5424



ಶ್ರೀಮನ್ನಿರಂಜನ ನಿರಾಭಾರಿ ಪ್ರಣವಸ್ವರೂಪಿ

ಡಾ॥ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ

# ಸುವರ್ಣಮಹೋತ್ಸವ

೧೯೮೧

ಭಾಗ







ಶ್ರೀಮನ್ನಿರಂಜನ ನಿರಾಭಾರಿ ಪ್ರಣವಸ್ವರೂಪಿ

ಡಾ|| ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಗೆ

# ಸಿದ್ಧಗಂಗಾಶ್ರೀ
# ಸುವರ್ಣ ಸಂಪುಟ ಸಮರ್ಪಣೆ

೧೯೮೧





– ಓಂ –

ಶ್ರೀ ಗುರು ಬಸವಲಿಂಗಾಯನಮಃ

# ಸಿದ್ಧಗಂಗಾಶ್ರೀ



ಸಂಪಾದಕರು

ಚನ್ನಪ್ಪ ಎರೇಸೀಮೆ
ಟಿ. ಆರ್. ಮಹಾದೇವಯ್ಯ



ಪ್ರಕಾಶಕರು

ಹಳೆಯ ವಿದ್ಯಾರ್ಥಿಗಳ ಸಂಘ, ಶ್ರೀ ಸಿದ್ಧಗಂಗಾಕ್ಷೇತ್ರ,
ತುಮಕೂರು ಜಿಲ್ಲೆ

೧೯೮೧

'SIDDAGANGASREE' Felicitation volume presented to His Holiness Dr. Sri Shivakumara Mahaswamiji of Sri Siddhaganga Matt on the occasion of the 'Golden Jubilee Year' of his ascention as the Peetharohana of Sri Siddhaganga Matt. Published by the Old Boys Association of the Matt. Edited by Pandit Channappa Yaresime and T.R. Mahadevaiah, M.A. Pages 1088 + 142 + 16; 1981.





**Price : Rs. 175-00**




Designs : M. J. Khoparde

Blocks : Narayanarao and Sridhar, Silton Block

Jacket and colour photos : Orient Litho Press, Sivakasi

Printed at :
ANUBHAVA PRINTERS, Rajajinagar, BANGALORE-560 010.

# ಪ್ರಕಾಶಕರ ನುಡಿ

ಶ್ರೀಮತ್ಪೂಜ್ಯಪಾದರಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅತ್ಯಂತ ವಾತ್ಸಲ್ಯಭಾವದಿಂದ ವಿದ್ಯಾರ್ಥಿಗಳನ್ನು ಸಾಕಿ ಸಲಹಿದುದು ಅನೇಕ ಮುಖಗಳಲ್ಲಿ : ತಾಯಿಯಾಗಿ ಹೊತ್ತುಹೊತ್ತಿಗೆ ಅನ್ನ ನೀರು ಇತ್ತಿದ್ದಾರೆ ; ತಂದೆಯಾಗಿ ನೆಳಲಿತ್ತು ರಕ್ಷಿಸಿದ್ದಾರೆ ; ಆಚಾರ್ಯರಾಗಿ ನೀತಿಕ್ರಿಯಾಚಾರ ಬೋಧಮಾಡಿ ತೀಡಿ ತಿದ್ದಿದ್ದಾರೆ; ಗುರುವಾಗಿ ಪಾಠಪ್ರವಚನಮಾಡಿ ಬೌದ್ಧಿಕ ಸಂಪತ್ತನ್ನು ಬೆಳೆಸಿದ್ದಾರೆ ; ವಿವಿಧ ವಿದ್ಯಾವೈದುಷ್ಯಗಳ ವಿದ್ಯಾಮಂದಿರಗಳನ್ನು ಕಟ್ಟಿ ನಮ್ಮ ನಮ್ಮ ಮನಕ್ಕೊಪ್ಪುವ ವಿದ್ಯಾವ್ಯಾಸಂಗಗಳಿಗೆ ಅನುವುಮಾಡಿಕೊಟ್ಟು ನಮ್ಮ ಪಾಲಿನ ಸರಕಾರವೇ ಆಗಿದ್ದಾರೆ. ಕೊನೆಗೆ ಸಂತೋಷದಿಂದ ಚೆನ್ನಾಗಿ ಪ್ರಪಂಚದಲ್ಲಿ ಬಾಳಿಬದುಕಿರೆಂದು ಹರಸಿ ಬೀಳ್ಕೊಟ್ಟಿದ್ದಾರೆ. ಅನಿಮಿತ್ತಬಂಧುಗಳೂ, ಪ್ರತ್ಯಾಶಾರಹಿತರೂ ಆದ ಅವರ ಈ ಕಾರುಣ್ಯದ ಫಲವಾಗಿ ಅವರು ನಮ್ಮ ಹೃದಯಕಮಲಮಧ್ಯದ ಆರಾಧ್ಯಮೂರ್ತಿಗಳಾಗಿ ಯಾವಜ್ಜೀವವೂ ರಾರಾಜಿಸುತ್ತಿದ್ದಾರೆ.

ಹಿಂದಿನಿಂದಲೂ ನಡೆದುಬಂದ ಶ್ರೀಕ್ಷೇತ್ರದ ಮೂಲಧ್ಯೇಯವಾದ ನಿತ್ಯದಾಸೋಹವ್ರತವನ್ನು ಊಣೆಯವಿಲ್ಲದೆ ಪಾಲಿಸಿಕೊಂಡು, ಸಾವಿರಸಾವಿರ ಸಂಖ್ಯೆಯ ವಿದ್ಯಾರ್ಥಿ ಪಾಲನೆ ಪೋಷಣೆಯ ಹೊಣೆಗಾರಿಕೆಯನ್ನು ಮೈಮೇಲೆಳೆದುಕೊಂಡು ಕಾರ್ಯನಿರ್ವಹಣೆಮಾಡುವುದರ ಹಿನ್ನೆಲೆಯ ಶ್ರೀಗಳವರ ಅಗಾಧ ಪರಿಶ್ರಮ ಊಹಾತೀತ. ಈ ಕಾರ್ಯವನ್ನೊಂದು ಲೀಲೆಯಂತೆ ಕಳೆದ ೫೦ ವರ್ಷಗಳಿಂದ ಶ್ರೀ ಗಳವರು ಎಂಥ ದುರ್ಧರ ಪ್ರಸಂಗದಲ್ಲೂ ನಡೆಸಿಕೊಂಡು ಬಂದಿದ್ದಾರೆ. ತಮ್ಮ ಈ ಸಂಕಲ್ಪದ ಈಡೇರಿಕೆಗೆ ಎಲ್ಲರೂ ಕಂಡಂತೆ ಕಲ್ಲುಹೊತ್ತು ಕಟ್ಟಡ ಕಟ್ಟಿದ್ದಾರೆ ; ಅಡಿಗೆ ಮನೆಯಲ್ಲಿ ಮುದ್ದೆ ತಿರುವಿ, ಅನ್ನ ಬಸಿದಿದ್ದಾರೆ; ಹೊಲ ಗದ್ದೆ ಕಣಕಟ್ಟೆಗಳಲ್ಲಿ ಕೈಮುಟ್ಟಿ ಕೆಲಸಮಾಡಿ ಶ್ರಮಜಲ ಸುರಿಸಿದ್ದಾರೆ. ಹೆಗಲಿಗೆ ಕೊಡಲಿಯನ್ನೇರಿಸಿ ಸೌದೆಸೊಪ್ಪಿಗಾಗಿ ಬೆಟ್ಟ ಗಟ್ಟಗಳನ್ನು ಸುತ್ತಿದ್ದಾರೆ ; ಬಾವಿಯ ನೀರು ಸೇದಿ ಗದ್ದೆಗುಣ್ಣಿಸಿ ಬತ್ತ ಬೆಳೆದಿದ್ದಾರೆ. ಅವರ ಈ ಕಾರ್ಯಫಲ ಸಾವಿರಸಾವಿರ ವಿದ್ಯಾರ್ಥಿಗಳ ರಕ್ಷಣೆ, ದೀನದಲಿತರ, ಹಸಿದವರ, ಅತಿಥಿ ಅಭ್ಯಾಗತರ ಯೋಗಕ್ಷೇಮಕ್ಕೆ ಸಂದಿದೆ. ಅವರ ಸಮಸ್ತಾಂತಃಕರಣವನ್ನು ತುಂಬಿನಿಂತ ಪೂರ್ಣಲಕ್ಷ್ಯ 'ಯತ್ರ ಜೀವಸ್ತತ್ರ ಶಿವಃ' ಆಗಿದೆ. ಅವರೊಂದು ಶಿವತೇಜವೇ ಎನಿಸಿದ್ದಾರೆ. ಆ ತೇಜ ಶಕ್ತಿಯಾಗಿ ಕ್ರಿಯಾಮುಖಗೊಂಡರೆ ಸುತ್ತಣ ಲೋಕವನ್ನು ಹೇಗೆ ಬದುಕಿಸಬಲ್ಲುದು, ಎಂಬುದಕ್ಕೆ ಶ್ರೀಗಳವರು ಪ್ರತ್ಯಕ್ಷ ನಿದರ್ಶನ.

ಇಂಥ ಮಹಾಶಿವಯೋಗಿಗಳವರ ಕೃಪಾಶ್ರಯದಲ್ಲಿ ಬೆಳೆದವರೆಂಬ ಹೆಮ್ಮೆ ಹಳೆಯ ವಿದ್ಯಾರ್ಥಿಗಳ ಮನೋಬುದ್ಧಿಗಳಲ್ಲಿ ಘನೀಭೂತಗೊಂಡು ಅನಿರ್ವಚನೀಯ ಆನಂದವನ್ನೀತ್ತಿದೆ. ಮಾತೃಸಂಸ್ಥೆಗೆ ಏನಾದರೂ ನಮ್ಮ ಪಾಲಿನ ಸೇವೆಮಾಡಿ ಕೃತಾರ್ಥತೆ ಹೊಂದಲು ಹಳೆಯ ವಿದ್ಯಾರ್ಥಿಸಂಘ ೧೯೫೫ ರಿಂದಲೂ ಕಾರ್ಯಪ್ರವೃತ್ತವಾಗಿದೆ. ಸಂಘದ ಸೇವೆ ಕ್ಷೇತ್ರಕ್ಕೆ ಎಷ್ಟರಮಟ್ಟಿಗೆ ಪೂರಕವಾಗಿದೆಯೋ ಏನೋ ಆ ಮಾತು ಬೇರೆ. ಆದರೆ ಸೇವೆಸಲ್ಲಿಸಬೇಕು ಎಂಬ ಕಾತರ ಆತುರಗಳಿಗೆ ವಿಶ್ರಾಂತಿ ಸಿಕ್ಕಿದೆ. ತಾ. ೨-೩-೧೯೮೦ಕ್ಕೆ ಶ್ರೀಗಳವರು ಕ್ಷೇತ್ರಾಧ್ಯಕ್ಷರಾಗಿ ೫೦ ಸಂವತ್ಸರಗಳು ಸಂದಿವೆ. ಈ ಕಾರಣಕ್ಕಾಗಿ ಕ್ಷೇತ್ರದ ಅಪಾರ ಭಕ್ತವೃಂದ ಅತಿವಿಜೃಂಭಣೆಯಿಂದ ಸುವರ್ಣಮಹೋತ್ಸವವನ್ನು ಆಚರಿಸಲು ವಿವಿಧಮುಖಗಳಲ್ಲಿ ಕಾರ್ಯಪ್ರವೃತ್ತವಾಗಿದೆ. ಇದೇ ಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಸಂಘ ಒಂದು ಅತ್ಯುತ್ತಮ ಸಂಭಾವನಾಗ್ರಂಥವನ್ನು ಶ್ರೀ ಸನ್ನಿಧಿಗೆ ಅರ್ಪಿಸುವುದರ ಮೂಲಕ ಕೃತಾರ್ಥತೆ ಪಡೆಯಲು ೧೯೭೮ರಲ್ಲೇ ಕಾರ್ಯಪ್ರವೃತ್ತವಾಗಿ ಸುಪ್ರಸಿದ್ಧ ಸಾಹಿತಿ, ಕವಿ ಡಾ. ಸಿದ್ಧಯ್ಯಪುರಾಣಿಕ ಅವರ ಅಧ್ಯಕ್ಷತೆಯಲ್ಲಿ ಒಂದು ಸಂಪಾದಕ ಮಂಡಲವನ್ನು ರಚನೆ ಮಾಡಿತು. ಈ ಮಂಡಲ ತಾ. ೮-೧೦-೭೮ರಲ್ಲಿ ಶ್ರೀಕ್ಷೇತ್ರದಲ್ಲಿ ಸಭೆಸೇರಿ ನಮ್ಮ ಹೆಬ್ಬಯಕೆ, ನಿಡುಬಯಕೆಗಳಿಗೆ ಅನುಗುಣವಾಗಿ ಸಿದ್ಧಪಡಿಸಲಿರುವ ಗ್ರಂಥದ ರೂಪರೇಖೆಯನ್ನು ನಿಷ್ಕರ್ಷಿಸಿ, ಅನಂತರ ಬೆಂಗಳೂರಿನಲ್ಲಿ ಐದಾರು ಸಲ ಸಭೆಸೇರಿ ಚರ್ಚಿಸಿ ಕಷ್ಟಪಟ್ಟು ಕಾರ್ಯಮಾಡಿದ ಫಲವೇ 'ಸಿದ್ಧಗಂಗಾಶ್ರೀ' ಎಂಬ ಹೆಸರಿನ ಈ ಸುವರ್ಣಸಂಪುಟ. ಸಂಪಾದಕರಾಗಿ ಕ್ಷೇತ್ರದ ಹಳೆಯವಿದ್ಯಾರ್ಥಿಗಳೇ ಆದ ಶ್ರೀ ಚನ್ನಪ್ಪ ಎರೇಸೀಮೆ ಅವರೂ ಮತ್ತು ಕ್ಷೇತ್ರದ ಪರಮಭಕ್ತರಾದ ಶ್ರೀ ಟಿ. ಆರ್. ಮಹಾದೇವಯ್ಯನವರೂ ಬಹುವಾಗಿ ಹೆಣಗಿದ್ದಾರೆ. ಈ ಗ್ರಂಥ ನಮ್ಮೆಲ್ಲರ ಆಸೆ ಆಕಾಂಕ್ಷೆಗಳಿಗನುಗುಣವಾಗಿ ಮೈತಾಳಿದೆ ಎಂಬ ತೃಪ್ತಿ ನಮಗಾಗಿದೆ. ಈ ಗ್ರಂಥದಲ್ಲಿನ 'ಕ್ಷೇತ್ರಶ್ರೀ' ವಿಭಾಗದ ಪ್ರತ್ಯೇಕ ೧೫೦೦ ಪ್ರತಿಗಳನ್ನು ಬೇರ್ಪಡಿಸಿ ಗ್ರಂಥ ಮಾಡಿದ್ದೇವೆ. ಕ್ಷೇತ್ರದ ಬಗೆಗೆ, ಶ್ರೀಗಳವರ ಬಗೆಗೆ ತಿಳಿಯಬೇಕೆನ್ನುವವರಿಗೆ ಅನುಕೂಲವಾಗಲೆಂದು ಈ ಯತ್ನ.

ಹಳೆಯ ವಿದ್ಯಾರ್ಥಿಗಳ ಭಕ್ತಿಕಾಣಿಕೆಯಾಗಿ ಶ್ರೀ ಪಾದಕ್ಕೆ ಅರ್ಪಿಸಲಿರುವ 'ಸಿದ್ಧಗಂಗಾಶ್ರೀ' ಸಂಭಾವನಾ ಸುವರ್ಣ ಸಂಪುಟವು ಇಷ್ಟೊಂದು ಸುಂದರವಾಗಿ ಹೊರಬರಲು ಕಾರಣರಾದ ಸಂಪಾದಕ ಮಂಡಲಿಯ ಸಮಸ್ತ ಹಿರಿಯ ವಿದ್ವಾಂಸರಿಗೆ, ನೆರವನ್ನು ವಿವಿಧ ಮುಖಗಳಲ್ಲಿ ಇತ್ತ ಸಮಸ್ತರಿಗೆ ನಮ್ಮ ನಮನಗಳು ಸಲ್ಲಬೇಕು. ಪೂಜ್ಯಪಾದರಿಗೆ ಸಮಸ್ತ ಹಳೆಯ ವಿದ್ಯಾರ್ಥಿಗಳ ಪರವಾಗಿ ಸಾಷ್ಟಾಂಗ ಪ್ರಣಾಮಗಳು.

ಎಂ. ಎನ್. ಚನ್ನಬಸಪ್ಪ

ಪ್ರಧಾನ ಕಾರ್ಯದರ್ಶಿ, ಹಳೆಯ ವಿದ್ಯಾರ್ಥಿ ಸಂಘ, ಸಿದ್ಧಗಂಗಾಕ್ಷೇತ್ರ

ಸುರತ್ಕಲ್ಲು

೬-೫-೧೯೮೧

# ಸಂಪಾದಕ ಸಮಿತಿ ಅಧ್ಯಕ್ಷರ ನುಡಿ

ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿಗಳೂ ತ್ರಿವಿಧ ದಾಸೋಹ ಮೂರ್ತಿಗಳೂ, ಮಹಾ ಮಹಿಮರೂ ಆದ ಶ್ರೀ ಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ನಿಲವನ್ನು ಆ ಸಿದ್ಧಲಿಂಗೇಶ್ವರನೇ ಬಲ್ಲನಲ್ಲದೆ ನಮ್ಮಂಥವರು ಬಲ್ಲೆವೆಂದು ಸೊಲ್ಲಿಸಲಾದೀತೆ? ಮಾತು ಸೋತು ಶರಣಾಗತವಾಗುತ್ತದೆ ಶ್ರೀಗಳವರ ಸನ್ನಿಧಿಯಲ್ಲಿ! ಮಾತಿಗೆ ಮೀರಿದ ದಿವ್ಯವ್ಯಕ್ತಿತ್ವ ಅವರದು.

> 'ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ,
> ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ, ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ
> ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿರೋ!'

> 'ನಿಜವನರಿದ ನಿಶ್ಚಿಂತನೆ, ಮರಣವ ಗೆಲಿದ ಮಹಂತನೆ, ಪರವನೊಳಕೊಂಡ ಪರಿಣಾಮಿಯೆ,
> ಬಯಲಲೊದಗಿದ ಭರಿತನೆ, ಗುಹೇಶ್ವರಲಿಂಗ ನಿರಾಳವನೊಳಕೊಂಡ ಸಹಜನೆ'

'ಇಂಥ ವಚನಗಳಿಗೆ ನೈಜ ನಿದರ್ಶನವಾಗಿ ಇಂದೂ ಯಾರಾದರೂ ತೊಳಗಿ ಬೆಳಗುತ್ತಿರುವರೆ?' ಎಂದು ಯಾರಾದರೂ ಕೇಳಿದರೆ ಸಿದ್ಧಗಂಗೆಗೆ ಹೋಗಿ ಶ್ರೀ ಶಿವಕುಮಾರ ಶಿವಯೋಗಿಗಳವರ ದರ್ಶನ ಪಡೆದು ನೋಡಿರಿ ಎಂದೇ ಉತ್ತರಿಸಬೇಕಾದೀತು! ಅರ್ಧ ಶತಮಾನದ ತ್ರಿವಿಧ ತಪದ, ತ್ರಿವಿಧ ದಾಸೋಹದ, ತ್ರಿವಿಧ ಲಿಂಗಾರ್ಚನೆಯ ಸಿದ್ಧಿಶ್ರೀ 'ಸಿದ್ಧಗಂಗಾಶ್ರೀ'ಯಾಗಿ ವಿರಾಜಿಸುತ್ತಿರುವುದನ್ನು ಅವರಲ್ಲಿ ಕಂಡು ಕೃತಾರ್ಥರಾಗುವರು. ಇಂಥವರೊಬ್ಬರು ಇಂದೂ ನಮ್ಮ ಮಧ್ಯದಲ್ಲಿರುವುದೇ ನಮ್ಮೆಲ್ಲರ ಪರಮಭಾಗ್ಯ! ಕತ್ತಲೆ ಗಾಢವಾದಂತೆ ಜ್ಯೋತಿಯ ಕಾಂತಿ ಹೆಚ್ಚುವಂತೆ ಸುತ್ತಲೂ ದುರಿತ ದುಷ್ಕರ್ಮತಮಂಧ ಹೆಚ್ಚುತ್ತಿರುವಂತೆಯೇ ಈ ಮಹಾಮಹಿಮರ ಪ್ರಭೆಯೂ ಹೆಚ್ಚುತ್ತಲಿದೆ!

ಈ ಸರ್ವಾಂಗ ಲಿಂಗಿಯಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೆ? ನಿರ್ಮಲ ಕ್ರಿಯೆಯನ್ನೆ? ಉಜ್ವಲ ವೈರಾಗ್ಯವನ್ನೆ? ಶಮದಮಾದಿ ದೈವೀಸಂಪತ್ತನ್ನೆ? ಬಹುಭಾಷಾ ಪಾರಂಗತಿಯನ್ನೆ? ಪವಿತ್ರ ಜೀವನವನ್ನೆ? ಸಕಲ ಜೀವರಾಶಿಗಳನ್ನೂ ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಅಪಾರ ಅನುಕಂಪೆಯನ್ನೆ? ಜೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೆ? ಪಂಡಿತ ಪಾಮರರಿಬ್ಬರನ್ನೂ ಏಕ ಪ್ರಕಾರವಾಗಿ ಮೆಚ್ಚಿಸುವ ಮಾತುಗಾರಿಕೆಯನ್ನೆ? ವೈಜ್ಞಾನಿಕ ದೃಷ್ಟಿಯನ್ನೆ? ಆಧ್ಯಾತ್ಮಿಕ ಔನ್ನತ್ಯವನ್ನೆ? ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆಗಳನ್ನೆ? ವಿದ್ಯಾರ್ಥಿಗಳ ಮೇಲಣ ವಾತ್ಸಲ್ಯವನ್ನೆ? ರಾಷ್ಟ್ರನಿರ್ಮಾಣ ಕಾರ್ಯಧುರಂಧರತೆಯನ್ನೆ? ದೀನಬಂಧುತ್ವವನ್ನೆ? ಕವಿ ಕಲಾವಿದ ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೆ? ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೆ? ಸಂಘಟನಾ ಶಕ್ತಿಯನ್ನೆ? ಶಿವಮಂತ್ರ ಸಿದ್ಧಿಯನ್ನೆ? ಎಷ್ಟು ಜನರು ಬಂದು ಬೇಡಿ ಕಾಡಿದರೂ, ಎಂಥ ವಿಘ್ನಗಳು ಎದುರಾದರೂ ಎಳ್ಳಷ್ಟೂ ಬೇಸರ, ಮುನಿಸು, ದಣಿವುಗಳನ್ನು ತೋರದ ಸದಾ ಸುಪ್ರಸನ್ನವದನವನ್ನೆ? ಬಹು ವಿಷಯ ಪರಿಣತಿಯನ್ನೆ? ಜಗಳಗಳನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೆ? ದಿನದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತರ ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ ದಾಸೋಹ, ವಿದ್ಯಾರ್ಥಿನಿಲಯ, ಶಾಲೆ ಕಾಲೇಜುಗಳ ಜಟಿಲ ಸಮಸ್ಯೆಗಳ ವರೆಗೆ ಎಲ್ಲವನ್ನೂ ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೆ? ಉದ್ಧರಣೆಗಳನ್ನು ಬರೆಯುವುದರಿಂದ ಸರ್ವೋದ್ಧಾರದ ಸಮಗ್ರ ಯೋಜನೆಗಳ ವರೆಗೆ ಸರ್ವ ಕಾರ್ಯಗಳಲ್ಲಿಯೂ ಒಡ ಮೂಡುವ ಕಾಯಕನಿಷ್ಠೆಯನ್ನೆ? ಗಡಿಯಾರವೂ ನಾಚಿಕೊಳ್ಳುವಂತಹ ಸಮಯ ಪರಿಪಾಲನೆಯನ್ನೆ? ಕರಣ ವಿಜಯ, ಜಿತೇಂದ್ರಿಯತ್ವಗಳನ್ನೆ? ಆಲೋಚಿಸಿದನಿತೂ ಅಪಾರವಾಗಿ ತೋರುವ ಈ ಅಧ್ಯಾತ್ಮಸೂರ್ಯರ ಅಗಾಧವಾದ, ಅವರ್ಣನೀಯವಾದ ವ್ಯಕ್ತಿತ್ವದ ಎಲ್ಲ ಅಂಶಗಳನ್ನೂ ಗುರುತಿಸಿ ಅವುಗಳ ಒಟ್ಟು ಬೆಲೆಯನ್ನು ಕಟ್ಟ ಬಲ್ಲವರಾರು?

ಇಂಥ ಪರಮಾನುಭಾವಿಗಳ, ಮಹಾಮಹಿಮರ ಶ್ರೀ ಕ್ಷೇತ್ರಾಧ್ಯಕ್ಷತೆಯ ಸುವರ್ಣಮಹೋತ್ಸವವು ಅನತಿ ದೂರದಲ್ಲಿಯೇ ಅಭೂತಪೂರ್ವವಾಗಿ ಜರುಗಲಿದೆ. ಅದು ಬರಿ ಮಹೋತ್ಸವವಾಗದೆ ಬಹುಕಾಲ ಬಾಳಬಲ್ಲ ಬೃಹತ್ ಶಿಕ್ಷಣ ಸಂಸ್ಥೆಯೊಂದರ ಸ್ಥಾಪನೆಯಲ್ಲಿ, ಬಹೂಪಯೋಗಿ ಅಭಿನಂದನ ಸಂಪುಟವೊಂದರ ಪ್ರಕಟನೆಯಲ್ಲಿ ಪರಿಣಮಿಸಬೇಕೆಂಬುದು ಭಕ್ತರೆಲ್ಲರ ಬಯಕೆಯಾಗಿದೆ. ಬೃಹತ್ ಶಿಕ್ಷಣ ಸಂಸ್ಥೆಯ ಸ್ಥಾಪನೆಗಾಗಿ ಸಮಾಜದ ವರಿಷ್ಠರ ಬೇರೆ ಸಮಿತಿ ರಚಿತವಾಗಿ ಆ ಮಹತ್ಕಾರ್ಯದ ಶಿವಾರಂಭ ಮಾಡಿದೆ. ಈ ಅಭಿನಂದನ ಸಂಪುಟದ ಸಲುವಾಗಿಯೂ ನಾಡಿನ ವಿಖ್ಯಾತ ವಿದ್ವಾಂಸರನ್ನೊಳಗೊಂಡ ಸಂಪಾದಕ ಸಮಿತಿ ದಿನಾಂಕ ೮-೧೦-೭೮ರಂದು ಶ್ರೀ ಕ್ಷೇತ್ರದಲ್ಲಿ ಸೇರಿ ಸಂಪುಟದ ರೂಪರೇಷೆಗಳನ್ನು ನಿರ್ಧರಿಸಿತು. ಪರಮಪೂಜ್ಯ ಮಹಾಸ್ವಾಮಿಗಳವರ ಅಸೀಮವಾತ್ಸಲ್ಯದ ಹಾಗು ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದವರ ಅಭಿಮಾನದ ಫಲವಾಗಿ ನಾನು ಈ ಸಂಪಾದಕ ಸಮಿತಿಯ ಅಧ್ಯಕ್ಷನಾಗಿ ನಿಯುಕ್ತನಾದರೂ ಇದರ ಸಂಪಾದನೆಯ, ಮುದ್ರಣದ, ಕರಡು ತಿದ್ದುವಿಕೆಯ ಬಹುಪಾಲು ಶ್ರೇಯಸ್ಸು ಸಂಪಾದಕರಾಗಿ ಹಗಲಿರುಳು ತ್ರಿಕರಣ ಶುದ್ಧಿಯಿಂದ, ಅಮಿತ ಶ್ರದ್ಧೆಯಿಂದ ದುಡಿದ ಪಂಡಿತ ಚನ್ನಪ್ಪನವರು ಎರೇಸೀಮೆ, ಪ್ರೊ. ಟಿ. ಆರ್. ಮಹಾದೇವಯ್ಯನವರು ಈ ಉಭಯರಿಗೆ ಸಲ್ಲುತ್ತದೆ. ಅವರ ನಿಸ್ಸೀಮ ಸೇವೆ ಪ್ರತಿಯಿಲ್ಲದುದು. ಅವರಿಗೆ ನನ್ನ ನೆನಿಕೆಗಳು. ಇದರಲ್ಲಿ ಸಂಗ್ರಹಗೊಂಡಿರುವ ವಿದ್ವತ್ಪೂರ್ಣ ಲೇಖನಗಳನ್ನು ನೀಡಿದ ಎಲ್ಲ ಪಂಡಿತೋತ್ತಮರಿಗೂ, ಕವನಗಳ ಕೊಡುಗೆಯಿತ್ತ ಕವಿವರರಿಗೂ ನನ್ನ ನಮ್ರ ನಮನಗಳು. ನಾವೆಲ್ಲರೂ ಸೇರಿ ಅರ್ಪಿಸುವೆವು ಈ ಕೃತಿಯನು ಈ ಮಹಾನುಭಾವಿಯ ಅಡಿದಾವರೆಗೆ: ಅವರ ಚರಣಗಳ ಮೇಲೆ ಇದು ಬಿದ್ದುರುಳುಗೆ!

ಅಭಿನಂದನ ಗ್ರಂಥಗಳ ಇತಿಹಾಸದಲ್ಲಿಯೇ ಒಂದು ವಿಕ್ರಮವೆನಿಸಲಿರುವ ಈ ಬೃಹತ್ ಸಂಪುಟ ಎಲ್ಲೆಲ್ಲಿ ಎಡೆ ಪಡೆವುದೋ ಅಲ್ಲಲ್ಲಿ ಜ್ಞಾನ ದಾಸೋಹ ನಡೆಯಲಿ; ಇದರಿಂದ ಅಸಂಖ್ಯರು ಅರಿವಿನ ಅಮೃತವನ್ನು ಪಡೆಯಲಿ; ಸಿದ್ಧಗಂಗೆಯ ಶಿವಯೋಗಿ ಪುಂಗವನ ಪದಚಿಹ್ನೆಗಳನ್ನನುಸರಿಸಿ ನಡೆಯಲಿ!

—ಸಿದ್ಧಯ್ಯ ಪುರಾಣಿಕ

'ಶ್ರೀಗಿರಿ'
೪/೩ಎ, ಆಲಿಆಸ್ಕರ್ ರಸ್ತೆ, ಬೆಂಗಳೂರು-೫೨
೧೮-೧೦-೮೦

# ಸಂಪಾದಕರ ಬಿನ್ನಹ

ಶ್ರೀ ಸಿದ್ಧಗಂಗೆ ಒಂದು ಅವಿಮುಕ್ತ ಕ್ಷೇತ್ರ. ಅದರ ಐತಿಹ್ಯ, ಸಾಗಿಬಂದ ವೀತರಾಗಿಗಳ ಪವಿತ್ರ ಪರಂಪರೆ, ಸಾಧಿಸಿರುವ ಲೋಕೋಪಕಾರಕ ಮಹಾಕಾರ್ಯ ಇವು ನಾಡಿನ ಇತಿಹಾಸದಲ್ಲಿ ಸುವರ್ಣಾಧ್ಯಾಯಗಳು. ಸಂನ್ಯಾಸಿಧರ್ಮವು ಕ್ರಿಯಾಮುಖವಾದರೆ ಎಂಥ ಅದ್ಭುತ ನಡೆಯುತ್ತದೆಂಬುದನ್ನು ಸಿದ್ಧಗಂಗಾ ಕ್ಷೇತ್ರಾಧಿಪತಿಗಳ ಸಾಧನೆಯಿಂದಲೇ ಅರಿಯಬೇಕಾಗುತ್ತದೆ. ಶ್ರೀಕ್ಷೇತ್ರ ಈ ಶತಮಾನದಲ್ಲಿ ಸಾಧಿಸಿದ ಆಧ್ಯಾತ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕಾರ್ಯಕ್ರಮಗಳು ನವಭಾರತ ನಿರ್ಮಾಣ ಕಾರ್ಯದಲ್ಲಿ ತನ್ನದೇ ಆದ ದಾಖಲೆ ಸ್ಥಾಪಿಸಿವೆ. ಈ ಪಾವನ ಕ್ಷೇತ್ರದ ಒಲೆಯಲ್ಲಿ ಅಟ್ಟುಂಡವರು, ತಲೆಯಲ್ಲಿ ಅಟ್ಟುಂಡು ಬಾಳು ಬೆಳಗಿಸಿಕೊಂಡವರು ಲಕ್ಷೋಪಲಕ್ಷ ಜನ. ಸುಮಾರು ಆರೇಳು ನೂರು ವರ್ಷಗಳ ಇತಿಹಾಸ ಹೊಂದಿರುವ ಶ್ರೀಕ್ಷೇತ್ರದ ಇಂದಿನ ಲೋಕೋತ್ತರ ಕೀರ್ತಿ ಕಲ್ಪವೃಕ್ಷದ ಬೀಜಾರೋಪಣೆ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಶ್ರೀಮದಟವೀಶ್ವರರಿಂದಾದರೆ, ೨೦ನೆಯ ಶತಮಾನದ ಮೊದಲ ಮೂರುದಶಕಗಳಲ್ಲಿ ಶ್ರೀಮದುದ್ದಾನ ಶಿವಯೋಗಿಗಳು ಆ ಕಲ್ಪವೃಕ್ಷದ ಸಸಿಗೆ ನೀರೆರೆದು ಬೆಳೆಸಿದರು. ೧೯೩೦ರಲ್ಲಿ ಕ್ಷೇತ್ರಾಧ್ಯಕ್ಷರಾಗಿ ಬಂದ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆ ಕಲ್ಪವೃಕ್ಷವನ್ನು ಹೆಮ್ಮರವನ್ನಾಗಿಸಿದರು. ಹಲವು ಮುಖದಲ್ಲಿ ರಚನಾತ್ಮಕವಾಗಿ ಕಾರ್ಯರಂಗಕ್ಕೆ ಪ್ರವೇಶಿಸಿದ ಶ್ರೀಗಳವರ ನಿಷ್ಕಾಪಟ್ಯನಡೆನುಡಿ, ತಪಸ್ಸು, ಪವಿತ್ರಸಂಕಲ್ಪ, ಕ್ರಿಯಾಶಕ್ತಿಯ ಪ್ರಾಬಲ್ಯಗಳು ಅವರು ನೋಡಿದ ನೋಟಕ್ಕೆ, ಯೋಚಿಸಿದ ಯೋಚನೆಗೆ, ಕೈಯಿಟ್ಟ ಕ್ರಿಯೆಗೆ ಅಪ್ರತಿಹತ ಶಕ್ತಿಯನ್ನಿತ್ತಿವೆ. ಮಾನವವರ್ಗದ ಭವಿಷ್ಯದ ಬದುಕಿಗೆ ಶಿವಕಾರುಣ್ಯದ ಅರುಣೋದಯವಾದಂತೆ ಆಗಿದ್ದಾರೆ. ಜಾತಿ ಮತ ಪಂಥ ಭೇದವಿಲ್ಲದೆ ಸಕಲರಲ್ಲಿ ಬೆರೆತು ಸಾಗುವ ಅವರವೇ ಆದ ರೀತಿನೀತಿಗಳಿಂದ ಅವರು ಸರ್ವಾದರಣೀಯರಾಗಿದ್ದಾರೆ. ಇಂದು ದೇಶವಿದೇಶಗಳಲ್ಲಿ ಅವರ ಮತ್ತು ಅವರ ಪವಿತ್ರಕ್ಷೇತ್ರದ ಪುಣ್ಯಚರಿತೆಯನ್ನು ಕೇಳಿ, ತಲೆಬಾಗದವರಿಲ್ಲ.

ಶ್ರೀಶಿವಕುಮಾರ ಮಹಾಸ್ವಾಮಿಗಳವರು ಪವಿತ್ರಪರಂಪರೆಯ ಈ ಮಹಾಕ್ಷೇತ್ರಾಧ್ಯಕ್ಷರಾಗಿ ೧೯೮೦ ರ ಮಾರ್ಚ್ ತಿಂಗಳ ೨ನೆಯ ತಾರೀಖಿಗೆ ೫೦ವರ್ಷ ಸಂದವು. ಈ ದೀರ್ಘಾವಧಿಯ ಅವರ ತಪಸ್ಸೆಲ್ಲ ಜನತೆಯ ಸರ್ವತೋಮುಖ ಕಲ್ಯಾಣಕ್ಕೆ ಬಿಯವಾಗಿದೆ. ಅವರು ತಪಸ್ಸನ್ನಾಚರಿಸಿದ್ದಾರೆಂದರೂ ಒಂದೇ, ರಾಷ್ಟ್ರಹಿತ ಬಯಸಿದ್ದಾರೆಂದರೂ ಒಂದೇ. ಇಂಥ ಮಹಾತಪಸ್ವಿಗಳು ಲೋಕಕ್ಕೆ ಮಾಡಿದ ಮಹಾಕಲ್ಯಾಣಕಾರ್ಯಗಳನ್ನು ಸ್ಮರಿಸಿ, ಭಕ್ತಿಭಾವವನ್ನು ಪ್ರಕಟಿಸಲು ಅಪಾರ ಭಕ್ತಸ್ತೋಮ ೧೯೮೧ ರಲ್ಲಿ ಸುವರ್ಣಮಹೋತ್ಸವವನ್ನು ರಾಷ್ಟ್ರಮಟ್ಟದಲ್ಲಿ ಆಚರಿಸಲು ತೀರ್ಮಾನಿಸಿತು. ಇದೇ ಸಂದರ್ಭದಲ್ಲಿ ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಸಂಘ ಅನ್ನ ನೀರು ನೆಳಲಿತ್ತು ನಡೆನುಡಿಗಲಿಸಿ ಪೋಷಿಸಿದ ಪೂಜ್ಯ ಶ್ರೀಪಾದರಿಗೆ ಅವರ ಮೇರು ಸದೃಶ ವ್ಯಕ್ತಿತ್ವಕ್ಕೆ ತಕ್ಕುದಾದ ಅಭಿನಂದನ ಗ್ರಂಥವನ್ನರ್ಪಿಸಿ ಕೃತಾರ್ಥತೆ ಪಡೆಯಲು ತೀರ್ಮಾನಿಸಿತು. ಕರ್ನಾಟಕದ ಖ್ಯಾತಕವಿ, ಲೇಖಕರೆಂದು ಕೀರ್ತಿತರಾದ ಡಾ. ಸಿದ್ಧಯ್ಯ ಪುರಾಣಿಕರ ಅಧ್ಯಕ್ಷತೆಯಲ್ಲಿ ಸಂಪಾದಕ ಸಮಿತಿ ರೂಪುಗೊಂಡಿತು. ನಾಡಿನ ಹೆಸರಾಂತ ವಿದ್ವಾಂಸರನ್ನು ಸಮಿತಿಯ ಸದಸ್ಯರನ್ನಾಗಿ ಸೇರಿಸಿತು. ಸಂಪಾದಕರಾಗಿ ಕಾರ್ಯನಿರ್ವಹಿಸುವ ಭಾರವನ್ನು ನಮ್ಮಿಬ್ಬರ ಮೇಲೆ ಹೊರಿಸಿತು.

ಅಭಿನಂದನ ಗ್ರಂಥ ಪ್ರಕಟಣ ಸಮಿತಿಯು ೮-೧೦-೭೮ರಂದು ಶ್ರೀಕ್ಷೇತ್ರದಲ್ಲಿ ಡಾ. ಸಿದ್ಧಯ್ಯ ಪುರಾಣಿಕರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಿತು. ಗ್ರಂಥದ ರೂಪುರೇಷೆಗಳನ್ನು ಕೂಲಂಕಷವಾಗಿ ಚರ್ಚಿಸಿತು. ಮತ್ತೆ ೧೪ ಮತ್ತು ೧೫-೧೦-೭೮ರಂದು ಬೆಂಗಳೂರಿನಲ್ಲಿ ಸಭೆಸೇರಿ ಲೇಖನಗಳ ವಿಷಯ, ಲೇಖಕರ ಆಯ್ಕೆ ಮೊದಲಾದ ಮಹತ್ವದ ವಿಷಯಗಳನ್ನು ನಿರ್ಣಯಿಸಿ ಆ ದಿಸೆಯಲ್ಲಿ ಕಾರ್ಯೋನ್ಮುಖರಾಗಲು ಸಂಪಾದಕರಿಗೆ ಆದೇಶ ನೀಡಿತು. ಅನಂತರವೂ ಆಗಾಗ ಸಭೆಸೇರಿ ಚರ್ಚಿಸಿ, ಕಾರ್ಯೋನ್ಮುಖರಾದೆವು. ನಾವು ಪೂಜ್ಯರ ದಿವ್ಯವ್ಯಕ್ತಿತ್ವದ ಪ್ರಭೆಯನ್ನು ಅಂತರಂಗದಲ್ಲಿ ತುಂಬಿಕೊಂಡು ಸಂಪೂರ್ಣ ಅಳುಕಿನಿಂದಲೇ, ಆದರೆ ಪ್ರಾಂಜಲ ಮನಸ್ಸಿನಿಂದ, ಭಕ್ತಿಭಾವದಿಂದ ಕಾರ್ಯವನ್ನು ಆರಂಭಿಸಿ ಬಹುದೂರ ಸಾಗಿ ಬಂದಿದ್ದೇವೆ.

ನಮಗೆ ಸಂಪಾದನಾ ಕಾರ್ಯಕ್ಕಿಂತ ಸಂಚಯನ ಕಾರ್ಯವೇ ತ್ರಾಸದಾಯಕವೆನಿಸಿತು. ಒಂದು ಗೊತ್ತುಪಡಿಸಿದ ವಿಷಯವನ್ನು ಸೂಚಿಸಿ, ನಿರ್ದಿಷ್ಟವಾದ ರೂಪುರೇಷೆಯ ಚೌಕಟ್ಟನ್ನು ನಿರ್ದೇಶಿಸಿ ಲೇಖನ ಬರೆಸುವುದು ಸುಲಭವಾದ ಕೆಲಸವಲ್ಲ. ಲೇಖಕರನ್ನು ಸಮಯೋಚಿತವಾದ ಒಂದು ಲೇಖನ ಕಳಿಸಿ ಎಂದೋ, ನಿಮ್ಮ ಬಳಿ ಸಿದ್ಧವಾಗಿರುವ ಯಾವುದಾದರೂ ಒಂದು ಬರಹ ಕಳಿಸಿ ಎಂದೋ ಕೇಳಿದ್ದರೆ ಲೇಖನಗಳಿಗೆ ಬರವಿರುತ್ತಿರಲಿಲ್ಲ. ಆದರೆ ನಮ್ಮ ಉದ್ದೇಶ ಬೇರೆಯಾಗಿತ್ತು. ಈ ಅಭಿನಂದನ ಗ್ರಂಥ ಒಂದು ಐತಿಹಾಸಿಕ ದಾಖಲೆಯಾಗಬೇಕು, ಸಂಶೋಧಕರಿಗೆ ಆಕರಗ್ರಂಥವಾಗಬೇಕು, ಸಾಹಿತ್ಯಾಭ್ಯಾಸಿಗಳಿಗೆ ಸಂದರ್ಭ ಗ್ರಂಥವಾಗಬೇಕು ಎಂಬ ಸಂಕಲ್ಪದ್ದಾಗಿತ್ತು. ಸಂಪಾದಕ ಸಮಿತಿಯ ನಿರ್ಧಾರದಂತೆ ಲೇಖನಗಳು ನಾವು ಸೂಚಿಸಿರುವ ವಿಷಯಗಳನ್ನೊಳಗೊಂಡು ವಿಚಾರ ಪರಿಪ್ಲುತಗಳೂ, ಸಂಶೋಧಕ ದೃಷ್ಟಿಯುಳ್ಳವೂ ಆಗಿರಬೇಕೆಂದು ವಿಜ್ಞಾಪಿಸಿ ನಾಡಿನ ಅನೇಕ ವಿದ್ವಾಂಸರಿಗೆ ಲೇಖನಕ್ಕಾಗಿ ಕೋರಿಕೆಯ ಪತ್ರ ಬರೆದೆವು. ನಮ್ಮ ವಿಜ್ಞಾಪನಾ ಪತ್ರಕ್ಕೆ ನಾಡಿನ, ರಾಷ್ಟ್ರದ ಮೂಲೆಮೂಲೆಯಿಂದ ಬಂದ

ಪ್ರತಿಕ್ರಿಯೆಗಳನ್ನು ಒಂದು ಕಡೆ ಸೇರಿಸಿದರೆ ಅದೊಂದು ಸಂಕೀರ್ಣ ಪ್ರತಿಕ್ರಿಯೆಗಳ ಚಿಕ್ಕ ಸಂಪುಟವಾದೀತು! ನಮ್ಮ ಕಟ್ಟುಸಿಟ್ಟಿನ ಕ್ರಮದ ಹಿಂದಿರುವ ಸದುದ್ದೇಶವನ್ನು ಮನಗಂಡ ಲೇಖಕರು ಶ್ರೀಕ್ಷೇತ್ರದ ಹಾಗೂ ಶ್ರೀಶ್ರೀಗಳ ಮೇಲಣ ಗೌರವ, ಅಭಿಮಾನಗಳಿಂದ ಪ್ರೋತ್ಸಾಹದ ಮಾತುಗಳನ್ನಾಡಿ ನಮ್ಮ ಸಾಹಸವನ್ನು ಮೆಚ್ಚಿ ಬರೆದರು.

ನಿರೀಕ್ಷಿಸಿದ ಕಾಲಕ್ಕೆ ಎಲ್ಲ ಲೇಖನಗಳು ಬರಲಿಲ್ಲ. ಮೂರು–ನಾಲ್ಕು ಐದು-ಆರು ಜ್ಞಾಪಕ ಪತ್ರಗಳನ್ನು ಬರೆದರೂ ಪರಿಣಾಮ ಕಾಣಸಲಿಲ್ಲ. ಲೇಖಕರನ್ನು ಮುಖತಃ ಭೇಟಿಯಾಗಿ ಗ್ರಂಥದ ಮಹತ್ವವನ್ನು ಮನವರಿಕೆ ಮಾಡಿಕೊಟ್ಟು ಮನವೊಲಿಸಬೇಕೆಂದು ತೀರ್ಮಾನಿಸಿದೆವು. ಮೊದಲು ಮೈಸೂರು ಮತ್ತು ಧಾರವಾಡಗಳಿಗೆ ಯಾತ್ರೆ ಕೈಕೊಂಡೆವು. ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿರುವ ಲೇಖಕರ ಮನೆಮನೆಗೆ ದಾಳಿ ಮಾಡಿದೆವು. ಈ ಯಾತ್ರೆ ಫಲಪ್ರದವಾಯಿತು. ಯಾವುದೇ ಸಂದರ್ಭದಲ್ಲಿ ಇಂಥ ಲೇಖಕರು ಸಿಕ್ಕಾಗ 'ಸಿದ್ಧಗಂಗಾಶ್ರೀ'ಯ ಲೇಖನ-ಕಾಣಿಕೆ ಎಲ್ಲಿ ? ಎಂದು ಕೇಳಿ ನಮ್ಮ 'ನಕ್ಷತ್ರಕತನ'ವನ್ನು ಪ್ರದರ್ಶಿಸಿದ್ದೂ ಉಂಟು! ಲೇಖನಗಳು ಕೈಸೇರತೊಡಗಿದವು. ಆದರೆ ಕೆಲವರು ಗ್ರಂಥವು ಅಚ್ಚಿನ ಮನೆ ಸೇರುವ ಕಾಲ ಬಂದಾಗಲೂ ಲೇಖನ ಕೊಡುತ್ತೇವೆಂದು ಹೇಳುತ್ತಲೇ ಬಂದರು. ನಾವು 'ನೆರೆನಂಬಿ' ಕಾದೆವು. ಕೊನೆ ಗಳಿಗೆಗೂ ಲೇಖನ ಬಾರದೆ ನಿರಾಶರಾದೆವು. ಹೀಗಾಗಿ ಕೆಲವು ಮಹತ್ವದ ವಿಷಯಗಳು ಇಲ್ಲಿ ಸೇರ್ಪಡೆಯಾಗಲಿಲ್ಲ. 'ಸಿದ್ಧರಾಮ' ಲೇಖನ ಗ್ರಂಥದಲ್ಲಿ ಬಿಟ್ಟುಹೋಗಿರುವುದು ಇದೇ ಕಾರಣದಿಂದ. ಈ ಅನಿವಾರ್ಯ ಪ್ರಸಂಗದಿಂದ ನಮಗೆ ವಿಷಾದವೆನಿಸಿದೆ. ಇಂಥ ಸಂದರ್ಭದಲ್ಲೆಲ್ಲಾ ನಾವು ಅಂದುಕೊಂಡಂತೆ ಈ ಗ್ರಂಥವನ್ನು ಸರ್ವಾಂಗಸುಂದರವಾಗಿಸಲಿಲ್ಲವಲ್ಲಾ ಎಂಬ ಕೊರಗು ನಮ್ಮನ್ನು ಕಾಡಿದೆ.

ಆಧುನಿಕ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಅಭಿನಂದನ ಗ್ರಂಥಗಳ ಒಂದು ಹೊಸ ಪರಂಪರೆ ಬೆಳೆದುಬಂದಿದೆ. ತನ್ನ ವಿಶಿಷ್ಟವಾದ ಶಕ್ತಿಸಂಪನ್ನತೆಯಿಂದ ನಾಡವರ ಉದ್ಧಾರಕ್ಕೆ ಶ್ರಮಿಸಿದ ಮಹಾನುಭಾವರ ಬಗ್ಗೆ ಕೃತಜ್ಞತೆಯನ್ನು ಸಲ್ಲಿಸಲು ರೂಪುಗೊಳ್ಳುವ ಗೌರವಗ್ರಂಥಗಳು ಧನ್ಯಾತ್ಮರ ಬದುಕು–ಬರಹಗಳನ್ನು ಸಮೀಕ್ಷಿಸುವ ನೆವದಲ್ಲಿ ಸೃಜನಶೀಲ ಹಾಗು ವಿಮರ್ಶಾತ್ಮಕ ಸಾಹಿತ್ಯಸೃಷ್ಟಿಗೆ ಕಾರಣವಾಗುತ್ತವೆ. ಈ ಪರಂಪರೆ ಸ್ವಾಗತಾರ್ಹವಾದುದು.

'ಸಿದ್ಧಗಂಗಾಶ್ರೀ' ಅಭಿನಂದನ ಗ್ರಂಥದಲ್ಲಿ ಗೌರವಿಸಲ್ಪಡುವವರು ಭರತಖಂಡದ ಆಧ್ಯಾತ್ಮಶಕ್ತಿಯ ಪ್ರತಿರೂಪರು; ಕನ್ನಡ, ಸಂಸ್ಕೃತ ಮತ್ತು ಆಂಗ್ಲ ಭಾಷೆಗಳ ಮೇಲೆ ಪ್ರಭುತ್ವಪಡೆದ ನಿಸ್ಸೀಮ ಪಂಡಿತರು. ಅವರು ಜಾಗತಿಕ ಧರ್ಮಗಳ ಮೌಲ್ಯವನ್ನರಿತು ವರ್ತಮಾನಕ್ಕೆ ಸಲ್ಲುವ ಸಮನ್ವಯಾಚಾರ್ಯರಾಗಿದ್ದಾರೆ. ದೇಶದ ಬಡಜನತೆಯ ಹೊಟ್ಟೆ-ನೆತ್ತಿಗಳನ್ನು ತುಂಬುವ ಕರ್ಮಯೋಗಿಗಳೂ ಆಗಿದ್ದಾರೆ. ಭಗವಂತನ ಕೃಪಾಶಕ್ತಿ ಭುವಿಯಲ್ಲಿ ಅವತರಿಸಿ ಜಗದ ಜೀವಿಗಳನ್ನು ಉದ್ಧರಿಸುತ್ತದೆ ಎಂಬ ಶ್ರದ್ಧೆಗೆ, ನಂಬಿಕೆಗೆ ಪರಮಪೂಜ್ಯ ಡಾ. ಶಿವಕುಮಾರಸ್ವಾಮಿಗಳು ಪ್ರತ್ಯಕ್ಷ ನಿದರ್ಶನ. ಅವರ ಬಗ್ಗೆ ಬರೆಯುವುದೆಂದರೆ, ಅವರ ಸಾರ್ಥಕ ಜೀವನದ ಬೆಳಕಿನ ಹೆಜ್ಜೆಗಳನ್ನು ಗುರುತಿಸುವುದೆಂದರೆ ನಾಡಿನ ಆಧ್ಯಾತ್ಮಿಕ ಇತಿಹಾಸವನ್ನೇ ಬರೆದಂತೆ. ಅಂತೆಯೇ ಅಭಿನಂದನ ಗ್ರಂಥಗಳ ಸಾಲಿನಲ್ಲಿ 'ಸಿದ್ಧಗಂಗಾಶ್ರೀ'ಗೆ ವಿಶಿಷ್ಟ ಸ್ಥಾನವಿದೆ. ಇದು ತನ್ನ ಗುಣ ಗಾತ್ರ ದೃಷ್ಟಿಯಿಂದ ಹೊಸ ಆಯಾಮವನ್ನು ಸೃಷ್ಟಿಸಿದೆ.

ಸುಮಾರು ೧೨೫೦ ಪುಟಗಳ **'ಸಿದ್ಧಗಂಗಾ ಶ್ರೀ'**ಮಹಾಸಂಪುಟದಲ್ಲಿ ಐದು ವಿಭಾಗಗಳಿವೆ. ಮೊದಲನೇಯದು **'ಕ್ಷೇತ್ರಶ್ರೀ'**. ಸಿದ್ಧಗಂಗಾ ಕ್ಷೇತ್ರದ ಇತಿಹಾಸ ಮತ್ತು ಅಲ್ಲಿನ ತೇಜೋಮೂರ್ತಿಗಳ ಜೀವನಚರಿತ್ರೆಗಳು ಇಲ್ಲಿವೆ. ಕ್ಷೇತ್ರದ ಚಟುವಟಿಕೆಗಳು, ವಿದ್ಯಾಸಂಸ್ಥೆಗಳು ಮೊದಲಾದ ವಿವರಣೆಗಳು ಇಲ್ಲಿ ಉಂಟು. ಶ್ರೀಗಳವರ ಭಾಷಣಗಳು, ಲೇಖನಗಳನ್ನು ಇಲ್ಲಿ ಅಳವಡಿಸಲಾಗಿದೆ. ಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಅನುಭವಗಳು, ಕ್ಷೇತ್ರವನ್ನು ಸಂದರ್ಶಿಸಿದ ಗಣ್ಯರ ಅನಿಸಿಕೆಗಳು ಸೇರ್ಪಡೆಯಾಗಿವೆ. ಚಾರಿತ್ರಿಕ ದೃಷ್ಟಿಯಿಂದ ವಾಸ್ತವಿಕತೆಗೆ ಒತ್ತುಗೊಟ್ಟ ನಿರೂಪಣೆ ಇಲ್ಲಿದೆ. ಅಂತೆಯೇ ಇದೊಂದು ಅತ್ಯುತ್ತಮ ಐತಿಹಾಸಿಕ ದಾಖಲೆ. ಈ ಭಾಗದ ಕೊನೆಯಲ್ಲಿ **'ಕವಿ ಕಾಣಿಕೆ'** ಎಡೆ ಪಡೆದಿದೆ. ನಾಡಿನ ಕವಿಕುಲ ಶ್ರೀಕ್ಷೇತ್ರ ಹಾಗೂ ಶ್ರೀಗಳವರ ಬಗ್ಗೆ ಬರೆದ ಕವನಗುಚ್ಛವಿದು. ಈ 'ಕ್ಷೇತ್ರಶ್ರೀ' ವಿಭಾಗವು ಕ್ಷೇತ್ರದ ಭಕ್ತರಿಗೆ, ಅಭಿಮಾನಿಗಳಿಗೆ ಬಹಳ ಪ್ರಿಯವಾಗುವುದರಿಂದ ಇದನ್ನೇ ಪ್ರತ್ಯೇಕವಾಗಿ ಕೆಲವು ಪ್ರತಿಗಳನ್ನು ಅಚ್ಚು ಮಾಡಿಸಿ ಒದಗಿಸಬೇಕೆಂದು ತೀರ್ಮಾನ ಕೈಕೊಂಡ ಮೇರೆಗೆ **'ಸಿದ್ಧಗಂಗಾಶ್ರೀ-ಕ್ಷೇತ್ರಶ್ರೀ ವಿಭಾಗ'**ವು ಪ್ರತ್ಯೇಕವಾಗಿ ಮೂಡಿ ಬಂದಿದೆ.

ಗ್ರಂಥದ ಎರಡನೆಯ ಭಾಗ **'ದರ್ಶನ ಶ್ರೀ'**. ವಿಶ್ವದ ಪ್ರಮುಖ ಧರ್ಮಗಳನ್ನು ಪರಿಚಯಿಸುವ ಲೇಖನಗಳು ಇಲ್ಲಿವೆ. ಜೊತೆಗೆ ವೀರಶೈವ ಧರ್ಮದ ಬಗೆಗಿನ ವಿಸ್ತಾರವಾದ ಅಭ್ಯಾಸಕ್ಕೆ ಅನುಕೂಲವಾಗುವ ಲೇಖನಗಳನ್ನು ಹೊಂದಿದ್ದು ತೌಲನಿಕ ಅಧ್ಯಯನಕ್ಕೆ ಅವಕಾಶವಿದೆ. ದರ್ಶನಶ್ರೀ ಭಾಗದ ಲೇಖನಗಳು ಆಯಾ ಧರ್ಮದ ಬಗ್ಗೆ ಆಳವಾದ ತಿಳುವಳಿಕೆಯುಳ್ಳವರಿಂದ ರೂಪುಗೊಂಡಿದ್ದು ವೈಚಾರಿಕತೆ ಹಾಗೂ ಸಂಶೋಧಕ ದೃಷ್ಟಿಯನ್ನೊಳಗೊಂಡು ರಚಿತವಾಗಿರುವುದು ಸಮಾಧಾನದ ಸಂಗತಿ.

ಮೂರನೆಯದು **'ಸಾಹಿತ್ಯಶ್ರೀ'** ನಾಡಿನ ಸಾಹಿತ್ಯಚರಿತ್ರೆಗೆ ವೀರಶೈವರು ನೀಡಿರುವ ಕಾಣಿಕೆ ಈ ಭಾಗ. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಅವಲೋಕನ ಗ್ರಂಥದ ಇತಿಮಿತಿಯ ದೃಷ್ಟಿಯಿಂದ ಅಸಾಧ್ಯವಾದ್ದರಿಂದ ಸತ್ವ ಮತ್ತು ಸಂಖ್ಯಾ

ದೃಷ್ಟಿಯಿಂದ ಸಾಹಿತ್ಯ ಚರಿತ್ರೆಯಲ್ಲಿ ಸಿಂಹಪಾಲು ಪಡೆದಿರುವ ವೀರಶೈವ ಸಾಹಿತ್ಯವನ್ನು ಹೊಸ ದೃಷ್ಟಿಯಿಂದ ಅಭ್ಯಾಸ ಪೂರ್ಣವಾಗಿ ವಿಶ್ಲೇಷಿಸುವ ಲೇಖನಗಳನ್ನು ಅಳವಡಿಸಬೇಕಾಯಿತು. ಸಾಹಿತ್ಯಪ್ರಕಾರಗಳ ದೃಷ್ಟಿಯಿಂದ ವೀರಶೈವ ಸಾಹಿತ್ಯವನ್ನು ಇಲ್ಲಿ ಅವಲೋಕನ ಮಾಡಿದವರು ನಾಡಿನ ಅಗ್ರಮಾನ್ಯ ಲೇಖಕರು ಎಂಬುದು ಹೆಮ್ಮೆಯ ಸಂಗತಿ.

**'ಕಲಾಶ್ರೀ'** ಎಂಬ ಕೊನೆಯ ವಿಭಾಗದಲ್ಲಿ ವೀರಶೈವರು ಲಲಿತಕಲೆಗಳಿಗೆ ಸಲ್ಲಿಸಿದ ಸೇವೆಯ ಸಮೀಕ್ಷೆ ಇದೆ. ಸಂಗೀತ, ನಾಟಕ, ಗಮಕ ಮೊದಲಾದ ಕಲೆಗಳನ್ನು ವೀರಶೈವರು ಹೇಗೆ ಬೆಳೆಸಿ, ಬೆಳಗಿದರು ಎಂಬುದನ್ನು ಆಯಾ ಕ್ಷೇತ್ರಗಳಲ್ಲಿ ನುರಿತ ಲೇಖಕರು ಬರೆದಿದ್ದಾರೆ. ನಿರೀಕ್ಷಿಸಿದ ಲೇಖನಗಳು ಬರದೆ ಈ ಭಾಗ ಅರೆ-ಕೊರೆಯೆನಿಸಿದರೂ ಈ ನಿಟ್ಟಿನ ಕೆಲಸಕ್ಕೆ ಇದು ತೋರು ಬೆರಳಾಗಿ ಇದೆ ಎಂಬುದಂತೂ ನಿಜ.*

ಈ ಗ್ರಂಥದಲ್ಲಿ ಸೇರ್ಪಡೆಯಾಗಿರುವ 'ಚಿತ್ರಾವಳಿ'ಗಳೇ ಒಂದು ಸಂಪುಟವಾಗುವಷ್ಟು ಇವೆ. ಶ್ರೀ ಕ್ಷೇತ್ರದ ಹಾಗೂ ಶ್ರೀಗಳವರ ಬಗೆಗಿನ ಪ್ರಾತ್ಯಕ್ಷಿಕೆಗಳು ಅವು. ಬೇರೆ ಬೇರೆ ಸನ್ನಿವೇಶಗಳಲ್ಲಿ ತೆಗೆದ ಛಾಯಾಚಿತ್ರಗಳು, ವರ್ಣಚಿತ್ರಗಳು ಮಾತಿಗೆ ನಿಲುಕದ ಮಹಿಮಾಸ್ಪದ ಮಹಾಕಾರ್ಯಗಳನ್ನು ಕಣ್ಣಿಗೆ ಕಟ್ಟುತ್ತವೆ. ಐತಿಹಾಸಿಕವಾಗಿ ಇಂಥ ಚಿತ್ರಗಳ ಮಹತ್ವವನ್ನು ಅರಿತ ನಾವು ಅವು ಹೆಚ್ಚೆಂದು ತೋರಿದರೂ ಅವನ್ನು ಇಲ್ಲಿ ಅಳವಡಿಸಿದ್ದೇವೆ. ಲೇಖನಗಳು ಗ್ರಂಥದ ಸತ್ವವನ್ನು ಹೆಚ್ಚಿಸಿರುವಂತೆ ಈ ಚಿತ್ರಗಳು ಸಂಪುಟದ ಶೋಭೆಯನ್ನು ಹೆಚ್ಚಿಸಿವೆ.

ಇದು ಈ ಮಹಾಸಂಪುಟದ ಸ್ಥೂಲರೂಪ. ಇದರ ಅಂತರಂಗವನ್ನು ಹೊಗಲು ತಮಗೆ ಸ್ವಾಗತ.

ಈ ಅಭಿನಂದನ ಗ್ರಂಥ ಪ್ರಕಟಣ ಸಮಿತಿಯ ಅಧ್ಯಕ್ಷರಾದ ಡಾ. ಸಿದ್ಧಯ್ಯ ಪುರಾಣಿಕ ಅವರು ಮತ್ತು ಸಮಿತಿಯ ಸದಸ್ಯ-ವಿದ್ವಾಂಸರು ತಮ್ಮ ಅಮೂಲ್ಯ ಸಲಹೆ-ಸೂಚನೆಗಳನ್ನು ನೀಡಿ ಮುನ್ನಡೆಸಿದ್ದಾರೆ. ಲೇಖನಗಳ ಪರಿಷ್ಕರಣ ಕಾರ್ಯದಲ್ಲಿ ಶ್ರೀ ಹೆಚ್. ದೇವೀರಪ್ಪನವರು ಮತ್ತು ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು, ಕವನಗಳ ಆಯ್ಕೆಯಲ್ಲಿ ಪ್ರೊ. ಜಿ. ಎಸ್. ಶಿವರುದ್ರಪ್ಪನವರು ನೆರವಾಗಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ನಾಡಿನ ವಿದ್ವಾಂಸರು ನಮ್ಮ ವಿಜ್ಞಾಪನೆಯನ್ನು ಮನ್ನಿಸಿ, ನಾವು ಕೊಟ್ಟ ಕಾಟವನ್ನು ಸಹಿಸಿಕೊಂಡು ನಮಗೆ ಲೇಖನ, ಕವನಗಳನ್ನು ಕಳಿಸಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು. ಕಲಾವಿದ ಶ್ರೀ ಕೋಪರ್ಡೆ, ಪಡಿಯಚ್ಚು ತಯಾರಕರಾದ ಶ್ರೀ ನಾರಾಯಣರಾವ್ ಮತ್ತು 'ಸಿಲ್‌ಟೋನ್ ಬ್ಲಾಕ್' ಮಾಲೀಕರಾದ ಶ್ರೀಧರರಾವ್, ಗ್ರಂಥದ ರಕ್ಷಾಕವಚ ಮತ್ತು ವರ್ಣ ಚಿತ್ರಗಳ ಮುದ್ರಣ ಕಾರ್ಯವನ್ನು ಮನ ಮೆಚ್ಚುವಂತೆ ಮಾಡಿಕೊಟ್ಟ ಶಿವಕಾಶಿಯ ದಿ ಓರಿಯಂಟ್ ಲಿಥೋ ಪ್ರೆಸ್ ಮಾಲೀಕರು, ಗ್ರಂಥದ ಮುದ್ರಕರಾದ ಅನುಭವ ಪ್ರಿಂಟರ್ಸ್‌ನ ಶ್ರೀ ಮಹದೇವ ಬಣಕಾರ ಮತ್ತು ಶ್ರೀ ಬಸವರಾಜ ಜಿಗಳೂರ ಇವರೆಲ್ಲರಿಗೂ ನಮ್ಮ ಧನ್ಯವಾದಗಳು. ಗ್ರಂಥ ನಿರ್ಮಾಣದ ಬೇರೆ ಬೇರೆ ಹಂತಗಳಲ್ಲಿ ನಮಗೆ ಡಾ. ಚನ್ನಬಸಪ್ಪ, ಆಡಿಟರ್ ಶ್ರೀ ಸಿದ್ಧ ಗಂಗಯ್ಯ, ಶ್ರೀ ಕೆ. ಸಿ. ಬಸಪ್ಪ ಮತ್ತು ಶ್ರೀ ಪುಟ್ಟಶಂಕರಯ್ಯ ಇವರುಗಳ ಸಲಹೆ ಸಹಕಾರಗಳು ಅಗಣಿತ. ಇವರಲ್ಲದೆ ಕ್ಷೇತ್ರದ ಅನೇಕ ಹಳೆಯ ವಿದ್ಯಾರ್ಥಿಗಳ ಸಹಕಾರವೂ ದೊರೆತಿದೆ. ಅವರೆಲ್ಲರಿಗೆ ನಮ್ಮ ನೆನಕೆಗಳು. ಪೂಜ್ಯರ ಶ್ರೀಪಾದಕ್ಕೆ ಅರ್ಪಿತವಾದ ಈ ಗ್ರಂಥಪುಷ್ಪವು ಧರ್ಮ, ಸಾಹಿತ್ಯ, ಸಂಸ್ಕೃತಿ, ಕಲೆಗಳ ಅಭ್ಯಾಸ ಮಾಡಬೇಕೆಂಬ ಸಹೃದಯರಿಗೆ ಸದಭಿರುಚಿ ಮೂಡಿಸುವ ಸುಪ್ರಸಾದವಾದರೆ ನಾವು ಧನ್ಯರು.

**ಚನ್ನಪ್ಪ ಎರೇಸೀಮೆ**
**ಟಿ. ಆರ್. ಮಹಾದೇವಯ್ಯ**

---

* ಗ್ರಂಥದಲ್ಲಿ ಪ್ರಕಟಗೊಂಡ ಲೇಖನಗಳಲ್ಲಿನ ಅಭಿಪ್ರಾಯಗಳಿಗೆ ಆಯಾ ಲೇಖಕರು ಹೊಣೆಗಾರರು.

# ವಿಷಯಾನುಕ್ರಮಣಿಕೆ



## ಕ್ಷೇತ್ರಶ್ರೀ

## ಕವಿಕಾಣಿಕೆ

## ದರ್ಶನಶ್ರೀ

## ಸಾಹಿತ್ಯಶ್ರೀ

## ಕಲಾಶ್ರೀ

# ಶುದ್ಧಾಶುದ್ಧ ಪತ್ರಿಕೆ

| ಅಶುದ್ಧ | ಶುದ್ಧ | ಪುಟ-ಸಾಲು | |
|---|---|---|---|
| ಕಾಣಸುತ್ತವೆ | ಕಾಣಿಸುತ್ತವೆ | ೭ | ೨೦ |
| ಸಿದ್ಧೇಶರ | ಸಿದ್ದೇಶ್ವರ | ೭ | ೨೧ |
| ಕಲ್ಲಿಹ | ಕಲ್ಲಿಪ | ೧೧ | ೪ |
| ತೋಂಟದಾರ್ಯದ | ತೋಂಟದಾರ್ಯರ | ೧೧ | ೨೯ |
| ಅವಿಚ್ಚಿನ್ನ | ಅವಿಚ್ಛಿನ್ನ | ೧೩ | ೧೫ |
| ಮು ್ನ | ಮುನ್ನ | ೧೩ | ೨೭ |
| ಗಂಥು | ಗ್ರಂಥ | ೩೪ | ೧೭ |
| ಸ್ವಾಮಿಗಳು)4 | ಸ್ವಾಮಿಗಳು4 | ೫೦ | ೯ |
| ಶಾಶ್ರ | ಶಾಸ್ತ್ರ | ೫೩ | ೧೩ |
| ವೀತರಾಗ | ರಾಗ | ೫೩ | ೨೬ |
| ಭೂದಿ | ಬೂದಿ | ೫೫ | ೯ |
| ಆದಿಂನ | ಅಂದಿನ | ೬೨ | ೩೯ |
| ಅಡವಿಶ್ವರ | ಅಟವೀಶ್ವರ | ೬೩ | ೧೨ |
| ಪ್ರಭಾವಕ್ಯೆ | ಪ್ರಭಾವಕ್ಕೆ | ೧೦೭ | ೩೭ |
| ಆಗ್ರಹ | ಆಗ್ರಹ | ೧೦೯ | ೨೩ |
| ಶ್ರೀಗಳರು | ಶ್ರೀಗಳವರು | ೧೨೬ | ೧೪ |
| ಅನಾದೃಶ | ಅನ್ಯಾದೃಶ | ೧೨೭ | ೨೦ |
| ತೋಂಠದ | ತೋಂಟದ | ೧೫೪ | ೯ |
| ಗರಿಯಸೀ | ಗರೀಯಸೀ | ೧೭೨ | ೧೮ |
| ಈಗಪ್ಪು | ಈಗೆಪ್ಪು | ೧೯೦ | ೨೧ |
| ಅಕೀರ್ತಿಕರವು | ಅಕೀರ್ತಿಕರಮ್ | ೧೯೩ | ೧೦ |
| ಆರ್ಹ | ಅರ್ಹ | ೨೦೧ | ೨೨ |
| ನ್ಯಾನಪಿ | ನಾನ್ಯಪಿ | ೨೧೩ | ೨೩ |
| ನರಃ | ನರೇ | ೨೧೫ | ೩ |
| ವರ್ಷಗಳು | ೭೨ ವರ್ಷಗಳು | ೩೪೨ | ೩೯ |
| ರಜೆ | ರುಜೆ | ೪೧೬ | ೧೦ |
| ಶೀಂಲ | ಶೀಲಂ | ೪೧೬ | ೧೮ |
| ಕ್ಷಜಿದ್ | ಕ್ವಜಿದ್ | ೪೩೯ | ೧೭ |
| ಕ್ಷಜಿದ್ | ಕ್ವಜಿದ್ | ೪೩೯ | ೧೭ |
| ಕ್ಷಜಿದ್ | ಕ್ವಜಿದ್ | ೪೩೯ | ೧೮ |
| ಕ್ಷಜಿದ್ | ಕ್ವಜಿದ್ | ೪೩೯ | ೧೮ |
| ಸಾತ್ತ್ವಿಕ್ವ | ಸಾತ್ತ್ವಿಕ | ೪೪೦ | ೧೮ |
| ಭಟ್ಟ | ಭಟ್ಟ | ೪೪೪ | ೩೫ |
| ನಾಸೇವ | ನಾನ್ಯೇವ | ೪೫೨ | ೨೨ |
| ಗೌಡವಾದ | ಗೌಡಪಾದ | ೫೪೦ | ೧೦ |
| ಸ್ವಭಾಯೋಃ | ಸ್ವಭಾವಯೋಃ | ೫೪೧ | ೧೭ |
| ಸಮೆಪ್ರಿಯಃ | ಸಮೋಪ್ರಿಯಃ | ೫೪೪ | ೯ |
| ದೇಶಬಂಧ | ದೇಹಬಂಧ | ೫೯೮ | ೨ |
| ಅತ್ಯಂತಿಕ | ಆತ್ಯಂತಿಕ | ೫೯೮ | ೨೫ |
| ತನಸಂಗ್ರಹ | ತನ್ತ್ರಸಂಗ್ರಹ | ೬೨೯ | ೩೮ |
| ಶಕ್ತ್ಯಾನುಸಾರ | ಶಕ್ತ್ಯನುಸಾರ | ೬೩೧ | ೨೯ |
| ಆವರ | ಅವರು | ೬೬೯ | ೩೨ |
| ಅವಲಂಬನ | ಅವಲಂಬಿಸ | ೬೭೧ | ೪೧ |
| ಲಕ್ಷಕ್ಕೆ | ಲಕ್ಷ್ಯಕ್ಕೆ | ೬೭೪ | ೫ |
| ದಂಕುಶಕ್ಕಯ್ಯ | ದು, ಕುಲಿಶಕ್ಕಯ್ಯ | ೬೭೭ | ೩೦ |
| ದೇವರದಾಸಿಮಯ್ಯ | ಜೇಡರದಾಸಿಮಯ್ಯ | ೭೪೫-೭೪೭ ಶಿರೋನಾಮೆಗಳು | |
| ೧೦೫೦ | ೧೧೫೦ | ೭೪೭ | ೬ |
| ಪ್ರಡ | ಪುಟ | ೭೫೦ | ೨೨ |
| ೧೧೬೩ | ೧೧೬೮ | ೭೬೮ | ೬ |
| ಸ್ತೋತ್ರ | ಸ್ತೋತ್ರ | ೯೦೭ | ೨೮ |

ಪುಟ ೯೪೨ 'ಕನ್ನಡ ಶತಕಸಾಹಿತ್ಯದ ಆದ್ಯಪ್ರವರ್ತಕರು' ಲೇಖ ಪದ್ಯಗಳಲ್ಲಿ ಚೂಡಾಮಣೀ ಮೌಳೀ ಎಂದು ಅಂತ್ಯಗೊಳ್ಳಬೇಕಾದ ಕೆಲವು ಕಡೆ ಚೂಡಾಮಣಿ, ಮೌಳಿ ಹೀಗೆ ಹ್ರಸ್ವಾಂತವಾಗಿವೆ. ಅವನ್ನು ದೀರ್ಘಾಂತವಾಗಿ ಓದಿಕೊಳ್ಳಬೇಕು.

| ಅಶುದ್ಧ | ಶುದ್ಧ | ಪುಟ-ಸಾಲು | |
|---|---|---|---|
| ಶುತ್ಲ | ಶುಕ್ಲ | ೯೫೩ | ೯ |
| ಕಳಿದ | ತಳೆದ | ೯೮೨ | ೨೫ |
| ಬನ್ನಬಸಪ್ಪ | ಚನ್ನಬಸಪ್ಪ | ೯೮೩ | ೧೦ |
| ಆಥೆಲೊ | ಅಥೆಲೊ | ೧೦೦೧ | ೨೭ |
| ಮುಂಪುವರೆಸು | ಮುಂದುವರಿಸು | ೧೦೬೧ | ೨೦ |
| ಕಂದೆನಿ | ಕಂಪನಿ | ೧೦೬೧ | ೨೧ |
| ನಟನಟಿಯ | ನಟನಟಿಯು | ೧೦೬೧ | ೨೨ |
| ಉದ್ಧಾನ | ಉದ್ದಾನ | ೧೦೮೮ | ೧೦ |
| ಸಾಮುರಶ್ಯ | ಸಾಮರಸ್ಯ | ೧೦೮೮ ಕಾಲಂ ೨ | ೨ |
| ಶಿದ್ಧಲಿಂಗಾ | ಸಿದ್ಧಲಿಂಗಾ | ೧೦೮೮ ಕಾಲಂ ೨ | ೨೩ |



॥ ಶ್ರೀ ಗುರು ಬಸವಲಿಂಗಾಯನಮಃ ॥

# ಸ್ತೋತ್ರ

ಅವಾಚ್ಯಾತ್ಮ ಸ್ವರೂಪಾಯ ಶಿವಭಾವಪ್ರದಾಯಿನೇ
ನಮಃ ಸದ್ಗುರುನಾಥಾಯ ಷಟ್‌ಸ್ಥಲಬ್ರಹ್ಮಮೂರ್ತಯೇ ॥

ಸರ್ವಲೋಕೋಪಕಾರಾಯ ಯೋದೇವಃ ಪರಮೇಶ್ವರಃ
ಚರತ್ಯತಿಥಿರೂಪೇಣ ನಮಸ್ತೇ ಜಂಗಮಾತ್ಮನೇ ॥

ಗುರುಸಿದ್ಧಲಿಂಗ ಕರುಣಾಪಾಂಗ ಭವಭಂಗ ।
ಗುರುಸಿದ್ಧಲಿಂಗೇಂದ್ರ ನತಜನಾಂಬುಧಿಚಂದ್ರ ।
ಗುರುಸಿದ್ಧಲಿಂಗಾರ್ಯ ವೀರವ್ರತಾಚಾರಚರ್ಯ ಸೌಂದರ್ಯವೀರ್ಯ ॥
ಗುರುಸಿದ್ಧಯತಿರಾಜ ಜಿತಮಾಯ ಚಿತ್ಕಾಯ ।
ಗುರುಸಿದ್ಧಲಿಂಗಯ್ಯ ಯೋಗಿಜನಹೃಚ್ಛಯ್ಯ ।
ಗುರುಸಿದ್ಧಲಿಂಗೇಶ ಸುಜ್ಞಾನಸಂಕಾಶ ಜಯಜಯಾಕಾಶಕೇಶ ॥

-ಸಿದ್ಧೇಶ್ವರ ಪುರಾಣ

ಪರುಷತಾನಾದೊಡಂ ಸರಿಯಲ್ತು ನಿಮ್ಮಡಿಗೆ ।
ಪರುಷಂ ಸೋಂಕಿದ ಲೋಹ ಚಿನ್ನವಾಯ್ತಾದರಂತೆ ।
ಪರುಷವೆನಿಸಿದುದಿಲ್ಲ ದೇವ ನಿಮ್ಮಂಘ್ರಿಯುಂ ನೆರೆಪೊರ್ದಿದಧಮನರನು ॥
ಗುರುರೂಪನಪ್ಪನದರಿಂ ಪರಾತ್ಪರಮನಿಮು ।
ಧರ ಜಿತೇಂದ್ರಿಯ ಪಾಲಿಸೆನ್ನ ಸದ್ಗುಣರನ್ನ ।
ದುರಿತಾಚಲಸ್ವರುಪೆ ಗುರುವೆ ತೋಂಟದ ಸಿದ್ಧಲಿಂಗ ಮತ್ಕಲ್ಪತರುವೆ ॥

-ಭಾವರತ್ನಾಭರಣ

ದುರಿತತಮಃಪತಂಗನಮುಕ್ತಾರ್ಥವಿವೇಕನಸತ್ತ್ರಸಂಗನಿ ।
ಸ್ಫುರಲಸದಂತರಂಗನಭವಾಗಮವಾರಿಜ ದಿವ್ಯಭೃಂಗನ ।
ಕ್ಷರಪರಲಿಂಗ ಸಂಗನತಿಶಾಂತಿ ನಿರಸ್ತಜಡಾನುಷಂಗನೊ ।
ಲ್ಬುರುತರ ಸಿದ್ಧಲಿಂಗಯತಿ ತುಂಗನೊಡರ್ಚುಗೆ ಸಜ್ಜನೇಷ್ಟಮಂ ॥

-ರಾಜಶೇಖರವಿಲಾಸ

ಶ್ರೀಮದ್ಬೋಧಸುಧಾಬ್ಧಿವರ್ಧನ ವಿಧುಂ ಮುಕ್ತ್ಯಂಗನಾವಲ್ಲಭಂ ।
ಸೋಮಾದಿ ಪೃಥ್ವಂತತತ್ತ್ವನಿವಹಕ್ಕಾಧಾರರೂಪಂ ಪರಂ ।
ಸೀಮಾತೀತ ಸುಕೀರ್ತಿಯುಕ್ತಮಮಲಂ ಭಕ್ತೇಷ್ಟದಂ ಸದ್ಗುಣೋ ।
ದ್ದಾಮಂ ತೋಂಟದ ಸಿದ್ಧಲಿಂಗನೊಲವಿಂ ರಕ್ಷಿಪ್ಪುದೆಮ್ಮಂ ಸದಾ ॥

-ತೋಂಟದಾರ್ಯರಗಳೆ

ಜಗಜ್ಜಾಲಪಾಲಂ ಜನಸ್ತುತ್ಯಶೀಲಂ ।
ಭವಾರಣ್ಯದಾವಂ ಭೃತಸ್ವಾನುಭಾವಂ ।
ಶಿವಾನಂದಕೋಶಂ ದಿನೇಶಪ್ರಕಾಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

ಕಲಾಸತ್ಕಲಾಪಂ ಕಪರ್ದಿಸ್ವರೂಪಂ ।
ಮನೋವೃತ್ತಿಶೂನ್ಯಂ ಮುನಿವ್ರಾತಮಾನ್ಯಂ ।
ಸಮುಂಚದ್ಗುಣಾಂಕಂ ಸದಾನಿಷ್ಕಳಂಕಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

ಸ್ವತಂತ್ರಸ್ವಲೀಲಂ ಗಜೇಂದ್ರಾನುಕೂಲಂ ।
ಮಿಳನ್ಮೂಲಮಂತ್ರಂ ಪ್ರಣೀತೇಶತಂತ್ರಂ ।
ಶಿವಧ್ಯಾನಸಕ್ತಂ ಪರಾನಾದಿಮುಕ್ತಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

ಪವಿತ್ರಾಭಿಧೇಯಂ ಪರಾಮ್ನಾಯ ಗೇಯಂ ।
ನಿರಸ್ತಾಂಗಜಾತಂ ಸುಧಾಸ್ಫೀತ ಗೀತಂ ।
ಪರಿಚ್ಛಿನ್ನಪಾಶಂ ಸಮಸ್ತಾಮರೇಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥

-ಸಿದ್ಧಲಿಂಗಾಷ್ಟಕ

ಬಸವಪುರಾತನರ್ ಚರಿಸಿ ತೋರಿದ ಷಟ್‌ಸ್ಥಲಮಾರ್ಗದೊಳ್ ಪ್ರವ ।
ರ್ತಿಸುತಮನೂನಭಕ್ತಿರತಿಯಿಂ ತನುವಿತ್ತಮನಂಗಳಂ ಸಮ ।
ರ್ಪಿಸಿ ಗುರುಲಿಂಗಜಂಗಮಕೆ ವಂಚನೆಯಿಲ್ಲದೆ ಮಾಡಿ ಕೂಡಿ ರಾ- ।
ಜಿಸುವ ಮಹಾತ್ಮರಂ ನೆನೆವುದೇ ಘನಮುಕ್ತಿಪದಂ ಶಿವಾಧವಾ ॥

–ಶತಕತ್ರಯ




**ಒಳಗಡೆಯಲ್ಲಿ:**

# ಶ್ರೀಸಿದ್ಧಗಂಗಾಕ್ಷೇತ್ರ: ಪರಿಸರ ಮತ್ತು ಇತಿಹಾಸ

— ಚನ್ನಪ್ಪ ಎರೇಸೀಮೆ.

ಶ್ರೀಸಿದ್ಧಗಂಗಾಕ್ಷೇತ್ರವು ಭಾರತದಲ್ಲಿ ಇಂದು ಜ್ಞಾನ ವಿಜ್ಞಾನಗಳ ಒಂದು ಗಣನೀಯ ಸ್ಥಾನವೆಂದೂ ಧಾರ್ಮಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಪವಿತ್ರಸ್ಥಳವೆಂದೂ, ಎಲ್ಲಕ್ಕೂ ಮಿಗಿಲಾಗಿ ವೀರಶೈವ ಪರಂಪರೆಯ ಮಹಾ ದಾಸೋಹಕ್ಷೇತ್ರವೆಂದೂ, ಸಮಸ್ತ ಮಾನವ ಸಂಸ್ಕೃತಿಯನ್ನು ಗೌರವಿಸುವ ಸ್ಥಾನವೆಂದೂ, ಪ್ರಖ್ಯಾತವಾಗಿ ದೇಶವಿದೇಶಗಳ ವಿಚಾರವಾದಿಗಳ ಗಮನ ಸೆಳೆದಿದೆ. ಈ ಕ್ಷೇತ್ರ ಸಮಸ್ತ ಜನಾಂಗದ ಅನುಕೂಲಕ್ಕಾಗಿ ಅನೇಕಮುಖದಲ್ಲಿ ರಚನಾತ್ಮಕ ಕಾರ್ಯಗೌರವದಲ್ಲಿ ತೊಡಗಿ ನವಭಾರತ ನಿರ್ಮಾಣ ಕಾರ್ಯದಲ್ಲಿ ಶಕ್ತಿಮೀರಿ ಶ್ರಮಿಸಿದೆ; ಶ್ರಮಿಸುತ್ತಿದೆ. ಈ ಕ್ಷೇತ್ರಾಧಿಪತಿಗಳು ಸಾರ್ವಜನಿಕರಿಗೆ ತಾವು ಇಷ್ಟು ಮಾಡಿದ್ದೇವೆಂದು ಹೇಳಿಕೊಳ್ಳುತ್ತಿಲ್ಲ. ಜಂಗಮಸ್ಥಾನವನ್ನಲಂಕರಿಸಿ ಸರ್ವಲೋಕೋಪಕಾರಕ್ಕಾಗಿ ತಾವು ತಮ್ಮ ಪಾಲಿನ ಯಾವ ಕಾರ್ಯ ಮಾಡಬೇಕು ಎಂಬುದನ್ನು ಸ್ವತಃ ಮಾಡಿ, ಆಚರಿಸಿ ತೋರಿಸಿ ಲೋಕಜೀವನಕ್ಕೆ ಪೂರಕವಾಗಿದ್ದಾರೆ. ದಾಸೋಹಂಭಾವದಲ್ಲಿ ತಮ್ಮನ್ನು ಪೂರ್ಣ ಸವೆಸಿ ಎಣ್ಣೆ ಬತ್ತಿಗಳು ತಾವು ಸವೆದು ಲೋಕವನ್ನು ಬೆಳಕು ಮಾಡುವಂತೆ ವ್ಯವಹರಿಸಿದ್ದಾರೆ; ಲೋಕವನ್ನು ಆದಷ್ಟು ದಷ್ಟ ಪುಷ್ಟಗೊಳಿಸಿದ್ದಾರೆ. ಜಂಗಮಧರ್ಮ ಬಹುಸತ್ವದಿಂದ ಕೂಡಿದುದೆಂದೂ, ಅದು ಕ್ರಿಯಾಮುಖವಾಗಿ ಹೊರಹೊಮ್ಮಿದಾಗ ಅಘಟಿತ ಘಟನೆ ನಡೆದು ಹೋಗುವುದೆಂದೂ ಈ ಕ್ಷೇತ್ರ ಮತ್ತು ಕ್ಷೇತ್ರಾಧಿಪತಿಗಳು ತೋರಿಸಿಕೊಟ್ಟಿದ್ದಾರೆ. ಬಸವಾದಿ ಪ್ರಮಥರು ನುಡಿದು ಆಚರಿಸಿ ತೋರಿಸಿದ 'ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ' ಬಯಕೆಯನ್ನು ತಲೆಯಮೇಲೆ ಹೊತ್ತು ಶ್ರಮಿಸುವುದೇ ಈ ಕ್ಷೇತ್ರಾಧಿಪತಿಗಳು ನಡೆದು ಬಂದ ದಾರಿ. ಇಂಥ ಆದರ್ಶ ಕ್ರಿಯಾಸಂಪತ್ತಿನ ಫಲವಾಗಿ 'ಸರ್ವೇಜನಾಃ ಸುಖಿನೋಭವಂತು' ಎಂಬ ಪ್ರಾಚೀನ ಭಾರತೀಯ ಧರ್ಮದ್ರಷ್ಟಾರರ ಉಕ್ತಿ ಈ ಕ್ಷೇತ್ರದಲ್ಲಿ ಕಾರ್ಯರೂಪಕ್ಕೆ ಬಂದಿದೆ. ಈ ಕ್ಷೇತ್ರದಲ್ಲಿ ಅನಾದಿಕಾಲ ದಿಂದಲೂ ನಡೆದು ಬಂದ ದಾಸೋಹ ಕ್ರಿಯೆ (ಪ್ರಸಾದ ವಿತರಣಾ ಕ್ರಿಯೆ) ಬರಬಹುದಾದ ಅನೇಕ ಅಗ್ನಿಪರೀಕ್ಷೆಗಳನ್ನೆಲ್ಲ ಗೆದ್ದು ನೂರಾರು ವರ್ಷಗಳಿಂದ ಅವಿಚ್ಛಿನ್ನವಾಗಿ ನಡೆದುಬಂದಿದೆ. ಹೇಗೆ ನಡೆದುಬಂದಿದೆ ? ಈಗ ಹೇಗೆ ನಡೆಯುತ್ತಿದೆ ? ಎಂಬುದೊಂದು ಬಿಡಿಸಲಾರದ ಕಗ್ಗಂಟು, ನೋಡುವವರಿಗೆ. ಆದರೆ ಇಲ್ಲಿನ ಶಿವಯೋಗಿಗಳ ಸತ್ತ್ವಭರಿತವಾದ ವೀರವಿರಕ್ತ ಧರ್ಮದ ಒಂದು ಸಹಜಕ್ರಿಯೆಯಾಗಿಯೇ ಇದು ಇಂದಿಗೂ ನಡೆಯುತ್ತ ಬಂದಿದೆ. ೧೯೩೦ನೆಯ ಇಸ್ವಿಯಲ್ಲಿ ಶ್ರೀಮದುದ್ದಾನಶಿವಯೋಗಿಗಳವರ ಕರಕಂಜಸಂಜಾತರಾಗಿ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕ್ಷೇತ್ರಾಧ್ಯಕ್ಷರಾದಮೇಲಂತೂ ಅಘಟಿತ ಘಟನಾಸಮರ್ಥರಾದ ಗುರುಗಳ ಕೃಪಾಶೀರ್ವಾದದ ವಜ್ರಕವಚ ತೊಟ್ಟು ಅವರ ಪಂಚಪರುಷ ಶಕ್ತಿಗಳನ್ನು ಕೈವಶಪಡಿಸಿಕೊಂಡು ಶ್ರೀ ಕ್ಷೇತ್ರದ ದಾಸೋಹ ಕ್ರಿಯೆಯನ್ನು 'ನಭೂತೋ ನಭವಿಷ್ಯತಿ'ಎನ್ನುವಂತೆ ಮಾಡಿದ್ದಾರೆ. ತತ್ಫಲವಾಗಿ ಮಠದ ಕೀರ್ತಿಗೌರವಗಳು ದಿಗಂತ ವಿಶ್ರಾಂತ ಗೊಂಡಿವೆ.

ಇವರು ಮಠದ ಅಭಿವೃದ್ಧಿಗೊಳಿಸಿದ್ದಾರೆಂದರೂ ಒಂದೇ; ಲೋಕೋದ್ಧಾರಕ್ಕಾಗಿ ಶ್ರಮಿಸಿದ್ದಾರೆ ಎಂದರೂ ಒಂದೇ. ಸರ್ವಜನಾಂಗದ ಆತಿಥ್ಯದ ಇನ್ನೊಂದು ಹೆಸರೇ ಶ್ರೀ ಸಿದ್ಧಗಂಗಾಕ್ಷೇತ್ರ. ಶ್ರೀ ಶಿವಕುಮಾರ ಸ್ವಾಮಿಗಳವರು ದೀನದಲಿತೋ ದ್ಧಾರಕ್ಕೆ ಶ್ರಮಿಸಿದ್ದಾರೆ. ಜೀವನದ ಅನೇಕ ಕಷ್ಟದಲ್ಲಿ ನೊಂದು ಬೆಂದು ಆಶಾಜ್ಯೋತಿಯನ್ನೇ ನಂದಿಸಿಕೊಂಡವರನ್ನು ಸಂತೈಸಿ ಅವರಲ್ಲಿ ನೂತನ ಆಶೆಯಜ್ಯೋತಿಯನ್ನು ಬೆಳಗಿಸಿದ್ದಾರೆ. ಲಕ್ಷಾಂತರ ಬಡಮಕ್ಕಳ ಪೋಷಣೆಯ ಭಾರಹೊತ್ತು ಪೋಷಿಸಿ ವಿದ್ಯಾಬುದ್ಧಿ ಕಲಿಸಿ ಜೀವನದಲ್ಲಿ ತಲೆಯೆತ್ತಿ ಬಾಳುವ ಮಾರ್ಗತೋರಿಸಿದ್ದಾರೆ. ಅನಾಥರಿಗೆ ಅನ್ನವಿಕ್ಕಿ ಸಂತುಷ್ಟಗೊಳಿಸಿದ್ದಾರೆ. ಅನೇಕ ವಿದ್ಯಾವಂತರಿಗೆ ಪೋಷಕರಾಗಿ ಅವರಿಗೆ ಜೀವನದ ಮಾರ್ಗಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ನೂರಾರು ಮಠಮಾನ್ಯಗಳ ವಟುಗಳಿಗೆ ಧರ್ಮ ನೀತಿಸಂಹಿತೆಯ ಮತ್ತು ಕ್ರಿಯಾಚಾರದ ಆಚಾರ್ಯಪುರುಷರಾಗಿದ್ದಾರೆ. ತಮ್ಮ ಸತ್ತ್ವಭರಿತ ಉಪದೇಶ ಗಳಿಂದ ಲೋಕದ ಅಸಂಖ್ಯಾತ ಜನಗಳಿಗೆ ಮಾರ್ಗದರ್ಶನಮಾಡಿದ್ದಾರೆ. ಪ್ರವಚನ ಪಟುಗಳಾಗಿ ಪುರಾಣ ಪ್ರವಚನ ಮಾಡಿದ್ದಾರೆ. ಉಪಾಧ್ಯಾಯರಾಗಿ ವಿದ್ಯಾರ್ಥಿಗಳಿಗೆ ಪಾಠಪ್ರವಚನ ಮಾಡಿದ್ದಾರೆ. ಕೃಷಿಕಾಯಕಮಾಡಿ ದುಡಿದು ಸಂಪಾದಿಸಿ ತೋರಿಸಿ, ಲೋಕಕ್ಕೆ ವರ್ತನೋಪದೇಶವೇ ಆಗಿದ್ದಾರೆ. ವೀರವಿರಕ್ತಧರ್ಮವನ್ನು ಸ್ವೀಕರಿಸಿ ಲೋಕಕ್ಕೆ ಏನೇನು ಮಾಗದರ್ಶನ ಮಾಡಬೇಕೋ ಅದೆಲ್ಲವನ್ನೂ ಶ್ರದ್ಧಾಭಕ್ತಿ ವಿಶ್ವಾಸದಿಂದ ಮಾಡಿ ಮುಗಿಸಿದ್ದಾರೆ. ಒಟ್ಟಿನಲ್ಲಿ ಸತ್ತ್ವಭೂಯಿಷ್ಠವಾದ ಶ್ರೀ ಸಿದ್ಧಗಂಗಾ ಪುಣ್ಯಕ್ಷೇತ್ರ ಮಧ್ಯದಲ್ಲಿ ಬೆಳೆದು ಲೋಕದುದ್ದಕ್ಕೂ ರೆಂಬೆ ಕೊಂಬೆಗಳನ್ನು ಚಾಚಿ ನಿಂತ ಮಹಾವೃಕ್ಷವಾಗಿದ್ದಾರೆ. ಆ ಮಹಾವಿಟಪಿಯ ಆಶ್ರಯ

ಛಾಯೆಯಲ್ಲಿ ಲಕ್ಷೋಪಲಕ್ಷ ಜನ ವಿಶ್ರಮಿಸಿದ್ದಾರೆ. ಹಸಿವೆಯಾದರೆ ಫಲಗಳನ್ನು ಕಿತ್ತು ತಿಂದಿದ್ದಾರೆಂದು ಅಲಂಕಾರಿಕವಾಗಿ ಈ ಕ್ಷೇತ್ರಾಧಿಪತಿ ಶ್ರೀ ಶಿವಕುಮಾರಸ್ವಾಮಿಗಳವರ ವಿಚಾರವಾಗಿ ಹೇಳಬಹುದು.

**ಶ್ರೀ ಸಿದ್ಧಗಂಗಾಕ್ಷೇತ್ರದ ಪರಿಸರ ಮಹತ್ವ**

ಶ್ರೀ ಸಿದ್ಧಗಂಗಾಕ್ಷೇತ್ರ ತುಮಕೂರು ಜಿಲ್ಲೆಯಲ್ಲಿದೆ. ತುಮಕೂರಿನಿಂದ ಪೂರ್ವಕ್ಕೆ ಮೂರು ಮೈಲುಗಳ ಅಂತರದಲ್ಲಿದೆ. ದಾಸೋಹಮೂರ್ತಿಯಾದ ಚಿಕ್ಕಣ್ಣಸೆಟ್ಟಿಯೆಂಬ ಶರಣನಿದ್ದ ಕೇತಸಮುದ್ರ (ಕ್ಯಾತಸಂದ್ರ)ದಿಂದ ಉತ್ತರಕ್ಕೆ ಎರಡು ಫರ್ಲಾಂಗ್ ದೂರದಲ್ಲಿದೆ.[1] ಅನೇಕ ಶಿವಶರಣರ ಬೀಡಾಗಿದ್ದು ಚೋಳರ ಕಾಲದಿಂದಲೂ ಪ್ರಸಿದ್ಧವಾಗಿರುವ ದೇವರಾಯ ಪಟ್ಟಣದಿಂದ ಆಗ್ನೇಯಕ್ಕೆ ಅರ್ಧ ಮೈಲು ದೂರದಲ್ಲಿದೆ[2]. ಅನೇಕ ಗುಹೆಗಳಿಂದಲೂ ಶಿವಲಿಂಗಗಳಿಂದಲೂ ತುಂಬಿರುವ ರಾಮಗಿರಿ ಎಂಬ ಹೆಸರಿನ ಬೆಟ್ಟವೂ (ರಾಮಲಿಂಗನ ಬೆಟ್ಟ ಅಥವಾ ರಾಮೇದೇವರ ಬೆಟ್ಟ) ಸಿದ್ಧಗಂಗಾಬೆಟ್ಟ (ಶಿವಗಿರಿ ?)ವೂ ಅವಳಿಬೆಟ್ಟಗಳಾಗಿವೆ. ಈ ಬೆಟ್ಟ ಸಿದ್ಧಲಿಂಗೇಶ್ವರ ಕ್ಷೇತ್ರದಿಂದ ಪೂರ್ವದಿಗ್ಭಾಗದಲ್ಲಿ ಅನತಿ ದೂರದಲ್ಲಿಯೇ ಇದೆ. ಸಿದ್ಧಗಂಗಾಗಿರಿ (ಶಿವಗಿರಿ ?) ರಾಮಲಿಂಗೇಶ್ವರ ಬೆಟ್ಟಗಳಿಂದ ಆಗ್ನೇಯಕ್ಕೆ ನಾಲ್ಕು ಮೈಲುಗಳ ಅಂತರದಲ್ಲಿ ಸಿದ್ಧಗಿರಿ ಇದೆ. ಈ ಸಿದ್ಧಗಿರಿಗೆ ಸಿದ್ಧನಬೆಟ್ಟ ಅಥವಾ ನಿಜಗಲ್ಲುಬೆಟ್ಟವೆಂದೂ ಕರೆಯಲಾಗುತ್ತಿದೆ. ಇದು ಅನೇಕ ಗುಹೆಗಳಿಂದಲೂ, ಆ ಗುಹೆಗಳಲ್ಲಿ ಶಿವಲಿಂಗಗಳಿಂದಲೂ ಒಳಗೊಂಡು ಪ್ರಾಚೀನ ಶೈವೇತಿಹಾಸವನ್ನು ಸಾರುವ ಒಂದು ಸಂಶೋಧನಾಯೋಗ್ಯ ಸ್ಥಾನವಾಗಿದೆ. ಇಲ್ಲಿರುವ ಭವ್ಯವಾದ ಉದ್ಭಾನವೀರಭದ್ರನಿಂದ ಇದು ವೀರಭದ್ರಕ್ಷೇತ್ರವೂ ವೀರಶೈವಕ್ರಾಂತಿ ಕ್ಷೇತ್ರಗಳಲ್ಲಿ ಒಂದೂ ಎನಿಸಿದೆ. ಈ ಬೆಟ್ಟದಿಂದ ಆಗ್ನೇಯಕ್ಕೆ ೪ ಮೈಲು ದೂರದಲ್ಲಿಯೇ ದಕ್ಷಿಣಕಾಶಿಯೆಂದೂ ಪುಣ್ಯ ಕ್ಷೇತ್ರವೆಂದೂ ಹೆಸರಾಗಿರುವ ಶಿವಗಂಗಾ ಬೆಟ್ಟವಿದೆ. ಶಿವಗಂಗೆಯಿಂದ ವಾಯವ್ಯಕ್ಕೆ ಒಂದು ಗೆರೆ ಎಳೆದರೆ ನೇರವಾಗಿ ನಾಲ್ಕು ನಾಲ್ಕು ಮೈಲುಗಳ ಅಂತರದಲ್ಲಿ ಸಿದ್ಧಗಿರಿ–ರಾಮಗಿರಿ–ಸಿದ್ಧಗಂಗಾಗಿರಿ ಈ ನಾಲ್ಕು ಬೆಟ್ಟಗಳು ಪ್ರಾಚೀನ ಶೈವೇತಿಹಾಸದ ಅನಂತ ಅವಶೇಷಗಳಿಂದ ಕೂಡಿ ಬೀಗಿ ಬಳುಕಿನಿಂತಿವೆ. ಈ ನಾಲ್ಕು ಬೆಟ್ಟಗಳಲ್ಲಿ ಅನೇಕ ಗುಹೆಗಳು, ಶಿವಲಿಂಗಗಳು, ಕೋಟೆ ಕೊತ್ತಳಗಳು,ತಪೋಯೋಗ್ಯ ಸ್ಥಾನಗಳು ತುಂಬಿದ್ದು ಇವುಗಳು ಈ ನಾಡಿನ ಪ್ರಾಚೀನ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲಬಲ್ಲವುಗಳಾಗಿವೆ. ಕಲ್ಯಾಣದ ಕ್ರಾಂತಿಯ ನಂತರ ಅನೇಕ ಚರಪತಿಗಳಿಂದ ಕೂಡಿ ಚಿಕ್ಕಸಿದ್ಧೇಶ್ವರನೆಂಬುವನು ಶಿವಗಂಗೆಗೆ ಬಂದು ಅಲ್ಲಿ ಹೊನ್ನಾದೇವಿಯಿಂದ ಕಂಕಣ ಪಡೆದನೆಂದು ಹೇಳುವ ಹಂಪೆಯ ವಿರೂಪಾಕ್ಷ ಪಂಡಿತನ (ಕ್ರಿ.ಶ. ೧೫೮೫) ಚೆನ್ನಬಸವ ಪುರಾಣದ "....ಚಿಕ್ಕಸಿದ್ಧೇಶ್ವರಂ ಚರಪತಿಗಳಂ ಕೂಡಿಕೊಂಡಿರದೆ ಸಂಚರಿಸುತ್ತ ಶಿವಗಂಗೆಗೈತಂದು ಹೊನ್ನಾದೇವಿಯಿಂ ಕಂಕಣವ ಪಡೆದನು"* (೬೨-೪೩). ಈ ಮಾತು ವಿಚಾರಯೋಗ್ಯ. ಕಲ್ಯಾಣದ ಶಿವಶರಣರನೇಕಸಂತಾನ ಶಿವಗಂಗೆಯ ಸುತ್ತಮುತ್ತ ಹರಡಲು ಇದು ಮುಖ್ಯಕಾರಣವಾಯಿತು. ಈ ಚಿಕ್ಕಸಿದ್ಧೇಶ್ವರನ ಗವಿ ಸಿದ್ಧಗಂಗಾ ಬೆಟ್ಟದ ಪಕ್ಕದ ರಾಮಲಿಂಗನ ಬೆಟ್ಟದಲ್ಲಿ ಈಗಲೂ ಇದೆ. ಇವನ ಕಾರಣದಿಂದಲೇ ಈ ಗವಿಗೆ ಚಿಕ್ಕಸಿದ್ಧೇಶ್ವರನ ಗವಿಯೆಂದು ಹೆಸರು ಬಂದಿರಬಹುದು. ಈ ಗವಿಗೂ ಶಿವಗಂಗಾ ಕ್ಷೇತ್ರಕ್ಕೂ ನೇರವಾಗಿ ಏಳು ಮೈಲುಗಳ ಸುಮಾರು ದೂರವಾಗುವುದು. ಸಾಕಷ್ಟು ವಿಶಾಲವಾದ ಈ ಗವಿಯಲ್ಲಿ ಶಿವಲಿಂಗವಿದೆ. ಭವ್ಯವಾದ ಈ ಗವಿ ರಾಮಗಿರಿಯ ಮಧ್ಯದ ಸುಂದರ ಸನ್ನಿವೇಶದಲ್ಲಿದೆ; ಹೊರಭಾಗದಲ್ಲಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ಈ ಗವಿಯ ಹೊರಭಾಗದಲ್ಲಿರುವ ಬಂಡೆಗಳ ಮೇಲಿನ ಕೆಲವು ಚಿಹ್ನೆಗಳು ಏನೆಂಬುದು ತಿಳಿಯುತ್ತಿಲ್ಲ. ಈ ಗವಿಯ ಪಶ್ಚಿಮದಿಗ್ಭಾಗದಲ್ಲಿ ಸಮೀಪದಲ್ಲಿಯೇ ಅತ್ಯಂತ ಮಹತ್ವದ ದೊಡ್ಡಸಿದ್ಧಪ್ಪನ ಗವಿಯಿದೆ. ಈ ಗವಿಗೆ ಈ ಹೆಸರು ಬರಲು ಕಾರಣ : ತೋಂಟದ ಸಿದ್ಧಲಿಂಗೇಶ್ವರರ ಪ್ರಮುಖ ಶಿಷ್ಯರಲ್ಲೊಬ್ಬರಾಗಿದ್ದ ದೊಡ್ಡಸಿದ್ಧಪ್ಪನವರ ಸಂಬಂಧದಿಂದ ಇತ್ತೀಚೆಗೆ ಬಂದಿರಬಹುದು. ಈ ಗವಿಯು ಮೂರು ಬಾಗಿಲುಗಳಿಂದ ಕೂಡಿದ್ದು, ಈ ಮೂರು ಬಾಗಿಲುಗಳೂ ಕಡೆದು ಸುಂದರಗೊಳಿಸಲ್ಪಟ್ಟಿವೆ. ಇದು ಬಹು ದುರ್ಗಮವಾಗಿದ್ದು, ಒಳಗೆ ಶಿವಲಿಂಗ ಮತ್ತು ನಂದಿಗಳಿವೆ. ಹಿಂದಿನ ಸಿದ್ಧಗಂಗಾಧಿಪತಿಗಳಿಗೂ ಈ ಗವಿಗೂ ನಿಕಟ ಸಂಬಂಧವಿದ್ದುದಾಗಿ ತಿಳಿದುಬರುತ್ತದೆ.

ನಮ್ಮ ಪ್ರಾಚೀನ ಶಿವಯೋಗಿಗಳು, ಸಿದ್ಧಪುರುಷರು ನಿಸರ್ಗಸೊಬಗಿನ ಸೌಂದರ್ಯಕ್ಕೆ ಮಾರುಹೋದವರು. ಪರಮಾತ್ಮನ ವ್ಯಕ್ತರೂಪವಾದ ಸೃಷ್ಟಿಯ ಅನಂತ ರೂಪರಾಶಿಯನ್ನು ಅವರು ಎಂದೂ ಕಡೆಗಣಿಸಿದವರಲ್ಲ. ಶಿವಲೀಲೆಯ ರಸಬುಗ್ಗೆ

---

1. ಚೆನ್ನಬಸವಪುರಾಣ ಕಾಂ.5 ಸಂ.10 ಪ.65
2. ಶಿವತತ್ತ್ವ ಚಿಂತಾಮಣಿ ಪು.401. ಪದ್ಯ 75 ; ಈ ಊರಿನಲ್ಲಿ ಚೋಳರ ಕಾಲದ ಒಂದು ಶಿವಾಲಯವೂ ಒಂದು ಪ್ರಾಚೀನ ವೀರಶೈವ ಮಠವೂ ಇದ್ದು ಇದು ಚಿಕ್ಕ ಪಾಳೆಯಪಟ್ಟಾಗಿತ್ತೆಂದು ತಿಳಿದುಬರುವುದು.

* ಚರಪತಿಗಳನ್ನು ಕೂಡಿಕೊಂಡು ಚಿಕ್ಕಸಿದ್ಧೇಶ್ವರರು ಬಂದುದು ವಿಜಯನಗರದಿಂದ ಆಗಿರಬಹುದೆಂದು ಕೆಲವರ ತರ್ಕವಿದೆ. ಆದರೆ ಪದ್ಯದಲ್ಲಿ ಬಂದಿರುವ ವಿಷಯವನ್ನವಲೋಕಿಸಿ ಬಸವಣ್ಣನಿದ್ದ ಕಲ್ಯಾಣವೇ ಆಗಿರಬಹುದೆಂದು ನಾವು ಊಹಿಸಿದ್ದೇವೆ. ವಿಜಯನಗರಕ್ಕೂ 'ವಿಜಯ ಕಲ್ಯಾಣ ಎಂಬ' ಹೆಸರು ಇತ್ತುಮಾತ್ರ.

ಯಾಗಿರುವ ಸತ್ಯ–ಸುಂದರ–ಶಿವದ ಜೀವಂತದೇಗುಲವಾಗಿ ಸೃಷ್ಟಿಯ ಶುದ್ಧಸೌಂದರ್ಯದಿಂದ ತಿರೋಧಾನರಾದವರಲ್ಲ. ಅಂತೆಯೇ ಶಿವನ ಅಗಾಧಲೀಲೆಯ ರಸಬುಗ್ಗೆಯಾಗಿರುವ ಸಹಜಸೌಂದರ್ಯತಾಣಗಳಾದ ಬೆಟ್ಟಗುಡ್ಡಗಳಲ್ಲಿ ಸೃಷ್ಟಿಯೇ ನಿರ್ಮಿಸಿದ ಹೆಬ್ಬಂಡೆಗಳ ತಳದ ಗೂಡುಗಳನ್ನು ತಮ್ಮ ತಪೋಭೂಮಿಗಳನ್ನಾಗಿ ಮಾಡಿಕೊಂಡು ಅಲ್ಲಿ ಆತ್ಮಾರಾಮರಾಗಿ ನಿತ್ಯಸತ್ಯವನ್ನು ಅರಸುತ್ತಿದ್ದರೆಂದು ತೋರುತ್ತದೆ. ಅವರು ಲೋಕಜೀವನದಿಂದ ದೂರವಿದ್ದು ಅವರ ಪಾರಿಶುದ್ಧ್ಯಕ್ಕೆ ಹೋಗಿ ಲೋಕವನ್ನು ತಿದ್ದುತ್ತಿದ್ದರು. ಸದಾ ಸೃಷ್ಟಿಯ ಸೊಬಗಿನ ಮಧ್ಯದಲ್ಲಿ ತಾವೂ ಸೃಷ್ಟಿಯೇ ಆಗಿ ಕಂಗೊಳಿಸುತ್ತಿದ್ದರು. ಇಲ್ಲದಿದ್ದರೆ ಇಂಥ ದುರ್ಗಮ ಗವಿಗಳನ್ನು ಆರಿಸಿಕೊಂಡು ವಾಸಯೋಗ್ಯವಾದವುಗಳನ್ನಾಗಿ ಏಕೆ ಮಾಡುಕೊಳ್ಳುತ್ತಿದ್ದರು? ಅಲ್ಲಿ ಅವರ ಕಣ್ಣಿಗೆ ಸದಾ ಕಾಣುವ ಸೂರ್ಯೋದಯ ಸೂರ್ಯಾಸ್ತಗಳ ಸೊಬಗು, ವಿಶಾಲವಾದ ಭೂಭಾಗ, ತಲೆಯೆತ್ತಿ ನೋಡಿದರೆ ಕಾಣುವ ಸುಂದರ ಬೆಟ್ಟದ ಉತ್ತುಂಗ ಶೃಂಗಗಳು ಅದರ ಮೇಲೆ ಅನಂತವೆನಿಸಿ ಕಾಣುವ ನೀಲಾಕಾಶ, ಹಚ್ಚನೆಯ ಹಸಿರುದುಂಬಿ ಸದಾ ರಾರಾಜಿಸುವ ಸುತ್ತಮುತ್ತಣ ಅರಣ್ಯರಾಶಿ, ಭೀಮಾಕಾರದ ಅರೆ ಬಂಡೆಗಳ ಸೊಬಗು, ಸ್ವಚ್ಛಂದವಾಗಿ ವಿಹರಿಸುವ ವನ್ಯಮೃಗಗಳು, ಪಶು ಪಕ್ಷಿಗಳು–ಈ ಸಹಜ ಸುಂದರ ನಿಸರ್ಗ ಸೊಬಗಿನ ಬಾಳು ಅವರನ್ನು ಮುಗ್ಧರನ್ನಾಗಿ ಮಾಡುತ್ತಿತ್ತು. ಆನಂದತುಂದಿಲರನ್ನಾಗಿಮಾಡುತ್ತಿತ್ತು. ಅಂತೆಯೇ ಸಾಮಾನ್ಯ ಮನುಷ್ಯವರ್ಗದಿಂದ ವಾಸಿಸಲಶಕ್ಯವಾದ ತಾಣಗಳನ್ನು ತಮ್ಮ ತಪೋಯೋಗ್ಯಸ್ಥಾನಗಳನ್ನಾಗಿ ಆರಿಸಿಕೊಳ್ಳುತ್ತಿದ್ದರು. ನಿತ್ಯ ಸತ್ಯ ತತ್ತ್ವವನ್ನರಸುವ ಬೀಡುಗಳನ್ನಾಗಿ ಮಾಡಿಕೊಳ್ಳುತ್ತಿದ್ದರು. ಈ ದೃಷ್ಟಿಯಿಂದ ಶಿವಗಂಗಾಗಿರಿ–ಸಿದ್ಧರಬೆಟ್ಟ, ರಾಮಗಿರಿ, ಸಿದ್ಧಗಂಗಾಗಿರಿ –ಇವುಗಳು ಒಂದಕ್ಕೊಂದು ಸಂಬಂಧವುಳ್ಳವುಗಳಾಗಿ, ಅನೇಕ ಪ್ರಾಚೀನ ಸಿದ್ಧಪುರುಷರ ಸಿದ್ಧಿಕ್ಷೇತ್ರಗಳೂ, ಕ್ರಾಂತಿಕ್ಷೇತ್ರಗಳೂ ಆಗಿದ್ದವು ಎಂಬುದನ್ನು ಇಲ್ಲಿನ ಅವಶೇಷಗಳಿಂದ ಅರಿಯಬಹುದಾಗಿದೆ.

ಇಲ್ಲಿನ ಗುಹೆಗಳು ೧೨ನೆಯ ಶತಮಾನದಿಂದಲೂ ಬೆಳೆದುಬಂದ ವೀರಶೈವರ ಮಹಾಕ್ರಾಂತಿಯಲ್ಲಿ ಪ್ರತ್ಯಕ್ಷ ಭಾಗಿಗಳಾಗಿದ್ದ ಅನೇಕ ಶಿವಯೋಗಿಗಳ ನಿವಾಸಸ್ಥಾನಗಳಾಗಿದ್ದುವೆಂದೂ ಇತ್ತೀಚಿನ ಅನೇಕ ಸಿದ್ಧಪುರುಷರ ತಾಣಗಳಾಗಿದ್ದವೆಂದೂ ತಿಳಿದು ಬರುವುದು. ಅದಕ್ಕೂ ಪೂರ್ವದಲ್ಲಿ ಇವು ಅನೇಕ ಪಾಶುಪತಾಚಾರ್ಯರುಗಳ ಬೀಡುಗಳೂ ಆಗಿರಬಹುದು. ಪಾಶುಪತಾಚಾರ್ಯರು ಸ್ಥಾಪಿಸಿದ ಲಿಂಗಗಳಿಗೆಲ್ಲಾ 'ಸಿದ್ಧೇಶ್ವರ' ಎಂದು ಹೆಸರಿರುವುದೂ ಪ್ರಸಿದ್ಧವಾದ ಅಂಶ. ಅವು ವಾಸಯೋಗ್ಯಗವಿಗಳಾದ ಬಗೆಗೆ ಏನೇನೂ ಸುಳಿವು ಸಿಗುವುದಿಲ್ಲ; ಈಗಲೂ ಸುವ್ಯವಸ್ಥೆಯಲ್ಲಿ ಸಿದ್ಧಗಂಗಾಬೆಟ್ಟದಲ್ಲಿ ಮೂರುಗವಿಗಳೂ, ರಾಮಲಿಂಗನ ಬೆಟ್ಟದಲ್ಲಿ ನಾಲ್ಕು ಗವಿಗಳೂ, ಸಿದ್ಧನಬೆಟ್ಟದಲ್ಲಿ ಮೂರುಗವಿಗಳೂ ಶಿವಗಂಗಾಬೆಟ್ಟದಲ್ಲಿ ಏಳೆಂಟುಗವಿಗಳೂ ನಮಗೆ ಕಾಣುತ್ತವೆ. ಅನೇಕ ಗವಿಗಳು ಹಾಳಾಗಿವೆ. ಈ ದೃಷ್ಟಿಯಿಂದ ಬೆಂಗಳೂರು ಜಿಲ್ಲೆಯಲ್ಲಿರುವ ರೇವಣಸಿದ್ಧೇಶ್ವರನಬೆಟ್ಟ, ಕೊರಟಗೆರೆ ತಾಲ್ಲೂಕಿನಲ್ಲಿರುವ ಸಿದ್ಧನಬೆಟ್ಟಗಳೂ, ಕಲ್ಲೆಯಬೆಟ್ಟದ ಎರಡು ಗವಿಗಳೂ ವಿಚಾರಯೋಗ್ಯ ಸ್ಥಾನಗಳಾಗಿವೆ. ಈ ಪರಿಸರದ ವೀರಶೈವರಿಗೆಲ್ಲ ಈ ತಾಣಗಳ ಸಂಬಂಧ ಅನೇಕ ರೀತಿಯಲ್ಲಿ ಹೆಣೆದುಕೊಂಡಿದೆ.

## ಸಿದ್ಧಗಂಗಾ ಪರಿಸರದಲ್ಲಿನ ಅನೇಕ ಪ್ರಸಿದ್ಧ ಸ್ಥಾನಗಳು

೧) **ಬೆಳಗುಂಬ:** ಸಿದ್ಧಗಂಗಾ ಬೆಟ್ಟದ ಸಮೀಪದಲ್ಲಿ ಕೇವಲ ಒಂದು ಮೈಲು ಅಂತರದಲ್ಲಿರುವ ಬೆಳಗುಂಬಬೆಟ್ಟವು ಸಿದ್ಧರಾಮೇಶ್ವರರ ತಪೋಭೂಮಿಯಾಗಿದೆ. ಇಲ್ಲಿ ಸಿದ್ಧರಾಮೇಶ್ವರ ದೇವಾಲಯವಿದ್ದು, ಪ್ರತಿವರ್ಷ ಮಕರಸಂಕ್ರಮಣದಲ್ಲಿ ಜಾತ್ರೆ ನೆರವೇರುತ್ತದೆ. ಸಿದ್ಧರಾಮೇಶ್ವರರು, ರೇವಣಸಿದ್ಧ, ಮರುಳಸಿದ್ಧರ ಜೊತೆಯಲ್ಲಿ ಶಿವಗಂಗಾಪ್ರಾಂತದಲ್ಲಿ ಅನೇಕ ವರ್ಷಗಳು ಇದ್ದು ನಂತರ ಈ ಬೆಳಗುಂಬ ಬೆಟ್ಟದಲ್ಲಿ ಕೆಲವು ವರ್ಷ ಅನುಷ್ಠಾನ ಮಾಡಿ, ಗೋಡೆಕೆರೆ, ನೊಣವಿನಕೆರೆ, ಎಳನಡು, ಹುಲಿಯೂರು ದುರ್ಗ, ಕಟ್ಟಿಗೆಹಳ್ಳಿ, ತಮಡಿಹಳ್ಳಿ ಮೊದಲಾದ ಕಡೆ ಹೋಗಿ ಆಮೇಲೆ ಸೊನ್ನಲಾಪುರಕ್ಕೆ ಬಂದು ಲಿಂಗೈಕ್ಯರಾಗಿರಬಹುದೆಂದು ಊಹಿಸಲು ಶಕ್ಯವಿದೆ. ಈಗ ದಕ್ಷಿಣ ಕರ್ನಾಟಕ ಪ್ರಾಂತದಲ್ಲಿ ಸುಮಾರು ೭೭ ಸ್ಥಾನಗಳು ಸಿದ್ಧರಾಮೇಶ್ವರ ಕ್ಷೇತ್ರಗಳಾಗಿವೆಯೆಂದು 'ಸದ್ಧರ್ಮದೀಪಿಕೆ' ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನರು ಅಭಿಪ್ರಾಯಪಡುತ್ತಾರೆ. ಮರುಳಸಿದ್ಧ, ರೇವಣಸಿದ್ಧರ ಸ್ಮಾರಕವಿರುವ ಕಡೆಗಳಲ್ಲೆಲ್ಲ ಸಿದ್ಧರಾಮೇಶ್ವರರ ಸ್ಮಾರಕಗಳಿವೆಯೆಂದು ಶ್ರೀ ಚೆನ್ನಮಲ್ಲಿಕಾರ್ಜುನರು ತೋರಿಸಿಕೊಟ್ಟಿದ್ದಾರೆ.[3] ಬೆಳಗುಂಬದಲ್ಲಿದ್ದಾಗಲೇ ೧೨ನೆಯ ಶತಮಾನದಲ್ಲಿ ಸಿದ್ಧಗಂಗಾಗಿರಿಯಲ್ಲೂ ಅವರು ಕೆಲವು ದಿನ ಇದ್ದಿರಬಹುದು ಎಂದು ಊಹಿಸಲು ಶಕ್ಯವಿದೆ. ಏಕೆಂದರೆ ಇವೆರಡೂ ಸ್ಥಾನಗಳು ತೀರ ಸಮೀಪದವು. ಹೊಂದಿಕೊಂಡೇ ಇರುವ ಬೆಟ್ಟಗಳು. ಶೂನ್ಯಸಿಂಹಾಸನಾಧೀಶರಾಗಿ ಸಿದ್ಧರಾಮೇಶ್ವರರೂ, ಆಚಾರ್ಯಪುರುಷರಾಗಿ ರೇವಣಸಿದ್ಧ ರುದ್ರಮುನಿಗಳೂ ಮತ್ತು ಮರುಳಸಿದ್ಧೇಶ್ವರರೂ ಈ ಭಾಗದಲ್ಲಿ ತಮ್ಮ ಪಾಲಿನ ಕೆಲಸಮಾಡಿದ್ದಾರೆಂದು ಊಹಿಸಲು ಅನೇಕ ಆಧಾರಗಳನ್ನು ಶ್ರೀ ಚೆನ್ನಮಲ್ಲಿಕಾರ್ಜುನರು ಒದಗಿಸಿದ್ದಾರೆ.[4] ಇದಲ್ಲದೆ

---

3) ಶ್ರೀ ಚೆನ್ನಮಲ್ಲಿಕಾರ್ಜುನ : ರೇವಣಸಿದ್ಧರು, ಪು. 220

4) ಅದೇ ಪು. 218, 219, 232, 233, 244, 388, 389.

ಪಕ್ಕದ ರಾಮದೇವರ ಬೆಟ್ಟದ ಮೇಲಿರುವ ಕೋಟೆಕೊತ್ತಲಗಳೂ, ಅಲ್ಲಿರುವ ಶಿವಾಲಯ ಮತ್ತು ಗುಹೆ, ದೇವರಾಯಪಟ್ಟಣದಲ್ಲಿನ ಅವಶೇಷಗಳೂ, ಕೇತಸಮುದ್ರದ ಅವಶೇಷಗಳೂ ಈ ಭಾಗದ ಪ್ರಾಚೀನ ವೈಭವವನ್ನು ಚಿತ್ರಿಸುವ ಕೆಲವು ಹಳೆಯ ಉಳಿಕೆಗಳು. ಚಾರಿತ್ರಿಕ ದೃಷ್ಟಿಯಿಂದಲೂ ಧರ್ಮ ಇತಿಹಾಸ ದೃಷ್ಟಿಯಿಂದಲೂ ಸಿದ್ಧಗಂಗೆಯ ಸುತ್ತಮುತ್ತಣ ಪ್ರದೇಶಗಳು ಅನೇಕ ಬಗೆಯ ಅವಶೇಷಗಳನ್ನುಹೊಂದಿವೆ.

೨) **ಗುಬ್ಬಿ :** ಅಮರಗುಂಡವೆಂದು ೧೨ನೆಯ ಶತಮಾನದಿಂದಲೂ ಪ್ರಸಿದ್ಧವಾದ ಗುಬ್ಬಿಯು ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಕೇವಲ ೧೧-೧೨ ಮೈಲು ಪಶ್ಚಿಮದಿಗ್ಭಾಗದಲ್ಲಿದ್ದು, ಸಿದ್ಧಗಂಗೆಯೊಡನೆ ಪ್ರಾಚೀನ ಕಾಲದಿಂದಲೂ ಸಂಬಂಧವಿಟ್ಟುಕೊಂಡಿದ್ದ ಐತಿಹಾಸಿಕ ನಗರವಾಗಿದೆ. ಸಿದ್ಧಗಂಗೆಯಲ್ಲಿ ತಮಗೊಂದು ಮಠವನ್ನು ಸ್ಥಾಪಿಸಿ, ಈ ಕ್ಷೇತ್ರದಿಂದ ಒಂದು ಶಿಷ್ಯ ಪರಂಪರೆಯು ಬೆಳೆದು ಬರುವುದಕ್ಕೆ ಕಾರಣರಾದ ಶ್ರೀ ಗೋಸಲ ಸಿದ್ಧೇಶ್ವರ ಸ್ವಾಮಿಗಳವರಿಂದ ೩ನೆಯವರಾದ (ಗೋಸಲ ಸಿದ್ಧೇಶ್ವರರ ಶಿಷ್ಯರ ಶಿಷ್ಯರ ಶಿಷ್ಯ) ಗೋಸಲಚನ್ನಬಸವೇಶ್ವರರ ಸಮಾಧಿ ಇರುವುದು ಇಲ್ಲಿಯೇ. ಇವರು ಸಿದ್ಧಗಂಗಾ ಕ್ಷೇತ್ರಾಧಿಪತಿಯಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಗುರುಗಳೇ ಆಗಿದ್ದಾರೆ. 'ನಿರಂಜನವಂಶರತ್ನಾಕರ' ಗ್ರಂಥದ ಅಭಿಪ್ರಾಯದ ಪ್ರಕಾರ ಈ ಚೆನ್ನಬಸವೇಶ್ವರರು ಸಿದ್ಧಗಂಗಾಕ್ಷೇತ್ರದ ಬೆಟ್ಟದ ಮೇಲಿನ ಗವಿಯಲ್ಲಿ ಅನುಷ್ಠಾನಾದಿಗಳನ್ನು ಮಾಡಿಕೊಂಡು ಲಿಂಗಜಂಗಮ ದಾಸೋಹಕ್ರಿಯೆಗಳನ್ನೆಸಗುತ್ತಿದ್ದ ಸಮಯದಲ್ಲಿ ಗುಬ್ಬಿಯಿಂದ ಮಲ್ಲಣ್ಣನು ಶ್ರೀ ಕ್ಷೇತ್ರಕ್ಕೆ ಬಂದು ಚೆನ್ನಬಸವರಾಜೇಂದ್ರ ಸ್ವಾಮಿಗಳನ್ನು ತನ್ನ ಗುಬ್ಬಿಗೆ ಕರೆದೊಯ್ದು ೭೨ ಬಿರುದು ಸಹಿತ ಉತ್ಸವಾದಿಗಳನ್ನು ಮಾಡಿಸಿ, ಗಣಪರ್ವವನ್ನಾಚರಿಸಿ, ಅವರಿಂದಲೇ ಅನುಗ್ರಹವನ್ನು ಪಡೆದನೆಂದು ತಿಳಿದು ಬರುವುದು. ಈ ಚೆನ್ನಬಸವರಾಜೇಂದ್ರ ಸ್ವಾಮಿಗಳೇ 'ಕ್ಷೇತ್ರಜ್ಞ ಸುಮನೋವಾದ'ವೆಂಬ ವೀರಶೈವಸಿದ್ಧಾಂತ ಪ್ರತಿಪಾದಕ ಗ್ರಂಥವನ್ನು ಬರೆದಿದ್ದಾರೆ. 'ಕರ್ನಾಟಕ ಸಂಸ್ಕೃತೋಭಯ ಕವಿತ್ವಂಗಳಂ ಪೂರ್ಣಲಕ್ಷಣ ಚಮತ್ಕಾರದಿಂದ ಮಾಳ್ಪನಿರ್ಣಯಕೆ ನೀನೆಯುಗ್ಗಳವಲಾ! ಬಸವಪುರಾಣಾರ್ಥವಂ ಪೇಳ್ವೊಡೆ ಅರ್ಣವಪ್ರಾಂತ ಭೂಮಿಯೊಳು ಪೆಸರಾಗಿರ್ದೆ' ಎಂದು ಜನ ಮಲ್ಲಣಾರ್ಯನನ್ನು ಹೊಗಳುತ್ತಿದ್ದರಂತೆ. ಬಸವಪುರಾಣ ಪ್ರವಚನದಲ್ಲಿ ಈತ ಬಹಳ ಗಟ್ಟಿಗನೆಂದು ತಿಳಿಯುವುದು. ಅಂತೆಯೆ ಇವನು ಹೇಳುವ ಬಸವಪುರಾಣವನ್ನು ಕೇಳಲು ಜನಜಂಗುಳಿಯಲ್ಲಿ ಎರಡು ಗುಬ್ಬಚ್ಚಿಗಳೂ ದಿನಾಲು ಬರುತ್ತಿದ್ದವಂತೆ. ಪುರಾಣ ಪರಿಸಮಾಪ್ತಿಯೊಡನೆ ಅವೂ ಕೂಡ ಅಸುವನ್ನು ನೀಗಲು ಅವುಗಳನ್ನು ಸಮಾಧಿಮಾಡಿಸಿ ಮೇಲೆ ವೃಷಭ ಪ್ರತಿಷ್ಠೆಮಾಡಿ ಅದಕ್ಕೆ ಗುಬ್ಬಚ್ಚಿ ಬಸವನೆಂದು ಈಗಲೂ ಕರೆಯುವಂತಾಗಿದೆ. ಈ ಕಾರಣದಿಂದಲೇ ಈ ಅಮರಗೊಂಡಕ್ಕೆ ಗುಬ್ಬಿ ಎಂಬ ಹೆಸರು ಬಂದಿತೆಂದು ಆಖ್ಯಾಯಿಕೆಯಿದೆ. ಈ ಮಲ್ಲಣಾರ್ಯನ ಹಿರಿಯರು ಶಿವಯೋಗನಿಷ್ಠಾಗರಿಷ್ಠರೂ, ಮಹಾ ದಾರ್ಶನಿಕರೂ, ಕವಿಗಳೂ ಆದವರೆ ಆಗಿದ್ದಾರೆ. ಬಸವಣ್ಣನವರ ಕಾಲದವರೆಗೂ ಇವರ ಹಿರಿಯರ ಚರಿತ್ರೆ ಹೋಗುತ್ತದೆ. ವಾತುಲಾಗಮಕ್ಕೆ ಟೀಕೆ ಬರೆದು 'ಗಣಭಾಷಿತರತ್ನಮಾಲೆ'ಯೆಂಬ ವಚನಸಂಕಲನಗ್ರಂಥ ಬರೆದ ಗುಬ್ಬಿಯ ಮಲ್ಲಣ್ಣನೇ (ಕ್ರಿ.ಶ. ೧೪೭೫) ಇವನ ತಾತ. 'ಸಿದ್ಧೇಶ್ವರ ಪುರಾಣ' ಕರ್ತೃವಾದ ಶಾಂತೇಶ (ಕ್ರಿ.ಶ. ೧೫೬೧) ಈ ಮಲ್ಲಣಾರ್ಯರ ಮಗ. ಹೀಗೆ ವಿದ್ವಾಂಸರ, ಅನುಭಾವಿಗಳ ವಂಶವಲ್ಲಿ ಬೆಳೆದುಬಂದು ಪರಂಪರೆಯನ್ನು ಉಳಿಸಿದ ಮಲ್ಲಣಾರ್ಯ (ಕ್ರಿ.ಶ. ೧೫೧೩) ಸಿದ್ಧಗಂಗೆಯ ಸಂಬಂಧ ಸಂಪರ್ಕವನ್ನು ಇಟ್ಟುಕೊಂಡವನೆಂದು ತಿಳಿದು ಬರುವುದು. 'ಭೂಲೋಕ ಪಾವನ ಕಕುದ್ಗಿರಿ ಸುದಾಕ್ಷಿಣ್ಯ ಕೈಲಾಸವೆನಿಸಿದ್ದ' ಶಿವಗಂಗೆಯ ಮೇಗಣ ಗವಿಯ ಸಿಂಹಾಸನಾಧೀಶ ಶಾಂತಸಂಜೀಶ್ವರನ ಶಿಷ್ಯನಾದ ಈತನಿಗೆ ಶಿವಗಂಗೆಯ ಸಂಬಂಧವೂ ವಿಶೇಷವಾಗಿತ್ತು. ಹೀಗೆ ಸಿದ್ಧಗಂಗೆ ಶಿವಗಂಗೆಗಳ ಸಂಬಂಧವಿಟ್ಟುಕೊಂಡ ಮಲ್ಲಣ್ಣನ ಊರಾದ ಗುಬ್ಬಿಯು ಸಿದ್ಧಗಂಗೆಯ ಪರಿಸರದ ಅತ್ಯಂತ ಮಹತ್ವದ ಪ್ರಾಚೀನ ಊರಾಗಿದೆ; ಶಿವಶರಣರ ಬೀಡಾಗಿದೆ.ಗುಬ್ಬಿಯ ಮಲ್ಲಣಾರ್ಯರ 'ವೀರಶೈವಾಮೃತ ಮಹಾಪುರಾಣ' ಈ ಪರಿಸರದಲ್ಲಿನ ಅನೇಕ ಮಹಾಪುರುಷರ, ದಾರ್ಶನಿಕರ, ಶಿವಯೋಗಿಗಳ, ಸಂಬಂಧವನ್ನು ತಿಳಿಸುವ ಮಹಾಗ್ರಂಥವಾಗಿ ಸಿದ್ಧಗಂಗಾ ಪರಿಸರದ ಮಹತ್ವವನ್ನು ಕುರಿತು ಬೆಳಕು ಚೆಲ್ಲಬಲ್ಲ ಸತ್ತ್ವಪೂರ್ಣ ವಿಶ್ವಕೋಶವಾಗಿದೆ. ಶಿವಗಂಗೆ, ಗೂಳೂರು, ಗುಮ್ಮಳಾಪುರಗಳೇ ಮೊದಲಾದ ಅನೇಕ ಸ್ಥಾನಗಳ ಮಹತ್ವ ಈ ಗ್ರಂಥದಿಂದ ಸುವ್ಯಕ್ತವಾಗುತ್ತಿದೆ. ವೀರಶೈವ ಧರ್ಮೇತಿಹಾಸದಲ್ಲಿ ಗುಬ್ಬಿ ಅತ್ಯಂತ ಮಹತ್ವದ ಸ್ಥಾನವಿಶೇಷವೆನಿಸಿದೆ.

೩) **ಗೂಳೂರು :** ಸಿದ್ಧಗಂಗಾ ಕ್ಷೇತ್ರಕ್ಕೆ ಕೇವಲ ೩-೪ ಮೈಲು ನೈಋತ್ಯಕ್ಕೆ ಇರುವ ಸುಪ್ರಸಿದ್ಧವಾದ ಗೂಳೂರು ವೀರಶೈವ ಕ್ರಾಂತಿಯ ಇತಿಹಾಸದಲ್ಲಿ ಹೆಸರಿಸಬೇಕಾದ ಒಂದು ಮಹತ್ವದ ಸ್ಥಳವಾಗಿದೆ. ಈ ಗೂಳೂರನ್ನು ವೃಷಭಪುರಿಯೆಂದೂ ಅನೇಕ ಗ್ರಂಥಗಳಲ್ಲಿ ಕರೆಯಲಾಗಿದೆ. 'ಗೂಳೂರು' ಎಂಬ ಕನ್ನಡ ಪದದ ಸಂಸ್ಕೃತ ರೂಪ ಇದು. ಶಿವಗಂಗೆಯಿಂದ ೭-೮ ಮೈಲು ಪಶ್ಚಿಮಕ್ಕಿರುವ ಈ ಊರಿನಲ್ಲಿ ಮಹಾದಾರ್ಶನಿಕನೂ ಗುಮ್ಮಳಾಪುರದ ಸಿದ್ಧವೀರಣಾರ್ಯರ ತರುವಾಯ ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಯಲ್ಲಿ ಹರದನಹಳ್ಳಿಯ ಶೂನ್ಯಸಿಂಹಾಸನಾಧಿಪತಿಯೂ ಆಗಿದ್ದ ಸಿದ್ಧವೀರಣಾರ್ಯರ ಊರಾಗಿದೆ. ಇವರಿಗೆ ಗೂಳೂರು ಸಿದ್ಧವೀರಣ್ಣೊಡೆಯ ಎಂದೂ ಕರೆಯಲಾಗುತ್ತಿದೆ. ನಮಃಶಿವಾಯದೇವರು ಇವರ ವಿದ್ಯಾಗುರುಗಳು. ಇವರು ಬರೆದ ಶೂನ್ಯ

ಸಂಪಾದನೆಯೆಂಬ ಶ್ರೇಷ್ಠತಮ ಗ್ರಂಥ ಕನ್ನಡ ಸಾಹಿತ್ಯೇತಿಹಾಸದಲ್ಲಿ ಅತ್ಯಂತ ಮಹತ್ವ ಸ್ಥಾನ ಪಡೆದಿದೆ. ತಾವು ಬರೆದ ಈ ಶೂನ್ಯ ಸಂಪಾದನೆಯಲ್ಲಿ "ಶ್ರೀಮದ್ಬೋಧಾಗುರು ನಮಃಶಿವಾಯದೇವರ ದಿವ್ಯಪದಕಮಲಕ್ಕೆ ಈ ಸಂಪಾದನೆಯ ದಿವ್ಯಜ್ಞಾನವಚನಾಮೃತವ ಬರೆದು ಸಮರ್ಪಿಸಿದೆನು. ಗುರುವೇ, ಎನ್ನ ತಪ್ಪನ್ನೊಪ್ಪಿಗೊಂಡು ಎನ್ನಂಗ ಮನಂಗಳಲ್ಲಿ ಮೂರ್ತಿಗೊಂಡು ನಿಮ್ಮ ಚಿದಂಘ್ರಿಯೊಳೆನ್ನನಿಂಬಿಡಯ್ಯ ಶಾಶ್ವತ ಗುರುವೇ ಶರಣಾರ್ಥಿ" ಎಂದು ತನ್ನ ಆತ್ಯಂತಿಕ ಗುರುಭಕ್ತಿಯನ್ನು ಪ್ರಕಟಿಸಿಕೊಂಡಿದ್ದಾರೆ. ಇವರು 'ನಮಃಶಿವಾಯಗುರುವೇ' ಎಂಬ ಅಂಕಿತದಲ್ಲಿ ವಚನಗಳನ್ನೂ ಬರೆದಿರಲು ಸಾಧ್ಯವಿದೆ ಎಂದು ವಿದ್ವಾಂಸರು ತರ್ಕಿಸಿದ್ದಾರೆ. ತಾವು ತಮ್ಮ ಶೂನ್ಯಸಂಪಾದನೆಯನ್ನು 'ತೋಂಟದ ಸಿದ್ಧಲಿಂಗ ಸದ್ಗುರು ವರನಾಥನ ಆದರದೊಳಿರ್ಪ ಬೋಳಬಸವೇಶಾರ್ಯರ ಸತ್ಕರುಣವನಾಂತು' ಬರೆದುದಾಗಿ ಅವರ ಈ ಗ್ರಂಥದಿಂದಲೇ ತಿಳಿದು ಬರುವುದು. ಗೂಳೂರು ಸಿದ್ಧವೀರಣ್ಣೊಡೆಯರು ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಯ ಶೂನ್ಯಸಿಂಹಾಸನಾಧಿಪತಿಗಳಾದುದರಿಂದಲೂ, ಪ್ರಭುದೇವರ ಮಹತ್ತು ಬೃಹತ್ತುಗಳನ್ನು ಪ್ರಕಟಗೊಳಿಸುವ ಶ್ರೇಷ್ಠಮಟ್ಟದ ಶೂನ್ಯಸಂಪಾದನೆಯ ಕರ್ತೃಗಳಾದುದರಿಂದಲೂ, ಸಿದ್ಧಲಿಂಗೇಶ್ವರರ ಶ್ರೀಕ್ಷೇತ್ರವಾದ ಸಿದ್ಧಗಂಗೆಗೆ ಸಮೀಪದವರೇ ಆದುದರಿಂದಲೂ ಇವರು ಸಿದ್ಧಗಂಗೆಗೆ ಅತ್ಯಂತ ಸಂಬಂಧವುಳ್ಳವರು. ಸಿದ್ಧಗಂಗೆಯ ಪರಿಸರದ ಮಹತ್ವವನ್ನು ಸಾರಲು ಗೂಳೂರು ಮತ್ತು ಅಲ್ಲಿನ ಸಿದ್ಧವೀರಣ್ಣೊಡೆಯರು ಪ್ರತ್ಯಕ್ಷ ನಿದರ್ಶನ. ಗೂಳೂರಿನಲ್ಲಿ ಅನೇಕ ವೀರಶೈವ ಮಠಗಳ ಅವಶೇಷಗಳನ್ನು ನೋಡಬಹುದಾಗಿದೆ. ಸಂಪಾದನೆಯ ಚನ್ನಂಜೇದೇವ, ಗುರುಲಿಂಗದೇವರೇ ಮೊದಲಾದ ಸುಪ್ರಸಿದ್ಧ ದಾರ್ಶನಿಕರೂ ಇದೇ ಗೂಳೂರಿನವರೇ ಎಂಬುದು ಇನ್ನೂ ವಿಶೇಷ ಸಂಗತಿ.

೪) **ಕೈದಾಳ :** ಗೂಳೂರಿನ ಪಕ್ಕದಲ್ಲಿರುವ ಕೈದಾಳ ಕ್ಷೇತ್ರ ಕರ್ನಾಟಕದ ಶಿಲ್ಪಕಲೆಯಲ್ಲಿ ಆಚಾರ್ಯಪುರುಷನೆಂದು ಕೀರ್ತಿತನಾಗಿರುವ ಜಕ್ಕಣಾಚಾರ್ಯನ ಜನ್ಮಸ್ಥಳ. ಈ ಸ್ಥಳವೂ ಸಿದ್ಧಗಂಗೆಯಿಂದ ನೈಋತ್ಯಕ್ಕೆ ೩-೪ ಮೈಲುಗಳ ಅಂತರವುಳ್ಳದ್ದು. ಈಗಲೂ ಇಲ್ಲಿರುವ ದೇವಾಲಯದ ಶಿಲ್ಪಕಲೆ ಸಂದರ್ಶಕರನ್ನು ಮಂತ್ರಮುಗ್ಧರನ್ನಾಗಿ ಮಾಡುವ ಅಂತಸ್ಸತ್ತ್ವದಿಂದ ಕೂಡಿದೆ. ಪ್ರಾಚೀನ ಕಾಲದಿಂದಲೂ ಶಿಲ್ಪಶಾಸ್ತ್ರಾಚಾರ್ಯರು ಹುಟ್ಟಿ ಬೆಳೆಯಬೇಕಾದುದರ ಹಿನ್ನೆಲೆಯಲ್ಲಿ ಅವರಿಗೆ ಆಶ್ರಯವೀಯುತ್ತಿದ್ದ ರಾಜಮಹಾರಾಜರ ಬಗೆಗೂ ವಿಚಾರ ಮಾಡಬೇಕಾಗುತ್ತದೆ.

೫) **ಮಣ್ಣೆ :** ಸಿದ್ಧಗಂಗೆಗೆ ನೇರ ಪೂರ್ವದಲ್ಲಿ ಸುಮಾರು ೧೨-೧೪ ಮೈಲುಗಳ ದೂರದಲ್ಲಿ ಮಣ್ಣೆ ಎಂಬ ಗ್ರಾಮವು ಚೋಳರ ಕರ್ನಾಟಕದ ರಾಜಧಾನಿಯಾಗಿತ್ತೆಂದು ಇತ್ತೀಚೆಗೆ ಅಲ್ಲಿ ಸಿಕ್ಕ ಅವಶೇಷಗಳಿಂದ ತಿಳಿದುಬಂದಿದೆ. ಆ ಊರನ್ನು ಹಿಂದೆ ಮಾನ್ಯಪುರ, ಮಣಿಪುರ, ರತ್ನಪುರ ಎಂದು ಕರೆಯಲಾಗುತ್ತಿತ್ತು. ಅಲ್ಲಿರುವ ಸೋಮೇಶ್ವರ ದೇವಾಲಯ ಮನೋಹರವಾಗಿದೆ. ಇದು ಸಿದ್ಧಗಂಗಾ ಪರಿಸರದ ಅತ್ಯಂತ ಮಹತ್ವದ ಐತಿಹಾಸಿದ ಸ್ಥಾನವಾಗಿದೆ.

೬) **ಶಿವಗಂಗಾ ಕ್ಷೇತ್ರ :** ಬಹು ಪ್ರಾಚೀನ ಕಾಲದಿಂದಲೂ ಶಿವಗಂಗೆ-ಸಿದ್ಧಗಂಗೆ ಎರಡೂ ಕ್ಷೇತ್ರಗಳ ಸಂಬಂಧ ಜನಜೀವನದಲ್ಲಿ ಹಾಸುಹೊಕ್ಕು. ಸಿದ್ಧಗಂಗೆಯನ್ನು ನೋಡಿ ಶಿವಗಂಗೆಗೂ, ಶಿವಗಂಗೆಯನ್ನು ನೋಡಿ ಸಿದ್ಧಗಂಗೆಗೂ ಬರುವುದು ಇಂದಿಗೂ ಜನರಲ್ಲಿ ಉಳಿದುಬಂದಿರುವ ಶ್ರದ್ಧಾವಿಶೇಷ. 'ಶಿವಗಂಗೆಯ ನೋಟಕ್ಕೆ, ಸಿದ್ಧಗಂಗೆ ಊಟಕ್ಕೆ', 'ಸಿದ್ಧಗಂಗೆಯ ಊಟ ಚಂದ, ಶಿವಗಂಗೆಯ ನೋಟಚಂದ'ಎಂಬ ಗಾದೆಗಳು ಇನ್ನೂ ಜನಜಂಗುಳಿಯ ಬಾಯಲ್ಲಿ ಉಳಿದು ಬಂದಿರುವ ಮಾತಾಗಿವೆ. ಈ ಎರಡೂ ಕ್ಷೇತ್ರಗಳು ಕೇವಲ ೮-೯ ಮೈಲುಗಳ ಅಂತರದಲ್ಲಿದ್ದು ವೀರಶೈವ ಕ್ರಾಂತಿಯ ಇತಿಹಾಸದಲ್ಲಿ ಇವುಗಳ ಮಹತ್ವ ಅತ್ಯಂತ ಕುತೂಹಲಕಾರಿಯಾದುದು. ಸುತ್ತಮುತ್ತಣ ಪ್ರದೇಶಕ್ಕೆ ಶಿವಶರಣರ ತತ್ತ್ವಪ್ರಸಾರ ಮಾಡುವಿಕೆಯಲ್ಲಿ ಈ ಎರಡೂ ಕ್ಷೇತ್ರಗಳಿಗೆ ಅತ್ಯಂತ ಮಹತ್ವ ಬಂದಿದೆ. ಶಿವಗಂಗೆಗೆ ಇರುವಷ್ಟು ಪ್ರಾಚೀನ ಚರಿತ್ರೆಯ ದಾಖಲೆಗಳು ಸಿದ್ಧಗಂಗೆಗೆ ಇರದಿದ್ದರೂ ಸಿದ್ಧಗಂಗೆಯು ಪ್ರಾಚೀನ ಕಾಲದಿಂದಲೂ ಸಿದ್ಧಪುರುಷರ ನಿವಾಸಸ್ಥಾನವಾಗಿರಲಿಕ್ಕೆ ಸಾಕೆಂಬುದನ್ನು ಇಲ್ಲಿನ ಬೆಟ್ಟದಲ್ಲಿರುವ ಅನೇಕ ಪ್ರಾಚೀನ ಗುಹೆಗಳು ಸಾರುತ್ತಿವೆ. ಶಿವಗಂಗೆಗೆ ಅನೇಕವರ್ಷಗಳ ಚರಿತ್ರೆಯಿದ್ದರೂ ೧೨ನೇ ಶತಮಾನದ ನಂತರ ಈ ಕ್ಷೇತ್ರದಲ್ಲಿ ವೀರಶೈವರ ಅದ್ಭುತ ಕ್ರಾಂತಿ ನಡೆದಿದೆ. ಇದೊಂದು ಸೂರ್ಯನಿದ್ದ ಹಾಗೆ. ಅದರ ಕಿರಣಗಳು ಹರದನಹಳ್ಳಿ, ಗುಮ್ಮಳಾಪುರ, ಗುಬ್ಬಿ, ಸಿದ್ಧಗಂಗೆ, ಕಲ್ಲೆಯ, ವಿಜಯನಗರ, ಶ್ರೀಶೈಲದವರೆಗೂ ಹರಡಿದ್ದವು. ಸಿದ್ಧಗಂಗಾಧಿಪತಿಗಳಾದ ಶಿವಕುಮಾರ ಸ್ವಾಮಿಗಳು "ನನ್ನ ಬಾಲ್ಯದಲ್ಲಿ ಶಿವಗಂಗಾಕ್ಷೇತ್ರ ನನ್ನ ಮೇಲೆ ಮಹತ್ತರವಾದ ಪ್ರಭಾವ ಬೀರಿದೆ" ಎಂದು ಹೇಳಿಕೊಳ್ಳುತ್ತಿದ್ದಾರೆ. ಇಂದಿಗೂ ಶಿವಗಂಗೆಯ ಸುತ್ತಮುತ್ತಣ ಊರಿನ ಜನಗಳು ಪ್ರಾತಃಕಾಲ ಎದ್ದು ಮೊದಲು ಶಿವಗಂಗೆ ಬೆಟ್ಟ ನೋಡಿ ಕೈಮುಗಿಯುವ ಪರಿಪಾಠವನ್ನಿಟ್ಟುಕೊಂಡಿದ್ದಾರೆ. ಶಿವಗಂಗೆಯ ಚರಿತ್ರೆಯನ್ನು ಅಗಸ್ತ್ಯ, ಮುದ್ಗಲ, ಕಣ್ವಾದಿ ಋಷಿಗಳವರೆಗಿನ ಪ್ರಾಗೈತಿಹಾಸಿಕ ಕಾಲದವರೆಗೂ ಎಳೆದುಕೊಂಡು ಹೋಗಲಾಗುತ್ತಿದೆ. ಆದರೆ ಈ ಬಗೆಗೆ ಹೆಚ್ಚು ಸಾಕ್ಷ್ಯಾಧಾರಗಳು ಬೇಕಾಗುತ್ತವೆ. ಈಗಿನ ಅವಶೇಷಗಳಿಂದ ಸುಮಾರು ೧೨೦೦ ವರ್ಷಗಳ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದೆ. ಕ್ರಿ.ಶ. ೮ನೆಯ ಶತಮಾನದ ಶಂಕರಾಚಾರ್ಯರ ಸಂಬಂಧವನ್ನು ಈ ಕ್ಷೇತ್ರಕ್ಕೆ ಹೇಳಲಾಗುತ್ತಿದೆ. ಇದು ಸುಪ್ರಸಿದ್ಧ ಶೈವಕ್ಷೇತ್ರವಾಗಿರುವಂತೆಯೇ ಜೈನರ ಸಾಂಸ್ಕೃತಿಕ ಕ್ಷೇತ್ರವೂ ಆಗಿದೆ. ಹೊಯ್ಸಳ

ವಿಷ್ಣುವರ್ಧನನ ಪಟ್ಟಮಹಿಷಿಯಾದ ಶಾಂತಲೆಯು ಇಲ್ಲಿ ಬಸದಿಗಳನ್ನು ಕಟ್ಟಿಸಿದಳೆಂದೂ.ಕೊನೆಗೆ ಇಲ್ಲಿಯೇ ಕ್ರಿ.ಶ. ೧೧೩೧ರಲ್ಲಿ ಸಮಾಧಿ ಮರಣವನ್ನಪ್ಪಿದಳೆಂದೂ ಹೇಳಲಾಗುತ್ತಿದೆ.[5]

ಇಂದಿಗೂ ಶಿವಗಂಗೆಯಲ್ಲಿ ವರ್ಷಕ್ಕೊಮ್ಮೆ ಆಚರಿಸಲಾಗುತ್ತಿರುವ 'ಶಾಂತಮ್ಮನ ಹಬ್ಬ' ಎಂಬ ಹಬ್ಬ ಈ ಚರಿತ್ರೆಗೆ ಪುಷ್ಟಿಯನ್ನು ಕೊಡುವ ಒಂದು ಅಂಶವಾಗಿದೆ. ಅದೇನೇ ಇರಲಿ, ವೀರಶೈವೇತಿಹಾಸದಲ್ಲಿಯಂತೂ ೧೨ನೇ ಶತಮಾನದಿಂದೀಚೆಗೆ ಈ ಕ್ಷೇತ್ರ ಬಹಳಷ್ಟು ಚರಿತ್ರೆಯನ್ನಡಗಿಸಿಕೊಂಡಿರುವುದಂತೂ ನಿಶ್ಚಯ. ಈಗ ಈ ಕ್ಷೇತ್ರದಲ್ಲಿ ಅಳಿದುಳಿರುವ ಮಠಮಾನ್ಯಗಳ ದಾಖಲೆಗಳಿಂದ, ಅವಶೇಷಗಳಿಂದ, ಸುಮಾರು ಪಂಚಪೀಠಗಳ ಐದು ಮಠಗಳೂ ಸೇರಿ ೬೪ ಮಠಗಳು ಇದ್ದುವೆಂದು ತಿಳಿದುಬರುವುದು. ಇವು ಬೆಟ್ಟದ ಮೇಲೂ ಕೆಳಗೂ ಇದ್ದುವು. ಕೆಲವು ಕಪೆ ಗುಹೆಗಳೇ ಮಠಗಳಾಗಿದ್ದವು. ಇವುಗಳಲ್ಲಿ ಇಂದಿಗೂ ಬೆಟ್ಟದ ಮೇಲ್ಭಾಗದಲ್ಲಿ ರೇವಣಸಿದ್ಧೇಶ್ವರರು ಮತ್ತು ರುದ್ರಮುನಿಶಿವಾಚಾರ್ಯರ ಸಂಬಂಧದ ಮೇಲಣ ಗವಿಮಠ ಮತ್ತು ಹೊನ್ನಮ್ಮನ ಗವಿಮಠಗಳ ಹೆಸರನ್ನು ಹೇಳಬಹುದು. ಕಲ್ಲಿಯಲ್ಲಿ ೬೪ ಶೀಲಗಳನ್ನು ಆಚರಿಸಿಕೊಂಡಿದ್ದ ಪಾಲ್ಕುರಿಕೆ ಸೋಮನಾಥರೆಂಥ ವೀರಶೈವಾಚಾರ್ಯಮಹಾಪುರುಷರನ್ನು ದಂಗುಬಡಿಸಿದ ಸರ್ವಶೀಲೆ ಚೆನ್ನಮ್ಮನಂತೆಯೇ ಶಿವಗಂಗೆಯಲ್ಲೂ ೬೪ ಶೀಲಗಳನ್ನು ಆಚರಿಸುತ್ತಿದ್ದ ಹೊನ್ನಮ್ಮನೆಂಬ ಶಿವಶರಣೆಯಿದ್ದಳೆಂದೂ ಅವಳ ಕಾರಣದಿಂದಲೇ ಹೊನ್ನಮ್ಮನ ಗವಿಮಠವು ಅಸ್ತಿತ್ವದಲ್ಲಿ ಬಂದಿತೆಂದೂ ಅವಳು ತ್ರಿವಿಧ ದಾಸೋಹ ಸದ್ಭಾವಿನಿಯಾಗಿದ್ದಳೆಂದೂ ಪ್ರಸಿದ್ಧ ಸಂಶೋಧಕರಾದ ಚೆನ್ನಮಲ್ಲಿಕಾರ್ಜುನರ ಅಭಿಪ್ರಾಯವಾಗಿದೆ.[6] ಈ ಮಠ ಉಜ್ಜಯಿನಿ ಮರುಳಸಿದ್ಧರ ಪೀಠಕ್ಕೆ ಸೇರಿದ ಮಠವೆಂದೂ ಈಗ ಕರೆಯಲಾಗುತ್ತಿದೆ. ಈಗಿರುವ ಹೊನ್ನಮ್ಮನ ವಿಗ್ರಹ ಪಾರ್ವತಿಯ ಆಕಾರದಲ್ಲಿ ಕಪೆಯ ಗಂಗಾಧರೇಶ್ವರ ದೇವಾಲಯವಿರುವುದರಿಂದ ಎಲ್ಲಾ ಕಡೆಗೂ ಇದ್ದ ಹಾಗೆ ಪಾರ್ವತಿಯ ದೇವಾಲಯವನ್ನು ಮಾಡಿ ಆ ವಿಗ್ರಹಕ್ಕೆ ಹೊನ್ನಮ್ಮ ಎಂದು ಕರೆಯುತ್ತಿರಬಹುದು. ಹೊನ್ನಮ್ಮ ಎಂಬುದರ ಸಂಸ್ಕೃತ ರೂಪಾಂತರವೇ 'ಸ್ವರ್ಣಾಂಬಾ'. ಬೆಟ್ಟದ ಕೆಳಭಾಗದಲ್ಲಿ 'ಮರಿಯಮ್ಮ'ನ ದೇವಾಲಯವೊಂದು ಇದ್ದು ಇದು ಮರಿಹೊನ್ನಮ್ಮ ಎಂಬುದರ ಸಂಕ್ಷೇಪರೂಪವಾಗಿದೆ.

ಎಡಗೈಯಲ್ಲಿ ಲಿಂಗವನ್ನು ಹಿಡಿದಿರುವ ವಿಗ್ರಹಗಳನ್ನು ಶಿವಗಂಗೆಯಲ್ಲಿ ಕಾಣಬರುವಷ್ಟು ಇನ್ನೆಲ್ಲಿಯೂ ನಾವು ನೋಡಲಾಗುವುದಿಲ್ಲ. ಅದರಂತೆಯೇ ಶಿವಗಂಗೆಯಲ್ಲಿ ಮತ್ತು ಅದರ ಸುತ್ತಮುತ್ತಲ ಪ್ರದೇಶದಲ್ಲಿರುವಷ್ಟು ವೀರಭದ್ರನ ಮೂರ್ತಿಗಳನ್ನು ಇನ್ನೆಲ್ಲಿಯೂ ನಾವು ನೋಡಲಾರೆವು.

ಇವುಗಳಲ್ಲಿ ಮುಖ್ಯವಾಗಿ ಶಿವಗಂಗೆಯಲ್ಲಿರುವ ೮–೧೦ ವೀರಭದ್ರಮೂರ್ತಿಗಳನ್ನು ಬಿಟ್ಟು ಈ ಪರಿಸರದಲ್ಲಿ ಪಕ್ಕದ ಸಿದ್ಧನಬೆಟ್ಟ(ನಿಜಗಲ್ಲುಬೆಟ್ಟ)ದಲ್ಲಿರುವ ಉದ್ಭಾನವೀರಭದ್ರ, ಅದರ ಪಕ್ಕದಲ್ಲಿಯೇ ಇರುವ ದೇವರ ಹೊಸಹಳ್ಳಿಯ ವೀರಭದ್ರ, ಹೆರಳೂರು, ಸಾವನದುರ್ಗ, ಹುತ್ತರಿದುರ್ಗ, ಹುಲಿಯೂರುದುರ್ಗ, ತುಮಕೂರು, ಹೊನ್ನುಡಿಕೆ, ನೆಲಮಂಗಲಗಳಲ್ಲಿರುವ ವೀರಭದ್ರಮೂರ್ತಿಗಳೂ, ಬೆಂಗಳೂರಿನ ಪ್ರಳಯಕಾಲ ವೀರಭದ್ರಮೂರ್ತಿಯೂ, ತುಮಕೂರು ತಾಲ್ಲೋಕು ಅಗ್ರಹಾರದ ವೀರಭದ್ರ, ಎಡೆಯೂರಿನಲ್ಲಿರುವ ವೀರಭದ್ರಮೂರ್ತಿಗಳನ್ನು ಹೆಸರಿಸ ಬಹುದು. ಈ ಎಲ್ಲಾ ವೀರಭದ್ರಮೂರ್ತಿಗಳೂ ರೇವಣಸಿದ್ಧೇಶ್ವರರು ಈ ಭಾಗದಲ್ಲಿ ಎಸಗಿದ ವೀರಶೈವಕಾಂತ್ರಿಯ ಫಲವಾಗಿ ಈ ಪರಿಸರದಲ್ಲಿ ಮೂಡಿಬಂದಿವೆ ಎಂಬುದನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಈ ವೀರಭದ್ರಮೂರ್ತಿ ಪ್ರತಿಷ್ಠಾಪನೆ ರೇವಣಸಿದ್ಧೇಶ್ವರರ ಕಾಲದಲ್ಲಾಗಿರಬಹುದು ಅಥವಾ ಈಚೆಗಾಗಿರಬಹುದು. ರೇವಣಸಿದ್ಧ, ಮರುಳಸಿದ್ಧ, ಸಿದ್ಧರಾಮೇಶ್ವರರು ಕಲ್ಯಾಣದ ಬಸವಾದಿ ಪ್ರಮಥರ ಕ್ರಾಂತಿಯ ರಾಜಕೀಯ ವಿಪ್ಲವ ಶಾಂತಗೊಂಡ ಮೇಲೆ ದಕ್ಷಿಣ ಭಾಗದಲ್ಲಿ ಶಿವಗಂಗಾಪ್ರಾಂತದಲ್ಲಿ ತಮ್ಮ ಪಾಲಿನ ಕೆಲಸವನ್ನು ಬಹು ಚುರುಕಾಗಿ ನಿಂತು ಮಾಡಿದ್ದಾರೆಂಬುದಕ್ಕೆ ಬೇಕಾದಷ್ಟು ಕುರುಹುಗಳು ಈ ಪರಿಸರದಲ್ಲಿ ಇರುವುದೇ ಸಾಕ್ಷಿಯಾಗಿದೆ. ಇವರ ಅನಂತರ ೧೪ನೇ ಶತಮಾನದ ಆದಿಯಲ್ಲಿದ್ದ ಹರದನಹಳ್ಳಿಯ ಪೀಠಾಚಾರ್ಯರಾದ ಗೋಸಲ ಸಿದ್ಧೇಶ್ವರರು ಮೊದಲ್ಗೊಂಡು ೧೮ನೆಯ ಶತಮಾನದವರೆಗೆ ಮಹತ್ತರವಾದ ಧರ್ಮಜಾಗೃತಿಯನ್ನು ಈ ಭಾಗದಲ್ಲಿ ಮಾಡಿ ಬಸವಾದಿ ಪ್ರಮಥರ ಕ್ರಾಂತಿಯ ಕಿಡಿ ಈ ಭಾಗದಲ್ಲಿ ಆರಗೊಡದಂತೆ ನೋಡಿಕೊಂಡಿದ್ದಾರೆ. ಇವರಲ್ಲಿ ಮುಖ್ಯವಾಗಿ ಜಂಗಮರು, ಗುರುಸ್ಥಲದವರು, ಶಿವಾನುಭವಿಗಳು, ಕವಿಗಳು, ದಾರ್ಶನಿಕರು ಸೇರಿದ್ದಾರೆ. ಗೋಸಲಸಿದ್ಧೇಶ್ವರರು, ಶಂಕರಸ್ವಾಮಿಗಳು, ಚೆನ್ನಬಸವೇಶ್ವರರು, ತೋಂಟದ ಸಿದ್ಧಲಿಂಗೇಶ್ವರರು, ಬೋಳಬಸವೇಶ್ವರರು, ಗುಮ್ಮಳಾಪುರದ ಸಿದ್ಧವೀರದೇವರು, ಗೂಳೂರು ಸಿದ್ಧವೀರಣ್ಣೊಡೆಯರು, ಶೀಲವಂತಾರ್ಯ ಇವರ ಶಿಷ್ಯರಾದ ಹಲಗೆಯದೇವರು, ಗಗನಾರ್ಯರು, ಕಂಚವೀರಣ್ಣೊಡೆಯರು, ಕಟ್ಟಿಗೆಹಳ್ಳಿಯ ಸಿದ್ಧಲಿಂಗೇಶ್ವರರು, ಗುಬ್ಬಿಯ ಮಲ್ಲಣ್ಣ, ಅವರ

5. ಶ್ರವಣಬೆಳಗೊಳದ ಒಂದು ಶಾಸನ.

6. ಚೆನ್ನಮಲ್ಲಿಕಾರ್ಜುನ : ರೇವಣಸಿದ್ಧೇಶ್ವರರ ಚರಿತ್ರೆ, ಪು. 394.

ಮೊಮ್ಮಗನಾದ ಮಲ್ಲಣಾರ್ಯ, ಮಲ್ಲಣಾರ್ಯರ ಮಗ ಶಾಂತೇಶ, ವಿರಕ್ತತೋಂಟದಾರ್ಯ, ಗುಮ್ಮಳಾಪುರದ ಶಾಂತೇಶ[7], ಗುಮ್ಮಳಾಪುರದ ಈ ಶಾಂತೇಶನ ದೌಹಿತ್ರನಾದ ಹಲಗ–ಇವರೇ ಮೊದಲಾದವರು ಸಿದ್ಧಗಂಗೆ ಮತ್ತು ಶಿವಗಂಗೆಯ ಪರಿಸರದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಧರ್ಮಜಾಗೃತಿಗೈದ ಮಹಾಪುರುಷರೇ ಆಗಿದ್ದಾರೆ.

೫) **ಕಲ್ಲಿಹ :** ಸಿದ್ಧಗಂಗೆ ಮತ್ತು ಶಿವಗಂಗೆಯ ಪರಿಸರದ ಅತ್ಯಂತ ಮಹತ್ವದ ಇನ್ನೊಂದು ವೀರಶೈವ ಮಹಾಕ್ಷೇತ್ರವೆಂದರೆ ಮಾಗಡಿ ತಾಲ್ಲೋಕಿನಲ್ಲಿರುವ ಕಲ್ಲಿಹ ಅಥವಾ ಕಲ್ಲೆಯವಾಗಿದೆ. ಈಗ 'ಕಲ್ಯ' ಎಂದೂ ಕರೆಯಲಾಗುತ್ತಿದೆ. ಇಲ್ಲಿ ಬೆಟ್ಟದ ಮೇಲಿರುವ ಸರ್ವಶೀಲೆ ಚೆನ್ನಮ್ಮನವರ ಮಠ ಅತ್ಯಂತ ಕುತೂಹಲಕಾರಕವಾದ ಗವಿಯೇ ಆಗಿದೆ. ಈ ಕಲ್ಲೆಯದಲ್ಲಿ ಕೇತಿಸೆಟ್ಟಿಯೆಂಬ ಪ್ರಸಿದ್ಧ ವೀರಶೈವ ಮಹಾಪುರುಷನೂ ಆಗಿ ಹೋಗಿದ್ದಾನೆ. ಆತನು ಆ ಕಾಲದಲ್ಲಿ ಗುರುಲಿಂಗಜಂಗಮಕ್ಕೆ ಲಕ್ಷ ಲಕ್ಷ ಸಂಖ್ಯೆಯ ವಿತ್ತವನ್ನು ವೆಚ್ಚಮಾಡಿದನೆಂದು ತಿಳಿದು ಬಂದಿದೆ. ಈ ಕಲ್ಲೆಯ ೧೨-೧೩ನೆಯ ಶತಮಾನಗಳಲ್ಲಿ ಪ್ರಸಿದ್ಧ ವೀರಶೈವ ಶಿವಶರಣರಿಂದ ಕೂಡಿದ ಪುಣ್ಯಕ್ಷೇತ್ರವಾಗಿತ್ತು. ಇಲ್ಲಿ ವೀರಶೈವದ ೬೪ ಶೀಲಗಳನ್ನು ಆಚರಿಸುತ್ತ ಲಿಂಗ ಜಂಗಮ ದಾಸೋಹ ಮಾಡುತ್ತಿದ್ದ ಸರ್ವಶೀಲೆ ಚೆನ್ನಮ್ಮನವರ ಕಥೆಯನ್ನು ಎಲ್ಲಾ ವೀರಶೈವ ಗ್ರಂಥಗಳು ಸಾರುತ್ತಿವೆ. ೧೩ನೆಯ ಶತಮಾನದ ಆದಿಯಲ್ಲಿ ಆಂಧ್ರದ ಶ್ರೀಶೈಲ, ವಾರಂಗಲ್ಲು ಪ್ರಾಂತದಲ್ಲಿದ್ದ ಮಹಾಕವಿಗಳೂ, ಭೃಂಗೀಶ್ವರಾವತಾರಿಯೆನಿಸಿದವರೂ, ಬಸವಪುರಾಣವನ್ನು ಆಂಧ್ರಭಾಷೆಯಲ್ಲಿ ಬರೆದವರೂ ಆದ ಪಾಲ್ಕುರಿಕೆ ಸೋಮನಾಥರು ಸರ್ವಶೀಲೆ ಚೆನ್ನಮ್ಮನವರನ್ನು ಸಂದರ್ಶಿಸುವ ನಿಮಿತ್ತ ಅನೇಕ ಶಿವಶರಣರೊಡನೆ ಬಂಡಿಯನ್ನು ಹೂಡಿಸಿಕೊಂಡು ಪಂಚಸಂದಿಗೆ ಪ್ರಥಮತಃ ಬಂದು, ಅಲ್ಲಿಂದ ಶಿವಗಂಗೆಗೂ, ಶಿವಗಂಗೆಯಿಂದ ಕಲ್ಲೆಯಕ್ಕೂ ಬಂದರು ; ಚೆನ್ನಮ್ಮನವರ ೬೪ ಶೀಲಗಳ ಆಚರಣೆಯನ್ನು ಕಂಡು ಮಂತ್ರಮುಗ್ಧರಾಗಿ ನಮಸ್ಕರಿಸಿ ತಮ್ಮೂರಿಗೆ ಹೋಗಲು ಅಪ್ಪಣೆ ಕೇಳಿದರು. ಹೋಗಲು ಚೆನ್ನಮ್ಮನವರ ಸಮ್ಮತಿಯಿರಲಿಲ್ಲ. ಇದನ್ನು ತಿಳಿದ ಸೋಮನಾಥರು 'ಅಪ್ಪಣೆ ಕೊಟ್ಟರೆ ಕೊರತೆಯಿಲ್ಲ ಕೊಡಿ' ಎಂದು ಕೇಳಿದರು. ಚೆನ್ನಮ್ಮನವರು ನಮಸ್ಕರಿಸಿದರು. ಸೋಮನಾಥರು ಬಂಡಿಯನ್ನು ಹೂಡಿಸಿ ಮೇಲೇರಿ ಕುಳಿತರು. ಆದರೆ ಎತ್ತುಗಳು ಮುಂದಕ್ಕೆ ಹೆಜ್ಜೆಯನ್ನೇ ಇಡಲಿಲ್ಲ. ಸೋಮನಾಥರು ಪ್ರವಾಸವನ್ನು ನಿಲ್ಲಿಸಿ ಕಲ್ಲೆಯದಲ್ಲಿ ನಿಂತರು. ಕೆಲವು ದಿನಗಳಲ್ಲಿ ಅಲ್ಲಿಯೇ ಲಿಂಗೈಕ್ಯರಾದರು. ಅವರ ಗದ್ದುಗೆ ಕಲ್ಲೆಯದಲ್ಲಿ ಆಯಿತು.

**ತತ್ತ್ವಶಾಸ್ತ್ರದೃಷ್ಟಿಯಿಂದ ಮಹತ್ವದ ಕೃತಿಗಳು ಇದೇ ಪರಿಸರದವು :–** ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಶ್ರೇಷ್ಠಕೃತಿಗಳೆಂದೂ ತತ್ತ್ವಶಾಸ್ತ್ರ ದೃಷ್ಟಿಯಿಂದ ಜಗದ್ವಿಖ್ಯಾತಕೃತಿಗಳೆಂದೂ ಖ್ಯಾತವಾಗಿರುವ ಗುಮ್ಮಳಾಪುರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ, ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ, ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯಸಂಪಾದನೆ, ಇತ್ಯಾದಿ ಅನೇಕ ಶೂನ್ಯಸಂಪಾದನೆಗಳು ಸಿದ್ಧಗಂಗೆ–ಶಿವಗಂಗೆಗಳ ಪರಿಸರದಲ್ಲಿ ಹುಟ್ಟಿಬೆಳೆದು ಬೆಳಕು ಕಂಡ ಅಪೂರ್ವಕೃತಿಗಳಾಗಿ ಕಲ್ಯಾಣದ ಶರಣರ ತತ್ತ್ವಜ್ಞಾನವನ್ನು ಜನತೆಯಲ್ಲಿ ಪ್ರಸಾರ ಮಾಡಿದವುಗಳಾಗಿವೆ. ಇವೂ ಅಲ್ಲದೆ ಹಲಗೆದೇವರ ಶೂನ್ಯಸಂಪಾದನೆಯೂ ಕೂಡ ಇದೇ ಪರಿಸರದಲ್ಲಿ ಮೂಡಿಬಂದ ಒಂದು ಶ್ರೇಷ್ಠಕೃತಿಯಾಗಿದೆ. ಇದನ್ನು ಪ್ರತ್ಯಕ್ಷ ವೀರಭದ್ರಾವತಾರಿ ಎಂದೇ ಕರೆಯಲಾಗುತ್ತಿತ್ತು. ಆದುದರಿಂದ ಈ ಪ್ರಾಂತವು ಮತ್ತೊಮ್ಮೆ ಕಲ್ಯಾಣದ ಬಸವಾದಿ ಪ್ರಮಥರ ತತ್ತ್ವಜ್ಞಾನ ಪ್ರಕಾಶವನ್ನು ಬೆಳಗಿದುದೆಂದು ಹೇಳಲು ಅನುಮಾನವೇ ಇಲ್ಲ. ಈ ಮಾತಿನ ಹಿನ್ನೆಲೆಯಲ್ಲಿ ಇಲ್ಲಿನ ಜನಜೀವನದ ತತ್ತ್ವಜ್ಞಾನದ ಹಿರಿಮೆಯನ್ನು ಮನಗಾಣಬಹುದು. ಇವಲ್ಲದೆ ಗುಬ್ಬಿಯ ಮಲ್ಲಣ್ಣ (೧೫೨೫)ನ ಗಣಭಾಷಿತ ರತ್ನಮಾಲೆ, ವಾತುಲತಂತ್ರಟೀಕೆ, ಇವನ ಮೊಮ್ಮಗನಾದ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ ಮತ್ತು ಭಾವಚಿಂತಾರತ್ನ, ಗುಬ್ಬಿಯ ಚೆನ್ನಬಸವೇಶ್ವರರ ಕ್ಷೇತ್ರಜ್ಞ ಸುಮನೋಪಾದ, ಶಾಂತೇಶ ಮತ್ತು ವಿರಕ್ತ ತೋಂಟದಾರ್ಯದ ಸಿದ್ಧೇಶ್ವರ ಪುರಾಣಗಳು, ಚೇರಮಾಂಕನ ಚೇರಮಕಾವ್ಯಗಳೂ ಇದೇ ಭೂಮಿಯಿಂದ ಆವಿರ್ಭವಿಸಿವೆ. ವಚನಸಂಪಾದಕರಾದ ಚೆನ್ನಂಜೇದೇವರು ಮತ್ತು ಎಳಮಲೆಯ ಗುರುಶಾಂತ ದೇವರು, ತ್ರಿವಿಧಿ ಕರ್ತೃವಾದ ಶೀಲವಂತಯ್ಯ, ಟೀಕಾಕಾರನಾದ ಸಂಪಾದನೆಯ ಗುರುಲಿಂಗದೇವ, ಅನುಭವಸೂತ್ರದ ಟೀಕಾಕಾರನಾದ ಚೆನ್ನಮಲ್ಲಿಕಾರ್ಜುನ, ಚತುರಾಸ್ಯಪುರಾಣ ಕರ್ತೃವಾದ ಸಂಪಾದನೆಯ ಕವಿ ಪರ್ವತೇಶ, ಅನುಭವಕಂದ ಕೃತಿಕಾರನಾದ ಕವಿಶಾಂತ, ಅಮೃತೇಶ್ವರ ಭಾಷ್ಯದ ಕರ್ತೃವಾದ ಸಪ್ಪೆಯಾರ್ಯರೇ ಮೊದಲಾದವರು[8] ಹರದನಹಳ್ಳಿ ಪೀಠಾಚಾರ್ಯರ, ಮುಖ್ಯವಾಗಿ ಸಿದ್ಧಲಿಂಗೇಶ್ವರರ ಕ್ರಾಂತಿಯ ಫಲವಾಗಿ ಪ್ರಕಾಶಕ್ಕೆ ಬಂದು ಈ ಪರಿಸರದಲ್ಲಿಯೇ ಬೆಳಗಿದ ಮಹಾಕವಿಗಳು ಮತ್ತು ದಾರ್ಶನಿಕರೆಂದು

---

7. ಈ ಶಾಂತೇಶ ಗುಬ್ಬಿಯ ಶಾಂತೇಶನಿಗಿಂತ ಭಿನ್ನವಾದ ಇನ್ನೊಬ್ಬ ಶಾಂತೇಶ. ಈತನನ್ನು ಗುಬ್ಬಿಯ ಶಾಂತೇಶ ಹೊಗಳಿದ್ದಾರೆ. ಈತನು ಸುಪ್ರಸಿದ್ಧ ಶಿವಶರಣ.

8. ಸಿದ್ಧಲಿಂಗ ಶಿವಯೋಗಿ : ಮೈಸೂರು ವಿ.ವಿ. (1974)

ತಿಳಿದರೆ ಸಾಕು.[9] ಈ ಪರಿಸರವನ್ನು ನಾವು ಹರದನಹಳ್ಳಿಯಿಂದ ಗೊಮ್ಮಟಾಪುರ, ಚಿಕ್ಕಬಳ್ಳಾಪುರ, ಬಿಜ್ಜಾವರ, ಎಳನಡು, ಗುಬ್ಬಿ, ಎಡಿಯೂರು, ಮೈಸೂರು, ಹರದನಹಳ್ಳಿಯನ್ನು ಸೇರಿಸುವಂತೆ ಒಂದು ಗೆರೆ ಎಳೆದರೆ ಎಷ್ಟಾಗುವುದೋ ಅಷ್ಟು ಭೂಭಾಗವೆಂದು ಸ್ಥೂಲವಾಗಿ ತಿಳಿಯಬೇಕು. ಸ್ವಲ್ಪ ಹೆಚ್ಚುಕಡಿಮೆ ಒಳಹೊರಗೆ ಹೋಗಬಹುದು. ಒಟ್ಟಿನಲ್ಲಿ ಈ ಭೂಭಾಗದಲ್ಲಿ ಶಿವಗಂಗೆ–ಸಿದ್ಧಗಂಗೆ–ಗೂಳೂರು-ಗುಬ್ಬಿ-ಎಡಿಯೂರು-ಹರದನಹಳ್ಳಿ-ಕಲ್ಲೆಯ-ಗುಮ್ಮಟಾಪುರ-ನಂದಿಪುರ–ಈ ಊರುಗಳು ವೀರಶೈವ ಸಾಹಿತ್ಯ-ಸಂಸ್ಕೃತಿ, ಧರ್ಮಗಳ ಬೆಳವಣಿಗೆಯ ದೃಷ್ಟಿಯಿಂದ ೧೨ನೇ ಶತಮಾನದಿಂದ ೧೮ನೆಯ ಶತಮಾನದವರೆಗೆ ಬಹು ಮಹತ್ವದ ಪಾತ್ರವನ್ನು ವಹಿಸಿದ್ದ ಪ್ರಸಿದ್ಧ ಸ್ಥಳಗಳೆಂದು ತಿಳಿದರೆ ಸಾಕು.

## ಸಿದ್ಧಗಂಗಾ ಪರಿಸರದಲ್ಲಿ ಮಠಮಾನ್ಯಗಳು

ಸಿದ್ಧಗಂಗಾ ಪರಿಸರದಲ್ಲಿ ಬೆಳೆದು ಬಂದಿರುವ ಮಠಮಾನ್ಯಗಳ ಸಂಖ್ಯೆ ಇನ್ನಿತರ ಯಾವ ಭಾಗದಲ್ಲೂ ನಾವು ಕಾಣಲು ಶಕ್ಯವಿಲ್ಲದಷ್ಟು ವಿಪುಲವಾಗಿವೆ. ಇವುಗಳಲ್ಲಿ ಗುರುವರ್ಗದವರ ಮಠಗಳೂ, ವಿರಕ್ತಮಠಗಳೂ ಸೇರಿಕೊಂಡಿವೆ. ಮುಖ್ಯವಾಗಿ ಕೆಳಗೆ ಕಂಡ ಈ ಮಠಗಳನ್ನು ಉಲ್ಲೇಖಿಸಬಹುದಾಗಿದೆ. ಈ ಪೂರ್ವದಲ್ಲಿ ಶಿವಗಂಗೆ ಒಂದರಲ್ಲೇ ೬೪ ಮಠಗಳಿದ್ದವೆಂದು ತಿಳಿಸಿದೆ. ಈಗ ಮೂರು ನಾಲ್ಕು ಮಠಗಳು ಮಾತ್ರ ಅಸ್ತಿತ್ವದಲ್ಲಿವೆ. ಶಿವಗಂಗೆಯ ಪೂರ್ವ ದಿಗ್ಭಾಗದಲ್ಲಿರುವ ಕಂಬಾಳು ಮರುಳಸಿದ್ಧರ ಮಠ, ಕಂಚುಗಲ್ ಬಂಡೇಮಠ, ಬಿಲುಮೆಮಠ, ಬಸವಾಪಟ್ಟಣದಲ್ಲಿ ಬೋಳಬಸವೇಶ್ವರಸ್ವಾಮಿ ಕ್ಷೇತ್ರ, ಮಸ್ಕಲ್‌ಮಠ, ಸೋಲೂರಿನಲ್ಲಿರುವ ಮೂರು ನಾಲ್ಕು ಮಠಗಳು, ಸೋಲೂರು ಪಕ್ಕದಲ್ಲಿರುವ ಮಹಂತೇಶ್ವರಸ್ವಾಮಿ ಗದ್ದಿಗೆಯಮಠ, ತೋಪಿನಮಠ, ಕಣ್ಣೂರುಮಠ, ತಿಪ್ಪಸಂದ್ರದಮಠ, ಹುತ್ರಿದುರ್ಗ, ಸಾವನದುರ್ಗಗಳಲ್ಲಿರುವ ಮಠಗಳು, ಕಲ್ಲೆಯದ ಸರ್ವಶೀಲೆ ಚೆನ್ನಮ್ಮನಮಠ, ಶಿವಗಂಗೆಯ ಪಕ್ಕದ ಕಾಚಕಲ್ಲಪ್ಪನ ಬೆಟ್ಟದಲ್ಲಿರುವ ಗದ್ದಿಗೆ, ನೆಲಮಂಗಲದಲ್ಲಿರುವ ಬಸವಣ್ಣದೇವರಮಠವೇ ಮೊದಲಾದ ನಾಲ್ಕು ಮಠಗಳು, ಮಧುಗಿರಿಯಮಠ, ಹುಸ್ಕೂರು ಗುಡೇಮಾರನಹಳ್ಳಿಗಳಲ್ಲಿರುವ ಮಠಗಳು, ಮಾಗಡಿಯಲ್ಲಿನ ೨–೩ ಮಠಗಳು, ತುಮಕೂರಿನಲ್ಲಿರುವ ಕರಿಬಸವದೇವರ ಮಠವೇ ಮೊದಲಾದ ಐದಾರು ಮಠಗಳು, ಸಿದ್ಧಗಂಗೆಯ ಪಕ್ಕದ ದೇವರಾಯಪಟ್ಟಣದಮಠ, ಸಿದ್ಧನಬೆಟ್ಟದಲ್ಲಿರುವ ಗದ್ದುಗೆ, ಬೆಟ್ಟದಹಳ್ಳಿ, ಬೆಟ್ಟಳ್ಳಿ, ಚಕ್ರಬಾವಿ, ಚಿತ್ತಲಹಳ್ಳಿ, ತ್ರಿಪುರಾಂತಕೇಶ್ವರಮಠಗಳೂ, ಅಂಕನಹಳ್ಳಿ ಮಠ, ಹುಲಿಯೂರುದುರ್ಗದಮಠ, ಸಾವನದುರ್ಗದ ಹತ್ತಿರದ ಕಲ್ಯಾಣದೇವರಮಠಗಳೇ ಮೊದಲಾದುವು,ಕನಕಪುರದ ದೇಗುಲಮಠ ಚೆನ್ನಪಟ್ಟಣ, ಗೂಳೂರು, ಗುಮ್ಮಟಾಪುರ, ಎಡಿಯೂರು, ಹೊನ್ನುಡಿಕೆ ಮಠಗಳು, ಬೆಂಗಳೂರಿನ ಪರಿಸರದಲ್ಲಿರುವ ಸರ್ವಭೂಷಣ ಮಠವೇ ಮೊದಲಾದ ೬೩ಮಠಗಳು, ಬಾಣಾವರದಮಠ, ಮೈಲನಹಳ್ಳಿಮಠ, ಎಲಗನಹಳ್ಳಿ, ತಾವರೆಕೆರೆ,ಹೂಲಿಕಟ್ಟೆ, ವಿರುಪಸಂದ್ರ, ಕಗ್ಗೆರೆ ಮಠಗಳು, ಕಪ್ಪೂರು ಗದ್ದಿಗೆ, ನೊಣವಿನಕೆರೆ, ಗೋಡೆಕೆರೆ, ಕಟ್ಟಿಗೆಹಳ್ಳಿ, ಗುಬ್ಬಿ, ಎಳನಡು, ಕುಣಿಗಲ್ಲಿನ ದಕ್ಷಿಣದಲ್ಲಿ ೩ ಮೈಲುಗಳ ಅಂತರದಲ್ಲಿರುವ ಗವಿಮಠ ಇವೇ ಮೊದಲಾದ ಮಠಗಳನ್ನು ಹೆಸರಿಸಬಹುದಾಗಿದೆ. ಇವಲ್ಲದೆ ಇನ್ನೂ ಅನೇಕ ಮಠಮಾನ್ಯಗಳು ಸಿದ್ಧಗಂಗೆ ಮತ್ತು ಶಿವಗಂಗೆಗಳ ಪರಿಸರದಲ್ಲಿ ಹರಡಿ ಷಟ್‌ಸ್ಥಲಜ್ಞಾನಜ್ಯೋತಿಯನ್ನು ಹಿಂದಿನಿಂದಲೂ ಆರಗೊಡದಂತೆ ಬೆಳಗಿಸುತ್ತ ಬಂದಿವೆ. ಇಷ್ಟೆಲ್ಲಕ್ಕೂ ಇಲ್ಲಿ ಕಾಲಕಾಲಕ್ಕೆ ನಡೆದ ಅನೇಕ ಮಹಾಪುರುಷರ ಸಿದ್ಧಶಿವಯೋಗಿಗಳ ಸತ್ತ್ವಪೂರ್ಣಕ್ರಾಂತಿಯ ಫಲವೇ ಕಾರಣವಾಗಿದೆ ಎನ್ನಲು ಅಡ್ಡಿಯೇನೂ ಇಲ್ಲ.

## ಸಿದ್ಧಗಂಗಾ ಪರಿಸರದಲ್ಲಿ ೧೯ ಮತ್ತು ೨೦ನೆಯ ಶತಮಾನದಲ್ಲಿ ಈರ್ವರು ಮಹಾನುಭಾವರ ಅವತಾರ

ರೇವಣಸಿದ್ಧರು, ಮರುಳಸಿದ್ಧ, ಸಿದ್ಧರಾಮೇಶ್ವರ, ಗೋಸಲಸಿದ್ಧೇಶ್ವರ, ತೋಂಟದ ಸಿದ್ಧಲಿಂಗಯತೀಶ್ವರ, ಬೋಳಬಸವೇಶ್ವರರೆ ಮೊದಲಾದ ಮಹಾ ಶಿವಯೋಗಿಪುಂಗವರ ಕ್ರಾಂತಿಕ್ಷೇತ್ರವಾದ ಸಿದ್ಧಗಂಗಾ ಮತ್ತು ಶಿವಗಂಗೆಯ ಪರಿಸರ ೧೯ ಮತ್ತು ೨೦ನೆಯ ಶತಮಾನಗಳಲ್ಲೂ ಅಘಟಿತ ಘಟನಾಸಮರ್ಥರೂ ಶಿವಲಿಂಗಲೀಲಾವಿನೋದಚಿತ್ತರೂ ದಾಸೋಹಸದ್ಭಾವಾಸಕ್ತರೂ ಆದ ಈರ್ವರು ಕಾರಣಪುರುಷರಿಗೆ ಜನ್ಮವಿತ್ತು ತನ್ನ ಮಹತ್ವವನ್ನುಳಿಸಿಕೊಂಡುಬಂದಿದೆ. ಶಿವಯೋಗೀಶ್ವರರ ಆಡುಂಬೊಲವೆನಿಸಿದ

---

9. ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯ ಪರಂಪರೆ ಬಹುಮುಖವಾದುದು. ಇವರ ಶಿಷ್ಯಪರಂಪರೆಗೆ ಒಂದಿಲ್ಲೊಂದು ದೃಷ್ಟಿಯಿಂದ ಸೇರಿದ್ದ ಕವಿಗಳ ದಾರ್ಶನಿಕ ಕೃತಿಗಳು ವಿಪುಲ ಸಂಖ್ಯೆಯವು. ಈ ಎಲ್ಲ ಕೃತಿಗಳೂ ವೀರಶೈವ ತತ್ತ್ವಶಾಸ್ತ್ರ, ಬಸವಾದಿಪ್ರಮಥರ ವಚನಗಳ ಸಂಪಾದನೆ, ವೀರಶೈವ ಮಹಾಪುರುಷರ ಪುರಾಣಗಳು,ವೀರಶೈವ ಶರಣರು, ಶರಣೆಯರು,ಅವರುಗಳ ಸ್ಥಾನ ವಿಶೇಷಗಳೇ ಮೊದಲಾದವುಗಳ ಪಟ್ಟಿಯನ್ನು ಕೊಡುವ ವಿಷಯಗಳು, ವೀರಶೈವಚಾರ ವಿಚಾರಗಳು, ತ್ರಿವಿಧಿಗಳು, ಟೀಕೆಗಳು, ಶೂನ್ಯಸಂಪಾದನೆಗಳೇ ಮೊದಲಾದ ವಿಷಯಗಳಿಂದ ಕೂಡಿದವುಗಳಾಗಿ ಸಿದ್ಧಗಂಗೆ-ಶಿವಗಂಗೆಯ ಪರಿಸರದಲ್ಲಿ ಒಡಮೂಡಿದವುಗಳಾಗಿವೆ. ಈ ದೃಷ್ಟಿಯಿಂದ ಈ ಪರಿಸರದ ವಿದ್ವಾಂಸರ ದಾರ್ಶನಿಕರ, ಕವಿಗಳ, ಟೀಕೆಟಿಪ್ಪಣಿಕಾರರ ಅನುಭವ, ವಿದ್ವತ್ತು, ಬಹುಶ್ರುತತ್ವಗಳೇ ಮೊದಲಾದವನ್ನು ಊಹಿಸಬಹುದಾಗಿದೆ.

ಶಿವಗಂಗಾ ಅವಿಮುಕ್ತಕ್ಷೇತ್ರಕ್ಕೆ ಉತ್ತರದಿಗ್ಭಾಗದಲ್ಲಿ ಸುಮಾರು ೩ ಮೈಲುಗಳ ಅಂತರದಲ್ಲಿರುವ ಲಕ್ಕೂರು ಮತ್ತು ದಕ್ಷಿಣದಿಗ್ಭಾಗದಲ್ಲಿ ೩–೪ ಮೈಲುಗಳ ಅಂತರದಲ್ಲಿರುವ ವೀರಾಪುರಗಳು ಈರ್ವರು ಯತೀಶ್ವರರ ಜನ್ಮಭೂಮಿಗಳು.

ಲಕ್ಕೂರಿನಲ್ಲಿ ಕ್ರಿ.ಶ. ಸುಮಾರು ೧೮೬೭ರ ಹೊತ್ತಿನಲ್ಲಿ ಹುಟ್ಟಿ ಅಲ್ಲಿ ಬಾಲ್ಯಜೀವನ ನಟಿಸಿ, ಸಿದ್ಧಗಂಗಾಕ್ಷೇತ್ರಾಧಿಪತಿಗಳಾಗಿ ಅಘಟಿತಘಟನಾಪರಂಪರೆಗಳನ್ನು ಮೆರೆದು ಸಿದ್ಧಗಂಗಾಪುಣ್ಯಭೂಮಿಯಲ್ಲಿ ಸರ್ವಲೋಕೋಪಕಾರದ ಜ್ಞಾನ–ವಿಜ್ಞಾನ–ಧರ್ಮ–ಸಂಸ್ಕೃತಿಯ ಬೆಳವಣಿಗೆಗೆ ಕಾರಣಪುರುಷರೆನಿಸಿ ಮಹಾದಾಸೋಹವನ್ನು ಆಚರಿಸಿ ೧೯೪೧ರಲ್ಲಿ ಲಿಂಗೈಕ್ಯರಾದ ಶ್ರೀಮದುದ್ದಾನ ಶಿವಯೋಗಿಗಳು ಒಬ್ಬರು. ವೀರಾಪುರದಲ್ಲಿ ಕ್ರಿ.ಶ. ಸುಮಾರು ೧೯೦೮ರಲ್ಲಿ ಜನ್ಮಧಾರಣೆ ಮಾಡಿ ೧೯೩೦ರಲ್ಲಿಯೇ ಉದ್ದಾನಶಿವಯೋಗಿಗಳ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಸಿದ್ಧಗಂಗಾಕ್ಷೇತ್ರಾಧ್ಯಕ್ಷರೆಂದು ನಾಮಕರಣಗೊಂಡು ಉದ್ದಾನಶಿವಯೋಗಿಗಳವರು ಲಿಂಗೈಕ್ಯರಾದ ನಂತರ ಶ್ರೀಕ್ಷೇತ್ರದ ಸರ್ವಲೋಕೋಪಕಾರಕ ಸೇವಾಮನೋಭಾವವನ್ನು ಮುಗಿಲೆತ್ತರಕ್ಕೆ ಏರಿಸಿ 'ನಭೂತೋ ನಭವಿಷ್ಯತಿ'ಎನ್ನುವಂತೆ ಮಾಡಿರುವ, ಮಾಡುತ್ತಿರುವ ಶ್ರೀ ನಿ.ಪ್ರ. ಶಿವಕುಮಾರಸ್ವಾಮಿಗಳು ಇನ್ನೊಬ್ಬ ಮಹಾಕಾರಣಿಕ ಪುರುಷರು. ಶ್ರೀಶಿವಕುಮಾರಸ್ವಾಮಿಗಳವರ ಅದ್ಭುತ ಕ್ರಿಯಾಜ್ಞಾನ ಸಮುಚ್ಚಯದ ನಡೆನುಡಿಗಳಿಂದ ಹರದನಹಳ್ಳಿ ಪೀಠಾಚಾರ್ಯರ ಪರಂಪರೆಯಲ್ಲಿ ಬೆಳಗಿದ ತೋಂಟದ ಸಿದ್ಧಲಿಂಗೇಶ್ವರರ ಕೀರ್ತಿಗೌರವಗಳನ್ನು ಕಾರ್ಯಮುಖದಿಂದ ವಚನಗಳಿಂದ ಇನ್ನಿತರ ಅವಶೇಷಗಳಿಂದ ತಿಳಿದರೆ, ಅವರಷ್ಟೇ ಪ್ರಭಾವಮುದ್ರೆಯನ್ನುಳ್ಳ ಶ್ರೀ ಶಿವಕುಮಾರಸ್ವಾಮಿಗಳವರ ಕ್ರಿಯಾಯೋಗದ ಮಹತ್ತು ಬೃಹತ್ತುಗಳನ್ನು ಪ್ರತ್ಯಕ್ಷ ಕಾಣುವ ಭಾಗ್ಯ ಇಂದಿನ ಪೀಳಿಗೆಗೆ ಉಂಟಾಗಿರುವುದು ಪುಣ್ಯವಿಶೇಷವೆ. ೧೨ನೆಯ ಶತಮಾನದಿಂದ ಇಂದಿನವರೆಗೆ ಸಿದ್ಧಗಂಗಾ ಪರಿಸರದಲ್ಲಿ ಅನೇಕ ಅಗಣಿತ ಮಹಾ ಮಹಾ ಶಿವಯೋಗಿಗಳವರ ಶಿವಯೋಗದ ಸಾರಭೂತ ಶಾಂತರಸದ ಅವಿಚ್ಛಿನ್ನಸ್ರೋತವಿದ್ದೇ ಇದೆ ಎಂಬುದಕ್ಕೆ ಮತ್ತು ನೆಲದ ಗುಣ ವ್ಯಕ್ತಿತ್ವವನ್ನು ರೂಪಿಸಬಲ್ಲ ವಿಶಿಷ್ಟ ಸಾಮರ್ಥ್ಯವುಳ್ಳದ್ದೆಂಬುದಕ್ಕೆ ೧೯ ಮತ್ತು ೨೦ನೆಯ ಶತಮಾನದ ಈ ಇಬ್ಬರು ಕಾರಣಪುರುಷರು ನಮಗೆ ಜೀವಂತ ನಿದರ್ಶನರಾಗಿದ್ದಾರೆ. ಹರದನಹಳ್ಳಿ ಪೀಠಾಚಾರ್ಯರ ದಿವ್ಯತಪೋಭೂಮಿಯಾದ ಸಿದ್ಧಗಂಗೆಯ ಶುದ್ಧಿ–ಸಿದ್ಧಿ, ಶುಚಿ–ರುಚಿಗಳು ಈ ಈರ್ವರು ಕಾರಣಪುರುಷರಿಂದ ದಿಗಂತ ವಿಶ್ರಾಂತಗೊಂಡಿವೆ. ಈ ಸಿದ್ಧಗಂಗಾಕ್ಷೇತ್ರದಲ್ಲಿ ಈಗ ಏನು ನಡೆಯುತ್ತಿದೆ? ಹೇಗೆ ನಡೆಯುತ್ತಿದೆ? ಈ ಎರಡೂ ಬಿಡಿಸಲಾರದ ಕಗ್ಗಂಟುಗಳೇ. ಶತಶತಮಾನಗಳಿಂದ ಸಂಚಯನಗೊಂಡು ಬಂದ ಮಹಾ ಮಹಾಕಾರಣಪುರುಷರ ದಿವ್ಯ ತಪಶ್ಶಕ್ತಿಯ ಕಾಣದ ಕೈ ಇಲ್ಲಿನ ಅನಿಮಿತ್ತಬಂಧುಗಳೂ ಶಿವಯೋಗಿಪುಂಗವರೂ ಆದ ಶ್ರೀ ಶಿವಕುಮಾರ ಮಹಾಸ್ವಾಮಿಯವರ ಅದ್ಭುತ ಕ್ರಿಯಾಶೀಲತೆಗೆ ತೆರೆಯಮರೆಯಲ್ಲಿ ಸಹಾಯಕ್ಕೆ ನಿಂತೇ ಇದೆ ಎನ್ನಿಸುತ್ತದೆ. 'ಇಲ್ಲದಿದ್ದರೆ ಓರ್ವ ವ್ಯಕ್ತಿಯಿಂದ ಇಷ್ಟೆಲ್ಲ ಕಾರ್ಯ ಮಾಡುವುದು ಶಕ್ಯವಿಲ್ಲದ ಮಾತು'ಎಂದು ಶ್ರೀಸ್ವಾಮಿಗಳೇ ಎಷ್ಟೋ ಸಲ ಉಚ್ಚರಿಸಿಕೊಂಡುದು ಸಾಕ್ಷಿಯಾಗಿದೆ. ಶ್ರೀ ಶಿವಕುಮಾರಸ್ವಾಮಿಗಳು ಓರ್ವ ವ್ಯಕ್ತಿಗಳಂತೂ ಅಲ್ಲ. ವ್ಯಕ್ತಿತ್ವದ ಎಲ್ಲೆಕಟ್ಟನ್ನು ಆ ಮಹಾಪುರುಷರಿಗೆ ಅನ್ವಯಿಸುವುದೂ ಕಷ್ಟ. ಅದು ಅನೇಕ ಮಹಾ ಮಹಾಕಾರಣಪುರುಷರ ಕಾರಣಶರೀರ ಒಬ್ಬುಳಿಗೊಂಡ ಒಂದು ತೇಜೋವಿಶೇಷ. ಅದು ಆಕಾರಗೊಂಡು ಕ್ರಿಯಾಮುಖದಲ್ಲಿ ನಮ್ಮ ಕಣ್ಣಿಗೆ ಗೋಚರವಾಗುತ್ತದೆ ಎಂದೇ ನಮ್ಮ ಭಾವನೆ. ಅವರು ಬೇಡುವ ಜಂಗಮರಂತೂ ಅಲ್ಲ; ಆ ಜಂಗಮಪುಂಗವರಿಗೆ ಬೇಡಿಸಿಕೊಳ್ಳುವ ಶಿಷ್ಯಸಂಪತ್ತೂ ಇಲ್ಲ. ಅವರ ಅದ್ಭುತ ಪರುಷಶಕ್ತಿಗೆ ಅಭಾವದ ತೆರೆಯೆಂದೂ ಅಡ್ಡಬರಲೇ ಇಲ್ಲ. ನೆನೆಯದ ಮುನ್ನ ಬೇಕುಬೇಕಾದ ವಸ್ತುಸಂಚಯನ, ಎಲ್ಲವೂ ದಾಸೋಹಕ್ಕೆ ನೈವೇದ್ಯ; ನಿಚ್ಚ ನಿಚ್ಚ ಅಲ್ಲಿ ನಡೆಯುವ ಖರ್ಚುವೆಚ್ಚಗಳು ಶ್ರೀಮಂತಿಕೆಯಮಂತೂ ಅಲ್ಲವೇ ಅಲ್ಲ. ಈ ಖರ್ಚುವೆಚ್ಚಗಳು,ದಾಸೋಹ ವ್ಯವಸ್ಥೆಗಳು ಇನ್ನಿತರ ಲೋಕೋಪಕಾರಕ ಕ್ರಿಯೆಗಳು ನಡೆಯುವುದು ಬೇರೆ ರೀತಿಯ ಶ್ರೀಮಂತಿಕೆಯಿಂದ. ಈ ಶ್ರೀಮಂತಿಕೆ ಇಲ್ಲಿಯ ಶ್ರೀಗಳವರಿಗೆ ಉಂಟಾಗಿದ್ದು ಅವರ ನಿಷ್ಕಾಪಟ್ಯ ಲಿಂಗತಪಸ್ಸಿನ ಪ್ರಭಾವದಿಂದ. ಶ್ರೀ ಶಿವಕುಮಾರ ಸ್ವಾಮಿಗಳವರ ೭೦ ವರ್ಷಗಳ ದೀರ್ಘ ತಪಸ್ಸು ಸಕಲಜೀವಿಗಳ ಸುಖದ ಮಾರ್ಗದರ್ಶನಕ್ಕೆ ವಿನಿಯೋಗವಾಗಿದೆ. 'ಕೊಡುವವ ಸಂಗ, ಕೊಳ್ಳುವವ ಸಂಗಮದೇವ' ಈ ಮಾತು ಕ್ಷೇತ್ರಕ್ಕೆ ಪೂರ್ಣ ಅನ್ವಯ.

**ಕಲ್ಯಾಣಕ್ರಾಂತಿಯ ನಂತರ ಸಿದ್ಧಗಂಗಾ–ಶಿವಗಂಗಾ ಪರಿಸರಕ್ಕೆ ಬಂದ ಮಹತ್ವ**

ಕ್ರಿ.ಶ. ೧೧೬೮ರ ಸುಮಾರಿನಲ್ಲಿ ಕಲ್ಯಾಣದ ಕಲಚೂರ್ಯ ಬಿಜ್ಜಳನ ಅವಸಾನದೊಡನೆ ಬಸವಣ್ಣನವರ ಮತ್ತು ಅವರ ಅನುಯಾಯಿಗಳ ವಿಶ್ವಮಾನ್ಯ ತತ್ತ್ವಪ್ರಸಾರಕಾರ್ಯ ಸ್ಥಗಿತಗೊಂಡು ಹೋಯಿತು. 'ಬ್ರಾಹ್ಮಣ ಮೊದಲುಗೊಂಡು ಅಂತ್ಯಜ ಕಡೆಯಾಗಿ, ಶಿವಭಕ್ತರಾದವರನ್ನೆಲ್ಲ' ಒಂದುಗೂಡಿಸಿ ರಾಷ್ಟ್ರ ಶಕ್ತಿಗೊಂಡು ಅಪೂರ್ವ ಚಾಲನೆ ಕೊಡಲು ಶರಣರು ಮಾಡಿದ ಕ್ರಾಂತಿಗೆ ಘೋರವಾದ ರಾಜಕೀಯ ವಿಪ್ಲವದ ಬಂಡೆಗಲ್ಲುರುಳಿ ಅವರೆಲ್ಲ ಜರ್ಝರಿತರಾಗಿ ದಿಕ್ಕುದಿಕ್ಕುಗಳಿಗೆ ಚದುರಿದರು. ಬಸವಣ್ಣನವರು ಕಪ್ಪಡಿಸಂಗಮದಲ್ಲಿ ತಮ್ಮ ಕೊನೆಯ ದಿನಗಳನ್ನು ವಿಷಾದದಿಂದ ಕಳೆದರು. ಚೆನ್ನಬಸವಣ್ಣನವರ ನೇತೃತ್ವದಲ್ಲಿ ಒಂದು ಗುಂಪು ಈಗಿನ ಕಾರವಾರ ಜಿಲ್ಲಾ ಸುಪಾ ತಾಲ್ಲೋಕಿನಲ್ಲಿರುವ ಉಳುವೆಗೆ ನಡೆದು ಅಲ್ಲಿ 'ಮಹಾಮನೆ' ಎಂಬೊಂದು ಗವಿಯಲ್ಲಿ ಸೇರಿ

ಶಿವಾನುಭಾವ ಪ್ರಚಾರ ಕಾರ್ಯ ಕೈಗೊಂಡರು ; ಅಲ್ಲಿಗೂ ವೈರಿಗಳು ಬೆನ್ನಟ್ಟಿ ಹೋಗಿ ಆ ಶರಣ ಸಮುದಾಯವನ್ನೆಲ್ಲ ತೀರಿಸಿದರು. ಇನ್ನೊಂದು ಗುಂಪು ಶ್ರೀಶೈಲದತ್ತ ನಡೆದು ದಿಕ್ಕುದಿಕ್ಕುಗಳಲ್ಲಿ ಚೆದುರಿ ಅಲ್ಲಲ್ಲಿ ಮಠಮಾನ್ಯಗಳನ್ನು ಮಾಡಿಕೊಂಡು ತಮ್ಮ ತಮ್ಮ ನಿಜಾಚರಣೆಯಲ್ಲಿ ನಿರತರಾದರು. ಕಲ್ಯಾಣದಲ್ಲಿ ಒಂದೇ ಕಡೆಗೆ ಇವರೆಲ್ಲ ಮತ್ತೊಮ್ಮೆ ಸೇರುವೆಗೊಳ್ಳಲು ಅವಕಾಶ ಒದಗಲೇ ಇಲ್ಲ. ಶ್ರೀಶೈಲದ ಕಡೆಗೆ ಹೋದ ಶರಣರ ತಂಡದವರ ಬಾಯಿಂದ ಕಲ್ಯಾಣದ ಕ್ರಾಂತಿಯ ಕಥೆ ಮತ್ತು ಬಸವಣ್ಣನವರ ವ್ಯಕ್ತಿತ್ವದ ಹಿರಿಮೆ ಗರಿಮೆಗಳನ್ನು ಪಾಲ್ಕುರಿಕೆ ಸೋಮನಾಥರು, ಇನ್ನೂ ಬಾಲಕರಾಗಿರುವಾಗಲೇ, ಕೇಳಿ ಪ್ರಭಾವಿತರಾಗಿ, ತೆಲುಗಿನಲ್ಲಿ ಪ್ರಥಮತಃ ಬಸವಣ್ಣನವರ ಬಗೆಗೆ ಮಹಾಪುರಾಣವೊಂದನ್ನು ನಿರ್ಮಿಸಿದನೆಂದು ಈಗ ಹೇಳಲಾಗುತ್ತಿದೆ. ಬಸವಣ್ಣನವರ ಬಗೆಗೆ ಅಪಾರ ಗೌರವವನ್ನು ತಳೆದು ಅದ್ಭುತರಮ್ಯವಾದ ಪುರಾಣ ಮತ್ತು ಸ್ತೋತ್ರಗೀತೆಗಳನ್ನು ತೆಲುಗಿನಲ್ಲಿ ಬರೆದು ಮೊದಲು ಪ್ರಸಾರ ಮಾಡಿದವನೇ ಪಾಲ್ಕುರಿಕೆ ಸೋಮನಾಥ. ಈ ದೃಷ್ಟಿಯಿಂದ ಒಂದು ನೂತನ ಸಾಹಿತ್ಯ ಸಂಪ್ರದಾಯವೇ ಬೆಳೆದುಹೋಯಿತು. ಬಸವಣ್ಣನ ನಡೆನುಡಿ ಆಚಾರ ವ್ಯವಹಾರಗಳು ಈ ನೂತನ ಶರಣಗಣದ ಮಾರ್ಗಕ್ಕೆ ಆದರ್ಶವಾಗಿ ಬಸವಣ್ಣ ಮಂತ್ರಪುರುಷನೆನಿಸಿದನು. ಇದೇನೇ ಇರಲಿ ಇನ್ನೊಂದು ತಂಡ ದಕ್ಷಿಣದ ಸುಪ್ರಸಿದ್ಧ ಕ್ಷೇತ್ರವೆನಿಸಿದ ಶಿವಗಂಗೆಯ ಕಡೆಗೆ ಬಂತು. ಶಿವಗಂಗೆಯ ಕಡೆಗೆ ಬಂದವರಲ್ಲಿ ಚಿಕ್ಕಸಿದ್ಧೇಶನೆಂಬುವನು ಮುಖ್ಯನೆಂದು ತೋರುತ್ತದೆ. ಅವನು ಅನೇಕ ಜನ ಚರಮೂರ್ತಿಗಳೊಡನೆ ಬಂದು ಹೊನ್ನಾದೇವಿಯಿಂದ ಕಂಕಣ ಪಡೆದನು. ಈ ಚಿಕ್ಕಸಿದ್ಧೇಶ್ವರ ಮತ್ತು ಅನೇಕ ಚರಮೂರ್ತಿಗಳು ಶಿವಗಂಗೆ ಮತ್ತು ಅದರ ಸುತ್ತಮುತ್ತಲ ಪ್ರಾಂತ್ಯದಲ್ಲಿ ಮೆರೆದುದರಿಂದ ಕಲ್ಯಾಣದ ಶರಣರ ನೇರ ಸಂತಾನ ಈ ಭಾಗದಲ್ಲಿ ಪ್ರಸಾರಗೊಳ್ಳಲು ಕಾರಣವಾಯಿತು.* ಈ ಪರಿಸರದಲ್ಲಿ ಅನೇಕ ಮಠಮಾನ್ಯಗಳು ಮತ್ತು ಅವನ್ನಾಶ್ರಯಿಸಿ ಮುಂದೆ ವೀರಶೈವ ತತ್ತ್ವಶಾಸ್ತ್ರದ ಅನೇಕ ಮಹತ್ವದ ಕೃತಿರತ್ನಗಳು ಆವಿರ್ಭಾವಗೊಳ್ಳಲು ಕಾರಣವಾಯಿತೆಂದು ಈ ಪೂರ್ವದಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ. ಇನ್ನೊಂದು ತಂಡದ ಮುಖ್ಯರಾದ ಗುಮ್ಮಣ-ಪೆಮ್ಮಣ ಎಂಬ ಹೆಸರಿನ ವ್ರತಿಗಳ ಬಗೆಗೆ ಚೆನ್ನಬಸವಪುರಾಣ ನಮ್ಮ ಗಮನವನ್ನು ಸೆಳೆಯುತ್ತದೆ :–

"..............................ಕಲ್ಯಾಣ ।
ವಳಿಯಲಾ ಪ್ರಜೆಗಳಂ ತುರುಕರಾಕ್ಷಸರಾಗ ।
ಸುಲಿದು ಸೂರ್ಯಾಡಲಾ ಗುಮ್ಮಣಂ ಪೆಮ್ಮಣಯ್ಯಗಳಿನಿಪ ವ್ರತಿಗಳಿರದೆ ॥
ನೆಲೆಗೆಟ್ಟುಪೋಗಿ ದಕ್ಷಿಣಕಾಶಿಯೆನಿಸಿ ಭೂ ।
ತಳದೊಳಗೆ ಮೆರೆವ ಶಿವಗಂಗೆಯ ಸಮೀಪದ ಸು ।
ಸ್ಥಳದೊಳಗೆ ಪುರವನುರೆ ರಚಿಪರಾ ಗುಮ್ಮಣಂ ಪೆಮ್ಮಣಯ್ಯಗಳೆಂಬರು ॥ (೬೨-೪೫)
ಪರಮ ಕೈಲಾಸಕ್ಕೆ ಮಿಗಿಲೆನಿಸಿ ಗುಮ್ಮಳಾ ।
ಪುರವೆಂಬ ನಾಮದಿಂದುದ್ಧರಿಪರೆಂತೆನಲ್ ।
ಚರಲಿಂಗದಮಳಪಾದೋದಕವನೇ ಮಣ್ಣ ಹಸಿಯ ಬಿಂದಿಗೆಯ ತುಂಬಿ ।
ಪರಿವಾಣದೊಳಗಿರಿಸಿ ಹೊತ್ತುಕೊಂಡಾಪುರವ ।
ತಿರುಗಿ ಬಂದಾ ಮಧ್ಯದಲ್ಲಿ ನಿಕ್ಷೇಪಿಸೀ ।
ಪುರವನೆ ಲಿಂಗವಿಲ್ಲದ ಭವಿಯು ಪುಗಲಳಿಯಲೆನುತಾಜ್ಞಾಪಿಸುವರು ॥ (೬೨-೪೬)

ಗುಮ್ಮಳಾಪುರವೆಂಬ ಹೆಸರಿನ ಶರಣನಗರ ನಿರ್ಮಿತವಾದುದರ ಹಿನ್ನೆಲೆಯಲ್ಲಿ ಹೇಗೆ ಕಲ್ಯಾಣದ ಶಿವಶರಣ ಸಮೂಹ ಶಿವಗಂಗೆಯ ಪ್ರಾಂತಕ್ಕೆ ತಮ್ಮ ಧರ್ಮ ಸಂಸ್ಕೃತಿಯ ಉಳಿವಿಗಾಗಿ ಹರಿತಂದು ವಾಸಿಸಿದರೆಂಬುದಕ್ಕೊಂದು ನಿದರ್ಶನವಾಗಿ ಈ ಪುರಾಣದ ಮಾತನ್ನು ನಾವು ಯೋಚಿಸಬೇಕಾಗಿದೆ. ೧೫-೧೬ನೆಯ ಶತಮಾನದಲ್ಲಿ ಈ ಗುಮ್ಮಳಾಪುರ ಶರಣಸಂಪ್ರದಾಯದ ಶ್ರೇಷ್ಠ ವ್ಯಕ್ತಿಗಳಿಂದ ಸುಪ್ರಸಿದ್ಧ ವೀರಶೈವ ಕೇಂದ್ರವೇ ಆದುದನ್ನು ನಾವು ಗಮನಿಸಬಹುದು. ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯರಾಗಿ ಬೋಳಬಸವೇಶ್ವರರನ್ನು ವಿದ್ಯಾಗುರುಗಳನ್ನಾಗಿ ಪಡೆದಿದ್ದ ಗುಮ್ಮಳಾಪುರದ ಸಿದ್ಧಲಿಂಗದೇವರು ಸುಪ್ರಸಿದ್ಧ ಷಟ್‌ಸ್ಥಲ ಜ್ಞಾನಿಗಳಾಗಿದ್ದರು. ಇವರು ಶೂನ್ಯಸಂಪಾದನೆ ಎಂಬ ಶ್ರೇಷ್ಠ ಮಟ್ಟದ ವೀರಶೈವ ತಾತ್ತ್ವಿಕಗ್ರಂಥ ಬರೆದಿರುವರಲ್ಲದೆ, 'ಬೋಳಬಸವೇಶ್ವರಾ. ನಿಮ್ಮಧರ್ಮ, ನಿಮ್ಮಧರ್ಮ' ಎಂಬ ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾರೆ. ಶಿವಗಣಪ್ರಸಾದಿ ಮಹಾದೇವಯ್ಯ (ಇನ್ನೊಂದು ಶೂನ್ಯಸಂಪಾದನೆಯ ಕರ್ತೃ), ಗೂಳೂರು ಸಿದ್ಧವೀರಣಾರ್ಯ (ಇವರೂ ಮತ್ತೊಂದು ಶೂನ್ಯಸಂಪಾದನೆಯ ಕರ್ತೃ),

* ಚಿಕ್ಕಸಿದ್ಧೇಶ್ವರರು ವಿಜಯನಗರ ಪಾಳಾದ ಮೇಲೆ ಶಿವಗಂಗೆಗೆ ಬಂದವನೆಂದು ಹೇಳುವ ಅಭಿಪ್ರಾಯವೂ ಉಂಟು. ಈ ಬಗೆಗೆ ಹಿಂದೆ ತಿಳಿಸಲಾಗಿದೆ.

ಹಾಗೂ ಗುಮ್ಮಳಾಪುರದ ಸಿದ್ಧವೀರದೇವ ಇವರು ಮೂವರೂ ಹೆಚ್ಚು ಕಡಿಮೆ ಸಮಕಾಲೀನರಾಗಿ ಬಾಳಿ ಪರಸ್ಪರರನ್ನು ಕಂಡು ಶಿವಾನುಭಾವಗೋಷ್ಠಿಯನ್ನು ನಡೆಸಿ ಮುಂದು ಮುಂದಿನವರು ಹಿಂದು ಹಿಂದಿನವರಿಗೆ ಕೃತಜ್ಞತೆಗಳನ್ನರ್ಪಿಸುತ್ತ ಒಡಲು ಹಲವಾದರೂ ಆತ್ಮ ಒಂದೇ ಆಗಿ ಒಬ್ಬರು ಬರೆದುದನ್ನು ಇನ್ನೊಬ್ಬರು ಧಾರಾಳವಾಗಿ ಸ್ವೀಕರಿಸಿ ಶೂನ್ಯಸಂಪಾದನೆಯನ್ನು ರಚಿಸಿರುವರು.[10] ಈ ಗುಮ್ಮಳಾಪುರವು 'ಛಪ್ಪನ್ನ ದೇಶದೋಳ್ ಕೈಲಾಸವೆನಿಸಿದ್ದಿತೆಂದು ಗುಮ್ಮಳಾಪುರದ ತೋಪಿನ ವೀರಗಣಾಚಾರಿಯಾದ ಹಲಗ (ಕ್ರಿ.ಶ. ೧೬೫೦) ಹೇಳಿಕೊಂಡಿದ್ದಾನೆ. ಈ ಹಲಗನೂ ಉತ್ತಮ ಕವಿಯಾಗಿದ್ದನು. ಇದೂ ಅಲ್ಲದೆ ಇಲ್ಲಿ ಶಾಂತೇಶನೆಂಬ ಮಹಾ ಕವಿಯೂ ಇದ್ದನು. ಈ ಶಾಂತೇಶನನ್ನು ಗುಬ್ಬಿಯ ಶಾಂತೇಶ[11] ಹೊಗಳಿದ್ದಾನೆ. 'ನಿರಂಜನವಂಶರತ್ನಾಕರ' ಗ್ರಂಥದ ಪ್ರಕಾರ ಬೋಳ ಬಸವೇಶ್ವರರ ನಂತರ ಸಿದ್ಧವೀರೇಶ್ವರಸ್ವಾಮಿ (ಗುಮ್ಮಳಾಪುರದ ಸಿದ್ಧವೀರೇಶ್ವರ ಸ್ವಾಮಿ) ಎಂಬುವರು ತೋಂಟದ ಸಿದ್ಧಲಿಂಗೇಶ್ವರರ ಸಂಪ್ರದಾಯದ ಶೂನ್ಯ ಸಿಂಹಾಸನಾಧಿಪತಿಗಳಾಗಿದ್ದರೆಂದೂ ಅವರು ೭೦ ವರ್ಷಗಳವರೆಗೆ ಬದುಕಿದ್ದು ಆ ಕಾಲದಲ್ಲಿ ಅಲ್ಲಿ ೧೨೦೦೦ ಜನರಿಗೆ ವೀರಶೈವೋಪದೇಶ ಕೊಟ್ಟರೆಂದೂ ಅವರ ಗದ್ದುಗೆ ಗುಮ್ಮಳಾಪುರದಲ್ಲೀ ಆಯಿತೆಂದೂ ತಿಳಿದು ಬರುವುದು.[12] ಇವರೆಲ್ಲರಿಗೆ ಗೂಳೂರು, ಸಿದ್ಧಗಂಗೆ, ಗುಬ್ಬಿ ಹಾಗೂ ಶಿವಗಂಗೆಗಳ ಸಂಬಂಧ ಒಂದಿಲ್ಲೊಂದು ರೀತಿಯಲ್ಲಿ ಇದ್ದುದು ತಿಳಿದು ಬರುವುದು. ಈ ಎಲ್ಲ ಕಾರಣಗಳಿಂದ ಕಲ್ಯಾಣಕ್ರಾಂತಿಯಾದ ಮೇಲೆ ವಿಜಯನಗರದಲ್ಲಿ ಮತ್ತೊಮ್ಮೆ ವೀರಶೈವೋದ್ಧರಣ ಕಾರ್ಯಗಳು ಅನೇಕ ಮುಖದಲ್ಲಿ ತ್ವರಿತಗತಿಯಿಂದ ಸಾಗುತ್ತಿದ್ದಾಗ ದಕ್ಷಿಣಕರ್ನಾಟಕದ ಶಿವಗಂಗಾ–ಸಿದ್ಧಗಂಗಾ ಪರಿಸರದಲ್ಲಿ ಗುಮ್ಮಳಾಪುರ,ಹರದನಹಳ್ಳಿಯ (ಚಾಮರಾಜನಗರ ತಾಲ್ಲೋಕು)ವರೆಗೂ ಹೇಗೆ ಪ್ರಭಾವಯುತವಾಗಿ ನಡೆಯುತ್ತಿತ್ತು ಎಂಬುದನ್ನು ಅರಿಯಬಹುದಾಗಿದೆ. ಈ ಭಾಗದಲ್ಲಿ ಮಠಮಾನ್ಯಗಳು, ಮಹಿಮಾನ್ವಿತವಾದ ಗದ್ದುಗೆಗಳು ಅಧಿಕಸಂಖ್ಯೆಯಲ್ಲಿ ನಮಗೆ ಕಾಣಿಸುತ್ತಿರುವುದಕ್ಕೆ ಇದು ಒಂದು ಕಾರಣವೆನ್ನಬಹುದು. ಇನ್ನೂ ಒಂದು ಮುಖ್ಯ ಕಾರಣವನ್ನು ಇಲ್ಲಿ ಗಮನಿಸಬೇಕಾಗಿದೆ. ಅತ್ಯಂತ ಪ್ರಭಾವಶಾಲಿಗಳಾಗಿದ್ದ ರೇವಣಸಿದ್ಧೇಶ್ವರರು ಈ ಭಾಗದಲ್ಲಿ ಮಾಡಿದ ಕ್ರಾಂತಿ. ಇದರಿಂದ ಸಿದ್ಧಗಂಗಾ–ಶಿವಗಂಗಾಕ್ಷೇತ್ರಗಳ ಪರಿಸರದ ಮಹತ್ವವು ಅತ್ಯಂತ ಪ್ರಭಾವಯುತವಾಗಿ ಬೆಳೆದು ನೀತಿನಿಯಮಸಂಹಿತೆಯ ಅಗಾಧ ಪರಿಣಾಮ ಜನತೆಯ ಮೇಲಾಗಿ ಒಂದು ನಿಯಮಬದ್ಧ ಸಮಾಜ ಬೆಳೆದುಬರುವುದಕ್ಕೆ, ಅನೇಕ ವಿದ್ವಾಂಸರು ಜನ್ಮತಾಳುವುದಕ್ಕೆ, ಅವರಿಂದ ಶ್ರೇಷ್ಠತಮ ಗ್ರಂಥಗಳು ಆವಿರ್ಭಾವವಾಗುವುದಕ್ಕೆ ಕಾರಣವಾಯಿತೆನ್ನಬೇಕು. ರೇವಣಸಿದ್ಧಾದಿಗಳು ಹೀಗೆ ಈ ಪರಿಸರವನ್ನು ಶಿವಶರಣವಾಸಯೋಗ್ಯ ಭೂಮಿಯನ್ನಾಗಿಸಿದುದೇ ಕಲ್ಯಾಣದ ಕಡೆಯಿಂದ ಶಿವಶರಣರ ತಂಡಗಳು ಬಂದು ನೆಲೆಗೊಳ್ಳುವುದಕ್ಕೆ ಕಾರಣವಾಗಿರಬಹುದು.

## ಸಿದ್ಧಗಂಗಾ ಪರಿಸರದಲ್ಲಿ ಸಿದ್ಧತ್ರಯರ ಸಂಚಾರ

೧೨ನೆಯ ಶತಮಾನದ ಈ ಪರಿಸರದ ಮಹತ್ವದ ಬಗೆಗೆ ಮುಖ್ಯವಾಗಿ ಯೋಚಿಸುವ ಇನ್ನೊಂದು ಅಂಶವೆಂದರೆ ಬಸವಾದಿ ಪ್ರಥಮರ ದಿವ್ಯತತ್ತ್ವವನ್ನು ಪ್ರಸಾರ ಮಾಡಲು ಬಹುವಾಗಿ ಹೆಣಗಿದ ರೇವಣಸಿದ್ಧ, ಮರುಳಸಿದ್ಧ ಮತ್ತು ಸಿದ್ಧರಾಮರ ಅತ್ಯಂತ ಕುತೂಹಲಕಾರಿಯಾದ ಕ್ರಾಂತಿಯ ವಿಚಾರ. ಚರಿತ್ರೆಯ ಗರ್ಭದಲ್ಲಿ ಈ ಮಹಾಪುರುಷರ ವಿಮಲಕರ್ತೃತ್ವಶಕ್ತಿ, ಸ್ಥಳ ಸನ್ನಿವೇಶದ ಕುರುಹುಗಳು, ಸಂಚಾರ ಮಾಡಿದ ಸ್ಥಳಗಳು, ಮಾಡಿದ ಕಾರ್ಯಗಳು ಹುದುಗಿದ್ದರೂ ಸಹಿತ ಗುರುತು ಸಿಗದಂತಾಗಿದ್ದರೂ ವಿಕೀರ್ಣ ಯಾಗಿ ಅವುಗಳನ್ನು ಜಿಡಿಸಿ ಕಳೆದುಳಿದ ಅನೇಕ ಅವಶೇಷಗಳು, ಹೇಳಿಕೆಗಳು, ಸ್ಥಳಪುರಾಣಗಳೇ ಮೊದಲಾದವುಗಳಿಂದ ನಿಶ್ಚಿತವಾಗಿ ಯಲ್ಲದಿದ್ದರೂ ಮಸಮಸಕಾಗಿಯಾದರೂ ಕಂಡುಹಿಡಿಯಬಹುದಾಗಿದೆ. ಕಲ್ಯಾಣದ ಶೂನ್ಯಪೀಠಾಧಿಪತಿಗಳಾದ ಚೆನ್ನಬಸವೇಶ್ವರರು ಉಳುವೆಗೆ ಹೋದ ಮೇಲೆ ಶೂನ್ಯಸಿಂಹಾಸನಾಧಿಪತಿಸ್ಥಾನದಲ್ಲಿ ರುದ್ರಮುನಿ ಶಿವಾಚಾರ್ಯರು–ಸಿದ್ಧರಾಮೇಶ್ವರರಿಬ್ಬರ ಹೆಸರುಗಳೂ ಕೇಳಿಬರುತ್ತವೆ. ರುದ್ರಮುನಿ ಶಿವಾಚಾರ್ಯರು ಕಲ್ಯಾಣದ ಶರಣರ ಕೊನೆಯ ದಿನಗಳಲ್ಲಿ ನಡೆದ ಘೋರಕದನದಲ್ಲಿ ಪ್ರತ್ಯಕ್ಷ ಭಾಗಿಗಳಾಗಿದ್ದವರು. ಉಳುವೆಯ ಕಡೆಗೆ ಮತ್ತು ಶಿವಗಂಗೆಯ ಕಡೆಗೆ ಹೋಗುತ್ತಿದ್ದ ತಂಡದಲ್ಲಿ ಇವರೂ ಮಡಿವಾಳ ಮಾಚಯ್ಯನವರೂ ಹೋರಾಟದ ನೇತೃತ್ವ ವಹಿಸಿದ್ದರೆಂದು ಹೇಳಲಾಗುತ್ತಿದೆ. ಕಾತರಹಳ್ಳಿ (ಬೆಳಗಾಂವ ಜಿಲ್ಲಾ) ಯಲ್ಲಿ ಶಿವಶರಣರು ಮತ್ತು ಬಿಜ್ಜಳನ ಸೈನ್ಯದ ನಡುವಿನ ಹೋರಾಟದಲ್ಲಿ ಇವರು ಇದ್ದರು. ಹೋರಾಡುತ್ತಾ ಶರಣರ ತಂಡ ಉಳುವೆಯ ಮಹಾಮನೆಯಲ್ಲಿ ಲಿಂಗೈಕ್ಯರಾದ ಮೇಲೆ ಇವರನ್ನು ರೇವಣಸಿದ್ಧೇಶ್ವರರು ಕರೆದುಕೊಂಡು ದಕ್ಷಿಣಕ್ಕೆ ಹೊರಟು ಬಂದಿರಬೇಕು ಎಂದು ಊಹಿಸಲು ಶಕ್ಯವಿದೆ. ಮಡಿವಾಳ ಮಾಚಯ್ಯನವರು ಹಿಪ್ಪರಿಗೆಯ ಕಡೆಗೆ ಹೊರಟು, ಬಂದು ಅಲ್ಲಿ ಲಿಂಗೈಕ್ಯರಾದರು. ರುದ್ರಮುನಿಶಿವಾಚಾರ್ಯರನ್ನು ಶೂನ್ಯ

---

10. ಆರ್.ಸಿ. ಹಿರೇಮಠ (ಸಂ) ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ ಪೀಠಿಕೆ ಪು. ೧೪-೧೫.

11. ವೀರಶೈವ ಮಹಾಮೃತ ಪುರಾಣ ಕರ್ತೃವಾದ ಮಲ್ಲಣಾರ್ಯ (೧೫೧೩)ರ ಮಗನೂ, ಸಿದ್ಧೇಶ್ವರ ಪುರಾಣ ಕರ್ತೃವೂ ಆದ ಶಾಂತೇಶ.

12. ಗುಮ್ಮಳಾಪುರ ಈಗ ಕರ್ನಾಟಕದ ಗಡಿಯಲ್ಲಿರುವ ಮದ್ರಾಸು ಪ್ರಾಂತದ ಹೊಸೂರು ತಾಲ್ಲೋಕಿನಲ್ಲಿದೆ. ಇಲ್ಲಿಗೂ ಶಿವಗಂಗೆಗೂ, ಸುಮಾರು ೬೦ ಮೈಲಿಗಳಿಗಿಂತಲೂ ಹೆಚ್ಚು ದೂರವಾದೀತು. ಆದರೂ ಅದು ಶಿವಗಂಗಾ ಪ್ರಾಂತದ ತೇಜದಿಂದಲೇ ಬೆಳಗಿದುದು.

ಸಿಂಹಾಸನಾಧಿಪತಿಗಳನ್ನಾಗಿ ಮಾಡಲು ಒಪ್ಪದೆ ರೇವಣಸಿದ್ಧೇಶ್ವರರು ಕಕುದ್ಗಿರಿಗೆ ಕರೆದುಕೊಂಡು ಬಂದರೆಂದೂ ಸಿದ್ಧರಾಮೇಶ್ವರರೂ ಆಮೇಲೆ ಬಂದು ಇವರೊಡನೆ ಕೂಡಿಕೊಂಡು ಕಕುದ್ಗಿರಿಯ ಮೇಲಣ ಗವಿಯಲ್ಲಿ ಇವರೆಲ್ಲ ವಾಸಿಸತೊಡಗಿದರೆಂದೂ ಶ್ರೀ ಚೆನ್ನಮಲ್ಲಿಕಾರ್ಜುನರು ಪುರಾಣವೊಂದರ ಆಧಾರದಿಂದ ವಿವರಿಸಿದ್ದಾರೆ[13]. ಚೆನ್ನಬಸವಣ್ಣನವರ ನಂತರ ಸಿದ್ಧರಾಮೇಶ್ವರರು ಶೂನ್ಯಸಿಂಹಾಸನಾಧಿಪತ್ಯವನ್ನು ವಹಿಸಿದುದಂತೂ ಎಲ್ಲರೂ ಒಪ್ಪುವ ಅಂಶ. ಇವೆಲ್ಲ ಕ್ರಿ.ಶ. ೧೧೬೭ರ ನಂತರ ನಡೆದ ವಿಚಾರಗಳೆಂದು ತೋರುವುದು. ಇವರ ಜೊತೆಗೆ ಮರುಳಸಿದ್ಧರೂ ಇದ್ದರು. ಇವರೆಲ್ಲರ ಸ್ಮಾರಕಗಳು ಶಿವಗಂಗಾ ಬೆಟ್ಟದಲ್ಲಿ ಇವೆ[14]. ಮೂವರು ಸಿದ್ಧಪುರುಷರೂ ಸಿದ್ಧಗಂಗೆ, ಶಿವಗಂಗೆ ಮತ್ತು ಸುತ್ತ ಮುತ್ತಣ ಪ್ರದೇಶದಲ್ಲಿ ಮಾಡಿದ ಧರ್ಮ, ಸಂಸ್ಕೃತಿ, ಸಾಹಿತ್ಯ ಪ್ರಚಾರ ಕಾರ್ಯ ಅತ್ಯಂತ ಗಮನಾರ್ಹವಾದುದಾಗಿದೆ. ಇವರ ಕ್ರಾಂತಿಯ ಫಲವಾಗಿ ಈ ಭಾಗದಲ್ಲಿ ಅನೇಕ ಮಠಮಾನ್ಯಗಳೂ, ಗದ್ದುಗೆಗಳೂ, ಸ್ಮಾರಕಗಳೂ, ವಿಗ್ರಹಗಳೂ, ವೀರಭದ್ರಮೂರ್ತಿಗಳೂ ಉಂಟಾಗಲು ಕಾರಣವಾಯಿತು[15].

ಈ ಸಿದ್ಧತ್ರಯರು ಶಿವಗಂಗೆಯಿಂದ ಹೊರಟು ಅನೇಕ ದಿನಗಳ ಕಾಲ ರಾಮಗಿರಿ, ಶಿವಗಿರಿ, ಸಿದ್ಧಗಿರಿ ನೆಲಮನೆ ಬೆಟ್ಟಗಳಲ್ಲಿ ವಾಸಿಸಿ ಸುತ್ತ ಮುತ್ತಣ ಪ್ರದೇಶಗಳಲ್ಲಿ ಸಂಚರಿಸಿದ ಹಾಗೆ ಶ್ರೀ ಚೆನ್ನಮಲ್ಲಿಕಾರ್ಜುನರು ವಿವರಣೆ ನೀಡಿದ್ದಾರೆ[16]. ಇಲ್ಲಿನ ರಾಮಗಿರಿ ಎಂಬುದಂತೂ ಸ್ಪಷ್ಟವಾಗಿ ಈಗಿನ ಸಿದ್ಧಗಂಗಾ ಬೆಟ್ಟದ ಅವಳಿಬೆಟ್ಟವಾದ ರಾಮಲಿಂಗೇಶ್ವರ ಬೆಟ್ಟ (ರಾಮದೇವರ ಬೆಟ್ಟ). ಬೆಟ್ಟದ ಮೇಲಿರುವ ಕಡೆದ ಕಲ್ಲಿನ ರಾಮಲಿಂಗೇಶ್ವರ ದೇವಾಲಯ ಮತ್ತು ಅಲ್ಲಿಯೇ ಪಕ್ಕದಲ್ಲಿನ ಶಿವಲಿಂಗವಿರುವ ಎರಡು ಗುಹೆಗಳು, ಹರುಕು ಮುರುಕಾಗಿರುವ ಚಿಕ್ಕ ಚಿಕ್ಕ ಕೊತ್ತಳಗಳನ್ನುಳ್ಳ ಕೋಟೆ, ಬೆಟ್ಟದ ಪೂರ್ವ ದಿಗ್ಭಾಗದ, ಮಧ್ಯಂತರ ಪ್ರದೇಶದಲ್ಲಿರುವ ಚಿಕ್ಕಸಿದ್ಧಪ್ಪ ಮತ್ತು ದೊಡ್ಡಸಿದ್ಧಪ್ಪನವರ ಹೆಸರಿನಿಂದ ಕರೆಯಲಾಗುತ್ತಿರುವ ಶಿವಲಿಂಗ ವಿಶಿಷ್ಟವಾದ ಎರಡು ಭವ್ಯ ಗವಿಗಳು ಈ ಬೆಟ್ಟ ಗತಕಾಲದಲ್ಲಿ ಧರ್ಮ ಸಂಸ್ಕೃತಿ ಸಂವರ್ಧನೆಯ ಕೇಂದ್ರವಾಗಿತ್ತೆಂಬ ಅಂಶವನ್ನು ಸಾರುತ್ತಿರುವ ಪಳೆಯುಳಿಕೆಗಳು. ಸಿದ್ಧಗಂಗಾಕ್ಷೇತ್ರಾಧಿಪತಿಗಳಿಗೆ ದೊಡ್ಡಸಿದ್ಧಪ್ಪನ ಗವಿಯ ಸಂಬಂಧ ಇನ್ನೂ ಇದೆ. ಉದ್ದಾನಶಿವಯೋಗಿಗಳು ಶಿವಯೋಗ ಸಿದ್ಧಿಯನ್ನು ಪಡೆದ ಗುಹೆಗಳಲ್ಲಿ ಈ ಗುಹೆಗೆ ಬಹು ಪ್ರಮುಖ ಸ್ಥಾನವಿದೆ. ಈ ವಿಷಯವನ್ನು ಸ್ಥೂಲವಾಗಿ ಹಿಂದಿನ ಪುಟಗಳಲ್ಲಿ ವಿವರಿಸಲಾಗಿದೆ. 'ಶಿವಗಿರಿ' ಎಂದು ಯಾವುದಕ್ಕೆ ಕರೆದರೋ ಗೊತ್ತಾಗುತ್ತಿಲ್ಲವಾದರೂ ರಾಮಗಿರಿಯ ಪಕ್ಕದ ಸಿದ್ಧಗಂಗಾ ಬೆಟ್ಟಕ್ಕೆ ಕರೆದಿರಬೇಕೆಂದು ಊಹಿಸಲು ಶಕ್ಯವಿದೆ. ಗೋಸಲಸಿದ್ಧೇಶ್ವರರು ಇಲ್ಲಿಗೆ ಬಂದು ತಮ್ಮ ಸಮಯಾಚಾರದ ಮಠವನ್ನು ಸ್ಥಾಪಿಸುವವರೆಗೆ ಈ ಹೆಸರಿನಿಂದ ಈ ಬೆಟ್ಟವನ್ನು ಕರೆದಿರಬಹುದು. ಏಕೆಂದರೆ ರಾಮದೇವರ ಬೆಟ್ಟ, ಶಿವಗಂಗೆ ಬೆಟ್ಟಗಳಂತೆ ಇಲ್ಲಿಯೂ ತಪೋಯೋಗ್ಯವಾದ ಅನೇಕ ಗುಹೆಗಳೂ, ಗುಹೆಗಳಲ್ಲಿ ಶಿವಲಿಂಗಗಳೂ ಇರುವುದು ಮತ್ತು ಗಂಗಾಜಲ ವಿಶಿಷ್ಟವಾದ ಈಗಿನ ಗಂಗಮ್ಮನವರ ಭವ್ಯವೂ ವಿಶಾಲವೂ ಆದ ಗವಿಯು ನಮ್ಮ ಊಹೆಯನ್ನು ದೃಢಪಡಿಸಲು ಇರುವ ಪ್ರಮುಖ ಕಾರಣಗಳಲ್ಲಿ ಒಂದು. ಉತ್ತರ ದಿಗ್ಭಾಗದಲ್ಲಿ ದೇವರಾಯಪಟ್ಟಣದ ಕಡೆಗಿರುವ ಭವ್ಯವೂ ವಿಶಾಲವೂ ಶಿವಲಿಂಗ ವಿಶಿಷ್ಟವೂ ಆದ ಗವಿಯೂ ಒಂದು ಪ್ರಬಲಾಧಾರ. ಅಲ್ಲದೆ 'ಶಿವಗಿರಿ' ಎಂದು ಈಗ ಯಾವ ಬೆಟ್ಟವನ್ನೂ ಕರೆಯಲಾಗುತ್ತಿಲ್ಲ. ಸಿದ್ಧಗಿರಿ ಅಥವಾ 'ಜಲಸಿದ್ಧಗಿರಿ' ಎಂಬುದಂತೂ ಶಿವಗಂಗೆಗೂ ರಾಮಗಿರಿಗೂ ಮಧ್ಯದಲ್ಲಿ ಕೇವಲ ಎರಡೂ ನಿಟ್ಟಿನಿಂದ ೩-೪ ಮೈಲಿಗಳು ಅಂತರದಲ್ಲಿ ಅನೇಕ ಅವಶೇಷಗಳಿಂದ ತುಂಬಿರುವ ಈಗಿನ ನಿಜಗಲ್ಲು ಬೆಟ್ಟವೆಂಬುವುದರಲ್ಲಿ ಸಂಶಯ ಬಾರದು. ಈ ಬೆಟ್ಟಕ್ಕೆ ಈಗಲೂ ಸಿದ್ಧನ ಬೆಟ್ಟ ಅಥವಾ ಸಿದ್ಧರಬೆಟ್ಟವೆಂದೇ ಕರೆಯಲಾಗುತ್ತಿದೆ. ಬೆಟ್ಟದ ಪಾರ್ಶ್ವದಲ್ಲಿರುವ ಉದ್ದಾನ ವೀರಭದ್ರ, ಕಡೆದ ಕಲ್ಲಿನ ಬಾಗಿಲುಗಳಿಂದ ಭವ್ಯವಾಗಿರುವ ಗುಹೆಗಳು, ಗುಹೆಗಳಲ್ಲಿನ ಶಿವಲಿಂಗಗಳು, ಪ್ರಾಚೀನ ಕೋಟೆಕೊತ್ತಲಗಳು ಈ ಬೆಟ್ಟದ ಪ್ರಾಚೀನತೆಯನ್ನೂ ಭವ್ಯ ಸಾಂಸ್ಕೃತಿಕ ಮತ್ತು ಧಾರ್ಮಿಕ ಕೇಂದ್ರವೆಂಬುದನ್ನೂ ನಿಚ್ಚಳಗೊಳಿಸಲು ಇರುವ ಜೀವಂತ ನಿದರ್ಶನಗಳು. ನೆಲಮನೆ ಬೆಟ್ಟ ಎಂದರೆ ಶಿವಗಂಗೆಯಿಂದ ಆಗ್ನೇಯ ದಿಗ್ಭಾಗದಲ್ಲಿ ಸುಮಾರು ೩೦-೪೦ ಮೈಲುಗಳ ಅಂತರದಲ್ಲಿರುವ ರೇವಣಸಿದ್ಧೇಶ್ವರಬೆಟ್ಟ; ಇದಕ್ಕೆ ಅವ್ವೇರಹಳ್ಳಿ ಬೆಟ್ಟವೆಂದೂ ಕರೆಯಲಾಗುತ್ತಿದೆ. ಇದು ಇಂದಿಗೂ ರೇವಣಸಿದ್ಧೇಶ್ವರನ ಹೆಸರಿನ ದೇವಾಲಯವನ್ನು ಹೊಂದಿ ವೀರಶೈವ ಪ್ರಪಂಚಕ್ಕೆಲ್ಲ ಪೂಜ್ಯಸ್ಥಾನವಾಗಿಯೇ ಇದೆ.

ಮೇಲೆ ವಿವರಿಸಿರುವ ಶಿವಗಂಗೆ, ಸಿದ್ಧಗಿರಿ, ರಾಮಗಿರಿ, ಶಿವಗಿರಿ, ನೆಲಮನೆ ಗಿರಿಗಳನ್ನು ಕ್ರಿ.ಶ. ೧೧೬೭ ರಿಂದ ಇತ್ತೀಚೆಗೆ ರೇವಣಸಿದ್ಧ, ಮರುಳಸಿದ್ಧ, ಸಿದ್ಧರಾಮ—ಈ ಸಿದ್ಧತ್ರಯರು ತಮ್ಮ ಪ್ರಚಾರಕೇಂದ್ರಗಳನ್ನಾಗಿಸಿಕೊಂಡು ತಮ್ಮ ಧಾರ್ಮಿಕ, ಸಾಮಾಜಿಕ, ನೈತಿಕ ವಿಚಾರಗಳ ಪ್ರಚಾರದಿಂದ ಸುತ್ತಮುತ್ತಣ ಪ್ರದೇಶದ ಜನತೆಯನ್ನು ಸುಸ್ಥಿತಿಗೆ ತರಲು ಬಹುವಾಗಿ ಹೆಣಗಿದುದು

---

13. ಶ್ರೀ ಚೆನ್ನಮಲ್ಲಿಕಾರ್ಜುನ : ರೇವಣಸಿದ್ಧರು-ಪು. ೨೧೮.
14. ಅದೇ ಪು. ೨೨೦-೨೧
15. ಈ ಬಗೆಗೆ ಹಿಂದಿನ ಪುಟದಲ್ಲೇ ಸಂಕ್ಷೇಪವಾಗಿ ತಿಳಿಸಿರುವುದನ್ನು ನೋಡಬಹುದು.
16. ರೇವಣಸಿದ್ಧೇಶ್ವರರು ಪು.೨೧೮, ೨೧೯, ೨೩೧, ೨೩೪. ಇತ್ಯಾದಿ.



**ಬೆಟ್ಟದ ಮೇಲ್ಭಾಗದಿಂದ ಕಾಣುವ ಶ್ರೀ ಕ್ಷೇತ್ರದ ಒಂದು ವಿಹಂಗಮ ದೃಶ್ಯ.**

(ಹಿಂದಿನಪುಟದ ಚಿತ್ರ : ಶ್ರೀ ಸಿದ್ಧಗಂಗಾಕ್ಷೇತ್ರವನ್ನು ದಕ್ಷಿಣದಿಂದ ಪ್ರವೇಶಿಸುವಾಗ ಕಾಣುವ ದೃಶ್ಯ)



ಬೆಟ್ಟದ ಮಧ್ಯಭಾಗದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಮಂದಿರ ಮತ್ತು
ಪಕ್ಕದ ಕೋಡುಗಲ್ಲಿನ ಕೆಳಭಾಗದಲ್ಲಿ ಜಂಗಮಪಾದಪರಿಪೂತ
ಶ್ರೀ ಸಿದ್ಧಗಂಗಾ ಜಲವಿರುವ ಗುಹೆಯ ಸ್ಥೂಲನೋಟ.



ಶ್ರೀ ಸಿದ್ಧಲಿಂಗೇಶ್ವರ–ಸಿದ್ಧಗಂಗಾ ಮಾತೆಯರಿರುವ ಸ್ಥಾನಕ್ಕೆ ಹೋಗಲು
ಬೆಟ್ಟದ ಮೆಟ್ಟಲು ಮಾರ್ಗ.



ಶ್ರೀ ಸಿದ್ಧಲಿಂಗೇಶ್ವರರ ಸುಂದರ ಮಂಗಳ ವಿಗ್ರಹ



ಶ್ರೀ ಸಿದ್ಧಗಂಗಾ ಜಲೋದ್ಭವ : ಮೇಲ್ಭಾಗದಿಂದ ಕಾಣುವ ದೃಶ್ಯ



ಅಲಂಕಾರಗೊಂಡಾಗ ಶ್ರೀ ಸಿದ್ಧಲಿಂಗೇಶ್ವರ ಮೂರ್ತಿಯ
ಸುಂದರ ನೋಟ.




ದಾಸೋಹಕೀರ್ತಿ, ಮಹಿಮಾಮೂರ್ತಿ ಲಿಂ. ಅಟವೀಶ್ವರಸ್ವಾಮಿಗಳು
(ಲಿಂ. ೧೯೦೧)



ಇಂದಿನ ಶ್ರೀ ಸಿದ್ಧಗಂಗಾ ಕ್ಷೇತ್ರದ ಲೋಕೋತ್ತರ ಕೀರ್ತಿಕಲ್ಪವೃಕ್ಷಕ್ಕೆ
ಶಿವಯೋಗಾಮೃತ ಧಾರಾಪಾತ ಮಾಡಿದ ಸರ್ವಲೋಕೋಪಕಾರಿ
ಲಿಂ. ಉದ್ದಾನ ಶಿವಯೋಗಿಗಳು
(ಲಿ. ೧೯೪೧)



ಅನಿಮಿತ್ತ ಬಂಧು, ದಯಾಸಾಗರಮೂರ್ತಿ ಶ್ರೀ ನಿ. ಪ್ರ. ಡಾ॥ ಶಿವಕುಮಾರ ಮಹಾಸ್ವಾಮಿಗಳು

















ವಿವಿಧ ಚಟುವಟಿಕೆಗಳಿಂದ ಜಾಗೃತಿಗೊಂಡು ಸದಾ ರಾರಾಜಿಸುತ್ತಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದ ಆವರಣ

ಸುಸ್ಪಷ್ಟವಾದ ಅಂಶವೇ ಆಗಿದೆ. ಈ ವಿಚಾರದ ಹಿನ್ನೆಲೆಯಲ್ಲಿ ಈ ಮೂವರು ಸಿದ್ಧಪುರುಷರಿಗೆ ಸಿದ್ಧಗಂಗಾಗಿರಿಯೂ ವಾಸ್ತವ್ಯಸ್ಥಾನವಾಗಿರಬೇಕು. ಅವರು ಅನೇಕ ದಿನಗಳು ಇಲ್ಲಿ ವಾಸಮಾಡಿದ್ದಾರೆನ್ನಲು ಸಿದ್ಧಗಂಗಾ ಗಿರಿಯ ಪಕ್ಕದ ಬೆಳಗುಂಬದ ಗುಡ್ಡದಲ್ಲಿರುವ ಸಿದ್ಧರಾಮೇಶ್ವರರ ದೇವಾಲಯವೂ ಒಂದು ಒಳ್ಳೆಯ ನಿದರ್ಶನವೆನ್ನಲು ಅನುಮಾನ ಬಾರದು. ಶಿವಗಂಗೆಯ ಪಕ್ಕದ ಕಂಬಾಳು, ಮರುಳಸಿದ್ಧೇಶ್ವರರ ಸ್ಥಾನವಾಗಿದ್ದು, ಅಲ್ಲಿ ಒಂದೂವರೆ ಅಡಿ ಎತ್ತರದ ಮರುಳಸಿದ್ಧೇಶ್ವರರ ವಿಗ್ರಹ ಎಡಗೈಯಲ್ಲಿ ಲಿಂಗ, ಬಲಗೈಯಲ್ಲಿ ಜಪಮಾಲೆಯನ್ನು ಹಿಡಿದು ಕುಳಿತಂತೆ ಇದೆ. ಕಂಬಾಳುಮಠ ಪರ್ವತ ಶಾಖೆಗೆ ಸೇರಿದ್ದು, ಅಲ್ಲಿ ಮಲ್ಲಿಕಾರ್ಜುನ ಮೂರ್ತಿಯೂ ಇದೆ ಎಂದು ಚೆನ್ನಮಲ್ಲಿಕಾರ್ಜುನರು ತಮ್ಮ ರೇವಣಸಿದ್ಧೇಶ್ವರರು ಗ್ರಂಥದಲ್ಲಿ ವಿವರಣೆ ನೀಡಿದ್ದಾರೆ. ಕ್ರಿ.ಶ. ೧೧೭೮ರಲ್ಲಿ ಈ ಪ್ರಾಂತದ ರಾಜನಾಗಿದ್ದ ವೀರಬಲ್ಲಾಳನ ಆಳೊತ್ತಿನಲ್ಲಿ ರೇವಣಸಿದ್ಧರು ಕೂಸು ಬಸವನ ಮೂಲಕ ಶಿವಗಂಗೆಯ ಬೆಟ್ಟದ ಮೇಲೆ ಅಗ್ನಿಸ್ತಂಭ ಜಲಸ್ತಂಭಗಳನ್ನು ನಿಲ್ಲಿಸಲಿಕ್ಕೂ ವೀರಭದ್ರಮೂರ್ತಿಗಳ ಪ್ರತಿಷ್ಠೆ ಮಾಡಿಸಲಿಕ್ಕೂ ಕಾರಣವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ರೇವಣಸಿದ್ಧರು ವೀರಗೋತ್ರದವರಾದುದರಿಂದ ತಮ್ಮ ಗೋತ್ರದ ಅಧಿಪತಿಯಾದ ವೀರಭದ್ರಮೂರ್ತಿಯನ್ನು ಬಹಳ ಕಡೆ ಈ ಭಾಗದಲ್ಲಿ ಸ್ಥಾಪಿಸಲು ಕಾರಣವಾಯಿತು. ಮೇಲಣ ಗವಿಮಠದಲ್ಲೂ ವೀರಭದ್ರಮೂರ್ತಿಯಿರುವುದನ್ನು ಗಮನಿಸಬಹುದು. ಇವೆಲ್ಲ ರೇವಣಸಿದ್ಧೇಶ್ವರರ ಕಾಲದಲ್ಲೋ ಅಥವಾ ಅವರ ಅನಂತರ ಅವರ ಪ್ರಭಾವದಿಂದ ಜನರು ಪ್ರತಿಷ್ಠಿಸಿದವೋ ಹೇಳಲಾಗುವುದಿಲ್ಲ. ಇಲ್ಲಿನ ರುದ್ರೇಶ್ವರ ದೇವಾಲಯದಲ್ಲಿರುವ ಆರು ಅಡಿ ಎತ್ತರದ ವೀರಭದ್ರಮೂರ್ತಿ ಭವ್ಯವಾಗಿದೆ. ಈ ಗುಡಿಯ ಉತ್ತರ ದಿಗ್ಭಾಗದಲ್ಲಿ ಕೊಳವೂ ಆ ಕೊಳದ ಪಶ್ಚಿಮಕ್ಕೆ ಮಹಂತಿನ ಮಠವೆಂದು ಕರೆಯಿಸಿಕೊಳ್ಳಲ್ಪಡುವ ಇನ್ನೊಂದು ವೀರಶೈವ ಮಠವೂ ಇದೆ. ಹೀಗೆ ಶಿವಗಂಗೆ ಮತ್ತು ಅದರ ಸುತ್ತ ಮುತ್ತಣ ಪ್ರದೇಶಗಳಲ್ಲಿ ಅನೇಕ ಮಠಗಳು ಗತಕಾಲದ ವೀರಶೈವ ಧರ್ಮದ ಉಚ್ಛ್ರಾಯ ಸ್ಥಿತಿಯನ್ನು ಸಾರುವ ಜೀವಂತ ನಿದರ್ಶನಗಳಾಗಿ ಉಳಿದಿವೆ. ಕಣ್ಣಿಟ್ಟಲ್ಲಿ ಶಿವಲಿಂಗಗಳು, ನಂದಿಯ ವಿಗ್ರಹಗಳು, ಎಡಗೈಯಲ್ಲಿ ಲಿಂಗಹಿಡಿದಿರುವ ವಿಗ್ರಹಗಳು. ಕುವೆಂಪು ಅವರ ಮಾತಿನಲ್ಲಿ 'ಹಾಳು ದೇಗುಲದಲ್ಲಿ, ಲಂಟಾನಪೊದೆಯಲ್ಲಿ ಕಲ್ಲುರುಳಿ ಮುರಿದ ಅರಳಿಕಟ್ಟೆ, ಹಳು ಬೆಳೆದಲ್ಲಿ ಇಲ್ಲಿ ಏನಿಲ್ಲವೆಂದು ಸಾಗುತಿರಲು ಅನಿರೀಕ್ಷಿತ'ವಾಗಿ ನಮಗೆ ಪ್ರಾಚೀನ ಧರ್ಮ ಸಂಸ್ಕೃತಿಯ ವೈಭವದ ಕುರುಹುಗಳೇ ಶಿವಗಂಗೆಯ ಸುತ್ತ ಮುತ್ತಣ ಪ್ರದೇಶದಲ್ಲಿ ಲಭ್ಯವಾಗುತ್ತವೆ.

ಈ ಪ್ರದೇಶದಲ್ಲಿ ಪ್ರಭಾವಪೂರ್ಣವಾಗಿ ವೀರಶೈವ ಧರ್ಮ ಸಂಸ್ಕೃತಿ ಬೆಳಗುವುದಕ್ಕೆ ಪ್ರಥಮ ಕಾರಣ ಸಿದ್ಧತ್ರಯರು ಮತ್ತು ರೇವಣಸಿದ್ಧರ ಮಗ ರುದ್ರಮುನಿ ಶಿವಾಚಾರ್ಯರಾದರೆ, ೧೪ನೆಯ ಶತಮಾನದಿಂದ ಹರದನಹಳ್ಳಿ ಪೀಠಾಚಾರ್ಯರಾದ ಗೋಸಲ ಸಿದ್ಧೇಶ್ವರರು, ಅವರ ಶಿಷ್ಯರಾದ ಶಂಕರ ಸ್ವಾಮಿಗಳು, ಗುಬ್ಬಿಯ ಚೆನ್ನಬಸವೇಶ್ವರರು ಮತ್ತು ಮುಖ್ಯವಾಗಿ ತೋಂಟದ ಸಿದ್ಧಲಿಂಗ ಶಿವಯೋಗಿಗಳು, ಬೋಳಬಸವಾರ್ಯರೇ ಮೊದಲಾದ ನಿರಂಜನ ಜಗದ್ಗುರು ಪೀಠಾಧಿಕಾರಿಗಳೂ ಇನ್ನೊಂದು ಪ್ರಬಲ ಕಾರಣ. ಕ್ರಿ.ಶ. ೧೨೨೦ನೆಯ ಇಸವಿಯ ಸುಮಾರಿನಲ್ಲಿ ನೆಲಮಂಗಲದ ಲಲನೆಯ ಶಾಸನದ ರೀತ್ಯಾ ಶಿವಗಂಗೆಯಲ್ಲಿ ಕೆಂಚಸೋಮನೆಂಬುವನ ಗಣಾರಾಧನೆಗೆ ೧೨೦೦೦ ಜನ ಒಡೆಯರು ಸೇರಿದ್ದರೆಂಬ ಅಂಶ ಬೆಳಕಿಗೆ ಬಂದಿದೆ.[17] ವೀರಶೈವ ಧರ್ಮೇತಿಹಾಸದಲ್ಲಿ ಶಿವಗಂಗೆ ಮತ್ತು ಸುತ್ತಮುತ್ತಣ ಪ್ರಾಂತದಲ್ಲಿರುವ ಸಿದ್ಧಗಂಗೆ, ಗೂಳೂರು, ಗುಬ್ಬಿ, ಕಲ್ಲೆಯ, ಗುಮ್ಮಳಾಪುರ ಮೊದಲಾದವುಗಳ ಚರಿತ್ರೆ ಅತ್ಯಂತ ಕುತೂಹಲಕಾರಿ ಮತ್ತು ರೋಮಾಂಚಕಾರಿ. ಪ್ರಕೃತ ಆ ಎಲ್ಲ ಚರಿತ್ರೆಯನ್ನು ಇಲ್ಲಿ ಬರೆಯುವುದು ನಮ್ಮ ಉದ್ದೇಶವಲ್ಲ. ಸಿದ್ಧಗಂಗೆಯು ಅನತಿ ದೂರದಲ್ಲಿ ಆದ ಈ ವೀರಶೈವದ ಕ್ರಾಂತಿಯ ಕಾಲದಲ್ಲಿ ಸಿದ್ಧಗಂಗೆಯ ಪಾಲು ಅಧಿಕವೆಂದೂ ೧೨ನೆಯ ಶತಮಾನದಲ್ಲಿಯೇ ಇದು ಅನೇಕ ಮಹಾಪುರುಷರ, ಶಿವಯೋಗಿಗಳ, ಸಿದ್ಧಪುರುಷರ ತಪೋಯೋಗ್ಯಸ್ಥಾನವಾಗಿತ್ತೆಂಬುದನ್ನು ತೋರಿಸಿಕೊಡುವುದೇ ಪ್ರಧಾನಾಂಶ. ಇಲ್ಲಿನ ಗುಹೆಗಳು ಅನಾದಿ. ಆದರೆ ಇದಕ್ಕೂ ಹಿಂದಿನ ಚರಿತ್ರೆಯ ಮೇಲೆ ಬೆಳಕನ್ನು ಚೆಲ್ಲಬಲ್ಲ ಇನ್ನಾವ ಅಂಶಗಳೂ ನಮಗೆ ಲಭ್ಯವಾಗುತ್ತಿಲ್ಲ. ಮೇಲಿನ ಕೆಲವಂಶಗಳನ್ನು ಗಮನಿಸಿ, ಷಟ್‌ಸ್ಥಲಜ್ಞಾನಿ ಶ್ರೀ ಚೆನ್ನಬಸವಣ್ಣನವರ ನಂತರ ನಿರಂಜನ ಜಗದ್ಗುರು ಪೀಠದ ಜಂಗಮಪುಂಗವರಾಗಿ ಸಿದ್ಧರಾಮೇಶ್ವರರೂ, ಆಚಾರ್ಯಪೀಠದ ಗುರುವರ್ಗದವರಾಗಿ ರೇವಣಸಿದ್ಧ, ಮರುಳಸಿದ್ಧ, ರುದ್ರಮುನಿ ಶಿವಾಚಾರ್ಯರೂ ಶಿವಗಂಗೆ, ಸಿದ್ಧಗಂಗೆಗಳ ಪರಿಸರದಲ್ಲಿ ಅನೇಕ ವರ್ಷ ತಮ್ಮ ಪ್ರಭಾವ ಪೂರ್ಣಕ್ರಾಂತಿಯನ್ನು ಮಾಡಿ ಕ್ರಿ. ಶ. ೧೨೫೦ರ ವರೆಗೂ ಧರ್ಮಜಾಗೃತಿಗೊಳಿಸಿ ಜನಮನದಲ್ಲಿ ಭಕ್ತಿಜೀವನವನ್ನು ಬಿತ್ತಿ ಸಾಮಾಜಿಕ ನೆಮ್ಮದಿಗೆ ಹೆಣಗಿದರೆಂಬುದನ್ನು ಮುಖ್ಯವಾಗಿ ತಿಳಿದರೆ ಸಾಕು. ಮುಂದೆ ಸಿದ್ಧರಾಮೇಶ್ವರರು ಈ ಭಾಗದಲ್ಲಿ ಒಬ್ಬರೇ ಸಂಚಾರ ಕೈಗೊಂಡು ಅತ್ಯಂತ ಪ್ರಭಾವಯುತವಾಗಿ ವೀರಶೈವದ ಪ್ರಚಾರ ಮಾಡಿದುದೂ ಕಂಡುಬರುವುದು. ಅವರು ತಮ್ಮ ಕುರುಹನ್ನು ಸುಮಾರು ಈ ಭಾಗದಲ್ಲಿ ಅನೇಕ ಕಡೆ ಬಿಟ್ಟು ಹೋಗಿದ್ದಾರೆ. ಅನೇಕ ಊರುಗಳ ಹೆಸರುಗಳು ಸೊನ್ನಲಾಪುರ ಎಂದೇ

17. ಶ್ರೀ ಚೆನ್ನಮಲ್ಲಿಕಾರ್ಜುನ : ರೇವಣಸಿದ್ಧರು-ಪು.234-35

ಉಳಿದಿವೆ. ಸಿದ್ಧರಾಮೇಶ್ವರರ ಗದ್ದುಗೆಗಳು ದೇವಾಲಯಗಳಿಗಂತೂ ಕೊರತೆಯಿಲ್ಲ. ಶೂನ್ಯಪೀಠಾಧೀಶ್ವರರಾಗಿ ಶರಣ ತತ್ತ್ವ ಪ್ರಚಾರ ಮಾಡುವುದು ತಮ್ಮ ಆದ್ಯಕರ್ತವ್ಯವೆಂದು ಇವರು ಹೇಳಿದುದು ವಾಸ್ತವವೇ ಆಗಿದೆ. ಆದರೆ ಮುಂದಿನ ಕರ್ನಾಟಕದ ಜನಜೀವನ ರಾಜಕೀಯ ಪಿಡುಗು, ಪೀಡೆಗಳಿಂದ ಜರ್ಝರಿತಗೊಂಡಿತು. ಸಮಸ್ತ ಹಿಂದೂ ಜನಾಂಗವೇ ಕಂಗಾಲಾಗುವ ಘೋರ ದಿನಗಳು ಒದಗಿದವು. ಹೀಗೆ ಅಸ್ತವ್ಯಸ್ತಗೊಂಡ ಜನಜೀವನವ್ಯವಸ್ಥೆಗೊಳಿಸಲು ಇನ್ನೊಂದು ಧಾರ್ಮಿಕ ಕ್ರಾಂತಿಯನ್ನು ಜನತೆ ನೋಡತೊಡಗಿತು.

**ಸಿದ್ಧೇಶ್ವರ ಪುರಾಣಗಳಲ್ಲಿ ಸಿದ್ಧಗಂಗೆಯ ಹೆಸರಿಲ್ಲ :**

ವಿರಕ್ತ ತೋಂಟದಾರ್ಯ (೧೫೬೦) ನ ಸಿದ್ಧೇಶ್ವರ ಪುರಾಣ ಮತ್ತು ಗುಬ್ಬಿಯ ಶಾಂತೇಶನ (೧೫೬೧) ಸಿದ್ಧೇಶ್ವರ ಪುರಾಣಗಳಲ್ಲಿ ಸಿದ್ಧಗಂಗೆಯ ಪ್ರಸ್ತಾಪವನ್ನು ಅವರು ಮಾಡದಿರುವುದರಿಂದ, ಸಿದ್ಧಗಂಗೆಯ ಪ್ರಾಚೀನತೆಯ ಬಗೆಗೆ ಸಂಶಯ ಪಡುವ ವಿದ್ವಾಂಸರೂ ಇದ್ದಾರೆ. 'ಸಿದ್ಧಗಂಗೆ' ಎಂಬ ಹೆಸರು ಇಲ್ಲ ಅಷ್ಟೆ; ಸಿದ್ದಗಂಗೆಯಲ್ಲಿ ನಿಂತು ಅವರು ಆಚರಿಸಿದ ಪವಾಡಗಳು ಇವೆ ಎನ್ನಲು ಸಾಧ್ಯವಿದೆ. ಇವರಿಬ್ಬರೂ ಬರೆದ ತೋಂಟದ ಸಿದ್ಧಲಿಂಗಯತಿಯ ಚರಿತ್ರೆಯಲ್ಲಿ ಹೆಸರು ಇಲ್ಲದಿದ್ದುದು ಬಹುಮುಖ್ಯವಲ್ಲ. ಮತ್ತು ಅವರ ನಿಡುಬಾಳಿನ ಸಮಸ್ತ ಘಟನೆಗಳನ್ನು ಒಂದು ಚಿಕ್ಕ ಗ್ರಂಥದಲ್ಲಿ ತರುವುದೂ ಸಾಧ್ಯವಿಲ್ಲ. ಅವರಿಗೆ ಬೇಕಾಗಿರುವುದು ಅವರ ಜೀವನ ಚರಿತ್ರೆಯ ಮಧ್ಯದಲ್ಲಿ ವೀರಶೈವದರ್ಶನವನ್ನು ಸಾಧ್ಯವಾದಷ್ಟು ಗುರುವು ಶಿಷ್ಯನಿಗೆ ಬೋಧಿಸಿದಂತೆ ಕಲ್ಪಿಸಿ ಹೇಳುವುದು. ಸುಮಾರು ೮೦-೯೦ವರ್ಷಗಳಷ್ಟು ನೀಡುಬಾಳು ಬಾಳಿರಬಹುದಾದ ಸಿದ್ಧಲಿಂಗೇಶ್ವರರ ಜೀವನದಲ್ಲಿ ನಡೆದುವೆನ್ನಬಹುದಾದ ಜನರ ಬಾಯಲ್ಲಿನ ಪವಾಡ ಘಟನಾವಳಿಗಳನ್ನು ಅವರ ಜೀವನದೊಡನೆ ಬೆಳಸಿ ಅದ್ಭುತ ರಮ್ಯಮಾಡಿ ಅಂದಿನ ಜನಜೀವನಕ್ಕೆ ಹಿಡಿಸುವ ರೀತಿಯಲ್ಲಿ ಕಾವ್ಯ ರಚನೆ ಮಾಡುವುದು ಅವರ ಕೆಲಸವಾಗಿತ್ತು. ಇದೂ ಅಲ್ಲದೆ ಶಿವಯೋಗಿಗಳ ದಿನದಿನದ ಎಲ್ಲ ಜೀವನ ವೃತ್ತವನ್ನು ಕಾವ್ಯದಲ್ಲಿ ತರುವುದು ಸಾಧ್ಯವಿಲ್ಲ; ಸಾಧುವೂ ಅಲ್ಲ. ಇವರು ಬರೆದುದು ಪುರಾಣಗ್ರಂಥ; ಅದು ದಿನಚರಿಯ ಚರಿತ್ರೆಯಂತೂ ಅಲ್ಲ. ಆ ರೀತಿಯ ಪುರಾಣ ಸಂಪ್ರದಾಯದ ಬರವಣಿಗೆಯಲ್ಲಿ ಇವರು 'ಸಿದ್ಧಗಂಗೆ' ಎಂದು ಹೆಸರು ಹೇಳದಿದ್ದರೂ ಹೇರಂಬನ ಸಾಂಗತ್ಯ ಗ್ರಂಥ ಮತ್ತು 'ನಿರಂಜನವಂಶರತ್ನಾಕರ'ಗಳು ಹೆಸರು ಹೇಳಿ ಅವರು ಬಿಟ್ಟ ಕೆಲವು ಘಟನೆಗಳನ್ನು ತಮ್ಮ ಕಾವ್ಯ ಮತ್ತು ಚರಿತ್ರೆಗಳಲ್ಲಿ ತಂದು ಈ ಕ್ಷೇತ್ರದ ಪ್ರಾಚೀನತೆಯ ಬಗೆಗಿನ ಕೆಲವರ ಸಂಶಯವನ್ನು ಸಾಧ್ಯವಾದ ಮಟ್ಟಿಗೆ ನಿವಾರಿಸಿವೆ. ಯಾವುದೋ ಒಂದು ಕಾವ್ಯದಲ್ಲಿ ಹೆಸರೆತ್ತಿ ಈ ಬಗೆಗೆ ಹೇಳಿಲ್ಲವೆಂದಾಕ್ಷಣಕ್ಕೆ ಅದರ ಅಸ್ತಿತ್ವದ ಬಗೆಗೆ ಅಲ್ಲಗಳೆಯುವುದು ಸಮಂಜಸವೂ ಅಲ್ಲ; ಸಾಧುವೂ ಅಲ್ಲ. ದೇವರಾಯಪಟ್ಟಣದಲ್ಲಿ ಒಂದು ಮಡಿಕೆ ಅನ್ನ ೫೦೦ ಜನ ಜಂಗಮರಿಗೆ ಆಹಾರವಾದ ಒಂದು ಪವಾಡ ನಡೆದಿದೆಯೆಂದು ಸಿದ್ಧೇಶ್ವರ ಪುರಾಣ, ಹೇರಂಬನ ಸಾಂಗತ್ಯ, ಸಿದ್ಧಲಿಂಗೇಶ್ವರ ಸಾಂಗತ್ಯ ಗ್ರಂಥಗಳಲ್ಲೆಲ್ಲ ಉಕ್ತವಾಗಿದೆ. ದೇವರಾಯ ಪಟ್ಟಣದ ಭೂಮಿಯಲ್ಲಿಯೇ ಸಿದ್ಧಗಂಗೆಯಿರುವುದು. ಸಿದ್ಧಲಿಂಗೇಶ್ವರರು ಸಿದ್ಧಗಂಗೆಯಲ್ಲಿದ್ದಾಗಲೇ ಈ ಘಟನೆ ನಡೆದುದೆಂದು ಭಾವಿಸಬೇಕಲ್ಲದೆ ಈ ಘಟನೆಯ ಬಗ್ಗೆ ಅನ್ಯಥಾ ಭಾವಿಸುವುದು ತಪ್ಪು. ಅದರಂತೆ ತುಮಕೂರಿನಲ್ಲಿ ನಡೆದ ಭಸ್ಮದ ಗಟ್ಟಿಯನು. ವೈಷ್ಣವನಿಗೆ ಲಿಂಗ ಮಾಡಿಕೊಟ್ಟ ಘಟನೆಯೂ ಇಲ್ಲಿನ ಇನ್ನಿತರ ಘಟನೆಗಳೂ ಇವರು ಸಿದ್ಧಗಂಗೆಯಲ್ಲಿ ವಾಸ್ತವ್ಯ ಮಾಡಿದಾಗಲೇ ಎನ್ನಲು ಅನುಮಾನವೇಕೆ ? ಸಿದ್ಧಗಂಗೆ ಅವರ ವಾಸ್ತವ್ಯ ಸ್ಥಾನ. ಇಲ್ಲಿನ ಮಠ ಅವರ ಖಾಸಾಮಠ. ಹರದನಹಳ್ಳಿ ಪೀಠಾಚಾರ್ಯರ ಒಂದು ವಸಾಹತು.[18] ಅವರು ಈ ಭಾಗದ ಸಂಚಾರಕ್ಕೆ ಬಂದಾಗ ಸಿದ್ಧಗಂಗಾಕ್ಷೇತ್ರದಲ್ಲಿಯೇ ತಮ್ಮ ವಾಸ್ತವ್ಯ ಮಾಡುತ್ತಿದ್ದರಲ್ಲದೆ ಅವರು ಸತತ ಗೊತ್ತುಗುರಿಯಿಲ್ಲದೆ ಊರೂರು ತಿರುಗುತ್ತಿದ್ದರೆಂದಲ್ಲ. ಸಿದ್ಧೇಶ್ವರಪುರಾಣ, ತೋಂಟದ ಸಿದ್ಧಲಿಂಗೇಶ್ವರ ರಗಳೆಗಳಲ್ಲಿ ತುಮಕೂರಿನಲ್ಲಿ ನಡೆದ ಎರಡು ಪವಾಡಗಳು, ರಗಳೆಯಲ್ಲಿ ಕೇತಸಮುದ್ರ (ಕೇತ ಶರಧಿ) ದಲ್ಲಿ ನಡೆದ ಎರಡು ಪವಾಡಗಳು ಇವೆಲ್ಲವೂ ಸಿದ್ಧಗಂಗೆಯಲ್ಲಿ ಸಿದ್ಧಲಿಂಗೇಶ್ವರರು ಉಳಿದ ದಿನಗಳಲ್ಲಿ ನಡೆದುವೆಂದು ದೃಢವಾಗಿ ತಿಳಿಯುವುದು ಒಳ್ಳಿತು. ಕೇತಶರಧಿಯೂ ಸಿದ್ಧಗಂಗೆಯೂ ಒಂದೇ; ಈಗ ಕೇವಲ ೨ ಫರ್ಲಾಂಗುಗಳ ಅಂತರದಲ್ಲಿರುವ ಸ್ಥಾನ ವಿಶೇಷಗಳು ಸಿದ್ಧಗಂಗೆಯ ಅರ್ಧಭಾಗ, ಕೇತ ಸಮುದ್ರದ ಗಡಿಯಲ್ಲಿಯೇ ಇದೆ. ಅಲ್ಲದೆ ತಮ್ಮ ಹಿಂದೆ ಬಂದ ಚರಮೂರ್ತಿಗಳಿಗೆಲ್ಲ ಬಿಡಾರ ಮಾಡಿಕೊಟ್ಟಿದ್ದುದು ಸಿದ್ಧಗಂಗೆಯಲ್ಲಿರುವ ಅನೇಕ ಗವಿಗಳಲ್ಲಿಯೇ; ಸಿದ್ಧಲಿಂಗೇಶ್ವರರ ಪ್ರಮುಖ ಶಿಷ್ಯರಲ್ಲೊಬ್ಬರಾದ ದೊಡ್ಡ ಸಿದ್ದಪ್ಪನವರ ಹೆಸರಿನ ಗವಿ ಇಂದಿಗೂ ರಾಮಲಿಂಗೇಶ್ವರನ ಬೆಟ್ಟದಲ್ಲಿರುವುದನ್ನು ಕಾಣಬಹುದಾಗಿದೆ. ಅದರಂತೆಯೇ ಅದರ ಪಕ್ಕದಲ್ಲಿಯೇ ಚಿಕ್ಕಸಿದ್ದಪ್ಪನ ಗವಿಯು ಇವೆ. * ಇವೆರಡು ಭವ್ಯವಾದ ಗವಿಗಳೇ ಆಗಿವೆ. ದೊಡ್ಡಸಿದ್ಧಪ್ಪನ ಗವಿ ಕಡೆದ

18. ಫ. ಗು. ಹಳಕಟ್ಟಿ : ಶಿವಶರಣರ ಚರಿತ್ರೆ, ಭಾ_2, ಪು.288

* ಈ ಚಿಕ್ಕಸಿದ್ದಪ್ಪ ಯಾರೆಂದು ತಿಳಿಯುವುದು ಕಷ್ಟವಾಗಿದೆ. ಇವನೂ ಬಹುಶಃ ತೋಂಟದ ಸಿದ್ಧೇಶ್ವರ ಸ್ವಾಮಿಗಳ ಶಿಷ್ಯರಲ್ಲಿದ್ದ ಇನ್ನೊಬ್ಬ ಸಿದ್ಧೇಶ್ವರರಾಗಿರಬಹುದೆ ? ಅಥವಾ ಕಲ್ಯಾಣದಿಂದ ಬಂದವರೇ ? ವಿಜಯನಗರದಿಂದ ಬಂದವರೆ ?

ಕಲ್ಲಿನ ಬಾಗಿಲುವಾಡದಿಂದ ಕೂಡಿದ್ದಾಗಿ ಮೊದಲ ಹತ್ತಿಪ್ಪತ್ತಡಿಗಳಷ್ಟು ದೂರ ತೆವಳಿಕೊಂಡು ಹೋದ ಮೇಲೆ ಇನ್ನೊಂದು ಬಾಗಿಲು ಸಿಗುವುದು. ಆ ಬಾಗಿಲನ್ನು ದಾಟಿದೊಡನೆಯೇ ನಂದಿಯ ಮಂಟಪ. ಆ ನಂದಿಯ ಮಂಟಪ ದಾಟಿದೊಡನೆ ಇನ್ನೊಂದು ಬಾಗಿಲು ಸಿಗುವುದು. ಅದನ್ನು ದಾಟಿದ ಮೇಲೆ ವಿಶಾಲವಾದ ಬಯಲು. ಆ ಬೈಲಿನ ಮಧ್ಯದಲ್ಲೊಂದು ಶಿವಲಿಂಗ. ೫೦–೬೦ ಜನಗಳು ಕುಳಿತು ಶಿವಾನುಭವ ಗೋಷ್ಠಿಗಳನ್ನು ನೆರವೇರಿಸುವಷ್ಟು ವೈಶಾಲ್ಯ ಅಲ್ಲಿದೆ. ನಂದಿಮಂಟಪದ ಸುತ್ತು ಮುತ್ತಲೂ ೪೦-೫೦ ಜನ ಕೂಡುವಷ್ಟು ತಾಣವಿದೆ. ಸಿದ್ಧಗಂಗೆಯ ಮಹಿಮಾಮೂರ್ತಿ ಉದ್ದಾನಶಿವಯೋಗಿಗಳವರಿಗೂ, ಈ ಗವಿಗೂ ಬಹಳ ಸಂಬಂಧ ಇತ್ತು. ಆಗಾಗ ಇಲ್ಲಿಗೆ ಒಬ್ಬರೇ ಹೋಗಿ ಬರುತ್ತಿದ್ದುದುಂಟು. ರಾತ್ರಿ ವೇಳೆಯಲ್ಲಿ ಒಬ್ಬರೇ ಅಲ್ಲಿಗೆ ಹೊರಟಾಗ ಅನೇಕರು ಹಿಂಬಾಲಿಸಿ ಹೋಗಿ ಅದ್ಭುತಘಟನೆಗಳನ್ನು ಕಂಡವರು ಇನ್ನೂ ಅಕ್ಕಪಕ್ಕದ ಹಳ್ಳಿಗಳಲ್ಲಿದ್ದಾರೆ. ಹಗಲಿನಲ್ಲೇ ಹೋಗಲು ಕಷ್ಟವಾಗುವ ಆ ಸ್ಥಾನಕ್ಕೆ ಅಮಾವಾಸ್ಯೆಯ ರಾತ್ರಿಯಲ್ಲೂ ಉದ್ದಾನ ಶಿವಯೋಗಿಗಳು ಹೋಗುತ್ತಿದ್ದುದು ಅತ್ಯಂತ ರೋಮಾಂಚಕಾರಿ ಅಂಶ. ಅವರು ತಮ್ಮ ಶಿವಯೋಗಸಾಮರ್ಥ್ಯದಿಂದ ಮೃಗ ಬಾಧಾನಿವಾರಣೆಯನ್ನು ಪಡೆದವರಾಗಿದ್ದರು. ಈ ವಿಷಯವನ್ನು ಹಿಂದೆ ವಿವರಿಸಿದೆ. ಇಷ್ಟೆಲ್ಲ ವಿಪುಲ ಅವಶೇಷಗಳು ಸಿದ್ಧಗಂಗೆಯ ಪ್ರಾಚೀನತೆಯನ್ನು ದೃಢೀಕರಿಸುವಲ್ಲಿ ನೆರವಾಗುತ್ತಿದ್ದರೂ, ಡಾ॥ ಎಲ್. ಬಸವರಾಜು ಅವರು ಸಿದ್ಧಗಂಗಾಕ್ಷೇತ್ರದ ಪ್ರಾಚೀನತೆಯನ್ನು ಒಪ್ಪಿ, ಮಠದ ಪ್ರಾಚೀನತೆಯನ್ನು ಒಪ್ಪಿದಂತೆ ಇಲ್ಲ. ಅವರು 'ಹೇರಂಬನು ಈ ಸಿದ್ಧಗಂಗೆಯಲ್ಲಿ ಮಠವೊಂದು ಇದ್ದಿತೆಂದಾಗಲಿ, ಅಲ್ಲಿ ಯಾರಾದರೊಬ್ಬರು ಸ್ವಾಮಿಗಳಿದ್ದರೆಂದಾಗಲಿ ಹೇಳದಿರುವುದರಿಂದ ಇಂದಿನ ಸಿದ್ಧಗಂಗಾಮಠವು ಕಡೆಯ ಪಕ್ಷ ೧೭೯೯-೧೭೬೧ಕ್ಕಿಂತ ಈಚಿನದೆನ್ನಬಹುದೆನಿಸುವುದು'[19] ಎಂದಿದ್ದಾರೆ. ಇಲ್ಲಿ 'ಮಠ'ವೆಂದರೆ ಲಕ್ಷ್ಯಾರ್ಥ ಅಥವಾ ಸಮಾಜರೂಢಿಯಿಂದ ಶಿವಯೋಗಿಗಳು ವಾಸಿಸುವ ಸ್ಥಾನವೇ ಅಲ್ಲದೆ ಬೇರಲ್ಲ. ಇಲ್ಲಿನ ಕ್ಷೇತ್ರವೂ ಮಠವೂ ಎರಡೂ ಅನ್ಯೋನ್ಯ ಸಂಬಂಧದವು. 'ಮಠ' ಶಬ್ದಕ್ಕಿರುವ ವಾಚ್ಯಾರ್ಥವನ್ನಿಲ್ಲಿ ಗಮನಿಸಬೇಕಾಗಿಲ್ಲ. ಪೂರ್ವದಲ್ಲಿ ಸಿದ್ಧಗಂಗಾ ಬೆಟ್ಟದ ಮೇಲೆಯೇ ಇರುವ ಕಟ್ಟಡವನ್ನೇ ಮಠವೆಂದು ತಿಳಿದರೂ ಬಾಧಕವಿಲ್ಲ. ಮೊದ ಮೊದಲು ದಾಸೋಹ ಅಲ್ಲಿಯೇ ಇತ್ತು. ಅಲ್ಲಿ ಛಾತ್ರಗಣವಿದ್ದೇ ತೀರಬೇಕೆಂಬ ನಿಯಮವೇನೂ ಇಲ್ಲ. ನಿರಂಜನವಂಶರತ್ನಾಕರದ ಪ್ರಕಾರ ಗೋಸಲಸಿದ್ಧೇಶ್ವರರು ತಮಗಾಗಿ ಸಿದ್ಧಗಂಗಾಕ್ಷೇತ್ರದಲ್ಲಿ ಒಂದು ಮಠವನ್ನು ಕಟ್ಟಿಸಿಕೊಂಡರೆಂದು ಸ್ಪಷ್ಟವಾಗಿ ಹೇಳಲಾಗಿದೆ. ಹರದನಹಳ್ಳಿ ಪೀಠಾಚಾರ್ಯರು ತಾವು ಬಿಡಾರ ಮಾಡಿದ ಕಡೆಗಳಲ್ಲೆಲ್ಲ ಆ ಭಾಗದ ಜನಗಳ ನಿಚ್ಚ ನಿಚ್ಚ ಆಚಾರ ವಿಚಾರ ಶುದ್ಧಿಗೆ ಓರೋರ್ವ ವಿರಕ್ತರನ್ನು ನೆಲೆಗೊಳಿಸುತ್ತಿದ್ದರು. ವಿರಕ್ತರ ಆ ನೆಲೆಗಳೇ ಮಠಗಳಾಗಿ ಮುಂದುವರಿಯುತ್ತಿದ್ದವು. ಆ ಮಠಗಳ ಸಂಪತ್ತು ಸುತ್ತ ಮುತ್ತಲ ಜನಗಳೇ ಆಗಿರುತ್ತಿದ್ದರು. 'ಸಿದ್ಧಲಿಂಗೇಶ್ವರ ಸಾಂಗತ್ಯ'ದಲ್ಲಿ ಬರುವ

ದೇಶದೇಶಕೆ ವಿರಕ್ತರನೊಬ್ಬರ । ಲೇಸಾಗಿ ನೇಮಿಸಿ ಮಡಗಿ ।
ಭೂಶುದ್ಧಿಯನು ಮಾಡಿ ಕಲಿಯ ಕಟ್ಟಾಳಿದ । ದೋಷರಹಿತ ಸಿದ್ಧಲಿಂಗ ॥ (೧೯–೧೭)

ಈ ಪದ್ಯದಿಂದ ಸಿದ್ಧಲಿಂಗೇಶ್ವರರು ವಿರಕ್ತಮಠಸಂಪ್ರದಾಯವನ್ನು ಹೇಗೆ ಬೆಳೆಸಿ ಭೂಶುದ್ಧಿ ಮಾಡುತ್ತಿದ್ದರೆಂಬುದನ್ನರಿಯಬಹುದು. ಆ ವಿರಕ್ತರು ವಾಸಿಸುವ ಸ್ಥಾನಗಳೆಲ್ಲ 'ಮಠ'ಗಳೇ ಆದುವು. ಮಠ ಶಬ್ದವನ್ನಿಲ್ಲಿ ಜಂಗಮರು ವಾಸ ಮಾಡುವ ಮನೆಯೇ ಎಂದು ತಿಳಿಯಬೇಕು. ಜಂಗಮರನ್ನು ನೆಲೆಗೊಳಿಸಿದರೆನ್ನುವುದೂ ಒಂದೇ, ಮಠವನ್ನು ಸ್ಥಾಪಿಸಿದರೆನ್ನುವುದೂ ಒಂದೇ. 'ಮಠ' ಶಬ್ದಕ್ಕಿರುವ 'ಮಠಶ್ಛಾತ್ರಾದಿ ನಿಲಯಃ' ಎಂಬ ಅಮರಕೋಶದ ಅರ್ಥಕ್ಕೆ ತಕ್ಕೆ ಬಿದ್ದು ಮೈ ನೋಯಿಸಿಕೊಳ್ಳಬೇಕಾದುದೇನೂ ಇಲ್ಲ. ಈಗಲೂ ಅನೇಕ ಗೃಹಸ್ಥರ ಮನೆಗಳಿಗೆ ಚಿಕ್ಕಮಠ, ದೊಡ್ಡಮಠ, ಹಿರೇಮಠ ಇತ್ಯಾದಿ ನಾಮಾಂತರಗಳ ವ್ಯವಹಾರವಿರುವುದನ್ನು ಗಮನಿಸಬೇಕು. ಈಗ ಸಿದ್ಧಗಂಗೆಯಲ್ಲಿ ಹಳೆಯ ಮಠವೆಂದು ಕರೆಯುವ ಮಠ ಭವ್ಯವಾದ ೪ ಅಡಿ ದಪ್ಪನೆಯ ಪ್ರಾಕಾರದಿಂದ ಆವೃತವಾಗಿ ಮಧ್ಯದಲ್ಲಿ ಆಗಮೋಕ್ತ ವಾಸ್ತುಶಿಲ್ಪ ಕ್ರಮವಿಡಿದು ಕಟ್ಟಿದ ಕಟ್ಟಡ ಅದರ ಪ್ರಾಚೀನತೆಗೊಂದು ನಿದರ್ಶನ. ಆದರೆ ಅದರ ಅನೇಕ ಭಾಗಗಳು ಕಾಲಕಾಲಕ್ಕೆ ಬದಲಾವಣೆ ಹೊಂದಿ ಇಂದಿನ ಸ್ಥಿತಿಯಲ್ಲಿವೆ. ಶ್ರೀಶಿವಕುಮಾರ ಸ್ವಾಮಿಗಳ ಕಾಲದಲ್ಲೂ ಅನೇಕ ಮಾರ್ಪಾಡುಗಳು ಅಲ್ಲಿ ಆಗಿವೆ. ಒಂಭತ್ತು ಕಂಬಗಳ ಪಡಸಾಲೆಯ ಭಾಗ, ಆ ಕಂಬಗಳ ಮೇಲೆ ಕೆತ್ತಿಸಿರುವ ವಿಗ್ರಹಗಳು ಮಠದ ಪ್ರಾಚೀನತೆಯನ್ನು ಸಾರುವ ಕುರುಹುಗಳಾಗಿವೆ. ಗೋಸಲ ಸಿದ್ಧೇಶ್ವರರ ಕಾಲದ ಮಠ ಇದೇ ಎಂದು ಗ್ರಹಿಸಲಾಗುತ್ತಿದೆ. ಒಂದು ವೇಳೆ ಇದರ ಪ್ರಾಚೀನತೆಯ ಬಗೆಗೆ ಸಂಶಯ ತಾಳಿದರೂ ಬೆಟ್ಟದ ಮೇಲೆ ಸಿದ್ಧಲಿಂಗೇಶ್ವರ ಸ್ವಾಮಿಯ ವಿಗ್ರಹವಿರುವ ಕಟ್ಟಡದ ಸುತ್ತಮುತ್ತಲಿರುವ ಗುಹಾದಿ ಕಟ್ಟಡಗಳಂತೂ ಪ್ರಾಚೀನವಾಗಿದ್ದು, ಅದನ್ನೇ ಪ್ರಾಚೀನ ಮಠವೆಂದು ಗ್ರಹಿಸಬೇಕು. ಇವೆಲ್ಲ ಕಾಲಕಾಲಕ್ಕೆ ಜೀರ್ಣೋದ್ಧಾರವಾಗಿ ಮೂಲ ರೂಪವನ್ನು ಬದಲಾಯಿಸಿವೆ. ಅಂತೂ

19. ಬೆಂಗಳೂರು ವಿ.ವಿ. ಪ್ರಕಟಣೆ : ವಚನಕಾರ ಸಿದ್ಧಲಿಂಗ ಯತಿ, ಪುಟ 66 ಅಡಿ ಟಿಪ್ಪಣಿ

ಮಠದ ಪ್ರಾಚೀನತೆಯ ಬಗೆಗೆ ಸಂಶಯವೇನೂ ಇಲ್ಲ. ಪಂಡಿತ ನಾಗಭೂಷಣಶಾಸ್ತ್ರಿಗಳು ಅಡವಿ ಸ್ವಾಮಿಗಳು ಇಲ್ಲಿನ ಮಠ ಸ್ಥಾಪಿಸಿದರು[20] ಎಂದಿದ್ದಾರೆ. ಇವೆಲ್ಲ ಸಿದ್ಧಗಂಗೆಯನ್ನು ನೋಡದೆ ಅದರ ಬಗೆಗೆ ವಿಚಾರಿಸದೆ ಬರೆದ ಬರವಣಿಗೆಗಳಾಗಿದೆ ಇವಕ್ಕೆ ಬೆಲೆ ಕೊಡಲಾಗುವುದಿಲ್ಲ. ಇಂತಿಂಥ ವಿದ್ವಾಂಸರು ಹಿಂದೆ ಮುಂದೆ ನೋಡದೆ ಹೀಗೆ ಬರೆಯುತ್ತಿರುವುದಕ್ಕೆ ಆಶ್ಚರ್ಯ ವ್ಯಕ್ತ ಪಡಿಸಬೇಕಾಗುತ್ತದೆ, ಅಷ್ಟೆ. ಅಡವಿ ಸ್ವಾಮಿಗಳೆಂಬುವರು ಈ ಮಠದ ಅಧಿಕೃತ ಸ್ವಾಮಿಗಳೇ ? ಅವರು ವಿರಕ್ತ ಮೂರ್ತಿಗಳೇ ? ಎಂಬುದು ಇನ್ನೂ ಅನುಮಾನ. ಆದರೆ ಅವರು ಸಾಧಿಸಿದ ಶಿವಯೋಗದ ಮೇಲ್ಮೆಯಿಂದ ಅವರು ಯಾವ ಜಂಗಮರಿಗಿಂತಲೂ ಕಡಿಮೆಯವರಲ್ಲವೆಂಬುದಂತೂ ನಿಜ. ಅವರ ಪೂರ್ವದ ಸ್ಥಳ ಧಾರವಾಡ ಜಿಲ್ಲೆಯ ಹಾನಗಲ್ಲು ತಾಲ್ಲೋಕಿನ ಕೂಡಲ ಗ್ರಾಮ. ಅಲ್ಲಿನ ವಿರಕ್ತಮಠದಿಂದ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಗುಬ್ಬಿಗೆ ಆಗಮಿಸಿ ಅಲ್ಲಿಂದ ಕ್ರಿ.ಶ. ಸುಮಾರು ೧೮೬೫ರ ಹೊತ್ತಿಗೆ ಸಿದ್ಧಗಂಗೆಗೆ ಬಂದು ಸಿದ್ಧಗಂಗೆಯ ಸುಸ್ಥಿತಿಗೆ ಮತ್ತು ಅಭಿವೃದ್ಧಿಗೆ ಕಾರಣರಾದ ಕಾರಣ ಪುರುಷರು. ಅವರು ಸಿದ್ಧಗಂಗೆಗೆ ಬಂದಾಗಲೂ ಸಿದ್ಧಗಂಗೆಯಲ್ಲಿ ಶ್ರೀ ನಿ.ಪ್ರ. ಸಿದ್ಧಲಿಂಗಸ್ವಾಮಿಗಳೆಂಬ ಹೆಸರಿನ ಅಧಿಕೃತ ಸ್ವಾಮಿಗಳಿದ್ದರು. ಅವರು ತುಂಬಾ ಮುಗ್ಧರು. ಏನೂ ಅರಿಯದವರು. ಆದುದರಿಂದ ಮಠದ ಸ್ಥಿತಿ ಹೀನಾವಸ್ಥೆಗೆ ಬಂದಿತ್ತು. ಆಗ ಅಡವಿಸ್ವಾಮಿಗಳು ಈ ಮಠಕ್ಕೆ ಬಂದರು. ಅವರು ದಾಸೋಹ ಕ್ರಿಯೆಗಳೇ ಮೊದಲಾದುವನ್ನು ಪ್ರಾರಂಭಿಸಿದರು. ಕೊನೆಗೆ ಸಿದ್ಧಲಿಂಗಸ್ವಾಮಿಗಳು ಆಡಳಿತವನ್ನೆಲ್ಲ ಅವರಿಗೆ ಒಪ್ಪಿಸಿದರು. ಅಡವಿ ಸ್ವಾಮಿಗಳೇ ಮುಂದೆ ಮಠದ ಸಮಸ್ತ ಆಗು ಹೋಗುಗಳಿಗೆ ಕಾರಣರಾದರು. ಕೊನೆಗೆ ಅವರೂ ಉದ್ದಾನಪ್ಪ ಸ್ವಾಮಿಗಳಿಗೆ ಮಠವನ್ನೊಪ್ಪಿಸಿ ತಾವು ತೊಟ್ಟಿಲಕೆರೆಯಲ್ಲಿ ಅಭಿವೃದ್ಧಿಗೆ ತಂದ ಮಠದಲ್ಲಿ ಲಿಂಗೈಕ್ಯರಾಗುವುದಕ್ಕೂ ಇದೇ ಕಾರಣ.[21] ಮೇಲಾಗಿ ಅಡವಿಸ್ವಾಮಿಗಳವರು ಬೆಟ್ಟದ ಮೇಲಿನ ಅಮ್ಮನವರ ಗವಿಯ ಮಠದಲ್ಲಿಯೇ ವಾಸ್ತವ್ಯ ಮಾಡಿದ್ದರಲ್ಲದೆ ಕೆಳಗಿನ ಮಠದ ಸಿದ್ಧಲಿಂಗ ಸ್ವಾಮಿಗಳವರ ವ್ಯವಹಾರದಲ್ಲಿ ಮೊದ ಮೊದಲು ಕೈ ಹಾಕುತ್ತಲೇ ಇರಲಿಲ್ಲ. ಅವರ ದಾಸೋಹ ಮತ್ತು ಪಾಠಶಾಲೆಗಳ ವ್ಯಾಪ್ತಿಯು ಬೆಟ್ಟದ ಮೇಲಿನ ಮಠಕ್ಕಷ್ಟೇ ಸೀಮಿತವಾಗಿತ್ತು. ಸಿದ್ಧಲಿಂಗ ಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಕೆಳಗಿನ ಮಠದ ಅಧಿಕಾರವೂ ಅವರದಾಗಲು ಕಾರಣವಾಯಿತು. ಸಿದ್ಧಲಿಂಗಸ್ವಾಮಿಗಳು ತಾವಿರುವಾಗಲೇ ಮಠದ ಉತ್ತರಾಧಿಕಾರಿಗಳನ್ನು ಮಾಡಲಿಲ್ಲವಾದ್ದರಿಂದ ಮಠದ ಸಮಸ್ತ ವ್ಯವಹಾರವೂ ಅಡವಿ ಸ್ವಾಮಿಗಳದೇ ಆಯಿತು. ಮುಂದೆ ಅವರು ಮಠಕ್ಕೆ ಉದ್ದಾನ ಶಿವಯೋಗಿಗಳವರನ್ನು ನೇಮಿಸಿ ಹೊರಟು ಹೋದುವರಲ್ಲಿ ಬಹಳ ಅರ್ಥವಡಗಿದೆ. ಆ ಕಾಲದಲ್ಲಿ ಉದ್ದಾನಪ್ಪನವರನ್ನು ಕಾರಣಪುರುಷರೆಂದು ಕಂಡವರು ಅಡವಿಸ್ವಾಮಿಗಳೊಬ್ಬರೆ. ಅಧಿಕಾರ ವಹಿಸಿಕೊಂಡಂದಿನಿಂದ ಉದ್ದಾನಪ್ಪನವರ ತೇಜೋವಿಶೇಷದ ಅರಿವು ಎಲ್ಲರಿಗೂ ಆಗತೊಡಗಿತು. ಅಡವಿಸ್ವಾಮಿಗಳ ಪ್ರಭಾವಲಯ ಅತ್ಯಂತ ಮಹತ್ವದ್ದಾಗಿತ್ತು. ಅವರ ಸತ್ಸಂಕಲ್ಪ ಶಕ್ತಿಯೇ ಉದ್ದಾನಶಿವಯೋಗಿಗಳವರು ಮಠವನ್ನು ಅಭಿವೃದ್ಧಿಗೊಳಿಸಲು ಕಾರಣವಾಯಿತೆಂದು ಅನೇಕ ಸಲ ಉದ್ದಾನ ಸ್ವಾಮಿಗಳೇ ತಮ್ಮ ಶಿಷ್ಯರಲ್ಲಿ ಹೇಳಿಕೊಂಡಿದ್ದಾರೆ. ಆದ್ದರಿಂದ ಶ್ರೀ ನಾಗಭೂಷಣ ಶಾಸ್ತ್ರಿಗಳ ಹೇಳಿಕೆ ಸಮಂಜಸವಲ್ಲದ್ದು. ನಿರಂಜನ ವಂಶರತ್ನಾಕರದಲ್ಲಿ 'ಸಿದ್ಧಗಂಗಾ ಮಠದ ಸಿದ್ಧಲಿಂಗಪ್ಪನವರ ಬಡಕಟ್ಟಿನ ಐದು ಜನ ಚರಮೂರ್ತಿಗಳನ್ನು' ಹೇಳಲಾಗಿದೆ.[22] ಈ ಬುಡಕಟ್ಟಿಗೆ ಸೇರಿದ ಐದು ಜನ ಚರಮೂರ್ತಿಗಳು ಯಾವ ಯಾವ ಮಠದವರೆಂಬುದನ್ನು ಹೇಳಿಲ್ಲ. ಆದ್ದರಿಂದ ಹಿಂದಿನಿಂದಲೂ ಅಂದರೆ ಗೋಸಲ ಸಿದ್ಧೇಶ್ವರರ ಕಾಲದಿಂದಲೂ (ಕ್ರಿ.ಶ. ೧೩೦೦) ಇಲ್ಲಿ ಮಠವೂ ಜಂಗಮಮೂರ್ತಿಗಳೂ ಇದ್ದುದು ಸೂರ್ಯನಷ್ಟೇ ನಿಚ್ಚಳ ಮತ್ತು ಸತ್ಯ.

## 13ನೆಯ ಶತಮಾನದ ಮ್ಲೇಚ್ಛರ ಹಾವಳಿ ಮತ್ತು ಹರದನಹಳ್ಳಿ ಪೀಠಾಚಾರ್ಯರ ಕ್ರಾಂತಿ :

ಕಲ್ಯಾಣದ ಕ್ರಾಂತಿಯ ನಂತರ ಅಸ್ತವ್ಯಸ್ತಗೊಂಡ ವೀರಶೈವಧರ್ಮದ ಪರಿಸ್ಥಿತಿಯನ್ನು ೧೨ನೆಯ ಶತಮಾನದ ಕೊನೆಯಲ್ಲಿ ಸಿದ್ಧಗಂಗಾ ಪರಿಸರದಲ್ಲಿ ಮಾಡಿದ ಸಿದ್ಧತ್ರಯರ ಕ್ರಾಂತಿಯು ಕ್ರಿ.ಶ. ಸುಮಾರು ೧೨೫೦ರವರೆಗೆ ಜನತೆಯನ್ನು ಸುವ್ಯವಸ್ಥೆಗೆ ತರಲು ಪ್ರಯತ್ನಿಸಿತ್ತು. ಆದರೆ ಒಮ್ಮೆಲೇ ಬಿರುಗಾಳಿಯಂತೆ ೧೩ನೆಯ ಶತಮಾನದ ಕೊನೆಯಲ್ಲಿ ಅನೇಕ ಅನಿಷ್ಟ ಪರಂಪರೆಗಳು ಕರ್ನಾಟಕದಲ್ಲಿ ಬಂದೊದಗಿದವು. ಇಲ್ಲಿ ಧರ್ಮ, ಸಾಹಿತ್ಯ, ಸಂಸ್ಕೃತಿ, ಸಂಪತ್ತೂ ನೆಗೊಂಡು ಘೋರ ವಿಪತ್ಪರಂಪರೆ

---

20. ಸಾವಧಾನ ಸಂಚಿಕೆ 22, ಸಂಪುಟ 24, ಪುಟ 1.

21. ಸಿದ್ಧಗಂಗಾ ಮಠಕ್ಕೆ ಇಲ್ಲಿನ ಧರ್ಮಕಾರ್ಯಕ್ಕೋಸುಗ ಸಿದ್ಧಗಂಗಾ ಪಾಳ್ಯ, ಬೊಮ್ಮನಹಳ್ಳಿ ಎಂಬ ಎರಡು ಇನಾಂಗ್ರಾಮಗಳು ಇದ್ದವು. ಈ ಇನಾಮತಿಯನ್ನು ಯಾರು ಹಾಕಿಕೊಟ್ಟಿದ್ದರೋ ತಿಳಿಯದು. ೧೮೬೦ಕ್ಕೂ ಹಿಂದೆ ಸರಕಾರದವರು ಮಠದ ಆಡಳಿತ ಸರಿಯಿಲ್ಲವೆಂದು ಇನಾಮತಿಯನ್ನು ಕಿತ್ತುಕೊಂಡರು. ಉದ್ದಾನಸ್ವಾಮಿಗಳು ಈ ಇನಾಮತಿ ಪಡೆಯಲು ೧೯೧೩ರಲ್ಲಿ ಪ್ರಯತ್ನಿಸಿ ಸಾಧ್ಯವಾಗದೆ ಕೈಬಿಟ್ಟಂತೆ ಹಳೆಯ ದಾಖಲೆಗಳಿಂದ ತಿಳಿದು ಬರುವುದು.

22. ಶ್ರೀ ಚೆನ್ನಮಲ್ಲಿಕಾರ್ಜುನ (ಸಂ) ನಿರಂಜನ.ವಂಶ. ರತ್ನಾಕರ-ಭಾಗ 2 ಪುಟ 28.

ಗಳನ್ನು ಜನತೆ ಅನುಭವಿಸುವ ಹಠಾತ್ತಾದ ಪರಿಸ್ಥಿತಿ ಬಂದೊದಗಿತು. ಒಂದು ಕಾಲದಲ್ಲಿ ಕನ್ನಡನಾಡು ದಕ್ಷಿಣ ಭಾರತವನ್ನು ಸುಸ್ಥಿತಿಯಲ್ಲಿಡುವ ಕರ್ತವ್ಯ ಭಾರವನ್ನು ಹೊತ್ತು ನಿಂತ ನಾಡಾಗಿತ್ತು. ಇಲ್ಲಿ ಹುಟ್ಟಿ ಬೆಳೆದ ಚಕ್ರಾಧಿಪತ್ಯಗಳೇ ಇದಕ್ಕೆ ಸಾಕ್ಷಿ. ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದಷ್ಟು ಚಕ್ರಾಧಿಪತ್ಯಗಳು ಭಾರತದ ಇನ್ನಾವ ಭಾಗದಲ್ಲೂ ಹುಟ್ಟಿ ಬೆಳೆಯಲಿಲ್ಲವೆಂದರೆ ತಪ್ಪಲ್ಲ. ಮೌರ್ಯರ ಸಾಮಂತರಾಗಿದ್ದ ಶಾತವಾಹನರು ಮತ್ತು ಗಂಗರು ಮೊದಲ್ಗೊಂಡು ಹೊಯ್ಸಳರವರೆಗೆ ಸುಮಾರು ೧೨೦೦ವರ್ಷಗಳ ದಕ್ಷಿಣ ಭಾರತವು ಜ್ಞಾನ ವಿಜ್ಞಾನಗಳ, ಸಾಹಿತ್ಯ, ಲಲಿತಕಲೆ, ಶಿಲ್ಪವಿಜ್ಞಾನಗಳ ತವರುಮನೆಯೆನಿಸಿತ್ತು. ಚಾಲುಕ್ಯ ಚಕ್ರವರ್ತಿಗಳ ಆಳ್ವಿಕೆಯಲ್ಲಿ ವೈಭವ ಶಿಖರಕ್ಕೇರಿದ್ದ ಕನ್ನಡಚಕ್ರಾಧಿಪತ್ಯದ ಆಧಾರಸ್ತಂಭಗಳು ಆ ಚಕ್ರಾಧಿಪತ್ಯದ ಅವಸಾನದ ನಂತರ ಲಿಕಿಲಿಕಿಯಾಗಿ ಹೋದವು. ಆಗ ಸಮಗ್ರಕರ್ನಾಟಕದ ಕ್ಷೇಮಚಿಂತನೆಯ ಇನ್ನೊಂದು ಚಕ್ರಾಧಿಪತ್ಯ ಗರಿಗಟ್ಟಿಕೊಳ್ಳಲಿಲ್ಲ. ಅನೇಕ ಚಿಕ್ಕ ದೊಡ್ಡ ಸ್ವಯೂಥಕಲಹಪೀಡಿತ ರಾಜ್ಯಗಳು ಮಾತ್ರ ಉಳಿದವು. ಅದುವರೆಗೆ ಉತ್ತರದ ಮಹಮ್ಮದೀಯರ ದಾಳಿಯಿಂದ ದೂರವಿದ್ದ ಕನ್ನಡನಾಡಿಗೆ ಮಹಮ್ಮದೀಯರ ದಾಳಿಯ ಪಿಡುಗು ಪ್ರಾರಂಭವಾಯಿತು. ಸಮರ್ಥವಾಗಿ ಆ ದಾಳಿಯನ್ನು ತಡೆಗಟ್ಟುವ ಕೆಚ್ಚು ನೆಚ್ಚುಗಳು ಕನ್ನಡಿಗರಲ್ಲಿ ಉಳಿಯಲಿಲ್ಲ. ಇದಕ್ಕೆ ಕಾರಣಗಳು ಅನೇಕ. ಎಲ್ಲೆಲ್ಲೂ ಅನೈಕಮತ್ಯ ತುಂಬಿತ್ತು. ಅಂತೆಯೇ ಪ್ರಥಮತಃ ದೊಡ್ಡ ಪ್ರಮಾಣದ ಸೈನ್ಯದೊಂದಿಗೆ ದಿಲ್ಲಿಯ ಸುಲ್ತಾನನಾದ ಅಲ್ಲಾವುದ್ದೀನ್ ಖಿಲ್ಜಿಯು ೧೨೯೪ರ ಹೊತ್ತಿನಲ್ಲಿ ದಕ್ಷಿಣ ಭಾರತಕ್ಕೆ ಪದಾರ್ಪಣೆ ಮಾಡಿ ದೇವಗಿರಿಗೆ ಮುತ್ತಿಗೆ ಹಾಕಿ ಅಲ್ಲಿಯ ಅರಸನಾದ ರಾಮದೇವನನ್ನು ಸೋಲಿಸಿ, ಕಪ್ಪವನ್ನು ಸೆಳೆದು ಹೊರಟುಹೋದ ನಂತರ ಕನ್ನಡನಾಡಿನ ಜನಾಂಗಕ್ಕೆ ಉಸುರು ಕಟ್ಟಿದಂತಾಗಿ ಅನೇಕ ಕಷ್ಟನಷ್ಟಗಳು ಪ್ರಾರಂಭವಾದವು. ಇಲ್ಲಿನ ಅಪಾರ ಐಶ್ವರ್ಯ ಅವರ ಕಣ್ಣನ್ನು ಕುಕ್ಕಿಸಿತು. ಅಲ್ಲಾವುದ್ದೀನ್ ಖಿಲ್ಜಿಯ ದಕ್ಷಿಣ ಭಾರತದ ದಾಳಿಯ ರುಚಿಯುಂಡ ಅವನ ಸರದಾರನಾದ ಮಲಿಕ್ಕಾಫರನು ಕ್ರಿ.ಶ. ೧೩೦೯ ರಿಂದ ೧೩೧೧ರವರೆಗೆ ದೊಡ್ಡ ಪ್ರಮಾಣದಲ್ಲಿ ದಾಳಿಮಾಡಿ ಕನ್ನಡ ನಾಡಿನ ಪ್ರಸಿದ್ಧ ದೊರೆಗಳಾದ ಯಾದವರನ್ನು, ಹೊಯ್ಸಳರನ್ನು ಸೋಲಿಸಿ ಅವರ ಐಶ್ವರ್ಯವನ್ನೆಲ್ಲ ಕೊಳ್ಳೆ ಹೊಡೆದನು. ಹೆಚ್ಚು ಕಡಿಮೆ ದಕ್ಷಿಣ ಭಾರತವನ್ನೆಲ್ಲ ಅಲ್ಲೋಲಕಲ್ಲೋಲಗೊಳಿಸಿದನು. ಓರಂಗಲ್ಲಿನ ಪ್ರತಾಪರುದ್ರನನ್ನು ಸ್ವಾಧೀನಪಡಿಸಿಕೊಂಡು ಪಾಂಡ್ಯರ ರಾಜಧಾನಿಯಾದ ಮಧುರೆಯಲ್ಲಿ ತನ್ನ ಸೈನ್ಯವನ್ನು ಇಟ್ಟನು. ಮುಂದೆ ದೆಹಲಿಯ ಹುಚ್ಚುದೊರೆ ಮಹಮ್ಮದ್‌ಬಿನ್ ತೊಗಲಕನಂತೂ ಓರಂಗಲ್ಲು, ದೇವಗಿರಿಗಳನ್ನು ದೆಹಲಿಯ ಒಂದು ಭಾಗಗಳಂತೆಯೇ ಮಾಡಿದನು. ಕನ್ನಡಿಗರ ಆಶಾಕಿರಣದಂತಿದ್ದ ಪ್ರಬಲ ರಾಜರಿಂದ ಕೂಡಿದ್ದ ಹೊಯ್ಸಳರ ದ್ವಾರಸಮುದ್ರವೀಗ ಹಾಳು. ಯಾದವರೂ ಮೂಲೆಗುಂಪು. ಇನ್ನುಳಿದ ಚಿಕ್ಕ ಪುಟ್ಟ ಪಾಳೆಯಪಟ್ಟುಗಳ ಪಾಡೇನು ? ಈ ಸ್ಥಿತಿ ಕ್ರಿ.ಶ. ೧೩೩೬ರವರೆಗೆ ಅವ್ಯಾಹತವಾಗಿ ನಡೆಯಿತು. ಈಗ ಕನ್ನಡನಾಡಿನ ಜನತೆ ಕಣ್ಣುಬಿಟ್ಟಿತು. ಕನ್ನಡನಾಡಿನಲ್ಲಿದ್ದ ಸಮಸ್ತ ಧರ್ಮಗಳು ಅಳಿಯ ತೊಡಗಿದ್ದವು. ಜನತೆ ಗಾಬರಿಗೊಂಡಿತು. ಕಂಪಲಿಯ ರಾಜನು ಹತನಾಗಿ ಅವನ ಇಬ್ಬರು ಮಕ್ಕಳು ಸೆರೆಹಿಡಿಯಲ್ಪಟ್ಟು ಮಹಮ್ಮದೀಯ ಧರ್ಮಕ್ಕೆ ಮತಾಂತರಗೊಳಿಸಿದುದಂತೂ ಕನ್ನಡಿಗರಿಗೆ ತೀರಾ ಗಾಬರಿಯನ್ನುಂಟುಮಾಡಿತು. ಧರ್ಮ, ದೇವಾಲಯ, ಧರ್ಮಗ್ರಂಥಗಳ ಮೇಲೂ ದಾಳಿ ಪ್ರಾರಂಭವಾಯಿತು.[23] ಆಗ ಸಮಗ್ರ ಕರ್ನಾಟಕವನ್ನು ಜಾಗೃತಿಗೊಳಿಸಿದ ಕೀರ್ತಿ ಮಠಾಧಿಪತಿಗಳಿಗೆ ಸಲ್ಲಬೇಕು. ಆ ಮಠಾಧಿಪತಿಗಳು ಯಾರೇ ಆಗಿರಬಹುದು. ಶೈವ, ವೀರಶೈವ. ಅದ್ವೈತ, ವಿಶಿಷ್ಟಾದ್ವೈತ, ಜೈನ ಈ ಎಲ್ಲ ಸಿದ್ಧಾಂತಾನುಯಾಯಿಗಳೂ ಒಂದುಗೂಡಿದರು. ಧರ್ಮರಕ್ಷಣೆಗಾಗಿ, ಸಂಸ್ಕೃತಿ, ಸಾಹಿತ್ಯ, ಶಿಲ್ಪಾದಿಗಳ ರಕ್ಷಣೆಗಾಗಿಯೇ ಒಂದು ಮಹಾಸಾಮ್ರಾಜ್ಯ ಕಟ್ಟುವ ತಮ್ಮ ಸಂನ್ಯಾಸ ಧರ್ಮವನ್ನು ಕ್ರಿಯಾಮುಖಗೊಳಿಸಿದರು. ಪಂಪಾಕ್ಷೇತ್ರದ ಪ್ರಸಿದ್ಧ ಕಾಳಾಮುಖಾಚಾರ್ಯ ಕಾಶಿಕ್ರಿಯಾವಿಲಾಸಶಕ್ತಿ, ಶೃಂಗೇರಿ ಶ್ರೀಮಚ್ಛಂಕರ ಭಗವತ್ಪಾದರ ಪರಂಪರೆಯ ಶಾರದಾಪೀಠಾಧಿಗಳು ತಮ್ಮ ಮಠಮಾನ್ಯಗಳನ್ನು ಬಿಟ್ಟಿದ್ದರು. ನಾಡಿನುದ್ದಗಲಕ್ಕೂ ಸಂಚರಿಸಿದರು. ಇದೇ ಸಮಯದಲ್ಲಿಯೇ ವೀರಶೈವ ಶೂನ್ಯಪೀಠಾಧಿಪತಿ ಸ್ಥಾನಾಪನ್ನರಾಗಿದ್ದ ಹರದನಹಳ್ಳಿ (ಈಗಿನ ಚಾಮರಾಜನಗರ ತಾಲ್ಲೂಕು) ಜಗದ್ಗುರು ಗೋಸಲಸಿದ್ಧೇಶ್ವರರೂ ಧಾರ್ಮಿಕ ಕೆಚ್ಚು ನೆಚ್ಚುಗಳನ್ನು ಜನತೆಯಲ್ಲಿ ತುಂಬಲು ಸಂಚಾರ ಕೈಗೊಂಡರು. ದಕ್ಷಿಣ ಭಾರತವೆಲ್ಲ ಒಗ್ಗೂಡಿ ದಿಗ್ಗೆಂದು ಎದ್ದುನಿಂತಿತು. ಹೊನ್ನಿನ ಹೊಳೆ ಹರಿಯಿತು. ಸಂಗಮವಂಶದ ಹಕ್ಕ, ಬುಕ್ಕರೇ ಮೊದಲಾದ ನಾಲ್ವರು ಕ್ಷತ್ರಿಯ ವೀರರನ್ನು ಮುಂದೆಮಾಡಿ 'ವಿಜಯನಗರ' ಅಥವಾ 'ವಿಜಯಕಲ್ಯಾಣ'ವೆಂಬ ಹೆಸರಿನ ಧರ್ಮರಾಜ್ಯ ಸ್ಥಾಪನೆಯ ಪೂರ್ವರಂಗಕ್ಕೆ ಅಂದಿನ ದಕ್ಷಿಣಭಾರತದ ಸುಪ್ರಸಿದ್ಧ ಶೈವಕ್ಷೇತ್ರವಾದ ಪಂಪಾವಿರೂಪಾಕ್ಷನ ಸ್ಥಾನವೇ ಆರಿಸಲ್ಪಟ್ಟಿತು. ಅವನನ್ನೆ ತಮ್ಮ ರಾಜಮುದ್ರೆಯನ್ನಾಗಿ ಸ್ವೀಕರಿಸಿ ಸಾಮ್ರಾಜ್ಯದ ಅಸ್ತಿಭಾರಹಾಕಿದರು. ಇದಕ್ಕೆ ಹೊಯ್ಸಳರ ಕೊನೆಯ ರಾಜನೂ,

---

23. (i) ವೈಷ್ಣವ ಆಚಾರ್ಯನಾದ ವೆಂಕಟನಾಥನು ತನ್ನ 'ಅಭೀತಿಸ್ತವ'ದಲ್ಲಿ

ಕಲಿಪ್ರಣಿಧಿ ಲಕ್ಷಣೈಃ ಕಲಿತಶಾಕ್ಯಲೋಕಾಯತೈಃ । ತುರುಷ್ಕಯವನಾದಿಭಿಃ ಜಗತಿ ಜೃಂಭಮಾಣಂಭಯಂ ।
ಪ್ರಕೃಷ್ಟ ನಿಜಶಕ್ತಿಭಿಃ ಪ್ರಸಭಮಾಯುಧೈಃ ಪಂಚಭಿಃ ಕ್ಷಿತಿತ್ರಿದಶರಕ್ಷಕೈಃ ಕ್ಷಪಯರಂಗನಾಥ ಕ್ಷಣಾತ್ ।

— ಹೀಗೆಂದು ರಂಗನಾಥನನ್ನು ಸ್ಮರಿಸಿದ್ದಾನೆ.

ಮಹಮ್ಮದೀಯರಿಂದ ಜರ್ಝರಿತಗೊಂಡವನೂ ಆದ ಮುಮ್ಮಡಿ ಬಲ್ಲಾಳನ ಪೂರ್ಣ ಆಶೀರ್ವಾದ ದೊರಕಿತು. ಕಳೆದುಳಿದ ಪ್ರಭ್ಯವನ್ನೆಲ್ಲ ರಾಜರೂ, ಪಾಳೆಗಾರೂ ಜನತೆಯೂ ವಿಜಯನಗರಕ್ಕೆ ಸುರಿಯಿತು. ಅದೇ ಹೊನ್ನಿನಮಳೆಗರೆದರೆಂಬ ಪವಾಡದ ಕಥೆ. ಧರ್ಮರಕ್ಷಣೆಗಾಗಿಯೇ ಸಾಮ್ರಾಜ್ಯದ ಸ್ಥಾಪನೆಯಾಯಿತು. 'ದಕ್ಷಿಣ ಭಾರತದ ಇತಿಹಾಸದಲ್ಲಿ ಧರ್ಮರಕ್ಷಣೆಯನ್ನೇ ಉದ್ದೇಶವಾಗಿಟ್ಟುಕೊಂಡ ಸಾಮ್ರಾಜ ಬೇರೊಂದು ಇನ್ನೂ ಕಂಡುಬಂದಿಲ್ಲ. ಇದೇ ವಿಜಯನಗರ ಸಾಮ್ರಾಜ್ಯಸ್ಥಾಪನೆಯ ವೈಶಿಷ್ಟ್ಯ.' ಜನತೆ ಮತ್ತು ರಾಜರುಗಳು ವೈಯಕ್ತಿಕ ಭಿನ್ನತೆಗಳನ್ನು ದೂರೀಕರಿಸಿದರು. ಬಡವಬಲ್ಲಿದರೆನ್ನದೆ, ಉಚ್ಚನೀಚರೆನ್ನದೆ ಪಂಡಿತ ಪಾಮರರೆನ್ನದೆ ಸಮಸ್ತ ಹಿಂದೂಗಳೆಲ್ಲ ಒಟ್ಟುಗೂಡಿದರು. ಸಮನ್ವಯಮನೋಭಾವಗಳನ್ನು ಬೆಳೆಸಿಕೊಂಡು ಏಕೀಭವಿಸಿ ಹೋಗಿದರು. ಈ ಕಾರಣದಿಂದ ಅತ್ಯಲ್ಪಕಾಲದಲ್ಲಿ ಪೂರ್ವ ಪಶ್ಚಿಮ ಘಟ್ಟಗಳ ಮಧ್ಯದ ನಾಡಾದ ದಕ್ಷಿಣಭಾರತವನ್ನು ಏಕಚಕ್ರಾಧಿಪತ್ಯದ ನೆರಳಿನಲ್ಲಿ ಸಮಾವೇಶಗೊಳಿಸಲು ಸಾಧ್ಯವಾಯಿತು. ಹಿಂದೂಗಳಿಗೆ, ಹಿಂದೂ ಧರ್ಮಗಳಿಗೆ ಬಂದೊದಗಿದ ಪೀಡೆ ಪರಿಹಾರವಾಯಿತು. ಧರ್ಮಕ್ಕೆ ಸಂಸ್ಕೃತಿಗಳಿಗೆ ಆಧಾರ ಭೂತರಾಗಿದ್ದ ಮಠಾಧಿಪತಿಗಳಿಗೂ, ವಿದ್ವಾಂಸರಿಗೂ, ದೇವಾಲಯಾದಿಗಳಿಗೂ ರಕ್ಷಣೆಯೊದಗಿತು. 'ವಿಜಯನಗರ' ಅಥವಾ 'ವಿಜಯಕಲ್ಯಾಣ' ಈ ಹೆಸರಿನಲ್ಲಿ ಈ ಎಲ್ಲ ಅಂಶಗಳೂ ಧ್ವನಿತವಾಗುತ್ತಿವೆ. ಆದರೆ ವಿಜಯನಗರದ ಅರಸರು ನಾಮಮಾತ್ರ. ಪ್ರಭುವು ನಿಜವಾಗಿ 'ಶ್ರೀ ವಿರೂಪಾಕ್ಷ'ನೇ ಆಗಿದ್ದನೆಂಬುದನಿಲ್ಲಿ ಗಮನಿಸಬಹುದು. ಶ್ರೀ ವಿರೂಪಾಕ್ಷನ ಹೆಸರೇ ರಾಜಮುದ್ರೆ. ವಿರೂಪಾಕ್ಷ ಮುಂದೆ ಮುಂದೆ, ಅರಸರು ಅವನ ಹಿಂದೆ ಹಿಂದೆ. ಈ ಉದ್ದೇಶಕ್ಕೆ ಭಂಗ ಬಂದಾಗಲೇ ಸಾಮ್ರಾಜ್ಯವೂ ಒಡೆಯಿತೆಂಬುದನ್ನು ಇಲ್ಲಿಯೇ ಸ್ಮರಿಸಿಕೊಳ್ಳಬಹುದು. ಇಂಥ ಪರಿಸ್ಥಿತಿಯಲ್ಲಿಯೇ ಮಹಿಮಾಶಾಲಿಗಳೂ' ಅಘಟಿತಘಟನಾಸಮರ್ಥರೂ ಆದ ಗೊಸಲಸಿದ್ಧೇಶ್ವರರು ತಮ್ಮ ಹರದನಹಳ್ಳಿ (ವಾಣಿಜ್ಯಪುರ)ಯ ಪೀಠದಲ್ಲಿ ಉತ್ತರಾಧಿಕಾರಿಯಾಗಿ ಶಂಕರಾಚಾರ್ಯ ಎಂಬುವರನ್ನು ಕುಳ್ಳಿರಿಸಿ, ತಾವು ಸಂಚಾರ ಕೈಕೊಂಡರು. ಪರಕೀಯರ ದಾಳಿಗೆ ತುತ್ತಾಗಲಿದ್ದ, ತುತ್ತಾಗಿದ್ದ' ನಾಡಿನ ಜನತೆಯಲ್ಲಿ ಧಾರ್ಮಿಕ ಪ್ರಜ್ಞೆ, ತನ್ಮೂಲಕ ಕೆಚ್ಚುನೆಚ್ಚುಗಳನ್ನು ಬೇರೂರಿಸಲು ತಮ್ಮ ಪಾಲಿನ ಕಾರ್ಯಕ್ಕೆ ತೊಡಗಿದರು.

**ಗೋಸಲಸಿದ್ಧೇಶ್ವರರು ಸಿದ್ಧಗಂಗೆಯಲ್ಲಿ ಮಠವನ್ನು ಸ್ಥಾಪಿಸಿದುದು : (ಕ್ರಿ. ಶ. ಸು. ೧೩೦೦–೧೩೫೦)**

ಗೋಸಲಸಿದ್ಧೇಶರರು ಹರದನಹಳ್ಳಿ ನಿರಂಜನಜಗದ್ಗುರು ಪೀಠಾಚಾರ್ಯರಲ್ಲಿ ೧೫ನೆಯವರು. ಅವರು ಶಂಕರಾಚಾರ್ಯರೆಂಬುವರನ್ನು ೧೬ನೆಯ ಜಗದ್ಗುರುಗಳೆಂದು ಗೊತ್ತುಮಾಡಿ ಉತ್ತಾರಾಧಿಕಾರಕೊಟ್ಟು, ತಾವು ಮಠವನ್ನು ಬಿಟ್ಟು ತಮ್ಮ ಅನುಯಾಯಿಗಳಾದ ೧೦೧ ಜನ ವಿರಕ್ತಮೂರ್ತಿಗಳೊಡನೆ ಕೂಡಿಕೊಂಡು ಧರ್ಮಜಾಗೃತಿಗೊಳಿಸುತ್ತ ಪ್ರಥಮತಃ ದಕ್ಷಿಣ ಭಾರತದ ಸುಪ್ರಸಿದ್ಧ ಶೈವ, ವೀರಶೈವ, ಜೈನ, ಅದ್ವೈತ ಸಿದ್ಧಾಂತಗಳ ಕೇಂದ್ರವಾಗಿದ್ದ ಶಿವಗಂಗೆಗೆ ಬಂದರು. ಅಲ್ಲಿ ಭಕ್ತರ ನೆರವಿನಿಂದ ೬೩ ಜನ ಪುರಾತನರ ಮತ್ತು ಏಕಾದಶ ರುದ್ರಗಣಗಳ ಪೂಜೋತ್ಸವಗಳನ್ನು ನೇರವೇರಿಸಿದರು. ಅಲ್ಲಿ ಕೆಲವುದಿನಗಳು ವಾಸ್ತವ್ಯಮಾಡಿ ಧರ್ಮಪ್ರಸಾರ ಕಾರ್ಯ ಕೈಗೊಂಡ ಮೇಲೆ ತಮ್ಮದೇ ಆದ ಒಂದು ಸ್ವತಂತ್ರಸ್ಥಾನವನ್ನು ಕಲ್ಪಿಸಿಕೊಳ್ಳಲು, ಅದನ್ನು ಸ್ವತಂತ್ರ ವೀರಶೈವ ಕ್ಷೇತ್ರವನ್ನಾಗಿ ಮಾಡಿಕೊಳ್ಳಲು ಮನಸ್ಸುಮಾಡಿ ಶಿವಗಂಗೆಯಿಂದ ವಾಯುವ್ಯಕ್ಕೆ ಸುಮಾರು ಮುಕ್ಕಾಲುಗಾವುದ (೯ ಮೈಲಿ) ದೂರದಲ್ಲಿದ್ದ ಕೇತಸಮುದ್ರದ ಪಕ್ಕದಲ್ಲಿರುವ ಬೆಟ್ಟಕ್ಕೆ ಬಂದರು. ತುಮಕೂರು ಗೂಳೂರು ಸೀಮೆಯ ಭಕ್ತವೃಂದ ಶ್ರೀ ಗೋಸಲಸಿದ್ಧೇಶ್ವರರನ್ನು ಎದುರ್ಗೊಂಡಿತು. ಈ ಬೆಟ್ಟದ ಸನ್ನಿವೇಶಕ್ಕೆ ಮಾರುಹೋದ ಗೋಸಲಸಿದ್ಧೇಶ್ವರರು ಈ ಬೆಟ್ಟದ ಪರಿಸರದಲ್ಲಿ ತಮ್ಮೊಡನಿದ್ದ ನೂರೊಂದು ವಿರಕ್ತರಿಗೆ ನೂರೊಂದು ತಪೋನುಷ್ಠಾನುಯೋಗ್ಯವಾದ ಗುಹೆಗಳನ್ನು ಕಲ್ಪಿಸಿದರು. ತಾವು ಅಲ್ಲಿ ಭಕ್ತಾದಿಗಳ ನೆರವಿನಿಂದ ಒಂದು ಮಠವನ್ನು ಸ್ಥಾಪಿಸಿದರು. ಪ್ರಥಮತಃ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಹರದನಹಳ್ಳಿ ಶೂನ್ಯ ಪೀಠಾಚಾರ್ಯರು ಸ್ಥಾಪಿಸಿದ ಮಠದ ಪರಂಪರೆಯೇ ಇಂದಿಗೂ ಸಾರೋದ್ಧಾರವಾಗಿ ನಡೆದುಕೊಂಡು ಬರುತ್ತಿದೆ. ಹರದನಹಳ್ಳಿಯ ಶೂನ್ಯಪೀಠಾಧೀಶರು ಯಾರೂ ತಾವಾಯಿತು ! ತಮ್ಮ ಮಠವಾಯಿತು ! ಎಂದು ತಮ್ಮ ಮಠದಲ್ಲಿ ಕುಳಿತವರಲ್ಲ. ಇಂದು ನಾಡಿನ ಉದ್ದಗಲಕ್ಕೂ ಇರುವ

---

(ii) ಬುಕ್ಕರಾಯನ ಸೊಸೆಯೂ ಕಂಪಣರಾಯನ ಹೆಂಡತಿಯೂ ಆದ ಗಂಗಾದೇವಿಯು, ತನ್ನ ವೀರ ಕಂಪಣರಾಯ ಚರಿತ್ರೆಯೆಂಬ ಸಂಸ್ಕೃತಗ್ರಂಥದಲ್ಲಿ—

"ಶ್ರುತಿರಸ್ತಮಿತಾನಯಃ ಪ್ರಲೀನೋ । ವಿರತಾಧರ್ಮಕಥಾ ಚ್ಯುತಂ ಚರಿತಂ ।
ಸುಕೃತಂಗತಿಂ ಅಭಿಜಾತ್ಯಮಸ್ತಂ । ಕಿಮಿವಾನ್ಯತ್ ಕಲಿರೇಕಏವಧನ್ಯಃ ॥"
"ನತಥಾ ಕಟುಧೂತ್ಕ್ರ ತಾತ್ ವ್ಯಥಾಮೇ । ಹೃದಿ ಜೀರ್ಣೋಪವನೇಷು ಘೂಕಲೋಕಾತ್ ।
ಪರಿಶೀಲಿತ ಪಾರಸೀಕವಾಗ್‌ಭ್ಯೋ । ಯವನಾನಾಂ ಭವನೇ ಯಥಾ ಶುಕೇಭ್ಯಃ ॥"
"ಪ್ರಶಾಂತದಾವೇವನಾಂತಲಕ್ಷ್ಮೀಃ । ಗತೋಪರಾಗಾ ಗಗನಸ್ಥಲೀವ ।
ಕಲಿಂದಜಾಮರ್ದಿತಕಾಲಿಯೇವ । ದಿಗ್ ದಕ್ಷಿಣಾಸೀತ್ ಕ್ಷತಪಾರಸೀಕಾಃ ॥"

—ಈ ಎಲ್ಲ ಮಾತುಗಳೂ ಆ ಕಾಲದ ಯವನರ ದಾಳಿಯ ಪರಿಣಾಮಾದಿಗಳನ್ನು ಸೂಚಿಸುತ್ತವೆ.

ಅನೇಕ ಗದ್ದುಗೆಗಳು, ಮಠಗಳು, ದೇವಾಲಯಗಳು ಈ ಪರಂಪರೆಯವರ ಬೃಹತ್ತು ಮಹತ್ತುಗಳನ್ನು ಸೂಚಿಸುವ ಮುಖ್ಯ ಅವಶೇಷಗಳಾಗಿವೆ. ಸಿದ್ಧಗಂಗಾ ಕ್ಷೇತ್ರದಲ್ಲಿ ಇಂದು ಹಳೆಯ ಮಠವೆಂದು ಹೇಳುವ ಮಠವೇ ಗೋಸಲಸಿದ್ಧೇಶ್ವರರು ಸ್ಥಾಪಿಸಿದ ಮಠ. ಅದರ ಕೆಲವು ಭಾಗಗಳು ಇತ್ತೀಚೆಗೆ ಅಭಿವೃದ್ಧಿಗೊಂಡಿರಬಹುದು. ೮ ಕಂಬಗಳ ಪಡಸಾಲೆಯ ವಿಚಿತ್ರ ರೀತಿಯ ಕಟ್ಟಡದ ಮಾದರಿಯನ್ನಿಲ್ಲಿ ನೋಡಬಹುದು. ಕಂಬಗಳ ಮೇಲೆ ಕೊರೆದ ಚಿತ್ರಗಳು ಅಂದಿನ ಶ್ರೀ ಮಠದ ಚರಿತ್ರೆಯನ್ನು ಪ್ರತಿಬಿಂಬಿಸುತ್ತವೆ.

**ಗಂಗೋದ್ಭವ**

ಗೋಸಲಸಿದ್ಧೇಶ್ವರರು ತಮ್ಮ ನೂರೊಂದು ವಿರತರೊಡನೆ ಹೀಗೆ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಲಿಂಗಪೂಜೆ ಜಂಗಮ ದಾಸೋಹಾದಿ ಕ್ರಿಯೆಗಳಲ್ಲಿ ಇದ್ದು, ಧರ್ಮ ಜಾಗೃತಿಯ ಕಾರ್ಯವನ್ನು ಮುಂದುವರಿಸಿಕೊಂಡು ಬರುತ್ತಿರುವಾಗ, ಒಂದು ದಿನ ಈ ನೂರೊಂದು ವಿರಕ್ತರಲ್ಲಿ ಒಬ್ಬರಾಗಿದ್ದ ಶ್ರೀ ಗೋಸಲ ಸಿದ್ಧೇಶ್ವರರ ಶಿಷ್ಯರೆನಿಸಿದ್ದ ಮೂರ್ತಿಗಳೊಬ್ಬರು ಮಧ್ಯರಾತ್ರಿಯ ಸುಮಾರಿಗೆ ಅತ್ಯಂತ ತೃಷೆಗೊಂಡರು. ಅವರು ವಯೋವೃದ್ಧರು; ರಾತ್ರಿಯ ಕಗ್ಗತ್ತಲು ಎಲ್ಲೆಲ್ಲೂ ಆವರಿಸಿತ್ತು. ತಮ್ಮ ಗವಿಯಲ್ಲಿ ದೀಪ ಬೇರೆ ಇರಲಿಲ್ಲ. ಆದ್ದರಿಂದ ಹೊರಗೆ ಹೋಗಿ ನೀರನ್ನು ತರುವಂತೆ ಇರಲಿಲ್ಲ; ಕಳವಳ ಅಧಿಕವಾಯಿತು. ಇಂಥ ಸಮಯದಲ್ಲಿ ಆ ವಿರಕ್ತ ಮೂರ್ತಿಗಳು ತಮ್ಮ ಗುರುಗಳಾದ ಗೋಸಲ ಸಿದ್ಧೇಶ್ವರರನ್ನು ಧ್ಯಾನಿಸಿದರು. ಗೋಸಲಸಿದ್ಧೇಶ್ವರರ ಅಂತಕರಣಕ್ಕೆ ಇವರ ಈ ಸ್ಥಿತಿ ಅರ್ಥವಾಗಿ ತತ್‌ಕ್ಷಣವೇ ತಮ್ಮ ಒಂದೆರಡು ಜನ ಶಿಷ್ಯರೊಡನೆ ತಾವಿದ್ದ ಹಳೆಯ ಮಠದಿಂದ ಹೊರಟು ಈ ವಿರಕ್ತಮೂರ್ತಿಗಳಿದ್ದ ಬೆಟ್ಟದ ಮಧ್ಯದ ಮಹಾಗುಹೆಗೆ ಆ ಮಧ್ಯ ರಾತ್ರಿಯ ಕಗ್ಗತ್ತಲಿನಲ್ಲಿಯೇ ಬಂದರು. ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡರು. ಆ ಕ್ಷಣದಲ್ಲಿ ಮೊಳಕಾಲನ್ನು ಗುಹೆಯ ಕಲ್ಲು ಬಂಡೆಗೆ ಬಲವಾಗಿ ಹೊಡೆದರು. ಅಲ್ಲಿ ಪಡುವುಬಿತ್ತು ; ಚಲ್ಲೆಂದು ಗಂಗಾ ಜಲವು ಉದ್ಭವವಾಯಿತು. ತೃಷೆಯಿಂದ ಸಂಕಟಗೊಂಡ ವಿರಕ್ತಮೂರ್ತಿಗಳಿಗೆ ಆ ಉದಕದಿಂದ ಸ್ನಾನ ಮಾಡಿಸಿ, ಭಸ್ಮಧರಿಸಿ ಶಿವಮಂತ್ರದೊಡನೆ ಲಿಂಗಮುಖದಿಂದ ಉದಕಪಾನಮಾಡಿಸಿ, ಅವರ ನೀರಡಿಕೆಯ ಬಾಧೆಯನ್ನು ಹೋಗಲಾಡಿಸಿದರು. ಗೋಸಲಸಿದ್ಧೇಶ್ವರ ಶಿವಯೋಗಿಯ ಪಾದ ಸ್ಪರ್ಶದಿಂದ ಹೊರಹೊರಟ ಆ ಗಂಗಾಜಲಕ್ಕೆ ' ಸಿದ್ಧಗಂಗಾ ' ಜಲವೆಂದು ಹೆಸರಾಯಿತು. ಕ್ಷೇತ್ರಕ್ಕೂ ಅಂದಿನಿಂದ ಅದೇ ಹೆಸರು ಮುಂದುವರೆಯಿತು.[24] ಅಂದಿನಿಂದ ಇಂದಿನವರಿಗೆ ಈ ಗಂಗಾಜಲದ ಸ್ನಾನಪಾನಾದಿಗಳನ್ನು ಅವಿಚ್ಛಿನ್ನವಾಗಿ ಸಮಸ್ತ ಕೋಮಿನ ಜನರು ಆಚರಿಸುತ್ತ ಬಂದಿದ್ದಾರೆ ; ಜನಮನದ ಮೈಲಿಗೆಯನ್ನು ಈ ಶಿವಯೋಗಿಯ ಪಾದಸ್ಪರ್ಶಜಲ ಕಳೆಯುತ್ತ ಬಂದಿದೆ. ಈ ವಿಷಯದಲ್ಲಿ ಅಂದಿನಿಂದ ಇಂದಿನವರೆಗೆ ಜಾತಿಗೊಂದಲ ಅಡ್ಡ ಬಂದಿಲ್ಲ ; ಬಡವಬಲ್ಲಿದ ಭಾವ ಪ್ರತಿಬಂಧಕಗೊಳಿಸಿಲ್ಲ. ಇದೊಂದು ಸಮಸ್ತಕೋಮಿನ ಜನರ, ಅನೇಕ ದರ್ಜೆಯ ಜನರ ಭಾವೈಕ್ಯದ ಮಹಾಸೇತುವೆಯೆನಿಸಿ ಪವಿತ್ರತೀರ್ಥವೆನಿಸಿ, ಕ್ಷೇತ್ರ ಪಾವಿತ್ರ್ಯದ ರಕ್ಷಾಕವಚವೆನಿಸಿ, ಸಿದ್ಧಿಶುದ್ಧಿಗಳ ಆಗರವೆನಿಸಿ, ರುಚಿಶುಚಿಗಳ ಸೈಪಿನ ಸೀಮೆಯೆನಿಸಿ ಮೆರೆಯುತ್ತಿರುವ ಅಂಶವೇನೂ ಯಾರೂ ಅರಿಯದ ವಿಷಯವಲ್ಲ. ಅಂತೆಯೇ ಶ್ರೀ ಕ್ಷೇತ್ರವು ಅದೇ ಸಂಪ್ರದಾಯವನ್ನು ಉಳಿಸಿಕೊಂಡು ಬೆಳೆಸಿಕೊಂಡು, ಸಮಸ್ತ ಕೋಮಿನ ಜನರ ಹಿತವನ್ನು ಸಾಧಿಸಿಕೊಂಡು ಬರುವ ಮಹಾ ಹೊಣೆ ಹೊತ್ತಿರುವುದನ್ನು ಇಂದಿಗೂ ಕಾಣಬಹುದಾಗಿದೆ.

ಸಿದ್ಧಗಂಗಾ ತೀರ್ಥದ ಬಗೆಗೆ ನಿರಂಜನವಂಶ ರತ್ನಾಕರದಲ್ಲಿ ವಿಶೇಷವರ್ಣನೆ (ಪುಟ ೩೨) ಯಿದ್ದು, ಈ ತೀರ್ಥದ ಸ್ನಾನ ಪಾನಾದಿಗಳಿಂದ ಬ್ರಹ್ಮಹತ್ಯಾದಿ ದೋಷಗಳೂ, ಕುಷ್ಟರೋಗಗಳೂ ಪರಿಹಾರವಾಗುತ್ತವೆಂದು ವರ್ಣಿಸಲಾಗಿದೆ. ಗೋಸಲಸಿದ್ಧೇಶ್ವರರ ಕಾಲದಲ್ಲಿಯೇ ಆ ಬೆಟ್ಟದಲ್ಲಿ ಸಿದ್ಧಗಂಗಾ ತೀರ್ಥದ ಬಳಿ ಭಕ್ತಾದಿಗಳು ಗಣಪರ್ವಾದಿಗಳನ್ನು ಮಾಡುತ್ತಿದ್ದರೆಂದೂ, ಸೇವಾಕೈಂಕರ್ಯಾದಿಗಳನ್ನು ವಿಶೇಷವಾಗಿ ಆಚರಿಸುತ್ತಿದ್ದರೆಂದೂ ವಿವರಿಸಲಾಗಿದೆ. ಒಂದು ವೇಳೆ ಜಲವು ಬತ್ತಿದರೆ ಭಕ್ತಾದಿಗಳೆಲ್ಲ ಸ್ನಾನಾದಿಗಳನ್ನು

---

24. " ನಿರಂಜನವಂಶ ರತ್ನಾಕಾರ " ವೆಂಬ ಗ್ರಂಥದಿಂದ ಗಂಗಾಜಲವು ಗೋಸಲಸಿದ್ಧೇಶ್ವರರಿಂದ ಉದ್ಭವಗೊಂಡಿತೆಂದು ತಿಳಿದು ಬರುತ್ತದೆ. ಆದರೆ ಗ್ರಂಥಾಂತರಗಳಿಂದ ಈ ವಿಷಯದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ಕ್ರಿ.ಶ. ಸು. ೧೬೦೦ರಲ್ಲಿದ್ದ ಹೇರಂಬನೆಂಬ ಎಲಹಂಕದಕವಿಯು ಬರೆದ " ಸಿದ್ಧಲಿಂಗೇಶ್ವರ ಸಾಂಗತ್ಯ " ವೆಂಬ ಗ್ರಂಥದ ಪ್ರಕಾರ ಈ ' ಸಿದ್ಧಗಂಗಾ ' ಜಲವು ತೋಂಟದ ಸಿದ್ಧಲಿಂಗೇಶ್ವರರಿಂದ ಉಂಟಾಯಿತೆಂದು ಗೊತ್ತಾಗುತ್ತದೆ. ಗೋಸಲಸಿದ್ಧೇಶ್ವರರಿಗೂ ಹೇರಂಬ ಕವಿಗೂ ಸುಮಾರು ೩೦೦ ವರ್ಷಗಳ ಅಂತರವಿದ್ದು ಈ ದೀರ್ಘಾವಧಿಯಲ್ಲಿ ಕಥೆ ಹೇಗೆ ಹೇಗೊ ಬೆಳೆದು ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಕರ್ನಾಟಕ, ಆಂಧ್ರ, ತಮಿಳುನಾಡುಗಳಲ್ಲೆಲ್ಲ ಮಹಾಪ್ರಭಾವ ಶಾಲಿಗಳೆನಿಸಿದ್ದ ತೋಂಟದ ಸಿದ್ಧಲಿಂಗಶಿವಯೋಗಿಗಳವರ ಸಂಬಂಧವನ್ನು ಪಡೆದಿರಬಹುದು. ಈ ಹೊತ್ತಿಗಾಗಲೇ ' ಸಿದ್ಧಗಂಗಾ ' ತೀರ್ಥದ ಮಹತ್ತು ಬೃಹತ್ತುಗಳು ಜನಜನಿತವಾಗಿ ಹೋಗಿದ್ದುವು. ಅಂತೆಯೇ ಹೇರಂಬ ಕವಿ ತನ್ನ ಗ್ರಂಥದ ೧೯ನೆಯ ಸಂಧಿಯಲ್ಲಿ ಈ ಸಿದ್ಧಗಂಗಾ ತೀರ್ಥದ ಬಗೆಗೆ ವಿಶೇಷವಾಗಿ ಹೊಗಳಿದ್ದಾನೆ. ಈ ತೀರ್ಥವು ಅನೇಕ ಜನರ ಮಾನಸಿಕ ಮತ್ತು ದೈಹಿಕ ರೋಗ ಪರಿಹಾರಕವಾಗಿತ್ತೆಂದು ಹೇಳುವುದನ್ನು ಗಮನಿಸಬಹುದು. ಈ ಲೇಖನದಲ್ಲಿ ಮುಂದೆ ಆ ವಿಷಯವನ್ನು ಪ್ರಸ್ತಾಪಿಸಲಾಗಿದೆ. ೧೪ನೆಯ ಶತಮಾನದಿಂದ ಇಂದಿನವರೆಗೆ ಅವಿಚ್ಛಿನ್ನವಾಗಿ ಗಂಗಾ ಪೂಜೆ, ಗಂಗಾಮಾತೆಯ ಉಪಾಸನೆ ಸರ್ವಧರ್ಮಿಯರ ಶ್ರದ್ಧೆಯಲ್ಲಿ ಬೆರೋರಿ ನಡೆಯುತ್ತಲೇ ಇದೆ.



ಉ
ಪ
ಪೂ
ದ



ವಿಷಯ ಸೂಚಿ
+ ತೋಂಟದ ಸಿದ್ಧಲಿಂಗೇಶ್ವರ ಕ್ಷೇತ್ರ
△ ಸಿದ್ಧರಾಮೇಶ್ವರ ಕ್ಷೇತ್ರ
ಬೆಟ್ಟಗಳು
ರೇವಣಸಿದ್ಧ, ಮರುಳಸಿದ್ಧ, ಸಿದ್ಧರಾಮರವರ ಕಾರ್ಯಕ್ಷೇತ್ರ, 12ನೇ ಶತಮಾನ
ರೈಲು ಮಾರ್ಗ
ರಾಜಮಾರ್ಗಗಳು
ನದಿಗಳು
ಸಿರಾ
ಮಧುಗಿರಿ
ಬೆಳ್ಳಾವೆ
ಹಾಗಲವಾಡಿ
ಸಿದ್ಧರ ಬೆಟ್ಟ 15
(ಹರದನಹಳ್ಳಿ ಶಂಕರಸ್ವಾಮಿಗಳ ಗದ್ದುಗೆ)
ತುಮಕೂರು
ಗುಬ್ಬಿ 14
ಶಿವಗಂಗೆ
ತುರುವೇಕೆರೆ
ಕುಣಿಗಲ್ಲು
ಮಾಗಡಿ
ಎಡೆಯೂರು 17
ಕಗ್ಗೆರೆ
ಶಿಂಷಾ ನದಿ
ಕೃಷ್ಣರಾಜಸಾಗರ
ಮಂಡ್ಯ
ಮದ್ದೂರು
ಶ್ರೀರಂಗಪಟ್ಟಣ
ಕಾವೇರಿ ನದಿ
ಮಳವಳ್ಳಿ
ದನಗೂರು
ಮೈಸೂರು
ದೇವನೂರು
(ಗುರುಮಲ್ಲೇಶ್ವರ ಮಠ)
ಟಿ. ನರಸೀಪುರ
ತಲಕಾಡು
28
ಚಿಲಕವಾಡಿ
24
(ಶಂಭುಲಿಂಗಬೆಟ್ಟ)
ಕೊಳ್ಳೇಗಾಲ
ಕಪಿಲಾ ನದಿ
ನಂಜನಗೂಡು
(ಶೈವ ಕ್ಷೇತ್ರ)
20 +
ಸುತ್ತೂರು
(ಶಿವರಾತ್ರೀಶ್ವರಮಠ)
(ವೀರಭದ್ರಕ್ಷೇತ್ರ)
ಯಳಂದೂರು
22 (ಗೌರೀಶ್ವರ ದೇವಾಲಯ)
ಚಾಮರಾಜನಗರ
ಹರದನಹಳ್ಳಿ
(ಶೂನ್ಯ ಸಿಂಹಾಸನಾಧೀಶರು)
21 +




# ದ್ಧಗಂಗಾ-ಶಿವಗಂಗಾ ಪರಿಸರ

## ವಿವರಗಳು

೧. ಸಿದ್ಧಗಂಗಾ : ಗೋಸಲ ಸಿದ್ಧೇಶ್ವರ ಗದ್ದುಗೆ, ಸಿದ್ಧಲಿಂಗೇಶ್ವರ ತಪೋಭೂಮಿ;
೨. ಲಕ್ಕೂರು : ಉದ್ದಾನ ಶಿವಯೋಗಿಗಳ ಜನ್ಮಭೂಮಿ.
೩. ವೀರಾಪುರ : ಶ್ರೀ ಶಿವಕುಮಾರ ಸ್ವಾಮಿಗಳ ಜನ್ಮಭೂಮಿ.
೪. ಶಿವಗಂಗೆ : ೬೪ ವೀರಶೈವ ಮಠ; ರೇವಣಸಿದ್ಧ ಕಾರ್ಯಕ್ಷೇತ್ರ; ವೀರಭದ್ರ ಕ್ಷೇತ್ರ.
೫. ಕಲ್ಲೆಯ : ಸರ್ವಶೀಲೆ ಚನ್ನಮ್ಮನ ಮಠ, ಪಾಲ್ಕುರಿಕೆ ಸೋಮನಾಥರ ಗದ್ದುಗೆ.
೬. ಸಾವನದುರ್ಗ : ವೀರಭದ್ರ ಕ್ಷೇತ್ರ.
೭. ಬೆಂಗಳೂರು : ೬೩ ವೀರಶೈವ ಮಠ; ವೀರಭದ್ರ ಕ್ಷೇತ್ರ.
೮. ಗುಮ್ಮಳಾಪುರ : ಶೂನ್ಯಸಂಪಾದನೆ ಕರ್ತೃ, ಸಿದ್ಧಲಿಂಗಸ್ವಾಮಿ ಕ್ಷೇತ್ರ.
೯. ನೆಲಮಂಗಲ : ೪ ವೀರಶೈವ ಮಠ.
೧೦. ಸೋಲೂರು : ೪ ವೀರಶೈವ ಮಠ.
೧೧. ಕಾಚಕಲ್ಲಪ್ಪನ ಬೆಟ್ಟ: ಶಿವಲಿಂಗ ಕ್ಷೇತ್ರ.
೧೨. ಸಿದ್ಧರ ಬೆಟ್ಟ : ಶಿವಲಿಂಗಕ್ಷೇತ್ರ; ವೀರಭದ್ರಕ್ಷೇತ್ರ.
೧೩. ಗೂಳೂರು : ಶೂನ್ಯಸಂಪಾದನೆಯ ಕರ್ತೃಸಿದ್ಧ ವೀರಣ್ಣೊಡೆಯನ ಸ್ಥಳ.
೧೪. ಗುಬ್ಬಿ : ಗೋಸಲ ಚನ್ನಬಸವೇಶ್ವರ ಗದ್ದುಗೆ.
೧೫. ಸಿದ್ಧರ ಬೆಟ್ಟ (ಕೊರಟಗೆರೆ) : ಹರದನಹಳ್ಳಿ ಶಂಕರಾಚಾರ್ಯರ ಸಮಾಧಿ ಸ್ಥಳ.
೧೬. ಮಧುಗಿರಿ : ಬೋಳ ಬಸವೇಶ್ವರರ ಗದ್ದುಗೆ.
೧೭. ಎಡೆಯೂರು : ಸಿದ್ಧಲಿಂಗೇಶ್ವರರ ಸಮಾಧಿ ಸ್ಥಳ.
೧೮. ಹುಲಿಯೂರು : ಸಿದ್ಧಲಿಂಗೇಶ್ವರ ಕ್ಷೇತ್ರ.
೧೯. ದನಗೂರು : ರೇವಣಸಿದ್ಧೇಶ್ವರ ಕ್ಷೇತ್ರ.
೨೦. ಸುತ್ತೂರು : ರೇವಣಸಿದ್ಧೇಶ್ವರ ಕ್ಷೇತ್ರ.
೨೧. ಹರದನಹಳ್ಳಿ : ಶೂನ್ಯಸಿಂಹಾಸನಾಧೀಶರ ಸ್ಥಳ.
೨೨. ಎಳಂದೂರು : ಷಡಕ್ಷರದೇವನ ಗದ್ದುಗೆ.
೨೩. ಮಹದೇಶ್ವರ ಬೆಟ್ಟ: ಹರದನಹಳ್ಳಿ, ನಿರ್ವಾಣಯ ಗಣೇಶ್ವರ ಗದ್ದುಗೆ.
೨೪. ಚಿಲಕವಾಡಿ : ನಿಜಗುಣರ ತಪೋಭೂಮಿ.
೨೫. ಮೈಸೂರು : ಅರಮನೆ ಪಂಚಗವಿಮಠ ಮೊದಲಾದ ೪ ಮಠ.
೨೬. ರೇವಣಸಿದ್ಧೇಶ್ವರ ಬೆಟ್ಟ : ರೇವಣಸಿದ್ಧರ ಪುಣ್ಯಭೂಮಿ.
೨೭. ಕನಕಪುರ : ದೇಗುಲ ಮಠ.
೨೮. ತಲಕಾಡು : ಪಂಚಲಿಂಗ ಕ್ಷೇತ್ರ; ೨ ವೀರಶೈವ ಮಠ.
೨೯. ನಂದಿ : ಚೋಳರ ಕಾಲದ ನಂದಿ ಕ್ಷೇತ್ರ; ವಿರಕ್ತ ತೋಂಟದಾರ್ಯ.
೩೦. ಸಾಸಲು ಶಾಂತಲಿಂಗ ದೇಶಿಕ: ಭೈರವೇಶ್ವರ ಕಥಾ ಮಣಿಸೂತ್ರ ರತ್ನಾಕರ.
೩೧. ಮಣ್ಣೆ : ಚೋಳರ ರಾಜಧಾನಿ.

(ವಿಷಯಕ್ಕೆ ಪು. ೧ ರಿಂದ ೧೬ ನೋಡಿರಿ)

ಮಾಡಿ ಭಕ್ತಿಯಿಂದ ಸಿದ್ಧೇಶ್ವರನನ್ನು ಭಜಿಸಿದರೆ ಮೊದಲಿನಂತೆ ಗಂಗಾಜಲವು ಬರುತ್ತದೆಂದೂ ಆ ಜಲದಿಂದ ೧೦ ಸಾವಿರದವರೆಗೂ ಗಣತೃಪ್ತಿಯನ್ನು ಮಾಡಬಹುದುದೆಂದೂ ಆ ಗ್ರಂಥ ತಿಳಿಸುತ್ತದೆ.[25]

ಹೀಗೆ ಗೋಸಲಸಿದ್ಧೇಶ್ವರರು ತಮ್ಮ ನೆಲೆಯನ್ನು ಶ್ರೀ ಸಿದ್ಧಗಂಗೆಯಲ್ಲಿ ಮಾಡಿ, ಧರ್ಮ ಪ್ರಸಾರಗೊಳಿಸಿ ಲಿಂಗೈಕ್ಯರಾದರೆಂದು ತಿಳಿದು ಬರುವುದು. ಆದರೆ ಈಗ ಬಂದಿರುವ ದೊಡ್ಡ ತೊಡಕೆಂದರೆ ಅವರ ಗದ್ದುಗೆಯ ವಿಚಾರ. ವಿಸ್ತಾರವಾದ ಕಾಲ ಪ್ರಾಂತದ ಮರೆಯಲ್ಲಿ ಗದ್ದುಗೆಯ ಸ್ಥಾನವು ಅಡಗಿದೆ. ಗೋಸಲಸಿದ್ಧೇಶ್ವರರು ಕೊನೆಯುವರೆಗೆ ಶ್ರೀ ಸಿದ್ಧಗಂಗಾಕ್ಷೇತ್ರದ ಸಿದ್ಧಗಂಗಾ ಮಾತೆಯಿರುವ ಗವಿಯಲ್ಲಿಯೇ ಶಿವಯೋಗಾನುಷ್ಠಾನಮಾಡಿದವರು. ತಮ್ಮ ಹಿಂದಿದ್ದ ೧೦೧ ವಿರತರುಗಳಿಗೆ ಅನುಗ್ರಹಮಾಡಿ ಮುಂದೆ ಅವರು ಸಮಾಜದ ವಿವಿಧಭಾಗಗಳಲ್ಲಿ ಸಂಚರಿಸಿ ಧರ್ಮ ಜಾಗೃತಿಗೊಲಿಸಲು ಸಮರ್ಥರನ್ನಾಗಿ ಮಾಡಿದರು. ೧೦೧ ಜಸ ವಿರತರ ಸಂಪ್ರದಾಯವನ್ನು ಉಂಟುಮಾಡಿದವರು ಪ್ರಾಯಶಃ ಗೋಸಲಸಿದ್ಧೇಶ್ವರಸ್ವಾಮಿಗಳವರೇ ಆಗಿದ್ದಾರೆ. ಈ ಎಲ್ಲ ವಿಷಯಗಳನ್ನು ಲಕ್ಷಿಸಿ ರಾ. ಸಾ. ಫ. ಗು. ಹಳಕಟ್ಟಿಯವರು, ಕಲ್ಯಾಣದ ವಿನಾಶದನಂತರ ಪಟ್ಟದಕಲ್ಲು, ಪುಲಿಗೆರೆ, ಬನವಾಸಿ, ಬಳ್ಳಿಗಾವಿ, ಮಂಗಳವಾಡ, ಮುದನೂರು, ಕಪ್ಪಡಿಸಂಗಮುಗಳ ಪಟ್ಟಿಯಲ್ಲಿ ಸಿದ್ಧಗಂಗೆಯನ್ನು ಸೇರಿಸಿ, ಇದು ಹರದನಹಳ್ಳಿ ಪೀಠಾಚಾರ್ಯರ ವಸಹಾತಾಗಿತ್ತೆಂದೂ, ಧರ್ಮಪ್ರಸಾರ ಕೇಂದ್ರವಾಗಿತ್ತೆಂದೂ ಅಭಿಪ್ರಾಯಪಡುತ್ತಾರೆ.[25a] ಬಸವಾದಿಪ್ರಮಥರ ನಂತರ ವೀರಶೈವೋದ್ಧರಣ ಕಾರ್ಯವನ್ನು ಬಹು ಬಿರುಸಾಗಿ ಪ್ರಭಾವಯುತವಾಗಿ ಮಾಡಿದವರೇ ಗೋಸಲಸಿದ್ಧೇಶ್ವರರು. ಇವರ ಹರದನಹಳ್ಳಿಯ ಪೀಠವು ಬಹುಶಃ ಇವರ ಕಾಲದಲ್ಲಿಯೇ ಶೂನ್ಯ ಸಿಂಹಾಸನವೆಂದು, ಅಂದಿನ ಸಮಾಜದಿಂದ ಅಂಗಿಕೃತವಾಗಿರಬಹುದು. ಕಲ್ಯಾಣದ ಕ್ರಾಂತಿಯ ನಂತರ ಶೂನ್ಯಸಿಂಹಾಸನ,ಅದರ ಅಧಿಪತ್ಯಗಳೂ ವಿಚ್ಛಿತ್ತಿಗೊಂಡುವಷ್ಟೇ. ಪುನಃ ಶೂನ್ಯಸಿಂಹಾಸನದ ಸ್ಥಾನ ನಿರ್ದೇಶನಗೊಳಿಸಲು ಪ್ರಯತ್ನ ನಡೆದಿವೆ. ಮೊದಲ ಪ್ರಯತ್ನ ಶಿವಗಂಗೆಯೆಂದು ತಿಳಿದುಬರುತ್ತದೆ. ಆದರೆ ಆ ಪ್ರಯತ್ನ ಯಶಸ್ಸುಗಳಿಸಲಿಲ್ಲ. ರೇವಣಸಿದ್ಧೇಶ್ವರರು ತಾವೇ ಒಂದು ಮಠವನ್ನು ಸ್ಥಾಪಿಸಿ, ಮಗನಾದ ರುದ್ರಮುನಿಯನ್ನೊಡಗೊಂಡು ಶಿವಗಂಗೆಯಲ್ಲಿ ಅದ್ಭುತವಾದ ಕಾರ್ಯ ಮಾಡಿದರು. ರೇಣುಕಾಚಾರ್ಯರು ಮತ್ತು ರುದ್ರಮುನಿ ಶಿವಾಚಾರ್ಯರ ಲಿಂಗೈಕ್ಯಾನಂತರ ಆ ಕಾರ್ಯಗಳು ಸ್ಥಗಿತಗೊಂಡವು. ಮುಂದೆ ಹರದನಹಳ್ಳಿಯಲ್ಲಿ ವೀರಬಣಂಜುಗಳವರಿಂದ ಶೂನ್ಯಪೀಠದ ಪರಂಪರೆ ಪುನಃ ನಡೆದುಬರುವಂತೆ ಮಾಡಿದ ಪ್ರಯತ್ನ ಕುತೂಹಲಕಾರಿಯಾದುದು. ಹರದನಹಳ್ಳಿಯ ಮಠದ ಪರಂಪರೆಯಲ್ಲಿ ಗೋಸಲಸಿದ್ಧೇಶ್ವರರು ೧೫ನೆಯವರಾದರೂ ಹಿಂದಿನವರೆಗೆ ಜಗದ್ಗುರು ಎಂಬ ಸಂಕೇತವಿತ್ತೋ ಇಲ್ಲವೋ ಗೊತ್ತಿಲ್ಲ.[26]

**ಹರದನಹಳ್ಳಿ ಮತ್ತು ಅಲ್ಲಿನ ಮಠ :**

ಪ್ರಾಚೀನ ಕರ್ನಾಟಕದ ವ್ಯಾಪಾರವು ವೀರ ಬಣಂಜುಗಳೆಂದು ಕರೆಯಿಸಿಕೊಳ್ಳುವ ಒಂದು ಮಹಾ ಸಂಘಕ್ಕೆ ಒಳಪಟ್ಟುದಾಗಿತ್ತು. ಈ ಮಹಾಸಂಘದ ಮೂಲಕೇಂದ್ರ ಐಹೊಳೆ (ಆಯ್ಯಾವಳೆ), ಪಟ್ಟದಕಲ್ಲು-ಎಂಬ ಊರುಗಳಲ್ಲಿತ್ತು. ಈ ಬಣಂಜುಗಳಲ್ಲಿ

---

25. ಸಿದ್ಧಗಂಗಾ ಕ್ಷೇತ್ರದ ಬೆಟ್ಟದಲ್ಲಿ ಈಗ ಸಿದ್ಧಲಿಂಗೇಶ್ವರ ಮೂರ್ತಿಯ ದೇವಾಲಯದ ಎದುರಿನ ಮಹಾಗುಹೆಯೇ 'ಸಿದ್ಧಗಂಗಾ' ಮಾತೆಯ ಸ್ಥಾನ. ೧೦-೧೨ ಆಳೆತ್ತರದ ಮಹಾ ಕೊಡುಗಲ್ಲು ನಿಂತಿದ್ದು ಆ ಕೊಡುಗಲ್ಲಿನ ಕೆಳಭಾಗದಲ್ಲಿ ಮಹಾಗುಹೆಯೊಂದು ಪ್ರಕೃತಿಯಿಂದಲೇ ನಿರ್ಮಾಣವಾಗಿದೆ. ಆ ಗುಹೆ ಸುಮಾರು ೭೦-೮೦ ಜನರು ಕೂಡಲು ಯೋಗ್ಯವಾಗಿದೆ. ಅಲ್ಲಿಯೇ ಬಂಡೆಯ ಮಧ್ಯದಲ್ಲಿ ಸಿದ್ಧಗಂಗೋದ್ಭವವಾಗಿದೆ. ಅದರಲ್ಲಿ ಜಲವನ್ನು ತೆಗೆತೆಗೆದಷ್ಟು ಬರುತ್ತದೆ.ಆದರೆ ಉಕ್ಕಿ ಹರಿಯುವುದಿಲ್ಲ.ವಿಶೇಷ ಮಳೆಗಾಲದಲ್ಲಿ ಮಾತ್ರ ಒಮ್ಮೊಮ್ಮೆ ಉಕ್ಕುವುದುಂಟು. ಹಾಗೇ ಉಕ್ಕಿದ ವರ್ಷ ಸಮೃದ್ಧವಾದ ಮಳೆ ಬೆಳೆಗಳಿಂದ ಕೂಡಿದ ವರ್ಷವೆಂದೂ ನಂಬಿಕೆ. ಗಂಗೋದ್ಭವವಾಗಿರುವ ಸ್ಥಾನದ ಮುಂಭಾಗದಲ್ಲಿ ಎರಡು ಮೆಟ್ಟಲುಗಳ ಆಳದ ತಗ್ಗು ಇದೆ. ಇದು ಶಿಲಾಮಯವೇ ಆಗಿದೆ. ಅದರ ತುಂಬ ನೀರು ನಿಲ್ಲುತ್ತದೆ. ಈ ಭಾಗವನ್ನು ದಾಟಿಯೇ ಮುಂದಿನ ತಪೋನುಷ್ಠಾನ ಯೋಗ್ಯವಾದ ಗುಹೆಯನ್ನು ಪ್ರವೇಶಿಸಬೇಕು. ಅಲ್ಲಿ ಒಳಭಾಗ ವಿಶಾಲವಾಗಿದೆ. ಒಳಗೆ ಪ್ರವೇಶಿಸಿದೊಡನೆಯೇ ಎಂಥ ಚಂಚಲಚಿತ್ತನಿಗೂ ಮಾನಸಿಕ ಸಂಗ್ರಹವುಂಟಾಗಿ ಶಿವಜ್ಞಾನವು ಎಚ್ಚರಗೊಳುತ್ತದೆ. ಚಿತ್ತವೃತ್ತಿಯಲ್ಲಿ ಸಂಯಮವುಂಟಾಗುವುದನ್ನು ಅಲ್ಲಿ ಹೋಗಿ ನೋಡಿ ಅನುಭವಿಸಬೇಕು.

25a ಶಿವಶರಣರ ಚರಿತ್ರೆ ಭಾಗ ೨ ಪುಟ ೨೮೮ (೧೯೫೧)

26. ಶ್ರೀ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ವಚನದಲ್ಲಿ ತಮ್ಮ ಗುರುಪರಂಪರೆಯನ್ನು ಹೇಳಿಕೊಂಡಿದ್ದಾರೆ ಅದರಲ್ಲಿ ೧) ಅನಾದಿಗಣೇಶ್ವರ ೨) ಆದಿಗಣೇಶ್ವರ ೩) ನಿರ್ಮಾಯಗಣೇಶ್ವರ ೪) ನಿರಂಜನ ಗಣೇಶ್ವರ ೫) ಜ್ಞಾನಾನಂದ ಗಣೇಶ್ವರ ೬) ಆತ್ಮಗಣೇಶ್ವರ ೭) ಅಧ್ಯಾತ್ಮ ಗಣೇಶ್ವರ ೮) ರುದ್ರಗಣೇಶ್ವರ ೯) ಬಸವಪ್ರಭುದೇವರು ೧೦) ಆದಿಲಿಂಗದೇವರು ೧೧) ಚನ್ನವೀರೇಶ್ವರದೇವರು ೧೨) ಹರದನಹಳ್ಳಿಯ ಗೋಸಲದೇವರು (ಗೋಸಲಸಿದ್ಧೇಶ್ವರರು) ೧೩) ಶಂಕರದೇವರು ೧೪) ದಿವ್ಯಲಿಂಗದೇವರು ೧೫) ಚೆನ್ನಬಸವೇಶ್ವರರು ೧೬) ತೋಂಟದ ಸಿದ್ಧಲಿಂಗೇಶ್ವರರು-ಹೀಗೆ ಗುರುಪರಂಪರೆಯ ಹೆಸರುಗಳಪಟ್ಟಿ ಬಂದಿದೆ. ಶೂನ್ಯಸಿಂಹಾಸನವನ್ನೇರಿದ ಪ್ರಭುದೇವರು,ಚೆನ್ನಬಸವಣ್ಣನವರು ಮತ್ತು ಸಿದ್ಧರಾಮೇಶ್ವರರು-ಇವರನ್ನು ಸೇರಿಸಿ ಗೋಸಲಸಿದ್ಧೇಶ್ವರರನ್ನು ೧೫ ನೆಯ ಶೂನ್ಯಸಿಂಹಾಸನಾಧೀಶ್ವರರೆಂದು ಹೇಳುವ ಪರಿ

ಮಹಾನಾಡ ಸೆಟ್ಟಿ, ವಾಲಿಸೆಟ್ಟಿ, ಪಟ್ಟಣಸೆಟ್ಟಿ, ಗುಡಾರದಸೆಟ್ಟಿ ಬಣಕಾರಸೆಟ್ಟಿ, ಗುಣಹಾರಿಸೆಟ್ಟಿ ಇತ್ಯಾದಿ ನಾಮಾಂತರಗಳುಂಟು. ಇವರು ಸಾಮಾನ್ಯವಾಗಿ ಧರ್ಮನಿಷ್ಠರು, ಧರ್ಮ ಸಂರಕ್ಷಕರು. ಎತ್ತುಗಳಮೇಲೆ ಕಂಟಲಿ ಹೇರಿಕೊಂಡು ಊರಿಂದೂರಿಗೆ ಸಾಗಿ ವ್ಯಾಪಾರ ಮಾಡುತ್ತಿದ್ದರು. ಹೆಸರುಗಳೇ ಹೇಳುವಂತೆ ವಿವಿಧ ವ್ಯಾಪಾರಗಳಲ್ಲಿ ಇವರೆಲ್ಲ ವ್ಯವಹರಿಸುತ್ತ ಕುಟುಂಬರಕ್ಷಣೆ ಗುರುಲಿಂಗ ಜಂಗಮಸೇವಾ ಕಾರ್ಯಗಳನ್ನು ಮಾಡುತ್ತಿದ್ದರು. ಒಳನಾಡಿನ ವ್ಯವಹಾರವೆಲ್ಲ ಆ ಕಾಲದಲ್ಲಿ ಎತ್ತಿನ ಮೇಲೆ ಹೇರಿದ ಹೇರುಗಳ ಮೂಲಕವೇ ಸಾಗುತ್ತಿತ್ತು.

ಇಂಥ ಕಂಟಲಿ ವ್ಯಾಪಾರದ ವೀರಬಣಂಜುಗಳು ಮಧುರೆಗೆ ಹೋಗಿಬರುವ ಮಾರ್ಗದಲ್ಲಿ ಈಗಿನ ಚಾಮರಾಜ ನಗರ ತಾಲ್ಲೂಕು ಹರದನಹಳ್ಳಿ ಎಂದು ಹೇಳಿಸಿಕೊಳ್ಳುವಲ್ಲಿ ಒಂದು ನಗರವನ್ನು ಕಟ್ಟಿಸಿದರು. ಇಲ್ಲಿ ತೃಣಜಲಸಮೃದ್ಧವಾಗಿತ್ತು. ಇದಕ್ಕೆ ಹರದನಹಳ್ಳಿ ಎಂದೂ ಸಂಸ್ಕೃತದಲ್ಲಿ ವಾಣಿಜ್ಯ ಪುರವೆಂದೂ ಕರೆದರು. ಅಲ್ಲಿ ಅವರು ಒಂದು ಶಿವಾಲಯವನ್ನು ಕಟ್ಟಿಸಿ ಅದರಲ್ಲಿ ಅಮೃತೇಶ್ವರ ಲಿಂಗವನ್ನು ಪ್ರತಿಷ್ಠಾಪಿಸಿದರು. ಅದೇ ಮುಂದೆ ದಿವ್ಯಲಿಂಗೇಶ್ವರ ಅಖಿಲೇಶ್ವರ ಇತ್ಯಾದಿ ಹೆಸರಿನಿಂದ ಕರೆಯಿಸಿಕೊಂಡಿತು.[26a] ಆ ವೀರಬಣಂಜುಗಳು ದೇವಾಲಯದ ಪಕ್ಕದಲ್ಲಿಯೇ ಒಂದು ಮಠವನ್ನು ಕಟ್ಟಿಸಿ ಸಮಯಾಚಾರಕ್ಕಾಗಿ ಅಲ್ಲಿ ಪ್ರಭುದೇವರ ಪರಂಪರೆವಿಡಿದು ಜಂಗಮ ಪ್ರಭುವೊಬ್ಬರನ್ನು ನೆಲೆಗೊಳಿಸಿದರು. ಈ ಜಂಗಮ ಮೂರ್ತಿಗಳೇ ಹರದನಹಳ್ಳಿಯ ಗೋಸಲದೇವರು. ಅಂದರೆ ಗೋಸಲಸಿದ್ಧೇಶ್ವರಸ್ವಾಮಿಗಳು. ಈ ವಿಷಯವನ್ನು ಸೂಕ್ಷ್ಮವಾಗಿ ಗ್ರಹಿಸಿದಾಗ ಅಳಿದು ಹೋದ ಶೂನ್ಯಸಿಂಹಾಸನಕ್ಕೆ ಪುನಃ ಮೂರ್ತಸ್ವರೂಪಕೊಟ್ಟು ಹರದನಹಳ್ಳಿಯ ಮಠದಲ್ಲಿ ಅದನ್ನು ಪ್ರತಿಷ್ಠಾಪಿಸಿದರೆಂಬುದು ಗೊತ್ತಾಗುವುದು. ಆದುದರಿಂದ ಈ ಪೂರ್ವದ ಗೋಸಲಸಿದ್ಧೇಶ್ವರರ, ಹಿಂದಿನ ೧೧ ಜನ ಗುರುಗಳು ನಿರಂಜನ ಜಂಗಮ ಪದವನ್ನು ಹೊಂದಿರಲಿಲ್ಲವೆಂದು ತೋರುವುದು.ನಿರಂಜನ ಜಂಗಮಾಧಿಕಾರ ಗೋಸಲ ಸಿದ್ಧೇಶ್ವರರಿಂದಲೇ ಮುಂದುವರಿಯಿತೆಂದೂ ಆದುದರಿಂದಲೇ ಅವರು ತಮ್ಮ ನಿರಂಜನಜಗದ್ಗುರು ಸ್ಥಾನಾಪನ್ನರಾಗಿ ಸಂಚಾರ ಕೈಕೊಂಡು ಖಿಲವಾಗುತ್ತ ಬಂದಿದ್ದ ವೀರಶೈವಧರ್ಮದ ಪುನರುದ್ಧಾರದ ಮಹಾಕಾರ್ಯದಲ್ಲಿ ತತ್ಪರರಾಗಿ ಪ್ರಚಾರ ಮಾಡುತ್ತ ಶಿವಗಂಗೆಗೆ ಅನಂತರ ಸಿದ್ಧಗಂಗೆಗೆ ಬಂದು ಅನೇಕ ವರ್ಷಗಳು ಅನುಷ್ಠಾನಾದಿಗಳನ್ನು ಮಾಡಿ, ಮೂಲಪೀಠದ ಉತ್ತರಾಧಿಕಾರವನ್ನು ಶಂಕರದೇವರು ಅಥವಾ ಶಂಕರಾಚಾರ್ಯರಿಗೆ ವಹಿಸಿ ಇಲ್ಲಿಯೇ ಅಂದರೆ ಸಿದ್ಧಗಂಗೆಯಲ್ಲಿಯೇ ಲಿಂಗೈಕ್ಯರಾದರೆಂದು ಹೇಳಬಹುದು. ಗೋಸಲ ಸಿದ್ಧೇಶ್ವರರು ಲಿಂಗೈಕ್ಯರಾದ ಮೇಲೆ ಅವರ ಶಿಷ್ಯರಾದ ಶಂಕರಾಚಾರ್ಯರ ಕ್ರಾಂತಿಯು ಇನ್ನೂ ಉಜ್ವಲಗೊಳ್ಳುತ್ತದೆ.

**ಹರದನಹಳ್ಳಿ ಶಂಕರಾಚಾರ್ಯ ಸ್ವಾಮಿಗಳು: (ಕ್ರಿ.ಶ. ಸುಮಾರು ೧೩೫೩)**

೧೭ನೆಯ ಪಟ್ಟದ ಈ ಶಂಕರಾಚಾರ್ಯ ಸ್ವಾಮಿಗಳವರು ತಮ್ಮ ಗುರುಗಳಾದ ಗೋಸಲ ಸಿದ್ಧೇಶ್ವರರ ಪ್ರವಾಸ ಕಾಲದಲ್ಲಿ ತಮ್ಮ ಹರದನಹಳ್ಳಿಯ ಮಠದಲ್ಲಿಯೇ ಲಿಂಗಜಂಗಮ ದಾಸೋಹಾದಿಗಳನ್ನು ಮಾಡಿಕೊಂಡು ಇದ್ದು ಗುರುಗಳು ಲಿಂಗೈಕ್ಯರಾದ ಮೇಲೆ ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ದಿವ್ಯಲಿಂಗೇಶ್ವರರೆಂಬುವರಿಗೆ ಇತ್ತು ತಾವು ಪ್ರವಾಸ ಕೈಕೊಳ್ಳುವರು. ಇವರು ತಮ್ಮ ಪ್ರವಾಸದಲ್ಲಿ ಪ್ರಥಮತಃ ಪಂಪಾಕ್ಷೇತ್ರಕ್ಕೆ ಬಂದು ಅಲ್ಲಿ ತಮ್ಮ ಗುರುಗಳವರು ಅನುಸರಿಸಿದ್ದ ಏಕೋತ್ತರಶತಸ್ಥಲಸಂಕೇತದಲ್ಲಿ ೧೦೧ ಜನ ವಿರಕ್ತರ ಸಂಪ್ರದಾಯವನ್ನು ಉಂಟುಮಾಡಿದರು. ಅವರೆಲ್ಲರಿಗೆ ಷಟಸ್ಥಲ ಜ್ಞಾನೋಪದೇಶವನ್ನಿತ್ತರು. ಅವರಲ್ಲಿ ಮುಖ್ಯರಾದವರೆಂದರೆ–ಕರಸ್ಥಲದ ವೀರಣ್ಣೊಡೆಯರು, ಕರಸ್ಥಲದ ನಾಗಿದೇವರು, ಸಪ್ತಕಾವ್ಯದ ಗುರುಬಸವದೇವರು, ಬತ್ತಲೆಯ

---

ಪಾಠವಿದೆ. ಇಲ್ಲಿ ಹರದನಹಳ್ಳಿಯ ಹೆಸರು ಬಂದಿರುವುದು ಕೇವಲ ಗೋಸಲದೇವರಿಂದಲೇ. ತೋಂಟದ ಸಿದ್ಧಲಿಂಗ ಯತಿಗಳು ಹೇಳಿದ ಇದೇ ಪರಂಪರೆಯನ್ನೇ ವಿರಕ್ತ ತೋಂಟದಾರ್ಯರು ತಮ್ಮ ಸಿದ್ಧೇಶ್ವರ ಪುರಾಣದಲ್ಲಿಯೂ ಹೇಳಿದ್ದಾರೆ. (ಸಂ. ೨, ಪ ೩೧ ೩೨-೩೩) ನಿರಂಜನವಂಶ ರತ್ನಾಕರದಲ್ಲಿ ಇದೇ ಪರಿವಿಡಿಯನ್ನೇ ಅನುಸರಿಸಿ ಈ ಎಲ್ಲ ಸ್ವಾಮಿಗಳವರು ಸಂಚರಿಸಿದ ದೇಶ, ಮಾಡಿದಕಾರ್ಯ ಪವಾಡ ಮತ್ತು ಲಿಂಗೈಕ್ಯ ಸ್ಥಳಗಳನ್ನು ಹೇಳಿದೆ. ಆದರೆ ಸಿದ್ಧೇಶ್ವರ ಪುರಾಣದಲ್ಲಿ ಪ್ರಭುದೇವರು, ಚೆನ್ನಬಸವಣ್ಣನವರು, ಸಿದ್ಧರಾಮೇಶ್ವರ ಹೆಸರನ್ನು ಹೇಳಿಲ್ಲ.

26a ಇಲ್ಲಿ ಶಿವಾಲಯವನ್ನು ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿಸಲು ಕಾರಣವಾದ ಕಥೆ ಸಿದ್ಧೇಶ್ವರಪುರಾಣ, ನಿರಂಜನವಂಶ ರತ್ನಾಕರಗಳಲ್ಲಿ ಬಂದಿದೆ; ಅದು ಹೀಗೆ :
''ಅಡಿಕೆ, ಮೆಣಸು, ಯಾಲಕ್ಕಿ ಮುಂತಾದ ಸರಕುಗಳನ್ನು ಸಾವಿರಾರು ಎತ್ತುಗಳ ಮೇಲೆ ಹೇರಿಕೊಂಡು ಹೋಗುತ್ತಿದ್ದ ಈ ವ್ಯಾಪಾರಿ ಸಂಘವು ತೃಣಜಲಕಾಷ್ಟಗಳಿಂದ ಸಮೃದ್ಧವಾದ ಈ ಸ್ಥಳದಲ್ಲಿ ಕಂಟಲಿಗಳನ್ನು ಇಳುಹಿ, ಗೂಡಾರಗಳನ್ನು ಹೊಡೆದು ತಂಗಿದ್ದರು. ಎತ್ತುಗಳನ್ನು ಮೇಯಲು ಬಿಟ್ಟು ಅನಂತರ ಸ್ನಾನಾದಿಗಳನ್ನು ಮಾಡಿ ಅಡಿಗೆಮಾಡಲು ಪ್ರಾರಂಭವಾಯಿತು. ಹೂಡಿದ ಒಲೆಯ ಗುಂಡುಗಳಲ್ಲಿ ಒಂದು ಗುಂಡಿನಿಂದ ಹಾಲು ಹರಿಯುವುದಕ್ಕೆ ಮೊದಲಾಗಿ ಬೆಂಕಿಯೆಲ್ಲ ನಂದಿಹೋಗತೊಡಗಿತು. ಈ ಸುದ್ದಿಯನ್ನು ಹಿರಿಯ ಸೆಟ್ಟಿಗೆ ತಿಳಿಸಿದರು. ಹಿರಿಯಸೆಟ್ಟಿಯು ತನ್ನ ಜೇಡಿಕೆಯಲ್ಲಿರುವ ಎಲ್ಲ ಸೆಟ್ಟರನ್ನು ಕರೆಯಿಸಿ ತೋರಿಸಿ ಮುಂದೇನೆಂದು ಯೋಚಿಸಿದನು. ಅವರೆಲ್ಲ

ದೇವರು, ನಿರ್ವಾಣಯೋಗೀಶ್ವರರು, ಕಲ್ಲುಮಠದ ಪ್ರಭುದೇವರು ಇವರೇ ಮೊದಲಾದವರು. ಪ್ರೌಢದೇವರಾಯನೂ ಇವರಿಂದ ಉಪದೇಶ ಪಡೆದನೆಂದೇ ನಿರಂಜನವಂಶ ರತ್ನಾಕರ ಹೇಳುತ್ತಿದೆ.[27] ಪ್ರೌಢದೇವರಾಯನು ವಿಜಯನಗರದಲ್ಲಿ ಶ್ರೀ ಶಂಕರಾಚಾರ್ಯ ಸ್ವಾಮಿಗಳವರ ಉತ್ಸವವನ್ನು ಅವರಿಗಿರುವ ೭೨ ಬಿರುದುಗಳು ಸಮೇತ ಮಾಡಿಸಿ, ಅರಮನೆಯಲ್ಲಿ ಪೂಜಾವಿಗಳನ್ನು ಮಾಡಿಸಿ, ಅಪಾರ ಕಾಣಿಕೆಯನ್ನರ್ಪಿಸಿದನು. ಸ್ವಾಮಿಗಳು ಆ ದ್ರವ್ಯದಿಂದ ಹೇಮಕೂಟದಲ್ಲಿ ಗಣಾರಾಧನೆಯನ್ನು ಮಾಡಿಸಿದರು.[28] ಈ ಅಂಶದಿಂದ ವಿಜಯನಗರದಲ್ಲಿ ವೀರಶೈವೋದ್ಧರಣದ ಕಾರ್ಯಕಲಾಪಗಳು ಮತ್ತೊಮ್ಮೆ ಬಿರುಸಾಗಿ ನಡೆಯಲು ಹರದನಹಳ್ಳಿಯ ಪೀಠಾಚಾರ್ಯರು ಬಹುಮಟ್ಟಿಗೆ ಕಾರಣಕರ್ತರಾದರೆಂಬುದು ಧ್ವನಿತವಾಗುವುದು. ನೂರೊಂದು ವಿರಕ್ತರ ಸಂಪ್ರದಾಯ ವಿಜಯನಗರದಲ್ಲಿ ಬೆಳೆದು ಬಂದ ಬಗೆಗೆ ಅನೇಕ ಊಹಾಪೋಹಗಳಿವೆ. ಆದರೆ ಆಗ ವೀರಶೈವ ಪ್ರಪಂಚಕ್ಕೆ ಹರದನಹಳ್ಳಿಯ ಪೀಠದ ಆಸರೆಯೇ ಮುಖ್ಯವಾಗಿತ್ತೆಂದೂ ಉಳಿದ ಇನ್ನಿತರ ಕೇಂದ್ರಗಳು ರಾಜಕೀಯ ವಿಪ್ಲವದ ಕಾಲ್ತುಳಿತಕ್ಕೆ ಸಿಕ್ಕು ಜರ್ಜರಿತಗೊಂಡಿದ್ದುವೆಂದೂ ಊಹಿಸಬೇಕಾಗಿದೆ. ಬಸವಾದಿ ಪ್ರಮಥರ ಕ್ರಾಂತಿಯ ಕಿಡಿ ಆರಗೊಡದಂತೆ ಪ್ರಯತ್ನಿಸಿದವರು, ಈ ಪೀಠದವರು.

ಹಂಪೆಯಿಂದ ನೇರವಾಗಿ ಶಂಕರಸ್ವಾಮಿಗಳು ಸಂಚಾರ ಕೈಕೊಂಡು ತಮ್ಮ ಪೂಜ್ಯಗುರುಗಳಾದ ಗೋಸಲಸಿದ್ಧೇಶ್ವರರು ತಪಸ್ಸು ಮಾಡಿ ಮಠವನ್ನು ಕಟ್ಟಿಸಿದ ಸಿದ್ಧಗಂಗಾ ಗಿರಿಗೆ ಬಂದು ಅಲ್ಲಿ ಅನೇಕ ವರ್ಷಗಳು ಶಿವಯೋಗಾನುಷ್ಠಾನದಲ್ಲಿ ನಿರತರಾಗಿ, ಆಗಿನ ಪೆನುಗುಂಡೆ ನಾಡಿಗೊಳಪಟ್ಟಿದ್ದ ಕೊರಟಗೆರೆಯ ಸಮೀಪದ ಸಿದ್ಧನಬೆಟ್ಟದಲ್ಲಿ ಶಿವಾಧೀನರಾದರು. ಇವರ ಉತ್ತರಾಧಿಕಾರಿಗಳಾಗಿ ಹರದನಹಳ್ಳಿಯ ಶಿವಾನುಭವ ಚರಂತಿಕೆಯ ಸ್ವಾಮಿಗಳವರಾಗಿದ್ದ ದಿವ್ಯ ಲಿಂಗೇಶ್ವರರು ತಮ್ಮ ಗುರುವರ್ಗದವರಂತೆ ಪ್ರವಾಸ ಕೈಕೊಂಡಿದ್ದರೂ ಹೆಚ್ಚಿನ ಪ್ರಭಾವಯುತವಾದ ಕಾರ್ಯಗಳೇನೂ ಅವರ ಕಾಲದಲ್ಲಿ ಆದಂತೆ ಕಂಡುಬರುವುದಿಲ್ಲ. ಕೆಲವುಕಾಲ ಈ ಸ್ವಾಮಿಗಳು ತಲಕಾಡಿನ ಸುತ್ತಮುತ್ತ ಮಾತ್ರ ಸಂಚರಿಸಿದರು. ಆದರೆ ಇವರು ಮಹಾ ಪುರುಷರಾಗಿದ್ದ ಹಾಗೆ ಕಂಡುಬರುವುದು. ಅಂಗವಿಕಲರನೇಕರಿಗೆ ಅಂಗಾಂಗಗಳುಂಟಾಗುವ ಪವಾಡವನ್ನು ಎಳಂದೂರಿನಲ್ಲಿ ಮಾಡಿದ ಹಾಗೂ, ಎಳಂದೂರು ತಲಕಾಡುಗಳಲ್ಲಿ ಪರಮತಸ್ಥರೊಡನೆ ವಾದಮಾಡಿ ಅವರನ್ನು ಗೆದ್ದು ಸ್ವಮತೋತ್ಕರ್ಷವನ್ನುಂಟುಮಾಡಿದರೆಂದೂ, ಏನೂ ಅರಿಯದ ನಿರಕ್ಷರ ಕುಕ್ಷಿಗಳಿಂದ ವೇದಾಗಮೋಪನಿಷತ್ತುಗಳನ್ನು ಹೇಳಿಸಿದರೆಂದೂ ತಿಳಿದುಬರುವುದು. ಇವರು ತಮ್ಮ ಶಿವಾನುಭವ ಚರಂತಿಕೆಯ ಪಟ್ಟವನ್ನು ಗೋಸಲ ಚೆನ್ನಬಸವರಾಜೇಂದ್ರರಿಗೆ ಉಂಟುಮಾಡಿ ತಾವು ಹರದನಹಳ್ಳಿಯಲ್ಲಿಯೇ ಲಿಂಗೈಕ್ಯರಾದರು.[29]

## ಗೋಸಲ ಚೆನ್ನಬಸವರಾಜೇಂದ್ರ ಸ್ವಾಮಿಗಳು

ಗೋಸಲ ಚೆನ್ನಬಸವರಾಜೇಂದ್ರ ಸ್ವಾಮಿಗಳು ಹರದನಹಳ್ಳಿಯ ನಿರಂಜನ ಜಂಗಮಾಧಿಕಾರ ವಹಿಸಿಕೊಂಡ ತರುಣದಲ್ಲಿಯೇ ವಿಜಯನಗರದ ಪ್ರೌಢದೇವರಾಯನು ಲಿಂಗೈಕ್ಯನಾದನು. ಅನಂತರ ವೀರಶೈವೋದ್ಧರಣಕಾರ್ಯದಲ್ಲಿ ಆಸಕ್ತಿವಹಿಸುವ ಇನ್ನೊಬ್ಬ

---

ಹಾಲು ಹರಿಯುತ್ತಿದ್ದ ಗುಂಡನ್ನು ಹೊರತೆಗೆದು ಪರೀಕ್ಷಿಸಿ ಇದು ಗುಂಡಲ್ಲವೆಂದೂ, ಲಿಂಗಶಿಲೆಯೆಂದೂ ಅರಿತು ಆ ಗುಂಡಿಗೆ ಅಮೃತೇಶ್ವರ ಲಿಂಗವೆಂದು ಹೆಸರಿಟ್ಟು ಒಂದು ಶಿವಾಲಯವನ್ನು ನಿರ್ಮಿಸಿದರು. ಅದೇ ಶಿವಲಿಂಗಕ್ಕೆ ಮುಂದೆ ದಿವ್ಯಲಿಂಗವೆಂದು ಹೆಸರಿಟ್ಟು ಅಲ್ಲಿಯೇ ತಮ್ಮ ಸಮಯಾಚಾರಕ್ಕಾಗಿ ಒಂದು ಮಠವನ್ನು ಕಟ್ಟಿಸಿ ತಮ್ಮ ಸಮಯಾಚಾರದ ಪ್ರಭುದೇವರ ಪರಂಪರೆಯಲ್ಲಿ ಗೋಸಲಸಿದ್ಧೇಶ್ವರ ರೆಂಬುವರನ್ನು ನೇಮಿಸಿ, ದೇವಾಲಯ ಮತ್ತು ಮಠಕ್ಕೆ ಭೂಮಿ ಕಾಣಿಗಳನ್ನು ಮಾಡಿದ್ದರು.'' ಹೀಗೆ ನಿರಂಜನವಂಶರತ್ನಾಕರ ಹೇಳಿದರೆ, ಸಿದ್ಧೇಶ್ವರ ಪುರಾಣದಲ್ಲಿ ಕಥೆಯೇನೋ ಇದೇ ಕ್ರಮದಲ್ಲಿ ಬಂದಿದ್ದರೂ ಮಠದಲ್ಲಿ ಸಮಯಾಚಾರಕ್ಕಾಗಿ ನೇಮಿಸಿದ ಸ್ವಾಮಿಗಳ ಹೆಸರು ಹೇಳುವಾಗ ಟಿಪ್ಪಣಿ ೫ರಲ್ಲಿ ಹೇಳಿರುವ ಮೊದಲನೆಯ ಸ್ವಾಮಿಗಳಿಂದಲೇ ಸ್ವಾಮಿಗಳ ಪರಂಪರೆ ಪ್ರಾರಂಭವಾಯಿತೆಂದು ಹೇಳಲಾಗಿದೆ. (ಸಂ-೨೪-೩೧-೩೨-೩೩). ಇಲ್ಲಿ ಇನ್ನೊಂದು ಅಂಶವೇನೆಂದರೆ ವೀರಬಣಂಜುಗಳು ಹರದನ ಹಳ್ಳಿಯಲ್ಲಿ ಮಠವನ್ನು ಸ್ಥಾಪಿಸಲಿಕ್ಕೆ ಮತ್ತು ಅಲ್ಲಿ ಅನಾದಿಗಣವರರ ಎಂಬುವರನ್ನು ಆ ಪೀಠದ ಮೇಲೆ ಕುಳ್ಳಿರಿಸುವುದಕ್ಕೆ ರೇವಣಸಿದ್ಧೇಶ್ವರರೇ ಮುಖ್ಯವಾದ ಕಾರಣವೆಂದೂ, ಈ ಅನಾದಿಗಣವದರ ಹೆಸರು ಪ್ರಭುಸ್ವಾಮಿ ಎಂದು ಇತ್ತೆಂದೂ ಈ ಅನಾದಿಗಣವರನಿಗೆ ರೇವಣಸಿದ್ಧೇಶ್ವರರು ರುದ್ರಮುನಿ ಶಿವಾಚಾರ್ಯರಿಂದ ಷಟ್‌ಸ್ಥಲೋಪದೇಶ ಕೊಡಿಸಿದರೆಂದೂ ಶ್ರೀ ಚೆನ್ನಮಲ್ಲಿಕಾರ್ಜುನರು ಅಭಿಪ್ರಾಯ ಪಡುತ್ತಾರೆ. (ರೇ.ಸಿ. ಪೀಠಿಕೆ ಪು. XV.) ಈ ವಿಷಯ ಯೋಚಿಸತಕ್ಕದ್ದಾಗಿದೆ. ಹೀಗಾದಾಗ ಕಾಲದ ಅಸಾಂಗತ್ಯ ಅಧಿಕವಾಗುತ್ತದೆ.

27. ನಿ. ವಂ. ರತ್ನಾಕರ; ಹಳಕಟ್ಟಿಯವರ ಪ್ರಕಟನೆ. ಪು. ೩೨-೩೩.

28. ಈಗಲೂ ಹೇಮಕೂಟದಲ್ಲಿ ವಿರೂಪಾಕ್ಷ ದೇವಾಲಯದಿಂದ ದಕ್ಷಿಣಕ್ಕೆ ತುಂಗಭದ್ರಾ ತೀರದಲ್ಲಿ ಹಾಳುಬಿದ್ದ ಒಂದು ದೊಡ್ಡ ವೀರಶೈವ ಮಠವಿದೆ. ಈಗ ಅದರ ಜೀರ್ಣೋದ್ಧಾರವನ್ನು ಕೊಟ್ಟೂರು ಮಠದ ಶ್ರೀಗಳವರು ಮಾಡುತ್ತಿದ್ದಾರೆ. ಆ ಮಠ ಕೊಟ್ಟೂರು ಸ್ವಾಮಿ ಮಠದ ಪರಂಪರೆಗೆ ಸೇರಿದುದೆಂದು ತಿಳಿದುಬರುತ್ತದೆ. ಸಾಕಷ್ಟು ಭವ್ಯವಾಗಿರುವ ಈ ಮಠ ಪಂಪಾಕ್ಷೇತ್ರದಲ್ಲಿದ್ದ ವೀರಶೈವ ಮಠಗಳೆಲ್ಲಕ್ಕಿಂತ ದೊಡ್ಡದೆಂದು ಹೇಳಲಾಗುತ್ತಿದೆ. ಈ ಮಠದ ಮೂಲಪುರುಷರಾದ ಕಪ್ಪಿನ ಚನ್ನಬಸವಸ್ವಾಮಿಗಳು (೧೫೧೮) ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯರಾಗಿದ್ದರೆಂದು ಆ ಮಠದ ದಾಖಲೆಗಳಿಂದ ಗೊತ್ತಾಗಿದೆ. (ರಸಿಕಚಕ್ರಹರಿಹರದೇವ ಪುಟ XVI ನೋಡಿ) ಸಂ. ಬಿ. ಸಿ. ಜವಳಿ ಮತ್ತು ಶಾಂತರಸರು.

29. ನಿ. ವಂ. ರತ್ನಾಕರ (ಸಂ. ಹಳಕಟ್ಟಿ) ಪು. ೩೫

ರಾಜನು ವಿಜಯನಗರದಲ್ಲಿ ಹುಟ್ಟಲಿಲ್ಲ. ಅಂತೆಯೇ ವೀರಶೈವೋದ್ಧರಣಕಾರ್ಯದಲ್ಲಿ ಅತ್ಯಂತ ಮಹಿಮಾಶಾಲಿಗಳಾದ ವ್ಯಕ್ತಿಗಳು ಬೇಕಾಗಿತ್ತು. ಸಮಾಜದ ಪುಣ್ಯವೋ ಎಂಬಂತೆ ತೋಂಟದ ಸಿದ್ಧಲಿಂಗಶಿವಯೋಗಿಗಳು ಹರದನಹಳ್ಳಿಯಲ್ಲಿಯೇ ಜನ್ಮವೆತ್ತಿ ೮ನೆಯ ವಯಸ್ಸಿನಲ್ಲಿಯೇ ಗೋಸಲ ಚನ್ನಬಸವೇಶ್ವರರ ಕೃಪೆಗೆ ಪಾತ್ರರಾದರು. ಇವರಿಗೆ ಬಾಲ್ಯದಲ್ಲಿಯೇ ಗೋಸಲ ಚನ್ನಬಸವೇಶ್ವರರು ಶಿವಾನುಭವ ಚರಂತಿಕೆಯ ಪಟ್ಟಕಟ್ಟಿದರು. 'ಸಿದ್ಧಲಿಂಗೇಶ್ವರ' ಎಂದು ನಾಮಕರಣ ಮಾಡಿದರು. ಇವರು ತಮ್ಮ ಎಂಟನೆಯ ವರ್ಷದ ಬಾಲ್ಯದಲ್ಲಿಯೇ ಅಪಾರ ಶಿವಾನುಭವ ಸಂಪತ್ತಿನಿಂದಲೂ, ಅಪೂರ್ವ ಪ್ರತಿಭೆಯಿಂದಲೂ ಶೋಭಿಸುವ ಮಹಾಪುರುಷರಾಗಿದ್ದರು. ಅಂತೆಯೇ ನಿರಂಜನಪೀಠದ ಆಗುಹೋಗುಗಳನ್ನು ಆ ಚಿಕ್ಕವಯಸ್ಸಿನಲ್ಲಿಯೇ ನಿರ್ವಹಿಸುತ್ತ ದಾಸೋಹಾದಿಕ್ರಿಯೆಗಳನ್ನು ಮಾಡಿಕೊಂಡಿರುತ್ತಿರಲು ಚನ್ನಬಸವೇಶ್ವರರು ತಮ್ಮೆಲ್ಲ ಗುರುಗಳ ಹಾಗೆಯೇ ಪ್ರವಾಸ ಕೈಕೊಂಡು ಹರದನಹಳ್ಳಿಯನ್ನು ಬಿಟ್ಟು ನೇರವಾಗಿ ಸಿದ್ಧಗಂಗಾಕ್ಷೇತ್ರಕ್ಕೆ ಬಂದು ಅಲ್ಲಿ ಗಣಪರ್ವವನ್ನು ವಿಜೃಂಭಣೆಯಿಂದ ನೆರವೇರಿಸಿದರು. ಸಿದ್ಧಗಂಗೆಯ ಬೆಟ್ಟದ ಮೇಲಣಗವಿಯಲ್ಲಿ ಅನುಷ್ಠಾನಾದಿಗಳನ್ನು ಮಾಡಿಕೊಂಡು ಲಿಂಗಜಂಗಮದಾಸೋಹಾದಿ ಕ್ರಿಯೆಗಳನ್ನು ಯಥಾಸಾಂಗವಾಗಿ ನಡೆಯಿಸಿಕೊಂಡು ಬರತೊಡಗಿದರು. ಆ ಸಮಯದಲ್ಲಿ ಗುಬ್ಬಿಯಲ್ಲಿ ಅನೇಕ ಅನುಭಾವಿಗಳೂ ವಿದ್ವಾಂಸರೂ ಇದ್ದರು. ಇಷ್ಟೇ ಅಲ್ಲ, ೧೨ನೆಯ ಶತಮಾನದಿಂದಲೂ ಗುಬ್ಬಿಯು ಶಿವಶರಣರ ಬೀಡಾಗಿದ್ದ ಬಗೆಗೆ ನಮಗೆ ವಿವರಗಳು ದೊರಕುತ್ತವೆ. ಆಗಿನ ಈ ಊರಿನ ಹೆಸರು 'ಅಮರಗುಂಡ' ಎಂಬುದು. 'ಅಮರಗುಂಡದ ಮಲ್ಲಿಕಾರ್ಜುನ' ಎಂಬ ಪ್ರಸಿದ್ಧ ವಚನಕಾರನು ೧೨ನೆಯ ಶತಮಾನದಲ್ಲಿ ಅಲ್ಲಿ ಆಗಿ ಹೋದನು. ಅಮರಗುಂಡದ ಮಲ್ಲಿಕಾರ್ಜುನ ದೇವಾಲಯ ಇಂದಿಗೂ ಇಲ್ಲಿದೆ. ಇದೇ ಊರಿನಲ್ಲಿಯೇ ಪ್ರಸಿದ್ಧದಾರ್ಶನಿಕನೂ ಶಿವಾನುಭವಿಯೂ ಆದ 'ಮಲ್ಲಣ್ಣ'ನೆಂಬುವನು ಇದ್ದನು. ಅವನು ವಾತುಲಾಗಮಕ್ಕೆ ವ್ಯಾಖ್ಯಾನ ಬರೆದುದಲ್ಲದೆ, 'ಗಣಭಾಷಿತರತ್ನಮಾಲೆ' ಎಂಬ ಹೆಸರಿನ ವೀರಶೈವ ದರ್ಶನವನ್ನು ತಿಳಿಸುವ ವಚನ ಸಂಕಲನ ಮಾಡಿದ್ದಾನೆ. ಇವನ ಮೊಮ್ಮಗ ಮಲ್ಲಣಾರ್ಯನೆಂಬುವನು ಸಿದ್ಧಗಂಗೆಗೆ ಬಂದು ಇಲ್ಲಿಂದ ಮಹಾಶಿವಯೋಗೀಶ್ವರರಾದ ಚನ್ನಬಸವರಾಜೇಂದ್ರ ಸ್ವಾಮಿಗಳವರವನ್ನು ಗುಬ್ಬಿಗೆ ಕರೆದೊಯ್ದು ಅಲ್ಲಿ ೭೭ ಬಿರುದುಗಳು ಸಮೇತವಾಗಿ ಸ್ವಾಮಿಗಳವರ ಉತ್ಸವಾದಿಗಳನ್ನು ಮಾಡಿಸಿ ಗಣಪರ್ವಗೈಸಿ ಅವರಿಂದ ಅನುಗ್ರಹದೀಕ್ಷೆಯನ್ನು (ಷಟಸ್ಥಲ ಜ್ಞಾನೋಪದೇಶವನ್ನು) ಪಡೆದನು.[30] ಅನಂತರ ಮಲ್ಲಣಾರ್ಯ ಮಹಾಪ್ರಭುವಾದ ಚೆನ್ನಬಸವೇಶ್ವರರನ್ನು ತಮ್ಮಲ್ಲಿಯೇ ಉಳಿಸಿಕೊಳ್ಳಬೇಕೆಂದು ಒಂದು ಮಠವನ್ನು ನಿರ್ಮಾಣ ಮಾಡಿ ಅಲ್ಲಿ ಅವರನ್ನು ಇರಿಸಿದನು. ಆ ಮಠವು ಇಂದಿಗೂ ಗುಬ್ಬಿಯಿಂದ ಒಂದುಮೈಲು ದೂರದಲ್ಲಿ 'ಚೆನ್ನಳ್ಳಿ' ಎಂಬ ಗ್ರಾಮದಲ್ಲಿದೆ. ಚೆನ್ನಬಸವೇಶ್ವರರ ಸಂಬಂಧದಿಂದಲೇ ಈ ಊರು 'ಚೆನ್ನಳ್ಳಿ' ಎಂದು ಇಂದಿಗೂ ಉಳಿದಿರುವುದನ್ನು ಈ ಸಮಯದಲ್ಲಿ ಜ್ಞಾಪಿಸಿಕೊಳ್ಳಬಹುದು.[31] ಶ್ರೀಗಳವರು ತಮಗೆ ಕಟ್ಟಿಸಿದ ಮಠದಲ್ಲಿರುತ್ತ ಶಿವಯೋಗಾನಂದತುಂದಿಲರಾಗಿರುತ್ತಿದ್ದು, ಇಲ್ಲಿಯೇ ಲಿಂಗೈಕ್ಯರಾದರು. ಅವರ ಗದ್ದುಗೆಯು ಊರಿನ ಪೂರ್ವದಿಗ್ಭಾಗದಲ್ಲಿ ಇಂದೂ ವಿರಾಜಿಸುತ್ತಿದೆ. ಇಂದಿಗೂ ಗುಬ್ಬಿಯ ಅಧಿದೇವತೆ ಚೆನ್ನಬಸವೇಶ್ವರರೇ ಆಗಿದ್ದಾರೆ. ಪ್ರತಿವರ್ಷ ರಥೋತ್ಸವಾದಿಗಳು ಜರುಗುತ್ತವೆ.

**ತೋಂಟದ ಸಿದ್ಧಲಿಂಗೇಶ್ವರರು :**

ಶೂನ್ಯ ಸಿಂಹಾಸನಾಧೀಶ್ವರರ ಪರಂಪರೆಯಲ್ಲಿ ಪ್ರಭುದೇವ, ಚೆನ್ನಬಸವಣ್ಣ, ಸಿದ್ಧರಾಮೇಶ್ವರರ ನಂತರ ಅತ್ಯಂತ ಪ್ರಭಾವಶಾಲಿಗಳೂ, ಮಹಿಮಾಪುರುಷರೂ, ಶಿವಾನುಭಾವ ವಿದ್ಯಾವಿಶಾರದರೂ, ವಚನಶಾಸ್ತ್ರಕಾರರೂ ಎನಿಸಿದ ಶಿವಯೋಗಿಗಳಾಗಿದ್ದಾರೆ. ಇವರು ಬಹುಶಃ ಕ್ರಿ. ಶ. ೧೪೦೦ರ ಸುಮಾರಿನಲ್ಲಿ ಜನಿಸಿ, ೧೪೮೦ರವರೆಗೆ ಬಾಳಿದರು.[31a] ವೀರಶೈವ ಧರ್ಮೇತಿಹಾಸದಲ್ಲಿ

---

30. ಈ ಮಲ್ಲಣಾರ್ಯನ ಮನೆತನ ಶ್ರೇಷ್ಠಸಂತತಿಯ ಮನೆತನ. ಈತನು ವೀರಶೈವಾಮೃತ ಮಹಾಪುರಾಣವೆಂಬ ಶ್ರೇಷ್ಠತಮವಾದುದೂ ವೀರಶೈವ ವಿಶ್ವಕೋಶದಂತಿರುವುದೂ ಆದ ಗ್ರಂಥವನ್ನೂ, ಭಾವಚಿಂತಾರತ್ನವೆಂಬ ಸತ್ಯೇಂದ್ರಚೋಳನ ಕಥೆಯನ್ನು ತಿಳಿಸುವ ಮಂತ್ರ ಮಹಾತ್ಮೆಯ ಪ್ರಾಧಾನ್ಯವಿಷಯವುಳ್ಳ ಗ್ರಂಥವನ್ನೂ ಬರದಿದ್ದಾನೆ ಎಂಬ ವಿಷಯ ಈ ಹಿಂದೆ ವಿವರಿಸಲ್ಪಟ್ಟಿದೆ.

31. ಇಂದಿಗೂ ಈ ಮಠದಲ್ಲಿ ಚೆನ್ನಬಸವೇಶ್ವರಸ್ವಾಮಿಗಳವರ ಉತ್ಸವ ಮೂರ್ತಿಯು ಇದ್ದು, ಪ್ರತಿವರ್ಷ ಉತ್ಸವಾದಿಗಳು ಜರಗುತ್ತವೆ.

31a ಇತ್ತೀಚೆಗೆ ತೋಂಟದ ಸಿದ್ಧಲಿಂಗೇಶ್ವರರ ಕಾಲದ ಬಗೆಗೆ ಅನೇಕ ಚರ್ಚೆಗಳು ನಡೆಯುತ್ತಿವೆ. ಕ್ರಿ. ಶ. ೧೪೦೦ ರಿಂದ ೧೫೬೦ ವರೆಗೆ ಇವರ ಕಾಲ ತೂಗುಯ್ಯಾಲೆಯಲ್ಲಿ ಇದೆ. ಪ್ರಕೃತಕವಿಚರಿತ್ರೆಕಾರರ ಅಭಿಪ್ರಾಯವನ್ನೂ ಇದುವರೆಗೆ ನಂಬಿಕೊಂಡು ಬಂದಿರುವ ನಂಬಿಗೆಯನ್ನೂ ಮುಖ್ಯವಾಗಿಟ್ಟುಕೊಂಡು ಸದ್ಯಕ್ಕೆ ಅದೇ ಕಾಲವನ್ನು ಸ್ವೀಕರಿಸಲಾಗಿದೆ. ಇತ್ತೀಚಿನ ವಿದ್ವಾಂಸರು ಕ್ರಿ. ಶ. ೧೫೬೦ವರೆಗೆ ಅವರ ಕಾಲವನ್ನು ಎಳೆದೊಯ್ಯುವ ವಾದವನ್ನು ಅಲ್ಲಗಳೆಯುವವರಿದ್ದಾರೆ. ಡಾ. ಮಲ್ಲೇದೇವರು ಸಂಪಾದಿಸಿರುವ ಸ್ವತಂತ್ರ ಸಿದ್ಧಲಿಂಗೇಶ್ವರನ ವಚನಗಳು ಗ್ರಂಥದ ಪೀಠಿಕೆ (ಪುಟ ೧೯ರಿಂದ ೨೫) ಯಲ್ಲಿ ಈ ವಾದವನ್ನು ಅಲ್ಲಗಳೆದು ಕವಿಚರಿತ್ರೆಕಾರರ ಕಾಲವನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದ್ದಾರೆ. ಕವಿಚರಿತ್ರೆಕಾರರ ಕಾಲವನ್ನು ಒಪ್ಪದೆ ಒಂದು ಶತಮಾನದಷ್ಟು ಕಾಲವನ್ನು ಮುಂದಕ್ಕೆ ಹೇಳುವವರ ವಾದದಲ್ಲಿಯೂ ಅನೇಕ ಸಂಶಯಗಳು, ತೊಡರುಗಳು ಇಲ್ಲದಿಲ್ಲ. ಮಹಾತಪಸ್ವಿಗಳಾದ ಅವರು ದೀರ್ಘಕಾಲ ಬದುಕಿ ೧೫೦೦ರ ಮುಂದೆಯೂ ಇದ್ದಿರಬಹುದು. ಆಗ ಅವರ ಜನನದ ಅಂದಾಜು ಕಾಲವು ಮುಂದಕ್ಕೆಬರಬೇಕಾಗುತ್ತದೆ. ನಿಷ್ಕೃಷ್ಟ ಆಧಾರಗಳ ಅಭಾವದಿಂದ ಇದಮಿತ್ಥಂ ಎಂದು ಹೇಳುವದಕ್ಕೆ ಅನೇಕ ತೊಡಕುಗಳು ಬರುತ್ತವೆ. ಅಂತು ೧೫೦೦ರಲ್ಲಿ ಅವರು ಇರಲು ಸಾಧ್ಯವೆನ್ನಬಹುದು. ಗುಬ್ಬಿಗೆ ಚನ್ನಬಸವೇಶ್ವರರನ್ನು ಕರೆತಂದ ಮಲ್ಲಣಾರ್ಯರ ಬಗೆಗೂ ಭಿನ್ನಾಭಿಪ್ರಾಯಗಳಿವೆ. ಪ್ರಾಯಃ ಇವನ ತಾತನಾದ ಮಲ್ಲಣ್ಣನೇ ಈ ಕಾರ್ಯ ಮಾಡಿರಬಹುದೆನ್ನುವವರೂ ಇದ್ದಾರೆ.

ಅತ್ಯದ್ಭುತ ಕ್ರಾಂತಿಯನ್ನು ಮಾಡಿದ ಕಾರಣ ಪುರುಷರೆನಿಸಿದ್ದಾರೆ; ಇವರನ್ನು ದ್ವಿತೀಯ ಪ್ರಭುದೇವರೆಂದೂ ಕರೆಯಲಾಗುತ್ತಿದೆ. ಇವರು ಮಾಡಿದ ಕ್ರಾಂತಿ ದೊಡ್ಡದು; ತತ್ಫಲವಾಗಿ ಧರ್ಮವು ನವನವೋನ್ಮೇಷಶಾಲಿನಿಯೆನಿಸಿದೆ. ಇಂದು ವೀರಶೈವ ಸಮಾಜದಲ್ಲಿ ತಲೆಯೆತ್ತಿನಿಂತಿರುವ ಅಧಿಕ ಸಂಖ್ಯಾತವಾದ ವಿರಕ್ತ ಮಠ, ಪಟ್ಟದಮಠ, ಶರಣಸಂತತಿಯ ಮಠಗಳ ಅಸ್ತಿತ್ವಕ್ಕೆ ತೋಂಟದ ಸಿದ್ಧಲಿಂಗಶಿವಯೋಗಿಗಳೇ ಬಹುಮಟ್ಟಿಗೆ ಕಾರಣಪುರುಷರೆನಿಸಿದ್ದಾರೆ. ಸಿದ್ಧಗಂಗಾ ಮಠವು ಗೋಸಲಸಿದ್ಧೇಶ್ವರರಿಂದ ಸ್ಥಾಪನೆಗೊಂಡು ತನ್ನ ಮಹಿಮಾವಿಶೇಷಗಳನ್ನು ಬೆಳಸಿಕೊಂಡುಬಂದರೂ ಈ ಕ್ಷೇತ್ರಾಧಿಪತಿಗಳು ಸಿದ್ಧಲಿಂಗೇಶ್ವರರೇ ಎನಿಸಿದ್ದಾರೆ. ಇಂದು ಕ್ಷೇತ್ರದಲ್ಲಿ ನಡೆಯುವ ನಿತ್ಯೋತ್ಸವ, ಮಾಸೋತ್ಸವ, ವಾರ್ಷಿಕೋತ್ಸವ, ರಥೋತ್ಸವ ಯಾತ್ರಾದಿ ಕಾರ್ಯಕ್ರಮಗಳೆಲ್ಲ ಇವರ ಹೆಸರಿನಿಂದಲೇ ನಡೆಯುತ್ತಿವೆ. ಮಹಾಮಹಿಮರಾದ ಇವರ ಮತ್ತು ಇವರ ಗುರುವರ್ಗದವರ ತಪೋತೇಜದಿಂದ ಈ ಕ್ಷೇತ್ರವು ಜಾಗೃತ ಸ್ಥಾನವೆನಿಸಿ ಅಪಾರ ಮಹಿಮೆಗಳ ಆಗರವೆನಿಸಿದೆ. ಲಕ್ಷೋಪಲಕ್ಷ ಜನರ ಜೀವನದ ಮೇಲೆ ಪರಿಣಾಮ ಬೀರಿ ನಾನಾ ವಿಧವಾದ ಜೀವನಮಾರ್ಗವನ್ನು ಕಲ್ಪಿಸಿದೆ; ಕಲ್ಪಿಸುತ್ತಿದೆ. ಮಾನಸಿಕ ದೈಹಿಕ ನೆಮ್ಮದಿ ಭಂಗಗೊಂಡವರಿಗೆ ಅಭಯ ಪ್ರಧಾನಮಾಡಿ ಸುಖಶಾಂತಿಗಳನ್ನು ಕಲ್ಪಿಸುತ್ತಿದೆ. ದೀನದಲಿತವರ್ಗಕ್ಕೆ ಪ್ರಸಾದವಿತ್ತು, ಪ್ರಸನ್ನತೆಯನ್ನೊದಗಿಸುತ್ತಿದೆ. ಜನತೆಯನ್ನು ಯಾವ ಭೇದಭಾವವಿಲ್ಲದೆ ಲೌಕಿಕ, ಪಾರಲೌಕಿಕ ವಿದ್ಯಾವೈದುಷ್ಯ ಸಂಪದ್ಭರಿತವನ್ನಾಗಿ ಮಾಡುತ್ತಿದೆ. ಕಿಂಬಹುನಾ — ಈ ಕ್ಷೇತ್ರವು ಸಕಲಜೀವಾತ್ಮರಿಗೆ ಲೇಸನೇ ಬಯಸುತ್ತಿದೆ. ಎಂಬ ಒಂದುಮಾತಿನಿಂದ ಕ್ರೋಢೀಕರಿಸಿ ಹೇಳಿ ಮುಗಿಸಬಹುದು.

ಪಕೃತ ಈ ಕ್ಷೇತ್ರಾಧಿಪತಿಗಳಾದ ಶ್ರೀ ಸಿದ್ಧಲಿಂಗಶಿವಯೋಗಿಗಳ ವಿಷಯವಾಗಿ ಈ ಲೇಖನದಲ್ಲಿ ಸ್ವಲ್ಪ ದೀರ್ಘವಾಗಿಯೇ ವಿವರಣೆ ಕೊಡಲಾಗಿದೆ.

ತೋಂಟದ ಸಿದ್ಧಲಿಂಗ ಶಿವಯೋಗೀಶ್ವರರನ್ನು ಪ್ರಭುದೇವರ ಶೂನ್ಯಸಿಂಹಾಸನಾಧಿಪತಿಗಳೆಂದೂ, ದ್ವಿತೀಯ ಪ್ರಭುದೇವರೆಂದೂ ಇವರ ಬಗೆಗೆ ಹುಟ್ಟಿದ ಅನೇಕ ಪುರಾಣಗಳಲ್ಲಿ ಮತ್ತು ಸ್ತೋತ್ರಮಾಡಿದ ಕವಿಗಳ ಕಾವ್ಯಗಳಲ್ಲಿ ಕೀರ್ತಿತರಾಗಿದ್ದಾರೆ. ಇವರ ಬಗೆಗೆ ಇದುವರೆಗೆ ಎರಡು ಶಿಲಾಶಾಸನಗಳು ಉಪಲಬ್ಧವಿದ್ದು ಆ ಶಾಸನಗಳು ಈ ಮಹಾಶಿವಯೋಗಿಯ ನಾಮಸ್ಮರಣೆಮಾಡಿ ಪುನೀತಗೊಂಡಿವೆಯೆನ್ನಬಹುದು. ಮೊದಲನೆಯ ಶಾಸನವೇ ಎಡೆಯೂರಿನ ದೇವಾಲಯದಲ್ಲಿರುವ ಶಾಸನ ಇದರಲ್ಲಿ ಶಿವಯೋಗಿಗಳನ್ನು ವಿಶೇಷವಾಗಿ ವರ್ಣನೆಮಾಡಲಾಗಿದೆ. ಎರಡನೆಯ ಶಾಸನ ಚಿತ್ರದುರ್ಗದ ಶ್ರೀನಿವಾಸ ಅವಧಾನಿಗಳ ತೋಂಟದಲ್ಲಿ ಇದೆ. ಅದರಲ್ಲಿ ಶಿವಯೋಗಿಗಳು ಬರೆದ ಷಟ್‌ಸ್ಥಲ ಜ್ಞಾನಾಮೃತ ಸಾರದ ೩೦೨ನೆಯ ವಚನದ ಪೂರ್ಣಪಾಠವೇ ಇದೆ. ಈ ಎರಡೂ ಶಿಲಾಶಾಸನಗಳನ್ನೂ ಅವಲೋಕಿಸಿದಾಗ[32] ಆ ಕಾಲದಲ್ಲಿ ಶಿವಯೋಗಿಗಳ ಪ್ರಭಾವಮುದ್ರೆ ಎಂತಹುದೆಂಬುದರ ಅರಿವಾಗದಿರದು. ಚಿತ್ರದುರ್ಗದ ಶಾಸನವನ್ನು ಯಂತ್ರದ ಕಲ್ಲೆಂದು ಕರೆಯಲಾಗುತ್ತಿದೆ. ಜನರು ದನಕರುಗಳಿಗೆ ಬೇನೆಬಂದಾಗ ಇದನ್ನು ತೊಳೆದ ನೀರನ್ನು ಅವುಗಳಿಗೆಕುಡಿಸುತ್ತಾರೆ. ರೋಗ ಗುಣವಾಗುತ್ತದೆ ಎಂಬ ಭಾವನೆ ಆ ಜನರಲ್ಲಿದೆ. ಇದೊಂದು ಯಂತ್ರದ ಕಲ್ಲಾಗಿರುವುದು ನಿಜವೆಂದು ತೋರುತ್ತದೆ. ಏಕೆಂದರೆ ಈ ವಚನದ ಮೇಲ್ಭಾಗದಲ್ಲಿ ಷಡಕ್ಷರ ಮಂತ್ರದ ಕುಂಡಲಿಯು ಉದ್ಧೃತವಾಗಿದೆ. ದತ್ತಿ ಮೊದಲಾದ ಬೇರೆ ಯಾವ ವಿಷಯವೂ

32. ೧ನೆಯ ಶಾಸನ ಎಡೆಯೂರ ದೇವಾಲಯದಲ್ಲಿರುವುದು –(ಇಲ್ಲಿಯ ಅಂಕಿಗಳು ಸಾಲುಗಳನ್ನು ಸೂಚಿಸುವುವು) ೧) ಕೊಡಗಿಹಳ್ಳಿಯ ದೇವರು ತಾಳುಪಡದ ಭೂಮಿಯಲ್ಲಿ ತೋಂಟದಸ್ವಾಮಿ ೨) ಗೆ ತಮ್ಮ ಭಕ್ತಿಯಿಂದಾ ಕಟ್ಟಿಸಿಕೊಟ್ಟಮಠ ಯಿಮಹ ಸಿದ್ಧೇಶ್ವರನ ಅತಿಸಯವೆಂತೆಂದ ೩) ಡೇ ಶ್ರಿಮತು ಸಚ್ಚಿದಾನಂದ ನಿತ್ಯಪರಿಪೂರ್ಣವನುಳ್ಳ ಅನಾದಿಭಕ್ತ ಆ ಭಕ್ತನ ಹೃದಯದಲ್ಲಿ ಜಂ ೪) ಗಮ ಜಂಗಮರ ಮಕುಟದಲ್ಲಿ ಶೂನ್ಯಲಿಂಗ ಆ ಲಿಂಗದಲ್ಲಿ ಚಿದಂಬರ ಶಿವಶಕ್ತಿ ಪಂಚಶಕ್ತಿ ಪಂಚನಾದ ಪಂಚಬ್ರಂಹ್ಮಯಿಶ್ವರಾಷ್ಟಕ ಮಹೇಶ್ವರ ಪಂಚವಿಂಶತಿ ರುದ್ರರೇಕಾ ೬) ದಶತ್ರಯವಯ....ರಂಣ್ಯ ಗರ್ಭ ವಿರಾಟ ಮೂರ್ತಿಯಿಂತೀಯೆಂಭತ್ತೊಂದು ಮೂರ್ತಿ ೭) ಯೆ ಅಂಗವಾಗಿರ್ಪಾತನೆ ಅನಾದಿಭಕ್ತನು, ಆ ಭಕ್ತನ ಪ್ರಾಣಕಲಾಚೈತನ್ಯಸ್ವ ೮) ರೂಪೇ ತೋಂಟದ ಸಿದ್ಧಲಿಂಗೇಶ್ವರನು. ಆ ಸಿದ್ಧಲಿಂಗೇಶ್ವರನ ಮೂರ್ತಿ ಕ್ರಮವೆಂತೆಂದರೆ ೯)ಡೆ ಪ್ರಣವವೆ ಸಿರಸು ನವಸಾರಾವೆಭುಜ ಶಿಕರವೇ ದೇಹ ವಯಪ್ಕಾರವೇಪಾದ ಅನಂ ೧೦) ತ ಕೋಟಿಬ್ರಹ್ಮಾಂಡಂಗಳೇ ಮುಕುಟ ಸಮಸ್ತ ಲೋಕಾದಿಲೋಕಂಗಳೇ ದೇಹದ ಜಳವ ೧೧) ಳೆಯ ಅಕಾಶವೇ ಮುಖ ದಿಕ್ಕುಗಳೇ ತೋಳು ಚಂದ್ರಸೂರ್ಯಾದಿಗಳೇ ನಯನ ಪಾತಾಳ ೧೨) ವೇ ಪದೆ ಮೇಘಂಗಳೇ ಜಟಾಬಂಧ ಆ ಜಟಾಬಂಧದಲ್ಲಿ ಶೂನ್ಯಲಿಂಗ ವೇದಪುರಾಣಂಗಳೇ ತ್ರಿನ ೧೩) ಕ್ಷತ್ರಂಗಳೇ ಪುಷ್ಪ ಚಂದ್ರಪ್ರಕಾಶವೇ ವಿಭೂತಿ ಅಷ್ಟಕುಲ ಪರ್ವತಂಗಳೇ ರುದ್ರಾಕ್ಷಿ ಸಮಸ್ತ ಸಮುದ್ರಂಗ ೧೪) ಳೇ ಕಮಂಡಲ ಭುವನ ಸೃಷ್ಟಿಯೆಕಂತೆ ದಿವಾರಾತ್ರಿಗಳೇ ಮಠ ಷಡುರುತುಗಳೇ ಷಡುಸ್ಥಲ ಮಹಾಸೇ ೧೫) ಷನೆ ಕಟಿಸೂತ್ರ ಪರಿಪೂರ್ಣಜ್ಞಾನವೇ ಪಂಚಮುದ್ರೆ ತ್ರಿಕಾಲಗ್ನಾನವೇ ಮಹದೈಶ್ವರ್ಯ ಮಹಾ ೧೬)ಮೇರುವೇ ದಂಡ ಸದ್ಗುಣವೇ ಕರ್ಪುರ ಕುಲವೇ ಶಿವಕುಲ ಯಿಂತಪ್ಪ ಅನಾದಿ ಜಂಗಮವೆ ೧೭) ಜಗಹಿತಾರ್ಥವಾಗಿ ಚರಿಸಿದ ಕ್ರಮವೆಂತೆಂದರೆ ಗ್ನಾನಕ್ರಿಯಾ ಸ್ವರೂಪನ ಸರ್ವಾಂಗಲಿಂ ೧೮) ಗಿ ಷಟಸ್ಥಲಜ್ಞಾನಿ ಸರ್ವಾಚಾರಸಂಪಂನ್ನ ಪಾದೋದಕ ಪ್ರಸಾದ ಪ್ರತಿಷ್ಠಾಚಾರ್ಯರು ೧೯) ಅಷ್ಟಾವರಣಾಲಂಕರಣ ದ್ವೈತಾದ್ವೈತತತಿಮಿರಮಾರ್ತ್ತಂಡನುಂ ಯಿಂತಪ್ಪ ದಿವ್ಯಶಿವಯೋಗಿ ಸಿದ್ಧಲಿ ೨೦) ಂಗೇಶ್ವರಂಗೆ ಸಂಮ್ಯಜ್ಞಾನೋದಯವಾಗಿ ಸಂಸಾರಹೇಯವುಂ ಮಾಡಿ ಶರಣು ಹೊಕ್ಕ ಸಿಷ್ಯಜನ....''

—ಸಂ. ಡಾ. ಆರ್. ಸಿ. ಹಿರೇಮಠ; ಷಟ್ಸ್ಥಲ ಜ್ಞಾನಸಾರಾಮೃತ, ಪೀಠಿಕೆ, ಪು. ೨೯-೨೩೧

ಈ ಶಾಸನದಲ್ಲಿಲ್ಲದ ಮೂಲಕ ಇದನ್ನು ಕೇವಲ ಈ ಮಂತ್ರ ಮಹಿಮೆಯನ್ನು ಬಿತ್ತರಿಸುವದಕ್ಕಾಗಿಯೇ ಕೆತ್ತಿದಂತೆ ತೋರುತ್ತದೆ.[33]

ತೋಂಟದ ಸಿದ್ಧಲಿಂಗೇಶ್ವರರು ಪ್ರಭುದೇವರಿಂದ ಶೂನ್ಯಸಿಂಹಾಸನಾಧೀಶ್ವರರ ಪರಂಪರೆಯಲ್ಲಿ ೧೯ ನೆಯವರು ; ಅಥವಾ ತಾವೇ ತಮ್ಮ ೮ ನೆಯ ವಚನದಲ್ಲಿ ಹೇಳಿಕೊಂಡ ಹಾಗೆ ತಮ್ಮ ಗುರುಪರಂಪರೆಯಲ್ಲಿ ೧೬ನೆಯವರು. ಇವರ ಜೀವನ ಚರಿತ್ರೆಯನ್ನರಿಯಲು ವಿಪುಲವಾದ ಸಾಹಿತ್ಯರಾಶಿ ಕನ್ನಡದಲ್ಲಿದೆ. ಇವರ ಜೀವನವನ್ನು ಅಧಿಕರಿಸಿ, ಸ್ವತಃ ಇವರ ಶಿಷ್ಯ ಪರಂಪರೆಯಲ್ಲೊಬ್ಬರಾದ ವಿರಕ್ತ ತೋಂಟದಾರ್ಯ (ಕ್ರಿ. ಶ. ೧೫೬೦)ರು 'ಸಿದ್ಧೇಶ್ವರ ಪುರಾಣ'ವೆಂಬ ಹೆಸರಿನ ಪುರಾಣ ಬರೆದಿದ್ದಾರೆ. ಹೇರಂಬನೆಂಬ ಬ್ರಾಹ್ಮಣ ಕವಿ (ಕ್ರಿ. ಶ. ೧೫೬೦)[34] ಯು ಸಿದ್ಧಲಿಂಗೇಶ್ವರ ಸಾಂಗತ್ಯವನ್ನು ಬರೆದಿದ್ದಾನೆ. ಶಾಂತೇಶನೆಂಬ ಕವಿ (ಕ್ರಿ. ಶ. ೧೫೬೧)[35] ಯು ಸಿದ್ಧೇಶ್ವರ ಪುರಾಣವನ್ನು ಬರೆದಿದ್ದಾನೆ. ಇದೂ ಅಲ್ಲದೆ ಘನಲಿಂಗಿದೇವ (ಕ್ರಿ. ಶ. ೧೪೭೦) ಮೊದಲ್ಗೊಂಡು ೧೮ನೆಯ ಶತಮಾನದ ವರೆಗಿನ ಸುಮಾರು ನಲ್ವತ್ತು ಜನಗಳು ತಮ್ಮ ಕಾವ್ಯಗಳಲ್ಲಿ ಸಿದ್ಧಲಿಂಗೇಶ್ವರರ ಮಹಿಮಾತಿಶಯವನ್ನು ಭಯ ಭಕ್ತಿಯಿಂದ ಕೊಂಡಾಡಿದ್ದಾರೆ.[36] ಷಡಕ್ಷರದೇವನಂಥ ಅದ್ಭುತ ಪ್ರತಿಭಾ ಪಾಂಡಿತ್ಯವುಳ್ಳ ಕವಿಯು ತನ್ನ ಗ್ರಂಥಗಳಲ್ಲಿ ಸಿದ್ಧಲಿಂಗೇಶ್ವರರ ವ್ಯಕ್ತಿತ್ವವನ್ನು ಭಯ ಭಕ್ತಿಯಿಂದ ಕೊಂಡಾಡಿದ್ದಲ್ಲದೆ, ಪ್ರತ್ಯೇಕವಾಗಿ 'ಸಿದ್ಧಲಿಂಗ ಸ್ತವ' ಎಂಬ ಸ್ತೋತ್ರ ಗೀತೆಗಳನ್ನು ಸಂಸ್ಕೃತದಲ್ಲಿ ಹಾಡಿದ್ದಾನೆ. ಇವಲ್ಲದೆ ನಿರಂಜನ ವಂಶರತ್ನಾಕರ, ನಿರಂಜವಂಶದರ್ಪಣ ಮೊದಲಾದ ಗ್ರಂಥಗಳಲ್ಲಿ ಸಿದ್ಧಲಿಂಗೇಶ್ವರರ ಅನೇಕ ಮಹಿಮೆಗಳ ವರ್ಣನೆಯಿದೆ.

**ಸಿದ್ಧಲಿಂಗೇಶ್ವರರ ಸಂಚಾರ ; ಸಿದ್ಧಗಂಗಾ ಕ್ಷೇತ್ರಕ್ಕೆ ಆಗಮನ :**

ತಮ್ಮೆಲ್ಲ ಗುರುವರ್ಗದವರ ಹಾಗೆಯೇ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ಹರದನಹಳ್ಳಿಯ ನಿರಂಜನ ಜಂಗಮಾಧಿಕಾರವನ್ನು ತಮ್ಮ ವಾತ್ಸಲ್ಯಕ್ಕೆ ಪಾತ್ರರಾಗಿದ್ದ ಬೋಳುಬಸವಿದೇವರೆಂಬುವರಿಗೆ ವಹಿಸಿ,[37] ತಾವು ಸಂಚಾರ ಕೈಗೊಳ್ಳುತ್ತಾರೆ. ಸಿದ್ಧ

---

೨ನೆಯ ಶಾಸನ-ನಾದ ಬಿಂದು ಕಳೆಭೇದವ ತಿಳಿದಲ್ಲಿ। ಆರಕ್ಷರವಾದ ತೆರೆವನರಿಯ ಬಾ।ರದು ಆರಕ್ಷರಕೆ ಮೂಲ ಪ್ರಣವಮ। ತಿಳಿದಲ್ಲದೆ ನಾದ ಕಳೆದೋರದು ಅನಾದದೊ।ಳಗಿನ ಕಳೆಯನೋಡಿ ಕಂಡಲ್ಲದೆ ರಾಜಶಿವಯೋ।ಗಿಯಾಗಬಾರದು ರಾಜಶಿವಯೋಗವೆಂಬುದು। ಆದಿಯಲ್ಲಿ ಶಿವಬೀಜವಾದ ಮಹಾಮಹಿ।ಮರಿಗೆ ಸಾಧ್ಯವಪ್ಪುದಲ್ಲದೆ ತ್ರೈಜಗದಲ್ಲಾರಿ।ಗೂ ಅಸಾಧ್ಯ ನೋಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

33. ಅದೇ. ಪು. ೨೩೨.

34. ಹೇರಂಬ ಕವಿಯೂ ಕ್ರಿ.ಶ. ೧೫೬೦ ರಲ್ಲಿದ್ದನೆಂದು ಷ. ಜ್ಞಾ. ಸಾ.ವ ಪೀಠಿಕೆ ಪು. ೫೧ರಲ್ಲಿ ಹೇಳಿದ್ದಾರೆ. ಇದು ನಿಜವಾದರೆ ಇವರೂ ವಿರಕ್ತ ತೋಂಟದಾರ್ಯರ ಸಮಕಾಲೀನರೇ ಆಗುತ್ತಾರೆ. ಇವನು ಯಲಹಂಕದ ನಾಳ್ಪ್ರಭು ಮುದ್ದು ಕೃಷ್ಣರಾಜನೆಂಬುವನಿಗಾಗಿ ಶ್ರೀ ಸಿದ್ಧಲಿಂಗೇಶ್ವರ ಸಾಂಗತ್ಯವನ್ನು ಬರೆದಂತೆ ಹೇಳಿಕೊಂಡಿದ್ದಾನೆ. ಆದರೆ ಸಾಕಷ್ಟು ಆಧಾರಗಳಿಲ್ಲದ್ದರಿಂದ ಈ ಮಾತನ್ನು ಒಪ್ಪಲಾಗುವುದಿಲ್ಲ.ಇತ್ತೀಚೆಗೆ ಹೇರಂಬನ ಕಾಲವನ್ನು ೧೭೦೦ ರಿಂದ ಮುಂದೆ ಎಂದು ವಿದ್ವಾಂಸರು ಕಾರಣ ಕೊಟ್ಟು ವಿವರಿಸುತ್ತಿದ್ದಾರೆ.

35. ಈ ಶಾಂತೇಶ ಕವಿಯು ವೀರಶೈವಾಮೃತ ಮಹಾಪುರಾಣವನ್ನು ಬರೆದ ಗುಬ್ಬಿಯ (ಅಮರಗುಂಡದ) ಮಲ್ಲಣಾರ್ಯನ ಮಗ. ಇವರದು ವಿಶ್ವತ್ಪರಂಪರೆಯ ಶರಣ ಸಂಪ್ರದಾಯದ ಮನೆತನ. ಇವನ ತೋಂಟದಸಿದ್ಧಲಿಂಗೇಶ್ವರ ಪುರಾಣ ಇತ್ತೀಚೆಗೆ ಶ್ರೀ ಬಿ. ನಂ. ಚಂದ್ರಯ್ಯನವರಿಂದ ಸಂಪಾದಿತವಾಗಿ ಪ್ರಕಟವಾಗಿದೆ.

36. ಘನಲಿಂಗಿದೇವ (೧೪೭೦), ಗುಬ್ಬಿಯ ಮಲ್ಲಣ್ಣ (೧೪೭೫),* ಸ್ವತಂತ್ರ ಸಿದ್ಧಲಿಂಗೇಶ್ವರ (೧೪೮೦), ಗುಮ್ಮಳಾಪುರದ ಸಿದ್ಧಲಿಂಗೇಶ್ವರ (೧೪೮೦), ಗೂಳೂರು ಸಿದ್ಧವೀರಣಾರ್ಯ (೧೪೮೦), ಸಾನಂದ ಶಿವಯೋಗಿ (೧೪೮೦), ಮಲ್ಲಿಕಾರ್ಜುನ ಕವಿ (೧೪೮೫), ಬಸವಲಿಂಗಶಿವಯೋಗಿ (೧೫೦೦), ಗುರುನಂಜ ಕವಿ (೧೫೦೦), ಗುಬ್ಬಿಯ ಮಲ್ಲಣಾರ್ಯ (೧೫೧೩), ಪ್ರಭುಲಿಂಗ ಕವಿ (೧೫೨೦), ಓದುವಗಿರಿಯ (೧೫೨೫), ಚೇರಮಾಂಕ (೧೫೨೬), ಮುರಿಗೆಯ ಶಾಂತವೀರ (೧೫೩೦), ಸಂಪಾದನೆಯ ಚೆನ್ನಂಜೆದೇವ (೧೫೩೦), ಇಮ್ಮಡಿ ತೋಂಟದಾರ್ಯ (೧೫೩೦), ಎಮ್ಮೆಯ ಬಸವ (೧೫೪೩), ಚೆನ್ನಬಸವಾಂಕ (೧೫೧೫), ಕುಮಾರ ಚೆನ್ನಬಸವ (೧೫೫೦), ಸಿರಿನಾಮಧೇಯ (೧೫೫೦), ಮುರಿಗೆದೇಶಿಕೇಂದ್ರ (೧೫೬೦), ಮಹಾಂತಸ್ವಾಮಿ (೧೫೬೦), ಎಳಮಲೆಯಗುರು ಶಾಂತದೇವ (೧೫೬೫), ವಿರೂಪಾಕ್ಷ ಪಂಡಿತ (೧೫೮೫), ಇಮ್ಮಡಿ ಮುರಿಗೆಸ್ವಾಮಿ (೧೫೯೦), ಬಸವಲಿಂಗಕವಿ (೧೬೦೦), ಸಿದ್ಧಲಿಂಗಶಿವಯೋಗಿ (೧೬೦೦), ಸಂಪಾದನೆಯ ವೀರಣಾರ್ಯ (೧೬೦೦), ಎಳಂದೂರು ಹರೀಶ್ವರ (೧೬೦೦), ಬಸವಲಿಂಗ (೧೬೧೧), ಶಾಂತವೀರದೇಶಿಕ (೧೬೫೦), ಸಿದ್ಧನಂಜೇಶ (೧೬೫೦), ಶಾಂತಮಲ್ಲ (೧೬೫೦), ಪರ್ವತ ಶಿವಯೋಗಿ (೧೬೫೦), ಷಡಕ್ಷರಕವಿ (೧೬೫೪), ಬಸವಲಿಂಗ (೧೬೯೯), ಸಂಪಾದನೆಯ ಪರ್ವತೇಶ (೧೬೯೮), ಸೋಮಶೇಖರ ಶಿವಯೋಗಿ (೧೭೦೦), ಸೋಮಕವಿ (೧೭೦೦), ನೂರೊಂದ (೧೭೪೦), ನಂದಿನಾಥ (೧೭೪೫).-ಇತ್ಯಾದಿ. (*ಇವರು ಸ್ತೋತ್ರಮಾಡಿದಂತೆ ಕಂಡುಬರುತ್ತಿಲ್ಲ. ಸಂ.) — ಸಂ. ಆರ್. ಸಿ. ಹಿರೇಮಠ ; ಷ. ಜ್ಞಾ. ಸಾ. ಪೀಠಿಕೆ ಪು. ೨೩೨-೩೩

37. ಈ ಬೋಳಬಸವಿದೇವರಿಗೆ ' ನಿರುಕ್ಷರಕುಕ್ಷಿ ಬೋಳಬಸವಿದೇವ ' ರೆಂದೂ ಹೆಸರು. ಇವರು ವಿದ್ಯಾಭ್ಯಾಸವನ್ನು ಮಾಡಿರಲಿಲ್ಲ. ಶಿವಾನುಭವ ಸಂಪತ್ತಿನಲ್ಲಿ ಅದ್ವಿತೀಯರೆನಿಸಿದ್ದರು. ಕೆಲವು ಜನ ಕುಚೋದ್ಯಗಾರರು ಇವರ ಬಗ್ಗೆ 'ಕುಕ್ಷಿಯನ್ನು ಬರೆದರೂ ಮೂರಕ್ಷರವಿಲ್ಲದವರು, ಎಂದು ಚೇಷ್ಟೆ ಮಾಡಿದರಂತೆ. ಆಗ ನೊಂದುಕೊಂಡ ಬೋಳಬಸವೇಶರು ೨೧ ದಿನಗಳವರೆಗೆ ಪ್ರಸಾದವಿಲ್ಲದೆ ಒಂದು ಗುಡ್ಡದಲ್ಲಿ ಕುಳಿತು ತಮ್ಮ ಗುರುಗಳಾದ ತೋಂಟದ ಸಿದ್ಧಲಿಂಗೇಶ್ವರರನ್ನು ಧ್ಯಾನ ಮಾಡಲು ತರ್ಕವ್ಯಾಕರಣಾದಿ ಶಾಸ್ತ್ರಜ್ಞಾನವೂ,ಪುರಾಣಪ್ರವಚನಾದಿ ವಿದ್ಯಾವೈದುಷ್ಯವೂ ಕೈಗೂಡಿತೆಂದು ನಿರಂಜನ ವಂಶರತ್ನಾಕರ ಹೇಳುತ್ತದೆ. ತಥ್ಯಾಂಶವಿಷ್ಟೆ :-ಇವರು ನಿರಂಜನಜಂಗಮಾಧಿಕಾರ ಸ್ವೀಕಾರ ಕಾಲದಲ್ಲಿ ಹೆಚ್ಚಾಗಿ ವಿದ್ಯಾಭ್ಯಾಸ ಮಾಡಿದವರಲ್ಲ. ಸಿದ್ಧಲಿಂಗೇಶ್ವರರ ಕೃಪೆಗೆ ಪಾತ್ರರಾಗಿ ಅಧಿಕಾರ ಸ್ವೀಕಾರ ಮಾಡಿದ ಮೇಲೆ ಕ್ರಮೇಣ ಸಕಲ ಶಾಸ್ತ್ರ ಪಾರಂಗತರಾದರು ಎಂದು ಭಾವಿಸಬೇಕು.

ಲಿಂಗೇಶ್ವರರ ಸಂಚಾರ ಕಾಲದಲ್ಲಿ ೭೦೧ ಜನವಿರಕ್ತರೂ ಮೂರು ಸಾವಿರ ಜನ ಚರಮೂರ್ತಿಗಳೂ ಪಾಲ್ಗೊಂಡಿದ್ದರು. ಈ ಎಲ್ಲರೊಡನೆ ಹರದನ ಹಳ್ಳಿಯನ್ನು ಬಿಟ್ಟು ಪ್ರವಾಸ ಕೈಗೊಂಡ ಸಿದ್ಧಲಿಂಗೇಶ್ವರರು ಸಮಗ್ರ ಭಾರತವನ್ನು ಪ್ರವಾಸ ಮಾಡಿದರು. ಅವರು ಸಂದರ್ಶಿಸಿ, ತಂಗಿ, ಧರ್ಮಪ್ರಸಾರ ಮಾಡಿದ ಸ್ಥಾನಗಳಲ್ಲಿ ಸೌರಾಷ್ಟ್ರ, ಶ್ರೀ ಶೈಲ, ಕೊಲ್ಲಿಪಾಕಿ, ಕೇದಾರ, ದ್ರಾಕ್ಷಾರಾಮ, ಗೋಕರ್ಣ ಹಂಪೆ, ತ್ರ್ಯಂಬಕೇಶ್ವರ, ಶಿವಗಂಗೆ, ರಾಮೇಶ್ವರ, ಪೊನ್ನಾಂಬಲ, ಕಂಚಿ, ಕಾಳಹಸ್ತಿ, ಚಿದಂಬರ, ಅರುಣಾಚಲ–ಮೊದಲಾದವು ಮುಖ್ಯ ಸ್ಥಳಗಳು. ಇವಲ್ಲದೆ ಹೊಳಲುಗುಂದ, ಕಾರ್ಕಳ, ಗಾಳಿಪೂಜೆಬೆಟ್ಟ, ಹೊನ್ನುಡಿಕೆ, ಚೆನ್ನಪಟ್ಟಣ, ಮಂಗಳವಾಡ, ಕಲ್ಯಾಣಗಳನ್ನು ಹೇಳಬಹುದು. ಇಲ್ಲೆಲ್ಲ ಸಂಚರಿಸಿ ಅಗತ್ಯವಿದ್ದಲ್ಲಿ ಮಠ ಮಾನ್ಯಗಳನ್ನು ಪ್ರತಿಷ್ಠಾಪನೆ ಮಾಡಿ ಅವಕ್ಕೆಲ್ಲ ಚರಮೂರ್ತಿಗಳನ್ನು ನಿಯಮಿಸಿ ವೃದ್ಧಾಪ್ಯದ ಹೊತ್ತಿಗೆ ಅಂದರೆ ಕ್ರಿ. ಶ. ೧೪೭೦–೮೦ ರೊಳಗಿನ ದಶಕದ ಸುಮಾರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಬರುತ್ತಾರೆ. ಇಲ್ಲಿ ಅನೇಕ ವರ್ಷಗಳು ಪೂಜಾನುಷ್ಠಾನಾದಿಗಳನ್ನು ಮೇಲಣ ಗವಿಯಲ್ಲಿ ಮಾಡಿ ಕೇತಶರಧಿ, ತುಮಕೂರು, ಸಿದ್ಧಗಂಗೆ ದೇವರಾಯಪಟ್ಟಣಗಳಲ್ಲಿ ಅನೇಕ ಪವಾಡಗಳನ್ನು ಮೆರೆದು ಸಿದ್ಧಗಂಗೆಯಿಂದ ನೇರವಾಗಿ ತುಮಕೂರು, ಗೂಳೂರು, ಹೆಬ್ಬೂರು ಕುಣಿಗಲ್ಲು, ಹುಲಿಯೂರುದುರ್ಗಗಳ ಮಾರ್ಗವಾಗಿ ಹೊರಟು ಕಗ್ಗೆರೆಗೆ ಬಂದು ಕಗ್ಗೆರೆಯಲ್ಲಿ ಕೆಲವು ದಿನಗಳಿದ್ದು ಎಡೆಯೂರಿನಲ್ಲಿ ಕ್ರಿ. ಶ. ೧೪೮೦ ರ ಹೊತ್ತಿಗೆ ಶಿವಸಮಾಧಿ ಹೊಂದುವರು. ಈ ಹೊತ್ತಿಗಾಗಲೇ ಸಿದ್ಧಗಂಗೆ ಪವಿತ್ರ ತೀರ್ಥಕ್ಷೇತ್ರವೆಂದು ಪ್ರಸಿದ್ಧಿ ಹೊಂದಿ ಅನೇಕ ಕಡೆಯಿಂದ ಭಕ್ತಾದಿಗಳನ್ನು ಆಕರ್ಷಿಸುತ್ತ ಪವಿತ್ರಕ್ಷೇತ್ರವೇ ಎನಿಸಿತ್ತು. ಜೊತೆಗೆ ಇಲ್ಲಿ ಮಠವೂ ಸ್ಥಾಪಿತವಾಗಿ ಒಂದು ಪರಂಪರೆ ನಡೆದು ಬರುತ್ತಿತ್ತು.

**ಸಿದ್ಧಗಂಗೆ ಮತ್ತು ಪರಿಸರದಲ್ಲಿ ಸಿದ್ಧಲಿಂಗೇಶ್ವರರು ಮೆರೆದ ಪವಾಡಗಳು :**

ಹೇರಂಬ ಕವಿಯ ಸಿದ್ಧಲಿಂಗೇಶ್ವರ ಸಾಂಗತ್ಯದಲ್ಲಿ 'ಸಿದ್ಧಗಂಗಾ ಜಲದ' ಮಹಿಮೆಯು ವಿಶೇಷವಾಗಿ ವರ್ಣಿಸಲ್ಪಟ್ಟಿದೆ.[38] ಈ ಸಿದ್ಧಗಂಗಾ ಜಲದ ಮಹಿಮಾತಿಶಯವು ಕರ್ನಾಟಕ ತಮಿಳುನಾಡುಗಳಲ್ಲೂ ಪ್ರಸರಿಸಿತ್ತು. ತಿಗುಳಾರಣ್ಯದಿಂದ 'ವೀರಣಾರ್ಯ' ಎಂಬುವವನು ವಿಷರೋಗದಿಂದ ಪೀಡಿತನಾಗಿ ಬರುವನು. ಅವನು ಇಲ್ಲಿದ್ದ ಸಿದ್ಧಲಿಂಗ ಶಿವಯೋಗಿಗಳ ಮೊರೆಹೊಕ್ಕು ತನ್ನ ತಮಿಳು ಭಾಷೆಯಿಂದಲೇ 'ಮಹಾವಿಷರೋಗಸುಪರ್ಣನೇ, ನನ್ನ ರೋಗವನ್ನು ಪರಿಹರಿಸು' ಎಂದು ಕೇಳುವನು. ಸಿದ್ಧಲಿಂಗೇಶ್ವರರು 'ಸಿದ್ಧಗಂಗಾ ಜಲದಲ್ಲಿ ಸ್ನಾನ ಮಾಡು' ಎಂದು ಅವನಿಗೆ ತಿಳಿಸುವರು.[39] ಅದರಂತೆ ವೀರಣಾರ್ಯನು ಸ್ನಾನ ಮಾಡಲು ವಿಷರೋಗ ಪರಿಹಾರವಾಯಿತು. ತನಗೆ ಕನ್ನಡ ಭಾಷೆ ಗೊತ್ತಿಲ್ಲದ್ದರಿಂದ ಸ್ವಾಮಿಯನ್ನು ಸಿದ್ಧಗಂಗಾ ಜಲವನ್ನು ತಮಿಳು ಭಾಷೆಯಲ್ಲಿಯೇ ಸ್ತೋತ್ರ ಮಾಡಲು ಪ್ರಾರಂಭಿಸಿದನು. ಅಕ್ಕಪಕ್ಕದಲ್ಲಿದ್ದ ಸ್ವಾಮಿಗಳವರ ಶಿಷ್ಯರೆಲ್ಲ ತಮಗೆ ಈತನ ಭಾಷೆ ತಿಳಿಯುವುದಿಲ್ಲವೆಂದೂ, ಈತನಿಗೆ ಕನ್ನಡ ಭಾಷೆ ಬರುವಂತೆ ಮಾಡಿ ಕನ್ನಡದಲ್ಲಿಯೇ ಅವನು ಸ್ತೋತ್ರ ಮಾಡುವಂತೆ ಕರುಣಿಸಬೇಕೆಂದೂ ಬೇಡಿಕೊಂಡರು. ರುದ್ರಗಣದ ವಾಕ್ಯವನ್ನು ಕೇಳಿ ಸಿದ್ಧಲಿಂಗೇಶನು ಅವನಿಗೆ ಕನ್ನಡ ಭಾಷೆ ಬರುವಂತೆ ಅನುಗ್ರಹ ದೃಷ್ಟಿಯನ್ನು ಬೀರಲು ಅವನಿಗೆ ಕನ್ನಡ ಭಾಷೆ ಬಂದು ಕನ್ನಡದಲ್ಲಿಯೇ ಅವನು ಸ್ವಾಮಿಗಳವರ ಸ್ತೋತ್ರಮಾಡಲು ಪ್ರಾರಂಭಿಸಿದನು.[40] ಈತನ ಪ್ರಾರ್ಥನೆಯನ್ನು ಕೇಳಿ

---

38. 'ಸಿದ್ಧಗಂಗಾ' ಜಲೋದ್ಭವವು ಸಿದ್ಧಲಿಂಗೇಶ್ವರರಿಂದಲೇ ಆಯಿತೆಂದು ಹೇರಂಬ ಕವಿಯು ಹೇಳುತ್ತಾನೆ. ಆದರೆ ನಿ. ಮಂ. ರತ್ನಾಕರ ಗ್ರಂಥದ ಪ್ರಕಾರ ಸಿದ್ಧಗಂಗಾ ಜಲೋದ್ಭವ ಪವಾಡ ಗೋಸಲ ಸಿದ್ಧೇಶ್ವರರಿಂದ ಆಯಿತೆಂದು ಹೇಳಲಾಗುತ್ತಿದೆ. ಬಹುಶಃ ಗೋಸಲ ಸಿದ್ಧೇಶ್ವರರಿಂದಲೇ ಈ ಜಲೋದ್ಭವದ ಪವಾಡ ಕ್ರಿ. ಶ. ಸು. ೧೩೨೫ರ ಸುಮಾರಿಗೆ ಆಯಿತೆಂದು ಊಹಿಸಬಹುದು. ಅದೇನೇ ಇದ್ದರೂ ೧೪೭೦ರ ಸುಮಾರಿಗೆ ಈ ಸಿದ್ಧಗಂಗಾ ಜಲವು ಪವಿತ್ರ ಜಂಗಮಪಾದತೀರ್ಥವೆಂಬ ಕೀರ್ತಿಗೆ ಪಾತ್ರವಾಗಿ, ಜನತೆಯಲ್ಲಿ ಇದರ ಮಹಿಮಾತಿಶಯಗಳು ಭಕ್ತಿಯನ್ನುಂಟು ಮಾಡಿದ್ದುವೆಂದು ಒಟ್ಟಾರೆ ತಿಳಿಯಬಹುದು.

39. (i) ಹೊಸಮಹಿಮೆಯ ಸಿದ್ಧಗಂಗಾ ತೀರ್ಥದಬಳಿ । ಯೆಸೆದಿಪ್ಪಸಿದ್ಧೇಶನೆಡೆಗೆ ।
ವಿಷರೋಗಾನ್ವಿತನಾಗಿ ತಿಗುಳಾರಣ್ಯದಿಂದಲು-। ಬ್ಬಸಗೊಳು ತೋರ್ವನೈತಂದ ॥ ೧೬-೪.
(ii) ರೋಗತಿಮಿರ ಮಾರ್ತಾಂಡ ಮಹಾವಿಷ । ರೋಗ ಸುಪರ್ಣನೆಯೆನ್ನ ।
ರೋಗ ಪರಿಹರಿಸೆಂದು ದ್ರಾವಿಡ ಭಾಷೆ । ಯಾಗಮದಿಂದಸ್ತುತಿಸಿದ ॥ ೧೯-೬.
(iii) ವಿಷರೋಗಾನ್ವಿತನ ನುಡಿಯ ಕೇಳಿ ವನವಾಸಿ । ಬೆಸಸಿದ ಸಿದ್ಧಗಂಗೆಯೊಳು ।
ನುಸರದಿ ನೀನು ಸ್ನಾನವಮಾಡೆ ಭವರೋಗ । ವಿಷಹರವಹುದೆನುತವಗೆ ॥ ೧೯-೭.
iv) ಅನಿಮಿಷವಂದ್ಯನ ನುಡಿಗೇಳಿ ವೀರಣಾ-। ರ್ಯನು ಘನ ಹರುಷವತಾಳಿ ।
ಮನನಲವಿಂದ ಸ್ನಾನಮಾಡೆ ವಿಷರೋಗ । ಕ್ಷಣದೊಳು ಪರಿಹಾರವಾಯ್ತು ॥ ೧೯-೮.

40. ಈ ಘಟನೆಯನ್ನು ಸಿದ್ಧನಂಜೇಶನು (ಕ್ರಿ. ಶ. ಸು. ೧೫೫೦) ತನ್ನ ಗುರುರಾಜ ಚರಿತ್ರೆಯ ಸಂ. ೧೩ರಲ್ಲಿ ಪ. ೮೭ರಿಂದ ೯೫ರವರೆಗೆ ಸಿದ್ಧಲಿಂಗೇಶ್ವರರ ಮಹಿಮಾತಿಶಯವನ್ನು ಹೇಳುವ ಸಂದರ್ಭದಲ್ಲಿ 'ವೀರಯ್ಯನಿಗಿತ್ತ ಕನ್ನಡ ಭಾಷೆಯ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದುದರಿಂದ ತಿಗುಳದೇಶ ಕರ್ನಾಟಕ ದೇಶಗಳಲ್ಲಿ ಕ್ರಿ.ಶ. ೧೫೫೦ಕ್ಕೂ ಹಿಂದೆಯೇ ಸಿದ್ಧಗಂಗಾ ತೀರ್ಥದ ಮಹಿಮೆ ಪ್ರಚಾರಗೊಂಡಿತ್ತೆಂದಾದರೂ ಊಹಿಸಲು ಅನುಮಾನವೇನಿದೆ ?

ಸರ್ವರೂ ಆನಂದಗೊಂಡರು. ಮುಂದೆ ಸಿದ್ಧಲಿಂಗೇಶ್ವರರು ಮಠದೊತ್ತಿನಲ್ಲಿಯೇ ಇರುವ ದೇವರಾಯಪಟ್ಟಣದಲ್ಲಿ ಒಂದು ಮಡಿಕೆ ಅನ್ನವನ್ನು ೫೦೦ ಜನ ಜಂಗಮರಿಗೆ ಪ್ರಸಾದವಾಗುವ ಹಾಗೆ ಪವಾಡವೆಸಗಿದರು.[41] ಅತಿವೃಷ್ಟಿಯನ್ನು ನಿಲ್ಲಿಸಿದ ಪವಾಡ ಇಲ್ಲೇ ನಡೆಯಿತು. ಸಿದ್ಧಗಂಗೆಯ ಪಕ್ಕದ ಕೇತಶರಧಿ (ಈಗಿನ ಕ್ಯಾತಸಂದ್ರ) ಯಲ್ಲಿಮುರಿದ ರಥ ಮೊದಲಿನಂತಾದುದು, ಮತ್ತು ಸಿದ್ಧಲಿಂಗೇಶ್ವರರ ಆಣೆಯಿಂದ ಎತ್ತು ಏಳುದಿನ ಉಪವಾಸವಿದ್ದ ಪವಾಡಗಳೂ ನಡೆದವು. ಹೀಗೆ ಶ್ರೀ ಕ್ಷೇತ್ರದಲ್ಲಿದ್ದು ಸಿದ್ಧಲಿಂಗೇಶ್ವರರು ಅನೇಕ ಪವಾಡಗಳನ್ನು ಮೆರೆದು ಸಂಚಾರ ಕೈಗೊಳ್ಳುತ್ತಾರೆ.

**ಸಿದ್ಧಗಂಗೆಯಿಂದ ಸಿದ್ಧಲಿಂಗೇಶ್ವರರ ಪ್ರಯಾಣ :**

ಸಿದ್ಧಗಂಗೆಯಿಂದ ತಮ್ಮ ೭೦೧ ಜನ ವಿರತರು ಹಾಗೂ ಮೂರು ಸಾವಿರ ಚರಮೂರ್ತಿಗಳೊಡನೆ ತುಮಕೂರಿಗೆ ಬಂದು ಅಲ್ಲಿಯೂ ಅನೇಕ ಪವಾಡಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಒಂದೇ ರಾತ್ರಿ ತುಮಕೂರು ಮತ್ತು ಕಣಿಯಕಲ್ಲು (ಕುಣಿಗಲ್ಲು ?)ಗಳಲ್ಲಿ ಕಾಣಿಸಿಕೊಂಡ, ಮತ್ತು ತುಮಕೂರಿನ ಹಲಗೆಶೆಟ್ಟರ ಮನೆಯಲ್ಲಿ ತುಂಬೆ ಹೂವಿನ ಮಳೆಗರೆಸಿದ ಪವಾಡಗಳು ಮುಖ್ಯವಾದುವು. ಈ ತುಂಬೆ ಹೂವಿನ ಮಳೆಗರೆಸಿದ ಪವಾಡ ನಡೆದ ಸ್ಥಳದಲ್ಲಿಯೇ ಈಗ ಸಿದ್ಧಲಿಂಗೇಶ್ವರ ದೇವಾಲಯ ನಿರ್ಮಾಣವಾಗಿದೆ ಎಂದು ತಿಳಿದು ಬರುತ್ತದೆ. ತುಮಕೂರಿನಿಂದ ನೇರವಾಗಿ ಪ್ರವಾಸ ಕೈಕೊಂಡು ಗೂಳೂರು (ವೃಷಭಪುರ) ಹೊನ್ನುಡಿಕೆ, ಹೆಬ್ಬೂರು, ನಾಗಸಂದ್ರ ? (ನಾಗಶರಧಿ) ಕುಣಿಯಕಲ್ಲು (ಕುಣಿಗಲ್ಲು ?) ಹುಲಿಯೂರು (ಚಿತ್ರಕಾಯಪುರ, ವ್ಯಾಘ್ರಪುರ)[42] ಮುಂತಾದ ಊರುಗಳಲ್ಲಿ ಸಂಚರಿಸಿ ಅನೇಕ ಪವಾಡಗಳನ್ನು ಮೆರೆದು ಕಗ್ಗೆರೆಗೆ ದಯಮಾಡಿಸಿ ನಾಗಿಣೀ ನದಿಯತೀರದ ಹೂವುಗಳಿಂದ ರಮ್ಯವಾಗಿ,ಬಿಲ್ವವನದಿಂದ ಮನೋಹರವಾಗಿ ಶೋಭಿಸುವ ತೋಟದಲ್ಲಿ ಬೀಡುಬಿಡುವರು. ಆ ಊರ ಮುಖ್ಯ ವ್ಯಕ್ತಿಯಾದ ನಂಬ್ಯಣ್ಣ ಮತ್ತು ಗಿರಿಗೌಡರೂ ಸಮಸ್ತ ಭಕ್ತರೂ ಶ್ರೀಗಳವರಲ್ಲಿ ತಮ್ಮ ಅನಂತ ಭಕ್ತಿಯನ್ನು ಅರ್ಪಿಸುವರು. ಇಷ್ಟರಲ್ಲಿ ಕಗ್ಗೆರೆಗೆ ಒಂದು ಘೋರ ವಿಪತ್ತು ಪ್ರಾಪ್ತವಾಗುವುದು. ರತ್ನಗಿರಿಯ ವಾಲ್ಮೀಕಿಕುಲದ ಪಾಳೆಗಾರನು[43] ಸೈನ್ಯ ಸಮೇತರಾಗಿ ಬಂದು ದಾಳಿಯನ್ನಿಕ್ಕುವನು. ಊರ ಜನರೆಲ್ಲ ದಿಕ್ಕು-ಗೆಟ್ಟು ಊರು ಬಿಟ್ಟೋಡಿಹೋಗಿ ನೀರಗಲ್ಲ ಅರಸರ ಮೊರೆಹೊಗುವರು. ಈ ದಾಳಿಯ ಅವಾಂತರದಲ್ಲಿ ಜನರು ಶಿವಯೋಗಿಗಳನ್ನೇ ಮರೆತು ಬಿಡುವರು. ನಂಬ್ಯಣ್ಣ ಮೊದಲಾದ ಕಗ್ಗೆರೆಯ ಭಕ್ತರ ಬಿನ್ನಹವನ್ನು ಸ್ವೀಕಾರಮಾಡಿದ್ದ ಶ್ರೀಗಳವರು ಮುಂದಕ್ಕೆ ಪ್ರಯಾಣ ಮಾಡುವಂತೆಯೂ ಇರಲಿಲ್ಲ. ಊರಲ್ಲಿ ಭಕ್ತರಾರೂ ಇಲ್ಲ. ಶಿವಯೋಗಿಗಳು ತಾವು ಕುಳಿತ ಮರದಡಿಯಲ್ಲಿಯೇ ಶಿವಯೋಗಾನಂದದಲ್ಲಿ ಮುಳುಗಿ ಸಮಾಧಿಸ್ಥರಾಗುವರು. ಶ್ರೀಗಳವರ ದೇಹದ ಸುತ್ತಲೂ ಹುತ್ತಬೆಳೆದು ನಿಲ್ಲುವುದು. ಸ್ವಲ್ಪದಿನಗಳಲ್ಲಿ ಊರುಬಿಟ್ಟು ಹೋಡಿಹೋದ ಜನ ಮರಳಿ ಊರಿಗೆ ಬಂದು ಸ್ವಾಮಿಗಳವರಲ್ಲಿ ಅನಂತಭಕ್ತಿ ಪ್ರಾರ್ಥನೆ ಸಲ್ಲಿಸುವರು. ಬಹಿರ್ಮುಖರಾದ ಶಿವಯೋಗಿಗಳು ಅವರ ಪ್ರಾರ್ಥನೆಯ ಮೇರೆಗೆ ಕಗ್ಗೆರೆಯುನ್ನು ಪ್ರವೇಶಿಸುವರು.[44] ಭಕ್ತಾದಿಗಳು ಅತಿ ವೈಭವದಿಂದ ಶ್ರೀಗಳವರ ಮೆರವಣಿಗೆ ಮಾಡುವರು. ಈ ಹೊತ್ತಿಗಾಗಲೆ ಶಿವಯೋಗಿಗಳವರಿಗೆ ತುಂಬಾ ವಯಸ್ಸಾದ ಹಾಗೆ ಕಾಣುತ್ತದೆ. ಶಿವಯೋಗಿಗಳವರ ಪಾದ ಪದ್ಮಾರಾಧಕರಲ್ಲೊಬ್ಬನಾದ ಚೆನ್ನವೀರಪ್ಪ ಒಡೆಯರೆಂಬುವರು ಸ್ವಾಮಿಗಳವರಿಗೆ ಒಂದು ಮಠವನ್ನು ಕಟ್ಟಿಸಿಕೊಡುವ ಸತ್ಸಂಕಲ್ಪವುಳ್ಳವರಾಗಿ ತಮ್ಮ ಗುರುಗಳೂ ಸಿದ್ಧಲಿಂಗೇಶ್ವರರ ಪರಮಭಕ್ತರೂ ಆದ ಪಟ್ಟದ ಚಿಟ್ಟಿಗದೇವರೆಂಬುವರಲ್ಲಿ ಈ ವಿಷಯವನ್ನು ಬಿನ್ನೈಸಿ ಕೆಲವೊಂದು ಧನವನ್ನು ಅವರಿಗೆ ಒಪ್ಪಿಸುವರು. ಚಿಟ್ಟಿಗದೇವರು ತಮ್ಮ ಭಕ್ತನ ಭಕ್ತಿಯ ಮೇರೆಗೆ ಎಡೆಯೂರಿನಲ್ಲಿ ಒಂದು ಮಠವನ್ನು ಕಟ್ಟಿಸಿ ಶಾಸನ ಹಾಕಿಸುವರು.[45] ಶ್ರೀ ಶಿವಯೋಗಿಗಳವರು ತಮ್ಮ ಸಂಗಡವೇ ಇದ್ದ ಸಪ್ಪೇದೇವರು, ಉಪ್ಪಿನಹಳ್ಳಿಯ ಸ್ವಾಮಿ,

---

41. ಈ ಘಟನೆ ಸಿದ್ಧೇಶ್ವರ ಪುರಾಣ, ಸಿದ್ಧಲಿಂಗೇಶ್ವರ ಸಾಂಗತ್ಯ, ತೋಂಟದಾರ್ಯರಗಳೆ- ಈ ಮೂರು ಗ್ರಂಥಗಳಲ್ಲೂ ಬರುತ್ತವೆ.
— ಸಂ. ಆರ್. ಸಿ. ಹಿರೇಮಠ; ಪ. ಜ್ಞಾ. ಸಾ. ಪೀಠಿಕೆ ಪು.೫೫ ಮತ್ತು ೬೦.

42. ಹುಲಿಯೂರು (ಹುಲಿಯೂರುದುರ್ಗ) ಹತ್ತಿರದಲ್ಲಿ ದ್ವಿತೀಯ ಸಿದ್ಧಗಂಗೆಯೆಂಬ ಸ್ಥಳವೊಂದಿದೆ. ತೋಂಟದ ಸಿದ್ಧಲಿಂಗಶಿವಯೋಗಿಗಳು ಇಲ್ಲಿಗೆ ದಯಮಾಡಿಸಿದಾಗ ಸಿದ್ಧಗಂಗೆಯ ಹಾಗೆಯೇ ಇಲ್ಲಿಯೂ ಕಲ್ಲುಬಂಡೆಯಲ್ಲಿ ಪಾದಸ್ಪರ್ಶದಿಂದ ತೀರ್ಥಜಲವನ್ನು ಬರಿಸಿದ ಪವಾಡವನ್ನು ಮೆರೆದಿದ್ದಾರೆ. ಅಲ್ಲಿ ಒಂದು ಮಠವನ್ನು ಶಿವಯೋಗಿಗಳು ನಿರ್ಮಿಸಿ ಚರಮೂರ್ತಿಗಳನ್ನು ನೇಮಿಸಿದ ವಿಷಯವನ್ನು ಹೇರಂಬ ಮತ್ತು ವಿರಕ್ತತೋಂಟದಾರ್ಯರು ತಮ್ಮ ಗ್ರಂಥದಲ್ಲಿ ನಿರೂಪಿಸಿದ್ದಾರೆ.

43. ನಿ.ವ.ರ.ದಲ್ಲಿ ವಾಲ್ಮೀಕಿ ಕುಲದವನಾದ ರತ್ನಗಿರಿಯ ದೊರೆ ಎಂದು ಇದೆ

44. ತೋಂಟದ ಸಿದ್ಧಲಿಂಗ ಶಿವಯೋಗಿಗಳವರನ್ನು 'ಸಿದ್ಧೇಶ' ಎಂದೇ ಕರೆಯಲಾಗುತ್ತಿದ್ದು, ಅವರು ಕಗ್ಗೆರೆಯ ತೋಟದಲ್ಲಿ ಶಿವಯೋಗ ಸಮಾಧಿಯಲ್ಲಿ ಕುಳಿತ ನಂತರ ತೋಂಟದ ಸಿದ್ಧೇಶ, ತೋಂಟದ ಸಿದ್ಧಲಿಂಗೇಶ್ವರ, ತೋಂಟದಾರ್ಯ—ಇತ್ಯಾದಿ ನಾಮಾಂತರಗಳಿಂದ ಕರೆಯಲಾಗುತ್ತಿದೆ. ತೋಟಪ್ಪ ಮುಂತಾಗಿ ಇಡುವ ಹೆಸರುಗಳ ಹಿನ್ನೆಲೆಯೂ ಇದೇ ಆಗಿದೆ.

45. ಟಿಪ್ಪಣಿ ೧೨ರಲ್ಲಿ ಈ ಶಾಸನದ ವಿಷಯವನ್ನು ಕೊಡಲಾಗಿದೆ.

ಗುಮ್ಮಳಾಪುರದ ಸಿದ್ಧಲಿಂಗದೇವರು, ಶೀಲವಂತ ದೇವರು, ಬೋಳಬಸವಾರ್ಯರೇ ಮೊದಲಾದವರಿಗೆ[46] ಶಿವಯೋಗರಹಸ್ಯದ ಅನೇಕ ಮರ್ಮಗಳನ್ನು ತಿಳಿಸಿ, ಲಿಂಗಾಂಗ ಸಾಮರಸ್ಯದ ರೀತಿಯನ್ನು ಅರುಹಿ ಎಡೆಯೂರಿನಲ್ಲಿ ಚಿಟ್ಟಿಗ ದೇವದಿಂದ ಕಟ್ಟಿಸಲ್ಪಟ್ಟ ಮಠದಲ್ಲಿ ಲಿಂಗೈಕ್ಯರಾದವರು.

### ತೋಂಟದ ಸಿದ್ಧಲಿಂಗೇಶ್ವರರ ಕ್ರಾಂತಿಯ ಫಲ

ಸಾಮಾನ್ಯವಾಗಿ ಈಗ ಸಮಾಜದಲ್ಲಿರುವ ಜಂಗಮವರೇಣ್ಯರ ಮಠಗಳಿಗೂ, ಅನೇಕ ಪಟ್ಟಾಧ್ಯಕ್ಷರ ಮಠಮಾನ್ಯಗಳಿಗೂ ಶ್ರೀ ತೋಂಟದಾರ್ಯರಿಗೂ ಒಂದಿಲ್ಲೊಂದು ಬಗೆಯಲ್ಲಿ ಸಂಬಂಧವಿದ್ದೇ ಇದೆ. ಕಲ್ಯಾಣದ ಪ್ರಭುದೇವರ ಪರಂಪರೆಯನ್ನು ಮುಂದು ವರಿಸಿಕೊಂಡು ಧರ್ಮೋದ್ಧಾರದ, ಸಮಾಜಸಂಸ್ಕರಣದ, ಕಾರ್ಯನಿಷ್ಠೆಯ ವಿವಿಧೋದ್ದೇಶ ಸಾಧನೆಗಾಗಿ ಆವಿರ್ಭಾವಗೊಂಡ ಶೂನ್ಯ ಪೀಠದ ಕಾರ್ಯಗಳು, ಕಲ್ಯಾಣದಲ್ಲಿ ಸ್ಥಗಿತಗೊಂಡ ಮೇಲೆ ಅದರ ಮೂಲ ಕೇಂದ್ರವು ಹರದನಹಳ್ಳಿಯ ಪರಂಪರೆಯಿಂದ ಮುಂದುವರಿದು ಕಾರ್ಯರಂಗ ಪ್ರವೇಶಮಾಡಿ ದೇಶದ ಮೂಲೆ ಮೂಲೆಗಳಲ್ಲಿ ನವಜಾಗ್ರತಿಯನ್ನುಂಟುಮಾಡಿ ಸರ್ವಸಮಾಜಗಳ ಸಂಸ್ಕೃತಿ ಸಂವರ್ಧನೆಗೆ ಪ್ರಯತ್ನಿಸಿದುದು ಗೋಚರವಾಗುತ್ತದೆ. ಈ ಪರಂಪರೆಯಲ್ಲಿ ತೋಂಟದ ಸಿದ್ಧೇಶ್ವರರ ಪಾತ್ರ ಅತ್ಯಂತ ಪ್ರಭಾವ ಯುತವಾದುದು. ಇವರು ಪ್ರವಾಸಕಾಲದಲ್ಲಿ ಅನೇಕರಿಗೆ ಅನುಗ್ರಹದೀಕ್ಷೆಯಿತ್ತು. ಮಠ ಮಾನ್ಯಗಳನ್ನು ನಿರ್ಮಿಸಿ, ಅಲ್ಲಲ್ಲಿ ಚರವ ರೇಣ್ಯರನ್ನು ನೇಮಿಸಿ ಧರ್ಮ, ಸಂಸ್ಕೃತಿ, ಸಾಮಾಜಿಕ ಪ್ರಗತಿ, ಶೀಲಸಂವರ್ಧನೆಯ ಅಗಾಧಕಾರ್ಯವನ್ನು ಮಾಡಿದ್ದಾರೆ; ವೀರ ಶೈವೋದ್ಧರಣದ ಅಗಾಧ ಪ್ರಗತಿಯನ್ನು ಸಾಧಿಸಿದ್ದಾರೆ. ತೋಂಟದಾರ್ಯರ ಹಿಂದಿದ್ದ ಏಳ್ನೂರು ವಿರತರ ಸಂತತಿಯವರೇ ಇಂದು ದೇಶಾದ್ಯಂತ ಅನೇಕ ಮಠಮಾನ್ಯಗಳ ಬೆಳವಣಿಗೆಗೆ ಕಾರಣರಾಗಿದ್ದಾರೆ. 'ವಿರತ' ಶಬ್ದವು ಕೇವಲ ಜಂಗಮ ಸಂಪ್ರದಾಯದವರಿಗೇ ಮೀಸಲಾಗಿರದೆ ಪಟ್ಟಾಧ್ಯಕ್ಷರಿಗೂ ಮೀಸಲಾದ ಶಬ್ದವೇ ಆಗಿದೆ. ವಿಗತವಾದ ರತಿಯೇ 'ವಿರತಿ' ಅದನ್ನುಳ್ಳವನೇ 'ವಿರಕ್ತ' ವಿರಕ್ತ ಎಂದರೆ ಈಗ ಜಂಗಮ ಸಂಪ್ರದಾಯದವರಿಗೆ ಕರೆಯುವುದೇ ರೂಢಿ ಅಷ್ಟೆ. ವಿರೂಪಾಕ್ಷ ಕವಿಯ ಚೆನ್ನಬಸವ ಪುರಾಣ, ಲಕ್ಕಣ್ಣ ದಂಡೇಶನ ಶಿವತತ್ತ್ವಚಿಂತಾಮಣಿ ಮುಂತಾದ ಗ್ರಂಥಗಳು ದೇಶಾದ್ಯಂತ ಇರುವ ಅನೇಕ ವೀರಶೈವ ಚರ್ಯಾಕಾಂಡಪಂಡಿತರ, ಶಿವ ಯೋಗಿಗಳ ಹೆಸರು, ಅವರು ಮಾಡಿದ ಕಾರ್ಯಗಳ ಪಟ್ಟಿಯನ್ನು ಕೊಡುತ್ತವೆ. ನಾಡಿನಾದ್ಯಂತ ಇರುವ ಶರಣರ ಮತ್ತು ವಿರಕ್ತರ,

---

46. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಹಿಂದೆ ೭೦೧ ವಿರತರು ೩೦೦೦ ಚರಮೂರ್ತಿಗಳು ಇದ್ದರೆಂದು ಹೇಳಲಾಗುತ್ತಿದೆ. ಅವರಲ್ಲಿ ಬಹು ಜನರ ಹೆಸರನ್ನು ಚನ್ನಬಸವ ಪುರಾಣ ಹೇಳಿದೆ. ಅಲ್ಲಿ ''.... ಇಂತಿವರ್ ಮೊದಲಾದ ವಿರತರೇಳ್ನೂರ್ವರುಂ ಸಂತತಂಗೂಡಿಷಟ್‌ಸ್ಥಲ ಮಾರ್ಗಮಂ ಧರೆಯೊಳಂತರಿಸದಂತೆ ನೆಲೆಗೊಳಿಸುತೆ'' (ಕಾಂ. ೫, ಸಂ. ೧೦, ಪ ೫೦) ಎಂದಿದ್ದಾರೆ. ೭೦೧ ಸಂಖ್ಯೆಯಿಲ್ಲ. ಅವರಲ್ಲಿ ಮುಖ್ಯರಾದವರು—

(i) ಸಿದ್ಧಲಿಂಗೇಶ್ವರಂ ಕಂಬಳಾದೇವರಾ । ಸಿದ್ಧನಂಜೇಶ್ವರಂ ಚೆನ್ನದೇವರ್ ದೊಡ್ಡ ।
ಸಿದ್ಧಲಿಂಗೇಶ್ವರಂ ಕಂಕಣದದೇವರ್ ಆ ಲಂಬಕರ್ಣದ ದೇವರು ॥
ಸಿದ್ಧಮಲ್ಲೇಶ್ವರಂ ಗುಮ್ಮಳಾಪುರದವರ । ಸಿದ್ಧಲಿಂಗೇಶ್ವರಂ ಎಡತೊರೆಯ ಪುರದಗುರು ।
ಸಿದ್ಧವಿರಣ್ಣೊಡೆಯರೆಸೆವ ಘನಲಿಂಗದೇವರ್ ಚಿಕ್ಕ ಮಲ್ಲೇಶನು ॥ ಕಾ. ೫, ಸಂ. ೧೦,-೪೭

(ii) ಮರಳಸಿದ್ಧೇಶ್ವರಂ ಚಂದ್ರಶೇಖರನೆಸೆವ । ಸುರಗಿಯಾರ್ಯಂ ಶಾಂತಮಲ್ಲಿಕಾರ್ಜುನದೇವ ।
ರಿರದೆ ಬೆಡಗಿನ ಪರ್ವತೇಶ್ವರಂ ಪಟ್ಟಣದದೇವರೆಂದಾ ಜಗುನಿಯ ।
ಮರಳದೇವರ್ ಮಳಿಯ ದೇವರಾ ಬತ್ತಲೆಯ । ಲಿರುವ ದೇವರ್ ಸಂಪಿಗೆಯ ರಾಚವಟ್ಟಿದೇ ।
ವರು ಸಪ್ಪಿಯಾರ್ಯನುಪ್ಪಿನ ಹಳ್ಳಿಯಾರ್ಯನೊಪ್ಪುವ ಶೀಲವಂತಾರ್ಯನು ॥ ೪೮ ॥

(iii) ಎಸೆವ ಕೊಡಗಿಯ ಹಳ್ಳಿಯಾರ್ಯನುಂ ಜೋಲಿಯಾ । ಬಸವೇಶ್ವರಂ ರಾಚವಟ್ಟಿಕೋರಿಯಸಿದ್ಧ ।
ಬಸವೇಶ್ವರಂ ಹಿರಣ್ಯಾರ್ಯನಾಶಿವಪೂಜೆಯಾರ್ಯನೆಂದೆನಿಪ ಬೋಳು ।
ಬಸವೇಶನಂದುಕಿತ್ತಾವರದೆನಿಂದುರಾ । ಜಿಸುವ ಚನ್ನಮಲ್ಲೇಶ್ವರಾದಿ ಪರಿಪರಿಯಲ್ಲಿ ।
ಪೆಸರ್ವಡೆದ ವಿರತರೇಳ್ನೂರ್ವರಾ ತೋಂಟದಯತೀಶನಂ ಕೂಡಿರ್ದರು ॥ ೪೯ ॥

— ಈ ಪಟ್ಟಿಯಲ್ಲಿ ಅನೇಕ ಪಟ್ಟಾಧ್ಯಕ್ಷ ಸ್ವಾಮಿಗಳವರ ಪರಂಪರೆಯೂ ಇದೆ. ಅನೇಕ ಪಟ್ಟಾಧ್ಯಕ್ಷಪರಂಪರೆಯವರು, ವಿರಕ್ತರು, ಶರಣ ಸಂತತಿಯವರು ಸಿದ್ಧಲಿಂಗೇಶ್ವರರ ಅನುಗ್ರಹ ಪಡೆದವರೇ ಆಗಿದ್ದಾರೆ. ಇದರಿಂದ ಜಂಗಮದ ಸ್ಥಾನಮಾನದ ಕಲ್ಪನೆಯೂ ಆಗುತ್ತದೆ. ಸುತ್ತೂರು ಮಹಾಮಠದ ಘನಲಿಂಗಿ ದೇವರು ತೋಂಟದ ಸಿದ್ಧಲಿಂಗೇಶ್ವರರಿಂದ ಅನುಗ್ರಹ ಪಡೆದವರೇ ಆಗಿದ್ದಾರೆ. ಇವರದು ಪಟ್ಟಾಧ್ಯಕ್ಷರ ಪೀಠ. ಇಲ್ಲಿ ಬಂದಿರುವ ದೊಡ್ಡಸಿದ್ಧೇಶ್ವರರೇ ವಚನಕಾರರಾದ ಸ್ವತಂತ್ರ ಸಿದ್ಧಲಿಂಗೇಶ್ವರರೆಂದು ಡಾ. ಮಲ್ಲಿದೇವರು ತಾವು ಸಂಪಾದಿಸಿದ 'ಸ್ವತಂತ್ರ ಸಿದ್ಧ ಲಿಂಗೇಶ್ವರರ ವಚನಗಳು' ಗ್ರಂಥದ ಪ್ರಸ್ತಾಪನೆಯಲ್ಲಿ ನಿರ್ಧರಿಸಿದ್ದಾರೆ. (ಪೀಠಿಕೆ ಪು ೮ ನೋಡಿ)

ಪಟ್ಟಾಧ್ಯಕ್ಷರ ಪಟ್ಟಿ ವಿಜಯನಗರಕ್ಕೆ ಮುಟ್ಟಲು ವಿಜಯನಗರವು ವೀರಶೈವದ ಒಂದು ಪ್ರಮುಖ ಕೇಂದ್ರವಾಗಿರುವುದಷ್ಟೇ ಅಲ್ಲ, ಹರದನಹಳ್ಳಿ ಪೀಠಾಚಾರ್ಯರಿಗೂ ವಿಜಯನಗರಕ್ಕೂ ಇರುವ ಸಂಬಂಧವನ್ನು ಸೂಚಿಸುತ್ತದೆ. ಅದರ ಸ್ಥಾಪನೆಯ ಉದ್ದೇಶದ ಘನತೆಯನ್ನು ಈ ಹಿಂದೆ ವಿವರಿಸಲಾಗಿದೆ. ಚೆನ್ನಬಸವಪುರಾಣದಲ್ಲಿ ಯಾವ ಯಾವ ಊರುಗಳಲ್ಲಿ ಯಾವ ಯಾವ ಭಕ್ತರು, ಶರಣರು. ಇದ್ದು ವೀರಶೈವಾಚಾರ ಸಂಪತ್ತಿನಿಂದ ಕೂಡಿದ್ದರು. ಅವರ ಕಾರ್ಯಗಳೇನು ? ಇತ್ಯಾದಿಗಳನ್ನು ಸಂಕ್ಷೇಪವಾಗಿ ಹೇಳಲಾಗಿದೆ.47 ಇವರೆಲ್ಲ ತೋಂಟದಸಿದ್ಧಲಿಂಗೇಶ್ವರರ ಅಥವಾ ಹರದನಹಳ್ಳಿ ಪರಂಪರೆಯ ಸಿದ್ಧಲಿಂಗೇಶ್ವರರ ಪೂರ್ವಜರ ಕ್ರಾಂತಿಯ ಫಲವಾಗಿ ಜಾಗೃತರಾಗಿ ವೀರಶೈವೋದ್ಧರಣದ ಕಾರ್ಯರಂಗದಲ್ಲಿದ್ದವರೆಂದು ತಿಳಿಯಲನುಮಾನವಿಲ್ಲ. ಇವರಲ್ಲಿ ಮುಖ್ಯರಾದವರ ಹೆಸರುಗಳನ್ನು ಹೀಗೆ ಹೇಳಬಹುದು.

ಶ್ರೀಗಿರಿಯ ಪ್ರಾಂತದಲ್ಲಿದ್ದ ಹುಚ್ಚುನಂಜೇಶ್ವರ. ಹುಚ್ಚುವಿರೂಪಾಕ್ಷರು. ಮೂದಾಪುರದ ಮರುಳದೇವರು. ಹೊನ್ನಹಳ್ಳಿಯ ಅನಾದಿಸಿದ್ಧರದೇವ ಸಿದ್ಧವೀರೇಶ. ನಿಡುಮಾಮಿಡಿಯ ಕರಿಯ ಬಸವೇಶ. ಕರಡಿಯ ಹಾಲುದೇವ. ಸರವೆಯಸಿದ್ಧರಾಮೇಶ, ಕೋರನ್ನದಾರ್ಯ. ಬುಕ್ಕಸಾಗರದ ಕರಿಯ ಸಿದ್ಧೇಶ್ವರ. ನಾರಕಂಥೆಯ ದೇವರು. ಚೆಂಡಗಹಳ್ಳಿಯ ವೀರಪ್ಪ. ಮಾವಿನಹಳ್ಳಿಯ ಮಲ್ಲಪ್ಪ. ಅದೇ ಗ್ರಾಮದ ಸಂಗಮೇಶ್ವರ. ಗುಮ್ಮಳಾಪುರದ ಜಂಗುಳಿ ವೀರಪ್ಪ. ಸುಪ್ರಸಾದಿ ದೇವರು. ನಂಜರಾಯ, ಕೆಂಜಸೋಮಣ್ಣನಾಯಕ. ಎಳಂದೂರು ಚೆನ್ನೊಡೆಯ. ಬರಗಿರಿಯ ದೇವಿನಾಯಕ. ಸಿದ್ಧಮಲ್ಲಿನಾಯಕ. ಜಂಬೂರು ದೊರೆಗಳು ಕೇತಸಾಗರ (ಕೇತಸಮುದ್ರ ಅಥವಾ ಕ್ಯಾತಸಂದ್ರ)ದ ಸೆಟ್ಟಿ. ಬಿಜ್ಜಾವರದ ಚಿಕ್ಕಣ್ಣಗೌಡ. ಸುಕಟೂರು ತಮ್ಮಣ್ಣಗೌಡ, ತಗಡೂರು ಪ್ರಭು. ತಲಕಾಡು ಚಂದ್ರಶೇಖರ. ಭೋಗವಾಡಿಯ ಲಿಂಗರಾಯ. ಉಡುವಂಕ ನಾಡಪ್ರಭು. ಸೋಲೂರು ಬಸಪ್ಪ, ಮತ್ತು ಸಂಗಯ್ಯ ಮಹಾಂತಯ್ಯ ಸಂಡಿಗೆ ಸಿದ್ಧಪ್ಪ. ಮುದ್ದು ಸಂಗಪ್ಪ, ಅಂದೂರುಕೆರೆಯ ದಾಸೋಹದ ಲಿಂಗಪ್ಪ. ಮಲ್ಲಪ್ಪ. ಕಾಬಣದ ಬಿಂಗಿ ಗಂಗಾಧರ, ಕಳಲೆ ವೀರಪ್ಪ. ಹೊಸಹಳ್ಳಿಯ ನಾಗಪ್ಪ. ಬಸಪ್ಪ. ಮೋಳಿಗಯ್ಯ. ಬಾಣಾವರದ ಸಿದ್ಧಪ್ಪ. ಶೀಲವಂತ ಸಿರಿಯಾಳಯ್ಯಾ. ಹೋಳಿನ ಸಿದ್ಧಪ್ಪ. ದುರ್ಗದ ಕಲ್ಲಪ್ಪ. ವಿರತ ಬಸಪ್ಪ. ತೈಲದಲ್ಲಿ ಮರುಳಪ್ಪ. ಮಾನಂಗಿ ಶಿಖರಪ್ಪ. ಬಿಟ್ಟಮಂಡೆಯ ಪ್ರಭು. ಬಯಲ ಪ್ರಭು. ಕಳಲೆಯ ಕೆಂಚೇದೇವರು. ಕಾನಾಪುರದ ಮರುಳಸಿದ್ಧೇಶ. ಉಪ್ಪಲಗುಡಿಯ ಮರುಳು ಸಿದ್ಧೇಶ. ಕೊಟ್ಟೂರು ಬಸವಲಿಂಗೇಶ. ಆನೇಗುಂದಿ ಬೆಟ್ಟದಲ್ಲಿದ್ದ ಹುಚ್ಚುದೇವರು. ಬಳ್ಳಿಗಾವೆಯ ಹುಚ್ಚುಸಿದ್ಧರಾಮೇಶ. ಇತ್ಯಾದಿ. ನಾಡಿನ ಶಿವಭಕ್ತರ ಈ ರೀತಿಯ ಪಟ್ಟಿಯನ್ನು ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿಯಲ್ಲಿ ನೋಡಬಹುದು. ಅದು ಇನ್ನೂ ವ್ಯಾಪಕವಾದದ್ದು.

ಸಿದ್ಧಲಿಂಗೇಶ್ವರರ ಮತ್ತು ಅವರ ಪೂರ್ವಜರಾದ ನಿರಂಜನ ಜಗದ್ಗುರುಗಳವರ ಕ್ರಾಂತಿಯ ಬೆಳಸು ನಾಡಿನ ಮೂಲೆ ಮೂಲೆಗಳಲ್ಲಿ ಹೇಗೆ ಜಾಗೃತವಾಗಿತ್ತು ಎಂಬುದು ಈ ಮೇಲಿನ ಪಟ್ಟಿಯಿಂದ ಸಿದ್ಧವಾಗುತ್ತದೆ. ಸಿದ್ಧಲಿಂಗೇಶ್ವರರಂತೂ ಒಬ್ಬ ಸೂರ್ಯನಿದ್ದ ಹಾಗೆ. ಅವರ ಸಹಸ್ರ ಸಹಸ್ರ ಸಂಖ್ಯೆಯ ಪ್ರಭಾಮಯ ಕಿರಣಗಳು ನಾಡಿನ ಮೂಲೆ ಮೂಲೆಗಳಲ್ಲೂ ಪ್ರಸಾರಗೊಂಡು ನಾಡೆಲ್ಲ ಬೆಳ್ಳಂಬೆಳಕಾಗಿ ಜನತೆ ಅಜ್ಞಾನಾಂಧಕಾರದಿಂದ ಜ್ಞಾನದ ಹೊಂಬೆಳಕಿನಲ್ಲಿ ವಿರಾಜಿಸುತ್ತಿತ್ತೆಂದು ಹೇಳಿದರೆ ಸಾಕು.

**ಸಿದ್ಧಲಿಂಗೇಶ್ವರರ ನಂತರದ ಸಿದ್ಧಗಂಗಾಕ್ಷೇತ್ರ**

ಸಿದ್ಧಲಿಂಗೇಶ್ವರರ ನಂತರ ಅನೇಕ ವರ್ಷಗಳವರೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಪರಂಪರೆಯಲ್ಲಿ ಐತಿಹಾಸಿಕವಾಗಿ ನಮಗೆ ಆಧಾರಗಳು ಸಿಗುತ್ತಿಲ್ಲ. ಆದರೆ ಆ ವಿರಕ್ತಪರಂಪರೆ ಬೆಳೆದುಕೊಂಡು ಬಂದಿದೆ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಮುಪ್ಪಿನಾರ್ಯರು. ರುದ್ರಸ್ವಾಮಿಗಳು. ಸಿದ್ಧಲಿಂಗಸ್ವಾಮಿಗಳು ಈ ಕ್ಷೇತ್ರಾಧಿಪತಿಗಳಾಗಿದ್ದ ಹಾಗೆ ತಿಳಿದುಬರುವುದು. ಆದರೆ ಈ ಕಾಲದಲ್ಲಿ ಮಠದ ಸ್ಥಿತಿಗತಿಗಳು ಚೆನ್ನಾಗಿಲ್ಲದೆ ಹಳೆಯ ದಾಖಲೆಗಳೆಲ್ಲ ನಾಶವಾಗಿ ಕಾಲಗರ್ಭದಲ್ಲಿ ಚರಿತ್ರೆಯ ಮೇಲೆ ಮುಸುಕು ಕವಿದಿದೆ. ೧೯ನೇ ಶತಮಾನದ ಆದಿಯಲ್ಲಿ ಸಿದ್ಧಲಿಂಗಸ್ವಾಮಿಗಳವರು ಶ್ರೀ ಮಠಾಧ್ಯಕ್ಷರಾಗಿದ್ದ ಕಾಲದಲ್ಲಿ ಆ ಶತಮಾನದ ಕೊನೆಯಲ್ಲಿ ಸುಮಾರು ಕ್ರಿ. ಶ. ೧೮೫೦–೫೫ರ ಸುಮಾರಿಗೆ ಹಾನಗಲ್ಲು ತಾಲ್ಲೂಕು ಕೂಡಲ ವಿರಕ್ತ ಮಠಾಧೀನದಲ್ಲಿರುವ ಗುರುನಂಜೇಶ್ವರನ ಗದ್ದುಗೆಯಲ್ಲಿ ಪೂಜಾನುಷ್ಠಾನಗಳನ್ನು ಮಾಡಿಕೊಂಡಿದ್ದ ಸಿದ್ಧಪುರುಷರಾದ ಅಡವೀಸ್ವಾಮಿಗಳು (ಅಟವೀಶ್ವರ ಸ್ವಾಮಿಗಳು) ಗುಬ್ಬಿಗೆಬಂದ ಮೇಲೆ ಅವರು ಸಿದ್ಧಗಂಗಾ ಕ್ಷೇತ್ರದ ಮಹಾತ್ಮೆಯನ್ನರಿತವರಾಗಿ ಅಲ್ಲಿಂದ ಗಂಗಾಪೂಜೆಗೆ ಸಿದ್ಧಗಂಗೆಗೆ ಬರುವ ಜನರೊಡನೆ ಸಿದ್ಧಗಂಗೆಗೆ ಬಂದರು. ಇಲ್ಲಿನ ಸ್ಥಿತಿಗತಿಗಳನ್ನರಿತು ಈ ಕ್ಷೇತ್ರದಲ್ಲಿ ಅನೇಕ ರಚನಾತ್ಮಕ ಕಾರ್ಯಗಳನ್ನು ಕೈಕೊಂಡು ಶ್ರೀ ಕ್ಷೇತ್ರದ ಕೀರ್ತಿಯನ್ನು ಬೆಳಗಿಸಿದರು. ದಾಸೋಹ. ಸಂಸ್ಕೃತ ವಿದ್ಯಾಭ್ಯಾಸಗಳಿಗೆ ಅಂಕುರಾರ್ಪಣೆಮಾಡಿದರು.

---

74. ಚೆ. ಬ. ಪು. ಕಾ. ೫, ಸಂ. ೧೦, ಪದ್ಯ ೫೧ ರಿಂದ ಮುಂದೆ.

**ಮಹಿಮಾಪುರುಷ ಅಡವೀಸ್ವಾಮಿಗಳು**

ಹಾನಗಲ್ಲು ತಾಲ್ಲೂಕು 'ಕೂಡಲ' ಒಂದು ಸಂಗಮ ಕ್ಷೇತ್ರ. ಈ ಗ್ರಾಮದ ಹತ್ತಿರ ಪಶ್ಚಿಮ ಘಟ್ಟಗಳ ಮಡಿಲಲ್ಲಿರುವ ಇಸಳೂರು ಗ್ರಾಮದಲ್ಲಿ[48] ಹುಟ್ಟಿ ಬರುವ 'ಧರ್ಮಾ' ಎಂಬ ಹೊಳೆ. ಸಾಗರದ ಹತ್ತಿರ ಅದೇ ಪಶ್ಚಿಮ ಘಟ್ಟಗಳ ಸಾನು ಪ್ರದೇಶದ ವರದಾಮೂಲವೆಂಬ ಹೆಸರಿನ ಸ್ಥಳದಿಂದ ಹುಟ್ಟಿ ಬರುವ 'ವರದಾ' ಎಂಬ ಹೊಳೆಗಳ ಸಂಗಮವಾಗಿದೆ.[49] ಅದ್ದರಿಂದಲೇ ಈ ಊರಿಗೆ ಕೂಡಲ ಎಂಬ ಹೆಸರು. ಇದೊಂದು ಪುರಾತನ ಪುಣ್ಯ ಕ್ಷೇತ್ರ. ಇಲ್ಲಿ ಭೂಗತವಾದ ಅವಶೇಷಗಳು ಹೇರಳ ಅದರ ಪ್ರಾಚೀನ ಚರಿತ್ರೆಯ ಮೇಲೆ ದೊಡ್ಡ ಬಂಡೆಗಲ್ಲು ಎಳೆದಿದೆ. ಈ ಕೂಡಲದಲ್ಲಿ ಸಂಗಮೇಶ್ವರ ಶಿವಲಿಂಗವಿದೆ. ಬಸವಣ್ಣನವರ ಕುಮಾರನಾದ 'ಮುದ್ದು ಸಂಗಪ್ಪ'[50] ನವರ ಗುಡಿಯಿದೆ. ಇವೆರಡೂ ದೇವಾಲಯಗಳಿಗೆ ಮೊದಲು ಭದ್ರವಾದಪ್ರಾಕಾರವಿದ್ದು ಈಗ ಅದೆಲ್ಲ ಬಿದ್ದು ಹೋಗಿದೆ. ಪಕ್ಕದಲ್ಲಿಯೇ ದೊಡ್ಡ ವಿರಕ್ತ ಮಠವಿದೆ. ಆ ಮಠದಲ್ಲಿ ನೀಲಮ್ಮನವರ ಗುಡಿ ಎಂಬ ಪ್ರತ್ಯೇಕ ಭಾಗವಿರುವುದೊಂದು ವೈಶಿಷ್ಟ್ಯ. ಈ ವಿರಕ್ತ ಮಠದ ಅವರಣದಲ್ಲಿಯೇ ಮಹಾಮಹಿಮಾಶಾಲಿಗಳಾದ ಗುರುನಂಜೇಶ್ವರ(ಗುರುನಂಜಪ್ಪ)ಗದ್ದುಗೆಯಿದೆ. ಇವರು ಮಹಾಮಹಿಮಾಶಾಲಿಗಳಾದ ವಿರಕ್ತವರೇಣ್ಯರೆನಿಸಿ ಆ ಮಠದಲ್ಲಿ ಆಗಿಹೋದರು. ಇವರ ಮಹಿಮೆಗಳು ಅನೇಕ; ಅವರಲ್ಲಿ ಮುಖ್ಯವಾದುದೆಂದರೆ: ಒಮ್ಮೆ ಪ್ರವಾಸ ಹೋಗಿದ್ದ ಗುರುನಂಜೇಶ್ವರರಿಗೆ ಬಹಳ ಬಿಸಿಲಾಗಿ ತುಂಬಾ ಆಯಾಸವಾಗಿತ್ತಂತೆ. ಆಗ ಚೆನ್ನಾಗಿ ಚಿಗಿತ ಮಾವಿನ ಮರದ ಕೊಂಬೆಯೊಂದನ್ನು ಮುರಿದುಕೊಂಡು ಹೆಗಲ ಮೇಲೆ ಇಟ್ಟುಹೊತ್ತುಕೊಂಡು ಬಿಸಿಲಿನ ತಾಪವನ್ನು ಹೋಗಲಾಡಿಸಿಕೊಂಡರಂತೆ. ಬಿಸಿಲಿನ ತಾಪ ಕಡಿಮೆಯಾದ ಮೇಲೆ ಆ ಮುರಿದ ಮಾವಿನ ಕೊಂಬೆಯನ್ನು ಅಲ್ಲಿಯೇ ಹಳ್ಳದ ದಂಡೆಯಲ್ಲಿ ಭೂಮಿಯ ಚುರುಕಿನಲ್ಲಿಟ್ಟು, ಹಳ್ಳದಿಂದ ನೀರನ್ನು ತಂದು ಅದಕ್ಕೆರೆದು 'ದೊಡ್ಡ ಮರವಾಗು' ಎಂದು ಆಶೀರ್ವದಿಸಿದರಂತೆ. ದೊಡ್ಡದಾಗಿ ಬೆಳೆದ ಆ ಮಾಮರ 'ಮಾರನಬೀಡು'[51] ಎಂಬ ಹಳ್ಳಿಯಹತ್ತಿರ ಇಂದಿಗೂ ಇದೆ. ಅದಕ್ಕೆ 'ಗುರು ನಂಜಪ್ಪನ ಮಾವಿನಮರ' ಎಂದೂ ಹೇಳುತ್ತಾರೆ. ಪೂಜಾದಿಗಳನ್ನು ಮಾಡುತ್ತಾರೆ. ಇಂಥ ಮಹಿಮಾಶಾಲಿಗಳಾದ ಗುರುನಂಜೇಶ್ವರರ ಗದ್ದುಗೆ ಭವ್ಯವಾಗಿ ಕಟ್ಟಲ್ಪಟ್ಟಿದೆ (ಈಗ ಶಿಥಿಲಗೊಂಡಿದೆ). ಈ ಗುರುನಂಜೇಶ್ವರನ ಗದ್ದುಗೆಯಲ್ಲಿ ಪೂಜಾನುಷ್ಠಾನಗಳನ್ನು ಮಾಡಿಕೊಂಡಿದ್ದ ಅಡವೀಶ್ವರ ಸ್ವಾಮಿಗಳಿಗೆ ಕೂಡಲ ವಿರಕ್ತ ಮಠದ ಸಂಬಂಧವಿತ್ತೋ ಇಲ್ಲವೋ ತಿಳಿದು ಬರುವುದಿಲ್ಲ. ಅಂತೂ ಮಹಾಮಹಿಮಾಶಾಲಿಗಳೆಂದು ಕೀರ್ತಿವೆತ್ತವರು.[52]

ಈ ಅಡವೀಶ್ವರ ಸ್ವಾಮಿಗಳವರಿಗೆ ಕೂಡಲದಲ್ಲಿ ಮನನೋಯುವ ಪ್ರಸಂಗವೊಂದು ಒದಗಿತು. ಆ ಪ್ರಸಂಗದಿಂದ ನೊಂದುಕೊಂಡ ಅಡವೀಶ್ವರರು ಕೂಡಲವನ್ನು ಬಿಟ್ಟು ರಾತ್ರಿಯೇ ಹೊರಟು ನಾಗನೂರಿಗೆ[53] ಬರುವಷ್ಟರಲ್ಲಿ ನಾಗನೂರಿನ ಜನರು ಇವರನ್ನು ಸಂತೈಸಿ ಪೂಜೆಗೆ ಕರೆದೊಯ್ದರು. ಪೂಜೆ ಮಾಡಿ ಮಲಗಿದರು. ರಾತ್ರಿ ಯಾರಿಗೂ ಹೇಳದೆ ತಮ್ಮ ಪೂಜಾ ಸಾಮಾಗ್ರಿಗಳನ್ನು ಅವರ ಮನೆಯಲ್ಲಿಯೇ ಬಿಟ್ಟು ಹೊರಟುಬಿಟ್ಟರು. (ಅಡವಿಸ್ವಾಮಿಗಳವರಿಗೆ ಸಂಬಂಧಿಸಿದ ಕೆಲವು ಸಾಮಾಗ್ರಿಗಳು ಸವಣೂರು ತಾಲೂಕು ಮನ್ನಂಗಿ ಎಂಬ ಊರಿನಲ್ಲಿ ಇವೆಯೆಂದು ತಿಳಿದುಬಂದಿದೆ. ಆ ಸಾಮಾಗ್ರಿಗಳನ್ನು ಆ ಮನೆಯವರು ಯಾರಿಗೂ ಕೊಡಲು ಒಪ್ಪುತ್ತಿಲ್ಲವೆಂದೂ ತಿಳಿದುಬಂದಿದೆ). ಮುಂದೆ ಅವರು ಎಲ್ಲಿಗೆ ಹೋದರೆಂಬುದು ಯಾರಿಗೂ ಗೊತ್ತಾಗಲೇ

---

48. ಇಸಳೂರು ಈಗ ಕಾರವಾರ ಜಿಲ್ಲಾ ಸಿರ್ಸಿ ತಾಲ್ಲೂಕಿನಲ್ಲಿದೆ. ಇಲ್ಲಿ ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಯ ನೋಡ ಸಿದ್ಧಲಿಂಗ ಸ್ವಾಮಿಗಳವರ ಗದ್ದುಗೆ ಇದೆ. ಇವರು ತಿಳವಳ್ಳಿಯಲ್ಲಿ ಲಿಂಗೈಕ್ಯರಾದ ತೋಂಟದ ಸಿದ್ಧಲಿಂಗಸ್ವಾಮಿಗಳ ಪರಂಪರೆಯ ಸಿದ್ಧವೀರಸ್ವಾಮಿಗಳವರ ಶಿಷ್ಯರು. ಇವರಿಂದಲೇ ಮುಂದೆ ಮುರಿಗೆ ಸಮಯ, ಕುಮಾರ ಸಮಯ, ಕೆಂಪಿನ ಸಮಯ ಭೇದಗಳು ಉಂಟಾದವೆಂದು ನಿ.ವಂ. ರತ್ನಾಕರ ಗ್ರಂಥದಿಂದ ತಿಳಿದುಬರುವುದು.
49. ಈ ವರದಾ ನದಿಯ ದಂಡೆಯಲ್ಲಿ ಕದಂಬರ ಸುಪ್ರಸಿದ್ಧ ರಾಜಧಾನಿಯಾದ ಬನವಾಸಿ ಇದೆ. ಧರ್ಮಾನದಿಯ ದಂಡೆಯ ಮೇಲೆ ಕದಂಬರ ಇನ್ನೊಂದು ಶಾಖೆಯ ರಾಜಧಾನಿಯಾದ ಪುರಾಣ ಪ್ರಸಿದ್ಧ ಹಾನಗಲ್ಲು ಇದೆ.
50. ಮುದಿ ಸಂಗಪ್ಪ, ಮುಸೆಂಗಪ್ಪ–ಈ ಹೆಸರಿನಿಂದ ಜನ ಈ ಗುಡಿಯಲ್ಲಿರುವ ವಿಗ್ರಹವನ್ನು ಕರೆಯುತ್ತಿದ್ದಾರೆ.
51. ಈ ಮಾರನ ಬೀಡು ಕೂಡಲದಿಂದ ಸುಮಾರು ೪ ಮೈಲು ದೂರದಲ್ಲಿದೆ. (ಹಾನಗಲ್ಲು ತಾಲ್ಲೂಕು)
52. ಈ ಅಡವಿಸ್ವಾಮಿಗಳನ್ನು ಕೆಲವರು ಅಂಕಲಗಿಯಿಂದ ಬಂದವರು ಎಂದು ತಪ್ಪುಗ್ರಹಿಕೆಯಿಂದ ಹೇಳುತ್ತಿದ್ದಾರೆ. ಅಂಕಲಗಿ ಅಡವಿಸ್ವಾಮಿಗಳೇ ಬೇರೆ ಇವರೇ ಬೇರೆ. ಅಂಕಲಗಿ ಅಡವಿಸ್ವಾಮಿಗಳು ಕ್ರಿ.ಶ. ೧೮೫೭ರ ಹೊತ್ತಿಗೇ ಲಿಂಗೈಕ್ಯರಾಗಿ ಹೋದ ಬಗೆಗೆ ಐತಿಹ್ಯವುಂಟು ಇವರಾದರೋ ೧೯೦೧ರಲ್ಲಿ ಲಿಂಗೈಕ್ಯರಾದವರು. ಈಗ ಇವರ ಮೂಲವಾದ ಧಾರವಾಡ ಜಿಲ್ಲಾ ಹಾನಗಲ್ ತಾಲ್ಲೂಕು ಕೂಡಲಗ್ರಾಮದಲ್ಲಿರುವ ವಿರಕ್ತ ಮಠದಸ್ವಾಮಿಗಳು, ಇವರ ಚರಿತ್ರೆಯ ಸಂಗ್ರಹ ಮತ್ತು ಇವರು ಅಲ್ಲಲ್ಲಿ ಬಿಟ್ಟುಹೋಗಿರುವ ಸಾಮಗ್ರಿಗಳ ಸಂಗ್ರಹದ ಪ್ರಯತ್ನದಲ್ಲಿ ತೊಡಗಿದ್ದಾರೆ. ಕೂಡಲದ ವೃದ್ಧ ಜನರನೇಕರು ಇವರ ಬಗೆಗೆ ಅನೇಕ ಕಥೆಗಳನ್ನು ಹೇಳುವವರು ಈಗಲೂ ಇದ್ದಾರೆ.
53. ಈ ನಾಗನೂರು ಕೂಡಲದಿಂದ ಒಂದೂವರೆ ಮೈಲು ದೂರದಲ್ಲಿ ಅದೇ ವರದಾ ಹೊಳೆಯ ದಂಡೆಯಲ್ಲಿದೆ.

ಇಲ್ಲ. ಸ್ವಾಮಿಗಳು ಹೊರಟು ಊರೂರು ದಾಟಿ ಗುಬ್ಬಿಗೆ ಬಂದು ತಂಗಿದರು.[54] ಇತ್ತ ಕೂಡಲದ ಅನೇಕ ಜನಗಳು ಸ್ವಾಮಿಗಳವರನ್ನು ಹುಡುಕುವ ಕಾರ್ಯ ತತ್ಪರರಾದರು. ಆದರೆ ಅವರು ಸಿಕ್ಕದೆ ನಿರಾಸೆಗೊಂಡರು. ಇಂದಿಗೂ ಈ ಭಾಗದಲ್ಲಿ— **"ಏನಾಗಿದ್ದಾರವ್ವ । ಕಂಡೀರೇನಡವಿ ಸ್ವಾಮಿಾನ......"** ಎಂಬ ಹೆಣ್ಣು ಮಕ್ಕಳ ಹಾಡು ಪ್ರಚಲಿತವಿದೆ. ಅಡಿವೆಪ್ಪ, ಅಡಿವೆವ್ವ ಇತ್ಯಾದಿ ಹೆಸರಿಡುವ ಪದ್ಧತಿಯೂ ವಿಶೇಷವಾಗಿದೆ. ಒಂದೇ ಮನೆಯಲ್ಲಿ ಇಬ್ಬರು ಮೂವರಿಗೆ ಈ ಹೆಸರಿಡುವ ಪದ್ಧತಿಯೂ ಕೂಡಲದಲ್ಲಿತ್ತು. ಈಗಲೂ ಅಡಿವೆಪ್ಪ ಅಡಿವೆವ್ವ ಹೆಸರುಗಳ ಆಧಿಕ್ಯವಿದೆ. ಇವೆಲ್ಲ ಅಡವಿಸ್ವಾಮಿಗಳ ಪ್ರಭಾವದಿಂದಾದ ಹೆಸರುಗಳು. ಈ ಅಡವಿ ಸ್ವಾಮಿಗಳೇ ಗುಬ್ಬಿಯಲ್ಲಿ ನಿಂತು ಅಲ್ಲಿ ಅನೇಕ ಮಾಹಾ ಕಾರ್ಯ ಮಾಡಿ ಕಾರಣ ಪುರುಷರೆನಿಸಿದ್ದರು.

ವಿಷರೋಗ ಪರಿಹಾರಕಗಳೂ, ಇಷ್ಟಸಿದ್ಧಿದಾಯಿಕೆಯೂ ಎನಿಸಿ ಗೋಸಲಸಿದ್ಧೇಶ್ವರರ ಕಾಲದಿಂದಲೂ ಜನತೆಯಲ್ಲಿ ಶ್ರದ್ಧಾ ಭಕ್ತಿ ವಿಶ್ವಾಸಗಳನ್ನು ಮೂಡಿಸಿದ್ದ 'ಸಿದ್ಧಗಂಗಾ' ಮಾತೆಯ ಪೂಜೆ (ಗಂಗಾಪೂಜೆ)ಗೆ ನಿಟ್ಟೂರು ಗುಬ್ಬಿಯ ಕಡೆಯಿಂದ ಜನ ಗಾಡಿಗಳನ್ನು ಹೂಡಿಕೊಂಡು ಪರ್ವದಿನಗಳಲ್ಲಿ, ಶುಕ್ರವಾರ, ಮಂಗಳವಾರಗಳಂದು ಬರುವ ಹೋಗುವ ಪರಿಪಾಠ ಇಂದಿನಂತೆ ಅಂದೆಯೂ ಇತ್ತು. ಗುಬ್ಬಿಯಲ್ಲಿ ವಾಸವಾಗಿದ್ದ ಅಡವೀಶ್ವರರಿಗೆ ಇದರ ಪರಿಚಯವಾಗಿ ಒಮ್ಮೆ ಇಲ್ಲಿಗೆ ಬರುವ ಗಾಡಿಯಲ್ಲಿ ಕುಳಿತು ಬಂದರು. ಇಲ್ಲಿನ ಪ್ರಾಕೃತಿಕ ಸನ್ನಿವೇಶ ತಪೋನುಷ್ಠಾನಯೋಗ್ಯ ಸನ್ನಿವೇಶ, ಕ್ಷೇತ್ರ ಮಾಹಾತ್ಮೆಗಳು ಅವರ ಮನವನ್ನು ಸೂರೆಗೊಂಡವು. ಕ್ಷೇತ್ರಾಧಿಪತಿಗಳಾಗಿದ್ದ ನಿ। ಪ್ರ। ಶ್ರೀ ಸಿದ್ಧಲಿಂಗ ಶಿವಯೋಗಿಗಳು ತಮ್ಮ ಪಾಡಿಗೆ ತಾವು ತಮ್ಮ ಪೂಜಾನುಷ್ಠಾನದಲ್ಲಿದ್ದು, ವಿಶೇಷ ಕಾರ್ಯಕ್ರಮಗಳನ್ನೇನೂ ಇಟ್ಟುಕೊಂಡಿದ್ದಿಲ್ಲ. ಅಡವೀಶ್ವರರು ದಾಸೋಹ ಸದ್ಭಾವಿಗಳು, ಪ್ರತ್ಯುತ್ಪನ್ನಮತಿಗಳು ತಮ್ಮ ಲೋಕೋಪಕಾರಕ ಸನ್ಮತಿಗೆ ಇಂತಹ ಸ್ಥಾನದ ಒಂದು ಅವಶ್ಯಕತೆಯೂ ಇತ್ತು. ಇಲ್ಲಿಯೇ ಸಿದ್ಧಗಂಗಾ ಗುಹೆಯಲ್ಲಿ ಉಳಿದು ಪೂಜಾನುಷ್ಠಾನಗಳಿಂದ ಕಾಲಯಾಪನೆ ಮಾಡುತ್ತ ತಪೋನಿರತರಾದರು. ಅವರ ತಪಸ್ಸಿಗೆ ಸಿದ್ಧಗಂಗಾ ಮಾತೆಯ ಕಾರುಣ್ಯ ಲಭ್ಯವಾಯಿತು. ಸಿದ್ಧಪುರುಷರೇ ಆದರು. ಚಿಕ್ಕ ಒಂದು ಸಂಸ್ಕೃತ ಪಾಠಶಾಲೆ ದಾಸೋಹಕ್ರಿಯೆ ಮೇಲ್ಭಾಗದ ಗುಹೆಯ ಪರಿಸರದಲ್ಲಿಯೇ ಪ್ರಾರಂಭವಾದುವು. ಮೊದಲೇ ಇದ್ದ ಅಲ್ಪಪ್ರಮಾಣದ ಅನ್ನ ಸಂತರ್ಪಣೆಯ ಕಾರ್ಯ ವ್ಯವಸ್ಥಾಬದ್ಧವಾಗಿ ಹೆಚ್ಚಿನ ಪ್ರಮಾಣದಲ್ಲಿ ಪ್ರಾರಂಭವಾದುವು. 'ಮತಕಪುರವರಾಧೀಶ ಸೋಮೇಶ್ವರ ವರಪ್ರಸಾದ ಲಬ್ಧಕವಿತಾವಿಶಾರದ ಶಿವಕವಿ ನಂಜುಂಡ ಶಿವಯೋಗಿಗಳೆಂಬುವರು[55] ಶ್ರೀ ಕ್ಷೇತ್ರಕ್ಕೆ ಬಂದು ಅಡವೀಶ್ವರರ ದಿವ್ಯ ಪ್ರಭಾವಕ್ಕೊಳಗಾಗಿ ಮಠದಲ್ಲಿಯೇ ನಿಂತರು. ಅಡವೀಶ್ವರರ ಪೂರ್ಣಾನುಗ್ರಹಕ್ಕೆ ಪಾತ್ರರಾದರು. ಅವರ ಸಹಾಯದಿಂದ ಅಡವೀಶ್ವರ ಸ್ವಾಮಿಗಳು ಸಿದ್ಧಗಂಗೆಯಲ್ಲಿ ಪಾಠಶಾಲೆಗೆ ಮೊದಲು ಮಾಡಿದರು. ಈ ಮತುಕೂರು ನಂಜುಂಡ ಶಿವಯೋಗಿಗಳು ಶರಣಲೀಲಾಮೃತ, ರಾಜಶೇಖರ ವಿಲಾಸ, ಚೆನ್ನಬಸವಪುರಾಣ, ಸರ್ವಜ್ಞವಚನ–ಮೊದಲಾದ ಕಾವ್ಯಪಠಣದಲ್ಲಿ, ವ್ಯಾಖ್ಯಾನದಲ್ಲಿ ಬಲ್ಲಿದರಾಗಿದ್ದರು. ಇವರ ವಿದ್ವತ್ತು, ಕವಿತ್ವಶಕ್ತಿ, ಬೋಧನಾಚಾತುರ್ಯ, ಕಾವ್ಯ ವಾಚನ ವ್ಯಾಖ್ಯಾನಗಳು ಕ್ಷೇತ್ರಕ್ಕೆ ಬರುವ ಜನಮನವನ್ನು ಸೂರೆಗೊಂಡವು. ಆಗಿನ ವೀರಶೈವ ಪಂಡಿತ ಪ್ರಕಾಂಡರಾದ ಆಸ್ಥಾನ ಮಹಾವಿದ್ವಾನ್ ಕರ್ನಾಟಕ ಭಾಷಾ ರತ್ನ ಪಿ. ಆರ್. ಕರಿಬಸವ ಶಾಸ್ತ್ರಿಗಳೇ ಮೊದಲಾದವರು ನಂಜುಂಡ ಶಿವಯೋಗಿಗಳವರ ಪಾಂಡಿತ್ಯ, ಶುದ್ಧಿ, ಸಿದ್ಧಿಗಳಿಗೆ ಮಾರು ಹೋದರು. ಇವರ ಕವಿತಾಶಕ್ತಿಯ ಬಗೆಗೆ ಪಿ. ಆರ್. ಕರಿಬಸವ ಶಾಸ್ತ್ರಿಗಳು–'ಶ್ರೀ ನಂಜುಂಡ ಶಿವಯೋಗಿಗಳನ್ನು ನಾನು ಇಚ್ಛಾಪೂರ್ವಕವಾಗಿ ಸಂದರ್ಶಿಸಿ, ಅವರ ಗ್ರಂಥವನ್ನು ಓದಿದೆನು, ಅವರು ಸುಸಂಸ್ಕೃತವಾದ ಅಂತಃಕರಣವುಳ್ಳವರು ; ಶುದ್ಧ ಚರಿತ್ರರು ; ಅಸದೃಶ ಕವಿತಾಶಕ್ತಿಯುಳ್ಳವರು ; ಅಭಿನವ ಕಾಳಿದಾಸಿ ಕೈ. ಬಸವಪ್ಪ ಶಾಸ್ತ್ರಿಗಳಿಗೆ ಸಮಾನರಿವರೊಬ್ಬರೇ. ಇಂತಹವರು ನಮ್ಮ ಸಮಾಜದಲ್ಲಿ ಅಪರೂಪ. ರಾಜಾಶ್ರಯವಿದ್ದಿದ್ದರೆ ಲೋಕವಿಖ್ಯಾತ ಕವಿಗಳೆಂದು

---

54. ಈಗ ಅಡವೀ ಸ್ವಾಮಿಗಳ ಮಠವಿರುವ ಕಡೆ ಒಂದು ಚಿಕ್ಕ ಮಂಟಪವಿತ್ತೆಂದೂ ಅದೇ ಮಂಟಪದಲ್ಲಿ ಪ್ರಥಮತಃ ಬಂದು ಅಡವೀ ಸ್ವಾಮಿಗಳು ತಂಗಿದ್ದರೆಂದೂ ನೋಡಿದ ಅನೇಕ ವೃದ್ಧರು ಹೇಳುತ್ತಿದ್ದರು.

55. ಈಗಿನ ಮೈದಾಳ ಗ್ರಾಮಕ್ಕೆ ಮತಕಪುರ, ಮತುಕೂರು–ಇತ್ಯಾದಿ ಹೆಸರುಗಳುಂಟು. ಇದು ಸಿದ್ಧಗಂಗೆಗೆ ೪-೫ ಮೈಲು ದೂರದಲ್ಲಿದೆ. ಆ ಊರಿನಲ್ಲಿ ಪುರಾತನವಾದ ಸೋಮೇಶ್ವರ ದೇವಾಲಯವಿದೆ. ಅಲ್ಲಿ ಮಹಾಪಂಡಿತರೂ, ಉಪಾಧ್ಯಾಯ ವೃತ್ತಿಯಲ್ಲಿ ಪ್ರಥಮತಃ ಇದ್ದು, ಶಿವಯೋಗ ಮಾರ್ಗದಲ್ಲಿ ಅಭಿಲಾಷೆಯುಳ್ಳವರೂ ಆಗಿದ್ದ ನಂಜುಂಡ ಶಿವಯೋಗಿ ಎಂಬ ಹೆಸರಿನ ಗೃಹಸ್ಥರಿದ್ದರು. ಅವರನ್ನು 'ಮತುಕೂರು ನಂಜುಂಡ ಶಿವಯೋಗಿ' ಎಂದು ಕರೆಯಲಾಗುತ್ತಿದೆ. ಅವರು ತಮ್ಮ 'ಅಟವೀಶ್ವರ ಗುರುಭಕ್ತಿಸಾರ'ವೆಂಬ ಗ್ರಂಥದಲ್ಲಿ 'ಶ್ರೀಮತ್ಕರ್ಣಾಟಮಂಡಲ ಮಂಡನಾಯಮಾನ ಮತಕಪುರಾಧೀಶ ಶ್ರೀ ಸೋಮೇಶವರಪ್ರಸಾದಲಬ್ಧಕವಿತಾವಿಶಾರದರಾದ ಶಿವಕವಿ ನಂಜುಂಡ ಶಿವಯೋಗಿ' ಎಂದು ಹೇಳಿಕೊಂಡಿದ್ದಾರೆ. ಇವರು ಕ್ರಿ. ಶ. ೧೮೪೩ರಲ್ಲಿ ಜನಿಸಿರಬಹುದೆಂದು ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ತರ್ಕಿಸಿದ್ದಾರೆ. (ಸಮರ್ಪಣೆ ಗ್ರಂಥದ ಲೇಖನ ಪು. ೧೧೪) ಸುಮಾರು ೯೭ ವರ್ಷಗಳ ಕಾಲ ಜೀವಿಸಿದ್ದು ಬೆಂಗಳೂರಿನ ಸಮಿಾಪದ ಹುಸ್ಕೂರು ಗ್ರಾಮದಲ್ಲಿ ಲಿಂಗೈಕ್ಯರಾದರು. ಇವರ ಗದ್ದುಗೆ ಹುಸ್ಕೂರಿನಲ್ಲಿ ಈಗಲೂ ಇದೆ.

ಹೆಸರಾಗುತ್ತಿದ್ದರು. ಗೌರವದಿಂದ ಪ್ರೀತಿಯಿಂದ ನನ್ನನ್ನು ಕಂಡ ಅವರನ್ನು ಪ್ರೀತಿಯಿಂದ ಗೌರವಿಸುತ್ತೇನೆ'[56] ಎಂದಿದ್ದಾರೆ. ಈ ನಂಜುಂಡ ಶಿವಯೋಗಿಗಳು ಅಟವೀಶ್ವರ ಭಕ್ತಿಸಾರವೆಂಬ ಉತ್ತಮಮಟ್ಟದ ಭಕ್ತಿಜ್ಞಾನವೈರಾಗ್ಯಬೋಧಕಗ್ರಂಥವನ್ನು ಶ್ರೀ ಕ್ಷೇತ್ರದಲ್ಲಿ ರಚಿಸಿ ಅಟವೀಶ್ವರರಿಗೆ ಅರ್ಪಿಸಿದ್ದಾರೆ. ಆ ಗ್ರಂಥವು ಭಾಮಿನಿ ಷಟ್ಪದಿಯಲ್ಲಿದ್ದು ಪ್ರಸನ್ನ ಕವಿತಾವಾಣಿಯಿಂದ ಕೂಡಿದೆ. ೨೧೬ ಷಟ್ಪದಿಗಳಿಂದ ಕೂಡಿದ ಈ ಪದ್ಯಗ್ರಂಥದಲ್ಲಿ ಪ್ರತ್ಯೇಕವಾದ ೫ ಪದ್ಯಗಳು ಶಿವಪಾರ್ವತೀವರ್ಣನಪರವಾಗಿವೆ. ೨೧೬ ಪದ್ಯಗಳನ್ನು ಪ್ರತ್ಯೇಕಗೊಳಿಸಿದುದರ ಉದ್ದೇಶ ತಿಳಿದೇ ಇದೆ: ವೀರಶೈವದಲ್ಲಿ ೨೧೬ ಸಂಖ್ಯೆ ಲಿಂಗಸಕೀಲಕಬೋಧಕವಾದುದು. ಆದುದರಿಂದ ಅಟವೀಶ್ವರ ಭಕ್ತಿಸಾರವು ೨೧೬ ಪದ್ಯಗಳಿಂದ ಮುಗಿದೆ. ಪರಮೇಶ್ವರ ಮತ್ತು ಪಾರ್ವತಿಯ ಕೊನೆಯ ಸ್ತುತಿಗೆ ೫ ಪದ್ಯ ವಿಶಾಸಲು. ಹೀಗೆ ಒಟ್ಟು ೨೨೧ ಪದ್ಯಗಳಿಂದ ಕೂಡಿದ ಈ ಗ್ರಂಥದ ಮೇಲೆ ರಾಜಶೇಖರ ವಿಲಾಸ. ಚೆನ್ನಬಸವಪುರಾಣ. ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿ ಮೊದಲಾದ ಪ್ರಸಿದ್ಧ ಗ್ರಂಥಗಳ ಪ್ರಭಾವವುಂಟಾಗಿದೆ. ಗ್ರಂಥದಲ್ಲಿ ಸಿದ್ಧಗಂಗಾಮಾತೆಯನ್ನು ಹೀಗೆ ಸ್ತುತಿಸಿದ್ದಾನೆ.

ಅದ್ರಿಗುಹೆಯೊಳು ನೆಲಸಿ ತೋಂಟದ।
ಸಿದ್ಧಲಿಂಗೇಶ್ವರನ ಮೃದುಪದ।
ಪದ್ಮಸೇವೆಯೊಳಾವಗಂ ತವೆಸಿದ್ಧವಾಗಿರ್ಪ॥
ಸಿದ್ಧಗಂಗೆಯೆ ಕೊಡುವುದೆನ್ನಯ।
ಬುದ್ಧಿಗತಿ ನಿರ್ಮಲವನೆಂಬೆನು।
ಶುದ್ಧ ಪುಣ್ಯಪ್ರದನೆ ಪಾಲಿಪುದೆಮ್ಮ ನಟವೀಶಾ॥ (ಪ. ೪)

ಹಿಮಗಿರಿಕನ್ನೆಯೆನಿಸಿದ ಗಂಗೆಯನ್ನು ಸಿದ್ಧಗಂಗಾ ಮಾತೆಯೊಡನೆ ಅಭೇದವಾಗಿ :

ಚೆನ್ನೆಸದ್ಗುಣರನ್ನೆ ಹಿಮಗಿರಿ।
ಕನ್ನೆನುತಿಸುವೆನಿನ್ನೆ ದೀನಶ।
ರಣ್ಯೆ ಘನಸಂಪನ್ನೆ ಮಾನ್ಯೆವದಾನ್ಯೆಪಾವನ್ನೇ॥
ಬನ್ನಬಡಿಸದೆ ದುರಿತಸಂಕುಲ।
ವನ್ನು ತೊಲಗಿಸಿ ಕರಣಶುದ್ಧಿಯ।
ಸನ್ನುತಳೆ ಕೃಪೆಮಾಳ್ಪುದೆಂಬೆನು ಪೊರೆವುದಟವೀಶಾ॥ (ಪ. ೫)

ಈ ಗ್ರಂಥವು ಪಾಠ್ಯಯೋಗ್ಯವಾಗಿದ್ದು ಉತ್ತಮ ಕವಿತಾ ಶಕ್ತಿಯಿಂದ ಕೂಡಿ ಭಕ್ತಿಜ್ಞಾನವೈರಾಗ್ಯಬೋಧಕವಾಗಿದೆ. ಪ್ರತಿ ಪದ್ಯವೂ 'ಪೊರೆವುದೆಮ್ಮನಟವೀಶಾ' 'ಪಾಲಿಪುದೆಮ್ಮನಟವೀಶಾ ಇತ್ಯಾದಿಯಾಗಿ ಮುಕ್ತಾಯಗೊಳ್ಳುತ್ತದೆ.

ಇದಲ್ಲದೆ ಶಿವಯೋಗಿಗಳು ಅಟವೀಶ್ವರ ಗೀತಾಮಂಜರಿ[57] ಮಾರ್ಕಾಂಡೇಯವಿಳಾಸ. ಸುರಾಭಾಂಡೇಶ್ವರೋಪಾಖ್ಯಾನ, ಹಾಲಾಹಲಭಕ್ಷಣೆಯ ಕಥೆ–ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ.[58] ಕವಿತಾಶಕ್ತಿಯ ಜೊತೆಗೆ ಇವರಿಗೆ ಚಿತ್ರಕಲಾ ನೈಪುಣ್ಯವೂ ಇತ್ತು.[59]

---

56. ಸಮರ್ಪಣೆ' ಪದ್ಮಶ್ರೀ. ಬಿ. ಶಿವಮೂರ್ತಿಶಾಸ್ತ್ರೀ. ಪು. ೧೧೬
57. ಈ ಗ್ರಂಥ ೧೮೯೪ರಲ್ಲಿ ಬೆಂಗಳೂರಿನಲ್ಲಿ ಮುದ್ರಣವಾಗಿದೆ.
58. ಶಿವಾನುಭವ, ಸಂ. ಫ. ಗು. ಹಳಕಟ್ಟಿ; ಸಂ ೩. ಸಂ. ೧೧. ಪುಟ. ೧. (೧೯೨೮). (ಅಟವೀಶ್ವರರ ಗೀತಾಮಂಜರಿ ಶಿವಯೋಗಿಗಳು ಸಿದ್ಧಗಂಗೆಯಲ್ಲಿದ್ದಾಗಲೇ ರಚಿತವಾಗಿರಬಹುದು. ಆದರೆ ಉಳಿದ ಗ್ರಂಥಗಳು ತುಮಕೂರಿನಲ್ಲಿದ್ದಾಗ ರಚಿತವಾದವೋ ಅಥವಾ ಸಿದ್ಧಗಂಗೆಯಲ್ಲಿದ್ದಾಗ ರಚಿತವಾದುವೋ ಗೊತ್ತಿಲ್ಲ. ಅಂತೂ ಅವೆಲ್ಲ ಪ್ರಕಾಶಕ್ಕೆ ಬಂದುದು ಶ್ರೀ ಸಿದ್ಧಗಂಗೆಯಲ್ಲಿ ಅವರು ಇದ್ದಾಗಲೇ ಎಂಬುದು ತರ್ಕಿಸಬೇಕಾದ ವಿಷಯ).
59. 'ಇವರು ಬರೆದ ಚಿತ್ರಗಳು ತುಮಕೂರಿನ ಹಾಲಪ್ಪನವರ ಕರಿಬಸಪ್ಪನವರ ಮನೆ' ಇನ್ನೂ ಹಲವು ಶ್ರೀಮಂತರ ಮನೆಗಳನ್ನು ಅಲಂಕರಿಸಿವೆ. ಅವರ ಮನೆಗಳಲ್ಲಿ (೧) ಸರ್ವಸಿದ್ಧಿ ಗಣಪತಿ, (೨) ಚಂದ್ರಶೇಖರಮೂರ್ತಿ (೩) ಗಿರಿಜಾಕಲ್ಯಾಣ ವೈಭವ (೪) ಉಮಾಮಹೇಶ್ವರ ಮೂರ್ತಿ (೫) ನಂದಿವಾಹನಮೂರ್ತಿ (೬) ಅಂಧಕಾಸುರಸಂಹಾರ–ಎಂಬ ಚಿತ್ರಗಳು ಕಂಗೊಳಿಸುತ್ತಿವೆ'

ಪದ್ಮಶ್ರೀ. ಬಿ. ಶಿವಮೂರ್ತಿಶಾಸ್ತ್ರೀ, ಸಮರ್ಪಣೆ ಗ್ರಂಥ. ಪು. ೧೧೬

ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಮತಕೂರು ಶಿವಯೋಗಿಗಳ ವಿದ್ವತ್ತಿನ ಸೇವೆಯೊದಗಿದುದರ ಜೊತೆಗೆ ಇನ್ನೊಬ್ಬರು ಮಹಾವಿದ್ವಾಂಸರೂ ಉಭಯ ಕವಿತಾವಿಶಾರದರೂ ಎನಿಸಿದ ಮಾಗಡಿ ವೀರಪ್ಪಶಾಸ್ತ್ರಿಗಳ ಸೇವೆಯೂ ಕೊಂಚಕಾಲ ಒದಗಿತು. ಇಲ್ಲಿನ ವೇದ ಪಾಠಶಾಲೆಗೆ ಇವರು ವಿದ್ಯಾಭ್ಯಾಸಕ್ಕೆಂದು ಬಂದು ವಿದ್ಯಾಭ್ಯಾಸ ಮಾಡಿದರು. ಇವರು ಅಟವೀಶ್ವರರ ಕೃಪೆಗೆ ಪಾತ್ರರಾಗಿ ಹೋಗಿ ಅನೇಕ ಗ್ರಂಥಗಳನ್ನು ರಚಿಸಿದರು.[60]

ಒಂದು ಕಡೆಯಲ್ಲಿ ವಿದ್ವಾಂಸರ ವಿದ್ವತ್ತಿನ ಪ್ರಭೆಯೂ. ಮತ್ತೊಂದು ಕಡೆ ಅಟವೀಶ್ವರರ ಶಿವಯೋಗ ನಿಷ್ಠೆಯ ಉಜ್ವಲ ಪ್ರಕಾಶವೂ. ಮಗುದೊಂದೆಡೆ ಗೋಸಲ ಸಿದ್ಧೇಶ್ವರರು ಮೊದಲುಗೊಂಡು ಹರದನಹಳ್ಳಿಯ ನಿರಂಜನ ಜಂಗಮ ವಂಶದವರ ತಪೋತೇಜದ ಸೂರ್ಯನ ಸಹಸ್ರ ಕಿರಣಗಳ ಹೊಂಬೆಳಗೂ ಮುಪ್ಪುರಿಗೊಂಡು ಶ್ರೀ ಸಿದ್ಧಗಂಗೆಯ ಕೀರ್ತಿಲತೆ ಚಿಲ್ಲವರಿದು ದಾಂಗುಡಿಯಿಟ್ಟು ಬೆಳೆಯತೊಡಗಿತು. ಭಕ್ತರ ಭಾವುಕರ. ಶ್ರೀಮಂತರ–ಕೊಡುಗೆಗಳು ಅಧಿಕವಾದವು. ಅಟವೀಶ್ವರರು ಸಿದ್ಧಗಂಗೆಯ ದಾಸೋಹದಿ ಕ್ರಿಯೆಗಳನ್ನು. ಚಿಕ್ಕದಾಗಿ ಪ್ರಾರಂಭಿಸಿದ ವಿದ್ಯಾಸಂಸ್ಥೆಯನ್ನು ಯಥಾಸಾಂಗವಾಗಿ ನೆರವೇರಿಸುವ ಹೊಣೆಯ ಜೊತೆಗೆ ತಾವು ಪೂರ್ವದಲ್ಲಿ ಗುಬ್ಬಿ ಸುಕ್ಷೇತ್ರದಲ್ಲಿ ಎಲ್ಲಿ ಬಂದಿಳಿದಿದ್ದರೋ ಅಲ್ಲಿ ಒಂದು ಮಠವನ್ನು ನಿರ್ಮಾಣ ಮಾಡಬೇಕೆಂಬ ಸತ್ಸಂಕಲ್ಪ ಮಾಡಿದರು. ಭಕ್ತರ ನೆರವಿನಿಂದ ಗುಬ್ಬಿಯಲ್ಲಿ ಕೋಡಿ ಹಳ್ಳದ ದಂಡೆಯಲ್ಲಿ ಒಂದು ಮಠವನ್ನು ನಿರ್ಮಾಣ ಮಾಡಿ ಮುಗಿಸಿದರು. ತೊರೆಯ ದಂಡೆಯಲ್ಲಿ ಒಂದು ಮಠವನ್ನು ನಿರ್ಮಾಣ ಮಾಡಿ ಮುಗಿಸಿದರು. ತೊರೆಯ ದಂಡೆಯಲ್ಲಿ ಕಟ್ಟಿದ ಮಠವಾದ್ದರಿಂದ ಅದಕ್ಕೆ 'ತೊರೆಯ ಮಠ'ವೆಂದು ಕರೆಯಲಾಗುತ್ತಿದೆ. ಹರದನಹಳ್ಳಿಯ ಶೂನ್ಯಸಿಂಹಾಸನಾಧೀಶರೂ. ತೋಂಟದ ಸಿದ್ಧಲಿಂಗೇಶ್ವರರ ಗುರುಗಳೂ. ಶ್ರೀ ಸಿದ್ಧಗಂಗೆಯಲ್ಲಿ ಅನೇಕ ಕಾಲ ತಪೋನುಷ್ಠಾನ ಮಾಡಿ ಗುಬ್ಬಿಯಲ್ಲಿ ಲಿಂಗೈಕ್ಯರಾದವರೂ ಆದ ಗೋಸಲ ಚೆನ್ನಬಸವೇಶ್ವರರ ದೇವಾಲಯದ ಪಕ್ಕದಲ್ಲಿ ೬೩ ಪುರಾತನರ ಮಂಟಪ, ಮಂಟಪದ ಮಧ್ಯದಲ್ಲಿ 'ಅಘನಾಶಿನಿ' ಎಂಬ ಕಲ್ಯಾಣಿಯನ್ನು ಕಟ್ಟಿಸಿದರು. ಈ ಕಾರ್ಯಗಳೆಲ್ಲ ಕ್ರಿ.ಶ. ೧೮೫೬ರ ಹೊತ್ತಿಗೆ ಮುಗಿದುವೆಂದು ಊಹಿಸಬಹುದು. ಏಕೆಂದರೆ ಈ ಕಾಲದಲ್ಲಿ ಹುಟ್ಟಿದ ಒಂದು ಶಾಸನ ದೇವಾಲಯದ ಪಕ್ಕದಲ್ಲಿದ್ದು ಅದರಲ್ಲಿ ಅಟವೀಶ್ವರರ ವಿಷಯದ ಪ್ರಸ್ತಾವಿದೆಯೆಂದು ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಹೇಳುತ್ತಾರೆ. ಚೆನ್ನಬಸವೇಶ್ವರರಿಗೆ ಬೆಳ್ಳಿಯ ಪಲ್ಲಕ್ಕಿಯನ್ನು ಮಾಡಿಸಿದರು. 'ತೊಟ್ಟಿಲ ಕೆರೆ' ಎಂಬ ಗ್ರಾಮದಲ್ಲಿ ವಿರಕ್ತ ಮಠವನ್ನು ಅಭಿವೃದ್ಧಿಗೆ ತಂದರು.[61] ಹೀಗೆ ಈ ಭಾಗದಲ್ಲಿ ಅನೇಕ ಮಹತ್ಕಾರ್ಯಗಳನ್ನು ಸಾಧಿಸಿದ ಅಟವೀಶ್ವರರ ಮಮತೆ ಶ್ರೀ ಸಿದ್ಧಗಂಗಾ ಕ್ಷೇತ್ರದ ವಿಷಯದಲ್ಲಿ ಅಧಿಕವಾಯಿತು.[62] ಅಷ್ಟರಲ್ಲಿ ಕ್ಷೇತ್ರಾಧಿಪತಿಗಳಾಗಿದ್ದ ಶ್ರೀ ನಿ. ಪ್ರ. ಸಿದ್ಧಲಿಂಗ ಶಿವಯೋಗಿಗಳು ಲಿಂಗೈಕ್ಯರಾಗಿ ಹೋಗಿದ್ದರು. ಸಿದ್ಧಗಂಗಾ ಕ್ಷೇತ್ರದಲ್ಲಿ ತಾವು ಮಾಡಿದ್ದ ಅನೇಕ ಲೋಕೋಪಕಾರಕ ಕಾರ್ಯ ಮತ್ತು ವೀರಶೈವ ಧರ್ಮ ಸಂವರ್ಧನ ಎಂಬ ಕಲ್ಪವೃಕ್ಷದ ಸಸಿಯನ್ನು ಶಿವಯೋಗಶಕ್ತಿಯ ಕಾರುಣ್ಯಜಲವನ್ನೆರೆದು ಬೆಳಸಿ ಮಹಾವೃಕ್ಷವನ್ನಾಗಿಸುವ ಸಾಮರ್ಥ್ಯವುಳ್ಳ ಧೀಮ ಶಕ್ತಿಯ ಮಹಾವ್ಯಕ್ತಿಯನ್ನು ಅರಸುವ ಕಾರ್ಯಕ್ಕೆ ಮೊದಲು ಮಾಡಿದರು. ಅವರ ಸಂಕಲ್ಪಶಕ್ತಿಯ ಪ್ರಬಲಪಾಶ 'ಲಕ್ಕೂರಿನ ರುದ್ರಪ್ಪ' ಎಂಬ ಅಘಟಿತಘಟನಾಸಮರ್ಥ ವ್ಯಕ್ತಿಯನ್ನು ಬಂಧಿಸಿ ಮಠಕ್ಕೆಳೆತಂದಿತು. ಈ ರುದ್ರಪ್ಪ ಮತ್ತಾರೂ ಅಲ್ಲ. ಅಸಾಧಾರಣ ಚೇತನಶಕ್ತಿಸಂಪನ್ನರೂ. ಅಘಟಿತಘಟನಾ ವಿಶೇಷವುಳ್ಳವರೂ ಆದ ಉದ್ದಾನಶಿವಯೋಗಿಗಳು.

**ಲಕ್ಕೂರಿನ ರುದ್ರಪ್ಪನವರ ಆಗಮನ:**

ಲಕ್ಕೂರಿನ ರುದ್ರಪ್ಪನು ಅಟವಿಸ್ವಾಮಿಗಳವರ ಪ್ರಬಲಾಕರ್ಷಣೆಗೊಳಗಾಗಿ ಮಠಕ್ಕೆ ಬಂದುದೇ ತಡ ಅಟವೀಶ್ವರರಿಗೆ ಸಹಸ್ರ ಬಾಹುಬಲಬಂದಂತಾಯಿತು. ಸಹಸ್ರ ಕಿರಣಗಳನ್ನು ದಿಗ್ದಿಗಂತಗಳಿಗೆ ಚಾಚಿ ಉದಯಗೊಳ್ಳುವ ಹೊಂಗದಿರನ ಕಾಂತಿಯ.

---

60. ಕ್ರಿ. ಶ. ೧೮೬೮ರಲ್ಲಿ ಸಾವಂದಪ್ಪ-ಗಂಗಮ್ಮ ಎಂಬ ದಂಪತಿಗಳ ಗರ್ಭದಿಂದುಸಿದ ವೀರಪ್ಪ ಶಾಸ್ತ್ರಿಗಳು ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿಕೊಂಡು ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಸಿದ್ಧಗಂಗೆಗೆ ಬಂದು ಸೇರಿದರು. ಅಟವೀಶ್ವರರ ಕೃಪೆಗೆ ಪಾತ್ರರಾದರು. ಇವರು ರಾಘವಾಂಕ ಕಾವ್ಯವನ್ನು ಸಂಪಾದಿಸಿ ೧೯೦೪ರಲ್ಲಿ ಪ್ರಕಟಿಸಿದರು. ಅಷ್ಟಾವರಣವಿವೇಕ, ಸಿದ್ಧಲಿಂಗೇಶ್ವರಶತಕ (೧೦೧ ಪದ್ಯಗಳು), ಸಿದ್ಧಲಿಂಗೇಶ್ವರ ಸ್ತೋತ್ರ (ಸಂಸ್ಕೃತ ೧೦೮ ಶ್ಲೋಕಗಳು), ಕೋಳೂರು ಕೊಡಗೂಸಿನ ಕಥೆ, ರೇವಣಾರಾಧ್ಯನ ಕಥೆ, ಜಯದೇವ ಭಜಕಾನಂದಿನಿ. ಗುರು ಭಜನ, ಶಿವಗೀತೆ, ಶಿವಾಧಿಕ್ಯ, ಬಿಜ್ಜಳ್ವೆಯ ಕಥೆ,–ಈ ಗ್ರಂಥಗಳನ್ನು ಬರೆದುದಲ್ಲದೆ, ೧೯೩೩ರಲ್ಲಿ 'ವೀರಶೈವ ಧರ್ಮಸಂಗ್ರಹ'ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. (೧೯೦೬-೧೯೦೭ರಲ್ಲಿ ವೀರಶೈವಾಮೃತ ಪುರಾಣವನ್ನು ಪ್ರಕಟಿಸಿದ್ದಾರೆ. ಸಂ.)
—ಶಿವಾನುಭವ; ಫ.ಗು. ಹಳಕಟ್ಟಿ. ಸಂ ೧೧, ಸಂ ೬; ೧೯೩೬
61. ಪದ್ಮಶ್ರೀ ಬಿ. ಶಿ. ಶಾಸ್ತ್ರಿ; ಗುಬ್ಬಿ ಚೆನ್ನಬಸವೇಶ್ವರ ಸುಪ್ರಭಾತ; ಪು. ೧೮–೧೯.
62. ವಾಸ್ತವಾಂಶವೆಂದರೆ ಆಗಿನ ಮಠದ ಪರಿಸ್ಥಿತಿ ತೀರಾ ದುರ್ಬಲಗೊಂಡಿತ್ತು. ಇದನ್ನು ಕಂಡು ಮಠಕ್ಕೆ ಇದ್ದ ಸಿದ್ಧಗಂಗಾ ಪಾಳ್ಯ, ಬೊಮ್ಮನಹಳ್ಳಿ–ಎಂಬೆರಡು ಗ್ರಾಮಗಳ ಇನಾಮತಿಯನ್ನೂ ಸರಕಾರದವರು ಕಿತ್ತುಕೊಂಡಿದ್ದರು.

ಶ್ರೀ ಕ್ಷೇತ್ರಭಾಗ್ಯೋದಯದ ಮರೀಚಿ ಮಾಲೆಯುಂಟಾಯಿತು. ರುದ್ರಪ್ಪ ಶ್ರೀ ಕ್ಷೇತ್ರಕ್ಕೆ ಸಿದ್ಧಿಗಾಗಿ ಬಂದಿದ್ದರೇ ? ಸಿದ್ಧಪುರುಷರಾಗಿ ಬಂದಿದ್ದರೇ ? ಸಿದ್ಧಿಗಾಗಿ ಬಂದರು. ಸಿದ್ಧಪುರುಷರಾಗಿ ಬಂದರು ಎರಡೂ ಬಿಡಿಸಲಾರದ ಕಗ್ಗಂಟು. ಸಿದ್ಧಗಂಗೆಗೆ ಲಕ್ಕೂರಿನ ರುದ್ರಪ್ಪ ಅದೆಷ್ಟೋ ಸಲ ಬಂದಿದ್ದ. ತನ್ನೂರಿನಿಂದಲೇ ಪಶ್ಚಿಮ ದಿಗಂತದಲ್ಲಿ ಬೂದು ಬೂದು ಬಣ್ಣದಿಂದ ಕಾಣುವ ಸಿದ್ಧಗಂಗಾ ಬೆಟ್ಟವನ್ನು ಬಾಲ್ಯದಿಂದ ನೋಡಿ ಕೈಯೆತ್ತಿ ಮುಗಿಯುತ್ತಿದ್ದವನು. ಸಿದ್ಧಗಂಗಾ ಕ್ಷೇತ್ರ ವೆಂಬ ಸಮುದ್ರದ ಉಪ್ಪು. ಲಕ್ಕೂರಿನ ಬೆಟ್ಟದನೆಲ್ಲಿಕಾಯಿ ಅಡವಿಸ್ವಾಮಿಗಳವರ ದಿವ್ಯ ಶಿವಯೋಗಶಕ್ತಿಯ ಫಲವಾಗಿ ಎರಡೂ ಒಂದಾದವು. ಸಿದ್ಧಗಂಗೆಯ ಭಾಗ್ಯದ ಬಾಗಿಲು ತೆರೆಯಿತು. ಭಕ್ತರ ಭಕ್ತಿಜೀವನಕ್ಕೆ ಕಳೆಯೇರಿತು. ಮುಂದೆ ಕೆಲದಿನಗಳಲ್ಲಿ ರುದ್ರಪ್ಪ 'ಉದ್ದಾನಶಿವಯೋಗಿ' ಎಂಬ ನೂತನಾಭಿಧಾನದಿಂದ ಹರದನಹಳ್ಳಿ ಪೀಠಾಚಾರ್ಯರ ಪ್ರಾಚೀನ ತಪೋಭೂಮಿಯಾದ ಶ್ರೀ ಸಿದ್ಧಗಂಗಾಧಿಪತ್ಯವನ್ನು ವಹಿಸಿದನು. ಅಟವಿಸ್ವಾಮಿಗಳು ಕ್ರಿ.ಶ. ೧೯೦೧ರ ಕಾರ್ತಿಕ ಮಾಸದಲ್ಲಿ ಲಿಂಗೈಕ್ಯರಾದರು. ತೊಟ್ಟಿಲಕೆರೆಯಲ್ಲಿ ಅವರ ಸಮಾಧಿಯಾಯಿತು.



# ಶಿವಗಂಗಾ ಕ್ಷೇತ್ರ

— ಟಿ. ಆರ್. ಮಹಾದೇವಯ್ಯ

ಕನ್ನಡನಾಡು ಪುಣ್ಯಪುರುಷರ ಬೀಡಾಗಿರುವಂತೆಯೇ ಪುಣ್ಯಕ್ಷೇತ್ರಗಳ ಪಾವನನೆಲೆಯೂ ಆಗಿದೆ. ಇತಿಹಾಸ ಪ್ರಸಿದ್ಧವಾದ ಇಂಥ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳ ಸರಣಿಯಲ್ಲಿ 'ದಕ್ಷಿಣಕಾಶಿ' ಎಂದು ಕೀರ್ತಿವೆತ್ತ ಶಿವಗಂಗೆಗೆ ಅಗ್ರಸ್ಥಾನವಿದೆ. ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿ ಸಮುದ್ರಮಟ್ಟದಿಂದ ೪೫೬೦ ಅಡಿ ಎತ್ತರವಿರುವ ಶಿವಗಂಗಾಬೆಟ್ಟ ಮತ್ತು ಅದರ ಪರಿಸರ ತನ್ನದೇ ಆದ ಚರಿತ್ರೆಯನ್ನು ಹೊಂದಿದೆ. ಶಿವಗಂಗೆ, ಸಿದ್ಧಗಂಗೆ ಹಾಗೂ ಸಿದ್ಧರಬೆಟ್ಟ–ಈ ಮೂರು ಕ್ಷೇತ್ರಗಳಿಗೆ ಪರಸ್ಪರ ಸಂಬಂಧ-ಸಂಪರ್ಕಗಳಿದ್ದು ಅವುಗಳ ಸುತ್ತಮುತ್ತ ನಡೆದ ಧರ್ಮಜಾಗೃತಿಯ ಕೆಲಸ ಉಲ್ಲೇಖನಾರ್ಹವಾಗಿದೆ.

ಶಿವಗಂಗೆಯಲ್ಲಿ ದೊರೆಯುವ ಐತಿಹ್ಯಗಳಿಂದ ಇತಿಹಾಸಕಾರರು ಅದರ ಪ್ರಾಚೀನತೆಯು ಎರಡು ಸಾವಿರ ವರ್ಷಗಳಷ್ಟು ಹಿಂದಕ್ಕೆ ಹೋಗುತ್ತದೆ ಎಂದು ತರ್ಕಿಸಿದ್ದಾರೆ. ಅಲ್ಲಿನ ಸ್ಥಳಪುರಾಣಗಳು ಅದರ ಪಾವಿತ್ರ್ಯವನ್ನು ಕುರಿತು ಬಗೆಬಗೆಯಾಗಿ ಬಣ್ಣಿಸಿವೆ. ಶಿವಗಂಗೆಬೆಟ್ಟಕ್ಕೆ ಹಿಂದೆ ಕಕುದ್ಗಿರಿ ಎಂದು ಹೆಸರಿತ್ತೆಂದು ತಿಳಿದುಬರುತ್ತದೆ.[1] ನಂದೀಶ್ವರನು ಈ ಬೆಟ್ಟವನ್ನು ತನ್ನ ಕಕುತ್ತದ (ಹೆಗಲು) ಮೇಲೆ ಹೊತ್ತು ತಪಸ್ಸು ಮಾಡಿದನೆಂದೂ, ಅದಕ್ಕೆ ಆ ಹೆಸರು ಬಂತೆಂದೂ ಹೇಳುವರು. ಕಳಲೆನಂಜರಾಜ (೧೮ನೇ ಶತಮಾನ) 'ಕಕುದ್ಗಿರಿ ಮಾಹಾತ್ಮೆ' ಎಂಬ ಕೃತಿಯನ್ನು ರಚಿಸಿದ್ದಾನೆ. ಅದು ಇನ್ನೂ ಅಚ್ಚಾಗಿಲ್ಲ. ಸ್ಕಾಂದ ಪುರಾಣದ ತೀರ್ಥಖಂಡದ ಹನ್ನೆರಡು ಅಧ್ಯಾಯಗಳ, ಭವಿಷ್ಯೋತ್ತರ ಪುರಾಣದ ತೀರ್ಥಖಂಡದ ಎರಡು ಅಧ್ಯಾಯಗಳ, ಸ್ಕಾಂದಪುರಾಣದ ಕಲ್ಯಾಣಖಂಡದ ಆರು ಅಧ್ಯಾಯಗಳಲ್ಲಿ ನಿರೂಪಿತವಾಗಿರುವ ಕಕುದ್ಗಿರಿ ಮಹಿಮೆಯ ಮೂಲ ಸಂಸ್ಕೃತ ಶ್ಲೋಕಗಳನ್ನು ಕನ್ನಡದಲ್ಲಿ ನಂಜರಾಜ 'ಮಂದಾಕಿನೀಧರಗಿರಿ' (ಶಿವಗಂಗೆ) ಚರಿತೆಯನ್ನು ನಿರೂಪಿಸಿದ್ದಾನೆ. ಗ್ರಂಥಾಂತ್ಯದಲ್ಲಿ 'ಕಕುದ್ಗಿರಿ ಮಹಿಮೆಯೊಳು ಸ್ಕಾಂದ ಪುರಾಣದಲ್ಲಿರ್ದ ತೀರ್ಥಖಂಡ ದ್ವಾದಶಾಧ್ಯಾಯಮಂ ಕರ್ನಾಟಕ ಸೂಕ್ತಿಯಿಂದ ವಿಂಶತಿ ಅಧ್ಯಾಯಗಳಂ ಸಮಗ್ರವಾಗಿ ಹೇಳಿರುವುದು. ಶ್ರೀಶಿವಗಂಗಾ ಮಹಿಮೆ ಸಂಪೂರ್ಣ, ಮಂಗಳ ಮಹಾಶ್ರೀ' ಎಂಬ ಮಾತಿದೆ. ಶಿವಗಂಗೆಯು ಕಣಾದಮುನಿಯ ತಪೋಭೂಮಿಯಾಗಿತ್ತೆಂಬ ನಂಬುಗೆಯೂ ಇದೆ.[2] ಪೂರ್ವದಲ್ಲಿ ಕಣಾದಮುನಿ ಶಿವನ ಗಂಗಾಧರ ಲೀಲೆಯ ಸನ್ನಿವೇಶವನ್ನು ತನ್ನ ಅಂತರಂಗದಲ್ಲಿ ಧ್ಯಾನಿಸಿ, ಗರಿಕೆಯ ತುದಿಯ ನೀರಹನಿಯನ್ನು ಮಾತ್ರ ತಿಂಗಳಿಗೊಮ್ಮೆ ಕುಡಿದು ತೃಪ್ತನಾಗುತ್ತ ಆ ಪರ್ವತದ ಘೋರಾರಣ್ಯದಲ್ಲಿ ಬಹಳ ಕಾಲ ತಪಸ್ಸು ಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಶಿವನು ತನ್ನ ಶಿರಸ್ಸಿನಲ್ಲಿದ್ದ ಗಂಗೆಯನ್ನು ಇಳುಹಿ ಪಂಚಾಗ್ನಿಗಳ ನಡುವೆ ತಪಸ್ಸು ಮಾಡುತ್ತಿದ್ದ ಆತನ ಮೇಲೆ ಎರಚಿದನು. ಆದ್ದರಿಂದ ಈ ಪುಣ್ಯಕ್ಷೇತ್ರಕ್ಕೆ 'ಶಿವಗಂಗೆ' ಎಂದು ಹೆಸರಾಯಿತೆಂದು ಆ ಆಖ್ಯಾಯಿಕೆ ತಿಳಿಸುತ್ತದೆ. ಈ ಹೇಳಿಕೆಗಳು ಇತಿಹಾಸದ ಮೇಲೆ ಸಾಕಷ್ಟು ಬೆಳಕು ಚೆಲ್ಲಲು ಸಮರ್ಥವಾಗದಿದ್ದರೂ ಈ ಬೆಟ್ಟಕ್ಕೆ ಪ್ರಾಚೀನ ಇತಿಹಾಸವಿದೆಯೆಂಬುದನ್ನು ಸೂಚಿಸಲು ಸಹಕಾರಿಗಳಾಗುತ್ತವೆ.

ಶಿವಗಂಗೆ ಬೆಟ್ಟವನ್ನು ಒಮ್ಮೆ ಭಾವಪೂರ್ಣವಾಗಿ ನೋಡಿದವರಿಗೆ ಅದಕ್ಕಿರುವ ಹೆಸರು ಅನ್ವರ್ಥವೆನ್ನಿಸದಿರದು. ಆ ಬೆಟ್ಟದ ಔನ್ನತ್ಯ, ಗಾಂಭೀರ್ಯಗಳು, ಬೆಟ್ಟದ ಮೇಲೆ ಇರುವ ಕಡಿದಾದ ಹೆಬ್ಬಂಡೆಗಳು, ಆ ಎತ್ತರದ ಕೊಡುಗಲ್ಲು ನೋಡಿದವರಿಗೆ ಬೆರಗು ತರುತ್ತವೆ. ಅಲ್ಲಿನ ಗವಿಗಳು ಗವಿಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ದೇವತಾ ವಿಗ್ರಹಗಳೇ ಮೊದಲಾದವುಗಳು ಗತಕಾಲದ ಇತಿಹಾಸದ ಮೇಲೆ ಬೆಳಕು ಬೀರುತ್ತವೆ. ಆ ಬೆಟ್ಟದ ಕುಂಬಿಯು ಶಿವನ ಪಾವನ ಶಿರಸ್ಸಿನಂತಿದ್ದರೆ, ಅಲ್ಲಿರುವ ತೀರ್ಥಕಂಬದಿಂದ ಮಕರಸಂಕ್ರಮಣದಂದು ನಿಯಮಿತ ವೇಳೆಗೆ ಒಸರುವ ತೀರ್ಥವು ಶಿವನ ಸಿರಿಮುಡಿಯಲ್ಲಿರುವ ಸಾಕ್ಷಾತ್ ಗಂಗೆಯೇ ಎನ್ನಿಸುತ್ತದೆ. ಆದ್ದರಿಂದಲೇ ಆ ಬೆಟ್ಟಕ್ಕೆ ಶಿವನ ಗಂಗೆ–ಶಿವಗಂಗೆ ಎಂಬ ಹೆಸರು ಒಪ್ಪುತ್ತದೆಂದು ತೋರುತ್ತದೆ. ಅಥವಾ ಈ ಬೆಟ್ಟಕ್ಕೆ ಈ ಹೆಸರು ಬರಲು ಕಾರಣವೂ ಇದೇ ಆಗಿರಬಹುದು.

---

1. ಹಿಮವತ್ಪರ್ವತದ ಒಂದು ಶಿಖರಕ್ಕೆ 'ಕಕುದ್ಮಾನ್' ಎಂಬ ಹೆಸರಿದೆ. ಇದು ಕೈಲಾಸ ಪರ್ವತದ ವಾಯುವ್ಯದಲ್ಲಿದೆ. ಇದು ನಂದಿಯ ಉತ್ಪತ್ತಿ ಸ್ಥಾನವೆಂದು ಮತ್ಸ್ಯಪುರಾಣದ ವರ್ಣನೆ. –(ಪುರಾಣನಾಮ ಚೂಡಾಮಣಿ ಪುಟ. ೭೫)
2. (ಹಸ್ತಪ್ರತಿ ಕೆ.ಬಿ. ೨೮೬, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು)

ಇನ್ನೊಂದು ಆಶ್ಚರ್ಯವೆಂದರೆ ಆ ಬೆಟ್ಟವು ನಾಲ್ಕು ದಿಕ್ಕುಗಳಿಗೂ ನಾಲ್ಕು ರೂಪವಾಗಿ ಕಾಣುತ್ತದೆ. ಪೂರ್ವದ ಕಡೆಯಿಂದ ನೋಡಿದಾಗ ಬಸವನಾಕಾರ. ಪಶ್ಚಿಮದ ಕಡೆಯಿಂದ ನೋಡಿದಾಗ ಗಣೇಶನಾಕಾರ. ಉತ್ತರದ ಕಡೆಯಿಂದ ನೋಡಿದಾಗ ಸರ್ಪದ ಆಕಾರ. ದಕ್ಷಿಣದ ಕಡೆಯಿಂದ ನೋಡಿದಾಗ ಲಿಂಗಾಕಾರವಾಗಿ ಕಾಣುತ್ತದೆ. ಈ ನೈಸರ್ಗಿಕ ಬೃಹತ್ ಶಿಲ್ಪದ ಚಾತುರ್ಯವನ್ನು ಮೆಚ್ಚದರಾರು ?

ಆ ಬೆಟ್ಟದ ಪ್ರಶಾಂತವಾದ ನೈಸರ್ಗಿಕ ಸನ್ನಿವೇಶ ಹಿಂದೆ ಅನೇಕ ಸಾಧಕರನ್ನು ತನ್ನ ಕಡೆ ಸೆಳೆದುಕೊಂಡಿದೆ. ಇಂದೂ ಸಹೃದಯಿಗಳನ್ನು ಕೈಬೀಸಿ ಕರೆಯುತ್ತಿದೆ. ಅಲ್ಲಿರುವ ಸ್ವಾಭಾವಿಕವಾದ ಗವಿಗಳು. ಪ್ರಾಕೃತಿಕ ಆಸರೆಗಳು ತಪಶ್ಚರ್ಯಕ್ಕೆ ಹೇಳಿ ಮಾಡಿಸಿದಂತಿವೆ. ಅನೇಕ ಸಾಧುಗಳು. ಆಧ್ಯಾತ್ಮ ಪಿಪಾಸುಗಳು. ಆತ್ಮಾನುಸಂಧಾನಿಗಳು ಆ ಪಾವನತಾಣದಲ್ಲಿ ಸಾಧನೆ ಮಾಡಿ ಸಿದ್ಧಿ ಪಡೆದಿದ್ದಾರೆ. ಹಿಂದೆ ಇದೊಂದು ಜಾಗೃತಿಯ ಕೇಂದ್ರವಾಗಿತ್ತೆಂಬುದಕ್ಕೆ ಅಲ್ಲಿರುವ ಅನೇಕ ಕುರುಹುಗಳು ಸಾಕ್ಷಿಹೇಳುತ್ತವೆ. ಉತ್ತರದ ಕಡೆಯಿಂದ ಪಾಶುಪತಾಚಾರ್ಯರು ಕರ್ನಾಟಕದ ವಿವಿಧ ಭಾಗಗಳಲ್ಲಿ ಬಂದು ನೆಲಸಿದಂತೆ ಈ ಬೆಟ್ಟದಲ್ಲೂ ಪ್ರಾಚೀನಕಾಲದಲ್ಲಿ ಬಂದು ನೆಲಸಿರಬಹುದು.

ಶಿವಗಂಗೆ ಬೆಟ್ಟದ ಎತ್ತರ–ಬಿತ್ತರಗಳು, ಬಂಡೆಗಲ್ಲುಗಳು. ನೂರಾರು ಗವಿಗಳು. ನೂರಾರು ತೀರ್ಥಗಳು ಆ ಕ್ಷೇತ್ರವನ್ನು ರಮಣೀಯಸ್ಥಾನವಾಗಿಸಿವೆ. ಶಿವಗಂಗೆಯಲ್ಲಿರುವ ಗುಹೆಗಳು ಇತಿಹಾಸಪ್ರಸಿದ್ಧವಾದ ಅಜಂತ. ಎಲ್ಲೋರ, ಐಹೊಳೆ, ಬಾದಾಮಿಯ ಗುಹಾಂತರ್ದೇವಾಲಯಗಳನ್ನು ಜ್ಞಾಪಕಕ್ಕೆ ತರುತ್ತವೆ. ಆದರೆ ಇಲ್ಲೊಂದು ಪ್ರಮುಖ ವ್ಯತ್ಯಾಸ ಕಾಣುತ್ತದೆ. ಅಲ್ಲಿನ ಗುಹೆಗಳು ಬೆಟ್ಟವನ್ನು ಕೊರೆದು ಮಾಡಿದ ಕೃತಕ ಗವಿಗಳು : ರೂವಾರಿಗಳು ತಮ್ಮ ಕೈಚಳಕದಿಂದ ನಿರ್ಮಿಸಿದ ಕಲಾ ಚಾತುರ್ಯದ ನಿರ್ಮಾಣಗಳು. ಆದರೆ ಶಿವಗಂಗೆಯ ಗವಿಗಳು ನಿಸರ್ಗ ನಿರ್ಮಿತ. ಹಾಗೆ ನೋಡಿದರೆ ಕ್ಷೇತ್ರಾಧಿಪತಿ ಗಂಗಾಧರೇಶ್ವರ ಹಾಗೂ ಹೊನ್ನಮ್ಮನ ದೇಗುಲಗಳೂ ಗವಿಗಳೇ ! ಬಂಡೆಗಳಿಂದ ತಾನೇ ನಿರ್ಮಾಣವಾದ ಕಲ್ಮನೆಗಳು. ಅವಕ್ಕೆ ಬಾಗಿಲು ಜೋಡಿಸಿ. ಗೋಪುರಗಳನ್ನು ಕಟ್ಟಿದ್ದಾರೆ. ಅಷ್ಟೆ. ಕಂಬ. ಬೋದಿಗೆಗಳು ಒಂದೂ ಇಲ್ಲದೆ ನಿಸರ್ಗವೆಂಬ ಚತುರಶಿಲ್ಪಿ ನಿರ್ಮಿಸಿದ ಈ ಕಲ್ಮನೆಗಳು ಭಾವುಕರ ಮೈಮನಗಳನ್ನು ಜುಮ್ಮೆದಟ್ಟಿಸುತ್ತವೆ. ಶಿವಗಂಗೆ ನಿಜವಾದ ಅರ್ಥದಲ್ಲಿ ತೀರ್ಥಕ್ಷೇತ್ರ. ಮೇಲಿನ ತೀರ್ಥಕಂಬದಲ್ಲಿ ಪವಿತ್ರ ತೀರ್ಥ ಬರುವುದಿರಲಿ. ಆ ಬೆಟ್ಟದಲ್ಲೆಲ್ಲಾ ನೂರಾರು ತೀರ್ಥಗಳಿವೆ. ಲಿಂಗದತೀರ್ಥ. ಕಣ್ವತೀರ್ಥ. ಪಾತಾಳಗಂಗೆ. ಚಕ್ರತೀರ್ಥ. ಜಾಜಿದೊಣೆ, ಕಮಲತೀರ್ಥ. ಆನೆದೊಣೆ. ಒರಳುತೀರ್ಥ. ಕುಂಭಾವತಿತೀರ್ಥ, ಶಂಕರಾಚಾರ್ಯತೀರ್ಥ. ಮೈತ್ರೇಯತೀರ್ಥ, ಮೌದ್ಗಲ್ಯತೀರ್ಥ. ಕಲ್ಯಾಣಿತೀರ್ಥ. ಇತ್ಯಾದಿ.

ಶಿವಗಂಗೆ ಹಾಗೂ ಅದರ ಪರಿಸರದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸವನ್ನು ಪರಿಶೀಲಿಸುವುದಕ್ಕೆ ಮುಂಚೆ ಯಾತ್ರಾರ್ಥಿಯಾಗಿ ಸಾಗಿ ಆ ಬೆಟ್ಟ ಮತ್ತು ಊರನ್ನು ಕ್ರಮವಾಗಿ ಪರಿಚಯ ಮಾಡಿಕೊಳ್ಳೋಣ:–

ಬೆಟ್ಟದ ಬುಡದಲ್ಲೇ ಉತ್ತರದಿಕ್ಕಿನ ಕಡೆ ಶಿವಗಂಗೆ ಊರಿದೆ. ಬೆಟ್ಟಕ್ಕೆ ಹತ್ತುವ ಮಹಾದ್ವಾರದ ಎದುರಿಗೆ ಒಂದು ಲಿಂಗತೀರ್ಥವಿದೆ. ಅದನ್ನು ಅಗಸ್ತ್ಯತೀರ್ಥವೆನ್ನುತ್ತಾರೆ. ಅಗಸ್ತ್ಯಮಹರ್ಷಿಗಳು ಇದನ್ನು ನಿರ್ಮಿಸಿದರೆಂದು ಹೇಳುತ್ತಾರೆ. ಸುತ್ತಲೂ ಕಲ್ಲು ಕಟ್ಟಡವಿದ್ದು ನೂರೊಂದು ಲಿಂಗಗಳನ್ನು ಸ್ಥಾಪಿಸಲಾಗಿದೆ. ಅದಕ್ಕೆ ಇದನ್ನು 'ನೂರೆಂಟು ಲಿಂಗದ ಕಲ್ಯಾಣಿ' ಎಂದೂ ಕರೆಯುವರು. ಪೂರ್ವಭಾಗದಲ್ಲಿರುವ ಲಿಂಗವನ್ನು ಅಗಸ್ತ್ಯರು ಪ್ರತಿಷ್ಠಾಪಿಸಿದರೆಂದೂ. ಆದ್ದರಿಂದಲೇ ಅದಕ್ಕೆ ಅಗಸ್ತ್ಯೇಶ್ವರ ಲಿಂಗವೆಂದು ಹೆಸರು ಬಂತೆಂದೂ ಹೇಳುತ್ತಾರೆ. ಅಲ್ಲೇ ನೈಋತ್ಯದಿಕ್ಕಿನಲ್ಲಿ ಶಿವಗಂಗಾ ಮಠವಿದೆ. ಇದು ಶೃಂಗೇರಿ ಶಾರದಾಪೀಠದ ಶಾಖಾಮಠ. ಅದರ ಬಳಿ ಇರುವ ಶ್ರೀ ಶಾರದಾದೇವಿಯ ದೇವಸ್ಥಾನ ಸುಪ್ರಸಿದ್ಧವಾದುದು. ಸ್ಫಟಿಕಶಿಲೆಯ ಶಾರದಾಮೂರ್ತಿ ಅತ್ಯಂತ ರಮ್ಯವಾಗಿದೆ. ಇದನ್ನು ಶಿಲ್ಪಿ ಸಿದ್ಧಲಿಂಗಸ್ವಾಮಿಗಳು ರೂಪಿಸಿದರೆಂದು ತಿಳಿಯುತ್ತದೆ. ಮಠಕ್ಕೆ ಸಮೀಪವಾಗಿಯೇ 'ಕಮಲತೀರ್ಥ' ಎನ್ನುವ ಸುಂದರಕಲ್ಯಾಣಿ ಇದೆ (೬೦ ಗಜ × ೫೦ ಗಜ). ಇದಕ್ಕೆ ನಾಲ್ಕೂ ಕಡೆ ದ್ವಾರ ಹಾಗೂ ಮೆಟ್ಟಲುಗಳಿವೆ. ಸುತ್ತಲೂ ಇರುವ ಕೈಪಿಡಿ ಗೋಡೆಯಲ್ಲಿ ರಾಮಾಯಣ ಹಾಗೂ ಭಾಗವತದ ಅನೇಕ ದೃಶ್ಯಗಳನ್ನು ಕೆತ್ತಲಾಗಿದೆ. ಮೆಟ್ಟಲುಗಳಲ್ಲಿರುವ ಕಲಾಕೌಶಲ್ಯ ರಮಣೀಯವಾಗಿದ್ದು ಈ ಕಲ್ಯಾಣಿ ಆಕರ್ಷಕವಾಗಿ ಕಾಣುತ್ತದೆ.

ಬೆಟ್ಟದ ಮಹಾದ್ವಾರದ ಪಕ್ಕದಲ್ಲೇ ಇರುವ ಶಾಂತೇಶ್ವರ ದೇವಾಲಯ ಇತಿಹಾಸ ಪ್ರಸಿದ್ಧವಾಗಿದೆ. ಹೊಯ್ಸಳ ರಾಜ ವಿಷ್ಣುವರ್ಧನನ ಪಟ್ಟದರಾಣಿ ಶಾಂತಲಾದೇವಿ ಈ ಬೆಟ್ಟದ ಕೋಡುಗಲ್ಲಿನಿಂದ ಕೆಳಗೆ ಬಿದ್ದು ಮಡಿದಳೆಂದೂ, ಈ ದೇವಸ್ಥಾನವನ್ನು ಮಹಾರಾಜ ತನ್ನ ಮನದನ್ನೆಯ ಆತ್ಮಕ್ಕೆ ಶಾಂತಿಯುಂಟಾಗಲೆಂದು ಕಟ್ಟಿಸಿದನೆಂದೂ ಹೇಳುವರು. ಆದರೆ ನಿರಾಭರಣ ಸುಂದರಿಯಂತಿರುವ ಈ ದೇಗುಲವನ್ನು ಕಲಾಕುಸುರಿಗೆಲಸಕ್ಕೆ ಹೆಸರಾದ ಹೊಯ್ಸಳ ಶಿಲ್ಪಿಗಳು ನಿರ್ಮಿಸಿದರೆ

ಎಂಬ ಸಂದೇಹ ಬಾರದಿರದು. ಆದರೆ ಶಿವಗಂಗೆ ಊರಿನವರು ಈವೊತ್ತಿಗೂ ಆಚರಿಸುವ 'ಶಾಂತಮ್ಮನ ಹಬ್ಬ' ಶಾಂತಲಾ ದೇವಿಯ ನೆನಪನ್ನು ಹಚ್ಚಹಸುರಾಗಿಟ್ಟಿದೆ.

ಬೆಟ್ಟದ ಉತ್ತರ ದಿಕ್ಕಿನ ಈ ನೋಟ ಚೇತೋಹಾರಿ. ಸಾಲಾದ ಮೆಟ್ಟಿಲುಗಳಿಂದ, ಗುಡಿಗೋಪುರಗಳಿಂದ, ಬೃಹತ್ ಶಿಲ್ಪಗಳಿಂದ ಮನೋಹರವಾಗಿ ಕಾಣುತ್ತದೆ. ಬೆಟ್ಟವನ್ನು ಹತ್ತುವ ಜಾಗದಲ್ಲಿರುವ ಮಹಾದ್ವಾರದ ಬಳಿ ನಿಂತು ಮೇಲೆ ನೋಡಿದರೆ ಸಾಲಾಗಿ ಇರುವ ಮೆಟ್ಟಿಲುಗಳು ಸ್ವರ್ಗದ ಸೋಪಾನಗಳಂತೆ ಕಾಣಿಸುತ್ತವೆ. ಈ ಬೆಟ್ಟದ ಮೆಟ್ಟಿಲುಗಳ ಸಂಖ್ಯೆ ಇಲ್ಲಿಂದ ಕಾಶಿಗೆ ಎಷ್ಟು ಯೋಜನಗಳಾಗುತ್ತವೋ ಅಷ್ಟು ಇದ್ದು, ಬೆಟ್ಟವನ್ನು ಹತ್ತಿ ಇಳಿದವರಿಗೆ ಕಾಶಿಗೇ ಹೋಗಿ ಬಂದಷ್ಟು ಪುಣ್ಯ ಲಭಿಸುವುದೆಂಬ ನಂಬುಗೆ ಜನರಲ್ಲಿ ಮನೆಮಾಡಿದೆ. ಅಂತೆಯೇ ರೈಸರು ಹೀಗೆ ಬರೆದಿದ್ದಾರೆ :-

" The number of steps leading to the top is said to equal the number of yojanas hence to Benares. The place is therefore called 'Dakshina Kasi' and an ascent to the top is vicariously as meritorious as a pilgrimage to the holy city. " -Mysore Gezette, P. 90.

ಬೆಟ್ಟವನ್ನು ಹತ್ತಲು ಆರಂಭಿಸಿದಾಗ ಮೊದಲು ಎಡಗಡೆ ಒಂದು ಬೃಹತ್ ಗಣಪತಿಯ ಮೂರ್ತಿ ಕಾಣುತ್ತದೆ. ಇಲ್ಲಿ ಯಾತ್ರಾರ್ಥಿಗಳು ಸಂಕಲ್ಪ ಮಾಡಿ ಬೆಟ್ಟ ಹತ್ತುವರು. ಮುಂದೆ ನಂದಿಮಂಟಪ ಸಿಕ್ಕುತ್ತದೆ. ಆಮೇಲೆ ಸಿಕ್ಕುವುದು ಸುಬ್ರಹ್ಮಣ್ಯಸ್ವಾಮಿ ಸನ್ನಿಧಿ, ಆನಂತರ ದಾರಿ ಕವಲಾಗುತ್ತದೆ. ಬಲಭಾಗಕ್ಕೆ ಹೊರಳುವ ದಾರಿ ಗಂಗಾಧರೇಶ್ವರಸ್ವಾಮಿ ದೇಗುಲಕ್ಕೂ, ಎಡಗಡೆಯ ದಾರಿ ಬೆಟ್ಟದ ತುದಿಯ ಕಡೆಗೂ ಸಾಗುತ್ತವೆ. ಎಡಭಾಗಕ್ಕೆ ಮುಂದೆ ಸಾಗಿದರೆ ಸ್ವಲ್ಪ ದೂರದಲ್ಲೇ ಒರಟುಕೆತ್ತನೆಯ ದೊಡ್ಡದಾದ ಬಸವನ ವಿಗ್ರಹವಿದೆ (೧೨ ಗಜ × ೮ ಗಜ × ೯ ಗಜ). ಅದೇ ಎಮ್ಮೆ ಬಸವಣ್ಣ. ಅಲ್ಲೇ ಒಂದು ಗವಿ ಮತ್ತು ಅದರಲ್ಲಿ ಒಂದು ಲಿಂಗ ಇವೆ. ಮತ್ತೆ ಮುಂದೆ ಸಾಗಿದರೆ ಬಲಭಾಗಕ್ಕೆ ಗಂಜಿವೀರ ಭದ್ರನ ಮೂರ್ತಿ ಇದೆ. ಗಂಗಾಧರೇಶ್ವರ ದೇಗುಲದ ಅಡಿಗೆ ಶಾಲೆಯಿಂದ ಗಂಜಿ ಹರಿದು ಬರುವ ಸ್ಥಳದಲ್ಲಿರುವುದರಿಂದ ಈ ಹೆಸರು ಬಂದಿರಬಹುದು. ಇನ್ನು ಸ್ವಲ್ಪ ಮೇಲಕ್ಕೆ ಹತ್ತಿದರೆ ಕೆಂಪೇಗೌಡನ ಮಂಟಪ ಸಿಕ್ಕುತ್ತದೆ. ಇದು ಶಿಲ್ಪಾಲಂಕಾರ ಹೊಂದಿದ ಕಂಬಗಳನ್ನುಳ್ಳ ಮೂರು ಅಂಕಣದ ಮಂಟಪ. ಇಲ್ಲಿ ಕೆಲವು ಶಾಸನಗಳಿವೆ. ಅಲ್ಲಿಂದ ಮುಂದೆ ಸಾಗಿದಾಗ ಒಂದು ದೊಡ್ಡ ಬಾಗಿಲು ಎದುರಾಗುತ್ತದೆ. ಅದೇ ಗಾರೆಬಸವನ ಬಾಗಿಲು. ಬಾಗಿಲ ಮೇಲೆ ಗಾರೆಯಿಂದ ಮಾಡಿದ ಬಸವನ ಮೂರ್ತಿ ಇದೆ. ಇಲ್ಲಿಯೂ ಒಂದು ಶಾಸನವಿದೆ. ಮುಂದೆ ಹತ್ತಿದರೆ ಆ ಎತ್ತರವಾದ ಸ್ಥಳದಲ್ಲಿ ಬಲಗಡೆಗೆ ಒಂದು ದೊಡ್ಡ ಕೊಣವಿದೆ. ಅದೇ ಆನೆದೊಣೆ. ಸಮೀಪದಲ್ಲೇ ಒಂದು ಶಿವಲಿಂಗದ ಗುಡಿ ಇದ್ದು. ಅಲ್ಲಿ ಒಂದು ಶಾಸನವೂ ಇದೆ. ಇನ್ನೂ ಸ್ವಲ್ಪ ಮುಂದೆ ನಡೆದರೆ ಅಲ್ಲಿ ಚಿಗಟನ ಗವಿ ಸಿಕ್ಕುತ್ತದೆ. ಅದರಲ್ಲಿ ಕೆಲವು ವಿಗ್ರಹಗಳು ಇವೆ. ಅಲ್ಲಿಂದ ಮೇಲೇರತೊಡಗಿದಾಗ ಒಂದು ಕಲ್ಲು ಬಾಗಿಲು ಸಿಕ್ಕುತ್ತದೆ. ಅನತಿ ದೂರದಲ್ಲೇ ಕಣ್ವ ತೀರ್ಥವಿದೆ. ಅದು ೧೬೫೨ ರಲ್ಲಿ. ಶಿವಾಜಿಯ ತಂದೆ ಷಹಜಿಯ ಕಾಲದಲ್ಲಿ ಕಟ್ಟಿದ್ದು ಎಂಬ ಉಲ್ಲೇಖವುಳ್ಳ ಶಾಸನವೊಂದು ಅಲ್ಲಿದೆ. ಮುಂದೆ ಒನಕೆಗಂಡಿ ಎಂಬ ಬಂಡೆಗಳ ನಡುವಿನ ಇಕ್ಕಟ್ಟಾದ ದಾರಿಯ ಮೂಲಕ ಹಾದು ಹೋಗಬೇಕು. ಅಲ್ಲಿಂದ ಮುಂದೆ ಬೆಟ್ಟ ಬಹಳ ಕಡಿದಾಗುತ್ತದೆ. ಹತ್ತುವವರಿಗೆ ಅನುಕೂಲವಾಗಿರಲೆಂದು ಉದ್ದಕ್ಕೂ ಕಬ್ಬಿಣದ ಸರಳುಗಳನ್ನು ಅಳವಡಿಸಿದ್ದಾರೆ. ಪ್ರಯಾಸದಿಂದ ಮೇಲೇರಿದರೆ ಕೋಡಗಲ್ಲು ಸಿಕ್ಕುತ್ತದೆ. ಅದರ ಮೇಲೆ ಕೋಡಗಲ್ಲು ಬಸವ ಇದೆ. ಸುತ್ತಲೂ ಸಾಕಷ್ಟು ಜಾಗವಿಲ್ಲ. ಹಾಗಿದ್ದರೂ ಶಿಲ್ಪಿಗಳು ಅದನ್ನು ಹೇಗೆ ಕಡೆದು ರೂಪಿಸಿದರು ಎಂಬುದು ಆಶ್ಚರ್ಯವಾಗಿಯೇ ಉಳಿಯುತ್ತದೆ. ಅಲ್ಲಿನ ಶಾಸನವೊಂದು ಅದನ್ನು ಕಂಡರಿಸಿದ ಕಾಲ ೧೩೮೮ ಎಂದು ಸೂಚಿಸುತ್ತದೆ. ಮೇಲೆ ಹತ್ತಿ ಬಂದ ಯಾತ್ರಿಕರು ಆ ಬಸವಣ್ಣನನ್ನು ಪ್ರದಕ್ಷಿಣೆ ಮಾಡುವರು. ಅಲ್ಲಿಂದ ಮುಂದೆ ಶೃಂಗ. ಅಲ್ಲಿ ವೀರಭದ್ರನ ಗುಡಿ ಇದೆ. ಉತ್ತರಕ್ಕೆ ಇರುವ ವಿಸ್ತಾರವಾದ ಬಂಡೆಯ ಮೇಲೆ ಎರಡು ಕಲ್ಲುಕಂಬಗಳಿವೆ. ದೊಡ್ಡ ಕಂಬವೇ ತೀರ್ಥಕಂಬ. ಚಿಕ್ಕದು ದೀಪಸ್ತಂಭ, ಇದನ್ನು ಅಗ್ನಿಕಂಬ ಮತ್ತು ಜಲಕಂಬಗಳೆಂದು ಹೆಸರಿಸಿರುವುದೂ ಉಂಟು. ಇವನ್ನೇ ಜನರು ಉರಿಗಂಬ ಮತ್ತು ತೀರ್ಥಕಂಬಗಳೆಂದು ಕರೆಯುತ್ತಾರೆ. ಹಿಂದೆ ವಿಶೇಷ ದಿನಗಳಲ್ಲಿ ಇವೆರಡರ ಮೇಲೆ ದೀಪಗಳನ್ನು ಹಚ್ಚಿಡುತ್ತಿದ್ದರು. ಜಲಸ್ತಂಭವು ಬುಡದಲ್ಲಿ ಎರಡುವರೆ ಅಡಿ ಇದ್ದು ೧೫ ಅಡಿ ಎತ್ತರವಿದೆ. ಆ ಕಂಬದಲ್ಲಿ ಉತ್ತರಕಡೆ ಕೆಳಭಾಗದಲ್ಲಿ ಅಷ್ಟಕೋಣಾಕಾರದ ಒಂದು ತಗ್ಗು ಇದ್ದು ಅದರಿಂದ ಮಕರಸಂಕ್ರಮಣದ ದಿನ ಸ್ವಲ್ಪ ನೀರು ಒಸರುತ್ತದೆ. ಈ ಪವಿತ್ರ ಜಲವನ್ನು ಗಂಗಾಧರೇಶ್ವರನ ಅಭಿಷೇಕಕ್ಕೆ ಬಳಸುವರು. ಆ ಕಂಬದ ಮೇಲು ಭಾಗದಲ್ಲಿ ವೈಷ್ಣವರ ತೆಂಕಲೆನಾಮವನ್ನು ಹೋಲುವ ಶಿಲ್ಪಾಲಂಕಾರವಿದೆ. ಕೆಳಭಾಗದಲ್ಲಿ ನಾಲ್ಕೂ ಕಡೆ ಒಂದೇ ಶಾಸನವನ್ನು ಕೆತ್ತಿದೆ. ಕೂಸು ಬಸವನೆಂಬುವನು ಹೊಯ್ಸಳ ದೊರೆ ನರಸಿಂಹ (೧) (೧೧೪೧–೧೧೭೩)ನ ಕಾಲದಲ್ಲಿ ಈ ಸ್ತಂಭಗಳನ್ನು ಸ್ಥಾಪಿಸಿದನೆಂದು ತಿಳಿಯುತ್ತದೆ. ಇದೇ ವಿಷಯವನ್ನು ಗಂಗಾಧರೇಶ್ವರ ಗುಡಿಯ ಉತ್ತರ ಭಾಗದ ಬಂಡೆಯ ಮೇಲೆ ಕೆತ್ತಿದೆ. ಎಪಿಗ್ರಾಫಿಕ ಕರ್ನಾಟಕ IX ಸಂಪುಟದ

೧೧೬ ನೇ ನೆಲಮಂಗಲ ಶಾಸನದಲ್ಲಿ ಇದು ಉಲ್ಲೇಖವಾಗಿದೆ : "ಸ್ವಸ್ತಿಶ್ರೀ ಕೊಟ್ಟಾರದ ಹೆಗ್ಗಡೆ ಮಾಚಿಮಯ್ಯನ ಹೊಲ್ಲವೆಯ ಪುತ್ರಂ ಶ್ರೀ ನಾರಸಿಂಗ ದೇವರ ಕೂಸ ಬಸವಣ್ಣ ಸಿವಗಂಗೆ ದೇವರ ಬೆಟ್ಟದ ಮೇಲೆ ದೀಪಮಾಲೆಯ ಕಂಬ ನಿಲಿಸಿ......ಬೆಟ್ಟಿದಿಂದ ಮೂಡಣ ಒಂಡಿಸಗೆರೆಯುಂ ಮಾರುಗೊಂಡು ಬಿಟ್ಟಂ ಕೂಸ ಬಸವಣ್ಣ." ಶಿವಗಂಗೆಯ ದೀಪಮಾಲೆಯ ಕಂಬಗಳನ್ನು ನಿಲ್ಲಿಸಿ, ಅದು ಸಾರೋದ್ಧಾರವಾಗಿ ನಡೆದುಕೊಂಡು ಬರುವಂತೆ ದತ್ತಿಯನ್ನು ಕೊಟ್ಟವನು ಕೂಸು ಬಸವಣ್ಣ ಎಂಬುದು ಸ್ಪಷ್ಟ. ಈತನೇ ನೆಲಮನೆಯ ರೇವಣಸಿದ್ಧೇಶ್ವರನ ಬೆಟ್ಟದ ಬಳಿಯ ಭೈರವ ದೇವಾಲಯವನ್ನು ಕಟ್ಟಿಸಿದಂತೆ ತಿಳಿಯುತ್ತದೆ. ರೇವಣಸಿದ್ಧರು ಭೈರವ ಭಕ್ತರ ರಕ್ಷಕರು. ಅದ್ದರಿಂದ ಕೂಸಬಸವನು ರೇವಣಸಿದ್ಧರ ಆದೇಶದಂತೆ ಇದನ್ನು ನೆರವೇರಿಸಿದನೆಂದು ತರ್ಕಿಸಬಹುದು.

ಈ ಎರಡು ಕಂಬಗಳನ್ನು ನಿಲ್ಲಿಸಿರುವ ದೊಡ್ಡ ಬಂಡೆಯ ಒಂದುಭಾಗ ಮುಂಚಾಚಿಕೊಂಡು ಯಾವ ಆಧಾರವೂ ಇಲ್ಲದೆ ನಿಂತಿದೆ. ಆ ಚಾಚುಭಾಗದಲ್ಲಿ ಎರಡುಕೊಂಡಿಗಳನ್ನು ಅಳವಡಿಸಲಾಗಿದ್ದು, ಅವುಗಳಲ್ಲಿ ಒಂದು ಚಿನ್ನದ್ದು. ಮತ್ತೊಂದು ಬೆಳ್ಳಿಯದು ಹೀಗೆ ಎರಡು ಗಂಟೆಗಳನ್ನು ತಗಲುಹಾಕಿತ್ತೆಂದು ತಿಳಿದುಬರುತ್ತದೆ. ಈಗ ಅವು ಇಲ್ಲ. ಯಾವ ಆಸರೆಯೂ ಇಲ್ಲದ ಈ ಕಡಿದಾದ ಬಂಡೆಗೆ ಹೇಗೆ ಕೊಂಡಿಗಳನ್ನು ಹಾಕಿದರು ಎಂಬುದು ಇಂದಿಗೂ ಸೋಜಿಗದ ಸಂಗತಿಯಾಗಿ ಉಳಿದಿದೆ. ಶೃಂಗಾಗ್ರದಲ್ಲಿ ಕನ್ನಡ ಹಾಗೂ ನಾಗರೀ ಲಿಪಿಯ ಅನೇಕ ಶಾಸನಗಳು ಇವೆ (ಮೈ ಆರ್. ೧೯೧೪-೧೫, ಭಾಗ-೧ ಪುಟ. ೬೧). ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲಾದೇವಿ ೧೧೩೧ರಲ್ಲಿ ಈ ಕುಂಭಿಯ ಮೇಲಿಂದ ಬಿದ್ದು ಸತ್ತಳೆಂದು ಶಾಸನವೊಂದು ತಿಳಿಸುತ್ತದೆ. "ಸಕ ವರ್ಷಂ ೧೦೫೦ ಮೂಱನೆಯ ವಿರೋಧಿ ಕಿತ್ಸಂವರದ ಚೈತ್ರ ಸುದ್ಧ ಪಂಚಮೀ ಸೋಮವಾರದಂದು ಶಿವಗಂಗೆಯ ತೀರ್ತ್ಥದಲು ಮುಡಿಪಿ ಸ್ವರ್ಗತೆಯಾದಳು" (ಎಪಿಗ್ರಾಫಿಕ ಕರ್ನಾಟಕ ೨ನೇ ಸಂಪುಟದ ೧೪೩ (೫೩) ಶಾಸನ. ಸಾಲು ೯೩-೯೬ ; ಕಾಲ ೧೧೩೧).

ಬೆಟ್ಟದ ಕೆಳಗಿನ ಮಹಾದ್ವಾರದಿಂದ ಹಿಡಿದು ಕೋಡುಗಲ್ಲು ಬಸವನವರೆಗೆ ಹೀಗೆ ಸಿಕ್ಕುವ ಅನೇಕ ತೀರ್ಥಗಳು, ಗವಿಗಳು, ಕಲಾಮೂರ್ತಿಗಳು, ನಾನಾ ಹೆಸರಿನ ಬಂಡೆಗಳು, ಸಿದ್ಧಸ್ಥಾನಗಳು, ಪಾವನನೆಲೆಗಳು,ರಮ್ಯದೃಶ್ಯಗಳು ಇವನ್ನು ನೋಡಿಕೊಂಡು ಶೃಂಗದಿಂದ ಕೆಳಗೆ ಇಳಿಯುತ್ತಾ ಬೆಟ್ಟದ ಅರೆದಪ್ಪಲಿಗೆ, ದಾರಿ ಕವಲೊಡೆದಲ್ಲಿಗೆ, ಬರಬೇಕು. ಅಲ್ಲಿಂದ ಬಲಗಡೆಗೆ ತಿರುಗುವ ದಾರಿಯಲ್ಲಿ ಸ್ವಲ್ಪದೂರ ಸಾಗಿದರೆ ನಮಗೆ ಮೊದಲು ಸಿಕ್ಕುವುದು ಗಂಗಾಧರೇಶ್ವರನ ಗುಡಿ. ಇದೊಂದು ಸ್ವಾಭಾವಿಕವಾದ ಗುಹೆ. ಇದು ಸುಮಾರು ೪೦ಅಡಿ ಉದ್ದ, ೩೦ ಅಡಿ ಅಗಲವಿದ್ದು ಕಂಬಗಳೇ ಇಲ್ಲದೆ ಅಖಂಡವಾದ ಬಂಡೆಯೊಂದನ್ನು ಮೇಲ್ಛಾವಣಿಯಾಗಿ ಹೊಂದಿದೆ. ಉತ್ತರ ಮತ್ತು ಪೂರ್ವದಿಕ್ಕುಗಳಲ್ಲಿ ಎರಡು ಮಹಾದ್ವಾರಗಳಿದ್ದು ಅವುಗಳ ಮೇಲೆ ಗೋಪುರಗಳನ್ನು ಕಟ್ಟಿದ್ದಾರೆ. ಗುಡಿಯ ಮಹಾದ್ವಾರಕ್ಕೂ ಗವಿಯ ಭಾಗಕ್ಕೂ ನಡುವೆ ಕೆಂಪೇಗೌಡನ ಹಜಾರವಿದೆ. ಅಲ್ಲಿರುವ ಕಲ್ಯಾಣಮಂಟಪ ಹಾಗೂ ನಂದಿಮಂಟಪಗಳು ಆಕರ್ಷಕವಾಗಿವೆ. ಅಲ್ಲಿನ ಕಂಬಗಳ ಶಿಲ್ಪಕಲಾಚಾತುರ್ಯ ಮೆಚ್ಚುವಂತಿದೆ. ಪೂರ್ವಾಭಿಮುಖವಾಗಿರುವ ಗಂಗಾಧರೇಶ್ವರ ಲಿಂಗವು ಎಂಟು ಅಡಿಗಳ ಎತ್ತರವಿದೆ. ಎದುರಿನಲ್ಲಿ ನಂದಿವಿಗ್ರಹವಿದೆ. ಹೊಯ್ಸಳ ಶಿಲ್ಪಕಲೆ ಎದ್ದು ಕಾಣುತ್ತದೆ. ಗುಹೆಯ ಒಳಗಡೆ ಬೇರೆಬೇರೆ ಕಡೆ ಖಜಾನೆಗಣಪತಿ, ಹರಿಹರ, ಸುಬ್ರಮಣ್ಯಮೂರ್ತಿಗಳು ಇವೆ. ಇವಲ್ಲದೆ ಹೊಯ್ಸಳರ, ವಿಜಯನಗರದ ಹಾಗೂ ಪಾಳೆಗಾರರ ಕಾಲದ ಕಲ್ಲಿನ ಹಾಗೂ ಲೋಹದ ಮೂವತ್ತಕ್ಕೂ ಹೆಚ್ಚಿನ ಪ್ರತಿಮೆಗಳು ಇಲ್ಲಿವೆ. ಹೀಗಾಗಿ ಈ ದೇಗುಲ ಒಂದು ಚಿತ್ರಕೂಟವೆನಿಸಿದೆ. ಇಲ್ಲಿಯೇ ಕೆಂಪೇಗೌಡನ ಪ್ರತಿಮೆಯೊಂದಿದ್ದು ಅದರ ಮೇಲೆ ೧೬೦೮ ಎಂದು ಕಾಲವನ್ನು ಸೂಚಿಸಲಾಗಿದೆ. ಇದರೊಡನೆ ಇನ್ನು ಕೆಲವು ಪ್ರತಿಮೆಗಳಿವೆ. ಆ ದೇವರಿಗೆ ನಡೆದುಕೊಂಡ ರಾಜರ ಪಾಳೆಯಗಾರರ ಪ್ರತಿಮೆಗಳು ಇವು ಎಂದು ಊಹಿಸಬಹುದು. ದೇವಸ್ಥಾನದ ನವರಂಗ ಹಾಗೂ ನಂದಿಮಂಟಪಗಳಲ್ಲಿಯೂ ಹೊಯ್ಸಳ ಶಿಲ್ಪಿಗಳ ಕೈವಾಡ ಎದ್ದುಕಾಣುತ್ತದೆ. ಅಲ್ಲಿನ ಕಂಬಗಳ ಮೇಲಿನ ಶಾಸನಗಳು ೧೧೯೬ರ ಕಾಲದವು. ದೇವಸ್ಥಾನದಲ್ಲಿ ಅನೇಕ ಗಂಟೆಗಳಿದ್ದು ಒಂದು ಓಂಕಾರಗಂಟೆಯ ಮೇಲೆ ಕೆಂಪೇಗೌಡನ ದಾನ ಎಂಬ ಉಲ್ಲೇಖವಿದೆ. ಒಟ್ಟಾರೆ ಈ ದೇಗುಲವು ದಿವ್ಯವೂ, ಭವ್ಯವೂ ಆಗಿದ್ದು ಹೊಯ್ಸಳ, ವಿಜಯನಗರ ಹಾಗೂ ಪಾಳೆಯಗಾರರ ಕಾಲಗಳಲ್ಲಿ ಕ್ರಮೇಣ ಅಭಿವೃದ್ಧಿಯನ್ನು ಪಡೆದಿದೆ ಎಂಬುದು ಸ್ಪಷ್ಟವಾಗಿ ಕಾಣುತ್ತದೆ.

ಕೆಂಪೇಗೌಡನ ಹಜಾರದಿಂದ ಪೂರ್ವಕ್ಕೆ 'ಚಕ್ರತೀರ್ಥ'ವೆಂಬ ವರ್ತುಲಾಕಾರದ ಒಂದು ಸುಂದರ ಹೊಂಡವಿದೆ. ಪಶ್ಚಿಮಕ್ಕೆ ಎತ್ತರದಲ್ಲಿ ಶಂಕರಾಚಾರ್ಯ ತೀರ್ಥವಿದೆ. ಇಲ್ಲಿ ಶಂಕರಾಚಾರ್ಯರು ತಪಸ್ಸು ಮಾಡಿದರೆಂದು ತಿಳಿದು ಬರುತ್ತದೆ. ಉತ್ತರದ ಇಳಿಜಾರಿನಲ್ಲಿ ಮೈತ್ರೇಯ ತೀರ್ಥವಿದೆ. ದಕ್ಷಿಣಕ್ಕೆ ಆಳವಾದ ಗವಿಯಲ್ಲಿ ಮೌದ್ಗಲ್ಯ ತೀರ್ಥವಿದೆ. ಅಲ್ಲಿಯೇ ಮುಂದೆ ವೀರೇಶ್ವರನ ಗುಡಿ ಇದ್ದು ಅಲ್ಲಿ ೫ ಅಡಿಯ ಸುಂದರಮೂರ್ತಿಯನ್ನು ಬಂಡೆಯಲ್ಲೇ ಕೆತ್ತಲಾಗಿದೆ. ಅಲ್ಲಿ ಎರಡು ಶಾಸನಗಳಿವೆ. ಅಲ್ಲಿಂದ ತುಸು ದೂರದಲ್ಲಿ ಒಂದು ಸೊಗಸಾದ ಕಲ್ಯಾಣಿ, ಬಾವಿ, ಒಂದು ಸಣ್ಣ ಮಂಟಪ ಇವೆ. ಕೆಳಗಡೆ ಮೈಸೂರರಸ ಚಿಕ್ಕದೇವ ರಾಜನ ಆಶ್ರಿತನಾದ ದಾಸರಾಜಯ್ಯ ಕಟ್ಟಿಸಿದ ಕಲ್ಯಾಣಿ ಇದೆ. ಇಲ್ಲೇ 'ಪಾದವರೆ' ಇರುವುದು. ಗಂಗಾಧರೇಶ್ವರ ಮತ್ತು ಹೊನ್ನಾದೇವಿಯರದೆಂದು ನಂಬಲಾದ ಪಾದಗಳನ್ನು ಅಲ್ಲಿ ಕೆತ್ತಲಾಗಿದೆ.

ಗಂಗಾಧರೇಶ್ವರನ ದೊಡ್ಡ ಗುಹೆಯ ಉತ್ತರ ದಿಕ್ಕಿಗಿರುವ ಇನ್ನೊಂದು ಗುಹೆಯೇ ಹೊನ್ನಾದೇವಿಯ ಗುಡಿ. ಅಲ್ಲಿರುವ ಹೊನ್ನಮ್ಮನ ಐದಡಿಯ ಮೂರ್ತಿ ಸುಂದರವಾಗಿದೆ. ಎಂಟು ಕೈಗಳಲ್ಲಿ ಶಂಖ, ಚಕ್ರ, ಘಂಟೆ, ರುಂಡ, ಪರಶು, ಕತ್ತಿಗಳಿದ್ದು ದೇವಿ ಚಂಡಮುಂಡರನ್ನು ದಂಡಿಸುವಂತೆ ಕೆತ್ತಲಾಗಿದೆ. ಹೊನ್ನಾದೇವಿ ಎಂಬುದು ಸ್ವರ್ಣಾಂಬ ಎಂಬುದರ ಕನ್ನಡ ಭಾಷಾಂತರ. ಈ ಮೂರ್ತಿಯ ಪಕ್ಕದಲ್ಲಿ ಹಿರಿದ ಕತ್ತಿಯ ನಾಲ್ಕೂವರೆ ಅಡಿ ಎತ್ತರದ ಸ್ತ್ರೀ ಮೂರ್ತಿಗಳಿದ್ದು ಈಗ ಒಂದು ಮಾತ್ರ ಉಳಿದಿದೆ. ಮೈಸೂರರಸರು ಹೊನ್ನಾದೇವಿಗೆ ಆಭರಣಗಳನ್ನು ಮಾಡಿಸಿಕೊಟ್ಟಿರುವ ಬಗ್ಗೆ ಉಲ್ಲೇಖವಿದೆ.

ಹೊನ್ನಾದೇವಿಯ ಗುಡಿಯ ಹಿಂದೆ ಕೆಳಗಣ ಗವಿಮಠವಿದೆ. ಅದರ ಬಳಿಯೇ ಕಡಿದಾದ ಬಂಡೆಗಳ ನಡುವೆ ಆಳದಲ್ಲಿ ಪಾತಾಳತೀರ್ಥವಿದೆ. ನಲವತ್ತು ಮೆಟ್ಟಿಲುಗಳನ್ನು ಇಳಿದರೆ ತೀರ್ಥ ಸಿಕ್ಕುತ್ತದೆ. ಪಾರ್ವತಿಗೆ ಬಾಯಾರಿ ಶಿವನನ್ನು ನೀರಿಗಾಗಿ ಯಾಚಿಸಿದಳೆಂದೂ, ಶಿವನು ಗಂಗೆಯನ್ನು ಕೊಡದೆ ಹೋದಾಗ ಕೋಪದಿಂದ ಕಾಳಿಯಾಗಿ ಖಡ್ಗದಿಂದ ಬಂಡೆಯನ್ನು ಹೊಡೆದ ಳೆಂದೂ ಆಗ ಗಂಗೆ ಉದ್ಭವವಾಗಿ ಅವಳ ಬಾಯಾರಿಕೆಯನ್ನು ತಣಿಸಿದಳೆಂದೂ ಸ್ಥಳ ಪುರಾಣ ಹೇಳುತ್ತದೆ. ಪಾತಾಳತೀರ್ಥಕ್ಕೆ ಹೋಗುವ ದಾರಿಯಲ್ಲಿ ಕೆಲವು ಗದ್ದುಗೆಗಳಿವೆ. ಅವು ಆ ಮಠದ ಗುರುಗಳವು ಎಂದು ತಿಳಿದು ಬರುತ್ತದೆ. ಎಡಭಾಗದ ಬಂಡೆ ಯಲ್ಲಿ ೯ ಅಡಿ ಎತ್ತರದ ವೀರಭದ್ರನ ಮೂರ್ತಿಯನ್ನು ಕೆತ್ತಿದೆ. ಪಾತಾಳಗಂಗೆಯಲ್ಲಿ ಮಿಂದ ಭಕ್ತರು ಈ ವೀರಭದ್ರನನ್ನು ಆರಾಧಿಸಿ ಮುಂದೆ ಸಾಗುವರು.

ಇದಿಷ್ಟು ಯಾತ್ರಾರ್ಥಿ ಶಿವಗಂಗೆಯಲ್ಲಿ ಕಾಣಬಹುದಾದ ಸ್ಥೂಲವಾದ ಭೌತಿಕ ಸನ್ನಿವೇಶ. ಇಂದು ಕಾಣದೆ ಇರುವ, ಇತಿಹಾಸ ಸಂಶೋಧಕರಿಗೆ ಪೂರ್ಣ ಗೋಚರಿಸದೆ ಇರುವ ತನ್ನದೇ ಆದ ವಿಶಿಷ್ಟ ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸ ಇದಕ್ಕಿದೆ ಎಂಬ ಅಂಶವನ್ನು ನಾವು ನಂಬಬೇಕು. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಕ್ರಾಂತಿಯ ನಂತರ ಬಸವಣ್ಣನವರ ಅನುಯಾಯಿಗಳಾಗಿದ್ದ ಶರಣರು ಹಲವಾರು ತಂಡಗಳಾಗಿ ಅನೇಕ ಕಡೆ ಚೆದುರಿದರು. ಅಲ್ಲಲ್ಲಿ ಸಂಘಟಿತರಾದ ಶರಣರು ಬೇರೆ ಬೇರೆ ಕಡೆಗಳಲ್ಲಿ ಬಸವಣ್ಣನವರು ಆರಂಭಿಸಿದ ಮಹಾಕಾರ್ಯವನ್ನು ಮುಂದುವರಿಸುವ ದಿಸೆಯಲ್ಲಿ ಶ್ರಮಿಸ ತೊಡಗಿದರು. ಒಂದು ಗುಂಪು ಉಳವಿಯಲ್ಲಿ, ಇನ್ನೊಂದು ಗುಂಪು ಸೊಲ್ಲಾಪುರದಲ್ಲಿ, ಮತ್ತೊಂದು ಗುಂಪು ಹಂಪೆಯಲ್ಲಿ ಹೀಗೆ ಸದ್ದುಗದ್ದಲವಿಲ್ಲದೆ, ತಮ್ಮನ್ನು ಮರೆಸದೆ, ತನ್ನನ್ನೂ ಸಮಷ್ಟಿಯಲ್ಲಿ ಒಂದಾಗಿಸಿ ಮಾನವ ಹಿತಸಾಧನೆಯ ಮಹಾ ಕಾರ್ಯವನ್ನು ಪುನರುಜ್ಜೀವನಗೊಳಿಸಲು ಶ್ರಮಿಸಿದರು. ಹಾಗೆ ಕಲ್ಯಾಣದಿಂದ ಹೊರಟ ಕೆಲವು ಶರಣರು ಶಿವಗಂಗೆಯನ್ನು ಕೇಂದ್ರವನ್ನಾಗಿ ಮಾಡಿಕೊಂಡು ಕ್ರಿಯಾಶೀಲರಾದರು. ಶಿವಗಂಗಾ ಕ್ಷೇತ್ರದ ಸುತ್ತಮುತ್ತ ಈಗಲೂ ಕಾಣಿಸುವ ಅವಶೇಷಗಳು ಅಲ್ಲಿ ನಡೆದ ಆಧ್ಯಾತ್ಮಿಕ ಚಟುವಟಿಕೆಗಳನ್ನು ಕಲ್ಪಿಸಿಕೊಳ್ಳಲು ಸಹಾಯಕವಾಗಿವೆ.

ಶಿವಗಂಗೆಯಲ್ಲಿ ಆಗಿ ಹೋದ ಹೊನ್ನಮ್ಮ, ಕಲ್ಲಿಯದ ಸರ್ವಶೀಲೆ ಚನ್ನಮ್ಮನಂತೆಯೇ ಒಬ್ಬ ಮಹಾ ಶರಣೆಯಾಗಿರ ಬೇಕು. ಆಕೆ ವೀರಶೈವ ಧರ್ಮಪ್ರಸಾರ ಹಾಗೂ ಶರಣರ ಸಂಘಟನೆಗೆ ಯತ್ನಿಸಿರಬೇಕು. ಹೊನ್ನಮ್ಮನು ಬಸವತತ್ವ ಪ್ರಸಾರ ಹಾಗೂ ಶರಣ ಧರ್ಮ ಸಂವರ್ಧನೆಗೆ ಅನೇಕ ಶರಣರನ್ನು ಕಂಕಣಬದ್ಧರನ್ನಾಗಿ ಮಾಡಿದಳೆಂಬುದನ್ನು ವಿರೂಪಾಕ್ಷ ಪಂಡಿತ ತನ್ನ ಚೆನ್ನಬಸವಪುರಾಣದಲ್ಲಿ ಹೀಗೆ ಹೇಳಿದ್ದಾನೆ :

> ........................ಚಿಕ್ಕಸಿದ್ಧೇಶ್ವರಂ
> ಚರಪತಿಗಳಂ ಕೂಡಿಕೊಂಡು ಚರಿಸುತ್ತೆಬಂ
> ದಿರದೆ **ಶಿವಗಂಗೆ ಗೈತಂದು ಹೊನ್ನಾದೇವಿ**ಯಿಂದೆ ಕಂಕಣವ ಪಡೆವಂ
>
> (ಚನ್ನಬಸವ ಪುರಾಣ. ೬೨-೩೩)

ಅಲ್ಲದೆ ಶಿವಗಂಗೆಯಲ್ಲಿ ಮತ್ತು ಅದರ ಸುತ್ತಮುತ್ತಣ ಪರಿಸರದಲ್ಲಿ ಶರಣರ ಸಂಘಟನೆಯ ಕಾರ್ಯ ನಡೆಯಿತೆಂಬ ಬಗ್ಗೆ ಅದೇ ಕವಿ ಕಾಲಜ್ಞಾನದ ಸಂಧಿಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ :

> ಎಲೆಸಿದ್ಧರಾಮ ಕೇಳ್ ಜಸದಿ ಕಲ್ಯಾಣ
> ವಳಿಯಲಾ ಪ್ರಜೆಗಳಂ ತುರುಕರಾಕ್ಷಸರಾಗ
> ಸುಲಿದು ಸೂರ್‍ಯಾಡಲಾ ಗುಮ್ಮಣ ಪೆಮ್ಮಣಯ್ಯಗಳೆನಿಪ ವ್ರತಿಗಳಿರದೆ
> ನೆಲೆಗೆಟ್ಟು ಪೋಗಿ **ದಕ್ಷಿಣಕಾಶಿ**ಯೆನಿಸಿ ಭೂ
> ತಳದೊಳಗೆ ಮೆರೆವ **ಶಿವಗಂಗೆ**ಯ ಸಮೀಪ ಸು
> ಸ್ಥಳದೊಳಗೆ ಪುರವನುರೆ ರಚಿಪರಾ ಗುಮ್ಮಣ ಪೆಮ್ಮಣಯ್ಯಗಳೆಂಬರು (ಅದೇ. ೬೨-೪೫)

ಒಂದು ಕಾಲದಲ್ಲಿ ಶಿವಗಂಗೆಯಲ್ಲಿ ೬೪ ವೀರಶೈವ ಮಠಗಳಿದ್ದುವು ಎಂಬ ಉಲ್ಲೇಖ ಇಂಥ ಕಾರ್ಯಗಳು ಅಲ್ಲಿ ನಡೆದಿದ್ದುವು ಎಂಬುದನ್ನು ಸಮರ್ಥಿಸುತ್ತದೆ. ಉದಾಹರಣೆಗೆ ಮೇಲಣಗವಿಮಠ, ಕೆಳಗಣಗವಿಮಠ ಹಾಗೂ ಹೊನ್ನಮ್ಮನ ಗವಿಮಠಗಳು. ಶಿವಗಂಗೆಯ ಪರಿಸರದಲ್ಲಿರುವ ವೀರಶೈವ ಕ್ಷೇತ್ರಗಳು ಜೀವಂತ ಸಾಕ್ಷಿಯಾಗಿ ನಿಂತಿವೆ. ಉದಾಹರಣೆಗೆ— ಕಂಬಾಳುಮಠ, ಕಂಚುಕಲ್ ಬಂಡಮಠ, ಮುಸ್ಕಲ್‌ಮಠ, ತೋಟಿನಮಠ, ಕಣ್ಣೂರುಮಠ, ತಪ್ಪಸಂದ್ರಮಠ, ಹುತ್ರಿದುರ್ಗದ ಮಠ, ಕಲ್ಲೆಯದ ಸರ್ಪಶಿಲೆ ಚೆನ್ನಮ್ಮನಮಠ, ಕಾಚಕಲ್ಲಪ್ಪನ ಗದ್ದಿಗೆ, ನೆಲಮಂಗಲದ ಬಸವಣ್ಣದೇವರಮಠವೇ ಮೊದಲಾದ ನಾಲ್ಕು ಮಠಗಳು, ಹೊಸೂರು, ಅಂಕನಹಳ್ಳಿ, ಕುಪ್ಪೂರುಗದ್ದುಗೆ, ಬೆಟ್ಟಹಳ್ಳಿ, ಸಾವನದುರ್ಗ, ಕುಣಿಗಲ್, ಚಕ್ರಭಾವಿ, ಗುಡೇಮಾರನಹಳ್ಳಿ, ಸೋಲೂರು, ಬೆಂಗಳೂರು ಮುಂತಾದಕಡೆ ಇರುವ ಪ್ರಸಿದ್ಧ ಮಠಗಳೂ, ಇವಲ್ಲದೆ ಹುಲಿಯೂರು ದುರ್ಗದಮಠ, ಮಧುಗಿರಿಮಠ, ಸಿದ್ಧನಬೆಟ್ಟದ ಗದ್ದುಗೆ, ಜೋಳಬಸವೇಶ್ವರರ ಗದ್ದುಗೆ, ಸಿದ್ಧಗಂಗಾಕ್ಷೇತ್ರ, ಎಲೆವನಹಳ್ಳಿ, ತಾವರೆಕೆರೆ, ಹುಲಿಕಟ್ಟೆ, ವಿರುಪಸಂದ್ರ, ಕಗ್ಗೆರೆಕ್ಷೇತ್ರ, ಎಡೆಯೂರು, ತುಮಕೂರು ಮೊದಲಾದ ಕಡೆ ಇರುವ ಮಠಗಳು.

ಶಿವಗಂಗೆಯ ವಾಯುವ್ಯಕ್ಕೆ ೫ ಕಿಲೋಮೀಟರ್ ದೂರದಲ್ಲಿ ಸಿದ್ಧರಬೆಟ್ಟ. ೧೨ ಕಿಲೋಮೀಟರ್ ದೂರದಲ್ಲಿ ಸಿದ್ಧಗಂಗೆ ಮತ್ತುರಾಮೇಶ್ವರವೆಂಬ ಅವಳಿ ಬೆಟ್ಟಗಳು, ಅಲ್ಲಿಂದ ಸುಮಾರು ೨ ಕಿಲೋಮೀಟರ್ ದೂರದಲ್ಲಿ ಬೆಳುಗುಂಬದಲ್ಲಿ ಸಿದ್ಧರಾಮೇಶ್ವರ ಗದ್ದುಗೆ ಇದೆ. ಈಗಲೂ ಅಲ್ಲಿ ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ತುಮಕೂರು ಪಕ್ಕದ ಗೂಳೂರಿನಲ್ಲಿ ಮಠವಿದೆ. ಶೂನ್ಯಸಂಪಾದನೆಕಾರ ಸಿದ್ಧವೀರಣ್ಣೊಡೆಯ ಅಲ್ಲಿಯವನೇ. ಕನ್ನಡನಾಡಿನ ಗಡಿಯಲ್ಲಿರುವ ಹೊಸೂರು ತಾಲ್ಲೂಕು ಗುಮ್ಮಳಾಪುರದಲ್ಲಿ ಒಂದು ಶೂನ್ಯಸಂಪಾದನೆ ಮೂಡಿ ಬಂತು. ಅಲ್ಲಿಯೂ ಕೂಡ ಅನೇಕ ಮಠಮಾನ್ಯಗಳಿವೆ. ಅದೂ ಕೂಡ ಹಿಂದೆ ವೀರಶೈವರ ಸುಪ್ರಸಿದ್ಧ ಕ್ಷೇತ್ರವಾಗಿತ್ತೆಂಬುದರಲ್ಲಿ ಸಂಶಯವಿಲ್ಲ. ಇಲ್ಲಿ ಉಲ್ಲೇಖಿಸಬೇಕಾದ ಇನ್ನೊಂದು ಜಾಗೃತಿಯ ತಾಣವೆಂದರೆ ಚಾಮರಾಜನಗರ ತಾಲ್ಲೂಕು ಹರದನಹಳ್ಳಿ. ನಿಜಗುಣ ಶಿವಯೋಗಿಗಳ ತಪೋಭೂಮಿಯಾದ ಶಂಭುಲಿಂಗನ ಬೆಟ್ಟವು ಅಲ್ಲಿಗೆ ಸಮೀಪವಾಗುತ್ತದೆ. ಮಲೆಯ ಮಾದೇಶ್ವರ ನಿರಂಜನ ಜಗದ್ಗುರು ಪೀಠಾಚಾರ್ಯರಲ್ಲಿ ಒಬ್ಬನೆಂಬುದು ಗಮನಾರ್ಹ.

ಶಿವಗಂಗೆಯ ಮೇಲಣಗವಿಯಂತೂ ಅನೇಕ ವಿಭೂತಿಪುರುಷರಿದ್ದ ಪಾವನ ತಾಣ. ಗುಬ್ಬಿಯ ಮಲ್ಲಣಾರ್ಯ 'ವೀರಶೈವಾಮೃತಮಹಾಪುರಾಣ'ದಲ್ಲಿ ತನ್ನ ಗುರುಪರಂಪರೆಯನ್ನು ಹೇಳಿಕೊಳ್ಳುವಾಗ ಈ ಮಠದಲ್ಲಿ ಆಗಿ ಹೋದ ಆಚಾರ್ಯರ ಪಟ್ಟಿಯನ್ನೇ ಕೊಟ್ಟಿದ್ದಾನೆ; "ಮೇಲಣಗವಿಯ ಮಲೆಯ ಶಾಂತೇಶ್ವರನ ಪರಿವಿಡಿಯ ಶಂಭುಲಿಂಗದೇಶಿಕ ಮಲೆಯ ವೀರೇಶ ಸಿದ್ಧರಾಮಸ್ವಾಮಿಯೂ ಕರಕಮಲ ಸಂಜಾತ...ಗುರುಶಾಂತ ನಂಜೇಶ್ವರ" (ವೀರಶೈವಾಮೃತಮಹಾಪುರಾಣ. ೧-೧-೬) ಎಂದು ಹೇಳುವಾಗ ಮಲೆಯ ಶಾಂತೇಶ್ವರನ ಪರಂಪರೆಯ ಗುರುಗಳ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಎಪಿಗ್ರಾಫಿಕ ಕರ್ನಾಟಕ IXರ ದೊಡ್ಡಬಳ್ಳಾಪುರದ ೪೦ನೇ ಶಾಸನದಲ್ಲಿ (ಕಾಲ. ೧೫೪೨) ಈ ಬಗ್ಗೆ ಪ್ರಸ್ತಾಪವಿದೆ: ದಳವಾಯಿ ಸೋಂಣಪ ನಾಯಕರ ಮಕ್ಕಳು ಭೈರಪ್ಪನಾಯಕರು ಶಿವಗಂಗೆಯ ಮೇಲಣ ಗವಿಯ ಸಿಂಹಾಸನದ ಮಲೆಯ ಶಾಂತದೇವರಿಗೆ ಕೊಟ್ಟ ಧರ್ಮಶಾಸನದ ಕ್ರಮವೆಂತೆಂದರೆ...ಶಿವಪೂಜೆಯಂ ಮಾಡಿಕೊಂಡು ಸುಖದಿಂದಾ ಅನುಭವಿಸುವುದುಯೆಂದು ಕೊಟ್ಟ ಪುರಧರ್ಮಶಾಸನ. –ಇಂಥ ದಾಖಲೆಗಳಿಂದ ಆ ಮಠದ ಗುರುಪರಂಪರೆಯಲ್ಲಿ ಶಂಭುದೇಶಿಕ, ಮಲೆಯ ವೀರೇಶ, ಸಿದ್ಧರಾಮಸ್ವಾಮಿ, ಗುರುಶಾಂತ, ನಂಜೇಶ್ವರ ಮುಂತಾದ ಮಹಾನುಭಾವರು ಆಗಿಹೋಗಿರುವುದು ತಿಳಿದುಬರುತ್ತದೆ.

ಪಂಚಾಚಾರ್ಯರಲ್ಲಿ ಒಬ್ಬರಾದ ರೇಣುಕಾಚಾರ್ಯರ ಮಗ ರುದ್ರಮುನಿಗಳು ಕಲ್ಯಾಣದಿಂದ ಇಲ್ಲಿಗೆ ಬಂದು ಮಠವನ್ನು ಸ್ಥಾಪಿಸಿ, ಆ ಕ್ಷೇತ್ರವನ್ನು ವೀರಶೈವ ಧರ್ಮ ಹಾಗೂ ಸಂಸ್ಕೃತಿಗಳ ಸಂವರ್ಧನ ಕೇಂದ್ರವನ್ನಾಗಿ ಮಾಡಿಕೊಂಡಿದ್ದರೆಂಬುದು ಗಮನಾರ್ಹ. ಮೇಲಣ ಗವಿ ಮಠದಲ್ಲಿ ರುದ್ರಮುನಿ ಗವಿ ಇದೆ. ಒರಳು ತೀರ್ಥದ ಪಕ್ಕದಲ್ಲಿ ಒಂದೂವರೆ ಅಡಿ ಎತ್ತರದ ಚತುರ್ಬಾಹು ಮತ್ತು ರುಂಡಮಾಲಾಧಾರಿಯಾದ ರುದ್ರಮುನಿ ಸ್ವಾಮಿಯ ಮೂರ್ತಿ ಇದೆ. 'ರುದ್ರಮುನೀಂದ್ರನಾಮಮುನಿ ಮುಖ್ಯನಿಳಾತಳದಲ್ಲಿ ಪೆರ್ಮೆವೆತ್ತು...ಕ್ಷುದ್ರ ಮತಂಗಳಂ ಜಯಿಸಿ ಬೆಳ್ಳಿಸಮೆಣ್ಣೆಸೆದೀವೆ ಸಂತತಂ ಭದ್ರಚರಸ್ವರೂಪನೆಸೆದಂ' (ಶ್ರೀ ರೇವಣ ಸಿದ್ಧೇಶ್ವರರು ೩೯೮) ಎಂಬ ಉಲ್ಲೇಖವೂ ಅದನ್ನೇ ದೃಢಪಡಿಸುತ್ತದೆ. ಇದಲ್ಲದೆ ಮರುಳಸಿದ್ಧ, ಸಿದ್ಧರಾಮ ಹಾಗೂ ರೇವಣಸಿದ್ಧತ್ರಯರು ವೀರಶೈವ ಧರ್ಮದ ಉದ್ಧಾರಕ್ಕಾಗಿ ನಾಡಿನಲ್ಲೆಲ್ಲ ಸುತ್ತಾಡುತ್ತಾ ಈ ಕ್ಷೇತ್ರದಲ್ಲೂ ಇದ್ದರೆಂಬುದಕ್ಕೆ ಆಧಾರಗಳಿವೆ. "ಸಿದರಾಮೇಶ್ವರ ದೇವರಿಗೆ ಕೆಂಚ ಸೋಮಣನಾಯಕರು ಪ್ರಭವ ಸಂವತ್ಸರದ ಕಾರ್ತಿಕ ಶು ೧೧ ಲು ದೇವಗೊಂಡನ ಹಳಿಯನು ಪುರವಾಗಿ...ಕೊಟ" ಎಂಬ ಎಪಿಗ್ರಾಫಿಕ ಕರ್ಣಾಟಕ IX(s) ನೆಲಮಂಗಲದ ೧೫೭ನೇ ಶಾಸನ ಸಿದ್ಧರಾಮೇಶ್ವರರಿಗೆ ದೇವಗೊಂಡನ ಹಳ್ಳಿಯನ್ನು ಶಿವಪುರವಾಗಿ ಬಿಟ್ಟುಕೊಟ್ಟುದನ್ನು

ತಿಳಿಸುತ್ತದೆ. ರೇವಣಸಿದ್ಧರು ನೆಲಮನೆಗೆ (ರೇವಣಸಿದ್ಧೇಶ್ವರ ಬೆಟ್ಟಕ್ಕೆ) ಹೋಗುವ ದಾರಿಯಲ್ಲಿ ಈ ಕ್ಷೇತ್ರದಲ್ಲಿ, ಮೇಗಣ ಗವಿಯಲ್ಲಿ, ಕೆಲಕಾಲವಿದ್ದರು. ಬೆಟ್ಟದ ಕುಂಭಿಯ ಮೇಲಣ ಎರಡು ಸ್ತಂಭಗಳ ಸ್ಥಾಪನೆಗೆ ಅವರು ಕಾರಣರೆಂಬುದಕ್ಕೆ ಆಧಾರವಿದೆ. ಗವಿ ಗಂಗಾಧರೇಶ್ವರ ಗುಹೆಯ ನೈವೇದ್ಯದ ಮನೆಯ ಪೂರ್ವ ದಿಕ್ಕಿನ ಗೋಡೆಯಲ್ಲಿರುವ ಶಾಸನದಲ್ಲಿ ವೀರ ಗಂಗ ಹೊಯ್ಸಳ ಶ್ರೀ ನಾರಸಿಂಹದೇವನ ಹೆಸರಿದೆ. ಆತ ೧೧೭೨ರಲ್ಲಿದ್ದನೆಂದೂ. ಈ ನಾರಸಿಂಗದೇವರ ಕೂಸು ಎಂದು ಕರೆಯಲ್ಪಡುತ್ತಿದ್ದ ಕೂಸು ಬಸವಣ್ಣನೇ ಬೆಟ್ಟದ ಮೇಲಿನ ಸ್ತಂಭಗಳ ಸ್ಥಾಪಕನಿರಬಹುದೆಂದು ಕಾಣುತ್ತದೆ. ಈ ವೀರಗಂಗನು ರೇವಣಸಿದ್ಧರಲ್ಲಿ ಭಕ್ತಿಯುಳ್ಳವನಾಗಿ ಅವರ ಆದೇಶದಂತೆ ನಡೆದಿರುವ ಸಂಭವವಿದೆ ಎಂದು ಶ್ರೀ ಚನ್ನಮಲ್ಲಿಕಾರ್ಜುನರು ಸರಿಯಾಗಿಯೇ ತರ್ಕಿಸಿದ್ದಾರೆ (ಶ್ರೀ ರೇವಣಸಿದ್ಧರು ಪು. ೩೯೩).

ಮೇಲಣಗವಿ ರೇವಣಸಿದ್ಧರ ಮೂಲಮಠ. ಅವರದು ವೀರಗೋತ್ರ. ತಮ್ಮ ಗೋತ್ರದ ಅಧಿಪತಿಯಾದ ವೀರಭದ್ರನ ಮೂರ್ತಿಯನ್ನು ಅನೇಕ ಕಡೆ ಸ್ಥಾಪಿಸಿದ್ದಾರೆ. ಶಿವಗಂಗೆಯೊಂದರಲ್ಲಿಯೇ ಅನೇಕ ವೀರಭದ್ರಮೂರ್ತಿಗಳಿವೆ. ಕುಂಬಿಯ ಮೇಲಿರುವ ವೀರಭದ್ರ, ಗಂಜಿವೀರಭದ್ರ. ಪಾತಾಳಗಂಗೆ ಬಳಿಯ ವೀರಭದ್ರಮೂರ್ತಿಗಳನ್ನು ಮುಖ್ಯವಾಗಿ ಇಲ್ಲಿ ಹೆಸರಿಸಬಹುದು. ಶಿವಗಂಗೆ ಊರೊಳಗೆ ರುದ್ರಮುನಿ ಚೌಕಿ ಎಂಬ ಭಾಗವಿದೆ. ಅದು ರುದ್ರಮುನಿಯ ವಿಹಾರ ಸ್ಥಳವಾಗಿದ್ದಿರಬಹುದು. ಅಲ್ಲಿಯೂ ಒಂದು ಭವ್ಯ ವೀರಭದ್ರ ದೇವಾಲಯವಿದೆ. ಸಿದ್ಧರ ಬೆಟ್ಟದ ಸಿಜಗಲ್ ಮಠದಲ್ಲಿ ೧೨ ಅಡಿ ಎತ್ತರದ ವೀರಭದ್ರಮೂರ್ತಿ ಇದೆ. ಇದು ಉದ್ಭಾನ ವೀರಭದ್ರ ಎಂದು ಪ್ರಸಿದ್ಧವಾಗಿದೆ. ದೇವರ ಹೊಸಹಳ್ಳಿಯಲ್ಲಿರುವ 'ಹೊಸಳ್ಳಿ ರುದ್ರ'ನೆಂದು ಪ್ರಸಿದ್ಧನಾಗಿರುವ ವೀರಭದ್ರ. ಹರಳೂರಿನ ವೀರಭದ್ರ. ಹುತ್ರಿದುರ್ಗದ ವೀರಭದ್ರ ಮತ್ತು ಭದ್ರಕಾಳಿ. ಸಾವನದುರ್ಗದ ವೀರಭದ್ರ. ಬೆಂಗಳೂರಿನ ಪ್ರಳಯ ಕಾಲದ ವೀರಭದ್ರ. ತುಮಕೂರು ಮೊದಲಾದ ಕಡೆ ಇರುವ ವೀರಭದ್ರನ ಮೂರ್ತಿಗಳು ಈ ಪರಂಪರೆಯ ದ್ಯೋತಕವಾಗಿವೆ. ಮೈಸೂರು ಶಾಸನ ಇಲಾಖೆಯ ೧೯೧೩-೧೪ನೇ ವರದಿಯಲ್ಲಿ ಶೃಂಗಿ ಪರ್ವತ ಮತ್ತು ಕೂಷ್ಮಾಂಡ ಪರ್ವತಗಳಲ್ಲಿ ೨೦ ಅಡಿ ಎತ್ತರದ ವೀರಭದ್ರಮೂರ್ತಿಗಳು ಇದ್ದುದಾಗಿ ತಿಳಿದು ಬರುತ್ತದೆ. ಇದನ್ನೆಲ್ಲಾ ಪರಿಶೀಲಿಸಿದರೆ ಶ್ರವಣಬೆಳುಗೊಳದ ಗೋಮಟೇಶ್ವರ ಮೂರ್ತಿಯ ಎತ್ತರವನ್ನು ಮೀರಿಸುವಂತಹ ವೀರಭದ್ರಮೂರ್ತಿಗಳನ್ನು ಪ್ರತಿಷ್ಠಾಪಿಸಲು ಯತ್ನಿಸಿರಬೇಕೆಂದು ತೋರುತ್ತದೆ.

ಕೆಳಗಣ ಗವಿಯ ಹೊನ್ನಾದೇವಿ ಮಠದಲ್ಲಿ ಮರುಳಸಿದ್ಧರು ಇದ್ದರೆಂದೂ ಅದು ದಾರುಕಾಚಾರ್ಯರ ಪೀಠ ಅಥವಾ ಸ್ವರ್ಣಾಂಗನೆಯ ಮಠವೆಂದು ಕರೆಯಲ್ಪಡುತ್ತಿತ್ತೆಂದೂ ತಿಳಿದುಬರುತ್ತದೆ. ಈಚೆಗೆ ಅಲ್ಲಿ ದೊರಕಿರುವ ಕೈಮುಗಿದು ಕೊಂಡಿರುವ ಸ್ತ್ರೀ ವಿಗ್ರಹವು ಅಲ್ಲಿದ್ದ ಮಹಾಶರಣೆ ಚನ್ನಮ್ಮನ ಮೂರ್ತಿಯಾಗಿರಬೇಕು. ಭೃಂಗಿ ಮಠವು ಏಕೋರಾಮರ ಶಾಖೆಯ ಮಠವೆಂದೂ, ಕಂಬಾಳು ಮಠವು ಶ್ರೀ ಶೈಲದ ಶಾಖೆಗೆ ಸೇರಿದ ಮಠವೆಂದೂ ಹೇಳುವರು. ಅಲ್ಲಿ ಮರುಳ ಸಿದ್ಧೇಶ್ವರರ ಪ್ರತಿಮೆ ಇದೆ. ಬಯಲ ಬಸವಣ್ಣನ ಮಠವೂ ಶ್ರೀ ಶೈಲದ ಶಾಖೆಗೆ ಸೇರಿದ್ದೇ. ಹೀಗಾಗಿ ಶಿವಗಂಗೆಯಲ್ಲಿ ರೇವಣಸಿದ್ಧರು ಶೂನ್ಯ ಸಿಂಹಾಸನವನ್ನು ಪ್ರತಿಷ್ಠಾಪಿಸಿ, ಅದಕ್ಕೆ ಐದು ಗುರುಮಠಗಳನ್ನು ಹೊಂದಿಸಿಕೊಟ್ಟು ವೀರಶೈವ ಧರ್ಮದ ಉತ್ಥಾನಕ್ಕೆ ಶ್ರಮಿಸಿದರೆಂಬುದು ಐತಿಹಾಸಿಕ ಸತ್ಯ. ಎಡಗೈಯಲ್ಲಿ ಲಿಂಗವನ್ನು ಹಿಡಿದು ಬಲಗೈಯಲ್ಲಿ ಜಪಸರ ಹಿಡಿದು ತಪೋಭಂಗಿಯಲ್ಲಿ ಕುಳಿತ ಪ್ರತಿಮೆಗಳು ಸಾಕಷ್ಟು ಇದ್ದು ಈ ಮಾತಿಗೆ ಪುಷ್ಟಿಯನ್ನೊದಗಿಸುತ್ತವೆ. ಮೇಲಣ ಗವಿಯ ಪ್ರಶಾಂತ ವಾತಾವರಣ, ಒಳಗೇ ಇರುವ ಶಾಶ್ವತವಾದ ತೀರ್ಥಗಳು, ಅಲ್ಲಿ ಇರುವ ಗದ್ದುಗೆಗಳು-ಇವೆಲ್ಲವೂ ಧರ್ಮಜಿಜ್ಞಾಸೆ ಹಾಗೂ ಆಧ್ಯಾತ್ಮಿಕ ಸಾಧನೆಗೆ ತಕ್ಕ ಸನ್ನಿವೇಶವನ್ನು ಒದಗಿಸಿವೆ. ಪ್ರಾಕೃತಿಕ ಹಾಗೂ ಮಾನುಷ ಕಾರಣದಿಂದಾಗಿ ಇಂಥ ಅನೇಕ ಕುರುಹುಗಳು ಇಂದು ಹಾಳಾಗಿ ಹೋಗಿವೆ. ಅದರಲ್ಲೂ ೧೯೦೦ರಲ್ಲಿ ಬಿದ್ದ ಭಾರಿ ಮಳೆಯಿಂದ ಅನೇಕ ಭಾಗಗಳು ಬಿದ್ದುಹೋಗಿವೆ, ಒಡೆದು ಹಾಳಾಗಿವೆ. ಅಭಿಮಾನ ಶೂನ್ಯರಾದ ಜನರ ಅವಜ್ಞೆಗೆ ಪಕ್ಕಾಗಿ ಹೇಳ ಹೆಸರಿಲ್ಲವಾಗಿವೆ.

ಕರ್ಣಾಟಕದ ಧಾರ್ಮಿಕ ಇತಿಹಾಸದಲ್ಲಿ ಮಹತ್ವದ ಪಾತ್ರವಹಿಸಿದ ಶಿವಗಂಗೆ ಮತ್ತು ಅದರ ಪರಿಸರದ ಇತಿಹಾಸದ ಪುಟಗಳು ಇನ್ನೂ ಅಜ್ಞಾತವಾಗಿವೆ. ಸಂಶೋಧಕರ ಗಮನವಿನ್ನೂ ಈ ಕಡೆ ಹರಿಯಬೇಕಾಗಿದೆ. ಬಸವಣ್ಣನವರ ನಂತರ ಶಿವಗಂಗೆ ಎರಡನೆಯ ಕಲ್ಯಾಣವೆಂಬಂತೆ ಧರ್ಮ ಹಾಗೂ ಸಂಸ್ಕೃತಿ ಸಂವರ್ಧನೆಗೆ ಶ್ರಮಿಸಿದ ಮಾನವಹಿತ ಸಾಧಕರ ಬೀಡಾಗಿತ್ತು ಎಂಬುದು ಕನ್ನಡಿಗರು ಅಭಿಮಾನ ಪಡಬೇಕಾದ ಸಂಗತಿ.

# ಉದ್ದಾನ ಯತೀಶ್ವರ

— ಚನ್ನಪ್ಪ ಎರೇಸೀಮೆ

## ಮರ್ತ್ಯಲೋಕದ ಮಹಾ ಬೆಳಗು

ಮರ್ತ್ಯಲೋಕದ ಮಹಾಮನೆ ಹಾಳಾಗಿಹೋಗಬಾರದೆಂದು ಕರ್ತನಟ್ಟಿದನಯ್ಯ
ಒಬ್ಬ ಶಿವಶರಣನ. ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸ ಮಾಡಿ,
ರುದ್ರಗಣ, ಪ್ರಮಥಗಣರೆಲ್ಲರ ಹಿಡಿತಂದು, ಅಸಂಖ್ಯಾತರೆಂದು ಹೆಸರಿಟ್ಟುಕರೆದು,
ಭಕ್ತಿಯ ಸ್ಥಳಕುಳವ ಶ್ರುತದೃಷ್ಟ ಪವಾಡವಂ ಮೆರೆದು ತೋರಿ, ಜಗವರಿಯೆ
ಶಿವಾಚಾರದ ಧ್ವಜವನೆತ್ತಿಸಿ ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಗೆ
ಯಾದನು, ಶಿವಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯ ಕಂಡು,
ಯೆನ್ನಮನ ಉಬ್ಬಿ ಕೊಬ್ಬಿ ಓಲಾಡುತ್ತಿದೆಯಯ್ಯ, ನಮ್ಮಗುಹೇಶ್ವರನ ಶರಣ
ಸಂಗನ ಬಸವಣ್ಣನ ದಾಸೋಹದ ಘನವ ನೇನೆಂದೆನಬಹುದು ನೋಡಾ ! ಸಿದ್ಧರಾಮಯ್ಯ.

ಶಿವಯೋಗಿಯು ಸುಳಿದ ಸುಳುಹು ಜಗತ್ಪಾವನ ;
ಮೆಟ್ಟಿದಧರೆಯೆಲ್ಲ ಪವಿತ್ರ ;
ನಿಮಿಷಾರ್ಧವಿದ್ದ ಸ್ಥಲವೆಲ್ಲ ಅವಿಮುಕ್ತಕ್ಷೇತ್ರ ;
ಹೊಕ್ಕ ಜಲವೆಲ್ಲ ಪುಣ್ಯತೀರ್ಥ ;
ಏರಿದ ಬೆಟ್ಟವೆಲ್ಲ ಶಿವಪರ್ವತ ;
ಕೃಪೆಯಿಂದ ನೋಡಿದ ಜನರೆಲ್ಲ ಸಾಲೋಕ್ಯರು ;
ಒಡನೆ ಸಂಭಾಷಿಸಿದವರೆಲ್ಲ ಸದ್ಯೋನ್ಮುಕ್ತರು,
ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

## ಈ ಹುಡುಗನಾರು ?

ಲಕ್ಕೂರಿನ ಪಟೇಲ್ ಗಟ್ಟಿಪ್ಪಮರುಳಸಿದ್ಧಮ್ಮ ದಂಪತಿಗಳ ಕಾಯಕನಿಷ್ಠೆ ಗುರುಲಿಂಗ ಜಂಗಮಸೇವಾಧುರೀಣತೆ, ದಾಸೋಹಸದ್ಭಾವಗಳು. ಸುತ್ತು ಮುತ್ತೆಲ್ಲ ಪ್ರಸಿದ್ಧ. ಶರಣ ಜನ ಸಮುಚಿತವಾದ ಅವರ ಕಾಯಕನಿಷ್ಠೆಯಿಂದ ಅವರಿಗೆ ಸಮಸ್ತ ಸೌಭಾಗ್ಯಗಳೂ ಲಭ್ಯವಾಗಿದ್ದವು. ಬೇಸಾಯ ಕಾಯಕ, ಮನೆತುಂಬಿದ ದನಕರು, ದುಡಿಯುವ ಮಕ್ಕಳು. ಏನೆಲ್ಲ ಸುಖ ಅವರದಾಗಿತ್ತು. ಇಂಥ ಸದ್ಭಕ್ತ ದಂಪತಿಗಳ ಬಳಿವಿಡಿದು 'ಭಕ್ತ ದೇಹಿಕ ದೇವನಪ್ಪದೇವನು' ಬರುವುದುಂಟೆಂದು ಬಸವಣ್ಣನವರ ಹೇಳಿಕೆ.[1] ಅದರಂತೆ ಗಟ್ಟಿಪ್ಪ ಮರುಳಸಿದ್ಧಮ್ಮ ದಂಪತಿಗಳ ಗುರುಲಿಂಗಜಂಗಮ ಸೇವಾಮನೋಭಾವದ ಪರೀಕ್ಷೆಗೆಂದೋ ಏನೋ ಮಹಾಜಂಗಮ ಮೂರ್ತಿಗಳೊಬ್ಬರು ಒಮ್ಮಿಂದೊಮ್ಮೆಗೆ ಲಕ್ಕೂರಿಗೆ ಬಂದು ನೇರವಾಗಿ ಇವರ ಮನೆಗೆ ನಡೆತಂದರು. ಅವರು ಬಂದುದು ಒಂದು ಮಹಾ ಕಾರಣಕ್ಕಾಗಿ. ಮರೆತು ಮಲಗಿದ್ದವನನ್ನು ಎಚ್ಚರಿಸಲಿಕ್ಕಾಗಿ. ಬಂದ ಜಂಗಮ ಪುಂಗವರನ್ನು ಭಯಭಕ್ತಿಯಿಂದ ಬರಮಾಡಿಕೊಂಡರು. ಆ ವಿರಕ್ತಮೂರ್ತಿ ಅವರ ಮನೆಯಲ್ಲಿ ಹರ್ಷಚಿತ್ತದಿಂದ ಪೂಜೆ ಮುಗಿಸಿ ಎಲ್ಲರಿಗೂ ತೀರ್ಥಪ್ರಸಾದವಿತ್ತು ತಾವೂ ಪ್ರಸಾದ ಮುಗಿಸಿದರು. ಆಗ ಆಜಾನುಬಾಹುವೂ, ಸಮದ ವೃಷಭಗಂಭೀರದ ಧ್ವನಿವಿಶೇಷವುಳ್ಳವನೂ ಬಂಧುರವಾದ ಮೈಕಟ್ಟುಳ್ಳವನೂ ಮಿಂಚಿನಂತೆ ಹೊಳೆಯುವ ನೇತ್ರದ್ವಯದವನೂ ಆದ ೧೪–೧೫ ವರ್ಷ ವಯಸ್ಸಿನ ಹುಡುಗ ಸ್ವಾಮಿಗಳವರ ಪಾದಗಳಿಗೆ ನಮಸ್ಕರಿಸಿದನು. ಶ್ರೀಗಳವರ

---

1. 'ಭಕ್ತದೇಹಿಕ ದೇವನಪ್ಪದೇವರು ಸದ್ಭಕ್ತರ ಬಳಿವಿಡಿದು ಬಪ್ಪನಾಗಿ ಆಳ್ದನು ಬರಲು ಆಳುಮಂಚದ ಮೇಲಿರುವುದು ಗುಣವೇಹೇಳಾ, ಕೂಡಲಸಂಗಮದೇವನು ಜಂಗಮರೂಪಾಗಿ ಬಂದಾನೆಂದು ಎಂದೆಂದೂ ನಾನು ಮಂಚವನ್ನೇರದ ಭಾಷೆ'



ಹರದನಹಳ್ಳಿಯಲ್ಲಿರುವ ಅಮೃತೇಶ್ವರ
(ದಿವ್ಯಲಿಂಗೇಶ್ವರ) ಶಿವಾಲಯದ
ಮಹಾದ್ವಾರದ ಭವ್ಯ ದೃಶ್ಯ.

(ಈ ಎರಡು ಪಡಿಯಚ್ಚು:
ಗದುಗಿನ ತೋಂಟದಾರ್ಯಮಠದ ಕೃಪೆ.)

ಹರದನಹಳ್ಳಿಯಲ್ಲಿರುವ
ನಿರಂಜನ ಜಗದ್ಗುರು
ಗೋಸಲ ಚನ್ನಬಸವೇಶ್ವರರ ಶ್ರೀಮಠ.





ದಕ್ಷಿಣ ಕಾಶಿ ಎಂದು ಪ್ರಸಿದ್ಧವಾಗಿರುವ
ಶಿವಗಂಗಾ ಗಿರಿಯನ್ನು ಉತ್ತರ
ದಿಗ್ಭಾಗದಿಂದ ನೋಡಿದಾಗ
ಕಾಣುವ ದೃಶ್ಯ.



ಸಿದ್ಧಗಂಗಾಗಿರಿಗೂ, ಶಿವಗಂಗಾ ಗಿರಿಗೂ
ಮಧ್ಯದಲ್ಲಿ ಅನೇಕ ಶಿವಲಿಂಗವಿಶಿಷ್ಟ
ಗುಹೆಗಳಿಂದಲೂ ಉದ್ದಾನ ವೀರಭದ್ರನ
ದೇವಾಲಯದಿಂದಲೂ
ನಯನಮನೋಹರವಾಗಿರುವ ಸಿದ್ಧನಬೆಟ್ಟ
(ನಿಜಗಲ್ಲುಬೆಟ್ಟ)ದ ಒಂದು ನೋಟ.



ಬೆಟ್ಟವನ್ನೇರಿ ನೋಡಿದಾಗ ಕಾಣುವ ಸಿದ್ಧಗಂಗಾ ಮಠದ ಪರಿಸರದ ಒಂದು ನೋಟ (ಅಸಮಗ್ರ)



ಗುಬ್ಬಿಯಲ್ಲಿರುವ ಗೋಸಲ ಚನ್ನಬಸವೇಶ್ವರರ
ಶಿವಯೋಗ ಸಮಾಧಿಯ ಮಹಾದ್ವಾರ.



ಗೋಸಲಸಿದ್ಧೇಶ್ವರ, ಶಂಕರಪ್ರಭು, ಗೋಸಲಚನ್ನಬಸವೇಶ್ವರ,
ತೋಂಟದ ಸಿದ್ಧಲಿಂಗಯತಿಗಳು ಅನೇಕ ವರ್ಷ ಶಿವಯೋಗಾನುಷ್ಠಾನ
ಮಾಡಿದ ಸಿದ್ಧಗಂಗಾಗಿರಿಯಲ್ಲಿನ ಪಾವನ ಸ್ಥಾನ.





↑
ಸಿದ್ಧಗಂಗಾ ಬೆಟ್ಟದಲ್ಲಿ ದೇವರಾಯ ಪಟ್ಟಣದ ಸಮೀ
ಪದಲ್ಲಿರುವ ಭವ್ಯವಾದ ಗುಹೆಯ ದೃಶ್ಯಗಳು. ಇವೆ
ರಡೂ ಒಂದೇ ಗುಹೆಯ ಬೇರೆಬೇರೆ ನಿಟ್ಟಿನಿಂದ ನೋಡಿ
ದಾಗ ಕಾಣುವ ದೃಶ್ಯಗಳು. ಇದೇ ಗುಹೆಯಲ್ಲಿ ಶ್ರೀ
ಸಿದ್ಧಲಿಂಗೇಶ್ವರರು ತಮ್ಮ ಶಿಷ್ಯರಿಗೆ ಅನೇಕ ವರ್ಷ
ಧರ್ಮಬೋಧೆ ಮಾಡುತ್ತಿದ್ದರೆಂದು ಪ್ರತೀತಿ. ಅವರ
೫೦೦ ವಚನಗಳು ಇಲ್ಲಿದ್ದಾಗಲೇ ಪೂರ್ಣಗೊಂಡವೆಂದು
ನಂಬಲಾಗುತ್ತಿದೆ. (–ಆಧಾರ: ಷಟ್‌ಸ್ಥಲವಲ್ಲಭ)



←ಸಿದ್ಧಗಂಗಾಗಿರಿಯನ್ನು ಪೂರ್ವದಿಗ್ಭಾಗದಿಂದ ಅಂದರೆ
ರಾಮಲಿಂಗೇಶ್ವರ ಬೆಟ್ಟದ ತಪ್ಪಲಿನಿಂದ ನೋಡಿದಾಗ
ಕಾಣುವ ದೃಶ್ಯ.



← ಅನೇಕ ಶಿವಲಿಂಗ ವಿಶಿಷ್ಟ ಗುಹೆಗಳಿಂದಲೂ ಬೆಟ್ಟದ
ನೆತ್ತಿಯಲ್ಲಿರುವ ಕೋಟೆಯಲ್ಲಿನ ರಾಮಲಿಂಗೇಶ್ವರ
ಹೆಸರಿನ ಶಿವಾಲಯದಿಂದಲೂ ಕೂಡಿ ಅನೇಕ ಗತಕಾಲದ
ಅವಶೇಷಗಳಿಂದ ತುಂಬಿ ನಿಂತಿರುವ ಸಿದ್ಧಗಂಗಾಗಿರಿಯ
ಅವಳಿ ಬೆಟ್ಟ; ರಾಮೇಲಿಂಗೇಶ್ವರ ಬೆಟ್ಟ.
(ರಾಮೇದೇವರ ಬೆಟ್ಟ)



←ರಾಮೇದೇವರ ಬೆಟ್ಟದಲ್ಲಿನ ದೊಡ್ಡಸಿದ್ಧಪ್ಪನ ಗವಿಯ ದೂರದ ದೃಶ್ಯ. ಉದ್ದಾನ ಶಿವಯೋಗಿಗಳವರಿಗೆ ಈ ಗುಹೆಯ ಸಂಬಂಧ ವಿಶೇಷವಾಗಿತ್ತು.



ದೊಡ್ಡಸಿದ್ಧಪ್ಪನ ಗವಿಯ ದುರ್ಗಮ ಪ್ರವೇಶ ದ್ವಾರ.



ದೊಡ್ಡಸಿದ್ಧಪ್ಪನ ಗವಿಯ ಒಳಭಾಗದ ಶಿವಲಿಂಗ.
(ಇದರ ಮುಂದೆ ೩ ಅಡಿ ಎತ್ತರದ ಭವ್ಯ ನಂದಿ ಇದೆ.)



← ಸಿದ್ಧನ ಬೆಟ್ಟದಲ್ಲಿರುವ ಇನ್ನೊಂದು ಗಭೀರ ಗುಹೆ.



ರಾಮೇದೇವರ ಬೆಟ್ಟದಲ್ಲಿ ದೊಡ್ಡ ಸಿದ್ಧಪ್ಪನ ಗವಿಯ
ಹತ್ತಿರದಲ್ಲಿಯೇ ಇರುವ ಚಿಕ್ಕಸಿದ್ಧಪ್ಪನ ಗವಿಯ ದೃಶ್ಯ.
← (ಚಿತ್ರದಲ್ಲಿ ಗವಿಯ ಬಾಗಿಲನ್ನು ಕಾಣಬಹುದು.)



ಸಿದ್ಧನ ಬೆಟ್ಟದ ಮೇಲ್ಭಾಗದಿಂದ ಆಗ್ನೇಯಕ್ಕೆ ಕಾಣುವ ಶಿವಗಂಗೆಯ ಬೆಟ್ಟ



ಚಿಕ್ಕಸಿದ್ದಪ್ಪನ ಗುಹೆಯಲ್ಲಿನ ಶಿವಲಿಂಗ



ಉದ್ದಾನ ಶಿವಯೋಗಿಗಳು ಪೂರ್ವಾಶ್ರಮದಲ್ಲಿ ಪಶುಪಾಲನೆಗೆ
← ತೆರಳುತ್ತಿದ್ದ ಸಿದ್ಧನಬೆಟ್ಟದ ಪ್ರದೇಶ.



ಉದ್ದಾನ ಶಿವಯೋಗಿಗಳವರು ಜನ್ಮತಾಳಿದ ಲಕ್ಕೂರು ಗ್ರಾಮದ ದೂರದ ನೋಟ.



ಉದ್ದಾನ ಶಿವಯೋಗಿಗಳ ಬಾಲ್ಯಜೀವನದ ಬಗೆಗೆ ನೆನಪಿನಾಳದಿಂದ ಅನೇಕ ವಿಷಯಗಳನ್ನು ತಿಳಿಸಿದ ಅವರ ಪೂರ್ವಾಶ್ರಮದ ಸಂಬಂಧಿ ಶಾಂತವೀರಯ್ಯನವರು



ಸಿದ್ಧನ ಬೆಟ್ಟದ ಶಿವಲಿಂಗವಿಶಿಷ್ಟವಾದ ಮತ್ತೊಂದು ಗುಹೆ



ಉದ್ದಾನ ಶಿವಯೋಗಿಗಳು ಅವತರಿಸಿದ ಹಳೆಯ ಮನೆ



ಸಿದ್ಧನ ಬೆಟ್ಟದಲ್ಲಿರುವ ಗಭೀರವಾದ ಮತ್ತೊಂದು ಗುಹೆ. ಶಿವಲಿಂಗ ವಿಶಿಷ್ಟವಾದ ಗುಹೆ. ಈ ಗುಹೆಯ ಸಂಬಂಧ ಲಕ್ಕೂರು ರುದ್ರಪ್ಪನಿಗೆ ವಿಶೇಷವಾಗಿತ್ತು.



ಉದ್ಧಾನ ವೀರಭದ್ರ ದೇವಾಲಯದ ಪಕ್ಕದ ಗಭೀರ ಗುಹೆ



ಲಕ್ಕೂರಿನ ರುದ್ರಪ್ಪನ ಮನೆದೇವರಾದ ಉದ್ಧಾನ ವೀರಭದ್ರನ ಗುಡಿ.
(ದೂರದ ನೋಟ)



ಸಿದ್ಧನ ಬೆಟ್ಟದಲ್ಲಿಯ ಉದ್ಧಾನ ವೀರಭದ್ರ ಮೂರ್ತಿ

ಸಮಗ್ರ ದೃಷ್ಟಿ ಧೈರ್ಯಮೇರುವಿನಂತೆ ಕಂಡ ಇವನ ಮೇಲೆ ಆಶ್ಚರ್ಯಕರ ರೀತಿಯಲ್ಲಿ ಕೇಂದ್ರೀಕೃತವಾಯಿತು. ಗಟ್ಟೆಪ್ಪನವರು ಸ್ವಾಮಿಗಳವರಿಗೆ "ಬುದ್ಧಿ ಇವನೇ ನಮ್ಮ ಕಿರಿಯ ಮಗ, ಬಲು ತುಂಟ: ಸ್ವತಂತ್ರ ಸ್ವಭಾವದ ಇವನಿಗೆ ಯಾರೂ ಏನೂ ಹೇಳುವಂತಿಲ್ಲ; ತಾನುಂಟೋ ಮೂರು ಲೋಕ ಉಂಟೋ ಎಂಬಂತೆ ಇವನ ವ್ಯವಹಾರ. ಏನೆಂದರೂ ಮೌನಗೊಳ್ಳುತ್ತಾನೆ. ಈ ಕಾಣುವ ಸಿದ್ಧನಬೆಟ್ಟದ ಅಡವಿಯೊಳಗಿನ ಗುಹೆಗಹ್ವರಗಳಾಯಿತು. ಇವನಾಯಿತು. ಇವನಿಗೆ ತಮ್ಮ ಆಶೀರ್ವಾದ ಚೆನ್ನಾಗಿ ಆಗಬೇಕು". ಎಂದು ಲೋಕೋಚಿತ ಗೃಹಸ್ಥರ ನುಡಿಯಿಂದ ನುಡಿದರು. ಶಿವಯೋಗಿಗಳು ಕ್ಷಣಕಾಲ ಮೌನವಾಗಿದ್ದು, ನಮಸ್ಕರಿಸಿ ಎದ್ದುನಿಂತ ಈ ಹುಡುಗನನ್ನೇ ದಿಟ್ಟಿಸಿ ನೋಡಿದರು. ಹುಡುಗನ ದೃಷ್ಟಿಯೊಡನೆ ತಮ್ಮ ದೃಷ್ಟಿಯನ್ನು ಬೆರೆಸಿ "ಇವನಿಗೆ ನಾವು ಆಶೀರ್ವದಿಸುವುದೇನಿದೆ. ? ಈತ ನಿಮ್ಮ ಮಗನಾಗಿರುವುದೊಂದು ನಿಮಿತ್ತ ಅಷ್ಟೇ. ಇವನ ಉಜ್ವಲ ಭವಿಷ್ಯ ನಮ್ಮನ್ನೂ ಮೂಕವಿಸ್ಮಿತಗೊಳಿಸಿದೆ. ಅಸಾಧಾರಣತೇಜಶ್ಶಾಲಿಯಾದ ಈತನು ನಡೆದುದೇ ಮಾರ್ಗ; ಆಡಿದುದೇ ಕ್ರೀಡೆ; ಶಿವನ ಮದಕರಿಯಂತೆ ಈತ" ಎಂದು ನಕ್ಕು ಸುಮ್ಮನಾದರು. ತಂದೆತಾಯಿ ಬಂಧು ಬಳಗದವರಿಗೆ ಶ್ರೀಗಳವರ ಈ ನುಡಿ ಎಷ್ಟು ಅರ್ಥವಾಯಿತೋ ಏನೋ! ಹುಡುಗನಿಗೆ ಒಂದು ಬಾಳೇಹಣ್ಣನ್ನು ಆಶೀರ್ವದಿಸಿ ಕೊಟ್ಟರು. ಹುಡುಗ ಆ ಹಣ್ಣನ್ನು ಸ್ವೀಕರಿಸಿ ಮತ್ತೊಮ್ಮೆ ಪಾದ ಮುಟ್ಟಿ ನಮಸ್ಕರಿಸಿ, ಹೊರಗೆ ಬಂದು ಕುಳಿತುಕೊಂಡನು. ಸ್ವಾಮಿಗಳವರು ಮನೆಯವರಿಗೆಲ್ಲ ಶಿಷ್ಟಾಚಾರದಂತೆ ಆಶೀರ್ವದಿಸಿ ಹೊರಟರು. ಎಲ್ಲರೂ ನಮಸ್ಕರಿಸಿ ಬೀಳ್ಕೊಟ್ಟರು. ಸ್ವಾಮಿಗಳು ಹೊರಬರುವುದನ್ನೇ ಕಾಯುತ್ತಾ ಕುಳಿತಿದ್ದ ಹುಡುಗ ಸ್ವಾಮಿಗಳು ಹೊರ ಹೊರಟೊಡನೆಯೇ ಅವರ ಬೆನ್ನು ಹತ್ತಿ ಹೋಗಿ ಸ್ವಾಮಿಗಳವರಿಗೆ ಪುನಃ "ಸ್ವಾಮಿ ತಾವು ಕೈಯಲ್ಲಿ ಹಿಡಿದಿರುವ ಪುಸ್ತಕವನ್ನು ನನಗೆ ಓದಲಿಕ್ಕೆ ಕೊಡುತ್ತೀರಾ"? ಎಂದು ಕೇಳಿದನು. ಹುಡುಗನ ಮಾತಿನಲ್ಲಿ ಗಡಸು ಇತ್ತು. ಕೆಚ್ಚಿತ್ತು, ಶಿವನಕೈಯಲಗಿನ ಮೊನಚಿತ್ತು. ಸ್ವಾಮಿಗಳು— "ಪುಸ್ತಕವನ್ನು ಕೊಡಬಹುದು. ಆದರೆ ಇದನ್ನು ಓದಿ ಇದರಂತೆ ನಡೆದುಕೊಳ್ಳುವುದಕ್ಕೆ ಆಗುತ್ತದೆಯೆ ? ಇದನ್ನು ಓದಿದ ಮೇಲೆ ಇದರಂತೆ ನಡೆಯಬೇಕು. ಸುಮ್ಮನೆ ಓದಿದರೇನುಫಲ?" ಎಂದರು. ಹುಡುಗ ದಿಟ್ಟತನದಿಂದ "ಓಹೋ! ಅದರಲ್ಲಿರುವುದನ್ನು ಓದಿ ಅದರಂತೆ ನಡೆದುಕೊಳ್ಳುತ್ತೇನೆ. ಕೊಟ್ಟು ನೋಡಿ" ಎಂದನು. ಶ್ರೀಗಳವರು ಪರಿಪೂರ್ಣ ತೃಪ್ತಿಯ ನಿಟ್ಟುಸಿರು ಬಿಟ್ಟು ಸಂತೋಷದಿಂದ ತಮ್ಮ ಕೈಯಲ್ಲಿರುವ ಗ್ರಂಥವನ್ನು ಕೊಟ್ಟು ಆಶೀರ್ವದಿಸಿದರು.[2] ಆ ಪುಸ್ತಕವನ್ನು ಸಿದ್ಧನಬೆಟ್ಟದಲ್ಲಿ[3] ತನ್ನ ಕುರಿಮೇಕೆಗಳನ್ನು ಮೇಯಲು ಬಿಟ್ಟು ಅವನು ಮೈಮೇಲೆ ಎಚ್ಚರವಿಲ್ಲದಂತೆ ಶ್ರದ್ಧಾಸಕ್ತಿಯಿಂದ ಓದ ತೊಡಗಿದನು. ಕೆಲವೇ ವಾರಗಳಲ್ಲಿ ತನ್ನ ಮೇಕೆಯ ಮಂದೆಯಲ್ಲಿ ಒಂದು ಮೇಕೆಯನ್ನು ಮಾರಿ ಬಂದ ಹಣವನ್ನು ತೆಗೆದುಕೊಂಡು ಸ್ವಯಂಪ್ರೇರಿತನಾಗಿ ಗುಂಡಿಗೆರೆಗೆ ಹೋಗಿ ಅಲ್ಲಿನ ಮಠದಲ್ಲಿ ಶಿವದೀಕ್ಷಾಸಂಸ್ಕಾರ ಮಾಡಿಸಿಕೊಂಡು ಬಂದನು. ಹುಡುಗನ ಪೂಜಾನಿಷ್ಠೆ, ಸೇವಾ ಮನೋಭಾವ ಅಧಿಕಗೊಂಡವು. ಮನೆಯಲ್ಲಿನ ಪೂಜೆ ಸಾಲದೆಂಬಂತೆ ಸಿದ್ಧನಬೆಟ್ಟದಲ್ಲಿ ತನ್ನ ಮೇಕೆಯ ಮಂದೆಯನ್ನು ಮೇಯ ಬಿಟ್ಟು ಗಿಡಗಂಟಿಗಳಲ್ಲಿ ಹೂ ಪತ್ರೆಗಳನ್ನು ತಿರಿದು ತಂದು ಹೊಣೆಮಡುಗಳಲ್ಲಿ ಸ್ನಾನ ಮಾಡಿ ಘಂಟೆಘಂಟೆಗಳ ಅರಿವಿಲ್ಲದೆ ಶಿವಪೂಜೆಯಲ್ಲಿ ಮಗ್ನನಾಗತೊಡಗಿದನು. ಒಂದು ಹೊತ್ತು ಮಾತ್ರ ಪ್ರಸಾದ ತೆಗೆದುಕೊಂಡು ರಾತ್ರಿ ಕೇವಲ ಬಿಲ್ವಪತ್ರೆಯನ್ನೇ ಪ್ರಸಾದವನ್ನಾಗಿ ಸ್ವೀಕರಿಸತೊಡಗಿದನು. ಸ್ನಾನ ಪೂಜೆಗಳಿಲ್ಲದೆ ಈ ಬಾಲ್ಯದಲ್ಲಿಯೇ ಎಂದೂ ಊಟೋಪಚಾರ ಮಾಡುತ್ತಿರಲಿಲ್ಲ. ಪಶುಪಾಲನಾವೃತ್ತಿಗಿಳಿದವನಾದರೂಕೂಡ ತನ್ನ ಒಂದು ಜೋಳಿಗೆಯಲ್ಲಿ ಸಕ್ಕರೆಯ ಪೊಟ್ಟಣ, ಭಸ್ಮರುದ್ರಾಕ್ಷಿಗಳ ಪುಡಿಕೆಗಳನ್ನು ಇಟ್ಟುಕೊಂಡು ಕಂಡಕಂಡಲ್ಲೆಲ್ಲ ಶಿವಪೂಜೆಯನ್ನು ಅತ್ಯಂತ ಗೌಪ್ಯದಿಂದ ಆಚರಿಸತೊಡಗಿದನು. ಸಕ್ಕರೆಯನ್ನು ಇರುವೆಗಳ ಗೂಡನ್ನು ಹುಡುಕಿ ಹುಡುಕಿ ಹಾಕತೊಡಗಿದನು. ಹುಡುಗನ ಈ ಲೋಕೋತ್ತರ ಚರ್ಯೆಗಳನ್ನು ಕಂಡು ಇವನನ್ನು ಇವನೊಬ್ಬ ಸಂನ್ಯಾಸಿ—ಇತ್ಯಾದಿ ಮಾತುಗಳಿಂದ ಕಂಡಕಂಡವರೆಲ್ಲ ಕಟಕಿ ನುಡಿಯತೊಡಗಿದರು. ಈ ಹುಡುಗನ ಮರೆಯಲ್ಲಿ ಶಿವಸಂಸ್ಕಾರಸಂಪತ್ತಿನ ಅಪೂರ್ವತೇಜೋರಾಶಿ ಹೊಳೆಯತೊಡಗಿತು. ಶಿವಯೋಗದ ಅಪಾರಕಳೆ ಮೊಳೆಯೊಡೆದು ಮರವಾಗತೊಡಗಿತು. ಈ ಹುಡುಗನಾರು ? ಹರದನಹಳ್ಳಿ ಪೀಠದ ಗೋಸಲಸಿದ್ಧೇಶ್ವರರು ಅವರ ಪರಂಪರೆಯ ಶಂಕರಸ್ವಾಮಿಗಳು, ಚೆನ್ನಬಸವೇಶ್ವರರು, ಸಿದ್ಧಲಿಂಗೇಶ್ವರರೇ ಮೊದ

2. ಆ ಪುಸ್ತಕವಾವುದು ಎಂಬುದು ಗೊತ್ತಾಗುತ್ತಿಲ್ಲ. ಕೆಲವರು ಜ್ಞಾನಸಿಂಧು ಎಂಬ ಪುಸ್ತಕವೆಂದೂ, ಮತ್ತೆ ಕೆಲವರು ಶಿವಶರಣರ ವಚನದ ಪುಸ್ತಕವೆಂದೂ ಹೇಳುವುದುಂಟು. ಅದು ನೀಲಿಕಾಗದದಲ್ಲಿ ರಾಗಿಮಸಿಯಿಂದ ಬರೆದ ಪುಸ್ತಕವೆಂದು ಮಾತ್ರ ಈ ವಿಷಯ ತಿಳಿದ ಓರ್ವ ವೃದ್ಧರು ಹೇಳುತ್ತಾರೆ.

3. ಲಕ್ಕೂರಿನ ಸಮೀಪದ ಪಶ್ಚಿಮದಿಗ್ಭಾಗದಲ್ಲಿ ಒಂದು ಮೈಲು ಅಂತರದಲ್ಲಿರುವ ಇತಿಹಾಸಪ್ರಸಿದ್ಧವಾದ ಒಂದು ಬೆಟ್ಟ, ಅನೇಕ ಗುಹೆಗಳಿಂದಲೂ, ಗುಹೆಗಳಲ್ಲಿರುವ ಶಿವಲಿಂಗಗಳಿಂದಲೂ, ವೀರಭದ್ರಾದಿದೇವಾಲಯ ಕೋಟೆ ಕೊತ್ತಲಗಳು-ಇತ್ಯಾದಿ ಅನೇಕ ಪ್ರಾಚೀನ ಅವಶೇಷಗಳಿಂದ ಕೂಡಿರುವ ಒಂದು ಗುಡ್ಡ. ಸಿದ್ಧಗಂಗಾ ಪರಿಸರ ವೆಂಬ ಲೇಖನದಲ್ಲಿ ಬಂದ ಸಿದ್ಧನಬೆಟ್ಟ, ಜಲಸಿದ್ಧಗಿರಿ-ಇತ್ಯಾದಿಯಾಗಿ ವಿವರಿಸಿರುವ ಬೆಟ್ಟವೇ ಇದು.

ಲಾದ ಮಹಾಮಹಿಮಾಶಾಲಿಗಳ ತಪೋನುಷ್ಠಾನ ಸುಕ್ಷೇತ್ರವೂ ಜ್ಞಾನ-ವಿಜ್ಞಾನ-ದಾಸೋಹಸದ್ಭಾವದಲ್ಲಿ ಇಂದು ಭಾರತದ ಸುಪ್ರಸಿದ್ಧ ಶೈಕ್ಷಣಿಕ ಧಾರ್ಮಿಕ ಕೇಂದ್ರವೆಂದು ಪರಿಗಣಿತವಾಗಿರುವುದೂ ಆದ ಶ್ರೀ ಸಿದ್ಧಗಂಗಾಕ್ಷೇತ್ರಾಧಿಪತ್ಯದ ಪೂರ್ಣ ಹೊಣೆಯನ್ನು ೧೯೪೧ನೆಯ ಕಾರ್ತಿಕ ಮಾಸದಿಂದ ವಹಿಸಿ, ಅದರ ಲೋಕೋತ್ತರ ಕೀರ್ತಿ ವಿಶೇಷಕ್ಕೆ ತಮ್ಮ ಲಿಂಗತಪಶ್ಶಕ್ತಿ ಸಂಜನಿತ ಕಾರಣ್ಯಜಲಧಾರಾವರ್ಷವನ್ನು ಕರೆದು ಬೆಳೆಸಿ. ಮಹಾತಪಸ್ವಿ-ಶಿಷ್ಯೋತ್ತಮ ಡಾ. ಶಿವಕುಮಾರಸ್ವಾಮಿಗಳವರ ಕೈಗಿತ್ತು ಹೋದ ಶ್ರೀ. ಸಿ.ಪ್ರ. ಲಿಂ. ಉದ್ದಾನಶಿವಯೋಗಿಗಳು. ಬಾಲ್ಯದಲ್ಲಿಯೇ ಅದ್ಭುತ ತಪಶ್ಶಕ್ತಿಯನ್ನು ಸಾಧಿಸಿ ಅನೇಕ ಪವಾಡಗಳನ್ನು ಬಾಲ್ಯದಲ್ಲಿಯೇ ನಟಿಸಿ ಇಹಪರದ ಪುಣ್ಯಪುರುಷರೆಂದೂ ಕಾರುಣ್ಯಮೂರ್ತಿಯೆಂದೂ ಅನಿಮಿತ್ತ ಬಂಧುವೆಂದೂ. ತ್ರಿವಿಧ ದಾಸೋಹದ ಸದ್ಭಾವಮೂರ್ತಿಯೆಂದೂ ವಶ್ಯವಾಕ್ ಶಕ್ತಿಯುಳ್ಳವರೆಂದೂ ಕೀರ್ತಿತರಾದ ಉದ್ದಾನಶಿವಯೋಗಿಗಳ ಪೂರ್ವಾಶ್ರಮದ ಹೆಸರು ರುದ್ರಪ್ಪ ಓದಲು ಇವನಿಗೆ ಪುಸ್ತಕವನ್ನು ಇತ್ತು ಆಶೀರ್ವದಿಸಿದ ಮೂರ್ತಿಗಳೇ ಶುದ್ಧಿಯಿಂದ ಸಿದ್ಧಿಪಡೆದ ಮಹಿಮಾಶಾಲಿಗಳೆಂದು ಕೀರ್ತಿತರಾದ ಫಲಾಹಾರ ಸ್ವಾಮಿಗಳು.)[4]

**ಲಕ್ಕೂರಿನ ಪುಣ್ಯ ದಂಪತಿಗಳು : ಗಟ್ಟಿಪ್ಪ-ಮರುಳಸಿದ್ಧಮ್ಮ.**

ಬೆಂಗಳೂರು ಜಿಲ್ಲಾ ನೆಲಮಂಗಲ ತಾಲ್ಲೂಕು ದಾಬಸಪೇಟೆಗೆ (ಸೋಂಪುರಕ್ಕೆ) ಸಮೀಪದಲ್ಲಿ ಕೇವಲ ಮುಕ್ಕಾಲು ಮೈಲು ಸರಿ ಸುಮಾರಿನಲ್ಲಿ ಲಕ್ಕೂರು ಎಂಬ ಹಳ್ಳಿ ಇದೆ. ದಕ್ಷಿಣಕಾಶಿ ಎನಿಸಿ ಪುಣ್ಯಪುರುಷರ ಪಾದ ಧೂಳಿಯಿಂದ ಪವಿತ್ರೀ ಕೃತವಾದ ಶಿವಗಂಗೆಯಿಂದ ಸುಮಾರು ಮೂರು ಮೈಲು ಉತ್ತರ ದಿಕ್ಕಿನಲ್ಲಿ ಇದೆ. ಅನೇಕ ಸಿದ್ಧಪುರುಷರ ನೆಲೆಬೀಡಾದ ಸಿದ್ಧನಬೆಟ್ಟ ಒಂದು ಮೈಲು ಅಂತರದಲ್ಲಿ ಪಶ್ಚಿಮ ದಿಗ್ಭಾಗದಲ್ಲಿದೆ. ರೇವಣಸಿದ್ಧೇಶ್ವರ, ಮರುಳಸಿದ್ಧೇಶ್ವರ, ಸಿದ್ಧರಾಮೇಶ್ವರ, ರುದ್ರಮುನಿಸ್ವಾಮಿಗಳವರ ಸಂಚಾರದಿಂದ ಪವಿತ್ರೀಕೃತವಾದ ಈ ಪುಣ್ಯಭೂಮಿಯಲ್ಲಿ ಏಳೆಂಟು ನೂರು ವರ್ಷಗಳಿಂದ ಅವಿಚ್ಛಿನ್ನ ಧಾರೆಯಾಗಿ ಹರಿದು ಬಂದ ತಪ್ಪಸ್ಸಿನ ಫಲದ ರಾಶಿ ಲಕ್ಕೂರಿನ ಪುಣ್ಯ ದಂಪತಿಗಳ ಪುಣ್ಯ ಗರ್ಭಾಂಬುಧಿಯಲ್ಲಿ ಸುಮಾರು ೧೮೭೦ರಲ್ಲಿ ಗಂಡು ಮಗುವಿನ ರೂಪದಲ್ಲಿ ಜನಿಸಿತ್ತು. ಆ ಧರ್ಮಕ್ಷೇತ್ರದ ಫಲ ಆ ನೆಲದಲ್ಲಿ ಜನಿಸಿದ ಅವರ ಮಗನ ಮೇಲೆ ಕೆಲಸ ಮಾಡಿತು. ಮಗುವಿಗೆ ತಮ್ಮ ಮನೆದೇವರಾದ ಸಿದ್ಧನಬೆಟ್ಟದ ಉದ್ದಾನ ವೀರಭದ್ರನ ಹೆಸರನ್ನೇ ರುದ್ರಪ್ಪ ಎಂದು ಇಟ್ಟರು. ರುದ್ರಪ್ಪ, ಗಟ್ಟಿಪ್ಪ ಮತ್ತು ಮರುಳಸಿದ್ಧಮ್ಮನವರ ಹೊಟ್ಟೆಯಲ್ಲಿ ಒಬ್ಬಂಟಿಗನಾಗಿ ಹುಟ್ಟಿಬಂದವನಲ್ಲ. ರುದ್ರಪ್ಪ (ದೊಡ್ಡ ರುದ್ರಪ್ಪ) ಹುಚ್ಚಣ್ಣಪ್ಪ. ಭೈರಪ್ಪ, ಗುಂಡಯ್ಯ, ಗಟ್ಟೀಭೈರಪ್ಪ. ಎಂಬ ಐದು ಜನ ಅಣ್ಣಂದಿರನ್ನು ಬಸಮ್ಮ. ಲಿಂಗಮ್ಮ. ಪುಟ್ಟಲಿಂಗಮ್ಮ. ಹೊನ್ನಮ್ಮ ಎಂಬ ನಾಲ್ವರು ಸಹೋದರಿಯರನ್ನು ಪಡೆದಿದ್ದ ರುದ್ರಪ್ಪ ತುಂಬು ಸಂಸಾರದಲ್ಲಿ ಹುಟ್ಟಿ ಬಂದವನು. ಗಟ್ಟಿಪ್ಪನವರು ಊರಿನ ಪಟೇಲರು. ನೂರಾರು ಎಕರೆ ಜಮೀನನ್ನು ಹೊಂದಿ ಕೃಷಿ ಕಾಯಕದಲ್ಲಿ ಸುತ್ತಮುತ್ತಣ ಪ್ರಾಂತದಲ್ಲೆಲ್ಲ ಹೆಸರುವಾಸಿಯಾದವರು. ಸುಮಾರು ಎರಡುನೂರರಷ್ಟು ಕುರಿಮೇಕೆಗಳ ಹಿಂಡು. ನೂರಾರು ದನ ಕರುಗಳು. ಶ್ರದ್ಧಾ ಭಕ್ತಿ ವಿಶ್ವಾಸದಿಂದ ಕೃಷಿ ಕಾಯಕ ಮಾಡುತ್ತಿದ್ದ ಇವರ ಮನೆಯಲ್ಲಿ ನೂರಾರು ಕಂಡುಗ ದವಸ ಧಾನ್ಯ ಸದಾ ತುಂಬಿರುತ್ತಿತ್ತು. ಮನೆಗೆ ದಿನವೂ ಹತ್ತಿಪ್ಪತ್ತು ಜನರಾದರು ಬಂದು ಊಟಮಾಡಿಕೊಂಡು ಹೋದರೆ ಈ ಪುಣ್ಯ ದಂಪತಿಗಳಿಗೆ ತೃಪ್ತಿ. ಶ್ರಾವಣಮಾಸ. ಮಹಾನವಮಿಗಳಲ್ಲಿ ಮನೆಯಲ್ಲಿ ರೇವಣಸಾಂಗತ್ಯ ಶರಣಲೀಲಾಮೃತ ಗ್ರಂಥಗಳ ಪಠಣ ತಪ್ಪುತ್ತಿರಲಿಲ್ಲ. ಆಗಾಗ ಮನೆಯಲ್ಲಿ ಗಣಪರ್ವಗಳು ನಡೆದು ಅನ್ನಸಂತರ್ಪಣೆ ನಡೆಯುತ್ತಿತ್ತು. ಈ ಎಲ್ಲ ಕಾರಣದಿಂದ ಗಟ್ಟಿಪ್ಪನವರ ವಿಷಯದಲ್ಲಿ ಸುತ್ತಮುತ್ತಲ ಹಳ್ಳಿಯವರಿಗೆಲ್ಲ ಪೂಜ್ಯಭಾವ. ರುದ್ರಪ್ಪನವರೇ ಇವರ ಕಿರಿಯಮಗ. ತಂದೆ

---

4. ಈ ಫಲಹಾರ ಸ್ವಾಮಿಗಳವರ ಚರ್ಯೆ ಅತ್ಯಂತ ವಿಚಿತ್ರ. ಅವರ ಪ್ರಸಾದ ಸೇವನೆಯೂ ಅಷ್ಟೇ ವಿಚಿತ್ರ. ಉದ್ದಿನ ಕಾಳಿನಿಂದ ಮಾಡಿದ ಉಸುಳಿ, ಮೆಣಸಿನಕಾಯಿಯ ಕಾರದ ಒಂದು ಮುದ್ದೆ, ಸ್ವಲ್ಪ ತುಪ್ಪ. ಇದೇ ಇವರ ಆಹಾರ. ಶಿವಗಂಗೆಯಿಂದ ದಕ್ಷಿಣದಿಗ್ಭಾಗದಲ್ಲಿ ಸೋಲೂರು ಸಮೀಪದಲ್ಲಿರುವ ಮಹಂತೇಶ್ವರ ಗದ್ದಿಗೆಯನ್ನು ಕಟ್ಟಿಸಿದವರು ಇವರೇ. ಮಹಂತೇಶ್ವರರು ಶಿವಯೋಗ ನಿಷ್ಠಾಗರಿಷ್ಠರೆಂದೂ, ಅವರು ಲಿಂಗೈಕ್ಯರಾದ ಸ್ಥಳವೂ ಇದೇ ಎಂದು ಗುರುತಿಸಿ ಅಲ್ಲಿ ಗದ್ದಿಗೆ ಕಟ್ಟಿಸಿದರಂತೆ. ಮಹಂತೇಶ್ವರರ ಕಾಲಾದಿಗಳು ಸ್ಪಷ್ಟವಾಗಿ ತಿಳಿದು ಬಂದಿಲ್ಲ, ಶಿವಗಂಗೆಯ ಸುತ್ತಮುತ್ತ ಇಂಥ ಅನೇಕ ಶಿವಶರಣರ ಗದ್ದುಗೆಗಳಿದ್ದು ಅವುಗಳ ಚರಿತ್ರೆ ಕಾಲಗರ್ಭದಲ್ಲಿ ಅಸ್ಪಷ್ಟವಾಗಿಯೇ ಅಡಗಿ ಕುಳಿತಿವೆ. ಈ ಫಲಹಾರ ಸ್ವಾಮಿಗಳು ಲಕ್ಕೂರಿನ ಗಟ್ಟಿಪ್ಪನವರ ಮನೆಗೆ ಬಂದುದು ಆಕಸ್ಮಿಕವೆಂದೂ ಅವರ ಬರುವಿಕೆ ರುದ್ರಪ್ಪನನ್ನು ಕಾಣುವುದೇ ಪ್ರಧಾನೋದ್ದೇಶವಾಗಿತ್ತೆಂದೂ ಮೊನ್ನೆಮೊನ್ನೆವರೆಗಿದ್ದ ಲಕ್ಕೂರಿನ ವೃದ್ಧರ ಮಾತು. ಇವರಲ್ಲಿ ಮುಖ್ಯರಾದವರೆಂದರೆ ರುದ್ರಪ್ಪನ ಅಣ್ಣ ಭೈರಪ್ಪ ಎಂಬುವರ ಮಗಳು ಗಂಗಮ್ಮನವರ ಗಂಡ ಶತಾಯುಷಿ ಶಾಂತವೀರಯ್ಯ ಎಂಬುವರು. ಅನೇಕ ಹಳೆಯ ಚರಿತ್ರೆಯನ್ನು ನೆನೆ ನೆನೆದು ಆ ಕಾಲಗರ್ಭದಿಂದ ಅದನ್ನು ಹೊರತೆಗೆದು ಇದನ್ನು ಹೇಳಿದರು. ಇವರ ಮಾತುಗಳು ಮತ್ತು ಲಕ್ಕೂರಿನ ಮತ್ತೊಬ್ಬ ಅತಿವೃದ್ಧ ಮಲ್ಲಜ್ಜ ಎಂಬುವರ ಮಾತುಗಳು ಈ ವಿಷಯದ ಬರವಣಿಗೆಗೆ ಕಾರಣವಾಗಿದೆ. (೧೯೭೮ರ ಆಷಾಢ ಮಾಸದಲ್ಲಿ ಇವರಿಬ್ಬರನ್ನೂ ಸಂಧಿಸಿ ಉದ್ದಾನಸ್ವಾಮಿಗಳ ಪೂರ್ವಾಶ್ರಮದ ಕಥೆಯನ್ನು ಸಂಗ್ರಹಿಸಲಾಗಿದೆ.)

ತಾಯಿಯರಿಬ್ಬರ ವಾತ್ಸಲ್ಯ ರುದ್ರಪ್ಪನ ವಿಷಯದಲ್ಲಿ ಅತ್ಯಧಿಕ. ಅಲ್ಲದೆ ರುದ್ರಪ್ಪನ ಹುಟ್ಟು ಎಲ್ಲ ಮಕ್ಕಳ ಹುಟ್ಟಿನಂತಿರಲಿಲ್ಲ. ಇವನ ಜನನ ವಿಷಯದಲ್ಲಿ ಒಂದು ಅದ್ಭುತ ಘಟನೆ ನಡೆದು ಇವನಾವ ಮಹಾಪುರುಷನೋ ಏನೋ ಎನ್ನುವ ಒಂದು ಬಗೆಯ ಆಂತರಿಕ ನಂಬುಗೆ ಅವರಲ್ಲಿ ಬಲಿತು ಬರುವುದಕ್ಕೂ ಒಂದು ಕಾರಣವಿತ್ತು.

ಮರುಳಸಿದ್ಧಮ್ಮನ ತೌರೂರು ಬಸವಾಪಟ್ಟಣ. ಈ ಹೆಸರು ಈ ಊರಿಗೆ ಬಂದುದು ಬೋಳಬಸವೇಶ್ವರರಿಂದ. ನಿರಂಜನ ಜಗದ್ಗುರು ಮಹಾಕಾರಣಿಕ ತೋಂಟದ ಸಿದ್ಧಲಿಂಗೇಶ್ವರರ ಕರಕಮಲ ಸಂಜಾತರೂ ಅಪ್ರತಿಮ ಶಿವಯೋಗಿಗಳೂ ಆದ ಬೋಳು ಬಸವೇಶ್ವರರ ತಪೋಭೂಮಿ. ಬಸವಾಪಟ್ಟಣದ ಸಮೀಪದಲ್ಲಿಯೇ ಇದೆ. ಇದು ಶಿವಗಂಗೆಗೆ ಆಗ್ನೇಯ ದಿಗ್ಭಾಗದಲ್ಲಿ ೩-೪ ಮೈಲುಗಳ ಅಂತರದಲ್ಲಿಯೇ ಇದೆ. ಬಾಲ್ಯದಲ್ಲಿ ಬಸವಾಪಟ್ಟಣದ ಮಾತಾಪಿತೃಗಳ ಮನೆಯಲ್ಲಿ ಬೆಳೆಯುತ್ತಿದ್ದ ಮರುಳಸಿದ್ಧಮ್ಮನವರು ಬೋಳಬಸವೇಶ್ವರರಲ್ಲಿ ಅಪರಿಮಿತ ಭಕ್ತಿಭಾವ ತುಂಬಿಕೊಂಡು ಬೆಳೆದವರು. ಅಲ್ಲಿರುವ ಬೋಳಬಸವೇಶ್ವರರ ಗದ್ದುಗೆಗೆ ತನ್ನ ಅನಂತಭಕ್ತಿ ಪ್ರಣಾಮಗಳನ್ನು ಸಲ್ಲಿಸುತ್ತ ಬೆಳೆದಿದ್ದ ಮರುಳಸಿದ್ಧಮ್ಮ ಲಕ್ಕೂರಿನಲ್ಲಿ ತನ್ನ ಗಂಡನ ಮನೆಯಲ್ಲಿ ವಾಸಿಸುತ್ತಿದ್ದಾಗಲೂ ಆಗಾಗ ಎತ್ತಿನ ಬಂಡಿಯಲ್ಲಿ ಕುಳಿತು ಗಂಡನೊಡನೆ ಬಂದು. ಬೋಳಬಸವೇಶ್ವರರ ಗದ್ದುಗೆಗೆ ತನ್ನ ಭಕ್ತಿಕಾಣಿಕೆಯನ್ನು ಸಲ್ಲಿಸಿ ಹೋಗುತ್ತಿದ್ದಳು.[5] ಒಂದು ದಿನ ಎಂದಿನಂತೆ ತನ್ನ ಸೇವಾಕೈಂಕರ್ಯ ಪ್ರಕಟಿಸಲು ಬಂದಾಗ ಒಂದು ಅದ್ಭುತ ಘಟನೆ ನಡೆಯಿತು. ಬೋಳಬಸವೇಶ್ವರರ ಪೂಜಾದಿಗಳನ್ನು ಮುಗಿಸಿದಳು. ಪೂಜೆ ಮಾಡುತ್ತಾ ಮಾಡುತ್ತಾ ಗದ್ಗದ ಕಂಠಳಾಗಿ ಬೋಳಬಸವೇಶ್ವರರ ಗದ್ದುಗೆಯನ್ನೇ ಎವೆಯಿಕ್ಕದೆ ನೋಡುತ್ತಾ ಸ್ತಂಭೀಭೂತಳಾಗಿ ನಿಂತುಬಿಟ್ಟಳು. ಪತಿ ಗಟ್ಟೆಪ್ಪನವರು ಅಲುಗಾಡಿಸಿದರೂ ಮೈಮೇಲೆ ಪ್ರಜ್ಞೆಯಿಲ್ಲದವಳಂತೆ ಕಂಡುಬಂದ ಅವಳು ಆನಂದ ತುಂದಿಲಳಾಗಿ ಗದ್ಗದಿತಕಂಠಳಾದಳು. ಬಿಕ್ಕಿಬಿಕ್ಕಿ ಅತ್ತಳು. ಒಂದು ಅಪೂರ್ವ ತೇಜೋರಾಶಿಯೇ ಅವಳ ಶಿವಲಿಂಗ ಸ್ಥಾನವಾದ ನೇತ್ರದ ಬೆಳಕಿನಲ್ಲಿ ಹೊಕ್ಕು ಎತ್ತೆತ್ತಲೂ ಪ್ರಕಾಶವನ್ನೇ ಕಾಣುವಂತಾದಳು. ಮರುಕ್ಷಣದಲ್ಲಿ ಎಲ್ಲವೂ ಶಾಂತವಾಯಿತು. ಅಪೂರ್ವ ಆನಂದದಿಂದ ಧಾರಾಕಾರವಾಗಿ ಆನಂದಬಾಷ್ಪ ಸುರಿಸಿದಳು : ಎಚ್ಚರಗೊಂಡಳು. ಪತಿ ಗಟ್ಟೆಪ್ಪನವರಿಗೆ ಒಂದೂ ಅರ್ಥವಾಗದೆ ಗಜಬಜಿಸಿದರು. "ಇದೆಲ್ಲ ಏನೇ ನಿನ್ನ ವರ್ತನೆ! ಎಂದೂ ಇಲ್ಲದೆ ಇಂದೇಕೆ ಹುಚ್ಚಿಯಂತೆ ವರ್ತಿಸಿದೇ" ಎಂದರು. "ಏನೂ ಇಲ್ಲ : ಇಂದು ಎಂದೂ ಇಲ್ಲದ ಏನೋ ಒಂದು ರೀತಿಯ ಬೆಳ್ಳಂಬೆಳಕನ್ನು ಕಂಡಂತಾಯಿತು. ಯಾವುದೋ ಬೆಳಕು ಸ್ವಾಮಿಯಿಂದ ಹೊರಹೊರಟು ನನ್ನ ಕಣ್ಣನ್ನು ಕುಕ್ಕಿಸಿದಂತಾಯಿತು. ನನಗೆ ಯಾವುದೂ ಎಚ್ಚರವಿಲ್ಲದಂತೆ ಮಾಡಿತು. ಮಹಾ ಆನಂದವಾದಂತಾಯಿತು. ನೆಲಕ್ಕೆ ಕುಸಿದು ಬೀಳುವಂತಾಯಿತು" ಇತ್ಯಾದಿಯಾಗಿ ತನಗಾದ ಅನುಭವವನ್ನೆಲ್ಲ ಗಂಡನೆದುರು ಹೇಳಿದಳು. 'ಆಯಿತು ನಡೆ ಊರಿಗೆ ಹೋಗೋಣ' ಎಂದು ಗಾಡಿಯನ್ನು ಕಟ್ಟಿಕೊಂಡು ಲಕ್ಕೂರಿನತ್ತ ಹೊರಟು ಬಂದರು. ಮುಂದಿನ ಒಂದು ವರ್ಷಕ್ಕೆ ತನ್ನ ಕೊನೆಯ ಮಗ ರುದ್ರಪ್ಪನೊಡನೆ ಬೋಳಬಸವೇಶ್ವರರ ದರ್ಶನಕ್ಕೆ ಬಂದು ಬೋಳಬಸವೇಶ್ವರರ ಎದುರಿನಲ್ಲಿ ಎಳೆಯ ಶಿಶು ರುದ್ರಪ್ಪನನ್ನು ಇಟ್ಟು 'ಇದೋ ಸ್ವಾಮಿ, ನಿನ್ನ ಪ್ರಸಾದ' ಎಂದು ಹೇಳಿ ತನ್ನ ಭಕ್ತಿಕೈಂಕರ್ಯ ಮುಗಿಸಿ ಬಂದರು.

ಈ ಘಟನೆ ನಡೆದಮೇಲೆ ಗಟ್ಟೆಪ್ಪ–ಮರುಳಸಿದ್ಧಮ್ಮನವರ ಕೊನೆಯ ಶಿಶು ರುದ್ರಪ್ಪ ಬೆಳೆಬೆಳೆದಂತೆಲ್ಲ ಮನೆಯ ಸಿರಿಸಂಪತ್ತು ಬೆಳೆಯುತ್ತಾ ಬಂತು. ರುದ್ರಪ್ಪ ದಿನೇ ದಿನೇ ಬೋಳಬಸವೇಶ್ವರರ ಕಾರುಣ್ಯದ ಹಾಲು ಬೆಣ್ಣೆಯಲ್ಲಿ ಬೆಳೆಯತೊಡಗಿದನು. ತುಂಬಿದ ಮನೆ, ರುದ್ರಪ್ಪನ ನಡೆ ನುಡಿ, ಆಟ ಪಾಟ, ಮಾತುಕತೆ ಮೊದಲಾದ ಕಾರ್ಯಚಟುವಟಿಕೆಗಳಿಂದ ಕಳಕಳಿಸತೊಡಗಿತು. ತನ್ನ ಮೊನಚಾದ ಮಾತಿನಿಂದಲೂ, ಧೀರ ನಡೆಯಿಂದಲೂ, ಹೊಲ ಮನೆ ಗದ್ದೆಗಳಲ್ಲಿನ ಉತ್ಸಾಹಪೂರ್ಣ

---

5. ಬೋಳಬಸವೇಶ್ವರರ ಗದ್ದುಗೆ ನಿರಂಜನ ವಂಶರತ್ನಾಕರದ ಪ್ರಕಾರ ಮಧುಗಿರಿಯಲ್ಲಿ ಆಗಿದೆಯೆಂದು ತಿಳಿದುಬರುವುದು. ಆದರೆ ಶಿವಗಂಗೆಯಿಂದ ಮಾಗಡಿಗೆ ಹೋಗುವ ರಾಜಮಾರ್ಗದ ಪಕ್ಕದಲ್ಲಿಯೇ ಶಿವಗಂಗಾ ಬೆಟ್ಟದಿಂದ ಆಗ್ನೇಯ ದಿಗ್ಭಾಗದಲ್ಲಿ ಕಂಬಾಳುಮಠದ ಸಮಿಪದಲ್ಲಿ ಬಸವಾಪಟ್ಟಣದ ಹತ್ತಿರ ಇವರ ಗದ್ದುಗೆ ಇದೆ. ಗದ್ದುಗೆಯ ಮೇಲೆ ಶಿವಲಿಂಗ ಪ್ರತಿಷ್ಠೆ ಇದೆ. ಸುತ್ತಲೂ ಭದ್ರವಾದ ಆವರಣದಿಂದ ಆವೃತವಾಗಿ ಮಧ್ಯದಲ್ಲಿ ಸುಂದರವಾಗಿ ಕಟ್ಟಿಸಿರುವ ಈ ಬೋಳಬಸವೇಶ್ವರರ ಗದ್ದುಗೆ ಯಾವುದು ? ಬಹುಶಃ ಬೋಳಬಸವೇಶ್ವರರು ಇಲ್ಲಿಯೇ ಲಿಂಗೈಕ್ಯರಾದರೇ ? ಅಥವಾ ಮಧುಗಿರಿಯಲ್ಲಿ ಲಿಂಗೈಕ್ಯರಾದರೇ ? ಸಂಶೋಧಿಸಬೇಕಾದ ಅಂಶವಾಗಿದೆ. ಇವರು ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಾಗಿ ೯೬ ವರ್ಷಗಳವರೆಗೆ ಬಾಳಿ ಅನೇಕರಿಗೆ ಅನುಗ್ರಹವಿತ್ತು ಬಯಲಾದ ಪ್ರಭಾವಶಾಲೀ ನಿರಂಜನ ಜಗದ್ಗುರುಗಳು. 'ಬೋಳಬಸವೇಶ್ವರಾ ನಿಮ್ಮಧರ್ಮ ನಿಮ್ಮಧರ್ಮ' ಎಂಬ ಅಂಕಿತದಲ್ಲಿ ಗುಮ್ಮಳಾಪುರದ ಸಿದ್ಧಲಿಂಗಯತಿಗಳು ವಚನ ಬರೆದಿದ್ದಾರೆ. ಈಗ ೧೮ ವಚನಗಳು ಉಪಲಬ್ಧವಿವೆ. ಈ ಗುಮ್ಮಳಾಪುರದ ಸಿದ್ಧಲಿಂಗದೇವರೇ ಬೋಳಬಸವೇಶ್ವರರ ನಂತರ ಶೂನ್ಯ ಸಿಂಹಾಸನಾರೋಹಣ ಮಾಡಿದ್ದಾರೆಂದು ತಿಳಿದುಬರುವುದು.

—(ಡಾ॥ ಆರ್. ಸಿ. ಹಿರೇಮಠ : (ಸಂ.) ಗುಮ್ಮಳಾಪುರದ ಸಿದ್ಧಲಿಂಗದೇವರ ಶೂ. ಸಂ. ಪ್ರಸ್ತಾವನೆ : ಪುಟ ೧೪–೧೫ ನೋಡಿ)

ಕೆಲಸ ಕಾರ್ಯಗಳಿಂದಲೂ ಮನೆಯ ದನಕರು ಕುರಿಮೇಕೆಗಳ ಪಾಲನಾಕ್ರಿಯೆಯಿಂದಲೂ ರುದ್ರಪ್ಪ ದಿನೇ ದಿನೇ ಎಲ್ಲರ ಗಮನ ಸೆಳೆಯುತೊಡಗಿದನು. ಉಳಿದ ಬೇಸಾಯಗಾರರೆಲ್ಲ ಬಾಲಕ ರುದ್ರಪ್ಪನ ಉತ್ಸಾಹ ಶಕ್ತಿಗೆ ಮಾರುಹೋದರು. ತಂದೆ ತಾಯಿಗಳು ಏಳೆಂಟು ವರ್ಷ ತುಂಬಿದ ಮಗನನ್ನು ವಿದ್ಯಾಭ್ಯಾಸಕ್ಕೊಳಪಡಿಸಬೇಕೆಂದು ಪ್ರಯತ್ನಿಸಿದರು. ಆಗ ಲಕ್ಕೂರಿನಲ್ಲಿ ಶಾಲೆ ಇರಲಿಲ್ಲ. ಉತ್ಸಾಹದಿಂದ ದಾಬಸಪೇಟೆಯಲ್ಲಿರುವ ಒಂದು ಕೂಲಿ ಮಠಕ್ಕೆ ಸೇರಿದರು. ನೇಗ್ಗಿಯ ಚಂದ್ರಣ್ಣ ಮತ್ತು ಮಲ್ಲಪ್ಪ ಇವರಿಬ್ಬರೂ ರುದ್ರಪ್ಪನ ಶಾಲಾ ಸ್ನೇಹಿತರಾದರು. ಶಾಲೆ ಬಿಟ್ಟೊಡನೆಯೇ ರುದ್ರಪ್ಪ ಈ ಸ್ನೇಹಿತರನ್ನೊಡಗೊಂಡು ಸಿದ್ಧನ ಬೆಟ್ಟದ ಸಂಚಾರ ಕೈಗೊಳ್ಳುತ್ತಿದ್ದ. ಅಲ್ಲಿ ಅತ್ತಿ. ನೇರಳೆ. ಮಾವು–ಮೊದಲಾದ ಮರಗಳನ್ನೇರಿ ಹಣ್ಣು ಕಿತ್ತು ತಿನ್ನುವುದು. ಪರಂಗಿ. ಕವಳೆ. ಕಾರೆ. ಜೋರೆ ಹಣ್ಣುಗಳನ್ನು ಸಂಗ್ರಹಿಸುವುದು. ಬೆಟ್ಟದಲ್ಲಿರುವ ವೀರಭದ್ರ ಮೂರ್ತಿಯ ಎದುರು. ಗವಿಯಲ್ಲಿರುವ ಶಿವಲಿಂಗದೆದುರು ಹಣ್ಣನ್ನೆಲ್ಲ ಸುರುವಿ ನೈವೇದ್ಯ ಮಾಡುವುದು ಅನಂತರ ತನ್ನ ಸ್ನೇಹಿತರೊಡನೆ ಅವನ್ನೆಲ್ಲ ತಿಂದು ತೇಗಿ ಮನೆಯ ಕಡೆಗೆ ದಾರಿ ಹಿಡಿಯುವುದು–ಈ ರೀತಿಯ ವ್ಯವಹಾರದಲ್ಲಿ ತೊಡಗಿದನು. ಒಮ್ಮೊಮ್ಮೆ ಗಭೀರತೆಯಿಂದ ಕೂಡಿದ ಅಲ್ಲಿರುವ ಗವಿಗಳನ್ನು ಕುತೂಹಲ ದೃಷ್ಟಿಯಿಂದ ಒಳಹೊಕ್ಕು. ಹೊರ ಬರದೆ ಅಲ್ಲಿಯೇ ಕುಳಿತು ಬಿಡುತ್ತಿದ್ದ. ಸ್ನೇಹಿತರೆಲ್ಲ ಹೆದರಿ ಹೊರಬಂದು ಕಿರಿಚಿ ಕಿರಿಚಿ ಕರೆದರೂ ಹೊರಬರುತ್ತಿರಲಿಲ್ಲ. ತನ್ನ ಮನಸ್ಸಿಗೆ ಬಂದಾಗ ಹೊರ ಬಂದು ಸ್ನೇಹಿತರನ್ನು ಕೂಡಿಕೊಂಡು ಮನೆಗೆ ಬರುತ್ತಿದ್ದ. ಒಮ್ಮೊಮ್ಮೆ ಉದ್ದಾನ ವೀರಭದ್ರನ ಗುಡಿಯಲ್ಲಿ ವೀರಭದ್ರನಂತೆ ನಿಂತು ನಟಿಸಿ ಸ್ನೇಹಿತರನ್ನು ನಗಿಸುತ್ತಿದ್ದ. ಈ ರೀತಿಯ ಆತನ ಬಾಲ್ಯ ಪ್ರವೃತ್ತಿಗಳು ತಂದೆ ತಾಯಿಗಳಿಗೆ ತಲೆನೋವನ್ನುಂಟು ಮಾಡತೊಡಗಿದವು. ಮಗ ಅಷ್ಟಿಷ್ಟು ವಿದ್ಯಾಭ್ಯಾಸ ಮಾಡಲೆಂದು ಶಾಲೆಗೆ ಕಳಿಸಿದರೆ ಶಾಲೆಯ ಓದು ಬರಹಗಳಲ್ಲಿ ಆಸಕ್ತಿ ತೋರಿಸದೆ ಗಿರಿ ಗಹ್ವರಗಳನ್ನು ಸುತ್ತಾಡುವ ಮರಗಿಡಗಳನ್ನೇರುವ. ಅಡವಿ ಅಡವಿಗಳಲ್ಲಿ ಸುತ್ತಾಡುವ ಈತನ ವ್ಯವಹಾರಗಳು ಅವರಿಗೆ ಅಲೌಕಿಕವಾಗಿ ಕಂಡವು. ಹೀಗೆ ನಾಲ್ಕೈದು ವರ್ಷಗಳು ಸಂದುಹೋದವು. ಆ ವೇಳೆಗಾಗಲೇ ರುದ್ರಪ್ಪ ತನ್ನ ಅತ್ಯದ್ಭುತ ಪ್ರತಿಭೆಯಿಂದ ಅಲ್ಪಸ್ವಲ್ಪ ಓದಿ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಪಡೆದಿದ್ದ. ಆದರೇನು ತಂದೆ ತಾಯಿಗಳ ಆಸೆ ಅಭಿಲಾಷೆಗಳಿಗೆ ತಕ್ಕ ಹಾಗೆ ಅವನು ಓದಲಿಲ್ಲವೆನ್ನಬಹುದು. ಸ್ವಲ್ಪ ಓದಿ ಬಹಳ ತಿಳಿದುಕೊಳ್ಳುವ ಸಾಮರ್ಥ್ಯವನ್ನು ಪಡೆದಿದ್ದನೆನ್ನಬಹುದು. ಕೊನೆಗೆ ರುದ್ರಪ್ಪ ಶಾಲೆಗೆ ಶರಣು ಹೊಡೆದುಬಿಟ್ಟ.

**ಲೋಕದಲ್ಲಿ ಕೆಲವರು ದೊಡ್ಡವರಾಗಿಯೇ ಹುಟ್ಟುತ್ತಾರೆ :**

ಲೋಕದಲ್ಲಿ ಅನೇಕ ಜನ ಮಹಾಪುರುಷರ ಬಾಲ್ಯ ಜೀವನ ಅದ್ಭುತ ರಮ್ಯವಾಗಿರುತ್ತದೆ. ಆದರೆ ಆ ಚರ್ಯೆಯನ್ನು ಅರ್ಥ ಮಾಡಿಕೊಳ್ಳುವವರೇ ಅಪರೂಪ. ದಿನೇ ದಿನೇ ರುದ್ರಪ್ಪನ ಬಾಲ್ಯಜೀವನ ಅದ್ಭುತ ರಮ್ಯವಾಗತೊಡಗಿತು. ೧೧–೧೨ ವರ್ಷ ವಯಸ್ಸಿಗೆ ನಿರ್ಭೀತನಾಗಿ ರುದ್ರಪ್ಪ ಹಗಲು ರಾತ್ರಿಯೆನ್ನದೆ ಸಿದ್ಧನಬೆಟ್ಟದ ಗವಿಗಳಲ್ಲಿ. ರುದ್ರೇಶ್ವರ ದೇವಾಲಯದಲ್ಲಿ ಒಬ್ಬಂಟಿಗನಾಗಿ ಸುತ್ತಾಡುತ್ತ ಗಂಟೆ ಗಂಟೆಗಳವರೆಗೆ ಧ್ಯಾನಮಗ್ನನಾಗಿ ಕುಳಿತುಕೊಂಡು ಬಿಡುತ್ತಿದ್ದ. ಈ ವ್ಯವಹಾರದಲ್ಲಿ ಅವನಿಗಾಗುವ ಆನಂದ ಬೇರೆ ವ್ಯವಹಾರಗಳಲ್ಲಿ ಆಗುತ್ತಿರಲಿಲ್ಲ. ಕೊನೆಗೆ ತಂದೆ ತಾಯಿಗಳು ಈ ಮಗನಿಗೆ ಮೇಕೆ ಕುರಿಗಳನ್ನು ಕಾಯ್ದುಕೊಂಡು ಬರುವ ಕೆಲಸಕ್ಕೆ ನೇಮಿಸಿಬಿಟ್ಟರು. ರುದ್ರಪ್ಪನಿಗೆ ಬೇಕಾದುದೂ ಅದೇ.

ಲೋಕದಲ್ಲಿ ಕೆಲವರು ದೊಡ್ಡವರಾಗಿಯೇ ಹುಟ್ಟುತ್ತಾರೆ; ಕೆಲವರು ಹುಟ್ಟಿದ ಮೇಲೆ ದೊಡ್ಡವರಾಗುತ್ತಾರೆ: ಹುಟ್ಟಿನೊಡನೆಯೇ ಕೆಲವರು ಮಹನೀಯರಾಗುತ್ತಾರೆ; ಕೆಲವರು ಹುಟ್ಟಿದ ಮೇಲೆ ಮಹನೀಯರಾಗುತ್ತಾರೆ. ರುದ್ರಪ್ಪ ಹುಟ್ಟಿನೊಡನೆಯೇ, ದೊಡ್ಡತನವನ್ನೂ. ಮಹನೀಯತೆಯನ್ನೂ ಮೈಮನಕ್ಕಂಟಿಸಿಕೊಂಡು ಬಂದ ದಿವ್ಯ ಚೇತಸ್ಸುಳ್ಳವನು. ಲೋಕ ಸಾಮಾನ್ಯ ನಡೆನುಡಿಗಳಿಂದ ವಿಭಿನ್ನವಾದ ರುದ್ರಪ್ಪನು ಬಾಲ್ಯದಿಂದಲೇ ಪವಾಡ ಪುರುಷನಾಗಿ ಬೆಳೆದು ಬಂದವನು. ಅಹಿಂಸೆ. ತ್ರಿಕರಣ ಶುದ್ಧಿಗಳು ಹುಟ್ಟಿನೊಡನೆ ರುದ್ರಪ್ಪನಿಗೆ ಬೆಳೆದು ಬಂದವು. ಅಂತೆಯೇ ಅವನ ನಡೆನುಡಿಗಳಲ್ಲಿ ವ್ಯವಹಾರಗಳಲ್ಲಿ ಪವಾಡ ಸದೃಶ ಅನೇಕ ಘಟನೆಗಳು ಬಾಲ್ಯದಲ್ಲಿಯೇ ನಡೆದು ಬರತೊಡಗಿದವು. ಪವಾಡಗಳ ವಿಷಯದಲ್ಲಿ ಒಂದು ಮಾತು: ಪವಾಡದ ಮಾತೆತ್ತಿದೊಡನೆಯೇ ಕೆಲವು ವಿಜ್ಞಾನಿಗಳು ಮೂಗು ಮುರಿಯುವುದು ಇತ್ತೀಚಿನ ಪ್ರವೃತ್ತಿಗಳಲ್ಲಿ ಒಂದು. ವಿಜ್ಞಾನ ಕಾರ್ಯ ಕಾರಣ ಸಂಬಂಧವನ್ನು ಕೇಳುತ್ತದೆ: ಪವಾಡಗಳಲ್ಲಿ ಕಾರಣ ಕಾಣುವುದಿಲ್ಲ. ಕಾರ್ಯ ಕಾಣುತ್ತದೆ. ಆಗ ಅವರು ಕಾರಣವಿಲ್ಲದೆ ಕಾರ್ಯವಾದ ಬಗೆಗೆ ಸಂಶಯ ತಾಳುತ್ತಾರೆ. ಆದರೆ ಬಹು ಜನ ವಿಚಾರವಾದಿಗಳು ಪವಾಡಗಳನ್ನು ನಂಬುತ್ತಾರೆ. ಅಲ್ಲಿ ಕಾರಣವೆಂಬುದು ಕಣ್ಣಿಗೆ ಕಾಣದಿದ್ದರೂ ಅದು ಇದ್ದೇ ಇದೆ. ಆದರೆ ಅದು ವ್ಯಕ್ತಿ–ಶಕ್ತಿಯ ಪ್ರಭಾವದಲ್ಲಿ ಅಡಕವಾಗಿ ಲೋಕಕ್ಕೆ ಸ್ಪಷ್ಟವಾಗಿ ಗೋಚರಿಸುವುದಿಲ್ಲವಾಗಿ ಕಾರ್ಯ ಕಾರಣ ಸಂಬಂಧವಾದಿಗಳು ಅಲ್ಲಗಳೆಯುತ್ತಾರೆ. ಆತ್ಮ ಶಕ್ತಿಯ ಅಪಾರ ತೇಜಸ್ಸು ಆ ಶಕ್ತಿಯನ್ನು ಗಳಿಸದಿದ್ದವರಿಗೆ ಒಮ್ಮೊಮ್ಮೆ ಸಂಶಯಕ್ಕೀಡು ಮಾಡುವುದುಂಟು. ಶಿವಯೋಗದ ಅಥವಾ ಯೋಗದ ಸಾಧನಾಬಲದಿಂದ ಸಿದ್ಧಿಗೊಂಡ ಅದ್ಭುತವಾದ ಆತ್ಮ ಶಕ್ತಿಯ

ಅಭಿವ್ಯಕ್ತಿಯು ಲೋಕಕ್ಕೆ ಪವಾಡವಾಗುತ್ತದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯಗಳೆಂಬ ಪಂಚ ಕೋಶಗಳ ಕಂಚುಕ ನಾಶವಾಗಿ ಅಂದರೆ ಪ್ರಾಕೃತಿಕ ಗುಣಗಳನ್ನು ಯೋಗಶಕ್ತಿ ಬಲದಿಂದ ಕೆಡಿಸಿದಾಗಲೇ ಯೋಗ ಶಕ್ತಿಯು ಪ್ರಕಟಗೊಂಡು ಪವಾಡಗಳು ಲೋಕಕ್ಕೆ ಕಾಣ ಬರುತ್ತವೆ. ಆದರೆ ಅನೇಕ ಜನ ಶಿವಯೋಗಿಗಳು ಆ ಶಕ್ತಿಯನ್ನು ಪ್ರಕಟಿಸುವುದಿಲ್ಲ. ಪ್ರಕಟಿಸಿದರೂ ಶಿಷ್ಟ ರಕ್ಷಣೆಗಾಗಿ ಕೆಲವು ವೇಳೆ ಅವು ಮೀಸಲಾಗಿರುತ್ತವೆ. ಅಷ್ಟಾಂಗಯೋಗ ನಿರತರಾದ ಕೆಲವರು ಪ್ರಕಟಿಸುವುದುಂಟು. ಆದರೆ ಪ್ರಕಟಿಸುವುದೂ ಕೂಡ ಲೋಕ ಹಿತಕ್ಕೆ. ಲೋಕಹಿತಕ್ಕೆ ಧಕ್ಕೆ ತರುವ ರೀತಿಯಲ್ಲಿ ಕೆಲವರು ಪ್ರಕಟಿಸಿ ತಮ್ಮ ಶಕ್ತಿಯ ದುರುಪಯೋಗ ಮಾಡಿಕೊಳ್ಳುವುದು ಉಂಟು.[5] ಅದೇನೇ ಇರಲಿ ಶಕ್ತಿಯು ಸಂಕುಚಿತಗೊಂಡಾಗ ವ್ಯಕ್ತಿ ಪ್ರಕೃತಿಬದ್ಧನಾಗಿ ಜೀವನೆನಿಸುವನು. ಶಕ್ತಿಯು ಪೂರ್ಣ ವಿಕಸಿತ ಸ್ಥಿತಿಯಲ್ಲಿ ವ್ಯಕ್ತಿ ಶಿವನಾಗಿ ಪ್ರಕೃತಿ ಯುಕ್ತನಾಗುತ್ತಾನೆ ಅಥವಾ ಶಕ್ತಿ ವಿಶಿಷ್ಟನಾಗುತ್ತಾನೆ. ಅಂಥ ವ್ಯಕ್ತಿ ಪ್ರಕೃತಿಯ ಮೇಲೆ ಪ್ರಭುತ್ವ ಸ್ಥಾಪಿಸಿದ ಪ್ರಭುವಾಗುತ್ತಾನೆ. ಇಂಥ ಪ್ರಭುತ್ವ ಶಕ್ತಿ ಪಡೆದ ವ್ಯಕ್ತಿ ಅಪ್ರಾಕೃತತ್ತ್ವ ಪಡೆದ ದಿವ್ಯ ಮಾನವನೆನಿಸುತ್ತಾನೆ. ಈ ರೀತಿಯ ಅಪ್ರಾಕೃತ ಸ್ಥಿತಿಗೇರಿ ನಿಂತ ವ್ಯಕ್ತಿಯ ದಿವ್ಯ ವ್ಯಕ್ತಿತ್ವ ಮಾತಿನಲ್ಲಿ ಕೃತಿಯಲ್ಲಿ ಲೋಕ ಸಾಮಾನ್ಯ ಮಾನವರಿಂದ ಪ್ರಕಟಿಸಲಸಾಧ್ಯವಾದ ಶಕ್ತಿ ಪ್ರಕಟಿಸಲು ಶಕ್ತವಾಗುವುದು. ಅದು ಲೋಕಕ್ಕೆ ಪವಾಡವಾಗಿ ಕಾಣುವುದು. ಇವು ಅಣಿಮಾ ಮಹಿಮಾದಿ ಅಷ್ಟಸಿದ್ಧಿಗಳ ರೂಪದಲ್ಲಿ ಸಿದ್ಧಪುರುಷರ ಕೈವಶವಾಗಿರುತ್ತವೆಂದು ಯೋಗ ಶಾಸ್ತ್ರಗಳಲ್ಲಿ ಹೇಳಲಾಗುತ್ತಿದೆ. ಪವಾಡಗಳನ್ನು ವ್ಯಕ್ತಪಡಿಸುವುದು ಎಲ್ಲರಿಂದಲೂ ಸಾಧ್ಯವಿಲ್ಲ. ಶಿವಯೋಗ ಶಕ್ತಿ ಪಡೆದವರಿಂದ ಮಾತ್ರ ಸಾಧ್ಯವೆಂದು ಯೋಗ ಶಾಸ್ತ್ರದ ಮಾತುಗಳಿಂದ ನಮಗೆ ಗೊತ್ತಾಗುತ್ತದೆ. ಪಾತಂಜಲಿಯ ಯೋಗ ಶಾಸ್ತ್ರದಲ್ಲಿ– ತ್ರಿಕರಣಶುದ್ಧವಾಗಿ ಸತ್ಯವನ್ನು ಅಭ್ಯಾಸ ಮಾಡಿದ ಯೋಗಿಗೆ ವಾಕ್ ಸಿದ್ಧಿಯುಂಟಾಗುವುದು.[6] ಅಂದರೆ ಅವನು ನುಡಿದ ನುಡಿಯಲ್ಲಿ ಶಾಪ ಮತ್ತು ಅನುಗ್ರಹಗಳೆರಡೂ ಉಂಟಾಗುವುವೆಂದೇ ಅರ್ಥ. ಹಿಂಸಾಸ್ವಭಾವವನ್ನೇ ನಷ್ಟಗೊಳಿಸಿಕೊಂಡ ಯೋಗಿಯ ಸನ್ನಿಧಿಯಲ್ಲಿ ಬದ್ಧ ವೈರವುಳ್ಳ ಪ್ರಾಣಿಗಳಲ್ಲೂ ಮೈತ್ರಿ ಉಂಟಾಗುವುದೆಂದೂ ಅಂಥ ಯೋಗಿಗೆ ಮೃಗಬಾಧಾ ನಿವಾರಣೆಯಾಗುವುದೆಂದೂ ಎಂಥ ಕ್ರೂರಮೃಗಗಳಾದರೂ ಹಿಂಸೆಗೆಳಸುವುದಿಲ್ಲವೆಂದೂ ಹೇಳಲಾಗುತ್ತಿದೆ.[7] ಅವರ ಮಾತನ್ನು ಅನುಸರಿಸಿ ಅರ್ಥವೇ ಹರಿದುಬರುತ್ತದೆಂದು ಅನೇಕ ಅನುಭವಿಗಳ ಅನುಭವವಾಗಿದೆ.[8] ಅಷ್ಟಾಂಗ ಯೋಗದ 'ಯಮ' ಎಂಬ ಮೊದಲನೆಯ ಅಂಗದಲ್ಲಿರುವ ಐದು ಗುಣಗಳಲ್ಲಿ ಮೊದಲನೆಯ ಅಹಿಂಸೆ–ಸತ್ಯವೆಂಬ ಗುಣಗಳನ್ನು ಅಭ್ಯಾಸ ಮಾಡಿಸಿದವನ ಸನ್ನಿಧಿಯಲ್ಲಿ ಇತರರು ವೈರಭಾವವನ್ನು ಬಿಡುವರೆಂದೂ, ಅವನಿಗೆ ಅಗಲೇ ಶಾಪಾನುಗ್ರಹ ಶಕ್ತಿ ಬರುವುದೆಂದೂ ಹೇಳಿದ ಮೇಲೆ ಸಂಪೂರ್ಣ ಯೋಗವು (ಅಷ್ಟಾಂಗಗಳಿಂದ ಕೂಡಿದ ಯೋಗವು) ಸಿದ್ಧಿಸಿದರೆ ಅವನಲ್ಲಿ ಇನ್ನೆಂತಹ ಅದ್ಭುತ ಶಕ್ತಿಯುಂಟಾಗಲಿಕ್ಕಿಲ್ಲ! ಅದರಲ್ಲಿಯೂ ಶಿವಯೋಗಿಯಾದವನ ವಿಚಾರವಲ್ಲಿ ವಿವರಿಸುವುದಾದರೂ ಏನಿದೆ? ಪ್ರತ್ಯಕ್ಷ ಶಿವಸ್ವರೂಪರೇ ಆದ ಅವರಲ್ಲಿ ಶಿವಶಕ್ತಿ ಒಡಮೂಡಿರುತ್ತದೆ. ಇತ್ತೀಚಿನ ದಿನಗಳಲ್ಲಿ ಸತ್ಯ ಅಹಿಂಸೆಗಳನ್ನು ಜೀವನಕ್ಕಳವಡಿಸಿಕೊಂಡಿದ್ದ ಗಾಂಧಿ, ಅರವಿಂದ ಘೋಷರೇ ಮೊದಲಾದವರಿಂದ ಎಂಥ ಅದ್ಭುತ ಘಟನೆಗಳು ನಡೆದಿಲ್ಲ? ಆದುದರಿಂದ ಶಿವಯೋಗದಲ್ಲಿ ಅದ್ಭುತ ಶಕ್ತಿ ಸಂಚಯನಗೊಳಿಸಿಕೊಂಡ ಶಿವಯೋಗಿಗಳ ಜೀವನದಲ್ಲಿಯೂ ಅದ್ಭುತಗಳು ನಡೆಯುತ್ತವೆ. ಆದರೆ ವೀತರಾಗಭಯಕ್ರೋಧ ವಿವರ್ಜಿತರಾದ ಅವರು ತಾವು ಕಷ್ಟ ಅನುಭವಿಸಿದರೂ ಇತರರಿಗೆ ಕೇಡನ್ನುಂಟು ಮಾಡುವ ಶಾಪಾದಿಗಳನ್ನು ಪ್ರಕಟಿಸುವುದಿಲ್ಲ. ಅನುಗ್ರಹವನ್ನು ಬೇಕಾದರೆ ಪ್ರಕಟಿಸಿಯಾರು. ಅದರೂ ಒಮ್ಮೊಮ್ಮೆ ಲೋಕಜೀವನವನ್ನು ತಿದ್ದಲು.ಮೂರ್ಖರನ್ನು ದಾರಿಗೆ ತರಲು, ಇನ್ನಾವ ಉಪಾಯಗಳೂ ತೋರದಿದ್ದಾಗ ಶಾಪದ ಮೂಲಕ ಸರಿಪಡಿಸುವುದೂ ಉಂಟು. ಈ ಕಾರಣದಿಂದ ನಷ್ಟವಾದ ತಮ್ಮ ಶಕ್ತಿಯನ್ನು ಪುನಃ ಅವರು ಸಂಪಾದಿಸಿ ಸರಿದೂಗಿಸಿಕೊಳ್ಳುತ್ತಾರೆ. 'ಶಾಪಾದಪಿ ಶರಾದಪಿ' ಎಂಬ ಮಾತನ್ನಿಲ್ಲಿಸ್ಮರಿಸಬಹುದು. ಶಾಪದಿಂದಲಾದರೂ ಶರದಿಂದಲಾದರೂ ಲೌಕಿಕದೌಷ್ಟ್ಯವನ್ನು ಹಾಳುಮಾಡಿ ಸದ್ಧರ್ಮಸ್ಥಾಪನೆ ಮಾಡಲು ಮಹಾತ್ಮರು ಆಗಾಗ ಯತ್ನಿಸುತ್ತಾರೆ.

ಬಾಲ್ಯದಲ್ಲಿ ಲಕ್ಕೂರಿನ ರುದ್ರಪ್ಪ ಸಾಮಾನ್ಯ ಬಾಲಕನಂತೇನೂ ಇರಲಿಲ್ಲ. ಹುಟ್ಟುತ್ತಲೇ ಅವನು ಯೌಗಿಕ ಪುರುಷನಂತೆ ಇದ್ದ. ಕರ್ಣನ ಸಹಜಕವಚಕುಂಡಲಗಳಂತೆ ಅವನ ಮೈಮನಸ್ಸಿಗೆ ಯೌಗಿಕಶಕ್ತಿ ಅಂಟಿಕೊಂಡು ಬಂದಿತ್ತು.

---

5. ದೃಷ್ಟಾಂತವಾಗಿ ಪ್ರಭುಲಿಂಗಲೀಲೆಯಲ್ಲಿ ಬರುವ ಸಿದ್ಧರಾಮ ಹಣೆಗಣ್ಣುರಿಯನ್ನು ಪ್ರಭುದೇವರ ಮೇಲೆ ಪ್ರಯೋಗಿಸಿದುದನ್ನು ಜ್ಞಾಪಿಸಿಕೊಳ್ಳಬಹುದು.
6. 'ಸತ್ಯ ಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಂ' (ಪಾದ ೨, ಸೂತ್ರ ೩೬)
7. 'ಅಹಿಂಸಾಪ್ರತಿಷ್ಠಾಯಾಂ ತತ್‌ಸನ್ನಿಧೌ ವೈರತ್ಯಾಗಃ'(ಪಾದ ೨, ಸೂತ್ರ-೩೫)
8. ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋನುಧಾವತಿ ।
   ಲೌಕಿಕಾನಾಂಹಿ ಸಾಧೂನಾಂ ಅರ್ಥಂ ವಾಗನುವರ್ತತೇ ॥ (ಭವಭೂತಿಯ ಉತ್ತರ ರಾಮಚರಿತ್ರೆ)

ಅಂತೆಯೇ ಅವನ ಅನೇಕ ಅಲೌಕಿಕ ನಡೆನುಡಿಗಳು ಲೋಕದ ಜನರಿಂದ ಅವನನ್ನು ಬೇರ್ಪಡಿಸಿದ್ದವು. ಕೆಲವರು ಹುಟ್ಟುತ್ತಲೆ ದೊಡ್ಡವರಾಗಿ ಹುಟ್ಟುತ್ತಾರೆ: ಕೆಲವರು ಹುಟ್ಟಿದ ಮೇಲೆ ದೊಡ್ಡವರಾಗುತ್ತಾರೆಂದು ಈ ಪೂರ್ವದಲ್ಲಿ ಹೇಳಿದುದು ಇದೇ ಉದ್ದೇಶದಿಂದ. ಶಂಕರಾಚಾರ್ಯರು ಹುಟುತ್ತಲೇ ದೊಡ್ಡವರಾಗಿ ಹುಟ್ಟಿದರು. ಇಲ್ಲದಿದ್ದರೆ ಎಂಟನೆಯ ವಯಸ್ಸಿನಲ್ಲಿಯೇ ಸಕಲ ವೇದಶಾಸ್ತ್ರದ ಕ್ರಮ ಹೇಗೆ ಅವರಿಗೆ ವಶವರ್ತಿಯಾಗುತ್ತಿತ್ತು ? ೩೨ ವರ್ಷ ವಯಸ್ಸಿನ ಹೊತ್ತಿಗೆ ಅವರು ಸಾಧಿಸಿದ್ದು ಅಗಣಿತ. ಇಂಥ ಇದ್ಭುತ ಚೇತಸ್ಸುಗಳ ವಿಚಾರದಲ್ಲಿ ಸಾಮಾನ್ಯ ಲೋಕ ಲೌಕಿಕ ರೀತ್ಯಾ ಯೋಚಿಸುವವರ ಯೋಚನೆಗಳು ತಲೆ ಕೆಳಗಾಗುತ್ತವೆ. ಕುರಿಮೇಕೆಗಳನ್ನು ಕಾಯುವ ಕಾಯಕದ ಮರೆಯಲ್ಲಿ ಅಗಾಧ ಶಕ್ತಿಯ ಉದ್ದಾನಪ್ಪನ ಅಲೌಕಿಕ ನಡೆನುಡಿಗಳು ಲೋಕಕ್ಕೆ ತಿಳಿಯುವುದಾದರೂ ಹೇಗೆ? ಇಂಥವರನ್ನು ಕಂಡು ಲೋಕ ಗುರುತಿಸುವುದು ಕಷ್ಟವೆಂಬ ಮಾತು ಒತ್ತಟ್ಟಿಗಿರಲಿ, ಇವರನ್ನು ಹುಚ್ಚರೆಂದು ಕರೆಯುವುದೂ ಉಂಟು.[9] ಇವರನ್ನು ಮಹಾಪುರುಷರೆಂದು ಲೋಕ ಸ್ವೀಕರಿಸುವುದು ಒಂದು ಸನ್ಮುಹೂರ್ತದ ಮಹಾಘಟನೆ ಒದಗಿದಾಗ ಮಾತ್ರ. ರುದ್ರಪ್ಪ ಹರದನಹಳ್ಳಿ ಪೀಠಾಚಾರ್ಯರ ಪರಂಪರೆಯ ಅಂತಸ್ಸತ್ವವನ್ನು ೧೯ನೆಯ ಶತಮಾನದಲ್ಲಿಯೂ ಪಡೆದು ಮೂಡಿ ಬಂದ ಒಂದು ಶಿವಕಳೆಯ ಮಿಂಚು. ಅದು ಒಂದು ಸನ್ಮುಹೂರ್ತಕ್ಕಾಗಿ ಎದುರು ನೋಡುತ್ತಾ ಸಿದ್ಧಪುರುಷರ ತಪೋಭೂಮಿಯ ಮರೆಯಲ್ಲಿ ಕುರಿಮೇಕೆಗಳನ್ನು ಕಾಯುವ ಒಂದು ಲೀಲಾವಿನೋದದಲ್ಲಿ ಕಾಲಯಾಪನೆ ಮಾಡುತ್ತಿತ್ತೆಂದೂ ಹರದನಹಳ್ಳಿಯ ಪೀಠಾಚಾರ್ಯರುಗಳ ತಪೋಭೂಮಿಯ ಒಡೆತನದ ಸಿದ್ಧತೆಯ ಸಾಧನೆಯಲ್ಲಿ ಕಾಲಯಾಪನೆ ಮಾಡುತ್ತಿತ್ತೆಂದೂ ಹೇಳಬಹುದಾಗಿದೆ.

**ಜನ್ಮದುರಾಸೆಗಳೆದು ಹೊರಹೊರಟ ವಿಪುಲವೈರಾಗ್ಯ ನಿಧಿ**

ಕುರಿಮೇಕೆಗಳ ಪಾಲನೆಯಲ್ಲಿ ನಿರತರಾಗಿದ್ದ ರುದ್ರಪ್ಪನ ಮೇಲೆ ಅಗಾಧಪರಿಣಾಮವನ್ನು ಸಿದ್ಧನಬೆಟ್ಟ (ನಿಜಗಲ್ಲು ಬೆಟ್ಟ) ಉಂಟುಮಾಡಿತ್ತು. ಆ ಬೆಟ್ಟದಲ್ಲಿರುವ ಹೆಬ್ಬಂಡೆಗಳಲ್ಲಿ ಪ್ರಕೃತಿ ನಿರ್ಮಿತವಾದ ಗುಹೆಗಳನ್ನೆಲ್ಲ ರುದ್ರಪ್ಪ ಪರಿಚಯ ಮಾಡಿಕೊಂಡಿದ್ದ. ಕೆಲವು ಗುಹೆಗಳಲ್ಲಿ ಪ್ರಾಚೀನರಿಂದ ಪ್ರತಿಷ್ಠಾಪಿಸಲ್ಪಟ್ಟ ಶಿವಲಿಂಗಗಳ ಮುಂದೆ ತಲ್ಲೀನತೆಯಿಂದ ಗಂಟೆಗಟ್ಟಲೆ ಕುಳಿತು ಧ್ಯಾನಮಗ್ನನಾಗುತ್ತಿದ್ದ. ಅಲ್ಲಿಯೇ ಒಂದು ಪಾರ್ಶ್ವದಲ್ಲಿದ್ದ ಉದ್ದಾನ ವೀರಭದ್ರನ ದರ್ಶನಕ್ಕೆ ಆಗಾಗ ಹೋಗಿ ಅಲ್ಲಿ ಮೈಮರೆತು ಕುಳಿತಿರುತ್ತಿದ್ದ. ಉದ್ದಾನ ವೀರಭದ್ರದೇವಾಲಯ ಮತ್ತು ವೀರಭದ್ರ ಮೂರ್ತಿ ಇವನ ಮನಸ್ಸಿನ ಮೇಲೆ ಅಗಾಧ ಪರಿಣಾಮವುಂಟುಮಾಡಿದ್ದವು. ಕಾರಣವೇನಂದರೆ ಪಟೇಲ್ ಗಟ್ಟೆಪ್ಪನವರು ತಮ್ಮ ಮನೆದೇವರಾದ ಈ ವೀರಭದ್ರನ ಪೂಜೆ ಪುನಸ್ಕಾರಗಳಿಗೆ ವಿಶೇಷ ದಿನಗಳಲ್ಲಿ ಮನೆಯ ಸಮಸ್ತ ಮಂಡಳಿಯೊಡನೆ ಬರುತ್ತಿದ್ದರು. ಬಾಲ್ಯದಿಂದ ರುದ್ರಪ್ಪ ಅನೇಕಸಲ ಈ ದೇವಾಲಯಕ್ಕೆ ಬಂದು ತಂದೆತಾಯಿಗಳ ಭಕ್ತಿಜೀವನದಲ್ಲಿ ಪಾಲ್ಗೊಂಡಿದ್ದ ಕಾರಣ ಹಸುಳೆತನದಿಂದಲೂ ಒಂದು ಅನಿರ್ವಚನೀಯ ಸಂಬಂಧದ ಬೆಸುಗೆಯನ್ನು ವೀರಭದ್ರಮೂರ್ತಿ ರುದ್ರಪ್ಪನ ಮನಸ್ಸಿನೊಡನೆ ಬೆಸೆದಿತ್ತು. ಅಂತೆಯೇ ಉದ್ದಾನ ವೀರಭದ್ರನ ಗುಡಿಗೆ ಆಗಾಗ ರುದ್ರಪ್ಪ ಹೋಗಿ ಮೈಮರೆತು ಧ್ಯಾನದಲ್ಲಿ ಮಗ್ನನಾಗಿರುತ್ತಿದ್ದ. ಒಮ್ಮೊಮ್ಮೆ ಸಿದ್ಧಗಿರಿಯ ನೆತ್ತಿಯನ್ನೇರಿ ಅತಿ ನಿಕಟದಲ್ಲಿಯೇ ಸ್ಪಷ್ಟವಾಗಿ ಕಾಣುತ್ತಿದ್ದ ಶಿವಗಂಗಾ ಗಿರಿಯ ನೆತ್ತಿಯನ್ನು ಇನ್ನೊಮ್ಮೆ ರಾಮಗಿರಿ (ರಾಮೇಶ್ವರ ಬೆಟ್ಟ) ಶಿವಗಿರಿ ಅಥವಾ ಸಿದ್ಧಗಂಗಾ ಬೆಟ್ಟದ ನೆತ್ತಿಯನ್ನು ಎವೆಯಿಕ್ಕದೆ ನೋಡುತ್ತಿದ್ದ. ಆಕಾಶದಲ್ಲಿ ತೂರಿ ಹೋಗುತ್ತಿದ್ದ ಮೋಡಗಳ ಬೆನ್ನೇರಿ ಆ ಗುಡ್ಡದ ನೆತ್ತಿಗಳ ಮೇಲೆ ಇಳಿದು ಕ್ರೀಡಿಸಿದಂತೆ ಸ್ವಭಾವ ಕ್ರೀಡೆಗಳಲ್ಲಿಯೂ ಮುಳುಗಿರುತ್ತಿದ್ದ. ಬಿಡುವು ಆದಾಗಲೆಲ್ಲ ಒಬ್ಬನೇ ಅಲ್ಲಿಯವರೆಗೂ ಹೋಗಿ ಸುತ್ತಾಡಿ ಬರುತ್ತಿದ್ದುದೂ ಉಂಟು. ಒಮ್ಮೊಮ್ಮೆ ಸಿದ್ಧಗಂಗಾ ಬೆಟ್ಟದ ಕಡೆಯಿಂದ ಯಾವುದೋ ಶಕ್ತಿ ಕೈಬೀಸಿ ತನ್ನನ್ನು ಕರೆಯುತ್ತಿದ್ದಂತೆಯೂ ಹಗಲುಗನಸು ಕಾಣುತ್ತಿದ್ದ. ಒಮ್ಮೆ ಸಿದ್ಧನಬೆಟ್ಟದಲ್ಲಿ ತನ್ನ ನಿತ್ಯಕಾಯಕದಲ್ಲಿ ಮಗ್ನನಾಗಿರುವಾಗ ಓರ್ವ ದಿವ್ಯಪುರುಷನ ದರ್ಶನ ರುದ್ರಪ್ಪನಿಗೆ ಆಯಿತು. ಆತನ ಸಹವಾಸದಲ್ಲಿ ರುದ್ರಪ್ಪ ಅನೇಕ ದಿನಗಳು ಅಲೆದಾಡಿದ. ಭೀಕರ ಗುಹೆಗಳಲ್ಲಿ ಹಗಲು ರಾತ್ರಿಯನ್ನದೆ ಕಾಲಕಳೆಯತೊಡಗಿದ. ಈತನ ಸಂಸರ್ಗದ ಫಲವಾಗಿ ರುದ್ರಪ್ಪ ಮಂತ್ರತಂತ್ರ ಭೂತ ಬಾಧಾನಿವಾರಣಾದಿ ಅನೇಕ ವಿದ್ಯೆಗಳನ್ನು ಕಲಿತುಕೊಂಡುಬಿಟ್ಟ. ಈಗ ರುದ್ರಪ್ಪನ ಚರ್ಯೆಯು ಒಂದು ಬಗೆಯಾಯಿತು. ಸಿದ್ಧಪುರುಷನಿಗೂ ರುದ್ರಪ್ಪನಿಗೂ ಸಂಬಂಧ ತಪ್ಪಿಹೋಯಿತು. ಆಮೇಲೆ ರುದ್ರಪ್ಪ ತಾನು ಕಲಿತ ಈ ವಿದ್ಯೆಗಳನ್ನೆಲ್ಲ

---

9. ಸ್ವಾಮಿ ವಿವೇಕಾನಂದರು ಕಲ್ಕತ್ತ ನಗರದಿಂದ ಬೀದಿ ಬೀದಿಗಳಲ್ಲಿ ಚಿಕ್ಕಪುಟ್ಟ ನೌಕರಿಗಾಗಿ ಅಲೆಯುತ್ತಿದ್ದಾಗ ದೇವರು, ದೈವಗಳ ವಿಚಾರದಲ್ಲಿ ವಿಚಿತ್ರ ರೀತಿಯ ವಿತಂಡವಾದ ಮಾಡುತ್ತಿದ್ದಾಗ, ತನ್ನ ತಂದೆ ತನಗಾಗಿ ಏನೇನು ಮಾಡಿಲ್ಲವೆಂದು ಅವನೊಡನೆ ಜಗಳಕ್ಕೆ ನಿಂತಾಗ ಅವನ ಅಂತರಂಗದ ಅದ್ಭುತ ಶಕ್ತಿಯ ನಿಲವನ್ನರಿಯದೆ ಅವನನ್ನು ಹುಚ್ಚನೆಂದವರೂ ಇದ್ದರು. ಅವನು ಜಗತ್ಪ್ರಸಿದ್ಧ ತತ್ವಜ್ಞಾನಿಯಾಗಿ ಜಗತ್ತನ್ನೇ ಬೆರಗುಗೊಳಿಸಬಲ್ಲ ಮಹಾಪುರುಷನಾಗುವನೆಂದು ಆಗ ಯಾರು ಗುರುತಿಸಲೇ ಇಲ್ಲ. ಅವನು ಮಹಾಪುರುಷನಾಗಿ ಗೋಚರವಾದದ್ದು ಒಂದು ಸನ್ಮುಹೂರ್ತ ಒದಗಿದಾಗ ಮಾತ್ರ.

ಪ್ರಯೋಗಿಸತೊಡಗಿದ. ಇವನ್ನು ಪ್ರಯೋಗಿಸಬೇಕೆ ? ಬೇಡವೆ ? ಎಂಬುದೊಂದು ಬೇರೆ ಪ್ರಶ್ನೆ ? ಆದರೆ ರುದ್ರಪ್ಪನಿಗೆ ಮೊದಮೊದಲು ಈ ಪ್ರಯೋಗದಲ್ಲಿ ಒಂದು ಮೋಜೆನಿಸಿದ್ದಂತೂ ನಿಜ. ಮುಂದೆ ಶಿವಯೋಗದ ಮುಂದೆ ಇವೆಲ್ಲ ಅಲ್ಲವೆಂಬ ತಿಳುವಳಿಕೆ ಬರುವವರೆಗೆ ಆಗಾಗ ಈ ಪ್ರಯೋಗಗಳನ್ನು ಮಾಡುತ್ತಿದ್ದನೆಂದೂ ಅನೇಕರ ಅಭಿಪ್ರಾಯ. ಉದ್ಧಾನಪ್ಪ ಮೇಕೆಗಳನ್ನು ಕಾಯುತ್ತಿದ್ದಾಗ ಇವನೊಡನೆ ದನ ಕಾಯುವ ಸ್ನೇಹಿತರೂ ಕೆಲವರಾದರು. ಅದರಲ್ಲಿ ಮುಖ್ಯವಾಗಿ ನಿಜಗಲ್ಲಿನ ಚಿನ್ನಮುತ್ತಯ್ಯ, ಉರಗೊಲ್ಲರ ನಂಜಪ್ಪ, ಇವರು ಪ್ರಧಾನರಾದವರು. ಇವರು ಯಾವಾಗಲೂ ರುದ್ರಪ್ಪನನ್ನು ಬಿಟ್ಟಿರದೆ ಅವನು ಓದುವುದನ್ನು ಕೇಳುತ್ತಾ ಕುಳಿತಿರುತ್ತಿದ್ದರು. ದನಮೇಕೆಗಳೆಲ್ಲ ಇವರ ಸುತ್ತಲೂ ನಿಲ್ಲುತ್ತಿದ್ದ ದಿನಗಳೆಷ್ಟೋ. ಆ ಬೆಟ್ಟದಲ್ಲಿನ ಕ್ರೂರ ಮೃಗಗಳಿಂದ ಇವರ ತಂಡದಲ್ಲಿನ ಒಂದು ಪಶುವಿಗೂ ಎಂದೂಬಾಧೆ ಬರಲಿಲ್ಲವಂತೆ. ಎಷ್ಟೋ ಸಮಯದಲ್ಲಿ ದನಮೇಕೆಗಳು ಮೇಯುವುದನ್ನುಬಿಟ್ಟು ರುದ್ರಪ್ಪನ ಸುತ್ತ ಮೆಲಕುಹಾಕುತ್ತ ಮಲಗುತ್ತಿದ್ದುದನ್ನು ಎಲ್ಲರೂ ನೋಡಿ ಈ ರುದ್ರಪ್ಪ ದನಗಳಿಗೆಲ್ಲ ಯಾವುದೋ ಮಂಕುಭೂದಿ ಚೆಲ್ಲಿದ್ದಾನೆಂದುಕೊಳ್ಳುತ್ತಿದ್ದರಂತೆ. ದನಕಾಯುವ ಸ್ನೇಹಿತರಾದ ಚಿನ್ನಮುತ್ತಯ್ಯ, ನಂಜಪ್ಪ ಇವರು ರುದ್ರಪ್ಪನ ಶಿಷ್ಯರಂತೆ ವರ್ತಿಸುತ್ತಾ ಕಾಡಿನಲ್ಲಿನ ಗೇರು, ಮಾವು, ಕವಳಿ, ನೇರಳೆಹಣ್ಣುಗಳನ್ನು ಸಂಗ್ರಹಿಸಿ ತಂದು ಈತನ ಮುಂದೆ ಗುಡ್ಡ ಹಾಕುತ್ತಿದ್ದರಂತೆ. ಅವರ ದನಗಳ ರಕ್ಷಣೆಯ ಭಾರ ರುದ್ರಪ್ಪನದಾಗಿರುತ್ತಿತ್ತು. ಆ ಫಲಗಳನ್ನು ಸ್ನಾನ ಪೂಜೆಯನ್ನು ಮುಗಿಸಿ ತಿನ್ನುತ್ತಿದ್ದನಂತೆ.

ಒಂದು ದಿನ ಸಾಯಂಕಾಲದ ಸಮಯ. ಮೇಕೆಗಳನ್ನು ಮೇಯಬಿಟ್ಟು ರುದ್ರಪ್ಪ ಒಂದು ಬಂಡೆಯ ಮೇಲೆ ಕುಳಿತಿದ್ದ. ಅಷ್ಟರಲ್ಲಿ ಒಂದು ತೋಳವು ಮೇಕೆಗಳನ್ನು ಅಟ್ಟಿಸಿಕೊಂಡು ಬಂತು. ಮೇಕೆಗಳು ಓಡಿ ಓಡಿ ಬಂದವು. ರುದ್ರಪ್ಪ ತೋಳವನ್ನೂ ಭಯಭೀತಿಯಿಂದ ಓಡಿಬಂದ ಮೇಕೆಗಳನ್ನು ನೋಡಿದನು. ಕೆಲವು ಮೇಕೆಗಳು ರುದ್ರಪ್ಪನ ಸುತ್ತ ಮುತ್ತ ಕೂಗಾಡುತ್ತಾ ಚೀರಾಡುತ್ತಾ ನಿಂತವು. ನಾಲ್ಕು ಮೇಕೆಗಳು ಮಾತ್ರ ಕೆಸರಿನಲ್ಲಿ ಸಿಕ್ಕುಹಾಕಿಕೊಂಡವು ತೋಳ ಅವುಗಳತ್ತ ಹೋಗಿ ಬಾಯ್ತೆರೆಯಿತು. ಆದರೆ ತೋಳ ಒಂದು ಮೇಕೆಯನ್ನೂ ಮುಟ್ಟಲಾಗಲಿಲ್ಲ. ಹಾಗೇ ಬಾಯ್ತೆರೆದೇ ನಿಂತುಬಿಟ್ಟಿತು. ರಾತ್ರಿ ಹನ್ನೆರಡು ಗಂಟೆಯಾದರೂ ಹಾಗೆ ನಿಂತಿತ್ತು. ಮೇಕೆಗಳೂ ತೋಳದಿಂದ ಮಾರುದ್ದ ದೂರದಲ್ಲಿ ಕೆಸರಿನಲ್ಲಿ ಹಾಗೇ ನಿಂತುಕೊಂಡಿದ್ದವು, ಉಳಿದ ಮೇಕೆಗಳೆಲ್ಲ ರುದ್ರಪ್ಪನ ಸುತ್ತಮುತ್ತ ಮಲಗಿ ಮೆಲಕು ಹಾಕುತ್ತಿದ್ದವು. ರಾತ್ರಿ ೧೨ ಘಂಟೆಯಾದರೂ ಮೇಕೆಗಳೂ ರುದ್ರಪ್ಪನೂ ಮನೆಗೆ ಬಾರದಿರುವುದರಿಂದ ತಾಯಿತಂದೆಗಳು ನಾಲ್ಕಾರು ಜನರನ್ನು ಹುಡುಕಲು ಕಳಿಸಿದರು. ದೀಪದೊಡನೆ ಮಧ್ಯರಾತ್ರಿ ಸುಮಾರಿಗೆ ಅವರೆಲ್ಲ ಬಂಡೆಯ ಮೇಲೆ ತಾನೇ ತಾನಾಗಿ ಕುಳಿತ ರುದ್ರಪ್ಪನನ್ನೂ ಸುತ್ತ ಮುತ್ತ ನಿಶ್ಚಿಂತೆಯಿಂದ ಮಲಗಿದ್ದ ಮೇಕೆಗಳನ್ನೂ ಬಾಯಿತೆರೆದೇ ನಿಂತಿದ್ದ ತೋಳವನ್ನೂ ಕಂಡು ಭಯದಿಂದ ಅವಾಕ್ಕಾದರು. ತೋಳ ಮಾತ್ರ ಇವರು ಬಂದರೂಕೂಡ ಓಡದೆ ತೆರೆದ ಬಾಯಲ್ಲಿ ಹಾಗೇ ನಿಂತಿತ್ತು. ಊರಿಂದ ಬಂದವರು ಕೆಸರಿನಲ್ಲಿದ್ದ ಮೇಕೆಗಳನ್ನೆತ್ತಿಕೊಂಡು ಎಲ್ಲ ಮೇಕೆಗಳೊಡನೆ ಮನೆಗೆ ರುದ್ರಪ್ಪನನ್ನು ಕರೆತಂದರು. ತೋಳವನ್ನು ರುದ್ರಪ್ಪ ಹೊಡೆಯಗೋಡಲಿಲ್ಲ. ರುದ್ರಪ್ಪ ತೋಳಕ್ಕೆ ಮತ್ತಾವ ಮಂತ್ರ ಹಾಕಿದನೋ ಶಿವನೇ ಬಲ್ಲ; ಆಮೇಲೆ ತೋಳ ಬಾಯಿ ಮುಚ್ಚಿಕೊಂಡು ಓಡಿ ಹೋಯಿತು. ಈ ಘಟನೆ ನಡೆದುದು ರುದ್ರಪ್ಪ ಸುಮಾರು ೧೫ ವರ್ಷದವನಿರುವಾಗ.

ಮನೆಗೆ ಬಂದೊಡನೆ ರುದ್ರಪ್ಪನ ತಂದೆ ಅಣ್ಣತಮ್ಮಂದಿರೆಲ್ಲ ಮನಸ್ವೀ ಬೈದಾಡತೊಡಗಿದರು. ರುದ್ರಪ್ಪ ಅವನ್ನೆಲ್ಲ ತನ್ನ ಮೌನಮುದ್ರೆಯ ಮಹಾಸ್ತ್ರದಿಂದ ಜಯಿಸಿಕೊಂಡ. ಅಣ್ಣಂದಿರಿಂದ ಒಂದೆರಡು ಏಟುಗಳನ್ನೂ ತಿಂದ. ಆದರೆ ಅವೆಲ್ಲವನ್ನೂ ರುದ್ರಪ್ಪ ತುಟಿಪಿಟ್ಟೆನ್ನದೆ ಸಹಿಸಿಕೊಂಡು ಸುಮ್ಮನಾದ. ಈ ಘಟನೆ ನಡೆದ ಕೆಲದಿನಗಳಲ್ಲಿ ಇನ್ನೊಂದು ಘಟನೆ ನಡೆಯಿತು. ಅಣ್ಣನಾದ ಗುಂಡಪ್ಪ ಹೊಲಕ್ಕೆ ಗೊಬ್ಬರವನ್ನು ಹೇರಲು ಬಂಡಿಕಟ್ಟಿದ. ರುದ್ರಪ್ಪನೂ ಅಣ್ಣನ ಈ ಕಾರ್ಯದಲ್ಲಿ ನೆರವಾಗಲೆಂದು ಬಂದಿದ್ದ. ಗಾಡಿಗೆ ಎತ್ತನ್ನು ಹೂಡುವಾಗ ಜತ್ತಿಗೆಯನ್ನು ಹೊರಭಾಗದಿಂದ ಹಾಕಲು ರುದ್ರಪ್ಪ ತೊಡಗಿದಾಗ ಕೋಪಗೊಂಡ ಗುಂಡಪ್ಪ 'ಇಷ್ಟು ದಿನ ವ್ಯವಸಾಯ ಮಾಡಿದ ನಿನಗೆ ಎತ್ತು ಹೂಡಲಿಕ್ಕೆ ಇನ್ನೂ ಬರಲಿಲ್ಲವೇ ಮೂರ್ಖಾ' ಎಂದು 'ಫಡೀರನೆ' ಕಪೋಲಕ್ಕೆ ಹೊಡೆದು ಬಿಟ್ಟ. ಹೊಡೆತದಿಂದ ರುದ್ರಪ್ಪನಿಗೆ ತಲೆ ಗಿರ್ರೆಂದಿತು. ಕಣ್ಣಲ್ಲಿ ಕತ್ತಲೆಗೂಡಿಸಿದಂತಾಯಿತು. ಐದು ಬೆರಳುಗಳೂ ಕಪೋಲದ ಮೇಲೆ ಬಾಸುಂಡೆಯಾಗಿ ಮಾಡಿದವು. ಆಗಲೂ ರುದ್ರಪ್ಪ ಏನೂ ಮಾತನಾಡದೆ ಸುಮ್ಮನೆ ಸಹಿಸಿಕೊಂಡೇ ತನ್ನ ಕರ್ತವ್ಯ ನಿರ್ವಹಿಸಿದ. ಮಗುದೊಂದು ಮೂರನೆಯ ಪ್ರಸಂಗ ರುದ್ರಪ್ಪನ ಮನಸ್ಸಿನ ಮೇಲೆ ಅಗಾಧ ಪರಿಣಾಮವುಂಟು ಮಾಡುವ ಸನ್ನಿವೇಶವನ್ನೇ ತಂದೊಡ್ಡಿತು.

ರುದ್ರಪ್ಪ ದನ ಮೇಸುವುದಕ್ಕೆ ಹೋಗಲಿ ಎಲ್ಲಿಗೇ ಹೋಗಲಿ ತನ್ನ ಒಂದು ಜೋಳಿಗೆ ಸಂಗಾತಿಯಾಗಿ ಹೆಗಲಿನಲ್ಲಿ ನೇತಾಡುತ್ತ ಇದ್ದೇ ಇರುತ್ತಿತ್ತು. ಆ ಜೋಳಿಗೆಯಲ್ಲಿ ಕರ್ಪೂರ, ಊದುಬತ್ತಿ, ಭಸ್ಮ, ಸ್ವಲ್ಪಪತ್ರೆ, ಒಂದು ಸಕ್ಕರೆಯ ಪೊಟ್ಟಣ ಇವೆಲ್ಲ ಇರಲೇಬೇಕು. ಇರುವೆಯ ಸಾಲು ಕಂಡಲ್ಲೆಲ್ಲ ಪೊಟ್ಟಣ ಬಿಚ್ಚಿ ಸಕ್ಕರೆ ಹಾಕಲೇಬೇಕು. ಈ ಪರಿಪಾಠ

ಏಳೆಂಟುವರ್ಷದ ಹುಡುಗನಿಂದಲೂ ರುದ್ರಪ್ಪನ ಒಂದು ಅಭ್ಯಾಸವಾಗಿ ಬಂದಿತ್ತು. ಸಕ್ಕರೆ ಮತ್ತು ಕರ್ಪೂರಕ್ಕಾಗಿ ಆಗಾಗ ಒಂದೊಂದು ಮೇಕೆಯನ್ನು ಮಾರಿ ಈ ಕಾರ್ಯಕ್ಕಾಗಿ ಹಣವೊದಗಿಸಿಕೊಳ್ಳುತ್ತಿದ್ದ. ಒಮ್ಮೆ ಈ ಕಾರ್ಯಕ್ಕಾಗಿ ಹಣದ ಅಭಾವ ಬಹಳವಾದಾಗ ಒಂದು ದೊಡ್ಡ ಮೇಕೆಯನ್ನೇ ಎರಡು ರೂಪಾಯಿಗಳಿಗೆ ಮಾರಿಬಿಟ್ಟ.[10] ಒಳ್ಳೆಯ ಹಾಲಿನ ತಳಿಯ ಉತ್ತಮ ಮೇಕೆಯನ್ನು ಮಾರಾಟ ಮಾಡಿದ ರುದ್ರಪ್ಪನ ಬಗೆಗೆ ಮನೆಯವರೆಲ್ಲರ ಆಕ್ರೋಶ ಅಧಿಕವಾಗಿಹೋಯಿತು. ಆದರೆ ರುದ್ರಪ್ಪನಿಗೆ ಆ ಎರಡು ರೂಪಾಯಿ ಅವನ ಆರುತಿಂಗಳ ವರೆಗಿನ ಸಕ್ಕರೆ ಕರ್ಪೂರಗಳ ಅಭಾವವನ್ನು ಹೋಗಲಾಡಿಸುವಷ್ಟು ಮಟ್ಟಿನ ಸಮೃದ್ಧಿ ತಂದುಕೊಟ್ಟಿತ್ತು. ಮೇಕೆಯನ್ನು ಮಾರಿಕೊಂಡುಬಂದ ದಿನ ರಾತ್ರಿ ಈ ಸುದ್ದಿಯನ್ನು ತಿಳಿದ ಐದೂಜನ ಅಣ್ಣಂದಿರೂ. ತಂದೆಯೂ ಆಳಿಗೊಂದು ಬೈದು ನಾಲ್ಕಾರು ಏಟುಗಳನ್ನು ಕೊಟ್ಟುಬಿಟ್ಟರು, ಮನೆಯವರ ಭರ್ತ್ಸನೆಯ ಈ ಮೂರು ಪ್ರಸಂಗಗಳೂ ರುದ್ರಪ್ಪನಲ್ಲಿ ಒಂದು ಬಗೆಯ ಪ್ರಬಲ ವೈರಾಗ್ಯ ಭಾವ ಬಲಿಯಲು ಅನುವು ಮಾಡಿಕೊಟ್ಟವು. ಅಂದು ರಾತ್ರಿ ರುದ್ರಪ್ಪನಿಗೆ ನಿದ್ರೆ ಬರಲಿಲ್ಲ. ದುಃಖವೂ ಆಗಲಿಲ್ಲ. ರಾತ್ರಿಯೆಲ್ಲಾ ಕಣ್ಣು ಮುಚ್ಚಲಿಲ್ಲ. ಆಪ್ತರು. ಮಿತ್ರರು, ತಾಯ್ತಂದೆಗಳು ಮನೆಮಠ ಇವುಗಳ ಮೇಲೆ ಅಲ್ಪಸ್ವಲ್ಪವಿದ್ದ ಅವನ ಮಮಕಾರ ಭಾವ ರಾತ್ರಿಯ ಆ ಯೋಚನಾಗ್ನಿಯಲ್ಲಿ ದಗ್ಧವಾಗಿ ಹೋಯಿತು. ಬೆಳಕು ಹರಿಯುವುದರೊಳಗಾಗಿ ಈ ನೆಲವ ಬಿಟ್ಟೋಡುವನೆಂಬ ಒಂದು ಬಗೆಯ ಕೆಚ್ಚು ಅವನಲ್ಲಿ ಅಂಕುರಿಸಿತು. ಎಲ್ಲಿಗೆ ಹೋಗಬೇಕು ? ಏನುಮಾಡಬೇಕು ? ಎಂಬುದನ್ನೆಲ್ಲ ನಿಶ್ಚಯಿಸಿಕೊಂಡುಬಿಟ್ಟ.

ಇತ್ತ ಗಟ್ಟೆಪ್ಪ ಮತ್ತು ಉಳಿದ ಗಂಡುಮಕ್ಕಳು ರುದ್ರಪ್ಪನ ಬಗೆಗೆ ನಡೆದುಕೊಂಡ ರೀತಿ ಮರುಳಸಿದ್ಧಮ್ಮನವರಿಗೆ ವಿಶೇಷ ನೋವನ್ನುಂಟುಮಾಡಿದವು. ಅಣ್ಣಂದಿರು ತಂದೆ ಅಷ್ಟು ಬೈದರೂ. ಹೊಡೆದರೂ ಒಂದು ಉತ್ತರವನ್ನೂ ತಿರುಗಿ ಕೊಡದೆ ಪ್ರತಿಶಕ್ತಿಯನ್ನು ಪ್ರದರ್ಶಿಸದೆ ಮೌನವಾಗಿಯೇ ಇದ್ದ ಮಗನ ಬಗೆಗೆ ಅಪಾರ ಕನಿಕರ ಮೂಡಿ ರಾತ್ರಿಯೆಲ್ಲಾ ತಾಯಿ ಕಣ್ಣೀರ್ಗರೆದರು. ಪತಿ ಗಟ್ಟೆಪ್ಪನವರಿಗೆ "ನೀವೆಲ್ಲ ಸೇರಿ ರುದ್ರಪ್ಪನನ್ನು ಅಷ್ಟು ಹೊಡೆದು ಬೈದು ತಿರಸ್ಕರಿಸಿದ್ದು ಸರಿಯೇ ?" ಎಂದು ಪ್ರಶ್ನಿಸುತ್ತ "ಅವನು ಎರಡು ರೂಪಾಯಿಗೆ ಮೇಕೆಯನ್ನು ಮಾರಿ ಮಾಡಿದ್ದಾದರೂ ಏನು ? ತನ್ನ ಹಿಂದಿನಿಂದ ಬಂದ ಜೀವದಯಾಪರತೆಗಾಗಿ ಖರ್ಚು ಮಾಡಿದನಲ್ಲವೆ ? ಪೂಜೆ. ದೇವರು, ದೈವ ಎಂದು ಮೊದಲಿನಿಂದಲೂ ಏನೋ ಒಂದು ಶ್ರದ್ಧೆಯಲ್ಲಿ ಬಂದ ಅವನು ಕೊಂಡು ತಂದುದು ಕರ್ಪೂರ ಭಸ್ಮದ ಗಟ್ಟಿಗಳಲ್ಲವೆ"? –ಇತ್ಯಾದಿಯಾಗಿ ಕೇಳಿದ ಹೆಂಡತಿಯ ಮಾತುಗಳನ್ನು ಕೇಳಿ ಗಟ್ಟೆಪ್ಪನ ಕಣ್ಣಲ್ಲೂ ನೀರಾಡಿತು. ರಾತ್ರಿ ನಾವೆಲ್ಲ ಸೇರಿ ಚಿಕ್ಕವನಾದ ಆ ಮಗನನ್ನು ಹೊಡೆದುದು ಅಪರಾಧವಾದ ಹಾಗೆ ಆಯಿತು. ಐದು ಬೆರಳುಗಳು ಸರಿಯಿರುತ್ತವೆಯೆ ? ಅನೇಕ ಮಕ್ಕಳಲ್ಲಿ ಅಂಥವರೊಬ್ಬೊಬ್ಬರಿರುತ್ತಾರೆ. ಅದನ್ನು ಸಹಿಸಿಕೊಳ್ಳದೆ ನಾವೆಲ್ಲ ಸೇರಿ ಅವನ ಮನಸ್ಸಿಗೆ ನೋವಾಗುವಂತೆ ವರ್ತಿಸಿದ್ದು ಅಪರಾಧವೆಂದುಕೊಂಡು ಅವನೂ ಕಣ್ಣಿಗೆ ಕಣ್ಣುಹಚ್ಚದೆ ರಾತ್ರಿಯೆನ್ನೆಲ್ಲ ಕಳೆಯುತ್ತಿದ್ದ. ಬೆಳಗಾದೊಡನೆ "ನಿನ್ನೆ ರಾತ್ರಿ ನಡೆದ ಪ್ರಸಂಗವನ್ನು ಮರೆತುಬಿಡು ಮಗನೇ ! ನಾವೆಲ್ಲನಿನ್ನನ್ನು ಹೊಡೆದದ್ದು ತಪ್ಪಾಯಿತೆಂದು ಹೇಳಿಕೊಂಡು ಬಿಡೋಣವೆನ್ನಿಸಿತು ಗಟ್ಟೆಪ್ಪನವರಿಗೆ. ತಾಯಿಯ ಕರುಳು ಮಗನನ್ನು ನೆನೆನೆನೆದು ಬಿಕ್ಕಿಬಿಕ್ಕಿ ಅಳುವಂತೆ ಮಾಡಿತ್ತು. ಕೊನೆಗೆ ಗಂಡನಿಗೆ "ರುದ್ರಪ್ಪನಿಗೆ ಈ ವರ್ಷ ಮದುವೆ ಮಾಡಿಬಿಡೋಣ. ಮದುವೆಯಾದರೆ ಎಲ್ಲ ಸರಿಹೋಗುತ್ತದೆ.[11] ಎಂದು ಗಂಡನಿಗೆ ಹೇಳಿ ತಮ್ಮ ಮಗಳ ಮಗುವೊಂದನ್ನು ತಂದು ಕತ್ತಲೆಯೊಡನೆ ಪ್ರಕಾಶದ ಸ್ನೇಹ ಮಾಡಿಸಿಬಿಡುವ ಮುಂಡಿಗೆಯನ್ನು ಮನಸ್ಸಿನಲ್ಲಿಯೇ ತಿಂದಳು. ಮರುಳಸಿದ್ಧಮ್ಮ. ಮಗನ ಆಜಾನುಬಾಹುತ್ವ. ಹೊಳೆವಕಣ್ಣು. ಮೇಘಮಂದ್ರಧ್ವನಿವಿಶೇಷ ಎಂಥ ಸನ್ನಿವೇಶಕ್ಕೂ ತಡೆಯಬಲ್ಲ ವಜ್ರ ಶರೀರ. ಸದಾ ಮೌನವಾಗಿ ವರ್ತಿಸುವ ಗಂಭೀರ ನಡೆ. ತಾಳ್ಮೆ, ಎಲ್ಲಕ್ಕೂ ಹೆಚ್ಚಾಗಿ ಭಕ್ತಿಜೀವನ. ಸರ್ವಜೀವದಯಾ

---

10. ಎರಡು ರೂಪಾಯಿಗಳಿಗೆ ೧೮೭೫ರ ಸುಮಾರಿಗೆ ಮಾಡಿದುದರಲ್ಲಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಆಗ ಒಂದು ರೂಪಾಯಿಗೊಂದರಂತೆ ಮೇಕೆಗಳು ಮಾರಾಟವಾಗುತ್ತಿದ್ದ ಕಾಲ. ಎರಡು ರೂಪಾಯಿ ಒಂದು ಮೇಕೆಯ ಬೆಲೆ ಬಹಳಹೆಚ್ಚು. ೫–೬ ರೂಪಾಯಿಗಳಿಗೆ ಒಂದೊಂದು ಹಸು ಬರುತ್ತಿದ್ದ ಆ ಕಾಲದಲ್ಲಿ ಮೇಕೆಯ ಬೆಲೆ ಒಂದು, ಒಂದುಕಾಲು ಒಂದುವರೆಯಾದರೆ ಬಹಳ ಹೆಚ್ಚು. ಎರಡು ರೂಪಾಯಿಯ ಮೇಕೆಯೆಂದರೆ ಸುಮಾರು ಒಂದು ತಂಬಿಗೆ ಹಾಲು ಕೊಡುವ ಮೇಕೆಯೆಂದೇ ತಿಳಿಯಬೇಕು. ಒಂದೊಂದು ತಂಬಿಗೆ ಹಾಲು ಕೊಡುವ ಮೇಕೆಗಳನ್ನು ಮೊನ್ನೆ ಮೊನ್ನೆಯವರೆಗೂ ಕಾಣುತ್ತಿದ್ದೆವು. ಈಗ ಅಂಥ ತಳಿಯನ್ನೇ ಮನುಷ್ಯ ತನ್ನ ನಾಲಿಗೆಯ ಚಾಪಲ್ಯಕಾರಣಕ್ಕಾಗಿ ನಾಶಗೊಳಿಸಿಬಿಟ್ಟಿದ್ದಾನೆ. ಇನ್ನು ಕೆಲವು ದಿನಗಳ ತರುವಾಯ ನಾಡ ಹಸುಗಳ ತಳಿ ಏನಾಗುವುದೋ ನೋಡಬೇಕಾದ ಪರಿಸ್ಥಿತಿ ಬರತೊಡಗಿದೆ.

11. ಹದಿನಾಲ್ಕು ಹದಿನೈದರ ಹರೆಯದಲ್ಲಿ ಎಂತಹ ಮದುವೆಯೆಂದು ಯಾರಾದರೂ ಇಂದಿನವರು ಸಂಶಯತಾಳಬಹುದು. ಅಂದಿನ ದಿನಗಳಲ್ಲಿ ೮–೧೦ ವರ್ಷದ ಗಂಡುಮಕ್ಕಳಿಗೂ ಮದುವೆಮಾಡುವ ಪರಿಪಾಠವಿತ್ತು. ಮದುವೆಯೆಂದರೇನೆಂಬುದೇ ಗೊತ್ತಿಲ್ಲದ ಹಸುಳೆಗಳೂ ಹಸೆಯೇರಿ ಮದುವೆಯ ಸಂಭ್ರಮದಲ್ಲಿ ಮುಳುಗುತ್ತಿದ್ದವು. ಅದೊಂದು ಮೋಜಿನ ಪ್ರಸಂಗವೂ ಆಗಿರುತ್ತಿತ್ತು. ದಯವಿಟ್ಟು ಇಂದಿನ ಜನಜೀವನದೊಡನೆ ಅಂದಿನ ಜನಜೀವನವನ್ನು ತುಲನೆ ಮಾಡಬೇಡಿ.

ಪರತೆ–ಒಂದೊಂದೂ ಮರುಳುಸಿದ್ಧಪ್ಪನವರ ಹೃತ್ಪಟಲದ ಮೇಲೆ ಕಾಣಿಸಿಕೊಂಡು ಮರೆಯಾಗುತ್ತಿದ್ದುವು. ಬೆಳಗಾಗುವುದನ್ನೇ ಕಾಯುತ್ತ ಕಣ್ಣಿಗೆ ಕಣ್ಣು ಹಚ್ಚದೆ ಹತ್ತಾರು ಸಲ ಎದ್ದೆದ್ದು ಮಲಗಿದ್ದಳು.

**ಸಿದ್ಧಲಿಂಗೇಶ್ವರನ ಸನ್ನಿಧಿಗೈತಂದ ಬೋಳಬಸವೇಶ್ವರರ ಕಾರುಣ್ಯಶಿಶು :**

ಇತ್ತ ರುದ್ರಪ್ಪ ತನ್ನ ಮುಂದಿನ ಹಾದಿಯೇನೆಂಬುದನ್ನು ನಿರ್ಧರಿಸಿಬಿಟ್ಟಿದ್ದ. ಬೆಳಗಿನ ಬ್ರಾಹ್ಮೀ ಮುಹೂರ್ತ ತಲೆದೋರಿದ ಕಾಲ. ಮುಂಗೋಳಿ ಕೂಗಿತು. ತಾನು ಆಡನ್ನು ಮಾರಿ ತಂದಿದ್ದ ಎರಡು ರೂಪಾಯಿಯಲ್ಲಿ ಖರ್ಚಾಗಿ ಉಳಿದುದನ್ನೂ ಉಳಿದ ಸಕ್ಕರೆ ಮೊದಲಾದುವನ್ನೂ ಮುಟ್ಟಲಿಲ್ಲ. ಅದನ್ನು ಅಲ್ಲಿಯೇ ತಾನು ಮಲಗುವ ಹಾಸಿಗೆಯ ಮೇಲೆ ಇಟ್ಟ. ಜನ್ಮ ಸಂಬಂಧದ ದುರಾಶೆಯನ್ನು ನೀಗಿದ. ಸಂಸಾರ ಜೀವನಕ್ಕಂಟಿಬಂದಿದ್ದ ಅನೇಕ ಬಂಧಗಳನ್ನೆಲ್ಲ ಒಂದೊಂದಾಗಿ ಕತ್ತರಿಸಿ ಹಾಕಿದ. ಮನೆಯ ನೆಳಲನ್ನು ನೆನೆಯಲಿಲ್ಲ: ಧನಧಾನ್ಯಾದಿ ಅರ್ಥ ಸಂಪತ್ತನ್ನು ಲಕ್ಷಿಸಲಿಲ್ಲ : ಬಂಧುಬಳಗ ಅಣ್ಣ ತಮ್ಮ ತಂದೆ ತಾಯಿಯೆಂಬ ಯಾವ ಒಂದು ಸಂಬಂಧದಲ್ಲೂ ಕಿಂಚಿತ್ತೂ ಆಸೆ ಮನಸ್ಸಿನ ಮುಂದೆ ಸುಳಿಯಲಿಲ್ಲ. ದೃಢ ನಿರ್ಧಾರದ ಮಹಾಮೇರುವೇ ನಡೆದು ಹೊರಡುವಂತೆ ಪಶ್ಚಿಮಾಭಿಮುಖವಾಗಿ ಹೊರಟು ಬೆಳಕು ಹರಿಯುವ ಹೊತ್ತಿಗೆ ಗೋಸಲ ಸಿದ್ಧೇಶ್ವರರ ತಪೋಮಹಿಮಾತಿಶಯದಿಂದ ಪರಿಪೂತವೂ. ಸಿದ್ಧಲಿಂಗೇಶ್ವರರ ಸಾನ್ನಿಧ್ಯದಿಂದ ಭೂಸ್ವರ್ಗ ಸದೃಶವೂ ಆದ ಸಿದ್ಧಗಂಗಾ ಕ್ಷೇತ್ರಕ್ಕೆ ಬಂಧನಕ್ಕೊಳಗಾಗಿದ್ದ ಗಜವು ಬಂಧನ ಬಿಡಿಸಿಕೊಂಡು ತನ್ನ ವನದ ಗಜಗಳ ಗುಂಪಿಗೆ ಬಂದು ಸೇರಿ ಕೊಳ್ಳುವಂತೆ ಸೇರಿಕೊಂಡುಬಿಟ್ಟ. ಈ ಪೂರ್ವದಲ್ಲಿ ರುದ್ರಪ್ಪ ಸಿದ್ಧಗಂಗೆಗೆ ಎಷ್ಟೋ ಸಲ ಬಂದಿದ್ದ. ಇಲ್ಲಿಗೆ ಬಂದು ಸಿದ್ಧಗಂಗಾ ಬೆಟ್ಟ. ರಾಮಲಿಂಗೇಶ್ವರ ಬೆಟ್ಟಗಳಲ್ಲೆಲ್ಲ ಸುತ್ತಾಡಿದ್ದ. ಇಲ್ಲಿನ ದಾಸೋಹದ ಪ್ರಸಾದ ಸ್ವೀಕರಿಸಿದ್ದ. ಅಡಿವಪ್ಪ ಸ್ವಾಮಿಗಳನ್ನು ದೂರದಿಂದಲೇ ಕಂಡು ಎಲ್ಲರಂತೆ ನಮಸ್ಕರಿಸಿ ಹೋಗುತ್ತಿದ್ದ. ಆದರೆ ಅವರ ಪರಿಚಯ ಮಾಡಿಕೊಂಡಿರಲಿಲ್ಲ. 'ಹತ್ತರೊಡನೆ ಹನ್ನೊಂದಾಗಿ ಪರಿಷೆಯೊಡನೆ ಮಹಾದೇವ' ಎನ್ನುವಂತೆ ಎಲ್ಲರಂತೆ ಬಂದು ಎಲ್ಲರಂತೆ ನಮಸ್ಕರಿಸಿ ಅನೇಕ ಗಂಟೆಗಳ ಕಾಲ ಅಮ್ಮನವರ ಗವಿಯಲ್ಲಿ ಕುಳಿತು ಪ್ರಭಾವಿತನಾಗಿ ಹೋಗುತ್ತಿದ್ದ. ಅಂದಿನ ದಿನಗಳ ರೀತಿಯೇ ಬೇರೆ. ಇಂದಿನ ರೀತಿಯೇ ಬೇರೆ. ಇಂದು ಅವನನ್ನು ಎಳೆದುಕೊಂಡು ಬಂದದ್ದು ಅವನ ಮನಸ್ಸಾಗಿರಲಿಲ್ಲ. ಯಾವುದೋ ಅಗೋಚರ ಶಕ್ತಿಯ ಬಂಧನ.

ಆಗತಾನೆ ಕ್ಷೇತ್ರದ ದಾಸೋಹ ಮೂರ್ತಿಗಳಾಗಿದ್ದ ಅಡವೀಶ್ವರರು ತಮ್ಮ ಬೆಳಗಿನ ಪೂಜೆಯನ್ನು ಮುಗಿಸಿಕೊಂಡು ಬಂದು ಅಮ್ಮನವರ ಗವಿಯ ಮುಂಭಾಗದಲ್ಲಿರುವ ಸಿದ್ಧಲಿಂಗೇಶ್ವರರ ದೇವಾಲಯದ ಮುಂಭಾಗದ ಕಟ್ಟೆಯ ಮೇಲೆ ಕುಳಿತಿದ್ದರು. ಅವರ ಮುಖ ಭಸ್ಮದಿಂದ ಮುಸುಗಿತ್ತು. ಕೆಂಜೆಡೆ ಬೆನ್ನ ಮೇಲೆ ನೇತಾಡುತ್ತಿತ್ತು. ಶುಭ್ರವಾದ ಕಾಷಾಯ ವಸ್ತ್ರದಿಂದ ಪರಿಶೋಭಿಸುತ್ತ ಸಾಕ್ಷಾತ್ ಸಿದ್ಧೇಶ್ವರನಂತೆ ಕಾಣುವ ಆ ಮಂಗಲಮೂರ್ತಿಯನ್ನು ಕಾಣುತ್ತಲೇ ರುದ್ರಪ್ಪ ಓಡಿಹೋಗಿ ಪಾದಗಳ ಮೇಲೆ ಬಿದ್ದು ಹೊರಳಾಡಿದನು. ಅಡವೀಶ್ವರರು ಈತನು ಬಂದು ಹೀಗೆ ಅತ್ಯುತ್ಕಟ ಭಕ್ತಿ ಭಾವದಿಂದ ಬಂದು ನಮಸ್ಕರಿಸಿದ ನಮಸ್ಕಾರದಲ್ಲಿ ಏನೋ ಒಂದು ಹೊಸತನವನ್ನು ಕಂಡರು. ೧೫–೧೬ರ ಹರೆಯದವನಾಗಿದ್ದರೂ ರುದ್ರಪ್ಪ ಇಪ್ಪತ್ತು ಇಪ್ಪತ್ತೆರಡರ ಹರೆಯದ ಮೈಕಟ್ಟನ್ನು ಹೊಂದಿದ್ದ. ಕಣ್ಣುಹೊಳಪು, ದೃಢ ನಿರ್ಧಾರದ ಅಸಾಧಾರಣ ತೇಜದಿಂದ ಹೊಳೆಯುತ್ತಿದ್ದವು. ಮುಖ ಮಂಡಲದ ಕಾಂತಿಯಲ್ಲಿ ಅಪೂರ್ವ ತೇಜೋರಾಶಿ ತುಂಬಿತ್ತು. ಇಂಥ ಓರ್ವ ಯುವಕ ಬೆಳಕು ಹರಿಯುವುದರೊಳಗಾಗಿ ಬಂದು ತಮ್ಮ ಸನ್ನಿಧಿಯಲ್ಲಿ ಹೀಗೆ ಕೈಂಕರ್ಯದ ಪರಮಾವಧಿಯಿಂದ ಹೊರಳಾಡು ವುದನ್ನು ಕಂಡ ಅಡವೀಶ್ವರರಲ್ಲಿ ಕಾರುಣ್ಯವುಕ್ಕಿತು. ಮೇಲೇಳು, 'ಯಾವ ಊರು ಏನು ನಿಮಿತ್ತ ಬಂದೆ' ಇತ್ಯಾದಿ ಕುಶಲ ಪ್ರಶ್ನೆಗಳನ್ನು ಕೇಳತೊಡಗಿದರು. ರುದ್ರಪ್ಪ ತನ್ನ ಪೂರ್ವೋತ್ತರಗಳನೆಲ್ಲ ಹೇಳಿ 'ಶ್ರೀ ಕ್ಷೇತ್ರದಲ್ಲಿಯೇ ಇರುವುದಕ್ಕೆ ಬಂದಿರುವೆ' ನೆಂದು ಅಡವೀಶ್ವರರಿಗೆ ತಿಳಿಸಿದನು.

'ಇಲ್ಲಿ ಊಟ ಮಾಡಿಕೊಂಡು ಇರುವವರಿಗೆ ಸ್ಥಾನವಿಲ್ಲ' ಎಂದರು ಅಡವೀಶರು. ಅದಕ್ಕೆ 'ಇಲ್ಲ! ನಾನಿಲ್ಲಿ ಊಟ ಮಾಡಿಕೊಂಡು ಕಾಲ ಕಳೆಯುವ ನಿಮಿತ್ತ ಬಂದವನಲ್ಲ' ಎಂದ ಮೇಘ ಮಂದ್ರ ಧ್ವನಿಯಲ್ಲಿ ರುದ್ರಪ್ಪ. ಆಗ ಅಟವೀಶ್ವರರು 'ಇಲ್ಲಿಯ ಕೆಲಸ ಕಾರ್ಯಗಳು ಬಹಳ ಕಷ್ಟದವು; ಇದು ದಾಸೋಹ ಕ್ಷೇತ್ರ. ಸೌದೆ ಸೊಪ್ಪು ಹೊಂದಿಸಬೇಕು; ವ್ಯವಸಾಯ ಮಾಡಬೇಕು; ನೆಲ ಅಗಿಯಬೇಕು; ಕಟ್ಟಡ ಕಟ್ಟಬೇಕು. ಈ ಎಲ್ಲ ಕೆಲಸಗಳ ಅನುಭವ ನಿನಗೆ ಇದೆಯೇ ? ಎಂದರು. ಆಗ ರುದ್ರಪ್ಪ ನಿರ್ಧಾರ ಧ್ವನಿಯಲ್ಲಿ 'ಗುರುದೇವ ಅಂಥ ಇಂಥ ಕೆಲಸವೆಂದರೇನು ? ತಾವು ಪಾದದಿಂದ ತೋರಿಸಿದ ಕೆಲಸವನ್ನು ತಲೆಯಿಂದ ಮಾಡಿ ಮುಗಿಸುತ್ತೇನೆ. ಈ ನಿರ್ಧಾರದಿಂದಲೇ ಈ ಪುಣ್ಯ ಕ್ಷೇತ್ರಕ್ಕೆ ಹೆಜ್ಜೆಯಿಟ್ಟಿದ್ದೇನೆ. ಮನೆ ಮಠದ ಹಂಗು ತೊರೆದ ನನಗೆ ಪೂಜೆ ಪ್ರಸಾದವೊಂದು ನಡೆದರೆ ಸಾಕು. ಅದಕ್ಕಾಗಿ ಯಾವ ಬೆಲೆಯನ್ನಾದರೂ ತೆತ್ತ ಬಲ್ಲೆ. ಈ ಕ್ಷೇತ್ರ

ಬಿತವೇ ನನ್ನ ಹಿತ: ಶ್ರೀ ಮದನಾದಿ ಸಿದ್ಧಲಿಂಗೇಶ್ವರರ ಸೇವೆಗೆ ಈ ಪರಿಪುಷ್ಟವಾದ ಕ್ರಿಯಾಂಗದ ಶಕ್ತಿಯಿಲ್ಲ ಹೊಸಲು. ಮನ ಹೊಸಲು. ಭಾವ ಹೊಸಲು. ಅನಾಥ ನಾಥನೂ ಅನಿಮಿತ್ತ ಬಂಧುವೂ ಆದ ಸಿದ್ಧಲಿಂಗೇಶನೇ ನನ್ನ ತಾಯಿ ತಂದೆ. ಕುಲ. ಬಲ. ಛಲ ಎಲ್ಲವೂ ಆಗಿದ್ದಾನೆಂದೇ ದೃಢವಾಗಿ ನಂಬಿ ಆತನು ನಡೆಸಿದಂತೆ ನಾನು ಇಲ್ಲಿಗೆ ನಡೆದು ಬಂದಿದ್ದೇನೆ. ನಾನು ಇಲ್ಲಿಗೆ ಹೆಣ್ಣಿಗಾಗಿ ಮಣ್ಣಿಗಾಗಿ. ಹೊನ್ನಿಗಾಗಿ ಬಂದವನಂತೂ ಮೊದಲೇ ಅಲ್ಲ' ಎಂದು ಪಟಪಟನೆ ನುಡಿದುಬಿಟ್ಟ. ರುದ್ರಪ್ಪನ ಈ ದೃಢ ನಿರ್ಧಾರದ ಧ್ವನಿಯಲ್ಲಿ ಅಡವಿಸ್ವಾಮಿಗಳು ಹಿಂದೆಂದೂ ಯಾರ ವಾಣಿಯಲ್ಲೂ ಕಾಣದ ಒಂದು ಅಪೂರ್ವ ತೇಜಸ್ಸನ್ನು ಕಂಡರು. 'ಹಾಗಾದರೆ ಆಗಬಹುದು' ಎಂದು ಅಡವೆಪ್ಪನವರು ಶ್ರೀ ಕ್ಷೇತ್ರದಲ್ಲಿರಲು ರುದ್ರಪ್ಪನಿಗೆ ಅಪ್ಪಣೆಯಿತ್ತರು. ಆತನ ಪೂಜೆ ಪ್ರಸಾದಕ್ಕೆ ವ್ಯವಸ್ಥೆ ಮಾಡಿದರು. ರುದ್ರಪ್ಪ ಪೂಜೆ ಪ್ರಸಾದ ಮುಗಿಸಿ ಆ ದಿನ ಸಂಜೆಯ ವರೆಗೆ ಗುದ್ದಲಿ ಹಿಡಿದು ನೆಲ ಅಗಿಯುವ ಕೆಲಸ ಮಾಡಿದ. ಕೈಯೆಲ್ಲ ಕೆಂಪಾಗಿ ಗುಳ್ಳೆಗಳೆದ್ದವು. ರಾತ್ರಿ ಪುನಃ ಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ ಮಲಗಿದ. ಅಡವಿಸ್ವಾಮಿಗಳು ಆ ಒಂದೇ ದಿನದ ಅವನ ಕೆಲಸ ಕಾರ್ಯಗಳನ್ನೂ ಅವನ ಪೂಜಾನಿಷ್ಠೆ ಯನ್ನೂ ಕಂಡು ಪ್ರಸನ್ನ ಚಿತ್ತರಾದರು. ದಿನದಿನವೂ ಮಠದ ಕೆಲಸ ಕಾರ್ಯಗಳಲ್ಲಿ ಅಸೀಮ ಶ್ರದ್ಧಾಶಕ್ತಿಯಿಂದ ದುಡಿಯ ತೊಡಗಿದ ಅವನ ವಿಷಯದಲ್ಲಿ ದಿನೇ ದಿನೇ ಅಡಿವೆಪ್ಪನವರಿಗೆ ಕಾರುಣ್ಯ ಉಕ್ಕತೊಡಗಿತು. ಅನುಗ್ರಹ ಬುದ್ಧಿ ಮೊಳೆಯ ತೊಡಗಿತು. ಅವನ ವೇಷದ ಮರೆಯ ಶಿವಾನುಭಾವ ಸಂಪತ್ತಿಗೂ, ಅಚಲ ನಿರ್ಧಾರದ ಕ್ರಿಯಾಶಕ್ತಿಗೂ ಮಾರು ಹೋದರು. ಈತನ ನಡೆ ನುಡಿಗಳಲ್ಲಿ ಮಹಾ ಕಾರಣಿಕರಲ್ಲಿರಬೇಕಾದ ಶಕ್ತಿಗಳು ಬೀಜರೂಪವಾಗಿ ಅಡಗಿವೆ ಎಂಬುದನ್ನು ಅರಿತುಕೊಂಡರು. ದಿನ ಕಳೆದಂತೆ ಅಡಿವೆಪ್ಪನವರು ಸಿದ್ಧಲಿಂಗೇಶ್ವರರ ಮತ್ತು ಸಿದ್ಧಗಂಗಾ ಮಾತೆಯರ ಸೇವೆಯಲ್ಲಿ ತನ್ನನ್ನು ಸಂಪೂರ್ಣ ಕರಗಿಸಿ ಕೊಂಡು ಅವರ ಪಾದಕಮಲಮಕರಂದಭೃಂಗನಂತೆ ವ್ಯವಹರಿಸುವ ಈ ರುದ್ರಪ್ಪನೇ ಈ ಕ್ಷೇತ್ರಪುರುಷನೆಂದು ಗುರುತಿಸ ತೊಡಗಿದರು. ತಮ್ಮ ಇಚ್ಛೆಯೊಳಗೆ ಮೂಡಿ ಬಂದ ಕಾರ್ಯಗಳನ್ನೆಲ್ಲ ರುದ್ರಪ್ಪ ಇವರು ಹೇಳುವ ಪೂರ್ವದಲ್ಲೇ ಮಾಡಿ ಮುಗಿಸುತ್ತಿರುವುದಕ್ಕೆ ಅಡಿವೆಪ್ಪನವರಿಗೆ ಅಪಾರ ಸಂತೋಷವಾಗತೊಡಗಿತು. ತಾವು ಗುಬ್ಬಿಯಿಂದ ಸಿದ್ಧಗಂಗೆಗೆ ಬಂದು ಮಾಡ ಬೇಕಾದ ಕಾರ್ಯ ಮುಗಿದುಹೋಯೆಂದುಕೊಂಡರು. ಇಲ್ಲಿಗೆ ಬಂದ ಈ ರುದ್ರಪ್ಪನನ್ನು ಕ್ಷೇತ್ರಾಧಿಪತಿಯಾದ ಸಿದ್ಧಲಿಂಗೇಶನೇ ಕರೆಸಿ ಕೊಂಡನೆಂಬ ಭಾವನೆ ದೃಢವಾಗತೊಡಗಿತು.

**ಲೋಕಜೀವನಕ್ಕೆ ಅಂಟಿಯೂ ಅಂಟದ ಮಹಾ ಮಹಿಮನ ಹಸ್ತ ಗುಣದ ಪರಿಣಾಮ :**

ರುದ್ರಪ್ಪನ ಮರೆಯಲ್ಲಿನ ಶಿವಯೋಗ ಶಕ್ತಿಯ ಪರಿಚಯ ಪ್ರಥಮತಃ ಆದುದು ಅಡಿವೆಪ್ಪನವರಿಗೆ ಮಾತ್ರ. ಮನೆಯ ಯಾರೂ ಅವರನ್ನು ಗುರುತಿಸಲಸಮರ್ಥರಾದರು. ಇದನ್ನೇ ಮಹಾ ಮಾಯೆಯೆಂದು ಪ್ರಾಜ್ಞರು ಕರೆದರು. ಪುರಾಕೃತಕರ್ಮದ ಪರ್ವೆಯಲ್ಲಿ ಸುಜ್ಞಾನದ ತಿಳುವಳಿಕೆ ಮೂಡಲು ಸಮಯ ಹೆಚ್ಚು ಬೇಕು. ಸಂಸ್ಕಾರವೂ ಇರಬೇಕು. ರುದ್ರಪ್ಪ ಲೋಕಜೀವನಕ್ಕೆ ಅಂಟಿಯೂ ಅಂಟದಂಥ ಶಿವಾರ್ಪಣಭಾವದಲ್ಲಿ ಬಾಲ್ಯದಿಂದಲೂ ಬೆಳೆದು ಬಾಳುತ್ತ ಬಂದ ಸ್ವತಂತ್ರಮತಿ. ಇವನ ಹುಟ್ಟಿನ ಹಿನ್ನೆಲೆಯಲ್ಲೇ ಅದ್ಭುತವಡಗಿದ್ದರೂ ಲೌಕಿಕರಾದ ಮಾತಾಪಿತೃಗಳಿಗೆ ಇದರ ಅರಿವಾಗದೆ ಹೋದದ್ದು ಸಹಜವೇ. ಅವರಿಗೆ ಇದ್ದ ಪುತ್ರನ ಬಗೆಗಿನ ಚಿಂತೆಯ ಸ್ವರೂಪವೇ ಬೇರೆ, ಸದಾ ಚಿದವಸ್ಥೆಯಲ್ಲಿ 'ಆತ್ಮನ್ಯೇವಾತ್ಮನಾತುಷ್ಟಃ, ಆತ್ಮಕ್ರೀಡಃ, ಆತ್ಮರತಿಃ,' ಎಂಬಂತೆ ತನ್ನ ಪೂರ್ಣಬಾಳನ್ನು ಬೆಳಗಿಸುವುದರ ಮೂಲಕ ಲೋಕದ ನಡೆಗಿಂತ ಭಿನ್ನನಾಗಿ ಕಾಣುವ ರುದ್ರಪ್ಪನನ್ನು ನೋಡಬೇಕಾದ ಕಣ್ಣಿನಿಂದ ತಂದೆತಾಯಿಗಳಿಗೆ ನೋಡಲಾಗಲಿಲ್ಲ. ರುದ್ರಪ್ಪ ಭೌತವಸ್ತುಗಳಲ್ಲಿಲ್ಲದ ಅಮೃತ ರಸನಿಧಿ, ಪರಮಾತ್ಮ ಸಾಕ್ಷಾತ್ಕಾರದಲ್ಲಿ ಇದೆ, ಎಂಬುದನ್ನು ಅರಿತು ಆ ಮಾರ್ಗದಲ್ಲಿ ಸಾಗಬೇಕೆಂದು ಬಯಸಿ ಭಾವಿಸಿ ಸಹಜಾಚರಣೆಗೆ ತನ್ನನ್ನು ತಾನು ಸಿದ್ಧಗೊಳಿಸಿಕೊಳ್ಳುತ್ತಿದ್ದ, ಅವರ ಜೀವನ ಕಥೆಯೆಲ್ಲಾ ಶಿವಲೀಲೆಯೇ, ಭೂತ ತೃಪ್ತಿಯೇ ಆಗಿತ್ತು. ಕಾರಣಪುರುಷರ ಅಗಾಧ ಸಂಕಲ್ಪ ಶಕ್ತಿ ಅವರ ಸಮಗ್ರಕ್ರಿಯಾ ಮುಖದಲ್ಲೂ ಬಾಲ್ಯದಿಂದಲೂ ಬೆಳೆದು ಬಂದಿತ್ತು. ಶಿವ ಸಾಮ್ರಾಜ್ಯದ ಸದ್ಭಕ್ತಿ ಸಾರ್ವಭೌಮನಿಗಿರಬೇಕಾದ ಗುಣಗಳು ಬೀಜರೂಪದಲ್ಲಿ ಬಾಲಕ ರುದ್ರಪ್ಪನಲ್ಲಿ ಇದ್ದುದನ್ನು ಗುರು ತಿಸಲು ಮನೆಯ ಬಳಗಕ್ಕೆ ಶಕ್ಯವಿಲ್ಲದಿದ್ದರೂ ಕೆಲವೇ ದಿನಗಳಲ್ಲಿ ಅಡಿವೆಪ್ಪಸ್ವಾಮಿಗಳು ಮಾತ್ರ ಗುರುತಿಸಿಟ್ಟುಕೊಂಡು ಬಿಟ್ಟರು. ಒಮ್ಮೆ ರುದ್ರಪ್ಪನ ಘನತೆಯನ್ನೂ ಅವನ ಹಸ್ತಗುಣವನ್ನೂ. ಶ್ರದ್ಧಾಸಕ್ತಿಯನ್ನೂ ಮತ್ತು ಕುಶಲತೆಯನ್ನೂ ಸಮೀಪದಿಂದಲೇ ನೋಡುವ ಪ್ರಸಂಗ ಅಡವಿಸ್ವಾಮಿಗಳಿಗೆ ಒದಗಿತು.

ಧನುರ್ಮಾಸ ಬಂತು. ಅಡಿವೆಪ್ಪನವರಿಗೆ ಅಡಿಗೆ ಮಾಡುವವರು ಯಾರೂ ಇರಲಿಲ್ಲ. ರುದ್ರಪ್ಪನನ್ನೇ ತಾತ್ಕಾಲಿಕ ವಾಗಿ ಆ ಕೆಲಸಕ್ಕೆ ನೇಮಿಸಿದರು. ಸರಿ, ರುದ್ರಪ್ಪ ಅಡವಿಸ್ವಾಮಿಗಳ ಬಾಣಸಿಗತನಕ್ಕೆ ಕೈಯಿಟ್ಟ ಒಂದು ತಿಂಗಳು ಶ್ರದ್ಧಾಭಕ್ತಿ ವಿಶ್ವಾಸಗಳಿಂದ ಆ ಯತೀಶ್ವರರ ಖಾಸಾಸೇವೆ ಮಾಡಿ ಮುಗಿಸಿದ. ಈ ಕಾರಣದಿಂದ ಅಡವಿಸ್ವಾಮಿಗಳು ತಮ್ಮ ಜೀವನದ ಮೇಲಾದ ಮಹತ್ವದ ಪರಿಣಾಮವನ್ನು ಕಂಡು ಅವಾಕ್ಕಾದರು. ಅವರು ರುದ್ರಪ್ಪನನ್ನು ಆಪಾದಮಸ್ತಕದವರೆಗೆ ದಿಟ್ಟಿಸಿ

ನೋಡತೊಡಗಿದರು. ರುದ್ರಪ್ಪನಲ್ಲಿ ಇನ್ನೂ ಹೆಚ್ಚು ಹೆಚ್ಚಿನ ಶಕ್ತಿಸಂಚಾರವಾಗತೊಡಗಿದರು. ಅಡವಿಸ್ವಾಮಿಗಳಲ್ಲಿ ಅನೇಕ ದಿನಗಳಿಂದ ಮನೆ ಮಾಡಿಕೊಂಡಿದ್ದ ಗೂರಲುಬೇನೆ ಆ ಧನುರ್ಮಾಸದಲ್ಲಿ ರುದ್ರಪ್ಪನು ಮಾಡಿ ಬಡಿಸಿದ ಪ್ರಸಾದದ ಪರಿಣಾಮದಿಂದಲೋ ಏನೋ ಹಾರಿ ಹೋಗಿ ಅವರು ಪೂರ್ಣ ಆರೋಗ್ಯಭಾಗ್ಯದಿಂದ ಕೂಡಿದರು. ರುದ್ರಪ್ಪನ ಹಸ್ತಗುಣ ದಲ್ಲಿದ್ದ ಶುದ್ಧಿಯನ್ನು ಕಾಣಲು ಅಡಿವೆಪ್ಪನವರಿಗೆ ಸನ್ನಿವೇಶ ಬಹಳ ನೆರವಾಯಿತು. ಕ್ರಿಯಾಶುದ್ಧಿ, ವಸ್ತುಶುದ್ಧಿ ಭೂತ ತೃಪ್ತಿಗಳಿಂದ ಕ್ಷೇತ್ರದ ಸೇವೆಯಲ್ಲಿ ತನ್ನನ್ನು ಸಂಪೂರ್ಣ ತೊಡಗಿಸಿಕೊಂಡ ರುದ್ರಪ್ಪನ ಮೇಲೆ ಅಡಿವೆಪ್ಪನವರು ತಮ್ಮ ತಪಶ್ಶಕ್ತಿಯ ಕಾರುಣ್ಯಾಮೃತವನ್ನು ಎರೆಯತೊಡಗಿದರು. ಇವರಿಂದ ರುದ್ರಪ್ಪ ಇನ್ನೂ ತೇಜಶ್ಶಾಲಿಯಾಗತೊಡಗಿದ. ಇವನನ್ನು ಈ ಕ್ಷೇತ್ರಾಧಿಪತಿಯಾದ ಗೋಸಲ ಸಿದ್ಧೇಶ, ಶಂಕರಸ್ವಾಮಿ, ಚೆನ್ನಬಸವೇಶ, ಸಿದ್ಧಲಿಂಗೇಶ್ವರರೇ ಇಲ್ಲಿಗೆ ಕರೆಸಿ ಕೊಂಡರೆಂಬ ಭಾವನೆ ಅಡಿವೆಪ್ಪನವರಿಗೆ ದಿನೇ ದಿನೇ ಪ್ರಬಲವಾಗತೊಡಗಿತು.

**ಮಾತೃ ವಾತ್ಸಲ್ಯದ ಸೆರೆಯನ್ನು ಹರಿದ ರುದ್ರಪ್ಪ**

ಇಲ್ಲಿ ಇನ್ನೊಂದು ವಿಷಯವನ್ನು ತಿಳಿಸುವುದು ಅವಶ್ಯಕ. ರುದ್ರಪ್ಪ ಲಕ್ಕೂರಿನ ತನ್ನ ಮನೆಯಲ್ಲಿ ತಾನು ಮನೆ ಬಿಟ್ಟು ಹೊರಡುವುದಕ್ಕೆ ಮೊದಲು ಒದಗಿದ ಕಾರಣಗಳ ಹಿನ್ನೆಲೆಯಲ್ಲಿ ಮಾತಾಪಿತೃಗಳು ಇಂಥ ಒಬ್ಬ ಮಗನನ್ನು ಸಂತೈಸಲು ತಮಗಾಗದೇ ಹೋದ ವಿಧಿಗಾಗಿ ಮರಮರ ಮರುಗಿದರು. ಏನಾದರೂ ಮಾಡಿ ಮಗನನ್ನು ಹುಡುಕಿತರಲು ಪ್ರಯತ್ನಿ ಸತೊಡಗಿದರು. ಅವನು ಮನೆ ಬಿಟ್ಟು ಎಲ್ಲಿಗೆ ಹೋದನೆಂಬುದೇ ಅನೇಕ ದಿನಗಳು ಇವರಿಗೆ ತಿಳಿಯಲಿಲ್ಲ. ಮೊದಮೊದಲು ಒಂದೆರಡು ದಿನಗಳು ಸಿದ್ಧನಬೆಟ್ಟದ ಗುಹೆಗಳಲ್ಲಿ ಎಲ್ಲಾದರೂ ಅಡಗಿಕುಳಿತನೇ ? ಹಾಳು ಹರಕು ಕೋಟೆಯ ಮೂಲೆಯಲ್ಲಿ ಅವಿತುಕೊಂಡನೇ ? ಬಂಧುಬಳಗದವರ ಮನೆಮಠಗಳನ್ನು ಆಶ್ರಯಿಸಿಕೊಂಡನೇ ? ಎಂದು ಎಲ್ಲೆಲ್ಲೂ ಹುಡುಕಿದರು. ಕೊನೆಗೆ ಸಿದ್ಧಗಂಗೆಯಲ್ಲಿ ಸೇರಿಕೊಂಡಿರುವ ವಿಷಯವನ್ನು ಕರ್ಣಾಕರ್ಣಿಯಾಗಿ ಕೇಳಿ ತಾಯಿ ಮರುಳಸಿದ್ಧಮ್ಮನವರೇ ಬಂಡಿಯನ್ನು ಕಟ್ಟಿಸಿಕೊಂಡು ಶ್ರೀ ಕ್ಷೇತ್ರದ ದಾಸೋಹಕ್ಕೆ ರಾಗಿ, ಅಕ್ಕಿ, ಹುಣಸೇಹಣ್ಣು, ಊಟದೆಲೆಗಳನ್ನು ತುಂಬಿಕೊಂಡು ಬಂದರು.* ತನ್ನ ತಾಯಿ ಮಠಕ್ಕೆ ಬಂದ ಸುಳಿವು ರುದ್ರಪ್ಪನಿಗೆ ಹೇಗೋ ಗೊತ್ತಾಯಿತು. ಆಗ ಅವರು ಯಾರಿಗೂ ತಿಳಿಯದಂತೆ ಅಮ್ಮನವರ ಗವಿಯನ್ನು ಪ್ರವೇಶಿಸಿ ಒಂದು ಮೂಲೆಯಲ್ಲಿ ಶಿವಪೂಜೆ ಮಾಡುತ್ತಾ ಕುಳಿತುಬಿಟ್ಟರು. ಹೊರಗಿನ ಜಗತ್ತಿಗೂ ತಮಗೂ ಯಾವ ಸಂಬಂಧವೂ ಇಲ್ಲದಂತಹ ಸನ್ನಿವೇಶವನ್ನು ನಿರ್ಮಾಣ ಮಾಡಿಕೊಂಡು ಬಿಟ್ಟರು.

ಮರುಳಸಿದ್ಧಮ್ಮನವರು ಮಠಕ್ಕೆ ಬಂದು ದಾಸೋಹಕ್ಕೆ ತಮ್ಮ ಕಾಯಕಾರ್ಜಿತ ಪದಾರ್ಥಗಳನ್ನೊಪ್ಪಿಸಿ ಅಡವಿ ಸ್ವಾಮಿಗಳ ಸನ್ನಿಧಿಗೆ ಬಂದು ತನ್ನ ಮಗ ರುದ್ರಪ್ಪನ ವಿಚಾರವಾಗಿ ಮನೆಯಲ್ಲಿ ನಡೆದ ಸಮಗ್ರ ವಿಷಯವನ್ನು ತಿಳಿಸಿ 'ಸ್ವಾಮಿ, ಏನಾದರೂ ಮಾಡಿ ನನ್ನ ಮಗನಿಗೆ ಬುದ್ಧಿ ಹೇಳಿ, ನನ್ನ ಮನೆಗೆ ಮರಳುವಂತೆ ಮಾಡಿರೆಂದು' ಕೇಳಿಕೊಂಡರು. ಆಗ ಅಡವೆಪ್ಪನವರು ರುದ್ರಪ್ಪನನ್ನು ಹುಡುಕಿಸಿದರು. ರುದ್ರಪ್ಪ ಎಲ್ಲಿಯೂ ಕಣ್ಣಿಗೆ ಗೋಚರಿಸಲಿಲ್ಲ. ಆಗ ಅಡಿವೆಪ್ಪನವರು 'ಅಮ್ಮ, ಅವನನ್ನು ನೀವು ನಿಮ್ಮ ಮಗನೆಂದು ಭಾವಿಸಿರಬಹುದು. ಅವನೊಬ್ಬ ಅಗಣ್ಯಪುಣ್ಯಪುರುಷ ; ಅವನ ರೀತಿನೀತಿ ಗಳು ಲೋಕಲೌಕಿಕರಂತಲ್ಲ. ಅಸಾಧಾರಣವ್ಯಕ್ತಿತ್ವವನ್ನು ಸಂಪಾದಿಸಿಕೊಂಡಿರುವ ಅವನಿಗೆ ಬುದ್ಧಿ ಹೇಳಲು ನಾನಾರು ? ಅವನು ನಿಮ್ಮ ಮೇಲೆ ಮುನಿಸಿಕೊಂಡು ಬಂದಿಲ್ಲ, ನಿಮ್ಮ ಮನೆಯಲ್ಲಿ ನಡೆದ ಆ ಪ್ರಸಂಗವೊಂದು ನೆಪ ಮಾತ್ರ. ಪ್ರಬಲ ವೈರಾಗ್ಯನಿಧಿಗಳಿಗೆ ಒಂದೊಂದು ನೆಪದ ಮೂಲಕ ಮಹತ್ತರವಾದ ಜೀವನದ ಬದಲಾವಣೆಗಳು ಉಂಟಾಗುತ್ತವೆ, ಸಾಂಸಾರಿಕ ಸಂಬಂಧದ ಸಮಸ್ತ ಕಟ್ಟುಗಳನ್ನು, ಕಗ್ಗಂಟುಗಳನ್ನು ಕತ್ತರಿಸಿ ಹೊರಬರಲು ಅದೊಂದು ಸನ್ಮುಹೂರ್ತವಷ್ಟೇ. ಅವನು ಇಲ್ಲಿಗೆ ಬಂದಂದಿನಿಂದ ನಿಮ್ಮ ಮೇಲೆ ಮುನಿಸಿಕೊಂಡು ಬಂದಿರುವೆನೆಂದು ಎಂದೂ ಹೇಳಿಲ್ಲ. ಅಂಥ ಮಹತ್ತರವಾದ ಜ್ಞಾನ ಶಕ್ತಿ ಸಂಪನ್ನರಿಗೆ ಮುನಿಸೆಂಬುದುಂಟೆ ? ಸರ್ವಥಾ ಇಲ್ಲ. ಅವನ ಸತ್ಸಂಕಲ್ಪವನ್ನು ನಡೆಸಿಕೊಡಲು ಈಶ್ವರ ಕಾರುಣ್ಯವೇ ಅವನನ್ನು ಇಲ್ಲಿಗೆ ಎಳೆದು ತಂದಿದೆ ಎಂದು ನಾನು ತಿಳಿದಿದ್ದೇನೆ. ನೀನು ಜನ್ಮ ಕೊಟ್ಟ ತಾಯಿಯಾಗಿರಬಹುದು. ಅದೂ ಒಂದು ಜನನನಿಮಿತ್ತವಷ್ಟೇ ಅಲ್ಲದೆ ಅಂಥವರು ನಿಮಗೂ ಪೂಜ್ಯರಾಗುತ್ತಾರೆ, ಇನ್ನು ಮೇಲೆ ನೀನು ಇವನು ನನ್ನ ಮಗ ನೆಂಬ ಮಮಕಾರವನ್ನು ತೊರೆಯುವುದು ಕ್ಷೇಮ. ಕಲ್ಲಿನಿಂದ ಹುಟ್ಟಿದ ಸ್ವಯಂಭುಲಿಂಗವು ಆ ಕಲ್ಲಿನ ಮಗುವೆನಿಸದು. ಈ ಕ್ಷೇತ್ರದ ಅಧಿದೇವತೆಗಳು ಅವನನ್ನು ಇಲ್ಲಿಗೆ ಕರೆಸಿಕೊಂಡಿದ್ದಾರೆಂದೇ ನನ್ನ ನಂಬುಗೆ. ಅವನು ಈ ಲೋಕದ ಗುರು

---

* ಸಿದ್ಧಗಂಗಾ ಮಠಕ್ಕೆ ಬರುವವರು ಹಾಗೇ ಬರುವುದಿಲ್ಲ. ದಾಸೋಹಕ್ಕೆ ಏನಾದರೂ ತೆಗೆದುಕೊಂಡು ಬರಬೇಕೆಂಬುದೊಂದು ಹಿಂದಿನಿಂದಲೂ ಇಲ್ಲಿನ ಸುತ್ತಮುತ್ತಣ ಜನರಲ್ಲಿ ಬೆಳೆದು ಬಂದಿರುವ ಒಂದು ದಾಸೋಹ ಸದ್ಭಾವ.

ಹಾಗುವ ಭವ್ಯಭವಿಷ್ಯ ಪಡೆದ ಮಹಾ ವ್ಯಕ್ತಿ. ಅವನು ನಿನಗೂ ಗುರು. ಈ ಭಾವನೆ ನಿಮ್ಮಲ್ಲಿ ಬೆಳೆದು ಬಂದರೆ ಸಾಕು. ಅವನು ತ್ರಿವಿಧ ದಾಸೋಹಿಯಾಗಿ ವೀರಶೈವಧರ್ಮದ ಶ್ರೇಷ್ಠ ಜಂಗಮಪರಂಪರೆಯ ವೀರವಿರಕ್ತನಾಗಿ ಲೋಕೋದ್ಧಾರ ಕಾರ್ಯನಿರತನಾಗಿ ಮಹಾಮಹಿಮಾಶಾಲಿಯಾಗುವುದನ್ನು ನೀನೇ ಇನ್ನು ಕೆಲದಿನಗಳಲ್ಲಿ ಕಾಣುವಂತಾದೀತು.' ಎಂದು ಭವಿಷ್ಯ ನುಡಿದು ಮರುಳಸಿದ್ಧಮ್ಮನ ತಾಯ್ತನದ ಹಂಬಲವನ್ನು ಕಡಿಮೆ ಮಾಡಿ ಪ್ರಸಾದವನ್ನಿತ್ತರು. ಆ ಕೂಡಲೆ ಮರುಳಸಿದ್ಧಮ್ಮನಿಗೆ ಸೀರೆ. ಕುಪ್ಪಸ. ಇತ್ಯಾದಿಗಳನ್ನು ತರಿಸಿ ಮಡಿಲಿಗೆ ತುಂಬಿ ಕಳಿಸಿಕೊಟ್ಟರು. ಅಳುತ್ತಾಳುತ್ತಾ ಮರುಳಸಿದ್ಧಮ್ಮ ಲಕ್ಕೂರಿಗೆ ಬಂದು ನಡೆದ ವೃತ್ತಾಂತವನ್ನೆಲ್ಲ ಹೇಳಿದಳು. ಎಲ್ಲರೂ ಕಸಿಬಿಸಿಗೊಂಡರು. ಬರಬರುತ್ತಾ ರುದ್ರಪ್ಪನ ಮೇಲಿನ ಮಮತೆ ಎಲ್ಲರಿಗೂ ಕಡಿಮೆಯಾಗುತ್ತಾ ಬಂತು. ರುದ್ರಪ್ಪ ಅತ್ಯಂತ ಪ್ರೀತಿಯಿಂದ ಮೇಯಿಸುತ್ತಿದ್ದ ಎರಡು ಮೇಕೆಗಳಿಗೆ ಅವನ ಹೆಸರನ್ನೇ ಸಣ್ಣರುದ್ರಪ್ಪ. ದೊಡ್ಡ ರುದ್ರಪ್ಪ. ಎಂದು ಕರೆದು ಅವು ಸಾಯುವುವರೆಗೂ ಪ್ರೀತಿಯಿಂದ ಪೂಜಿಸುತ್ತಾ ನೋಡಿಕೊಂಡರು. ಅವು ಸತ್ತ ಮೇಲೆ ಅವನ್ನು ಹುಗಿದು ಅದರ ಮೇಲೆ ಸಮಾಧಿಯನ್ನು ಕಟ್ಟಿಸಿದರೆಂದು ತಿಳಿದುಬರುವುದು. ಆದರೆ ಈಗ ಆ ಸಮಾಧಿ ಇದೆಯೇ ಇಲ್ಲವೇ ವಿಚಾರಿಸಿ ತಿಳಿಯಬೇಕಾದ ಅಂಶ.

**ರುದ್ರಪ್ಪನ ಭೀಮಸಾಹಸದಿಂದ ಸಿದ್ಧಗಂಗೆಗೆ ಸಹಸ್ರ ತೋಳು ಮೂಡಿಬಂದವು :**

ರುದ್ರಪ್ಪ ಅಡಿವೆಪ್ಪನವರ ಶಿಷ್ಯನಾಗಿ ಶ್ರೀ ಸಿದ್ಧಗಂಗಾ ದಾಸೋಹ ಸಂಸ್ಥೆಯ ಕೆಲಸಕಾರ್ಯಗಳ ಮತ್ತು ಪಾಠ ಶಾಲೆಗಳ ಕೆಲಸ ನೋಡಿಕೊಂಡು ಶ್ರೀ ಕ್ಷೇತ್ರದ ಇಂದಿನ ಕೀರ್ತಿಯ ಕಲ್ಪವೃಕ್ಷಕ್ಕೆ ತನ್ನ ಅದ್ಭುತ ಸಾಮರ್ಥ್ಯದ ಕ್ರಿಯಾಮುಖದ, ಶಿವಯೋಗದ ಕರ್ತೃತ್ವಶಕ್ತಿಯ ದೇವಗಂಗೆಯನ್ನೇ ಹರಿಸಿ ಮಹಾವಿಟಪಿಯನ್ನಾಗಿಸುವ ಭಾರವನ್ನು ಮಾನಸಿಕವಾಗಿಯೇ ಹೆಗಲ ಮೇಲೆ ಹೊತ್ತು ಕರ್ತವ್ಯಶೀಲನಾದನು. ಸಿದ್ಧಗಂಗೆಯ ಭಾಗ್ಯದಬಾಗಿಲು ತೆರೆಯಿತು. ಅದರ ಲೋಕೋತ್ತರ ಕ್ರಿಯಾ ಬಾಹುಳ್ಯಕ್ಕೆ ಏಕಕಾಲದಲ್ಲಿ ಸಹಸ್ರ ಬಾಹುಗಳೇ ಮೂಡಿಬಂದ ಹಾಗಾಯಿತು. ಅವರು ಸಿದ್ಧಗಂಗಾ ಕ್ಷೇತ್ರಕ್ಕೊಂದು ದೊಡ್ಡ ಶಕ್ತಿಯಾಗಿ ಪರಿಣಮಿಸಿದರು. ಅನೇಕ ಅದ್ಭುತ ಘಟನೆಗಳು ಶ್ರೀ ಕ್ಷೇತ್ರದಲ್ಲಿ ಇವರಿಂದ ಜರುಗಿದುದು ಅಡವಿಸ್ವಾಮಿಗಳವರ ಗಮನಕ್ಕೆ ಬಂದಿತು. ಶ್ರದ್ಧಾಭಕ್ತಿವಿಶ್ವಾಸಗಳಿಂದ ಅಡವಿಸ್ವಾಮಿಗಳವರ ಸೇವಾಕೈಂಕರ್ಯದಲ್ಲಿ ರುದ್ರಪ್ಪ ತನ್ನನ್ನೇ ಕರಗಿಸಿಕೊಂಡಿದ್ದನು. ಒಂದು ದಿನ ಅಡವಿಸ್ವಾಮಿಗಳವರ ಎದುರಿನಲ್ಲಿಯೇ ಅದ್ಭುತವಾದ ಒಂದು ಘಟನೆ ನಡೆಯಿತು. ಅದು ಹೀಗೆ :

ಹಾಸನ ಜಿಲ್ಲಾ ತೋಟಗದ್ದೆ ಎಸ್ಟೇಟಿನ ಕಾಫಿಪ್ಲಾಂಟರ್ ಶ್ರೀ ದೇವಪ್ಪಗೌಡರಿಗೆ ಭೂತಚೇಷ್ಟೆಯುಂಟಾಯಿತು. ನನ್ನ ಗುರುವು ಸಿದ್ಧಗಂಗೆಯಲ್ಲಿದ್ದಾನೆಂದು ಹೇಳಿದ ಹೇಳಿಕೆಯಂತೆ ಗುರುವನ್ನು ತೋರಿಸಲು ಉಂಟಾದ ಭೂತಚೇಷ್ಟೆಯನ್ನು ನಿವಾರಿಸಲು ಬಂಧುಗಳು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಅವರನ್ನು ಕರೆತಂದರು. ಶ್ರೀ ಕ್ಷೇತ್ರಕ್ಕೆ ಬಂದೊಡನೆಯೇ ಗೌಡರು 'ನನ್ನ ಗುರುವೆಲ್ಲಿ ?' ಎಂದು ಅರ್ಭಟಿಸುತ್ತಿರಲು 'ಇಗೋ ನಿನ್ನ ಗುರುವನ್ನು ನೋಡೆಂದು ಅಟವೀಶ್ವರರ ಎದುರಿಗೆ ಒಯ್ದು ನಿಲ್ಲಿಸಿದರು. ಆಗ ಗೌಡರು 'ಇವನಲ್ಲ ನನ್ನ ಗುರು' ಎನ್ನುತ್ತ ತಿರುಗುಮುರುಗಾಗಿ ನಿಂತುಬಿಟ್ಟರು. ಈ ಘಟನೆ ಅಡವೀಸ್ವಾಮಿಗಳಿಗೂ ಅಚ್ಚರಿಯ ಮೇಲೆ ಅಚ್ಚರಿಯನ್ನುಂಟು ಮಾಡಿತು. ಅಷ್ಟರಲ್ಲಿ ರುದ್ರಪ್ಪನವರು ಸೌದೆ ಗಾಡಿಯನ್ನು ಹೊಡೆದುಕೊಂಡು ಬರುತ್ತಿದ್ದುದು, ಗೌಡರ ಕಣ್ಣಿಗೆ ಬಿತ್ತು. ತತ್‌ಕ್ಷಣವೇ ಕುಪ್ಪಳಿಸುತ್ತ ಆರ್ಭಟಿಸುತ್ತ 'ಅಗೋ ನನ್ನ ಗುರು! ಪರಮಾರಾಧ್ಯ ಗುರು!' ಎಂದು ಹೇಳುತ್ತ ಗಾಡಿಯ ಮೇಲಿದ್ದ ರುದ್ರಪ್ಪನವರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಬಿಟ್ಟರು. 'ಗುರುವೇ. ತ್ರಾಹಿಮಾಂ. ತ್ರಾಹಿಮಾಂ' ಎಂದು ಅಂಗಲಾಚಿ ಬೇಡಿಕೊಳ್ಳತೊಡಗಿದರು. ನೆರದ ಜನಸ್ತೋಮ ಸ್ತಂಭೀಭೂತವಾಯಿತು. ಅಟವಿಸ್ವಾಮಿಗಳು ಈ ಘಟನೆಯಿಂದ ಹೌಹಾರಿದರು. ಆ ಗಳಿಗೆಯಲ್ಲಿಯೇ ಲಕ್ಕೂರಿನ ರುದ್ರಪ್ಪ "ಉದ್ದಾನ ಶಿವಯೋಗಿ"ಯಾಗಿ ಮಾನಸಿಕ ಪರಿವರ್ತನೆ ಹೊಂದಿದರು. ಯಾವುದೋ ಅಪೂರ್ವ ಸಂಸ್ಮರಣೆಗೊಳಗಾದರು.[12]

ಆಗ ಗೌಡರು–"ನಾವಿಬ್ಬರೂ ಇಲ್ಲಿ ಕಾಣುವ ರಾಮಲಿಂಗನ ಬೆಟ್ಟದಲ್ಲಿರುವ ದೊಡ್ಡ ಸಿದ್ಧಪ್ಪನ ಗವಿಯಲ್ಲಿದ್ದ ತಪಸ್ವಿಗಳಲ್ಲವೇ ? ಒಮ್ಮೆ ಸಿದ್ಧಲಿಂಗೇಶ್ವರರ ದರ್ಶನಕ್ಕೆ ಬಂದಾಗ ಅಮ್ಮನವರು (ಗಂಗಾಮಾತೆಯರು) ದರ್ಶನವಿತ್ತರು. ಆಗ ನಾನೆಸಗಿದ ಒಂದು ತಪ್ಪಿಗಾಗಿ ನನ್ನನ್ನು ರಾಕ್ಷಸನಾಗೆಂದು ಅಮ್ಮನವರು ಶಾಪವೀಯಲಿಲ್ಲವೇ! ಆಗ ಶಾಪಗ್ರಸ್ತನಾದ ನಾನು ಸಿದ್ಧಲಿಂಗೇಶನ ಮರೆಹೋಗಲು ಶಾಪದ ಫಲವನ್ನನುಭವಿಸಿಯೇ ತೀರಬೇಕೆಂದು ಅಪ್ಪಣೆ ಮಾಡಿದರಲ್ಲವೇ ? 'ಶಾಪದ ಶೀಘ್ರ ನಿವಾರಣೋಪಾಯ ಕೇಳೇ'ನ್ನಲು 'ನಿನ್ನೊಡನೆ ನಾನು ಇರಬೇಕು. ಎಂದು ನಾನು ಕೇಳಲಿಲ್ಲವೇ ? ಬ್ರಹ್ಮಚಾರಿಯಾದ ನೀನು ಸಮ್ಮತಿಸಲಿಲ್ಲವೆ? ನೀನು ಮನುಷ್ಯ ರೂಪದಿಂದ ಈ ಕ್ಷೇತ್ರವನ್ನು ಉದ್ಧರಿಸಿ ಮಹಾದಾನಿ (ಉತ್ ದಾನಿ) ಯಾಗು;

---

12. ಈ ಘಟನೆಯನ್ನು ಡಾ॥ ಜಿ. ಮರುಳಸಿದ್ಧಯ್ಯ ಸಂಸ್ಕೃತ ಪ್ರೊಫೆಸರ್, ಮಾನಸ ಗಂಗೋತ್ರಿ ಮೈಸೂರು ಅವರು 'ಪ್ರಸಾದ' ಗ್ರಂಥದಲ್ಲಿ ಪ್ರಕಟಿಸಿದ್ದಾರೆ.

ಮಹಾಪುರುಷನಾಗು' ಎಂದು ಸಿದ್ಧಲಿಂಗೇಶ್ವರರು ಹೇಳಲು ನೀವು ಒಪ್ಪಲಿಲ್ಲವೇ ? ಗುರುವೆ...' ಇತ್ಯಾದಿಯಾಗಿ ಎಲ್ಲರೂ ಕೇಳುವಂತೆ ತಮ್ಮ ಕಂಚಿನ ಕಂಠದಿಂದ ನುಡಿದೊಡನೆಯೇ ರುದ್ರಪ್ಪ ತನ್ನನ್ನೇ ತಾನು ಮರೆತು ಸ್ತಂಭೀಭೂತನಾದನು. ಸ್ವಲ್ಪ ಸಮಯದ ನಂತರ ಬಿಕ್ಕಿ ಬಿಕ್ಕಿ ಅಳತೊಡಗಿದನು. ಗೌಡರೂ ಅಳತೊಡಗಿದರು. ಮರುಕ್ಷಣದಲ್ಲಿ ಒಬ್ಬರಿಗೊಬ್ಬರು ಅಪ್ಪಿಕೊಂಡು ಕ್ಷಣಕಾಲ ಅತ್ತು ದುಃಖೋಪಶಮನಗೊಂಡು ನಂತರ ಅಡವಿಸ್ವಾಮಿಗಳವರಿಗೆ ನಮಸ್ಕರಿಸಿದರು. ದೇವಪ್ಪಗೌಡರ ಪೈಶಾಚಿಕ ಭಾವ ತೊಲಗಿತು. ಈ ಘಟನೆ ಅಡವಿಸ್ವಾಮಿಗಳವರ ಮೇಲೆ ಮಹತ್ತರ ಪರಿಣಾಮ ಬೀರಿತು. ಇದುವರೆಗೂ ರುದ್ರಪ್ಪನಿಂದ ನಾನು ಸೇವೆ ಮಾಡಿಸಿಕೊಂಡದ್ದು ತಪ್ಪೆಂಬ ಭಾವ ಬಲಿಯಿತು. ಈತ ರುದ್ರಪ್ಪನಲ್ಲ. ಈ ಕ್ಷೇತ್ರಾಧಿಪತಿಯಾದ ಸಿದ್ಧಲಿಂಗೇಶ್ವರನ ಕೃಪಾವಿಶೇಷಕ್ಕೆ ಪಾತ್ರನಾದ ಅದ್ಭುತ ಶಕ್ತಿಯ ಶಿವಯೋಗಿ. ಇನ್ನು ಮುಂದೆ ನಾನು ಇವನ ಸೇವೆಯನ್ನು ಸ್ವೀಕರಿಸಬಾರದು. ಈತನೇ ಈ ಕ್ಷೇತ್ರಾಧ್ಯಕ್ಷನೆಂಬ ತೀರ್ಮಾನಕ್ಕೆ ಬಂದರು.[13] ಲಕ್ಕೂರು ರುದ್ರಪ್ಪ ಮತ್ತು ದೇವಪ್ಪ ಗೌಡರಿಬ್ಬರೂ ಗೌಪ್ಯವಾಗಿ ಶಿವಗಂಗಾಕ್ಷೇತ್ರ. ಸಿದ್ಧಗಿರಿ (ನಿಜಗಲ್ಲು ಬೆಟ್ಟ) ರಾಮಲಿಂಗನಬೆಟ್ಟ (ರಾಮಗಿರಿ). ಕೊರಟಗೆರೆ ಸಮೀಪದಲ್ಲಿರುವ ಸಿದ್ಧನಬೆಟ್ಟ[14] ಗಳಲ್ಲಿ ಸಂಚರಿಸಿ ಬಂದರು. ತಮ್ಮ ಪೂರ್ವಜೀವನದ ಗೌಪ್ಯಸ್ಥಾನಗಳನ್ನೆಲ್ಲ ನೋಡಿಕೊಂಡು ಬಂದರು. ಜೀವಿತಾವಧಿಯ ವರೆಗೆ ಇವರೀರ್ವರೂ ಪರಸ್ಪರಾವಲಂಬಿಗಳಾಗಿಯೇ ಬಾಳಿದುದನ್ನು ಎಲ್ಲರೂ ಕಂಡಿದ್ದಾರೆ. ಇಂದಿಗೂ ದೇವಪ್ಪಗೌಡರ ಮಕ್ಕಳು ಮೊಮ್ಮಕ್ಕಳು ಮನೆ ಮಂಡಳಿಯೆಲ್ಲ ಶ್ರೀ ಕ್ಷೇತ್ರದ ಶ್ರದ್ಧಾಭಕ್ತಿ ವಿಶ್ವಾಸ ಪೂರ್ಣ ಭಕ್ತ ವರ್ಗದವರೇ ಆಗಿ ನಡೆದುಕೊಳ್ಳುತ್ತಿದ್ದಾರೆ. ಈಗಿನ ಶ್ರೀಗಳಾದ ಶ್ರೀ ಶಿವಕುಮಾರಸ್ವಾಮಿಗಳವರೂ ಈ ಮನೆತನದಲ್ಲಿ ಅಷ್ಟೇ ವಾತ್ಸಲ್ಯವಿಟ್ಟುಕೊಂಡಿರುವುದಕ್ಕೆ ಈ ಹಿಂದೆ ಹೇಳಿದ ದೇವಪ್ಪಗೌಡರ ಮತ್ತು ಉದ್ದಾನಶಿವಯೋಗಿಗಳ ಪರಸ್ಪರ ಅವಲಂಬನತ್ವವೇ ಪ್ರಮುಖಕಾರಣವೆನ್ನಬಹುದು. ಇಂದಿಗೂ ಪ್ರತಿವರ್ಷ ದೇವಪ್ಪಗೌಡರ ಮಕ್ಕಳು ಮೊಮ್ಮಕ್ಕಳು ಶ್ರೀ ಶಿವಕುಮಾರಸ್ವಾಮಿಗಳವರನ್ನು ಮನೆಗೆ ಬರಮಾಡಿಕೊಂಡು ಪಾದಪೂಜೆ ಮಾಡಿಕೊಂಡು ತೀರ್ಥಪ್ರಸಾದವನ್ನು ತೆಗೆದುಕೊಂಡೇ ತೀರುತ್ತಾರೆ.

**ಲಕ್ಕೂರ ರುದ್ರಪ್ಪ ಸಿದ್ಧಗಂಗೆಯ ಉದ್ದಾನಪ್ಪನಾದ :**

ರುದ್ರಪ್ಪ ಸಿದ್ಧಗಂಗೆಯನ್ನು ಸೇರಿ, ಅಡವಿಸ್ವಾಮಿಗಳು ಶ್ರೀ ಕ್ಷೇತ್ರದಲ್ಲಿ ಪ್ರಾರಂಭಿಸಿದ ಸಮಸ್ತ ದಾಸೋಹ ಕಾರ್ಯವನ್ನು ನಿರ್ವಹಿಸಿಕೊಂಡು ಬರುವ ಸಾಮರ್ಥ್ಯ ಪಡೆದರು. ಕ್ಷೇತ್ರದಲ್ಲಿ ಎಲ್ಲೆಲ್ಲಿಯೂ ಇವರ ಮಿಂಚಿನ ವೇಗದ ಚಟುವಟಿಕೆ ಕಂಚಿನಂಥ ಕಂಠದ ಕಲಕಲನಿನಾದಗಳಿಂದ ಕ್ಷೇತ್ರದಲ್ಲಿ ಒಂದು ಹೊಸ ಕಳೆ ಮೂಡಿ ಬಂದು ನಳನಳಿಸತೊಡಗಿತು. ಅಡವೀಶ್ವರರು ನಾನು ಈ ಪುಣ್ಯಕ್ಷೇತ್ರಕ್ಕೆ ಬಂದು ಮಾಡಿದ ಲೋಕೋಪಕಾರಕ ಕಾರ್ಯಗಳು ಇನ್ನೂ ನಿರ್ಬಾಧಿತವಾಗಿ ನಡೆದುಕೊಂಡು ಹೋಗುತ್ತವೆಂದೂ ಈ ರುದ್ರಪ್ಪನೇ ಈ ಕ್ಷೇತ್ರಾಧಿಪತಿಯೆಂದೂ ತೀರ್ಮಾನಿಸಿಬಿಟ್ಟರು, ಅವರಿಗೆ ಕ್ಷೇತ್ರದ ಎಲ್ಲ ಜವಾಬ್ದಾರಿಗಳನ್ನು ಕೊಟ್ಟುಬಿಟ್ಟರು.[15] ಕೆಲವು ದಿನಗಳಲ್ಲಿ ಇವರನ್ನು 'ಉದ್ದಾನಶಿವಯೋಗಿ' ಎಂಬ ನೂತನ ಅಭಿಧಾನದಿಂದ ೧೫೦೦ ರಿಂದ ಉಜ್ವಲ ಚರಿತ್ರೆಯನ್ನು ಹೊಂದಿದ ಮಹಾತೇಜೋವಿಶಿಷ್ಟವೂ ಅಘಟಿತಘಟನಾಸಮರ್ಥರಾದ

---

13. ಉದ್ದಾನ ಶಿವಯೋಗಿಗಳವರು ತಾವು ಪೂರ್ವಾಶ್ರಮದ 'ರುದ್ರಪ್ಪ' ಎಂಬ ಹೆಸರಿನಿಂದ ಶ್ರೀ ಕ್ಷೇತ್ರದ ಸೇವಾಕೈಂಕರ್ಯದಲ್ಲಿದ್ದಾಗಲೂ, ಶಿವಯೋಗಿಗಳಾದ ಮೇಲೂ ಅನೇಕ ಪವಾಡಗಳನ್ನು ಮೆರೆದ ಬಗೆಗೆ ಜನಜನಿತವಾದ ಕಥೆಗಳೆಷ್ಟೋ ಇವೆ. ಅವುಗಳಲ್ಲಿ ಕೆಲವನ್ನು ಮುಂದೆ ವಿವರಿಸಲಾಗಿದೆ.

14. ಈ ಬೆಟ್ಟವು ಹರದನಹಳ್ಳಿ ನಿರಂಜನ ಜಗದ್ಗುರು ಪರಂಪರೆಯವರ ಸಂಬಂಧದ ಪುಣ್ಯಕ್ಷೇತ್ರ. ಇಲ್ಲಿ ಗೋಸಲ ಸಿದ್ಧೇಶ್ವರರ ಶಿಷ್ಯರೂ, ವಿಜಯನಗರದ ೧೧೧ ವಿರಕ್ತರ ಸಂಪ್ರದಾಯದ ಬೆಳವಣಿಗೆಗೆ ಕಾರಣಕರ್ತರೂ ಎನಿಸಿದ ಶಂಕರಾಚಾರ್ಯ (ಶಂಕರಪ್ರಭು) ಸ್ವಾಮಿಗಳವರ ಗದ್ದುಗೆ ಇದೆ. (ನಿರಂಜನ ವಂಶರತ್ನಾಕರದ ಅಭಿಪ್ರಾಯದ ಪ್ರಕಾರ)

15. ಅಡವಿಸ್ವಾಮಿಗಳು ಗುಬ್ಬಿಯಿಂದ ಸಿದ್ಧಗಂಗೆಗೆ ಬಂದಾಗ ಇಲ್ಲಿ ಮುಗ್ಧರೂ ವ್ಯವಹಾರ ಚಾತುರ್ಯವನ್ನೇ ಅರಿಯದ ಸಿದ್ಧಲಿಂಗಪ್ಪ ಸ್ವಾಮಿಗಳು ಇದ್ದರೆಂದು ಈ ಹಿಂದೆ ತಿಳಿಸಿದ್ದೆ. ಅವರು ದುರ್ಬಲರಾಗಿದ್ದು, ಕ್ಷೇತ್ರದ ಕಾರ್ಯ ಬಾಹುಳ್ಯ ಅವರಿಂದ ನಡೆಸಿಕೊಂಡು ಹೋಗಲು ಸಾಧ್ಯವಿಲ್ಲವೆಂದುಕೊಂಡು ತಿಳಿದು ಅವರಿಂದ ಕ್ಷೇತ್ರದ ಎಲ್ಲ ಅಧಿಕಾರವನ್ನು ಪಡೆದುಕೊಂಡು ಕ್ಷೇತ್ರವನ್ನು ಅಭಿವೃದ್ಧಿಗೊಳಿಸಿದ್ದರು. ಸಿದ್ಧಲಿಂಗಸ್ವಾಮಿಗಳು ಪೂರ್ವಾಶ್ರಮದಲ್ಲಿ ಕ್ಷೇತ್ರದ ಪಕ್ಕದಲ್ಲಿಯೇ ಇರುವ ಆರೆಪಾಳ್ಯದಲ್ಲಿ ಇವರ ವಂಶಸ್ಥರು ಇನ್ನೂ ಇದ್ದಾರೆ. ಇವರಿಗೂ ಹಿಂದೆ ರುದ್ರಸ್ವಾಮಿಗಳು ಮುಪ್ಪಿನಸ್ವಾಮಿಗಳು ಎಂಬ ಸ್ವಾಮಿಗಳು ಇಲ್ಲಿ ಆಗಿಹೋಗಿದ್ದಾರೆ. ಅವರ ಚರಿತ್ರೆಗಳು ಸ್ಪಷ್ಟವಾಗಿ ಗೊತ್ತಿಲ್ಲ. ಗದ್ದಿಗೆಗಳು ಮಾತ್ರ ಇವೆ. ಇವರೆಲ್ಲರ ಕಾಲದಲ್ಲೂ ಕ್ಷೇತ್ರವೂ ಉತ್ತಮ ಸ್ಥಿಯಲ್ಲಿ ಇರಲಿಲ್ಲ ಎಂದು ತಿಳಿದುಬರುವುದು. ಈ ಕಾರಣದಿಂದಲೇ ಆಗಿನ ಮೈಸೂರಿನಲ್ಲಿದ್ದ ಬ್ರಿಟಿಷ ಸರಕಾರದವರು ಇದಕ್ಕಿದ್ದ ಸಿದ್ಧಗಂಗಾಪಾಳ್ಯ, ಬೊಮ್ಮನಹಳ್ಳಿ ಎಂಬೆರಡು ಊರುಗಳ ಇನಾಮತಿಯನ್ನು ಕಿತ್ತುಕೊಂಡು ಬಿಟ್ಟರು.

ಶಿವಯೋಗಿಪುಂಗವರ ತಪೋಭೂಮಿಯೂ ಎನಿಸಿದ ಸಿದ್ಧಗಂಗಾ ಕ್ಷೇತ್ರದ ಜಂಗಮಪುಂಗವರೆಂದು ನೇಮಿಸಿ ಅಧಿಕಾರಕೊಟ್ಟು ಬಿಟ್ಟರು. ಈ ಸಂದರ್ಭದಲ್ಲಿ ಅಧಿಕಾರಕ್ಕಾಗಿ ಕೆಲವರು ಅಹಿತಕರ ಘಟನೆಗಳನ್ನು ನಡೆಸಿದರೆಂದೂ ತಿಳಿದುಬರುವುದು. ಆ ಸಮಯದಲ್ಲಿ ಮಠದ ಖರ್ಚುವೆಚ್ಚಗಳು ಅಧಿಕಗೊಂಡು ಆರ್ಥಿಕ ಪರಿಸ್ಥಿತಿ ತುಂಬ ಹದಗೆಟ್ಟುಹೋಗಿತ್ತು.

ಅಡವಿಸ್ವಾಮಿಗಳುವರು ತೀವ್ರ ಅನಾರೋಗ್ಯಕ್ಕೊಳಗಾದರು. ಅವರನ್ನು ತುಮಕೂರಿನ ಕೆಲವು ಭಕ್ತರು ಉಪಚಾರಕ್ಕೆಂದು ಕರೆದೊಯ್ದರು. ಉದ್ದಾನಪ್ಪನವರು ಮಠದಲ್ಲಿಯೇ ಉಳಿದರು. ದಿನೇ ದಿನೇ ಅನಾರೋಗ್ಯ ಅಧಿಕಗೊಂಡು ಕೊನೆಯ ಸ್ಥಿತಿಯೇ ಪ್ರಾಪ್ತವಾಯಿತು. ಉದ್ದಾನಶಿವಯೋಗಿಗಳಿಗೆ ವಿಷಯ ತಿಳಿದು ಧಾವಿಸಿ ತುಮಕೂರಿಗೆ ತೆರಳಿದರು. ಆಗ ಅಡವೀಶ್ವರರಿಗೆ ಎಚ್ಚರ ತಪ್ಪಿ ಮಾತು ನಿಂತು ಹೋಗಿತ್ತು. ಉದ್ದಾನ ಶಿವಯೋಗಿಗಳು ಹೋಗಿ ಮೈ ಕೈ ಮುಟ್ಟಿ "ಗುರುವೇ ಪರಮ ಗುರುವೇ ನಾನು ಬಂದಿದ್ದೇನೆ. ಈ ಸ್ಥಿತಿಯಲ್ಲಿ ನನ್ನನ್ನೊಮ್ಮೆ ಕಣ್ಣುಬಿಟ್ಟು ನೋಡಬಾರದೆ." ಎಂದು ಕೂಗಿಕೊಂಡರು. ಅಡವೀಶ್ವರರು ಕಣ್ಣು ಬಿಟ್ಟರು. ನೆಚ್ಚಿನ ಕೆಚ್ಚೆದೆಯ ಶಿಷ್ಯೋತ್ತಮನಮುಖ ನೋಡಿದರು. ತೃಪ್ತಿಯ ನಿಟ್ಟುಸಿರು ಬಿಟ್ಟರು. 'ನಾನೀಗ ಎಲ್ಲಿದ್ದೇನೆ' ಎಂದು ಅಡವೀಶ್ವರರು ಉದ್ದಾನ ಶಿವಯೋಗಿಗಳನ್ನು ಅಸ್ಪಷ್ಟ ಧ್ವನಿಯಲ್ಲಿ ಪ್ರಶ್ನಿಸಿದರು. ಉದ್ದಾನಪ್ಪನವರು– 'ತಾವೀಗ ತುಮಕೂರಿನ ಭಕ್ತರ ಮನೆಯಲ್ಲಿದ್ದೀರೆಂ'ದು ಕಿವಿಯಲ್ಲಿ ಹೇಳಿದರು. 'ಸಿದ್ಧಗಂಗೆಯಲ್ಲಿ ಇಲ್ಲವೇ'? ಎಂದು ಪುನಃ ಕೇಳಿದರು. ಅದಕ್ಕೆ ಉದ್ದಾನಪ್ಪಗಳು 'ಇಲ್ಲ' ಎಂದು ಉತ್ತರಿಸಿದರು. ಆಗ ಅಡವಿಸ್ವಾಮಿಗಳವರ ಮುಖ ಇನ್ನೂ ಖಿನ್ನವಾಯಿತಂತೆ. ಆಗ ಅವರು ಸುತ್ತಮುತ್ತಣ ಭಕ್ತರನ್ನೆಲ್ಲ ಹೊರಗೆ ಹೋಗುವಂತೆ ಸಂಜ್ಞೆ ಮಾಡಿದರು. ಸುತ್ತು ಮುತ್ತ ನೆರದಿದ್ದ ಭಕ್ತರೆಲ್ಲ ಹೊರಗೆ ಹೊರಟು ಹೋದರು. ಆಗ ಅಡವೀಶ್ವರರು ತಮ್ಮ ಎಲ್ಲ ನಿರೋಧಗಳನ್ನು ಅದುಮಿ, ಶಕ್ತಿ ಸಂಚಯನವನ್ನು ಪ್ರಯತ್ನದಿಂದ ಅಧಿಕಗೊಳಿಸಿದರು. "ಉದ್ದಾನಪ್ಪ, ನೀನು ಈಗ ಮಠವನ್ನೇಕೆ ಬಿಟ್ಟು ಬಂದೆ? ಈ ಸುತ್ತು ಮುತ್ತಲಿನ ಜನ ನಿನ್ನ ಯೋಗ್ಯತೆಯನ್ನು ಅರಿಯರು. ಇವರಾರೂ ನಿನಗೆ ಸೇರುವದಿಲ್ಲ.ನೀನು ಈ ಕೂಡಲೇ ಮಠಕ್ಕೆ ಹೋಗು. ಈ ಸಮಯದಲ್ಲಿ ನೀನು ಇಲ್ಲಿಗೆ ಬಂದುದು ಒಂದು ದೃಷ್ಟಿಯಿಂದ ಒಳ್ಳೆಯದೇ ಆಯಿತು. ನನ್ನ ಸರ್ವ ಶಕ್ತಿಯನ್ನು ನಿನಗೆ ಧಾರೆಯೆರೆದುಬಿಟ್ಟಿದ್ದೇನೆ. ಈಗ ನನ್ನಲ್ಲಿ ನನ್ನದೆನ್ನುವುದೇನೂ ಉಳಿದಿಲ್ಲ. ನೀನು ಸಿದ್ಧಗಂಗೆಯ ಯೋಗಕ್ಷೇಮವನ್ನು ಎಚ್ಚರದಿಂದ ನೋಡಿಕೊಂಡು ಆ ಮಹಾ ಸಂಸ್ಥೆಯನ್ನು ಬೆಳೆಸು ಹೆದರಬೇಡ. ಮಠದಲ್ಲಿ ನನ್ನ ಗದ್ದುಗೆ ಕಟ್ಟಿಸು ನಾನು ಸದಾ ನಿನ್ನ ಬೆಂಬಲಕ್ಕಿರುತ್ತೇನೆ" ಇತ್ಯಾದಿ ಹೇಳಿ ತಮ್ಮ ಕೊರಳ ರುದ್ರಾಕ್ಷಿ ಸರವನ್ನು ತೆಗೆದು ಅವರ ಕೊರಳಿಗೆ ಹಾಕಿ 'ಇದೇ ನಾನು ನಿನಗೆ ಕೊಡುವ ಸಂಪತ್ತು' ಕಿರುದನಿಯಲ್ಲಿ ಉಸುರಿದರು. ಅಂತಃಕರಣ ಪೂರ್ವಕವಾಗಿ ತಾವು ಅವರಿಗೆ ಏನು ಕೊಡಬೇಕೋ ಅದನ್ನೆಲ್ಲಾ ಕೊಟ್ಟು, ಮೈಮೇಲೆ ಕೈಹಾಡಿಸಿ ತಲೆಯಮೇಲೆ ಕೈಯಿಟ್ಟು ಹರಸಿ ಕಳುಹಿಸಿದರು. ದುಃಖಿತಪ್ತ ಉದ್ದಾನಪ್ಪನವರು ಉತ್ಕಂಠಿತರಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಬಿಕ್ಕಿ ಬಿಕ್ಕಿ ಅಳುತ್ತ ಹೊರಟು ಬಂದುಬಿಟ್ಟರು. ಇತ್ತ ಅಡವಿಸ್ವಾಮಿಗಳು ಲಿಂಗೈಕ್ಯರಾದರು. ಇವರ ಲಿಂಗತನುವನ್ನು ತೊಟ್ಲುಕೆರೆಗೆ ಒಯ್ದು ಅಲ್ಲಿ ಸಮಾಧಿ ಮಾಡಿದರು. ತೊಟ್ಲುಕೆರೆಯ ಮಠವನ್ನು ಅಡವಿಸ್ವಾಮಿಗಳೇ ಅಭಿವೃದ್ಧಿಗೊಳಿಸಿದ್ದರು. ಅಲ್ಲಿಯೇ ತಮ್ಮ ಸಮಾಧಿಯಾಗತಕ್ಕದ್ದೆಂದು ಅಡವಿಸ್ವಾಮಿಗಳು ಎಲ್ಲರಿಗೂ ಹೇಳಿದ್ದರ ಮೇರೆಗೆ ಮೊದಲೇ ಸಿದ್ಧವಾಗಿದ್ದ ಸಮಾಧಿಯಲ್ಲಿ ಅವರ ಸಮಾಧಿಕ್ರಿಯೆಗಳು ಕ್ರಿ. ಶ. ೧೯೦೧ ನೆಯ ಕಾರ್ತಿಕ ಮಾಸದ ಶುಕ್ಲಪಕ್ಷ ಅಷ್ಟಮಿಯ ದಿನ ನೆರವೇರಿದುವು.

ಇತ್ತ ಮಠದಲ್ಲಿಯಾದರೋ ಕೆಲವು ವಿರೋಧಗಳ ಮೂಲಕ ಏನೂ ಇಲ್ಲದಂತಾಗಿತ್ತು. ನಿಚ್ಚನಿಚ್ಚ ಆಚರಿಸುವ ದಾಸೋಹದ ವ್ಯವಸ್ಥೆಯೇ ಹದಗೆಟ್ಟುಹೋಗಿತ್ತು. ಗುರುಗಳಾದ ಅಡವಿಸ್ವಾಮಿಗಳು ನನ್ನ ಗದ್ದುಗೆ ಕಟ್ಟಿಸೆಂದು ಬೇರೆ ಅಪ್ಪಣೆ ಮಾಡಿದ್ದಾರೆ. ಆ ಗುರುವಾಕ್ಯವನ್ನು ಈಡೇರಿಸಲೇ ಬೇಕು. ಏನು ಮಾಡುವುದು? ಎಂಬ ಚಿಂತೆಯಲ್ಲಿ ಅನೇಕ ರಾತ್ರಿ ನಿದ್ರೆಯನ್ನೇ ಉದ್ದಾನಪ್ಪನವರು ಮಾಡಲಿಲ್ಲ. ಮಣ್ಣಮಡಕೆಯಲ್ಲಿ ಪ್ರಸಾದ ಪರಿಕರ ಸಿದ್ಧಗೊಳಿಸಿ ಉಪಯೋಗಿಸುವ ಪರಿಸ್ಥಿತಿಯೊದಗಿತು. ಮೂರುತಿಂಗಳು ಹೀಗೆಯೇ ಕಾಲ ಕಳೆದರು. ಒಂದು ದಿನ ಬೆಳಗಿನ ಜಾವದಲ್ಲಿ ಅಡವೀಶ್ವರರು ಕನಸಿನಲ್ಲಿ ಕಾಣಿಸಿಕೊಂಡು" ಉದ್ದಾನಪ್ಪ. ಚಿಂತೆಯೆಂಬುದು ಶಿವಯೋಗಿಗುಂಟೆ? ನೀನು ಅಧೀರನಾಗಬೇಡ: ನಾನು ಸದಾ ನಿನ್ನ ಬೆಂಬಲಕ್ಕೆ ಇದ್ದೆ ಇದ್ದೇನೆ: ನಾಳೆಯೇ ನನ್ನ ಗದ್ದುಗೆಯ ಕೆಲಸ ಪ್ರಾರಂಭಿಸು" ಎಂದು ಹೇಳಿ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದಂತಾಯಿತು. ಬೆಳಗಾಗುತ್ತಲೆ ಅತ್ಯುತ್ಸಾಹದಿಂದ ಸ್ನಾನ ಪೂಜೆಗಳನ್ನು ತೀರಿಸಿಕೊಂಡು ಸ್ವತಃ ತಾವೇ ಕೈಯಲ್ಲಿ ಗುದ್ದಲಿ ಹಿಡಿದು ಅಡವಿಸ್ವಾಮಿಗಳ ಗದ್ದುಗೆಯ ಪಾಯ ತೋಡುವ ಕೆಲಸಕ್ಕೆ ಮೊದಲು ಮಾಡಿದರು. ಒಬ್ಬರನ್ನು ಸಹಾಯಕ್ಕೆ ತೆಗೆದುಕೊಂಡು ಹಗ್ಗ ಹಿಡಿದು ಗುರುತುಮಾಡಿಕೊಂಡು ನೆಲವನ್ನು ಅಗಿಯತೊಡಗಿದುದನ್ನು ನೋಡಿದ ಜನ ಇವರ ಈ ತೋಳ ಬಲದ ಕೆಲಸವನ್ನು ಕಂಡು ಅವಾಕ್ಕಾದರು: ಆಗ ಅವರೊಬ್ಬ ರುದ್ರಮೂರ್ತಿಯಂತೆ ಭಾಸವಾಗುತ್ತಿದ್ದರು. ತೋಳಿನಲ್ಲಿ ಅವರಿಗೆ ಏನು ಶಕ್ತಿಯಡಗಿತ್ತೋ ಎಂಬುದು ಅದಿಂದ ಅವರ ಕೆಲಸ ಎಲ್ಲರಿಗೂ ಮನವರಿಕೆ ಮಾಡಿಕೊಡುವಂತಿತ್ತು.

**ಇಗೋ ಸ್ವಾಮಿ ಹರಕೆಯನ್ನು ಒಪ್ಪಿಸಿಕೊಳ್ಳಿ :**

ಉದ್ಧಾನಪ್ಪನವರು ಮಧ್ಯಾಹ್ನದವರೆಗೆ ಗದ್ದುಗೆಯ ಪಾಯ ತೆಗೆದು ತಮ್ಮ ಕೈ ನೋಡಿಕೊಂಡರು. ಕೈಯಲ್ಲೆಲ್ಲಾ ಬೊಬ್ಬೆಯೆದ್ದಿದ್ದವು. ಆ ಮೇಲೆ ಸ್ನಾನಕ್ಕೆ ತೆರಳಿ, ಸ್ನಾನ ಶಿವಪೂಜೆ ಮುಗಿಸಿಕೊಂಡು ಬಂದು, ಮಠದ ಮುಂಭಾಗದಲ್ಲಿ ಮಂಡಿಸಿದರು. ಅಂದಿನ ಅವರ ಮುಖದ ಮೇಲಿನ ಹುಮ್ಮಸ್ಸು ಮೂರು ಲೋಕವನ್ನೇ ಸತ್ಕ್ರಿಯೆಯಿಂದ ಗೆದ್ದೇನೆಂಬ ಆತ್ಮ ಪ್ರತ್ಯಯದ ಉತ್ಸಾಹಾಧಿಕ್ಯದಿಂದ ಹೊಳೆಯುತ್ತಿತ್ತು. ಬಾಹುವಿನಲ್ಲಿ ಅದ್ಭುತಶಕ್ತಿಸಂಚಾರವಾಗುತ್ತಿದ್ದುದನ್ನು ಕಂಡುಕೊಂಡರು. ಹೀಗಿರುತ್ತಿರುವಲ್ಲಿ ಆಂಧ್ರಪ್ರದೇಶದ ಒಬ್ಬ ಸದ್ಗೃಹಸ್ಥರೆಡ್ಡಿಯು ತನ್ನ ಹೆಂಡತಿ ಮತ್ತು ಚಿಕ್ಕ ಹಸುಳೆಯೊಂದನ್ನೊಳಗೊಂಡು ಬಂದು ಶ್ರೀ ಉದ್ಧಾನ ಶಿವಯೋಗಿಗಳ ಪಾದಗಳ ಮೇಲೆ ಮಗುವನ್ನಿಟ್ಟು "ಸ್ವಾಮಿಯ ಕೃಪೆಯಿಂದ ಉಂಟಾದ ನನ್ನ ವಂಶದ ಕುಡಿಯಿದು. ಕಳೆದ ಹದಿನಾರು ವರ್ಷದಿಂದ ನನ್ನ ಸಂಸಾರದಲ್ಲಿ ಸಂತಾನಾಭಾವದಿಂದ ಸುಖವನ್ನೇ ಕಾಣದೆ ತೊಳಲುತ್ತಿದ್ದೆ. ಸ್ವಾಮಿಯ ಕೃಪೆಯಿಂದ ಇಂದು ನನಗೆ ಉಂಟಾದ ಈ ಗಂಡು ಸಂತಾನದಿಂದ ಕೃತಾರ್ಥನಾದೆ. ಇಗೋ ನನ್ನ ಹರಕೆಯ ಕಾಣಿಕೆಯನ್ನು ಒಪ್ಪಿಸಿಕೊಳ್ಳಿ" ಎಂದು ಐದುನೂರು ರೂಪಾಯಿಗಳ ಹಮ್ಮಿಣಿಯನ್ನು ಸ್ವಾಮಿಯ ಪಾದಗಳ ಮೇಲಿಟ್ಟು ಪುನಃ ಪುನಃ ನಮಸ್ಕಾರ ಮಾಡಿ ಎದ್ದು ನಿಂತನು. ಉದ್ಧಾನಸ್ವಾಮಿಗಳು ಅವಾಕ್ಕಾದರು. ರಾತ್ರಿ ಕನಸಿನಲ್ಲಿ ಶಿವಯೋಗಿಪುಂಗವರಾದ ಅಡವಿಶ್ವರ ಗುರುಗಳು ಬಂದು "ಯಾವುದಕ್ಕೂ ಚಿಂತಿಸಬೇಡ ನಾನು ಸದಾ ನಿನ್ನ ಬೆಂಬಲಕ್ಕಿದ್ದೇನೆ. ಏಳೆಂ"ದು ಎಬ್ಬಿಸಿ ಆಶೀರ್ವದಿಸಿದ ಘಟನೆ ಜ್ಞಾಪಕಕ್ಕೆ ಬಂದು ಮೂಕ ವಿಸ್ಮಿತರಾಗಿ "ಇಗೋ ಅಡವಿಸ್ವಾಮಿಗಳ ಕೃಪೆ ಇಂದಿನಿಂದ ಪ್ರಾರಂಭವಾಯಿತು." ಹೆದರಬೇಡ ಎದ್ದೇಳು ಎಂದು ಒಳಗಿನಿಂದ ಅವ್ಯಕ್ತಧ್ವನಿಯೊಂದು ಬಡಿದು ಎಬ್ಬಿಸಿದಂತಾಯಿತು. ನೂರ್ಮಡಿ ಉತ್ಸಾಹ ದೇಹದಲ್ಲಿ ಸಂಚಾರವಾಯಿತು. ಆಂಧ್ರದ ರೆಡ್ಡಿಯವರ ಧನವನ್ನು ಸ್ವೀಕರಿಸಿ, ಅವರಿಗೆ ಆಶೀರ್ವಾದ ಮಾಡಿ ಪ್ರಸಾದವಿತ್ತು ಕಳಿಸಿಕೊಟ್ಟರು. ಆ ಐದುನೂರು ರೂಪಾಯಿಗಳ ಪ್ರಸಾದದ ಬಲದಿಂದ ಉದ್ಧಾನಸ್ವಾಮಿಗಳು ಸಿದ್ಧಗಂಗಾ ಮಹಾ ದಾಸೋಹಮಠದ ಅಭಿವೃದ್ಧಿ ಕಾರ್ಯಗಳಲ್ಲಿ ಮಗ್ನರಾದರು. ದಿನೇ ದಿನೇ ಅವರ ಅದ್ಭುತ ಪುರುಷ ಶಕ್ತಿ ಪ್ರಕಟವಾಗುತ್ತ ನಡೆಯಿತು. ಮಠದ ಅಭಿವೃದ್ಧಿ ಕಾರ್ಯಗಳೂ, ದಾಸೋಹ ವ್ಯವಸ್ಥೆಯೂ, ವಿದ್ಯಾರ್ಥಿ ನಿಲಯಗಳ ಶಿಕ್ಷಣ ಸಂಸ್ಥೆಗಳ ಕಾರ್ಯಗಳೂ ನಿರ್ಬಾಧಿತವಾಗಿ ನಡೆಯತೊಡಗಿ 'ಕೊಡುವವ ಸಂಗ ಕೊಳ್ಳುವವ ಸಂಗಮದೇವ' ಎಂಬ ಬಸವಣ್ಣನವರ ಉಕ್ತಿಗೆ ಸಾರ್ಥಕ್ಯವುಂಟಾಗತೊಡಗಿತು. ಲೋಕಜೀವನಕ್ಕೆ ಪೂರಕವಾಗುವ ಲೌಕಿಕ ಪಾರಮಾರ್ಥಿಕ ಅನೇಕ ಕಾರ್ಯಗಳ ಭದ್ರಭವನಕ್ಕೆ ತಳಹದಿ ಹಾಕಿದರು. ದಿನೇ ದಿನೇ ಅವರ ಶಿವಲಿಂಗಲೀಲಾವಿನೋದ ಚರಿತ್ರೆಯು ಅಧಿಕಗೊಳ್ಳತೊಡಗಿತು. ಅವರೊಬ್ಬ ಕಾರಣಪುರುಷರಾಗಿ ಲೋಕಕ್ಕೆ ಕಾಣಿಸಿಕೊಳ್ಳತೊಡಗಿದರು.

**ಪ್ರಬಲಸಂಕಲ್ಪ ಶಕ್ತಿಯ ಉದ್ಧಾನೇಶ್ವರರು :**

ಉದ್ಧಾನಶಿವಯೋಗಿಗಳು ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ ಮೇಲೆ ಅವರು ಸಾಧಿಸಿದ ಸಾಧನೆ ಆ ಕಾಲದಲ್ಲಿ ಅತ್ಯದ್ಭುತವಾದದ್ದು. ಲೌಕಿಕದೃಷ್ಟಿಯಲ್ಲಿ ಅವರು ಅಷ್ಟೊಂದು ವಿದ್ಯಾವಂತರಲ್ಲ, ನಿಜ. ಆದರೂ ಓದು ಬರಹವನ್ನು ಅಷ್ಟಿಷ್ಟು ಬೆಳೆಸಿಕೊಂಡಿದ್ದರು. ಅವರ ಮಾತಿನಲ್ಲಿ ಹೇಳಬೇಕೆಂದರೆ 'ಸ್ವಲ್ಪ ಓದಿ ಬಹಳ ತಿಳಿದುಕೊಳ್ಳಬೇಕು' ಅನ್ನುವಂತೆ ಅವರ ಓದಿನ ಪರಿ. ಕುರಿತೋದಿ ವಿದ್ಯಾವಂತರೆನ್ನಿಸಿಕೊಂಡವರಲ್ಲ. ಆದರೆ ಅವರ ವಿದ್ಯಾವೈದುಷ್ಯದ ಸಂಪದ್ಭರಿತ ವ್ಯಕ್ತಿತ್ವದ ಅರಿವು ಕೆಲವರಿಗೆ ಮಾತ್ರ ಇತ್ತು. ಅವರದು ಅಕ್ಷರವಿದ್ಯೆಯಲ್ಲ; ಶಿವಯೋಗ ವಿದ್ಯೆ. ಲೋಕ ಸಂಗ್ರಹ ಧಾರಣವಿದ್ಯೆ; ಸರ್ವಲೋಕೋಪಕಾರಕವಿದ್ಯೆ. ಅವರು ಬಸವಣ್ಣನಂತೆ ಹಸ್ತ ಪರುಷ. ದೃಷ್ಟಿಪರುಷ, ನಡೆನುಡಿಭಾವಪರುಷಶಕ್ತಿಯನ್ನು ತಾವು ನಿಷ್ಕಾಪಟ್ಯಪೂರ್ವಕ ಲಿಂಗತಪಸ್ಸನ್ನಾಚರಿಸಿ ಪಡೆದಿದ್ದರು. ಮಠಕ್ಕೆ ಹೆಚ್ಚು ಜನ ಬರಬೇಕು. ಅವರೆಲ್ಲ ತೃಪ್ತಿಯಾಗಿ ಊಟಮಾಡಬೇಕು ; ವಿದ್ಯಾರ್ಥಿಗಳು ಮಠಕ್ಕೆ ಬರಬೇಕು ; ಅವರು ಸತ್ಶೀಲರಾಗಿ ಬೆಳೆಯಬೇಕು ಮತ್ತು ಬಾಳಬೇಕು : ಚೆನ್ನಾಗಿ ಓದಿ ವಿದ್ವಾಂಸರಾಗಬೇಕು : ಚೆನ್ನಾಗಿಯೂ ಊಟ ಮಾಡಬೇಕು : ಕೆಲಸವನ್ನೂ ಚೆನ್ನಾಗಿ ಮಾಡಬೇಕು. ಎಲ್ಲವೂ ಚೆನ್ನಾಗಿರಬೇಕೆಂಬುದೇ ಅವರ ಉತ್ಕಟೇಚ್ಛೆ. ಸೋಮಾರಿಗಳು, ಹೇಡಿಗಳು ಅವರಿಗೆಸಲ್ಲರು. ಓದಿದವರನ್ನು ಸ್ವಾಮಿಗಳವರು ಪರೀಕ್ಷೆ ಮಾಡುತ್ತಿದ್ದುದೂ ಉಂಟು. ಚೆನ್ನಾಗಿ ಓದುವವನಿಗೆ ಕಲ್ಲುಸಕ್ಕರೆ. ಹಣ್ಣು, ಬಟ್ಟೆಬರೆ ಎಲ್ಲವನ್ನು ತಾವೇ ಕೊಡಬೇಕು, ಅವರ ಕೈಯಿಂದ ಈ ರೀತಿ ಪ್ರಸಾದವನ್ನು ಪಡೆದವರು. ಅವರಿಂದ ಏಟು ತಿಂದವರು ಈಗಲೂ ಇದ್ದಾರೆ.[16]

---

16. ಈಗಿನ ಕನಕಪುರ ಮಠಾಧ್ಯಕ್ಷರಾದ ಶ್ರೀ ಶ್ರೀ ನಿ. ಪ್ರ. ಮಹಾಲಿಂಗಸ್ವಾಮಿಗಳು, ಪ್ರೊ॥ ಜಿ. ಮರುಳಸಿದ್ಧಯ್ಯ, ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯ, ವಿದ್ವಾನ್ ಗಂಗಪ್ಪ ಇನ್ನೂ ಅನೇಕರು ಅಂದಿನ ಶ್ರೀಗಳವರ ವಿದ್ಯಾರ್ಥಿಗಳ ಮೇಲಿನ ವಾತ್ಸಲ್ಯಾದಿಗಳ ಬಗೆಗೆ ಸ್ವಾರಸ್ಯಕರವಾಗಿ ವಿವರವನ್ನು ಒದಗಿಸುತ್ತಾರೆ. ಇವರೆಲ್ಲ ಉದ್ಧಾನೇಶ್ವರರ ಅನುಗ್ರಹಕ್ಕೆ ಪಾತ್ರರಾದ ಮಠದ ಹಳೆಯ ವಿದ್ಯಾರ್ಥಿಗಳೇ ಆಗಿದ್ದಾರೆ.

ತಮ್ಮ ಮನಸ್ಸಿಗೆ ಇವನು ಬುದ್ಧಿವಂತ ವಿದ್ಯಾರ್ಥಿಯೆಂದು ಹೊಳೆದರಾಯಿತು. ಮಠಕ್ಕೆ ಬಂದವರೆದುರು ಆ ವಿದ್ಯಾರ್ಥಿಯ ಬಗೆಗೆ ಹೆಮ್ಮೆಯಿಂದ ಹೇಳಿಕೊಳ್ಳದೆ ಇರುತ್ತಿರಲಿಲ್ಲ. ಇದರಿಂದ ವಿದ್ಯಾರ್ಥಿಗಳಲ್ಲಿ ಆತ್ಮಪ್ರತ್ಯಯ ತುಂಬಿ ಅವರು ಶ್ರೀಗಳವರ ಕೃಪೆಗೆ ಪಾತ್ರರಾಗಲು ಸ್ಪರ್ಧೆಯಿಂದ ಓದುತ್ತಿದ್ದರೆಂದು ಆಗಿನ ವಿದ್ಯಾರ್ಥಿಗಳನೇಕರು ಹೇಳುತ್ತಿದ್ದಾರೆ.

ನಿತ್ಯ ನಿತ್ಯ ಮಠದ ಖರ್ಚುವೆಚ್ಚಗಳಿಗೆಲ್ಲ ಉದ್ದಾನಸ್ವಾಮಿಗಳವರ ಜೋಳಿಗೆಯು ಬಲವೇ ಬಲ. ದಾಸೋಹ ವ್ಯವಸ್ಥೆ ಒಂದಿಗಿಂತ ಶತಾಧಿಕ, ಸಹಸ್ರಾಧಿಕ; ಆದರೆ ಉದ್ದಾನ ಶಿವಯೋಗಿಗಳು ಯಾರನ್ನೂ ಯಾಚಿಸುತ್ತಿರಲಿಲ್ಲ. ಅಗಾಧ ಸಂಕಲ್ಪ ಶಕ್ತಿ ವಿಶಿಷ್ಟರಾದ ಅವರ ಸಂಕಲ್ಪಕ್ಕೆ ಒಳಗಾದ ಯಾವ ಕಾರ್ಯಕ್ಕೂ ಅಡೆತಡೆ ಬಂದಂತಿಲ್ಲ. ಇದು ಅವರ ಪರುಷಶಕ್ತಿಯಲ್ಲದೆ ಬೇರಲ್ಲ. ಧಾರವಾಡದ ಮೃತ್ಯುಂಜಯಪ್ಪಗಳು ಅಥಣಿ ಶಿವಯೋಗಿಗಳವರ ಸಂಕಲ್ಪಶಕ್ತಿ, ಪರುಷಶಕ್ತಿಯ ಬಗೆಗೆ ಆಗಾಗ ವಿವರಿಸುತ್ತಿದ್ದರು. ಅವೆಲ್ಲವನ್ನೂ ಬಹು ಜನರು ಕೇಳಿದ್ದಾರೆ. ಅವರ ಚರ್ಯೆಯೆಲ್ಲ ಉದ್ದಾನ ಸ್ವಾಮಿಗಳವರಲ್ಲಿ ಕಾಣುತ್ತಿತ್ತು. ಜೋಳಿಗೆಯ ಮಹತ್ತು ಬೃಹತ್ತುಗಳೇನೆಂಬುದನ್ನು ಇಂದಿಗೂ ಸಿದ್ಧಗಂಗೆಗೇ ಹೋಗಿ ನೋಡಬೇಕು. ದೀನರು, ದಲಿತರು, ಜೀವನದ ಅನೇಕ ಕಷ್ಟಕಾರ್ಪಣ್ಯಗಳಿಂದ ನೊಂದು ಬೆಂದವರು ಶ್ರೀಗಳವರ ಹತ್ತಿರ ಬಂದು ಅವರ ಪರುಷದೃಷ್ಟಿಯಿಂದ ಸುಖಿಗಳಾಗುತ್ತಿದ್ದರು. 'ಸಿದ್ಧಲಿಂಗೇಶನ ಕೃಪೆಯಿಂದ ಎಲ್ಲ ಸರಿ ಹೋಗುತ್ತದೆ. ಹೆದರಬೇಡಿ' ಎಂದು ಮೂಗಿನ ಮೇಲೆ ಬೆರಳಾಡಿಸಿ ನೋಡಿದರಾಯಿತು. ಕಾರ್ಯವಾದ ಹಾಗೆಯೇ. ಇದೇ ಅವರ ಅಭಯವಾಣಿ. ಚಿತ್ರದುರ್ಗದ ಜಗದ್ಗುರು ಜಯದೇವ ಸ್ವಾಮಿಗಳವರಿಗೆ ಉದ್ದಾನೇಶ್ವರರ ತಪಶ್ಶಕ್ತಿಯು ಅರಿವಾಗಿತ್ತು. ಆಗಾಗ ಮಠಕ್ಕೆ ಬಂದು ಶಿವಯೋಗಿಗಳವರನ್ನು ನೋಡಿಕೊಂಡು ಹೋಗುವ ಪದ್ಧತಿ ಇತ್ತು. ಉದ್ದಾನೇಶ್ವರರ ಕೊನೆಗಾಲದಲ್ಲಿ ಜಯದೇವ ಸ್ವಾಮಿಗಳು ನೇರವಾಗಿ ಹಳೆಯ ಮಠಕ್ಕೆ ಹೋಗಿ ಉದ್ದಾನೇಶ್ವರರನ್ನು ಸಂದರ್ಶಿಸಿ ಹೋದರು. ದೇಗುಲ ಮಠದ ಮಹಾಶಿವಯೋಗಿಗಳಾದ ನಿರ್ವಾಣಸ್ವಾಮಿಗಳು ಉದ್ದಾನ ಶಿವಯೋಗಿಗಳ ಅದ್ಭುತ ಶಕ್ತಿಗೆ ಮಾರುಹೋಗಿ ಆಗಾಗ ಬಂದು ದರ್ಶನ ಪಡೆಯುತ್ತಿದ್ದರು. ಹೀಗೆ ಅನೇಕ ಶಿವಯೋಗಿಗಳವರು ಉದ್ದಾನೇಶ್ವರರ ಸಂದರ್ಶನ ಮಾರ್ಗದರ್ಶನ ಪಡೆಯುತ್ತಿದ್ದರು. ತಮ್ಮ ಮಠದ ಉತ್ತರಾಧಿಕಾರಿಯ ಪ್ರಶ್ನೆ ಬಂದಾಗ ಕನಕಪುರದ ನಿರ್ವಾಣ ಸ್ವಾಮಿಗಳು ಉದ್ದಾನಶಿವಯೋಗಿಗಳ ಹತ್ತಿರಕ್ಕೆ ಬಂದು ನಿಮ್ಮ ಸೇವೆಯಲ್ಲಿರುವ ವಟುವೇ ಬೇಕೆಂದು ಕೇಳಿದರು. ಉದ್ದಾನಶಿವಯೋಗಿಗಳು ಅವರಿಗೆ ತಮ್ಮ ಸೇವೆಯಲ್ಲಿದ್ದ ಪೂರ್ವಾಶ್ರಮದ ಕೆಂಬಳಲಿನ ಕಾಳಪ್ಪನನ್ನು ಅರಿಸಿ ಕಳುಹಿಸಿದರು. ಅವರೇ ಈಗ 'ಮಹಾಲಿಂಗಸ್ವಾಮಿಗಳು' ಎಂಬ ಹೆಸರಿನಿಂದ ಕನಕಪುರದ ಮಠವನ್ನು ಬೆಳಗಿಸುತ್ತಿರುವವರು. ಅವರು ಮಹಾಮಹಿಮರಾಗಿ ಇಂದಿಗೂ ಅಲ್ಲಿ ರಾರಾಜಿಸುತ್ತಿದ್ದಾರೆ. ಅವರ ಯಾವ ಸಂಕಲ್ಪವೇ ಆಗಲಿ ಅದು ಯಥಾ ಯೋಗ್ಯವಾಗಿ ನಡೆದು ಹೋಗುತ್ತಿದೆ.

**ಜಾತ್ರೆ ಮಾಡಬೇಕೆಂಬ ಸಂಕಲ್ಪ :**

ಉದ್ದಾನ ಶಿವಯೋಗಿಗಳು ಸಿದ್ಧಲಿಂಗೇಶ್ವರರ ಯಾತ್ರಾ ಮಹೋತ್ಸವ, ರಥೋತ್ಸವ, ದನಗಳ ಪರಿಷೆಯನ್ನು ಮಾಡಬೇಕೆಂಬ ಸಂಕಲ್ಪದಿಂದ ಕೂಡಿದರು. ಅವರ ಸಂಕಲ್ಪ ಕೇವಲ ಜಾತ್ರೆ ನಡೆದು ಹರಿದುಹೋಗಬೇಕೆಂದಷ್ಟೇ ಅಲ್ಲ. ಜಾತ್ರೆಗೆಲ್ಲ ದಾಸೋಹದ ವ್ಯವಸ್ಥೆಯಾಗಬೇಕೆಂಬುದು. ಏನನ್ನಾದರೂ ಮಾಡಬಹುದು ಇಂಥ ಸಂಕಲ್ಪ ಮಾಡುವುದು ಸುಲಭವಲ್ಲ. ಜಾತ್ರೆಗೆಲ್ಲ ಊಟ ಹಾಕುವುದೇನು ಸುಲಭ ಕೆಲಸವೇ ? ಯಾರಾದರೂ ಇಂಥ ಒಂದು ಮಹಾಭಾರವನ್ನು ಹೊರಲು ಮನಸ್ಸು ಮಾಡಲಾದೀತೆ ? ಆದರೂ ಉದ್ದಾನಶಿವಯೋಗಿಗಳು ಸಂಕಲ್ಪಮಾಡಿ ಈಡೇರಿಸಿಕೊಂಡುಬಿಟ್ಟರು. ಜಾತ್ರೆಸೇರಿತು. ರಥೋತ್ಸವ ವೈಭವದಿಂದ ಆಯಿತು. ಸಂಕಲ್ಪದಂತೆ ಪ್ರಥಮ ವರ್ಷವೇ ಜಾತ್ರೆಗೆಲ್ಲ ದಾಸೋಹ ವ್ಯವಸ್ಥೆ ನಡೆದುಹೋಯಿತು. ಇಂದಿಗೂ ಆ ಸಂಕಲ್ಪಕ್ಕೆ ಚ್ಯುತಿ ಬಾರದಿರುವುದನ್ನು ನೋಡಬಹುದು. ೧೯೦೯ರಲ್ಲಿ ಪ್ರಥಮತಃ ಜಾತ್ರೆ ನಡೆದದ್ದು. ಅಂದಿನ ಅವರ ಆ ಸಂಕಲ್ಪವು ಯಥಾಯೋಗ್ಯವಾಗಿ ಇಂದಿಗೂ ನಡೆದು ಬರುತ್ತಲೇ ಇದೆ. ಇದೊಂದು ಲೋಕದಲ್ಲೆಲ್ಲೂ ಕಾಣದ ಮಹಾ ಅದ್ಭುತವೇ ಸರಿ. ಎಲ್ಲ ವ್ಯವಸ್ಥೆಯನ್ನು ಮಠದವರೇ ಮಾಡಬೇಕೆಂದಲ್ಲ. ಅದು ಸಾಧ್ಯವೂ ಇಲ್ಲ. ತೇರುಕಟ್ಟಲು, ಜಾತ್ರೆಯಜನಕ್ಕೆಲ್ಲ ೬-೭ ಕಡೆ ಊಟಕ್ಕೆ ಕೊಪ್ಪಲು ನಿರ್ಮಾಣಮಾಡಿ, ಅಲ್ಲಿ ಅಡಿಗೆಮಾಡಲು ಪ್ರಸಾದ ವಿತರಣೆ ಮಾಡಲು, ವಿವಿಧ ಉತ್ಸವಗಳ ವ್ಯವಸ್ಥೆ ಮಾಡಲು ಒಂದೊಂದು ಊರಿನವರಿಗೆ ಅಂದೇ ನೇಮಿಸಿದರು. ಇಂದಿಗೂ ವಂಶಪಾರಂಪರ್ಯವಾಗಿ ಆ ಜನರೇ ಬಂದು ನಿಂತು ೧೦-೧೫ ದಿನಗಳ ಜಾತ್ರಾ ಮಹೋತ್ಸವದ ಕಾರ್ಯಭಾರವನ್ನು ಹೊತ್ತು ಮುಗಿಸಿ ಹೋಗುತ್ತಿದ್ದಾರೆ. ಹೀಗೆ ಎಲ್ಲೆಲ್ಲೂ ನೇಮ, ಶಿಸ್ತು, ವ್ಯವಸ್ಥೆ ಈ ಕ್ಷೇತ್ರದ ಒಂದು ದೊಡ್ಡ ಆದರ್ಶ. ಉದ್ದಾನ ಸ್ವಾಮಿಗಳು ಹಾಕಿಕೊಟ್ಟ ಆದರ್ಶಪಾಲನೆ ಇನ್ನೂ ಜನರಿಂದ ನಡೆಯುತ್ತಲೇ ಇದೆ. ಇಂದಿನ ದಿನಗಳಲ್ಲಂತೂ ಪ್ರಸಾದ ವಿತರಣೆಯ ವ್ಯವಸ್ಥೆ ನೋಡುವವರಿಗೆಲ್ಲ ಕನಸು ಮನಸ್ಸಿನಲ್ಲಿ ಕಂಡರಿಯದ, ಕೇಳಿತಿಳಿಯದ ಮಹಾಪವಾಡವಾಗಿ ಕಾಣುತ್ತಿದೆ. ಈ ಮಹಾಭಾರವನ್ನು

ಹೊತ್ತು ಸಹಿಸಿಕೊಳ್ಳುವ ಶಕ್ತಿ ಸಿದ್ಧಗಂಗೆಗೊಂದಕ್ಕೆ ಸೀಮಿತವಲ್ಲದೆ ಅನ್ಯತ್ರ ಎಲ್ಲೂ ನೋಡಲು ಶಕ್ಯವೇ ಇಲ್ಲ. ಆದ್ದರಿಂದ ಇದೊಂದು ಜಗತ್ತಿನ ಅದ್ಭುತವಲ್ಲದೆ ಬೇರೇನು ?

**ಸಿದ್ಧಗಂಗಾ ಮಠವೊಂದು ದೊಡ್ಡ ನ್ಯಾಯಾ ಸ್ಥಾನ :**

ಉದ್ದಾನೇಶ್ವರರು ನಿಷ್ಠುರವಾದಿಗಳು ; ಸುಳ್ಳಿನಿಂದ ಸತ್ಯವನ್ನು ಮುಚ್ಚುವ ಜನರಿಗೆ ತಕ್ಕ ಬುದ್ಧಿಗಲಿಸುವುದು ಇವರ ಲೋಕ ನಡವಳಿಕೆಯನ್ನು ತಿದ್ದುವ ಮಹಾ ಗುಟ್ಟಾಗಿತ್ತು. ಸುತ್ತ ಹತ್ತು ಹರದಾರಿಯ ಗ್ರಾಮಾಂತರ ಪ್ರದೇಶಗಳ ದೊಡ್ಡ ದೊಡ್ಡ ವ್ಯಾಜ್ಯಗಳು ಸಿದ್ಧಗಂಗಾ ಮಠಕ್ಕೆ ಬರಬೇಕು ; ಇಲ್ಲಿ ನುರಿಯಬೇಕು. ಉದ್ದಾನ ಶಿವಯೋಗಿಗಳು ಹೇಳಿದ ತೀರ್ಮಾನಕ್ಕೆ ಯಾರೂ ತುಟಿಪಿಟಕ್ ಎನ್ನುವಂತಿಲ್ಲ. ಕೋರ್ಟ್ ಕಚೇರಿಗಳಲ್ಲಿ ನುರಿಯದ ವ್ಯಾಜ್ಯಗಳು ಇಲ್ಲಿ ನುರಿತು ಶ್ರೀ ಕ್ಷೇತ್ರವೊಂದು ದೊಡ್ಡ ನ್ಯಾಯಾಸ್ಥಾನವೇ ಆಗಿತ್ತು ; ಈಗಲೂ ಆಗಿದೆ. ಶ್ರೀಗಳವರು ಎರಡೂ ಪಕ್ಷದವರನ್ನು ನಿರ್ದಿಷ್ಟಪಡಿಸಿದ ದಿನಕ್ಕೆ ಸರಿಯಾಗಿ ಶ್ರೀ ಮಠಕ್ಕೆ ಬರಮಾಡಿಕೊಳ್ಳುವುದು. ಇಬ್ಬರ ವಾದ–ವಿವಾದಗಳನ್ನು ಗ್ರಹಿಸಿ, ತೀರ್ಪು ಕೊಟ್ಟರಾಯಿತು. ಅದೇ ಶಾಸನ. ಇಬ್ಬರೂ ಒಪ್ಪಲೇಬೇಕು. ಆಮೇಲೆ ಮಠದಲ್ಲಿ ಎರಡೂ ಪಕ್ಷದವರು ಸ್ನಾನ ಪೂಜಾದಿಗಳನ್ನು ಮಾಡಿ, ಒಂದೇ ಪಂತಿಯಲ್ಲಿ ಕುಳಿತು ಪ್ರಸಾದ ಸ್ವೀಕರಿಸಿ ಪುನಃ ಎಂದಿನಂತೆ ಅನ್ಯೋನ್ಯವಾಗಿ ನಡೆದುಕೊಳ್ಳಬೇಕು. ಹೊರಡುವಾಗ ಇಬ್ಬರೂ ಶ್ರೀಗಳವರಿಗೆ ನಮಸ್ಕರಿಸಿ ಅನ್ಯೋನ್ಯವಾಗಿ ನಡೆದುಕೊಳ್ಳುತ್ತೇವೆಂದು ಹೇಳಿ ಹೋಗಬೇಕು. ಸಮಾಜದೊಡನೆ ಇಷ್ಟೊಂದು ಅನ್ಯೋನ್ಯತೆ ಪಡೆದ ಮಠಗಳು ತೀರ ಅಪರೂಪ. ಕರ್ನಾಟಕದಲ್ಲಂತೂ ಇಲ್ಲ. ಸಿದ್ಧಗಂಗಾಮಠ ಸಮಾಜಕ್ಕೆ ಸರ್ವವಿಧದಲ್ಲೂ ಬೇಕು ; ಅದರಂತೆ ಮಠಕ್ಕೂ ಸಮಾಜ ಬೇಕು. ಸಮಾಜಕ್ಕೂ ಮಠಕ್ಕೂ ಅನ್ಯೋನ್ಯ ಸಂಬಂಧ ಇಂದಿಗೂ ಉಳಿದುಬಂದಿರುವ ಸಂಪ್ರದಾಯ ಈ ಮಠದ್ದಾಗಿದೆ. ಸಮಾಜದವರು ಈ ಮಠವನ್ನು ತಮ್ಮ ಮನೆಯಂತೆಯೇ ಭಾವಿಸಿ ನಡೆದುಕೊಳ್ಳುತ್ತಿದ್ದಾರೆ. ಅಲ್ಲಿಯದಾಸೋಹಕ್ಕೆ ಮೊದಲು ಬಿಟ್ಟ ಕುಂಬಳಕಾಯಿ. ತರಕಾರಿ ಮಿಸಲು; ತೋಟದಲ್ಲಿ ಬಿದ್ದ ಅಡಿಕೆಯ ಪಟ್ಟಿ ಮಠಕ್ಕೆ ಮೀಸಲು; ಸಮಾಜದಲ್ಲಾಗುವ ಶುಭಶೋಭನಗಳಲ್ಲಿ ಮಠದ ಕಾಯಿ, ದಕ್ಷಿಣೆ ಮೀಸಲು; ಜಾತ್ರೆ ಬಂದರೆ ನೋಡಬೇಕು. ಶುಚಿರ್ಭೂತರಾಗಿ ಹೆಣ್ಣು ಗಂಡು ಮಕ್ಕಳು ತಾವು ಬೆಳೆದು ತೆಗೆದಿಟ್ಟ ದವಸ ಧಾನ್ಯಗಳನ್ನು ತಮ್ಮ ತಮ್ಮ ತಲೆಯ ಮೇಲೆ ಹೊತ್ತುಕೊಂಡು ಬಂದು ಶ್ರದ್ಧೆಯಿಂದ ಅರ್ಪಿಸುತ್ತಾರೆ. ಹೀಗೆ ಅರ್ಪಿಸಿ ಪ್ರಸಾದ ಸ್ವೀಕರಿಸಿ, ಧನ್ಯತೆ ಪಡೆದವರಂತೆ ಭಾವಿಸಿಕೊಂಡು ಹೋಗುತ್ತಾರೆ. ಮಠದವರು ಕೇಳುವುದಾಗಲಿ, ಕೇಳಿಸಿಕೊಳ್ಳುವ ಭಕ್ತವರ್ಗವಾಗಲಿ ಮಠಕ್ಕಿಲ್ಲವೆಂದೇ ಮಠದ ವ್ಯವಹಾರದಲ್ಲಿ ಅನೂಹ್ಯವಾದ ಒಂದು ಕೊಂಡಿ ಭಕ್ತರೊಡನೆ ಶ್ರೀಗಳವರ ಬೆಸುಗೆ ಬೆಸೆದಿತ್ತು. ಇಂಥ ಕ್ರಿಯೆಯಿಂದ ಸಾಮಾಜಿಕ ನೆಮ್ಮದಿ, ಶಾಂತಿ ಕುದುರುವುದೆಂಬುದನ್ನು ಹೇಳಬೇಕಾಗಿಲ್ಲವಷ್ಟೆ. ಮಠದಲ್ಲಿ ತೀರ್ಮಾನವಾಗುವ ವ್ಯಾಜ್ಯ ಕೇವಲ ವೀರಶೈವರದೆಂದು ಭಾವಿಸಬಾರದು. ಉದ್ದಾನ ಶಿವಯೋಗಿಗಳವರು ಆ ಭಾವನೆಯನ್ನು ಇಟ್ಟುಕೊಂಡವರಲ್ಲ. ಎಲ್ಲ ಕೋಮಿನವರೂ ಉದ್ದಾನ ಶಿವಯೋಗಿಗಳಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು ; ಮಹಮ್ಮದೀಯರೂ ಹೊರತಾಗಿರಲಿಲ್ಲ. ಊಟದಲ್ಲಿ, ಉಪಚಾರದಲ್ಲಿ, ಮಠದ ಸೇವೆಯಲ್ಲಿ, ಮಠಕ್ಕೆ ದಾನ ಮಾಡುವುದರಲ್ಲಿ, ವ್ಯಾಜ್ಯ ಬಗೆಹರಿಸಿಕೊಳ್ಳುವುದರಲ್ಲಿ ಓದುವಲ್ಲಿ, ಬರೆಯುವಲ್ಲಿ–ಎಲ್ಲದರಲ್ಲೂ ಶ್ರೀ ಮಠ ಸರ್ವಲೋಕೋಪಕಾರ ಮನೋಭಾವವುಳ್ಳದ್ದು. ಅಲ್ಲಿ ಜಾತಿ ಗೀತಿಗಳನ್ನು ಅರಸಿ ಉಪಕಾರ ಮಾಡಬೇಕು. ಮಾಡಬಾರದು ಎಂಬ ಪ್ರಶ್ನೆಯೇ ಇಲ್ಲ. ಇಂದಿಗೂ ಅದೇ ಪರಿಪಾಠ. ೧೯೧೭ನೆಯ ಇಸವಿಯಲ್ಲಿಯೇ ಉದ್ದಾನ ಶಿವಯೋಗಿಗಳು ತಮ್ಮ ಮಠದಲ್ಲಿ ಸಾರ್ವಜನಿಕ ಉಚಿತ ಅಶನವಸತಿಯ ವಿದ್ಯಾರ್ಥಿನಿಲಯ ತೆರೆದರು. ಆ ಕಾಲ ಸಾರ್ವಜನಿಕ ವಿದ್ಯಾರ್ಥಿ ನಿಲಯ ತೆರೆಯಲು ಸರಕಾರವೂ ಹೆದರುತ್ತಿದ್ದ ಕಾಲ. ಸರಕಾರವೇ ಕೋಮುವಾರು ವಿದ್ಯಾರ್ಥಿ ನಿಲಯಗಳನ್ನು ತೆರೆಯುತ್ತಿತ್ತು. ಅಂಥ ಕಾಲದಲ್ಲಿ ಉದ್ದಾನಶಿವಯೋಗಿಗಳು ತಮ್ಮ ಮಠದಲ್ಲಿ ಸಾರ್ವಜನಿಕ ಉಚಿತ ವಿದ್ಯಾರ್ಥಿನಿಲಯ ತೆರೆದು ಎಲ್ಲ ಕೋಮಿನವರನ್ನು ಸೇರಿಸಿಕೊಂಡಿದ್ದರು. ಅಲ್ಲದೆ ಆ ಕಾಲ ಸಂಸ್ಕೃತವನ್ನು ಎಲ್ಲರೂ ಓದಲು ಶಕ್ಯವಿಲ್ಲದ ಕಾಲ. ಓದುವವರಿದ್ದರೂ ಪಾಠವನ್ನು ಹೇಳುವವರು ಸಿಗದಿದ್ದ ಕಾಲ. ಆ ಕಾಲದಲ್ಲಿ ಸಂಸ್ಕೃತವನ್ನು ಎಲ್ಲರೂ ಓದಬಹುದೆಂದು ಪ್ರಥಮತಃ ಸಾರಿ ಅದರಂತೆ ಎಲ್ಲ ಕೋಮಿನವರಿಗೂ ಸಂಸ್ಕೃತವನ್ನೋದಲು ಅವಕಾಶ ಕಲ್ಪಿಸಿದವರು ನನಗೆ ತಿಳಿದ ಮಟ್ಟಿಗೆ ಭಾರತದಲ್ಲಿಯೇ ಶ್ರೀ ಶಿವಯೋಗಿಗಳು ಮೊದಲು ಎಂದು ತೋರುತ್ತದೆ. ಕರ್ನಾಟಕದ ಮಟ್ಟಿಗಂತೂ ಸತ್ಯ. ಹೀಗೆ ಎಲ್ಲರೂ ಸಂಸ್ಕೃತವನ್ನೋದಲು ಅವಕಾಶ ಕಲ್ಪಿಸಿಕೊಟ್ಟ ಪಾಠಶಾಲೆ ಅಂದಿನ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆ; ಇಂದಿನ ಸಂಸ್ಕೃತಮಹಾ ಪಾಠಶಾಲೆ (ಕಾಲೇಜು). ಅಂದಿನ ಕಾಲದಲ್ಲಿ ಈ ಕಾರ್ಯ ಉದ್ದಾನ ಶಿವಯೋಗಿಗಳವರ ಒಂದು ದೊಡ್ಡ ಪವಾಡವೇ ಆಗಿತ್ತು.

**'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ'**

ಉದ್ದಾನಪ್ಪನವರು ಹುಟ್ಟುಕಟ್ಟುಗ್ರವಾದಿಗಳು. ಅವರದು ವೀರಭದ್ರನ ಅಂಶವಿದ್ದಹಾಗೆ, ಆದರೆ ಅವರ ವೀರವಿದ್ದುದು ಭದ್ರಕ್ಕೆ. ಅವರಿಗೆ ಕೋಪವಿತ್ತು ; ಆ ಕೋಪ ಲೋಕವನ್ನು ತಿದ್ದುವುದಕ್ಕೆ ಪ್ರಯೋಗವಾಗುತ್ತಿದ್ದಿತಲ್ಲದೆ

ಪ್ರಳಯಕ್ಕಲ್ಲ. ಅವಗುಣಕ್ಕೆ ಮುನಿವವರಲ್ಲದೆ ಪ್ರಾಣಕ್ಕಲ್ಲ. ಅವರ ಅನೇಕ ಉತ್ತಮ ನಿರ್ಧಾರಗಳಿಗೆ ಅಡೆತಡೆಯನ್ನು ತಂದೊಡ್ಡುವವರ ವಿಷಯದಲ್ಲಿ ಉಗ್ರರಾಗಿ ಬಿಡುತ್ತಿದ್ದರು. ಅವರ ಉಗ್ರತೆ ಪ್ರಸಂಗದಲ್ಲಿ ವಜ್ರದಂತೆ ಕಠೋರವಾಗಿರುತ್ತಿತ್ತಾದರೂ, ಮರುಕ್ಷಣದಲ್ಲಿ ಕುಸುಮಸದೃಶ. ತಮ್ಮ ಕೋಮಲ ಅಂತರಂಗವನ್ನೇ ಬಿಚ್ಚಿತೋರಿಸಿಬಿಡುತ್ತಿದ್ದರು. ಲೋಕಕ್ಕೆ ಪಾಠಕಲಿಸುವಾಗ ಶಿಕ್ಷೆ ಅನಿವಾರ್ಯವೆಂಬುದು ಅವರ ವಾದ. ಬಹುಡೊಂಕಾದ ಲೋಕವನ್ನು ಶಿಕ್ಷೆಯಿಂದಲೇ ದಾರಿಗೆ ತರಬೇಕೆನ್ನುವ ಮನೋಭಾವದವರಲ್ಲಿ ಉದ್ದಾನಶಿವಯೋಗಿಗಳೂ ಒಬ್ಬರು. ಆದ್ದರಿಂದಲೇ ಅವರು ಕಠಿಣವಾಗಿ ವರ್ತಿಸುತ್ತಿದ್ದುದುಂಟು. ಮಠದಲ್ಲಿ ಓದದಿರುವ ವಿದ್ಯಾರ್ಥಿಗಳಿಗೆ, ಸೋಮಾರಿಗಳಿಗೆ, ಮೈಗಳ್ಳರಿಗೆ ಶಿಕ್ಷೆ ತಪ್ಪಿದ್ದೇ ಅಲ್ಲ. ಹಾಗೆ ಶಿಕ್ಷೆಕೊಟ್ಟನಂತರ ಸ್ವಲ್ಪ ಹೊತ್ತಿನ ಮೇಲೆ ಪುನಃ ಹತ್ತಿರಕ್ಕೆ ಕರೆದು, ಸಕ್ಕರೆ ಬಾಳೇಹಣ್ಣು ಉತ್ತತ್ತಿಯೇ ಮೊದಲಾದವುಗಳನ್ನು ಕೊಟ್ಟು, 'ಇನ್ನು ಮೇಲೆ ಚೆನ್ನಾಗಿ ಓದು. ನೋಡು ಚೆನ್ನಾಗಿ ಊಟಮಾಡಬೇಕು ; ಚೆನ್ನಾಗಿ ಕೆಲಸ ಮಾಡಬೇಕು ; ಚೆನ್ನಾಗಿ ಓದಬೇಕು, ತಿಳಿಯಿತೋ.' ಎಂದು ಹೇಳಿಕಳಿಸುತ್ತಿದ್ದುದುಂಟು. ತಮ್ಮ ನೆಚ್ಚಿನ ಶಿಷ್ಯರೂ ತಮ್ಮ ಕಾರುಣ್ಯಾಮೃತಜಲಧಾರಾಪಾತ್ರರೂ ಕ್ಷೇತ್ರದ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಶ್ರೀ ಶಿವಕುಮಾರ ಸ್ವಾಮಿಗಳನ್ನೂ ಅವರು ಶಿಕ್ಷೆಗೆ ಒಳಪಡಿಸದಿರಲಿಲ್ಲ. ಹನ್ನೊಂದು ವರ್ಷಗಳ ಕಾಲ ಕಠಿಣ ಶಿಕ್ಷೆಗೆ ಅವರನ್ನು ಒಳಪಡಿಸಿ ಕಡಿತಕ್ಕೆ, ಬಡಿತಕ್ಕೆತಂದು, ಕಾಸಿ, ಕರಗಿಸಿ, ತಿಕ್ಕಿ, ಉಜ್ಜಿ, ಅಪರಂಜಿಯನ್ನಾಗಿ ಮಾಡಿ ಶಿವನ ಕಂಠಾಭರಣಗೊಳಿಸಿದರೆಂದಮೇಲೆ ಲೋಕಲೌಕಿಕರ ಬಗೆಗೆ ಹೇಳುವುದೇನಿದೆ! 'ಅರಣ್ಯೌಕಸೋಪಿ ಲೌಕಿಕಜ್ಞಾವಯಂ' ಈ ಮಾತು ಉದ್ದಾನಪ್ಪನವರಿಗೆ ಪೂರ್ಣ ಅನ್ವಯಿಸುತ್ತಿತ್ತು. ಅರಣ್ಯದಲ್ಲಿರುವ ಸಂನ್ಯಾಸಿಸದೃಶವಾದ ನಡೆನುಡಿಯವರಾಗಿದ್ದರೂ ಲೋಕಲೌಕಿಕದ ಅಪಾರ ಅನುಭವ ಗಳಿಸಿದ್ದ ಅವರು ಲೋಕದ ಜನರ ಸುಖ–ದುಃಖ, ನೋವು–ನಲಿವು, ಹಾನಿ–ವೃದ್ಧಿಗಳ ಬಗೆಗೆ ಪೂರ್ಣಾನುಭವಗಂಡವರು. ಅಂಥ ಸಮಾಜದ ಮಧ್ಯದಲ್ಲಿ ಹುಟ್ಟಿಬೆಳೆದು ಬಂದ ಅವರು ಸಮಾಜದ ಆ ತೆರದ ಲೋಪದೋಷಗಳನ್ನು ತಿದ್ದಿ ದಾರಿಗೆ ತರುವ ವಿಷಯದಲ್ಲಿ ಅಪಾರ ಆಸ್ಥೆವಹಿಸುತ್ತಿದ್ದರು. ನ್ಯಾಯನಿಷ್ಠುರವಾಗಿಯೇ ಅಂಥ ಸಮಯದಲ್ಲಿ ವರ್ತಿಸಿ ಅನ್ಯಾಯಕ್ಕೊಳಗಾದವರಿಗೆ, ಶೋಷಣೆಗೆ ಸಿಕ್ಕಿದದವರಿಗೆ ನ್ಯಾಯದೊರಕಿಸಿಕೊಡುತ್ತಿದ್ದರು. ಮಾತು ಕೇಳದ ದುಷ್ಟ ಜನಗಳನ್ನು ತಮ್ಮ ಯೋಗಸಿದ್ಧಿಯನ್ನು ಪ್ರಕಟಮಾಡಿಯಾದರೂ ದಾರಿಗೆ ತರುತ್ತಿದ್ದರು. ಅಂತೆಯೇ ಜನ ಸಿದ್ಧಗಂಗೆಯ ಉದ್ದಾನಪ್ಪನವರ ಹೆಸರೆತ್ತಿದರೆ ಸಾಕು ನಡುಗುತ್ತಿದ್ದರು. ಸಮಾಜಕ್ಕೆ ಈ ತೆರನಾದ ಬಂಧುವನ್ನು ಕಾರುಣ್ಯಸಿಂಧುವನ್ನು ಇನ್ನೆಲ್ಲಿ ತರಲಾದೀತು. ತಾವು ಸಂನ್ಯಾಸಿಗಳಾಗಿ ಸಮಾಜದ ತಂಟೆ ನಮಗೇಕೆಂದೂ ತಾವುಂಟೋ ಮೂರುಲೋಕವುಂಟೋ ಎಂದೂ ಅವರು ಎಂದೂ ಕೈಕಟ್ಟಿ ಕುಳಿತವರಲ್ಲ. ಎಷ್ಟೋ ಸಂದರ್ಭಗಳಲ್ಲಿ ಹಳ್ಳಿಹಳ್ಳಿಗಳಿಗೆ ಹೋಗಿ ಅಲ್ಲಿನ ಸಮಸ್ಯೆಗಳನ್ನು ತಾವೇ ನಿವಾರಿಸಿಬಿಡುತ್ತಿದ್ದರು, ಅಂಥ ಸಮಯದಲ್ಲಿ ಒಮ್ಮೊಮ್ಮೆ ವಜ್ರದಂತೆ ಕಠೋರವಾಗಿ ಒಮ್ಮೊಮ್ಮೆ ಕುಸುಮದಂತೆ ಮೃದುವಾಗಿ ವರ್ತಿಸುತ್ತಾ ವ್ಯವಹರಿಸುತ್ತಿದ್ದ ಅವರ ವ್ಯವಹಾರ ಕೌಶಲ್ಯವನ್ನು ಇಂದಿಗೂ ಜನ ಹಾಡಿ ಹೊಗಳುತ್ತಿದ್ದಾರೆ. ಉದ್ದಾನಶಿವಯೋಗಿಗಳ ಕೋಪವೆಂಬುದು ಒಂದು ರೀತಿಯ ಅನುಗ್ರಹವಲ್ಲದೆ ಅದಕ್ಕೆ 'ಕೋಪ' ಶಬ್ದದ ಬಳಕೆಯೇ ಅಪಾರ್ಥದ್ದು. ಅನುಗ್ರಹಕ್ಕಾಗಿ ಕೋಪ ; ಕೋಪವೇ ಅನುಗ್ರಹ ; ಹೊರಮೈಗೆ ಕೋಪದಂತೆ ಕಾಣುವ ಅನುಗ್ರಹ ಉದ್ದಾನಸ್ವಾಮಿಗಳ ಚರ್ಯೆಯ ಒಂದು ಪ್ರಧಾನ ಗುಣ. ನಿರ್ಗುಣರಾದ ಯೋಗೀಶ್ವರರ ದೇಹಕರ್ಮಗಣದಲ್ಲಿ ದೋಷವನ್ನು ಅರಸುವುದು ಶಕ್ಯವೇ ಇಲ್ಲ. ಇಷ್ಟೆಲ್ಲ ಲೌಕಿಕದಲ್ಲಿ ಉದ್ದಾನಶಿವಯೋಗಿಗಳು ಮುಳುಗಿದಂತೆ ಲೋಕದ ಜನರ ಕಣ್ಣಿಗೆ ಕಂಡರೂ ನಿರ್ಲೇಪತ್ವವೇ ಅವರ ಪ್ರಮುಖಚರ್ಯೆಯಾಗಿತ್ತು. ಒಮ್ಮೊಮ್ಮೆ ಅವರು ಲೋಕಜೀವನದ ಅಸಭ್ಯವರ್ತನೆಗಳನ್ನು ನೇರವಾಗಿ ಖಂಡಿಸಿಬಿಡುತ್ತಿದ್ದಂತೆ, ತಮ್ಮ ಅಸಭ್ಯವರ್ತನೆಗಳನ್ನು ತಾವೇ ಖಂಡಿಸಿಕೊಳ್ಳುತ್ತಿದ್ದರು. ಇಲ್ಲಿ ಅಸಭ್ಯ ವರ್ತನೆ ಎಂದರೆ ಅನ್ಯಥಾ ಭಾವಿಸಬಾರದು. ಉದಾಹರಣೆಗಾಗಿ ಈ ಪ್ರಸಂಗ ಹೇಳಬಹುದು : ಶಿವಯೋಗಿಗಳ ಮೈಕೈಗಳಿಗೆ ಕಜ್ಜಿಯ ತುರಿ ಅಂಟಿತ್ತು. ತಮ್ಮ ಕೈಗಳಿಂದ ತಾವೇ ಒಮ್ಮೆ ತಮ್ಮ ಕಜ್ಜಿಯನ್ನು ತುರಿಸಿಕೊಳ್ಳುತ್ತಿದ್ದರಂತೆ. ಆ ಕೂಡಲೇ ಏನೋ ಹೊಳೆಯದಂತಾಗಿ 'ಥೂ ! ಕಪಿ ಚೇಷ್ಟೆ'. ಎಂದು ಕೈಕಟ್ಟಿ ಕಣ್ಣುಮುಚ್ಚಿ ಕುಳಿತುಬಿಟ್ಟರಂತೆ. ಪುನಃ ಮೈಕೈಗಳನ್ನೇ ಎಂದೂ ತುರಿಸಿಕೊಳ್ಳಲಿಲ್ಲವಂತೆ. ಇಂಥ ಕಠೋರ ನೈಷ್ಠುರ್ಯವನ್ನು ಅವರು ತಮ್ಮ ವಿಷಯದಲ್ಲೂ ವ್ಯಕ್ತಪಡಿಸುತ್ತಿದ್ದರು. ಇಂಥ ಅನೇಕ ಚರ್ಯೆಗಳು ಅವರ ಜೀವನದಲ್ಲಿ ಅಲೋಕಸಾಮಾನ್ಯವೆನಿಸಿದ್ದವು. ಅವರ ಅಂತರ್ಯದ ಬಹುಭಾಗ ಯಾರಿಗೂ ತಿಳಿಯುತ್ತಿರಲಿಲ್ಲ. ಅಂತೆಯೇ ಅವರ ಸಂಕಲ್ಪಶಕ್ತಿ ಪ್ರಬಲಗೊಂಡು ಯಾವುದು ಅವರ ಯೋಚನೆಯೋ ಅದು ಸಿದ್ಧಿಸುವುದಕ್ಕೆ ಕಾಲಾವಕಾಶವೇ ಬೇಕಾಗುತ್ತಿರಲಿಲ್ಲ, ಅವರ ಯೋಚನೆಯೇ ಕಾರ್ಯವನ್ನು ಎಳೆದುಕೊಂಡು ಬಂದುಬಿಡುತ್ತಿತ್ತು. ಇದು ಅವರ ಸಂಕಲ್ಪಶಕ್ತಿಯ ಪ್ರಾಬಲ್ಯವನ್ನು ಸೂಚಿಸುತ್ತದೆ. ಅವರು ಮಠಾಧಿಪತ್ಯವಹಿಸಿಕೊಂಡ ಹೊಸದರಲ್ಲಿ ಮೂರು ತಿಂಗಳವರೆಗೆ ಅಡವಿಸ್ವಾಮಿಗಳವರಿಂದ ನಡೆಸಿಕೊಂಡು ಬರುತ್ತಿದ್ದ ದಾಸೋಹ ವ್ಯವಸ್ಥೆಯನ್ನು ನಡೆಸಿಕೊಂಡು ಬರುವುದು ತೀರಾದುಸ್ತರವಾಗಿ ಚಿಂತಾಮಗ್ನರಾಗಿ ಏನೂ ತೋಚದವರಂತೆ ಇದ್ದರು. ಅಂಥ ಸಮಯದಲ್ಲಿ ಅಮ್ಮನವರ ಗವಿಯನ್ನು ಪ್ರವೇಶಿಸಿ ದಿನವಿಡೀ ಅಲ್ಲಿ ಜ್ಞಾನಮಗ್ನರಾಗಿ ಕುಳಿತುಬಿಡು

ತ್ತಿದ್ದರು.[19] ಲಿಂಗೈಕ್ಯ ಗುರುಗಳಾದ ಅಡವಿಸ್ವಾಮಿಗಳು ಶಿವಯೋಗ ಸಮಾಧಿಯಲ್ಲಿ ಕುಳಿತ ಇವರನ್ನು ಎಚ್ಚರಿಸಿ 'ಹೆದರಬೇಡ ನಾನಿದ್ದೇನೆ. ನನ್ನ ಗದ್ದುಗೆಯುಕೆಲಸ ಪ್ರಾರಂಭಿಸು' ಎಂದು ಹೇಳಿ ಹೋದಾಗಿನಿಂದಲೇ ಇವರ ಜೋಳಿಗೆಗೆ ಎಂದೂ ಕೊರತೆ ಬರಲಿಲ್ಲ,

ಜೋಳಿಗೆ ಅಕ್ಷಯ ಪಾತ್ರೆಯಾಗಿ ಹೋಯಿತು. ಆದರೆ ಅದು ಕಾಡಿಬೇಡಿ ತಂದು ದಾಸೋಹ ಮಾಡುವ ಜೋಳಿಗೆಯಾಗಿರಲಿಲ್ಲ. ಕಾಡದೆ ಬೇಡದೆ ಆ ಜೋಳಿಗೆ ತುಂಬಿಬರುತ್ತಿತ್ತು. ಮಠದ ಪಕ್ಕದಲ್ಲಿರುವ ದೇವರಾಯಪಟ್ಟಣ, ಮಾರನಾಯಕನ ಪಾಳ್ಯ, ಅರೆಪಾಳ್ಯದವರೂ, ಗೂಳ್ಯ, ಪುರುಷನಹಳ್ಳಿ, ಅಂಬಲಗೆರೆ, ಕೋರ, ಮೆಳೇಹಳ್ಳಿ, ಚಿಕ್ಕಹಳ್ಳಿ, ಶಿವಗಂಗೆಯ ಸುತ್ತಮುತ್ತಣ ಅನೇಕ ಗ್ರಾಮಗಳ ಭಕ್ತರು ಸಕಲೇಶಪುರಪ್ರಾಂತದ ಅನೇಕ ಶ್ರೀಮಂತವರ್ಗದವರು ಬೆಂಗಳೂರಿನ ಭಕ್ತವರ್ಗದವರು ಶ್ರೀಗಳವರ ಪ್ರಬಲ ಆಕರ್ಷಣೆಗೊಳಗಾಗಿ ಮಠದ ಬೆಂಬಲಕ್ಕೆ ನಿಂತರು. ಶ್ರೀಗಳವರೂ ಮಠದ ಜೀರ್ಣೋದ್ಧಾರಕ್ಕೆ ಟೊಂಕ ಕಟ್ಟಿ ನಿಂತರು. ಸ್ವತಃ ಕೈಯಲ್ಲಿ ಹಾರೆ ಗುದ್ದಲಿ ಹಿಡಿದು ೧೯೦೧–೧೯೦೨ನೆಯ ಇಸ್ವಿಯ ಸುಮಾರಿನಲ್ಲೇ ಮಠದಲ್ಲಿ ಅಭಿವೃದ್ಧಿ ಕಾರ್ಯಗಳೂ ಜೀರ್ಣೋದ್ಧಾರ ಕಾರ್ಯಗಳೂ ಭರದಿಂದ ನಡೆಯತೊಡಗಿದವು. ಮಠದ ಪ್ರವೇಶ ದ್ವಾರದ ದೊಡ್ಡ ಕಲ್ಯಾಣಿಯನ್ನು ಕಟ್ಟುವ ಕಾರ್ಯ, ಕ್ಷೇತ್ರದ ಅವಶ್ಯಕತೆಗಳನ್ನು ಪೂರೈಸುವ ಎರಡು ಮೂರು ಬಾವಿಗಳ ಕೆಲಸ, ಅಡವಿಸ್ವಾಮಿಗಳ ಗದ್ದುಗೆಯ ಕಟ್ಟಡ, ಮಹಾನವಮಿಮಂಟಪ, ಈಗಿನ ದಾಸೋಹದ ಮನೆಯ ಭವ್ಯ ಕಟ್ಟಡ, ಈಗಿನ 'ಆಫೀಸ್ ರೂಂ.' ಇರುವ ದೊಡ್ಡ ಕಟ್ಟಡ, ಹಳೆಯ ಮಠದ ಜೀರ್ಣೋದ್ಧಾರಕಾರ್ಯ ಎಲ್ಲವನ್ನು ಒಂದೊಂದಾಗಿ ನಿರ್ಮಾಣ ಮಾಡುವ, ಜೀರ್ಣೋದ್ಧಾರ ಮಾಡುವ ಕೆಲಸ ಭರದಿಂದ ನಡೆದುಹೋಯಿತು. ಸ್ವಲ್ಪ ಭೂಮಿಕಾಣಿಯನ್ನು ಕೊಂಡು ವ್ಯವಸಾಯ ಪ್ರಾರಂಭವಾಯಿತು. ಸ್ವತಃ ಉದ್ದಾನ ಶಿವಯೋಗಿಗಳೇ ಪ್ರಥಮತಃ ವ್ಯವಸಾಯಕ್ಕಿಳಿದರು. ವ್ಯವಸಾಯವನ್ನು ರೂಢಿಸುತ್ತಾ ತಮ್ಮ ಜೀವಿತಾವಧಿಯವರೆಗೆ ೧೬ ಎಕ್ಕರೆಗಳಷ್ಟು ಹೊಲಗದ್ದೆಗಳನ್ನು ರೂಢಿಸತೊಡಗಿದರು. ಎಷ್ಟೋ ವರ್ಷ ಸ್ವತಃ ತಾವೇ ರಂಟೆಕುಂಟೆಗಳನ್ನು ಹೊಡೆದರು. ಸ್ವತಃ ಕಾಯಕ ಮಾಡಿ ತಮ್ಮ ಲಾಂಛನದ ಹಂಗು ಹರಿದರು. ಲೋಕಕ್ಕೆ ಕಾಯಕದ ಮಹತ್ವವನ್ನರುಹಿದರು. ಹಳೆಯ ಸಂಸ್ಕೃತ ಪಾಠಶಾಲೆ ೧೯೧೭ನೆಯ ಇಸ್ವಿಯ ಹೊತ್ತಿಗೆ ಸರಕಾರದ ಮನ್ನಣೆ ಪಡೆದು ಅಧಿಕೃತವಾಗಿ ಸಿದ್ಧಲಿಂಗೇಶ್ವರ ಸಂಸ್ಕೃತ ಮತ್ತು ವೇದ ಪಾಠಶಾಲೆ ಎಂಬ ಹೆಸರಿನಿಂದ ಎಲ್ಲ ಮತದವರ ಓದಿಗಾಗಿ ತೆರೆಯಲ್ಪಟ್ಟಿತು. ಉಚಿತ ಅಶನವಸತಿ ನಿಲಯವನ್ನು ತೆರೆದು ಪ್ರಥಮತಃ ಮಠದಲ್ಲಿ ೬೦ ಜನ ವಿದ್ಯಾರ್ಥಿಗಳಿಗೆ ಸೌಕರ್ಯವೊದಗಿಸಿದರು. ಈ ವಿದ್ಯಾರ್ಥಿನಿಲಯ ಎಲ್ಲಾ ಕೋಮಿನವರಿಗೂ ತೆರೆಯಲ್ಪಟ್ಟಿತ್ತೆಂಬುದು ಇಲ್ಲಿ ಜ್ಞಾಪಿಸಬೇಕಾದ ಅಂಶ. ಮಠವನ್ನು ಅಭಿವೃದ್ಧಿಗೆ ತರುತ್ತಿದಂತೆಯೇ ಹಿಂದೆ ಈ ಮಠಕ್ಕೆ ಇನಾಮಾಗಿಕೊಡಲ್ಪಟ್ಟ ಸಿದ್ಧಗಂಗಾಪಾಳ್ಯ ಮತ್ತು ಬೊಮ್ಮನಹಳ್ಳಿಗಳನ್ನು ಪುನಃ ಮಠಕ್ಕೆ ಪಡೆಯಲು ೧೯೧೩ನೆಯ ಇಸ್ವಿಯಲ್ಲಿ ಪ್ರಯತ್ನಿಸಿದರು. ಅದು ಸಾಧ್ಯವಿಲ್ಲವೆಂದು ಕಂಡುಬಂದ ಮೇಲೆ ಯಾವ ಹಂಗೂ ಬೇಡವೆಂದು ಸ್ವಯಂ ಶಿವಯೋಗಶೂರರಾಗಿ ಕಾರ್ಯ ಮಾಡಿ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳತೊಡಗಿದರು. ಹೀಗೆ ಅವರ ಕ್ರಿಯಾಯೋಗದ, ಕರ್ತೃತ್ವ ಶಕ್ತಿಯ ಕಾರುಣ್ಯ ಜಲಧಾರೆಯನ್ನು ಎರೆದು ಮಮತೆಯಿಂದ ಪೋಷಿಸಿ ಬೆಳೆಸಿದ ಮಠದ ಅಭಿವೃದ್ಧಿ, ವಿದ್ಯಾಸಂಸ್ಥೆ, ವಿದ್ಯಾರ್ಥಿನಿಲಯಗಳು ಇಂದು ರಾಷ್ಟ್ರಮಟ್ಟದ ಬೃಹತ್ ಸಂಸ್ಥೆಗಳಾಗಿ ಬೆಳೆದು ಬೃಹದ್ಭಾರತದ, ಅಷ್ಟೇ ಏಕೆ ? ವಿಶ್ವದ ಪ್ರಮುಖ ವಿದ್ಯಾಕೇಂದ್ರಗಳಲ್ಲೊಂದೆಂಬ ಖ್ಯಾತಿಯನ್ನು ಗಳಿಸಿದುದು ಶಿವಯೋಗಿಗಳ ಪುಣ್ಯಫಲವೆಂಬುದನ್ನು ಯಾರೂ ಅಲ್ಲಗಳೆಯಲಾಗದು. ಎಷ್ಟೋಸಲ ಶಿಷ್ಯರಾದ ಶ್ರೀ ಶಿವಕುಮಾರ ಸ್ವಾಮಿಗಳವರೇ ಇಷ್ಟೆಲ್ಲ ನಮ್ಮ ಗುರುಗಳ ಪ್ರಬಲ ಸಂಕಲ್ಪಶಕ್ತಿಯ ಫಲ ಎಂದಿದ್ದಾರೆ.

**ಶಿವಯೋಗಿಗಳು ಕಾಯಕ ಸದ್ಭಾವಿಗಳು :**

ಉದ್ದಾನಶಿವಯೋಗಿಗಳು ಹುಟ್ಟಾ ಕಾಯಕಸದ್ಭಾವಿಗಳು ; ಸಿದ್ಧಗಂಗಾ ಮಠಕ್ಕೆ ಅವರು ಬಂದು ಸೇರಿದುದೂ ಕಾಯಕಕ್ಕೆಂದೇ. ಎಲ್ಲ ವಿಧವಾದ ಶ್ರಮದ ಕೆಲಸಕ್ಕೆ ತಡೆಯಬಲ್ಲ ವಜ್ರಕಾಯ ಅವರದಾಗಿತ್ತು. ಅವರು ಮಾಡಿದ ಸತ್ಯ

---

19. ಶ್ರೀಮಠದ ಅತ್ಯಂತ ಪ್ರಮುಖ ಮಹತ್ವಪೂರ್ಣ ಗವಿಯೇ ಅಮ್ಮನವರ ಗವಿ. ಈ ಗವಿಯಲ್ಲಿಯೇ ಹಿಂದಿನ ಪರವನಹಳ್ಳಿಯ ಗೋಸಲೇಶ್ವರ, ಶಂಕರಾಚಾರ್ಯ, ಚೆನ್ನಬಸವೇಶ್ವರ, ತೋಂಟದ ಸಿದ್ಧಲಿಂಗೇಶ್ವರರುಗಳು ಅನುಷ್ಠಾನಮಾಡಿದುದು. ಈಗಿರುವ ಗವಿಯ ಒಳ ಉತ್ತರಭಾಗದಲ್ಲಿ ಒಂದು ಚಿಕ್ಕ ಬಾಗಿಲು ಈಗಲೂ ಇದೆ. ಉದ್ದಾನಸ್ವಾಮಿಗಳವರ ಕಾಲದಲ್ಲಿ ಅದು ಮುಚ್ಚಲ್ಪಟ್ಟಿತು. ಉದ್ದಾನಸ್ವಾಮಿಗಳು ಆ ಬಾಗಿಲನ್ನು ದಾಟಿ ಒಳಗೆ ಹೋಗುತ್ತಿದ್ದರಂತೆ. ಒಳಭಾಗವಲ್ಲಿ ಒಂದು ಚಿಕ್ಕ ನೀರಿನ ಪ್ರವಾಹ ಇರುವುದೆಂದೂ ನಂದಿಕೋಲಾಟವಾಡುವಷ್ಟು ವಿಶಾಲತೆ ಅಲ್ಲಿರುವುದೆಂದೂ ಆ ವಿಶಾಲ ಭಾಗ ದಾಟಿ ಮುಂದೆ ಹೋದರೆ ಅಲ್ಲಿ ಅನೇಕ ಸಿದ್ಧಪುರುಷರು ಪದ್ಮಾಸೀನರಾಗಿ ಕುಳಿತಂತೆ ಇರುವ ಅಸ್ಥಿಪಂಜರಗಳು ಇವೆಯೆಂದೂ ಉದ್ದಾನಸ್ವಾಮಿಗಳು ಹೇಳುತ್ತಿದ್ದುದಾಗಿ ದೀರ್ಘಕಾಲ ಸಿದ್ಧಲಿಂಗೇಶ್ವರರ ಪೂಜೆಮಾಡಿಕೊಂಡಿದ್ದ ಲಿಂಗೈಕ್ಯರಾದ ಅಜನ್ಮ ಬ್ರಹ್ಮಚಾರಿ ಶ್ರೀ ಗಂಗಾಧರದೇವರು ನನ್ನೆದುರಿಗೆ ಅನೇಕ ಸಲ ಕಥೆ ಮಾಡಿ ಹೇಳುತ್ತಿದ್ದರು. ಈಗ ಆ ಒಳಭಾಗವನ್ನು ಪ್ರವೇಶಿಸದ ಹಾಗೆ ಮುಚ್ಚಿಬಿಡಲಾಗಿದೆ. ಆದರೆ ಮುಚ್ಚಿದ ಅದರ ಗುರುತನ್ನು ಮಾತ್ರ ನಾವೀಗ ಕಾಣಬಹುದಾಗಿದೆ.

ಶುದ್ಧ ಕಾಯಕವೇ ಅವರಿಗೆ ಫಲವನ್ನೆಳೆದುತಂದು ಕೊಟ್ಟು ಅದ್ಭುತ ಪವಾಡವನ್ನಾಗಿಸಿತು. ಸೋಮಾರಿತನವೂ, ಆತ್ಮ ಪ್ರತ್ಯಯವಿಹೀನತ್ವವೂ ಅವರಿಂದ ಬಹುದೂರ. ಬೆಟ್ಟವನ್ನು ಎತ್ತಿಟ್ಟೇನು ಎನ್ನುವ ಪ್ರಚಂಡ ಆತ್ಮಪ್ರತ್ಯಯ, ಧೈರ್ಯ, ಸಂಕಲ್ಪ ಅವರವಾಗಿದ್ದವು. ಈ ಶಕ್ತಿಗಳು ಅವರಿಗೆ ಅಂದು ತಂದುಕೊಟ್ಟ ಫಲ ಅಷ್ಟಿಷ್ಟಲ್ಲ. ಅಂತೆಯೇ ಉದ್ಯಮಶೀಲರೂ, ಸಾತ್ವಿಕ ಸ್ವಭಾವದವರೂ, ನಿಷ್ಕಾಮಕರ್ಮದಲ್ಲಿ ನಂಬಿಕೆಯಿರುವವರೂ ಆದವರನ್ನು ಕಂಡರೆ ಅವರು ಕಾರುಣ್ಯದೋರಿ ಅವರಿಗೆ ಬೇಕಾದ ಸಹಾಯ ಸಂಪತ್ತನ್ನೊದಗಿಸುತ್ತಿದ್ದರು. ಅವರು ದಾಕ್ಷಿಣ್ಯ ಜೀವಿಗಳಂತೂ ಎಂದೂ ಅಲ್ಲ. 'ನ್ಯಾಯನಿಷ್ಠುರಿ ದಯಾದಾಕ್ಷಿಣ್ಯಪರ ನಾನಲ್ಲವಯ್ಯ; ಲೋಕವಿರೋಧಿ ಶರಣನಾರಾರಿಗೂ ಅಂಜುವವನಲ್ಲ...'ಎನ್ನುವ ಬಸವಣ್ಣನವರ ವಾಣಿ ಅವರ ಕ್ರಿಯಾಮುಖದಲ್ಲಿ ಸದಾ ಪ್ರತ್ಯಕ್ಷವಾಗಿರುತ್ತಿತ್ತು. ತನ್ನವರು, ನನ್ನವರು ಎಂಬ ತುಚ್ಛಭಾವ ಅವರಲ್ಲಿ ಎಂದೂ ತಲೆ ಹಾಕಲಿಲ್ಲ. ವಿಶ್ವಭ್ರಾತೃತ್ವ, ವಿಶ್ವಕುಟುಂಬತ್ವ, ವಿಶ್ವಕಲ್ಯಾಣತ್ವಾಪೇಕ್ಷೆಯೇ ಅವರ ಹುಟ್ಟುಗುಣ. ವೀರ, ಧೀರ, ಗಂಭೀರ, ಗುಣಶೀಲಸಂಪತ್ತು ಉದ್ದಾನಶಿವಯೋಗಿಗಳದು. ಕಾಯಕಪ್ಪಮಾಡಿ ದಾಸೋಹ ಮಾಡುವ ಇವರ ದಾಸೋಹ ಕ್ಷೇತ್ರ ಅತ್ಯಂತ ಪರಿಶುದ್ಧವಾದುದು. ಶುದ್ಧಿಯಿಂದ ಸಿದ್ಧಿಪಡೆದುದು; ಶುಚಿಯಿಂದ ರುಚಿಗೊಂಡದ್ದು, ಸತ್ಕರ್ಮ ಕೌಶಲದಿಂದ ಸತ್ಯ ಶುದ್ಧವಾದದ್ದು. ಶರಣರು ಹೇಳುವ :

"ಅನು ಆರಂಭ ಮಾಡುವೆನಯ್ಯ ಗುರುಪೂಜೆಗೆಂದು ;
ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು ;
ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು ;
ನಾನಾವ ಕರ್ಮಂಗಳಂ ಮಾಡಿದರೆಯೂ ಆ ಕರ್ಮಫಲ ಭೋಗವ ನೀ ಕೊಡುವೆಯೆಂಬುದ
ನಾ ಬಲ್ಲೆನು ; ನೀ ಕೊಟ್ಟದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರೀಯ ಮಾಡೆನು ;
ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ ಕೂಡಲಸಂಗಮದೇವಾ"

"ಗುರುವಾದರೂ ಕಾಯಕದಿಂದವೆ ಜೀವನ್ಮುಕ್ತಿ;
ಲಿಂಗವಾದರೂ ಕಾಯಕದಿಂದಲೇ ಶಿಲೆಯ ಕುರುಹು ಹರಿವುದು;
ಜಂಗಮವಾದರೂ ಕಾಯಕದಿಂದವೆ ತನ್ನ ವೇಷದ ಪಾಶಹರಿವುದು;
ಗುರುವಾದರೂ ಚರಸೇವೆಯ ಮಾಡಬೇಕು;
ಲಿಂಗವಾದರೂ ಚರಸೇವೆಯ ಮಾಡಬೇಕು;
ಜಂಗಮವಾದರೂ ಚರಸೇವೆಯ ಮಾಡಬೇಕು;
ಇದು ಚಂದೇಶ್ವರ ಲಿಂಗದ ಅರಿವು ಕೇಳಾ ಪ್ರಭುವೇ"

ಈ ಮಾತುಗಳು ಶ್ರೀಗಳವರ ದಾಸೋಹ ಸದ್ಭಾವಕ್ಕೆ ಪೂರ್ಣ ಅನ್ವಯವಾಗುವಂತಹವುಗಳು. ಇವರ ಓಜೋಮಯ ವಾದ ಚಟುವಟಿಕೆಗಳು, ಆ ಚಟುವಟಿಕೆಗಳ ಮಧ್ಯದಲ್ಲಿನ ಮೇಘಮಂದ್ರಧ್ವನಿಯ ಕಾರಣದಿಂದ ಕ್ಷೇತ್ರದ ಆವರಣವೆಲ್ಲ ಸದಾ ಕಲ ಕಲನಿನಾದ ಗಂಭೀರವಾಗಿ ಜಾಗೃತವಾಗಿರುತ್ತಿತ್ತು. ಈಗಿನ ಕ್ಷೇತ್ರದ ಅಭ್ಯುದಯದ ಮಹದಂಶವೆಲ್ಲ ಈ ಧೀರಯತಿಪುಂಗವರ ಅಮಿತಕರ್ತೃತ್ವಶಕ್ತಿ ಮತ್ತು ಶಿವೈಕಚಿತ್ತಪ್ರಕರ್ಷದ ಫಲ. ಗಂಭೀರ ಮುಖಮುದ್ರೆಯಲ್ಲಿ ಶಿವಯೋಗದ ಶಕ್ತಿಯ ಫಲವಾಗಿ ಹೊರಹೊಮ್ಮುವ ಅಮಿತ ತೇಜೋರಾಶಿಯಿಂದ ಎಂಥವರನ್ನೂ ತಮ್ಮತ್ತ ಆಕರ್ಷಿಸಿ, ದೃಷ್ಟಿಪಾತದಿಂದಲೇ ಅವರ ಮನೋ ಭಿತ್ತಿಯಮೇಲೆ ಸುಂದರ ರಮ್ಯಭಕ್ತಿಚಿತ್ರವನ್ನು ಮೂಡಿಸಬಲ್ಲ ಸತ್ವಸಂಪನ್ನರಾಗಿದ್ದರು. ಅಂತೆಯೇ ಅವರ ಅನುಗ್ರಹಕ್ಕೆ ಪಾತ್ರ ರಾಗಿ ಸುಖಿಗಳಾಗಿರುವವರ ಸಂಖ್ಯೆ ಇಂದೂ ವಿಪುಲವಾಗಿದೆ.

**ಶಿವಯೋಗಸಾಧನೆಯಲ್ಲಿ ಉದ್ದಾನಶಿವಯೋಗಿಗಳು :**

ಉದ್ದಾನ ಶಿವಯೋಗಿಗಳು ಶಿವಯೋಗಸಾಧನೆಯಲ್ಲಿ ಬಹು ಮೇಲ್ಮಟ್ಟದಲ್ಲಿದ್ದರು. ಹುಟ್ಟಾಯೋಗಪುರುಷರೇ ಆಗಿ ದ್ದರು. ಯೋಗದಲ್ಲಿ ಇವರ ಮಟ್ಟವನ್ನು ಮುಟ್ಟಿದ್ದ ಶಿವಯೋಗಿಗಳು ವಿರಳ. ತತ್ಫಲವಾಗಿ ಅವರು ಪ್ರತ್ಯಕ್ಷ ಶಿವಸ್ವರೂಪರೇ ಆಗಿದ್ದರು. ಶಿವಶಕ್ತಿ ಅವರಲ್ಲಿವಿಶೇಷ ರೀತಿಯಲ್ಲಿ ಒಡಮೂಡಿತ್ತಾಗಿ ಪರುಷಶಕ್ತಿ ಅವರಿಗೆ ಕೈಗೂಡಿತ್ತು. ಇಚ್ಛಾಮಾತ್ರದಿಂದಲೇ ಮಠದಕಾರ್ಯಗಳು ಬೃಹತ್ಪ್ರಮಾಣದಲ್ಲಿ ಸಾಗುತ್ತಿದ್ದವು. ಈ ಶಿವಯೋಗಾಭ್ಯಾಸಕ್ಕೆ, ಚಿತ್ತವೃತ್ತಿನಿರೋಧಕ್ಕೆ ಅವರು ಪ್ರವೇಶ

ಮಾಡುತ್ತಿದ್ದ ಗುಹೆಗಳು ಎರಡು. ಒಂದು ಬೆಟ್ಟದಮೇಲ್ಭಾಗದಲ್ಲಿ ಜಂಗಮ ಪಾದತೀರ್ಥವಿರುವ ಸಿದ್ಧಗಂಗಾ ಅಮ್ಮನವರ ಗವಿ; ಎರಡನೆಯದು ರಾಮಲಿಂಗೇಶ್ವರರ ಬೆಟ್ಟ (ರಾಮಗಿರಿ) ದಲ್ಲಿರುವ ದೊಡ್ಡಸಿದ್ಧಪ್ಪನಗವಿ. ಸಿದ್ಧಗಂಗಾಬೆಟ್ಟದ ಮೇಲಿರುವ ಗವಿಯಲ್ಲಂತೂ ಆಗಾಗ ಪ್ರವೇಶ ಮಾಡಿ ಅನೇಕ ಘಂಟೆಗಳ ಕಾಲ ಕುಳಿತು ಹೊರಗೆ ಬರುತ್ತಿದ್ದರು. ಅವರು ಗವಿಯನ್ನು ಪ್ರವೇಶ ಮಾಡಿ ಹೊರಗೆ ಬರುವವರೆಗೆ ಅತ್ತಯಾರೂ ಸುಳಿಯುತ್ತಿರಲಿಲ್ಲ. ಅಲ್ಲಿ ಅವರ ಸಾಧನೆ ಸಿದ್ಧಿಗಳನ್ನು ಹೇಗೆ ಪಡೆಯುತ್ತಿದ್ದರೆಂಬ ವಿವರಗಳು ಮಾತ್ರ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಆಮೇಲೆ ಇವರು ಗಾಢವಾದ ಯಾವುದೇ ವಿಷಯ ಕುರಿತು ಯೋಚಿಸುವಾಗ ಈ ಗವಿಯ ಹೊರಭಾಗದಲ್ಲಿರುವ ಒಂದು ಕಲ್ಲುಬಂಡೆಯ ಮೇಲೆ ಕುಳಿತುಕೊಂಡುಬಿಡುತ್ತಿದ್ದರುತೆ.[20] ಈ ಕಲ್ಲುಬಂಡೆಯ ಸ್ಥಾನ ಅವರ ಯೋಚನೆ ಯೋಜನೆಗಳಿಗೆ ಸೂಕ್ತ ಪರಿಹಾರವನ್ನು ಒದಗಿಸುತ್ತಿತ್ತೆಂದು ತಿಳಿದುಬರುತ್ತದೆ. ಆ ಕಲ್ಲು ಬಂಡೆಯ ಮೇಲೆ ಅವರು ಹೋಗಿ ಕುಳಿತರೆ ಅವರ ಸನಿಹಕ್ಕೆ ಯಾರೂ ಹೋಗುತ್ತಿರಲಿಲ್ಲವಂತೆ. ಅಲ್ಲಿ ಅವರೊಬ್ಬರೇ ಹೋಗಬೇಕು; ಕ್ಷೇತ್ರಾಧಿಪತಿಯಾದ ಸಿದ್ಧಲಿಂಗೇಶ್ವರರು ಇವರೊಡನೆ ಪ್ರತ್ಯಕ್ಷಮಾತನಾಡುತ್ತಿದ್ದರೆಂದೇ ಇಂದಿಗೂ ಜನರ ಗ್ರಹಿಕೆ. ವಿಶೇಷ ಸಂದರ್ಭಗಳಲ್ಲಿ ಸಿದ್ಧಲಿಂಗೇಶ್ವರ ಸ್ವಾಮಿಯ ಹತ್ತಿರ ಉದ್ದಾನಶಿವಯೋಗಿಗಳು ಹೋಗಿ ಕುಳಿತು ಬಂದ ನಂತರವೇ ಮುಂದಿನ ಕಾರ್ಯಾರಂಭದ ವಿಷಯದಲ್ಲಿ ತೀರ್ಮಾನ ಕೈಕೊಳ್ಳುತ್ತಿದ್ದರು. ಅಲ್ಲಿ ಅವರಿಗೆ ಸಿದ್ಧಲಿಂಗೇಶ್ವರರು ಹೇಗೆ ಸೂಚಿಸುತ್ತಿದ್ದರೋ ಇವರು ಹೇಗೆ ತಿಳಿದುಕೊಳ್ಳುತ್ತಿದ್ದರೋ ಎರಡೂ ರಹಸ್ಯವಾದವುಗಳೇ.

ಇವರ ಯೋಗಸಿದ್ಧಿಗೆ ಕಾರಣವಾಗುತ್ತಿದ್ದ ಇನ್ನೊಂದು ಗವಿಯಾದ ದೊಡ್ಡಸಿದ್ಧಪ್ಪನ ಗವಿ ಮಠದಿಂದ ಸುಮಾರು ಎರಡು ಅಥವಾ ಎರಡುವರೆ ಮೈಲು ದೂರದಲ್ಲಿ ರಾಮಲಿಂಗನಬೆಟ್ಟದ ಮಧ್ಯದಲ್ಲಿ ಇದೆ. ಇಲ್ಲಿಗೆ ಆಗಾಗ ಒಬ್ಬರೇ ಹೋಗುತ್ತಿದ್ದರು. ದುರ್ಗಮವಾದ ಅರಣ್ಯ ಮಧ್ಯದಲ್ಲಿರುವ ಈ ಗವಿಗೆ ರಾತ್ರಿ ಹಗಲು ಎನ್ನದೆ ತಮಗೆ ಇಚ್ಛೆಬಂದಾಗಲೆಲ್ಲ ಹೋಗುತ್ತಿದ್ದರು. ಅನೇಕ ಸಲ ಅಮಾವಾಸ್ಯೆಯ ಕಗ್ಗತ್ತಲಿನಲ್ಲಿ ಒಬ್ಬರೇ ಹೋಗುತ್ತಿದ್ದರು. ಹಗಲು ಪ್ರವೇಶಮಾಡಲು ಅಶಕ್ಯವಾದ ಗವಿಯಲ್ಲಿ ರಾತ್ರಿಯ ಕಾಗ್ಗಾವಳಲ್ಲಿ ಒಬ್ಬರೇ ಹೇಗೆ ಪ್ರವೇಶಮಾಡುತ್ತಿದ್ದರೆಂಬುದನ್ನು ಈಗ ಅದನ್ನು ಪ್ರತ್ಯಕ್ಷ ಕಂಡವರು ಊಹಿಸುವುದೂ ಕಷ್ಟವೆನಿಸುತ್ತದೆ. ಮಠದಿಂದ ಶ್ರೀಗಳವರು ಒಬ್ಬರೇ ಹೊರಟು ಬಂದರೆಂದು ತಿಳಿದ ಪಕ್ಕದ ಹಳ್ಳಿಯವರು ಪಂಜು ಲಾಟೀನುಗಳ ಬೆಳಕನ್ನುಂಟುಮಾಡಿಕೊಂಡು ಬಂದರೆ, ಅವರನ್ನೆಲ್ಲ ಹಿಂದಕ್ಕೆ ಕಳುಹಿಸಿಬಿಡುತ್ತಿದ್ದರು. ಶ್ರೀಗಳವರು ಬೆಟ್ಟವನ್ನು ಏರುತ್ತ ಹೊರಟರೆಂದರೆ ಅವರ ಮುಂಭಾಗದಲ್ಲಿ ಎರಡು ಪಂಜುಗಳು ಮುಂದೆ ಮುಂದೆ ಹೋಗುತ್ತಿದುದ್ದನ್ನು ಕಂಡವರು ಆ ಹಳ್ಳಿಯಲ್ಲಿ ಈಗಲೂ ಇದ್ದಾರೆ.[21] ಅಷ್ಟಸಿದ್ಧಿಗಳನ್ನು ಶಿವಯೋಗಿಗಳು ಪಡೆದಿದ್ದರೆಂಬುದಕ್ಕೆ ಇದು ಪ್ರತ್ಯಕ್ಷ ನಿದರ್ಶನ. ಹೊರಟು ಹೋಗಿ ಚಿಕ್ಕಸಿದ್ಧಪ್ಪನ ಗವಿಯ ಮುಂದುಗಡೆ ಹಾಯ್ದು, ಅಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿರುವ ದೊಡ್ಡಸಿದ್ಧಪ್ಪನ ಗವಿಯ ಹೊರಭಾಗದಲ್ಲಿರುವ ಒಂದು ಚಿಕ್ಕಕಲ್ಯಾಣಿಯಲ್ಲಿ ಮುಖಮಾರ್ಜನೆ ಮಾಡಿಕೊಂಡು ಅತ್ಯಂತ

---

20. ಈ ಕಲ್ಲುಬಂಡೆ ಯಾವುದೆಂದು ಈಗ ಗೊತ್ತಾಗುತ್ತಿಲ್ಲ. ಸೂರ್ಯೋದಯವಾದೊಡನೆ ಈ ಬಂಡೆಯ ಮೇಲೆ ಪ್ರಥಮತ ಸೂರ್ಯಕಿರಣಗಳು ಬೀಳುತ್ತಿದ್ದವೆಂದೂ, ಅದು ಅವರಿಗೆ ಪರುಷಗಟ್ಟಿಯ ಸದೃಶವಾಗಿತ್ತೆಂದೂ ಸಾಮಾನ್ಯವಾಗಿ ಈಗ ತಿಳಿಯಲಾಗುತ್ತಿದೆ. ಶ್ರೀ ಮಠದ ದಾಸೋಹಕ್ಕೆ ಹಣಕಾಸಿನ, ಪಡಿಪದಾರ್ಥಗಳ ಕೊರತೆಯಾದುದು ಅನುಭವಕ್ಕೆ ಬಂದರೆ ಈ ಕಲ್ಲುಬಂಡೆಯ ಮೇಲೆ ಹೋಗಿ ಕುಳಿತು ಬಿಟ್ಟರೆ ಕೊರತೆಯಾದ ವಸ್ತುಗಳು ತಾವಾಗಿಯೇ ಬಂದು ಭಕ್ತರ ಮೂಲಕ ದಾಸೋಹಕ್ಕೆ ಸಂದಾಯವಾಗುತ್ತಿದ್ದುವೆಂದೂ ಉದ್ದಾನ ಸ್ವಾಮಿಗಳವರನ್ನು ಅತ್ಯಂತ ಸಮೀಪದಲ್ಲಿ ಕಂಡು ಅವರ ಅನುಗ್ರಹಕ್ಕೆ ಪಾತ್ರರಾಗಿ ಈಗ ಹಾಲಿ ಇರುವ ಕರ್ನಕುಪ್ಪೆ ಚೇರ್ಮನ್ ರೇವಣ್ಣನವರ ತಿಳಿಸುತ್ತಾರೆ.

21. ನಾವು ಈ ಗವಿಯಿರುವ ಪ್ರದೇಶದ ಸಮೀಪದ ಹಳ್ಳಿಯವರ ನೆರವಿನಿಂದ ಅದನ್ನು ನೋಡಿ ಛಾಯಚಿತ್ರಗಳನ್ನು ತೆಗೆದುಕೊಂಡು ಬರಬೇಕೆಂದು ಹೋದೆವು. ಹಿಂದೆ ಉದ್ದಾನ ಸ್ವಾಮಿಗಳವರು ಗವಿಯನ್ನು ಪ್ರವೇಶಿಸಲು ಬರುವಾಗ ಅವರ ನೆರವಿಗೆಂದು ಸಿದ್ಧವಾಗಿ ಬರುತ್ತಿದ್ದ ಆದಿ ಕರ್ನಾಟಕರ ವೃದ್ಧರೊಬ್ಬರು ಈಗಲೂ ನಮಗೆ ದಾರಿ ತೋರಿಸಲು ಬಂದರು. ಅವರು ನಮ್ಮನ್ನು ಕರೆದೊಯ್ದು ಗವಿಯನ್ನು ತೋರಿಸಿ ಉದ್ದಾನ ಸ್ವಾಮಿಗಳು ಇಲ್ಲಿಗೆ ಬರುತ್ತಿದ್ದಾಗ ನಡೆಯುತ್ತಿದ್ದ ಅದ್ಭುತ ಘಟನೆಗಳನ್ನು ಕಥೆ ಮಾಡಿ ವಿವರಿಸಿದರು. ಆಗಿನ ಆ ಸನ್ನಿವೇಶಗಳನ್ನು ನನೆಸಿಕೊಂಡರೆ ಈಗಲೂ ಮೈ ನವಿರೇಳುತ್ತದೆ, ಎಂದು ತನ್ನ ನವಿರೆದ್ದ ಮೈಯನ್ನು ತೋರಿಸಿದನು. ನಾವು ಗವಿಯ ಸಮೀಪಕ್ಕೆ ಹೋಗಿ ನೋಡಿದಾಗ ನಮಗೆ ಒಳಗೆ ಹೋಗಲು ಭಯವಾಯಿತು. ನಾಲ್ಕೈದು ಜನಗಳು ಒಬ್ಬರಿಗೊಬ್ಬರು ಟಾರ್ಚ್, ಲಾಟೀನು ಹಿಡಿದುಕೊಂಡು ಧೈರ್ಯದ ಮಾತನಾಡಿಕೊಂಡು ಒಳಗೆಹೋದೆವು. ಕಡೆದ ಕಲ್ಲಿನ ಬಾಗಿಲುವಾಡದ ಆ ಗವಿಯನ್ನು ಪ್ರವೇಶಿಸಿ ಮೊದಲು ಸ್ವಲ್ಪ ದೂರ, ತೆವಳಿಕೊಂಡು ಹೋಗಬೇಕು. ಅಲ್ಲಿ ಒಂದು ಬಾಗಿಲು ಸಿಗುವುದು. ಅದನ್ನು ದಾಟಿದೊಡನೆಯೇ ಬಸವ, ಅದರ ಮುಂದೆ ಇನ್ನೊಂದು ಕಡೆದ ಬಾಗಿಲು; ಅದನ್ನೂ ದಾಟಿದ ಮೇಲೆ ಶಿವಲಿಂಗ. ಅದರ ಸುತ್ತಲೂ ವಿಶಾಲ ಬೈಲು. ಇದೊಂದು ಗಭೀರ ದೃಶ್ಯ. ಇಲ್ಲಿಯೇ ಇರುವ ಒಂದು ಸ್ಥಳದಲ್ಲಿ ಶಿವಯೋಗಿಗಳು ಗಂಟೆಗಟ್ಟಲೆ, ದಿನಗಟ್ಟಲೆ ಕುಳಿತುಬಿಡುತ್ತಿದ್ದರು ಎಂದು ಆ ವೃದ್ಧರು ನಮಗೆ ತಿಳಿಸಿದರು. ಅದರ ಚಿತ್ರಗಳನ್ನು ಈ ಗ್ರಂಥದಲ್ಲಿ ಕೊಡಲಾಗಿದೆ.

ಗಭೀರವಾದ ದೊಡ್ಡ ಸಿದ್ಧಪ್ಪನ ಗವಿಯನ್ನು ಪ್ರವೇಶಿಸುತ್ತಿದ್ದರು.[22] ಅಲ್ಲಿ ಇಚ್ಛೆ ಬಂದಷ್ಟು ಸಮಯ ಕುಳಿತು ಬರುತ್ತಿದ್ದರು. ಅವರ ಅಲ್ಲಿನ ಸಾಧನೆ ಸಿದ್ಧಿಗಳೇನೆಂಬುದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಯಾರಾದರೂ 'ಒಳಗೆ ತಾವು ಏನು ಮಾಡಿ ಬಂದಿರಿ' ಎಂದು ಕೇಳಿದರೆ ಶ್ರೀಗಳವರು ನಗುತ್ತ 'ಅಲ್ಲಿ ನಮ್ಮವರು ಇದ್ದಾರೆ. ಅವರೊಡನೆ ಮಾತನಾಡಿಕೊಂಡು ಬರುತ್ತೇನೆ' ಎಂದುಬಿಡುತ್ತಿದ್ದರು. 'ನಮಗೂ ಅವರನ್ನು ತೋರಿಸುತ್ತೀರಾ ?' ಎಂದರೆ-'ಅವರೆಲ್ಲ ನಿಮ್ಮ ಕಣ್ಣಿಗೆ ಕಾಣುವುದಿಲ್ಲ' ಎಂದು ಬಿಡುತ್ತಿದ್ದರಂತೆ, ನಗು ನಗುತ್ತ. ನಿಜವಾಗಿಯೂ ಶ್ರೀಗಳವರ ವರ್ತನೆಗಳಲ್ಲಿ ಇದೊಂದು ರೋಮಾಂಚಕಾರಿಯಾದ ನಡೆ. ಹಗಲು ಹೊತ್ತು ಹೋಗಲಿ, ರಾತ್ರಿಯ ಹೊತ್ತು ಒಬ್ಬರೇ ಹೋಗುವುದೆಂದರೇನು ? ಆ ಗಭೀರ ಗವಿಯಲ್ಲಿ ಹಾವೇನೋ, ಚೇಳೇನೋ, ಹಿಂಸ್ರ ಪಶುಪಕ್ಷಿಗಳೇನು ಹೊಕ್ಕಿರುವುವೋ ಎಂದು ನಮಗೆ ಭಯ: ಆದರೆ ಶ್ರೀಗಳವರಿಗೋ ಅದೇತರ ಭಯವೂ ಇಲ್ಲ. ಶಿವಯೋಗದಲ್ಲಿ ಒಂದು ಹಂತಕ್ಕೇರಿದ ಮೇಲೆ ಮೃಗಬಾಧಾ ನಿವಾರಣೆಯಾಗುವುದೆಂದು ಯೋಗಶಾಸ್ತ್ರದ ವಿವರಣೆ. ಈ ವಿಷಯವನ್ನು ಹಿಂದೆಯೇ ಸ್ಥೂಲವಾಗಿ ಹೇಳಿದೆ. ಈ ಸಿದ್ಧಿಯು ಉದ್ದಾನ ಸ್ವಾಮಿಗಳವರಿಗೆ ಅವರು ಇನ್ನೂ ಪೂರ್ವಾಶ್ರಮ ಸ್ಥಿತಿಯಲ್ಲೇ ಉಂಟಾಗಿತ್ತೆಂದು ಅನೇಕರ ಹೇಳಿಕೆ. ಶಿವಯೋಗಿಗಳವರ ಧೈರ್ಯ, ಸ್ಥೈರ್ಯ ನಿರ್ಭಯಾದಿಗಳು ಅವರು ಏರಿದ ಶಿವಯೋಗದ ಫಲವಾಗಿ ಲೋಕಕ್ಕೆ ಪವಾಡಗಳಾಗಿ ಕಾಣುತ್ತಿದ್ದವು.[23] ಹೀಗೆ ಬಾಲ್ಯದಿಂದಲೂ ಇವರ ಜೀವನವೆಲ್ಲವೂ ಲೋಕ ಸಾಮಾನ್ಯ ವ್ಯವಹಾರಕ್ಕಿಂತ ಭಿನ್ನವಾಗಿಯೇ ಇದ್ದು ಇವರೊಬ್ಬ ಅತ್ಯದ್ಭುತಚೇತನದ, ಅಘಟಿತಘಟನಾ ಸಾಮರ್ಥ್ಯದ ಮಹಾವ್ಯಕ್ತಿಗಳಾಗಿ ಕಾಣುತ್ತಿದ್ದರು, ಕೆಲವು ಇವರ ಜೀವನದಲ್ಲಿ ನಡೆದುವೆನ್ನಲಾದ ಅದ್ಭುತ ಪ್ರಸಂಗಗಳನ್ನು ಮುಂದಿನ ಪುಟಗಳಲ್ಲಿ ನೋಡಬಹುದು.

**ಉತ್ತರಾಧಿಕಾರ ವಿಚಾರ :**

ಈ ಪೂರ್ವದಲ್ಲಿ ಇವರು ಸಿದ್ಧಲಿಂಗೇಶ್ವರರೊಡನೆ ಮಾತನಾಡುತ್ತಿದ್ದರೆಂದು ಹೇಳಿದೆಯಷ್ಟೆ. ಇಷ್ಟೇ ಅಲ್ಲ ಒಮ್ಮೊಮ್ಮೆ ಅವರು ವಿಲಕ್ಷಣವಾಗಿ ಯಾವುಯಾವುದೋ ಶಕ್ತಿಯೊಡನೆಯೂ ಮಾತನಾಡಿದಂತೆ ವರ್ತಿಸುತ್ತಿದ್ದರು. ಇದಕ್ಕೊಂದು ಪ್ರಸಂಗ ನಡೆದುದನ್ನು ಈ ಸಮಯದಲ್ಲಿ ಜ್ಞಾಪಿಸಬಹುದು. ತಮ್ಮ ಉತ್ತಾರಾಧಿಕಾರಿಗಳನ್ನಾಗಿ ಈಗಿನ ಶ್ರೀ ಶಿವಕುಮಾರ ಸ್ವಾಮಿಗಳನ್ನಾರಿಸುವ ಪೂರ್ವದಲ್ಲಿ 'ಮರುಳಾರಾಧ್ಯ' ಎಂಬುವರನ್ನು ಆರಿಸಿಕೊಂಡಿದ್ದರು. ಅವರು ತೀವ್ರ ಅನಾರೋಗ್ಯದಿಂದ ಮರಣೋನ್ಮುಖರಾದರು. ಸಾವು ಬದುಕುಗಳೊಡನೆ ಸೆಣಸುವ ಸಮಯ. ಉದ್ದಾನ ಶಿವಯೋಗಿಗಳು ಹೊಯ್ದಾಟಕ್ಕೆ ಒಳಗಾದರು.[24] ಈ ಸಮಯದಲ್ಲಿ ಉದ್ದಾನ ಶಿವಯೋಗಿಗಳು ಸಿದ್ಧಲಿಂಗೇಶ್ವರರ ದರ್ಶನಕ್ಕೆ ಹೊರಟರು.[25] ಆಗಿನ ಅವರ ಮುಖಮುದ್ರೆ ವಿಲಕ್ಷಣವಾಗಿತ್ತು. ಅವರು ಈ ಲೋಕದಲ್ಲಿ ವ್ಯವಹರಿಸುವವರಂತೆಯೇ ಕಾಣುತ್ತಿರಲಿಲ್ಲ. ಉದ್ವೇಗ, ಆವೇಗಗಳಿಂದ ಕೂಡಿದ ಮುಖ ಮುದ್ರೆಯುಳ್ಳ ಆಗಿನ ಅವರೊಡನೆ ಮಾತನಾಡುವ ಧೈರ್ಯಯಾರಿಗೂ ಬರಲಿಲ್ಲ. ಆವುಗೆಗಳನ್ನು ಪಾದದಲ್ಲಿ ಮೆಟ್ಟಿಕೊಂಡು ವೇಗ ವೇಗವಾಗಿ ಬೆಟ್ಟದ ಮೆಟ್ಟಲನ್ನೇರಲು ತೆರಳುತ್ತಿದ್ದರು. ಬೆಟ್ಟದ ಮೆಟ್ಟಲಿನ ಸಮಿಪಕ್ಕೆ ಹೋಗುತ್ತಿದ್ದಂತೆ ಥಟ್ಟನೆ ನಿಂತರು. ಏನನ್ನೋ ಅವಲೋಕಿಸುವರಂತೆ ನಿಂತು– 'ಇರಲಿ ಬಿಡು'...... ಏನು ? ಬೇಡವೆ ? ಏಕೆ ಬೇಡ ? ಇದ್ದರೇನು?

---

22. ಎಂದೂ ಬತ್ತದ ಈ ಚಿಲುಮೆಗೆ ಈಗಲೂ ದೊಡ್ಡ ಸ್ವಾಮಿಗಳ ಹೊಂಡ ಎನ್ನುತ್ತಾರೆ. ಈ ಹೆಸರು ಹೇಗೆ ಬಂತೆಂಬುದು ಗೊತ್ತಾಗುತ್ತಿಲ್ಲ. ಉದ್ದಾನ ಸ್ವಾಮಿಗಳ ಕಾರಣದಿಂದಲೇ ದೊಡ್ಡ ಸ್ವಾಮಿಗಳ ಹೊಂಡ ಎಂಬ ಹೆಸರಾಗಿದೆಯೆಂದು ಡಾ॥ ಜಿ. ಮರುಳಸಿದ್ಧಯ್ಯನವರು ಹೇಳುತ್ತಾರೆ.

23. ಶಿವಯೋಗಿಗಳು ಪವಾಡವನ್ನು ಮೆರೆದು ಲೋಕ ಜೀವನದಲ್ಲಿ ಅದ್ಭುತ ಪ್ರದರ್ಶನ ಮಾಡಬೇಕೆಂಬ ಮನೋಭಾವದವರೇನೂ ಅಲ್ಲ. ಆದರೆ ಅವರ ಜೀವನದುದ್ದಕ್ಕೂ ಆ ಘಟನೆಗಳು ಲೋಕಕ್ಕೆ ಕಾಣಿಸಿಕೊಳ್ಳುತ್ತಿದ್ದವು. ಯಾರಾದರೂ ತಮ್ಮ ಯಾವುದೇ ಕರ್ತವ್ಯದ ಬಗೆಗೆ ಅಪ್ಪಣೆ ಕೇಳಲು ಹೋದರೆ ಬೇಡವೆಂದರೆ ಬೇಡ. ಆಗಲಿ ಎಂದರೆ ಎಲ್ಲವೂ ಹೂಸರವನ್ನೆತ್ತಿದಷ್ಟು ಸುಗಮ. ಶ್ರೀಗಳವರು ಅಶ್ವಹೃದಯವನ್ನು ಬಲ್ಲವರಾಗಿದ್ದರೆಂದು ಎಷ್ಟೋ ಜನ ಹೇಳುತ್ತಾರೆ. ಅವರು ತಾವು ಏರುವ ಪಂಚ ಕಲ್ಯಾಣಿ ಕುದುರೆಯನ್ನೇರಿದ ಮೇಲೆ, ಏರುವ ಪೂರ್ವದಲ್ಲಿಯೇ ಅದರ ಚರ್ಯೆಯನ್ನು ಕಂಡೊಡನೆ ಕಾರ್ಯದ ಫಲಾಫಲಗಳನ್ನು ಹೇಳಿ ಬಿಡುತ್ತಿದ್ದರು. ಕಾರ್ಯ ವಿಫಲವೆಂಬ ಚರ್ಯೆಯನ್ನು ಕುದುರೆಯು ತೋರಿಸಿದರೆ ಕಾರ್ಯಕ್ರಮವನ್ನು ಮೊಟಕುಗೊಳಿಸಿ ಬಿಡುತ್ತಿದ್ದರು.

24. ಈ ಘಟನೆ ನಡೆದುದು ೧೬-೧-೧೯೩೦ನೆಯ ಇಸವಿಯಂದು.

25. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಶಿವಯೋಗೀಶ್ವರರು ಬೆಟ್ಟದ ಮೇಲೇರಿ ಸಿದ್ಧಲಿಂಗೇಶ್ವರರ ದರ್ಶನ ತೆಗೆದುಕೊಂಡು ಬರುವ ಪದ್ಧತಿ. ಅಲ್ಲಿ ಹೋಗಿ ಕೆಲಹೊತ್ತು ಅಪ್ಪನವರ ಗವಿಯನ್ನು ಪ್ರವೇಶಿಸಿ ಕುಳಿತು ಹೊರಬರುತ್ತಿದ್ದರು. ಇದನ್ನು ಜನಗಳು ಸಿದ್ಧಲಿಂಗೇಶ್ವರರೊಡನೆ ಮಾತನಾಡಿ ಬಂದರೆಂದು ಭಾವಿಸುತ್ತಿದ್ದರು. ಬಹುಶಃ ಮಾತನಾಡಿಯೂ ಬರುತ್ತಿರಬಹುದು. ಜನ ಸಾಮಾನ್ಯಕ್ಕೆ ಆ ವಿಷಯ ಅರ್ಥವಾಗುವುದು ಕಷ್ಟ; ಆ ಭಾಷೆಯೂ ಅರ್ಥವಾಗುವುದು ಕಷ್ಟ. ಅದು ಭಾಷೆಯಲ್ಲದ ಭಾಷೆ. ಅರ್ಥವಾಗದ ಅರ್ಥವೇ ಆ ಭಾಷೆಯ ವಿಶೇಷಾರ್ಥ.

......ಹೋ. ಹೋ. ಒಯ್ಯಲೇಬೇಕೆ ? ಹಾಗಾದರೆ ತೆಗೆದುಕೊಂಡು ಹೋಗು. ತೆಗೆದುಕೊಂಡು ಹೋಗಲೇಬೇಕೆಂದರೆ ತಡೆಯಲು ನಾನಾರು ? ಹೂಂ–...... ಹೋಗು ಹೋಗು. ಆಗಲಿ ...' ಹೀಗೆ ಒಬ್ಬರೇ ಗುಡುಗುಟ್ಟಿಬಿಟ್ಟರು. ಇತ್ತ ಮರುಳಾರಾಧ್ಯರು ಲಿಂಗೈಕ್ಯರಾದರು.[26] ಹೀಗೆ ಶಿವಯೋಗಿಗಳು ಯಾವ ಶಕ್ತಿಯೊಡನೆ ಮಾತನಾಡಿದರೆಂಬುದು ಗೊತ್ತಾಗುತ್ತಿಲ್ಲ, ಅಥವಾ ಯಾರೊಡನೆ ಮಾತನಾಡಿದಿರೆಂದು ಕೇಳುವ ಧೈರ್ಯವಾದರೂ ಯಾರಿಗುಂಟು ? ಈ ಘಟನೆ ನಡೆದಮೇಲೆ ಶ್ರೀಗಳವರು ನೇರವಾಗಿ ಸಿದ್ಧಲಿಂಗೇಶ್ವರರ ಸನ್ನಿಧಿಗೆ ಹೋಗಿ ಅನೇಕ ಘಂಟೆಗಳ ಕಾಲ ಅಲ್ಲಿ ಒಬ್ಬರೇ ಶಿವಯೋಗ ಸಮಾಧಿಯಲ್ಲಿ ಕುಳಿತರು. ಮುಂದೆ ಶ್ರೀಮಠದ ಉತ್ತರಾಧಿಕಾರಿಗಳಾರೆಂಬುದರ ಚಿತ್ರವನ್ನು ಆಗಲೇ ಕಂಡುಕೊಂಡು ಬಂದರು. ಆ ಸಮಾಧಿಸ್ಥಿತಿಯಲ್ಲಿ ಅವರ ಕಣ್ಣೆದುರಿಗೆ ನಿಂತವರು ವೀರಾಪುರದ 'ಶಿವಣ್ಣ' ಎಂಬವರು. ಆ ಕೂಡಲೇ ತಮ್ಮ ಅನುಗ್ರಹವನ್ನು ಶಿವಣ್ಣನ ಮೇಲೆ ಸಂಕಲ್ಪ ಮಾತ್ರದಿಂದ ಚೆಲ್ಲಿದರು. ಆ ದಿನ ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಶಿವಣ್ಣನವರೂ ಉದ್ದಾನ ಶ್ರೀಗಳವರ ಪ್ರಬಲ ಸಂಕಲ್ಪದ ಕಟ್ಟಿಗೊಳಗಾಗಿ ಮಠಕ್ಕೆ ಧಾವಿಸಿ ಬಂದರು. ಬಂದು ಮರುಳಾರಾಧ್ಯರ ಸಮಾಧಿಕ್ರಿಯೆಯಲ್ಲಿ ಭಾಗವಹಿಸಿದರು[27]. ಮಾನಸಿಕವಾಗಿ ಶ್ರೀಕ್ಷೇತ್ರದ ಉತ್ತರಾಧಿಕಾರಿಯಾಗಿ ಬಿಟ್ಟರು. ಉದ್ದಾನ ಶಿವಯೋಗಿಗಳವರ ಶಿವಯೋಗ ಶಕ್ತಿಯ ಅದ್ಭುತ ನಿದರ್ಶನಗಳಿಗೆ ಬೇರೆ ಇನ್ನೇನು ಬೇಕು ? ಇಂಥ ರಹಸ್ಯಗಳೇ ನಿರ್ಮಾಯಾನಿಧಿಯಾಗಿದ್ದ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರೊಡನೆ ಉದ್ದಾನ ಶಿವಯೋಗಿಗಳು ಮಾತನಾಡುತ್ತಿದ್ದರೆಂದೂ ಅವರ ಅಪ್ಪಣೆಯಾದಂತೆ ವರ್ತಿಸುತ್ತಿದ್ದರೆಂದೂ ಹೇಳುವ ಆಖ್ಯಾಯಿಕೆಗಳಿಗೆ ನಿದರ್ಶನಗಳು. ವೀರಾಪುರದ ಶಿವಣ್ಣನವರು ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತರಾಧಿಕಾರಿಗಳಾಗುತ್ತಾರೆಂಬುದು ಯಾರ ಕನಸು ಮನಸ್ಸಿನಲ್ಲೂ ಇರಲಿಲ್ಲ; ಶಿವಣ್ಣನವರಲ್ಲಿ ವಿಶೇಷ ಸಲಿಗೆಯೂ ಉದ್ದಾನ ಶಿವಯೋಗಿಗಳವರಿಗೆ ಮೊದಲು ಇರಲಿಲ್ಲ. ಆದರೆ ಶಿವಣ್ಣನವರು ಉದ್ದಾನ ಶಿವಯೋಗಿಗಳ ಅದ್ಭುತ ಶಿವಯೋಗ ಸಂಪತ್ತಿಗೆ ಮಾರು ಹೋಗಿದ್ದರೆಂಬುದೂ, ಅವರನ್ನು ಕಂಡರೆ ಭಯಗೊಂಡು ನಡುಗುತ್ತಿದ್ದರೆಂಬುದಂತೂ ಸತ್ಯ. ಶಿವಣ್ಣನವರ ಮಾತಾ ಪಿತೃಗಳಿಗೆ ತಮ್ಮ ಮಗ ಸಿದ್ಧಗಂಗಾ ಮಠದ ಉತ್ತರಾಧಿಕಾರಿಯಾಗುವ ಇಚ್ಛೆಯಿರಲಿಲ್ಲವೆಂಬುದು ಉದ್ದಾನ ಶಿವಯೋಗಿಗಳವರಿಗೆ ಕರ್ಣಾಕರ್ಣಿಕೆಯಾಗಿ ತಿಳಿದುಬಂತು. ಲೋಕ ಲೌಕಿಕರ ಪುತ್ರ ವಾತ್ಸಲ್ಯ, ಆಸೆ ಆಕಾಂಕ್ಷೆಗಳ ಪೂರ್ಣ ಅರಿವಿದ್ದ ಶಿವಯೋಗಿಗಳು ಶಿವಣ್ಣನವರ ತಂದೆ ತಾಯಿಯವರನ್ನು ಸ್ವತಃ ತಾವೇ ಸಮಾಧಾನ ಪಡಿಸಿ ಬರಬೇಕೆಂದು ಸುಮಾರು ೧೨ ಮೈಲಿ ದೂರವಿರುವ ವೀರಾಪುರಕ್ಕೆ ನಡೆದುಕೊಂಡೆ ಹೋದರು. 'ತಮ್ಮ ಮಗನನ್ನು ಉದ್ದಾನ ಶಿವಯೋಗಿಗಳು ತಮ್ಮ ಮಠದ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡರಲ್ಲಾ' ಎಂಬ ಕೋಪದಿಂದ ತಂದೆಯವರಾದ ಪಟೇಲ ಹೊನ್ನಪ್ಪನವರು ಶಿವಯೋಗಿಗಳು ಬರುತ್ತಾರೆಂಬುದನ್ನು ತಿಳಿದೂ ಕೂಡಾ ಆ ದಿನ ಮನೆಬಿಟ್ಟು ಎಲ್ಲಿಗೋ ಹೊರಟುಹೋಗಿಬಿಟ್ಟರಂತೆ. ಶಿವಯೋಗಿಗಳು ಹೋಗಿ ಅವರು ಮನೆಯಲ್ಲಿಲ್ಲದಿರುವುದನ್ನರಿತು ಹಾಗೆಯೇ ನಿಂತಕಾಲಮೇಲೆ ಹಿಂತಿರುಗಿ ಬಿಟ್ಟರು. ಇಡೀ ಊರಿಗೆ ಉರೇ ಶಿವಯೋಗಿಗಳ ಕ್ರೋಧವನ್ನರ್ಥಮಾಡಿಕೊಂಡು ಪಾದಗಳ ಮೇಲೆ ಬಿದ್ದು ಹೊರಳಾಡಿ ಕೋಪಮಾಡಿಕೊಳ್ಳಬಾರದು ಶಿವಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ ದಯಮಾಡಿಸಬೇಕೆಂದು ಕೇಳಿಕೊಂಡಿತು. ಪಟೇಲ್ ಹೊನ್ನಪ್ಪನವರ ಮನೆಯ ಬಳಗವೆಲ್ಲ ದಾರಿಗೆ ಅಡ್ಡವಾಗಿ ನಿಂತಿತ್ತು. ಆದರೆ ಅಚಲ ನಿರ್ಧಾರದ ಈ ವೀರವಿರಕ್ತರು ನೊಂದು ಬೆಂದು ಯಾರನ್ನು ಲೆಕ್ಕಿಸದೆ ಮಠಕ್ಕೆ ಹೊರಟು ಬಂದರು. ಹೊನ್ನಪ್ಪನವರು ತಾನಾಗಿ ಬಂದ ಭಾಗ್ಯ ಕಳೆದುಕೊಂಡರು. ಶಿವಯೋಗಿಯ ಯಾವ ಕೃಪೆ ಅವರಿಗಾಗಿ ಕಾಯ್ದಿತ್ತೋ ಅದರಿಂದ ವಂಚಿತರಾದರು. ಧೃತಿ, ಕ್ಷಮಾ, ದಾಸೋಹಗುಣ, ಲಿಂಗಭಕ್ತಿಗೆ ಹೆಸರಾಗಿದ್ದ ಪಟೇಲ್ ಹೊನ್ನಪ್ಪನವರಿಗೆ ಈ ಸಮಯದಲ್ಲಿ ಅಜ್ಞಾನ ತಲೆದೋರಿದ್ದು ದೈವ ದುರ್ವಿಪಾಕವೇಸರಿ. ಅಂತೂ ಆ ಸಮಯದಲ್ಲಿ ಉದ್ದಾನ ಶಿವಯೋಗಿಗಳ ಕ್ರೋಧಕ್ಕೆ ಅವರು ಪಾತ್ರರಾದದ್ದಂತೂ ನಿಶ್ಚಯ. ಉದ್ದಾನ ಶಿವಯೋಗಿಗಳು ಬಂದಾಗ ವೀರಾಪುರದ ಪಟೇಲರು ಹೀಗೆ ನಡೆದುಕೊಳ್ಳಬಾರದಾಗಿತ್ತೆಂದು ಇಂದಿಗೂ ಶ್ರೀಶ್ರೀ ಶಿವಕುಮಾರಸ್ವಾಮಿಗಳು ಅನ್ನುತ್ತಿದ್ದಾರೆ. ಈಘಟನೆಯಿಂದ ಪಟೇಲ್ ಹೊನ್ನಪ್ಪನವರಿಗೆ ಕೆಡುಕೇ ಆಯಿತೆಂದು ಬಲ್ಲವರ ವಿವರಣೆ. ಆದರೇನು ಉದ್ದಾನ ಶಿವಯೋಗಿಗಳು ಶಿವಣ್ಣನವರನ್ನು ಸ್ವತಃ ಅವರ ಆಗ್ರಹದ ಮೇರೆಗೆ ಅವರಿಗೆ ಶ್ರೀ

---

26. ೧೬-೧೦-೧೯೩೦ ನೆಯ ದಿವಸ ನಡೆದ ಈ ಘಟನೆಯ ವಿಷಯವನ್ನು ತಿಳಿಸಿದವರು ಕರ್ನಕುಪ್ಪೆ ಛೇರ್ಮನ್ ರೇವಣ್ಣನವರು. ಡಾ. ಮರುಳಸಿದ್ಧಯ್ಯನವರೂ ಈ ಘಟನೆಯನ್ನು ಸ್ವಲ್ಪ ಹೆಚ್ಚುಕಡಿಮೆ ಇದೇ ರೀತಿ ಹೇಳುತ್ತಿದ್ದಾರೆ.

27. ಈ ಘಟನೆ ನಡೆಯುವ ಒಂದೆರಡು ತಿಂಗಳ ಪೂರ್ವದಲ್ಲಿ ಶಿವಣ್ಣನವರು ಮಠಕ್ಕೆ ಬಂದಿದ್ದರಂತೆ. ಆ ದಿನ ಹಳೆಯ ಮಠದಲ್ಲಿ ಹುಡುಗಾಟಿಕೆ ಮಾಡಿ ಉಳಿದವರನ್ನು ವಿನೋದಗೊಳಿಸಲು ಮರುಳಾರಾಧ್ಯರ ಕಫನಿ ಮತ್ತು ಆವುಗೆಗಳನ್ನು ಮೆಟ್ಟಿ, ಉಳಿದ ವಿದ್ಯಾರ್ಥಿಗಳನ್ನು ಬಡಿಬಡಿದು ನಮಸ್ಕಾರ ಮಾಡಿಸಿಕೊಂಡು ಸಕ್ಕು ನಗಿಸಿದ್ದರಂತೆ. ಈ ವಿನೋದ ಸಮಯದಲ್ಲಿ ಪಾಲ್ಗೊಂಡಿದ್ದವರಲ್ಲಿ ಈಗಿನ ಕನಕಪುರದ ದೇಗುಲ ಮಠಾಧ್ಯಕ್ಷರಾದ ಮಹಲಿಂಗ ಸ್ವಾಮಿಗಳವರೂ, ಡಾ. ಮರುಳಸಿದ್ದಯ್ಯನವರೂ ಆಗಿದ್ದಾರೆ. ಅವರು ಸ್ವಾರಸ್ಯವಾಗಿ ಈ ಘಟನೆಯನ್ನು ಹೇಳಿ, ಅಂದಿನ ದಿನಗಳ ನೆನಪು ಮಾಡಿಕೊಂಡು ಪುಳುಕಿತಗಾತ್ರರಾಗುತ್ತಿದ್ದಾರೆ.

ಶಿವಕುಮಾರಸ್ವಾಮಿಗಳು ಎಂಬ ನೂತನಾಭಿಧಾನವಿಟ್ಟು ತಾ. ೩-೩-೧೯೩೦ ರಲ್ಲಿ ಉತ್ತರಾಧಿಕಾರಿಗಳನ್ನಾಗಿ ವಿಜೃಂಭಣೆಯಿಂದ ಕಾರ್ಯಮಾಡಿ ಮುಗಿಸಿದರು. ಶಿವಯೋಗಿಗಳವರ ಶಿಷ್ಯರಾದ ಶ್ರೀ ಶಿವಕುಮಾರಸ್ವಾಮಿಗಳೂ ವೀರಾಪುರದ ಪಟೇಲರ ಬಗೆಗೆ ಅಸಮಾಧಾನ ತಳೆದರು. ಉದ್ದಾನ ಶಿವಯೋಗಿಗಳವರಿಗೆ ಈ ರೀತಿಯಲ್ಲಿ ಅವರು ನಡೆದುಕೊಂಡು ಮನಸ್ಸಿಗೆ ಖೇದಗೊಳಿಸಿದ್ದು ಬಹು ಸಂಕಟಕ್ಕೀಡುಮಾಡಿತು. ಪಟೇಲರು ಶಿವಯೋಗಿಗಳು ಬರುತ್ತಾರೆಂಬುದನ್ನರಿತೂ ಮನೆ ಬಿಟ್ಟು ತೆರಳಬಹುದೇ ? ಎಂದು ನೊಂದುಕೊಂಡು ತಾವು ತಮ್ಮ ಗುರುಗಳ ಅಭಿಪ್ರಾಯವನ್ನೇ ಹೊಂದಿದರು.

**ಶ್ರೀ ಶಿವಕುಮಾರಸ್ವಾಮಿಗಳವರನ್ನು ಸುಂದರ ಮೂರ್ತಿಯನ್ನಾಗಿ ಕಡೆದ ಮಹಾಶಿಲ್ಪಿ :**

ಉದ್ದಾನಶಿವಯೋಗಿಗಳು ತಮ್ಮ ಅಂತಃಕರಣಗ್ರಂಥಿಯನ್ನು ಬಿಚ್ಚಿ, ಶಿವಣ್ಣನವರೆಂಬ ಪಟುವನ್ನು ಶ್ರೀ ಶಿವಕುಮಾರ ಸ್ವಾಮಿಗಳು ಎಂಬ ಹೆಸರಿಟ್ಟು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಮೇಲೆ ಅವರ ಮುಂದಿನ ಕೆಲಸ ತಮ್ಮ ಶಿಷ್ಯ ರನ್ನು ಸುಂದರಮೂರ್ತಿಯನ್ನಾಗಿ ಕಡೆದು ನಿಲ್ಲಿಸಬೇಕಾದುದು. ಹೀಗೆ ಮೂರ್ತಿಯನ್ನು ಕಟೆದು ಸುಂದರಗೊಳಿಸಲು ಅವರು ಸುಮಾರು ೧೧ ವರ್ಷಗಳು ವಿನಿಯೋಗಿಸಿದರೆನ್ನಬಹುದು. ಈ ಹನ್ನೊಂದು ವರ್ಷಗಳ ಅವಧಿಯಲ್ಲಿ ಅವರನ್ನು ಅನೇಕ ಅಗ್ನಿಪರೀಕ್ಷೆಗಳಿಗೊಳಪಡಿಸಿದರು. ಹಲವಾರು ರೀತಿಯಲ್ಲಿ ಪರೀಕ್ಷಿಸಿ ನೋಡಿದರು. ಪುಟವಿಕ್ಕಿ. ಒರಗೆ ಹಚ್ಚಿ, ಬಣ್ಣಕ್ಕೆ ತಂದು, ಕಡಿದು, ಬಡಿದು, ತಿಕ್ಕಿ, ಉಜ್ಜಿ ಲಿಂಗದೇವನ ಕಂಠಾಭರಣವನ್ನಾಗಿ ಮಾಡಿದರೆನ್ನಬೇಕು. ಒಳಗೊಳಗೆ ತಮ್ಮ ಶಿಷ್ಯರ ಕರ್ತವ್ಯದಕ್ಷತೆ, ಗಂಭೀರತೆ, ಸರ್ವಜೀವದಯಾಪರತೆ, ಪೂಜಾ ನಿಷ್ಠೆಗಳಿಗೆ ಹಿರಿಹಿರಿ ಹಿಗ್ಗುತ್ತ ಹೊರಹೊರಗೆ ಕೋಪ, ಭರ್ತ್ಸನೆಗಳನ್ನು ತೋರ್ಪಡಿಸುತ್ತಿದ್ದರು. ಗುರುವಿನಿಂದಾಗುತ್ತಿರುವ ಈ ಮಾನಾಪಮಾನ, ಹಾನಿವೃದ್ಧಿಗಳನ್ನು ಸಹಿಸುವ ಶಕ್ತಿ ಇವರಲ್ಲಿ ಎಷ್ಟರಮಟ್ಟಿಗೆ ಇದೆ ಎಂಬುದನ್ನು ಪರೀಕ್ಷಿಸಲು ಈ ರೀತಿ ಅಗ್ನಿಪರೀಕ್ಷೆಗಳನ್ನು ಅವರಿಗೆ ಒಡ್ಡುತ್ತಿದ್ದರು. ಕೈಗೆ ಹಣವನ್ನು ಹೆಚ್ಚಾಗಿ ಕೊಡುತ್ತಿರಲಿಲ್ಲ; ಆದರೆ ದಾಸೋಹದ ವ್ಯವಸ್ಥೆಯ ಭಾರವನ್ನೆಲ್ಲಾ ಶಿವಕುಮಾರ ಸ್ವಾಮಿಗಳವರ ಮೇಲೆಯೆ ಹಾಕಿಬಿಟ್ಟರು. ದುಡಿದು ಸಂಪಾದಿಸಿ ದಾಸೋಹ ವ್ಯವಸ್ಥೆಯನ್ನು ಮಾಡಿರೆಂದು ಹೇಳಿಬಿಡುತ್ತಿದ್ದರು. ಕೇವಲ ಬೆಂಗಳೂರಿನಲ್ಲಿ ಬರುವ ಅಲ್ಪಸ್ವಲ್ಪ ಬಾಡಿಗೆ, ಭಕ್ತರಿಂದ ಬರುವ ಅಲ್ಪಸ್ವಲ್ಪ ಕಾಣಿಕೆ ಇದರಿಂದ ದಾಸೋಹ ವ್ಯವಸ್ಥೆ ಮಾಡು ವುದು ಎಷ್ಟೋಸಲ ಶಿವಕುಮಾರಸ್ವಾಮಿಗಳವರಿಗೆ ಅಗ್ನಿಪರೀಕ್ಷೆಯಂತಾಗಿತ್ತು. ಆದರೂ ಉದ್ದಾನಶಿವಯೋಗಿಗಳವರ ಕೃಪೆ ಯಿಂದ ಅವೆಲ್ಲ ಪರಿಹಾರಗೊಳ್ಳುತ್ತಿದ್ದವು. ಅಪಾರ ಸಾಹಸದಿಂದ ನಿರಂತರ ಹೋರಾಟದಿಂದ ಶಿವಕುಮಾರಸ್ವಾಮಿಗಳವರು ಯಾವ ಊಣೆಯವೂ ಇಲ್ಲದೆ ದಾಸೋಹ ಕಾರ್ಯವನ್ನು ಮೊದಲಿಗಿಂತ ವಿಜೃಂಭಣೆಯಾಗಿ ನಡೆಸುವುದಕ್ಕೆ ಪ್ರಾರಂಭಿಸಿದರು. ಇದನ್ನು ಕಂಡ ಉದ್ದಾನಶಿವಯೋಗಿಗಳು ಚಿಕ್ಕವರ ಖರ್ಚುವೆಚ್ಚ ವಿಪರೀತವಾಗಿಹೋಯಿತು ; ಹೀಗಾದರೆ ಮಠ ಹೇಗೆ ಉಳಿಯಬೇಕು ಇತ್ಯಾದಿ... ಮೇಲುನೋಟಕ್ಕೆ ಕೋಪ, ಗದರಿಕೆ, ಮೂದಲಿಕೆಗಳನ್ನು ತೋರ್ಪಡಿಸುತ್ತಲೇ ಒಳಗೊಳಗೆ ಹಿರಿ ಹಿರಿ ಹಿಗ್ಗುತ್ತಿದ್ದರು. ಒಮ್ಮೆ ದಾಸೋಹಕ್ಕೆ ಬೇಳೆಯ ಅವಶ್ಯಕತೆ ಉಂಟಾದಾಗ ಕೈಯಲ್ಲಿ ಹಣವಿಲ್ಲದೆ ವಿದ್ಯಾರ್ಥಿಗಳಿಂದ ಹಣ ವನ್ನು ಸಾಲ ಪಡೆದು ಬೇಳೆ ತರಿಸಿ ದಾಸೋಹಕ್ಕೆ ವಿನಿಯೋಗಿಸಿದ ಪ್ರಸಂಗವನ್ನು ಇಂದಿಗೂ ಶಿವಕುಮಾರಸ್ವಾಮಿಗಳು ನೆನೆಸಿ ಕೊಳ್ಳುತ್ತಾರೆ. ೧೦-೧೨ ಮೈಲು ದೂರದ ಹಳ್ಳಿಗಳ ಬಿನ್ನಹಕ್ಕೆ ಒಪ್ಪಿಕೊಂಡಾಗ ಅಲ್ಲಿಗೆ ನಡೆದುಕೊಂಡು ಹೋಗಿ ಬಂದ ಪ್ರಸಂಗವನ್ನು ನೆನೆನೆನೆದು ಶಿವಕುಮಾರಸ್ವಾಮಿಗಳು ಇಂದೂ ಪುಳುಕಿತಗಾತ್ರರಾಗುತ್ತಾರೆ. ವಾಹನ ಸೌಕರ್ಯ ಮೊದಲಾದವು ಗಳ ಬಗೆಗೆ ಉದ್ದಾನಶಿವಯೋಗಿಗಳು ತಾವೇ ದುಡಿದು ಸಂಪಾದಿಸಿ ವಾಹನಸೌಕರ್ಯ ಮಾಡಿಕೊಳ್ಳಲಿಕ್ಕೆ ಹೇಳಿಕಳುಹಿಸು ತ್ತಿದ್ದರು. ನನ್ನಲ್ಲಿ ಏನನ್ನೂ ಕೇಳಕೂಡದೆಂದು ಕಟ್ಟಪ್ಪಣೆ ಮಾಡಿಬಿಡುತ್ತಿದ್ದರು. ಶ್ರೀ ಶಿವಕುಮಾರಸ್ವಾಮಿಗಳಿಗೆ ಈ ವರ್ತನೆ ತಮ್ಮ ಅದ್ಭುತಕ್ರಿಯಾಶಕ್ತಿಯನ್ನು ಬೆಳೆಸಿಕೊಳ್ಳಲು ಆಶೀರ್ವಾದವೇ ಆಯಿತು. ದಾಸೋಹ, ವಿದ್ಯಾರ್ಥಿನಿಲಯಗಳ ಸುವ್ಯವಸ್ಥೆಗಳ ಭಾರವನ್ನು ಶಿವಕುಮಾರಸ್ವಾಮಿಗಳು ವಹಿಸಿಕೊಂಡ ಮೇಲೆ ಇವರ ಮೂಲಭೂತಗುಣಗಳಾದ ಅನುಕಂಪ, ದಾಕ್ಷಿಣ್ಯಪ್ರವೃತ್ತಿ, ದೀನದಲಿತೋದ್ಧಾರಾಸಕ್ತಿ, ಯಾರನ್ನೂ ಏನನ್ನೂ ಕೇಳದಿರುವ ಸ್ವಭಾವ ಮುಂತಾದವುಗಳು ಇವರನ್ನು ಅನೇಕ ತೊಂದರೆಗಳಿಗೆ ಗುರಿಮಾಡಿದರೂ ಆ ತೊಂದರೆಗಳೆಲ್ಲ ಮರುಕ್ಷಣದಲ್ಲಿ ಮಾಯವಾಗಿ ಬಿಡುತ್ತಿದ್ದವು. ಇವೆಲ್ಲ ಉದ್ದಾನ ಶಿವಯೋಗಿಗಳವರ ಕೃಪೆ. ಅವರು ತಮ್ಮ ಶಿಷ್ಯರ ಕೈ ಬರಿದಾಗಕೂಡದು; ಧನ ಸಂಗ್ರಹವೂ ಆಗಕೂಡದು. ಅಹನ್ಯಹನಿಜೀವನ ಸಾಗಿಸಿ, ಅದರ ಕಷ್ಟನಷ್ಟಗಳ ಅರಿವಿನ ಅನುಭವವಾಗಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದರು. ಕಷ್ಟದ ಮೇಲೆ ಕಷ್ಟಗಳು ಚಿಕ್ಕವರಿಗುಂಟಾಗಿ ಅದರಲ್ಲಿ ಅವರು ಪಾರಾಗಬೇಕೆಂಬ ಅಪೇಕ್ಷೆ ಉದ್ದಾನಪ್ಪನವರದು. ಉದ್ದಾನಶಿವಯೋಗಿಗಳಿಗೆ ಇಂಗ್ಲೀಷ್ ಓದಿದವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡು ಆಗಿದೆ. ಇವರು ನಮ್ಮ ಆಚಾರ, ವಿಚಾರ, ಪೂಜಾನಿಷ್ಠೆ, ದಾಸೋಹ ಸದ್ಭಾವದಲ್ಲಿ ಎಷ್ಟರಮಟ್ಟಿಗೆ ಲೋಕದ ಮಾನಮನ್ನಣೆಗಳಿಗೆ ಅರ್ಹರಾಗುವರೋ ಏನೋ ಎಂಬ ಭಯವಿತ್ತೆಂದು ತೋರುತ್ತದೆ. ಆದ್ದರಿಂದಲೇ ಈ ಅಗ್ನಿಪರೀಕ್ಷೆಗಳಿಗೆ ಗುರಿಪಡಿಸುತ್ತಿದ್ದರಂತೆ. ಶಿವಕುಮಾರಸ್ವಾಮಿಗಳವರ

ಪೂರ್ವಾಶ್ರಮದ ಬಂಧುಬಳಗದವರಿಗೆ ಕೊಟ್ಟ ದುಡ್ಡುಕಾಸುಗಳ ವಸೂಲಿಗೆ ಇವರನ್ನೇ ಕಳಿಸಿ ವಸೂಲ್ಮಾಡಿಕೊಂಡೇ ಬರಬೇಕೆಂದು ಹೇಳುತ್ತಿದ್ದರಂತೆ. ಗುರುಗಳ ಅಪ್ಪಣೆಯನ್ನು ಚಾಚೂತಪ್ಪದೆ ನಡೆಸಿಕೊಂಡು ಬರತೊಡಗಿದ ಮೇಲೆ ಇವರಿಗೆ ಪೂರ್ವಾಶ್ರಮದ ಜನ್ಮದುರಾಸೆ ಕಳೆದಿದೆಯೆಂದು ತೃಪ್ತಿಪಡುತ್ತಿದ್ದರಂತೆ. ಒಮ್ಮೆ ಒಂದು ಪರೀಕ್ಷೆಯ ಪ್ರಸಂಗ ನಡೆದುದು ಹೀಗೆ:

ಸಕಲೇಶಪುರದ ಗುಡ್ಡದ ಮನೆ ಗೌಡರು ಒಂದು ಹೊಸ ಮನೆ ಕಟ್ಟಿಸಿ, ಅದರ ಪ್ರವೇಶೋತ್ಸವಕ್ಕೆ ದಯಮಾಡಿಸಬೇಕೆಂದು ಉದ್ದಾನ ಶಿವಯೋಗಿಗಳನ್ನು ಒಪ್ಪಿಸಲಿಕ್ಕೆ ಮಠಕ್ಕೆ ಬಂದರು. ಉದ್ದಾನಸ್ವಾಮಿಗಳವರನ್ನು ಕಂಡು, ತಾವು ನನ್ನ ಹೊಸ ಮನೆಯ ಪ್ರವೇಶೋತ್ಸವ ನಡೆಸಿಕೊಡಲು ದಯಮಾಡಿಸಬೇಕೆಂದು ಬೇಡಿದರು. ಆಗ ಶಿವಯೋಗಿಗಳು 'ಚಿಕ್ಕವರನ್ನೇ ಕರೆದುಕೊಂಡು ಹೋಗಿ ಕಾರ್ಯ ಮುಗಿಸಿಕೊಳ್ಳಿ' ಎಂದರು. ಗೌಡರು ಚಿಕ್ಕವರನ್ನು ಕಂಡು ಸ್ವಾಮಿಗಳ ಅಪ್ಪಣೆಯಾಗಿದೆ ತಾವು ದಯಮಾಡಿಸಿ ನನ್ನ ಮನೆಯ ಪ್ರವೇಶೋತ್ಸವವನ್ನು ನೆರವೇರಿಸಿಕೊಟ್ಟು ಬರಬೇಕೆಂದು ಬೇಡಿದರು. ಆಗ ಶಿವಕುಮಾರ ಸ್ವಾಮಿಗಳು ಗುರುಗಳ ಹತ್ತಿರ ಬಂದು ಗೌಡರ ಬಿನ್ನಹವನ್ನು ತಿಳಿಸಿದರು. ಶಿವಯೋಗಿಗಳು 'ಹೋಗಿಬಿಟ್ಟು ಕೆಲಸ ಮುಗಿಸಿ ಬನ್ನಿರಿ' ಎಂದು ಆಜ್ಞೆಮಾಡಿದರು. ಗೌಡರು ದಿನಾಂಕವನ್ನು ತಿಳಿಸಿ ಬಂದುಬಿಟ್ಟರು. ಸಕಲೇಶಪುರಕ್ಕೆ ಹೋಗುವ ದಿನ ಬಂತು. ನಾಳೆಯೇ ಗೃಹ ಪ್ರವೇಶ ದಿನಾಂಕವಿತ್ತು. ಆಗ ಶಿವಕುಮಾರಸ್ವಾಮಿಗಳು ಗುರುಗಳಾದ ಉದ್ದಾನ ಶಿವಯೋಗಿಗಳನ್ನು ಕಂಡು ಸಕಲೇಶಪುರಕ್ಕೆ ಹೋಗಿ ಬರಲು ಅಪ್ಪಣೆ ಕೇಳಿದರು. ಶಿಷ್ಯರ ಮನದ ಪರೀಕ್ಷೆಗೋ ಏನೋ 'ಹೋಗಕೂಡದು' ಎಂದುಬಿಟ್ಟರು. ಈ ಮಾತು ಕೇಳಿ ಶಿವಕುಮಾರಸ್ವಾಮಿಗಳು ಬೆಚ್ಚಿಬಿದ್ದರು. 'ಹಿಂದೆ ತಾವೇ ಅಪ್ಪಣೆ ಮಾಡಿದ ಪ್ರಕಾರ ಅವರ ಬಿನ್ನಹವನ್ನು ಒಪ್ಪಿಕೊಂಡು ಆಗಿದೆ. ಹೋಗದಿದ್ದರೆ...ಅಪರಾಧವಾಗುವುದು' ಎಂದರು. ಆಗ ಪುನಃ ಉದ್ದಾನಸ್ವಾಮಿಗಳು ಕತ್ತೆತ್ತಿ ಮುಖವನ್ನು ನೋಡಿ 'ಸ್ವಾಮಿಗಳೇ, ಹೋಗಕೂಡದೆಂದರೆ ಹೋಗಕೂಡದು! ಹೋಗಕೂಡದು! ಹೋಗಕೂಡದು!!! ಗೊತ್ತಾಯಿತೋ! ಜಾತ್ರೆ ಬಂತು. ಅಕ್ಕಿ, ಮೆಣಸಿನಕಾಯಿ, ಬೆಲ್ಲ, ಹಿಟ್ಟು, ಕಾಯಿ ಹೊಂದಿಸಬೇಕು; ಮಠಕ್ಕೆ ಸುಣ್ಣ ಬಣ್ಣ ಮಾಡಿಸಬೇಕು; ಸೌದೆ ಇಲ್ಲ. ಇವನ್ನೆಲ್ಲ ಬಿಟ್ಟು ಸಕಲೇಶಪುರಕ್ಕೆ ಹೋಗುತ್ತಾರಂತೆ! ಹೋಗಕೂಡದು ತಿಳಿಯಿತೇ' ಎಂದು ಬಿಟ್ಟರು. ಶಿವಕುಮಾರಸ್ವಾಮಿಗಳಿಗೆ ಒಂದೂ ತಿಳಿಯದಂತಾಗಿ ಸ್ವಲ್ಪಹೊತ್ತು ಸುಮ್ಮನೆ ನಿಂತುಬಿಟ್ಟರು. 'ಯಾಕ್ರೀ ಸ್ವಾಮಿಗಳೇ, ಸುಮ್ಮನೆ ನಿಂತಿರಿ' ಎಂದರು ಶಿವಯೋಗಿಗಳು. 'ಒಪ್ಪಿಗೆ ಕೊಟ್ಟು ಈಗ ಹೋಗದಿದ್ದರೆ ಹೇಗೆ?' ಎಂಬ ಚಿಂತೆಗೊಳಗಾಗಿದ್ದ ಶಿವಕುಮಾರಸ್ವಾಮಿಗಳು ಪುನಃ ಮೆಲ್ಲನೆಯ ಧ್ವನಿಯೆತ್ತಿ 'ತಾವು ಮೊದಲೇ ಬೇಡ ಎಂದಿದ್ದರೆ ಒಪ್ಪಿಗೆ ಕೊಡುತ್ತಿರಲಿಲ್ಲ. ತಮ್ಮನ್ನು ಕೇಳಿಯೇ ಒಪ್ಪಿಗೆ ಕೊಟ್ಟು ಆಗಿದೆ. ಶಿವಪೂಜಾಮರಿಗಳನ್ನು ಆಗಲೇ ಕಳಿಸಿ ಆಗಿದೆ. ಅವರು ಅಲ್ಲಿಗೆ ಇಂದು ರಾತ್ರಿಯೇ ಹೋಗಿ ತಲುಪಿರುತ್ತಾರೆ. ಸ್ವಾಮಿಗಳು ಬರುತ್ತಾರೆಂದು ತಿಳಿಸಿಬಿಡುತ್ತಾರೆ. ಅವರೆಲ್ಲ ದಾರಿ ಕಾಯುತ್ತಾರೆ. ಈಗ ತಪ್ಪಿಸಿಕೊಂಡರೆ ಮಠಕ್ಕೆ ಅಪವಾದ ಬರುತ್ತದೆ. ಇದಕ್ಕೂ ಮಿಕ್ಕಿ ತಮ್ಮ ಅಪ್ಪಣೆಯಾದಂತೆ ಆಗಲಿ' ತಮಗೆ ಬೇಡವಾದರೆ ನನಗೂ ಬೇಡವೇ ಬೇಡ; ನಾನು ತಮ್ಮ ಆಜ್ಞಾಧಾರಕ' ಎನ್ನಲು ಉದ್ದಾನಸ್ವಾಮಿಗಳು ಶತಪಥ ತಿರುಗುತ್ತಾ ಮೂಗಿನ ಮೇಲೆ ಬೆರಳಾಡಿಸಿ ಶಿವಕುಮಾರಸ್ವಾಮಿಗಳ ಮುಖ ನೋಡುತ್ತಾ, 'ಹೂಂ...ಏನು!...ಏನು...ಮಠದ ಖರ್ಚುವೆಚ್ಚ ವ್ಯವಹಾರ ಬಹಳ. ಜಾತ್ರೆ ಬಂತು! ಜಾತ್ರೆ ಬಂತು! ಹೊಂದಿಸೋದು ಬಹಳ ಇದೆ...ಹುಂ...ಆಗಲಿ ಹೋಗಿ ಬನ್ನಿ. ಕೂಡಲೇ ಹಿಂದಿರುಗಿ ಬಂದುಬಿಡಬೇಕು ತಿಳಿಯಿತೇ'! ಎಂದು ಹೇಳಿದರು. ಶಿವಕುಮಾರಸ್ವಾಮಿಗಳಿಗೆ ಸ್ವರ್ಗವೇ ಧರೆಗಿಳಿದು ಬಂದಂತಾಯಿತು. ನಮಸ್ಕರಿಸಿ ನಗುನಗುತ್ತಾ ಹೊರಟುಹೋದರು. ಯಾರಿಗಾದರೂ ಏನನ್ನಾದರೂ ಹೇಳಬೇಕಾದರೆ ಶಿವಯೋಗಿಗಳು ಮೂಗಿನ ಮೇಲೆ ಬೆರಳಿಟ್ಟು ಬೇಕು ಅಥವಾ ಬೇಡ ಎಂದು ಹೇಳುತ್ತಿದ್ದರಂತೆ.[28] ಇದೊಂದು ವಿಧದಲ್ಲಿ ಶಿಷ್ಯ ಪರೀಕ್ಷೆಯಾದರೆ, ಇನ್ನೊಂದು ವಿಧದಲ್ಲಿ ತಮ್ಮ ಶಿಷ್ಯರ ಬಗೆಗೆ ಲೋಕದ ಅಭಿಪ್ರಾಯಗಳನ್ನು ಶಿವಯೋಗಿಗಳು ತಿಳಿಯುತ್ತಿದ್ದರು.

### ಇದೊಂದು ವಿಚಿತ್ರ ರೀತಿಯ ಪರೀಕ್ಷೆ

ಪುಟ್ಟಯ್ಯ ಎಂಬುವ ವ್ಯಾಪಾರಿ ಪ್ರತಿವರ್ಷ ಸಿದ್ಧಗಂಗೆಯ ಜಾತ್ರೆಯಲ್ಲಿ ಅಲಂಕಾರ ಮಾಡಲು ಬರುತ್ತಿದ್ದ. ಅವನು ಒಂದು ಕುಂಕುಮದ ಅಂಗಡಿಯನ್ನು ಇಟ್ಟು ವ್ಯಾಪಾರ ಮಾಡಿಕೊಂಡು ಹೋಗುತ್ತಿದ್ದ. ಈ ಕಾರಣದಿಂದ ಸ್ವಾಮಿಗಳಲ್ಲಿ ಅವನು ಸ್ವಲ್ಪ ಸಲುಗೆಯಿಂದ ವರ್ತಿಸುತ್ತಿದ್ದ. ಸ್ವಾಮಿಗಳು ಸ್ವಲ್ಪಮಟ್ಟಿಗೆ ಅವನನ್ನು ಹತ್ತಿರಕ್ಕೆ ಬಿಟ್ಟಿಕೊಂಡಿದ್ದರು. ಅವನು

---

28. ಉದ್ದಾನ ಶಿವಯೋಗಿಗಳು ಸೂರ್ಯನಾಡಿ ಚಂದ್ರನಾಡಿಯ ಅನುಭವದಿಂದ ಅನೇಕರಿಗೆ ಹೀಗೇನಾದರೂ ಹೇಳುವಾಗ ಮೂಗಿನ ಮೇಲೆ ಬೆರಳಾಡಿಸಿ ತಮಗೆ ತಿಳಿದುದನ್ನು ಹೇಳುತ್ತಿದ್ದರೆಂದು ಅವರನ್ನು ಸಮೀಪದಿಂದ ಬಲ್ಲ ತುಮಕೂರಿನ ಎಂ. ಟಿ. ಎಸ್. ಕೆಂಪಹೊನ್ನಯ್ಯನವರು ತಮ್ಮ ಒಂದು ಲೇಖನದಲ್ಲಿ ಹೇಳಿದ್ದಾರೆ. (ಸಮರ್ಪಣೆ ಪು. ೬೨–೬೩)

ಜಾತ್ರೆ ಮುಗಿದ ಮೇಲೆ ಒಂದು ದಿನ ಸ್ವಾಮಿಗಳು ವಿರಾಮದಿಂದ ಹಳೆಯ ಮಠದಲ್ಲಿ ಕುಳಿತುಕೊಂಡಾಗ ಅಲ್ಲಿಗೆ ಬಂದು ನಮಸ್ಕರಿಸಿ ಕುಳಿತುಕೊಂಡನು. ಶ್ರೀಗಳವರು ಆ ಮಾತು ಈ ಮಾತು ಪ್ರಾರಂಭಿಸಿ 'ಪುಟ್ಟಯ್ಯ ಏನು ಏನು! ಚಿಕ್ಕವರು ಬಹಳ ಖರ್ಚಿನವರಾಗಿಬಿಟ್ಟರು. ಇವರು ಮುಂದೆ ಮಠವನ್ನು ಉಳಿಯಗೊಡುವುದಿಲ್ಲ, ಅಲ್ಲವೇ?' ಎಂದರು. ಅವನು 'ಹೌದು ಬುದ್ಧಿ. ತಾವಿರುವವರೆಗೆ ಮಠ. ಮುಂದೆ ಅವರು ಮಠವನ್ನು ಉಳಿಯಗೊಡುವುದಿಲ್ಲ. ಅದೇನು ಖರ್ಚು. ಅದೇನು ವೆಚ್ಚ! ಅಬ್ಬಬ್ಬಾ!!' ಎಂದ 'ಹೌದು. ಮಠದ ಕಸಗೂಡಿಸುವುದಕ್ಕೂ ದಿಕ್ಕಿಲ್ಲದಂತಾಗುತ್ತದೆ ಅಲ್ಲವೇನಯ್ಯ' ಎಂದರು ಶ್ರೀಗಳು. ಅವನು 'ಹೌದು ಬುದ್ಧಿ ಮಠದ ಕಸಗೂಡಿಸುವುದಕ್ಕೂ ಇವರಿಂದ ಸಾಧ್ಯವಾಗುವುದಿಲ್ಲ. ಈ ಪಾಟಿ ಖರ್ಚುವೆಚ್ಚ ಮಾಡದರೆ ಎಲ್ಲಿ ಸಾಧ್ಯ' ಎಂದ. ಶ್ರೀಗಳು 'ಮಠದ ಸುಣ್ಣಬಣ್ಣ ಮಾಡಿಸುವುದಂತೂ ಸಾಧ್ಯವೇ ಇಲ್ಲ ಅಲ್ಲವೇ ಪುಟ್ಟಯ್ಯ' ಎಂದರು. ಅವನು 'ಹೌದು ಬುದ್ಧಿ, ಕಸಗೂಡಿಸುವುದಕ್ಕೂ ಆಗದೇ ಇದ್ದಾಗ ಸುಣ್ಣಬಣ್ಣಕ್ಕೆಲ್ಲಿ ಬಂತು'? ತಾವಿರುವವರೆಗೇ ಇವೆಲ್ಲ' ಎಂದ. 'ಜನರು ಹೀಗೆ ಅಂದುಕೊಳ್ಳುತ್ತಿದ್ದಾರೇನು?' ಎಂದರು ಶ್ರೀಗಳು. 'ಹೌದು ಬುದ್ಧಿ. ಎಲ್ಲರೂ ಹೊರಗಡೆ ಹೀಗೇ ಅಂದುಕೊಳ್ಳುತ್ತಿದ್ದಾರೆ' ಎಂದ. ಶ್ರೀಗಳವರ ಮುಖ ಗಂಭೀರವಾಯಿತು. ಯಾವ ವಿಚಾರವನ್ನೂ ಮಾಡದೆ ಎಲ್ಲದಕ್ಕೂ ಹೌದು ಬುದ್ಧಿ. ಹೌದು ಬುದ್ಧಿ ಎನ್ನುತ್ತ ತಾನೂ ಒಂದೆರಡು ಹೆಚ್ಚಿಗೆ ಮಾತುಗಳನ್ನು ಪೋಣಿಸಿ ಹೇಳುತ್ತಿರುವ ಪುಟ್ಟಯ್ಯನತ್ತ ತೀಕ್ಷ್ಣದೃಷ್ಟಿಯನ್ನು ಹರಿಸಿದರು. ಅವರ ತೀಕ್ಷ್ಣದೃಷ್ಟಿಪಾತ ತನ್ನನ್ನು ಎರಗಿತೆಂಬುದನ್ನರಿತ ಪುಟ್ಟಯ್ಯನಿಗೆ ಭಯವುಂಟಾಯಿತು. ಕೋಪಗೊಂಡರೆ ಹಿಂದುಮುಂದು ನೋಡದೆ ಬಡಿತಕೊಟ್ಟುಬಿಡುತ್ತಿದ್ದರೆಂಬುದರ ಅರಿವಿದ್ದ ಪುಟ್ಟಯ್ಯ ಮೇಲಕ್ಕೆದ್ದ. 'ಏಯ್, ಅಯೋಗ್ಯ! ಏಳು ಮೇಲಕ್ಕೆ ಇಲ್ಲಿಂದ! ತೊಲಗಾಚೆ. ಮೂರ್ಖ! ಮಠದ ಕಸಗೂಡಿಸುವವರಿಲ್ಲದಾಗುತ್ತದಂತೆ? ಮಠ ಸುಣ್ಣಬಣ್ಣ ಕಾಣುವುದಿಲ್ಲವಂತೆ! ಮಠವನ್ನು ಉಳಿಯಗೊಡುವುದಿಲ್ಲವಂತೆ! ಯಾರೋ ನಿನಗೆ ಹೇಳಿದವರು. ಅವರ ಕೆಲಸಕಾರ್ಯ ಕಂಡು ಲೋಕವೆಲ್ಲ ಅವರನ್ನು ಬಾಯಿತುಂಬ ಹೊಗಳತೊಡಗಿದೆ. ಖರ್ಚು ಮಾಡಿದರೇನು? ದುಡಿಯುತ್ತಾರೆ. ಖರ್ಚು ಮಾಡುತ್ತಾರೆ, ದುಡಿಯುವವರು ಅವರು. ಖರ್ಚು ಮಾಡುವವರು ಅವರು. ಬಡಬಗ್ಗರನ್ನು ಕಂಡರೆ, ವಿದ್ಯಾರ್ಥಿಗಳನ್ನು ಕಂಡರೆ, ಮಠಕ್ಕೆ ಬರುವ ಜನಗಳನ್ನು ಕಂಡರೆ ಏನು ಪ್ರೀತಿ! ಏನು ಆದರ! ಸಂತೋಷದಿಂದ ಅವರೆಲ್ಲರಿಗೆ ಅನ್ನವಸತಿ ಒದಗಿಸುವ ಚಿಕ್ಕ ಸ್ವಾಮಿಗಳನ್ನು ಏನೆಂದು ತಿಳಿದಿದ್ದೀಯೋ ಮೂರ್ಖಾ. ಸರಕಾರಿ ಆಫೀಸರಂತೂ ಅವರನ್ನು ಕಂಡರೆ ಬಹಳ ಭಯ ತೋರಿಸುತ್ತಾರೆ. ಹಳ್ಳಿಪಳ್ಳಿಗಳ ಜನ ಹಾಡಿಹರಸುತ್ತಿದ್ದಾರೆ. ಲೋಕಪೂಜ್ಯರಾಗಿರುವ ಅವರನ್ನು ಹಾಗೆ ಹೀಗೆ ಅನ್ನುವುದಕ್ಕೆ ಬಂದ ಈ ಮೂರ್ಖ. ಯಾರೋ ಅವರು ಮಠ ಹಾಳುಮಾಡುತ್ತಾರೆ ಎನ್ನುವವರು? ಏಳು ಮೇಲಕ್ಕೆ ಇಲ್ಲಿಂದ! ಅಷ್ಟಿಲ್ಲದೆ ನಾನು ಅವರಿಗೆ ಕಾವಿ ಉಡಿಸಿದ್ದೇನೇನೋ ಮೂರ್ಖ. ನಡೆ ಆಚೆ...' ಇತ್ಯಾದಿಯಾಗಿ ಗದರಿದೊಡನೆ ಪುಟ್ಟಯ್ಯನ ಜಂಘಾ ಬಲವೇ ಉಡುಗಿದಂತಾಗಿ ಪಾದಗಳ ಮೇಲೆ ಅಡ್ಡಬಿದ್ದು 'ತಪ್ಪಾಯಿತು ಬುದ್ಧಿ, ತಾವು ಹೇಗೆ ಹೇಳಿದಿರೋ ಹಾಗೇ ನಾನು ಹೇಳಿದೆ. ಚಿಕ್ಕವರು ಬಹಳ ದೊಡ್ಡವರು. ಅವರನ್ನು ಲೋಕ ಹಾಡಿ ಹೊಗಳುತ್ತಿದೆ ಬುದ್ಧಿ. ನೀವೇನು ಅಂದುಕೊಳ್ಳುತ್ತೀರೋ ಎಂದುಕೊಂಡು ನೀವು ಹೇಳಿದಂತೆ ಹೇಳಿದೆ ಅಷ್ಟೇ' ಎಂದನು. 'ಅಯ್ಯ ಗೃಹಸ್ಥ, ನೀನು ಹೊರಗೆ ಇರುವವ; ನಾಲ್ಕು ಜನರು ಆಡುವ ಮಾತು ಕೇಳುವವ: ನೈಜವಾದ ಮಾತನ್ನು ಹೇಳುತ್ತೀಯೆ ಎಂದುಕೊಂಡು ಹಾಗೆ ಕೇಳಿದರೆ, ನೀನು ಇನ್ನು ಎರಡು ಹೆಚ್ಚಿಗೆ ಮಾತು ಪೋಣಿಸಿ ಹೇಳಿ ನನಗೂ ಅವರಿಗೂ ತಂದು ಹಚ್ಚಬೇಕೆಂದಿರುವೆಯಾ'– ಎಂದು ಶ್ರೀಗಳು ತಮ್ಮ ಕೋಪವನ್ನು ಸ್ವಲ್ಪ ಕಡಿಮೆ ಮಾಡಿದರು, ಆಗ ಪುಟ್ಟಯ್ಯ 'ಸ್ವಾಮಿ, ಕ್ಷಮಿಸಿಬಿಡಿ. ನನ್ನದು ತಪ್ಪಾಯಿತು' ಎಂದು ಹೊರಟುಹೋದವನು ಪುನಃ ಈ ಪ್ರಸ್ತಾಪವನ್ನೇ ಮಾಡಲಿಲ್ಲ.

ಮಹಾ ಕಾರಣಿಕರೂ, ಶಿವಯೋಗನಿಷ್ಠಾಗರಿಷ್ಠರೂ ಆದ ಶ್ರೀ ಉದ್ದಾನ ಶಿವಯೋಗಿಸ್ವಾಮಿಗಳವರ ಈ ಯೋಗ್ಯತಾ ಪತ್ರಕ್ಕಿಂತ ಶಿವಕುಮಾರಸ್ವಾಮಿಗಳವರಿಗೆ ಜಗತ್ತಿನ ಇನ್ನಾವ ಯೋಗ್ಯತಾ ಪತ್ರಗಳು ಬೇಕಾಗಿಲ್ಲವಷ್ಟೇ. ಅವತಾರಿಕ ಗುರು–ಅವತಾರಿಕ ಶಿಷ್ಯರ ನಿರಾಕುಳಸಂಗದಿಂದ ಶಿವಯೋಗದ ಸುಜ್ಞಾನ ಉದ್ಭವ. ಶಿವಕುಮಾರ ಮಹಾಸ್ವಾಮಿಗಳು ಸಾಧಿಸಿದ ಮುಗಿಲೆತ್ತರದ ಸಾಧನೆಗೆ ಇಹಪರದಪುಣ್ಯಪುರುಷ ಮಹಾಶಿವಯೋಗಿ ಉದ್ದಾನಪ್ಪಗಳು ವಶಪಡಿಸಿಕೊಂಡ ಪರುಷ ಶಕ್ತಿಯೇ ಕಾರಣ. ಅವರು ತಮ್ಮ ಶಿಷ್ಯೋತ್ತಮನಲ್ಲಿ ಪೂರ್ಣವಾಗಿ ತಮ್ಮನ್ನೇ ಕಾಣುತ್ತಿದ್ದರು. ಅಂತರಂಗದಲ್ಲಿ ಕಾರುಣ್ಯ ಪ್ರವಾಹವನ್ನೇ ಅವರತ್ತ ಹರಿಸುತ್ತಿದ್ದರು. ಆದರೆ ಮೇಲು ನೋಟಕ್ಕೆ ಬಹಿರಂಗದಲ್ಲಿ ಅವರ ಮೇಲೆ ಅನೇಕ ಬಗೆಯಲ್ಲಿ ಕೋಪದೋರಿ ಗುರುವಿನಿಂದಾದ ಮಾನಾಪಮಾನಗಳ ಬಗೆಗೆ ಅವರನ್ನು ಪರೀಕ್ಷಿಸುತ್ತಿದ್ದರು. ಪುಟವಿಕ್ಕಿ ಅಪರಂಜಿಯಾಗಿದೆಯೇ ಎಂದು ಪರೀಕ್ಷಿಸಿ ನೋಡಲು ಅವೆಲ್ಲ ಅವರು ಒಡ್ಡಿದ ಪ್ರಸಂಗಗಳೋ ಏನೋ ಶಿವಯೋಗಿಗಳಿಗೇ ಗೊತ್ತು. ಆದರೆ ಗುರುವಿಗೆ ತಕ್ಕ ಶಿಷ್ಯರಾದ ಶಿವಕುಮಾರಸ್ವಾಮಿಗಳು ತಮ್ಮ ಮೇರುವಿನಂಥ ತಾಳ್ಮೆ, ಧೈರ್ಯ, ಸ್ಥೈರ್ಯಗಳಿಂದ ಒಂದೂ ಮಾತನಾಡದೆ ತಡೆದುಕೊಂಡುದು ಅವರ ಲೋಕ ವಿಭೂತಿತ್ವಕ್ಕೆ ಪ್ರತ್ಯಕ್ಷ ನಿದರ್ಶನವಾಗಿದೆ. ಶಿವಯೋಗಿಗಳ ಕೋಪವೂ ಆಶೀರ್ವಾದವೇ ಆಗಿರುತ್ತಿತ್ತು ಎಂಬ ಮಾತಿಗೆ ಸಾರ್ಥಕ್ಯವನ್ನಿಲ್ಲಿ ಕಾಣುತ್ತೇವೆ.

**ಕೊನೆಯ ಉಳಿಯೇಟು :**

ಇಂತು ಉದ್ದಾನಶಿವಯೋಗಿಗಳು ಶಿಷ್ಯನನ್ನು ವಿವಿಧ ಪರೀಕ್ಷೆಗಳಿಗೆ ಒಳಪಡಿಸಿ ತೇರ್ಗಡೆಗೊಳಿಸಿ ಕೊನೆಯ ಯೋಗ್ಯತಾ ಪತ್ರಕೊಡಬೇಕಲ್ಲವೆ ? ಅದಕ್ಕೊಂದು ಪ್ರಸಂಗವನ್ನು ಒಡ್ಡಿದರು. ಈ ಪ್ರಸಂಗ ನಡೆದುದು ೧೯೪೧ನೆಯ ಇಸ್ವಿಯ ಜನವರಿ ಸುಮಾರಿನಲ್ಲಿ. ಈ ಹೊತ್ತಿಗಾಗಲೇ ಶಿವಕುಮಾರ ಸ್ವಾಮಿಗಳು ಅಧಿಕಾರ ಸ್ವೀಕರಿಸಿ ಹನ್ನೊಂದು ವರ್ಷಗಳು ಸಂದಿದ್ದವು. ಅಷ್ಟು ವೇಳೆಗೆ ಶಿವಕುಮಾರ ಸ್ವಾಮಿಗಳವರ ಶಿವಯೋಗದಲ್ಲಿನ ಶಕ್ತಿ ಸಾಮರ್ಥ್ಯಗಳೂ, ಅವರ ಲೋಕಾನುಗ್ರಹಚರ್ಯೆಗಳೂ ದಾಸೋಹ ಸದ್ಭಾವದ ಪ್ರಜ್ಞೆಗಳೂ ಲೋಕಪ್ರಸಿದ್ಧವಾಗಿದ್ದವು; ಅವರ ತಪಶ್ಶಕ್ತಿ ಸಾಮರ್ಥ್ಯಗಳಿಂದ ಶ್ರೀ ಸಿದ್ಧಗಂಗಾ ಕ್ಷೇತ್ರದ ಕೀರ್ತಿಗೌರವಗಳೂ ಅತ್ಯಧಿಕವಾಗಿ ಹರಡಿದ್ದವು. ಜನತೆ ಅವರನ್ನು ಮಹಾಕಾರಣಿಕರೆಂದು ಗುರುತಿಸಿತ್ತು.

ಉದ್ದಾನಶಿವಯೋಗಿಗಳು ದೈಹಿಕ ಅಸ್ವಸ್ಥತೆಯಿಂದ ಹಾಸಿಗೆ ಹಿಡಿದಿದ್ದರು. ಅನೇಕ ಜನಗಳು ಶ್ರೀಗಳವರನ್ನು ಬಂದು ಬಂದು ನೋಡಿಕೊಂಡು ಹೋಗುತ್ತಿದ್ದರು. ಚಿತ್ರದುರ್ಗದಿಂದ ಲಿಂ. ಜಗದ್ಗುರು ಜಯದೇವ ಮುರುಘರಾಜೇಂದ್ರ ಸ್ವಾಮಿಗಳೂ ಉದ್ದಾನ ಶಿವಯೋಗಿಗಳ ದರ್ಶನಕ್ಕೆ ಬಂದರು. ಉದ್ದಾನಶಿವಯೋಗಿಗಳ ದರ್ಶನಕ್ಕೆ ಬಂದ ಜಯದೇವಸ್ವಾಮಿಗಳವರನ್ನು ಶಿವಕುಮಾರ ಸ್ವಾಮಿಗಳವರು ಸ್ವಾಗತಿಸಿ ಹಳೆಯ ಮಠದಲ್ಲಿರುವ ತಮ್ಮ ಗುರುಗಳ ದರ್ಶನಕ್ಕೆ ಕರೆದೊಯ್ದರು. ಆಸಮಯದಲ್ಲಿ ಚಿತ್ರದುರ್ಗ ಜಗದ್ಗುರುಗಳವರ ಸಮಕ್ಷದಲ್ಲಿಯೇ ಉದ್ದಾನಶಿವಯೋಗಿಗಳು ತಮ್ಮ ಶಿಷ್ಯರ ಮೇಲೆ ಕೋಪದ ಕಿಡಿಕಾರಿದರು. ಶಿವಕುಮಾರ ಸ್ವಾಮಿಗಳವರು ಕಾರಣವಿಲ್ಲದೆ ಬಂದವರೆದುರಿಗೆ ಹೀಗೆ ವಿನಾಕಾರಣ ಕೋಪದ ಕಿಡಿಕಾರಿದುದಕ್ಕೆ ಖಿನ್ನವದನರಾಗಿ ಜಗದ್ಗುರುಗಳನ್ನು ಅಲ್ಲಿಯೇ ಬಿಟ್ಟು ಹೊರಗೆಹೋಗಿ ಕುಳಿತುಬಿಟ್ಟರು. ಜಗದ್ಗುರುಗಳು ಉದ್ದಾನಶಿವಯೋಗಿಗಳ ಯೋಗಕ್ಷೇಮ ವಿಚಾರಿಸಿ ಹೊರಟು ಹೋಗುವಾಗ ಶಿವಕುಮಾರಸ್ವಾಮಿಗಳವರನ್ನು ಕಂಡು ಸಮಾಧಾನಪಡಿಸಿ ಹೊರಟು ಹೋದರು. ಈ ಪ್ರಸಂಗದಿಂದ ಉದ್ದಾನಶಿವಯೋಗಿಗಳೂ ಚಿಕ್ಕವರಿಗೆ ಇಂದು ಬಹಳ ನೋವನ್ನುಂಟು ಮಾಡಿದೆನೆಂದು ಮನಸ್ಸಿನಲ್ಲಿ ಭಾವಿಸಿದರು. ಆಗ ಅಲ್ಲಿದ್ದವರು ಉದ್ದಾನಸ್ವಾಮಿಗಳವರಿಗೆ 'ಬುದ್ಧಿ ಜಗದ್ಗುರುಗಳವರ ಎದುರಿಗೆ ತಾವು ಚಿಕ್ಕ ಸ್ವಾಮಿಗಳವರನ್ನು ಹೀಗೆ ಹೀಯಾಳಿಸಿದುದು ಸರಿಯೇ ? ಅವರೇನೆಂದುಕೊಳ್ಳುತ್ತಾರೆ. ಅವರಲ್ಲಿ ಏನಾದರೂ ತಪ್ಪಿದ್ದರೆ ಏಕಾಂತದಲ್ಲಿ ಕರೆಸಿ ಶಿಕ್ಷಿಸಿದರೆ ಅವರು ತಮ್ಮ ಶಿಕ್ಷೆಯನ್ನು ಸಹಿಸಿಕೊಳ್ಳಲಾರರೆ ? ಅದು ಬಿಟ್ಟು ಬಂದವರೆದುರಿಗೆಲ್ಲ ಹೀಗೆ ಭರ್ತ್ಸನೆಗೊಳಿಸಿದರೆ ಅವರ ಮನಸ್ಸಿಗೆ ಎಷ್ಟು ನೋವಾಗಲಿಕ್ಕಿಲ್ಲ ? ಅವರು ಅತ್ಯಂತ ಜವಾಬ್ದಾರಿಯ ಈ ಸಂಸ್ಥೆಯ ಕಾರ್ಯಕ್ರಮಗಳನ್ನು ನಡೆಸುವುದಾದರೂ ಹೇಗೆ ?'[29] ಎಂದರು. ಅದಕ್ಕೆ ಶಿವಯೋಗಿಗಳು 'ಹೌದು, ಹೀಗೆ ಅವರನ್ನು ಇಂದು ವಾಗ್ದಂಡನೆಗೊಳಗು ಮಾಡಿದ್ದು ನನಗೂ ನೋವನ್ನುಂಟುಮಾಡಿದೆ. ಆದರೆ ನನ್ನ ಅಭಿಪ್ರಾಯವಿಷ್ಟು : ಅವರು ಮಹಾ ಸಂಸ್ಕಾರಿಗಳೆಂಬುದನ್ನು ಬಲ್ಲೆನು, ಆದರೂ ಅವರು ಇನ್ನೂ ಲೋಕಪೂಜ್ಯರಾಗಬೇಕೆಂಬ ಬಯಕೆ ನನ್ನದು. ನನ್ನ ಈ ಭರ್ತ್ಸನೆಯನ್ನು ಅವರು ಎಷ್ಟರಮಟ್ಟಿಗೆ ಸಹಿಸಿಕೊಳ್ಳಬಲ್ಲರೆಂಬ ನನ್ನ ಇಂದಿನ ಪರೀಕ್ಷೆಯೇ ಕೊನೆಯ ಪರೀಕ್ಷೆ. ಅವರ ಆದರ್ಶ, ಶ್ರದ್ಧಾಶಕ್ತಿ, ಶಿವಪೂಜಾ ದುರಂಧರತೆ, ಲೋಕವ್ಯವಹಾರಜ್ಞಾನ, ಭಕ್ತಿ, ಜನವಾತ್ಸಲ್ಯ, ಸಂಸ್ಥೆಯನ್ನು ಕಟ್ಟಿ ಬೆಳೆಸುವಲ್ಲಿನ ಅಪಾರಶಕ್ತಿಸಾಮರ್ಥ್ಯ, ವಿದ್ಯಾಪಕ್ಷಪಾತ, ಕಾಯಕಸದ್ಭಾವಗಳನ್ನು ಕಂಡು ನನ್ನ ಹೃದಯ ಆನಂದದಿಂದ ಉಕ್ಕಿಹೋಗಿದೆ. ಅದೊಂದು ಶ್ರೇಷ್ಠ ದರ್ಜೆಯ ಲಿಂಗವಾಗಿ ಮಹಾ ಮಹಾ ಶಿವಯೋಗಿಗಳ ದಿವ್ಯತಪೋಭೂಮಿಯಾದ ಈ ಕ್ಷೇತ್ರದ ಮಹಿಮೆಯನ್ನು ಬೆಳಗಬೇಕೆಂದೇ ಇದುವರೆಗೆ ತೊಂಬತ್ತೊಂಬತ್ತು ಉಳಿಯೇಟು ಹಾಕಿ ಕೆತ್ತುತ್ತ ಬಂದಿದ್ದೇನೆ. ಈ ದಿನ ಜಗದ್ಗುರುಗಳವರೆದುರಿಗೆ ನೂರನೆಯ ಏಟನ್ನು ಹಾಕಿ ಪೂರ್ಣಗೊಳಿಸಿದೆ. ಇನ್ನು ಮೇಲೆ ಅವರ ತಂಟೆಗೆ ಹೋಗುವುದಿಲ್ಲ. ಅವರ ಮೇಲೆ ಶ್ರೀ ಸಿದ್ಧಲಿಂಗೇಶ್ವರನ ಅಪಾರ ಕಾರುಣ್ಯ ಜಲಧಾರಾಪಾತವಾಗಿದೆ. ಅವರಿಂದ ಮುಂದೆ ಈ ಕ್ಷೇತ್ರದ ಯಶಸ್ಸು ಬೆಳಗಲಿ. ಲೋಕದ ಜನಕ್ಕೆ ಕ್ಷೇತ್ರದಿಂದ ಬಹಳಷ್ಟು ಉಪಕಾರವಾಗಲಿ' ಎಂದು ಹೇಳಿ ಸುಮ್ಮನಾದರು. ಪುನಃ ಸ್ವಾಮಿಗಳವರನ್ನು ಅವರು ಎಂದೂ ಏನೂ ಅನ್ನಲಿಲ್ಲ. ಇದೆಲ್ಲ ನಡೆದುದು ರಾತ್ರಿಯ ಸಮಯದಲ್ಲಿ. ಬೆಳಗಾದ ಮೇಲೆ ಶಿವಕುಮಾರ ಸ್ವಾಮಿಗಳವರಿಗೆ ಈ ವಿಷಯವನ್ನು ಹೋಗಿ ತಿಳಿಸಿದರು. ಆಗ ಚಿಕ್ಕಸ್ವಾಮಿಗಳಿಗೆ ಕುಸಿದು ಹೋಗುವಂತಾಯಿತಂತೆ. ಇದುವರೆಗೆ ತಮ್ಮನ್ನು ಕಂಡರೆ ವಿನಾಕಾರಣ ಗುಡುಗುತ್ತಿದ್ದ ತಮ್ಮ ಪೂಜ್ಯ ಗುರುವರ್ಯರ ಅಭಿಪ್ರಾಯ ಅರ್ಥವಾಗಿ ತಮ್ಮ ತಿಳುವಳಿಕೆ ಎಷ್ಟು ತಪ್ಪಿನಿಂದ ಕೂಡಿದುದೆಂದು ಮರುಗಿ ಆ ಕೂಡಲೆ ಪುನಃ ಶ್ರೀ ಉದ್ದಾನ ಶಿವಯೋಗಿಗಳವರ ದರ್ಶನಕ್ಕೆ ಬಂದರು. ಆಗ ಉದ್ದಾನ ಶಿವಯೋಗಿಗಳು ತಮ್ಮ ಅತ್ಯಂತ ವಾತ್ಸಲ್ಯಪೂರ್ಣಕೃಪಾದೃಷ್ಟಿಯಿಂದ ಅವರನ್ನು ದಿಟ್ಟಿಸಿನೋಡಿ ಕಣ್ಣೀರ್ಗರೆದರು. ಆ ದೃಷ್ಟಿಪಾತದಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳವರು ಏನೋ ಹೊಸತನ ಕಂಡಂತಾದರು. ಎಂದೂ ಇಲ್ಲದ ಅಪೂರ್ವ

---

29. ಈ ಮಾತನ್ನು ಹೇಳಿದವರು ಕ್ಷೇತ್ರದ ಹಳೆಯ ವಿದ್ಯಾರ್ಥಿಗಳಾದ ಆಸ್ಥಾನವಿದ್ವಾನ್ ನಂಜುಂಡಾರಾಧ್ಯರು. ಇವರು ಉದ್ದಾನಶಿವಯೋಗಿಗಳ ಕೃಪೆಗೆ ಪಾತ್ರರಾದವರಲ್ಲಿ ಒಬ್ಬರು.

ತೇಜಸ್ಸೊಂದು ತಮ್ಮ ಮೈಮನಗಳನ್ನು ಆವರಿಸಿದಂತೆ ಭಾವಿಸಿ ಸಂತೋಷಗೊಂಡು ಪುಳಕಿತಗಾತ್ರರಾಗಿ ಶಿವಯೋಗಿಗಳ ಸನಿಹಕ್ಕೆ ಸರಿದಾಗ ಶಿವಯೋಗಿಗಳು ತಮ್ಮ ಶಿಷ್ಯರ ಮೈದಡವಿದರು. ಹಿಂಡುಗಟ್ಟಿ ಪುಳಕಗೊಂಡ ಶರೀರದ ಶಿವಕುಮಾರ ಸ್ವಾಮಿಗಳು ಬೆವೆತರು. ಗದ್ಗದಿತಕಂಠರಾಗಿ ಕಣ್ಣೀರೊರೆಸುತ್ತ ಕುಳಿತರು. ಇದೇ ಸ್ಥಿತಿ ಉದ್ದಾನ ಶಿವಯೋಗಿಗಳವರಿಗೂ ಆಗಿ ಧಾರಾಕಾರವಾಗಿ ಆನಂದಬಾಷ್ಪ ಸುರಿಸಿದರು. ಶಿವಕುಮಾರ ಸ್ವಾಮಿಗಳವರಿಗೆ ತಮ್ಮ ಶಕ್ತಿಸೂರ್ಯಾಡಿಸಿದಂತಾಗಿ ವಿಲಕ್ಷಣಾ ನಂದಭರಿತರಾದರು.

"ಜ್ಯೋತಿಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪುದಯ್ಯ:
ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪುವಯ್ಯ ;
ಪ್ರಸಾದವ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪುವಯ್ಯ ;
ಲಿಂಗವಮುಟ್ಟಿದಂಗವೆಲ್ಲ ಲಿಂಗವಪ್ಪುದಯ್ಯ :
ಸಕಳೇಶ್ವರ ದೇವಾ. ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯ" (—ಸಕಳೇಶ ಮಾದರಸರು)

"ಜ್ಯೋತಿಯ ಸಂಗದಿಂದ ಕರ್ಪೂರವು ಜ್ಯೋತಿಯಪ್ಪಂತೆ :
ಅಪ್ಪುವಿನ ಸಂಗದಿಂದ ಲವಣವು ಅಪ್ಪುವಪ್ಪವಂತೆ ;
ಶ್ರೀಗುರುವಿನ ಸಂಗದಿಂದ ಶಿಷ್ಯನು ಗುರುವಪ್ಪುದು ತಪ್ಪದು.
'ಯಥಾಬೀಜಸ್ತಥಾಂಕುರಃ' ಎಂಬುದು ತಪ್ಪದು, ದಿಟದಿಟನೋಡಾ ;
ಕಲ್ಪವೃಕ್ಷದ ಬೀಜದಿಂದಾದ ಸಸಿಯು ಕಲ್ಪವೃಕ್ಷವಪ್ಪದು ತಪ್ಪದು ನೋಡಾ:
ಕಾಮಧೇನುವಿನ ಶಿಶು ಕಾಮಧೇನುವಪ್ಪದು ದಿಟದಿಟ ನೋಡಾ ;
ಸದ್ಗುರುವಿನಿಂದಾದ ಶಿಷ್ಯನು ಸದ್ಗುರುವಪ್ಪುದು ದಿಟದಿಟ ನೋಡಾ ;
'ಯಥಾಬೀಜಸ್ತಥಾಂಕುರಃ' ಎಂಬ ವಾಕ್ಯವು ತಪ್ಪದು.
ಶಿವಬಲ್ಲನು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ" (—ಉರಿಲಿಂಗ ಪೆದ್ದಿಗಳು)

ಎಂಬ ಶರಣರ ನುಡಿಯಂತೆ ಉದ್ದಾನ ಶಿವಯೋಗಿಗಳ ತಪಶ್ಶಕ್ತಿಯ ದಿವ್ಯಜ್ಯೋತಿಯಿಂದ ಶ್ರೀ ಶಿವಕುಮಾರ ಜ್ಯೋತಿ ಬೆಳಗತೊಡಗಿತು. ಆ ಕಲ್ಪವೃಕ್ಷದ ಬೀಜದಿಂದ ಈ ಕಲ್ಪವೃಕ್ಷ ಮೊಳೆದೋರಿ ಮಹಾವೃಕ್ಷವಾಗತೊಡಗಿತು. ಆ ಕಾಮಧೇನುವಿನ ಶಿಶು ಕಾಮಧೇನುವೇ ಆಗಿ ಸಿದ್ಧಗಂಗಾ ಪುಣ್ಯಭೂಮಿಯನ್ನು ಸ್ವರ್ಗವನ್ನಾಗಿಸಿತು. ಈಗ ಗುರುವೇ ಶಿಷ್ಯನಾದ, ಶಿಷ್ಯನೇ ಗುರುವಾದ. ಇಳಿದ ಗುರು ಶಿಷ್ಯನಾಗಿಬಿಟ್ಟ; ಏರಿದ ಶಿಷ್ಯ ಗುರುವಾಗಿ ಬಿಟ್ಟ. ಈ ರಹಸ್ಯ ಗೂಢಕ್ಕೆ ಗೂಢ. ಈ ಘಟನೆ ನಡೆದ ಕೆಲವೇ ದಿನಗಳಲ್ಲಿ ಅಂದರೆ ೧೧-೧-೧೯೪೧ನೆಯ ಶನಿವಾರ ರಾತ್ರಿ ೧೧-೪೫ರ ಸುಮಾರಿಗೆ ಉದ್ದಾನ ಶಿವಯೋಗಿಗಳ ಜೀವಜ್ಯೋತಿ ಪರಂಜ್ಯೋತಿಯಲ್ಲಡಗಿತು. ಸುಮಾರು ೮೦-೮೧ ವರ್ಷಗಳಷ್ಟು ದೀರ್ಘಕಾಲ ಈ ಶಿವಗಂಗಾ ಪ್ರಾಂತದ ಪುಣ್ಯಭೂಮಿಯಲ್ಲಿ ಅವತಾರ ಮಾಡಿದ ಆ ದಿವ್ಯತೇಜೋಮೂರ್ತಿ ಲೋಕಜೀವನದಲ್ಲಿ ತನ್ನ ಅದ್ಭುತವಾದ ಕ್ರಿಯಾ ಪ್ರಾಬಲ್ಯದಿಂದ ಕಾಯಕ ಸದ್ಭಾವ ಮಾಡಿ. ಅನಂತ ಜನರ ಕಲ್ಪತರುವಾಗಿ, ಕಾಮಧೇನುವಾಗಿ ದ್ವಿತೀಯ ಗೋಸಲಸಿದ್ಧೇಶ್ವರ ರೆನಿಸಿ ಬಹುಜನಜೀವನದಲ್ಲಿ ತೊಳಗಿದ ಆ ಪುಣ್ಯಜ್ಯೋತಿ ಸಿದ್ಧಗಂಗಾ ಕ್ಷೇತ್ರ ಮಧ್ಯದಲ್ಲಿ ಬೆಳಗಿತು. ಆ ಜ್ಯೋತಿಯ ಬೆಳಕಿನಲ್ಲಿ ತಮ್ಮನ್ನು ತಾವು ಅರಿತುಕೊಂಡವರು ಎಷ್ಟೋ ಜನರು ಈಗಲೂ ಇದ್ದಾರೆ. ಅವರು ತೊಟ್ಟ ದಾಸೋಹವ್ರತ. ಅವರು ಸಾಧಿಸಿದ ಸಾಧನೆ, ಸಮಸ್ತ ಮಠಾಧಿಪತಿಗಳಿಗೆ ತೋರುಗಂಬ. ದಾರಿದೀಪ. ಆ ದೀಪದ ಬತ್ತಿಯನ್ನು ಚಾಚಿ ಉಜ್ವಲಗೊಳಿ ಸುತ್ತಿರುವವರಲ್ಲಿ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅಗ್ರಗಣ್ಯರು, ಅವರ ಇಂದಿನ ಲೋಕೋಪಕಾರಕ ಸಮಸ್ತ ಕ್ರಿಯಾ ಮುಖದಲ್ಲಿ ಉದ್ದಾನೇಶ್ವರರು ತೆರೆಯ ಮರೆಯಲ್ಲಿ ನಿಂತು ಇಂದೂ ಬೆಳಗುತ್ತಿದ್ದಾರೆ. ಆ ದೇಹದಿಂದ ಅವರು ಮರೆಯಾಗಿ ಶಿಷ್ಯರಲ್ಲಿ ಜ್ಯೋತಿಯಾಗಿ ಬೆಳಗುತ್ತಿದ್ದಾರೆನ್ನಬಹುದು.

"ಬಯಲೇ ರೂಪಾಯಿತ್ತು ; ನಿರ್ವಯಲೇ ನಿರೂಪಾಯಿತ್ತು.
ಸರ್ವಾಂಗದೊಳು ಉರಿ ವೇದಿಸಿತ್ತು. ಅಲ್ಲೊಂದು ಸದಮದಗಜ
ಹಯನಾಯಿತ್ತು. ಅಮೃತವನೆ ಉಂಡಿತ್ತು. ನಮ್ಮ ಬಸವಪ್ರಿಯ
ಚೆನ್ನಬಸವಣ್ಣನ ಕೂಡಿತ್ತು." (—ಅಪ್ಪಣ್ಣ ಶರಣರು)

# ಉದ್ದಾನ ಶಿವಯೋಗಿಗಳವರ ಕಾಲದ ಕೆಲವು ಅದ್ಭುತ ಘಟನೆಗಳು

ಉದ್ದಾನಶಿವಯೋಗಿಗಳು ಹುಟ್ಟಾ ಯೋಗಪುರುಷರು. ಬಾಲಲೀಲಾ ಮಹಾಂತ ಶಿವಯೋಗಿಗಳಂತೆ, ಅಥಣಿಶಿವ ಯೋಗಿಗಳಂತೆ ಇವರ ಜೀವನದಲ್ಲೂ ಅನೇಕ ಅದ್ಭುತ ಪವಾಡಗಳು ನಡೆದುಹೋಗಿವೆ. ಮಹಾಘನಲಿಂಗವು ತನ್ನ ತಾನರ್ಚಿಸಿ ಕೊಂಬ ಲೀಲಾವಿಲಾಸದಿಂದ ದೇಹವೆಂಬ ಮನೆಯ ಮಾಡಿಕೊಂಡು ಶರಣರೂಪಾಗಿ ಅಖಂಡ ಜ್ಞಾನದೃಷ್ಟಿಯಿಂದ ವ್ಯವ ಹಾರಕ್ಕೆ ಲೋಕಲೌಕಿಕರಂತೆ ಕಂಡರೂ ಅವರ ಇರವಿನ ಪರಿಯೇ ಬೇರೆ. ಅವರು ದೇಹವಿಡಿದಿದ್ದರೂ ದೇಹಗುಣವಂಟದಂತೆ ನಿರ್ಲೇಪರಾಗಿಯೇ ಜಗಜ್ಜಾಲದಲ್ಲಿ ವ್ಯವಹರಿಸುತ್ತಾರೆ. ಅಂಥವರ ಜೀವನವೇ ಒಂದು ಲೀಲೆ. ಆ ಲೀಲೆಯಲ್ಲಿನ ಅವರ ಅನೇಕ ಸಹಜಕ್ರಿಯೆಗಳೂ ಲೋಕಕ್ಕೆ ಪವಾಡವಾಗಿ ಕಾಣುವುದುಂಟು. ಪವಾಡಗಳನ್ನು ನಂಬದ ಕೆಲವು ವಿಜ್ಞಾನವಾದಿಗಳು ಈ ಬಗೆಗೆ ಸ್ವಲ್ಪ ಅನುಮಾನ ವ್ಯಕ್ತಪಡಿಸುವುದುಂಟು. ಆದರೆ ಉದ್ದಾನಶಿವಯೋಗಿಗಳ ಅನೇಕ ಅದ್ಭುತ ಘಟನೆಗಳನ್ನು ಕಂಡವರು ಇನ್ನೂ ಇದ್ದು, ಅವರು ಆ ಘಟನೆಗಳ ಬಗೆಗೆ ಪ್ರಭಾವಿತರಾಗಿ ಹೇಳುತ್ತಿರುವುದನ್ನು ಕೇಳುತ್ತಿದ್ದೇವೆ. ಒಂದು ಕಾಲದಲ್ಲಿ ಪೂರ್ವಜನ್ಮ ಪುನರ್ಜನ್ಮಗಳ ಬಗೆಗೆ ಸಂಶಯ ವ್ಯಕ್ತಪಡಿಸುತ್ತಿದ್ದ ವಿಜ್ಞಾನವಾದಿಗಳೇ ಈಗ ಆ ವಿಷಯದಲ್ಲಿ ಶ್ರದ್ಧೆ ತಳೆದಿದ್ದಾರೆ. ಈ ಯುಗದ ಜಗತ್ಪ್ರಸಿದ್ಧ ಯೋಗಪುರುಷನೆನಿಸಿದ್ದ ಅರವಿಂದ ಘೋಷರು ಪವಾಡಗಳನ್ನು ಅಲ್ಲಗಳೆದಿಲ್ಲ. ಅವರ ಜೀವಿತ ಒಂದು ಪವಾಡಮಯವೇ ಆಗಿತ್ತು. ಇದೇನೇ ಇರಲಿ. ಉದ್ದಾನಶಿವಯೋಗಿಗಳು ಅದ್ಭುತ ಶಕ್ತಿಯುಳ್ಳ ಮಹಿಮಾ ವಿಶೇಷವುಳ್ಳವರು. ಮಹಮ್ಮದೀಯರೂ ಕೂಡ ಇವರ ಅಸಾಧಾರಣ ಶಕ್ತಿಗೆ ಮಾರುಹೋಗಿ ಅವರನ್ನು ಬಾಯ್ತುಂಬ ಹೊಗಳುತ್ತಾರೆ. ಅವರ ಪವಾಡಗಳನ್ನು ಬಣ್ಣಿಸುತ್ತಾರೆ. ಅನಂತ ಪವಾಡಗಳನ್ನು ಇವರು ಮಾಡಿದರೂ ಅವು ಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಕೆಲವು ಇವರ ಅದ್ಭುತವಾದ ಪರುಷ ಶಕ್ತಿಯಿಂದ ನಡೆದ ಘಟನೆಗಳು, ಈ ಹಿಂದೆ ವಿವರಿಸಿರುವ ಉದ್ದಾನಶಿವಯೋಗಿಗಳ ಚರಿತ್ರೆಯಲ್ಲಿಯೇ ಕೆಲವು ಪವಾಡಗಳ ವರ್ಣನೆ ಇದೆ. ಅವು ಗಳನ್ನುಳಿದು ಉಳಿದವುಗಳು ಈ ಮುಂದೆ ಇವೆ:

೧) ಉದ್ದಾನಶಿವಯೋಗಿಗಳು ಪೂರ್ವಾಶ್ರಮದಲ್ಲಿ ರುದ್ರಪ್ಪ ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದರಷ್ಟೆ.[30] ಇವರು ಸೇವಾಕಾಂಕ್ಷೆಯಿಂದ ಸಿದ್ಧಗಂಗಾಮಠಕ್ಕೆ ಬಂದು ಸೇರಿದಮೇಲೆ ಮಠದ ದಾಸೋಹ ವ್ಯವಸ್ಥೆಗೊಂದು ಅಪೂರ್ವ ಕೊಡುಗೆಯಂತಾಗಿದ್ದರು. ಸೌದೆಸೊಪ್ಪನ್ನು ಹೊಂದಿಸುವ ಭಾರವನ್ನೆಲ್ಲ ಅಡವಿಸ್ವಾಮಿಗಳು ಇವರಿಗೇ ಒಪ್ಪಿಸಿದ್ದರು. ಒಂದು ದಿನ ರುದ್ರಪ್ಪ ಐದಾರು ಗಾಡಿಗಳನ್ನು ಕಟ್ಟಿಸಿಕೊಂಡು ದೇವರಾಯನ ದುರ್ಗಕ್ಕೆ ಸೌದೆಗಾಗಿ ಹೋಗಿದ್ದ. ಕ್ಯಾತಸಂದ್ರದ ಮಹಮ್ಮದೀಯ ಮದಾರ್‌ಸಾಬಿ ಎಂಬುವನೂ ಈ ಗುಂಪಿನಲ್ಲಿದ್ದವನು. ಗಾಡಿಗಳಲ್ಲಿ ಸೌದೆ ತುಂಬಿ ಹೊರಡುವ ವೇಳೆಗಾಗಲೆ ಕತ್ತಲಾಯಿತು. ಆಕಾಶವೆಲ್ಲ ಮೇಘಾಚ್ಛಾದಿತವಾಗಿ ಕಗ್ಗತ್ತಲು ಎತ್ತೆತ್ತಲೂ ಹರಡಿಹೋಯಿತು. ದಾರಿಯೇ ಕಾಣದಂತಾ ಯಿತು. ರುದ್ರಪ್ಪನವರಿಗೆ ಗಾಡಿಯವರೆಲ್ಲ 'ಸ್ವಾಮಿ, ಈಗ ಕತ್ತಲು ಬಹಳವಾಯಿತು. ಇಲ್ಲಿಯೇ ಎತ್ತುಗಳ ಕೊರಳುಬಿಚ್ಚಿ ಗಾಡಿಗಳನ್ನು ನಿಲ್ಲಿಸಿಬಿಡೋಣ, ಬೆಳಗಾದಮೇಲೆ ಮಠಕ್ಕೆ ಹೋದರಾಯಿತು. ಇನ್ನೂ ಮಠ ನಾಲ್ಕೈದು ಮೈಲು ದೂರವಿದೆ. ರಾತ್ರಿ ಎಲ್ಲಿಯಾದರೂ ಗಾಡಿಗಳು ಉರುಳಿ ಆಗಬಾರದ ಅನಾಹುತವಾದರೆ ಗತಿಯೇನು' ಇತ್ಯಾದಿಯಾಗಿ ನುಡಿಯುತ್ತಿರಲು, ರುದ್ರಪ್ಪನವರು–'ಇಲ್ಲ, ಆಗಲೇ ಕೂಡದು. ಈಗ ಎಷ್ಟು ಹೊತ್ತಿದ್ದರೂ ಮಠಕ್ಕೆ ಹೋಗಿಯೇ ತೀರಬೇಕು. ಅಡಿವೆಪ್ಪ ನವರು[31] ಎಷ್ಟು ಹೊತ್ತಿದ್ದರೂ ಮಠಕ್ಕೆ ಈ ದಿನ ಸೌದೆ ಬಂದು ಬೀಳಬೇಕೆಂದು ಆಜ್ಞೆಮಾಡಿದ್ದಾರೆ. ನೀವಾರೂ ಹೆದರ ಬೇಡಿರಿ. ಈಗ ಪಂಜಿನ ಬೆಳಕು ಬರುತ್ತೆ ಎನ್ನುತ್ತಿದ್ದಂತೆಯೇ ಗಾಡಿಗಳ ಮುಂಭಾಗದಲ್ಲಿ ಎರಡು ಕಡೆಗೂ ಎರಡು ಬೆಳಕು ಗಳು ಮುಂದೆ ಮುಂದೆ ನಡೆಯತೊಡಗಿದವು. ಎಲ್ಲರಿಗೂ ಈ ವಿಚಿತ್ರವನ್ನು ಕಂಡು ಭಯಾಶ್ಚರ್ಯಗಳೆರಡೂ ಉಂಟಾದವು. ರುದ್ರಪ್ಪ ಮುಂದೆ ಮುಂದೆ ನಡೆಯತೊಡಗಿದ. ಗಾಡಿಗಳು ಹಿಂದು ಹಿಂದೆ ಬರತೊಡಗಿದವು. ಆ ಬೆಳಕು ಮಠದ ಆವರಣ ದವರೆಗೂ ಬಂದು ಮಾಯವಾಯಿತು. ಈ ದೃಶ್ಯವನ್ನು ಕಂಡವರು ಮೊನ್ನೆಮೊನ್ನೆಯವರೆಗೂ ಇದ್ದರು, ಕ್ಯಾತಸಂದ್ರದ ಮದಾರ್‌ಸಾಬಿ ಎಂಬುವವರು ಸ್ವತಃ ಈ ದೃಶ್ಯವನ್ನು ಕಂಡು ಕೊನೆಯವರೆಗೆ ಈ ಬಗೆಗೆ ಕಥೆಮಾಡಿ ಹೇಳುತ್ತಿದ್ದುದುಂಟು.

೨) ರಾಮಲಿಂಗೇಶ್ವರ ಬೆಟ್ಟದಲ್ಲಿರುವ ದೊಡ್ಡಸಿದ್ದಪ್ಪನ ಗವಿಗೆ ಉದ್ದಾನಶಿವಯೋಗಿಗಳು ಮನಸ್ಸು ಬಂದಾಗ ಲೆಲ್ಲ ಹೋಗಿ ಬರುತ್ತಿದ್ದರು. ಆ ಗವಿಯಿರುವುದು ಮಠದಿಂದ ಸುಮಾರು ಎರಡು ಎರಡುವರೆ ಮೈಲುಗಳ ಅಂತರದಲ್ಲಿ. ರಾಮಲಿಂಗೇಶ್ವರನ ಬೆಟ್ಟದ ಮಧ್ಯಭಾಗದ ದಟ್ಟಡವಿಯಲ್ಲಿ ಅಲ್ಲಿಗೆ ಹೋಗಲು ಎರಡು ಕಾಲು ದಾರಿಗಳುಂಟು. ಒಂದು

30. ಮುಂದಿನ ಕಥೆಗಳಲ್ಲಿ 'ರುದ್ರಪ್ಪ' ಎಂದು ಬಂದೆಡೆಗಳಲ್ಲೆಲ್ಲ ಈ ಹೆಸರು ಉದ್ದಾನಶಿವಯೋಗಿಗಳ ಪೂರ್ವಾಶ್ರಮದ ಹೆಸರೆಂದು ಭಾವಿಸಬೇಕು.

31. ಸಿದ್ಧಗಂಗಾಮಠದ ಆಡಳಿತ ನಡೆಸುತ್ತಿದ್ದ ಅಡವಿಸ್ವಾಮಿಗಳು.

ದಾರಿ ಸಿದ್ಧಗಂಗಾ ಬೆಟ್ಟದ ತಪ್ಪಲಿನಿಂದ ನೇರವಾಗಿ ಬೆಟ್ಟದಲ್ಲಿಯೇ ಹಾದು ಹೋಗುವುದು; ಇದು ಸ್ವಲ್ಪ ಸಮೀಪ. ಸುಮಾರು ಒಂದು ಒಂದುವರೆ ಮೈಲಿಯಾದೀತು. ಇನ್ನೊಂದು ರಾಮಲಿಂಗನ ಬೆಟ್ಟವನ್ನು ಬಳಸಿ ಅದರ ಪೂರ್ವಾದಿಗ್ಭಾಗದಿಂದ ಬೆಟ್ಟವನ್ನೇರಿ ಹೋಗುವುದು ಇದೇ ಬಳಸಿನದು, ಆದರೆ ಸುಲಭ. ಉದ್ದಾನಶಿವಯೋಗಿಗಳು ಸಿದ್ಧಗಂಗಾಬೆಟ್ಟದ ತಪ್ಪಲಿನಿಂದ ಸಮೀಪದ ದಾರಿಯಿಂದಲೇ ಒಂದು ಅಮಾವಾಸ್ಯೆಯ ದಿನ ಹೊರಟರು. ಅವರ ಶಿವಪೂಜಾಮರಿ 'ಬಾಳಪ್ಪ' ಎಂಬುವವನಿದ್ದನು.[31a] ಸ್ವಾಮಿಗಳವರ ಆಪ್ತವ್ಯಕ್ತಿ ಆತ. ಸ್ವಾಮಿಗಳು ಮುಂದೆ ಮುಂದೆ ಹೋದಂತೆಲ್ಲ ಕತ್ತಲಲ್ಲಿ ಅವರಿಗೆ ಕಾಣದಂತೆ ಈತನೂ ಹೊರಟ. ಇನ್ನೇನು ಗವಿ ಸಮೀಪದಲ್ಲೇ ಬಂದಿತು. ಆಗ ಒಂದು ಧ್ವನಿ 'ಮನುಷ್ಯಸಂಗಾತವೇತಕ್ಕೆ' ಎಂದು ಮೊಳಗಿತು. ಉದ್ದಾನಪ್ಪವರು ಹಿಂದಕ್ಕೆ ಹೊರಳಿ ನೋಡಿದರು, ಹಿಂದೆ ಬೀಳುತ್ತೇಳುತ್ತಾ ಬಾಳಪ್ಪ ಬರುತ್ತಿದ್ದ. 'ಬಾಳಪ್ಪ ನೀನೇಕೆ ಬಂದೆ. ಹಿಂದಕ್ಕೆ ಹೊರಡು' ಎಂದು ಒಂದು ಬಾಳೆಹಣ್ಣು ಕೊಟ್ಟು ಕಳಿಸಿದರಂತೆ. ಬಾಳಪ್ಪನೂ ಅವಷ್ಟು ಧೈರ್ಯಶಾಲಿಯೇ ಆದರೂ ಹಿಂದಕ್ಕೆ ಬರದೆ ಬಹಳ ದೂರ ಹಿಂದೆ ಉಳಿದು ಹಿಂದೆಯೇ ಹೋದ. ಸ್ವಾಮಿಗಳು ದೊಡ್ಡ ಸಿದ್ದಪ್ಪನ ಗವಿಯನ್ನು ಸಮೀಪಿಸುತ್ತಿದ್ದಂತೆಯೇ ಎರಡು ದೀಪಗಳು ಅವರಿಗೆ ಮಾರ್ಗದರ್ಶನಗಳಾಗಿ ಹೋಗತೊಡಗಿದವು. ಸ್ವಾಮಿಗಳು ಗವಿಯನ್ನು ಪ್ರವೇಶಿಸಿದರು. ಬಾಳಪ್ಪ ಹೊರಭಾಗದಲ್ಲಿ ದೂರದ ಒಂದು ಕಲ್ಲುಬಂಡೆಯ ಮೇಲೆ ಇಡೀ ರಾತ್ರಿಯನ್ನು ಕಳೆದ. ರಾತ್ರಿ ಗವಿಯಿಂದ ಘಂಟೆ ಜೇಗಟೆಗಳ ನಾದ ಕೇಳಿಬರುತ್ತಿತ್ತೆಂದು ಮಾತ್ರ ಹೇಳುತ್ತಿದ್ದ. ಸ್ವಾಮಿಗಳು ಮುಂದೆ ಮುಂದೆ ಒಬ್ಬರೇ ಹೋಗುತ್ತಿದ್ದಾಗ ಎರಡು ಪಂಜುಗಳ ಬೆಳಕನ್ನು ಕಂಡವರಲ್ಲಿ ಬಾಳಪ್ಪನೂ ಒಬ್ಬ. ತನ್ನ ಜೀವಿತಾವಧಿಯವರೆಗೆ ಈ ರೋಮಾಂಚಕಾರೀ ಘಟನೆಗಳನ್ನು ಬಾಳಪ್ಪ ಹೇಳುತ್ತಿದ್ದ.

೩) ೧೯೪೫ನೆಯ ಇಸ್ವಿ ನಾನು[32] ನನ್ನ ಸ್ನೇಹಿತರೊಂದಿಗೆ ಚಿಕ್ಕಳ್ಳಿಗೆ ಹೋಗಿದ್ದೆ.[33] ಸ್ನೇಹಿತರು ಆ ಊರಿನಲ್ಲಿರುವ ತಮ್ಮ ತೋಟಕ್ಕೆ ಎಳನೀರು ಕುಡಿದುಬರೋಣ ಎಂದು ನನ್ನನ್ನು ಕರೆದೊಯ್ದರು. ತೋಟಕ್ಕೆ ಹೋದೆವು. ನಾವು ಹೋದ ತೋಟದ ಪಕ್ಕದಲ್ಲಿಯೇ ಮಠಕ್ಕೆ ಭಕ್ತರು ಬರೆದುಕೊಟ್ಟ ಒಂದು ಚಿಕ್ಕ ತೋಟವಿದೆ. ಆ ತೋಟದಲ್ಲಿ ಕುಳಿತೆವು. ಆ ತೋಟವನ್ನು ಮಠಕ್ಕೆ ಬರೆದುಕೊಟ್ಟವರೇ ಮಾಡುತ್ತಿದ್ದರು. ಅವರು ಸಿದ್ಧಗಂಗಾ ಕ್ಷೇತ್ರದಿಂದ ನಾವು ಬಂದಿರುವೆವೆಂದು ತಿಳಿದು ಓರ್ವ ಹೆಣ್ಣು ಮಗಳು ಬಂದು ಆದರಿಸಿದಳು. ನಾವು ಆಗಲೇ ಎಳನೀರು ಕುಡಿದು ಬಂದಿದ್ದರಿಂದ ಅವರು ತಂದ ಎಳನೀರು ಕುಡಿಯಲು ಒತ್ತಾಯ ಮಾಡಿದರೂ ಕುಡಿಯಲಿಲ್ಲ. ಆಗ ಅವರು 'ಆ ನಮ್ಮಪ್ಪ ಉದ್ದಾನಪ್ಪನ ಪುಣ್ಯವೇ ಪುಣ್ಯ' ಎಂದು ಎತ್ತಿಕೈಮುಗಿದು, ಈ ನಮ್ಮ ತೋಟವನ್ನು ಅವರಿಗೆ ಅರ್ಪಿಸಿಬಿಟ್ಟಿದ್ದೇವೆ ಎಂದು ತನ್ನ ತೋಟವನ್ನು ಅರ್ಪಿಸಿದುದರ ಹಿನ್ನೆಲೆಯ ಕಥೆಯನ್ನು ನಮ್ಮ ಆಗ್ರಹದ ಮೇರೆಗೆ ಹೇಳತೊಡಗಿದಳು.

'ಸ್ವಾಮಿ ನಮಗೆ ಒಬ್ಬನೇ ಮಗ ಅಂತಾ ಇದ್ದಾ. ಚೆನ್ನಾಗೇ ಇದ್ದ. ಬಾಳಾ ಕಾಯ್ಲೆ ಆಯ್ತು. ನಾವು ಕಂಡ ಕಂಡ ಮದ್ದು ಕೊಟ್ವಿ. ಆದರೂ ಉಳಿಲಿಲ್ಲ. ಸತ್ತು ಹೋಗಿಬಿಟ್ಟ. ಸತ್ತುಹೋದ ಸ್ವಲ್ಪ ಹೊತ್ತಿನ ಮೇಲೆ ಮಿಸುಗಿದಾ. ನಮ್ಗೆಲ್ಲಾ ಸಂತೋಷವಾಯ್ತು. ಎದ್ದುಕೂತ್ಗಂಡಾ. 'ಅಮ್ಮಾ, ನಾನು ಸಿದ್ಗಂಗೆಗೋಗಿದ್ದೆ. ಉದ್ದಾನಪ್ನೋರು ಏನ್ಬಂದೇ ಊಟಾ ಮಾಡ್ಕೋಗು ಎಂದರು. ಊಟಮಾಡಿಬಂದೆ. ಎಂದವನೇ ಮತ್ತೆಮಲಗಿದವ್ನ ಮ್ಯಾಲ್ಕೇಳ್ಳಿಲ್ಲ ಸ್ವಾಮಿ' ಎಂದವಳೇ ಬಳಬಳ ಕಣ್ಣೀರು ಸುರಿಸಿದಳು. ಅವಳ ಈ ಕರುಳು ಕೊರೆಯುವ ಕಥೆ ಕೇಳಿ ನಮಗೂ ಕಸಿವಿಸಿಯಾಯಿತು. 'ಈ ಘಟನೆ ನಡೆದ ಮೇಲೆ ಆ ಸ್ವಲ್ಪ ತೋಟವನ್ನೇ ಸಿದ್ಧಗಂಗೆಗೆ ಬರೆದುಕೊಟ್ಟು ನಾವೇ ಮಾಡುತ್ತಿದ್ದೇ'ವೆಂದಳು. ಇದು ನಾವೇ ಪ್ರತ್ಯಕ್ಷ ಕೇಳಿದ ಕಥೆ. ಈ ಹೆಣ್ಣುಮಗಳು ಅಗ್ನಿವಂಶ ಕ್ಷತ್ರಿಯ ಜನಾಂಗದವಳು (ಅಂದರೆ ತಿಗುಳರು).

೪) 'ದಾಸೋಹದ ಖರ್ಚಿಗೆ ರಾಗಿ ಮುಗಿದು ಹೋಗಿದೆ' ಎಂದು ದಾಸೋಹದವರು ಸ್ವಾಮಿಗಳ ಕಿವಿಗೆ ಸುದ್ದಿ ಮುಟ್ಟಿಸಿದರು. ಸ್ವಾಮಿಗಳು ತಾವೇ ದೊಡ್ಡ ಗಳುವೊಂದನ್ನು ಪಣತದ (ಕಣಜ) ಮೇಲಿನ ಬೆಳಕಿಂಡಿಯಿಂದ ಸುಗ್ಗಿಸಿ ಕುಟ್ಟಿ ನೋಡಿದರು 'ಡಣ, ಡಣ,' ಎಂದು ನೆಲದ ಸಪ್ಪಳ ಕೇಳಿಸಿತು. ಓಹೋ, ರಾಗಿ ಮುಗಿದು ಹೋಗಿದೆ. ಈಗ ರಾಗಿಯನ್ನೆಲ್ಲಿಂದ ಹೊಂದಿಸುವುದು ? ಎಂದುಕೊಂಡು ಬೆಟ್ಟವನ್ನೇರಿ ಯಾವಾಗಲೂ ಹೋಗಿ ಕುಳಿತುಕೊಳ್ಳುವ ಕಲ್ಲುಬಂಡೆಯ ಮೇಲೆ ಬಾಯ ಮೇಲೆ ಕೈಯಿಟ್ಟು ಮೂಗಿನ ಮೇಲೆ ಬೆರಳಾಡಿಸುತ್ತಾ ಕುಳಿತು ಬಿಟ್ಟರು. ಆ ಕಲ್ಲುಬಂಡೆಯ ವೈಶಿಷ್ಟ್ಯವೇನೆಂದರೆ ಸೂರ್ಯೋದಯವಾದೊಡನೆ ಇಲ್ಲಿಗೆ ನೇರವಾಗಿ ಸೂರ್ಯಕಿರಣಗಳು ಬೀಳುತ್ತವೆಂದೂ ಉದ್ದಾನಸ್ವಾಮಿಗಳು ಅನೇಕ ಪ್ರಸಂಗಗಳಲ್ಲಿ ಆ ಬಂಡೆಯ

---

31a. ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಪ್ರೊಫೇಸರ್ ಆಗಿ ನಿವೃತ್ತರಾಗಿರುವ ವಿದ್ವಾನ್ ಗಂಗಪ್ಪನವರು ಈ ಬಾಳಪ್ಪನವರ ಪುತ್ರರು.

32. ನಾನು ಎಂದರೆ ಈ ಲೇಖನ ಬರೆದವ.

33. ಮಠದಿಂದ ಸುಮಾರು ಮೂರು ಮೈಲುಗಳ ಅಂತರದಲ್ಲಿರುವ ಹಿರೇಹಳ್ಳಿ ರೇಲ್ವೆ ಸ್ಟೇಷನ್ ಬಳಿಯಿರುವ ಹಳ್ಳಿ.

ಮೇಲೆ ಕುಳಿತುಕೊಳ್ಳುತ್ತಿದ್ದರೆಂದೂ ಅಲ್ಲಿ ಅವರು ಕುಳಿತುಕೊಂಡಮೇಲೆ ಅವರ ಮನಸ್ಸಿನ ಇಚ್ಛೆಯಂತೆ ಕಾರ್ಯಗಳಾಗುತ್ತಿದ್ದವೆಂದೂ ಹೇಳಲಾಗುತ್ತಿದೆ.[34] ಇವರು ಈ ಕಲ್ಲು ಬಂಡೆಯ ಮೇಲೆ ಕುಳಿತಾಗ ಅವರ ಬಳಿಗೆ ಯಾರೂ ಹೋಗುತ್ತಿರಲಿಲ್ಲ.

ಈ ಸಮಯಕ್ಕೆ ಮೆಳೆಹಳ್ಳಿಯ ಭೀಮೇಗೌಡ ಎಂಬುವರು[35] ಊರಿನಿಂದ ಗಾಡಿಯನ್ನು ಹೂಡಿಸಿಕೊಂಡು ದಾಸೋಹಕ್ಕೆ ಸ್ವಲ್ಪದವಸಧಾನ್ಯಗಳನ್ನು ಹೇರಿಕೊಂಡು ತನ್ನ ಮಗ ಸಿದ್ದಪ್ಪ (ಸಿದ್ದೇಗೌಡ)ನ ಹೆಂಡತಿಯನ್ನು ಕರೆದುಕೊಂಡು ಮಠಕ್ಕೆ ಬಂದನು. ಅವನು ಸ್ವಾಮಿಗಳು ಬೆಟ್ಟದಮೇಲೇರಿ ಕುಳಿತಿರುವರೆಂಬುದನ್ನು ಮಠದ ಜನಗಳಿಂದ ತಿಳಿದು ಸ್ವಾಮಿಗಳು ಕುಳಿತಲ್ಲಿಗೆ ಸೊಸೆಯೊಡನೆ ನೇರವಾಗಿ ಹೋದ. ಸ್ವಾಮಿಗಳು ತಾವೇತಾವಾಗಿ ನಿರ್ಲಿಪ್ತತೆಯಿಂದ ಕುಳಿತಿದ್ದರು. ಭೀಮೇಗೌಡ ಸೊಸೆಯೊಡನೆ ಸ್ವಾಮಿಗಳವರಿಗೆ ನಮಸ್ಕರಿಸಿ ನಿಂತ. 'ಏನು ಏನು, ಯಾವಾಗ ಬಂದದ್ದು ? ಏನು ಬಂದದ್ದು ? ಏನು ? ...[36] ಇತ್ಯಾದಿಯಾಗಿ ಕೇಳಿದರು. 'ಸ್ವಾಮಿ, ದೇವರು ಕೊಟ್ಟಂತೆ ಎಲ್ಲಾ ಭಾಗ್ಯ ಇದೆ. ಇಗೋ ಇವಳೇ ಸೊಸೆ. ನನ್ನ ಮಗ ಸಿದ್ದೇಗೌಡನ ಹೆಂಡತಿ. ಮದುವೆಯಾಗಿ ಹನ್ನೆರಡು ವರ್ಷಗಳಾಗಿ ಹೋಗಿವೆ. ಮೊಮ್ಮಕ್ಕಳನ್ನು ಕಾಣುವ ಭಾಗ್ಯ ನನ್ನ ಹಣೆಯಲ್ಲಿ ಬರೆಯಲಿಲ್ಲ. ಅದಕ್ಕಾಗಿ ಸ್ವಾಮಿಯ ಸನ್ನಿಧಿಗೆ ಬಂದಿದ್ದೇನೆ. ಇಷ್ಟೆ'! 'ಇಷ್ಟೆಯೋ! ಹೋಗು ಹೋಗು ದಾಸೋಹಕ್ಕೆ ಹತ್ತು ಹತ್ತು ಕಂಡುಗ ರಾಗಿ ತಂದು ಹಾಕು ಹೋಗು ಹೋಗು' ಎಂದರು ಸ್ವಾಮಿಗಳು. ಭೀಮೇಗೌಡನೇನು ಸಾಮಾನ್ಯನಲ್ಲ. ಭಕ್ತನ ಕೆಚ್ಚು ನೆಚ್ಚುಗಳಿದ್ದ ಮನುಷ್ಯ. 'ಇಷ್ಟೆಯೋ ಸ್ವಾಮಿ, ತಂದು ಹಾಕುತ್ತೇನೆ ನಿಮ್ಮ ಮಾತು ಸುಳ್ಳಾದರೆ ?' ಎಂದ. ಸ್ವಾಮಿಗಳು ಅವನನ್ನು ಅವನ ಸೊಸೆಯನ್ನು ದಿಟ್ಟಿಸಿನೋಡಿ 'ಸಿದ್ಧಲಿಂಗೇಶ ಎಲ್ಲಾ ಎಲ್ಲಾ ಸುಖ ಮಾಡುತ್ತಾನೆ. ಗಂಗಾಸ್ನಾನ ಮಾಡಿಸಿ ಪ್ರಸಾದ ತಕ್ಕೊಂಡು ಹೊರಡು ಹೊರಡು; ಊರಿಗೆ ಹೋಗಿ ರಾಗಿ ತಂದು ಹಾಕು; ರಾಗಿತಂದು ಹಾಕು' ಎಂದು ಬಿಟ್ಟರು. ಭೀಮೇಗೌಡ ಶ್ರೀಗಳವರು ಹೇಳಿದಂತೆ ಗಂಗಾಸ್ನಾನವನ್ನು ಸೊಸೆಗೆ ಮಾಡಿಸಿ ಪೂಜೆ ಮುಗಿಸಿಕೊಂಡು ಊಟಮಾಡಿ ಗಾಡಿಕಟ್ಟಿಕೊಂಡು ಊರಿಗೆ ಬಂದನು. ಊರಿಗೆ ಬಂದ ಮೇಲೆ ಶ್ರೀಮಠಕ್ಕೆ ಶ್ರೀಗಳವರು ಹೇಳಿದಂತೆ ಹತ್ತು ಕಂಡುಗ ರಾಗಿಯನ್ನು ನ್ಯಾಯವಾಗಿ ಅಳೆದು ಭಯಭಕ್ತಿಯಿಂದ ಕೂಡಿ ಅರ್ಪಿಸಿ ಹೋದ. ಮುಂದೆ ಒಂದೇ ವರ್ಷದಲ್ಲಿ ಗಂಡು ಮಗುವೊಂದು ಸೊಸೆಯ ಹೊಟ್ಟೆಯಲ್ಲಿ ಹುಟ್ಟಿತು. ಮಗುವಿಗೆ 'ಸಿದ್ಧಲಿಂಗೇಗೌಡ' ಎಂದು ಹೆಸರಿಟ್ಟು ಮೊಮ್ಮಗ, ಮಗ, ಸೊಸೆಯರೊಡನೆ ಶ್ರೀಕ್ಷೇತ್ರಕ್ಕೆ ಪುನಃ ಇನ್ನಷ್ಟು ರಾಗಿಯನ್ನು ಹೇರಿಕೊಂಡು ಬಂದು ಅರ್ಪಿಸಿ ಸ್ವಾಮಿಗಳವರ ದರ್ಶನಾಶೀರ್ವಾದ ಪಡೆದನು. ಮುಂದೆ ಅವರೇ ಸಿದ್ಧಲಿಂಗೇಶ್ವರರ ಜಾತ್ರೆಯಲ್ಲಿ ಒಂದು ಕೊಪ್ಪಲನ್ನು ಕಟ್ಟಿಸಿ, ಜನರಿಗೆ ಊಟೋಪಚಾರ ವ್ಯವಸ್ಥೆ ಮಾಡಿಸ ತೊಡಗಿದರು. ಈಗಲೂ ಈ ಕೊಪ್ಪಲಿಗೆ ಮೆಳೆಹಳ್ಳಿ ಕೊಪ್ಪಲು ಎಂದೇ ಕರೆಯಲಾಗುತ್ತಿದೆ. ಈ ಮೆಳೆಹಳ್ಳಿಯವರ ಸೇವೆ ನಾನಾ ಮುಖದಲ್ಲಿ ಮಠಕ್ಕೆ ಈಗಲೂ ಸಂದಾಯವಾಗುತ್ತಲೇ ಇದೆ.

(—ಕರ್ನಕುಪ್ಪೆ ಚೇರಮನ್ ರೇವಣ್ಣನವರು ಹೇಳಿದ್ದು)

ಋ) ತುಮಕೂರು ತಾಲ್ಲೂಕಿನಲ್ಲಿ ಕರ್ನಕುಪ್ಪೆ ಪಾಳ್ಯ ಎಂಬ ಊರಿದೆ. ಇದಕ್ಕೆ ಮಾಯಮ್ಮನ ಪಾಳ್ಯವೆಂದೂ ಕರೆಯಲಾಗುತ್ತದೆ. ಅಲ್ಲಿ ಮರಿಯಪ್ಪನೆಂಬ ಒಬ್ಬ ರೈತ. ಅವನು ಒಂದು ಹುಣಸೇಮರದ ತೋಪು ಬೆಳೆಸಿದ್ದ. ಉದ್ದಾನ ಶಿವಯೋಗಿಗಳು ಕರ್ನಕುಪ್ಪೆಗೆ ಭಿಕ್ಷಾಟನೆಗೆ ಬಂದು ಅಲ್ಲಿಯ ಕಾರ್ಯ ಮುಗಿಸಿಕೊಂಡು ಕರ್ನಕುಪ್ಪೆ ವೀರೇಗೌಡರೊಡನೆ ಕುದುರೆಯ ಮೇಲೆ ಬೇರೆ ಊರಿಗೆ ಪ್ರಯಾಣ ಬೆಳೆಸುವಾಗ ಆ ಹುಣಸೇಮರದ ತೋಪಿನ ಹತ್ತಿರಕ್ಕೆ ಬಂದರು. ಆ ಹುಣಸೇಮರಗಳನ್ನು ಬೆಳಸಿದ್ದ ರೈತನಾದ ಮರಿಯಪ್ಪ ಅಲ್ಲಿಯೇ ಇದ್ದ. ಸ್ವಾಮಿಗಳು ಆ ತೋಪಿನ ಹತ್ತಿರ ಕುದುರೆಯನ್ನು ಥಟ್ಟನೆ ನಿಲ್ಲಿಸಿದರು, ರೈತ ಓಡಿಬಂದು ಸ್ವಾಮಿಗಳಿಗೆ ನಮಸ್ಕರಿಸಿದ. 'ಯಾರ ಮರ ಯಾರ ಮರ ಇವೆಲ್ಲ' ಎಂದರು. ಮರಿಯಪ್ಪ 'ಸ್ವಾಮಿ ಇವೆಲ್ಲ ನಾನು ಬೆಳೆಸಿದವು. ಇಷ್ಟು ದೊಡ್ಡವಾದರೂ ಕಾಯಿಲ್ಲ, ಕಸರಿಲ್ಲ. ಈ ವರ್ಷ ಎಲ್ಲವನ್ನು ಕಡಿಸಿಹಾಕಿಬಿಡುತ್ತೇನೆ' ಎಂದ. ಆಗ ಸ್ವಾಮಿಗಳು 'ಆ ಮರಗಳನ್ನೆಲ್ಲ ದಿಟ್ಟಿಸಿ ನೋಡಿ, ಈ ವರ್ಷ ಬಿಡುವ ಫಸಲನ್ನೆಲ್ಲ ದಾಸೋಹಕ್ಕೆ ತಂದು ಹಾಕಿಬಿಡು' ಕಡಿಸಬೇಡ ಒಳ್ಳೆಯಮರ. ಮುಂದೆ ಸಿದ್ಧಲಿಂಗೇಶ ಸುಖ ಮಾಡುತ್ತಾನೆ' ಎಂದು ಹೇಳಲೊಡನೆ ಅವನು 'ಸ್ವಾಮಿ ಕಾಯಿಬಿಟ್ಟರಲ್ಲವೇ ದಾಸೋಹಕ್ಕೆ ತಂದು ಹಾಕೋದು' ಎಂದ. 'ಹಾಕುಹಾಕು ನಮಸ್ಕಾರ ಹಾಕು. ಕಾಯಿ ಬಿಡುತ್ತೆ ಬಿಡುತ್ತೆ, ತಿಳಿಯಿತಿಲ್ಲೊ! ಮಠಕ್ಕೆ ಫಸಲು ತಂದು ಹಾಕೋದನ್ನು ಮರೆಯಬೇಡ ಮರೆಯಬೇಡ' ಎಂದರು. ಅದರಂತೆ ಹೇಳಿ ಮರಿಯಪ್ಪ ನಮಸ್ಕಾರ ಹಾಕಿದ. ಅದೇನು ಅದ್ಭುತವೊ ಆ ವರ್ಷ ಎಲೆಗೊಂದರಂತೆ ಕಾಯಿಬಿಟ್ಟು ಮರಗಳು ಬೀಗಿನಿಂತವು. ಶ್ರೀಗಳವರು ಅಪ್ಪಣೆ

---

34. ಈಗ ಈ ಕಲ್ಲು ಬಂಡೆಯಾವುದೆಂಬುದರ ಪರಿಚಯ ಮಠದಲ್ಲಿ ಯಾರಿಗೂ ಇದ್ದಹಾಗೆ ಇಲ್ಲ.
35. ತುಮಕೂರಿನಿಂದ ಉತ್ತರಕ್ಕೆ ಆರೇಳುಮೈಲುಗಳ ಅಂತರದಲ್ಲಿ ಶಿರಾಕ್ಕೆ ಹೋಗುವ ದಾರಿಯಿಂದ ಪೂರ್ವ ದಿಗ್ಭಾಗದಲ್ಲಿರುವ ಒಂದು ಊರು.
36. ಚಿಕ್ಕ ಚಿಕ್ಕ ಮಾತುಗಳನ್ನು ಎರಡೆರಡು ಮೂರು ಮೂರು ಸಲ ಮಾತನಾಡುವುದು ಸ್ವಾಮಿಗಳ ಮಾತಿನ ಶೈಲಿ.

ಕೊಡಿಸಿದಂತೆ ಆ ವರ್ಷದ ಎಲ್ಲ ಹುಣುಸೇಹಣ್ಣನ್ನು ಒಡೆದು ತಂದು ಮಠಕ್ಕೆ ಹಾಕಿದ. ಶ್ರೀಗಳವರ ದೃಷ್ಟಿಪರುಪಶಕ್ತಿಗೆ ಇದೊಂದು ಜೀವಂತ ನಿದರ್ಶನ. (—ಕರ್ನಕುಪ್ಪೆ ಚೇರ್ಮನ್ ರೇವಣ್ಣನವರು ಹೇಳಿದ್ದು)

೬) ಕಲ್ಲೆಯದ[37] ಸೋಮಣ್ಣ ಕೃಷಿಕಾಯಕದಲ್ಲಿ ಅತ್ಯಂತ ಶ್ರದ್ಧಾಭಕ್ತಿ ತಳೆದ ಓರ್ವ ವ್ಯಕ್ತಿ. ಸದೃಢ ಶರೀರಿ. ಈತನಿಗೆ ಗಂಡುಸಂತಾನಭಾಗ್ಯ ಮೂವರು ಪತ್ನಿಯರಿಂದ ಲಭಿಸಲಿಲ್ಲ. ಅವರೆಲ್ಲ ಸತ್ತರು. ಇಷ್ಟಾದರೂ ಸಂತಾನ ವಿಷಯದಲ್ಲಿ ಅವನ ತೀವ್ರಾಸಕ್ತಿ ಮಾಯವಾಗಲಿಲ್ಲ. ಕಲ್ಲೆಯವನ್ನು ಬಿಟ್ಟು ಅಂಬಲಗೆರೆಗೆ[38] ಬಂದ. ಅಲ್ಲಿ ಸ್ವಲ್ಪ ಭೂಮಿ ಕಾಣೆಯನ್ನು ಮಾಡಿಕೊಂಡು ಕೃಷಿಕಾಯಕದಲ್ಲಿ ನಿರತನಾದ. ನಾಲ್ಕನೆಯ ಮದುವೆಯನ್ನು ಅಂಬಲಗೆರೆಯಲ್ಲೇ ಮಾಡಿಕೊಂಡ. ಅವರಿಂದಲೂ ಗಂಡುಮಕ್ಕಳಾಗಲಿಲ್ಲ. ಅತಿ ದುಃಖಿತನಾದ ಸೋಮಣ್ಣ ಒಂದು ಸಲ ಅಂಬಲಗೆರೆಗೆ ದಯಮಾಡಿಸಿದ್ದ ಉದ್ದಾನ ಶಿವಯೋಗಿಗಳ ಬೆನ್ನು ಬಿದ್ದ. ಅವರ ದರ್ಶನ ಪಡೆದು ತನ್ನ ದುಃಖವನ್ನು ಹೇಳಿಕೊಂಡು 'ಸ್ವಾಮಿಯವರು ಆಶೀರ್ವದಿಸಿ ನನ್ನ ವಂಶದ ಕುಡಿ ಮುಂದುವರಿಯುವಂತೆ ಮಾಡಬೇಕೆಂದು' ಬೇಡಿಕೊಂಡ. ಆತನ ಕೊರಗನ್ನು ಅರ್ಥ ಮಾಡಿಕೊಂಡ ಶ್ರೀಗಳವರು 'ಗಂಡುಮಗುವಾಗುತ್ತೆ. ಮಗು ಹುಟ್ಟಿದ ಮೇಲೆ ಸ್ವಾಮಿಯ ಹೆಸರಿಟ್ಟು ಅವನ ತೂಕ ರೂಪಾಯಿ ತಂದು ದಾಸೋಹಕ್ಕೆ ಅರ್ಪಿಸು. ಹೋಗು ಹೋಗು' ಎಂದರು. ಹರ್ಷಿತನಾದ ಸೋಮಣ್ಣ ಮನೆಗೆ ಬಂದ. ಅಂದು ಅವನಿಗೆ ವಿಲಕ್ಷಣಾನಂದವಾಯಿತು. ವರ್ಷ ತುಂಬುವುದರೊಳಗೆ ಗಂಡು ಮಗುವು ಜನನವಾಯಿತು. ಇದು ನಡೆದದ್ದು ೧೯೩೦ನೆಯ ಇಸ್ವಿ ಫೆಬ್ರುವರಿ ತಿಂಗಳಲ್ಲಿ. ಮಗುವಿಗೆ ಶ್ರೀಗಳವರ ಆದೇಶದಂತೆ 'ಸಿದ್ಧಗಂಗಪ್ಪ' ಎಂದು ನಾಮಕರಣ ಮಾಡಿ, ನೂರು ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಸ್ವಾಮಿಗಳಿಗೆ ಅರ್ಪಿಸಿದ. ಸ್ವಾಮಿಗಳು "ಈ ನೂರು ರೂಪಾಯಿಗಳು ಮಗುವಿನ ತೂಕ ತೂಗುವುದಿಲ್ಲ. ಹೋಗು ಹೋಗು ತೆಂಗಿನಕಾಯಿ ತಂದು ತೂಗು' ಎಂದರು. ಅದರಂತೆ ಮಗುವಿನ ತೂಕಕ್ಕೆ ಸಮನಾಗಿ ನೂರು ರೂಪಾಯಿ ಮತ್ತು ತಕ್ಕಷ್ಟು ತೆಂಗಿನಕಾಯಿಗಳನ್ನೂ ಹಾಕಿ ತೂಗಿ ಅರ್ಪಿಸಿ ಬಂದನು. ಮತ್ತೊಂದು ಸಲ ಶ್ರೀಗಳವರು ಅಂಬಲಗೆರೆಗೆ ಬಂದು ಸೋಮಣ್ಣನ ಮನೆಯ ಮುಂಭಾಗದ ಚಪ್ಪರದಲ್ಲಿ ನೇರವಾಗಿ ಹೋಗಿ ಕುಳಿತುಕೊಂಡು ತಾವೇ ದುಡ್ಡು ಕೊಟ್ಟು ದಾಬಸ್‌ಪೇಟೆಯಿಂದ ಒಂದು ಚೀಲ ಪುರಿ, ಕಡಲೆ, ಕಲ್ಲುಸಕ್ಕರೆ, ಉತ್ತತ್ತಿಗಳನ್ನು ತರಿಸಿ ಊರಿಗೆಲ್ಲ ಹಂಚಿಸಿ ಮಗುವನ್ನು ಕೈಗೆತ್ತಿಕೊಂಡು ಮುದ್ದಾಡಿ ಬಂದರು. ಮಗು ಬೆಳೆದು ದೊಡ್ಡದಾದ ಮೇಲೆ ಅಂಬಲಗೆರೆಗೆ ಬಂದಾಗ ಅವನನ್ನು ಗುರುತಿಸಿ 'ಏಯ್, ಹೋಗು, ಹೋಗು, ನಿಮ್ಮಪ್ಪ ನಿನ್ನ ತೂಕದ ರೂಪಾಯಿ ಕೊಡುತ್ತೇನೆ ದಾಸೋಹಕ್ಕೆ ಎಂದಿದ್ದ. ತೆಗೆದುಕೊಂಡು ಬಾ ಹೋಗು' ಎಂದರಂತೆ. ಹುಡುಗ ತಂದೆಯನ್ನು ಕಾಡಿ, ಬೇಡಿ ಸ್ವಲ್ಪ ಹಣವನ್ನು ಪಡೆದು ಸ್ವಾಮಿಗಳಿಗೆ ಅರ್ಪಿಸಿದನು. ಸ್ವಾಮಿಗಳು ನಕ್ಕು ಸುಮ್ಮನಾಗಿಬಿಟ್ಟರಂತೆ. (—ಅಂಬಲಗೆರೆ ಜನರು ಹೇಳುವ ಕಥೆ)

೭) ದೇವರಾಯ ಪಟ್ಟಣದಲ್ಲಿರುವ ಮಠದ ಹೊಲದಲ್ಲಿ ಮೆಣಸಿನ ಗಿಡ ಹಚ್ಚಿಸಲಾಗಿತ್ತು. ದೇವರಾಯಪಟ್ಟಣದಲ್ಲಿದ್ದ ಸಂಜೀವಯ್ಯ ಎಂಬುವನು ಅಭಿಚಾರವಿದ್ಯೆಯಲ್ಲಿ ಹೆಸರುವಾಸಿಯಾಗಿದ್ದನು. ಆತನು ತನ್ನ ಅಭಿಚಾರ ವಿದ್ಯೆಯಿಂದ ಗಿಡಗಳೆಲ್ಲ ಒಣಗಿ ಹೋಗುವಂತೆ ಮಾಡಿದ್ದನಂತೆ. ಅದಕ್ಕಾಗಿ ಉದ್ದಾನಪ್ಪನವರು ಅವನನ್ನು ಮಠಕ್ಕೆ ಕರೆಯಿಸಿ. 'ಅಯ್ಯ ಸಂಜೀವಯ್ಯ, ನಮ್ಮ ದಾಸೋಹಕ್ಕೆ ಬೇಕೆಂದು ಹೊಲದಲ್ಲಿ ಮೆಣಸಿನ ಗಿಡ ಹಚ್ಚಿಸಿದರೆ, ಅವು ಒಣಗಿಹೋಗುವಂತೆ ಮಾಡಬಹುದೇ?' ಎಂದರು. ಅದಕ್ಕೆ ಆತನು 'ನಾನು ಮಾಡಿಲ್ಲ' ಎಂದುಬಿಟ್ಟ. ಅವನು ತನ್ನ ಅಭಿಚಾರ ಸಾಮಗ್ರಿ ಸಮೇತ ಅಲ್ಲಿಗೆ ಬಂದಿದ್ದ. ಆಗ ಉದ್ದಾನಪ್ಪನವರು 'ಎಲೋ ನಿಜ ಹೇಳುವಿಯೇ ಬೇಕೋ ನಿನಗೆ' ಎಂದು ಕೈಯ್ಯಲ್ಲಿದ್ದ ಬೆತ್ತವನ್ನು ಮೇಲಕ್ಕೆತ್ತಿದರು. ಆಗ ಅವನು ಸ್ವಾಮಿಗಳ ಬೆತ್ತದ ಏಟು ತನಗೆ ಬೀಳದಂತೆ ಮೇಲಕ್ಕೆತ್ತಿದ ಕೈಹಾಗೇ ಮೇಲಿರುವಂತೆಯೇ ಮಾಡಿಬಿಟ್ಟ. ಆಗ ಸ್ವಾಮಿಗಳು 'ಎಲೋ ದುಷ್ಟ, ನನ್ನ ಮೇಲೆಯೇ ನಿನ್ನ ಶಕ್ತಿ ಪ್ರಯೋಗ ಮಾಡುವೆಯಾ' ಎಂದು ಎಡಗೈಯಿಂದ ಒಂದು ನಿಂಬೆ ಹಣ್ಣನ್ನು ಅವನ ಮೇಲೆ ಹಾಕಿದರು. ಆ ಕೂಡಲೇ ಅವನು ನೆಲಕ್ಕೆ ಬಿದ್ದ. ಆಗ ಉದ್ದಾನಪ್ಪನವರು ಬೆತ್ತವನ್ನು ಹಿಡಿದು ನಡೆ, ನಡೆ, ನಡೆ ಎನ್ನುತ್ತಿದ್ದಂತೆಯೇ ಅವನು ಭೂಮಿಯ ಮೇಲೆ ಉರುಳುತ್ತಾ ನಡೆದನು. 'ಅಪ್ಪಾ ಉದ್ದಾನಪ್ಪನವರೇ, ಇನ್ನು ಮೇಲೆ ಸಾಯೋತನಕ ನಿಮ್ಮ ತಂಟೆಗೆ ಬರುವುದಿಲ್ಲ. ನಾನು ಮಾಡಿದ್ದು ತಪ್ಪು ಸಾಕು ಸಾಕು' ಎಂದ. ಸ್ವಾಮಿಗಳು ಈ ಮೂರ್ಖನಿಗೆ ಸರಿಯಾದ ಪಾಠಕಲಿಸಬೇಕೆಂದು, 'ಎಲೋ ಸಂಜೀವಯ್ಯ ನನ್ನ ಮೇಲೆ ಮಠದ ಮೇಲೆ ಮಾಡುವುದಿರಲಿ, ಇನ್ನಾರ ಮೇಲೂ ಈ ಅಭಿಚಾರ ಪ್ರಯೋಗ ಮಾಡುವುದಿಲ್ಲವೆಂದು ಸಿದ್ಧಲಿಂಗೇಶ್ವರನ ಮೇಲೆ ಆಣೆ ಇಟ್ಟರೆ ನಿನ್ನನ್ನು ಕೈ ಬಿಡುತ್ತೇನೆ. ಇಲ್ಲದಿದ್ದರೆ

37. ೬೪ ಶೀಲಗಳನ್ನು ೧೬ನೆಯ ಶತಮಾನದಲ್ಲಿ ಆಚರಿಸುತ್ತಿದ್ದ ಸರ್ವಶೀಲೆ ಚೆನ್ನಮ್ಮನವರು ಇದ್ದ ಊರು; ಮಾಗಡಿ ತಾಲ್ಲೂಕಿನಲ್ಲಿದೆ. ಪಾಲ್ಕುರಿಕೆ ಸೋಮನಾಥರ ಸಮಾಧಿ ಸ್ಥಳವೂ ಇದೇ.

38. ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿರುವ ಒಂದು ಹಳ್ಳಿ. ಉದ್ದಾನ ಸ್ವಾಮಿಗಳವರ ಅತ್ಯಂತ ಪ್ರೀತಿಗೆ ಪಾತ್ರವಾದ ಹಳ್ಳಿ. ಇಲ್ಲಿನವರ ಸೇವೆ ಮಠಕ್ಕೆ ಈಗಲೂ ಬೃಹತ್ ಪ್ರಮಾಣದಲ್ಲಿ ನಡೆಯುತ್ತ ಇದೆ.

ನಿನ್ನನ್ನು,ಹಾಗೆಯೇ ಕ್ಯಾತ್ಸಂದ್ರದವರೆಗೆ ಉರುಳಿ ಹೋಗುವಂತೆ ಮಾಡುತ್ತೇನೆ' ಎಂದರು. ಸಂಜೀವಯ್ಯ ಮೇಲೇಳಲೇ ಆಗಲಿಲ್ಲ. ಉದಾನಪ್ಪನವರು 'ನಡೆ ನಡೆ...'ಅನ್ನುತ್ತಲೇ ಇದ್ದರು. ಅಂದಂತೆ ಅವನು ಉರುಳುತ್ತಲೇ ಇದ್ದ. ಉರುಳಿ ಉರುಳಿ ಸುಸ್ತಾಗಿ ಹೋಗಿದ್ದ. ಇನ್ನು ಈ ಉದ್ದಾನಪ್ಪ ನನ್ನನ್ನು ಕೈ ಬಿಡುವುದಿಲ್ಲವೆಂಬುದನ್ನು ಅರಿತುಕೊಂಡ. ಆಗ ತನ್ನ ಹೆಗಲಿಗೆ ಹಾಕಿಕೊಂಡು ತನ್ನೊಡನೇ ತಂದಿದ್ದ ಜೋಳಿಗೆಯನ್ನು ತೆಗೆದು ಇಟ್ಟು 'ಅಪ್ಪಾ. ಇನ್ನು ಮೇಲೆ ಈ ಜೋಳಿಗೆಯನ್ನು ಮುಟ್ಟುವುದಿಲ್ಲ. ಸಿದ್ಧ ಲಿಂಗೇಶ್ವರನ ಆಣೆಯಾಗಿ ಯಾರ ಮೇಲೂ ಅಭಿಚಾರ ಪ್ರಯೋಗ ಮಾಡುವುದಿಲ್ಲ' ಎಂದು ಭಾಷೆ ಕೊಟ್ಟಮೇಲೆ ಶ್ರೀಗಳವರು 'ಏಳು ಹಾಗಾದರೆ' ಎಂದು ಎಬ್ಬಿಸಿ ಅವನಿಗೆ ಸ್ನಾನ ಮಾಡಿಸಿ ಊಟ ಮಾಡಿಸಿ ಕಳಿಸಿಕೊಟ್ಟರು. ಅಂದಿನಿಂದ ಅವನು ತನ್ನ ಅಭಿಚಾರ ಪ್ರಯೋಗವನ್ನು ಬಿಟ್ಟುಬಿಟ್ಟನು.

ಶ್ರೀ ಶಿವಯೋಗಿಗಳಿಗೆ ಇಂಥ ವಿದ್ಯೆಯ ಪರಿಚಯ ಚೆನ್ನಾಗಿ ಗೊತ್ತಿತ್ತು. ಈ ವಿದ್ಯೆಗಳನ್ನೆಲ್ಲಾ ಪೂರ್ವಾಶ್ರಮದಲ್ಲಿ ಪ್ರಯೋಗಿಸುತ್ತಿದ್ದರಂತೆ. ಮುಂದೆ ಅವರನ್ನೆಲ್ಲ ಅಡವೀಸ್ವಾಮಿಗಳ ಆಜ್ಞೆಯ ಮೇರೆಗೆ ಕೈಬಿಟ್ಟರು. ಆದರೆ ದುಷ್ಟರಿಗೆ ಬುದ್ಧಿಕಲಿಸುವ ಸಮಯ ಬಂದಾಗ ಈ ರೀತಿ ಪ್ರಯೋಗ ಮಾಡುತ್ತಿದ್ದರು ಎಂದು ತಿಳಿದು ಬರುವುದು.

(—ದೇವರಾಯಪಟ್ಟಣದಲ್ಲಿನ ಜನರು ಹೇಳುವ ಕಥೆ)

೮) ಒಮ್ಮೆ ದಾಬಸಪೇಟೆಯಲ್ಲಿ ವಾಸಿಸುತ್ತಿದ್ದ ಮಹಮ್ಮದೀಯನೊಬ್ಬ ಸಿದ್ಧಗಂಗಾ ಮಠಕ್ಕೆ ಬಂದ. ಅವನು ಅಭಿಚಾರವಿದ್ಯೆಯಲ್ಲಿ ಮಹಾಸಮರ್ಥನೆಂದು ಹೆಸರುವಾಸಿಯಾಗಿದ್ದ. ಆತನು ಅಡವೀಸ್ವಾಮಿಗಳ ಮೇಲೆ ತನ್ನ ಅಭಿಚಾರವಿದ್ಯೆಯನ್ನು ತೋರಿಸಲು ಬಂದಿದ್ದ. ಆಗ ಅಲ್ಲಿಯೇ ಇದ್ದ ರುದ್ರಪ್ಪನಿಗೆ ಈ ವಿಷಯ ಗೊತ್ತಾಯಿತು. ಅವನೂ ಅಡವೀಸ್ವಾಮಿಗಳ ಹತ್ತಿರವೇ ನಿಂತಿದ್ದ ಆ ಸಾಬಿಯು ಅಡವೀಸ್ವಾಮಿಯವರ ಮೇಲೆ ಅಭಿಚಾರ ವಿದ್ಯೆಯನ್ನು ಪ್ರಯೋಗಿಸಿದ. ಇದು ಅಡವಿಸ್ವಾಮಿಗಳಿಗೆ ಗೊತ್ತಾಯಿತು. ಆಗ ರುದ್ರಪ್ಪ ಅವನಿಗೆ ಪ್ರತೀಕಾರ ಮಾಡಲೆಳಸಿ, ಕೈಗೆ ಲಿಂಬೆ ಹಣ್ಣನ್ನು ಹಿಡಿದ. ಅಡವಿಸ್ವಾಮಿಗಳು ರುದ್ರಪ್ಪನ ಕಡೆ ಹೊರಳಿ 'ರುದ್ರಪ್ಪ. ನೀನೀಗ ಏನು ಮಾಡುವೆಯೆಂಬುದು ನನಗೆ ಗೊತ್ತಾಯಿತು. ಈತನ ಅಭಿಚಾರ ವಿದ್ಯೆ ನನ್ನ ಮೇಲೆ ನಾಟುವುದಿಲ್ಲ. ನೀನು ಇವನ ಮೇಲೆ ಪ್ರತೀಕಾರ ಮಾಡಬೇಡ. ಕ್ಷಮಿಸಿ ಮಠಬಿಟ್ಟು ಕಳುಹಿಸಿಬಿಡು' ಎಂದರು. ರುದ್ರಪ್ಪ ಆತನ ಕೈಹಿಡಿದು ಎಳೆದುಕೊಂಡು ಕ್ಯಾತ್ಸಂದ್ರದ ವರೆಗೆ ಹೋಗಿ, 'ಇನ್ನು ಮೇಲೆ ಈ ಮಠದ ತಂಟೆಗೇನಾದರೂ ಬಂದರೆ ನಿನ್ನ ಗತಿ ಕಾಣಿಸಿಬಿಡುತ್ತೇನೆಂದು ಹೆದರಿಸಿ ಕಳುಹಿಸಿದರು. ಅಂದಿನಿಂದ ಮಠದ ಕಡೆಗೆ ಅವನು ಬರಲಿಲ್ಲ. ರುದ್ರಪ್ಪನ ಸಾಮರ್ಥ್ಯದ ಅರಿವು ಅವನಿಗೆ ಇತ್ತು.

(—ಶ್ರೀ ಮಠದ ವೃದ್ಧಜನಜನಿತ ಕಥೆ)

೯) ಉದ್ದಾನ ಶಿವಯೋಗಿಗಳು ಯಾರಾದರು ಏನನ್ನಾದರೂ ಯಾಚಿಸಿ ಬಂದರೆ 'ಇಲ್ಲ' ಎನ್ನದೆ ಕೊಟ್ಟು, ಸಕಾಲದಲ್ಲಿ ತಂದು ತಲುಪಿಸಲು ಸೂಚಿಸಿ ಕಳಿಸುತ್ತಿದ್ದರು. ಅದು ಹಣ, ಕಾಳು ಕಡಿ ಏನಾದರೂ ಆಗಿರಬಹುದು. ಒಮ್ಮೆ ತುಮಕೂರಿನ ಓರ್ವ ವ್ಯಕ್ತಿ ೫೦೦ ರೂಪಾಯಿಗಳನ್ನು ಪಡೆದು ಹೋದನು. ಆತನು ನಿರ್ದಿಷ್ಟಪಡಿಸಿದ ಅವಧಿಯೊಳಗಾಗಿ ಹಣ ತಿರುಗಿಸಲಾಗಲಿಲ್ಲ. ಆಗ ಸ್ವಾಮಿಗಳು ಆ ಹಣ ಪಡೆಯಲು ಎರಡು ಮೂರು ಸಲ ಪ್ರಯತ್ನಿಸಿದರು. ಮಠದಲ್ಲಿಯೂ ದಾಸೋಹಕ್ಕೆ ಕೊರತೆ ಹೆಚ್ಚಾಗಿತ್ತು. ಆತನನ್ನು ಹುಡುಕಿಕೊಂಡು ತುಮಕೂರಿಗೆ ಹೋಗಿ 'ಆ ಹಣವೆಲ್ಲಿ'? ಎಂದು ಕೋಪದಿಂದ ಕೇಳಿದರು. ಅತ ನಿರುಪಾಯನಾಗಿ ಆಗ ಈಗ ಎಂದು ಪುನಃ ಸಬೂಬು ಹೇಳಿದನು. ಶ್ರೀಗಳವರಿಗೆ ಕೋಪ ಬಂದು 'ನಿನ್ನ ಹೆಂಡತಿ ಸಾಯಾ! ಎಲ್ಲೋ ಹಣ...' ಇತ್ಯಾದಿ ಪುರುಷ ವಾಕ್ಯ ನುಡಿದೇಬಿಟ್ಟರು. ಆತ ಹೌಹಾರಿದ. ಆ ಕೂಡಲೇ ಮನೆಗೆ ಹೊರಟು ಹೋದ. ಅಲ್ಲಿ ಅವನ ಹೆಂಡತಿಯೂ ಸತ್ತು ಹೋಗಿದ್ದಳು. ಅವಳ ಉತ್ತರಕ್ರಿಯಾದಿಗಳನ್ನು ಮಾಡಿ ಮಠಕ್ಕೆ ಅಳುತ್ತ ಬಂದು ಸ್ವಾಮಿಗಳವರಲ್ಲಿ 'ಸ್ವಾಮಿ ಕೋಪಗೊಂಡು ತಾವು ಕೊಟ್ಟ ಶಾಪದಿಂದ ನಾನು ಹಾಳಾಗಿ ಹೋದೆ. ನನ್ನ ಹೆಂಡತಿ ಸತ್ತುಹೋದಳು. ನನ್ನ ಗತಿ ಏನು' ಎಂದ. ಶ್ರೀಗಳವರು ಬಹುಖಿನ್ನರಾಗಿ 'ಹೋಗಲಿ ಬಿಡು ನಮಗೆದುಡ್ಡು ಕೊಡಬೇಡ, ಇನ್ನೂ ಐದುನೂರು ರೂಪಾಯಿ ತೆಗೆದುಕೊಂಡು ಹೋಗಿ ಬೇರೆ ಮದುವೆ ಮಾಡಿಕೊಂಡು ಸುಖವಾಗಿರು' ಎಂದು ಹೇಳಿ ಪುನಃ ೫೦೦ರೂ. ಕೊಟ್ಟು, ತಮ್ಮ ಕೋಪಕ್ಕೆ ತಾವೇ ಸಂಕಟಪಟ್ಟುದೂ ಉಂಟು. ಮುಂದೆ ಹೀಗೆ ಮಾತನಾಡುವುದನ್ನೇ ಬಿಟ್ಟರಂತೆ.

ಈ ಮೇಲೆ ವಿವರಿಸಿದ ಘಟನೆಗಳಲ್ಲದೆ, ಸಕಲೇಶಪುರದ ತೋಟಗದ್ದೆ ಎಸ್ಟೇಟಿನ ದೇವಪ್ಪಗೌಡರ ಭೂತ ಚೇಷ್ಟೆಯ ನಿವಾರಣೆ ಮತ್ತು ಪೂರ್ವಜನ್ಮಸ್ಮರಣೆಯೇ ಮೊದಲಾದ ನೂರಾರು ಘಟನೆಗಳು ಅವರ ಜೀವನದಲ್ಲಿ ನಡೆದುಹೋಗಿವೆ. ಅವನ್ನೆಲ್ಲ ವಿವರಿಸುವುದು ನಮ್ಮ ಉದ್ದೇಶವಲ್ಲ[39]. ಕೆಲವು ಘಟನೆಗಳನ್ನು ಮಾತ್ರ ಇಲ್ಲಿ ವಿವರಿಸಿದೆ. ಅವರ ವಾಕ್‌ಸಿದ್ಧಿ, ಪ್ರಬಲ ಸಂಕಲ್ಪ, ದುಷ್ಟಶಿಕ್ಷೆ, ಶಿಷ್ಟಪಾಲನಾದಿಗಳು ಈ ಘಟನೆಗಳಿಂದ ತಿಳಿದು ಬರುವುವು.

---

39. ತೋಟಗದ್ದೆ ಎಸ್ಟೇಟಿನ ದೇವಪ್ಪಗೌಡರ ಭೂತಚೇಷ್ಟೆಯನ್ನು ನಿವಾರಿಸಿದ ಕಥೆ ಅವರ ಜೀವನಚರಿತ್ರೆಯ ಒಂದಂಗವಾಗಿ ಈ ಹಿಂದೆಯೇ ಬಂದಿದೆ. ಅಲ್ಲಿ ಅವಲೋಕಿಸುವುದು.

# ನಾ ಕಂಡ ಉದ್ದಾನ ಶಿವಯೋಗಿಗಳು

—ಡಾ॥ ಜಿ. ಮರುಳಸಿದ್ಧಯ್ಯ

ಶ್ರೀ ಶಿವಯೋಗಿಗಳ ವ್ಯಕ್ತಿತ್ವದಲ್ಲಿ ಬಹುಪಾಲು ಅಜ್ಞಾತವಾದುದು. ಅವರು ಹುಟ್ಟಿ ಬೆಳೆದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದುದು ಧರ್ಮಕರ್ಮಸಂಯೋಗವೆಂದು ಕೆಲವರ ಭಾವನೆ. ಕೆಲವರು ಶ್ರೀಗಳನ್ನು ದೂರದಿಂದಲೂ ಕಾಣುತ್ತಾರೆ. ಇನ್ನು ಹಲವರು ಅವರ ಜೀವನವನ್ನು ವಿಮರ್ಶಿಸಿ ದೂರಾಲೋಚನೆ ಮಾಡಿಯೂ ನಿರ್ಧರಿಸುವರು. ನಾನು ಶ್ರೀ ಕ್ಷೇತ್ರದಲ್ಲೇ ವಿದ್ಯಾಭ್ಯಾಸ ಮಾಡಿ ಶ್ರೀಗಳವರ ಸಾನ್ನಿಧ್ಯದಲ್ಲಿದ್ದುಕೊಂಡು ಅವರನ್ನು ಸಾಕ್ಷಾತ್‌ದರ್ಶನ ಮಾಡಿಕೊಂಡವನು. ಆದ್ದರಿಂದ ಅವರ ಪೂರ್ವಾಶ್ರಮ ಹಾಗೂ ಪುನರ್‌ಜನ್ಮದ ಬಗ್ಗೆ ಇರುವ ಅನೇಕ ಕತೆಗಳನ್ನು ಒರೆಗಲ್ಲಿಗೆ ಹಚ್ಚಿ ಸತ್ಯಾನ್ವೇಷಣೆ ಮಾಡಿದ್ದೇನೆ. ಇಲ್ಲಿನ ಕೆಲವು ವಿಷಯಗಳು ಶ್ರೀಗಳವರ ನಿಕಟವರ್ತಿಗಳಿಂದಲೂ, ಸಹಪಾಠಿಗಳಿಂದಲೂ ತಿಳಿದುಬಂದವು. ಹಲವು ಸ್ವಾನುಭವದಿಂದ ತಿಳಿದವು. ಆದರಿಂದ ಇಲ್ಲಿ ಕಟ್ಟುಕತೆಗಳಿಗೂ, ಸಲ್ಲದ ಉತ್ಪ್ರೇಕ್ಷೆಗಳಿಗೂ ಅವಕಾಶವಿತ್ತಿಲ್ಲ.

ಒಟ್ಟಿನಲ್ಲಿ ಶ್ರೀಗಳ ಜೀವನ ಅಧ್ಯಾತ್ಮಮಯ, ತಪೋಮಯ, ಪುರುಷಾಕಾರಮಯ 'ಕಾಯಕವೇ ಕೈಲಾಸ'ವೆಂದು ಶ್ರೀ ಸಿದ್ಧಗಂಗಾಕ್ಷೇತ್ರದ ಸರ್ವತೋಮುಖವಾದ ಏಳಿಗೆಗಾಗಿ ಅಧ್ಯಾತ್ಮ, ಶರೀರ ಎರಡನ್ನೂ ಧಾರೆಯೆರೆದ ಜೀವನ್ಮುಕ್ತರು. ಪಾರಿಭಾಷಿಕ ವಿದ್ಯಾಭ್ಯಾಸವು ಅಷ್ಟಾಗಿಲ್ಲದಿದ್ದರೂ ಜನ್ಮಜನ್ಮಾಂತರದ ತಪೋಮಹಿಮೆಯಿಂದ ಶುದ್ಧಸ್ಫಟಿಕ ಸಂಕಾಶವಾದ ಆತ್ಮಶಕ್ತಿಯಿಂದ ಕಷ್ಟನಿಷ್ಠುರಗಳನ್ನೆಲ್ಲ ಸದೆಬಡಿದು ಆ ಜನ್ಮಸಿದ್ಧ ವೀರವಿರಕ್ತಿ ಹಾಗೂ ಶುದ್ಧಸಂನ್ಯಾಸದಿಂದ ಸಿದ್ಧಗಂಗಾ ಕ್ಷೇತ್ರವನ್ನು ಆದರ್ಶದ ಅಡಿಗಲ್ಲಿನ ಮೇಲೆ ಕಟ್ಟಲು ದೈವಪ್ರೇರಿತ ಶಿವಶಿಲ್ಪಿಯಂತೆ ಕ್ಷೇತ್ರದಲ್ಲಿ ನಿಂತರು. ಶ್ರೀ ಕ್ಷೇತ್ರದಲ್ಲಿ ವಿದ್ಯೆ ಹಾಗು ಸಂಸ್ಕೃತಿಗಳ ತಳಪಾಯವನ್ನು ಕಟ್ಟಿದರು. ಸ್ವಯಂ ಆಧ್ಯಾತ್ಮಿಕ ಸಂಪೂರ್ಣತೆ ಪಡೆದು ಉಳಿದವರಲ್ಲೂ ಅದನ್ನು ರೂಢಿಸಲು ಪ್ರಯತ್ನಿಸಿ ಕ್ಷೇತ್ರದಲ್ಲಿ ನೈತಿಕ ಹಿನ್ನೆಲೆಯನ್ನು ಬಹು ಭದ್ರವಾಗಿ ರೂಪಿಸಲು ಹವಣಿಸಿದರು. ವಿದ್ಯಾದಾನ, ಅನ್ನದಾನಗಳ ನೆಲೆಯ ಮೇಲೆ ಕಾಯಕ ಮಂತ್ರದಿಂದ, ತಪಶ್ಶಕ್ತಿಯಿಂದ ಪುಣ್ಯಕ್ಷೇತ್ರವೆಂದು ಜನಶ್ರುತಿ ಮೊಳಗುವಂತೆ ಮಾಡಿ ಶ್ರೀ ಕ್ಷೇತ್ರಕ್ಕೆ ಸುಭದ್ರ ಅಡಿಪಾಯವನ್ನು ಹಾಕಿದರು, ಇಷ್ಟಾದರೂ ಅಹಂಕಾರ ಇವರನ್ನು ಮುಟ್ಟಲಿಲ್ಲ.

**ಬಾಲ್ಯ ಜೀವನ :**

ಶ್ರೀ ಕ್ಷೇತ್ರಕ್ಕೆ ಪೂರ್ವದಲ್ಲಿರುವ ದಾಬಸ್‌ಪೇಟೆ ಹತ್ತಿರವಿರುವ ಲಕ್ಕೂರು ಶ್ರೀಗಳ ಜನ್ಮಸ್ಥಳ. ಬಾಲ್ಯದಲ್ಲೇ ಅವರು ಶಿವಪೂಜಾ ದುರಂಧರರಾಗಿದ್ದರು. ಇದನ್ನು ಇಷ್ಟಪಡದ ಅವರ ಮಾತಾಪಿತೃಗಳು ಅವರನ್ನು ಮೇಕೆ ಕಾಯಲು ಕಳುಹಿಸಿದರು. ಏಕಾಂತ ಧ್ಯಾನಕ್ಕೆ ಸದವಕಾಶವನ್ನು ನೀಡುವ ಈ ಕೆಲಸವನ್ನು ಮನಸಾರ ಒಪ್ಪಿದರು. ಸಂತೋಷದಿಂದ ಊರ ಮಗ್ಗುಲಿನಲ್ಲಿರುವ ನಿಜಗಲ್ ದುರ್ಗದಲ್ಲಿ ಮೇಕೆ ಕಾಯುವ ಕಾರ್ಯ ಆರಂಭವಾಯಿತು. ಕ್ರಮೇಣ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರು ಇವರ ಕಿವಿಗೆ ಬಿತ್ತು. ಸಂಸಾರದ ಜಂಗುಳಿಯಿಂದ ಮನಸ್ಸು ರೋಸಿ ಹೋಗಿತ್ತು. ಗ್ರಾಮವಾಸವು ಬೇಸರವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿದರು. ಪೂರ್ವಪುಣ್ಯವಿರಬೇಕು. ನಿಜಗಲ್ ಬೆಟ್ಟದಲ್ಲಿ ಅವರಿಗೆ ಋಷಿಸಂಪರ್ಕ ಬೆಳೆದು ಅದರ ಫಲವಾಗಿ ಮಂತ್ರ, ತಂತ್ರ, ಯೋಗಾಭ್ಯಾಸ ಇವುಗಳಲ್ಲಿ ಪೂರ್ಣಪರಿಣತಿಯುಂಟುಮಾಡಿತು. ದೃಢಕಾಯರೂ ಗುರುಸೇವಾನಿಷ್ಠರೂ ಆಗಿದ್ದ ಇವರಿಗೆ ಶ್ರೀ ಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಅಡವಿಸ್ವಾಮಿಗಳ ಆಶೀರ್ವಾದವಾಯಿತು. ಬೆಳಕಿಗೆ ಬರುತ್ತಿದ್ದ ಶ್ರೀ ಕ್ಷೇತ್ರದ ದಾಸೋಹಕ್ಕಾಗಿ ಸೌದೆ ತರುವುದು ಇವರ ಕೆಲಸವಾಯಿತು. ಇದುವೆ ಅವರ ಪ್ರತಿದಿನದ ಕಾಯಕ. ಅವಕಾಶ ದೊರೆತಾಗ ತಮ್ಮ ಯೋಗಾಭ್ಯಾಸ ಪ್ರಾಣಾಯಾಮಾದಿಗಳನ್ನೂ ಮಾಡಿಕೊಳ್ಳುತ್ತಿದ್ದರು. ಇವರ ಪೂರ್ವಾಶ್ರಮದ ಹೆಸರು ರುದ್ರಪ್ಪ. ರುದ್ರಪ್ಪನವರು ಹೆಸರಿಗೆ ತಕ್ಕಂತೆ ಉಗ್ರಮೂರ್ತಿ. ಈ ಭಾವ ಪ್ರಾಯಃ ಅವರ ಜೀವನದ ಕೊನೆಯ ತನಕವೂ ಇದ್ದಿತು. ಇದರಿಂದಾಗಿ ಅವರ ವ್ಯಕ್ತಿತ್ವದಲ್ಲಿ ಕಳೆಯೇರಿತೇ ವಿನಾ ನ್ಯೂನತೆಯುಂಟಾಗಲಿಲ್ಲ.

**ಅಧ್ಯಾತ್ಮ–ಸಸಿ ಮರವಾಯಿತು :**

ನಿಜಗಲ್ ಬೆಟ್ಟದಲ್ಲಿ ದೊರೆತ ಮುನಿಸಂಪರ್ಕ ಅವರಲ್ಲಿ ರೂಢಮೂಲವಾಗಿತ್ತು. ಕತ್ತಲಲ್ಲಿ ಸೌದೆಗಾಡಿಗಳನ್ನು ತರುವಾಗ ಸಂದರ್ಭದಲ್ಲಿ ರುದ್ರಪ್ಪನವರೇ ದಾರಿ ಕಾಣುವುದಿಲ್ಲವೆಂದಾಗ ಗಾಡಿಯ ಇಕ್ಕೆಲಗಳಲ್ಲೂ ಪಂಜುಗಳು ಗಾಡಿಗಳನ್ನು

ಮಠದವರೆಗೂ ಸುಖವಾಗಿ ಒಯ್ಯುತ್ತಿದ್ದುವು. ಕೆಲಸದವರಿಗೆ ಯಾವುದಾದರೂ ಕಾಯಿಲೆ ಬಂದಾಗ ರುದ್ರಪ್ಪನವರು ಮಂತ್ರ ಶಕ್ತಿಯಿಂದ ಅವರನ್ನು ಗುಣಪಡಿಸುತ್ತಿದ್ದರು. ಮಂತ್ರಶಕ್ತಿಯನ್ನು ಮಾತ್ರವಲ್ಲ, ರುದ್ರಪ್ಪನವರು ಕೆಲಮಟ್ಟಿಗೆ ವೈದ್ಯವನ್ನೂ ತಿಳಿದಿದ್ದರು. ಇವರ ಮಂತ್ರಶಕ್ತಿಯ ವಿಚಾರವು ಶ್ರೀ ಅಡವಿಸ್ವಾಮಿಗಳ ಕಿವಿಗೂ ಮುಟ್ಟಿತು. ಅಸೂಯೆಪಡದ ಅವರು ರುದ್ರಪ್ಪನವರನ್ನು ತಮ್ಮ ಶಿಷ್ಯನನ್ನಾಗಿ ಏಕೆ ಪಡೆದುಕೊಳ್ಳಬಾರದು ಎಂದು ಯೋಚಿಸತೊಡಗಿದರು. ಅವರ ನಿರಂತರ ಸೇವೆ ಹಾಗೂ ಮಠದ ಕಾರ್ಯಕಲಾಪಗಳಲ್ಲಿ ಅವರಿಗಿದ್ದ ನಿಷ್ಠೆಯಿಂದ ಸಂತುಷ್ಟರಾದ ಶ್ರೀ ಅಡವೀಸ್ವಾಮಿಗಳಲ್ಲಿ ರುದ್ರಪ್ಪ ನವರನ್ನು ಕ್ಷೇತ್ರದ ಉತ್ತರಾಧಿಕಾರಿಗಳನ್ನಾಗಿ ಮಾಡಿಬಿಡುವ ಸಂಕಲ್ಪ ಮೊಳಕೆಗೊಂಡಿತು.

**ಅಡವೀಸ್ವಾಮಿಗಳಿಗೆ ಮಾಟ :**

ರುದ್ರಪ್ಪನವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಳ್ಳುವ ಸುದ್ದಿಕೇಳಿದ ಜನರು ಶ್ರೀಗಳಿಗೆ ಯಾರೋ ಮಾಟ ಮಾಡಿಸಿದರೆಂಬುದು ಒಂದು ವಂದತಿ[1]. ಅಡವೀಸ್ವಾಮಿಗಳು ಪರಿತಪಿಸುವುದನ್ನು ಕಂಡ ರುದ್ರಪ್ಪನವರು ಮಾಟಮಂತ್ರಗಳಲ್ಲಿ ಪಳಗಿದ್ದವರಾದ್ದರಿಂದ ಕೂಡಲೇ ಶ್ರೀ ಸ್ವಾಮಿಗಳ ಮಾಟವನ್ನು ಕಿತ್ತೊಗೆದರು. ಅಡವಿಸ್ವಾಮಿಗಳ ಪೀಡಾ ಪರಿಹಾರವಾಯಿತು. ರುದ್ರಪ್ಪನವರ ಮೇಲೆ ಸ್ವಾಮಿಗಳ ಕೃಪೆ ಇನ್ನೂ ಹೆಚ್ಚಾದರೂ ಅವರನ್ನು ಶ್ರೀಗಳು ಕರೆದು 'ಈಗಲೇ ಈ ಮಾಯ ಮಾಟ ಗಳನ್ನು ಬಿಟ್ಟು ಬಿಡು' ಎಂದು ಆಜ್ಞಾಪಿಸಿ ಅವರಿಂದ ನಮಸ್ಕಾರ ಹಾಕಿಸಿಕೊಂಡರಂತೆ.

**ಅದ್ಭುತ ಬ್ರಹ್ಮರಾಕ್ಷಸ ಘಟನೆ :**

ಸಕಲೇಶಪುರದ ತೋಟದ ಗದ್ದೆ ಎಸ್ಟೇಟಿನ ಕಾಫಿ ಪ್ಲಾಂಟರ್ ಶ್ರೀ ದೇವಪ್ಪಗೌಡರಿಗೆ ಬ್ರಹ್ಮರಾಕ್ಷಸನ ಕಾಟ. ಅವ ರನ್ನು ಸಿದ್ಧಗಂಗೆಗೆ ಬ್ರಹ್ಮರಾಕ್ಷಸನ ಮೋಕ್ಷಕ್ಕಾಗಿ ಕರೆತಂದರು. ಬ್ರಹ್ಮರಾಕ್ಷಸ ಹಿಡಿದ ದೇವಪ್ಪಗೌಡರನ್ನು ಶ್ರೀ ಅಡವೀ ಸ್ವಾಮಿಗಳ ಎದುರಿನಲ್ಲಿ ನಿಲ್ಲಿಸಿದಾಗ ಅವರು 'ಇವನಾರು? ಇವನಲ್ಲ ನನ್ನ ಗುರು. ನನ್ನ ಗುರುವೆಲ್ಲಿ'? ಎಂದು ಗರ್ಜಿಸಿ ತಿರುಗುಮುರುಗಾಗಿ ನಿಂತರು. ಸೌದೆ ಗಾಡಿಯನ್ನು ಹೊಡೆದುಕೊಂಡು ರುದ್ರಪ್ಪನವರು ಬರುತ್ತಲೇ 'ಗುರುವೇ! ನನ್ನನ್ನು ಕಾಪಾಡಬೇಕು' ಎಂದು ದೇವಪ್ಪಗೌಡರು ರುದ್ರಪ್ಪನವರ ಕಾಲುಗಳನ್ನು ಹಿಡಿದುಕೊಂಡರಂತೆ. ಆಗ ದೇವಪ್ಪಗೌಡರಲ್ಲಿ ಆವಾಹಿತನಾಗಿದ್ದ ಬ್ರಹ್ಮರಾಕ್ಷಸನು ತಮ್ಮಿಬ್ಬರ ಪೂರ್ವಜನ್ಮದ ವೃತ್ತಾಂತವನ್ನು ಹೇಳುವ ಸಂದರ್ಭದಲ್ಲಿ ತಾವೀರ್ವರೂ ಅಲ್ಲಿ ಋಷಿಗಳಾಗಿದ್ದರೆಂದೂ ಶ್ರೀ ಗಂಗಾಂಬಿಕೆಯು ದರ್ಶನವಿತ್ತಾಗ ಗೈದ ಒಂದು ಅಪರಾಧಕ್ಕಾಗಿ ತಾನು ಬ್ರಹ್ಮರಾಕ್ಷಸನ ಪೀಡೆಗೆ ಬಲಿ ಯಾದುದಾಗಿಯೂ ಅದು ತಮ್ಮಿಂದ ನಿವಾರಣೆಯಾಗಬೇಕೆಂದೂ ನುಡಿದನು. ಆಗಲೇ ಬ್ರಹ್ಮರಾಕ್ಷಸ ಶ್ರೀರುದ್ರಪ್ಪನವರನ್ನು ಹೆಗಲಮೇಲಿರಿಸಿಕೊಂಡು ಕ್ಷೇತ್ರದ ಮಗ್ಗುಲಲ್ಲಿರುವ ರಾಮಲಿಂಗ ದೇವರ ಬೆಟ್ಟದಲ್ಲಿರುವ[2] ಶ್ರೀ ದೊಡ್ಡಸಿದ್ದಪ್ಪನವರ ಗವಿಗೆ ಹೋಗಿ ಅಲ್ಲಿ ತಾವೀರ್ವರೂ ತಪಸ್ಸು ನಡೆಸಿದ ಸ್ಥಳ ಗುರುತು ಇತ್ಯಾದಿಗಳನ್ನು ತೋರಿಸಿತು. ಇದನ್ನು ಶ್ರೀ ಅಡವಿಸ್ವಾಮಿ ಗಳು ಕಣ್ಣಾರೆ ಕಂಡಿದ್ದುದರಿಂದಲೇ ರುದ್ರಪ್ಪನವರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಲು ನಿರ್ಧರಿಸಿದುದು.

**ಮಳೆ ಬಿಟ್ಟರೂ ಮರದ ಹನಿ ಬಿಡಲಿಲ್ಲ:**

ಶ್ರೀ ಕ್ಷೇತ್ರದಲ್ಲಿ ರುದ್ರಪ್ಪನವರು ಪ್ರಭಾವಿಗಳಾದರು. ಇತ್ತ ಶ್ರೀ ಅಡವಿಸ್ವಾಮಿಗಳ ಅವಸಾನಕಾಲವೂ ಪ್ರಾಪ್ತ ವಾಗಿ ಅವರು ಹಠಾತ್ತನೆ ತೊಟ್ಟಿಲಕೆರೆಯಲ್ಲಿ ಶಿವೈಕ್ಯರಾದರು. ಬರೀ ಮೈಯಲ್ಲೇ ಅವರ ಸಮಾಧಿಕಾರ್ಯಗಳನ್ನು ನೆರವೇರಿಸ ಹೋದ ಶ್ರೀ ರುದ್ರಪ್ಪನವರಿಗೆ ತೊಂದರೆ ಕೊಡುವ ಅನೇಕ ಪ್ರಯತ್ನಗಳು ನಡೆದುವು. ಆದರೆ ದೇಹದಾರ್ಢ್ಯತೆಯುಳ್ಳ ಆ ವ್ಯಕ್ತಿಯ ಎದುರು ವಿರೋಧಿಗಳ ಪ್ರಯತ್ನಗಳು ವಿಫಲವಾದವು. ಶ್ರೀ ರುದ್ರಪ್ಪನವರು ಬರಿ ಮೈಯಲ್ಲೇ ಸಿದ್ಧಗಂಗೆಗೆ ಹಿಂದಿರುಗಿದರು. ಅಲ್ಲಿ ಅವರು ಶ್ರೀ ಅಡವಿಸ್ವಾಮಿಗಳ ತೋರುಗದ್ದಿಗೆಯನ್ನು ರಚಿಸಲು ಪ್ರಯತ್ನಿಸಿ ಅದನ್ನು ಪೂರ್ಣಗೊಳಿಸಿ ದರು. ಇದನ್ನು ಸಹಿಸದ ಸುತ್ತ ಮುತ್ತಲಿನ ಜನರು ಕೋಪೋದ್ರಿಕ್ತರಾಗಿ ಶ್ರೀ ಕ್ಷೇತ್ರದಲ್ಲಿನ ದೇವಸ್ಥಾನದ, ಸ್ವಾಮಿವಿಗ್ರಹದ ಕೈ ಕಾಲು ಮುರಿದು ಬಿಸುಟರು. ರುದ್ರಪ್ಪನವರಿಗೆ ಉತ್ತರಾಧಿಕಾರ ಸಲ್ಲದೆಂದು ಹಟ ಹಿಡಿದರು, ಶ್ರೀ ಅಡವಿಸ್ವಾಮಿಗಳು ವಿಧ್ಯುಕ್ತವಾಗಿ ಇವರಿಗೆ ಆಶ್ರಮವೀಯದೆ ಶಿವೈಕ್ಯರಾದುದರಿಂದ ಜನರಿಗೆ ದಿಕ್ಕುತೋಚದಂತಾಗಿದ್ದಿತು. ಅಲ್ಲಿಯೂ ಪಕ್ಷಗಳು ಪ್ರಾರಂಭವಾಗಿ ಬಂಡೇಮಠದ ಚರಮೂರ್ತಿಗಳಿಂದ ಶ್ರೀ ರುದ್ರಪ್ಪನವರಿಗೆ ಶ್ರೀ ಸಿದ್ಧಗಂಗಾಕ್ಷೇತ್ರದ ಉತ್ತರಾಧಿಕಾರ ಕೊಡಿಸಿದರು. ಮೊದಲಿನ ರುದ್ರಪ್ಪ ಶ್ರೀ ಸಿದ್ಧಗಂಗಾಕ್ಷೇತ್ರದ ಶ್ರೀ ಅಡವಿಸ್ವಾಮಿಗಳ ಉತ್ತರಾಧಿಕಾರಿಗಳಾದರು. ಅಂದಿ ನಿಂದ ಅವರು ಶ್ರೀ ಮನ್ನಿರಂಜನ ಉದ್ದಾನ ಶಿವಯೋಗಿಗಳೆಂದು ಪ್ರಸಿದ್ಧರಾದರು.

1. ಈ ಸುದ್ದಿ ಈಗ ನಂಬಲಾಗದಿದ್ದರೂ ಆಗ ನಂಬಬೇಕಾಗಿತ್ತು.
2. ಇಂದೂ ರಾಮಲಿಂಗದೇವರ ಬೆಟ್ಟದ ದೊಡ್ಡಸಿದ್ದಪ್ಪನವರ ಗವಿಯ ಪಕ್ಕದಲ್ಲಿರುವ ಎಂದೆಂದೂ ನೀರು ಹರಿವ ಒಂದು ಹೊಂಡಕ್ಕೆ 'ಉದ್ದಾನ ಸ್ವಾಮಿಗಳ ಹೊಂಡ' ಎಂದು ಹೆಸರಿರುವುದನ್ನು ನಾವಿಲ್ಲಿ ಸ್ಮರಿಸಬಹುದು. ಶ್ರೀ ಮನ್ನಿರಂಜನ ಉದ್ದಾನ ಸ್ವಾಮಿಗಳ ಬಗ್ಗೆ ಸತ್ಯವಾದ ಕತೆಗಳು ಅನೇಕವಿವೆ. ಲೇಖನವು ಲಂಬಿಸುವ ಭಯದಿಂದ ಇಲ್ಲಿ ಅವುಗಳನ್ನೆಲ್ಲ ತಿಳಿಸಿಲ್ಲ.

ಬಾಲ್ಯಾವಸ್ಥೆಯಿಂದ ಈ ವರೆಗೆ ಇವರನ್ನು ಎದುರಿಸಿದ ಘಟನೆಗಳೆಲ್ಲ ಇವರ ವೀರವಿರಕ್ತಿ, ಆಧ್ಯಾತ್ಮಿಕ ತೇಜೋವಿಶೇಷ ಮತ್ತು ತಪೋನಿಷ್ಠೆಗಳನ್ನು ಹಾಗೂ ಇವರ ಮುಖ್ಯವಾದ ಮುನಿವ್ರತ ಮತ್ತು ಮುಖಮುದ್ರೆಗಳನ್ನು ಪರಿಸ್ಫುಟಗೊಳಿಸುವ ಘನ ಉದ್ದೇಶದಿಂದಲೇ ನಡೆದುವು. ಆದರೆ ಎಲ್ಲವನ್ನೂ ರೂಪಿಸುವ ಭವ್ಯಭವಿಷ್ಯದಲ್ಲಿ ಅವೆಲ್ಲವೂ ಬಂದು ಸುಳಿದು ಹೋಗುವ ಅಭ್ರಚ್ಛಾಯೆಯಂತೆ ಕಂಡೂ ಕಾಣದಾದವು.

**ಮಠಾಧಿಪತ್ಯದ ಕಠಿಣಪರೀಕ್ಷೆ :**

ಮುನಿಗಳಾಗಿದ್ದು ಕಾರಣಪುರುಷರಾಗಿದ್ದರೂ ಸಹ ಮಾನವ ಸಹಜವಾದ ಕಾಠಿಣ್ಯ, ಕಾರ್ಪಣ್ಯಗಳು ಋಷಿಜೀವಿಗಳನ್ನು ಬಿಡಲಿಲ್ಲ. ಪಕ್ಷ ವಿಪಕ್ಷ ವಿಪ್ಲವಗಳ ನಡುವೆ ಮಠಾಧಿಪತ್ಯವನ್ನು ವಹಿಸಿಕೊಂಡ ಆದರ್ಶ ಮುನಿವ್ರತಿಗಳಾದ ಶ್ರೀ ಉದ್ದಾನಗುರುಗಳನ್ನು ವಿಧಿನಿಯಮಗಳು ಕಾಡತೊಡಗಿದವು. ಅನ್ನದಾನಕ್ಕೆ ಅವಕಾಶವಿಲ್ಲ. ವಿದ್ಯಾದಾನಮಾಡಲು ಅನುಕೂಲಗಳಿಲ್ಲ, ಸ್ಥಾನದಲ್ಲಿ ಸುಖವಿಲ್ಲ, ಶಾಂತಿಯಿಲ್ಲ. ಎಲ್ಲೆಲ್ಲೂ ವಿಪ್ಲವ. ಮಠಗಳನ್ನೂ ಮಠಾಧಿಪತಿಗಳನ್ನೂ ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನೋಡಿ ಅವರ ಆತ್ಮಪರೀಕ್ಷೆ ಮಾಡಿ ನೋಡಬೇಕು. ಗುರುಗಳು ಹಸುಬೆ ಚೀಲವನ್ನು ಹೊತ್ತು ಭಿಕ್ಷೆಗಾಗಿ ಪಾದಯಾತ್ರೆ ಹೊರಟರು. ಮೊದಮೊದಲು ಗಣನೆಗೆ ತಾರದ ಜನರಿಂದ "ಮುಂದಕ್ಕೆ ಹೋಗಿ" ಎನ್ನುವುದನ್ನು ಕೇಳಿಯಾಯ್ತು. ಆದರೆ ಕಾಲಕ್ರಮೇಣ ಆತ್ಮಶಕ್ತಿಗಾಗಿ ಗುರುಕೃಪೆಯು ವಜ್ರಕವಚವಾಯಿತು. ಬ್ರಹ್ಮರಾಕ್ಷಸ ಘಟನೆ, ದೆವ್ವಪೀಡೆ–ಉಪಟಳ ಇವುಗಳೀದ ಬಿಡುಗಡೆ, ಈ ವಿಚಾರ ಶ್ರೀಗಳವರ ಮಹಿಮಾಜೀವನಕ್ಕೆ ಸ್ವಲ್ಪಮಟ್ಟಿಗೆ ಮೊದಮೊದಲು ನೆರವಾದವು. ಅವರ ಆದರ್ಶ, ನಿಗರ್ವ, ಆಚಾರವಿಚಾರ ಇವುಗಳಿಂದಾಗಿ ಬರಬರುತ್ತ ಶ್ರೀ ಸಿದ್ಧಗಂಗಾ ಕ್ಷೇತ್ರವು ಆದರ್ಶ ಪಾವನಕ್ಷೇತ್ರವಾಯಿತು. ಶಿವಯೋಗಿಗಳು ಮಹಾಮಹಿಮರಾಗಿ ಕಾಣಿಸತೊಡಗಿದರು. ಅನಂತರ ಶ್ರೀಗಳವರಿಂದ ದಿನೇ ದಿನೇ ರೂಪುಗೊಂಡ ಕಟ್ಟಡ, ಅನ್ನದಾನ, ವಿದ್ಯಾದಾನ, ಆದರ್ಶದ ನೀತಿನಿಯಮಗಳು ಜನಮನದಲ್ಲಿ ಅದ್ಭುತ ಪರಿಣಾಮಗಳನ್ನು ಬೀರತೊಡಗಿದುದರ ಕಾರಣವಾಗಿ ಎಲ್ಲರೂ ಭಕ್ತಿಯಿಂದ ನಡೆಯುತ್ತ ನೆರವಾಗತೊಡಗಿದರು. ಅವರ ಆ ಲೋಕೋಪಕಾರಕ ಕಾರ್ಯಗಳು ಅಚ್ಚಳಿಯದ ಶಿಲಾಶಾಸನಗಳಂತಿವೆ. ಧನ, ದವಸ ಮೊದಲಾದುವುಗಳ ಅಭಾವ ತಾನಾಗಿ ಕರಗಿ ಬಹುಧಾನ್ಯ, ಬಹುಧನಗಳಿಗೆ ಅವಕಾಶ ಮಾಡಿಕೊಟ್ಟಿತ್ತು, ಅವರ ಮಹಿಮಾತಿಶಯ. 'ಆದಾನಂ ಹಿ ವಿಸರ್ಗಾಯ' ದಾನಕ್ಕಾಗಿಯೇ ಪರಿಗ್ರಹ, ಇದು ಶ್ರೀ ಸಿದ್ಧಗಂಗಾ ಕ್ಷೇತ್ರದ ಮೂಲಮಂತ್ರ. ಇದರೊಡನೆ ಈ ವರೆಗೂ ಪರಂಪರೆಯಿಂದ ಅಲ್ಲಿಗೆ ಬಂದಿರುವ ಆದರ್ಶ ಗುರುಮೂರ್ತಿಗಳು ಅದಕ್ಕೆ ತಾರಕಮಂತ್ರವಾಗಿದ್ದಾರೆ.

**ಉತ್ತರಾಧಿಕಾರ :**

ತಮ್ಮ ೨೫ನೇ ವಯಸ್ಸಿನಿಂದ ೮೦ ವರ್ಷಗಳ ಕೊನೆಯವರೆಗೂ ಉದ್ದಾನಶಿವಯೋಗಿಗಳು ಅನ್ವರ್ಥನಾಮ ಪಡೆದು ಶ್ರೀ ಸಿದ್ಧಗಂಗಾಕ್ಷೇತ್ರವನ್ನು ಆದರ್ಶಕ್ಷೇತ್ರವನ್ನಾಗಿ ಮಾಡಿದರು. ಈ ಸಮಯದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಆಲೇನಹಳ್ಳಿಯಿಂದ ಅಭ್ಯಾಸಮಾಡಲು ಬಂದ ಶ್ರೀ ಮರುಳಸಿದ್ಧಯ್ಯ ಎಂಬ ವಟುವು, ಶ್ರೀ ಮರುಳಾರಾಧ್ಯ ಎಂಬ ಹೆಸರಿನಿಂದ ಶ್ರೀ ಉದ್ದಾನಶಿವಯೋಗಿಗಳ ಉತ್ತರಾಧಿಕಾರಿಗಳಾದರು, ಸುಮಾರು ಹತ್ತು ವರ್ಷಗಳ ಕಾಲ ವೇದ, ಸಂಸ್ಕೃತಗಳಲ್ಲಿ ಉತ್ತಮ ಪಾಂಡಿತ್ಯ ಪಡೆದು ಉತ್ತಮ ವಾಗ್ಮಿಗಳೂ, ವಾಚಾಳಿಗಳೂ ಆದ ಶ್ರೀ ಮರುಳಾರಾಧ್ಯರು ಹಿರಿಯ ಗುರುಗಳಿಗೆ ಮೆಚ್ಚುಗೆಯ ಶಿಷ್ಯರಾದರು.

**ಒಂದು ಕಿವಿಮಾತು :**

[1]ಒಂದು ಸಂಜೆ ನಡೆದ ಘಟನೆ. ನಾನು ಶ್ರೀಕ್ಷೇತ್ರದ ಛತ್ರದಲ್ಲಿ ವಾಸಿಸುತ್ತಿದ್ದೆ. ಶ್ರೀ ಸ್ವಾಮಿಯ ಪೂಜೆಗೆಂದು ಬಿಲ್ವಪತ್ರೆಗಳನ್ನು ಎತ್ತುತ್ತಿದ್ದ ನಾನು ಅವನ್ನು ದೇವಸ್ಥಾನಕ್ಕೆ ಕೊಡಲು ಬಹುಶಃ ಬೆಟ್ಟಕ್ಕೆ ಹೋಗುತ್ತಿದ್ದೆ. ಮೇಲಿನಿಂದ ಯಾರೋ ಇಬ್ಬರು ಕಾವಿ ಹೊದ್ದು ತಲೆಯನ್ನು ಮುಚ್ಚಿಕೊಂಡು ಪರಸ್ಪರ ಮಾತನಾಡಿಕೊಳ್ಳುತ್ತ ಇಳಿದು ಬರುತ್ತಿದ್ದರು. ಯಾರೋ ಏನೋ ನಾನು ಗಮನಿಸಿರಲಿಲ್ಲ. ಸಮೀಪಿಸಿದಾಗ ಕೇಳಿ ಬಂದ 'ಹುಂ'ಕಾರದಿಂದ ಇವರು ದೊಡ್ಡ ಶ್ರೀಗಳೇ ಎಂದು ದೃಢವಾಗಿ ಮೈ ಝುಂ ಎಂದಿತು. ಹಿಂದೂ ಹೋಗುವಂತಿಲ್ಲ. ಮುಂದೂ ಹೋಗುವಂತಿಲ್ಲ. ಅಲ್ಲೆ ನಿಂತೆ. ಆ ಉದಾತ್ತ ವ್ಯಕ್ತಿಗಳಿಬ್ಬರೂ ನನ್ನನ್ನು ಮಾತನಾಡಿಸಲೇ ಇಲ್ಲ. ಆದರೆ ಅಸ್ಪಷ್ಟವಾದ ಕೆಲವು ಮಾತುಗಳು ನನಗೆ ಕೇಳಿಸಿದವು.

---

1. ೧೯೨೯-೩೦ ರಲ್ಲಿ ನಾನು ಕಾಂದಿಶೀಕನಾಗಿ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ವಿದ್ಯಾರ್ಥಿಯಾಗಿ ಸೇರಿದ್ದ ಪರ್ವಕಾಲ. ಬರೆದಿರುವ ಸಂಗತಿ ಕಲ್ಪಿತವಲ್ಲ. ಬಾಲ್ಯದಲ್ಲಿ ಕಣ್ಣಾರೆ ಕಂಡದ್ದು. ಅರ್ಥವಾಗದೇ ಇದ್ದುದರಿಂದ ಅದರ ಪ್ರತಿಕೃತಿ ಕೊಡುತ್ತಿದ್ದೇನೆ. ಇಬ್ಬರು ವ್ಯಕ್ತಿಗಳನ್ನು ಕಂಡಿದ್ದೆ. ಒಬ್ಬರು ನಮ್ಮ ಗುರುಗಳು, ಇನ್ನೊಬ್ಬರು ಯಾರು? ಈ ಪ್ರಶ್ನೆಗೆ ಕೇವಲ ಊಹ್ಯ. ಪ್ರತಿ ಅಮಾವಾಸ್ಯೆಯಂದು ಶ್ರೀ ಉದ್ದಾನ ಶಿವಯೋಗಿಗಳು ರಾಮಲಿಂಗನ ಬೆಟ್ಟಕ್ಕೆ ಹೋಗಿ ಬರುತ್ತಿದ್ದರಂತೆ. ಒಮ್ಮೆ ಅವರಿಗೆ ತಿಳಿಯದೆ ಅವರನ್ನು ಹಿಂಬಾಲಿಸಿದ ಬಾಳಪ್ಪ ಎಂಬ ಅವರ ಸವಾರಿ ಗಾಡಿಯ ಚಾಲಕ ಗವಿ ಬಾಗಿಲಲ್ಲಿ ಪತ್ತೆಯಾಗಿ 'ಇಲ್ಲೇಕೆ ಬಂದ್ಯೋ ? ಹೋಗು ಮಠಕ್ಕೆ ಓಂದಿರುಗೆ'ಂದು ಬಾಳೆಹಣ್ಣನ್ನು ಕೊಟ್ಟು ಕಳುಹಿಸಿದರಂತೆ. ಬಾಳಪ್ಪನಿರುವತನಕ ಇಂಥ ವಿಚಿತ್ರ ಕಥೆಗಳನ್ನು ಹೇಳುತ್ತಿದ್ದ. ವೀರಪ್ಪತಾತನೆಂಬ ಶ್ರೀಗಳ ಶಿವಪೂಜಾ ಮರಿ ಇಂಥವೇ ಕೆಲವು ಕಥೆಗಳನ್ನು ಹೇಳುತ್ತಿದ್ದ. ಇವೆಲ್ಲವನ್ನೂ ಬೆಲೆ ಹಚ್ಚುವುದೂ ಒಗಟೇ, ಇಲ್ಲಿ ಇದನ್ನು ಲಂಬಿಸಹೋಗಿಲ್ಲ.

"......ಹಾಗಾದರೆ ಈಗ ಏನಪ್ಪಣೆ ? ಬೇಡವೇ ?......ಏಕೆ ಬೇಡ ?......
......ಬಿಟ್ಟು ಬಿಡಲೇನು ? ...... ಲೇ......? ನಿನಗೆ ಬೇಡವಾದರೆ ನನಗೂ ಬೇಡ.
......ಕರೆದುಕೊಂಡು ಹೋಗು ಹೋಗು"

ಎಂದು ನಮ್ಮ ಗುರುಗಳು ಆಕಾಶಭಾಷಣ ಮಾಡಿದರು.

ಇತ್ತ ಶ್ರೀ ಮರುಳಾರಾಧ್ಯರು ಶಿವೈಕ್ಯರಾದರು. ಈ ದೈವದುರ್ಘಟನೆಯಾಗುವ ವೇಳೆಗೆ ಹತ್ತುವರ್ಷಗಳ ಕಾಲ ಅವರು ದೊಡ್ಡ ಗುರುಗಳ ಉತ್ತರಾಧಿಕಾರತ್ವದ ಸ್ಥಾನವನ್ನು ಹೊಂದಿದ್ದರು.

ಈ ಘಟನೆ ನಗ್ನ ಸತ್ಯ. ಆ ಮತ್ತೊಂದು ವ್ಯಕ್ತಿ ಯಾರೆಂಬುದು ಈಗಲು ತಿಳಿಯದ ವಿಚಾರ. ಆದರೆ ಶ್ರೀ ಉದ್ದಾನ ಶಿವಯೋಗಿಗಳು ಮಾನವರಾದರೂ ಅತಿ ಮಾನವರೊಡನೆ ಸಂಪರ್ಕವಿಟ್ಟಿದ್ದರೆಂಬುದು ಲೇಖಕನ ನಂಬಿಕೆ. ಅವರು ಶ್ರೀ ದೊಡ್ಡ ಸಿದ್ಧಪ್ಪ ಮತ್ತು ಚಿಕ್ಕಸಿದ್ಧಪ್ಪ ಎಂದು ರಾಮದೇವರ ಬೆಟ್ಟದಲ್ಲಿ ಈಗಲೂ ತಪೋಮಗ್ನರಾಗಿರುವ ಮುನಿಪುಂಗವರೆಂದು ಪ್ರತೀತಿ. ಅಲ್ಲದೆ ಅವರು ಬೇತಾಳನನ್ನೂ ವಶಪಡಿಸಿಕೊಂಡಿದ್ದರೆಂದು ಹೇಳುತ್ತಾರೆ. ಆ ಎರಡನೆಯ ವ್ಯಕ್ತಿ ಇವರಲ್ಲಿ ಒಬ್ಬರಿರ ಬೇಕೆಂದು ಈಗ ಲೇಖಕನ ಅನಿಸಿಕೆ. ಈ ಅತಿಮಾನವ ಸಂಪರ್ಕ ಅವರ ಮುನಿವ್ರತದ ಫಲವೆನ್ನದೆ ತೀರದು. ಕಾರಣ ಪುರುಷರಾಗಿ ಹುಟ್ಟಿ ಬ್ರಹ್ಮರಾಕ್ಷಸ ತಿಳಿಸಿದಂತೆ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಬೆಳಗಲು ಅವರು ದೈವಪ್ರೇರಿತರಾಗಿ ಮಾನವ ಜನ್ಮವನ್ನು ಪಡೆದಿದ್ದರೆಂಬುದು ಒಂದು ವಾದ.

**ಪುನಃ ಉತ್ತರಾಧಿಕಾರಿ :**

೧೯೩೦ರಲ್ಲಿ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀಮರುಳಾರಾಧ್ಯರು ಶಿವೈಕ್ಯರಾದ ಮೇಲೆ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಉದ್ದಾನಸ್ವಾಮಿಗಳು ಸಮಚಿತ್ತರಂತೆ ಕಂಡುಬಂದರು. ಆ ವರ್ಷದ ಜಾತ್ರೆ ನಡೆಯುವ ಮೊದಲು ಶ್ರೀ ಮರುಳಾರಾಧ್ಯರ ಸಮಾಧಿಕಾರ್ಯಗಳು ನಡೆಯುತ್ತಿರುವಾಗ ಹಠಾತ್ತನೆ ಶ್ರೀ ಶಿವಣ್ಣನವರು ಅವರ ದೃಷ್ಟಿಗೆ ಬಿದ್ದರು. ಶ್ರೀ ಶಿವಣ್ಣನವರು ಶಿವಗಂಗೆಯ ಹತ್ತಿರದ ವೀರಾಪುರದ ನಿವಾಸಿಗಳು. ಶ್ರೀಗಳು ಅವರನ್ನೇ ತಮ್ಮ ಕೃಪಾಪಾತ್ರರಾಗಲು ಅರ್ಹರೆಂದು ದಿವ್ಯ ದೃಷ್ಟಿಯಿಂದ ಕಂಡಿದ್ದರು. ಶ್ರೀ ಮರುಳಾರಾಧ್ಯರ ಸಮಾಧಿವೇಳೆಯಲ್ಲಿ ಶ್ರೀ ಶಿವಣ್ಣನವರಿಗೆ ಉದ್ದಾನಸ್ವಾಮಿಗಳು 'ಶಿವಣ್ಣ ! ನಮಸ್ಕಾರ ಹಾಕು' ಎಂದು ಪೂರ್ವಸೂಚನೆಯಿಲ್ಲದೆಯೇ ಅಪ್ಪಣೆ ಮಾಡಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಗೆ ವ್ಯಾಸಂಗ ಮಾಡುತ್ತಿದ್ದ ಶ್ರೀ ಶಿವಣ್ಣನವರು ಸಮಾಧಿ ಕಾರ್ಯದಲ್ಲಿ ಪಾಲ್ಗೊಳ್ಳಲು ಬಂದಿದ್ದರು. ಬಿ.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿದ್ದ ಅವರು ಶ್ರೀಗಳ ಅಪ್ಪಣೆಯನ್ನು ಮೀರಲಾಗದೆ ತಾಯಿ ತಂದೆಗಳ ಅಪ್ಪಣೆಯನ್ನು ಪಡೆಯಲು ಅವಕಾಶವಿಲ್ಲದೆ ಒಪ್ಪಬೇಕಾದ ಪರಿಸ್ಥಿತಿಯುಂಟಾಯಿತು. ಮುನಿವ್ರತವೋ, ವೀರವಿರಕ್ತಿಯೋ ಯೋಗಸಿದ್ಧಿಯೋ ಅಂತೂ ಶ್ರೀಗಳ ಅಪ್ಪಣೆಯನ್ನು ಮೀರುವಂತೆಯೇ ಇಲ್ಲ. ಅವರ ಆಜ್ಞೆಯಂತೆ ನಮಸ್ಕಾರ ಮಾಡಿದರು. ಆ ವರ್ಷದ ಜಾತ್ರೆಯಲ್ಲೇ ಅವರ ಆಶ್ರಮಸ್ವೀಕಾರ ಜರುಗಿತು, ಸುಮಾರು ೧೧ ವರ್ಷಗಳು ಶ್ರೀಮನ್ನಿರಂಜನ ಉದ್ದಾನಶಿವಯೋಗಿಗಳ ಮಾರ್ಗದರ್ಶನವು ನೂತನ ಶ್ರೀಗಳಿಗೆ ದೊರಕಿತು. ಶ್ರೀ ಶಿವಣ್ಣನವರು ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶಿವಕುಮಾರಸ್ವಾಮಿಗಳೆಂಬ ದಿವ್ಯನಾಮಾಂಕಿತರಾದರು.

"ಹರ ತನ್ನ ಭಕ್ತರ ತಿರಿವಂತೆ ಮಾಡುವ ;
ಒರೆದು ನೋಡುವ ಸುವರ್ಣದ ಚಿನ್ನದಂತೆ,
ಅರೆದು ನೋಡುವ ಕಬ್ಬಿನ ಕೋಲಿನಂತೆ;
ಅರಿದು ನೋಡುವ ಶ್ರೀಗಂಧದಂತೆ,
ಬೆದರದೆ ಬೆಚ್ಚದೆಯಿದ್ದರೆ ಕರವಿಡಿದೆತ್ತಿಕೊಂಬ ರಾಮನಾಥ"

ಎಂಬಂತೆ ಕೆಲವು ಕಾಲ ಕಳೆದ ಮೇಲೆ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶಿವಕುಮಾರಸ್ವಾಮಿಗಳ ಅಧಿಕಾರಾವಧಿಯಲ್ಲಿ ಶ್ರೀಕ್ಷೇತ್ರದ ಸುವರ್ಣಯುಗವು ಆರಂಭವಾಯಿತು. ಕಾಲವು ಹೇಗೇ ಇರಲಿ, ವಿದ್ಯಾರ್ಥಿಗಳ ಸಂಖ್ಯೆ ೧೦೦ ರಿಂದ ೪೦೦೦ ಕ್ಕೇರಿತು. ಅನ್ನದಾನ ಮಿಗಿಲಾಯಿತು. ಮಾಧ್ಯಮಿಕ ಶಾಲೆಗಳು ಪ್ರೌಢಶಾಲೆಗಳು ಈ ಕ್ಷೇತ್ರದಲ್ಲೂ ಕ್ಷೇತ್ರದ ವತಿಯಿಂದ ಬೇರೆ ಬೇರೆ ನಗರ ಗ್ರಾಮಗಳಲ್ಲೂ ಪ್ರಾರಂಭವಾದವು. ತುಮಕೂರಿನಲ್ಲಿ ಒಂದು ಸೈನ್ಸ್‌ಕಾಲೇಜು, ಅದಕ್ಕೂ ಮಿಗಿಲಾಗಿ ಒಂದು ಇಂಜನಿಯರಿಂಗ್ ಕಾಲೇಜು ಸಹ ಪ್ರಾರಂಭವಾಯಿತು. ದೇಶ ಆಹಾರಧಾನ್ಯಗಳ ವಿಷಯದಲ್ಲಿ ಕಷ್ಟಕ್ಕೆ ಗುರಿಯಾಗಿದ್ದರೂ ಶ್ರೀ ಶಿವಕುಮಾರಸ್ವಾಮಿಗಳ ಕ್ಷೇತ್ರಾಭಿವೃದ್ಧಿ ಕಾರ್ಯಕ್ರಮಗಳಿಗೆ ಯಾವುದೇ ರೀತಿಯ ಅಡೆತಡೆಗಳುಂಟಾಗಲಿಲ್ಲ. ಶ್ರೀಗಳವರ ಪ್ರಭಾವ ಪ್ರತಿಭೆಗಳು ದೇಶದ ಸಾಮಾಜಿಕ ವಿಷಯಗಳಲ್ಲಿ ಪ್ರವೇಶಮಾಡಿ ಅವರ ಅಭ್ಯುದಯಕ್ಕಾಗಿ ದಾರಿ ಮಾಡಿದವು.

ಒಟ್ಟಿನಲ್ಲಿ ಶ್ರೀ ಶಿವಕುಮಾರಸ್ವಾಮಿಗಳು ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಸುವರ್ಣಯುಗವನ್ನು ಪ್ರಾರಂಭಿಸಿಅಭಿವೃದ್ಧಿಗೊಳಿಸಿದರು. ಒಂದು ಮಾತಿನಲ್ಲಿ ಹೇಳುವುದಾದರೆ ಶ್ರೀ॥ ಸಿ॥ ಪ್ರ॥ ಸ್ವಾ॥ ಶಿವಕುಮಾರಸ್ವಾಮಿಗಳನ್ನು ಪೂಜೆಗೆ ಬಿನ್ನಹ ಹಾಕುವುದು, ಭಾಷಣಕ್ಕೆ ಆಹ್ವಾನಿಸುವುದು ನ್ಯಾಯತೀರ್ಪಿಗೆ ಆಹ್ವಾನಿಸುವುದು ಇತ್ಯಾದಿಗಳೆಲ್ಲ ಜನಸ್ತೋಮಕ್ಕೆ ಒಂದು ಹೆಮ್ಮೆಯ ಕೆಲಸವಾಯಿತು. ವೀರವಿರಕ್ತರೂ ಶಾಂತಿಸಾಗರರೂ ಆದ ಶ್ರೀಗಳು ಎಲ್ಲವನ್ನೂ ಸಮದೃಷ್ಟಿಯಲ್ಲಿ ನೋಡಿ ತಮ್ಮ ಭಾಷಣದಲ್ಲಿ ಕೀರ್ತಿ ಪಡೆದರು. ಯಾವ ನ್ಯೂನತೆಗೂ ಹೆದರಿ ಪರರನ್ನು ಬೇಡಿಲ್ಲ. ಯಾರನ್ನೂ ಬೇಡದಂತೆ ಶ್ರೀ ಗುರುವು ಅವರಿಗೆ ಅಭಯಹಸ್ತ ನೀಡಿದ್ದಾನೆ.

**ಉಪಸಂಹಾರ : ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ (ಗೀತೆ. ೧೮–೫೯)**

ಪ್ರಕೃತಿಯೇ ಮನುಷ್ಯನನ್ನು ಒತ್ತಾಯದಿಂದ ತನ್ನಿಷ್ಟದಂತೆ ಕೆಲಸ ಮಾಡಿಸುತ್ತದೆ ಎಂದು ಗೀತೆಯಲ್ಲಿ ತಿಳಿಸುವಂತೆ ದೈವವೂ ತನ್ನಿಷ್ಟದಂತೆ ಮನುಷ್ಯನನ್ನು ನಾನಾ ಕೆಲಸಗಳಲ್ಲಿ ಪ್ರೇರೇಪಿಸುತ್ತದೆ. ಶ್ರೀಮದುದ್ದಾನ ಸ್ವಾಮಿಗಳು ಮೋಕ್ಷ ಮೇಯಿಸುವುದೇ ತನ್ನ ಕೆಲಸವೆಂದು ನಿಶ್ಚಯಿಸಿರಬೇಕು. ನಿಜಗಲ್ ಬೆಟ್ಟದಲ್ಲಿ ಅವರಿಗೆ ಮಹತ್ತ್ವದ ಸಾಕ್ಷಾತ್ಕಾರವಾಗುವುದೆಂದು ಬಹುಶಃ ಅವರು ಭಾವಿಸಿರಲಿಕ್ಕಿಲ್ಲ. ಆ ಬೆಟ್ಟದ ಘಟನೆ ಅವರ ಮಹಾಸಾಧನೆಗಳ ಪ್ರಥಮ ಹಂತ. ವೀರ ವೀರಕ್ತಿಯು ಅವರಿಗೆ ಸಂಸ್ಕಾರ ಲಭ್ಯವಾಗಿದ್ದ ಜನ್ಮಸಿದ್ಧ ವರ. ಅವರ ಮುನಿವ್ರತ, ತಪಸ್ಸು ಇತ್ಯಾದಿಗಳಿಗೆ ಅವರ ಮನೆಯ ಪರಿಸರ ಅವರಿಗೆ ಸರಿಬೀಳದೆ ಶ್ರೀ ಸಿದ್ಧಗಂಗಾಕ್ಷೇತ್ರವು ಸರಿಯಾದ ಪರಿಸರವಾಯಿತು. ಅಲ್ಲಿಯೇ ಸೇವೆ ಮಾಡುವುದಾಗಿ ತನ್ನ ಆಧ್ಯಾತ್ಮಿಕ ಗಂಟನ್ನು ಬಚ್ಚಿಟ್ಟು ಸೇವಾಪರರಾದರು. ಆದರೆ ಪ್ರಕೃತಿ ತನ್ನ ಕೆಲಸ ಮಾಡಿಯೇ ತೀರುವುದು. ಅಡವೀಸ್ವಾಮಿಗಳು ಅಸ್ವಸ್ಥರಾದಾಗ ಪ್ರಕೃತಿಯ ಚಳಕವು ಚುರುಕಾಯಿತು. ಶೂನ್ಯಕ್ಕೆ ಅತಿಶೂನ್ಯವೇ ಮದ್ದೆಂದರು. ಶ್ರೀ ಅಡವೀಸ್ವಾಮಿಗಳ ಕೃಪಾಶೀರ್ವಾದ ದೊರೆತು ಆಕಾಶಪುಷ್ಪವೆಂದೆನಿಸಿದ್ದ ವಿರಕ್ತಾಶ್ರಮ ಕೈಸೇರಿತು. ಅಚ್ಚಳಿಯದ ದಿಟ್ಟತನ. ಆಧ್ಯಾತ್ಮಿಕ ವರ್ಚಸ್ಸಿರುವ ಯಾವ ವ್ಯಕ್ತಿ ತಾನೇ ಕ್ಷುದ್ರರ ಪಟಾಟೋಪಕ್ಕೆ ಬಗ್ಗುವನು ? ದಿನೇ ದಿನೇ ಅಭಿವೃದ್ಧಿಯಾಗುತ್ತಿದ್ದ ಅವರ ಆಧ್ಯಾತ್ಮ ಶಕ್ತಿ ಅವರನ್ನು ಸನ್ನೆ ಮಾಡಿ ಹೆದರಬೇಡ ಎಂದಿರಬೇಕು. ಇಲ್ಲದಿದ್ದಲ್ಲಿ ಆ ಗುರುತರ ಜವಾಬ್ದಾರಿಯ ಎದುರು ಅವರು ಅಶಕ್ತರಾಗುತ್ತಿದ್ದರೋ ಏನೋ.

ಕ್ಷುದ್ರ ಉಪಟಳಗಳು ಮುಗಿದ ಬಳಿಕ ಶ್ರೀಗಳು ಸಂಸ್ಥೆಯನ್ನು ಬಲವಾಗಿ ಕಟ್ಟಲು ಶ್ರಮಪಟ್ಟರು. ಹಳ್ಳಿ ಹಳ್ಳಿಗೂ ಹಸುಬೆ ಚೀಲದಲ್ಲಿ ಪೂಜಾಸಾಮಗ್ರಿಗಳನ್ನು ತುಂಬಿ ಭಿಕ್ಷೆಗೆ ಹೊರಟರು. ಮೊದ ಮೊದಲು ನಿರಾಸೆಪಡಬೇಕಾಯಿತಾದರೂ ಮುಂದೆ ಬುದ್ಧಿ ತಿಳಿದ ಜನರಿಂದ ಧನ ಧಾನ್ಯ ಯಥೇಚ್ಛವಾಗಿ ದೊರಕಿತು. ಶ್ರೀಗಳು ಸಾಮಾಜಿಕ ಸೇವೆಯನ್ನು ಮಾಡಲು ಊರಲ್ಲಿರುವ ಪಾರ್ಟಿಗಳು ಅಡ್ಡ ಬಂದಾಗ, ಆ ಪಾರ್ಟಿಗಳು ಮುರಿದು ಒಗ್ಗಟ್ಟು ಬರುವ ತನಕವೂ ಪೂಜೆಯನ್ನೇ ಮಾಡುವುದಿಲ್ಲವೆಂದು ಸತ್ಯಾಗ್ರಹ ಹಿಡಿಯುತ್ತಿದ್ದರು. ಹೇಳಿದ ಮಾತಿಗೆ ಯಾರಾದರೂ ಮೀರಿದರೆ ಕೂಡಲೇ ಬರೀ ಮೈಯಲ್ಲಿ ಕಾರೆ ಗಿಡದ ಮೇಲೆ ಕುಳಿತು ಸತ್ಯಾಗ್ರಹ ನಡೆಸುತ್ತಿದ್ದರು. ಅವರು 'ಇಟ್ಟರೆ ವರ ಕೊಟ್ಟರೆ ಶಾಪ' ವೆಂಬುದು ಎಲ್ಲರಿಗೂ ಗೊತ್ತಿದ್ದು ಪರಿಸ್ಥಿತಿ ಸುಧಾರಿಸಿತು. ಸಾಲ ತೆಗೆದುಕೊಂಡ ಒಬ್ಬಾತ ತುಂಬಾ ದಿನಗಳಾದರೂ ಹಣವನ್ನು ಹಿಂದಿರುಗಿಸದಿದ್ದಾಗ ಶ್ರೀಗಳು 'ನಿನ್ನೆಂಡರ್ ಸಾಯ...... ಎಲ್ಲೋ ನನ್ನ ೫೦೦ ರೂಪಾಯಿಗಳು' ಎಂದರಂತೆ ಅದರಂತೆ ಅವನ ಹೆಂಡತಿ ತೀರಿಹೋದಳು. ಆತ 'ಬುದ್ಧಿ ! ನನ್ನೆಂಡ್ರು ಸತ್ತಳು ಬುದ್ಧಿ' ಎಂದಾಗ ಶ್ರೀಗಳು ತಮ್ಮ ಕೋಪದ ಶಾಪಕ್ಕೆ ತಾವೇ ಸಂಕಟಗೊಂಡು ಪುನಃ ೫೦೦ ರೂ. ಗಳನ್ನು ಅವನಿಗೆ ಕೊಟ್ಟು 'ಹೋಗು ಮದುವೆಯಾಗಿ ಸುಖವಾಗಿರು' ಎಂದು ಅನುಗ್ರಹಿಸಿ ಕಳುಹಿಸಿ ಕೊಟ್ಟರು. ಐದುನೂರು ರೂಪಾಯಿಗಳನ್ನು ವಸೂಲು ಮಾಡುವಲ್ಲಿ ಉಂಟಾದ ಕೋಪದ ಶಾಪಕ್ಕೆ ಬಲಿಯಾದ ಆ ಬಡಪಾಯಿಗೆ ಸಾವಿರ ರೂಪಾಯಿಗಳ ದಂಡವನ್ನು ಶ್ರೀಗಳವರೇ ಕೊಟ್ಟಿದುಂಟು.

ಜಾತ್ರೆ ಸಮಯದಲ್ಲಿ ಊಟದ ಎಲೆಗಳು, ಅಕ್ಕಿ ಮೊದಲಾದ ದವಸಧಾನ್ಯ ಸಾಲದೆ ಬಂದಾಗ "ಸಿದ್ಧಲಿಂಗ ತರ್ತಾನೆ ಮಾಡ್ರೋ ಅಡಿಗೇನ" ಎಂದು ಹೇಳುತ್ತಿದ್ದರಂತೆ. ದವಸ ಧಾನ್ಯಗಳು ಅಚ್ಚರಿಪಡುವಂತೆ ತುಂಬುತ್ತಿದ್ದುವು. ಅಂಥ ವಾಕ್ಸಿದ್ಧಿ, ವಾಕ್‌ಶಕ್ತಿ ಅವರಲ್ಲಿದ್ದುದೇ ಇದಕ್ಕೆ ಕಾರಣ. ಅದಕ್ಕಾಗಿ ಹಲವಾರು ಜನರು ಅವರ ಬಳಿ ವರ ಬೇಡಿ ಸಿದ್ಧಿ ಪಡೆಯುತ್ತಿದ್ದರು.

ಜಾತ್ರೆಯ ಸಂದರ್ಭ : ಒಮ್ಮೆ ಸುತ್ತಮುತ್ತಲೂ ಪ್ಲೇಗು ಹರಡಿದ್ದರಿಂದ ಸರಕಾರ ಅನುಮತಿಯನ್ನು ನೀಡಿರಲಿಲ್ಲ. ಅದಕ್ಕಾಗಿ ಡೆಪ್ಯುಟಿ ಕಮಿಷನರ ಮೇಲೆ ಶ್ರೀಗಳ ಹಾರಾಟವೋ ಹಾರಾಟ. ಎಷ್ಟು ಹೇಳಿದರೂ ಅನುಮತಿಯಂತೂ ಸಿಗಲೇ ಇಲ್ಲ. ಇತ್ತ ಜಾತ್ರೆಗಾಗಿ ತಂದ ಪದಾರ್ಥಗಳೆಲ್ಲ ಹಾಳಾಗುವುದೆಂಬ ಖೇದ. ಅಂತೂ ಚಿಕ್ಕರಥದಲ್ಲೇ ಸ್ವಾಮಿಯ ಉತ್ಸವ ನಡೆಸಿಬಿಟ್ಟರು. ಶ್ರೀಗಳ ಆಧ್ಯಾತ್ಮದ ಶುದ್ಧ ಜೀವನದ ಬಗ್ಗೆ ಕೇಳಿ ತಿಳಿದಿದ್ದ ಡೆಪ್ಯುಟಿ ಕಮಿಷನರ್ ಅವರು, ತಾವೇ ಖುದ್ದಾಗಿ ಬಂದು 'ಸ್ವಾಮಿ !, ಪ್ಲೇಗಿನ ಹಾವಳಿ ಇದೆ. ಜಾತ್ರೆ ನಿಲ್ಲಿಸಲಾಗಿದೆ' ಎಂದರು. ಶ್ರೀಗಳು 'ನಾನು ನಡೆಸಿಯೇ

ನಡೆಸುತ್ತೇನೆ. ಇಲ್ಲಿ ನೋಡಿ ಈ ಅಕ್ಕಿ, ಕಾರದ ಪುಡಿ, ಇವನ್ನೆಲ್ಲ ಯಾರು ತಿನ್ನಬೇಕು'–ಎಂದು ಮುಂತಾಗಿ ಬಿಸಿಯಾಗೇ ಪ್ರಶ್ನಿಸಿದರು. ಅವರು ನಿರುತ್ತರರಾಗಿ ಸುಮ್ಮನೆ ಹೋದರು. ಜಾತ್ರೆ ನಡೆಯಿತು. ಅವರ ಅಲೌಕಿಕ ವರ್ತನೆಯ ಬಗ್ಗೆ ತಿಳಿದ ಇತರರು ಅಧಿಕಾರಿಗಳನ್ನು ಸಮಾಧಾನ ಪಡಿಸಿದರು. ವಿದ್ಯಾರ್ಥಿಗಳನ್ನು ಓದಿಸುವುದರಲ್ಲಿ ಶ್ರೀಗಳಿಗೆ ವಿಶೇಷ ಆಸಕ್ತಿ. ನನ್ನನ್ನು ಕಂಡರೆ ಗುರುಗಳಿಗೆ ಒಂದು ತರಹದ ಅವ್ಯಾಜ ಪ್ರೀತಿ. ಕಂಡಾಗಲೆಲ್ಲ ಕರೆದು 'ಲೋ! ಅಣ್ಣ! ಕರಿನಾಯಿ ಬಿಳಿ ನಾಯಿ ಆದ ಕತೆ ಹೇಳು' ಅನ್ನುತ್ತಿದ್ದರು. ಹೇಳಿ ಬಿಡುತ್ತಿದ್ದೆ ನಾನು. ಪಾಠ ಒಪ್ಪಿಸದ ವಿದ್ಯಾರ್ಥಿಗಳನ್ನು ಮೂದಲಿಸಿ ಕೆಂಪು ಇರುವೆ ಗೂಡಿನ ಮೇಲೆ ನಿಲ್ಲಿಸಿ ಕಾವಲಿರುತ್ತಿದ್ದರು. ಕಾಲೆತ್ತಿದರೆ ಏಟು ಬೀಳುತ್ತಿತ್ತು. ಒಮ್ಮೆ ಮಾವಿನಕಾಯಿ ಕಿತ್ತ ತಪ್ಪಿಗೆ ನನ್ನನ್ನು ಮಾವಿನ ಮರಕ್ಕೆ ಕಟ್ಟಿ ನೇತು ಹಾಕಿಸಿದ್ದರು. ಅಲ್ಲದೆ ಕಲ್ಯಾಣಿಯಲ್ಲಿ ಈಜುತ್ತಿದ್ದಾಗ ಮಳೆ ಬೀಳುತ್ತಿರುವಾಗಲೇ ಬಂದು ಹಿಡಿದು ಶಿಕ್ಷಿಸಿದ್ದರು.

ಹಳೇಮಠದಲ್ಲಿ ಶ್ರೀಗಳು ಏಕಾಂತವಾಸದಲ್ಲಿರುತ್ತಿದ್ದರೂ ನೂರಾರು ಕಡೆ ಅವರ ದೃಷ್ಟಿ. ತುಮಕೂರಿನಲ್ಲಿ ವ್ಯಾಪಾರ, ಭಿಕ್ಷಾದಿಗಳಿಗೂ ಅವರು ಮೊದಮೊದಲು ಕಾಲುನಡಿಗೆಯಲ್ಲಿಯೇ ತೆರಳುತ್ತಿದ್ದರು. ನಂತರ ಜಟಕಾದಲ್ಲಿ ಪ್ರವಾಸ ಮಾಡುತ್ತಿದ್ದರು. ನಾನು ಪ್ರಾಪ್ತವಯಸ್ಸಿನವನಾದ ಮೇಲೆ ಅವರ ಮಡಿಬಟ್ಟೆ ಹಿಂಡುವುದು, ಮಡಿನೀರು ಹಾಕುವುದು, ಅಭ್ಯಂಜನ ಮಾಡಿಸುವುದು ಇಂತಹ ಖಾಯಂ ಸೇವೆಗಾಗಿ ನೇಮಕಗೊಂಡಿದ್ದುದು ಪುಣ್ಯಕರವಾದ ಸಂಗತಿ. ಈ ಪುಣ್ಯವೇ ಮುಂದೆ ನನ್ನ ಜೀವನದ ಅನೇಕ ಸಂದಿಗ್ಧ ಪರಿಸ್ಥಿತಿಯಲ್ಲಿ ರಕ್ಷಕನಂತೆ ಒದಗಿದೆ ಎಂದು ಪ್ರಬಲವಾಗಿ ನಂಬಿದ್ದೇನೆ. ಇದಕ್ಕಾಗಿಯೇ ಅನೇಕರು ಶ್ರೀ ಉದ್ದಾನ ಸ್ವಾಮಿಗಳ ಪಟ್ಟದ ಶಿಷ್ಯನೆಂದು ನನ್ನನ್ನು ಮೂದಲಿಸುವುದೂ ಉಂಟು. ಆದರೆ ಅಂಥ ಪಟ್ಟವೇನೂ ಇಲ್ಲ. ನಾನು ಅವರಲ್ಲಿ ಕಾಲವನ್ನರಿತು ವರ್ತಿಸುತ್ತಿದ್ದುದರಿಂದ ಅವರು ನನಗೆ ದುಡ್ಡಿನ ವ್ಯವಹಾರವನ್ನು ವಹಿಸಿದರು. ಒಮ್ಮೆ ಶ್ರೀಗಳ ವ್ಯವಹಾರವು ನನಗೆ ಸರಿಯೆನಿಸದಿದ್ದಾಗ ಲೆಕ್ಕದ ಪುಸ್ತಕವನ್ನು ಅವರತ್ತ ಬಿಸಾಡಿದ್ದೂ ಉಂಟು. ಅದನ್ನು ಕಂಡ ಶ್ರೀಗಳು 'ಲೇ! ಈ ಬಡ್ಡಿ ಮಗನಿಗೆ ಒಂದೆದೆಯಲ್ಲ ಇರೋದು ಎಂಟೆದೆ' ಎಂದು ನನಗೆ ಆಶೀರ್ವಾದ ಮಾಡಿದರೇ ಹೊರತು ಸಿಟ್ಟಿನಿಂದ ಏನೂ ಅನ್ನಲಿಲ್ಲ. ನಾನು ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಕಟ್ಟುವ ಸಮಯ. ಆದರೆ ದುಡ್ಡಿನ ಮುಗ್ಗಟ್ಟಿನಿಂದ ಚಡಪಡಿಸುತ್ತಿದ್ದಾಗ ಅವನ್ನು ಹೇಗೋ ತಿಳಿದ ಶ್ರೀಗಳು 'ಲೋ! ಅಣ್ಣಾ! ಕೊಳ್ಳೋ ದುಡ್ಡನ್ನು' ಎಂದು, 'ಅಂದ್ರೆ, ಅಂದ್ರೆ, ಫಸ್ಟ್‌ಕ್ಲಾಸಿನಲ್ಲಿ ಪಾಸು ಮಾಡಬೇಕು' ಎಂದು ಅಪ್ಪಣೆ ಮಾಡಿದರು. ಅವರ ಆಶೀರ್ವಾದವಿರಬೇಕು. ನಾನು ಪಾಸು ಮಾಡಿದೆ. ಶ್ರೀಕ್ಷೇತ್ರದಲ್ಲಿ ನಡೆಸುತ್ತಿದ್ದ ಸೇವೆ, ಸಂಸ್ಕೃತಾಭ್ಯಾಸಕ್ಕೆ ತಿಲಾಂಜಲಿಯಿತ್ತು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅಭ್ಯಾಸವನ್ನು ಪ್ರಾರಂಭಿಸಿದೆ. ಶಿವರಾತ್ರಿ ಪೂಜೆಯಲ್ಲಿ ತೀರ್ಥವನ್ನು ತೆಗೆದುಕೊಳ್ಳುತ್ತಿದ್ದಾಗ 'ಯಾವ ಮಂತ್ರವೋ ನೀ ಹೇಳೋದು.....' ಎಂದರು. ನಾನು ಏನೂ ಹೇಳದೇ ಇದ್ದಾಗ ಗಾಯತ್ರಿಯನ್ನೇ ಕಿವಿಯಲ್ಲಿ ಉಪದೇಶಿಸಿದರು. ಎಂ. ಎ. ಮಾಡುವ ವರೆಗೂ ಇಲ್ಲಿ ಬರಕೂಡದೆಂದು ಅಪ್ಪಣೆ ಮಾಡಿದ ಗುರುಗಳ ಶಿರಸ್ಸನ್ನು ಅವರ ಅವಸಾನ ಕಾಲದಲ್ಲಿ ನನ್ನ ತೊಡೆಯ ಮೇಲಿರಿಸಿ ಕೊನೆಯ ಪಾದೋದಕ ಕುಡಿಸಿ ಅವರು ಲಿಂಗೈಕ್ಯರಾಗುವುದನ್ನು ಕಣ್ಣಾರೆ ನೋಡಿದೆ.

ಶ್ರೀಗಳಿಗೆ ತಮ್ಮ ಉತ್ತರಾಧಿಕಾರಿಗಳಲ್ಲಿ ಅನನ್ಯವಾದ ಪ್ರೀತಿ. ಬಂದವರಿಗೆಲ್ಲ 'ನಮ್ಮ ಸ್ವಾಮಿಗಳು' 'ನಮ್ಮ ಸ್ವಾಮಿಗಳು' ಎಂದು ಪ್ರೀತಿಯಿಂದ ಹೇಳುತ್ತಿದ್ದರು. ಕಾಲವಿಲ್ಲ, ವೇಳೆಯಿಲ್ಲ, "ಸ್ವಾಮಿಗಳೇ! ಇಲ್ಲಿ ಬನ್ನಿ" ಎಂದು ಗೋಪ್ಯಗಳನ್ನೆಲ್ಲ ಹೇಳುತ್ತಿದ್ದರು. ಕಾಲಕ್ರಮೇಣ ಅವರ ಅಧ್ಯಾತ್ಮ ಜ್ಞಾನವನ್ನೆಲ್ಲ ಇವರಿಗೆ ಧಾರೆ ಎರೆದರು. ಅವರು ಲಿಂಗೈಕ್ಯರಾಗುವ ದಿನ ನಾವೆಲ್ಲ ವಾರ್ಷಿಕೋತ್ಸವಕ್ಕಾಗಿ ಆಟಪಾಟಗಳನ್ನು ನಡೆಸುತ್ತಿದ್ದೆವು. ಶ್ರೀಗಳು ಆಪ್ತರಾದ ಶ್ರೀ ಅನಂತರಾಮನ್ ಅವರಿಗೆ ತಾವೇ ಪತ್ರ ಬರೆದು 'ವಾರ್ಷಿಕೋತ್ಸವಕ್ಕೆ ನಾವು ಇರುವುದಿಲ್ಲ' ಎಂದಿದ್ದರು. ಇದರ ಅಂತರಾರ್ಥವನ್ನು ನಾವು ತಿಳಿದಿರಲಿಲ್ಲ. ಆದರೇನು, ಎಲ್ಲ ಮಿಂಚಿ ಹೋಗಿತ್ತು!

ಅಂತ್ಯದಲ್ಲಿ ಆಧ್ಯಾತ್ಮಿಕ ಮುಖ ಮುದ್ರೆಯಲ್ಲಿ ತಲ್ಲೀನರಾದಂತೆ ಕಂಗೊಳಿಸುತ್ತಿದ್ದ ಮಹಾವ್ಯಕ್ತಿಯ ಅಂತ್ಯದರ್ಶನ ಮಾಡಿ ಅವರ ಆಶೀರ್ವಾದ ಪಡೆದು, ಷಡಕ್ಷರಿ ಮಂತ್ರದ ಸಮೂಹಪಠನದಿಂದ ದಿಗಂತಗಳು ಮೊಳಗುತ್ತಿದ್ದಾಗ "ಮಹಾತಪಸ್ವಿ"ಯ ಪರಿನಿಷ್ಕ್ರಮಣವನ್ನು ಕಂಡೆವು. ೧೯೪೧ನೆಯ ಜನವರಿ ತಿಂಗಳ ೧೧ ನೆಯ ದಿನಾಂಕ ಶ್ರೀಮದುದ್ದಾನ ಗುರುಗಳ ಅವತಾರವು ಕೊನೆಗೊಂಡಿತು.

ಆದಿಯಿಂದ ಅಂತ್ಯದವರೆಗೂ ಅವರದು ಒಂದು ರೀತಿ ಹಮ್ಮುಬಿಮ್ಮುಗಳಿಲ್ಲದ ಲಿಂಗಸಮರ್ಪಿತ ಅರ್ಪಣಬುದ್ಧಿ. ಅರ್ಪಣದಲ್ಲಿ ತನ್ನ ಪ್ರಾರ್ಥನೆ ಯಂತ್ರ. ಪ್ರಪಂಚವನ್ನು ಶಿವನು ನಡೆಸಲಿ ಎಂಬ ಹಟ. ಅದು ಎಷ್ಟರಮಟ್ಟಿಗೆ ಸಾಧ್ಯವೆಂದು ಅವರ ಕಲ್ಪನೆಯಿಲ್ಲ. ಗಂಡು ಹೆಣ್ಣು ಭೇದವಿಲ್ಲದೆ ಎಲ್ಲರೂ ಆದರ್ಶ ಅರ್ಪಣಭಾವದಿಂದಿರಬೇಕೆಂಬ ಸಂಕಲ್ಪ ಅವರದು. ಶ್ರೀಗಳು ಈ ಕಾಲದಲ್ಲಿ ಇರುತ್ತಿದ್ದರೆ ಸರ್ಕಾರ, ಸಮಾಜ, ಎಲ್ಲದರ ಮೇಲೂ ಹಲ್ಲೆ ನಡೆಸುತ್ತಿದ್ದರೋ ಏನೋ! ಅವರದು

ಆದಿಯಿಂದ ಅಂತ್ಯದವರೆಗೂ ಬಸವಾದಿ ಪ್ರಮಥರಂತೆ ಅರ್ಪಣಭಾವ, ತ್ಯಾಗಬುದ್ಧಿ ; ಪ್ರಭುದೇವರಂತೆ ನೈಷ್ಕರ‍್ಯದ ನಡೆ; ಚೆನ್ನಬಸವಣ್ಣನವರಂತೆ ಜ್ಞಾನಮಾರ್ಗ.

ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ ॥
ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ ಯದ್ಯತಯೋ ವಿಶಂತಿ ॥ ೫ ॥

ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ ।
ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾಃ ಪರಿಮುಚ್ಯಂತಿ ಸರ್ವೇ ॥ ೬ ॥

ದಹ್ರಂ ವಿಪಾಪ್ಮಂ ವರಂ ವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಮ್
ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಮ್ ॥ ೭ ॥

ಮಹಾನಾರಾಯಣೋಪನಿಷತ್ ಖಂಡ–೧೦

ಮುನಿಪ್ರಪಂಚದ ಚೈತನ್ಯಕ್ಕೆ ಆಧುನಿಕ ಮಾನವಪ್ರಪಂಚದ ಅರಿವೆಲ್ಲಿ ? ಅದಕ್ಕಾಗಿ ಅವರು ಆಗಾಗ ಈಗಿನ ಜನಾಂಗದೊಡನೆ ಅಸಹ್ಯಪಡುತ್ತಿದ್ದರು. ಈ ಸ್ವಭಾವವು ಅವರಿಂದ ದೂರವಾಗಲೆ ಇಲ್ಲ. ಇಷ್ಟಬಂದವರೊಡನೆ ಅವರ ಬಾಂಧವ್ಯ ಸರಳ ಸುಮಧುರ. ಕನಲಿದರೆ ಮಾತ್ರ ಕಾಲಾಗ್ನಿರುದ್ರ. ಬಸವಾದಿಗಳ ಆದರ್ಶವಿದ್ದರೂ ಮುನಿತ್ವವನ್ನು ಸಮಗ್ರವಾಗಿ ಅಳವಡಿಸಿಕೊಂಡಿದ್ದರಿಂದ ಸಾಮಾನ್ಯರಿಗೆ ಅವರು ಸುಲಭಗಮ್ಯರಲ್ಲ. ಆಬಾಲ್ಯವಾಗಿ ತಮ್ಮದೇ ಆದ ಏಕಾಂತ ವಾಸವನ್ನು ಹೊಂದಿದ್ದು ಸ್ನಾನ, ಊಟ, ಭಕ್ತರು ನಮಸ್ಕರಿಸಿದಾಗ ಎಲ್ಲೆಲ್ಲೂ ಗುರುಲಿಂಗ ಸ್ಮರಣೆಯೇ ಮಹಾಮಂತ್ರ ಅವರದಾಗಿತ್ತು. 'ಶಿವನೇ ನಿನ್ನ ಪಾದ, ಗುರುವೇ ನಿನ್ನ ಪಾದ' ಇವು ಅವರ ತಾರಕ ಮಂತ್ರ. ಮಠಾಧಿಪತ್ಯ ವಹಿಸಿದ ಬಳಿಕ ಅವರ ಪ್ರಭಾವ ಅದಮ್ಯ, ಅಸಾಧಾರಣವಾಗಿತ್ತು. ಮಹಾಕ್ಷೇತ್ರವನ್ನು ಅತ್ಯುನ್ನತ ಮಟ್ಟಕ್ಕೇರಿಸಿ ಮುಂದುವರೆಸಬೇಕೆಂಬ ಉತ್ಕಟೇಚ್ಛೆ ಅವರದಾಗಿತ್ತು. ಹಣವನ್ನು ಸಂಗ್ರಹಿಸುವಾಗಲೂ ಅವರಿಗೆ ಸಾಕಾಗುವಷ್ಟು ಹಣ ಸಂಗ್ರಹವಾಗಲಿಲ್ಲ. ಆದರೂ ಶ್ರೀಗಳು ತಮ್ಮದೇ ಆದ ವಿಶಿಷ್ಟ ಜೀವನವನ್ನು ನಡೆಸಿ ತ್ರಿಕರಣಪೂರ್ವಕವಾಗಿ ಗುರುಲಿಂಗಜಂಗಮಾರ್ಚನೆಯಲ್ಲಿ ತನುಮನಧನಗಳನ್ನು ಸಮರ್ಪಿಸಿ ಪ್ರಮಥವರೇಣ್ಯರಾಗಿ ಬಂದಂತೆಯೇ ಪ್ರಮಥವರೇಣ್ಯಪ್ರಪಂಚಕ್ಕೆ ಹಿಂದಿರುಗಿದರು. ಅದನ್ನು ಬಲ್ಲವರು ಮಾತ್ರ ಬಲ್ಲರು. ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ಅಚ್ಚಳಿಯದ ಭದ್ರಬುನಾದಿಯನ್ನು ಹಾಕಿ ಅದರ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣರಾಗಿ ಕಣ್ಮರೆಯಾದರು.

# ಶ್ರೀ ಶಿವಕುಮಾರ ಮಹಾಸ್ವಾಮಿಗಳು

—ಚನ್ನಪ್ಪ ಎರೆಸೀಮೆ

ಸಕಲವನೆಲ್ಲ ಲಿಂಗದೊಳಗೆ ತೋರಿದನು ;
ಆ ಲಿಂಗದ ಬೆಳಗ ಸಕಲದೊಳಗೆ ತೋರಿದನು ;
ಎನ್ನ ಮನಕ್ಕೆ ಅತಿಶಯವ ತೋರಿ ತೋರಿ ರಕ್ಷಿಸಿದನು ;
ಎನ್ನೊಳಗೆ ತನ್ನ ತೋರಿದನು ; ತನ್ನೊಳಗೆ ಎನ್ನ ತೋರಿದನು ;
ಮತ್ತೆ ಎರಡುವನೇಕ ಮಾಡಿ, ಎನ್ನೊಳಗೆ ಗುಹೇಶ್ವರನಾದನು ;
ಹೊರಗೆ ಮಹಾಲಿಂಗವಾಗಿ ನಿಂದನು. ಶ್ರೀಗುರುಲಿಂಗ ಬಸವಣ್ಣನು. (—ಪ್ರಭುದೇವರು)

ಕಾಯಕ್ಲೇಶದಿಂದ ತನುಮನ ಬಳಲಿಸಿ, ಧನವ ಗಳಿಸಿ, ಗುರುಲಿಂಗಜಂಗಮಕ್ಕೆ
ವೆಚ್ಚಿಸಿ, ದಾಸೋಹವ ಮಾಡುವ ಸದ್ಭಕ್ತನ ಪಾದವ ತೋರಯ್ಯ, ನಿಮ್ಮ ಧರ್ಮ ;
ಆದೇಕೆಂದೊಡೆ: ಆತನ ತನು ಶುದ್ಧ; ಆತನ ಮನ ಶುದ್ಧ; ಆತನ ನಡೆ ನುಡಿ ಪಾವನ;
ಆತಂಗೆ ಉಪದೇಶವ ಮಾಡಿದ ಗುರುನಿರಂಜನ, ನಿರಾಮಯ.
ಅಂತಪ್ಪ ಭಕ್ತನ ಕಾಯವೇ ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ ಮಾಡುವ
ಜಂಗಮ ಜಗತ್ಪಾವನ. ಇಂತಿವರಿಗೆ ನಮೋ ನಮೋ ಎಂಬೆ ಕೂಡಲ ಚೆನ್ನಸಂಗಮದೇವ.
(—ಚೆನ್ನಬಸವಣ್ಣನವರು)

ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ ;
ಲಿಂಗಾನುಭಾವದಿಂದ ನಿಮ್ಮ ಕಂಡು ಎನ್ನ ಮರೆದೆ ಕೂಡಲಸಂಗಮದೇವಾ. (—ಬಸವಣ್ಣನವರು)

**ಇಹಪರದ ಪುಣ್ಯಪುರುಷ :**

ಬಸವಾದಿ ಪ್ರಮಥರ ಜಗದ್ವಿಖ್ಯಾತ ಕ್ರಾಂತಿ ಚಾಲುಕ್ಯಚಕ್ರವರ್ತಿಗಳ ಶ್ರೇಷ್ಠ ನಗರವೆನಿಸಿದ ಮತ್ತು ಸಮಕಾಲೀನ ಜಗತ್ತಿನಲ್ಲಿ ಅಂತರ ರಾಷ್ಟ್ರೀಯ ಮಹಾನಗರದ ಖ್ಯಾತಿಗೊಳಗಾದ ಕಲ್ಯಾಣದಲ್ಲಿ ನಡೆದು, ರಾಜಕೀಯದ ಪ್ರಬಲ ಆಘಾತ ದಿಂದ ಅಲ್ಲಿಂದ ಕಾಲ್ದೆಗೆದು ದಕ್ಷಿಣಭಾರತದ ಅನೇಕ ಸ್ಥಳಗಳಲ್ಲಿ ಕಾರಂಜಿಯಂತೆ ಪುಟಿಯತೊಡಗಿತು. ಅವುಗಳಲ್ಲಿ ಶಿವಗಂಗಾ ಕ್ಷೇತ್ರವೂ ಒಂದೆಂದು ಹೇಳಬಹುದು. ಈ ಶಿವಗಂಗೆಯ ಪರಿಸರವೆಲ್ಲ ಅನೇಕ ಶರಣಜನಗಳಿಂದಲೂ ಗುರುವಿರಕ್ತರುಗಳಿಂ ದಲೂ ತುಂಬಿತು. ಇವರಲ್ಲಿ ರೇವಣಸಿದ್ಧೇಶ್ವರ, ಮರುಳಸಿದ್ಧೇಶ್ವರ, ಸಿದ್ಧರಾಮೇಶ್ವರ, ರುದ್ರಮುನಿ ಶಿವಾಚಾರ್ಯ ಮೊದ ಲಾದವರು ಪ್ರಮುಖರು. ಮುಂದೆ ಈ ಪರಿಸರಕ್ಕೆಲ್ಲ ಹರದನಹಳ್ಳಿಯ ಪೀಠಾಚಾರ್ಯರಲ್ಲಿ ಗೋಸಲಸಿದ್ಧೇಶ್ವರರು ಮೊದ ಲ್ಗೊಂಡು ಕಟ್ಟಿಗೆಹಳ್ಳಿ ಸಿದ್ಧಲಿಂಗದೇವರವರೆಗೆ ಅತ್ಯಂತ ಕಳೆಯೇರಿತು[1]. ಇವರೆಲ್ಲರ ಕ್ರಾಂತಿಯ ಫಲವಾಗಿ ಶಿವಗಂಗೆಯ ಸುತ್ತಮುತ್ತಣ ಪ್ರಾಂತದಲ್ಲಿ ಅನೇಕ ಮಠಮಾನ್ಯಗಳೂ, ಆ ಮಠಮಾನ್ಯಗಳ ಪರಂಪರೆಗಳೂ ಹುಲುಸಾಗಿ ಬೆಳೆದವು[2].

---

1. ಗೋಸಲಸಿದ್ಧೇಶ್ವರ, ಶಂಕರಪ್ರಭು, ಗೋಸಲಚೆನ್ನಬಸವೇಶ್ವರ, ತೋಂಟದ ಸಿದ್ಧಲಿಂಗೇಶ್ವರ, ಬೋಳಬಸವೇಶ್ವರ, ಗೂಳೂರು ಸಿದ್ಧಲಿಂಗ (ಸಿದ್ಧವೀರ), ಗುಮ್ಮಳಾಪುರದ ಸಿದ್ಧವೀರಯ್ಯ, ಗಗನದಯ್ಯ, ಕಟ್ಟಿಗೆಹಳ್ಳಿ ಸಿದ್ಧಲಿಂಗ, ಇತ್ಯಾದಿ. ಇವರೆಲ್ಲ ಗೋಸಲಸಿದ್ಧೇಶ್ವರರ ಪರಂಪರೆಯವರೇ ಆಗಿದ್ದಾರೆ. ಈ ಪರಂಪರೆ ಸೋಮಶೇಖರ ಶಿವಯೋಗಿಯ ತೋಂಟದ ಸಿದ್ಧಲಿಂಗ ಶಿವಯೋಗಿಯ ಷಟ್‌ಸ್ಥಲ ಜ್ಞಾನಾ ಮೃತಸಾರ ಟೀಕೆಯಿಂದ ತಿಳಿದು ಬರುವ ಅಂಶ.
2. ಶಿವಗಂಗೆಯ ೬೪ ಮಠಗಳು, ನೆಲಮಂಗಲದ ೪ ಮಠಗಳು, ಬೆಂಗಳೂರಿನ ೬೪ ಮಠಗಳು, ಸಿದ್ಧಗಂಗಾ ಬುಡಕಟ್ಟಿನ ೫ ಮಠಗಳು (ಸಿ.ವಂ. ರತ್ನಾಕರ ಭಾಗ ೨ರ ಪ್ರಕಾರ) ನಂದಿಪುರ ಮತ್ತು ಎಡೆಯೂರಿನ ೨ ಮಠಗಳು, ಬಿಜ್ಜಾವರ, ತುಮಕೂರು, ದೇವರಾಯಪಟ್ಟಣ, ಗುಬ್ಬಿ, ಕಲ್ಲೆಯ, ಕಂಚುಕಲ್ಲು, ಮಾಗಡಿ, ಕುಣಿಗಲ್ಲು, ಕಗ್ಗೆರೆ, ಗೂಳೂರು, ಗುಮ್ಮಳಾಪುರ, ಮೈಲನಹಳ್ಳಿ, ಬೆಟ್ಟದಹಳ್ಳಿ, ಬೆಟ್ಟಳ್ಳಿ, ಚಕ್ರಭಾವಿ, ಅಂಕನಹಳ್ಳಿ, ಹುಲಿಯೂರುದುರ್ಗ, ಸಾವನದುರ್ಗ, ದೇಗುಲಮಠ (ಕನಕಪುರ), ಕಣ್ಣೂರು, ಕಟ್ಟಿಗೆಹಳ್ಳಿ, ತೋಪಿನಕೆರೆ, ಗೋಡೆಕೆರೆ, ಸೋಲೂರಿನ ೩-೪ ಮಠಗಳು, ಸಿಡ್ಲಳ್ಳಿ, ಎಳಸಡು, ಕಟ್ಟಿಗೆಹಳ್ಳಿ, ಮೊದಲಾದ ಊರುಗಳಲ್ಲಿರುವ ಅಸಂಖ್ಯಾತ ಮಠಮಾನ್ಯಗಳು. ಈ ಪಟ್ಟಿ ಇನ್ನೂ ಬಹಳ ದೊಡ್ಡದು.

ವೀರಶೈವ ಧರ್ಮವನ್ನು ಪ್ರತಿನಿಧಿಸುವ ಅನೇಕ ದೇವಾಲಯಗಳೂ ಅಸ್ತಿತ್ವಕ್ಕೆ ಬಂದವು[3]. ವೀರಶೈವಧರ್ಮತತ್ತ್ವ ಸಂಸ್ಕೃತಿಯನ್ನು ಪ್ರತಿಪಾದಿಸುವ ಗ್ರಂಥರಾಶಿ ಹೊರಹೊಮ್ಮಿದವು[4]. ಇವಕ್ಕೆಲ್ಲ ಶಿವಗಂಗೆ. ಸಿದ್ಧಗಂಗೆ, ಗೂಳೂರು. ಗುಬ್ಬಿ, ಗುಮ್ಮಳಾಪುರ. ಎಡೆಯೂರು ಮೊದಲಾದವು ಕೇಂದ್ರಗಳಾದವು. ಅಂತೆಯೇ ಈ ಭಾಗ ವೀರಶೈವಮಯವಾಗಿ ಆ ಸಂಸ್ಕೃತಿಯು ಅವಿಚ್ಛಿನ್ನ ಸಂಸ್ಕಾರ ವಿಶೇಷದಿಂದ ಅನೇಕ ಶತಮಾನಗಳು ಕಳಕಳಿಸಿ ಬೆಳೆಯಿತು. ಜನಜೀವನ ಈ ಸಂಸ್ಕೃತಿಯ ಸಾರವನ್ನು ಹೀರಿ ಸಂಸ್ಕಾರಸಂಪನ್ನವೆನಿಸಿ ಬದುಕಿತು. ವಿವಿಧ ಕಾಯಕ ಸದ್ಭಾವದಿಂದ ಸುಸಂಸ್ಕೃತ ಜೀವನ ನಡೆಸಿ ಅನೇಕ ಮಹಾಪುರುಷರ. ಶರಣರ. ಲಿಂಗಲೀಲಾವಿನೋದಚಿತ್ತರ ಉದ್ಭವಕ್ಕೆ ಕಾರಣವೆನಿಸಿತು. ಪರಿಸರದ ಸಾರಭೂತ ಸಂಸ್ಕಾರ ವಿಶೇಷವು ಅಲ್ಲಿನ ಜನಜೀವನದ ಮೇಲೆ ನೀತಿಸಂಹಿತೆ. ಆಚಾರಸಂಹಿತೆಗಳ ಅಗಾಧ ಪರಿಣಾಮ ಬೀರುತ್ತದೆ. ಇಂತಹ ಸಂಸ್ಕಾರ ವಿಶಿಷ್ಟ ಜನಜೀವನದ ಸಂಸ್ಕೃತಿಯ ಮಧ್ಯದಲ್ಲಿ ಒಮ್ಮೊಮ್ಮೆ ಅದ್ಭುತ ಚೇತಸ್ಸಿನ ಮಹಾಕಾರಣಿಕರು ಜನ್ಮವೆತ್ತಿ, ತಮ್ಮ ವಿಶಿಷ್ಟ ಕರ್ತೃತ್ವಶಕ್ತಿಯ ಪ್ರಚಂಡ ಕ್ರಾಂತಿಯಿಂದ ನೂತನ ಮನ್ವಂತರವೊಂದರ ಪ್ರವರ್ತಕರಾಗಿ. ಹಲವು ಮುಖದಲ್ಲಿ ಜನಜೀವನದಲ್ಲಿ ತುಂಬಿನಿಂತ ಕೊಳೆಯನ್ನು ಹೋಗಲಾಡಿಸಿ, ಅವರ ಜೀವನಕ್ಕೊಂದು ನೂತನತೆಯನ್ನುಂಟುಮಾಡುತ್ತಾರೆ. ಅಂಥ ಮಹಾಪುರುಷರ ಮಾಲಿಕೆಯಲ್ಲಿ ಸಿದ್ಧಗಂಗಾಕ್ಷೇತ್ರಾಧ್ಯಕ್ಷರೂ, ತ್ರಿವಿಧದಾಸೋಹಿಗಳೂ, ಇಪ್ಪತ್ತನೆಯ ಶತಮಾನದಲ್ಲಿ ತೋಂಟದ ಸಿದ್ಧಲಿಂಗೇಶ್ವರರಂತೆ ಜನತೆಯ ತುಂಬು ಜೀವನಕ್ಕೆ ಹೆಣಗುತ್ತಿರುವವರೂ ಆದ ಶ್ರೀಮನ್ನಿರಂಜನ ನಿರಾಭಾರಿ ಪ್ರಣವಸ್ವರೂಪಿ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಒಬ್ಬರು. ಶಿವಗಂಗಾಪ್ರಾಂತದ ಶಿವಶರಣಸಂಸ್ಕೃತಿಯ ಪ್ರಭಾವಲಯ ಪರಿಸರದಲ್ಲಿ ಅದರ ಅನೇಕ ಶತಮಾನಗಳ ಸಾರವನ್ನು ಹೀರಿ ಬೆಳೆದು ನಿಂತ ಈ ಮಹಾ ಕಲ್ಪವೃಕ್ಷಪ್ರಾಯರಾದ ಇವರ ಹುಟ್ಟು, ಬೆಳವಣಿಗೆ, ಸಾಧಿಸಿದ ಸಾಧನೆ, ಏರಿದ ಎತ್ತರ, ಸತ್ವಪೂರ್ಣ ಕ್ರಿಯಾಜ್ಞಾನಸಮುಚ್ಚಯಸಂಪತ್ತು, ಲೋಕ ಜೀವನಕ್ಕೆ ಸವೆಸಿದ ತ್ರಿವಿಧ ದಾಸೋಹಭಾವ, ಕ್ರಿಯಾಸಿದ್ಧಿಯಿಂದ ಕಟ್ಟಿ ಬೆಳೆಸಿದ ಸಂಸ್ಥೆಗಳು, ತಪಶ್ಶಕ್ತಿಯ ಅಮೃತಧಾರೆಯನ್ನೀಂಟಿಸಿ ಅವನ್ನು ಮಮತೆಯಿಂದ ಪೋಷಿಸಿದ ಪೋಷಣೆ. ದೀನದಲಿತರ ಬಗೆಗೆ ತೋರಿದ ಕಾರುಣ್ಯಗಳೇ ಮೊದಲಾದ ಅನೇಕ ಮುಖಗಳ ಒಂದು ಸ್ಥೂಲ ಪರಿಚಯ ಮಾಡಿಕೊಡುವುದೇ ಈ ಲೇಖನದ ಪ್ರಧಾನೋದ್ದೇಶ. ಮಹಾತೇಜಶ್ಶಾಲಿಗಳಾದ ದಿವ್ಯಪುರುಷರ ಬಗೆಗೆ ಬರೆಯುವುದು ಕಠಿಣ ಕೆಲಸ. ಆದರೂ ಶಕ್ತ್ಯನುಸಾರ ಆ ಕಾರ್ಯವನ್ನು ಮಾಡಬೇಕಾದುದೂ ಅನಿವಾರ್ಯ. ಮಹಾಪುರುಷರ ಬಗೆಗೆ ಬರೆಯುವವನು ಅವರ ಅಂತರಂಗವನ್ನು ಪ್ರವೇಶಿಸಿ ತಿಳಿದು ಯಥಾಸತ್ಯವನ್ನು ವಿವರಿಸಬೇಕಾದುದು ಅತ್ಯವಶ್ಯಕ. ಆದರೆ ಮಹಾಪುರುಷರು ಸಮುದ್ರದಲ್ಲಿ ತೇಲುವ ಮಂಜುಗಡ್ಡೆಯಂತೆ. ಲೋಕ ಜೀವನಕ್ಕೆ ಅವರು ಕಾಣುವುದು ಆ ಮಂಜುಗಡ್ಡೆಯಂತೆ ಒಂಬತ್ತರಲ್ಲೊಂದು ಪಾಲು ಮಾತ್ರ. ಅಷ್ಟು ಭಾಗವನ್ನು ಕಂಡು ಮಹಾಪುರುಷರನ್ನು ಪೂರ್ಣ ಅರ್ಥಮಾಡಿಕೊಂಡಿದ್ದೇನೆಂದು ವಿವರಿಸುವ ವಿವರಣೆಯೂ ಒಮ್ಮೊಮ್ಮೆ ತಪ್ಪಾದೀತು. ಆದರೂ ಬಾಲ್ಯದ ಅವರ ಸಮಕಾಲೀನರ, ಪೂರ್ವಾಶ್ರಮದ ಬಂಧುಬಳಗದವರ. ಶಾಲಾಕಾಲೇಜು ಜೀವನದೊಡನಾಡಿಗಳ ಹೇಳಿಕೆ ಕೇಳಿಕೆಗಳು ಬರೆದಿಟ್ಟ ಬರವಣಿಗೆಗಳು, ಅವರಿಂದಲೇ ಬರೆಯಲ್ಪಟ್ಟ ದಿನಚರಿಯ ದಾಖಲೆಗಳು, ಪ್ರತ್ಯಕ್ಷ ಕಣ್ಣಿಗೆ ಕಾಣುತ್ತಿರುವ ವಿಷಯಗಳು, ಬರೆದಿರುವ ಪತ್ರ ಸಾಹಿತ್ಯ, ನಡೆದು ಹೋದ ಘಟನೆಗಳ ಹಳೆಯ ಬರವಣಿಗೆಗಳು, ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಯಾಗಿ ಹತ್ತಿರದಿಂದ ಅವರನ್ನು ಕಂಡು ನನ್ನ ಮನಸ್ಸಿಗೆ ಅನಿಸಿದ ಅನಿಸಿಕೆಗಳು ಇಷ್ಟೆಲ್ಲ ಪರಿಕರದ ಆಧಾರದ ಮೇಲೆ ಈ ಒಂದು ಪರಿಚಯ ಲೇಖನಕ್ಕೆ ತೊಡಗುವ ಸಾಹಸ ಮಾಡಿದ್ದೇನೆಂಬುದನ್ನು ಪ್ರಥಮತಃ ನಿವೇದಿಸಿಕೊಳ್ಳುವುದು ತಪ್ಪಾಗಲಾರದು. ಶ್ರೀಗಳವರನ್ನು ಸಮೀಪದಿಂದ ಕಂಡಾಗ ಅವರ ಬಗೆಗೆ ನಮಗೆ ಗೊತ್ತಾಗಿರುವ ಅಂಶ ನಮ್ಮ ದೃಷ್ಟಿಕೋನದ್ದು ; ವಾಸ್ತವಾಂಶ ಹೇಗೆ ಇರುತ್ತದೋ ಎಂಬ ಭಯವೂ ನನಗಿಲ್ಲದಿಲ್ಲ. ಆದರೆ ಶ್ರೀಗಳವರ ಪುಣ್ಯ ಚರಿತ್ರೆಗೆ ಕುಂದಕ ಬಾರದ ರೀತಿಯಲ್ಲಿದ್ದರೆ ಸಾಕು ; ಅದೇ ನಮ್ಮ ಭಾಗ್ಯವೆಂದು ಭಾವಿಸಬೇಕಾಗಿದೆ. ಎಷ್ಟೋ ಸಮಯದಲ್ಲಿ ಪರಮರಹಸ್ಯವೇ ಒಂದು ಬಗೆಯಾಗಿದ್ದು ಅದಕ್ಕೆ ನಮ್ಮ

---

3. ಕಲ್ಲೆಯದ ಸೋಮೇಶ್ವರ ಗದ್ದುಗೆ, ಕಂಚುಕಲ್ಲು ಬಂಡೆಮಠದ ಗುಡ್ಡದ ಮೇಲಿನ ಗದ್ದುಗೆ, ಕಾಚಕಲ್ಲಪ್ಪನ ಗುಡ್ಡ, ಮಹಂತೇಶ್ವರ ಗದ್ದುಗೆ, ರಾಮಲಿಂಗೇಶ್ವರ ಬೆಟ್ಟದ ಮೇಲಿರುವ ಶಿವಾಲಯ, ಬೋಳಬಸವೇಶ್ವರ ದೇವಾಲಯ, ಶಿವಗಂಗೆಯಲ್ಲಿರುವ ಅನೇಕ ವೀರಭದ್ರ ದೇವಾಲಯ, ಹುಲಿಯೂರು ದುರ್ಗ, ಸಾವನದುರ್ಗ, ಸಿದ್ಧರಬೆಟ್ಟ, ಹೊಸಹಳ್ಳಿ, ಹರಳೂರು, ನೆಲಮಂಗಲ, ಬೆಂಗಳೂರು, ತುಮಕೂರು, ಹೊನ್ನುಡಿಕೆಗಳೇ ಮೊದಲಾದ ಕಡೆಗಳಲ್ಲಿರುವ ಅನೇಕ ವೀರಭದ್ರ ದೇವಾಲಯಗಳು, ಶಿವಗಂಗೆಯ ಇನ್ನಿತರ ದೇವಾಲಯಗಳು.
4. ತೋಂಟದ ಸಿದ್ಧಲಿಂಗೇಶ್ವರ, ಗುಬ್ಬಿಯ ಮಲ್ಲಣ್ಣ, ಗುಬ್ಬಿಯ ಮಲ್ಲಣಾರ್ಯ, ಶಾಂತೇಶ, ವಿರಕ್ತತೋಂಟದಾರ್ಯ, ಶಿವಗಣಪ್ರಸಾದಿ ಮಹದೇವಯ್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರ, ಹಲಗೆದೇವರು, ಕೆಂಚವೀರಣ್ಣೊಡೆಯ, ಚೆನ್ನಂಜೇದೇವ, ಸ್ವತಂತ್ರ ಸಿದ್ಧಲಿಂಗೇಶ್ವರ, ಸಾನಂದಶಿವಯೋಗಿ, ಎಳಮಲೆಯ ಗುರುಶಾಂತ, ಸಂಪಾದನೆಯ ಪರ್ವತೇಶ, ಸೋಮಶೇಖರ ಶಿವಯೋಗಿ, ಚೇರಮಾಂಕ, ಹೇರಂಬ (ಇವನು ವೀರಶೈವ ಕವಿಯಲ್ಲ)—ಇವರೇ ಮೊದಲಾದವರು ಕಾವ್ಯ, ಪುರಾಣ, ಸಂಪಾದನೆ, ಟೀಕೆ—ಮೊದಲಾದ ಪ್ರಕಾರಗಳಲ್ಲಿ ಈ ಪರಿಸರದಲ್ಲಿ ಹರದನಹಳ್ಳಿ ಜೀಶಾಚಾರ್ಯರ ಕ್ರಾಂತಿಯ ನಂತರ ಹುಲುಸಾದ ಸಾಹಿತ್ಯ ರಚನೆ ಮಾಡಿದ್ದಾರೆ. ಇವರಲ್ಲದೆ ಇನ್ನೂ ಅನೇಕರನ್ನೂ ಹೆಸರಿಸಬಹುದು.

ವ್ಯಾಖ್ಯೆಯೇ ಬೇರೆಯಾಗಿದ್ದರೆ ತಪ್ಪು. ಇಷ್ಟೆಲ್ಲ ದೃಷ್ಟಿಕೋನವನ್ನಿಟ್ಟುಕೊಂಡು ಸಾಧ್ಯವಾದಷ್ಟು ಈ ಚರಿತ್ರೆಯನ್ನು ವಿವರಿಸ ಹೊರಟ ನನಗೆ ಅರಿಯದೆ ಆಗಿರುವ ತಪ್ಪು ಕ್ಷಮ್ಯ. ಈ ವಿಷಯದಲ್ಲಿ ಸಾಧ್ಯವಾದಷ್ಟೂ ಎಚ್ಚರಿಕೆ ವಹಿಸಿ ಈ ಬರವಣಿಗೆ ಸಾಗಿದೆ.

**ಶಿವಶರಣರ ಸಂತಾನದ ಪರಂಪರೆ :**

ಬೆಂಗಳೂರು ಜಿಲ್ಲಾ ಮಾಗಡಿ ತಾಲ್ಲೂಕಿನಲ್ಲಿರುವ ವೀರಾಪುರ ಪ್ರಸಿದ್ಧ ಶಿವಶರಣರ ಪುಣ್ಯಕ್ಷೇತ್ರಗಳ ಮಧ್ಯದಲ್ಲಿರುವ, ವ್ಯವಸಾಯ ಕಾಯಕ ಪ್ರಧಾನ್ಯತೆಯ ಭಕ್ತರ ಒಂದು ಕಿರುವಳ್ಳಿ. ಆಗ್ನೇಯ ದಿಕ್ಕಿಗೆ ಸುಮಾರು ಒಂದೂವರೆ ಮೈಲುಗಳ ಅಂತರದಲ್ಲಿ ಪ್ರಸಿದ್ಧ ಶಿವಶರಣರಾಗಿ ಹೋದ ಮಹಾಂತೇಶ್ವರರ ಗದ್ದುಗೆ: ವಾಯುವ್ಯಕ್ಕೆ ಎರಡು ಮೈಲು ಅಂದಾಜಿನಲ್ಲಿ ಪ್ರಾಚೀನ ಶಿವಶರಣ ಕ್ಷೇತ್ರವಾದ ಕಾಚಕಲ್ಲಪ್ಪನ ಬೆಟ್ಟ; ಪೂರ್ವಕ್ಕೆ ಸುಮಾರು ಮೂರು ಮೈಲುಗಳ ಅಂತರದಲ್ಲಿ ಕಂಚುಗಲ್ಲು ಬಂಡೆಯ ಮಠ ಮತ್ತು ಬೆಟ್ಟದ ಮೇಲಿರುವ ಶಿವಶರಣ ಕ್ಷೇತ್ರ. ಈಶಾನ್ಯಕ್ಕೆ ಸುಮಾರು ಮೂರು ಮೂರುವರೆ ಮೈಲುಗಳ ಅಂತರದಲ್ಲಿ ಬೋಳಬಸವೇಶ್ವರರ ತಪೋಭೂಮಿ ಮತ್ತು ಮರುಳಸಿದ್ಧೇಶ್ವರರ ತಪೋಭೂಮಿಯಾದ ಕಂಬಾಳುಮಠ. ಉತ್ತರದ ಸುಮಾರು ಮೂರು ಮೈಲುಗಳ ಅಂತರದಲ್ಲಿ ದಕ್ಷಿಣಕಾಶಿಯೆಂದು ಪ್ರಸಿದ್ಧವಾಗಿರುವ ಶಿವಗಂಗಾ ಕ್ಷೇತ್ರ. ಆಗ್ನೇಯಕ್ಕೆ ಸುಮಾರು ೧೫-೨೦ ಮೈಲುಗಳ ಅಂತರದಲ್ಲಿ ಸರ್ವಶೀಲೆಶಿವಶರಣೆ ಚೆನ್ನಮ್ಮನವರ ಗವಿ. ಮತ್ತು ಪಾಲ್ಕುರಿಕೆ ಸೋಮನಾಥರ ಗದ್ದುಗೆಗಳಿರುವ ಕಲ್ಲೆಯ ಕ್ಷೇತ್ರ. ಪಶ್ಚಿಮಕ್ಕೆ ಸುಮಾರು ೨೦ ಮೈಲುಗಳ ಅಂತರದಲ್ಲಿ ಎಡೆಯೂರು ಕ್ಷೇತ್ರ– ಧಾರ್ಮಿಕೇತಿಹಾಸದಲ್ಲಿ ಅತ್ಯಂತ ಪ್ರಸಿದ್ಧಿಪಡೆದ ಈ ಪುಣ್ಯಭೂಮಿಯ ಮಧ್ಯದಲ್ಲಿ ಒಂದು ಕಿರುಬೆಟ್ಟದ ಮೇಲೆ ರಾರಾಜಿಸುವ ವೀರಾಪುರಕ್ಕೆ ಪ್ರಕೃತಿ ಅತ್ಯಂತ ಪ್ರಸನ್ನತೆಯಿಂದ ಸೌಂದರ್ಯರಾಶಿಯನ್ನೇ ತುಂಬಿದೆ. ಊರ ಸುತ್ತಮುತ್ತ ಕುರುಚಲು ಗಿಡದ ದೊಡ್ಡ ಕಾಡು, ಮಾವು, ನೇರಳೆ, ಗೇರು, ಹಲಸು, ತೆಂಗು, ಸಮೃದ್ಧವಾಗಿ ಬೆಳೆದು ನಿಂತಿದೆ. ಹಿಪ್ಪೆ ಹೊಂಗೆಯ ಸಾಲು ಎಲ್ಲೆಲ್ಲೂ ರಾರಾಜಿಸುತ್ತ ನೋಡುವವರ ಕಣ್ಮನಕ್ಕೆ ತಣಿವುಗೊಳಿಸುತ್ತದೆ. ನವಿಲು, ಗಿಳಿ, ಕೋಗಿಲೆ, ಕಾಜಾಣಗಳ ವಿವಿಧ ಕೂಜನ ಹೃನ್ಮನಗಳನ್ನು ತಣಿಸುತ್ತಿದೆ. ಅರಣ್ಯ ವನ್ನಾಶ್ರಯಿಸಿ, ಕರಡಿ, ಚಿರ್ಚು, ತೋಳ,ಕತ್ತೆಗಿರುಬ, ಸೀಳುನಾಯಿಗಳೇ ಮೊದಲಾದವುಗಳಿಗೆ ಕೊರೆಯೇನೂ ಇಲ್ಲಿಲ್ಲ[5]. ಪಶ್ಚಿಮ ದಿಗ್ಭಾಗದ ಹೊಂಗೆಸಾಲಿನ ಮಧ್ಯದಲ್ಲಿ ಮನೋಹರವಾಗಿ ಹರಿದುಬರುವ ಚಿಕ್ಕಹೊಳೆಯು ಸಂಪತ್ತು ಊರಿಗೆ ವರವಾಗಿ ಪ್ರಕೃತಿಯಿಂದ ಬಂದಿದೆ. ವ್ಯವಸಾಯದ ಪ್ರಧಾನ ಬೆಳೆಗಳಾಗಿ ಕಬ್ಬು, ಭತ್ತ, ರಾಗಿ, ಜೋಳ, ಹುರುಳಿ, ಸೀಗೆ, ಅಡಿಕೆ, ತೆಂಗು, ಎಲೆ– ಈ ಬೆಳೆಗಳು ಎಲ್ಲೆಲ್ಲೂ ಕಂಗೊಳಿಸುತ್ತಿರುತ್ತವೆ. ಹೀಗೆ ಮನೋಹರ ಪ್ರಕೃತಿ ಸಂಪತ್ತಿನ ಮಧ್ಯದಲ್ಲಿ ಬೆಳೆದು ಬಾಳಿದ, ಧರ್ಮಸಂಸ್ಕೃತಿ ತಾಣಗಳ ಮಧ್ಯದಲ್ಲಿ ಕಂಗೊಳಿಸುವ ವೀರಾಪುರದಲ್ಲಿ ಶರಣಪರಂಪರೆಯಲ್ಲಿ ಬೆಳೆದುಬಂದ ಹೊನ್ನಪ್ಪ ಅಕ್ಕಹೊನ್ನಮ್ಮ ದಂಪತಿಗಳು ಸದಾಚಾರ, ಸದ್ವಿನಯ, ದೈವಭಕ್ತಿ, ಕೃಷಿಕಾಯಕ ಸದ್ಭಾವಕ್ಕೆ ಹೆಸರಾದವರು. ಊರಿನ ಗೌಡ (ಪಟೇಲ)ರಾದ ಇವರ ಮಾತಿಗೆ ಪ್ರತಿ ಹೇಳುವವರು ಅಲ್ಲಿ ಯಾರು ಇಲ್ಲ. ಅತ್ಯಂತ ಪ್ರಭಾವಮುದ್ರೆಯನ್ನು ಎಲ್ಲ ವಿಧದಲ್ಲೂ ಒತ್ತಿ, ಆಚಾರಸಂಹಿತೆಯನ್ನು ಜನತೆಯಲ್ಲಿ ಅಧಿಕಾರ ವಾಣಿಯಿಂದ ಹೇಳುತ್ತಿದ್ದ ಈ ಪುಣ್ಯದಂಪತಿಗಳಿಗೆ ಒಬ್ಬರೇ ಗಂಡು ಮಕ್ಕಳು ; ಅವರ ಹೆಸರೂ ಹೊನ್ನಪ್ಪ ಎಂದೇ. ಶಿವಗಂಗೆಯ ಮಹಾಶಿವಶರಣೆಯೆಂದು ಕೀರ್ತಿತಳಾಗಿದ್ದ ಹೊನ್ನಾದೇವಿ (ಹೊನ್ನಮ್ಮ)ಯ ಸಂಪ್ರದಾಯದಿಂದ ಪುನೀತಗೊಂಡ ಇವರ ಮನೆಯಲ್ಲಿ ಹೊನ್ನಪ್ಪ,ಹೊನ್ನಾದೇವಿ, ಹೊನ್ನಮ್ಮ– ಈ ಹೆಸರುಗಳ ಮೇಲೆ ಮಹಾಮಮತೆ. ಹೊನ್ನಪ್ಪನವರಿಗೆ ಹೊನ್ನೇಗೌಡರು, ಪಟೇಲ್ ಹೊನ್ನಪ್ಪನವರು ಎಂಬ ಹೆಸರು ಗಳಿಂದಲೂ ಕರೆಯಲಾಗುತ್ತಿತ್ತು.

ಈ ಹೊನ್ನಪ್ಪನವರ ಧರ್ಮಪತ್ನಿ ಗಂಗಮ್ಮನವರು. ಈ ಪುಣ್ಯದಂಪತಿಗಳ ಪ್ರಭಾವಮುದ್ರೆ ಸುತ್ತಮುತ್ತಣ ಅನೇಕ ಹಳ್ಳಿಗಳ ಮೇಲೆ ಮಹತ್ವದ್ದಾಗಿತ್ತು. ದಾಸೋಹಸದ್ಭಾವಿಗಳಾದ ಈ ಸಾರ್ಥಕ ಬದುಕಿನ ದಂಪತಿಗಳು 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ದೇವರದಾಸಿಮಯ್ಯನವರ ನುಡಿಯನ್ನು ಅರ್ಥಪೂರ್ಣಗೊಳಿಸಿದ್ದರು. ಕೃಷಿ ಕಾಯಕದ ಕ್ರಿಯಾ ಶುದ್ಧಿಯಿಂದ ಭಾವಶುದ್ಧಿಗೊಂಡವರು; ಭಾವಶುದ್ಧಿಯಿಂದ ಸರ್ವೇಂದ್ರಿಯ ಶುದ್ಧರೆನಿಸಿದವರು. ಹೊನ್ನಪ್ಪನವರು ತಾವುಶ್ರದ್ಧಾ ಭಕ್ತಿ ವಿಶ್ವಾಸಗಳಿಂದ ಮಾಡುತ್ತಿದ್ದ ಕೃಷಿಕಾಯಕದಿಂದ ಸಮೃದ್ಧಜೀವನ ನಡೆಸುತ್ತಿದ್ದರು. ಊರಿನ ಪಟೇಲರೂ ಸುತ್ತಮುತ್ತಣ ಗ್ರಾಮಗಳ ಮುತ್ಸದ್ದಿಗಳೂ ಆದುದರಿಂದ ದಿನಾಲು ಮನೆಯಲ್ಲಿ ಅನೇಕ ಜನಗಳ ಆತಿಥ್ಯ ನಡೆಯುತ್ತಲೇ ಇತ್ತು. ಅದೊಂದು ಚಿಕ್ಕ ದಾಸೋಹ ಕ್ಷೇತ್ರವೇ ಆಗಿತ್ತು. ಗುರು ಜಂಗಮರನೇಕರು ಇವರ ಭಕ್ತಿಜೀವನದ ಬಳಿವಿಡಿದು ಬಂದು ತೀರ್ಥ ಪ್ರಸಾದ ಪ್ರದಾನ ಮಾಡಿ ಹೋಗುತ್ತಿದ್ದರು. ಶ್ರಾವಣಮಾಸದಲ್ಲಿ ಒಂದು ತಿಂಗಳು, ನವರಾತ್ರಿಯೇ ಮೊದಲಾದ ಪರ್ವಕಾಲದಲ್ಲಿ ಮನೆಯಲ್ಲಿ

---

5. ಕಳೆದ ಅನೇಕ ದಶಕಗಳಲ್ಲಿ ಕಾಡ ಕಡಿದು ನಾಡುಮಾಡಹೋಗಿ, ಹಳೆಯ ಪ್ರಕೃತಿಯ ಸಹಜ ಸೌಂದರ್ಯಕ್ಕೆ ಧಕ್ಕೆ ಬಂದಿದೆ. ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ, ಇಂಥ ಶ್ರೇಷ್ಠ ಪರಿಸರದ ಸೌಂದರ್ಯ ಮತ್ತು ಸಂಸ್ಕೃತಿಯ ಪ್ರಭಾವ ಅತ್ಯಂತ ಮಹತ್ವದ್ದಾಗಿರುತ್ತದೆ. ಪರಿಸರದ ಸಮಗ್ರ ಸಂಸ್ಕೃತಿ ಯನ್ನು ಹೀರಿ ಮಹಾಚೇತಸ್ಸುಗಳು ಒಮ್ಮೊಮ್ಮೆ ಜನ್ಮಧಾರಣ ಮಾಡುವುದು ತ್ರಿಕಾಲಸತ್ಯವಿಷಯವಾದ್ದರಿಂದ ಅಂದಿನ ಸನ್ನಿವೇಶದ ಯಥಾಚಿತ್ರ ಕೊಡಲು ಪ್ರಯತ್ನಿಸಿದೆ.

ಪಟೇಲ್ ಹೊನ್ನಪ್ಪನವರೇ ತಮ್ಮ ಕಂಚಿನಂತಹ ಕಂಠದಿಂದ ರೇವಣಸಾಂಗತ್ಯ, ಶರಣಲೀಲಾಮೃತವೇ ಮೊದಲಾದ ಗ್ರಂಥ ಪಠಣ ಮಾಡಿ. ಅರ್ಥವಿವರಣೆ ನೀಡಿ ಜನಮನ ತಣಿಸುತ್ತಿದ್ದರು. ಪ್ರವಚನ ಮುಕ್ತಾಯ ಸಮಾರಂಭದಲ್ಲಿ ಗಣಪರ್ವಗಳನ್ನಾಚರಿಸಿ ಅನ್ನಸಂತರ್ಪಣೆ ನಡೆಸುತ್ತಿದ್ದರು. ಹಸ್ತಶುದ್ಧಿಯನ್ನು ಪಡೆದಿದ್ದ ಇವರು ಅನೇಕ ಮಾನಸಿಕಕ್ಲೇಶಗಳಿಗೊಳಗಾದವರಿಗೆ, ಸಂತಾನವಿಹೀನರಿಗೆ ಭಸ್ಮವನ್ನು ಕೊಡುವ ಪರಿಪಾಠವನ್ನಿಟ್ಟುಕೊಂಡಿದ್ದರು. ಅದು ವಿಶೇಷ ಪ್ರಭಾವಯುತವಾದ ಇವರ ಕಾರ್ಯಗಳಲ್ಲಿ ಒಂದು. ಈ ಭಸ್ಮವನ್ನು ಧರಿಸಿಕೊಂಡು ಮಾನಸಿಕ ನೆಮ್ಮದಿ ಪಡೆದವರು ಸುತ್ತಮುತ್ತಣ ಗ್ರಾಮದಲ್ಲಿ ಎಷ್ಟೋ ಜನ. ವೀರಾಪುರ ಪರಿಸರದ ಅನೇಕ ಗ್ರಾಮಗಳ ವ್ಯಾಜ್ಯಗಳಿಗೆ ಹೊನ್ನೇಗೌಡರ ಮನೆಯೊಂದು ನ್ಯಾಯಾಲಯದಂತಿರುತ್ತಿತ್ತು. ನಿರ್ದಾಕ್ಷಿಣ್ಯವಾಗಿ ತೀರ್ಮಾನ ಹೇಳಿಬಿಡುವ ಇವರ ನಿಷ್ಪಕ್ಷಪಾತ ಬುದ್ಧಿಯಿಂದಾಗಿ ಜನ ಇವರೆಡೆಗೆ ತಮ್ಮ ವ್ಯಾಜ್ಯಗಳ ತೀರ್ಮಾನಕ್ಕಾಗಿ ಧಾವಿಸಿ ಬರುತ್ತಿದ್ದರು. ನ್ಯಾಯಕ್ಕಾಗಿ ಬಂದ ಜನಗಳಿಗೆ ಗೌಡರ ಮನೆಯಲ್ಲಿಯೇ ಊಟೋಪಚಾರ. ಹೀಗಾಗಿ ಇವರ ಮನೆ ಪ್ರತಿಷ್ಠೆಯ ಕುರುಹಿನಿಂದ ಸದಾ ಜಾಗೃತವಾಗಿಯೇ ಇರುತ್ತಿತ್ತು. ಹೊನ್ನೇಗೌಡರ ಪತ್ನಿ ಗಂಗಮ್ಮನವರು ಪತಿಯ ಈ ಬಹುಮುಖ ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ. ಕೌಟುಂಬಿಕ ಜೀವನದಲ್ಲಿ ಸದಾ ಕರ್ತವ್ಯೋನ್ಮುಖರಾಗಿಯೇ ಜಾಗೃತವಾಗಿರಬೇಕಾಗುತ್ತಿತ್ತು. ಪತ್ಯರ್ಥವಾಗಿ ಅರ್ಪಿಸಲ್ಪಟ್ಟ ಸಮಸ್ತ ಕ್ರಿಯೆಗಳುಳ್ಳವರಾಗಿದ್ದರು. ಕುಟ್ಟುವುದು, ಬೀಸುವುದು, ಪ್ರಸಾದ ಪರಿಕರಗಳನ್ನು ಜೋಡಿಸುವುದು. ಮಕ್ಕಳುಮರಿಗಳನ್ನು ಪೋಷಿಸುವುದು ಇವೇ ಮೊದಲಾದ ತಮ್ಮ ಕಾರ್ಯಗಳಲ್ಲಿ ಸದಾ ಎಚ್ಚರವಾಗಿರುತ್ತಿದ್ದ ಇವರಿಗೆ ಸದೃಢ ಆರೋಗ್ಯಕಾಯ ಈಶ್ವರದತ್ತ ವರವಾಗಿ ಬಂದಿತ್ತು. ಬೀಸುವಾಗ. ಕುಟ್ಟುವಾಗ ಇವರು ಉತ್ತರ ಸ್ವರದಿಂದ ಹಾಡುತ್ತಿದ್ದ ತ್ರಿಪದಿ ಸಾಂಗತ್ಯಗಳು ಅವರ ಅದ್ಭುತ ಜ್ಞಾಪಕಶಕ್ತಿಗೂ. ಉತ್ಸಾಹಶಕ್ತಿಗೂ ಜ್ವಲಂತ ನಿದರ್ಶನಗಳಾಗಿದ್ದವು. ದೈವಭಕ್ತಿ ಇವರ ಹಾಡುಗಳಲ್ಲಿ ಮಡುಗಟ್ಟಿರುತ್ತಿತ್ತು. ಇವರ ಕಕ್ಕುಲತೆ. ವಾತ್ಸಲ್ಯ. ಪ್ರೀತಿ ವಿಶ್ವಾಸಗಳು ತಮ್ಮ ಮನೆಮಠ. ಮಕ್ಕಳುಮರಿ, ಪತಿ ಇವುಗಳಿಗೆ ಸೀಮಿತವಾಗಿ ಸಂಕುಚಿತವಾಗಿರದೆ. ಅವು ಬಂಧುಬಳಗ. ಗುರು ದೈವ, ಅತಿಥಿಅಭ್ಯಾಗತ, ದೀನದಲಿತ ವ್ಯಾಪ್ತಿಯಲ್ಲಿ ಹರಡಿದುದರ ಪರಿಣಾಮವಾಗಿ ಇವರ ಗೃಹಿಣೀಧರ್ಮದ ವರ್ಚಸ್ಸು ಆದರ್ಶಗಳು ಅನುಕರಣೀಯವಾಗಿದ್ದವು. ಹದಿಮೂರು ಜನ ಮಕ್ಕಳನ್ನು ಹೆತ್ತ ಈ ತಾಯಿಯ ಆರೋಗ್ಯಭಾಗ್ಯ ಕೊನೆಯವರೆಗೂ ಸದೃಢವಾಗಿದ್ದು ತಾಯ್ತನದ ಹಿರಿಮೆಗರಿಮೆಗಳಿಗೊಂದು ತೋರುಗಂಬವಾಗಿತ್ತು. ಈ ಹದಿಮೂರು ಜನ ಮಕ್ಕಳನ್ನು ಉತ್ತಮ ರೀತಿಯಿಂದ ಪಾಲನೆ ಪೋಷಣೆ ಮಾಡಿ ಸಂಸ್ಕಾರಜೀವಿಗಳನ್ನಾಗಿ ಕಡೆದುದರ ಹಿನ್ನೆಲೆಯಲ್ಲಿ ಇವರ ತಾಯ್ತನದ ಹೊಣೆಗಾರಿಕೆಯ ಅಗಾಧ ಪರಿಶ್ರಮ, ತಾಳ್ಮೆ, ತ್ಯಾಗ, ವಾತ್ಸಲ್ಯ, ದೈವಭಕ್ತಿ, ದಾಸೋಹ ಸದ್ಭಾವಗಳ ಅಪರಿಮಿತ ಕರ್ಮಕೌಶಲದ ಪರಿಚಯವನ್ನು ಊಹಿಸಿಯೇ ಗೊತ್ತು ಮಾಡಿಕೊಳ್ಳಬೇಕು. ಆಚಾರದಿಂದ ಚೆಲುವಾದ ಅಂಗ, ಮಹಾನುಭಾವದಿಂದ ಚೆಲುವಾದ ಮನಸ್ಸು ಆ ಗಂಗಮ್ಮನವರದು. ಇಂಥ ಅಪೂರ್ವ ತೇಜಶ್ಶಾಲಿನಿಯ ಜೀವನದಿಂದ ಅದ್ಭುತ ಸೃಷ್ಟಿಯೊಂದು ಆಗಲೇಬೇಕು.

**ದೇವಕಳೆ :**

ಗಂಗಮ್ಮ ಹೊನ್ನೆಗೌಡರ ಮೇಲೆ ಹೇಳಿದ ೧೩ ಜನ ಮಕ್ಕಳಲ್ಲಿ ಎಂಟು ಜನ ಗಂಡು ಮಕ್ಕಳು, ಐದು ಜನ ಹೆಣ್ಣು ಮಕ್ಕಳು[6]. ಎಂಟು ಜನ ಗಂಡು ಮಕ್ಕಳಲ್ಲಿ ಕೊನೆಯ ಮಗನೇ "ಶಿವಣ್ಣ". ತಾಯಿ ಗಂಗಮ್ಮನವರ ಶಿವಪೂಜಾನಿಷ್ಠೆ ವೃದ್ಧಿಗೊಂಡು, ಶುದ್ಧಾಂತಃಕರಣಭಾವ ಬಲಿತು, ಗುರುಲಿಂಗಜಂಗಮಸೇವಾಕಾಂಕ್ಷೆ ಬೆಳೆದು ಸಂಸ್ಕಾರ ವಿಶೇಷವಾಗಿ ಪರಿಣಮಿಸಿ, ತಜ್ಜನ್ಯ ಪ್ರಬಲ ಪುಣ್ಯವಿಶೇಷದಿಂದ ಕೊನೆಯಲ್ಲಿ ಹುಟ್ಟಿದ ಮಗನಾಗಿದ್ದರಿಂದಲೇ "ಶಿವ" ಎಂಬ ಅನ್ವರ್ಥಕನಾಮವಾಯಿತು. ಶಿವಣ್ಣ ಕೊನೆಯ ಮಗನಾದುದರಿಂದಲೂ. ಬಾಲ್ಯದಲ್ಲಿಯೇ ಬೀಜರೂಪವಾಗಿ ಹೊರಹೊಮ್ಮುತ್ತಿದ್ದ ಧೈರ್ಯ, ಸಾಹಸ, ಭಕ್ತಿ, ಉತ್ಸಾಹಗಳ ಚಿಲುಮೆಯಂತೆ ಕಂಗೊಳಿಸುವ ಸದೃಢ ಶರೀರಿಯಾದ್ದರಿಂದಲೂ ಈ ಮಗನಲ್ಲಿ ತಾಯಿ ತಂದೆಯರ ವಾತ್ಸಲ್ಯ ಅತ್ಯಧಿಕವಾಗಿದ್ದವು. ಅಣ್ಣಂದಿರ. ಅಕ್ಕಂದಿರ ಪ್ರೀತಿವಿಶ್ವಾಸಗಳು ಬಂಧುಬಳಗದ ನೆರೆಹೊರೆಯುವರ

---

6. ಗಂಡುಮಕ್ಕಳು :- ೧) ಹೊನ್ನಪ್ಪ (ಅಪ್ಪಣ್ಣಪ್ಪ). ೨) ಪುಟ್ಟಹೊನ್ನಪ್ಪ. ೩) ಕೆಂಪಣ್ಣ. ೪) ಬಾಳಪ್ಪ. ೫) ಕೆಂಪುನಂಜಪ್ಪ, ೬) ಹೊನ್ನಗಂಗಪ್ಪ, ೭) ಲಿಂಗಪ್ಪ, ೮) ಶಿವಣ್ಣ.

ಹೆಣ್ಣುಮಕ್ಕಳು :- ೧) ಪುಟ್ಟಹೊನ್ನಮ್ಮ, ೨) ಗವಿಯಮ್ಮ, ೩) ಕೆಂಪಮ್ಮ, ೪) ಪುಟ್ಟತಾಯಮ್ಮ, ೫) ಗೌರಮ್ಮ.

(ಪುಟ್ಟಹೊನ್ನಮ್ಮ ಮತ್ತು ಪುಟ್ಟಹೊನ್ನಪ್ಪ ಇವರು ಅವಳಿ ಮಕ್ಕಳಾದ್ದರಿಂದ ಒಂದೇ ಹೆಸರು) ಶಿವಣ್ಣನ ಹಿರಿಯಣ್ಣಂದಿರಾದ ಒಂದನೆಯ ಹೊನ್ನಪ್ಪನವರಿಗೆ ಅಪ್ಪಣ್ಣಪ್ಪ ಎಂದೂ ಹೆಸರು. ಹಸ್ತಶುದ್ಧಿಯಲ್ಲಿ ಇವರೂ ಪ್ರಸಿದ್ಧಿ ಪಡೆದವರು ; ಭಸ್ಮವನ್ನು ಮಂತ್ರಿಸಿಕೊಡುವುದು, ಯಂತ್ರಧಾರಣೆ ಮಾಡುವುದು ಮೊದಲಾದವುಗಳಿಂದ ಸುತ್ತಮುತ್ತಣ ಹಳ್ಳಿಗಳಲ್ಲೆಲ್ಲಾ ಪ್ರಸಿದ್ಧರಾಗಿದ್ದ ಇವರು ತ್ರಿಕಾಲಶಿವಪೂಜಾ ಧುರಂಧರರು ; ಅತ್ಯಂತ ಸಾತ್ವಿಕ ಪುರುಷರು. ಶರಣ ಸಜ್ಜನಿಕೆಯಲ್ಲಿ ಜೀವನ ನಡೆಸಿದವರು; ಇವರು ಕುದುರೆಯನ್ನೇರುವುದರಲ್ಲಿ ಪ್ರಖ್ಯಾತಿ ಪಡೆದು ವೀರೋಚಿತ ನಡೆಯುಳ್ಳವರೆನಿಸಿದ್ದರು. ಗಂಡುಮಕ್ಕಳಲ್ಲಿ ಐದನೆಯವರಾದ ಕೆಂಪುನಂಜಪ್ಪನವರೂ ಕೂಡ ವಿರಕ್ತೋಚಿತ ಜೀವನ ನಡೆಸಿ ವೀರ ವೈರಾಗ್ಯ ಮೂರ್ತಿಯೆಂದೂ ಕೀರ್ತಿತರಾದವರು, ಕೊನೆಯುವರೆಗೂ ಇವರು ಕಾಯಕದಲ್ಲಿ ನಿರತರಾಗಿದ್ದರು.

ಕಕ್ಕುಲತೆಗಳು ಅಪರಿಮಿತವಾಗಿದ್ದವು. ಧಾರ್ಮಿಕ ಹಿನ್ನೆಲೆಯ ಬೃಹತ್ಸಂಸಾರದವರೆಲ್ಲರ ಕೇಂದ್ರೀಕೃತ ವಾತ್ಸಲ್ಯದೃಷ್ಟಿಯ ಮಧ್ಯದಲ್ಲಿ ಶಿವಣ್ಣನ ಬಾಲ್ಯ ಅತ್ಯಂತ ಸಂಸ್ಕಾರಭೂಯಿಷ್ಠವಾಗಿ ಪೋಷಣೆಗೊಂಡು ಬೆಳೆಯಿತು. ಒಂದು ರೀತಿಯಲ್ಲಿ ತಂದೆ ತಾಯಿಯವರೀರ್ವರ ವ್ಯಕ್ತಿತ್ವ ಶಿವಣ್ಣನವರ ಮೇಲೆಯೇ ಮಹತ್ವದ ಪರಿಣಾಮ ಬೀರಿದವು. ಶಿವಣ್ಣ ಹುಟ್ಟಿದುದು ೧೯೦೮ನೇ ಎಪ್ರಿಲ್ ಒಂದನೆಯ ದಿನಾಂಕದ ಬ್ರಾಹ್ಮೀಮುಹೂರ್ತದಲ್ಲಿ. ಹುಟ್ಟಿನೊಡನೆಯೇ ಶಿವಣ್ಣ ಮನೆಯ ಭಾಗ್ಯವನ್ನೆಲ್ಲ ಕಟ್ಟಿಕೊಂಡೇ ಹುಟ್ಟಿಬಂದಿದ್ದ. ಇವನ ಹುಟ್ಟುಗುಣದ ಪರಿಣಾಮವೋ ಏನೋ ಹೊನ್ನೆಗೌಡ ಗಂಗಮ್ಮನವರ ಭಾಗ್ಯದ ಬಾಗಿಲು ತೆರೆದಿತ್ತು. ಐಶ್ವರ್ಯ ಇವನು ಬೆಳೆಬೆಳೆದಂತೆ ಅಧಿಕವಾಗುತ್ತಲೇ ನಡೆದಿತ್ತು. ನೂರಾರು ದನಕರುಗಳು ಕೊಟ್ಟಿಗೆಯಲ್ಲಿ ತುಂಬಿರುತ್ತ ಹಾಲು ಹಯನುಳ್ಳ ಮನೆ ಎನಿಸಿತ್ತು. ಸದಾ ಕಣಜದಲ್ಲಿ ೧೫೦-೨೦೦ ಪಲ್ಲದಷ್ಟು ರಾಗಿ ದಾಸ್ತಾನುಗೊಂಡು ಇರಲೇಬೇಕು. ಮಳೆಗಾಲದಲ್ಲಿ ಬಡಬಗ್ಗರಿಗೆ ಹಂಚಬೇಕು. ಸುಗ್ಗಿಯಲ್ಲಿ ಯಾವ ವಾತವಿಲ್ಲದೆ ಅದನ್ನೆಲ್ಲ ವಸೂಲು ಮಾಡಬೇಕು. ಸಣ್ಣಗುಡ್ಡದಂತೆ ಕಾಣುವ ಮೆಣಸಿನಕಾಯಿ ರಾಶಿ ಮಾಳಿಗೆಯ ಮೇಲೆ ಪ್ರತಿವರ್ಷ ಕಾಣುತ್ತಿತ್ತು. ಪ್ರತಿವರ್ಷ ಕಬ್ಬುಹಾಕಬೇಕು. ಆಲೆಮನೆಯಾಡಬೇಕು. ಮನೆಗೆ ಬೇಕಾಗುವ ಬೆಲ್ಲವನ್ನು ಸಂಗ್ರಹಿಸಿಟ್ಟು ಹೆಚ್ಚಿನದನ್ನು ಮಾರಬೇಕು. ಸೀಗೆ, ಹಿಪ್ಪೆ, ಹೊಂಗೆ, ಮೆಣಸಿನಕಾಯಿ ಮಾರಾಟದಿಂದ ಜೀವನಕ್ಕೆ ಕೊರತೆಯಿಲ್ಲದಷ್ಟು ಹಣ ಬರುತ್ತಿತ್ತು. ಈ ಎಲ್ಲ ಬೆಳೆ ಎಂದೂ ಇಲ್ಲದಷ್ಟು ಬೆಳೆಯುತ್ತಿತ್ತಾಗಿ ಶಿವಣ್ಣನ ಹುಟ್ಟಿನಲ್ಲಿ ಏನೋ ವಿಶೇಷವನ್ನು ಮನೆಯವರೆಲ್ಲ ಕಂಡಿದ್ದರು; ಕಾಣುತ್ತಿದ್ದರು. ಮನೆಯಂತೂ ಒಂದು ಪುಟ್ಟ ದಾಸೋಹಕ್ಷೇತ್ರವೇ ಆಗಿತ್ತು. ಮನೆಗೆ ಹೆಚ್ಚು ಹೆಚ್ಚು ಜನ ಬಂದು ಊಟ ಮಾಡುತ್ತಿದ್ದರೆ ಶಿವಣ್ಣನಿಗೆ ಎಲ್ಲಿಲ್ಲದ ಹಿಗ್ಗು; ನೂರ್ಮಡಿ ಉತ್ಸಾಹದ ಬುಗ್ಗೆ ಅವನಲ್ಲಿ ಪುಟಿಯುತ್ತಲೇ ಇರುತ್ತಿತ್ತು. ಒಟ್ಟಿನಲ್ಲಿ ಶಿವಣ್ಣ ಮಾತಾಪಿತೃಗಳ ಅಣ್ಣಅಕ್ಕಂದಿರ ಈಪ್ಸಿತಾರ್ಥವನ್ನು ಕೊಡುವ ನಡೆನುಡಿಯ ಕಲ್ಪಲತೆಯಂತೆ ವೀರಾಪುರ ಪಟೇಲರ ಮನೆಯಲ್ಲಿ ಬಾಲಲೀಲೆಯನ್ನು ನಟಿಸುತ್ತಿದ್ದನೆನ್ನಬಹುದು.

ಬಾಲಕ ಶಿವಣ್ಣ ಸ್ವಲ್ಪ ಓಡಾಡುವ ಮಗುವಾಗಿ. ಮೂರು–ನಾಲ್ಕು ವರ್ಷದವನಾಗಿದ್ದಾಗಲೇ ತಂದೆಯವರ ಧೈರ್ಯ, ಶಕ್ತಿ, ಸಾಮರ್ಥ್ಯ, ದಾಸೋಹಗುಣ ಮೊದಲಾದವುಗಳನ್ನು ಕಂಡು ತಾನೂ ಹೀಗೆಯೇ ಆಗಬೇಕೆಂದುಕೊಳ್ಳುತ್ತಿದ್ದ. ಪರ್ವಕಾಲಗಳಲ್ಲಿ ಮನೆಯಲ್ಲಿ ತಂದೆಯವರು ಶ್ರಾವ್ಯವಾಗಿ ಹಾಡಿ ವ್ಯಾಖ್ಯಾನ ಮಾಡುತ್ತಿದ್ದ ಶರಣಲೀಲಾಮೃತವೇ ಮೊದಲಾದ ಪುರಾಣಪ್ರವಚನದ ಪ್ರಭಾವವಂತೂ ಶಿವಣ್ಣನವರನ್ನು ಮುಗ್ಧಗೊಳಿಸುತ್ತಿತ್ತು. ಎಷ್ಟೋಸಲ ತೊದಲುನುಡಿಯಿಂದಲೇ ಅನುಕರಣ ಮಾಡಿ ತಾಯಿಯೆದುರು ತೋರಿಸಿ ನಕ್ಕುನಲಿಸುತ್ತಿದ್ದ. ತುಂಟತನವನ್ನಂತೂ ಶಿವಣ್ಣ ಬಾಲ್ಯದಿಂದ ತನ್ನೊಡನೆ ಕಟ್ಟಿಕೊಂಡೇ ಹುಟ್ಟಿಬಂದಿದ್ದನೆನ್ನುವಷ್ಟುಮಟ್ಟಿಗೆ ಪಡೆದಿದ್ದ. ಇವನ ತುಂಟತನದಿಂದ ಮನೆ ಸದಾ ಜಾಗೃತವಾಗಿರುತ್ತಿತ್ತು ಅಥವಾ ಗದ್ದಲದಿಂದಲೇ ಕೂಡಿರುತ್ತಿತ್ತೆನ್ನಬೇಕು. ಆದರೆ ತಾಯಿಯೊಡನೆ ಸ್ನಾನ ಮಾಡಿ ಶಿವಪೂಜಾ ಗೃಹ ಪ್ರವೇಶಿಸಿದಾಗ ಮಾತ್ರ ಅಲ್ಲಿ ಸಂಪೂರ್ಣ ಮೌನ ಮುಖಮುದ್ರೆ; ತಾಯಿ ಅನುಭವಿಸುವ ಶಿವಪೂಜಾ ಆನಂದವನ್ನೆಲ್ಲ ತಾನೂ ಅನುಭವಿಸುತ್ತಿದ್ದ. ಮುಖ ಮೈಗೆಲ್ಲ ವಿಭೂತಿ ಬಳಿದುಕೊಂಡು ತಾಯಿಯೆದುರು ಕೈಮುಗಿದುಕೊಂಡು ಕುಳಿತ ಶಿವಣ್ಣನ ಆಗಿನ ನೋಟ ಶಿಶುರೂಪದ ಸಾಕ್ಷಾತ್ ಸಿದ್ಧಲಿಂಗೇಶ್ವರನೋ ಎಂಬಂತೆ ಕಾಣುತ್ತಿತ್ತಂತೆ. ಶಿವಪೂಜೆ ಮಾಡಿ ಊಟಕ್ಕೆ ಕುಳಿತೊಡನೆ ಪುನಃ ಗಲಾಟೆ ಗದ್ದಲ. ತುಪ್ಪವನ್ನಂತೂ ವಿಶೇಷ ಎಡೆ ಮಾಡಬೇಕು. ಹಾಲು ಮೊಸರನ್ನು ಕೇಳಿದಷ್ಟು ನೀಡಬೇಕು. ಸ್ವಲ್ಪ ಹೆಚ್ಚು ಕಡಿಮೆಯಾದರೆ ರಾದ್ಧಾಂತವೇ. ಈತನನ್ನು ಹೇಗೆ ತೃಪ್ತಿಪಡಿಸಬೇಕೆಂಬುದೇ ತಾಯಿಗೆ ಸಮಸ್ಯೆಯಾಗಿ ಹೋಗಿತ್ತು. ಈತನ ಈ ಅಗಾಧ ತುಂಟತನ ಒಮ್ಮೊಮ್ಮೆ ಬೇಸರ ತರುತ್ತಿತ್ತಾದರೂ ಶಿವಗಂಗೆಯ ಗಂಗಾಧರೇಶ್ವರ–ಹೊನ್ನಾದೇವಿಯರು ತಮ್ಮ ಭೂತಗಣದಲ್ಲಿನ ಒಂದು ಚೇಷ್ಟೆಯ ದೇವತೆಯನ್ನೇ ನಮ್ಮ ಮನೆಗೆ ಕರುಣಿಸಿರಬೇಕು ಎಂದು ಆಗಾಗ ಅಂದುಕೊಳ್ಳುತ್ತಿದ್ದರಂತೆ. 'ನನ್ನ ಎಲ್ಲ ಮಕ್ಕಳೂ ಒಂದು ತೂಕ; ಇವನೊಬ್ಬನೇ ಒಂದು ತೂಕ'–ಎಂದು ತಾಯಿ ಮಗನ ಈ ಅನೇಕ ಮನೋಲ್ಲಾಸಕಾರೀ ಚಟುವಟಿಕೆಗಳನ್ನು ನೋಡಿ ಆಡುತ್ತಿದ್ದರು. ಆದರೆ ತಾಯಿ ಮಗುವಿನಲ್ಲಿ ಬಾಲ್ಯದಿಂದಲೇ ಹೊರಹೊಮ್ಮುತ್ತಿದ್ದ ದೇವಗಣದ ಕಳೆಯನ್ನು ಗುರುತಿಸಿದಳು. ಮಾತಿನಲ್ಲಿ, ರೂಪಿನಲ್ಲಿ, ಉತ್ಸಾಹದಲ್ಲಿ, ಚುರುಕುತನದಲ್ಲಿ, ಶ್ರದ್ಧಾಭಕ್ತಿವಿಶ್ವಾಸಗಳಲ್ಲಿ, ಪ್ರಚಂಡತನದಲ್ಲಿ, ತೇಜೋವಿಶೇಷದಲ್ಲಿ ಎಲ್ಲ ಮುಖದಲ್ಲೂ ಏನೋ ಅಸಾಧಾರಣತೆಯನ್ನು ಕಂಡ ತಾಯಿ ಇವನು ಯಾವ ಕಾರಣಪುರುಷನಾಗುವ ಭಾಗ್ಯ ಕಾದಿದೆಯೋ ಎಂದು ಮನದಲ್ಲಿ ಅನೇಕ ಸಲ ಭಾವಿಸಿ, ಪತಿ ಹೊನ್ನೇಗೌಡರ ಎದುರಿಗೂ ಆಡಿ ತೋರಿಸಿದ್ದಳು. ಶಿವಣ್ಣನ ಚೇಷ್ಟೆ ವಿಶೇಷವಾದರೆ, ಅವನನ್ನು ಸಮಾಧಾನಪಡಿಸುವ ಒಂದು ಯುಕ್ತಿ ಗಂಗಮ್ಮನವರಿಗೆ ಗೊತ್ತಾಗಿತ್ತು. 'ಶಿವಪ್ಪ, ನೋಡು ನೀನು ಹೀಗೆಲ್ಲ ಮಾಡಿದರೆ ಶಿವನು ತನ್ನ ಕೈಲಾಸದಲ್ಲಿ ನಿನ್ನನ್ನು ಹತ್ತಿರಕ್ಕೇ ಸೇರಿಸುವುದಿಲ್ಲ. ಗೊತ್ತಾಯಿತೇ'! ಎಂದೊಡನೆ ಶಿವಣ್ಣ ಥಟ್ಟನೆ ಚೇಷ್ಟೆಯನ್ನು ನಿಲ್ಲಿಸಿ 'ಏಕೆ' ಎಂದು ಮರುಪ್ರಶ್ನೆ ಹಾಕಿಯೇ ತೀರುತ್ತಿದ್ದ. ಆಗ ತಾಯಿ ಶಿವನು ಚೇಷ್ಟೆ ಮಾಡುವವರನ್ನು ಹೆದರಿಸಿ ಓಡಿಸಿ ಬಿಡುತ್ತಾನೆ. ಅವನಿಗೆ ಚೇಷ್ಟೆ ಹಠ ಮಾಡುವವರನ್ನು ಕಂಡರೆ ಆಗುವುದಿಲ್ಲ, ಎಂದೊಡನೆ ಏನೋ ಭಾವನಾಲೋಕದಲ್ಲಿ ಮುಳುಗಿದವನಂತೆ ನೋಡಿ 'ಅಮ್ಮಾ' ಆ ಶಿವನು ವಾಸಿಸುವ ಕೈಲಾಸ

ವೆಲ್ಲಿದೆ ? ಅಲ್ಲಿಗೆ ನಾವು ಹೋಗುವುದು ಹೇಗೆ ? ಹಿಂದೊಂದು ದಿನ ನಾವು ಪೂಜಿಸುವ ಶಿವಲಿಂಗವೇ ಶಿವ ಎಂದು ಹೇಳಿದ್ದೆ ಯಲ್ಲವೆ ? ಅವನೇ ಶಿವಗಂಗೆಯ ಬೆಟ್ಟದಲ್ಲಿಯೂ ನೆಲಸಿದ್ದಾನೆಂದು ಬೆಟ್ಟಕ್ಕೆ ಮೊನ್ನೆ ಕರೆದೊಯ್ದಾಗ ಹೇಳಿದ್ದೆಯಲ್ಲವೆ ? ಇದೇ ಕೈಲಾಸ ಎಂದು ಆ ದಿನ ವಿವರಿಸಿದ್ದೆಯಲ್ಲವೆ? ಅಂದು ನನ್ನನ್ನೂ ನಿನ್ನನ್ನೂ ಸೇರಿಸಿದ್ದನಲ್ಲ, ಇಂದೇಕೆ ಸೇರಿಸುವುದಿಲ್ಲ' ? ಇತ್ಯಾದಿ ಮಾತುಗಳನ್ನಾಡಿ ತಾಯಿಯನ್ನು ತಬ್ಬಿಬ್ಬುಗೊಳಿಸಿ ತನ್ನ ತೊದಲು ನುಡಿಗಳಿಂದ ತಾಯಿಯ ಅಂತಃಕರಣವನ್ನೆಲ್ಲ ಗೆದ್ದುಬಿಡುತ್ತಿದ್ದ. ತಾಯಿ ನಗುತ್ತ 'ನಿನ್ನೊಡನೆ ಮಾತನಾಡಿ ನಾನು ಪೂರೈಸೇನೇನೋ ಶಿವಣ್ಣ' ಎನ್ನುತ್ತ ತನ್ನ ಕೆಲಸಕ್ಕೆ ಹೋಗಿಬಿಡುತ್ತಿದ್ದಳು. ಶಿವಣ್ಣ ತನ್ನ ಆಟಪಾಟ ಆಮೋದ ಪ್ರಮೋದಗಳಲ್ಲಿ ಮಗ್ನನಾಗುತ್ತಿದ್ದ.

**ಶಿವಗಂಗೆಯ ಪ್ರಭಾವ :**

ಶಿವಣ್ಣ ತನ್ನ ತಂದೆತಾಯಿಯವರೊಡನೆ ಶಿವಗಂಗೆಗೆ ಅನೇಕ ಸಲ ಹೋಗಿ ಹೊನ್ನಾದೇವಿ. ಗಂಗಾಧರೇಶ್ವರ, ಹೊನ್ನಮ್ಮನ ಗವಿಮಠಕ್ಕೆ ಸೇರಿದ ವೀರಭದ್ರ, ಮರಿಹೊನ್ನಮ್ಮ (ಮರಿಯಮ್ಮ) ದೇವತಾ ವಿಗ್ರಹಗಳ ಗಾಢ ಪರಿಚಯ ಮಾಡಿಕೊಂಡಿದ್ದ. ಗಂಗಮ್ಮನವರು ಮಾತ್ರ ಪ್ರತಿ ಮಂಗಳವಾರ ಪಟೇಲರು ಬರಲಿ ಬಿಡಲಿ, ತಾನು ಮಾತ್ರ ಹೋಗಿಬರಲೇಬೇಕು. ಮಂಗಳವಾರ ತಪ್ಪಿದರೆ ಶುಕ್ರವಾರ ಹೋಗಿ ಬರಲೇಬೇಕು. ಅದು ಅವಳ ವೈಯಕ್ತಿಕ ಭಕ್ತಿಜೀವನದ ಒಂದು ಅಂಗವಾಗಿತ್ತು. ಶಿವಗಂಗೆ ವೀರಾಪುರಕ್ಕೆ ಕೇವಲ ಮೂರು ಮೈಲು ಮಾತ್ರ. ಹೊನ್ನೇಗೌಡರ ಮನೆಯಿಂದ ಕೂಗಳತೆಯಲ್ಲಿದೆಯೋ ಎಂಬಂತೆ ಸ್ಪಷ್ಟವಾಗಿ ಕಾಣುವ ಆ ಬೆಟ್ಟದಲ್ಲಿನ ದೇವಾಲಯಗಳಿಗೂ ಹೊನ್ನೇಗೌಡರ ಮನೆತನಕ್ಕೂ ಗಾಢವಾದ ಸಂಬಂಧ. ತಾಯಿ ಹೋಗುವಾಗ ಶಿವಣ್ಣ ತಾಯಿಯ ಹಿಂದೆ ಹೋಗಲೇಬೇಕು, ಗೌರಮ್ಮನ ಹಿಂದೆ ಗಣಪಣ್ಣ ಹೊರಟು ಬರುವಂತೆ[7]. ತಾಯಿ ಪ್ರೀತಿಯ ಇಂಥ ಪ್ರಚಂಡ ಮಗನನ್ನು ಶಿವಗಂಗೆಗೆ ಬಿಟ್ಟು ಹೋಗುವುದಾದರೂ ಹೇಗೆ? ಹೀಗಾಗಿ ಕಂಕುಳ ಕೂಸಿನಿಂದಲೂ ಶಿವಣ್ಣನವರಿಗೆ ಶಿವಗಂಗಾಕ್ಷೇತ್ರದ ಗಾಢಸಂಬಂಧ ಹೆಣೆದು ಬಿಟ್ಟಿತ್ತು. ಐದು ವರ್ಷಗಳವರೆಗೆ ಶಿವಣ್ಣ ತನ್ನ ತಾಯಿಯನ್ನು ಅಗಲಿದುದೇ ಇಲ್ಲ. ತಾಯಿಯ ಪ್ರಭಾವ ಶಿವಣ್ಣನ ಜೀವನದ ಮೇಲೆ ಆದಷ್ಟು ಇನ್ನಾರಿಂದಲೂ ಆಗಿಲ್ಲ. ಎರಡನೆಯ ಸ್ಥಾನ ತಂದೆಗೆ, ತಾಯಿಯ ಅಗಲಿಕೆ ಒಂದೆರಡು ಗಂಟೆ ಆದರೆ ಆಯಿತು, ಗುಡುಗುಟ್ಟಿ ಹುಡುಕಾಡಿ ಮುಖ ನೋಡವವರೆಗೆ ರಾದ್ಧಾಂತವನ್ನೇ ಎಬ್ಬಿಸಿಬಿಡುತ್ತಿದ್ದ. ಇದಕ್ಕೆ ಕಾರಣವಿತ್ತು: ಅದು ಸ್ತನ್ಯಪಾನ. ೫ ವರ್ಷಗಳವರೆಗೆ ತಾಯಿಯ ಸ್ತನ್ಯಪಾನ ಮಾಡಿದ್ದ ಶಿವಣ್ಣ ಸ್ತನ್ಯಪಾನ ಮಾಡಬೇಕೆಂಬ ಬಯಕೆ ಬಂದೊಡನೆ ವೀರಭದ್ರಾವತಾರ ಪ್ರಾರಂಭ ಮಾಡಿಬಿಡುತ್ತಿದ್ದ. ಸ್ತನ್ಯಪಾನ ಮಾಡಿದ ಮೇಲೆ ಅಬ್ಬರ ಕಡಿಮೆ ಮಾಡುತ್ತಿದ್ದ.

ಶಿವಗಂಗಾ ಕ್ಷೇತ್ರದರ್ಶನವನ್ನು ಪ್ರತಿವಾರವೂ ಮಾಡುತ್ತಿದ್ದ ಬಾಲಕ ಶಿವಣ್ಣನ ಮನಸ್ಸಿನ ಮೇಲೆ ಆ ಕ್ಷೇತ್ರ ಅಗಾಧ ಪರಿಣಾಮ ಬೀರಿತ್ತು. ಬೆಟ್ಟ ಹತ್ತಿ ಅಲ್ಲಿನ ದಿವ್ಯಭವ್ಯಪ್ರಾಕೃತಿಕ ಸನ್ನಿವೇಶದಲ್ಲಿ ಪ್ರಭಾವಿತನಾಗಿ ಮೈಮರೆತುಬಿಡುತ್ತಿದ್ದ. ಅಲ್ಲಿಂದ ಕಣ್ಣಳತೆವರೆಗೆ ಮಲಗಿದ ಮದ್ದಾನೆಗಳಂತೆ ಬೂದು ಬಣ್ಣದಿಂದ ಕಾಣುವ ಸಿದ್ಧಗಂಗಾ ಬೆಟ್ಟ, ರಾಮೇದೇವರ ಬೆಟ್ಟ, ಸಿದ್ಧನ ಬೆಟ್ಟ, ದೇವರಾಯದುರ್ಗದ ಬೆಟ್ಟಗಳ ಮೇಲೆಯೇ ಇವನ ಕಣ್ಣು. ಈ ಬೆಟ್ಟಗಳು ಶಿವಣ್ಣನ ಮನಸ್ಸಿನ ಮೇಲೆ ಅಪೂರ್ವ ಪರಿಣಾಮ ಬೀರುತ್ತಿದ್ದವು. ತಾಯಿಯಿಂದ ಆ ಬೆಟ್ಟಗಳ ಪರಿಚಯ ಮಾಡಿಕೊಳ್ಳುತ್ತಿದ್ದ. ಸಿದ್ಧಗಂಗಾ ಕ್ಷೇತ್ರದ ಉದ್ದಾನ ಶಿವಯೋಗಿಗಳು, ಸಿದ್ಧಲಿಂಗೇಶ್ವರರು, ಅಮ್ಮನವರ ಗವಿ ಇವುಗಳ ಪರಿಚಯವನ್ನು ತಾಯಿಯಿಂದಲೇ ಮಾಡಿಕೊಂಡು ಅಲ್ಲಿಗೊಮ್ಮೆ ಹೋಗಿ ಬರುವ ಕುತೂಹಲವನ್ನು ಆಗಾಗ ವ್ಯಕ್ತಪಡಿಸುತ್ತಿದ್ದ. ತಾಯಿ 'ಶಿವರಾತ್ರಿಯಲ್ಲಿ ಸಿದ್ಧಲಿಂಗೇಶ್ವರ ರಥೋತ್ಸವವನ್ನು ಉದ್ದಾನಪ್ಪನವರು ಪ್ರಾರಂಭಿಸಿದ್ದಾರೆ. ಒಮ್ಮೆ ಹೋಗಿ ತೋರಿಸಿಕೊಂಡು ಬರುತ್ತೇನೆ' ಎಂದು ಹೇಳಿದ್ದರು. ಈ ರೀತಿಯಲ್ಲಿ ತಾಯಿಯವರು ಶಿವಣ್ಣನ ಬಾಲ್ಯಜೀವನದಲ್ಲಿ ಭಕ್ತಿ, ಶ್ರದ್ಧೆ. ವಿಶ್ವಾಸಗಳನ್ನು ಮೂಡಿಸುವ ಮಹಾಗುರುವಾಗಿ ಅತುಲ ಪ್ರಭಾವದ ಪ್ರಭಾವಲಯವನ್ನೇ ನಿರ್ಮಿಸಿದವರು. ಶಿವಗಂಗೆಯಲ್ಲದೆ ತಂದೆತಾಯಿಯರೊಡನೆ ಆಗಾಗ ಹೋಗಿಬರುತ್ತಿದ್ದ ಇತರ ಸ್ಥಾನಗಳೆಂದರೆ, ಕುಂಚುಗಲ್ಲು ಬಂಡೆಮಠ, ಕಾಚಕಲ್ಲಪ್ಪನ ಗುಡ್ಡ. ಮಹದೇಶ್ವರನ ಗದ್ದುಗೆ ಮೊದಲಾದ ವೀರಾಪುರದ ಅಕ್ಕಪಕ್ಕದಲ್ಲಿರುವ ಶಿವಶರಣರ ಮಹಿಮಾನ್ವಿತ ಸ್ಥಾನಗಳಾಗಿದ್ದವು; ಅವು ಜಂಗಮ ಕ್ಷೇತ್ರಗಳೇ ಆಗಿದ್ದವು.

---

7. ಬಾಲ್ಯದಲ್ಲಿನ ಶಿವಣ್ಣನವರ ಜೀವನ ಘಟನೆಗಳನ್ನು ಯಥಾವತ್ತಾಗಿ ಕಥೆ ಮಾಡಿ ಹೇಳಿದವರು ಈಗಲೂ ಜೀವಂತವಾಗಿರುವ ಹೊನ್ನೇಗೌಡ–ಗಂಗಮ್ಮನವರ ಕಿರಿಯ ಮಗಳು ಗೌರಮ್ಮನವರು. ಹೆಣ್ಣುಮಕ್ಕಳಲ್ಲಿ ೫ ನೆಯವರು ಇವರೇ. ಶಿವಣ್ಣನವರಿಗಿಂತ ಹಿರಿಯರು. ಇವರನ್ನು ಗುಂಡಿಗೇರೆಗೆ ಕೊಟ್ಟಿದೆ. ನಾವು ಅವರನ್ನು ಸಂಧಿಸಿ ಶಿವಣ್ಣನವರ ಬಾಲ್ಯಜೀವನಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಸಂಗ್ರಹಿಸಿದೆವು. ಇದಲ್ಲದೆ ಶಿವಣ್ಣನವರ ಬಾಲ್ಯದ ಒಡನಾಡಿಗಳಲ್ಲಿ ಗೊಲ್ಲರಪಾಳ್ಯದ ಬಾಲಯ್ಯ ಮತ್ತು ರುದ್ರಯ್ಯ ಇವರನ್ನೂ ಸಂಧಿಸಿ ಅನೇಕ ವಿಷಯಗಳನ್ನು ಸಂಗ್ರಹಿಸಲಾಗಿದೆ. ಜೊತೆಗೆ ಹೊನ್ನೇಗೌಡರ ಮೊಮ್ಮಕ್ಕಳ ಸಂಖ್ಯೆ ವಿಪುಲ. ಅವರೂ ನಮ್ಮ ಈ ಸಂಗ್ರಹ ಕಾರ್ಯದಲ್ಲಿ ವಿಶೇಷ ನೆರವಿತ್ತು ಶಿವಣ್ಣನವರ ಜೀವನದ ಯಥಾವತ್ ನಿರೂಪಣೆಗೆ ನೆರವಾಗಿದ್ದಾರೆ. ಇಲ್ಲಿನ ವಿಷಯ ಅವರದು, ಭಾಷೆ ನಮ್ಮದು.

ಶಿವಣ್ಣನ ಬಾಲ್ಯಜೀವನದ ಮೇಲೆ ಪ್ರಭಾವ ಬೀರಿದ ಇನ್ನೊಂದು ಚೇತನ ಅಣ್ಣಂದಿರಾದ ಕೆಂಪನಂಜಪ್ಪನವರು. ಅವರು ವೀರವೈರಾಗ್ಯಶಾಲಿಗಳು. ಕೊನೆಯವರೆಗೆ ಬ್ರಹ್ಮಚಾರಿಯಾಗಿಯೇ ಉಳಿದು ವಿರಕ್ತೋಚಿತ ಜೀವನವಿಧಾನದಿಂದ ಜೀವಿಸಿದವರು. ಅವರ ಆಚಾರಶ್ರದ್ಧೆ ಬಹಳ. ಆಚಾರವೇ ಧರ್ಮದ ಮೂಲವೆಂದು ತಿಳಿದು ಎರಡು ಹೊತ್ತು ತಪ್ಪದೆ ಸ್ನಾನ ಪೂಜೆ ಜಪತಪಗಳಲ್ಲಿ ಕಾಲಕಳೆದವರು. ಅವರದು ದನಗಳನ್ನು ಅಡವಿಯಲ್ಲಿ ಮೇಯಿಸಿಕೊಂಡು ಬರುವ ಕಾಯಕ. ಅವುಗಳ ಪಾಲನೆ ಪೋಷಣೆ ಮಾಡುವುದು. ಇವರು ದನ ಕಾಯಲು ಅಡವಿಗೆ ಹೋಗುವಾಗ ಶಿವಣ್ಣನೂ ಎಷ್ಟೋ ವೇಳೆ ಅವರೊಡನೆಯೇ ಹೋಗುತ್ತಿದ್ದ. ಅವರೊಡನೆ ಅರಣ್ಯದಲ್ಲಿ ಸುತ್ತಾಡಿ ಪ್ರಕೃತಿಯ ಅನಂತ ವೈಚಿತ್ರ್ಯವನ್ನು ಕಂಡು ಈಶ್ವರನ ಅಗಾಧ ಸೃಷ್ಟಿಯ ಲೀಲೆಯ ಬಗೆಗೆ ಮೈಮರೆಯುತ್ತಿದ್ದ. ಅಣ್ಣನೊಡನೆ ಅರಣ್ಯದಲ್ಲಿ ಗಿಡದ ನೆರಳಲ್ಲಿ ಪ್ರಾರ್ಥನೆಗೆ ತೊಡಗಿ ಗಂಟೆಗಟ್ಟಲೆ ಬಾಲ ಶಿವಯೋಗಿಯಂತೆ ಹಾಡಿಪಾಡಿ, ಕುಣಿದು ಕುಕಿಲಿರಿದು ಮೈಮನ ಮರೆಯುತ್ತಿದ್ದ. ಅದು ಸಾಕಾದರೆ ಗೇರು, ಅತ್ತಿ, ನೇರಳೆ, ಮಾವು ಮೊದಲಾದ ಹಣ್ಣುಗಳನ್ನು ಅಣ್ಣನಿಂದ ಕೀಳಿಸಿಕೊಂಡು ತಿನ್ನುತ್ತಿದ್ದ. ಅದೂ ಸಾಕಾದೊಡನೆ ತಾಯಿಯನ್ನು ನೆನೆಸಿಕೊಂಡು ಮನೆಯ ಕಡೆಗೆ ಓಡಿ ಬರುತ್ತಿದ್ದ. ತಾಯಿಯನ್ನು ನೆನಸಿಕೊಂಡಾಗಲೆಲ್ಲ ಶಿವಣ್ಣ ಎಲ್ಲಿಯೇ ಇರಲಿ ನಾಗಾಲೋಟ ಕೀಳುತ್ತಿದ್ದ. ಆಗ ಅವನನ್ನು ಹಿಡಿಯುವ ಶಕ್ತಿ ಯಾರಿಗೂ ಇರುತ್ತಿರಲಿಲ್ಲ[7a].

ಶಿವಣ್ಣನವರ ಮೇಲೆ ತಂದೆಯವರ ನಡೆನುಡಿಗಳೂ ಅಗಾಧ ಪರಿಣಾಮ ಬೀರಿದ್ದವು. ಅವರ ನ್ಯಾಯ ನಿಷ್ಠುರತೆ, ವೀರೋಚಿತ ನಡೆ, ಧೀರೋದಾತ್ತ ವರ್ತನೆ, ಆಗಾಗ ಮಾಡುತ್ತಿದ್ದ ಪುರಾಣ ಪ್ರವಚನ, ಪ್ರವಚನದಲ್ಲಿ ಅವರು ಹೇಳುತ್ತಿದ್ದ ಶಿವಶರಣರ ಅನೇಕ ಕಥೆಗಳು. ಗಂಭೀರವಾಣಿ, ದಾಸೋಹ ಸದ್ಭಾವ, ಪರೋಪಕಾರಗುಣ, ಅತಿಥಿ ಅಭ್ಯಾಗತರಲ್ಲಿನ ಆದರ ಈ ಗುಣಗಳನ್ನು ಕಂಡು ತಾನೂ ತನ್ನ ತಂದೆಯಂತೆಯೇ ಆಗಬೇಕೆಂದು ಆಗಾಗ ಮನಸ್ಸಿನಲ್ಲಿ ಮಂಡಿಗೆತಿನ್ನುತಿದ್ದನು. ಹೀಗೆ ತಂದೆ, ತಾಯಿ, ಅಣ್ಣ ಕೆಂಪನಂಜಪ್ಪ ಈ ಮೂವರು ವ್ಯಕ್ತಿಗಳ ಆದರ್ಶ ಮುಪ್ಪುರಿಗೊಂಡು ಶಿವಣ್ಣನ ಬಾಲ್ಯದ ಸಾರವತ್ತಾದ ಸಂಸ್ಕಾರ ವಿಶೇಷಗಳು ಅವರ ಮುಂದಿನ ಜೀವನದ ದಿಕ್ಕನ್ನೇ ಬದಲಾಯಿಸುವ ಮಹಾದರ್ಶಗಳಾದವು. ಅವರ ಭಾವಕೋಶ ಅನೇಕ ಬೀಜ ರೂಪದ ಸಂಸ್ಕಾರ ವಿಶೇಷಗಳಿಂದ ತುಂಬಿ ಬೀಗಿಬಳುಕಿತು. ಆ ಉತ್ತಮ ಸಂಸ್ಕಾರಗಳೇ ದಿನೇ ದಿನೇ ಅಭಿವೃದ್ಧಿಗೊಂಡು ಹೆಮ್ಮರಗಳಾಗಿ ಬೆಳೆದವು. ಗುರುಹಿರಿಯರಲ್ಲಿ ಭಕ್ತಿಭಾವ, ಪರಮಾತ್ಮನಲ್ಲಿ ಅಚಲಶ್ರದ್ಧೆ ಮತ್ತು ಕರ್ತವ್ಯನಿಷ್ಠೆಗಳು ಅವರ ಬೆಳವಣಿಗೆಯ ಜೊತೆಯಲ್ಲಿಯೇ ಬೆಳೆದುಬಂದವು. ಶಿವಣ್ಣ ಬೆಳೆಬೆಳೆದಂತೆ ಪಟೇಲರ ಮತ್ತು ಅವರ ಮನೆಯ ಕೀರ್ತಿ ಗೌರವಗಳೂ ಅಧಿಕಗೊಳ್ಳತೊಡಗಿದವು. ಏನೋ ಒಂದು ಹೊಸ ಕಳೆ, ಹೊಸ ಹೊಳಪು ಆ ದೊಡ್ಡ ಮನೆತನದ ನಿಚ್ಚನಿಚ್ಚ ಬದುಕಿನಲ್ಲಿ ಕಾಣತೊಡಗಿದವು.

ಒಮ್ಮೆ ಒಂದು ಪ್ರಸಂಗ ನಡೆಯಿತು : ಶಿವಣ್ಣ ಇನ್ನೂ ಚಿಕ್ಕವನು, ನಾಲ್ಕೈದು ವರ್ಷದವನಿರಬಹುದು. ವೀರಾಪುರಕ್ಕೊಬ್ಬ ಹಸ್ತಸಾಮುದ್ರಿಕೆಯ ಸಂನ್ಯಾಸಿ ಬಂದ. ಇಂಥವರು ಯಾರೇ ಬಂದರೂ ಮೊದಲು ಪಟೇಲರ ಮನೆಗೆ ಬಂದು ತಾನೇ ಊರಾಡಬೇಕು ? ಆತ ಪಟೇಲರ ಮನೆಯ ಕಟ್ಟೆಯ ಮೇಲೆ ಬಂದು ಕುಳಿತ. ಪಟೇಲರನ್ನು ಕಂಡ, ತನ್ನ ಹಸ್ತ ಸಾಮುದ್ರಿಕೆಯ ಕಡತ ಬಿಚ್ಚಿ ವ್ಯಾಪಾರ ಪ್ರಾರಂಭಿಸಿದ. ಅದೊಂದು ಹಳ್ಳಿಯವರ ಮೋಜು. ಒಂದು ಬಗೆಯ ವಿನೋದವೂ ಕೂಡ. ಹಳ್ಳಿಯವರೆಲ್ಲ ಒಬ್ಬೊಬ್ಬರಾಗಿ ಬಂದು ತಮ್ಮ ತಮ್ಮ ಭವಿಷ್ಯದ ಪರಿಣಾಮ ತಿಳಿದು ಹೋದರು. ಪಟೇಲರ ಪಕ್ಕದಲ್ಲಿ ತೇಜೋವಿಶೇಷದಿಂದ ಕಾಣುವ ಶಿವಣ್ಣನ ಮೇಲೆ ಗೋಸಾಯಿಯ ದೃಷ್ಟಿ ಬಿತ್ತು. ಪಟೇಲರ ಅನುಮತಿಯಂತೆ ಹುಡುಗನ ಕೈ ನೋಡಲು ಕೈಯನ್ನು ಹಿಡಿದ. ಆ ಕೈ ನೋಡಿ ಒಮ್ಮೆಲೇ ಗೋಸಾಯಿ ಕೈಯನ್ನು ಹಣೆಗೊತ್ತಿಕೊಂಡು. 'ಸ್ವಾಮಿ ಇಷ್ಟೊಂದು ಶುಭಲಕ್ಷಣದ ಕೈಯನ್ನೇ ನಾನು ನೋಡಿಲ್ಲ ; ಇವನೊಬ್ಬ ಮಹಾಭಾಗ್ಯವಂತ ; ಅನ್ನದಾನಿ; ಇವನಿಂದ ನಾಡೆಲ್ಲ ಬೆಳಗುವುದು. ಇವನೇನಿದ್ದರೂ ಕಾರಣಪುರುಷ; ನಿಮಗೆ ದಕ್ಕುವ ಮಗನಲ್ಲ. ಲೋಕದ ಸೊತ್ತಾಗುವವನು' ಎಂದನು. ಪಟೇಲರು ಆ ಮಾತುಗಳನ್ನು ಅಷ್ಟೊಂದು ಗಮನಿಸಲೇ ಇಲ್ಲ. ಅವನು ಪಟೇಲರ ಪುಡಿಗಾಸು ಪಡೆದು ಅವರ ಮನೆಯಲ್ಲಿ ಉಂಡು ಹೊರಟು ಹೋದ. ದಿನ ಕಳೆದಂತೆ ಪಟೇಲರು ಅದನ್ನು ಮರೆತರು. ಅವರ ಮನೆಯಲ್ಲಿ ಹಬ್ಬ ಹರಿದಿನಗಳೆಷ್ಟೋ ಜರುಗುತ್ತಿದ್ದವು. ಅವುಗಳಲ್ಲಿ ಯುಗಾದಿ, ಶಿವರಾತ್ರಿ, ಗೌರೀಹಬ್ಬಗಳು ಸಡಗರದಿಂದ ನಡೆಯುತ್ತಿದ್ದವು. ಮನೆಯ ಜನ

---

7a. ಪಟೇಲ್ ಹೊನ್ನಪ್ಪನವರ ಗೋಮಾಳ ಊರ ಪಕ್ಕದಲ್ಲಿಯೇ ಇದೆ. ಅಲ್ಲಿ ದೊಡ್ಡ ಹಿಪ್ಪೆಯ ಕೊಪ್ಪಲು, ಹೊಂಗೇಸಾಲು ಇದೆ. ಅಲ್ಲಿಯೇ ಅವರ ದನಕುರಿ ಮೇಕೆಗಳು ಮೇಯುತ್ತಿದ್ದವು. ಈ ಹೊಂಗೇಸಾಲು, ಹಿಪ್ಪೇ ತೋಪು ಶಿವಣ್ಣನ ಆಟದ ಮೈದಾನ. ಇಲ್ಲಿಯೇ ಮರಕೋತಿ ಆಟ, ಮರಳುಗುಡ್ಡೆ ಆಟ ಆಡುತ್ತಿದ್ದ. ಪಕ್ಕದಲ್ಲಿಯೇ ಕೆರೆ. ಆ ಕೆರೆಯಲ್ಲಿ ಈಜಾಡುತ್ತಿದ್ದ. ಕೆರೆಯ ದಂಡೆಯ ಮೇಲೆಯೇ ಇನ್ನೊಂದು ದೊಡ್ಡ ಹಿಪ್ಪೆಯ ಮರ. ಈ ಮರ ಶಿವಣ್ಣನ ನಿಕಟವರ್ತಿ; ಈ ಮರವನ್ನು ಏರುವುದು ಶಿವಣ್ಣನ ಒಂದು ಗೀಳು ಮನೆಯಲ್ಲಿ ಕೋಪಿಸಿಕೊಂಡು ಬಂದು ಈ ಮರದ ಬುಡದಲ್ಲಿ ಕುಳಿತುಬಿಡುತ್ತಿದ್ದ. ಇವನನ್ನು ಸಮಾಧಾನ ಮಾಡಿ ಕರೆದೊಯ್ಯ ಬೇಕಾದರೆ ಮನೆಯವರಿಗೆ ಸಾಕುಬೇಕಾಗಿ ಹೋಗುತ್ತಿತ್ತು.

ಗಳೆಲ್ಲರ ಸಡಗರ ಒಂದು ತೂಕ. ಶಿವಣ್ಣನ ಸಡಗರ ಇನ್ನೊಂದು ತೂಕ. ಶಿವರಾತ್ರಿಯಂದು ಹೂ ಪತ್ರೆ ತರುವುದು, ತಳಿರು ತೋರಣ ಕಟ್ಟುವುದು. ಇವೆಲ್ಲ ಮುಗಿದ ಮೇಲೆ ಸ್ನಾನ ಮಾಡಿ ತಂದೆ ತಾಯಿಯರೊಡನೆ ಗಂಟೆಗಟ್ಟಲೆ ಮೈ ಮುಖಕ್ಕೆಲ್ಲ ವಿಭೂತಿ ಧಾರಣೆ ಮಾಡಿಕೊಂಡು ಶಿವಪೂಜೆಯಲ್ಲಿ ಮಗ್ನನಾಗಿ ಬಿಡುತ್ತಿದ್ದ. ಧ್ಯಾನಕ್ಕೆ ಕುಳಿತ ತಂದೆತಾಯಿಯರನ್ನು ನೋಡಿ ತಾನೂ ಗಂಟೆಗಟ್ಟಲೆ ಧ್ಯಾನಕ್ಕೆ ಕುಳಿತರೆ ಸಾಕ್ಷಾತ್ ಕುಮಾರಸ್ವಾಮಿಯಂತೆ. ಬಾಲ ಸಿದ್ಧ ಶಿವಯೋಗಿಯಂತೆ ಕಾಣುವ ಶಿವಣ್ಣನನ್ನು ನೋಡುವುದೇ ಮನೆಮಂದಿಗೆಲ್ಲ ಒಂದು ಕೌತುಕದ ಸಂಗತಿಯಾಗಿ ಬಿಡುತ್ತಿತ್ತು. ಮಗನ ಭಕ್ತಿ ಮತ್ತು ಶ್ರದ್ಧೆಯಿಂದ ಕೂಡಿದ ಉತ್ಸಾಹಪೂರ್ಣ ಬಾಲ್ಯದ ನಡೆನುಡಿಗಳಿಗೆ ತಂದೆತಾಯಿಗಳು ಹಿರಿಹಿರಿ ಹಿಗ್ಗುವಷ್ಟು ಇನ್ನಾವ ಮನೆಯ ಐಶ್ವರ್ಯವನ್ನು ಕಂಡೂ ಹಿಗ್ಗುತ್ತಿರಲಿಲ್ಲ.

**ಅಪೂರ್ವ ಚೇತನ :**

ಗೌರೀಹಬ್ಬ, ಯುಗಾದಿಹಬ್ಬಗಳಲ್ಲೂ ಅಷ್ಟೆ. ಮನೆಗೆ ಬಂದವರೊಂದಿಗೆ ಸರಸಸಲ್ಲಾಪ ಅವರ ಊಟೋಪಚಾರದ ವಿಷಯದಲ್ಲಿ ತೋರಿಸುವ ಆದರಾಭಿಮಾನ. ನೇರವಾಗಿ ಅಂಬಿನಂತೆ ಹೊರಬರುತ್ತಿದ್ದ ಸ್ಪಷ್ಟವಾದ ಮಾತುಗಳು–ಬಂದವರನ್ನು ತೃಪ್ತಿಗೊಳಿಸುತ್ತಿದ್ದವು. ಈ ರೀತಿಯ ಶಿವಣ್ಣನ ಉತ್ಸಾಹಪೂರ್ಣ ಶ್ರದ್ಧಾಭಕ್ತಿವಿಶ್ವಾಸಪೂರ್ಣ ಚಟುವಟಿಕೆಗಳ ಕಾರಣದಿಂದ ಅವನು ಕಂಡವರ ಕಣ್ಮಣಿಯಾಗಿ ಮಾತಾಪಿತೃಗಳ ಶರಣಜನೋಚಿತ ಭಕ್ತಿಜೀವನಕ್ಕೊಲಿದು ಶಿವನಿತ್ತ ಪ್ರಸಾದಫಲದಂತೆ ದಿನೇ ದಿನೇ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿದ್ದ. ಆತನಲ್ಲಿ ಪ್ರತಿಭೆಯ ಬೀಜರೂಪವಾದ ನವನವೋನ್ಮೇಷಶಾಲಿನೀಬುದ್ಧಿಯನ್ನು ಆ ಬಾಲ್ಯದಲ್ಲೇ ಗುರುತಿಸಬಹುದಾಗಿತ್ತು. ತೇಜಶ್ಶಾಲಿಯಾಗಿ ಅವನು ಬೆಳೆಬೆಳೆದಂತೆಲ್ಲ ಬಾಲೋಚಿತ ತುಂಟತನವೂ ವೆಗ್ಗಳವಾಗಿಯೇ ಬೆಳೆದಿತ್ತು. ಮಗನ ತುಂಟತನ ತಾಯಿಯನ್ನು ಮಾತ್ರ ಎಂದೂ ಬೇಸರಗೊಳಿಸಲಿಲ್ಲ. ಆದರೆ ಆ ತುಂಟತನ ತಾಯಿಯ ಕಕ್ಷೆಗೆ ಬಂದೊಡನೆ ಎಲ್ಲಿಯೋ ಮಾಯವಾಗಿ ಬಿಡುತ್ತಿತ್ತು. ಇವನ ತುಂಟತನಕ್ಕೆ ತಂದೆಯವರು ಆಗಾಗ ಗದ್ದರಿಸುತ್ತಿದ್ದುದುಂಟು. ಆದುದರಿಂದ ತಂದೆಯವರನ್ನು ಕಂಡಾಗ ಸ್ವಲ್ಪ ಭಯಪಡುತ್ತಿದ್ದ ಶಿವಣ್ಣನಿಗೆ ತಾಯಿಯನ್ನು ಕಂಡರೆ ಎಳ್ಳಷ್ಟೂ ಭಯವಾಗುತ್ತಲೇ ಇರಲಿಲ್ಲ. ತಾಯಿ ತನ್ನ ಮಗನ ಸಮಸ್ತ ಕ್ರಿಯಾಮುಖವನ್ನು ಸೂಕ್ಷ್ಮವಾಗಿ ಗಮನಿಸಿ, ಇವನು ಯಾವುದೊ ಮಹಾಕಾರಣಕ್ಕಾಗಿ ಹುಟ್ಟಿದ ಅಪೂರ್ವ ಚೇತನವೆಂದು ತಿಳಿದಿದ್ದಳು. ಆದುದರಿಂದ ಮಗನಲ್ಲಿ ತೋರುವ ಮಮತೆ ವಾತ್ಸಲ್ಯಗಳೂ ಭಕ್ತಿಯಾಗಿಯೇ ತೋರಿಬರುತ್ತಿತ್ತೆಂದರೆ ತಪ್ಪಲ್ಲ. ಶಿವಣ್ಣನವರ ಶೈಶವದ ಒಂದೊಂದು ನಡೆನುಡಿಯೂ ಮಾರ್ಮಿಕವಾಗಿದ್ದುವೆಂದರೆ ತಪ್ಪಲ್ಲ. ಸಣ್ಣ ಮಕ್ಕಳ ಬುದ್ಧಿ ಅವರ ಪ್ರಾಣಶಕ್ತಿಯ ವೃದ್ಧಿ. ಬಾಳಿನ ಆದಿಪರ್ವದಲ್ಲಿ ಅನೇಕ ಸುಸಂಬದ್ಧ ಸನ್ನಿವೇಶದಿಂದ ಭಾವಕೋಶಸಂಗ್ರಹೀತಸಂಸ್ಕಾರಗಳು ಅವನವನ ಜೀವನವನ್ನು ರೂಪಿಸುವ ಶ್ರೇಷ್ಠ ಸಲಕರಣೆಗಳಾಗುತ್ತವೆ. ಶಿವಣ್ಣನವರ ಭಾವ ಸೃಷ್ಟಿರಹಸ್ಯದ ಅನೇಕ ತತ್ತ್ವಾನ್ವೇಷಣೆಯಲ್ಲಿ ಮಗ್ನವಾಗಿರುತ್ತಿದ್ದುದನ್ನು ಬಾಲ್ಯದಲ್ಲಿಯೇ ಗುರುತಿಸಬಹುದಾಗಿತ್ತು. ಅಡವಿಯಲ್ಲಿ ಗಿಡಗಂಟಿಗಳು, ಅವುಗಳ ಹೂ ಹಣ್ಣು ಕಾಯಿಗಳತ್ತ. ಹರಿಯುವ ಹೊಳೆಹಳ್ಳಗಳತ್ತ. ತೀವ್ರ ಗಮನ ಹರಿಸಿ ಅವುಗಳ ವಿಶ್ಲೇಷಣೆಯಲ್ಲಿ ಓರ್ವನೇ ಏನೇನೋ ಯೋಚನೆ ಮಾಡುತ್ತಾ ಕುಳ್ಳಿರುತ್ತಿದ್ದುದನ್ನು ಗಮನಿಸಿದ್ದವರು ಅವರ ಅಣ್ಣಂದಿರಾದ ಕೆಂಪುನಂಜಪ್ಪನವರು.

**ವಿದ್ಯಾಭ್ಯಾಸ ಜೀವನ :**

ತಂದೆತಾಯಿಗಳ,ಅಣ್ಣಂದಿರ,ಅಕ್ಕಂದಿರ ಅತ್ಯಂತ ಕಕ್ಕುಲತೆಯಲ್ಲಿ ಬೆಳೆಯುತ್ತಿರುವ ಶಿವಣ್ಣನನ್ನು ಅವರೆಲ್ಲ ಚಲುವನ್ನೇ ಸಲಹುವಂತೆ, ಬೆಳಗನ್ನೇ ಬೆಳಸುವಂತೆ, ಭಕ್ತಿಯನ್ನೇ ಒಪ್ಪಿಡುವಂತೆ ಮುಪ್ಪುರಿಗೊಂಡ ವಾತ್ಸಲ್ಯಭಾವದಿಂದ ಬೆಳೆಸುತ್ತಿದ್ದರು. ಇಷ್ಟೇ ಅಲ್ಲ, ಸಮಗ್ರ ವೀರಾಪುರವೇ ಶಿವಣ್ಣನ ಬಗೆಗೆ ಅತ್ಯಂತ ವಾತ್ಸಲ್ಯ ತೋರಿಸುತ್ತಿತ್ತು. ಇವರ ಬಾಲೋಚಿತ ತುಂಟತನ, ಧೈರ್ಯ, ಸ್ಥೈರ್ಯ, ಭಕ್ತಿ, ಮಾತುಕತೆ ಎಲ್ಲವೂ ಊರ ಜನರ ಮನೆಮಾತಾಗಿತ್ತು. ಹೀಗೆ ಕಂಡವರ ಕಣ್ಮಣಿಯಾಗಿ ಬೆಳೆಯುತ್ತಿದ್ದ ಶಿವಣ್ಣನ ವಿದ್ಯಾಭ್ಯಾಸ ವಿಷಯದಲ್ಲಿ ತಂದೆಯವರಿಗೆ ಬಹಳ ಚಿಂತೆಯಾಯಿತು. ಕಾರಣ: ಊರಲ್ಲಿ ಸರಿಯಾದ ಶಾಲೆಯಿರದಿರುವುದು. ಅನಿವಾರ್ಯವಾಗಿ ಊರಿನ ಕೂಲಿಮಠಕ್ಕೆ ೪ನೆಯ ವರ್ಷಕ್ಕೆ ಸೇರಿಸಿದರು. ಆ ಕಾಲದಲ್ಲಿ ಶಿವಣ್ಣ ಬಹಳಷ್ಟು ಸಮಯವನ್ನು ತಾಯಿಯ ಪರಿಸರದಲ್ಲಿಯೇ ಕಳೆಯುತ್ತಿದ್ದ. ಶಾಲೆಯಲ್ಲಿ ಉಪಾಧ್ಯಾಯರ ಬಳಿ ನಿರ್ಬಂಧದಿಂದ ಕುಳಿತುಕೊಂಡಿದ್ದರೂ ತಾಯಿಯ ನೆನಪಾದೊಡನೆ ಯಾರನ್ನೂ ಲೆಕ್ಕಿಸದೆ ಓಡುತ್ತೋಡುತ್ತಾ ತಾಯಿಯ ಹತ್ತಿರಕ್ಕೆ ಬಂದುಬಿಡುತ್ತಿದ್ದ. ತಾಯಿಯ ಸ್ತನ್ಯಪಾನ ಮುಗಿದೊಡನೆ ನಿರ್ಭಯವಾಗಿ ಶಾಲೆಗೆ ಹೋಗುತ್ತಿದ್ದ. ಏನೇ ಇತರ ನಿರ್ಬಂಧವಿದ್ದರೂ ತಾಯಿಯ ಬಳಿಗೆ ಹೋಗುವ ಬಯಕೆಯುಂಟಾದರೆ ಆ ನಿರ್ಬಂಧಗಳು ಶಿವಣ್ಣನಿಗೆ ನಿರ್ಬಂಧಗಳೇ ಅಲ್ಲ; ಆ ವಯಸ್ಸಿನಲ್ಲಿ ಆಗಲೂಬಾರದು.

ಎಂಟು ವರ್ಷಗಳವರೆಗೆ ವೀರಾಪುರ ಮತ್ತು ಪಕ್ಕದ ಹಳ್ಳಿಯಾದ ಪಾಲನಹಳ್ಳಿಗಳಲ್ಲಿ ಹೇಗೆಹೇಗೋ ಪ್ರಾಥಮಿಕ ಶಿಕ್ಷಣವನ್ನು ಶಿವಣ್ಣ ಮುಗಿಸಿದನು. ಇವರ ಜೊತೆಗೆ ಅಣ್ಣ ಲಿಂಗಪ್ಪ ಎಂಬುವರೂ ಓದುತ್ತಿದ್ದರು. ಎಂಟು ವರ್ಷವಾಗಿದ್ದರೂ ಶಿವಣ್ಣ ದೈಹಿಕವಾಗಿ ಹತ್ತು ವರ್ಷದವರ ಅಂಗಶಕ್ತಿಯನ್ನು ಪಡೆದಿದ್ದನಾದ್ದರಿಂದ ಇವನ ಪಾದರಸದಂತಹ ಚಟುವಟಿಕೆ.



ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಜನ್ಮವಿತ್ತ ವೀರಾಪುರ. ಈ ಮುಂದೆ ಕಾಣುವ ಕೆರೆಯಲ್ಲಿ ಶ್ರೀಗಳವರು ಬಾಲ್ಯದಲ್ಲಿ ಮನದಣೀ ಈಸಾಡುತ್ತಿದ್ದರು



ಈ ದೊಡ್ಡ ತೆಂಗಿನ ಮರಕ್ಕೆ ಶ್ರೀಗಳವರೇ ಬಾಲ್ಯದಲ್ಲಿ ನೀರೆರೆದು ಬೆಳೆಸಿದರು. ಹಿಂಭಾಗದಲ್ಲಿ ಶಿವಗಂಗೆಯ ಬೆಟ್ಟ ಕಾಣುತ್ತವೆ.



ವೀರಾಪುರದ ಸಮೀಪದ ನೋಟ



ಶ್ರೀಗಳವರಿಗೆ ಜನ್ಮವಿತ್ತ ಮನೆಯಿದ್ದ ಸ್ಥಳ
ಪೂರ್ವದ ಹಳೆಯ ಮನೆಯ ಸ್ಥಾನದಲ್ಲೀಗ ಬೇರೆಬೇರೆ ಮನೆಗಳು ಹುಟ್ಟಿವೆ.



ಶ್ರೀಗಳವರ ಬಾಲ್ಯಜೀವನದ ಅನೇಕ ಘಟನೆಗಳನ್ನು ವಿವರಿಸಿದ ಅವರ ಪೂರ್ವಾಶ್ರಮದ ಸೋದರಿ ಗೌರಮ್ಮ.



ಬಾಲ್ಯದಲ್ಲಿ ಶ್ರೀಗಳವರು ವಿದ್ಯಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿ ಅವರು ವಾಸಮಾಡುತ್ತಿದ್ದ ಊರಹೊರಗಿನ ಅವರ ಪೂರ್ವಾಶ್ರಮದ ದನಕರುಗಳ ಮನೆ.



ದನದ ಮನೆಯಿಂದ ಉತ್ತರಕ್ಕೆ ಅನತಿ ದೂರದಲ್ಲಿ ಕಾಣುವ ಶಿವಗಂಗಾ ಬೆಟ್ಟದ ದೃಶ್ಯ.



ಶ್ರೀಗಳವರು ಬಾಲ್ಯದಲ್ಲಿ ಗಿಡಮರ ಹತ್ತಿ ಆಟ ಆಡುತ್ತಿದ್ದ ಅವರ ಪೂರ್ವಾಶ್ರಮದ ಹಿಪ್ಪೇಮರದ ತೋಪು.



ಕೆರೆಯ ಪಕ್ಕದಲ್ಲಿನ ಬಹು ದೊಡ್ಡ ಹಿಪ್ಪೇಮರದ ಬುಡ. ಈ ಮರವನ್ನು ಹತ್ತುವುದೂ ಆಟವಾಡು ವುದೂ ಬಾಲ್ಯದಲ್ಲಿ ಶ್ರೀಗಳವರಿಗೆ ಬಹಳ ಇಷ್ಟ. ಈ ಮರ ಬಿದ್ದು ಕೊನೆಗೆ ಸಿದ್ಧಗಂಗೆಯ ದಾಸೋಹಕ್ಕೆ ಸೌದೆಯಾಗಿ ಉರಿದು ಸಾರ್ಥಕ್ಯಪಡೆಯಿತು.



ಶ್ರೀಗಳವರು ಬಾಲ್ಯದಲ್ಲಿ ಬಾಲೋಚಿತವಾದ ಅನೇಕ ಚೇಷ್ಟೆಗಳನ್ನು ಮಾಡಿ ಜನವನ್ನು ನಗಿಸುತ್ತ
ತಾವೂ ನಗುತ್ತ ಯಾರ ಕೈಗೂ ಸಿಗದಂತೆ ಹತ್ತಿ ಕುಳ್ಳಿರುತ್ತಿದ್ದ ಆಲದ ಮರ.



ವೀರಾಪುರದ ಪಕ್ಕದ ಗೊಲ್ಲರ ಹಟ್ಟಿಯ ಹತ್ತಿರವಿರುವ ಈ ಹಲಸಿನಮರದ ಹಣ್ಣೆಂದರೆ
ಶ್ರೀಗಳವರಿಗೆ ಬಾಲ್ಯದಲ್ಲಿ ಬಲು ಇಷ್ಟ.



ಶ್ರೀಗಳವರು ಬಾಲ್ಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ವೀರಾಪುರದ ಕೂಲಿಮಠ.



ಶ್ರೀಗಳವರು ಬಾಲ್ಯದಲ್ಲಿ ವಿದ್ಯಾಭ್ಯಾಸ ಮಾಡಿದ ನಾಗವಲ್ಲಿಯ
ಎ. ವಿ. ಸ್ಕೂಲ್



ಶ್ರೀಗಳವರು ವಿದ್ಯಾಭ್ಯಾಸ ಮಾಡಿದ
ಬೆಂಗಳೂರು ಸೆಂಟ್ರಲ್ ಕಾಲೇಜಿನ ಒಂದು ಭಾಗ



ನಾಗವಲ್ಲಿಯಲ್ಲಿದ್ದಾಗ ಶ್ರೀಗಳು ವಾಸಿಸುತ್ತಿದ್ದ
←ಅವರ ಪೂರ್ವಾಶ್ರಮದ ಸೋರಿಯ ಮನೆ.




ಶ್ರೀಗಳವರು ಹೈಸ್ಕೂಲ್ ಮತ್ತು ಎಂಟ್ರೆನ್ಸ್ ವಿದ್ಯಾಭ್ಯಾಸ ಮಾಡಿದ ತುಮಕೂರಿನ ಹೈಸ್ಕೂಲ್ ಕಟ್ಟಡ.



ಶ್ರೀಗಳವರು ೧೨ ವರ್ಷ ಬಾಲಕರಿದ್ದಾಗ



ವಿದ್ಯಾಭ್ಯಾಸ ಮಾಡುತ್ತಿದ್ದಾಗ ಸಹಾಧ್ಯಾಯಿ ಶ್ರೀಗಳವರ
ಪೂರ್ವಾಶ್ರಮದ ಅಣ್ಣ, ಲಿಂಗಪ್ಪ



ನಾಗವಲ್ಲಿ ಎ. ವಿ. ಸ್ಕೂಲಿನ ಉಪಾಧ್ಯಾಯರು ಮತ್ತು ಸಹಪಾಠಿಗಳ ಮಧ್ಯದಲ್ಲಿ ಶ್ರೀಗಳವರು.



ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಶ್ರೀಗಳು ಓದುವಾಗ ಅಶನವಸತಿ ಸೌಕರ್ಯ ನೀಡಿದ ಗುಬ್ಬಿ ತೋಟದಪ್ಪ ಛತ್ರದ ಹೊರನೋಟ.



ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿನಿಲಯದ ಈ ಕಟ್ಟಡದ ಮೇಲ್ಭಾಗದ ಒಂದು ಕೊಠಡಿಯಲ್ಲಿ ವಾಸಿಸಿ ಶ್ರೀಗಳು ವಿದ್ಯಾಭ್ಯಾಸ ಮಾಡುತ್ತಿದ್ದರು. (೧೯೨೭-೩೦)



ಗುರುಕರುಣ



ಪಂಚಕಲ್ಯಾಣಿ ಕುದುರೆಯನ್ನೇರಿದ
ಶ್ರೀ ಶಿವಕುಮಾರ ಸ್ವಾಮಿಗಳು (೧೯೩೫)

ಉದ್ದಾನ ಸ್ವಾಮಿಗಳವರ ಕೃಪಾಶೀರ್ವಾದ ಪಡೆದು
'ಶ್ರೀ ಶಿವಕುಮಾರ ಸ್ವಾಮಿಗಳು' ಎಂಬ ನೂತನಾಭಿಧಾನಹೊಂದಿದ
ಶಿವಣ್ಣನವರು (೧೯೩೦)

ತುಂಟತನಗಳು ಅಸಾಧ್ಯವಾಗಿ ಬೆಳೆದುಹೋದವು. ಅವೆಲ್ಲ ಹಾಸ್ಯದಲ್ಲಿ ಪರ್ಯವಸಾನಗೊಳ್ಳುತ್ತಿದ್ದವು. ತಾನೂ ನಕ್ಕು, ಉಳಿದವರನ್ನೂ ನಗಿಸಿ ಆನಂದಗೊಳ್ಳುತ್ತಿದ್ದುದು ಈ ತುಂಟತನದ ಹಿನ್ನೆಲೆಯ ಪ್ರಧಾನ ಲಕ್ಷಣವಾಗಿತ್ತು.

ಒಮ್ಮೊಮ್ಮೆ ಊರ ಹೆಣ್ಣುಮಕ್ಕಳು ಊರಿನಿಂದ ಸ್ವಲ್ಪ ದೂರದಲ್ಲಿರುವ ಸಿಹಿನೀರಿನ ಬಾವಿಯಿಂದ ನೀರು ತರುತ್ತಿದ್ದರೆ, ಹಿಂದಿನಿಂದ ಬಂದು ಅವರ ಕೊಡಗಳಲ್ಲಿ ಕಲ್ಲು ಹರಳುಗಳನ್ನು ಹಾಕಿ ನಗುತ್ತ ಓಡಿ ಹೋಗಿ ಒಂದು ಆಲದ ಮರವನ್ನೇರಿ ಕುಳಿತ ನಗುತ್ತಿದ್ದ. ಆ ಹೆಣ್ಣುಮಕ್ಕಳು ಕೊಡದ ನೀರನ್ನು ಅಲ್ಲಿಯೇ ನೆಲಕ್ಕೆ ಸುರಿಯುವುದನ್ನು ನೋಡುವುದೂ ಅವನಿಗೊಂದು ತಮಾಷೆಯ ನೋಟವಾಗಿರುತ್ತಿತ್ತು. ಸಾಮಾನ್ಯವಾಗಿ ಅವರೆಲ್ಲ ಪಟೇಲರ ಬಂಧುಗಳು, ನೆಂಟರಿಷ್ಟರೇ ಆಗಿರುತ್ತಿದ್ದ ಕಾರಣ ಈ ಹಾಸ್ಯವನ್ನು ಯಾರೂ ಅಲ್ಲಗಳೆಯುತ್ತಿರಲಿಲ್ಲ. ಅವರಿಗೆಲ್ಲ ಇವನ ಉತ್ಸಾಹ ಅಚ್ಚುಮೆಚ್ಚಿನದಾಗಿತ್ತು. ಆದರೆ ಅತಿರೇಕವನ್ನೆಂದೂ ಮಾಡುತ್ತಿರಲಿಲ್ಲ. ಪುನಃ ಅವರಲ್ಲಿ ಅಕ್ಕ, ಅಮ್ಮ, ಅತ್ತೆ ಮೊದಲಾದ ಮಾತುಗಳನ್ನಾಡಿ ಅವರ ಶ್ರಮ ಪರಿಹಾರ ಮಾಡಿಬಿಡುತ್ತಿದ್ದುದೊಂದು ವೈಶಿಷ್ಟ್ಯ. ಅತ್ಯಂತ ಚೇಷ್ಟೆ, ತುಂಟತನ, ಕೋಪ ಇವು ಬಾಲ್ಯದಲ್ಲಿ ಮಕ್ಕಳಲ್ಲಿರುವುದನ್ನು ಮನಶ್ಶಾಸ್ತ್ರ ಅಲ್ಲಗಳೆಯುವುದಿಲ್ಲ. ಉದಾತ್ತೀಕರಣದಿಂದ ಈ ಶಕ್ತಿ ಉತ್ಸಾಹಗಳೆಲ್ಲ ಕ್ರಿಯೆಗಳಾದರೆ ಅದ್ಭುತ ಕ್ರಿಯಾಶಕ್ತಿ ಸಂಪನ್ನತೆ ವ್ಯಕ್ತಿಯಲ್ಲಿ ಅಳವಡುತ್ತದೆ ಎಂದೇ ಅವರ ವಾದ. ಶಿವಣ್ಣನವರ ಈ ಬಾಲೋಚಿತ ಶಕ್ತಿಗಳೆಲ್ಲ ಬರುಬರುತ್ತ ಕ್ರಿಯೆಗಳಾಗುತ್ತ ನಡೆದು ಅವರ ಕ್ರಿಯೆಗಳಿಗೊಂದು ಪ್ರಬಲಶಕ್ತಿ ಬಂದುದನ್ನಿಲ್ಲಿ ಸೂಚ್ಯವಾಗಿ ನಾವು ತಿಳಿಯಬಹುದಾಗಿದೆ.

**ಆಟ–ಪಾಠ–ಬಾಲಕೂಟ–ನೋಟ :**

ಅವರ ಬಾಲ್ಯದ ಚಟುವಟಿಕೆಗಳು ಮುಖ್ಯವಾಗಿ ಕುದುರೆಯನ್ನೇರುವುದು, ಹಣ್ಣಿನ ಮರಗಳ ಗುಂಪನ್ನು ಹುಡುಕಿಕೊಂಡು ಸಹಪಾಠಿಗಳೊಂದಿಗೆ ಅಡವಿ ಅಡವಿ ತಿರುಗುವುದು. ಕೆರೆಯಲ್ಲಿ ಈಜಾಡುವುದು, ಮರಗಳನ್ನೇರುವುದು, ಮರಕೋತಿಯ ಆಟವನ್ನು ಆಡುವುದು, ಮರುಳುಗುಡ್ಡೆಯ ಆಟವಾಡುವುದು ಇವೇಮೊದಲಾದವುಗಳಲ್ಲಿ ಪರ್ಯವಸಾನವಾಗುತ್ತಿದ್ದವು. ಶಾಲೆಗೆ ರಜೆ ಬಂದರೆ ಇವೇ ಇವನ ಪಾದರಸದಂತಹ ಚಟುವಟಿಕೆಗಳಾಗಿರುತ್ತಿದ್ದವು.

ತಂದೆಯವರು ಒಂದು ಒಳ್ಳೆಯ ದೊಡ್ಡ ಕುದುರೆಯನ್ನು ಮನೆಯಲ್ಲಿ ತಮಗಾಗಿ ಸಾಕಿಕೊಂಡಿದ್ದರು. ಅಲ್ಲದೆ ಇವರು ಹಿರಿಯ ಅಣ್ಣ ಅಪ್ಪಣ್ಣಪ್ಪ ಕುದುರೆಯ ಏರಾಟದಲ್ಲಿ ಸುತ್ತಮುತ್ತೆಲ್ಲ ಪ್ರಸಿದ್ಧರಾದವರು. ಇವರು ಕುದುರೆ ಸವಾರಿ ಮಾಡುವುದನ್ನು ನೋಡಿದ್ದ ಶಿವಣ್ಣನಿಗೆ ತಾನೂ ಅಂತೆಯೇ ಆಗಬೇಕೆಂಬಾಸೆ. ತಂದೆ ಸಾಕಿದ ಕುದುರೆಯನ್ನು ಅವಕಾಶ ಸಿಕ್ಕಾಗಲೆಲ್ಲ ಹತ್ತಿ 'ಓಡಿಸುತ್ತಿದ್ದರೆ ಧೂಳೊಂದೇ ಕಾಣುತ್ತಿತ್ತೆಂದು' ಅಕ್ಕ ಗೌರಮ್ಮ ಇನ್ನೂ ಜ್ಞಾಪಿಸಿಕೊಂಡು ನಗುತ್ತ ಹೇಳುತ್ತಾಳೆ. ಆದರೆ ಕುದುರೆಯನ್ನು ಜೀನು ಸಮೇತವಾಗಿ ಹತ್ತುತ್ತಿದ್ದನೆಂದಲ್ಲ. ಜೀನು ಬಿಗಿಯುವುದಕ್ಕೂ ಇವರಿಗೆ ಅವಕಾಶವಿರುತ್ತಿರಲಿಲ್ಲ. ತಂದೆಯವರು ಇಲ್ಲದ ಸಮಯದಲ್ಲಿ ಕುದುರೆಯನ್ನು ಬಿಚ್ಚಿಕೊಂಡು ಹೋಗಿ, ಬತ್ತಲ ಕುದುರೆಯನ್ನೇ ಏರಿ ಹಾರಿಸುವ ಇವರ ಬಾಲ್ಯದ ಶಕ್ತಿಸಾಮರ್ಥ್ಯಗಳು ನೋಡುವವರನ್ನು ಆಶ್ಚರ್ಯಚಕಿತಗೊಳಿಸುತ್ತಿದ್ದವು. ಈ ಚಟುವಟಿಕೆ ಸಾಕಾದ ಮೇಲೆ ಅಡವಿಗೆ ಹಣ್ಣು ತಿನ್ನಲು ಗೆಳೆಯರ ಗುಂಪು ಕಟ್ಟಿಕೊಂಡು ಹೋಗುತ್ತಿದ್ದರು. ವೀರಾಪುರದ ಸುತ್ತಮುತ್ತ ಕುರುಚಲ ಗಿಡದ ದೊಡ್ಡ ಕಾಡೇ ಬೆಳೆದು ನಿಂತಿತ್ತು. ಆ ಕಾಡಿನಲ್ಲಿ ನೇರಳೆ, ದೇವದಾರು, ಗೇರು, ಅತ್ತಿ, ಮಾವು, ಹಲಸಿನಮರಗಳೂ ಪರಂಗಿ, ಕವಳಿ, ಕಾರೆ, ಎಲಚಿಯ ಪೊದೆಗಳೂ ವಿಶೇಷವಾಗಿ ಬೆಳೆದಿರುತ್ತಿದ್ದವು. ಆಯಾಯ ಸುಗ್ಗಿಯಲ್ಲಿ ಬಿಡುವ ಆ ಹಣ್ಣುಗಳನ್ನು ಚೆನ್ನಾಗಿ ತಿಂದು ಬರುವುದು ಶಿವಣ್ಣನ ವಿಶೇಷ ಆಸಕ್ತಿಗಳಲ್ಲಿ ಒಂದಾಗಿತ್ತು. ನೇರಳೆ ಹಣ್ಣಿನ ಸುಗ್ಗಿಯಲ್ಲಿ ನೇರಳೆ ಮರವನ್ನು ಶಿವಣ್ಣನೇ ಹತ್ತಿ ಬೇಕುಬೇಕಾದ ಪಕ್ವಫಲಗಳನ್ನು ಗಿಡದಲ್ಲೇ ಕುಳಿತು ತಿಂದು ಕೆಳಗಿನವರಿಗೆ ಕೊಂಬೆಗಳನ್ನು ಹಿಡಿದು ಅಲ್ಲಾಡಿಸಿ ಉದುರಿಸುತ್ತಿದ್ದ. ಅವರೆಲ್ಲ ಅವನ್ನು ಗುಡ್ಡೆಮಾಡಿ ಕಟ್ಟಿಕೊಂಡು ದಾರಿಯುದ್ದಕ್ಕೂ ತಿನ್ನುತ್ತ ಬರುತ್ತಿದ್ದರು. ಪಾಲನಹಳ್ಳಿಯಲ್ಲಿರುವ ಅಂಗಡಿಯವರ ಹಲಸಿನ ಮರ, ವೀರಾಪುರದ ಪಕ್ಕದ ಗೊಲ್ಲರಪಾಳ್ಯದ ಹಲಸಿನ ಮರಗಳ ಮೇಲೆ ಇವರ ಕಣ್ಣು ಬಹಳ. ಈ ಮರಗಳಲ್ಲಿ ಹಣ್ಣುಬಿಟ್ಟಾಗ ಮೊದಲ ಹಣ್ಣು ಶಿವಣ್ಣನ ಪಾಲು. ಹಣ್ಣು ಕಿತ್ತು ಶಿವಣ್ಣ ಗೆಳೆಯರೊಡನೆ ಬಿಚ್ಚಿ ತಿನ್ನುತ್ತಿದ್ದರೆ ಯಾರ ಆಕ್ಷೇಪವೂ ಇರುತ್ತಿರಲಿಲ್ಲ. ಅಥವಾ ಅವರೇ ಹರಿದು ಶಿವಣ್ಣನಿಗೆ ತಿಂದುಕೋ ಎಂದು ಕೊಡುತ್ತಿದ್ದುದೂ ಉಂಟು. ಒಮ್ಮೊಮ್ಮೆ ದೋರೆಕಾಯಿ ಕಿತ್ತು ಯಾರಿಗೂ ಗೊತ್ತಾಗದಂತೆ ಹೊಲಕ್ಕೆ ಹಾಕಿದ ಗೊಬ್ಬರದ ಗುಂಪೆಯಲ್ಲಿ ನಾಲ್ಕಾರು ದಿನ ಮುಚ್ಚಿಟ್ಟು ಹಣ್ಣಾದ ಮೇಲೆ ಗೆಳೆಯರೊಡನೆ ಕೂಡಿ ತಿನ್ನುವುದೂ ಒಂದು ಬಗೆಯಾಗಿರುತ್ತಿತ್ತು. ಶಿವಣ್ಣನವರ ಈ ಕಾರ್ಯದಲ್ಲಿ ಅತ್ಯಂತ ಆಪ್ತಮಿತ್ರನೆಂದರೆ ವೆಂಕಟರಮಣಯ್ಯ ಎಂಬುವನು[8]. ಇವನದೂ ಶಿವಣ್ಣನದೂ ಗುಟ್ಟೊಂದೇ. ಗೊಲ್ಲರ ಬಾಲಯ್ಯ, ಆದಿಕರ್ನಾಟಕದವರ ರುದ್ರಯ್ಯ ಇವರು ಸದಾ ಹಿಂಬಾಲಕರಾಗಿರುತ್ತಿದ್ದ ಇನ್ನಿತರ ಸ್ನೇಹಿತರು. ಅರಣ್ಯದಲ್ಲಿ

8. ಬಾಲ್ಯಸ್ನೇಹಿತನಾದ ವೆಂಕಟರಮಣಯ್ಯನನ್ನು ಕೊನೆಯುವರೆಗೂ ಪ್ರೀತಿಸುತ್ತಿದ್ದರು. ಆತನಿಗೆ ಎಷ್ಟೋ ಸಲ ಅಂಗಿ ಪಂಚೆಗಳನ್ನು ಕೊಡಿಸಿದುದೂ ಉಂಟು. ಇದಲ್ಲದೆ ಗೊಲ್ಲರ ಬಾಲಯ್ಯ ಆದಿಕರ್ನಾಟಕದವರ ರುದ್ರಯ್ಯ ಎಂಬುವವರನ್ನೂ ಕೊನೆಯುವರೆಗೆ ವಿಶ್ವಾಸವಾಗಿ ಕಂಡು ಅವರಿಗೆ ಉಡುಗೊರೆಗಳನ್ನು ಕೊಟ್ಟುಕಳುಹಿಸುತ್ತಿದ್ದುದೂ ಉಂಟು.

ಪಣ್ಣಿಗೆ ತಿರುಗುವಾಗ ಈ ನಾಲ್ಕು ಜನರದು ಒಂದು ಗುಂಪು. ಗೇರು ಮತ್ತು ಕಾರೆಯ ದೋರೆಕಾಯಿಯನ್ನು ಕಿತ್ತು ಅವನ್ನು ಅಪಪಿಯ ಬೆರಣಿಯ ಕಿಚ್ಚಿಗೆ ಹಾಕಿ ಸುಟ್ಟು ಹದಮಾಡಿಕೊಂಡು ತಿನ್ನುವುದು, ಗೇರುಹಣ್ಣು ಹೆಚ್ಚಾಗಿ ಸಿಕ್ಕಾಗ ಹುಲ್ಲಿ ಸರಪಿಯಲ್ಲಿ ಸರಗಳನ್ನಾಗಿ ಮಾಡಿ ಒಣಗಿಸಿಬಿಟ್ಟು ಆಮೇಲೆ ಮನೆಯವರಿಗೆ ಸ್ನೇಹಿತರಿಗೆ ಹಂಚಿ ತಿನ್ನುವುದೂ ಶಿವಣ್ಣನ ಒಂದು ಉತ್ಸಾಹ ವಿಶಿಷ್ಟ ಕಾರ್ಯವಾಗಿತ್ತು. ಶಿವಣ್ಣ ಒಬ್ಬನೇ ಎಂದೆಂದೂ ಏನನ್ನೂ ತಿನ್ನುತ್ತಿರಲಿಲ್ಲ. ಅನೇಕರಿಗೆ ಹಂಚಿ ತಿನ್ನುವಿಕೆಯಲ್ಲಿ ಅವನು ಕಾಣುವ ಆನಂದವನ್ನು ಬೇರಾವುದರಲ್ಲೂ ಕಾಣುತ್ತಿರಲಿಲ್ಲ. ಮನೆಯಲ್ಲಿಯೂ ಅಷ್ಟೆ. ಮನೆಗೆ ಬಂದ ಅತಿಥಿಗಳಿಗೆ ಉಪಚಾರಿಸುವಿಕೆಯಲ್ಲಿ ಅತ್ಯಂತ ಆಸಕ್ತಿ ತೋರುತ್ತಿದ್ದನು. ಅವರಿಗೆ ಮಾಡಿ ದಣಿಯನು, ನೀಡಿ ದಣಿಯನು: ಅವರು ತೃಪ್ತಿಯಾಗಿ ಊಟ ಮಾಡುವುದನ್ನು ಕಂಡು ನಲಿಯುವುದು ಇವನ ಸ್ವಭಾವಕ್ಕಂಟಿಬಂದ ಗುಣ. ಬಾಲ್ಯದಲ್ಲಿಯೇ ದಾಸೋಹ ಸದ್ಭಾವ ಶಿವಣ್ಣ ನಲ್ಲಿ ಅಪರಿಮಿತ ರೀತಿಯಲ್ಲಿ ಉದ್ಭವವಾಗಿತ್ತು. ಅಂತೆಯೇ ಜನ ಇವನನ್ನು ಕಂಡು ಇವನು ಮುಂದೆ ಮಹಾದಾಸಿಯಾಗುವನು ಎಂಬ ಉದ್ಗಾರವನ್ನು ತೆಗೆಯದೆ ಹೋಗುತ್ತಿರಲಿಲ್ಲ. 'ಹೊನ್ನೇಗೌಡರ ಮನೆಗೆ ಈ ಮಗ ಅನ್ನವನ್ನೇ ಬೆನ್ನಿಗೆ ಕಟ್ಟಿಕೊಂಡು ಹುಟ್ಟಿಬಂದಿದ್ದಾ'ನೆಂದವರು ಎಷ್ಟೋ ಜನ. ಅದು ನಿಜವೂ ಆಗಿತ್ತು.

ಅವರೆಕಾಯಿ ಸುಗ್ಗಿ ಬಂದರೆ ಅವರ ಉತ್ಸಾಹಕ್ಕೆ ಪಾರವೇ ಇರಲಿಲ್ಲ. ತಮ್ಮ ನೂರಾರು ಎಕರೆ ಭೂಮಿಯಲ್ಲಿ ಎಲ್ಲೆಲ್ಲಿ ಬಲಿತ ಅವರೆಕಾಯಿಗಳಿವೆಯೋ ಅವನ್ನೆಲ್ಲ ತನ್ನ ಸ್ನೇಹಿತರ ಮೂಲಕ ಆರಿಸಿ ತರಿಸಿ. ಹೊಲದ ಬದುವಿನಲ್ಲಿ ಬೆರಣಿಯ (ಕಾಕುಳ್ಳು) ಕೆಂಡದಲ್ಲಿ ಸುಟ್ಟು ಹದಗೊಳಿಸಿ ತಿನ್ನುವುದಂತೂ ಪ್ರತಿವರ್ಷದ ಒಂದು ಹವ್ಯಾಸವಾಗಿತ್ತು. ಅವರೆಕಾಯಿ ಸುಗ್ಗಿ ಮುಗಿಯುವುದರೊಳಗೆ ನಾಲ್ಕಾರು ಸಲವಾದರೂ ಈ ಕಾರ್ಯವನ್ನು ಮಾಡಿ ಮುಗಿಸಿದರೇ ಆ ಸುಗ್ಗಿಯ ಉಪಯೋಗವನ್ನು ಚೆನ್ನಾಗಿ ಮಾಡಿಕೊಂಡಂತೆಂಬ ಭಾವನೆ ಶಿವಣ್ಣನಿಗೆ.

ಹಿತ್ತಿಲಲ್ಲಿ ಬಿಟ್ಟ ಕುಂಬಳದ ಹಣ್ಣಿನಲ್ಲಿ ದೊಡ್ಡದು ಯಾವುದೋ ಅವನ್ನು ಆರಿಸಿ ಹರಿದು ಹೊಲಕ್ಕೆ ಒಯ್ದು, ಅದಕ್ಕೆ ಚಂದ್ರಿಕೆ (ಉಂಡಿಗೆ) ಹಾಕಿ ಒಳಗಿನ ಬೀಜಗಳನ್ನೆಲ್ಲ ತೆಗೆದು ಅದರಲ್ಲಿ ಮನೆಯಲ್ಲಿ ತಾಯಿಯಿಂದ ಹಟ ಹಿಡಿದು ತೆಗೆದುಕೊಂಡು ಹೋದ ಬೆಲ್ಲ. ಏಲಕ್ಕಿ. ಶುಂಠಿ. ಒಣಕೊಬ್ಬರಿಯ ತುರಿಯನ್ನು ತುಂಬಿ. ಬೆರಣಿಯ ಕೆಂಡದಲ್ಲಿ ಅದನ್ನು ಸುಟ್ಟು ತಿನ್ನುವುದರಲ್ಲಂತೂ ಎಲ್ಲಿಲ್ಲದ ಉತ್ಸಾಹದ ಒಂದು ಮಹಾಪರ್ವವೇ ಆಗಿರುತ್ತಿತ್ತು. ಅದನ್ನು ಸುಟ್ಟಮೇಲೆ ಬಾಳೆ ಎಲೆ ಅಥವಾ ಮುತ್ತುಗದ ಎಲೆ ತರಿಸಿ ಹಾಸಿ ಹಣ್ಣನ್ನು ಬಿಚ್ಚಿ ಬೇರೆ ಬೇರೆ ಭಾಗಗಳನ್ನು ಮಾಡಿ, ತಾನೂ ತಿಂದು ಉಳಿದವರಿಗೆ ತಿನ್ನಿಸಿ ಆನಂದಗೊಳ್ಳುತ್ತಿದ್ದ ಶಿವಣ್ಣನ ಈ ಗಣಪರ್ವ ವರ್ಷವೊಂದಕ್ಕೆ ಎರಡು ಮೂರು ಸಲವಾದರೂ ನಡೆದರೇ ತೃಪ್ತಿ.

**ಆಲೆಮನೆಯಲ್ಲಿ ಶಿವಣ್ಣ :**

ವೀರಾಪುರದ ಊರ ಮುಂದೆಯೇ ಹೊನ್ನೇಗೌಡರ ಹೊಲಗದ್ದೆ ಹಿಪ್ಪೇಮರದ ತೋಪಿನ ಬೈಲು ಇತ್ತು. ಕಬ್ಬು ಹಾಕುವುದನ್ನು ಯಾವ ವರ್ಷವೂ ಹೊನ್ನೇಗೌಡರು ತಪ್ಪಿದ್ದೇ ಇಲ್ಲ. ಪ್ರತಿ ವರ್ಷವೂ ಆಲೆಮನೆ ಆಡಲೇ ಬೇಕು. ಆಲೆಮನೆಯಲ್ಲಿ ಊರವರು ಅಕ್ಕಪಕ್ಕದ ಹಳ್ಳಿಯವರು ಮನದಣಿಯೆ ಕಬ್ಬಿನಹಾಲು, ಬಿಸಿಬೆಲ್ಲ ತಿನ್ನಬೇಕು. ಆಲೆಮನೆ ಕಟ್ಟಿ ಜನತೆಯನ್ನು ತನ್ಮೂಲಕ ತೃಪ್ತಿಪಡಿಸುವುದು ಹೊನ್ನೇಗೌಡರ ಮನೆತನದ ಪ್ರತಿಷ್ಠೆಗಳಲ್ಲಿ ಒಂದು ಅಂಶವಾಗಿತ್ತು. ಅವರ ದಾಸೋಹಂಭಾವಕ್ಕೆ ಆಲೆಯಮನೆ ಪೂರಕವಾಗಿತ್ತು. ಆಲೆಮನೆ ಕಟ್ಟುವ ಕಾಲ ಯಾವಾಗ ಬರುವುದೋ ಎಂದು ಶಿವಣ್ಣ ಚಡಪಡಿಸುತ್ತಿದ್ದ. ಆ ಸಮಯ ಬಂದಾಗ ಅವನ ಉತ್ಸಾಹಕ್ಕೆ ಪಾರವೇ ಇರುತ್ತಿರಲಿಲ್ಲ. ಆಲೆಮನೆ ಕಟ್ಟುವುದು, ಒಲೆ ಹಾಕುವುದು, ಗಾಣಗಳನ್ನು ನಿಲ್ಲಿಸುವುದು, ಎಲ್ಲೆಲ್ಲೂ ಅವನ ಓಡಾಟವೇ ಓಡಾಟ. ಆಲೆಮನೆ ಕಟ್ಟಿ ಜನಕ್ಕೆಲ್ಲ ಹಾಲೊದಗಿಸುವುದು ಒಂದು ಪುಣ್ಯಕಾರ್ಯವೆಂದೇ ಶಿವಣ್ಣನ ಭಾವನೆ. ಜೊತೆಗೆ ತನ್ನ ಇಡೀ ಒಂದು ವರ್ಷದ ಹಾಲು ಬಿಸಿಬೆಲ್ಲ ತಿನ್ನುವ ಕುತೂಹಲದ ಪರಿಹಾರಕ್ಕೆ ಒಳ್ಳೆಯ ಅವಕಾಶವನ್ನು ತಂದೊದಗಿಸಿದಂತಾಗುತ್ತಿತ್ತು. ಆಲೆಮನೆಯಲ್ಲಿ ಒಂದು ಕಡೆಯಲ್ಲಿ ಸುಸಜ್ಜಿತವಾದ ಒಂದು ಒಳ್ಳೆಯ ಕೊಠಡಿಯು ಕಟ್ಟಲ್ಪಡುತ್ತಿತ್ತು. ಆ ಕೊಠಡಿಯಲ್ಲಿ ಆಲೆಮನೆ ಮುಗಿಯುವವರೆಗೆ ಶಿವಣ್ಣನ ವಸತಿ. ಕಬ್ಬು ಸವರುವುದರಿಂದ ಮೊದಲ್ಗೊಂಡು ಆಲೆಮನೆಯ ಎಲ್ಲ ವ್ಯವಹಾರಗಳಲ್ಲೂ ಶಿವಣ್ಣನ ಉತ್ಸಾಹಜನಕ ಚಟುವಟಿಕೆಗಳು ಕಂಡುಬರುತ್ತಿದ್ದವು. ಕೆರಕಲು ಬೆಲ್ಲ, ಕೆನೆಬೆಲ್ಲ (ಅಂಟುಬೆಲ್ಲ)ವನ್ನು ದಿನವೂ ತಿನ್ನಬೇಕು. ಬಂದವರಿಗೆಲ್ಲ ಕೊಡಬೇಕು. ತಟ್ಟೆಬೆಲ್ಲ ಮಾಡಲು ಮನೆಯಿಂದ ತಾಯಿಯಲ್ಲಿ ಕಾಡಿಬೇಡಿ ತಂದ ಕಡಲೆ, ಕೊಬರಿ, ಗಸಗಸೆ, ಕಡಲೆಕಾಯಿ ಬೀಜ, ಏಲಕ್ಕಿಪುಡಿಗಳ ಸಂಗ್ರಹ ಶಿವಣ್ಣನ ಉಗ್ರಾಣದಲ್ಲಿ ಸದಾ ತುಂಬಿರುತ್ತಿತ್ತು. ಬೆಲ್ಲ ಬಂದೊಡನೆ ತಟ್ಟೆಯಲ್ಲಿ ಬಿಸಿಬೆಲ್ಲವನ್ನು ತುಂಬಿ ತಂದು, ಅವರ ಮೇಲೆ ಹುರಿಗಡಲೆ. ಕಡಲೆಕಾಯಿಬೀಜ, ಒಣಕೊಬರಿತುರಿ, ಗಸಗಸೆ ಏಲಕ್ಕಿಪುಡಿಗಳನ್ನು ಹರಡಿ ತಟ್ಟಿ. ಅದು ಆರಿದ ಮೇಲೆ ಚಾಕುವಿನಿಂದ ಕೊರೆದು ಚಿಕ್ಕಚಿಕ್ಕ ಹಲಪೆಗಳನ್ನು ಮಾಡಿ ಜಾಗರೂಕತೆಯಿಂದ ಎತ್ತಿ ಪೇರಿಸಿಟ್ಟು. ಸ್ನೇಹಿತರೊಂದಿಗೆ ಸಂತೋಷದಿಂದ ಸೇವಿಸುವುದು ಶಿವಣ್ಣನ ಆನಂದದಾಯಕ ಕಾರ್ಯಗಳಲ್ಲಿ ಒಂದು. ಆಲೆಮನೆಗೆ ಬಂದವರಿಗೆಲ್ಲ ಒಂದೊಂದು ತುಂಡು ಕೊಟ್ಟು 'ಹೇಗಿದೆ'? ಎಂದು ಕೇಳಿ. ಅವರ ಸಂತೋಷದ ಶ್ಲಾಘನೆಯಿಂದ ಉತ್ಸಾಹಗೊಳ್ಳುವುದು. ಶಿವಣ್ಣನ ಆಲೆಮನೆ

ಜೀವನದಲ್ಲಿನ ಒಂದು ಪ್ರಮುಖ ಕಾರ್ಯ. ಶಿವಣ್ಣನಲ್ಲಿ ಈ ತರದ ಔದಾರ್ಯ, ಜನಪ್ರೀತಿ, ಔತ್ಸುಕ್ಯ, ಕಾರ್ಯಶ್ರದ್ಧೆಗಳು ಹುಟ್ಟು ಗುಣಗಳಾಗಿ ಅವನ ಬೆಳವಣಿಗೆಯಂತೆಯೇ ಬೆಳೆಯುತ್ತ ಬಂದು, ಅವನ ಬಾಲ್ಯಜೀವನದ ಮರೆಯಲ್ಲಡಗಿದ ಮಹಾ ಮಾನವತೆಯ ಬೀಜಗಳಂತೆ ಅವ್ಯಕ್ತವಾಗಿದ್ದವು.

ಶಿವಣ್ಣ ಬಾಲ್ಯದಲ್ಲಿ ಆಡುವ ಆಟಗಳಲ್ಲೆಲ್ಲ ಮರಕೋತಿಯ ಆಟ ಅತ್ಯಂತ ಪ್ರಿಯವಾದುದಾಗಿತ್ತು. ಅವನ ಮರಕೋತಿಯ ಆಟ ಊರ ಮುಂದೆಯೇ ಇರುವ ಹೊನ್ನೇಗೌಡರ ಹಿಪ್ಪೇತೋಪಿನಲ್ಲಿ ಅಥವಾ ಕೆರೆ ಏರಿಯ ಮೇಲೆ ಮಹಾವೃಕ್ಷವಾಗಿ ಬೆಳೆದಿದ್ದ ಹಿಪ್ಪೆಮರಗಳಿಗೆ[9] ವೇಗವಾಗಿ ಓಡಿಬಂದು ಅವನ್ನೇರಿ ಕುಳಿತುಕೊಳ್ಳುತ್ತಿದ್ದ ಇವನ ಜಾಣ್ಮೆ ಸಹಪಾಠಿಗಳನ್ನೆಲ್ಲ ಆಶ್ಚರ್ಯಚಕಿತಗೊಳಿಸಿ ಬಿಡುತ್ತಿತ್ತು. ಸೋಲನ್ನೆಂದೂ ಅನುಭವಿಸಲೇ ಇಲ್ಲವೆಂದು ಕಂಡವರು ಇಂದೂ ಹೇಳುತ್ತಿದ್ದಾರೆ. ಮಳಲು ಗುಡ್ಡೆಗಳನ್ನು ಮಾಡಿ ಆ ಗುಡ್ಡೆಗಳನ್ನು ಜಿಗಿದುಹಾರುವುದು ಶಿವಣ್ಣ ಉತ್ಸಾಹದ ಆಟಗಳಲ್ಲಿ ಇನ್ನೊಂದು. ಸೋತವರನ್ನು ಕಾಲು ಹಿಡಿದು ಮಳಲಗುಡ್ಡೆಗಳ ಮೇಲೆ ಎಳೆದು ಆಡುವುದು ಇವನ ಅತ್ಯಂತ ಮೋಜಿನ ಕಾರ್ಯಗಳಲ್ಲಿ ಒಂದು. ಇವನೇನಾದರೂ ಸೋತರೆ ಇವನ ಕಾಲು ಹಿಡಿದು ಎಳೆಯಲು ನಾಲ್ಕಾರು ಜನರಾದರೂ ಬೇಕು. ತುಂಟತನ ಮಾಡಿ ಓಡುವದಕ್ಕೆ ಪ್ರಾರಂಭ ಮಾಡಿದರೆ ಪುಟಚೆಂಡಿನಂತೆ ನೆಗೆನೆಗೆದು ಓಡುವ ಇವನು ಬೆನ್ನಟ್ಟಿ ಬರುವರನ್ನು ಓಡಿಸಿ ಓಡಿಸಿ ದಣಿಸಿ ಬಾಯಿ ತೆಗೆಸುವುದರಲ್ಲಿ ಅತ್ಯಂತ ಆಸಕ್ತಿ ತೋರಿಸುತ್ತಿದ್ದನು. ಓಟದಲ್ಲಿ ಇವನನ್ನು ಮಿಕ್ಕಿಸುವ ಸಹಪಾಠಿಗಳು ಒಬ್ಬರೂ ಇರುತ್ತಿರಲಿಲ್ಲ. ಎಲ್ಲದರಲ್ಲೂ ಇವನದೇ ಮೇಲುಗೈಯಾಗಿರುತ್ತಿತ್ತು. ಇಷ್ಟೆಲ್ಲ ಆಟಪಾಟವಾಡಿ ತಾಯಿಯ ಕಕ್ಷೆಗೆ ಒಳಪಟ್ಟೊಡನೆ ಶಿವಣ್ಣ ಸ್ತಬ್ಧನಾಗಿ ಬಿಡುತ್ತಿದ್ದ. ತಾಯಿಯೊಡನೆ ಪೂಜೆ, ಧ್ಯಾನ ಪ್ರಾರ್ಥನೆಯಲ್ಲಿ ಮಗ್ನನಾಗಿಬಿಡುತ್ತಿದ್ದ.

**ಮಾತೃವಿಯೋಗದ ಘೋರ ಆಘಾತ**

ಹೀಗೆ ಬಾಲ್ಯದ ಉತ್ಸಾಹಪೂರ್ಣ ಕ್ರಿಯಾಶಕ್ತಿಯ ಶಿವಣ್ಣ ೪ನೆಯ ತರಗತಿಯವರೆಗೆ ವಿದ್ಯಾಭ್ಯಾಸವನ್ನು ವೀರಾಪುರ, ಪಾಲನಹಳ್ಳಿಗಳಲ್ಲಿ ಮುಗಿಸುವ ಹೊತ್ತಿಗೆ ಜೀವನದಲ್ಲಿ ಒಂದು ದೊಡ್ಡ ಆಘಾತವನ್ನನುಭವಿಸಿದ. ಬಾಲ್ಯದಿಂದ ಎದೆಗವಚಿಕೊಂಡೇ ಶ್ರದ್ಧೆಯಿಂದ, ಮಮತೆಯಿಂದ, ಅತ್ಯಂತ ವಾತ್ಸಲ್ಯದಿಂದ, ಭಕ್ತಿಯಿಂದ ಬೆಳೆಸಿ ಅನೇಕ ಸಂಸ್ಕಾರಗಳನ್ನುಂಟುಮಾಡಿದ್ದ ತಾಯಿ ಗಂಗಮ್ಮನವರು ಇವನ ಎಂಟನೆಯ ವಯಸ್ಸಿನಲ್ಲಿ ಲಿಂಗೈಕ್ಯರಾದುದು ಇವನ ಜೀವನದಲ್ಲೊಂದು ಅದ್ಭುತ ಪರಿವರ್ತನೆಯ ಘಟ್ಟವೆಂದೇ ಹೇಳಬಹುದು. ಒಮ್ಮಿಂದೊಮ್ಮಿಗೆ ಕಂಡರಿಯದ ಕೇಳಿ ತಿಳಿಯದ ಇಂಥ ಪ್ರಬಲಾಘಾತದಿಂದ ಶಿವಣ್ಣ ಜರ್ಝರಿತನಾಗಿ ಹೋದನಲ್ಲದೆ ನಿತ್ಯಾನಿತ್ಯ ವಿಷಯ ವಿವೇಚನೆಗೆ ಈ ಘಟನೆಯೊಂದು ಒಳ್ಳೆಯ ನಿದರ್ಶನವಾಗಿ ಆವುದೋ ಪರಿವರ್ತನೆಯ ಘಟ್ಟವನ್ನು ಇದು ಉಂಟು ಮಾಡಿತು. ಪ್ರಬಲಸಂಸ್ಕಾರ, ಸಂಸ್ಕೃತಿಗಳ ಬಲದಿಂದ ಮಾತೃವಿಯೋಗದ ಈ ಹಠಾತ್ತಾಗಿ ಎರಗಿದ ಆಘಾತವನ್ನು ಧಾರಣ ಮಾಡಿ ದಿನೇ ದಿನೇ ತನ್ನನ್ನು ಹದಕ್ಕೆ ತಂದುಕೊಂಡ.

**ಎರಡನೆಯ ಹಂತದ ವಿದ್ಯಾಭ್ಯಾಸ : ನಾಗವಲ್ಲಿಯಲ್ಲಿ :**

ಪ್ರಾಥಮಿಕ ವಿದ್ಯಾಭ್ಯಾಸ ಮುಗಿದ ಮೇಲೆ ಶಿವಣ್ಣನನ್ನು ಶಾಲೆಗೆ ಎಲ್ಲಿಗೆ ಕಳುಹಿಸಬೇಕೆಂಬ ಚಿಂತೆ ಹೊನ್ನೇಗೌಡರಿಗೆ ಉಂಟಾಯಿತು. ಸ್ವಲ್ಪದಿನ ಗುಂಡಿಗೆರೆಯ ಕಿರಿಯ ಮಗಳು ಗೌರಕ್ಕನ ಮನೆಗೆ ಕಳುಹಿಸಿದರು. ಅಲ್ಲಿಯೂ ಇವನನ್ನು ಹಿಡಿಯಲಾಗಲಿಲ್ಲ. ಆಗ ನಾಗವಲ್ಲಿಯ ಗಂಗೇಗೌಡ ಎಂಬುವರಿಗೆ ಕೊಟ್ಟಿದ್ದ ದೊಡ್ಡ ಮಗಳು ಪುಟ್ಟಹೊನ್ನಮ್ಮನವರ ಮನೆಗೆ ಕಳುಹಿಸಿದರು. ಲಿಂಗಪ್ಪ ಎಂಬ ಇನ್ನೊಬ್ಬ ಮಗನನ್ನೂ ಇಲ್ಲಿಯೇ ಬಿಟ್ಟರು. ಲಿಂಗಪ್ಪ ಹೊನ್ನೇಗೌಡರಿಗೆ ಸಮಸ್ಯೆಯ ಮಗನೇ ಆಗಿರಲಿಲ್ಲ. ಗೌಡರಿಗೆ ಯಾವಾಗಲೂ ಶಿವಣ್ಣನ ಚಿಂತೆಯೇ ಚಿಂತೆ. ಅವನನ್ನು ಚೆನ್ನಾಗಿ ನೋಡಿಕೊಳ್ಳುವವರಾಗಬೇಕು ಎಂಬ ಬಯಕೆ ಅವರಿಗೆ. ಪುಟ್ಟಹೊನ್ನಮ್ಮ ತಮ್ಮನನ್ನೇ ಮಗನಂತೆ ಸಲಹಿ ವಿದ್ಯಾಭ್ಯಾಸ ಮಾಡಿಸುವ ಭರವಸೆಯನ್ನು ತಂದೆಯವರಾದ ಹೊನ್ನೇಗೌಡರಿಗೆ ಕೊಟ್ಟು, ತಮ್ಮ ಮನೆಯಲ್ಲಿ ಇಟ್ಟುಕೊಂಡು ತಮ್ಮೂರಿನ ರೂರಲ್ ಎ.ವಿ. ಸ್ಕೂಲ್‌ಗೆ ಸೇರಿಸಿದಳು. ತಮ್ಮನ ತುಂಟತನವನ್ನೆಲ್ಲ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದ ಪುಟ್ಟಹೊನ್ನಮ್ಮ ಹಿಂದೆ ತಮ್ಮ ತಾಯಿ ಯಾವ ಯಾವ ವಿಧಾನಗಳಿಂದ ತಂತ್ರಗಳಿಂದ ಇವನನ್ನು ಅಂಕೆಯಲ್ಲಿಟ್ಟುಕೊಂಡು ರಕ್ಷಿಸುತ್ತಿದ್ದಳೋ ಅದೇ ತಂತ್ರದಿಂದ ರಕ್ಷಿಸತೊಡಗಿದಳು. ಅಕ್ಕನ ಮನೆ ಬೇರೆ ಮನೆಯಾಗಿ ಶಿವಣ್ಣನಿಗೆ ಕಾಣುತ್ತಲೇ ಇರಲಿಲ್ಲ. ಇಷ್ಟು ಹೊತ್ತಿಗಾಗಲೇ ಶಿವಣ್ಣನ ಅನೇಕ ತಂಟೆ ತಕರಾರುಗಳ ಅಬ್ಬರ ಕುಗ್ಗುತ್ತ ಬಂದಿದ್ದವು. ಶಿವಣ್ಣನಿಗೆ ಉಣ್ಣಲು, ತಿನ್ನಲು ಯಾವುದಕ್ಕೂ ಎಂದೂ ಕೊರತೆಯಾಗಲಿಲ್ಲ. ಹಾಲು, ಮೊಸರು, ತುಪ್ಪಗಳನ್ನು ಯಥೇಚ್ಛವಾಗಿ ಅವನಿಗೆ ಹಾಕುತ್ತಿದ್ದರು. ಈ ವಿಷಯದಲ್ಲಿ ಕೊರತೆಯಾದಾಗ

---

9. ಕೆರೆಯ ಪಕ್ಕದ ಹಿಪ್ಪೆಯ ಮರ ಶಿವಣ್ಣನ ಅತ್ಯಂತ ಪ್ರೀತಿಯ ಮರ. ಮನೆಯಲ್ಲಿ ಏನಾದರೂ ತಂಟೆ ತಕರಾರು ಮಾಡಿಕೊಂಡು ಕೋಪಗೊಂಡಾಗ ಈ ಹಿಪ್ಪೆಯ ಮರದಡಿ ಬಂದು ಕುಳಿತುಕೊಳ್ಳುತ್ತಿದ್ದ. ಈ ಮರವನ್ನು ಇತ್ತೀಚೆಗೆ ಕಡಿದರು. ಇದರ ಬುಡವೊಂದೇ ಸುಮಾರು ನಾಲ್ಕೈದು ಲಾರಿಗಳ ಬಜ್ಜೆಯಿತ್ತು. ೧೯೭೭ರಲ್ಲಿ ಈ ಬುಡ ಸಿದ್ಧಗಂಗಾ ದಾಸೋಹಕ್ಕೆ ಸೌದೆಯಾಗಿ ಉರಿದು ಸಾರ್ಥಕಗೊಂಡಿತು.

ತಾನೆ ಏನಾದರೊಂದು ತಕರಾರು ! ತಮ್ಮನ ಈ ತಕರಾರುಗಳ ಪರಿಚಯವಿದ್ದ ಅಕ್ಕ ಅವನ ಮನಃಪೂರ್ವವಂತೆ ನಡೆದುಕೊಂಡದ್ದೊಂದು ವಿಶೇಷ. ತುಪ್ಪದ ವಿಷಯದಲ್ಲಿ ಅವರಕ್ಕ ಗೌರಮ್ಮ ಈಗಲೂ ಹೇಳುತ್ತಾಳೆ : 'ಅಬ್ಬಾ ! ನಮ್ಮ ಶಿವಣ್ಣನಿಗೆ ಅನ್ನದ ಮೇಲೆ ತುಪ್ಪ ಹಾಕಿದ ಮೇಲೆ ಅದನ್ನು ಅನ್ನದಲ್ಲಿ ಕಲಸಿ, ಮುಷ್ಟಿಯಲ್ಲಿ ಆ ಅನ್ನವನ್ನು ಹಿಚುಕಿದರೆ ಬೆರಳು ಸಂದಿಯಿಂದ ತುಪ್ಪ ಹೊರಬರಬೇಕು, ಹಾಗಿದ್ದರೇ ಅವನು ಉಣ್ಣುವುದು: ಇಲ್ಲವಾದರೆ 'ಅಕ್ಕಾ, ನೋಡಿಲ್ಲಿ ನೀನು ನೀಡಿದ ತುಪ್ಪ ಅನ್ನಕ್ಕೇ ಹತ್ತಲಿಲ್ಲ. ಇನ್ನಷ್ಟು ಹಾಕಿದರೇ ನಾನು ಉಣ್ಣುವುದು', ಹೀಗೇ ಹೇಳಿಬಿಡುತ್ತಿದ್ದ' ಎಂದು. ಇನ್ನೂ ಒಂದು ಪ್ರಸಂಗವನ್ನು ಗೌರಮ್ಮ ಹೇಳುವುದು ಹೀಗೆ : 'ತನ್ನಕ್ಕನಲ್ಲದೆಬೇರೆಯವರಾರಾದರೂ ಊಟಕ್ಕೆ ನೀಡುತ್ತಿದ್ದರೆ ಅಕ್ಕಾ, ನೀನೇ ಬಾ. ಇವರಿಗೆ ಊಟಕ್ಕೆ ನೀಡಲು ಬರುವುದಿಲ್ಲ' ಎಂದು ನಗುತ್ತ ಅಕ್ಕನನ್ನೇ ಕರೆದು ಊಟಕ್ಕೆ ಇಡಿಸಿಕೊಳ್ಳುತ್ತಿದ್ದ. ಅಕ್ಕ ಊಟಕ್ಕೆ ನೀಡಿದಾಗ ಸಮಾಧಾನದ ನಿಟ್ಟುಸಿರು ಬಿಡುತ್ತ, ಅಕ್ಕ ನೀಡಲು ತುಪ್ಪ ತಂದರೆ ಕೈಯೊಡ್ಡುತ್ತಿದ್ದ. ಕೈತುಂಬ ತುಪ್ಪ ಬೀಳದಿದ್ದರೆ 'ಅಕ್ಕ ಇದೇನು ? ತುಪ್ಪ ಬೀಳಲೇ ಇಲ್ಲ, ನನ್ನ ಕೈಯೇ ತುಂಬಲಿಲ್ಲ. ನೀಡು ನೀಡು' ಎಂದು ನಗುತ್ತ ಹೇಳಿ ಅಕ್ಕನ ಮನಸ್ಸನ್ನು ತನ್ನ ತುಂಟನಗೆಯಿಂದಲೇ ಗೆದ್ದು ಸಾಕಾಗುವಷ್ಟು ತುಪ್ಪ ನೀಡಿಸಿಕೊಂಡು ಉಂಡು ತೃಪ್ತಿಪಡುತ್ತಿದ್ದ' ಎಂದು. ಅಕ್ಕನಿಗೆ ಇವನ ತೃಪ್ತಿಯೇ ತನ್ನ ತೃಪ್ತಿಯಾಗಿರುತ್ತಿತ್ತು. ಒಟ್ಟಿನಲ್ಲಿ ಅಕ್ಕ ತನ್ನ ತಾಯಿಯು ಶಿವಣ್ಣನನ್ನು ಹೇಗೆ ಬಾಲ್ಯದಿಂದಲೂ ನೋಡಿಕೊಳ್ಳುತ್ತಿದ್ದಳೋ ಹಾಗೆಯೇ ನೋಡಿಕೊಂಡು ಸಲಹಿದಳು.

ನಾಗವಲ್ಲಿಯಲ್ಲಿ ಶಿವಣ್ಣನ ಉತ್ಸಾಹಕ್ಕೇನೂ ಭಂಗ ಬರಲಿಲ್ಲ. ಅಲ್ಲಿಯೂ ಬಂದ ಕೆಲವೇ ದಿನಗಳಲ್ಲಿ ಅನೇಕ ಸ್ನೇಹಿತರನ್ನು ಹೊಂದಿಸಿಕೊಂಡು ತನ್ನ ಮಿಂಚಿನಂತಹ ಚಟುವಟಿಕೆಗಳನ್ನು ಪ್ರಾರಂಭಿಸಿದ್ದ. ಆಪ್ತಮಿತ್ರರಲ್ಲಿ ಬಳ್ಳಗೆರೆಯಿಂದ ಬರುತ್ತಿದ್ದ ಬೋರೇಗೌಡ ಒಬ್ಬರು[9]. ಆದರೂ ವೀರಾಪುರದಲ್ಲಿದ್ದ ಸ್ವಾತಂತ್ರ್ಯ ಮತ್ತು ಸನ್ನಿವೇಶದ ಅನುಕೂಲ ನಾಗವಲ್ಲಿಯಲ್ಲಿಲ್ಲದ್ದರಿಂದ ರಜಾ ಸಮಯಗಳಲ್ಲಿನ ಹೊರ ಸಂಚಾರದ ಚಟುವಟಿಕೆಗಳು ಕಡಿಮೆಯಾಗಿದ್ದವು. ಆ ಶ್ರದ್ಧೆ ಓದುವತ್ತ ತಿರುಗಿತ್ತು. ಗಂಭೀರಭಾವ ಬಲಿಯುತ್ತ ಬಂದಿತ್ತು. ಈಜುವ, ಮರಕೋತಿಯಾಟವಾಡುವ ಚಟುವಟಿಕೆಗಳನ್ನು ಯಾವಾಗಲೋ ಒಮ್ಮೊಮ್ಮೆ ಕಲ್ಪಿಸಿಕೊಂಡು ಆಡಿ ತೃಪ್ತಿಪಟ್ಟುಕೊಳ್ಳುತ್ತಿದ್ದ. ಶಿವಣ್ಣನ ಠೀವಿಗೆ ಇವನನ್ನು 'ಚಿಕ್ಕ ಸೇಕದಾರ ಬುಡ್ಡ ಸೇಕದಾರ' ಎಂದು ಕೆಲವರು ಕರೆದು ತೃಪ್ತಿಪಟ್ಟುಕೊಳ್ಳುತ್ತಿದ್ದರು. ಶಾಲಾ ಉಪಾಧ್ಯಾಯ ವರ್ಗ ಮಾತ್ರ ಇವನ ಬಗೆಗೆ ದಂಗುಗೊಳ್ಳುವಷ್ಟು ಮಟ್ಟಿಗೆ ಪ್ರತಿಭೆಯನ್ನು ಇವನು ತೋರಿಸದೆ ಬಿಡಲಿಲ್ಲ. ಓದಿನಲ್ಲಿ, ಆಟಪಾಟದಲ್ಲಿ, ಇನ್ನಿತರ ಪಠ್ಯೇತರ ಚಟುವಟಿಕೆಗಳಲ್ಲಿ ಮೇಲುಗೈಯಾಗಿರುವುದೇ ಇವನ ಆ ಶಾಲಾ ಜೀವನದ ಗುಟ್ಟಾಗಿತ್ತು. ಎರಡು ವರ್ಷದ ಪಾಠ ಪ್ರವಚನಗಳನ್ನು ಒಂದೇ ವರ್ಷದಲ್ಲಿ ಓದಿ ೧೯೧೯ರಲ್ಲಿ ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲೂ, ೧೯೨೧ರಲ್ಲಿ ಇಂಗ್ಲೀಷ್ ಲೋಯರ್ ಸೆಕೆಂಡರಿಯಲ್ಲೂ ತೇರ್ಗಡೆ ಹೊಂದಿದನು. ಅಣ್ಣನಾದ ಲಿಂಗಪ್ಪ ಇಂಗ್ಲೀಷ್ ಲೋಯರ್ ಸೆಕೆಂಡರಿಯಲ್ಲಿ ಆ ವರ್ಷ ಉತ್ತೀರ್ಣನಾಗಲಿಲ್ಲ. ಇಬ್ಬರೂ ಸೇರಿ ಹೈಸ್ಕೂಲಿಗೆ ತುಮಕೂರಿಗೆ ಹೋಗಬೇಕಾದ ಕಾರಣ ಲಿಂಗಪ್ಪನ ಒಂದು ವರ್ಷ ಮುಂದುವರಿದ ವಿದ್ಯಾಭ್ಯಾಸದ ಫಲವಾಗಿ ಶಿವಣ್ಣ ವಿದ್ಯಾಭ್ಯಾಸವನ್ನು ಒಂದು ವರ್ಷ ನಿಲ್ಲಿಸಬೇಕಾಯಿತು. ಶಿವಣ್ಣನೊಬ್ಬನನ್ನೇ ತುಮಕೂರಿಗೆ ವಿದ್ಯಾಭ್ಯಾಸಕ್ಕೆ ಕಳುಹಿಸುವುದು ಹೇಗೆ ? ಎಂಬುದೇ ಒಂದು ವರ್ಷದ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಲು ಕಾರಣವಾಯಿತು.

ನಾಗವಲ್ಲಿಯಲ್ಲಿ ಶಿವಣ್ಣನ ಅತ್ಯದ್ಭುತ ಬಾಲ್ಯೋಚಿತ ಚಟುವಟಿಕೆಗಳು, ಹಟಗಳು, ಕಾರ್ಯಸಾಧಿಸುವ ತೀವ್ರಾಶಕ್ತಿ, ಉತ್ಸಾಹಗಳೆಲ್ಲ ಶಕ್ತಿಗಳಾಗಿ ಉದಾತ್ತೀಕರಣ ಹೊಂದಿ ವಿದ್ಯಾಭ್ಯಾಸದಲ್ಲಿ ಮಹಾಸಾಧನೆ ಸಾಧಿಸಬೇಕೆಂಬ ತೀವ್ರಾಭಿಲಾಷೆಯತ್ತ ಹರಿದವು. ಈಗ ಅವನೊಬ್ಬ ಗ್ರಾಮಾಂತರ ಪ್ರದೇಶದ ಮೇಧಾವಿ ವಿದ್ಯಾರ್ಥಿಯಾಗಿ ಎಲ್ಲರ ಕಣ್ಣಿಗೆ ಕಾಣತೊಡಗಿದನು. ಗಂಭೀರತೆಯ ಸಾಕಾರ ಮೂರ್ತಿಯಾಗುವತ್ತ ಇವನ ಸಮಗ್ರ ಗಮನ ಹರಿಯತೊಡಗಿತು. ನಸುಕಿನಲ್ಲಿ ಎದ್ದು ಸ್ನಾನ ಮಾಡಿ ಧ್ಯಾನ ಪೂಜೆಯತ್ತ ಇವನ ಒಲವು ಹರಿದಿತ್ತು. ನಸುಕಿನಲ್ಲಿ ಬೇಗ ಎಚ್ಚರವಾಗಲಿಕ್ಕಿಲ್ಲವೆಂದು ಶಂಕಿಸಿ ತಾನು ಬಿಟ್ಟಿದ್ದ ಜುಟ್ಟಿಗೆ ಚಿಕ್ಕಹಗ್ಗ ಕಟ್ಟಿಕೊಂಡು ಮಲಗುತ್ತಿದ್ದ ದಿನಗಳೆಷ್ಟೋ ಎಂದು ಗೌರಮ್ಮನವರು ಈಗಲೂ ಹೇಳುತ್ತಿದ್ದಾರೆ. ಇಷ್ಟಾದರೂ ಯಾವಾಗಲೋ ಒಮ್ಮೊಮ್ಮೆ ಇವನ ಆಟಪಾಟದ, ಅರಣ್ಯಪ್ರದೇಶಸಂಚಾರದ ಅಭಿಲಾಷೆ ದಿಗ್ಗನೆದ್ದು ಕೆಲವೇ ಜನ ಮಿತ್ರರ ಗುಂಪಿನೊಡನೆ ಆ ಅಭಿಲಾಷೆಯನ್ನು ಈಡೇರಿಸಿಕೊಂಡು, ಪುನಃ ತನ್ನ ಪ್ರಧಾನೋದ್ದೇಶವಾದ ವಿದ್ಯಾಭ್ಯಾಸಕ್ಕೆ ಹೊರಳಿಬಂದು ತಲ್ಲೀನತೆಯಲ್ಲಿರುತ್ತಿದ್ದನು. ವಿದ್ಯಾಭ್ಯಾಸದಲ್ಲಿ ತಲ್ಲೀನತೆಯನ್ನು ನಾಗವಲ್ಲಿಯಲ್ಲಿ ವಿಶೇಷವಾಗಿ ಸಾಧಿಸಿದ್ದನು. ಓದುತ್ತ ಕುಳಿತಾಗ ಅಕ್ಕನವರು ಕೂಗಿದರೆ ಇವನಿಗೆ ಕೇಳುತ್ತಿರಲಿಲ್ಲವಂತೆ. ಅವರು ಬಂದು ಮೈಕೈ ಮುಟ್ಟಿ 'ಶಿವಣ್ಣ,

---

9. ಬೋರೇಗೌಡ ಈಗಲೂ ಇದ್ದಾರೆ. ನಾಗವಲ್ಲಿಯಲ್ಲಿ ಕಳೆದ ಶಿವಣ್ಣನವರ ಜೀವನದ ಅನೇಕ ಮಾಹಿತಿಗಳನ್ನು ಒದಗಿಸಿದವರಲ್ಲಿ ಈ ಬೋರೇಗೌಡರೂ ಒಬ್ಬರು. ನಾಗವಲ್ಲಿಗೆ ತರೂರು ಎಂದು ಆಗ ಕರೆಯುತ್ತಿದ್ದರು.

ಶಿವಣ್ಣ' ಎಂದು ಎಚ್ಚರಿಸಿದಾಗಲೇ ಇವನಿಗೆ ಅರಿವು. ಅಷ್ಟೊಂದು ತಲ್ಲೀನತೆಯನ್ನು ಬಾಲ್ಯದಲ್ಲಿ ಇವನು ಸಾಧಿಸಿದ್ದೊಂದ್ಯ ಇವನ ಶಕ್ತಿ ವಿಶೇಷದ ಸಂಕೇತವೇ ಆಗಿತ್ತು. ಶಿವಣ್ಣನ ಕೆಲವು ವಿಶೇಷವಾದ ವ್ಯವಸ್ಥಾಬದ್ಧ ಜೀವನ, ಗಂಭೀರ ನಡೆನುಡಿ, ಕರ್ತವ್ಯದಲ್ಲಿನ ತೀವ್ರಾಸಕ್ತಿ, ವೀರೋಚಿತ ಕರ್ತವ್ಯ ನಿರ್ವಹಣಾಸಾಮರ್ಥ್ಯಗಳು ದೊಡ್ಡವರ ಗಮನವನ್ನು ತನ್ನತ್ತ ಸೆಳೆಯಲು ಕಾರಣವಾಯಿತು. ಗುರುಹಿರಿಯರು ಮೆಚ್ಚಿ ಶ್ಲಾಘನೆ ಮಾಡುತ್ತಿದ್ದರು. ಇವನ ವರ್ತನೆ ಎಲ್ಲರ ಮನೆಮಾತಾಗಿ ಆದರ್ಶ ವಿದ್ಯಾರ್ಥಿತನಕ್ಕೆ ಇವನ ದೃಷ್ಟಾಂತವನ್ನು ತಮ್ಮ ತಮ್ಮ ಮಕ್ಕಳಿಗೆ ಕೊಡುವಂತಾಗಿತ್ತು. ನಾಗವಲ್ಲಿಯಲ್ಲಿ ಶಿವಣ್ಣನಿರುವಷ್ಟು ಕಾಲ ಆ ಶಾಲೆಯೂ ಕಳಕಳಿಸುತ್ತಿತ್ತು.

**ಪ್ರೌಢ ಮತ್ತು ಪದವಿಶಿಕ್ಷಣ ವಿದ್ಯಾರ್ಥಿಯಾಗಿ ಶಿವಣ್ಣನವರು * :**

ನಾಗವಲ್ಲಿಯ ರೂರಲ್ ಎ. ವಿ. ಸ್ಕೂಲ್ (ಗ್ರಾಮಾಂತರ ಆಂಗ್ಲೋ ವರ್ನಾಕ್ಯುಲರ್ ಸ್ಕೂಲ್)ನಲ್ಲಿ ಯಶಸ್ವಿಯಾಗಿ ವಿದ್ಯಾಭ್ಯಾಸ ಮುಗಿಸಿದ ಮೇಲೆ ತುಮಕೂರಿಗೆ ಅಣ್ಣ ಲಿಂಗಪ್ಪನೊಡನೆ ಬಂದ ಶಿವಣ್ಣನವರು ೧೯೨೨ರಲ್ಲಿ ಅಲ್ಲಿಯ ಗೌರ್ನಮೆಂಟ್ ಹೈಸ್ಕೂಲ್ ಮೊದಲ ತರಗತಿಗೆ ಸೇರಿದರು. ಒಂದು ಕೊಠಡಿಯನ್ನು ತುಮಕೂರಿನಲ್ಲಿ ಹಿಡಿದು ಅಲ್ಲಿ ಸ್ವತಃ ಅಡಿಗೆ ಮಾಡಿಕೊಂಡು ಊಟ ಮಾಡುತ್ತ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಇವರು ಹೈಸ್ಕೂಲ್‌ನಲ್ಲಿ ವಿದ್ಯಾಭ್ಯಾಸ ಮಾಡುವ ಕಾಲದಲ್ಲಿ ಕೆಂಬಳಲಿನಿಂದ ಹೈಸ್ಕೂಲ್ ವಿದ್ಯಾಭ್ಯಾಸ ಮಾಡಲು ಬಂದಿದ್ದ ಕಾಳಪ್ಪನವರ[10] ಪರಿಚಯವಾಯಿತು. ಇವರ ಪರಿಚಯ ಸ್ನೇಹದಲ್ಲಿ ಮುಂದುವರೆಯಿತು. ಬರುಬರುತ್ತ ಇವರಿಬ್ಬರೂ ಏಕದೇಹನ್ಯಾಯದ ನಿಕಟಮಿತ್ರರಾದರು. ಸಿದ್ಧಗಂಗೆಯ ಕೀರ್ತಿಯನ್ನೂ ಉದ್ದಾನ ಶಿವಯೋಗಿಗಳ ಮಹಿಮಾತಿಶಯವನ್ನೂ ಬಾಲ್ಯದಿಂದಲೇ ಕೇಳುತ್ತಾ ಬಂದಿದ್ದ ಶಿವಣ್ಣನವರು ಬಿಡುವು ಸಿಕ್ಕಾಗಲೆಲ್ಲ ಸಿದ್ಧಗಂಗಾ ಕ್ಷೇತ್ರಕ್ಕೆ ಕಾಳಪ್ಪನವರೊಡನೆ ಹೋಗಿ ಬರತೊಡಗಿದರು. ಆಗಲೇ ಇವರು ಉದ್ದಾನ ಶಿವಯೋಗಿಗಳವರ ಅತುಳ ಶಿವಯೋಗ ಸಂಪತ್ತಿಗೆ ಮಾರು ಹೋದರು. ಸಿದ್ಧಗಂಗೆಗೆ ಪ್ರಕೃತಿಯೇ ತಂದಿತ್ತ ಅನಂತ ಸೌಂದರ್ಯ ರಾಶಿಗೆ ಮಾರುಹೋಗಿ ಮೈಮರೆಯುತ್ತಿದ್ದನು. ಬೆಟ್ಟವನ್ನೇರಿ ಸಿದ್ಧಲಿಂಗೇಶ್ವರ ಮೂರ್ತಿಯೆದುರು ಜಲತೀರ್ಥವಿರುವ ಅಮ್ಮನವರ ಗವಿಯಲ್ಲಿ ಕುಳಿತು ಗಂಟೆಗಟ್ಟಲೆ ಮೈಮನ ಮರೆಯುತ್ತಿದ್ದರು. ಬೆಟ್ಟದ ನೆತ್ತಿಯನ್ನೇರಿ ದೂರದಲ್ಲಿ ಬೂದು ಬಣ್ಣದಿಂದ ಶೋಭಾಯಮಾನವಾಗಿ ವಿರಾಜಿಸುವ ತನ್ನ ಬಾಲ್ಯದ ಅತ್ಯಂತ ಆಕರ್ಷಣೆಯಾದ ಶಿವಗಂಗಾ ಬೆಟ್ಟವನ್ನು ಕಂಡು ಕುಣಿದಾಡುತ್ತಿದ್ದರು. ಸಿದ್ಧಗಂಗಾ ಬೆಟ್ಟದ ಮೂಲೆಮೂಲೆಗಳ ಪರಿಚಯ ಮಾಡಿಕೊಂಡರು. ಹೀಗೆ ಸಿದ್ಧಗಂಗೆಯಲ್ಲಿ ಕೆಲಕಾಲ ಕಳೆದು ತುಮಕೂರಿಗೆ ಬಂದು ತಮ್ಮ ವಿದ್ಯಾಭ್ಯಾಸ ಕಾರ್ಯದಲ್ಲಿ ನಿರತರಾಗತೊಡಗುತ್ತಿದ್ದರು. ದಿನಕಳೆದಂತೆ ಸಿದ್ಧಗಂಗೆಯ ಮೇಲಿನ ಮಮತೆ ಅಧಿಕವಾಗತೊಡಗಿತು. ಆದರೆ ಉದ್ದಾನಸ್ವಾಮಿಗಳವರನ್ನು ಕಂಡರೆ ಎಲ್ಲಿಲ್ಲದ ಭಯ; ಕಂಪನಗೊಳ್ಳುತ್ತ ದೂರದಿಂದಲೇ ಅವರಿಗೊಂದು ನಮಸ್ಕಾರ ಹಾಕಿ ಬರುತ್ತಿದ್ದರು. ಶಿವಣ್ಣನವರ ತೇಜೋವಿಶೇಷ ಗುರುಲಿಂಗಜಂಗಮ ಭಕ್ತಿ, ತಲ್ಲೀನತೆಗೆ ಆಕರ್ಷಿತರಾದ ಆ ಮಠದ ಉತ್ತರಾಧಿಕಾರಿಗಳೆಂದು ಗೊತ್ತಾಗಿದ್ದ ಮರುಳಾರಾಧ್ಯರು[11] ಇವರಲ್ಲಿ ಯಾವುದೋ ವಿಶೇಷ ಶಕ್ತಿಯನ್ನು ಕಾಣತೊಡಗಿದರು. ಇವರಲ್ಲಿರುವ ಮಹತ್ತರ ತೇಜಸ್ಸಿಗೆ ಮಾರುಹೋಗಿದ್ದರು. ಹೀಗಿದ್ದುಕೊಂಡು ಶಿವಣ್ಣ ಕಷ್ಟಪಟ್ಟು ಓದಿ ೧೯೨೬ನೆಯ ಇಸ್ವಿಯಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಇಷ್ಟು ವೇಳೆಗಾಗಲೇ ಇವರ ಅಣ್ಣ ಲಿಂಗಪ್ಪ ಹೈಸ್ಕೂಲ್ ಶಿಕ್ಷಣವನ್ನು ಕುಂಠಿತಗೊಳಿಸಿ ಊರಿಗೆ ತೆರಳಿಬಿಟ್ಟಿದ್ದರು. ಪ್ಲೇಗು ಜಾಡ್ಯದ ನಿಮಿತ್ತ ೧೯೨೪ರಲ್ಲಿ ಒಂದು ವರ್ಷ ಶಿವಣ್ಣನವರೂ ವಿದ್ಯಾಭ್ಯಾಸವನ್ನು ಕುಂಠಿತಗೊಳಿಸುವಂತಾಗಿ ಮೆಟ್ರಿಕ್ಯುಲೇಷನ್‌ನಲ್ಲಿ ತೇರ್ಗಡೆಯಾಗಲು ಒಂದು ವರ್ಷ ಅವಧಿ ಮುಂದುವರಿಯಿತು. ಆದರೂ ಎದೆಗುಂದದೆ ಹೈಸ್ಕೂಲ್ ಶಿಕ್ಷಣ ಮುಗಿಸಿ ಅಲ್ಲಿಯೇ ಎಂಟ್ರೆನ್ಸ್ ಪರೀಕ್ಷೆಗಾಗಿ ವಿದ್ಯಾಭ್ಯಾಸ ಮುಂದುವರಿಸಿದರು. ಹೀಗೆ ಶಿವಣ್ಣನವರು ಸಿದ್ಧಗಂಗೆಯ ಸಂಬಂಧವನ್ನಿಟ್ಟುಕೊಂಡು ಸಾಹಸದಿಂದ ಎಂಟ್ರೆನ್ಸ್ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಿದ್ದ ಕಾಲದಲ್ಲಿ ತುಮಕೂರಿನಲ್ಲಿ ಪ್ಲೇಗು ಜಾಡ್ಯ ತಲೆದೋರಿ ವಿದ್ಯಾಭ್ಯಾಸ ಕುಂಠಿತವಾಗುವ ಭಯ ಬಂತು. ತುಮಕೂರಿನ ಕೊಠಡಿಯಲ್ಲಿದ್ದು ಊಟೋಪಚಾರ ಮಾಡಿ ವಿದ್ಯಾಭ್ಯಾಸ ಮಾಡಲು ಅನಾನುಕೂಲವಾಗಿತ್ತು. ಆದ ಕಾರಣ ಉದ್ದಾನ ಶಿವಯೋಗಿಗಳವರನ್ನು ಕಂಡು, ಮಠದಲ್ಲಿ ಅಶನವಸತಿಯ ಸೌಕರ್ಯಕ್ಕಾಗಿ ಪ್ರಾರ್ಥಿಸಿಕೊಳ್ಳಬೇಕೆಂದು ಸಿದ್ಧಗಂಗೆಗೆ ಬಂದರು. ಶಿವಯೋಗಿಗಳನ್ನು ಕಾಣುವುದು ಹೇಗೆ? ಕೇಳುವುದೆಂತು? ಎಂದು ಬಹಳ ಹೊತ್ತು ಯೋಚಿಸಿದರು. ಏಕೆಂದರೆ, ಶಿವಣ್ಣನವರಿಗೆ ಯಾರನ್ನಾದರೂ ಕೇಳಬೇಕೆಂದರೆ ಆಗುತ್ತಲೇ ಇರಲಿಲ್ಲ.

---

* ಇನ್ನು ಮುಂದೆ ಶಿವಣ್ಣನವರು ಎಂದು ಬಹುವಚನದಲ್ಲಿ ಶಿವಣ್ಣನನ್ನು ಸಂಬೋಧಿಸಲಾಗಿದೆ.

10. ಈ ಕಾಳಪ್ಪನವರೇ ಉದ್ದಾನಸ್ವಾಮಿಗಳವರ ಕೃಪೆಗೆ ಪಾತ್ರರಾಗಿ ಸಿದ್ಧಗಂಗಾ ಮಠದಲ್ಲಿ ಓದಿಕೊಂಡಿದ್ದ ಈಗಿನ ಕನಕಪುರ ದೇಗುಲಮಠದ ಮಹಾಲಿಂಗಸ್ವಾಮಿಗಳು. ಅವರು ಸಿದ್ಧಗಂಗೆಯಿಂದ ಹೈಸ್ಕೂಲಿಗೆ ಬರುತ್ತಿದ್ದರು.

11. ಇವರನ್ನು ಉದ್ದಾನಶಿವಯೋಗಿಗಳು ತಮ್ಮ ಉತ್ತರಾಧಿಕಾರಿಗಳೆಂದು ಗೊತ್ತುಮಾಡಿಟ್ಟುಕೊಂಡಿದ್ದರು. ಇವರು ತಕ್ಕಷ್ಟು ಸಂಸ್ಕೃತ. ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿ ಉತ್ಸಾಹದಿಂದ ಕೆಲಸ ಮಾಡುತ್ತಿದ್ದರು.

ಅತ್ಯಂತ ಸಂಕೋಚಪಟ್ಟುಕೊಳ್ಳುತ್ತಿದ್ದರು. ಕೊನೆಗೊಮ್ಮೆ ಧೈರ್ಯ ಮಾಡಿ ಉದ್ದಾನಶಿವಯೋಗಿಗಳನ್ನು ಕಂಡು ತನ್ನ ತೊಂದರೆಯನ್ನು ಹೇಳಿಕೊಂಡು ಮಠದಲ್ಲಿದ್ದು ಅಶನ ವಸತಿಗಳ ಸೌಕರ್ಯ ಪಡೆದು ವಿದ್ಯಾಭ್ಯಾಸವನ್ನು ಮುಂದುವರಿಸುವ ಪ್ರಾರ್ಥನೆಯನ್ನು ಸಲ್ಲಿಸಿದರು. ಉದ್ದಾನ ಶಿವಯೋಗಿಗಳು 'ಸಾಧ್ಯವಾಗುವುದಿಲ್ಲ' ಎಂದು ಬಿಟ್ಟರು. ಶಿವಣ್ಣನವರಿಗೆ ಮುಖದ ಮೇಲೆ ತಣ್ಣೀರೆರಚಿದಂತಾಯಿತು. ಆದರೂ ಉದ್ದಾನ ಶಿವಯೋಗಿಗಳ ವಿಷಯದಲ್ಲಿ ಇವರ ಭಕ್ತಿಯೇನೂ ಕಡಿಮೆಯಾಗಲಿಲ್ಲ. ಇವರೊಬ್ಬ ಮಹಾವಿಭೂತಿಪುರುಷರೆಂದೇ ಶಿವಣ್ಣನವರು ಬಗೆದಿದ್ದುದು ಇದಕ್ಕೆ ಕಾರಣ. ಮರುಳಾರಾಧ್ಯರಾಗಲಿ, ಮಿತ್ರ ಕಾಳಪ್ಪನವರಾಗಲಿ ಮಠದಲ್ಲಿ ಇವರಿಗೆ ಸ್ಥಾನ ಕೊಡಿಸಲು ಅಸಮರ್ಥರಾದರು. ಉದ್ದಾನ ಶಿವಯೋಗಿಗಳ ಇಚ್ಛೆಯೇ ಇಚ್ಛೆ. ಅವರು 'ಅಸ್ತು' ಎಂದರುಂಟು; ಇಲ್ಲದಿದ್ದರೆ ಇಲ್ಲ. ಅವರನ್ನು ಕಾಡಿ ಬೇಡಿ ಸ್ಥಾನ ಪಡೆಯಬೇಕೆಂಬ ಕೆಚ್ಚು ಆಗ ಯಾರಲ್ಲಿಯೂ ಇರುತ್ತಿರಲಿಲ್ಲ. ಮಠದಲ್ಲಿ ಸ್ಥಾನ ಕೊಡುವುದಾಗುವುದಿಲ್ಲವೆಂದಾಗ ಶಿವಣ್ಣನವರು ನಿರುಪಾಯರಾದರು. ಕೊನೆಗೆ ಸೆಟ್ಟಿಹಳ್ಳಿ[12]ಯಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ಪಡೆದು ಅಲ್ಲಿಯೇ ಕಷ್ಟಪಟ್ಟು ಅಡಿಗೆ ಮಾಡಿಕೊಂಡು ಊಟ ಮಾಡಿ ವಿದ್ಯಾಭ್ಯಾಸ ಮುಂದುವರಿಸಿದರು. ಶ್ರಮಜೀವನ, ಕಷ್ಟದ ಕಾರ್ಯಗಳಿಗೆ ತಡೆಯಬಲ್ಲ ದೈಹಿಕಶಕ್ತಿಯನ್ನು ಮೊದಲಿನಿಂದಲೂ ಬೆಳೆಸಿಕೊಂಡು ಬಂದಿದ್ದ ಶಿವಣ್ಣನವರಿಗೆ ಇದೇನೂ ಅಸಾಧ್ಯ ಕಾರ್ಯವಾಗಿರದಿದ್ದರೂ ಓದಿಕೊಳ್ಳಲು ಸಾಕಷ್ಟು ಸಮಯ ಸಿಗದೆ ಚಡಪಡಿಸುತ್ತಿದ್ದರು. ಶಿವಣ್ಣನವರು ಕಷ್ಟಪಟ್ಟು ವಿದ್ಯಾಭ್ಯಾಸವನ್ನು ಸೆಟ್ಟಿಹಳ್ಳಿಯಲ್ಲಿದ್ದುಕೊಂಡು ಓದುತ್ತಿರುವುದು ಉದ್ದಾನ ಸ್ವಾಮಿಗಳ ಗಮನಕ್ಕೆ ಕರ್ಣಾಕರ್ಣಿಕೆಯಾಗಿ ಗೊತ್ತಾಯಿತು. ಆಗ ನಾಲ್ಕು ತಿಂಗಳ ಅವಧಿಯವರೆಗೆ ಮಾತ್ರ ಮಠದಲ್ಲಿದ್ದು ಓದಿಕೊಳ್ಳಬಹುದೆಂದು ಅವರು ಅಪ್ಪಣೆಕೊಟ್ಟರು. ಅದರಂತೆ ಶಿವಣ್ಣನವರು ಸಿದ್ಧಗಂಗಾಕ್ಷೇತ್ರದ ಉಚಿತ ವಿದ್ಯಾರ್ಥಿ ನಿಲಯದ ಆಶ್ರಯವನ್ನು ನಾಲ್ಕು ತಿಂಗಳವರೆಗೆ ಪಡೆದು ಓದನ್ನು ಮುಂದುವರಿಸಿ ೧೯೨೭ನೆಯ ಮಾರ್ಚ್–ಏಪ್ರಿಲ್ ತಿಂಗಳಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ತೇರ್ಗಡೆಯಾದರು.

ಈ ನಾಲ್ಕು ತಿಂಗಳ ಅವಧಿಯಲ್ಲಿ ಶ್ರೀ ಕ್ಷೇತ್ರದ ವಿದ್ಯಾರ್ಥಿಯಾಗಿದ್ದ ಶಿವಣ್ಣನವರ ಮತ್ತು ಮರುಳಾರಾಧ್ಯರ ಸಾಮಾನ್ಯಸ್ನೇಹ ಗಾಢವಾಯಿತು. ಅಂತೆಯೇ ಕಾಳಪ್ಪನವರ ಸ್ನೇಹವೂ ಅಗಾಧವಾಗಿ ಬೆಳೆದುಹೋಯಿತು. ಕಾಳಪ್ಪ, ಶಿವಣ್ಣ, ಮರುಳಾರಾಧ್ಯರು ಈ ಮೂವರೂ ತ್ರಿಪುಟಿಯಂತಾದರು; ಸ್ನೇಹದಿಂದ ಮುಪ್ಪುರಿಗೊಂಡರು. ಶಿವಣ್ಣನವರ ಹೃದಯ ಸಂಪತ್ತಿನ ಪರಿಚಯ ಮರುಳಾರಾಧ್ಯರಿಗೆ ನೇರವಾಗಿ ಉಂಟಾಯಿತು. ಇವರೊಬ್ಬ ಮಹಾನುಭಾವಿಗಳೆಂಬುದರ ಸ್ಪಷ್ಟ ಚಿತ್ರವನ್ನು ತಮ್ಮ ಹೃತ್ಪಟಲದಲ್ಲಿ ಎಂದಿಗಿಂತ ಆಗ ಹೆಚ್ಚಾಗಿ ಕಂಡರು. ಕಾಳಪ್ಪನವರಂತೂ ಶಿವಣ್ಣನವರನ್ನು ಅಗಲುತ್ತಲೇ ಇರಲಿಲ್ಲ. ಗಂಭೀರ ಪ್ರಕೃತಿಯ, ಸತತಾಭ್ಯಾಸದ, ಕ್ರಿಯಾಪ್ರಾಬಲ್ಯಶಕ್ತಿಯ, ಶುದ್ಧಶೀಲಾದಿ ಗುಣವಿಶೇಷದ ಇವರ ಪ್ರಭಾವ ಮುದ್ರೆ ಎಲ್ಲರನ್ನೂ ಆಕರ್ಷಿಸಿತು. ಉದ್ದಾನ ಶಿವಯೋಗಿಗಳಿಗೆ ದಿನೇ ದಿನೇ ಶಿವಣ್ಣನವರ ಪರಿಚಯ ಪ್ರತ್ಯಕ್ಷಾಪ್ರತ್ಯಕ್ಷವಾಗಿ ಆಗತೊಡಗಿತು. ಅವರ ಕೃಪಾಕಟಾಕ್ಷದ ಕಕ್ಷೆಗೆ ಶಿವಣ್ಣ ಒಳಗಾದನು. ಅವರ ಕಾರುಣ್ಯಾಮೃತ ಧಾರಾಪಾತದ ಮುಂಗಾರು ಪ್ರಾರಂಭವಾಯಿತು. ಈ ದೃಷ್ಟಿಯಿಂದ ಎತ್ತೆತ್ತಲೂ 'ಶಿವಣ್ಣ ಶಿವಣ್ಣ' ಈ ಹೆಸರು ಮಠದ ಪರಿಸರದಲ್ಲಿ ಪ್ರತಿಧ್ವನಿತವಾಗುತ್ತಿತ್ತು. ಲೋಕದ ಜನ ಶಿವಣ್ಣನವರ ಹೆಸರಿನಿಂದ ಆಕರ್ಷಿತರಾದರು. ವೀರಾಪುರದ ಶಿವಣ್ಣ ಉತ್ತಮ ವಿದ್ಯಾರ್ಥಿ, ತೇಜಸ್ವಿ, ಸಂಸ್ಕೃತಿಸಂಪನ್ನ, ಸಂಯಮಿ, ಸಚ್ಛೀಲ, ಸದಾಚಾರಿ, ಲಿಂಗಪೂಜಾನಿಷ್ಠ, ಅತಿಸ್ನೇಹಿ, ಕರ್ತವ್ಯಕುಶಲ–ಇತ್ಯಾದಿಯಾಗಿ ಜನರ ಬಾಯಲ್ಲಿ ಒಂದಿಲ್ಲೊಂದು ರೀತಿಯ ಪ್ರಶಂಸೆಗೆ ಪಾತ್ರರಾಗತೊಡಗಿದರು. 'ಬೆಳೆಯ ಸಿರಿಯ ಮೊಳಕೆಯಲ್ಲಿ ನೋಡು' ಎಂಬುಕ್ತಿಗೆ ಅನುಗುಣವಾಗಿತ್ತು, ಶಿವಣ್ಣನವರ ಈಗಿನ ಜೀವನದ ಒಳಹೊರನೋಟ.

**ಬೆಂಗಳೂರಿಗೆ ವಿದ್ಯಾಭ್ಯಾಸಕ್ಕೆ ಶಿವಣ್ಣನವರ ಪ್ರಯಾಣ :**

ಶಿವಣ್ಣನವರ ವಿದ್ಯಾಭ್ಯಾಸ ಜೀವನದಲ್ಲಿ ಇದು ಮೂರನೆಯ ಘಟ್ಟ; ಈ ಹಂತದಲ್ಲಿ ಶಿವಣ್ಣನವರ ಶ್ರದ್ಧೆ, ಆಚಾರ–ವಿಚಾರ ನಿಷ್ಠೆ, ಅವಧಾನ ಏಕಮುಖವಾಗತೊಡಗಿತ್ತು. ಅಗಾಧವಾದ ಆಲೋಚನೆಗಳಿಂದ ಇವರ ಬುದ್ಧಿ ಸದಾ ಜಾಗರೂಕವಾಗತೊಡಗಿತ್ತು. ಪ್ರತಿಯೊಂದು ಚಲನವಲನವನ್ನೂ ತಮ್ಮ ವಿವೇಕದ ಒರೆಗಲ್ಲಿಗೆ ಹಚ್ಚಿ ತಿಕ್ಕಿ ನೋಡಿ ಪ್ರಾಮಾಣಿಕವಾದ ತಮ್ಮ ಹೃದಯಕ್ಕೊಪ್ಪುವ ರೀತಿಯಲ್ಲಿ ನಡೆಯತೊಡಗಿದ್ದರು. ಅವಿವೇಕ, ಅನಾಚಾರಗಳು ಎಂದೂ ಇವರ ಹತ್ತಿರವೇ ಸುಳಿಯದಿರುವಾಗ ಇಂದು ಅವುಗಳ ಸುಳಿವನ್ನೂ ಕಾಣರು. ಈ ರೀತಿಯ ಜೀವನವನ್ನು ಶಿವಣ್ಣನವರು ರೂಢಿಸಿಕೊಂಡಿದ್ದರು. ಸಿದ್ಧಗಂಗಾಕ್ಷೇತ್ರದ ವಿದ್ಯಾರ್ಥಿಯಾಗಿ ಅಲ್ಲಿನ ಸಮಸ್ತರ ಮೇಲೆ ತಮ್ಮ ಪ್ರಭಾವ ಮುದ್ರೆಯನ್ನೊತ್ತಿದ್ದ ಶಿವಣ್ಣನವರು ತುಮಕೂರಿನಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಲು ಹೊರಟರು. ಉದ್ದಾನ ಯತೀಶ್ವರರ ಅಪ್ಪಣೆ ಕೇಳಿದರು. ಸ್ವಾಮಿಗಳು 'ಚೆನ್ನಾಗಿ ಓದಬೇಕು, ಚೆನ್ನಾಗಿರಬೇಕು, ಆಗಾಗ

12. ತುಮಕೂರಿನ ಸಮೀಪದ ಒಂದು ಹಳ್ಳಿ.

ಮಠಕ್ಕೆ ಬರುತ್ತ ಹೋಗುತ್ತಿರಬೇಕು ತಿಳಿಯಿತೋ' ಎಂದು ಹೇಳಿ ಆಶೀರ್ವದಿಸಿ ಕಳುಹಿಸಿಕೊಟ್ಟರು. ಮರುಳಾರಾಧ್ಯರಿಗೆ ಮತ್ತು ಕಾಳಪ್ಪನವರಿಗೆ ಶಿವಣ್ಣನವರ ಅಗಲುವಿಕೆಯೊಂದು ಮಾರ್ಮಿಕವಾದ ಸಂಕಟಕ್ಕೀಡು ಮಾಡಿತು. ಗದ್ಗದಿತಕಂಠರಾಗಿ ಬೆಂಗಳೂರಿಗೆ ಕಳುಹಿಸಿಕೊಟ್ಟರು. ಅಲ್ಲಿನ ತೋಟದಪ್ಪನವರ ವಿದ್ಯಾರ್ಥಿ ನಿಲಯಕ್ಕೆ ಸೇರಿಕೊಂಡು ಸೆಂಟ್ರಲ್ ಕಾಲೇಜಿನಲ್ಲಿ ೧೯೨೭ನೆಯ ಇಸ್ವಿಯಿಂದ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಇಲ್ಲಿನ ವಿದ್ಯಾಭ್ಯಾಸ ಕಾಲದಲ್ಲಿ ಶಿವಣ್ಣನವರ ಜೀವನಶ್ರದ್ಧೆ ತುಂಬಾ ಪ್ರಶಂಸಾರ್ಹವಾದುದಾಗಿತ್ತು. ದಿನವೂ ನಸುಕಿನಲ್ಲೆದ್ದು ತಣ್ಣೀರಿನಲ್ಲಿ ಸ್ನಾನ ಮಾಡಿ, ತಾವೇ ಹೂ ಪತ್ರಿಗಳನ್ನೆತ್ತಿ ತಂದು ಆನಂದವಾಗಿ ಶಿವಪೂಜಾ ಕಾರ್ಯದಲ್ಲಿ ಮಗ್ನರಾಗುತ್ತಿದ್ದರು. ಜನತೆಯ ನಿಷ್ಠೆ ಪಾಶ್ಚಾತ್ಯ ನಾಗರಿಕತೆಯ ಫಲವಾಗಿ ಕಂದಿಕುಂದುತ್ತಿದ್ದ ಕಾಲವದು. ಆದರೆ ಆ ನಾಗರಿಕತೆಯ ಕಾಳಸರ್ಪದ ಕಡಿತಕ್ಕೆ ಶಿವಣ್ಣನವರು ಒಳಗಾಗದೆ ಆಚಾರ ಸಂಹಿತೆಯನ್ನು ಕಾಪಾಡಿಕೊಂಡು ನೀತಿನಿಷ್ಠೆಯನ್ನು ಬಲಿಸಿಕೊಂಡು ಆ ವಿದ್ಯಾರ್ಥಿ ನಿಲಯದಲ್ಲಿ ಒಂದು ಧರ್ಮನೀತಿ ಸಂಹಿತೆಯನ್ನೇ ತೆರೆದರು. ಇವರ ದಿವ್ಯಪ್ರಭಾವಕ್ಕೊಳಗಾದ ಸಹ ನಿವಾಸಿಗಳನೇಕರು ಈಗಲೂ ಅಂದಿನ ಸುಂದರ ದಿನಗಳನ್ನು ನೆನೆಸಿಕೊಳ್ಳುತ್ತಿದ್ದಾರೆ[13]. ವಿಕಾರ ಸನ್ನಿವೇಶಗಳನ್ನೇ ಮಾರ್ಪಡಿಸಿ ಶುದ್ಧ ಸಂಪ್ರದಾಯವನ್ನು ಪರಿಸರದಲ್ಲುಂಟುಮಾಡುವ ಮಹಾಸಾಮರ್ಥ್ಯ ಶಿವಣ್ಣನವರಿಗೆ ಇತ್ತೆಂದು ಅವರು ಶ್ಲಾಘಿಸುತ್ತಿದ್ದಾರೆ. ನೀತಿನಿಯಮ ಸಂಯಮಗಳಲ್ಲಿ ಗುರಿತಪ್ಪಿ ವರ್ತಿಸುವ ಅನೇಕರಲ್ಲಿ ಮಾನಸಿಕ ಪರಿವರ್ತನೆಮಾಡಿ ಸದಾಚಾರಕ್ಕೆ ಶಿವಣ್ಣನವರು ಒಳಪಡಿಸುತ್ತಿದ್ದರು. ಜಿಹ್ವಾಚಾಪಲ್ಯಕ್ಕೊಳಗಾಗಿ ಹೋಟಲುಗಳನ್ನಲೆಯುವುದಂತೂ ಶಿವಣ್ಣನವರಿಗೆ ಎಂದೂ ಇರಲೇ ಇಲ್ಲವಂತೆ. ಕಾಫಿಯನ್ನು ವಿದ್ಯಾರ್ಥಿ ನಿಲಯದಲ್ಲಾದರೂ ಮುಟ್ಟುತ್ತಿರಲಿಲ್ಲ. ಕಾಲೇಜಿನ ಸಮಾರಂಭಗಳಲ್ಲಿ ಉಪಾಹಾರ ವ್ಯವಸ್ಥೆಯೇರ್ಪಟ್ಟು ಶಿವಣ್ಣನವರು ಆ ಸನ್ನಿವೇಶದ ಪ್ರಭಾವಕ್ಕೊಳಪಟ್ಟಾಗಲೂ ಒಂದು ದಿನವೂ ಆ ತಿಂಡಿಯ ಪದಾರ್ಥಗಳನ್ನು ಮುಟ್ಟದೆ ಕೇವಲ ಹಣ್ಣುಹಂಪಲುಗಳನ್ನು ಸ್ವೀಕರಿಸಿಬಿಡುತ್ತಿದ್ದರು. ಶಿವಣ್ಣನವರ ಈ ಆಹಾರ ವಿಹಾರಗಳಲ್ಲಿನ ನಿಯಮಬದ್ಧ ನಡವಳಿಕೆಗಾಗಿ ಇವರನ್ನು 'ನೀವು ಶೀಘ್ರದಲ್ಲಿ ಯಾವುದಾದರೊಂದು ಮಠದ ಸ್ವಾಮಿಗಳಾಗುವುದು ಉತ್ತಮ' ಎಂದು ಅಪಹಾಸ್ಯ ಮಾಡುತ್ತಿದ್ದರು. ವಿರಾಮ ಕಾಲವನ್ನಂತೂ ಶಿವಣ್ಣನವರು ಕಾಡುಹರಟೆ, ವ್ಯರ್ಥಕಾಲಹರಣಗಳಲ್ಲಿ ಕಳೆಯದೆ ಸಿದ್ಧಗಂಗಾ ಕ್ಷೇತ್ರದ ಮಹಿಮೆ, ಉದ್ದಾನ ಶಿವಯೋಗಿಗಳ ವೀರಧೀರಗಂಭೀರ ಗುಣಶೀಲ ಸಂಪತ್ತಿಯ ವಿಚಾರ, ಮರುಳಾರಾಧ್ಯರ ವಾತ್ಸಲ್ಯ, ಮಠಾಚಾರದ ಅವಶ್ಯಕತೆ, ವೀರಶೈವ ಶಿವಶರಣರ ಕ್ರಿಯಾಜ್ಞಾನ ಸಮುಚ್ಚಯಾದಿ ವಿಷಯಗಳನ್ನು ಕುರಿತು ಸಹಪಾಠಿಗಳೊಡನೆ ಸಂಭಾಷಿಸುತ್ತಿದ್ದರು[13a]. ಕಾಲೇಜಿನಲ್ಲಿಯೂ ಶಿವಣ್ಣನವರ ಘನಗಂಭೀರ ನಡೆನುಡಿಗಳು ವಿದ್ಯಾಭ್ಯಾಸದಲ್ಲಿನ ತೀವ್ರಾಸಕ್ತಿಗಳು ಇವರ ಉಪಾಧ್ಯಾಯ ವರ್ಗದವರ ಗಮನವನ್ನು ತೀವ್ರವಾಗಿ ಸೆಳೆದಿದ್ದವು. ದಿ.ಎ.ಆರ್. ಕೃಷ್ಣಶಾಸ್ತ್ರಿಗಳು, ದಿ. ಟಿ.ಎಸ್. ವೆಂಕಣ್ಣಯ್ಯನವರು ಶಿವಣ್ಣನವರ ನಡೆನುಡಿ ಆಚಾರ ವ್ಯವಹಾರಗಳನ್ನು ತುಂಬಾ ಶ್ಲಾಘಿಸುತ್ತಿದ್ದರು. ಅಂತೆಯೇ ಶಿವಣ್ಣನವರೂ ತಮ್ಮ ವಿದ್ಯಾಗುರುಗಳಲ್ಲಿ ಭಯಭಕ್ತಿಯಿಂದಲೇ ನಡೆದುಕೊಳ್ಳುತ್ತಿದ್ದರು. ಟಿ.ಎಸ್. ವೆಂಕಣ್ಣಯ್ಯ, ಕೃಷ್ಣಶಾಸ್ತ್ರಿಗಳವರೇ ಮೊದಲಾದ ಅನೇಕ ಆದರ್ಶ ಉಪಾಧ್ಯಾಯರುಗಳ ವ್ಯಕ್ತಿತ್ವವನ್ನು ಈಗಲೂ ಶ್ಲಾಘಿಸುತ್ತಿದ್ದಾರೆ. ಹೀಗೆ ಬೆಂಗಳೂರಿನಲ್ಲಿ ಶಿವಣ್ಣನವರ ವಿದ್ಯಾರ್ಥಿ ಜೀವನಕ್ರಮ ಸಾಗುತ್ತಿರುವಾಗ ರಜಾ ಕಾಲಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಕಾಲ ಕಳೆಯುವುದೇ ಅಧಿಕವಾಯಿತು. ಹುಟ್ಟೂರಾದ ವೀರಾಪುರಕ್ಕೆ ಆಗಾಗ ಹೋಗಿ ನಾಲ್ಕಾರು ದಿನಗಳಿದ್ದು ಪುನಃ ಸಿದ್ಧಗಂಗೆಗೆ ಬರುತ್ತಿದ್ದುದೂ ಉಂಟು. ಸಿದ್ಧಗಂಗಾ ಕ್ಷೇತ್ರಕ್ಕೆ ಬಂದಾಗ ಹೆಚ್ಚಾಗಿ ಮರುಳಾರಾಧ್ಯರ ಸ್ನೇಹದಲ್ಲೇ ಬಹಳ ಕಾಲ ಕಳೆಯುತ್ತಿದ್ದರು. ಉದ್ದಾನ ಶಿವಯೋಗಿಗಳವರ ಕಣ್ಣಿಗೂ ಆಗಾಗ ಬೀಳುತ್ತಿದ್ದು ಅವರ ಪರೀಕ್ಷೆಗಳಿಗೊಳಗಾಗುತ್ತಿದ್ದರು. ಅವರನ್ನು ಕಂಡರಾಯಿತು ತುಂಬಾ ಭಯಕಂಪಿತರಾಗಿಬಿಡುತ್ತಿದ್ದರು. ಈ ಕಾರಣ ಹೆಚ್ಚಾಗಿ ಅವರ ಸನಿಹಕ್ಕೆ ಹೋಗುತ್ತಿರಲಿಲ್ಲ. ಮರುಳಾರಾಧ್ಯರನ್ನು ಕಂಡರೆ ಎಲ್ಲಿಲ್ಲದ ಸಲಿಗೆ, ಸಂಭ್ರಮ, ನಕ್ಕುನಗಿಸುವ ಸರಸಪ್ರಸಂಗ.

ಹೀಗಿದ್ದರೂ ಶಿವಣ್ಣನವರು ವೈರಾಗ್ಯಜೀವನೋಚಿತ ಏಕಾಂತಮೌನದ ಗೊಡ್ಡು ಜೀವಿಗಳಾಗಿರಲಿಲ್ಲ. ಸದಾ, ತನಗೊಪ್ಪುವ ಸಮಾನ ಮನೋಭಾವದ ಮಿತ್ರರಲ್ಲಿ ಸೇರಿಕೊಂಡೇ ಇರುತ್ತಿದ್ದರು. ಅನೇಕ ಸಮಯದಲ್ಲಿ ಹಾಸ್ಯದ ಹೊನಲನ್ನು ಹರಿಸಿ ನಕ್ಕುನಗಿಸುವುದನ್ನೂ ಅವರು ಮರೆತಿರಲಿಲ್ಲ. ಆದರೆ ಅವರ ಪ್ರತಿಯೊಂದು ಹಾಸ್ಯ ಪ್ರಸಂಗಗಳು ಬಹಳ ಗಂಭೀರವಾಗಿರುತ್ತಿದ್ದುವು. ಅಪಹಾಸ್ಯವಾಗಲಿ, ಅಶ್ಲೀಲಹಾಸ್ಯವಾಗಲಿ ಅವರದಾಗಿರಲಿಲ್ಲ. ಬೇರೊಬ್ಬರ ಮನನೋಯಿಸಬಲ್ಲ ಹಾಸ್ಯ, ಕೆಡೆನುಡಿಗಳಿಂದ ಮಾತ್ರ ಯಾವಾಗಲೂ ದೂರ. ಒಮ್ಮೆ ಮರುಳಾರಾಧ್ಯರ ಕೊಠಡಿಯಲ್ಲೇ ಇದ್ದರು. ಮರುಳಾರಾಧ್ಯರು ಎಲ್ಲಿಗೋ ಹೊರಟುಹೋಗಿದ್ದರು. ಮರುಳಾರಾಧ್ಯರೆಂದರೆ ಉಳಿದ ವಿದ್ಯಾರ್ಥಿಗಳಿಗೆಲ್ಲಾ ಭಯ. ವಿದ್ಯಾರ್ಥಿ

13. ಅಂಥವರಲ್ಲಿ ಶ್ರೀ ಹೆಚ್.ಬಿ. ಪುಟ್ಟಸ್ವಾಮಪ್ಪ, ಬಿ.ಎ. ಅವರು ಪ್ರಮುಖರು. ಇವರು ಅಸಿಸ್ಟೆಂಟ್ ಕಮೀಷನರ್ ಆಗಿ ನಿವೃತ್ತರಾಗಿ ಇಂದಿಗೂ ಶ್ರೀ ಶಿವಕುಮಾರ ಸ್ವಾಮಿಗಳವರ ನಿಕಟವರ್ತಿಗಳಾಗಿಯೇ ಜೀವಿಸುತ್ತಿದ್ದಾರೆ. ಅವರೂ ಶಿವಣ್ಣನವರೂ ಒಂದೇ ಕೊಠಡಿಯಲ್ಲಿದ್ದು ವಿದ್ಯಾಭ್ಯಾಸ ಮಾಡಿದವರು. ಅಂದಿನ ಶಿವಣ್ಣನವರ ಜೀವನದ ಬಗೆಗೆ ಅನೇಕ ಮಾಹಿತಿಗಳನ್ನು ಒದಗಿಸುವವರಲ್ಲಿ ಇವರು ಅತ್ಯಂತ ಮುಖ್ಯರು.

13a ಸಮರ್ಪಣೆ : ಶ್ರೀ ಹೆಚ್.ಬಿ. ಪುಟ್ಟಸ್ವಾಮಪ್ಪನವರ ಲೇಖನ ಪು. ೫೫.

ನಿಲಯದ ಪೂರ್ಣ ವ್ಯವಸ್ಥೆಯೆಲ್ಲ ಮರುಳಾರಾಧ್ಯರ ಹೊಣೆಗಾರಿಕೆಗೊಳಪಟ್ಟು ಆಗಾಗ ಸೋಮಾರಿ ವಿದ್ಯಾರ್ಥಿಗಳಿಗೆ ಶಿಕ್ಷಿಸುತ್ತಿದ್ದರು. ಮರುಳಾರಾಧ್ಯರ ಶಿಕ್ಷೆ ತಪ್ಪಿಸಿಕೊಂಡರೆ ಆಗಾಗ ಉದ್ದಾನ ಶಿವಯೋಗಿಗಳ ಕೈಗೆ ಸಿಕ್ಕಿಬಿದ್ದರಂತೂ ಪರೀಕ್ಷೆಯೇ ನಡೆಯುತ್ತಿತ್ತು. ಪಾಠಪ್ರವಚನ ವಿಷಯದಲ್ಲಿ ಉದ್ದಾನಪ್ಪನವರ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಸಿಗದಿದ್ದರೆ ವಿದ್ಯಾರ್ಥಿಗಳಿಗೆ ಘೋರಶಿಕ್ಷೆಯೇ ಕಾದಿರುತ್ತಿತ್ತು. ಹೀಗಾಗಿ ವಿದ್ಯಾರ್ಥಿಗಳೆಲ್ಲಾ ತಮ್ಮ ವಿದ್ಯಾಭ್ಯಾಸದಲ್ಲಿ ಸದಾ ಎಚ್ಚರವಾಗಿಯೇ ಇರುತ್ತಿದ್ದರು. ಮರುಳಾರಾಧ್ಯರಿಲ್ಲದ ಈ ಸಮಯವೆಂದರೆ ವಿದ್ಯಾರ್ಥಿಗಳ ಆಲಸ್ಯದ ದಿನ. ಇದನ್ನರಿತ ಶಿವಣ್ಣನವರು ಮರುಳಾರಾಧ್ಯರ ಕಫನಿಯನ್ನು ತೊಟ್ಟು, ಪಾವುಡವನ್ನು ತಲೆಗೆ ಸುತ್ತಿ, ಆವುಗೆಗಳನ್ನು ಮೆಟ್ಟಿ ಸಪ್ಪಳ ಮಾಡುತ್ತಾ ಅವರಂತೆ ಗುಡುಗುತ್ತಾ ವಿದ್ಯಾರ್ಥಿಗಳ ಕೊಠಡಿಗಳನ್ನು ಪ್ರವೇಶ ಮಾಡಿದರಂತೆ. ಮರುಳಾರಾಧ್ಯರು ಇಲ್ಲವೆಂದು ಮೈ ಮರೆತು ಮಲಗಿದ್ದ ವಿದ್ಯಾರ್ಥಿಗಳ ಜಂಘಾಬಲವೇ ಉಡುಗಿ ಗಡಗಡ ನಡುಗಿ ಮೇಲೆದ್ದು ಅಡ್ಡಬಿದ್ದು ಮುಖ ನೋಡಿ ಆ ಮೇಲೆ ಬಿದ್ದೆದ್ದು ಬಿದ್ದು ನಕ್ಕರಂತೆ. ಶಿವಣ್ಣನವರೂ ಹೊಟ್ಟೆ ಹುಣ್ಣಾಗುವಂತೆ ನಕ್ಕರಂತೆ. ಈ ಘಟನೆ ಶಿವಣ್ಣನವರ ಶುದ್ಧಾಂತಃಕರಣ ಪ್ರೇರಿತವೋ ಸಿದ್ಧಲಿಂಗೇಶ್ವರರ ಕೃಪೆಯೋ ಉದ್ದಾನ ಶಿವಯೋಗಿ ಪ್ರೇರಿತವೋ ಅದರ ಪರಿಚಯ ಮುಂದೆ ಆದೀತು.

**ರಜಾ ಕಾಲದಲ್ಲಿ ಶಿವಣ್ಣನವರ ವೀರಾಪುರದ ಜೀವನ :**

ರಜಾ ಕಾಲದಲ್ಲಿ ಸಿದ್ಧಗಂಗೆಯಲ್ಲಿ ಹೀಗೆ ಕಾಲ ಕಳೆದು ಕೆಲವು ದಿನಗಳು ವೀರಾಪುರದ ವಾಸಕ್ಕೆ ಹೋಗುತ್ತಿದ್ದರು. ವೀರಾಪುರದ ಹಳೆಯ ಬಾಲ್ಯಸ್ನೇಹಿತರೆಲ್ಲ ಶಿವಣ್ಣ ಬರುವುದನ್ನು ಜಾತಕ ಪಕ್ಷಿಗಳು ಮುಂಗಾರನ್ನೇ ನಿರೀಕ್ಷಿಸುವಂತೆ ನಿರೀಕ್ಷಿಸುತ್ತಲೇ ಇರುತ್ತಿದ್ದರು. ಅವರು ಊರಿಗೆ ಬಂದರೆ ಊರಿನಲ್ಲಿಯೇ ಏನೋ ಒಂದು ಬಗೆಯ ವಿದ್ಯುತ್ಸಂಚಾರದಂತಹ ಶಕ್ತಿ ಸಂಚಾರವಾಗುತ್ತಿತ್ತು. ಊರಿನ ಪ್ರತಿಯೊಬ್ಬರ ಬಾಯಲ್ಲೂ ಶಿವಣ್ಣನವರು ಬಂದರೆ ಅವನ ಸುದ್ದಿಯೇ ಮನೆಮಾತಾಗಿಬಿಡುತ್ತಿತ್ತು. ಹೀಗಾಗಿ ಇವರ ಬರುವಿಕೆ ವೀರಾಪುರಕ್ಕೆ ಹಬ್ಬದ ವಾತಾವರಣವನ್ನೇ ಸೃಷ್ಟಿಸಿಬಿಡುತ್ತಿತ್ತು. ಶಿವಣ್ಣನವರು ಬಂದರೆಂಬ ಸುದ್ದಿಯನ್ನು ಕೇಳಿ ಬಾಲ್ಯಸ್ನೇಹಿತರ ಗುಂಪೆಲ್ಲ ಸುತ್ತಮುತ್ತ ನೆರೆದು ತಮ್ಮ ಹಳೆಯಕಾಲದ ಸಿಹಿಕಹಿಗಳನ್ನೆಲ್ಲಾ ನೆನೆಸಿಕೊಳ್ಳುತ್ತಿತ್ತು. ಶಿವಣ್ಣ ತಮ್ಮೂರಿಗೆ ಬಂದರೆ ಊರ ಹೊರಗಿನ ಹೊಲದಲ್ಲಿ ದನಕರು ಕುರಿಗಳಿಗಾಗಿ ಕಟ್ಟಿದ ದೊಡ್ಡ ಮನೆಯ ಮುಂಭಾಗದ ಕೊಠಡಿಯಲ್ಲಿಯೇ ವಾಸಿಸುತ್ತಾ ಅದನ್ನೇ ತಮ್ಮ ವಿದ್ಯಾಭ್ಯಾಸದ ಕೊಠಡಿಯನ್ನಾಗಿ ಮಾಡಿಕೊಳ್ಳುತ್ತಿದ್ದರು. ಆ ಕೊಠಡಿಯನ್ನು ಬಿಟ್ಟು ಹೊರ ಬಂದರೆ ನೇರವಾಗಿ ಉತ್ತರಕ್ಕೆ ಕಾಣುವ ಶಿವಗಂಗೆಯ ಬೆಟ್ಟ, ಕಾಚಕಲ್ಲಪ್ಪನ ಬೆಟ್ಟಗಳ ಸೌಂದರ್ಯವೈಮನಗಳನ್ನು ಈಗಲೂ ಮರೆಸುತ್ತಿತ್ತು. ಪಶ್ಚಿಮ ದಿಗ್ಭಾಗದ ಹೊಳೆ, ಸುತ್ತಲೂ ಹೊಲಗದ್ದೆ, ಗಿಡಮರಗಳು ಇವುಗಳಿಂದ ಆವೃತವಾಗಿರುವ ಆ ಊರ ಹೊರಗಿನ ದನಕಟ್ಟುವ ಮನೆಯಲ್ಲಿ ವಾಸಿಸುವುದು ಶಿವಣ್ಣನವರಿಗೆ ಎಲ್ಲಿಲ್ಲದ ಆನಂದ. ಬಾಲ್ಯ ಸ್ನೇಹಿತರಿಗೆಲ್ಲ ತಾವಿರುವಲ್ಲಿಯೇ ವಿವಿಧ ಭಕ್ಷ್ಯಭೋಜ್ಯ ಹಣ್ಣುಹಂಪಲುಗಳ ಆತಿಥ್ಯ ನಡೆಯುತ್ತಿತ್ತು. ಅವರೆಲ್ಲ ಹೋದ ಮೇಲೆ ಶಿವಣ್ಣನವರು ಕೊಠಡಿಯಲ್ಲಿ ಮಲಗುತ್ತಿದ್ದರೆಂದಲ್ಲ. ಸಂಪೂರ್ಣ ಕೆಲಸದಲ್ಲಿ ತೊಡಗಿಬಿಡುತ್ತಿದ್ದರು. ಹೊಲಕ್ಕೆ ಹೋಗಿ ಹೊಲದಲ್ಲಿ ನಡೆಯುವ ಕಾರ್ಯದಲ್ಲಿ ಪ್ರತ್ಯಕ್ಷಭಾಗಿಗಳಾಗಿ ಎರಡಾಳಿನ ಕೆಲಸ ಕಾರ್ಯ ಮಾಡಿ ಮುಗಿಸುತ್ತಿದ್ದರು. ಮನೆಯಲ್ಲಿ ಗೊಬ್ಬರ ಹೇರಲು ಗಾಡಿಗಳನ್ನು ಕಟ್ಟಿದರೆ ತಲೆಗೊಂದು ವಸ್ತ್ರವನ್ನು ಸುತ್ತಿಕೊಂಡು ಗೊಬ್ಬರ ತುಂಬಿ ಗಾಡಿಯನ್ನು ಹೊಲಕ್ಕೆ ಕಳಿಸಿಕೊಡುವುದು. ಗಾಡಿ ಬರುವುದರೊಳಗೆ ಆ ಗೊಬ್ಬರವನ್ನು ದುಂಡಗೆಮಾಡುವುದು ಇವೇ ಮೊದಲಾದ ಕ್ರಿಯೆಯಲ್ಲಿ ಅಚಲಶ್ರದ್ಧೆಯಿಂದ ದುಡಿಯುತ್ತಿದ್ದರು. ಇವರು ಎರಡು ಎಕರೆ ತೋಟವನ್ನು ಏತದ ನೀರೆತ್ತಿಯೇ ಮಾಡುತ್ತ ಬಂದಿದ್ದರು. ನಸುಕಿನಲ್ಲಿಯೇ ಹೋಗಿ ಹತ್ತು ಘಂಟೆಯವರೆಗೆ ಅವಿಶ್ರಾಂತವಾಗಿ ನೀರೆತ್ತಿ ನೋಡುವವರನ್ನೆಲ್ಲಾ ಬೆಕ್ಕಸ ಬೆರಗುಗೊಳಿಸುತ್ತಿದ್ದುದನ್ನು ಕಂಡವರು ಈಗಲೂ ವೀರಾಪುರದಲ್ಲಿ ಅನೇಕರಿದ್ದಾರೆ. ಒಟ್ಟಿನಲ್ಲಿ ಅವರೊಂದು ಉತ್ಸಾಹದ ಬುಗ್ಗೆಯೆನಿಸಿದ್ದರು. ಸತತೋದ್ಯೋಗ–ಶೀಲಸಂಹಿತೆಯ ಆಚಾರ್ಯರಂತಿದ್ದರು, ಎನ್ನಬಹುದು. ಶ್ರಮದ ಕೆಲಸಗಳನ್ನು ತಡೆಯಬಲ್ಲ ಶಕ್ತಿ ಅಂಗಾಂಗಗಳಲ್ಲಿ ತುಂಬಿ ತುಳುಕುತ್ತಿತ್ತು. ಬೇಸರ ಪಟ್ಟುಕೊಳ್ಳುವುದು ಮುಖ ಸೊಟ್ಟಗೆ ಮಾಡಿ ಕೆಲಸದಿಂದ ತಪ್ಪಿಸಿಕೊಂಡು ಅಲೆಯುವುದು, ಬಟ್ಟೆಬರೆ ಮೈ ಕೈಗಳು ಕೊಳೆಯಾದಾವೆಂದು ಹೆದರಿ. ಇನ್ನೊಬ್ಬರಿಗೆ ಕಾರ್ಯ ಮಾಡಲು ಹೇಳುವ ಗೌಡಿಕೆಯು ಕೆಲಸಕ್ಕೂ ಶಿವಣ್ಣನವರಿಗೂ ಬಹುದೂರ. ಯಾವ ಕೆಲಸ ಮಾಡಲು ನನ್ನಿಂದ ಸಾಧ್ಯವಿಲ್ಲ? ಎನ್ನುವುದೇ ಕೆಲಸದ ವಿಷಯದಲ್ಲಿ ಶಿವಣ್ಣನವರ ಸವಾಲು. ಎಲ್ಲ ಕೆಲಸಗಳನ್ನು ಮನಮುಟ್ಟಿ ಮಾಡುವುದು ಅವರ ಜಾಯಮಾನಕ್ಕೆ ಅಂಟಿಬಂದ ಒಂದು ಶ್ರದ್ಧಾವಿಶೇಷ. ಕೆಲಸ ಕಾರ್ಯಗಳನ್ನು ಮುಗಿಸಿ ತಾವೇ ತಮ್ಮ ಶಿವಪೂಜಾ ಕೊಠಡಿಯನ್ನು ಸಾರಣೆಗಳಿಂದ ಶುದ್ಧೀಕರಿಸಿಕೊಂಡು, ಹೂಪತ್ರೆಗಳನ್ನು ಎತ್ತಿತಂದು ಸ್ನಾನಮಾಡಿ ಶಿವಪೂಜೆ ಮಾಡುವಲ್ಲಿ ಆಗುವ ಆನಂದ ಬೇರೆಯವರಿಂದ ಮಾಡಿಸಿದ ಈ ಕಾರ್ಯಗಳಿಂದ ಆಗುತ್ತಿರಲಿಲ್ಲ. ಅಂತೆಯೇ ತಮ್ಮ ಸಂಬಂಧದ ಎಲ್ಲ ಕಾರ್ಯಗಳನ್ನು ತಾವೇ ಮಾಡಿಕೊಳ್ಳುವ ಆತ್ಮಾವಲಂಬನೆಯಲ್ಲಿ ಶಿವಣ್ಣನವರು ಮೊದಲಿನಿಂದಲೂ ತಮ್ಮನ್ನು ತೊಡಗಿಸಿಕೊಂಡೇ ಬಂದಿದ್ದವರು. ಈಗ ಆ ಎಲ್ಲಾ ಕ್ರಿಯೆಗಳೂ ಶ್ರದ್ಧೆ ಕಡುನಿಷ್ಠೆಗಳಿಂದ ಗಟ್ಟಿಗೊಂಡು ಸಹಜ ಕ್ರಿಯೆಗಳಾಗಿಬಿಟ್ಟಿದ್ದವು. ಶಿವಪೂಜೆ ಮಾಡಿ ಪ್ರಸಾದ ಸ್ವೀಕರಿಸಿ ಓದುವುದಕ್ಕೆ ಕುಳಿತರೆಂದರೆ ಎಷ್ಟು ಹೊತ್ತಾದರೂ ಏಕಾಗ್ರಚಿತ್ತರಾಗಿ ಓದುವುದ

ನ್ನೆಲ್ಲಾ ಓದಿಮುಗಿಸಿಬಿಡುತ್ತಿದ್ದರು. ಓದುವುದು ಬೇಸರವಾದೊಡನೆ ಹೊಲಗದ್ದೆಗಳ ಕೆಲಸಕ್ಕೆ ಹಾಜರಾಗಿ ಮನವ ಬಳಲಿಸಿ, ತನುವ ದಂಡಿಸಿ ಕಾರ್ಯ ಮಾಡುವುದರಲ್ಲಿ ಮಗ್ನರಾಗಿಬಿಡುತ್ತಿದ್ದರು. ವಿರಾಮವೆಂದರೆ: 'ಒಂದು ಕೆಲಸ ಮಾಡಿ ಮುಗಿಸಿ ಇನ್ನೊಂದು ಕೆಲಸ ಮಾಡುವುದಕ್ಕೆ ತೊಡಗುವುದು' ಎಂಬ ಸೂತ್ರದ ಪರಿಚಯ ಶಿವಣ್ಣನವರಿಗೆ ವಿದ್ಯಾಭ್ಯಾಸ ಕಾಲದಲ್ಲೇ ಪರಿಚಯವಾಗಿ ಹೋಗಿತ್ತು. ನಿಯಮ ತಪ್ಪಿ ಕ್ರಮ ತಪ್ಪಿ ವ್ಯವಹರಿಸುವ ವ್ಯವಹಾರದಿಂದ ಶಿವಣ್ಣ ಎಷ್ಟೋ ದೂರ ಹೊರಟುಬಂದು, ಅಚಲ ನಿರ್ಧಾರದ, ದೃಢ ಸಂಕಲ್ಪದ, ಕರ್ತವ್ಯಕೌಶಲದ ಸಾಕಾರಮೂರ್ತಿಗಳನ್ನಾಗಿ ತಾವೇ ತಮ್ಮನ್ನು ಮೊದಲಿನಿಂದಲೂ ರೂಪಿಸಿ ಕೊಂಡು ಬಂದಿದ್ದರು. ಒಂದು ದೃಷ್ಟಿಯಿಂದ ವಿಚಾರ ಮಾಡಿದರೆ ಶಿವಣ್ಣನವರ ಬಾಲ್ಯದ ಬಾಲ್ಯೋಚಿತ ಚಟುವಟಿಕೆ, ಪ್ರತಿಭೆ, ಚೇಷ್ಟೆ, ಆಮೋದ ಪ್ರಮೋದಗಳೆಲ್ಲ ಈಗ ಉದಾತ್ತೀಕರಣದಿಂದ ಕ್ರಿಯಾಶಕ್ತಿಯಾಗಿ ಮಾರ್ಪಟ್ಟು ಅವರೀಗ ಪ್ರಬಲಶಕ್ತಿಯ ಸತ್ಕ್ರಿಯಾಚಾರಸಂಪನ್ನ ಮೂರ್ತಿಯಾಗಿಬಿಟ್ಟಿದ್ದರು. ಅದ್ದರಿಂದಲೇ ಅಸಾಧ್ಯವೆಂಬುದನ್ನು ಕಂಡರಿಯರು; ಕೇಳಿ ತಿಳಿಯರು. ದೈವಕ್ಕೆ ಶರಣುಹೊಡೆದು ಕೈಕಟ್ಟಿಕೊಂಡು ಕುಳಿತುಕೊಳ್ಳುವ ಸೋಮಾರಿಗಳ ದೈವವಾದ, ಕುರುಡು ನಂಬಿಕೆಯಿಂದ ದೂರರಾಗಿ ಸತ್ಯಶುದ್ಧಕಾಯಕದ ಮರ್ಮವನ್ನರಿತು ಆಚರಿಸಿ ಫಲಕ್ಕಾಗಿ ಕಾಯ್ದು ಕುಳಿತುಕೊಳ್ಳದೆ ಮುಂದುವರಿಯುತ್ತಿದ್ದರು. ಅಂತೆಯೇ ಇವರ ಕಾಯಕಕ್ಕೊಂದು ಪ್ರಬಲ ಶಕ್ತಿ ಬಂದು ಆ ಶಕ್ತಿಯೇ ಕಾಯಕಕ್ಕೆ ಫಲವನ್ನೆಳೆದು ತಂದುಕೊಡುತ್ತಿತ್ತು. ಶಿವಶರಣರ ಈ ಕಾಯಕ ಸಂಹಿತೆ, ವಿದ್ಯಾಭ್ಯಾಸ ಕಾಲದಲ್ಲಿ ಶಿವಣ್ಣನ ಕ್ರಿಯಾಮುಖದಲ್ಲಿ ಮೈದಾಳಿದುದು ಅದೊಂದು ಮಹಾಕಾರಣದ ಮುನ್ಸೂಚನೆಯೇ ಆಗಿತ್ತು. ಒಟ್ಟಿನಲ್ಲಿ ಶಿವಣ್ಣನವರು ತಮ್ಮ ವಯೋಮಾನ ಪರಿಮಿತಿಯ ಕ್ರಿಯೆ ಜ್ಞಾನಗಳ ಅರಿವಿನಿಂದ ಅದೆಷ್ಟೋ ವರ್ಷಗಳ ಮುಂದೆ ಏರಿಹೋಗಿದ್ದು, ಲೋಕವೃತ್ತದಲ್ಲಿ ಆಗಲೇ ತಮ್ಮ ಗಂಭೀರ ಸ್ಥಾನಮಾನಗಳನ್ನು ಸಿದ್ಧಗೊಳಿಸಿ ಕೊಂಡಿದ್ದರೆಂದು ನಿರ್ವಿವಾದವಾಗಿ ಹೇಳಬಹುದಾಗಿದೆ.

'ಅನಿರ್ವೇದಂಚ ದಾಕ್ಷ್ಯಂಚ ಮನಸಶ್ಚಾಪರಾಜಯಂ ।
ಕಾರ್ಯಸಿದ್ಧಿಪರಾಣ್ಯಾಹುಃ ತಸ್ಮಾದ್ದೇತದ್‌ಬ್ರವೀಮ್ಯಹಂ'[14]

-ಎಂಬೊಂದು ಸುಭಾಷಿತವುಂಟು. ಕಾರ್ಯಸಿದ್ಧಿಯಾಗಬೇಕಾದರೆ ಬೇಸರವಿಲ್ಲದ ಉತ್ಸಾಹ, ದಕ್ಷತೆ, ಸೋಲನ್ನಪ್ಪಿಕೊಳ್ಳದ ಮನೋಭಾವ ಇವು ಬೇಕೆಂದು ಬಲ್ಲವರು ಹೇಳುವರು. ಈ ಮಾತು ಶಿವಣ್ಣನವರ ಜೀವನಕ್ಕೆ ಪೂರ್ಣ ಅನ್ವಯವಾಗುತ್ತಿತ್ತು. ಇಷ್ಟೇ ಅಲ್ಲ, ಈ ಮಾತೂ ಕೂಡ ಅವರ ಕಾರ್ಯಕ್ಷಮತೆಗೆ ಕಡಿಮೆಯೇ. 'ಕ್ರಿಯಾಶುದ್ಧಿಯಾದಲ್ಲಿ ಭಾವಶುದ್ಧವಾಗಿಪ್ಪುದು. ಭಾವ ಶುದ್ಧವಾದಲ್ಲಿ ಸರ್ವೇಂದ್ರಿಯಗಳೂ ಏಕೇಂದ್ರಿಯವಾಗಿ ಚಿತ್ತಶುದ್ಧವಾಗಿಪ್ಪುದು' ಎಂಬ ಶರಣರ ನುಡಿಯ ಅರ್ಥಮಾಡಿ ಕೊಂಡು ಆಚರಿಸುವವರು ಜೀವನದಲ್ಲಿ ತೊಳಲೇ ಬೇಕಾಗಿಲ್ಲ. ಅವರು ಸುಖ ಬಂದರೆ ಹಿಗ್ಗರು, ದುಃಖ ಬಂದರೆ ಕುಗ್ಗರು. ಎಲ್ಲವೂ ಶಿವನ ಪ್ರಸಾದವೇ ಎಂಬ ಅತ್ಯಂತ ನಿರ್ಧಾರಕ್ಕೊಳಗಾಗಿ ಜೀವನಪಥದಲ್ಲಿ ದುಃಖವೆಂಬುದನ್ನೇ ಕಾಣದಂತಾಗುತ್ತಾರೆ. ಇಲ್ಲಿ ಆತ್ಮನಿರೀಕ್ಷಣೆಯನ್ನವರು ಮಾಡಿಕೊಂಡು ತಮ್ಮನ್ನು ತಾವು ತಿದ್ದಿಕೊಂಡು, ಶಿವಭಾವಾಪನ್ನಮನಸ್ಕರಾಗಿ ಲೋಕದ ದೃಷ್ಟಿ ಯಲ್ಲಿ ದುಃಖವೆಂಬಂಶವನ್ನೇ ಸುಖವನ್ನಾಗಿ ಮಾರ್ಪಡಿಸಿಕೊಂಡು ನಿತ್ಯತೃಪ್ತ ಜೀವನದಲ್ಲಿ ಸುಖಿಸುತ್ತಾರೆ. ಶಿವಣ್ಣನವರಿಗೆ ವಿದ್ಯಾರ್ಥಿ ಜೀವನದಲ್ಲಿ ಈ ರಹಸ್ಯದ ಅರಿವಾಗಿ ಅದರಂತೆ ಆಚರಿಸುವ ಹುಸಿಯಿಲ್ಲದ ಜೀವನಕ್ಕವರಳವಟ್ಟಿದ್ದು, ಅವರ ಮಹಾ ಮಾನವತ್ವದ ಸುಪ್ರಭಾತಕ್ಕೊಂದು ಬೆಳ್ಳಿಯ ಚುಕ್ಕೆ ಮೂಡಿದಂತೆಂದು ಹೇಳಿದರೆ ಅತಿಶಯೋಕ್ತಿಯೇನೂ ಆಗಲಾರದು.

'ಸತ್ಕ್ರಿಯೆಯೆಂಬುದೇ ಜ್ಞಾನ, ಜ್ಞಾನದೊಡಲೇಕ್ರೀ. ಅದೆಂತೆಂದೊಡೆ:
ಸುಗಂಧವನಿರಿಸಿಕೊಂಡಿಪ್ಪ ಕರಂಡದಂತೆ, ಆ ಒಡಲಿಲ್ಲದೆ ಗಂಧವಿರಬಲ್ಲುದೆ?
ಐಘಟದೂರ ರಾಮೇಶ್ವರ ಲಿಂಗವು ಕುರುಹಾಗಿ ಅರಿವ ಇರಿಸಿಕೊಂಡಿದ್ದಿತು'

(—ಮೆರೆಮಿಂಡದೇವ)

-ಕ್ರಿಯೆಯೇ ಜ್ಞಾನ, ಜ್ಞಾನವೇ ಕ್ರಿಯೆ—ಈ ಮರ್ಮವನ್ನು ಶರಣರು ಸಂಪೂರ್ಣ ಒಪ್ಪಿದವರು. ಏರಿದರೆ ಅರಿವು, ಇಳಿದರೆ ಕ್ರಿಯೆ ಈ ಮಾತಿನ ಅರ್ಥವೂ ಇದೇ. ಕ್ರಿಯಾಜ್ಞಾನ ಸಮುಚ್ಚಯ ಸೂತ್ರವನ್ನು ಶಿವಣ್ಣನವರು ತಮ್ಮ ಸಮಗ್ರ ಶಕ್ತಿಗೆ ಅಳವಡಿಸಿ ಕೊಂಡು ಆ ಮಾರ್ಗದಲ್ಲಿ ಮುನ್ನಡೆಯುವ ಸತ್ಸಂಕಲ್ಪಫಲವಾಗಿಯೇ ಅವರ ವ್ಯಕ್ತಿತ್ವಕ್ಕೊಂದು ಪ್ರಬಲಾಕರ್ಷಣೆ, ಪೂರ್ವ ವಯಸ್ಸಿನಲ್ಲಿಯೇ ಬಂದ ಕಾರಣವಾಗಿ ಅವರೊಬ್ಬ ಆದರ್ಶಪುರುಷರೆಂದು ಎಲ್ಲರ ಮಾನಮನ್ನಣೆಗಳಿಗೆ ಪಾತ್ರರಾಗಲು ಕಾರಣ ವಾಗಿತ್ತು. ಇಷ್ಟಾದರೂ ಇವರು ಅತ್ಯಂತ ವಿನಯಶಾಲಿಗಳಾಗಿ ಗುರುಹಿರಿಯರಲ್ಲಿ ಅಪಾರ ಗೌರವಭಾವದಿಂದ ನಡೆದುಕೊಳ್ಳು ತ್ತಿದ್ದರೆಂಬುದನ್ನು ಜ್ಞಾಪಿಸಲೇಬೇಕು. ವಿದ್ಯಾವಂತ—ಅವಿದ್ಯಾವಂತ ಎಂಬ ತಾರತಮ್ಯವನ್ನು ಎಂದೂ ಕಾಣರು. ವ್ಯಕ್ತಿಯ

14. ಇದೊಂದು ರಾಮಾಯಣದಲ್ಲಿನ ಸುಭಾಷಿತ. ಅಂಗದನು ಸೀತಾನ್ವೇಷಣೆಯ ಕಾಲದಲ್ಲಿ ವಾನರರಿಗೆಲ್ಲ ಹೇಳುವ ಮಾತು. (ಸುಭಾಷಿತ ಸಂಗ್ರಹ ಕ.ಸಾ. ಪರಿಷತ್ ಪ್ರಕಟನೆ)

ವ್ಯಕ್ತಿತ್ವವನ್ನು ಅವನ ಕ್ರಿಯಾಶುದ್ಧಿ ಮತ್ತು ಆ ಕ್ರಿಯೆಯ ಮೇಲೆ ಅವನು ಒತ್ತಿರುವ ತಮ್ಮ ಪ್ರಭಾವಮುದ್ರೆ-ಇವುಗಳ ಮೇಲೆ ಅಳೆಯುತ್ತಿದ್ದರು. ಏನೂ ಓದದೆಯಿದ್ದರೂ ಅವರು ಶುದ್ಧಕಾಯಕಸಂಪನ್ನರಾಗಿದ್ದರೆ ಅವರನ್ನು ಅತ್ಯಂತ ಗೌರವದಿಂದ ಕಂಡು, ಇಂಥವರೇ ರಾಷ್ಟ್ರ ಸಂಪತ್‌ಪುರುಷನ ಬೆನ್ನುಮೂಳೆಯೆಂಬುದನ್ನು ಕಂಡುಕೊಂಡಿದ್ದರು.

'ಅಭಿವಾದನಶೀಲಸ್ಯ, ನಿತ್ಯಂ ವೃದ್ಧೋಪಸೇವಿನಃ,
ಚತ್ವಾರಿ ತಸ್ಯವರ್ಧಂತೇ, ಆಯುರ್ವಿದ್ಯಾಯಶೋಬಲಂ'

ಗುರುಹಿರಿಯರಿಗೆ ಶಿರಬಾಗಿ, ಅವರ ಸೇವಾಮನೋಭಾವವುಳ್ಳವರ ಆಯುಸ್ಸು. ವಿದ್ಯೆ, ಯಶಸ್ಸು ಬಲ ಈ ನಾಲ್ಕೂ ವೃದ್ಧಿಗೊಳ್ಳುತ್ತವೆಂಬ ಸುಭಾಷಿತಾರ್ಥವನ್ನು ಜೀವನಕ್ಕೆ ಚೆನ್ನಾಗಿ ಅಳವಡಿಸಿಕೊಂಡಿದ್ದರು ಶಿವಣ್ಣನವರು.

**ಮಹಾಯೋಗ :**

ರಜಾ ಕಾಲವನ್ನು ಪೂರೈಸಿ ಯಥಾಪ್ರಕಾರ ಶಿವಣ್ಣನವರು ಬೆಂಗಳೂರಿಗೆ ಬಂದು ಪುನಃ ತಮ್ಮ ವಿದ್ಯಾಭ್ಯಾಸ ಜೀವನದಲ್ಲಿ ತಲ್ಲೀನರಾಗಿಬಿಡುತ್ತಿದ್ದರು. ಸೆಂಟ್ರಲ್ ಕಾಲೇಜ್‌ನಲ್ಲಿ ಭೌತ ಮತ್ತು ಗಣಿತಶಾಸ್ತ್ರಗಳನ್ನು ಐಚ್ಛಿಕವಿಷಯಗಳನ್ನಾಗಿ ಸ್ವೀಕರಿಸಿ ಎರಡು ವರ್ಷ ಮುಗಿಸಿ ಮೂರನೆಯ ವರ್ಷದಲ್ಲಿ ಮುಕ್ಕಾಲು ಭಾಗ ಕಳೆದಿತ್ತು. ಜನವರಿ ತಿಂಗಳ ಅರ್ಧ ಭಾಗ ಕಳೆದಿತ್ತು. ಎರಡು, ಎರಡೂವರೆ ತಿಂಗಳಲ್ಲಿ ಬಿ.ಎ ಅಂತಿಮ ಪರೀಕ್ಷೆ ಕಾದು ಕುಳಿತಿತ್ತು. ಶಿವಣ್ಣನವರು ತಮ್ಮ ಎಲ್ಲ ಗಮನವನ್ನೂ ಓದಿನಲ್ಲಿ ಕೇಂದ್ರೀಕರಿಸಿ ಉತ್ತಮ ರೀತಿಯ ತೇರ್ಗಡೆಯ ಯಶಸ್ಸಿಗಾಗಿ ಶ್ರಮಿಸುತ್ತಿದ್ದರು. ೧೯೩೦ನೆಯ ಜನವರಿ ೧೬ನೆಯ ದಿನಾಂಕ ಬಂತು. ಆ ದಿನ ಶಿವಣ್ಣನವರಿಗೆ ಕನಸು ಮನಸಿನಲ್ಲಿ ನೆನೆಯದ ಒಂದು ದಾರುಣವಾರ್ತೆಯ ಬರಸಿಡಿಲು ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಹಠಾತ್ತಾಗಿ ಬಂದು ಅಪ್ಪಳಿಸಿತು. ಆ ಸುದ್ದಿಯನ್ನು ಅವರ ಕಿವಿಗಳೇ ಒಪ್ಪಲಿಲ್ಲ. ಪುನಃ ಪುನಃ ನಿಜವೇ ? ಛೆ! ಹಾಗಾಗಿರಲಾರದು ! ಎಂದು ತಮಗೆ ತಾವೇ ಪ್ರಶ್ನೆ ಹಾಕಿಕೊಂಡರು. ಆದರೇನು ಬಂದ ಸುದ್ದಿ ಸತ್ಯವೇ ಆಗಿತ್ತು. 'ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತರಾಧಿಕಾರಿ ಶ್ರೀ ಮರುಳಾರಾಧ್ಯರು ಲಿಂಗೈಕ್ಯರಾದರು' ಎಂಬುದೇ ಆ ದಾರುಣ ವಾರ್ತೆ. ಶ್ರೀ ಮರುಳಾರಾಧ್ಯರ ಮಹಾಸ್ನೇಹಿಗಳಾದ ಶಿವಣ್ಣನವರಿಗೆ ಈ ವಾರ್ತೆ ಕರ್ಣಕಠೋರವಾಯಿತು. ಎದೆ ಬಡಿದುಕೊಳ್ಳತೊಡಗಿತು. ಕೈಕಾಲುಗಳು ಕ್ಷಣ ಹೊತ್ತು ನಡುಗಿದಂತಾದುವು. ಧೈರ್ಯ ತಂದುಕೊಂಡು ಸ್ನೇಹಿತ ಪುಟ್ಟಸ್ವಾಮಪ್ಪನವರೊಡನೆ ಶ್ರೀಮಠಕ್ಕೆ ಧಾವಿಸಿ ಬಂದರು. ಇವರನ್ನು ಮಠಕ್ಕೆ ಧಾವಿಸಿ ಬಂದರೆನ್ನುವುದಕ್ಕಿಂತ ಶ್ರೀ ಸಿದ್ಧಗಂಗಾ ಕ್ಷೇತ್ರದಿಂದ ಬಂದ ಒಂದು ಬಲವತ್ತರವಾದ ಹಗ್ಗವು ಇವರ ಕೈಕಾಲುಗಳನ್ನು ಕಟ್ಟಿ ಹೊತ್ತುಕೊಂಡು ಬಂದು ತಂದು ಹಾಕಿತೆನ್ನುವುದೇ ಸೂಕ್ತ. ಇವರು ಶ್ರೀ ಮಠಕ್ಕೆ ಬರುವುದರೊಳಗೆ ತಮ್ಮ ನೆಚ್ಚಿನ ಗುರುಗಳೂ, ಒಂದು ರೀತಿಯಲ್ಲಿ ಸ್ನೇಹಿತರೂ ಆಗಿದ್ದ ಶ್ರೀ ಮರುಳಾರಾಧ್ಯರು ಕಣ್ಮುಚ್ಚಿಬಿಟ್ಟಿದ್ದರು. ಶಿವಣ್ಣನವರ ದುಃಖ ಉಮ್ಮಳಿಸಿಬಂದು ಸ್ವಲ್ಪ ಹೊತ್ತು ಬಿಕ್ಕಿ ಬಿಕ್ಕಿ ಚಿಕ್ಕ ಮಕ್ಕಳಂತೆ ಅತ್ತುಬಿಟ್ಟರು. ಪುನಃ ಧೈರ್ಯತಂದುಕೊಂಡು ಅವರ ಸಮಾಧಿ ಕಾರ್ಯದಲ್ಲಿ ತೊಡಗಿದರು. ಈ ಸಮಯದಲ್ಲಿ ಶಿವಣ್ಣನವರಿಗೆ "ಅನಿತ್ಯಾನಿ ಶರೀರಾಣಿ ವಿಭವೋನೈವ ಶಾಶ್ವತಃ. ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ" ಎಂಬ ಮಾತು ಪದೇ ಪದೇ ಮನಸ್ಸಿಗೆ ತಟ್ಟತೊಡಗಿತು.

**ಶಕ್ತಿಪಾತ :**

ಇತ್ತ ಉದ್ದಾನ ಶಿವಯೋಗಿಗಳು ತಮ್ಮ ಮುಂದಿನ ಮಾರ್ಗಕ್ಕಾಗಿ ಬೆಟ್ಟವನ್ನೇರಿ ಅಮ್ಮನವರ ಗವಿಯಲ್ಲಿ ಭಾವ ಸಮಾಧಿಯಲ್ಲಿ ಮುಳುಗಿದರು[15]. ಆಗ ಅವರು ಸುಲಲಿತವಾದ ತಮ್ಮ ಅಂತರ್ಮುಖದ ಕನ್ನಡಿಯಲ್ಲಿ ಓರ್ವ ತೇಜೋ ವಿಶೇಷದ, ಭಸ್ಮೋದ್ಧೂಳಿತ ಶರೀರದ, ರುದ್ರಾಕ್ಷ ಮಾಲಾಲಂಕೃತ ಬಾಲ ಶಿವಯೋಗಿಯನ್ನು ನೋಡಿದರು. ಆ ಬಾಲ ಶಿವಯೋಗಿಯ ಮುಖವನ್ನು ನೋಡಿದ ಪರಿಚಯವಾಯಿತು. ಸಿದ್ಧಲಿಂಗೇಶ್ವರನ ಕಾರುಣ್ಯಕ್ಕೆ ತಲೆಬಾಗಿದರು. ಸಂಕಲ್ಪ ಮಾತ್ರದಿಂದ ತತ್ತ್ವ ವಿಭೂತಿಯನ್ನು ಅವರ ಪೆರೆನೊಸಲಿಗೆ ಧರಿಸಿ, ತಲೆಯ ಮೇಲೆ ಕೈಯಿಟ್ಟು ತಮ್ಮ ಅಂತಃಕರಣ ಗ್ರಂಥಿಯನ್ನು ಬಿಚ್ಚಿ ಸುರಿಸಿದರು. ಶಿವಯೋಗಿಯ ಸಂಕಲ್ಪ ಮೂದೆರನಾದುದು. ಒಂದು: ಸಂಕಲ್ಪ ಮಾತ್ರದಿಂದ ಅಂತಃಕರಣ ಗ್ರಂಥಿಯನ್ನು ಬಿಚ್ಚಿ ಎರೆದು ಶಿಷ್ಯನ ಚಿತ್ತಭೂಮಿಯಲ್ಲಿ ಅಪೂರ್ವ ತೇಜೋವಿಶೇಷವನ್ನು ಉಂಟುಮಾಡುವುದು, ಇನ್ನೊಂದು : ದೃಷ್ಟಿಪಾತದಿಂದ. ಮತ್ತೊಂದು: ಸ್ಪರ್ಶದಿಂದ. ಸಂಕಲ್ಪ ಮಾತ್ರದಿಂದ ಕಾರುಣ್ಯವನ್ನು ತೋರುವ ಶಕ್ತಿ ಉದ್ದಾನ ಸ್ವಾಮಿಗಳವರಿಗಿತ್ತು. ಅನೇಕ ಘಟನೆಗಳನ್ನು ಅವರ ಇತಿಹಾಸ ಪುಟಗಳಲ್ಲಿ ನೋಡಿದವರಿಗೆ ಅದರ ಪರಿಚಯವಿತ್ತು. ಅದ್ಭುತ ಸಂಕಲ್ಪಶಕ್ತಿಯ ಶಿವಯೋಗಿಗಳವರು.

ಇತ್ತ ಶಿವಣ್ಣನವರು ಮರುಳಾರಾಧ್ಯರ ಸಮಾಧಿ ಕಾರ್ಯದಲ್ಲಿ ತತ್ಪರರಾಗಿರುತ್ತಿದ್ದಂತೆ ತಮಗರಿಯದಂತೆ ತಮ್ಮ ಭಾವನಾ ಸಾಮ್ರಾಜ್ಯದಲ್ಲಿ ಉಂಟಾಗುತ್ತಿರುವ ಅದ್ಭುತ ಪರಿವರ್ತನೆಯ ತುಮುಲದಲ್ಲಿ ಮೈಮೇಲೆ ಎಚ್ಚರವಿಲ್ಲದವರಂತೆ ವರ್ತಿಸುತ್ತಿದ್ದರು. ಒಂದು ಕಡೆಯಲ್ಲಿ ಮರುಳಾರಾಧ್ಯರನ್ನು ನೆನೆನೆನೆದು ದುಃಖಾವೇಗವನ್ನು ತಡೆದು ಕರ್ತವ್ಯದಲ್ಲಿ ಮಗ್ನರಾಗಿರುತ್ತಿದ್ದಂತೆ

15. ಈ ಸಮಯದಲ್ಲಿನ ವಿಶೇಷ ಘಟನೆಯನ್ನು ಉದ್ದಾನ ಶಿವಯೋಗಿಗಳ ಚರಿತ್ರೆಯಲ್ಲಿ ಹೇಳಿದ್ದೇನೆ. ಅಲ್ಲಿ ನೋಡುವುದು.

ಮತ್ತೊಮ್ಮೆ ಬೆಳ್ಳಂಬೆಳಕಾಗಿ, ಬೆಳಕು ಕತ್ತಲೆಯ ಕಾಣುವ ಸಂದೇಹದ ದಂದುಗದಲ್ಲಿ ಮುಳುಮುಳುಗಿ ಏಳುತ್ತಿದ್ದರು. ಎಂದೂ ಇಲ್ಲದ ಅಪೂರ್ವ ಆನಂದದಲ್ಲಿ ಒಮ್ಮೆ ತೇಲಿದರೆ, ದುಃಖ ಸಂಕಟದ ಆವೇಗದಲ್ಲಿ ಒಮ್ಮೆ ಮುಳುಗುತ್ತಿದ್ದರು, ಮುಳುಗಿದೊಡನೆ ಮತ್ತೆ ಮೇಲೇಳುತ್ತಿದ್ದರು. ಈ ತೇಲು ಮುಳುಗುವಿಕೆಯ ಇಬ್ಬಗೆಯ ದಂದುಗದಲ್ಲಿದ್ದಂತೆಯೇ ಮರುಳಾರಾಧ್ಯರ ಲಿಂಗತನುವನ್ನು ಸಮಾಧಿಮಾಡುವ ಸ್ಥಿತಿಗೆ ಎಲ್ಲ ಕಾರ್ಯಗಳೂ ಮುಗಿದು ಲಿಂಗತನುವನ್ನು ತಂದು ಕ್ರಿಯಾಸಮಾಧಿಯನ್ನು ಮುಗಿಸಿದರು. ಕಂಚುಗಲ್ ಬಂಡೇಮಠದ ಶ್ರೀಗಳವರು ಸಮಾಧಿಯ ಮೇಲೆ ಆಸೀನರಾಗಿದ್ದಾರೆ. ಶಿವಣ್ಣನವರೇ ಅವರ ಪಾದಪೂಜೆ ಮಾಡುತ್ತಿದ್ದಾರೆ. ರಾಶಿ ರಾಶಿಯಾಗಿ ಧೂಪ, ಕರ್ಪೂರ ಧಗಧಗಿಸಿ ಜಾಜ್ವಲ್ಯಮಾನವಾಗಿ ಉರಿಯುತ್ತಿದೆ. ಕೂಡಿದ ಸಹಸ್ರ ಸಹಸ್ರ ಸಂಖ್ಯೆಯ ಭಕ್ತಜನತತಿ ಕಣ್ಣೀರ್ಗರೆಯುತ್ತ ಲಿಂಗೈಕ್ಯರ ಗುಣಗಾನಮಾಡುತ್ತಿದ್ದಾರೆ. ಪೂಜಾ ಕಾರ್ಯಗಳೆಲ್ಲ ಮುಗಿದು ಸಮಾಧಿ ಕ್ರಿಯೆಯೆಲ್ಲಾ ಮುಗಿಯುತ್ತಲೇ ಉದ್ದಾನ ಶಿವಯೋಗಿಗಳು ಅಲ್ಲಿಗೆ ಒಮ್ಮಿಂದೊಮ್ಮೆಲೆ ಬಂದು ಕಾಣಿಸಿಕೊಂಡರು. ಮುಂದೆ ಮಠದ ಉತ್ತರಾಧಿಕಾರಿಗಳಾರೆಂಬ ಜಿಜ್ಞಾಸೆಯೊಡಮೂಡಿತ್ತು. ಎಲ್ಲರ ಮನಸ್ಸಿನಲ್ಲೂ ಶಿವಣ್ಣನವರೇ ಈ ಕ್ಷೇತ್ರದ ಉತ್ತರಾಧಿಕಾರಕ್ಕೆ ಯೋಗ್ಯರೆಂಬ ಪಿಸುಗುಟ್ಟುವ ಧ್ವನಿ ಏಳತೊಡಗಿತ್ತು.

**ಶಿವಣ್ಣನವರಲ್ಲಾದ ಅದ್ಭುತ ಶಕ್ತಿ ಸಂಚಾರ :**

ಆಗ ಯಾರೂ ಶಿವಣ್ಣನವರಿಗೆ ಉತ್ತರಾಧಿಕಾರಿಗಳಾಗಿರೆಂದು ಹೇಳುವ ಧೈರ್ಯ ಮಾಡಲಿಲ್ಲ, ತುಮಕೂರು ಜಿಲ್ಲಾ ವಿದ್ಯಾಧಿಕಾರಿಗಳಾಗಿದ್ದ ದಾವೂದ ಸಾಹೇಬ್ ಅವರೂ ಮರುಳಾರಾಧ್ಯರ ಸಮಾಧಿ ಕಾರ್ಯದಲ್ಲಿ ಭಾಗಿಗಳಾಗಿ ಅಲ್ಲಿಯೇ ಇದ್ದರು. ಅವರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ತುಂಬಿ ನಿಂತಿರುವ ಜನಾಭಿಪ್ರಾಯವನ್ನು ಸಂಗ್ರಹಿಸಿ, ಶಿವಣ್ಣನವರಲ್ಲಿ ಜನಾಭಿಪ್ರಾಯವನ್ನು ತಿಳಿಸುವ ರೀತಿಯಲ್ಲಿ ಸಂಭಾಷಣೆಯಲ್ಲಿ ತೊಡಗಿದ್ದರು. ಶಿವಣ್ಣನವರಿಗೂ ಜನತೆಯ ಏಕಾಭಿಪ್ರಾಯ ತನ್ನ ವಿಷಯದಲ್ಲಿ ಮುಂದುವರಿದಿರುವುದರ ಅರಿವಾಗಿತ್ತು. ಮನಸ್ಸು ಹೊಯ್ದಾಡುತ್ತಿತ್ತು. ಒಂದು ಕಡೆಯಲ್ಲಿ ವಿದ್ಯಾಭ್ಯಾಸ, ಪದವೀಧರತ್ವ, ಅದರಿಂದ ಮುಂದೊದಗಬಹುದಾದ ಲೌಕಿಕ ಭೋಗಭಾಗ್ಯ ಜೀವನದ ಅಸ್ಪಷ್ಟ ಚಿತ್ರದ ಬೊಂಬೆ, ಒಂದು ಮೂಲೆಯಲ್ಲಿ ನಿಂತು ಕಿಲಿಕಿಲಿ ನಗುತ್ತಿತ್ತು. ಇನ್ನೊಂದೆಡೆ ಮಹಾ ಮಹಾ ಯತೀಶ್ವರರ ಶಿವಯೋಗ ಭೋಗಭಾಗ್ಯದ ಅಪರಿಮಿತ ತೇಜೋರಾಶಿ ಮುಗಿಲೆತ್ತರಕ್ಕೇರಿನಿಂತಿತ್ತು. ಆ ಮಹಾ ಪ್ರಕಾಶವು ಶಿವಣ್ಣನ ಸರ್ವಕಾಮನೆಗಳ ಕಾವಳದ ರಾಶಿಯನ್ನೇ ಇಲ್ಲದಂತೆ ಅಳಿಸಿ ತಿಕ್ಕಿ ಮುಕ್ಕಿಬಿಡುತ್ತಿತ್ತು. ಈ ಉಭಯ ದಂದುಗದಲ್ಲಿ ಡೋಲಾಯಮಾನನಾಗಿರುವ ಸಮಯದಲ್ಲಿ ಶಿವಣ್ಣನವರು ಒಮ್ಮೆ ಕತ್ತಲನ್ನೂ ಮತ್ತೊಮ್ಮೆ ಬೆಳಕನ್ನೂ ಕಾಣುತ್ತಿದ್ದರು. ಕತ್ತಲೆ ಬರುಬರುತ್ತಲೆ ಉಜ್ವಲಪ್ರಕಾಶ ಅದನ್ನು ಅವರ ಭಾವ ಭೂಮಿಯ ಹತ್ತಿರಕ್ಕೆ ಬರಬರುತ್ತಲೇ ತಿಕ್ಕಿಮುಕ್ಕಿಬಿಡುತ್ತಿತ್ತು. ಇವನ್ನೆಲ್ಲಾ ಉದ್ದಾನಯತೀಶ್ವರರು ಗುರುತಿಸದೇ ಇರಲಿಲ್ಲ. ಶಿವಣ್ಣನೀಗ ಎಣ್ಣೆ ಬತ್ತಿಗಳಿಂದ ಕೂಡಿದ ದೊಡ್ಡ ಹಣತೆಯಾಗಿದ್ದಾನೆ. ಬತ್ತಿಯ ಕುಡಿಗೆ ಜ್ಯೋತಿಯನ್ನು ಹತ್ತಿಸುವುದೊಂದೇ ಉಳಿದಿರುವುದೆಂದು ಭಾವಿಸಿದರು. ಉದ್ದಾನಸ್ವಾಮಿಗಳ ಸಂಕಲ್ಪ ಶಕ್ತಿ ಅಮೇಯವಾಗಿತ್ತು. ವಿಶ್ವಕುಟುಂಬಿಗಳೂ, ಶಿವಯೋಗಮಾರ್ಗ ದುರಂಧರರೂ ಆದವರ ಸಂಕಲ್ಪವೇ ಹಾಗೆ. ಇಂಥವರ ಸಂಕಲ್ಪಶಕ್ತಿಯ ಬಗೆಗೆ ವಿಚಾರಿಸಲು ಎಷ್ಟೋ ಬುದ್ಧಿಜೀವಿಗಳ ಬುದ್ಧಿಗೆ ಅಶಕ್ಯ. ಅರವಿಂದರು, ಪರಮಹಂಸರು, ವಿವೇಕಾನಂದರು ಮುಖ್ಯವಾಗಿ ಗಾಂಧಿ ಇಂಥವರ ಸಂಕಲ್ಪ ಶಕ್ತಿ ಸಾಮಾನ್ಯ ಮಾನವರಿಗಿಂತ ಭಿನ್ನ. ಎಲ್ಲರೂ ಅವರಂತೆಯೇ ಮಾನವರು ನಿಜ. ಆದರೆ ಲೋಕದ ಹೃದಯವನ್ನು ಗೆಲ್ಲುವುದಕ್ಕೆ ಲೋಕದ ಅಲ್ಪಚೇತನಗಳನ್ನು ಬೆಳಗಿಸುವುದಕ್ಕೆ ಬೇಕಾದ ಅತ್ಯದ್ಭುತ ಆತ್ಮಶಕ್ತಿಯನ್ನವರು ಬೆಳೆಸಿಕೊಂಡಿದ್ದರೆಂದೇ ಮಹತ್ವದ ಘಟನೆಗಳನ್ನು ತಮ್ಮ ಜೀವಿತದಲ್ಲಿ ಮಾಡಿತೋರಿಸಿದುದನ್ನು ಎಲ್ಲರೂ ಕಂಡಿದ್ದಾರೆ. ಈ ಅದ್ಭುತ ಕಾರ್ಯವೇ ಲೋಕ ಜೀವನಕ್ಕೆ ಪವಾಡವಾಗಿ ಕಾಣುವುದು. ಇಲ್ಲಿ ನಮ್ಮ ವಿಶ್ವವಿದ್ಯಾಲಯದ ಪದವಿಗಿದವಿಗಳ ಮಾನದಂಡಗಳೇ ಬೇಕಾಗುವುದಿಲ್ಲ. ರಾಮಕೃಷ್ಣ ಪರಮಹಂಸರಿಗೆ ಯಾವ ವಿಶ್ವವಿದ್ಯಾಲಯವೂ ಡಿಗ್ರಿಯನ್ನು ಇತ್ತಿದ್ದಿಲ್ಲ. ಹೃದಯ ಶಕ್ತಿಯ ಔನ್ನತ್ಯದ ಅಳತೆಗೋಲೇ ಬೇರೆ. ಅದನ್ನಳೆಯಲು ಇನ್ನೊಂದು ಅಷ್ಟೇ ಎತ್ತರಕ್ಕೇರಿದ ಹೃದಯಶಕ್ತಿಯ ವ್ಯಕ್ತಿಬೇಕು. ಇಲ್ಲದಿದ್ದರೆ ವಿಮರ್ಶೆ ಶುಷ್ಕ, ಅರ್ಥಹೀನ. ಇಂಥ ಅದ್ಭುತ ಶಕ್ತಿಯ ಒಂದು ಆತ್ಮ ಇನ್ನೊಂದು ಆತ್ಮದಲ್ಲಿ ತನ್ನ ಶಕ್ತಿಯನ್ನು ಪಾತಮಾಡಲು ಸಮರ್ಥವಾಗುತ್ತದೆ. ಕೇವಲ ಬುದ್ಧಿಶಕ್ತಿಯಿಂದ ಯೋಚಿಸುವವರಿಗೆ ಇಲ್ಲಿ ಸಂಶಯ ಅನಿವಾರ್ಯ. ನಮಗೆ ಅಲೌಕಿಕವಾದ ನಮ್ಮ ಅನುಭವಕ್ಕೆ ನಿಲುಕದ ಅನೇಕ ವಿಷಯಗಳ ಬಗೆಗೆ ಸಂಶಯ ತಾಳುತ್ತೇವೆ. ನಮ್ಮ ಅನುಭವದಾಳದಿಂದಲೇ ಲೋಕದ ಅನುಭವವನ್ನು ಅಳತೆಮಾಡಹೋಗಿ ಎಷ್ಟೋ ಸಲ ಹುಚ್ಚರಾಗುತ್ತೇವೆ. ಉದ್ದಾನಶಿವಯೋಗಿಗಳನ್ನು ಕಂಡು ಎಷ್ಟೋ ಜನರು ಅವರ ಪ್ರಭಾವಕ್ಕೆ ಮಾರುಹೋಗಿ ಇವರು ಯಾವುದೋ ಮಹಾ ಕಾರಣಕ್ಕಾಗಿ ಅವತರಿಸಿದ ಮಹಾಪುರುಷರೆಂಬುದನ್ನು ಕೊಂಡಾಡಿದ ದೃಷ್ಟಾಂತಗಳುಂಟು. ಉದ್ದಾನ ಸ್ವಾಮಿಗಳು ಸಮಾಧಿಯಲ್ಲಿಗೆ ಬಂದೊಡನೆಯೇ ಆ ಸ್ವಾಮಿಗಳ ಸುತ್ತಮುತ್ತೆಲ್ಲ ಜನಜಂಗುಳಿ ನೆರೆಯಿತು. ಶಿವಣ್ಣನವರೂ ಭಯಭಕ್ತಿಯಿಂದ ಸ್ವಾಮಿಗಳವರ ಎದುರಿನಲ್ಲಿ ನಿಂತಿದ್ದರು. 'ಶಿವಣ್ಣನವರೇ, ನೀವು ಈ ಮಠದ ಉತ್ತರಾಧಿಕಾರವನ್ನು ವಹಿಸಿಕೊಂಡು ಸಿದ್ಧಲಿಂಗೇಶ್ವರರ ಪ್ರತಿನಿಧಿಗಳಾಗಿ ಇತೋಪ್ಯತಿಶಯವಾಗಿ ಈ ದಾಸೋಹಕ್ಷೇತ್ರದ

ಗುರುತರ ಹೊಣೆಗಾರಿಕೆಯನ್ನು ವಿಶೇಷ ಶಕ್ತಿಸಾಮರ್ಥ್ಯದಿಂದ ನಡೆಸಿಕೊಂಡು ಹೋಗಬೇಕೆಂಬುದು ಸಮಸ್ತ ಭಕ್ತರ ಅಭಿಲಾಷೆ; ಸಿದ್ಧಲಿಂಗೇಶ್ವರರ ಆಜ್ಞೆ ; ನಮ್ಮ ಇಚ್ಛೆ. ಯಾವುದನ್ನೂ ಯೋಚಿಸದೆ ನಮಸ್ಕಾರ ಹಾಕಿಬಿಡಿ' ಎಂದು ಅವನ ತಲೆಯ ಮೇಲೆ ಕೈ ಇಟ್ಟು ಹೇಳಿಬಿಟ್ಟರು. ಉದ್ದಾನ ಶಿವಯೋಗಿಗಳು ತಲೆಯಮೇಲೆ ಕೈಯಿಟ್ಟೊಡನೆ ಶಿವಣ್ಣನವರು ತಮ್ಮನ್ನೇ ತಾವು ಮರೆ ತರು: ನಡುಗಿ ವೃಥಗೊಂಡ. 'ಯಾವುದನ್ನೂ ಯೋಚಿಸದೆ ನಮಸ್ಕಾರ ಹಾಕಿಬಿಡಿ' ಎಂದಮೇಲೆ ಇನ್ನೇತರ ಯೋಚನೆಯೆಂದು ಕೊಂಡು ಉದ್ದಾನೇಶ್ವರರ ಪದತಲದಲ್ಲಿ ತನ್ನ ವಿಮಲ ಪುಸ್ತಕವನ್ನೇ ಹಾಡಿಬಿಟ್ಟರು. ಕೇಳಬೇಕೆ ! ನೆರೆದ ಭಕ್ತ ಸಮೂಹ ಸಂತೋಷ ವಾರಿಧಿಯಲ್ಲಿ ಮುಳುಗಿದಂತಾಗಿ ಉತ್ಸಾಹಾತಿರೇಕದ ಧ್ವನಿಯಲ್ಲಿ "ಹರಹರ ಮಹಾದೇವ" ಎಂದು ಹುಚ್ಚೆದ್ದು ಕೂಗಿ ಕುಣಿದಾಡಿತು. ಆ ಕ್ಷಣದಲ್ಲಿ ಶಿವಣ್ಣನಲ್ಲೊಂದು ಅದ್ಭುತ ಶಕ್ತಿ ಸಂಚಾರವಾದಂತಾಯಿತು. ಬೆಟ್ಟವನ್ನಾಲ್ಲಾಡಿಸೇನು, ಮಹಾ ಮೇರುವನ್ನೇ ತೂಗೇನು, ಸಪ್ತ ಸಾಗರಗಳಲ್ಲೀಸಾಡೇನೆನ್ನುವ ಅಪರಿಮಿತ ಆತ್ಮಪ್ರತ್ಯಯ ಮೂಡಿ ಮಿಂಚಿ ಮಾಯವಾಯಿತು.

'ಅರಿಲುಗೊಂಡಕೆರೆಗೆ ತೊರೆ ಬಂದು ಹಾಯ್ದಂತೆ,
ಬರಲುಗೊಂಡಸಸಿಗೆ ಮಳೆ ಸುರಿದಂತೆ,
ಅರಸುವ ಬಳ್ಳಿಯೇ ಕಾಲಿಗೆ ಸುತ್ತಿದಂತೆ,
ಬಡವ ನಿಧಾನವನೆಡಹಿ ಕಂಡಂತೆ,'

ಭಾವಕ್ಕಗಮ್ಯವಾದ ಗುರುಮೂರ್ತಿಯ ಕೃಪಾ ವಿಶೇಷವನ್ನು ಶಿವಣ್ಣನವರು ಆ ಸಮಯದಲ್ಲಿ ಕಂಡಂತಾಯಿತು. ಅವರಿಗೆ ಈ ಸಮಯದಲ್ಲುಂಟಾದ ಅದ್ಭುತ ಶಕ್ತಿಸಂಚಾರ ಜನ್ಯಆತ್ಮಪ್ರತ್ಯಯ ಅವರು ಗಳಿಸಿದ ಮಾನವ ಸಹಜ ಶಕ್ತಿಯಿಂದುಂಟಾದ ದ್ದಲ್ಲ. ಪ್ರಬಲ ಸಂಕಲ್ಪಶಕ್ತಿಯ ಶಿವಯೋಗಿಗಳವರ ಸಂಕಲ್ಪಮಾತ್ರದಿಂದ, ಸ್ಪರ್ಶಮಾತ್ರದಿಂದ ತಮ್ಮಂತಃಕರಣಗ್ರಂಥಿ ಯನ್ನು ಬಿಚ್ಚಿ ಶಕ್ತಿಪಾತ ಮಾಡಿದುದರ ಮಹಾಫಲದ ಕಾರಣದಿಂದ. ಮೊದಮೊದಲು ಶಿವಣ್ಣನವರ ಮನಸ್ಸು ಸ್ವಲ್ಪ ಹೊತ್ತು ಹೊಯ್ದಾಟಕ್ಕೊಳಗಾಗಿ ದೇಹ ಕಂಪಿಸಿದರೂ, ಬುದ್ಧಿ ಬೆದರಿದರೂ ಸ್ವಲ್ಪ ಹೊತ್ತಿನಲ್ಲಿ ಅಚಲ ನಿರ್ಧಾರದ ಮಹಾ ಮೇರು ವಾಗಿಬಿಟ್ಟರು. ತಂದೆ, ಸಹೋದರ, ಬಂಧುವರ್ಗ, ಆಪ್ತಮಿತ್ರರೊಡನೆ ಸಮಾಲೋಚನೆ ಮಾಡಬೇಕೆಂದಾಗಲಿ, ಮುಂದೆ ತಾನು ಉತ್ತಮ ಭೋಗ ಜೀವನದ ಸುಖಪಡುವೆನೆಂದಾಗಲಿ ಮನಸ್ಸಿನ ಮುಂದೆ ಸುಳಿಯಲೇ ಇಲ್ಲ. ಶಿವಯೋಗಿಯ ಕಾರುಣ್ಯ ಅವರ ಬಂಧು ಬಳಗ, ಆಪ್ತ ಮಿತ್ರವರ್ಗಗಳೊಡನೆ ಲೌಕಿಕ ಭೋಗ ಭಾಗ್ಯಗಳೊಡನೆ ಇವರಿಗಿರುವ ಸಂಬಂಧದ ಕಟ್ಟುಗಳನ್ನೆಲ್ಲಾ ಕಳಚಿ, ಜನ್ಮ ದುರಾಸೆಯನ್ನು ಕಳೆದು, ಅಲ್ಪಭೋಗಭಾಗ್ಯಗಳ ಅಣಕು ಕಾವಳನ್ನು ಹರಿದೋಡಿಸಿ, ಸಮಸ್ತ ಲೋಕವನ್ನೇ ತನ್ನ ಮನೆ ಯೆಂದು ತಬ್ಬಿಕೊಳ್ಳುವ ಬೃಹತ್ ಸಂಸಾರದ ಸಂನ್ಯಾಸಿಜೀವನದ ವಜ್ರಕವಚವನ್ನು ತೊಡಿಸಿಬಿಟ್ಟಿತು. ಇಲ್ಲದಿದ್ದರೆ ಈ ಮಹಾ ಭಾರವನ್ನು ಹೊರುವ ಮೇರು ಸದೃಶ ಧೈರ್ಯವನ್ನು ಆ ಸಮಯದಲ್ಲಿ ಶಿವಣ್ಣ ಮಾಡುತ್ತಿರಲೇ ಇಲ್ಲ.

**ಶ್ರೀ ಶಿವಕುಮಾರಸ್ವಾಮಿಗಳೆಂಬ ನೂತನಾಭಿದಾನ[16] :**

ಒಂದು ರೀತಿಯಲ್ಲಿ ಸಿದ್ಧಲಿಂಗೇಶ್ವರರೇ ಇವರನ್ನು ಮೊದಲಿನಿಂದ ತಮ್ಮ ಕಾರುಣ್ಯದ ಶಿಶುವೆಂದು ಹಾಲು, ಬೆಣ್ಣೆಯ ನ್ನೆರೆದು ಸಾಕಿ ಸಲಹಿದುದರ ಹಿನ್ನೆಲೆಯನ್ನು ಹಿಂದಿನಿಂದ ನಡೆದುಬಂದ ಅವರ ಜೀವನದಿಂದ ಗುರುತಿಸುವುದಕ್ಕೆ ಸಾಧ್ಯವಿದೆ. ಆ ಸಂಸ್ಕಾರ ವಿಶೇಷ ಮತ್ತು ಉದ್ದಾನೇಶ್ವರ ಕೃಪೆ ಇದೆಲ್ಲಾ ಸೇರಿ ಇಂದು ಒಂದನ್ನೂ ವಿಚಾರಿಸದೆ ಒಪ್ಪಿಗೆ ಕೊಡಲು ಕಾರಣವೇ ನೆಂಬುದನ್ನು ಗುರುತಿಸಲು ಶಕ್ಯವಿದೆ. ಶಿವಣ್ಣನವರು ತಮ್ಮ ಹುಟ್ಟಿನೊಡನೆಯೇ ಶಿವಸಂಸ್ಕಾರವನ್ನು ತಲೆಯಮೇಲೆ ಹೊತ್ತು ಕೊಂಡು ಬಂದಿದ್ದವರು. ಶಿವಯೋಗಿ ಪುಂಗವರ ಪಾದಸಂಚಾರದಿಂದ ಪವಿತ್ರೀಕೃತ ಪುಣ್ಯಭೂಮಿಯ ಸಂತತ ಸಂಸ್ಕಾರ ಧಾರೆಯು ಅವರ ಮನಸ್ಸಿನ ಮೇಲೆ ಕೆಲಸಮಾಡಿತ್ತು. ನಿಂತ ನೆಲದ ಗುಣ ಒಮ್ಮೊಮ್ಮೆ ಇಂಥ ತೇಜೋವಿಶೇಷದ ಶಕ್ತಿಯನ್ನು ಲೋಕ ಜೀವನ ಬೆಳಗಲು ಕಾಣಿಕೆಯಾಗಿ ಕೊಡುತ್ತದೆ.

ಶಿವಣ್ಣನವರು ಉದ್ದಾನ ಶಿವಯೋಗಿಗಳಿಗೆ ತಮ್ಮ ಒಪ್ಪಿಗೆಯನ್ನು ಸೂಚಿಸಿ, ಅವರಿತ್ತ ವೀರಶೈವ ವಿರಕ್ತಪರಂಪರೆಯ ಕಾಷಾಯ ವಸ್ತ್ರಧರಿಸಿ, 'ಶ್ರೀ ಶಿವಕುಮಾರ ಸ್ವಾಮಿಗಳು' ಎಂಬ ನೂತನ ನಾಮಾಂತರದಿಂದ ಬೆಂಗಳೂರಿಗೆ ಬಂದು ತಮ್ಮ ವಿದ್ಯಾಭ್ಯಾಸದ ಕೊನೆಯ ಹಂತದ ಪರೀಕ್ಷೆಗೆ ಸಿದ್ಧವಾಗತೊಡಗಿದರು. ಇವರು ಸಿದ್ಧಗಂಗಾ ಕ್ಷೇತ್ರಾಧಿಪತ್ಯವನ್ನು ವಹಿಸಿದ ಸಂತೋಷದ ಸುದ್ದಿಯಿಂದ ಎ. ಆರ್. ಕೃಷ್ಣಶಾಸ್ತ್ರಿಗಳೇ ಮೊದಲಾದ ಉಪಾಧ್ಯಾಯವರ್ಗದವರು ಶ್ಲಾಘನೆಯ ಸುರಿಮಳೆ ಸುರಿಸಿದರು. ನಾಡಿನ ಅನೇಕಭಾಗಗಳ ಜನರು ತಮ್ಮ ಮೆಚ್ಚುಗೆಯನ್ನು ಸೂಚಿಸಿ ಸಂದೇಶಗಳನ್ನು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಕಳುಹಿಸಿದರು.

16. ಇದುವರೆಗೆ 'ಶಿವಣ್ಣ' ಎಂದೂ ಶಿವಣ್ಣನವರೆಂದೂ ಹೇಳುತ್ತ ಬಂದಿದೆ. ಇನ್ನು ಮುಂದೆ ಶ್ರೀ ಶಿವಕುಮಾರಸ್ವಾಮಿಗಳು ಎಂದೇ ಪ್ರಯೋ ಗಿಸಲಾಗಿದೆ.

**ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ ; ಕೊಟ್ಟಮಾತನ್ನು ಬದಲಿಸಲಾರೆ :**

ಇತ್ತ ವೀರಾಪುರದ ಪಟೇಲ್ ಹೊನ್ನೇಗೌಡರು ತಮ್ಮ ಪ್ರೀತಿಯ ವಿದ್ಯಾವಂತ ಪುತ್ರನು ಸಿದ್ಧಗಂಗಾಕ್ಷೇತ್ರದ ಉತ್ತರಾಧಿಕಾರಿಯಾದನೆಂದು ತಿಳಿದು ಕಶಾಘಾತಕ್ಕೊಳಗಾದವರಂತೆ ತತ್ತರಿಸಿದರು. ತಮ್ಮ ಮಗ ಬಿ.ಎ. ಪದವೀಧರನಾಗಿ ಉನ್ನತ ಹುದ್ದೆಯೊಂದನ್ನಲಂಕರಿಸುವನೆಂದೂ ಅದರಿಂದ ತಮ್ಮ ಮನೆತನಕ್ಕೆ ಗೌರವ ಘನತೆಗಳನ್ನು ತರುವನೆಂದೂ ಅನೇಕ ಕನಸು ಕಂಡವರು ; ಶೀಘ್ರದಲ್ಲೇ ಲಗ್ನ ಮಾಡಿಬಿಡಬೇಕೆಂಬ ಯೋಚನೆಯನ್ನೂ ಮಾಡಿದ್ದವರು. ಏನಾದರೂ ಮಾಡಿ ಈ ಉತ್ತರಾಧಿಕಾರತ್ವದಿಂದ ಮಗನ ಮನಸ್ಸನ್ನು ತಿರುಗಿಸಿಬಿಡಬೇಕೆಂದು ತನ್ನ ಮಕ್ಕಳು ಮತ್ತು ಬಂಧುಬಳಗದ ಅನೇಕ ಜನರನ್ನೊಳಗೊಂಡು ಧಾವಿಸಿ ಬೆಂಗಳೂರಿಗೆ ಬಂದರು. ತೋಟದಪ್ಪನವರ ವಿದ್ಯಾರ್ಥಿನಿಲಯದಲ್ಲಿ ಬೀಡುಬಿಟ್ಟು, ಶಿವಣ್ಣನವರೆದುರು ಅತ್ತು, ಕರೆದು, ಗೋಗರೆದು ಈ ನಿರ್ಧಾರವನ್ನು ಬದಲಿಸಬೇಕೆಂದು ಪರಿಪರಿಯಲ್ಲಿ ಬೇಡಿಕೊಂಡರು. ಆಸೆ ಆಮಿಷಗಳನ್ನೊಡ್ಡಿದರು; ಆದರೆ ಶಿವಣ್ಣನವರ ಮೇರುಪರ್ವತದಂಥ ಅಚಲನಿರ್ಧಾರವನ್ನು ಬದಲಿಸುವುದು ಯಾರಿಗೂ ಶಕ್ಯವಿರಲಿಲ್ಲ. ಪ್ರಳಯಮಾರುತ ಬೀಸಿ ಬಡಿದಾಗ ಬೆಟ್ಟಗಳೂ ಅಲ್ಲಾಡಿ ಹೋಗುತ್ತವೆ. ಆದರೆ ಧೀರಪ್ರಕೃತಿಯ ಮಹಾಚೇತಸ್ಸಂಪನ್ನರ ಮನಸ್ಸು ಅಲ್ಲಾಡುವುದುಂಟೇ ? ಅಷ್ಟೊಂದು ಧೈರ್ಯಸಂಪನ್ನತೆ ಶ್ರೀ ಶಿವಕುಮಾರಸ್ವಾಮಿಗಳಿಗುಂಟಾಗಿತ್ತು. ಅವರ ಮಾತುಗಳಿಗುತ್ತರವಾಗಿ ಸ್ವಾಮಿಗಳು, ಪೂರ್ವಾಶ್ರಮದ ತಮ್ಮ ತಂದೆಗೆ ತಮ್ಮ ದೃಢನಿರ್ಧಾರದ ಸ್ಪಷ್ಟ ಉತ್ತರವನ್ನು ಹೀಗೆ ಹೇಳಿಬಿಟ್ಟರು: 'ನಮ್ಮನ್ನು ನೀವು ಹೆಚ್ಚು ಹೊತ್ತು ಇದುವರೆಗೆ ವಾತ್ಸಲ್ಯ ಭಾವವಿಟ್ಟು ಸಲಹಿದ್ದೀರಿ, ಅದಕ್ಕಾಗಿ ನಿಮಗೆ ಚಿರಋಣಿ'. ನಾನು ಸಿದ್ಧಗಂಗಾಮಠದ ಮಹಾ ಪರಂಪರೆಯ ಜಂಗಮ ಮೂರ್ತಿಯಾಗಬೇಕೆಂಬುದು ಈಶ್ವರ ಸಂಕಲ್ಪ: ಅಲ್ಲಿ ನನ್ನ ಪ್ರಯತ್ನವೇನೂ ಇಲ್ಲ. ನಾನು ಸಂನ್ಯಾಸಿಯಾಗಬೇಕೆಂಬುದೇ ಈಶ್ವರ ಸಂಕಲ್ಪವಾಗಿರುವಾಗ ಅದನ್ನು ತಪ್ಪಿಸಲು ಯಾರಿಂದಲೂ ಶಕ್ಯವಿಲ್ಲ. ನನ್ನನ್ನು ಕಾಡಬೇಡಿ, ಇನ್ನಾರನ್ನಾಗಲಿ ಈ ಸನ್ನಾಹಕ್ಕೆ ಕಳಿಸಬೇಡಿ. ಉದ್ದಾನಶಿವಯೋಗಿಗಳಿಗೆ ಮಾತುಕೊಟ್ಟು ಆಗಿ ಹೋಗಿದೆ. ಆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳುವುದು ಸಾಧ್ಯವಿಲ್ಲದ್ದು: ನಿಮ್ಮಗಳ ವಾತ್ಸಲ್ಯಕ್ಕೆ ಜೋತುಬಿದ್ದು, ನಾನು ಕೊಟ್ಟ ವಾಗ್ದಾನಕ್ಕೆ ವಿರುದ್ಧವಾಗಿ ನಡೆದರೆ ಅದರಿಂದ ನನಗೆ ತುಂಬಾ ಕೆಡುಕಾಗುತ್ತದೆ. ನಿಮಗೂ ಅದೀತು. ಆದ್ದರಿಂದ ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ. ನೀವು ಸುಖವನ್ನು ಬಯಸುವುದಾದರೆ ಈ ವಿಷಯದಲ್ಲಿ ಇನ್ನು ಹೆಚ್ಚಿಗೆ ಪ್ರಸ್ತಾಪ ಮಾಡುವುದು ಸೂಕ್ತವೆನಿಸುವುದಿಲ್ಲ. ಇತ್ಯಾದಿಯಾಗಿ ನುಡಿದುಬಿಟ್ಟರು, ಒಡಿಸಿಂದ ಸಿಡಿದು ಹಾರುವ ಅರಳುಗಳಂತೆ. ಈ ದೃಢ ನಿರ್ಧಾರದ ಸ್ಪಷ್ಟ ಉತ್ತರವನ್ನು ಕೇಳಿದ ಹೊನ್ನೇಗೌಡರಿಗೂ ಇತರ ಬಂಧುಬಳಗದವರಿಗೂ ಸಿಡಿಲೆರಗಿದಂತಾಗಿ ಹೋಯಿತು. ಎಲ್ಲರ ಕಣ್ಣುಗಳೂ ತೇವಗೊಂಡವು. ಅವರೆಲ್ಲರೂ ನಿರುಪಾಯರಾಗಿ ಕೊರಡಿಯಿಂದ ಹೊರಟು ಹೋದರು. ಪುನಃ ಯಾರೂ ಬರಲಿಲ್ಲ. ಆದರೆ ಹೊನ್ನೇಗೌಡರ ಮನದಲ್ಲಿ ಉದ್ದಾನಸ್ವಾಮಿಗಳು ತಮ್ಮ ಮಗನನ್ನು ಹೇಳದೇ ಕೇಳದೇ ಹೀಗೆ ತಮ್ಮ ಸ್ವತ್ತನ್ನಾಗಿ ಮಾಡಿಕೊಳ್ಳಬಹುದೆ? ಎಂಬ ಅಗ್ರಹ ಮೊಳಕೆಯೊಡೆಯಿತು. ಇದೊಂದು ದುರದೃಷ್ಟಕರ ಪ್ರಸಂಗವಾಗಿ ಹೋಯಿತು.

**ಹುಟ್ಟಿದೂರಿಗೆ ಇಪ್ಪತ್ತೈದುವರ್ಷಗಳ ಮೇಲೆ ಹೆಜ್ಜೆಯಿಟ್ಟ ಧೀರ ನಿಲುವು :**

ಇತ್ತ ಕರ್ಣಾಕರ್ಣಿಕೆಯಾಗಿ ವೀರಾಪುರದ ಪಟೇಲ್ ಹೊನ್ನಪ್ಪನವರು ತಮ್ಮ ನಿರ್ಧಾರವನ್ನು ಒಪ್ಪಿಲ್ಲವೆಂಬ ಸುದ್ದಿಯನ್ನು ಉದ್ದಾನಪ್ಪನವರು ತಿಳಿದರು. ಅವರು ವಿರಕ್ತರು, ಆದರೂ ಲೌಕಿಕಜ್ಞರು: ಇಂಥ ಸ್ಥಿತಿಯಲ್ಲಿ ಲೌಕಿಕರ ಮನದುಮ್ಮಳದ ಆಳ ನೀಳಗಳನ್ನು ಊಹಿಸಿ ತಿಳಿಯತಕ್ಕವರು. ಆದ್ದರಿಂದ ತಾವೇ ಹೋಗಿ ಅವರ ಸಂಕಟಕ್ಕೊಳಗಾದ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಿ ಬರಬೇಕೆಂದು ವೀರಾಪುರಕ್ಕೆ ನಡೆದುಕೊಂಡೇ ಹೊರಟರು[17]. ಆದರೆ ಪಟೇಲರು ಮನೆಯಲ್ಲಿರಲಿಲ್ಲವಾಗಿ ಮಠಕ್ಕೆ ಮರಳಿ ಬಂದುಬಿಟ್ಟರು. ಅವರು ಬೇಕೆಂತಲೇ ಮನೆಯಲ್ಲಿರಲಿಲ್ಲವೆಂಬುದನ್ನರಿತರು. ತಾವು 'ಒಂದು ಮನೆಯ ಉದ್ಧಾರಕ್ಕಿಂತ ಲಕ್ಷೋಪಲಕ್ಷ ಮನೆಗಳನ್ನು ಉದ್ಧಾರಮಾಡಬಲ್ಲವನನ್ನಾಗಿ ಇವರ ಮಗನನ್ನು ಸ್ವೀಕರಿಸಿದುದರಲ್ಲಿ ಸೈದ್ಧಾಂತಿಕವಾಗಿ ತಪ್ಪೇನೂ ಇಲ್ಲ' ಎಂಬ ನಿರ್ಧಾರಕ್ಕೆ ಬಂದು ಪುನಃ ವೀರಾಪುರಕ್ಕೆ ಪಾದವಿಡಲಿಲ್ಲ. ಶಿವಯೋಗಿಗಳವರ ಈ ಕೋಪವೇ ಅನುಗ್ರಹೀತ ಶಿಷ್ಯರಾದ ಶ್ರೀ ಶಿವಕುಮಾರಸ್ವಾಮಿಗಳ ಕೋಪವೂ ಆಯಿತು. ಪಟೇಲ್ ಹೊನ್ನಪ್ಪನವರು ಹೀಗೆ ಮಾಡಬಾರದಾಗಿತ್ತೆಂದೂ, ಇದರಿಂದ ಅವರಿಗೆ ಲಾಭಕ್ಕಿಂತ ಹಾನಿಯೇ ಹೆಚ್ಚೆಂದೂ ತೀರ್ಮಾನಿಸಿದರು. ತಾವೂ ವೀರಾಪುರವನ್ನೇ ಮರೆತುಬಿಟ್ಟರು. ಮಹಾಕಾರಣಿಕಪುರುಷರಾದ ಉದ್ದಾನ ಶಿವಯೋಗಿಗಳು ಸ್ವತಃ ತಾವೇ ನಡೆದುಕೊಂಡು ವೀರಾಪುರಕ್ಕೆ ಬಂದರೆ ಉದಾಸೀನತೆಯಿಂದ ಕಂಡ ಪಟೇಲರ ಬಗೆಗೆ ಒಂದು ಬಗೆಯ ಆಗ್ರಹ ಮೂಡಿ, ವೀರಾಪುರಕ್ಕೂ ಸಿದ್ಧಗಂಗೆಗೂ ಮಧ್ಯದಲ್ಲಿ ಒಂದು ಮಹಾಸಮುದ್ರವೇ ಅಡ್ಡ ಬಂದಂತಾಗಿ ಹೋಯಿತು. ಶಿವಕುಮಾರಸ್ವಾಮಿಗಳು ತಾವು ಅಧಿಕಾರ ವಹಿಸಿಕೊಂಡ

---

17. ಉದ್ದಾನ ಶಿವಯೋಗಿಗಳವರ ಚರಿತ್ರೆಯಲ್ಲಿ ಈ ಹಿಂದೆ ಈ ವಿಷಯದ ವಿಸ್ತಾರ ವಿವರಣೆ ಇದೆ. ನೋಡಿಕೊಳ್ಳುವುದು.

ಮೇಲೂ ವೀರಾಪುರಕ್ಕೆ ಹೆಜ್ಜೆಯಿಡುವ ಮನಸ್ಸನ್ನೇ ಮಾಡಲಿಲ್ಲವೆಂಬುದು ಇಲ್ಲಿ ಸ್ಮರಿಸತಕ್ಕ ಅಂಶವಾಗಿದೆ. ಅವರು ಸಿದ್ಧಗಂಗೆಯ ಮಠಾಧಿಪತ್ಯವನ್ನು ವಹಿಸಿಕೊಂಡಮೇಲೆ ವೀರಾಪುರದ ಅನೇಕ ಜನಗಳು ಬಂದು ತಮ್ಮೂರಿಗೆ ಬರಬೇಕೆಂದು ಕೇಳಿಕೊಂಡ ಕೇಳಿಕೆಯನ್ನು ಶ್ರೀ ಶಿವಕುಮಾರ ಸ್ವಾಮಿಗಳು ತಿರಸ್ಕರಿಸತೊಡಗಿದರು. ೧೯೩೦ ರಿಂದ ೧೯೫೫ರವರೆಗೆ ವೀರಾಪುರಕ್ಕೆ ಹೋಗಲೇ ಇಲ್ಲ. ಕೊನೆಗೆ ೧೯೫೫ರಲ್ಲಿ ಹೋಗಲೇ ಬೇಕಾದ ಪ್ರಸಂಗವೊಂದು ಬಂತು. ಭಕ್ತರ ಭಕ್ತಿಶಕ್ತಿಗೆ ಒಳಗಾದ ಈ ಪ್ರಸಂಗ ನಡೆದುದು ಹೀಗೆ :

ಪಟೇಲ್ ಹೊನ್ನಪ್ಪನವರ ಮೊಮ್ಮಗ ಅಂದರೆ ಶ್ರೀ ಶಿವಕುಮಾರ ಸ್ವಾಮಿಗಳವರ ಪೂರ್ವಾಶ್ರಮದ ಅಣ್ಣನವರ ಮಗ ಹೊಸಮನೆಯೊಂದನ್ನು ೧೯೫೫ರಲ್ಲಿ ಕಟ್ಟಿಸಿದನು. ಆ ಮನೆಯ ಪ್ರವೇಶೋತ್ಸವ ಸಿದ್ಧಗಂಗಾಮಠಾಧೀಶರಿಂದಲೇ ಆಗಬೇಕೆಂಬ ಸಂಕಲ್ಪವನ್ನು ಇಟ್ಟುಕೊಂಡಿದ್ದನು. ಅವನು ಮಠಕ್ಕೆ ಬಂದು ಸ್ವಾಮಿಗಳವರಲ್ಲಿ 'ನನ್ನ ಕಟ್ಟಿಸಿದ ನೂತನಗೃಹ ಪ್ರವೇಶೋತ್ಸವವನ್ನು ತಮ್ಮ ಶ್ರೀ ಪಾದವಿಡುವುದರ ಮೂಲಕ ನಡೆಸಿಕೊಡಬೇಕೆ'ಂದು ಬೇಡಿದನು. ಶ್ರೀಗಳವರು ಆಗುವುದಿಲ್ಲವೆಂದು ಸ್ಪಷ್ಟವಾಗಿ ನುಡಿದರು, ಅವನು ಕಣ್ಣಂಚಿನಲ್ಲಿ ನೀರುತಂದು 'ಸ್ವಾಮಿ, ತಾವೇ ಈ ಪ್ರವೇಶೋತ್ಸವವನ್ನು ನಡೆಸಿಕೊಡಬೇಕೆಂಬ ಸಂಕಲ್ಪ ನನ್ನದು, ನಡೆಸಿಕೊಡಲೇಬೇಕೆ'ಂದು ಹಠ ಹಿಡಿದನು, ಆಗಲೂ ಸ್ವಾಮಿಗಳು 'ಆಗುವುದಿಲ್ಲ, ನಾವು ನಿಮ್ಮೂರಿಗೆ ಬರುವುದಿಲ್ಲ' ಎಂದು ಖಂಡಿತವನ್ನೇ ನುಡಿದರು. ಆಗ ಭಕ್ತನಾದ ಅವನಿಗೂ ಹಠದ ಮನೋಭಾವ ಕೆರಳಿತು, ಭಕ್ತನ ಭಕ್ತಿಗೂ ಶಕ್ತಿಯಿದೆಯಷ್ಟೆ. ಆ ಶಕ್ತಿಯ ಪ್ರಯೋಗಕ್ಕೆ ಅವನೂ ಸಿದ್ಧನಾಗಿ 'ಸ್ವಾಮಿ, ತಾವು ದೊಡ್ಡವರು, ಮಹಾಮಹಿಮರು, ತಮ್ಮೆದುರು ನಿಂತು ಮಾತನಾಡುವ ಧೈರ್ಯ ನನ್ನದಲ್ಲ. ನಾನೇನೋ ಈಶ ಸಂಕಲ್ಪದಿಂದ ಮನೆಕಟ್ಟಿದೆ. ಅದರ ಪ್ರವೇಶೋತ್ಸವವನ್ನು ಸಾಕ್ಷಾತ್ ಸಿದ್ಧಲಿಂಗನ ಪ್ರತಿನಿಧಿಗಳೇ ಆದ ತಮ್ಮಿಂದಲೇ ಮಾಡಿಸಿ, ಆ ಮನೆಯಲ್ಲಿ ವಾಸಿಸಬೇಕೆಂಬ ಸಂಕಲ್ಪ ಮಾಡಿದ್ದೆ. ಆದರೆ ಶಿವಯೋಗಿಗಳವರಾದ ತಮ್ಮ ಕೃಪೆಯುಂಟಾಗಲಿಲ್ಲ. ಶಿವಯೋಗಿಯ ಕೃಪೆಗೆ ದೂರವಾದ ಆ ಮನೆಯನ್ನು ಭಕ್ತನಾದ ನಾನು ಪ್ರವೇಶ ಮಾಡುವುದಾದರೂ ಹೇಗೆ? ಆ ಮನೆ ಹಾಗೆಯೇ ಹಾಳುಬಿದ್ದುಹೋದರೂ ಚಿಂತೆಯಿಲ್ಲ, ತಾವು ಬಂದು ಈ ಕೆಲಸ ನಡೆಸಿಕೊಟ್ಟರೆ ಆಯಿತು. ಇಲ್ಲದಿದ್ದರೆ ಇಲ್ಲ. ತಮ್ಮ ಇಚ್ಛೆಯಿದ್ದಂತಾಗಲಿ' ಎಂಬ ಭಕ್ತನ ಭಕ್ತಿಯ ಪಂಥವನ್ನು ಪಣವಾಗಿಟ್ಟು ನಮಸ್ಕರಿಸಿ ಹೊರಟೇಬಿಟ್ಟನು. ಶ್ರೀಶಿವಕುಮಾರ ಸ್ವಾಮಿಗಳವರ ಮನಸ್ಸು ಆಗ ಜಾಗೃತವಾಯಿತು. ಭಕ್ತನ ಭಕ್ತಿ ದೊಡ್ಡದು. ಅವನ ಭಕ್ತಿಗೂ ಶಕ್ತಿ ಇದೆ ಎಂಬುದರ ಅರಿವಾಯಿತು. ಆಗ ಮುನಿಸಿಕೊಂಡು ಹೋದ ಪಟೇಲರನ್ನು ಕರೆಸಿ 'ಆಗಲಿ ನಿಮ್ಮ ಮನೆಯ ಪ್ರವೇಶೋತ್ಸವಕ್ಕೆ ಬರುತ್ತೇವೆ. ಸಿದ್ಧತೆ ಮಾಡಿಕೊಳ್ಳಿ' ಎಂದಾಗ ಪಟೇಲರಿಗೆ ಸ್ವರ್ಗವೇ ಧರೆಗಿಳಿದು ಬಂದ ಸಂತೋಷವಾಯಿತು. ಮತ್ತೊಮ್ಮೆ ಕಣ್ಣುಗಳು ಹನಿಗೂಡಿ ಕಪೋಲಪಾಲಿಗಳ ಮೇಲೆ ದಳದಳನೆ ಉರುಳಿದುವು. ಶಿವಯೋಗಿಗಳು ವೀರಾಪುರದ ಗಡಿಗೆ ಹೆಜ್ಜೆಯಿಟ್ಟರು. ತಮ್ಮ ಮುನಿಸನ್ನು ಬಿಟ್ಟು ಸಿದ್ಧಗಂಗಾ ಶ್ರೀಗಳು ೨೫ ವರ್ಷಗಳ ಮೇಲೆ ಬರುವರೆಂದು ಸುತ್ತಮುತ್ತಲಿನ ಹಳ್ಳಿಗಳ ಸಹಸ್ರ ಸಹಸ್ರ ಸಂಖ್ಯೆಯ ಜನ ನೆರೆದು ಮಹಾನಂದದಿಂದ ಶಿವಯೋಗಿಗಳವರನ್ನು ಸ್ವಾಗತಿಸಿ. ಹುಚ್ಚೆದ್ದು ಜಯಘೋಷಮಾಡಿತನ್ನ ಭಕ್ತಿಯ ಅತ್ಯುತ್ಸಾಹವನ್ನು ಪ್ರಕಟಿಸಿತು. ಶ್ರೀಗಳವರೂ ಇಪ್ಪತ್ತೈದು ವರ್ಷಗಳ ಮೇಲೆ ತಮ್ಮ ಪೂರ್ವಾಶ್ರಮದ ಹುಟ್ಟೂರನ್ನು ಹೊಕ್ಕರೂ ಅದು ತಮ್ಮೂರೆಂಬ ಭಾವನೆಯೇನೂ ಬರಲಿಲ್ಲ. ಇಲ್ಲಿ ಪ್ರಾಸಂಗಿಕವಾಗಿ ಈ ವಿಷಯ ಪ್ರಸ್ತಾಪಮಾಡಬೇಕಾಯಿತು, ಅಷ್ಟೆ, ಇದೇನೇ ಇರಲಿ.

**ವಿಧ್ಯುಕ್ತ ಉತ್ತರಾಧಿಕಾರ ಮಹೋತ್ಸವ :**

ಇತ್ತ ತೋಟದಪ್ಪನವರ ಛತ್ರದಲ್ಲಿದ್ದ ಶ್ರೀ ಶಿವಕುಮಾರ ಸ್ವಾಮಿಗಳವರು ಉದ್ದಾನಶಿವಯೋಗಿಗಳರಿಗೆ ಒಂದು ಕಾಗದ ಬರೆದು 'ಬೇಗನೆ ತಮಗೆ ವಿಧ್ಯುಕ್ತವಾಗಿ ಉತ್ತರಾಧಿಕಾರವನ್ನು ಮಾಡಿಬಿಟ್ಟರೆ ಪೂರ್ವಾಶ್ರಮದ ಸಂಬಂಧಿಗಳ ಕಾಟ ತಪ್ಪುತ್ತದೆ. ಪದೇ ಪದೇ ಅವರು ನನಗೆ ತೊಂದರೆ ಕೊಡುತ್ತಿದ್ದಾರೆ' ಎಂದು ತಿಳಿಸಿಬಿಟ್ಟರು. ಉದ್ದಾನ ಶಿವಯೋಗಿಗಳು ಅದೂ ನಿಜವೆಂದು ಒಪ್ಪಿ, ಮಠದಲ್ಲಿ ಉತ್ಸಾಹದಿಂದ ಎಲ್ಲ ಸಿದ್ಧತೆಗಳನ್ನೂ ಮಾಡಿ ಅತ್ಯಂತ ವಿಜೃಂಭಣೆಯಿಂದ ತಾರೀಖು : ೩-೩-೧೯೩೦ನೆಯ ದಿವಸ ನಿರಂಜನ ಜಂಗಮಾಧಿಕಾರಕೊಟ್ಟು ಆಶೀರ್ವದಿಸಿಬಿಟ್ಟರು. ಅಂದಿನಿಂದ ಶ್ರೀ ಶಿವಕುಮಾರ ಸ್ವಾಮಿಗಳು ಕ್ರಿ.ಶ. ಸುಮಾರು ೧೩೦೦ರಲ್ಲಿ ಗೋಸಲ ಸಿದ್ಧೇಶ್ವರಪ್ರಭು ಸ್ವಾಮಿಗಳವರಿಂದ ಸ್ಥಾಪಿತಗೊಂಡು ಒಂದು ಚರಿತ್ರಾರ್ಹ ಮಹಾಪರಂಪರೆಯನ್ನೇ ಹೊಂದಿದ್ದ ಶ್ರೀ ಸಿದ್ಧಗಂಗಾ ಮಠದ ಜಂಗಮಪುಂಗವರ ಮಾಲಿಕೆಯಲ್ಲಿ ಸೇರಿದರು. ಲೋಕ ಜೀವನದಲ್ಲಿ ಒಂದು ಹೊಸ ಅಧ್ಯಾಯವನ್ನೇ ತೆರೆದು ಅವರ ಉತ್ತಮಿಕೆಗೆ ಹಗಲು ರಾತ್ರಿಯೆನ್ನದೆ ದಾಸೋಹ ಸದ್ಭಾವದಲ್ಲಿ ತಮ್ಮ ಜೀವಿತವನ್ನೇ ಧಾರೆಯೆರೆಯುವ ಮಹಾ ಸಂಕಲ್ಪದಿಂದ ಆ ಗದ್ದುಗೆಯನ್ನೇರಿದರು. ಸಿದ್ಧಗಂಗಾ ಕ್ಷೇತ್ರದಲ್ಲಿ ಸಿದ್ಧಲಿಂಗೇಶ್ವರನ ಆಜ್ಞೆಯಂತೆ ಉದ್ದಾನಶಿವಯೋಗಿಗಳವರಿಂದ ನೆಡಿಸಲ್ಪಟ್ಟ ಕಲ್ಪವೃಕ್ಷದ ಸಸಿಯಂತಾದರೆಂಬುದನ್ನು ಮುಂದಿನ ಅವರ ಅನವರತ ಕ್ರಿಯಾ ಸಾಮರ್ಥ್ಯದ ಶಿವಯೋಗಮಾರ್ಗಜೀವನವಿಧಾನದಿಂದ ಅರಿಯಬಹುದಾಗಿದೆ.

**ಅವಿಶ್ರಾಂತ ದಾಸೋಹ ಸದ್ಭಾವದ ಸೇವೆಯಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳು :**

ಉದ್ದಾನ ಶಿವಯೋಗಿಗಳಿಗೆ ಶ್ರೀ ಶಿವಕುಮಾರ ಸ್ವಾಮಿಗಳವರನ್ನು ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡ ಬಗೆಗೆ ಸ್ವಲ್ಪ ಭಯವಿತ್ತೆಂದು ತೋರುತ್ತದೆ. ಆ ಭಯ ಮತ್ತಾವುದೂ ಅಲ್ಲ. ಇವರು ಇಂಗ್ಲೀಷ್ ಓದಿ ಬಂದವರು. ಆಚಾರ ವಿಚಾರಗಳಲ್ಲಿ ಶೈಥಿಲ್ಯ ಬಂದು ಈ ಪವಿತ್ರ ಕ್ಷೇತ್ರದ ಧವಳಕೀರ್ತಿಯ ಬಗೆಗೆ ಜನ ಬೆರಳು ತೋರಿಸುವಂತಾದೀತೋ ಏನೋ ಎಂಬ ಭಯವೇ ಅದು. ಅದಕ್ಕಾಗಿ ಉದ್ದಾನ ಯತೀಶರು ಶಿವಕುಮಾರ ಸ್ವಾಮಿಗಳವರನ್ನು ಅನೇಕ ಪರೀಕ್ಷೆಗೊಳಪಡಿಸಿದರು. ಈ ಮೂರ್ತಿಯನ್ನು ಅಂದವಾಗಿ ಕಡೆದು ಕ್ಷೇತ್ರದಲ್ಲಿ ಪ್ರತಿಷ್ಠೆಗೊಳಿಸಬೇಕೆಂಬ ಸಂಕಲ್ಪ ಮಾಡಿ.ಕೈಯಲ್ಲಿ ಉಳಿ ಕೊಡತಿಗಳನ್ನೇ ಹಿಡಿದರೆಂದು ಹೇಳಿದರೆ ತಪ್ಪಾಗಲಾರದು.

ನೂತನ ನಾಗರಿಕತೆಯ ಪ್ರಭಾವಕ್ಕೊಳಗಾಗಿ ಆಂಗ್ಲ ವಿದ್ಯಾಭ್ಯಾಸ ಮಾಡಿ ಬಂದವರ ಆಚಾರವಿಚಾರಗಳನ್ನು ಜನ ನಂಬದೆಯಿರತಕ್ಕ ಕಾಲವದು. ಆ ಕಾಲದಲ್ಲಿ ಬಿ.ಎ. ಓದಿದವರೆಂದರೆ ಅದೊಂದು ಹೆಚ್ಚಿನ ಮಟ್ಟದ ವಿದ್ಯಾಭ್ಯಾಸ ಮಾಡಿ ಬಂದವರೆಂದು, ಪರಿಗಣಿಸಲ್ಪಡುತ್ತಿತ್ತು. ಸಮಯಾಚಾರದಲ್ಲಿ ಅಂಥವರ ನಡವಳಿಕೆಯನ್ನು ಜನ ಶಂಕಿಸುತ್ತಿದ್ದುದರಿಂದ ಉದ್ದಾನಪ್ಪನವರೂ ಅಂಥ ಲೋಕಸಾಮಾನ್ಯ ನಂಬಿಕೆಯನ್ನು ಮನದಲ್ಲಿ ಶಂಕಿಸಿ, ತಿದ್ದುವುದಕ್ಕೆ ಶ್ರಮಿಸಿರುವುದು ಕಂಡುಬರುವುದು. ಆದರೆ ಮೊದಲಿನಿಂದಲೂ ಪ್ರೀತಿವಾತ್ಸಲ್ಯಗಳನ್ನಿಟ್ಟುಕೊಂಡು ತಮ್ಮ ಅಂತಃಕರಣದಲ್ಲಿ ಪ್ರತಿಬಿಂಬಿಸಿ ನಿಂತ ಇವರ ಬಗೆಗೆ ನಂಬಿಕೆಗೇನೂ ಕೊರತೆ ಇರಲಿಲ್ಲ. ಆದರೂ ಆಚಾರವಿಚಾರಸಂಹಿತೆ, ಸಮಯಾಚಾರದಕ್ಷತೆಗಳನ್ನು ಪರಿಶುದ್ಧಗೊಳಿಸುವ ಗುರುಗಳಾಗಿ ಇವರ ಬಗೆಗೆ ತಾವು ಮಾಡಬೇಕಾದ ಕರ್ತವ್ಯದಲ್ಲಿ ತೊಡಗಿ ಅನೇಕ ಕಟ್ಟುಪಾಡುಗಳಿಗೆ ಸಿಲುಕಿಸಿದರು.ಶ್ರೀ ಶಿವಕುಮಾರ ಸ್ವಾಮಿಗಳವರು ಮೊದಲಿನಿಂದಲೂ ಸಮಾಜದ ಎಲ್ಲ ಪರಿಸರಕ್ಕೂ, ಧರ್ಮಕ್ಕೂ, ಸಮಯಾಚಾರ ನಿಷ್ಠೆಗೂ ಹೊಂದಿಕೊಳ್ಳಬಲ್ಲಂಥ ಸಾಮರ್ಥ್ಯವನ್ನು ಶಿವಕೃಪೆಯಿಂದ ಶಿವಯೋಗಿಗಳಕೃಪೆಯಿಂದ ಪಡೆದುಕೊಂಡೇ ಬೆಳೆಯುತ್ತ ಬಂದವರು. ಸಾಮಾನ್ಯಜನ ಜೀವನ ಮಧ್ಯದಲ್ಲಿಯೇ ಜನಾಂಗದ ಮೂಲಭೂತ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದವರು. ನಾಡಿನ ಸನಾತನ ಸಂಸ್ಕೃತಿಯ ಸಮೃದ್ಧವಾದ ಭೂಮಿಯಲ್ಲಿ ಬೆಳೆದುಬಂದ ಶ್ರೇಷ್ಠ ಕಲ್ಪವೃಕ್ಷಪ್ರಾಯರಾಗಿ ಸುಳಿದೆಗೆದು ಎದ್ದುನಿಂತಿದ್ದವರು. ಜನಜೀವನದ ಸುಖದುಃಖ, ನೋವು ನಲಿವು, ಆಟಪಾಟ, ಧರ್ಮಾಧರ್ಮಗಳ ಪರಿಜ್ಞಾನ ಬಾಲ್ಯದಿಂದಲೂ ಅವರಿಗೆ ಅಂಟಿಕೊಂಡು ಬಂದ ಸ್ವಭಾವವಾಗಿತ್ತು. ಶ್ರಮಜೀವಿಗಳಾಗಿ, ಸಂಸ್ಕೃತಿ ಸಂಪನ್ನರಾಗಿ, ಆಚಾರನಿಷ್ಠರಾಗಿ, ಲಿಂಗಲೀಲಾವಿನೋದಚಿತ್ತರಾಗಿ, ಸಮಯಧರ್ಮಪಾಲಕರಾಗಿದ್ದರೆಂಬುದನ್ನು ಬಾಲ್ಯದಿಂದಿಡುತ್ತಾ ಬಂದಿದ್ದ ಅವರ ಹೆಜ್ಜೆಗಳನ್ನು ಅವಲೋಕಿಸಿ ಕಂಡುಕೊಳ್ಳಬಹುದಾಗಿದೆ. ಅವರು ಏರಿದರೆ ಅರಿವಾಗಿದ್ದರು ; ಇಳಿದರೆ ಕ್ರಿಯೆಯಾಗಿದ್ದರು. ಒಂದು ದೃಷ್ಟಿಯಲ್ಲಿ ಅವರೇ ಕ್ರಿಯೆಯಾಗಿದ್ದರು. ಇಂದಿಗೂ ಈ ಸತ್ಯವನ್ನು ನಾವು ಕಾಣಬಹುದಾಗಿದೆ. ಈ ಸಂಸ್ಕಾರ ಇಂದಿನದೇ ಅಲ್ಲ ; ಹಿಂದಿನಿಂದಲೂ ಮೈಗೂಡಿಸಿಕೊಂಡು ಬಂದದ್ದು.

**ವಜ್ರ ಕಾಠಿಣ್ಯ ; ಕುಸುಮ ಕೋಮಲ :**

ಉದ್ದಾನ ಶಿವಯೋಗಿಗಳು ಹೊಸದಾಗಿ ಶಿವಕುಮಾರ ಸ್ವಾಮಿಗಳು ಮಠದ ಪ್ರತ್ಯಕ್ಷ ಕ್ರಿಯಾತ್ಮಕ ಜೀವನಕ್ಕಿಳಿದೊಡನೆಯೇ ಅವರಿಗೆ ದಾಸೋಹದ, ಶಿಕ್ಷಣ ಸಂಸ್ಥೆಯ ಮತ್ತು ವಿದ್ಯಾರ್ಥಿನಿಲಯಗಳ ಜವಾಬ್ದಾರಿಯನ್ನು ವಹಿಸಿಬಿಟ್ಟರು. ಕೈಗೆ ಹೆಚ್ಚಾಗಿ ದುಡ್ಡು ಕೊಡುತ್ತಿರಲಿಲ್ಲ. ಬೆಂಗಳೂರು ನಗರದಲ್ಲಿರುವ ಕೆಲವು ಮನೆಗಳ ಅಲ್ಪಸ್ವಲ್ಪ ಬಾಡಿಗೆ, ಭಕ್ತರ ಕಾಣಿಕೆ ಸರ್ಕಾರದ ಅಲ್ಪಸ್ವಲ್ಪ ಗ್ರಾಂಟ್–ಇಷ್ಟು ಹಣ ಮಾತ್ರ ಶಿವಕುಮಾರ ಸ್ವಾಮಿಗಳವರ ಕೈಗೆ ಸೇರುತ್ತಿತ್ತು. ಜಮೀನಿನ ಉತ್ಪನ್ನವೂ ಹೆಚ್ಚಿರಲಿಲ್ಲ. ಆಗ ಇದ್ದ ಜಮೀನೂ ಕೂಡ ಕೇವಲ ಅತ್ಯಲ್ಪ; ೧೬ ಎಕರೆಗಳು ಮಾತ್ರ. ಶಿವಕುಮಾರ ಸ್ವಾಮಿಗಳಾದರೋ ಅತ್ಯಂತ ಅನುಕಂಪದವರು, ದಾಕ್ಷಿಣ್ಯಪರರು, ಯಾರಿಗೂ ಕಠಿಣವಾಗಿ ಮಾತನಾಡುವವರಲ್ಲ. ಅಲ್ಲದೆ ಯಾರನ್ನೂ ಏನನ್ನೂ ಬೇಡಿ ಗೊತ್ತಿಲ್ಲದವರು. ಅವರ ಶ್ರೇಷ್ಠವಾದ ಗುಣವಿಶೇಷಗಳ ಫಲವಾಗಿ ದಾಸೋಹದ ಖರ್ಚುವೆಚ್ಚಗಳು ಮಿತಿಮೀರತೊಡಗಿದವು. ಜನರು ಇವರ ಲೋಕೋತ್ತರ ಗುಣಸ್ವಭಾವಗಳಿಗೆ ಮಾರುಹೋಗಿ ಅಧಿಕ ಸಂಖ್ಯೆಯಲ್ಲಿ ಮಠಕ್ಕೆ ಬರತೊಡಗಿದರು.ಅವರಿಗೆಲ್ಲಾ ಪ್ರಸಾದ, ವಸತಿ ಸೌಲಭ್ಯವೊದಗಿಸಲು ಶಿವಕುಮಾರಸ್ವಾಮಿಗಳಿಗೆ ಕಷ್ಟವಾಗುತ್ತಿತ್ತು ; ಕೈಗೆದುಡ್ಡೇನೋ ಬರುತ್ತಿತ್ತು : ಕೂಡಲೇ ಖರ್ಚಾಗುತ್ತಿತ್ತು. ಉದ್ದಾನ ಶಿವಯೋಗಿಗಳನ್ನು ಕೇಳಿದರೆ ಅವರು ದುಡಿದು ಸಂಪಾದಿಸಿ ಖರ್ಚು ಮಾಡಿಕೊಳ್ಳಲಿಕ್ಕೆ ಹೇಳಿ ಕಳಿಸಿಬಿಡುತ್ತಿದ್ದರು. ಹೀಗಾಗಿ ಮೊದಮೊದಲು ಇಕ್ಕಟ್ಟಿಗೆ ಸಿಕ್ಕು ಧರ್ಮಸಂಕಟಕ್ಕೊಳಗಾಗುತ್ತಿದ್ದರು. ಆದರೂ ಬಂದ ಕಷ್ಟಗಳೆಲ್ಲಾ ಆ ಕೂಡಲೇ ಪರಿಹಾರವಾಗಿಬಿಡುತ್ತಿದ್ದುದೊಂದು ಶಿವಯೋಗಿಗಳ ಕೃಪಾವಿಶೇಷವೆನ್ನದೆ ಬೇರೇನೂ ಹೇಳಲಿಕ್ಕಾಗುವುದಿಲ್ಲ. ಉದ್ದಾನ ಶಿವಯೋಗಿಗಳು ತಮ್ಮ ಶಿಷ್ಯರ ಮೇಲಿರುವ ತಮ್ಮ ಅಪಾರ ವಾತ್ಸಲ್ಯಭಾವವನ್ನು ಎಂದೂ ಪ್ರಕಟಗೊಳಿಸುತ್ತಲೇ ಇರಲಿಲ್ಲ. ವಜ್ರಕಠೋರವಾಗಿ ಮೇಲೆ ತೋರಿಸುತ್ತಿದ್ದರು. ಕುಸುಮ ಸದೃಶ ಮಾರ್ದವವನ್ನು ಅಂತರಂಗದಲ್ಲಿ

ಅವರ ಬಗೆಗೆ ಇಟ್ಟಿದ್ದರು. ಕೂರ್ಮಶಿಶುಸ್ನೇಹನ್ಯಾಯ ಗುರು ಶಿಷ್ಯರಲ್ಲಿ ಸದಾ ನಡೆದುಬರುತ್ತಿತ್ತು[18]. ಶಿವಕುಮಾರಸ್ವಾಮಿಗಳೇ ತಮ್ಮ ಹಿಂದಿನ ಆ ದಿನಗಳನ್ನು ನೆನೆದು ಒಂದು ದಿನ ಹೀಗೆ ಹೇಳಿದುದು ಜ್ಞಾಪಕ: 'ನನಗೆ ಎಷ್ಟೋ ವೇಳೆ ಉಪ್ಪು ಬೇಳೆ ಹೊಂದಿಸುವುದಕ್ಕೂ ಕೈಯಲ್ಲಿ ದುಡ್ಡು ಇರುತ್ತಿರಲಿಲ್ಲ. ಶ್ರೀಗಳವರು 'ದುಡ್ಡು ಇಲ್ಲ' ಎಂದು ಹೇಳಿಕಳಿಸಿಬಿಡುತ್ತಿದ್ದರು. ಒಮ್ಮೆ ಬೇಳೆ ಅವಶ್ಯವಾಗಿ ಬೇಕಾಗಿತ್ತು. ಹತ್ತಿರ ದುಡ್ಡು ಇರಲಿಲ್ಲ. ಆ ಕ್ಷಣದಲ್ಲಿ ದುಡ್ಡು ಎಲ್ಲಿಯೂ ದೊರೆಯಲಿಲ್ಲ. ಆಗ ವಿದ್ಯಾರ್ಥಿಗಳು ತಾವು ತಮ್ಮ ಖರ್ಚಿಗೆ ಇಟ್ಟುಕೊಂಡ ಹಣವನ್ನೇ ಅವರಿಂದ ಪಡೆದು ಅಂದಿನ ದಂದುಗವನ್ನು ಮುಗಿಸಿ ಆಮೇಲೆ ವಿದ್ಯಾರ್ಥಿಗಳಿಗೆ ಅವರವರ ದುಡ್ಡು ಕೊಟ್ಟಿದ್ದಾಯಿತು. ಎಷ್ಟೋ ಸಲ ಹಳ್ಳಿಗಳ ಜನ್ನದಗಳಿಗೆ ನಮ್ಮ ಗುರುಗಳು 'ನೀವೇ ಹೋಗಿಬನ್ನಿ' ಎನ್ನುತ್ತಿದ್ದರು. ವಾಹನ ಸೌಕರ್ಯವಿಲ್ಲ, ಗುರುಗಳ ಅಪ್ಪಣೆ ಮೀರುವಂತಿರಲಿಲ್ಲ. ಹಳ್ಳಿಯವರಿಗೆ ವಾಹನ ಸೌಕರ್ಯ ಒದಗಿಸಿರೆಂದು ಕೇಳಲೂ ದಾಕ್ಷಿಣ್ಯ. ಹೀಗಾಗಿ ಎಂಟು-ಹತ್ತು-ಹನ್ನೆರಡು ಮೈಲುಗಳವರೆಗೆ ನಡೆದುಕೊಂಡು ಹೋಗಿ ಜನ್ನದ ತೀರಿಸಿ ಬಂದ ಪ್ರಸಂಗಗಳೆಷ್ಟೋ ಇವೆ. ತುಮಕೂರಿಗೆ ಆಫೀಸಿನ ಕೆಲಸ ಕಾರ್ಯಗಳಿಗೆ ಹೋಗಿ ಬರುವುದಕ್ಕೆ ಎಂದೂ ವಾಹನ ಉಪಯೋಗಿಸಲೇ ಇಲ್ಲ.' ಇತ್ಯಾದಿ, ಇತ್ಯಾದಿ. ಚಿಕ್ಕಸ್ವಾಮಿಗಳಿಗೆ ಕಷ್ಟನಷ್ಟ ಏನೆಂಬುದರ ಅರಿವಾಗಬೇಕು. ದಾಸೋಹದ ಖರ್ಚುವೆಚ್ಚ ಹೆಚ್ಚು ಮಾಡುವುದು ದೊಡ್ಡದಲ್ಲ. ಅದಕ್ಕೆ ಹೊಂದಿಸಬೇಕಾದರೆ ಏನು ಕಷ್ಟ, ಏನು ನಷ್ಟ ಎಂಬುದರ ಅರಿವು ಅವರಿಗಾಗಬೇಕು. ಅದಕ್ಕಾಗಿಯೇ ಅವರಿಗೆ ನಾವು ಹೆಚ್ಚಿಗೆ ದುಡ್ಡು ಕೊಡುತ್ತಿಲ್ಲ ಎನ್ನುತ್ತಿದ್ದರಂತೆ ಉದ್ದಾನಪ್ಪನವರು. ಅವರ ಕಾರುಣ್ಯ 'ತಮ್ಮ ಶಿಷ್ಯರ ಕೈ ಬರಿದಾಗಕೂಡದು, ಕೈಯಲ್ಲಿ ಹಣ ಹೆಚ್ಚಾಗಲೂ ಕೂಡದು' ಎಂಬ ಭಾವನೆಯದು. ಒಂದು ದೃಷ್ಟಿಯಿಂದ ಉದ್ದಾನ ಸ್ವಾಮಿಗಳು ಶಿವಕುಮಾರ ಸ್ವಾಮಿಗಳಲ್ಲಿ ತಮ್ಮನ್ನೇ ಕಾಣುತ್ತಿದ್ದರು. ಅವರ ಅಂತರಂಗವನ್ನೇ ಪ್ರವೇಶಿಸಿಬಿಡುತ್ತಿದ್ದರು. ಹಣದ ಮುಗ್ಗಟ್ಟು ಅತಿಶಯವಾಗಿ, ಉಪಾಯದೋರದಾದಾಗ ಆ ಕಾಣದ ಕೈಯು ಅಭಯ ಹಸ್ತ ಚಾಚಿಬರುತ್ತಿತ್ತು. ಗುಡ್ಡದಂತೆ ಬಂದ ಅಭಾವದ ಸನ್ನಿವೇಶ ಮರುಕ್ಷಣದಲ್ಲಿ ಮಂಜಿನಂತೆ ಕರಗಿ ಬಯಲಾಗಿ ಸಮೃದ್ಧಗೊಂಡು ಬರುತ್ತಿತ್ತು. ಇಂಥ ಅಗ್ನಿಪರೀಕ್ಷೆಗಳನ್ನೊಡ್ಡಿ ತಮ್ಮ ಶಿಷ್ಯರನ್ನು ಕಷ್ಟನಷ್ಟಗಳ ಸಂದಿಗೆ ಸಿಲುಕಿಸಿ ಅಪಾರ ಲೋಕಾನುಭವವನ್ನುಂಟು ಮಾಡುತ್ತಿದ್ದುದೂ, ಒಂದು ಬಗೆಯಲ್ಲಿ ಕೃಪಾವಿಶೇಷವೇ. ಇಂದಿಗೂ ಶಿವಕುಮಾರ ಸ್ವಾಮಿಗಳು ತಮ್ಮ ಗುರುಗಳು ತಮ್ಮ ಬಗೆಗೆ ಕಠೋರವಾಗಿ ವರ್ತಿಸುತ್ತಿದ್ದುದೂ ಅವರ ಪೂರ್ಣಕೃಪಾವಿಶೇಷವೇ ಎಂಬುದನ್ನು ನೆನೆಸಿಕೊಂಡು ಒಮ್ಮೊಮ್ಮೆ ಗದ್ಗದಿತಕಂಠರಾಗುತ್ತಾರೆ. ಕೆಲವು ಕಾಲ ಅವರ ಈ ವರ್ತನೆ ನನಗೆ ಸಹಿಸಲಸಾಧ್ಯವಾದ ಮನೋಯಾತನೆಯನ್ನುಂಟುಮಾಡಿದರೂ ಹಾಗೇಕೆ ಮಾಡಿದರೆಂಬುದರ ಅರಿವು ನನಗೆ ಆಮೇಲೆ ಉಂಟಾಗತೊಡಗಿತು' ಎಂದು ಆ ದಿನಗಳನ್ನು ನೆನೆದುಕೊಳ್ಳುತ್ತಾರೆ.

**ಅಭಿವೃದ್ಧಿಗೊಂಡ ಶಿವಕುಮಾರ ಸ್ವಾಮಿಗಳವರ ತೇಜಸ್ಸು :**

ಶ್ರೀ ಶಿವಕುಮಾರ ಸ್ವಾಮಿಗಳವರ ಲೋಕೋತ್ತರ ಗುಣವಿಶೇಷ, ಲಿಂಗತಪಸ್ಸು, ವಾತ್ಸಲ್ಯಭಾವ, ಕ್ರಿಯಾಶಕ್ತಿಗಳು ದಿನೇ ದಿನೇ ಅಭಿವೃದ್ಧಿಗೊಳ್ಳತೊಡಗಿದವು. ಲೋಕದ ಜನಗಳೆಲ್ಲ ಇವರ ಉದಾತ್ತ ನಡೆನುಡಿಗಳಿಗೆ ಮಾರುಹೋಗಿ, ತಮ್ಮ ತಮ್ಮ ಪಾಲಿನ ಕಾಣಿಕೆಗಳನ್ನು ಅರ್ಪಿಸತೊಡಗಿದರು. ದಾಸೋಹಕಾರ್ಯಗಳು, ವಿದ್ಯಾರ್ಥಿನಿಲಯ, ಸಂಸ್ಕೃತ ಪಾಠಶಾಲೆಗಳು ನಿರ್ಬಾಧಿತವಾಗಿ ನಡೆಯತೊಡಗಿದವು. ಆದರೆ ಇದೇ ಕಾಲಕ್ಕೆ ಖರ್ಚುವೆಚ್ಚಗಳು ಮಿತಿಮೀರಿದುವು. ಕೊಡುವವ ಸಂಗ, ಕೊಳ್ಳುವವ ಕೂಡಲ ಸಂಗಮದೇವ, ಎಂಬ ಬಸವಣ್ಣನವರ ನುಡಿಯಂತೆ ಬರುವುದಕ್ಕೂ ಕೊರತೆಯಿರಲಿಲ್ಲ, ಖರ್ಚಾಗುವುದಕ್ಕೂ ಮಿತಿಯಿರಲಿಲ್ಲ. ಈ ಪರಿಸ್ಥಿತಿಯನ್ನು ಕಂಡು ಉದ್ದಾನ ಶಿವಯೋಗಿಗಳು ಒಳಗೊಳಗೇ ಅತ್ಯಂತ ಸಂತೋಷಪಟ್ಟರೂ ಹೊರಗೆ ಗರ್ಜನೆ ಮಾಡುವುದನ್ನು ಬಿಟ್ಟಿರಲಿಲ್ಲ. ಆದರೂ ಶಿವಕುಮಾರಸ್ವಾಮಿಗಳವರು ತಮ್ಮ ಬೆಳೆದ ಖರ್ಚುವೆಚ್ಚಗಳನ್ನಂತೂ ಮೊಟಕುಗೊಳಿಸುವುದು ಸಾಧ್ಯವಿರಲಿಲ್ಲ. ಒಮ್ಮೆ ಒಂದು ಪ್ರಸಂಗ ನಡೆಯಿತು;

ಬೇಳೂರಿನ ಓರ್ವ ಮುದುಕ ಅತ್ಯಂತ ಕೃಪಣ. ಜೀವನದಲ್ಲಿ ಯಾರಿಗೂ ಒಂದು ಬಿಡ್ಕಾಸನ್ನೂ ಕೊಟ್ಟುಗೊತ್ತಿಲ್ಲದವ. ಅವನು ಉದ್ದಾನಸ್ವಾಮಿಗಳ ಹತ್ತಿರಕ್ಕೆ ಏಳುನೂರು ರೂಪಾಯಿಗಳ ನೋಟುಗಳನ್ನು ತಂದು ಮುಂಚವಮೇಲಿಕ್ಕಿದ. 'ಸ್ವಾಮಿ, ಈ ನೋಟುಗಳೆಲ್ಲಾ ಹುಳು ತಿಂದು ಹಾಳಾಗಿ ಹೋಗಿವೆ, ಕಳ್ಳಕಾಕರ ಭಯದಿಂದ ಹೊಟ್ಟಿನ ಬಣವೆಯಲ್ಲಿ ಮುಚ್ಚಿಟ್ಟಿದ್ದೆ. ಅಲ್ಲಿ ಇಟ್ಟಿದ್ದರಿಂದ ಹೀಗಾಗಿವೆ; ಯಾರೂ ಹಿಡಿಯುತ್ತಿಲ್ಲ. ಇವಕ್ಕೆ ಹೊಸ ನೋಟುಗಳನ್ನು ನಿಮ್ಮ ಚಿಕ್ಕಸ್ವಾಮಿಗಳಿಗೆ ಹೇಳಿ ತರಿಸಿ

---

18. ಕೂರ್ಮಶಿಶುಸ್ನೇಹನ್ಯಾಯ : ಸಮುದ್ರದಲ್ಲಿ ಒಂದು ಕಡೆ ಆಮೆಯು ಮರಿಗಳನ್ನು ಹಾಕಿ, ಅವುಗಳನ್ನು ಅಲ್ಲಿಯೇ ಬಿಟ್ಟು ಬೇರೆಡೆಗೆ ಮೇಯಲು ಹೋಗಿರುತ್ತದೆ. ಅದು ಮೇಯುತ್ತಾ, ಮೇಯುತ್ತಾ ಬಹುದೂರ ಹೋಗಿ ಮರಿಗಳನ್ನು ನೆನಪು ಮಾಡಿಕೊಳ್ಳುತ್ತದೆ. ಅದೇ ಸಮಯಕ್ಕೆ ಮರಿಗಳಿಗೂ ತಾಯಿಯ ನೆನಪಾಗುತ್ತದೆ. ಹೀಗೆ ಏಕಕಾಲದಲ್ಲಿ ಒಂದಕ್ಕೊಂದಕ್ಕೆ ಪರಸ್ಪರ ಆಕರ್ಷಣೆಯುಂಟಾಗುತ್ತದೆ. ತಾಯಿಯು ಮರಿಗಳಿಗೆ ತನ್ನ ಭಾವನೆಯಿಂದಲೇ ತೃಪ್ತಿಯನ್ನುಂಟುಮಾಡುತ್ತದೆ. ಈ ತರದ ಲೋಕವ್ಯವಹಾರವನ್ನು ಕೂರ್ಮಶಿಶುಸ್ನೇಹ ನ್ಯಾಯವೆಂದು ಕರೆಯುತ್ತಾರೆ.

ಕೊಡಿ, ಅವರು ಬುದ್ಧಿವಂತರಂತೆ. ಇಂಥದ್ದೆಲ್ಲ ಅವರಿಗೆ ಗೊತ್ತಂತೆ' ಎಂದ. ಉದ್ದಾನ ಸ್ವಾಮಿಗಳು ಅವನನ್ನು ಶಿಖಿನ ಖಾಂತದವರೆಗೆ ನೋಡಿದರು. ಹೀಗೇಕೆ ನೋಡಿದರೆಂಬುದರ ಅರಿವು ಚಿಕ್ಕಣ್ಣನಿಗಾಗಿರಲಿಕ್ಕಿಲ್ಲ. ಆದರೆ ಮೈಮನಸ್ಸುಗಳು ಒಮ್ಮೆಲೇ ಜುಮ್ಮೆಂದಂತಾಯಿತು. ಎಂದೂ ಇಲ್ಲದ ಏನೋ ಒಂದು ಮಹಾ ಬದಲಾವಣೆ ಅವನ ಮನಸ್ಸಿನಲ್ಲುಂಟಾದಂತೆ ಭಾಸವಾಯಿತು, ಸ್ವಾಮಿಗಳು 'ಹೋಗು, ಊಟಮಾಡಿಕೊಂಡು ಊರಿಗೆ ಹೋಗಿ ಇನ್ನೂ ಕೆಲವುದಿನ ಬಿಟ್ಟು ಬಾ' ಎಂದು ಹೇಳಿಕಳಿಸಿದರು. ಚಿಕ್ಕಣ್ಣ ಊಟಮಾಡಿ ಊರಿಗೆ ಹೋದ. ಉದ್ದಾನ ಸ್ವಾಮಿಗಳು ಚಿಕ್ಕಸ್ವಾಮಿಗಳನ್ನು ಕರೆದು 'ಸ್ವಾಮಿಗಳೇ, ನೋಡಿ, ಈ ನೋಟುಗಳೆಲ್ಲಾ ಓರ್ವ ರೈತನವು, ಹುಳು ತಿಂದು ಹಾಳಾಗಿವೆ, ಇವಕ್ಕೆ ಬೇರೆ ಹೊಸ ನೋಟು ತರಿಸಿಕೊಡಿ' ಎಂದು ಹೇಳಿ ಕೊಟ್ಟರು. ಶಿವಕುಮಾರಸ್ವಾಮಿಗಳು ಅವುಗಳ ಬದಲು ಹೊಸ ನೋಟುಗಳನ್ನು ತರಿಸಿಕೊಟ್ಟರು. ಉದ್ದಾನ ಸ್ವಾಮಿಗಳು ಕೆಲವುದಿನ ಬಿಟ್ಟು ಬಂದ ಮುದುಕನಿಗೆ ಆ ನೋಟುಗಳನ್ನು ಕೊಟ್ಟರು. ಮುದುಕ ಆ ನೋಟುಗಳನ್ನು ಕೈಗೆ ಎತ್ತಿಕೊಳ್ಳಲು ಇಚ್ಛಿಸಲೇ ಇಲ್ಲ. ಅತ್ಯಂತ ಕೃಪಣನಾದ ಅವನಲ್ಲಿ ಈ ಪರಿವರ್ತನೆಯುಂಟಾದದ್ದು ಹೇಗೆಂಬುದನ್ನು ಊಹಿಸುವುದು ಕಷ್ಟವೇನೂ ಆಗದು. ಉದ್ದಾನಸ್ವಾಮಿಗಳು ಆ ಮುದುಕನಲ್ಲಿರುವ ಕಾರ್ಪಣ್ಯದ ಕಾವಳನ್ನು ತಮ್ಮ ದೃಷ್ಟಿಪಾತದಿಂದಲೇ ಕಳೆದು ಅಲ್ಲಿ ತ್ಯಾಗಮನೋಭಾವದ ಮಣಿದೀಪವನ್ನು ಹೊತ್ತಿಸಿಬಿಟ್ಟರು. ಲೋಕಜೀವನಕ್ಕೆ ಮೆಚ್ಚುವಾಗಬೇಕಾದುದು ಇವನಲ್ಲಿ ಸಂಗ್ರಹವಾಗಿದೆ. ಅದು ಲೋಕದ ಸೊತ್ತಾಗಬೇಕು ಎಂಬ ಶಿವಯೋಗಿಯ ಇಚ್ಛೆಯೇ ಚಿಕ್ಕಣ್ಣನಲ್ಲಿ ಇಂಥ ಅನೂಹ್ಯವಾದ ಪರಿವರ್ತನೆಗೆ ಕಾರಣವಾಯಿತು. ಆತನು 'ಸ್ವಾಮಿ, ಈ ಹಣವನ್ನು ನಾನೇನು ಮಾಡಲಿ, ನೀವೇ ಇಟ್ಟುಕೊಂಡುಬಿಡಿ' ಎಂದು ಹೇಳಿ ಹೊರಟುಹೋದನು ; ಇಷ್ಟಕ್ಕೇ ಮುಗಿಯಲಿಲ್ಲ. ಕೆಲವು ದಿನಗಳ ಮೇಲೆ ಆ ಮುದುಕ ಇದ್ದಕ್ಕಿದ್ದಂತೆ ಒಂದು ಕೊಲ್ಲಾರಿಬಂಡಿಯನ್ನು ಹೂಡಿಕೊಂಡು ಭತ್ತ ತುಂಬಿದ ಚೀಲದಲ್ಲಿ ನಾಲ್ಕುಸಾವಿರ ರೂಪಾಯಿ ತುಂಬಿ ತಂದನು. ಈ ಮುದುಕ ಉದ್ದಾನ ಸ್ವಾಮಿಗಳಿದ್ದಾಗಲೂ ಮಠಕ್ಕೆ ಬರುತ್ತಿದ್ದ. ಈಗಲೂ ಬಂದ. 'ಆಫೀಸ್ ರೂಂ ಬಾಗಿಲಲ್ಲಿ ಗಾಡಿಯನ್ನು ನಿಲ್ಲಿಸಿ 'ಏನೋರೇ ಬನ್ನಿಲ್ಲಿ! ನಿಮ್ಮ ಸಂಗಡ ಮಾತಾಡ್ಬೇಕು' ಎಂದ. ಸ್ವಾಮಿಗಳು ಇವನ ಸ್ವಭಾವ ಮಾತುಕತೆ ಇವನ್ನು ಅರಿತವರಾಗಿದ್ದರು. 'ತಗೊಳ್ಳಿ ನಿಮ್ಮ ಖರ್ಚುವೆಚ್ಚ ಬಾಳಾ ಆಗೈತೆ. ನಿಮಗೆ ಕೊಡಬೇಕಂತ್ಲೆ ತಂದಿದ್ದೀನಿ. ನಾಲ್ಕು ಸಾವಿರ ರೂಪಾಯಿ ಐತೆ, ಎಂದು ಮುಂದೆ ಹಣ ಸುರಿದನು. ಶ್ರೀಗಳವರು ಅವಾಕ್ಕಾದರು. ಹಾಗೆ ಹಣ ಸುರಿದವನೇ ಅದರಲ್ಲಿ ಒಂದುಸಾವಿರ ರೂಪಾಯಿ ತಕ್ಕೊಂಡು 'ಈ ಹಣ ಆಮೇಲೆ ಕೊಡ್ತೇನೆ ಉಳಿದ ಹಣ ತಕ್ಕೊಂಡು ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಖರ್ಚುಮಾಡಿಕೊಳ್ಳಿ' ಎಂದು ಹೇಳಿದನು. ಈ ಘಟನೆ ಉದ್ದಾನ ಸ್ವಾಮಿಗಳವರ ಲಿಂಗೈಕ್ಯಾನಂತರ ನಡೆದುದು. ಆದರೆ ಆ ನಿರಕ್ಷರಕುಕ್ಷಿಯೂ ಮಹಾ ಕೃಪಣನೂ ಆದ ಚಿಕ್ಕಣ್ಣ ಪರಿವರ್ತನೆಗೊಂಡು ಮಹಾದಾನಿಯಾದದ್ದು ಉದ್ದಾನ ಶಿವಯೋಗಿಗಳವರ ದೃಷ್ಟಿಪಾತಕೃಪಾ ವಿಶೇಷದಿಂದಲೇ, ಅವನ ತ್ಯಾಗವೊಂದು ರೋಮಾಂಚಕ ಘಟನೆಯೆಂದೇ ಶಿವಕುಮಾರಸ್ವಾಮಿಗಳವರ ವರ್ಣನೆ. ಈ ಮುದುಕನ ಹೆಸರು 'ಚಿಕ್ಕಣ್ಣ' ಅಥವಾ ಚಿಕ್ಕೇಗೌಡ ಎಂದು. ಮುದುಕ ಮುಂದೆ ಮಠದಲ್ಲಿಯೇ ಉಳಿದ. ಆದರೆ ಒಂದು ದಿನವೂ ಕುಳಿತು ಊಟ ಮಾಡಿದವನಲ್ಲ. ದಿನವಿಡೀ ದೇಹಶ್ರಮಮಾಡಿ ಮಠದ ಹೊಲಗದ್ದೆಗಳಲ್ಲಿ ದುಡಿದು, ದನಕರುಗಳನ್ನು ಮೇಯಿಸಿ, ಹುಲ್ಲುತಂದು ಹಾಕುತ್ತಾ ಮಠದ ಸೇವೆಯಲ್ಲಿ ತನ್ನ ದೇಹವನ್ನು ಸವೆಸಿದನು. ಈತನ ಕ್ರಿಯಾಯೋಗ ದೊಡ್ಡದೆಂದು ಶ್ರೀಗಳು ಈಗಲೂ ಈತನನ್ನು ಶ್ಲಾಘಿಸುತ್ತಿದ್ದಾರೆ. ಅವನ ಕಾಯಕಧರ್ಮವನ್ನು ಮನಸಾರೆ ಹೊಗಳುತ್ತಾರೆ. ಮುಂದೆ ಇವನು ತನ್ನಲ್ಲಿದ್ದ ಹಣವನ್ನಲ್ಲದೆ ಊರಿನಲ್ಲಿ ಕೊಟ್ಟಿದ್ದ ೧೦-೧೨ ಸಾವಿರ ರೂಪಾಯಿ ಸಾಲವನ್ನೆಲ್ಲಾ ಬಡ್ಡಿ ಸಹಿತ ವಸೂಲುಮಾಡಿ ಮಠಕ್ಕೆ ಅರ್ಪಿಸಿದ್ದೊಂದು ಅವಿಸ್ಮರಣೀಯ ಘಟನೆ ಎನ್ನುತ್ತಾರೆ, ಶ್ರೀ ಶಿವಕುಮಾರಸ್ವಾಮಿಗಳು. ಜೀವನದಾರಭ್ಯ ಕಿಲುಬು ಕಾಸನ್ನು ಯಾರಿಗೂ ಕೊಡದೆ ಕಷ್ಟಕಾರ್ಪಣ್ಯದಿಂದ ಗಳಿಸಿದ್ದ ಧನವನ್ನು ಮಠಕ್ಕೆ ತಂದೊಪ್ಪಿಸುವಾಗಿನ ಧನದ ಮೇಲಿನ ಇವನ ನೈರಾಶ್ಯಭಾವಕ್ಕೆ ಕಾರಣ ಹುಡುಕುವುದು ದೊಡ್ಡದಲ್ಲ. ಹಿಂದೆ ಉದ್ದಾನ ಸ್ವಾಮಿಗಳವರ ದರ್ಶನಾರ್ಶೀವಾದ ಪಡೆದಿದ್ದ ಇವನಿಗೆ ಉದ್ದಾನ ಸ್ವಾಮಿಗಳು ಹರಸಿದ್ದರು. ಶ್ರೀಗಳವರ ಆ ಹರಕೆಯ ಫಲವಾಗಿ ತಾನು ಗಳಿಸಿದ ಐಶ್ವರ್ಯವನ್ನೆಲ್ಲ ಶುದ್ಧಿಗೊಳಿಸಿಕೊಂಡನಲ್ಲದೆ ಬೇರಿಲ್ಲ. ಶಿವಯೋಗಿಯ ಕೃಪೆ ಹೇಗಾಗುತ್ತದೆ? ಯಾವ ರೂಪದಲ್ಲಿ ಕಾಮನೆಗಳನ್ನು ಸುಡುತ್ತವೆ ಎಂಬುದು ತಿಳಿಯಲಾಗದ ಒಗಟು[19].

ಚಿಕ್ಕಣ್ಣನ ಈ ಹಣವೇ ಅಕಾಲದಲ್ಲಿ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಮೂಲಬಂಡವಾಳವಾಯಿತು. ಚಿಕ್ಕಣ್ಣನಂತೆ ದೇವನಹಳ್ಳಿ ಕೊಡುಗುರಿಕೆಯಿಂದ ಒಂದು ಮುದುಕಿ ಸ್ವಾಮಿಗಳವರಿಗೆ ಅಂಥ ಕಷ್ಟಕಾಲದಲ್ಲಿ ೨,೫೦೦ ರೂಪಾಯಿ, ಹಣವನ್ನು

---

19. ಚಿಕ್ಕಣ್ಣ ಅಂದಿನಿಂದ ಕೊನೆಯವರೆಗೆ ಮಠದಲ್ಲಿದ್ದು ಶಿವಸಾಯುಜ್ಯ ಪಡೆದನು. ಇವನ ಸಮಾಧಿಕ್ರಿಯೆಯನ್ನು ವಿಧ್ಯುಕ್ತವಾಗಿ ಶಿವಕುಮಾರ ಸ್ವಾಮಿಗಳು ನೆರವೇರಿಸಿದರು. ಇವನು ಕೊಟ್ಟ ಹಣನ್ನು ಇವನ ಅತ್ಯಂತ ಪ್ರೀತಿಗೆ ಪಾತ್ರವಾಗಿದ್ದ ದನಕರುಗಳ ಕೊಟ್ಟಿಗೆ ಕಟ್ಟಿಸಲು ವಿನಿಯೋಗಿಸಿದರು.

ಸ್ವಯಂಪ್ರೇರಿತಳಾಗಿಬಂದು ಸುರಿದು 'ಮಹಾರಾಯ, ನಿಮ್ಮ ಖರ್ಚುವೆಚ್ಚ ಅನಂತ' ಈ ಹಣವನ್ನು ನಾನೇನು ಮಾಡಲಿ! ನೀವೇ ಉಪಯೋಗಿಸಿಕೊಳ್ಳಿ.' ಎಂದು ಹೇಳಿ ಸುರಿದು ಕೆಲವುದಿನ ಮಠದಲ್ಲಿಯೇ ಇತ್ತು. ಸ್ವಾಮಿಗಳು ಭಿಕ್ಷಾಟನೆಗೆ ಗ್ರಾಮಾಂತರ ಪ್ರದೇಶಕ್ಕೆ ಹೋದಾಗ ಮಠದಲ್ಲಿಯೇ ಸತ್ತಿತು. ಆದರೆ ಸಾಯುವ ಪೂರ್ವದಲ್ಲಿ ತನ್ನಲ್ಲಿದ್ದ ಬೆಳ್ಳಿನಾಣ್ಯ ಮತ್ತು ಸ್ವಲ್ಪ ಬಂಗಾರವನ್ನು ತಾನಿದ್ದ ಕೊಠಡಿಯಲ್ಲಿಯ ಮೂಲೆಯೊಂದರಲ್ಲಿ ಇಟ್ಟು ಮೇಲೆ ಮಳಲನ್ನು ಮುಚ್ಚಿಟ್ಟು, ಸ್ವಾಮಿಗಳಿಗೆ ಇವನ್ನು ಅರ್ಪಿಸಬೇಕೆಂದು ಅಲ್ಲಿದ್ದವರಿಗೆ ಹೇಳಿ ಸತ್ತಿತು. ಸರ್ಕೀಟಿನಿಂದ ಸ್ವಾಮಿಗಳು ಬಂದ ಮೇಲೆ ಅದೆಲ್ಲವೂ ಶ್ರೀಗಳವರಿಗೆ ಅರ್ಪಿತವಾಯಿತು[20].

ಇವುಗಳ ಉಲ್ಲೇಖ ಮಾಡಿದುದರ ಕಾರಣ ಇಷ್ಟೆ : ಉದ್ದಾನ ಶಿವಯೋಗೀಶ್ವರರ ಕೃಪಾಹಸ್ತ ಅವರ ಶಿಷ್ಯರು ಮಾಡುವ ಅದ್ಭುತ ದಾಸೋಹ ಸದ್ಭಾವಕ್ಕೆ ಹೇಗೆ ಅನೂಹ್ಯವಾದ ರೀತಿಯಲ್ಲಿ ಕಣ್ಣಿಗೆ ಕಾಣದಂತೆ ಸಿದ್ಧವಾಗುತ್ತಿತ್ತೆಂಬುದರ ಒಂದು ದೃಷ್ಟಾಂತವಷ್ಟೆ. ಇಂಥ ನೂರಾರು ಪ್ರಸಂಗಗಳು ಶ್ರೀ ಶಿವಕುಮಾರ ಸ್ವಾಮಿಗಳವರ ಜೀವನದಲ್ಲಿ ನಡೆದುಹೋಗಿವೆ. ಪೂರ್ವದಲ್ಲಿ ಎರಡು ಇನಾಂ ಗ್ರಾಮಗಳಿಂದ ಕೂಡಿ ತಕ್ಕಷ್ಟು ಅನುಕೂಲತೆಗಳಿಂದ ಧರ್ಮಕಾರ್ಯ ಮಾಡುತ್ತಿದ್ದ ಮಠವೇ ಆದರೂ ೧೯ನೆಯ ಶತಮಾನದಲ್ಲಿ ಮಠ ಆರ್ಥಿಕವಾಗಿ ಕ್ಷೀಣದೆಸೆಗೆ ಬಂದಿತ್ತು. ಅಲ್ಲಿನ ಶಿವಯೋಗಿಗಳ ಶಕ್ತಿ ಸಾಮರ್ಥ್ಯಗಳೇ ಆ ಮಠದ ಸಂಪತ್ತಾಗಿದ್ದವು. ಅವರ ಸತ್ಸಂಕಲ್ಪಶಕ್ತಿಗಳ ಫಲವಾಗಿ ಅಲ್ಲಿ ಆಗ ನಡೆಯುತ್ತಿದ್ದ ಉತ್ಪತ್ತಿ ಖರ್ಚುಗಳ ಬಗೆಗೆ ಯೋಚಿಸಲು ಶ್ರೀಮಂತವಾದ ಹೃದಯಶಕ್ತಿಬೇಕು; ಮಸ್ತಿಷ್ಕವೊಂದೇ ಈ ರಹಸ್ಯವನ್ನರಿಯಲು ಸಮರ್ಥವಾಗದು. ಮಸ್ತಿಷ್ಕ ಏನಿದ್ದರೂ ಲೆಕ್ಕಾಚಾರದ್ದು. ಆ ಲೆಕ್ಕಾಚಾರವೆಲ್ಲಾ ಸಿದ್ಧಗಂಗಾ ಕ್ಷೇತ್ರದ ವಿಚಾರದಲ್ಲಿ ತಲೆಕೆಳಗು.

ಹೀಗೆ ಉದ್ದಾನ ಸ್ವಾಮಿಗಳು ಸತತ ೧೧ ವರ್ಷಗಳವರೆಗೆ ಶ್ರೀ ಶಿವಕುಮಾರ ಸ್ವಾಮಿಗಳನ್ನು ವಿವಿಧ ರೀತಿಯಲ್ಲಿ ಕಡೆದರು. ಲಿಂಗೈಕ್ಯರಾದಮೇಲೆ ಕಣ್ಣಿಗೆ ಕಾಣದೇ ಕಡೆದರು; ಅಷ್ಟೇಅಲ್ಲ. ಕಡೆಯುತ್ತಿದ್ದಾರೆಂದು ನನ್ನ ಊಹೆ[21]. ಕಾಸಿ ಕರಗಿಸಿ ಕಾಳಿಕೆಗಳೆದು ಒರೆಗೆಹಚ್ಚಿ ಬಣ್ಣಕ್ಕೆ ತಂದು ಬಡಿದು ಪರಮಾತ್ಮನ ಕೊರಳ ಆಭರಣವನ್ನಾಗಿ ಮಾಡಿದರು. ೧೯೩೦ನೆಯ ಇಸ್ವಿಯಲ್ಲಿ ಶ್ರೀ ಶಿವಕುಮಾರಸ್ವಾಮಿಗಳ ಪ್ರಯತ್ನದ ಫಲವಾಗಿ, ಉದ್ದಾನ ಸ್ವಾಮಿಗಳು ೧೯೧೭ರಲ್ಲಿ ಸ್ಥಾಪಿಸಿದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆ ಸಂಸ್ಕೃತ ಕಾಲೇಜಾಗಿ ಪರಿವರ್ತನೆಗೊಂಡು, ತರ್ಕ ವ್ಯಾಕರಣ, ಸಾಹಿತ್ಯಶಾಸ್ತ್ರದಲ್ಲಿ ವಿದ್ವತ್ ಪದವಿಗಳಿಗೆ ಎಲ್ಲಾ ಕೋಮಿನವರಿಗೂ ಓದುವ ಅವಕಾಶವನ್ನುಂಟುಮಾಡಿಕೊಟ್ಟದ್ದನ್ನು ಕಂಡು, ಅವರು ಹಿರಿಹಿರಿ ಹಿಗ್ಗಿದುದುಂಟು. ತಮ್ಮ ಶಿಷ್ಯರ ಶಕ್ತಿಸಂಪತ್ತಿನ, ಕಾರ್ಯಗೌರವದ, ಕಾಯಕ ಸದ್ಭಾವದ ಮುಖ್ಯವಾಗಿ ತಮ್ಮ ಅತ್ಯಂತ ಮಮತೆಯ 'ದಾಸೋಹ' ಕಾರ್ಯಗಳ ಬೆಳವಣಿಗೆಯನ್ನು ಕಂಡು ಒಳಗೊಳಗೇ ಸಂತೋಷಚಿತ್ತರಾಗುತ್ತಿದ್ದರು. ಹೊರಗೆ ಮತ್ತೂ ಯಥಾಪ್ರಕಾರ ಕಠೋರವೇ[22]. ಆ ಕಠೋರ ಅನುಗ್ರಹದ ಕುರುಹಂತೆ. ಅವರು ಕಾಠಿಣ್ಯವನ್ನು ಸಹಿಸಿದವರಿಗೇ ಅನುಗ್ರಹಿಸುತ್ತಿದ್ದರೆಂದು ಅವರಿಂದ ಅನುಗ್ರಹೀತರಾದ ಲೌಕಿಕ ವ್ಯಕ್ತಿ ಡಾ॥ ಜಿ. ಮರುಳಸಿದ್ಧಯ್ಯನವರು ಹೇಳುತ್ತಿದ್ದಾರೆ.

**ಗುರುವಿಯೋಗ :**

೧೯೪೧ನೆಯ ಇಸ್ವಿಯ ಜನವರಿ ಮೊದಲವಾರದಲ್ಲಿ ಉದ್ದಾನ ಶಿವಯೋಗಿಗಳು ವಾರ್ಧಕ್ಯದ ದೇಹಧರ್ಮದಂತೆ ಹಾಸಿಗೆ ಹಿಡಿದರು. ಅನೇಕ ಜನಗಳು ಶಿವಯೋಗಿಗಳನ್ನು ಬಂದು ಬಂದು ನೋಡಿಕೊಂಡು ಹೋದರು. ಚಿತ್ರದುರ್ಗದ ಜಯದೇವ ಜಗದ್ಗುರುಗಳೂ ಯೋಗಕ್ಷೇಮ ವಿಚಾರಿಸಲು ಬಂದರು. ಅವರನ್ನೊಡಗೊಂಡು ಶಿವಕುಮಾರಸ್ವಾಮಿಗಳು ಹಳೆಯ ಮಠಕ್ಕೆ ಬಂದರು[23]. ಆಗಲೂ ತಮ್ಮ ಪ್ರೀತಿಯ ಶಿಷ್ಯರ ಮೇಲೆ ಕೋಪವನ್ನೇ ಪ್ರಕಟಿಸಿದರು. ಆ ಕೋಪ ತಮ್ಮ ಶಿಷ್ಯರು ಗುರುವಿನಿಂದಾದ ಮಾನಾಪಮಾನಗಳಲ್ಲಿ ಸಮಾನಭಾವವುಂಟೋ ಇಲ್ಲವೋ ಎಂಬುದರ ಪರೀಕ್ಷೆಯೇ ಆಗಿತ್ತು. ಶಿವಕುಮಾರ ಸ್ವಾಮಿಗಳು ಆ ಪ್ರಸಂಗದಿಂದ ನೊಂದುಕೊಳ್ಳಲಿಲ್ಲ, ಎದುರಾಡಲಿಲ್ಲ. ಕೊನೆಗೆ ಶಿವಯೋಗಿಗಳು ಇನ್ನು ಸಾಕು. ಇವರು ಸುಂದರಮೂರ್ತಿಗಳಾಗಿದ್ದಾರೆ. ಕಳೆದ ಸುಮಾರು ೧೧ ವರ್ಷಗಳಿಂದ ತೊಂಭತ್ತೊಂಭತ್ತು ಉಳಿ ಏಟು ಹಾಕಿಯಾಗಿದೆ, ಇಂದಿನ ಈ ಏಟು ನೂರನೆಯದು. ಇನ್ನು ಉಳಿ ಏಟಿನ ಅವಶ್ಯಕತೆ ಇಲ್ಲ, ಎಂದು ತೃಪ್ತಿಯ ನಿಟ್ಟುಸಿರು ಬಿಟ್ಟರು. ತಾವು ಈ ಗೋಸಲ

---

20. ಈಗ ಇರುವ 'ಲಿಂಗಮ್ಮನ ಛತ್ರ' ಕಟ್ಟಡ ಈ ಮುದುಕಿ ಮಠಕ್ಕರ್ಪಿಸಿದ ಹಣದ ಸಹಾಯದಿಂದ ಕಟ್ಟಲ್ಪಟ್ಟು, ಅವಳ ಹೆಸರನ್ನೇ ಅದಕ್ಕಿಡಲಾಯಿತು. ಇದೂ ಉದ್ದಾನಸ್ವಾಮಿಗಳು ಲಿಂಗೈಕ್ಯರಾದಮೇಲೆ ನಡೆದ ಘಟನೆ.
21. ಏಕೆಂದರೆ ಅನೇಕ ಭಾಷಣಗಳಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳವರು ಮಠದ ಅಭಿವೃದ್ಧಿಯನ್ನು ನಾನು ಮಾಡಿದ್ದೇನೆಂದೇನೂ ಅಲ್ಲ; ಅದೆಲ್ಲಾ ನಮ್ಮ ಪೂಜ್ಯ ಗುರುಗಳ ಕೃಪೆಯೆಂದು ಉತ್ಕಂಠಿತರಾಗಿ ಹೇಳುವುದನ್ನು ನಾನು ಕೇಳಿದ್ದೇನೆ. ಆದ್ದರಿಂದಲೇ ನಾವು ಹಾಗೆ ಊಹಿಸಬೇಕಾಗಿದೆ.
22. ಈ ಬಗೆಗೆ ಅನೇಕ ಪ್ರಸಂಗಗಳನ್ನು ಉದ್ದಾನ ಸ್ವಾಮಿಗಳವರ ಜೀವನ ಚರಿತ್ರೆಯ ಭಾಗದಲ್ಲಿ ವಿವರಿಸಲಾಗಿದೆ; ಅಲ್ಲಿ ನೋಡಬಹುದು.
23. ಈ ಪ್ರಸಂಗದ ವಿಶೇಷ ವಿವರಣೆ ಉದ್ದಾನ ಸ್ವಾಮಿಗಳ ಚರಿತ್ರೆಯಲ್ಲಿದೆ.

ಸಿದ್ಧೇಶ್ವರ, ಸಿದ್ಧಲಿಂಗೇಶ್ವರರೇ ಮೊದಲಾದವರ ಪುಣ್ಯಭೂಮಿಯಲ್ಲಿ ಕಲ್ಪವೃಕ್ಷದ ಸಸಿಯನ್ನೇ ನೆಟ್ಟಂದಾಯಿತು. ಕಾಮಧೇನುವಿನ ಕರುವನ್ನೇ ಸಾಕಿಸಲುಹಿದಂತಾಯಿತೆಂದು ಭಾವಿಸಿ ಲಿಂಗೈಕ್ಯರಾಗುವ ಮುನ್ನ ಶ್ರೀ ಶಿವಕುಮಾರಸ್ವಾಮಿಗಳವರನ್ನು ಕಂಡು ಅಂತಃಕರಣವುಕ್ಕಿ ಕಣ್ಣೀರ್ಗರೆದರು. ಶಿವಕುಮಾರಸ್ವಾಮಿಗಳೂ ಸಾತ್ವಿಕಭಾವ ಉಕ್ಕೇರಿ ಗದ್ಗದಿತಕಂಠರಾಗಿ ಕಣ್ಣೀರ್ಗರೆದರು. ಸ್ವರ್ಗೀಯವಾದ, ಹೃದಯವನ್ನು ಕಲಕುವ ಆ ಸನ್ನಿವೇಶ ಮಾರ್ಮಿಕವಾಗಿತ್ತು. ೧೯೪೧ರ ಜನವರಿ ೧೧ನೆಯ ದಿನಾಂಕ ಶನಿವಾರ ರಾತ್ರಿ ೧೧.೪೫ ಗಂಟೆಯ ಸುಮಾರಿಗೆ ಸಾಕ್ಷಾತ್ ಗೋಸಲ ಸಿದ್ಧೇಶ್ವರರಂತೆ ವಿರಾಜಿಸುತ್ತಿದ್ದ ಉದ್ದಾನಶಿವಯೋಗಿಗಳ ಆತ್ಮಜ್ಯೋತಿ ಮಹಾಜ್ಯೋತಿಯಲ್ಲಿ ಒಂದಾಗಿ ಭೌತಿಕ ಲಿಂಗಶರೀರದಿಂದ ಕಣ್ಮರೆಯಾದರು. ಸಕಲೇಶಪುರದ ತೋಟಗದ್ದೆ ಎಸ್ಟೇಟಿನ ಮಾಲೀಕರಾದ ದೇವಪ್ಪಗೌಡರ ಭಕ್ತಿಯ ಕುರುಹಾಗಿ ಕಟ್ಟಿಸಿ ಸಿದ್ಧಪಡಿಸಿದ್ದ ಸಮಾಧಿಯಲ್ಲಿ ಲಿಂಗತನುವನ್ನು ಮರುದಿನ ಗದ್ದುಗೆ ಮಾಡಲಾಯಿತು.

**"ಏಡಿಸಿಕಾಡಿತ್ತು ಶಿವನಡಂಗುರ"**

ಈಗ ಶ್ರೀ ಶಿವಕುಮಾರ ಸ್ವಾಮಿಗಳ ತಲೆಯಮೇಲೆ ಮಠದ ಸಮಸ್ತ ಆಗುಹೋಗುಗಳ ಗುರುತರ ಜವಾಬ್ದಾರಿಯು ಬಿತ್ತು. ತಮ್ಮ ಗುರುಗಳಿದ್ದಾಗ ಅದಾವುದೋ ಧೈರ್ಯದಿಂದ ಸಾಗುತ್ತಿದ್ದರು. ಮಠದಲ್ಲಿ ಹಣಕಾಸು ಇರಲಿಲ್ಲ. ಬಂದುದೆಲ್ಲಾ ಅಂದಂದಿನ ಖರ್ಚಿಗೆ ವ್ಯಯವಾಗುತ್ತಿತ್ತು. ಇಂಥ ವಿಶೇಷ ಸಂದರ್ಭದಲ್ಲಿ ಖರ್ಚು ಮಾಡಲು ಬೇಕಾದ ಅಧಿಕ ಮೊತ್ತದ ಹಣ ಮಠದಲ್ಲಿಲ್ಲದೆ ಬರಿಗೈಯಾದಂತಾಗಿದ್ದರು. ಆಗ ಸ್ವಾಮಿಗಳ ಕೈಯಲ್ಲಿದ್ದುದು ಕೇವಲ ೩೦೦ ರೂಪಾಯಿಗಳು ಮಾತ್ರ. ಬ್ಯಾಂಕಿನಲ್ಲಿ ಸ್ವಲ್ಪ ಹಣವಿತ್ತಾದರೂ ಆ ಹಣ ಆ ಕ್ಷಣದಲ್ಲೇ ಶಿವಕುಮಾರಸ್ವಾಮಿಗಳವರ ಕೈಗೆ ಬರುವಂತೆ ಇರಲಿಲ್ಲ. ಅದೆಲ್ಲಾ ಉದ್ದಾನ ಸ್ವಾಮಿಗಳವರ ಹೆಸರಿನಲ್ಲಿತ್ತು. ತಮ್ಮ ನಂತರ ಈ ಹಣವನ್ನು ತಮ್ಮ ಉತ್ತರಾಧಿಕಾರಿಗಳಿಗೆ ಕೊಡಬೇಕೆಂಬ ಯಾವ ಕಾಗದಪತ್ರಗಳನ್ನೂ ಉದ್ದಾನ ಶಿವಯೋಗಿಗಳು ಮಾಡಿರಲಿಲ್ಲ. ಹೀಗಾಗಿ ಯೋಚನೆಗಿಟ್ಟುಕೊಂಡಿತ್ತು. ಏನು ಮಾಡಬೇಕು ? ಶಿವಯೋಗಿಗಳ ಗಣಾರಾಧನೆಗೆ ಹೇಗೆ ? ಎಂಬ ಚಿಂತೆ ಆವರಿಸಿತು. ಶ್ರೀಮಠದಲ್ಲಿ ಇಂಥ ಒಂದು ಸಮಾರಾಧನೆ ನಡೆಯುತ್ತದೆಂದು ಗೊತ್ತಾದರಾಯಿತು, ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಜನ ಸೇರಿಬಿಡುತ್ತಾರೆ. ಇದು ಈ ಮಠದ ಒಂದು ವೈಶಿಷ್ಟ್ಯ. ಅಂಥ ಸಮಯದಲ್ಲಿ ಇನ್ನೂರು, ಮುನ್ನೂರು ರೂಪಾಯಿಗಳು ಉಪ್ಪು ಹುಳಿಗೂ ಎಟಕುವುದಿಲ್ಲ. ಅಷ್ಟು ಇಷ್ಟು ಹೇಗೆಹೇಗೋ ಮಾಡುವಂತಿಲ್ಲ. ಅದು ಮಠದ ಪ್ರತಿಷ್ಠೆಗೆ ಭಂಗ. ಬಂದವರಿಗೆಲ್ಲಾ ಕ್ರಮವಾಗಿ ಪ್ರಸಾದ ವಿತರಣೆಯಾಗಲೇಬೇಕು. ಶಿವಕುಮಾರಸ್ವಾಮಿಗಳಿಗಾದರೋ ಯಾರನ್ನೇ ಆಗಲಿ ಎಂದೂ ಬೇಡಿ ಅಭ್ಯಾಸವಿರಲಿಲ್ಲ. ಈ ರೀತಿಯಲ್ಲಿ ಯೋಚನೆಯಲ್ಲಿ ಕುಳಿತಾಗ ಇದ್ದಕ್ಕಿದ್ದಂತೆ ಬೆಂಗಳೂರಿನ ಭಕ್ತರು ಬಿನ್ನಹ ಮಾಡಿ ಶ್ರೀಗಳವರನ್ನು ಬರಮಾಡಿಕೊಂಡರು. ಅವರು 'ಉದ್ದಾನ ಶಿವಯೋಗಿಗಳವರ ಗಣಾರಾಧನೆಗೆ ಯಾವ ರೀತಿಯಿಂದಲೂ ಕೊರತೆಯಾಗಕೂಡದು. ದೊಡ್ಡ ಪ್ರಮಾಣದಲ್ಲಿ ಬಂದವರಿಗೆಲ್ಲಾ ತೃಪ್ತಿಯಾಗುವಂತೆ ಪ್ರಸಾದ ವಿತರಣೆಯಾಗಬೇಕೆಂದು' ಬೇಡಿಕೊಂಡು ಗಣಾರಾಧನೆಗೆ ಬೇಕಾಗುವ ಎಲ್ಲ ಸಾಮಗ್ರಿಗಳನ್ನೂ ಹೇರಿಸಿ ಕಳುಹಿಸಿದರು. ಬೆಂಗಳೂರಿನ ಭಕ್ತರಿಗೆ ಹೀಗೆ ಗಣಾರಾಧನೆ ಮಾಡಿರೆಂದು ಹೇಳಿದವರಾರು ? ಅವರಿಗೇನು ಗೊತ್ತು ಮಠದಲ್ಲಿ ಇದೆ, ಇಲ್ಲ ಎಂಬುದು ? ಇದೂ ಒಂದು ರೀತಿಯ ಪರುಷ ಶಕ್ತಿಯೇ. ಎಂದೂ ಯಾವ ಗಳಿಗೆಯಲ್ಲೂ ಸಿದ್ಧಗಂಗಾ ಕ್ಷೇತ್ರಾಧಿಪತಿಗಳು ಇಂದಿಗೆ ಹೇಗೆ, ನಾಳೆಗೆ ಹೇಗೆ ಎಂದು ಚಿಂತೆಮಾಡಿದವರೇ ಅಲ್ಲ. ಒಂದು ವೇಳೆ ಕೊರತೆಯಾದುದು ಕಂಡುಬಂದು ಚಿಂತೆಗಾರಂಭವಾಯಿತೋ ಇಲ್ಲವೋ ಅದಾವ ಮಹಾನುಭಾವದ ಕಾರಣವೋ ಗೊತ್ತಿಲ್ಲ, ಎಲ್ಲೆಲ್ಲಿಂದಲೋ ಪಡಿಪದಾರ್ಥಗಳೋ, ಹಣವೋ, ಮನುಷ್ಯಬಲವೋ ತಾನೇ ತಾನಾಗಿ ಬಂದ ನೂರಾರು ಸಾವಿರಾರು ಘಟನೆಗಳು ನಡೆದುಹೋಗಿವೆ. ನಿರ್ಬಾಧಿತವಾಗಿ ಉದ್ದಾನ ಶಿವಯೋಗಿಗಳವರ ಗಣಾರಾಧನೆ ಬೃಹತ್‌ಪ್ರಮಾಣದಲ್ಲಿಯೇ ನಡೆದುಹೋಯಿತು. ಇಂಥ ಅಭಾವದ ಘಟನೆಗಳು ಸಂಭವಿಸಿ ಅವೆಲ್ಲಾ ಯಥಾವತ್ತಾಗಿ ತಮ್ಮಿಂದತಾವೇ ಪರಿಹಾರವಾಗಿ ಹೋಗುತ್ತವೆ. ಈ ಬಗೆಗೆ ಶ್ರೀಗಳವರನ್ನು ವಿಚಾರಿಸಿದರೆ 'ನನಗಂತೂ ಒಂದೂ ಗೊತ್ತಾಗುವುದಿಲ್ಲ. ಇಷ್ಟೊಂದು ಬೃಹತ್ ಪ್ರಮಾಣದ ಖರ್ಚುವೆಚ್ಚಗಳು ಶಿವಕೃಪೆಯಿಂದ ನಡೆದುಹೋಗುತ್ತವೆ. ಹೇಗೆ ಬರುತ್ತದೆ, ಹೇಗೆ ಖರ್ಚಾಗುತ್ತದೆ ಎಂಬುದಂತೂ ನನಗಿನ್ನೂ ಗೊತ್ತಾಗಿಲ್ಲ' ಎನ್ನುತ್ತಾರೆ ; ಎಷ್ಟೋ ಸಲ ಓವರ್ ಡ್ರಾಫ್ಟ್ ಆಗಿರುವುದುಂಟು. ಎಷ್ಟೋಸಲ ಜಾತ್ರೆಯ ಸಮಯದಲ್ಲೇ ಅಕ್ಕಿಯಿಲ್ಲದಂತೆ ಆಗಿಹೋಗಿದೆ. ಅಕ್ಕಿಯಿಲ್ಲವೆಂದು ಭಾವಕ್ಕೆ ಹೊಳೆದಾಗಲೇ ಯಾರು ಯಾರೋ ಶಿವಪ್ರೇರಣೆಯಿಂದ ಕಳಿಸಿಬಿಟ್ಟಿರುವುದು ಮಠದ ದಾಸೋಹದ ಚರಿತ್ರೆಯಲ್ಲಿ ಕಂಡದ್ದೂ ಆಗಿದೆ ; ಕೇಳಿದ್ದೂ ಆಗಿದೆ. 'ಕೊಡುವವ ಸಂಗ, ಕೊಳ್ಳುವವ ಸಂಗಮದೇವ'ಎಂಬ ಮಾತಿಗೆ ಇಲ್ಲಿಯೇ ನಾವು ಸಾರ್ಥಕ್ಯವನ್ನು ಕಾಣಬಹುದು. ಇಂಥ ಘಟನೆಗಳನ್ನೇ ಪವಾಡವೆಂದು ಕರೆಯುವುದು. ಸಾಮಾನ್ಯ ಮಾನವನ ಯೋಚನೆಗಳಿಗೆ ಇವು ಅಗಾಧವಾಗಿ ಕಾಣುವುದರಿಂದ ಅವನು ಹಾಗೆ ಕರೆಯುವುದು ವಾಡಿಕೆ. ಇಂಥ ಘಟನೆಗಳ ಬಗೆಗೆ ವಿಶೇಷ ಹೃದಯಸಂಪತ್ತುಳ್ಳವರ ಯೋಚನೆಯೇ ಬೇರೆ. ಮಾಡುವ ಮತ್ತು ನೀಡುವ ನಿಜಗುಣವಿದ್ದಾಗ

ತಾನೆ ಶಿವನು ಕೂಡಿಕೊಳ್ಳುವನು. ನಿಜಗುಣ ತಪ್ಪಿದಾಗ ಏನೂ ಇಲ್ಲ. ಇದ್ದರೂ ಅವನು ದರಿದ್ರನೇ. ಈ ಬಗೆಗೆ ಬಸವಣ್ಣನವರ ಈ ಕೆಳಗಿನ ವಚನ ವಿಚಾರಾರ್ಹ.

> "ಮಾಡಿದೆನೆಂಬುದು ಮನದಲ್ಲಿ ಹೊಳೆದರೆ, ಏಡಿಸಿ ಕಾಡಿತ್ತು ಶಿವನ ಡಂಗುರ ;
> ಮಾಡಿದೆನೆನ್ನದಿರಾಲಿಂಗಕ್ಕೆ ; ನೀಡಿದೆನೆನ್ನದಿರಾ ಜಂಗಮಕ್ಕೆ ;
> ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ, ಬೇಡಿತ್ತನೀವ ಕೂಡಲ
> ಸಂಗಮದೇವ".

ಮಾಡುವೆನು, ನೀಡುವೆನು, ಎನ್ನುವುದಕ್ಕೆ ನಾವಾರು ? ಕೆರೆಯ ನೀರನ್ನೇ ಕೆರೆಗೆ ಚೆಲ್ಲಿ ನಾನು ಚೆಲ್ಲಿದೆನೆಂದರೆ ಹೇಗೆ ? ಶಿವನಿಗಾಗಲಿ, ಚರಾಚರ ಜೀವಕೋಟಿಗಾಗಲಿ ಮಾಡಿದೆನು ನೀಡಿದೆನು ಎನ್ನುವುದು ತಪ್ಪು; ಹಾಗೆಂದಾಗಲೇ ಶಿವನ ಏಟು ಬೆನ್ನುಹತ್ತಿಬಂದು ಅಪ್ಪಳಿಸುತ್ತದೆ. ಆ ಭಾವವಿಲ್ಲದೆ ಮಾಡುವಾತನೂ ನಾನಲ್ಲ; ನೀಡುವಾತನೂ ನಾನಲ್ಲ : ಮತ್ತು ಬೇಡುವವನೂ ನಾನಲ್ಲ : ಅದೆಲ್ಲ ನಿಮ್ಮ ಕಾರುಣ್ಯವೆಂದು ದೇವರ ಮೇಲೆಯೇ ಭಾರ ಹೊರಿಸಿಬಿಡುವುದು ಲೇಸು. ದಾಸಿಯಾದವಳು ಆಲಸ್ಯ ಹೊಂದಿದರೆ, ಮನೆಯ ಒಡತಿಯೇ ಮನೆ ಕೆಲಸಮಾಡಿಕೊಂಡಂತೆ, ಶಿವನು ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳುತ್ತಾನೆ. ಎಂದುಕೊಂಡು ನಾವು ನಮ್ಮ ಕ್ರಿಯೆಯಲ್ಲಿ ಮುಳುಗಿದರಾಯಿತು. ಶಿವನು ತನ್ನ ಕೆಲಸವನ್ನು ತಾನು ಮಾಡಿಕೊಳ್ಳುತ್ತಾನೆಂದು ಭಕ್ತ–ಗುರು–ಜಂಗಮ ಯಾರೂ ಕೈಕಟ್ಟಿಕೊಂಡು ವಾಗದ್ವೈತವನ್ನೂ ನುಡಿಯಲಾಗದು. ಕ್ರಿಯೆ ಅವಿಚ್ಛಿನ್ನಧಾರೆಯಾಗಿ ನಡೆಯುತ್ತಲೇ ಇರಬೇಕು. ಆದರೆ ಮಾಡಿ ಮಾಡದಂತಿರಬೇಕು : ಮಾಡಿ ಬೇಡದಂತಿರಬೇಕು : ನಾನು ಮಾಡಿದೆನೆಂಬ ಭಾವ ಮನದಲ್ಲಿ ಮೂಡದಂತೆ ಇರಬೇಕೆಂಬುದೇ ಕ್ರಿಯಾಪ್ರಧಾನವಾದಿಗಳಾದ ಶರಣರ ಅಭಿಮತ. ಈ ಮಾತು ಸಿದ್ಧಗಂಗಾ ಕ್ಷೇತ್ರಕ್ಕೆ ಪೂರ್ಣ ಅನ್ವಯವಾಗುತ್ತದೆ. ಈ ದಾಸೋಹ ಕ್ಷೇತ್ರದ ನಡೆ ಅನ್ಯಾದೃಶ. ಕಂಡರಿಯದುದ್ದು ; ಕೇಳಿ ತಿಳಿಯದುದ್ದು.

**ಅಗ್ನಿಪರೀಕ್ಷೆಗಳು :**

ದಾಸೋಹ ಕ್ರಿಯೆ ಅಗ್ನಿಪರೀಕ್ಷೆಯಿದ್ದಂತೆ. ಆ ಕ್ರಿಯೆಯನ್ನು ಕೈಕೊಂಡವರಿಗೆ ಸಾಮಾನ್ಯವಾಗಿ ಅನೇಕ ಪರೀಕ್ಷೆಗಳನ್ನು ಶಿವನು ಮಾಡುವುದೂ ಉಂಟು. ಈ ಪರೀಕ್ಷೆಯಲ್ಲಿ ಅದ್ಭುತ ಹೃದಯಸಂಪತ್ತುಳ್ಳವರು ತೇರ್ಗಡೆಯಾಗುತ್ತಾರೆ; ಉಳಿದವರು ಲಂಡರಾಗಿ ಹಿಂದೆ ಸರಿಯುತ್ತಾರೆ[24]. ಶಿವನ ಭಾಷೆ ಎರಡಾಳಿನದು; ಕೊಲುವೆನೆಂಬುದು ಅವನದಾಗಿದ್ದರೆ, ಗೆಲುವೆನೆಂಬುದು ಭಕ್ತನದಾಗಿರಬೇಕು. ಶಿವಭಕ್ತರು ಸತ್ಯವೆಂಬ ಕೂರಲಗನ್ನು ಕೈಯಲ್ಲಿ ಹಿಡಿದು ಕೊಲುವೆನೆಂಬ ಶಿವನ ಭಾಷೆಯನ್ನೇ ಸುಳ್ಳಾಗಿಸುತ್ತಾರೆ. ತಮ್ಮ ಭಕ್ತಿಶಕ್ತಿಯ ಅತುಲಪರಾಕ್ರಮದಿಂದ ಹೋರಾಡುತ್ತಾರೆ; ಕೊನೆಗೆ ಅಜೇಯರಾಗುತ್ತಾರೆ.

ಸಿದ್ಧಗಂಗಾ ದಾಸೋಹ ಕ್ಷೇತ್ರದ ವಿಚಾರದಲ್ಲಿಯೂ ಈ ಮಾತು ವಿಚಾರ ಯೋಗ್ಯವಾಗಿದೆ. ೧೯೬೬ನೆಯ ಇಸ್ವಿ ದೇಶದಲ್ಲಿ ಆಹಾರಾಭಾವ ತಲೆದೋರಿ ಎಲ್ಲಲ್ಲೂ ಹಾಹಾಕಾರ ಉಂಟಾಗಿದ್ದ ಕಾಲ. ಅದರ ಬಿಸಿ ಶ್ರೀಮಠದ ದಾಸೋಹಕ್ಕೂ ತಟ್ಟಿತು. ಮಠದಲ್ಲಿ ಆಗ ಸಾವಿರಾರು ವಿದ್ಯಾರ್ಥಿಗಳು, ಸಿಬ್ಬಂದಿವರ್ಗ, ಇನ್ನಿತರ ಯಾತ್ರಾರ್ಥಿಗಳು ಇದೇ ತಲೆಭಾರವಾಗಿದ್ದ ಕಾಲ. ದುಡ್ಡು ಕೊಟ್ಟರೂ ದವಸಧಾನ್ಯಗಳ ಸರಬರಾಜು ಸರಿಯಾಗಿಲ್ಲದ ಅಂಥ ಸ್ಥಿತಿಯಲ್ಲಿ ಈ ದಾಸೋಹ ಕ್ಷೇತ್ರದ ಅಗ್ನಿಪರೀಕ್ಷೆ ಶಿವನಿಂದಲೇ ಆಯಿತೆಂದು ನನ್ನ ಭಾವನೆ. ಅಂದಿನ ಘಟನಾವಳಿಗಳನ್ನು ಪ್ರತ್ಯಕ್ಷ ನೋಡಿದವರಲ್ಲಿ ನಾನೂ ಒಬ್ಬ. ದಾಸೋಹ ಕ್ಷೇತ್ರವಾದ್ದರಿಂದ ಅನ್ನವಿಲ್ಲದ ಜನ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬಂದು ಬಂದು ತುಂಬತೊಡಗಿದರು. ಶ್ರೀ ಶಿವಕುಮಾರಸ್ವಾಮಿಗಳವರ ಹೃದಯ ಕಲಕಿಹೋಯಿತು. ಅಸಂಖ್ಯಾತ ಜನರು ತುತ್ತನ್ನಕ್ಕಾಗಿ ಪರದಾಡುವ ಈ ಸಮಯದಲ್ಲಿ ನಮಗೆ ಪ್ರಸಾದ ಸ್ವೀಕರಿಸಲು ಅಧಿಕಾರವಿದೆಯೆ ? ಎಂದು ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳತೊಡಗಿದರು. ಮಠದ ಮಾಮೂಲುದಾಸೋಹದ ಜೊತೆಗೆ ಬಂದವರಿಗೆಲ್ಲಾ ಅನ್ನಸಂತರ್ಪಣೆ ಮಾಡುವುದು ಹೇಗೆ ? ಮಾಮೂಲಿನ ದಾಸೋಹಕ್ಕೆ ತಕ್ಕಷ್ಟೆ ಸಿಬ್ಬಂದಿ ಮತ್ತು ಪರಿಕರಗಳ ಪರಿಮಿತಿಯಿದ್ದಾಗ ಹಠಾತ್ತಾಗಿ ಬಂದ ಇವರಿಗೆಲ್ಲಾ ಪ್ರಸಾದ ಕೊಡದೇ ಕಳಿಸುವಂತಿಲ್ಲ. ಪ್ರಸಾದ ಕೊಡಿಸಲು ವಿಶೇಷ ತಾಂತ್ರಿಕ ತೊಂದರೆಯುಂಟಾಗಿ ಅದೊಂದು ಶ್ರೀಮಠದ ಘನತೆ ಗೌರವಗಳನ್ನು ಅಲ್ಲಾಡಿಸಿ ನೋಡುವ

---

24. 'ಶಿವನ ಪರೀಕ್ಷೆ' ಎನ್ನುವವಿಷಯದಲ್ಲಿ ವಿಜ್ಞಾನವಾದಿಗಳನೇಕರು ಪ್ರಶ್ನಿಸುವುದುಂಟು. ಶಿವಪರೀಕ್ಷೆಯೆಂಬುದೊಂದಿದ್ದರೆ ಎಲ್ಲರನ್ನೂ ಏಕೆ ಪರೀಕ್ಷಿಸುವುದಿಲ್ಲ ? ಎಂಬುದೇ ಅವರ ವಾದದ ಪ್ರಶ್ನೆ. ಶಿವನು ಸಾಮಾನ್ಯವಾಗಿ ಶಿವಭಕ್ತಿಕಂಕಣ ತೊಟ್ಟವರ ವಿಷಯದಲ್ಲೇ ಪರೀಕ್ಷೆ ಮಾಡುತ್ತಾನೆಂಬುದು ಭಕ್ತರ ವಾದ. ಯಾವುದೇ ಒಂದು ನಿರ್ದಿಷ್ಟ ಪರೀಕ್ಷೆಯನ್ನು ಲೋಕದಲ್ಲಿ ಯಾರಿಗೆ ಮಾಡುತ್ತಾರೆ ? ಅದಕ್ಕಾಗಿ ಕ್ರಮವಾಗಿ ಓದಿ ಪರೀಕ್ಷಾಶುಲ್ಕ ಕಟ್ಟಿ ಅಪ್ಪಣೆ ಚೀಟಿ ಪಡೆದವರಿಗೆ ತಾನೆ ಮಾಡುವುದು. ಹಾದಿಬೀದಿಯಲ್ಲಿ ಅಲೆಯುವವರು ನಾವೂ ಈ ಪರೀಕ್ಷೆಗೆ ಬರುತ್ತೇವೆಂದು, ಪರೀಕ್ಷಾ ಕೊಠಡಿಯನ್ನು ಹೊಕ್ಕರೆ ಸಾಧ್ಯವೆ ಪರೀಕ್ಷಿಸಲು ? ಶಿವನಭಕ್ತಿಪರೀಕ್ಷೆಗೆ ಓದಿ, ಆ ಪರೀಕ್ಷೆಗೆ ಕುಳಿತವರಿಗೆ ಮಾತ್ರ ಶಿವನ ಪರೀಕ್ಷೆ, ಎಂಬ ದೃಷ್ಟಾಂತವೇ ಅಂಥ ಪ್ರಶ್ನೆ ಕೇಳುವವರಿಗೆ ಉತ್ತರ, ಭಕ್ತರದು.

ಪ್ರಶ್ನೆಯಾಗಿತ್ತು. ಶ್ರೀ ಕ್ಷೇತ್ರದ ದಾಸೋಹ ಸದ್ಭಾವಗಳನ್ನು ಒರೆಗೆ ಹಚ್ಚಿ ತಿಕ್ಕಿ ಬಣ್ಣಕ್ಕೆ ತಂದು ನೋಡುವ ಪರೀಕ್ಷೆಯೇ ಆಗಿತ್ತು. ಶ್ರೀಗಳವರು ಧೈರ್ಯಗುಂದಲಿಲ್ಲ. ಮಠದಲ್ಲಿ ಈಗಿರುವ ದವಸಧಾನ್ಯಗಳೆಲ್ಲಾ ಖರ್ಚಾದರೂ ಚಿಂತೆಯಿಲ್ಲ, ಮಠ ಬರಿದಾದರೂ ಚಿಂತೆಯಿಲ್ಲ; ಬಂದವರಿಗೆಲ್ಲಾ ಪ್ರಸಾದಕೊಟ್ಟು ಕಳಿಸಲೇಬೇಕೆಂಬ ಅಚಲ ನಿರ್ಧಾರಕ್ಕೆ ಬಂದು, ಸ್ವತಃ ತಾವೇ ಅಡಿಗೆ ಮನೆಯಲ್ಲಿ ನಿಂತರು. ಅನೇಕ ಕೊಪ್ಪರಿಗೆಗಳಲ್ಲಿ ಮುದ್ದೆ ತಿರುವಲು ತಾವೂ ಸನ್ನದ್ಧರಾದರು. ಆಳೆತ್ತರದ ದೊಡ್ಡ ಕೊಳಗಗಳಲ್ಲಿ ಗಾಡಿಗಾಡಿಗಳ ತುಂಬ ತರಕಾರಿಯನ್ನು ತರಿಸಿ ಹೆಚ್ಚಿಹಾಕಿ ಸಾರು ಕುದಿಸಿದರು. ಮಠದ ಮುಂಭಾಗದಲ್ಲಿ ದೊಡ್ಡ ಬೈಲಿನಲ್ಲಿ ಕಿಕ್ಕಿರಿದು ಕುಳಿತು ಕಣ್ಣುಕಣ್ಣು ಬಿಡುತ್ತಿದ್ದವರಿಗೆಲ್ಲಾ ಪ್ರಸಾದವನ್ನು ಎಷ್ಟುಹೊತ್ತಾದರೂ ತಾವೇನಿಂತು ಕೊಡಿಸಿ ಅವರೆಲ್ಲರೂ ತೃಪ್ತಿಯ ನಿಟ್ಟುಸಿರು ಬಿಟ್ಟು ಸಂತೋಷದಿಂದ ಹೋಗುತ್ತಿರುವುದನ್ನು ಕಂಡು, ಹರ್ಷಿಸಿ ತಮ್ಮ ಪ್ರಸಾದಕ್ಕೆ ತೆರಳುತ್ತಿದ್ದರು. ಹೊತ್ತಾದರೆ ಪ್ರಸಾದವನ್ನೂ ಬಿಟ್ಟು ಮತ್ತೊಂದು ವೇಳೆಗೆ ಪ್ರಸಾದಕ್ಕೆ ಹೋಗತೊಡಗಿದರು. ಎಷ್ಟೋ ರಾತ್ರಿ ಅವರು ಈ ಬಡಜನರ ಬವಣೆಯನ್ನು ಕಂಡು ಪ್ರಸಾದ ತೆಗೆದುಕೊಳ್ಳದೆ ಮಲಗಿ ಏಳುತ್ತಿದ್ದರು. ಹೀಗೆ ಅನೇಕ ತಿಂಗಳುಗಳು ಕಳೆದರೂ ಶ್ರೀಗಳವರ ಧೈರ್ಯಮೇರುವು ಅಲ್ಲಾಡಲಿಲ್ಲ. 'ಕೊಡುವವ ಸಂಗ, ಕೊಳ್ಳುವವ ಸಂಗಮದೇವ' ಎಂಬ ಮಾತಿನ ಯಥಾರ್ಥ್ಯದ ಬಗ್ಗೆ ನಂಬುಗೆಯಿಟ್ಟು ತಮ್ಮ ದಾಸೋಹ ಕ್ಷೇತ್ರದ ಚರಿತ್ರೆಯನ್ನು ರೂಪಿಸಿಕೊಂಡು ಬಂದುದೆ ಈ ಧೈರ್ಯಕ್ಕೆ ಕಾರಣವಾಗಿತ್ತು. ಆಗ ಕರ್ನಾಟಕ ಸರ್ಕಾರ (ಆಗಿನ ಮೈಸೂರು ಸರ್ಕಾರ) ಕರ್ಣಾಕರ್ಣಿಕೆಯಾಗಿ ಈ ವಿಷಯವನ್ನು ತಿಳಿಯಿತು. ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು, ಆಹಾರ ಮಂತ್ರಿಗಳಾದ ಶ್ರೀ ಬಿ. ಡಿ. ಜತ್ತಿಯವರು ಹಲಕೆಲವು ಉನ್ನತ ಅಧಿಕಾರಿಗಳು ಮಠಕ್ಕೆ ಬಂದರು. ಇಲ್ಲಿನ ಅದ್ಭುತವನ್ನು ಕಂಡು ಆವಾಕ್ಕಾಗಿ ಶ್ರೀಗಳವರು ಈ ದೀನದಲಿತರ ಬಗೆಗೆ ತೋರಿಸುತ್ತಿರುವ ದಾಸೋಹ ಸದ್ಭಾವಕ್ಕೆ ಮನವಾರೆ ಅಭಿನಂದಿಸಿದರು. ಈ ಸಮಯದಲ್ಲಿ ಗೋದಿಯನ್ನು ತಿಂಗಳಿಗೆ ನೂರು ಮೂಟೆಗಳಂತೆ ಕೆಲವು ತಿಂಗಳು ಕೊಟ್ಟರೆಂದು ತಿಳಿದುಬರುವುದು. ನೂರು ಮೂಟೆ ಅಪಾರ ಜನ ಸಂದೋಹಕ್ಕೆ ೧೦ ದಿನಗಳವರೆಗೆ ಮಾತ್ರ ಸಾಕಾಗುತ್ತಿತ್ತು. ಉಳಿದ ೨೦ ದಿನಗಳ ಗ್ರಾಸ ಮಠದಿಂದಲೇ ವ್ಯಯವಾಗುತ್ತಿತ್ತು. ಇಂಥ ಘಟನೆಗಳೆಲ್ಲವುಗಳ ಪಟ್ಟಿ ಮಾಡುತ್ತ ಹೋದರೆ ಕಾಲಾತೀತವಾದೀತು. ದಾಸೋಹವೆಂದರೆ ದಾಸಭಾವದಿಂದ ವರ್ತಿಸುವುದು. ದಾಸೋಹಕ್ಕೂ ಊಟ ಹಾಕುವುದಕ್ಕೂ ಏನು ಸಂಬಂಧವೆಂದು ಕೇಳಬಹುದು. ಇಲ್ಲಿ 'ಊಟ ಮಾಡುವವನೇ ಒಡೆಯ, ನೀಡುವವ ದಾಸ' ಅನ್ನಕ್ಕೆ ಒಡೆಯರಾರೋ ಅವರಿಗೆ ಅನ್ನವನ್ನು ಕೊಡುವುದು ಎಂಬರ್ಥದಲ್ಲಿ ದಾಸೋಹವೆಂದರೆ ಅನ್ನ ನೀಡುವಿಕೆ ಎಂಬ ರೂಢಿಯ ಅರ್ಥ ಆ ಶಬ್ದಕ್ಕೆ ಬಂದಿದೆ. ಈ ವ್ರತ ಕೈಕೊಳ್ಳುವುದೇನು ಸುಲಭವೆ ? ಈ ವ್ರತದಿಂದ ಇಂದಿನವರೆಗೆ ಶ್ರೀ ಕ್ಷೇತ್ರದ ದಾಸೋಹ ವ್ಯವಸ್ಥೆ ಅನೇಕ ಅಗ್ನಿಪರೀಕ್ಷೆಗಳಲ್ಲಿ ಗೆದ್ದು ತನ್ನ ಜಗತ್ಪ್ರಸಿದ್ಧ ಮೇಲ್ಮೆಯನ್ನು ಉಳಿಸಿಕೊಂಡೇ ಬಂದಿದೆ. ಈ ವ್ರತವನ್ನು ಅನುಸರಿಸಿ ಸೈ ಎನ್ನಿಸಿಕೊಂಡವರು ತೀರಾ ವಿರಳ. ಏಕೆಂದರೆ ಇದೊಂದು ಅಸಿಧಾರಾವ್ರತವಿದ್ದ ಹಾಗೆ. ಶ್ರೀಕ್ಷೇತ್ರ ಈ ಅಸಿಧಾರಾವ್ರತವನ್ನು ಗೆದ್ದು ಮುನ್ನಡೆದು ಬಂದಿದೆ[25].

ಅದಕ್ಕೆಲ್ಲಾ ಕಾರಣ ಈ ಕ್ಷೇತ್ರದ ಜಂಗಮಮೂರ್ತಿಗಳೆಲ್ಲರ ನಿಷ್ಕಾಪಟ್ಯಲಿಂಗನಿಷ್ಠಾಗರಿಷ್ಠಭಾವ ; ಲೋಕಜೀವನ ಮಧ್ಯದಲ್ಲಿ ಆ ಸಂಸ್ಕೃತಿಯ ಸಾಕಾರಮೂರ್ತಿಗಳಾಗಿ ಬೆಳೆದು ಬಂದರೀತಿ, ಸರ್ವ ಜಾತಿಮತದವರನ್ನು ಸಮಾನಭಾವದಿಂದ ಕಾಣುತ್ತಾ ಬಂದ ಸಮತಾಭಾವ, ದೀನದಲಿತರ ಬಗೆಗಿನ ಕಾರುಣ್ಯ, ಕಾಯಕನಿಷ್ಠೆ ಇವೇ ಮುಖ್ಯ ಕಾರಣಗಳು. ಇಲ್ಲಿನ ತಪಸ್ವಿಗಳ ಈ ತೆರದ ನಡೆನುಡಿಗಳಿಂದ ಇಲ್ಲಿನ ಸರ್ವ ಕೆಲಸಗಳೂ ಬೃಹತ್ಪ್ರಮಾಣದಲ್ಲೇ ನಡೆಯುತ್ತವೆ. ಹಾಗೆ ಮೊದಲಿನಿಂದಲೂ ನಡೆದು ಬಂದಿವೆ. ಜನ ತಮ್ಮ ಮನೆಯಂತೆಯೇ ಇಲ್ಲಿ ವರ್ತಿಸುತ್ತಾರೆ. ಊಟದ ಹೊತ್ತಿನಲ್ಲಿ ನಿರ್ಭಯವಾಗಿ ತಮ್ಮ ಪಾಡಿಗೆ ತಾವು ಊಟದ ಮನೆಗೆ ಹೋಗುತ್ತಾರೆ. ಅಲ್ಲಿ ಊಟ ಮಾಡುವವರು ಊಟ ಮಾಡುತ್ತಿರುತ್ತಾರೆ. ಹೊಸದಾಗಿ ಬಂದವರನ್ನು ಕುಳ್ಳಿರಿಸಿ ಊಟ ಮಾಡಿಸಿಕಳಿಸುತ್ತಾರೆ. ಬೇರೆ ಪ್ರಶ್ನೆಯೇ ಇಲ್ಲ. ಜನದ ಸಂಖ್ಯೆ ಎಷ್ಟಾದರೂ ಆಗಿರಬಹುದು. ಇತ್ತೀಚಿನ ದಿನಗಳಲ್ಲಿಯಂತೂ ದಾಸೋಹ ಕ್ಷೇತ್ರ ಅತ್ಯಂತ ವಿಶಾಲಗೊಂಡಿದೆ. ೧೯೭೯ನೆಯ ಇಸ್ವಿಯ ಲೆಕ್ಕದ ಪ್ರಕಾರ ವಿದ್ಯಾರ್ಥಿಗಳೆಲ್ಲ ಇದ್ದಾಗ ವಿದ್ಯಾರ್ಥಿಗಳಿಗೆ ಮತ್ತು ಕ್ಷೇತ್ರ ಸಂದರ್ಶನಾರ್ಥವಾಗಿ ಬಂದವರಿಗಾಗಿ ಖರ್ಚಾಗುವ ಅಕ್ಕಿ ಮತ್ತು ರಾಗಿಯ ಹಿಟ್ಟಿನ ಮೊತ್ತ ಸುಮಾರು ೨೫ ಚೀಲಗಳಷ್ಟು. ಇದರ ಹಿನ್ನೆಲೆಯಲ್ಲಿ ಸೌದೆ, ಸಾಂಬಾರಪುಡಿ, ಕಾರ, ತರಕಾರಿ, ಬೇಳೆ, ಮಜ್ಜಿಗೆ ಇವುಗಳ ಮೊತ್ತವನ್ನು, ಪ್ರತಿನಿತ್ಯ ಅದನ್ನು ಬೇಯಿಸಿ ವಿತರಣೆ ಮಾಡುವ ವಿಧಾನಗಳನ್ನು ಅಳೆದಾಗ ಇದನ್ನು ಅದ್ಭುತ ಪವಾಡವೆಂದು ಕರೆಯದೆ ಇನ್ನೇನೆನ್ನಬೇಕು ; ಈ ಕ್ರಿಯೆಯ ಪ್ರೇರಕ ಶಕ್ತಿಗೇನು ಹೇಳಬೇಕು ? ಎಂದೋ ಒಂದು ದಿನ ಮಾಡಿಮುಗಿಸುವುದಾಗಿದ್ದರೆ ಹೇಗೋ ಕಷ್ಟಪಟ್ಟು ಮಾಡಿ ಮುಗಿಸಬಹುದು. ದಿನವೂ ಬೆಳಗಾದರೆ ಇದೇ ರೀತಿಯಲ್ಲಿ ನಡೆಯಬೇಕಲ್ಲವೆ ! ಇದಕ್ಕೆ ವ್ಯಕ್ತಿಶಕ್ತಿಯೆಂದು ವಿಜ್ಞಾನವಾದಿಗಳು ಸುಲಭವಾಗಿ ಹೇಳಿ ಜಾರಿಕೊಳ್ಳಬಹುದು. ಆದರೆ

---

25. ಅಸಿಧಾರಾವ್ರತ :—ಇದು ಒಂದು ನ್ಯಾಯ, ಬಹು ಹರಿತವಾದ ಖಡ್ಗದ ಬಾಯಿಗೆ ಜೇನುತುಪ್ಪವನ್ನು ಹಚ್ಚಿ ನಾಲಿಗೆ ಹರಿಯದಂತೆ ಅದನ್ನು ನೆಕ್ಕುವಿಕೆ. ನೆಕ್ಕುವಿಕೆಯು ನೇರವಾಗಿರಬೇಕು, ಅಡ್ಡಮಗ್ಗುಲಿನಿಂದಲ್ಲ.

ವ್ಯಕ್ತಿಶಕ್ತಿಯೊಂದೇ ಸಾಲದು. ಅದಕ್ಕೆ ಬೇರೊಂದು ರೀತಿಯ ತೆರೆಯ ಮರೆಯ ಪ್ರೇರಕಶಕ್ತಿಯೂ ಬೇಕೆಂಬುದನ್ನು ಭಾವನಾ ಜೀವಿಗಳು ನಂಬುತ್ತಾರೆ. ಯಾರು ಏನೇ ಕರೆಯಲಿ ಅಧ್ಭುತ ಕ್ರಿಯೆ. ಅಧ್ಭುತ ಹೃದಯ ಸಂಪತ್ತು ಎಂದುಎನ್ನಲೇ ಬೇಕು ; ಪವಾಡವೆಂದು ಒಪ್ಪಲೇ ಬೇಕು.

**ಸಿದ್ಧಗಂಗೆಯ ಜಾತ್ರೆಯ ವೈಶಿಷ್ಟ್ಯ :**

ಜಾತ್ರೆಯೆಂದರೆ ವೈಶಿಷ್ಟ್ಯವೇನು ಬಂತು ? ಲೋಕದಲ್ಲಿ ಎಷ್ಟೋ ಜಾತ್ರೆಗಳಾಗುತ್ತವೆ. ಇದೊಂದೇ ಜಾತ್ರೆಯೇನು? ಎಂದು ಯಾರಾದರೂ ಪ್ರಶ್ನಿಸಬಹುದು. ಲೋಕದ ಇನ್ನಿತರ ಜಾತ್ರೆಗಳಿಗೂ ಸಿದ್ಧಗಂಗಾ ಜಾತ್ರೆಗೂ ಅನೇಕ ವಿಷಯಗಳಲ್ಲಿ ಭಿನ್ನತೆಯಿದೆ. ಸಿದ್ಧಗಂಗಾ ಜಾತ್ರೆಯ ವೈಶಿಷ್ಟ್ಯ ಅದರ ದಾಸೋಹದಲ್ಲಿ ಅಡಗಿದೆ. ಉಳಿದ ದಿನಗಳಲ್ಲಿ ಮಠದ ದಾಸೋಹದಲ್ಲಿ ಹೇಗೆಹೇಗೋ ಇಪ್ಪತ್ತು ಇಪ್ಪತ್ತೈದು ಚೀಲ ದವಸದ ಪ್ರಸಾದ ಪರಿಕರಮಾಡಿ ನೀಡಿ ಊಟ ಮಾಡಿಸಿ ಬಿಡಬಹುದು. ಆದರೆ ಇಡೀ ಜಾತ್ರೆಗೇ ದಾಸೋಹ ವ್ಯವಸ್ಥೆಯನ್ನು ಮಾಡುವ ಭಾರವನ್ನು ಮೈಮೇಲೆ ಎಳೆದುಕೊಂಡು ಹಿಂದಿನಿಂದಲೂ ಅದನ್ನು ಊನವಿಲ್ಲದೆ ನಡೆಸಿಕೊಂಡು ಬಂದಿರುವ ಯಶಸ್ಸು ಸಿದ್ಧಗಂಗಾ ಕ್ಷೇತ್ರದ್ದು. ಅಂತೆಯೇ ಅದರ ವೈಶಿಷ್ಟ್ಯ ಅದರ ದಾಸೋಹದಲ್ಲಿ ಅಡಗಿದೆಯೆಂದು ಹೇಳಿದ್ದು. ಲೋಕದಲ್ಲಿ ಇಂಥ ಒಂದು ಅದ್ಭುತವನ್ನು ಎಲ್ಲೂ ಕಾಣಲಾಗುವುದೇ ಇಲ್ಲ. ಉದ್ದಾನಶಿವಯೋಗಿಗಳು ಶಿವರಾತ್ರಿಯ ಸಮಯದಲ್ಲಿ ಶ್ರೀ ಸಿದ್ಧಲಿಂಗೇಶ್ವರರ ರಥೋತ್ಸವವನ್ನೂ, ಜಾತ್ರೆಯನ್ನೂ, ದನದ ಪರಿಷೆಯನ್ನೂ ಹತ್ತು ದಿನಗಳ ಪರ್ಯಂತ ಮಾಡುವ ಇಚ್ಛೆಯನ್ನು ೧೯೧೯ರಲ್ಲಿ ವ್ಯಕ್ತಪಡಿಸಿದರು. ಅವರ ಈ ಇಚ್ಛೆಯಲ್ಲಿ ಇದ್ದ ದೊಡ್ಡ ಇನ್ನೊಂದು ಸಂಕಲ್ಪವೆಂದರೆ ದಾಸೋಹ ಕ್ಷೇತ್ರವಾದ್ದರಿಂದ ಜಾತ್ರೆಗೆ ಬಂದವರಿಗೆಲ್ಲ ಹತ್ತು ದಿನಗಳವರೆಗೆ ಅನ್ನ ಸಂತರ್ಪಣೆ ಮಾಡಬೇಕೆನ್ನುವುದು. ಅವರು ಹಾಗೆ ಸಂಕಲ್ಪ ಮಾಡಿದ ವರ್ಷವೇ ಅಂದರೆ ೧೯೧೯ನೆಯ ಇಸ್ವಿಯಲ್ಲಿ ಬರುವ ಶಿವರಾತ್ರಿಯಂದು ಜಾತ್ರೆ ನಡೆದೇ ಹೋಯಿತು. ಅವರ ಸಂಕಲ್ಪದಂತೆ ಜಾತ್ರೆಗೆ ಬಂದವರಿಗೆಲ್ಲ ಹತ್ತು ದಿನಗಳ ಪ್ರಸಾದ ವಿತರಣೆಯೂ ಆಯಿತು. ಸಂಕಲ್ಪ ಮಾಡಬಹುದು, ಅದರ ಹಿಂದೆ ಅಡಗಿರುವ ಅಗಾಧ ಪರಿಶ್ರಮದ ಕಲ್ಪನೆಯನ್ನು ನೆನೆಸಿಕೊಂಡಾಗ ಮೈನವಿರೇಳುತ್ತದೆ. ಅಂದು ಜಾತ್ರೆಯನ್ನು ಪ್ರಾರಂಭಿಸಿದಾಗ ದಾಸೋಹಕ್ಕೆ ಆರು ಕೊಪ್ಪಲು ಹಾಕಬೇಕು. ಒಂದೊಂದು ಊರಿನವರು ಬಂದು ಹತ್ತು ದಿನಗಳು ಅಡಿಗೆ ಮಾಡಿ ಊಟಕ್ಕೆ ನೀಡಿ ಹೋಗಬೇಕೆಂದು ಗೊತ್ತುಮಾಡಿದರು. ತೇರು ಕಟ್ಟಲು, ಹತ್ತು ದಿನಗಳು ನಡೆಯುವ ಸಿದ್ಧಲಿಂಗೇಶ್ವರ ಸ್ವಾಮಿ ಉತ್ಸವಗಳನ್ನು ನೆರವೇರಿಸಲು ಇಂಥಿಂಥ ಊರಿನವರು ಬಂದು ಕೆಲಸ ಮಾಡಬೇಕೆಂದು ಎಲ್ಲವನ್ನೂ ವ್ಯವಸ್ಥೆ ಮಾಡಿದರು. ಅದೇ ವ್ಯವಸ್ಥೆಯೇ ಇಂದಿಗೂ ಆಯಾಯ ಊರಿನವರಿಂದ ನಡೆದುಕೊಂಡು ಬರುತ್ತಿದೆ. ಇದೆಲ್ಲ ಉದ್ದಾನಸ್ವಾಮಿಗಳವರ ಆಜ್ಞೆ.

ಜಾತ್ರೆಯಲ್ಲಿ ಮೂರು ದಿನಗಳು ಸಿಹಿಯ ಅಡಿಗೆ ಆಗಬೇಕು. ಆ ದಿನಗಳನ್ನು ಬಿಟ್ಟು ಉಳಿದ ದಿನಗಳಲ್ಲಿ ಮುದ್ದೆ ಅನ್ನ ಸಾರುಗಳ ಪ್ರಸಾದ ಪರಿಕರ ಸಿದ್ಧವಾಗಿ ಅನ್ನಸಂತರ್ಪಣೆ ನಡೆಯಬೇಕು. ಇಂಥ ಒಂದು ಭಾರವನ್ನು ತಾವಾಗಿಯೇ ಮೈಮೇಲೆಳೆದುಕೊಂಡು ಅದನ್ನು ಸಾರೋದ್ಧಾರವಾಗಿ ಇಂದಿನವರೆಗೆ ನಡೆಸಿಕೊಂಡು ಬಂದ ಈ ಮಠಾಧಿಪತಿಗಳ ಸ್ಥೈರ್ಯ, ಧೈರ್ಯ, ಕೆಚ್ಚು ನೆಚ್ಚುಗಳ ಬಗೆಗೆ ಮಾಡುವ ಆಲೋಚನಾ ಜೀವಿಗಳ ಯೋಚನೆಯೆಲ್ಲಾ ತಲೆಕೆಳಗು. ಈ ಕ್ರಿಯೆಯನ್ನು ನೋಡುವವರಿಗೇ ಅಸಾಧ್ಯವೆನಿಸಿದಾಗ ಮಾಡುವ ಹೊಣೆ ಹೊತ್ತವರ ಹೊಣೆಗಾರಿಕೆಯ ಬಗೆಗೆ ಲೆಕ್ಕಹಾಕಲು ಮಸ್ತಿಷ್ಕಕ್ಕಿಂತ ಹೃದಯಶಕ್ತಿಯ ಅವಶ್ಯಕತೆಯೇ ಹೆಚ್ಚು ಪ್ರಯೋಜನಕಾರಿ. ಶ್ರೀ ಶಿವಕುಮಾರಸ್ವಾಮಿಗಳವರ ಈ ಐವತ್ತು ವರ್ಷಗಳ ಆಡಳಿತಾವಧಿಯಲ್ಲಿ ಜಾತ್ರೆಯ ಖರ್ಚುವೆಚ್ಚಗಳೆಲ್ಲ ಮುಗಿಲೆತ್ತರಕ್ಕೆ ಹೋಗಿವೆ.

**ಸೌದೆಗಾಗಿ ಶಿವಕುಮಾರಸ್ವಾಮಿಗಳು ಕೊಡಲಿಯನ್ನು ಕೈಯಲ್ಲಿ ಹಿಡಿದರು :**

ಜಾತ್ರೆ ಇನ್ನೂ ಒಂದೂವರೆ ಎರಡು ತಿಂಗಳು ಮುಂದಿದೆ, ಎನ್ನುತ್ತಿರುವಂತೆ ಅದರ ವ್ಯವಸ್ಥೆಯ ಕಾರ್ಯಕ್ರಮಗಳು ಒಂದೊಂದಾಗಿ ಪ್ರಾರಂಭವಾಗುತ್ತವೆ. ಆರೇಳು ಕೊಪ್ಪಲುಗಳದುರಸ್ತಿ, ಒಲೆ ಹಾಕುವುದು, ಪಾತ್ರೆ ಪಡಗಗಳ ದುರಸ್ತಿ, ಮಠಕ್ಕೆಲ್ಲ ಸುಣ್ಣ ಬಣ್ಣ ಗಚ್ಚುಗಾರೆಗಳ ಕೆಲಸ, ಸಂಬಾರ ಪುಡಿಮಾಡಿಸುವುದು, ಸೌದೆ, ದವಸಧಾನ್ಯಗಳ ಸಂಗ್ರಹ, ಬೆಲ್ಲ ಹುಣಿಸೆ ಹಣ್ಣು ಜೋಡಿಸುವುದು, ಖಾರದ ಪುಡಿ ಮಾಡಿಸುವುದು ಇದರ ಒಂದು ದೊಡ್ಡ ದಂದುಗವೇ ಮಠದಲ್ಲಿ ಪ್ರಾರಂಭವಾಗಿ ಬಿಡುತ್ತದೆ. ೧೯೭೮ನೆಯ ಇಸ್ವಿಯ ಜಾತ್ರೆಯ ಮುಂದೆ ಶ್ರೀಗಳವರನ್ನು ನಾನು ಸಂಬಾರ ಪುಡಿಯ ಬಗ್ಗೆ ಒಂದು ಅಂದಾಜು ಲೆಕ್ಕವನ್ನು ಕೇಳಿದೆ. ಅದಕ್ಕೆ ಶ್ರೀಗಳು ಲೆಕ್ಕಹಾಕು ಎಂದು ಹೇಳುತ್ತ, '೧.೫೦೦ ಕೆ.ಜಿ ಹಿಂದೂಪುರದ ಮೆಣಸಿನಕಾಯಿ, ಇಪ್ಪತ್ತೈದು ಚೀಲ ದನಿಯಾ, ಒಂದು ಚೀಲ ಮೆಣಸು, ಒಂದು ಚೀಲ ಜೀರಿಗೆ...' ಹೀಗೆ ಪ್ರಾರಂಭವಾಯಿತು. ಮೆಂತ್ಯ, ಎಳ್ಳು, ಕಡಲೇಬೇಳೆ, ಹೆಸರುಬೇಳೆ, ಚಕ್ಕೆ, ಮೊಗ್ಗು ಇತ್ಯಾದಿ ಇತ್ಯಾದಿ ಸಾಮಾನುಗಳ ಪಟ್ಟಿ. ಅದರ ವಿವರ ಬರೆದ ಒಂದು ಪಟ್ಟಿಯನ್ನೂ ಆಮೇಲೆ ಕೈಗೆ ಕೊಟ್ಟು 'ಎಡದ ಸಂಖ್ಯೆಯನ್ನೆಲ್ಲ ಕೂಡಿಸು' ಎಂದರು. ನಾನೇ ಸ್ವತಃ ಕೂಡಿಸಿದೆ. ತಲೆ ಗಿರ್ರೆಂದಿತು, ಕೇವಲ ನಾಲ್ವತ್ತು ಸಾವಿರ ರೂಪಾಯಿಗಳ ಸಂಬಾರಪುಡಿಯ ಪಟ್ಟಿಯನ್ನು ನೋಡಿ. ಇನ್ನು ಉಳಿದ ಪದಾ

ರ್ಥಗಳ ಮೌಲ್ಯದ ಬಗೆಗೆ ಲೆಕ್ಕ ಹಾಕಲು ಓದುಗರಿಗೇ ಬಿಡುತ್ತೇನೆ. ಈಗ ಗೊತ್ತಾಗಿರುವ ಅಂದಾಜಿನ ಪ್ರಕಾರ ದಿನವೊಂದಕ್ಕೆ ೧೨೦ ರಿಂದ ೧೫೦ ಪಲ್ಲ ದವಸಧಾನ್ಯಗಳು ಅಂದರೆ ಮುಖ್ಯವಾಗಿ ಅಕ್ಕಿ ರಾಗಿಗಳು ಬೆಂದು ಪ್ರಸಾದ ಪರಿಕರಗಳಾಗುತ್ತವೆ. ರಥೋತ್ಸವ, ಬೆಳ್ಳಿಯ ಪಲ್ಲಕ್ಕಿಯ ದಿನಗಳಲ್ಲಿ ಆಗುವ ಖರ್ಚುವೆಚ್ಚಗಳು ಪರಮಾವಧಿಯವು. ಭೀಮಕಾಯದ ಕೊಳಗಗಳಲ್ಲಿ ಪಾಯಸ, ಸಾರು, ಕುದಿಯಲು, ಕೊಪ್ಪರಿಗೆಗಳಲ್ಲಿ ಮುದ್ದೆ ತಿರುವಲು, ಮತ್ತೊಂದು ಕಡೆ ಅನ್ನಬಸಿಯಲು ಏಕಕಾಲದಲ್ಲಿ ನಾಲ್ಕು ತಪ್ಪಲೆಗಳನ್ನಿಡುವ ಒಲೆ-ಹೀಗೆ ನಾಲ್ಕು ಒಲೆಗಳು ಎರಡೂ ಹೊತ್ತು ಉರಿದು ಪ್ರಸಾದ ಪರಿಕರಸಿದ್ಧವಾಗಲು ಒಂದೊಂದು ಕೊಪ್ಪಲಿಗೆ ೮-೧೦ ಗಾಡಿ ಸೌದೆಯು ಸಾಲುವುದಿಲ್ಲವೆಂದಾಗ ಆರೇಳು ಕೊಪ್ಪಲುಗಳಿಗೆ ಏಕಕಾಲದಲ್ಲಿ ಬೇಕಾಗುವ ಸೌದೆಯ ಮೊತ್ತವನ್ನು, ಅದೂ ಹತ್ತುದಿನ ಹೀಗಾಗಬೇಕಾದುದನ್ನು ಊಹಿಸಿಯೇ ನಾವು ಬೆಕ್ಕಸಬೆರಗಾಗುತ್ತೇವೆ. ಇತ್ತೀಚಿನ ದಿನಗಳಲ್ಲಿ ಸೌದೆಯ ಅಭಾವ ತೀವ್ರವಾಗಿ ಸೌದೆಯನ್ನು ಹೊಂದಿಸುವುದೇ ದುಸ್ಸಾಧ್ಯವಾಗಿ ಹೋಗಿದೆ. ೧೯೭೮ ಮತ್ತು ೭೯ನೆಯ ಇಸ್ವಿಯಲ್ಲಿ ನಡೆದ ಶಿವರಾತ್ರಿಯ ಜಾತ್ರೆಯ ಸಮಯದಲ್ಲಿ ಸೌದೆಯ ಅಭಾವ ತೀವ್ರವಾಗಿ ಹೋದಾಗ ಸ್ವತಃ ಶಿವಕುಮಾರಸ್ವಾಮಿಗಳೇ ಕೈಯಲ್ಲಿ ಕೊಡಲಿ ಹಿಡಿದುದುಂಟು. ೨೫೦-೩೦೦ ಜನ ವಿದ್ಯಾರ್ಥಿಗಳ ನೆರವಿನಿಂದ ದೇವರಾಯ ದುರ್ಗದ ಕಾಡಿನಲ್ಲಿ ಶ್ರೀಗಳು ಸೌದೆಗಾಗಿ ಅಲೆದಾಡಿದುದನ್ನು, ಶತಾಯ ಗತಾಯ ಸೌದೆಯನ್ನು ಹೊಂದಿಸಿ ಜಾತ್ರೆಯ ದಾಸೋಹ ಪೂರೈಸಿದ್ದನ್ನು ಎಲ್ಲರೂ ನೋಡಿದ್ದಾರೆ. ೭೨-೭೩ರ ಹರೆಯದಲ್ಲಿ ಶಿವಕುಮಾರ ಸ್ವಾಮಿಗಳು ಸ್ವತಃ ಶ್ರಮ ಸಾಧ್ಯವಾದ ಕೆಲಸದಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುವಾಗಲಿರುವ ಅವರ ದೈಹಿಕಶಕ್ತಿ ಮಾನಸಿಕಉತ್ಸಾಹಗಳಿಂದ ಲೋಕವನ್ನೇ ನಾಚಿಸುತ್ತಾರೆ. ಬೆಳಿಗ್ಗೆ ಶಿವಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ ಹೋದರೆ, ಪುನಃ ಸಾಯಂಕಾಲಕ್ಕೇ ಮಠಕ್ಕೆ ಬಂದು ಸ್ನಾನ ಶಿವಪೂಜೆ ಪ್ರಸಾದ. ಮಧ್ಯದಲ್ಲಿ ಅವರು ಏನನ್ನೂ ಮುಟ್ಟುವುದಿಲ್ಲ. ಹಸಿವು, ತೃಷೆಗಳ ಬಾಧೆ ಅವರನ್ನು ಲೋಕದ ಜನರಂತೆ ಬಾಧಿಸುವುದಿಲ್ಲ. ಇಷ್ಟೊಂದು ಸತ್ವಭರಿತವಾಗಿ ಕ್ರಿಯೆಯಲ್ಲಿ ಮುಳುಗಿದವರ ಕ್ರಿಯೆಗೆ ಪ್ರಬಲಸಾಮರ್ಥ್ಯ ಬರುವುದರಲ್ಲಿ ಅನುಮಾನವೇನು ? ಅವರೊಬ್ಬ ವ್ಯಕ್ತಿಯಂತೂ ಅಲ್ಲ ; ಯಾವುದೋ ತೇಜೋವಿಶೇಷ ಶಕ್ತಿಯ ಸಾಕಾರ. ಅಥವಾ ಬಯಲುಗಟ್ಟಿಗೊಂಡು ಆದ ಆಕಾರ.

ಕೆಲವರು ಹೇಳಬಹುದು : ಇಷ್ಟೆಲ್ಲ ಮೈಮೇಲೆ ಭಾರವೆಳೆದುಕೊಂಡು ಮಾಡುವುದು ಯಾವ ಪುಣ್ಯಕ್ಕೆಂದು. ಇದು ವೈಯಕ್ತಿಕ ಪ್ರಶ್ನೆ. ಒಂದು ಸತ್ಸಂಕಲ್ಪವನ್ನು ಮಾಡಿ, ಅದನ್ನು ಯಶಸ್ವಿಯಾಗಿ ನಡೆಸೇನೆಂಬ ಮಹಾ ಚೇತಸ್ಸಂಪನ್ನರೊಬ್ಬರ ಸಂಕಲ್ಪದ ಬಗೆಗೆ ಏತಕ್ಕೆ ಹೀಗೆ ಮಾಡುವರು ಎಂದು ಪ್ರಶ್ನಿಸಲು ನಾವಾರು ? ಅವರವರ ಸಂಕಲ್ಪ ಅವರವರಿಗೆ. ವೀರಶೈವ ಸಮಯಾಚಾರದಲ್ಲಿ ಜಂಗಮದ ಮುಖ್ಯಲಕ್ಷಣ 'ಸರ್ವ ಲೋಕೋಪಕಾರಕ್ಕೆ ಜಂಗಮ ತನ್ನ ಪಾಲಿನ ಕಾಯಕ ಮಾಡಬೇಕು' ಎಂಬುದು. ಶ್ರೀ ಶಿವಕುಮಾರ ಸ್ವಾಮಿಗಳವರ ಸಮಯನಿಷ್ಠೆಗಳಲ್ಲಿ ಜೀವಚೈತನ್ಯದ ಉದ್ಧಾರಕ್ಕೆ ಅವರು ಮಾಡುವ ಕ್ರಿಯಾ ಸಂಕಲ್ಪ ಅವರಿಂದ ಈ ಅದ್ಭುತ ಮಾಡಿಸುತ್ತದೆ. ಅವರವರ ಸಂಕಲ್ಪ ಅವರವರಿಗೆ. ತಮ್ಮ ಸಂಕಲ್ಪವನ್ನು ಅಷ್ಟೊಂದು ಶ್ರಮವಹಿಸಿ 'ಈಡೇರಿಸಿ ತೋರಿಸಬೇಕು' ಎಂಬ ಪ್ರಬಲಾತುರ. ಆ ಆತುರವು ಎಷ್ಟರಮಟ್ಟಿಗೆ ವ್ಯಕ್ತಿಶಕ್ತಿಯಿಂದ ಪರಮಾವಧಿ ಗೇರೀತೆಂಬುದರ ಒಂದು ಅಳತೆಯಾದರೂ ಲೋಕಕ್ಕೆ ಬೇಕಲ್ಲವೆ? ಲೋಕ ಜೀವನದಲ್ಲಿ ಶುದ್ಧಕ್ರಿಯಾಚಾರನಿರತ ವ್ಯಕ್ತಿಯ ಸತ್ವವಿಶೇಷವೇನು ? ಇದರ ಒಂದು ಅರಿವು ಮಾನವನಿಗಾಗಬೇಡವೆ ? ಯಾವ ಪುಣ್ಯಕ್ಕೆಂದು ಪ್ರಶ್ನಿಸುವವರು, ಎಷ್ಟರಮಟ್ಟಿಗೆ ಪುರುಷ ಪ್ರಯತ್ನ ಕೆಲಸ ಮಾಡೀತೆಂಬುದನ್ನು ಅರಿತರೂ ಸಾಕು. ಹಿನ್ನೆಲೆಯಲ್ಲಿನ ಯಾವುದೋ ಅಗೋಚರ ಶಕ್ತಿಯ ಕಾಣದ ಕೈಯ ಅಭಯಪ್ರದಾನದ ಬಗೆಗೆ ಅವರಿಗೆ ನಂಬಿಕೆ ಬರಲಿ ಅಥವಾ ಬಿಡಲಿ.

ಶ್ರೀ ಶಿವಕುಮಾರ ಸ್ವಾಮಿಗಳು ಏರಿದ ಎತ್ತರ ಅನೂಹ್ಯ. ಅವರು ಇನ್ನೊಂದು ದೃಷ್ಟಿಯಿಂದ ಸಂಪೂರ್ಣವಾಗಿ ಕ್ರಿಯೆಯಾಗಿದ್ದಾರೆ. ಏರಿದಾಗ ಅವರನ್ನು ನೋಡಬೇಕು (ನೋಡುವ ಕಣ್ಣು ಸ್ವಚ್ಛವಾಗಿದ್ದರೆ) ಜ್ಞಾನಸ್ವರೂಪರಾಗಿರುತ್ತಾರೆ. ಇಳಿದರೆ ಕ್ರಿಯೆಯಾಗಿರುತ್ತಾರೆ. ಅವರಲ್ಲಿ ಕ್ರಿಯಾಜ್ಞಾನಗಳು ಗಟ್ಟಿದುಪ್ಪ ತಿಳಿದುಪ್ಪವಿದ್ದ ಹಾಗೆ. ಅದ್ದರಿಂದ ಅವರು ಕೈಮುಟ್ಟಿದ, ಮನಸ್ಸುಮಾಡಿದ ಕ್ರಿಯೆಗೆ ಅನಂತ ಶಕ್ತಿ ಬಂದಿದೆ, ಬರುತ್ತಲಿದೆ. ಅವರ ಮನಸ್ಸಿಗೆ ಈ ಕಾರಣವಾಗಿ ಅಪರಿಮಿತ ಸಂಕಲ್ಪಶಕ್ತಿ ಬಂದಿದೆ ; ಅಥವಾ ಇಚ್ಛಾಶಕ್ತಿಯೊದಗಿದೆ. ಹಸ್ತಶುದ್ಧಿ ಅನೇಕರ ಕಲ್ಯಾಣವನ್ನೊದಗಿಸಿದೆ. ನಡೆನುಡಿ ಲೋಕಕ್ಕೆ ವರ್ತನೋಪದೇಶವಾಗಿದೆ. ಅವರ ದರ್ಶನಾಶೀರ್ವಾದಗಳು ಲೋಕದ ಜನರ ಮಾನಸಿಕ ಕ್ಲೇಶನಿವಾರಿಸುವ ವಿಭೂತಿತ್ವದ ಗುಣಗಳನ್ನು ಪಡೆದಿವೆ. ಅಂತೆಯೇ ಅವರು ನಿಂತ ನೆಲಕ್ಕೆ ಬೆಲೆ ಬಂದಿದೆ. ಅವಿಮುಕ್ತ ಕ್ಷೇತ್ರವಾಗಿದೆ. ವ್ಯಕ್ತಿ ವಿಶೇಷದ ಪರಾಶಕ್ತಿ ನಿಂತ ನೆಲದ ಮೇಲೆ ತನ್ನ ಕಾರ್ಯಮಾಡಿ ಅದನ್ನು ಧರ್ಮಕ್ಷೇತ್ರವನ್ನಾಗಿಸುತ್ತದೆ. ಅಥವಾ ಧರ್ಮಕ್ಷೇತ್ರವೇ ಅಂಥ ವ್ಯಕ್ತಿಯನ್ನು ನಿರ್ಮಿಸುತ್ತದೆ. ಎರಡೂ ಬೀಜವೃಕ್ಷನ್ಯಾಯ.

**ಜಾತ್ರೆಯಲ್ಲಿನ ಇತರ ವೈಶಿಷ್ಟ್ಯಗಳು : ಬೆಳ್ಳಿ ಪಲ್ಲಕ್ಕಿ ಮತ್ತು ವಸ್ತುಪ್ರದರ್ಶನ**

ಹತ್ತು ದಿನಗಳು ನಡೆಯುವ ಶ್ರೀ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವದಲ್ಲಿ ಶಿವರಾತ್ರಿಯ ಮರುದಿನ ಜರುಗುವ

ರಥೋತ್ಸವ. ಅನಂತರದ ಐದನೆಯ ದಿನಕ್ಕೋ ಆರನೆಯ ದಿನಕ್ಕೋ ಜರುಗುವ ಬೆಳ್ಳಿಯ ಪಲ್ಲಕ್ಕಿಯ ಉತ್ಸವಗಳು,* ವಸ್ತುಪ್ರದರ್ಶನ,ದನಗಳ ಪ್ರದರ್ಶನ, ದನಗಳ ಪರಿಷೆ ಮೊದಲಾದುವನ್ನು ಹೆಸರಿಸಬಹುದು. ರಥೋತ್ಸವವಾದ ಮೇಲೆ ಉತ್ಸವಗಳಲ್ಲೆಲ್ಲ ಬೆಳ್ಳಿಯ ಪಲ್ಲಕ್ಕಿಯ ಉತ್ಸವವೇ ಅತ್ಯಂತ ವೈಭವೋಪೇತವಾದ ಬಹು ದೊಡ್ಡ ಉತ್ಸವ. ಬೆಳ್ಳಿಯ ಪಲ್ಲಕ್ಕಿಯಲ್ಲಿ ಸಿದ್ಧಲಿಂಗ ಸ್ವಾಮಿಯನ್ನು ಕುಳ್ಳಿರಿಸಿ ಬೆಳ್ಳಂಬೆಳಕಾಗುವವರೆಗೆ ಅನೇಕ ಮನರಂಜನೆಯನ್ನು ಜನರಿಗೆ ಒದಗಿಸುವ ಈ ಉತ್ಸವದ ದಿನ ಸಿದ್ಧಗಂಗೆಯಲ್ಲಿ ಕುಳಿತುಕೊಳ್ಳುವುದಿರಲಿ ನಿಲ್ಲಲೂ ಸ್ಥಳವಿರುವುದಿಲ್ಲ. ಅಂದು ಸೇರುವ ಜನಸಮುದ್ರದ ಕಾರಣವಾಗಿ ಮಠದ ಆವರಣವೆಲ್ಲ ಭೂಮಿಯೇ ಬಾಯ್ಬಿಟ್ಟು ಒಳಗಿನಿಂದ ಜನವನ್ನು ಹೊರಹಾಕಿದೆಯೋ ಎನ್ನುವಂತಾಗಿ ಗಿಜಿಗಿಜಿಯೆನ್ನುತ್ತಿರುತ್ತದೆ. ರಾತ್ರಿಯಲ್ಲಿ ವಿಶಾಲವಾದ ಬೈಲಿನಲ್ಲಿ ಸುಡುವ ಮದ್ದಿನ ವಿವಿಧ ಪ್ರಕಾರದ ದೃಶ್ಯ ಈ ಅಪಾರ ಜನಸ್ತೋಮಕ್ಕೆ ಅನ್ಯಾದೃಶ ಮನರಂಜನೆಯನ್ನೊದಗಿಸುತ್ತದೆ. ಆ ದಿನದ ಪಾಯಸದ ಊಟದ ದಾಸೋಹ ವ್ಯವಸ್ಥೆ ನಿರಾತಂಕವಾಗಿ ನಡೆದುಬಿಟ್ಟರೆ ಶ್ರೀಗಳವರು ತೃಪ್ತಿಯ ನಿಟ್ಟುಸಿರು ಬಿಡುತ್ತಾರೆ. ಅಂತೆಯೇ ಅವರು ಕೊಪ್ಪಲಿನಿಂದ ಕೊಪ್ಪಲಿಗೆ ವಾಯುವೇಗದಿಂದ ಸಂಚರಿಸುತ್ತಾರೆ. ಅಂದು ಇಡಿ ಹಗಲು ರಾತ್ರಿ ಶ್ರೀಗಳವರು ಕುಳಿತುಕೊಳ್ಳುವುದಕ್ಕೂ ಆಗದಷ್ಟು ಜವಾಬ್ದಾರಿಯಿಂದ ವರ್ತಿಸಿ ಬೆಳಕು ಹರಿಯುವವರೆಗೆ ನಡೆಯುವ ಉತ್ಸವದಲ್ಲಿ ಪೂರ್ಣ ಭಾಗಿಗಳಾಗಿ ತಮ್ಮ ಬೆಳಗಿನ ಪೂಜೆ ಪ್ರಸಾದಕ್ಕೆ ತೆರಳುತ್ತಾರೆ.

ಈ ಜಾತ್ರೆಯ ಸಮಯದಲ್ಲಿ ಗ್ರಾಮಾಂತರ ಪ್ರದೇಶದ ಜನರ ಜ್ಞಾನ–ಮನರಂಜನೆಯ ಉದ್ದೇಶಗಳಿಂದ ೧೯೬೩ರಿಂದಲೇ ವಸ್ತುಪ್ರದರ್ಶನವನ್ನು ತೆರೆಯಲಾಗಿದೆ. ಇದಕ್ಕೆ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರಗಳ ಅನೇಕ ಮಳಿಗೆಗಳೂ ಸಾರ್ವಜನಿಕರ ಮಳಿಗೆಗಳೂ ಬರುತ್ತವೆ. ದಿನವೂ ಒಂದಿಲ್ಲೊಂದು ಬಗೆಯ ಮನರಂಜನೆಯಿರುತ್ತದೆ. ಈ ವಸ್ತುಪ್ರದರ್ಶನದ ಪ್ರವೇಶ ಧನ ತೀರಾ ಕಡಿಮೆ. ಅದನ್ನು ಲಾಭನಷ್ಟಗಳೆರಡೂ ಆಗದಂತಹ ರೀತಿಯಲ್ಲಿ ನಿಗದಿಗೊಳಿಸಲಾಗಿದೆ. ಲಕ್ಷಾಂತರ ಜನ ಈ ಪ್ರದರ್ಶನಕ್ಕೆ ಭೇಟಿ ಕೊಡುತ್ತಾರೆ. ಇದರ ಆಡಳಿತ ವ್ಯವಸ್ಥೆಯನ್ನೆಲ್ಲ ಶ್ರೀಗಳವರು ಹಳೆಯ ವಿದ್ಯಾರ್ಥಿ ಸಂಘದವರಿಗೆ ಬಿಟ್ಟುಕೊಟ್ಟಿದ್ದಾರೆ. ನೂರಾರು ಜನ ಹಳೆಯ ವಿದ್ಯಾರ್ಥಿಗಳೆಲ್ಲ ಒಗ್ಗಟ್ಟಿನಿಂದ ಶಿಸ್ತಿನ ಸಿಪಾಯಿಗಳಂತೆ ದುಡಿದು ಈ ಕಾರ್ಯ ನಿರ್ವಹಿಸಿ ಹೋಗುತ್ತಾರೆ.

**ಈ ಜಾತ್ರೆಗೆ ಬರುವ ಜನ ಬರಿಗೈಯಲ್ಲಿ ಬರುವುದಿಲ್ಲ :**

ಸಿದ್ಧಲಿಂಗೇಶ್ವರನ ಜಾತ್ರೆಗೆ ಬರುವ ಗ್ರಾಮಾಂತರ ಪ್ರದೇಶದ ಜನ ಹಾಗೇ ಯಾರೂ ಬರುವುದಿಲ್ಲ. ಮಡಿಹುಡಿಯಿಂದ ಕೂಡಿ, ಗಾಡಿಯನ್ನು ಕಟ್ಟಿಕೊಂಡೋ, ಕಾಲುನಡಿಗೆಯಿಂದಲೋ ತಾವು ಬೆಳೆದ ಬೆಳೆಯ ವಸ್ತು ಯಾವುದೇ ಆಗಿರಬಹುದು, ಮೀಸಲಾಗಿಟ್ಟಿದ್ದನ್ನು, ಕಟ್ಟಿಕೊಂಡು ಬಂದು ದಾಸೋಹ ವಿಭಾಗಕ್ಕೆ ಅರ್ಪಿಸುತ್ತಾರೆ. ಉದ್ದಾನ ಶಿವಯೋಗಿಗಳವರು ಹಾಕಿ ಕೊಟ್ಟಿರುವ ಈ ಮೀಸಲು ಪಡಿಪದಾರ್ಥಗಳ ಅರ್ಪಣೆಯ ಪದ್ಧತಿ, ಇಂದಿಗೂ ಚಾಚೂ ತಪ್ಪದೆ ನಡೆದು ಬರುತ್ತಿದೆ. ಕಾಯಕ ಸಂಪಾದಿತ ಧನವನ್ನು ಗುರುಲಿಂಗಜಂಗಮಕ್ಕರ್ಪಿಸುವಲ್ಲಿ ತರುವವರದೂ ದಾಸೋಹವೇ. ಅವರೂ ತಮ್ಮ ತಮ್ಮ ಮಟ್ಟದಲ್ಲಿ ದಾಸೋಹ ಸದ್ಭಾವಿಗಳೇ ಎಂಬುದು ವೀರಶೈವತತ್ತ್ವದ ಅನುಯಾಯಿಗಳ ಒಂದು ಅತಿ ಮಹತ್ವದ ಸಾಮಾಜಿಕ ಪದ್ಧತಿ. ಇವರು ಅರ್ಪಿಸುವ ವಸ್ತುಗಳು ಹಲವು ಬಗೆಯವು : ಅಕ್ಕಿ, ಬೇಳೆ, ರಾಗಿ, ಹಿಟ್ಟು, ಹುಣಸೆಹಣ್ಣು, ಬೆಲ್ಲ, ಈರುಳ್ಳಿ, ಕುಂಬಳಕಾಯಿ, ಊಟದೆಲೆ, ತೆಂಗಿನಕಾಯಿ, ಇತರ ತರಕಾರಿ ಅದೇನೇ ಆಗಿರಬಹುದು. ಈ ಪಡಿಪದಾರ್ಥಗಳು ದಾಸೋಹ ವಿಭಾಗಕ್ಕೆ ಸಂದಾಯವಾಗಿ ಅಭೂತ ಪೂರ್ವದ ಈ ದಾಸೋಹದ ಖರ್ಚುವೆಚ್ಚಗಳಿಗೆ ಸ್ವಲ್ಪಮಟ್ಟಿಗೆ ಸಹಕಾರಿಯಾಗುತ್ತವೆ. ಹೀಗೆ ಪಡಿಪದಾರ್ಥಗಳನ್ನು ಎಲ್ಲ ಕೋಮಿನವರೂ ಅರ್ಪಿಸುಸುತ್ತ ಬಂದಿದ್ದಾರೆ. ಇಲ್ಲಿ ಜಾತಿಗೀತಿಗಳ ಪ್ರಶ್ನೆಯೇ ಇಲ್ಲ. ಅವೇನಿದ್ದರೂ ಸಿದ್ಧಗಂಗೆಗೆ ಅನ್ವಯಿಸುವುದೇ ಇಲ್ಲ. ಅದು ಇತ್ತೀಚಿನ ರಾಜಕೀಯದ ಅನಿಷ್ಟ ಪರಂಪರೆ. ಅವರು ತಮ್ಮ ಶಕ್ತ್ಯನುಸಾರ ಕಾಣಿಕೆಯನ್ನು ಕಾಣಿಕೆಯ ಡಬ್ಬಗಳಿಗೆ ಹಾಕುತ್ತಾರೆ. ಮಠದವರು ಜಾತ್ರೆಗೆ ಬರುವ ದನಗಳಿಗೆ ಒಂದು ರೂಪಾಯಿಯಂತೆ ಹಣ ವಸೂಲು ಮಾಡುತ್ತಾರೆ. ಅಂತೂ ಜನತೆಯಿಂದ ಬರುವುದಕ್ಕೂ ಜಾತ್ರೆಯಲ್ಲಿ ಖರ್ಚಾಗುವುದಕ್ಕೂ ಸ್ವಲ್ಪ ಹೆಚ್ಚು ಕಡಿಮೆ ಸರಿಯಾಗುತ್ತ ಬಂದಿದೆ. ಇಂಥ ಈ ನಡವಳಿಕೆಯಲ್ಲಿ 'ಕೊಡುವವಸಂಗ ಕೊಳ್ಳುವವಸಂಗಮದೇವ' ಎಂಬ ಮಾತಿನ ಗುಟ್ಟು ಅಡಗಿದೆ. ಶ್ರೀಗಳವರು ಹೇಗೆ ಬರುವುದೋ ಹೇಗೇ ವಿನಿಯೋಗವಾಗುವುದೋ ಎರಡೂ ಅರಿಯಲಾಗದ ಒಗಟು. ಎಂದು ನಕ್ಕು ಸುಮ್ಮನಾಗುತ್ತಾರೆ. ನಗುವಿನ ಹಿಂದಿರುವ ತಮ್ಮ ಅಪಾರ ಶ್ರಮವನ್ನು ಮರೆತ ಭಾವ

* ೧೯೫೭–೫೮ನೆಯ ಸಾಲಿನಲ್ಲಿ ತುಮಕೂರಿನ ಪ್ರಸಿದ್ಧ ದಾನಿಗಳೂ ವ್ಯಾಪಾರಸ್ಥರೂ ಆದ ಲಿಂ.ಟಿ.ಎನ್. ಕೆಂಪುಹೊನ್ನಯ್ಯನವರು ಲಕ್ಷಾಂತರ ರೂಪಾಯಿ ಬೆಲೆ ಬಾಳುವ (ಇಂದಿನ ಕಾಲಕ್ಕೆ ಐದಾರುಲಕ್ಷ ಬೆಲೆಯಾಗುವ) ಬೆಳ್ಳಿಯ ತಗಡಿನ ಪಲ್ಲಕ್ಕಿಯನ್ನು ಈ ಉದ್ದೇಶಕ್ಕಾಗಿ ಮಾಡಿಸಿ ಶ್ರೀಗಳವರಿಗೆ ಅರ್ಪಿಸಿದ್ದಾರೆ. ಅಂದಿನ ಉತ್ಸವದ ಖರ್ಚಿಗೆಂದು ಒಂದು ಶಾಶ್ವತ ಇಡುಗಂಟನ್ನು ಇಟ್ಟಿದ್ದಾರೆ. ಈ ಉತ್ಸವಕ್ಕಾಗಿ ಅದರ ಬಡ್ಡಿಯು ಸ್ವಲ್ಪ ಬರುತ್ತದೆ. ಪ್ರತಿವರ್ಷ ಈ ಕಾರಣಕ್ಕಾಗಿ ಆ ಉತ್ಸವ ಅವರ ಹೆಸರಿನಲ್ಲಿ ನಡೆಯುತ್ತದೆ. ಗ್ರಾಮಾಂತರ ಪ್ರದೇಶದ ಜನ ಮನೋರಂಜನೆಗೆ ಅನೇಕ ಚಟುವಟಿಕೆ ಅಂದು ನಡೆಯುತ್ತವೆ. ಇತ್ತೀಚೆಗೆ ಬೆಳ್ಳಿಯ ಪಲ್ಲಕ್ಕಿಯ ಉತ್ಸವ ರಥೋತ್ಸವದ ಮರುದಿನವೇ ಆಗುತ್ತಿದೆ.

ನೋಡಿದವರಿಗೆ. ಪುನಃ ನೂತನೋತ್ಸಾಹದ ದಾಸೋಹದದಂದುಗ. ಲೋಕ ಜೀವನದ ಸುಖವನ್ನು ಕಂಡು ತೃಪ್ತಿಯ ನಿಟ್ಟುಸಿರು ಬಿಡುವುದು ಜಂಗಮದ ವಿಶಿಷ್ಟ ಲಕ್ಷಣ.

**ಶಿಕ್ಷಣ ಕ್ಷೇತ್ರದಲ್ಲಿ ಶ್ರೀಗಳವರ ಸಾಧನೆ ಜಗತ್ಪ್ರಸಿದ್ಧ :**

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಈ ಕ್ಷೇತ್ರಾಧಿಪತಿಗಳಿಂದ ಯಾವ ಕಾರ್ಯವೂ ಸಣ್ಣ ಪ್ರಮಾಣದಲ್ಲಿ ನಡೆಯುವುದೇ ಇಲ್ಲ. ಎಲ್ಲವೂ ಜಗದ್ವಿಖ್ಯಾತ ಕಾರ್ಯಕ್ರಮಗಳೇ. ಜಗದ್ವಿಖ್ಯಾತ ದಾಸೋಹ, ಜಗದ್ವಿಖ್ಯಾತ ವಿದ್ಯಾರ್ಥಿ ಸಮೂಹ. ಜಗದ್ವಿಖ್ಯಾತ ಸಂಸ್ಕೃತ ಕಾಲೇಜು, ಜಗದ್ವಿಖ್ಯಾತ ಜಾತ್ರೆ (ದಾಸೋಹದ ದೃಷ್ಟಿಯಿಂದ). ಅಂತೆಯೇ ಶೈಕ್ಷಣಿಕ ಕ್ಷೇತ್ರದಲ್ಲೂ ಆ ಮಠದ ಸೇವೆ ಜಗದ್ವಿಖ್ಯಾತವೇ ಆಗಿದೆಯೆಂಬುದರಲ್ಲಿ ಯಾವ ಪ್ರತ್ಯವಾಯವೂ ಇಲ್ಲ. ೧೯೧೭ರಲ್ಲಿ ಉದ್ದಾನ ಶಿವಯೋಗಿಗಳವರಿಂದ ಸ್ಥಾಪಿತವಾದ ಸಂಸ್ಕೃತ ಮತ್ತು ವೇದ ಪಾಠಶಾಲೆಯು ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ೧೯೩೭ರಲ್ಲಿಯೇ ಉದ್ದಾನ ಶಿವಯೋಗಿಗಳಿರುವಾಗಲೇ ಕಾಲೇಜಾಗಿ ಪರಿವರ್ತನೆಗೊಂಡು ಇಂದು ಸುಮಾರು ೨೫೦೦ – ೩೦೦೦ ವಿದ್ಯಾರ್ಥಿಗಳು ಒಂದೇ ಒಂದು ಸಂಸ್ಕೃತ ಕಾಲೇಜಿನಲ್ಲಿ ಒಂದೇ ಕಡೆ ಊಟ ವಸತಿಗಳ ಸೌಕರ್ಯಗಳೊಡನೆ ತರ್ಕ, ವ್ಯಾಕರಣ, ಅಲಂಕಾರ, ಶಕ್ತಿ, ವಿಶಿಷ್ಟಾದ್ವೈತವೇದಾಂತ ವಿಭಾಗಗಳಲ್ಲಿ ವಿದ್ವತ್ ಮಟ್ಟದವರೆಗೆ ಓದಲು ಅವಕಾಶವಿರುವುದು ಜಗತ್ತಿನಲ್ಲಿ ಇದೊಂದೇ ಕಡೆಗೆ. ಇನ್ನೊಂದು ಎಲ್ಲಿಯಾದರೂ ಇದ್ದರೆ ತೋರಿಸಬಹುದು. ಈ ಶಿಕ್ಷಣ ಸಂಸ್ಥೆಯನ್ನು ಶಿವಕುಮಾರ ಸ್ವಾಮಿಗಳು ಮೊದಲಿನಿಂದಲೂ ಅತ್ಯಂತ ಮಮತೆಯಿಂದ ತಮ್ಮ ತಪಶ್ಶಕ್ತಿಯ ಬಹು ಭಾಗವನ್ನು ಧಾರೆಯೆರೆದು ಕಟ್ಟಿ ಬೆಳೆಸಿದ್ದಾರೆ ; ಉಳಿಸಿಕೊಂಡು ಬಂದಿದ್ದಾರೆ. ಅನೇಕರು ಇಲ್ಲಿ ಓದಿ ವಿದ್ವಾಂಸರೆನಿಸಿ ಜಗತ್ತಿನ ಅನೇಕ ಕಡೆಗಳಲ್ಲಿ ಕರ್ತವ್ಯ ನಿರತರಾಗಿದ್ದಾರೆ. ಈ ಕಾಲೇಜಲ್ಲದೆ ಶ್ರೀ ಕ್ಷೇತ್ರದಲ್ಲಿ ಕನ್ನಡ ಪಂಡಿತ ಪರೀಕ್ಷಾ ವಿಭಾಗವೂ ಈ ಸಂಸ್ಕೃತ ಕಾಲೇಜಿನ ಅಂಗವಾಗಿ ಉದಯಗೊಂಡಿದೆ. ನೂರಾರು ಜನ ಪಂಡಿತರನ್ನು ರಾಜ್ಯದ ಹೈಸ್ಕೂಲು ಶಿಕ್ಷಕಸ್ಥಾನಕ್ಕೆ ಒದಗಿಸಿದೆ. ಒಂದು ಜೂನಿಯರ್ ಕಾಲೇಜು, ಇನ್ನೊಂದು ಹೈಸ್ಕೂಲ್, ಒಂದು ಸಂಗೀತ ಶಿಕ್ಷಣ ಶಾಲೆ. ಕುರುಡರ ಶಾಲೆ, ಒಂದು ಉಪಾಧ್ಯಾಯ ತರಬೇತಿ ಕೇಂದ್ರ (ಟಿ.ಸಿ.ಎಚ್.), ಒಂದು ಜ್ಯೋತಿಷ್ಯ ಪಾಠಶಾಲೆ, ಒಂದು ಕಾಮರ್ಸ್ ತರಗತಿಗಳ ಪಾಠಶಾಲೆ, ಒಂದು ಅಪ್ಪರ್ ಪ್ರೈಮರಿಸ್ಕೂಲ್, ಪ್ರೈಮರಿಸ್ಕೂಲ್ ಇದ್ದು ಇವರೆಲ್ಲ ಶ್ರೀ ಮಠದಲ್ಲಿಯೇ ಆಸನ ವಸತಿಯ ಸೌಕರ್ಯ ಪಡೆದಿದ್ದಾರೆ. ಈ ತರಹದ ಒಂದೇ ಒಂದು ಮಠ ಪ್ರಪಂಚದಲ್ಲಿ ಮತ್ತಾವುದಾದರೂ ಇದೆಯೇ ನಾವಂತೂ ಕೇಳಿಲ್ಲ ; ತಿಳಿದಿಲ್ಲ. ಆದ್ದರಿಂದಲೇ ಇಂಥ ಒಂದು ದೊಡ್ಡ ವಿದ್ಯಾರ್ಥಿ ನಿಲಯವನ್ನು ಅನೇಕ ಶಿಕ್ಷಣ ಸಂಸ್ಥೆಗಳನ್ನು ಒಳಗೊಂಡ ಮಠ ಪ್ರಪಂಚದಲ್ಲಿ ಈಗ ತಿಳಿದ ಮಟ್ಟಿಗೆ ಇದೊಂದೇ ಎಂದು ನಾವು ಹೇಳಿದ್ದೇವೆ. ಇದು ಸತ್ಯವೂ ಹೌದು. ಶ್ರೀಗಳವರು ಈ ಮಕ್ಕಳನ್ನೆಲ್ಲ ಪಾಲನೆ ಪೋಷಣೆ ಮಾಡಿ, ಓದಿಸಿ, ತಮ್ಮ ಕೈಲಾದ ಮಟ್ಟಿಗೆ ತೀಡಿ, ತಿದ್ದಿ ಸಮಾಜಕ್ಕೆ ಕಾಣಿಕೆಯಾಗಿ ಒಪ್ಪಿಸುವುದರ ಮೂಲಕ ಸಂತೋಷ ಪಡುತ್ತಾರೆ. ರಾಷ್ಟ್ರಹಿತಕ್ಕೆ ಶ್ರೀಗಳವರ ಇನ್ನಾವ ಕಾಣಿಕೆ ಬೇಕು ? ರಚನಾತ್ಮಕ ಕಾರ್ಯ ಗೌರವದಲ್ಲಿ ಶ್ರೀಗಳವರ ಸೇವೆಗೆ ಬೇರೆ ಏನು ಬೇಕು ?

ಉದ್ದಾನ ಶಿವಯೋಗಿಗಳವರ ಕಾಲದಲ್ಲಿ ಅಂದರೆ ೧೯೪೦–೪೧ರಲ್ಲಿ ಈ ಕ್ಷೇತ್ರದ ವಿದ್ಯಾರ್ಥಿಗಳ ಸಂಖ್ಯೆ ಕೇವಲ ೬೦ ಮಾತ್ರ ಇತ್ತು. ಕಾಲಕಾಲಕ್ಕೆ ಆ ಸಂಖ್ಯೆ ಗಣನೀಯವಾಗಿ ಬೆಳೆದು ಇಂದು ಸುಮಾರು ೩೮೦೦ ವಿದ್ಯಾರ್ಥಿಗಳ ಮಟ್ಟಕ್ಕೇರಿದೆ. ೧೯-೯-೭೯ನೆಯ ದಿನ ಮುರಾರ್ಜಿ ದೇಸಾಯಿಯವರು ಸಾಯಂಕಾಲ ೬ ಅಥವಾ ೬–೩೦ರ ಸುಮಾರಿಗೆ ಅಕಸ್ಮಾತ್ತಾಗಿ ಮಠಕ್ಕೆ ಬಂದರು. ಆಗ ವಿದ್ಯಾರ್ಥಿಗಳೆಲ್ಲ ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗಿದ್ದ ಸಮಯ. ಆ ದೃಶ್ಯವನ್ನು ಕಂಡ ದೇಸಾಯಿಯವರು ವಿದ್ಯಾರ್ಥಿಗಳನ್ನುದ್ದೇಶಿಸಿ ನಾಲ್ಕು ಹಿತವಚನಗಳನ್ನು ಹೇಳುತ್ತ 'ಇಷ್ಟೊಂದು ಅಧಿಕ ಸಂಖ್ಯೆಯ ಮಕ್ಕಳು ಒಂದೇ ಒಂದು ಮಠದ ಆಶ್ರಯದಲ್ಲಿ ಒಂದೇ ಕಡೆ ಉಚಿತವಾದ ಆಸನ ವಸತಿಗಳ ಸೌಕರ್ಯ ಪಡೆದು ಓದುತ್ತಿರುವುದನ್ನು ನಾನು ಎಲ್ಲಿಯೂ ಕಂಡಿಲ್ಲ ; ಕೇಳಿಲ್ಲ' ಎಂದು ಉದ್ಗಾರ ತೆಗೆದು ಹೋದರು. ಇದೆಲ್ಲಾ ಮಠದಲ್ಲಿನ ಶಿಕ್ಷಣ ಕ್ಷೇತ್ರ ವಿಸ್ತಾರ. ಇನ್ನು ತುಮಕೂರಿನಲ್ಲಿ ೧೯೪೪ರಲ್ಲಿಯೇ ಸಿದ್ಧಗಂಗಾ ಹೈಸ್ಕೂಲ್ ಎಂಬ ವಿದ್ಯಾ ಸಂಸ್ಥೆಯನ್ನು ತೆರೆದು ಅದನ್ನು ಯಶಃಪೂರ್ಣವಾಗಿ ನಡೆಸಿಕೊಂಡು ಬಂದುದೂ ಒಂದು ದೊಡ್ಡ ಇತಿಹಾಸವೇ ಆಗಿದೆ. ಆ ಕಾಲದಲ್ಲಿಯೇ ಆ ಹೈಸ್ಕೂಲಿಗೊಂದು ಸ್ವತಂತ್ರ ಕಟ್ಟಡವನ್ನೊದಗಿಸಿ ಅದನ್ನು ನಡೆಸಿಕೊಂಡು ಬರುವಲ್ಲಿ ಮೊದಮೊದಲು ಬಹಳ ಶ್ರಮಪಟ್ಟರು. ಅನಂತರ ಅದೇ ಕಟ್ಟಡದಲ್ಲಿ ಈಗ ಒಂದು ಉಪಾಧ್ಯಾಯ ತರಬೇತಿ ಕೇಂದ್ರವೂ (ಟಿ.ಸಿ.ಎಚ್) ನಡೆಯತೊಡಗಿದೆ. ಕೇವಲ ನಗರ ಪ್ರದೇಶದಲ್ಲಿಯೇ ವಿದ್ಯಾಕೇಂದ್ರಗಳು ಸ್ಥಾಪನೆಯಾಗುತ್ತಿರುವುದನ್ನೂ ಅಲ್ಲಿನ ವಿದ್ಯಾರ್ಥಿಗಳಿಗೆ ಸೀಮಿತವಾಗಿರುವ ಪ್ರೌಢವಿದ್ಯಾಭ್ಯಾಸವನ್ನು ಗ್ರಾಮಾಂತರ ಪ್ರದೇಶದ ಮಕ್ಕಳಿಗೂ ಒದಗಿಸಬೇಕೆಂದು ಗ್ರಾಮಾಂತರ ಪ್ರದೇಶದ ಜನರ ಕಷ್ಟನಷ್ಟ. ನೋವು ನಲಿವುಗಳ ಪರಿಚಯವನ್ನು ಮೊದಲಿನಿಂದಲೂ ಪಡೆದಿದ್ದ ಶ್ರೀಗಳವರು ತಮ್ಮ ದೃಷ್ಟಿಯನ್ನು ಅತ್ತ ಹರಿಸಿದರು. ಇದೊಂದು ಶ್ರೀಗಳವರ ದೊಡ್ಡ ಕ್ರಾಂತಿಕಾರಕ ಲೋಕಸೇವಾ ಮನೋಭಾವ. ಅತ್ಯಂತ ಶ್ರಮವಹಿಸಿ ಸುಮಾರು ೨೪ರಷ್ಟು ಪ್ರೌಢ ಶಾಲೆಗಳನ್ನು ಗ್ರಾಮಾಂತರ ಪ್ರದೇಶದ ವಿವಿಧ ಭಾಗಗಳಲ್ಲಿ ೧೯೬೨ರಿಂದಲೇ ತೆರೆಯುತ್ತ ಮಠದ ಶೈಕ್ಷಣಿಕ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನೇ




ತುಮಕೂರು - ಬೆಂಗಳೂರು ಜಿಲ್ಲಾ ನಕ್ಷೆ

ತೆರೆದರು. ಶ್ರೀಗಳವರ ಈ ಪ್ರಚಂಡ ಶಕ್ತಿಯ ಹಿಂದೆ ಅವರ ಕಾರುಣ್ಯ ಭಾವ, ಗ್ರಾಮಾಂತರ ಜನರ ಹಿತಚಿಂತನ, ಶ್ರಮ ಸಹಿಷ್ಣುತೆಯ ಸ್ಪಷ್ಟ ಚಿತ್ರ ಅಭಿವ್ಯಕ್ತ. ಪುರುಷನ ಹಳ್ಳಿಯಲ್ಲಿಯ ಹೈಸ್ಕೂಲಿನ ಕಟ್ಟಡವನ್ನು ಶ್ರೀಗಳವರೇ ಮಠದ ೭೫ ಸಾವಿರ ರೂಪಾಯಿಗಳ ಖರ್ಚಿನಿಂದ ಕಟ್ಟಿಸಿಕೊಡಬೇಕಾದ ಪ್ರಸಂಗ ಬಂದು, ಕಟ್ಟಿಸಿಕೊಟ್ಟು ೧೯೭೯ನೆಯ ಜೂನ್ ೨೨ನೆಯ ತಾರೀಖು ಅದರ ಪ್ರವೇಶೋತ್ಸವವನ್ನು ಕರ್ನಾಟಕದ ಮಂತ್ರಿಗಳಲ್ಲೊಬ್ಬರಾದ ಶ್ರೀ ರಾಮೇಗೌಡರ ಹಿರಿತನದಲ್ಲಿ ವಿಜೃಂಭಣೆಯಿಂದ ನೆರವೇರಿಸಿ ಅಂದು ಅಲ್ಲಿಯೇ ಪೂಜೆ ಮುಗಿಸಿ ಬಂದರು. ಇಷ್ಟೆಲ್ಲ ಕಾರ್ಯಗಳನ್ನು ಶ್ರೀಗಳವರು ಸಾಧಿಸಿದ್ದು ದುಡ್ಡಿನ ಬಲದಿಂದಲ್ಲ: ಆತ್ಮಶಕ್ತಿಯ ತೇಜೋವಿಶೇಷದಿಂದ.

**ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿ :**

ಶ್ರೀಗಳವರ ಸಂಕಲ್ಪಶಕ್ತಿ ಉದ್ದಾನ ಶಿವಯೋಗಿಗಳಂತೆಯೇ ಪ್ರಚಂಡಬಲವುಳ್ಳದ್ದು. ಅಥವಾ ಉದ್ದಾನ ಶಿವಯೋಗಿಗಳವರ ಆ ಪ್ರಚಂಡ ಶಕ್ತಿ ಇವರಿಗೆ ಅನುಗ್ರಹವಾಗಿ ಬಂದಿದೆ ಎಂದರೂ ತಡೆದೀತು. ೧೯೫೨ನೆಯ ಇಸ್ವಿ. ಶ್ರೀಗಳವರು ಹೊಲದ ಕಡೆಗೆ ಹೊರಟರು. ನಾನೂ ಆಗ ಹಿಂಬಾಲಿಸಿದ್ದೆ. ಶ್ರೀಗಳವರು ಒಂದು ಬದುವಿನ ಮೇಲೆ ನಿಂತರು. ಆಗ ಒಂದು ಮಾತು ಹೀಗೆ ಹೇಳಿದರು : 'ತಾಂತ್ರಿಕ ಶಿಕ್ಷಣ ಕ್ಷೇತ್ರದಲ್ಲಿ ಈ ಭಾಗ ತೀರಾ ಹಿಂದೆ ಬಿದ್ದಿದೆ. ಆ ಶಿಕ್ಷಣ ಸಂಸ್ಥೆಗಳು ಕೇವಲ ಬೆಂಗಳೂರಿನಲ್ಲಿಯೇ ಕೇಂದ್ರೀಕೃತವಾಗಿವೆ. ಒಂದು ಉತ್ತಮ ನಿವೇಶನ ಸಿಕ್ಕು ಸರಕಾರ ಅನುಮತಿಯಿತ್ತರೆ ಒಂದು ಇಂಜಿನಿಯರಿಂಗ್ ಕಾಲೇಜನ್ನು ತುಮಕೂರಿನಲ್ಲಿ ಶ್ರೀಮಠದ ವತಿಯಿಂದ ತೆರೆಯಬೇಕೆಂದಿದ್ದೇನೆ.' ತುಮಕೂರಿನಲ್ಲಿರುವ 'ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ'ಯ ಉದಯಕ್ಕೆ ಸಂಕಲ್ಪರೂಪದ ಬೀಜ ಮೊಳೆದೋರಿದ್ದು ೧೯೫೨ರಲ್ಲಿ. ಅಂದಿನಿಂದ ಅವರ ಸಂಕಲ್ಪ ಕ್ರಿಯಾಮುಖವಾಗಲು ಕಾರ್ಯ ಮಾಡತೊಡಗಿತು. ಇಂಥ ಮಹಾಪುರುಷರ ಸಂಕಲ್ಪ ಒಂದು ಮಹಾಶಕ್ತಿ. ಅದು ಅಲ್ಲಿಂದ ಹರಿದು ಹೋಗಿ ಎಲ್ಲಿ ಎಲ್ಲಿ ಯಾವಯಾವ ಶಕ್ತಿ ಪ್ರದರ್ಶಿಸಿ ಕಾರ್ಯೋನ್ಮುಖರನ್ನಾಗಿಸುವುದೋ ಊಹಿಸುವುದೂ ಶಕ್ಯವಿಲ್ಲದ್ದು. ಅದು ನಾಡಿನ ಅನೇಕ ಶಕ್ತಿಯನ್ನು ಒಟ್ಟುಗೂಡಿಸಲು ಯತ್ನಿಸಿತು. ಮುಖ್ಯವಾಗಿ ತುಮಕೂರಿನ ದಾನಿಗಳು, ವಾಣಿಜ್ಯೋದ್ಯಮಿಗಳು, ಉತ್ಸಾಹೀ ಯುವಕರ ಪ್ರಜ್ಞೆಯನ್ನು ಬಡಿದೆಬ್ಬಿಸಿ, ಅವರ ಶಕ್ತಿಯ ಮೇಲೆ ಕೆಲಸ ಮಾಡಿಸಿತು. ಶ್ರೀಗಳವರು ಸಾಕ್ಷೀಭೂತರಾಗಿ ನಿಂತರು. ಪ್ರಾರಂಭವಾಯಿತು ಕ್ರಿಯಾಮುಖ. ಶ್ರೀಗಳವರು ೧೯೬೩ನೆಯ ಇಸ್ವಿಯಲ್ಲಿ ಅಧಿಕೃತವಾದ 'ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದಕ್ಕೆ ತಾವೇ ಅಧ್ಯಕ್ಷರಾಗಿದ್ದುಕೊಂಡು ಮಾರ್ಗದರ್ಶನ ಮಾಡಿದರು. ಅನೇಕ ಶ್ರೀಮಂತ ದಾನಿಗಳನ್ನು, ಉತ್ಸಾಹಿ ಯುವಕರನ್ನು, ಶಿಕ್ಷಣ ತಜ್ಞರನ್ನು ಮತ್ತು ಆಸಕ್ತಿಯುಳ್ಳವರನ್ನು ಆಕರ್ಷಿಸಿ ಕಟ್ಟಿದ ಆ ಸಂಸ್ಥೆಯ ಆಶ್ರಯದಲ್ಲಿ ತುಮಕೂರಿನಲ್ಲಿ ಅನೇಕ ಮಹತ್ವದ ಶಿಕ್ಷಣ ಸಂಸ್ಥೆಗಳು ಹುಟ್ಟಿ ಆ ನಗರದ ಇತಿಹಾಸದಲ್ಲೇ ಕಂಡರಿಯದ ಕ್ರಾಂತಿಗೆ ಕಾರಣರಾದರು. ಈ ಕ್ರಾಂತಿಯ ಪ್ರಥಮ ದರ್ಜೆಯ ಪ್ರೌಢ ಶಿಶುವೆಂದರೆ 'ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ' ಎಂಬುದು. ೧೯೬೩ರಲ್ಲಿ ಸ್ಥಾಪಿತವಾದ ಈ ಕಾಲೇಜು ನೂರಾರು ಎಕರೆ ವಿಸ್ತಾರವಾದ ಭೂಮಿಯಲ್ಲಿ ಕಾಲೇಜಿನ ಎಲ್ಲ ಅವಶ್ಯಕತೆಗಳಿಗೆ ಸಾಕಾಗುವಷ್ಟು ಕಟ್ಟಡಗಳಿಂದಲೂ ವಿದ್ಯಾರ್ಥಿನಿಲಯಗಳಿಂದಲೂ ಉತ್ತಮ ದರ್ಜೆಯ ಉಪಾಧ್ಯಾಯರಿಂದಲೂ ಭಾರತದ ಮತ್ತು ಪ್ರಪಂಚದ ಅನೇಕ ದೇಶಗಳ ಗಮನ ಸೆಳೆದಿದೆ. ನೂರಾರು ಜನ ಆಫ್ರಿಕಾ ಇರಾನ್ ಮೊದಲಾದ ವಿದೇಶೀಯರೂ ಇಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ತುಮಕೂರಿನ ಮಹತ್ವಕ್ಕೆ ಈ ಕಾಲೇಜು ಕೊಟ್ಟ ಕಾಣಿಕೆ ಅಮೂಲ್ಯ. ಇದಲ್ಲದೆ 'ಸಿದ್ಧಗಂಗಾ ಸೈನ್ಸ್ ಆರ್ಟ್ಸ್ ಕಾಮರ್ಸ್ ಕಾಲೇಜು. ಸಿದ್ಧಗಂಗಾ ಟೀಚರ್ಸ್ (ಬಿ.ಎಡ್) ಕಾಲೇಜು. ಸಿದ್ಧಗಂಗಾ ಸಂಜೆ ಆರ್ಟ್ಸ್ ಕಾಲೇಜು, ಸಿದ್ಧಗಂಗಾ ಉಪಾಧ್ಯಾಯ ತರಬೇತಿ ಕೇಂದ್ರ, ಪ್ರೈಮರಿ ನರ್ಸರಿ ಸ್ಕೂಲುಗಳು–ಶ್ರೀಗಳವರ ಶಿಕ್ಷಣ ಕ್ಷೇತ್ರದ ಮಹಾ ಕ್ರಾಂತಿಯ ಕುರುಹುಗಳಾಗಿ ತುಮಕೂರಿನಲ್ಲಿ ಬೆಳೆದು ನಿಂತಿವೆ : ಅಷ್ಟೇ ಅಲ್ಲ ಪ್ರಗತಿಯಲ್ಲಿ ಬಾನೆತ್ತರಕ್ಕೇರಿವೆ. ಶ್ರೀ ಕ್ಷೇತ್ರದ ಕೀರ್ತಿಯನ್ನೂ ಬೆಳಗಿಸಿವೆ.

**ಶ್ರೀಗಳವರ ಕಾಯಕ ಸದ್ಭಾವ ಮತ್ತು ದಿನಚರಿ :**

'ಕಾಯಕ' ಶಬ್ದದ ಅರ್ಥವ್ಯಾಪ್ತಿಯು ಶ್ರೀಗಳವರ ಜೀವನವನ್ನೆಲ್ಲ ವ್ಯಾಪಿಸಿ ನಿಂತಿರುವುದನ್ನು ಕಾಣುತ್ತೇವೆ. ನಿಮಿಷ ನಿಮಿಷಗಳೂ ಸತ್ಕಾರ್ಯಗಳಿಂದಲೇ ಮುಂದುವರಿಯುವ ಮನುಷ್ಯಜೀವನ ಅತ್ಯಂತ ಪವಿತ್ರತಮವಾಗುತ್ತದೆಂದೇ ಶ್ರೀಗಳವರು ಸದಾ ಹೇಳುವ ಮಂತ್ರಸದೃಶ ಬೋಧೆ. ಅದರಂತೆ ಅವರು ತಮ್ಮ ಜೀವನವನ್ನು ರೂಪಿಸಿಕೊಂಡುಬಿಟ್ಟಿದ್ದಾರೆ. 'ಕ್ರಿಯಾಂಗವಾದ ಈ ದೇಹ ಸತ್ಕರ್ಮಾಚರಣೆಗಳಿಂದ ಶುದ್ಧಿ ಪಡೆಯುತ್ತದೆ. ಕಾಯಕ ಯಾವುದಾದರೂ ಆಗಿರಬಹುದು. ಅವನವನ ಪಾಲಿಗೆ ಬಂದ ಬೀದಿಯನ್ನು ಗುಡಿಸುವ ಕೆಲಸವಾದರೂ ಆಯಿತು. ಆ ಕಾರ್ಯವನ್ನು ಸತ್ಯಶುದ್ಧ ಮನಸ್ಸಿನಿಂದ ಮಾಡಿ ಮುಗಿಸಬೇಕು. ಹಾಗೆ ಮಾಡಿದಾಗಲೇ ಈ ದೇಹ ಪಡೆದುದಕ್ಕೆ ಸಾರ್ಥಕವೆನ್ನುತ್ತಾರೆ. ಶ್ರದ್ಧೆಯಿಂದ ಸತತವೂ ಇಂಥ ಕರ್ತವ್ಯನಿರತನಾದ ಮನುಷ್ಯನಿಗೇ ದೇವನನ್ನು ಕಾಣುವ ಸಾಮರ್ಥ್ಯ ಬರುತ್ತದೆ. ಹಾಗಿಲ್ಲದೆ ಗೊತ್ತುಗುರಿಯಿಲ್ಲದ ಅಸತ್ಕರ್ಮಗಳ ಆಚರಣೆ, ಸೋಮಾರಿತನ, ಅಧರ್ಮದಲ್ಲಿ ಮಗ್ನನಾಗುವುದೇ ಮೊದಲಾದ ಕ್ರಿಯೆಗಳು ನಮ್ಮನ್ನು ದೇವರಿಂದ ಬಹುದೂರ

ಎಸೆಯುಬಿಡುತ್ತೇವೆ. ಆಗ ನಾವು ಜೀವನದಲ್ಲಿ ಯಾವ ಒಂದು ಸುಖವನ್ನೂ ಕಾಣದೆ ಪ್ರಾಣಿ ಸಹಜ ವರ್ತನೆಯಿಂದ ನರಕಸದೃಶ ಬಾಳಿನ ಘೋರ ಯಾತನೆಯಿಂದ ಬಳಲಬೇಕಾಗುತ್ತದೆ. ಈಶ್ವರದತ್ತವಾದ ಈ ಪ್ರಸಾದ ಕಾಯ ಧರಿಸಿಬಂದ ಇಹಲೋಕದ ಬಾಳಿನಿಂದಲೂ ದೂರ, ಪರಲೋಕದ ಮುಕ್ತಿಯಿಂದಲೂ ದೂರವಾಗಿಬಿಡುತ್ತೇವೆ.–ಈ ಮಾತುಗಳು ಶ್ರೀಗಳವರ ಅಮೃತ ವಾಣಿಗಳು. ಅಂತೆಯೇ ಅವರು ತಮ್ಮ ಜೀವನವನ್ನು ಬಹು ವ್ಯವಸ್ಥಾಬದ್ಧವಾದ ಕಾಯಕ ಜೀವನಕ್ಕೆ ಮೊದಲಿನಿಂದಲೂ ಅಳವಡಿಸಿಕೊಂಡು ತಮ್ಮ ಸಮಸ್ತ ಕ್ರಿಯೆಗಳಿಗೂ ಒಂದು ಮಹಾಶಕ್ತಿಯನ್ನೇ ತಂದುಕೊಂಡಿದ್ದಾರೆ. ಶಿವಶರಣರ ಕಾಯಕಧರ್ಮ ಅಥವಾ ಕಾಯಕಸೂತ್ರ ಒಂದು ಪ್ರಯೋಗಾತ್ಮಕನಿಲುವನ್ನು ತಳೆದಾಗ, ಅದರಿಂದವನು ಅದ್ಭುತ ಸಾಧಿಸಬಹುದು. ಅದರ ಶಕ್ತಿಯೆಷ್ಟು ಎಂಬುವರ ಸ್ಪಷ್ಟ ಅರಿವನ್ನು ಶ್ರೀ ಸಿದ್ಧಗಂಗಾ ಶ್ರೀಗಳವರ ಕಾಯಕದ ಜೀವನದಲ್ಲಿ ಕಾಣಲು ಶಕ್ಯವಿದೆ. 'ಕ್ರಿಯೆಯೆಂದರೇ ಅವರು ; ಅವರೇಕ್ರಿಯೆ'. ಅನ್ನುವಷ್ಟರಮಟ್ಟಿಗೆ ಅವರು ಕ್ರಿಯೆಗೆ ಹೊಂದಿಕೊಂಡುಬಿಟ್ಟಿದ್ದಾರೆ. ಅದೂ ಒಂದು ಯೋಗವೆಂದೇ ಅವರ ವ್ಯಾಖ್ಯೆ. ಗೀತೆಯಲ್ಲಿ ಹೇಳುವ 'ಯೋಗಃ ಕರ್ಮಸು ಕೌಶಲಂ' ಈ ಮಾತು ಶ್ರದ್ಧಾಭಕ್ತಿ ವಿಶ್ವಾಸಪೂರ್ಣ ಕಾಯಕವೆಂದೇ ಅವರ ತೀರ್ಮಾನ. ಎಷ್ಟೇ ದೈಹಿಕಾಲಸ್ಯವಾಗಿರಲಿ, ನಿದ್ರೆಗೆಟ್ಟಿರಲಿ ಅಂದಂದಿನ ಕೆಲಸಗಳನ್ನು ಬಿಟ್ಟು ವಿರಾಮ ಪಡೆಯುವುದು ತೀರಾ ಅಪರೂಪ. ಡಾಕ್ಟರರುಗಳು ವಿಶೇಷ ದೇಹಾಲಸ್ಯ ಸಂದರ್ಭದಲ್ಲಿ ಬಂದು, ಮಧ್ಯಾಹ್ನ ಸ್ವಲ್ಪ ಹೊತ್ತು ತಾವು ನಿದ್ರೆ ಮಾಡಿ ವಿರಾಮಪಡೆಯಲೇಬೇಕೆಂದು ಹೇಳಿ ಹೇಳಿ ಸುಸ್ತಾಗಿದ್ದಾರೆ. ಆದರೆ ಮಧ್ಯಾಹ್ನ ಮಲಗಿದುದನ್ನು ಯಾರೂ ಕಂಡಿಲ್ಲ. ಒಮ್ಮೊಮ್ಮೆ ತೀರಾ ಆಲಸ್ಯವಾದರೂ ಕ್ರಿಯೆಯಲ್ಲಿ ತೊಡಗಿ ಆ ಕ್ರಿಯೆ ಮಾಡುವ ಸ್ಥಳದಲ್ಲಿಯೇ ಕಣ್ಣುಮುಚ್ಚಿ ತೂಕಡಿಸಿದರೆ ಆಯಿತು ಅವರ ನಿದ್ರೆ. ಒಮ್ಮೊಮ್ಮೆ ಕಾಗದಕ್ಕೆ ಸಹಿ ಮಾಡುತ್ತ ಮೂರು ಸಲ ಕಣ್ಣು ಮುಚ್ಚಿ ತೂಕಡಿಸಿ ನಾಲ್ಕನೆಯ ಸಲಕ್ಕೆ ಸಹಿ ಮುಗಿಸಿದುದನ್ನು ಕಣ್ಣಾರೆ ಕಂಡಿದ್ದೇವೆ. ಅಂಥ ಸಮಯದಲ್ಲೂ ಮಲಗಲು ಹೋಗುವುದಿಲ್ಲ. ಅದಕ್ಕೆ ಕಾರಣ ಅಂದಂದಿನ ಕ್ರಿಯೆ ಕೆಡುತ್ತದೆಂದೇ ಅವರು ಎಷ್ಟೋ ಸಲ ಹೇಳಿದ್ದಾರೆ. ಅಂಥ ಸಮಯದಲ್ಲಿ ಕುಳಿತಲ್ಲಿಯೇ ಒಂದೆರಡು ನಿಮಿಷ ಕಣ್ಣು ಮುಚ್ಚಿ ತೆರೆದರೆ ಆಯಿತು, ಅವರ ನಿದ್ರೆಯ ಶಾಸ್ತ್ರ. ಲೋಕಜೀವನಕ್ಕೆ ಉಪಕಾರವಾಗುವ ಸಂಘ ಸಂಸ್ಥೆಗಳಿಂದ ಕಳೆದ ೫೦ ವರ್ಷಗಳ ಅವಧಿಯಲ್ಲಿ ಸಿದ್ಧಗಂಗಾ ಕ್ಷೇತ್ರವನ್ನು ಇಷ್ಟರಮಟ್ಟಿಗೆ ಅಣಿಗೊಳಿಸಿರುವುದರ ಗುಟ್ಟು ಅವರ ಸಮರ್ಥ ಕ್ರಿಯಾಯೋಗದ ಫಲವೇ ಆಗಿದೆ. ಜಂಗಮಧರ್ಮ ಸತ್ಯಶುದ್ಧವಾಗಿ ಕ್ರಿಯಾಮುಖಿಗೊಂಡಾಗ ಏನು ಅದ್ಭುತ ನಡೆದೀತೆಂಬುದರ ಒಂದು ಪ್ರಯೋಗಾತ್ಮಕ ನಿಲುವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದ ವ್ಯಾಪಕ ಸಂಘಸಂಸ್ಥೆಗಳಬಾಹುಳ್ಯ, ಸತ್ವ–ಮಟ್ಟ–ಶುಚಿ–ರುಚಿ–ಶುದ್ಧಿ–ಸಿದ್ಧಿಗಳಿಂದ ಅರಿಯಲು ಶಕ್ಯವಿದೆ. ಇಷ್ಟೆಲ್ಲವನ್ನು ಕಂಡಾಗ ಸಹೃದಯನಾದವನಿಗೆ ಇವರು ನಿಜವಾಗಿಯೂ ಯಾವುದೋ ಮಹಾಕಾರ್ಯಕ್ಕಾಗಿ ಈ ರೂಪದಲ್ಲಿ ನಮಗೆ ಕಾಣಿಸಿಕೊಳ್ಳುವ ಯೌಗಿಕ ಪುರುಷರೆಂಬುದನ್ನು ಮನವರಿಕೆ ಮಾಡಿಕೊಡುತ್ತದೆ. ಅವರ ಬೋಧೆಯಷ್ಟೇ ಅಲ್ಲ, ವರ್ತನೆಯೇ ಲೋಕಕ್ಕೊಂದು ದೊಡ್ಡ ಉಪದೇಶ. ಆದ್ದರಿಂದ ಲೋಕಲೌಕಿಕ ಅವರತ್ತ ಕೈಯೆತ್ತಿ ಮುಗಿದು, ಬಾಯ್ತುಂಬ ಹಾಡಿ, ಮೈತುಂಬ ನವಿರೇಳಿಸಿಕೊಳ್ಳುತ್ತದೆ. ಹಾಸನ, ಚಿಕ್ಕಮಗಳೂರು ಜಿಲ್ಲೆಯ ಪ್ರವಾಸಕ್ಕೆ ಹೋದರೆ ನೋಡಬೇಕು, ಅಲ್ಲಿಯ ಜನರ ಶ್ರದ್ಧಾಭಕ್ತಿವಿಶ್ವಾಸಗಳ ಪರಾಕಾಷ್ಠ ಭಾವವನ್ನು, ಯಾರಿಗೂ ಮಣಿಯದ ಅಲ್ಲಿನ ಕಾಫಿ ತೋಟಗಳ ಮಾಲೀಕರು ಮತ್ತು ಅವರ ಬಳದವರು ಶ್ರೀ ಶಿವಕುಮಾರ ಶಿವಯೋಗಿಗಳನ್ನು ಕಂಡರಾಯಿತು, ಭಕ್ತಿಯಿಂದ ಗಡಗಡ ನಡುಗುವುದನ್ನು ಕಾಣುತ್ತೇವೆ. ಶ್ರೀಗಳವರು ಈ ನಾಡಿಗೆ ದಯಮಾಡಿಸಿದಾಗ ಪ್ರತ್ಯಕ್ಷ ಈ ಸನ್ನಿವೇಶಗಳನ್ನು ಕಂಡ ನನಗೆ ಶ್ರೀಗಳವರು ತಮ್ಮ ಕ್ರಿಯಾಯೋಗದಿಂದ ಏರಿದ ಎತ್ತರವೇ ಇದೆಲ್ಲಕ್ಕೂ ಕಾರಣವೆಂಬ ಸಿದ್ಧಾಂತಕ್ಕೆ ಬಂದಿರುವವರಲ್ಲಿ ನಾನೂ ಒಬ್ಬ. ಶಿವಕುಮಾರ ಸ್ವಾಮಿಗಳು ಎಲ್ಲಿಗೇ ಹೋಗಲಿ ಜನ ಇವರ ತೇಜಸ್ಸಿನಿಂದ ಹುಚ್ಚೆದ್ದು ತಮ್ಮ ಭಕ್ತಿ ಪ್ರಣಾಮವನ್ನು ಸಲ್ಲಿಸುತ್ತಾರೆ. ಒಮ್ಮೆ ಕಲ್ಯಾಣದಿಂದ ನವಿಲುಗುಂದಕ್ಕೆ ಬಂದರು. ಅಲ್ಲಿಯ ಭಕ್ತನೊಬ್ಬ 'ಇವರಾರು ?' ಎಂದು ಒಬ್ಬರನ್ನು ಕೇಳಿದ 'ಇವರು ಸಿದ್ಧಗಂಗೆಯ ಸ್ವಾಮಿಗಳು' ಎಂದುದು ಕಿವಿಗೆ ಬಿದ್ದೊಡನೆ 'ಹುಚ್ಚೆದ್ದು ಅಯ್ಯೋ ! ಕಂಡೆ, ಕಂಡೆ! ಕಾಣಬಾರದ್ದನ್ನು ಕಂಡೆ' ಎಂದವನೇ ಕುಣಿದಾಡತೊಡಗಿದ ; ಓಡಿ ಬಂದು ಪಾದಗಳ ಮೇಲೆ ಬಿದ್ದು ಹೊರಳಾಡಿದ. ಇಂಥ ಪ್ರಸಂಗಗಳು ಸಾವಿರಾರು. ಇಷ್ಟೊಂದು ಲೋಕಪ್ರಿಯವಾಗಿರುವ ಸಾಮರ್ಥ್ಯವನ್ನು ಸಂಪಾದಿಸುವುದಕ್ಕೆ ನೆರವಾದ ಅವರ ಕಾಯಕದ ನಿಲುವೇನೆಂಬುದನ್ನು, ಶಿವಯೋಗದ ರಹಸ್ಯವೇನೆಂಬುದನ್ನು ನೋಡಬೇಕಾದರೆ ನಾವೂ ಬೆಳಗಿನ ೨–೩೦ಕ್ಕೆ ಏಳಬೇಕಾದೀತು; ಎದ್ದರೂ ಅರ್ಥಮಾಡಿಕೊಳ್ಳುವ ಅಂತರ್ದೃಷ್ಟಿಯನ್ನು ಹೊಂದಬೇಕಾದೀತು.

**ದಿನಚರಿ :**

ಶ್ರೀಗಳವರ ದಿನಚರಿ ಪ್ರಾರಂಭವಾಗುವುದು ರಾತ್ರಿ ಸುಮಾರು ೨ ಅಥವಾ ೨–೩೦ರಿಂದ[26]. ಎದ್ದೊಡನೆ ಹಳೆ

26. ಈ ಮಾತಿನ ಯಾಥಾರ್ಥ್ಯಕ್ಕೆ ಶ್ರೀಗಳವರು ಸ್ವಹಸ್ತದಿಂದ ಬರೆದಿಟ್ಟ ಡೈರಿಗಳನ್ನು ನೋಡಬಹುದು. ೧೯೫೧ ರಿಂದ ೧೯೭೪ರವರೆಗೆ ಶ್ರೀಗಳು ಯಾವ ಯಾವ ಕಾರ್ಯ ಮಾಡಿ ಮುಗಿಸಿದರೆಂಬುದನ್ನು ಒಂದು ಡೈರಿಯಲ್ಲಿ, ಇನ್ನೊಂದು ಡೈರಿಯಲ್ಲಿ ಅಂದಿನ ಮುಖ್ಯ ಕಾರ್ಯಗಳನ್ನು ಬರೆದಿದ್ದಾರೆ. ಇವುಗಳ ಪ್ರಕಾರ ಪ್ರತಿದಿನ ಅವರ ಕಾರ್ಯ ಪ್ರಾರಂಭವಾಗುವುದು ರಾತ್ರಿ ೨, ೨–೩೦, ೩ ಘಂಟೆಗಳಿಂದ ಎಂಬುದು ಕಂಡುಬಂದಿದೆ.

ಮಠದಲ್ಲಿ ಪ್ರಾತರ್ವಿಧಿ ಮುಗಿಸಿ ಸ್ನಾನ ಮಾಡಿ ಶಿವಪೂಜೆಗೆ ಕುಳಿತು ಮುಗಿಸುವುದು. ೫–೩೦ರ ವೇಳೆಗೆ: ಕೆಲವು ವೇಳೆ ೬ ಘಂಟೆಯ ವರೆಗೆ. ಅನಂತರ ಆಫೀಸಿಗೆ ಆ ಕೂಡಲೆ ಹೊರಡುವುದು. ದರ್ಶನಕ್ಕೆ ಅಥವಾ ಇನ್ಯಾವುದೇ ಕಾರ್ಯಕ್ಕೆ ಬಂದ ಜನಗಳ ಭೇಟಿ ಕಾರ್ಯಕ್ರಮ ಕೆಲವು ವೇಳೆ ಈ ಹೊತ್ತಿಗೇ ಪ್ರಾರಂಭವಾಗಿರುತ್ತದೆ. ಹಳೆ ಮಠದಲ್ಲಿ ಬಟ್ಟೆಬರೆ ಹಾಕುತ್ತಲೇ ಕೆಲವರೊಡನೆ ಮಾತನಾಡುವುದು. ಕೆಲವರೊಡನೆ ದಾರಿಯಲ್ಲೇ ಮಾತನಾಡುತ್ತ ಆಫೀಸಿನವರೆಗೆ ಬರುತ್ತಾರೆ. ಅಷ್ಟು ಹೊತ್ತಿಗೆ ಎಷ್ಟೋ ಜನಗಳ ಭೇಟಿಯ ಕಾರ್ಯವನ್ನು ಮುಗಿಸುತ್ತಾರೆ. ಆಫೀಸಿಗೆ ಬಂದೊಡನೆ ಪ್ರಥಮತಃ ಡೈರಿಯನ್ನು ತೆರೆದು ಅಂದಿನ ಕಾರ್ಯಗಳನ್ನು ತಿಳಿದುಕೊಳ್ಳುವುದು. ಆ ಮೇಲೆ ವಿವಿಧ ಫೈಲುಗಳನ್ನು ನೋಡುವುದು. ಇದಾಗುತ್ತಲೆ ಸುದ್ದಿ ಸಮಾಚಾರಗಳನ್ನು ಪತ್ರಿಕೆಗಳಲ್ಲಿ ನೋಡುವುದು. (ಪತ್ರಿಕೆ ಅಷ್ಟು ಹೊತ್ತಿಗೆ ಬಂದಿದ್ದರೆ). ಆ ಕೂಡಲೆ ದಿನದಿನವೂ ಹಿಂದಿನಿಂದ ಮಾಡುತ್ತ ಬಂದಿರುವ ಉಪಾಧ್ಯಾಯ ವೃತ್ತಿ. ಆಫೀಸ್ ಬಾಗಿಲಿನ ಮುಂದೆಯೋ ಅಥವಾ 'ಆಡಿಟೋರಿಯಂ'ನಲ್ಲಿಯೋ ಪಿ.ಯು.ಸಿ., ಎಸ್.ಎಸ್.ಎಲ್.ಸಿ. ಹುಡುಗರಿಗೆ ಇಂಗ್ಲೀಷ್ ಸಂಸ್ಕೃತ ಮೊದಲಾದ ಪಾಠ ಪ್ರವಚನಗಳನ್ನು ಮಾಡುತ್ತಾರೆ. ಸಂಸ್ಕೃತದಲ್ಲಿ ಕುಮಾರಸಂಭವ, ರಘುವಂಶ, ಮೇಘದೂತ. ಕಿರಾತಾರ್ಜುನೀಯಗಳೇ ಮೊದಲಾದ ಪ್ರೌಢ ಗ್ರಂಥಗಳ ಪಾಠ ಪ್ರವಚನಗಳು ಶ್ರೀಗಳವರಿಗೆ ಬಹು ಇಷ್ಟ. ವಿದ್ಯಾರ್ಥಿಗಳಂತೂ ಶ್ರೀಗಳವರ ಪಾಠಪ್ರವಚನಗಳೆಂದರೆ ಕುಣಿದಾಡುತ್ತಾರೆ. ಇದರಿಂದ ಇವರಿಗೆ ಉತ್ತಮ ಶಿಕ್ಷಕತನವೂ ಮೈಗೂಡಿ ಬಂದಿದೆಯೆಂಬುದರ ಅರಿವಾಗುತ್ತದೆ. ಶ್ರೀಗಳವರ ಪಾಠವನ್ನು ಯಾವ ವಿದ್ಯಾರ್ಥಿಯೂ ತಪ್ಪಿಸಿಕೊಳ್ಳುವುದಿಲ್ಲ. ಶ್ರೀಗಳವರ ಇಂಗ್ಲೀಷ್ ಪಾಠವಂತೂ ವಿದ್ಯಾರ್ಥಿಗಳಿಗೆ ರಸದೌತಣವಿದ್ದಂತೆ. ಈ ದೃಷ್ಟಿಯಿಂದ ಶ್ರೀಗಳವರು ಉತ್ತಮ ವರ್ಗದ ಉಪಾಧ್ಯಾಯರು. ೫೦ ವರ್ಷದಿಂದ ಕ್ಲುಪ್ತ ಕಾಲದಲ್ಲಿ ಈವೃತ್ತಿಯನ್ನು ನಡೆಸುತ್ತಲೇ ಬಂದಿದ್ದಾರೆ.

ಈ ಕಾರ್ಯ ಮುಗಿಸಿ ಪುನಃ ಆಫೀಸ್‌ಗೆ ಬಂದು, ಕಾಯ್ದು ಕುಳಿತ ಅಂದಂದಿನ ದರ್ಶನಕ್ಕೆ ಬಂದ ಜನಗಳಿಗೆ ಏನು ಏನು ಹೇಳಬೇಕೋ ಅದನ್ನು ಹೇಳಿ, ದಾಸೋಹದ ಮನೆಗೆ ಹೋಗುವುದು. ಅಲ್ಲಿ ಏನಾಗಿದೆ ? ಏನಾಗಬೇಕು ? ಎಲ್ಲದರ ಪರಿಶೀಲನೆ. ಅಡಿಗೆಯ ಮನೆಯನ್ನು ಹೊಕ್ಕು ಅಲ್ಲಿನ ಅಂದಂದಿನ ಸಮಸ್ಯೆಗಳ ಬಗೆಗೆ ಪರ್ಯಾಲೋಚನೆ. (ಅಡಿಗೆ ಬೇಗನೆ ಆಗದಿದ್ದರೆ ಚಡಪಡಿಸಿಬಿಡುತ್ತಾರೆ. ಸ್ವತಃ ತಾವೇ ಅಂಥ ಸಮಯದಲ್ಲಿ ಮುದ್ದೆ ತಿರುವಿದ, ಅನ್ನ ಬಸಿದ ಉದಾಹರಣೆಗಳೂ ಉಂಟು). ಅಷ್ಟು ಹೊತ್ತಿಗೆ ಟಪಾಲು ಬಂದಿರುತ್ತದೆ. ಅವುಗಳನ್ನೆಲ್ಲ ನೋಡುವುದು. ಇನ್ನಿತರ ಆಫೀಸಿನ ಶಾಲಾ ಕಾಲೇಜುಗಳ ಫೈಲುಗಳನ್ನು ನೋಡುವುದು, ಇತ್ಯಾದಿ ವಿವಿಧ ಕಾರ್ಯಗಳು. ಈ ಕಾರ್ಯಗಳನ್ನು ಮಾಡುತ್ತಲೇ ಮಧ್ಯಮಧ್ಯದಲ್ಲಿ ದರ್ಶನಾಶೀರ್ವಾದಕ್ಕೆ ಇನ್ನಿತರ ಕೆಲಸಕಾರ್ಯಗಳಿಗೆ ಬಂದಿರುವವರ ಯೋಗಕ್ಷೇಮ ವಿಚಾರ. ಅಷ್ಟು ಹೊತ್ತಿಗೆ ಕ್ಷೇತ್ರಕ್ಕೆ ಸ್ವಾಮಿಯ ಸೇವೆಗೆ ಗಂಗಾಪೂಜೆಗೆ ಬಂದ ಜನಗಳು ದಾಸೋಹ ಕಟ್ಟಡದ ಮುಂಭಾಗದಲ್ಲಿನ ಮಂಚದ ಸುತ್ತಮುತ್ತ ನೆರೆದಿರುತ್ತಾರೆ. ಮಂಗಳವಾರ, ಶುಕ್ರವಾರ, ಅಮಾವಾಸ್ಯೆ, ಹುಣ್ಣಿಮೆ ಇನ್ನಿತರ ಪರ್ವದಿನಗಳಲ್ಲಿ ಇವರ ಸಂಖ್ಯೆ ತೀರಾ ಹೆಚ್ಚಾಗಿರುತ್ತದೆ. ಉಳಿದ ಸಮಯಗಳಲ್ಲಿ ಸ್ವಲ್ಪ ಕಡಿಮೆ. ಜಾತ್ರೆಯ ಸಮಯದಲ್ಲಿಯಂತೂ ಹೇಳಬೇಕಾದುದೇನೂ ಇಲ್ಲ. ಇವರೆಲ್ಲ ಮಂಚದ ಸುತ್ತಮುತ್ತ ನೆರೆದಿರುವ ಸಮಯಕ್ಕೆ ಅಲ್ಲಿಗೆ ಹೋಗಿ ಮಂಚದ ಮೇಲೆ ಕೂಡುತ್ತಾರೆ. ಮಂಚದ ಮೇಲೆ ಕುಳಿತು ಯಂತ್ರಧಾರಣೆಯಅಪೇಕ್ಷೆಯಿಂದ ಬಂದವರಿಗೆ ಯಂತ್ರ ಧಾರಣೆಯ ಕಾರ್ಯ. ದುಃಖ ಸಂಕಟಗಳಿಂದ ಬಂದವರಿಗೆ. ಮಾನಸಿಕಕ್ಲೇಶಗಳಿಗೀಡಾದವರಿಗೆ ಸಾಂತ್ವನ ವಚನ ನೀಡುತ್ತಾರೆ. ಆಮೇಲೆ ಅವರೆಲ್ಲರನ್ನೂ ಪ್ರಸಾದಕ್ಕೆ ಕಳಿಸಿ, ಎಲ್ಲರೂ ಪ್ರಸಾದ ತೆಗೆದುಕೊಂಡು ಬಂದ ಮೇಲೆ ೨ ಅಥವಾ ೨–೩೦ ಘಂಟೆಗೆ ದಾಸೋಹ ಕ್ಷೇತ್ರದಲ್ಲಿ ತಮ್ಮ ಸ್ನಾನ ಶಿವಪೂಜೆ.ಲಘು ಪ್ರಸಾದ ಮುಗಿಸಿ, ೩ ಅಥವಾ ೩–೩೦ಕ್ಕೆ ಹೊರಗೆ ಬರುವುದು. ಅನಂತರ ಆಫೀಸಿಗೆ ಬಂದು ಟಪಾಲುಗಳಿಗೆಲ್ಲ ಸಹಿ ಮಾಡುವುದು, ಅವನ್ನು ರವಾನೆಗೊಳಿಸುವುದು. ಆಮೇಲೆ ಮಂಚದ ಮೇಲಿನ ಕೆಲಸ ಕಾರ್ಯಗಳು ಇನ್ನೂ ಉಳಿದಿದ್ದರೆ ಅವನ್ನು ಮಾಡುವುದು, ಇಲ್ಲವೆ ಮಠದ ಕಟ್ಟಡಗಳು, ಹೊಲಗದ್ದೆ ತೋಟಗಳ ವೀಕ್ಷಣೆ.

ಇಷ್ಟು ಹೊತ್ತಿಗಾಗಲೆ ಸಾಯಂಕಾಲ ೬ ಘಂಟೆಯಾಗುತ್ತದೆ. ಸಮಗ್ರ ವಿದ್ಯಾರ್ಥಿಗಳು ಸಾಮೂಹಿಕ ಪ್ರಾರ್ಥನೆಗೆ ಗುಲಾಬಿ ವರ್ಣದ ಸಮವಸ್ತ್ರಗಳನ್ನು ಹೊತ್ತು ಸಿದ್ಧವಾಗಿರುತ್ತಾರೆ. ಶ್ರೀಗಳವರು ಆಫೀಸ್ ಬಾಗಿಲದ ಮಂಚದ ಮೇಲೆ ಬಂದು ಕೂಡುತ್ತಲೇ ಗಗನ ಗಂಭೀರ ನಿನಾದದಿಂದ ಪ್ರಾರ್ಥನೆ ಕನ್ನಡ ಸಂಸ್ಕೃತ ಶ್ಲೋಕಗಳಿಂದ ಮೊದಲಾಗುತ್ತದೆ. ೧೫–೨೦ ನಿಮಿಷಗಳ ಪ್ರಾರ್ಥನೆಯಾದೊಡನೆ ಶ್ರೀಗಳವರು ಐದು ನಿಮಿಷದಿಂದ ಹತ್ತು ನಿಮಿಷಗಳವರೆಗೆ ಅವರನ್ನು ಕುರಿತು ಉಪದೇಶ ನೀಡುತ್ತಾರೆ. ಅನಂತರ ವಿದ್ಯಾರ್ಥಿಗಳೆಲ್ಲ ಪ್ರಸಾದಕ್ಕೆ ಹೋಗುತ್ತಾರೆ, ಅವರು ಪ್ರಸಾದಕ್ಕೆ ಹೋಗಿ ಕುಳಿತೊಡನೆ ಶ್ರೀಗಳವರು ಒಂದು ಸುತ್ತು ಆ ಮೂರು ಸಾವಿರ ಎಂಟುನೂರು ವಿದ್ಯಾರ್ಥಿಗಳ ಮಧ್ಯದಲ್ಲಿ ತಿರುಗಾಡಿ, ಅವರ ಪ್ರಸಾದ ಸ್ವೀಕಾರದ ತನಿಖೆ ಮಾಡಿ ಪುನಃ ಆಫೀಸಿಗೆ ಬರುತ್ತಾರೆ. ಒಂಬತ್ತು ಗಂಟೆಯವರೆಗೆ ಆಫೀಸ್‌ನಲ್ಲಿದ್ದು ಹಳೆ ಮಠಕ್ಕೆ ಬರುವುದು. ಅಷ್ಟರಲ್ಲಿ

ಹಳೆಯ ಮಠದಲ್ಲಿರುವ ವಿವಿಧ ಮಠಗಳ ಉತ್ತರಾಧಿಕಾರಿಗಳನ್ನು[27] ಬರಮಾಡಿ, ಅವರಿಂದ ಸಾಮೂಹಿಕವಾಗಿ ಗುರುಕರುಣ ತ್ರಿವಿಧಿಯೇ ಮೊದಲಾದ ಧರ್ಮಗ್ರಂಥಗಳ ಪಠಣಮಾಡಿಸಿ, ಸುಮಾರು ೯-೩೦ಕ್ಕೆ ತಮ್ಮ ಸ್ನಾನ ಶಿವಪೂಜಾಕಾರ್ಯಕ್ಕೆ ತೆರಳಿ ೧೧ ಘಂಟೆಯ ಸುಮಾರಿಗೆ ಶಿವಯೋಗ ನಿದ್ರಾಮುದ್ರೆ[28]. ಪುನಃ ರಾತ್ರಿ ೨-೦೦, ೨-೩೦ರ ವೇಳೆಗೆ ಯಥಾಪ್ರಕಾರ ದೈನಂದಿಕ ಕ್ರಿಯೆಯ ಪ್ರಾರಂಭ, ಪೂಜೆಯೂ ಅವರ ಒಂದು ಕಾಯಕ.

ಇಷ್ಟೆಲ್ಲಾ ಶ್ರೀಗಳವರ ದೈನಂದಿಕ ಕಾರ್ಯಕ್ರಮಗಳು ಅವರು ಮಠದಲ್ಲಿದ್ದಾಗ ಚಾಚೂ ತಪ್ಪದೆ ನಡೆದೇ ನಡೆಯುತ್ತವೆ. ಬೆಳಗಿನ ಬ್ರಾಹ್ಮೀಮುಹೂರ್ತದಲ್ಲಿ ಅವರು ಅವಿಚ್ಛಿನ್ನವಾಗಿ ಮೂರು ಘಂಟೆಗಳವರೆಗೆ ಮಾಡುವ ಪೂಜೆಯಲ್ಲಿ ಕಾಣುವ ಸುಖ ಅಪೂರ್ವವೆಂಬುದನ್ನು ಆ ಪೂಜೆ ಮಾಡಿ ಮುಗಿಸಿ ಹೊರಗೆ ಬಂದಾಗ ಮಹದಾನಂದಗೊಂಡವರಂತೆ ನೂತನೋತ್ಸಾಹ ಭರಿತರಂತೆ ಕಾಣುವ ಸ್ವರೂಪದಿಂದ ಊಹಿಸಬಹುದಾಗಿದೆ. ೭೨-೭೩ ವರ್ಷಗಳ ಈ ಉತ್ತರ ವಯಸ್ಸಿನಲ್ಲಿನ ಅವರ ಉತ್ಸಾಹವನ್ನು ನೋಡಿದರೆ ತಮ್ಮನ್ನು ತಾವು ಮೊದಲಿನಿಂದಲೂ ಹೇಗೆ ನಿಯಮನಿಷ್ಠೆಗಳಿಗೊಳಪಡಿಸಿಕೊಂಡು, ಇಷ್ಟೊಂದು ಕಾರ್ಯ ಗೌರವಗಳ ಮಧ್ಯದಲ್ಲಿಯೂ ಬತ್ತಿಹೋದ ಉತ್ಸಾಹ. ಇಂಗಿಹೋದ ಜ್ಞಾಪಕಶಕ್ತಿ, ಮಬ್ಬಾದ ದೃಷ್ಟಿ, ಮುಪ್ಪಿನ ದೇಹ ಧರ್ಮವನ್ನು ಗೆದ್ದು ಬಂದಿದ್ದಾರೆಂಬ ಬಗೆಗೆ ಆಶ್ಚರ್ಯಚಕಿತರಾಗಿ ಹೋಗುತ್ತೇವೆ. ಪ್ರಸಾದದ ಶಾಸ್ತ್ರಗಾಮಿತ್ವ ಎಂಥ ದೈಹಿಕ ಭಾಗ್ಯವನ್ನುಂಟುಮಾಡುತ್ತದೆಂಬುದನ್ನು ಪ್ರತ್ಯಕ್ಷ ನೋಡುತ್ತೇವೆ.

**ಲೋಕಕ್ಕಾಗಿ ಶ್ರೀಗಳವರು ಅತ್ತರೂ ತಮ್ಮ ಕಣ್ಣನ್ನು ಹಾಳುಮಾಡಿಕೊಂಡಿಲ್ಲ :**

ಶ್ರೀಗಳರು ಲೋಕ ಜೀವನದ ಸೌಂದರ್ಯಕ್ಕೆ, ಉತ್ಕರ್ಷಕ್ಕೆ ಅವಿಶ್ರಾಂತವಾಗಿ ಲೌಕಿಕರ ರೀತಿಯಲ್ಲಿ ಶ್ರಮಿಸಿದ್ದರೂ, ಅದಕ್ಕಾಗಿ ಅತ್ತರೂ, ಅತ್ತು ಅತ್ತು ತಮ್ಮ ಕಣ್ಣನ್ನು ಹಾಳುಮಾಡಿಕೊಂಡಿಲ್ಲ. ತಮ್ಮ ಸಮಯಾಚಾರ ನಿಷ್ಠೆಯಲ್ಲಿ ನಿಷ್ಕಾಪಟ್ಯವಾಗಿ ಕ್ರಮವಾಗಿ ಪೂಜಾದಿ ತಪೋವ್ಯವಹಾರವನ್ನು ಆಚರಿಸುತ್ತ ಬಂದಿದ್ದಾರೆ. ಎಲ್ಲ ಬಗೆಯ ತಪಸ್ಸಿಗೆ ಆಚಾರವೇ ಮೂಲವೆಂಬುದು ಇವರು ನಂಬಿರುವ ಸೂತ್ರ. ಅವರ ತ್ರಿಕಾಲಪೂಜೆ ಎಂಥ ಸಮಯದಲ್ಲೂ ನಿರ್ವಿಘ್ನವಾಗಿ ನಡೆದು ಬಂದಿದೆ. ಲೌಕಿಕ ವ್ಯವಹಾರಗಳ ಒತ್ತಡ ಹೆಚ್ಚಾಗುತ್ತ ಬಂದಂತೆ ಅವರು ತಮ್ಮ ನಿದ್ರೆಯನ್ನೇ ಮೊಟಕು ಮಾಡಿ ಪೂಜೆ ಮಾಡಿದ್ದಾರೆ. ಅಂತೆಯೇ ರಾತ್ರಿಯ ೨ ಅಥವಾ ೨-೩೦ಕ್ಕೆ ತಪ್ಪದೇ ಎದ್ದು ತಮ್ಮ ಆತ್ಮಧರ್ಮ ಅಥವಾ ಸಮಯನಿಷ್ಠೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಸಮಯನಿಷ್ಠೆಯ ಶಾಸ್ತ್ರೀಯ ಆಚರಣೆಯಿಂದಾಗಿ ತಮ್ಮ ತನುಕರಣಾದಿಗಳನ್ನು ಶುದ್ಧೀಕರಿಸಿಕೊಂಡಿದ್ದಾರೆ. ವೀರಶೈವಪರಿಭಾಷೆಯಲ್ಲಿ ಲಿಂಗಗುಣಗಳನ್ನಾಗಿ, ಉದಾತ್ತೀಕರಿಸಿಕೊಂಡಿದ್ದಾರೆ. ಒಂದು ದೃಷ್ಟಿಯಿಂದ ಲಿಂಗ ತಪಸ್ಸಿನ ಫಲವಾಗಿ ಅವರ ಕ್ರಿಯೆಗಳೆಲ್ಲ ಲಿಂಗಪೂಜೆಗಳೇ ಆಗಿವೆ. ನಡೆ, ನುಡಿ, ನೋಟ, ಮಾಟಗಳೆಲ್ಲ ಲಿಂಗಕಳೆಯಿಂದ ಕೂಡಿವೆ. ಅಂತೆಯೇ ಲೋಕ ಅವರ ಸಮಗ್ರ ಕ್ರಿಯೆಯಲ್ಲಿ ತನ್ನ ಅಖಿಲುಸೇವೆಯನ್ನು ಸಮರಸಗೊಳಿಸಿದೆ. ಈ ಸಮರಸವೇ ಸಿದ್ಧಗಂಗಾ ಕ್ಷೇತ್ರದ ಬೆಳವಣಿಗೆಯ ಗುಟ್ಟು. ಆದ್ದರಿಂದಲೇ ಈ ಹಿಂದೆ ಲೋಕಕ್ಕೆ ಅವರ ವರ್ತನೆಯೇ ಒಂದು ದೊಡ್ಡ ಉಪದೇಶವೆಂದು ವಿವರಿಸಲಾಗಿದೆ. ಆ ಉಪದೇಶದ ಫಲವನ್ನು ಸಮಸ್ತ ಕೋಮಿನವರೂ ಯಥಾಶಕ್ತಿ ಅನುಸರಿಸಿ ಸುಖಿಸಿರುವುದು ಕಂಡು ಬರುವುದು.

ಅವರ ಪ್ರಸಾದ ಸೇವನೆಯಂತೂ ತುಂಬಾ ಶಾಸ್ತ್ರಗಾಮಿತ್ವದ್ದು. ಹುಣಿಸೆಯಹುಳಿ. ಕಾರ, ಎಣ್ಣೆ, ಮಸಾಲೆಯ ಪದಾರ್ಥಗಳನ್ನು ಮುಟ್ಟಿದ್ದೇ ಇಲ್ಲ. ಒಗ್ಗರಣೆ ಹಾಕಿದ ಪದಾರ್ಥಗಳನ್ನು ಸ್ವೀಕರಿಸುವುದು ತೀರಾಅಪರೂಪ. ಒಗ್ಗರಣೆ ಪದಾರ್ಥಗಳ ಸುಳಿವು ಅವರ ದಿನದಿನದ ಪ್ರಸಾದ ಪರಿಕರಗಳಲ್ಲಿ ಇರುವಂತೆಯೇ ಇಲ್ಲ. ಬೆಳಿಗ್ಗೆ ಹೆಸರು ಬೇಳೆಯನ್ನು ಸ್ವಲ್ಪ ಸೈಂಧಲವಣ ಜೀರಿಗೆಪುಡಿ ಹಾಕಿ ಕುದಿಸಿದರಾಯಿತು: ಅದೇ ಅವರ ಸಾರು ಪಲ್ಯ ಎಲ್ಲಾ ಬಸಿರಿ. ಅದರ ಜೊತೆಗೆ ಕಾರ, ಉಪ್ಪು ಹಾಕದೇ ಇರುವ ತೆಂಗಿನಕಾಯಿಯ ಚಟ್ನಿ ಇದ್ದರಾಯಿತು : ಇಲ್ಲದಿದ್ದರೆ ಇಲ್ಲ. ಈ ವ್ಯಂಜಕ ಪದಾರ್ಥಗಳ ಜೊತೆಗೆ ಒಂದು ಎರಡು ಚಿಕ್ಕಚಿಕ್ಕ ಇಡ್ಡಲಿ. ಅಥವಾ ಎರಡು ಅಕ್ಕಿಯ ರೊಟ್ಟಿ ಸ್ವೀಕರಿಸಿದರೆ ಆಯಿತು, ಅವರ ಪ್ರಸಾದ ಸ್ವೀಕಾರದ ಸಡಗರ;

27. ಕನ್ನಡ ನಾಡಿನ ಅನೇಕ ಮಠಾಧಿಪತಿಗಳು ತಮ್ಮ ಉತ್ತರಾಧಿಕಾರಿಗಳನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ವಿದ್ಯಾಭ್ಯಾಸ ಮತ್ತು ಆಚಾರವಿಚಾರ ಧಾರ್ಮಿಕವಿಧಿವಿಧಾನಗಳ ಅಭ್ಯಾಸಕ್ಕೆಂದು ಕಳಿಸುತ್ತಾರೆ. ಅವರೆಲ್ಲ ಹಳೆಯ ಮಠದಲಿದ್ದು ಶ್ರೀಗಳವರ ನೇರ ಸೇವೆಯಲ್ಲಿ ತೊಡಗಿರುತ್ತಾರೆ. ಅವರಿಗೆ ಅನೇಕ ವಿಧದಲ್ಲಿ ಶ್ರೀಗಳವರು ಧರ್ಮಬೋಧೆ ಮಾಡುತ್ತಾರೆ. ಅವರಶೀಲ, ಧರ್ಮಪ್ರಜ್ಞೆ. ಆಚಾರವಿಚಾರ ಸಂಹಿತೆಯ ಬಗೆಗೆ ಅನೇಕ ವಿಧದಲ್ಲಿ ತರಬೇತಿಗೊಳಿಸಿ, ಕಳಿಸಿಕೊಡುತ್ತಾರೆ. ಈ ದೃಷ್ಟಿಯಿಂದ ಶ್ರೀ ಸಿದ್ಧಗಂಗಾ ಕ್ಷೇತ್ರವೂ ಒಂದು 'ಶಿವಯೋಗಿಗಳ ಮಂದಿರ'ವೇ ಆಗಿದೆ ಎಂಬುದನ್ನು ಗಮನಿಸಬಹುದು. ಕೊಳ್ಳೇಗಾಲದಿಂದ ಹಿಡಿದು ಸೊಲ್ಲಾಪುರದವರೆಗಿನ ಅನೇಕ ಮಠಗಳ ಪಟ್ಟಗಳನ್ನು ಶ್ರೀ ಮಠದಲ್ಲಿ ಕಾಣಬಹುದು. ತಮಿಳು. ಆಂಧ್ರನಾಡಿನ ಅನೇಕ ಸ್ವಾಮಿಗಳೂ ಇಲ್ಲಿ ಶಿಕ್ಷಣ ಪಡೆದಿದ್ದಾರೆ.

28. ರಾತ್ರಿಯ ಪೂಜಾಕಾರ್ಯವನ್ನು ಎಂಥ ಸಂದರ್ಭದಲ್ಲೂ ಶ್ರೀಗಳವರು ಬಿಡುವುದಿಲ್ಲ. ದೀರ್ಘ ಪ್ರವಾಸದ ಫಲವಾಗಿಯೋ ಇನ್ನಾವ ಕಾರಣದಿಂದಲೋ ಜ್ವರ ಇತ್ಯಾದಿ ದೈಹಿಕ ಅಲಸ್ಯವಾದಾಗೂ ಸ್ನಾನ ಮಾಡುವುದನ್ನು ನಿಲ್ಲಿಸುವುದಿಲ್ಲ. ಆದರೆ ೧೦-೩೦ ಕ್ಕೂ ಸಮಯ ಹೆಚ್ಚಾದರೆ ಮಾತ್ರ ಸ್ನಾನ ಮಾಡದೆ ಹಾಗೇ ಪವಡಿಸಿ, ಪುನಃ ರಾತ್ರಿ ೨-೩೦ ಘಂಟೆಗೆ ಪೂಜೆಗೆ ಪ್ರಾರಂಭಿಸುತ್ತಾರೆ.

ಹಾಲು ಅರ್ಧ ಕಪ್ಪುಮಾತ್ರ[29]. ಕೊಬ್ಬನ್ನುಂಟುಮಾಡುವ ಯಾವ ಪದಾರ್ಥಗಳನ್ನೂ ಸ್ವೀಕರಿಸಲು ಒಪ್ಪುವುದಿಲ್ಲ. ಒಂದೆರಡು ಸೌಟು ತುಪ್ಪವನ್ನು ಮಾತ್ರ ಸ್ವೀಕರಿಸುತ್ತಾರೆ ಮಾತ್ರ. ಮಧ್ಯಾಹ್ನ ಸ್ವಲ್ಪ ಮುದ್ದೆ ಯಥಾಪ್ರಕಾರ ಹೆಸರು ಅಥವಾ ತೊಗರಿ ಬೇಳೆಯ ಸಾರು, ಒಂದು ಗಿಂಡಿ (ಕಪ್ಪು) ಯಷ್ಟು ಮಜ್ಜಿಗೆ ಆದರೆ ಅವರ ಪ್ರಸಾದ ವೈಭವ ಮುಗಿಯಿತು. ರಾತ್ರಿಯಾದರೋ ಅನ್ನವೂ ಇಲ್ಲ, ಮುದ್ದೆಯೂ ಇಲ್ಲ. ಒಂದು ಅಥವಾ ಎರಡು ರೊಟ್ಟಿ ಅಥವಾ ಈರುಳ್ಳಿ, ಎಣ್ಣೆ, ಕಾರವಿಲ್ಲದ ಒಂದು ಹಿಡಿಯಷ್ಟು ಉಪ್ಪಿಟ್ಟು ಇಷ್ಟಾದರೆ ಆಯಿತು. ನಾಲಿಗೆಯ ರುಚಿಗಾಗಿ ಪ್ರಸಾದವಲ್ಲ; ದೇಹಧರ್ಮವನ್ನು ಪ್ರಸನ್ನತೆಯಲ್ಲಿಡುವುದಕ್ಕೆ ಪ್ರಸಾದ ಎಂಬುದು ಶ್ರೀಗಳವರ ಪ್ರಸಾದ ಸ್ವೀಕಾರ ಸೂತ್ರ. ಅಜೀರ್ಣಾದಿ ಆಹಾರದೋಷಗಳು ಶ್ರೀಗಳವರ ದೀರ್ಘಾಯುಷ್ಯದ ಈ ಅವಧಿಯಲ್ಲಿ ಒಮ್ಮೆಯೂ ಇಣಿಕಿಹಾಕಿಲ್ಲವಂತೆ. ಈ ಪ್ರಸಾದಧರ್ಮದ ಬಗ್ಗೆ ಶ್ರೀಗಳವರು ಒಮ್ಮೆ ಅಪ್ಪಣೆ ಕೊಡಿಸಿದುದು ಹೀಗೆ :

> "ಈ ದೇಹವು ಈಶ್ವರನ ಪ್ರಸಾದಕಾಯ, ಅದನ್ನು ಕೆಡಿಸಬಾರದು, ಅನಾರೋಗ್ಯಗೊಳಿಸಿಕೊಳ್ಳಬಾರದು. ವೃದ್ಧಾಪ್ಯದಲ್ಲಿ ಶೈಥಿಲ್ಯಗೊಳ್ಳುವುದು ದೇಹಧರ್ಮ, ಅದರ ಬಗೆಗೆ ಯತ್ನವಿಲ್ಲ. ಅಕಾಲದಲ್ಲಿ ಅದು ಕರ್ತವ್ಯ ಕರ್ಮಗಳನ್ನು ಮಾಡುವ ಪಟುತ್ವ ಕಳೆದುಕೊಳ್ಳಬಾರದು; ಪಟುವಾಗಿರಬೇಕು. ರೋಗಾದಿಗಳಿಗೆ ತುತ್ತಾಗದ ಹಾಗೆ ನೋಡಿಕೊಳ್ಳುವುದೂ ಒಂದು ಪೂಜೆಯೇ. ಅಕಾಲದಲ್ಲಿ ರೋಗಾದಿಗಳಿಗೆ ತುತ್ತಾದರೆ ನಾವು ಶಿವನ ಯಾವುದೋ ಕಟ್ಟಳೆಯನ್ನು ಮಿಕ್ಕಿದ್ದೇವೆ ಎಂದು ಅರ್ಥ ; ದೇಹಕ್ಕೆ ಬೇಕಾಗುವ ಪ್ರಸಾದವನ್ನು ಅದಕ್ಕೊದಗಿಸಿ ಪ್ರಸಾದದಿಂದ ಪ್ರಸನ್ನ ಪರಿಣಾಮಿ ಎನಿಸಿಕೊಳ್ಳಬೇಕು. ನಾಲಗೆಯ ಚಾಪಲ್ಯಕ್ಕೆ ಪ್ರಸಾದವಲ್ಲ. ಹಾಗಾಗಿದ್ದರೆ ಅದು ಪ್ರಸಾದ ಎಂಬ ಹೆಸರನ್ನೆ ಪಡೆಯುತ್ತಿರಲಿಲ್ಲ. ದೇಹ ಮನಬುದ್ಧಿಗಳಿಗೆ ಪ್ರಸನ್ನ ಪರಿಣಾಮದ ಮೂಲಕ ಮಹಾಲಿಂಗಕ್ಕೆ ತೃಪ್ತಿ ಕೊಡಬೇಕು. ನಾಲಗೆಯ ಚಾಪಲ್ಯಕ್ಕೆ ಕಟ್ಟುಬಿದ್ದು ಹೆಚ್ಚಾಗಿ ಬೇಕುಬೇಕಾದ ಪ್ರಸಾದ ಸ್ವೀಕರಿಸಿ, ಇನ್ನೊಂದಂಗಕ್ಕೆ ತೊಂದರೆಕೊಟ್ಟು ಪ್ರಸಾದವನ್ನು ವಿಷವನ್ನಾಗಿಸಿ ಪ್ರಸಾದ ಕಾಯವನ್ನು ಕೆಡಿಸಬಾರದು. ಅದರಿಂದ ಕ್ರಿಯೆಗೆ ಭಂಗಬಂದು ಶರಣತತ್ತ್ವವನ್ನು ಪಾಲಿಸಿದಂತಾಗುವುದಿಲ್ಲ'

–ಎನ್ನುತ್ತಾರೆ. ಈ ಎಲ್ಲ ಉದ್ದೇಶಗಳನ್ನು ಲಕ್ಷ್ಯದಲ್ಲಿಟ್ಟು ಪ್ರಸಾದ ಸ್ವೀಕರಿಸುವ ಶ್ರೀಗಳವರ ಪ್ರಸಾದಕ್ರಿಯೆ ಅನಾದೃಶವಾದುದು ; ಶಾಸ್ತ್ರಗಾಮಿತ್ವದ್ದು.

**ಯಂತ್ರಧಾರಣೆ :**

ಇನ್ನು ಯಂತ್ರಧಾರಣೆಯ ವಿಚಾರದಲ್ಲಿ ಒಂದೆರಡು ಮಾತುಗಳ ಅವಶ್ಯಕತೆ ಇದೆ. ಯಂತ್ರಧಾರಣೆ ಶ್ರೀ ಕ್ಷೇತ್ರದ ಒಂದು ಕಾಯಕ. ಉದ್ದಾನಶಿವಯೋಗಿಗಳವರ ಕಾಲದಿಂದಲೂ ಅಷ್ಟೇ ಏಕೆ ಅಡವಿಸ್ವಾಮಿಗಳವರ ಕಾಲದಿಂದಲೂ ನಡೆದು ಬಂದ ಮಠದ ಸಂಪ್ರದಾಯದ ಒಂದು ಅವಿಭಾಜ್ಯಅಂಗ. ಈ ವಿಚಾರದಲ್ಲಿ ವೈಜ್ಞಾನಿಕವಾಗಿ ವಿಚಾರಮಾಡಿಯೋ ಅಥವಾ ಇನ್ನಾವ ತರ್ಕಬುದ್ಧಿಗೆ ಕಟ್ಟುಬಿದ್ದೋ ಅಲ್ಲಗಳೆಯುವರೂ ಇದ್ದಾರೆ. ಸಿದ್ಧಗಂಗಾ ಶ್ರೀಗಳವರೂ ಕೂಡ ವೈಜ್ಞಾನಿಕ ವಿಚಾರಗಳಸತ್ಯಕ್ಕೂ ಸಂಪ್ರದಾಯಗಳಲ್ಲಿರುವ ನಿಗೂಢ ಸತ್ಯಕ್ಕೂ ಸೇತುಪ್ರಾಯರು. ಅವರು ಹಳೆಯದೆಲ್ಲ ಸುಳ್ಳೆಂದೂ, ಹೊಸದೆಲ್ಲ ಸತ್ಯವೆಂದೂ ಒಮ್ಮೆಲೇ ಒಪ್ಪಿ ಹಳೆಯದನ್ನು ತಳ್ಳಿಹಾಕುವುದಿಲ್ಲ. ಅಂತಃಕರಣ ಶುದ್ಧಿಯಿಂದ ಮಾಡುವ ಅನೇಕ ಕ್ರಿಯೆಗಳು ಫಲಪ್ರದವಾಗುತ್ತವೆ, ಎಂಬ ವಿಚಾರದಲ್ಲಿ ನಂಬಿಕೆಯುಳ್ಳವರು. ಶುದ್ಧಾಂತಃಕರಣದಿಂದ ಮಾಡುವ ಅನೇಕ ಕ್ರಿಯೆಗಳು ಶಿವನನ್ನು ಮುಟ್ಟುತ್ತವೆ. ಆಗ ಶಿವನು ಅನುಗ್ರಹಿಸುತ್ತಾನೆ, ಎಂದೇ ಅವರ ನಂಬುಗೆ. ಪ್ರತ್ಯಕ್ಷವೇ ಪ್ರಮಾಣವೆಂದು ಶ್ರೀಗಳವರು ನಂಬುವುದಿಲ್ಲ. ಕಣ್ಣಿಗೆ ಕಾಣದಿರುವುದು ವಿಶ್ವದಲ್ಲಿ ಬಹಳ ಇದೆ, ಎನ್ನುತ್ತಾರೆ. ಅದು ಅನುಭವಕ್ಕೆ, ಹೃದಯಕ್ಕೆ ಗೋಚರಿಸುತ್ತದೆ ಎನ್ನುತ್ತಾರೆ, ಇದೇನೇ ಇರಲಿ ಯಂತ್ರಧಾರಣೆಯ ವಿಚಾರದಲ್ಲಿ ಶ್ರೀಗಳವರಿಗೂ ನಂಬಿಕೆ. ಜನಕ್ಕೂ ತೃಪ್ತಿ. ಬೇರೆ ರೀತಿಯಲ್ಲಿ ಯೋಚಿಸುವ ಯೋಚನೆ ಪ್ರಕೃತ ಅನಗತ್ಯ.

---

29. ಕೇವಲ ಹಾಲನ್ನೇ ಸ್ವೀಕಾರ ಮಾಡುವುದು ತೀರಾ ಕಡಿಮೆ. ಅವರು ಎಂದಿನಿಂದಲೋ ಬೇವಿನ ಚಕ್ಕೆಯನ್ನು ಕುದಿಸಿ ಹಾಲಿನಲ್ಲಿ ಸ್ವಲ್ಪ ಸಕ್ಕರೆ ಬೆರೆಸಿ ಸ್ವೀಕರಿಸುತ್ತ ಬಂದಿದ್ದಾರೆ. ಇದರ ಪರಿಚಯ ನನಗೆ ೧೯೪೫ನೆಯ ಇಸ್ವಿಯಿಂದಲೂ ಇದೆ. ಆಗೊಮ್ಮೆ ಅಡಿಗೆಯ ಓರ್ವ ಮಿತ್ರ ಉಳಿದಸ್ವಲ್ಪ ಕಷಾಯ ತೋರಿಸಿ 'ಕುಡಿಯುತ್ತೀರಾ' ಎಂದ. ನಾನು ಸಂತೋಷದಿಂದ 'ಆಗಲಿ' ಎಂದು ಕುಡಿದು ಮುಖ ಕೆಡಿಸಿಕೊಂಡೆ. ನಾನು ಅದನ್ನು ಇದೊಂದು ರೀತಿಯ ಖೀರೋಏನೋ ಎಂದು ತಿಳಿದುಕೊಂಡದ್ದೇ ಹೀಗಾಗಲು ಕಾರಣ. ಆ ಕಾಲದಲ್ಲಿ ಅತ್ಯಂತ ಕಟುವಾದ ಬೇವಿನ ಚಕ್ಕೆಯ ರಸವನ್ನು ಹಾಲಿನಲ್ಲಿ ಹಾಕಿ ಕುಡಿಯುತ್ತಿದ್ದರು. ಹಾಲು ಗುಲಾಬಿ ವರ್ಣವಾಗುವಷ್ಟು ಬೇವಿನ ಚಕ್ಕೆಯ ಕಷಾಯವಿರುತ್ತಿತ್ತು. ಈಗ ಅಷ್ಟೊಂದು ಕಟುವಾಗಿ ಈ ಕಷಾಯವಿರುವುದಿಲ್ಲ. ಈ ಎಲ್ಲ ವಿಷಯಗಳು ನನ್ನ ಪ್ರತ್ಯಕ್ಷ ಅನುಭವಕ್ಕೆ ಬಂದವುಗಳಾದ್ದರಿಂದ ಈ ಪ್ರಾತ್ಯಕ್ಷಿಕೆಯನ್ನು ಚಾಚೂ ತಪ್ಪದೆ ಲೋಕದ ಮುಂದೆ ಇಡಬೇಕೆಂದರಿತು ವಿವರಿಸುತ್ತಿದ್ದೇನೆ. ಮಹಾಚೇತಸ್ಸಂಪನ್ನರು ಎಲ್ಲ ವಿಷಯದಲ್ಲೂ ಲೋಕ ಜೀವನದಿಂದ ಹೇಗೆ ಭಿನ್ನ ರೀತಿಯಲ್ಲಿ ವರ್ತಿಸುತ್ತಾರೆಂಬುದಕ್ಕೆ ಇಂಥ ನಡೆನುಡಿಗಳು ನಿದರ್ಶನಗಳು.

**ಶ್ರೀಗಳವರ ಕಾಯಕನಿಷ್ಠೆಗೆ ಎಲ್ಲರೂ ಕಂಡರಿತ ಒಂದೆರಡು ನಿದರ್ಶನಗಳು :**

ಸಿದ್ಧಗಂಗಾ ಸಂಸ್ಥೆ ಒಂದು ವ್ಯಕ್ತಿಯ ಒಂದು ಗುಂಪಿನ ಸುಖಕ್ಕಾಗಿ, ಸಂಸ್ಕಾರಕ್ಕಾಗಿ ಬೆಳೆದುಬಂದ ಸಂಸ್ಥೆಯಾಗಲೀ ಬೆಳೆಯುತ್ತಿರುವ ಸಂಸ್ಥೆಯಾಗಲೀ ಅಲ್ಲ. ಸರ್ವಜನ ಹಿತಕ್ಕಾಗಿ ಸರ್ವಜನದ ಸಹಕಾರವನ್ನು ಪಡೆದು ಸರ್ವರಿಗೆ ಸರ್ವಪ್ರ ವಿನಿಯೋಗವಾಗಬೇಕೆಂದು ಹುಟ್ಟಿಬೆಳೆದ ಸಂಸ್ಥೆ. ಈ ಸಂಸ್ಥೆಯನ್ನು ಕಟ್ಟಲು ಶ್ರೀಗಳು ಕಲ್ಲುಹೊತ್ತಿದ್ದಾರೆ. ಇಲ್ಲಿನ ಕಟ್ಟಡಗಳ ನಿರ್ಮಾಣ ಕಾಲದಲ್ಲಿ ಶ್ರೀಗಳು ವಿದ್ಯಾರ್ಥಿಗಳೊಡನೆ ತಾವೂ ಶ್ರಮವಹಿಸಿ ಕೆಲಸ ಮಾಡಿದುದನ್ನು ಎಲ್ಲರೂ ನೋಡಿದ್ದಾರೆ. ವಿದ್ಯಾರ್ಥಿಗಳ ಸಮೂಹದಲ್ಲಿ ಪ್ರೀತಿಯಿಂದ ಕೆಲಸ ಮಾಡುವುದೆಂದರೆ ಶ್ರೀಗಳವರಿಗೆ ತುಂಬ ಇಷ್ಟ. ಇದನ್ನು ಕಂಡ ವಿದ್ಯಾರ್ಥಿಗಳ ಉತ್ಸಾಹ ನೂರ್ಮಡಿ. ಈ ಕ್ರಿಯೆಯ ಹಿನ್ನಲೆಯಲ್ಲಿ ವಿದ್ಯಾರ್ಥಿಗಳಿಗೆ ಸಂಘಶಕ್ತಿಯಲ್ಲಿನ ಅಪಾರಯಶಸ್ಸು, ಶ್ರಮಜೀವನದ ಅಭ್ಯಾಸ, ಸತತೋದ್ಯೋಗದ ಅಭ್ಯಾಸವೂ ಪರೋಕ್ಷವಾಗಿಯೇ ಆಗುತ್ತದೆಂಬುದನ್ನು ವಿವರಿಸುವ ಅಗತ್ಯವೇನಿದೆ ? ರಾಗಿಯ ಕಣದಲ್ಲಿ ಶ್ರೀಗಳವರು ಎಷ್ಟು ದಿನ ಕೆಲಸ ಮಾಡಿಲ್ಲ ? ಇದನ್ನು ನೋಡದವರಾರಿದ್ದಾರೆ. ಇದನ್ನು ವಿವರಿಸುವುದರ ಉದ್ದೇಶವಿಷ್ಟೆ : ಸಂನ್ಯಾಸಿಯು ಕ್ರಿಯಾಮುಖನಾದಾಗ ಅದ್ಭುತ ಪವಾಡವೇ ನಡೆದುಹೋಗುತ್ತದೆ, ಎಂಬುದು. ಕೆಲಸದಲ್ಲಿಮಗ್ನರಾದಾಗ ವಿದ್ಯಾರ್ಥಿಗಳನ್ನು ಕಿರುಹಾಸ್ಯದಿಂದ ನಕ್ಕು ನಗಿಸುವುದೂ ಶ್ರೀಗಳವರ ಒಂದು ಗುಟ್ಟು. ಬಾಲ್ಯದಿಂದಲೂ ಶ್ರೀಗಳು ಲಘುಹಾಸ್ಯ ಪ್ರಿಯರಾಗಿಯೇ ಬೆಳೆದು ಬಂದವರು. ತಿಳಿಹಾಸ್ಯದಿಂದ ಆಗಾಗ ತಾವೂ ನಕ್ಕು, ಇನ್ನೊಬ್ಬರನ್ನೂ ನಗಿಸುವ ಪ್ರಸಂಗಗಳನ್ನು ಈಗಲೂ ಆಗಾಗ ಪ್ರಕಟಿಸುತ್ತಾರೆ.

**ಒಮ್ಮೆ ಒಂದು ಪ್ರಸಂಗ ಹೀಗೆ ನಡೆಯಿತು :**

ದೇವರಾಯಪಟ್ಟಣದ ಕೆರೆಯ ಕೆಳಗೆ ಮಠದ ಸ್ವಲ್ಪ ಗದ್ದೆ ತೋಟ ಇದೆ. ಬತ್ತವೆಲ್ಲ ಹೊಡೆಗೆ ಬಂದಿತ್ತು. ಕೆರೆಯಲ್ಲಿ ನೀರು ಬತ್ತಿ ಹೋಗಿತ್ತು. ಇನ್ನೊಂದು ಹದ ನೀರು ಕೊಟ್ಟರೆ ನೂರಾರು ಪಲ್ಲ ಬತ್ತ ಬರುವ ಸ್ಥಿತಿಯಲ್ಲಿತ್ತು. ಪ್ರಕೃತಿ ಕೈಕೊಟ್ಟಿತು. ಏನು ಮಾಡಬೇಕು ! ಎಂಬುದು ಶ್ರಿಗಳವರಿಗೆ ಯೋಚನೆಗಿಟ್ಟುಕೊಂಡಿತು. ಕೈಕಟ್ಟಿ ಕುಳಿತರೆ ಪ್ರಯೋಜನವಿಲ್ಲವೆಂದು ಶ್ರೀಗಳು ಯೋಚಿಸಿ ಗದ್ದೆಗಳ ಮಧ್ಯದಲ್ಲಿರುವ ಒಂದೆರಡು ಬಾವಿಗಳನ್ನು ದುರಸ್ತಿಗೊಳಿಸಿದರು. ಕಪಿಲೆಯನ್ನು ಹಚ್ಚಿಸಿದರು. ಅಂದು ಕೆಲಸಗಾರರಲ್ಲಿ ಶ್ರೀಗಳಿಗೆ ಏನು ಅಸಡ್ಡೆ ಕಂಡುಬಂತೋ ಏನೋ ತಾವೇ ನಿಂತು ಕಪಿಲೆಯ ಬಾನಿಗಳನ್ನು ಸರಿಪಡಿಸಿ ಕಪಿಲೆಯನ್ನು ಎಳೆದು ಗದ್ದೆಗೆ ನೀರು ಹಾಯಿಸಲು ಕ್ರಿಯಾಪ್ರವೃತ್ತರಾದರು. ಶ್ರೀಗಳವರು ಗದ್ದೆಯಲ್ಲಿ ಕೆಲಸಕ್ಕೆ ನಿಂತುದು ವಿದ್ಯಾರ್ಥಿಗಳಿಗೆ ಅರಿವಾದೊಡನೆ ತಂಡತಂಡವಾಗಿ ಗದ್ದೆಗೆ ಓಡಿ ಬಂದರು. ಬಂದು ನೋಡುತ್ತಾರೆ : ಒಂದೆರಡು ಹುಡುಗರ ಸಹಾಯದಿಂದ ಕಪಿಲೆಯನ್ನು ಸ್ವತಃ ತಾವೇ ಎಳೆಯುತ್ತಿದ್ದರು. ವಿದ್ಯಾರ್ಥಿಗಳು ಪ್ರಾರ್ಥಿಸಿದರು: 'ಬುದ್ಧಿ ನಾವು ಎಳೆಯುತ್ತೇವೆ, ತಾವು ಕೈಬಿಡಿ' ಎಂದು. ಶ್ರೀಗಳವರು ಕೇಳಲಿಲ್ಲ, ನನಗೂ ಕಪಿಲೆ ಎಳೆಯುವ ಅಭ್ಯಾಸ ಸ್ವಲ್ಪ ಆಗಲಿ. ಅದಕ್ಕಾಗಿ ಎಳೆಯುತ್ತಿದ್ದೇನೆ, ನನಗೆ ಸಾಕಾದಾಗ ನೀವು ಎಳೆಯಿರಿ, ಎಂದು ಹೇಳುತ್ತಾ ೫–೬ ಹುಡುಗರು ಒಂದು ಕಡೆ, ಶ್ರೀಗಳವರು ಒಬ್ಬರೇ ಒಂದುಕಡೆ ಕಪಿಲೆಯನ್ನು ಮೂರು ನಾಲ್ಕು ಘಂಟೆಗಳವರೆಗೆ ಸತತ ಪರಿಶ್ರಮಮಾಡಿ ಎಳೆದು ನೀರನ್ನು ಗದ್ದೆಗೆ ಹಾಯಿಸಿದರು. ಅನಂತರ ಸಂಕಟಕ್ಕೊಳಗಾದ ವಿದ್ಯಾರ್ಥಿಗಳ ಪ್ರಾರ್ಥನೆಗೆ ಮನ್ನಣೆಯಿತ್ತು ಕಪಿಲೆಯನ್ನು ಕೈಬಿಟ್ಟರು. ವಿದ್ಯಾರ್ಥಿಗಳೆಲ್ಲ ನೂತನೋತ್ಸಾಹದಿಂದ ನೀರು ಜಗ್ಗಿ ಸಾಯಂಕಾಲದ ಹೊತ್ತಿಗೆ ನೀರನ್ನೆಲ್ಲ ತೆರವು ಮಾಡಿದರು. ಈ ಪ್ರಸಂಗ ೧೯೫೨ರ ಭಾದ್ರಪದಮಾಸದಲ್ಲಿ ನಡೆದುದು[30].

**ಇನ್ನೊಂದು ಪ್ರಸಂಗ :**

ಮೈದಾಳದ ಕೆರೆಯ ಕೆಳಗೂ ಮಠದ ಸ್ವಲ್ಪ ಗದ್ದೆಯಿದೆ, ಅದು ಮಠದಿಂದ ಸುಮಾರು ಎರಡು ಮೈಲು ದೂರ ಇದೆ. ಬತ್ತವನ್ನು ಕೊಯ್ದು ನೆಲಕ್ಕೆ ಹಾಕಿತ್ತು. ಅದನ್ನು ಹೇರಿಕೊಂಡು ಕಣಕ್ಕೆ ತಂದು ಹಾಕುವಲ್ಲಿ ಕೆಲಸಗಾರರು ಯಾವುದೋ ಕಾರಣದಿಂದ ಅಸಡ್ಡೆ ಮಾಡಿದ್ದರು. ಶ್ರೀಗಳು ಒಂದೆರಡು ಸಲ ಕೆಲಸಗಾರರಿಗೆ ಹೇಳಿದರು. ಕಾರ್ಯವಾಗಿರಲಿಲ್ಲ, ಮೋಡ ಆಕಾಶದಲ್ಲಿ ತೂಗಾಡುತ್ತಿತ್ತು. ಮಳೆ ಬಿದ್ದರೆ ಎಲ್ಲವೂ ಹಾಳಾಗಿ ಹೋಗುವ ಸ್ಥಿತಿಯಲ್ಲಿತ್ತು. ಶ್ರೀಗಳವರು ತಾವೇ ೫-೬ ಗಾಡಿಗಳನ್ನು ಹೂಡಿಸಿದರು. ಸಾಯಂಕಾಲ ೭-೩೦ ಅಥವಾ ೮ ಘಂಟೆಯ ಸಮಯದಲ್ಲಿ ಹುಲ್ಲು ಹೇರಿಸಿಕೊಂಡು ಬರಲು ತಾವೇ ಹೊರಟರು. ಚಂದ್ರ ಮೂಡಿದ್ದನಾದರೂ ಮೋಡದಿಂದ ಮುಸುಕಿನ ಚಂದ್ರನ ಬೆಳಕು ಸ್ಪಷ್ಟವಾಗಿರಲಿಲ್ಲ. ಶ್ರೀಗಳು ನಡೆಯುತ್ತಲೇ ಹೊರಟರು. ಗಾಡಿಗಳು ಮುಂದೆ ಹೋದವು. ಶ್ರೀಗಳು ಗದ್ದೆಗೆ ಹುಲ್ಲುಹೇರಿಸಿಕೊಂಡು ಬರಲು ಹೊರಟಿರುವರೆಂಬ ಸುದ್ದಿ ತಿಳಿ

30. ಈ ಪ್ರಸಂಗ ನಡೆದಾಗ ನಾನು ದೇವರಾಯಪಟ್ಟಣದ ಪ್ರಾಥಮಿಕ ಶಾಲಾ ಉಪಾಧ್ಯಾಯನಾಗಿದ್ದೆ. ಮಠದ ಗದ್ದೆ ನನ್ನ ವಾಸದ ಮನೆಯಿಂದ ಅರ್ಧ ಫರ್ಲಾಂಗ್ ದೂರದಲ್ಲಿತ್ತು. ನಾನು ನನ್ನ ಮನೆಯ ಬಾಗಿಲಿಂದ ನೋಡಿದಾಗ ಶ್ರೀಗಳವರು ಕಪಿಲೆ ಎಳೆಯುವುದು ಕಂಡಿತು. ನನಗೆ ಮನೆಯಲ್ಲಿ ಕೂಡಲಾಗಲಿಲ್ಲ. ಎಲ್ಲವನ್ನು ಬಿಟ್ಟು ಓಡಿಹೋಗಿ ಶ್ರೀಗಳವರನ್ನು ಕೈಬಿಡಿಸಲು ಯತ್ನಿಸಿ ವಿಫಲರಾದವರಲ್ಲಿ ನಾನೂಬ್ಬ.

ದೊಡನೆಯೇ ನೂರಾರು ಹುಡುಗರು ಊಟ ಮಾಡುವುದನ್ನೇ ಬಿಟ್ಟು ಬೆನ್ನಹತ್ತಿ ಹೊರಟರು. ವೇಗ ವೇಗವಾಗಿ ಹೋಗುತ್ತಿದ್ದ ಶ್ರೀಗಳವರಲ್ಲಿ- 'ಬುದ್ಧಿ, ನಾವು ಹೇರಿಸಿಕೊಂಡು ಬರುತ್ತೇವೆ. ತಾವು ಮಠಕ್ಕೆ ಹಿಂತಿರುಗಬೇಕು' ಎಂದು ಪ್ರಾರ್ಥಿಸಿದರೂ ನಿಷ್ಫಲವಾಯಿತು. ಶ್ರೀಗಳವರು ಮುಂದೆ ಹೋಗುತ್ತಲೇ ಇದ್ದರು. ಕತ್ತಲಲ್ಲಿ ಆವುಗೆ ಮೆಟ್ಟಿಕೊಂಡು ಹೋಗುವಾಗ ಬಹಳ ಎಚ್ಚರಿಕೆಯಿಂದಿರಬೇಕಲ್ಲವೇ ? ವಿದ್ಯಾರ್ಥಿಗಳಿಗೆ ದಿಗಿಲು! ಎಲ್ಲಿ ಪಾದಪಲ್ಲಟವಾದೀತೋ ಎಂದು. ಆ ಎಚ್ಚರಿಕೆಯಿಂದಲೇ ಹಿಂದೆ ನಾಲ್ಕಾರು ಹುಡುಗರು ಮುಂದೆ ನಾಲ್ಕಾರು ಹುಡುಗರು ಹೋಗುತ್ತಲೇ ಇದ್ದರು. ಗದ್ದೆಗೆ ಹೋಗುವಷ್ಟರಲ್ಲಿ ಮುಂದೆ ಮುಂದೆ ಹೋಗಿ ಆಗಲೇ ಗದ್ದೆಯಲ್ಲಿ ಸೇರಿದ್ದ ವಿದ್ಯಾರ್ಥಿಗಳ ಸಂಖ್ಯೆ ನೂರಿನ್ನೂರು. ಸ್ವತಃ ಶ್ರೀಗಳು ಕಪನಿಯನ್ನು ಮೇಲಕ್ಕೇರಿಸಿ ಕಟ್ಟಿ, ಆವುಗೆಗಳನ್ನು ಬದುವಿನ ಮೇಲಿರಿಸಿ, ಹೊರೆಗಳನ್ನು ಕಟ್ಟಿ ಕಟ್ಟಿ ವಿದ್ಯಾರ್ಥಿಗಳ ಮೇಲೆ ಹೊರಿಸುತ್ತಿದ್ದರು. ತುಟಿಪಿಟಿಕ್ಕೆನ್ನದೆ ೨ ತಾಸುಗಳಲ್ಲಿ ಆರೇಳು ಗಾಡಿಹುಲ್ಲು ಹೊರೆಕಟ್ಟಿ ಗಾಡಿಯನ್ನೇರಿ ಕುಳಿತಿತ್ತು. ಶ್ರೀಗಳು ೧೧ ಘಂಟೆ ಹೊತ್ತಿಗೆ ಮಠಕ್ಕೆ ಬಂದು ಸ್ನಾನ ಶಿವಪೂಜೆಗೆ ತೆರಳಿದರು[31]. ಇಲ್ಲಿ ಕೊಟ್ಟಿರುವ ಎರಡು ದೃಷ್ಟಾಂತರಗಳು ಕೇವಲ ದಿಙ್ಮಾತ್ರಪ್ರದರ್ಶನಾರ್ಥವಾದವು. ಇಂಥ ಪ್ರಸಂಗಗಳು ಎಷ್ಟೋ ನಡೆದಿವೆ. ಸೌದೆಯ ಅಭಾವವಾದಾಗ ತಾವೇ ಕಾಡಿಗೆ ಸೌದೆಗಾಗಿ ಹೋಗಿ ಕೊಡಲಿಯನ್ನು ಕೈಯಲ್ಲಿ ಹಿಡಿದ ಪ್ರಸಂಗಗಳು ಎಷ್ಟೋ. ರಾಗಿ, ಬತ್ತದ ಒಕ್ಕಲು ನಡೆದಾಗ ರಾಗಿಯ ಕಣದಲ್ಲಿ ಸ್ವತಃ ಶ್ರೀಗಳವರು ಕೆಲಸ ಮಾಡುತ್ತಿದ್ದುದಂತೂ ಸರ್ವೇಸಾಮಾನ್ಯ ವಿಷಯ. ಈಗಿನ ಮಠದ ಹೊಸ ಕಟ್ಟಡಗಳೆಷ್ಟಿವೆಯೋ ಅವುಗಳಿಗೆ ಉಪಯೋಗಿಸಿದ ಕಲ್ಲುಗಳಲ್ಲಿ ಐದರಲ್ಲಿ ಒಂದು ಕಲ್ಲಾದರೂ ಶ್ರೀಗಳವರ ಹಸ್ತ ಮುಟ್ಟದೆ ಕಟ್ಟಡದ ಗೋಡೆಯಲ್ಲಿ ಕುಳಿತಿಲ್ಲ. ಗುಡ್ಡದ ಯಾವುದೋ ಭಾಗದಲ್ಲಿ ಒಡೆದಿದ್ದ ಆ ಕಲ್ಲನ್ನು ಕೆಳಕ್ಕೆ ಎಸೆಯುವ ಅಥವಾ ನೂರಾರು ಮಕ್ಕಳಿಗೆ ಕಲ್ಲುಗಳನ್ನು ತಲೆಯಮೇಲೆ ಹೊರಿಸಿ ಕೆಳಭಾಗಕ್ಕೆ ಸಾಗಿಸುವ ಕಾರ್ಯವನ್ನು ಅನೇಕ ವರ್ಷಗಳು ಶ್ರೀಗಳು ಮಾಡಿದ್ದಾರೆ. ಇತ್ತೀಚೆಗೆ ದೈಹಿಕ ಶ್ರಮದ ಕೆಲಸಗಳು ಉತ್ತರ ವಯಸ್ಸಿನ ಕಾರಣ ಕಡಿಮೆಯಾಗಿವೆ. ಅಲ್ಲದೆ ಇತರ ಕಾರ್ಯಬಾಹುಳ್ಯದ ಭಾರ ಅತ್ಯಧಿಕವಾಗಿ ಹೋಗಿದೆ. ಅವರು ಮಾಡುತ್ತಿದ್ದ ಕೆಲಸಗಳನ್ನು ಪಟ್ಟಿ ಮಾಡಿ ಹೇಳುವುದು ನಮ್ಮ ಮುಖ್ಯಕಾರ್ಯವಲ್ಲ. ಶ್ರೀಗಳವರ ಕ್ರಿಯಾವಿಷಯಕ ಶ್ರದ್ಧೆಯ ಅಥವಾ ಕಾಯಕನಿಷ್ಠೆಯ ಬಗೆಗೆ ಹಲವು ಕೆಲವು ಪ್ರಸಂಗಗಳ ಉದಾಹರಣೆ ಕೊಟ್ಟಿದೆ ಅಷ್ಟೆ. ಯಾವ ಕಾರ್ಯವೇ ಆಗಲಿ ಅದನ್ನು ಮನಮುಟ್ಟಿ ಪ್ರೀತಿಯಿಂದ ಮಾಡಿ ಮುಗಿಸುವ ದೈಹಿಕಶಕ್ತಿ, ಮಾನಸಿಕ ಉತ್ಸಾಹ, ಬೌದ್ಧಿಕ ವಿಧಾನಗಳು ಶ್ರೀಗಳವರಿಗೆ ಹುಟ್ಟಿನೊಡನೆಯೇ ವರವಾಗಿ ಬಂದುವುಗಳು. ಅಂತೆಯೇ ಘನೋದ್ದೇಶಭರಿತವಾದ ಅನೇಕ ಮಹಾಕಾರ್ಯಗಳು ಶ್ರೀಮಠದಲ್ಲಿ ನಿರ್ಬಾಧಿತವಾಗಿ ಸಾಗಿ ಬಂದಿವೆ, ಈಗಲೂ ಬರುತ್ತಿವೆ. ಮಾಡುವ ಕ್ರಿಯೆಗೆ ಫಲವನ್ನೇ ಬೇಡಬೇಕಾಗಿಲ್ಲ. ಕ್ರಿಯೆಯ ಅಂತಸ್ಸತ್ವಕ್ಕನುಗುಣವಾಗಿ ಫಲವು ತಾನಾಗಿಯೇ ಲಭ್ಯವಾಗುತ್ತದೆ. ಅಥವಾ ಕ್ರಿಯೆಯೇ ಫಲವನ್ನು ಎಳೆದುಕೊಂಡು ಬರುತ್ತದೆಂಬುದೇ ಶ್ರೀಗಳವರು ಶುದ್ಧಕ್ರಿಯೆಯ ಬಗೆಗಿಟ್ಟಿರುವ ಅಪಾರ ವಿಶ್ವಾಸ. ಅಂತೆಯೇ ೧೯೩೦ ನೆಯ ಇಸವಿಯಿಂದ ಶ್ರೀಗಳವರು ಏನು ಸಾಧಿಸಿದ್ದಾರೆ ? ಎಷ್ಟು ಸಾಧಿಸಿದ್ದಾರೆ ? ಎಂಬುದಕ್ಕೆ ಅಂದಿನ ಸ್ಥಿತಿಯನ್ನು ಇಂದಿನ ಸ್ಥಿತಿಯನ್ನು ನೋಡಿದವರಿಗೆ ಅದರ ಇತಿಹಾಸದ ಬೃಹದ್ದರ್ಶನ ಕಣ್ಣೆದುರಿಗೆ ಕಟ್ಟಿದಂತೆ ನಿಲ್ಲುತ್ತದೆ. ಅವರು ಕ್ರಿಯೆಯನ್ನು ಮಾಡಿದ್ದಾರೆಂದರೂ ಒಂದೇ ; ಲೋಕಹಿತವನ್ನು ಸಾಧಿಸಿದ್ದಾರೆಂದರೂ ಒಂದೆ. ಅವರ ಕ್ರಿಯೆಯ ಫಲವನ್ನೆಲ್ಲಾ ಲೋಕ ಉಂಡಿದೆ. ಲಕ್ಷೋಪಲಕ್ಷ ಜನರ ಜೀವನದಲ್ಲಿ ಅವರ ಕ್ರಿಯೆಯ ಫಲವು ದೀಪ ಮುಡಿಸಿ ಬೆಳಕನ್ನುಂಟುಮಾಡಿದೆ ಎಂದು ಹೇಳಿದರೆ ಸಾಕು.

**ಶ್ರೀ ಮಠದ ಭಿಕ್ಷಾಟನೆಯ ರೀತಿ ನೀತಿ :**

ಶ್ರೀಗಳವರು ಪ್ರತಿವರ್ಷ ಗ್ರಾಮಾಂತರ ಪ್ರದೇಶದಲ್ಲಿ ಭಿಕ್ಷಾಟನೆ ಮಾಡದೆ ಮಠದ ಖರ್ಚು ವೆಚ್ಚಗಳಿಗೆ ಬೇರೆ ಮಾರ್ಗವಿಲ್ಲ. ಮಠಕ್ಕೆ ಸ್ವಲ್ಪ ಹೊಲಗದ್ದೆ ಇದೆ. ಅದರ ಉತ್ಪತ್ತಿ ಮಠದ ಎರಡು ತಿಂಗಳ ಖರ್ಚುವೆಚ್ಚಗಳಿಗೆ ಆದೀತು. ಆ ಭೂಮಿ ಇತ್ತೀಚಿನದು. ಉದ್ದಾನ ಸ್ವಾಮಿಗಳವರ ಕಾಲಕ್ಕೆ ಕೇವಲ ೧೭ ಎಕರೆ ಭೂಮಿ ಇತ್ತು. ಹೆಚ್ಚಿನದು ಶ್ರೀ ಶಿವಕುಮಾರ ಸ್ವಾಮಿಗಳವರು ತಮ್ಮ ಕಾಲದಲ್ಲಿ ತಮಗೆ ದಾನವಾಗಿ ಬಂದುದು ಮತ್ತು ಕೊಂಡುಕೊಂಡದ್ದು. ಈ ಕಾರಣದಿಂದ ಭಿಕ್ಷಾಟನೆಯ ವೃತ್ತಿ ಸಿದ್ಧಗಂಗಾ ಮಠದ ಮುಖ್ಯವೃತ್ತಿಗಳಲ್ಲೊಂದು. ಸಿದ್ಧಗಂಗಾ ಮಠದ ಜೋಳಿಗೆಯ ಬಲ ಬಹಳ ದೊಡ್ಡದು. ಜೋಳಿಗೆಯ ಬಲದ ಮಹತ್ವವೇನೆಂಬುದನ್ನು ಯಾರಾದರೂ ಅರಿಯಬೇಕಾದರೆ ಸಿದ್ಧಗಂಗಾ ಮಠದ ಜೋಳಿಗೆಯನ್ನೇ ನೋಡಬೇಕು. ಎಷ್ಟೋ ಸಂದರ್ಭದಲ್ಲಿ ನಿನ್ನ ಕಾಣಿಕೆ ಅಥವಾ ಕಾಳು ಕಡಿ ಇಷ್ಟು ಬೇಡ ಬಹಳ ಹೆಚ್ಚಾಯಿತು ಎನ್ನುವ ಪರಿಸ್ಥಿತಿ ಸ್ವಾಮಿಗಳಿಗೇ ಉಂಟಾಗುತ್ತದೆ. ಅಷ್ಟೊಂದು ಸತ್ವ ಅವರ ಭಿಕ್ಷಾಟನೆಗೆ ಬಂದಿದೆ. ಇವರಿಗೆ ಬೇಡಿಸಿಕೊಳ್ಳುವ ಭಕ್ತರೇ ಇಲ್ಲ ; ಬೇಡುವ ಜಂಗಮವೂ ಇವರಲ್ಲ. ಕಾಡಿಬೇಡಿ ಹೆದರಿಸಿ ಬೆದರಿಸಿ ತಂದು ದಾಸೋಹ ಮಾಡಬೇಕೆನ್ನುವ ಭಾವವೂ ಇವರಲ್ಲಿಲ್ಲ. ಶ್ರೀಗಳವರು ಗ್ರಾಮಾಂತರ ಪ್ರದೇಶಕ್ಕೆ ಮೊದಮೊದಲು ಭಿಕ್ಷಾಟನೆಗೆ ಹೋದರೆ ಒಂದೊಂದು ಊರಲ್ಲಿ ಒಂದು ಅಥವಾ ಎರಡು ದಿನ ತಂಗಿ

31. ಈ ಕೆಲಸದಲ್ಲಿ ನಾನು ಪ್ರತ್ಯಕ್ಷ ಭಾಗಿಯಾಗಿದ್ದೆ. ಆ ದಿನ ನನಗೆ ದೇಹಾಲಸ್ಯ. ಈ ಸುದ್ದಿಯನ್ನು ಕೇಳಿ, ಹಾಸಿಗೆ ಬಿಟ್ಟೆದ್ದು ನಾನೂ ಗದ್ದೆಗೆ ಓಡಿದ್ದೆ. ಆದರೆ ನನಗೆ ಶ್ರೀಗಳು ಕೆಲಸ ಮಾಡಲು ಬಿಡಲಿಲ್ಲ. ಈ ಘಟನೆ ನಡೆದದ್ದು ೧೯೪೫ರಲ್ಲಿ ಆಗ ನಾನೊಬ್ಬ ಮಠದ ವಿದ್ಯಾರ್ಥಿ.

ಅಲ್ಲಿ ಪೂಜಾದಿಗಳನ್ನು ಮುಗಿಸುತ್ತಿದ್ದರು. ಊರಿನವರೆಲ್ಲ ಸೇರಿ ತಮಗೆ ಶಕ್ಯವಿದ್ದಷ್ಟನ್ನು ತಾವೇ ಬಂದು ಸ್ವಾಮಿಗಳವರಲ್ಲಿ ನಮಸ್ಕಾರ ಹಾಕಿ ನೀಡುವುದು, ತದನಂತರ ಮಠಕ್ಕೆ ತಾವೇ ಗಾಡಿಯಲ್ಲಿ ಕಳುಹಿಸುವುದು. ಇದೇ ಭಿಕ್ಷಾಟನಾ ಪದ್ಧತಿ. ಸ್ವಾಮಿಗಳವರು ತಾವಾಗಿ ಯಾರನ್ನು ಅಷ್ಟು ಕೊಡು, ಇಷ್ಟು ಕೊಡು ಎಂದು ಕೇಳಿದವರೇ ಅಲ್ಲ. ಕೇಳುವ ಪರಿಪಾಠ ಮಠದ ಇತಿಹಾಸದಲ್ಲೇ ಇಲ್ಲ. ಹೀಗೆ ಅನೇಕ ಹಳ್ಳಿಗಳಲ್ಲಿ ೩-೪ ತಿಂಗಳು ಪ್ರವಾಸ ಮಾಡಿ ಬರುತ್ತಿದ್ದರು. ಈಗ ಶ್ರೀಗಳವರಿಗೆ ಉತ್ತರ ವಯಸ್ಸಿನ ಫಲವಾಗಿ ಮತ್ತು ಕಾರ್ಯಬಾಹುಳ್ಯದ ಫಲವಾಗಿ ಹೆಚ್ಚು ಪ್ರವಾಸ ಮಾಡುವುದು ಆಗುತ್ತಿಲ್ಲ. ಐದು ಆರು ಹಳ್ಳಿಗಳಲ್ಲಿ ಒಂದೊಂದು ದಿನ ಪ್ರವಾಸ ಮಾಡಿಬಂದರಾಯಿತು. ಶ್ರೀಗಳವರು ಭಿಕ್ಷೆಗೆ ಬಂದರೆಂದೇ ಅದರ ಸಂಕೇತ. ಅವರೆಲ್ಲ ಸೇರಿ ತಮಗೆ ತಿಳಿದಷ್ಟು ದವಸ ಧಾನ್ಯ, ಎಲೆ, ಹುಣಸೆಹಣ್ಣು, ಬೆಲ್ಲ ಇತ್ಯಾದಿಗಳನ್ನು ಮುಂಡಗೆ ಮಾಡುತ್ತಾರೆ, ಮಠದ ಗಾಡಿಗಳು ಹೋಗಿ ಹೇರಿ ತರುತ್ತವೆ. ಇಲ್ಲವೆ ಹಳ್ಳಿಯವರೇ ಹೇರಿ ತರುತ್ತಾರೆ. ಮಲೆನಾಡಿಗೆ ಮುಖ್ಯವಾಗಿ ಸಕಲೇಶಪುರ ಪ್ರದೇಶಕ್ಕೆ ಮಾತ್ರ ಒಂದು ತಿಂಗಳು ಪ್ರವಾಸ ಮಾಡಲೇಬೇಕು; ಅಲ್ಲಿಂದ ಸ್ವಲ್ಪ ಬತ್ತ ತಮ್ಮ ಸ್ವಂತ ಭೂಮಿಕಾಣಿಯಿಂದಲೂ ಭಕ್ತಾದಿಗಳಿಂದಲೂ ಬರುತ್ತದೆ. ಸಕಲೇಶಪುರಪ್ರಾಂತಕ್ಕೆ ಹೋಗಲೇಬೇಕಾದುದು ಉದ್ದಾನ ಸ್ವಾಮಿಗಳವರ ಕಾಲದಿಂದಲೂ ಬಂದ ಒಂದು ಸಂಪ್ರದಾಯ. ಯಾವ ಕಾರಣದಿಂದಲೂ ಶ್ರೀಗಳವರು ಅಲ್ಲಿಗೆ ಹೋಗುವುದನ್ನು ತಪ್ಪಿಸುವುದಿಲ್ಲ. ಇದಲ್ಲದೆ ಮಠಕ್ಕೆ ಗಂಗಾ ಪೂಜೆಗೆ, ಸಿದ್ಧಲಿಂಗೇಶ್ವರ ದರ್ಶನಕ್ಕೆ ಬರುವವರು ಇಷ್ಟಾನುಸಾರ ಕಾಳುಕಡಿ, ಕಾಣಿಕೆ ಸಮರ್ಪಿಸುತ್ತಾರೆ. ಇದು ಬಹು ಪ್ರಾಚೀನ ಪದ್ಧತಿ. ಸಿದ್ಧಗಂಗೆಗೆ ಗ್ರಾಮಾಂತರ ಪ್ರದೇಶದಿಂದ ಬರುವವರು ಯಾರೂ ಬರಿಕೈಯಿಂದ ಬರುವುದಿಲ್ಲ. ಅಷ್ಟಿಷ್ಟು ಕಾಳುಕಡಿ, ತರಕಾರಿ, ಊಟದೆಲೆ–ತಮಗೆ ಏನೇನು ಲಭ್ಯವೋ ಅದನ್ನು ತರುತ್ತಾರೆ. ಮಠಕ್ಕೆ ಅರ್ಪಿಸಿ ಮಠದಲ್ಲಿ ಪ್ರಸಾದ ಸ್ವೀಕರಿಸಿ ಹೋಗುತ್ತಾರೆ. ಇವೆಲ್ಲ ದಾಸೋಹ ಕ್ಷೇತ್ರದೊಡನೆ ಲೋಕ ಜೀವನವು ಇಟ್ಟುಕೊಂಡು ಬಂದ ಸಹಕಾರ ಮನೋಭಾವದ ಸತ್ಸಂಪ್ರದಾಯಗಳು. ಸಿದ್ಧಗಂಗಾಕ್ಷೇತ್ರವೆಂದರೆ, ದಾಸೋಹವೆಂದರೆ ಎಲ್ಲ ಮತೀಯರಿಗೂ ತಮ್ಮ ಮನೆಯೇ, ತಮ್ಮದೇ ದಾಸೋಹ ಎನ್ನುವ ಮನೋಭಾವ. ಎಲ್ಲ ಮತೀಯರೂ ತಾವು ಆಚರಿಸುವ ವಿಶೇಷ ಸಭೆ, ಸಂಘಗಳಿಗೆ ಶ್ರೀಗಳವರನ್ನು ಬರಮಾಡಿಕೊಂಡು ಸಮಯೋಚಿತ ಉಪದೇಶಲಾಭ ಪಡೆಯುತ್ತಾರೆ. ತಮ್ಮ ಸಮಾಜದ ಕುಂದು ಕೊರತೆಗಳನ್ನು ಹೇಳಿಕೊಳ್ಳುತ್ತಾರೆ. ಅವಕ್ಕೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ಶ್ರೀಗಳವರು ಹೇಳಿದರೆ ಯಾರೂ ಪ್ರತ್ಯುತ್ತರ ಕೊಡದಷ್ಟು ಶ್ರೀಗಳವರ ಅಭಿಪ್ರಾಯಕ್ಕೆ ಶಕ್ತಿ ಬಂದಿದೆ. ಎಷ್ಟೋ ಸಲ ಸ್ವಾಮಿಗಳು ಮಾಡಿದ ತೀರ್ಮಾನಗಳು ಮೇಲು ನೋಟಕ್ಕೆ ಅನೇಕರಿಗೆ 'ಶ್ರೀಗಳು ಈ ತೀರ್ಮಾನ ತಕ್ಕೊಳ್ಳಬಾರದಾಗಿತ್ತು' ಎನಿಸಿದರೂ, ಕಾಲ ಕಳೆದಂತೆಲ್ಲ ಆ ತೀರ್ಮಾನವೇ ಸರಿಯಾದುದೆಂಬ ಜನ ಬೆಂಬಲ ಗಳಿಸುತ್ತದೆ. ಹಿಂದೆ ಈ ತೀರ್ಮಾನವನ್ನು ಶ್ರೀಗಳವರು ಕೈಕೊಂಡದ್ದೇ ಒಳ್ಳೆಯದಾಯಿತೆನ್ನುವ ತಿರುವನ್ನು ಅದನ್ನು ಅಲ್ಲಗಳೆದವರಿಗೂ ಉಂಟುಮಾಡುತ್ತದೆ. ಇದಕ್ಕೆ ಎಷ್ಟೋ ನಿದರ್ಶನಗಳುಂಟು.

**ಸಿದ್ಧಗಂಗಾ ಶ್ರೀಗಳು ಶ್ರೇಷ್ಠ ನ್ಯಾಯಮೂರ್ತಿಗಳು : ಮಠವೇ ನ್ಯಾಯಾಸ್ಥಾನ* :**

ಉದ್ದಾನಶಿವಯೋಗಿಗಳೇ ಆಯಿತು, ಶ್ರೀ ಶಿವಕುಮಾರಸ್ವಾಮಿಗಳೇ ಆಯಿತು ಇವರೀರ್ವರೂ ವ್ಯವಸಾಯ ಕಾಯಕದ ಜನಜೀವನ ಮಧ್ಯದಿಂದಲೇ ಉದಯಿಸಿದವರು. ಗ್ರಾಮಾಂತರ ಪ್ರದೇಶದ ಜನರ ನ್ಯಾಯನಿಷ್ಠುರಗಳು, ತಂಟೆತಕರಾರುಗಳು, ಅವರ ನೋವು ನಲಿವುಗಳ ಸ್ಪಷ್ಟ ಪರಿಚಯವಿದ್ದವರು. ಹೀಗಾಗಿ ಇವರ ಒಲವು ಗ್ರಾಮೀಣ ಪ್ರದೇಶದ ಜನಜೀವನವನ್ನು ಶುದ್ಧೀಕರಿಸುವಲ್ಲಿ ವಿಶೇಷ ಶ್ರಮಿಸುವುದೇ ಆಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಕಾರಣಗಳಿಂದ ತಂಟೆತಕರಾರುಗಳಿಗೇನೂ ಕೊರತೆಯಿಲ್ಲವಷ್ಟೆ. ಸಣ್ಣ ಸಣ್ಣ ಕಾರಣಗಳಿಗಾಗಿ ಕೋರ್ಟು ಕಚೇರಿಗಳ ಕಟ್ಟೆಯನ್ನು ಹತ್ತುವುದು ಆ ಜನಗಳ ಒಂದು ಅಜ್ಞಾನದ ಪರಮಾವಧಿಯ ಕುರುಹಾಗಿರುವುದು ಎಲ್ಲರಿಗೂ ಗೊತ್ತಿರುವ ಅಂಶವೇ ಆಗಿದೆಯಲ್ಲವೇ ? ಉದ್ದಾನ ಸ್ವಾಮಿಗಳು ಇಂಥ ತಂಟೆ ತಕರಾರುಗಳಾದಾಗ ತಾವೇ ಹಳ್ಳಿಗಳಿಗೆ ಹೋಗಿ ಆ ತಂಟೆಗಳನ್ನು ಬಗೆಹರಿಸಿ ಬರುತ್ತಿದ್ದುದೂ ಇತ್ತಲ್ಲವೆ? ಇದರಿಂದ ಕೋರ್ಟು ಕಚೇರಿಗಳಿಗೆ ಹೋಗಿ ಅಪಾರ ಹಣ ವೆಚ್ಚ ಮಾಡಿ ಎರಡೂ ಪಕ್ಷದವರು ಹಾಳಾಗುವುದು ಬಹುಮಟ್ಟಿಗೆ ತಪ್ಪುತ್ತಿತ್ತು. ಕೆಲವೊಮ್ಮೆ ಮಠಕ್ಕೆ ಕರೆಯಿಸಿ ನ್ಯಾಯವಾಗಿ ವ್ಯಾಜ್ಯಗಳನ್ನು ತೀರ್ಮಾನಿಸಿ, ಅವರು ಪರಸ್ಪರ ಮೊದಲಿನಂತೆ ಕೂಡಿ ಬಾಳಲು ಹಚ್ಚುತ್ತಿದ್ದರು. ಇದೇ ಸಂಪ್ರದಾಯ ಶ್ರೀ ಶಿವಕುಮಾರಸ್ವಾಮಿಗಳ ಕಾಲದಲ್ಲಿ ಇಂದಿಗೂ ನಡೆದುಬರುತ್ತಿದೆ. ಈ ಕಾರಣದಿಂದ ಸಿದ್ಧಗಂಗಾಮಠವೂ ಒಂದು ನ್ಯಾಯಾಲಯದಂತೆ ಆಗಿಹೋಗಿದೆ. ಅನೇಕ ವ್ಯಾಜ್ಯಗಳನ್ನು ಶ್ರೀಗಳು ತೀರ್ಮಾನ ಮಾಡಿದುದನ್ನು ಅವರು ಬರೆದಿಟ್ಟ ಡೈರಿಗಳಿಂದ ತಿಳಿಯಬಹುದಾಗಿದೆ. ಕೆಲವೊಂದು ಸಲ ಸರಕಾರಿ ಅಧಿಕಾರಿಗಳೂ ಜಟಿಲವಾದ ಸಮಸ್ಯೆಗಳ ಸಮಯದಲ್ಲಿ ಹಾಜರಾಗಿದ್ದ ಉದಾಹರಣೆಗಳು ಕಂಡುಬರುತ್ತವೆ.

---

* ಶ್ರೀಗಳವರು ನ್ಯಾಯತೀರ್ಮಾನ ಮಾಡಿದ ಕೆಲವು ದಾಖಲೆಗಳನ್ನು ಅವರೇ ಬರೆದಿಟ್ಟ ಡೈರಿಗಳನ್ನು ಅಭ್ಯಸಿಸಿ ಕೆಲವನ್ನು ಮಾತ್ರ ಈ ಗ್ರಂಥದಲ್ಲಿ ಮುಂದೆ ಕೊಡಲಾಗಿದೆ, ನೋಡಬಹುದು.

ಶ್ರೀಗಳು ನ್ಯಾಯ ತೀರ್ಮಾನ ಮಾಡಲು ಅನುಸರಿಸುವ ರೀತಿ ತುಂಬಾ ಹಾರ್ದಿಕ ಹಾಗೂ ಯುಕ್ತಿಯುಕ್ತವಾಗಿರುತ್ತದೆ. ಪಕ್ಷ ಪ್ರತಿಪಕ್ಷದವರಿಬ್ಬರನ್ನೂ ಒಂದು ತಾರೀಖು ನಿಗದಿಮಾಡಿ ಮಠಕ್ಕೆ ಕರೆಸಿಕೊಳ್ಳುತ್ತಾರೆ. ಸಿದ್ಧಗಂಗಾ ಶ್ರೀಗಳು ಕರೆಯ ಕಳಿಸಿದರೆಂದರೆ ಹಿಂದೇಟು ಹೊಡೆದು ತಪ್ಪಿಸಿಕೊಳ್ಳುವುದಂತೂ ಸಾಧ್ಯವೇ ಇಲ್ಲ, ಅಷ್ಟೊಂದು ಭಯ ಜನಗಳಿಗೆ. ಈ ಭಯ ಮತ್ತಾವುದೂ ಅಲ್ಲ; ಶ್ರೀಗಳವರ ಕರೆಗೆ ತಪ್ಪಿಸಿಕೊಂಡು ಯಾವ ಭಾಗ್ಯಕ್ಕೆ ಎರವಾದೇವೋ ಎಂಬುದಷ್ಟೆ. ಈ ಕಾರಣದಿಂದ ಯಾರೂ ತಪ್ಪಿಸಿಕೊಳ್ಳುವುದಿಲ್ಲ. ಎರಡು ಪಕ್ಷದವರೂ ಬಂದ ಮೇಲೆ ಅವರೆಲ್ಲರನ್ನೂ ಪ್ರೀತಿ ವಿಶ್ವಾಸಗಳಿಂದ ಮಾತನಾಡಿಸುತ್ತಾರೆ. ಲೋಕಾಭಿರಾಮವಾಗಿ ಮಳೆ ಬೆಳೆ ಮಕ್ಕಳು ಮರಿಗಳ ಯೋಗಕ್ಷೇಮ–ಇತ್ಯಾದಿ ವಿಚಾರಗಳು ಕೆಲವು ಕಾಲ ಸಂಭಾಷಣೆಯ ಮುಖ್ಯ ವಿಷಯಗಳಾಗಿರುತ್ತವೆ. ಊಟದ ಸಮಯವಾಗಿದ್ದರೆ ಅವರೆಲ್ಲರನ್ನೂ ಊಟ ಮಾಡಿಕೊಂಡು ಬನ್ನಿರೆಂದು ದಾಸೋಹಕ್ಕೆ ಕಳಿಸುತ್ತಾರೆ. ಅವರೆಲ್ಲ ದಾಸೋಹಕ್ಕೆ ಹೋಗಿ ಊಟಮಾಡಿ ಬರುತ್ತಾರೆ. ಅಷ್ಟರಲ್ಲಿ ಅವರೆಲ್ಲರಲ್ಲಿ ಏನೋ ಒಂದು ಬಗೆಯ ಮನಃಪರಿವರ್ತನೆಯೂ ಆಗಿರುವುದೋ ಏನೋ! ವ್ಯಾಜ್ಯಕ್ಕೆ ಕುಳಿತ ಮೇಲೆ ಇಬ್ಬರ ಕಡೆಯ ವಿಚಾರಗಳನ್ನೂ ಅದಕ್ಕೆ ಸಂಬಂಧಿಸಿದ ದಾಖಲೆ ಪತ್ರಗಳನ್ನೂ, ಸಾಕ್ಷಿ ಮೊದಲಾದವುಗಳನ್ನೂ ವಿಚಾರಿಸಿ, ನ್ಯಾಯವನ್ನು ಹೇಳಿಬಿಡುತ್ತಾರೆ. ಹಟ ಹಿಡಿದವರನ್ನು ಅನೇಕ ದೃಷ್ಟಾಂತ ಕಥೆ, ಸುಭಾಷಿತಗಳ ಮೂಲಕ ಹದಕ್ಕೆ ತಂದು ಒಪ್ಪಿಸಿಬಿಡುತ್ತಾರೆ. ಆ ಕೂಡಲೆ ಅಲ್ಲಿ ಕಾಗದ ಪತ್ರಗಳನ್ನೂ ಮಾಡಿ ಒಪ್ಪಿತ ಹಾಕಿಸಿ, ಇನ್ನು ಮುಂದೆ ಹೀಗೆ ಮಾಡಬಾರದೆಂದೂ ಅದರಿಂದ ಹಾನಿಯಾಗುವುದೆಂಬುದನ್ನೂ ಅನೇಕ ಬಗೆಯಲ್ಲಿ ವಿವರಿಸಿ, ಅವರು ಪರಸ್ಪರ ಮೊದಲಿನಂತೆ ಕೂಡಿಬಾಳುವಹಾಗೆ ಮಾಡಿ, ನಮಸ್ಕಾರ ಹಾಕಿಸಿಕೊಂಡು ಬಿಡುತ್ತಾರೆ. ಇದರಿಂದ ಅವರೆಲ್ಲ ದೊಡ್ಡವರಿಗೆ ಮಾತು ಕೊಟ್ಟು ಬಂದಿದ್ದೇವೆಂಬ ಧರ್ಮಭೀತಿಯಿಂದಲೋ, ವಿರೋಧ, ಕೋಪಗಳಿಂದಾಗುವ ಅನರ್ಥಗಳನ್ನು ಜ್ಞಾಪಿಸಿಕೊಂಡೋ ವಾತಾವರಣವನ್ನು ಮಧುರವುಳ್ಳದ್ದನ್ನಾಗಿ ಮಾಡಿಕೊಳ್ಳುತ್ತಾರೆ. ಕೋರ್ಟು ಕಚೇರಿಗಳಲ್ಲಿ ಪಕ್ಷ ಪ್ರತಿಪಕ್ಷದವರಿಗೆ ಇಂಥ ಮಧುರ ವಾತಾವರಣವನ್ನುಂಟುಮಾಡುವುದು ಶಕ್ಯವೇ ಇಲ್ಲ ತಾನೆ. ಆದ್ದರಿಂದ ಹಳ್ಳಿಯ ಕಡೆಯವರನೇಕರು ನ್ಯಾಯಕ್ಕಾಗಿ ಮಠಕ್ಕೆ ಧಾವಿಸಿ ಬರುವುದು ವಿಶೇಷ. ಶ್ರೀಗಳವರ ಡೈರಿಯನ್ನು ನೋಡಿದಾಗ ಕಂಡುಬಂದ ಅಂಶದ ಪ್ರಕಾರ ಕೆಲವೊಮ್ಮೆ ಗೊತ್ತಾದ ಹಳ್ಳಿಯಲ್ಲಿ ನಿರ್ದಿಷ್ಟಪಡಿಸಿದ ವೇಳೆಗೆ ಶ್ರೀಗಳವರೂ ಹೋಗಿ ವ್ಯಾಜ್ಯ ತೀರ್ಮಾನಿಸಿ ಬಂದಿದ್ದಾರೆ. ಆಗ ಇನ್ನೂ ಅನೇಕ ಸ್ಥಳೀಯ ಪ್ರತಿಷ್ಠಿತ ಜನರನ್ನೂ ಆಹ್ವಾನಿಸಿ ಅವರ ಸಮಕ್ಷದಲ್ಲಿ ಬುದ್ಧಿ ಹೇಳಿಸಿ, ತಾವೂ ಹಿತವಾದ ನುಡಿದು ವ್ಯಾಜ್ಯ ತೀರ್ಮಾನಿಸಿ ಎರಡೂ ಪಕ್ಷದವರ ಮನೆಗಳಿಗೂ ಹೋಗಿ ಬಂದು, ಮಧುರವಾದ ವಾತಾವರಣವನ್ನುಂಟುಮಾಡಿ ಬರುತ್ತಾರೆ. ಇವರ ವ್ಯಾಜ್ಯ ತೀರ್ಮಾನಕ್ಕೆ ತಿಂಗಳುಗಟ್ಟಲೆ ವರ್ಷಗಟ್ಟಲೆ ಅವಧಿ ಬೇಕಿಲ್ಲ; ಲಾಯರ್ ಅಡ್ವೊಕೇಟರುಗಳು ಬೇಕಿಲ್ಲ. ಪುಂಡರ ಪುಂಡಾಟಕ್ಕೆ ಸ್ಥಾನವಿಲ್ಲ. ರೊಟ್ಟಿಬುತ್ತಿಯನ್ನು ಕಟ್ಟಿ ತಿರುಗಬೇಕಿಲ್ಲ. ಮಧುರವಾದ ವಾತಾವರಣ ಕಲ್ಪಿಸಿ ಮನವೊಲಿಸಿ ಸ್ವಲ್ಪ ಹೆಚ್ಚು ಕಡಿಮೆ ಇಬ್ಬರಿಗೂ ತೃಪ್ತಿಯಾಗುವ ಮಧ್ಯಮಾರ್ಗವೊಂದನ್ನು ಕಂಡು, ವ್ಯಾಜ್ಯ ತೀರಿಸುವ ಶ್ರೀಗಳವರ ಜಾಣ್ಮೆಗೂ, ಲೋಕಸಂಗ್ರಹಬುದ್ಧಿಗೂ, ಗ್ರಾಮೀಣ ಜನಗಳಲ್ಲಿನ ವಾತ್ಸಲ್ಯಭಾವಕ್ಕೂ ಎಲ್ಲರೂ ತಲೆದೂಗುತ್ತಾರೆ. ಈ ಕಾರಣದಿಂದ ಶ್ರೀಗಳವರು ಒಳ್ಳೆಯ ನ್ಯಾಯಮೂರ್ತಿಗಳಾಗಿಯೂ, ಮಠವೇ ಒಂದು ನ್ಯಾಯಾಲಯವಾಗಿಯೂ ಕಾಣುತ್ತದೆ.

ಕೆಲವೊಮ್ಮೆ ಹತ್ತು ಹನ್ನೆರಡು ವರ್ಷಗಳು ಕೋರ್ಟು ಕಚೇರಿಯಲ್ಲಿಯೂ ನುರಿಯದ ಜಟಿಲ ವ್ಯಾಜ್ಯಗಳನ್ನು ಶ್ರೀ ಶಿವಕುಮಾರ ಸ್ವಾಮಿಗಳು ತೀರ್ಮಾನ ಮಾಡಿ ನ್ಯಾಯಾಲಯಾಧಿಕಾರಿಗಳ ಪ್ರಶಂಸೆಗೂ ಪಕ್ಷ ಪ್ರತಿಪಕ್ಷದವರ ಪ್ರಶಂಸೆಗೂ ಪಾತ್ರರಾಗಿದ್ದಾರೆ. ಅಂಥ ಸಮಯದಲ್ಲಿ ನ್ಯಾಯಾಲಯದ ನ್ಯಾಯವಾದಿಗಳೂ ಮಠಕ್ಕೆ ಬಂದು ತೀರ್ಮಾನದಲ್ಲಿ ಭಾಗವಹಿಸಿದ್ದುಂಟು, ಮಠದ ಶ್ರೀಗಳವರ ಈ ನ್ಯಾಯತೀರ್ಮಾನದ ವಿಶೇಷಾಸಕ್ತಿಯಲ್ಲಿ ಅವರು ಗ್ರಾಮೀಣ ಜೀವನದೊಡನೆ ಎಷ್ಟು ಗಾಢವಾಗಿ ಬೆರೆತು ಅವರ ಪರಿಶುದ್ಧಿಗೆ, ಸಹಬಾಳ್ವೆಗೆ ಹೆಣಗುತ್ತಿದ್ದಾರೆಂಬುದರ ಸ್ಪಷ್ಟ ಚಿತ್ರ ಎಲ್ಲರಿಗೂ ಗೋಚರಿಸುವ ಅಂಶವಾಗಿದೆ. ವೀರಶೈವ ಮಠಮಾನ್ಯಗಳು ಪ್ರಾಚೀನ ಕಾಲದಿಂದಲೂ ಹೀಗೆ ಸಮಾಜ ಜೀವನದೊಂದಿಗೆ ಬೆಸುಗೆಗೊಂಡಿವೆ.

**ಹಳ್ಳಿಗಳ ಭಾರವನ್ನು ತಾವೇ ಮೈಮೇಲೆ ಎಳೆದು ಹಾಕಿಕೊಳ್ಳುವುದು :**

ಕೆಲಕೆಲವಂಶಗಳಲ್ಲಿ ಹಳ್ಳಿಯವರ ಸ್ಥಿತಿಗತಿ, ಅವರ ಜೀವನ ಮಟ್ಟಗಳ ಭವಣೆಯನ್ನು ಕಂಡು ಅವರಿಗೆ ಉಪಯೋಗವಾಗುವ ಕೆಲವು ಕಾರ್ಯಭಾರಗಳನ್ನು ಶ್ರೀಗಳವರು ತಮ್ಮ ಮೇಲೆ ತಾವೇ ಹಾಕಿಕೊಂಡು ಅದಕ್ಕಾಗಿ ಅಪಾರ ಶ್ರಮಪಟ್ಟು ಮೈಕೈ ನೋವು ಮಾಡಿಕೊಳ್ಳುವುದುಂಟು. ಎಷ್ಟೋ ಜನಗಳು ಆದಷ್ಟು ಭಾರವನ್ನು ಕಡಿಮೆ ಮಾಡಿಕೊಳ್ಳಬೇಕೆನ್ನುತ್ತಾರೆ. ಸಿದ್ಧಗಂಗಾ ಶ್ರೀಗಳು ಆದಷ್ಟು ಹೆಚ್ಚು ಭಾರ ಮಾಡಿಕೊಂಡು ಸಾಗುವವರು. ಅದನ್ನು ಹೊರಲಿಕ್ಕೆ ಅವರಿಗೆ ಈಶ್ವರದತ್ತ ಅನೇಕ ಶಕ್ತಿಗಳು ಬಂದಿರುವುದೂ, ಕಾಯಕದ ಪ್ರಯೋಗಾತ್ಮಕ ನಿಲುವಿನ ಸತ್ವವನ್ನರಿತು ಇರುವುದೂ ಈ ಧೈರ್ಯಕ್ಕೆ ಕಾರಣವಿರಬಹುದು. ಮಾಡಿದಣಿಯುವವರಿಗಿಂತ ನೋಡಿದವರಿಗೇ ದಣಿವಾಗುವಷ್ಟು ಸಮಾಜಭಾರವನ್ನು ತಾವಾಗಿ ತಮ್ಮ ಮೈಮೇಲೆಳೆದುಕೊಳ್ಳುವುದು ಶಿವಕುಮಾರಸ್ವಾಮಿಗಳವರ ಒಂದು ಸಂತೋಷದ ಕೆಲಸವೆಂದು ನನ್ನಭಾವನೆ.

೧೯೭೭ ನೆಯ ಇಸವಿಯಲ್ಲಿ ಶ್ರೀಗಳು ಒಂದು ಯೋಚನೆ ಮಾಡಿದರು. ಹಳ್ಳಿಗಳಲ್ಲಿ ಜನರು ಏನನ್ನೂ ಕಾಣರು. ಅವರಿಗೆ ಮನರಂಜನೆ, ತತ್ತ್ವಬೋಧನೆ, ಧಾರ್ಮಿಕಶ್ರದ್ಧೆ, ಸಾಮಾಜಿಕ ಪ್ರಜ್ಞೆಗಳು ತೀರಾ ಕಡಿಮೆ. ಅವರಿಗೆ ಈ ವಿಷಯದಲ್ಲಿ ಕಿಂಚಿತ್ ಸಹಾಯ ಸಹಕಾರ ಕೊಡಬೇಕು ಎಂದುಕೊಂಡು ಆ ವರ್ಷದಿಂದ 'ಗ್ರಾಮಾಂತರ ಬಸವ ಜಯಂತಿ' ಕಾರ್ಯಕ್ರಮ ನಡೆಸಬೇಕು. ಅದರ ಅಂಗವಾಗಿ ಭಾಷಣ, ಪ್ರವಚನ, ಕಾವ್ಯವಾಚನಗಳನ್ನು ಏರ್ಪಡಿಸಬೇಕು. ಇದಲ್ಲದೆ ರಾತ್ರಿಯಲ್ಲಿ ಒಂದು ಸುಸಜ್ಜಿತ ರಂಗಮಂಟಪದಲ್ಲಿ ಬಸವೇಶ್ವರ ನಾಟಕವಾಡಿ ತೋರಿಸಬೇಕು. ಇವುಗಳಿಂದ ಅವರಿಗೆ ಮನರಂಜನೆಯ ಜೊತೆಗೆ ತತ್ತ್ವ ಬೋಧೆಯೂ, ಸಾಮಾಜಿಕಪ್ರಜ್ಞೆಯೂ ಕೆರಳೀತು. ಯತ್ಕಿಂಚಿತ್ ಅವರ ಜೀವನದ ನಿಲುವಿಗೆ ಕಳೆಯೇರೀತೆಂಬುದೇ ಅವರ ಈ ಯೋಜನೆ. ಈ ಯೋಚನೆಗನ್ವಯವಾಗಿ ನಾಲ್ಕು ಹಳ್ಳಿಗಳನ್ನು ಆ ವರ್ಷದ ಕಾರ್ಯಕ್ರಮಕ್ಕೆ ಆರಿಸಿ ಆಯಾ ಊರಿನ ಪ್ರತಿಷ್ಠಿತರಿಗೆ ಈ ಯೋಜನೆಯನ್ನು ವಿವರಿಸಿ ಹೇಳಿಕಳಿಸಿದರು. ಕಾರ್ಯಕ್ರಮಗಳು ಆರಂಭವಾದವು. ಆಯಾ ಹಳ್ಳಿಯವರು ಬಂದವರಿಗೆ ಊಟೋಪಚಾರ ವ್ಯವಸ್ಥೆ ಮಾಡಿದರು. ಮಠದಿಂದ ರಂಗಮಂಟಪದ ಸಾಮಗ್ರಿಗಳು ನಾಟಕಕಲಾವಿದರು, ವಾದ್ಯಗೋಷ್ಠಿ, ಅಲಂಕಾರ ಮಾಡುವವರು. ವಿದ್ಯುತ್ತಿನ ವ್ಯವಸ್ಥೆ ಮಾಡುವವರು ಎಲ್ಲರೂ ಮಠದ ಖರ್ಚಿನಿಂದಲೇ ಧಾವಿಸಿದರು. ಭಾಷಣ, ಪ್ರವಚನ ಮಾಡುವವರೂ ಆಗಮಿಸಿದರು. ಅವರಿಗೂ ಮಠದಿಂದಲೇ ಖರ್ಚು ವೆಚ್ಚಗಳ ಪೂರೈಕೆಯಾಯಿತು. ಈ ಸಮಯದಲ್ಲಿ ಉಳಿದವರ ವಿಷಯ ಹೇಗಾದರೂ ಇರಲಿ, ಶ್ರೀಗಳವರ ಶ್ರಮದ ವೊತ್ತ ಹೇಳುವುದಿಲ್ಲಿ ಮುಖ್ಯ. ಶ್ರೀಗಳವರು ರಾತ್ರಿ ೨ ಗಂಟೆಗೆ ಎದ್ದು ಎಂದಿನಂತೆ ತಮ್ಮ ಬೆಳಗಿನ ೫–೩೦ರ ವರೆಗಿನ ಪೂಜೆ ಮುಗಿಸಿ, ಫೈಲು ನೋಡುವುದು, ಪತ್ರಿಕೆಗಳ ಅವಲೋಕನ, ಪಾಠ ಮಾಡುವುದು ಇತ್ಯಾದಿ ಕಾಯಕ ಮುಗಿಸಿ, ಬೆಳಗಿನ ៥ಗಂಟೆಗೆ ಮಠ ಬಿಟ್ಟು ೮ಗಂಟೆಗೆ ಆಯಾ ಹಳ್ಳಿಗಳಲ್ಲಿ ನಿರ್ದಿಷ್ಟ ಪಡಿಸಿದ ಸಭಾಕಾರ್ಯಕ್ರಮಗಳಲ್ಲಿ ೧೨ ಘಂಟೆಯವರೆಗೆ ಭಾಗವಹಿಸಿ. ಭಾಷಣ ಪ್ರವಚನ ಮುಗಿಸುವುದು, ೧೨ರಿಂದ ೨ ಗಂಟೆಯವರೆಗೆ ಪೂಜೆ, ಆಮೇಲೆ ಪುನಃ ಮಧ್ಯಾಹ್ನದ ಸಭಾಕಾರ್ಯಕ್ರಮ. ಆಗಲೂ ಭಾಷಣ ಪ್ರವಚನ ಕಾರ್ಯಕ್ರಮಗಳು ೬ ಘಂಟೆಯವರೆಗೆ. ಆಮೇಲೆ ಪುನಃ ಪೂಜೆ, ೯ ಘಂಟೆಗೆ ನಾಟಕದ ಕಾರ್ಯಕ್ರಮದಲ್ಲಿ ಭಾಗವಹಿಸುವಿಕೆ. ಬೆಳಗಾಗುವ ತನಕ ನಾಟಕವನ್ನು ಎಲ್ಲರೊಡನೆ ನೋಡುವುದು. ಎಲ್ಲರ ಸಂತೋಷದಲ್ಲಿ ತಾವೂ ಭಾಗಿಯಾಗುವುದು. ಬೆಳಕು ಹರಿಯುತ್ತಿದ್ದಂತೆ ಪುನಃ ಮಠಕ್ಕೆ ಬಂದು ಸ್ನಾನ ಪೂಜೆ ಮುಗಿಸಿ ಎಂದಿನಂತೆ ತಮ್ಮ ಮಠದ ಕಾರ್ಯಕ್ರಮದಲ್ಲಿ ಭಾಗವಹಿಸುವುದು. ಈ ಅವಿಶ್ರಾಂತ ಶ್ರಮಕ್ಕೆ ಸಾಮಾನ್ಯ ಚೇತನ ತಡೆಯಲು ಸಾಧ್ಯವೇ ಇಲ್ಲ. ಅವರ ಆರೋಗ್ಯ ಅದು ಹೇಗೆ ತಡೆಯುತ್ತದೆಯೋ ದೇವರೇ ಬಲ್ಲ. ಅವರ ಆರೋಗ್ಯದ ಗುಟ್ಟು ಅವರ ವ್ಯವಸ್ಥಾ ಬದ್ಧವಾದ ಜೀವನದಲ್ಲಿ ಅಡಗಿದೆ. ಈ ಕಾರ್ಯಕ್ರಮವನ್ನು ಅವರು ನಡೆಸಿದುದು ಹೀಗೆ: ೧೯೭೭ ನೆಯ ಮೇ ತಿಂಗಳ ೧೫ ನೆಯ ತಾರೀಖು ಬ್ಯಾಲದಕೆರೆಯಲ್ಲಿ, ಅದೇ ತಿಂಗಳು ೧೯ ನೆಯ ದಿನಾಂಕ ಕಂಚುಗಲ್ಲು ಬಂಡೇಮಠದಲ್ಲಿ, ೨೪ ನೆಯ ದಿನಾಂಕ ಮೆಳೆಹಳ್ಳಿಯಲ್ಲಿ, ಜೂನ್ ೨೨ ರಂದು ಪುರುಷನ ಹಳ್ಳಿಯಲ್ಲಿ. ಈ ಪ್ರಕಾರ ಗೊತ್ತು ಮಾಡಿ ವ್ಯವಸ್ಥಾ ಬದ್ಧವಾಗಿ ಆಚರಿಸಿದರು. ಎಲ್ಲವೂ ಕ್ರಮವಾಗಿ ನಡೆದುಹೋದವು. ಇದರಿಂದ ಮಠಕ್ಕೆ ಸುಮಾರು ೮–೧೦ ಸಾವಿರದಷ್ಟಾದರೂ ಖರ್ಚಾಗಿರಬೇಕು. ಈ ಸಂದರ್ಭವನ್ನು ಉಲ್ಲೇಖಿಸಿದುದರ ಉದ್ದೇಶವಿಷ್ಟೆ: ತಮ್ಮ ಮೈಮೇಲೆ ಅನೇಕ ಭಾರಗಳನ್ನು ತಾವೇ ಎಳೆದುಕೊಂಡು ಅವಿಶ್ರಾಂತ ಶ್ರಮದ ಜೀವನದಲ್ಲಿ ಅವರು ತೊಡಗಿ ಅದರಿಂದ ಪರರಿಗೆ ಅದರಲ್ಲೂ ಗ್ರಾಮಾಂತರದ ಜನರಿಗೆ ಉಪಕಾರವಾದರೆ ಸಾಕು; ಆಗ ಅವರಿಗಾಗುವ ತೃಪ್ತಿ ಅಷ್ಟಿಷ್ಟಲ್ಲ. ಇಂಥ ಸಂದರ್ಭದಲ್ಲೂ ಇವರು ತ್ರಿಕಾಲಪೂಜೆಯ ನಿಷ್ಠೆಗೆ, ಸಮಯಾಚಾರಕ್ಕೆ ಅಲಸದೆ ವ್ಯವಹರಿಸಿದರು. ಅವರ ಈ ವ್ಯವಹಾರಗಳೆಲ್ಲ ಲೋಕಾನುಗ್ರಹಕ್ಕೆ ಸಂಪೂರ್ಣ ಪೂರಕಗಳೇ ಆದವುಗಳಾದುವು. ಹಳ್ಳಿಯವರಿಗೆ ಇಷ್ಟೆಲ್ಲ ಖರ್ಚು ವೆಚ್ಚಗಳನ್ನು ತೂಗಿಸುವ ಸಾಮರ್ಥ್ಯವಿರುವುದಿಲ್ಲವೆಂದು ಖರ್ಚು ವೆಚ್ಚಗಳ ಭಾರವನ್ನು ತಾವೇ ಮೈಮೇಲೆ ಎಳೆದುಕೊಂಡುಬಿಟ್ಟರು. ಅವರೆ ಊರಿನವರು ಸುತ್ತಮುತ್ತಣ ಹಳ್ಳಿಯಿಂದ ಬರುವ ಸಾವಿರಾರು ಜನಕ್ಕೆ ಎರಡೂ ಹೊತ್ತು ದಾಸೋಹ ವ್ಯವಸ್ಥೆ ಮಾತ್ರ ಮಾಡಲೇಬೇಕು ಮಾತ್ರ. ಅದಕ್ಕೆ ಬೇಕಾಗುವ ಪಾತ್ರೆಪಡಗಗಳೂ ಮಠದಿಂದಲೇ ಬಂದವುಗಳೆಂಬುದನ್ನು ಇಲ್ಲೇ ಸ್ಮರಿಸಬೇಕು. ದಾಸೋಹ ವ್ಯವಸ್ಥೆ ಸಿದ್ಧಗಂಗಾಶ್ರೀಗಳು ಎಲ್ಲೆಲ್ಲಿ ಇಂಥ ಸಮಾರಂಭಗಳಿಗೆ ಹೋಗುವರೋ ಅಲ್ಲೆಲ್ಲಾ ನಡೆಯಲೇ ಬೇಕು. ಎಲ್ಲರೂ ತೃಪ್ತಿಯಾಗಿ ಊಟಮಾಡಬೇಕು. ಪ್ರಸಾದಕ್ಕೆ ಯಾರೂ ಪರದಾಡಬಾರದು. ಏಕೆಂದರೆ ಅವರು ಸರ್ವದಾ ದಾಸೋಹ ಮೂರ್ತಿಗಳೇ ಅಲ್ಲವೇ ! ದಾಸೋಹದಲ್ಲಿ ಅವರು ಪಡುವ ತೃಪ್ತಿ ಅತಿ ಹೆಚ್ಚಿನದು. ಅದಕ್ಕಾಗಿ ಯಾವ ಬೆಲೆಯನ್ನಾದರೂ ತೆತ್ತಾರು. ಎಷ್ಟಾದರೂ ಶ್ರಮಪಟ್ಟಾರು. ಅವರ ಶ್ರಮ ಲೋಕಕ್ಕೆ ತೃಪ್ತಿಯಾದರೆ ಅದೇ ಅವರಿಗೆ ಆನಂದ. ಈ ದೃಷ್ಟಿಯನ್ನು ಅವರ ಎಲ್ಲಾ ಮುಖಗಳ ಯೋಜನೆ ಯೋಚನೆಗಳಲ್ಲಿ ಕಾಣಬಹುದು. 'ಉಪಕಾರಃ ಪರೋಧರ್ಮಃ ಪರಾರ್ಥಂ ಕರ್ಮನೈಪುಣಂ......' ಎಂಬುದು ಅವರ ಸಮಗ್ರ ಜೀವನಕ್ಕೆ ಹೊಂದಿಕೆಯಾಗುವ ಮಾತಾಗಿದೆ.

**ಶ್ರೀಗಳವರು ಉತ್ತಮ ಪ್ರವಚನಕಾರರು, ಉಪದೇಶಕರು, ಲೇಖಕರು :**

ಶ್ರೀಗಳವರು ಪುರಾಣ ಪ್ರವಚನಕ್ಕೆ ಕುಳಿತರೆ, ಅನೇಕ ಶಾಸ್ತ್ರಸಮ್ಮತವಾಗಿ ವಿವರಿಸುತ್ತ ಕೇಳುವವರನ್ನು ಮಂತ್ರ

ಮುಗ್ಧರನ್ನಾಗಿ ಮಾಡುತ್ತಾರೆ. ೧೯೫೧ರಲ್ಲಿ ಮಠದಲ್ಲಿ ಶ್ರಾವಣಮಾಸ ಪ್ರಯುಕ್ತ ಪ್ರಭುಲಿಂಗಲೀಲೆ ಪ್ರವಚನ ಒಂದು ತಿಂಗಳು ನಡೆಯಿತು. ನಾನೇ ಓದಿ ವಿವರಣೆ ಮಾಡುತ್ತಿದ್ದೆ. 'ಭೋಗ ಭೂಮಿಯ ಭೋಗತನುವಿನಲಾಗದನುಪಮಕಾರ್ಯಸಿದ್ಧಿ......' (ಗತಿ-೨-೩೪) ಎಂಬ ಪದ್ಯಾರ್ಥವನ್ನು ನಾನು ವಿವರಿಸುತ್ತಿದ್ದೆ. ಅಷ್ಟು ಹೊತ್ತಿಗೆ ಶ್ರೀಗಳವರು ಬಂದುಬಿಟ್ಟರು. ನಾನು ಹೇಳಿದ ಅರ್ಥ ಅಷ್ಟೊಂದು ಸರಿಯಿರಲಿಲ್ಲ. ಸರಿ, ಪ್ರಾರಂಭವಾಯಿತು ಆ ಪದ್ಯದ ಮೇಲೆ ವ್ಯಾಖ್ಯಾನ. ಅಂದಿನ ಪ್ರವಚನಕ್ಕೆ ಅದೊಂದೇ ಪದ್ಯದ ಅರ್ಥವನ್ನು ಒಂದು ಘಂಟೆಯವರೆವಿಗೆ ನಿರರ್ಗಳವಾಗಿ ಪ್ರವಚನ ಮಾಡಿಬಿಟ್ಟರು. ಕೂಡಿದ ಜನಗಳೆಲ್ಲ 'ತಾವೇ ಒಂದು ತಿಂಗಳು ಈ ಪ್ರವಚನ ಮುಗಿಸಬೇಕೆ'ಂದು ಕೇಳಿಕೊಂಡರು. ಶ್ರೀಗಳವರಿಗೆ ಕಾರ್ಯಭಾರ ಬೇಕಾದಷ್ಟಿತ್ತು. ಒಂದೊಂದು ನಿಮಿಷವೂ ಬಿಡುವಿದ್ದಿಲ್ಲ. ಆದರೂ ಭಕ್ತರೆಲ್ಲರ ಮತ್ತು ವಿದ್ಯಾರ್ಥಿಗಳ ಒತ್ತಾಯಕ್ಕೆ ಕಟ್ಟುಬಿದ್ದು ಆ ವರ್ಷ ಶ್ರಾವಣಮಾಸ ಪೂರ್ಣ ಪ್ರಭುಲಿಂಗಲೀಲೆಯ ಪ್ರವಚನವನ್ನು ಶ್ರೀಗಳವರೇ ಮಾಡಿದರು. ನಾನು ಪುರಾಣ ಓದತೊಡಗಿದೆ. ಆ ಅಭೂತಪೂರ್ವಪ್ರವಚನದಿಂದ ಕೂಡುತ್ತಿದ್ದ ಜನವೆಲ್ಲ ಬೆಕ್ಕಸಬೆರಗುಗೊಂಡಿತು. ಪುರಾಣ ಪರಿಸಮಾಪ್ತಿಯ ಕಾಲದಲ್ಲಿ ಮೈಸೂರು ಅರಮನೆಯ ಪಂಚಗವಿಮಠಾಧ್ಯಕ್ಷರೂ ಜಗತ್ಪ್ರಸಿದ್ಧ ವಿದ್ವಾಂಸರೂ ಆದ ಗೌರೀಶಂಕರ ಸ್ವಾಮಿಗಳು ಬಂದು ಮೂರುದಿನ ಬೆಳಗು ಬೈಗು ಎರಡೆರಡು ಸಲದಂತೆ ಪ್ರಭುಲಿಂಗಲೀಲೆಯ ಪ್ರಸಂಗಗಳ ಮೇಲೆ ಪ್ರವಚನ ಮಾಡಿದರು. ಅದೊಂದು ಸ್ವರ್ಗೀಯ ಸನ್ನಿವೇಶವೇ ಆಗಿತ್ತು.

ಶ್ರೀಗಳವರು ಯಾವಾಗ ಅಭ್ಯಾಸ ಮಾಡಿದ್ದರೋ ಅವರಿಗೆ ಅಭ್ಯಾಸಮಾಡಲು ಸಮಯವು ಯಾವಾಗ ಸಿಕ್ಕುತ್ತಿತ್ತೋ ಗೊತ್ತಿಲ್ಲ. ಅನೇಕ ಗ್ರಂಥಾವಲೋಕನ ಮಾಡಿ ಅದನ್ನೆಲ್ಲ ಕಂಠಸ್ಥ ಮಾಡಿಕೊಂಡಿದ್ದಾರೆ. ಅವರ ಪ್ರವಚನದಲ್ಲಿ ಅವೆಲ್ಲ ನಿರರ್ಗಳವಾಗಿ ಬರುತ್ತವೆ. ಅವರು ಕಂಠಸ್ಥ ಮಾಡಿಕೊಂಡಿರುವ ಗ್ರಂಥಗಳೆಂದರೆ, ಮೊಗ್ಗೆಯ ಮಾಯಿದೇವರ ಶತಕತ್ರಯ, ನಿಜಗುಣ ಶಿವಯೋಗಿಗಳ ಕೈವಲ್ಯಪದ್ಧತಿ, ಸರ್ಪಭೂಷಣಶಿವಯೋಗಿಗಳ ಕೈವಲ್ಯಕಲ್ಪವಲ್ಲರಿ, ಮೈಲಾರದ ಬಸವಲಿಂಗ ಶರಣರ ಗುರುಕರಣತ್ರಿವಿಧಿ, ಹರಿಹರನ ಪಂಪಾಶತಕ ರಕ್ಷಾಶತಕಗಳು, ಮುಪ್ಪಿನ ಷಡಕ್ಷರಿಗಳ ಪದ್ಯಗಳು, ಷಡಕ್ಷರದೇವನ ರಾಜಶೇಖರ ವಿಳಾಸದಲ್ಲಿ ಬರುವ ಶ್ರೀಶೈಲಜಾವಲ್ಲಭಾಂಕಿತ ಶಿವಮಹಿಮಾಸ್ತೋತ್ರಗಳು ಮತ್ತು ಇದೇ ಕವಿಯ ಇತರ ಸ್ತೋತ್ರ ಸಾಹಿತ್ಯದ ಪದ್ಯಗಳು. ಶಂಕರಾಚಾರ್ಯರ ಭುಜಂಗಪ್ರಯಾತವೃತ್ತಗಳು, ರಾವಣಕೃತ ಶಿವತಾಂಡವಸ್ತೋತ್ರ, ಸುಭಾಷಿತರತ್ನ ಭಾಂಡಾಗಾರದ ಅನೇಕ ಪದ್ಯಗಳು-ಹೀಗೆ ಈ ಪಟ್ಟಿಯನ್ನು ಬೆಳೆಸುತ್ತಾ ಹೋಗಬಹುದು. ಇವನ್ನೆಲ್ಲ ಸಂದರ್ಭೋಚಿತವಾಗಿ ಹಾಡಿ ಅವುಗಳ ಆಧಾರದಿಂದ ಪ್ರವಚನ ಮಾಡುತ್ತ ಹೋದರೆ ಕೇಳುವವರಿಗೆ ರಸದೌತಣವಿದ್ದಂತಿರುತ್ತದೆ. ಈಗಲೂ ಶಿವಪೂಜೆ ಮುಗಿಸಿ ಆನಂದವಾಗಿ ಅವುಗಳನ್ನೆಲ್ಲ ರಾಗವೆತ್ತಿ ಹಾಡಿ ತೃಪ್ತಿಪಡುತ್ತಾರೆ. ಕೇಳುವವರಿಗೆ ತೃಪ್ತಿಪಡಿಸುತ್ತಾರೆ. ಶ್ರೀಗಳವರ ಜ್ಞಾಪಕಶಕ್ತಿಯ ಜೊತೆಗೆ ಪ್ರತಿಭೆಯ ಬಗೆಗೆ ಕೇಳುವವರೆಲ್ಲ ಅಪ್ರತಿಭರಾಗುತ್ತಾರೆ. ಎಂದಿನಿಂದಲೂ ಬಿಡುವಿಲ್ಲದ ಕಾರ್ಯಭಾರದಲ್ಲಿ ಹುದುಗಿರುವ ಅವರಿಗೆ ಇವುಗಳನ್ನೆಲ್ಲ ಕಂಠಸ್ಥ ಮಾಡಿಕೊಳ್ಳಲು ಸಮಯ ಯಾವಾಗ ಸಿಕ್ಕಿತು ಎಂಬುದೊಂದು ದೊಡ್ಡ ಪ್ರಶ್ನೆಯೇ. ಒಂದು ಸಲ ಈ ಬಗ್ಗೆ ಪ್ರಶ್ನೆಯನ್ನು ಶ್ರೀಗಳವರಲ್ಲಿ ಮಾಡಿದಾಗ ಅವರಿತ್ತ ಉತ್ತರ: 'ನಮ್ಮ ದೊಡ್ಡ ಸ್ವಾಮಿಗಳಿದ್ದಾಗ ವಿದ್ಯಾರ್ಥಿಗಳ ಕೊಠಡಿಗಳ ಮಧ್ಯದಲ್ಲಿಯೇ ಪವಡಿಸುತ್ತಿದ್ದೆ. ರಾತ್ರಿ ನಸುಕಿನಲ್ಲಿಯೇ ಎದ್ದು ದಿನವೂ ಎರಡು ಘಂಟೆಗಳ ಕಾಲ ಪಾರಾಯಣ ಮಾಡುತ್ತಿದ್ದುದರ ಫಲವಾಗಿ ಮತ್ತು ಗುರುಗಳು ಲಿಂಗೈಕ್ಯರಾದ ಮೇಲೂ ಮಾರ್ಕಾಂಡೇಯ ನಿಲಯದಲ್ಲಿಯೇ ಪವಡಿಸುತ್ತಿದ್ದೆ. ಆಗ ಎಷ್ಟೇ ಕೆಲಸದ ಒತ್ತಡವಿದ್ದರೂ ಕನಿಷ್ಠ ಪಕ್ಷ ಅರ್ಧ ಘಂಟೆಯಾದರೂ ಒಂದೊಂದಾಗಿ ಪಾರಾಯಣ ಮಾಡುತ್ತಿದ್ದೆ. ಹತ್ತು ಹನ್ನೆರಡು ವರ್ಷಗಳ ಸತತ ಪಾರಾಯಣದಿಂದ ಇವೆಲ್ಲ ಕಂಠಸ್ಥವಾಗಲು ಸಾಧ್ಯವಾಯಿತು. ಒಂದು ಮಾತು: ಮನುಷ್ಯ ಮನಸ್ಸು ಮಾಡಿ ಉತ್ಸಾಹದಿಂದ ಮುಂದುವರಿದರೆ ಸಾಧಿಸದಿರುವ ಸಾಧನೆ ಯಾವುದು ತಾನೆ ಇದೆ'? ಹೀಗೆ ಅವರು ಅಸಂಖ್ಯ ಪದ್ಯಗಳ ಕಂಠಸ್ಥ ವಿಷಯದಲ್ಲಿ ಅಪ್ಪಣೆ ಕೊಡಿಸಿದಮಾತು ಇಂದಿಗೂ ಕಿವಿಯಲ್ಲಿ ಮಾರ್ದನಿಸುತ್ತಿದೆ. ಎಷ್ಟೋ ಸಲ ಅವರು 'ಸ್ವಲ್ಪ ಸಮಯ ಸಿಗುತ್ತಿದ್ದರೆ ಬರವಣಿಗೆಯನ್ನು ಮಾಡಬಹುದಿತ್ತು. ಆದರೆ ಈ ಎಲ್ಲ ಕೆಲಸಕಾರ್ಯಗಳ ನಿರ್ವಹಣೆಯ ಭಾರ ಬರವಣಿಗೆಯತ್ತ ಗಮನ ಹರಿಸಲು ಅವಕಾಶಕೊಡಲಿಲ್ಲ' ಎಂದು ಹೇಳುತ್ತಾರೆ. ಬರವಣಿಗೆಯನ್ನು ಒಮ್ಮೊಮ್ಮೆ ಅವಕಾಶ ಕಲ್ಪಿಸಿಕೊಂಡು ಬರೆದಿರುವುದೂ ಪ್ರಯತ್ನಿಸಿರುವುದೂ ಕಂಡುಬರುತ್ತಿದೆ. ಆದರೆ ತೀರಾ ಕಡಿಮೆ.

ಶ್ರೀಗಳವರು ಒಳ್ಳೆಯ ಉಪನ್ಯಾಸಕರು ಎಂಬುದು ಲೋಕಕ್ಕೆಲ್ಲ ಗೊತ್ತು. ಅವರು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ಮದ್ರಾಸು ನಾಡಿನ ಅನೇಕ ಸಂಘಸಂಸ್ಥೆಗಳ ಆಹ್ವಾನದ ಮೇರೆಗೆ ಹೋಗಿ ಮಹಾ ಮಹಾ ಜನಸ್ತೋಮದಲ್ಲಿ ಪ್ರಸನ್ನವಾಣಿಯಿಂದ ಪರಮಾವಧಿ ಮೂರು ಘಂಟೆಗಳ ಕಾಲ ಉಪನ್ಯಾಸ ಮಾಡಿದುದು ಕಂಡು ಬರುತ್ತದೆ. ಕರ್ನಾಟಕದಲ್ಲಿ ಯಂತೂ ಎಲ್ಲಾ ತಾಲ್ಲೂಕುಗಳ ಮುಖ್ಯ ಸ್ಥಳಗಳಲ್ಲಿ ಬಹುಶಃ ಅನೇಕ ಸಭೆ ಸಮಾರಂಭಗಳಲ್ಲಿ ಭಾಗವಹಿಸಿದ್ದಾರೆ. ಎಲ್ಲ ಮತ ಬಾಂಧವರೂ ಇವರನ್ನು ಆದರದಿಂದ ಬರಮಾಡಿಕೊಂಡು ಉಪದೇಶವನ್ನು ಆಲಿಸಿ ತೃಪ್ತರಾಗಿದ್ದಾರೆ. ಹಳ್ಳಿಪಳ್ಳಿಗಳ ಸಂಖ್ಯೆ ಯಂತೂ ಅಪಾರ. ಸಾಮಾನ್ಯವಾಗಿ ಹಳ್ಳಿಗಳ ಸಭೆಗಳಲ್ಲಿ ಅವರ ಮಟ್ಟಕ್ಕೆ ನಿಲುಕುವ ಭಾಷೆಯಲ್ಲಿ ನೂರಾರು ದೃಷ್ಟಾಂತ ಉಪ

**We,** the Chancellor, Vice-Chancellor and Members of the Senate of the **Karnatak University** certify that the Honorary Degree of

# Doctor of Letters

has been conferred on

**His Holiness Shivakumar Swamiji,** B.A.,

at Dharwar, on Sixth November, in the year one thousand nine hundred and sixty-five.

**In Testimony** whereof are set the Seal of the said University and the Signature of the said Chancellor.

V. V. Giri

Chancellor

ಮಾನಗಳನ್ನು ಜೋಡಿಸಿ ಹೇಳುವ ಆ ವಿಧಾನ ಅನ್ಯಾದೃಶ. ಪಂಡಿತರ ವಿದ್ಯಾವಂತರ ಸಭೆಗಳಲ್ಲಿ ಅನೇಕ ಜಟಿಲ ಸಮಸ್ಯೆಗಳಿಗೆ ಶ್ರೀಗಳವರ ಭಾಷಣ ಪರಿಹಾರವನ್ನೊದಗಿಸುವಂತಿರುತ್ತದೆ. ಬೆಂಗಳೂರು ಆಕಾಶವಾಣಿಯವರು ಮಠಕ್ಕೆ ಬಂದು ಶ್ರೀಗಳವರ ಸಂದೇಶಗಳನ್ನು ರಿಕಾರ್ಡು ಮಾಡಿಕೊಂಡು ಹೋಗಿ ಬಿತ್ತರಿಸಿದ್ದಾರೆ. ಕಡಿಮೆ ಮಾತುಗಳಲ್ಲಿ ಅರ್ಥಪೂರ್ಣವಾಗಿ ವಿಷಯ ವ್ಯಾಪ್ತಿಯ ಸಮಗ್ರ ನೋಟವನ್ನುಂಟುಮಾಡುವಲ್ಲಿ ಶ್ರೀಗಳವರಿಗೆ ಭಾಷೆಯ ಮೇಲೆ ಪ್ರಭುತ್ವ ಸಾಧಿಸಲ್ಪಟ್ಟ ಅಂಶ ಎಲ್ಲರಿಗೂ ಅರಿವನ್ನುಂಟುಮಾಡುತ್ತದೆ. ಅಥವಾ ಅವರ ವಿಚಾರಗಳಿಗೆಲ್ಲ ಅವರ ಭಾಷೆ ಮಣಿದು ಬಂದಿದೆಯೆನ್ನಬಹುದು. ಎಷ್ಟೋ ಸಂದರ್ಭಗಳಲ್ಲಿ ಇವರ ಭಾಷಣದಲ್ಲಿನ ನಿರೂಪಣಾ ವಿಧಾನದಿಂದಾಗಿ ಮನಃಪರಿವರ್ತನೆಗೊಂಡು ಅನೇಕ ಮಕ್ಕಳು ಶ್ರೀಗಳವರಲ್ಲಿ ತಮ್ಮ ತಪ್ಪನ್ನು ಒಪ್ಪಿಸಿ ಅತ್ತುಕರೆದು ಕ್ಷಮೆ ಕೇಳಿದುದೂ ಉಂಟು[33]. ರಾಷ್ಟ್ರಮಟ್ಟದ ಅಖಿಲ ಭಾರತ ವೀರಶೈವ ಮಹಾಧಿವೇಶನ ಬೊಂಬಾಯಿಯಲ್ಲಿ ಸೇರಿದಾಗ, ಅ.ಭಾ. ಕನ್ನಡ ಸಾಹಿತ್ಯ ಸಮ್ಮೇಳನಗಳು ಬೆಂಗಳೂರು ಮತ್ತು ಸಿದ್ಧಗಂಗೆಗಳಲ್ಲಿ ನೆರವೇರಿದಾಗ ಶ್ರೀಗಳವರು ಪ್ರಧಾನೋಪನ್ಯಾಸಕರಾಗಿ ವಿಚಾರಪರಿಪ್ಲುತ ಭಾಷಣಗಳನ್ನು ಯಾವ ಪೂರ್ವಸಿದ್ಧತೆಯೂ ಇಲ್ಲದೆ ಮಾಡಿದ್ದಾರೆ. ವಿಶ್ವವಿದ್ಯಾನಿಲಯದ ಮಹತ್ವದ ಸಭೆಗಳಲ್ಲಿ ಭಾಷಣ ಮಾಡಿದ್ದಾರೆ. ಅಂತೆಯೇ ಕರ್ನಾಟಕ ವಿಶ್ವವಿದ್ಯಾಲಯ ೬–೧೧–೬೫ರಲ್ಲಿ ಶ್ರೀಗಳವರನ್ನು ಬರಮಾಡಿಕೊಂಡು ಗೌರವ 'ಡಿಲಿಟ್' ಪದವಿಯನ್ನಿತ್ತು ಗೌರವಿಸುವ ವ್ಯಾಜದಲ್ಲಿ ತಮ್ಮನ್ನು ತಾವು ಗೌರವಿಸಿಕೊಂಡಿದೆ ಎನ್ನಬಹುದು[34].

ಶ್ರೀಗಳವರು ಸಿದ್ಧಗಂಗಾ ಕ್ಷೇತ್ರದಲ್ಲಿ ಹಳೆಯ ವಿದ್ಯಾರ್ಥಿ ಸಂಘದವರು ಹೊರಡಿಸುವ ಸಿದ್ಧಗಂಗಾ ತ್ರೈಮಾಸಿಕಕ್ಕೂ ಅದೇ ಈಗ ಮಾಸಿಕವಾಗಿ ಬರುತ್ತಿರುವದಕ್ಕೂ ತಮ್ಮ ಅಭಿಪ್ರಾಯಗಳನ್ನು ಚಿಕ್ಕ ಚಿಕ್ಕ ಲೇಖನಗಳ ರೂಪದಲ್ಲಿ ಬರೆದಿದ್ದಾರೆ. ಅವರ ಬರವಣಿಗೆಯಲ್ಲಿ ಧರ್ಮ, ಸಂಸ್ಕೃತಿ, ರಾಷ್ಟ್ರಸಮಸ್ಯೆಗಳಿಗೆ ವಿಶೇಷ ಪ್ರಾಧಾನ್ಯತೆಯಿರುತ್ತದೆ. ಮಾತುಗಳು ಸೂತ್ರಬದ್ಧ. ನೇರವಾಗಿ ಹೃದಯಕ್ಕೆ ನಾಟುವ ಸತ್ವಾಧಿಕ್ಯದಿಂದ ಕೂಡಿರುತ್ತವೆ. ಇದೇ ಗ್ರಂಥದ ಬೇರೊಂದೆಡೆಯಲ್ಲಿ ಓದುಗರು ಅವುಗಳ ಲಾಭ ಪಡೆಯಬಹುದು. ಹೀಗೆ ಶ್ರೀ ಸಿದ್ಧಗಂಗಾ ಶ್ರೀಗಳವರು ಪ್ರವಚನಕಾರರಾಗಿ, ಲೇಖಕರಾಗಿ, ಹೃದಯವನ್ನು ಪ್ರವೇಶಿಸುವಂತಹ, ಅಂತಃಕರಣವನ್ನು ಕಲಕುವಂತಹ ಉಪದೇಶಕರಾಗಿ ಲೋಕಜೀವನಕ್ಕೆ ತಮ್ಮ ಅಮೋಘವಾದ ಕಾಣಿಕೆಯನ್ನು ಸಲ್ಲಿಸು

---

33. ಒಮ್ಮೆ ಕುಣಿಗಲ್ಲು ತಾಲ್ಲೂಕಿನ ಒಂದು ಶಾಲಾವಾರ್ಷಿಕೋತ್ಸವ ಪ್ರಸಂಗ (ಊರ ಹೆಸರು ಮರತಿದೆ). ಆ ಶಾಲಾ ಮಕ್ಕಳ ಮಧ್ಯದಲ್ಲಿ ಶ್ರೀಗಳವರು ಭಾಷಣ ಮಾಡುತ್ತಾ ಮಕ್ಕಳು ತಂದೆತಾಯಿಯರಲ್ಲಿ ತೋರಿಸುವ ವಿಧೇಯತೆಯ ವಿಷಯ ವಿವರಿಸುತ್ತಿದ್ದರು. ಈ ವಿವರಣೆ ಮುಗಿದೊಡನೆ ಓರ್ವ ೧೨-೧೩ ವರ್ಷದ ಬಾಲಕ ಬಿಕ್ಕಿ ಬಿಕ್ಕಿ ಅಳತೊಡಗಿದ. ಕೂಡಿದ ಜನರೆಲ್ಲ ಅವಾಕ್ಕಾದರು. ಹುಡುಗನನ್ನು ಸ್ವಾಮಿಗಳು ಸಮಾಧಾನಪಡಿಸಿ, ಏನೆಂದು ವಿಚಾರಿಸಿದಾಗ ಆತನು, 'ಸ್ವಾಮಿ, ನಾನು ನಮ್ಮ ತಂದೆಯ ಜೇಬಿನಿಂದ ಹತ್ತುರೂಪಾಯಿಯ ನೋಟು ಕದ್ದು ನಾನು ತಕ್ಕೊಂಡಿಲ್ಲ ಎಂದು ಸುಳ್ಳು ಹೇಳಿಬಿಟ್ಟೆ. ಮುಂದೆ ನನ್ನ ಗತಿಯೇನು' ? ಎಂದು ಅಳುತ್ತಲೇ ಇದ್ದ. ಶ್ರೀಗಳವರು ಅವನನ್ನು ಯಥೋಚಿತ ಸಾಂತ್ವನಗೊಳಿಸಿ ಕಳುಹಿಸಿಕೊಟ್ಟರು. ಈ ಪ್ರಸಂಗ ೧೯೫೨ರಲ್ಲಿ ನಡೆದುದು.

34. ಈ ಸಮಯದಲ್ಲಿ ಸ್ವಾಮಿಗಳವರ ಬಗೆಗೆ ವಿಶ್ವವಿದ್ಯಾಲಯವು ಹೇಳಿದ ಮಾತುಗಳು ಉಲ್ಲೇಖನಾರ್ಹವಾದುವುಗಳೆಂದು ಇಲ್ಲಿ ಕೊಡಲಾಗಿದೆ.

''ನಾವು ಈಗ ಸನ್ಮಾನಿಸುತ್ತಿರುವ ಸಿದ್ಧಗಂಗಾ ಮಠದ ಪೂಜನೀಯ ಶ್ರೀ ಶಿವಕುಮಾರ ಸ್ವಾಮಿಗಳು ಮಾನವ ಕುಲದ ಹಿತಕ್ಕಾಗಿ ಪರಿಶ್ರಮಿಸುತ್ತಿರುವ ಆದರ್ಶವಾದಿ ಮಹಾಪುರುಷರು. ಎಲ್ಲ ಅಂತಸ್ತಿನ ಜನಸಾಮಾನ್ಯರಲ್ಲಿ ಸಂಸ್ಕೃತಿ, ವಿದ್ಯಾಭ್ಯಾಸಗಳನ್ನು ಹರಡಲು ಅವರು ವಿಶೇಷವಾಗಿ ಶ್ರಮಿಸುತ್ತಿದ್ದಾರೆ. ಈ ಧ್ಯೇಯಸಾಧನೆಗಾಗಿ ಅವರು ಅನುಸರಿಸುತ್ತಿರುವ ಮಾರ್ಗವು ವಿಶಿಷ್ಟವೂ ಅನುಕರಣೀಯವೂ ಆಗಿದೆ. ಅವರು ಆಶ್ರಮ ಸ್ವೀಕರಿಸಿದ ಮೇಲೆ ಸಾಂಪ್ರದಾಯಿಕ ತತ್ವಶಾಸ್ತ್ರದ ಪರಿಚಯವನ್ನು ಹೊಂದಲು ಸಂಸ್ಕೃತಾಧ್ಯಯನಕ್ಕೆ ತೊಡಗಿ,ಸಿದ್ಧಗಂಗಾ ಕ್ಷೇತ್ರದಲ್ಲಿ ಈ ಮೊದಲೇ ಸ್ಥಾಪಿತವಾಗಿದ್ದ ಮಹಾಪಾಠಶಾಲೆಯ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದರು. ಅದರ ಫಲವಾಗಿ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆಯಲ್ಲಿ ಶಿಕ್ಷಣ ಪಡೆಯುವವರ ಸಂಖ್ಯೆ ೧೯೬೫ರಲ್ಲಿ ೮೦೦ಕ್ಕೇರಿತು. (ಈಗ ೧೯೭೪ಕ್ಕೆ ಈ ಸಂಖ್ಯೆ ಸುಮಾರು ೩೦೦೦) ಇದೇ ಸಂದರ್ಭದಲ್ಲಿ ಶ್ರೀಗಳವರು ವಿದ್ಯಾಭ್ಯಾಸವು ಸಿರಿವಂತ ಉತ್ತಮವರ್ಗದ ಮಕ್ಕಳಿಗೆ ಮೀಸಲಾಗಿ ಬಡ ಮಕ್ಕಳ ವಿದ್ಯಾಭ್ಯಾಸಕ್ಕೆ ಸಾಕಷ್ಟು ಸೌಕರ್ಯ ಅನುಕೂಲಗಳು ಇಲ್ಲದಿರುವುದನ್ನರಿತು ಮಠದ ಉಚಿತವಿದ್ಯಾರ್ಥಿನಿಲಯದಲ್ಲಿ ೨೨೦೦ ಜನ ಮಕ್ಕಳಿಗೆ (ಈಗ ೧೯೭೪ರಲ್ಲಿ ಈ ಸಂಖ್ಯೆ ೩೮೦೦) ಉಚಿತ ಅಶನ-ವಸತಿ ಏರ್ಪಡಿಸಿರುವರು, ಕಟ್ಟುನಿಟ್ಟಾಗಿ ನಿಯಮ ನಿಬಂಧನೆಗಳನ್ನು ಪಾಲಿಸಿ, ಶಿಸ್ತಿನಿಂದ ನಡೆದು ಆದರ್ಶಜೀವನವನ್ನು ರೂಪಿಸುವ ನೀತಿಶಿಕ್ಷಣವೂ ಕೊಡಲ್ಪಡುತ್ತಿದೆ, ಈ ವಿದ್ಯಾರ್ಥಿ ನಿಲಯದಲ್ಲಿ. ಶ್ರೀಗಳವರು ಸಾಹಿತ್ಯಪ್ರಿಯರು, ಜೀವನದಲ್ಲಿ ಸಾಹಿತ್ಯ ಪ್ರಭಾವವನ್ನರಿತವರು. ಅವರ ಯಾಜಮಾನ್ಯದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ೪೪ನೆಯ ಸಮ್ಮೇಳನವು ಯಶಸ್ವಿಯಾಗಿ ನಡೆಯಿತು. ಸಾಹಿತ್ಯ, ತತ್ವಶಾಸ್ತ್ರಗಳಲ್ಲಿನ ಆಸಕ್ತಿ, ಸನಾತನಸಂಸ್ಕೃತಿಯ ಅಭಿರುಚಿ ಇವು ಶ್ರೀಗಳವರನ್ನು ಆಧುನಿಕ ಸಮಾಜದ ಅಗತ್ಯಗಳ ಕಡೆಗೆ ಉದಾಸೀನರನ್ನಾಗಿ ಮಾಡಿಲ್ಲ. ಶ್ರೀಗಳವರು ಪ್ರಾರಂಭಿಸಿರುವ ಇಂಜಿನಿಯರಿಂಗ್ ಕಾಲೇಜು; ತಾಂತ್ರಿಕ ವಿದ್ಯೆಯನ್ನು ಜನತೆಯಲ್ಲಿ ಹರಡುವ ಸಾಧನವಷ್ಟೆ ಅಲ್ಲ, ಆ ಪ್ರಾಂತದಲ್ಲಿ ಸಮಾಜಸೇವಾಭಾವನೆಯನ್ನು ಉದ್ಬೋಧಿಸುವ ಸಂಸ್ಕೃತಿ ಕೇಂದ್ರವೂ ಆಗಿದೆ.''

ತ್ತಲೇ ಬಂದಿದ್ದಾರೆ. ಎಣೆಯಿಲ್ಲದ ಅವರ ಅನೇಕ ಮುಖದ ಮಹಿಮಾಪೂರ್ಣ ಜೀವನ ವಿಧಾನಗಳ ಪರಿಚಯ ಮಾಡಿಕೊಡಲು ಈ ಕಿರುಲೆಕ್ಕಣಿಕೆಗೆ ಶಕ್ತಿಯುಂಟಾದೀತೆಂದು ಭಾವಿಸಲಾರೆ.

**ಆಡಂಬರ ಜೀವನಕ್ಕೂ ಶ್ರೀಗಳವರಿಗೂ ಬಹುದೂರ :**

ಆಡಂಬರ, ಕೃತ್ರಿಮತೆ, ಡಂಭಾಚಾರಗಳನ್ನು ಕಂಡರೆ ಶ್ರೀಗಳವರು ಕಿಡಿಕಿಡಿಯಾಗುತ್ತಾರೆ. ವಿಪರೀತ ಖರ್ಚಿನ ಜೀವನವನ್ನು ಕಂಡರಂತೂ ಅವರಿಗೆ ಆಗುವುದಿಲ್ಲ. ತಮ್ಮ ಜೀವನದಲ್ಲಿ ಅವರು ಅತ್ಯಂತ ಮಿತವ್ಯಯದವರು. ಅನವ್ಯಶ್ಯಕವಾಗಿ ಒಂದು ಕಾಸನ್ನೂ ಖರ್ಚು ಮಾಡುವುದಿಲ್ಲ. ಆವಶ್ಯಕವಾದ ಖರ್ಚುವೆಚ್ಚಗಳ ವಿಷಯ ಬಂದಾಗ ಲಕ್ಷ ಲಕ್ಷ ಮೊತ್ತದ ಹಣವನ್ನು ಲಕ್ಷ್ಯವಿಲ್ಲದೆ ಖರ್ಚು ಮಾಡಿ ಅದನ್ನು ಲೋಕಜೀವನದ ಪಾಲಿಗೆ ಎರೆದು ತೃಪ್ತಿಪಡಿಸುತ್ತಾರೆ. ಅವರು ತಮ್ಮ ಬಟ್ಟೆ ಬರೆ, ಊಟ ಉಪಚಾರದಲ್ಲಿ ಸದಾ ಆಡಂಬರರಹಿತರಾಗಿ ವರ್ತಿಸುತ್ತಾರೆಂಬುದು ಅವರನ್ನು ನೋಡಿದವರಿಗೆಲ್ಲರಿಗೂ ಸ್ಪಷ್ಟವಾಗಿಯೇ ಇದೆ. ಸದಾ ಖಾದಿಯ ಬಟ್ಟೆಯ ಒಂದು ಕಪನಿ, ಹೊದೆಯುವ ಒಂದು ಖಾದಿ ಸೆಲ್ಲೆ. ತಲೆಗೆ ಸುತ್ತುವ ಒಂದು ಪಾವುಡ. ಇಷ್ಟು ಅವರ ಬಟ್ಟೆಯ ಐಸಿರಿ. ಪಾದಗಳಿಗೆ ಮೆಟ್ಟಲು ಒಂದು ಜೊತೆ ಆವುಗೆ. ಇವನ್ನು ಸಾಮಾನ್ಯವಾಗಿ ಅವರು ಕೊಳ್ಳುವುದೂ ಅಪರೂಪ. ಭಕ್ತರು ತಮ್ಮ ಭಕ್ತಿಯ ಕಾಣಿಕೆಯಾಗಿ ಕೊಟ್ಟಿರುವುದೇ ಹೆಚ್ಚು. ಮೈಸೂರಿನ ಅರಮನೆ ಪಂಚಗವಿ ಮಠಾಧ್ಯಕ್ಷರಾದ ಗೌರೀಶಂಕರ ಸ್ವಾಮಿಗಳು[35] ಇವರ ವಿರಕ್ತಜೀವನ, ದಾಸೋಹಭಾವ, ಮಹಾನುಭಾವ ಸಂಪತ್ತಿಗೆ ಪೂರ್ಣ ಮಾರುಹೋಗಿ ಅತ್ಯಂತ ಗೌರವಭಾವದಿಂದ ಕಾಣುತ್ತಿದ್ದರು. ಒಮ್ಮೆ ಮೈಸೂರಿಗೆ ಕರೆದುಕೊಂಡು ಹೋಗಿ ಪಾದಪೂಜೆ ಮಾಡಿ ೧೫ ತೊಲೆ ಬಂಗಾರದ ಒಂದು ಲಿಂಗಕರಂಡಕ (ಕರಡಿಗೆ)ವನ್ನು ಅರ್ಪಿಸಿದರು. ಶ್ರೀಗಳವರು 'ಬುದ್ಧಿ, ನಾನಿದನ್ನು ಧರಿಸುವುದಿಲ್ಲ. ಬಂಗಾರದ ಕರಡಿಗೆಯನ್ನು ಧರಿಸಿ ನಾನು ಮಾಡುವುದೇನು ? ನನಗೆ ಬೇಡ' ಎಂದರು. ಅದಕ್ಕೆ ಗೌರೀಶಂಕರ ಸ್ವಾಮಿಗಳು 'ಸ್ವಾಮಿ, ನೀವು ಮಹಾ ಜಂಗಮಮೂರ್ತಿಗಳು, ನಾನೀಗ ಭಕ್ತನಾಗಿ ನಮ್ಮ ಮಠಕ್ಕೆ ನಿಮ್ಮನ್ನು ಕರೆದು ತಮ್ಮ ಪ್ರಸಾದ ಕೈಕೊಂಡಿದ್ದೇನೆ, ಭಕ್ತನಾದವನು ಜಂಗಮಪಾದಕ್ಕೆ ಧನವನ್ನರ್ಪಿಸಬೇಕೆಂಬುದು ಸಮಯ ಧರ್ಮ. ಆದ್ದರಿಂದ ಭಕ್ತನ ಭಕ್ತಿಗೆ ಚ್ಯುತಿ ಬರದಂತೆ ಇದನ್ನು ಸ್ವೀಕರಿಸುವುದರ ಮೂಲಕ ನನ್ನ ಭಕ್ತಿಯನ್ನು ಶುದ್ಧಗೊಳಿಸಬೇಕು'. ಇತ್ಯಾದಿ ವೀರಶೈವ ತತ್ತ್ವದ ಸಾರವನ್ನೇ ತಮ್ಮ ಮಹಾಪಾಂಡಿತ್ಯದಿಂದ ಉಪನ್ಯಾಸ ಮಾಡಿಬಿಟ್ಟರು. ಶ್ರೀಗಳವರು ನಿರುಪಾಯರಾದರು. ಗೌರೀಶಂಕರ ಸ್ವಾಮಿಗಳು ಅಷ್ಟಕ್ಕೆ ಬಿಡಲಿಲ್ಲ. ತಮ್ಮ ಕಣ್ಣೆದುರಿಗೇ ಅದನ್ನು ಧರಿಸಬೇಕೆಂದು ಹಟಹಿಡಿದರು; ಧರಿಸುವಂತೆ ಮಾಡಿದರು. ಆದರೆ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದಮೇಲೆ ಅವರು ಅದನ್ನು ಧರಿಸಲಿಲ್ಲ. ತೆಗೆದಿಟ್ಟು ಬಿಟ್ಟರು. ಹೀಗೆ 'ಒಮ್ಮೊಮ್ಮೆ ಭಕ್ತರ ಭಕ್ತಿಗೆ ಕಟ್ಟುಬಿದ್ದು ಬಲು ಹಿಂಸೆ ಪಡಬೇಕಾಗುತ್ತದೆ' ಎಂದು ಎಷ್ಟೋ ಸಲ ಹೇಳಿಕೊಂಡಿದ್ದಾರೆ. ಶ್ರೀಗಳವರ ಪಾಲಿಗೆ ಮೆರವಣಿಗೆ ಮೊದಲಾದವು 'ಹಿಂಸೆ' ಎಂದು ಕರೆಸಿಕೊಳ್ಳುತ್ತವೆ. ಎಷ್ಟೋ ಹಳ್ಳಿಗಳವರು ಶ್ರೀಗಳವರನ್ನು ಬರಮಾಡಿಕೊಳ್ಳುತ್ತಾರೆ, ಅವರಿಗೆ ಶ್ರೀಗಳವರನ್ನು ಪಲ್ಲಕ್ಕಿಯಲ್ಲೋ, ಅಲಂಕೃತಗಾಡಿಗಳಲ್ಲೋ ಮೆರವಣಿಗೆಯಿಂದ ಕರೆದುಕೊಂಡು ಹೋಗಬೇಕೆಂಬ ಬಯಕೆ. ಶ್ರೀಗಳವರು ಎಷ್ಟೋ ಸಲ ಕೋಪ ಮಾಡಿಕೊಂಡು ಬಿಡುವುದೂ ಉಂಟು. ಆದರೆ ಶ್ರೀಗಳವರ ಕೋಪವನ್ನು ಭಕ್ತರೆಲ್ಲಿ ಕೇಳಬೇಕು ? ಎಲ್ಲರೂ ಸುತ್ತಮುತ್ತ ಕಲೆತು ಆಳಿಗೊಂದು ಮಾತು ಮಾತನಾಡುತ್ತಾ ತಮ್ಮನ್ನಿಂದು ನಾವು ಮೆರವಣಿಗೆಯಲ್ಲೇ ಕರೆದೊಯ್ಯಬೇಕು. ನಮ್ಮ ಊರಿಗೆ ದಯಮಾಡಿಸಿದಾಗ ನಮ್ಮ ಮನಸ್ಸಿನ ಪ್ರೀತಿಯನ್ನು ನಡಿಸಿಕೊಡಲೇ ಬೇಕೆಂದು ಹಟ ಹಿಡಿದು ಬಿಡುತ್ತಾರೆ. ಅನಿವಾರ್ಯವಾಗಿ ಅವರ ಮನಸ್ಸಿನ ತೃಪ್ತಿಗೆ ಇಚ್ಛೆಯಿಲ್ಲದ ಇಚ್ಛೆಯಿಂದ ಆ ಮೆರವಣಿಗೆಯಲ್ಲಿ ಭಾಗವಹಿಸಿ ಆಮೇಲೆ ಇದೊಂದು ಹಿಂಸೆಯನ್ನು ನಮಗುಂಟುಮಾಡುತ್ತೀರೆಂದು ಜನಕ್ಕೆ ಹೇಳಿ, ಇನ್ನು ಮುಂದೆ ಹೀಗೆ ಮಾಡಬಾರದೆನ್ನುತ್ತಾರೆ. ಆದರೆ ಜನ ಕೇಳಬೇಕಲ್ಲ ! ಮೈಸೂರಿನಲ್ಲಿ ಮಹಾರಾಜರ ಸರ್ಕಾರವಿದ್ದ ಕಾಲ : ಆ ಸರ್ಕಾರದಲ್ಲಿ ಶಿವಮೊಗ್ಗದ ಪ್ರಸಿದ್ಧ ಅಡ್ವೋಕೇಟ್ ಆಗಿದ್ದ ಚೆನ್ನಗಿರಿ ತಾಲ್ಲೂಕು ಲಿಂಗದಹಳ್ಳಿಯ ಶ್ರೀ ಎಲ್. ಸಿದ್ದಪ್ಪನವರು ಒಬ್ಬ ಮಂತ್ರಿಗಳು. ಅವರು ಒಮ್ಮೆ ಸಿದ್ಧಗಂಗಾಕ್ಷೇತ್ರಕ್ಕೆ ಬಂದರು[36]. ಈ ಮಠದ ಕಾರ್ಯಭಾರಗಳನ್ನು ಶ್ರೀಗಳವರ ಅದ್ಭುತವಾದದ ಜಂಗಮ ತೇಜಸ್ಸನ್ನು ಕಂಡು ತಮ್ಮ ಭಕ್ತಿಭಾವವನ್ನು ಪ್ರಕಟಿಸುತ್ತಾ ಶ್ರೀ ಮಠದ ಇಂದಿನ ಘನತೆಗೌರವಗಳಿಗೆ ತಕ್ಕಂತೆ ಅಡ್ಡಪಲ್ಲಕ್ಕಿಯ ಉತ್ಸವ, ಬಿರುದುಬಾವುಲಿಗಳು ಇರಬೇಕೆಂದೂ ಶ್ರೀಗಳವರು ಸರಕಾರದಿಂದ ಅಂತಹ ರಹದಾರಿಯನ್ನು ಪಡೆಯುವುದು ಪ್ರಯೋಜನಕಾರಿಯೆಂದೂ ಹೇಳಿದರು. ಆಗ ಶ್ರೀಗಳವರು ಈ ದಾಸೋಹಕ್ಷೇತ್ರಕ್ಕೆ ಅದೊಂದೂ ಬೇಕಾಗಿಲ್ಲ. ಆಡಂಬರದ ಜೀವನದಿಂದ ನಾವು ಲೋಕಕ್ಕೂ ದೇವನಿಗೂ ದೂರವಾದೇವು. ಸಾರ್ವಜನಿಕ ಸೇವೆಯೇ ನಮ್ಮ

35. ಇವರು ಜಗತ್ಪ್ರಸಿದ್ಧ ವಿದ್ವಾಂಸರು. ಚಾಮುಂಡಿ ಬೆಟ್ಟದ ಪಶ್ಚಿಮ ದಿಗ್ಭಾಗದ ತಪ್ಪಲಿನಲ್ಲಿ ಅರಮನೆಗೆ ಸಂಬಂಧಿಸಿದ ಪಂಚಗವಿಮಠವೆಂಬ ದೊಡ್ಡ ಮಠವೊಂದಿದೆ. ಆ ಮಠದ ಅಧಿಪತಿಗಳಾದ ಇವರು ಕಾಶಿಯಲ್ಲಿ ಸುಮಾರು ಮೂವತ್ತುಮೂರು ವರ್ಷ ವಿದ್ಯಾಭ್ಯಾಸ ಮಾಡಿ ಅಪಾರ ಪಾಂಡಿತ್ಯ ಗಳಿಸಿದ ವಿದ್ವಾಂಸರೆನಿಸಿದ್ದರು. ಈ ಗ್ರಂಥದಲ್ಲಿ 'ಗೌರೀಶಂಕರದರ್ಶನ' ಎಂಬ ಲೇಖನದಲ್ಲಿ ಅವರ ಬಗೆಗೆ ತಿಳಿಯಬಹುದು.

36. ಶ್ರೀ ಟಿ.ಎನ್. ಕೆಂಪುಹೊನ್ನಯ್ಯ : ನಾನು ಕಂಡ ಸಿದ್ಧಗಂಗಾ ಕ್ಷೇತ್ರ (ಸಮರ್ಪಣೆ ಗ್ರಂಥ ಪುಟ ೬೫ ನೋಡಿ.)

ಮುಖ್ಯ ಗುರಿಯಲ್ಲವೆ ನಾವು ಬಿರುದುಬಾವಲಿಗಳಿಂದ ಮೆರೆಯಬೇಕಾದುದೇನೂ ಇಲ್ಲ. ಜನರ ಭಕ್ತಿ ವಿಶ್ವಾಸಗಳೇ ನಮಗೆ ಸಾಕು. ಎಂದು ನಗುನಗುತ್ತಾ ಹೇಳಿಬಿಟ್ಟರು. ಲಿಂಗಪ್ಪನವರು ಅಷ್ಟಕ್ಕೆ ಬಿಡಲಿಲ್ಲ. (ಅವರಿಗೆ ಈ ಮಠಕ್ಕೆ ಮೊದಲ ದರ್ಜೆಯ ಬಿರಿದುಬಾವಲಿಗಳನ್ನು ಕೊಡಿಸಬೇಕೆಂಬ ಇಚ್ಛೆಯಿತ್ತೆಂದು ತೋರುತ್ತದೆ). ತುಮಕೂರಿನ ಪ್ರಸಿದ್ಧ ವರ್ತಕರೂ ಶ್ರೀಮಠದ ಭಕ್ತರೂ ಎಂದು ಖ್ಯಾತರಾಗಿದ್ದ ಶ್ರೀ ಟಿ. ಎನ್. ಕೆಂಪುಹೊನ್ನಯ್ಯನವರನ್ನು ಸಂಧಿಸಿ, ನೀವು ಮಠದ ಭಕ್ತರ ಪರವಾಗಿ ಸಿದ್ಧಗಂಗಾಮಠಕ್ಕೆ ಅಡ್ಡಪಲ್ಲಕ್ಕಿ ಉತ್ಸವಗಳೇ ಮೊದಲಾದ ಮೊದಲ ದರ್ಜೆಯ ಮನ್ನಣೆಯ ರಹದಾರಿಗಾಗಿ ಬರೆಯಬೇಕೆಂದೂ ಈ ಮಠಕ್ಕಲ್ಲದೆ ಇನ್ನೆಂಥ ಮಠಕ್ಕೆ ಅಂತಹ ಮರ್ಯಾದೆಯ ರಹದಾರಿಯನ್ನು ಕೊಡಬೇಕು ಎಂದೂ ಸೂಚಿಸಿ ಹೋದರು. ಈ ವಿಷಯದಲ್ಲಿ ಶ್ರೀ ಕೆಂಪುಹೊನ್ನಯ್ಯನವರು ಶ್ರೀಗಳವರೊಡನೆ ಸಮಾಲೋಚನೆಗಾಗಿ ಬಂದರು. ಶ್ರೀಗಳವರಲ್ಲಿ ಈ ಪ್ರಸ್ತಾಪವೆತ್ತಿದಾಗ ಶ್ರೀಗಳು ಅದನ್ನು ಸಂಪೂರ್ಣವಾಗಿ ನಿರಾಕರಿಸಿ, ದಯವಿಟ್ಟು ಮನವಿಮಾಡಿಕೊಳ್ಳಬೇಡಿರೆಂದು ಎಚ್ಚರಿಸಿ ಕಳುಹಿಸಿದರು. ಇದು ಶ್ರೀಗಳವರ ನಿರಹಂಭಾವ, ನಿರೀಹಂಭಾವಗಳಿಗೊಂದು ಪ್ರತ್ಯಕ್ಷ ನಿದರ್ಶನ. ಆಡಂಬರಕ್ಕೂ ಶ್ರೀಗಳವರಿಗೂ ಬಹುದೂರ.

'ಒಂದು ಕಾಲದಲ್ಲಿ ಇಂಥ ಮೆರವಣಿಗೆ ಮೊದಲಾದವುಗಳು ಸಮಾಜದಲ್ಲಿ ಬೇಕಾಗಿರಬಹುದು, ರಾಜಮಹಾರಾಜರೇ ಸಂನ್ಯಾಸಿಗಳನ್ನು ಹಾಗೆ ಮೆರೆಸುತ್ತಿರಬಹುದು. ವಿವೇಕಯುತರಾದ ಸಂನ್ಯಾಸಿಗಳು ಅಂಥ ಆಡಂಬರಕ್ಕೆ ಮನಸ್ಸುಕೊಡಲಾರರು ಎಂದು ಶ್ರೀಗಳವರು ಈಗಲೂ ಆ ಬಗೆಗೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಾರೆ. ಇಂದಿನ ಸಮಾಜದಲ್ಲಿನ ತರುಣ ಜನಾಂಗ ತಮ್ಮ ಜೀವನದ ವೆಚ್ಚವನ್ನು ತೀರಾ ಅಧಿಕಗೊಳಿಸಿಕೊಂಡು ಬಿಟ್ಟಿದ್ದಾರೆ. ಇನ್ನೊಂದು ಕಡೆಯಲ್ಲಿ ಗ್ರಾಮಾಂತರ ಪ್ರದೇಶದ ಜನತೆ ಅತ್ಯಂತ ದಾರುಣವಾದ ರೀತಿಯಲ್ಲಿ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ, ರಾಷ್ಟ್ರದ ಆರ್ಥಿಕ ಹಂಚಿಕೆಯಲ್ಲಿ ಏನೋ ದೋಷವಿದೆ. ಕಷ್ಟಪಟ್ಟು ದುಡಿಮೆ ಮಾಡುವವನಿಗೆ ಏನೂ ಸೌಲಭ್ಯವಿಲ್ಲ; ಅದಿಲ್ಲದವರು ಜೀವನದಲ್ಲಿ ಬಹಳಷ್ಟು ಎತ್ತರ ಮಟ್ಟದಲ್ಲಿದ್ದಾರೆ; ಆಡಂಬರದಲ್ಲಿದ್ದಾರೆ. ಜೀವನದಲ್ಲಿ ಆಡಂಬರ, ಕೃತ್ರಿಮಭಾವ, ಕೃತಕ ಜೀವನ ಬೆಳೆದಂತೆಲ್ಲ ಅವು ಕೆಲ ಕಾಲದ ಮೇಲೆ ರಾಷ್ಟ್ರಪುರುಷನ ಅಂಗಕ್ಕೆ ಹತ್ತಿದ ಕಜ್ಜಿಗಳಂತಾಗಿ ಇಡೀ ರಾಷ್ಟ್ರವೇ ಮೈ ಕೈ ತುರಿಸಿಕೊಳ್ಳುವ ಪ್ರಸಂಗ ಬರಬಹುದು. ಇಂದಿನ ಶ್ರೀಮಂತರ ವರ್ಗ ಸುಖಭೋಗ ವಿಲಾಸದಿಂದ ದೂರವಾಗಿ ತಮ್ಮನ್ನು ಆದಷ್ಟು ಸಹಜಸುಂದರವೂ ಆಡಂಬರರಹಿತವೂ ಅನವಶ್ಯಕ ಖರ್ಚುವೆಚ್ಚಗಳಿಂದ ದೂರವಾದುದೂ ಆದ ಜೀವನವನ್ನು ಎಷ್ಟು ಬೇಗನೆ ರೂಪಿಸಿಕೊಂಡಷ್ಟೂ ಉತ್ತಮ. ಇಂದ್ರಿಯಭೋಗವಿಲಾಸ ವಿಷಸರ್ಪವಿದ್ದ ಹಾಗೆ'–ಇತ್ಯಾದಿಯಾಗಿ ಅವರು ಲೋಕಕ್ಕೆ ತಮ್ಮ ಸಂದೇಶದ ಮೂಲಕ ಎಚ್ಚರಿಸುತ್ತಲೇ ಬರುತ್ತಿದ್ದಾರೆ. 'ನಾನು ಅನಿವಾರ್ಯವಿಲ್ಲದಿದ್ದರೆ ಕಾರನ್ನು ಹತ್ತುತ್ತಲೇ ಇರಲಿಲ್ಲ, ಅನೇಕ ಸಂಸ್ಥೆಗಳನ್ನು ಕಟ್ಟಲಾಗಿದೆ, ದೂರ ದೂರ ತಿರುಗಾಡುವ ಪ್ರಸಂಗಗಳು ದಿನೇ ದಿನೇ ಹೆಚ್ಚಾದವು, ಭಕ್ತರುಗಳ, ಇತರ ಜನರುಗಳ ಕರೆ ವಿಪರೀತವಾಗಿ ಹೋಯಿತು, ಆದುದರಿಂದ ಕಾರು ಉಪಯೋಗಿಸಲೇಬೇಕಾಯಿತು. ಅದರಲ್ಲಿಯೂ ಒಂದು ಕಾರು ಮಠದಿಂದ ಕೊಂಡಿದ್ದಲ್ಲ, ಭಕ್ತರ ಕಾಣಿಕೆಯಾಗಿ ಬಂತು. ವ್ಯವಹಾರ ಬೆಳೆಯದಿದ್ದರೆ ಕಾರಿನ ಅವಶ್ಯಕತೆ ನನಗೆ ಇರಲೇ ಇಲ್ಲ. ನಡೆಯುವುದರಲ್ಲಿ ನನಗೆ ಬಹಳ ಪ್ರೀತಿ. ಆದರೆ ಕಾರ್ಯವ್ಯಾಪ್ತಿ ನಡೆಯುವಿಕೆಗೆ ಅಡಕವಾಗುತ್ತಿಲ್ಲ. ಆದರೆ ಇಲ್ಲಿ ಇನ್ನೂ ಒಂದು ಮಾತನ್ನು ಹೇಳಬೇಕು. ನಾನು ಉಪಯೋಗಿಸುವ ಕಾರಿನ ಪೆಟ್ರೋಲ್ ವೆಚ್ಚ, ಡ್ರೈವರನ ಸಂಬಳ. ನನ್ನ ಶಿವಪೂಜಾ ಮನೆಯಲ್ಲಿ ಸೇವೆಯಲ್ಲಿ ನಿರತವಾಗಿರುವವರ ಸಂಬಳ ಸಾರಿಗೆಗಳಿಗೆ ನಾನು ಸ್ವತಃ ಕಾಯಕ ಮಾಡಿ ಸಂಪಾದಿಸುತ್ತೇನೆ. ಕಾಲವನ್ನು ಹೇಗೋ ಒದಗಿಸಿಕೊಂಡು ದಿನದ ಕೆಲವು ಘಂಟೆಗಳು ಯಂತ್ರ ಬರೆಯುವ ಕಾಯಕ ನಮ್ಮ ಗುರುಗಳ ಆಶೀರ್ವಾದದ ಫಲ. ಲೋಕ ನನ್ನ ಕೈಯಿಂದ ಯಂತ್ರ ಕಟ್ಟಿಸಿಕೊಳ್ಳಬೇಕೆಂದು ಬಯಸಿ ದುಂಬಾಲ ಬಿದ್ದು ಬರೆಯಿಸಿಕೊಂಡು ಕಟ್ಟಿಸಿಕೊಳ್ಳುತ್ತದೆ. ಈ ವಿಷಯದಲ್ಲಿ ನನಗೂ ನಂಬಿಕೆ, ಕಟ್ಟಿಸಿಕೊಂಡವರಿಗೂ ಮಾನಸಿಕ ನೆಮ್ಮದಿ. ಶುದ್ಧಾಂತಃಕರಣದಿಂದ ಪರಮಾತ್ಮನ ಸ್ವರೂಪವಾದ ಮಂತ್ರವನ್ನೇ ನಾನು ಬರೆದು ಜಂಗಮ ಪಾದೋದಕಮಿಶ್ರ ಭಸ್ಮದೊಡನೆ ಕಟ್ಟುತ್ತೇನೆ. ಅದರಿಂದ ಪ್ರಯೋಜನ ಅವರಿಗೆಷ್ಟರಮಟ್ಟಿಗೆ ಆಗುವುದೆಂಬುದನ್ನು ನಾನು ಹೇಗೆ ಹೇಳಲಿ? ನಾನು ಒಲ್ಲೆನೆಂದರೂ ಜನ ಬಿಡುವುದಕ್ಕೆ ತಯಾರಿಲ್ಲ. ಈ ನನ್ನ ಕಾಯಕ ನನ್ನ ಸಂಬಂಧದ ಖರ್ಚುವೆಚ್ಚಗಳಿಗೆಲ್ಲ ಆಗುತ್ತದೆ. ಆದುದರಿಂದ ನನ್ನ ಖರ್ಚುವೆಚ್ಚಗಳ ಬಗೆಗೆ ಯಾರೂ ಆಡಿಕೊಳ್ಳುವಂತೆಯೇ ಇಲ್ಲ. ಮಠಕ್ಕೆ ಬರುವ ಕಾಣಿಕೆ ಮೊದಲಾದುವೆಲ್ಲ ಸಿದ್ಧಲಿಂಗೇಶ್ವರರ ಸೊತ್ತು. ಅವರ ಆ ಸೊತ್ತನ್ನು ಅವರ ದಾಸೋಹಕ್ಕೆ ವಿನಿಯೋಗಿಸುತ್ತೇನೆ. ಈ ಕ್ಷೇತ್ರವೇ ಮಹಾಮಹಿಮರಾದ ಸಿದ್ಧಲಿಂಗೇಶ್ವರರದು. ನಾವು ಅವರ ಸ್ವತ್ತನ್ನು ರಕ್ಷಿಸಿ ಅವರಿತ್ತ ಧನದಿಂದ ಬೆಳೆಸಿ. ಅವರ ವ್ಯವಸ್ಥೆಯನ್ನು ನೋಡಿಕೊಳ್ಳುವ ಧರ್ಮದರ್ಶಿ (ಟ್ರಸ್ಟಿ) ಗಳಿದ್ದಹಾಗೆ. ನಮ್ಮ ನಂತರ ಮುಂದೆ ಬಂದವರು ಈ ಸಂಪ್ರದಾಯವನ್ನು ಉಳಿಸಿ ಬೆಳಸಿಕೊಂಡು ಹೋಗುತ್ತಾರೆ. ಈ ಕ್ಷೇತ್ರದ ಧನವನ್ನು ಆಡಂಬರದ ವ್ಯವಹಾರಗಳಿಗೆ ಖರ್ಚು ಮಾಡಲು ನಮಗೆ ಅಧಿಕಾರವಿದೆಯೆಂದು ನಾನು ತಿಳಿದಿಲ್ಲ. ಪ್ರಸಂಗದಲ್ಲಿ ಲಕ್ಷಲಕ್ಷ ಮೊತ್ತದ ಹಣ ಲಕ್ಷ್ಯವಿಲ್ಲದೆ ಖರ್ಚಾಗುತ್ತದೆ, ದಾಸೋಹಕ್ಕೆ. ಇತ್ಯಾದಿಯಾಗಿ ತಮ್ಮ ವಿಚಾರಗಳನ್ನು ಹೇಳುವುದರ ಮೂಲಕ ಶ್ರೀಗಳವರು ತಮ್ಮ ಜೀವನ

ರಹಸ್ಯದ ಪುಸ್ತಕವನ್ನೇ ಲೋಕದ ಎದುರಿಗೆ ತೆರೆದಿಡುತ್ತಾರೆ. ಇನ್ನೇನು ಬೇಕು ? ಈ ರಹಸ್ಯವನ್ನರಿತ ಶ್ರೀಗಳವರು ಎಂದೂ ಆಡಂಬರಕ್ಕೆ ಮನಸ್ಸನ್ನು ಮಾಡುವುದೇ ಇಲ್ಲ.

**ಶ್ರೀಗಳವರು ಧೈರ್ಯಮೇರುಗಳು, ಕ್ಷಮಾಶೀಲರು, ಅವಿಕಾರ ಚೇತನರು :**

ಲೋಕೋತ್ತರ ದಾಸೋಹ ಸಂಸ್ಥೆಯನ್ನು, ವಿವಿಧ ವಿದ್ಯಾಕೇಂದ್ರಗಳನ್ನು ಕಟ್ಟಿ ಅವರ ಆಡಳಿತದ ಕಷ್ಟನಿಷ್ಠುರಗಳ ಮಧ್ಯೆ ವ್ಯವಹರಿಸುವಲ್ಲಿ ಅನೇಕ ಸಮಸ್ಯೆಗಳು ಹಠಾತ್ತಾಗಿ ಬಂದು ಅಪ್ಪಳಿಸುತ್ತವೆ. ನಾನಾ ಪ್ರಕಾರದ ಜನರ ಸಂಬಂಧವಿಟ್ಟುಕೊಂಡು ವ್ಯವಹರಿಸುವವರಿಗೆ ಇಂಥ ಸಮಸ್ಯೆಗಳು ಸಹಜವೇ ಆಗಿರಬಹುದು. ಆದರೆ ಶ್ರೀಗಳವರು ಆ ಸಮಸ್ಯೆಗಳ ಪರಿಹಾರದಲ್ಲಿ ಧೈರ್ಯದಿಂದ ವರ್ತಿಸುತ್ತಾರೆ. ಮೌನದಿಂದ ಗೆಲ್ಲುತ್ತಾರೆ. ವಿಕಾರಗೊಳ್ಳುವುದಂತೂ ಅವರ ಚರಿತ್ರೆಯಲ್ಲಿ ಇಣಿಕಿ ನೋಡಿಲ್ಲ. ಅವರು ಆನೆಯನ್ನೇರಿ ಹೋಗುವ ನಡೆಯವರಾದ್ದರಿಂದ ಏತರ ಭಯ ?

ಒಮ್ಮೆ ಓರ್ವ ವಿದ್ವಾಂಸರು ಒಂದು ಗ್ರಂಥ ಬರೆದು ಅದರಲ್ಲಿ ಉದ್ದಾನ ಶಿವಯೋಗಿಗಳವರ ಬಗೆಗೆ ಸಲ್ಲದ ಉಲ್ಲೇಖ ಮಾಡಿದ್ದರು. ಅವರು ಮಠದ ಹಳೆಯ ವಿದ್ಯಾರ್ಥಿಗಳು. ಉದ್ದಾನ ಶಿವಯೋಗಿಗಳು ಅವರನ್ನು ಪಾಲನೆ ಪೋಷಣೆ ಮಾಡಿದವರು, ಆಗಾಗ ಬಟ್ಟೆಬರೆ ಹಣ್ಣು ಸಕ್ಕರೆ ಕೊಟ್ಟು ಅತ್ಯಂತ ಮಮತೆಯನ್ನು ತೋರಿದ್ದವರು. ಅಂಥವರ ವಿಷಯದಲ್ಲಿ ಅನಾವಶ್ಯಕ ಬರವಣಿಗೆ ಬರೆದರು; ಇದು ಅವರ ತಪ್ಪು ಕಲ್ಪನೆಯಾಗಿತ್ತು. ಈ ವಿಷಯವನ್ನು ಕಂಡು ಉದ್ದಾನ ಶಿವಯೋಗಿಗಳವರ ಇತರ ಭಕ್ತರು ಮತ್ತು ಮಠದ ಹಳೆಯ ವಿದ್ಯಾರ್ಥಿ ಸಂಘದವರು ಅವರ ಮೇಲೆ ಕಾನೂನಿನ ಕ್ರಮಕೈಕೊಳ್ಳಲು ತೀರ್ಮಾನ ಮಾಡಿ ಶ್ರೀಗಳವರಲ್ಲಿ ಈ ವಿಷಯ ಅರಿಕೆ ಮಾಡಿದರು. ಆಗ ಶ್ರೀಗಳು 'ಉದ್ದಾನ ಸ್ವಾಮಿಗಳು ಉದ್ದಾನ ಸ್ವಾಮಿಗಳೇ. ಆತನು ಆತನೇ ; ನನ್ನ ವಿಷಯದಲ್ಲಿ ಆ ಮನುಷ್ಯಬೇಕಾದರೆ ಬರೆಯಬಹುದಾಗಿತ್ತು, ನಾನಿನ್ನೂ ಜೀವಂತವಾಗಿದ್ದೇನೆ, ಉತ್ತರ ಕೊಡಬಹುದಾಗಿತ್ತು. ಎಲ್ಲಿ ಆ ಮನುಷ್ಯ ನಿಷ್ಠೆ ತೋರಿಸಬೇಕಾಗಿತ್ತೋ ಅಲ್ಲಿ ಕತ್ತಿಯನ್ನೆತ್ತಿದ. ಇಂಥ ಮನುಷ್ಯನ ವಿರುದ್ಧ ಮಾಡುವ ಪ್ರತೀಕಾರ ಮನೋಭಾವ ನಮ್ಮ ಘನತೆಗೆ ಕುಂದಕ. ಇಂಥ ಒಂದೊಂದು ಗಾಳಿ ಆಗಾಗ ಏಳುತ್ತವೆ, ಎದ್ದು ಹಾರಿ ಹೋಗುತ್ತದೆ. ಆಗ ಕೆಲವರ ಕಣ್ಣಲ್ಲಿ ಧೂಳು ಬೀಳಬಹುದು. ಅದನ್ನು ಸರಿಪಡಿಸಿಕೊಂಡರಾಯಿತು. ಏನೂ ಮಾಡ ಹೋಗಬೇಡಿ, ಎಲ್ಲವೂ ತಾನೇ ಸರಿಹೋಗುತ್ತದೆ, ಆ ವ್ಯಕ್ತಿ ಸಾಕ್ಷರನಾಗಿರಬಹುದು ಆದರೆ ಸುಸಂಸ್ಕೃತ ಅನ್ನುವ ವಿಷಯದಲ್ಲಿ ಅನುಮಾನ. 'ತನ'ಗೆ ಮುನಿವವನಿಗೆ ತಾ ಮುನಿಯಲೇಕಯ್ಯ............ಕೇಳಿಲ್ಲವೇ ? ಬಸವಣ್ಣನವರ ಮಾತುಗಳನ್ನು' ಎಂದುಬಿಟ್ಟರು. ಎಲ್ಲರೂ ತಣ್ಣಗಾಗಿಬಿಟ್ಟರು. ಆ ವ್ಯಕ್ತಿ ಕೆಲ ದಿನಗಳ ಮೇಲೆ ಅದೇನು ಸಂಭವಿಸಿತೋ ಮಠಕ್ಕೆ ಬಂದ. ಶ್ರೀಗಳವರಿಗೆ ನಮಸ್ಕಾರ ಹಾಕಿದ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದ, ಶ್ರೀಗಳವರು 'ಏನು ಸಮಾಚಾರ? ಸಮಾಧಾನಮಾಡಿಕೊಳ್ಳಿ. ಯಾವಾಗ ಬಂದದ್ದು, ಊಟ ಮಾಡಿ ಹೋಗಿ' ಎಂದು ಹೇಳಿ ಮೇಲಕ್ಕೇಳುವುದರಲ್ಲಿದ್ದರು, ಆತ ತಾನು ಉದ್ದಾನ ಶಿವಯೋಗಿಗಳ ಮೇಲೆ ದೋಷ ದೃಷ್ಟಿಯಿಂದ ಬರೆದುದು ಅಪರಾಧವೆಂದೂ,ಅವರು ನನ್ನ ಉದ್ಧಾರಕರೆಂದೂ ಏನೇನೋ ಹೇಳತೊಡಗಿದ, ಶ್ರೀಗಳವರು ಆಗಲೂ ಉದ್ವೇಗಗೊಳ್ಳಲಿಲ್ಲ, 'ಇರಲಿ ಬಿಡಿ. ಏನೇನೋ ಬರುತ್ತದೆ ಹೋಗುತ್ತದೆ. ಯಾವುದೋ ಸಂದರ್ಭದಲ್ಲಿ ಏನೋ ಉದ್ವೇಗ ಬರುತ್ತದೆ. ಏನೇನೊ ನಡೆದು ಹೋಗುತ್ತದೆ. ಈಗ ಪಶ್ಚಾತ್ತಾಪ ಪಡುತ್ತೀರಿ ಇಷ್ಟೇ ಸಾಕು. ಇನ್ನೊಮ್ಮೆ ಹಾಗೆ ಮಾಡದಂತೆ ಜೀವನ ರೂಪಿಸಿಕೊಂಡರಾಯಿತು' ಇತ್ಯಾದಿ ಸ್ವಾಂತನಗೊಳಿಸಿ ಊಟ ಮಾಡಿಸಿ ಪ್ರಸಾದ ಕೊಟ್ಟು ಕಳುಹಿಸಿದರು. ಇಂಥ ಉದಾರಚರಿತದ ನಡೆ ಶ್ರೀಗಳವರದು. ಇನ್ನೊಬ್ಬರ ಬಗೆಗೆ ಬರೆದು ನೋಯಿಸಬೇಕೆಂಬ ಉದ್ದೇಶ ನಮಗೂ ಇಲ್ಲ. ಇಂಥವನ್ನು ಆದಷ್ಟು ಮರೆಯುವುದು ನಮಗೂ ಉತ್ತಮವೇ? ಆದರೆ ಶ್ರೀಗಳವರ ತಾಳ್ಮೆ, ಅವಿಕಾರ ಬುದ್ಧಿಗೆ ಒಂದು ದೃಷ್ಟಾಂತವನ್ನು ಕೊಟ್ಟತಷ್ಟೆ. ಹೀಗೆ ತಮ್ಮ ಕೆಲವು ತಪ್ಪುಕಲ್ಪನೆಗಳಿಂದ ಶ್ರೀಗಳವರ ಬಗೆಗೆ ಕೋಪಗೊಂಡವರೆಷ್ಟೋ ಜನ ವಿದ್ಯಾವಂತರು, ಖ್ಯಾತರೆನಿಸಿದವರು ಪಶ್ಚಾತ್ತಾಪ ವ್ಯಕ್ತಪಡಿಸಿದ್ದಾರೆ. ಎಷ್ಟೋ ಇಂಥ ಉದಾಹರಣೆಗಳಿವೆ, ಇಲ್ಲಿ ಶ್ರೀಗಳವರ ಇನ್ನೊಂದು ಮಹಾಗುಣವೆಂದರೆ ಕ್ಷಮೆ. ಮಠದಲ್ಲಿಯೇ ಇದ್ದು ಗುರುತರ ಅಪರಾಧ ಮಾಡಿದವರ ವಿಷಯದಲ್ಲಿ ಶ್ರೀಗಳವರು ಉದ್ವೇಗಗೊಳ್ಳುವುದಿಲ್ಲ. ಅದು ವಿಪತ್ಕಾರಕವೇ ಆಗಿರಲಿ. ಪ್ರತೀಕಾರ ಮಾಡಲು ಎಂದೂ ಅಸ್ತ್ರವನ್ನೆತ್ತಿದವರಲ್ಲ. ಅವರನ್ನು ತಿರಸ್ಕರಿಸಿ ದೂರವಿಡುವುದೂ ಇಲ್ಲ. ಪುನಃ ಹತ್ತಿರಕ್ಕೆ ಬಂದೊಡನೆ ಮಾತನಾಡಿಸಿ ಅವರ ಮನಸ್ಸಿನ ಸಂಶಯ ನಿವಾರಿಸಿ ಬಿಟ್ಟಿರುವ ದೃಷ್ಟಾಂತಗಳೆಷ್ಟೋ. ಇಂಥ ಲೋಕೋತ್ತರ ಧೈರ್ಯಮೇರುವನ್ನು ಕ್ಷಮಾಮೂರ್ತಿಯನ್ನು ಅವಿಕಾರಚೇತನವನ್ನು ಪಡೆದ ನಾಡು, ಸಮಾಜ, ಮಠ ಕೃತಾರ್ಥತೆಯನ್ನೈದಿತೆಂದು ಕೈಎತ್ತಿ ಮುಗಿಯುವಂತಾಗುತ್ತದೆ.

ಇದುವರೆಗೆ ವಿವರಿಸಿದ ವಿಷಯದಿಂದ ವ್ಯಾವಹಾರಿಕವಾದ ಧೈರ್ಯ, ಕ್ಷಮೆ. ಅವಿಕಾರಗುಣಗಳ ಒಂದು ವಿಹಂಗಮ ನೋಟವನ್ನು ನಾವು ಕಂಡರೆ ಇನ್ನೊಂದು ರೀತಿಯ ಧೀರತನ ಶ್ರೀಗಳವರ ಮಾನಸಿಕ ವಿಷಯಕ್ಕೆ ಸಂಬಂಧಿಸಿದುದನ್ನು ಈ ಸಂದರ್ಭದಲ್ಲಿ ಲೋಕದೆದುರು ಇಡಲೇಬೇಕಾದುದು ತಪ್ಪಲ್ಲವೆಂದು ನನ್ನ ಭಾವನೆ. ಈ ವಿಷಯವನ್ನು ತಿಳಿಯುವ ಮೊದಲು ಒಂದು

ವಿಷಯವನ್ನು ಆಲೋಚಿಸಬೇಕು. ಶ್ರೀಗಳವರನ್ನು ಈ ಮಠಕ್ಕೆ ಉತ್ತರಾಧಿಕಾರಿಗಳನ್ನಾಗಿ ಯಾರೂ ತಂದು ಮಾಡಿಲ್ಲ. ಪೂರ್ವಾಶ್ರಮದ ರಕ್ತ ಸಂಬಂಧದ ನಂಟಿಗೆ ಕಟ್ಟು ಬಿದ್ದು ಅವರ ಗುರುಗಳು ಮಾಡಿಲ್ಲ. ಪ್ರಾಪ್ತ ವಯಸ್ಸಿನಲ್ಲಿ ಅಂದರೆ ೨೨–೨೫ನೆಯ ವಯಸ್ಸಿನಲ್ಲಿ,ಪ್ರೌಢ ವಿದ್ಯಾಭ್ಯಾಸ ಕಾಲದಲ್ಲಿ,ಪ್ರಾಪಂಚಿಕ ಅನುಭವಗಳು ಅರ್ಥವಾಗಿದ್ದ ಕಾಲದಲ್ಲಿ, ಗೃಹಸ್ಥಾಶ್ರಮಧರ್ಮ, ಸಂನ್ಯಾಸಧರ್ಮಗಳನ್ನು ತೂಗಿ ನೋಡಿ, ಕಷ್ಟವೇನು, ನಿಷ್ಠುರವೇನೆಂದು ವಿಚಾರಿಸಿ ತಿಳಿಯುವ ವಯಸ್ಸಿನಲ್ಲಿ ತಾವೇ ಸ್ವತಃ ತೀರ್ಮಾನ ಕೈಕೊಂಡು ಶಿವಕುಮಾರಸ್ವಾಮಿಗಳು ಮಹಾತಪಸ್ವಿ ಉದ್ದಾನಪ್ಪನವರಿಗೆ ನಮಸ್ಕಾರ ಹಾಕಿದವರು. ಜೀವನದುದ್ದಕ್ಕೂ ಬಸವಣ್ಣನವರು ಹೇಳುವ

> 'ಸತಿಯಿಲ್ಲದಂತೆ ಪ್ರಪಂಚವಿಲ್ಲದಂತೆ ವೈಶಿಕವಿಲ್ಲದಂತೆ
> ನಡೆಸಯ್ಯ ಲಿಂಗತಂದೇ; ಒಂದು ನಿಮಿಷವಾದರೂ ನಿಮ್ಮ ಶರಣ ಸಂಗದಲ್ಲಿರಿಸಯ್ಯ :
> ಬೇರೆ ಮತ್ತೆ ಅನ್ಯವ ತೋರದಿರಯ್ಯ...' (ಭ.ಸ್ಥ. ೬೨ ; ಕ.ವಿ.ವಿ.ಪ್ರ.)

ಈ ಮಾತನ್ನು ಸಾರ್ಥಕಗೊಳಿಸುವಂತೆ ನಡೆದುಕೊಂಡು ಬಂದವರು. ಅಪಾರ ಲೋಕಪ್ರೀತಿಯನ್ನು ಬಾಲ್ಯದಿಂದಲೂ ಪಡೆದವರು. ಪರಿಶುದ್ಧ ಚಾರಿತ್ರ, ಶುದ್ಧಕ್ರಿಯೆಗಳನ್ನು ಮೈಗೂಡಿಸಿಕೊಂಡೇ ಬಾಳಿಬಂದವರು. ಮಹಾಮಹಿಮರಾದ ಉದ್ದಾನ ಶಿವಯೋಗಿಗಳವರ ಪ್ರಬಲಕೃಪೆಯ ವಜ್ರಕವಚ ತೊಟ್ಟು ಎದ್ದು ನಿಂತವರು. ಇಂಥವರಿಗೆ ಗಂಭೀರ ಪ್ರಸಂಗವೊಂದು ಸಂಘಟಿಸಿತು. ಆ ಪ್ರಸಂಗವನ್ನು ಶ್ರೀಗಳವರು ಬಹು ವ್ಯಥಿತ ಹೃದಯರಾಗಿ ಒಮ್ಮೆ ಹೇಳಿದ್ದರು. ಅದು ನಡೆದುದು ಇಂದಿಗೆ ಸುಮಾರು ೨೫–೩೦. ವರ್ಷಗಳ ಹಿಂದೆ ಅದರ ಸಂಕ್ಷೇಪ ವಿವರಣೆ ಹೀಗೆ :

ಶ್ರೀಗಳವರು ಮಂಚದ ಮೇಲೆ ಯಂತ್ರಧಾರಣೆ ಮಾಡುತ್ತ, ಶ್ರೀಕ್ಷೇತ್ರಕ್ಕೆ ಬಂದಿರುವ ಇತರರಿಗೆ ದರ್ಶನಾಶೀರ್ವಾದ ಮಾಡುತ್ತ ಕಾರ್ಯಮಗ್ನರಾಗಿರುವ ಸಮಯ. ನೂರಾರು ಜನ ಸ್ತ್ರೀಪುರುಷರು ಮಕ್ಕಳು ಮರಿಗಳು ಮಂಚದ ಸುತ್ತಮುತ್ತ ಕುಳಿತಿದ್ದಾರೆ. ಸ್ವಾಮಿಗಳ ಸುತ್ತಮುತ್ತ ಹತ್ತಿಪ್ಪತ್ತು ಜನಗಳು ನಿಂತಿದ್ದಾರೆ. ಒಂದು ಕಡೆಯಲ್ಲಿ ಅಕ್ಕಿರಾಗಿಗಳನ್ನು ಹಸನು ಮಾಡಲು ಎಂಟು ಹತ್ತು ಹೆಣ್ಣುಮಕ್ಕಳು ತೊಡಗಿದ್ದಾರೆ. ಕಾಲ ಮಧ್ಯಾಹ್ನ ೧೨,೧೨-೩೦ರಷ್ಟಾಗಿರಬಹುದು. ಓರ್ವ ಯುವತಿ ಬಂದಳು, ಸುಮಾರು ೩೦ ವರ್ಷ ಇರಬಹುದು. ರೂಪವತಿ, ಮೈಮೇಲೆ ದಿವ್ಯಾಭರಣಗಳನ್ನಿಟ್ಟಿದ್ದಾಳೆ. ಪಟ್ಟೆಪೀತಾಂಬರ ಉಟ್ಟಿದ್ದಾಳೆ. ಆಧುನಿಕ ಸಂಸ್ಕೃತಿಯ ವೇಷಭೂಷಣಗಳಲ್ಲಿ ಶ್ರೀಮಂತಿಕೆಯ ಅಟ್ಟಹಾಸದಿಂದ ಕೂಡಿದ್ದ ಅವಳ ವಿವಿಧಭಾವಭಂಗಿ ಇತ್ತು. ಇವಳು ಬಂದೊಡನೆ ಯಾರೋ ದೊಡ್ಡವರೆಂದು ನೆರೆದವರು ದಾರಿಬಿಟ್ಟರು. ಸ್ವಾಮಿಗಳ ಸುತ್ತಮುತ್ತ ಇದ್ದವರು ದೂರ ಸರಿದರು. ಅವಳು ಸರಸರನೆ ಬಂದು ಶ್ರೀಗಳವರ ಪಾದಗಳ ಮೇಲೆ ಬಿದ್ದು ಅವನ್ನು ಗಟ್ಟಿಯಾಗಿ ಹಿಡಿದು ಅಳುವುದಕ್ಕೆ ಪ್ರಾರಂಭಿಸಿದಳು. ಶ್ರೀಗಳು 'ಏಳಮ್ಮ ಏಕೆ ? ಏನು ಸಮಾಚಾರ ? ಯಾವ ಊರು ?' ಎಂದು ಕೇಳಿದರು. ಆದರೂ ಅವಳು ಪಾದ ಬಿಡಲೇ ಇಲ್ಲ. ಒಂದು ನಿಮಿಷದವರೆಗೂ ಹಾಗೆ ಗಟ್ಟಿಯಾಗಿ ಪಾದವನ್ನು ಹಿಡಿದೇ ಇದ್ದವಳು, ಅಳುವುದನ್ನು ನಿಲ್ಲಿಸಿದಳು. ಸುತ್ತಮುತ್ತ ನಿಂತ ಜನರು ಅವಾಕ್ಕಾದರು. 'ಸ್ವಾಮಿ ನನ್ನನ್ನು ಕಾಪಾಡಿ' ಎಂದಳು. 'ಮೇಲಕ್ಕೇಳಮ್ಮ ಪಾದ ಬಿಡು. ಏನು ನಿನ್ನ ಕಷ್ಟ ? ಅದನ್ನು ಹೇಳು 'ಏಳು', ಎಂದರು. ಆಗ ಗಟ್ಟಿಯಾಗಿ ಹಿಡಿದಿದ್ದ ಪಾದಬಿಟ್ಟು

'ಸ್ವಾಮಿ, ನಾನು ತಮ್ಮ ಮಠದಲ್ಲಿರಲು ಬಂದಿದ್ದೇನೆ'

'ಮಠದಲ್ಲಿರಲು ಸ್ತ್ರೀಯರಿಗೆ ಅವಕಾಶವಿಲ್ಲ, ಸ್ವಾಮಿಯ ಸೇವೆ ಮುಗಿಸಿಕೊಂಡು ಪ್ರಸಾದ ತಕ್ಕೊಂಡು ನಿಮ್ಮ ನಿಮ್ಮ ಊರಿಗೆ ಹೋಗಬೇಕು.'

'ಹಾಗಲ್ಲ ಸ್ವಾಮಿ, ನನ್ನ ಹತ್ತಿರ ಸ್ವಲ್ಪ ಬಂಗಾರದ ಆಭರಣ, ದುಡ್ಡು ಇದೆ. ಅದನ್ನೆಲ್ಲಾ ತಮ್ಮ ಸನ್ನಿಧಿಗೆ ಸಮರ್ಪಿಸಿ ಇಲ್ಲೇ ಇರಬೇಕೆಂದು ಬಂದಿದ್ದೇನೆ.'

'ನೀವು ನಿಮ್ಮ ಬಂಗಾರದ ಆಭರಣ, ದುಡ್ಡು ದ್ರವ್ಯವನ್ನು ಹಾಗೆಲ್ಲ ಮಠಮಾನ್ಯಗಳಿಗೆ ಕೊಟ್ಟು ಬರಿಗೈಯಾಗಬಾರದು, ಅವು ನಿಮ್ಮ ಸಂಸಾರದ ಸುಖಕ್ಕಾಗಿ ಇರಬೇಕು ; ಅದಿರಲಿ. ನಿಮ್ಮ ಊರಾವುದು ? ನಿಮ್ಮ ಗಂಡನ ಹೆಸರೇನು? ಮಕ್ಕಳು ಮರಿಗಳೆಷ್ಟು, ಅದನ್ನು ಹೇಳಿ' ಎಂದರು ಶ್ರೀಗಳು.

ಆಗ ಅವಳು ತನ್ನ ಊರು, ಗಂಡನ ಹೆಸರು ಮುಂತಾದುವನ್ನು ಹೇಳುತ್ತ 'ಸ್ವಾಮಿ ನನಗೆ ಮಕ್ಕಳು ಮರಿ ಏನೂ ಇಲ್ಲ. ನನ್ನ ಗಂಡನ ಸಂಬಂಧದ ಯಾವ ಸುಖವೂ ಇಲ್ಲ...' ಹಾಗೆ ಹೀಗೆ ವಿಚಿತ್ರ ಕಾಮುಕಿಯಂತೆ ಗುಹ್ಯಾಚಾಪಲ್ಯದ ಮಾತನಾಡಿದಳು. ಶ್ರೀಗಳವರು ಈ ಸಮಯದಲ್ಲಿ ಅತ್ಯಂತ ಕ್ರೋಧಗೊಂಡರು. ಆದರೂ ಕ್ರೋಧವನ್ನು ತಡೆದು ಅಲ್ಲಿಂದ ತಟ್ಟನೆ ಎದ್ದು ಹಳೆಯ ಮಠಕ್ಕೆ ಹೊರಟು ಹೋಗಿ ಅಲ್ಲಿದ್ದ ಮಠದ ಇತರ ಜನರಿಗೆ 'ಆ ಸ್ತ್ರೀಯನ್ನು ಊಟ ಮಾಡಿಸಿ ಮಠಬಿಟ್ಟು ಹೋಗುವಂತೆ ಕಳಿಸಿಬಿಡಿ' ಎಂದು ಹೇಳಿದರು. 'ಲೋಕದ ಈ ಡೊಂಕು ಎಂತಹುದು ? ತಾವು ಸುಖವಾಗಿರರು: ಶಿವನೇ

ಶಂಕರನೇ ಎಂದು ಕೊಂಡು ಕಾಲಯಾಪನೆ ಮಾಡುವ ನಮ್ಮನ್ನೂ ಕೈಬಿಡರು.' ಜೀವನದಲ್ಲಿ ಎಂದೂ ಕಾಣದ ಇಂಥ ಸನ್ನಿವೇಶದಿಂದ ಶ್ರೀಗಳು ವ್ಯಥಿತ ಹೃದಯರಾಗಿ ಹೋದರು. ಸಿದ್ಧಲಿಂಗೇಶ್ವರನೇ ಇಂಥ ಒಂದು ಪರೀಕ್ಷೆಯನ್ನು ಮಾಡಲು ಉದ್ದೇಶಿಸಿರಬಹುದೇ ? ಇತ್ಯಾದಿ ನೂರಾರು ಯೋಚನಾತರಂಗಗಳಲ್ಲಿ ತೇಲಾಡುತ್ತಲೇ ಸ್ನಾನ ಮುಗಿಸಿ ಶಿವಪೂಜಾಗೃಹಕ್ಕೆ ತೆರಳಿ ಬಹಳ ಹೊತ್ತಿನವರೆಗೆ ಲಿಂಗಪೂಜೆಯಲ್ಲಿ ಮಗ್ನರಾದರು. ಶಿವನ ಡಂಗುರವು ಇಂಥವರನ್ನು ಹೇಗೆ ಹಿಡಿಸಿ ಕಾಡುತ್ತದೆ. ಎಂಬುದಕ್ಕೆ ಇದೊಂದು ಪ್ರಬಲ ನಿದರ್ಶನ. ಮಹಾ ಮಹಾಋಷೀಶ್ವರರಿಗೆ ಇಂಥ ಪ್ರಸಂಗಗಳೊದಗಿರುವುದನ್ನು ಪುರಾಣ ಕಥೆಗಳಲ್ಲಿ ಕಾಣಬಹುದಾಗಿದೆ. 'ಬಲವಾನ್ ಇಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ' (ಇಂದ್ರಿಯ ಸಮೂಹ ಬಲವತ್ತರವಾದದ್ದು, ಅದು ವಿದ್ವಾಂಸನನ್ನೂ ಎಳೆಯುತ್ತದೆ.) ಎಂದು ಕೌಶಿಕ ಹೇಳಬೇಕಾಯಿತು. ಇದೇನೇ ಇರಲಿ. ಶ್ರೀಗಳವರು ಇಲ್ಲಿ ತೋರಿಸಿದ ವರ್ತನೆ ಒಂದು ಧೀರ ವೃತ್ತಿ. ಧೀರ ಗುಣಕ್ಕೆ ಮಹಾಕವಿ ಕಾಳಿದಾಸ ಸೂತ್ರವನ್ನು ಕುಮಾರ ಸಂಭವದಲ್ಲಿ 'ವಿಕಾರಹೇತೌ ಸತಿ ವಿಕ್ರಿಯಂತೇ ಯೇಷಾಂ ನ ಚೇತಾಂಸಿತ ಏವಧೀರಾಃ' ಎಂದು ಹೇಳಿದ್ದಾನೆ.

ವಿಕಾರ ಕಾರಣಗಳಾದ ವಸ್ತುಗಳು ಇದ್ದರೂ ಯಾರು ವಿಕಾರ ಹೊಂದುವುದಿಲ್ಲವೋ ಅವರೇ ಧೀರರು. ಇವರು ಇಂದ್ರಿಯಗಳ ಮೇಲೆ ಹೋರಾಟ ನಡೆಸಿ ಜಯ ಸಂಪಾದಿಸಿದವರು. ಲೌಕಿಕ ನೈಷ್ಠುರ್ಯಗಳನ್ನು ಧೀರೋದಾತ್ತಗುಣಗಳಿಂದ ಜಯಿಸಬಹುದು. ಪಾಟವೇಂದ್ರಿಯಜಯ ಅತ್ಯಂತ ದೊಡ್ಡದು. ಅದಕ್ಕೆ ಶಿವನ ಪ್ರಬಲ ಕಾರುಣ್ಯಬೇಕು. ಶ್ರೀಗಳವರು ಶಿವಭಾವಾಪನ್ನಮನಸ್ಕರು. ಎಂದೆಂದೂ 'ಮೇ ಮನಃ ಶಿವಸಂಕಲ್ಪಮಸ್ತು' ಎಂಬ ವೇದ ಮಂತ್ರವನ್ನು ಪಠಿಸುತ್ತ ಮನಸ್ಸನ್ನು ಶಿವಸಂಕಲ್ಪದಿಂದ ಕೂಡಿದುದನ್ನಾಗಿ ಮಾಡಿಕೊಂಡವರು. ಉದ್ದಾನ ಶಿವಯೋಗಿಗಳಂಥ ಅಘಟಿತ ಘಟನಾಸಮರ್ಥರಾದ ಶಿವಯೋಗಿಗಳ ಆಶೀರ್ವಾದ ವಜ್ರಕವಚ ಕೊಟ್ಟವರು; ಅವರ ಮನಸ್ಸು ಕಾಮನೆಗಳ ಕಾವಳನ್ನು ಕತ್ತರಿಸಿದುದು.

'ಎಲ್ಲಿ ನೋಡಿದಲ್ಲಿ ಮನವೆಳಸಿದರೆ ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ
ಪರವಧುವ ಮಹಾದೇವಿಯೆಂಬೆ, ಕೂಡಲ ಸಂಗಮದೇವ' (ಛ. ಸ್ಥ. ೪೪೫: ಕ.ವಿ.ವಿ.ಪ್ರ.)

ಬಸವಣ್ಣನವರ ಈ ವಚನಾರ್ಥವನ್ನು ನಡೆಯಲ್ಲಿ ತಂದವರು. ಹೀಗೆ ದೇವನೂ ಶಿವಕುಮಾರ ಸ್ವಾಮಿಗಳವರನ್ನು ಕರಕರ ಕಾಡಿದ್ದಾನೆ, ಕಿರಿಕಿರಿಗೊಳಿಸಿದ್ದಾನೆ. 'ಕೊಲುವೆನೆಂಬ ದೇವನ ಭಾಷೆಗೆ ಗೆಲುವೆನೆಂಬ ಭಕ್ತನ ಭಾಷೆ' ಅವನು ಹಿಡಿದ ಸತ್ಯವೆಂಬ ಕೂರಲಗಿನ ಧೈರ್ಯದಿಂದ ಲಭ್ಯವಾಗೇ ಆಗುತ್ತದೆಂಬುದನ್ನು ಮರೆಯಬಾರಮು. ಶ್ರೀಗಳವರು ಆ ಅಲಗನ್ನು ಕೈಯಲ್ಲಿ ಹಿಡಿದು ಇಂದ್ರಿಯ ಪ್ರವೃತ್ತಿಯೊಡನೆ ಹೋರಾಡಿ ಅಜೇಯರಾಗಿ ನಿಂತವರು. ಹೀಗೆ ನಿಂತು ತಮ್ಮ ಗುರುಗಳವರ ಪರಂಪರಾಗತ ಲೋಕಕಲ್ಯಾಣೈಕ ದೃಷ್ಟಿಯಿಂದ ಕಾರ್ಯಗಳನ್ನು ಮನಮುಟ್ಟಿ ಸತತ ದುಡಿದು ಲೋಕೋಪಕಾರಕ್ಕೆ ಅನೇಕ ಸಂಸ್ಥೆಗಳನ್ನು ಕಟ್ಟಿಬೆಳಸಿ, ಹೆಮ್ಮರವನ್ನಾಗಿಸಿದ್ದಾರೆ. ಅವರ ಕ್ಷಮಾಗುಣ, ಅವಿಕಾರ ಮನಸ್ಸು, ಧೀರೋದಾತ್ತ ನಡೆ, ನುಡಿ ಅವರನ್ನು ಅವರ ಸಂಸ್ಥೆಗಳನ್ನು ಮುಗಿಲೆತ್ತರಕ್ಕೇರಿಸಿವೆ. ಅವರು ಇದುವರೆಗೆ ಲೋಕಕ್ಕೆ ಕೆಡೆ ನುಡಿದಿಲ್ಲ. ದುರ್ಭಾಷೆಯನ್ನು ಬಳಸಿಲ್ಲ. ಪರರ ಮನ ನೋಯುವಂತೆ ನಿಂದಿಸಿಲ್ಲ, ನಿಂದಿಸುವುದಿಲ್ಲ. ತಮ್ಮನ್ನು ತಾವು ಬಣ್ಣಿಸಿಕೊಂಡು ಪ್ರತಿಷ್ಠೆ ತೋರಿಸಿಲ್ಲ. ಆದುದರಿಂದ ಅವರು ಮಹಾನುಭಾವ ಪ್ರತೀಕರಾಗಿ ಮಹಾ ಮಹಾ ಶಿವಯೋಗಿಗಳು ಒಲಿದು ಬಂದು ತಪಸ್ಸನ್ನು ಆಚರಿಸಿದ ಸಿದ್ಧಗಂಗೆಯ ಸಿದ್ಧಪುರುಷರಾಗಿ ಪ್ರಬುದ್ಧಚೇತನರಾಗಿ ಲೋಕಕ್ಕೆ ಕಾಣಿಸಿಕೊಂಡು ಎಲ್ಲೆಲ್ಲೂ ಸೂರ್ಯನೋಪಾದಿಯಲ್ಲಿ ಹೊಳೆಯುತ್ತಿದ್ದಾರೆ. ಅವರ ಇಂದ್ರಿಯಗಳು ಅವರ ಮಾತನ್ನು ಕೇಳುತ್ತವೆ. ಅಂತಃಕರಣ ವೃತ್ತಿ ಶಿವಭಾವನೆಯಿಂದ ಪರಿಶುದ್ಧವಾಗಿದೆ. ಅಂತೆಯೇ ಅವರು ಲೋಕವನ್ನು, ಲೋಕವು ಅವರನ್ನು ಆಕರ್ಷಿಸುತ್ತಲೇ ಬಂದಿದೆ.

**ಶ್ರೀಗಳವರ ಪ್ರಬಲಾಂತಃಕರಣ ವೃತ್ತಿ: ಮಠಕ್ಕೆ ಮೃತ್ಯುಂಜಯ ಸ್ವಾಮಿಗಳ ಆಗಮನ :**

ಶ್ರೀಗಳವರ ಅಂತಃಕರಣ ಪ್ರವೃತ್ತಿ ಶಿವಭಾವಾಪನ್ನವಾಗಿದೆಯೆಂಬುದಕ್ಕೆ ಒಂದು ಪ್ರಸಂಗವನ್ನು ಕೊಡಬಹುದಾಗಿದೆ. ಸುಮಾರು ೩೦–೩೨ ವರ್ಷಗಳ ಹಿಂದಿನ ಮಾತು. ಶಿವಯೋಗದಲ್ಲಿ ಬಹು ಎತ್ತರದ ಮಟ್ಟವನ್ನು ಮುಟ್ಟಿದ್ದ ಧಾರವಾಡದ ಮುರುಘಾಮಠದ ಮೃತ್ಯುಂಜಯ ಸ್ವಾಮಿಗಳು ಎಡೆಯೂರ ಸಿದ್ದಲಿಂಗೇಶ್ವರರ ದರ್ಶನ ಮಾಡಿಕೊಂಡು ಅನೇಕ ಜನ ಜಂಗಮ ಮೂರ್ತಿಗಳೊಡನೆ ಸಿದ್ಧಲಿಂಗೇಶ್ವರ ಕ್ಷೇತ್ರವಾದ ಸಿದ್ಧಗಂಗೆಗೂ ಬಂದರು. ಆಗ ಮಠದಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳಿರಲಿಲ್ಲ. ೨೫–೩೦ ಮೈಲು ದೂರದ ಒಂದು ಹಳ್ಳಿಯಲ್ಲಿ ಭಿಕ್ಷಾಟನೆಗೆ ಹೋಗಿ ಅಲ್ಲಿಯೇ ವಸತಿ ಮಾಡಿದ್ದರು. ಮೃತ್ಯುಂಜಯಪ್ಪನವರು 'ಅಯ್ಯೋ! ಶ್ರೀಗಳು ಇಲ್ಲವಲ್ಲಾ; ಅವರ ದರ್ಶನ ಪಡೆದು ಹೋಗಲೇಬೇಕೆಂದಿದ್ದೆ ಉಪಾಯವಿಲ್ಲ' ಎಂದು ಚರಮೂರ್ತಿಗಳೊಡನೆ ಪವಡಿಸಿಬಿಟ್ಟರು. ಇತ್ತ ದೂರದ ಹಳ್ಳಿಯಲ್ಲಿ ಬಿಡಾರ ಮಾಡಿದ್ದ ಶ್ರೀಗಳವರಿಗೆ ಮಠಕ್ಕೆ ಹೋಗಿ ಬರಬೇಕೆಂಬ ಮನಸ್ಸೂ ಆಯಿತು. ಶಿವಪೂಜೆಯ ಸೇವಾ ಜನರನ್ನು, ಇನ್ನಿತರರನ್ನು ಅಲ್ಲಿಯೇ ಬಿಟ್ಟು ಮಠಕ್ಕೆ ಹೋಗಿ ಬೆಳಗಿನ ಪೂಜೆಯನ್ನು ಮಠದಲ್ಲಿಯೇ ಮುಗಿಸಿಕೊಂಡು ಬರುತ್ತೇವೆಂದು ಹೇಳಿ, ರಾತ್ರಿ ಆ ಹಳ್ಳಿಯಲ್ಲೇ ಶಿವಪೂಜೆ ಪ್ರಸಾದ ಮುಗಿಸಿ ಮಠಕ್ಕೆ

ರಾತ್ರಿ ೧೨ ಘಂಟೆಯ ಹೊತ್ತಿಗೆ ಬಂದರು. ಮಠಕ್ಕೆ ಮೃತ್ಯುಂಜಯ ಸ್ವಾಮಿಗಳು ಅನೇಕ ಜನ ಚರಮೂರ್ತಿಗಳೊಡನೆ ಬಂದಿರು
ವುದು ಗೊತ್ತಾಯಿತು. ಸಿದ್ಧಲಿಂಗೇಶ್ವರನೇ ನನ್ನನ್ನು ಮಠಕ್ಕೆ ಹೋಗುವಂತೆ ಪ್ರೇರೇಪಿಸಿದನೆಂದು ಭಾವಿಸಿ ಬೆಳಕು ಹರಿ
ಯುವುದರೊಳಗಾಗಿ ಪ್ರಸಾದಪರಿಕರವನ್ನು ಸಿದ್ಧಗೊಳಿಸುವುದಕ್ಕೆ ಸಂಬಂಧಪಟ್ಟವರಿಗೆ ಆಜ್ಞಾಪಿಸಿ, ತಾವೂ ಪವಡಿಸಿದರು.
ಬೆಳಗಾಗುತ್ತಲೆ ಮೃತ್ಯುಂಜಯಪ್ಪನವರನ್ನು ಸಂದರ್ಶಿಸಿ ಶಿವಪೂಜೆಗಾಗಿ ಕರೆದು ತಂದು ಸ್ನಾನ ಮಾಡಿಸಿದರು. ಎಲ್ಲರೂ ಶಿವಪೂಜೆ
ಮುಗಿಸಿದರು. ಇನ್ನು ಪಾದ ಪೂಜೆ ನಡೆಯಬೇಕು. ಶಿವಕುಮಾರ ಸ್ವಾಮಿಗಳು ಮೃತ್ಯುಂಜಯಪ್ಪಗಳಿಗೆ ನಮಸ್ಕರಿಸಿ 'ಪಾದ
ಪೂಜಾಗದ್ದುಗೆಯನ್ನು ಏರಬೇಕೆಂದು ಪ್ರಾರ್ಥಿಸಿದರು. ಮೃತ್ಯುಂಜಯಪ್ಪಗಳು 'ಛೀ! ಎಲ್ಲಿಯಾದರೂ ಉಂಟೇ ಸ್ವಾಮಿ! ತಾವೇ
ಪಾದಪೂಜಾ ಗದ್ದುಗೆಯೇರಬೇಕೆಂದು' ಪ್ರತಿಯಾಗಿ ಅವರೂ ನಮಸ್ಕಾರ ಹಾಕಿದರು. ಆಗ ಶಿವಕುಮಾರ ಸ್ವಾಮಿಗಳು
'ಬುದ್ಧಿ, ತಾವು ಪೂಜ್ಯರು ಹಿರಿಯರು. ಮಹಾಚೇತನರು ತಮ್ಮ ಪಾದಪೂಜೆ ಮಾಡಿಕೊಳ್ಳಲು ನನಗೆ ಅವಕಾಶ ಮಾಡಿಕೊಡಿ'
ಎಂದರು. ಮೃತ್ಯುಂಜಯಪ್ಪನವರು 'ಬುದ್ಧಿ. ತಾವು ಮಹಾ ದಾಸೋಹಿಗಳು, ಈ ಪುಣ್ಯಕ್ಷೇತ್ರದ ಅಧಿಪತಿಗಳು, ಸಾಕ್ಷಾತ್
ಸಿದ್ಧಲಿಂಗೇಶ್ವರರ ಪ್ರತಿನಿಧಿಗಳು; ತಮ್ಮ ದರ್ಶನ ಮಾಡಿ ತಮ್ಮಿಂದ ತೀರ್ಥಪ್ರಸಾದ ತೆಗೆದುಕೊಂಡು ಹೋಗಬೇಕೆಂದು ನಾನೀಗ
ಭಕ್ತನಾಗಿ ಬಂದಿದ್ದೇನೆ. ತಾವು ಕೃಪೆಯಿಟ್ಟು ತೀರ್ಥಪ್ರಸಾದ ಕೊಟ್ಟು ಕಳುಹಿಸಿದರೆ ತೆಗೆದುಕೊಂಡು ಹೋಗುತ್ತೇನೆ. ಇಲ್ಲ
ದಿದ್ದರೆ ನನಗೆ ಆ ಭಾಗ್ಯವಿಲ್ಲವೆಂದು ಹಾಗೇ ಹೋಗುತ್ತೇನೆ'– ಇತ್ಯಾದಿಯಾಗಿ ಹೇಳುತ್ತ ನಿಂತರು. ಪರಸ್ಪರ ನೀವು ದೊಡ್ಡ
ವರು ನೀವು ದೊಡ್ಡವರೆಂಬ ವಾಗ್ವಾದ ಪ್ರಾರಂಭವಾಯಿತು. ಆಗ ಮೃತ್ಯುಂಜಯ ಸ್ವಾಮಿಗಳು 'ಇನ್ನು ಹೊರಡಿರಿ.
ಸ್ವಾಮಿಯ ಪ್ರಸಾದ ಲಭ್ಯವಾಗಲಿಲ್ಲ, ನನ್ನಲ್ಲಿಯೇ ಏನೋ ದೋಷವಿದ್ದೀತು......' ಇತ್ಯಾದಿ, ತಮ್ಮ ಕಡೆಯವರಿಗೆ ನುಡಿ
ಯುತ್ತಿದ್ದಂತೆಯೇ ಶ್ರೀ ಶಿವಕುಮಾರ ಸ್ವಾಮಿಗಳು ಗದ್ದುಗೆಯೇರಿ ಕುಳಿತರು, ಪಾದ ಪೂಜೆ ಮಾಡಿಸಿಕೊಂಡರು. ಮೃತ್ಯುಂಜ
ಯಪ್ಪಗಳೂ ಉಳಿದ ಮೂರ್ತಿಗಳೂ ಪರಿವಾರದವರೂ ತೀರ್ಥ ಪ್ರಸಾದ ಮುಗಿಸಿ ಹೊರಟು ಹೋದರು. ಮಹಾಮಹಾ
ಶಿವಯೋಗಿಗಳು ಸಿದ್ಧಗಂಗಾ ಶ್ರೀಗಳವರ ಲಿಂಗಪೂಜಾನಿಷ್ಠೆ ಜಂಗಮದಾಸೋಹಸಂಜನಿತ ಶಿವಲಿಂಗತೇಜೋವಿಶೇಷಕ್ಕೆ
ಮಾರು ಹೋಗಿದ್ದಾರೆ. ಇವರ ನಡೆನುಡಿ ಘನತೆಗೌರವಗಳನ್ನು ಕುರಿತು ಚಿತ್ರದುರ್ಗದ ಜಗದ್ಗುರು ಜಯವಿಭವ ಮುರುಘ
ರಾಜೇಂದ್ರ ಸ್ವಾಮಿಗಳಂತೂ ಹಿರಿಹಿರಿಹಿಗ್ಗಿ 'ಅವರು ಬಹಳ ದೊಡ್ಡವರು. ಅವರು ಮಾಡುವ ಅಗಾಧ ಕಾರ್ಯಗಳು ಪವಾಡ
ಸದೃಶವಾದುವುಗಳು' ಎಂದು ಪದೇಪದೇ ನನ್ನೆದುರು ನಾನು ಚಿತ್ರದುರ್ಗದಲ್ಲಿದ್ದಾಗ ಹೇಳುತ್ತಿದ್ದರು. ೧೯೬೪ ರಲ್ಲಿ ನಡೆದ
ಒಂದು ಘಟನೆಯನ್ನಿಲ್ಲಿ ಉಲ್ಲೇಖಿಸಿದರೆ ತಪ್ಪಾಗಲಾರದು.

ಜಯವಿಭವ ಜಗದ್ಗುರುಗಳು ಹಾಸಿಗೆ ಹಿಡಿದು ತೀವ್ರ ಕಾಯಿಲೆಯಿಂದ ಸರ್ಪಭೂಷಣ ಮಠದಲ್ಲಿ ಮಲಗಿದ್ದಾಗ
ಶ್ರೀ ಶಿವಕುಮಾರ ಸ್ವಾಮಿಗಳು ಅವರನ್ನು ನೋಡಿಕೊಂಡು ಹೋಗಲು ಬಂದರು. ಜಗದ್ಗುರುಗಳು ಪವಡಿಸಿದ್ದರು, ಅವರ
ಪಾದದ ಕಡೆಗೆ ಶಿವಕುಮಾರ ಸ್ವಾಮಿಗಳು ನಿಂತಿದ್ದರು. ಆಗ ಜಯವಿಭವ ಸ್ವಾಮಿಗಳು ತಮ್ಮ ತಲೆಯ ಕಡೆಗಿರುವ ಕುರ್ಚಿ
ಯನ್ನು ತೋರಿಸಿ, ಇಲ್ಲಿ ಮುಹೂರ್ತ ಮಾಡಬನ್ನಿರೆಂದು ಹೇಳಿದರು. ಶ್ರೀಗಳವರು ಸಾಂತ್ವನ ಹೇಳುತ್ತ ಹಾಗೇ ನಿಂತಿದ್ದರು.
ಆಗ ಜಯವಿಭವ ಸ್ವಾಮಿಗಳು 'ನೀವು ದೊಡ್ಡವರಪ್ಪ, ನನ್ನ ಪಾದದ ಕಡೆಗೆ ನಿಂತಿದ್ದೀರಿ' ಎಂದು ಅಂಥ ತೀವ್ರ ಕಾಯಿಲೆಯಲ್ಲೀ
ಮೇಲೆದ್ದು ಸ್ವಾಮಿಗಳಿದ್ದ ಕಡೆ ತಲೆಮಾಡಿ ಮಲಗಿದರು. ಆಗ ಇಬ್ಬರ ಕಣ್ಣುಗಳೂ ನೀರ್ಗೂಡಿದವು. ಹೀಗೆ ಮಹಾಮಹಾ
ಚೇತನ್ಸಮನ್ವಿತರಾದ ಸ್ವಾಮಿಗಳವರು ಶಿವಕುಮಾರ ಸ್ವಾಮಿಗಳೆಂದರೆ ಬಹಳದೊಡ್ಡವರೆಂದು ಹಾಡಿಹೊಗಳಿದ್ದಾರೆ. ಇವರ
ದಿವ್ಯವಿಭೂತಿತ್ವದ ರಹಸ್ಯವನ್ನು ಅರಿತು ಅಪಾರಗೌರವ, ವಿಶ್ವಾಸ, ಭಕ್ತಿಭಾವವನ್ನು ಪ್ರಕಟಿಸಿದ್ದಾರೆ. ಇನ್ನೇನು ಬೇಕು
ಶ್ರೀಗಳವರ ಪರಿಶುದ್ಧಾಂತಃಕರಣ ಪ್ರವೃತ್ತಿಯ ಬಗೆಗೆ ಸಾಕ್ಷ್ಯ.

ಶ್ರೀಗಳವರ ಅಂತಃಕರಣ ಅವರ ಮಾತನ್ನು ಕೇಳುತ್ತಿದ್ದುವೆಂಬುದರ ಬಗೆಗೆ ಒಂದೆರಡು ದೃಷ್ಟಾಂತಗಳು ನಮ್ಮ
ಕಣ್ಣು ಮುಂದೆ ನಡೆದುವನ್ನು ವಿವರಿಸುತ್ತ ಈ ಲೇಖನವನ್ನು ಮುಗಿಸಬೇಕೆಂದಿದ್ದೇನೆ.

ಮಠದಲ್ಲಿ ಮಾರ್ಕಂಡೇಯ ನಿಲಯ ಕಟ್ಟುವ ಕಾರ್ಯ ನಡೆದಿತ್ತು. ಆ ಕಾರ್ಯದಲ್ಲಿ ವಿದ್ಯಾರ್ಥಿಗಳು ಕಟ್ಟಡದ ಕೆಲಸ
ಗಾರರು ಎಲ್ಲರೂ ಸೇರಿ ಮೊಲ್ಡಿಂಗ್ ಹಾಕಿ ಮುಗಿಸಿದ ದಿನ ಅದು: ಸಾಯಂಕಾಲ ೬-೩೦ ಗಂಟೆಯಾಗಿ ಹೋಯಿತು.
ಶ್ರೀಗಳವರು ಅದೆಲ್ಲಿಂದಲೋ ಅಲ್ಲಿಗೆ ಬಂದರು. ನೂರಾರು ಜನ ವಿದ್ಯಾರ್ಥಿಗಳೂ ಕಟ್ಟಡದ ಕೆಲಸದವರೂ ಮೋಲ್ಡಿಂಗ್
ಹಾಕಿದ ಪ್ರದೇಶದ ಕೆಳಗೆ ಹರಟೆ ಹೊಡೆಯುತ್ತ ತಮ್ಮ ತಮ್ಮ ಶೌರ್ಯ ಪ್ರಕಟಿಸುತ್ತ ನಿಂತಿದ್ದರು. ಆಗ ನಾನೂ ಒಬ್ಬ ಅದರಲ್ಲಿ
ಭಾಗಿಯಾದವನೇ. ಸ್ವಾಮಿಗಳು ಬಂದವರೇ 'ಏನಿದು ಸುಮ್ಮನೆ ಹರಟೆ' ಎಂದು ಗದರಿಸುತ್ತ 'ನಡೆಯಿರಿ ಎಲ್ಲರೂ ಮುಖತೊಳೆದು
ಪ್ರಾರ್ಥನೆಗೆ ತೆರಳಿ' ಎಂದು ಹೇಳಿದರು. ಎಲ್ಲರೂ ಜೀಳುತ್ತೇಳುತ್ತ ಕೈಕಾಲು ಮುಖತೊಳೆದು ಮುಂದಿನ ಕಾರ್ಯಕ್ಕೆ ಹೊರಟು
ಹೋದರು. ಶ್ರೀಗಳವರು ಅಲ್ಲಿಯೇ ಸ್ವಲ್ಪಹೊತ್ತು ನಿರೀಕ್ಷಿಸುತ್ತ ನಿಂತರು. ಹುಡುಗರಾಗಲಿ ಕೆಲಸದವರಾಗಲಿ ಯಾರೂ
ಅಲ್ಲಿ ನಿಲ್ಲಲಿಲ್ಲ. ಎಲ್ಲರೂ ಹೋಗಿ ಎರಡು ನಿಮಿಷಗಳಾಗಿರಬಹುದು. ಒಮ್ಮೆಲೆ ಸೆಂಟರಿಂಗ್ 'ಲಡಲ್' ಎಂದು ಮುರಿದು.

ಹಾಕಿದ ಹಸಿಯ ಮೋಲ್ಡಿಂಗ್ ಕಬ್ಬಿಣ ಸಮೇತ ಕಳಚಿ ನೆಲಕ್ಕೆ ಬಿದ್ದುಬಿಟ್ಟಿತು. ಹುಡುಗರೆಲ್ಲ ಓಡಿಬಂದರು, ಎಲ್ಲರೂ ಥರಗುಟ್ಟಿ ನಡುಗಿ ಬಿಟ್ಟರು. ಶ್ರೀಗಳವರು ಅಲ್ಲಿಗೆ ಬಂದು ಹೇಳದಿದ್ದರೆ ಎಷ್ಟು ಹುಡುಗರು ಹರಟೆ ಹೊಡೆಯುತ್ತ ಅಲ್ಲಿಯೇ ನಿಂತು ದುರ್ಮರಣಕ್ಕೆ ಈಡಾಗುತ್ತಿದ್ದರೋ ! ಎಷ್ಟು ಜನ ಹುಡುಗರ ಕೆಲಸಗಾರರ ಕೈಕಾಲು ಮುರಿಯುತ್ತಿದ್ದವೋ ! ಇನ್ನಿತರರ ಪಾಡೇನಾಗುತ್ತಿತ್ತೋ !

ಇಂಥದೇ ಇನ್ನೊಂದು ನಾನೇ ಕಣ್ಮುಟ್ಟ ನೋಡಿದ ಪ್ರಸಂಗ: ನೂರಾರು ಹುಡುಗರು ಸೇರಿ ವಸ್ತುಪ್ರದರ್ಶನದಲ್ಲಿ 'ಸ್ಟೇಜ್' ಕಟ್ಟಲು ಪ್ರಾರಂಭಿಸಿದ್ದರು. ದೊಡ್ಡ ದೊಡ್ಡ ಸರ್ವೇಮರಗಳನ್ನು ಹುಗಿದು ನಿಲ್ಲಿಸಿ, ಮೇಲ್ಭಾಗದಲ್ಲಿ ಮರಕಟ್ಟಲು, ಹೊದಿಸಲು ಮೂವತ್ತುನಾಲ್ವತ್ತು ಹುಡುಗರು ಹತ್ತಿಬಿಟ್ಟಿದ್ದರು, ಕೆಲಸ ಬಹು ಹುರುಪಿನಿಂದ ಸಾಗುತ್ತಿತ್ತು, ಕೆಳಭಾಗದಲ್ಲಿಯೂ ಐವತ್ತು ಅರವತ್ತು ಹುಡುಗರು ನಿಂತಿದ್ದರು. ಎಲ್ಲಿಂದಲೋ ಸ್ವಾಮಿಗಳು ಅಲ್ಲಿಗೆ ಬಂದರು. 'ಏನಿದು ಮೇಲೆ ಅಷ್ಟೊಂದು ಜನ' ಎಂದು ಗದರಿಕೆ ಹಾಕುತ್ತಲೇ ಬಂದರು. ಮೇಲಿದ್ದವರೆಲ್ಲ ಶ್ರೀಗಳವರು ಬಂದರೆಂದು ಸರಸರನೇ ಇಳಿದು ನಮಸ್ಕಾರ ಮಾಡಲು ಸ್ವಲ್ಪ ದೂರದಲ್ಲಿರುವ ಸ್ವಾಮಿಗಳು ನಿಂತಲ್ಲಿಗೆ ಬಂದರು. ಆ ಸ್ಟೇಜಿನ ಕೆಳಭಾಗದಲ್ಲಿದ್ದವರೂ ಬಂದು ಸ್ಟೇಜಿನ ಸಂಬಂಧದ ವಿವರಗಳನ್ನು ತಿಳಿಸುತ್ತ ನಿಂತರು, ಅದೇನಾಯಿತೋ ದೇವರೇಬಲ್ಲ! ಸ್ಟೇಜೆಲ್ಲ ಮುರಿದು ಒಮ್ಮೆಲೇ ನೆಲಕ್ಕಪ್ಪಳಿಸಿಬಿಟ್ಟಿತು, ಮರಗಳು ಲಡ ಲಡ ಮುರಿದವು, ಶ್ರೀಗಳವರು 'ಯಾರಾದರೂ ಸಿಕ್ಕಿಕೊಂಡು ಬಿಟ್ಟರೋ ಏನೋ ನೋಡಿ' ಎಂದು ಹೇಳಿದರು. ಈಶ್ವರಕೃಪೆ ಯಾರೂ ಅಲ್ಲಿರಲಿಲ್ಲ.

ಶ್ರೀಗಳವರ ಇಂಥ ಅಂತಃಕರಣವೃತ್ತಿಗೆ ಸಂಬಂಧಿಸಿದ ಕಥೆಗಳೆಷ್ಟೋ ಇವೆ. ಅವನ್ನೆಲ್ಲಾ ಹೇಳುವುದು ಕಾಲಾತೀತದ ಪ್ರಶ್ನೆ. ಇಲ್ಲಿ ಈ ಕಥೆಗಳನ್ನು ಹೇಳುವುದರ ಮುಖ್ಯೋದ್ದೇಶವಿಷ್ಟೆ: ಶ್ರೀಗಳವರ ಅಂತಃಕರಣ ಬಹು ಮೇಲ್ಮಟ್ಟದ್ದಾಗಿದೆ. ಕಣ್ಣರಿಯದಿದ್ದರೂ ಕರುಳಿಗೆ ಅರಿವಾಗುವಂತಹುದು. ಜೀವನದುದ್ದಕ್ಕೂ ನಿಷ್ಕಾಪಟ್ಯ ನಡೆನುಡಿಗಳಿಂದ ನಡೆದು ಲೋಕಜೀವನದ ಶುದ್ಧಿಗೆ, ಸಿದ್ಧಿಗೆ ಅಹೋರಾತ್ರಿ ಲಿಂಗದೇವನನ್ನು ಕೈಯಲ್ಲಿ ಹಿಡಿದು ಪೂಜಿಸಿ, ಅವನ ಪರೀಕ್ಷೆಗಳಲ್ಲೆಲ್ಲಾ ಗೆದ್ದು ನಿಂತವರು. ತಮ್ಮನ್ನೇ ತಾವು ಶಿವನ ತಕ್ಕಡಿಯಲ್ಲಿ ತೂಕ ಹಾಕಿಸಿಕೊಂಡವರು. ಶಿವನು ಇವರನ್ನು ತೂಗಿನೋಡಿ ತಕ್ಕ ಬೆಲೆಯನ್ನು ಕಟ್ಟಿದ್ದಾನೆ. ಶಿವನ ಅಪಾರ ಕಾರುಣ್ಯಜಲಾಭಿಷೇಕದಿಂದ ಪರಿತೃಪ್ತರಾದ ಅವರ ಸರ್ವೇಂದ್ರಿಯಗಳೂ ಅವರ ಮಾತನ್ನು ಕೇಳುತ್ತವಾದ್ದರಿಂದಲೇ ಅವರ ಕ್ರಿಯೆಗೆ, ನೋಟಕ್ಕೆ ಮಾಟಕ್ಕೆ ಅದ್ಭುತ ಶಕ್ತಿ ಬಂದಿದೆ,

> ಭಕ್ತಿ ಸುಭಾಷೆಯ ನುಡಿಯ ನುಡಿವೆ ; ನುಡಿದಂತೆ ನಡೆವೆ;
> ನಡೆಯೊಳಗೆ ನುಡಿಯ ಪೂರೈಸುವೆ ; ತ್ರಾಸು ಕಟ್ಟಳೆ ನಿಮ್ಮ ಕಯ್ಯಲ್ಲಿ ;
> ಒಂದು ಜವೆ ಕೊರತೆಯಾದಡೆ
> ಎನ್ನನದ್ದಿ ನೀನೆದ್ದುಹೋಗು ಕೂಡಲಸಂಗಮದೇವ

–ಬಸವಣ್ಣನವರ ಈ ನುಡಿಯ ಕೆಚ್ಚು ನೆಚ್ಚು ಶ್ರೀ ಶಿವಕುಮಾರ ಸ್ವಾಮಿಗಳವರ ಅಂತರಂಗ ಬಹಿರಂಗ ವ್ಯವಹಾರಗಳ ಕೆಚ್ಚು ನೆಚ್ಚಾಗಿದೆ. ಶಿವನ ಕಯ್ಯಲ್ಲಿ ತಕ್ಕಡಿ ಕೊಟ್ಟು ತೂಕಹಾಕೆಂದು ಹೇಳುವವರ ಅಂತಃಕರಣ ಅತ್ಯಂತ ಧೈರ್ಯದಿಂದಲೇ ಕೂಡಿರಬೇಕು. ಆ ಧೈರ್ಯ, ಸ್ಥೈರ್ಯ, ಕೆಚ್ಚು, ನೆಚ್ಚುಗಳನ್ನು ಪಡೆದಿರುವ ಶಿವಕುಮಾರ ಸ್ವಾಮಿಗಳ ಜೀವನ ಬಾಲ್ಯದಿಂದಲೂ ಒಳಹೊರಗೆ ಅರಿತು ಆಚರಿಸಿ, ಶಿವಶಿವ ಎಂದು ಮನೋಬುದ್ಧಿಗಳಿಗೆ ಓದಿಸಿ, ಪ್ರಬಲ ಸಂಸ್ಕಾರಗೊಳಿಸಿದುದರ ಫಲ. ಅವರ ಆ ಸಾಧನೆಯ ಫಲ ಲೋಕಜೀವನದ ಸುಖ ಸಂತೋಷಗಳಿಗೆ ಬಿಯವಾಗುತ್ತಿದೆ. ಕಳೆದ ೫೦ ವರ್ಷಗಳಿಂದ ಶ್ರೀ ಕ್ಷೇತ್ರದಲ್ಲಿ ಸಿದ್ಧಲಿಂಗೇಶ್ವರರ ಜೀವಂತ ಪ್ರತಿನಿಧಿಗಳಾಗಿ ನಿಂತು, ಉದ್ದಾನ ಸ್ವಾಮಿಗಳವರ ಆಶೀರ್ವಾದವನ್ನು ಪಡೆದು ಅವರು ಸಾಧಿಸಿದ ಅನಂತ ಸಾಧನೆ ಸಿದ್ಧಿಗಳಫಲವುಣ್ಣುವ ಸಮಸ್ತ ಭಕ್ತಕೋಟಿ ತನ್ನನ್ನು ತಾನು ಗೌರವಿಸಿಕೊಳ್ಳಲೋಸುಗವೇ ಈ ವರ್ಷ ಶ್ರೀಗಳವರ ಸ್ವರ್ಣಮಹೋತ್ಸವವನ್ನಾಚರಿಸುತ್ತಿದೆ. ಅವರ ಕಾರುಣ್ಯರಸಾಮೃತ ಉತ್ತರೋತ್ತರ ಲೋಕದ ಚೇತನಗಳನ್ನು ತಣಿಸಬೇಕು. ಅವರ ಭವ್ಯಾದರ್ಶ, ದಿವ್ಯವಿಭೂತಿತ್ವದ ನಡೆ ಲೋಕಜೀವನಕ್ಕೆ ದಾರಿದೀಪವಾಗಬೇಕು. ಆ ಬೆಳಕಿನಲ್ಲಿ ಲೋಕ ಎಡವದೆ ತಡವರಿಸದೆ ಹೋಗುವಂತಾಗಬೇಕು. ಆ ಮಹಾಚೇತನಕ್ಕೆ ಈ ಬೇಡಿಕೆಯನ್ನು ಬೇಡಿ ಈ ಲೇಖನ ಮುಗಿಸುತ್ತೇನೆ.

---

# ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾಷಣಗಳು

[ಶ್ರೀಗಳವರು ಸಾವಿರಾರು ಸಂಘಸಂಸ್ಥೆಗಳಲ್ಲಿ. ಸಾರ್ವಜನಿಕ ಸಮಾರಂಭಗಳಲ್ಲಿ ಭಾಷಣ ಮಾಡಿದ್ದಾರೆ. ಮಾದರಿಗಾಗಿ ಇಲ್ಲಿ ಅವರ ಕೆಲವು ಭಾಷಣಗಳ ಸಾರಾಂಶ ಕೊಡಲಾಗಿದೆ]

## ೧. ಜ್ಞಾನಿಗಳು ಜಗತ್ತಿಗೆ ಭೂಷಣರು

[೧೯೫೫ನೆಯ ಶ್ರಾವಣ ಮಾಸದಲ್ಲಿ ೧ ತಿಂಗಳು ಪ್ರಭುಲಿಂಗಲೀಲೆಯ ಪ್ರವಚನ ಮಾಡಿದ ಶ್ರೀಗಳವರು ಅದರ ಪರಿಸಮಾಪ್ತಿ ಸಮಾರಂಭದಂದು ದಯಮಾಡಿಸಿದ್ದ ಅರಮನೆ ಪಂಚಗವಿ ಮಠಾಧ್ಯಕ್ಷರಾದ ಶ್ರೀ ನಿ.ಪ್ರ. ಗೌರೀಶಂಕರ ಸ್ವಾಮಿಗಳವರ ಬಗ್ಗೆ ಅಪ್ಪಣೆ ಕೊಡಿಸಿದ ಭಾಷಣ]

ಪೂಜ್ಯ ಶ್ರೀ ಗೌರೀಶಂಕರಸ್ವಾಮಿಗಳವರು ಕೃಪೆಮಾಡಿ ಇಲ್ಲಿಗೆ ದಯಮಾಡಿಸಿ ಪ್ರವಚನ ಪರಿಸಮಾಪ್ತಿ ಸಮಾರಂಭ ನೆರವೇರಿಸಿಕೊಟ್ಟ ಸಮಯದಲ್ಲಿ ಮೂರು ದಿವಸಗಳಿಂದ ಅವಿಶ್ರಾಂತವಾಗಿ ಅಪ್ಪಣೆ ಕೊಡಿಸಿದ ವೀರಶೈವ ಸಿದ್ಧಾಂತ ಮತ್ತು ತಾತ್ವಿಕ ವಿಚಾರವು ಅಲಭ್ಯ ಲಾಭವಾಗಿ ಪರಿಣಮಿಸಿತು, ಇದರ ವರ್ಣನೆಯನ್ನು ಎಷ್ಟು ಮಾಡಿದರೂ ತೀರದು; ಭೌತಿಕ ಜಾಲದ ಜಂಜಡದಲ್ಲಿ ಜಗತ್ತೆಲ್ಲಾ ತನ್ನ ಮುಖ್ಯವಾದ ದೃಷ್ಟಿಯನ್ನಿಟ್ಟು ಅದರ ಬೆಳವಣಿಗೆಯಿಂದಲೇ ಉದ್ಧಾರವಾಗುತ್ತೇವೆಂಬ ಅಪಕ್ವಾಲೋಚನಾವಸ್ಥೆಯಲ್ಲಿಯೇ ಕಾಲ ಕಳೆಯುಹತ್ತಿದೆ. ಈಗಿನ ವಿಪನ್ನಾವಸ್ಥೆಗಳನೇಕವನ್ನವಲೋಕಿಸಿದರೆ ಜಗತ್ತಿನ ರೂಪರೇಖೆಗಳು ಹೇಗೆ ಚಿತ್ರಿತವಾಗಬಹುದು ? ಜಗತ್ತಿನ ರಾಜಕೀಯ ಶಾಂತಿಯನ್ನು, ಸಾಮಾಜಿಕ ಶಾಂತಿಯನ್ನು ಕಾಯ್ದುಕೊಳ್ಳುವುದು ಹೇಗೆ ? ಎಂಬ ಹಲವಾರು ವಿಚಾರಗಳಲ್ಲಿ ಮತ್ಸದ್ದಿಗಳು ಮಾರ್ಗ ಕಾಣದೆ ತೊಳಲಹತ್ತಿದ್ದಾರೆ. ಪರಿಹಾರವೂ ಅನಿವಾರ್ಯ. ಭೌತಶಾಸ್ತ್ರದ ಬೆಳವಣಿಗೆಯ ಫಲವಾಗಿ ಮಾನವವಿನಾಶಕಾರಕ ಸಾಮರ್ಥ್ಯವನ್ನು ಪ್ರಬಲ ರಾಷ್ಟ್ರಗಳು ಪಡೆದಿವೆ. ಕೋಪತಾಪಾದಿಗಳಿಂದ ಕೂಡಿದ ಪ್ರಬಲ ರಾಷ್ಟ್ರವೊಂದು ರಾಕ್ಷಸಕೃತ್ಯಕ್ಕೆ ಮನಸ್ಸು ಮಾಡಿದರೆ ತತ್ಪರಿಣಾಮವಾಗಿ ಜಗತ್ತನ್ನೇ ತಲ್ಲಣಗೊಳಿಸುವ ಕಾಲ ಉಂಟಾದೀತು. ಹೀಗಾದರೆ ಜಗತ್ತಿನ ಉದ್ಧಾರವಾಗುವುದೇ ? ಎಂಬ ನಿರಾಶಾ ಭಾವವೂ ಜನಗಳಲ್ಲಿ ಮೂಡದಿಲ್ಲ. ಆದರೆ ಪೂಜ್ಯ ಶ್ರೀಗಳವರ ಭಾಷಣದಿಂದ ಯಾರ ಹೃದಯದಲ್ಲಿ ತಾನೆ ಆಶಾಕಿರಣಗಳು ಏಳುವುದಿಲ್ಲ? ಇಂದು ಜಗತ್ತಿನ ವಿಪ್ಲವವಾಗುತ್ತಿದ್ದರೆ, ವಿನಾಶಕಾರಕ ಮಾರ್ಗದಲ್ಲಿ ಹೋಗುತ್ತಿದ್ದರೆ, ಅದು ತನ್ನನ್ನು ತಾನು ಚೆನ್ನಾಗಿ ವಿಚಾರಿಸಿಕೊಂಡಿಲ್ಲ ಇಷ್ಟೆ. ಆರ್ಥಿಕ, ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಜ್ಞಾನಿಗಳು ನಿರಾಶಾವಾದಿಗಳಾಗುವುದು ಬೇಡ. ಆದರೆ ಅಲ್ಲಿ ಜ್ಯೋತಿಯನ್ನು ಕಾಣುವ ಕಣ್ಣಿನವರಾಗಿ ಆಶಾವಾದಿಗಳಾಗಬೇಕು. ಈ ತತ್ತ್ವವು ಶ್ರೀಗಳವರ ಅನುಗ್ರಹಪೂರ್ಣವೂ ವಿದ್ವತ್ಪೂರ್ಣವೂ ಆದ ಉಪನ್ಯಾಸದಿಂದ ವ್ಯಕ್ತಪಟ್ಟಿದೆ. ಹೃದಯಂಗಮವಾದ ಇಂಥ ಭಾಷಣಗಳಿಂದ ನಾಸ್ತಿಕರೂ ಆಸ್ತಿಕರಾಗುವರು. ಶ್ರೀಮಠದ ವಿದ್ಯಾರ್ಥಿವೃಂದಕ್ಕೂ ಭಕ್ತವೃಂದಕ್ಕೂ ಸನ್ನಿಧಿಯ ದರ್ಶನ, ಉಪದೇಶಭಾಷಣಗಳು ಬತ್ತದ ಬುಗ್ಗೆಯಾಗಿ ಪರಿಣಮಿಸಿವೆಯೆಂದು ಭಾವಿಸಿದ್ದೇವೆ.

ಪೂಜ್ಯರು ವೀರಶೈವ ವಚನಶಾಸ್ತ್ರದಲ್ಲಿ ಪ್ರತಿಪಾದಿತವಾಗಿರುವ ವೀರಶೈವತತ್ತ್ವನಿಷ್ಠೆ, ಲಿಂಗದಪ್ರಯೋಜನ, ಮತ್ತು ಲಿಂಗತತ್ತ್ವವಿಚಾರ, ಗುರುವಿನ ಅವಶ್ಯಕತೆ ಮೊದಲಾದ ವಿಷಯಗಳನ್ನು ಅಪಾರವಾದ ಶಾಸ್ತ್ರಜ್ಞಾನದಿಂದಲೂ ಸ್ವಾನುಭಾವದಿಂದಲೂ, ಲಿಂಗನಿಷ್ಠಾಗರಿಷ್ಠತೆಯಿಂದಲೂ ಅಧಿಕಾರವಾಣಿಯಿಂದ ಭಾಷಣರೂಪದಲ್ಲಿ ತಿಳಿಸಿರುವುದು ನಮ್ಮೆಲ್ಲರಿಗೂ ಅಷ್ಟೇಕೆ ಮಾನವ ಜನಾಂಗಕ್ಕೆ ಉಪಕಾರ ಕಾರಣವಾದುದೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಶಿವಶರಣರು ಕೇವಲ ವೀರಶೈವೋದ್ಧಾರದ ಮನೋಭಾವದವರೇ ಅಲ್ಲ. ಮಾನವಕೋಟಿಯ ಉದ್ಧಾರಕ್ಕಾಗಿ ಹೆಣಗಿದ ಸಮತಾವಾದಿಗಳು. 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವುದು' ಅವರ ಜೀವನದ ಉಸಿರು. 'ಯತ್ರ ಜೀವಸ್ತತ್ರಶಿವಃ' ಎಂಬುದು ಅವರ ಹೃದಯ ಪಟಲದಲ್ಲಿ ಮೂಡಿದ ಚಿತ್ರ, ಮಾನವಾನುಭವದ ಅಂತಿಮ ಗುರಿಯನ್ನು ನಡೆದು ನುಡಿದು ತೋರಿಕೆಗೊಳಿಸಿದವರು. ಜೀವ ಪ್ರಪಂಚವನ್ನು ಶಿವಪ್ರಪಂಚವನ್ನಾಗಿ ಮಾರ್ಪಡಿಸಲು ಸಾಧನಾಸಂಪತ್ತಿಯನ್ನು ಸೂರೆಗೊಳಿಸಿದವರು. ಹೊನ್ನು, ಹೆಣ್ಣು, ಮಣ್ಣಿನ ವಿಚಾರದಲ್ಲಿ ಕಣ್ಣು ಕೆಡದಂತೆ ವಿಶ್ವವೆಲ್ಲ ಜೀವನವನ್ನು ನಡೆಸುವ ವಿಧಾನದ ರೂಪರೇಖಾ ನಿರ್ಮಾಣವನ್ನು ಮಾಡಿಟ್ಟವರು. ತನುಮನಭಾವಗಳನ್ನು ಲಿಂಗಪ್ರಕಾಶದಿಂದ ಬೆಳಗಿಸಿದವರು. ಆದುದರಿಂದಲೇ ಅವರ ಆದರ್ಶ ಮಾನವಕೋಟಿಗೆ ಭೂಷಣಪ್ರಾಯವಾದುದೆಂದು ಹೇಳಬೇಕು. ಜೀವನ ಹೋರಾಟದ ದೂರದರ್ಶಿತ್ವವು ಶರಣರ ದೃಷ್ಟಿಯಲ್ಲಿ ಕಂಡುಬರುವ



ಶಿವರಾತ್ರಿಯಂದು ರಥೋತ್ಸವ
ಸಮಯದಲ್ಲಿ ಬೆಟ್ಟದಮೇಲಿಂದ
ಶ್ರೀ ಸಿದ್ಧಲಿಂಗೇಶ್ವರ ಉತ್ಸವ
ಮೂರ್ತಿಯನ್ನು ಕರೆತರುವ
ವೈಭವದ ವಿವಿಧ ದೃಶ್ಯಗಳು,













ರಥದ ಮುಂದೆ ಶ್ರೀಗಳು

ಶಿವರಾತ್ರಿಯ ಸಮಯದ
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ
ವೈಭವೋಪೇತ ರಥೋತ್ಸವದ
ವಿವಿಧ ದೃಶ್ಯಗಳು

(ಅನೇಕ ಕಲಾವಿದರ ಮನರಂಜನಾ
ಕಾರ್ಯಕ್ರಮಗಳೊಂದಿಗೆ)



ಜಾತ್ರೆಯ ಕಾಲದ
ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ
ವೈಭವವಿಶಿಷ್ಟ ಬೆಳ್ಳಿಪಲ್ಲಕ್ಕಿಯ
ಅಭೂತಪೂರ್ವದೃಶ್ಯ.

ದಾಸೋಹದಲ್ಲಿ ರಾಷ್ಟ್ರಾದ್ಯಂತ
ವಿಖ್ಯಾತಿಗೊಂಡಿರುವ ಶ್ರೀಕ್ಷೇತ್ರದ
ದಾಸೋಹ ಮಠದ ಮುಂಭಾಗ





ದಾಸೋಹ ಗೃಹದಲ್ಲಿ ಆಲೂಗಡ್ಡೆ ಈರುಳ್ಳಿಯ ರಾಶಿ



ಉಪ್ಪಿನಕಾಯಿಯ ಹರವಿಗಳ ಸಾಲು
ಹಿಂಭಾಗದಲ್ಲಿ ತುಪ್ಪತುಂಬಿದ ಟಿನ್‌ಗಳೂ ಇವೆ.



↑

ಷ ಮಹೋತ್ಸವಗಳಲ್ಲಿ ರಾಶಿರಾಶಿಯಾಗಿ ಸಿದ್ಧಗೊಳ್ಳುವ
ದೆ ಮತ್ತು ಲಾಡುಗಳು ಹಾಗೂ ಮಾಲ್ದಿಯ ಮೂಟೆಗಳು

ದಲ್ಲಿ ಬಲಗಡೆ: ಮುಂಭಾಗದಲ್ಲಿ ಬುಂದೆ ರಾಶಿಯನ್ನೂ ಹಿಂಭಾಗದಲ್ಲಿ
ಗಳ ರಾಶಿಯನ್ನೂ ಎಡಗಡೆ ಚೀಲಗಳಲ್ಲಿ ತುಂಬಿ ಅಡಕಲೇರಿಸಿದ ಮಾಲ್ದಿ
ಗಳನ್ನೂ ಕಾಣಬಹುದು.)

ದಾಸೋಹ ಗೃಹದಲ್ಲಿ ಭೀಮಾಕಾರದ ಭಾಂಡಗಳ ಸಾಲು
↓







ಸಾರಿನ ಕೊಳಗಗಳು



ಪಾಯಸದ ಕೊಪ್ಪರಿಗೆಗಳು



ಮುದ್ದೆ ಕಟ್ಟುವುದು



ಊಟ



ಊಟ



ಊಟ

ಪ್ರಸಾದ ಸಿದ್ಧಪಡಿಸುವಿಕೆ ಮತ್ತು ವಿತರಣೆ ಮಾಡುವಿಕೆ




ಎಲ್ಲೆಲ್ಲಿ ಸ್ಥಳ ಸಿಗುವುದೋ ಅಲ್ಲೆಲ್ಲಾ ದಾಸೋಹ ವ್ಯವಸ್ಥೆ



↑
ಬೇರೆಬೇರೆ ಕೊಪ್ಪಲುಗಳಲ್ಲಿಯ ಪ್ರಸಾದ ವಿತರಣೆಯ ದೃಶ್ಯ
ಶ್ರೀಗಳವರೇ ಸ್ವತಃ ಪ್ರಸಾದ ನೀಡಿಸುವಿಕೆ



ಜಾತ್ರೆಯ ಕಾಲದ ದನಗಳ ಪರಿಷೆಯ ಒಂದು ನೋಟ →

ಒಂದಂಶವನ್ನು ಗಮನಿಸಿ, ಭರತಖಂಡವನ್ನು ಪರಕೀಯರ ದಬ್ಬಾಳಿಕೆಯಿಂದ ಪಾರುಗೊಳಿಸಿದ ಇಂದಿನ ಯುಗಪುರುಷರಾದ ಗಾಂಧೀಯವರು ಯಾವ ತತ್ತ್ವದಿಂದ ಭರತಖಂಡದ ಅಥವಾ ಪ್ರಪಂಚದ ಜನತೆಯಲ್ಲಿ ಸಮತೆಯನ್ನುಂಟುಮಾಡಲು ಪ್ರಯತ್ನಿಸಿದರೋ ಅಂಥ ಮಹಾತತ್ತ್ವವನ್ನು ಬಸವಣ್ಣನವರೂ ಅನೇಕ ಶರಣರೂ, ಹನ್ನೆರಡನೆಯ ಶತಮಾನದಲ್ಲಿಯೇ ಸಾರಿದರು. ಬೆಳಗಾಂವಿಗೊಮ್ಮೆ ಗಾಂಧಿಯವರು ಬಂದಾಗ ಕನ್ನಡನಾಡಿನಂಥ ಧನ್ಯವಾದ ನಾಡನ್ನು ಕಾಣೆನೆಂದು ಉದ್ಗಾರ ತೆಗೆದರು. ವೀರಶೈವರು ಕಾರ್ಮಿಕ ಸಮಸ್ಯೆಯನ್ನು ಬಗೆಹರಿಸಿದಂತೆ ಅಸ್ಪೃಶ್ಯೋದ್ಧಾರ ಮಾಡಿದುದೂ ಚರಿತ್ರಾರ್ಹವಾದ ಮಾದರಿಯದು. ಗಾಂಧಿಯವರು ಸಹ ಈ ಯುಗದಲ್ಲಿ ಅಸ್ಪೃಶ್ಯೋದ್ಧಾರ ಮಾಡಿದರು. ಆದರೆ ಅಸ್ಪೃಶ್ಯೋದ್ಧಾರ ಮಾಡಿದ ರೀತಿಯಲ್ಲಿ ಗಾಂಧಿಯವರಿಗೂ ಬಸವಣ್ಣನವರಿಗೂ ಮಹದಂತರವಿದೆ. ಗಾಂಧಿಯವರು ಅಸ್ಪೃಶ್ಯರನ್ನು ಅಸ್ಪೃಶ್ಯರನ್ನಾಗಿಯೇ ಇಟ್ಟು ಉದ್ಧರಿಸಹೋದರು. ಬಸವಣ್ಣನವರ ಉದ್ಧಾರಮಾರ್ಗದಲ್ಲಿ ಅಸ್ಪೃಶ್ಯ ಶಬ್ದವೇ ಇಲ್ಲ. ಅವರನ್ನೆಲ್ಲ ಭಕ್ತರನ್ನಾಗಿಯೇ ಮಾಡಿ ಶರಣರೆಂದು ಕರೆದು ಉದ್ಧಾರಗೊಳಿಸಿದರು.

ಶರಣರೆಂಬುವರು ಕೇವಲ ಒಂದು ಮತದ ಮುಂದಾಳುಗಳಲ್ಲ. ಇಂದು ನಾವು ಹಿಂದೂಧರ್ಮವೆಂದು ಯಾವುದನ್ನು ಸಂಬೋಧಿಸುತ್ತೇವೆಯೋ ಆ ವಿಶಿಷ್ಟ ಧರ್ಮದ ಮುಂದಾಳುಗಳೂ ಸತ್ಯಶುದ್ಧರೂ ಆದ ಆಸ್ತಿಕ ಜನಸ್ತೋಮ. ಸಮಸ್ತ ಹಿಂದೂಧರ್ಮದ ಪ್ರತಿನಿಧಿಗಳಂತೆ ಒಂದು ಕಡೆ ಜಾತ್ಯತೀತ ಸುಂದರಸಮಾಜ ನಿರ್ಮಾಣ ಮಾಡಲು ಕೂಡಿದ ಮಹಾನುಭಾವಿಗಳು. ಆದರೆ ನಾವು ನಮ್ಮ ದೌರ್ಭಾಗ್ಯದಿಂದ ಶರಣರು ನಡೆಯಿಸಿಕೊಂಡು ಬಂದ ತತ್ತ್ವ, ಸಾಹಿತ್ಯ, ಸಂಸ್ಕೃತಿಯನ್ನು ಹಿಂದೆ ಹಾಕಿ ಕೃತ್ರಿಮವಾತಾವರಣದಲ್ಲಿ ಅಡಿಯಿಟ್ಟು ಇಂದು ಇಷ್ಟು ದುಃಖಿಕ್ಕೀಡಾಗಿದ್ದೇವೆ. ಭರತಖಂಡದ ದೌರ್ಭಾಗ್ಯದಿಂದ ಶರಣರ ತತ್ತ್ವವೆಲ್ಲವೂ ಉಳಿದ ಎಲ್ಲ ತತ್ತ್ವಗಳ ಪ್ರಚಾರದಂತೆ ಸಾಕಷ್ಟು ಪ್ರಚಾರವಾಗದಿದ್ದುದು ರಾಷ್ಟ್ರೀಯ ಹಾನಿಯೇ ಎಂಬುದನ್ನು ಹಿಂಜರಿಯದೆ ಹೇಳಿದರೆ ತಪ್ಪೆಯುತ್ತದೆ.

ಕರ್ನಾಟಕ ದೇಶವು ತನ್ನದೇ ಆದ ಭವ್ಯ ಚರಿತ್ರೆಯಿಂದಲೂ ಸಂಸ್ಕೃತಿಯಿಂದಲೂ ಕೂಡಿದುದಾಗಿದೆ. ಇಲ್ಲಿಯೇ ಬೆಳೆದು ಪ್ರಸಾರಗೊಂಡ ವೀರಶೈವವಂತೂ ಬಹು ದಿನಗಳಿಂದ ಎಲ್ಲ ಸಮಾಜಗಳ ಸಮಾನತೆಯನ್ನು ಕಾಯ್ದುಕೊಂಡು, ಸಂಸ್ಕಾರರಹಿತರಿಗೆ ಸಂಸ್ಕಾರಕೊಡುವುದರ ಮೂಲಕ, ಜ್ಞಾನರಹಿತರಿಗೆ ಜ್ಞಾನವನ್ನುಂಟುಮಾಡಿಕೊಡುವುದರ ಮೂಲಕ ಅವಿದ್ಯಾವಂತರನ್ನು ವಿದ್ಯಾವಂತರನ್ನಾಗಿ ಮಾಡುವುದರ ಮೂಲಕ ತನ್ನ ವಿಶೇಷವಾದ ನಿಸ್ವಾರ್ಥ ಸೇವಾಮನೋಭಾವವನ್ನು ವ್ಯಕ್ತಪಡಿಸಿದೆ. ಜ್ಞಾನರಹಿತರನ್ನು ಹಿಂದಕ್ಕೆ ತಳ್ಳಿ ತಾನು ಮುಂದೆ ಮುಂದೆ ಸಾಗದೆ ಅವರನ್ನು ತಮ್ಮಂತೆ ಮಾಡಲು ಬಹು ಹೆಣಗಿದೆ. ಪ್ರಾಚೀನ ಕಾಲದ ಕರ್ನಾಟಕ ದೇಶದ ವಿದ್ಯಾಭ್ಯಾಸದ ಹೊಣೆಯನ್ನು ವೀರಶೈವರ ಮಠಗಳೇ ಹೊತ್ತಿದ್ದವು. ಮಠ ಶಬ್ದಕ್ಕೆ ವಿದ್ಯಾಸಂಸ್ಥೆಯೆಂದೇ ಹೆಸರು. "ಮಠಶ್ಛಾತ್ರಾದಿ ನಿಲಯಃ"–ಮಠವೆಂದರೆ ವಿದ್ಯಾರ್ಥಿಗಳ ನಿಲಯವೆಂದೇ ಅಮರಕೋಶಕಾರನ ಅಭಿಪ್ರಾಯ. ಕರ್ನಾಟಕದಲ್ಲಿನ ಅಸಂಖ್ಯಾತ ಮಠಗಳ ಬಹುಮುಖ ತ್ಯಾಗದ ಫಲವೇ ಆಗಿನ ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರ ವ್ಯವಹಾರಿಗಳಾದ ಸುಸಂಸ್ಕೃತ ಜನರು. ಇವತ್ತೂ ಆ ದೃಷ್ಟಿಯಲ್ಲಿ ವೀರಶೈವ ಮಠಗಳು ತಮ್ಮ ಕರ್ತವ್ಯ ವಿಮುಖತೆ ತೋರದಿದ್ದರೂ. ಸರಕಾರವೇ ಅವರ ಬಹುಮುಖ ಹೊಣೆಹೊತ್ತುದರಿಂದ ಸಡಿಲು ಬಿಟ್ಟಿದೆ, ಮತ್ತು ಇನ್ನೂ ಹಲವಾರು ಐತಿಹಾಸಿಕ ತೊಂದರೆಗಳು ಆ ಮುಖದ ಕಾರ್ಯವಿಮುಖತೆಗೆ ಕಾರಣೀಭೂತಗಳಾದವು. ಆದರೂ ಆ ವಿಷಯದಲ್ಲಿ ಅಂದರೆ ಜನತೆಯಲ್ಲಿ ವಿದ್ಯಾಪ್ರಸಾರ ಕಾರ್ಯ ಮಾಡುವಲ್ಲಿ ಇನ್ನಿತರ ಯಾವ ಸಮಾಜಕ್ಕೆ ಇಂದೂ ವೀರಶೈವ ಧರ್ಮಸಂಸ್ಥೆಗಳು ಹಿಂದೆ ಬಿದ್ದಿಲ್ಲ. ಈಗಿನ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿ ಎಂಬ ಊರು ದಕ್ಷಿಣ ಕರ್ನಾಟಕದ ಕಲ್ಯಾಣ ಪಟ್ಟವಾಗಿತ್ತೆಂದೂ ಮಹಾಪಾಠಶಾಲೆಯೊಂದು ಸ್ಥಾಪಿತವಾಗಿ ಸಾವಿರಾರು ಜನ ವಿದ್ಯಾರ್ಥಿಗಳು ವಿದ್ಯಾಭ್ಯಾಸಮಾಡುತ್ತಿದ್ದರೆಂದೂ, ಅದೊಂದು ಅಲ್ಲಿ ಮಹಾ ವಿಶ್ವವಿದ್ಯಾಲಯದಂತೆ ಆಗಿತ್ತೆಂದೂ ಕೇಳುತ್ತೇವೆ. ೧೨ ನೆಯ ಶತಮಾನದಲ್ಲಿ ಅದು ಶೈವ ವಿದ್ವಾಂಸರ ತತ್ತ್ವ ಪ್ರಸಾರ ಕೇಂದ್ರವಾಗಿದ್ದಿತು. ರಾಜಕೀಯ ಧಾರ್ಮಿಕ ಕ್ಷೇತ್ರಗಳೆರಡಕ್ಕೂ ಅದು ಕ್ಷೇತ್ರವಾಗಿದ್ದ ಬಗ್ಗೆ ಹಲವಾರು ಶಿಲಾಲೇಖನಾಧಾರವಿದೆ. ಕಲ್ಯಾಣವು ಉತ್ತರ ಕರ್ನಾಟಕದಲ್ಲಿ ಪ್ರಸಾರ ಕೇಂದ್ರವಾದರೆ ದಕ್ಷಿಣ ಕರ್ನಾಟಕದಲ್ಲಿ ಬಳ್ಳಿಗಾವಿ. ಈ ಊರಿಗೆ ಬಸವಣ್ಣ ಪ್ರಭುದೇವರು ಬಿಜ್ಜಳ ಸಮೇತವಾಗಿ ಬಂದು ಬಹುದಿನಗಳು ವಾಸವಾಗಿದ್ದರೆಂದು ಕೆಲವರ ಅಭಿಪ್ರಾಯವಾಗಿದೆ. ಹನ್ನೆರಡನೆಯ ಶತಮಾನದ ನಂತರ ಕರ್ನಾಟಕದ ಎಲ್ಲ ಶೈವ ವಿದ್ಯಾಕೇಂದ್ರಗಳು ವೀರಶೈವ ಮಠಗಳಾಗಿಯೇ ಮಾರ್ಪಟ್ಟಿವೆಯೆಂಬುದು ವಿದ್ವಾಂಸರ ಅಭಿಪ್ರಾಯ.

ಜಗತ್ತಿನ ಎಲ್ಲ ರಾಷ್ಟ್ರಗಳಿಗೂ ಭರತಖಂಡಕ್ಕೂ ಹಲವಾರು ವಿಷಯಗಳಲ್ಲಿ ವೈವಿಧ್ಯವಿದೆ. ಎಲ್ಲಾ ರಾಷ್ಟ್ರಗಳಲ್ಲೂ ಸಂಸ್ಕೃತಿಯೆಂಬುದು ನಗರಗಳಿಂದ ಹಳ್ಳಿಹಳ್ಳಿಗಳ ಮೂಲೆ ಮೂಲೆಗಳಿಗೂ ಹರಿದರೆ ಭರತಖಂಡದಲ್ಲಾದರೋ ನಿರ್ಜನಾರಣ್ಯ ಸ್ಥಾಪಿತ ಮಠ, ಋಷ್ಯಾಶ್ರಮಗಳಿಂದ ನಗರಗಳವರೆಗೆ ಹರಿದಿದೆ. ಸಂಸ್ಕೃತಿ ಶಬ್ದಕ್ಕೆ ಬಹುವಿಶಾಲವಾದ ಅರ್ಥವಿದೆ. ಅಂತರ್ಬಾಹ್ಯ ಸ್ವರೂಪ ಸಂಸ್ಕಾರಪೂರ್ಣ ವ್ಯಕ್ತಿಯನ್ನೆ ಸುಸಂಸ್ಕೃತ ಅಥವಾ ಸಂಸ್ಕೃತಿ ಪಡೆದವ ಎನ್ನುವುದು. ಮಾನವನಿಗೆ ಸುಖಶಾಂತಿ

ಯೆಂಬುದು ಹೊರಗಿನ ಯಾವ ವಸ್ತುಗಳಿಂದಲೂ ಉಂಟಾಗದು. ಅದು ಆಂತರಿಕ ಹೋರಾಟದ ಫಲವಾಗಿ ಅಜೇಯನಾಗಿ ನಿಲ್ಲುವವನ ಪಾಲಿಗೆ ಸಿಗುವ ಭಾಗ್ಯ. ಆದುದರಿಂದ ಸಂಸ್ಕೃತಿಸಂವರ್ಧನವೆಂದರೆ ಅಂತರ್ಬಾಹ್ಯಶುದ್ಧಿಯೇ ಆಗಿದೆ. ಆಂತರಿಕ ಶಾಂತಿ ಬಾಹ್ಯಕ್ರಿಯಾಶುದ್ಧಿ ಎರಡೂ ಹಾಸು ಹೊಕ್ಕಾದವುಗಳು; ಅವಿನಾಭಾವ ಸಂಬಂಧದಿಂದ ಇರುವವುಗಳು. ಇಂಥ ಅವಿನಾಭಾವ ಸಂಬಂಧ ಶಕ್ತಿಯನ್ನು ಮನುಷ್ಯನಲ್ಲಿ ಅಳವಡಿಸುವ ಹೊಣೆಯೇ ಋಷ್ಯಾಶ್ರಮಗಳ ಮಠಮಾನ್ಯಗಳ ನಿರ್ಮಾಣ ಹೇತುವಾಗಿದೆ. ಪ್ರಜಾಕೋಟಿಯು ಅರಮನೆಗೆ ತೋರುವ ಗೌರವವನ್ನೇ ಗುರುಮನೆಗೂ ತೋರುತ್ತಿತ್ತು. ಇಂದಿನ ಜಗತ್ತಿನ ಜನಾಂಗದಲ್ಲಿ ತತ್ತ್ವನಿಷ್ಠೆ, ಧಾರ್ಮಿಕಸಂಸ್ಕೃತಿ ಉಳಿಯಬೇಕಾದರೆ ಮಠಗಳು ಜ್ಞಾನದಾಸೋಹ, ವಿದ್ಯಾದಾಸೋಹ, ಪ್ರಸಾದದಾಸೋಹ ನಿಲಯಗಳಾಗಬೇಕಾಗಿದೆ. ಸಂನ್ಯಾಸಿಗಳ ಪಾತ್ರ ಭರತಖಂಡದ ಇತಿಹಾಸದಲ್ಲಿ ಉಜ್ವಲ ಪ್ರಕಾಶದಲ್ಲಿದೆ. ಸಂನ್ಯಾಸಿಗಳನ್ನಾಶ್ರಯಿಸದೆ ಅವರ ಪಾದಪೂಜೆ ಮಾಡದೆ ಭರತಖಂಡದಲ್ಲಿ ಯಾವ ಧರ್ಮರಾಜ್ಯಗಳೂ ಹಿಂದಿನಿಂದ ಕಟ್ಟಲ್ಪಟ್ಟಿಲ್ಲ. ಚಾಣಕ್ಯ ಕಾಶಿಕ್ರಿಯಾವಿಲಾಸಶಕ್ತಿ, ಮಹಾರಾಷ್ಟ್ರದ ರಾಮದಾಸಾದಿಗಳಂತಹವರು ಆಯಾಯ ಕಾಲದಲ್ಲಿ ರಾಜ್ಯವನ್ನು ಕಟ್ಟುವುದರಲ್ಲಿ ನೆರವಾಗಿ ಮಾರ್ಗದರ್ಶನ ಮಾಡಿ ಪ್ರಜಾಕೋಟಿಯ ಕ್ಷೇಮವನ್ನೆಸಗುವುದರಲ್ಲಿ ಹಿಂದೆ ಬಿದ್ದಿಲ್ಲ. ಜನಾಂಗದ ಮನೋದೌರ್ಬಲ್ಯವು ಅವನ ಶ್ರೇಯಸ್ಸಿಗೆ ಬಹುಮಟ್ಟಿಗೆ ಪ್ರತಿಬಂಧಕವಾದುದು. ಮನಸ್ಸು ಕುಕಲ್ಪನೆಗಳ ಆಗರವಾದರೆ, ಜೀವಿತದಲ್ಲಿ ಅವನಿಂದ ಯಾವ ಮಹಾಕಾರ್ಯವೂ ಆಗುವುದಿಲ್ಲ. ನನ್ನಲ್ಲಿ ಈಶ್ವರಾಂಶವಿದೆ, ನಾನು ಆತನ ಅಂಶದಿಂದಲೇ ಹುಟ್ಟಿದವನು. ನನ್ನಿಂದ ಮಹಾ ಕಾರ್ಯಸಾಧನೆಯಾಗುವುದು, 'ಕೂಡಲಸಂಗಮದೇವನೊಲಿಸ ಬಂದ ಪ್ರಸಾದ ಕಾಯವಿದು' ಎಂಬ ದೃಢವಿಶ್ವಾಸದಿಂದ ಮುಂದೆ ಸಾಗಿದರೆ ಸುಖದ ಸುಂದರ ದಿನಗಳನ್ನು ಅವನು ಕಾಣುವನು. ಪೂಜ್ಯ ಗೌರೀಶಂಕರ ಶ್ರೀಗಳವರು ಈ ತತ್ತ್ವವನ್ನೇ ಹಲವಾರು ಉಪನ್ಯಾಸಗಳ ಮೂಲಕ ನಮಗೆ ಬೋಧಿಸಿದ್ದಾರೆ. ಅಂಥ ಸುಖವನ್ನುಂಟು ಮಾಡುವ ಧಾರ್ಮಿಕ ವಿಷಯದಲ್ಲಿ ಪರಮಾತ್ಮತತ್ತ್ವವಿಚಾರದಲ್ಲಿ ಕಾಲಕಳೆಯಲು ಜನ ಬೇಸರಗೊಂಡಿದೆ. ಆ ಕಾರ್ಯಕ್ಕೆ ವೇಳೆಯಿಲ್ಲ, ಉಳಿದ ಎಲ್ಲಕಾರ್ಯಕ್ಕೂ ವೇಳೆಯಿದೆ. ಇದನ್ನು ಶಿವಶರಣರು–

> 'ಜೊಳ್ಳು ಮಾತೆಂದರೆ ನಲಿನಲಿದು ಆಡುವರು
> ಕಾಳುಗೆಲಸವೆಂದರೆ ನಲಿನಲಿದು ಮಾಡುವರು
> ಗುರುಸೇವೆಯೆಂದರೆ, ಶಿವಪೂಜೆಯೆಂದರೆ, ಪಂಚಾಕ್ಷರಿಯೆಂದರೆ
> ಅಳಲುವರು, ಬಳಲುವರು, ನರಳುವರು, ಇಂಥ ಮರುಳರಿಗೆ ದುಃಖವಲ್ಲದೆ ಸುಖವಿಲ್ಲ.'

ಹೀಗೆ ಅಪ್ಪಣೆ ಕೊಡಿಸಿದುದು ವಾಸ್ತವವಾಗಿಯೇ ಇದೆ. ಜಗತ್ತಿನಲ್ಲಿ ನಿರರ್ಥಕ ಕಾಲಹರಣ ಹೆಚ್ಚಾಗಿದೆ. ತಮ್ಮ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಸತ್ಯವಾಗಿ ಶುದ್ಧವಾಗಿ ನೀತಿಯಿಂದ ಮಾಡಿದರೆ ಸಾಕು. ಅಷ್ಟರಿಂದಲೇ ಜಗತ್ತಿನ ಸಮಸ್ಯೆಗಳೆಲ್ಲವೂ ಪರಿಹಾರವಾದಾವು. ಕರ್ತವ್ಯದಲ್ಲಿ ಶ್ರದ್ಧೆ ಮತ್ತು ಶುದ್ಧಿಗಳಿಲ್ಲದಿದ್ದರೆ ಅದು ತನ್ನನ್ನು ತಾನಾಶ್ರಯಿಸಿದ ರಾಷ್ಟ್ರವನ್ನು ಅಧೋಗತಿಗಿಳಿಸುತ್ತದೆಂಬುದನ್ನು ಅರಿತಿರಬೇಕು. ಮನಸ್ಸನ್ನು ಸಂತೈಸಿಕೊಳ್ಳಲು ದೇಹವನ್ನು ಸಂತೈಸಿಕೊಳ್ಳಲು ಮಾಡಬೇಕಾದ ಸಾಧನವನ್ನು ಕಷ್ಟವೆಂದು ಭಾವಿಸಿ, ಆಲಸ್ಯದೋರಿ, ನಿರ್ಲಕ್ಷಿಸಿ ಅಮೂಲ್ಯವೇಳೆಯನ್ನು ಮನಸ್ಸಿಗೆ ಬಂದಂತೆ ಮಾತನಾಡುವುದರಲ್ಲೋ ಅಥವಾ ಕೆಲಸಕ್ಕೆ ಬಾರದ ಕೆಲಸಮಾಡುವಿಕೆಯಲ್ಲೊ ಕಳೆದು ಕ್ರಿಯಾಶುದ್ಧಿಗೆ ಕಲಂಕ ತಂದುಕೊಳ್ಳುವರು. 'ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು'. ನುಡಿಯಲ್ಲಿ ಪಾವಿತ್ರ್ಯ ಆವಶ್ಯಕ. ಕುಹಕ, ದುರ್ಭಾಷೆಗಳು ಮನೋಸಂಸ್ಕಾರವನ್ನು ಕೆಳಮುಖಕ್ಕೆ ಒಯ್ಯುವುವು. ದೇವನಿತ್ತ ಶಕ್ತಿಗಳನ್ನು ಸದುಪಯೋಗಪಡಿಸಿಕೊಳ್ಳಬೇಕಲ್ಲದೆ, ಅನ್ಯಥಾ ಹರಿಸಬಾರದು. ದೊಡ್ಡವರ, ಜ್ಞಾನಿಗಳ ಲಾಭಪಡೆಯಬೇಕು. ಸದ್ಗ್ರಂಥಗಳ ಗೋಷ್ಠಿಗಳ ಲಾಭಪಡೆದು ಆತ್ಮ ತುಷ್ಟಿ ಪುಷ್ಟಿಗಳಿಸಬೇಕು. ಜಗತ್ತಿನ ಜನಜೀವನದಲ್ಲಿ ಬಹುಭಾಗ ನಿರರ್ಥಕ ಕಾಲಹರಣೆಯೇ ಆಗಿದೆ. ಪೂಜ್ಯಶ್ರೀ ಗೌರೀಶಂಕರಸ್ವಾಮಿಗಳಂಥ ಮಹಾ ಜ್ಞಾನಿಗಳ ಉಪದೇಶಕೊಳ್ಳುವವರು ಎಷ್ಟುಜನ ನಮ್ಮ ಕರ್ನಾಟಕದಲ್ಲಿದ್ದಾರೆ? ಶ್ರೀಗಳವರ ಅಪಾರ ವಿದ್ವತ್ತು ನಮ್ಮ ಕರ್ನಾಟಕಕ್ಕೊಂದು ಹೆಮ್ಮೆ. ವ್ಯರ್ಥವಾಗಿ ಕಾಲವನ್ನು ಕಳೆದರೂ ನಮಗೆ ಸಂತೋಷ. ಆದರೆ ಅಂಥವರಿಂದ ದಿವ್ಯ ಸಂಸ್ಕಾರ ಹೊಂದಲು ನಮಗೆ ಇಷ್ಟವಿಲ್ಲ. ಇದೇ ಮಾನವಾಪರಾಧ.

ಜೀವನದಲ್ಲಿ ಅತ್ಯಂತ ಮಹತ್ವವೆನಿಸಿರುವ ಸುಖದ ಕಲ್ಪನೆಯಲ್ಲಿ ಮನುಷ್ಯ ಭ್ರಮಿತನಾಗಿದ್ದಾನೆ. ಶಾಶ್ವತ ಸುಖವೆಂದರೇನು ? ಆ ಬಗೆಗೆ ಯೋಚಿಸಿ ಆ ಸುಖಪ್ರದಕಾರ್ಯರಂಗದಲ್ಲಿ ಮನಸ್ಸು ವ್ಯವಸಾಯ ಮಾಡುತ್ತಿಲ್ಲ. ಆದುದರಿಂದ ಮನೋದೌರ್ಬಲ್ಯವುಂಟಾಗಿ ದುರ್ಮಾರ್ಗಪ್ರವೃತ್ತಿ ಹೆಚ್ಚಾಗುತ್ತ ನಡೆದಿದೆ. ಯಾವ ಮಾರ್ಗದಲ್ಲಿ ಮನಸ್ಸು ಹರಿಸಬೇಕೋ ಆ ಮಾರ್ಗದಲ್ಲಿ ಹರಿಸುತ್ತಿಲ್ಲ. ಮಾನಸಿಕ ತಪಸ್ಸು ನಡೆಯದಿದ್ದರೆ ಅದಕ್ಕೆ ಶಕ್ತಿ ಬರುವುದಿಲ್ಲ. ಗೀತೆಯಲ್ಲಿ—

> ಮನಃ ಪ್ರಸಾದ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
> ಭಾವ ಸಂಶುದ್ಧಿರಿತ್ಯೇತತ್ ತಪೋಮಾನಸಮುಚ್ಯತೇ ॥

ಎಂದು ಹೇಳಲಾಗಿದೆ. ಶಿಳಿಯಾದ ಮನಸ್ಸು ಒಳ್ಳೆಯದನ್ನೇ ಚಿಂತಿಸುವುದು. ಹೆಚ್ಚು ಮಾತನಾಡದಿರುವುದು, ಬಿಗಿಹಿಡಿಯುವುದು, ವಂಚನೆಯಿಲ್ಲದಿರುವುದು ಇವು ಮನಸ್ಸಿನ ತಪಸ್ಸುಗಳಾಗಿವೆ. ಶಿವಶರಣರ ಜೀವನ ಸಮೃದ್ಧಿಯಾದ ಜೀವನ; ಕಾಯಸ್ಥ ಪರಶಿವನನ್ನು ದ್ವೇಷಿಸಿ ಮಾಡತಕ್ಕ ಕಾಯಕದ ಸುಖದ ನಿಬ್ಬೆರಗಿನಲ್ಲಿ ಬಡತನ, ಶ್ರೀಮಂತಿಕೆಯು ಶಬ್ದಗಳಿಗೆ ಅವರ ನಿಘಂಟುವಿನಲ್ಲಿ ಒಂದೇ ಅರ್ಥ. ಅವರು ಸತ್ಯ ಶುದ್ಧಕಾಯಕವವರು ; ಉದ್ಯೋಗಶೀಲರು ; ಕಾಯಕ ಸುಖವೇ ಕೈಲಾಸ ಸುಖವೆಂದು ನಂಬಿ ನುಡಿದು ನಡೆದವರು. ತನಗಾಗಿ ಮತ್ತೊಬ್ಬರನ್ನು ಬೇಡುವುದು ಮಹಾಪರಾಧವೆಂದೇ ಎಣಿಸುತ್ತಿದ್ದರು. ಅವರು ಸ್ವಾವಲಂಬನ ಮಾರ್ಗ. ಆರ್ಥಿಕ ಸಮಾನತೆಯೇ ಮೊದಲಾದ ಸುಂದರ ತತ್ತ್ವವರಿತು ಕೆಲಸ ಮಾಡಿ ಜನತೆಯಲ್ಲಿ ಸಮಾನತೆ ಶಾಂತಿ ಸಮೃದ್ಧಿ ಜೀವನವನ್ನುಂಟುಮಾಡಲು ಹೆಣಗಿದುದು ಅವರು ನುಡಿದ ವಚನರಾಶಿಯಲ್ಲಿ ಮಡುಗಟ್ಟಿ ನಿಂತಿವೆ :

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ ಇಲ್ಲಿಸಲ್ಲದವರು ಅಲ್ಲಿಯೂ ಸಲ್ಲರಯ್ಯಾ"

ಎಂದು ಬಸವಣ್ಣನವರು ಜಗತ್ತಿಗೆ ಸಾರಿದರು. ಈ ಜಗತ್ತೆಲ್ಲವೂ ಒಂದು ನಾಣ್ಯಮುದ್ರಣ ಶಾಲೆ. ಇಲ್ಲಿ ನಾವು 'ಖೋಟಾ' ನಾಣ್ಯಗಳಾಗಬಾರದು. ಇಲ್ಲಿ 'ಖೋಟಾ' ನಾಣ್ಯಗಳಾದರೆ ಅಲ್ಲಿಯೂ ಅದೇ ಗತಿ. ಮಾನವಕೋಟಿಯು ಪರಮ ಲಕ್ಷ್ಯ ದಿವ್ಯಜ್ಯೋತಿಸಂದರ್ಶನ. ಆ ತತ್ತ್ವ ಯಾವ ಒಂದು ಪಂಗಡದ್ದಲ್ಲ. ಆ ತತ್ತ್ವವನ್ನು ಎಲ್ಲ ಜನಾಂಗವೂ ಸತ್ಕರ್ಮಾಚರಣೆಯಿಂದಲೂ, ಶಾಸ್ತ್ರಮಾರ್ಗವಿಡಿದು ಆಚರಣೆ ಮಾಡುವುದರಿಂದಲೂ, ದಿವ್ಯಜ್ಞಾನಿಗಳ ಬೋಧನೆಯಿಂದಲೂ, ಸ್ವಾನುಭಾವದ ಒರೆಗಲ್ಲಿಗೆ ಹಚ್ಚಿನೋಡುವುದರ ಮೂಲಕವೂ ಪಡೆದು ಅರಿತು ಆಚರಿಸಬೇಕು.

ಶ್ರೀಗಳವರು ಮಹಾನುಭವಿಗಳೂ, ವೀರವಿರಾಗಿಗಳೂ, ವಿರಕ್ತಪುಂಗವರೂ ಆದ ಜಂಗಮವಾಗಿದ್ದಾರೆ. ವೀರಶೈವದಲ್ಲಿ ಸದ್ಯದ ಸ್ಥಿತಿಯಲ್ಲಿ ಶ್ರೀಗಳವರಂತಹ ಮಹಿಮರ ಪಾತ್ರದ ಪೂರ್ಣಲಾಭವು ಅವಶ್ಯಕವೂ ಅನಿವಾರ್ಯವೂ ಅದುದೇ ಆಗಿದೆ. ವೀರಶೈವ ತತ್ತ್ವಶಾಸ್ತ್ರದ ಮೂರ್ತಿಮಂತಸ್ವರೂಪಜ್ಞಾನವಿಲ್ಲದೆ ಅನೇಕ ವಿತಂಡವಾದಗಳು ಸಮಾಜ ಪ್ರಗತಿ ಪಥಕ್ಕೆ ವಿರೋಧಕಾರಿಗಳಾಗಿ ಹೋಗಿವೆ. ಎಷ್ಟೋ ಮಠಮಾನ್ಯಗಳು ಕರ್ತವ್ಯವಿಮುಖವಾಗಿವೆ. ತತ್ತ್ವನಿಷ್ಠೆಯ ಅಭಾವವಾಗಿದೆ. ಕಾಯಕ ಲೋಪಗೊಳ್ಳಹತ್ತಿದೆ. ಶರಣರ ಆದರ್ಶಜೀವನವು ಕೇವಲ ಗ್ರಂಥಸ್ಥವಾಣಿಯಾಗಿಯೂ, ನಡೆಯಿಲ್ಲದ ನುಡಿಯ ಗಡಣವಾಗಿಯೂ ಪರಿಣಮಿಸಿವೆ. ವಿಶ್ವಧರ್ಮನೀತಿಯಲ್ಲಿ ವೀರಶೈವಕ್ಕೆ ಸಹೃದಯತೆಯಿಂದ ವಿಚಾರ ಮಾಡಿದಲ್ಲಿ ಅಗ್ರತಾಂಬೂಲ ದೊರೆಯಬೇಕು. ಇಂಥ ವಿಶ್ವವಿಶಾಲ ಕೀರ್ತಿಗೆ ಪಾತ್ರವಾಗಬಲ್ಲ ಸದ್ಧರ್ಮೋದ್ಧಾರದ ಪ್ರಚಾರಕ್ಕೆ ಸತ್ಯರೂ, ನಿಷ್ಠರೂ, ಸಾಹಸಿಗಳೂ, ವಿದ್ಯಾವಂತರೂ ಆದ ತರುಣರು ಶ್ರೀಗಳವರಂತಹ ದಿವ್ಯಜ್ಞಾನಿಗಳ ಸಹಾಯ ಸಂಪತ್ತನ್ನು ಪಡೆದು, ಸಮಾಜ ಸಂಸ್ಕಾರವನ್ನೂ ಜಗತ್ಕೀರ್ತಿಯನ್ನು ಉಂಟುಮಾಡಬೇಕಾಗಿದೆ. ಇಂದು ಕೇವಲ ಬುದ್ಧಿಯ ಬೆಳವಣಿಗೆ ಮಾತ್ರ ವಿಶೇಷವಾಗಿ ನಡೆಯ ಹತ್ತಿದೆ. ಬುದ್ಧಿಕಾರ್ಯದ ಬೆಳವಣಿಗೆಯಾಗಬಾರದೆಂದಲ್ಲ ; ಅದು ಬೆಳೆದು ಬೆಳೆದಂತೆಲ್ಲ ಹೃದಯ ಕಾರ್ಯವೂ ಬೆಳೆಯುತ್ತ ಸಂಸ್ಕಾರ ಹೊಂದುತ್ತಾ ಬಾರದಿರುವುದೇ ಸಮಾಜದಲ್ಲಿನ, ರಾಷ್ಟ್ರದಲ್ಲಿನ, ಜಗತ್ತಿನಲ್ಲಿನ ಅಶಾಂತಿಗೆ ಕಾರಣೀಭೂತವಾಗಿದೆ. ಶಾಂತಿಯು ಅವನವನ ಆಂತರಿಕ ಪರಿತೃಪ್ತಿಕಾರಕ ಸ್ಥಿತಿಯಾಗಿದೆ, ಅದನ್ನು ಬುದ್ಧಿಶಕ್ತಿಯ ಪರಮಾವಧಿಯಿಂದ ಪಡೆಯಲಾಗುವುದಿಲ್ಲ. ನಿಷ್ಕಲ್ಮಷವೂ, ವಿವೇಕಪೂರ್ಣವೂ ಆದ ಹೃದಯಶುದ್ಧಿಯಿಂದಲೇ ಪಡೆಯಬೇಕು. ಆದುದರಿಂದ ಬುದ್ಧಿಯೊಂದೇ ಬೆಳೆದರೆ ತುಂಬು ಜೀವನದ ಅರ್ಥವೇ ಆಗುವುದಿಲ್ಲ. ಪರಿಪೂರ್ಣಜೀವನ ಅಥವಾ ಸಮೃದ್ಧಿಜೀವನವೆಂದರೆ, ಬುದ್ಧಿಯ ಮತ್ತು ಹೃದಯದ ಪರಿಪೂರ್ಣ ಸ್ಥಿತಿಯಿಂದಳವಡುವ ಸ್ಥಿತಿಯಾಗಿದೆ. ಕೇವಲ ಬುದ್ಧಿಯೊಂದರ ಪೂರ್ಣತೆ ಪಡೆದ ಮನುಷ್ಯನಿಂದ ಜಗತ್ತು ಅನಂತಾನಂತ ನಷ್ಟಕ್ಕೆ ಗುರಿಯಾಗಬೇಕಾಗುತ್ತದೆ. ಒಂದು ಪಕ್ಷ ಕೇವಲ ಹೃದಯಶಕ್ತಿಯನ್ನೇ ಬೆಳೆಯಿಸಿಕೊಂಡು ಬುದ್ಧಿಶಕ್ತಿಯನ್ನು ಪಡೆಯದೆಯಿದ್ದ ಮನುಷ್ಯನಿಂದ ಬೇಕಾದಷ್ಟು ಲೋಕೋಪಕಾರವಾಗುತ್ತದೆ. ಅವನಲ್ಲಿ ಹೃದಯವಿದೆ, ಶಾಂತಿಯಿದೆ: ಅದ್ದರಿಂದ ಸುಖವಿದೆ. ಅನ್ಯರಸುಖದಲ್ಲಿ ಶಾಂತಿಯಲ್ಲಿ ಸಹನೆಯಿದೆ. ಬಹು ಮಟ್ಟಿಗೆ ಕೇವಲ ಬುದ್ಧಿಶಕ್ತಿ ಪ್ರಚೋದನಾಕಾರ್ಯರೂಪಿಗಿಂತ ಹೃದಯಶಕ್ತಿಯ ಪ್ರಚೋದನಾಕಾರ್ಯದಲ್ಲಿ ತೊಡಗಿರುವವನು ಶ್ರೇಷ್ಠನೆಂದೇ ಹೇಳಬೇಕು. ಅಮೇರಿಕಾದೇಶದ ತತ್ವಜ್ಞಾನಿಗಳೊಬ್ಬರು 'ನಾವು ವಿಜ್ಞಾನದಿಂದ ಪಕ್ಷಿಗಳಾಗಿ ಹಾರಾಡುತ್ತಿದ್ದೇವೆ. ನೀರಿನಲ್ಲಿ ಮೀನಿನಂತೆ ಓಡುತ್ತಿದ್ದೇವೆ, ಆದರೆ ಮಾನವನಾಗಿ ಭೂಮಿಯ ಮೇಲೆ ನಡೆಯುವುದನ್ನು ಮಾತ್ರ ಕಲಿತಿಲ್ಲ' ಎಂದು ಹೇಳುವ ಮಾತು ಮೇಲಿನ ವಾದದ ಸಮರ್ಥನ ರೂಪವಾದುದೇ ಆಗಿದೆ.

ಜ್ಞಾನಿಗಳು ಜಗತ್ತಿಗೆ ಭೂಷಣರು. ಅವರ ನಡೆ ಸುಂದರ, ನುಡಿ ಸುಂದರ. ಲೌಕಿಕಕ್ಕೆ ಮರುಳಾಗಿಕಾಣುವ ಅಲೌಕಿಕ ಲೀಲೆ ಅವರದು. ಆ ಸೌಂದರ್ಯರಾಶಿಯು ಸಹೃದಯ ದೃಷ್ಟಿ ದೃಷ್ಟಾರರಿಗೆ ಮಾತ್ರ ಕಾಣುವುದು. ಅವರ ವಚನಗಳು ನಿತ್ಯವೂ ಹೊಸ ಮಾತುಗಳೇ ಆಗಿವೆ. ಅಂಥ ನಿಷ್ಕಲ್ಮಷ ಹೃದಯದಿಂದ ಹೊರಟವಾದ್ದರಿಂದಲೇ ಸದಾ ಹೊಸವು, ಅವು ನಮ್ಮ ಜೀವನವನ್ನು ಹಸನುಗೊಳಿಸುತ್ತವೆ. ಜೇಡರ ದಾಸಿಮಯ್ಯನವರು ಹೇಳುವ ಈ ಮಾತನ್ನು ಅವಲೋಕಿಸಿರಿ :

ಕಡೆಗೀಲಿಲ್ಲದೆ ಬಂಡಿ ಹೊಡೆಗೆಡೆವುದು ಮಾಬುದೇ ; ಕಡೆಗೀಲು ಬಂಡಿಗಾಧಾರ
ಕಡುದರ್ಪವೇರಿದ ಒಡಲೆಂಬ ಬಂಡಿಗೆ ಶಿವಶರಣರ ನುಡಿಗಡಣವೇ
ಕಡೆಗೀಲು ಕಾಣಾ ರಾಮನಾಥಾ ॥

## ೨. ವ್ಯಕ್ತಿ - ರಾಷ್ಟ್ರ

[ ಮಂಡ್ಯ ಕರ್ನಾಟಕ ಸಂಘದಲ್ಲಿ ತಾ. ೩-೨-೧೯೫೨ರಂದು ಶ್ರೀಗಳವರು ಮಾಡಿದ ಮನನೀಯ ಭಾಷಣದ ಸಾರಾಂಶ ]

**ವಿಜ್ಞಾನ ಯುಗ :**

ಇಂದಿನ ಜಗತ್ತು ಹೇಗೆ ಸಾಗುತ್ತಿದೆ, ಅದರ ಸ್ವರೂಪವೇನು ? ಯಾವ ದಿಸೆಯಲ್ಲಿ ಓಡುತ್ತಿದೆ ? ಜನತಾಮನೋಭಾವನೆ ಹೇಗಿದೆ ? ಎಂಬುದನ್ನು ಮೊದಲು ವಿಚಾರಮಾಡಬೇಕು. ಇದು ವಿಜ್ಞಾನದ ಕಾಲ. ಪೂರ್ವಕಾಲದಂತೆ ಜಗತ್ತಿನ ಬೇರೆ ಬೇರೆ ರಾಷ್ಟ್ರಗಳು. ಬೇರೆ ಬೇರೆ ಜನಾಂಗ ಎಂಬ ಮಾತು ವಿಜ್ಞಾನದ ಫಲವಾಗಿ ಮಾಯವಾಗಿ ಜಗತ್ತಿನ ಜನರೆಲ್ಲ ಒಂದು ಕುಟುಂಬವೆಂಬಂತಾಗಿ ಹೋಗಿದೆ. ಪ್ರಾತಃಕಾಲ ಮುಂಬೈಯಲ್ಲಿ ಉಪಾಹಾರಮಾಡಿ. ಮಧ್ಯಾಹ್ನ ಲಂಡನ್ನಿನಲ್ಲಿ ಊಟಮುಗಿಸಿ, ಸಾಯಂಕಾಲ ನ್ಯೂಯಾರ್ಕ ನಗರದಲ್ಲಿ ವಸತಿಮಾಡಬಹುದು. ಜಗತ್ತಿನ ಬೇರೆ ಬೇರೆ ಜನಾಂಗಗಳಿಂದ ನಾವು ಪ್ರತ್ಯೇಕವಾಗಿ ಉಳಿಯಲು ಸಾಧ್ಯವಿಲ್ಲ. ಜಗತ್ತಿನ ಒಂದು ಮೂಲೆಯಲ್ಲಾಗುವ ಘಟನೆ ಇಡೀ ಜಗತ್ತಿಗೇ ಆವರಿಸಿಬಿಡುವುದು. ಮೊನ್ನೆತಾನೆ ಮುಗಿದ ಪ್ರಪಂಚದ ಎರಡನೆಯ ಮಹಾಯುದ್ಧವನ್ನು ಜ್ಞಾಪಿಸಿಕೊಳ್ಳಬಹುದು. ವಿಜ್ಞಾನದ ಬಲದಿಂದ ಯೂರೋಪ್ ಖಂಡದಲ್ಲಿ ನಡೆದ ಈ ಯುದ್ಧದ ಬಿಸಿ ಪ್ರಪಂಚಕ್ಕೆಲ್ಲ ಆವರಿಸಿತು. ಜಗತ್ತೇ ತಲ್ಲಣಿಸಿಹೋಯಿತು. ಅದರಿಂದ ಪ್ರಪಂಚದ ಮೇಲಾದ ದುಷ್ಪರಿಣಾಮವನ್ನು ಅಳತೆಮಾಡಲಾಗುವುದಿಲ್ಲ. ಜನ ಹಾನಿ, ಐಶ್ವರ್ಯಹಾನಿ, ಆರೋಗ್ಯಹಾನಿ–ಒಂದಲ್ಲ ಎರಡಲ್ಲ.

ವಿಜ್ಞಾನದ ಫಲವಾಗಿ ಮಾನಜೀವನಕ್ಕೆ ಅನಂತ ಉಪಕಾರವಾಗಿರುವುದೇನೋ ನಿಜ. ಆದರೆ ಯಾವುದೋ ಒಂದುಕೊರತೆ ಮನುಷ್ಯನನ್ನು ಆವರಿಸಿದೆ. ಪ್ರತಿಯೊಬ್ಬ ವ್ಯಕ್ತಿಯೂ ಅಲ್ಪಶ್ರಮದಿಂದ ಹೆಚ್ಚಿನ ಸುಖ ಪಡೆಯಲು ಪ್ರಯತ್ನಿಸುತ್ತಿದ್ದಾನೆ. ಕ್ರಿಯಾಂಗವಾದ ದೈಹಿಕ ಶ್ರಮವನ್ನೇ ಅಳಿಸಿಹಾಕಲು ಪ್ರಯತ್ನಿಸುತ್ತಿದ್ದಾನೆ. ಭೋಗಲಾಲಸೆ ಅತ್ಯಧಿಕವಾಗತೊಡಗಿದೆ. ಸಂಯಮಶಕ್ತಿ ಕುಂಠಿತಗೊಂಡಿದೆ. ಈ ಕಾರಣ ಮನಸ್ಸಿನಲ್ಲಿ ಸಂಪೂರ್ಣ ನೆಮ್ಮದಿಯಿಲ್ಲದೆ ಕೊರತೆಯಿಂದ ಬಳಲಿಹೋಗಿದ್ದಾನೆ. ತೊಳಲುತ್ತಿದ್ದಾನೆ. ಸುಖಕ್ಕಾಗಿ ಹಾತೊರೆಯುತ್ತಿದ್ದಾನೆ. ಅಂತರಿಕ ಜೀವನದ ಬೆಳವಣಿಗೆಯಿಲ್ಲದ ಕಾರಣ ಮೃಗಮರೀಚಿಕೆಯಂತೆ ಸುಖವಲ್ಲದುದನ್ನು ಸುಖವೆಂದು ಅದರ ಬೆನ್ನು ಹತ್ತಿ ಓಡುತ್ತಿದ್ದಾನೆ. ಅಮೆರಿಕಾದಲ್ಲಿ ಒಬ್ಬ ಮನುಷ್ಯ ವಿಜ್ಞಾನದ ಮುನ್ನಡೆಯ ಪ್ರಶಂಸೆ ಮಾಡುತ್ತಿದ್ದ. ಆಗ ರೈತನೊಬ್ಬ 'ಸ್ವಾಮಿ, ತಾವು ವಿಜ್ಞಾನದ ಪ್ರಶಂಸೆ ಮಾಡುವುದೇನೋ ನಿಜ, ಆಕಾಶದಲ್ಲಿ ಪಕ್ಷಿಗಳಂತೆ ಹಾರಾಡುತ್ತೇವೆ. ನೀರಿನಲ್ಲಿ ಮೀನಿನಂತೆ ಈಜಾಡುತ್ತಿದ್ದೇವೆ. ಆದರೆ ಭೂಮಿಯಲ್ಲಿ ಮಾನವರಾಗಿ ಬಾಳುವುದೇ ಗೊತ್ತಿಲ್ಲದಂತಾಗಿದೆ' ಎಂದನಂತೆ. ಈ ಮಾತು ಬಹಳ ವಿಚಾರಯೋಗ್ಯವಾದದ್ದು.

**ಶಾಂತಿಯಿಲ್ಲ:**

ನಾವು ಮುಖ್ಯವಾಗಿ ಕಲಿಯಬೇಕಾದುದನ್ನು ಕಲಿತಿಲ್ಲ. ನವನಾಗರಿಕರೆಂದೂ. ಸಂಸ್ಕೃತಿಯಿಂದ ಕೂಡಿದವರೆಂದೂ ಹೇಳಿಕೊಳ್ಳುತ್ತಿದ್ದೇವೆ. ಆದರೆ ನಮ್ಮಲ್ಲಿ ನಿಜವಾದ ನಾಗರಿಕತೆ, ಸಂಸ್ಕೃತಿ ಬೆಳೆದಿದೆಯೇ ? ನಾವೇ ಸ್ವಾತ್ಮನಿರೀಕ್ಷಣೆ ಮಾಡಿಕೊಳ್ಳಬೇಕು. ನಿಜವಾಗಿ ವಿಚಾರಮಾಡಿನೋಡಿದರೆ ನಮ್ಮಲ್ಲಿ ಪಾಶವೀವೃತ್ತಿ ಅಧಿಕಗೊಂಡಿದೆ. ಜಗತ್ತಿನ ಜನಾಂಗದ ಜೀವನಮಟ್ಟ ಕಡಿಮೆ ದರ್ಜೆಗಿಳಿದಿದೆ. ಜನಾಂಗವನ್ನು ಮೇಲ್ಮಟ್ಟಕ್ಕೆ ತರಲು ಬೇಕಾಗುವ ಸಾಮಗ್ರಿಗಳು ಯುದ್ಧಕ್ಕಾಗಿ ವ್ಯಯವಾಗುತ್ತಿವೆ. ವಿನಾಶಕಾರಕ ವಸ್ತುಗಳ ಬಳಕೆಗಾಗಿ ವ್ಯಯವಾಗುತ್ತಿವೆ. ಶಾಂತಿಸ್ಥಾಪನೆಗಾಗಿ ಅನೇಕ ಮುತ್ಸದ್ದಿಗಳು. ಧರ್ಮಭಾವನೆಯ ಮಹಾನುಭಾವರು ಪ್ರಯತ್ನಿಸುತ್ತಿದ್ದಾರೆ. ಆದರೆ ಪ್ರಬಲವಾದ ಪಾಶವೀವೃತ್ತಿ ಇವರ ಸಾಮಾನ್ಯಪ್ರಯತ್ನಗಳನ್ನು ಭಗ್ನಗೊಳಿಸುತ್ತಿದೆ. ಇಂದಿನ ಜಗತ್ತಿನ ಮುಖ್ಯರಾಷ್ಟ್ರಗಳು ಎತ್ತಸಾಗಿವೆ ? ಜಗತ್ತಿನ ವಿನಾಶಕ್ಕೆ ಕೋಟಿಕೋಟಿ ಹಣವನ್ನು ವ್ಯಯಮಾಡುತ್ತಿವೆ. ಆ ಯುದ್ಧಗಳಿಗಾಗಿ ಖರ್ಚಾಗುವ ಹಣವನ್ನು ಮಾನವಕಲ್ಯಾಣಕ್ಕೆ ವ್ಯಯಮಾಡಿದರೆ ಜಗತ್ತಿನ ಜನಾಂಗದ ಜೀವನಮಟ್ಟ ಅಧಿಕಗೊಂಡು ಸುಖಿಪಟ್ಟಾರು. ಈಗ ಮೂರನೆಯ ಮಹಾಯುದ್ಧ ಸಂಘಟಿಸೀತೇನೋ ಎಂಬ ಭೀತಿ ಎಲ್ಲರನ್ನು ಆವರಿಸಿದೆ. ಇದು ಮಾನವನಲ್ಲಿ ಹುದುಗಿರುವ ಅಶಾಂತಿ, ದ್ವೇಷಭಾವನೆ, ಕ್ರೌರ್ಯದ ಫಲವಲ್ಲದೆ ಮತ್ತೇನು ? 'ಶಾಂತಂ ಸಮೃದ್ಧಂ' ಎಂಬ ಮಂತ್ರದ ಅರ್ಥ ಅವರಿಗೆ ಗೊತ್ತಾಗಿಲ್ಲ.

**ಪ್ರಾಚೀನ ಭಾರತ ಸಮೃದ್ಧವಾಗಿತ್ತು :**

ಪ್ರಾಚೀನ ಭಾರತದ ಋಷಿಪರಂಪರೆ ಶಾಂತಿಯೇ ಸಮೃದ್ಧ ಜೀವನವೆಂದು ಭಾವಿಸಿ ಎಂದೂ ಶಾಂತಿಮಂತ್ರವನ್ನೇ ಪಠಿಸುತ್ತಬಂದಿದ್ದರು. ಇಂದು ಇಲ್ಲಿಯೂ ಆ ಪರಿಸ್ಥಿತಿ ಮಾಯವಾಗುತ್ತಿದೆ. ಒಂದು ಕಾಲದಲ್ಲಿ ನಾಗರಿಕತೆಯ, ಸಂಸ್ಕೃತಿಯ ಉತ್ತುಂಗ ಶೃಂಗವನ್ನೇರಿದ್ದ ಭಾರತ ಇಂದು ತನ್ನ ಆ ಪ್ರಾಚೀನ ವೈಭವದಿಂದ ದೂರದೂರಕ್ಕೆ ತಳ್ಳಲ್ಪಡುತ್ತಿದೆ. ಪ್ರಾಚೀನಭಾರತದಲ್ಲಿ ಧರ್ಮದ ತಳಹದಿಯ ಮೇಲೆ ರಾಜ್ಯಗಳನ್ನು ಕಟ್ಟಿ 'ಸರ್ವೇಜನಾಸ್ಸುಖಿನೋಭವಂತು' ಎಂದು ಸರ್ವಪ್ರಜಾಕ್ಷೇಮಕ್ಕಾಗಿ ಎಂಥ ತ್ಯಾಗವನ್ನಾದರೂ ಮಾಡಲು ಸಿದ್ಧರಿದ್ದರು. ಅವರಿಗೆ ಧರ್ಮ ಮತ್ತು ರಾಜಕೀಯ ಎರಡೂ ಹೃದಯದ ಎರಡು ಭಾಗಗಳು. 'ಸುಖಸ್ಯ ಮೂಲಂ ಧರ್ಮಃ ; ಧರ್ಮಸ್ಯ ಮೂಲಮರ್ಥಃ : ಅರ್ಥಸ್ಯಮೂಲಂ ರಾಜ್ಯಂ : ರಾಜ್ಯಸ್ಯ ಮೂಲಮಿಂದ್ರಿಯನಿಗ್ರಹಃ......'[1] ಎಂಬುದೇ ಅವರ ನಂಬುಗೆಯಾಗಿತ್ತು. ಅವರಂತೆ ರಾಜ್ಯವಾಳಿದರು.ನಿಜ. ಸಹಸ್ರವರ್ಷಗಳ ಹಿಂದೆಯೇ ಇವರೂ ಮುಗ್ಗರಿಸಿದರು. ಇಲ್ಲಿ ಪರಕೀಯರ ರಾಜ್ಯತಂತ್ರ ಪ್ರಾರಂಭವಾಗಿ ದೇಶದಲ್ಲಿ ಅನೈಕ್ಯ. ದ್ವೇಷಾಸೂಯೆ.ಕೊಲೆಸುಲಿಗೆ. ಸಂಪತ್ತಿನನಾಶ ಏನೇನಾಗಬೇಕೋ ಎಲ್ಲವೂ ಆಗಿ ಭಾರತೀಯರು ಕ್ಷತವಿಕ್ಷತಗೊಂಡು ಜೀವಚ್ಛವಗಳಾದರು. ತೇಜೋವಧೆಯಾಗಿ ಹೋಯಿತು. ದಿನದ ಇಪ್ಪತ್ತು ನಾಲ್ಕು ತಾಸುಗಳೂ ಅನ್ನಬಟ್ಟೆಗಳನ್ನು ಹೊಂದಿಸುವಿಕೆಯಲ್ಲಿಯೇ ಇವರ ಶಕ್ತಿ ನಷ್ಟವಾಗಿಹೋಯಿತು. ತಮ್ಮ ಹಿಂದಿನ ವೈಭವಗಳನ್ನೆಲ್ಲ ಮರೆತು ಕುಳಿತರು. ೧೯ ನೆಯ ಶತಮಾನದಲ್ಲಿ ಪುನಃ ಭಾರತ ದಿಗ್ಗನೆದ್ದು ಸ್ವಾತಂತ್ರ್ಯದ ಹೋರಾಟ ನಡೆಸಿತು. ಅನೇಕ ಮಹನೀಯರು ತ್ಯಾಗಮಾಡಿದರು; ಪ್ರಾಣತೆತ್ತರು. ಮೊನ್ನೆಮೊನ್ನೆ ತಾನೆ ಸ್ವಾತಂತ್ರ್ಯ ಲಭಿಸಿತು. ಸ್ವತಂತ್ರಭಾರತ ತನ್ನ ಹಿಂದಿನ ವೈಭವಗಳನ್ನು ಪುನಃ ಪ್ರತಿಷ್ಠಾಪಿಸಿ. ಜನತೆಗೆ ಜೀವನರಹಸ್ಯವೇನೆಂಬುವರ ಅರಿವನ್ನುಂಟುಮಾಡುವತ್ತ ಸಾಗೀತೆಂದು ಭಾವಿಸೋಣ.

**ಜೀವಿತದ ರಹಸ್ಯ :**

ತುಂಬುಜೀವನದ ತತ್ತ್ವ ಅಡಗಿರುವುದು, ಲೌಕಿಕ, ಪಾರಮಾರ್ಥಿಕ, ರಾಜಕೀಯಗಳ ಹೊಂದಾಣಿಕೆಯಲ್ಲಿ. ಇವು ಒಂದನ್ನು ಬಿಟ್ಟು ಇನ್ನೊಂದಿಲ್ಲ. ಇವು ಪ್ರಾಚೀನ ಭಾರತೀಯರಲ್ಲಿ ಹಾಸುಹೊಕ್ಕಾಗಿ ಬೆಳೆದುಬಂದಿದ್ದವು. ಇಂದು ಇವುಗಳಲ್ಲಿ ಹೊಂದಾಣಿಕೆಯಿಲ್ಲದ ಜೀವನ ನಮ್ಮದಾಗಿದೆ. ನಾವು ನಮ್ಮ ಹಿಂದಿನ ದಿವ್ಯಾದರ್ಶಗಳನ್ನು ಮೂಲೆಗೆ ತಳ್ಳುತ್ತ ನಡೆದಿದ್ದೇವೆ. ನಾವು ವಿಜ್ಞಾನವನ್ನು ಕಲಿಯೋಣ. ಜೊತೆಗೆ ನಮ್ಮವರ ಸಂಸ್ಕೃತಿಯ ಸಮಗ್ರತೆಯನ್ನು ಅಭ್ಯಾಸ ಮಾಡೋಣ, ಸಾಹಸದಿಂದ ಸಾಧಿಸಬೇಕಾದ ಜೀವನಮೌಲ್ಯಗಳನ್ನು ಸಾಧಿಸೋಣ. ಜ್ಞಾನಾರ್ಜನೆ ಅರ್ಜಿಸಿದ ಜ್ಞಾನವನ್ನು ಕ್ರಿಯಾಮುಖಗೊಳಿಸುವ ಸಾಧನೆ ಇವು ತಪ್ಪಿದುವೆಂದರೆ ಜೀವನವೇ ಅಸ್ತವ್ಯಸ್ತ. ಆಗ ಪುನಃ ನಾವು ಗೊಂದಲದ ಜೀವನದಲ್ಲಿ ಮುಳುಗಬೇಕಾಗುತ್ತದೆ. ಹೃದಯ ದೌರ್ಬಲ್ಯವನ್ನು ಕಿತ್ತೆಸೆದು ಆಧ್ಯಾತ್ಮಿಕ ಸಂಪತ್ತಿನಿಂದುಂಟಾಗುವ ಸಹಜಧೈರ್ಯಸಂಪನ್ನರಾಗಿ ಮುಂದುವರಿಯುವುದರಲ್ಲಿಯೇ ತುಂಬುಜೀವನದ ರಹಸ್ಯ ಅಡಗಿದೆ. ಆಧ್ಯಾತ್ಮಿಕ ಪ್ರವೃತ್ತಿಯೆಂದರೆ ಜಗತ್ತನ್ನು ಬಿಟ್ಟು ಬೇರೆ ರೀತಿಯಲ್ಲಿ ಬಾಳಬೇಕೆಂಬುದಲ್ಲ. ಅದು ರಾಜಕೀಯ, ಆರ್ಥಿಕ, ನೈತಿಕ ಹೊಣೆಗಾರಿಕೆಗಳನ್ನೆಲ್ಲ ಸುತ್ತುಹಾಕಿಕೊಂಡಿದೆ. ಸರ್ವಸಂಗಪರಿತ್ಯಾಗಿಗಳೆನಿಸಿದವರೂ ಲೌಕಿಕವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅದರ ಉತ್ಕರ್ಷಕ್ಕೆ ಹೆಣಗಿದ್ದಾರೆ. ಕಾಳಿದಾಸನ ಶಾಕುಂತಲದಲ್ಲಿ ಕಣ್ವರು 'ಅರಣ್ಯೌಕಸೋಪಿ ಲೌಕಿಕಜ್ಞಾ ವಯಂ' ಎಂದು ಹೇಳಿರುವ ಮಾತನ್ನು ಗಮನಿಸಬೇಕು.

**ಧರ್ಮದ ತಳಹದಿ :**

ಧರ್ಮದ ತಳಹದಿಯ ಮೇಲೆ ಕಟ್ಟಲ್ಪಡುವ ನಾಗರಿಕತೆ ಸುಸಂಸ್ಕೃತವಾದದ್ದು. ನಮ್ಮ ಸಮಸ್ತ ಕ್ರಿಯಾಮುಖದಲ್ಲೂ ಧರ್ಮಬುದ್ಧಿ ಬಲಿತು ಬರದಿದ್ದರೆ ನಾವು ಎಷ್ಟೇ ನಾಗರಿಕರೆನಿಸಿದರೂ ಸುಸಂಸ್ಕೃತರೆನಿಸಲಾರೆವು. ನಮಗೆ ಗಳಿಕೆ ಬಳಕೆಗಳೆರಡರ ಅರ್ಥವೂ ಆಗಬೇಕು. ಸಂಪಾದಿಸುವುದನ್ನೆಲ್ಲ ಧರ್ಮಬುದ್ಧಿಯಿಂದಲೇ ಸಂಪಾದಿಸಿ, ಧರ್ಮಬುದ್ಧಿಯಿಂದಲೇ ಅರಿತು ಬಳಕೆ ಮಾಡಬೇಕು. ಇದನ್ನು ಶರಣರು 'ದಾಸೋಹಂ ಭಾವ'ವೆಂದು ಕರೆದಿದ್ದಾರೆ. ಪಾಪದಿಂದ ಗಳಿಸಿದ ಅರ್ಥ ಪ್ರಾಯಶ್ಚಿತ್ತಕ್ಕೆ ವ್ಯಯವಾಗುತ್ತದೆಂಬುದರ ಅರಿವು ಎಲ್ಲರಿಗೂ ಮೂಡಿಬರಬೇಕು. ಪಾಪಬುದ್ಧಿಯಿಂದ ಏನನ್ನೂ ಸಂಗ್ರಹಿಸಬಾರದು. ಇಂದು ಯಾಂತ್ರಿಕ ಯುಗದ ಪರಿಣಾಮವಾಗಿ ಜನತೆಯಲ್ಲಿ ಪಾಪ ಭೀತಿ ಮಾಯವಾಗಹತ್ತಿದೆ. ಶ್ರೀಮಂತರು, ಬುದ್ಧಿವಂತರು. ಶ್ರೀಮಂತರಾಗಿಯೇ ನಡೆದಿದ್ದಾರೆ. ಅವರಿಗೆ ಸಂಗ್ರಹಬುದ್ಧಿ ಮುಮುಕರಿಸಿ ಮುನ್ನಡೆದಿದೆ. ಆದ್ದರಿಂದ ಬಡವರೂ, ಬುದ್ಧಿಹೀನರೂ ಮತ್ತಷ್ಟು ಬಡವರಾಗುತ್ತಿದ್ದಾರೆ. ಹೀಗೆ ಅರ್ಥವ್ಯವಸ್ಥೆ ಹದಗೆಟ್ಟಾಗಲೇ ಸಮಾಜ ಜೀವನದಲ್ಲಿ ಭಾರಿ ಪ್ರಮಾಣದ ಏರುಪೇರುಗಳುಂಟಾಗಿ ಜನತೆಯಲ್ಲಿ ದ್ವೇಷಾಸೂಯೆಗಳು ಅಧಿಕಗೊಂಡು ಒಂದುದಿನ ಮಹಾಕ್ರಾಂತಿಗೂ ಕಾರಣವಾಗುತ್ತದೆ. ಹೀಗಾಗದಂತೆ ಸ್ವತಂತ್ರ ಭಾರತದಲ್ಲಿ ಆಡಳಿತ ವ್ಯವಸ್ಥೆಯುಂಟಾಗಿ ಸಕಲ ಜೀವಾತ್ಮರಿಗೆ ಲೇಸಾಗುವ ಮಧ್ಯಮಮಾರ್ಗ ಕಂಡುಹಿಡಿಯಲೇಬೇಕು. ಬಹುಜನಗಳ ಜೀವನಕ್ಕೆ ಅನುಕೂಲವಾಗುವ ಅರ್ಥ ಕೆಲವೇ ಜನಗಳಲ್ಲಿ ಸಂಗ್ರಹವಾದರೆ. ಹಸಿದವರು ಬರಬರುತ್ತ ಹೆಬ್ಬುಲಿ

1. ಕೌಟಿಲೀಯ ಅರ್ಥಶಾಸ್ತ್ರ: ಅ. ೧; ೨ ರಿಂದ ೫ ನೆಯ ಸೂತ್ರಗಳವರೆಗೆ.

ಗಳಾಗುತ್ತಾರೆ. ಇದ್ದಲ್ಲಿಗೆ ದಾಳಿಯಿಕ್ಕುತ್ತಾರೆ. ಇದನ್ನೆ ಮಹಾಕ್ರಾಂತಿಯೆಂದು ನಾನು ಹೇಳಿದ್ದು. ಹೀಗಾಗದಂತೆ ಬುದ್ಧಿಜೀವಿಗಳು ಜಾಗೃತೆ ವಹಿಸಬೇಕಾದುದು ಅನಿವಾರ್ಯ.

ಸ್ವಾತಂತ್ರ್ಯ ಬಂದ ಈ ಐದಾರು ವರ್ಷಗಳ ಅವಧಿಯ ಭಾರತೀಯ ಜನಜೀವನ ವಿಚಿತ್ರ ರೀತಿಯಲ್ಲಿ ಹೊರಟಂತೆ ಭಾಸವಾಗುತ್ತಿದೆ. ನಮ್ಮ ಪೂರ್ವಜರ ಮನೋಭಾವಕ್ಕೆ ವಿರುದ್ಧವಾದ ಮನೋಭಾವ ಹೊಂದಿ ನಡೆಯುವಂತೆ ತೋರುತ್ತಿದೆ. ತಾನೂ ಸುಖಪಟ್ಟು ಇತರರೂ ಸುಖಪಡುವಂತೆ ವಿಧಾಯಾತ್ಮಕವಾಗಿ ಬಾಳುವ ಬಾಳು, ಬಡವರೂ, ದರಿದ್ರರೂ, ಬುದ್ಧಿಹೀನರೂ ಆಗಿರುವ ಇಂದಿನ ಭಾರತೀಯರಿಗೆ ಅವಶ್ಯಕ. ತಾನೊಬ್ಬ ಬದುಕಿದರಾಯಿತು; ಇನ್ನೊಬ್ಬರ ಗೊಡವೆ ಕಟ್ಟಿಕೊಂಡೇನು? ಎಂಬ ವಿನಾಶಾತ್ಮಕವಾದ ನಡೆನುಡಿಗಳನ್ನು ಧರ್ಮ ಒಪ್ಪುವುದಿಲ್ಲ. ಧರ್ಮವೆಂದರೆ ಯಾರೋ ಕೆಲವರು ಆಚರಿಸುವ ದೇವತಾಪೂಜೆ ಪುರಸ್ಕಾರಗಳಷ್ಟೇ ಅಲ್ಲ. ಜಗತ್ತಿನ ಯಥಾರ್ಥಜ್ಞಾನ ಪಡೆದು ಸತ್ಯ ಶುದ್ಧವಾಗಿ ಬಾಳುವ ಬಾಳೇ ಧರ್ಮವೆನಿಸುವುದು. ಮನುಷ್ಯನಬಾಳು ಒಂದು ಪರಿಮಿತ ಕಾಲಾವಧಿಯುಳ್ಳದ್ದು. ಆ ಅವಧಿಯಲ್ಲಿ ನಾನು ಎಲ್ಲಿಂದ ಬಂದೆ ? ಈಗ ಎಲ್ಲಿದ್ದೇನೆ ? ಮುಂದೆ ಹೋಗುವುದೆಲ್ಲಿಗೆ ? ಎಂಬ ಮೂರು ಪ್ರಶ್ನೆಗಳಿಗೆ ಉತ್ತರ ಹುಡುಕಬೇಕಾಗುವುದು. ಈ ಮೂರು ಪ್ರಶ್ನೆಗಳಿಗೆ ಧರ್ಮ ನಮಗೆ ಉತ್ತರ ಹುಡುಕಿಕೊಡುತ್ತದೆ. ಧರ್ಮದ ಆ ಯಥಾರ್ಥಜ್ಞಾನದಲ್ಲಿ ಬಾಳು ಸಾಗಿದಾಗಲೇ ಜೀವನ ಪರಿಪೂರ್ಣವೆನಿಸುತ್ತದೆ. ಇಲ್ಲದಿದ್ದರೆ ಜೀವನ ಬರಡು.

**ಆಂತರಿಕ ಸೌಂದರ್ಯದ ಬೆಳವಣಿಗೆ :**

ಈ ಲೋಕದಲ್ಲಿ ವ್ಯಕ್ತಿ ದೊಡ್ಡವನಾಗಬೇಕಾದರೆ, ಆಂತರಿಕಸೌಂದರ್ಯ ಬೆಳೆಯಬೇಕು. ಮನಸ್ಸಿನ ಮೂಲಗುಣವನ್ನು ಹುರಿದು, ಅದು ಉದಾತ್ತಯೋಜನೆಗಳನ್ನು ಮಾಡುವಂತೆ ಮಾಡಬೇಕು. ಅದಕ್ಕೆ ಮೆಲ್ಲಮೆಲ್ಲನೆ ಮುದ್ದುನುಡಿ ಕಲಿಸಬೇಕು. ಮನಸ್ಸನ್ನು ಧ್ಯಾನಾಭಿಮುಖಗೊಳಿಸಬೇಕು. ಅದರ ಸಮಗ್ರ ದಿಕ್ಕುಗಳಿಗೆ ಹರಿಯುವ ಹರಿತವನ್ನು ವ್ಯವಸ್ಥೆಗೊಳಿಸಿಕೊಳ್ಳಬೇಕು. ನಮಗೆ ಸುಖವನ್ನೂ ದುಃಖವನ್ನೂ ತಂದುಕೊಳ್ಳುವವರು ನಾವೇ, ಇದೆಲ್ಲಕ್ಕೂ ನಮ್ಮ ಮನಸ್ಸೇ ಕಾರಣ, ಮನಸ್ಸಿನ ಮೇಲೆ ಜಯ ಸಾಧಿಸಿದವನು ಸರ್ವಪುರುಷಾರ್ಥಗಳನ್ನು ಸಾಧಿಸಲರ್ಹನಾಗುತ್ತಾನೆ. ಪ್ರಾಥಮಿಕ ಹಂತದಲ್ಲಿ ತಪ್ಪುಮಾಡಬಹುದು. ಮಾಡಿದುದು ತಪ್ಪೆಂದು ತಿಳಿದ ಮೇಲೆ ಪುನಃ ತಪ್ಪು ಮಾಡುವತ್ತ ಮನವನ್ನು ಇಳಿಯಗೊಡಬಾರದು. ಮಹಾತ್ಮರು ತಮ್ಮ ಮನಸ್ಸಿನೊಡನೆ ಹೋರಾಡಿ ಜಯ ಸಂಪಾದಿಸಿಯೇ ಆತ್ಮಲಾಭಮಾಡಿಕೊಂಡಿದ್ದಾರೆ. ಅವರು ಏನೆಲ್ಲವನ್ನು ಸಾಧಿಸಿ ಸುಖಿಸಿದ್ದಾರೆ. ಅವರ ಜೀವಿತ ರಹಸ್ಯಗಳು ನಮಗೆ ದಾರಿದೀಪಗಳಾಗಬೇಕು.

**ನುಡಿಯಂತೆ ನಡೆ :**

ಪ್ರತಿಯೊಬ್ಬ ಮನುಷ್ಯನೂ ತನ್ನ ತನ್ನ ಸ್ಥಾನದಲ್ಲಿ ದೊಡ್ಡವನು. ಅವನವನು ತನ್ನ ಕ್ಷೇತ್ರದಲ್ಲಿ ಮಾಡುವ ಕೆಲಸವನ್ನು ಶ್ರದ್ಧಾಭಕ್ತಿ ವಿಶ್ವಾಸಗಳಿಂದ ಮಾಡಿಮುಗಿಸುವ ಮನೋಭಾವ, ಸ್ಥೈರ್ಯ, ಧೈರ್ಯಹೊಂದಬೇಕು. ಅದೇ ನಿತ್ಯತಪಸ್ಸೆನಿಸಿದೆ. ನಾವು ಮಾಡುವ ಯಾವುದೇ ಕ್ರಿಯೆ ತಪಸ್ಸಾದಾಗಲೇ ಕ್ರಿಯೆಗೆ ಸತ್ತ್ವಬರುತ್ತದೆ. ಆ ಸತ್ವವೇ ಕ್ರಿಯೆಗೆ ತಕ್ಕ ಫಲವನ್ನು ಎಳೆದು ತರುತ್ತದೆ. ಸತ್ಕ್ರಿಯೆಯಾಗಿದ್ದಾಗ ಮಾತ್ರ ಸತ್ಫಲಲಭ್ಯವಾಗುವುದು. ಇಂಥ ಸತ್ಕ್ರಿಯಾಚಾರ ಸಂಪತ್ತನ್ನೇ ಶರಣರು 'ಕಾಯಕ' ಎಂದು ಕರೆದಿದ್ದಾರೆ. ಕಾಯಕ ಬೇರೆಯಲ್ಲ ದೇವಪೂಜೆ ಬೇರೆಯಲ್ಲ. 'ಕಾಯಕದಲ್ಲಿ ನಿರತನಾದರೆ ಲಿಂಗಪೂಜೆಯನ್ನಾದರೂ ಮರೆಯಬೇಕು' ಎಂಬುದು ಶರಣರ ಅನುಭವ. ಇಲ್ಲಿ ಲಿಂಗಪೂಜೆ ಬಿಡಬೇಕೆಂದಲ್ಲ. ಕಾಯಕದ ಸ್ಥಾನವೇನೆಂಬುದರ ವಿಶ್ಲೇಷಣೆಯಿದೆ. ನಮಗೆ ಮಾನವಲೋಕದಲ್ಲಿ ಉನ್ನತಸ್ಥಾನ ಸಿಗಬೇಕೆಂಬ ಅಪೇಕ್ಷೆಯಿದ್ದರೆ, ನಾವು ನಮ್ಮ ಆಂತರಿಕಸೌಂದರ್ಯವನ್ನು ಉನ್ನತವಾಗಿ ಬೆಳೆಸಿಕೊಂಡಿರಲೇ ಬೇಕು. ನಮ್ಮ ನುಡಿಗೆ ಶಕ್ತಿಬರಬೇಕೆಂದಿದ್ದರೆ ನಮ್ಮ ನಡೆಯೂ ಶಕ್ತಿವಂತವಾಗಿರದಿದ್ದರೆ ಹೇಗೆ ? 'ಭಕ್ತಿ ಸಂಭಾಷಣೆಯ ಮಾಡುವೆ ; ನುಡಿದಂತೆ ನಡೆಯುವೆ ; ನುಡಿಯಲ್ಲಿ ನಡೆಯ ಪೂರೈಸುವೆ...' ಎಂಬ ಪ್ರತಿಜ್ಞೆ ನಮ್ಮದಾಗಿ ಈ ಪ್ರತಿಜ್ಞಾವಿಧಿಯನ್ನು ಸಾರ್ಥಕಗೊಳಿಸುವಂತಹ ಮಾರ್ಗದಲ್ಲಿ ದಿನದಿನವೂ ನಡೆಯುವ ಅಭ್ಯಾಸಮಾಡಿದಾಗ ನಮ್ಮಜೀವಿತಕ್ಕೊಂದು ಅದ್ಭುತಶಕ್ತಿಯುಂಟಾಗುವುದು. ಲೋಕಕ್ಕೆಅಂಥವರು ಪವಾಡಪುರುಷರಾಗಿ ಗೋಚರಿಸುವರು. ಇಂಥವರನ್ನೇ ಪುರಾಣಗಳು ಅವತಾರಪುರುಷರೆಂದು ಕರೆಯುತ್ತವೆ. ವಾಸ್ತವಾಂಶದಲ್ಲಿ ಎಲ್ಲ ಚೇತನಪ್ರಪಂಚವೂ ಶಿವನ ಅವತಾರವೇ. ಆದರೆ ಅಜ್ಞಾನದಿಂದ ಅವರ ಅರಿವಿಲ್ಲದೆ ಬಹುದೂರ ಸಾಗಿರುತ್ತಾರಾಗಿ ಅವರವರಲ್ಲಿರುವ ಶಿವಕಳೆ ಮುಸುಕಾಗಿರುತ್ತದೆ. ಆ ಅಜ್ಞಾನದ ಆವರಣ ಸರಿದಾಗ ತಾವೇ ಜ್ಯೋತಿಸ್ವರೂಪರೆಂಬ ಅರಿವಾಗುತ್ತದೆ.

**ರಾಷ್ಟ್ರದ ಬದುಕಿಗೆ ಪೂರಕವಾಗಬೇಕು :**

ಹೀಗೆ ಪ್ರತಿ ವ್ಯಕ್ತಿಯೂ ಸ್ವಯಂಪೂರ್ಣವಾಗುತ್ತ ರಾಷ್ಟ್ರದ ಸಮಗ್ರ ಬದುಕಿಗೆ ಪೂರಕವಾದಾಗ ರಾಷ್ಟ್ರ ಶಕ್ತಿಶಾಲಿಯೆನಿಸುತ್ತದೆ. ಆತ್ಮಶಕ್ತಿಯ ಸಂಪತ್ತಿನಿಂದ ತುಂಬುತ್ತದೆ, ಪರಿಪೂರ್ಣಜೀವನದ ಯಥಾರ್ಥವನ್ನು ಪಡೆಯುತ್ತದೆ. ಹೀಗಾಗದಿದ್ದರೆ ರಾಷ್ಟ್ರಶಕ್ತಿ ನಷ್ಟವಾಗಿ ಅಧೋಗತಿಗಿಳಿಯುತ್ತದೆ. ರಾಷ್ಟ್ರಕ್ಕೆ ಪ್ರತಿಯೊಬ್ಬ ಮನುಷ್ಯನೂ ತನ್ನ ತನ್ನ ಪಾಲಿನ ಸೇವೆ

ಯನ್ನು ತನ್ನ ತನ್ನ ಸ್ವಯಂಪೂರ್ಣತೆಯ ಮೂಲಕ ಸಲ್ಲಿಸಬೇಕು. ಒಂದು ನೀರಹನಿ ನೂರಾರು ಟನ್ನು ತೂಕದ ಹಡಗನ್ನು ಹೊರಲಾರದು; ಇಂಥ ಕೋಟಿ ಕೋಟಿ ನೀರಿನ ಹನಿಗಳು ಸಮುದ್ರವೆನಿಸಿಕೊಂಡಾಗ ಮಾತ್ರ ಹೊರಬಲ್ಲವು. ಇಂದಿನ ವಿಜ್ಞಾನದ ನೆರವನ್ನು ನಾವು ತಿರಸ್ಕರಿಸಬೇಕಾದುದೇನೂ ಇಲ್ಲ. ಇಂದಿನ ಜಗತ್ತಿನಲ್ಲಿ ಬಾಳಬೇಕಾದರೆ ವಿಜ್ಞಾನದ ನೆರವು ಬೇಕೇಬೇಕು, ಆದರೆ ಅದೊಂದೇ ನಮ್ಮ ಚರಮಸಿದ್ಧಿಯಲ್ಲವೆಂಬುದನ್ನು ಜ್ಞಾಪಕದಲ್ಲಿಡಬೇಕು. ಚರಮಸಿದ್ಧಿಯೆಂದರೆ ಪರಿಪೂರ್ಣತೆ ಸಾಧಿಸುವುದು. ಮನುಷ್ಯ ಜೀವನ ಭೌತಪ್ರಪಂಚದೊಡನೆ ಆಂತರಿಕ ಪಿಂಡಪ್ರಪಂಚದೊಡನೆ ಸಮ್ಮಿಲನಗೊಂಡು ಸಾಗುವಂತಹುದು. ಬಾಹ್ಯ ಜಗತ್ತಿನಲ್ಲಿ ವೈಜ್ಞಾನಿಕವಾಗಿ ಅಂದಂದಿಗೆ ಸಂಶೋಧನೆಗೊಂಡ ವಿಷಯ ಜ್ಞಾನದೊಡನೆ ಹೊಂದಾಣಿಕೆ ಹೊಂದಿ, ಆಂತರಿಕ ಪ್ರಜ್ಞೆಯನ್ನು ಬೆಳೆಸಿಕೊಂಡೇ ಜೀವನ ಸಮನ್ವಯ ಸಾಧಿಸಬೇಕು. ಸುಪ್ತವಾಗಿರುವ ನಮ್ಮ ಸಂಸ್ಕೃತಿಯನ್ನು ಜಾಗೃತಗೊಳಿಸಿ ಅದನ್ನು ಮೈಗೂಡಿಸಿಕೊಂಡು ಶಾಂತಿಯಿಂದ ಲಭ್ಯವಾಗುವ ಸಮೃದ್ಧ ಜೀವನ ನಮ್ಮದಾಗುವಂತೆ ಈಶ್ವರನು ಕರುಣಿಸಲೆಂದು ಹಾರೈಸುತ್ತೇವೆ.

## ೩. ದೈವೀಶಕ್ತಿಯ ಬೆಳವಿಗೆ

[ತಾ. ೨೨-೬-೧೯೫೨ರಂದು ಹಾಸನದ ತಣ್ಣೀರುಹಳ್ಳದ ಮಠಕ್ಕೆ ನೂತನವಾಗಿ ಶಿವಲಿಂಗ ಸ್ವಾಮೀಗಳವರು ಚರಜಂಗಮಾಧಿಕಾರ ಸ್ವೀಕಾರ ಮಾಡಿದಂದು ನಡೆದ ಶಿವಾನುಭವ ಸಮ್ಮೇಲನಾಧ್ಯಕ್ಷತೆ ವಹಿಸಿದ್ದ ಶ್ರೀಗಳವರ ಉಪದೇಶ ಭಾಷಣ.]

**ಹೃದಯ ಸಂಪತ್ತು :**

ಮನುಷ್ಯ ಜ್ಞಾನಪ್ರಧಾನ ಪ್ರಾಣಿ. ಯಾವ ಪ್ರಾಣಿಗಳಿಗೂ ಕೊಡದಿರುವ ವಿಶೇಷ ಶಕ್ತಿಯನ್ನು ಪರಮಾತ್ಮ ಮನುಷ್ಯನಿಗೆ ಇತ್ತಿದ್ದಾನೆ. ಅದೇ ಜ್ಞಾನಾರ್ಜನಾ ಸಾಮರ್ಥ್ಯ. ಆನೆಯೇ ಮೊದಲಾದ ಪ್ರಬಲಸಾಮರ್ಥ್ಯದ ಪ್ರಾಣಿಗಳನ್ನು ಸೃಷ್ಟಿಸಿದ್ದರೂ ಪ್ರಬಲಬುದ್ಧಿ ಶಕ್ತಿಯಿಂದ ಅವೆಲ್ಲ ಪ್ರಾಣಿಗಳ ಮೇಲೂ ಅಧಿಕಾರ ಪಡೆಯುವ ಸಾಮರ್ಥ್ಯ ಮನುಷ್ಯನಿಗಿದೆ. ಅಂತೆಯೇ ಸೃಷ್ಟಿಯಲ್ಲಿ ಇವನು ಕಿರೀಟಪ್ರಾಯನೆನಿಸಿದ್ದಾನೆ. ಇಂಥ ದೈವಿಕಸಾಮರ್ಥ್ಯ ಬಂದಿರುವುದು ಇವನಿಗೊಬ್ಬನಿಗೇ. ಸುಖೇಚ್ಛೆ ಎಲ್ಲ ಪ್ರಾಣಿಗಳಿಗೂ ನಿಸರ್ಗದತ್ತ ವರವಾದರೂ ಮನುಷ್ಯನ ಸುಖದ ಕಲ್ಪನೆಯ ಅನುಭವ ಮೇಲ್ಮಟ್ಟದ್ದು. ಸುಖವೆಂದರೇನೆಂಬುದನ್ನು ಮಾನವ ವಿಶ್ಲೇಷಣೆಮಾಡಿ ತಿಳಿದು, ಅದರ ಅನ್ವೇಷಣೆ ಮಾಡಬಲ್ಲ ಶಕ್ತಿವಂತನಾಗಿದ್ದಾನೆ. ತಾನು ಯಾರು ? ಎಲ್ಲಿಂದ ಬಂದೆ ? ಎಲ್ಲಿಗೆ ಹೋಗಬೇಕಾಗಿದೆ ? ಈ ಪ್ರಶ್ನೆಗಳಿಗೆ ಉತ್ತರ ಹುಡುಕಿ ಶಾಶ್ವತವಾದ ಮುಕ್ತಿಯನ್ನು ಪಡೆಯಲು ಮನುಷ್ಯನೊಬ್ಬನೇ ಸಮರ್ಥ, ಸೃಷ್ಟಿಯ ನಿಗೂಢತತ್ತ್ವಗಳನ್ನು ಕಂಡು ಹಿಡಿಯುವಿಕೆಯೂ ಕೂಡ ತನ್ನ ಉತ್ಕರ್ಷಕ್ಕಾಗಿ. ಸ್ವಲ್ಪ ಶ್ರಮದಿಂದ ಬಹಳ ಸುಖ ಸಿಗುವಂತೆ ಪ್ರಯತ್ನಿಸುವ ಹೋರಾಟವೇ ಆಗಿದೆ. ಈ ಹೋರಾಟವನ್ನು ಯಾರೂ ಅಲ್ಲಗಳೆಯಬೇಕಾಗಿಲ್ಲ. ಆದರೆ ಇನ್ನೊಂದು ಪ್ರಬಲ ಹೋರಾಟದಲ್ಲಿ ಮನುಷ್ಯ ಯಶಸ್ವೀರಿಯಾಗದಿದ್ದರೆ ಬಾಳೆಲ್ಲ ಬರಡುಗೊಂಡು ಶಾಶ್ವತ ಸುಖದ ಕಲ್ಪನೆಯಿಂದ ವಂಚಿತನಾಗಿ ಹೋಗುತ್ತಾನೆ. ಈ ಹೋರಾಟವೇ ಈಶ್ವರನನ್ನು ಹುಡುಕುವ ಹೋರಾಟ. ಇದು ಮಸ್ತಿಷ್ಕದಿಂದ ಸಿಗುವ ವಸ್ತುವಲ್ಲ. ಹೃದಯ ಶಕ್ತಿಯಿಂದ ಪಡೆಯುವ ಸಂಪತ್ತು. ಬುದ್ಧಿ ಶಕ್ತಿ ಕೇವಲ ಲೆಕ್ಕಾಚಾರದ್ದು ; ಸ್ವಾರ್ಥಪರವಾದದ್ದು. ಅದೊಂದೇ ಬೆಳೆದರೆ ಪ್ರಯೋಜನವಿಲ್ಲ. ಅದಕ್ಕೆ ಸರಿದೊರೆಯಾಗಿ ಹೃದಯಶಕ್ತಿಯೂ ಬೆಳೆದರೆ ಮಾತ್ರ ಅಂಥವನ ಬುದ್ಧಿಶಕ್ತಿಯಿಂದ ಪ್ರಪಂಚಕ್ಕೆ ಕಲ್ಯಾಣವಾದೀತು. ಇಲ್ಲದಿದ್ದರೆ ಅದೇ ಮಾರಕವೂ ಆದೀತು. ಒಂದು ವೇಳೆ ಬುದ್ಧಿಶಕ್ತಿಯ ಬೆಳೆ ಹುಲುಸಾಗಿ ಬೆಳೆಯದಿದ್ದರೂ ಚಿಂತೆಯಿಲ್ಲ. ಹೃದಯಶಕ್ತಿಯೊಂದು ಚೆನ್ನಾಗಿ ಬೆಳೆದರೆ ಅಂಥವರಿಂದ ಲೋಕಕ್ಕೆ ಬಹಳಷ್ಟು ಉಪಕಾರವಾದೀತು. ಹೃದಯಶಕ್ತಿಯ ಬೆಳವಣಿಗೆಯಿಂದ ಎಷ್ಟೋ ಜನ ಶಿವಯೋಗಿಗಳು ಜೀವಿತದಲ್ಲಿ ಎಲ್ಲೆಲ್ಲೂ ಶಾಂತಿಸಂದೇಶ ಹರಡಿದ್ದಾರೆ. ಲೋಕದ ಸುಖದುಃಖದಲ್ಲಿ ಭಾಗಿಗಳಾಗಿದ್ದಾರೆ. ಲೋಕದ ದೀನದಲಿತರ ಕಣ್ಣೊರೆಸಿ ಸಾಂತ್ವನಗೊಳಿಸಿದ್ದಾರೆ. ನಮ್ಮ ಗುರುಗಳಾದ ಉದ್ದಾನ ಶಿವಯೋಗಿಗಳು ವಿದ್ಯಾವಂತರೇನೂ ಅಲ್ಲ : ವಿಜ್ಞಾನವನ್ನು ಓದಿರಲಿಲ್ಲ. ಅವರ ಹೃದಯಸಂಪತ್ತು ಅತ್ಯದ್ಭುತ. ಅವರು ತಮ್ಮ ಸಂಕಲ್ಪಶಕ್ತಿಯಿಂದ ಸಾಧಿಸಿದ ಸಾಧನೆ. ಅಗಾಧ. ಅಂತೆಯೇ ಅಥಣಿ ಶಿವಯೋಗಿಗಳೂ ಇತ್ತೀಚೆಗೆ ಆಗಿಹೋದವರು. ಅವರ ಶಿವಾನುಭವ ಸಂಪತ್ತು ಮೇಲ್ಮಟ್ಟದ್ದು. ಒಮ್ಮೆ ಒಬ್ಬ ಸ್ವಾಮಿಗಳು ಹುಬ್ಬಳ್ಳಿಯ ಸಿದ್ಧಾರೂಢರ ಹತ್ತಿರಹೋಗಿ 'ಶಿವಾನುಭಾವ' ಎಂದರೇನು ಎಂದರಂತೆ. ಆಗ ಅವರಿಗೆ ಸಿದ್ಧಾರೂಢರು ಹೇಳಿದ ಉತ್ತರ 'ನೀವು ಅಥಣಿ ಶಿವಯೋಗಿಗಳನ್ನು ನೋಡಿ. ಅಷ್ಟೇಸಾಕು. ಅವರ ವರ್ತನೆಯೇ ನಿಮಗೆ ಶಿವಾನುಭವದ ಬಗೆಗೆ ವ್ಯಾಖ್ಯಾನ ಕೊಡುತ್ತದೆ' ಅಂದರಂತೆ.

**ಅಂಗಭೋಗ ; ಲಿಂಗಭೋಗ :**

ಈ ಭೌತ ಪ್ರಪಂಚದಲ್ಲಿ ಏನೆಲ್ಲವನ್ನೂ ಸಾಧಿಸಿದ. ಸಾಧಿಸಲು ಸಮರ್ಥನಾದ ಮಾನವನಿಗೆ ತನ್ನ ಕೊನೆಯ ಗುರಿಯ ಅರ್ಥವಾದಾಗಲೇ ಅವನು ಪರಿಪೂರ್ಣನೆನಿಸುವನು. ಭರತಖಂಡದಲ್ಲಿನ ಪ್ರಾಚೀನದಾರ್ಶನಿಕರ ಮೇಲ್ಮೆ ಏನು ? ಅವರ

ದರ್ಶನ ಜ್ಞಾನಾನುಭವ ಎಷ್ಟೊಂದು ಉಚ್ಚಮಟ್ಟದ್ದು ! ಈ ಅಂಶವನ್ನು ನಾವಿಂದು ಆಳವಾಗಿ ಯೋಚಿಸುವ ಕಾಲ ಬಂದಿದೆ. ಏಕೆಂದರೆ ನಮ್ಮ ಕಣ್ಮನಗಳೆಲ್ಲ ಭೌತಸುಖದಲ್ಲಿ ನಟ್ಟು 'ಸುರಿ! ಇನ್ನಷ್ಟು ಸುರಿ!' ಎಂದು ಆ ಸುಖದಲ್ಲಿಯೇ ಮುಳುಗಿ ಕಂಗಾಲಾಗಿ ದ್ದೇವೆ. ಯಾವುದು ಸುಖವಲ್ಲವೋ ಅದನ್ನೇ ಸುಖವೆಂದು ಕರಡಿಯಂತೆ ತಬ್ಬಿಕೊಂಡು ಇನ್ನೊಂದು ಮಹಾಸುಖದಿಂದ ಪೂರ್ಣ ವಿರಹಾಗಿದ್ದೇವೆ. ಇದುವರೆಗೆ ಭರತಖಂಡದ ಸ್ಥಿತಿ ಪರಕೀಯರ ದಬ್ಬಾಳಿಕೆಯ ಆಡಳಿತದ ಫಲವಾಗಿ ತೀರಾ ಹೀನಸ್ಥಿತಿಯಲ್ಲಿತ್ತು. ಈಗ ನಾಲ್ಕೈದು ವರ್ಷಗಳ ಹಿಂದೆ ನಮಗೆ ಸ್ವಾತಂತ್ರ್ಯ ಲಭ್ಯವಾಗಿ ನಾವಿಂದು ಪ್ರಪಂಚದೆದುರು ತಲೆಯೆತ್ತಿ ಸ್ವತಂತ್ರ ಭಾರತದ ಪ್ರಜೆಯೆನ್ನುವ ಹೆಮ್ಮೆಯುಂಟಾಗಿದೆ. ಹೀಗಾಗಲು ಭಾರತ ತೆತ್ತ ತ್ಯಾಗ ಬಲಿದಾನಗಳ ಮೊತ್ತವೇನೂ ಕಡಿಮೆಯದಲ್ಲ. ೧೮೫೭ರಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿನ ಬ್ರಿಟಿಷರ ಕ್ರೌರ್ಯದ ಪರಮಾವಧಿ ಊಹೆಗೆ ನಿಲುಕದ್ದು. ಆದರೆ ಅದನ್ನೆಲ್ಲ ನಾವಿಂದು ಮರೆತಿದ್ದೇವೆ. ಮರೆಯುವುದು ಅನಿವಾರ್ಯವೂ ಆಗಿದೆ. ಆ ಆಂದೋಲನವನ್ನು ನಾವೇನೋ ಸ್ವಾತಂತ್ರ ಹೋರಾಟ ವೆಂದು ಕರೆದರೂ ಬ್ರಿಟಿಷರು ಅದನ್ನು ಸಿಪಾಯಿಗಳ ದಂಗೆಯೆಂದು ಲಾಘವದಿಂದ ಕರೆದರು. ಅದೇನೇ ಇರಲಿ. 'ಗತಂ ನಶೋಚ ಯೇತ್ ಪ್ರಾಜ್ಞಃ' ಎಂದುಕೊಂಡು ಸುಮ್ಮನಾಗೋಣ. ಆದರೆ ಇಂದು ಪುಣ್ಯಭೂಮಿಯಾದ ಭಾರತದಲ್ಲಿ ಕಾಣುವುದೇನನ್ನು? ಎಲ್ಲೆಲ್ಲೂ ನಾಸ್ತಿಕತೆಯನ್ನು. ಅಧರ್ಮ ಎತ್ತೆತ್ತಲೂ ತಾಂಡವವಾಡತೊಡಗಿದೆ. ಇದು ನಮ್ಮ ದೌರ್ಬಲ್ಯದ ಕುರುಹು. ರಾಜ ಕೀಯ ಸ್ವಾತಂತ್ರ್ಯವೊಂದೇ ನಮ್ಮ ಪರಿಪೂರ್ಣಜೀವನವಲ್ಲ. ನಮ್ಮ ನಮ್ಮ ತನುಕರಣಭಾವಗಳ ಮೇಲೂ ನಾವು ಸ್ವಾತಂತ್ರ್ಯ ಸಾಧಿಸಬೇಕಾಗಿದೆ. ಅದನ್ನು ಸಾಧಿಸದಿದ್ದರೆ ನಾವು ಕೇವಲ ಅಂಗಭೋಗಿಗಳಾಗಿ ಲಿಂಗಭೋಗೋಪಭೋಗವನ್ನು ದೂರಕ್ಕೆ ತಳ್ಳಿದವರೆನಿಸುತ್ತೇವೆ. ಆಗ ಜೀವನಶಾಂತಿಯೆಂಬುದು ಗಗನಕುಸುಮ ಸದೃಶವಾಗುವುದು. ಉಣಬೇಕು. ಉಡಬೇಕು, ಇಡ ಬೇಕು, ತೊಡಬೇಕು, ಎಲ್ಲ ಸುಖಗಳನ್ನು ಅನುಭವಿಸು. ಆದರೆ ಅಂಗಭೋಗ ಅನರ್ಪಿತ; ಲಿಂಗಭೋಗ ಪ್ರಸಾದ. ಅಂಗಭೋಗ ಜೀವನದಿಂದ ಭವದ ಬಳ್ಳಿಯನ್ನು ಹರಿಯಲು ಶಕ್ಯವಿಲ್ಲ, ಉಂಡುಟ್ಟು ಸುಖವಾಗಿ ಇರಬೇಕೆಂಬುದರ ಪೂರ್ಣ ಅರ್ಥವೆಂದರೆ: ಕಾಯಕ ಸದ್ಭಾವಿಯಾಗಿ ದುಡಿದು ಸಂಪಾದಿಸಿದುದನ್ನು ಈಶ್ವರ ಪ್ರಸಾದವೆಂದು ಭಾವಿಸಿ ಪ್ರಸಾದಬುದ್ಧಿಯಿಂದ ಸ್ವೀಕರಿಸಿ ಲಿಂಗಭೋಗೋಪಭೋಗಿಯಾಗಬೇಕೆಂಬುದರಲ್ಲಿ ತಾತ್ಪರ್ಯಗೊಳ್ಳುವುದು. ಅನ್ಯರ ಶ್ರಮದ ಮೇಲೆ ಬದುಕಬಾರದು; ಒಬ್ಬೊ ಬ್ಬನ ಶ್ರಮವೂ ಸ್ವತಂತ್ರ ಭಾರತದ ಉಜ್ವಲ ಭವಿಷ್ಯ ನಿರ್ಮಾಣಕ್ಕೆ ಪೂರಕವಾಗಬೇಕು. ಶರಣರು ಲೋಕಕ್ಕೆ ಸಾರಿದ ಸಂದೇಶವು ಇದೇ. ಶರಣರೆಂದರೆ ಒಂದು ವಿಶಿಷ್ಟ ಜಾತಿಯ ಜನವೆಂದು ತಿಳಿಯಬಾರದು. ಅದರಲ್ಲಿ ಸಮಗ್ರ ಹಿಂದೂ ಸಂಸ್ಕೃತಿಯ ಜನ ರೆಲ್ಲ ತುಂಬಿದ್ದಾರೆ. ಅವರೆಲ್ಲರ ಹೃದಯವನ್ನು ಗೆದ್ದ ಮೂರ್ತಿ ಬಸವಣ್ಣನ ವಿಚಾರಧಾರೆಯಂತೆ ನೂತನ ಕಾಯಕ ಸೂತ್ರದ ಕಲ್ಪನೆಯನ್ನು ಮಾಡಿಕೊಂಡು ಒಬ್ಬೊಬ್ಬ ಶರಣನೂ ಲೋಕ ಜೀವನದಲ್ಲಿ ಕಾಯಕದ ಮಹತ್ವವೇನೆಂಬುದನ್ನು ಕಲ್ಯಾಣ ಮಹಾ ನಗರದಲ್ಲಿ ಅರಿತು ಆಚರಿಸಿ ತೋರಿಸಿಕೊಟ್ಟರು ; ಅಷ್ಟೇ ಅಲ್ಲ, ತಮ್ಮ ದಿವ್ಯಾನುಭವವನ್ನು ವಚನಗಳಲ್ಲಿ ಬರೆದಿಟ್ಟು ಭಾರತದ ವಿಚಾರವಾದಿಗಳ ವೈಚಾರಿಕ ಪ್ರಜ್ಞೆಯನ್ನು ಕೆರಳಿಸಿದರು. ಇಂದು ಸ್ವತಂತ್ರಭಾರತದಲ್ಲಿ ಸುಂದರಸಮಾಜ ಕಟ್ಟಬೇಕೆಂದು ಇಚ್ಛಿಸುವವರು ಕಲ್ಯಾಣದ ಶಿವಶರಣರ ವಿಚಾರವಾದವನ್ನು ಕೈಗೆತ್ತಿಕೊಂಡು ಅನುಷ್ಠಾನಕ್ಕೆ ತರುವುದಾದರೆ ಆಗ ಭವ್ಯಭಾರತದ ಬಾಳು ಅರ್ಥಪೂರ್ಣವಾಗುತ್ತದೆ. ಕಾಯಕಷ್ಟವನ್ನು ಸತ್ಯಶುದ್ಧವಾಗಿ ಮಾಡುವವನ ವಿಚಾರವಾಗಿ ಚೆನ್ನಬಸವಣ್ಣನವರು ಆಡಿದ ಒಂದು ಮಾತನ್ನು ನಿಮ್ಮೆಲ್ಲರ ಗಮನಕ್ಕೆ ತರುತ್ತೇನೆ :

'ಕೃಷಿಕೃತ್ಯ ಆವ ಕಾಯಕದಿಂದಲಾದಡೇನು ? ತನುಮನ ಬಳಲಿಸಿ ಗಳಿಸಿ ತಂದು
ಗುರುಲಿಂಗ ಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡುವ ಪರಮ ಸದ್ಭಕ್ತನ
ಪಾದವ ತೋರಯ್ಯ ಎನಗೆ; ಅದೆಂತೆಂದೊಡೆ ಆತನ ತನುಶುದ್ಧ ; ಆತನ ನಡೆ
ಶುದ್ಧ : ನುಡಿಯೆಲ್ಲ ಪಾವನ : ಆತನಿಗೆ ಉಪದೇಶವ ಮಾಡಿದಾತನೆ ಪರಮ
ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯೇ ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ
ಮಾಡುವ ಜಂಗಮವೇ ಜಗತ್ಪಾವನ. ಇಂತಪ್ಪ ಗುರು ಶಿಷ್ಯ ಜಂಗಮಕ್ಕೆ
ನಾನು ನೆರೆನಂಬಿ ನಮೋ ನಮೋ ಎನ್ನುತಿಪ್ಪೆನಯ್ಯ'

—ಈ ಮಾತಿನಲ್ಲಿ ಕಾಯಕಷ್ಟ ಮಾಡಿ ದುಡಿದು ಸಂಪಾದಿಸುವ ವ್ಯಕ್ತಿಯ ಘನತೆಯನ್ನು ವ್ಯಕ್ತಪಡಿಸಿದ್ದಾರೆ ಚೆನ್ನಬಸವಣ್ಣ ನವರು. ಸ್ವತಂತ್ರಭಾರತಕ್ಕೆ ಇದಕ್ಕಿಂತ ಹೆಚ್ಚಿಗೆ ಯಾವ ಸಂದೇಶವನ್ನು ಶರಣರು ಕೊಟ್ಟಾರು? ಬಸವಣ್ಣನವರು ಸ್ವತಂತ್ರ ಭಾರತದ ಪ್ರಜೆಗಳಿಗೆ ಕೊಡುವ ಸಂದೇಶ ಕೇಳಿ :

"ಮೊತ್ತಾರೆ ಎದ್ದು ಕಣ್ಣದೊಸೆಯುತ್ತ. ಎನ್ನೊಡಲಿಂಗೆ, ಎನ್ನೊಡವೆಗೆ, ಎನ್ನ ಮಡದಿ
ಮಕ್ಕಳಿಗೆಂದು ನುಡಿದೆನಾಡದೆ ಎನ್ನಮನಕ್ಕೆ ಮನವೇ ಸಾಕ್ಷಿ ! 'ಆಸನೇ, ಶಯನೇ
ಯಾನೇ, ಸಂಪರ್ಕೇ ಸಹಭೋಜನೇ, ಸಂಚರಂತಿ ಮಹಾಘೋರೇ, ನರಕೇಕಾಲಮಕ್ಷಯಂ

ಎಂಬ ಶ್ರುತಿಯ ಬಸವಣ್ಣನೋದುವನು ಎಂಬರು. 'ಭವಿ ಬಿಜ್ಜಳನ
ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು' ನುಡಿವರಯ್ಯ ಪ್ರಮಥರು !
ಕೊಡುವೆನವರಿಗೆ ಉತ್ತರವ : ಕೂಡಲಮ್ಮೆವೆ : ಹೊಲೆಹೊಲೆಯರಮನೆಯ
ಹೊಕ್ಕಾದರೂ, ಸಲೆ ಕೈಕೂಲಿಯಮಾಡಿಯಾದಡೆಯೂ, ನಿಮ್ಮ ನಿಲುವಿಂಗೆ ಕುದಿವೆನಲ್ಲದೆ
ಎನ್ನೊಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲಸಂಗಮದೇವಾ."

— ಇಲ್ಲಿ ಲೋಕಜೀವನಕ್ಕೆ ತನ್ನನ್ನೇ ತಾನರ್ಪಿಸಿಕೊಂಡಿರುವ ಬಸವಣ್ಣನ ಪ್ರತಿಜ್ಞೆಯ ಹಿಂದೆ ಎಂಥ ಅಗಾಧ ಅರ್ಥವಡಗಿದೆಯೆಂಬುದನ್ನು ನಾವು ಅರಿಯಬೇಕಾಗಿದೆ; ಅರಿದು ಆಚರಿಸಬೇಕಾಗಿದೆ. ಈ ಆಚರಣೆ ಕೈಗೂಡಿದಾಗ ಸ್ವತಂತ್ರಭಾರತಕ್ಕೆ ನಮ್ಮ ಅರ್ಥಪೂರ್ಣಕಾಣಿಕೆಯನ್ನು ಸಲ್ಲಿಸಿದಂತಾಗುತ್ತದೆಂಬುವದರಲ್ಲಿ ಅನುಮಾನವೇ ಇಲ್ಲ. ಬಸವಣ್ಣ ಕಟ್ಟಿದ ಸಮಾಜದಲ್ಲಿ ಸಮಸ್ತ ಹಿಂದೂ ಜನಾಂಗವೇ ಇದೆ. ಕಾಯಕ ಯಾವುದಾದರೂ ಆಗಿರಬಹುದು. ಎಲ್ಲ ಕಾಯಕಗಳೂ ಲೋಕಜೀವನಕ್ಕೆ ಪೂರಕಗಳು. ಮೋಳಿಗೆಯ ಮಾರಯ್ಯ, ಪಡಿಹಾರಿ ಚಿಕ್ಕಣ್ಣ, ಹಡಪದ ಅಪ್ಪಣ್ಣ, ಮಡಿವಾಳ ಮಾಚಿದೇವ, ಭಂಡಾರಿ ಶಾಂತರಸ, ಮಾದರ ಧೂಳಯ್ಯ, ಮೇದರ ಕೇತಯ್ಯ, ಆಯ್ದಕ್ಕಿಯ ಮಾರಯ್ಯ, ಒಕ್ಕಲಿಗ ಮುದ್ದಣ್ಣ, ಮೊರನ ವೇಮಯ್ಯ, ಕದಿರ ರೆಮ್ಮವ್ವೆ, ಅಂಬಿಗರ ಚೌಡಯ್ಯ, ವೈದ್ಯಸಂಗಣ್ಣ, ಮಾದರ ಹರಳಯ್ಯ, ಗಾಣದ ಕಣ್ಣಪ್ಪಯ್ಯ, ಸುಂಕದ ಬಂಕಣ್ಣ, ಬಾಚಿಕಾಯಕದ ಬಸವಣ್ಣ, ನುಲಿಯ ಚಂದಯ್ಯ, ಸೂಜಿಕಾಯಕದ ರಾಮಿದೇವ–ಇಲ್ಲಿನ ಹೆಸರುಗಳ ಹಿಂದಿರುವ ಕಾಯಕಗಳು ಲೋಕಜೀವನಕ್ಕೆ ಪೂರಕಗಳು. ಅವರವರ ಸ್ಥಾನದಲ್ಲಿ ಅವರವರು ದೊಡ್ಡವರೇ. ಇಲ್ಲಿ ಕರ್ತವ್ಯದ ಮೇಲಿಂದ ಕೀಳು ಮೇಲಿನ ಪ್ರಶ್ನೆಯೇ ಇಲ್ಲ. ಅಂದಿನ ಸಮಾಜ ಕಟ್ಟುವುದಕ್ಕೆ ಈ ಮಾತು ಅವಶ್ಯಕವಿತ್ತೆಂದು ತಿಳಿಯಬಾರದು : ಇಂದಿನ ಸಮಾಜ ಕಟ್ಟುವದಕ್ಕೂ ಇವರೆಲ್ಲ ಬೇಕು.

**ಶಾಂತ ಜಗತ್ತು :**

ಪ್ರಪಂಚದ ಮಾನವ ಕೋಟಿಗೆಲ್ಲ ಇಂದು ಶಾಂತಿ ಬೇಕಾಗಿದೆ. ಶಾಂತಿಯು ಸುಮ್ಮನೆ ಸಿಗುವ ವಸ್ತುವಲ್ಲ, ನಿಜಧರ್ಮಾಚರಣೆಯಿಂದಲೇ ಅದು ಲಭ್ಯವಾಗಬೇಕು. ಧರ್ಮದ ತಳಹದಿಯಿಲ್ಲದೆ ಸುಮ್ಮನೆ ಶಾಂತಿಶಾಂತಿಯೆಂದು ಕೂಗಾಡಿದರೆ ಅದು ಲಭ್ಯವಾಗದು. ಶಾಂತಿಯು ಅಂತಃಕರಣದಿಂದ ಹೊರಹೊಮ್ಮುವ ಒಂದು ಅವಸ್ಥಾವಿಶೇಷ. ಮನಬುದ್ಧಿಚಿತ್ತಾಹಂಕಾರಗಳನ್ನು ಸಂತೈಸಿ ಎತ್ತೆತ್ತಲೂ ಪ್ರೀತಿಯನ್ನು ಹರಡಿ ತಾನೂ ಅದರ ಫಲವನ್ನನುಭವಿಸಬೇಕು. ಇತರರೂ ಅನುಭವಿಸುವಂತೆ ಮಾಡಬೇಕು. 'ಆತ್ಮನಃಪ್ರತಿಕೂಲಾನಿ ಪರೇಷಾಂ ನಸಮಾಚರೇತ್' ಎಂಬ ಸುಭಾಷಿತವೊಂದುಂಟು, ಇದರ ಅರ್ಥ ಇಷ್ಟೇ: ನಿನಗೆ ಯಾವುದು ಪ್ರತಿಕೂಲವೆಂದು ಭಾವಿಸಿರುವೆಯೋ ಇತರರ ವಿಷಯದಲ್ಲೂ ನೀನು ಹಾಗೇ ನಡೆದುಕೊಳ್ಳಬೇಡ. ನಿನ್ನನ್ನು ಎಲ್ಲರೂ ಪ್ರೀತಿಸಬೇಕೆಂಬ ಇಚ್ಛೆಯಿದ್ದರೆ ನೀನೂ ಇತರರನ್ನು ಪ್ರೀತಿಸು. ಭಾರತದ ದರ್ಶನಗಳು ಇಲ್ಲಿಗೆ ನಿಂತಿಲ್ಲ. ನಿನ್ನನ್ನೇ ಎಲ್ಲ ಜೀವ ರಾಶಿಗಳಲ್ಲೂ ನೋಡು ಎನ್ನುತ್ತವೆ. ಇಂದು ಪ್ರಪಂಚದಲ್ಲಿರುವ ಅಶಾಂತಿಗೆ ಭಾರತ ತನ್ನ ಆಧ್ಯಾತ್ಮಿಕ ಸಂಪತ್ತಿನ ಕಾಣಿಕೆಯನ್ನು ಸಲ್ಲಿಸಬೇಕಾಗಿದೆ. ಕಾರಣ : ಪಾಶ್ಚಾತ್ಯ ನಾಗರಿಕತೆ ಭೌತಿಕತೆಯ ಬುನಾದಿಯ ಮೇಲೆ ನಿಂತಿದೆ; ಭಾರತದ ನಾಗರಿಕತೆಯು ಆಧ್ಯಾತ್ಮಿಕತೆಯ ಮೇಲೆ ನಿಂತಿರುವುದೇ ಆಗಿದೆ. ಆಧ್ಯಾತ್ಮಿಕ ಸಂಪತ್ತಿನ ತೌರೂರಾದ ಭಾರತದ ಜವಾಬ್ದಾರಿ ವಿಶ್ವ ಶಾಂತಿ ವಿಚಾರದಲ್ಲಿ ಗುರುತರವಾದುದಾಗಿದೆ. ಧರ್ಮಕ್ಕೂ ರಾಜಕೀಯಕ್ಕೂ ನಿಕಟ ಸಂಬಂಧವಿದೆಯೆಂದು ಭಾರತ ಹಿಂದಿನಿಂದಲೂ ಅರಿತಿದೆ ; ಆಚರಿಸಿದೆ. ಸರ್ವಸಂಗಪರಿತ್ಯಾಗಿಗಳಾದ ಸಂನ್ಯಾಸಿಗಳಿಗೆ ರಾಜಮಹಾರಾಜರು ಹಿಂದಿನಿಂದಲೂ ಗೌರವಿಸಿ ಅವರ ಸಲಹೆ ಸಹಕಾರಗಳಿಂದಲೇ ರಾಜ್ಯಕಟ್ಟಿದ್ದಾರೆ. ಮೌರ್ಯರಾಜ್ಯ, ವಿಜಯನಗರ ರಾಜ್ಯ, ಮರಾಠರಾಜ್ಯ ಸ್ಥಾಪನೆಯ ಹಿಂದಿರುವ ಸಂನ್ಯಾಸಿಗಳ ಮಹತ್ವಪೂರ್ಣ ಪಾತ್ರವನ್ನು ಅರ್ಥಮಾಡಿಕೊಳ್ಳಬೇಕು. ಇವರೆಲ್ಲ ಸಂದಿಗ್ಧಪರಿಸ್ಥಿತಿಯಲ್ಲಿ ಕ್ರಾಂತಿಯನ್ನು ಮಾಡಿ, ಶಾಂತಿ ಸ್ಥಾಪಿಸಿದ ಮಹಾಪುರುಷರು.

**ಸಮಾಜಜಾಗೃತಿಗೆ ವೀರಶೈವಮಠಗಳ ಸೇವೆ :**

ಬಹು ಪ್ರಾಚೀನ ಕಾಲದಿಂದಲೂ ವೀರಶೈವ ಮಠಗಳು ಎಲ್ಲ ಸಮಾಜಗಳ ಉತ್ಕರ್ಷಕ್ಕೆ ಸೇವೆ ಸಲ್ಲಿಸುತ್ತ ಬಂದಿವೆ. ವಿದ್ಯಾಭ್ಯಾಸ, ಸಾಮಾಜಿಕ ಸುಧಾರಣೆ, ಧಾರ್ಮಿಕ, ಸಾಂಸ್ಕೃತಿಕ ಉನ್ನತಿಗಾಗಿ ಬಹಳಷ್ಟು ಹೆಣಗಿವೆ. ಯಾವ ಸಮಾಜ ತನ್ನ ಸಮಾಜದ ಮತ್ತು ಇತರ ಸಮಾಜದ ಯೋಗಕ್ಷೇಮದ ಹೊಣೆ ಹೊತ್ತು ಕಾರ್ಯಸಾಧನೆ ಮಾಡಿದೆಯೋ ಅದು ವಿಧಾಯಾತ್ಮಕ ಸಮಾಜವೆನಿಸುವುದು. ವೀರಶೈವ ಸಮಾಜ ಮತ್ತು ಮಠಮಾನ್ಯಗಳು ಈ ಕಾರ್ಯ ಮಾಡಿರುವುದು ಅತ್ಯಂತ ಹೆಮ್ಮೆಯ ವಿಚಾರ. ಯಾವ ಸಮಾಜ ತನ್ನ ಸಮಾಜೋತ್ಕರ್ಷವನ್ನು ಮಾತ್ರಮಾಡಿ ಇತರರ ಬಗೆಗೆ ಯಾವ ಚಿಂತೆಯನ್ನೂ ಮಾಡುವುದಿಲ್ಲವೋ ಅದು ವಿನಾಶಾತ್ಮಕ ವೆನಿಸುವುದು. ವೀರಶೈವ ಮಠಗಳ ಪರಂಪರೆ ಸಮಸ್ತ ಹಿಂದೂ ಸಂಸ್ಕೃತಿಗೇ ತನ್ನ ಕೈಲಾದ ಸಹಾಯಮಾಡಿದೆ. ಜನಾಂಗಕ್ಕೆ ನೀತಿಸಂಹಿತೆ ಬೋಧಿಸಿದೆ. 'ಮಠ' ಎಂದು ಇವುಗಳಿಗೆ ಬಂದ ಹೆಸರೇ ಇವು ವಿದ್ಯಾಭ್ಯಾಸ ಕೇಂದ್ರಗಳಾಗಿದ್ದ

ನೆಂಬುದನ್ನು ತಿಳಿಸುತ್ತದೆ. 'ಮಠಶ್ಛಾತ್ರಾದಿನಿಲಯಃ' ಎಂದೇ ಅಮರಕೋಶನಿಘಂಟಿನಲ್ಲಿ ಮಠದಶಬ್ದಾರ್ಥ ಹೇಳಿದೆ.'ಛಾತ್ರ' ಎಂದರೆ ವಿದ್ಯಾರ್ಥಿ ಎಂದು ಅರ್ಥ. ಮಲೆನಾಡಿನ ಹೆಬ್ಬಾಗಿಲಿನಲ್ಲಿರುವ ಹಾಸನದ ತಣ್ಣೀರು ಹಳ್ಳದಮಠ ಈ ದಿಸೆಯಲ್ಲಿ ಪ್ರಾಚೀನ ಕಾಲದಿಂದ ಹೆಚ್ಚಿನ ಸೇವೆಮಾಡುತ್ತ ಬಂದಿದೆ. ಹಿಂದೆ ಆಚಾರನಿಷ್ಠರಾಗಿದ್ದ ವ್ಯಾಪಾರಿಗಳು ತಮ್ಮ ಆಚಾರಾದಿಗಳಿಗೆ ಅನುಕೂಲವಾಗಲೆಂದು ಹೆದ್ದಾರಿಯ ಸಮೀಪದಲ್ಲೇ ನಗರಬಿಟ್ಟು ಹೊರವಲಯದಲ್ಲಿ ಅನೇಕ ಮಠ ಮಾನ್ಯಗಳನ್ನು ಸ್ಥಾಪಿಸಿದ್ದಾರೆ. ಧರ್ಮಸಂಸ್ಥೆಗಳು ಲೌಕಿಕ ವ್ಯವಹಾರಗಳಿಗೂ ಹೇಗೆ ಮಾಧ್ಯಮಗಳಾಗಿದ್ದುವೆಂಬುದನ್ನು ಇದು ತೋರಿಸಿಕೊಡುತ್ತದೆ. ನಮ್ಮ ಪರಂಪರೆಯ ಪ್ರಾಚೀನ ಮಠವಾದ ಹರದನ ಹಳ್ಳಿಯ ಶೂನ್ಯಪೀಠವೂ ಕೂಡ ವೀರಬಣಂಜುಗಳು ಮಧುರೆಯ ಕಡೆಗೆ ವ್ಯಾಪಾರಕ್ಕಾಗಿ ಹೋಗುವ ಕಾಲದಲ್ಲಿ ತಮ್ಮಸಮಯಾಚಾರಕ್ಕಾಗಿ ಕಟ್ಟಿಸಿದ ಮಠವೆಂದೇ ಸಮಕಾಲೀನ ಗ್ರಂಥಗಳಲ್ಲಿ ಹೇಳಲಾಗಿದೆ. ಅದೇ ಮಠದಲ್ಲಿ ಕಲ್ಯಾಣದಲ್ಲಿ ಸ್ಥಾಪಿತಗೊಂಡಿದ್ದ ಶೂನ್ಯಸಿಂಹಾಸನದ ಪರಂಪರೆ ಬೆಳೆದು ಬಂದಿರುವುದೆಂದು ತಿಳಿದು ಬರುತ್ತದೆ. ಆ ಪರಂಪರೆಯಲ್ಲಿ ಬಂದ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಆ ಪೀಠದ ಘನತೆ ಗೌರವಗಳನ್ನು ಮುಗಿಲೆತ್ತರಕ್ಕೇರಿಸಿದರು. ಆ ಪೀಠದ ಪರಂಪರೆಯವರು ಕರ್ನಾಟಕ ಆಂಧ್ರ ತಮಿಳುದೇಶ ಮಹಾರಾಷ್ಟ್ರಗಳನ್ನೆಲ್ಲ ಸಂಚರಿಸಿ ಧರ್ಮಬೋಧೆ ಮಾಡಿದ್ದಾರೆ. ಹೀಗೆ ವೀರಶೈವ ಪರಂಪರೆಯಲ್ಲಿ ಬಂದಿರುವ ಅಸಂಖ್ಯಾತ ಮಠಮಾನ್ಯಗಳು ಧಾರ್ಮಿಕ ದೀಪ ಆರಗೊಡದ ಹಾಗೆ ಎಂದಿನಿಂದಲೂ ಜಾಗೃತಿಯ ಎಣ್ಣೆಬತ್ತಿಗಳನ್ನು ಒದಗಿಸುತ್ತ ಬಂದಿವೆ. ಅಂಥ ಮಠಗಳಲ್ಲಿ ತಣ್ಣೀರು ಹಳ್ಳದ ಮಠವೂ ಒಂದು. ನೂತನ ಶ್ರೀಗಳು ಸಿದ್ಧಗಂಗಾ ಕ್ಷೇತ್ರದಲ್ಲಿ ಅನೇಕ ವರ್ಷ ವಿದ್ಯಾಭ್ಯಾಸ ಮಾಡಿ ಬಂದವರು. ಅತ್ಯಂತ ಋಜು ಸ್ವಭಾವದವರು : ಆಚಾರನಿಷ್ಠರು. ಅವರ ಲಾಭವನ್ನು ಇಲ್ಲಿಯ ಸಮಾಜ ಮಾಡಿಕೊಳ್ಳಬೇಕು. ಧರ್ಮ ಸಂಸ್ಥೆಗಳನ್ನು ಬೆಳೆಯಿಸಿ ತನ್ಮೂಲಕ ಧಾರ್ಮಿಕಜಾಗೃತಿಯನ್ನು ಪಡೆಯಬೇಕು. ಅವು ಸಮಾಜದ ಜೀವನಾಡಿಗಳಿದ್ದ ಹಾಗೆ, ಉದಾಸೀನ ಸಲ್ಲದು. ಮನುಷ್ಯ ಜೀವನಕ್ಕೆ ಅನ್ನ ಬಟ್ಟೆಗಳ ಸಮಸ್ಯೆಯಷ್ಟೇ ಮುಖ್ಯವಲ್ಲ. ಧರ್ಮ ಸಂಸ್ಕೃತಿಯ ಸಂವರ್ಧನೆಯೂ ಅತ್ಯಂತ ಮುಖ್ಯವಾಗಿದೆ. ದೈವೀಶಕ್ತಿಯು ಅಭಿವೃದ್ಧಿಗೊಂಡು ರಾಕ್ಷಸೀಶಕ್ತಿಯನ್ನು ಕುಗ್ಗಿಸಿ ನೂರಾರು ವರ್ಷ ಶಾಂತಿ ಸಮೃದ್ಧಿಯಿಂದ ಬಾಳುವ ಬಾಳಿಗೆ ಸಿದ್ಧತೆ ಮಾಡಿಕೊಳ್ಳಬೇಕು. ಅದಕ್ಕೆ ಅನುಕೂಲವಾಗುವಂತಹ ವಾತಾವರಣವನ್ನು ಸಮಾಜದಲ್ಲಿ ನಿರ್ಮಾಣ ಮಾಡಿಕೊಳ್ಳಬೇಕು. ನೂರು ವರ್ಷ ವ್ಯರ್ಥವಾಗಿ ಬಾಳುವುದಕ್ಕಿಂತ ಮೂರು ವರ್ಷ ಲೇಸೆನಿಸಿಕೊಂಡು ಬಾಳುವ ಬಾಳು ಮಾನವ ಜನಾಂಗದ್ದಾಗಬೇಕು. ಈ ತರದ ಬಾಳನ್ನು ಬಾಳಲು ಮಠಮಾನ್ಯಗಳ ಸೇವೆ ಅಪಾರ. ಮಠಾಧಿಪತಿಗಳೂ ಕೂಡ ತಮ್ಮ ಆಚಾರ ವಿಚಾರಗಳನ್ನು ಬೆಳೆಸಿಕೊಂಡು ತಮ್ಮ ಆಶ್ರಮಧರ್ಮಕ್ಕನುಗುಣವಾದ ತಪಸ್ಸಿನ ಅಭಿವೃದ್ಧಿಪಡಿಸಿಕೊಂಡು ಲೋಕಹಿತಕ್ಕೆ ಹೆಣಗಬೇಕು. ಅಂಥ ಸಮೃದ್ಧಬಾಳನ್ನು ಜಗದೀಶ್ವರನು ಎಲ್ಲರಿಗೂ ಕರುಣಿಸಲೆಂದು ಹಾರೈಸುತ್ತೇವೆ.

## ೪. ನೈತಿಕ ಮೌಲ್ಯಗಳು

[ತಿಪಟೂರು ಸರ್ಕಾರಿ ಬಾಲಕರ ಪ್ರೌಢ ಶಾಲೆಯ ಶಾಲಾಸಂಘದ ವಾರ್ಷಿಕೋತ್ಸವದಲ್ಲಿ ತಾ. ೨೨-೧೨-೧೯೫೨ ರಂದು ಮಾಡಿದ ಭಾಷಣ]

**ಪ್ರಸಾದಕಾಯ :**

ಭಾರತ ಸ್ವಾತಂತ್ರ್ಯಾನಂತರ ರಾಷ್ಟ್ರದಲ್ಲಿನ ಬಹುದೊಡ್ಡ ಮೊತ್ತದ ಮಕ್ಕಳ ವಿದ್ಯಾಭ್ಯಾಸದ ಹೊಣೆಗಾರಿಕೆಯನ್ನು ಸರಕಾರ ಅರಿತು ಅಪಾರಹಣವನ್ನು ಅದಕ್ಕಾಗಿ ವೆಚ್ಚಮಾಡತೊಡಗಿದೆ. ಇದೊಂದು ಶುಭಸೂಚನೆ. ಮುಂದುವರಿದ ರಾಷ್ಟ್ರಗಳ ವಿದ್ಯಾಭ್ಯಾಸದಲ್ಲಿನ ಯೋಜನೆ-ಯೋಚನೆಗಳನ್ನು ಅಭ್ಯಸಿಸಿದ ಪ್ರವೀಣರ ಸಲಹೆಯಂತೆ ರಾಷ್ಟ್ರದಲ್ಲಿ ಅನೇಕಶಾಸ್ತ್ರಗಳ ಅಭ್ಯಾಸಕ್ಕಾಗಿ ಅನೇಕ ಶಾಲಾಕಾಲೇಜುಗಳು ತಲೆಯೆತ್ತತೊಡಗಿವೆ. ಒಂದು ಕಡೆಯಲ್ಲಿ ರಾಷ್ಟ್ರ. ಇನ್ನೊಂದು ಕಡೆಯಲ್ಲಿ ನಿಮ್ಮ ಪೋಷಕರು. ಮತ್ತೊಂದು ಕಡೆ ಶಾಲಾಕಾಲೇಜುಗಳ ಉಪಾಧ್ಯಾಯರು–ಈ ಮೂರು ಮುಖದ ಪ್ರಯತ್ನದಲ್ಲಿ ನೀವೆಲ್ಲ ವಿದ್ಯಾಭ್ಯಾಸನಿರತರಾಗಿದ್ದೀರಿ. ಈ ಒಂದು ಮಹಾಕಾರ್ಯ ಯಶಸ್ವಿಗೊಳ್ಳಲು ಯಾರು ಅತ್ಯಂತ ಶ್ರದ್ಧೆಯಿಂದ ಕಾರ್ಯನಿರ್ವಹಿಸಬೇಕು ? ಯಾರ ಜವಾಬ್ದಾರಿ ಅಧಿಕತಮ ? ಎಂದರೆ ವಿದ್ಯಾರ್ಥಿಗಳದ್ದೇ. ಸರಕಾರ ಯೋಜನೆ ಹಾಕಿ ದುಡ್ಡು ಖರ್ಚು ಮಾಡಬಹುದು : ತಂದೆ ತಾಯಿಗಳು ತಮ್ಮ ಮನೆಗೆಲಸ ಬಿಡಿಸಿ ಹೊತ್ತುಹೊತ್ತಿಗೆ ಊಟಬಟ್ಟೆಕೊಟ್ಟು ಶಾಲೆಗೆ ಕಳಿಸಬಹುದು. ಏನೆಲ್ಲ ಸೌಲಭ್ಯಗಳನ್ನು ನಿಮಗೆ ಒದಗಿಸಿಕೊಡಬಹುದು ನಿಜ. ವಿದ್ಯಾಭ್ಯಾಸವನ್ನು ಮಾಡುವ ನಿಮ್ಮಲ್ಲಿ, ಮಾಡಿಸುವ ಉಪಾಧ್ಯಾಯರಲ್ಲಿ ನಿಜವಾದ ಶ್ರದ್ಧೆ ಬೆಳೆಯದಿದ್ದರೆ. ಎಲ್ಲವೂ ವ್ಯರ್ಥ. ನಿಮಗೆಲ್ಲ ದೇವರು ನೂರುವರ್ಷ ಬಾಳುವಷ್ಟು ಶಕ್ತಿ ಸಾಮರ್ಥ್ಯಗಳನ್ನು ಜ್ಞಾನ ವಿಜ್ಞಾನವನ್ನು ಸೂಕ್ಷ್ಮರೂಪದಿಂದ ಈ ನಿಮ್ಮ ದೇಹದಲ್ಲಿ ತುಂಬಿಕಳಿಸಿದ್ದಾನೆ. ಆ ಸೂಕ್ಷ್ಮರೂಪದ ಶಕ್ತಿಗಳನ್ನೆಲ್ಲ ಅಧಿಕ

ಗೊಳಿಸುವುದೇ ವಿದ್ಯಾಭ್ಯಾಸದ ಲಕ್ಷಣ. ನಿಮ್ಮ ದೇಹ-ಮನ-ಬುದ್ಧಿ ಇವೆಲ್ಲ ಪರಮಾತ್ಮನ ವರಗಳೇ, ದೇವನನ್ನು ಒಲಿಸುವುದಕ್ಕೇ ಬಂದ ಈ ದೇಹ ಅವನ ಪ್ರಸಾದಕಾಯವೆಂಬ ಹೆಸರಿನ ಘನತೆಪಡೆದಿದೆ. ಈ ದೇಹಕ್ಕೆ ಎರಡು ಪ್ರಪಂಚಗಳ ಸಂಬಂಧವಿದೆ. ಒಂದು ಹೊರಗಿನ ಪ್ರಪಂಚ : ಇನ್ನೊಂದು ಒಳಗಿನ ಪ್ರಪಂಚ. ಒಂದು ಬ್ರಹ್ಮಾಂಡ-ಇನ್ನೊಂದು ಪಿಂಡಾಂಡ. ಹೊರಗಿನ ಪ್ರಪಂಚಜ್ಞಾನವಾದ ಭಾಷೆ-ಚರಿತ್ರೆ-ಭೂಗೋಳ-ವಿಜ್ಞಾನ-ಗಣಿತ-ಅರ್ಥಶಾಸ್ತ್ರ-ಸಮಾಜಶಾಸ್ತ್ರ ಮುಂತಾದ ಎಲ್ಲ ಬಗೆಯ ಶಾಸ್ತ್ರಗಳ ಅಭ್ಯಾಸವನ್ನು ಶ್ರದ್ಧಾಭಕ್ತಿ ವಿಶ್ವಾಸದಿಂದ ಮಾಡುವುದರ ಜೊತೆಗೆ ನಿಮ್ಮ ಮನ ಬುದ್ಧಿ ಚಿತ್ತ ಅಹಂಕಾರಗಳು ಭಕ್ತಿ ನೀತಿ ನಿಯಮಾದಿ ವ್ಯವಹಾರಗಳು ಹೃದಯ ಸಂಸ್ಕಾರದ ಫಲವಾಗಿ ಸುಸಂಸ್ಕೃತಗೊಳ್ಳಬೇಕು. ನೀತಿ ನಿಯಮಗಳಿಲ್ಲದೆ ಕೇವಲ ಹೊರಗಿನ ವಿದ್ಯೆಯಲ್ಲಿಯೇ ನಿಪುಣರಾದರೆ ಸಾಲದು. ಅದನ್ನೇ ಗಾಂಧಿಯವರು ಗಾಡ್ ಲೆಸ್ ಎಜ್ಯುಕೇಷನ್ (God Less Education) ಎಂದಿದ್ದಾರೆ. ಅಂದರೆ ದೈವತ್ವವಿಲ್ಲದ ವಿದ್ಯಾಭ್ಯಾಸ. ಮನುಷ್ಯನಿಗೆ ವ್ಯವಹಾರಿಕ ಜ್ಞಾನವಿಜ್ಞಾನಗಳೂ ಬೇಕಿದಂತೆ ಆಂತರಿಕ ಅನುಭವದ ಐಶ್ವರ್ಯವು ಮೈಗೂಡಿ ಬಂದಾಗಲೇ ಅವನು ಮಾನವನಾಗುತ್ತಾನೆ. ಇಲ್ಲದಿದ್ದರೆ ದಾನವನಾಗುತ್ತಾನೆ.

**ಶ್ರದ್ಧಾವಂತರಾಗಿರಿ :**

ಇಂದು ವ್ಯಾಪಕವಾಗಿ ಸಮಗ್ರ ಭಾರತದ ವಿದ್ಯಾಕ್ಷೇತ್ರದ ಸರ್ವೇಮಾಡಿದರೆ ಮುಖ್ಯವಾಗಿ ಗೋಚರಿಸುವ ಅಂಶ ಮಕ್ಕಳಿಗೆ ವಿದ್ಯಾಭಾಸದಲ್ಲಿ ಶ್ರದ್ಧೆಯೇ ಮಾಯವಾಗತೊಡಗಿದೆ. ಎಂಬುದು. ಈ ಪಿಡುಗು ಸ್ವಾತಂತ್ರ್ಯಕ್ಕೂ ಪೂರ್ವದಲ್ಲಿಯೇ ಹುಟ್ಟಿಕೊಂಡಿತು. ಹೆಚ್ಚಾಗಿ ೧೯೪೭ ರಿಂದ ಈಚೆಗೆ ವಿದ್ಯಾರ್ಥಿಗಳಲ್ಲಿ ಶಿಸ್ತು-ಶ್ರದ್ಧೆ-ನಯವಿನಯಗಳು ಇಳಿಮುಖವಾಗತೊಡಗಿವೆ. ಉತ್ತಮ ಸಂಸ್ಕೃತಿ ಸಂಸ್ಕಾರಗಳ ಅಭ್ಯಾಸ ಮಾಡದಿದ್ದರೆ ಅದು ನಮ್ಮ ಪಾಲಿನ ದೌರ್ಭಾಗ್ಯವೇ ಸರಿ. ಬಾಲಕರಾದ ನೀವು ಒಂದು ವಿಷಯವನ್ನು ಸ್ಪಷ್ಟವಾಗಿ ತಿಳಿಯಬೇಕು. ನಿಮ್ಮ ವಿದ್ಯಾಪ್ರೇಮವನ್ನು, ಕಾತರವನ್ನು ಅಧಿಕಗೊಳಿಸಿಕೊಳ್ಳಬೇಕು. ಹಿಂದಿನವರು ವಿದ್ಯೆಗಾಗಿ ಆತ್ಮಾರ್ಪಣೆ ಮಾಡಿದ್ದಾರೆ. ಜಗತ್ತಿನೆದುರು ನೀವೆಲ್ಲ ತಲೆಯೆತ್ತಿ ನಡೆಯುವ ಸೌಭಾಗ್ಯ ನಿಮಗೆ ೧೯೪೭ ರಿಂದ ಈಚೆಗೆ ಉಂಟಾಗಿದೆ. ಏತತ್ಪೂರ್ವದಲ್ಲಿ ನಿಮಗೆಲ್ಲ ಆ ಸೌಭಾಗ್ಯವಿರಲಿಲ್ಲ. ಈಗ ನಾವು ಜಗತ್ತಿಗೆ ನಮ್ಮತನವನ್ನು ತೋರಿಸಬೇಕಾಗಿದೆ. ಅನೇಕ ಸ್ವಾತಂತ್ರ್ಯಪ್ರೇಮಿಗಳ ತ್ಯಾಗ, ಬಲಿದಾನ, ಆತ್ಮಾರ್ಪಣೆಗಳಿಂದ ನಮಗೆ ಸ್ವಾತಂತ್ರ್ಯ ಬಂದಿದೆ. ಎಂಬುದು ನಿಮ್ಮ ಗಮನಕ್ಕೆ ಬರಬೇಕಾದುದು ಮುಖ್ಯ. ನಮಗೆ ದೊರಕಿರುವ ಅಪೂರ್ವ ಸಂಪತ್ತೆಂದರೆ ಸ್ವಾತಂತ್ರ್ಯವೇ ಆಗಿದೆ. ಅದು ಅಳಿಯಬೇಕೋ ? ಉಳಿಯಬೇಕೋ ? ಉಳಿಯಬೇಕಾದರೆ ನಮ್ಮ ಪಾಲಿನ ಕರ್ತವ್ಯಗಳನ್ನು ಶ್ರದ್ಧೆಯಿಂದ ಮಾಡಬೇಕು. ಕರ್ತವ್ಯಲೋಪಮಾಡಿದರೆ ಮುಂದೆ ಪುನಃ ನಾವು ಅಪಾಯದ ದವಡೆಗೆ ಸಿಗಬೇಕಾಗುತ್ತದೆ. 'ಅಲಭ್ಯಲಾಭೋ ಹಿ ಯೋಗಃ' 'ಲಬ್ಧಸ್ಯ ಪರಿಪಾಲನಂ ಕ್ಷೇಮಂ' 'ಯೋಗಕ್ಷೇಮ'ದ ಬಗೆಗೆ ಇವೆರಡು ವಾಕ್ಯಗಳು. ಅಲಭ್ಯವಾದ ಲಾಭವಾಗುವುದೇ ಯೋಗವೆನಿಸಿಕೊಳ್ಳುವುದು. ಈ ಯೋಗವೇ ಸ್ವಾತಂತ್ರ್ಯ. ಲಭ್ಯವಾದುದನ್ನು ಪರಿಪಾಲಿಸಿಕೊಂಡು ಹೋಗುವುದೇ ಕ್ಷೇಮ.

**ದೈವೀಶಕ್ತಿಯ ಅಭಿವೃದ್ಧಿ :**

ಗಾಂಧಿಯವರು ಹೇಳುತ್ತಿದ್ದುದು ಹೀಗೆ : 'ನಿಮಗೆ ಹಕ್ಕು ಬೇಕೆನ್ನುವಿರಿ : ಸ್ವಾತಂತ್ರ ಬೇಕೆನ್ನುವಿರಿ. ಅದು ಬೇಕಾದರೆ ನಿಷ್ಠೆಯಿಂದ ನಿಮ್ಮ ನಿಮ್ಮ ಪಾಲಿನ ಕೆಲಸವನ್ನು ಮಾಡಿರಿ. ಮಾಡುವ ಕೆಲಸವನ್ನು ಧರ್ಮಬುದ್ಧಿಯಿಂದ ಮಾಡಿರಿ. ಹಾಗೆ ಮಾಡಿ ನಿಮ್ಮ ಹಕ್ಕುಬಾಧ್ಯತೆಗಳನ್ನು ಕೇಳುವುದು ನ್ಯಾಯವೆನಿಸುತ್ತದೆ. ಅದಿಲ್ಲದಿದ್ದರೆ ದೇಶದ್ರೋಹಿಗಳಾಗುವಿರಿ.' ಮನುಷ್ಯ ಉದ್ಧಾರವಾಗುವುದು, ನಾಶವಾಗುವುದು ಅವನವನ ಕರ್ತವ್ಯವನ್ನವಲಂಬಿಸಿದೆ. ತನ್ನ ಉದ್ಧಾರಕ್ಕೂ ವಿನಾಶಕ್ಕೂ ತಾನೇಹೊಣೆ. ಅದಕ್ಕೆ ಮುಖ್ಯವಾಗಿರುವುದು ಕಾಲವನ್ನು ಸದುಪಯೋಗಪಡಿಸಿಕೊಳ್ಳುವುದು. ಕಾಲವನ್ನು ಉತ್ತಮರೀತಿಯಿಂದ ಉಪಯೋಗಪಡಿಸುವುದನ್ನು ಕಲಿತರೆ ನಮಗೆ ಸುಖವಾಗುವುದು. ನಮ್ಮ ನಮ್ಮ ಕರ್ತವ್ಯಪ್ರಜ್ಞೆ ಪ್ರಬಲವಾದಂತೆಲ್ಲ ಮಾಡಿದ ಕರ್ತವ್ಯದ ಪ್ರಾಬಲ್ಯವೇ ಫಲವನ್ನು ನಮ್ಮಲ್ಲಿಗೆ ಎಳೆದುತರುತ್ತದೆ. ನಾವು ಫಲವನ್ನು ಅರಸಿಕೊಂಡು ಹೋಗಬೇಕಾಗಿಲ್ಲ. ಪ್ರತಿಯೊಬ್ಬನಲ್ಲಿ ದೈವೀಶಕ್ತಿ ಪೈಶಾಚಿಕಶಕ್ತಿ ಎರಡೂ ಇವೆ. ದೈವೀಶಕ್ತಿಯನ್ನು ದಿನೇ ದಿನೇ ಬೆಳೆಸಿಕೊಂಡು ಪೈಶಾಚಿಕಶಕ್ತಿಯನ್ನು ದಮನಮಾಡಬೇಕು. ವಿದ್ಯಾಭ್ಯಾಸವೆಂದರೆ ದೈವೀಶಕ್ತಿಯನ್ನು ಪ್ರಕಾಶಪಡಿಸುವುದೇ ಆಗಿದೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿಯ ಅಂತರ್ಗತವಾದ ದೈವಶಕ್ತಿ ಅರಳಿಬರಬೇಕು. ಅದು ತನ್ನ ಸುತ್ತಮುತ್ತಣ ಪ್ರಪಂಚವನ್ನೂ ಪರಪ್ರಪಂಚವನ್ನಾಗಿ ಮಾರ್ಪಡಿಸಬೇಕು. ಶುದ್ಧವಾದ ಅಂತರಂಗ ಜೀವನ, ಶುದ್ಧವಾದ ಬಹಿರ್ಜೀವನಕ್ಕೆ ಸಹಕಾರಿ. ಒಳಗಿನ ರಣರಂಗ. ಹೊರಗಿನ ಶೃಂಗಾರ ಇವು ನಮ್ಮ ಜೀವನವಾದರೆ ಬದುಕು ಕೃತಕವಾಗಿ ಲೋಕಜೀವನಕ್ಕೆ ಮಾರಕವಾಗುತ್ತದೆ.

**ಸಮೃದ್ಧ ಜೀವನಕ್ಕೆ ಯತ್ನಿಸಿ :**

ನಮ್ಮ ಪೂರ್ವಿಕರು ಬಾಳಿದುದು ಇಂದಿರುವ ವೈಜ್ಞಾನಿಕ ಪ್ರಪಂಚದಂಥ ಪ್ರಪಂಚದಲ್ಲಲ್ಲ. ಈಗಿನಂಥ ದೊಡ್ಡ ದೊಡ್ಡ ವಿಶ್ವವಿದ್ಯಾಲಯಗಳು, ಶಾಲೆಕಾಲೇಜುಗಳು, ತಾಂತ್ರಿಕ ವಿದ್ಯಾಸಂಸ್ಥೆಗಳು ಆಗ ಇರಲಿಲ್ಲ. ವಿದ್ಯುಚ್ಛಕ್ತಿಯಿರಲಿಲ್ಲ.

ಹರಳೆಣ್ಣೆ, ಹೊಂಗೆಯೆಣ್ಣೆಗಳ ಮಂದಪ್ರಕಾಶದಲ್ಲಿ ಓದಿದರು. ಕೂಲಿಶಾಲೆಗಳಲ್ಲಿ ಮಠಮಾನ್ಯಗಳಲ್ಲಿ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳೆಂಬ ವಿದ್ಯಾಸಂಸ್ಥೆಗಳಲ್ಲಿ ಆಗ ವಿದ್ಯಾಭ್ಯಾಸ ನಡೆಯುತ್ತಿತ್ತು. ಆದರೂ ಅವರು ಶ್ರದ್ಧೆಯಿಂದ ಓದಿ ಮಹಾವಿದ್ವಾಂಸರೆನಿಸಿ ಅತ್ಯಮೂಲ್ಯ ಗ್ರಂಥನಿರ್ಮಿಸಿದರು. ಕಾವ್ಯ, ನಾಟಕ, ಅಲಂಕಾರ, ಜ್ಯೋತಿಷ್ಯ, ಇತಿಹಾಸ, ಪುರಾಣ, ಶಾಸ್ತ್ರ ಇವೇ ಮೊದಲಾದ ಗ್ರಂಥನಿರ್ಮಾಣ ಮಾಡಿದರು. ವೇದೋಪನಿಷತ್ತುಗಳನ್ನು ಬರೆದರು. ಇಂದು ಅವರು ಬರೆದಮಟ್ಟದ ಗ್ರಂಥ ನಿರ್ಮಾಣವಾಗುತ್ತಿದೆಯೆ ? ಗ್ರಂಥನಿರ್ಮಾಣವಾಗುವುದು ಹೋಗಲಿ, ಅವರು ಬರೆದ ಗ್ರಂಥಗಳ ಅರ್ಥಕೂಡ ಆಗುತ್ತಿಲ್ಲ. ಅವರು ಕಷ್ಟಪಟ್ಟು ಬರೆದ ಗ್ರಂಥಗಳನ್ನು ನೋಡಿದರೆ ಇಂದು ನಮಗೆ ಆಶ್ಚರ್ಯವಾಗುತ್ತಿದೆ. ಅವರ ಸಾಹಸಮಯ ಜೀವನದ ಅರಿವಾಗುತ್ತದೆ. ನಮ್ಮಲ್ಲಿ ಅಂದಂದಿನ ಮಟ್ಟದಲ್ಲಿ ವಿಜ್ಞಾನ ಬೆಳೆದಿದ್ದಿಲ್ಲವೆಂತಲ್ಲ. ಬೆಳೆದವು ಆದರೆ ಒಂದು ಸಾವಿರ ವರ್ಷದಿಂದ ಅವ್ಯಾಹತವಾಗಿ ನಡೆದ ಪರಕೀಯರ ಕ್ರೂರದಬ್ಬಾಳಿಕೆಯಿಂದ ಧರ್ಮವೇ ಪ್ರಧಾನವಾಗಿ ಬಾಳಿದ್ದ ಆ ಸಂಪನ್ನಜನ ಜರ್ಝರಿತವಾಗಿ ನೆಲೆತಪ್ಪಿ ಬದುಕಿದರೆ ಸಾಕೆಂದೂ, ಧರ್ಮ ಉಳಿದರೆ ಸಾಕೆಂದೂ ಬಯಸಿ ಕಾಡುಮೇಡನ್ನು ಅಲೆದರು. ಬರೆದ ಎಷ್ಟೋಗ್ರಂಥಗಳನ್ನು ಕಳೆದುಕೊಂಡರು. ಸಾಹಸಮಯಜೀವನದಿಂದ ದೂರಸರಿಯುವಂತಾಯಿತು. ಶಾಂತವೇ ಸಮೃದ್ಧವೆಂದು ಬಾಳಿದ ಅವರ ಬಾಳು ಇಂದು ನಮಗೆ ಲಭ್ಯವಾಗುವುದು ಶಕ್ಯವಿಲ್ಲ. ಇಂದಿನ ಭಾರತ ಅನೇಕ ಸಮಸ್ಯೆಗಳ ಬೀಡಾಗಿದೆ. ಇಂಥ ಸಮಸ್ಯಾತ್ಮಕ ಭಾರತದಲ್ಲಿ ಇಂದಿನ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಂಡು ಒಗ್ಗಟ್ಟಿನಿಂದ ಬಾಳಿ ಬದುಕಬೇಕಾದ ಮಾರ್ಗವನ್ನು ನಾವು ಕಾಣದಿದ್ದರೆ, ಇನ್ನೂ ವಿನಾಶಗೊಳ್ಳುತ್ತೇವೆ. ಅಂತೆಯೇ ಇಂದು ನಮ್ಮ ಜವಾಬ್ದಾರಿ ಹೆಚ್ಚಿದೆ. ಆ ಜವಾಬ್ದಾರಿಯ ಜೀವನಮಾಡಲು ವಿದ್ಯಾಭ್ಯಾಸ ಕಾಲವಾದ ಈಗ ನೀವೆಲ್ಲ ಸಾಧಿಸುವುದು ಬಹಳ ಇದೆ. ಮುಂದಿನ ಪ್ರಪಂಚ ಇನ್ನೂ ಕಠಿಣವಾಗಬಹುದು. ಅಂದಿನ ಪ್ರಪಂಚದಲ್ಲಿ ಸಮೃದ್ಧವಾದ ಜೀವನದಿಂದ ಕೂಡಿದ ಬಾಳನ್ನು ಬಾಳಲು ನೀವು ಸಿದ್ಧರಾಗಬೇಕಲ್ಲವೆ ? ಹಾಗಿಲ್ಲದಿದ್ದರೆ ಈ ವಿದ್ಯಾಭ್ಯಾಸದಿಂದ ಪ್ರಯೋಜನವೇನು ? ಸರಕಾರ ಸಮಾಜಗಳ ಶ್ರಮವೆಲ್ಲ ವ್ಯರ್ಥವಾಗಿ ಹೋಗುವುದಿಲ್ಲವೆ ? ಅದನ್ನು ಇಂದಿನ ಪೀಳಿಗೆ ಅರ್ಥಮಾಡಿಕೊಳ್ಳಬೇಕು. ಅನಪೇಕ್ಷಿತವಾಗಿ ಬರುವ ಜೀವನದ ಕಷ್ಟನಷ್ಟಗಳನ್ನು ಎದುರಿಸುವುದಕ್ಕೆ ಮನಸ್ಸನ್ನು ಈಗಿನಿಂದಲೇ ಸಿದ್ಧಮಾಡಿಕೊಳ್ಳಬೇಕು. ಧೈರ್ಯ–ಸಾಹಸ–ಶಕ್ತಿ ಸಂಪನ್ನತೆ ಬೆಳಸಿಕೊಳ್ಳಬೇಕು. ಅಂಥದನ್ನೇ 'ಆತ್ಮಶ್ರೀ' ಎಂದು ಕರೆಯಲಾಗುತ್ತಿದೆ. ಪ್ರಾಚೀನ ಭಾರತದ ಋಷಿಪರಂಪರೆಯವರು ಸಂನ್ಯಾಸಿಗಳಾಗಿದ್ದರೂ ಲೌಕಿಕವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಕಾಳಿದಾಸನ ಶಾಕುಂತಲದಲ್ಲಿ ಬರುವ 'ಅರಣ್ಯೌಕಸೋಪಿ ಲೌಕಿಕಜ್ಞಾವಯಂ' (ನಾವು ಅರಣ್ಯವಾಸಿಗಳಾದರೂ ಲೌಕಿಕಜೀವನವನ್ನು ಚೆನ್ನಾಗಿಬಲ್ಲವರು) ಎಂಬ ಮಾತನ್ನು ಕಣ್ವರು ಹೇಳಿದಂತೆ ಆ ನಾಟಕದಲ್ಲಿ ಹೇಳಿಸಿದ್ದಾನೆ. ನಲಂದದಲ್ಲಿ ಅಂದಿನ ನಮ್ಮ ಹಿರಿಯರು ಕಟ್ಟಿದ ವಿಶ್ವವಿದ್ಯಾಲಯದಲ್ಲಿ ಶೀಲಭದ್ರನೆಂಬ ಮಹಾವಿದ್ವಾಂಸ ೧೪ ಶಾಸ್ತ್ರಗಳಲ್ಲಿ ಪೂರ್ಣಪಾಂಡಿತ್ಯ ಪಡೆದಿದ್ದನಂತೆ. ಆ ಹದಿನಾಲ್ಕು ಶಾಸ್ತ್ರಗಳಿಗೆ ಸಂಬಂಧಿಸಿದ ಗ್ರಂಥಗಳೆಲ್ಲ ಸುಟ್ಟುಹೋದರೂ ಭಯಪಡಬೇಕಾಗಿದ್ದಿಲ್ಲವಂತೆ. ಶೀಲಭದ್ರ ಪುನಃ ಅವನ್ನೆಲ್ಲ ಹೇಳಿ ಬರೆಸುವಷ್ಟು ಪ್ರಬಲ ವಿದ್ವಾಂಸನಾಗಿದ್ದನೆಂದು ಹೇಳಲಾಗುತ್ತಿದೆ. ಆ ಹದಿನಾಲ್ಕು ಶಾಸ್ತ್ರಗಳ ಸಂಪತ್ತನ್ನು ಅವನು ಮೈಗೂಡಿಸಿಕೊಂಡಿರುವುದರ ಹಿನ್ನೆಲೆಯಲ್ಲಿ ಅವನ ತಾಳ್ಮೆ, ಕಷ್ಟಸಹಿಷ್ಣುತೆ, ಸತತಾಭ್ಯಾಸ ಪ್ರಯತ್ನ, ಪ್ರತ್ಯುತ್ಪನ್ನಮತಿತ್ವ-ಇವನ್ನು ನಾವು ಊಹಿಸಬೇಕು, ಅಂಥ ಸಾಹಸಮಯ ಜೀವನ ರೂಪಿಸಿಕೊಂಡು ನೀವು ನಿಮ್ಮ ನಿಮ್ಮ ಮಟ್ಟದಲ್ಲಿ ವಿದ್ಯಾಭ್ಯಾಸಮಾಡಿ ಶಕ್ತಿಸಂಪನ್ನರೆನಿಸುವುದು ನಮಗೆ ಅವಶ್ಯಕವಾಗಿದೆ. ಕಾಲದ ಬೆಲೆ ಬಹಳ ; ಹೋದಕಾಲ, ಆಯುಷ್ಯ ನಿಮಗೆ ತಿರುಗಿಬರುವುದಿಲ್ಲ. ಇನ್ನು ಹತ್ತಿಪ್ಪತ್ತು ವರ್ಷಗಳಲ್ಲಿ ನಿಮ್ಮ ಜೀವನಸ್ಥಿತಿಯೇ ಬೇರೆ. ಈ ಕಾಲ. ಈ ಉತ್ಸಾಹ, ಈ ಸನ್ನಿವೇಶ ಆಗ ನಿಮಗೆ ಸಿಗಲಾರದು. ಮುಂದಿನ ಸಾಹಸಮಯ ಜೀವನಕ್ಕೆ ನಾವು ಸಿದ್ಧರಾಗಬೇಕಾದುದು ಈಗಲೇ. ಈ ಬಾಲ್ಯ ಅನೇಕ ಉತ್ತಮ ಅಭ್ಯಾಸದಿಂದ ಕೂಡಿರಬೇಕು. ಶ್ರದ್ಧೆ, ನಿಷ್ಠೆ–ಬಲಿತುಬರಬೇಕು. ಅವು ನಿಮ್ಮ ಈಗಿನ ಅಭ್ಯಾಸವಾದರೆ ಮುಂದೆ ನಿಮ್ಮ ದೇಹ ಎಲ್ಲದಕ್ಕೂ ಒಗ್ಗಿಬರುವುದು; ಇದಿಲ್ಲದೆ ಬೆಳೆದ ದೇಹ ಮುಂದೆ ಒಗ್ಗಿಬರಲಾರದು. ಇದೊಂದು ನಿಮ್ಮ ಈಗಿನ ತಪಸ್ಸು. ನಮ್ಮ ಪೂರ್ವಿಕರ ಸಾಹಸಮಯ ಶ್ರದ್ಧಾಜೀವನ ಇಂದಿನ ವಿಜ್ಞಾನಯುಗದವರಿಗೆ ಹೊಂದಿಕೊಂಡುಬಂದರೆ ನಿಮ್ಮ ಶಕ್ತಿಸಾಮರ್ಥ್ಯಗಳು ನೂರ್ಮಡಿಸಿ ಬಂದು ನೀವು ಪ್ರಪಂಚದಲ್ಲಿ ಮಹಾವಿದ್ವಾಂಸರಾಗಿ ಬಾಳುತ್ತೀರಿ. ರಾಷ್ಟ್ರದ ಶಕ್ತಿ ಸಾಮರ್ಥ್ಯ ಕೀರ್ತಿಗಳನ್ನು ಹೆಚ್ಚಿಸುತ್ತೀರಿ. ನಾವು ನಿಮ್ಮಿಂದ ಇಂಥದನ್ನು ಅಪೇಕ್ಷಿಸುತ್ತಿದ್ದೇವೆ. ನೀವು ವರ್ಧಿಷ್ಣುಗಳಾಗಿ ಬೆಳೆದು ಬಾಳಿ ಬದುಕಬೇಕೆಂಬುದು ನಮ್ಮ ಹಂಬಲಾಗಿದೆ.

**ದೇವ ಮಾನವರಾಗಲು ಯತ್ನಿಸಿ :**

ಮನಸ್ಸಿನ ಬುದ್ಧಿಯ ಸಾಮರ್ಥ್ಯವನ್ನು ಹೆಚ್ಚಿಸುವ, ಆಲೋಚನೆಗೆ ತೊಡಗಿಸುವ ಗ್ರಂಥಗಳನ್ನು ಓದುವ ಚಟ ನಿಮ್ಮದಾಗಿ ಬರಬೇಕು. ಅಶ್ಲೀಲವಾದ, ಮನಸ್ಸಿಗೆ ಅಮಂಗಳವನ್ನುಂಟುಮಾಡುವ ಕಥೆ ಕಾದಂಬರಿಗಳಲ್ಲಿ ನಿಮ್ಮ ಅಮೂಲ್ಯ ವೇಳೆಯನ್ನು ಹಾಳುಮಾಡಬೇಡಿರಿ. ಮನಸ್ಸೆಂಬುದು ಒಂದು ಚಿಂತಾರತ್ನ. ಅದು ನಮಗೆ ಬೇಡಿದ್ದನ್ನು ಕೊಡುತ್ತದೆ. ಅಂಥ ಮನಸ್ಸು ಯಾವಾಗಲೂ ಶುಭ್ರವಾಗಿರುವಂತೆ ನೋಡಬೇಕು. ಅದಕ್ಕೆ ಒಳ್ಳೆಯ ಅಭ್ಯಾಸ ಮಾಡಿಸಬೇಕು. ಪಶುಮಾನವನು–ನರಮಾನವ

ದೇವಮಾನವನಾಗಬೇಕು ; ಅದಕ್ಕೆ ಮನಸ್ಸಂಕಲ್ಪ ಬಹಳ ಮುಖ್ಯ. ಮನಸ್ಸಿನ ಉತ್ತಮವಾದ ಸಂಕಲ್ಪದಿಂದಲೇ ನಮ್ಮ ಉತ್ತಮ ಭವಿಷ್ಯ. ಶಿಸ್ತು, ಸಂಯಮ, ನೀತಿ, ನಿಯಮಪಾಲನೆ ಇವು ಮನಸ್ಸಿನ ಅಭ್ಯಾಸಗಳಾಗಿ ಬಾಲ್ಯದಿಂದ ಬೆಳೆದುಬಂದರೆ, ಜೀವನದ ಉದ್ದಕ್ಕೂ ನಿಮ್ಮನ್ನು ಅವು ದೊಡ್ಡವರನ್ನಾಗಿಯೇ ಮಾಡುತ್ತವೆ. ಮಹಾತ್ಮರಾದವರ ಜೀವನ ಚರಿತ್ರೆಗಳನ್ನು ಓದಿರಿ. ಅವರು ಮಹಾತ್ಮರಾಗಲು ತಮ್ಮ ಜೀವನವನ್ನು ಬಾಲ್ಯದಿಂದ ಹೇಗೆ ರೂಪಿಸಿಕೊಂಡು ಬಂದರೆಂಬುವರ ಅರಿವಾಗುವುದು. ಚಿಕ್ಕಂದಿನಿಂದ ಯಾವನು ಯಾವ ಹೋರಾಟ ಮಾಡುವನೋ ಅದೇ ಅವನ ಜೀವನದುದ್ದದ ಹೋರಾಟವಾಗಿ ನಿಲ್ಲುವುದು. ಅದು ಕೆಟ್ಟದ್ದಾಗಿರಬಹುದು. ಒಳ್ಳೆಯದಾಗಿರಬಹುದು, ಒಳ್ಳೆಯದನ್ನಾರಿಸಿಕೊಳ್ಳಿರಿ. ದೊಡ್ಡವರಾಗಿ ಬಾಳಿ. ಇದಕ್ಕಿಂತ ನಿಮಗೆ ಹೆಚ್ಚಿಗೆ ಹೇಳುವುದೇನಿದೆ.

ನೀವಿಂದು ಸ್ವತಂತ್ರಭಾರತದ ಮಕ್ಕಳು. ನಿಮ್ಮ ತಂದೆ ತಾಯಿ, ತಾತ ಮುತ್ತಾತಂದಿರಿಗೆ ಈ ಭಾಗ್ಯವಿರಲಿಲ್ಲ. ನಿಮ್ಮಿಂದ ಮುಂದೆ ಈ ಭಾಗ್ಯ ಬೆಳೆದುಬರುತ್ತದೆ. ಈ ಸ್ವಾತಂತ್ರ್ಯಕ್ಕೆ ಕಳೆಯೆಂದರೆ. ಮೆರಗೆಂದರೆ ನಿಮ್ಮ ಶಿಸ್ತಿನ ಜೀವನ ; ಶ್ರದ್ಧಾವಂತ ಜೀವನ. ನಿಮ್ಮ ಜೀವನದಲ್ಲಿ ನೀವು ಸಣ್ಣಪುಟ್ಟ ತಪ್ಪು ಮಾಡಬಹುದು ; ಮಾಡಿರಬಹುದು. ಅಜ್ಞಾನದಿಂದ ಹಾಗಾಗುತ್ತದೆ. ನಾನು ಮಾಡಿದ್ದು ತಪ್ಪು ಎಂದು ತಿಳಿದಮೇಲೆ ಅದನ್ನು ಬಿಟ್ಟುಬಿಡಿ. ಇಚ್ಛಾಶಕ್ತಿ ಬೆಳೆಸಿಕೊಳ್ಳಿ. ನಿಮ್ಮ ದೇಹ ಮನಸ್ಸು ಎರಡೂ ಗಟ್ಟಿಯಾಗಲಿ. ದುಶ್ಚಟಗಳ ವಿಕಾರಕ್ಕೆ ಬಲಿಯಾಗಬೇಡಿರಿ. ನೈತಿಕ ಸಂಪತ್ತನ್ನು ಬೆಳೆಸಿಕೊಳ್ಳಿರಿ. ಐಶ್ವರ್ಯ ನಷ್ಟವಾದರೆ ಪುನಃ ಸಂಪಾದಿಸಬಹುದು. ನೀತಿಗೆಟ್ಟರೆ ಸರ್ವನಾಶ. 'ಜಾತಿಗೆಟ್ಟರೂ ನೀತಿಗೆಡಬಾರ'ದೆಂಬ ಗಾದೆಯೊಂದುಂಟು. ಅನವಶ್ಯಕವಾದುದಕ್ಕೆ ಹಂಬಲಪಡುವ ಆಸೆಯನ್ನು ಬಿಡಬೇಕು. ನಿಮಗೆ ಸಕಲಸಂಪತ್ತೂ ಮನೆಯಲ್ಲಿ ಇರಬಹುದು ; ಹಾಗೆಂದು ಕುಳಿತು ತಿನ್ನುವ ಸೋಮಾರಿತನ ಬಿಟ್ಟು ಕರ್ತವ್ಯ ಕರ್ತವ್ಯ ಎಂದು ದಿನದ ಎಲ್ಲ ಕಾಲವನ್ನು ಕರ್ತವ್ಯದಲ್ಲಿ ಕಳೆಯಿರಿ. ಮಾಡುವ ಕರ್ತವ್ಯ ರಚನಾತ್ಮಕವಾಗಿರಲಿ. ಆಗ ನಿಮ್ಮ ಜೀವಿತೋದ್ದೇಶ ಸಾರ್ಥಕವಾಗಿ ನೀವು ದೊಡ್ಡ ವ್ಯಕ್ತಿಗಳಾಗುತ್ತೀರಿ.

## ೫. ಈ ಪ್ರಪಂಚವೊಂದು ಛತ್ರ

[ದಕ್ಷಿಣಕಾಶಿಯೆಂದು ಪ್ರಖ್ಯಾತವಾಗಿರುವ ಶಿವಗಂಗಾ ಕ್ಷೇತ್ರದ ಹೊನ್ನಮ್ಮನ ಗವಿಮಠದ ಚರಿತ್ರಾರ್ಹ ಸಭಾಭವನದಲ್ಲಿ ತಾ. ೧೨-೪-೫೫ ನೆಯ ಮಂಗಳವಾರ ನೆರವೇರಿದ ಶಿವಾನುಭವ ಸಮ್ಮೇಲನದ ಅಧ್ಯಕ್ಷತೆವಹಿಸಿದ್ದ ಶ್ರೀಗಳವರು ಮಾಡಿದ ಭಾಷಣಸಾರ]

ಶಿವಗಂಗಾ ಕ್ಷೇತ್ರದ ಪವಿತ್ರಸ್ಥಳಗಳಲ್ಲೊಂದಾದ ಈ ಹೊನ್ನಮ್ಮನ ಗವಿಮಠದ ಇತಿಹಾಸ ಪ್ರಸಿದ್ಧವಾದ ಈ ಭವ್ಯ ಸಭಾಭವನದಲ್ಲಿ ಶಿವಾನುಭವ ಸಮ್ಮೇಲನವನ್ನು ಕರೆದು ಇಲ್ಲಿನ ಶ್ರೀಗಳವರು ಉಪಕಾರ ಮಾಡಿದ್ದಾರೆ. ಅನೇಕ ರಾಜಮಹಾರಾಜರ ಪಟ್ಟಬಂಧಮಹೋತ್ಸವ ನಡೆದ ಸ್ಥಳವಿದು. ಅನೇಕ ಮಹಾಮಹಾ ಶರಣಶರಣೆಯರು ಶಿವಾನುಭವ ಪ್ರಸಂಗ ಮಾಡಿದ ಸ್ಥಳವಿದು. ಕಲ್ಯಾಣದ ಮಹಾಕ್ರಾಂತಿಯ ನಂತರ ಕೆಲವು ಶರಣರು ಈ ಬೆಟ್ಟಕ್ಕೆ ಬಂದು ಹೊನ್ನಾದೇವಿಯಿಂದ ಕಂಕಣ ಪಡೆದರೆಂದು ವಿಜಯನಗರದ ವಿರೂಪಾಕ್ಷ ಪಂಡಿತ (೧೫೮೫)ನ ಚೆನ್ನಬಸವ ಪುರಾಣದ ಹೇಳಿಕೆ. ಇಲ್ಲಿ ೬೪ ಶೀಲಗಳನ್ನು ಆಚರಿಸಿದ ಹೊನ್ನಾದೇವಿಯೆಂಬ ಶಿವಶರಣೆಯಿದ್ದ ಹಾಗೆ ತಿಳಿದುಬರುವುದು. ನಮ್ಮ ಪ್ರಾಚೀನ ಇತಿಹಾಸ ಪರಂಪರೆಯ ಎಷ್ಟೋ ವಿಷಯಗಳೇ ನಮಗೆ ತಿಳಿಯದ ಹಾಗೆ ಮಧ್ಯಕಾಲೀನ ಭಾರತದ ಪರಕೀಯರ ಆಡಳಿತ ನಮಗೆ ಮಾಡಿರುವುದು ಅತ್ಯಂತ ಶೋಚನೀಯವಾದ ವಿಷಯ. ಆದರೂ ಇಷ್ಟರಮಟ್ಟಿಗೆ ಒಂದು ಸಾವಿರ ವರ್ಷದಿಂದ ಅಂತೂಇಂತೂ ಮೂಲ ಸಂಸ್ಕೃತಿಯನ್ನು ಎಷ್ಟೋ ಪರಕೀಯರ ಆಘಾತಗಳಾದರೂ ರಕ್ಷಿಸಿಕೊಂಡು ಬಂದಿರುವುದಕ್ಕೆ ಸಂತೋಷಿಸಬೇಕಾಗಿದೆ. ಈ ಶಿವಾನುಭವ ಸಮ್ಮೇಲನದಲ್ಲಿ ಗ್ರಾಮಾಂತರ ಪ್ರದೇಶದಿಂದ ಎಷ್ಟೋ ಜನ ಬಂದಿದ್ದೀರಿ. ಧರ್ಮಸಂಸ್ಕೃತಿಯ ಬಗೆಗೆ ನಿಮಗಿರುವ ಆದಾರಾಭಿಮಾನವನ್ನು ಇದು ಸೂಚಿಸುತ್ತದೆ. ಮಾನುಷ ಪ್ರಯೋಗಶಾಲೆಯಲ್ಲಿ ಈ ದೇಹ, ಪ್ರಾಣ. ಮನಸ್ಸು. ಇಂದ್ರಿಯಾದಿ ವ್ಯಾಪಾರ ವಿಷಯದಲ್ಲಿ ಒಂದು ನಿರ್ಣಯಕ್ಕೆ ಬಂದ ಧೀರಪುರುಷ ಬಸವಣ್ಣನವರು 'ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ: ಲಿಂಗಾನುಭಾವದಿಂದ ನಿಮ್ಮ ಕಂಡು ಎನ್ನಮರೆದೆ......' ಎನ್ನುತ್ತಾರೆ. ಅಂಥ ಅನುಭಾವಕ್ಕೆ ಇಂಥ ಪ್ರಸಂಗಗಳನ್ನು ಆಗಾಗ ಕಲ್ಪಿಸಿಕೊಳ್ಳಬೇಕು.

**ಶ್ರವಣ ಮನನ ನಿಧಿಧ್ಯಾಸ :**

ಒಳ್ಳೆಯ ವಿಚಾರಗಳನ್ನು ಪ್ರಾಜ್ಞರ ಬಾಯಿಂದ, ಅನುಭವಿಗಳ ವಾಣಿಯಿಂದ ಕೇಳಬೇಕು, ಎಂಬುದೊಂದು ಉತ್ತಮ ಸಂಸ್ಕಾರವಿಶೇಷವೇ ಆಗಿದೆ. ಶ್ರದ್ಧೆಯಿಂದ ಅಂಥ ವಿಚಾರಗಳನ್ನು ಕೇಳಬೇಕು. ಕೇಳಿ ಅಷ್ಟಕ್ಕೆಬಿಡಬಾರದು. ಹಾಗೆ ಶ್ರದ್ಧೆಯಿಂದ ಕೇಳಿದ್ದನ್ನು ಪದೇಪದೇ ಮನಸ್ಸಿನಲ್ಲಿ ಮಥನಮಾಡಬೇಕು. ಆಗ ನಮ್ಮ ಶ್ರದ್ಧೆ ಗಟ್ಟಿಗೊಳ್ಳುತ್ತ ಬರುತ್ತದೆ.

ಹೀಗೆ ಶ್ರದ್ಧೆ ಗಟ್ಟಿಗೊಳ್ಳುತ್ತ ಬಂದಂತೆ ಕೇಳಿದ ಆ ವಿಚಾರಗಳನ್ನೆಲ್ಲ ಆಚಾರದಲ್ಲಿ ಸಮನ್ವಯಗೊಳಿಸಿಕೊಂಡು ನಡೆಯಲು ಬರುತ್ತದೆ. ಇದನ್ನೇ ಇನ್ನೊಂದು ಬಗೆಯಲ್ಲಿ 'ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ' ಎನ್ನುತ್ತಾರೆ. ಮನಸ್ಸಿನ ಮುಂದೆ ಉದಾತ್ತ ತತ್ತ್ವಗಳು ಪದೇ ಪದೇ ಹರಿಯುತ್ತಿದ್ದರೆ ಅನ್ಯತ್ರ ಮನಸ್ಸು ಹರಿಯುವುದಕ್ಕೆ ಪ್ರತಿಬಂಧಕವಾಗುತ್ತದೆ. ಮನಸ್ಸೊಂದು ಚಿಂತಾ ರತ್ನವೆಂದು ಅನುಭಾವಿಗಳು ಹೇಳುತ್ತಾರೆ. ಅದು ನಾವು ಬಯಸಿದ್ದನ್ನು ಕೊಡುತ್ತದೆ. ನಮ್ಮ ಬಯಕೆಗಳು ದಿನೇ ದಿನೇ ಒಳ್ಳೆಯವೇ ಆಗುತ್ತ ನಡೆದರೆ ಅವೇ ನಮ್ಮ ಭಾವನೆಯಲ್ಲಿ ಗಟ್ಟಿಗೊಂಡು ಸಂಸ್ಕಾರಗಳಾಗುತ್ತವೆ. ನಮ್ಮ ಭಾವವೊಂದು ಬಹು ದೊಡ್ಡ ಕೋಶ. ಅದು ಅನೇಕ ವಿಷಯಗಳನ್ನು ಈ ಪ್ರಪಂಚದಲ್ಲಿ ಕ್ಷಣೇಕ್ಷಣೇ ತುಂಬುತ್ತ ಸಾಗುತ್ತಿರುತ್ತದೆ. ಒಳ್ಳೆಯ ವಿಷಯ ಗಳಿಂದ ಆಭಾವ ಕೋಶ ತುಂಬಿದರೆ ಅಲ್ಲಿ ಬೇರೆ ದುರ್ವಿಷಯಗಳಿಗೆ ಸ್ಥಾನವೇ ಇಲ್ಲವಾಗುವುದು. ಆ ನಮ್ಮ ಭಾವವೇ ಸ್ವಭಾವ ವೆನಿಸುವುದು. ಸ್ವಭಾವವೆಂದರೆ ನಮ್ಮ ನಮ್ಮ ಸಂಸ್ಕಾರಗಳನ್ನು ಲೋಕದಲ್ಲಿ ಪ್ರಕಟಿಸುವಿಕೆಯೇ ಆಗಿದೆ. ಆದ್ದರಿಂದ ಸತ್ಸಹ ವಾಸ, ಸದ್ಗೋಷ್ಠಿ, ಸದ್ವಿಚಾರಮಥನ- ಇವು ನಮ್ಮಲ್ಲಿ ಶಿವಸಂಸ್ಕಾರವನ್ನುಂಟುಮಾಡಲು ಪ್ರಮುಖ ಸಾಧನೆಗಳು. ನಮ್ಮ ಪ್ರಾಚೀನ ಜೀವನ ವಿಧಾನದಲ್ಲಿ ಸತ್ಸಂಸ್ಕಾರಗಳುಂಟಾಗಲು ಅನೇಕ ಸಾಮಾಜಿಕ ಸನ್ನಿವೇಶಗಳು ಮಠಮಾನ್ಯಗಳಲ್ಲಿ ದೇವಾಲಯ ಗಳಲ್ಲಿ ನಡೆಯುತ್ತಿದ್ದವು. ಅಷ್ಟೇ ಏಕೆ ಹೆಂಗಸರು ಕುಟ್ಟುವಾಗ ಬೀಸುವಾಗ ಹಾಡುವ ಹಾಡುಗಳೂ ಕೂಡಾ ತತ್ತ್ವಜ್ಞಾನ ವನ್ನು ಹೇಳುತ್ತಿದ್ದವು. ಅವುಗಳಿಂದ ಉತ್ತಮ ಸಂಸ್ಕಾರ ಸಂಪನ್ನರಾಗಿ ನಮ್ಮವರು ಬಾಳಿದರು. ಬದುಕಿದರು. ಸಂಸ್ಕೃತಿ ಯನ್ನು ಕಾಪಾಡಿಕೊಂಡು ಬಂದರು. ಶ್ರದ್ಧೆ ಅವರ ಬಾಳಿನ ಗುಟ್ಟಾಗಿತ್ತು.

**ಜೀವನದ ಕೃತಕತೆ :**

ಇಂದು ನಮ್ಮ ಜೀವನ ತೀರಾ ಕೃತಕವಾಗುತ್ತಿದೆ. ಆಪ್ತವಾಕ್ಯವನ್ನು ಪ್ರಮಾಣವೆಂದು ನಂಬುವ ನಂಬಿಕೆ ಕಡಿಮೆ ಯಾಗಿದೆ. ಶ್ರದ್ಧಾಭಕ್ತಿಜೀವನ ಮಾಯವಾಗತೊಡಗಿದೆ. ಬುದ್ಧಿಯಿಂದ ಸುಖವನ್ನು ಹುಡುಕ ಹೊರಟಿದ್ದಾರೆ. ನಾಗರಿಕ ತೆಯ ನಾಗಿಣಿಯು ನಮ್ಮನ್ನು ಕಚ್ಚಿ ನಮ್ಮ ತನುಮನ ಭಾವಗಳಲ್ಲಿ ಅಸಂಸ್ಕಾರದ ನಂಜನ್ನುಂಟುಮಾಡುತ್ತಿದೆ. ಆಡಂಬರದ ಜೀವನವೇ ನಮಗೆ ಹಿಡಿಸಿದೆಯಲ್ಲದೆ ಸಹಜ ಸುಂದರ ಜೀವನದಿಂದ ವಂಚಿತರಾಗುತ್ತ ನಡೆದಿದ್ದೇವೆ. ಇಂಥ ನಡುವಳಿಕೆಯಿಂದ ನಾವು ಜೀವಿತದಲ್ಲಿ ಯಾವುದನ್ನು ಮುಖ್ಯವಾಗಿ ಸಾಧಿಸಬೇಕೋ ಅದನ್ನು ಸಾಧಿಸಲಾಗದೆ ಅಶಾಂತಿಯಿಂದ ಕೂಡಿ ತೊಳಲು ತ್ತಿದ್ದೇವೆ. ಮನುಷ್ಯನ ಜೀವಿತ ಒಂದು ಪರಿಮಿತ ಅವಧಿಯ ಚೌಕಟ್ಟಿಗೊಳಗಾದದ್ದು. ವ್ಯರ್ಥವಾದ ಪೊಳ್ಳು ಮಾತಿನಲ್ಲಿ, ವ್ಯರ್ಥ ವಾದ ಕ್ರಿಯೆಯಲ್ಲಿ ಪವಿತ್ರವಾದ ಕಾಲವನ್ನು ಹಾಳುಮಾಡಿಕೊಳ್ಳುತ್ತಿದ್ದೇವೆ. ಬಸವಣ್ಣನವರು—

'ಹೊತ್ತಾರೆಯೆದ್ದು ಅಗ್ಗವಣಿ ಪತ್ರರೆಯ ತಂದು, ಹೊತ್ತು ಹೋಗದ ಮುನ್ನ
ಪೂಜಿಸು ಲಿಂಗವ; ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು ?
ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ
ತೊತ್ತುಗೆಲಸಮಾಡು ಕೂಡಲ ಸಂಗಮ ದೇವನ.'

— ನಮ್ಮ ವ್ಯರ್ಥ ಜೀವನ ಕಂಡು ಹೀಗೆ ಎಚ್ಚರಿಕೆ ಕೊಡುತ್ತಿದ್ದಾರೆ. ಮೃತ್ಯುವು ನಾವು ಹುಟ್ಟುತ್ತಲೇ ನಮ್ಮ ಬೆನ್ನಹಿಂದೆ ಸಾಗಿಬಂದಿದೆ. ಈ ಲೋಕದ ಜೀವನ ನಮಗೆ ಸ್ಥಿರವಲ್ಲ; ಇದು ಪರಮಾತ್ಮನ ಪ್ರಸಾದ ರೂಪವಾದ ಜಗತ್ತು. ದೇಹವೂ ಕೂಡಾ ಆತನನ್ನೊಲಿಸಬಂದ ಪ್ರಸಾದ ಕಾಯ. ಅಸ್ಥಿರವಾದ ನಮ್ಮ ಜೀವಿತ ಈ ಈಶ್ವರ ಪ್ರಪಂಚದಲ್ಲಿ ಕೆಲವು ದಿನ ತನ್ನ ಕ್ರಿಯಾಮುಖವಾದ ಈ ದೇಹ ಧರಿಸಿ ವ್ಯವಹರಿಸಲು ಬಂದಿದೆ. ಶುದ್ಧ ವ್ಯವಹಾರದಿಂದಲೇ ಈ ಈಶ್ವರ ನಿರ್ಮಿತ ಸೃಷ್ಟಿಯ, ಮತ್ತು ಪರಮಾತ್ಮನ ಯಥಾರ್ಥ ಜ್ಞಾನ ನಮಗೆ ಆಗಬೇಕು. ಈ ಯಥಾರ್ಥ ಜ್ಞಾನ ಸಂಪಾದನೆಯೇ ಶಿವಾನುಭಾವವೆನಿಸು ತ್ತದೆ. ಈ ಪ್ರಪಂಚದಲ್ಲಿ ಹಿಂದೆ ಎಷ್ಟೋ ಜನ ಹುಟ್ಟಿದರು. ಇಂದು ಅವರಾರೂ ಇಲ್ಲ. ಆದರೆ ಮಹಾತ್ಮರಾಗಿ ಬಾಳಿದ ವರ ತೇಜೋರೂಪವಾದ ಕೀರ್ತಿ ಉಳಿದಿದೆ: ಮಾತು ಉಳಿದಿದೆ. ಉಳಿದವರ ಗುರುತುಕೂಡಾ ಇಲ್ಲ.

**ಈ ಪ್ರಪಂಚವೊಂದು ಛತ್ರ :**

ಈ ಪ್ರಪಂಚವೊಂದು ಛತ್ರ. ಛತ್ರದಲ್ಲಿ ತಂಗಲು ಅನೇಕ ಜನ ಬರುತ್ತಾರೆ; ತಂಗುತ್ತಾರೆ. ಆಮೇಲೆ ಹೊರಟು ಹೋಗುತ್ತಾರೆ. ಹೊಸಬರು ಬರುತ್ತಾರೆ: ಹಳಬರು ಹೋಗುತ್ತಾರೆ. ಇದನ್ನು ಮನಸ್ಸಿನಲ್ಲಿ ಚೆನ್ನಾಗಿ ಯೋಚಿಸಬೇಕು. ಇದಕ್ಕೊಂದು ಪ್ರಸಂಗವನ್ನು ಹೇಳಬಹುದು.

ಒಂದು ದೊಡ್ಡ ಪಟ್ಟಣ. ಆ ಪಟ್ಟಣದಲ್ಲಿ ಒಬ್ಬ ದೊಡ್ಡ ರಾಜ. ಅವನಿಗೊಂದು ವಿಶಾಲವಾದ ಅರಮನೆ. ಇಂಥ ಪಟ್ಟಣವನ್ನು ಸಾಯಂಕಾಲ ಓರ್ವ ಕಾವಿಶಾಟಿಯ ಸಂನ್ಯಾಸಿ ಪ್ರವೇಶಿಸಿದ. ಅವನ ಕಣ್ಣಿಗೆ ಅರಮನೆ ಕಾಣಿಸಿತು. ಅರ ಮನೆಯ ಮುಂಭಾಗದಲ್ಲಿ ವಿಶಾಲವಾದ ಕಟ್ಟೆಯಿತ್ತು. ಆ ಕಟ್ಟೆಯ ಮೇಲೆ ಸಂನ್ಯಾಸಿ ಹೋಗಿ ಕುಳಿತ. ಆಗ ಅಲ್ಲಿದ್ದ ರಾಜ ಭಟರು.– 'ಅಯ್ಯಾ, ಇದು ಅರಮನೆ. ಇಲ್ಲಿ ನೀನು ಕೂಡ್ರುವಂತಿಲ್ಲ ನಡೆಯಾಚೆ.'

ಸಂನ್ಯಾಸಿ ; ಇದು ಛತ್ರ. ಅರಮನೆ ಅಂದವರಾರು ? ಇಲ್ಲಿ ಕೂಡ್ರಲು ನನಗೆ ಹಕ್ಕಿದೆ.

ಭಟರು : ಏನು ಮಾತನಾಡುವೆ ಎಚ್ಚರಿಕೆ ! ಎಲ್ಲಿ ನಿಂತು ಮಾತನಾಡುವೆ, ಎಂಬುದನ್ನು ವಿಚಾರಿಸು. ಹೆಚ್ಚು ಮಾತನಾಡಿದರೆ ತಕ್ಕ ಶಿಕ್ಷೆಯಾದೀತು !

ಸಂ– ನೀವೂ ಹೆಚ್ಚು ಮಾತನಾಡುವ ಅಧಿಕಾರ ಹೊಂದಿಲ್ಲ. ನೀವಾದರೋ ರಾಜಭಟರು. ನಿಮಗೇನು ಗೊತ್ತು. ಇದು ಛತ್ರವೇ ವಿನಾ ಅರಮನೆಯೆಂದು ನಾನು ತಿಳಿದಿಲ್ಲ.

ಸಂನ್ಯಾಸಿಯ ಮಾತು ಕೇಳಿ ಭಟರಿಗೂ ಹೆದರಿಕೆಯಾಯಿತು. ಕೈ ಹಿಡಿದು ಎಳೆದುಹಾಕೋಣವೆಂದರೆ ಕಾವಿಶಾಟಿ ಧರಿಸಿದ್ದಾನೆ. ಮಾತುಗಳನ್ನು ನೋಡಿದರೆ ದಿಟ್ಟತನದಿಂದ ಕೂಡಿವೆ ಏನು ಮಾಡಬೇಕೆಂಬುದು ತಿಳಿಯದೆ, ರಾಜನಿಗೆ ನಡೆದ ವಿಷಯವನ್ನು ಹೇಳಿ ಕಳಿಸಿದರು. ಹೆದರದಿರುವ ಈ ಸಾಧುವಿನ ಹತ್ತಿರ ರಾಜನೇ ಬರಬೇಕಾಯಿತು. ಬಂದು 'ಏನು, ನೀವು ಇದನ್ನು ಛತ್ರವೆಂದು ಹೇಳುತ್ತ, ಇಲ್ಲಿ ಕೂಡ್ರುವ ಅಧಿಕಾರ ನನಗೆ ಇದೆ ಎಂದು ವಾದಿಸುವಿರಂತಲ್ಲಾ ! ಇದು ನನ್ನ ಅರಮನೆಯಲ್ಲವೆ ? ಛತ್ರವೆಂದು ಹೇಗೆ ಹೇಳುತ್ತಿದ್ದೀರಿ' ಎನ್ನಲು, ಸಂನ್ಯಾಸಿಯು ಗಂಭೀರವದನದಿಂದ ರಾಜನ ಮುಖ ನೋಡಿ 'ಸ್ವಾಮಿ, ಇವರೇನೋ ಭೃತ್ಯರು ; ತಿಳಿಯದವರು. ನೀವು ಮಹಾ ಪ್ರಭುಗಳು ರಾಜ್ಯವಾಳುವವರು ನಿಮಗೆ ತಿಳುವಳಿಕೆ ಇದೆಯೆಂದು ಭಾವಿಸಿದ್ದೆ. ಅದಿರಲಿ, ನೀವು ಬರುವುದಕ್ಕಿಂತ ಮೊದಲು ಇಲ್ಲಿ ಯಾರಿದ್ದರು ?'

ರಾಜ : ನನ್ನ ತಂದೆ.

ಸಂನ್ಯಾಸಿ : ನಿಮ್ಮ ತಂದೆಗಿಂತ ಮೊದಲು ?

ರಾಜ : ನಮ್ಮ ತಾತ.

ಸಂ : ನಿಮ್ಮ ತಾತನಿಗಿಂತಲೂ ಮೊದಲು ?

ರಾ : ನಮ್ಮ ಮುತ್ತಾತಂದಿರು.

ಸಂ : ಸರಿ, ನಿಮ್ಮ ನಂತರ ಇಲ್ಲಿ ವಾಸಿಸುವವರಾರು ?

ರಾ : ನನ್ನ ಮಗ.

ಸಂ : ನಿಮ್ಮ ಮಗನ ನಂತರ ?

ರಾ : ಮೊಮ್ಮಗ.

—ಸರಿ. ನೀವೂ ನನ್ನ ಹಾಗೆಯೇ ಆದಂತಾಯಿತಲ್ಲವೆ. ನೀವಾರೂ ಇಲ್ಲಿ ಸ್ಥಿರವಾಗಿ ಉಳಿಯಲಿಲ್ಲ. ನಿಮಗಿಂತ ಮೊದಲು ನಿಮ್ಮ ತಂದೆ, ಅಜ್ಜ, ಮುತ್ತಜ್ಜ, ಮೊದಲಾದವರು ಇಲ್ಲಿ ಕೆಲವು ದಿನ ಇದ್ದರು, ಮುಂದೆಯೂ ಕೆಲವು ದಿನ ನಿಮ್ಮ ಮಗ, ಮೊಮ್ಮಗ-ಇಲ್ಲಿದ್ದು ಹೋಗುವವರೇ ಆದ ಬಳಿಕ ಛತ್ರಕ್ಕೂ ಇದಕ್ಕೂ ವ್ಯತ್ಯಾಸವೆಲ್ಲಿದೆ ?' ಎಂದ ಸಂನ್ಯಾಸಿಯ ಮಾತು ರಾಜನಿಗೆ ಜ್ಞಾನವನ್ನು ಮೂಡಿಸಿದವು.

**ಮಾನಸಿಕ ಸಂಸ್ಕಾರ ಬೇಕು :**

ಇದರ ಹಾಗೆಯೇ ಈ ಲೋಕದಲ್ಲಿ ನಮ್ಮ ವ್ಯವಹಾರ. ನಾವು ಇಲ್ಲಿಗೆ ಈಗ ಬಂದಿದ್ದೇವೆ. ಈಶ್ವರನಿಂದಲೇ ಬಂದಿದ್ದೇವೆ. ಈಶ್ವರನು ಇಲ್ಲಿ ಇದ್ದೂ ಇಲ್ಲದ ಬೆಡಗಿನಿಂದ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ್ದಾನೆ. ಅವನ ಅನುಭವವಾಗದೆಯೇ ಅವನ ಈ ಬ್ರಹ್ಮಾಂಡದ ಗಾಳಿ ಬೆಳಕು ನೀರು ಅನ್ನಪಾನಾದಿಗಳನ್ನು ಸ್ವೀಕರಿಸಿ ಹೋಗುತ್ತೇವೆ. ದೈತ್ಯಶಕ್ತಿಯಿಂದಲೋ ಇನ್ನಾವುದೋ ಶಕ್ತಿಯಿಂದಲೋ ಅವನ ಐಶ್ವರ್ಯವನ್ನು ಕೂಡು ಹಾಕಿಕೊಂಡು ಅದನ್ನು ಉಪಯೋಗಿಸುವುದಕ್ಕೆ ಅಧಿಕಾರವುಳ್ಳ ಇನ್ನಿತರ ಜೀವಿಗಳಿಗೆ ಅಭಾವವುಂಟುಮಾಡುತ್ತಿದ್ದೇವೆ. ಏನೇನೋ ಆಟ ಆಡುತ್ತೇವೆ. ಕೊನೆಗೊಂದು ದಿನ ಸಾಯುತ್ತೇವೆ. ಆದರೆ ಇದೆಲ್ಲ ಪ್ರಾಣಿ ಸಹಜ ವ್ಯಾಪಾರವಾಯಿತು. ಮನುಷ್ಯನಿಗೆ ಈಶ್ವರ ಕೊಟ್ಟ ಜ್ಞಾನದಿಂದ ಅವನ ಅನುಭವ ಮಾಡಿ ಅವಿರಳ ಸುಖವನ್ನು ಅನುಭವಿಸಿದಂತೆ ಆಗಲಿಲ್ಲ. ಈ ಭವ್ಯ ಜಗತ್ತಿನಲ್ಲಿ ಅರಿವಿನ ಪ್ರಸಾದ ಕಾಯ ಹೊತ್ತು ಬಂದುದಕ್ಕೆ ಇಷ್ಟರಲ್ಲೇ ಜೀವನ ವೃತ್ತ ಮುಗಿದರೆ ಸಾಕೇನು ? ಹೊರಗನ್ನು ನೋಡುವಂತೆ ಒಳಗನ್ನೂ ನೋಡಬೇಡವೆ ? ಈ ಪಿಂಡ ದೇಹವೂ ಒಂದು ಪ್ರಪಂಚವೇ. ಹೊರಗಿನದು ಬ್ರಹ್ಮಾಂಡವೆನಿಸಿದರೆ ಒಳಗಿನದು ಪಿಂಡಾಂಡ. ಇಲ್ಲಿಯೂ ಪ್ರಯೋಗಾಲಯಗಳನ್ನು ಕಟ್ಟಬೇಕು. ಪ್ರಯೋಗ ನಡೆಸಬೇಕು. ಎಚ್ಚರದಲ್ಲಿ ಹರಿದಾಡುತ್ತಿರುವ ಮನದ ವ್ಯಾಪಾರಗಳನ್ನು ಮುಂದಿಟ್ಟುಕೊಂಡು, ಅದು ವಿಪರೀತಕ್ಕೆ ಜಾರಗೊಡದಂತೆ ಮೆಲ್ಲ ಮೆಲ್ಲನೆ ಅದಕ್ಕೆ 'ಶಿವ ಶಿವಾ ಎಂದು ಓದಿಸಿ' ಸಾಂತ್ವನಗೊಳಿಸಿ ಶಿವಸಂಸ್ಕಾರ ವಿಶಿಷ್ಟವುಳ್ಳದ್ದನ್ನಾಗಿ ಮಾಡಿದರೆ ಅಂಥ ಮನ ಉನ್ಮನವೆನಿಸಿಕೊಂಡು ನಾವು ಬಯಸಿದ ಸತ್ಫಲಗಳನ್ನು ಕೊಟ್ಟೀತು. ಅದರ ಸಂಚನ್ನನುಸರಿಸಿ ಬುದ್ಧಿ, ಚಿತ್ತ, ಅಹಂಕಾರಾದಿಗಳು ಸಂಸ್ಕಾರಗೊಂಡಾವು. ದೇಹದ ಬೆಳವಣಿಗೆಗೆ ವ್ಯಾಯಾಮ ಉತ್ತಮ ಆಹಾರ ಗಾಳಿಗಳು ಅವಶ್ಯಕವಾದಂತೆ, ಮನಬುದ್ಧಿಚಿತ್ತಾಹಂಕಾರಗಳ ಬೆಳವಣಿಗೆಗೂ ಉತ್ತಮ ಸಂಸ್ಕಾರವನ್ನುಂಟು ಮಾಡುವ ಸನ್ನಿ

ವೇಶಗಳನ್ನು ಕಲ್ಪಿಸಲೇಬೇಕಾಗುತ್ತದೆ. ಇಲ್ಲಿ ನಡೆಯುವ ಶಿವಾನುಭವ ಸಮ್ಮೇಲನವು ಅಂಥ ಸನ್ನಿವೇಶವಲ್ಲಿ ಒಂದು.

**ಅವಿಮುಕ್ತ ಕ್ಷೇತ್ರ : ಶಿವಗಂಗೆ : ದಕ್ಷಿಣಕಾಶಿ :**

ಇಲ್ಲಿನ ಈ ಭವ್ಯವಾದ ಮಂದಿರಕ್ಕೆ, ಈ ಕ್ಷೇತ್ರಕ್ಕೆ ಭವ್ಯವಾದ ಚರಿತ್ರೆಯಿದೆ. ಈ ಕ್ಷೇತ್ರದಲ್ಲಿ ಮಹಾಮಹಾ ತಪಸ್ವಿಗಳು ವಾಸಿಸಿದ್ದರು. ಅವರು ಇಲ್ಲಿ ವಾಸಿಸಿ ಸುತ್ತಮುತ್ತಣ ಪ್ರಾಂತದಲ್ಲಿ ಸಂಚರಿಸಿ ಜನತೆಯಲ್ಲಿ ಧಾರ್ಮಿಕ ಜಾಗೃತಿ, ನೈತಿಕ ಪೋಷಣೆಗಾರಿಕೆ, ಸಾಂಸ್ಕೃತಿಕ ಸಂವರ್ಧನೆ ಮಾಡಿದ್ದಾರೆ. ಶ್ರೀ ರೇವಣಸಿದ್ಧೇಶ್ವರರು ಅವರ ಮಕ್ಕಳಾದ ರುದ್ರಮುನಿಶಿವಾಚಾರ್ಯರು, ಸಿದ್ಧರಾಮೇಶ್ವರರು, ಮರುಳಸಿದ್ಧೇಶ್ವರರು ಮತ್ತು ಗೋಸಲ ಸಿದ್ಧೇಶ್ವರರೇ ಮೊದಲಾದ ಹರವನಹಳ್ಳಿ ಪೀಠಾಚಾರ್ಯರು ಈ ನೆಲದಲ್ಲಿ ತಮ್ಮ ಲಿಂಗಲೀಲಾವಿನೋದದಲ್ಲಿ ಕಾಲಕಳೆದಿದ್ದಾರೆ. ೬೪ ವೀರಶೈವ ಮಠಗಳು ಶಿವಗಂಗೆ ಒಂದರಲ್ಲೇ ಇದ್ದುವೆಂದು ಹೇಳಲಾಗುತ್ತಿದೆ. ಇಲ್ಲಿಗೆ ಅನತಿ ದೂರದಲ್ಲಿರುವ ಕಲ್ಲೆಯದಲ್ಲಿ ೬೪ ಶೀಲಗಳನ್ನು ಆಚರಿಸುತ್ತಿದ್ದ ಸರ್ವಶೀಲೆ ಚೆನ್ನಮ್ಮನ ಮಠವಿದೆ. ಇವೆಲ್ಲ ಅವಿಮುಕ್ತ ಕ್ಷೇತ್ರಗಳು. ಬಾಲ್ಯದಲ್ಲಿ ಈ ಕ್ಷೇತ್ರದಿಂದ ನಾವೂ ಬಹಳ ಉತ್ತೇಜಿತರಾಗಿ ನೂರಾರು ಸುಂದರ ಭಾವನೆಗಳ ಬೆಳವಣಿಗೆ ಪಡೆದಿದ್ದೇವೆ. ಬಾಲ್ಯದಲ್ಲಿ ಈ ಬೆಟ್ಟವನ್ನು ಕಂಡಾಗಲೆಲ್ಲ ಏನೋ ಮನಸ್ಸಿನಲ್ಲಿ ಅಗಾಧ ಪರಿಣಾಮವುಂಟಾಗುತ್ತಿತ್ತು. ಇಲ್ಲಿನ ಶಿವಾಲಯಗಳು, ಗುಹೆಗಳು, ತೀರ್ಥದ ಮಡುಗಳು ಗುಡ್ಡದ ನೆತ್ತಿಯ ಮೇಲೆ ಪರಶಿವನ ಮಹಿಮೆಯ ಗುರ್ತಿಗಾಗಿ ನಿಲ್ಲಿಸಿರುವ ಅಗ್ನಿಸ್ತಂಭ, ಜಲಸ್ತಂಭಗಳೇ ಮೊದಲಾದ ಈ ಎಲ್ಲ ಸನ್ನಿವೇಶಗಳೂ ನಮಗೆ ಬಹಳಷ್ಟು ಶಿವಸಂಸ್ಕಾರಗಳನ್ನು ಒದಗಿಸಿವೆ : ನೂರಾರು ಸಲ ಈ ಬೆಟ್ಟಪ್ರಾಂತದಲ್ಲಿ ಸಂಚರಿಸಿ ತೃಪ್ತಿಪಟ್ಟಿದ್ದೇವೆ. ಇಂಥ ಅವಿಮುಕ್ತ ಕ್ಷೇತ್ರದಲ್ಲಿ ನಡೆಯುತ್ತಿರುವ ಈ ಶಿವಾನುಭವ ಸಮ್ಮೇಲನವೂ ಔಚಿತ್ಯಭರಿತವಾದದ್ದೇ ಆಗಿದೆ. ಹೊನ್ನಮ್ಮನ ಗವಿಮಠದ ಶ್ರೀಗಳವರು ಇಂಥ ಅನೇಕ ಸನ್ನಿವೇಶಗಳನ್ನು ಗ್ರಾಮಾಂತರ ಪ್ರದೇಶದ ಜನರಿಗೆ ಆಗಾಗ ದೊರಕಿಸಿಕೊಟ್ಟು ಜನಮನದಲ್ಲಿ ಧರ್ಮ ಮತ್ತು ಸಂಸ್ಕೃತಿಯ ನಂದಾದೀಪ ಬೆಳಗುವಂತೆ ಮಾಡಲೆಂದು ಹಾರೈಸುತ್ತೇವೆ.

## ೬. ಶ್ರೀಗಳವರ ಅಧ್ಯಕ್ಷ ಭಾಷಣ

[ಮುಂಬಯಿ ನಗರದಲ್ಲಿ ೧೯೬೪ರ ಜೂನ್ ೨ ಮತ್ತು ೩ನೆಯ ದಿನಾಂಕ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ೧೮ನೆಯ ಅಧಿವೇಶನದಲ್ಲಿ]

ಭರತಖಂಡದ ಅತ್ಯಂತ ಪ್ರಮುಖ ವಾಣಿಜ್ಯ ಕ್ಷೇತ್ರವೆನಿಸಿ ಪ್ರಸಿದ್ಧಿಪಡೆದು ಬಹಳ ಕಾಲದಿಂದಲೂ ಕರ್ನಾಟಕದ ಸಂಪರ್ಕಪಡೆದಿರುವ ಮುಂಬಯಿ ನಗರದಲ್ಲಿ, ಅಖಿಲ ಭಾರತ ವೀರಶೈವ ಮಹಾಸಭೆಯ ೧೮ ನೆಯ ಅಧಿವೇಶನವು ನಡೆಯುವುದು ಔಚಿತ್ಯ ಪೂರ್ಣವಾಗಿದೆ. ಮಹಾಸಭೆಯು ಹುಟ್ಟಿದಾಗಿ ಸುಮಾರು ೬೫ ವರ್ಷಗಳಾದರೂ ಈ ದೀರ್ಘ ಅವಧಿಯಲ್ಲಿ ಈವರೆಗೆ ೧೭ ಅಧಿವೇಶನಗಳಾಗಿರುತ್ತವೆ. ಹಿಂದಿನ ಅಧಿವೇಶನಗಳಲ್ಲಿ ಅನೇಕ ಮಹತ್ವಪೂರ್ಣ ನಿರ್ಣಯಗಳು ಅಂಗೀಕೃತವಾಗಿದ್ದರೂ ಅವುಗಳಲ್ಲಿ ಕೆಲವು ಮಾತ್ರ ಕಾರ್ಯರೂಪಕ್ಕೆ ಬಂದಿವೆಯೇ ಹೊರತು ಬಹಳ ನಿರ್ಣಯಗಳು ಕಾರ್ಯಗತವಾಗಿಲ್ಲ.

ಮಹಾಸಭೆಯು ಪ್ರಾರಂಭವಾದ ಕಾಲದಿಂದೀಚೆಗೆ ಜಗತ್ತಿನಲ್ಲಿ ಅದ್ಭುತವಾದ ಅನಂತವಾದ ಬದಲಾವಣೆಗಳಾಗಿವೆ. ಇದು ವಿಜ್ಞಾನಯುಗ. ವಿಚಾರಯುಗ. 'Russel' ಎನ್ನುವ ವಿಚಾರವಾದಿಯು ಹೇಳಿರುವ ಪ್ರಕಾರವಾಗಿ 'One hundred and fifty years of science have proved more explosive than five thousand years of prescientific culture' ಈ ಮಾತು ಅಕ್ಷರಶಃ ಸತ್ಯ. ತತ್ರಾಪಿ ಸುಮಾರು ಈಚಿನ ಅರ್ಧ ಶತಮಾನದ ಅವಧಿಯಲ್ಲಿ ಈ ಮಾತು ಅರ್ಥವತ್ತಾಗಿದೆ. ಭರತಖಂಡವು ಮಹಾತ್ಮಾ ಗಾಂಧಿಯವರ ಆತ್ಮ ಸಂಪತ್ತಿನಿಂದ ಸ್ಫೂರ್ತಿಪಡೆದು ದೇವದೇವನ ಕೃಪೆಯಿಂದ ಸ್ವಾತಂತ್ರ್ಯವನ್ನು ಪಡೆದು ಪ್ರಜಾಪ್ರಭುತ್ವದ ಆಳ್ವಿಕೆಯಲ್ಲಿ ಸಾಗುತ್ತಿರುವ ಕಾಲವಿದು. ವಿಜ್ಞಾನದ ಪ್ರಭಾವದಿಂದಾಗಿ ವಿಶ್ವವು ಒಕ್ಕೂಟವಾಗಿ ಕಾಲಕೃತ, ದೇಶಕೃತ ಅಂತರಾಯಗಳಿಲ್ಲವೂ ಮಾಯವಾಗಿ, ಎಲ್ಲ ಜನಾಂಗಗಳೂ ಅಕ್ಕಪಕ್ಕದ ಗ್ರಾಮದವರಂತೆ ಬಾಳ್ವಿಕೆ ಮಾಡುತ್ತಿರುವ ಕಾಲವಿದು. ಜಾತಿ ಪಂಥಗಳ ಗೊಂದಲವಿಲ್ಲದೆ ವ್ಯಾವಹಾರಿಕ ರಾಷ್ಟ್ರನಿರ್ಮಾಣವೇ ಭರತಖಂಡದ ಗುರಿಯೆಂದು ಘೋಷಣೆ ಮಾಡಿರುವ ಕಾಲವಿದು. ಇಂತಹ ಸಮಯದಲ್ಲಿ ಯಾವುದೊಂದು ಸಮಾಜವೂ ತನ್ನ ಪ್ರಗತಿಯನ್ನು ಸಾಧಿಸಲು, ಪ್ರಯತ್ನಿಸುವಾಗ ಅಖಂಡ ಭಾರತದ ಹಿತವನ್ನಾಗಲಿ ವಿಶ್ವದ ಹಿತವನ್ನಾಗಲಿ ಮರೆಯುವಂತಿಲ್ಲ. ಅಲ್ಲದೆ ಯಾವುದೊಂದು ಸಮಾಜ, ರಾಷ್ಟ್ರ ಇತರ ಸಮಾಜಗಳಿಂದ ಅಥವಾ ರಾಷ್ಟ್ರಗಳಿಂದ ಸರಿದು ಪ್ರತ್ಯೇಕವಾಗಿ ಬಾಳುವುದೂ ಶಕ್ಯವಲ್ಲ. ಎಲ್ಲಾ ಸಮಾಜಗಳೂ ಪರಸ್ಪರ ಅವಲಂಬಿಗಳು, ಪರಸ್ಪರ ಪೋಷಕಗಳು ಎನ್ನುವ ಅಂಶವನ್ನು ಮರೆಯುವಂತಿಲ್ಲ. ಅಂತೆಯೇ ಇಂದಿನ ಪರಿಸ್ಥಿತಿ ಸನ್ನಿವೇಶಗಳಿಗನುಸರಿಸಿ ವೀರಶೈವ ಮಹಾಸಭೆಯ ಧ್ಯೇಯ ಧೋರಣೆಗಳು, ಕೊಂಚ ಮಟ್ಟಿಗೆ

ಮಾರ್ಪಾಡಾಗಬೇಕೆನ್ನುವ ಅಂಶವನ್ನೂ ರಾಷ್ಟ್ರಘಟಕಕ್ಕೆ ವಿರೋಧವಾಗದ ರೀತಿಯವುಗಳೂ ಆಗಬೇಕೆನ್ನುವುದನ್ನೂ ಮೊದಲು ನಾವು ಗಮನಿಸಬೇಕಾಗಿದೆ.

ವೀರಶೈವ ಧರ್ಮವು ಪ್ರಾಚೀನವಾದ ಶೈವಧರ್ಮದ ಒಂದು ಶಾಖೆ. ಶೈವಧರ್ಮ ಹಾಗೂ ಲಿಂಗಪೂಜೆ ಅತ್ಯಂತ ಪ್ರಾಚೀನವೆನ್ನುವುದು ಮಹೆಂಜೋದಾರೋ–ಹರಪ್ಪಗಳ ಅವಶೇಷಗಳಿಂದ ವ್ಯಕ್ತವಾಗಿರುತ್ತದೆ. ಸಂಶೋಧಕರು ಶೈವ ಧರ್ಮವು ಸುಮಾರು ೫೦೦೦ ವರ್ಷಗಳಿಗಿಂತಲೂ ಹಿಂದಿನದೆಂದೂ, ಭರತಖಂಡದಲ್ಲಿ ಮಾತ್ರವಲ್ಲದೆ ಇನ್ನೂ ಬೇರೆ ಬೇರೆ ರಾಷ್ಟ್ರಗಳಲ್ಲಿಯೂ ಲಿಂಗಪೂಜೆಯನ್ನು ಮಾಡುವ ಪದ್ಧತಿ ಇದ್ದಿತೆಂದೂ ಅಭಿಪ್ರಾಯ ಪಟ್ಟಿರುತ್ತಾರೆ. ದ್ರಾವಿಡಸಂಸ್ಕೃತಿಯ ತಿರುಳು ಶೈವಧರ್ಮ; ವಿಶ್ವಸಂಸ್ಕೃತಿಯ ನಿರೂಪಣೆಯಲ್ಲಿ ದ್ರಾವಿಡ ಸಂಸ್ಕೃತಿಯ ಕೊಡುಗೆ ಅಮೋಘವಾದುದು. ಅದೇ ವಿಶ್ವಪ್ರತೀಕವಾದ ಶಿವಲಿಂಗ ಸ್ಥಾಪನೆ 'ಲಿಂಗೋಪಾಸನೆ' ಲಿಂಗಪೂಜೆ ಈ ಮೊದಲಾದವು ಸಾವಿರಾರು ವರ್ಷಗಳಿಂದಲೂ ಇಲ್ಲಿ ಇದ್ದುವೆಂದು ತಿಳಿದುಬರುತ್ತವೆ. ಈ ಶೈವಧರ್ಮದ ಲಿಂಗಸಿದ್ಧಾಂತದ ಕೊನೆಯ ಹಂತದ ವಿಚಾರಧಾರೆಯೇ ಇಷ್ಟಲಿಂಗದ ಕಲ್ಪನೆ ಮತ್ತು ದೇಹದ ಮೇಲೆ ಸತತವು ಲಿಂಗವನ್ನು ಧರಿಸಬೇಕೆನ್ನುವ ತತ್ತ್ವ. ಇದು ಮಹತ್ವವಾದುದು.

ವೀರಶೈವ ಸಿದ್ಧಾಂತ ಪ್ರತಿಪಾದಕವಾದ ಗ್ರಂಥಗಳು ಸಂಸ್ಕೃತ, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಉಪಲಬ್ಧವಿವೆ. ಶ್ರೀಕರಭಾಷ್ಯವು ಬ್ರಹ್ಮಸೂತ್ರಕ್ಕೆ ವೀರಶೈವ ಸಿದ್ಧಾಂತಾನುಸಾರ ಬರೆದ ಭಾಷ್ಯಗ್ರಂಥವಾಗಿ ವಿದ್ವಜ್ಜನರ ಮನ್ನಣೆಯನ್ನು ಪಡೆದಿದೆ. ಕ್ರಿಯಾಸಾರ, ಲಿಂಗಧಾರಣಚಂದ್ರಿಕಾ, ಸಿದ್ಧಾಂತಶಿಖಾಮಣಿ, ಅನುಭವಸೂತ್ರ ಮೊದಲಾದವು ವೀರಶೈವಧರ್ಮ ಪ್ರತಿಪಾದಕಗಳಾಗಿವೆ. ವೀರಶೈವಸಿದ್ಧಾಂತವು ವೇದಗಳನ್ನು ಮಾನ್ಯ ಮಾಡಿದ್ದರೂ ಆಗಮಗಳಿಗೆ ಹೆಚ್ಚಿನ ಸ್ಥಾನವನ್ನು ಕೊಟ್ಟಿದೆ. ೧೨ ನೆಯ ಶತಮಾನದಲ್ಲಿ ಬಸವಾದಿ ಶರಣರ ಕಾಲದಲ್ಲಿ ವೀರಶೈವಧರ್ಮದ ಬಗ್ಗೆ ಅದ್ಭುತ ವಿಚಾರಮಥನವಾಯಿತು. ಕಾಲಧರ್ಮವನ್ನೂ ಜನಜೀವನವನ್ನೂ ಅನುಸರಿಸಿ ಪರಿಷ್ಕರಿಸಲ್ಪಟ್ಟ ತತ್ತ್ವಗಳ ಆಧಾರದ ಮೇಲೆ ವಿಪುಲ ವ್ಯಾಪಕತೆಯನ್ನು ಹೊಂದಿದ ಈ ಧರ್ಮವು ಜನಾಂಗವನ್ನು ಸುಧಾರಿಸುವ ಮಹತ್ಕಾರ್ಯದಲ್ಲಿ ಸಂಪೂರ್ಣ ಯಶಸ್ವಿಯಾಯಿತು. ವಿಶ್ವಧರ್ಮವಾಗಿ ಮಾನವಜೀವನದ ಮಹಾಸಮಸ್ಯೆಗಳನ್ನು ಪರಿಹರಿಸಬಲ್ಲ ಶಕ್ತಿಯನ್ನೂ ಪಡೆಯಿತು. 'ಕಾಯಕವೇ ಕೈಲಾಸ' ಎಂದು ಸಾರಿ ವ್ಯಕ್ತಿಯ ದುಡಿಮೆಯ ಹಿರಿಮೆಯನ್ನು ಎತ್ತಿ ಹಿಡಿಯಿತು. ಹುಟ್ಟುವಿಕೆಯಿಂದ ಮೇಲು ಕೀಳುಗಳೆಂಬ ಕಲ್ಪನೆಗಳನ್ನು ಕಿತ್ತೊಗೆದು ವೈಯಕ್ತಿಕ ಸಾಧನೆ, ಪರಿಶುದ್ಧಜೀವನಗಳಿಂದಲೇ ಶ್ರೇಷ್ಠತ್ವ ಪ್ರಾಪ್ತಿಯೆಂದು ಸಾರಿತು. ಪ್ರಪಂಚವು ಸತ್ಯವೆಂದು ಹೇಳಿ ಮರ್ತ್ಯಲೋಕವನ್ನು ಮಹಾಮನೆಯನ್ನಾಗಿಯೂ, ಮಾನವಜೀವನವನ್ನು ದೇವಜೀವನವನ್ನಾಗಿಯೂ ಉದಾತ್ತಗೊಳಿಸುವುದೇ ಮಾನವನ ಮಹಾಗುರಿಯೆಂದು ಸಾರಿತು. ದೀನರು ದಲಿತರು ಪಾಮರರು ಉದ್ಧಾರವಾಗುವ ಮಾರ್ಗವನ್ನು ತೋರಿಸಿಕೊಟ್ಟು ನಿರಾಶೆಯ ವಾತಾವರಣವನ್ನು ಪರಿಹರಿಸಿ, ವಿಶ್ವಧರ್ಮವಾಗಿ ಮೆರೆಯಿತು. ಜೈನರ ಅಹಿಂಸೆ, ಮಹಮ್ಮದೀಯರ ಸಮತೆ, ಕ್ರೈಸ್ತರ ಶಾಂತಿ, ಬೌದ್ಧರ ಮಾನವೀಯತೆ ಎಲ್ಲವೂ ಈ ಧರ್ಮದಲ್ಲಡಗಿವೆ. ಈ ದೇಹವು ಕೂಡಲಸಂಗಮನನ್ನೊಲಿಸ ಬಂದಿರುವ ಪ್ರಸಾದ ಕಾಯವೆಂದು ಘೋಷಿಸಿದೆ. ಜೀವನವು ತುಚ್ಛವೆಂದು ಭಾವಿಸದೆ ಮಹಾ ಜೀವನವಾಗಿ ಪರಿವರ್ತನೆಯಾಗುವ ಶಕ್ತಿಯುಳ್ಳದೆಂದು ಭಾವಿಸಿದೆ. Not suppression or repression but sublimation is the principle of Veerasaivism. ಕ್ರಿಯಾಜ್ಞಾನಗಳ ಸಾಮರಸ್ಯವನ್ನು ಎತ್ತಿ ಹಿಡಿದಿದೆ. ಕ್ರಿಯೆಯ ಮೂಲಕ, ಶುದ್ಧಾಚರಣೆಯ ಮೂಲಕ ಜೀವನವು ರಸವತ್ತಾಗಿ ಸಾಗಬೇಕೆಂದು ಹೇಳಿದೆ. ಪ್ರತಿಯೊಂದು ವ್ಯಕ್ತಿಯೂ ಧರ್ಮಸಾಮ್ರಾಜ್ಯವನ್ನು ಪ್ರವೇಶಿಸಿ ಕ್ರಮವಾಗಿ ತನ್ನ ಸಾಧನೆಯನ್ನು ಮುಂದುವರಿಸಿ ದೇವದೇವನ ಸಾನ್ನಿಧ್ಯ ಹೊಂದುವ ಸ್ವಾತಂತ್ರ್ಯವುಳ್ಳವನೆಂದು ಸಾರಿದೆ. ರಚನಾತ್ಮಕ ಕಾರ್ಯಗಳ ಆಚರಣೆಯಿಂದಲೇ ಯಾವುದೊಂದು ರಾಷ್ಟ್ರವು ಜೀವಂತವಾಗಿ ಬೆಳೆದು ಪ್ರಗತಿಯನ್ನು ಸಾಧಿಸಬಲ್ಲುದೆಂಬ ವಿಚಾರಧಾರೆಯನ್ನು ಕಾರ್ಯಗತಮಾಡುವ ಧರ್ಮವಾಗಿ ವೀರಶೈವ ಧರ್ಮವು ರೂಪುಗೊಂಡಿತು. ಮಹಾತ್ಮಾ ಗಾಂಧಿಯವರು ನಮ್ಮ ರಾಷ್ಟ್ರದ ಅಭ್ಯುದಯಕ್ಕಾಗಿ ನಿರ್ದೇಶಿಸಿರುವ ತತ್ತ್ವಗಳೆಲ್ಲವೂ ಬಹಳಮಾಡಿ ೧೨ ನೆಯ ಶತಮಾನದ ವೀರಶೈವಧರ್ಮಾನುಯಾಯಿಗಳಲ್ಲಿ ಆಚರಣೆಯಲ್ಲಿದ್ದುವು. ಅಂತೆಯೇ ವೀರಶೈವಧರ್ಮತತ್ತ್ವಗಳ ಅನುಷ್ಠಾನ, ಅವುಗಳ ವ್ಯಾಪಕತೆ ಇಂದಿನ ಭರತಖಂಡದ ಅಭಿವೃದ್ಧಿಗೆ ಅತ್ಯಂತ ಪೋಷಕಗಳಾಗಿವೆ ಎನ್ನುವ ಅಂಶವನ್ನು ನಾವು ಗಮನಿಸಬೇಕು.

ವಿಶಾಲವೂ ಪವಿತ್ರವೂ ಆದ ತತ್ತ್ವಗಳ ಆಧಾರದ ಮೇಲೆ ಭಾವನಾತ್ಮಕ ವಿಧೇಯಾತ್ಮಕವಾದ ಈ ಧರ್ಮವು ಕೆಲವು ಕಾಲ ಭರತಖಂಡದ ಉನ್ನತಿಗಾಗಿ ಅಮೋಘವಾದ ಕಾಣಿಕೆಯನ್ನು ಸಲ್ಲಿಸಿ ಕೃತಕೃತ್ಯವಾಗಿದ್ದಿತು. ಆದರೆ ಸಮಾಜವು ಇಂದು ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಕ್ಷೀಣಿಸುತ್ತಿದೆ. ಅಖಿಲ ಭಾರತ ವೀರಶೈವ ಸಮಾಜದ ಉತ್ಕರ್ಷ ಸಾಧನೆಗಾಗಿ ಸ್ಥಾಪಿತವಾಗಿರುವ ಅಖಿಲ ಭಾರತ ವೀರಶೈವ ಮಹಾಸಭೆಯು (೧೯೦೪) ಸಮಾಜದ ಸರ್ವತೋಮುಖವಾದ ಬೆಳವಣಿಗೆಗೆ ಲಕ್ಷ್ಯಕೊಡುವುದು ಅಗತ್ಯವಾಗಿದೆ. ಸಮಾಜವು ಬಂಧುರವಾಗಿ, ಹೃಷ್ಟಪುಷ್ಟವಾಗಿ ಬೆಳೆದು ಗುರಿಯನ್ನು ಸಾಧಿಸಬೇಕಾದರೆ ಸಮಾಜ ಘಟಕವಾದ ಪ್ರತಿಯೊಂದು ಅಂಗದಲ್ಲಿಯೂ ಗಣನೀಯ ಬೆಳವಣಿಗೆಯು ಅವಶ್ಯವಾಗಿ ಆಗಲೇಬೇಕು.

ಯಾವುದೊಂದು ಸಮಾಜದ ಉನ್ನತಿಗೆ ಅದರ ಭದ್ರತೆಯು ಬುನಾದಿಯಾಗಿದೆ. ಈ ದೃಷ್ಟಿಯಿಂದ ವಿಚಾರಮಾಡು ವಾಗ ವೀರಶೈವ ಸಮಾಜದಲ್ಲಿ ಬಹಳ ಮಂದಿ ಹೆಚ್ಚಾಗಿ ಹಳ್ಳಿಗಳಲ್ಲಿ ವಾಸಮಾಡತಕ್ಕವರು. ಬಡತನದ ಬವಣೆಗೆ ತುತ್ತಾಗಿ ನಿಕೃಷ್ಟ ಜೀವನವನ್ನು ನಡೆಸುವವರು. ಈ ಸಂದರ್ಭದಲ್ಲಿ ಮಹಾತ್ಮಾಜಿಯವರ ಅಭಿಪ್ರಾಯವನ್ನು ಸ್ಮರಿಸಬೇಕಾಗಿದೆ. ರಾಷ್ಟ್ರವು ಸ್ವಾತಂತ್ರ್ಯವನ್ನು ಗಳಿಸಿದಮೇಲೆ "Every Indian must be provided with at least two square meals per day. Then only Independence can become meaningful" ಕಾಯಕವೇ ಕೈಲಾಸ ಎನ್ನುವ ತತ್ತ್ವವನ್ನು ಘೋಷಿಸಿದ ಶರಣರ ಸಂಪ್ರದಾಯ ಪಾಲನೆಗಾಗಿ ಈ ಸಮಾಜವು ಶ್ರಮಿಸಿದರೆ ಈ ಗುರಿಯನ್ನು ಮುಟ್ಟು ವುದು ಕಷ್ಟವಾಗುವುದಿಲ್ಲ. ಈ ಕಾರ್ಯಸಾಧನೆಗೆ ಅನುಗುಣವಾದ ಸೃಷ್ಟಿ ಮಾಡುವುದು ಸಮಾಜಮುಖಂಡರ ಹಾಗೂ ಅಖಿಲ ಭಾರತ ವೀರಶೈವ ಮಹಾಸಭೆಯ ಕರ್ತವ್ಯವಾಗಿದೆ.

ಪ್ರಕೃತ ಪರಿಸ್ಥಿತಿಯಲ್ಲಿ ಒಕ್ಕಲುತನ, ವಾಣಿಜ್ಯ ಮತ್ತು ಕೈಗಾರಿಕೆ ಇವುಗಳು ಸಂಪತ್ಸಾಧನಗಳಾಗಿವೆ. ಬಹಳ ಮಟ್ಟಿಗೆ ಸಮಾಜಬಂಧುಗಳಲ್ಲಿ ಅತ್ಯಲ್ಪ ಮಂದಿ ಕೈಗಾರಿಕೆಯನ್ನೂ, ಕೆಲವೇ ಮಂದಿ ವ್ಯಾಪಾರವನ್ನೂ. ಬಹಳ ಮಂದಿ ಬೇಸಾಯವನ್ನೂ ಅವಲಂಬಿಸಿರುತ್ತಾರೆ. ಈ ಮೂರು ಕ್ಷೇತ್ರಗಳಲ್ಲಿಯೂ ಗಣನೀಯ ಪ್ರಗತಿಯನ್ನು ಸಾಧಿಸುವುದು ಅವಶ್ಯಕ. ಬೇಸಾಯ ಕ್ಷೇತ್ರ ದಲ್ಲಿ ರೈತಬಾಂಧವರು ಹೆಚ್ಚು ಹೆಚ್ಚಾಗಿ ಉತ್ಪಾದನೆ ಮಾಡಬೇಕು. ಸರ್ವರಿಗೂ ಅನ್ನದಾತನಾದ ರೈತನು ಅಧಿಕ ಆಹಾರವನ್ನು ಬೆಳೆದು ನಮ್ಮ ದೇಶದಲ್ಲಿ ಉಂಟಾಗಿರುವ ಆಹಾರದ ಕೊರತೆಯನ್ನು ನೀಗಿಸಲು ಪ್ರಯತ್ನಪಡಬೇಕು. ವ್ಯಾಪಾರೋದ್ಯಮಿಗಳು ಶ್ರಮವಹಿಸಿ ತಮ್ಮ ವೃತ್ತಿಯನ್ನು ಮುಂದುವರಿಸುತ್ತಾ, ಪ್ರಾಮಾಣಿಕತೆ, ಸತ್ಯಸಂಧತೆ. ವಸ್ತುಗಳ ಗುಣಮಟ್ಟ ರಕ್ಷಣೆ ಇವುಗಳಿಗೆ ಹೆಚ್ಚು ಗಮನ ಕೊಡಬೇಕು. ದೊಡ್ಡ ದೊಡ್ಡ ವರ್ತಕರು ವಿದೇಶ ವ್ಯಾಪಾರದಲ್ಲಿ ಸಾಧಿಸಿರುವ ಪ್ರಗತಿಯು ಅತ್ಯಲ್ಪ. ಸಮಾಜದ ಶ್ರೀಮಂತವರ್ಗದವರು ಸಹಕಾರ ಸಂಘಗಳನ್ನು ಸ್ಥಾಪನೆ ಮಾಡಿಕೊಂಡು ಅವುಗಳ ಮತಿಯಿಂದ ನಮ್ಮ ದೇಶದ ಪರಿಸ್ಥಿತಿಗನುಗುಣ ವಾದ ಭಾರಿ ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸಬೇಕು. ಆಯಾ ಕ್ಷೇತ್ರಗಳಲ್ಲಿ ತಜ್ಞರಾದ ವಿದ್ಯಾವಂತರನ್ನು ಪರದೇಶಗಳಿಗೆ ಕಳುಹಿಸಿ. ಹೆಚ್ಚು ಪ್ರೌಢಿಮೆಯನ್ನು ಪಡೆದುಕೊಂಡು ಬಂದ ಅವರು ಕೈಗಾರಿಕೋದ್ಯಮವನ್ನು ಮುಂದುವರಿಸಲು ಶ್ರಮಿಸುವ ವ್ಯವಸ್ಥೆಯಾಗಬೇಕು. ಈ ಎಲ್ಲಾ ಉದ್ಯಮಗಳೂ ಗಣನೀಯ ಬೆಳವಣಿಗೆಯನ್ನು ಹೊಂದಬೇಕಾದರೆ ಆಯಾಕ್ಷೇತ್ರಗಳಲ್ಲಿ ಕೆಲಸ ಮಾಡತಕ್ಕವರಿಗೆ ಆರ್ಥಿಕ ನೆರವು ಅಗತ್ಯ. ಈ ಉದ್ದೇಶದಿಂದ ಬ್ಯಾಂಕು ಒಂದನ್ನು ಸ್ಥಾಪಿಸಬೇಕೆಂದು ಹಿಂದಿನ ಸಭೆಗಳಲ್ಲಿ ನಿರ್ಣಯವಾಗಿದ್ದರೂ ಅದು ಕಾರ್ಯರೂಪಕ್ಕೆ ಬಂದಿಲ್ಲ. ಅದಷ್ಟು ಶೀಘ್ರವಾಗಿ ಕಾರ್ಯರೂಪಕ್ಕೆ ತರುವ ಪ್ರಯತ್ನವನ್ನು ಅಖಿಲ ಭಾರತ ವೀರಶೈವ ಮಹಾಸಭೆಯು ಮಾಡಬೇಕು.

ಶಿಕ್ಷಣ ಕ್ಷೇತ್ರದಲ್ಲಿ ಅನೇಕ ಮಂದಿ ವೀರಶೈವ ಮಠಾಧೀಶ್ವರರೂ ಶ್ರೀಮಂತರೂ ಸಂಸ್ಥೆಗಳೂ ಈ ದಿಶೆಯಲ್ಲಿ ವಿಪುಲ ಸೇವೆ ಯನ್ನು ಸಲ್ಲಿಸಿರುವುದು ಹರ್ಷದ ಸಂಗತಿ. ಪಟ್ಟಣಗಳಲ್ಲಿ ಗ್ರಾಮಾಂತರಗಳಲ್ಲಿ ಸ್ಥಾಪಿತವಾಗಿರುವ ಸಂಸ್ಥೆಗಳು ವೀರಶೈವರಿಗೆ ಮಾತ್ರ ವಲ್ಲದೆ ಎಲ್ಲಾ ಜನರಿಗೂ ವಿದ್ಯಾದಾನ ಮಾಡುತ್ತಿರುವ ಪವಿತ್ರಸೇವೆಯು ಪ್ರಶಂಸನೀಯವು. ಆದರೂ ಈ ದಿಶೆಯಲ್ಲಿ ತೃಪ್ತಿಕರ ವಾದ ಪ್ರಗತಿಯು ಸಾಧಿತವಾಗಿಲ್ಲ. ಜನಸಂಖ್ಯೆಯು ವಿಪುಲವಾಗಿ ಬೆಳೆಯುತ್ತಿರುವ ಇಂದಿನ ಸನ್ನಿವೇಶದಲ್ಲಿ. ಬಡವರಿಗೆ ಹೆಚ್ಚಿನ ಪ್ರೋತ್ಸಾಹ, ಸಹಾಯ ಸೌಲಭ್ಯಗಳು ಅವಶ್ಯಕ. ಈ ಸಂದರ್ಭದಲ್ಲಿ ಮತ್ತೊಂದು ಮುಖ್ಯ ವಿಷಯವನ್ನು ಸಮಾಜ ಬಂಧುಗಳ ಗಮನಕ್ಕೆ ತರಬೇಕಾಗಿದೆ. ವಿದ್ಯಾ ಅರ್ಹತೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟಿರುವ ಕಾಲವಿದು. ಇದರ ಔಚಿತ್ಯವನ್ನು ಪ್ರಶ್ನಿಸುವುದನಾವಶ್ಯಕ. ವಿದ್ಯಾಕ್ಷೇತ್ರದಲ್ಲಿ ಕೊಂಚ ಮಟ್ಟಿನ ಪ್ರಗತಿಯಾಗಿದ್ದರೂ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಜಯಶೀಲರಾಗಿ ಐ.ಎ.ಎಸ್., ಐ.ಪಿ.ಎಸ್. ಮೊದಲಾದ ಹುದ್ದೆಗಳನ್ನು ಪಡೆಯುತ್ತಿರುವ ಮಂದಿ ನಮ್ಮ ಸಮಾಜದಲ್ಲಿ ಬಹಳ ಕಡಿಮೆ. ಸಮಾಜದಲ್ಲಿ ತೀಕ್ಷ್ಣಬುದ್ಧಿಯ ವಿದ್ಯಾರ್ಥಿಗಳು ಇಲ್ಲವೆಂತಲ್ಲ. ಅವರಿಗೆ ಅನುಕೂಲ ವಾತಾವರಣ, ಪ್ರೋತ್ಸಾಹ ಮತ್ತು ಮಾರ್ಗದರ್ಶನವಿಲ್ಲ. ಅಂತೆಯೇ, ಪಿ.ಯು.ಸಿ. ತರಗತಿಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾಗತಕ್ಕ ವಿದ್ಯಾರ್ಥಿಗಳನ್ನು ಆರಿಸಿಕೊಂಡು, ಅವರಿಗೆ ಆದರ್ಶ ಶಿಕ್ಷಣ ದೊರಕುವ ವ್ಯವಸ್ಥೆಮಾಡಿ, ಬಡಮಕ್ಕಳಿಗೆ ವಿದ್ಯಾರ್ಥಿವೇತನಗಳನ್ನು ಕೊಟ್ಟು ಪ್ರೋತ್ಸಾಹಿಸಿ ಅವರವರ ಪ್ರತಿಭೆ ವಿಕಾಸಗೊಂಡು ತನ್ಮೂಲಕ ಅವರ ವ್ಯಕ್ತಿತ್ವ ಪ್ರಕಾಶನ ಗೊಳ್ಳುವ ಸನ್ನಿವೇಶವನ್ನು ದೊರಕಿಸುವ ಏರ್ಪಾಡುಗಳಾಗಬೇಕು. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಇನ್ನೂ ಹೆಚ್ಚಿನ ಪ್ರೋತ್ಸಾಹ ಅವಶ್ಯಕ. ಪಟ್ಟಣಗಳಲ್ಲಿ ಬಹಳ ಮಂದಿ ಹೆಣ್ಣುಮಕ್ಕಳು ಕ್ರೈಸ್ತರ ಶಿಕ್ಷಣ ಸಂಸ್ಥೆಗಳಲ್ಲಿ (convent) ಅಭ್ಯಾಸ ಮಾಡುತ್ತಿ ರುವುದು ಎಲ್ಲರ ಗಮನಕ್ಕೂ ಬಂದಿರುವ ವಿಷಯ. ನಮ್ಮ ಸಂಸ್ಕೃತಿ ಧರ್ಮಗಳ ಪಾಲನೆಗೆ ಸ್ತಂಭಪ್ರಾಯರಾದ ಹೆಣ್ಣುಮಕ್ಕಳು ಎಳೆಯ ವಯಸ್ಸಿನಲ್ಲಿ ನಮ್ಮ ಸಂಸ್ಕೃತಿಯನ್ನು ವಿನಾಶಮಾಡತಕ್ಕ ಸಂಸ್ಥೆಗಳಲ್ಲಿ ಶಿಕ್ಷಣ ಪಡೆಯುತ್ತಿರುವುದರಿಂದ ಉಂಟಾಗುತ್ತಿ ರುವ ಹಾನಿಯನ್ನು ಯೋಚಿಸಲಸಾಧ್ಯವಾಗಿದೆ. ಅಂತೆಯೇ ಹೆಣ್ಣುಮಕ್ಕಳಿಗೆ ಉತ್ತಮ ಶಿಕ್ಷಣ ಹಾಗೂ ಶಿಸ್ತಿನ ಜೀವನಕ್ಕೆ ಪೋಷಕಗಳಾದ ರೆಸಿಡೆನ್ಸಿಯಲ್ ಶಾಲೆಗಳು ಸ್ಥಾಪಿತವಾಗಬೇಕು.

ವೀರಶೈವ ಸಮಾಜವು ಕ್ಷಾತ್ರತೇಜಸ್ಸುಳ್ಳ ಸಮಾಜ. ಹಿಂದೆ ವೀರಶೈವರು ಅನೇಕ ರಾಜ್ಯಗಳ ರಾಜಮಹಾರಾಜರುಗಳಾಗಿ ಉತ್ತಮ ಆಳ್ವಿಕೆಯನ್ನು ಮಾಡಿ ಪ್ರಜಾಕೋಟಿಗೆ ಸುಖಶಾಂತಿಗಳನ್ನು ದೊರಕಿಸಿಕೊಟ್ಟಿರತಕ್ಕ ವಿಷಯವನ್ನು ಇತಿಹಾಸ ಹೇಳುತ್ತಿದೆ. ಬೀಳಗಿ, ಸ್ವಾದಿ, ಕೆಳದಿ, ಬಿಜ್ಜಾವರ, ಕೊಡಗು, ಪುಂಗನೂರು, ಕಿತ್ತೂರು ಮುಂತಾದ ಸಂಸ್ಥಾನಗಳಲ್ಲಿ ವೀರಶೈವ ಅರಸರು ಆಗಿ ಹೋಗಿದ್ದಾರೆ. ದೇಶಕ್ಕೆ ವಿಪತ್ತು ಸಂಭವಿಸಿದಾಗ ಖಡ್ಗಧಾರಿಗಳಾಗಿ ಹೋರಾಡಿ ಘನತೆ ಗೌರವಗಳನ್ನು ಕಾಪಾಡಿದ ಕಿತ್ತೂರು ಚನ್ನಮ್ಮನಂತಹ ವೀರಮಹಿಳೆಗೆ ಜನ್ಮಕೊಟ್ಟಿರುವುದು ವೀರಶೈವ ಸಮಾಜ. ಹಲವಾರು ಕಾರಣಗಳಿಂದ ವೀರಶೈವ ಸಮಾಜ ಬಾಂಧವರಲ್ಲಿ ರಾಜಕೀಯ ಪ್ರಜ್ಞೆಯು ಕ್ಷೀಣಿಸಿ ಹೋಗುತ್ತಿದೆ. ಇದು ಶುಭಸೂಚಕನೆಯಲ್ಲ. ರಾಜಕೀಯ ಶಕ್ತಿ ತಪಃಪ್ರಭಾವಗಳ ಮೇಳನ ಶ್ರೀ ಬಸವಣ್ಣನವರಿಂದ ಮಹತ್ತರ ಕಾರ್ಯವನ್ನು ಮಾಡಿತೆನ್ನುವುದನ್ನು ಮರೆಯುವಂತಿಲ್ಲ. ಅಂತೆಯೇ ಸಮಾಜದಲ್ಲಿ ರಾಜಕೀಯ ಪ್ರಜ್ಞೆಯು ಬೆಳೆದು ಸಮಾಜ ಜಾಗೃತವಾಗಬೇಕು. ಯಾವುದೊಂದು ಆಕ್ರಮಣ ಮನೋಭಾವವಿಲ್ಲದೆ, ತನ್ನ ನ್ಯಾಯವಾದ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವ ಪ್ರಯತ್ನ ಮಾಡಬೇಕು. ರಾಜಕಾರಣ ಪಟುಗಳು ಹೆಚ್ಚು ಸಂಖ್ಯೆಯಲ್ಲಿ ಬೆಳೆದು ಭಾರತಮಾತೆಯ ಸೇವಾದೀಕ್ಷೆಯನ್ನು ಕೈಗೊಂಡು ತೃಪ್ತಿಕರವಾಗಿ ನಿರ್ವಾಹ ಮಾಡುವ ಮನೋಭಾವವುಳ್ಳವರಾಗಬೇಕು.

ವೀರಶೈವ ಸಮಾಜವು ಶಕ್ತಿಹೀನವಾಗಿರಬೇಕಾದರೆ ಒಳಪಂಗಡಗಳ ಪರಸ್ಪರ ಜಗಳವು ಒಂದು ಪ್ರಬಲವಾದ ಕಾರಣವಾಗಿದೆ. ತತ್ತ್ವವಿರುದ್ಧವಾದ ಈ ಪಂಗಡಗಳೆಲ್ಲವೂ ಮಾಯವಾಗಿ ಈ ಸಮಾಜವು ಒಂದಾಗಬೇಕು. ಹುಟ್ಟಿನಿಕೆಯಿಂದ ಶ್ರೇಷ್ಠತ್ವ ನಿಕೃಷ್ಟತ್ವವನ್ನು ಮಟ್ಟಹಾಕಿದ ಶ್ರೀ ಬಸವಣ್ಣನವರ ತತ್ತ್ವಗಳನ್ನು ಹೇಳುವ ಮಂದಿ ಈ ಕಲ್ಪನೆಯನ್ನು ಮುಂದುವರಿಸಿಕೊಂಡು ಬರುತ್ತಿರುವುದು ದೌರ್ಭಾಗ್ಯ. ಈ ಸಂದರ್ಭದಲ್ಲಿ ಮಹಾಭಾರತದ ಯಕ್ಷಪ್ರಶ್ನೆಯೊಂದನ್ನು ಇಲ್ಲಿ ಸ್ಮರಿಸಬಹುದು.

'ರಾಜನ್ ಕುಲೇನ ವೃತ್ತೇನ ಸ್ವಾಧ್ಯಾಯೇನ ಶ್ರುತೇನ ವಾ!
ಬ್ರಾಹ್ಮಣ್ಯಂ ಕೇನಭವತಿ ಪ್ರಬ್ರೂಹಿ ಮೇ ತತ್ ಸುನಿಶ್ಚಿತಮ್॥'

ಎನ್ನುವ ಯಕ್ಷನ ಪ್ರಶ್ನೆಗೆ ಧರ್ಮಜನು,

'ಶೃಣು ಯಕ್ಷ ಕುಲಂ ತಾತ ನಸ್ವಾಧ್ಯಾಯೇನ ಚ ಶ್ರುತಮ್!
ಕಾರಣಂ ಹಿ ದ್ವಿಜತ್ವೇಚ ವೃತ್ತಮೇವ ನಸಂಶಯಃ॥

ಎಂದು ಉತ್ತರ ಕೊಟ್ಟಿದ್ದಾನೆ. ಬ್ರಾಹ್ಮಣ್ಯಕ್ಕೆ ಶೀಲ ಸಂಪತ್ತು ಮುಖ್ಯವಾದುದೇ ಹೊರತು ಕುಲ ವಿದ್ಯೆಗಳಾವುವೂ ಅಲ್ಲವೆನ್ನುವುದನ್ನು ಘೋಷಣೆ ಮಾಡಿದ್ದಾನೆ. ವೀರಶೈವರಲ್ಲಿ ಪ್ರತಿಯೊಂದು ವ್ಯಕ್ತಿಗೂ ದೀಕ್ಷೆಯಿಂದ ಗುರುವು ತನುತ್ರಯಗತವಾದ ಮಲತ್ರಯವನ್ನು ಪರಿಹರಿಸಿ ಮಾಂಸಪಿಂಡವನ್ನು ಮಂತ್ರಪಿಂಡವನ್ನಾಗಿ ಮಾರ್ಪಾಡು ಮಾಡಿದ ಮೇಲೆ ತಾರತಮ್ಯ ಭಾವವೆಲ್ಲಿಯದು? ಸಿದ್ಧಾಂತ ಗ್ರಂಥಗಳಲ್ಲಿ—

'ಶಿವಸಂಸ್ಕಾರ ಯುಕ್ತೇಷು ಜಾತಿಭೇದೋ ನವಿದ್ಯತೇ।
ಕಾಷ್ಠೇಷು ವಹ್ನಿದಗ್ಧೇಷು ಯಥಾರೂಪಂ ನವಿದ್ಯತೇ॥
ಬ್ರಾಹ್ಮಣಃ ಕ್ಷತ್ರಿಯೋ ವಾಪಿ ವೈಶ್ಯೋ ವಾ ಶೂದ್ರ ಏವವಾ।
ಶಿವಭಕ್ತಿ ಸಮಾಪೇತೇ ಕ್ವ ಜಾತಿಪರಿಕಲ್ಪನಾ॥
ಇಂಧನೇಷ್ವಗ್ನಿದಗ್ಧೇಷು ಕೋವಾ ಭೇದಃ ಪ್ರಕೀರ್ತ್ಯತೇ'।

ಎನ್ನುವ ಪ್ರಮಾಣ ವಾಕ್ಯಗಳು ಜಾತಿವಾದವನ್ನು ಖಂಡಿಸಿರುತ್ತವೆ. ಚಾತುರ್ವರ್ಣ್ಯ ವ್ಯವಸ್ಥೆಗೆ ಒಳಪಟ್ಟಿದ್ದ ವ್ಯಕ್ತಿಗಳ ಪೈಕಿ ಶೂದ್ರ ಮೊದಲ್ಗೊಂಡು ಯಾರೇ ಆಗಲಿ ಲಿಂಗದೀಕ್ಷೆಯನ್ನು ಸ್ವೀಕರಿಸಿದ ಅನಂತರ ವರ್ಗಭೇದವಿಲ್ಲವೆನ್ನುವ ತತ್ತ್ವವು ಮಾನ್ಯವಾಗಿರುವಾಗ, ವೀರಶೈವರಾಗಿಯೇ ಹುಟ್ಟಿ ದೀಕ್ಷಾಸಂಸ್ಕಾರ ಹೊಂದಿ ಸಮಾಜದಲ್ಲಿ ತಮ್ಮ ತಮ್ಮ ವೃತ್ತಿಗಳನ್ನವಲಂಬಿಸಿ ವ್ಯವಹರಿಸುತ್ತಿರುವವರಲ್ಲಿ ಉಚ್ಚನೀಚಭಾವ ಕಲ್ಪನೆಯು ಸಾಧುವಾದುದಲ್ಲ. ಅಣ್ಣ ಬಸವಣ್ಣನವರು 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲರನೊಂದೆ ಎಂಬೆ'ನೆಂಬ ನೈಜ ತತ್ತ್ವವನ್ನು ಬೋಧ ಮಾಡಿರುವರು. ಸಮಾಜದ ಅಳಿವು ಉಳಿವುಗಳೇ ಪ್ರಶ್ನೆಯಾಗಿರುವಾಗ ತತ್ತ್ವರಹಿತ ಒಳಪಂಗಡಗಳಿಗೆ ಸ್ಥಾನವೆಲ್ಲಿಯದು? ಇತ್ತೀಚಿಗೆ ಒಳಪಂಗಡಗಳ ವಿವಾಹ ಪರಸ್ಪರ ಆಗುತ್ತಿವೆ. ಇದನ್ನು ಒಳಪಂಗಡಗಳು ಸ್ವಾಗತಿಸಿ ಪ್ರೋತ್ಸಾಹಿಸಬೇಕು. ಸಮಾಜ ಬಂಧುಗಳು ಸಹೃದಯತೆಯಿಂದ ಯೋಚನೆಮಾಡಿ ಈ ವ್ಯಾಧಿಯನ್ನು ಆದಷ್ಟು ಬೇಗ ಮಿಗಿಲಾದ ಶ್ರದ್ಧೆಯಿಂದ ಪ್ರಯತ್ನಿಸಿ ನಿರ್ಮೂಲ ಮಾಡಿ ಸಮಾಜವು ಸುಸಂಘಟಿತವಾಗಿ ಪ್ರಗತಿಗಾಮಿಯಾಗುವಂತೆ ಮಾಡಬೇಕು.

ಸರ್ವ ವೀರಶೈವರಿಗೂ ಅಗತ್ಯವಾದ ಷಟ್ಸ್ಥಲಸಿದ್ಧಾಂತದಲ್ಲಿ ಈ ಕೃತ್ರಿಮ ಭಿನ್ನತೆಗಳಿಗೆ ಅವಕಾಶವಿಲ್ಲ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಸ್ಥಲಗಳು ಯಾವುದೊಂದು ವರ್ಗದವರ ಆಸ್ತಿಯಲ್ಲ. ಅವರವರ ಸಾಧನಾಬಲ, ಲಿಂಗನಿಷ್ಠಾಗರಿಷ್ಠೆ, ಕಾಯಕಸದ್ಭಾವಗಳಿಂದ ವೀರಶೈವ ಧರ್ಮಾನುಯಾಯಿಗಳು ಬೇರೆ ಬೇರೆ ಹಂತಗಳಲ್ಲಿ ರಿರಬಹುದು. ಒಂದೇ ಮನೆಯಲ್ಲಿ ಬೇರೆ ಬೇರೆಯವರು ಬೇರೆ ಬೇರೆ ಸ್ಥಲಗಳಲ್ಲಿರಬಹುದು. ಗಂಡ ಭಕ್ತಸ್ಥಲದಲ್ಲಿರಬಹುದು. ಹೆಂಡತಿ ಐಕ್ಯಸ್ಥಲದಲ್ಲಿರಬಹುದು, ತಂದೆ ಭಕ್ತನಾಗಿದ್ದು ಮಗ ಶರಣಸ್ಥಲದಲ್ಲಿರಬಹುದು. ಇವು ಜಾತಿವಾಚಕಗಳಲ್ಲ. ಆಧ್ಯಾತ್ಮಿಕ ಸಾಧನೆಯ ಹಂತಗಳು. ಸಾಧನಾ ಬಲದಿಂದ ಅಂಗನಿಗೆ ಅಳವಡುವ ಸ್ಥಿತ್ಯಂತರಗಳು. ಅಂದಮೇಲೆ, ಭಕ್ತ, ಜಂಗಮ, ಮಹೇಶ್ವರ ಮುಂತಾದ ಅಶಾಸ್ತ್ರಿಕ ಕಲ್ಪನೆಗಳನ್ನು ಮಾಡಿಕೊಂಡು ಸಮಾಜವನ್ನು ಛಿನ್ನವಿಚ್ಛಿನ್ನವಾಗಿ ಮಾಡುವುದುಚಿತವಲ್ಲ. ಈ ಅಶಾಸ್ತ್ರೀಯ ವರ್ಗಭೇದ ಎಷ್ಟು ತೀವ್ರವಾಗಿ ಮಾಯವಾದರೂ ಸಮಾಜಕ್ಕೆ ಅಷ್ಟು ಒಳ್ಳೆಯದು. ಒಂದೇ ಅಂಗನು ಮೊದಲು ಭಕ್ತನಾಗಬಹುದು, ಅನಂತರ ಮಹೇಶನಾಗಬಹುದು, ಐಕ್ಯಸ್ಥಲದವರೆಗೂ ಏರಬಹುದು. ಪ್ರತಿಯೊಂದು ವ್ಯಕ್ತಿಗೂ ಷಟ್ಸ್ಥಲ ಸಿದ್ಧಾಂತ ಮುಕ್ತದ್ವಾರವೆನಿಸಿರುತ್ತದೆ. ತತ್ತ್ವವನ್ನು ಕಡೆಗಣಿಸಿ ಕೃತ್ರಿಮ ಭಿನ್ನತೆಗಳನ್ನು ಕಲ್ಪನೆ ಮಾಡಿಕೊಂಡು ಸಮಾಜವನ್ನು ಅವನತಿಗೊಯ್ಯುವುದು ಸಾಧುವಾದುದಲ್ಲ. ಪ್ರಭುದೇವರು ಹುಟ್ಟುತ್ತ ಯಾವ ಮಹೇಶ್ವರ ಮನೆತನದವರು ? ಚೆನ್ನಬಸವಣ್ಣ, ಬಸವಣ್ಣ ಇವರಾವ ಜಂಗಮ ಪಂಗಡದವರು ? ಸಿದ್ಧರಾಮೇಶ್ವರನು ಹುಟ್ಟುವಿಕೆಯಿಂದ ಯಾರು ? ಈ ಎಲ್ಲ ಅಂಶಗಳನ್ನೂ ಸದ್ಭಾವನೆಯಿಂದ ಪರಿಶೀಲನೆಮಾಡಿ ಸಂಕುಚಿತ ಮನೋಭಾವವನ್ನು ಬಿಟ್ಟು ವಿಶಾಲ ಮನೋಭಾವನೆಯಿಂದ ಬಂಧುರ ಸಮಾಜ ನಿರ್ಮಾಣಕ್ಕೆ ಎಲ್ಲರೂ ಸಹಾಯಕರಾಗಬೇಕು. ಈ ಬಗೆಗೆ ವೀರಶೈವ ಮಹಾಸಭೆಯು ಯೋಗ್ಯಮಾರ್ಗದರ್ಶನ ಮಾಡಬೇಕು.

ವೀರಶೈವ ಸಮಾಜರಚನೆ ಒಂದು ವೈಶಿಷ್ಟ್ಯವನ್ನು ಪಡೆದಿದೆ. ಮೊದಲಿನಿಂದಲೂ ಸಮಾಜದ ಯಾವುದೊಂದು ವ್ಯವಸ್ಥೆಯಾಗಲಿ ಮಠಗಳ ನಿಕಟಸಂಬಂಧವನ್ನು ಹೊಂದಿ ಅವುಗಳ ಮಾರ್ಗದರ್ಶನದಲ್ಲಿಯೇ ನಡೆದುಬಂದಿರುತ್ತವೆ. ಗುರು ವಿರಕ್ತವರ್ಗದ ಮಠಗಳು ವಿಪುಲವಾಗಿ ಸಮಾಜ ಜೀವನಕ್ಕೂ ನಾಡಿನ ಚೇತನಕ್ಕೂ ಹೊಂದಿಕೊಂಡು ಸಮಾಜ ಮತ್ತು ನಾಡಿನ ಪ್ರಗತಿ ಸಾಧನೆಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ನಿರ್ವಾಹಮಾಡಿವೆ. ಹಳ್ಳಿಗೊಂದರಂತೆ ಅಥವಾ ಕೆಲವು ಹಳ್ಳಿಗಳಿಗೊಂದರಂತೆ ಸ್ಥಾಪಿತವಾದ ವೀರಶೈವರ ಜನಸೇವಾ ಕೇಂದ್ರಗಳಾದ ಮಠಗಳು, ಮಠಾಧೀಶ್ವರರು ಆ ಹಳ್ಳಿಯ ಅಥವಾ ಹಳ್ಳಿಗಳ ಎಲ್ಲ ಸಮಾಜಗಳ ಮಕ್ಕಳುಗಳಿಗೂ ವಿದ್ಯಾಭ್ಯಾಸ ಮಾಡಿಸುವುದು ಮತ್ತು ಅಲ್ಲಿನ ಜನಗಳಲ್ಲಿ ಅನಿವಾರ್ಯವಾಗಿ ಒದಗಬಹುದಾದ ಸಣ್ಣ ಪುಟ್ಟ ಕಲಹಗಳನ್ನು ಪರಿಹರಿಸಿ ಎಲ್ಲ ಸಮಾಜದವರೂ ಸಂಘಟಿತರಾಗಿ ಬಾಳುವಂತೆ ಮಾಡತಕ್ಕ ಮಧುರ ಬಾಂಧವ್ಯವನ್ನು ಕುದುರಿಸುವ ಪವಿತ್ರವಾದ ಸೇವೆ ಮಠಗಳ ವತಿಯಿಂದ ಸಾಗುತ್ತಿತ್ತು. ಇಂದು ಸರ್ಕಾರದ ವಿದ್ಯಾ ಇಲಾಖೆ ಮತ್ತು ನ್ಯಾಯಾಂಗ ಇಲಾಖೆಗಳು ಮಾಡತಕ್ಕ ಕಾರ್ಯವನ್ನು ಹಿಂದೆ ವೀರಶೈವ ಮಠಗಳು ನಿರ್ವಾಹ ಮಾಡುತ್ತಿದ್ದುವು. ಮಠಾಧೀಶ್ವರರು ವೈರಾಗ್ಯಮೂರ್ತಿಗಳಾಗಿ, ಪೂಜಾನಿಷ್ಠೆಯುಳ್ಳವರಾಗಿ, ಜನಗಳಿಗೆ ಧರ್ಮಬೋಧೆಯನ್ನು ಮಾಡಿ ಅವರನ್ನು ಜಾಗ್ರತರನ್ನಾಗಿ ಮಾಡುವುದಲ್ಲದೆ ಮೇಲೆ ಹೇಳಿದ ಸೇವೆಗಳನ್ನು ತೃಪ್ತಿಕರವಾಗಿ ನಿರ್ವಹಿಸುತ್ತಾ ಜನಜೀವನಕ್ಕೆ ಹೊಂದಿಕೊಂಡು ಸರ್ವರ ಗೌರವ ಮನ್ನಣೆಗಳಿಗೆ ಪಾತ್ರವಾಗಿದ್ದರು.

ಇಂದು ಹಲವಾರು ಮಠಗಳು ಬಹಳ ಕ್ಷೀಣಸ್ಥಿತಿಯನ್ನು ಹೊಂದಿವೆ. ಮಠಗಳ ಕೋಟ್ಯಂತರ ರೂಪಾಯಿ ಬೆಲೆಬಾಳುವ ಆಸ್ತಿಗಳು ಅನ್ಯಾಕ್ರಾಂತವಾಗಿವೆ. ವೈರಾಗ್ಯ ಸಂಪತ್ತಿನ ಪ್ರಭಾವದಿಂದ, ಲಿಂಗಪೂಜಾನಿಷ್ಠೆಯ ತೇಜಸ್ಸಿನಿಂದ ಬೆಳಗುತ್ತಿದ್ದ, ಆಧ್ಯಾತ್ಮ ಸಿರಿಯ ಸಮೃದ್ಧಿಯಿಂದ ಕಂಗೊಳಿಸುತ್ತಿದ್ದ ವ್ಯಕ್ತಿಗಳು ಕಡಿಮೆಯಾಗಿ, ಅನೇಕ ಮಠಗಳು ಯಾವುದೋ ಒಂದು ವಂಶ ಪರಂಪರೆಯ ಮಠಗಳಾಗಿ ಮಾರ್ಪಟ್ಟು, ಬಾಂಧವ್ಯದ ಬಂಧನ, ಆಸ್ತಿಯ ಆಶೆಯಿಂದ ಅನರ್ಹರಾದ ಬಂಧುವರ್ಗದವರನ್ನು ಮಠಾಧಿಕಾರಿಗಳನ್ನಾಗಿ ಮಾಡುತ್ತಾ ಪವಿತ್ರತತ್ತ್ವಗಳಿಗೆ ಧಕ್ಕೆಯುಂಟಾಗಿದೆ. ಈ ಸಂದರ್ಭದಲ್ಲಿ ಮತ್ತೊಂದು ವಿಷಯವನ್ನು ಮಹಾ ಜನಗಳ ಗಮನಕ್ಕೆ ತರುವುದು ಅವಶ್ಯವೆಂದು ಭಾವಿಸುತ್ತೇವೆ. ಯಾರಾವರೊಬ್ಬ ಸ್ವಾಮಿಗಳ ವ್ಯಕ್ತಿತ್ವವನ್ನು ಅಳೆಯುವುದು ಅವರು ಸಂಪಾದನೆ ಮಾಡಿರುವ ಆಸ್ತಿಯಿಂದಲ್ಲ; ಸ್ಥಾಪಿಸಿರುವ ಸಂಸ್ಥೆಗಳಿಂದ ಅಲ್ಲ; ಕಟ್ಟಿಸಿರುವ ಭವನಗಳಿಂದಲ್ಲ. ಪರಂತು ಆ ವ್ಯಕ್ತಿಯು ನಿಷ್ಠಾಪೂರ್ವಕ ಆಧ್ಯಾತ್ಮಿಕ ಸಾಧನೆಯಿಂದ ಎಷ್ಟು ಪ್ರಮಾಣದಲ್ಲಿ ಆತ್ಮೋದ್ಧಾರ ಮಾಡಿಕೊಂಡು, ತನ್ನ ಬಳಿಗೆ ಬರುವ ಭಕ್ತರ ಆತ್ಮೋದ್ಧಾರ ಮಾಡಬಲ್ಲನೋ ಆ ಪ್ರಮಾಣದಿಂದ. ಈ ಸಂಪತ್ತು ಅಧಿಕವಾಗಬೇಕು. ಮಠಾಧೀಶ್ವರರು ಪೂಜಾನಿಷ್ಠೆಯುಳ್ಳವರಾಗಿ ತಮ್ಮ ಪೂಜಾಫಲವನ್ನು ಸಮಾಜಕ್ಕೂ ನಾಡಿಗೂ ಧಾರೆ ಎರೆಯುವಂತಾಗಬೇಕು. ಈ ಸಂದರ್ಭದಲ್ಲಿ ಅಥಣಿ ಶಿವಯೋಗಿಗಳಂತಹ ಪುಣ್ಯಮೂರ್ತಿಗಳನ್ನು ಸ್ಮರಿಸಬಹುದು. ಮಹಾಸಭೆಯ ವತಿಯಿಂದ ಒಂದು ನಿರ್ಣಯವಾಗಿ ಮಠಗಳ ಪರಿಸ್ಥಿತಿಯ ಪೂರ್ಣ ಪರಿಶೀಲನೆ ಮಾಡಿ, ಕೈ ಬಿಟ್ಟು ಹೋಗಿರುವ ಆಸ್ತಿಗಳನ್ನು ಬರಮಾಡಿಕೊಳ್ಳುವ ಪ್ರಯತ್ನ ಮಾಡುವುದಲ್ಲದೆ, ಮಠಗಳಿಗೆ ಯೋಗ್ಯಮೂರ್ತಿಗಳನ್ನು ಆರಿಸುವ ವ್ಯವಸ್ಥೆಯಲ್ಲಿ ನೆರವಾಗಬೇಕು. ಅಲ್ಲದೆ ಅನೇಕ ಮಠಗಳ ಆಸ್ತಿಗಳೆಲ್ಲವು ಕೆಲವು ಸಂಸಾರಿಗಳ ಖಾಸಗಿ ಆಸ್ತಿಗಳಾಗಿವೆ. ಸ್ವಾಮಿಗಳೇ ಇಲ್ಲದಿರುವ ಸಂಸ್ಥೆಗಳ ಆಸ್ತಿಗಳನ್ನು ಬರಮಾಡಿ

ಕೊಂಡು ಯೋಗ್ಯಮೂರ್ತಿಗಳನ್ನು ಆ ಮಠಗಳಿಗೆ ನೇಮಕಮಾಡಿಕೊಳ್ಳುವ ಪ್ರಯತ್ನ ಮಾಡಬೇಕು. ಮಠಗಳ ಜೀರ್ಣೋದ್ಧಾರ, ಸುಧಾರಣೆ, ಯೋಗ್ಯಮೂರ್ತಿಗಳ ನೇಮಕ ಇವು ಸಮಾಜದ ಬಂಧುರತೆಗೆ ಮಹಾಶಕ್ತಿಯನ್ನು ನೀಡತಕ್ಕ ಅಂಶವನ್ನು ಮರೆಯಲಾಗದು.

ವೀರಶೈವರಲ್ಲಿ ಗುರುವರ್ಗದ ಮಠಗಳಲ್ಲಿ ಪಂಚಪೀಠಗಳು ಪ್ರಧಾನಪೀಠಗಳಾಗಿದ್ದು ಅವುಗಳ ಶಾಖಾಮಠಗಳು ಹಲವಾರು ಕಡೆ ಗೋಚರವಾಗುತ್ತಿವೆ. ಅನೇಕ ಕಾರಣಗಳಿಂದ ಎರಡುವರ್ಗದಲ್ಲಿಯೂ ಸಂಪೂರ್ಣ ಸಾಮರಸ್ಯವಿಲ್ಲದೆ ಭಿನ್ನಾಭಿಪ್ರಾಯಗಳುಂಟಾಗಿ ಸಮಾಜ ಸಂಘಟನೆಗೆ ಬಾಧಕವಾಗಿರುವುದು ಹೊಸ ಮಾತೇನಲ್ಲ. ಸಮಾಜಕ್ಕೆ ಗುರು–ಜಂಗಮರಿಬ್ಬರೂ ಬೇಕು. ಗುರುವು ಕ್ರಿಯಾಮೂರ್ತಿ, ಜಂಗಮವು ಜ್ಞಾನಮೂರ್ತಿ; ಕ್ರಿಯಾಜ್ಞಾನ ಸಾಮರಸ್ಯರೂಪ ತತ್ತ್ವವನ್ನು ಪೋಷಣೆ ಮಾಡುತ್ತಿರುವ ಈ ಸಮಾಜಕ್ಕೆ ಇಬ್ಬರೂ ಅವಶ್ಯವಾಗಿರುತ್ತಾರೆ. ಅಂತೆಯೇ ಪಕ್ಷಾಭಿಮಾನಿಗಳಾಗಿ ವ್ಯವಹರಿಸುತ್ತಿರುವ ಸಮಾಜಬಂಧುಗಳು ಪಾಕ್ಷಿಕ ಮನೋಭಾವವನ್ನು ತೊರೆದು, ಗುರು ಜಂಗಮರಿಬ್ಬರನ್ನೂ ಸಮಾನವಾಗಿ ಗೌರವಿಸುವ ಮನೋವೈಶಾಲ್ಯತೆ ಬೆಳೆದರೆ ಬಹಳ ಮಟ್ಟಿಗೆ ಸುಧಾರಣೆಯಾಗಬಹುದು. ಸಮಾನ ಭಾವನೆ ಉದಯವಾಗಿ ಆ ವಿಧವಾದ ಸದ್ವರ್ತನೆ ಆಚರಿತವಾದಾಗ ಗುರುವರ್ಗದವರಾಗಲಿ ವಿರಕ್ತವರ್ಗದವರಾಗಲಿ ಭಿನ್ನಾಭಿಪ್ರಾಯವನ್ನು ಬೆಳೆಸಿಕೊಂಡು ಹೋಗುವುದಿಲ್ಲ. ಗುಂಪುಗುಳಿತನವೇ ಈ ಭಿನ್ನಾಭಿಪ್ರಾಯವನ್ನು ಹೆಚ್ಚು ಮಾಡುತ್ತಿದೆ. ಅಖಿಲ ಭಾರತ ವೀರಶೈವಮಹಾಸಭೆಯ ವತಿಯಿಂದ ವಿದ್ವಾಂಸರ ಮತ್ತು ಅನುಭವಿಗಳ ಸಮಿತಿಯೊಂದು ನಿರ್ಮಾಣವಾಗಿ ಅವರು ನಿರ್ಮತ್ಸರಬುದ್ಧಿಯಿಂದ ಶಾಸ್ತ್ರಾಧಾರಗಳಿಂದ ಒಂದು ತೀರ್ಮಾನಕ್ಕೆ ಬಂದು. ಆ ತೀರ್ಮಾನಕ್ಕೆ ಗುರುವರ್ಗವಿರಕ್ತವರ್ಗದವರು ಬದ್ಧರಾಗುವಂತೆ ಅವರ ಸಮ್ಮತಿಯನ್ನು ಪಡೆಯುವುದು ಉಚಿತವೆನಿಸುತ್ತದೆ.

ಜನನ ಮೊದಲ್ಗೊಂಡು ಸಮಾಧಿ ಪರ್ಯಂತ ನಿತ್ಯ–ನೈಮಿತ್ತಿಕ ಕ್ರಿಯಾಚರಣೆಯನ್ನು ಹೇಗೆ ಮಾಡಬೇಕೆಂಬ ಬಗೆಗೆ ಸಮಗ್ರ ವಿಷಯಗಳನ್ನೊಳಗೊಂಡ ಸುಲಭಶೈಲಿಯ ಸಂಕ್ಷೇಪ ವಿವರಣೆಯ ಧರ್ಮಗ್ರಂಥದ ಅವಶ್ಯಕತೆಯೊಂದು ಈಗ ಹೆಚ್ಚಾಗಿದೆ. ಈ ಗ್ರಂಥದಿಂದ ಭಿನ್ನಭಿನ್ನವಾಗಿ ಮನಬಂದರೀತಿಯಲ್ಲಿ ಎಲ್ಲಾ ದೈನಂದಿನ ಧರ್ಮಾಚರಣೆ ಮಾಡುತ್ತಿರುವ ಸಮಾಜಕ್ಕೊಂದು ತಿಳಿವನ್ನು ಮೂಡಿಸಿ,ಐಕ್ಯತೆಸಾಧಿಸಲು ಅತ್ಯಂತ ಸಹಕಾರಿಯಾಗುತ್ತದೆ. ಜನನ, ಲಿಂಗಧಾರಣ, ನಾಮಕರಣ, ದೀಕ್ಷಾವಿಧಾನ, ವಿವಾಹ ವಿಧಿ, ಸಮಾಧಿ ಕ್ರಿಯೆ, ಲಿಂಗಪೂಜೆ, ಜಂಗಮಪೂಜೆ, ತೀರ್ಥ ಪ್ರಸಾದ ಸೇವನೆ ಇವೇ ಮೊದಲಾದ ವಿಷಯಗಳು ಅದರಲ್ಲಿ ಅಡಕವಾಗುವಂತೆ ಕನ್ನಡ, ಹಿಂದಿ. ಮರಾಠಿ, ತೆಲುಗು, ತಮಿಳು ಭಾಷೆಗಳಲ್ಲಿ ಆ ಗ್ರಂಥವು ಅಚ್ಚಾಗಿ ಸುಂದರ ಚಿತ್ರಗಳಿಂದೊಡಗೂಡಿ ಪ್ರತಿ ವೀರಶೈವರ ಮನೆಗೂ ತಲುಪುವಂತಾಗುವುದಾದರೆ ಅದೊಂದು ಮಹಾಕಾರ್ಯವೇ ಆದೀತು. ಸಂಬಂಧ ಪಟ್ಟ ಅನೇಕಜನ ವಿದ್ವಾಂಸರು ಮಠಾಧಿಪತಿಗಳು ತತ್ಸಂಪಾದಕ ಮಂಡಲಿಯಲ್ಲಿ ಸೇರಿ ಒಂದೆಡೆ ಕಲೆತು, ಏನು ಬರೆಯಬೇಕು ? ಎಷ್ಟು ಬರೆಯಬೇಕು ? ಹೇಗೆ ಬರೆಯಬೇಕು ? ಎಂಬುದನ್ನು ತೀರ್ಮಾನಿಸಿ ಕರಡುಪ್ರತಿಯನ್ನು ಅಚ್ಚುಹಾಕಿಸಿ ಇನ್ನುಳಿದ ನಾಡಿನ ಮೂಲೆಮೂಲೆಯ ವಿದ್ವಾಂಸರ ಅಭಿಪ್ರಾಯಗಳನ್ನೂ ಸೂಕ್ತ ಬದಲಾವಣೆಗಳನ್ನೂ ತರಿಸಿ, ಮೊದಲು ಕನ್ನಡದಲ್ಲಿ ಮುದ್ರಣಮಾಡಿಸಿದರೆ ಅದನ್ನೇ ಉಳಿದ ಭಾಷಗಳಿಗೆ ಪರಿವರ್ತಿಸಿಕೊಳ್ಳಬಹುದು. ಇದು ದೊಡ್ಡ ಕಾರ್ಯವಾದರೂ ಮಹಾಸಭೆ ಮನಸ್ಸು ಮಾಡಿದರೆ ಇದು ಕಷ್ಟವೆನಿಸದು. ಈ ಗ್ರಂಥದ ಪ್ರಯೋಜನವು ಹೆಚ್ಚಾದೀತು. ಭಾವೈಕ್ಯ ಸಾಧಿಸಲು ಮತಾಚರಣೆಯ ನಿಜಜ್ಞಾನದ ಪರಿಚಯಮಾಡಿ ಕೊಡಲು. ಬಹುಮಟ್ಟಿಗೆ ಭಿನ್ನಾಭಿಪ್ರಾಯಗಳ ನಿವಾರಣೆಗೂ ಕೂಡ ಈ ಗ್ರಂಥವು ಸಹಕಾರಿಯಾದೀತು.

ವೀರಶೈವ ಕವಿಗಳು ವೈವಿಧ್ಯಮಯವಾದ ಸಾಹಿತ್ಯ. ಇತಿಹಾಸ. ಚರಿತ್ರೆಗಳ ಗ್ರಂಥಗಳನ್ನು ಹಿಂದೆ ರಚಿಸಿದ್ದಾರೆ; ಈಗಲೂ ರಚಿಸುತ್ತಿದ್ದಾರೆ. ಆದರೆ ಈಗ ಸ್ವತಂತ್ರ ಕೃತಿಕಾರರ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಗ್ರಂಥಕರ್ತರಿಗೆ ಯೋಗ್ಯಪುರಸ್ಕಾರ ಕೊಟ್ಟು. ಯೋಗ್ಯಗ್ರಂಥಗಳು ಹೊರಬರಲು ಮಹಾಸಭೆಯು ಒಂದು ನಿರ್ದಿಷ್ಟ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕು. ಮುಖ್ಯವಾಗಿ ವೀರಶೈವ ಸಾಹಿತ್ಯಚರಿತ್ರೆಯ ಕೊರತೆ ಹೆಚ್ಚಾಗಿದೆ. ದೇವರ ದಾಸಿಮಯ್ಯ ಮೊದಲ್ಗೊಂಡು ಬಸವಪ್ಪಶಾಸ್ತ್ರಿಗಳವರೆಗೆ ಎಲ್ಲಾ ಸಾಹಿತ್ಯಪ್ರಕಾರಗಳ ಚರಿತ್ರೆಯು ಹೊರಬರಬೇಕು. ಇದರಲ್ಲಿ ಸಾಹಿತ್ಯಭಾಗ, ದರ್ಶನ ಭಾಗಗಳೆಂದು ಎರಡು ಭಾಗಗಳಾಗಬೇಕು. ಕನ್ನಡ, ತೆಲುಗು, ತಮಿಳು, ಮರಾಠಿ, ಸಂಸ್ಕೃತ ಭಾಷೆಯಲ್ಲಿರುವ ವೀರಶೈವ ಸಾಹಿತ್ಯಚರಿತ್ರೆಯೂ ಸಮಾವೇಶಗೊಳ್ಳಬೇಕು. ಅನೇಕ ಅಪ್ರಕಟಿತ ಗ್ರಂಥಗಳ ಪ್ರಕಟಣೆಗೆ ಕಾರ್ಯಕ್ರಮ ಹಾಕಿಕೊಳ್ಳಬೇಕು. ಮುಗಿದುಹೋದ ಪ್ರತಿಗಳ ಪರಿಷ್ಕೃತ ಮುದ್ರಣವನ್ನು ಮಾಡಿಸಬೇಕು. ಅಲ್ಲದೆ ಅವುಗಳ ಬೆಲೆಯನ್ನು ತಗ್ಗಿಸಿ ಸಾಮಾನ್ಯರೂ ಕೊಂಡು ಓದುವಂತಿರಬೇಕು. ರಾಜಶೇಖರವಿಳಾಸ, ಗಿರಿಜಾಕಲ್ಯಾಣ, ಶಬರಶಂಕರವಿಳಾಸ, ವೃಷಭೇಂದ್ರವಿಜಯ. ವೀರಶೈವಾಮೃತ ಮಹಾಪುರಾಣ, ಪ್ರಭುಲಿಂಗಲೀಲೆ, ತ್ರಿಷಷ್ಟಿಪುರಾತನರ ಪುರಾಣ ಇವೇ ಮೊದಲಾದ ಉದ್ಗ್ರಂಥಗಳಿಗೆ ಸೂಕ್ತಟೀಕೆ ಟಿಪ್ಪಣಿಗಳನ್ನು ಬರೆಯಿಸಿ, ಅವುಗಳ ಅರ್ಥವು ಎಲ್ಲರಿಗೂ ಆಗುವಂತೆ ಮಾಡುವುದು ಮುಖ್ಯವಾಗಿದೆ. ಇದೂ ಅಲ್ಲದೆ

ಬಸವಣ್ಣ, ಪ್ರಭುದೇವ, ಚೆನ್ನಬಸವಣ್ಣ, ಸಿದ್ಧರಾಮ, ಜೇಡರ ದಾಸಿಮಯ್ಯ, ಅಕ್ಕಮಹಾದೇವಿ ಇವರ ವಚನಗಳಿಗೆ ಸೂಕ್ತ ಟೀಕೆ ಟಿಪ್ಪಣಿಗಳಿಂದೊಡಗೂಡಿದ ಪುಸ್ತಕಗಳು ಪ್ರಕಟಗೊಂಡು ಅವು ಸರ್ವಜನಸಾಮಾನ್ಯರ ಕೈಗೆ ಎಟಕುವಂಥ ಬೆಲೆಗಳಿಂದ ಕೂಡಿರಬೇಕೆಂಬುದನ್ನು ಜ್ಞಾಪಿಸದೆ ಇರಲಾರೆವು. ಇವೆಲ್ಲಾ ಕಾರ್ಯಗಳಿಗಾಗಿ ಮಹಾಸಭೆಯ ವತಿಯಿಂದ ಒಂದು ಮುದ್ರಣಾಲಯವನ್ನು ಬೆಂಗಳೂರು ಅಥವಾ ಧಾರವಾಡ ಕೇಂದ್ರಗಳಲ್ಲಿ ತೆರೆದು ತಕ್ಕ ಸಿಬ್ಬಂದಿ ವರ್ಗ ಮತ್ತು ವಿದ್ವಾಂಸವರ್ಗವನ್ನು ನಿಯಮಿಸುವ ಕೆಲಸವನ್ನು ಸಮಾಜಬಾಂಧವರು ಯೋಚಿಸಿ ಯೋಜನೆ ಹಾಕಬೇಕು. ನಂತರ ಕಾರ್ಯಪ್ರವೃತ್ತರಾಗಬೇಕು. ಇಲ್ಲಿ ಒಂದೊಂದು ವಿಭಾಗಕ್ಕೂ ಒಂದೊಂದು ಕಮಿಟಿಯನ್ನು ರಚಿಸಿ, ಅವರಿಂದ ವರದಿ ತರಿಸಿಕೊಂಡು ಸಮಾಜಬಾಂಧವರ ಅವಗಾಹನೆಗೆ ಈ ವಿಷಯವನ್ನು ತಂದು, ಮುಂದುವರಿಯುವುದು ಒಳ್ಳೆಯದು. ವೀರಶೈವದರ್ಶನಗ್ರಂಥಗಳೆನಿಸಿದ ಸಿದ್ಧಾಂತಶಿಖಾಮಣಿ, ವಿಶೇಷಾರ್ಥಪ್ರಕಾಶಿಕೆ, ಶಿವಾನುಭವಸೂತ್ರ, ಲಿಂಗಧಾರಣಚಂದ್ರಿಕೆ, ವೀರಶೈವಾನಂದಚಂದ್ರಿಕೆ, ಕ್ರಿಯಾಸಾರ ಇವೇ ಮೊದಲಾದ ಗ್ರಂಥಗಳು ಪುನರ್ಮುದ್ರಣಗೊಳ್ಳಬೇಕು. ಅಷ್ಟೇ ಅಲ್ಲ, ಅವುಗಳ ಕನ್ನಡ ಅನುವಾದವೂ ಆಗಿ, ಜನಸಾಮಾನ್ಯರ ಮನೆ ಮನೆಗಳನ್ನು ತಲುಪುವಂತಾಗಬೇಕು.

ಸರ್ಕಾರದವರು ಜಾತಿಯ ಆಧಾರದ ಮೇಲೆ ಜನಮತಗಣನೆಯನ್ನು ಮಾಡುವ ಪದ್ಧತಿ ರದ್ದುಮಾಡಿರುವುದರಿಂದ, ಮಹಾಸಭೆಯ ವತಿಯಿಂದಲೇ ಈ ಕಾರ್ಯವನ್ನು ಮಾಡಬೇಕಾಗಿರುತ್ತದೆ. ಈ ಬಗೆಗೆ ಸಭೆಯಲ್ಲಿ ಒಂದು ನಿರ್ಣಯವಾಗಿದ್ದರೂ ಕಾರ್ಯರೂಪಕ್ಕೆ ಬರಲಿಲ್ಲ. ಶೀಘ್ರವಾಗಿ ವೀರಶೈವರು ಜನಮತ ಗಣನೆಗೆ ಕಾರ್ಯೋನ್ಮುಖರಾಗಬೇಕಾಗಿದೆ.

ಸರ್ವತ್ರ ಉಂಟಾಗಿರುವ ಧರ್ಮಾಭಿಮಾನಶೂನ್ಯತೆಯ ಪ್ರಭಾವಕ್ಕೆ ಒಳಗಾಗಿ ವೀರಶೈವಸಮಾಜದಲ್ಲಿಯೂ, ಧರ್ಮಾಭಿಮಾನ ಕ್ಷೀಣಿಸುತ್ತಿರುವುದು ಈಗ ಗೋಚರವಾಗುತ್ತಿದೆ. ಪ್ರತಿಯೊಬ್ಬ ವೀರಶೈವನೂ ನಿರಂತರ ಇಷ್ಟಲಿಂಗಧಾರಿಯಾಗಿದ್ದು ಬೆಳಿಗ್ಗೆ ಮತ್ತು ಸಂಜೆ ಈ ಎರಡು ವೇಳೆಯಾದರೂ ಲಿಂಗಪೂಜೆಯನ್ನು ಮಾಡಿಯೇ ತೀರಬೇಕೆಂಬ ನಿಯಮವಿದ್ದರೂ ಅದನ್ನು ಪಾಲಿಸುವ ಮಂದಿ ಬಹಳ ಕಡಿಮೆಯಾಗಿದ್ದಾರೆ. ಲಿಂಗಪೂಜೆಯಂತಿರಲಿ ಇಷ್ಟಲಿಂಗವನ್ನು ಸದಾ ಧರಿಸತಕ್ಕವರೂ ಕಡಿಮೆಯಾಗಿದ್ದಾರೆ. ತರುಣ ಜನಾಂಗವು ಈ ಕಡೆ ಔದಾಸೀನ್ಯವನ್ನು ತೋರಿಸುತ್ತಿದೆ. ಇಷ್ಟಪ್ರಾಪಕ—ಅನಿಷ್ಟಪರಿಹಾರಕವಾದ ಇಷ್ಟಲಿಂಗ ಪೂಜೆಯಲ್ಲಿ ನಿಷ್ಠೆಯು ಬೆಳೆಯುವುದು ಸಮಾಜದ ಮೇಲ್ಮೆಗೆ ಕಾರಣವು. ಪ್ರಾಯೇಣ ನಿರಭಿಮಾನದ ವಾತಾವರಣ ಉಂಟಾಗಲು ಮಠಗಳ ಕರ್ತವ್ಯ ಲೋಪವೇ ಕಾರಣವೆಂದು ಹೇಳಬೇಕಾಗಿದೆ.

ಸಮಾಜದಲ್ಲಿ ಕೆಲವು ಮಂದಿ ದೊಡ್ಡಮನುಷ್ಯರು ಲಿಂಗವನ್ನು ತ್ಯಜಿಸಿರುವುದಲ್ಲದೆ ಅವರು ಸಭೆಗಳಲ್ಲಿ ಅದನ್ನು ಎತ್ತಿ ಸಾರಿ ಹೇಳುತ್ತಿದ್ದಾರೆ. ಇಂದು ಹಲವು ಆಧುನಿಕರಿಗೆ ಇದು ಆದರ್ಶವಾಗಿದೆ. ಗ್ರಾಮಾಂತರಗಳಲ್ಲಿ ವೀರಶೈವ ಸಮಾಜ ಬಂಧುಗಳು ಹೆಸರಿಗೆ ಮಾತ್ರ ವೀರಶೈವರಾಗಿ ವ್ಯವಹರಿಸುತ್ತಿರುವರೇ ಹೊರತು, ಧರ್ಮದ ಆಚರಣೆಯಾಗಲಿ, ತತ್ತ್ವಗಳ ಪರಿಚಯವಾಗಲಿ ಅವರಿಗೆ ಕಿಂಚಿತ್ತೂ ಇರುವುದಿಲ್ಲ. ಕ್ರೈಸ್ತ ಧರ್ಮೀಯರಲ್ಲಿ ಪ್ರಾಯಃ ಪ್ರತಿಯೊಂದು ವ್ಯಕ್ತಿಗೂ ತಮ್ಮ ಧರ್ಮದ ಸ್ಥೂಲ ಪರಿಚಯ ಉಂಟು. ಮುಸ್ಲಿಂ ಧರ್ಮದವರಲ್ಲಿ ಪ್ರತಿಯೊಂದು ವ್ಯಕ್ತಿಗೂ ತಮ್ಮ ಧರ್ಮದ ಪರಿಚಯ ಉಂಟು. ನಮ್ಮ ಧರ್ಮದವರಿಗೂ ಮತದ ಮೂಲತತ್ತ್ವಗಳ ಪರಿಚಯವನ್ನು ಮಾಡಿಸಿಕೊಡುವುದು ಅವಶ್ಯವೆನಿಸುತ್ತದೆ. ಇದು ಮಠಾಧಿಪತಿಗಳ ಆದ್ಯ ಕರ್ತವ್ಯವಾಗಿದೆ.

ಕರ್ನಾಟಕವೇ ಅಲ್ಲದೆ, ಆಂಧ್ರ, ದ್ರಾವಿಡ, ಮಹಾರಾಷ್ಟ್ರ ಈ ಮೊದಲಾದ ಪ್ರಾಂತಗಳಲ್ಲಿ ಸಂಚಾರಮಾಡಿ ಅವರಿಗೆ ಧರ್ಮದ ಬಗ್ಗೆ ಸಾಕಷ್ಟು ತಿಳಿವಳಿಕೆಯನ್ನುಂಟುಮಾಡಿ ಸುಧಾರಿಸಬೇಕಾದ ಆಗತ್ಯ ಹೆಚ್ಚಾಗಿದೆ. ಈ ಪ್ರಶ್ನೆಯನ್ನು ಮಹಾಸಭೆಯು ತೀವ್ರವಾಗಿ ಆಲೋಚನೆಮಾಡಿ, ಕಾರ್ಯಸಾಧನೆಗಾಗಿ ಕೆಲವು ಮಂದಿ ಯೋಗ್ಯರಾದ, ವಿದ್ಯಾವಂತರಾದ, ಸೇವಾ ಮನೋಭಾವನೆಯುಳ್ಳ ಪ್ರಚಾರಕರನ್ನು ನೇಮಕ ಮಾಡಬೇಕಾಗಿದೆ. ಸ್ಥಳೀಯ ಮಠಗಳಿದ್ದರೆ ಅವರೇ ಈ ಕಾರ್ಯವನ್ನು ಕೈಗೊಂಡರೆ ಸಂತೋಷ. ಇಲ್ಲವೆ ಬೇರೆ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ಇದಕ್ಕಾಗಿ ಒಂದು ನಿಧಿಯನ್ನು ಶೇಖರಿಸಬೇಕಾಗುತ್ತದೆ. ವೀರಶೈವ ವಿದ್ಯಾರ್ಥಿನಿಲಯಗಳಲ್ಲಿ ವಾರಕ್ಕೊಮ್ಮೆಯಾದರೂ ವೀರಶೈವ ಧರ್ಮದ ಬಗ್ಗೆ ವಿದ್ಯಾರ್ಥಿಗಳಿಗೆ ಬೋಧನೆ ಮಾಡುವ ವ್ಯವಸ್ಥೆಯಾಗಬೇಕು. ಚಿಕ್ಕವಯಸ್ಸಿನಲ್ಲಿ ಧರ್ಮಶ್ರದ್ಧೆಯು ಒಡಮೂಡಿದರೆ, ತರುಣರಲ್ಲಿ ಇಂದು ಕಾಣುತ್ತಿರುವ ಅಧರ್ಮಪ್ರವೃತ್ತಿಯು ಸಮಾಜದಲ್ಲಿ ಕಡಿಮೆಯಾಗುತ್ತಾ ಹೋಗಬಹುದು.

ಒಂದು ಮುಖ್ಯ ವಿಷಯದ ಕಡೆಗೆ ಸಭೆಯ ಗಮನವನ್ನು ಸೆಳೆದು ವಿರಮಿಸುತ್ತೇವೆ. ಮಹಾಸಭೆಯ ೧೭ ಅಧಿವೇಶನಗಳು ಮುಗಿದಿವೆ. ಇದು ೧೮ ನೆಯ ಅಧಿವೇಶನ. ಸಭೆಗಳಲ್ಲಿ ಭಾಗವಹಿಸಲು ಬರತಕ್ಕ ಸಮಾಜ ಬಂಧುಗಳ ಸ್ವಂತ ವೆಚ್ಚವನ್ನು ಗಣನೆಗೆ ತೆಗೆದುಕೊಂಡರೆ ಈ ಅಧಿವೇಶನಗಳಿಗೋಸ್ಕರ ಸುಮಾರು ೩೦–೩೫ ಲಕ್ಷ ರೂ. ಗಳಿಗಿಂತಲೂ ಹೆಚ್ಚು ಹಣ ಖರ್ಚಾಗಿರಬಹುದು. ಸಾಧಿಸಿರುವುದೇನು ? ಎನ್ನುವ ಪ್ರಶ್ನೆಯು ಉದ್ಭವಿಸಿದಾಗ ಆಶಾದಾಯಕವಾದ ಉತ್ತರ ಬರುತ್ತಿಲ್ಲ. ಈ ಸಭೆಯ ಸಂಚಾಲಕರು ಈ ವಿಷಯವನ್ನು ಚೆನ್ನಾಗಿ ಯೋಚಿಸಿ ರಚನಾತ್ಮಕ ಕಾರ್ಯಗಳನ್ನು ನಿರ್ದಿಷ್ಟವಾಗಿ ಮಾಡತಕ್ಕ ರೀತಿಯಲ್ಲಿ

ಮಹಾಸಭೆಯು ತನ್ನ ರೂಪು ರೇಷೆಗಳನ್ನು ವ್ಯವಸ್ಥೆಗೊಳಿಸಬೇಕಾಗಿದೆ. ಪ್ರಾಯಃ ಖಾಯಂ ವೇತನದ ಮೇಲೆ ಒಬ್ಬ ಕಾರ್ಯದರ್ಶಿ ಮತ್ತು ಗುಮಾಸ್ತ ನೇಮಕವಾಗಿ ಅಧ್ಯಕ್ಷರಿಗೆ ನೆರವಾಗುವ ಏರ್ಪಾಡಾದರೆ ಮಾತ್ರ ಪರಿಸ್ಥಿತಿ ಉತ್ತಮಗೊಳ್ಳಬಹುದೆಂದು ತೋರುತ್ತದೆ.

## ೭. ಆತ್ಮವಿಕಾಸ

[೨೪-೧೨-೧೯೬೯ ರಂದು ವಿಜಾಪೂರ ಜಿಲ್ಲೆಯ ಹುನುಗುಂದದ ಶ್ರೀ ವಿಜಯ ಮಹಾಂತೇಶ ವಿದ್ಯಾವರ್ಧಕ ಸಂಸ್ಥೆಗೆ ಭೇಟಿ ನೀಡಿ, ವಿಜಯ ಮಹಾಂತೇಶ ಕಾಲೇಜಿನಲ್ಲಿ ಮಾಡಿದ ಭಾಷಣ]*

ವೀರಶೈವ ಮಠಗಳು ಮೊದಲಿನಿಂದಲೂ ಸಮಾಜಕ್ಕೆ ನಾಡಿಗೆ ಗಣನೀಯ ಸೇವೆ ಸಲ್ಲಿಸುತ್ತಾ ಬಂದಿವೆ. ಅದಕ್ಕಾಗಿ ನಾವೆಲ್ಲ ಹೆಮ್ಮೆ ಪಡಬೇಕು. ಅಮರಕೋಶದಲ್ಲಿ ಮಠಗಳೆಂದರೆ ವಿದ್ಯಾದಾನ ಮಾಡುವ ಮಂದಿರಗಳು ಎಂಬ ಅರ್ಥವಿದೆ. ಹಿಂದಿನ ಕಾಲದಲ್ಲಿ ಓದಿಸುವವ ಬೋಧಿಸುವವ ಅಯ್ಯನೆನಿಸಿದ್ದನು. ಅವನ ಮನೆಯೇ ಮಠವೆನಿಸಿತು. ಆ ಸಂಪ್ರದಾಯಕ್ಕನುಸರಿಸಿ ಅನೇಕ ವೀರಶೈವ ಮಠಗಳು ಅಸ್ತಿತ್ವದಲ್ಲಿ ಉಳಿದವು. ಅವು ಸಮಾಜಕ್ಕೆ ಮಹೋಪಕಾರ ಮಾಡಿವೆ. ವಿದ್ಯೆ ಹಾಗೂ ಜ್ಞಾನದ ಅಭಾವವಿದ್ದ ಹಳ್ಳಿಗಳಲ್ಲೆಲ್ಲಾ ಎಲ್ಲ ಸಮಾಜದ ಬಂಧುಗಳಿಗೆ ಜ್ಞಾನವಿದ್ಯಾಪ್ರಸಾರ ಮಾಡುತ್ತಾಬಂದಿವೆ. ನ್ಯಾಯಾಲಯದ ಜೂರಿಗಳಂತೆ ಮಠದ ಸ್ವಾಮಿಗಳು, ವಿದ್ಯಾಪ್ರಸಾರದ ಜೊತೆಗೆ ನ್ಯಾಯ ನಿರ್ಣಯದ ಕೆಲಸವನ್ನೂ ಮಾಡುತ್ತಲಿದ್ದರು. ವೀರಶೈವ ಮಠಗಳ ಈ ಮಹತ್ಕಾರ್ಯ ಸಂಪ್ರದಾಯವಾಗಿ ನಡೆದುಬಂದಿದೆ.

ಮುಂಬೈ ಕರ್ನಾಟಕದ ವಿದ್ಯಾಸಂಸ್ಥೆಗಳು ಒಬ್ಬರಲ್ಲಾ ಒಬ್ಬ ವೀರಶೈವ ಸ್ವಾಮಿಗಳ ಕೃಪೆಯಿಂದ ಮುನ್ನಡೆದಿವೆ. ಆ ಮಾರ್ಗದಲ್ಲಿ ನಡೆದ ನನ್ನ ಸೇವೆ ಅತ್ಯಲ್ಪ. ನನಗೆ ಹೊಗಳಿಕೆ, ಪ್ರಶಂಸೆ ಬೇಡ. ಈ ಹೊಗಳಿಕೆಯಿಂದ ನಾವು ನಮ್ಮತನವನ್ನು ಮರೆಯುವ ಸಂಭವವುಂಟು. ಮುಂಬೈಕರ್ನಾಟಕವು ಖಾಸಗಿ ವಿದ್ಯಾಸಂಸ್ಥೆಗಳನ್ನು ವ್ಯಾಪಕವಾಗಿ ನಡೆಸುತ್ತ ಬಂದಿದೆ. ಅಮೇರಿಕಾದಲ್ಲಿಯೂ ಈ ಮಾದರಿಯ ಸಂಸ್ಥೆಗಳುಂಟು. ಖಾಸಗಿಯ ಸಂಸ್ಥೆಗಳಿಗೆ ಉದಾರದಾನಿಗಳು ಮುಂದೆ ಬಂದು ಗಣನೀಯ ಸಹಾಯ ನೀಡುತ್ತ ಬಂದುದು ಸ್ತುತ್ಯವಾದ ಸಂಗತಿಯಾಗಿದೆ. ಹುನುಗುಂದದ ಶ್ರೀ ವಿಜಯ ಮಹಾಂತೇಶ ವಿದ್ಯಾಸಂಸ್ಥೆಯವರು ಈ ಭಾಗದಲ್ಲಿ ಇದನ್ನು ಸ್ಥಾಪಿಸಿ ಪ್ರಗತಿ ಪಥದಲ್ಲಿ ನಡೆಸುತ್ತಲಿರುವುದು ನನಗೆ ಸಂತೋಷವನ್ನುಂಟುಮಾಡಿದೆ.

ಇನ್ನು ವಿದ್ಯಾಭ್ಯಾಸದ ಕಡೆಗೆ ಲಕ್ಷ್ಯ ಹರಿಸಿದಾಗ ಇಂದಿನ ವಿದ್ಯಾಭ್ಯಾಸದ ಫಲಗಳೇನು ? ಹೊರಗಿನಿಂದ ಯಾವುದಾದರೂ ಒಂದು ವಿಷಯವನ್ನು ಕಡ್ಡಾಯವಾಗಿ ಪ್ರವೇಶ ಮಾಡಿಸುವ ವಸ್ತುವಲ್ಲ ವಿದ್ಯೆಯೆಂಬುದು. ಆದರೆ ಸಂತೋಷದಿಂದ ಚೇತನ ಶಕ್ತಿಯನ್ನು ಜಾಗೃತಗೊಳಿಸಿ ಅಪರಿಪೂರ್ಣತ್ವದಿಂದ ಪರಿಪೂರ್ಣತ್ವದ ಕಡೆಗೆ ಮುನ್ನಡೆಸುವುದೇ ವಿದ್ಯೆ.

ಸೃಷ್ಟಿಕರ್ತನು ಈ ಜಗತ್ತಿನಲ್ಲಿ ಸಸ್ಯ-ಪ್ರಾಣಿ-ಮೃಗ-ಪಕ್ಷಿ ಮುಂತಾದ ಅನಂತ ವರ್ಗಗಳನ್ನು ಸೃಷ್ಟಿಮಾಡಿದರೂ, ಅಸಂತುಷ್ಟಗೊಂಡು ಕೊನೆಗೆ ತಪಸ್ಸು ಮಾಡಿ ಮಾನವವರ್ಗವನ್ನು ನಿರ್ಮಿಸಿದನು. ಮಾನವನಿಗೆ ಸಕಲ ಸೌಕರ್ಯಗಳನ್ನೂ ದಯಪಾಲಿಸಿದ್ದಾನೆ. ಮಾನವನಾಗಿ ಹುಟ್ಟಿದ ಮೇಲೆ. ಮಾನವಜನ್ಮ ಪವಿತ್ರವಾದುದರಿಂದ ಸಾಧನೆ ಮಾಡಿ ಮೋಕ್ಷಪಡೆದು ದೇವರ ಸಾಕ್ಷಾತ್ಕಾರ ಪಡೆಯಬೇಕು. 'ಸಾ ವಿದ್ಯಾ ಯಾ ವಿಮುಕ್ತಯೇ'– ಎಂಬ ಆರ್ಯೋಕ್ತಿಯಂತೆ ವಿದ್ಯೆಯ ಬಲದಿಂದ ಮಾನವನು ಜೀವನ್ಮುಕ್ತನಾಗುವ, ಮೋಕ್ಷ ಹೊಂದುವ ಮಟ್ಟಕ್ಕೇರಬೇಕು.

ಈ ಸೃಷ್ಟಿಯಲ್ಲಿ ಮಾನವರು ತಮ್ಮ ಹುಟ್ಟಿನ ಅರ್ಥವನ್ನು ಅರಿಯದ್ದರಿಂದ ಎಲ್ಲೆಡೆಯೂ ಅಶಾಂತಿ ದುಃಖ ಪಸರಿಸಿವೆ. ಬಹು ಜನರು ತಿಳಿದಂತೆ ಈ ದೇಹಮಾನವ ಮಾನವನಲ್ಲ ; ದೇಹದ ಹಾಗೂ ಬುದ್ಧಿ ಕೂಡಿದ ಮಾನವ ಮಾನವನಲ್ಲ. ಈ ಬಗ್ಗೆ ಒಂದು ಕಥೆಯಿದೆ: ಚಕ್ರವರ್ತಿ ಅಲೆಗ್ಝಾಂಡರನು ಅನೇಕ ಸಾಮ್ರಾಜ್ಯಗಳನ್ನು ಗೆದ್ದು ಮುಂದೆ ಮುಂದೆ ಸಾಗಿದನು. ಆತ ದಟ್ಟವಾದ ಅರಣ್ಯದಲ್ಲಿ ಹಾಯ್ದು. ಕಲ್ಲು ಬಂಡೆಗಳನ್ನು ದಾಟಿ, ಒಂದು ಗವಿಯ ಹತ್ತಿರ ಹಾಯ್ದುಹೋಗುತ್ತಿದ್ದಾಗ ಅಲ್ಲಿ ಒಬ್ಬ ಸಾಧು ಕಣ್ಣಿಗೆ ಬಿದ್ದನು. ಅಲೆಗ್ಝಾಂಡರ ದೂರದಲ್ಲಿ ನಿಂತು ದುರುಗುಟ್ಟಿ ಆತನನ್ನು ನೋಡಿದನು. ಆ ಸಾಧುವು ಯಾವ ವಿಚಾರಕ್ಕೂ ಒಳಗಾಗಲಿಲ್ಲ. ಆಗ ಅಲೆಗ್ಝಾಂಡರನು ಚಕಿತನಾಗಿ ಆ ಸಾಧುವಿಗೆ ಮಣಿದು ಪ್ರಾರ್ಥಿಸಿದನು :'ತಾವು ದೊಡ್ಡವರು, ನಮ್ಮ ದೇಶಕ್ಕೆ ಬರಬೇಕು' ಎಂದು. ಅನಂತರ ತನ್ನ ಪರಾಕ್ರಮದ ಪರಿಚಯವನ್ನೂ ತಿಳಿಸಿದನು. ಆಗ ಆ ಸಾಧು 'ನೀನು ತೋರುವ ಭಯ, ಮಾಡಿದ ಸಂಹಾರ, ಇವುಗಳಿಗೆ ನಾನು ಹೆದರುವದಿಲ್ಲ. ನಿನ್ನ ಪ್ರಚಂಡಖಡ್ಗದಿಂದ ನನ್ನ ದೇಹದ ಮೇಲೆ ಯಾವ ಪರಿಣಾಮವೂ ಆಗುವದಿಲ್ಲ' ಎಂದನು. ಅಲೆಗ್ಝಾಂಡರನಿಗೆ ಮತ್ತಷ್ಟು ಆಶ್ಚರ್ಯವಾಯಿತು.

---

* ಪ್ರೊ. ಬಿ. ಎಂ. ಹಾಗಿಯವರು ಸಂಗ್ರಹಿಸಿ ಕಳಿಸಿದುದು.

ಆಗ ಸಾಧು ಮತ್ತೆ ಹೇಳಿದನು. 'ದೇಹವನ್ನು ಕೊಲ್ಲಬಲ್ಲೆನೆಂಬುದು ನಿನ್ನ ಅಹಂಕಾರ ; ನಾನು ಜಡದೇಹಿಯಲ್ಲ ; ಜಾಗ್ರತ ಆತ್ಮಸ್ವರೂಪಿ : ಆತ್ಮವನ್ನು ಬೆಂಕಿ ಸುಡದು, ನೀರು ನೆನೆಸದು, ಗಾಳಿ ಅಲ್ಲಾಡಿಸದು, ಖಡ್ಗ ತುಂಡರಿಸದು. ಅಂಥ ಆತ್ಮಸ್ವರೂಪಿ ನಾನಾಗಿದ್ದೇನೆ'. ಎಂದನಂತೆ. ಆದ್ದರಿಂದ ಈ ಜಡದೇಹಕ್ಕೆ ಏನೂ ಮಹತ್ವವಿಲ್ಲ. ನೆಚ್ಚಿನ ಹೆಂಡತಿ, ಪ್ರೀತಿಯ ಮಗ ಸತ್ತರೆ ಅಳುತ್ತೇವೆ. ಈ ದುಃಖ ಯಾಕೆ? ಆ ದೇಹ ಸ್ವರೂಪಕ್ಕಲ್ಲ : ಮಮಕಾರ ಚೇತನಕ್ಕಾಗಿ. ಈ ದೇಹಕ್ಕೆ ಕಾಸಿನ ಕಿಮ್ಮತ್ತಿಲ್ಲ. ಅರಸನ ದೇಹವಾದರೂ ಸತ್ತು ಹೆಣವಾದ ಮೇಲೆ ಅಡಕೆಯ ಕಿಮ್ಮತ್ತು ಅದಕ್ಕಿಲ್ಲ. ಕಾರಣ ಈ ದೇಹ, ಮನಸ್ಸು, ಇಂದ್ರಿಯಗಳು ಕೂಡಿ ಆತ್ಮದ ವಿಕಾಸಕ್ಕೆ ನೆರವಾಗಬೇಕು. ಆಗ ಮಾನವ ನಿಜವಾದ ವಿವೇಕಿಯಾದ ಮಾನವನಾಗುತ್ತಾನೆ. ಬಂಧವಿಮೋಚನೆಗೊಳಿಸುವದೇ ವಿದ್ಯೆ. ಇಂದಿನ ನಮ್ಮ ವಿದ್ಯೆಯನ್ನು ಈ ಅರ್ಥದಲ್ಲಿ ಅವಲೋಕಿಸಬೇಕು. ಒಬ್ಬ ರೋಗಿಗೆ ಇಬ್ಬರು ವೈದ್ಯರು, ಹತ್ತು ಮಂದಿ ರಾಜಕಾರಣಿಗಳು ಗಂಟುಬಿದ್ದರೆ, ಆ ರೋಗಿಯ ಸ್ಥಿತಿ ಏನಾಗುವದೋ ಅದೇ ಸ್ಥಿತಿ ಇಂದಿನ ವಿದ್ಯೆಗೂ ಅನ್ವಯಿಸುತ್ತದೆ. ವಿದ್ಯಾಭ್ಯಾಸ ಉದಾತ್ತ ಗುರಿಯನ್ನು ಮುಟ್ಟಬೇಕು. ನಮ್ಮ ಸಾಧನೆ ಅದಕ್ಕೆ ಪೋಷಕವಾಗಬೇಕು. ಭರತಖಂಡದ ಉಜ್ವಲ ಗತಇತಿಹಾಸ ನೆನೆದು ಮುನ್ನಡೆಯಬೇಕು. ಇಂದಿನದು ವಿಜ್ಞಾನಯುಗ, ಮಾನವ ಚಂದ್ರಲೋಕಕ್ಕೆ ಹೋಗಿ ಬಂದಿದ್ದಾನೆ. ನಿಜವಾಗಿ ನಮ್ಮ ಸುಖ, ನೆಮ್ಮದಿಗಳು ಹೆಚ್ಚಬೇಕು. ಆದರೆ ವಿನಾಶಕಾರೀ ಮಾರಕಾಸ್ತ್ರಗಳ ಶೋಧದಿಂದ ಭಯ ಹೆಚ್ಚಾಗಿದೆ. ಮಾನವನು ವಿದ್ಯಾಭ್ಯಾಸದ ಬಲದಿಂದ ಮಹಾನ್ ಉದ್ದೇಶ ಸಾಧಿಸಲು ಹೆಣಗಬೇಕು. ಮಾನವನಲ್ಲಿಯ ಪಶುತ್ವ ಕಳೆದು ದೇವಮಾನವ ಮಟ್ಟಕ್ಕೆ ಮಾನವನನ್ನು ಒಯ್ಯಲು ವಿದ್ಯೆ ಕಾರಣವಾಗಬೇಕು.

ವಿದ್ಯಾರ್ಥಿಗಳು ಕೇವಲ ಪುಸ್ತಕದ ವಿದ್ಯೆ ಗಳಿಸಿದರೆ ಸಾಲದು ; ವಿದ್ಯೆಯಿಂದ ದೇಹ, ಬುದ್ಧಿ, ಆತ್ಮಗಳ ವಿಕಾಸ ಆಗಬೇಕು. ಇಂದು ಕ್ರೀಡಾಕೂಟಗಳಿಗೆ ಮಹತ್ವ ಬರಹತ್ತಿದೆ. ಕ್ರೀಡೆಗೂ ಇತಿಮಿತಿ ಇರಬೇಕು. ವಿದ್ಯಾರ್ಥಿಗಳು ಪೌಷ್ಟಿಕ ಆಹಾರ ಸೇವಿಸಬೇಕು. ಒಂದು ಹೇಳಿಕೆಯ ಪ್ರಕಾರ ಭಾರತದಲ್ಲಿ ೩ ಕೋಟಿ ಜನರಿಗೆ ಎರಡು ಹೊತ್ತಿನ ಊಟವಿಲ್ಲ. ೧೩ ಕೋಟಿ ಜನರಿಗೆ ಒಂದೇ ಹೊತ್ತು ಊಟ, ೨೦ ಕೋಟಿ ಜನರಿಗೆ ಸತ್ವಯುತವಾದ ಪೌಷ್ಟಿಕ ಆಹಾರವಿಲ್ಲ. ಯಾವ ದೃಷ್ಟಿಯಿಂದಲೂ ಆಹಾರದ ಅಪವ್ಯಯ ಆಗಬಾರದು.

ವಿದ್ಯಾರ್ಥಿಗಳು, ಮಕ್ಕಳು ಬ್ರಹ್ಮಚರ್ಯ ಪರಿಪಾಲನೆಗೆ ಅವಶ್ಯವಾಗಿ ಗಮನಹರಿಯಬೇಕು. ಅನೈತಿಕಭಾವ ಕೆರಳಿಸಬಲ್ಲ ಸಿನೆಮಾ ಪ್ರಪಂಚದ ಬೆನ್ನುಹತ್ತಿ ನೈತಿಕಪತನಕ್ಕೆ ಕಾರಣವಾಗಬಾರದು. ಕೀಳು ಅಭಿರುಚಿಗಳನ್ನು ಬೆಳೆಯಿಸಿಕೊಳ್ಳಬಾರದು. ಒಮ್ಮೆ ದಿವಂಗತ ಬಾಬುರಾಜೇಂದ್ರಪ್ರಸಾದರು ನನಗೆ ಪಾರ್ಲಿಮೆಂಟ್ ಅಧಿಕಾರ ಕೊಟ್ಟರೆ ೨೪ ಘಂಟೆಗಳಲ್ಲಿ ಸಿನಿಮಾ ಚಿತ್ರಗಳು ಮಾಡುವ ನೈತಿಕಪತನವನ್ನು ತಡೆಗಟ್ಟುತ್ತೇನೆ ಎಂದು ಹೇಳಿದ್ದರು. ನೈಷ್ಠಿಕ ಬ್ರಹ್ಮಚರ್ಯದ ಪಾಲನೆ ಮಾಡಬೇಕು. ದೊಡ್ಡ ದೊಡ್ಡ ಪಟ್ಟಣಗಳ ಮೋಹಕ ಜೀವನಕ್ಕೆ ಮಾರುಹೋಗಬಾರದು. ಬಾಹ್ಯ ಸೌಂದರ್ಯಕ್ಕೆ ಮರುಳಾಗಬಾರದು. ಆಂತರಿಕ ಸೌಂದರ್ಯವನ್ನು ಅರಳಿಸಿಕೊಳ್ಳಬೇಕು. ಕುಮಾರ ಸಂಭವದ ಕಥೆಯ ಪ್ರಕಾರ ಮನ್ಮಥದಹನದ ನಂತರ ಶಿವನು ಬೆಡಗಿನ ಪಾರ್ವತಿಯನ್ನು ಮಾತನಾಡಿಸದೆ ಅವಳಿಂದ ದೂರಹೋದ. ಇದನ್ನರಿತ ಪಾರ್ವತಿ ತಪಸ್ಸಿಗೆ ನಿಂತಳು. ಕಡುತರ ತಪಸ್ಸುಮಾಡಿ, ನಿಷ್ಠೆಯನ್ನು ತೋರಿ ಅಂತರಂಗ ಶುದ್ಧಿಗೊಳಿಸಿ ಕೊಂಡಾಗ ಶಿವ ತಾನಾಗಿಯೇ ಆ ಗಿರಿಜೆಯ ಹತ್ತಿರ ಬಂದು ದರ್ಶನ ಕೊಟ್ಟ.

ಜಗತ್ತಿಗೆ ಬೆಳಕನ್ನು, ಜ್ಞಾನವನ್ನು ಮೊದಲಿಗೆ ಕೊಟ್ಟವರು ಭಾರತೀಯರು. ಪರಕೀಯರು ನಮ್ಮ ಸಂಸ್ಕೃತಿಗೆ ಈಗಲೂ ಮನ್ನಣೆ ಕೊಡುತ್ತಾರೆ. ಹಿಟ್ಲರನಿದ್ದಾಗ ಜರ್ಮನಿಯ ಪಂಡಿತನು ಮೈಸೂರಿನ ಮಹಾರಾಜನಿಗೂ ಬೆಲೆ ಕೊಡಲಿಲ್ಲವಂತೆ, ಆದರೆ ಘನ ವಿದ್ವಾಂಸರಾದ ಮೈಸೂರಿನ ಶಾಮಾಶಾಸ್ತ್ರಿಯವರ ಹೆಸರನ್ನು ಕೇಳಿದಾಗ ಮೈಸೂರಿನ ದೊರೆಗೆ ಮನ್ನಣೆ ಸಿಕ್ಕಿತಂತೆ. ಎಲ್ಲಿಯಾದರೂ ವಿದ್ವಾಂಸರಿಗೆ ಬೆಲೆ ಇದ್ದೇ ಇದೆ. ಜ್ಞಾನಸಂಪಾದನೆಗೆ ಉಗ್ರತಪಸ್ಸನ್ನು ಮಾಡಬೇಕು. ಆತ್ಮವಿಕಾಸಕ್ಕೆ ವಿದ್ಯಾಭ್ಯಾಸ ಅವಶ್ಯ. ಅಂದಿನ ಗುರುಕುಲವಿದ್ಯಾಭ್ಯಾಸ ಕಷ್ಟಕರವಾಗಿತ್ತು. ಇಂದಿನದು ಸುಲಭ ವಿದ್ಯಾಭ್ಯಾಸ. ವಿದ್ಯಾಪ್ರಸಾರವಾದಂತೆಲ್ಲ ಅದರ ಬೆಲೆ ಕುಗ್ಗಹತ್ತಿದೆ. ಈಗ ವಿದ್ಯೆ ಮನೆಯ ಬಾಗಿಲಿಗೇನೆ ಬಂದಿದೆಯೆಂದು ಉದಾಸೀನ ಮಾಡಬಾರದು. ತಮ್ಮ ಸಾಧನೆಯಿಂದ ವಿದ್ಯೆಯನ್ನು ಸಂಪಾದಿಸಬೇಕು. ವಿದ್ಯಾಸಂಪಾದನೆಯಲ್ಲಿ ತೀವ್ರ ಆಸಕ್ತಿಯುಳ್ಳವರಾಗಬೇಕು. ವಿದ್ಯಾರ್ಥಿಗಳು ಕಾಲವನ್ನು ವ್ಯರ್ಥ ಕಳೆಯದೆ ಅದರ ಸದುಪಯೋಗ ಮಾಡಿಕೊಳ್ಳಬೇಕು. ಮನಸ್ಸನ್ನೂ, ನೀತಿಯನ್ನೂ ಕೆಡಿಸುವ ಕಥೆ, ಕಾದಂಬರಿಗಳನ್ನು ಓದಬಾರದು. ಇಂದು ಸಾಹಿತಿಗಳು ಕೃತಿ ಸಂಖ್ಯೆಗೆ ಬೆಲೆ ಕೊಡುತ್ತಿದ್ದಾರೆ. ನಿಜವಾಗಿ ಗುಣಕ್ಕೆ ಬೆಲೆ ಕೊಡಬೇಕು. ಕಾಳಿದಾಸ, ಪಂಪ, ರನ್ನ ಕವಿಗಳು ಬಹಳ ಬರೆದಿಲ್ಲ. ಆದರೂ ಗುಣಮಟ್ಟದಿಂದ ಅವರು ಚಿರಾಯುಗಳಾಗಿದ್ದಾರೆ ; ಅವರ ಕೃತಿಗಳು ಚಿರಸ್ಮರಣೀಯವಾಗಿವೆ,

ಜೀವನದಲ್ಲಿ ಶಿಸ್ತು, ಸಂಯಮ, ಸಹಕಾರ ಅವಶ್ಯಬೇಕು. ಪರರ ಸುಖದುಃಖಗಳು ನನ್ನವು ಎಂದು ತಿಳಿದು ಆಚರಿಸುವುದೇ ಧರ್ಮ. ದುಡಿಮೆಯ ಪ್ರಜ್ಞೆ ಬೆಳಸಿಕೊಂಡರೆ ಉತ್ಪಾದನೆ ಹೆಚ್ಚಾಗಿ ನಿಜವಾದ ಸಮತಾವಾದ ಸಾಧಿಸುತ್ತದೆ. ಇಂಥ

ಸಮತಾವಾದವನ್ನು ಬಸವಣ್ಣನವರು ಆಚರಿಸಲು ಪ್ರಯತ್ನಿಸಿದರು. ತನುವ ಬಳಲಿಸಿ, ಬೆವರು ಸುರಿಸಿ ಪಡೆದದ್ದು ಶ್ರೇಯಸ್ಸನ್ನು ತಂದುಕೊಡುತ್ತದೆ. ಮಹಾತ್ಮಾಗಾಂಧಿ, ಲಾಲಬಹಾದ್ದೂರ ಶಾಸ್ತ್ರಿ ಇದನ್ನೇ ಬಿಂಬಿಸಿಹೋಗಿದ್ದಾರೆ. ಅಂದಂದಿನ ಗಳಿಕೆ ಅಂದಂದಿನ ನಿತ್ಯ ನೇಮದಲ್ಲಿ ಸಂದಿರಬೇಕು. ಸಂಗ್ರಹ ಬುದ್ಧಿ ಸರಿಯಾದುದಲ್ಲ. ವಿದ್ಯಾರ್ಥಿಗಳು ಸಮಾಜ ಜೀವನದ ಅರ್ಥಮಾಡಿಕೊಂಡು ಆಚರಿಸಬೇಕು. ಸ್ವಾರ್ಥಕ್ಕೆ, ಸಂಗ್ರಹಕಾರ್ಯಕ್ಕೆ ಮನಸ್ಸು ಮಾಡಬಾರದು. ವಿದ್ಯಾರ್ಥಿಗಳು ದೈವಭಕ್ತಿಯುಳ್ಳವರಾಗಬೇಕು. ಭಗವಂತನ ಪ್ರಾರ್ಥನೆ, ಪೂಜೆ, ಧ್ಯಾನಗಳನ್ನು ಮಾಡಬೇಕು. ಪ್ರಾರ್ಥನೆಯು ಗಾಂಧೀಜಿಗೆ ಆತ್ಮಬಲದ ಸಾಧನೆಯಾಗಿತ್ತು. ಎರಡು ಹೊತ್ತು ದೇವತಾಪ್ರಾರ್ಥನೆ ಮಾಡಬೇಕು. ಈ ಬಗ್ಗೆ ಒಂದು ಕಥೆ ಇದೆ :

ಅಮೇರಿಕಾದ ೮-೯ ವರ್ಷದ ಬಾಲಕನೊಬ್ಬನಿಗೆ ರಸ್ತೆಯಲ್ಲಿ ಅಪಘಾತ ಉಂಟಾಯಿತು. ಕಾಲಿಗೆ ಪೆಟ್ಟು ತಗುಲಿ ವಿಪರೀತ ನೋವಾಯಿತು. ಡಾಕ್ಟರರು ಕಾಲು ತೆಗೆಯಬೇಕೆಂದು ಸೂಚಿಸಿದರು. ಆ ಮಗುವಿನ ಸಹೋದರರು ಒಪ್ಪಿದರು, ಕಾಲು ಕತ್ತರಿಸಲು ಮಗು ಒಪ್ಪಲಿಲ್ಲ. ಕಾಲು ಯಾವಾಗ ತೆಗೆಯಬೇಕು! ರಾತ್ರಿ ಮಗುವಿಗೆ ನಿದ್ದೆ ಹತ್ತಿದ್ದಾಗ ಆಪರೇಶನ್ ಥೇಟರಿಗೆ ಒಯ್ದು ತೆಗೆಯಬೇಕೆಂದರೆ ಮಗು ರಾತ್ರಿಯೆಲ್ಲ ಎಚ್ಚರವಾಗಿಯೇ ಇತ್ತು. ದೇವರ ಪ್ರಾರ್ಥನೆಯಲ್ಲಿ ನಂಬಿಕೆ ಇಟ್ಟ ಆ ಮಗುವಿಗೆ ಕ್ರಮೇಣ ಗುಣವಾಗುತ್ತಲಿದೆಯೆಂದು ಅನಿಸ ಹತ್ತಿತ್ತು. ತನ್ನ ತಂದೆ ತಾಯಿಗಳಿಗೆ ಈ ಸಂಗತಿ ತಿಳಿಸಿ, ತಾನು ದೇವರ ಪ್ರಾರ್ಥನೆಯಲ್ಲಿ ಆ ಮಗು ತೊಡಗಿತ್ತು. ದೇವರ ಪ್ರಾರ್ಥನೆಯನ್ನು ದೃಢ ಮನಸ್ಸಿನಿಂದ ಮಾಡಿದ್ದರಿಂದ ಮಗು ಗುಣಮುಖನಾದ. ಒಂದಾನೊಂದು ದಿನ ಅವನು ಅಮೇರಿಕಾದ ಅಧ್ಯಕ್ಷನೂ ಆದ. ಅವನೇ ಐಸೆನ್‌ಹೋವರ.

ಭಗವಾನ್ ಬಸವೇಶ್ವರರು ಎಲ್ಲೆಲ್ಲೂ ತಮ್ಮ ಮಹಾನುಭಾವದ ಬೆಳಕು ಹರಡಿ ಕಡೆಗೆ ಐಕ್ಯ ಪಡೆದ ಕೂಡಲ ಸಂಗಮದ ಸಮೀಪದಲ್ಲಿರುವ ಈ ಭಾಗದಲ್ಲಿ ವಿದ್ಯಾಸಂಸ್ಥೆಗಳು ಮೈದಾಳಿವೆ. ಅವುಗಳ ಮಹೋನ್ನತ ಗುರಿ ನೆರವೇರುವಂತೆ ಇಲ್ಲಿ ಸೇರಿದ ಮಕ್ಕಳೆಲ್ಲರೂ ಆಚರಿಸಬೇಕು.

## ೮. ಮನುಷ್ಯ ಸಮಾಜಜೀವಿ

[೪.೧೨.೭೧ರಂದು ಬಳ್ಳಾರಿಯಲ್ಲಿ ಸಮಾವೇಶಗೊಂಡ ವಾಲ್ಮೀಕಿ ನಾಯಕ ಮಹಾಸಮ್ಮೇಳನದಲ್ಲಿ ಮಾಡಿದ ಭಾಷಣದ ಸಾರಾಂಶ]*

ನಮಗೆ ಸ್ವಾತಂತ್ರ್ಯ ಬಂದಾಗ ಪ್ರಪ್ರಥಮವಾಗಿ ಸಂದೇಶವನ್ನು ಕೊಟ್ಟ ಪಂಡಿತ ಜವಹರಲಾಲ್ ನೆಹ್ರೂರವರು ಒಂದು ಕರೆಯನ್ನು ನೀಡಿದರು. ಇಂದು ನಮ್ಮ ಮುಖ್ಯವಾದ ಜವಾಬ್ದಾರಿ ಏನು ಎಂದು ಪ್ರಶ್ನಿಸಿ ಅವರೇ ಉತ್ತರ ಕೊಟ್ಟರು. ಭಾರತೀಯ ಜನಾಂಗದ ಸೇವೆಯನ್ನು ಸಲ್ಲಿಸುವುದು ನಮ್ಮ ಮುಖ್ಯ ಕರ್ತವ್ಯ. ಭಾರತೀಯ ಜನಾಂಗದಲ್ಲಿ ಯಾವ ದೋಷಗಳು ವ್ಯಾಪಕವಾಗಿ ಪ್ರಗತಿಗೆ ಕಂಟಕಪ್ರಾಯವಾಗಿವೆಯೋ ಅಂತಹ ದೋಷಗಳನ್ನು ಪರಿಹಾರ ಮಾಡಬೇಕಾದದ್ದು. ಯಾವ ದೋಷಗಳು ಬಡತನ, ಅಜ್ಞಾನ ಮತ್ತು ರೋಗ ರುಜಿನಗಳು ಇವುಗಳನ್ನು ನಿವಾರಣೆ ಮಾಡಬೇಕು. ಎಲ್ಲಕ್ಕಿಂತಲೂ ಮಿಗಿಲಾಗಿ ಭಾರತೀಯ ಜನಾಂಗಕ್ಕೆ ಸಮಾನಾವಕಾಶಗಳನ್ನು ಕಲ್ಪಿಸಿಕೊಡಬೇಕು. ಇದು ಅವರ ಸಂದೇಶದ ಮುಖ್ಯ ಸಾರಾಂಶ. ಶ್ರೀಮಾನ್ ಬೋರಯ್ಯನವರು** ಹೇಳಿದ ಪ್ರಕಾರ ೨೫ ವರ್ಷ ಅವಧಿಯಲ್ಲಿ ಮಹಾತ್ಮಾ ಗಾಂಧೀಜಿಯವರ ಸಂದೇಶವನ್ನು ಕೇಳಿ ಅದರಂತೆ ಕರ್ತವ್ಯೋನ್ಮುಖರಾದ ನಾವು ಪಂಡಿತ ಜವಹರಲಾಲ್ ನೆಹರೂರವರ ಒಂದು ಕರೆಗೆ ಓಗೊಟ್ಟು ಈ ಮಹಾ ಗುರಿಯನ್ನು ಎಷ್ಟರ ಮಟ್ಟಿಗೆ ಸಾಧಿಸಿದ್ದೇವೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ಪ್ರಾಯಃ ನಾವು ಭಾರತೀಯ ಜನಾಂಗದ ಇಂದಿನ ಚಿತ್ರವನ್ನು ಕಾಣುವಾಗ ನಿರಾಶೆಯೇ ಎಲ್ಲಾ ಕಡೆಯಲ್ಲಿಯೂ ಗೋಚರವಾಗುತ್ತಾ ಇದೆ, ಹೋದ ವರ್ಷ ಒಂದು ವರದಿಯನ್ನು ಓದುತ್ತಾ ಇರುವಾಗ ಅದರಲ್ಲಿ ಈ ವಿಷಯ ನಿರೂಪಿತವಾಗಿತ್ತು. 'ನಮ್ಮ ದೇಶದಲ್ಲಿ ದಿವಸಕ್ಕೆ ಒಂದು ಹೊತ್ತು ಊಟವಿಲ್ಲದೆ ಇರತಕ್ಕಂಥವರು ೩ ಕೋಟಿ ಜನರಿದ್ದಾರೆ. ಸುಮಾರು ೪ ಕೋಟಿ ಜನರಿಗೆ ದಿವಸಕ್ಕೆ ಒಂದೇ ಒಂದು ಊಟ ಸಿಕ್ಕುತ್ತಾ ಇದೆ. ಇನ್ನೂ ಬಹು ಸಂಖ್ಯಾತ ಜನಗಳಿಗೆ ಪೌಷ್ಟಿಕ ಆಹಾರವೇ ಲಭ್ಯವಾಗುತ್ತಿಲ್ಲ. ಅಂದ ಮೇಲೆ ಬಡತನ ಇನ್ನೂ ಕೂಡ ತಾಂಡವವಾಡುತ್ತಾ ಇದೆ ಎನ್ನುವುದು ವ್ಯಕ್ತವಾಗುತ್ತದೆ. ಮಹಾತ್ಮಾಜಿಯವರ ಸಂದೇಶದಂತೆ ಸ್ವಾತಂತ್ರ್ಯ ಅರ್ಥವತ್ತಾಗಬೇಕಾದರೆ ಪ್ರತಿಯೊಂದು ವ್ಯಕ್ತಿಗೂ ಕೂಡ ಎರಡು ಸಮೃದ್ಧಿಯಾದ ಊಟ ದೊರಕಬೇಕು. ಆ ಒಂದು ಕರ್ತವ್ಯದಲ್ಲಿ ಜಯಶೀಲರಾಗಬೇಕೆಂದು ಸಂದೇಶವನ್ನು ಕೊಟ್ಟಿದ್ದರು. ಪರಿಶೀಲನೆ ಮಾಡಲು ಆ ಸಂದೇಶ ಇನ್ನೂ ಕೂಡ ಸಂಪೂರ್ಣ ಯಶಸ್ವಿಯಾಗಿಲ್ಲವೆಂಬ ಒಂದು ವಿಷಯ ಸ್ಪಷ್ಟವಾಗಿ ಗೋಚರವಾಗುತ್ತಾ ಇದೆ.

---

* ರಿ॥ ಚೀಫ್ ಇಂಜನಿಯರ್ ಶ್ರೀ ಆರ್. ಸಿದ್ಧಯ್ಯನವರು ಸಂಗ್ರಹಿಸಿ ಕಳಿಸಿದರು.

** ಆ ಸಮಾರಂಭದ ಒಬ್ಬ ಮುಖ್ಯರು.

ಮತ್ತೊಂದು ಗಮನಿಸಬೇಕಾದುದು : ಈ ದಿವಸ ವಾಲ್ಮೀಕಿ ನಾಯಕರ ಸಮ್ಮೇಳನ ಎಂಬ ಒಂದು ಹೆಸರು ಈ ಸಭೆಗೆ ಕೊಡಲ್ಪಟ್ಟಿದೆ. ಈ ಮಾತನ್ನು ಕೇಳಿದಾಗ ಅನೇಕ ಮಂದಿ ಆಕ್ಷೇಪಣೆ ಮಾಡಬಹುದು. ಜಾತ್ಯತೀತ, ವರ್ಗಾತೀತ ರಾಷ್ಟ್ರವನ್ನು ಕಟ್ಟುವುದರಲ್ಲಿ ಆಸಕ್ತರಾಗಿರತಕ್ಕಂಥ ನಾವು ಇಂತಹ ಜಾತಿಯ ಸಮ್ಮೇಳನಕ್ಕೆ ಸ್ಥಾನವನ್ನು ಕೊಡಬೇಕೆ ? ಆ ಸಮ್ಮೇಳನ ಮಾಡಬಹುದೇ ಎಂಬುದೊಂದು ಆಕ್ಷೇಪಣೆ. ಪ್ರಾಯಃ ಆ ಆಕ್ಷೇಪಣೆಗೆ ಸಮಾಧಾನಕರವಾದ ಉತ್ತರವನ್ನು ಕೊಡಬೇಕಾದರೆ ನಮ್ಮ ಹಿಂದಿನ ಸಂಸ್ಕೃತಿ, ನಮ್ಮ ಸ್ವರೂಪ. ನಡೆದುಬಂದಿರತಕ್ಕಂಥ ಒಂದು ಪರಂಪರೆಯನ್ನು ಸ್ಥೂಲವಾಗಿ ಪರ್ಯಾಲೋಚಿಸಬೇಕಾಗಿದೆ. ಜಾತಿ ಜಾತಿ ಎನ್ನುವ ಸಂಸ್ಥೆಯು ತುಂಬಾ ವಿವಾದಾಸ್ಪದವಾಮದಾಗಿದೆ. ಈ ಸಂಸ್ಥೆಯನ್ನು ಉಳಿಸಬೇಕೋ ? ಅಳಿಸಬೇಕೊ ? ಎನ್ನುವುದು ಮುಖ್ಯ ಸಮಸ್ಯೆಯಾಗಿದೆ. ಈ ವಿಚಾರದಲ್ಲೂ ಮಹಾತ್ಮಾಗಾಂಧೀಜಿಯವರ ಅಭಿಪ್ರಾಯವನ್ನು ಸ್ಮರಿಸಬಹುದಾಗಿದೆ. ಅವರು ಸಂಶಯವನ್ನು ಚೆನ್ನಾಗಿ ಪರಿಹಾರ ಮಾಡಿಬಿಟ್ಟಿದ್ದಾರೆ. ಅವರ ಸ್ವಂತ ವಾಕ್ಯವನ್ನು ಹೇಳುತ್ತಿದ್ದೇನೆ. ಪ್ರಾಯಃ ನಿಮಗೆ ಅದರ ಮಹತ್ವ ಅರಿವಾದೀತು. ಮನುಷ್ಯ ಸಮಾಜಜೀವಿ. ಅಂದ ಮೇಲೆ ಯಾವುದೋ ಒಂದು ರೀತಿ ಸಮಾಜ ವ್ಯವಸ್ಥೆಯಾಗಬೇಕೆಂದು ಬಯಸುತ್ತಾನೆ. ನಾವು ಜಾತಿ ಸಂಸ್ಥೆಯನ್ನು ಬೆಳೆಸಿಕೊಳ್ಳುತ್ತಾ ಬಂದಿದ್ದೇವೆ. ಪಾಶ್ಚಾತ್ಯರು ವರ್ಗವನ್ನು ನಿರೂಪಣೆ ಮಾಡಿಕೊಂಡಿದ್ದಾರೆ. ಪಶ್ಚಿಮದೇಶದಲ್ಲಿ ಜಾತಿಸಂಸ್ಥೆ ಎಂಬುದು ಏನಾದರೂ ಅಪಾಯವನ್ನು ಮಾಡಿದ್ದರೆ,ಅವರ ವರ್ಗ ಹೆಚ್ಚಿನ ಅಪಾಯವನ್ನು ಮಾಡಿದೆ. 'If class has done any good to the society, caste has done more good to the country and also to the society' ಅಂದರೆ ವರ್ಗ ಎಂಬುದು ಸಮಾಜಕ್ಕೆ ಏನಾದರೂ ಉಪಕಾರವನ್ನು ಮಾಡಿದ್ದರೆ ಜಾತಿ ಸಂಸ್ಥೆ ಎಂಬುದು ಇನ್ನೂ ಹೆಚ್ಚಿನ ಉಪಕಾರವನ್ನು ಮಾಡಿದೆ. ಹೌದು, ಬಹಳ ದಿವಸಗಳಿಂದಲೂ ಕೂಡ ಈ ಸಂಸ್ಥೆ ಬೆಳೆದುಕೊಂಡು ಬಂದಿದೆ. ಈ ಸಂಸ್ಥೆಯನ್ನು ಕಿತ್ತು ಒಗೆಯಬೇಕೇ ಉಳಿಸಿಕೊಂಡು ಬರಬೇಕೇ ಎಂಬ ಒಂದು ಪ್ರಶ್ನೆ ನಮ್ಮ ಮುಂದೆ ಬಂದಾಗ ಪ್ರಾಯಶಃ ನಮಗೆ ಸಮರ್ಪಕವಾದ ಉತ್ತರ ದೊರಕುವುದಿಲ್ಲ. ಮಹಾತ್ಮಾಜಿಯವರ ಮತ್ತೊಂದು ವಾಕ್ಯವನ್ನು ನಾವು ಗಮನಿಸಬೇಕು,

ನಾವು ಎಲ್ಲವನ್ನೂ ಅಳಿಸಬೇಕೆಂದು ಮಾಡುವ ಪ್ರಯತ್ನ ಸಫಲವಾಗುವುದಿಲ್ಲ. ಆದರೆ ನಾವು ಅರಿಯಬೇಕಾದ ತತ್ತ್ವ ವೇನು ? ಎಲ್ಲಾ ಜಾತಿಗಳೂ ಉದ್ಧಾರವಾಗಬೇಕು. ಎಲ್ಲಾ ಸಮಾಜಗಳೂ ಉದ್ಧಾರವಾಗಬೇಕು. ವಿಶಾಲವಾದ ಭಾವನೆ ಮೂಡಿ ಬರಬೇಕು. ಯಾವುದೇ ಒಂದು ಸಮಾಜ ಉದ್ಧಾರವಾಗಿ ಇನ್ನೊಂದು ಸಮಾಜ ಕೆಳಗೆ ಹೋಗಬೇಕೆಂಬ ತತ್ತ್ವವನ್ನು ಮಾತ್ರ ದೂರಮಾಡಬೇಕು. ಪರಸ್ಪರ ಗೌರವ, ಪರಸ್ಪರ ಪ್ರೇಮಾದರಗಳು, ಪರಸ್ಪರ ಸಹಿಷ್ಣುತೆ ಈ ಒಂದು ತತ್ವದ ಮೇಲೆ ನಮ್ಮ ಸಮಾಜಜೀವನ ಮುಂದುವರಿಯಬೇಕು. ಆದ್ದರಿಂದ ಈ ತರಹ ಜಾತೀಯ ಸಂಬಂಧವಾದ ಸಮ್ಮೇಳನವೆಂದು ಯಾರು ಭಯಪಡಬೇಕಾದ್ದಿಲ್ಲ. ಆಕ್ಷೇಪಣೆ ಮಾಡಬೇಕಾದ ಅಗತ್ಯವಿಲ್ಲ. ಯಾವುದೇ ಒಂದು ಸಮಾಜವಾಗಲಿ ಭಾರತ ಮಾತೆಯ ಒಂದು ಮಗು. ಅಂದಮೇಲೆ ಸಮಾಜವು ತಾನು ದಷ್ಟಪುಷ್ಟವಾಗಿ ಬೆಳೆಯಬೇಕೆಂದು ಸಂಕಲ್ಪಿಸಿ ಪ್ರಗತಿಯನ್ನು ಸಾಧನೆ ಮಾಡಿಕೊಳ್ಳಬೇಕೆಂದು ಒಂದು ಪ್ರಯತ್ನದಲ್ಲಿ ತೊಡಗಿರುವಾಗ ಖಂಡನೀಯವೆಂದು ಯಾರೂ ಹೇಳುವಂತಿಲ್ಲ. ಪರಂತು ಆ ಒಂದು ಅಂಗ ಬೆಳೆದದ್ದೇ ಆದರೆ ಅದು ಭರತಖಂಡಕ್ಕೆ ಒಂದು ವಿಶೇಷಸೇವೆ ಎಂದೇ ಭಾವಿಸಬೇಕು. ಭಾರತಮಾತೆಯ ಒಂದು ಕಾಣಿಕೆ ಎಂದೇ ಭಾವಿಸಬೇಕು. ಆದ್ದರಿಂದ ಯಾವುದೇ ಒಂದು ಸಮಾಜ ತಾನು ಮುಂದುವರಿಯಬೇಕೆಂದು ಒಂದು ಪ್ರಯತ್ನವನ್ನು ಮಾಡುವ ತತ್ತ್ವವನ್ನು ಅಲ್ಲಗಳೆಯುವುದು ಸಾಧುವಾಗುವುದಿಲ್ಲ. ಮತ್ತೊಂದು ವಿಷಯ ನಾವು ಗಮನಿಸಬೇಕಾದ್ದು : ಭಾರತೀಯ ಧರ್ಮಸಂಸ್ಕೃತಿ ಅವರ ಪ್ರಕಾರ ವಿಶಾಲವಾದ ಅರ್ಥವುಳ್ಳದ್ದಾಗಿದೆ. ಉದಾತ್ತವಾದ ಭಾವನೆಯುಳ್ಳದ್ದಾಗಿದೆ. ಆದರೆ ಆದರ್ಶಗಳನ್ನು ಆ ಶ್ರೇಷ್ಠವಾದ ಅಂಶಗಳನ್ನು ಸಮಾಜಜೀವನದಲ್ಲಿ ಬಳಕೆಮಾಡಿಕೊಳ್ಳಬೇಕು. ಇಂದು ಮನುಷ್ಯ ಪ್ರಾಯಃ ಮಾನವಸಹಜವಾದಂತಹ ತಪ್ಪುಗಳನ್ನು ಮಾಡಿ ಅವುಗಳನ್ನು ಅಸಾಧ್ಯಮಾಡಿಕೊಂಡಿದ್ದಾನೆ. ಮತ್ತು ಸ್ವಾರ್ಥಕ್ಕೋಸ್ಕರ ಅವುಗಳನ್ನು ಬಳಕೆಮಾಡಿಕೊಂಡಿದ್ದಾನೆ. ಆ ವಿಧವಾದ ಒಂದು ಪ್ರವೃತ್ತಿಯನ್ನೇ ಈಗ ಸಮಾಜ ಜೀವನದಲ್ಲಿ ಕಾಣುತ್ತಿರುವ ಅತೃಪ್ತಿಗೂ ಅಸಮಾಧಾನಕ್ಕೂ ಕೂಡ ಮೂಲಭೂತವಾದ ಒಂದು ಕಾರಣವೆನ್ನಬಹುದಾಗಿದೆ. ಮೊನ್ನೆ ಒಬ್ಬರು ಹೇಳುತ್ತಾ ಇದ್ದರು: 'ಅಸ್ಸಾಂ ದೇಶದಲ್ಲಿ ಸಂಕೇಲರು ಎಂಬ ಒಂದು ಗುಂಪು ಇದೆ. ಅವರು ಎಸ್ಟೇಟಿನಲ್ಲಿ ಕೆಲಸ ಮಾಡತಕ್ಕಂಥ ಜನರು. ಈ ದಿವಸವೂ ಕೂಡ ಅವರನ್ನು ಕಾಣುವ ದೃಷ್ಟಿ ಎಂದರೆ, ನಾವು ದನಗಳನ್ನು ಒಯ್ಯುವ ಹಾಗೆ ಮುಖಂಡರು ಒಂದು ಚಾಟಿಯನ್ನು ಹಿಡಿದುಕೊಂಡು ಹೊಡೆದುಕೊಂಡು ಹೋಗುತ್ತಾಇರುತ್ತಾರೆ. ಅವರು ಮಾನವೀಯತೆಯ ಅರಿವು ಕಿಂಚಿತ್ತೂ ಇಲ್ಲದಂತೆ ದನಗಳ ಹಾಗೆ ಜೀವನ ಮಾಡುತ್ತಾ ಇದ್ದಾರೆ'.

ನಾನು ಹೇಳಿದೆ: ಆ ಮುಖಂಡರು ಏನು ಮಾಡುತ್ತಿದ್ದಾರೆ ? ಆ ಎಂ.ಎಲ್.ಎ.ಗಳು ಏನು ಮಾಡುತ್ತಿದ್ದಾರೆ ? ಅವರು ವಿಚಾರ ಮಾಡತಕ್ಕಂಥ ಪ್ರಶ್ನೆ. ಯಾವ ಜನಾಂಗ ಪ್ರಾಯಶಃ ತಿಳುವಳಿಕೆ ಇಲ್ಲದೇನೆ ಯಾರೋ ಹೇಳತಕ್ಕ ಒಂದು ಮಾತನ್ನು ನಂಬಿಕೊಂಡು ಆ ಮುಖಂಡರುಗಳಿಗೆ ತಲೆಬಾಗಿ ತಮ್ಮ ಜೀವನವನ್ನು ಎಷ್ಟು ಕಾಲ ಸಾಗಿಸಿಕೊಂಡು ಹೋಗುವುದಿಲ್ಲವೋ ಅಂತಹ

ಸಮಯದಲ್ಲಿ ಆ ಜನಾಂಗದ ಪ್ರೇಮಾದರಗಳನ್ನು ಉಪಯೋಗ ಮಾಡಿಕೊಂಡು ಪೋಷಣೆ ಮಾಡಿ ಸ್ವಾರ್ಥಕ್ಕೋಸ್ಕರವಾಗಿ ಉಪಯೋಗ ಮಾಡಿಕೊಳ್ಳತಕ್ಕಂಥ ಒಂದು ಪರಿಸ್ಥಿತಿ ನಮ್ಮ ಸಮಾಜಜೀವನದಲ್ಲಿ ಬಂದಿದೆ. ಸ್ವಾಭಾವಿಕವಾಗಿ ಕೊಂಚ ಮಟ್ಟಿಗೆ ಜನರಿಗೆ ತಿಳುವಳಿಕೆ ಜಾಸ್ತಿಯಾದ ಮೇಲೆ. ಜಾಗೃತಿ ಮೂಡಿದ ಮೇಲೆ ತಮ್ಮ ಸ್ಥಾನಮಾನಗಳನ್ನು ಅರಿತುಕೊಳ್ಳ ತಕ್ಕಂಥ ಸಾಮರ್ಥ್ಯ ಬಂದ ಮೇಲೆ ಯಾವುದೇ ಜನಾಂಗ ತಾನು ಮುಂದುವರಿಯಬೇಕೆನ್ನುವುದು ಸ್ವಾಭಾವಿಕ ಮತ್ತು ಅಂತಹ ಒಂದು ಬಯಕೆಯನ್ನು ನಾವು ಸ್ವಾಗತಿಸಬೇಕಾದುದು ಕರ್ತವ್ಯ. ಆ ದೃಷ್ಟಿಯಿಂದಲೇನೆ ಯಾವ ಜನಾಂಗಗಳು ಬಹಳ ಕಾಲ ಬಹು ಸಂಖ್ಯಾತವಾಗಿದ್ದರೂ ಕೂಡ ಹಿಂದುಳಿದು ಹೋಗಿವೆಯೋ ಅಂತಹ ಜನಾಂಗಗಳು ಹಲವಾರು ವಿಧದ ಸಂಕಷ್ಟಗಳಿಗೆ ಗುರಿ ಯಾಗಿವೆಯೋ ಆ ಜನಾಂಗಗಳು ವಿದ್ಯಾಭ್ಯಾಸವಾದ ಮೇಲೆ, ತಿಳುವಳಿಕೆ ಬಂದ ಮೇಲೆ ತಮ್ಮ ನಿಜವಾದಂಥ ಸ್ಥಾನಮಾನ ಗಳನ್ನು ಉಳಿಸಿಕೊಳ್ಳುವ ಸಲುವಾಗಿ ಪ್ರಯತ್ನ ಮಾಡುವುದು ಹೋರಾಡುವುದು ಸ್ವಾಭಾವಿಕವಾದದ್ದು, ಸಹಜವಾದದ್ದು ಎಂಬ ತಕ್ಕಂತಹ ಒಂದು ತತ್ತ್ವವನ್ನು ಮಾನ್ಯ ಮಾಡಬೇಕಾಗಿದೆ. ಅದನ್ನು ಯಾರೂ ಕೂಡ ಖಂಡಿಸುವಂತಿಲ್ಲ. ಈ ಒಂದು ಮಹಾ ತತ್ತ್ವದ ಪರಿಜ್ಞಾನದಿಂದಲೇನೇ ಈ ಸಮಾಜವಾದರೂ ಕೂಡ ತಾನು ಮುಂದುವರಿಯಬೇಕೆನ್ನುವ ಒಂದು ಆಕಾಂಕ್ಷೆ ಉಳ್ಳದ್ದಾ ಗಿರುವುದು. ಪ್ರಾಯಶಃ ಯಾರೂ ಆ ಬಗ್ಗೆ ಆಕ್ಷೇಪಣೆ ಮಾಡತಕ್ಕದ್ದಲ್ಲ. ಪರಂತು ಆ ಆಕಾಂಕ್ಷೆಯನ್ನು ಸ್ವಾಗತಿಸಿ ಅವರಿಗೆ ಯಾವ ರೀತಿಯಿಂದ ನೆರವನ್ನು. ಬೆಂಬಲವನ್ನು ಕೊಡಬೇಕೋ ಅದನ್ನು ಎಲ್ಲಾ ಸಮಾಜಗಳು ಕೊಡಬೇಕಾದದ್ದು ಒಂದು ಮುಖ್ಯ ವಾದ ಕರ್ತವ್ಯ. ಶ್ರೀಮಾನ್ ಶೇಷಣ್ಣನವರು,* ನನಗೆ ತೆಲುಗು ಬರುವುದಿಲ್ಲ. ಆದರೂ ಸ್ಥೂಲವಾಗಿ ಅರಿತು ಕೊಂಡೆ, ಅವರು ಮೊದಲಿನಿಂದಲೂ ಸಮಾಜದ ಏಳ್ಗೆಗೋಸ್ಕರ ಹೋರಾಟ ಮಾಡಿದರು. ಹೋರಾಡಿದರೂ ಇನ್ನೂ ಫಲಪ್ರದವಾಗಿಲ್ಲವೆಂದು ಹೇಳಿದರು. ಕಿಂಚಿತ್ತಾದರೂ ಫಲವನ್ನು ಕೊಟ್ಟಿಲ್ಲ, ಹೋರಾಟವು ಯಶಸ್ವಿಯಾಗಿಲ್ಲವೆಂದು ಅವರು ಹೇಳಿದರು. ಆದರೆ ಒಂದು ಮಾತು ನಾವು ಗಮನಿಸಬೇಕಾದ್ದು: ಯಾವುದೇ ಒಂದು ಸಮಾಜ ಮುಂದುವರಿಯಬೇಕಾದರೆ ಎರಡು ಮುಖ್ಯವಾದ ಅಂಶ ಬೇಕು. ಸಮಾಜದ ಪ್ರತಿಯೊಂದು ವ್ಯಕ್ತಿಯಲ್ಲಿಯೂ ಕೂಡ ಆತ್ಮ ವಿಶ್ವಾಸ ಮೂಡಿ ಬರಬೇಕು. ಸ್ವಾಭಿಮಾನ ಬೆಳೆದು ಬರಬೇಕು. ನನ್ನ ಸಮಾಜ ಮುಂದುವರಿಯಬೇಕು. ನನ್ನ ಬೆಳವಣಿಗೆಗೋಸ್ಕರವಾಗಿ ನನ್ನ ಕೈಲಾಗತಕ್ಕಂಥ ಕರ್ತವ್ಯವೆಲ್ಲವನ್ನು ಕೂಡ ಅದೂ ಪ್ರಾಮಾಣಿಕವಾಗಿ ಮಾಡಬೇಕು, ಎನ್ನುವ ಪ್ರಜ್ಞೆ ಮೂಡಿ ಬರಬೇಕು. ಭಗವದ್ಗೀತೆ 'ಉದ್ಧರೇತ್ ಆತ್ಮನಾ ತ್ಮಾನಂ' ಎಂದು ಸಂದೇಶ ಕೊಟ್ಟಿದೆ. ಯಾವೊಬ್ಬ ವ್ಯಕ್ತಿಯ ಪ್ರಗತಿ ತನ್ನ ಪ್ರಯತ್ನದಿಂದಲೇ ಆಗಬೇಕೇ ಹೊರತು ನನ್ನ ಉದ್ಧಾರವನ್ನೆಲ್ಲವನ್ನು ಇತರರು ಮಾಡಲು ಸಾಧ್ಯವಾಗುವುದಿಲ್ಲ. ಅಂದ ಮೇಲೆ ಎಲ್ಲಿಯವರೆಗೆ ಸಮಾಜ ಬಂಧುಗಳು ಜಾಗ್ರತ ರಾಗಿ ವ್ಯಕ್ತಿ ವ್ಯಕ್ತಿಯಲ್ಲಿಯೂ ಕೂಡ ಹಿತ ಮೂಡಿಸತಕ್ಕಂತಹ ಆತ್ಮ ವಿಶ್ವಾಸ ಮೂಡಿ ಸ್ವಾಭಿಮಾನ ಬೆಳೆದು ನಾನು ಮುಂದು ವರಿಯಬೇಕು, ಸಮಾಜವನ್ನು ಮುಂದೆ ತರಬೇಕು ಎನ್ನುವ ಇಚ್ಛೆ ಮೂಡಿ ಬರುವುದಿಲ್ಲವೋ ಅಲ್ಲಿಯವರೆಗೆ ಸಮಾಜ ಮುಂದುವರಿ ಯುವುದಿಲ್ಲ. ಇದು ಒಂದನೆಯ ವಿಷಯ. ಮತ್ತೊಂದು ವಿಷಯ ಅದರಲ್ಲಿ ಉಂಟಾಗುವಂಥ ಸ್ವಾಭಿಮಾನ. ಆತ್ಮವಿಶ್ವಾಸ ಮತ್ತು ಅವರ ಕರ್ತವ್ಯ ನಿಷ್ಠೆ ಎಲ್ಲವೂ ಫಲಕಾರಿಯಾಗತಕ್ಕಂಥ ರೀತಿಯ ಯೋಗ್ಯವಾದ ವಾತಾವರಣ ಸೃಷ್ಟಿಯಾಗಬೇಕು. ಹಾಗೆ ಸೃಷ್ಟಿ ಮಾಡಬೇಕಾದದ್ದು ಇತರ ಸಮಾಜಗಳ ಮುಖಂಡರು ಮತ್ತು ಸರಕಾರದ ಮುಖ್ಯವಾದ ಕರ್ತವ್ಯ. ಕೆಲವೇ ಮಂದಿ ಮುಖಂಡರು ಘೋಷಣೆ ಮಾಡಿದರೆ ಅಥವಾ ಭಾಷಣಗಳನ್ನು ಮಾಡಿದರೆ ಸಮಾಜ ಉದ್ಧಾರವಾಗುವದು ಸಾಧ್ಯವಿಲ್ಲ. ಅದನ್ನು ತಾವೆಲ್ಲ ಗಮನಿಸಬೇಕಾದದ್ದು. ಪ್ರಾಯಶಃ ಇಂದು ಭರತಖಂಡಕ್ಕೆ ಉಂಟಾಗಿರುವಂತಹ ಪ್ರಬಲ ದೋಷವೆಂದರೆ ಬಹಳ ಮಟ್ಟಿಗೆ ನಮ್ಮ ಜನರಲ್ಲಿ ಕರ್ತವ್ಯನಿಷ್ಠೆ ಕಡಿಮೆಯಾಗಿದೆ. ಪ್ರತಿಯೊಬ್ಬರು ತಮ್ಮ ಹಕ್ಕು ಬಾಧ್ಯತೆಯ ಅಪೇಕ್ಷೆ ಮಾಡುತ್ತಿದ್ದಾರೆ. ಕರ್ತವ್ಯ ಮಾಡಬೇಕು ಎನ್ನುವ ಒಂದು ವಿಚಾರದಲ್ಲಿ ನಾವು ಬಹಳ ಹಿಂದೆ ಹೋಗಿದ್ದೇವೆ. ಜಪಾನ್ ದೇಶದವರನ್ನು ನೋಡಿ, ಜರ್ಮನ್ ದೇಶದವರನ್ನು ನೋಡಿ. ಇಷ್ಟು ಎತ್ತರವಾದ ಮಟ್ಟವನ್ನು ಈ ಅಲ್ಪಾವಧಿಯಲ್ಲಿ ಮುಟ್ಟಬೇಕಾದರೆ ಏನು ಮುಖ್ಯ ವಾದ ಕಾರಣ? ಅವರ ದೇಶಪ್ರೇಮ, ಅವರ ಕರ್ತವ್ಯನಿಷ್ಠೆ, ಆದ್ದರಿಂದ ಅವರು ಶೀಘ್ರವಾಗಿ ಮೇಲಕ್ಕೇರಿದ್ದಾರೆ. ಯಾವ ಕಾರಣವೋ ಏನೋ ನಮಗೆ ಸ್ವಾತಂತ್ರ್ಯ ಬಂದ ಮೇಲೆ ಬಹು ಜನರಲ್ಲಿ ನಮಗೆ ಶ್ರಮ ಬೇಡ. ಸುಖ ಬೇಕು ಎನ್ನುವ ಒಂದು ಬಯಕೆ ಹೆಚ್ಚಾಗಿದೆ. ಆದ್ದರಿಂದ ಸಮಾಜ ಮುಂದುವರಿಯಬೇಕಾದರೆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಕೂಡ ಜಾಗ್ರತ ನಾಗಿ ಕರ್ತವ್ಯ ನಿಷ್ಠೆಯ ಬಗ್ಗೆ ಕಿಂಚಿತ್ತಾದರೂ ಹಿಂದುಳಿಯಬಾರದು. ಸ್ವಾಭಿಮಾನ ಆತ್ಮವಿಶ್ವಾಸ ಮೂಡಿಬರಬೇಕು. ನನ್ನ ಕಲ್ಯಾಣ ಮಾಡಿಕೊಳ್ಳಬೇಕು, ನನ್ನ ಸಮಾಜದ ಕಲ್ಯಾಣ ಮಾಡಿಕೊಳ್ಳಬೇಕು. ಎನ್ನುವ ಒಂದು ಸ್ಥಿರವಾದ ಭಾವನೆ ಉದಯವಾಗಬೇಕಾದುದು ಅವಶ್ಯ.

ಶಾಲೆಯನ್ನು ಸ್ಥಾಪನೆಮಾಡಿ ಮಕ್ಕಳಿಗೆ ವಿದ್ಯಾರ್ಜನೆ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು ವಿದ್ಯಾವಂತರಾಗತಕ್ಕಂತಹ ಅನುಕೂಲ ಸನ್ನಿವೇಶ ಮಾಡತಕ್ಕದ್ದು ಮಹಾ ಪವಿತ್ರವಾದ ಕೆಲಸವೆಂದು ಭಾವಿಸಬೇಕು. ವರದಿ ಪ್ರಕಾರ ೧೨೫ ಮಕ್ಕಳಿಗೆ

---

* ಇವರೂ ಒಬ್ಬ ಆ ಸಮಾರಂಭದ ಮುಖಂಡರು.

ಆಶ್ರಯ ಕೊಡತಕ್ಕಂತಹ ಒಂದು ಸಂಸ್ಥೆ ಹಾಳಾಗಿ ಹೋದರೆ ಅದು ಎಲ್ಲರೂ ದುಃಖಿಪಡಬೇಕಾದ ವಿಚಾರ. ನೀವು ಶ್ರೀಮಂತ ರಾಗಬೇಕು. ಸಂಸ್ಥೆ ಕಟ್ಟಲಿಕ್ಕೆ, ಎಂಬ ಭಾವನೆ ಬಿಡಬೇಕು. ಎಲ್ಲ ಬಡವರೂ ಕೂಡ ಮುಂದೆ ಬಂದು ಯಥಾಶಕ್ತಿ ಸೇವೆ ಸಲ್ಲಿಸಿ. ಸಂಸ್ಥೆ ಉದಯವಾಗಿ ಅದು ಮುಂದುವರಿಯತಕ್ಕ ಒಂದು ಉದಾತ್ತವಾದ ಭಾವನೆಯನ್ನು ತಾಳಿರಿ. ನೀವೆಲ್ಲ ತನುವನ್ನು ದಂಡಿಸಿ. ಮನವನ್ನು ಬಗ್ಗಿಸಿ ಕಾಯಕಷ್ಟವನ್ನು ಮಾಡತಕ್ಕ ಜನ, ಬಡತನ ಜೀವನವನ್ನು ಸಾಗಿಸತಕ್ಕಂತಹ ಜನ ನಿಮ್ಮ ಒಂದು ಕಾಣಿಕೆ ಎಷ್ಟೇ ಅಲ್ಪವಾದರೂ ಕೂಡ ಸಂಸ್ಥೆಗೆ ಅಪಾರವಾದ ಶಕ್ತಿಯಾಗುತ್ತದೆಂದು ತಾವೆಲ್ಲರೂ ಅರಿತುಕೊಳ್ಳಬೇಕು. ಅಂತೆಯೇ ಎಲ್ಲರ ಆ ವಿಧವಾದ ಸೇವೆ ಸಂದದ್ದೇ ಆದರೆ, ಆ ಸಂಸ್ಥೆ ಹೇಗನೆ ಮುಂದುವರಿಯುತ್ತದೆ ಎಂಬ ವಿಷಯವನ್ನು ತಾವೆಲ್ಲರೂ ತಿಳಿದುಕೊಳ್ಳಬೇಕು. ವರದಿಯನ್ನು ಓದುವಾಗ ಒಂದು ಮುಖ್ಯವಾದ ವಿಷಯವನ್ನು ತಮ್ಮ ಗಮನಕ್ಕೆ ತೆಗೆದುಕೊಂಡು ಬಂದರು. ಈ ಜನಾಂಗ ಮೊದಲಿನಿಂದಲೂ ಕೂಡ ಭರತಖಂಡಕ್ಕೆ ಅಮೋಘವಾದ ಸೇವೆಯನ್ನು ಸಲ್ಲಿಸಿದೆ. ಆ ಸೇವೆ ಒಂದು ಮುಖದ್ದಲ್ಲ. ಹಲವಾರು ಮುಖದಿಂದ ಅನಂತಮುಖಿ ಎನಿಸಿದೆ. ಒಕ್ಕಲುತನ ಮಾಡುವುದರಲ್ಲಿ ಈ ಜನಾಂಗವು ಶ್ರೇಷ್ಠವಾದ ಸ್ಥಾನವನ್ನು ಪಡೆದುಕೊಂಡು ಬಂದಿದೆ. ಮತ್ತೆ ದೇಶ ರಕ್ಷಣೆಯಾಗಬೇಕಾದರೆ, ದೇಶ ಉಳಿಯಬೇಕಾದರೆ ಯಾವ ರೀತಿಯಾದ ಸೇವೆ ಪ್ರಾಮುಖ್ಯವೋ ಅಂತಹ ಸೇವೆ ಸಲ್ಲಿಸುವುದರಲ್ಲಿ ಈ ಜನಾಂಗವು ಮೊದಲಿನಿಂದಲೂ ಅಮೋಘವಾದ ಪಾತ್ರವನ್ನು ವಹಿಸಿಕೊಂಡು ಬಂದಿದೆ. ಯಾಕಂದರೆ ಸ್ವಾತಂತ್ರವನ್ನು ಸಂಪಾದನೆ ಮಾಡತಕ್ಕದ್ದು ಒಂದು ಮುಖ್ಯ ಗುರಿಯಾದರೆ, ಯಾವ ಸಂಪತ್ತು ನಮ್ಮ ಹಸ್ತಗತವಾಯಿತೋ ಲಭ್ಯವಾಗಿದೆಯೋ ಅಂತಹ ಒಂದು ವಸ್ತುವನ್ನು ರಕ್ಷಣೆ ಮಾಡುವದು ಎಲ್ಲಕ್ಕಿಂತಲೂ ಶ್ರೇಷ್ಠವಾದ ಒಂದು ಕರ್ತವ್ಯ. ನೀವು ಮೊದಲಿನಿಂದಲೂ ರಾಜ್ಯರಕ್ಷಣೆ ಮಾಡುವುದರಲ್ಲಿ, ಧರ್ಮರಕ್ಷಣೆ ಮಾಡುವದರಲ್ಲಿ ಅಮೋಘವಾದ ಸೇವೆಯನ್ನು ಸಲ್ಲಿಸುತ್ತ ಬಂದಿದ್ದೀರಿ. ನಿಮ್ಮ ಸೇವೆಯನ್ನು ಸ್ಮರಿಸುವಾಗ ಇಂದಿನ ಜನಾಂಗವು ಕೂಡಾ ಆ ಪರಂಪರೆಯನ್ನು ಉಳಿಸಿಕೊಂಡು ಹೋಗತಕ್ಕಂತ ಪ್ರಯತ್ನ ಮಾಡುವದು ಮುಖ್ಯ. ಶ್ರೀಮಾನ್ ಬೋರಯ್ಯನವರು ಕರೆಯನ್ನು ಕೊಟ್ಟರು, ಸೈನ್ಯ ಖಾತೆಗೆ ಸೇರುವದರಲ್ಲಿ ಯಾರು ಹಿಂಜರಿಯಬಾರದೆಂದು. ಅದು ದೊಡ್ಡವರ ಸಂದೇಶ. 'ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸೀ'—ಹೆತ್ತಿರುವ ತಾಯಿ ಹೊತ್ತಿರುವ ಭೂಮಿ ಸ್ವರ್ಗಕ್ಕಿಂತಲೂ ಶ್ರೇಷ್ಠವಾದುವು. ಆ ಸೇವೆಯನ್ನು ಅತ್ಯಂತ ಪುಣ್ಯತಮವಾದ ಕಾರ್ಯವೆಂದು ಹೇಳಬೇಕು. 'ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ'. ದೇಶಕ್ಕೋಸ್ಕರವಾಗಿ ಪ್ರಾಣಾರ್ಪಣೆ ಮಾಡತಕ್ಕಂಥಾದ್ದು ಮಹೋನ್ನತವಾದ ಒಂದು ಸೇವೆ. ಈ ರೀತಿಯಾಗಿ ಯಾವ ಯಾವ ಕ್ಷಾತ್ರತೇಜಸ್ಸನ್ನು ಮೊದಲಿನಿಂದಲೂ ಕೂಡಾ ಬೆಳಸಿಕೊಂಡು ಬಂದಿದ್ದಾರೋ ಉಳಿಸಿಕೊಂಡು ಬಂದಿದ್ದಾರೋ ಇಂದು ಅವು ಈ ದೇಶವನ್ನು ಉಳಿಸಿಕೊಳ್ಳುವದರಲ್ಲಿ ಪ್ರಧಾನ ಪಾತ್ರ ವಹಿಸಬೇಕಾದುದು ಅವಶ್ಯಕ. ಯಾವುದೋ ಒಂದು ಉದ್ವೇಗದ ಭಾಷಣ ಮಾಡಿ ಚಪ್ಪಾಳೆ ಹೊಡೆದು, ಮನೆಗೆ ಹೋಗಿ ಮರೆತರೆ ಸಮಾಜ ಖಂಡಿತವಾಗಿಯೂ ಉದ್ಧಾರವಾಗುವುದಿಲ್ಲ. ಹೇಳಿದ ಮಾತನ್ನು ಯಾವಾಗಲೂ ಸ್ಮರಿಸುತ್ತಾ ಇರಬೇಕು. ಈಗಲೇ ಪ್ರತಿಜ್ಞೆಯನ್ನು ಕೈಕೊಂಡು ಕರ್ತವ್ಯಮುಖರಾಗಬೇಕು. ಹಾಗೆ ಮಾಡಿದರೆ ಮಾತ್ರ ಸಮಾಜ ಮುಂದುವರಿಯುವುದೇ ಹೊರತು ಕೆಲವೆ ಗಂಟೆ ಸೇರಿ ಇಲ್ಲಿ ಭಾಗವಹಿಸಿ ಉತ್ಸಾಹದಿಂದ ಇದ್ದು ಮರೆತು ಹೋದರೆ ಸಮಾಜ ಉದ್ಧಾರವಾಗುವುದಿಲ್ಲವೆಂದು ತಾವೆಲ್ಲ ಅರಿತುಕೊಳ್ಳಬೇಕಾದ ವಿಷಯ.

ಈ ಸಮಾಜದ ಮೂಲಪುರುಷ ಮಹಾನುಭಾವ ಮಹಾತಪಸ್ವಿ. ಮತ್ತು ಜಗತ್ತು ಎಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೆ ಸ್ಮರಿಸಬೇಕಾದಂತಹ ಒಂದು ಸಂಪತ್ತು ಕೊಟ್ಟುಹೋಗಿರುವವ. ರಾಮಾಯಣವನ್ನು ಬರೆದವ ವಾಲ್ಮೀಕಿಮಹರ್ಷಿ. ರಾಮಾಯಣವನ್ನು ಯಾವ ಕಾಲಕ್ಕೂ ಮರೆಯುವಂತಿಲ್ಲ. ಎಲ್ಲಿಯವರೆಗೆ ಜನಾಂಗವು ನೆಲೆಸಿರುವುದೋ ಅಲ್ಲಿಯವರೆಗೆ ಪವಿತ್ರವಾಗಿರತಕ್ಕಂತಹ ಒಂದು ಗ್ರಂಥ ಉಳಿಯುತ್ತದೆ. ಇದು ಬರಿಯ ಒಂದು ಕತೆಯಲ್ಲ. ಭಾರತೀಯ ಜೀವನದ ಆದರ್ಶವನ್ನು ಕೊಟ್ಟಿರತಕ್ಕಂತಹ ಒಂದು ಶ್ರೇಷ್ಠವಾಗಿರತಕ್ಕಂತಹ ಒಂದು ಅಮೌಲ್ಯ ಕೃತಿ. ಇಂತಹ ಒಂದು ಸಮಾಜ ಜೀವನ. ರಾಜಕೀಯ ಜೀವನ. ಆರ್ಥಿಕ ಜೀವನ. ಧಾರ್ಮಿಕ ಜೀವನದ ಪವಿತ್ರ ತತ್ತ್ವಗಳನ್ನು ಎಲ್ಲವನ್ನು ಸಂಗ್ರಹಮಾಡಿಕೊಡತಕ್ಕಂತಹ ಒಂದು ಗ್ರಂಥದ ನಿರ್ಮಾಣ ಕರ್ತೃ ವಾಲ್ಮೀಕಿಮಹರ್ಷಿ. ಅಂತಹವನ ಪರಂಪರೆಯಿಂದ ಬಂದಂತಹ ಜನಾಂಗ, ಪ್ರಾಯಶಃ ಮಹರ್ಷಿ ಯಾವ ಸ್ಥಾನಮಾನ ಉಳಿಸಿಕೊಂಡು ಬಂದಿದ್ದರೋ ಯಾವ ಚೇತನ ಶಕ್ತಿಯನ್ನು ಕೊಟ್ಟಿದ್ದರೋ ಅದನ್ನು ಕೊಂಚ ಮಟ್ಟಿಗೆ ಉಳಿಸಿಕೊಂಡು ಬರುವದು ಮುಖ್ಯ ಕರ್ತವ್ಯ. ಆ ದೃಷ್ಟಿಯಿಂದಲೇನೆ ಒಂದು ಆಶ್ರಮವನ್ನು ಸ್ಥಾಪನೆ ಮಾಡಿದ್ದೀರಿ. ಆಧ್ಯಾತ್ಮಿಕ ಜೀವನದಲ್ಲಿ ಯೋಗ್ಯವಾದ ಒಂದು ಮಾರ್ಗದರ್ಶನ ಮಾಡುತ್ತಿದ್ದೀರಿ. ಬಹುಸಂತೋಷಕರವಾದ ವಿಷಯ.

ಧರ್ಮ ಎಲ್ಲ ಜನಾಂಗದ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಮತ್ತೊಬ್ಬನು ಕಷ್ಟಪಡುತ್ತಿರುವದನ್ನು ಕಂಡು ತಾನು ಮರುಗಿ ಸಹಾಯವನ್ನು ಕೊಟ್ಟು ಮೇಲಕ್ಕೆ ಎತ್ತುವುದು ನಿಜವಾದ ಮನುಷ್ಯಧರ್ಮ. ಮತ್ತೊಬ್ಬನು ಸುಖವಾಗಿ ಬಾಳ್ವೆ ಮಾಡುವುದನ್ನು ನೋಡಿ ಅವನ ಸಂತೋಷದಲ್ಲಿ ಭಾಗಿಯಾಗುವ ಔದಾರ್ಯ ಯಾರಿಗೆ ಉಂಟೋ ಅದೇ ಧರ್ಮ.

ಅವನೇ ಧರ್ಮವಂತ. ಮತ್ತೊಬ್ಬನ ಕಷ್ಟವೇ ನನ್ನ ಕಷ್ಟ ಅವನ ಸುಖವೇ ನನ್ನ ಸುಖ ಎನ್ನುವ ಒಂದು ಭಾವನೆಯಿಂದ ಯಾವ ಜೀವನ ಸಾಗುತ್ತಿದೆಯೋ ಅದೇ ಧರ್ಮಜೀವನ. 'ಪತಿತಂ, ಪತಂತಂ, ಪತಿಷ್ಯಂತಂ ಯೋ ಉದ್ಧರೇತ್ ಸಧರ್ಮಃ' —ಯಾರು ಕೆಳಗೆ ಬಿದ್ದುಹೋಗಿದ್ದಾರೋ, ಬೀಳತಕ್ಕವರಾಗಿದ್ದಾರೋ, ಮುಂದೆ ಬೀಳುವರೋ ಅಂತಹವನಿಗೆ ಆಶ್ರಯವನ್ನು ಕೊಟ್ಟು ಮೇಲಕ್ಕೆ ಎತ್ತಿ ಉದ್ಧಾರ ಮಾಡತಕ್ಕದ್ದೇ ಧರ್ಮ. ಪತನವೆನ್ನುವದು ಆರ್ಥಿಕವಾಗಿರಲಿ. ಸಾಮಾಜಿಕವಾಗಿರಲಿ. ರಾಜಕೀಯವಾಗಿರಲಿ, ಧಾರ್ಮಿಕವಾಗಿರಲಿ. ಆಧ್ಯಾತ್ಮಿಕವಾಗಿರಲಿ, ಯಾವ ಕ್ಷೇತ್ರದ್ದೇ ಆಗಲಿ ಬಿದ್ದುಹೋಗತಕ್ಕಂತಹವ್ಯಕ್ತಿಗೆ ಆಶ್ರಯ ಕೊಡುವದು ನಿಜವಾದ ಧರ್ಮ. ಇಂತಹ ಒಂದು ವಿಶಾಲವಾದ ಭಾವನೆಯ ಮೇಲೆ ಧರ್ಮ ನಿಂತಿದೆ. ಧರ್ಮ ರೂಪಿಸಲ್ಪಟ್ಟಿದೆ. ಬೆಳೆದುಕೊಂಡು ಬಂದಿದೆ. ಆಧ್ಯಾತ್ಮಿಕವನ್ನು ಕೊಂಚಮಟ್ಟಿಗೆ ದುರುಪಯೋಗಮಾಡಿಕೊಂಡದ್ದು ನಿಜ. ನಮಗೆ ಸಾಕಷ್ಟು ಪರಿಜ್ಞಾನವಿಲ್ಲವಾದದ್ದರಿಂದ ತಿಳಿವಳಿಕೆ ಇಲ್ಲವಾದ ರಿಂದ ಪ್ರಾಯಶಃ ನಮ್ಮ ಸಂಸ್ಕೃತಿ ತತ್ತ್ವವನ್ನು ಆಳವಾಗಿ ಅಭ್ಯಾಸಮಾಡುವಾಗ ಒಂದು ಮುಖ್ಯವಾದ ವಿಷಯ ಕಾಣುತ್ತದೆ. ಇಷ್ಟೆಲ್ಲ ಉಂಟಾಗಿರುವ ಅವ್ಯವಸ್ಥೆಗೆ ಮುಖ್ಯವಾದ ಕಾರಣ ಅದರ ಅಜ್ಞಾನವೆ. ಮನುಷ್ಯನ ಜೀವನದಲ್ಲಿ ನಾಲ್ಕು ಮುಖ್ಯವಾದ ವಿಷಯ ವಿಮರ್ಶೆಯಾಗಬೇಕು. ನಾನು ಎಲ್ಲಿಂದ ಬಂದೆ ? ನಾನು ಯಾರು ? ನಾನು ಮಾಡಬೇಕಾದದ್ದೇನು ? ಮುಟ್ಟಬೇಕಾದ ಗುರಿ ಯಾವುದು? ಇವು ಸುಲಭವಾದ ಪ್ರಶ್ನೆಗಳು. ಆದರೆ ಉತ್ತರವೇನು ಸಾಮಾನ್ಯವಾದದ್ದಲ್ಲ. ಉತ್ತರಿಸಲು ಸಮಯವಿಲ್ಲ, ಸಂಕ್ಷೇಪವಾಗಿ ಮುಕ್ತಾಯ ಮಾಡುತ್ತೇನೆ. ಚಂದ್ರಲೋಕವನ್ನು ಕಂಡುಹಿಡಿದ ವಿಜ್ಞಾನಿಗಳ ಮುಂದೆ ಈ ಪ್ರಶ್ನೆ ಇಟ್ಟಾಗ ಉತ್ತರವನ್ನು ಕೊಡಲಾರರು. ಆದರೆ ನಮ್ಮ ಭಾರತೀಯ ಪುಣ್ಯಾತ್ಮರು. ಹಿಂದಿನ ಕಾಲದವರು,ಸಮರ್ಪಕವಾದ ಉತ್ತರ ಕೊಟ್ಟಿದ್ದಾರೆ. ಅದರಲ್ಲಿಯೂ ಹಳ್ಳಿಯ ಅವಿದ್ಯಾವಂತ ಹೆಣ್ಣುಮಗಳೊಬ್ಬಳು ಉತ್ತರಕೊಟ್ಟಿದ್ದಾಳೆ. ಅವಿದ್ಯಾವಂತೆಯಾದ ಒಬ್ಬ ಹೆಣ್ಣುಮಗಳಿವಳು. ಅವಳಿಗೆ ಒಬ್ಬನೇ ಮಗನಿದ್ದ ಸುಮಾರು ೮--೯ ವರ್ಷದವನಾಗಿದ್ದ. ಒಂದು ದಿವಸ ಮಗನನ್ನು ಮುಂದೆ ಕುಳ್ಳಿರಿಸಿಕೊಂಡು ಬುದ್ಧಿವಾದ ಹೇಳುತ್ತಿದ್ದಾಳೆ. ಪ್ರಾಯಶಃ ಆ ಮಾತನ್ನು ಕೇಳಿದಾಗ ಆಶ್ಚರ್ಯಪಡಬಹುದು. ಹೆಣ್ಣುಮಕ್ಕಳ ಸ್ಥಾನಮಾನ ಹೇಗಿತ್ತು. ಪರಂತು ವಿದ್ಯೆ ಇರದೇ ಇದ್ದಂತಹ ಕಾಲದಲ್ಲಿ ಅವರ ಜೀವನವೇ ಸಂಸ್ಕೃತಿಯಾಗಿತ್ತು. ಜೀವನವೇ ಒಂದು ಪವಿತ್ರವಾದ ತತ್ವವಾಗಿತ್ತು. ತಾಯಿ ಉಪದೇಶ ಮಾಡುತ್ತಾ ಇದ್ದಾಳೆ. ಜಾನಪದ ಗೀತೆಯಲ್ಲಿ ಈ ಮಾತು ಚೆನ್ನಾಗಿ ಚಿತ್ರಿತವಾಗಿದೆ:–

'ಆಚಾರಕ್ಕರಸಾಗು । ನೀತಿಗೆ ಪ್ರಭುವಾಗು
ಮಾತಿನಲಿ ಚೂಡಾಮಣಿಯಾಗು । ಎಲೆ ಕಂದ
ಜ್ಯೋತಿಯೇ ನೀನಾಗು ಜಗಕ್ಕೆಲ್ಲಾ ॥'

ಎಂತಹ ಪವಿತ್ರವಾದುದು, ಗಮನಿಸಬೇಕು. ಒಬ್ಬ ಸಾಮಾನ್ಯವಾದ ಹೆಣ್ಣುಮಗಳ ಬಾಯಿಂದ ಈ ಮಾತು ಬರಬೇಕಾಗಿದ್ದರೆ ಅವರ ಸಂಸ್ಕಾರ ಹೇಗೆ ಇತ್ತು. ಅವರ ಶಕ್ತಿ ಎಷ್ಟಿತ್ತು, ಅವರ ಜೀವನ ಎಂತಹದೆಂದು ಗಮನಿಸಬೇಕಾದುದು. ಇದು ಎಲ್ಲ ಹಳ್ಳಿಗಳಲ್ಲಿ ಸಾಮಾನ್ಯವಾದ ಜನಾಂಗಗಳಿಗೆ ಅನ್ವಯವಾಗತಕ್ಕಂಥ ತತ್ವ. ಯಾವದೇ ಒಂದು ಕುಲ, ಒಂದು ವರ್ಗಕ್ಕಲ್ಲ. ಮಗು ನೀನು ಆಚಾರವಂತನಾಗಿ ಬಾಳಪ್ಪ. ಶ್ರೀಮಂತನಾಗಿ ಬಾಳು ಎಂದು ಹೇಳಲಿಲ್ಲ. ಅಧಿಕಾರ ಪಡೆದುಕೋ ಅಂತಾ ಹೇಳಲಿಲ್ಲ. ಆಸ್ತಿವಂತನಾಗಿ ಬಾಳು ಅಂತಾ ಹೇಳಲಿಲ್ಲ. ಒಳ್ಳೆಯ ಆಚಾರವಂತನಾಗಿ ಬಾಳು, ಒಳ್ಳೆ ಗುಣವಂತನಾಗಿ ಬಾಳು, ಪವಿತ್ರವಾದಂತಹ ಮಾತು ಉಳ್ಳವನಾಗಿ ಬಾಳು. ಸದಾಚಾರವುಳ್ಳವನಾಗಿ, ಗುಣವಂತನಾಗಿ. ಪವಿತ್ರವಾದ ವಾಕ್ಯವುಳ್ಳವನಾದರೆ ಪ್ರಾಯಶಃ ಮಾನವನೇ. ನೀತಿವುಳ್ಳದ್ದಾಗುತ್ತದೆ ನಿನ್ನ ಜೀವನ. ತಾವು ಗಮನಿಸಬೇಕು ನಮ್ಮ ಸಂಸ್ಕೃತಿಯ ಹಿರಿಮೆಯನ್ನು. ಅಂದಮೇಲೆ ಭಾರತೀಯ ಸಂಸ್ಕೃತಿ ಅಂತಹ ಶ್ರೇಷ್ಠವಾದ ವಿಚಾರಗಳನ್ನು ಗಮನಿಸಿ ಯೋಗ್ಯವಾದ ಉತ್ತರವನ್ನು ಕೊಡುತ್ತಾ ಬಂದಿದೆ. ನಾನು ಯಾರು ಅನ್ನ ತಕ್ಕಂತಹ ಒಂದು ಪ್ರಶ್ನೆಯನ್ನು ತೆಗೆದುಕೊಂಡು ಉತ್ತರವನ್ನು ಕೊಟ್ಟಿದ್ದಾರೆ. ನೀನು ಹೊರಗೆ ಕಾಣುವಂತಹ ದೇಹವಲ್ಲ ಅಥವಾ ಅವಯವ ಮಾತ್ರವಲ್ಲ, ಮನಸ್ಸು ಮಾತ್ರವಲ್ಲ, ಎಲ್ಲವನ್ನು ಹೊಂದಿರತಕ್ಕಂಥ ಚೈತನ್ಯ ನೀನು. ಅದನ್ನು ಆತ್ಮಾ ಎಂದು ಕರೆಯುತ್ತಾರೆ. ಈ ಒಂದು ತತ್ವ ವ್ಯಾಪಕವಾಗುವುದು ಮಾನವ ಜೀವನಕ್ಕೆ ಅವಶ್ಯ. ಆದರೆ ಅದನ್ನು ತಪ್ಪು ಅರ್ಥಮಾಡಿಕೊಂಡು ಸ್ವಾರ್ಥಕ್ಕೆ ಉಪಯೋಗ ಮಾಡಿಕೊಂಡು ಬಳಕೆಯನ್ನು ಮಾಡಿಕೊಳ್ಳತಕ್ಕಂತಹ ರೀತಿ ನೀತಿಗಳಲ್ಲಿ ಮಾತ್ರ ಲೋಪದೋಷ ಕಂಡುಬಂದು ಅವ್ಯವಸ್ಥೆಗೆ ಕಾರಣವಾಗಿದೆ. ಅಂತಹ ಒಂದು ಆಧ್ಯಾತ್ಮಿಕ ಚೈತನ್ಯವನ್ನು ಮೂಡಿಸುವುದರ ಸಲುವಾಗಿ ಯಾವ ಈ ಸಂಸ್ಥೆಯು ಕಟ್ಟಲ್ಪಟ್ಟಿದೆಯೋ ಅದು ಕೂಡ ಪ್ರಶಂಸನೀಯವಾದ ಕಾರ್ಯ. ಆ ಸಂಸ್ಥೆಯ ಕಾರ್ಯಗಳು ಯಶಸ್ವಿಯಾಗಿ ಮುಂದುವರಿಯತಕ್ಕಂತಹ ಒಂದು ಶಕ್ತಿಯನ್ನು ಪರಮಾತ್ಮನು ಅನುಗ್ರಹ ಮಾಡಲಿ.

# ೯. ಭಾರತೀಯರು ಜಗತ್ತಿಗೆ ನೀಡಿದ ಬೆಳಕು

[೨೫-೯-೧೯೭೨ರಂದು ಮೈಸೂರು ವಾಣಿಜ್ಯಸಂಘದ ಭವನದಲ್ಲಿ ನಡೆದ ವಿಶ್ವಹಿಂದೂಪರಿಷತ್ತಿನ ರಾಜ್ಯಸಮಿತಿಯ ಉದ್ಘಾಟನಾ ಭಾಷಣ]

"ವಿಶ್ವದ ಮಾನವಕುಲದ ಕಲ್ಯಾಣಕ್ಕಾಗಿ ಹಿಂದೂಧರ್ಮದ ರಕ್ಷಣೆಯಾಗಿ ಅದು ಪರಿವರ್ಧಿಸಬೇಕು. ಇಲ್ಲದಿದ್ದರೆ ಮಾನವಕುಲದ ಪತನ ಮತ್ತು ಸರ್ವನಾಶ ನಿಶ್ಚಿತ. ಭಾರತಸ್ವಾತಂತ್ರ್ಯ ಕೇವಲ ಭಾರತಕ್ಕೆ ಅಲ್ಲ. ಇಡೀ ವಿಶ್ವಕ್ಕೆ ಅತಿ ಮಹತ್ವದ ಸಂಗತಿಯಾಗಿದೆ. ಮಾನವನ ಧಾರ್ಮಿಕ, ಆಧ್ಯಾತ್ಮಿಕ, ಆರ್ಥಿಕ, ರಾಜಕೀಯ ಭವಿಷ್ಯವನ್ನು ರೂಪಿಸುವುದರಲ್ಲಿ ಸ್ವತಂತ್ರ ಭಾರತ ಅತಿ ಮಹತ್ವದ ಪಾತ್ರವನ್ನು ನಿರ್ವಹಿಸಲಿದೆ". ಎಂದು ಹೇಳಿ ಭಾರತದಲ್ಲಿರುವ ಹಿಂದುಗಳಲ್ಲಿ ಹಿಂದುತ್ವದ ಅಭಿಮಾನವನ್ನು ಜಾಗೃತಗೊಳಿಸಿ, ಅವರನ್ನು ಸಂಘಟಿಸುವುದರ ಜೊತೆಗೆ ವಿಶ್ವದಾದ್ಯಂತ ಹರಡಿರುವ ಹಿಂದುಗಳಿಗೆ ಸ್ಫೂರ್ತಿ ಚೈತನ್ಯ ನೀಡುವ ಕಾರ್ಯ ಆದಾಗಲೇ ಅರವಿಂದರ ಭವಿಷ್ಯವು ಸತ್ಯವಾಗಲಿದೆ. ಅಂತಹ ಮಹತ್ವದ ಕಾರ್ಯವನ್ನು ವಿಶ್ವಹಿಂದೂ ಪರಿಷತ್ ಆರಂಭಿಸುತ್ತಿರುವುದನ್ನು ತುಂಬುಹೃದಯದಿಂದ ಸ್ವಾಗತಿಸುವ ಮಂಗಳಕರವಾದ, ಪವಿತ್ರ ಮುಹೂರ್ತವಿದು. ಭಾರತದಲ್ಲಿ ಕಂಡುಬರುವ ಆರ್ಥಿಕ ದಾರಿದ್ರ್ಯಕ್ಕೆ ಹಿಂದುತ್ವದ ಅಭಿಮಾನ ತಾಳದೆ ಧಾರ್ಮಿಕ ಜೀವನದಿಂದ ದೂರವಾಗಿರುವುದೇ ಕಾರಣ. ಎಲ್ಲಿಯವರೆಗೆ ನಮ್ಮ ಜನರು ಹಿಂದೂಧರ್ಮವನ್ನು ಅರಿತು ನಿಜವಾದ ಹಿಂದುಗಳಾಗಿ ಬಾಳುವ ಭಾಗ್ಯವನ್ನು ಹೊಂದುವುದಿಲ್ಲವೋ ಅಲ್ಲಿಯವರೆಗೆ ಈ ದೇಶ ಕೇವಲ ಹೆಸರಿಗೆ ಮಾತ್ರ ಹಿಂದುರಾಷ್ಟ್ರ. ಮುಸ್ಲಿಂ ಮತಕ್ಕೆ ಘೋಷಣೆ ನೀಡುವ ರಾಷ್ಟ್ರಗಳು ಜಗತ್ತಿನಲ್ಲಿ ಹಲವಾರು ಇವೆ. ಅದೇ ರೀತಿ ಕ್ರೈಸ್ತಮತಕ್ಕೂ ಬೆಂಬಲ ನೀಡುವ ರಾಷ್ಟ್ರಗಳು ಇವೆ. ಆದರೆ ಹಿಂದೂಧರ್ಮಕ್ಕೆ ಇಂದು ಇರುವ ಆಧಾರಭೂತ ರಾಷ್ಟ್ರವೆಂದರೆ ಭಾರತ ಮಾತ್ರ. ಇದೊಂದು ವಾಸ್ತವಿಕ ಸತ್ಯ. ಈ ಬಗ್ಗೆ ಎಲ್ಲ ಹಿಂದುಗಳೂ ಕಣ್ತೆರೆದು ಯೋಚಿಸಬೇಕು. ಇಲ್ಲೇ ಹಿಂದುತ್ವದ ಅಭಿಮಾನವು ಅಳಿದರೆ ಹಿಂದುಗಳು ವಿಶ್ವದಿಂದಲೇ ಅಳಿದು ಹೋದಂತೆ ಎಂಬುದನ್ನು ತಿಳಿದು ಈಗಲಾದರೂ ಎಚ್ಚರಗೊಳ್ಳಬೇಕು. ಹಿಂದೂಧರ್ಮ ಶಿಥಿಲಗೊಳ್ಳುತ್ತಿದೆ ಎಂದು ಹೇಳುತ್ತಿರುವುದು ವಾಸ್ತವಿಕ ಸ್ಥಿತಿ. ಇದಕ್ಕೆ ಕಾರಣವೇನು ? ನಮ್ಮ ಧರ್ಮದ ಜನರಿಗೆ ಅದರ ಪವಿತ್ರ, ಸತ್ವಶಾಲಿ ತತ್ವಗಳ ಅರಿವಿಲ್ಲ. ಪರಿಚಯವಿಲ್ಲ. ಈ ಕಾರ್ಯವನ್ನು ಮಠಾಧೀಶರು ಮಾಡಬೇಕು. ಹಿಂದೆಯೂ ಅವರೇ ಮಾಡಿದ್ದರು. ಒಂದು ಕಾಲದಲ್ಲಿ ಅನೇಕ ರೂಪ, ವಿಧಾನ, ಹಂತಗಳಿಂದ ಈ ವ್ಯವಸ್ಥೆ ನಡೆಯುತ್ತಿತ್ತು. ಜನರ ತಿಳಿವಿನ ಮಟ್ಟ, ಕಾಲಕಾಲಗಳಲ್ಲಿನ ಸನ್ನಿವೇಶಗಳಿಗೆ ತಕ್ಕಂತೆ ಮಠಗಳ ಮೂಲಕ ಧರ್ಮದ ಪ್ರಚಾರ–ಪ್ರಸಾರ ಆಗುತ್ತಿತ್ತು. ಆದರೆ ಈಗ ಈ ವ್ಯವಸ್ಥೆ ಮಾಯವಾಗಿದೆ. ಅದರ ಸ್ಥಾನದಲ್ಲಿ ಬೇರೆ ವ್ಯವಸ್ಥೆ ಬಂದಿಲ್ಲ. ಈ ಅಭಾವದಿಂದ ಇಂದು ಹಿಂದೂ ಸಮಾಜದಲ್ಲಿ ಅನೈಕ್ಯ ಉಂಟಾಗಿದೆ. ಹಿಂದೂಧರ್ಮದ ಆಚರಣೆಯಲ್ಲಿ ಶಿಥಿಲತೆ ತಾಂಡವವಾಡುತ್ತಿದೆ.

**ಇಂದಿನ ಹಿಂದುಗಳ ಕರ್ತವ್ಯ :**

ಈ ಸ್ಥಿತಿಯನ್ನು ಹೀಗೆ ಮುಂದುವರಿಯಲು ಬಿಟ್ಟರೆ ನಮ್ಮ ಪತನ ನಿಶ್ಚಿತ. ಮಾತ್ರವಲ್ಲ, ಜಗತ್ತಿನ ಸರ್ವನಾಶವೂ ಕಟ್ಟಿಟ್ಟಂತೆಯೇ. ಆದುದರಿಂದ ಮತ್ತೊಮ್ಮೆ ಹಿಂದೂಧರ್ಮದ ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳನ್ನು ಅರಿತು, ಆಚರಣೆಗೆ ತಂದು ನಾವೆಲ್ಲರೂ ಹಿಂದುಗಳೆಂಬ ಅಭಿಮಾನದಿಂದ ಬಾಳುವಂತಾಗಬೇಕು. ಇಲ್ಲಿಯ ಹಿಂದುಗಳೆಲ್ಲರನ್ನೂ ಸಂಘಟಿಸಬೇಕು. ವಿದೇಶಗಳಲ್ಲಿರುವ ಹಿಂದುಗಳು ತಮ್ಮ ಧರ್ಮ, ಸಂಸ್ಕೃತಿ ಮತ್ತು ಪರಂಪರೆಗಳ ಸಂಸ್ಕಾರದಿಂದ ದೂರವಾಗದಂತೆ ಅವರಲ್ಲಿ ಸ್ಫೂರ್ತಿ, ಚೈತನ್ಯ ತುಂಬಬೇಕು. ವಿಶ್ವದ ಹಿಂದುಗಳೆಲ್ಲರೂ ಒಂದಾಗಬೇಕು. ಇದೀಗ ಇಂದಿನ ಹಿಂದುಗಳ ಮುಂದಿರುವ ತುರ್ತು ಕರ್ತವ್ಯ. ವಿಶ್ವ ಹಿಂದೂ ಪರಿಷತ್ ಈ ಮಹತ್ಕಾರ್ಯವನ್ನು ಮಾಡಲು ಮುಂದೆ ಬಂದಿರುವುದು ಅತಿ ಸಂತೋಷದ ಸಂಗತಿ. ಅದನ್ನು ಹಾರ್ದಿಕವಾಗಿ ಸ್ವಾಗತಿಸೋಣ. ಪೂರ್ಣ ಸಹಕಾರ ಬೆಂಬಲಗಳನ್ನು ಅದಕ್ಕೆ ನೀಡೋಣ.

**ಸುಶಿಕ್ಷಿತ ವರ್ಗ ಇದನ್ನು ತಿಳಿಯಲಿ :**

ಇಂದು ಸುಶಿಕ್ಷಿತ ವರ್ಗದಲ್ಲಿ 'ಧರ್ಮ' ಎಂದೊಡನೆ ತಿರಸ್ಕಾರಭಾವನೆ ಇದೆ. ಅವರು ಪಾಶ್ಚಾತ್ಯ ಸಂಸ್ಕೃತಿಯಿಂದ ಪ್ರಭಾವಿತರಾಗಿರುವುದೇ ಇದಕ್ಕೆ ಕಾರಣ. ಧರ್ಮವು ಐಹಿಕ ಜೀವನವನ್ನು ಕುಂಠಿತಗೊಳಿಸುವುದಿಲ್ಲ. ಜೀವನದ ಎಲ್ಲ ಕ್ಷೇತ್ರಗಳನ್ನೂ ಚೈತನ್ಯದಿಂದ ತುಂಬಬಲ್ಲ ವಿಶಾಲವಾದ ತತ್ವ ಹಿಂದೂಧರ್ಮ. ಭೌತಿಕಬಲ ಬಹಳ ಕಾಲ ಬಾಳದು. ರೋಮನ್ ಸಾಮ್ರಾಜ್ಯ, ಗ್ರೀಕ್ ಸಾಮ್ರಾಜ್ಯಗಳೆಲ್ಲಿವೆ ? ನೆಪೋಲಿಯನನೂ ಸಾಮ್ರಾಜ್ಯ ಕಟ್ಟಿದ. ಕೊನೆಗೆ ಸೋತಾಗ ಅಂತಹ ಸಾಮ್ರಾಜ್ಯವೂ ಉರುಳಿತು. ಆದರೆ ಯೇಸುವಿನ ಸಾಮ್ರಾಜ್ಯ ಮಾತ್ರ ಉಳಿದಿದೆ. ಇತರ ಸಾಮ್ರಾಜ್ಯಗಳು ಭೌತಿಕ ಶಕ್ತಿಯಿಂದ ಕಟ್ಟಿರುವುದೇ ಅವುಗಳ ಪತನಕ್ಕೆ ಕಾರಣ ಎಂದು ಅವನು ಉದ್ಘೋಷಿಸಿದ. ಇಂದು ಮಾನವನು ಎಂಥಾ ಭೌತಿಕ ಪ್ರಗತಿಯನ್ನು ಸಾಧಿಸ

ದ್ದಾನೆ. ಆದರೆ ಅವನ ಸಮಸ್ಯೆಗಳು ನಿವಾರಣೆಯಾಗದೆ ಅದಕ್ಕಿಂತ ಹೆಚ್ಚಿನ ಗತಿಯಲ್ಲಿ ಬೆಳೆದಿವೆ. ಭೌತಿಕ ಪ್ರಗತಿಯಲ್ಲಿ ಸುಖ ಶಾಂತಿಗಳು ಲಭಿಸುವುದಿಲ್ಲವೆಂದು ಜಗತ್ತಿನ ವಿಜ್ಞಾನಿಗಳು ಮತ್ತು ಪ್ರಮುಖ ಚಿಂತಕರೆಲ್ಲರೂ ತೀರ್ಮಾನಕ್ಕೆ ಬಂದಿದ್ದಾರೆ. ಅಮೇರಿಕಾದಲ್ಲಿ ಒಮ್ಮೆ ವಿಶ್ವದ ವಿಜ್ಞಾನಿಗಳ ಸಭೆ ಸೇರಿದಾಗ ಸಾಮಾನ್ಯ ರೈತನೊಬ್ಬ 'ಮಾನವನು ಪಕ್ಕಿಯಂತೆ ಆಕಾಶದಲ್ಲಿ ಹಾರಲು ಕಲಿತಿದ್ದಾನೆ. ಮೀನಿನಂತೆ ಸಮುದ್ರದಲ್ಲಿ ಈಜಾಡಲು ಕಲಿತಿದ್ದಾನೆ. ಆದರೆ ಮಾನವನಾಗಿ ನೆಲದ ಮೇಲೆ ಬಾಳಲು ಮಾತ್ರ ಕಲಿತಿಲ್ಲ' ಎಂದು ಹೇಳಿದ. (Man has learnt to fly like a bird in the air, man has learnt to swim like a fish in the seas, but man has not learnt to live as a man on the earth) ಈ ಸವಾಲು ವಿಜ್ಞಾನಿಗಳನ್ನು ಎಚ್ಚರಗೊಳಿಸಿತು. ಜೀವನದ ಸಮಸ್ಯೆಗಳಿಗೆ ವಿಜ್ಞಾನವು ಪರಿಹಾರ ನೀಡದಿರುವಾಗ ಧರ್ಮವನ್ನೇ ಅವಲಂಬಿಸಬೇಕಾಗುತ್ತದೆ ಎಂಬ ತೀರ್ಮಾನಕ್ಕೆ ಅವರು ಬಂದರು. ಮಾನವನಾಗಿ ಬಾಳಬೇಕಾದರೆ ಅನ್ಯ ಮಾರ್ಗವೇ ಇಲ್ಲ. ಇದನ್ನು ಸುಶಿಕ್ಷಿತ ವರ್ಗ ಚನ್ನಾಗಿ ತಿಳಿಯಬೇಕು. ಹಿಂದೂಧರ್ಮದ ತತ್ತ್ವಗಳನ್ನು ವಿದೇಶೀಯರು ತುಂಬಾ ಅಧ್ಯಯನ ಮಾಡಿದ್ದಾರೆ. ಮುಕ್ತಕಂಠದಿಂದ ಪ್ರಶಂಸೆ ಮಾಡಿದ್ದಾರೆ. ಜಗತ್ತಿಗೆ ಮೊಟ್ಟಮೊದಲು ಬೆಳಕನ್ನು ನೀಡಿದ ರಾಷ್ಟ್ರ, ಧರ್ಮ ಯಾವುದು ? ಎಂದು ಕೇಳಿದರೆ ಹಿಂದೂ ರಾಷ್ಟ್ರ ಮತ್ತು ಹಿಂದೂಧರ್ಮ ಎಂದು ನಿರ್ಭಯವಾಗಿ ಹೇಳಬಹುದು.

ಅತಿ ಪ್ರಾಚೀನ ಗ್ರೀಕ್ ಸಂಸ್ಕೃತಿ. ಈ ಮಾತನ್ನಾಡುವಾಗ ನಮ್ಮೆಲ್ಲರ ಹೃದಯದಲ್ಲಿ ನವಚೈತನ್ಯ ಉಂಟಾಗಬೇಕು. ಪರದೇಶೀಯರು ನಮ್ಮನ್ನು ಪ್ರಶಂಸಿಸುತ್ತಿರುವಾಗ ನಾವು ಮಾತ್ರ ನಮ್ಮನ್ನು ಅರಿತುಕೊಳ್ಳದೆ ಮಂಕಾಗಿರಲು ಕಾರಣವೇನು? 'ನೀನು ಯಾರು'? ಎಂದು ಕೇಳಿದರೆ 'ನಾನು ಹಿಂದೂ' ಎಂದು ಅಭಿಮಾನದಿಂದ ಹೇಳಲು ಇಂದಿನವರಿಗೆ ನಾಚಿಕೆಯಾಗುತ್ತದೆ ಎಂದರೆ ಎಂತಹ ದುರ್ದೈವಿಗಳು ನಾವಾಗಿದ್ದೇವೆ !

ಕೆಲವರು ಧರ್ಮವೇ ಭರತಖಂಡವನ್ನು ನೀರಸಗೊಳಿಸಿತು ಎಂದು ಹೇಳುತ್ತಾರೆ. ಇದು ಅಜ್ಞಾನದ ಪರಮಾವಧಿ. ಅಹಂ ಬ್ರಹ್ಮಾಸ್ಮಿ, ತತ್ತ್ವಮಸಿ ಎಂದು ಯಾರು ಹೇಳಬಲ್ಲರು ? ನೀನು ಸಾಮಾನ್ಯನಲ್ಲ, ನೀನು ಬ್ರಹ್ಮ, ದೇವರಾಗಿದ್ದೀಯೆ ಎಂಬ ವೀರನಾದ, ಧೀರಘೋಷಣೆಯನ್ನು ಜಗತ್ತಿನಲ್ಲಿ ಇನ್ನಾರು ಮಾಡಬಲ್ಲರು? ಸಾವಿರಾರು ವರ್ಷಗಳಿಂದಲೂ ಈ ಮಾತನ್ನು ನಾವು ಪದೇಪದೇ ಕೇಳುತ್ತಾಬಂದವರು. ಇಂದು ಅತಿ ಕೆಳಮಟ್ಟಕ್ಕೆ ಇಳಿದಿದ್ದೇವೆ. ಧರ್ಮದ ಬಗ್ಗೆ ತಿರಸ್ಕಾರದ ಭಾವನೆ ತಾಳಿರುವುದೇ ನಮ್ಮ ಪತನಕ್ಕೆ ಕಾರಣ. ಈ ವೀರನಾದ ಮಾಡಿದ ಶ್ರೇಷ್ಠ ಪೂರ್ವಜರ, ಋಷಿಮುನಿಗಳ, ಪವಿತ್ರಾತ್ಮರ ರಕ್ತ ನಮ್ಮ ನಾಡಿಗಳಲ್ಲಿ ಹರಿಯುತ್ತಿದ್ದರೂ ನಾವು ಹೇಡಿಗಳಾಗಿರಬೇಕೆ? ನಮ್ಮ ಧರ್ಮದಿಂದ ದೂರವಾಗಿರಬೇಕೆ? ನಾನು ಹಿಂದೂ ಎನ್ನಲು ನಾಚಬೇಕೆ ?

ಇಡಿಯ ಜಗತ್ತಿನ ಮತ್ತು ಮಾನವಕುಲದ ಕಲ್ಯಾಣಕ್ಕಾಗಿ ನಮ್ಮ ಪೂರ್ವಜರು ಹಿಂದೂಧರ್ಮದ ಕೊಡುಗೆಯನ್ನು, ಅದರ ಪ್ರಖರ ತೇಜಸ್ಸನ್ನು, ಅದ್ಭುತ ಜ್ಞಾನಸಂಪತ್ತನ್ನೂ ಬಿಟ್ಟುಹೋಗಿದ್ದಾರೆ. ಇದನ್ನು ನಾವು ಅರಿತುಕೊಳ್ಳಬೇಕು. ಪ್ರವರ್ಧಿಸಬೇಕು ಮತ್ತು ನಮ್ಮ ಜೀವನವನ್ನು ತೇಜಸ್ವಿಗೊಳಿಸಬೇಕು. ಇಲ್ಲದಿದ್ದರೆ ನಮ್ಮ ಪತನ ನಿಶ್ಚಿತ.

ನಮ್ಮಲ್ಲಿರುವ ಹಲವಾರು ಸಂಪ್ರದಾಯಗಳು, ಪಂಥಗಳು, ಮತಗಳು ಹಿಂದೂ ಸಮಾಜವನ್ನು ಸಂಕುಚಿತಗೊಳಿಸುತ್ತಿವೆ, ಅದರ ಐಕ್ಯ ಮತ್ತು ಶಕ್ತಿಗಳನ್ನು ಕುಂಠಿಸುತ್ತಿವೆ ಎಂದು ಹಲವರು ಹೇಳುತ್ತಾರೆ. ಈ ಮಾತನ್ನು ಹೇಳುವವರಿಗೆ ಹಿಂದೂ ಧರ್ಮದ ವಿಶಾಲ ದೃಷ್ಟಿಯ ತಿಳುವಳಿಕೆ ಇಲ್ಲ. ನಮ್ಮ ಧರ್ಮದಷ್ಟು ವಿಶಾಲವಾದ ತತ್ತ್ವಜ್ಞಾನ ಜಗತ್ತಿನಲ್ಲಿ ಬೇರೊಂದಿಲ್ಲ. ಸಂಪ್ರದಾಯಗಳು ಎಷ್ಟೇ ಇರಲಿ ; ಅವೆಲ್ಲವೂ ವಿಶಾಲ ಹಿಂದೂ ಸಮಾಜದ ಶಾಖೆಗಳೆಂಬುದನ್ನು ಮರೆಯಲಾಗದು. ಮಾತೃ ಸಮಾಜಕ್ಕೆ ಪೋಷಕವಾಗಿ, ಪೂರಕವಾಗಿ ಕಾಣಿಕೆ ನೀಡುವಂತೆ ಅವು ಇರಬೇಕು. ಈ ಭಾವನೆ ನಮ್ಮಲ್ಲಿ ಪ್ರಧಾನವಾಗಿರಬೇಕು. ತಾನೇ ಶ್ರೇಷ್ಠ ಎಂಬ ಭಾವನೆ ಬಂದರೆ ಮಾತ್ರ ಅದು ಸಮಾಜಕ್ಕೆ ಅಪಾಯಕಾರಿ : ನಿಶ್ಚಿತವಾಗಿ ಹಾನಿಕಾರಕ. ಹಿಂದೂ ಧರ್ಮವೇ ಈ ಪಂಥ-ಸಂಪ್ರದಾಯಗಳಿಗೆ ಅವಕಾಶವಿತ್ತಿದೆ. ಅದೇ ಅದರ ಮಹತ್ವ. ತಮ್ಮ ಪ್ರವಾದಿ ಹೇಳಿದ್ದೇ ಸತ್ಯವೆಂದು ಹೇಳುವ, ಇತರರೂ ಆ ರೀತಿ ಹೇಳಬೇಕೆಂದು ಒತ್ತಾಯಿಸುವ ಅಪರಾಧವನ್ನು ಹಿಂದೂಧರ್ಮ ಮಾಡಿಲ್ಲ.

ಹಿಂದೂ ಧರ್ಮದಲ್ಲಿ ಎಲ್ಲ ವಿಧದ ಎಲ್ಲ ಮಟ್ಟದ ತಿಳುವಳಿಕೆಯ ಜನರಿದ್ದಾರೆ. ಅವರೆಲ್ಲರಿಗೂ ಯೋಗ್ಯವೆನಿಸಿದ ಆತ್ಮೋದ್ಧಾರದ ಮಾರ್ಗವನ್ನು ಅನುಸರಿಸಲು ಅವಕಾಶ ನೀಡಿರುವ ಪವಿತ್ರ ಧರ್ಮವಿದು. ಎಲ್ಲ ಮಟ್ಟದ ಜನರಿಗೂ ಒಂದೇ ರೀತಿ ಬೋಧಿಸಿದರೆ ಎಷ್ಟು ಜನರಿಗೆ ಅರ್ಥವಾದೀತು ಮತ್ತು ಎಷ್ಟು ಜನರು ಅದರಂತೆ ಅನುಸರಿಸಲು ಯೋಗ್ಯರಾದಾರು ? ಈ ಪ್ರಶ್ನೆಯನ್ನು ಸಂಪ್ರದಾಯ-ಪಂಥಗಳನ್ನು ತೆಗಳುವವರು ವಿಚಾರ ಮಾಡಿದಂತೆ ಕಾಣುವುದಿಲ್ಲ.

ಆದರೆ ಕ್ರೈಸ್ತರ ಕಾನ್ವೆಂಟುಗಳು, ಶಾಲೆಗಳು ಶಿಕ್ಷಣಕೊಡುತ್ತಿರುವುದನ್ನು ಈ ಜನ ಹೊಗಳುತ್ತಾರೆ. ಅಲ್ಲಿ ನಮ್ಮ ಧರ್ಮ ಮತ್ತು ಸಂಸ್ಕೃತಿಗಳಿಗೆ ಧಕ್ಕೆ ತರುವ ವಾತಾವರಣ ಉಂಟಾದರೆ ಅದನ್ನು ಸಹಿಸಬೇಕೆ ? ನಮ್ಮ ಜನರಿಂದ, ನಮ್ಮ ಸರ್ಕಾರದಿಂದ ಪೋಷಿತವಾದ ಈ ಸಂಸ್ಥೆಗಳು 'ನೀವು ಕುಂಕುಮವಿಟ್ಟುಕೊಳ್ಳಬೇಡಿ, ಬಳೆ ತೊಟ್ಟುಕೊಳ್ಳಬಾರದು' ಎಂದು ಹೇಳಿ

ವರೆ ನಾವು ಸಹಿಸಬೇಕೆ? ಇಲ್ಲ, ಇದನ್ನು ಪ್ರತಿಭಟಿಸಬೇಕು. ಶಾಸನಸಭೆಯಲ್ಲಿ ಸರ್ಕಾರಕ್ಕೆ ಈ ಬಗ್ಗೆ ತಿಳಿಸಬೇಕು. ಪ್ರಶ್ನೆಗಳನ್ನು ಕೇಳಬೇಕು. ಅದಕ್ಕಾಗಿ ಹಿಂದುಗಳು ಸಂಘಟಿತರಾಗಬೇಕು. ಬಲಗೊಳ್ಳಬೇಕು.

ನಮ್ಮಲ್ಲಿ ಅನೇಕ ಶ್ರೀಮಂತರು ಬೇರೆ ಬೇರೆ ಕಾರ್ಯಗಳಿಗೆ ಹಣ ದಾನಮಾಡುತ್ತಿದ್ದಾರೆ ಆದರೆ ಅವರು ಈಗ ತುರ್ತಾಗಿ ಹಿಂದೂ ಧರ್ಮದ ರಕ್ಷಣೆಗೆ, ಪೋಷಣೆಗೆ ಮುಂದಾಗಬೇಕು. ಅಂತಹ ಕಾರ್ಯಕ್ಕೆ ಉದಾರ ಸಹಾಯ ಮಾಡಬೇಕು. ಹಿಂದೂ ಸಮಾಜದ ರಕ್ಷಣೆಗಾಗಿ ಒಂದು ದೊಡ್ಡ ನಿಧಿ ಕೂಡಿಸಬೇಕು.

ಬಡತನದಿಂದ, ಪರಿಸ್ಥಿತಿಯ ಒತ್ತಡದಿಂದ ನಮ್ಮ ಧರ್ಮದಿಂದ ಮತಾಂತರಿಸಲ್ಪಟ್ಟ ಬಂಧುಗಳನ್ನು ಶುದ್ಧೀಕರಿಸುವ ಮಹತ್ವದ ಕಾರ್ಯವನ್ನು ಅತ್ಯಗತ್ಯವಾಗಿ ಮಾಡಬೇಕು. ಅವರ ರಕ್ತದ ಬಿಂದುವೂ ನಮ್ಮದೇ. ಅವರ ಧರ್ಮ ಸಂಸ್ಕೃತಿಗಳೂ ನಮ್ಮವೇ. ಈ ಕಾರ್ಯ ತಡಮಾಡದೆ ಆಗಬೇಕು. ಸಮಾಜದಲ್ಲಿ ಅವರನ್ನೆಲ್ಲ ಸ್ವೀಕರಿಸಿ, ಅವರ ಜೀವನಕ್ಕೆ ವ್ಯವಸ್ಥೆ ಮಾಡಿ ಕೊಡಬೇಕು. ಇಲ್ಲವಾದರೆ ತುಂಬಾ ಹಾನಿಯಾದೀತು.

ಧರ್ಮರಕ್ಷಣೆಗಾಗಿ ಯಾವ ತ್ಯಾಗವೂ ದೊಡ್ಡದಲ್ಲ. ರಾಣಾ ಪ್ರತಾಪನು ಎಂತಹ ಕಷ್ಟವನ್ನು ಅನುಭವಿಸಿದನು ? ಅವನ ಚಿಕ್ಕಮಗಳು ೧೦ ವರ್ಷದ ಹುಡುಗಿ ಚಂಪಾವತಿ ಧರ್ಮರಕ್ಷಣೆಯ ವಚನವನ್ನು ಕುಲದ ಅಭಿಮಾನವನ್ನು ಉಳಿಸುವ ಪ್ರತಿಜ್ಞೆಯನ್ನು ತಂದೆಯಿಂದ ಪಡೆದೇ ಕೊನೆಯುಸಿರೆಳೆದಿಲ್ಲವೇ ? ಮೊಗಲರ ಕಾಲದಲ್ಲಿ ಹಿಂದೂಗಳ ಸಾಮೂಹಿಕ ಕೊಲೆ ನಡೆದಾಗ ಗ್ರಂಥಾಲಯಗಳನ್ನು ಸುಟ್ಟಾಗ ಧರ್ಮಗ್ರಂಥಗಳ ರಕ್ಷಣೆ ಮಾಡಲು ನಮ್ಮ ಪೂರ್ವಜರು ಹೆಣಗಳ ರಾಶಿಯ ನಡುವೆ ಗ್ರಂಥಗಳನ್ನು ಹಿಡಿದುಕೊಂಡು ಮಲಗಿ 'ಇವರು ಸತ್ತಿದ್ದಾರೆ' ಎನ್ನುವವರೆಗೆ ಬಿದ್ದುಕೊಂಡಿದ್ದುದನ್ನು ನಾನಿಂದು ಮರೆಯೋಣವೇ? ಇಲ್ಲ. ಈ ಮಹಾತ್ಮರ ಪವಿತ್ರಾತ್ಮರ ತ್ಯಾಗದಿಂದ ಸ್ಫೂರ್ತಿಯನ್ನು ಪ್ರೇರಣೆಯನ್ನು ಗಳಿಸಿ ಇಂದಿನ ನಮ್ಮ ಕರ್ತವ್ಯಕ್ಕೆ ಮುಂದಾಗೋಣ.

## ೧೦. ಉದ್ಘಾಟನಾ ಭಾಷಣ

[ ೨೭-೧೨-೧೯೭೦ ರಂದು ನಡೆದ ೪೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಭಾಷಣ ]

ಕರ್ನಾಟಕ ದೇಶವೆಂಬುದು ಸಾಹಿತ್ಯ, ಸಂಸ್ಕೃತಿ, ಲಲಿತಕಲೆ, ಆಧ್ಯಾತ್ಮಿಕತೆಯ ಉಜ್ವಲ ಪರಂಪರೆಯ ನಾಡು. ಇದು ಕರ್ನಾಟಕಕ್ಕೆ ಹೆಮ್ಮೆಯನ್ನುಂಟುಮಾಡುವ ಅಂಶವಾದರೂ ಸ್ವಾತಂತ್ರ್ಯಾನಂತರ ಕರ್ನಾಟಕದ ಜನಜೀವನದಲ್ಲಿ ಕಂಡುಬರುವ ನೈತಿಕಪತನದ ಅಂಶವನ್ನು ಮನದಂದಾಗ ನಾಚಿಕೆಯಿಂದ ತಲೆತಗ್ಗಿಸುವಂತಾಗಿದೆ. ಸಾಹಿತ್ಯ ನಿರ್ಮಿತಿಯಲ್ಲೂ ಕೆಲವು ಕಡೆ ಇದು ತಲೆ ಹಾಕಿದೆ. ಸಂಸ್ಕೃತಿ ಸಂಪನ್ನರಾಷ್ಟ್ರಕ್ಕೆ ಇಂಥ ಪ್ರವೃತ್ತಿ ಭೂಷಣವಲ್ಲ. ಸಾಹಿತಿಗಳು ಉತ್ತಮ ಕೃತಿ ನಿರ್ಮಾಣದ ಮೂಲಕ ಸಮಾಜ ನಿರ್ಮಾಣದ ಗುರುತರ ಪಾತ್ರವಹಿಸಬೇಕು. ವೀರನ ಕೈಯ ಖಡ್ಗಕ್ಕಿಂತ ಸಾಹಿತಿಯ ಲೆಕ್ಕಣಿಕೆ ಹೆಚ್ಚು ಪ್ರಬಲ. ಅಭಿಮಾನ ಶೂನ್ಯತೆಯುಳ್ಳ ರಾಷ್ಟ್ರದಿಂದ ಯಾವ ಮಹತ್ತರ ಕಾರ್ಯಗಳೂ ಕೈಗೂಡವು.

ಭಾರತದ ಧಾರ್ಮಿಕ ಸಂಸ್ಕೃತಿಯ ಉದ್ಧರಣಕಾರ್ಯದಲ್ಲಿ ಮಠಾಧೀಶ್ವರರು ಅಗ್ರಗಣ್ಯರೆಂಬುದನ್ನು ಯಾರೂ ಮರೆಯುವಂತಿಲ್ಲ. ಪ್ರಾಯಃ ಅದೇ ಕಾರಣದಿಂದಲೇ ನಾವಿಂದು ಈ ಸಮ್ಮೇಲನದ ಉದ್ಘಾಟನೆಗಾಗಿ ಆಹ್ವಾನಿತರಾಗಿ ಬಂದಿರುವುದು. ಎಂದಿಗಿಂತಲೂ ಇಂದಿನ ಈ ಸಮ್ಮೇಲನ ವಿಶಿಷ್ಟ ರೀತಿಯದು. ಕನ್ನಡಿಗರು ತಮ್ಮ ಮೂಲಭೂತಹಕ್ಕಿಗಾಗಿ ಒಗ್ಗಟ್ಟಿನಿಂದ ಹೋರಾಡಬೇಕಾದ ಕಾಲವೀಗ ಸನ್ನಿಹಿತವಾಗಿದೆ. ಕನ್ನಡಿಗರಲ್ಲಿ ಮಹಾಚೈತನ್ಯವನ್ನಂಕುರಿಸುವ ಕಾರ್ಯಭಾರವನ್ನು ಕನ್ನಡ ಸಾಹಿತ್ಯ ಪರಿಷತ್ತು ವಹಿಸಬೇಕಾಗಿದೆ. ಪ್ರಕೃತ ಉಂಟಾಗಿರುವ ಗಡಿಸಮಸ್ಯೆಯಲ್ಲಿ ಕನ್ನಡ ಜನತೆ ಕನ್ನಡ ಸಾಹಿತ್ಯಪರಿಷತ್ತಿನ ಮಾರ್ಗದರ್ಶನವನ್ನು ಬಯಸುತ್ತಿದೆ. ಕನ್ನಡಿಗರು ಸಂಘಟಿತರಾಗಿ ತಮ್ಮ ಹಕ್ಕುಬಾಧ್ಯತೆಗಳನ್ನು ಉಳಿಸಿಕೊಳ್ಳಬೇಕು. ಜಗತ್ತು ಮೆಚ್ಚುವಂತಹ ಭಾರತದ ಸಂಸ್ಕೃತಿಯನ್ನು ರೂಪಿಸುವಲ್ಲಿ 'ಭಾರತದ ನೆಚ್ಚಿನ ಪುತ್ರಿ' ಕರ್ನಾಟಕ ಸಲ್ಲಿಸಿರುವ ಕಾಣಿಕೆ ಅಮೋಘವಾದುದು. ಇಂತಹ ಕನ್ನಡನಾಡಿಗೆ ಅಪಮಾನವಾಗುವಂತಹುದನ್ನು ಯಾರೂ ಮಾಡಬಾರದು. ಭಾರತದ ಎಲ್ಲ ಭಾಗಗಳೂ ಬೆಳೆಯಬೇಕು. ಒಂದಂಗದ ರಕ್ತಹೀರಿ ಕೃಶಗೊಳಿಸಿ, ಬೇರೊಂದು ಅಂಗ ದಷ್ಟಪುಷ್ಟವಾಗಿ ಬೆಳೆಯಬೇಕೆಂಬುದು ಸರಿಯಲ್ಲ.

ಸ್ವಾಭಿಮಾನವಿಲ್ಲದ ಮನುಷ್ಯರು ಉದ್ಧಾರವಾಗುವುದಿಲ್ಲ. ಕನ್ನಡಿಗರು ಸ್ವಾಭಿಮಾನದವರಾಗಿ ಬಾಳಿಬದುಕಬೇಕು. ಅದಕ್ಕಾಗಿ ಕಾರ್ಯೋನ್ಮುಖರಾಗಬೇಕು. ಕನ್ನಡಿಗರಲ್ಲಿ ಸ್ವಾಭಿಮಾನ ಕಡಿಮೆಯಾಗಿರುವುದಕ್ಕೆ ಇತ್ತೀಚೆಗೆ ಅನೇಕ ನಿದರ್ಶನಗಳು ಗೋಚರವಾಗುತ್ತಿವೆ. ಕನ್ನಡದ ಕಟ್ಟಭಿಮಾನಿ ಪ್ರೊ. ಜವರೇಗೌಡರು ಈ ಮಹತ್ವದ ಸಮ್ಮೇಲನಾಧ್ಯಕ್ಷರಾಗಿರುವುದು ತುಂಬಾ



ಪ್ರಶಾಂತ ತಾಣ : ಹಳೆಯ ಮಠದ ಮಹಾದ್ವಾರ




ಹಳೆಯ ಮಠದ ಮುಂಭಾಗ



ಹಳೆಯ ಮಠದ ೯ ಕಂಬಗಳ ಪಡಸಾಲೆಯ ಮಧ್ಯದ ಕಂಬ



ಹಳೆಯ ಮಠದಲ್ಲಿ ಶಿವಪೂಜಾ ವೇದಿಕೆ



ಹಳೆಯ ಮಠದ ಬಿಲ್ವವನ ಮತ್ತು ಪುಷ್ಪೋದ್ಯಾನ
ಅಲ್ಲಿ ಕೆಲಸ ಮಾಡುವ ವಟುಗಳು




ಹಾಲಿ ಶ್ರೀಕ್ಷೇತ್ರದಲ್ಲಿ ವ್ಯಾಸಂಗ ಮಾಡುವ ನಾಡಿನ ಅನೇಕ ಮಠಗಳ
ಉತ್ತರಾಧಿಕಾರಿಗಳು
(ನಿಂತವರಲ್ಲಿ ಎಡಗಡೆಯಿಂದ ಎರಡನೆಯ ಮತ್ತು ಒಂಬತ್ತನೆಯವರನ್ನುಳಿದು)



ಉದ್ದಾನ ಶಿವಯೋಗಿಗಳು



ದಾಸೋಹ ಮಠದ ಮುಂಭಾಗದ ಮಂಚದ ಮೇಲೆ ಶ್ರೀಗಳು



ಉದ್ದಾನ ಶಿವಯೋಗಿಗಳ ಗದ್ದುಗೆ



ಮಠದ ವಿದ್ಯಾಸಂಸ್ಥೆಗಳಿಗೆ ಮಕ್ಕಳನ್ನು ಸೇರಿಸಬಂದವರೊಡನೆ ಶ್ರೀಗಳು



ಆಫೀಸಿನ ಕೆಲಸಕಾರ್ಯಗಳಲ್ಲಿ ಶ್ರೀಗಳು



ಮಕ್ಕಳ ಚಟುವಟಿಕೆಗಳ ಮಧ್ಯದಲ್ಲಿ ಶ್ರೀಗಳು



ಸಾರ್ವಜನಿಕ ಹಿತಾಸಕ್ತಿಯಲ್ಲಿ



ಮಹಾಭಕ್ತ
ಸಿದ್ಧರಾಮಣ್ಣ
ದಂಪತಿಗಳ ಭಕ್ತಿ
ಸ್ವೀಕಾರದಲ್ಲಿ →



ಭಕ್ತರು ಸುರಿದ ಪುಷ್ಪರಾಶಿಯ ಮಧ್ಯದಲ್ಲಿ



ಮಠದ ಮಂಚದ ಮೇಲೆ
ಸಿದ್ಧರಾಮಣ್ಣನವರ
ಭಕ್ತಿಸ್ವೀಕಾರ
ಸಮಯದಲ್ಲಿ →



ಗವರ್ನರ್ ವಿ. ವಿ. ಗಿರಿ ಅವರಿಗೆ ಸನ್ಮಾನ



ಶ್ರೀ ಮುರಾರ್ಜಿ ಅವರೊಂದಿಗೆ ಕುಶಲ ಸಂಭಾಷಣೆ



ಗವರ್ನರ್ ಧರ್ಮವೀರ ಅವರಿಗೆ ಶುಭ ಹಾರೈಕೆ



ಶ್ರೀ ವಾಜಪೇಯಿ ಅವರೊಂದಿಗೆ ಆಫೀಸಿನಲ್ಲಿ



ಸೇವೆಗೆ ತಕ್ಕ ಸನ್ಮಾನ



ತರಳಬಾಳು ಜಗದ್ಗುರುಗಳೊಡನೆ ಆಪ್ತಾಲೋಚನೆ



ಕರ್ತವ್ಯ ಶ್ರದ್ಧೆಯಲ್ಲಿ



ಮಕ್ಕಳಿಗೆ ಪಾಲ್ಬೆಣ್ಣೆಯನ್ನುಣಿಸುವಲ್ಲಿ



ಶಾಲಾ ಮಕ್ಕಳ ಮಧ್ಯದಲ್ಲಿ



ಶಾಲಾ ಮಕ್ಕಳಿಗೆ ಪ್ರೋತ್ಸಾಹ ನೀಡುವಲ್ಲಿ





ಉಪದೇಶಾಮೃತ ನೀಡುವಲ್ಲಿ





ಮೈಸೂರು ವಿ.ವಿ. ವೈಸ್‌ಚಾನ್ಸಲರ್ ಅವರೊಡನೆ

ಪ್ರಖ್ಯಾತ ಹಿರಣ್ಣಯ್ಯ ಮಿತ್ರಮಂಡಳಿ ನಾಟಕ ಪ್ರೋತ್ಸಾಹದಲ್ಲಿ →

ಭಕ್ತಿಸ್ವೀಕಾರದಲ್ಲಿ ↓

ಪ್ರಸಾದವಿತರಣೆಯ ತನಿಖೆಯಲ್ಲಿ ↓







ಎಸ್.ಆಯ್.ಟಿ. ಕಟ್ಟಡಗಳ ತನಿಖೆಯ ಹಂತದಲ್ಲಿ



ಸೆಂಟ್ರಲ್ ಕಾಲೇಜಿನಲ್ಲಿ ಸರ್ವಶ್ರೀ ಗೋಕಾಕ್, ಮುಗಳಿ, ಶಂಕರೇಗೌಡ ಮೊದಲಾದವರೊಡನೆ



ಬೆಂಗಳೂರಿನಲ್ಲಿ ಜರುಗಿದ ೪೭ನೆಯ
ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ
ವಿಖ್ಯಾತ ಸಾಹಿತಿಗಳ ಮಧ್ಯದಲ್ಲಿ



೪೭ನೆಯ ಸಾಹಿತ್ಯ ಸಮ್ಮೇಲನಕ್ಕೆ
ಆಗಮಿಸಿದ ಅಸಂಖ್ಯಾತ ಜನದ
ಎದುರಿನಲ್ಲಿ



ಮಠದ ಮಕ್ಕಳ ಅಂಗ ಸಾಧನೆಯ ಅಭ್ಯಾಸದ ತನಿಖೆಯಲ್ಲಿ



ಮಕ್ಕಳ ಬೃಹತ್ ಮೇಳದ ಮಧ್ಯದಲ್ಲಿ



ಸತತಾಭ್ಯಾಸ ಶೀಲತೆಯಲ್ಲಿ
(ಸಿದ್ಧಗಂಗಾ ಸೈನ್ಸ್ ಕಾಲೇಜಿನ ಪುಸ್ತಕ ಪ್ರದರ್ಶನದಲ್ಲಿ)

ಸಂತೋಷಕರವಾದುದು. ಅವರು ತಮ್ಮ ಕಾಲಾವಧಿಯಲ್ಲಿ ಕನ್ನಡದ ಅನೇಕ ಸಮಸ್ಯೆಗಳನ್ನು ಬಗೆಹರಿಸುವರೆಂಬ ಭರವಸೆ ನಮಗೆ ಇದೆ.

ಸಾಹಿತಿಗಳ ಸಂಖ್ಯೆ ಬೆಳೆಯಲು ಯುವಕ ಬರಹಗಾರರಿಗೆ ಪ್ರೋತ್ಸಾಹ ನೀಡುವುದು ಅತ್ಯಗತ್ಯವಾದುದು. ಕನ್ನಡ ಪಂಡಿತ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಹೈಸ್ಕೂಲುಗಳಲ್ಲಿ ಭಾಷಾಧ್ಯಾಪಕರಾಗಿ ಕೆಲಸಮಾಡುತ್ತಿರುವ ಕನ್ನಡ ಪಂಡಿತರ ಸ್ಥಾನಮಾನಗಳನ್ನು ಪದವೀಧರರಿಗೆ ಸಮಾನವಾಗಿ ಕಾಣುವುದು ಅವಶ್ಯಕ. ಕನ್ನಡನಾಡು ತನ್ನ ಭವ್ಯಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಾಳಿ ಅನೇಕ ಮಂಗಳಗಳನ್ನು ನೋಡುವ ಭವ್ಯ ನಾಡಾಗಿ ಮೆರೆಯಲಿ. ಯಾವತ್ತು ಸಾಹಿತ್ಯ ಸಮ್ಮೇಲನದ ಕಾರ್ಯಕ್ರಮಗಳು ಯಶೋವಿಶೇಷದಿಂದ ಸಾಂಗಗೊಳ್ಳಲೆಂದು ಹಾರೈಸಿ ಈ ಸಮ್ಮೇಲನ ಉದ್ಘಾಟಿತವಾಯಿತೆಂದು ತಿಳಿಯಪಡಿಸುತ್ತೇವೆ.

## ೧೧. ಪರಿಶುದ್ಧ ಕಾಯಕ

[ ೩-೧೨-೧೯೭೨ ರಂದು ಬೆಂಗಳೂರು ಸುಭಾಷ್ ನಗರದ ಮೈದಾನದಲ್ಲಿ ರಾಜ್ಯದ ರೈತ ಮತ್ತು ರೈತಕಾರ್ಮಿಕರ ಸಂಘದ ಮಹಾಸಮ್ಮೇಳನದ ಉದ್ಘಾಟನಾ ಭಾಷಣ.]

ವ್ಯವಸಾಯವೆಂಬುದು ಪವಿತ್ರವೃತ್ತಿ. ಅದು ಅನ್ನಬ್ರಹ್ಮನ ಸೃಷ್ಟಿಮಾಡುವ ಪವಿತ್ರ ಉದ್ಯೋಗ. ವೇದೋಪನಿಷತ್ತುಗಳು ಸಾರಿರುವುದೇನು ? ನಿಷ್ಕ್ರಿಯಾ ಜೀವನವನ್ನಲ್ಲ. ಅವು ನಮಗೆ ದುಡಿಮೆಯ ಮಹತ್ವದ ಪಾಠವನ್ನೇ ಹೇಳುತ್ತವೆ. ಕ್ರಿಯಾಶೀಲನಾಗದ ವ್ಯಕ್ತಿ 'ಶರದಶ್ಶತಂ' ಬಾಳಿದರೂ ಅದು ಅರ್ಥರಹಿತ. ಜೀವನದ ಸಾರ್ಥಕತೆಯನ್ನು ಪರಿಶುದ್ಧ ಕಾಯಕದಿಂದಲೇ ಪಡೆಯಬೇಕು. ನಮ್ಮ ಧರ್ಮಗ್ರಂಥಗಳು ಕಾಯಕ ರಹಿತ ಬಾಳಿಗೆ ಮಹತ್ತ್ವವನ್ನು ಕೊಟ್ಟೇ ಇಲ್ಲ. ಅಂಥ ಕಾಯಕಶೀಲ ರೈತನ ಬಗೆಗೆ ಪ್ರತಿಯೊಬ್ಬ ಇನ್ನಿತರ ಕಾಯಕದವರು ಅಪಾರ ಗೌರವವನ್ನು ತಾಳಬೇಕು. ನಾವು ಏನೆಲ್ಲವನ್ನು ಉತ್ಪಾದಿಸಬಹುದು. ಆದರೆ ಅನ್ನದ ಉತ್ಪಾದನೆ ಕುಂಠಿತವಾದಾಗ ಉಳಿದೆಲ್ಲ ಉತ್ಪಾದನೆಗಳಿಗೇನು ಬೆಲೆ? ಸುಖಜೀವನದ ಅರ್ಥ ಬೇಸಾಯಗಾರನಿಗೆ ಮಾತ್ರ ಗೊತ್ತು. ಹಳ್ಳಿ ಭೋಗಜೀವನ ಕೇಳಿಲ್ಲ. ಅಧಿಕಾರ, ಸಂಪತ್ತು ಮತ್ತು ಭೋಗಜೀವನದ ದಾಹಗಳು ಮಾನವನನ್ನು ದಾನವನನ್ನಾಗಿ ಮಾಡುವ ಪರಿಸ್ಥಿತಿ ಹಳ್ಳಿಗಳಲ್ಲಿಲ್ಲ. ಪ್ರಾಚೀನ ಕಾಲದಲ್ಲಿ ಸೇವೆಯೇ ಅರ್ಥವ್ಯವಸ್ಥೆಯಾಗಿತ್ತು. ವಸ್ತುಗಳು ವಿನಿಮಯಕ್ಕೆ ಮಾಧ್ಯಮವಾಗಿದ್ದುವು. ಕಾರಣ ಗ್ರಾಮಜೀವನ ಆರ್ಥಿಕವಾಗಿ ಸ್ವಯಂಪರಿಪೂರ್ಣವಾಗಿತ್ತು. ಇಂದಿನ ಗ್ರಾಮಜೀವನ ಪ್ರಾಚೀನಧರ್ಮವನ್ನು ಮರೆಯದೆ ಕರ್ತವ್ಯಪ್ರಜ್ಞೆ, ಕ್ರಿಯಾಶೀಲತೆಯನ್ನು ಬೆಳೆಸಿಕೊಳ್ಳಬೇಕು. ರೈತರ ಸಂಘಟನೆ ಮಾಡಿ ಅವರ ಉದ್ಧಾರಕ್ಕೆ ಶ್ರಮಿಸುತ್ತಿರುವ ಸಂಸ್ಥೆಯೊಂದು ರೂಪುಗೊಂಡಿರುವುದು ತುಂಬಾ ಸಂತೋಷದ ವಿಚಾರ. ರೈತನ ದುಡಿಮೆಗೆ ಮಹತ್ವವಿತ್ತು ಅವನಿಗೆ ಅನುಕೂಲ ವಾತಾವರಣ ಕಲ್ಪಿಸುವುದು ಪ್ರಮುಖ ಅಂಶ. ಇದು ಯಾವ ರಾಜಕೀಯ ಹಾಗೂ ತತ್ತ್ವಗಳ ಜಿಜ್ಞಾಸೆಯಲ್ಲ. ಸ್ವಾತಂತ್ರ್ಯ ಬಂದು ೨೫ ವರ್ಷವಾದರೂ ರೈತನ ಪರಿಸ್ಥಿತಿ ಉತ್ತಮವಾಗಿಲ್ಲವೆ? ಎಂಬ ಪ್ರಶ್ನೆಗೆ ಉತ್ತರ ದೊರಕುವುದು ಕಷ್ಟ. ಅವನ ಸಾಲದ ಮೊತ್ತ ಮೊದಲಿಗಿಂತಲೂ ಅಧಿಕವಾಗಿದೆ. ಅನೇಕರು ಬೆಳೆದ ಕಾಳನ್ನೆಲ್ಲ ಸಾಲಕ್ಕೆ ಕೊಟ್ಟು ಬರಿಗೈಯಿಂದ ಹೋಗುವ ಪರಿಸ್ಥಿತಿಯೂ ಇದೆ. ಒಳ್ಳೆಯ ಭವಿಷ್ಯವಿಲ್ಲದೆ ಸಂಕಟ ಪರಿಸ್ಥಿತಿಯಲ್ಲಿರುವ ರೈತರ ಸಂಘಟನೆಗೆ ಇಂಥ ಕ್ರಮಗಳು ಅಗತ್ಯ. ಧರ್ಮವೆಂದರೆ ಆರ್ಥಿಕ, ರಾಜಕೀಯ ಧಾರ್ಮಿಕ ಅಥವಾ ಆಧ್ಯಾತ್ಮಿಕ ಯಾವುದೇ ರಂಗವಾಗಿರಲಿ ಕೆಳಗೆ ಬಿದ್ದವನನ್ನೂ, ಬೀಳುವವನನ್ನೂ ಮೇಲಕ್ಕೆತ್ತುವುದೇ ಆಗಿದೆ. ಬೇರೆಯವರ ಸುಖ ದುಃಖಗಳಲ್ಲಿ ಭಾಗಿಯಾಗಿ ಮಾನವ ಕಲ್ಯಾಣವನ್ನು ಹಾರೈಸುವುದೇ ಧರ್ಮ. ಅವನ್ನು ತೋರಿಕೆಗಾಗಿ ಆಚರಿಸುವುದಲ್ಲ. ಹೃದಯಪೂರ್ವಕವಾಗಿ ಮಾಡಬೇಕು. ಇದು ರಾಜಕೀಯ ಹಾಗು ಪಕ್ಷ, ಪ್ರತಿಪಕ್ಷ ಪ್ರಶ್ನೆಯಾಗಿಲ್ಲ. ರೈತನ ಉದ್ಧಾರಕ್ಕೆ ಅಗತ್ಯವಾದ ಈ ಕಾರ್ಯಕ್ರಮಕ್ಕೆ ಅಡ್ಡಿ ಆತಂಕ ದೂರವಾಗಿ ಸೂಕ್ತ ಮಾರ್ಗದರ್ಶನ ದೊರಕಲಿ. ಈ ಸಭೆ ಉದ್ಘಾಟಿತವಾಯಿತೆಂದು ಸೂಚಿಸ ಬಯಸುತ್ತೇವೆ.

## ೧೨. ವಚನ ವಾಙ್ಮಯ

[ಪ್ರಾಚೀನ ಧರ್ಮಭೂಮಿಯಾದ ಉಡುತಡಿಯಲ್ಲಿ ಮಹಾದೇವಿಯಕ್ಕನವರ ಅಮೃತಶಿಲಾ ಪ್ರತ್ತಿಮೆ ಪ್ರತಿಷ್ಠಾಪನಾ ಕಾರ್ಯವು ನೆರವೇರಿದ ಸಂದರ್ಭದಲ್ಲಿ ನೀಡಿದ ಆಶೀರ್ವಚನ]

ಇಂದು ವಚನವಾಙ್ಮಯದ ಆಳವಾದ ಅಧ್ಯಯನ–ಸಂಶೋಧನೆ ನಡೆಯುವುದು ಅಗತ್ಯ. ಅದು ಅಪಾರವಾದುದು,

ವಿಚಾರಪ್ರಚೋದಕವಾದುದು. ಅವು ಪ್ರತಿಭೆಯ ಒರೆಗಲ್ಲಿಗೆ ಹಚ್ಚಿದವು ಮಾತ್ರ ಅಲ್ಲ. ಸಹಜಕ್ರಿಯಾಚಾರದಲ್ಲಿ ನಿರತರಾಗಿದ್ದ ಶರಣರ ಅನುಭಾವವೇ, ಅಥವಾ ಅವರ ಬದುಕೇ ಹೊರಹೊಮ್ಮಿ ಜ್ಯೋತಿರೂಪದ ಮಾತಿನಲ್ಲಿ ಪಡಿಮೂಡಿಬಂದಿವೆ. ಸುಪ್ರಸಿದ್ಧ ವಚನಕಾರ್ತಿ ಶಿವಶರಣೆ ಅಕ್ಕಮಹಾದೇವಿಯ ಹುಟ್ಟೂರಾದ ಈ ಉಡುತಡಿಯಲ್ಲಿ ಅಕ್ಕನಮೂರ್ತಿಯೊಂದು ಈ ಸಮಾರಂಭ ನಡೆಯುತ್ತಿರುವುದು ಔಚಿತ್ಯಪೂರ್ಣವಾಗಿದೆ.

ವಚನ ಸಾಹಿತ್ಯವು ವೇದ ಹಾಗೂ ಉಪನಿಷತ್ತುಗಳ ವಿಚಾರಧಾರೆಗಿಂತ ಮುಂದೆ ಹೋಗಿ ಧರ್ಮಾಧರ್ಮ ವಿಷಯ ವಿವೇಚನೆ ಮಾಡಿದೆ. ಕಾರಣ ಇಂದಿನ ಜನತೆಗೆ ಧರ್ಮದ ಮರ್ಮವನ್ನು ತಿಳಿಸಲು ಇದು ಬಹು ನೆರವಾಗುವುದು, ಈ ವಚನಗಳು ನಾಡಿನ ಜನಸಾಮಾನ್ಯರ ಭಾಷೆಯಲ್ಲಿ ಅವರಿಗೆ ಅರ್ಥವಾಗುವ ಮಟ್ಟದಲ್ಲಿ ರಚಿತವಾಗಿರುವುದರಿಂದ ಜನತೆ ಧರ್ಮದ ಸೂಕ್ಷ್ಮವನ್ನು ವಚನಗಳ ಮೂಲಕವಾಗಿ ಬಹು ಸುಲಭವಾಗಿ ಅರಿಯಲು ಸಾಧ್ಯ. ಈ ದೃಷ್ಟಿಯಿಂದ ವಚನ ವಾಙ್ಮಯದ ಬಗೆಗೆ ಆಳವಾದ ಅಧ್ಯಯನ ಸಂಶೋಧನೆ ನಡೆಯಬೇಕು. ತತ್ತ್ವಜ್ಞಾನಿಗಳು, ಸಾಹಿತಿಗಳು, ವಿಮರ್ಶಕರು ಕೈಗೊಳ್ಳಬೇಕಾದ ಈ ಕಾರ್ಯಕ್ಕೆ ನಾಡಿನ ಎಲ್ಲ ವರ್ಗಗಳ ಜನರೂ ಬೆಂಬಲ, ನೆರವು ನೀಡಬೇಕು. ಇವು ಕನ್ನಡನಾಡಿನ ಜನತೆಯ ವಿಚಾರಧಾರೆಗಳು. ಅವರು ಅರಿತು ಆಚರಿಸಿದ ನಡೆನುಡಿಗಳ ಅಭಿವ್ಯಕ್ತಿಗಳು. ಇಲ್ಲಿ ಹೊರಗಿನಿಂದ ಎರವಲು ತಂದ ವಿಚಾರವಿದ್ದರೂ ಅದು ಪೂರ್ಣಪರಿಷ್ಕೃತ ಮತ್ತು ಅನುಭವಕ್ಕೆ ನಿಲುಕುವಂತಹುದು; ಇಲ್ಲಿರುವುದೆಲ್ಲ ವೇದೋಪನಿಷತ್ತಿನಲ್ಲಿ ಇದೆಯೆಂದು ಹೇಳಲಾಗುವುದಿಲ್ಲ; ಆದರೆ ಅಲ್ಲಿರುವುದೆಲ್ಲ ಇಲ್ಲಿ ಬಂದಿದೆಯೆಂದು ವಿಮರ್ಶಕರ ಅಭಿಪ್ರಾಯ.

ವಚನಗಳು ಧರ್ಮದ ದೃಷ್ಟಿಯಿಂದ ಸರ್ವಶ್ರೇಷ್ಠವಾದವು. ಕನ್ನಡದಲ್ಲಿ ಲಭ್ಯವಿರುವ ಅಸಂಖ್ಯಾತ ವಚನಗಳ ಅಧ್ಯಯನ ವರ್ಗೀಕರಣ, ಸಂಶೋಧನೆ, ವಿಮರ್ಶೆ ಈಗಾಗಲೇ ಆಗಿದೆಯಾದರೂ ಇನ್ನೂ ಮಾಡಬೇಕಾದ ಕಾರ್ಯ ಅಗಾಧವಿದೆ. ಶಿವಶರಣರ ಅನುಭವದ ಮೂಸೆಯಿಂದ ಮೂಡಿದ ಈ ವಚನಗಳ ಯಥಾರ್ಥಜ್ಞಾನ ಇಂದಿನ ಜನತೆಗೆ ಆಗಬೇಕಾಗಿದೆ. ಎಷ್ಟೋ ವಚನಗಳು ಇಂದಿನ ಪರಿಸರದಲ್ಲಿ ಅರ್ಥವಾಗುತ್ತಿಲ್ಲ. ಇವೆಲ್ಲ ಸಮಾಜಜೀವನದ, ಧರ್ಮದ ಮೂಲಭೂತ ತಿರುಳಾಗಿವೆ. ಅತ್ಯಮೂಲ್ಯವಾದ ಈ ಜ್ಞಾನಭಂಡಾರವನ್ನು ಕಡೆಗಣಿಸುವುದು ಸರಿಯಲ್ಲ. ಅವುಗಳ ಬಗ್ಗೆ ಹೆಚ್ಚಿನ ಆಸ್ಥೆ ತೋರಿಸಿ ಕನ್ನಡನಾಡು ನುಡಿಯ ಕೀರ್ತಿ ಬೆಳಗುವಂತೆ ಮಾಡಬೇಕಾದುದು ಕನ್ನಡಿಗರೆಲ್ಲರ ಕರ್ತವ್ಯ. ಜನಸಾಮಾನ್ಯರಿಗೆ ಅವರ ಅನುಭವದ ಫಲ ದೊರಕಿಸಿಕೊಡಬೇಕು. ಅವು ಪಂಡಿತ ಪಾಮರರಿಬ್ಬರ ಸೊತ್ತಾಗಬೇಕೆಂಬುದೇ ಶಿವಶರಣರ ಮನೀಷೆ. ಎಷ್ಟೋ ಶಿವಶರಣರು ವೇದಾಗಮ ಶಾಸ್ತ್ರಾದಿಗಳಲ್ಲಿ ನಿಷ್ಣಾತರು, ಸಂಸ್ಕೃತ ಬಲ್ಲವರು. ಆದರೂ ಅವರು ಜನಸಾಮಾನ್ಯರ ಹಿತಚಿಂತನಾದೃಷ್ಟಿಯಿಂದ ಸಂಸ್ಕೃತದಲ್ಲಿ ಬರೆಯಲಿಲ್ಲ. ಅಲ್ಲದೆ ಆ ಅಭಿಪ್ರಾಯಗಳನ್ನೆಲ್ಲ ಅಂಗೀಕರಿಸಿಯೂ ಇಲ್ಲ. ಅನುಭವಕ್ಕೆ ಹೊಂದಿಕೆಯಾಗುವುದನ್ನು ಸ್ವೀಕರಿಸಿ, ಅನ್ಯವನ್ನು ಧೈರ್ಯವಾಗಿ ಖಂಡಿಸಿದ್ದಾರೆ.

ಕನ್ನಡದಲ್ಲಿರುವ ಈ ವಚನವಾಙ್ಮಯ ಮರಾಠಿ ಅಥವಾ ಬಂಗಾಳಿ ಭಾಷೆಯಲ್ಲಿ ಇದ್ದಿದ್ದರೆ ಸಾಹಸದಿಂದ ಅವರು ಈ ವಿಚಾರಗಳನ್ನು ವಿಶ್ವವಿಖ್ಯಾತಗೊಳಿಸಿಬಿಡುತ್ತಿದ್ದರೆಂದು ನಮ್ಮ ಅಭಿಪ್ರಾಯ. ವಚನಸಾಹಿತ್ಯ ಕನ್ನಡದಲ್ಲಿ ಇರುವುದೇ ದುರದೃಷ್ಟವೇನೋ ಎನ್ನಿಸುತ್ತದೆ. ವಚನಗಳ ಬಗ್ಗೆ ಅವುಗಳ ವಿಚಾರಧಾರೆಯ ಬಗ್ಗೆ ಸಾಮಾನ್ಯ ಜನತೆಗೆ ಆದರಾಸಕ್ತಿ ಕಾಣುವುದಿಲ್ಲ. ಇದು ದೌರ್ಭಾಗ್ಯದ ಸಂಗತಿ ಎನ್ನಬೇಕು. ಆದರೆ ಪರಿಸ್ಥಿತಿ ಹಾಗೆಯೇ ಮುಂದುವರಿಯಲು ಬಿಡಬಾರದು. ಸರ್ವ ಪ್ರಯತ್ನಮಾಡಿ ಈ ವಚನಸಾರವನ್ನು ಜನಸಾಮಾನ್ಯನಿಗೆ ಮುಟ್ಟಿಸಬೇಕು. ಈ ದಿಸೆಯಲ್ಲಿ ಕೆಲವು ಜನ ವಿದ್ವಾಂಸರು ವಿಶೇಷ ಶ್ರಮಿಸಿ ಕಾರ್ಯಮಾಡಿದ್ದಾರೆ. ಆದರೆ ಮಾಡಬೇಕಾದುದು ಗುಡ್ಡದಷ್ಟಿದೆ, ಅದರಲ್ಲೂ ಸರಿಯಾಗಿ ತೂಕವಾಗಿ ಮಾಡಬೇಕಾದುದು ಎಷ್ಟೋ ಇದೆ.

ಶರಣರ ವಚನಗಳು ಸಮಗ್ರ ಕನ್ನಡಿಗರ ಧರ್ಮ ಮತ್ತು ಸಂಸ್ಕೃತಿಯ ತಿರುಳು : ಕನ್ನಡಿಗರ ವಿಚಾರಧಾರೆಗಳು. ಈ ವಚನಗಳು ಒಂದು ವರ್ಗದ, ಜಾತಿಯ ಜನರದು ಎಂದು ಭಾವಿಸಲಾಗದು. ಮಾನವ ಕುಲದ ಉದ್ಧಾರಕ್ಕೆ ಅವುಗಳ ಅಭಿಪ್ರಾಯವನ್ನು ಬಳಸಬೇಕು. ಈ ಅಮೂಲ್ಯ ಜ್ಞಾನಭಂಡಾರ ಕನ್ನಡ ಜನತೆಗೆ, ಮಾನವಕುಲಕ್ಕೆ ಹಂಚಿಕೆಯಾಗುವ ಏರ್ಪಾಟು ಆಗಬೇಕು. ಈ ಪ್ರಭಾವಯುತ ಪ್ರಚಾರಕಾರ್ಯವನ್ನು ಕನ್ನಡನಾಡಿನ ವಿದ್ವಾಂಸರು, ಸಂಶೋಧಕರು, ಮಠಾಧೀಶ್ವರರು, ಶ್ರೀಮಂತರು ಎಲ್ಲ ವರ್ಗದ ಜನರೂ ಕೈಗೆತ್ತಿಕೊಂಡು ತಮ್ಮ ತಮ್ಮ ಪಾಲಿನ ಸೇವೆಯನ್ನು ಮಾಡಬೇಕೆಂದು ಹಾರೈಸುತ್ತೇವೆ. ಮಹಾದೇವಿಯಕ್ಕನ ಪವಿತ್ರನೆಲದಲ್ಲಿ ಅವರ ಶಿಲಾಪುತ್ಥಳಿಯನ್ನು ಪ್ರತಿಷ್ಠಾಪಿಸಿದುದು ಔಚಿತ್ಯದಿಂದ ಕೂಡಿದುದು. ಆ ಮಹಾ ಶರಣೆಯ ದಿವ್ಯಾದರ್ಶ ಎಲ್ಲರಿಗೂ ದಾರಿದೀಪವಾಗಲಿ.

# ೧೩. ಹೆಣ್ಣು : ಅಂದು, ಇಂದು

[೩೦-೧೨-೭೨ ರಂದು ಗುಬ್ಬಿ ತಾಲ್ಲೂಕು ಕಡಬದ ಸರ್ವೋದಯ ಮಹಿಳಾ ಸಮಾಜದ ವಾರ್ಷಿಕೋತ್ಸವದ ಸಂದರ್ಭದಲ್ಲಿ ಅನುಗ್ರಹಿಸಿದ ಭಾಷಣ]

ನಮ್ಮ ಸಂಸ್ಕೃತಿಯಲ್ಲಿ ಹೆಣ್ಣಿಗೆ ಉತ್ತಮ ಸ್ಥಾನವಿದೆ. ಹೆಣ್ಣಿನ ಬಗೆಗಿನ ಈ ಮಾನ್ಯತೆಯನ್ನು ಎಲ್ಲ ಧರ್ಮಗಳೂ ಒಪ್ಪುತ್ತವೆ. ಮನುವಿನ ಮನುಧರ್ಮಶಾಸ್ತ್ರದಲ್ಲಿ ಹೇಳಿರುವ ಒಂದು ಶ್ಲೋಕ ಹೀಗಿದೆ :

'ಪಿತಾ ರಕ್ಷತಿ ಕೌಮಾರೇ । ಭರ್ತಾ ರಕ್ಷತಿ ಯೌವನೇ ।
ಪುತ್ರಸ್ತು ಸ್ಥಾವಿರೇ ಭಾವೇ । ನಸ್ತ್ರೀ ಸ್ವಾತಂತ್ರ್ಯಮರ್ಹತಿ' ॥

'ಹೆಣ್ಣು ಚಿಕ್ಕಂದಿನಲ್ಲಿ ತಂದೆಯ ಅಧೀನ, ಯೌವನದಲ್ಲಿ ಗಂಡನ ಅಧೀನ, ಇಳಿವಯಸ್ಸಿನಲ್ಲಿ ಮಕ್ಕಳ ಅಧೀನ. ಅವಳಿಗೆ ಸ್ವಾತಂತ್ರ್ಯವಿಲ್ಲ'. ಈ ಮನುವಾಕ್ಯವನ್ನು ಅನೇಕರು ತಪ್ಪಾಗಿ ಅರ್ಥೈಸಿದ್ದಾರೆ. ಮನುವಿನ ಉದ್ದೇಶವೇನಿತ್ತು ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು. ಆತನ ಉದ್ದೇಶ ಆಕೆ ಸ್ವಾತಂತ್ರ್ಯಕ್ಕೆ ಅನರ್ಹಳೆಂದಲ್ಲ. ಆರ್ಥಿಕವಾದ ಜವಾಬ್ದಾರಿ ಆಕೆಗೆ ಬೇಡ. ಏಕೆಂದರೆ ಹೆಣ್ಣು ಕುಟುಂಬದ ಕೇಂದ್ರಶಕ್ತಿ. ಆಕೆ ಮನೆಯ ಪರಿವಾರವನ್ನು ನೋಡಿಕೊಂಡು ತನ್ನ ಸಂತಾನವನ್ನು ಯೋಗ್ಯ ರೀತಿಯಲ್ಲಿ ಬೆಳಸಿದರೆ ಸಾಕು. ಆಕೆ ದುಡಿಯಲು ಬೇರೆ ಉದ್ಯೋಗವನ್ನವಲಂಬಿಸಬೇಕಿಲ್ಲ, ಎಂದು ಮಾತ್ರ ಆ ಶ್ಲೋಕದ ಅರ್ಥವೆಂದು ನಮ್ಮ ಭಾವನೆ.

ಉಪನಿಷತ್ತುಗಳು ಹೆಣ್ಣಿನ ಬಗ್ಗೆ ಅತ್ಯಂತ ಗೌರವದ ನಿಲವನ್ನು ತಳೆದಿವೆ. ಅವು 'ಮಾತೃದೇವೋಭವ' ಎಂದಿವೆ. ಈ ಪರಂಪರೆ ಇಂದಿನವರೆಗೂ ನಡೆದುಕೊಂಡು ಬಂದಿದೆ. ಆದರೆ ಮಧ್ಯೇ ಮಧ್ಯೇ ಹೆಣ್ಣನ್ನು ನೋಡುವ ದೃಷ್ಟಿಯಲ್ಲಿ ವ್ಯತ್ಯಾಸ ಕಂಡುಬಂದಿದೆ. ಆಗ ವಿಚಾರರು ಸಮಾಜದ ಕಣ್ಣನ್ನು ತೆರೆಸಿದ್ದಾರೆ. ಬಸವಣ್ಣನವರು ಹೆಣ್ಣನ್ನು 'ಮಹಾದೇವಿ' ಎಂದು ಕರೆದರು. ಸಿದ್ಧರಾಮರು 'ಹೆಣ್ಣನ್ನು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂದು ಸಾರಿದರು.

ಹೆಣ್ಣಿನ ಹಿರಿಮೆಗಳನ್ನು ಸಾರುವ ಅನೇಕ ಪ್ರಸಂಗಗಳು ಪುರಾಣದಲ್ಲಿವೆ. ಹರಿಶ್ಚಂದ್ರನ ಚರಿತ್ರೆಯಲ್ಲಿ ಕಾಣುವ ಚಂದ್ರಮತಿಯ ಪಾತ್ರ ಸ್ತ್ರೀತ್ವದ ಉಜ್ವಲತೆಗೆ ಉತ್ಕೃಷ್ಟ ಉದಾಹರಣೆ. ಗಂಡನು ಸತ್ಯದ ಅಗ್ನಿಪರೀಕ್ಷೆಗೆ ಒಳಗಾದಾಗ ಆಕೆ ಆತನಿಗೆ ಸ್ಫೂರ್ತಿಶಕ್ತಿಯಾಗಿ, ಸತ್ತ್ರೀರಕಳಾಗಿ ಅವನ ಗುರಿಸಾಧನೆಗೆ ನೆರವಾಗಿ ಅನುಭವಿಸಿದ ಕಷ್ಟನಿಷ್ಠುರದ ಮೊತ್ತ ಅಪಾರ. ಅದರಿಂದ ಅವಳು ಅಮರಳಾಗಿದ್ದಾಳೆ. ಹೆಣ್ಣಿನ ಮಹತ್ವ ಬರೀ ಉಪನಿಷತ್ತು, ಪುರಾಣಗಳಲ್ಲಿ ಮಾತ್ರ ಇಲ್ಲ. ಇತಿಹಾಸದಲ್ಲಿಯೂ ಸಾಕಷ್ಟು ನಿದರ್ಶನಗಳು ನಮಗೆ ದೊರೆಯುತ್ತವೆ. ರಾಣಾಪ್ರತಾಪಸಿಂಹನ ಮಗಳ ಸ್ವಾತಂತ್ರ್ಯ ಪ್ರೇಮ, ತ್ಯಾಗಬುದ್ಧಿ, ಕಷ್ಟಸಹಿಷ್ಣುತೆ, ದಿಟ್ಟತನಗಳು ಚರಿತ್ರಾರ್ಹವಾಗಿವೆ. ರಾಜ್ಯಭ್ರಷ್ಟನಾದ ತಂದೆ ಕಾಡುಮೇಡು ಅಲೆಯುತ್ತಾ, ಒಂದು ಹೊತ್ತಿನ ಊಟಕ್ಕೆ ಗತಿಯಿಲ್ಲದ ಪರಿಸ್ಥಿತಿಯಿದ್ದಾಗಲೂ, ಬೇಡ ಬಂದ ಸಂನ್ಯಾಸಿಗೆ ತನಗೆ ತಿನ್ನಲು ಉಳಿದಿದ್ದ ತುಂಡು ರೊಟ್ಟಿಯನ್ನೇ ನೀಡಲು ಮುಂದೆ ಬಂದ ಆ ಎಳೆಯ ವಯಸ್ಸಿನ ಹೆಣ್ಣುಮಗಳ ತ್ಯಾಗ ಚಿಕ್ಕದಲ್ಲ. ಅಕಬರ ಬಾದಶಹನಿಗೆ ಪ್ರತಾಪನು ಶರಣಾಗತನಾದರೆ ಕಳೆದುಕೊಂಡ ರಾಜ್ಯಭೋಗ, ಸುಖಸಂಪತ್ತು ಎಲ್ಲವೂ ದೊರೆಯುವುದೆಂಬ ಮಾತನ್ನು ಸಂನ್ಯಾಸಿ ಹೇಳಿದಾಗ, ಆ ಹೆಣ್ಣುಮಗಳು ತಂದೆಗೆ ಹೇಳಿದ್ದೇನು ? 'ನಿನ್ನ ದೇಹದಲ್ಲಿ ತೊಟ್ಟು ರಕ್ತವಿರುವತನಕ ನೀನು ಬಾದಶಹನಿಗೆ ಶರಣಾಗಬೇಡ. ನಾವು ಎಷ್ಟೇ ಕಷ್ಟಬರಲಿ ಸ್ವತಂತ್ರರಾಗಿರೋಣ.' ಹೀಗೆ ಹೇಳಿದ ಆಕೆ ತಂದೆಯಿಂದ ವಚನವನ್ನು ಪಡೆದು ಪ್ರಾಣನೀಗುತ್ತಾಳೆ. ಸಂನ್ಯಾಸಿಯ ವೇಷದಲ್ಲಿದ್ದ ಬಾದಶಹನು ಆ ಹೆಣ್ಣುಮಗಳ ಅಪೂರ್ವವಾದ ಸ್ವಾತಂತ್ರ್ಯಪ್ರೇಮ, ದಿಟ್ಟತನಗಳನ್ನು ಕಂಡು ಇಂಥ ಅಪೂರ್ವವಾದ ಸ್ತ್ರೀರತ್ನ ಕಣ್ಮರೆಯಾಯಿತಲ್ಲಾ! ಎಂದು ದುಃಖಿಸುತ್ತಾನೆ. ಚಿಕ್ಕ ವಯಸ್ಸಿನ ಆ ಹೆಣ್ಣುಮಗು ಅಕಬರನ ಕಣ್ಣು ತೆರೆಸುತ್ತಾಳೆ. ಅಕ್ಬರ ರಾಣಾಪ್ರತಾಪನಿಗೆ ರಾಜ್ಯವನ್ನು ಮರಳಿಕೊಟ್ಟು ಅವನು ಸ್ವತಂತ್ರ ರಾಜನೆಂದು ಒಪ್ಪಿಕೊಳ್ಳುತ್ತಾನೆ.

ಲೋಕದ ಎಲ್ಲ ಮಹಾತ್ಮರ ಜೀವನದಲ್ಲಿ ಹೆಣ್ಣಿನ ಪ್ರಭಾವ ಮುದ್ರೆಯನ್ನು ಕಾಣಬಹುದು. ಹೆಣ್ಣು ತಾಯಿಯಾಗಿ, ಪತ್ನಿಯಾಗಿ ಗಂಡಸಿನ ಮೇಲೆ ಸತ್ಪ್ರಭಾವವನ್ನು ಬೀರಿರುವುದನ್ನು ಕಾಣಬಹುದು. ಅವರ ಬಾಳು ಬೆಳಗಲು ತಮ್ಮ ತ್ಯಾಗ ಮತ್ತು ಸಹನೆಗಳಿಂದ ಶ್ರಮಿಸಿದ್ದಾರೆ. ರವೀಂದ್ರರು ಒಂದು ಕಡೆ ಹೆಣ್ಣಿನ ಬಗ್ಗೆ ಹೀಗೆಂದಿದ್ದಾರೆ: 'The woman is the embodiment of service and sacrifice'. ಮನೆಯ ಜವಾಬ್ದಾರಿ ಎಷ್ಟು ದೊಡ್ಡದು ! ಅದನ್ನು ಮಹಿಳೆ ಹೇಗೆ ನಿರ್ವಹಿಸಬಲ್ಲಳು ? ಎಂಬುದಕ್ಕೆ ಅವರು ತಮ್ಮ ಅನೇಕ ಕೃತಿಗಳಲ್ಲಿ ಸಮರ್ಥನೆ ನೀಡಿದ್ದಾರೆ. ಮಹಾತ್ಮಾ ಗಾಂಧೀಜಿಯವರು ಕೂಡ ಹೆಣ್ಣಿನಿಂದ ಪ್ರಭಾವಿತರಾಗಿದ್ದಾರೆ. ಇದನ್ನು ಅವರೇ ತಮ್ಮ ಆತ್ಮವೃತ್ತದಲ್ಲಿ ಹೇಳಿಕೊಂಡಿದ್ದಾರೆ. ಗಾಂಧೀಜಿ ಚಿಕ್ಕವರಿದ್ದಾಗ ಅವರನ್ನು ಸಾಕುವ ದಾದಿಯಿಂದ ಪ್ರಭಾವಿತರಾದರಂತೆ. ಎಳೆಯವರಾಗಿದ್ದಾಗ ಗಾಂಧೀಜಿ ತುಂಬಾ

ಹೆದರುತ್ತಿದ್ದರು. ಕತ್ತಲು ಕಂಡರೇ ನಡುಗುತ್ತಿದ್ದರು. ದಾದಿ ಅವರಿಗೆ ಧೈರ್ಯವನ್ನು ತುಂಬಿದಳು—'ಭಯವಾದಾಗ ರಾಮನಾಮವನ್ನು ಸ್ಮರಿಸು, ಧೈರ್ಯ ತಾನೇ ಬರುತ್ತದೆ' ಎಂದು. ಮಗುವಿನ ಮುಗ್ಧ ಮನದಲ್ಲಿ ದೇವರ ನಾಮದ ಬೀಜವನ್ನು ನೆಟ್ಟವಳು ದಾದಿ. ಅವಳ ಆ ಮಾತು ಗಾಂಧಿಯಲ್ಲಿ ಶ್ರದ್ಧೆಯಾಗಿ ಬೆಳೆದು ಗಟ್ಟಿಗೊಂಡಿತು. ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಎರಡನೆಯ ಹೆಣ್ಣು ಅವರ ತಾಯಿ. ಗಾಂಧೀಜಿ ಪರದೇಶಕ್ಕೆ ಹೊರಟಾಗ ಆಕೆ ಮೂರು ಸಂಗತಿಗಳನ್ನು ಹೇಳಿ ಆಣೆ ಮಾಡಿಸಿದಳು. ೧) ಮದ್ಯಪಾನ ಮಾಡಬಾರದು. ೨) ಮಾಂಸ ತಿನ್ನಬಾರದು. ೩) ಪರಸ್ತ್ರೀಸಂಗ ಮಾಡಬಾರದು. ಇವೇ ಆ ಮೂರು ಪ್ರತಿಜ್ಞೆಗಳು.

ಗಾಂಧೀಜಿಯವರ ವಿದೇಶ ಜೀವನದಲ್ಲಿ ಅವರ ದೃಢಚಿತ್ತವನ್ನು ಅಲುಗಾಡಿಸುವ ಪ್ರಸಂಗಗಳು ಘಟಿಸಿದಾಗ ಗಾಂಧೀಜಿಯವರು ತಾಯಿಯ ವಚನವನ್ನು ನೆನೆಸಿಕೊಂಡು ಅವುಗಳಿಂದ ಪಾರಾಗುತ್ತಿದ್ದರು. ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಮೂರನೆಯ ವ್ಯಕ್ತಿಯೆಂದರೆ ಅವರ ಸತಿ ಕಸ್ತೂರಿಬಾ. ಅವರೇ ಹೇಳಿದ್ದಾರೆ–'ತಮಗೆ ಸತ್ಯಾಗ್ರಹದ ಕಲ್ಪನೆ ಬಂದದ್ದು ತಮ್ಮ ಸತಿಯಿಂದ' ಎಂದು. ಹೀಗೆ ಮಹಾತ್ಮರ ಜೀವನದಲ್ಲಿ ಮಹಿಳೆಯ ಪಾತ್ರದ ಘನತೆ ಗೌರವಗಳೇನೆಂಬುದನ್ನು ತಿಳಿಯ ಬಹುದಾಗಿದೆ.

ಹೆಣ್ಣು ಕುಟುಂಬದ ಕಣ್ಣು. ಅವಳು ಒಳ್ಳೆಯವಳಿದ್ದು ತನ್ನ ಮಕ್ಕಳನ್ನು ಒಳ್ಳೆಯವರನ್ನಾಗಿ ಬೆಳೆಸಿದರೆ ಆ ಕುಟುಂಬ ಹಸನಾಗುತ್ತದೆ. ಒಂದೊಂದು ಕುಟುಂಬವೂ ಹಸನಾದರೆ ಸಮಾಜ ಹಸನಾಗುವುದು ಎಷ್ಟು ಹೊತ್ತು ?

ಮೊದಲಿಗೆ ಹೆಣ್ಣು ತನ್ನ ಹೊಣೆಗಾರಿಕೆಯನ್ನು ಅರಿಯಬೇಕು. ಯಾವುದನ್ನು ಮಾಡಿದರೆ ತನಗೆ ತನ್ನ ಇಡೀ ಕುಟುಂಬಕ್ಕೆ ಲೇಸಾಗುತ್ತದೆ ಎಂಬುದನ್ನು ಕಂಡುಕೊಂಡು, ಅದರಂತೆ ನಡೆದರೆ ಪ್ರಗತಿ ಖಂಡಿತ. ಹೆಣ್ಣು ಸಹನೆಗೆ, ತ್ಯಾಗಕ್ಕೆ ಬೇರೊಂದು ಹೆಸರು. ತನಗಿಲ್ಲದಿದ್ದರೂ ತನ್ನ ಗಂಡನಿಗೆ ಮಕ್ಕಳಿಗೆ ನೀಡುವ ಆಕೆಯ ತ್ಯಾಗಗಳು ಸಣ್ಣವಲ್ಲ. ನಾಡು ನುಡಿಯನ್ನು ಕಟ್ಟುವ ಮುಂದಿನ ಪೀಳಿಗೆಯನ್ನು ಬೆಳೆಸುವಾಗ ಆಕೆ ನಿರ್ವಹಿಸಬೇಕಾದ ಜವಾಬ್ದಾರಿ ಚಿಕ್ಕದೇನಲ್ಲ. ಆಕೆ ಮಾಡುವ ಸೇವೆ ಯಾವ ದೇಶ ಭಕ್ತನ ಸೇವೆಗಿಂತಲೂ ಕಡಿಮೆಯದಲ್ಲ.

ಇತ್ತೀಚೆಗೆ ಹೆಣ್ಣಿನ ಬಗ್ಗೆ ಆರೋಗ್ಯಕರವಾದ ವಾತಾವರಣ ಕಡಿಮೆಯಾಗಿದೆ. ಸಿನಿಮಾ ಪ್ರಭಾವ, ಕ್ಯಾಬರೇನೃತ್ಯವೆಂಬ ಪೀಡೆಗಳು ಹೆಣ್ಣಿನ ಮಾನ, ಮರ್ಯಾದೆ, ಘನತೆ, ಗೌರವಗಳನ್ನು ಹೀಗಳೆಯುತ್ತಿವೆ. ಮಹಾಭಾರತದಲ್ಲಿ ದ್ರೌಪದಿಯೊಬ್ಬಳನ್ನು ಅವಮಾನ ಮಾಡಿದ ಪ್ರಸಂಗದಿಂದ ಎಂಥ ಪ್ರಮಾದವಾಯಿತು. ಕುರುಕ್ಷೇತ್ರದಂಥ ಯುದ್ಧ ನಡೆದು ಮಾನವ ಶಕ್ತಿ ಹಾಗೂ ಭೌತಿಕಶಕ್ತಿಗಳೆರಡೂ ನಾಶವಾದವು. ಆದ್ದರಿಂದ ಇಂದು ಹೆಣ್ಣಿನ ಬಗ್ಗೆ ಜನ ತಳೆದಿರುವ ದೃಷ್ಟಿ ಅಪಾಯಕಾರಿ. ಹೆಣ್ಣು ಮಕ್ಕಳೂ ಕೂಡ ಇದನ್ನು ಅರ್ಥ ಮಾಡಿಕೊಳ್ಳಬೇಕು. ಆದರ್ಶ ಭಾರತೀಯ ಸ್ತ್ರೀಯ ಹಿರಿಯ ಸಂಸ್ಕೃತಿಯನ್ನು ನೆನೆಯಬೇಕು. ಅದನ್ನು ಅರಿತು ಅನುಸರಿಸುವಲ್ಲಿ ಶ್ರಮಿಸಬೇಕು. ಹೀಗೆ ಮಾಡುವಲ್ಲಿ ಮಹಿಳಾಸಮಾಜಗಳು ದಾರಿ ದೀಪವಾಗಬೇಕು.

## ೧೪. ಮಹಾತ್ಮರ ಸಂಕಲ್ಪವೇ ಶಿವಸಂಕಲ್ಪ

[ಕೊಡಗಿನ ಕೊಡಲಿಪೇಟೆಯ ಕಲ್ಲುಮಠದಲ್ಲಿ ತಾ. ೫-೨-೧೯೭೬ ರಲ್ಲಿ ನೆರವೇರಿದ ಶಿವಾನುಭವ ಸಮ್ಮೇಳನದ ಅಧ್ಯಕ್ಷ ಭಾಷಣ]

ಮಲೆನಾಡಿನ ಈ ಧಾರ್ಮಿಕ ಸಂಸ್ಥೆಯಲ್ಲಿ ಶಿವಾನುಭವ ಸಮ್ಮೇಳನವನ್ನು ಈ ಮಠದ ಶ್ರೀಗಳವರು ನೆರವೇರಿಸಿ, ಸುತ್ತಮುತ್ತಣ ಸದ್ಭಕ್ತಸಂದೋಹಕ್ಕೆ ಔಚಿತ್ಯಪೂರ್ಣಸನ್ನಿವೇಶವನ್ನು ಒದಗಿಸಿದ್ದಾರೆ. ಈ ಮಠದ ಶ್ರೀಗಳವರಾದ ಪೂಜ್ಯ ಶ್ರೀ ನಿ. ಪ್ರ. ನಂಜುಂಡ ಸ್ವಾಮಿಗಳವರು ನಮ್ಮ ಗುರುಗಳಾದ ಲಿಂ। ಶ್ರೀ ನಿ.ಪ್ರ. ಉದ್ದಾನ ಶಿವಯೋಗಿಗಳವರ ಕೃಪೆಗೆ ಪಾತ್ರರಾದವರು. ಅವರ ಅನುಗ್ರಹದಿಂದ ಈ ಮಠದ ಆಧಿಪತ್ಯವಹಿಸಿ ಅತ್ಯಂತ ಶ್ರಮದಿಂದ ಈ ಪ್ರಾಚೀನ ಮಠವನ್ನು ಸುಸ್ಥಿತಿಗೆ ತಂದು, ಈ ಭಾಗದಲ್ಲಿ ಧಾರ್ಮಿಕ ಜಾಗೃತಿಯನ್ನುಂಟುಮಾಡಿದ್ದಾರೆ. ಅವರ ಬಿನ್ನಹವನ್ನು ಮನ್ನಿಸಿ ನಾವಿಂದು ಈ ಸಮ್ಮೇಳನದಲ್ಲಿ ಭಾಗವಹಿಸಿ ನಾಲ್ಕು ಮಾತು ಹೇಳಬೇಕಾಗಿದೆ. ಇದುವರೆಗೆ ಅನೇಕ ವಿದ್ವಾಂಸರು ಶಿವಾನುಭಾವದ ಬಗೆಗೆ ಮಾತನಾಡಿದ್ದಾರೆ.

**ಶಿವಾನುಭಾವವೆಂದರೇನು ?**

ಈ ಸಮಸ್ತ ಪ್ರಪಂಚವು ಪರಮಾತ್ಮನ ಆವಾಸಸ್ಥಾನವೆಂದು ಜ್ಞಾನಿಗಳು ಕಂಡ ಸತ್ಯವಾಗಿದೆ. ಅವನು ಈ ಪ್ರಪಂಚದ ಹುಟ್ಟಿಗೆ ಮೂಲ ಕಾರಣನಾಗಿ ಓತಪ್ರೋತವಾಗಿ ಬೆಸುಗೆಗೊಂಡು, ಇದ್ದೂ ಇಲ್ಲದ ಪರಿಯಲ್ಲಿ ಅಡಗಿ ಕುಳಿತಿದ್ದಾನೆ. ಅಂದ ಬಳಿಕ ಬ್ರಹ್ಮಾಂಡದ ಒಂದು ಅಂಶವಾದ ಪಿಂಡಾಂಡದಲ್ಲೂ ಅವನು ಅಂತೆಯೇ ಇದ್ದೂ ಇಲ್ಲದ ಬೆಡಗಿನಿಂದ ಚಿತ್ಕಲಾ ರೂಪ

ದಲ್ಲಿ ಇದ್ದಾನೆ. ದೇಹಭಾವ ಆ ಚಿತ್ಕಲೆಗೆ ಆವರಿಸಿರುವ ಒಂದು ಆವರಣ. ಅದು ಆಣವ–ಮಾಯಾ–ಕಾರ್ಮಿಕ ಎಂಬ ಮೂರು ರೂಪದ ಮಲ. ಅವರ ನಿವೃತ್ತಿಯೇ ಆ ಸಚ್ಚಿದಾನಂದಲಕ್ಷಣಲಕ್ಷಿತನಾದ ಪರಮಾತ್ಮನ ಸಾಕ್ಷಾತ್ಕಾರದ ಮಾರ್ಗವೆಂದು ಶಿವಶರಣರು ಕಂಡುಂಡ ಸತ್ಯ. ತತ್ತ್ವಜ್ಞಾನ, ಅದನ್ನನುಸರಿಸಿದ ಅನುಭಾವ ವಿದ್ಯೆ, ಅಂಥ ಅನುಭವವನ್ನು ಸಂಪಾದಿಸುವಿಕೆ ಈಮಾರ್ಗದಲ್ಲಿ ಶಿವಶರಣರ ನಿಲವು ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ಆ ವೈಶಿಷ್ಟ್ಯವೇನೆಂಬುದರ ವಿಚಾರ ಮಾಡಿ ಅದನ್ನು ಕ್ರಿಯಾಮಾರ್ಗದಲ್ಲಿ ತರುವುದೇ ಶಿವಾನುಭಾವಮಾರ್ಗವೆನಿಸುವುದು. ಮಾನವಜೀವನ ಅಂತರ್ಮುಖದಿಂದ ಹೊರಹೊಮ್ಮಿದ್ದು. ಆದ್ದರಿಂದಲೇ ಶಿವಶರಣರು ಬಾಹ್ಯಪ್ರಪಂಚದತ್ತ ದೃಷ್ಟಿಯನ್ನು ಹೊರಳಿಸದೆ ಆಂತರಿಕದೃಷ್ಟಿಯುಳ್ಳವರಾಗಿ ಈ ಪಿಂಡಪ್ರಪಂಚದ ನಿಲವನ್ನು ವಿಶ್ಲೇಷಿಸಿ ಅಖಂಡಲಕ್ಷಣಲಕ್ಷಿತನಾದ ಪರಮಾತ್ಮನ ನಿಲವನ್ನು ತಮ್ಮ ಅನುಭವದಲ್ಲಿಯೇ ಸಾಕ್ಷಾತ್ಕಾರ ಮಾಡಿಕೊಂಡು ಬ್ರಹ್ಮಾಂಡದೊಡನೆ ಓತಪ್ರೋತಗೊಂಡ ಅವನ ನಿಲವನ್ನು ಅರಿತರು. ಅಂತೆಯೇ ಅವರ ದೃಷ್ಟಿಯಲ್ಲಿ ಒಳಗುಹೊರಗಾಗಿದೆ ; ಹೊರಗು ಒಳಗಾಗಿದೆ; ಒಳಹೊರಗೊಂದಾಗಿದೆ. 'ಪಿಂಡ ಬ್ರಹ್ಮಾಂಡಯೋರೈಕ್ಯಂ' ಎಂಬ ಆಗಮೋಕ್ತಿಯ ಅರ್ಥವೂ ಇದೇ ಆಗಿದೆ, ಈ ಪ್ರಪಂಚವು ಮಿಥ್ಯೆಯೆಂದಾಗಲಿ, ಮಾಯೆಯೆಂದಾಗಲಿ ಶಿವಶರಣರು ಪ್ರಪಂಚವನ್ನು ಹೀಗಳೆಯುವುದಿಲ್ಲ. ನಿರಾಕಾರನಾದ ಪರಮಾತ್ಮನ ಅಂಗವೇ ಬ್ರಹ್ಮಾಂಡವೆಂದು ಅವರ ವಾದ. ಚಿಚ್ಛಕ್ತಿರೂಪನಾದ ಜೀವನಿಗೆ ದೇಹವು ಹೇಗೋ ಹಾಗೆ ಬೃಹದ್ಬ್ರಹ್ಮಾಂಡವೂ ಪರಮಾತ್ಮನ ದೇಹ. ಅದು ಬ್ರಹ್ಮಾಂಡ ಇದು ಪಿಂಡಾಂಡ ; ಅಲ್ಲಿರುವುದನ್ನು ಪರಮಾತ್ಮ ಎಂದರೆ ಪಿಂಡದ ನಿಲುವಿನಲ್ಲಿರುವ ಅದನ್ನೇ ಪ್ರತ್ಯಗಾತ್ಮನೆಂದು ಕರೆಯಲಾಗುತ್ತಿದೆ. ಪರಮಾತ್ಮನು ತನ್ನ ಬಿಟ್ಟುಬೇರಿಲ್ಲ; ಬೇರೆಡೆಗೆ ಅವನನ್ನು ಹುಡುಕಿದರೂ ಸಿಗುವವನಲ್ಲ; ತನ್ನೊಳಗಿರುವ ಅವನನ್ನು ಈ ಪಿಂಡದ ಸಹಕಾರದಿಂದ ಅರಿಯುವ ಮಾರ್ಗವೇ ಶಿವಾನುಭಾವಮಾರ್ಗ. ಅರಿವನ್ನು ಅಂಗವಿಸಿಕೊಳ್ಳುವುದೇ ಶಿವಾನುಭವ ; ಅರಿದು ಆಚರಿಸುವುದೇ ಶಿವಾನುಭಾವ. ಈ ಅನುಭವ ಸಂಪಾದನೆಗೆ ಸಂಸಾರತ್ಯಾಗ ಮಾಡಬೇಕಾಗಿಲ್ಲ. ಈ ಪ್ರಪಂಚದಲ್ಲಿಯೇ ಎಲ್ಲರ ಮಧ್ಯದಲ್ಲಿ ವ್ಯವಹರಿಸಿ, ಈ ನರಪ್ರಪಂಚವನ್ನೇ ಹರಪ್ರಪಂಚವನ್ನಾಗಿ ಮಾರ್ಪಡಿಸಿಕೊಳ್ಳುವ ನಿಚ್ಚನಿಚ್ಚ ಅರಿವಿನ ಕ್ರಿಯೆಯಲ್ಲಿ ತೊಡಗಬೇಕು. ಇಂಥ ಅರಿವಿನ ಕ್ರಿಯೆಯಲ್ಲಿ ಬಸವಾದಿ ಪ್ರಮಥರು ಆಚರಿಸಿ ಆ ನಿತ್ಯಸತ್ಯದ ಅನುಭವದ ಸವಿಯನ್ನುಂಡವರು. ಅವರ ಅನುಭವ ವಚನಶಾಸ್ತ್ರದಲ್ಲಿ ಹೊರಹೊಮ್ಮಿದೆ. ಅವುಗಳ ಶ್ರವಣ-ಮನನ-ನಿಧಿಧ್ಯಾಸಗಳು ಅವಶ್ಯಕ. ಈ ಶಿವಾನುಭವ ಸಮ್ಮೇಲನ ಶ್ರವಣ ಪ್ರಯೋಜನವನ್ನುಂಟುಮಾಡುವ ಒಂದು ಸಾಧನ. ಕೇವಲ ಶ್ರವಣದಿಂದ ನಮ್ಮ ಉದ್ದೇಶಸಾಧನೆಯಾಗಲಿಲ್ಲ. ಅದನ್ನು ಮನನ ಮಾಡಬೇಕು. ಅಂದರೆ ನಮ್ಮ ಅನುಭವದ ಒರೆಗಲ್ಲಿಗೆ ಅದನ್ನೆಲ್ಲ ತಿಕ್ಕಿ ಮಥನಮಾಡಬೇಕು. ಮನದ ನೆನಹು, ಬುದ್ಧಿಯ ಸಾರಾಸಾರ ವಿಚಾರ, ಚಿತ್ತದ ಸಂಕಲ್ಪವಿಕಲ್ಪ–ಅಹಂಕಾರ ಪರಿಭ್ರಮಣೆ-ಇವೆಲ್ಲವುಗಳನತಿಗಳೆದು ಸಹಜ ಸುಮ್ಮಾನಿಯಾಗಬೇಕು ; ಅಂದರೆ ಅಂತರಂಗವೆಲ್ಲ ಬೆಳ್ಳಂಬೆಳಕು ಮಾಡಿಕೊಂಡು. ಕ್ರಿಯೆಯಲ್ಲಿ ಪ್ರಸಾರಗೊಳ್ಳಬೇಕು. ಹೀಗಾದಾಗಲೇ ಈ ಸಮ್ಮೇಲನದ ಉದ್ದೇಶ ಕ್ರಿಯೆಯಲ್ಲಿ ಪ್ರಸಾರವಾದಂತಾಗುತ್ತದೆ.

**ಮಾನವತೆ ಶ್ರೇಷ್ಠವಾದದ್ದು :**

ಜೀವಕೋಟಿಯಲ್ಲೆಲ್ಲ ಮಾನವ ಬಹುದೊಡ್ಡವನೆನಿಸಿದ್ದಾನೆ. ಪರಮಾತ್ಮನು ಅವನಿಗೆ ಯಾವ ಪ್ರಾಣಿಗಳಿಗೂ ಕೊಡದೆಯಿರುವ ವಿಚಾರಸಾಮರ್ಥ್ಯಕೊಟ್ಟಿದ್ದಾನೆ. ಆ ವಿಚಾರಶಕ್ತಿಯಿಂದ ಮನುಷ್ಯ ತಾನು ಯಾರು ? ಎಲ್ಲಿಂದ ಬಂದೆ ? ಈಗ ಎಲ್ಲಿದ್ದೇನೆ ? ಮುಂದೆ ಎಲ್ಲಿಗೆ ಪ್ರಯಾಣ ಬೆಳೆಸುತ್ತೇನೆ ? ಈ ತ್ರಿಕಾಲಗಳ ಬಗೆಗೆ ಯೋಚಿಸಿ ಸದ್ಧರ್ಮಪರಿಪಾಲನೆಮಾಡಿ ನಿತ್ಯಸುಖವನ್ನನುಭವಿಸುವ ಶಕ್ತಿಯನ್ನು ಪಡೆದಿದ್ದಾನೆ. ಮಾನವನು ಭೂತಪ್ರಾಣಿಯಲ್ಲ. ಉಂಡುಟ್ಟು ಜೀವಿಸುವುದೊಂದೇ ಇವನ ಜೀವನೋದ್ದೇಶವಲ್ಲ. ಶ್ರೇಷ್ಠಧ್ಯೇಯಸಾಧನೆಗಾಗಿ ಮೀಸಲಾಗಿರುವ ಈ ಜೀವನ ಸಾಮಾನ್ಯಪ್ರಾಣಿಸಹಜಜೀವನವಾದ ಆಹಾರ–ನಿದ್ರೆ–ಭಯ–ವಂಶಾಭಿವೃದ್ಧಿಯೇ ಮೊದಲಾದ ಕ್ರಿಯೆಗಳಲ್ಲಷ್ಟೇ ಪರ್ಯವಸಾನಗೊಳ್ಳಬಾರದು. ಹಾಗಾದರೆ ಇವನೂ ಒಂದು ಪ್ರಾಣಿಯೇ ಆದಂತಾಗಿ ಈಶ್ವರದತ್ತ ಅಲಭ್ಯಲಾಭವಾದ ಜ್ಞಾನಶಕ್ತಿಗೆ ಫಲವೇನು ? ಜಾಣರಾದವರು ಲೌಕಿಕವನ್ನು ಪಾರಮಾರ್ಥಿವನ್ನು ಸಾಧಿಸಿ ಮುಕ್ತನಾಗಬೇಕೆಂದು ಜಗತ್ತಿನ ದಾರ್ಶನಿಕರೆಲ್ಲ ಹೇಳುತ್ತಿದ್ದಾರೆ. ಹೀಗೆ ಮಾನವಜೀವನ ಸಂಸ್ಕೃತಿಸಂವರ್ಧನೆಮಾಡಿಕೊಂಡು ಹೋಗಲು ಸಮಾಜಜೀವನದಲ್ಲಿ ಮಾಡಿರುವ ಧಾರ್ಮಿಕ–ಸಾಂಸ್ಕೃತಿಕ ಕೇಂದ್ರಗಳೇ ಮಠಮಾನ್ಯಗಳು. ಅವುಗಳನ್ನು ಉಳಿಸಿಕೊಂಡು ಬೆಳೆಸಿಕೊಂಡು ಹೋಗಬೇಕಾದುದು ಸಮಾಜದ ಕರ್ತವ್ಯವಾಗಿದೆ. ಹಿಂದೆ ಈ ಉದ್ದೇಶದಿಂದಲೇ ಕೊಡಗಿನ ರಾಜಮಹಾರಾಜರು ಈ ಮಲೆನಾಡಿನಲ್ಲಿ ಅನೇಕ ಮಠಮಾನ್ಯಗಳನ್ನು ಮಾಡಿ ಅವಕ್ಕೆ ದತ್ತಿಗಳನ್ನು ಕೊಟ್ಟು ಸಮಾಜಸಂಸ್ಕೃತಿಯ ಸಂವರ್ಧನೆಗೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಮಠಮಾನ್ಯಗಳಲ್ಲಿರುವ ಸ್ವಾಮಿಗಳವರು ತಮ್ಮ ಆಶ್ರಮಧರ್ಮವನ್ನು ಉಜ್ವಲಗೊಳಿಸಿಕೊಂಡು ಭಕ್ತಹಿತಾರ್ಥವಾಗಿ ತಾವು ಲಿಂಗತಪಸ್ಸನ್ನಾಚರಿಸಿ, ಕಾಯಕಮಾಡಿ, ಆದರ್ಶ ಜೀವನ ನಡೆಸಿತೋರಿಸಿ ಸಮಾಜಜೀವನದ ಮೇಲ್ಮಟ್ಟಕ್ಕಾಗಿ ಹೆಣಗಬೇಕು. ಹಾಗೆ ಅವರು ಮಾಡಿದಾಗಲೆ ತಾವು ಧರಿಸಿರುವ ವೈರಾಗ್ಯಲಾಂಛನಕ್ಕೆ ಬೆಲೆಯುಂಟಾದೀತು. ಇಲ್ಲದಿದ್ದರೆ ಅಪಹಾಸ್ಯಕ್ಕೀಡಾಗಬೇಕಾಗುತ್ತದೆ. ಅನೇಕ ಮಠಮಾನ್ಯಗಳು ಇಂದು

ತಮ್ಮ ಕರ್ತವ್ಯದಿಂದ ಚ್ಯುತಗೊಂಡಿವೆ. ವೀರಶೈವ ಸಮಾಜ ಒಂದು ಸುಸಂಬದ್ಧಸಮಾಜ. ಅದು ಲೋಕಹಿತಾರ್ಥವಾಗಿ, ಧರ್ಮ ಮತ್ತು ಸಂಸ್ಕೃತಿ-ಸಾಹಿತ್ಯ ಸಂವರ್ಧನೆಗಾಗಿ ಪ್ರಾಚೀನಕಾಲದಿಂದ ಅನೇಕ ಮಠಗಳನ್ನು ನಿರ್ಮಾಣಮಾಡಿದೆ. ಅನೇಕ ಮಠಮಾನ್ಯಗಳ ಚರಿತ್ರೆ ಭವ್ಯವಾಗಿದೆ. ಅವು ಸಾಧಿಸಿರುವ ಸಾಧನೆ ಅತ್ಯದ್ಭುತ. ಸರ್ವಸಮಾಜಗಳ ಯೋಗಕ್ಷೇಮವನ್ನು ಅವು ಮಾಡಿವೆ. ಇವುಗಳ ಸದುಪಯೋಗದಿಂದ ಸಮಾಜ ನೆಮ್ಮದಿಯಿಂದ ಬಾಳಿದುದು ಪ್ರಾಚೀನ ಚರಿತ್ರೆಯಿಂದ ಕಂಡುಬರುತ್ತದೆ. ಕರ್ನಾಟಕದಲ್ಲಿ ಹರದನಹಳ್ಳಿಯ ಶೂನ್ಯಸಿಂಹಾಸನಾಧಿಪತಿಗಳ ಚರಿತ್ರೆ ಅತ್ಯಂತ ಭವ್ಯವಾದುದು. ಅದರಲ್ಲೂ ತೋಂಟದ ಸಿದ್ಧಲಿಂಗೇಶ್ವರರ ಕ್ರಾಂತಿಯ ಫಲವಾಗಿ ನೂರಾರು-ಸಾವಿರಾರು ಮಠಮಾನ್ಯಗಳು ಕರ್ನಾಟಕದ ತುಂಬೆಲ್ಲ ಹರಡಿ ಅವು ವೀರ ಶೈವ ಸಂಸ್ಕೃತಿಯನ್ನೇ ಉಜ್ಜ್ವಲಗೊಳಿಸಿವೆ ; ಈಗಲೂ ಆ ಕಾರ್ಯದಲ್ಲಿ ಅನೇಕ ಮಠಗಳು ತತ್ಪರವಾಗಿವೆ.

**ಜನತೆಯ ಭಾವನೆ ಬದಲಾಗಿದೆ :**

ಇತ್ತೀಚಿನ ತಲೆಮಾರಿನ ಜನತೆಯ ಭಾವನೆಗಳು ತೀರಾ ಬದಲಾವಣೆಗೊಂಡಿವೆ. ಇದಕ್ಕೆ ಕಾರಣ ಪಾಶ್ಚಾತ್ಯಸಂಸ್ಕೃತಿ ಮತ್ತು ವಿಜ್ಞಾನದ ಬೆಳವಣಿಗೆ, ರಾಜಕೀಯದಲ್ಲಿ ಬೇರುಬಿಟ್ಟಿರುವ ವಿಶೇಷಶ್ರದ್ಧಾಸಕ್ತಿಗಳೆನ್ನಬಹುದು. ಬುದ್ಧಿಶಕ್ತಿಯ ಬೆಳವಣಿಗೆಯಿಂದ ಸುಖಿವಾಗಿ ಬಾಳುತ್ತೇವೆಂದು ಅದರಲ್ಲಿ ಶ್ರದ್ಧಾಸಕ್ತಿಯನ್ನು ವಿಶೇಷವಾಗಿ ತೋರಿಸುತ್ತ ಹೃದಯ ಶಕ್ತಿಯ ಬೆಳವಣಿಗೆಯನ್ನು ಕುಂಠಿತಗೊಳಿಸತೊಡಗಿದೆ. ಬುದ್ಧಿಯ ಬೆಳವಣಿಗೆಯನ್ನು ಯಾರೂ ಅಸ್ವೀಕಾರ ಮಾಡರು : ಆದರೆ ಅದರ ಸಮಸಮನಾಗಿಯೇ ಹೃದಯಸೌಂದರ್ಯವನ್ನು ಬೆಳೆಸಿಕೊಂಡಾಗಲೇ ಮಾನವ ಮಾನವಾಗಿ ಬಾಳಿಯಾನು. ಕೇವಲ ಬುದ್ಧಿಯ ಬೆನ್ನುಹತ್ತಿಹೋಗಿ ವಂಚನೆಗೊಳಗಾಗುತ್ತಿದ್ದಾನೆ. ಸ್ವಾರ್ಥದ ಬಲೆಗೆ ಬಿದ್ದು ಅಂತಃಕರಣದ ಕೊಲೆ ಮಾಡುವುದು ಯಾವ ಕಾಲಕ್ಕೂ ಯುಕ್ತವಾಗಲಾರದು. ಅಗಾಧ ಬುದ್ಧಿಶಾಲಿಗೂ ಕೂಡ ಸ್ವಪ್ನದಲ್ಲಿ ಸಹ ಕಾಣಲಾಗದ ಸ್ಥಾನಕ್ಕೆ ಮುಟ್ಟಿಸುವ ಸಾಮರ್ಥ್ಯ ಅಂತಃಕರಣಕ್ಕೆ ಇದೆ. ಅಂತಃಕರಣಗಳು ಶಿವಸಂಕಲ್ಪಭರಿತವಾಗಬೇಕು. ಬುದ್ಧಿಯು ಯಾವಾಗಲೂ ಸಂಶಯದ್ದು ; ತರ್ಕದಲ್ಲಿ ಆಸಕ್ತವಾದುದ್ದು ; ಮುಖ್ಯವಾಗಿ ಬಹುಲೆಕ್ಕಾಚಾರದ್ದು. ಅಂತಃಕರಣದ ಕೆಲಸ ತೃಪ್ತಿಯದು ; ವ್ಯಕ್ತಿಯ ತೇಜೋ ವಿಶೇಷವನ್ನು ಬೆಳೆಸುವಂತಹುದು ; ಉತ್ತಮರೀತಿಯಲ್ಲಿ ಅಂತಃಕರಣ ಶುದ್ಧಿಯನ್ನು ಬೆಳೆಸಿಕೊಂಡವರಿಗೇ ಅತೀಂದ್ರಿಯ ಜ್ಞಾನ ಲಭ್ಯವಾಗುವುದಲ್ಲದೆ, ಬುದ್ಧಿಶಕ್ತಿಯುಳ್ಳವನಿಗಲ್ಲ. ಇದನ್ನರಿತು ನಾವು ಧರ್ಮಶ್ರದ್ಧೆಯನ್ನು ಬೆಳೆಸಿಕೊಂಡು ಶುದ್ಧಾಂತಃಕರಣ ವನ್ನು ಪಡೆಯಲು ಪ್ರಯತ್ನಿಸಬೇಕು. ಅಂಥ ವಿದ್ಯೆಯನ್ನು ಶಿವಾನುಭವ ಸಮ್ಮೇಲನಗಳು ಮನುಷ್ಯನಿಗೆ ಬೋಧಿಸುತ್ತವೆ. ಇಂಥ ಸನ್ನಿವೇಶಗಳನ್ನು ಪದೇಪದೇ ಉಂಟುಮಾಡಿಕೊಂಡು ಪರಸ್ಪರ ಅನುಭವದ ವಿಚಾರಗಳನ್ನು ಕುರಿತು ಯೋಚನೆ ಮಾಡುವಂತಾಗ ಬೇಕು. ಆಗ ಧಾರ್ಮಿಕಶ್ರದ್ಧೆ ಬೆಳೆದುಬರುತ್ತದೆ. ಚಿಕ್ಕಮಕ್ಕಳಿಗೆ ಹೆಣ್ಣುಮಕ್ಕಳಿಗೆ ಧಾರ್ಮಿಕ ಸಂಸ್ಕಾರ ಲಭ್ಯವಾಗುತ್ತದೆ : ಸಮಾಜದಲ್ಲಿ ಸರ್ವರೂ ಪ್ರೀತಿವಿಶ್ವಾಸಗಳಿಂದ ಬಾಳಲು ಅನುಕೂಲವಾಗುತ್ತದೆ. ಮಠಮಾನ್ಯಗಳು ಅಲ್ಲಲ್ಲಿ ಆಗಾಗ ಶಿವಾನು ಭವ ಸಮ್ಮೇಲನಗಳನ್ನು ಜರುಗಿಸಿ ತನ್ಮೂಲಕ ಅನೇಕ ಶಿವಾನುಭಾವಿಗಳಿಂದ ಪುರಾಣಪ್ರವಚನ, ಕೀರ್ತನೆ, ಭಾಷಣ-ಇತ್ಯಾದಿ ಗಳನ್ನೇರ್ಪಡಿಸಿ ವೀರಶೈವವನ್ನು ನಿಜಾಚರಣೆಗಳಿಗೆ ತಿರುಗಿಸುತ್ತ, ಪರಂಪರಾಗತವಾಗಿ ಬಂದ ಸಂಸ್ಕೃತಿಯ ಪ್ರಕಾಶವನ್ನು ಉಜ್ಜ್ವಲಗೊಳಿಸುತ್ತ ಹೋಗಬೇಕಾದುದು ಅನಿವಾರ್ಯ. ಅದಕ್ಕೆ ಮಠಮಾನ್ಯಗಳು ಉತ್ತಮ ಮಾಧ್ಯಮಗಳು. ಹಿಂದಿನಿಂದ ನಮ್ಮ ಮಠಮಾನ್ಯಗಳು ಸಮಾಜದಲ್ಲಿ ಉದ್ಭವಿಸುವ ನ್ಯಾಯಗಳನ್ನು ಬಗೆಹರಿಸುವ ನ್ಯಾಯಾಂಗಗಳೂ, ವಿದ್ಯಾಪ್ರಸಾರ,ಧರ್ಮ ಸಂಸ್ಕೃತಿ ಪ್ರಸಾರಕೇಂದ್ರಗಳೂ ಆಗಿದ್ದವು. ಈ ತತ್ತ್ವವನ್ನು ಅರ್ಥಮಾಡಿಕೊಂಡ ಅನೇಕ ರಾಜಮಹಾರಾಜರುಗಳು ಭೂಮಿ ಕಾಣಿಗಳನ್ನು ಮಠಗಳಿಗೆ ಕೊಟ್ಟಿದ್ದಾರೆ. ವೀರಶೈವ ರಾಜರಷ್ಟೇ ಅಲ್ಲ;ವೀರಶೈವೇತರ ರಾಜರೂ ವೀರಶೈವಮಠಗಳಿಗೆ ದತ್ತಿಗಳನ್ನು ಕೊಟ್ಟಿದ್ದಾರೆ. ಇಂದಿನ ಸಾಮಾಜಿಕ ಪರಿಸ್ಥಿತಿ ಏನೇ ಆಗಿರಲಿ. ಕಾಲ ಬದಲಾವಣೆಯಾದೀತು. ನಾವು ಶ್ರದ್ಧೆಯಿಂದ ನಮ್ಮ ಕೆಲಸವನ್ನು ತೀವ್ರಗೊಳಿಸಿದರೆ ಅದರ ಪುಣ್ಯದ ಫಲ ಇಂದಲ್ಲ ನಾಳೆ ಕೈಗೂಡೇಕೂಡುತ್ತದೆ. ಇದನ್ನು ಅರ್ಥಮಾಡಿಕೊಂಡು ಮಠದ ಶ್ರೀಗಳವರು ತಮ್ಮ ಪಾಲಿನ ಕೆಲಸದಲ್ಲಿ ಶುದ್ಧಾಂತಃಕರಣದಿಂದ ಕಾರ್ಯತತ್ಪರರಾಗಬೇಕು.

**ಬ್ರಹ್ಮಚರ್ಯಪಾಲನೆ :**

ಮುಖ್ಯವಾಗಿ ಮಠಾಧಿಪತಿಗಳು ಅಸ್ಖಲಿತಬ್ರಹ್ಮಚರ್ಯವನ್ನು ಕಾಪಾಡಿಕೊಂಡು ಮಾದರಿಯಾಗಿ ಬಾಳಬೇಕು. ಬ್ರಹ್ಮ ಚರ್ಯ ಸುಲಭವಲ್ಲ. ಅಂತಃಕರಣದಲ್ಲಿ ಬ್ರಹ್ಮಚರ್ಯಪಾಲನೆಯ ದೃಢಸಂಕಲ್ಪ ಮೂಡಿಬರಬೇಕು. ಆ ಸನ್ನಿವೇಶವನ್ನು ತಮ್ಮ ಸುತ್ತಮುತ್ತ ಸದಾ ನಿರ್ಮಾಣಮಾಡಿಕೊಳ್ಳಬೇಕಾಗುವುದು. ನಮ್ಮ ಪೂಜ್ಯಗುರುಗಳಾದ ಉದ್ದಾನಶಿವಯೋಗಿಗಳು ನಮ್ಮನ್ನೆಲ್ಲ ಕಠೋರಶಿಕ್ಷೆಗೊಳಗು ಮಾಡುತ್ತಿದ್ದರು. ಸಂದಿಗ್ಧಪರಿಸ್ಥಿತಿಯಲ್ಲಿ ನಾವು ಹೇಗೆ ವ್ಯವಹರಿಸುತ್ತೇವೆಂಬುದನ್ನು ಅವರು ಅಂಥ ಪ್ರಸಂಗಗಳನ್ನೊಡ್ಡಿ ಪರೀಕ್ಷಿಸುತ್ತಿದ್ದರು. ಇಂಥ ಕಠೋರಶಿಕ್ಷೆಗಳಿಗೆ ನಮ್ಮನ್ನು ಒಳಪಡಿಸದಿದ್ದರೆ ಇಂದು ನಾವು ಹೀಗಿರುತ್ತಿ ದ್ದೆವೋ ಇಲ್ಲವೋ. ಅವರ ಶಿಕ್ಷೆಗೆ ಒಳಪಟ್ಟ ಅನೇಕ ಮಠಾಧಿಪತಿಗಳು ಇಂದು ಮಹಾಸಂಸ್ಕಾರಿಗಳಾಗಿ ತಮ್ಮ ಆಶ್ರಮಧರ್ಮ ವನ್ನು ಕಾಪಾಡಿಕೊಂಡು ತಮ್ಮ ಪಾಲಿನ ಸಮಾಜಸೇವೆ ಮಾಡಿಕೊಂಡು ಬರುತ್ತಿದ್ದಾರೆ. ಅವರ ಅನುಗ್ರಹ, ಸಂಕಲ್ಪಶಕ್ತಿ

ಇವೆಲ್ಲ ನಮ್ಮನ್ನುಉದ್ಧಾರಮಾಡಿವೆ. ಮಹಾತ್ಮರ ಅನುಗ್ರಹಶಕ್ತಿ ದೊಡ್ಡದು, ಅದು ಪರುಷಮಣಿಯಿದ್ದಂತೆ. ಅದಕ್ಕೆ ಸಂಬಂಧಗೊಂಡ ಯಾವ ಕಬ್ಬಿಣವೇ ಆಗಲಿ ಅದು ಬಂಗಾರವಾಗುತ್ತದೆ ; ಮಹಾತಪಸ್ವಿಗಳ ಸಂಕಲ್ಪವೇ ಶಿವಸಂಕಲ್ಪ. ಅವರು ಸತ್ಸಂಕಲ್ಪದಿಂದ ನಮ್ಮನ್ನು ಆಶೀರ್ವದಿಸಿದರೆ ಸಾಕು. ನಮ್ಮ ಭವಭವಾಂತರಗಳೂ ನಾಶವಾಗುತ್ತವೆ. ಆ ವಿಷಯದಲ್ಲಿ ನಂಬುಗೆ ಬೇಕು ಮಾತ್ರ. ನಾವು ಪವಿತ್ರಭಾವನೆಯಿಂದ ಮಾಡುವ ಎಲ್ಲ ಕ್ರಿಯೆಗಳೂ ಸತ್ಫಲಭರಿತವಾಗುತ್ತವೆ. ನಮ್ಮ ಕ್ರಿಯೆಯ ಪ್ರಾಬಲ್ಯವೇ ಆ ಸತ್ಫಲವನ್ನು ನಾವು ಬಯಸದಿದ್ದರೂ ಎಳೆದುತರುತ್ತದೆ. ಈ ನಂಬುಗೆ ನಮ್ಮೆಲ್ಲರಲ್ಲೂ ಬೆಳೆದುಬರಬೇಕು. ಅಂಥ ಸದ್ಬುದ್ಧಿಯನ್ನು ಈಶ್ವರನು ಎಲ್ಲರಿಗೂ ಕರುಣಿಸಲಿ ಎಂದು ಹಾರೈಸುತ್ತೇವೆ.

## ೧೫. ಶಿವಾನುಭವ

[ಕಂಬಾಳು ಮಠದಲ್ಲಿ ತಾ. ೧-೫-೧೯೭೭ರಲ್ಲಿ ನಡೆದ ಶಿವಾನುಭವ ಸಮ್ಮೇಲನದ ಅಧ್ಯಕ್ಷಭಾಷಣ]

ಶಿವಾನುಭವ ಗಹನಕ್ಕೆ ಗಹನ; ಸರಳಕ್ಕೆ ಸರಳ. ಶಿವಾನುಭವವನ್ನು ಎಲ್ಲರೂ ಅರಿತು ಆಚರಣೆಗೆ ತರುವುದು ಸಾಧ್ಯವಿಲ್ಲವೆಂಬ ಮಾತನ್ನು ಒಪ್ಪುವುದಕ್ಕಾಗುವುದಿಲ್ಲ. ದರ್ಶನಭಾಗ, ಸಿದ್ಧಾಂತಭಾಗ, ಶಾಸ್ತ್ರಮಥನಮಾಡದೆ ಶಿವಾನುಭವ ಅಳವಡುವುದಿಲ್ಲವೆಂದು ಯಾರಾದರೂ ತಿಳಿದಿದ್ದರೆ ಅದು ತೀರಾ ಸುಳ್ಳು. ಅದರಲ್ಲಿ ಸಾಮಾನ್ಯಮನುಷ್ಯನಿಗೂ ಕೂಡಾ ಆ ಶಕ್ತಿ ಬಂದರೆ ಸಾಕು, ಮುಗ್ಧರಾಗಿದ್ದರೂ ಶಿವಾನುಭಾವವನ್ನು ಅರ್ಥಮಾಡಿಕೊಂಡು ಅನುಭವಕ್ಕೆ ತಂದುಕೊಳ್ಳಬಹುದು. ಈ ಲೋಕದ ಯಥಾರ್ಥವಾದ ಅನುಭವವೇ ಶಿವಾನುಭವವೆನಿಸಿಕೊಳ್ಳುವುದು. ಸಮಗ್ರಬ್ರಹ್ಮಾಂಡವೇ ಶಿವಸ್ವರೂಪ. ಆ ಸ್ವರೂಪವೇ ಪೂಜಾರ್ಹವಾದ ಲಿಂಗ. ಆ ಲಿಂಗವನ್ನು ದೀಕ್ಷಾವಿಧಿಯಿಂದ ಕರಸ್ಥಲಕ್ಕೆ ತಂದುಕೊಟ್ಟಾತನೇ ಗುರುವು. ಹೀಗೆ ಗುರುವು ಕೊಟ್ಟ ಶಿವದೀಕ್ಷೆಯ ಗತಿಮತಿಗಳ ಸಮನ್ವಯದ ಸಾಧನೆಯನ್ನು ಸಿದ್ಧಿಮಾಡಿಕೊಡುವ ಲಿಂಗದ ಚೈತನ್ಯಮುಖವೇ ಜಂಗಮ. ಈ ಗುರುಲಿಂಗಜಂಗಮದ ಮೂಲಕ ಪಡೆಯುವುದೇ ಪಾದೋದಕ, ಪ್ರಸಾದ. ಈ ಪ್ರಸಾದವನ್ನು ಲಿಂಗಭೋಗೋಪಭೋಗವೆಂದು ಭಾವಿಸುತ್ತ ಲೋಕದೊಡನೆ ಬಾಳುವ ವೀರಶೈವನ ನಡೆನುಡಿಗಳೇ ಶಿವಾನುಭವ ಎನಿಸುವುದು; ಸದ್ಗುಣ ಸತ್ಶೀಲಗಳಿಂದ ಕೂಡಿದ ಲೋಕಜೀವನ. ಶ್ರದ್ಧಾಭಕ್ತಿವಿಶ್ವಾಸಪೂರ್ಣವಾದ ಕಾಯಕ ಇವೆಲ್ಲ ಶಿವಾನುಭವದ ನರುಗುಂಪು ಸುತ್ತೆತ್ತಲೂ ಬೀರಲಿಕ್ಕೆ ಸಹಾಯಕಗಳಾಗುತ್ತವೆ. ಬಸವಣ್ಣನವರು ಒಂದು ಕಡೆ ಯಾವ ಶಾಸ್ತ್ರಗ್ರಂಥಗಳ ಸಿದ್ಧಾಂತಗಳ ಪರಿಚಯವಿಲ್ಲದವರೂ ಶಿವಾನುಭವಕ್ಕೆ ಅರ್ಹರೆಂಬುದನ್ನು

'ಆಳಿಗೊಂಡಹರೆಂದು ಅಂಜಲದೇಕೆ ? ನಾಸ್ತಿಕವಾಡಿಹರೆಂದು ನಾಚಲದೇಕೆ ?
ಆರಾದೊಡಾಗಲಿ ಶ್ರೀ ಮಹಾದೇವಂಗೆ ಶರಣೆನ್ನಿ. ಏನೂ ಅರಿಯೆನೆಂದು ಮೌನಗೊಂಡಿರಬೇಡ ;
ಕೂಡಲ ಸಂಗಮದೇವರ ಮುಂದೆ ದಂದಣದತ್ತಣ ಎನ್ನಿ'.
'ಸುಪ್ರಭಾತ ಸಮಯದಲ್ಲಿ ಅರ್ತಿಯಲ್ಲಿ ಲಿಂಗವ ನೆನೆದರೆ ತಪ್ಪುವುವು ಅಪಮೃತ್ಯು ಕಾಲಕರ್ಮಂಗಳಯ್ಯಾ !
ದೇವ ಪೂಜೆಯ ಮಾಟ, ದುರಿತ ಬಂಧನದೋಟ ! ಶಂಭು ನಿಮ್ಮಯ ನೋಟದ ಕಣ್-ಬೇಟ !
ಸದಾ ಸನ್ನಿಹಿತನಾಗಿ ಶರಣೆಂಬುವುದು ಜಂಗಮಾರ್ಚನೆಯ ಮಾಟ ಕೂಡಲಸಂಗನ ಕೂಟ'

—ಈ ವಚನಗಳ ಅರ್ಥದಲ್ಲಿ ಶಿವಾನುಭವದ ಅರ್ಥ ಅಡಗಿದೆ. ಆದ್ದರಿಂದ ವಿದ್ಯಾವಂತರಾಗಿಯೇ ಶಿವಾನುಭಾವಿಗಳಾಗಬೇಕೆಂಬ ವಾದವೇನಾದರೂ ಇದ್ದರೆ ಅದೆಲ್ಲ ಸುಳ್ಳು. ಶಿವಾನುಭಾವವನ್ನು ಪ್ರತಿಯೊಬ್ಬನೂ ಅವನವನ ಸ್ಥಾನದಲ್ಲಿ ಮೈಗೂಡಿಸಿಕೊಳ್ಳಲು ಸಾಧ್ಯವೆಂಬುದನ್ನು ಎಲ್ಲರೂ ಅರಿಯಬೇಕು.

**ಜೀವನದ ನಾಲ್ಕು ಮೂಲ ಸಮಸ್ಯೆಗಳು :**

ಜೀವನದ ನಾಲ್ಕು ಮೂಲಭೂತ ಸಮಸ್ಯೆಗಳ ಅರ್ಥಮಾಡಿಕೊಂಡು ಆ ಅರ್ಥಕ್ಕನುಗುಣವಾಗಿ ಜೀವನ ರೂಪಿಸಿಕೊಂಡವರು ನಾಗರಿಕರು ; ಸುಸಂಸ್ಕೃತರು. ಅವೆಂದರೆ— ೧) ನಾನು ಯಾರು ? ೨) ಎಲ್ಲಿಂದ ಬಂದೆ ? ೩) ಈಗ ಇರುವುದೆಲ್ಲಿ? ೪) ಮುಂದೆ ಹೋಗುವುದೆಲ್ಲಿ ? ಇವೇ ಆ ನಾಲ್ಕು ಮೂಲಭೂತ ಸಮಸ್ಯೆಗಳು. ನಮ್ಮ ಹಿಂದಿನವರು ಈ ಸಮಸ್ಯೆಗಳಿಗೆ ಉತ್ತರ ಹೇಳುವವರಾಗಿದ್ದರು. ಸರ್ಪಭೂಷಣಶಿವಯೋಗಿಗಳು ಕೈವಲ್ಯಕಲ್ಪವಲ್ಲರಿಯಲ್ಲಿ:—

'ವೇದ ಶಾಸ್ತ್ರಾಗಮ ಸ್ಮೃತಿ ತರ್ಕಮೀಮಾಂಸ ವೇದಾಂತ ತತ್ವಾದಿ ವಿದ್ಯೆಗಳ
ಓದಿ ಪರರಿಗುಪದೇಶಿಸಿ ತನ್ನೊಳ–ಭೇದ ಭಾವನೆ ನೆಲೆಗೊಳ್ಳದಿರೆ ॥
ದೊರಕದೆಂದೆಂದಿಗೂ ನಿಜಸುಖವು'

—ಎಂದಿದ್ದಾರೆ. ಮನುಷ್ಯನಿಗೆ ಐದು ವೇಗಗಳಿವೆ. ಅವನ್ನು ತಡೆಯಬೇಕೆಂದೂ, ಅವನ್ನು ತಡೆದವನೇ ಋಷಿಸದೃಶನೆಂದೂ ಹೇಳಲಾಗುತ್ತಿದೆ. ಮಾತಿನ ವೇಗ, ಕೋಪದ ವೇಗ, ತಿಳಿಯಬೇಕು ಅನ್ನುವುದರ ವೇಗ, ಉದರ ವೇಗ, ಉಪಸ್ಥ ವೇಗ—ಇವೇ ಆ ಐದು ವೇಗಗಳು. ಈ ಪಂಚವೇಗಗಳನ್ನು ಯಾವಾತ ತಡೆಯಬಲ್ಲನೋ ಅವನಿಗೆ ಶಿವಸಂಸ್ಕಾರ ಕ್ರಮೇಣ ಗಟ್ಟಿಗೊಳ್ಳುತ್ತ ಹೋಗುತ್ತದೆ. ಇದೇ ಶಿವಾನುಭಾವದ ಮೂಲ ದೃಷ್ಟಿ. ಇದಕ್ಕೊಂದು ಪ್ರಸಂಗವನ್ನು ಹೇಳಬಹುದು:

ಒಂದು ತೋಟವಿತ್ತು. ನಾಲ್ಕು ಜನ ಹಣ್ಣು ತಿನ್ನಬೇಕೆಂದು ಆ ತೋಟವನ್ನು ಹೊಕ್ಕರು. ಆ ನಾಲ್ಕು ಜನರೂ ಒಂದೊಂದು ಶಾಸ್ತ್ರದಲ್ಲಿ ಪರಿಣತಿ ಪಡೆದವರಿದ್ದರು. ಭೂಗರ್ಭಶಾಸ್ತ್ರಜ್ಞನು ತೋಟವನ್ನು ಹೊಕ್ಕು ಅಲ್ಲಿನ ಭೂಮಿಯನ್ನು ನೋಡಿ ಈ ಭೂಮಿಯ ಸ್ವರೂಪ ಎಂತಹುದು? ಗುಣಧರ್ಮ ಏನು? ಇತ್ಯಾದಿ ವಿಚಾರಿಸ ತೊಡಗಿದನು. ಸಸ್ಯಶಾಸ್ತ್ರಜ್ಞನು ಈ ಮಣ್ಣಿನಲ್ಲಿ ಯಾವ ಸಸ್ಯಗಳು ಚೆನ್ನಾಗಿ ಬೆಳೆಯಬಹುದು. ಈಗ ಎಂಥ ಗಿಡ ಹಾಕಿದ್ದಾರೆ? ಇನ್ನೆಂಥ ಗಿಡ ಹಾಕಬಹುದಾಗಿತ್ತು. ಇಲ್ಲಿನ ಸಸ್ಯಗಳಿಗೆ ಯಾವ ಯಾವ ಪೋಷಕಾಂಶ ಕಡಿಮೆಯಾಗಿದೆ ಇತ್ಯಾದಿ ವಿಚಾರಿಸ ಹತ್ತಿದನು. ಗಣಿತಶಾಸ್ತ್ರಜ್ಞನು ಈ ಭೂಮಿ ಎಷ್ಟು ಎಕರೆ ಇರಬಹುದು? ಇಲ್ಲಿರುವ ಗಿಡಗಳ ಸಂಖ್ಯೆಯೇನು? ಇತ್ಯಾದಿ ಗಣಿತದಲ್ಲಿ ತೊಡಗಿದ. ನಾಲ್ಕನೆಯವನು ಮೇಲಿನ ಶಾಸ್ತ್ರಗಳನ್ನು ಬಲ್ಲವನಾಗಿದ್ದಿಲ್ಲ. ಅವನು ಇವರೆಲ್ಲರೂ ತಮ್ಮ ತಮ್ಮ ಶಾಸ್ತ್ರಕ್ಕೆ ಸಂಬಂಧಿಸಿದಂತೆ ತೋಟದಲ್ಲಿ ವಿಚಾರಿಸುತ್ತಿದ್ದ ಹಾಗೆ ಬೇಗಬೇಗ ಹಣ್ಣುಗಳನ್ನು ಕಿತ್ತು ತಿನ್ನತೊಡಗಿದನಂತೆ. ವೇದಶಾಸ್ತ್ರ ಪುರಾಣ ತರ್ಕಾದಿಗಳು ಈಶ್ವರನನ್ನು ಹುಡುಕುವುದರಲ್ಲೇ ನಿಂತಿವೆ. ಅನುಭಾವಿಯಾದವನು ಅವನ ಅನುಭವವನ್ನು ಹೃದಯಕ್ಕಿಳಿಸಿಕೊಂಡು ಆತ್ಮತೃಪ್ತಿಯನ್ನು ಪಡೆಯುವನು. ಶಿವಾನುಭಾವವು ಪ್ರಭುದೇವರು ಹೇಳುವ:

'ಸುತ್ತಿ ಸುತ್ತಿ ಬಂದೊಡಿಲ್ಲ ; ಲಕ್ಷ ಗಂಗೆ ಮಿಂದೊಡಿಲ್ಲ ; ತುತ್ತ ತುದಿಯ ಮೇರುಗಿರಿಯ ಮೆಟ್ಟಿ ಕೂಡಿದರಿಲ್ಲ :<br>ನಿತ್ಯನೇಮದಿಂದ ತನು ಮುಚ್ಚಿಕೊಂಡರಿಲ್ಲ ; ನಿಚ್ಚಕ್ಕೆ ಮನವನಂದಂದಿಗೆ ಅತ್ತಿತ್ತ ಹರಿಯಲೀಯದೆ<br>ನಿಚ್ಚಯ ಚಿತ್ತದಲ್ಲಿ ಧರಿಸಬಲ್ಲಡೆ ಬಚ್ಚಬರಿಯ ಬೆಳಗು ಗುಹೇಶ್ವರಲಿಂಗ.'

—ಈ ಮಾತಿನಿಂದ ಅರಿಯಬಹುದು. ಇಲ್ಲಿ ಭಾವ ಪ್ರಮಾಣವೇ ಪ್ರಮಾಣ ; ಅನುಭವ ಪ್ರಮಾಣವೇ ಪ್ರಮಾಣ. ಭಾವವು ಅನುಭಾವವಾದಾಗ ಶಿವಾನುಭಾವ ಮೈಗೂಡುತ್ತದೆ. ಆಗ ದೇಹವೇ ದೇಗುಲವಾಗುತ್ತದೆ : ಆತ್ಮನೇ ದೇವನಾಗುತ್ತಾನೆ.

**ಜೀವನಸಮೃದ್ಧಿಯನ್ನಲ್ಲಗಳೆಯಬಾರದು**

ವೀರಶೈವವು ಪ್ರಾಪಂಚಿಕ ಜೀವನ ಸಮೃದ್ಧಿಯಿಂದ ಸುಂದರವಾಗಿರಬೇಕೆಂದು ಹೇಳುತ್ತದಲ್ಲದೆ, ಆ ಸುಖವನ್ನು ದೂರೀಕರಿಸುವುದಿಲ್ಲ. ಆದರೆ ಆ ಜೀವನದ ಅರ್ಥಮಾತ್ರವಾಗಿರಬೇಕು. ನಾನು ಎಲ್ಲ ವ್ಯವಹಾರಗಳನ್ನೂ ಮಾಡಬಹುದು. ಅವೆಲ್ಲ ಲಿಂಗ ಕಳೆಯಿಂದ ಕೂಡಿದವುಗಳಾಗಿರಬೇಕೆನ್ನುವುದು ಮುಖ್ಯ. ಇದೆಲ್ಲ ಅನುಭವದಲ್ಲಿ ತಾದಾತ್ಮ್ಯಭಾವ ಪಡೆದಿರಬೇಕು. ಅನುಭವವು ಅಷ್ಟೊಂದು ಪರಿಪುಷ್ಟವಾಗುವಂತೆ ಸುಂದರವಾಗುವಂತೆ ನಿತ್ಯನಿತ್ಯವೂ ಪರಿಶುದ್ಧಭಾವನೆಯಿಂದ ಕ್ರಿಯೆಯಲ್ಲಿ ತೊಡಗಬೇಕಾಗುತ್ತದೆ. 'ನಡೆವೆಡೆಯಲ್ಲಿ, ನೋಡುವೆಡೆಯಲ್ಲಿ, ರಮಿಪ್ಪೆಡೆಯಲ್ಲಿ, ವಸ್ತುವನ್ನು ಪಿಡಿವೆಡೆಯಲ್ಲಿ, ಭೋಗಿಪೆಡೆಯಲ್ಲಿ ಸುಖಂಬಡೆವಲ್ಲಿ'—ಎಲ್ಲಾ ಕ್ರಿಯಾಮುಖದಲ್ಲೂ ಲಿಂಗಕಳೆ, ಲಿಂಗಗುಣಗಳು ಅಳವಡುವಂತೆ ಸಾಧಿಸುವ ಸಾಧನೆಯೇ ಶಿವಾನುಭವ. ಈ ತರದ ನಡೆನುಡಿಯನ್ನು ಬೆಳೆಸಿಕೊಳ್ಳಲು ಶಾಸ್ತ್ರಾಗಮಗಳ ಜ್ಞಾನವು ಇದ್ದೇತೀರಬೇಕೆಂಬ ವಾದಕ್ಕೆ ಅರ್ಥವಿಲ್ಲ. ಈ ಕಾರಣದಿಂದ ಶಾಸ್ತ್ರಾಗಮಜ್ಞಾನ ಅನವಶ್ಯಕವೆಂದು ಅರ್ಥವಲ್ಲ. ಅವಿಲ್ಲದೆಯೇ ಶಿವಾನುಭವವನ್ನು ಅಳವಡಿಸಿಕೊಳ್ಳಲು ಸಾಧ್ಯವೆಂಬುದಷ್ಟೇ ಇಲ್ಲಿ ಮುಖ್ಯ.

**ಶಾಸ್ತ್ರಪಾಂಡಿತ್ಯವೇ ಮುಖ್ಯವಲ್ಲ:**

ಈ ಶಿವಾನುಭವ ಸಮ್ಮೇಲನದಲ್ಲಿ ಭಾಗವಹಿಸಿರುವವರೆಲ್ಲ ಗ್ರಾಮಾಂತರ ಪ್ರದೇಶದ ಜನಗಳು. ಮುಖ್ಯವಾಗಿ ವ್ಯವಸಾಯ ವೃತ್ತಿಯವರು. ವ್ಯವಸಾಯವೃತ್ತಿಗೂ ಶಿವಾನುಭಾವಕ್ಕೂ ಏನು ಸಂಬಂಧವೆಂದು ತಿಳಿಯಬಾರದು. ಯಾವ ವೃತ್ತಿಯೇ ಆಗಿರಲಿ ಅದು ಕಾಯಕವಾದರೆ ಸಾಕು. ಶ್ರದ್ಧಾಭಕ್ತಿವಿಶ್ವಾಸಗಳಿಂದ ಮಾಡಿ ಈಶ್ವರ ತನ್ಮೂಲಕ ಕೊಟ್ಟ ಕಾರೆಯ ಸೊಪ್ಪಾದರೂ ಲಿಂಗಕ್ಕೆ ಅರ್ಪಿತಮಾಡಿ ಸ್ವೀಕರಿಸುವುದೇ ಈ ಸಿದ್ಧಾಂತದ ರಹಸ್ಯ. ಶಿವಶರಣರ ಕಾಲದಲ್ಲಿ ವ್ಯವಸಾಯವೃತ್ತಿಯನ್ನೇ ಮಾಡಿಕೊಂಡಿದ್ದ ಅನೇಕ ಶರಣರು ಶಿವಾನುಭಾವದಲ್ಲಿ ಬಲ್ಲಿದರೆನಿಸಿದ್ದರು. ಅಷ್ಟೇ ಅಲ್ಲ. ಬೀದಿ ಬೀದಿಗಳಲ್ಲಿ ಹಗ್ಗಕಣ್ಣಿಗಳನ್ನು ಹೊತ್ತು ಮಾರುತ್ತಿದ್ದ ನುಲಿಯಚಂದಯ್ಯ, ಕಟ್ಟಿಗೆಹೊರೆಯನ್ನು ಅಡವಿಯಿಂದ ಹೊತ್ತುತಂದು ಕಲ್ಯಾಣದ ಬೀದಿಬೀದಿಗಳಲ್ಲಿ ಮಾರಾಟಮಾಡಿ ಜೀವಿಸುತ್ತಿದ್ದ ಮೋಳಿಗೆಮಾರಯ್ಯ, ಉಂಛಾವೃತ್ತಿ, ಅಂದರೆ ಕಾಳನ್ನು ಆಯ್ದುಕೊಂಡು ಬಂದು ಜೀವಿಸುತ್ತಿದ್ದ ಮಾರಯ್ಯದಂಪತಿಗಳ ಶಿವಾನುಭವಜ್ಞಾನ ಚಿಕ್ಕದಲ್ಲ. ಇವರು ತಮ್ಮ ಜ್ಞಾನದ ಬಲದಿಂದ ಬಸವಣ್ಣನಿಗೂ ಬುದ್ಧಿ ಹೇಳಿದವರು. ಹೀಗಿರುವಾಗ ನಿಮ್ಮ ನಿಮ್ಮ ಸ್ಥಾನದಲ್ಲಿ ನೀವೂ ದೊಡ್ಡವರೇ. ನಾವು ಓದಿಲ್ಲ ಬರೆದಿಲ್ಲ, ಪಂಡಿತರಲ್ಲ ಎಂದು ತಿಳಿಯಬಾರದು. 'ಯಃಕ್ರಿಯಾವಾನ್ ಸ ಪಂಡಿತಃ' ಕ್ರಿಯಾಶೀಲರೂ ಒಂದರ್ಥದಲ್ಲಿ ಪಂಡಿತರೇ. ನೀವು ನಿಮ್ಮ ಶ್ರಮದ

ಕ್ರಿಯೆಯಲ್ಲಿ ಪಂಡಿತರೇ ಆಗಿದ್ದೀರಿ. ಕ್ರಿಯಾಶುದ್ಧಿ, ಕ್ರಿಯಾಪ್ರಾಬಲ್ಯ. ಕ್ರಿಯಾಸೌಷ್ಠವ, ಕರ್ಮಕೌಶಲ್ಯಗಳೂ ಯೋಗಗಳೇ ಆಗಿವೆ. ಶುದ್ಧಕ್ರಿಯಾಚಾರವಿಲ್ಲದ ಲಿಂಗಪೂಜೆ ವ್ಯರ್ಥವೆಂದೇ ವೀರಶೈವ ಸಾರುತ್ತದೆ. ಶಾಸ್ತ್ರಪಾಂಡಿತ್ಯವೇ ಸರ್ವಶ್ರೇಷ್ಠವೆಂದು ತಿಳಿಯಬೇಕಾದೇನೂ ಇಲ್ಲ. ಇದಕ್ಕೊಂದು ಪ್ರಸಂಗವನ್ನು ಹೇಳಬಹುದು:

ಒಂದು ಹೊಳೆ ತುಂಬಿ ಹರಿಯುತ್ತಿತ್ತು. ಅದನ್ನು ದಾಟಲು ಹರಿಗೋಲಿನ ವ್ಯವಸ್ಥೆಯಿತ್ತು. ಆ ಹರಿಗೋಲನ್ನು ಓರ್ವ ಅಂಬಿಗ ನಡೆಸುತ್ತಿದ್ದ. ಒಂದು ದಿನ ನದಿಯನ್ನು ದಾಟಲು ಓರ್ವ ಘನವಿದ್ವಾಂಸ ಆ ಹರಿಗೋಲನ್ನು ಹತ್ತಿದ. ವಿದ್ವಾಂಸನು ಅಂಬಿಗನನ್ನು ಕುರಿತು 'ನೀನು ಏನು ಓದಿದ್ದೀಯೆ ಎಂದ'. ಅಂಬಿಗ 'ಸ್ವಾಮಿ, ನಾನು ಏನನ್ನೂ ಓದಲಾಗಲಿಲ್ಲ. ಹರಿಗೋಲು ನಡೆಸುತ್ತ ತಮ್ಮಂಥವರ ಸೇವೆ ಮಾಡುವುದೇ ನನ್ನ ಕರ್ತವ್ಯ'ಎಂದ. ಪಂಡಿತನು ಅವನ ಮಾತಿಗೆ ನಕ್ಕು ನಿನ್ನ ಜೀವನ ವ್ಯರ್ಥವೆಂದು ಹೇಳಿದ. ಅಷ್ಟರಲ್ಲಿ ಒಂದು ಬಿರುಗಾಳಿ ಬಂತು. ಡೋಣಿ ಅಲ್ಲಾಡತೊಡಗಿತು. ಪಂಡಿತ ಹೆದರಿದ. 'ಅಯ್ಯೋ, ಡೋಣಿ ಮುಳುಗದ ಹಾಗೆ ಪ್ರಯತ್ನಿಸು' ಎಂದ. ಅಂಬಿಗ 'ಸ್ವಾಮಿ, ಡೋಣಿ ಹತೋಟಿ ತಪ್ಪಿ ಹೋಗುತ್ತದೆ. ತಮಗೆ ಈಸಲು ಬರುತ್ತದೆಯೇ' ? ಎಂದ. ಪಂಡಿತನು 'ಈಸಲು ಬರುವುದಿಲ್ಲ' ಎನ್ನಲು, ಅಂಬಿಗ 'ಹಾಗಾದರೆ ನಿಮ್ಮ ಜೀವನವೂ ಇಂದಿಗೆ ವ್ಯರ್ಥವಾಯಿತಲ್ಲಾ! ನಾನೇನು ಮಾಡಲಿ,ನನ್ನ ಕೈಲಾದ ಪ್ರಯತ್ನ ಮಾಡುತ್ತಿದ್ದೇನಾದರೂ ಡೋಣಿ ಮುಳುಗುವುದನ್ನು ತಪ್ಪಿಸಲು ಸಾಧ್ಯವಿಲ್ಲವಾಗಿದೆ' ಎನ್ನುವಷ್ಟರಲ್ಲಿ ಡೋಣಿ ತಲೆಕೆಳಗಾಗೇ ಹೋಯಿತು. ಅಂಬಿಗ ಈಸಿ ದಡಸೇರಿದ. ಪಂಡಿತ ಪ್ರವಾಹದಲ್ಲಿ ಕೊಚ್ಚಿ ಹೋದ. ಈಗ ಯಾರ ಜೀವನ ವ್ಯರ್ಥ? ನೀವೇ ವಿಚಾರಿಸಿ.

**ಲಿಂಗಭೋಗೋಪಭೋಗ :**

ಈ ಪ್ರಪಂಚವನ್ನು ತಿರಸ್ಕರಿಸಬೇಕಾದುದಿಲ್ಲ; ಜೀವನವನ್ನು ಅಲ್ಲಗಳೆಯಬೇಕಾದುದಿಲ್ಲ. ಇದರ ಮಧ್ಯದಲ್ಲಿಯೇ ಇದ್ದು ಭೋಗಜೀವನವನ್ನು ಅನುಭವಿಸಿರಿ. ಆ ಅನುಭವ ಲಿಂಗಕಳೆಯಿಂದ ಕೂಡಿರಲಿ. ಭೋಗ ಯೋಗಗಳ ಸಮನ್ವಯ ಎಂದರೆ ಇದೇ ಆಗಿದೆ. ಸರ್ವಶಕ್ತನೂ, ಸರ್ವವ್ಯಾಪಿಯೂ, ಸರ್ವಜ್ಞನೂ ಆದ ಪರಮಾತ್ಮನನ್ನು ಮಾತ್ರ ನಂಬಿನಡೆಯಬೇಕು. ಅವನನ್ನು ನಂಬಿ ನಡೆಯುವ ನಡವಳಿಕೆಯೇ ಶಿವಾನುಭವದ ನಡುವಳಿಕೆ.

ಒಮ್ಮೆ ಕಬೀರನು ಬೀಸುತ್ತ ಕುಳಿತಿದ್ದ. ಬೀಸುವ ಕಲ್ಲಿಗೆ ರಾಗಿಯ ಮುಕ್ಕನ್ನು ಹಾಕುತ್ತಿದ್ದ. ರಾಗಿ ಹಿಟ್ಟಾಗಿ ಕಲ್ಲಿನ ಸುತ್ತುವಲಯದಲ್ಲಿ ಬೀಳುತ್ತಿತ್ತು. ಅವನ ಮನಸ್ಸಿಗೆ ಆಹಾ! ಜೀವನದಲ್ಲಿ ಈಶ್ವರನ ಮಾಯೆಯಿಂದ ಜೀವರುಗಳು ಹೀಗೆ ನುಚ್ಚುನೂರಾಗಿ ಹೋಗುತ್ತಿದ್ದಾರಲ್ಲವೆ, ಎಂಬ ಅರಿವಾಗತೊಡಗಿತು. ರಾಗಿ ಎಲ್ಲವೂ ಮುಗಿದವು. ಕಲ್ಲಿನ ಮೇಲು ಹೋಳನ್ನು ಮೇಲಕ್ಕೆತ್ತಿ ನೋಡಿದ. ಮಧ್ಯದಲ್ಲಿರುವ ಗೂಟದ ಸುತ್ತಲೂ ಕೆಲವು ರಾಗಿಯಕಾಳುಗಳು ಮಾತ್ರ ಏನೂ ಆಗದೆ ಹಾಗೇ ಉಳಿದಿದ್ದವು. ಆಗ ಅವನಿಗೊಂದು ತತ್ತ್ವ ಹೊಳೆಯಿತು. ಈ ಪ್ರಪಂಚವೆಂಬ ಬೀಸುಕಲ್ಲಿಗೆ ಮಧ್ಯದ ಗೂಟವೇ ಶಿವ. ಅವನನ್ನು ನಂಬಿದವರು ಅವನು ಒಡ್ಡಿದ ಮಾಯೆಯನ್ನು ಗೆದ್ದು ಸುಖಿಗಳಾಗುತ್ತಾರೆ ಎಂಬುದೇ ಆ ತತ್ತ್ವ. ಈ ಮರ್ಮವನ್ನರಿತು ದೊಡ್ಡವರು ಅರಿದು ಆಚರಿಸಿದ ರೀತಿನೀತಿಗಳನ್ನು ತಿಳಿದು ನಮ್ಮ ನಮ್ಮ ಕರ್ತವ್ಯದಲ್ಲಿ ಶ್ರದ್ಧಾಭಕ್ತಿವಿಶ್ವಾಸದಿಂದ ದುಡಿದು ನ್ಯಾಯವಾಗಿ ಸಂಪಾದಿಸಿ ಪ್ರಸಾದ ಸ್ವೀಕರಿಸುತ್ತ ಲಿಂಗಭೋಗೋಪಭೋಗಿಗಳಾಗಿ ತೃಪ್ತಿಯಿಂದ ಜೀವಿಸುವುದೇ ಶಿವಾನುಭಾವವೆನಿಸುತ್ತದೆ. ದೇವನು ನಿಮಗೆ ಅಂಥ ಸದ್ಬುದ್ಧಿಯನ್ನು ದಯಪಾಲಿಸಲಿ.

## ೧೬. ಸಕಲರ ಲೇಸಿನ ಸಂಸ್ಕೃತಿ *

[ರಾಯಚೂರ ಜಿಲ್ಲಾ ಲಿಂಗಸೂಗೂರ ತಾಲೂಕಿನ ಸಂತೆಕೆಲ್ಲೂರಿನಲ್ಲಿ ಘನಮಠ ಶಿವಯೋಗಿಗಳ ಶತಮಾನೋತ್ಸವದ ಅಂಗವಾಗಿ ದಿನಾಂಕ ೨೨-೧೨-೧೯೭೮ರಂದು ಜರುಗಿದ ಮಠಾಧಿಪತಿಗಳ ಸಮ್ಮೇಳನದ ಅಧ್ಯಕ್ಷ ಭಾಷಣ]

ಕರ್ನಾಟಕದಲ್ಲಿ ಕಾಲಕಾಲಕ್ಕೂ ವೀರಶೈವ ಸಮಾಜ ಹಿರಿದಾದ ಕಾಣಿಕೆ ನೀಡಿದೆ. ಎಲ್ಲಾ ಜನಾಂಗ, ರಾಷ್ಟ್ರಗಳಿಗೂ ಬೆಳಕು ಕೊಟ್ಟಿರುವ ರಾಷ್ಟ್ರ ನಮ್ಮದು. ರಾಷ್ಟ್ರಸೇವೆಯಲ್ಲಿ, ಆತಿಥ್ಯ ನೀಡುವಲ್ಲಿ ಕರ್ನಾಟಕದ ಪಾತ್ರ ಹಿರಿದು. ವೀರಶೈವ ಸಮಾಜ ಮುಂದುವರಿದರೆ ಯಾರಿಗೂ ಹಾನಿಯನ್ನು ಮಾಡಲಾರದು. ವೀರಶೈವ ಸಮಾಜ ಯಾವ ಕಾಲಕ್ಕೂ ಸಂಕೋಚದದ್ದಲ್ಲ. ಈ ಸಮಾಜ ಎಲ್ಲರೂ ಉಳಿಯಬೇಕು, ಎಲ್ಲರೂ ಬೆಳೆಯಬೇಕು ಎಂಬ ವಿಶಾಲತೆಯಿಂದ ತಾನೂ ಉಳಿದು, ಅನ್ಯರನ್ನೂ ಉಳಿಸಲು ಯತ್ನಿಸಿದ ಭಾವಾತ್ಮಕ ಸಮಾಜ. ಆದರೆ ಈ ವಿಚಾರವಿಲ್ಲದ ಸಂಸ್ಕೃತಿ ವಿನಾಶಾತ್ಮಕ ಸಂಸ್ಕೃತಿ. ಆದರೆ ನಮ್ಮದು ಅಂಥದ್ದಲ್ಲ. ಸಕಲರಿಗೂ ಲೇಸಬಯಸಿದ ಸಂಸ್ಕೃತಿ ನಮ್ಮದು. ಹೀಗೆ ನಿಷ್ಕಾಮ ಸೇವೆಸಲ್ಲಿಸಿದರೂ ಇಂದು ನಿರ್ವೀರ್ಯವಾಗಿದೆ ; ನಿಸ್ಸತ್ವವಾಗಿದೆ ; ಅವನತಿಗಿಳಿದಿದೆ. ಈ ಅವನತಿಗೆ ಕಾರಣರಾರು? ಎಂಬುದನ್ನು ನಾವಿಂದು ಸೂಕ್ಷ್ಮವಾಗಿ ವಿಚಾರಿಸಬೇಕಾಗಿದೆ.

* ಶ್ರೀ ಗಿರಿರಾಜ ಹೊಸಮನಿ ಅವರು ಸಂಗ್ರಹಿಸಿ ಕಳುಹಿಸಿದುದು.

ಹಿಂದಿನವರು ಇಷ್ಟೆಲ್ಲ ಮಠಮಾನ್ಯಗಳನ್ನು ಘನೋದ್ದೇಶದಿಂದಲೇ ಸ್ಥಾಪಿಸಿದ್ದಾರೆ. ಆಗಿನ ಕಾಲದಲ್ಲಿ ಜ್ಞಾನದಾನ ಮುಂತಾದವುಗಳ ವ್ಯವಸ್ಥೆ ಈಗಿನಂತೆ ಇರಲಿಲ್ಲ. ಅಂಥಾ ಸಮಯದಲ್ಲಿ ಅನ್ನದಾನ, ವಿದ್ಯಾದಾನದಂಥ ಪವಿತ್ರಕಾರ್ಯ ನಿರ್ವ ಹಿಸಲು ಈ ಮಠಗಳು ಉಂಟಾದವು. ಮಠ ಎನ್ನುವದಕ್ಕೆ ವಿಶಾಲ ಅರ್ಥ ಇದೆ. 'ಅಯ್ಯ' ಶಬ್ದ ವಿದ್ಯಾಗುರು–ವಿದ್ಯಾದಾನ ಮಾಡತಕ್ಕಂಥವನು ಎಂಬ ಅರ್ಥದ್ದು. ಅಂತೆಯೇ ಅವನು ಮಠದಯ್ಯನಾದ. ಇದೊಂದರಿಂದಲೇ ವೀರಶೈವರ ಮಾನವ ಪ್ರೇಮಗಳನ್ನು ಅರ್ಥಮಾಡಿಕೊಳ್ಳಬಹುದು. ಇದೂ ಅಲ್ಲದೆ ಸಮಸ್ತ ಸಮಾಜದಲ್ಲಿ ಮಧುರವಾತಾವರಣದ ನಿರ್ಮಾಪಕರೂ ಕೂಡ ಮಠದವರು ಹಾಗೂ ಮಠಾಧೀಶರು.

ಕ್ರಿಯಾಮೂರ್ತಿ ಗುರು, ಜ್ಞಾನಮೂರ್ತಿ ಜಂಗಮ. ನಮ್ಮದು ಕ್ರಿಯಾಜ್ಞಾನಗಳ ಸಂಗಮದ ಸಂಸ್ಕೃತಿ. ನಮಗೆ ಇಬ್ಬರೂ ಬೇಕು. ಇಬ್ಬರನ್ನೂ ನಾವಿಂದು ಸಮಾನತೆಯಿಂದ ಕಾಣಬೇಕು. ಸಮಾಜಬಂಧುಗಳು ಇಬ್ಬರ ಬಗೆಗೂ ಒಂದೇ ಭಾವನೆಯುಳ್ಳವರಾದರೆ ಗುರು-ವಿರಕ್ತರ ಪ್ರಶ್ನೆಯೇ ಬರಲಾರದು. ಗುರು-ವಿರಕ್ತರ ಈ ಪ್ರಶ್ನೆ ಅಷ್ಟೇನೂ ಘಾತುಕವಾದುದಾ ಗಲಿ, ಸೂಕ್ಷ್ಮವಾದುದಾಗಲಿ ಅಲ್ಲ.

ಒಳಪಂಗಡಗಳು ಅರ್ಥವಿಹೀನ, ತತ್ತ್ವವಿಹೀನ, ಧರ್ಮವಿರೋಧಗಳು; ಶರಣಧರ್ಮಕ್ಕೆ ಕಲಂಕ ತರುವಂಥವುಗಳು, ಯಾವುದು ಪವಿತ್ರಧರ್ಮವೆಂದು ನಾವು ನಮ್ಮ ಬಗ್ಗೆ ಹೇಳಿಕೊಳ್ಳುತ್ತೇವೆಯೋ ಅಂಥ ಈ ಪವಿತ್ರ ಧರ್ಮದಲ್ಲಿ ಇಂಥ ಧರ್ಮ ವಿರೋಧದ ಆಭಾಸವಿರಬಾರದು.

ಸಮಾಜದಲ್ಲಿ ಆರ್ಥಿಕ ಬಂಧುರತೆ ಉಂಟಾಗಬೇಕು. ಎಲ್ಲಿಯವರೆಗೆ ಆರ್ಥಿಕ ಧವ್ರತೆ ಉಂಟಾಗಲಾರದೋ ಅಲ್ಲಿಯ ವರೆಗೆ ಸಮಾಜ ಮುಂದುವರಿಯಲು ಸಾಧ್ಯವಿಲ್ಲ. ಇಂದಿನ ಈ ಮುಂದುವರಿದ ದಿನಮಾನಗಳಲ್ಲೂ ಭಾರತೀಯರ ಆರ್ಥಿಕ ಪರಿ ಸ್ಥಿತಿ ಬಡತನ ರೇಖೆಯ ಕೆಳಗೇ ಇದೆ. ಇದಕ್ಕೆ ಕಾರಣ, ಬಸವಣ್ಣನ ಕಾಯಕತತ್ತ್ವ ಬಿಟ್ಟು ನಡೆದದ್ದೇ ಕಾರಣ.

ಬಡವರ ಬಗ್ಗೆ ನಮ್ಮ ಅಂತರಂಗ ಕರಗಿದೆಯೇ? ಬಡವರ ಉದ್ಧಾರವಾಗಿದೆಯೇ? ಈ ಪ್ರಶ್ನೆಗೆ ಉತ್ತರವೇ ಕಾಣದು. ಬಸವಣ್ಣನವರ ಈ ದೀನ ದಯಾಳುತನದ ಪ್ರಾಮಾಣಿಕ ಪ್ರಯೋಗಕ್ಕೆ ನಾವು ಗಾಂಧೀಜಿಯವರ ಕಡೆ ನೋಡಬೇಕಾಗಿದೆ.

ಈಗಿನ ನಿರುದ್ಯೋಗಸಮಸ್ಯೆ, ಬಡತನಸಮಸ್ಯೆಗಳು ಕಡಿಮೆಯಾಗಬೇಕಾದರೆ ಬಸವಣ್ಣನವರ ಮಾರ್ಗವೇ ತಾರಕ. ಅದು ಕಾಯಕ. ಇಂದು ನಾವೆಲ್ಲ ಕಾಯಕ ಮಾಡಬೇಕು. ಆದರೆ ದುರ್ದೈವದಿಂದ ನಾವು ಅಲ್ಪಶ್ರಮ ಅಧಿಕಲಾಭದ ಮೊರೆ ಹೊಕ್ಕಿದ್ದೇವೆ. ಅದು ಹೇಗೆ ಸಾಧ್ಯ ? ಬಸವತತ್ತ್ವ ಇದನ್ನೆಲ್ಲ ಹೋಡೆದೋಡಿಸಬಲ್ಲ ಏಕಮೇವ ತಾರಕವಾಗಿದೆ.

ಇಂದು ಹೊಟ್ಟೆಗಾಗಿ ಬಳಲುವ ಜನಸಂಖ್ಯೆ ಹೆಚ್ಚಾದಂತೆ ಪುಢಾರಿಗಳ ಸಂಖ್ಯೆಯೂ ಹೆಚ್ಚಿತು. ಇದೇನೂ ಉತ್ತಮ ಸಮಾಜದ ಲಕ್ಷಣವಲ್ಲ. ಇಂದಿನ ಆರ್ಥಿಕಕ್ರಾಂತಿಗೆ ಬಸವಣ್ಣನವರ ತತ್ತ್ವಗಳೇ ಮೂಲವಾಗಿರಬೇಕು. ಅವು ಮಾತ್ರ ನಮ್ಮ ಪ್ರಗತಿಗೆ ಕಾರಣವಾದಾವು. ಸಮಾಜವಾದದ ಮಂಡನೆಯಲ್ಲಿ ಕಾರ್ಲ್‌ಮಾರ್ಕ್ಸ್‌ನೂ ಕೂಡಾ ಬಸವಣ್ಣನ ಮಟ್ಟಕ್ಕೆ ಬಂದಿಲ್ಲ. ಯಾರೂ ಬರಲಾರರೆಂದೇ ನಮ್ಮ ಅಭಿಪ್ರಾಯ.

ಒಬ್ಬನು ತನ್ನೊಬ್ಬನಿಗಾಗಿ ಹೆಚ್ಚಾಗಿ ಸಂಗ್ರಹ ಮಾಡುವುದು ಮಹಾಪಾಪ. ಏಕೆಂದರೆ ನಾಳೆಗೆ ಕಾಯಕ ಮಾಡು ವಾಗ ಬರುವ ಫಲದ ಬಗೆಗೆ ನಾವು ಶಿವನಲ್ಲಿ ಅವಿಶ್ವಾಸವಿರಿಸಿದಂತಾಗುತ್ತದೆ. ಯಾವುದು ನಿನಗೆ ಅಪ್ರಿಯವಾದದ್ದೋ ಅದನ್ನು ನೀನು ಮಾಡಬೇಡ. ಬಸವಣ್ಣ ಮಾಡಿದ ಈ ಬಗೆಯ ಸಾಮಾಜಿಕ ಹೊಂದಾಣಿಕೆಯನ್ನು ಇಂದು ನಾವೇಕೆ ಅನುಷ್ಠಾನದಲ್ಲಿ ತರ ಬಾರದು ? ಈ ದಿಸೆಯಲ್ಲಿ ನಾವಿಂದು ಪ್ರಯತ್ನಿಸಬೇಕು ; ಯಶಸ್ಸು ಪಡೆಯಬೇಕು. ವೀರಶೈವ ಸಮಾಜಕ್ಕೆ ಒಳ್ಳೆಯ ಸಂಸ್ಕೃತಿ, ಆಚಾರ ವಿಚಾರಗಳಿದ್ದರೂ ನಾವು ಅವುಗಳನ್ನು ನಿರ್ಲಕ್ಷಿಸಿದ್ದು ಸಮಾಜದ ದೌರ್ಬಲ್ಯ, ದೌರ್ಭಾಗ್ಯ.

ಪ್ರತಿಯೊಬ್ಬ ಶ್ರೀಗಳೂ ತಮ್ಮ ಲಿಂಗಪೂಜೆಯ ಕಾಲದಲ್ಲಿ ಕನಿಷ್ಠ ಬಿಲ್ವಪತ್ರಿಯ ದಳವನ್ನಾದರೂ ಸಮಾಜದ ಏಳಿಗೆ ಯಾಗಲಿ ಎಂಬ ಶಿವಸಂಕಲ್ಪದಿಂದ ಲಿಂಗಯ್ಯನಿಗರ್ಪಿಸಬೇಕು. ಆದರಿಂದ ಮಾತ್ರ ಲಿಂಗಪೂಜೆ ಸಾರ್ಥಕವಾದೀತು ! ಅದೇ ನಿಜವಾದ ಲಿಂಗಪೂಜೆಯೂ ಆದೀತು !! ಇಂಥ ಪೂಜೆಗೆ ಯಾವ ಕಟ್ಟುನಿಟ್ಟುಗಳೂ ಅಡ್ಡಿಆತಂಕಗಳೂ ಇಲ್ಲ. ಸಮಯ ಸಿಕ್ಕಾಗ ಪೂಜೆ ಮಾಡಲಿ. ಪ್ರತಿಯೊಬ್ಬ ಸ್ವಾಮಿಗಳೂ ಲಿಂಗಪೂಜಾನಿಷ್ಠರಾಗಬೇಕು. ಆ ನಿಷ್ಠೆಯನ್ನು ನಾವು ಸಮಾಜಕ್ಕೆ ಧಾರೆಯೆರೆಯ ಬೇಕು. ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸುವುದಕ್ಕಿಂತ ಪ್ರತಿಯೊಬ್ಬ ಸ್ವಾಮಿಗಳೂ ಲಿಂಗಪೂಜಾನಿಷ್ಠರಾಗಿ ಆಚಾರ ವಿಚಾರ ಗಳನ್ನು ಬೆಳೆಸಿಕೊಂಡು ಆ ಫಲವನ್ನು ಸಮಾಜಕ್ಕೆ ನೀಡಬೇಕು. ನಮ್ಮನ್ನು ನೋಡಿ ಲೋಕ ಕಲಿಯುವಂತಾಗಬೇಕು. ನಮ್ಮ ವರ್ತನೆಯೇ ಲೋಕಕ್ಕೆ ಉಪದೇಶವಾಗಬೇಕು. ಆಗ ಸಮಾಜದಲ್ಲಿ ನಮ್ಮ ಸ್ಥಾನ ನಮ್ಮದಾಗೇ ಆಗುತ್ತವೆ, ಇಲ್ಲದಿದ್ದರೆ ಸಮಾಜ ನಮ್ಮ ಕೈಗೆ ಸಿಗಲಾರದು.

# ೧೭. MEDICAL PROFESSION IS A NOBLE PROFESSION

[ಬೆಳಗಾವಿಯ ಜೆ. ಎನ್. ಮೆಡಿಕಲ್ ಕಾಲೇಜಿನಲ್ಲಿ ೧-೯-೧೯೭೨ ರಂದು ಮಾಡಿದ ಇಂಗ್ಲೀಷ್ ಭಾಷಣ]

I am much beholden to the organisers of this function for extending me an invitation to participate in today's celebrations and spend a few minutes in your midst. As you are daily taking instructions from eminent doctors and are frequently attending the learned lectures of profound scholars, it is rather a difficult task to deliver a speech which can appeal to you and win your appreciation. Any how, since I am obliged to address you on this occasion, I shall try to speak a few words.

I believe students from different states of India are studying in this college. It is a matter of great satisfaction that students speaking different languages, cherishing different customs and habits and prefering different religions are assembled in this campus and are living like brothers and sisters with mutual love and admiration. This is a best practicable example of emotional integration.

Along with other sciences medical science also has considerably developed in recent years and man has been able to obtain marvellous achievements in this field also. Diseases, the control of which was considered to be beyond the capacity of man have been completely controlled. Powerful medicines to cure even the deadly diseases have been found out. The surgical science has tremendously grown and the preventive measures have cleared the spread of epidemic diseases some of which have been almost eradicated. In spite of such miraculous achievement, yet according to the opinion of experts in the field, the achievement so far made is very little and to be made is very great.

The structure of the human body is so delicate and complicated that even the advanced medical science has not been able to have a comprahensive knowledge of it. It needs, probably streneous research of centuries more. So each medical student should have research mentality and must try to contribute what little he can to the growth of medical science.

Generally, academical knowledge which one earns will not be of great use for people working in other fields. For example knowledge of Physics, Chemistry, Biology, History or some other subject will not of any practical use to a clerk working in an office, a revenue officer, a post officer, a secretary working in a secretariate or a police officer or some other officer or a member. But the case is quite different so far as the medical science is concerned. Each and every item of the science will be of immense use to a medical man.

If a student can equip with a few portions of the syllabus, one can pass the examination. Even if he neglects a few portions, it is no loss to him for the examination point of view. When he enters public life, the loss effected by negligence will be of no account. But for a medical student mere passing the examination is not the ulterior motive. He cannot neglect any portions. He must be thorough with each and every item of the subject. All the items are of cent percent practical use to him.

Medical profession is a noble profession. The profession can become meaningful if it is associated with a spirit dedication of service. Amassing of wealth or property or the acquisition of most luxurious things or any other material gain cannot give happiness to a man if he is not in sound health. The authoritative statement 'Nahyarogyam samam bhagyam' declares the validity of this principle. The relief and pleasure enjoyed by person when he is completely recovered from

an ailing sickness has no comparison. It is the doctor who can bestow such immeasurable happiness to him. That is the reason why he commands the respect of all sections of people.

To create an atmosphere of love and friendship is an essential factor of a doctor's success. Approaching a patient and talking kind words to him go a great way in curing his illness. Mental power has got tremondous influence on the health of a person. The patient must be treated in seuh a way that he cherishes a kind of motherly feeling towards the doctor. Kind and symphathetic treatment of the patients act as the best curative medicine for the patients.

I want to quote you one instance about the effect of mind on the life of man. Long back I read an article in one of the foreign magazines. I do not exactly remember from which country the magazine was published or the exact date of publication. A judge gave a capital punishment to a criminal. With the permission of the court and the Government, the scientists took him to their position for conducting an experiment. He was asked to lie on a table with his face towards a glass bottle fixed in front of him. A rubber was connected from his body to the glass bottle. Behind him a big glass bottle containing red water was fixed and a rubber tube from that bottle was connected to the bottle in front of him. The doctors told him that they were extracting blood from his body and then the blood reached a certain mark in the bottle, he will die. Not even a drop of blood was taken from his body but the red water from the behind bottle was passing on to the front bottle. The criminal was attentively looking at the bottle in front of him. Terror and anxiety captured his mind and when the red water reached the mark the doctors had marked, the criminal collapsed. Expert medical opinion arises that many diseases are the results of mental weariness and they can be cured by creating hope and mental strength in the patient.

Medical student have to face one important problem soon after they finish their educational career. Majority of them go in search of appointments and since the unemployment problem is very keen, they may not secure appointments for some time. This results in disappointment and frustration in the medical graduates. But a detail study of the realistic view clears our doubts and kindles hope and enthusiasm. Services of doctors are always required for urban population and the rural population even today is deprived of even the basest medical fecilities. If proper arrangements are made by the government and public for providing fecilities to village population and if the doctors make up their minds to serve the poor people with a spirit of sacrifice and service bearing a few inconveniences of the village life, then probably the available doctors fall short of the demands. The country is in need of many more doctors, provided the scheme is worked up with a proper perspective and vision. I do not believe that the employment potentialities for doctors are poor.

The educated youth have to play a very important role in building the future of India, nay the future of the world. Mahatmaji has once said 'Desciplined and devoted youth are the salt of our nation'. University is an institution which should prepare the youth to become the best citizens of India. In a university unofficial social contacts count more than official lectures and examinations. An understanding of life fostered by the social and athletic activities, by the clash of personality by the interchange and testing of views is more more important than even intellectual gifts. Understanding an another is an important object of University education. Understanding does not mean learning or should not as the French proverb says 'Understanding all is to forgive all'. It helps to understand the complexity and mystery of life. A man of understanding has the openness of outlook, the freedom and flexibility of thought, the capacity to other states of mind. He is free from dogmatism and is always really to sympathise with others' views.

University student must have a sense of wonder and curiosity and his mind must be fresh and adventurous. A student must not be a slave of blind faith and a votary of meaningless customs and habits. He must cultivate the habit of free thinking. Sanskrit saying 'Vimarsharupine Vidya' substantiates this idea. The sense of descrimination, the spirit of some criticism is the essence of education. A university student must always cherish a spirit of enthusiasm and creativeness. It is the duty of man to move on. He is a born adventurer. A university should prepare persons who are bold and perseverent and are ready to face difficulties with patience. If it produces men who are low spirited, who play for safety, care and comfort and are afraid to take any risk, then that university has failed in its essential task. A college student must not be intellectual timid and should not prefare to take opinions from others. Free and right thinking and acting according to right consciousness, with an enterprising spirit are essential for a college student. Timidity and conservatism are the general habits of mind and they are great damages to society.

We are hearing every day about the unrest of youth and their revolt. This is a matter which is drawing the attention of the leaders, elders, institutions and the government. Generally students are accounted when such disturbances happen. But we have to think deeply and probe into the reasons of such an atmosphere. The mistake does not entirely lie with the students. The society and the elders are also responsible. They are not giving them proper guidance and some want to curb their rational tendency. A proper understanding of the spirit of youth, a congenial atmosphere for their healthy growth, creation of suitable opportunities for the removal of their frustration and giving them a proper lead, may change many of the existing evils.

If the students can develop the mentality of attacking the evils of society, it is always welcome. If they can understand the miseries and sufferings of half-clother, half-starved people and try to subscribe for the amelioration of this unhappy section of society and boldly oppose the cures of such a pitiable state. That spirit should not be condemned but on the other hand to be appreciated. The spirit of revolt against wrongs of society is not to be confused with indescipline and intolerance. It is quite consistant with deep minded courtesy and a consideration for the feelings of others. One should surrender the fundamental good measures which are essential in every form of civilized society.

The responsibility of the intellectual is very great. If we want to know the opinion of a nation or any important question, we do not consult its maid-servants and meet men-servants. It is the labourers of a country that represent the public sentiments and aspirations and mould them. It is the intelligent class that will take a large share in the creation and maintainance of high levels of public opinion and duty. They must take the responsibility of creating an ideal society. Mere worthy ambitions are not enough. Worthy techniques are also necessary. Ideas are always poor things unless they are brought into practice. By the courageous and deliberate application of human intelligence it is possible to solve many difficult problems and create an ideal atmosphere. Now it is your duty to plan and build the high ideal which you are cherishing today must never be forgotten. When you enter the public life after your educational career, you must not fill the race for wealth, sensible for place and power. You must rise to new heights, to seek new means of endeavour, to treat new path towards rational reconstruction, to build a new India on moral and spiritual foundations.

# ಶ್ರೀ ವಾಣಿ

[ಶ್ರೀ ಶಿವಕುಮಾರಮಹಾಸ್ವಾಮಿಗಳವರು ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದವರು ಪ್ರಕಟಿಸುತ್ತಿರುವ 'ಸಿದ್ಧಗಂಗಾ' ಮಾಸ ಪತ್ರಿಕೆಗಳ ಪ್ರತಿ ಸಂಚಿಕೆಗೂ ಒಂದೊಂದು ಚಿಕ್ಕಚಿಕ್ಕ ಸಂದೇಶರೂಪದ ಲೇಖನ ಬರೆದಿದ್ದಾರೆ. ಅವೆಲ್ಲ 'ಶ್ರೀವಾಣಿ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಲ್ಪಟ್ಟಿವೆ. ಅವುಗಳ ಸಂಖ್ಯೆ ನೂರಾರು. ಅವುಗಳಲ್ಲಿ ಕೆಲವನ್ನುಮಾತ್ರ ಈ ಕೆಳಗೆ ಕೊಡಲಾಗಿದೆ. ಈ ಶ್ರೀವಾಣಿಯಲ್ಲಿ ಶ್ರೀಗಳವರ ಸಾಮಾಜಿಕ, ಧಾರ್ಮಿಕ, ರಾಜಕೀಯ, ತಾತ್ವಿಕ ದೃಷ್ಟಿಯಲ್ಲಿನ ಅಭಿಪ್ರಾಯಗಳನ್ನು ನೋಡಬಹುದಾಗಿದೆ. ಕೆಲವೇ ಮಾತುಗಳಲ್ಲಿ ಸಮಸ್ಯೆಗಳಿಗೆ ಪರಿಹಾರ ಹೇಳುವ ಶ್ರೀಗಳವರ ಅಗಾಧ ಲೌಕಿಕ ಪಾರಲೌಕಿಕ ಪರಿಜ್ಞಾನ ಇಲ್ಲಿ ಅಭಿವ್ಯಕ್ತಗೊಂಡಿದೆ.]

## ೧. ಜಯಂತಿ

ಮಹಾಪುರುಷರ ಜಯಂತಿಯನ್ನು ಆಚರಿಸುವುದು ಅವರಿಗೆ ದೊಡ್ಡಸ್ತಿಕೆಯನ್ನುಂಟುಮಾಡುವುದಕ್ಕಲ್ಲ : ಪರಂತು ನಮ್ಮ ಜೀವನದ ಸಾಫಲ್ಯಕ್ಕಾಗಿ : ಅರ್ಥಾತ್ ನಾವು ನಿಜವಾದ ಬೆಳಕನ್ನು ಕಾಣುವ ಸಲುವಾಗಿ. 'ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ' ಅಧರ್ಮವು ಹೆಚ್ಚಿದಾಗಲೆಲ್ಲ ಧರ್ಮವನ್ನು ಪುನರುತ್ಥಾನಗೊಳಿಸುವ ಸಲುವಾಗಿ ತಾನು ಅವತಾರ ಮಾಡುವುದಾಗಿ ಗೀತೆಯಲ್ಲಿ ಶ್ರೀಕೃಷ್ಣಭಗವಾನರ ಆಶ್ವಾಸನೆ. ಈ ದೃಷ್ಟಿಯಲ್ಲಿಯೇ ಭಗವಾನ್ ಬಸವೇಶ್ವರರೂ ಕೂಡ ಅವತಾರ ಪುರುಷರು. ಅವರ ಜೀವನಚರಿತ್ರೆಯ ಬಗೆಗೆ ಹರಿಹರ, ಪಾಲ್ಕುರಿಕೆ ಸೋಮನಾಥ, ಸಿಂಗಿರಾಜ, ಭೀಮಕವಿ, ಷಡಕ್ಷರದೇವ ಮುಂತಾದ ಅನೇಕ ಮಂದಿ ಮಹಾಕವಿಗಳು ಮಹಾಕಾವ್ಯಗಳನ್ನೇ ರಚಿಸಿರುತ್ತಾರೆ. ಏನೇ ಆಗಲಿ, ಭೂಮಿಯಲ್ಲಿನ ಅಧರ್ಮ ನಿವೃತ್ತಿ, ಧರ್ಮದ ಪುನರುತ್ಥಾನದ ಸಲುವಾಗಿ ಈ ಮಹಾನುಭಾವರು ಜನ್ಮತಾಳಿದರು. ಮಹತ್ತರ ಕಾರ್ಯವನ್ನು ಸಾಧಿಸಿದರು. ಹರಿದು ಹಂಚಿಹೋಗಿದ್ದ ಅಖಂಡ ಕರ್ನಾಟಕ ಈಗ ಮತ್ತೆ ಒಂದುಗೂಡಿದೆ. ಯಾವ ರಾಷ್ಟ್ರದ ಏಳಿಗೆಗೆ ಬಸವಾದಿ ಪ್ರಮಥರು ಅನವರತ ಶ್ರಮದಿಂದ ದುಡಿದರೋ ಆ ದೇಶದಲ್ಲಿ ಅವರ ಜಯಂತಿಯನ್ನು ಇಂದು ವೈಭವಪೂರಿತವಾಗಿ ನಡೆಸಬೇಕು. ಆ ಮಹಾನುಭಾವರ ಜೀವನದಲ್ಲಿ, ಈ ಹೊತ್ತಿನ ಜೀವನಕ್ಕೆ ಹೊಂದಿಕೆಯಾಗತಕ್ಕಂತಹ ಸಂಗತಿಗಳಾವುವು ? ಎಂಬುದನ್ನು ನಾವು ವಿಚಾರ ಮಾಡಬೇಕು. ಅವರು ಪವಾಡಪುರುಷರೆಂದ ಮಾತ್ರಕ್ಕೆ ಬೆಲೆ ಕೊಡಬೇಕಾದ್ದಿಲ್ಲ. 'ದೇವತ್ವವನಾವುದೆಂದರಿಯರು ಕೇಳು ಮನವೇ...ಉರಿವ ಕಿಚ್ಚನು ಹೊಕ್ಕು ಬೇಯದೆ ಹೊರಟರೆ, ಅದು ದೇವತ್ವವೆಂಬರು ಕೇಳು ಮನವೇ. ಅದು ದೇವತ್ವವಲ್ಲ... 'ಆ ದೈವಮನದಿ ಷಡಕ್ಷರಿಯ ಲಿಂಗನೆಲಸಿದರೆ ಅದು ದೇವತ್ವ'. ಮುಪ್ಪಿನ ಷಡಕ್ಷರಿಸ್ವಾಮಿಗಳವರ ಈ ಕವಿತಾ ಭಾಗದ ಅರ್ಥವನ್ನು ನಾವು ಗಮನಿಸಿ ತಿಳಿಯಬೇಕು. ಅಂತೆಯೇ ಬಿಜ್ಜಳರಾಯನ ಪ್ರಧಾನಿಯಾಗಿದ್ದರೆಂದಮಾತ್ರಕ್ಕೆ ಬಸವಣ್ಣನವರ ಜಯಂತ್ಯುತ್ಸವ ಮಾಡಬೇಕಾಗಿಲ್ಲ. ಈಗಷ್ಟು ಜನ ಮಂತ್ರಿಪದವಿಯಲ್ಲಿದ್ದು ನಿವೃತ್ತರಾಗುವುದಿಲ್ಲ ? ಬಸವಣ್ಣನವರು ಲೋಕದ ದೀನದಲಿತರ ಸಲುವಾಗಿ ತಮ್ಮ ಜೀವನವನ್ನೇ ಮುಡುಪಿಟ್ಟುದರಿಂದ ಮಾತ್ರ. ಅವರು ಒಂದು ದೊಡ್ಡ ರಾಜ್ಯದ ಮಹಾಮಂತ್ರಿಯಾಗಿ, ಶ್ರೇಷ್ಠ ವರ್ಗದ ಸಮಾಜಸುಧಾರಕರಾಗಿ, ನೂತನ ರೀತಿಯ ಸಾಹಿತ್ಯನಿರ್ಮಾತೃಗಳಾಗಿ, ಅನುಭವಮಂಟಪದ ಸಂಸ್ಥಾಪಕರಾಗಿ, ಉಚ್ಚಮಟ್ಟದ ಶಿವಾನುಭಾವಿಗಳಾಗಿ, ತಮ್ಮ ವಿವಿಧಮುಖಜೀವನದಿಂದ ಇಡಿಯ ಮಾನವ ಕೋಟಿಗೇ ಸೇರಿದವರು. ಈ ಅಂಶವನ್ನು ಮನಗಂಡಾಗ ಕೇವಲ ವೀರಶೈವರಿಗೆ ಮಾತ್ರ ಅವರು ಸೇರಿದರೆನ್ನುವ ಅಲ್ಪಜ್ಞತೆ ಮಾಯವಾಗುವುದು ಸಹಜವಲ್ಲವೆ ? ಬಸವಣ್ಣನವರು ಜನಜಾಗ್ರುತಿ, ನವಕಲ್ಯಾಣಕಾರಕ ಸುಧಾರಣೆಗಳ ಜೊತೆಗೆ ಶ್ರಮಜೀವನಕ್ಕೆ ಅತಿ ಮಹತ್ವ ಕೊಟ್ಟು, 'ಕಾಯಕವೇ ಕೈಲಾಸ' (Work is worship) ಎಂದು ಸಾರಿ ಧನ್ಯತೆಪಡೆದವರು. ಕಪ್ಪಡಿಸಂಗಮ ಸುಕ್ಷೇತ್ರದಿಂದ ಕಲ್ಯಾಣಕ್ಕೆ ಬಂದ ಮೇಲಿನ ಕೇವಲ ಐಂಬತ್ತು ಹತ್ತು ವರ್ಷಗಳ ಅಲ್ಪಾವಧಿಯಲ್ಲಿ ಎಷ್ಟೊಂದು ಅನುಪಮ ಸೇವೆ ಅವರಿಂದ ಜಗತ್ತಿಗೆ ಸಂದಿತು ಎನ್ನುವುದನ್ನು ಮನಗಂಡಾಗ ಆಶ್ಚರ್ಯವೆನಿಸುತ್ತದೆ. ಮಹಾತ್ಮಾಗಾಂಧೀಜಿಯವರು ಹೇಳಿದ ಉಪಕಸುಬಿನ ಯೋಜನೆಯ ಗೃಹಕೈಗಾರಿಕೆಗಳನ್ನು (Home Industries) ಎಂಟುನೂರು ವರ್ಷಗಳ ಹಿಂದೆಯೇ ಜಾರಿಗೆ ತಂದವರು ಬಸವಣ್ಣನವರು. ಸಮಕಾಲೀನ ಜಗತ್ತಿನಲ್ಲಿ ತಾಂಡವವಾಡುತ್ತಿದ್ದ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸಿದ ಧೀರರು ಅವರು. ಮನುಷ್ಯಜೀವನದಲ್ಲಿ ಒಂದು ವೃತ್ತಿಯನ್ನು ಅವಲಂಬಿಸಿ, ಅಂದಂದಿನ ಜೀವನಾರ್ಥವನ್ನು ಗಳಿಸಿ ಅದನ್ನು ಸದ್ವಿನಿಯೋಗಗೊಳಿಸಬೇಕು. ಅದು ಬಿಟ್ಟು ನಾಳೆಗಾಗಿ ಸಂಗ್ರಹಮಾಡುವುದು ಪರಮಾತ್ಮನಲ್ಲಿ ಅವಿಶ್ವಾಸವನ್ನು ಸ್ಥಾಪಿಸಿದಂತಾದೀತು ; ಅದು ದೇಶದ್ರೋಹ, ಧರ್ಮದ್ರೋಹ, ಆತ್ಮದ್ರೋಹವಾದೀತು ಎಂಬಂಶವನ್ನು ತಮ್ಮ ಹಲವಾರು ವಚನಗಳಲ್ಲಿ ವ್ಯಕ್ತಪಡಿಸಿ, ಅಂತೇ ಸ್ವತಃ ಆಚರಿಸಿ ತೋರಿಸಿದರು. (ಮಾರ್ಚ್ ೧೯೬೭)

## ೨. ಭವ್ಯಾದರ್ಶ

ಧರ್ಮಭೂಮಿಯೆನಿಸಿರುವ ಭರತಖಂಡವು ವಿಶ್ವಕ್ಕೆ ಕೊಟ್ಟಿರುವ ಸಂದೇಶವಾವುದು ? ಜನಜಂಗುಳಿಗೆ ತೋರಿಸಿರುವ ಮಾರ್ಗವಾವುದು ? ಎನ್ನುವುದನ್ನು ಸ್ಥೂಲವಾಗಿ ಭಾರತೀಯರು ಅರಿಯುವುದು ಅವಶ್ಯಕ. ಧರ್ಮದ ಹೆಸರನ್ನೆತ್ತಿದ ಕೂಡಲೆ ಇಂದಿನ ಜನತೆ ಬೇಸರ ಪಡುವುದುಂಟು. 'ಧರ್ಮ' 'ದೇವರು' ಎಂಬ ಮೂಢನಂಬಿಕೆಗಳಿಂದ ಭಾರತೀಯರು ಕರ್ತವ್ಯನಿಷ್ಠೆಯಿಂದ ದೂರವಾಗಿ, ಪ್ರಗತಿಶೀಲರಾಗದೆ ಆಲಸ್ಯವನ್ನು ಪೋಷಣೆ ಮಾಡಿದ ನಿಷ್ಕರ್ಮಿಗಳಾಗಿ ದೇಶವನ್ನು ದುರವಸ್ಥೆಗೆ ಇಳಿಸಿದರೆಂದೂ, ಇಂದಿನ ನಮ್ಮ ಕಷ್ಟಕಾರ್ಪಣ್ಯಗಳೆಲ್ಲಕ್ಕೂ ಈ ಮನೋಭಾವನೆಯೇ ಮೂಲಹೇತುವೆಂದೂ ಆಕ್ಷೇಪಣೆ ಮಾಡುವುದುಂಟು. ಧರ್ಮದ ಯಥಾರ್ಥ ಸ್ವರೂಪವನ್ನರಿತ ಯಾರೇ ಆಗಲಿ ಈ ಆಕ್ಷೇಪಣೆಯನ್ನೆತ್ತಲಾರರು. ಧರ್ಮದ ಸ್ವರೂಪವನ್ನೇ ಅರಿಯದ ಅಥವಾ ಅರಿಯಲು ಪ್ರಯತ್ನಮಾಡದ ಜನರ ಅಜ್ಞಾನದ ಪರಮಾವಧಿಯ ಭ್ರಾಂತಿಯ ಕೂಗು ಅದು. ಧರ್ಮದ ವ್ಯಾಖ್ಯೆಯನ್ನು ಮಾಡಿದ ಪುಣ್ಯಪುರುಷರು 'ಯತೋಽಭ್ಯುದಯ ನಿಶ್ರೇಯಸಸ್ಸಿದ್ಧಿಃ ಸಧರ್ಮಃ' ಎನ್ನುವ ದಿವ್ಯಸಂದೇಶದಿಂದ ಮಾನವಜೀವನದಲ್ಲಿ ಅಭ್ಯುದಯ ನಿಶ್ರೇಯಸ್ಸುಗಳೆರಡನ್ನೂ ಏಕಕಾಲದಲ್ಲಿ ಸಾಧಿಸುವುದೇ ಪರಮಪುರುಷಾರ್ಥವೆಂದು ಸಾರಿರುವರು. ನಿಜಗುಣ ಶಿವಯೋಗಿಗಳು 'ಜಾಣನು ಲೌಕಿಕ ಪಾರಮಾರ್ಥಿಕಗಳೆರಡನೂ ಏಕಕಾಲದಲ್ಲಿ ಸಾಧಿಸುತಿಹನು' ಎಂದು ಸಾರಿರುವರು. ಮನುಷ್ಯನ ಮೂರು ಮೂಲಭೂತವಾದ ಹಕ್ಕುಗಳ (ಅನ್ನ, ಬಟ್ಟೆ, ವಸತಿ) ಪ್ರಾಪ್ತಿಗಾಗಿ ಅವನು ಸರ್ವ ಪ್ರಯತ್ನಗಳನ್ನೂ ಮಾಡಲೇಬೇಕು. ಇದುವೇ ಧರ್ಮದ ಸಂದೇಶ. ಮನುಷ್ಯನು ಚರಮಗುರಿಯನ್ನು ಮುಟ್ಟಲು ಯೋಗ್ಯಸಾಧನೆ ಮಾಡಬೇಕಾದರೂ ಸಮೃದ್ಧಜೀವನವು ಬುನಾದಿಯೆಂದು ಧರ್ಮವು ಸಾರುತ್ತದೆ. ಬಟ್ಟ ಬಯಲಾದ ಹಾಳು ಭೂಮಿಯಲ್ಲಿ ಪಾರಮಾರ್ಥಿಕತೆಯ ಹುಲುಸಾದ ಬೆಳೆ ಬೆಳೆಯಲಾರದು. ಅಂತೆಯೇ ಅನಾದಿ ಕಾಲದಿಂದಲೂ, ಮಾನವನ ಇಹ ಜೀವನದ ಅಂದವಾದ ಬಾಳಿಗೆ ಬೇಕಾದ ಸೌಕರ್ಯಗಳನ್ನೂ, ಸಹಾಯ ಸಂಪತ್ತುಗಳನ್ನೂ ಸತ್ಯವಾದ ಪ್ರಾಮಾಣಿಕವಾದ ರೀತಿಯಿಂದ ಗಳಿಸಿ ಬಳಸುವುದೇ ಅವನ ಜೀವನೋದ್ದೇಶಗಳಲ್ಲಿ ಮುಖ್ಯವಾದುದೆಂದು ಧರ್ಮಸಂಸ್ಥಾಪಕರು ಉಪದೇಶಿಸಿದ್ದಾರೆ. ಮಹಾಪುರುಷರ ಮಾತುಗಳಲ್ಲಿ ನಡೆನುಡಿಗಳಲ್ಲಿ ನಂಬಿಕೆಯನ್ನಿಟ್ಟು ಅವರ ಭವ್ಯಾದರ್ಶವನ್ನು ಜೀವನದ ಮುಂದಿಟ್ಟುಕೊಂಡು ಸಾಗಬೇಕು.

ಸೇವಿತವ್ಯೋ ಮಹಾವೃಕ್ಷಃ ಫಲಛಾಯಾ ಸಮನ್ವಿತಃ ।
ಯದಿ ದೈವಾತ್ ಫಲಂ ನಾಸ್ತಿ ಛಾಯಾ ಕೇನ ನಿವಾರ್ಯತೇ ॥

ಮಹಾವೃಕ್ಷವನ್ನು ಆಶ್ರಯಿಸಬೇಕು. ಅದು ಫಲ ಮತ್ತು ನೆಳಲುಗಳಿಂದ ಕೂಡಿರಬೇಕು. ಒಂದು ವೇಳೆ ಅದರಲ್ಲಿ ಫಲವಿಲ್ಲದಿದ್ದರೆ ನೆಳಲನ್ನು ಯಾರು ತಾನೇ ನಿವಾರಿಸಲು ಶಕ್ಯ ? ಆದ್ದರಿಂದ ಮನುಷ್ಯ ಭವ್ಯಾದರ್ಶಗಳನ್ನು ಮುಂದಿಟ್ಟುಕೊಂಡು. ಅಳಲದೆ ಬಳಲದೆ ಆತ್ಮೋದ್ಧಾರ ಸಾಧನಾಮಾರ್ಗಗಳಲ್ಲಿ ಜೀವನವೃತ್ತವನ್ನು ಪೂರ್ಣಮಾಡಿದರೆ ಉಭಯಸುಖಿ.

(ಡಿಸೆಂಬರ್ ೧೯೬೦)

## ೩. ಧರ್ಮ ಸಂದೇಶ

ವಿಕಾಸ ಪಥದಲ್ಲಿ ಮಾನವನು ಜಯಶಾಲಿಯಾಗಬೇಕಾದರೆ, ನಿರಂತರ ಸಾಧನೆಯೇ ಮುಖ್ಯವಾದುದು. ಜೀವಕೋಟಿಯಲ್ಲಿ ಪ್ರಪ್ರಥಮ ಸ್ಥಾನ ಗಳಿಸಿರುವ ಮಾನವನು ತನ್ನ ದೈವದತ್ತವಾದ ಶಕ್ತಿಗಳನ್ನು ಅರಿತು ಯೋಗ್ಯರೀತಿಯಲ್ಲಿ ವಿಕಾಸಗೊಳಿಸಿ, ಉಚಿತವಾಗಿ ಬಳಸಿ, ತನ್ನ ಕಲ್ಯಾಣವನ್ನು ಹೊಂದಬೇಕು. ಈ ಶಕ್ತಿಗಳು ಪ್ರಗತಿಪಥದಲ್ಲಿ ಬೆಳೆದಂತೆ ವ್ಯಕ್ತಿತ್ವವು ಪ್ರಕಾಶಮಯವಾಗುವುದು. ಅವನ ವಿಶಿಷ್ಟ ಸ್ವರೂಪವು ಒಂದು ವಿಧವಾದ ನವಚೈತನ್ಯವನ್ನು ಹೊಂದಿ, ವೈಯಕ್ತಿಕಜೀವನವೂ ಹಾಗು ಸಾಮಾಜಿಕ ಜೀವನವೂ, ಅಪೂರ್ವವಾದ ಶಾಂತಿ ಕಾಂತಿ ಸಾಮರಸ್ಯಗಳಿಂದ ಪ್ರಜ್ವಲಿಸುವುದು. ಮಾಡುವ ಕ್ರಿಯೆ, ನೋಡುವ ದೃಷ್ಟಿ, ನೆನೆವ ಮನಗಳೆಲ್ಲವೂ ಶುದ್ಧವಾಗುವುವು. ಬಹಿರಂಗ ಜಗತ್ತಿನ ವಿಶಿಷ್ಟ ವ್ಯವಹಾರಗಳು ಕೂಡ, ಜೀವನದ ಶ್ರೇಯಸ್ಸಿಗೆ ಸಾಧಕಗಳಾಗಿ ಪರಿಣಮಿಸುವುವು. ವಸ್ತುಸ್ಥಿತಿಯಲ್ಲಿ ವಿಜ್ಞಾನವು ಕೆಟ್ಟದ್ದಲ್ಲ. ಅದು ಜಗತ್ತಿಗೆ ದೊರಕಿಸಿರುವ ಅನುಕೂಲಗಳನ್ನು, ಸಹಾಯ ಸಂಪತ್ತನ್ನು ಕಡೆಗಣಿಸಲಾಗುವುದಿಲ್ಲ. ವಿಜ್ಞಾನವನ್ನು ಬಳಸುವ ಭಾವ, ನೋಡುವ ದೃಷ್ಟಿ ಪವಿತ್ರವಾಗಬೇಕು. ಈ ಎಲ್ಲ ಭಾವನೆಗಳ, ವಿಚಾರಗಳ, ಉಗಮಸ್ಥಾನವಾದ ಮಾನವನ ಹೃದಯ ಪರಿವರ್ತನೆಯಾಗಿ, ವಿಶ್ವಪ್ರೇಮದ ಉಪಾಸನೆಯಲ್ಲಿ ನಿರತನಾಗಬೇಕು. ಜೀವನದ ಅಂಗಭೂತವಾಗಿರುವ ಎಲ್ಲಾ ಘಟಕಗಳೂ, ಪ್ರಗತಿ ಸಾಧಕಗಳಾಗಿ ವಿನಿಯೋಗಿಸಲ್ಪಡಬೇಕು. ಆಧ್ಯಾತ್ಮಿಕ ಪ್ರವೃತ್ತಿಯನ್ನು ಬೆಳಸಿಕೊಂಡು, ಜೀವನದ ಧ್ಯೇಯೋದ್ದೇಶಗಳಿಂದ ಪ್ರಚೋದಿತವಾದ ಭೌತಿಕ ವ್ಯವಸ್ಥೆಯಿಂದಲೇ ಜಗತ್ತಿನ ಕಲ್ಯಾಣವಾಗಬಲ್ಲದು. ಜನಾಂಗ ಈ ತತ್ತ್ವವನ್ನು ಅವಶ್ಯಂಭಾವಿಯಾಗಿ ಯೋಚಿಸಿ ಇಂದಿನ ಜೀವನದಲ್ಲಿ ಹೆಜ್ಜೆಯಿಡಬೇಕಾಗಿದೆ. ತನ್ಮೂಲಕ ಈಶನಿರ್ಮಿತ ಜಗತ್ತಿನ ನೈಜಸೌಂದರ್ಯವನ್ನು ಕಾಪಾಡಬೇಕಾಗಿದೆ.

ಪಶುವೃತ್ತಿಯಿಂದ ಈಶ್ವರ ನಿರ್ಮಿತ ಜಗತ್ತಿನ ಸೌಂದರ್ಯ ಹಾಳಾಗುವುದು. ಈಶ್ವರ ಪ್ರಸಾದರೂಪವಾಗಿರುವ ಸಮಸ್ತ ತನು, ಮನ, ಪ್ರಾಣಗಳ ಸಮಗ್ರ ಸಹಕಾರ ಅವನ ಪ್ರಸಾದರೂಪವಾಗಿ ಲಭ್ಯವಾಗಿರುವ ಜಗತ್ತಿನೊಡನೆ ಸಂಪೂರ್ಣಹೊಂದಿ ಬಾಳುವ ಬಾಳಿನಲ್ಲಿ ಸಹಜ ಸೌಂದರ್ಯವಿದೆ. ಸುಖವಿದೆ. ಅಂತಾಗಲು ಯತ್ನಿಸುವುದನ್ನೇ ಧರ್ಮವು ಮಾನವನಿಗೆ ಕೊಡುವ ಸಂದೇಶ ವಾಗಿದೆ. (ಮಾರ್ಚ್ ೧೯೭೦)

## ೪. ಮಾನವತ್ವ

ಮಾನವಜೀವನದಲ್ಲಿ ಮುಖ್ಯವಾದ ಎರಡು ಘಟ್ಟಗಳಿರುವುದಾಗಿ ಜ್ಞಾನಿಗಳು ನುಡಿದಿರುವರು. ಪ್ರಾಕೃತರೂಪಿಯಾಗಿ ರತಕ್ಕ ಮಾನವನು ತನ್ನ ಪಶುತ್ವವನ್ನು ನೀಗಿ, ಮಾನವತ್ವವನ್ನು ಹೊಂದುವುದು ಮೊದಲನೆಯ ಹಂತ. ಆದರೆ ಇಷ್ಟರಿಂದಲೇ ತೃಪ್ತನಾಗದೆ, ಜೀವಕೋಟಿಯಲ್ಲಿ ಶ್ರೇಷ್ಠವಾದ ಈ ದೇಹಾವಲಂಬನ ಮಾಡಿರುವುದರ ಚರಮಧ್ಯೇಯವನ್ನು, ಅಂದರೆ ದೇವತ್ವ ವನ್ನು ಪಡೆಯುವುದು ಎರಡನೆಯ ಘಟ್ಟ. ಇಂದು ಜಗತ್ತಿನ ಜನತೆಯು ಮೊದಲನೆಯ ಹಂತವನ್ನು ಮುಟ್ಟಲು ಕೂಡ ಸಮರ್ಥ ವಾಗಿಲ್ಲ. ಪ್ರಚಲಿತವಿರುವ ವಿಷಮ ಪರಿಸ್ಥಿತಿಯು ಪರಿಹಾರವಾಗಿ, ಜಗತ್ತು ಶಾಂತವಾಗಿ ಪ್ರಗತಿ ಪಥವನ್ನು ಹಿಡಿಯಬೇಕಾದರೆ ಮಾನವೀಯತೆಯ ಪೂರ್ಣ ಸ್ವರೂಪವು ಕ್ರಿಯಾಜ್ಞಾನಗಳ ಮೂಲಕ ಪ್ರಕಟವಾಗಬೇಕು. ಆಗಲೇ ನಿಜವಾದ ಪ್ರಗತಿಯ ಅರಿವು ಮನುಷ್ಯನಿಗೆ ಗೋಚರವಾಗುತ್ತದೆ. ಈ ಬಗೆಗೆ ಅನೇಕ ತಜ್ಞರು ತಮ್ಮ ಅಭಿಪ್ರಾಯವನ್ನು ಕೂಲಂಕಷವಾಗಿ ವಿವರಿಸಿದ್ದಾರೆ. ಅವುಗಳತ್ತ ಮನುಷ್ಯ ಬಹುವಾಗಿ ಚಿಂತನೆ ಮಾಡುವ ಕಾಲವೀಗ ಎಂದಿಗಿಂತ ಅತ್ಯಂತ ಮುಖ್ಯವಾಗಿದೆ. (ಜೂನ್ ೧೯೭೦)

## ೫. ಗಳಿಕೆ-ಬಳಕೆ

ಮನುಷ್ಯನ ಮೂರು ಮೂಲಭೂತ ಹಕ್ಕುಗಳಾದ ಅನ್ನ, ವಸ್ತ್ರ, ವಸತಿಗಳ ಪ್ರಾಪ್ತಿಗಾಗಿ ಅವನು ಸರ್ವ ಪ್ರಯತ್ನ ಮಾಡಲೇಬೇಕು. ಇದುವೇ ಧರ್ಮದ ಸಂದೇಶ. ಮಾನವನು ತನ್ನ ಚರಮಗುರಿಯನ್ನು ಮುಟ್ಟಲು, ಯೋಗ್ಯಸಾಧನೆ ಮಾಡ ಬೇಕಾದರೂ ಸಮೃದ್ಧ ಜೀವನವು ಬುನಾದಿಯೆಂದು ಅನೇಕ ಮಹಾಪುರುಷರು ಹೇಳುತ್ತಾರೆ. ಬಟ್ಟಬಯಲಾದ ದರಿದ್ರಜೀವ ನದ ಹಾಳುಭೂಮಿಯಲ್ಲಿ ಪಾರಮಾರ್ಥದ ಹುಲುಸಾದ ಬೆಳೆಯು ಬೆಳೆಯಲಾರದು. ಅಂತೆಯೇ ಅನಾದಿಕಾಲದಿಂದಲೂ, ಮಾನ ವನ ಇಹಜೀವನದ ಅಂದವಾದ ಬಾಳಿಗೆ ಬೇಕಾದ ಸೌಕರ್ಯಗಳನ್ನು ಸಹಾಯಸಂಪತ್ತುಗಳನ್ನು ಸತ್ಯವಾದ, ಪ್ರಾಮಾಣಿಕವಾದ ರೀತಿಯಿಂದ ಗಳಿಸಿ ಬಳಸುವುದೇ ಅವನ ಜೀವನೋದ್ದೇಶಗಳಲ್ಲಿ ಮುಖ್ಯವಾದುದೆಂದು ಧರ್ಮಸಂಸ್ಥಾಪಕರು ಉಪದೇಶಿಸಿದ್ದಾರೆ. ಈ ಅಭಿಪ್ರಾಯವನ್ನೇ ಬೇರೊಂದು ರೀತಿಯಿಂದ ಹೇಳಬೇಕೆಂದರೆ. ಮನುಷ್ಯನು ಈ ಪವಿತ್ರವಾದ ಪ್ರಸಾದ ಕಾಯಾವಲಂಬಿ ಯಾಗಿ ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥ ಚತುಷ್ಟಯವನ್ನು ಸಾಧಿಸಬೇಕು. ದೇಹಾವಸಾನಾನಂತರ ದೇವದೇವನಲ್ಲಿ ಆತ್ಮಕ್ಕೆ ವಿಶ್ರಾಂತಿಯನ್ನು ಹೊಂದಿರುವ ಮಾತಿರಲಿ, ಇಹಜೀವನದ ಮುಖ್ಯಧ್ಯೇಯಗಳಾದ ಧರ್ಮಾರ್ಥಕಾಮಗಳ ಸ್ವರೂಪ ವನ್ನು ಸ್ಥೂಲವಾಗಿ ಪರಿಶೀಲಿಸಿದರೆ. ದಿವ್ಯ ತತ್ತ್ವವೊಂದು ಗೋಚರವಾಗುತ್ತದೆ. ಮನುಷ್ಯನಿಗೆ ಅರ್ಥಬೇಕು, ಕಾಮಬೇಕು. ಆದರೆ ಅಂತಹ ಅರ್ಥಕಾಮಗಳನ್ನು ಸಂಗ್ರಹಿಸುವುದೆಂತು ? ಅವು ಧರ್ಮಮೂಲವಾಗಿಯೇ ಕೈಗೂಡಬೇಕು. ಧರ್ಮಸೂತ್ರ ಕ್ಕನುಗುಣವಾಗಿ ಇವುಗಳ ಗಳಿಕೆ ಮತ್ತು ಬಳಕೆಗಳಾದಾಗಲೇ ಬಾಳು ಶುದ್ಧವೆನಿಸುವುದು. ಸಮಾಜದಲ್ಲಿ ಶುದ್ಧಿಯೂ ಸಿದ್ಧಿಯೂ ಲಭ್ಯವಾಗುವವು. ಯಾವಾಗ ಧರ್ಮದ ವ್ಯಾಪ್ತಿಯನ್ನು ಮೀರಿ ಇವುಗಳ ಸಂಗ್ರಹ ಮತ್ತು ವ್ಯಯಗಳು ಉಂಟಾಗುತ್ತವೆಯೋ ಆಗಲೇ ವ್ಯಕ್ತಿ, ಸಮಾಜ ಹಾಗೂ ರಾಷ್ಟ್ರಜೀವನದಲ್ಲಿ ಅಶಾಂತಿಯೊದಗುವುದು. ಅಸಮಾಧಾನಗಳ ತಾಂಡವ ಪ್ರಾರಂಭವಾಗಿ ಯುದ್ಧಗಳಿಗೆ ಎಡೆಗೊಡುವುದು. ಇಂದು ಜಗತ್ತಿನಲ್ಲಿ ಉಂಟಾಗಿರುವ ಅಸ್ತವ್ಯಸ್ತ ಪರಿಸ್ಥಿತಿಗಳಿಗೆ ಅರ್ಥಕಾಮಾದಿಗಳ ಗಳಿಕೆ ಬಳಕೆಗಳ ಜ್ಞಾನಾಭಾವವೇ ಮುಖ್ಯ ಕಾರಣವಾಗಿರುತ್ತದೆಂದು ನಿಸ್ಸಂಶಯವಾಗಿ ಹೇಳಬಹುದು. ಈ ಅಭಾವದ ಪರಿಣಾಮವಾಗಿ ಕಳೆದ ೫೦-೬೫ ವರ್ಷಗಳಲ್ಲಿ ಪ್ರಪಂಚ ವ್ಯಾಪ್ತಿಯನ್ನು ಪಡೆದ ಎರಡು ಮಹಾಯುದ್ಧಗಳಾಗಿ ಮಾನವ ಜೀವನದ ಮೇಲೆ ಆಗಿ ರುವ ದುಷ್ಪರಿಣಾಮಗಳಿಗೆ ಲೆಕ್ಕವಿಲ್ಲ. ಇನ್ನೊಂದು ಜಗದ್ವ್ಯಾಪ್ತಿ ಪಡೆದ ಯುದ್ಧವಾಗುವುದೆಂದರೆ ಸರ್ವನಾಶ ಖಂಡಿತ. ಇದಾ ಗದಂತೆ ವಿವೇಕಜೀವಿಯಾದ ಮಾನವನು ತನ್ನನ್ನು ಧರ್ಮದ ಕನ್ನಡಿಯಲ್ಲಿ ನೋಡಿಕೊಂಡು ಸಾಗುವಂತಾಗಬೇಕೆಂದು ಹಾರೈಸು ತ್ತೇವೆ. (ಡಿಸೆಂಬರ್ ೧೯೭೦)

## ೬. ಧರ್ಮಯುದ್ಧ

ಧರ್ಮವು 'ಮಾ ಹಿಂಸ್ಯಾತ್' ಎಂದು ಬೋಧಿಸುತ್ತದೆ. ನಿಜ, ಆದರೆ ಇನ್ನೊಂದು ಸಮಯದಲ್ಲಿ ಅದನ್ನು ಪುಷ್ಟೀ ಕರಿಸುತ್ತದೆ. ಭಗವದ್ಗೀತೆಯು ಈ ಎರಡು ತತ್ತ್ವಗಳ ಮಥಿತಾರ್ಥವನ್ನು ಎತ್ತಿ ತೋರಿಸುತ್ತದೆ. ಹಿಂಸೆಯೆಂದು ಯಾವುದನ್ನು ಕರೆಯುತ್ತೇವೆಯೋ ಅದೇ ಅಹಿಂಸೆಯೂ ಆಗುತ್ತದೆ. ಆದರೆ ಇಲ್ಲಿನ ಧರ್ಮಸೂಕ್ಷ್ಮವನ್ನು ಮಾತ್ರ ಜಾಗೃತವಾಗಿ, ಸೂಕ್ಷ್ಮ

ದೃಷ್ಟಿಯಿಂದ ಪರಿಶೀಲಿಸಬೇಕು. ಧರ್ಮವು ಅಧರ್ಮವನ್ನು ಗೆಲ್ಲುವಾಗ ಹಿಂಸೆಯನ್ನು ಅವಶ್ಯವಾಗಿ ಅನುಸರಿಸಲೇ ಬೇಕಾಗುತ್ತದೆ. ಹಾಗಿಲ್ಲದಿದ್ದರೆ ಅಧೋಮುಖವಾಗಿ ಸಂಚರಿಸುವ ಇಂದ್ರಿಯ ಜಾಲವನ್ನು ಊರ್ಧ್ವಮುಖಗೊಳಿಸುವ ಮಾರ್ಗದಲ್ಲಿ ಅವುಗಳ ಮೂಲಭೂತ ಗುಣಗಳನ್ನು ಅರಿಯುವುದೂ ಅಧರ್ಮವಾದೀತು. ಅದು ಹಾಗಲ್ಲ ; ಸದ್ಧರ್ಮಸ್ಥಾಪನೆಗೆ ನ್ಯಾಯ ದೊರಕಿಸುವ ಕಾರ್ಯಕ್ಕೆ ಆಸುರೀಶಕ್ತಿಗಳ ಮೇಲೆ ದೈವಶಕ್ತಿಗಳ ದಾಳಿ ಅನಿವಾರ್ಯ. ಈ ಮಾತು ಪಿಂಡಾಂಡ ಪ್ರಪಂಚ ವ್ಯಾಪ್ತಿಗನುಗುಣವಾದುದೆಂದು ಭಾವಿಸಲಾಗದು. ಹೊರಗಣ ಪ್ರಪಂಚಕ್ಕೂ ಅನಿವಾರ್ಯ. ಆಸುರೀಮನೋಭಾವದ ಜನಾಂಗಕ್ಕೆ ತಕ್ಕ ಬುದ್ಧಿಯನ್ನು ಕಲಿಸಲು ನ್ಯಾಯಸಮ್ಮತ ಧರ್ಮಯುದ್ಧ ಅಹಿಂಸೆಯೇ ಹೊರತು ಹಿಂಸೆಯಲ್ಲ. ಈ ಮಾತನ್ನು ಗೀತೆ ಎತ್ತಿ ಹಿಡಿದಿದೆ. ಒಂದು ದೃಷ್ಟಿಯಿಂದ ಗೀತೆ ಹುಟ್ಟಿದುದು ಈ ಮಾತಿನ ಸ್ಪಷ್ಟತೆಗಾಗಿ. 'ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾವಯಂ। ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ'॥ ಎಂದು ಅರ್ಜುನನು ವ್ಯಾಕುಲಚಿತ್ತನಾಗಿ ಶಸ್ತ್ರಾಸ್ತ್ರ ತ್ಯಾಗಮಾಡಿ ರಥದ ಮೇಲೆ ಕುಳಿತಾಗ ಶ್ರೀಕೃಷ್ಣ 'ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ। ಅನಾರ್ಯ ಜುಷ್ಟಮಸ್ವರ್ಗ್ಯಂ ಅಕೀರ್ತಿಕರಮರ್ಜುನ ?' ಎಂದು ಆಕ್ಷೇಪಿಸಿ 'ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ' ಎಂದು ಬುದ್ಧಿ ಹೇಳಿ ಧರ್ಮಸೂಕ್ಷ್ಮವನ್ನು ತಿಳಿಸಿ ಅವನಿಂದ ಕೌರವಸೈನ್ಯನಾಶಮಾಡಿಸುತ್ತಾನೆ. ತತ್ತ್ವಪಾಲನೆಗೆ ನ್ಯಾಯ ನೆಮ್ಮದಿಗಳಿಗೆ ಹಿಂಸೆ ಅನಿವಾರ್ಯವಾಗುತ್ತದೆ ಎಂಬುದು ಇದರಿಂದ ಸ್ಪಷ್ಟವಾಗಿ ವಿದಿತ. (ಡಿಸೆಂಬರ್ ೧೯೭೪)

## ೭. ಸ್ತ್ರೀ ಸ್ವಾತಂತ್ರ್ಯ

ಭಾರತೀಯ ಸಂಸ್ಕೃತಿಯು ಅತ್ಯಂತ ಮಹತ್ವವಾದುದು. ಎಲ್ಲ ದೃಷ್ಟಿಯಿಂದಲೂ ಅದು ಸಂಪೂರ್ಣವಾಗಿದೆ ಎಂಬ ಅಂಶವನ್ನು ಸರ್ವರೂ ಪ್ರತಿ ಇಲ್ಲದೆ ಒಪ್ಪಿಕೊಳ್ಳುತ್ತಿದ್ದಾರೆ. ಆದರೂ ವಿದೇಶೀ ಸಂಸ್ಕೃತಿಗಳನ್ನು ಶ್ಲಾಘಿಸುವ ಹಲವು ಮಂದಿ ನಮ್ಮ ಸಂಸ್ಕೃತಿಯಲ್ಲಿ ಸ್ತ್ರೀಯರಿಗೆ ಪ್ರಾಧಾನ್ಯತೆ ಇಲ್ಲವೆಂಬುದಾಗಿ ಆರೋಪಿಸುತ್ತಿದ್ದಾರೆ. ಅನಾದಿಕಾಲದಿಂದಲೂ ಸ್ತ್ರೀಯರನ್ನು ಅಬಲೆಯರೆಂದು ಸುಳ್ಳುಘೋಷಣೆ ಮಾಡಿ, ಅವರ ಸ್ವಾತಂತ್ರ್ಯವನ್ನು ಕಸಿದುಕೊಂಡು ಅವರು ಸೇವೆಗೆ ಮಾತ್ರ ಅರ್ಹರೆಂದು ಪರಿಗಣಿಸಲಾಗಿದೆ, ಇತ್ಯಾದಿಯಾಗಿ ಅವರು ಆಕ್ಷೇಪಿಸುತ್ತಿದ್ದಾರೆ. ಆದರೆ ಈ ಕೂಗು ಸತ್ಯಕ್ಕೆ ದೂರವಾದುದು. ನಮ್ಮ ಸಂಸ್ಕೃತಿಯ ಪೂರ್ಣಪರಿಚಯವಿಲ್ಲದವರು ಇತರ ಸಂಸ್ಕೃತಿಗಳ ಮೇಲಣ ಅಂಧಾಭಿಮಾನದಿಂದ ಹೊಂದಿರುವ ಭ್ರಾಂತಿ ಇದು. ವಾಸ್ತವಾಂಶ ಇದರಿಂದ ಭಿನ್ನವಾಗಿದೆ. ಮಹಿಳೆಯರಿಗೆ ನಮ್ಮ ಸಂಸ್ಕೃತಿಯಲ್ಲಿ ಅತಿ ಶ್ರೇಷ್ಠಸ್ಥಾನವನ್ನು ಮೀಸಲಾಗಿಡಲಾಗಿದೆ. ಜಗತ್ತಿಗೇ ಕಾನೂನನ್ನು ಪ್ರಥಮಬಾರಿಗೆ ನೀಡಿದ ಮನುಚಕ್ರವರ್ತಿಯು ತಾನು ರಚಿಸಿರುವ ಧರ್ಮಶಾಸ್ತ್ರದಲ್ಲಿ 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ' ಎಂಬುದಾಗಿ ಅಭಿಪ್ರಾಯ ಪಟ್ಟಿರುವುದು ಈ ವಿಷಯವನ್ನು ಸ್ಥಿರಪಡಿಸುತ್ತದೆ. ಮಾನವನ ಜೀವನವು ಸುಂದರವೂ ಸುಖಮಯವೂ ಆಗಿರಲು ಐಶ್ವರ್ಯ, ವಿದ್ಯೆ, ಶಕ್ತಿ ಈ ಮೂರು ಸಂಪತ್ತುಗಳು ಅತ್ಯಗತ್ಯವಾದುವು. ನಮ್ಮ ಪೂರ್ವಜರು ಐಶ್ವರ್ಯ ಸಂಪತ್ತಿಗೆ ಅಧಿದೇವತೆಯಾಗಿ 'ಲಕ್ಷ್ಮಿ' ಎಂಬ ಹೆಣ್ಣುಮಗಳ ಪ್ರತೀಕವನ್ನೇ ಆಯ್ಕೆಮಾಡಿದ್ದಾರೆ. ವಿದ್ಯೆಗೆ ಅಧಿದೇವತೆಯಾಗಿ ಹೆಣ್ಣುಮಗಳು 'ಸರಸ್ವತಿ'ಯನ್ನು ಸ್ವೀಕರಿಸಿದ್ದಾರೆ. ದುರ್ಗಾದೇವಿಯೂ ಇದರಂತೆ ಹೆಣ್ಣುಮಗಳು. ಅವಳು ಶಕ್ತಿಯ ಅಧಿದೇವತೆಯಾಗಿ ಆರಾಧಿಸಲ್ಪಡುತ್ತಿದ್ದಾಳೆ. ಈ ಮೂರುಶಕ್ತಿಗಳು ಸಮಾಜದಲ್ಲಿ ಬೆಳವಣಿಗೆಯಾಗಿ ಜೀವನ ಸುಗಮಗೊಳ್ಳಲು ಸ್ತ್ರೀಯೇ ಪ್ರಧಾನಳೆಂಬಂಶ ಈ ಮೂರು ಪ್ರತೀಕ ಮೂರ್ತಿಗಳಿಂದ ಭಾಸವಾಗುವ ಅಂಶ. ಪ್ರಾಯಶಃ ಪ್ರಪಂಚದ ಮತ್ತಾವ ಸಂಸ್ಕೃತಿಯಲ್ಲೂ ಸ್ತ್ರೀಯರಿಗೆ ಇಷ್ಟು ಪವಿತ್ರವಾದ ಸ್ಥಾನ ದೊರಕಿರಲಾರದು. ಪ್ರಾಚೀನ ಅರ್ವಾಚೀನ ಕಾಲಗಳೆರಡರಲ್ಲೂ ಭಾರತೀಯ ಮಹಿಳೆಯರು ತಮ್ಮ ಸಚ್ಚಾರಿತ್ರ್ಯ, ತ್ಯಾಗಭಾವನೆ, ಪಾತಿವ್ರತ್ಯಗಳಿಂದ ಕೂಡಿದ ಆದರ್ಶ ಜೀವನವನ್ನು ಸಾಗಿಸಿ, ವಿಶ್ವದಲ್ಲೇ ಖ್ಯಾತರಾಗಿರುವ ನಿದರ್ಶನಗಳು ಸಹಸ್ರಾರು ಇವೆ. ಆದರೆ ನಮ್ಮ ದೌರ್ಭಾಗ್ಯವೋ ಏನೋ ಬಹುಮಟ್ಟಿಗೆ ಈ ಒಂದು ಆದರ್ಶವು ಆಧುನಿಕತೆಯ ಸೋಗಿನಲ್ಲಿ ಕ್ರಮೇಣ ಶಿಥಿಲಗೊಳ್ಳುತ್ತಿದೆ. ಇದು ಶೋಚನೀಯ. ಸ್ತ್ರೀ ಜನಾಂಗ ಎಚ್ಚೆತ್ತು ಈ ದಿಶೆಯಲ್ಲಿ ಗಮನ ಹರಿಸಿ ಸೂಕ್ತರೀತಿ ಮಾರ್ಪಾಡಾಗಬೇಕಾದ ಅಗತ್ಯ ಎಂದಿಗಿಂತಲೂ ಇಂದು ಅತಿಯಾಗಿದೆ. (ಸೆಪ್ಟಂಬರ್ ೧೯೭೪)

## ೮. ಪ್ರಜಾಪ್ರಭುತ್ವ

ಇಂದು ನಮ್ಮ ದೇಶವು ವಿವಿಧ ಕ್ಷೇತ್ರಗಳಲ್ಲಿ ಅಸಂಖ್ಯ ಸಮಸ್ಯೆಗಳನ್ನು ಎದುರಿಸುತ್ತಿದೆ. ದಾರಿದ್ರ್ಯ, ನಿರುದ್ಯೋಗ, ಆಹಾರಾಭಾವ, ರಾಜಕೀಯ ಗೊಂದಲ, ಅನಕ್ಷರತೆ, ಸಾಮಾಜಿಕ ಅಸಮಾನತೆ, ಆರ್ಥಿಕ ಮುಗ್ಗಟ್ಟು, ಕ್ಷೀಣಿಸುತ್ತಿರುವ ಉತ್ಪನ್ನ ಇವೇ ಮುಂತಾದ ಸಮಸ್ಯೆಗಳನ್ನು ಅತಿ ಶೀಘ್ರದಲ್ಲಿ ಪರಿಹರಿಸಲೇ ಬೇಕಾಗಿದೆ. ಈ ಸಮಸ್ಯೆಗಳತ್ತ ತಮ್ಮ ಗಮನಹರಿಸಿ ಸೂಕ್ತ ಪರಿಹಾರವನ್ನು ಕಂಡುಹಿಡಿಯುವ ಸಾಮರ್ಥ್ಯವಿರುವುದು ಕೇವಲ ಬುದ್ಧಿಜೀವಿಗಳಿಗೆ ಮಾತ್ರ. ಉನ್ನತವಾದ ಅಂಶಗಳನ್ನು ಉನ್ನತವಾದ ಮಾರ್ಗಗಳಿಂದ ಉನ್ನತ ವ್ಯಕ್ತಿಗಳಿಂದ ಪಡೆಯಲಿಕ್ಕೆ ಮಾತ್ರ ಸಾಧ್ಯ. ನಮ್ಮದು ಪ್ರಜಾಪ್ರಭುತ್ವ ದೇಶ. ಪ್ರಜಾಪ್ರಭುತ್ವ

ವನ್ನು ಸೂಕ್ತವಾದ ಮಾರ್ಗದಲ್ಲಿ ಕೊಂಡೊಯ್ಯುವುದು ಪ್ರಾಜ್ಞರ ಜವಾಬ್ದಾರಿಯಾಗಿರುತ್ತೆ. ತತ್ವಜ್ಞಾನಿ ಶ್ರೀ ಎಸ್. ರಾಧಾಕೃಷ್ಣನ್‌ರವರು ಹೇಳಿರುವಂತೆ ಪ್ರಜಾಪ್ರಭುತ್ವ ಎಂಬುದು ಜನಜಂಗುಳಿಯ ಆಡಳಿತವಲ್ಲ. ಅದು ಲೋಕಾಭಿಪ್ರಾಯಕ್ಕೆ ಅಧೀನವಾದುದಲ್ಲ ಅಥವಾ ನಿರಂಕುಶ ಪ್ರಭುಗಳಿಗೆ ವಿಧೇಯವಾಗಿಯೂ ಇಲ್ಲ. ಅದು ವಿವೇಚನಾಶಾಲಿಗಳೂ ಹಾಗೂ ಸರ್ವೋತ್ಕೃಷ್ಟರೂ ಆದ ವ್ಯಕ್ತಿಗಳ ದಕ್ಷ ನಾಯಕತ್ವದ ಆಶ್ರಯದಲ್ಲಿ ಎಲ್ಲಾ ಜನತೆಯ ಮೂಲಕ, ಎಲ್ಲಾ ಜನತೆಯ ಪುರೋಭಿವೃದ್ಧಿಯ ಸಾಧನೆ, ಪರಸ್ಪರ ತಿಳಿವಳಿಕೆಯ ಬೆಳವಣಿಗೆ, ಹೆಚ್ಚಿನ ಸಹಕಾರ, ಚರ್ಚೆ ಹಾಗೂ ಒಪ್ಪಂದಗಳ ಮೂಲಕ ನಿರ್ಧಾರಗಳನ್ನು ಕೈಗೊಳ್ಳುವುದು–ಇತ್ಯಾದಿಗಳು ಪ್ರಜಾಪ್ರಭುತ್ವ ನೀತಿಯ ಪ್ರಧಾನ ಅಂಶಗಳು. ಪ್ರಜಾಪ್ರಭುತ್ವದಲ್ಲಿನ ನಾಯಕವರ್ಗವು ಪ್ರಾಮಾಣಿಕರಾಗಿಯೂ, ಪರಿಪೂರ್ಣತೆಯುಳ್ಳವರಾಗಿಯೂ, ಸೂಕ್ಷ್ಮಗ್ರಾಹಕಶಕ್ತಿಯುಳ್ಳವರಾಗಿಯೂ ಸೇವಾಮನೋಭಾವವುಳ್ಳವರಾಗಿಯೂ ಇದ್ದು, ಸತ್ಯ, ನಿಷ್ಠೆಗಳಿಗೆ ತಮಗೆ ತಾವೇ ಸಮರ್ಪಿಸಿಕೊಂಡವರಾಗಿರಬೇಕು. ಇವೆಲ್ಲಕ್ಕೂ ಮಿಗಿಲಾಗಿ ಮಾನವೀಯ ಅನುಕಂಪ, ಮನುಷ್ಯಸಹಜವಾದ ಪರಿಶೀಲನೆಗಳನ್ನು ಅಳವಡಿಸಿಕೊಂಡಿರಬೇಕು. ಇಂತಹ ಸರ್ವೋತ್ತಮ ವಿವೇಕಪೂರ್ಣ ವ್ಯಕ್ತಿಗಳ ಆಳ್ವಿಕೆಯನ್ನು ದೇಶಕ್ಕೆ ದೊರಕಿಸಿಕೊಡುವುದು ವಿದ್ಯಾವಂತವರ್ಗದ ಆದ್ಯಕರ್ತವ್ಯವಾಗಿದೆ. (ಮಾರ್ಚ್ ೧೯೭೫)

## ೯. ಸೇವೆ

ಸೇವೆಗಾಗಿ ಸೇವೆ ಎಂಬ ಉದಾತ್ತ ತತ್ತ್ವವನ್ನೊಳಗೊಂಡ ಸೇವಾಕಾರ್ಯಕ್ಕೆ ನಮ್ಮ ಪೂರ್ವಜರು ಪ್ರಾಮುಖ್ಯತೆಯನ್ನು ನೀಡಿದ್ದರು. ನಮ್ಮ ಸಂಸ್ಕೃತಿಯಲ್ಲಿ ಸೇವೆಯು ಹಾಸುಹೊಕ್ಕಾಗಿ ಬೆಳೆದುಬಂದಿದೆ. ವೇದಪುರಾಣಗಳು, ಭಗವದ್ಗೀತೆ ಮೊದಲಾದ ಧರ್ಮಗ್ರಂಥಗಳಲ್ಲಿ ಸೇವೆಯ ಮಹತ್ವವನ್ನು ಉಲ್ಲೇಖಿಸಿದ್ದಾರೆ. ಇಂದಿನ ಜನತೆಯಲ್ಲಿ ವಿಶೇಷವಾಗಿ ತರುಣ ಜನಾಂಗದಲ್ಲಿ ಈ ತೆರನಾದ ಸೇವಾಮನೋಭಾವ ಮೂಡಿ ಬರಬೇಕು. ತಮ್ಮ ನಾಡು ನುಡಿಗಳಿಗೆ ಸೇವೆ ಸಲ್ಲಿಸಬೇಕೆಂಬ ಉತ್ಕಟ ಅಭಿಲಾಷೆ, ಅಂತಹ ಬದುಕಿನಲ್ಲಿ ಶ್ರದ್ಧಾಶಕ್ತಿಗಳು ಅವರಲ್ಲಿ ಉಂಟಾಗಬೇಕಾದದ್ದು ಅತ್ಯವಶ್ಯ. ಸುಶಿಕ್ಷಿತ ಯುವಜನರು ತಮ್ಮ ಅಕ್ಕಪಕ್ಕದ ಸಮಾಜದಲ್ಲಿನ ಸ್ಥಿತಿಗತಿಗಳನ್ನು ಗಮನಿಸದೆ ತಮ್ಮ ಜೀವನವನ್ನು ಮಾತ್ರ ರೂಪಿಸಿಕೊಳ್ಳುವುದರಲ್ಲಿ ತಲ್ಲೀನರಾಗಿ ಭೋಗಲಾಲಸೆಗಳಿಗೆ ಗಮನವೀಯುವುದರ ಬದಲಾಗಿ ತಮ್ಮ ಸುತ್ತಲ ಬಂಧುಭಗಿನಿಯರ ಕಷ್ಟಕಾರ್ಪಣ್ಯಗಳನ್ನು ಅರಿತು ಬಗೆಹರಿಸಲೆತ್ನಿಸುವಲ್ಲಿ ಶ್ರಮಿಸುವುದನ್ನು ಕಲಿಯುವುದು ಅತ್ಯವಶ್ಯ. ಇವೆಲ್ಲಕ್ಕೂ ಮಿಗಿಲಾಗಿ ತನುವ ದಂಡಿಸಿ ದುಡಿಯುವ ಒಂದು ಮಹತ್ವಪೂರ್ಣ ಮನಃಪ್ರವೃತ್ತಿಯನ್ನು ನಮ್ಮ ಯುವಜನಾಂಗ ಬೆಳೆಸಿಕೊಳ್ಳಲು ಪೋಷಕವಾದ ವಾತಾವರಣ. ದೇಶಾದ್ಯಂತ ಎಲ್ಲಾ ಶಾಲಾ ಕಾಲೇಜುಗಳಲ್ಲಿ ನಿರ್ಮಾಣವಾಗುವುದು ಸ್ವಾಗತಾರ್ಹ. ಶಿಕ್ಷಣದ ಒಂದು ಭಾಗವಾಗಿ ಕಲಿಯುವಂತಹ ಏರ್ಪಾಡು ಎಂದಿಗಿಂತಲೂ ಇಂದು ಅವಶ್ಯ. ಸುಶಿಕ್ಷಿತ ತರುಣರು ಸ್ವಯಂಸ್ಫೂರ್ತಿಯಿಂದ ಮುಂದೆ ಬಂದು ರಾಷ್ಟ್ರದ ಏಳ್ಗೆಗಾಗಿ ತಮ್ಮನ್ನೇ ಸಮರ್ಪಿಸಿಕೊಳ್ಳುವಂತಹ ಪ್ರೇರಣೆ ಅವರಿಗೆ ದೊರಕುವಂತಾಗಬೇಕು. ಈ ದಿಶೆಯಲ್ಲಿನ ಯಾವುದೇ ವ್ಯವಸ್ಥೆಯು ಸರ್ವರ ಮೆಚ್ಚುಗೆಗೆ ಪಾತ್ರವಾಗುವುದರಲ್ಲಿ ಸಂಶಯವಿಲ್ಲ. (ನವಂಬರ್ ೧೯೭೫)

## ೧೦. ವಿದ್ಯೆ-ವಿದ್ಯಾಭ್ಯಾಸ

ಹಲವು ನಿಯಮಗಳು ಪರಿಸ್ಥಿತಿ, ಕಾಲ, ದೇಶವೃತ್ತಿಗಳಿಗನುಗುಣವಾಗಿ ಬದಲಾಯಿಸುತ್ತವೆ. ಆ ಬದಲಾವಣೆ ಅನಿವಾರ್ಯ. ಹಿರಿಯರಿಂದಲೂ ಅವು ಅಂಗೀಕೃತವಾಗುತ್ತವೆ. ಮತ್ತೆ ಕೆಲವು ನಿಯಮಗಳು ತ್ರಿಕಾಲಿಕವಾದವುಗಳು. ಅವುಗಳು ಬದಲಾಗಲಾರವು. ಬದಲಾಗುವ ಅವಶ್ಯಕತೆಯೂ ಇರುವುದಿಲ್ಲ. ಭೂತ ಭವಿಷ್ಯತ್ ವರ್ತಮಾನಗಳಲ್ಲಿ ಏಕರೀತಿಯಾಗಿರುತ್ತವೆ. ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ನಿಯಮವು ಎರಡನೇ ವರ್ಗಕ್ಕೆ ಸೇರುತ್ತದೆ. ವಿದ್ಯಾಭ್ಯಾಸವೆಂದರೆ ಕೆಲವರ ಅಕ್ಷರಾಭ್ಯಾಸವಲ್ಲ. ಕೇವಲ ಕೆಲವು ವಿಷಯ ತಿಳುವಳಿಕೆಯಲ್ಲ. ಆಂತರಿಕಜ್ಞಾನ, ಬಾಹ್ಯಕ್ರಿಯೆಗಳ ಸಾಮರಸ್ಯಕ್ಕೆ ತಕ್ಕ ಸಿದ್ಧತೆಯನ್ನು ಮಾನವನಿಗೆ ಒದಗಿಸುವ ತರಬೇತಿ. ವಿದ್ಯಾರ್ಥಿಗಳ ಉಗ್ರವಾದ ತಪಸ್ಸಿನಿಂದ ಮಾತ್ರ ಇಂಥ ವಿದ್ಯಾಭ್ಯಾಸದ ಸಿದ್ಧಿಯು ಸಾಧ್ಯ. ತಮ್ಮ ಭೌತಿಕಶಕ್ತಿ, ವಿಚಾರಶಕ್ತಿಗಳನ್ನು ಅರೆಯುವುದರಿಂದಲೇ ಅದು ಬರಬೇಕು. ಇದು ಯಾವುದೇ ಒಂದು ಕಾಲಕ್ಕೆ ಪರಿಮಿತವಾದುದಲ್ಲ. ಪರಂತು ಎಲ್ಲಾ ಕಾಲಗಳಲ್ಲಿಯೂ ಅನ್ವಯಿಸತಕ್ಕದಾಗಿದೆ. ವಿದ್ಯಾಭ್ಯಾಸ ಫಲಿಸಿ ಜ್ಞಾನಸಂಪತ್ತಿನ ಬೆಳವಣಿಗೆಯಾಗುವುದು ನಿಜಕ್ಕೂ ಸುಲಭಸಾಧ್ಯವಲ್ಲ. ಶ್ರಮಿಸಿಯೇ ತೀರಬೇಕು. ಕಷ್ಟಪಟ್ಟು ಅಧ್ಯಯನ ಮಾಡಿ ಸಾಧಿಸಬೇಕು; ಕ್ರಿಯಾಶೀಲರಾಗಿ ಸಾಧಿಸಬೇಕು; ಪ್ರಾಯೋಗಿಕವಾಗಿ ಸಾಧಿಸಬೇಕು. ಯಾವ ಜನಾಂಗವು ತನ್ನ ಕಾಲದಲ್ಲಿ ಈ ನಿಯಮದನುಸಾರ ನಡೆದಿದೆಯೋ ಅದು ಜ್ಞಾನಸಂಪತ್ತಿನ ಗಳಿಕೆಯಲ್ಲಿ ಒಳ್ಳೆಯ ಸ್ಥಾನವನ್ನು ಪಡೆದಿದೆ. ಇದು ಅನುಭವದ ಮಾತು. ತದ್ಭಿನ್ನವಾದ ಜನಾಂಗವು ಅಧೋಮುಖವಾಗಿರುತ್ತೆ. ಜಗತ್ತಿನ ಇತಿಹಾಸದ ಅವಲೋಕನದಿಂದ ಪ್ರಬುದ್ಧ ಅವಸ್ಥೆಯಲ್ಲಿದ್ದ ಜ್ಞಾನದ ಪರಮಾವಧಿಯನ್ನು ಮುಟ್ಟಿದ್ದ ಜನಾಂಗಗಳಲ್ಲಿನ ಚಟುವಟಿಕೆಗಳ ಪರಿಶೀಲನೆಯಿಂದ ಒಂದು ಸಿದ್ಧಾಂತ ರೂಪುಗೊಳ್ಳುತ್ತದೆ–ಯಾವ ಯಾವ ಜನಾಂಗವು ಅಧ್ಯಯನದಲ್ಲಿ ಅಭ್ಯಾಸದಲ್ಲಿ ವಿಶೇಷ ಆಸ್ಥೆ ವಹಿಸಿದೆಯೋ, ಪರಿಶ್ರಮಿಸಿದೆಯೋ, ಸಾಧನೆ ಎನ್ನುವುದನ್ನೇ

ಮುಖ್ಯವಾಗಿಟ್ಟುಕೊಂಡು ಕೆಲಸ ಮಾಡಿದೆಯೋ ಅಂತಹ ಜನಾಂಗವು ಉತ್ತಮಜ್ಞಾನಸಂಪತ್ತನ್ನು ಬೆಳೆಸಿಕೊಂಡಿದೆ. ತದ್ಭಿನ್ನ ದೇಶದ ಜನಾಂಗವು ವಿದ್ಯಾರ್ಥಿ ಪ್ರಪಂಚವು ಯೋಗ್ಯರೀತಿಯಲ್ಲಿ ಸಾಧನೆ ಮಾಡುತ್ತಿಲ್ಲ; ಸಾಕಷ್ಟು ಗಮನಕೊಡುತ್ತಿಲ್ಲ; ಅನ್ವೇಷಣೆ ಮಾಡುತ್ತಿಲ್ಲ. ಪರಿಣಾಮವಾಗಿ ಜ್ಞಾನಸಂಪತ್ತಿನ ಬೆಳವಣಿಗೆ ಮೊಟಕಾಗಿದೆ : ಕೃತಕವಾಗಿದೆ; ಕೃಶವಾಗಿದೆ. ಮೃತ್ಯುಸಂತರಣಕ್ಕಾಗಿ ಲೌಕಿಕವಿದ್ಯೆ, ಅಮೃತತ್ತ್ವಕ್ಕಾಗಿ ಪಾರಮಾರ್ಥಿಕ ವಿದ್ಯೆ; ಎರಡೂ ಅವಿನಾಭಾವದಿಂದಲೇ ಬೆಳೆಯುತ್ತ ದೇಶ, ಕಾಲಗಳಿಗೆ ಹೊಂದಿಕೆಯಾಗುವಂತೆ ಹೋದಾಗ ಮಾತ್ರ ಇಂದಿನ ಜಗತ್ತಿನಲ್ಲಿ ಸುಖಸಂತೃಪ್ತಿಯಿಂದ ಮನುಷ್ಯ ಬಾಳಬಹುದು. ಇಲ್ಲದಿದ್ದರೆ ಏನೆಲ್ಲ ಇದ್ದರೂ ಮನುಷ್ಯ ದರಿದ್ರನೇ. (ಡಿಸೆಂಬರ್ ೧೯೭೫)

## ೧೧. ಧರ್ಮ

ಇಂದು ಧರ್ಮಶ್ರದ್ಧೆ ಕ್ಷೀಣಿಸುತ್ತಿದೆ ಎಂಬ ಮಾತು ಸರ್ವತ್ರ ಕೇಳಿಬರುತ್ತಿದೆ. ಈ ಆಕ್ಷೇಪಣೆಯ ಸತ್ಯಾಸತ್ಯಗಳ ಪರಿಶೀಲನೆ ಅಗತ್ಯವಾಗಿದೆ. ಧರ್ಮಶ್ರದ್ಧೆ ಕಡಿಮೆಯಾಗುತ್ತಿರುವುದು ಪ್ರಧಾನವಾಗಿ ಎರಡು ರೂಪದಲ್ಲಿ ವಿಶ್ಲೇಷಿಸಲ್ಪಡುತ್ತದೆ. ಒಂದು ಗುಂಪಿನ ಜನಾಂಗ ಮುಗ್ಧರು ; ಅನಕ್ಷರಸ್ಥ ಬಂಧುಗಳು. 'ಧರ್ಮ' ಎಂಬುದನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿಲ್ಲದವರು. ಈ ಬಗೆಯ ಜನತೆ ಧರ್ಮದತ್ತ ಒಲವು ಉಳ್ಳವರಾಗಿದ್ದರೂ, ಧರ್ಮವೆಂದರೆ, ಅದೊಂದು ಅದ್ಭುತವಾದ ಜೀವನ ವಿಧಾನ, ಅತ್ಯಂತ ಕ್ಲಿಷ್ಟವಾದ ತತ್ತ್ವ, ಜನಸಾಮಾನ್ಯರಿಗೆ ಎಟುಕದ ಒಂದು ಮಹಾನ್‌ಸ್ಥಳ, ಇತ್ಯಾದಿಯಾದ ತಪ್ಪು ಕಲ್ಪನೆಯುಳ್ಳವರಾಗಿದ್ದಾರೆ. ಈ ಭಾವನೆಯ ಬಂಧನದಲ್ಲಿ ಸಿಲುಕಿ ಧರ್ಮವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನೇ ಅವರು ಮಾಡಿಲ್ಲ. ಇನ್ನೊಂದು ಗುಂಪಿನ ಜನ ಸುಶಿಕ್ಷಿತರು, ವೈಚಾರಿಕತೆಯುಳ್ಳವರು, ಆಲೋಚನಾಪರರು, ಧರ್ಮದಸ್ವರೂಪವನ್ನು ಅರ್ಥಮಾಡಿಕೊಳ್ಳಬಲ್ಲವರು. ದುರ್ದೈವವಶಾತ್ ಈ ಬಗೆಯ ಜನತೆ ಧರ್ಮದ ಬಗ್ಗೆ ಉದಾಸೀನ ಭಾವವನ್ನು ತಳೆದಿದ್ದಾರೆ. ಧರ್ಮದ ಬಗ್ಗೆ ಯಾವುದೇ ತೆರನಾದ ಆಸ್ಥೆಯುಳ್ಳವರಾಗಿಲ್ಲ: ಮಾತ್ರವಲ್ಲ ಧರ್ಮದಲ್ಲಿನ ಇತರೆಯವರ ನಂಬಿಕೆಯನ್ನೂ ಸಡಿಲಗೊಳಿಸುತ್ತಿದ್ದಾರೆ. ಇದು ದೇಶಕ್ಕೆ, ಇಡೀ ಮಾನವ ಜನಾಂಗಕ್ಕೆ ಅಪಾಯಕಾರಿ. ಮೊದಲನೇ ಗುಂಪಿನ ಅರಿಯದ ಮುಗ್ಧ ಜನತೆಗೆ ಧರ್ಮಬೋಧಕರು ಒಂದು ವಿಷಯವನ್ನು ಸಾರಿ ಸಾರಿ ಹೇಳಬೇಕು, ಒತ್ತಾಯವಾಗಿ ತಿಳಿಸಬೇಕು. ಈ ಬಗ್ಗೆ ಅವರಲ್ಲಿ ವಿಶ್ವಾಸ ಮೂಡಿಸುವುದಾಗಬೇಕು. ಯಾವುದು ಆ ವಿಷಯ ? ಎಂದರೆ : ಧರ್ಮವು ನಿತ್ಯಜೀವನದಿಂದ ಹೊರತಲ್ಲ : ಸಾಮಾನ್ಯರ ಬದುಕಿನ ಬೆನ್ನೆಲುಬು ; ಬೆಳಗಿನಿಂದ ಸಂಜೆಯವರಿಗೆ ಸಾಗುವ, ಈ ಸಮಾಜ ವ್ಯವಹಾರಗಳ, ಆಗುಹೋಗುಗಳ ಜೀವಾಳವೇ ಅದಾಗಿದೆ ಎನ್ನುವುದು. ವ್ಯಕ್ತಿ ತಾನು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡು ಹಸನಾಗಿ ಬಾಳಲು ಸಹಕರಿಸುವ ನಡವಳಿಕೆ ಯಾವುದುಂಟೋ ಅದೇ ಧರ್ಮ. ಮಾನವ ಜೀವನವನ್ನು ಆ ತರದ ನಡೆ ಅರ್ಥಪೂರ್ಣವನ್ನಾಗಿ ಮಾರ್ಪಡಿಸುತ್ತದೆ. ಮಾನವನ ಬದುಕಿಗೆ ಒಂದು ಗುರಿಯನ್ನು ತಂದುಕೊಡುತ್ತದೆ. ಅದರ ಅನುಸರಣೆಗೆ ಯಾವ ವಿಶೇಷ ತತ್ತ್ವಜ್ಞಾನವೂ ಬೇಕಿಲ್ಲ. ಅಧಿಕಾಧಿಕ ಅಧ್ಯಯನ ಅಗತ್ಯವಿಲ್ಲ. ಈ ವಿಚಾರ ಸ್ಪಷ್ಟವಾಗಬೇಕು. ಇನ್ನು ವಿಚಾರಶಕ್ತಿಯುಳ್ಳ ಗುಂಪು ಧರ್ಮದತ್ತ ಒಲವು ವಿಶ್ವಾಸಗಳನ್ನು ಬೆಳೆಸಿಕೊಳ್ಳಬೇಕು. ಆ ಬಗೆಗಿನ ತಮ್ಮ ಔದಾಸೀನ್ಯ ಮನೋಭಾವವನ್ನು ತೊಲಗಿಸುವತ್ತ ಶೀಘ್ರ ಶ್ರಮಿಸಬೇಕು. ಇದು ಮಾನವ ಕಲ್ಯಾಣಕ್ಕೆ ನಾಂದಿ. (ಜನವರಿ ೧೯೭೬)

## ೧೨. ಆತ್ಮವಿಕಾಸ

ಕರ್ಮ ಅನಿವಾರ್ಯ. ಮಾಡಲೇಬೇಕು. ಆದರೆ ಕರ್ಮದ ಫಲವನ್ನು ಅಪೇಕ್ಷಿಸಬಾರದು. ಫಲಾಪೇಕ್ಷೆಯು ಸ್ವಾರ್ಥಸಲ್ಲದು. ಇದನ್ನೇ ಗೀತೆಯಲ್ಲಿ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬುದಾಗಿ ಬೋಧಿಸಲಾಗಿದೆ. ಭಗವಂತನ ಮೇಲೆ ಭಾರಹಾಕಿ ಕರ್ಮದಲ್ಲಿ ತೊಡಗಬೇಕು. ಕರ್ಮ ಮಾಡಲಷ್ಟೇ ನಮಗೆ ಅಧಿಕಾರವುಂಟು. ಫಲವನ್ನು ಅಪೇಕ್ಷಿಸುವ ಅಧಿಕಾರ ನಮಗಿಲ್ಲ. ಅಲ್ಲದೆ ಮಾನವಜನ್ಮ ಅಲಭ್ಯಲಾಭ : ಕೇವಲ ಪುಣ್ಯಸಂಚಯದಿಂದ ಪಡೆಯಬಹುದಾದದ್ದು. ಜೀವನವು ಕ್ರಿಯಾಶೀಲ ಕರ್ತವ್ಯನಿಷ್ಠ ಹಾಗೂ ದೃಢಸಂಕಲ್ಪವುಳ್ಳದ್ದಾಗಿರಬೇಕು. ಕರ್ಮದ ಹಿಂದೆ ಫಲ ತಾನಾಗಿಯೇ ಬರುತ್ತದೆ ಅಥವಾ ಕರ್ಮದ ಪ್ರಾಬಲ್ಯವೇ ಫಲವನ್ನು ಆತನಲ್ಲಿಗೆ ಎಳೆದುಕೊಂಡು ಬರುತ್ತದೆ. ಕರ್ಮ ಎಂದರೆ ಇಲ್ಲಿ ವಿಶಾಲಾರ್ಥದಲ್ಲಿ ಬಳಸುವ ಪದ. ಶಿವಶರಣರು ಇದನ್ನು 'ಕ್ರೀ' ಎಂದೂ, 'ಕ್ರಿಯೆ'ಯೆಂದೂ, 'ಕಾಯಕ'ವೆಂದೂ ಕರೆದಿದ್ದಾರೆ. ಇದು ನಿಯತಿ ನಿಯಮ. ಕರ್ತವ್ಯಕ್ಕೆ ತಕ್ಕ ಪ್ರತಿಫಲ ಇದ್ದೇ ಇರುತ್ತದೆ. ಉದಾಹರಣೆಗೆ ದುಡಿಯುವ ವ್ಯಕ್ತಿಗೆ ವೇತನ ರೂಪದ ಪ್ರತಿಫಲ ದೊರೆಯುತ್ತದೆ. ಕರ್ತವ್ಯಪರನಾದ ವಿದ್ಯಾರ್ಥಿಗೆ ಅವನ ಅಪೇಕ್ಷಿತ ಫಲವಾದ ಉತ್ತೀರ್ಣತೆ ಸುಲಭ ಗ್ರಾಹ್ಯ. ನಿರಂತರ ಅಭ್ಯಾಸ ನಿರತನಾದವನು ಫಲದ ಬಗ್ಗೆ ಚಿಂತಿಸಬೇಕೇಕೆ ? ಅದಕ್ಕಾಗಿ ಕಾಲಹರಣ ಸಲ್ಲದು. ಬೇರಾವ ಜೀವ ಜಂತುಗಳಿಗೂ ಸಿಗಲಾರದಂಥ ಮಹಾಫಲ ಮಾನವ ಜನ್ಮ, ಅಂತಹ ಪವಿತ್ರಮಯ ಜನ್ಮದ ಸಾರ್ಥಕ್ಯಕ್ಕಾಗಿ ಮಾನವನು ಸದಾಚಾರಸಾಧಕನಾಗಬೇಕು. ಅವನ ಯೋಚನೆಗಳು ಪವಿತ್ರವಾಗಬೇಕು. ಯೋಜನೆಗಳು ಅರ್ಥಪೂರ್ಣವಾಗಿರಬೇಕು. ಯೋಚನೆ, ಯೋಜನೆ

ಗಳು ಶುದ್ಧವಾಗಿರದ ಹೊರತು ಕೃತಿ ಶುದ್ಧವಾಗದು. ಪ್ರಯುಕ್ತ ಮಾನವನು ನಿರಂತರ ಚಿಂತನಶೀಲನಾಗಬೇಕು. ಸತ್ ಚಿಂತನೆಯ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕು. ಆಗ ಮಾತ್ರ ಆತ್ಮವಿಕಾಸಕ್ಕೆ ಎಡೆಯುಂಟು, ಸತ್ ಚಿಂತನೆಯ ಫಲವಾಗಿ ಅಂತಃಶಕ್ತಿ ಮತ್ತು ಬಾಹ್ಯಶಕ್ತಿಗಳೆರಡನ್ನೂ ಅರ್ಜಿಸಿದಂತಾಗುತ್ತದೆ. ಅಂತಃಶಕ್ತಿಯ ವೃದ್ಧಿಯೇ ಆತ್ಮವಿಕಾಸ; ಬಾಹ್ಯ ಶಕ್ತಿಯ ಅರ್ಜನೆಯೇ ಪ್ರಫುಲ್ಲಚಿತ್ತತೆಯನ್ನು ಹೊಂದಲನುವಾಗುವ ದೈಹಿಕ ಆರೋಗ್ಯ. ಇವೆರಡೂ ಬಗೆಯ ಶಕ್ತಿಗಳ ಗಳಿಕೆಯಿಂದ ಮಾನವನ ಸರ್ವತೋಮುಖ ಬೆಳವಣಿಗೆ ಸಾಧ್ಯ. ವಿಚಾರವಂತರನೇಕರ ನುಡಿಗಳು ಇದನ್ನೇ ಸಾರಿ ಸಾರಿ ಹೇಳುತ್ತವೆ. ಸ್ವಪ್ನ ಸೃಷ್ಟಿ ಯೋಜನೆಗಳಲ್ಲಿ ಅರ್ಥವಿಲ್ಲದ ಯೋಜನೆಗಳು ಮೊದಲಾದುವುಗಳಲ್ಲಿ ಕಾಲಹರಣ ಮಾಡುವ ಮನುಷ್ಯನ ಕ್ರಿಯೆಗೆ ಶಕ್ತಿ ಬರುವುದಿಲ್ಲ. ಅವನ ಬಾಳು ಬರಡಾಗುವುದು. ಅವನ ಪಾಲಿಗೆ ಸುಖವೆಂಬುದು ಕನ್ನಡಿಯ ಫಲವೇ ಹೊರತು ಪ್ರತ್ಯಕ್ಷ ಫಲವೇನೂ ಅಲ್ಲ. (ಫೆಬ್ರುವರಿ ೧೯೭೬)

## ೧೩. ಆಂತರಿಕ ಸೌಂದರ್ಯ

ಇಂದಿನ ಜಗತ್ತಿನ ಮಾನವ ಜನಾಂಗ ಹಲವಾರು ಪ್ರಗತಿಗಳನ್ನು ಸಾಧಿಸಿದೆ. ವೈಜ್ಞಾನಿಕ ಬುದ್ಧಿಯನ್ನು ಊಹಾತೀತ ರೀತಿಯಲ್ಲಿ ಬೆಳೆಸಿಕೊಂಡು ಪ್ರಕೃತಿಯ ಅನೇಕ ನಿಗೂಢಗಳನ್ನು ಬಿಚ್ಚಿ ಬಯಲುಮಾಡಿದೆ. ಸಾಹಸದಿಂದ ಅಂತರಿಕ್ಷದಲ್ಲಿ ಹಾರಿ ಚಂದ್ರಮಂಡಲವನ್ನು ಸುತ್ತಿ, ಪುನಃ ಭೂಮಿಗಿಳಿದಿದೆ. ಅನೇಕ ಬಗೆಯಲ್ಲಿ ಪ್ರಾಕೃತಿಕ ಜಗತ್ತಿನ ವಿಶ್ಲೇಷಣೆ ನಡೆಸಿದೆ. ತಾನು ವಾಸಿಸುತ್ತಿರುವ ಭೂಗೋಳವನ್ನು ಅತ್ಯಂತ ಚಿಕ್ಕದು ಕಾಣುವಂತೆ ಮಾಡಿದೆ. ಭೌತಿಕ ಪ್ರಪಂಚದ ಮೀಮಾಂಸೆಯನ್ನು ಬೌದ್ಧಿಕ ಶಕ್ತಿಯ ಪ್ರಕರ್ಷದಿಂದ ಮಾಡಿ ಮುಂಬರುವ ಜನಾಂಗದ ಸುಖಸಾಧನೆಗಳಿಗೆ ಮಾರ್ಗದರ್ಶನ ಮಾಡಿದೆ. ಏನೆಲ್ಲವನ್ನೂ ಸಾಧಿಸಿದೆ. ಆದರೂ ಇಂದು ಜಗತ್ತಿನಲ್ಲಿ ತಲೆದೋರುತ್ತಿರುವ ಅನೇಕ ಸಮಸ್ಯೆಗಳ ಪರಿಹಾರದತ್ತ ವಿಮುಖಗೊಳ್ಳಹತ್ತಿದೆ. ರಾಷ್ಟ್ರಗಳ ಬಾಂಧವ್ಯವೇರ್ಪಡುವುದಕ್ಕೆ ಪ್ರತಿಯಾಗಿ ದ್ವೇಷಾಸೂಯೆಗಳು, ಬಡವ ಶ್ರೀಮಂತಿಕೆಯ ಭೇದಭಾವಗಳು, ವರ್ಣದ್ವೇಷಗಳು—ಇವೇ ಮೊದಲಾದವುಗಳು ಬೆಳೆಯಹತ್ತಿವೆ. ಈ ಎಲ್ಲ ಸಮಸ್ಯೆಗಳಿಗೆ ಕಾರಣವೇನು ? ಇವುಗಳನ್ನು ಬಗೆಹರಿಸಿ ಎಲ್ಲಾ ರಾಷ್ಟ್ರಗಳೂ ಸಹೋದರಭಾವದಿಂದ, ಪರಸ್ಪರ ಮೈತ್ರಿಯಿಂದ ಬಾಳಲು ಪ್ರತಿಬಂಧಕವಾಗಿರುವ ಅಂಶವಾವುದು ? ಎಂಬ ವಿಚಾರದಲ್ಲಿ ವಿಶ್ಲೇಷಣೆ ನಡೆಸಿದಾಗ ಮುಖ್ಯವಾಗಿ ಎದ್ದು ಕಾಣುವ ಅಂಶವೊಂದು ಗೋಚರಿಸುತ್ತದೆ. ಅದುವೇ ಅಂತರಿಕ ಸೌಂದರ್ಯದಿಂದ ನಾವು ಕೆಳಗಿಳಿದಿರುವುದು. ಬುದ್ಧಿಶಕ್ತಿಯಿಂದ ನಾವೆಲ್ಲ ಮೇಲೇರಿ ನಿಂತಿದ್ದರೂ ಆಂತರಿಕವಾಗಿ ಹೊರಹೊಮ್ಮಬೇಕಾದ ಆಧ್ಯಾತ್ಮಿಕ ಸೌಂದರ್ಯಾಭಾವವೇ ವ್ಯಕ್ತಿವ್ಯಕ್ತಿಗಳ, ರಾಷ್ಟ್ರರಾಷ್ಟ್ರಗಳ, ದ್ವೇಷಾಸೂಯೆಗಳಿಗೆ ಕಾರಣವಾಗಿದೆ, ಎಂದು ಹೇಳಬಹುದಾಗಿದೆ. ಮನುಷ್ಯಜೀವನಕ್ಕೆ ಮುಖ್ಯವಾಗಿ ಎರಡು ಮುಖಗಳುಂಟು. ಒಂದು ಆಂತರಿಕ ಸೌಂದರ್ಯ, ಇನ್ನೊಂದು ಬಾಹ್ಯಸೌಂದರ್ಯ. ಅಂತರಿಕ ಸೌಂದರ್ಯ ಬೆಳಕಿನಿಂದ ಕೂಡಿದಾಗ ಹೊರಗೂ ಬೆಳಕುಂಟಾಗಿ ಸೃಷ್ಟಿಯೆಲ್ಲ ಸುಂದರವಾಗಿ ಕಾಣುತ್ತದೆ. ಅಲ್ಲಿ ಸಲ್ಲುವವರು ಇಲ್ಲಿಯೂ ಸಲ್ಲುತ್ತಾರೆ. ಆಂತರಿಕವಾಗಿ ಸಲ್ಲುವವರು; ಬಾಹ್ಯದಲ್ಲೂ ಸಲ್ಲುತ್ತಾರೆ. ಆಗ ಅವನ ಬಾಳು ನಿರ್ಭಯ, ಸುಂದರ, ಪರಿಪೂರ್ಣ. ಈ ತತ್ತ್ವದತ್ತ ಇಂದಿನ ಜನಾಂಗ ಔದಾಸೀನ್ಯ ತಾಳಿದೆ. ಅಪಾರ ಮಾರಕಾಸ್ತ್ರಗಳ ಪ್ರಾಬಲ್ಯದಿಂದ ಕೂಡಿದ ಇಂದಿನ ಜಗತ್ತು ತನ್ನ ನಾಶವನ್ನು ತಾನೇ ಮಾಡಿಕೊಳ್ಳುವತ್ತ ಸಾಗಿದೆ. ಎಲ್ಲೆಲ್ಲೂ ಅಪನಂಬಿಕೆ, ಭಯ, ಭ್ರಾಂತಿಗಳಿಂದ ತಲ್ಲಣಗೊಳ್ಳುತ್ತಿದೆ. ಪರಮಾತ್ಮನಿಂದ ಲಭ್ಯವಾಗಿರುವ ಈ ಭೌತಿಕ ಜಗತ್ತಿನ ಸೌಂದರ್ಯವನ್ನು ಹಾಳುಮಾಡಿ, ಪ್ರಸಾದ ಕಾಯದ ಪರಿಪೂರ್ಣಲಾಭಮಾಡಿಕೊಳ್ಳದೆ ತನ್ನನ್ನೆ ತಾನು ಹಾಳುಮಾಡಿಕೊಳ್ಳುತ್ತದೆಂದು ಹೇಳದೆ ವಿಧಿಯಿಲ್ಲ. ಇಂಥ ಜಗತ್ತಿನ ಅಶಾಂತಿಯನ್ನು ಬದಿಗೊತ್ತಿ ಶಾಂತಿಸ್ಥಾಪನೆಗೆ ಅನೇಕ ಮುತ್ಸದ್ದಿಗಳು ಪ್ರಯತ್ನಿಸುತ್ತಿದ್ದಾರೆ. ಅವರ ಪ್ರಯತ್ನವು ಯಶಸ್ಸನ್ನು ಪಡೆಯಲೆಂದೂ, ಜಗತ್ತಿನ ಶಕ್ತಿವಂತ ರಾಷ್ಟ್ರಗಳು ತಮ್ಮ ಶಕ್ತಿಯ ವಿಷಯದಲ್ಲಿಯೇ ಪೂರ್ಣನಂಬಿಕೆಯಿಟ್ಟು ಅದರಿಂದಲೇ ಸುಖ ಪಡೆಯುತ್ತೇವೆಂಬ ಮಿಥ್ಯಾನಂಬುಕೆಗಿಂತ ಅಧ್ಯಾತ್ಮಿಕವಾಗಿ ಹೊರಹೊಮ್ಮುವ ಶಾಂತಿ, ಸುಹೃದ್ಭಾವಗಳ ಬೆಳವಣಿಗೆಯನ್ನು ಮಾಡಿ, ಇಂದು ಸಂಪಾದಿಸಿರುವ ಶಕ್ತಿಯನ್ನು ಮಾನವಕೋಟಿಯ ಸುಖಸೌಲಭ್ಯಕ್ಕೆ ವಿನಿಯೋಗಿಸಿ ಸುಖಿಸಲೆಂದು ಹಾರೈಸುತ್ತೇವೆ. (ಮಾರ್ಚ್ ೧೯೭೬)

## ೧೪. ಸಮಯ ಪ್ರಜ್ಞೆ

ಕಾಲ ಅತ್ಯಮೂಲ್ಯವಾದದ್ದು. ಅದಕ್ಕಾಗಿಯೇ 'ಮುತ್ತು ಕಳೆದರೆ ಸಿಕ್ಕೀತು; ಹೊತ್ತು ಕಳೆದರೆ ಸಿಕ್ಕೀತೆ' ? ಎಂಬುದಾಗಿ ತಿಳಿದವರು ಪ್ರಶ್ನಿಸಿದ್ದಾರೆ. ಸಮಯ ಹೇಗೆ ಬೆಲೆಬಾಳತಕ್ಕದ್ದೋ ಹಾಗೇ ಏಕ ರೀತಿಯದೂ ಆಗಿದೆ. ಅಂದರೆ ವಿದ್ಯಾರ್ಥಿಗಳಿಗೆ ಪರೀಕ್ಷಾ ಸಮಯಮಾತ್ರ ಅತ್ಯಮೂಲ್ಯವಾದುದು; ವರ್ಷಾವಧಿಯ ಉಳಿದ ಸಮಯ ಮಹತ್ವದ್ದಲ್ಲ. ಎಂಬುದು ತಪ್ಪು ಅಭಿಪ್ರಾಯವಾಗಿರುತ್ತದೆ. ಎಲ್ಲ ಸಮಯವೂ ಏಕರೀತಿಯ ಮೌಲ್ಯ ಅಥವಾ ಮಹತ್ವವುಳ್ಳದ್ದು. ಆದರೆ ಇಂದಿನ ಬಹುತೇಕ ವಿದ್ಯಾರ್ಥಿಗಳ ಧೋರಣೆ ಇದಕ್ಕೆ ವಿರುದ್ಧವಾದುದು. 'ಯುದ್ಧಕಾಲೇ ಶಸ್ತ್ರಾಭ್ಯಾಸಃ' ಎಂಬುದು ಇಂದಿನ ವಿದ್ಯಾರ್ಥಿಗಳ

ಮನೋಭಾವವಾಗಿದೆ. ಈ ವಿಚಾರವು ಕೇವಲ ವಿದ್ಯಾರ್ಥಿ ಸಮುದಾಯಕ್ಕೆ ಸೀಮಿತವಲ್ಲ. ಎಲ್ಲ ಬಗೆಯ ಮತ್ತು ಎಲ್ಲ ವರ್ಗದ ಜನರಲ್ಲಿಯೂ ಈ ಭಾವನೆ ಬಂದಿರುವುದು ಖೇದಕರ. ಅತ್ಯಮೂಲ್ಯವಾದ ಸಮಯವನ್ನು ಸದುಪಯೋಗ ಪಡಿಸಿಕೊಳ್ಳಲಿ, ಬಿಡಲಿ ಅದು ನಮ್ಮ ಪಾಲಿಗೆ ಎಂದೆಂದಿಗೂ ವ್ಯಯವಾಯಿತೆಂದೇ ತಿಳಿಯಬೇಕು. ಸದ್ವಿನಿಯೋಗವಾದಾಗ ಮಾತ್ರ ಅದಕ್ಕೆ ಸಾರ್ಥಕತೆ; ಇಲ್ಲವಾದಲ್ಲಿ ಅದು ವ್ಯಯವಾದಂತೆಯೇ ಸರಿ. ಹಣ ಖರ್ಚಾದರೆ ಪುನಃ ಅರ್ಜಿಸಬಹುದು. ಆದರೆ ಕ್ಷಣ ಜಾರಿದರೆ ಪುನರಾಗಮಿಸದು. ನಮ್ಮ ನಿತ್ಯದ ಚಿಂತನೆ ಕಾಲದ ಸದುಪಯೋಗವಾಯಿತೇ ? ಅಥವಾ ಇಲ್ಲವೇ ? ಎಂಬುದಾದರೆ ಮಾತ್ರ ಕಾಲದ ಬೆಲೆ ಅರಿಯಲು ಸಾಧ್ಯವಾಗುತ್ತದೆ. ಪ್ರತಿ ಕ್ಷಣವನ್ನೂ ಸದುಪಯೋಗಪಡಿಸಿಕೊಳ್ಳಲು ಸಹಾಯಕವಾಗುತ್ತದೆ. ಒಂದೇ ಸಮಯದಲ್ಲಿ ಒಬ್ಬ ವ್ಯಕ್ತಿ ಮಹತ್ಕಾರ್ಯವನ್ನೆಸಗುತ್ತಾನೆ, ಅವನಿಗೆ ಯಶಸ್ಸಿನ ಫಲ ದೊರೆಯುತ್ತದೆ. ಇನ್ನೊಬ್ಬ ದುಷ್ಕೃತ್ಯವೆಸಗುತ್ತಾನೆ ಮತ್ತು ಅಪಯಶಸ್ಸನ್ನು ಹೊಂದುತ್ತಾನೆ: ಮತ್ತೊಬ್ಬ ಆಗ ನಿಷ್ಕ್ರಿಯನಾಗಿಯೇ ಕುಳಿತಿರುತ್ತಾನೆ. ಅವನು ಲೋಕಕ್ಕೂ ಹೊರೆ; ಅಷ್ಟೇ ಏಕೆ ತನಗೆ ತಾನೇ ಹೊರೆ, ಈ ತತ್ತ್ವವನ್ನು ಅರ್ಥಮಾಡಿಕೊಂಡು ಯಶಸ್ಸಿಗಾಗಿ ಸಮಯವನ್ನು ವ್ಯಯಮಾಡಿದವನ ಕೀರ್ತಿ ಅಜರಾಮರವಾಗುತ್ತದೆಂದು ಪರಿಭಾವಿಸಿ ಜೀವನ ನಡೆಸಬೇಕು. ಇದೇ ಮನುಷ್ಯನಾಗಿ ಹುಟ್ಟಿದುದಕ್ಕೆ ಸಾರ್ಥಕ. ಉಳಿದುದೆಲ್ಲ ವ್ಯರ್ಥ. ಸಮಯ ಯಾರನ್ನೂ ಕಾಯುವುದಿಲ್ಲ, Time and tide wait for no man. ಅದು ಬಂದೇ ಬರುತ್ತದೆ. ಅದರ ಸದುಪಯೋಗ ವಿವೇಕಿಗಳ ಲಕ್ಷಣ. ಜೀವನದ ಪ್ರತಿಕ್ಷಣವೂ ಮಹತ್ತರವಾದುದು ಎಂದು ತಿಳಿಯದ ಹೊರತು ಕಾಲದ ಸದುಪಯೋಗ ಸಾಧ್ಯವಿಲ್ಲವಾಗುತ್ತದೆ. (ಏಪ್ರಿಲ್ ೧೯೭೬)

## ೧೫. ಪಿಂಡಬ್ರಹ್ಮಾಂಡಯೋರೈಕ್ಯಂ

ವಿಜ್ಞಾನ ಮತ್ತು ಧರ್ಮ ಬೇರೆ ಬೇರೆ ಎಂಬುದು ಕೆಲವರ ವಾದ. ಮತ್ತೆ ಕೆಲವರು ಧರ್ಮವು ವಿಜ್ಞಾನಕ್ಕೆ ಪೂರಕವೆಂದು ಅಭಿಪ್ರಾಯಪಡುತ್ತಾರೆ. ಅವೆರಡೂ ಪೂರ್ವಪಶ್ಚಿಮಗಳೇನೂ ಅಲ್ಲ, ಎರಡರ ಗುರಿಯೂ ಸತ್ಯದ ಸಾಕ್ಷಾತ್ಕಾರ. ಧರ್ಮ ಮತ್ತು ವಿಜ್ಞಾನಗಳ ಮಾರ್ಗಾನುಸರಣೆ ಬೇರೆ ಬೇರೆ ಇರಬಹುದು. ಆದರೆ ಗುರಿಯೊಂದೇ. ದೇವಸೃಷ್ಟಿಯ ನಿಗೂಢ ತತ್ತ್ವಗಳನ್ನು ಅರ್ಥಮಾಡಿಕೊಂಡು ಮಾನವನ ಸುಖಕ್ಕಾಗಿ ಅವನ್ನು ವ್ಯವಸ್ಥೆ ಮಾಡಿಕೊಳ್ಳುವುದು ವಿಜ್ಞಾನದ ಉದ್ದೇಶ. ಇಲ್ಲದ್ದನ್ನು ಯಾರೂ ಸೃಷ್ಟಿಸಿಲ್ಲ. ಯಾರೂ ಸೃಷ್ಟಿಕರ್ತರಲ್ಲ, ನ್ಯೂಟನ್ ಗುರುತ್ವಾಕರ್ಷಣ ಬಲವನ್ನು ಸೃಷ್ಟಿಸಲಿಲ್ಲ. ಇದ್ದ ಶಕ್ತಿಯನ್ನು ಕಂಡುಕೊಂಡು ಇತರರ ಅರಿವಿಗೆ ಅದನ್ನು ತಂದನು. ಪರಮಾತ್ಮನ ಸೃಷ್ಟಿಯಲ್ಲಿರುವ ಶಕ್ತಿಗಳನ್ನು ಸಂಶೋಧಿಸುವ ವಿಜ್ಞಾನಿಗಳಿಗೆ ಪ್ರಾಯಃ ಬಾಹ್ಯದೃಷ್ಟಿ ಮಾತ್ರ ಉಂಟು. ಸತ್ಯಾನ್ವೇಷಣೆಯ ಧ್ಯೇಯ ಸಾಧನೆಯಲ್ಲಿ ತೊಡಗಿರುವ ಧಾರ್ಮಿಕರು ಅಂತರ್ದೃಷ್ಟಿಯುಳ್ಳವರು. ಆದರೂ ಗುರಿಸಾಧನೆಯ ಏಕತೆಯ ದೃಷ್ಟಿಯಲ್ಲಿ ವಿಜ್ಞಾನ ಮತ್ತು ಧರ್ಮಗಳೆರಡೂ ಸಾಮ್ಯವುಳ್ಳವು. ಹಿಂದೊಂದು ಕಾಲದಲ್ಲಿ ಸತ್ಯವೆನಿಸಿದ್ದ ವೈಜ್ಞಾನಿಕ ಅಭಿಪ್ರಾಯ ಇಂದು ತನ್ನ ಮೌಲ್ಯ ಕಳೆದುಕೊಂಡಿರಲೂ ಸಾಧ್ಯ. ಉದಾಹರಣೆಗೆ ವೈಜ್ಞಾನಿಕ ಪ್ರಪಂಚದಲ್ಲಿ ಈ ಹಿಂದೆ 'Matter has weight' ಎಂದರಿತಿದ್ದ ನಾವು ಇಂದು 'Matter is nothing but energy ; Matter and energy are interconvertible' ಎಂಬುದಾಗಿ ಅರಿತಿದ್ದೇವೆ. ವಿಜ್ಞಾನಿಗಳೂ ಸಹ ಎಲ್ಲಕ್ಕೂ ಅವ್ಯಕ್ತವಾದ ಒಂದು ಶಕ್ತಿಯ ಕೈವಾಡವಿದ್ದೇ ಇದೆ ಎಂದು ನಂಬಿದ್ದಾರೆ. ಅದು ಪರಮಾಣು ಶಕ್ತಿಯ ರೂಪವೇ ಆಗಿರಲಿ. ಬೇರೆಯ ರೂಪದ್ದೇ ಆಗಿರಲಿ. ಶಕ್ತಿ ಅಥವಾ ಚೈತನ್ಯ ಇದೆ ಎಂಬುದು ನಿರ್ವಿವಾದ. ಧಾರ್ಮಿಕ ಪ್ರಪಂಚಕ್ಕೆ ಅದೇ ಶಕ್ತಿ ದೈವಸ್ವರೂಪವೆಂಬುದು ಗಮನಾರ್ಹವಾಗಿದೆ. ಆ ಶಕ್ತಿಗೆ ಮೂಲ ಕಾರಣವಾವುದೋ ಅದೇ ಪರದೈವ ಅದು ಬ್ರಹ್ಮಾಂಡದಲ್ಲೂ ಪೂರ್ಣವಾಗಿದೆ. ಪಿಂಡಾಂಡದಲ್ಲೂ ಪೂರ್ಣವಾಗಿದೆ 'ಪಿಂಡಬ್ರಹ್ಮಾಂಡಯೋರೈಕ್ಯಂ' ಎನಿಸಿದೆ.

(ಮೇ ೧೯೭೬)

## ೧೬. ಸ್ತ್ರೀಗೌರವ

ದೇಶ ಬೆಳೆಯಲು ಪ್ರಗತಿ ಹೊಂದಲು ಹೆಣ್ಣುಮಕ್ಕಳೂ ತಮ್ಮ ಪಾಲಿನ ಕಾಣಿಕೆಯನ್ನು ಸಲ್ಲಿಸುವುದರಲ್ಲಿ ಹಿಂದೆ ಬೀಳಬಾರದು. ಜಗತ್ತಿನಲ್ಲಿ ದೊಡ್ಡ ದೊಡ್ಡ ಮಹಾನುಭಾವರು ಅಂತಹ ದೊಡ್ಡ ಮಟ್ಟಕ್ಕೆ ಏರಬೇಕಾದರೆ ಕೆಲವರಿಗೆ ಪೂಜ್ಯಮಾತೆಯರೂ, ಕೆಲವರಿಗೆ ಧರ್ಮಪತ್ನಿಯರೂ, ಮತ್ತೆ ಕೆಲವರಿಗೆ ಸಹೋದರಿಯರೂ ಹಿಂದೆ ನಿಂತು ಎಲೆಮರೆಯ ಕಾಯಿಯಂತೆ ದುಡಿದಿದ್ದಾರೆ. ಪಾಂಡವರು, ಶಂಕರಾಚಾರ್ಯರು, ಬಸವಣ್ಣ, ಚೈತನ್ಯದೇವ, ಶಿವಾಜಿ, ವಿವೇಕಾನಂದರು, ಗಾಂಧೀಜಿ, ನೆಹರೂ ಮುಂತಾದವರ ಬದುಕನ್ನು ನೋಡಿದಾಗ ಸ್ತ್ರೀಶಕ್ತಿಯ ಕೈವಾಡವಿದ್ದೇ ಇದೆ. ಅದು ಜಗತ್ತಿನ ಮಹಾಪುರುಷರ ಜೀವನದಲ್ಲಿ ಎಂತಹ ಪಾತ್ರವಹಿಸಬಲ್ಲದು ಎಂಬ ಅರಿವುಂಟಾಗುತ್ತದೆ. ಸೀತೆ, ಸಾವಿತ್ರಿ, ದಮಯಂತಿ, ಅನಸೂಯಾ, ಕಸ್ತೂರಿಬಾಯಿ ಮುಂತಾದ ಸತೀಶಿರೋಮಣಿಗಳೂ, ಮೈತ್ರೇಯಿ, ಅಕ್ಕಮಹಾದೇವಿ, ಆಂಡಾಳ, ಭಕ್ತಮೀರಾ ಮುಂತಾದ ವಿರಕ್ತ ಸಾಧ್ವೀಮಣಿಗಳೂ, ಝಾನ್ಸಿರಾಣಿ, ಕಿತ್ತೂರುಚೆನ್ನಮ್ಮ, ಓಬವ್ವ ಮುಂತಾದ ರಣಧೀರೆಯರೂ ಜಗತ್ತಿನಲ್ಲೇ ವಿಶಿಷ್ಟವಾದ ಸ್ತ್ರೀಪರಂಪರೆಯ ಸಂಸ್ಕೃತಿಯನ್ನು ಭಾರತದಲ್ಲಿ ಬಿಟ್ಟುಹೋಗಿದ್ದಾರೆ. ಅಂತಹ ಅಮೂಲ್ಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವ ಗುರುತರ ಜವಾ

ಬ್ದಾರಿ ನಮ್ಮ ಇಂದಿನ ಹೆಣ್ಣುಮಕ್ಕಳ ಮೇಲೆ ಬಿದ್ದಿದೆ. ಆದ್ದರಿಂದ ಅವರು ತ್ಯಾಗ, ಭಕ್ತಿ, ಶ್ರದ್ಧೆ, ಸೇವಾಮನೋಭಾವ ಇವುಗಳಿಂದ ದೇಶ ಕಟ್ಟುವ ಮಹಾನುಭಾವರನ್ನು ಜಗತ್ತಿಗೆ ಕಾಣಿಕೆ ನೀಡುವ ಕರ್ತವ್ಯದಲ್ಲಿ ಸಹಭಾಗಿಗಳಾಗಬೇಕು. ಆಗ ಮಾತ್ರ ದೇಶ ತನ್ನ ಘನತೆಯನ್ನು ಉಳಿಸಿಕೊಂಡು ಪ್ರಗತಿಪಥದತ್ತ ಮುನ್ನಡೆಯಲು ಸಹಾಯಕವಾಗುತ್ತದೆ. ಅಂತೆಯೇ ಪುರುಷರು ದೇವತಾ ಸಮಾನಳಾದ ಸ್ತ್ರೀಯನ್ನು ಗೌರವಿಸುವುದನ್ನು ಕಲಿಯಬೇಕು. 'ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾ' ಎಂಬುವ ಮನುಮಹರ್ಷಿಯ ಉಕ್ತಿಯೂ ಇದೇ ಅಭಿಪ್ರಾಯವನ್ನು ಸಮರ್ಥಿಸುತ್ತದೆ. (ಮಾರ್ಚ್ ೧೯೭೭)

## ೧೭. ತ್ಯಾಗ

ಸ್ವಾತಂತ್ರ್ಯಸಮರ ಕಾಲದಲ್ಲಿ ವ್ಯಕ್ತಗೊಂಡ ಭಾರತೀಯರ ತ್ಯಾಗಬುದ್ಧಿ, ಸ್ವಾತಂತ್ರ್ಯಪ್ರಾಪ್ತಿಯ ನಂತರದ ಅವಧಿಯಲ್ಲಿ ಅದೃಶ್ಯವಾದುದು ಶೋಚನೀಯವಾದ ವಿಷಯ. ಈಗ ತ್ಯಾಗದ ಸ್ಥಾನದಲ್ಲಿ ಸ್ವಾರ್ಥ ತಲೆಹಾಕಿದೆ. ಮೂರು ಬೃಹತ್ ಯೋಜನೆಗಳು ಮುಗಿದಿದ್ದರೂ ಕೆಲವೇ ಮಂದಿ ಶ್ರೀಮಂತರಾದರು; ಶ್ರೀಮಂತರಾಗಿದ್ದವರು ಮತ್ತಷ್ಟು ಶ್ರೀಮಂತರಾದರು. ಇದು ತ್ಯಾಗದ ಅಭಾವದ ಸಂಕೇತವೇ ಸರಿ. ದೇಶದ ಪುರೋಭಿವೃದ್ಧಿಗೆ, ಸುಖೀರಾಜ್ಯಸ್ಥಾಪನೆಗೆ ತ್ಯಾಗವೇ ತಳಹದಿ. ತ್ಯಾಗಕ್ಕೆ ಸರ್ವರೂ ಸಿದ್ಧರಾಗಬೇಕು. ಭೋಗಮಯ ಜೀವನದ ಲಾಲಸೆ ಜನತೆಯಲ್ಲಿ ಕಡಿಮೆಯಾಗಬೇಕು. ಸ್ವಹಿತಕ್ಕಿಂತ ದೇಶದ ಹಿತ ಮುಖ್ಯವೆಂಬ ಭಾವನೆ ಮೂಡಿ ಬರಬೇಕು. ದೇಶಸೇವೆಯ ನೆಪದಲ್ಲಿ ಸ್ವಾರ್ಥಸಾಧನೆಯ ಗುರಿ ಹೊಂದಿರುವ ಮಂದಿ ಇಂದು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಪ್ರಬುದ್ಧಮಾನಕ್ಕೆ ಬರುತ್ತಿರುವುದು ಅಶುಭಕರ ಸಂಕೇತ. ಇದರ ವಿರುದ್ಧ ಹೋರಾಟ ಅನಿವಾರ್ಯವೆನಿಸಿದೆ. ಜನತೆ ನಿಸ್ಪೃಹ ದೇಶಸೇವಕರನ್ನು ಗುರುತಿಸಿ ದೇಶಸೇವೆಯ ಗುರುತರ ಹೊಣೆಯನ್ನು ಅವರ ಹೆಗಲಿಗೇರಿಸುವ ಹಂಬಲ ಹೊಂದುವುದು ಒಂದು ಮಹತ್ತರ ಅಂಶವಾಗಿದೆ. ತಮ್ಮ ಭವಿಷ್ಯ ಉಜ್ವಲವಾಗಬೇಕಾದರೆ ಯಾವ ಮಾರ್ಗದಲ್ಲಿ ಮುನ್ನಡೆಯಬೇಕೆಂಬುದನ್ನು ಜನತೆ ಕುರಿತು ಯೋಚಿಸುವ ಸಂಧಿಕಾಲ ಇಂದು ಬಂದಿದೆ. ಜನತೆ ಈಗ ಎಚ್ಚರ ತಪ್ಪಿ ನಡೆದರೆ ದುರ್ದಿನಗಳ ಕಪಿ ಕಟ್ಟಿಟ್ಟ ಬುತ್ತಿ. ಇಂದು ಸರ್ವಾಧಿಕಾರ ಎಲ್ಲೆಲ್ಲೂ ಕುಡಿಯೊಡೆಯ ತೊಡಗಿದೆ. ಹಿಂದಿನ ಕಾಲದಲ್ಲಿ ಕಿರೀಟದ ಹೆಸರಿನಲ್ಲಿ ನಡೆಯುತ್ತಿದ್ದ ದಬ್ಬಾಳಿಕೆಗೆ ತುತ್ತಾಗಿ ಜನತೆ ನೊಂದುಬೆಂದರೆ, ಇಂದು ತತ್ತ್ವಗಳ, ಗುಂಪಿನ, ಪಂಗಡಗಳ, ಜಾತಿಮತಗಳ, ಆದರ್ಶದ ಉರುಳಿನಲ್ಲಿ ಸಿಲುಕಿ ಪ್ರಾಣಗತವಾಗಿ ಉಸಿರುಕಟ್ಟಿ ಒದ್ದಾಡುತ್ತಿದೆ. ಸರ್ವಾಧಿಕಾರ ಜನತೆಯ ಸೇವೆಯ ಸೋಗಿನಲ್ಲಿ ವಿಶ್ವವ್ಯಾಪ್ತಿಯಾಗಿ ತಾನೇ ತಾನಾಗಿ ಮೆರೆಯುತ್ತಿದೆ. ಸರ್ವಾಧಿಕಾರದ ಹುಟ್ಟಡಗಿಸಿ ಸ್ವಾತಂತ್ರ್ಯದ ನೈಜ ಸವಿಯನ್ನು ಪಡೆಯಲು ಜನತೆ ತಮ್ಮ ಬುದ್ಧಿ ಮನಸ್ಸುಗಳ ಮೊರೆಹೋಗಬೇಕಾಗಿದೆ. (ಏಪ್ರಿಲ್ ೧೯೭೭)

## ೧೮. ಕ್ಷಾತ್ರಕ್ಕೆ ಧರ್ಮದ ಅಂಕುಶ ಬೇಕು

ವೇದ, ಉಪನಿಷತ್ತು, ಇತಿಹಾಸ ಕಾಲದಿಂದ ಕ್ಷಾತ್ರತೇಜಸ್ಸಿಗೆ ಉನ್ನತ ಸ್ಥಾನವಿತ್ತು ಗೌರವಿಸಿರುವುದು ಕಂಡು ಬರುತ್ತದೆ. ಅದಕ್ಕೆ ಹಿಂದೂಧರ್ಮ ಉಜ್ವಲಸ್ಥಾನ ಕೊಟ್ಟಿದೆ. ಆದರೆ ಬರೀ ಶೌರ್ಯ, ಪರಾಕ್ರಮ, ಸಾಹಸಗಳನ್ನು ವ್ಯಕ್ತಪಡಿಸುವ ತಂಡವೊಂದನ್ನೇ ತಯಾರಿಸಿದರೆ ಪ್ರೋತ್ಸಾಹಿಸಿದರೆ ಅವರೆಂದಿಗೂ ಸುಖೀರಾಜ್ಯವನ್ನು ನಿರ್ಮಾಣ ಮಾಡಲಾರರು. ಅಂತಹವರಿಂದ ಸರ್ವಾಧಿಕಾರ ಸ್ಥಾಪನೆಯಾಗಿ ವ್ಯಕ್ತಿಸ್ವಾತಂತ್ರ್ಯ ಹರಣವಾಗುತ್ತದೆ. ಕ್ಷಾತ್ರತೇಜಸ್ಸಿಗೆ ಧರ್ಮದ ಅಂಕುಶವಿದ್ದರೆ ಮಾತ್ರ ಸುಖೀರಾಜ್ಯಸ್ಥಾಪನೆಗೆ ಅವಕಾಶವುಂಟಾಗುತ್ತದೆ. ಇತಿಹಾಸದ ಅವಲೋಕನದಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ದೇಶದ ಸಾಹಿತ್ಯ, ಸಂಸ್ಕೃತಿ, ಧರ್ಮ, ಜೀವನದ ಬೆಳವಣಿಗೆ ಇವುಗಳಿಗೆ ಪವಿತ್ರ ವಾತಾವರಣ ಇರಲೇಬೇಕು. ದೇಶ ಶಾಂತಿಯಿಂದಿದ್ದು ಸುಗಮ ವಾತಾವರಣವಿದ್ದಾಗ ಎಲ್ಲಾ ಅಭಿವೃದ್ಧಿ ಸಾಧ್ಯವಾಗುತ್ತದೆ: ಅರ್ಥಪೂರ್ಣವಾಗುತ್ತದೆ. ಯುದ್ಧದ ಭೀತಿಯಿದ್ದು, ಅಶಾಂತಿ ಮೂಡಿದಾಗ ಧರ್ಮ, ಸಾಹಿತ್ಯ, ಸಂಸ್ಕೃತಿ ಇವುಗಳ ಬೆಳವಣಿಗೆ ಕುಂಠಿತವಾಗುತ್ತದೆ. ಉಪನಿಷತ್ಕಾಲ, ಧರ್ಮಪ್ರಚಾರದ ಕಾಲ. ಆಗಿನ ವಾತಾವರಣ ಬಹಳ ಪವಿತ್ರವಾಗಿತ್ತು. ಕ್ಷೋಭೆ ಇರಲಿಲ್ಲ. ಯಾವ ಸಮಸ್ಯೆಗಳೂ ಇರಲಿಲ್ಲ. ಆಗ ಆತ್ಮ, ಪರಮಾತ್ಮನನ್ನು ಕುರಿತು ಚಿಂತಿಸಲು ಅನುವಿತ್ತು. ಯಾವುದೇ ಮಹತ್ಸಾಧನೆಗೂ ಪವಿತ್ರವಾದ, ಉತ್ತಮವಾದ ವಾತಾವರಣ ಅಗತ್ಯವೆಂಬುದಕ್ಕೆ ಹಿಂದಿನ ಕಾಲದ ಉತ್ಕೃಷ್ಟ ಸಾಹಿತ್ಯ, ಧರ್ಮಗ್ರಂಥಗಳ ಆವಿರ್ಭಾವ ಪ್ರಾಚೀನ ಜನಜೀವನ ಸಂಸ್ಕೃತಿ ಇವು ಜೀವಂತ ನಿದರ್ಶನಗಳಾಗಿವೆ. (ಜುಲೈ ೧೯೭೭)

## ೧೯. ಸ್ವಾತಂತ್ರ್ಯ ಮತ್ತು ಸ್ವೇಚ್ಛಾಚಾರ

ಸ್ವಾತಂತ್ರ್ಯವೆಂದರೆ ಸ್ವೇಚ್ಛಾಚಾರವಲ್ಲ. ಅದೇ ಆತ್ಮವಿಕಾಸಕ್ಕೆ ರಕ್ಷೆ. ಇದಕ್ಕೆ ಒಂದು ಕಥೆ ನೆನಪಿಗೆ ಬರುತ್ತದೆ: 'ಒಂದು ಊರಿನಲ್ಲಿ ಒಬ್ಬ ಕುರುಬನ ಹತ್ತಿರ ಒಂದು ಕುರಿ ಮಂದೆ ಇದ್ದಿತು. ಹಗಲೆಲ್ಲಾ ಕುರಿಗಳು ಒಡೆಯನ ರಕ್ಷಣೆಯಲ್ಲಿರುತ್ತಿದ್ದವು. ರಾತ್ರಿಯ ವೇಳೆ ರೊಪ್ಪದಲ್ಲಿ ಬೆಚ್ಚಗೆ ಮಲಗಿ ನಾಯಿಯ ರಕ್ಷಣೆಯಲ್ಲಿರುತ್ತಿದ್ದವು. ಒಂದು ದಿನ ರಾತ್ರಿ ವೇಳೆಯಿಂ

ಗಳಲ್ಲಿ ಒಂದು ಕುರಿಮರಿಗೆ ಬಂಧನದ ಜೀವನ ಬೇಸರವೆನಿಸಿ. ಸ್ವತಂತ್ರ ಜೀವನದ ಆಸೆಯಾಗಿ. ತನ್ನ ಒಡನಾಡಿಗಳನ್ನು ಕುರಿತು 'ರೊಪ್ಪದಿಂದ ಹೊರಗೆ ಹೋಗಿ ಸ್ವಚ್ಛಂದವಾಗಿರೋಣ'ವೆಂದು ಪ್ರಚೋದಿಸಿತು. ಯಾವ ಕುರಿಯೂ ಅದರ ಅಭಿಪ್ರಾಯವನ್ನು ಅನುಮೋದಿಸಲಿಲ್ಲ. ಕ್ರಾಂತಿಕಾರೀ ಮನೋಭಾವದ ಈ ಮರಿ ಎಲ್ಲ ಕುರಿಗಳನ್ನು ಹೀಯಾಳಿಸಿ ತಾನೊಬ್ಬನೇ ಸ್ವತಂತ್ರವಾಗಿ ಬೆಳದಿಂಗಳ ರಾತ್ರಿಯಲ್ಲಿ ಕುಣಿದು ಕುಪ್ಪಳಿಸಿ ಸ್ವಚ್ಛಂದ ಜೀವನದ ಸುಖವನ್ನು ಅನುಭವಿಸುವೆನೆಂದು ಜಂಭದಿಂದ ರೊಪ್ಪ ಬಿಟ್ಟು ಸುಸುಳಿ ಹೊರಗೆ ಓಡಿತು. ಅದು ಹಾಡುತ್ತಾ, ಕುಣಿಯುತ್ತಾ ಊರ ಮುಂದಿನ ಕಾಡನ್ನು ಸೇರಿತು. ಸ್ವಾತಂತ್ರ್ಯ ಜೀವನದ ಕನಸು ಕಾಣುತ್ತಿದ್ದ ಅದರ ಅರಿವಿಗೆ ತಾನು ಮನೆಬಿಟ್ಟು ಬಹುದೂರ ಬಂದುದು ಗೊತ್ತಾಗಲೇ ಇಲ್ಲ. ಮೈಮರೆತು ಕುಣಿದು ಸಂತೋಷವನ್ನಾಚರಿಸುತ್ತಿದ್ದ ಅದಕ್ಕೆ ಕಾಡಿನಲ್ಲೇ ವಾಸವಾಗಿದ್ದ ಹುಲಿರಾಯ ಬಂದುದು ಕಾಣಲೇ ಇಲ್ಲ. ಒಮ್ಮೇಲೆ ತನ್ನ ಮೇಲೆ ಎರಗಿ ತನ್ನ ಸ್ವಾತಂತ್ರ್ಯಜೀವನಕ್ಕೆ ತೆರೆಯೆಳೆದ ಹುಲಿರಾಯನನ್ನು ಅದು ನೋಡುವ ಮುನ್ನವೇ ಇಹಲೋಕದ ವ್ಯಾಪಾರವನ್ನು ಮುಗಿಸಿಯಾಗಿತ್ತು. ಈ ಕಥೆಯಿಂದ ತಿಳಿದು ಬರುವುದಾದರೂ ಏನು ? ಸ್ವಾತಂತ್ರ್ಯ ಜೀವನಕ್ಕೆ ನಿಜವಾದ ಅರ್ಥ ಸ್ವೇಚ್ಛಾಜೀವನವಲ್ಲ. ನಮ್ಮ ಹಿತರಕ್ಷಕರ ಅಂಕೆಯಲ್ಲಿರುವುದು ಪರತಂತ್ರ ಜೀವನವಲ್ಲ. ರಕ್ಷಕರ ಅಂಕೆಯಲ್ಲಿದ್ದರೂ ಆತ್ಮ ರಕ್ಷಣೆಗೆ ಅದರ ವಿಕಾಸಕ್ಕೆ ಎಡೆಯಿದ್ದರೆ ಅದು ಸ್ವತಂತ್ರ ಜೀವನವೇ ಆಗುತ್ತದೆ. (ಆಗಸ್ಟ್ ೧೯೭೭)

## ೨೦. ಕೃತಜ್ಞತೆ

ಮಾನವನ ಜೀವನದಲ್ಲಿ ಪ್ರಾಯಃ ಸಂಪೂರ್ಣ ವಿನಾಶವಾಗುವಂತಹ ಸನ್ನಿವೇಶ ಪರಿಸ್ಥಿತಿಗಳು ಲಭ್ಯವಾದಾಗ ಯಾವುದೋ ವಿಶೇಷ ಸಹಾಯ ಸಂಪತ್ತಿನಿಂದಾಗಿ, ಶಕ್ತಿ ಲಭ್ಯವಾಗಿ ವಿಪತ್ತಿನಿಂದ ಪಾರಾಗುತ್ತಾನೆ. ವಾಸ್ತವಿಕವಾಗಿ ಆ ಮನುಷ್ಯ ನೂತನ ಚೈತನ್ಯವನ್ನು ಹೊಂದಿ ಬಾಳ್ವೆ ನಡೆಸಲುಪಕ್ರಮಿಸುತ್ತಾನೆ; ಶಕ್ತಿವಂತನಾಗುತ್ತಾನೆ. ಅಂತೆಯೇ ಯಾವುದೋ ಒಂದು ರೀತಿಯಲ್ಲಿ ಒಂದು ಮಟ್ಟದಲ್ಲಿ ವ್ಯವಹಾರ ಮಾಡುತ್ತಿದ್ದ ಮನುಷ್ಯನು ಜೀವನದಲ್ಲಿ ಅನುಕೂಲವಾದ ಅಥವಾ ಉನ್ನತವಾದ ಮಟ್ಟಕ್ಕೇರಿದಾಗ, ಮೇಲ್ಪದವಿಗೆ ಬಂದಾಗ ತನ್ನ ಹಿಂದಣ ಸ್ವರೂಪವನ್ನೇ ಮರೆತು ಹೊಸಬನಾಗುತ್ತಾನೆ. ತನ್ನನ್ನು ತಾನೇ ಮರೆಯುತ್ತಾನೆ. ಆತನು ಆ ಪದವಿಗೆ ಮುನ್ನ ಇದ್ದ ಸನ್ನಿವೇಶದ ಸ್ಮರಣೆಮಾಡಿಕೊಂಡು, ಆಗ ವ್ಯವಹರಿಸುತ್ತಿದ್ದ ರೀತಿ, ಅನುಸರಿಸುತ್ತಿದ್ದ ಕ್ರಮಗಳು, ಗಳಿಸುತ್ತಿದ್ದ ಯಶಸ್ಸುಗಳನ್ನು ಸ್ಮರಿಸಿ ವೃದ್ಧಿಸಿಕೊಳ್ಳುವ ಪ್ರಯತ್ನ ಮಾಡುವುದು ಸೂಕ್ತ. ಈ ರೀತಿಯ ಸ್ಮರಣೆ ಹಾಗೂ ಕೃತಜ್ಞತಾ ಮನೋಭಾವ ಆತನ ಅಭಿವೃದ್ಧಿಗೆ ಸಹಕಾರಿಯಾಗುತ್ತದೆ. ಮತ್ತು ಪೂರ್ವಾಪರ ವಿವೇಚನಾಶಕ್ತಿಯು ಕುದುರಿ ಇರುವ ಯಶಸ್ಸು, ಪದವಿ ಇತ್ಯಾದಿಗಳು ಭದ್ರಬುನಾದಿಯ ಮೇಲೆ ನಿಂತಂತಾಗುತ್ತದೆ. ಆದರೆ ಈ ರೀತಿ ಪೂರ್ವಸ್ಥಿತಿಯನ್ನು ಮರೆತು, ಕೊಂಚ ಸ್ಥಾನಕ್ಕೇರಿದಾಕ್ಷಣ ನೀತಿನಿಯಮಗಳನ್ನು ನಿರ್ನಾಮಮಾಡಿ, ಅಹಂಕಾರಿಯಾಗಿ ಸ್ವೇಚ್ಛಾಚಾರದಿಂದ ವರ್ತಿಸುವುದಾದಲ್ಲಿ ಆತನ ಅಧಃಪತನವು ಖಂಡಿತ. ಈ ರೀತಿಯ ಹೊಸತನವು ವಿನಾಶಕ್ಕೆ ಕಾರಣವಾಗುತ್ತದೆ. ಒಟ್ಟಿನಲ್ಲಿ ಎಚ್ಚರಿಕೆ ತಪ್ಪಿದಾಗ ತನ್ನ ನಾಶಕ್ಕೆ ತಾನೇ ಹೊಣೆಯಾಗಬೇಕಾಗುತ್ತದೆ. ಆದ್ದರಿಂದ ವ್ಯಕ್ತಿಯು ಕೃತಜ್ಞತಾ ಮನೋಭಾವದಿಂದ ವ್ಯವಹರಿಸುವುದು ತನ್ನ ಇಹಪರ ಸೌಖ್ಯಕ್ಕೆ ತಾನೇ ಸೋಪಾನವನ್ನು ನಿರ್ಮಿಸಿಕೊಂಡಂತಾಗುತ್ತದೆ.

(ನವಂಬರ್ ೧೯೭೭)

## ೨೧. ಸಂಸ್ಕೃತಾಧ್ಯಯನ

ಭರತಖಂಡ ಜಗತ್ತಿಗೆ ಬೆಳಕನ್ನು ಕೊಟ್ಟಂತಹ ರಾಷ್ಟ್ರ. ಮಾನವನ ಉದ್ಧಾರದ ಪಥವನ್ನು ತೋರಿದ ದೇಶ. ಇದು ಅಭಿಮಾನದ ಮಾತಲ್ಲ. ಪಾಶ್ಚಾತ್ಯ ಸತ್ಯಶೋಧಕರೂ ಇದನ್ನು ತುಂಬುಹೃದಯದಿಂದ ಹೊಗಳಿದ್ದಾರೆ. ಇಂತಹ ಶಕ್ತಿ ಸಂಪಾದನೆ ಭರತಖಂಡದವರಿಗೆ ಎಲ್ಲಿಂದ ಬಂತು ? ಎಂಬ ಪ್ರಶ್ನೆ ಉದಯವಾದಾಗ. ಸ್ಪಷ್ಟವಾದ ಉತ್ತರ : ಸಂಸ್ಕೃತಭಾಷೆ ಆ ಎಲ್ಲಾ ಶಕ್ತಿಗಳನ್ನು ಕೊಡುತ್ತದೆಂಬುದು. ನಮ್ಮ ಹಿಂದಿನ ಪುಣ್ಯಾತ್ಮರು ಕೇವಲ ಉದರ ನಿಮಿತ್ತಕ್ಕಾಗಿ ಸಂಸ್ಕೃತವನ್ನು ಕಲಿತವರಲ್ಲ : ಜ್ಞಾನಸಂಪಾದನೆ ಅವರ ಪರಮಧ್ಯೇಯವಾಗಿತ್ತು, ಆದ್ದರಿಂದ ಅವರು ದೇವದೇವನ·ಸಾಕ್ಷಾತ್ಕಾರಕ್ಕಾಗಿ ಆತ್ಮ ವಿದ್ಯೆಯನ್ನು ಕಲಿಯುತ್ತಿದ್ದರು. ಮಾನವನು ಇಂದು ಅಧಿಕಾರ, ಸಂಪತ್ತು ಮತ್ತು ಭೋಗಜೀವನವೆಂಬ ದಾಹತ್ರಯಗಳಿಗೆ ದಾಸನಾಗಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಪಶುಪಕ್ಷಿಗಳಿಗಿಂತಲೂ ಕನಿಷ್ಟವಾಗಿ ಜೀವಿತವನ್ನು ಸಾಗಿಸುತ್ತಿದ್ದಾನೆ. ಇದೇ ಪರಿಸ್ಥಿತಿ ಮುಂದುವರಿದರೆ ಜಗತ್ತು ವಿನಾಶದ ಹೆದ್ದಾರಿಯನ್ನು ತುಳಿಯಬೇಕಾಗುವುದು. ಮಾನವನು ಮಂಗಳವನ್ನು ಕಾಣಬೇಕಾದರೆ, ಜಗತ್ತು ಸುಖಶಾಂತಿಗಳಿಂದ ತುಂಬಿ ಬಾಳಬೇಕಾದರೆ, ಶೀಘ್ರವಾಗಿ ಧರ್ಮಜಾಗೃತಿಯುಂಟಾಗಬೇಕು. ಈ ಉದ್ದೇಶ ಸಾಧನೆಗೆ ಸಂಸ್ಕೃತಭಾಷೆಯ ಅಧ್ಯಯನ ಪರಮ ಆಧಾರ. ಏಕೆಂದರೆ ಅಲ್ಲಿ ಆತ್ಮೋದ್ಧಾರ ವಿದ್ಯೆಗೆ ಬೇಕಾದ ರಹಸ್ಯ ಬಹಳ ಅಡಗಿದೆ. ಅದು ಪ್ರಬುದ್ಧ ಭಾಷೆಯೂ ಆಗಿದೆ. ಮಾತೃಭಾಷೆಯ ಜೊತೆಗೆ ಈ ಭಾಷೆಯ ಅಭ್ಯಾಸವೂ ಬೇಕು. ಅಥವಾ ಅದರ ಜ್ಞಾನವನ್ನೆಲ್ಲ ತಮ್ಮ ಭಾಷೆಯ ಮೂಲಕ ಅರಿತರೂ ಆದೀತು. (ಜನವರಿ ೧೯೭೮)

## ೨೨. ಶಿಕ್ಷಣ

ಭರತಖಂಡದ ಆರ್ಯಜನಾಂಗ ದೊಡ್ಡ ಸಾಧನೆಯನ್ನು ಮಾಡಿದೆ, ವಿಶಾಲವಾದ ಭಾವನೆಯನ್ನು ಬೆಳಸಿಕೊಂಡಿದೆ. ವಿಶ್ವಕ್ಕೆ ಅನುಪಮ ಕಾಣಿಕೆಯನ್ನೇ ಸಲ್ಲಿಸಿದೆ. ನಮ್ಮ ಪೂರ್ವಜರು ಪ್ರತಿಭೆಗೆ ಹೆಸರಾಂತವರು. ಈ ಪ್ರತಿಭೆಯ ಒಂದು ಭಾಗ ಸಹಜ ಸ್ಫೂರ್ತಿಯಿಂದ ಸ್ಫುರಿಸಿದರೆ. ಉಳಿದ ತೊಂಬತ್ತೊಂಬತ್ತು ಭಾಗ ವ್ಯವಸಾಯದಿಂದ ಬರುವಂತಹದು. ಇಂಥ ವ್ಯವಸಾಯ ಮಾಡಲು ಅತುಲವಾದ ಶ್ರದ್ಧೆಯಿರಬೇಕು. ನಿದರ್ಶನಕ್ಕಾಗಿ ಕಾಡು ಹುಡುಗನಾದ ಏಕಲವ್ಯನು ಗುರುವಿನ ನೇರ ಮಾರ್ಗದರ್ಶನವಿಲ್ಲದೆ ಅರ್ಜುನನಿಗಿಂತಲೂ ಅಪ್ರತಿಮ ಪ್ರತಿಭಾಶಾಲಿಯಾಗಬೇಕಾದರೆ ಆತನಲ್ಲಿ ಅಡಗಿದ್ದ ಅಗಾಧವಾದ ಶಕ್ತಿಯಾವುದು ಎಂದು ಪ್ರಶ್ನಿಸಿಕೊಂಡಾಗ, ಗಾಢವಾದ ಶ್ರದ್ಧೆಯೇ ಅದಕ್ಕೆ ಕಾರಣವೆಂಬ ಉತ್ತರ ಯಾರಿಗಾದರೂ ತಿಳಿಯದಿರದು. ಇದನ್ನೇ ಭಗವಂತನು ಭಗವದ್ಗೀತೆಯಲ್ಲಿ ಅಪ್ಪಣೆ ಕೊಡಿಸಿದ್ದಾನೆ: 'ಶ್ರದ್ಧಾವಾನ್ ಲಭತೇ ಜ್ಞಾನಂ' ಎಂಬುದಾಗಿ. ಆದರೆ ಯಾವ ದುರಾದೃಷ್ಟವೋ ಏನೋ ಇಂದು ಶಿಕ್ಷಣರಂಗದಲ್ಲಿ ಅಂತಹ ಶ್ರದ್ಧೆ ಶೂನ್ಯವಾಗಿದೆ. ಶಿಕ್ಷಣ ಅರ್ಥರಹಿತವಾಗಿದೆ. ಕೇವಲ ಓದುಬರಹ ಕಲಿಯುವುದು ಅಥವಾ ಕೇವಲ ಜೀವಿಕೆಗಾಗಿ ಉಪಾಧಿ (ಡಿಗ್ರಿ) ಪಡೆಯುವುದೆಂಬ ಲಘುವಾದ ಅರ್ಥ ಶಿಕ್ಷಣಕ್ಕೆ ಅಂಟಿಕೊಂಡಿದೆ. ನಮ್ಮ ಹಿಂದಿನ ದಾರ್ಶನಿಕರು ವ್ಯಕ್ತಿಯ ಸಮಗ್ರ ಬೆಳವಣಿಗೆಯನ್ನು ಶಿಕ್ಷಣವೆಂದು ಕರೆಯುತ್ತಿದ್ದರು. ಅಷ್ಟೇಕೆ 'ಯಾ ವಿದ್ಯಾ ಸಾ ವಿಮುಕ್ತಯೇ' ಎಂಬುದು ವಿದ್ಯೆಗೆ ಅವರು ಕೊಟ್ಟ ವ್ಯಾಖ್ಯಾನ. ಒಟ್ಟಿನಲ್ಲಿ ವಿಶ್ವದಲ್ಲಿ ಮಂಗಳಮಯವಾದ ವಾತಾವರಣ ವುಂಟಾಗಬೇಕಾದರೆ ಶ್ರದ್ಧಾಭಕ್ತಿವಿಶ್ವಾಸಪೂರ್ಣವಾದ ಶಿಕ್ಷಣ ಕ್ರಮದಿಂದ ಮಾತ್ರ ಅದು ಸಾಧ್ಯ. (ಮಾರ್ಚ್ ೧೯೭೯)

## ೨೩. ಉಪಾಧ್ಯಾಯ

ಭಾರತದ ಪ್ರಾಚೀನ ಶಿಕ್ಷಣ ಪದ್ಧತಿಯು ಗುರುವಿಗೆ ಮಹತ್ತರವಾದ ಸ್ಥಾನವನ್ನು ದೊರಕಿಸಿಕೊಟ್ಟಿತ್ತು. ಸಮಾಜವೂ ಕೂಡಾ ಆತನನ್ನು ತುಂಬುಗೌರವಾದರಗಳಿಂದ ಕಾಣುತ್ತಿತ್ತು. ಗುರುವಾದವನೂ ಕೂಡ ತಾನು ಕೇವಲ ಅರ್ಥೋಪಜೀವಿಯಾಗಿರದೆ ಸಮಾಜದ ಗೌರವವನ್ನು ಸಂಪಾದಿಸಿಕೊಂಡು ತನ್ನ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಂಚನೆಯಿಂದ ನಿರ್ವಹಿಸುತ್ತಿದ್ದ. ಅವನು 'ಗುರು' ಎಂಬ ಹೆಸರಿಗೆ ಪೂರ್ಣಪಾತ್ರನೆನಿಸುತ್ತಿದ್ದ. ಗುರುವೆಂಬ ಶಬ್ದಕ್ಕೆ ಅಜ್ಞಾನಾಂಧಕಾರದಿಂದ ಬೆಳಕಿನತ್ತ ಒಯ್ಯುವವನೆಂದೇ ನಮ್ಮ ಆರ್ಯವಾಣಿ ಆ ಬಗೆಗೆ ಕೊಟ್ಟ ವ್ಯಾಖ್ಯಾನ. 'Guru leads the students from the darkness of ignorance to the light of knowledge'. ಅವನು ವಿದ್ಯಾದಾನ ಮಾಡುವುದರ ಜೊತೆಗೆ ಇಡೀ ಸಮಾಜವನ್ನೇ ಸುಧಾರಿಸುತ್ತಿದ್ದ. ಹೀಗೆ ಅವನೊಬ್ಬ ಸಮಾಜಸುಧಾರಕನಾಗಿ, ನ್ಯಾಯಮೂರ್ತಿಯಾಗಿ, ಸಮಾಜದ ಕೇಂದ್ರಬಿಂದುವಾಗಿ ಸಾರ್ಥಕ ಜೀವನವನ್ನು ಸಾಗಿಸ ಬೇಕಾದರೆ, ಆತನ ಬಾಳಿನ ತತ್ತ್ವವಾವುದು ಎಂದು ಪ್ರಶ್ನಿಸಿಕೊಂಡಾಗ ಅದಕ್ಕೆ Plain living ; high thinking-ಸರಳಜೀವನ; ಉನ್ನತ ಆಲೋಚನೆ. ಇವೇ ಅವನ ಬಾಳಿನ ಸೂತ್ರಗಳೆಂಬುದಾಗಿ ಉತ್ತರ ಕೊಡಬಹುದಾಗಿದೆ. ಆದರೆ ಬಹುಮಂದಿ ಉಪಾಧ್ಯಾಯರಲ್ಲಿ ಇಂದು ಈ ಒಂದು ಮಹತ್ವವಾದ ತತ್ತ್ವ ವಿಪರ್ಯಾಸವನ್ನು ಪಡೆಯುತ್ತಾ ಬಂದಿದೆ. ಒಟ್ಟಿನಲ್ಲಿ ಉಪಾಧ್ಯಾಯನಾದವನು ಸಮಾಜದ ಗೌರವವನ್ನು ಸಂಪಾದಿಸಬೇಕಾದರೆ ಆದರ್ಶ, ತ್ಯಾಗ, ಮತ್ತು ಸರಳಜೀವನದಿಂದ, ಶ್ರದ್ಧಾಭಕ್ತಿ ವಿಶ್ವಾಸಪೂರ್ಣ ಸೇವೆಯಿಂದ ಮಾತ್ರ. (ಏಪ್ರಿಲ್–೧೯೭೮)

## ೨೪. ಬಸವ ಸಂದೇಶ

ಭಾರತಮಾತೆಯ ಪುಣ್ಯಗರ್ಭದಲ್ಲಿ ಅನೇಕಾನೇಕ ಮಹಾತ್ಮರು ಅವತಾರಗೈದಿದ್ದಾರೆ. ಅವರು ವಿಶ್ವಮಾನ್ಯ ತತ್ತ್ವಗಳನ್ನು ಕಾಣಿಕೆ ರೂಪದಲ್ಲಿ ಜಗತ್ತಿಗೆ ನೀಡಿದ್ದಾರೆ, ಅಂತೆಯೇ ಎಂಟುನೂರು ವರ್ಷಗಳ ಹಿಂದೆ ಪುಣ್ಯಶ್ಲೋಕರಾದ ಬಸವಣ್ಣನವರು 'ಕಾಯಕವೇ ಕೈಲಾಸ' ಎಂಬ ಸರ್ವಮಾನ್ಯವಾದ ಜೀವನ ತತ್ತ್ವವನ್ನು ಜಗತ್ತಿಗೆ ಸಾರಿ, ಆಚರಿಸಿ ತೋರಿಸಿಕೊಟ್ಟಿದ್ದಾರೆ. ಇಂದು ಜಗತ್ತಿನಲ್ಲಿ ಎಲ್ಲೆಡೆ ಕೇಳಿಬರುತ್ತಿರುವ ಸ್ವಾತಂತ್ರ್ಯ, ಸಮತೆ, ವಿಶ್ವಬಂಧುತ್ವದ ಘೋಷಣೆಗಳನ್ನು ಎಂಟುಶತಮಾನಗಳ ಹಿಂದೆಯೇ ಅನುಷ್ಠಾನಕ್ಕೆ ತಂದಿದ್ದಾರೆ. ಮತಾಚಾರಗಳ ಅಂಧ ಜಟಿಲತೆಯಲ್ಲಿ ಸಿಕ್ಕಿ ತೊಳಲಾಡುತ್ತಿದ್ದಾಗ ಮಾನವಕುಲಕ್ಕೆ ಭಕ್ತಿಮಾರ್ಗದ ಕೈದೀವಿಗೆಯನ್ನಿತ್ತು ಉದ್ಧಾರಗೈದಿದ್ದಾರೆ. ಭಾವಶುದ್ಧಿಯಿಂದ ಕೂಡಿದ ಭಕ್ತಿಯೋಗದಿಂದ ಮನುಷ್ಯ ತನ್ನೆಲ್ಲ ಬಂಧಗಳನ್ನು ಕಳಚಿ ನಿಲ್ಲಬಲ್ಲನೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಜನ್ಮ ಮತ್ತು ವೃತ್ತಿಗಳ ಆಧಾರದ ಮೇಲೆ ಸಮಾಜ ನಿರ್ಮಿಸಿಕೊಂಡ ಮೇಲು ಕೀಳುಗಳೆಂಬ ವೈಷಮ್ಯವನ್ನು ತೊಡೆದು ಹಾಕಿ ಸಮಾಜದಲ್ಲಿ ಸಮಾನತೆಯನ್ನು ರೂಢಿಗೊಳಿಸಿದ್ದಾರೆ. ಬಸವಣ್ಣನವರು ಸಮಾಜದಲ್ಲಿ ರಾಶಿರಾಶಿಯಾಗಿ ಬಿದ್ದಿದ್ದ ಕಸವನ್ನು ಸೊಂಟಕಟ್ಟಿ ಕೈಯಲ್ಲಿ ಸಮ್ಮಾರ್ಜನವಿಡಿದು ಗುಡಿಸಿ, ಜನಮನ ಹೃದಯವನ್ನು ಅಗೆದು ಹಸನುಗೊಳಿಸಿ ಭಕ್ತಿಯ ಬೀಜ ಬಿತ್ತಿದ್ದಾರೆ. ಅವರು ಕಲ್ಯಾಣದ ಪ್ರಧಾನಮಂತ್ರಿಯಾಗಿ, ಶ್ರೇಷ್ಠಮಟ್ಟದ ಸಮಾಜಸುಧಾರಕರಾಗಿ, ನೂತನ ಸಾಹಿತ್ಯರಚನಾಕಾರರಾಗಿ, ಅನುಭವ ಮಂಟಪದ ಸಂಸ್ಥಾಪಕರಾಗಿ ಹೀಗೆ ವಿವಿಧಮುಖ ಜೀವನದಿಂದ ಇಡೀ ಮಾನವಕುಲಕ್ಕೆ ಲೇಸನ್ನೇ ಬಯಸಿದ ಶರಣರಾಗಿ ಜನಜಾಗೃತಿಯನ್ನುಂಟುಮಾಡಿದ್ದಾರೆ.

ಒಟ್ಟಿನಲ್ಲಿ ಆರೋಗ್ಯಕರವಾದ ವಾತಾವರಣ ಎಲ್ಲೆಡೆ ಸೃಷ್ಟಿಯಾಗಬೇಕಾದರೆ ಅಣ್ಣನವರು ಬೋಧನೆಗೈದ ತತ್ವಗಳನ್ನು ಪೂರ್ಣ ಅನುಷ್ಠಾನಕ್ಕೆ ತರುವುದರಲ್ಲಿ ಸಮಾಜವು ಪ್ರವೃತ್ತವಾಗಬೇಕು. (ಮೇ ೧೯೭೮)

## ೨೫. ಅಂತಿಮಗುರಿ

ಭರತಖಂಡದ ಮಹಾನ್ ದಾರ್ಶನಿಕರು, ಮಂತ್ರದ್ರಷ್ಟಾರರು, ಮನುಷ್ಯನ ಅಂತಿಮ ಗುರಿಯಾವುದೆಂಬುದನ್ನು ಸಾರಿ ಹೇಳಿದ್ದಾರೆ. ಅದಕ್ಕೆ ಪೂರಕವಾಗಿ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳ ಅರ್ಜನೆಯ ವಿಧಿವಿಧಾನ ಗಳನ್ನು ತಿಳಿಸಿದ್ದಾರೆ. ಆ ನಾಲ್ಕರಲ್ಲಿ ಮೊದಲು ಧರ್ಮವನ್ನು ಹೇಳಿರುವ ಉದ್ದೇಶವನ್ನು ಗಮನಿಸಿದಾಗ, ಅವರು ಧರ್ಮಕ್ಕೆ ಕೊಟ್ಟಿರುವ ಪ್ರಾಮುಖ್ಯವೆಷ್ಟೆಂಬುದು ಗೊತ್ತಾಗುತ್ತದೆ. ಅದೇನೆಂದರೆ: ಧರ್ಮದ ಆಧಾರದ ಮೇಲೆ ಅರ್ಥ ಮತ್ತು ಕಾಮಾದಿ ಗಳ ಅಪೇಕ್ಷೆಯಿರಬೇಕೆಂಬುದು ಆ ಪುಣ್ಯಾತ್ಮರು ವಿಶಾಲವಾದ ಅರ್ಥದಲ್ಲಿ, ವಿವಿಧ ರೀತಿಯಲ್ಲಿ ಧರ್ಮಕ್ಕೆ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ. 'ಪತಿತಂ, ಪತಂತಂ, ಪತಿಷ್ಯಂತಂ, ವಾ ಯೋ ಉದ್ಧರೇತ್ ಸ ಧರ್ಮಃ' ಬಿದ್ದಿರುವವನನ್ನು, ಬೀಳುತ್ತಿರುವವನನ್ನು ಬೀಳುವವನನ್ನು ಉದ್ಧಾರಮಾಡುವುದು ಯಾವುದೋ ಅದೇ ಧರ್ಮ. ಅಂದರೆ ಮನುಷ್ಯತ್ವದಿಂದ ಅಲ್ಪಾಯುವಾದ ಮನುಷ್ಯನು ಅದನ್ನು ಸಂಪಾದಿಸುವುದರಲ್ಲಿ ಸದಾ ಪ್ರವೃತ್ತನಾಗಬೇಕು. ಅದನ್ನೇ ಪುರಂದರದಾಸರು ಒಂದು ಕಡೆ ಹೀಗೆಅಪ್ಪಣೆ ಕೊಡಿಸಿದ್ದಾರೆ:

ಕಾಲನದೂತರು ಕಾಲ್ಪಿಡಿದೆಳೆವಾಗ ತಾಳು ತಾಳೆಂದರೆ ತಾಳುವರೆ ?
ದಾಳಿ ಬಾರದ ಮುನ್ನ ಧರ್ಮವ ಗಳಿಸಿರೋ ಸುಳ್ಳಿನ ಸಂಸಾರ ಸುರುಳಿಗೆ ಸಿಕ್ಕಬೇಡಿ

ಆದ್ದರಿಂದ ಮಾನವನ ಆತ್ಮೋನ್ನತಿಯಾಗಬೇಕಾದರೆ ಧರ್ಮದ ತಳಹದಿಯಿಂದ ಮಾತ್ರ ಸಾಧ್ಯ. (ಜೂನ್ ೧೯೭೮)

## ೨೬. ಸರ್ವಧರ್ಮ ಸಮನ್ವಯ

ಭರತಖಂಡ ಸರ್ವಧರ್ಮಗಳ ಸಮನ್ವಯದ ನೆಲೆವೀಡು. ಅದರಲ್ಲಿ ಕರ್ನಾಟಕವಂತೂ ಬೌದ್ಧ, ಜೈನ, ಶೈವ, ವೈಷ್ಣವ ಹೀಗೆ ಎಲ್ಲ ಧರ್ಮಗಳ ಸಂಗಮದ ಬೀಡು. ಈ ಕರ್ನಾಟಕದಲ್ಲಿ ಆಳಿದ ಮಹಾಪ್ರಭುಗಳು ಯಾವೊಂದು ಧರ್ಮ ವನ್ನೂ ಉಪೇಕ್ಷಿಸಿದವರಲ್ಲ. ಅವರು ಸರ್ವಧರ್ಮಸಹಿಷ್ಣುಗಳಾಗಿದ್ದರು; ಅವುಗಳ ರಕ್ಷಕರೂ ಆಗಿದ್ದರು. ಈ ಒಂದಂಶವನ್ನು ಇಂದಿಗೂ ಶಾಸನಗಳು ಶ್ರುತಪಡಿಸುತ್ತವೆ. ಹೊಯ್ಸಳ ಶಾಸನವೊಂದರಲ್ಲಿ—

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯಾಯಿಕಾಃ ॥
ಅರ್ಹನ್ನಿತ್ಯಥ ಜೈನಶಾಸನ ರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ನೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ ॥

ಶಿವನೆಂದು ಶೈವರು, ವೇದಾಂತಿಗಳು ಬ್ರಹ್ಮನೆಂದು, ಬೌದ್ಧರು ಬುದ್ಧನೆಂದು, ನೈಯಾಯಿಕರು ಕರ್ತನೆಂದು, ಜೈನರು ಅರ್ಹನೆಂದು, ಮೀಮಾಂಸಕರು ಕರ್ಮವೆಂದು ಯಾವ ಕೇಶವನನ್ನು ಉಪಾಸನೆ ಮಾಡುವರೋ, ಅವನೇ ಈಶ್ವರನು... ಎಂದಿದೆ. ಅಷ್ಟೇಕೆ, ಒಂದೇ ಸಂಸಾರದಲ್ಲಿ ಎಲ್ಲ ಧರ್ಮದವರೂ ಕೂಡಿ ಬಾಳ್ವೆ ನಡೆಸಿದ ಉದಾಹರಣೆಗಳೂ ಉಂಟು. ಹೊಯ್ಸಳ ವಂಶದ ಬಿಟ್ಟಿದೇವ ಅಥವಾ ವಿಷ್ಣುವರ್ಧನನು ಮೊದಲು ಶೈವ. ಆಮೇಲೆ ವಿಷ್ಣುಭಕ್ತ. ಅವನ ಪಟ್ಟದರಸಿಯಾದ ನಾಟ್ಯಸರಸ್ವತಿ ಶಾಂತಲಾದೇವಿ ಜಿನಭಕ್ತೆ, ಶಿವಭಕ್ತಿನಿಷ್ಠಾಗರಿಷ್ಠೆ. ಆಕೆಯ ತಂದೆ ಮಾರಸಿಂಗಮಯ್ಯ ಶಿವಭಕ್ತ, ತಾಯಿ ಮಾಚಿಕಬ್ಬೆ ಜಿನಭಕ್ತೆ. ಹೀಗೆ ಅವರ ಮನೆತನ ಜೈನ-ಶೈವ-ವೈಷ್ಣವ ಮತಗಳ ತ್ರಿವೇಣೀಸಂಗಮವಾಗಿತ್ತು. ಒಟ್ಟಿನಲ್ಲಿ ಕನ್ನಡಭೂಮಿ ಸರ್ವಧರ್ಮಸಮನ್ವಯರೂಪವಾದ ಒಂದು ದಿವ್ಯ ಧರ್ಮಸಂದೇಶವನ್ನು ಜಗತ್ತಿಗೇ ನೀಡಿದೆ. ಆದರೆ ಇಂಥ ನೆಲದಲ್ಲಿ ಇಂದು ಮತ ಧರ್ಮಗಳ ಸಂಘರ್ಷ ಅವಿರತವಾಗಿ ಸಾಗುತ್ತಿರುವುದು ವಿಷಾದಕರ. (ಜುಲೈ ೧೯೭೮)

## ೨೭. ಮಾತು

ಮಾನವ ಜನಾಂಗದ ಸಾಧನೆಯಲ್ಲಿ 'ಮಾತು' ಮಹಾಶಕ್ತಿಯುಳ್ಳದ್ದು. ಅದು ಮಾನವನ ಅಂತರಂಗ ಶಕ್ತಿಯ ಮತ್ತು ಸಂಸ್ಕೃತಿಯ ಅಳತೆಗೋಲು. ಅದು ಅರಿವಿಂಗೆ ಅಡಿಗಲ್ಲು; ಬಾಳಿಂಗೆ ಒಡನಾಡಿ. ಒಳ್ಳೆಯ ಮಾತು ಅಂತರಂಗದ ಶುದ್ಧಿ ವಿಕಾಸ ಗಳನ್ನುಂಟುಮಾಡಿ ತನ್ಮೂಲಕ ಆತನಿಗೆ ಘನ ವ್ಯಕ್ತಿತ್ವವನ್ನು ತಂದು ಕೊಡುತ್ತದೆ. ಅಂತೆಯೇ ಆ ಮಾತಿನಿಂದಲೇ ಮನುಷ್ಯನ ಅಧಃಪತನವೂ ಆಗುತ್ತದೆ. ಮನುಷ್ಯ ಮಾತಿನಿಂದ ಏನೆಲ್ಲವನ್ನು ಸಾಧಿಸಬಹುದು.

ಮಾತಿನಿಂ ನಗೆ ನುಡಿಯು । ಮಾತಿನಿಂ ಹಗೆ ಕೊಲೆಯು ।
ಮಾತಿನಿಂ ಸರ್ವಸಂಪದವು ಲೋಕಕ್ಕೆ ।
ಮಾತೆ ಮಾಣಿಕವು ಸರ್ವಜ್ಞ ॥

ಎಂಬುದಾಗಿ ಲೋಕಾನುಭಾವಿ ಸರ್ವಜ್ಞ ಮಾತಿನ ಅರ್ಥವನ್ನು ಸುಂದರವಾಗಿ ಹಾಡಿದ್ದಾನೆ. ನಮ್ಮ ಶರಣರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಈ ಮಾತಿಗೆ ದಿವ್ಯವ್ಯಾಖ್ಯೆಯನ್ನು ಕೊಟ್ಟಿದ್ದಾರೆ: 'ಮಾತೆಂಬುದು ಜ್ಯೋತಿರ್ಲಿಂಗ', ನುಡಿದರೆ ಮುತ್ತಿನ ಹಾರದಂತೆ ಲಾವಣ್ಯದಿಂದ ಕೂಡಿ ಮನೋಹಾರಿಯಾಗಿರಬೇಕು: ಮಾಣಿಕ್ಯದೀಪ್ತಿಯಂತೆ ಅರ್ಥದ ಹೊಳಹು ತುಂಬಿರಬೇಕು. ಸ್ಫಟಿಕದ ಸಲಾಕೆಯಂತೆ ನೇರವಾಗಿ ಪ್ರಕಾಶಮಯವಾಗಿರಬೇಕು. ಅಷ್ಟೇ ಏಕೆ! ಲಿಂಗವೇ ಮೆಚ್ಚಿ ಅಹುದ ಹುದೆನ್ನಬೇಕು...ಮುಂತಾಗಿ. ಆದರೆ ಈ ಮಾತಿಗೆ ಅರ್ಥವಂತಿಕೆ ಬರಬೇಕಾದರೆ ಅದರಲ್ಲಿ ಒಡಕಾಗಲೀ ಟೊಳ್ಳುತನವಾಗಲೀ ಇರಕೂಡದು. ಮೇಲಾಗಿ ಅದು ಚೇತಸ್ಪರ್ಶಿಯಾಗಿರಬೇಕು. ಮನೋಹಾರಿಯಾದ ಮಾತುಗಳಿಂದ ಮೈಮನಗಳ ಶುದ್ಧಿಯಾಗುವುದು. ಆದರೆ ಇಂಥ ಮಾತುಗಳು ಅತಿ ವಿರಳ. 'ಹಿತಂ ಮನೋಹಾರಿಚ ದುರ್ಲಭಂ ವಚಃ'. ಒಟ್ಟಿನಲ್ಲಿ ಜಗತ್ತಿನಲ್ಲಿಂದು ಎಲ್ಲಿಡೆ ಮಾತಿನಲ್ಲಿ ಟೊಳ್ಳುತನ ತಾಂಡವವಾಡುತ್ತಿದೆ. ರಾಷ್ಟ್ರ-ರಾಷ್ಟ್ರಗಳ ನಾಯಕರ ಮಾತಿನಲ್ಲಿಯೇ ತೂಕ ತಪ್ಪಿಹೋಗುತ್ತಿದೆ. ಹೀಗಾಗಬಾರದು. ಆದ್ದರಿಂದ ಎಲ್ಲಿಯವರೆಗೆ ಮಾತಿನಲ್ಲಿ ಶುದ್ಧಿ, ದೀಪ್ತಿ, ಮೌಲ್ಯಗಳು ಬರುವುದಿಲ್ಲವೋ ಅದರಲ್ಲಿ ಸಂಯಮವಿಲ್ಲವೋ ಅಲ್ಲಿಯವರೆಗೆ ಮಾನವನ ಹಿತಸಾಧನೆಯೂ ಸಾಧ್ಯವಿಲ್ಲ. ತನ್ಮೂಲಕ ಆತ್ಮವಿಕಾಸಕ್ಕೂ ಆತಂಕ. ಜಗತ್ತಿನ ಉದ್ಧಾರವೂ ಸಾಧ್ಯವಿಲ್ಲ. (ಸೆಪ್ಟಂಬರ್ ೧೯೭೮)

## ೨೮. ಗಾಂಧಿ

ಮಾನವ ಭಗವಂತನ ಸೃಷ್ಟಿಯಲ್ಲಿ ಕಿರೀಟಪ್ರಾಯ. ಕಾರಣ ಆತನು ಜಗತ್ತಿನ ಜೀವರಾಶಿಗಳಲ್ಲಿ ಅತ್ಯಂತ ಶ್ರೇಷ್ಠ ವಿಚಾರವಂತ ಹಾಗೂ ಪ್ರಜ್ಞಾವಂತ. ಮಾನವ ತನ್ನ ಜೀವಿತದ ಉದ್ದೇಶವನ್ನು ಅರಿತು ಆಚರಿಸುವ ಮಹಾಜ್ಞಾನಿ; ವ್ಯಕ್ತಿ ಹುಟ್ಟುವಿಕೆಯಿಂದ ಅಸಮಾನವಾದ ಮಾನವತ್ವವನ್ನು ಪಡೆದುಕೊಂಡರೂ ಬಾಳಿ ಬದುಕುವುದರಲ್ಲಿ ಅನೇಕ ವ್ಯತ್ಯಾಸಗಳನ್ನು ಕಾಣುತ್ತೇವೆ. ಈ ದೃಷ್ಟಿಯಿಂದ ಇಡೀ ಮಾನವ ವರ್ಗವನ್ನು ಒಬ್ಬ ಸಂತರು ಐದು ಗುಂಪುಗಳಾಗಿ ವಿಂಗಡಿಸಿದ್ದಾರೆ. ಮೊದಲನೆಯ ಗುಂಪಿನವರೆಂದರೆ, ತಾನೊಬ್ಬ ಸುಖವಾಗಿದ್ದರೆ ಸಾಕು. ತನ್ನ ಸುಖಕ್ಕಾಗಿ ಯಾರ ಪ್ರಾಣ ಹೋದರೂ ಚಿಂತೆಯಿಲ್ಲ ಎನ್ನುವವರು ; ಇವರು ಶಿಲಾವರ್ಗದವರು. ಇನ್ನು ಎರಡನೆಯ ವರ್ಗದವರೆಂದರೆ ಇವನಿಗಿಂತ ಸ್ವಲ್ಪ ಮುಂದೆ ಹೋಗಿ ತಾನೂ ಸುಖವಾಗಿದ್ದು ತನ್ನ ಕುಟುಂಬದವರೂ ಸುಖವಾಗಿರಬೇಕು. ಇದಕ್ಕೆ ಅಕ್ಕಪಕ್ಕದ ಕುಟುಂಬದವರು ನಾಶವಾದರೂ ಚಿಂತೆಯಿಲ್ಲವೆಂದು ಭಾವಿಸುವವರು ; ಇವರು ಸಸ್ಯವರ್ಗದವರು. ಇನ್ನೂ ಸ್ವಲ್ಪ ಮುಂದೆ ಹೋಗಿ ತಾನು ತನ್ನ ಕುಟುಂಬದ ಜೊತೆಗೆ ತನ್ನ ಊರಿನವರು ಸುಖವಾಗಿರಬೇಕೆಂದು ಬಯಸಿ, ಇದಕ್ಕಾಗಿ ಇನ್ನೊಂದು ಊರಿನವರು ನಾಶವಾದರೂ ಚಿಂತೆಯಿಲ್ಲವೆಂದು ಭಾವಿಸುವವರು; ಇವರು ಪ್ರಾಣಿವರ್ಗದವರು. ನಾಲ್ಕನೆಯ ವರ್ಗದವರೆಂದರೆ ತಾನು, ತನ್ನ ಕುಟುಂಬ, ತನ್ನ ಊರು ಮತ್ತು ರಾಷ್ಟ್ರದ ಒಳಿತಿಗಾಗಿ ಮತ್ತೊಂದು ರಾಷ್ಟ್ರದ ನಾಶಕ್ಕೆ ಪ್ರಯತ್ನಪಡುವವರು : ಇವರು ಮಾನವವರ್ಗದವರು. ಕೊನೆಯದಾಗಿ ಹಿಂದೆ ಹೇಳಿದ ಎಲ್ಲರ ಸುಖವಷ್ಟೇ ಅಲ್ಲ, ಇಡೀ ವಿಶ್ವವೇ ಸುಖ ಶಾಂತಿ ಸಮೃದ್ಧಿಯನ್ನು ಕಾಣಬೇಕೆಂದು ವಿಶ್ವಪ್ರೇಮಿಗಳಾಗಿ ಬಾಳಿ ಬೆಳಗಬೇಕೆನ್ನುವವರು : ಇವರು ದೈವೀವರ್ಗದ ಮಾನವರು. 'ಉದಾರ ಚರಿತಾನಾಂತು ವಸುಧೈವ ಕುಟುಂಬಕಂ' ಎನ್ನುವ ಉದಾತ್ತ ತತ್ತ್ವವುಳ್ಳ ವ್ಯಕ್ತಿಗಳು. ಮಹಾತ್ಮಾಗಾಂಧೀಜಿ ಕೊನೆಯದಾದ ದೈವೀವರ್ಗದ ಮಾನವ. ಈ ಪುಣ್ಯಪುರುಷನನ್ನು ನಾವು ಕೇವಲ ಭಾರತೀಯನೆಂದು ಭಾವಿಸಿದರೆ ತಪ್ಪಾಗುತ್ತದೆ. ಆದ್ದರಿಂದ ಗಾಂಧಿ ಇಡೀ ವಿಶ್ವವನ್ನೇ ಒಂದು ಕುಟುಂಬವಾಗಿ ಕಂಡ ವಿಶ್ವಪ್ರೇಮಿ, ವಿಶ್ವಕುಟುಂಬಿ ಹಾಗೂ ಮಹಾ ಮಾನವತಾವಾದಿ ಮತ್ತು ಸರ್ವಸಮತಾವಾದಿ ಎಂದು ಭಾವಿಸುವುದು ಅತ್ಯಂತ ಸೂಕ್ತವಾದುದು. (ಅಕ್ಟೋಬರ್ ೧೯೭೮)

## ೨೯. ಸಂಸ್ಕೃತಾಧ್ಯಯನ

ಭರತಖಂಡ ಜಗತ್ತಿನ ಭವಿಷ್ಯವನ್ನೇ ರೂಪಿಸಿದೆ. ಅದರ ದರ್ಶನಜ್ಯೋತಿಯ ಪ್ರಭೆಯಲ್ಲಿ ಅನೇಕ ರಾಷ್ಟ್ರಗಳು ಬೆಳಕು ಕಂಡಿವೆ. ಅದಕ್ಕೆ ಈ ಮೂಲಭೂತವಾದ ಶಕ್ತಿಯಾವುದು ಎಂಬ ಪ್ರಶ್ನೆ ಉದಯವಾದಾಗ, ಅದರ ಗರ್ಭದಲ್ಲಡಗಿರುವ ಅಮೂಲ್ಯವಾದ ಸಾಂಸ್ಕೃತಿಕ ಸಂಪತ್ತು, ದಿವ್ಯದರ್ಶನಜ್ಯೋತಿ, ಸೂಕ್ತಿರತ್ನಗಳು, ಅಗಾಧವಾದ ಪ್ರಾಚೀನ ವೈಜ್ಞಾನಿಕ ಸೈದ್ಧಾಂತಿಕ ವಿಷಯಗಳೇ ಕಾರಣವೆಂಬುದಾಗಿ ಉತ್ತರ ನೀಡಬಹುದು. ಇಂದು ಪಾಶ್ಚಾತ್ಯರ ಬೌದ್ಧಿಕ ಜ್ಞಾನವು ಸಂಸ್ಕೃತಕ್ಕೆ ಮಹಾ ಋಣಿಯಾಗಿದೆ. ಅದರ ಆಧಾರದಿಂದ ಜ್ಯೋತಿಷ್ಯ, ಗಣಿತ, ಜ್ಯಾಮಿತಿ ವಿಷಯಗಳಲ್ಲಿ ಹೊಸಹೊಸ ಆವಿಷ್ಕಾರಗಳನ್ನು ಕಂಡುಹಿಡಿದು ಪ್ರಕಟಿಸುತ್ತಿದ್ದಾರೆ. ಮುಂಬರುವ ವರ್ಷಗಳಲ್ಲಿ ಆ ಪಾಶ್ಚಾತ್ಯ ಖಂಡಗಳು ಈ ಭಾಷೆಗೆ ಇನ್ನೂ ಹೆಚ್ಚು ಋಣಿಯಾಗಬಲ್ಲವು. ಇದು ಭಾರತೀಯ ವಿದ್ವಾಂಸರ ಅಭಿಪ್ರಾಯವಲ್ಲ: ವಿದೇಶೀ ವಿದ್ವಾಂಸರ ಹೆಮ್ಮೆಯ ಹೇಳಿಕೆ. ಆದರೆ ಆ ಅಮೂಲ್ಯನಿಧಿಯನ್ನು. ನಾವು ಇಂದು ರಕ್ಷಿಸುವುದರಲ್ಲಿ, ಉಪಯೋಗಿಸುವುದರಲ್ಲಿ ವಿಫಲರಾಗಿದ್ದೇವೆ. ಅದಕ್ಕೆ ಒಂದು ಪ್ರಬಲ ಆಘಾತವೊದಗಿದೆ. ಕೆಲ ಅವಿದ್ಯಾವಂತರೂ ಅದರ ಬಗ್ಗೆ ಏನೂ ಅರಿಯದೆ ಸಹಜವಾಗಿ ಉದಾಸೀನರಾಗಿದ್ದಾರೆ. ಮತ್ತೆ ಹಲ

ವರು ಅರೆವಿದ್ಯಾವಂತರು ಅಪಾರ್ಥಮಾಡಿಕೊಂಡು ಔದಾಸೀನ್ಯವನ್ನು ವ್ಯಕ್ತಪಡಿಸುತ್ತಾರೆ. ಆದರೆ ಭರತಖಂಡದ ಸಂಸ್ಕೃತಿಯು ಪುನರುತ್ಥಾನವಾಗಬೇಕಾದರೆ. ಭವ್ಯಪೀಳಿಗೆ ಸೃಷ್ಟಿಯಾಗಬೇಕಾದರೆ. ಸಂಸ್ಕೃತವನ್ನು ಶರಣುಹೋಗಿ. ಅದನ್ನು ಚೆನ್ನಾಗಿ ಅಧ್ಯಯನ ಮಾಡಿ ಅದರ ಸಾರವನ್ನು ಅಳವಡಿಸಿಕೊಂಡಾಗಮಾತ್ರ ಸಾಧ್ಯ. (ನವಂಬರ್ ೧೯೭೮)

## ೩೦. ವ್ಯವಸಾಯಾತ್ಮಿಕಾ ಬುದ್ಧಿ

ವಿಷಯ ವಾಸನೆಗಳಿಂದ ದೂರವಾಗಿ ಪಾರಮಾರ್ಥಿಕ ವಿಷಯದ ಚಿಂತನೆಯಲ್ಲಿ ಪ್ರವಹಿಸುವುದೇ ವ್ಯವಸಾಯಾತ್ಮಕವಾದ ಬುದ್ಧಿಯ ಲಕ್ಷಣ.

ವ್ಯವಸಾಯಾತ್ಮಿಕಾಬುದ್ಧಿಃ ಏಕೇಹಕುರುನಂದನ ।
ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಂ ॥

ವ್ಯವಸಾಯಾತ್ಮಕವಲ್ಲದ ಎಂದರೆ ಸುಸಂಸ್ಕೃತವಲ್ಲದ ಮನಸ್ಸು ಬಹುಮುಖಿವಾಗಿ ಹರಿಯುವುದು. ವ್ಯವಸಾಯಾತ್ಮಿಕಾ ಬುದ್ಧಿಯು ಅರ್ಥಾತ್ ಸುಸಂಸ್ಕೃತ ಮನಸ್ಸು ಏಕಪಥ ಪ್ರವಾಹಿನಿಯಾಗಿರುವುದು. ಅಭ್ಯಾಸಬಲದಿಂದ ಪರಿಪೂರ್ಣವಾಗಿ ಹದಗೊಳಿಸಲ್ಪಟ್ಟ ಮನಸ್ಸುಳ್ಳವನೇ ಸುಸಂಸ್ಕೃತ. ಸುಸಂಸ್ಕೃತ ಮನಸ್ಸೇ ಚಿಂತಾರತ್ನ. ಅಸಂಸ್ಕೃತವಾದ ಮನಸ್ಸೇ ಘಟಸರ್ಪ. ಭಾವ ಬಲಿತು ಮನಸ್ಸು ಪವಿತ್ರವಾದಾಗ ಸುಸಂಸ್ಕೃತನ ಮಾತು, ಕೃತಿಗಳೆಲ್ಲವೂ ತೇಜೋಮಯವೂ ಪರಿಶುದ್ಧವೂ ಆಗುತ್ತವೆ. ಆಗ ಅವನ ಮಾತು, ಮಾಟಗಳು ವಿಶ್ವಪ್ರೇಮವನ್ನು ಹೊರಸೂಸುತ್ತಾ ಜಗದ್ಧಿತಾರ್ಥವಾಗುತ್ತವೆ. ಈತನೇ ನಿಜವಾದ ಸುಸಂಸ್ಕೃತ. ಇದುವೇ ಪವಿತ್ರವಾದ ಸುಸಂಸ್ಕೃತಿ. 'Culture is what produces sweetness of temper sanity of mind on strength of spirit.'

ಇಂಥ ಸುಸಂಸ್ಕೃತರೇ ವಿಶ್ವ ಶಾಂತಿಯನ್ನು ಸಾಧಿಸಬಲ್ಲರು. 'The greatest consivavle worker for peace is he who has himself attained perfection, realised god and eternal absolute peace' ಹೀಗೆ ಪರಿಪೂರ್ಣತೆಯನ್ನು ಹೊಂದಿ ದೇವ ಸಾಕ್ಷಾತ್ಕಾರವನ್ನು ಪಡೆದು ಪರಾಶಾಂತಿ ಪ್ರತೀಕವಾಗಿ ಬ್ರಹ್ಮಾನಂದದಲ್ಲಿ ವಿಹರಿಸುತ್ತಿರುವ ಜೀವನ್ಮುಕ್ತರೇ ಶಾಂತಿ ಸ್ಥಾಪನೆಗೆ ಶ್ರೇಷ್ಠ ಅಧಿಕಾರಿಗಳು. (ಡಿಸೆಂಬರ್–೧೯೭೮)

## ೩೧. ಅಹಂಕಾರ-ಮಮಕಾರ

ಸಾಮಾನ್ಯವಾಗಿ ಜಗತ್ತಿನಲ್ಲಿ ಇಂದು ಅನುಭವಿಸುತ್ತಿರುವ ಕಷ್ಟಸಮುದಾಯಕ್ಕೆ ಅಹಂಕಾರವು ಮೂಲಹೇತುವಾಗಿರುವುದು. ಕಾಮನೆಗಳೆಲ್ಲವೂ ಅಹಂಕಾರ ಪುರುಷನಿಗೆ ಸಾರ್ವಭೌಮಪಟ್ಟವನ್ನು ಕಟ್ಟಿ, ಅವನ ಸಾನ್ನಿಧ್ಯದಲ್ಲಿ ತಾವು ಕುಣಿದಾಡಿ ನಲಿಯುತ್ತಿರುವುವು. ನಾನು ಮಾಡುವೆನು, ನಾನು ದೊಡ್ಡವನು, ನಾನು ಕರ್ತೃ, ನಾನು ಭೋಕ್ತೃ ಮುಂತಾದ ಭಾವನೆಗಳು ಉದಯವಾಗುವುದೇ ಸರ್ವ ಅನರ್ಥಗಳಿಗೂ ಮೂಲ. ಇಂದು ಪ್ರಪಂಚದಲ್ಲಿ ನಡೆಯುತ್ತಿರುವ ಅಸಂಖ್ಯಾತ ವ್ಯವಹಾರಗಳು, ಅನೇಕ ಗಲಭೆಗಳು, ರಾಜಕೀಯ ಆಂದೋಲನಗಳು, ವಿನಾಶಕಾರಕ ಕೃತ್ಯಗಳು ಇವೆಲ್ಲಕ್ಕೂ ಅಹಂಕಾರ ಮಮಕಾರಗಳೇ ಅರ್ಥಾತ್ ನಾನು ನನ್ನದೆಂಬುದೇ ಮೂಲ. ಈ ಮದವೊಂದನ್ನು ಬಿಟ್ಟರೆ ಆತನೇ ಸುಖಜೀವಿ; ಶಾಂತಿ ಪ್ರಸ್ತಾಪಕನು. ಮನುಷ್ಯನಲ್ಲಿ ಅಹಂಕಾರಗಳಿರುವವರೆಗೂ ಶಾಂತಿ ಸಮಾಧಾನಗಳು ನೆಲೆಗೊಳ್ಳಲಾರವು. ಒಂದುವೇಳೆ ಅಹಂಕಾರ ಮಮಕಾರಪೂರ್ವಕ ಸುಖಗಳು ದೊರೆತಿದ್ದರೆ, ಅವೆಲ್ಲವೂ ದುಃಖಮಿಶ್ರಿತವಾದುವು. ಅಂಥವರಿಗೆ ದುಃಖರಹಿತವಾದ ಸುಖವೆನ್ನುವುದು ದುರ್ಲಭವಾದ ಮಾತು. ಅದು ಅಹಂಕಾರ ಮಮಕಾರ ಶೂನ್ಯವಾದ ಆತ್ಮಸಾಕ್ಷಾತ್ಕಾರದಿಂದ ದೊರಕುವುದೇ ಹೊರತು ಅಪಾರವಾದ ಧನಸಂಗ್ರಹದಿಂದಾಗಲಿ ಇನ್ನಿತರ ಭೋಗಜೀವನದಿಂದಲಾಗಲಿ ಅಲ್ಲ. ಈ ವಿಧವಾದ ನಿತ್ಯವೂ, ಸತ್ಯವೂ, ನಿರ್ದೋಷವೂ, ಅನಾದಿಯೂ ಆದ ಸುಖವೇ ಮೋಕ್ಷವೆನ್ನುವುದು. ಅದರ ಲಾಭಕ್ಕಾಗಿ ಕೈಲಾಸಕ್ಕೆ, ಹೋಗಬೇಕಾಗಿಲ್ಲ. ಕೈಲಾಸವೆಂಬುದು ಒಂದು ನಿರ್ದಿಷ್ಟಸ್ಥಾನವಲ್ಲ. ಮೇಲೆ ಹೇಳಿದಂತಹ ಆನಂದವು ಮನುಷ್ಯನಿಗೆ ಉಂಟಾದಾಗ ಅದೇ ಕೈಲಾಸವು. ಅದಕ್ಕಾಗಿ ಬೇರೊಂದೆಡೆಗೆ ಹೋಗಿ ಹುಡುಕಬೇಕೆನ್ನುವುದು ತಪ್ಪುಭಾವನೆ. ಇದನ್ನು ಮನುಷ್ಯನು ನಿರಹಂಕಾರಿಯಾಗಿ ನಿಷ್ಕಾಮಕಾಯಕದಿಂದ ಪಡೆಯಬಹುದು. ಕಾಮನಾರಹಿತಮನೋವೃತ್ತಿಯಿಂದ ಅಹಂಕಾರರಹಿತನಾಗಿ, ಈಶಾರ್ಪಣ ಬುದ್ಧಿಯಿಂದ ಮಾಡುವ ಸತ್ಕ್ರಿಯಾಚರಣೆಯೇ ಈ ಕಾಯಕಕ್ಕೆ ವಾಚ್ಯ. 'I mean by work action done for the divine and more and more in person with the divine alone and nothing else.' ಎಂಬ ಅರವಿಂದವಾಣಿಯೂ ಇದನ್ನೇ ಸಾರುತ್ತದೆ. (ಜನವರಿ ೧೯೭೯)

## ೩೨. ಮನಸ್ಸು

ಮಾನವನ ಮನಸ್ಸು ಸರ್ವ ಅಶಾಂತಿಗೆ ಮೂಲ. ಬಾಹ್ಯವ್ಯಾಪಾರಗಳೆಲ್ಲವಕ್ಕೂ ಅವನ ಭಾವನೆಗಳಿಗೂ ಮನಸ್ಸೇ ಕಾರಣ. ಭಾವದಲ್ಲಿ ಸೆಲೆಯೊಡೆದು ಮನಸ್ಸಿನಲ್ಲಿ ಉದ್ಭವವಾಗತಕ್ಕ ವಿಚಾರಗಳು ಮಾತಿನ ಸ್ವರೂಪದಲ್ಲಿಯೂ ಕೃತಿಯ ಸ್ವರೂಪದಲ್ಲಿಯೂ ವ್ಯಕ್ತವಾಗುತ್ತವೆ. ಮನಸ್ಸು ಪರಿಶುದ್ಧವಾಗಿ ಅರಳಿದಾಗ ಭಾಷೆಗೆ ಗಾಂಭೀರ್ಯ, ಹಾಗೂ ಕೃತಿಗೆ ಸೊಬಗು ಉಂಟಾಗುತ್ತವೆ. ಆದ್ದರಿಂದ ಮನಸ್ಸನ್ನು ಮೊದಲು ಪವಿತ್ರಗೊಳಿಸಬೇಕು. ಮನಸ್ಸು ಚಂಚಲಸ್ವಭಾವವುಳ್ಳದ್ದು, ವಿಷಯದಿಂದ ವಿಷಯಕ್ಕೆ, ವಸ್ತುವಿನಿಂದ ವಸ್ತುವಿಗೆ. ವಿಚಾರದಿಂದ ವಿಚಾರಕ್ಕೆ ಹಾರಾಡುವುದೇ ಅದರ ಸ್ವಭಾವವಾಗಿದೆ. ಅರ್ಜುನನು ಶ್ರೀಕೃಷ್ಣನನ್ನು 'ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ । ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ' ॥ ಎಂದು ಪ್ರಶ್ನೆ ಮಾಡುತ್ತಾನೆ. 'ಧರೆಯನಜಿನದಂತೆ ಸುರುಳಲಹುದು, ಮೇರುಗಿರಿಯನಂಗುಲಿಯು ಕೊನೆಯಲಾಳಲಹುದು. ಶರಧಿಯನ್ನೊಮ್ಮೆ ಪಾನ ಮಾಡಬಹುದು, ಸ್ಥಿತಿರಿಸಬಾರದು ನಿಮಿಷಾರ್ಧಮೀಮನವನು' ಎಂದು ನಿಜಗುಣ ಶಿವಯೋಗಿಗಳು ಹಾಡಿದ್ದಾರೆ. 'ಮನವೆಂಬ ಮರ್ಕಟನ ತಡೆಯಲಾರೆನು ದೇವ। ಎನಿತಿದರ ಚಪಲಚೇಷ್ಟೆಗಳ ವರ್ಣಿಸಲಿ' ಎಂದು ಸರ್ಪಭೂಷಣ ಶಿವಯೋಗಿಗಳೂ, 'ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು, ಹೊಂದಿದಲ್ಲಿ ಹೊಂದಲೀಯದೆನ್ನ ಮನವು, ನಿಂದಲ್ಲಿ ನಿಲ್ಲಲೀಯದೆನ್ನ ಮನವು' ಎಂದು ಬಸವಣ್ಣನವರೂ ಮನಸ್ಸಿನ ಚಂಚಲ ಸ್ವಭಾವವನ್ನು ಕುರಿತು ಹೇಳಿದ್ದಾರೆ. ಈ ಪ್ರಕಾರವಾಗಿ ಮನೋನಿಗ್ರಹವು ಅಸಾಧ್ಯವಾದರೂ ನಿರಂತರ ಅಭ್ಯಾಸದಿಂದ ಅದನ್ನು ಹದಗೊಳಿಸಬಹುದು. ಅದರ ಸ್ವಚ್ಛಂದ ಪ್ರವೃತ್ತಿಯನ್ನು ನಿರೋಧಿಸಬಹುದು. ಮನಸ್ಸಿನ ಪ್ರವೃತ್ತಿಯನ್ನು ತಡೆಯುವುದೆಂದರೆ ಅದನ್ನು ನಿರ್ವಿಷಯಕವಾಗಿ ಮಾಡುವುದೆಂದಲ್ಲ. ಮನಸ್ಸು ನಿರ್ವಿಷಯಕವಾಗಲಾರದು. ಅದರ ಪ್ರವೃತ್ತಿಯು ಸದ್ವಿಷಯಗಳ ಚಿಂತನೆಯಲ್ಲಿ ಪ್ರವಹಿಸುವುದೇ ಮನೋನಿಗ್ರಹ. ಈ ಮೂಲಕ ವ್ಯಕ್ತಿ ತನ್ನಲ್ಲಿರುವ ಶಕ್ತಿಸಾಮರ್ಥ್ಯಗಳನ್ನು ಬಳಸಿಕೊಂಡು ಅಭಿವೃದ್ಧಿ ಹೊಂದಬಹುದು. ಅನೇಕ ಮಹಾನುಭಾವರು ಶ್ರೇಷ್ಠ ಮಟ್ಟದ ವ್ಯಕ್ತಿಗಳಾಗಲು ಇದನ್ನು ಸಾಧನವನ್ನಾಗಿ ಮಾಡಿಕೊಂಡು ಉದಾತ್ತವಾದ ಸಂದೇಶಗಳನ್ನು ಜಗತ್ತಿಗೆ ನೀಡಿದ್ದಾರೆ. ಈ ಸಂದೇಶಗಳು ನಮಗೆ ಎಲ್ಲಾ ಕಾಲಕ್ಕೂ ದಾರಿ ದೀಪಗಳಾಗಿವೆ.

(ಫೆಬ್ರುವರಿ–೧೯೭೯)

## ೩೩. ಮಹಾನುಭಾವರ ಆದರ್ಶ

ಹಿಂದೆ ಭರತಖಂಡದ ಬದುಕು ಬಹು ಸುಂದರವಾಗಿತ್ತು. ಪರಿಪೂರ್ಣವಾಗಿತ್ತು. ಯಾವ ನಮ್ಮ ಗ್ರಾಮಾಂತರ ಜನ ತುಂಬು ಬದುಕನ್ನು ಸಾಗಿಸುತ್ತಿದ್ದರೋ. ಯಾವ ಹಳ್ಳಿಗಳು ಭರತಖಂಡದ ಸಂಸ್ಕೃತಿಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬರುವುದರಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದವೋ ಅಂಥ ಹಳ್ಳಿಗಳಿಗೆ ಇಂದು ಯಾವ ದುರದೃಷ್ಟವೋ ಏನೋ ನಗರದ ಅತಿ ನಾಗರೀಕತೆಯ ಕೆಟ್ಟ ಸೋಂಕು ತಗಲಿ ಅವುಗಳ ಬದುಕೂ ಹದಗೆಟ್ಟಿದೆ : ಕೃತಕವಾಗಿದೆ. ಹಿಂದೆ ನಮ್ಮ ಹಳ್ಳಿಯ ಜನ. ಜಾತಿ ಮತ ಭೇದವಿಲ್ಲದೆ ಮಧುರ ಬಾಂಧವ್ಯದಿಂದ ಒಟ್ಟಾಗಿ ಕಲೆತು ಸುಗ್ಗಿಯ ಸಮಯದಲ್ಲಿ ಆಚರಿಸುತ್ತಿದ್ದ ಕುಣಿತ. ಕೋಲಾಟ, ಜನಪದನೃತ್ಯ, ನಾಟಕಾಭಿನಯ, ದೇವರ ಉತ್ಸವ, ಮಹಾತ್ಮರ ಜಯಂತ್ಯಾಚರಣೆ–ಮುಂತಾದ ಸಾಂಪ್ರದಾಯಿಕ ಕಾರ್ಯಕ್ರಮಗಳು ಕಣ್ಮರೆಯಾಗುತ್ತಿವೆ. ಅವುಗಳಿಗೆ ಬದಲಾಗಿ ಎಲ್ಲೆಲ್ಲು ಆಡಂಬರದ, ಗದ್ದಲದ ಸಮಾರಂಭಗಳು ಜರುಗುತ್ತಿವೆ. ಇಂದು ಪ್ರತಿಯೊಬ್ಬನೂ ಸಾಮಾನ್ಯಸುಖದ ಪ್ರಾಪ್ತಿಗಾಗಿ ತೊಳಲಾಡುತ್ತಿದ್ದಾನೆ. ಬಾಹ್ಯವಸ್ತುಗಳನ್ನು ಭೋಗಿಸುವುದರಿಂದ ಬರುವ ತಾತ್ಕಾಲಿಕ ಸುಖವನ್ನು ಪರಮಸುಖವೆಂದು ನಂಬಿ ಭೋಗಲಾಲಸೆಯಲ್ಲಿ ಮಗ್ನನಾಗಿ, ತನ್ನ ಬಾಳನ್ನು ಹಾಳು ಮಾಡಿಕೊಳ್ಳುತ್ತಿದ್ದಾನೆ. ಇಂದ್ರಿಯ ಸುಖಗಳ ಕಲ್ಪನಾಸಾಮ್ರಾಜ್ಯದಲ್ಲಿ ವಿಹರಿಸುತ್ತಿರುವ ಅವನು ಕ್ಷಣಭಂಗುರಂಗಳೂ ರಮಣೀಯಗಳೂ ಪರಿಣಾಮವಿರಸಗಳೂ ಆದ ಸುಖಗಳನ್ನು ನಂಬಿ, ಭ್ರಾಂತನಾಗಿ ಕಡೆಗೆ ಅನಂತದುಃಖಗಳನ್ನು ಅನುಭವಿಸುತ್ತಿದ್ದಾನೆ. ಈ ತಪ್ಪು ಕಲ್ಪನೆಯ ವಿಷಮದೃಷ್ಟಿ ಮಾಯವಾಗಿ ಜಗದುದ್ಧಾರವಾಗಬೇಕಾದರೆ, ಮಹಾನುಭಾವರು ಸಾರಿ ಹೋಗಿರುವ ದಿವ್ಯ ಸಂದೇಶಗಳನ್ನು ಅರಿತು ಆಚರಿಸುವ ದೃಢಪ್ರಯತ್ನ ಮಾಡಿದಾಗ ಮಾತ್ರ ಸಾಧ್ಯ. ಅದಕ್ಕಾಗಿ ನಮ್ಮ ಹಳ್ಳಿಯ ಬಂಧುಗಳು ಸಂಘಟಿತರಾಗಿ ಮೇಲಿಂದ ಮೇಲೆ ದೊಡ್ಡವರ ಆದರ್ಶಗಳನ್ನು ಅರಿಯಲು ಅವರ ಜಯಂತ್ಯುತ್ಸವಾದಿಗಳನ್ನು ಏರ್ಪಡಿಸುವುದು ಸೂಕ್ತ. (ಜೂನ್–೧೯೭೯)

## ೩೪. ದುಡಿಮೆ*

ಭರತಖಂಡ ಸ್ವಾತಂತ್ರ್ಯಗಳಿಸಿದ ಮೇಲೆ ಸರ್ಕಾರ ಮತ್ತು ರಾಷ್ಟ್ರನಾಯಕರು ದೇಶವನ್ನು ಮುಂದುವರಿಸಬೇಕು, ಜನತೆಗೆ ಕಲ್ಯಾಣವಾಗಬೇಕು, ಈ ದೃಷ್ಟಿಯಿಂದ ಕರ್ತವ್ಯಮುಖರಾಗಬೇಕು ನಿಜ. ಆದರೆ ಅವರು ಯಾವ ಪ್ರಯತ್ನವೆಲ್ಲವನ್ನೂ

* ಬೆಂಗಳೂರು ಆಕಾಶವಾಣಿ ಕೃಪೆಯಿಂದ (ಚಿಂತನ ವಿಭಾಗ)

ನಡೆಸಿದ್ದಾರೋ ಆ ಪ್ರಯತ್ನ ಸಾಕಷ್ಟು ಫಲಕಾರಿಯಾಗಿಲ್ಲ, ಎಂಬ ಅಂಶವೂ ಕೂಡ ಸತ್ಯವಾಗಿದೆ. ಮುಖ್ಯವಾದ ಕಾರಣ ಏನು? ಎನ್ನುವುದನ್ನು ಪರಿಶೀಲನೆ ಮಾಡಲು ಪ್ರಯತ್ನಿಸಿದಾಗ ಸ್ಪಷ್ಟವಾಗಿ ಕಾಣತಕ್ಕ ಒಂದು ವಿಚಾರ : ನಮ್ಮ ಜನತೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕರ್ತವ್ಯಪ್ರಜ್ಞೆ ಜಾಗ್ರತವಾಗದಿರುವುದೇ ಆಗಿದೆ. ಸ್ವಾತಂತ್ರ್ಯ ಬಂದಮೇಲೆ ಬಹುತೇಕ ಜನಗಳು ಒಂದು ವಿಧ ವಾದ ಭ್ರಾಂತಿಯಲ್ಲಿದ್ದಾರೆ. ಶ್ರಮ ಕಡಿಮೆಯಾಗಬೇಕು. ಲಾಭ ಜಾಸ್ತಿಯಾಗಬೇಕು. ಎಲ್ಲಾ ಕ್ಷೇತ್ರಗಳಲ್ಲಿಯೂ ಕೂಡ ಅತ್ಯಂತ ಕಡಿಮೆ ಶ್ರಮದಿಂದ ಹೆಚ್ಚಿಗೆ ಲಾಭ ಬರಬೇಕೆಂಬ ತಿಳುವಳಿಕೆ ವ್ಯಾಪಕವಾಗಿ ಪರಡಿ ದೇಶಕ್ಕೆ ಮಹಾಅಪಾಯವನ್ನುಂಟುಮಾಡು ತ್ತದೆ. ಪ್ರಾಯಶಃ ಯಾವ ಜನಾಂಗವಾಗಲಿ, ರಾಷ್ಟ್ರವಾಗಲಿ ಮುಂದುವರಿಯಬೇಕಾದರೆ ಕರ್ತವ್ಯಪ್ರಜ್ಞೆ ಜಾಗ್ರತವಾಗಬೇಕು. ಕಾಯಕನಿಷ್ಠೆ ಬೆಳೆಯಬೇಕು, ಎಲ್ಲರೂ ಕಾಯಕಶೀಲರಾಗುವ ಪ್ರಜ್ಞಾವಂತರಾಗಬೇಕು ಮಾತ್ರವಲ್ಲ: ಸ್ವಯಂ ಆಚರಣೆಯುಳ್ಳವ ರಾಗಬೇಕು. ಆಗಲೇನೇ ಉತ್ಪಾದನೆ ಜಾಸ್ತಿಯಾಗಿ ದೇಶಕಲ್ಯಾಣವಾಗುವುದು. ಈ ಒಂದು ಮಹಾತತ್ತ್ವವನ್ನು ಬಸವಣ್ಣ ನವರು ಎಂಟುನೂರು ವರ್ಷಗಳ ಹಿಂದೆಯೇನೆ 'ಕಾಯಕವೇ ಕೈಲಾಸ' ಎಂಬ ಸೂತ್ರವನ್ನು ಜನತೆಗೆ ಪರಿಚಯ ಮಾಡಿಕೊಟ್ಟರು. ವ್ಯಕ್ತಿಯಾಗಲೀ. ಸಮಾಜವಾಗಲೀ. ರಾಷ್ಟ್ರವಾಗಲೀ ನಿಜವಾದ ಪ್ರಯತ್ನ ಹೊಂದಬೇಕಾದರೆ ಮೂರು ಮೂಲಭೂತವಾಗಿರ ತಕ್ಕಂಥ ತತ್ತ್ವಗಳು ಬೇಕು. ಪ್ರಪ್ರಥಮವಾಗಿ ಆ ವ್ಯಕ್ತಿಯಲ್ಲಿ, ಸಮಾಜದಲ್ಲಿ, ಅಥವಾ ರಾಷ್ಟ್ರದಲ್ಲಿ ನಾವು ಮುಂದುವರಿಯ ಬೇಕು, ಎಂಬತಕ್ಕಂಥ ಸಹಜವಾದ ಆಕಾಂಕ್ಷೆ ಉದಯವಾಗಬೇಕು. ೨ನೆಯದು ಕರ್ತವ್ಯನಿಷ್ಠೆ : ತನ್ನ ಜೀವನಾವಧಿಯಲ್ಲಿ ನಿಮಿಷ ನಿಮಿಷವನ್ನು ವ್ಯರ್ಥಮಾಡದೆ ಒಂದಲ್ಲ ಒಂದು ರೀತಿಯ ಕಾಯಕವನ್ನು ಮಾಡತಕ್ಕಂಥ ಸ್ಥಿರಸಂಕಲ್ಪವುಳ್ಳವನಾಗಬೇಕು. ಮೂರನೆಯದು ಉತ್ಸಾಹ ಶಕ್ತಿ: ಅಂದರೆ, ಒಂದು ಕಾರ್ಯವನ್ನು ಕೈಕೊಂಡರೆ ಅದನ್ನು ಮುಂದುವರಿಸುವಾಗ ಎಷ್ಟೇ ಎಡರು ತೊಡರುಗಳು ಉಂಟಾದರೂ ಅಂಜದೆ, ಅಳುಕದೆ. ವಿಘ್ನಗಳನ್ನು ಸಹಿಸಿಕೊಂಡು ಮುಂದುವರೆದು ಗುರಿಯನ್ನು ಸಾಧನೆ ಮಾಡುವುದು ಈ ಮೂರು ಶಕ್ತಿಗಳು ಒಟ್ಟುಗೂಡಿದರೆ ಮಾತ್ರ ನಿಜವಾದ ಪ್ರಗತಿಯಾದೀತು. ಯಾರೇ ಆಗಲಿ, ಯಾವ ರಾಷ್ಟ್ರ, ರಾಜ್ಯ, ಅಥವಾ ಸಂಸ್ಥೆಯಾಗಲಿ ಈ ಮೂಲಭೂತವಾಗಿರತಕ್ಕ ಶಕ್ತಿಗಳನ್ನು ಬಳಸುವ ಪ್ರಯತ್ನ ಮಾಡಿದರೆ ಅವರು ಪ್ರಪಂಚ ದಲ್ಲಿ ಬಾಳಲು ಸಮರ್ಥರಾಗುತ್ತಾರೆ. ಇಲ್ಲದಿದ್ದರೆ ರಾಷ್ಟ್ರದ ವಿನಾಶಕ್ಕೆ ಕಾರಣವಾಗುತ್ತದೆ ಎಂಬ ಅಂಶವನ್ನು ಯಾರೂಮರೆಯ ತಕ್ಕಂಥದ್ದಲ್ಲ. ಆದ್ದರಿಂದಲೇ ನಮ್ಮ ಸಂಸ್ಕೃತಿಯಲ್ಲಿ ಈ ಮೂರಕ್ಕೂ ಮಿಗಿಲಾದ ಸ್ಥಾನವನ್ನು ಕೊಟ್ಟು ಸಮಾಜವನ್ನು ಜಾಗೃತವನ್ನಾಗಿ ಮಾಡುವ ಪ್ರಯತ್ನಮಾಡಬೇಕು.

## ೩೫. ಕುಟುಂಬ ಕಲ್ಯಾಣ

ಇದು ನಮ್ಮ ದೇಶದ ಇಂದಿನ ಪರಿಸ್ಥಿತಿಯಲ್ಲಿ ಒಂದು ಮುಖ್ಯ ಸಮಸ್ಯೆಯಾಗಿದೆ. ಜನಸಂಖ್ಯೆ ವಿಶೇಷವಾಗಿ ಬೆಳೆಯುತ್ತಾ ಇದೆ. ಹೀಗೆಯೇ ಬೆಳವಣಿಗೆಯಾದರೆ ನಮ್ಮ ದೇಶದ ಸಂಪನ್ಮೂಲಗಳು ಎಲ್ಲ ಜನರಿಗೂ ಬೇಕಾಗತಕ್ಕಂತ ಸೌಕರ್ಯಗಳನ್ನು ಒದಗಿಸಿಕೊಡುವಷ್ಟು ಚೈತನ್ಯದಲ್ಲಿಲ್ಲ. ಇಡಿ ಜನತೆ ಸುಖವಾಗಿ, ಶಾಂತವಾಗಿ, ಸಮೃದ್ಧವಾಗಿ ಬಾಳ್ವೆ ಮಾಡಬೇಕಾದರೆ, ಪ್ರಜಾ ಸಂಖ್ಯೆಯನ್ನು ಮಿತಗೊಳಿಸುವುದು ಅವಶ್ಯವೆಂದೆನಿಸುತ್ತದೆ. ಈ ಬಗ್ಗೆ ಹಲವಾರು ವಿಧವಾದ ಭಿನ್ನಾಭಿಪ್ರಾಯಗಳು ಇರುವುದು ಸಹಜ. ಒಂದು ಅಂಶವನ್ನು ಮನವರಿಕೆ ಮಾಡಿಕೊಳ್ಳಬಹುದು. ಹಿಂದಿನ ಕಾಲದಲ್ಲಿ ಯೋಜನೆ ಇತ್ತೆ ? ಎಂಬ ಪ್ರಶ್ನೆ ಉದ ಯವಾಗುತ್ತಲಿದೆ. ಅಂದಿನ ಪರಿಸ್ಥಿತಿ ಇಂದಿಗಿಂತ ತುಂಬಾ ಭಿನ್ನವಾಗಿತ್ತು. ಜನಸಂಖ್ಯೆ ಪರಿಮಿತವಾಗಿತ್ತು. ದೇಶ ರಕ್ಷಣೆ ಮಾಡುವ ಶಕ್ತಿ ಇತ್ತು. ಎಲ್ಲರೂ ನೆಮ್ಮದಿಯಾಗಿ ಜೀವನ ಮಾಡುವ ವಾತಾವರಣವೂ ಇತ್ತು. ಈ ಒಂದು ಯೋಜನೆಯನ್ನು ಜಾರಿಗೆ ತರಬೇಕಾದ ಪರಿಸ್ಥಿತಿಯೂ ಇರಲಿಲ್ಲ. ಮತ್ತೊಂದು ಮುಖ್ಯವಾದ ವಿಷಯವೆಂದರೆ. ನಮ್ಮ ಸಂಸ್ಕೃತಿಯ ವಿಷಯವನ್ನು ಆಳ ವಾಗಿ ಅವಲೋಕನ ಮಾಡಿದಾಗ ಒಂದು ಅಂಶ ಚೆನ್ನಾಗಿ ವ್ಯಕ್ತವಾಗುತ್ತದೆ. ಪ್ರಾಯಃ ಇಂದಿನ ಜನತೆಗಿಂತಲೂ ಕೂಡ ಹಿಂದಿನ ಕಾಲದಲ್ಲಿ ಜನರು ಹೆಚ್ಚು ಸಂಯಮವುಳ್ಳವರಾಗಿದ್ದರು. ಆ ಶಕ್ತಿಯನ್ನು ಸಂಚಯ ಮಾಡಿಕೊಂಡಿದ್ದರು. ಬಹುತೇಕ ಜನತೆಯಲ್ಲಿ ಆ ಒಂದು ತತ್ತ್ವ ಪರಿಪಾಲನೆ ಸ್ಪಷ್ಟವಾಗಿ ಗೋಚರವಾಗುತ್ತ ಇತ್ತು. ಆದರೆ ಇಂದು ವಾತಾವರಣ ತುಂಬಾ ಭಿನ್ನವಾಗಿದೆ. ಮನುಷ್ಯ ಆ ಶಕ್ತಿಯನ್ನು ಕಳೆದುಕೊಂಡಿದ್ದಾನೆ. ಅವನ ವ್ಯಾಪಾರವೆಲ್ಲವೂ ಕೂಡ ಕೇವಲ ಬಹಿರ್ಮುಖಿಯಾಗಿದೆ. ಇಂತಹ ಒಂದು ವಾತಾವರಣ ಎಲ್ಲಾ ಕಡೆ ವ್ಯಾಪಕವಾಗಿರುವಾಗ ಯಾವುದಾದರೊಂದು ಯೋಜನೆಯನ್ನು ಮಾಡಿ ಜನಸಂಖ್ಯೆಯನ್ನು ಪರಿ ಮಿತಗೊಳಿಸುವುದು ಅತ್ಯವಶ್ಯಕವೆನ್ನಿಸುತ್ತದೆ. ಈ ಯೋಜನೆಯನ್ನು ಕಾರ್ಯಗತ ಮಾಡುವಾಗ ಯಾರನ್ನೇ ಆಗಲಿ, ಕಡ್ಡಾಯ ಮಾಡುವುದು ಉಚಿತವೆನಿಸುವುದಿಲ್ಲ. ಮಾಪಲು ಹಲವಾರು ಸಾಧನೆಗಳಿಂದ ಜನರಿಗೆ ಸೂಕ್ತವಾಗಿರತಕ್ಕಂಥ ತಿಳುವಳಿಕೆಯನ್ನು ಕೊಟ್ಟು ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವುಂಟಾಗುವಂತೆ ಮಾಡಿ ಸ್ವಯಂ ಪ್ರೇರಿತರಾಗಿ ಯೋಜನೆಯನ್ನು ಸ್ವಾಗತಿಸು ವಂತಾಗಬೇಕು. ಬಲತ್ಕಾರವಾಗಿ ಯೋಜನೆಯನ್ನು ಹೊರಿಸತಕ್ಕಂಥಾದ್ದು ಹಿತವಾದುದಲ್ಲ. ಅದರಿಂದ ಬಹಳ ಮಟ್ಟಿಗೆ ದುಷ್ಪರಿಣಾಮಗಳುಂಟಾಗಬಹುದು ಅಂತ ಕಾಣುತ್ತೆ. ಇಂದು ಎಷ್ಟು ಭೀಕರವಾಗಿರತಕ್ಕಂಥ ಬಡತನ ನಮ್ಮ ದೇಶದಲ್ಲಿ ಕಾಣುತ್ತ

ಇವೆಯೋ ಆ ಚಿತ್ರವನ್ನು ಚೆನ್ನಾಗಿ ವಿಮರ್ಶೆ ಮಾಡಿದಾಗ ಬಡ ಕುಟುಂಬಗಳ ಜೀವನ ಪರಿಚಯವನ್ನು ಮಾಡಿಕೊಂಡಾಗ ಅತ್ಯಾವಶ್ಯಕವಾಗಿ ಈ ಯೋಜನೆಯು ಕಾರ್ಯಗತವಾಗಬೇಕು. ಎಂಬುವನ್ನು ಒಪ್ಪಿಕೊಳ್ಳಬೇಕು. ಮತ್ತು ಸಾಮಾನ್ಯ ಜನತೆಯ ಮೇಲೂ ಕೂಡ ಯೋಜನೆಯ ಬಗ್ಗೆ ಹೆಚ್ಚು ಗೌರವ ಉಂಟಾಗುವಂಥ ರೀತಿಯಲ್ಲಿ ಪ್ರಚಾರಕಾರ್ಯವನ್ನು ಕೈಗೊಳ್ಳಬೇಕು. ಮೇಲಿಂದ ಮೇಲೆ ಜನಗಳಿಗೆ ಈ ವಿಚಾರಗಳ ಮಹತ್ವವನ್ನು ತಿಳಿಸಿ ಅದರ ಪ್ರಾಮುಖ್ಯತೆಯನ್ನು ಅವಶ್ಯಕತೆಯನ್ನು ಮನವರಿಕೆ ಮಾಡಿಕೊಟ್ಟಾಗ ಬಹಳ ಮಟ್ಟಿಗೆ ಜನಗಳು ತಾವಾಗಿಯೇ ಈ ಒಂದು ಯೋಜನೆಯ ಬಗೆಗೆ ಆಸಕ್ತಿ ವಹಿಸಬಹುದೆಂದು ಗೋಚರವಾಗುತ್ತದೆ. ಆದ್ದರಿಂದ ಜನಗಳ ಮೇಲೆ ಪ್ರಭಾವವನ್ನು ಬೀರಿ, ಅವರ ಮನಸ್ಸನ್ನು ಒಲಿಸಿಕೊಂಡು ಯೋಜನೆಯನ್ನು ಕಾರ್ಯಗತ ಮಾಡುವುದು ಇಂದಿನ ಪರಿಸ್ಥಿತಿಯಲ್ಲಿ, ವಾತಾವರಣದಲ್ಲಿ, ಅತ್ಯಾವಶ್ಯಕವಾಗಿದೆ.



# ಶ್ರೀಗಳವರ ಕೆಲವು ಲೇಖನಗಳು

[ಶ್ರೀಗಳವರು ಲೇಖನ ವ್ಯವಸಾಯದಲ್ಲಿ ತುಂಬಾ ಅಭಿರುಚಿಯುಳ್ಳವರು. ಆದರೆ ಕಾರ್ಯಬಾಹುಳ್ಯದಲ್ಲಿ ಅವರಿಗೆ ಬಿಡುವು ಸಿಕ್ಕು ವುದೇ ದುರ್ಲಭ. ಹೀಗಾಗಿ ಅವರು ಹೆಚ್ಚಾಗಿ ಲೇಖನ ಬರೆಯಲಾಗಲಿಲ್ಲ. ಅನೇಕ ಗ್ರಂಥಗಳಿಗೆ ಮುನ್ನುಡಿ, ಸಂದೇಶ ರೂಪದಲ್ಲಿ ಅವರು ಲೇಖನ ಬರೆದಿದ್ದಾರೆ. ಅವಾವುವನ್ನೂ ನಾವು ಸಂಗ್ರಹಿಸಲಿಲ್ಲ. ಪ್ರಕೃತ ಒಂದು ಮುನ್ನುಡಿಯನ್ನು ಇನ್ನಿತರ ಎರಡು ಲೇಖನಗಳನ್ನು ಮಾದರಿಗಾಗಿ ಈ ಮುಂದೆ ಕೊಟ್ಟಿದ್ದೇವೆ. ಇಷ್ಟರ ಮೇಲಿಂದಲೇ ಶ್ರೀಗಳವರ ಲೇಖನ ಬರವಣಿಗೆಯ ಒಂದು ರೀತಿ ಯನ್ನು ಕಾಣಬಹುದಾಗಿದೆ]

## ೧. ಇಂದ್ರಿಯ ನಿಗ್ರಹ

ಪ್ರಪಂಚದಲ್ಲಿ ಸರ್ವಜೀವಿಗಳಿಗೂ ಸುಖದ ಬಯಕೆಯು ಸ್ವಾಭಾವಿಕವಾದುದು. ಜೀವಕೋಟಿಯಲ್ಲಿ ಅಗ್ರಸ್ಥಾನವನ್ನು ಗಳಿಸಿರುವ ಮಾನವನಾದರೋ ವಿಶಿಷ್ಟ ವ್ಯಾಪಾರಗಳಲ್ಲಿ ಪ್ರವೃತ್ತನಾಗಿರುವುದು ಸುಖದ ಬಯಕೆಯಿಂದಲೇ. ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟಿರುವ ಕ್ರಿಯಾಶಕ್ತಿ ವಾಕ್‌ಶಕ್ತಿ ಧೀಶಕ್ತಿಗಳೆಲ್ಲವನ್ನೂ ಬೆಳೆಸಿಕೊಂಡು. ಅವುಗಳನ್ನು ಅಧಿಕಸುಖಪ್ರಾಪ್ತಿಗಾಗಿ ವಿನಿಯೋಗಿಸುತ್ತಾನೆ. ಬಂದದ್ದನ್ನು ಕಿರಿದುಮಾಡಿ, ಬಾರದ್ದನ್ನು ಹಿರಿದುಮಾಡಿ ತೃಪ್ತಿಯಿಲ್ಲದೆ ಅಲಭ್ಯವಾದುದನ್ನೇ ಇಚ್ಛಿಸಿ ಧಾವಿಸುತ್ತಾನೆ. ವೈಜ್ಞಾನಿಕರು ಸೃಷ್ಟಿಯ ಗರ್ಭದಲ್ಲಿ ಅಡಗಿರುವ ಅದ್ಭುತ ಶಕ್ತಿಗಳನ್ನು ಕಂಡುಹಿಡಿದು, ಅದನ್ನು ಹೊರಗೆಡವಿ ಅನಂತ ಸಂಶೋಧನೆಗಳನ್ನು ಮಾಡಿ ಯಂತ್ರಗಳನ್ನು ನಿರ್ಮಾಣ ಮಾಡುತ್ತಿರುವುದರ ಉದ್ದೇಶವೂ ಸುಖದ ಬಯಕೆಗಾಗಿಯೆನ್ನು ವುದು, ಸರ್ವವೇದ್ಯವಾಗಿದೆ. ಅಲ್ಪಶ್ರಮದಿಂದ ಅಧಿಕಸುಖವನ್ನು ಹೊಂದಬೇಕೆಂಬ ಆಕಾಂಕ್ಷೆಯಿಂದ ಹಿಂದೆ ಅವನಿಗೆ ಪ್ರಾಪ್ತ ವಾಗದಿರುವ ಸುಖಗಳನ್ನು ದೊರಕಿಸಿಕೊಡುವ ಇಚ್ಛೆಯಿಂದ ಮನುಷ್ಯನಿಗೆ ಯಂತ್ರೋಪಕರಣಗಳಿಂದ ನೆರವನ್ನು ಒದಗಿಸಿಕೊಟ್ಟು ಅವನ ಸ್ವಾಭಾವಿಕ ಬಯಕೆಯನ್ನು ಪೂರೈಸುವ ಕೀರ್ತಿಯನ್ನು ಹೊಂದಿರುವುದಾಗಿ ಸಂತುಷ್ಟನಾಗಿದ್ದಾನೆ. ಎಲ್ಲ ರಾಷ್ಟ್ರಗಳೂ. ಎಲ್ಲ ಜನಾಂಗಗಳೂ ಅನುಭವಿಸುತ್ತಿರುವ ಸುಖವನ್ನು ಸೂರೆಗೊಂಡು ಕೆಲವೇ ಜನಾಂಗಗಳ ಸ್ವತ್ತಾಗಿ ಮಾಡಬೇಕೆನ್ನುವ ಹಾಗೂ ಎಲ್ಲರನ್ನೂ ಪಾದಾಕ್ರಾಂತರನ್ನಾಗಿ ಮಾಡಿ ತಾವು ಮತ್ತು ತಮ್ಮ ಜನಾಂಗ ಅತ್ಯುನ್ನತ ಸುಖವನ್ನು ಹೊಂದಬೇಕೆಂಬ ರಾಕ್ಷಸೀ ಮಹತ್ವಾಕಾಂಕ್ಷೆಯೇ ಭಯಂಕರವಾದ ಮಾರಣಾಸ್ತ್ರಗಳ ಸಂಶೋಧನೆಗೂ ನಿರ್ಮಾಣಕ್ಕೂ ಮೂಲಹೇತುವಾಗಿದೆ.

ಮಾನವನು ಚರ್ಮಚಕ್ಷುವಿಗೆ ಗೋಚರವಾಗುತ್ತಿರುವ ಇಂದ್ರಿಯಾನುಭವದ ವ್ಯಾಪ್ತಿಗೆ ಒಳಪಟ್ಟಿರುವ ಭೌತಿಕವಸ್ತು ಗಳಿಂದಲೇ, ಭೋಗಜೀವನದಿಂದಲೇ ನಿಜವಾದ ಸುಖವು ಪ್ರಾಪ್ತಿಯಾಗುವುದೆನ್ನುವ ಹಂಬಲವುಳ್ಳವನಾಗಿರುತ್ತಾನೆ. ಅಂತೆಯೇ ಅವನ ಧ್ಯೇಯಧೋರಣೆಗಳು. ಕಾರ್ಯಚಟುವಟಿಕೆಗಳು, ಇಂದು ಗೋಚರವಾಗುತ್ತಿರುವ ರೂಪವನ್ನು ತಾಳಿವೆ. ವಾಸ್ತವಿಕವಾಗಿ ಮನುಷ್ಯಸಾಮಾನ್ಯನು ಇಂದು ಹೊಂದುತ್ತಿರುವ ತಿಳುವಳಿಕೆಯು ಸಾಧುವಾಗಿರುವುವೇ ? ಅವನು ಗಮಿಸುತ್ತಿರುವ ಮಾರ್ಗದಲ್ಲಿ ಮುಂದುವರೆದರೆ ಅವನ ಇಚ್ಛೆಯ ವಸ್ತುವಾದ ಸುಖದ ಅತ್ಯಂತಿಕ ಕಲ್ಪನೆಯು ಅವನಿಗೆ ಪೂರೈಸಬಹುದೇ ? ಎನ್ನುವುದು ವಿಚಾ ರಾರ್ಹವಾದ ಅಂಶ.

ಸಾಮಾನ್ಯ ಮನುಷ್ಯನ ದೃಷ್ಟಿಯಲ್ಲಿ ಸುಖವೆಂದು ಭಾವಿಸುತ್ತಿರುವ ವಸ್ತುವಿನ ಪ್ರಾಪ್ತಿಗಾಗಿ ಅವನ ಇಂದ್ರಿಯಗಳು ಸಾಧನೆಗಳಾಗಿರುತ್ತವೆ. ಬಾಹ್ಯವಸ್ತುಗಳನ್ನು ಭೋಗಿಸುವುದರಿಂದ ಉಂಟಾಗುವ ತಾತ್ಕಾಲಿಕ ಸುಖವನ್ನು ಪರಮ ಸುಖವೆಂದು ನಂಬಿ ಭೋಗಲಾಲಸೆಯಲ್ಲಿ ಮಗ್ನನಾಗಿ ತನ್ನ ಬಾಳನ್ನು ಹಾಳು ಮಾಡಿಕೊಳ್ಳುತ್ತಿದ್ದಾನೆ. ಐಂದ್ರಿಯಿಕ ಸುಖದ ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಿರುವ ಮನುಷ್ಯನು ಕ್ಷಣಭಂಗುರಗಳೂ ಅಪಾತರಮಣೀಯಗಳೂ ಪರಿಣಾಮವಿರಸಗಳೂ ಆದ ಸುಖಗಳನ್ನು ನಂಬಿ ಭ್ರಾಂತನಾಗಿ ಕಡೆಗೆ ಅನಂತದುಃಖಗಳನ್ನೂ ಅನುಭವಿಸುತ್ತಾನೆ. ಈ ತಪ್ಪು ಕಲ್ಪನೆಯ ವಿಷಮ ದೃಷ್ಟಿಯು ಮಾಯವಾಗಿ ಜಗದುದ್ಧಾರ ಕರ್ತೃಗಳಾದ ಮಹಾನುಭಾವರು ಉಸುರಿರುವ ಅಮರ ಸಂದೇಶಗಳನ್ನು ಅರಿತು ಆಚರಿಸುವ ದೃಢ ಪ್ರಯತ್ನ ಮಾಡದ ಹೊರತು ಮಾನವನಿಗೆ ನಿಜಸುಖವು ಲಭಿಸಲಾರದು. ಸಕಲೇಂದ್ರಿಯಗಳಲ್ಲಿ ವಿಹರಿಸುವ ಮನವ ಸೆಳೆದು ನಿಂದಾತನೇ ಸುಖಿ. ಪಂಚೇಂದ್ರಿಯಗಳಿಚ್ಛೆಯಲ್ಲಿ ಕೀಳು ಮನಗೊಂಡು ಸುಳಿಗೊಂಡವನೇ ದುಃಖಿ. ಮನವು ಬಹಿರ್ಮುಖವಾದರೆ ಅವಿರಳ ಜ್ಞಾನಿಯೆಂದು ನುಡಿದು ನಿಜಸುಖದ ಪ್ರಾಪ್ತಿಗಾಗಿ ಸಂಯಮಿತಜೀವನದಿಂದ ಕೂಡಿದ ಅಂತರಂಗಸಾಧನೆಯು ಅವಶ್ಯಕ ವೆಂದು ಶರಣರು ಸಾರಿರುವರು.

ಸಂಯಮಿತ ಜೀವನವೂ ಬ್ರಹ್ಮಚರ್ಯೆಯೂ ಸುಖದ ಮೂಲಹೇತುಗಳು. ಮಾನವಜೀವಿತದ ಸಾರಸರ್ವಸ್ವವು. ಮಹಾ ಕಲ್ಯಾಣದಾಯಕವು. ಬ್ರಹ್ಮಚರ್ಯೆಯು ವ್ಯಾಪಕವಾದ ಅರ್ಥವುಳ್ಳದ್ದಾಗಿದ್ದರೂ, ಸ್ತ್ರೀಪುರುಷ ಸಂಬಂಧವಾದ ಪ್ರೇಮವ್ಯವ

ಹಾರವಲ್ಲಿ ಅತ್ಯವಶ್ಯಕವಾದ ನಿಯಮ ಪಾಲನೆಯ ವಿಚಾರದಲ್ಲಿ ಜೀವನಸತ್ವವಾದ ವೀರ್ಯಸಂರಕ್ಷಣೆಯ ವಿಚಾರದಲ್ಲಿ ಅದನ್ನು ಬಳಸುವುದು ಒಂದು ಪದ್ಧತಿಯಾಗಿದೆ.

ಧರ್ಮಸಂಸ್ಕೃತಿ ಆಧ್ಯಾತ್ಮಿಕತೆಯ ಪವಿತ್ರ ತತ್ತ್ವಗಳ ಮೇಲೆ ಉಳಿದು ಬೆಳೆದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಾಳನ್ನು ಬೆಳಗಿಸಿಕೊಂಡು ಬಂದಿರುವ ನಮ್ಮೀ ಭರತಖಂಡದಲ್ಲಿ ಪ್ರಾಚೀನ ಕಾಲದಿಂದಲೂ ಬ್ರಹ್ಮಚರ್ಯ ರಕ್ಷಣೆಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದರು. ಜಗತ್ತಿನ ಪ್ರಾಚೀನತಮ ಗ್ರಂಥಗಳಾದ ವೇದಗಳು ಸಹ ಇದರ ಶ್ರೇಷ್ಠತೆಯನ್ನು ಹೊಗಳಿ ಬ್ರಹ್ಮಚರ್ಯೆಯಿಂದಲೇ ಮನುಷ್ಯನ ಸರ್ವಶಕ್ತಿಗಳೂ ಶುದ್ಧವಾಗಿ ಸಾರ್ಥಕತೆಯನ್ನು ಪಡೆಯುವುವೆಂದು ಸಾರಿವೆ. ವೇದಗಳಲ್ಲಿನ ಬ್ರಹ್ಮಚರ್ಯರೂಪೀ ತೇಜಸ್ಸಿನಿಂದಲೇ ರಾಜನು ಪ್ರಜೆಗಳನ್ನು ಸಂರಕ್ಷಣೆಮಾಡುತ್ತಾನೆ. ಆಚಾರ್ಯನು ಬ್ರಹ್ಮಚಾರಿಯಾಗಿರ ತಕ್ಕ ಶಿಷ್ಯನನ್ನು ಇಚ್ಛಿಸುತ್ತಾನೆ. ಬ್ರಹ್ಮಚರ್ಯೆಯಿಂದಲೇ ದೇವತೆಗಳು ಮೃತ್ಯುವನ್ನು ಜಯಿಸಿದರು. ಬ್ರಹ್ಮಚರ್ಯೆಯಿಂದಲೇ ಇಂದ್ರನು ದೇವತೆಗಳಿಗೆ ಸ್ವರ್ಗಸಂಪತ್ತನ್ನು ತಂದುಕೊಟ್ಟನು. ಬ್ರಹ್ಮಚಾರಿಯು ತನ್ನ ತೇಜೋಶಕ್ತಿಯನ್ನು ಪೃಥ್ವಿಯ ಮೇಲೆ ಎರಚುತ್ತಾನೆ. ಈ ಶಕ್ತಿಯಿಂದಲೇ ಸರ್ವವೂ ಜೀವಿಸುತ್ತಿದೆ. 'ಪರಾ' 'ಅಪರಾ' ಎಂಬೆರಡು ಪವಿತ್ರವಾದ ನಿಧಿಗಳು ಬ್ರಹ್ಮ ಚಾರಿಯಿಂದ ರಕ್ಷಣೆ ಮಾಡಲ್ಪಡುತ್ತವೆ. ಬ್ರಹ್ಮಚರ್ಯೆಯಿಂದ ಬ್ರಹ್ಮಜ್ಞಾನ ಪಡೆದ ತಪಸ್ವಿಯು ಇವುಗಳನ್ನು ಸ್ವಾಧೀನಮಾಡಿ ಕೊಳ್ಳುತ್ತಾನೆ. ಈ ಮುಂತಾದ ಇನ್ನೂ ಅನೇಕ ಪವಿತ್ರ ವಾಣಿಗಳು ಬ್ರಹ್ಮಚರ್ಯೆಯ ಹಿರಿಮೆಯನ್ನು ಹೊಗಳಿವೆ.

ನತಪಸ್ತಪ ಇತ್ಯಾಹುರ್ಬ್ರಹ್ಮಚರ್ಯಂ ತಪೋತ್ತಮಂ ।
ಊರ್ಧ್ವರೇತಾ ಭವೇದ್ಯಸ್ತು ಸ ದೇವೋ ನತು ಮಾನುಷಂ ॥

ಬ್ರಹ್ಮಚರ್ಯೆಯೇ ಶ್ರೇಷ್ಠವಾದ ತಪಸ್ಸು. ಬ್ರಹ್ಮಚರ್ಯರಕ್ಷಣೆ ಮಾಡಿಕೊಂಡಿರುವವನು ಮನುಷ್ಯರಲ್ಲಿ ದೇವನು. ಬ್ರಹ್ಮ ಚರ್ಯ ರಕ್ಷಣೆ ಮಾಡದಿರುವುದರಿಂದ ಆಯುಸ್ಸು, ತೇಜಸ್ಸು, ಶಕ್ತಿ, ಪರಾಕ್ರಮ, ಬುದ್ಧಿ, ಸಂಪತ್ತು, ಯಶಸ್ಸು, ಪುಣ್ಯ, ದೇವಾನು ಗ್ರಹ ಎಲ್ಲವೂ ನಾಶವಾಗುತ್ತವೆ. ೨೫ ವರ್ಷಗಳು ಬ್ರಹ್ಮಚರ್ಯೆಯನ್ನು ಪರಿಪಾಲನೆ ಮಾಡುವವನು ಶೀಲಸಂಪನ್ನನೂ ಶಕ್ತಿ ಯುತನೂ ಆಗುತ್ತಾನೆ : ದೀರ್ಘಾಯುವೂ ಆಗುತ್ತಾನೆ. ಬ್ರಹ್ಮಚರ್ಯವೇ ಜೀವನ, ವೀರ್ಯನಾಶವೇ ಮೃತ್ಯು, ಎಂದೂ ಸಾರಿವೆ. ಆರ್ಯೋಕ್ತಿಗಳು ಸಾರಿರುವ ಈ ಬ್ರಹ್ಮಚರ್ಯದ ಮಹತ್ವವನ್ನರಿತು ಸಾಧನೆ ಮಾಡುವ ಸಾಧಕರ ಸಂಖ್ಯೆ ಬೆಳೆದಂತೆಲ್ಲಾ ಜನಾಂಗವು ಸುಸಂಸ್ಕೃತವಾಗಿ ಉನ್ನತಿಯನ್ನು ಹೊಂದುತ್ತದೆ. ದೌರ್ಭಾಗ್ಯವಶಾತ್ ನಮ್ಮೀ ಪುಣ್ಯಭೂಮಿಯನ್ನು ವಿದೇಶೀಯ ರಾಕ್ರಮಣ ಮಾಡಿ ಆಳರಸರಾದ ನಂತರ ನಮ್ಮ ದೇಶಿಯರು ತೇಜೋಹೀನರಾಗಿ, ನಿರ್ವೀರ್ಯರಾಗಿ ತಮ್ಮತನವನ್ನು ತಾವು ಮರೆತು. ವಿಶ್ವಕಲ್ಯಾಣಕ್ಕೆ ಸಾಧಕವಾದ ತಮ್ಮ ಅಪೂರ್ವವಾದ ಸಂಪತ್ತುಗಳನ್ನೆಲ್ಲಾ ತ್ಯಾಜ್ಯ ಮಾಡುತ್ತಾ ಬಂದರು. ವಿದೇಶೀ ಯರ ಅಂಧಾನುಕರಣೆಯಿಂದ ಪರಂಪರಾಗತವಾಗಿ ಬಂದಿದ್ದ ತಮ್ಮ ಶ್ರೇಷ್ಠಗುಣಗಳನ್ನೇ ಭೋಗಲಾಲಸೆಯಿಂದ ಐಂದ್ರಿಯಿಕ ತೃಪ್ತಿಗಾಗಿಯೇ ಸಾಸಾರಿಕ ಜೀವನವನ್ನು ಬಳಸಲು ಅಭ್ಯಸಿಸಿದರು. ಊರ್ಧ್ವಮುಖವಾಗಿ ಪ್ರವಹಿಸುವ ವೀರ್ಯವೇ ತೇಜೋ ರೂಪವಾಗಿ ಓಜೋರೂಪವಾಗಿ ಪರಿಣತಗೊಂಡು ಬ್ರಹ್ಮ ಸಾಕ್ಷಾತ್ಕಾರಕ್ಕೆ ಸಾಧನವಾಗುವುದೆಂಬ ಕಲ್ಪನೆಯನ್ನೂ ಕೂಡ ಅರಿಯದೆ ಅಸಮರ್ಥರಾದರು. ಧರ್ಮಜೀವನದಿಂದ ಉತ್ತೇಜಿತರಾಗಿ ಮಾನವಜೀವನವು ದೇವ ಜೀವನದಲ್ಲಿ ಪರಿಸಮಾಪ್ತವಾಗಬೇಕೆ ನ್ನುವ ಉಚ್ಚತಮ ಧ್ಯೇಯವನ್ನು ಮರೆತು ಕಾಲ್ಪನಿಕ ಸುಖಲಾಲಸೆಯ ಕೃತಕಜೀವನದಲ್ಲಿ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗ ಮಾಡುತ್ತಾ ಮೃಗಜೀವನದ ಮಟ್ಟಕ್ಕೆ ಇಳಿದರು.

ಶಾಂತಿಯ ಸ್ವರೂಪವನ್ನರಿತು ಶಾಂತಿ ಸಾಧನೆಯನ್ನು ಮಾಡಿ ಶಾಂತಮೂರ್ತಿಗಳಾದ ಜಗತ್ತಿಗೆ ಶಾಂತಿಸಂದೇಶವನ್ನು ಬೀರಿ ಶಾಂತಿಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದ ಆರ್ಯ ಋಷಿಗಳ, ಸಾಧುಗಳ ಸಂತರ, ಶರಣರ, ಅನುಭಾವಿಗಳ ಪೀಳಿಗೆ ಯುಳ್ಳವರಾಗಿರತಕ್ಕ ನಾವೇ ಇಂದು ಜಗತ್ತಿನಲ್ಲಿ ತಾಂಡವವಾಡುತ್ತಿರುವ ಅಶಾಂತಿ. ಅಸಮಾಧಾನ, ದ್ವೇಷಾಸೂಯೆ ಸ್ವಾರ್ಥ ಪರತೆಯಿಂದುಂಟಾಗಿರತಕ್ಕ ಸಂಕುಚಿತ ಮನೋಭಾವಗಳೆಲ್ಲವನ್ನೂ ಪರಿಹರಿಸಿ ವಿಶ್ವದಲ್ಲಿ ಶಾಂತಿ ಸಮತೆಗಳನ್ನುಂಟುಮಾಡುವ ಹೊಣೆಗಾರಿಕೆಯನ್ನು ಹೊರಬೇಕಾಗಿದೆ. ಈ ಉದಾರ ಧ್ಯೇಯಸಾಧನೆಗೆ ತಕ್ಕ ಅರ್ಹತೆಯುಂಟಾಗಬೇಕಾದರೆ ನಮ್ಮ ತರುಣ ತರುಣಿಯರು ವಿಚಾರಮತಿಗಳಾಗಿ ಸತ್ಸಂಕಲ್ಪ ಸದ್ಭಾವನೆಗಳಿಂದ ಪ್ರಚೋದಿತರಾಗಿ ಬ್ರಹ್ಮಚರ್ಯ ಸಾಧನೆಯಲ್ಲಿ ನಿರತರಾಗಿ ತಮ್ಮ ಜೀವನವನ್ನು ಉದಾತ್ತಗೊಳಿಸುವುದು ಅವಶ್ಯಕವಾಗಿದೆ.

ಕೇವಲ ಬಹಿರ್ಮುಖವಾಗಿರುವ ಇಂದ್ರಿಯಪ್ರವೃತ್ತಿಗಳನ್ನು ನಿಗ್ರಹಮಾಡಿ ಸ್ವಾಭಾವಿಕವಾಗಿ ಪರಸ್ಪರಾಕರ್ಷಿತರಾಗಿ ರುವ ಪ್ರೇಮ ಜೀವನದ ಉಚ್ಛೃಂಖಲ ವೃತ್ತಿಯನ್ನು ತಡೆದು ಪ್ರೇಮನ್ನು ಭಕ್ತಿಯ ಉಡಿಗೆಯಿಂದ ಅಲಂಕರಿಸಬೇಕು. ತತ್ರಾಪಿ ಸರ್ವತ್ರ ಪ್ರಚಲಿತವಾಗಿರುವ ವಿಕಾರಹೇತುವಾದ ಸನ್ನಿವೇಶಗಳು, ಚಲನಚಿತ್ರದ ವಿಲಕ್ಷಣ ದೃಶ್ಯಗಳು ಇವುಗಳ ಮಧ್ಯೇ ವ್ಯವಹರಿಸುತ್ತಿರುವ ಸ್ತ್ರೀಪುರುಷರು ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುವುದೇನು ಸಾಮಾನ್ಯವಾದ ಮಾತಲ್ಲ.




ಕಲಾವಿದರ ಕುಂಚದಿಂದ: ಎಡದಿಂದ ಬಲಕ್ಕೆ:– ಬೆಳಗಾವಿಯ ನಾಗನೂರು ಮಠದ ಶ್ರೀಗಳು, ಮುರುಗೋಡದ ಶ್ರೀಗಳು, ಸಿದ್ಧಗಂಗಾ ಶ್ರೀಗಳು, ಧಾರವಾಡದ ಮೃತ್ಯುಂಜಯ ಶ್ರೀಗಳು ಮತ್ತು ಮಹಾಂತ ಶ್ರೀಗಳು.



ಮೈಸೂರಿನ ಶಿವಾನುಭವ ಸಮ್ಮೇಲನದಲ್ಲಿ ಶ್ರೀಗಳು



ಬೆಳಗಾಂವಿ ಶಹಪುರ ಶಿವಾನುಭವ ಸಮ್ಮೇಲನದ ನೇತೃತ್ವ ವಹಿಸಿದ ಶ್ರೀಗಳು

ವಿಶ್ವಾಮಿತ್ರ ಪರಾಶರಾದಿಗಳು ದೀರ್ಘತಪಸ್ಸನ್ನು ಮಾಡಿ ತೇಜೋವಂತರಾಗಿದ್ದ ತಪಸ್ವಿಗಳು. ಅವರೂ ಸಹ ಇಂದ್ರಿಯಗಳಿಂದ ವಂಚಿತರಾಗಿ ಅವುಗಳ ಆಧೀನರಾಗಿ ಅನಂತರ ಮತ್ತೊಮ್ಮೆ ಕಠಿಣ ತಪಸ್ಸಿನಿಂದ ತಮ್ಮನ್ನುದ್ಧಾರಮಾಡಿಕೊಂಡಿರತಕ್ಕ ನಿದರ್ಶನಗಳಿರುವಾಗ ಸಾಮಾನ್ಯಮನುಷ್ಯರಿಗೆ ಈ ಮಾತು ಸುಲಭವಾದುದಲ್ಲ. ಆದರೆ ಯಾರೂ ಸಹ ಹತಾಶರಾಗಬೇಕಾಗಿಲ್ಲ. ಪರಿಶುದ್ಧವಾದ ಮನಸ್ಸು, ಉತ್ತಮ ಸನ್ನಿವೇಶಕಲ್ಪನೆ, ಪ್ರಖರವಾದ ಭಾವನೆ ಇವುಗಳಿಂದ ಉದ್ಧಾರವಾಗಲು ಶಕ್ಯವೆಂಬ ಭರವಸೆಯನ್ನು ಹೊಂದಿ ಸಾಧನೆಯನ್ನು ಮಾಡುವುದು ಆವಶ್ಯಕವು.*

## ೨. ವಿಶ್ವಶಾಂತಿ**

ವಿಹಾಯ ಕಾಮಾನ್ ಯಸ್ಸರ್ವಾನ್ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಸ್ಸಶಾಂತಿಮಧಿಗಚ್ಛತಿ ॥ (ಶ್ರೀಮದ್ಭಗವದ್ಗೀತಾ)

ಜೀವನ ಪ್ರವಾಹವು ಆಸೆ, ಅಭಿಮಾನ, ಅಂಜಿಕೆಗಳ ಮಾರ್ಗವಾರ್ಗ್ಯವನ್ನು ಪ್ರವೇಶಿಸಿದಂತೆಲ್ಲ ಪ್ರಪಾತ, ಗರ್ತ, ಭಯಂಕರ ನಿನಾದಗಳು ಅನಿವಾರ್ಯ. ಅಲ್ಲಿ ಗಂಭೀರವೂ, ಶಾಂತವೂ, ಸುಂದರವೂ ಆದ ರೂಪದರ್ಶನವಿಲ್ಲ. ಆಸೆಗೆ ಕೊನೆಯಿಲ್ಲ. ಅಂಜಿಕೆಗೆ ಮಿತಿಯಿಲ್ಲ. ಅಭಿಮಾನಕ್ಕೆ ಪಾರವಿಲ್ಲ. ಆಸೆ ಹೆಚ್ಚುವಂತೆಲ್ಲ ಅಂಜಿಕೆಯೂ ಬೆಂಬಳಿವಿಡಿದು ಬಂದೇ ಬರುವುದು. ಇವುಗಳ ಪ್ರಭಾವಕ್ಕೆ ಒಳಗಾಗಿ ಅವನ್ನು ಹಿಂಬಾಲಿಸುತ್ತಿರುವ ಮಾನವನಿಗೆ ಜೀವನದಲ್ಲಿ ಸುಖವಿಲ್ಲ, ಶಾಂತಿಯಿಲ್ಲ, ತಣಿವಿಲ್ಲ. ಪ್ರಪಂಚದ ಮಹಾ ವಿಪ್ಲವಗಳಿಗೆಲ್ಲ ಈ ಆಸೆಯೇ ಬೀಜ. ರಾಜ್ಯಲೋಭ, ಧನಲೋಭ, ಪ್ರತಿಷ್ಠಾಪ್ರಿಯತೆಗಳಿಂದ ಪ್ರೇರಿತವಾಗಿರತಕ್ಕ ಕೆಲವುಮಂದಿ ನಾಯಕರು ತಮ್ಮ ಸ್ವಾರ್ಥಸಾಧನೆಗೆ ಜನತೆಯನ್ನು ಭೀಕರ ಸಂಗ್ರಾಮಗಳಿಗೆ ಗುರಿಮಾಡುವುದು ಅನುಭವದ ಮಾತಾಗಿದೆ. ಸುಮಾರು ಅರ್ಧ ಶತಮಾನಕ್ಕಿಂತಲೂ ಕಡಿಮೆ ಅವಧಿಯಲ್ಲಿ ಎರಡು ಘೋರ ಸಂಗ್ರಾಮಗಳಾಗಿ, ಜನತೆಯ ಜೀವನಮಟ್ಟವನ್ನು ಉನ್ನತಿಗೊಳಿಸಲು ಅತ್ಯಾವಶ್ಯಕವಾದ ಭೌತಿಕವಸ್ತುಗಳ ಸಂಪತ್ತು ಅಪಾರವಾಗಿ ನಷ್ಟವಾದದ್ದಲ್ಲದೆ, ಭೀಕರ ರಕ್ತಪಾತವಾಗಿ ಕೋಟ್ಯಂತರ ಮಾನವರು ಆಹುತಿಯಾದರು. ಈ ದುರ್ದಮ ಯುದ್ಧಗಳಿಂದುಂಟಾದ ದುರಂತ ಪರಿಣಾಮಗಳನ್ನನುಭವಿಸಿದ, ಅನುಭವಿಸುತ್ತಿರುವ ವಿಶ್ವದ ಬೇರೆ ಬೇರೆ ಜನಾಂಗಗಳು ಶಾಂತಿಗಾಗಿ ಹಾತೊರೆಯುತ್ತಾ 'ಶಾಂತಿ ಬೇಕು, ಶಾಂತಿ ಬೇಕು' ಎನ್ನುವ ಕೂಗನ್ನು ಕೂಗುತ್ತಿರುವುದು ಕೇಳಿಬರುತ್ತಿದೆ. ಈ ಕೂಗುಗಳಿಗೆ ಮನ್ನಣೆಯಿತ್ತು, ವಿಶ್ವದಲ್ಲಿ ಶಾಂತಿಯನ್ನು ಸ್ಥಾಪಿಸಿ, ಸಂತಪ್ತ ಹೃದಯಗಳಿಗೆ ತಣಿವನ್ನು ನೀಡುವ ಶಕ್ತಿಸಾಮರ್ಥ್ಯಗಳು ಇಂದಿನವರಿಗಿರುವುವೇ ? ಮತ್ತೊಮ್ಮೆ ಜಗತ್ತಿನಲ್ಲಿ ಚಿರಶಾಂತಿಯು ನೆಲೆಗೊಂಡು ಎಲ್ಲರೂ ಸುಖಶಾಂತಿಗಳಿಂದ ಜೀವನಪಥವನ್ನು ಸಾಗಿಸುವ ಸೌಭಾಗ್ಯ ಒದಗಬಹುದೇ? ವಿಶ್ವಶಾಂತಿಯನ್ನು ನೆಲೆಗೊಳಿಸಲು ವಿಶ್ವದ ಯಾವುದೇ ಒಂದು ರಾಷ್ಟ್ರವು ವೈಶಿಷ್ಟ್ಯವನ್ನು ಪಡೆದಿದೆಯೇ ? ಈ ಮುಂತಾದ ಜಟಿಲ ಪ್ರಶ್ನೆಗಳಿಗೆ ಉತ್ತರವನ್ನು ದೊರಕಿಸುವುದೊಂದು ಬೃಹತ್ಸಮಸ್ಯೆಯಾಗಿದೆ.

ಮೊದಲನೆಯ ಮಹಾಸಂಗ್ರಾಮದಿಂದ ಭೀಕರ ಪರಿಣಾಮಗಳ ಕಹಿ ಅನುಭವವನ್ನು ಹೊಂದಿ ಮನನೊಂದ ಕೆಲಮಂದಿ ಮಹಾನಾಯಕರು, ಮತ್ತೊಮ್ಮೆ ಮಹಾಯುದ್ಧಗಳು ಸಂಭವಿಸದಂತೆ ಸೂಕ್ತ ಆಲೋಚನೆಗಳನ್ನು ಮಾಡಿ, ಕಾರ್ಯಕ್ರಮಗಳನ್ನು ಕೈಕೊಳ್ಳುವ ಸಲುವಾಗಿ ರಾಷ್ಟ್ರಗಳ ಒಕ್ಕೂಟ (League of Nations)ವನ್ನು ಸ್ಥಾಪನೆಮಾಡಿ, ಆ ಮೂಲಕ ಧ್ಯೇಯಸಾಧನೆ ಮಾಡಬೇಕೆಂದು ಸಂಕಲ್ಪಿಸಿದರು. ಆದರೆ ಆ ಸಂಸ್ಥೆಯು ತನ್ನ ಕಾರ್ಯವನ್ನು ಮಾಡಿ ಕೃತಕೃತ್ಯವಾಗದೆ ಅಪಜಯವನ್ನು ಹೊಂದಿತು. ಮೊದಲಿಗಿಂತಲೂ ಕರಾಳ ಸ್ವರೂಪದ ಮಹಾಯುದ್ಧವೊಂದು ನಡೆದು, ವಿಶ್ವವೆಲ್ಲವನ್ನೂ ಭಯಂಕರ ವಿಪತ್ತಿಗೆ ಗುರಿಮಾಡಿತು. ಈ ಮಹಾವಿಪ್ಲವದ ಪರಿಣಾಮವಾಗಿ ಜಗತ್ತಿನ ಸ್ಥಿತಿಗತಿಗಳೆಲ್ಲವು ರೂಪಾಂತರ ಹೊಂದಿ ಮಾನವ ಜೀವನದ ರೂಪುರೇಷೆಗಳೆಲ್ಲವೂ ಪರಿವರ್ತನೆಯಾಗಿ, ದೃಷ್ಟಿಕೋನವೇ ಬದಲಾಯಿಸಿ ಹೊಸ ಮನ್ವಂತರವಾರಂಭವಾದ ಹಾಗೆ ಭಾಸವಾಗುತ್ತದೆ. ಮತ್ತೊಮ್ಮೆ ಮಹಾಯುದ್ಧವಾಗಿ ಜಗತ್ತಿನ ಸ್ವರೂಪವೇ ನಾಶವಾಗುವಂಥ ವಿಪತ್ತನ್ನು ಪರಿಹಾರ ಮಾಡಿ ವಿಶ್ವಶಾಂತಿಯನ್ನು ಸ್ಥಾಪಿಸಲು ಏರ್ಪಡಿಸಿರತಕ್ಕ ವಿಶ್ವಸಂಸ್ಥೆಯು ತನ್ನ ಗುರುತರವಾದ ಜವಾಬ್ದಾರಿಯನ್ನು ತೃಪ್ತಿಕರವಾಗಿ ನಡೆಸುವುದನ್ನು ಕಾದು ನೋಡಬೇಕಾಗಿದೆ.

ಭೌತಿಕಪ್ರಗತಿಯೇ ಮಾನವಜೀವನದ ಪರಮ ಧ್ಯೇಯವೆಂದೂ, ಉನ್ನತಮಟ್ಟದ ಲೌಕಿಕ ಸೌಲಭ್ಯಗಳು ಸಮಸ್ತ ಸುಖಶಾಂತಿಗಳಿಗೆ ಸಾಧನವೆಂದೂ ನಂಬಿರುವ ಜನತೆಯ ಸಂಖ್ಯೆಯು ಹೆಚ್ಚಿ, ವಿಜ್ಞಾನದ ಸಹಕಾರದಿಂದ ಅತ್ಯುಚ್ಚ ಮೇಲ್ಮೆಯನ್ನು ಪಡೆಯಬೇಕೆಂದು ಹಂಬಲಿಸುತ್ತಿದೆ. ವಿಜ್ಞಾನಿಗಳು ತೀವ್ರಗತಿಯಿಂದ ತಮ್ಮ ಪ್ರಯತ್ನವನ್ನು ಮುಂದುವರಿಸಿ, ತಮ್ಮ ಅದ್ಭುತವಾದ ಧೀಶಕ್ತಿಯಿಂದ ಸೃಷ್ಟಿಯ ಗರ್ಭದಲ್ಲಿ ಹುದುಗಿರುವ ಶಕ್ತಿಗಳನ್ನು ಹೊರಗೆಡವಿ ಅನೇಕ ಯಂತ್ರ, ತಂತ್ರ,

* 'ಯೌವನದ ರಹಸ್ಯ' ಗ್ರಂಥದ ಮುನ್ನುಡಿಯಿಂದ

** ಸಮರ್ಪಣೆ ಗ್ರಂಥದಿಂದ : (೧೯೭೨)

ಶಸ್ತ್ರಾಸ್ತ್ರಗಳನ್ನು ಕಂಡುಹಿಡಿದು, ಇವುಗಳ ನೆರವಿನಿಂದ ಮಾನವನಿಗೆ ಅಲ್ಪಶ್ರಮದಿಂದ ಅಧಿಕವಾದ ಸುಖವನ್ನು ದೊರಕಿಸಬೇಕೆಂದು ಹವಣಿಸುತ್ತಿದ್ದಾರೆ. ವಿಜ್ಞಾನದ ಬೆಳವಣಿಗೆಯಿಂದ ದೇಶಕೃತ, ಕಾಲಕೃತ ಅಂತರಾಯಗಳೆಲ್ಲವೂ ಹೋಗಿ ವಿಶ್ವದ ಬೇರೆ ಬೇರೆ ರಾಷ್ಟ್ರಗಳೆಲ್ಲವೂ ಅಕ್ಕಪಕ್ಕದ ಗ್ರಾಮಗಳವರಂತೆ ಪರಸ್ಪರ ಪರಿಚಯದಿಂದ ಬಾಳುವಿಕೆ ಮಾಡುವ ಸೌಲಭ್ಯಗಳುಂಟಾಗಿವೆ. ಚಮತ್ಕಾರಜನಕ, ವಿಸ್ಮಯಕಾರೀ ಸಂಶೋಧನೆಗಳು ಹೊರಬಿದ್ದು ಮಾನವನ ಬುದ್ಧಿಶಕ್ತಿಯ ಅಪ್ರತಿಮವಾದ ಸಾಹಸವನ್ನು ವ್ಯಕ್ತಪಡಿಸುತ್ತಿವೆ. ತಣಿವಿಲ್ಲದೆ, ಬಿಡುವಿಲ್ಲದೆ ಸಂಶೋಧನೆಗಳು ನಡೆಯುತ್ತಿವೆ. ಮುಂದೆ ವಿಜ್ಞಾನದಿಂದ ಪ್ರಪಂಚವು ಯಾವ ಸ್ಥಿತಿಯನ್ನು ಮುಟ್ಟಬಹುದೆಂಬುದನ್ನು ಹೇಳಲು ಸಾಧ್ಯವಿಲ್ಲ.

ವಿಜ್ಞಾನವೇನೋ ಬೆಳೆದಿದೆ. ವಿಜ್ಞಾನವನ್ನು ಹಿಂಬಾಲಿಸುವ ದಾಹವೂ ತೀಕ್ಷ್ಣವಾಗಿದೆ. ಈ ವಿಜ್ಞಾನವೇ ಜೀವನದ ಸರ್ವಸ್ವವೆಂದೂ ಯಂತ್ರನಾಗರಿಕತೆಯೇ ಜೀವಿತದ ಆದರ್ಶವೆಂದೂ ನಂಬಿ ಶ್ರಮಿಸುತ್ತಿರುವವರಿಗೆ, ಸಮಗ್ರಜೀವನದ ಸುಂದರ ಸ್ವರೂಪವು ಅರಿವಾಗಲಾರದೆನ್ನುವ ವಿಚಾರವೂ ಹೊಳೆಯಹತ್ತಿದೆ. ಜೀವಿತವು ಪ್ರಕಾಶವಾಗಬೇಕಾದರೆ ಶಾಂತಿಯೊಡಮೂಡಬೇಕು. ಆನಂದಾವಿರ್ಭಾವವಾಗಬೇಕು. ವಿಜ್ಞಾನದ ಉಪಾಸಕರಿಗೆ ಸುಖಶಾಂತಿಗಳು ದೊರೆತಿಲ್ಲ : ಆಶೆಯಡಗಿಲ್ಲ ; ತೃಪ್ತಿ ಲಭಿಸಿಲ್ಲ. ಲಭಿಸಿದ್ದನ್ನು ಕಿರಿದುಮಾಡಿ, ಲಭಿಸದಿದ್ದುದನ್ನು ಹಿರಿದುಮಾಡಿ, ಹಿರಿದರ ಪ್ರಾಪ್ತಿಗಾಗಿ ಕಸಿವಿಸಿಗೊಂಡು ಧಾವಿಸುತ್ತಿರುವ ಅಶಾಂತಜೀವನದ ಚಿತ್ರಗಳೇ ದೃಗ್ಗೋಚರವಾಗುತ್ತಿವೆ. ಮಾನವೀಯತೆಯ ಲಕ್ಷಣಗಳನ್ನತಿಕ್ರಮಿಸಿ ಮೃಗಸ್ವರೂಪ ಜೀವನದ ಆದರ್ಶಗಳು ಬೆಳೆಯುತ್ತಿವೆ. ವಿಜ್ಞಾನದ ಹಿರಿಮೆಗಳನ್ನು ಮನಸಾರ ಪ್ರಶಂಸೆ ಮಾಡುತ್ತಿದ್ದ ಒಬ್ಬ ವಿಜ್ಞಾನಿಗೆ, ಜ್ಞಾನಿಯಾದ ರೈತನೊಬ್ಬನು ಪ್ರತ್ಯುತ್ತರವಾಗಿ ಹೇಳಿದ : 'We have learnt to fly in air like birds ; we have learnt to swim in water like fish ; but unfortunately we have not learnt to live on earth as men.'* 'ನಾವು ಆಕಾಶದಲ್ಲಿ ಪಕ್ಷಿಗಳ ಹಾಗೆ ಹಾರುವುದನ್ನು ಕಲಿತಿದ್ದೇವೆ ; ನೀರಿನಲ್ಲಿ ಮೀನುಗಳ ಹಾಗೆ ಈಜುವುದನ್ನು ಕಲಿತಿದ್ದೇವೆ : ಮರ್ತ್ಯಲೋಕದಲ್ಲಿ ಮಾನವರಾಗಿ ಬಾಳುವುದನ್ನು ಕಲಿಯದಿರುವುದೊಂದು ಮಹಾದೌರ್ಭಾಗ್ಯ' ಎಂಬ ಮಾತುಗಳು ಸಮಂಜಸವೂ ಸುಂದರವೂ ಆಗಿರತಕ್ಕ ವಿಚಾರವೆಂಬುದನ್ನು ನಾವು ಗಮನಿಸಬಹುದು.

ಯಂತ್ರನಾಗರಿಕತೆಯ ಶ್ರದ್ಧಾಪೂರ್ವಕ ಉಪಾಸನೆಯಿಂದಾಗಲಿ, ವಿಶ್ವಸಂಸ್ಥೆಗಳಂಥ ತಜ್ಞರ ಸಮಿತಿಗಳಿಂದಲೇ ಆಗಲಿ ಎಲ್ಲರ ಬಯಕೆಯ ಶಾಂತಿಯು ಸ್ಥಾಪಿಸಲ್ಪಡದಿರಲು ಕಾರಣಗಳೇನು ? ಶಾಂತಿ ಸ್ಥಾಪನೆಯ ಮಾರ್ಗದಲ್ಲಿ ಎದ್ದು ನಿಂತಿರುವ ಪ್ರತಿಬಂಧಕಗಳಾವುವು ? ನಿರಂತರ ಉದ್ಭವಿಸುತ್ತಿರುವ ಎಡರು ತೊಡರುಗಳನ್ನು ಎದುರಿಸಿ, ಸಂಯಮಗೊಳಿಸಿ ಶಾಂತಿಯನ್ನು ಸ್ಥಾಪಿಸುವುದು ಶಕ್ಯವಾದೀತೇ ? ಆ ಶಕ್ತಿಯನ್ನು ಪಡೆದಿರುವವರು ಇರುವರೇ ? ಶಾಂತಿಸ್ಥಾಪನೆಯ ಮಾರ್ಗಗಳಾವುವು ? ಈ ಕೆಲವು ಮುಖ್ಯ ಪ್ರಶ್ನೆಗಳು ಇಂದಿನ ಜಗತ್ತಿನ ಮುಂದೆ ಮಹಾಸಮಸ್ಯೆಗಳಾಗಿವೆ.

'ಶಾಂತಿ' ಎನ್ನುವ ಶಬ್ದವನ್ನು ದಿನಬಳಕೆಯಲ್ಲಿ ಪ್ರಯೋಗ ಮಾಡುತ್ತಿದ್ದೇವೆ. ದಿನವಹಿ ವೃತ್ತಪತ್ರಿಕೆಗಳಲ್ಲಿ ಓದುತ್ತಿದ್ದೇವೆ. ಅಣುಬಾಂಬಿನ ಪ್ರಯೋಗದಿಂದಲಾದರೂ ಶಾಂತಿಯನ್ನು ಸ್ಥಾಪಿಸುವುದೇ ತನ್ನ ಬಯಕೆಯಾಗಿದೆಯೆಂದು ಹಿಂದೆ ಅಮೆರಿಕದ ಅಧ್ಯಕ್ಷರಾಗಿದ್ದ ಟ್ರೂಮನ್ನರು ಘೋಷಣೆಮಾಡಿದ್ದರು. ಶಾಂತಿಸ್ಥಾಪನೆಯ ಉದ್ದೇಶದಲ್ಲಿ ತಮ್ಮ ಪ್ರಯತ್ನಕ್ಕೆ ಇಂಗ್ಲೀಷಿನವರೂ ಅಮೆರಿಕನ್ನರೂ ಸಹಕರಿಸದೆ ವಿಘ್ನವನ್ನು ತರುತ್ತಿರುವರೆಂದು ರಷ್ಯಾದವರು ಘೋಷಿಸುತ್ತಿರುವರು. ಪ್ರತಿಯೊಬ್ಬರೂ ಸೋಮಾರಿ, ಜೂಜುಕೋರ, ಡಕಾಯಿತ, ಪಾತಕಿ, ಕುಹಕ, ಸಂನ್ಯಾಸಿ, ಕಾಳಸಂತೆಕೋರ, ಕೊಲೆಪಾತಕ, ಕವಿ, ತತ್ತ್ವಜ್ಞಾನಿ ಎಲ್ಲರೂ ಶಾಂತಿಯನ್ನು ಬಯಸತಕ್ಕವರೇಆಗಿದ್ದಾರೆ. ಬಳಸತಕ್ಕವರ ಭಾವದ ಮೇಲೆ, ಉಪಯೋಗಿಸತಕ್ಕವರ ದೃಷ್ಟಿಯ ಮೇಲೆ, 'ಶಾಂತಿ' ಶಬ್ದಕ್ಕೆ ನಾನಾ ವಿಧವಾದ ಅರ್ಥಗಳನ್ನು ಕಲ್ಪಿಸಬಹುದು. Mr. Horace Alexander ಎಂಬವರು ಹೇಳಿರುವುದೇನೆಂದರೆ :–

'It is a superficial judgment that sees humanity as a mass of innocent people wanting to be left in peace while a few warmongers seize power and then force the people to fight their battle. 'Wanting to be left in peace' is a selfish desire. Selfishness cannot be true peace. The wealthy miser who has contrived to pile up his millions by grinding the poor till they starve, wants to be left in peace to enjoy his ill-gotton gains. But he has been sowing the seeds of war all his life and cannot complain if he finally reaps what he has sown.'

* ಶ್ರೀಗಳವರ ಭಾಷಣ, ಇನ್ನಿತರ ಲೇಖನಗಳಲ್ಲಿ ಈ ದೃಷ್ಟಾಂತ ಹಲವು ಕಡೆ ಬಂದಿರುವುದನ್ನು ಸಂಪಾದಕರು ಗಮನಿಸಿದ್ದರೂ, ಆಯಾಯ ಹೇಳಿಕೆಗಳ ಪೂರ್ಣತೆಗಾಗಿ ಆ ಮಾತನ್ನು ಪುನರುಕ್ತಿಯೆನಿಸಿದರೂ ಹಾಗೇ ಇಟ್ಟಿದ್ದೇವೆ.

ಮಾನವ ಸಮಾಜವು, ಶಾಂತಿಯಿಂದ ಬಾಳಲು ಇಚ್ಛೆಯುಳ್ಳ ಸರಳ ಜನಗಳ ಸಮೂಹವೆಂದು ನಂಬುವುದು ತೋರಿಕೆಯ ಅಭಿಪ್ರಾಯ. ಕೆಲವುಮಂದಿ ಯುದ್ಧಪ್ರಚೋದಕರು ಅಧಿಕಾರವನ್ನು ಆಕ್ರಮಣಮಾಡಿ ತಮ್ಮ ಸಲುವಾಗಿ ಯುದ್ಧ ಮಾಡಲು ಜನತೆಯನ್ನು ತಳ್ಳುವುದು ಅನಿವಾರ್ಯ. ಶಾಂತಿಯಲ್ಲಿರುವಂತೆ ಅವಕಾಶವನ್ನೀಯಬೇಕೆಂಬುದೊಂದು ಸ್ವಾರ್ಥದ ಬಯಕೆ. ಸ್ವಾರ್ಥ ಸಾಧನೆಯು ಶಾಂತಿಯಾಗಲಾರದು. ಬಡವರನ್ನು ಶೋಷಣೆಮಾಡಿ ಅವರ ರಕ್ತವನ್ನು ಹೀರಿ ಧನಿಕನಾಗಿರುವ ಲೋಭಿ ಶ್ರೀಮಂತನು ಅನೀತಿಮಾರ್ಗದಿಂದ ಗಳಿಸಿದ ಭಾಗ್ಯವನ್ನು ನಿರಾತಂಕವಾಗಿ ಭೋಗಿಸಲು ಅನುಕೂಲವಾಗತಕ್ಕ ಶಾಂತಿಯನ್ನು ಬಯಸುತ್ತಾನೆ. ಆದರೆ ಆತನು ತನ್ನ ಜೀವಮಾನದಲ್ಲೆಲ್ಲಾ ಯುದ್ಧದ ಬೀಜಗಳನ್ನು ಬಿತ್ತುತ್ತಿರುತ್ತಾನೆ. ಅಂತ್ಯದಲ್ಲಿ ಮಾಡಿದ್ದುಣ್ಣಬೇಕಾದ ಸಂದರ್ಭವೊದಗಿದಾಗ ಯಾರನ್ನೂ ಆಕ್ಷೇಪಿಸುವಂತಿಲ್ಲ. ವೈಯಕ್ತಿಕ ಹಿತಗಳನ್ನೂ ಅಭಿರುಚಿಗಳನ್ನೂ ಅನುಸರಿಸಿ 'ಶಾಂತಿ' ಶಬ್ದಕ್ಕೆ ನಾನಾ ಅರ್ಥಗಳು ಕಲ್ಪಿತವಾಗಿವೆ.

ಶಾಂತಿತತ್ತ್ವವನ್ನು ಪರಿಪೂರ್ಣಗೊಳಿಸಲು ತಲೆತಲಾಂತರಗಳಿಂದ ಭರತಖಂಡವು ಶ್ರಮಿಸಿದೆ. ಭಾರತೀಯ ಮಹರ್ಷಿಗಳು, ಸಾಧುಗಳು, ಸಂತರು, ಶರಣರು ಪರಾಶಾಂತಿಯೆಂದೂ, ಅಪರಾಶಾಂತಿಯೆಂದೂ ಶಾಂತಿಯನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದುವುದು, ಅರ್ಥಾತ್ ಬ್ರಹ್ಮನಲ್ಲಿ ಲೀನವಾಗುವುದು, ಜೀವಾತ್ಮನು ವಿಶ್ವಾತ್ಮನಲ್ಲಿ ಐಕ್ಯವಾಗುವುದು, ಜೀವನು ಶಿವನಾಗುವದು, ಲಿಂಗಾಂಗಸಂಯೋಗವಾಗುವುದು–ಇದೇ ಮಾನವ ಜೀವಿತದ ಮಹಲ್ಲಕ್ಷ್ಯ. ಇದೇ ಪರಾಶಾಂತಿ. ಈ ಪರಾಶಾಂತಿಯನ್ನು ಹೊಂದುವುದೇ, ಎಂದರೆ ಮುಕ್ತಿಯನ್ನು ಗಳಿಸುವುದೇ ಮಾನವನ ಧ್ಯೇಯವೆಂದು ದರ್ಶನಗಳು ಸಾರಿರುವುವಲ್ಲದೆ, ಎಲ್ಲಾ ದರ್ಶನಗಳೂ ಮುಕ್ತಿಯ ಸಾಧನೋಪಾಯಗಳನ್ನು ಬೋಧಿಸಿ ಸಾಧಕನನ್ನು ಸಿದ್ಧನನ್ನಾಗಿ ಮಾಡುವ ಸಲುವಾಗಿಯೇ ಚರಿತಾರ್ಥವಾಗಿವೆ.

ಅಪರಾಶಾಂತಿಯ ಸ್ವರೂಪವನ್ನು ನಿಷ್ಕೃಷ್ಟವಾಗಿ ಬಣ್ಣಿಸುವುದು ದುಸ್ಸಾಧ್ಯ. ಮಾನವ ಜೀವನದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಅದನ್ನು ನಿರ್ದೇಶಿಸುವುದಾದರೆ ಸ್ವಾತಂತ್ರ್ಯ, ಸಮತೆ, ಸೌಹಾರ್ದ–ಎನ್ನುವ ತತ್ತ್ವಗಳನ್ನು ಎತ್ತಿಹಿಡಿದು, ಅಭಾವ, ಅಜ್ಞಾನ, ಅನ್ಯಾಯ, ಅಂಜಿಕೆ, ಹಿಂಸೆ, ತುಳಿತ, ಉಚ್ಚನೀಚ ಕಲ್ಪನೆಗಳು, ಸಂಕುಚಿತ ಭಾವಗಳು–ಇವುಗಳ ಉಪಟಳವಿಲ್ಲದೆ ಮನುಷ್ಯನ ವಿಕಾಸಕ್ಕೆ ಆವಶ್ಯಕವಾದ ಎಲ್ಲಾ ಸೌಲಭ್ಯಗಳ ಸಮಾನಾವಕಾಶಗಳುಳ್ಳ ಸ್ಥಿತಿಯೆಂದು ಹೇಳಬಹುದು. ರವೀಂದ್ರನಾಥ ಠಾಕೂರರ ಮಾತಿನಿಂದ ಈ ಸ್ಥಿತಿಯ ಸುಂದರವಾದ ಚಿತ್ರವೊಂದನ್ನು ನಾವು ನೋಡಬಹುದು:–

'Where the mind is without fear and head is held high,
Where the world has not been broken up into fragments by narrow
domestic walls,
Where words come out from the depth of truth,
Where the tireless striving stretches its arms towords perfection,
Where the clear stream of reason has not lost its way in the dreary
desert sand of dead habit,
Where the mind is led forward by Thee into ever widening thought
and action,
Into that heaven of freedom, my Father let my country awake.'

ಇಂದಿನ ಪರಿಸ್ಥಿತಿಯನ್ನವಲೋಕಿಸಿದರೆ ನಿರಾಶಾಮಯ ವಾತಾವರಣವೇ ಸರ್ವತ್ರ ವ್ಯಾಪಕವಾಗಿದೆ. ಯಂತ್ರನಾಗರಿಕತೆಯು ಧನಿಕರನ್ನು ಮತ್ತಷ್ಟು ಧನಿಕರನ್ನಾಗಿಯೂ ದರಿದ್ರರನ್ನು ದಟ್ಟದರಿದ್ರರನ್ನಾಗಿಯೂ ಮಾಡುತ್ತಿರುವುದರಿಂದ ಅನ್ನಬಟ್ಟೆಗಳ ಹಾಹಾಕಾರವು ಹೆಚ್ಚಿ, ಬಡತನ ಸಮಸ್ಯೆಯೊಂದು ಪೆಡಂಭೂತವಾಗಿ ನಿಂತಿದೆ. ಸಾಮಾಜಿಕ ಸ್ಥಾನಮಾನಗಳಿಗಾಗಿ ಭೀಕರ ಕಲಹಗಳುಂಟಾಗಿ ಜೀವನ ಜರ್ಜರಿತವಾಗಿದೆ. ಆಸುರೀಶಕ್ತಿಯ ಪ್ರಭಾವವು ಕರಾಳಸ್ವರೂಪವನ್ನು ಹೊಂದಿ ಎಲ್ಲೆಲ್ಲಿಯೂ ಅನ್ಯಾಯ, ಅಸತ್ಯ, ಹಿಂಸೆ, ಕೊಲೆ, ತುಳಿತ, ಗೊಂದಲ, ಅಸಮಾಧಾನಗಳು ತಾಂಡವವಾಡುತ್ತಿವೆ. ಅಸ್ತವ್ಯಸ್ತ ಪರಿಸ್ಥಿತಿಯಿಂದ ಜೀವನವು ಕಸಿವಿಸಿಯಾಗಿ ತೃಪ್ತಿಗಾಗಿ, ಶಾಂತಿಗಾಗಿ ಹಾತೊರೆಯುತ್ತಿದೆ. ಶಾಂತಿಸ್ಥಾಪನೆಯು ಅತ್ಯವಶ್ಯವಾಗಿ ಆಗಬೇಕಾಗಿದೆ.

ಜಗತ್ತಿನ ರಾಜಕೀಯ ಧುರೀಣರುಗಳ, ರಾಷ್ಟ್ರ ನಾಯಕರುಗಳ ಸಮಿತಿಗಳನ್ನು ರಚಿಸಿ, ಅಲ್ಲಿ ತರ್ಕವಿತರ್ಕಗಳು ನಡೆದು ಖಂಡನಮಂಡನಗಳು ಜರುಗಿ ಶಾಂತಿನಿರ್ಣಯಗಳನ್ನು ಮಂಡಿಸುವುದರಿಂದ ಶಾಂತಿಯು ಸ್ಥಾಪಿತವಾಗುವ ಭರವಸೆಯಿಲ್ಲ.

ಯಾರು 'ಶಾಂತಿ'ಎನ್ನುವ ದಿವ್ಯಮಂತ್ರದ ರಹಸ್ಯವನ್ನರಿತವರಾಗಿ ಅಂತರ್ಬಹಿಶ್ಶಾಂತಿಗಳನ್ನಳವಡಿಸಿಕೊಂಡು ಶಾಂತಸ್ವರೂಪ ವಾಗಿರುವರೋ ಅಂಥವರೇ ಶಾಂತಿಯ ಸಂದೇಶವನ್ನು ಜಗತ್ತಿಗೆ ಬೀರಿ, ಅಶಾಂತಿಯಿಂದ ಪರಿತಪಿಸುತ್ತಿರುವ ಜನತೆಗೆ ಶಾಂತಿ ಯನ್ನು ನೀಡಿ, ಶಾಂತಿಸಾಮ್ರಾಜ್ಯವನ್ನು ಸ್ಥಾಪಿಸಬಲ್ಲರು. ಭಾರತವರ್ಷದ ಮಹರ್ಷಿಗಳು, ಸಾಧುಸಂತರು, ಶರಣರು, ದಾಸರು ಈ ವರ್ಗದಲ್ಲಿ ಅತ್ಯುನ್ನತವಾದ ಸ್ಥಾನವನ್ನು ಗಳಿಸಿದ್ದಾರೆ:

'ಓಂ ದ್ಯೌಶ್ಶಾಂತಿರಂತರಿಕ್ಷಂ ಶಾಂತಿಃ ಪೃಥಿವೀ ಶಾಂತಿರಾಪಶ್ಶಾಂತಿಃ ಓಷಧಯಶ್ಶಾಂತಿಃ
ವನಸ್ಪತಯಃ ಶಾಂತಿರ್ವಿಶ್ವೇ ದೇವಾ ಶಾಂತಿಃ ಬ್ರಹ್ಮ ಶಾಂತಿಃ ಸರ್ವಶ್ಶಾಂತಿಃ ಶಾಂತಿರೇವಶಾಂತಿಃ'—

ಈ ದಿವ್ಯಮಂತ್ರವನ್ನು ಜಪಿಸುತ್ತಾ ಬ್ರಹ್ಮಾಂಡವೆಲ್ಲವೂ ಶಾಂತಸ್ವರೂಪವಾಗಿರಬೇಕೆಂದು ಆಶಿಸಿದವರವರು.

ಭೌತಿಕ ವಸ್ತುಗಳು, ಅರ್ಥಾತ್ ಹೊನ್ನು ಹೆಣ್ಣು ಮಣ್ಣುಗಳು ಅನರ್ಥಕಾರಿಗಳೆಂದೂ, ಅಶಾಂತಿಯ ಹೇತುಗಳೆಂದೂ ಶಸ್ತ್ರಾಸ್ತ್ರಗಳು ವಿನಾಶಕಾರಿಗಳೆಂದೂ ಭಾಸವಾಗುತ್ತದೆ. ಸೂಕ್ಷ್ಮಪರಿಶೀಲನೆಯಿಂದ ಬಾಹ್ಯವಸ್ತುಗಳು ತಾವಾಗಿಯೇ ದುಃಖ ಅಶಾಂತಿಗಳನ್ನುಂಟುಮಾಡುವುದಿಲ್ಲವೆಂದೂ. ಅವುಗಳನ್ನು ಬಳಸುವ ಮನೋಭಾವ, ನೋಡತಕ್ಕ ದೃಷ್ಟಿಯಲ್ಲಿಯೇ ದೋಷ ವಿರುವುದೆಂದೂ ಗೊತ್ತಾಗುತ್ತದೆ. ರಾಗ ದ್ವೇಷಗಳು ವಸ್ತುಗಳಲ್ಲಿಲ್ಲ. ಅಮೆರಿಕಾದೇಶದಲ್ಲಿ ತಯಾರಾದ ಅಣುಬಾಂಬನ್ನು ವಾಷಿಂಗ್‌ಟನ್ ಮೇಲೆ ಹಾಕಿದರೆ ಅದು ಪಿತೃವಾತ್ಸಲ್ಯದಿಂದ ಶಾಂತವಾಗುವುದಿಲ್ಲ. ರಷ್ಯಾದೇಶದ ಕಾರ್ಖಾನೆಗಳಲ್ಲಿ ತಯಾರಾದ ವಿಷವಾಯುವು ರಷ್ಯನ್ನರಿಗೆ ಅಮೃತಪ್ರಾಯವಾಗುವುದಿಲ್ಲ. ವಿದ್ಯುಚ್ಛಕ್ತಿಯ ದೀಪವು ತನ್ನ ಉತ್ಪಾದಕನಿಗೆ ಬೆಳಕನ್ನು ನೀಡಿ ಉಳಿ ದವರಿಗೆ ಅಂಧಕಾರವನ್ನುಂಟುಮಾಡುವುದಿಲ್ಲ. ಅವರಿವರೆನ್ನದೆ ಎಲ್ಲರ ಮೇಲೂ ತಮ್ಮ ಪ್ರಕೃತಿಧರ್ಮವನ್ನನುಸರಿಸಿ ಕಾರ್ಯ ಮಾಡುವುದೇ ಲಕ್ಷಣವಾಗಿದೆ. ದ್ವೇಷಾಗ್ನಿಯಿರುವುದು ಮಾನವನ ಹೃದಯದಲ್ಲಿ. ಅಲ್ಲಮಪ್ರಭುಗಳು ಸಂದೇಶ ಕೊಟ್ಟಿರುವಂತೆ 'ಹೊನ್ನು ಮಾಯೆಯೆಂಬರು ಹೊನ್ನು ಮಾಯೆಯಲ್ಲ ; ಹೆಣ್ಣು ಮಾಯೆಯೆಂಬರು ಹೆಣ್ಣು ಮಾಯೆಯಲ್ಲ ; ಮಣ್ಣು ಮಾಯೆ ಯೆಂಬರು ಮಣ್ಣು ಮಾಯೆಯಲ್ಲ ; ಮನದ ಕೊನೆಯ ಆಸೆಯೇ ಮಾಯೆ ಕಣಾ ಗುಹೇಶ್ವರಾ'. ಮನದ ಆಸೆಯೇ ಮಹಾ ವಿಷ ತ್ಕಾರಿಯಾಗಿರುವುದು. ಹೃದಯದಿಂದ ಹೊರಹೊರಟ ಈ ದ್ವೇಷಜ್ವಾಲೆಯು ಶಸ್ತ್ರಾಸ್ತ್ರಗಳನ್ನು ಸಾಧನವನ್ನಾಗಿ ಮಾಡಿ ಕೊಂಡು ಹತ್ಯಾಕಾಂಡವನ್ನು ನೆರವೇರಿಸುತ್ತದೆ. ಬಳಸುವ ಭಾವ, ನೋಡುವ ದೃಷ್ಟಿ ಪವಿತ್ರವೂ ಸಮೀಚೀನವೂ ಆದರೆ ಈ ವಸ್ತುಗಳೆಲ್ಲವನ್ನೂ ಶಕ್ತಿಗಳೆಲ್ಲವನ್ನೂ ಸಾಧನಗಳನ್ನಾಗಿ ಪರಿವರ್ತನೆ ಮಾಡಿಕೊಳ್ಳಬಹುದು. ಭಾವ ದೃಷ್ಟಿಗಳು ಮಲಿನವಾದರೆ ಅವು ಬಾಧಕವಾಗಿ ಬಳಸಲ್ಪಡುವುವು.

ಸರ್ವ ಅಶಾಂತಿಗೂ ಮೂಲ ಮಾನವನ ಹೃದಯ, ಅವನ ಮನಸ್ಸು. ಜಗತ್ತಿನಲ್ಲಿ ಶಾಂತಿಯು ಒಡಮೂಡಿ ನೆಲಸ ಬೇಕಾದರೆ ವ್ಯಕ್ತಿಗಳ ಆತ್ಮವಿಕಾಸವಾಗಬೇಕು. ಹೃದಯಗಳು ಅರಳಬೇಕು. ಮನಸ್ಸುಗಳು ಪವಿತ್ರವಾಗಬೇಕು. ಮಾನವನ ಬಾಹ್ಯವ್ಯಾಪಾರಗಳೆಲ್ಲಕ್ಕೂ ಅವನ ಭಾವನೆಗಳೂ ಮತ್ತು ಮನಸ್ಸೇ ಮೂಲ. ಭಾವದಲ್ಲಿ ಸೆಲೆಯೊಡೆದು ಮನಸ್ಸಿನಲ್ಲಿ ಉದ್ಭವ ವಾಗತಕ್ಕ ವಿಚಾರಗಳು ಮಾತಿನ ಸ್ವರೂಪದಲ್ಲಿಯೂ ಕೃತಿಯ ಸ್ವರೂಪದಲ್ಲಿಯೂ ವ್ಯಕ್ತವಾಗುತ್ತವೆ. ಮನಸ್ಸು ಪರಿಶುದ್ಧ ವಾದರೆ ಭಾಷೆಗೆ ಗಾಂಭೀರ್ಯ. ಕೃತಿಗೆ ಸೊಬಗು ಉಂಟಾಗುತ್ತದೆ. ಮೊದಲು ಮನಸ್ಸನ್ನು ಪವಿತ್ರಗೊಳಿಸಬೇಕು. ಮನಸ್ಸು ಚಂಚಲಸ್ವಭಾವವುಳ್ಳದ್ದು. ವಿಷಯದಿಂದ ವಿಷಯಕ್ಕೆ. ವಸ್ತುವಿನಿಂದ ವಸ್ತುವಿಗೆ, ವಿಚಾರದಿಂದ ವಿಚಾರಕ್ಕೆ ಧಾವಿಸುವುದು ಅದರ ಸ್ವಭಾವವಾಗಿದೆ. ಅರ್ಜುನನು ಶ್ರೀಕೃಷ್ಣನನ್ನು 'ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ । ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥'ಎಂದು ಪ್ರಶ್ನೆಮಾಡುತ್ತಾನೆ. 'ಧರೆಯನಜಿನದಂತೆ ಸುರುಳಲಹುದು. ಮೇರು ಗಿರಿಯನಂಗುಲಿಯ ಕೊನೆಯಲಾಳಲಹುದು. ಶರಧಿಯನೊಮ್ಮೆ ಪಾನವಮಾಡಲಹುದು ಸ್ಥೈತಿರಿಸಬಾರದು ನಿಮಿಷಾರ್ಧಮೀ ಮನ ವನು'ಎಂದು ನಿಜಗುಣ ಶಿವಯೋಗಿಗಳು ಹಾಡಿದ್ದಾರೆ. 'ಮನವೆಂಬ ಮರ್ಕಟನ ತಡೆಯಲಾರೆನು ದೇವ ಎನಿತಿದರ ಚಪಲ ಚೇಷ್ಟೆಗಳ ವರ್ಣಿಸಲಿ' ಎಂದು ಸರ್ಪಭೂಷಣಶಿವಯೋಗಿಗಳೂ. 'ಕೊಂಬೆಯ ಮೇಲಣ ಮರ್ಕಟನಂತೆ ಲಂಘಿಸುವುದೆನ್ನ ಮನವು, ಹೊಂದಿದಲ್ಲಿ ಹೊಂದಲೀಯದೆನ್ನ ಮನವು, ನಿಂದಲ್ಲಿ ನಿಲ್ಲಲೀಯದೆನ್ನ ಮನವು' ಎಂದು ಬಸವಣ್ಣನವರೂ ಮನಸ್ಸಿನ ಚಂಚಲಸ್ವಭಾವವನ್ನು ಕುರಿತು ಹೇಳಿದ್ದಾರೆ. ಮನೋನಿಗ್ರಹವು ದುಸ್ಸಾಧ್ಯವಾದರೂ ನಿರಂತರ ಅಭ್ಯಾಸದಿಂದ ಅದನ್ನು ಹದ ಗೊಳಿಸಬಹುದು. ಅದರ ಸ್ವಚ್ಛಂದ ಪ್ರವೃತ್ತಿಯನ್ನೂ ನಿರೋಧಿಸಬಹುದು. ವಿಧಿನಿಷೇಧಾತ್ಮಕ ವ್ರತಗಳೆಲ್ಲವೂ ಮನಸ್ಸನ್ನು ಸಂಯಮಗೊಳಿಸುವುದಕ್ಕಾಗಿಯೇ. ಮನಸ್ಸಿನ ಪ್ರವೃತ್ತಿಯನ್ನು ತಡೆಯುವುದೆಂದರೆ ಅದನ್ನು ನಿರ್ವಿಷಯಕವಾಗಿ ಮಾಡುವು ದೆಂದಲ್ಲ. ಮನಸ್ಸು ನಿರ್ವಿಷಯಕವಾಗಲಾರದು. ಅದರ ಪ್ರವೃತ್ತಿಯು ಸದ್ವಿಷಯಗಳ ಚಿಂತನೆಯಲ್ಲಿ, ದೇವನ ಧ್ಯಾನದಲ್ಲಿ ಪ್ರವಹಿಸುವಂತೆ ಪರಿವರ್ತನೆ ಮಾಡುವುದೇ ಸಂಯಮದ ಅರ್ಥ.

ವಿಷಯವಾಸನೆಗಳಿಂದ ದೂರವಾಗಿ ಪರಮಾತ್ಮ ವಿಷಯಕವಾದ ಚಿಂತನೆಯಲ್ಲಿಯೇ ಪ್ರವಹಿಸುವುದೇ ವ್ಯವಸಾಯಾ ತ್ಮಿಕವಾದ ಬುದ್ಧಿಯ ಲಕ್ಷಣ. 'ವ್ಯವಸಾಯಾತ್ಮಿಕಾ ಬುದ್ಧಿಃ ಏಕೇಹ ಕುರುನಂದನ । ಬಹುಶಾಖಾಹ್ಯನಂತಾಶ್ಚ ಬುದ್ಧಯೋಽ

ವ್ಯವಸಾಯಿ ನಾಂ. ವ್ಯವಸಾಯಾತ್ಮಕವಲ್ಲದ ಎಂದರೆ ಸುಸಂಸ್ಕೃತವಲ್ಲದ ಮನಸ್ಸೇ ಬಹುಮುಖವಾಗಿ ಹರಿಯುತ್ತಿರುವುದು. ವ್ಯವಸಾಯಾತ್ಮಿಕಾಬುದ್ಧಿಯು ಅರ್ಥಾತ್ ಸುಸಂಸ್ಕೃತ ಮನಸ್ಸು ಏಕಪಥಪ್ರವಾಹಿನಿಯಾಗಿರುವುದು. ಅಭ್ಯಾಸಬಲದಿಂದ ವೈರಾಗ್ಯದ ನೆರವಿನಿಂದ ಪರಿಪೂರ್ಣವಾಗಿ ಹದಗೊಳಿಸಲ್ಪಟ್ಟ ಮನಸ್ಸುಳ್ಳವನೇ ಸುಸಂಸ್ಕೃತ, ಸುಸಂಸ್ಕೃತವಾದ ಮನಸ್ಸೇ ಚಿಂತಾರತ್ನ. ಅಸಂಸ್ಕೃತವಾದ ಮನಸ್ಸೇ ಘಟಸರ್ಪ. ಭಾವ ಬಲಿತು ಮನವು ಪವಿತ್ರವಾದ ಸುಸಂಸ್ಕೃತನ ಮಾತು ಕೃತಿಗಳೆಲ್ಲವೂ ತೇಜೋಮಯವೂ, ಪರಿಶುದ್ಧವೂ ಆಗಿರುತ್ತವೆ. ಮಾನವನ ಹೃದಯ ಮನಸ್ಸುಗಳ ವಿಕಾಸವಾಗಿ, ತುಂಬುಹೃದಯದಿಂದ ಹೊರ ಹೊರಡುವ ಅವನ ಮಾತುಗಳು ವಿಶ್ವಪ್ರೇಮವನ್ನು ಹೊರಸೂಸುತ್ತವೆ. ಪವಿತ್ರಾತ್ಮದಿಂದ ಮಾಡುವ ಅವನ ಕೃತಿಗಳೆಲ್ಲವೂ ಜಗತ್ಕಲ್ಯಾಣಕರವಾಗಿಯೂ ಪರಿಣಮಿಸುತ್ತವೆ. ಈತನೇ ನಿಜವಾದ ಸುಸಂಸ್ಕೃತ. ಇದುವೇ ಪವಿತ್ರವಾದ ಸುಸಂಸ್ಕೃತಿ. Culture is what produces sweetness of temper, sanity of mind and strength of spirit.

ಸುಸಂಸ್ಕೃತರೇ.ಪವಿತ್ರಾತ್ಮರೇ ವಿಶ್ವಶಾಂತಿಯನ್ನು ಸಾಧಿಸಬಲ್ಲರು. The greatest conceivable worker for peace is he who has himself attained perfection, realised God and eternal absolute peace—'ಪರಾ ಶಾಂತಿಃ' ಪರಿಪೂರ್ಣತೆಯನ್ನು ಹೊಂದಿ, ದೇವಸಾಕ್ಷಾತ್ಕಾರವನ್ನು ಪಡೆದು ಪರಾಶಾಂತಿಯ ಪ್ರತೀಕವಾಗಿ ಬ್ರಹ್ಮಾನಂದದಲ್ಲಿ ವಿಹರಿಸುತ್ತಿರುವ ಜೀವನ್ಮುಕ್ತರೇ ಶಾಂತಿಸ್ಥಾಪನೆಗೆ ದಿವ್ಯ ಅಧಿಕಾರಿಗಳು. ಅವರೇ ದಿವ್ಯಾನಂದಾನುಭವಿಗಳು. ಉಪನಿಷದೋಕ್ತಿಯು 'ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ' ಎಂದು ಸಾರುತ್ತದೆ. ಮಹಾನುಭಾವರ ದೃಷ್ಟಿಯಲ್ಲಿ ಜಗತ್ತಿನ ಮಾನವರೆಲ್ಲರೂ ಸರಿಸಮಾನರು. ಉಚ್ಚನೀಚ ಕಲ್ಪನೆಗಳಿಲ್ಲ, ಅನಿಮಿತ್ತ ಬಂಧುಗಳವರು. ನಿರ್ವ್ಯಾಜಪ್ರೇಮವವರದು. ಸ್ವಯಂ ಶಾಂತಸ್ವರೂಪರಾದ್ದರಿಂದ ಅವರಿರುವ ಕ್ಷೇತ್ರವೇ ಶಾಂತಿಮಂದಿರವಾಗಿ ಸರ್ವತ್ರ ಶಾಂತಿಯನ್ನು ಬೀರುತ್ತಿರುವುದು. ಶಾಂತಿಸ್ಥಾಪನೆಯ ಸಲುವಾಗಿ ಅವರು ಯಾವ ಕಾರ್ಯಗಳನ್ನು ಮಾಡದೆ ಇದ್ದರೂ ವಿಕಸಿತವಾದ ಸುಗಂಧಪುಷ್ಪದ ಸೌರಭವು ಸುತ್ತಮುತ್ತ ಹರಡುವಂತೆ ಆ ಮಹಾನುಭಾವರ ಜೀವನದ ಸಾನ್ನಿಧ್ಯದಿಂದಲೇ ಶಾಂತಿಯು ಪಸರಿಸುವುದು. ಮಹರ್ಷಿಗಳ. ಸಾಧುಗಳ, ಸಂತರ. ಶರಣರ ಆಶ್ರಮಗಳಲ್ಲಿ ಕ್ರೂರ ಮೃಗಗಳು ತಮ್ಮ ಜಾತಿಸಹಜವಾದ ವೈರವನ್ನು ತೊರೆದು ಪರಸ್ಪರ ಮೈತ್ರೀಭಾವದಿಂದ ಇದ್ದ ಅನೇಕ ನಿದರ್ಶನಗಳಿವೆ. ಅವರು ವಿಶ್ವಕುಟುಂಬಿಗಳು. ಶ್ರೀ ಶಂಕರಾಚಾರ್ಯರ ದಿವ್ಯವಾಣಿಯು–

'ಶಾಂತಾ ಮಹಾಂತೋ ನಿವಸಂತಿ ಸಂತಃ ವಸಂತವಲ್ಲೋಕಹಿತಂ ಚರಂತಃ ।
ತೀರ್ಣಾ ಸ್ವಯಂ ಭೀಮಭವಾರ್ಣವಂ ಜನಾನ್ ಅಹೇತುನಾ ನ್ಯಾನಪಿ ತಾರಯಂತಃ'

ಶಾಂತಮೂರ್ತಿಗಳ ಅಮೃತ ಆತ್ಮವನ್ನೂ, ಜಗತ್ಕಲ್ಯಾಣ ಕರ್ತೃತ್ವವನ್ನೂ ವರ್ಣಿಸುವುದು.

Peace dwells in the heart of those who love God. Realise that your life without Him is barren. Yearn for Him and peace will follow.

Blessed are the pure in the heart for they shall see God.

ಇವರೆಲ್ಲರೂ ದೈವೀಮಾನವರು, ಮಹಾನುಭಾವರು. ಆಗಾಗ್ಗೆ ಅವತಾರ ಮಾಡಿ ಮಾನವಕುಲವನ್ನು ಉದ್ಧಾರಮಾಡಿದ್ದಾರೆ. ಧರ್ಮಗ್ಲಾನಿಯಾದಾಗ, ದುಷ್ಟಶಕ್ತಿಯ ವ್ಯಾಪ್ತಿಯು ಹೆಚ್ಚಾದಾಗ ಪರಮಾತ್ಮನೇ ಹಲವಾರು ರೂಪಗಳಲ್ಲಿ ಅವತಾರ ಮಾಡಿ ಆಸುರೀಸಂಪತ್ತನ್ನು ಹತ್ತಿಕ್ಕಿ, ದೈವೀಸಂಪತ್ತನ್ನು ನೆಲೆಗೊಳಿಸಿ, ಧರ್ಮಸಂಸ್ಥಾಪನೆ ಮಾಡಿ ಜಗತ್ತನ್ನು ರಕ್ಷಣೆ ಮಾಡಿರತಕ್ಕ ವಿಷಯ ಪರಮಾತ್ಮನ ವಾಕ್ಯದಿಂದಲೇ ವ್ಯಕ್ತವಾಗುತ್ತದೆ. 'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥' ಮಹಾತ್ಮಾಗಾಂಧಿಯವರು ಅವತಾರ ಮಾಡಿದರು. ತಮ್ಮ ಶ್ರೇಷ್ಠತಮ ಆಚರಣೆಗಳಿಂದ, ಅಮರಸಂದೇಶದಿಂದ ಭರತವರ್ಷದ ಜನತೆಯಲ್ಲಿ ಜಾಗೃತಿಯನ್ನುಂಟುಮಾಡಿ ಭಾರತಮಾತೆಯ ಬಂಧವಿಮೋಚನಮಾಡಿ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಸತ್ಯ. ಅಹಿಂಸೆಗಳಿಂದಲೇ ವಿಶ್ವದ ಕಲ್ಯಾಣವೆಂದು ಸಾರಿದರು. ಈ ತತ್ತ್ವಗಳ ಉಪಾಸನೆಯಲ್ಲಿಯೇ ಶಾಂತಿಯನ್ನು ಕಂಡರು. ಆದರೆ ಎಲ್ಲರೂ ದೈವೀಮಾನವರ ಅಂತಸ್ತನ್ನು ಮುಟ್ಟಲಾಗುವುದಿಲ್ಲ.

ಸುಸಂಸ್ಕೃತ ಜನಾಂಗವೇ ವಿಶ್ವಶಾಂತಿಯನ್ನು ನೆಲೆಗೊಳಿಸಬಲ್ಲದು. ಹಿಂದೆಯೇ ಹೇಳಿರುವಂತೆ ಬರಿಯ ಬಾಹ್ಯಜೀವನದ ಸೊಬಗು ಸೌಂದರ್ಯಗಳಿಂದಲೇ, ಗಳಿಕೆ ಬಳಕೆಗಳಿಂದಲೇ ಮನುಷ್ಯನು ಸುಸಂಸ್ಕೃತನಾಗಲಾರನು. ಅಂತರ್ಜೀವನದ ಸೊಬಗು ಸೌಂದರ್ಯಗಳೂ ಬೆಳೆಯಬೇಕು. ಇದುವೆ ನೈಜ ಸಂಸ್ಕೃತಿಯ ಲಕ್ಷಣ. ಸುಸಂಸ್ಕೃತನು ಸ್ವಾರ್ಥರಹಿತನು. ಸ್ವಾರ್ಥವೇ

ಸಕಲ ಅನರ್ಥಗಳ ಮೂಲ. ತನ್ನಂತೆ ಪರರ ಬಗೆಯುವುದೇ ಸುಸಂಸ್ಕೃತನ ಸ್ವಭಾವ ಮಾನವ ಬಾಂಧವರೆಲ್ಲರೂ ಪರಮಾತ್ಮನ ಮಕ್ಕಳು. ಅವರ ಕಲ್ಯಾಣಕ್ಕಾಗಿ ದುಡಿಯುವುದರಿಂದ ಪರಮಾತ್ಮನ ಕೃಪೆಯು ದೊರಕುವುದೆಂದು ಅವನ ನಂಬಿಕೆ. ಎಲ್ಲರಲ್ಲಿಯೂ ಆತ್ಮೀಯಭಾವನೆಯಿಂದ ಅವನ ಜೀವನವು ಸಾಗುವುದು. ಎಲ್ಲ ಜೀವಾತ್ಮರಲ್ಲಿಯೂ ವಿಶ್ವಾತ್ಮನನ್ನು ಕಾಣುವ ಆತನಿಗೆ ಸರ್ವರೂ ಸುಖಶಾಂತಿಗಳಿಂದ ಬಾಳಿ ಬದುಕಬೇಕೆಂಬುದೇ ಹೆಬ್ಬಯಕೆ. ಮತ್ತೊಬ್ಬರ ಕಷ್ಟವನ್ನು ನೋಡಿ ಮರುಗಿ ಅವರ ಕಷ್ಟವನ್ನು ಪರಿಹರಿಸಲು ಪ್ರಯತ್ನ ಮಾಡುವುದೇ ಅವನ ಸ್ವಭಾವ. ಇದುವೇ ಸನಾತನ ಧರ್ಮದ ಸಂದೇಶ. 'ಏತಾವಾನವ್ಯಯೋಧರ್ಮಃ । ಸದ್ಭಿರ್ನಿತ್ಯಮನುಷ್ಠಿತಃ ॥ ಯಲ್ಲೋಕ ಶೋಕಹರ್ಷಾಭ್ಯಾಂ । ಆತ್ಮಾ ಶೋಚತಿ ಹೃಷ್ಯತಿ' ॥ ಧರ್ಮದ ಸಾರಸರ್ವಸ್ವವೂ ಈ ಶ್ಲೋಕದಿಂದ ಸಾರಲ್ಪಟ್ಟಿದೆ. ಇನ್ನು ಕೆಲವು ಸಂತರ ನುಡಿಗಳು ವಿಶ್ವಪ್ರೇಮವನ್ನು ಪ್ರತಿಪಾದಿಸುತ್ತವೆ:

'What right have I for these joys when all around me is nothing but misery and struggle for a mouldy bit of bread? I do not want happiness even as a gift, if I do not have peace of mind about each of my blood brothers, bone of my bone and flesh of may flesh.'

ಹಿಂದೂಧರ್ಮವು ವಿಶಾಲಭಾವನೆಯುಳ್ಳುದು. ನಮ್ಮ ಸಂಸ್ಕೃತಿಯು ಸಕಲರಿಗೂ ಸ್ವಾಗತವನ್ನು ನೀಡುವ ಸಂಸ್ಕೃತಿಯು. ಯಾರನ್ನೂ ದ್ವೇಷಿಸುವುದಿಲ್ಲ. ಅಂತೆಯೇ ಪ್ರಾಚೀನ ಕಾಲದಿಂದಲೂ ವಿವಿಧ ಧರ್ಮೀಯರಿಗೆ ಆಶ್ರಯ ನೀಡಿ, ತನ್ನವರಂತೆ ಅವರನ್ನು ರಕ್ಷಣೆ ಮಾಡಿ ಪೋಷಿಸಿತು. 'Religious tolerance is the watchword of Hinduism'. ಧರ್ಮಸಂದೇಶವನ್ನು ಅರಿತು ಜೀವನವನ್ನು ರೂಪಿಸುವುದೇ ಸಂಸ್ಕೃತಿಯು. ಸುಸಂಸ್ಕೃತನಾದವನು ಮಾನವಸಾಮಾನ್ಯದ ಸುಖವನ್ನೇ ಬಯಸುತ್ತಿರುವನಾದ್ದರಿಂದ ಅಶಾಂತಿಮೂಲವಾದ ಅನ್ಯಾಯ, ಅಹಿಂಸೆ. ಶುಳಿತ, ತಾರತಮ್ಯಗಳೆಲ್ಲವೂ ಮಾಯವಾಗಿ, ಸ್ವಾತಂತ್ರ್ಯ ಸಮತೆ, ಸೌಹಾರ್ದ ತತ್ತ್ವಗಳ ಮೇಲೆ ಸುಂದರಸಮಾಜವನ್ನು ನಿರ್ಮಿಸುವುದೇ ಅವನ ಮುಖ್ಯ ಗುರಿಯಾಗುವುದು.

ಅಂತೆಯೇ ಪರರಿಗಾಗಿ ಜೀವಿಸುವ, ಅವರ ಮೇಲ್ಮೆಗಾಗಿ ಬಾಳನ್ನು ಸವೆಸುವ ಸುಸಂಸ್ಕೃತರೇ, ಪುಣ್ಯಶಾಲಿಗಳೇ. ಸಚ್ಚರಿತರೇ ವಿಶ್ವಶಾಂತಿಯನ್ನು ಸ್ಥಾಪಿಸಬಲ್ಲರು.

ವಿದ್ಯಾರ್ಥಿ ಜೀವನವನ್ನು ಮುಗಿಸಿ, ಮನೆಗೆ ಹಿಂತಿರುಗುತ್ತಿರುವ ಸಾಧಕನೊಬ್ಬನಿಗೆ ತೈತ್ತಿರೀಯೋಪನಿಷತ್ತಿನಲ್ಲಿ ಕೊಟ್ಟಿರುವ ಅಮರ ಸಂದೇಶವು ನಮ್ಮ ಸಂಸ್ಕೃತಿಯ ಸಮಗ್ರ ಚಿತ್ರವೊಂದನ್ನು ಕೊಡುತ್ತದೆ:–

'ವೇದಮನೂಚ್ಯಾಚಾರ್ಯೋಽನ್ತೇವಾಸಿನಮನುಶಾಸ್ತಿ. ಸತ್ಯಂ ವದ. ಧರ್ಮಂ ಚರ. ಸ್ವಾಧ್ಯಾಯಾನ್ಮಾಪ್ರಮದಃ. ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ ಸತ್ಯಾನ್ನಪ್ರಮದಿತವ್ಯಂ. ಧರ್ಮಾನ್ನಪ್ರಮದಿತವ್ಯಂ. ಕುಶಲಾನ್ನಪ್ರಮದಿತವ್ಯಂ. ಭೂತ್ಯೈನ ಪ್ರಮದಿತವ್ಯಂ. ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ. ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ. ಮಾತೃದೇವೋ ಭವ. ಪಿತೃದೇವೋ ಭವ. ಆಚಾರ್ಯದೇವೋ ಭವ. ಅತಿಥಿದೇವೋ ಭವ, ಯಾನ್ಯವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ. ನೋ ಇತರಾಣಿ. ಯಾನ್ಯಸ್ಮಾಕಗ್ಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ....'

ಭಾರತೀಯರಾದ ನಾವುಗಳೆಲ್ಲರೂ. ಹಿರಿಯರ ಅಮರವಾಣಿಗಳನ್ನು ಅಮರಸಂದೇಶಗಳನ್ನು ಅರಿತು ಸತ್ತ್ವಸಾಧಕರಾಗಿ ಸುಸಂಸ್ಕೃತರಾಗಬೇಕಾಗಿದೆ. ಪವಿತ್ರ ಜನಾಂಗವನ್ನು ನಿರ್ಮಾಣ ಮಾಡಿ ನಮ್ಮ ಸಂಸ್ಕೃತಿಯ ಅಚ್ಚಳಿಯದ ಕೀರ್ತಿಪತಾಕೆಯನ್ನು ಬೆಳಗಿ ಜಗತ್ತೆಲ್ಲವೂ ಆಶಾಭರಿತವಾಗಿ ನೋಡತಕ್ಕ ವಿಶ್ವಶಾಂತಿ ಸ್ಥಾಪನೆಯ ಮಹತ್ಕಾರ್ಯವನ್ನು ಸಾಧಿಸಬೇಕಾಗಿದೆ. ಗುರು ಅರವಿಂದರು ಹೇಳತಕ್ಕ ರೀತಿಯ ವಿಶ್ವೈಕ್ಯತೆಯನ್ನು ಸಾಧಿಸಬೇಕಾಗಿದೆ:–

'Unity for the human race by an inner oneness and not merely by an external association of interests, the resurgence of man out of the merely animal and economic life or the merely intellectual and aesthetic into the glories of the spiritual existence; the pouring of the power of the spirit into the physical mould and mental instrument so that man may develop his manhood into that super-manhood which shall exceed our present state as much as this exceeds animal state from which science tells us we have issued. Man's unity and man's self-transcendence can come only by living in Spirit.'

ಅಸತೋ ಮಾ ಸದ್ಗಮಯ । ತಮಸೋ ಮಾ ಜ್ಯೋತಿರ್ಗಮಯ । ಮೃತ್ಯೋರ್ಮಾ ಅಮೃತಂ ಗಮಯ ॥

## ೩. ಶಿವಶರಣರ ಕಾಯಕನಿಷ್ಠೆ *

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್‌ಂ ಸಮಾಃ ।
ಏವಂ ತ್ವಯೀ ನಾನ್ಯಥಾತೋಽಸ್ತಿ ನ ಕರ್ಮ ಲಿಪ್ಯತೇ ನರಃ ॥ —ಈಶಾವಾಸ್ಯ ಉಪನಿಷತ್

ಪರಮಾತ್ಮ ನಿರ್ಮಿತ ಸೃಷ್ಟಿಯು ಚೇತನಾಚೇತನವೆಂದು ಎರಡು ವಿಧವಾಗಿದೆ. ಅಚೇತನ ವಸ್ತುಗಳಿಗೆ ಇಂದ್ರಿಯಗಳೂ ತದ್ವಾರ ಆಗುವ ಸುಖದಲ್ಲಿ ಸಂವೇದನವೂ ಇಲ್ಲದಿದ್ದರಿಂದ ಅವುಗಳಿಗೆ ಸ್ಪಷ್ಟ ವ್ಯಕ್ತಿತ್ವವಿಲ್ಲ. ಚೇತನ ಸೃಷ್ಟಿಯಲ್ಲಿ ಮನುಷ್ಯಪ್ರಾಣಿಯೇ ಎಲ್ಲಕ್ಕೂ ಹೆಚ್ಚಿನವನು. ಇವನಲ್ಲಿ ಚೈತನ್ಯವೆಂಬುದು ಪರಮಾವಧಿಗೆ ಮುಟ್ಟಿದೆ. ಇವನಲ್ಲಿ ಅಪರಿಮಿತ ಸಂವೇದನಶಕ್ತಿಯಿದೆ. ಇವನ ಜ್ಞಾನಸಾಧನಗಳು ಎಲ್ಲಕ್ಕಿಂತಲೂ ಹೆಚ್ಚು ತೀಕ್ಷ್ಣವಿರುವುವು. ಅವುಗಳ ಸಹಾಯದಿಂದ ಅವನು ಪೂರ್ವಾಪರಾಲೋಚನೆಯಿಂದ ವಿಮರ್ಶೆ ಮಾಡಿ ತನ್ನ ಪರಮಕಲ್ಯಾಣವನ್ನು ಮಾಡಿಕೊಳ್ಳುವ ಲವಲವಿಕೆಯಲ್ಲಿರುವನು. ಆದುದರಿಂದ ಶ್ರೇಷ್ಠಜೀವಿಯಾದ ಮಾನವನು ತನಗೆ ದೊರತಿರುವ ಅಲ್ಪಕಾಲದಲ್ಲಿಯೇ ತನ್ನ ಪವಿತ್ರಜೀವನವನ್ನು ಸಾರ್ಥಕಗೊಳಿಸಲು ಯತ್ನಿಸಬೇಕು. ಮಾನವನ ಉನ್ನತಿಯು ಅವನು ಮಾಡುವ ಕಾರ್ಯಗಳನ್ನವಲಂಬಿಸಿದೆ. ಆ ಕಾರ್ಯಗಳು ಸತ್ಕಾರ್ಯಗಳಾದರೆ, ವ್ಯಕ್ತಿಗೂ, ದೇಶಕ್ಕೂ ಕೂಡಿಯೇ ಹಿತವಾಗುತ್ತದೆ. ಒಳ್ಳೆಯ ಕಾರ್ಯಗಳಿಂದ ಜೀವನವು ಪವಿತ್ರವೆನಿಸುತ್ತದೆ. ಈ ಸಂಗತಿಯನ್ನು ಬಸವೇಶ್ವರರು 'ಲೇಸೆನಿಸಿಕೊಂಡು ಒಂದು ದಿನ ಬದುಕಿದರೇನು, ನಾಲ್ಕು ದಿನ ಬದುಕಿದರೇನು. ಐದು ದಿನ ಬದುಕಿದರೇನೊ'ಎಂದು ಹೇಳಿದ್ದಾರೆ. ಶ್ರೀ ಅರವಿಂದರೂ ಸಹ :

'The earth is a world of life and matter. But man is not vegetable nor an animal. He is a spirtual and thinking being who is set here to shape and use the animal world for higher purposes with higher motives and for more divine intsruments.'

ಎಂದು ಉದ್ಗಾರಿಸಿರುವರು. ಅಂದರೆ ಈ ಪೃಥ್ವಿಯು ಚೇತನಾಚೇತನಾತ್ಮಕವಾದ ಪ್ರಪಂಚವು. ಆದರೆ ಮನುಷ್ಯನು ಸಸ್ಯವರ್ಗ ಯಾ ಪ್ರಾಣಿವರ್ಗಕ್ಕೆ ಸೇರಿದವನಲ್ಲ. ಅವನು ವಿಚಾರಶಕ್ತಿಯುಳ್ಳ ಆಧ್ಯಾತ್ಮಿಕ ಜೀವಿಯು. ಉನ್ನತ ಗುರಿಯುಳ್ಳವನಾಗಿ, ಈ ಪ್ರಪಂಚವನ್ನು ಉದಾತ್ತಧ್ಯೇಯಸಾಧನೆಗಾಗಿ, ದೈವತ್ವದ ಆವಿಷ್ಕಾರಕ್ಕಾಗಿ ಬಳಕೆ ಮಾಡಿಕೊಳ್ಳಲು ನಿಯಮಿಸಲ್ಪಟ್ಟಿದ್ದಾನೆ.

ಮನುಷ್ಯನು ಇಷ್ಟು ಶ್ರೇಷ್ಠಜೀವಿಯಾಗಿ, ಸಾಧಿಸತಕ್ಕ ಉದ್ದೇಶಗಳೂ ಮತ್ತು ಹೊಂದಲಿರುವ ಧ್ಯೇಯಗಳೂ ಅಸಂಖ್ಯಾತವಾಗಿರುವಾಗ, ಅವನು ಜೀವನದ ಒಂದು ಕ್ಷಣವನ್ನಾದರೂ ನಿರರ್ಥಕ ಮಾಡಿಕೊಳ್ಳತಕ್ಕದ್ದಲ್ಲ. ಕಾಲದ ಬೆಲೆಯು ಅಮೋಘವಾದುದು. ಹೋದ ಕಾಲವು ಮರಳಿ ಬರಲಾರದು. ಜೀವಿತವಾದರೂ ಅಲ್ಪಾಯುವಾಗಿದೆ. ಅಂದಮೇಲೆ ಕಾಲದ ಸದ್ವಿನಿಯೋಗವು ಅವನ ಪ್ರತಿಕ್ಷಣದ ಎಚ್ಚರಿಕೆಯಾಗಿರಲೇಬೇಕು. ಮಹಾಪುರುಷರ ಜೀವಮಾನಕಾಲದ ಪ್ರತಿಯೊಂದು ಕ್ಷಣವೂ ಅವರಿಗೆ ಒಂದಿಲ್ಲೊಂದು ತೆರಿಗೆಯನ್ನು ತೆತ್ತೇ ಹಾಯ್ದುಹೋಗಿದೆ. ಅವನು ಕರ್ತವ್ಯನಿಷ್ಠನಾಗಿರಬೇಕು. ನಾವು ನಿರುದ್ಯೋಗಿಗಳಾಗಿರಬೇಕೆಂದೂ, ಕರ್ಮಸಂನ್ಯಾಸ ಮಾಡಬೇಕೆಂದೂ ದೇವರು ನಮಗೆ ಈ ದೇಹೇಂದ್ರಿಯವನ್ನೂ, ಈ ಕರ್ಮಶಕ್ತಿಯನ್ನೂ ಕೊಟ್ಟಿಲ್ಲ. ಕರ್ಮಶಕ್ತಿಯು ದೇವರು ನಮಗೆ ಕೊಟ್ಟಿರುವ ಪರಮಭಾಗ್ಯವು. ಅದರ ಯೋಗ್ಯ ಉಪಯೋಗವಾಗಬೇಕೆಂದೇ ದೇವರು ಅದನ್ನು ನಮಗೆ ದಯಪಾಲಿಸಿರುವನು. ಕರ್ಮಮಾಡದೆ ನಮ್ಮ ಜೀವನಯಾತ್ರೆಯೂ ಕೂಡ ಮುಂದೆ ಸಾಗದು. ನಾವು ಈ ಕರ್ಮಭೂಮಿಯಲ್ಲಿ ಕರ್ಮದೇಹವನ್ನು ತೊಟ್ಟಿರುವವರೆಗೂ ಕರ್ಮವನ್ನು ಮಾಡಿಯೇ ತೀರಬೇಕು. ಕರ್ಮಸಂನ್ಯಾಸಕ್ಕಿಂತಲೂ ಕರ್ತವ್ಯನಿಷ್ಠೆಯೇ ಉತ್ತಮವು. ಇದನ್ನೇ :

'ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ
ಶರೀರ ಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದ ಕರ್ಮಣಃ' ॥

ಎನ್ನುವ ಗೀತಾವಾಕ್ಯವು ಸ್ಪಷ್ಟಪಡಿಸುತ್ತದೆ. ಕರ್ಮ ಮಾಡದೆ ನಾವು ಒಂದು ಕ್ಷಣವೂ ಇರಲಾರೆವು.

'ನ ಹಿ ಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ'॥

ಎಂಬ ಗೀತೋಕ್ತಿಯಂತೆ ಸಹ ವಾಸ್ತವವಾಗಿ ಯಾರೂ ಒಂದು ಕ್ಷಣವೂ ಕರ್ಮಮಾಡದೆ ಇರಲಾರರು. ಪ್ರಕೃತಿಯಿಂದ ಉತ್ಪನ್ನವಾದ ಗುಣಗಳಿಗೆ ಪರವಶನಾಗಿರುವ ಪ್ರತಿಯೊಬ್ಬನಿಂದ ಅವು ಕರ್ಮವನ್ನು ಮಾಡಿಸುತ್ತವೆಯೆಂದು ಹೇಳುತ್ತದೆ. 'Intense activity is necessary. We always work. We cannot live a minute without work.'

* ಸಮರ್ಪಣೆ ಗ್ರಂಥದಿಂದ (೧೯೭೨)

ಅಂದರೆ ಉತ್ತಮ ಕೃತಿಯು ಆವಶ್ಯಕ. ನಾವು ಯಾವಾಗಲೂ ಕರ್ಮಮಾಡುತ್ತಿರುತ್ತೇವೆ. ಕರ್ಮ ಮಾಡದೆ ಒಂದು ಕ್ಷಣ ಕಾಲ ವಾವರೂ ಜೀವಿಸಲಾರೆವು. ಮತ್ತು 'To de idle physically, while building castles in the air is not without work' ಮನಸ್ಸಿನಲ್ಲಿ ಕಲ್ಪನಾ ತರಂಗಗಳು ತುಂಬಿಕೊಂಡಿರುವಾಗ, ದೈಹಿಕ ವಿಶ್ರಾಂತಿಯನ್ನು ಹೊಂದಿದ್ದರೂ, ಅದು ಕರ್ಮಸಂನ್ಯಾಸವಲ್ಲ ಎನ್ನುವ ಸ್ವಾಮಿ ವಿವೇಕಾನಂದರ ಉಕ್ತಿಗಳೂ, ಮನುಷ್ಯನು ಕರ್ಮಮಾಡದೆ ಇರುವುದು ಅಸಾಧ್ಯವೆಂದು ಸ್ಪಷ್ಟೀಕರಿಸುತ್ತವೆ. ಅಭ್ಯುದಯ ಪ್ರಾಪ್ತಿಗೆ ಕರ್ಮವು ಅವಶ್ಯ. ಹಾಗೆಯೇ ಶ್ರೇಯಸ್ಸಿನ ಪ್ರಾಪ್ತಿಗಾದರೂ, ನಿಷ್ಠಾಪೂರ್ವಕವಾದ ಮನುಷ್ಯನ ದೃಢಪ್ರಯತ್ನವು ಅತಿ ಪ್ರಾಮುಖ್ಯವಾಗಿದೆ. ಸಾಧಕನಾಗಿ ಮಾಡಬೇಕಾದ ಸಾಧನೆಗಳನ್ನು ಮಾಡಿ ಮುಗಿಸಿದ ಮೇಲೆ ಸಿದ್ಧಾವಸ್ಥೆಯನ್ನು ಹೊಂದಬಲ್ಲನು. ಈ ವಿಚಾರಗಳೆಲ್ಲವನ್ನೂ ಚೆನ್ನಾಗಿ ಬಲ್ಲವರಾದ್ದರಿಂದಲೇ ನಮ್ಮ ಶರಣರು ಕಾಯಕಕ್ಕೆ ವಿಶೇಷ ಮಹತ್ವವನ್ನು ಕೊಟ್ಟು '**ಕಾಯಕವೇ ಕೈಲಾಸ**' ಎಂದು ಒತ್ತಿ, ಒತ್ತಿ ಸಾರಿರುವರು.

ಸೋಮಾರಿತನವೆನ್ನುವುದು ಶರಣರಿಗೆ ಸೇರದು. ಪರಾವಲಂಬನೆಯೆಂಬುದು ಅವರಿಗೆ ದೂರದ ಮಾತು. ದುಡಿಮೆಯು ಜೀವನದ ಕರ್ತವ್ಯವೆಂದು ಅವರ ಅನ್ನುಭವಿಕೆ. ಸಮಾಜಘಟಕನಾಗಿರತಕ್ಕ ಪ್ರತಿಯೊಬ್ಬ ವ್ಯಕ್ತಿಯೂ ಯಾವುದಾದರೊಂದು ಕಾರ್ಯವನ್ನು ಅವಲಂಬಿಸಿಯೇ ತೀರಬೇಕೆಂಬ ನಿರ್ಣಂಥವನ್ನು ಹೂಡಿದರು. ಸಾಮಾನ್ಯವಾಗಿ ದೇಹಪೋಷಣೆಯು ಸಹ ಆಹಾರೋತ್ಪಾದನೆ, ಧಾನ್ಯ ಸಂವರ್ಧನ, ಪಾಕಕ್ರಿಯೆ ಮುಂತಾದ ಕಾರ್ಯಗಳನ್ನು ನೆರವೇರಿಸದೆ ಆಗದು. ಅಂದಮೇಲೆ ಜೀವನಕ್ಕೆ ತಕ್ಕ ಕರ್ಮವು ಅವಶ್ಯಕ. ಹಾಗೆಯೇ ಆಧ್ಯಾತ್ಮಿಕ ಸಾಧನೆಗೂ ಕ್ರಿಯೆಯು ಆವಶ್ಯಕವೆಂದು ಶರಣರು ಸಾರಿರುವರು :

'ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೊ ;
ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೊ ;
ಬೇಯದೆ ಅಶನವನುಂಬ ಠಾವಾವುದು ? ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ'
'ಕಾಯಕವಳಿದ ಠಾವಿನಲ್ಲಿ ಜೀವನದ ಎಡೆಯಾಟವುಂಟೇ ?
ಕಾಯಕವಿಲ್ಲದೆ ಭಕ್ತಿ ಹೋಯಿತ್ತು ಮಾರಯ್ಯಪ್ರಿಯ ಅಮಳೇಶ್ವರಲಿಂಗವ ಮುಟ್ಟದೆ.'

ಕ್ರಿಯೆಯ ಮಾಡದೆ ಸಿದ್ಧಿ ಪ್ರಾಪ್ತಿಯಾಗದು. ಗತಿಮತಿ ಕರಣಾದಿಗಳು ಇರುವವರೆವಿಗೆ ಕರ್ಮಗಳನ್ನು ಮಾಡುತ್ತಲೇ ಇರಬೇಕು. ಕೇವಲ ಜ್ಞಾನ ಮಾತ್ರವೇ ಹೆಚ್ಚಿನದೆಂದು ಕುಳಿತರೆ ಅದು ತನ್ನಷ್ಟಕ್ಕೆ ತಾನೆ ತಲೆಯಲ್ಲಿ ಬಂದು ಸೇರದು. ಸತ್ಕ್ರಿಯಾಮಾರ್ಗದಿಂದ ಸಾಗಿ ಜ್ಞಾನವನ್ನು ಅಳವಡಿಸಲಿಕ್ಕೇ ಬೇಕು. ಆಗ ಸಿದ್ಧಿಯು ಕೈಸೇರುವುದು. ಈ ರೀತಿ ಕಾಯಕವೆನ್ನುವದು ಜೀವನದಲ್ಲಿ ಒಂದು ಸ್ಥಿರವಾದ ಅನಿವಾರ್ಯ ಪ್ರಸಂಗವೆಂಬುದು ಶರಣರ ಮತವು.

ಆಧುನಿಕ ಕಾಲದಲ್ಲಿ ನಿರುದ್ಯೋಗ ಸಮಸ್ಯೆಯು ಬಹಳ ಕಠಿನವಾಗಿದೆ. ಪ್ರಪಂಚದಲ್ಲಿ ಮಹಾ ಮಹಾ ಮೇಧಾವಿಗಳ ಲಕ್ಷ್ಯವೆಲ್ಲವೂ ನಿರುದ್ಯೋಗ ಸಮಸ್ಯೆಯ ನಿವಾರಣೋಪಾಯಗಳ ಶೋಧನದಲ್ಲಿ ಮಗ್ನವಾಗಿದೆ. ಅರ್ಥಶಾಸ್ತ್ರಜ್ಞರಂತೂ ಈ ನಿರುದ್ಯೋಗದಿಂದ ಉಂಟಾಗಿರುವ ವಿಷಮಪರಿಸ್ಥಿತಿಯನ್ನು ದೂರೀಕರಿಸಲು ಆವಶ್ಯಕವಾದ ಯೋಜನೆಗಳನ್ನು ಹುಡುಕುವುದರಲ್ಲಿ ತೊಡಗಿದ್ದಾರೆ. ನಿರುದ್ಯೋಗ ಸಮಸ್ಯೆಯ ಪರಿಣಾಮವಾಗಿ ಆರ್ಥಿಕ ಅವನತಿ ಹಾಗೂ ದಾರುಣದಾರಿದ್ರ್ಯದ ಭೀಕರತೆಯು ಎಲ್ಲೆಲ್ಲಿಯೂ ತಾಂಡವವಾಡುತ್ತಿದೆ. ನಮ್ಮ ಶರಣರ ಕಾಯಕತತ್ವವು ಕಠಿಣವಾದ ನಿರುದ್ಯೋಗ ಸಮಸ್ಯೆಯನ್ನು ಬಹಳ ಸುಲಭವಾಗಿ ಬಗೆಹರಿಸಲು ಹೇಗೆ ಶಕ್ಯವಾಯಿತೆಂಬುದನ್ನು ವಿಮರ್ಶಿಸುವ: ಉದ್ಯೋಗಗಳಲ್ಲಿ ಮೇಲು ಕೀಳುಗಳನ್ನೆಣಿಸಿ ಮೇಲಾದ ಉದ್ಯೋಗನೇ ಕರ್ತವ್ಯವು, ಉಳಿದುವೆಲ್ಲವೂ ತ್ಯಾಜ್ಯವೆಂಬ ತಪ್ಪು ಭಾವನೆಯು ಪ್ರಚಾರವಾಗಿರುವುದರಿಂದಲೇ ನಿರುದ್ಯೋಗವು ಇಷ್ಟು ಹೆಚ್ಚಾಗಿದೆ. ಉದ್ಯೋಗಗಳ ತಾರತಮ್ಯದಿಂದ ಸಾಮಾಜಿಕ ತಾರತಮ್ಯ ಉಂಟಾಗಿದೆ. ಒಂದು ಉದ್ಯೋಗವನ್ನು ಮಾಡುವವನು ಸಮಾಜದಲ್ಲಿ ಮೇಲು, ಮತ್ತೊಂದು ಉದ್ಯೋಗವನ್ನು ಮಾಡುವವನು ಕೀಳೆಂಬ ಘಾತುಕ ಕಲ್ಪನೆಯುಂಟಾಗಿ ಅನೇಕ ಉದ್ಯೋಗಗಳು ಸಮಾಜದ ಕೈಬಿಟ್ಟು ಹೋಗಿವೆ. ಉತ್ತಮವಾದ ಕಲೆಗಳು ಹಾಳಾಗಿವೆ, ದಾರಿದ್ರ್ಯವು ಹೆಚ್ಚಾಗಿದೆ. ಪರಾವಲಂಬನ ಜೀವಿಗಳ ಹಾಗೂ ಭಿಕ್ಷುಕರ ಸಂಖ್ಯೆಯು ಏರುತ್ತಿದೆ. ಹೀಗಾಗಿ ಸಮಾಜಪುರುಷನು ಬಹಳ ಭೀಕರ ಪರಿಸ್ಥಿತಿಯಲ್ಲಿರುತ್ತಾನೆ. ಶ್ರೀ ಬಸವೇಶ್ವರರು ವೃತ್ತಿಗಳ ಮೇಲು ಕೀಳುಗಳನ್ನು ಕಿತ್ತೊಗೆದವರಾದುದರಿಂದ, ಮನುಷ್ಯನು ಯಾವ ವ್ಯವಸಾಯವನ್ನು ಕೈಗೊಂಡರೂ ಕೀಳಲ್ಲವೆಂಬಭಿಪ್ರಾಯವು ತಲೆದೋರಿತು. ಯಾವ ಉದ್ಯೋಗವೇ ಆಗಲಿ, ಅದು ನೀತಿ ವಿಶಿಷ್ಟವೂ ಮತ್ತು ಸಮಾಜದ ಮೇಲ್ಮೆಗೆ ಆವಶ್ಯಕವೂ ಆದಲ್ಲಿ, ಅದು ಪರಮಾತ್ಮನ ಪೂಜೆಯಷ್ಟು ಪವಿತ್ರವು ಎಂಬುದನ್ನು ಸಾರಿದರು :

'ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ
ನಿಮ್ಮಾಣೆ ತಲೆದಂಡ ಕೂಡಲಸಂಗಮದೇವ'

ಎಂದು ಹೇಳಿ ಪ್ರತಿಯೊಂದು ಕಾಯಕದ ಘನತೆಯನ್ನು ಕೊಂಡಾಡಿರುವರು. 'All kinds of work from the mending of shoes to the reading of scriptures help man to proceed towards knowledge, if he does it disinterestedly' ಅಂದರೆ ಜೋಡುಗಳನ್ನು ಮಾಡುವ ಉದ್ಯೋಗದಿಂದ ಹಿಡಿದು ವೇದ ಪಾರಾಯಣದ ಪರ್ಯಂತವೂ ಯಾವ ಕಾರ್ಯವನ್ನೇ ಆಗಲಿ. ನಿಷ್ಕಾಮಬುದ್ಧಿಯಿಂದ ಮಾಡಿದರೆ ಅದು ಮನುಷ್ಯನ ಜ್ಞಾನ ಸಂಪಾದನೆಗೆ ಸಹಾಯಕವಾಗುವುದೆಂಬ ಉಕ್ತಿಯು ಉದ್ಯೋಗಗಳಲ್ಲಿರುವ ಉಚ್ಚ ನೀಚ ಭಾವನೆಯನ್ನು ಕಿತ್ತೊಗೆಯುವುದಾಗಿದೆ. ಶ್ರೀ ಬಸವೇಶ್ವರರ ಪ್ರಚಾರದಿಂದ ಸಮಾಜದಲ್ಲಿ ಕೈಬಿಟ್ಟು ಹೋಗಿದ್ದ ಉದ್ಯೋಗಗಳು ಪುನಃ ಪ್ರಾರಂಭವಾದುವು. ಎಲ್ಲರಿಗೂ ಉದ್ಯೋಗವು ದೊರಕುವಂತಾಯಿತು. ಸರ್ವ ವಿಧವಾದ ಕಲಾ ಕೈಗಾರಿಕೆಗಳೂ ಅಭಿವೃದ್ಧಿಗೊಂಡವು. 'ಕೃಷಿ ಕೃತ್ಯ ಕಾಯಕದಿಂದಾದೊಡೇನು, ತನು ಮನವ ಬಳಲಿಸಿ ತಂದು ದಾಸೋಹವ ಗೈವ ಸದ್ಭಕ್ತನ ಪಾದವ ತೋರಯ್ಯಾ ಎನಗೆ' ಎನ್ನುವ ನುಡಿಗಳು ಎಲ್ಲರನ್ನೂ ಹುರಿದುಂಬಿಸಿ ಕರ್ತವ್ಯನಿಷ್ಠರನ್ನಾಗಿ ಮಾಡಿದುವು. ಕಾಯಕವು ಸ್ವಾವಲಂಬನ ಮಾರ್ಗ; ಅದು ಉದರ ನಿರ್ವಾಹ ಸಾಧನೆಯಾಗಿಯೂ, ಮುಕ್ತಿಗೆ ಮಾರ್ಗವಾಗಿಯೂ ಪರಿಣಮಿಸಿತು. ಸಮಾಜದ ಭದ್ರತೆಗೆ ಬೇಕಾದ ಎಲ್ಲಾ ಉದ್ಯೋಗಗಳೂ ಸಮಾಜದಿಂದಲೇ ಮಾಡಲ್ಪಡಬೇಕೆನ್ನುವುದು ಅವರ ಪರಮತತ್ತ್ವವು. ತಮ್ಮ ಸಮಾಜಕ್ಕೆ ಬೇಕಾಗುವ ಅನುಕೂಲಗಳನ್ನೆಲ್ಲಾ ತಾವೇ ಏರ್ಪಡಿಸಿಕೊಳ್ಳಬೇಕೆಂದೂ, ಅನ್ಯರನ್ನು ಆಶ್ರಯಿಸಕೂಡದೆಂದೂ ಶಿವಶರಣರ ಮತವು. ಕಾಯಕ ತತ್ತ್ವವು ವೀರಶೈವ ಸಮಾಜದಲ್ಲಿ ಸುಪರಿಣಾಮವನ್ನುಂಟುಮಾಡಿತು. ಸಮಾಜದ ಸಂಪತ್ತು ಸಮಾಜದಲ್ಲಿಯೇ ಉಳಿದು ಸಮಾಜದ ಆರ್ಥಿಕ ಅಭ್ಯುದಯಕ್ಕೆ ಕಾರಣವಾಯಿತು. ನಮ್ಮ ದೇಶದ ಸಂಪತ್ತು ನಮ್ಮಲ್ಲಿಯೇ ಉಳಿಯುವಂತೆ ನಮಗೆ ಬೇಕಾದ ಸಲಕರಣೆಗಳನ್ನೆಲ್ಲಾ ತಯಾರಿಸುವ ಸಿದ್ಧತೆಗಳನ್ನು ಮಾಡಿ ಆರ್ಥಿಕ ಮುಗ್ಗಟ್ಟನ್ನು ಹೋಗಲಾಡಿಸಬೇಕೆಂಬ ಗ್ರಾಮಸುಧಾರಣಾಭಿಪ್ರಾಯಗಳೆಲ್ಲವನ್ನೂ ಈಗ ೮೦೦ ವರ್ಷಗಳ ಹಿಂದೆ ಆಚರಣೆಗೆ ತಂದ ಕೀರ್ತಿಯು ಶ್ರೀ ಬಸವೇಶ್ವರರಿಗೆ ಸೇರಿರುತ್ತದೆ. ಗೃಹ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸಿ ರಾಷ್ಟ್ರದ ದಾರಿದ್ರ್ಯವನ್ನು ಹೋಗಲಾಡಿಸಬೇಕೆಂಬ ಗ್ರಾಮಸುಧಾರಕ ಅಭಿಪ್ರಾಯವು ಆಗ ಆಚರಣೆಯಲ್ಲಿದ್ದಿತು. ಕಾಯಕವು ವೀರಶೈವ ಸಮಾಜದ ಸ್ವಸಾಮರ್ಥ್ಯಕ್ಕೆ ಕಾರಣವಾಯಿತು. ಅಲ್ಲದೆ ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ವ್ಯವಸಾಯಗಳನ್ನು ಕೈಕೊಳ್ಳುವುದರಿಂದ ಸಮಾಜದ ಸ್ವಾವಲಂಬನೆಯೂ, ಸ್ವಾಭ್ಯುದಯವೂ ಮತ್ತು ಆರ್ಥಿಕ ಉನ್ನತಿಯೂ ತಲೆದೋರುವುವು. ಈ ಕಾಯಕತತ್ತ್ವವು ಅರ್ಥಶಾಸ್ತ್ರದ ಜೀವಾಳವಾದ ಶ್ರಮ ವಿಭಾಗ (Division of labour) ತತ್ತ್ವವನ್ನು ಹೇಗೆ ಒಳಗೊಂಡಿದೆಯೆಂಬುದು ಮೇಲಿನ ಅಭಿಪ್ರಾಯಗಳಿಂದ ವ್ಯಕ್ತವಾಗುತ್ತದೆ. ವೀರಶೈವರೆಲ್ಲರೂ ಯಾವ ವಸ್ತುವನ್ನೇ ಆಗಲಿ ಸ್ವದೇಶೀಯರಿಂದಲೇ ಮಾಡಲ್ಪಟ್ಟದ್ದನ್ನು ಉಪಯೋಗಿಸಬೇಕೆಂಬ ನಿರ್ಬಂಧವಿದ್ದುದರಿಂದ, ಉತ್ಪನ್ನವಾದ ವಸ್ತುಗಳಿಗೆ ತಕ್ಕ ಗಿರಾಕಿಗಳು ದೊರೆತು ಜೀವನಯಾತ್ರೆಯು ಸುಸೂತ್ರವಾಗಿ ನಡೆಯುತ್ತಿತ್ತು. 'ಸ್ವದೇಶೀ ವಸ್ತುಗಳನ್ನೇ ಕೊಳ್ಳಿರಿ' ಎಂದು ಈಗ ಎಲ್ಲೆಲ್ಲಿಯೂ ಕೇಳಿಬರುತ್ತಿರುವ ಕೂಗು ಆಗ ಹೇಗೆ ಸಾಮಾಜಿಕಧರ್ಮದಲ್ಲಿ ಸಮಾವೇಶವಾಗಿತ್ತೆನ್ನುವುದನ್ನು ನೋಡಬಹುದು. ಈ ರೀತಿಯಲ್ಲಿ ಶರಣರ ಕಾಯಕತತ್ತ್ವವು ಸಮಾಜ ಭದ್ರತೆ, ಬಂಧುರತೆ ಹಾಗೂ ಮೇಲ್ಮೆಗೆ ಅತ್ಯುಪಯುಕ್ತವಾದ ಆರ್ಥಿಕ ಸಮಾನತೆಯನ್ನು ಸ್ಥಾಪಿಸುವುದರಲ್ಲಿ ಸಮರ್ಥವಾಯಿತು.

ವಿಶೇಷವಾದ ದ್ರವ್ಯಸಂಗ್ರಹ ಮಾಡಿ ನಾಳೆಗೆಂದು ಕೂಡಿಡುವುದು ಕಾಯಕತತ್ತ್ವಕ್ಕೆ ವಿರೋಧ. ಶರಣರು ಇದನ್ನು ಬಹಳ ಹೀಗಳೆದಿದ್ದಾರೆ. ನಾಳೆಗೆಂದು ನಮಗಾಗಿ ಕೂಡಿಡುವ ವಸ್ತುಸಂಚಯದಿಂದ, ಇಂದಿನ ದಿನ ನಾಲ್ಕಾರು ಮಂದಿಯ ಪೋಷಣೆಗೆ ಉಪಯೋಗವಾಗುವ ವಸ್ತುಗಳ ಕೊರತೆಯನ್ನುಂಟುಮಾಡಿ. ತಾನೊಬ್ಬನೇ ಸುಖವಾಗಿರಲು ಬಯಸುವುದು ಸ್ವಾರ್ಥದ ಹಾಗೂ ಅನ್ಯಾಯದ ಪರಮಾವಧಿಯೆಂದು ಶರಣರು ಹೇಳಿರುವರು. ಈ ತತ್ತ್ವವು ಈಗಿನ ಪ್ರಜಾಹಿತೈಷಿಗಳು ತರಲೆಳಸುವ ಸಮತಾವಾದ (Socialism) ತತ್ತ್ವವನ್ನೊಳಕೊಂಡಿದೆಯಲ್ಲದೆ, ದೇಶದ ಸಾರ್ವಜನಿಕ ಹಿತಕ್ಕೆ ವಿರೋಧವಾದ ಬಂಡವಾಳಶಾಹಿ (Capitalism) ತತ್ತ್ವವನ್ನು ಪ್ರತಿಭಟಿಸುವುದಾಗಿದೆ. ನಾಳೆಗೆಂದು ಸಂಗ್ರಹ ಮಾಡುವುದು ನಿರಂತರವೂ ನಾಳಿನ ಕಾಯಕದ ಫಲವನ್ನು ಅನುಗ್ರಹಿಸುವ ಜಗನ್ನಿಯಾಮಕನ ವಿಚಾರದಲ್ಲಿ ಅವಿಶ್ವಾಸವನ್ನು ತೋರಿಸಿದ ಹಾಗಾಗುತ್ತದೆನ್ನುವುದು ಶರಣರ ಅಭಿಪ್ರಾಯ. ಕಾಯಕವು ಕೇವಲ ಶಾರೀರಿಕ ಶ್ರಮವಲ್ಲ. ಪರಮಾತ್ಮನಲ್ಲಿ ಅಚಲಭಕ್ತಿಯುಳ್ಳವನಾಗಿ, ಆ ದೇವದೇವನಲ್ಲಿ ಸಂಪೂರ್ಣ ವಿಶ್ವಾಸವಿಟ್ಟು, ಅವನ ಸೇವೆಯೆಂದು ನಿಷ್ಕಾಮಪೂರ್ವಕವಾಗಿ ಮಾಡುವ ಕಾರ್ಯವದು. ಕಾಯಕದಿಂದ ಲಭಿಸಬಹುದಾದ ಫಲಪ್ರಾಪ್ತಿಯು ಪರಮಾತ್ಮನ ಇಚ್ಛೆಗೆ ಒಳಪಟ್ಟಿರುವುದೆನ್ನುವ ಪವಿತ್ರಭಾವನೆಯುಳ್ಳವನೇ ಕಾಯಕ ನಿರತನು.

> 'ಸತ್ಯಶುದ್ಧ ಕಾಯಕದಲ್ಲಿ ಬಂದ ದ್ರವ್ಯದಲ್ಲಿ ಚಿತ್ತ ವಿಶುದ್ಧವಾಗಿರಬೇಕು. ನೇಮದ ಕೂಲಿ
> ಅಂದಿನ ನಿತ್ಯನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ
> ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯ'

ಇವೇ ಮುಂತಾದ ವಚನಗಳಿಂದ ಮೇಲ್ಕಂಡ ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿರುವರು. ಗುರುವಾಗಲಿ. ಸರ್ವಸಂಗಪರಿತ್ಯಾಗಮಾಡಿದ ಜಂಗಮವಾಗಲಿ ಕಾಯಕವನ್ನು ಮಾಡಿಯೇ ತೀರಬೇಕೆಂಬ ನಿರ್ಬಂಧವನ್ನು ಶ್ರೀ ಬಸವಣ್ಣನವರು ಹೂಡಿದರು. ಇದರಿಂದ ಸೋಮಾರಿಗಳ ಸುಳಿದಾಟ ಅಡಗಿದ್ದಲ್ಲದೆ, ಜಂಗಮದ ಸೋಗು ಹಾಕಿಕೊಂಡು ಪರಾವಲಂಬಿಗಳಾಗಿದ್ದವರ ಸಂಖ್ಯೆ ಬಹಳ ಕಡಿಮೆಯಾಯಿತು. ಸಮಾಜಕ್ಕೆ ಕಂಟಕಪ್ರಾಯರಾಗಿ ಈಗ ತೋರಿಬರುತ್ತಿರುವ ಕಪಟ ಜಂಗಮದ ಆಟಾಟೋಪವು ಇಲ್ಲವಾಯಿತು.

'ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ. ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲ ಹರಿವುದು.
ಜಂಗಮವಾದಡೂ ಕಾಯಕದಿಂದಲೇ ಪಾಶ ಹರಿವುದು. ಇದು ಚನ್ನಬಸವಣ್ಣಪ್ರಿಯ ಚಂದೇಶ್ವರಲಿಂಗದರಿವು'.
'ನೇಮವ ಮಾಡಿಕೊಂಡು ಭಕ್ತರ ಭವನಂಗಳ ಹೊಕ್ಕು ಕಾಯಕವ ಬಿಟ್ಟು ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೆ ?
ಆ ಗುಣ ಅಮಳೇಶ್ವರಲಿಂಗಕ್ಕೆ ದೂರ'

ಈ ಪ್ರಪಂಚವೇ ಬೇಡವೆನ್ನುವ ಜಂಗಮನೂ ಸಹ ಕಾಯಕವನ್ನು ಮಾಡಿಯೇತೀರಬೇಕೆಂಬ ನಿಯಮವು ಆತ್ಮೋನ್ನತಿ ಕಾರ್ಯಕ್ಕೆ ಮುಖ್ಯ ಸಾಧನವಾಗಿದೆ. ಅಲ್ಲದೆ

'ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಾಃ ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ' ॥

ಎಂಬ ಗೀತೋಕ್ತಿಯಂತೆ ಶ್ರೇಷ್ಠರು ಆಚರಿಸುವುದನ್ನು ಜನತೆಯೂ ಆಚರಿಸುವುದು ಲೋಕರೂಢಿಯಾಗಿರುವುದರಿಂದ ತಮ್ಮ ನಿದರ್ಶನದಿಂದ ಸಮಾಜದವರನ್ನು ಕಾಯಕದಲ್ಲಿ ಪ್ರವೃತ್ತರಾಗುವಂತೆ ಮಾಡಬೇಕೆನ್ನುವ ಪರಮಉದ್ದೇಶದಿಂದಲಾದರೂ ಜಂಗಮರು ಕಾಯಕ ಮಾಡುವುದು ಅಗತ್ಯವೆಂದು ಗೊತ್ತಾಗುತ್ತದೆ.

ಅನ್ಯಾಯಾರ್ಜಿತ ದ್ರವ್ಯದಿಂದ ತಾನು ಮಾಡತಕ್ಕ ಗುರುಲಿಂಗಜಂಗಮ ಸೇವೆಯೂ ದಾನಧರ್ಮಪರೋಪಕಾರಾದಿಗಳೂ ಎಲ್ಲವೂ ನಿಷ್ಪ್ರಯೋಜನವು. ಅದರಿಂದ ಆ ಮನುಷ್ಯನಿಗೆ ಯಾವ ಪುಣ್ಯವೂ ಲಭಿಸಲಾರದು. ದೇಹವನ್ನು ದಂಡಿಸಿ ಕಾಯಕದಿಂದ ಗಳಿಸಿರುವುದು ಅಲ್ಪವಾದರೂ ಸರಿಯೆ ಅದರಿಂದ ತಾನು ಮಾಡುವ ಪರಮಾತ್ಮನ ಪೂಜೆ, ಅರ್ಜಿಸುವ ನೈವೇದ್ಯ–ಎಲ್ಲವೂ ಅವನಿಗೆ ಪ್ರಿಯವಾಗಬೇಕಾದರೆ ಸತ್ಯಶುದ್ಧಕಾಯಕದಿಂದ ಮಾತ್ರ ಎನ್ನುವುದನ್ನು ಶರಣರು ಸಾರಿ ಸಾರಿ ಹೇಳಿದ್ದಾರೆ:–

'ಕಂದಿಸಿ, ಕುಂದಿಸಿ, ಬಂಧಿಸಿ, ನೋಯಿಸಿ, ಕಂಡ ಕಂಡವರ ಬೇಡಿ ತಂದು ಲಿಂಗಕ್ಕೆ
ಮಾಡಿಹೆನೆಂಬುವ ದಂದುಗದ ಓಗರ ಅದು ಲಿಂಗ ನೈವೇದ್ಯಕ್ಕೆ ಸಲ್ಲದು. ತನುವ ದಂಡಿಸಿ
ಮನವ ಬಳಲಿಸಿ, ಬಂದ ತೆರದ ಅನುವರಿದು, ಸಂದಿಲ್ಲದೆ ಸಂಶಯವಿಲ್ಲದೆ
ಮಾಡುವುದೇಮಾಟ. ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಾರ್ಪಿತ.
ಅನ್ಯಾಯದ ಗಳಿಕೆ ಅನರ್ಪಿತ.'

ಕಾಯಕ ನಿರ್ವಹಣೆಗೆ ಸುದೃಢ ಆರೋಗ್ಯಕರವಾದ ದೇಹವು ಅವಶ್ಯಕವಾದುದರಿಂದ ದೇಹ ರಕ್ಷಣೆಗೂ ಶರಣರು ಪ್ರಾಮುಖ್ಯತೆಯನ್ನು ಸೂಚಿಸಿರುತ್ತಾರೆ. ದೇಹವನ್ನು ಹೇಯವೆಂದು ಶರಣರು ಅಲ್ಲಗಳೆಯುವವರಲ್ಲ. ದೇಹ ಪ್ರಾಣ ಮನ ಸುವ್ಯವಸ್ಥೆಯಾಗಿದ್ದರೇನೇ ಅಧ್ಯಾತ್ಮ ಸಿದ್ಧಿಯಾಗಬಲ್ಲುದು. 'ಶರೀರಮಾದ್ಯಂ ಖಲು ಧರ್ಮ ಸಾಧನಂ' ಎನ್ನುವ ಹಾಗೆ ಶರೀರವು ಧರ್ಮಸಾಧನೆಗೆ ಬೇಕೇಬೇಕು. ಶರೀರವು ದೃಢವಾಗಿಯೂ ನಿರೋಗಿಯಾದದ್ದಾಗಿಯೂ, ಆರೋಗ್ಯಭಾಗ್ಯ ಉಳ್ಳದ್ದಾಗಿಯೂ ಇರಬೇಕು. ರೋಗಪೀಡಿತವಾದ ದುರ್ಬಲ ದೇಹದಿಂದ ಆತ್ಮಸಿದ್ಧಿ ಯಾಗಲಾರದು. 'ನಾಯಮಾತ್ಮಾ ಬಲಹೀನೇನ ಲಭ್ಯಃ' ಎನ್ನುವ ಶಾಸ್ತ್ರೋಕ್ತಿಯು ಮೇಲಿನ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ. ಮಾನವನೊಳಗಿನ ದೇವತ್ವ ಸಂಪಾದನೆ ಹಾಗೂ ದೇವತ್ವ ಪ್ರಕಾಶಕ್ಕೆ ಅಡಿಗಲ್ಲಾಗಿ ಸಮ್ಯಗ್ಸಿದ್ಧ ದೇಹವು ಬೇಕು. ಭಗವದುನ್ಮುಖವಾದ ಜೀವಧರ್ಮ ಪರಿಸಮಾಪ್ತಿಗೆ ದೇಹವು ಒಂದು ಸಾಧನವು. ಇದನ್ನರಿತ ಪ್ರಾಜ್ಞರು 'A body is the boat by which we can cross the river of life' ಸಂಸಾರ ನದಿಯನ್ನು ದಾಟಲಿಕ್ಕೆ ನಮ್ಮ ದೇಹವೇ ಒಂದು ದೋಣಿಯೆಂದು ಹೇಳಿ ಶರೀರವು ಎಷ್ಟು ಶ್ರೇಷ್ಠವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಕಾಯಕತತ್ತ್ವವು ಮನುಷ್ಯನನ್ನು ಶ್ರಮಜೀವಿಯನ್ನಾಗಿ ಮಾಡುತ್ತದೆ, ಕಷ್ಟಸಹಿಷ್ಣುತೆಯನ್ನುಂಟುಮಾಡುತ್ತದೆ. ದೇಹದ ದುಡಿಮೆಯಿಂದ ನಾವು ತೆಗೆದುಕೊಳ್ಳುವ ಆಹಾರಪಾನೀಯಗಳು ಚೆನ್ನಾಗಿ ಪಚನವಾಗಿ ದೇಹದ ಬೆಳವಣಿಗೆಗೆ ಕಾರಣವಾಗುತ್ತದೆ. ಉದ್ಯೋಗವಿಲ್ಲದಿರುವ ಕಾಯಕವೇ ಸಮಸ್ತ ರೋಗಗಳ ಧಾಮವಾಗಿರುತ್ತದೆ.

ಕಾಯಕತತ್ತ್ವವು ಮಾನಸಿಕ ನೈರ್ಮಲ್ಯ ಹಾಗೂ ಸಿದ್ಧತೆ–ಇವುಗಳನ್ನು ಒದಗಿಸಿಕೊಡುತ್ತದೆ. ನಿರುದ್ಯೋಗಿಯ ಮನಸ್ಸು ವಂಚನೆಯ ವ್ಯವಹಾರದಲ್ಲಿ, ಕುತ್ಸಿತ ಆಲೋಚನೆಗಳಲ್ಲಿ ತೊಡಗುವುದು. ಮನಸ್ಸು ಸ್ವಾಭಾವಿಕವಾಗಿ ಚಂಚಲವಾಗಿದೆ.

ಅದನ್ನು ಬಂಧಿಸುವುದು ಅತಿ ದುಸ್ತರವಾದ ಕಾರ್ಯ. ಆದರೆ ಒಂದು ಮಾರ್ಗದಲ್ಲಿ ಪ್ರವಹಿಸುತ್ತಿರುವ ಅದರ ಗಮನವನ್ನು ಪ್ರಯತ್ನದಿಂದ ತಡೆದು ಮತ್ತೊಂದು ಮಾರ್ಗದಲ್ಲಿ ಹೋಗುವಂತೆ ಮಾಡುವುದು ಅಷ್ಟು ಕಷ್ಟವಲ್ಲ. ಸಾಮಾನ್ಯವಾಗಿ ಹೀನ ವಿಚಾರಗಳಲ್ಲಿ ಕುತ್ಸಿತ ಆಲೋಚನೆಗಳಲ್ಲಿಯೇ ಮನವು ಪ್ರವೃತ್ತವಾಗುವುದು, ಈ ವಿಧವಾದ ಅದರ ದುಷ್ಟಪ್ರವೃತ್ತಿಯನ್ನು ತಡೆದು, ಸದ್ವಿಚಾರಗಳಲ್ಲಿ ಹಾಗೂ ಸದಾಲೋಚನೆಗಳಲ್ಲಿ ಪ್ರವೃತ್ತಿಯುಂಟಾಗುವಂತೆ ಮಾಡಬೇಕಾದುದು ಮನುಷ್ಯನ ಕರ್ತವ್ಯ. ಕಾಯಕವು ಮನಸ್ಸನ್ನು ಉದ್ಯೋಗಶೀಲವನ್ನಾಗಿ ಮಾಡುತ್ತದೆ. ಕಾಯಕ ಮಾಡುವಾಗ ಪ್ರಾಮಾಣಿಕತೆ ಮತ್ತು ಮನಸ್ಥೈರ್ಯ ಇವು ಬಹಳ ಆವಶ್ಯಕ. ಪ್ರಾಮಾಣಿಕತೆಯಿಂದ ಮನಸ್ಸು ಪವಿತ್ರವಾಗುತ್ತದೆ. ಅಲ್ಲದೆ ಒಂದು ವಿಧವಾದ ಅಸಾಧಾರಣ ಶಕ್ತಿಯುಂಟಾಗುತ್ತದೆ. ಬೇಸಾಯಗಾರರು ಉದ್ಯೋಗವನ್ನು ಮಾಡುತ್ತಿರುವಾಗ ಮನಸ್ಸನ್ನು ಚಲಿಸಗೊಡದೆ ಏಕಾಗ್ರತೆಯಿಂದ ಅದನ್ನು ಸಾಗಿಸುತ್ತಿರಬೇಕು. ತಾನು ಮಾಡತಕ್ಕ ಉದ್ಯೋಗದಲ್ಲಿ ಮನಸ್ಸು ಲೀನವಾಗಿರಬೇಕು. ಧ್ಯಾನನಿರತನಾದ ಯೋಗಿಯು ಹೇಗೆ ಪರಮಾತ್ಮನಲ್ಲಿ ನಿಶ್ಚಲಭಾವವನ್ನಿಟ್ಟು ಅನ್ಯವಸ್ತುಗಳ ಪರಿವೆಯಿಲ್ಲದಿರುವನೋ, ಹಾಗೆಯೇ ಕಾಯಕದಲ್ಲಿ ಶರಣನು ತದೇಕಚಿತ್ತನಿರತನಾಗಿ ಅನ್ಯರ ಗೊಡವೆಯಿಲ್ಲದಿರುವನು. ಕಾಯಕದಲ್ಲಿ ಚಿತ್ತೈಕಾಗ್ರತೆಯು ಹೇಗಿರಬೇಕೆಂಬುದನ್ನು ಶರಣರು :

> 'ಕಾಯಕದಲ್ಲಿ ನಿರತನಾದಡೆ ಗುರುದರ್ಶನವನ್ನಾದರೂ ಮರೆಯಬೇಕು, ಕಾಯಕದಲ್ಲಿ
> ನಿರತನಾದಡೆ ಲಿಂಗಪೂಜೆಯನ್ನಾದರೂ ಮರೆಯಬೇಕು. ಜಂಗಮ ಮುಂದಿದ್ದರೂ
> ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರಲಿಂಗವಾಯಿ
> ತ್ತಾದರೂ ಕಾಯಕದೊಳಗೆ'

ಎನ್ನುವ ವಚನದಲ್ಲಿ ವ್ಯಕ್ತಪಡಿಸಿದ್ದಾರೆ. ಹೀಗೆ ಉದ್ಯೋಗ ಮಾಡುತ್ತಿರುವವರಿಗೆ 'ನನಗೆ ತಿಳಿದ ಮಟ್ಟಿಗೆ ಮನಃಪೂರ್ವಕವಾಗಿ ಈ ಕೆಲಸ ಮಾಡಿದ್ದೇನೆ' ಎಂಬ ಸಮಾಧಾನವುಂಟಾಗುತ್ತದೆ. ಮನಸ್ಸಿನಲ್ಲಿ ಸಮಾಧಾನವು ಸಂಪೂರ್ಣವಾಗಿ ನೆಲೆಗೊಂಡಾಗ ಉಂಟಾದ ಆನಂದವು ಅವರ್ಣನೀಯವಾಗಿದೆ. ಆಸಕ್ತಿಯಿಂದ ಕಾಯಕ ಮಾಡುವಾಗ ತಾನು ಮಾಡುವ ಕಾರ್ಯದಲ್ಲಿಯೇ ಒಂದು ಬಗೆಯ ಆನಂದ ಉಂಟಾಗುತ್ತದೆ. ಆ ಆನಂದದಿಂದ ಅವನು ಉದ್ಯೋಗದಲ್ಲಿ ಮತ್ತಷ್ಟು ನಿಷ್ಠಾವಂತನಾಗುತ್ತಾನೆ. ಭಾವನೆಯು ಬಲಿತ ಹಾಗೆಲ್ಲಾ, ಅವನ ಮನೋಶಕ್ತಿಯು ಅಲ್ಲಿಯೇ ಸಮರಸ ಹೊಂದುತ್ತದೆ. ಯಾವುದೇ ವಿಧವಾದ ದುರಾಲೋಚನೆ ದುರ್ವ್ಯಾಪಾರಗಳಲ್ಲಿ ಅದಕ್ಕೆ ಪ್ರವೇಶವೇ ಇಲ್ಲದಂತಾಗುತ್ತದೆ. ಎಲ್ಲೆಲ್ಲಿಯೋ ಹೋಗುತ್ತಿದ್ದ ಮನಸ್ಸನ್ನು ಹಿಂದಿರುಗಿಸಿ ಕಾಯಕದಲ್ಲಿ ನಿಲ್ಲುವಂತೆ ಮಾಡುವುದರಿಂದ, ಮನಸ್ಸಿನ ಸ್ಥೈರ್ಯ ಮತ್ತು ಪಾವಿತ್ರ್ಯಗಳು ಹೆಚ್ಚಾಗುತ್ತವೆ. ನಿರ್ಮಲಮನೋಭೂಮಿಕೆಯಲ್ಲಿ ಬಿತ್ತಲ್ಪಟ್ಟ ಆಧ್ಯಾತ್ಮಿಕ ಬೀಜವು ಚೆನ್ನಾಗಿ ಅಂಕುರಿಸಿ, ವೃಕ್ಷವಾಗಿ ಫಲಗಳನ್ನೀಯುವುದು. ಸೋಮಾರಿತನವು ಮಾನಸಿಕ ವಿಷವು ; ನಿರುದ್ಯೋಗವು ಮೈಗೂ ವಿಷ ; ಬುದ್ಧಿಗೂ ವಿಷ ; ಅಸದ್ವರ್ತನದ ದಾದಿ ; ದುಷ್ಟವರ್ತನದ ಮಹಾ ಮಾತೃಶ್ರೀ; ಸಪ್ತಮಹಾಪಾತಕಗಳಲ್ಲೊಂದು ಪಾತಕ ; ಕಲಿಪುರುಷನಿಗೊರಗುದಿಂಬು, ತಲೆದಿಂಬು : ಲೋಲಾಟದ ಮೆತ್ತೆ. ನಿರುದ್ಯೋಗದಿಂದ ಸಂಭವಿಸಲಿರುವ ಮಾನಸಿಕ ವಿಷವನ್ನು ಕಾಯಕವು ಹೋಗಲಾಡಿಸಿ ಮನಸ್ಸಿನಲ್ಲಿ ಶಾಂತಿ, ಸಮಾಧಾನ, ಸ್ಥೈರ್ಯಗಳನ್ನುಂಟುಮಾಡಿ, ಮನೋವಿಕಾಸಗೊಳಿಸುತ್ತದೆ.

ಕಾಯಕದಿಂದ ಮನುಷ್ಯನಿಗೆ ತೃಪ್ತಿಯೂ, ಆ ಮೂಲಕ ಜೀವನದಲ್ಲಿ ಸುಖವೂ ಉಂಟಾಗುತ್ತದೆ. ಯಾವನೇ ಆಗಲಿ ದೇಹ ದಂಡಿಸಿ, ದುಡಿದು ಕಷ್ಟಪಟ್ಟು ಸಂಪಾದಿಸಿದ್ದರಲ್ಲಿ ಹೆಚ್ಚು ವಿಶ್ವಾಸ, ಆದರ ಉಳ್ಳವನಾಗಿರುತ್ತಾನೆ. ತಾನು ಗಳಿಸಿದ ವಸ್ತುಗಳನ್ನು ಭೋಗಿಸುವುದರಲ್ಲಿ ತೃಪ್ತಿ ಸಮಾಧಾನಗಳುಂಟಾಗುತ್ತವೆ. ಆ ಮೂಲಕ ಒಂದು ವಿಗ್ಗಳವಾದ ಆನಂದ ಉಂಟಾಗುತ್ತದೆ. ಅನಾದರದಿಂದ ಆ ವಸ್ತುವನ್ನು ವ್ಯರ್ಥಮಾಡಲೆಳಸುವುದಿಲ್ಲ. ತಾನು ಕಷ್ಟಪಡದೆ ಪರರನ್ನು ಶೋಷಣೆ ಮಾಡಿ ಬಡವರ ರಕ್ತವನ್ನು ಹೀರಿ ಧನಿಕರಾಗಿ ಇಂದ್ರವೈಭವದಲ್ಲಿ ಮೆರೆಯುತ್ತಿರುವವರಿಗೆ ಬಡವರು ಭೋಗಿಸುವ ತೃಪ್ತಿ ಎಲ್ಲಿ? ಆನಂದವೆಲ್ಲಿ? ಎಲ್ಲವೂ ಗಗನಕುಸುಮಪ್ರಾಯವು. ಆ ತೃಪ್ತಿ, ಆ ಸಮಾಧಾನ, ಆ ಆನಂದ–ಇವುಗಳ ಲೇಶಾಂತವಾದರೂ ಅವರಿಗೆ ದೊರೆಯಲಾರವು. ತಾವು ದೇಹ ದಂಡಿಸಿ ಸಂಪಾದನೆ ಮಾಡದಿರುವುದರಿಂದ ಆಹಾರದ ಮೌಲ್ಯವು ಗೊತ್ತಿಲ್ಲದೆ, ಪ್ರಸಾದದ ಮಹತ್ವವು ಅರಿವಾಗದೆ ಈಗ ಶ್ರೀಮಂತರ ಮನೆಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಬಹು ವೆಚ್ಚದಿಂದ ಬಹು ಶ್ರಮದಿಂದ ಪಾಕಮಾಡಿದ ಸವಿಸವಿಯಾದ ಭಕ್ಷ್ಯಭೋಜ್ಯಾದಿಗಳನ್ನು ಲಕ್ಷ್ಯವಿಲ್ಲದೆ ಚರಂಡಿಗೆ ಬಿಸಾಡುತ್ತಿರುವರು. ಮೂರು ಹೊತ್ತು ನಾಲ್ಕು ಹೊತ್ತು ಕೂಳಿಲ್ಲದೆ ಅನ್ನ ಅನ್ನ ಎಂದು ಹಂಬಲಿಸುತ್ತಿರುವ ತಿರುಕರು ಮನೆಯ ಬಾಗಿಲಿಗೆ ಬಂದರೆ ಅವರಿಗೆ ಒಂದು ತುತ್ತು ಅನ್ನವನ್ನು ಕೊಡುವುದೆಂದರೆ ಸೇರದು. ಯಾರಿಗೆ ತೃಪ್ತಿ, ಸಮಾಧಾನ, ಆನಂದಗಳು ಲಭಿಸುವುದಿಲ್ಲವೋ ಅವರ ಬಾಳ್ವೆಯು ದುಃಖಕರವು.

ಕಾಯಕದಿಂದ ಮನುಷ್ಯನಿಗೆ ತಾಳ್ಮೆಯಿಂದ ಕಷ್ಟಗಳನ್ನು ಸಹಿಸಿಕೊಳ್ಳುವ ಧೈರ್ಯ, ಸುಖದುಃಖಗಳಲ್ಲಿ ಸಮಚಿತ್ತತೆ– ಈ ಗುಣಗಳುಂಟಾಗುತ್ತವೆ. ಮನುಷ್ಯನ ಜೀವನದಲ್ಲಿ ಸುಖದುಃಖಗಳು ದ್ವಂದ್ವಾತ್ಮಕ. ತನ್ನ ಜೀವನಪಥದಲ್ಲಿ ಅನಂತ ಕಷ್ಟ

ಗಳನ್ನನುಭವಿಸಬೇಕಾಗುತ್ತದೆ. ಹಲವು ಸ್ತುತಿನಿಂದೆಗಳಿಗೆ ಗುರಿಯಾಗಬೇಕಾಗುತ್ತದೆ. ಎಂಥ ಬಿಕ್ಕಟ್ಟಿನ ಪರಿಸ್ಥಿತಿಗಳು ಬಂದಾಗ್ಯೂ ಭೀತಿಗೊಂಡು ಕಾಯಕವನ್ನು ಬಿಡುವುದು ಭಕ್ತನಿಗೆ ಸಲ್ಲದು. ಅಂಜಿ ಕೆಲಸಾರುವುದು ಕಾಯಕತತ್ತ್ವಕ್ಕೆ ವಿರೋಧ. ಕರ್ತವ್ಯಪಥದಲ್ಲಿ ಬರುವ ಅನೇಕ ಅಡಚಣೆಗಳೆಂದರೆ. ದೇವರು ಒಡ್ಡಿದ ಪರೀಕ್ಷಾ ಪ್ರಸಂಗಗಳೆಂದು ನಂಬಿ ಭಕ್ತನು ತನ್ನ ಹಾದಿಯಿಂದ ಚ್ಯುತನಾಗದೆ ಮುಂದೆ ಸಾಗಲಿಕ್ಕೇ ಬೇಕು. ಅಂದರೆ ದೇವನ ಒಲುಮೆಯುಂಟಾಗುವುದು.

'ಹರ ತನ್ನ ಭಕ್ತರ ಶಿರಿವಂತೆ ಮಾಡುವ, ಒರೆದು ನೋಡುವ ಸುವರ್ಣ ಚಿನ್ನದಂತೆ
ಅರೆದು ನೋಡುವ ಚಂದನದಂತೆ, ಅರಿದು ನೋಡುವ ಕಬ್ಬಿನಂತೆ
ಬೆದರದೆ ಬೆಚ್ಚದೆ ಇದ್ದರೆ, ಕರವಿಡಿದು ಎತ್ತಿಕೊಂಬ ನಮ್ಮ ರಾಮನಾಥ'.

ಜೀವನಸಂಗ್ರಾಮದಲ್ಲಿ ಬರುವ ಆಘಾತಗಳಿಗೆ ಭೀತನಾಗದೆ, ದೃಢನಿಷ್ಠೆಯಿಂದ ಅವನ್ನು ಹಾಯ್ದು ಹೋಗಿ ಕಷ್ಟ–ಸುಖಗಳಲ್ಲಿ ಕುಗ್ಗಿ ಹಿಗ್ಗದೆ ಸಮಾಧಾನವಾಗಿರುವವನಿಗೆ ಜೀವಮಾನವೆನ್ನುವುದು ಸುಖಕರವಲ್ಲವೆ ?

ನಿಷ್ಕಾಮಬುದ್ಧಿಯಿಂದ ಕರ್ತವ್ಯಮಾಡಬೇಕೆಂಬುದೇ ಕಾಯಕದ ಮುಖ್ಯ ತತ್ತ್ವವು. ಪ್ರಪಂಚದಲ್ಲಿರುವ ಭೋಗ್ಯ ವಸ್ತುಗಳೆಲ್ಲವೂ ನಾವು ಅವುಗಳನ್ನು ಬಳಸುವ ಭಾವದಿಂದ. ಉಪಯೋಗಿಸತಕ್ಕ ರೀತಿಯಿಂದ ಸಾಧಕ ಅಥವಾ ಬಾಧಕವಾಗುತ್ತವೆ. ಅವುಗಳನ್ನು ಆಸೆಯಿಂದ, ಆಸಕ್ತಿಯಿಂದ ಸ್ವೀಕರಿಸಿದರೆ ಬಾಧಕವಾಗುತ್ತವೆ. ಆಸೆಯು ದಾಸ್ಯತ್ವದ ಕುರುಹು. ಆಶಾಬಂಧವು ಕೋಮಲವಾದರೂ ಎಂಥ ಕಠಿಣ ಹೃದಯಗಳನ್ನಾದರೂ ಬಂಧಿಸಬಲ್ಲುದು. ಮಹಾಪುರುಷರೆಲ್ಲರೂ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಿದ್ದರಿಂದಲೇ ಗಮ್ಯವನ್ನು ಮುಟ್ಟಿದರು. ತ್ಯಾಗವೇ ಅವರ ವಿಜಯಕ್ಕೆ ಮೂಲ. ತ್ಯಾಗದಲ್ಲಿಯೇ ಮಹಾಜೀವನದ ಉಗಮ. ಕಾಯಕವು ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಲ್ಪಡಬೇಕೆಂಬುದೇ ಶರಣರ ತತ್ತ್ವವು. ಗೀತಾಚಾರ್ಯರೂ ಹೀಗೆಯೇ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂದಿದ್ದಾರೆ.

'ಫಲದಾಶೆ ಮಾಡುವುದು ಕ್ರಿಯೆಯಲ್ಲ. ಅದೇನು ಕಾರಣವೆಂದಡೆ :
ಬಯಕೆಯ ಭಕ್ತಿಯ ಪೂರ್ವಪುರಾತನರು ಮೆಚ್ಚರು.
ನಮ್ಮ ಅಖಂಡೇಶ್ವರದೇವರು ಹಂಗಿನ ಭಕ್ತಿಯನೊಲ್ಲ ನೋಡಾ'

ಫಲಾಶಾರಹಿತ ಕರ್ಮವೇ ಶ್ರೇಷ್ಠವು. ಕಾಮ್ಯ ಬುದ್ಧಿಯಿಂದ ಮಾಡಿದ ಕರ್ಮವು. ಉದ್ದಿಷ್ಟ ಫಲವು ದೊರಕದಿರುವಾಗ, ನಮ್ಮನ್ನು ದುಃಖಕ್ಕೊಳಗುಮಾಡುತ್ತದೆ. ಕಾಮ್ಯ ಬುದ್ಧಿಯಿಂದ ಮಾಡಿದ ಯಾವುದೇ ಕರ್ಮವು ದೇವರಿಗೆ ಮುಟ್ಟದು. ಅದರಿಂದ ಕರ್ಮಬಂಧವು ನಿವೃತ್ತಿಯಾಗುವುದಿಲ್ಲ, ಆದುದರಿಂದಲೇ ಬಯಕೆಯ ಭಕ್ತಿಯೂ, ಕಾಮ್ಯಕಾಯಕವೂ, ಫಲಾಶೆಯುಳ್ಳ ಕರ್ಮವೂ ತ್ಯಾಜ್ಯವು. ನಿಜವಾದ ಕರ್ಮಯೋಗಿಯು ಸರ್ವಸ್ವವನ್ನೂ ಪರಮಾತ್ಮನಿಗೆ ಅರ್ಪಿಸಿ ನಿಷ್ಕಾಮನಾಮತಿಯುಳ್ಳವನಾಗಿ ಕರ್ತವ್ಯದೃಷ್ಟಿಯಿಂದ ತನ್ನ ಕರ್ಮವನ್ನು ಮಾಡುವನು. ಮುಕ್ತಿಯ ಬಯಕೆಯೂ ಸಹ ಅವನಿಗಿರುವುದಿಲ್ಲ.

'ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ; ಪರಮ ಪದವಿಯ ನಿಮ್ಮ ಎದೆಯಲ್ಲಿ ಇರಿದುಕೊಳ್ಳಿ:
ಪರಮ ಪದವಿಯ ನಿಮ್ಮ ತಲೆಯಲ್ಲಿ ಸುತ್ತಿಕೊಳ್ಳಿ. ನಿಮ್ಮ ತೊತ್ತುಸೇವೆಯೇ ಸಾಕುಎನಗೆ ಮಹಾಲಿಂಗಕಲ್ಲೇಶ್ವರದೇವಾ'.

ಶ್ರೀ ಅರವಿಂದರ ಉಕ್ತಿಯು ನಿಷ್ಕಾಮಕರ್ಮದ ಮಹತ್ವವನ್ನು ಸ್ಪಷ್ಟವಾಗಿ ಹೇಳುತ್ತಿದೆ :–

'The only work that spriitually purifices is that which is done without personal motives without desire for fame or public recognition or world greatness, without insistence on one's own mental motives of vital lusts and demands or physical preferances, without vanity for the sake of the divine alone· and at the command of the divine'.

ಅಂದರೆ. ವೈಯಕ್ತಿಕ ಉದ್ದೇಶಗಳಿಲ್ಲದೆಯೂ. ಖ್ಯಾತಿ. ಸಾರ್ವಜನಿಕ ಮಾನ್ಯತೆ, ಐಹಿಕ ಘನತೆ ಇವುಗಳ ಆಕಾಂಕ್ಷೆಯಿಲ್ಲದೆಯೂ. ಮತ್ತು ಸ್ವತಃ ಮನಸ್ಸಿನ ಹೇತುಗಳು, ಪ್ರಾಣದ ಲಾಲಸೆ ಮತ್ತು ಬೇಡಿಕೆಗಳು ಅಥವಾ ಶಾರೀರಿಕ ಇಷ್ಟಗಳು ಇಂಥವುಗಳಾವಕ್ಕೂ ದೃಢವಾಗಿ ಅಂಟಿಕೊಳ್ಳದೆಯೂ. ಡಾಂಭಿಕತೆ, ಅಪಕ್ವ ಆತ್ಮವಿಶ್ವಾಸ ಅಥವಾ ಅಧಿಕಾರ ಮತ್ತು ಮೇಲ್ಮೆಗಳ ಬಾಧ್ಯತೆ ಇವುಗಳ ಸಂಪರ್ಕವಿಲ್ಲದೆಯೂ, ಕೇವಲ ದೇವನ ಸಲುವಾಗಿ ದೇವನಅಪ್ಪಣೆಯಿಂದ ಮಾಡಲ್ಪಡುವ ಕರ್ತವ್ಯಮಾತ್ರವೇ ಆಧ್ಯಾತ್ಮಿಕ ಶುದ್ಧತೆಯನ್ನುಂಟುಮಾಡುವುದು.

ಸಾಮಾನ್ಯವಾಗಿ ಜಗತ್ತಿನಲ್ಲಿ ಅನುಭವಿಸುತ್ತಿರುವ ಕಷ್ಟ ಸಮುದಾಯಕ್ಕೆ ಅಹಂಕಾರವು ಮೂಲ ಹೇತುವಾಗಿರುವುದು. ಕಾಮನೆಗಳೆಲ್ಲವೂ ಅಹಂಕಾರ ಪುರುಷನಿಗೆ ಸಾರ್ವಭೌಮ ಪಟ್ಟವನ್ನು ಕಟ್ಟಿ ಅವನ ಸಾನ್ನಿಧ್ಯದಲ್ಲಿ ತಾವು ಕುಣಿದಾಡಿ ನಲಿಯುತ್ತಿರುವುವು. ನಾನು ಮಾಡುವೆನು, ನಾನು ದೊಡ್ಡವನು. ನಾನು ಕರ್ತೃ, ನಾನು ಭೋಕ್ತೃ–ಮುಂತಾದ ಭಾವನೆಗಳುದಯವಾಗುವುದೇ

ಸರ್ವ ಅನರ್ಥಗಳಿಗೂ ಮೂಲ. ಇಂದು ಪ್ರಪಂಚದಲ್ಲಿ ನಡೆಯುತ್ತಿರುವ ಅಸಂಖ್ಯಾತ ವ್ಯವಹಾರಗಳು, ಅನೇಕ ಗಲಭೆಗಳು, ರಾಜಕೀಯ ಆಂದೋಲನಗಳು, ವಿನಾಶಕಾರಕ ಯುದ್ಧಗಳು, ಇವೆಲ್ಲಕ್ಕೂ ಅಹಂಕಾರ-ಮಮಕಾರಗಳೇ, ಅರ್ಥಾತ್ ನಾನು, ನನ್ನದೆಂಬುದೇ ಮೂಲ. ಈ ಮದವೊಂದು ಬಿಟ್ಟರೆ ಆತನೇ ಸುಖಜೀವಿಯು. ಶಾಂತಿ ಪ್ರಸ್ಥಾಪಕನು. ಅಹಂಕಾರ-ಮಮಕಾರಗಳಿರುವವರಿಗೂ ಶಾಂತಿ ಸಮಾಧಾನಗಳು ನೆಲೆಗೊಳ್ಳಲಾರವು. ಕಾಯಕ ಮಾಡುವಾಗ ಅಹಂಕಾರದ ಸುದ್ದಿಯೇ ಇರಕೂಡದು. ನಾನು ಮಾಡುವೆನೆಂಬ ಹೆಮ್ಮೆಯಿಂದ ಮಾಡಿದ್ದು ಕಾಯಕವೇ ಅಲ್ಲ. ಕರ್ತವ್ಯಕ್ಕೋಸ್ಕರ ಕರ್ತವ್ಯವೆಂಬ ಶ್ರೇಷ್ಠ ತತ್ತ್ವವನ್ನರಿತು ನಿಷ್ಕಾಮಬುದ್ಧಿಯಿಂದ ಕರ್ಮ ಮಾಡುವುದೇ ಕಾಯಕವೆನ್ನಿಸಿಕೊಳ್ಳುವುದು.

'ನಾನು ಆರಂಭ ಮಾಡುವೆನಯ್ಯಾ ಗುರುಪೂಜೆಗೆಂದು
ನಾನು ವ್ಯವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮಸೇವೆಗೆಂದು......'
'ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ'

ಈ ಮೊದಲಾದ ಶರಣರ ವಚನಗಳಿಂದ ಅವರು ಅಹಂಕಾರಿಕ ವೃತ್ತಿಯನ್ನು ಎಷ್ಟರಮಟ್ಟಿಗೆ ನೀಗಿದ್ದರೆಂದು ವ್ಯಕ್ತವಾಗುತ್ತದೆ. ಅಹಂಕಾರಿಕ ವೃತ್ತಿಯಿಂದ ಮಾಡತಕ್ಕ ಕರ್ಮವು ಆತ್ಮೋದ್ಧಾರವನ್ನುಂಟುಮಾಡಲಾರದು. ಅರವಿಂದ ಘೋಷರ ಈ ಕೆಳಗೆ ಉದ್ಧರಿಸಿರುವ ಉಕ್ತಿಯು ಮೇಲ್ಕಂಡ ಇದೇ ಅಭಿಪ್ರಾಯವನ್ನು ಸಮರ್ಥಿಸುವುದಾಗಿದೆ:–

'I do not mean by work action done in the ego and the ignorance for the satisfaction of the ego and in the drive of rajasic desire· There can be no Karmayoga without the will to get rid of the ego rajas and desire which are the seals of ignorance'·

ಅಂದರೆ ಕರ್ಮವು ರಾಜಸ ಆಸೆಯ ಸೆಳೆತದಿಂದ ಅಹಂಕಾರ ತೃಪ್ತಿಗಾಗಿ ಹೆಮ್ಮೆ (ಗರ್ವ) ಮತ್ತು ಅಜ್ಞಾನದಿಂದ ಮಾಡಿದ ಕೃತಿಯಲ್ಲ. ಅಜ್ಞಾನದ ಕುರುಹಾಗಿರುವ ಅಹಂಕಾರ, ರಜಸ್ಸು ಮತ್ತು ವಾಸನೆ ಇವುಗಳನ್ನು ತಳ್ಳಿಬಿಡುವ ಸಂಕಲ್ಪವಿಲ್ಲದಿದ್ದರೆ ಅದು ಯೌಗಿಕ ಕರ್ಮವೆನಿಸಲಾರದು. ಹೀಗೆ ಕಾಮನಾರಹಿತ ಮನೋವೃತ್ತಿಯಿಂದ ಅಹಂಕಾರ ರಹಿತನಾಗಿ ಕೆಲಸ ಮಾಡುವುದು ಕಾಯಕವೆನಿಸುವುದು. ಅದಾದರೂ ಪರಮಾತ್ಮಾರ್ಪಿತವಾಗಿರಬೇಕು. ಸಾಧಕನು ತನ್ನ ಸರ್ವಸ್ವವನ್ನೂ ಶಕ್ತಿ-ಯುಕ್ತಿ-ಭಕ್ತಿಗಳನ್ನೂ, ತನುಮನ ಭಾವಗಳನ್ನೂ, ಪ್ರಾಣಕರಣ ಕರ್ಮಗಳನ್ನೂ ಪರಮಾತ್ಮನ ಚರಣದಲ್ಲಿ ಅನನ್ಯವಾಗಿ ಅರ್ಪಿಸುವುದು ಕಾಯಕ ತತ್ತ್ವವು. ಈ ಪರಿ ಸರ್ವಾರ್ಪಣ ಮಾಡಿ ಕಾಯಕದಲ್ಲಿ ತೊಡಗಿರುವುದರಿಂದ ಸಾಧಕನ ಸರ್ವಶಕ್ತಿ ಮತ್ತು ಕರ್ಮಗಳು ಕ್ಷಣಶಃ ಅವನನ್ನು ಪರಮಾತ್ಮನೆಡೆಗೆ ಒಯ್ಯುತ್ತಿರುವುವು. ಮೆಲ್ಲಮೆಲ್ಲನೆ ಅವನ ಅಹಂಕಾರ ಸ್ವಾರ್ಥ ಬುದ್ಧಿಗಳೆಲ್ಲವೂ ಅಳಿದು, ದೋಷಗಳೆಲ್ಲ ಸುಟ್ಟುಹೋಗಿ ಅವನಿಗೆ ಪರಮಾತ್ಮನ ಸಾಕ್ಷಾತ್ಕಾರವಾಗುವುದು. ಹೀಗೆ ಸರ್ವಾರ್ಪಣ ಮಾಡಿ ತನ್ನ ಸಕಲ ಹೊಣೆಯನ್ನೂ ಪರಮಾತ್ಮನ ಮೇಲೆ ಹೊರಿಸುವನು.

'ನನ್ನ ಯೋಗಕ್ಷೇಮ ನಿಮ್ಮದಯ್ಯ ಎನ್ನ ಹಾನಿ ವೃದ್ಧಿ ನಿಮ್ಮದಯ್ಯ......'
'ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ. ಮನ ನಿಮ್ಮದೆಂದ ಬಳಿಕ
ಎನಗೆ ಬೇರೆ ಮನವಿಲ್ಲ. ಧನ ನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ......'

ತನು–ಮನ–ಧನಗಳ ವಿಕಾರದಿಂದ ಬಳಲಿಕೆ ಹೊಂದಿದ ಸಾಧಕನು ತಾನು ವಿಶ್ರಾಂತನಾಗಿ ಪರಮಾತ್ಮನಿಗೆ ಮರೆಹೋಗುವನು. ದೇವರೆ ತನ್ನ ಹಿತಾಹಿತಗಳ ಕರ್ತನೆಂದು ತಿಳಿದು, ತನ್ನ ಅಂತಃಕರಣದಲ್ಲಿ ಪರಮಾತ್ಮನನ್ನು ಸ್ಥಾಪಿಸಿ, ಅವನಿಗೆ ಸರ್ವವನ್ನೂ ಅರ್ಪಿಸಿ, ಪರಮಾತ್ಮನ ಸಲುವಾಗಿಯೇ ತಾನು ಕೆಲಸ ಮಾಡುತ್ತಿರುವೆನೆಂದು ಕರ್ಮ ಮಾಡುತ್ತಿರುವನು. ತಾನು ಪರಮಾತ್ಮನ ಅನುಜ್ಞೆಯಂತೆ ಕಾರ್ಯ ಮಾಡುತ್ತಿರುವ ಯಂತ್ರರೂಪನು ಎಂಬ ನಂಬಿಕೆಯಿಂದ ಶಾಂತಿ ಸಮಾಧಾನಗಳನ್ನು ಹೊಂದಿ ಆನಂದದಲ್ಲಿರುವನು. ಶ್ರೀ ಅರವಿಂದರ ಈ ಕೆಳಗಿನ ವಾಕ್ಯಗಳು ಇಂಥ ಅವಸ್ಥೆಯನ್ನು ಚೆನ್ನಾಗಿ ವರ್ಣಿಸಿರುತ್ತವೆ:

'I mean by work action done for the devine and more and more in person with the divine for the divine alone and nothing else.'

ಕೇವಲ ದೇವನ ಸಲುವಾಗಿ ಮತ್ತು ಆತನೊಡನೆ ಯುಕ್ತವಾಗಿ ಆತನ ವಿನಾ ಇನ್ನಾವುದಕ್ಕೆಂದೂ ಅಲ್ಲದೆ ಮಾಡುವ ಕೃತಿಗೆ ಕರ್ಮವೆಂದು ಅರ್ಥ. ಮತ್ತು

'When you can begin to feel that it is the mother's force that is doing the work and then you are only a channel or an instrument, then in the place of

memory, there will have begun the automatic constant-realization of the yoga, devine union works.'

ಮಹಾಮಾತೆಯ ಶಕ್ತಿಯೇ ಕರ್ಮವನ್ನು ಮಾಡುತ್ತಿದ್ದು, ನೀನು ಕೇವಲ ಒಂದು ಯಂತ್ರವಾಗಿರುವುದಾಗಿ ಯಾವಾಗ ಅನುಭವಕ್ಕೆ ಬರತೊಡಗಿರುವುದೋ ಆಗ ಕರ್ಮದಲ್ಲಿ ಮೊದಲಿನ ಸ್ಮರಣೆಗೆ ಬದಲಾಗಿ ಸ್ವಾಭಾವಿಕವೂ ನಿರಂತರವೂ ಆದ ಯೋಗಾನುಭವ ಮತ್ತು ದೈವೀಐಕ್ಯತೆ ಇವು ಆರಂಭವಾಗುವುವು. ಹೀಗೆ ಪರಮಾತ್ಮನಿರ್ಮಿತ ಯಂತ್ರಸ್ವರೂಪನಾಗಿ ಕಾಯಕ ಮಾಡುತ್ತ, ಸರ್ವಸ್ವವನ್ನು ಪರಮಾತ್ಮನಿಗೆ ಅರ್ಪಣ ಮಾಡತಕ್ಕ ಭಕ್ತನು ತನ್ನದೆಂಬುವುದು ಯಾವುದನ್ನೂ ಇಟ್ಟುಕೊಳ್ಳದೆ ಎಲ್ಲ ಹೊರೆಯನ್ನೂ ಪರಮಾತ್ಮನ ಮೇಲೆಯೇ ಹೊರಿಸುವನು.

'ಮಾಡುವ ಭಕ್ತನೂ ನೀನೆ, ಮಾಡಿಸಿಕೊಂಬ ದೇವನೂ ನೀನೆ ಎಂದರಿದೆ. ಇದು ಕಾರಣ
ಅಖಂಡೇಶ್ವರಾ ನಿಮ್ಮ ಫಲ ಪದವ ನೋಡಲಿಲ್ಲ. ನೀವು ಎನಗೆ ಕೊಡಲಿಲ್ಲ'

ತಾನು ಮಾಡುವ ಕಾಯಕದಲ್ಲಿಯೇ ದೇವನನ್ನು ಕಾಣುವನು. ದುಃಖರಹಿತ ಆನಂದ ಸಾಮ್ರಾಜ್ಯದಲ್ಲೋಲಾಡುವನು. ಜಪತಪಾನುಷ್ಠಾನಗಳನ್ನು ಮಾಡಿ ಬೇರೊಂದೆಡೆಯಲ್ಲಿ ಪರಮಾತ್ಮನನ್ನು ಅರಸಬೇಕಾಗಿಲ್ಲ.

'ಮಾಡುವ ಮಾಟದಿಂದಲೇ ಬೇರೊಂದನರಿಯಬೇಕು. ಅರಿವಿಗೆ ನೆಮ್ಮದಿ ಒಡಗೂಡಬೇಕು.
ಬಯಲ ಭ್ರಮೆಯ ಕಳೆದು ನಮ್ಮ ಗುಹೇಶ್ವರಲಿಂಗದಲ್ಲಿ ನಿಜಪದವನೈದುವುದು ಮಾರಯ್ಯ'
'ಮಾಡುವ ಮಾಟ ಉಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ? ದಾಸೋಹವೆಂಬ ಸೇವೆಯ ಬಿಟ್ಟು
ಸಲಿಸಲಾರದೆ ಕೈಲಾಸವೆಂಬ ಆಸೆ ಬೇಡ. ಮಾರಯ್ಯಪ್ರಿಯ ಅಮರೇಶ್ವರಲಿಂಗವಿದ್ದ ಠಾವೇ ಕೈಲಾಸವಯ್ಯ'

ಶ್ರೀ ಅರವಿಂದಘೋಷರಾದರೂ ಈ ವಿಚಾರವನ್ನು ತಮ್ಮ 'Yoga and its objects' ಎಂಬ ಗ್ರಂಥದಲ್ಲಿ :

'Those who do work for the other in all sincerity are prepared by the work itself for the right consciousness even if they do not sit down for meditation or follow any particular practice of yoga' ಎಂದು ಹೇಳಿರುವರು.

ಸಂಪೂರ್ಣ ಯಥೋಚಿತವಾಗಿ ಯಾರು ಮಹಾಮಾತೆಗೆಂದೇ ಕರ್ಮ ಮಾಡುವರೋ ಅವರು ಧ್ಯಾನಕ್ಕೆ ಕೂಡದೆಯೂ, ಯಾವ ಯೋಗ ಸಾಧನೆಯನ್ನೂ ಅನುಸರಿಸದೆಯೂ ಅವರಿಗೆ ಯೋಗಸ್ಥಿತಿಯು ಉಂಟಾಗುತ್ತದೆ. ಈ ವಿಧವಾದ ಕರ್ಮಯೋಗಿಯು ಉಂಡು ಉಪವಾಸಿ. ಬಳಸಿ ಬ್ರಹ್ಮಚಾರಿ, ಮಾಡಿ ನಿರ್ಲೇಪಿ. ತನ್ನ ಶಕ್ತಿಸರ್ವಸ್ವದಿಂದ ಲೋಕಸಂಗ್ರಹ ಕಾರ್ಯಗಳನ್ನು ಎಡೆಬಿಡದೆ ಮಾಡುತ್ತಿದ್ದರೂ 'ಪುಂಖಾನುಪುಂಖ ವಿಷಯೇ ಕ್ಷಣತತ್ತ್ವರೋಪಿ ಬ್ರಹ್ಮಾವಲೋಕನ ನಿರೂಢ' ಮನುಶಯೋಗಿ' ಎನ್ನುವ ರೀತಿ, ಅವುಗಳಿಂದ ಬದ್ಧನಾಗದೆ ಅತ್ಯಂತ ಮುಕ್ತನಾಗುವನು.

ಪ್ರಪಂಚದಲ್ಲಿ ನಮಗೆ ದೊರಕುವ ಸುಖಗಳೆಲ್ಲವೂ ದುಃಖ ಮಿಶ್ರಿತವಾದುವು. ದುಃಖರಹಿತವಾದ ಸುಖವೆನ್ನುವುದು ದುರ್ಲಭವಾದ ಮಾತು. ಅದು ಆತ್ಮಸಾಕ್ಷಾತ್ಕಾರದಿಂದ ದೊರಕುವುದೇ ಹೊರತು, ಅಪಾರವಾದ ಧನಸಂಗ್ರಹದಿಂದಾಗಲೀ, ಅದ್ವಿತೀಯ ಪಾಂಡಿತ್ಯ ಸಂಪಾದನೆಯಿಂದಾಗಲೀ, ಉನ್ನತ ಅಧಿಕಾರ ಪ್ರಾಪ್ತಿಯಿಂದಾಗಲೀ, ಮತ್ತೆ ಯಾವುದರಿಂದಾಗಲೀ ಅಲ್ಲ. ಈ ವಿಧವಾದ ನಿತ್ಯವೂ,ಸತ್ಯವೂ, ನಿರ್ದೋಷವೂ ಅನಾದಿಯೂ ಆದ ಸುಖವೇ ಮೋಕ್ಷವೆನಿಸುವುದು. ಅದರ ಲಾಭಕ್ಕಾಗಿ ಹೋಗಬೇಕೆಂಬ ನಿರ್ಬಂಧವಿಲ್ಲ. ಕೈಲಾಸವೆಂಬುದು ಒಂದು ನಿರ್ದಿಷ್ಟ ಸ್ಥಾನವಲ್ಲ. ಮೇಲೆ ಹೇಳಿದಂತಹ ಆನಂದವು ಮನುಷ್ಯನಿಗೆ ಉಂಟಾದಾಗ ಅದೇ ಕೈಲಾಸವು. ಅದಕ್ಕಾಗಿ ಬೇರೊಂದೆಡೆಗೆ ಹೋಗಿ ಹುಡುಕಬೇಕೆನ್ನುವುದು ತಪ್ಪು ಭಾವನೆಯು. ನಿರಹಂಕಾರಿಯಾಗಿ, ಫಲಾಶಾರಹಿತ ನಿಷ್ಕಾಮಬುದ್ಧಿಯಿಂದ ಕಾಯಕವನ್ನು ಮಾಡುವ ಭಕ್ತನು ಸಂಕಲ್ಪವೆಂಬುದೇನೂ ಇಲ್ಲದೆ ಪರಮಾತ್ಮನ ಸಂಕಲ್ಪಗಳನ್ನೇ ಅವನು ಕೇವಲ ನಿಮಿತ್ತಮಾತ್ರನಾಗಿ ಮಾಡುತ್ತಿರುವನು. ಹೀಗೆ ಮಾಡುವ ಕಾಯಕವು ಅವನಿಗೆ ಬಾಧಕವಾಗದೆ ಸಾಧಕವೇ ಆಗುವುದು. ಕ್ರಿಯೆಯೆಂಬುದು ಯಾರಿಗೂ ಎಂದು ಬಿಟ್ಟದ್ದಲ್ಲ. ಇಷ್ಟವು ಸಾಧ್ಯವಾಗಲಿಕ್ಕೆ ಅದು ಆವಶ್ಯವು. ಅರಿದೆನೆಂಬುವವನಿಗೆ ಸಹ, ಪೂರ್ಣತ್ವವನ್ನು ಹೊಂದಲಿಕ್ಕೆ ಸತ್ಕ್ರಿಯಾಚಾರಣೆಯು ಬೇಕೇ ಬೇಕು. ಸರ್ವಾರ್ಪಣಬುದ್ಧಿಯಿಂದ ಸತ್ಕ್ರಿಯಾಚರಣೆಯಲ್ಲಿ ತೊಡಗಿರಬೇಕೆಂಬುದೇ ಕಾಯಕತತ್ತ್ವವು. ಅವನಿಗೆ ಮುಕ್ತಿಯ ಆಶೆ ಸಹ ಉಳಿಯುವುದಿಲ್ಲ. ಮಾಡುವವನೂ ಮಾಡಿಸಿಕೊಳ್ಳುವವನೂ, ಕೊಡುವವನೂ ಕೊಂಬುವವನೂ, ದೇವನೆಂಬ ನಿಲವು ನೆಲೆಯಾಗಿ, ಅವನ ಅಹಂಕಾರಿಕ ವೃತ್ತಿಯೂ, ಕಾಮನೆಗಳೂ ಎಲ್ಲವೂ ಅಳಿದುಹೋಗಿ. ಅವನು ಮಾಡುವ ಕಾಯಕದಿಂದಲೇ ಅವನ ವ್ಯಕ್ತಿತ್ವವು ಪರಮಾತ್ಮನಲ್ಲಿ ಪೂರ್ಣ ಲೀನವಾಗಿ ಹೋಗುವುದರಿಂದ ನಿಸ್ಸೀಮ ಪರಮಾನಂದವನ್ನು ಅರ್ಥಾತ್ ಕೈಲಾಸ ಪದವಿಯನ್ನು ಹೊಂದುವನು.

# ಶ್ರೀಗಳವರು ಭಾಷಣಗಳಲ್ಲಿ ಬಳಸಿದ ದೃಷ್ಟಾಂತ ಕಥೆಗಳು

[ಶ್ರೀ ಶಿವಕುಮಾರ ಸ್ವಾಮಿಗಳವರು ಭಾಷಣಕ್ಕೆ ನಿಂತೊಡನೆ ಎಲ್ಲೆಲ್ಲೂ ಸ್ತಬ್ಧತೆ; ಆ ಬಾಲವೃದ್ಧರೆಲ್ಲ ಮಂತ್ರಮುಗ್ಧರಾಗಿ ಕುಳಿತಿರುತ್ತಾರೆ. ಅವರ ಭಾಷಣದ ಸ್ವಾರಸ್ಯವೆಂದರೆ ಚಿಕ್ಕ ಚಿಕ್ಕ ಕಥೆಗಳ ದೃಷ್ಟಾಂತದಿಂದ ಗಹನವಿಷಯಗಳನ್ನು ಅಭಿವ್ಯಕ್ತಗೊಳಿಸುವುದಾಗಿದೆ. ವಿವಿಧ ಮೂಲಗಳಿಂದ ಆರಿಸಿಕೊಂಡು ಹೇಳುವ ಆ ದೃಷ್ಟಾಂತ ಕಥೆಗಳು ಇವರ ಶ್ರೀಮುಖದಲ್ಲಿ ಅತ್ಯಂತ ಸ್ವಾರಸ್ಯಕರ. ಅವರು ಹೇಳುವ ಕಥೆಗಳು ನೂರಾರು–ಸಾವಿರಾರು ! ಅವನ್ನೆಲ್ಲ ಕೂಡಿಸಿದರೆ ಅದೇ ಒಂದು ದೊಡ್ಡ ಸಂಪುಟವಾದೀತು ! ಅವುಗಳಲ್ಲಿ ಕೆಲವು ಮಾದರಿಗಳು ಇಲ್ಲಿವೆ]

### ೧. ನಂಬಿ ಭಗವಂತನನ್ನು ಪ್ರಾರ್ಥಿಸಿದರೆ ಅದರಿಂದ ಬರುವ ಲಾಭ ಅಪಾರವಾದುದು.

ಅಮೇರಿಕಾದ ೮–೯ವರ್ಷದ ಬಾಲಕನೊಬ್ಬನಿಗೆ ರಸ್ತೆಯಲ್ಲಿ ಅಪಘಾತ ಉಂಟಾಯಿತು. ಕಾಲಿಗೆ ಪೆಟ್ಟು ತಗಲಿ ವಿಪರೀತ ನೋವಾಯಿತು. ಡಾಕ್ಟರರು ಮಗುವಿನ ಕಾಲು ತೆಗೆಯಬೇಕೆಂದು ಸೂಚಿಸಿದರು. ಆ ಮಗುವಿನ ಸಹೋದರರು ಅದಕ್ಕೊಪ್ಪಿದರು. ಆದರೆ ಕಾಲು ತೆಗೆಯಲು ಮಗು ಒಪ್ಪಲಿಲ್ಲ. ಕಾಲು ಯಾವಾಗ ತೆಗೆಯಬೇಕು ? ರಾತ್ರಿ ಮಗುವಿಗೆ ನಿದ್ದೆ ಹತ್ತಿದಾಗ ಆಪರೇಷನ್ ಥಿಯೇಟರಿಗೆ ಒಯ್ದು ತೆಗೆಯಬೇಕೆಂದರೆ ಮಗು ರಾತ್ರಿಯೆಲ್ಲಾ ಎಚ್ಚರವಾಗಿಯೇ ಇತ್ತು. ದೇವರ ಪ್ರಾರ್ಥನೆಯಲ್ಲಿ ನಂಬಿಕೆ ಇಟ್ಟ ಆ ಮಗುವಿಗೆ ಕ್ರಮೇಣ ಗುಣವಾಗುತ್ತದೆಯೆಂದು ಅನಿಸಹತ್ತಿತು. ತನ್ನ ತಂದೆ ತಾಯಿಗಳಿಗೆ ಈ ಸಂಗತಿ ತಿಳಿಸಿ, ದೇವರ ಪ್ರಾರ್ಥನೆಯಲ್ಲಿ ಮಗು ತೊಡಗಿತು. ದೇವರ ಪ್ರಾರ್ಥನೆಯನ್ನು ದೃಢಮನಸ್ಸಿನಿಂದ ಮಾಡಿದ್ದರಿಂದ ಮಗು ಗುಣಮುಖನಾದ. ಒಂದಾನೊಂದು ದಿನ ಅಮೇರಿಕಾದ ಅಧ್ಯಕ್ಷನೂ ಆದ. ಅವನೇ ಐಸೆನ್ ಹೋವರ್.

### ೨. ಪರಮಾತ್ಮನು ಕೊಟ್ಟ ಶ್ರೇಷ್ಠವಾದ ಆಸ್ತಿಯಲ್ಲಿ ಹೆಚ್ಚಿನ ಭರವಸೆಯನ್ನು ತಾಳಬೇಕು.

ಟಾಲ್‌ಸ್ಟಾಯ್ ಮಹರ್ಷಿ ಬಳಿಗೆ ಒಮ್ಮೆ ಒಬ್ಬ ಮನುಷ್ಯ ಬಂದ, 'ಸ್ವಾಮೀ, ನಾನು ತುಂಬ ಬಡವ, ನನಗೇನಾದರೂ ಸಹಾಯಮಾಡಬೇಕು' ಅಂತ ಕೇಳಿದ. ಈ ಮಹಾನುಭಾವ ಅವನನ್ನು ನೋಡಿದ. ಒಳ್ಳೆಯ ದೃಢಕಾಯ : ಅಯ್ಯೋ ಎನಿಸಿ ಅವನಿಗೆ ಬುದ್ಧಿ ಕಲಿಸಬೇಕೆಂದುಕೊಂಡು ಹೀಗೆ ಹೇಳಿದನು. 'ಅಯ್ಯಾ ನನ್ನ ಸ್ನೇಹಿತ ಒಬ್ಬ ಕೈಗಳ ವ್ಯಾಪಾರ ಮಾಡುತ್ತಾನೆ. ನಿನ್ನ ಎರಡು ಕೈಗಳನ್ನೂ ಕೊಡು. ಐದು ಸಾವಿರ ರೂಪಾಯಿ ಕೊಡಿಸುತ್ತೇನೆ,

'ಇಲ್ಲಾ ಸ್ವಾಮಿ ನನ್ನ ಕೈಗಳು ನನಗೇ ಇರಲಿ'. 'ಹಾಗಾದರೆ ಇನ್ನೊಬ್ಬ ಸ್ನೇಹಿತ ಕಾಲು ಮಾರಾಟ ಮಾಡ್ತಾನೆ ನಿನ್ನೆರಡೂ ಕಾಲುಗಳನ್ನು ಕತ್ತರಿಸಿಕೊಡು. ಹತ್ತು ಸಾವಿರ ರೂಪಾಯಿ ಕೊಡುತ್ತಾನೆ.'

'ಆಗೋದಿಲ್ಲ ಸ್ವಾಮಿ'

'ಹೋಗಲಿ, ನನ್ನ ಬೇರೊಬ್ಬ ಸ್ನೇಹಿತ ವಿಜ್ಞಾನ ಸಂಶೋಧನೆಗಾಗಿ ಕಣ್ಣುಗಳನ್ನು ಸಂಗ್ರಹಿಸುತ್ತಿದ್ದಾನೆ. ನಿನ್ನೆರಡು ಕಣ್ಣುಗಳನ್ನೂ ಕಿತ್ತುಕೊಟ್ಟರೆ, ಇಪ್ಪತ್ತೈದು ಸಾವಿರ ರೂಪಾಯಿ ಕೊಡುತ್ತಾನೆ. ಕೊಡುವೆಯಾ ?'

'ಬೇಡಿ ಸ್ವಾಮಿ, ನನ್ನ ಕಣ್ಣು ನನಗೇ ಇರಲಿ'

ಆಗ ಟಾಲ್‌ಸ್ಟಾಯಿ ಹೇಳಿದರು :

'ಅಲ್ಲಯ್ಯಾ ದೇವರು ನಮಗೆ ಕೊಟ್ಟಿರುವುದೇ ಲಕ್ಷಾಂತರ ರೂಪಾಯಿ ಬೆಲೆಬಾಳುವ ಸ್ವತ್ತು. ಅದು ಲಭ್ಯವಾಗಿ ಇರುವಾಗ ಶ್ರಮಪಟ್ಟು ದುಡಿದು, ನಾಲ್ಕು ಜನರಿಗೆ ನೆರಳಾಗಿ ಬಾಳಲಾರದೆ ಹೀಗೆ ಭಿಕ್ಷೆ ಬೇಡುವರೆ ?'

### ೩. ಪೂಜ್ಯರಂತೆ ಕಾಣುವ ಅದೆಷ್ಟೋ ಮಂದಿಯ ಅಂತರಂಗ ದಾನವವತ್ವದ ತವರಾಗಿರಲೂ ಸಾಧ್ಯವೆಂಬುದು ಒಂದು ಸೋಜಿಗವೇ ಸರಿ.

ಸೀತಾಮಾತೆಯನ್ನರಸುತ್ತಾ ಆಂಜನೇಯ ಲಂಕಾಪಟ್ಟಣಕ್ಕೆ ಹೋದನು. ಸೂಕ್ಷ್ಮಾಕಾರ ತಾಳಿ ಪುರಪ್ರವೇಶ ಮಾಡಿ ರಾಕ್ಷಸರನ್ನು ಕಂಡನು. ದೈವಭಕ್ತಿ, ಸದಾಚಾರ, ಧ್ಯಾನ, ಭಜನೆ ಅವರಲ್ಲಿ ಎದ್ದು ಕಂಡವು. ಹನುಮಂತನು ಎಲ್ಲಿ ಹಾದಿ ತಪ್ಪಿ ರಾಕ್ಷಸರ ಲೋಕ ಎಂದು ಭಕ್ತರ ಭೂಮಿಗೆ ಬಂದೆನೋ ಎಂದುಕೊಂಡನು. ರಾಕ್ಷಸರೆಲ್ಲಾ ಭಸ್ಮ ಧರಿಸಿ ರುದ್ರಾಕ್ಷಿ ಹಾಕಿಕೊಂಡು ಭಗವಂತನನ್ನು ಆರಾಧಿಸುತ್ತಿದ್ದರು. 'ದಾರಿ ತಪ್ಪಿ ಬಂದಿರುವುದೇ ನಿಜ. ಇದು ರಾಕ್ಷಸರ ರಾಜ್ಯವಲ್ಲ. ಭಕ್ತರ ರಾಜ್ಯ' ಎಂದು ಚಿಂತಿಸತೊಡಗಿದನು. ಹಿಂದಿರುಗಿ ಹೋಗಲು ಸಾಧ್ಯವಿಲ್ಲ. ಸ್ವಾಮಿಯ ಆಜ್ಞೆಯಾಗಿದೆ. ಮನಸ್ಸಿನ ಆಂದೋಲನದಲ್ಲಿ ಅಲ್ಲಿ ಇಲ್ಲಿ

ಹುತ್ತಿದ. ಸೀತಾಮಾತೆ ಕಣ್ಣಿಗೆ ಬಿದ್ದಳು. ನೋಡೋಣವೆಂದು ಕಾದು ಕುಳಿತನು. ರಾತ್ರಿ ೧೦ ಗಂಟೆಯ ನಂತರ ರಾಕ್ಷಸರ ನಿಜವಾದ ಜೀವನ ಆರಂಭವಾಯಿತು. ಭಕ್ತಿ ಭೂತವಾಯಿತು. ಕುಡಿತ, ಕುಣಿತ, ಜೂಜಾಟ ಆರಂಭವಾದವು. ಆಂಜನೇಯನಿಗೆ ಆಗ ಅರಿವಾಯಿತು. ರಾಕ್ಷಸರ ಬಾಹ್ಯಾಡಂಬರಕ್ಕೆ ತಾನು ಮೋಸ ಹೋಗಿದ್ದುದು ಸ್ಪಷ್ಟವಾಯಿತು.

**೪. ನಾವು ವ್ಯಕ್ತಿಯ ಆಕಾರ ಭೂಷಣಗಳಿಗೆ ಬೆಲೆಕೊಡದೆ ಅವರಲ್ಲಿರುವ ವಿದ್ವತ್ತಿಗೆ ಪ್ರಾಧಾನ್ಯತೆಯನ್ನು ನೀಡಬೇಕು.**

ಒಂದು ಸಾರಿ ಜನಕಮಹಾರಾಜನು ವಿದ್ವಾಂಸರ ಚರ್ಚಾಗೋಷ್ಠಿಯನ್ನೊಡ್ಡಿ ಓಲಗದಲ್ಲಿ ತಾನು ಮಂಡಿಸಿದ್ದನು. ಗೋಷ್ಠಿಯಲ್ಲಿ ಚರ್ಚೆ ನಡೆಯುತ್ತಿರುವಾಗ ತನ್ಮಧ್ಯೇ 'ಅಷ್ಟಾವಕ್ರ'ನೆಂಬ ಮಹರ್ಷಿ ಸಭೆಯನ್ನು ಪ್ರವೇಶಿಸಿದ. ಆಗ ಆ ಮಹರ್ಷಿಯ ವಿಕೃತವಾದ ಆಕಾರವನ್ನು ಕಂಡು ಸಭೆಯಲ್ಲಿದ್ದ ವಿದ್ವಾಂಸರು ಅಸಹ್ಯಪಟ್ಟು ನಕ್ಕರು. ಕೂಡಲೇ ಋಷಿಯಾಗಿ ಅವರೊಂದಿಗೆ ಕೂಡಿ ತಾನೂ ನಕ್ಕನು. ಆಗ 'ನೀನು ಏಕೆ ನಗುತ್ತೀಯೆ ?' ಎಂಬ ಪ್ರಶ್ನೆ ರಾಜನಿಂದ ಬಂತು. ಆ ರಾಜನ ಪ್ರಶ್ನೆಯಿಂದ ಮುನಿಗೆ ಭಯವುಂಟಾಗಲಿಲ್ಲ ; ಮೇಲಾಗಿ ನಿರ್ಭೀತಿಯಿಂದ ತಾನು ಉತ್ತರವನ್ನು ಕೊಟ್ಟ. ಈ ಸಭೆಯಲ್ಲಿರುವ ಚಮ್ಮಾರರನ್ನು ನೋಡಿ ನಗುತ್ತಿದ್ದೇನೆ ಎಂಬುದಾಗಿ. ಪುನಃ 'ಇಲ್ಲಿ ಚಮ್ಮಾರರಾರು' ? ರಾಜನ ಅನುಪ್ರಶ್ನೆ. ಅದಕ್ಕೆ ಮಹರ್ಷಿಯು ಮರುಉತ್ತರವಾಗಿ 'ನನ್ನ ಪಾಂಡಿತ್ಯವನ್ನು ಪರಿಶೀಲಿಸದೆ ನನ್ನ ಚರ್ಮದ ಆಕಾರಕ್ಕೆ ಬೆಲೆಗೊಟ್ಟ ಚರ್ಮಚಕ್ಷುಗಳಾದ ಇವರೆಲ್ಲರೂ ಚಮ್ಮಾರರೇ' ಎಂದನು ಧೈರ್ಯದಿಂದ. ಈ ಉತ್ತರದಿಂದ ರಾಜರ್ಷಿಯಾದ ಜನಕನು ಸಂತುಷ್ಟಗೊಂಡ ಮತ್ತು ತನ್ನ ಆಸ್ಥಾನದ ಅಗ್ರಪಂಡಿತಪದವಿಯನ್ನು ಅಷ್ಟಾವಕ್ರನಿಗೇ ಅನುಗ್ರಹಿಸಿದ.

**೫. ಜೀವನದಲ್ಲಿ ವ್ಯರ್ಥ ಕಾಲಹರಣ ಹೆಚ್ಚಾಗಿದೆ. ಆಯುಸ್ಸಿನ ಮಹತ್ವ ನಮಗಿನ್ನೂ ಅರಿವಾಗಿಲ್ಲ**

ಒಮ್ಮೆ ರಾಜನೊಬ್ಬನು ಮುದುಕನೊಬ್ಬನನ್ನು ಸಂಧಿಸಿ ನಿನಗೆ ಎಷ್ಟು ವರ್ಷಗಳೆಂದು ಕೇಳಿದನಂತೆ. ಆ ಮುದುಕ ನಮ್ರತೆಯಿಂದ 'ಸ್ವಾಮಿ.ನನಗೆ ವಯಸ್ಸು ನಾಲ್ಕು ವರ್ಷ'ಗಳೆಂದ. ಅದನ್ನು ಕೇಳಿ ರಾಜನಿಗೆ ಆಶ್ಚರ್ಯವಾಯಿತು. 'ಇದೇನಯ್ಯ ಮುದುಕನಾಗಿದ್ದೀಯೆ ? ನನಗೆ ನಾಲ್ಕುವರ್ಷ ಎಂದು ಹೇಳುತ್ತಿರುವೆ' ? ಎಂದ ಮಹಾರಾಜ. ಅದಕ್ಕೆ ಆ ಮುದುಕ 'ಮಹಾಸ್ವಾಮಿ, ನನ್ನ ಆಯುಸ್ಸಿನ ಬಹುಭಾಗವನ್ನು ನಿದ್ರೆಯಲ್ಲಿ, ಕೆಲಸದಲ್ಲಿ, ಬಾಲ್ಯದಲ್ಲಿ ಹಾಳುಹರಟೆಯಲ್ಲಿ ಕಳೆದಿದ್ದೇನೆ. ಅದೆಲ್ಲಾ ಕಳೆದು ನನ್ನ ಆತ್ಮೋದ್ಧಾರಕ್ಕಾಗಿ ಶ್ರಮಿಸಿರುವ ಕಾಲ ಕೇವಲ ನಾಲ್ಕೇವರ್ಷಗಳ ಕಾಲ. ಅದೇ ನನ್ನ ಜೀವಿತ ಮಹತ್ವಕಾಲ. ಆದುದರಿಂದ ನನ್ನ ವಯಸ್ಸು ನಾಲ್ಕು ವರ್ಷ ಮಾತ್ರ ಉಳಿದುದೆಲ್ಲಾ ವ್ಯರ್ಥ' ಎಂದು ಹೇಳಿದನು.

**೬. ಪ್ರತಿಯೊಂದು ಪಶುಪಕ್ಷಿಗಳೂ ಕೂಡ ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತವೆ, ಅವು ಸ್ವಾತಂತ್ರ್ಯದ ಬೆಲೆಯನ್ನು ಮನುಷ್ಯನಿಗಿಂತಲೂ ಚೆನ್ನಾಗಿ ಅರ್ಥಮಾಡಿಕೊಂಡಿವೆ.**

ಒಮ್ಮೆ ಮೈಸೂರಿನ ದೊಡ್ಡ ಮಹಾರಾಜರು ಕಾಕನಕೋಟೆಯಲ್ಲಿ ಆನೆಗಳನ್ನು ಬಂಧಿಸಿದರು. ಅವುಗಳಲ್ಲಿ ಒಂದು ಸಲಗ ತನಗೆ ಸ್ವಾತಂತ್ರ ಹೋಯಿತೆಂಬ ಭಾವನೆಯಿಂದ ಆಹಾರಾದಿಗಳನ್ನು ತೆಗೆದುಕೊಳ್ಳದೆ ಉಪವಾಸ ಮಾಡಿತು. ದಿನೇ ದಿನೇ ಕೃಶವಾಯಿತು. ಮಹಾರಾಜರು ಪ್ರತಿದಿನ ಅದಕ್ಕೆ ಪ್ರಿಯವಾದ ಆಹಾರವನ್ನು ತಂದುಕೊಡಬೇಕೆಂದು ಅಪ್ಪಣೆ ಮಾಡಿದರು. ಆದರೂ ಅದು ಆಹಾರವನ್ನು ತೆಗೆದುಕೊಳ್ಳದೆ ಉಪವಾಸವನ್ನೇ ಮುಂದುವರಿಸಿತು. ಹೀಗೆ ಹತ್ತು ದಿನ ಕಳೆದು ಹನ್ನೊಂದನೆಯ ದಿನ ತಾನು ಅಸುನೀಗಿತು. ಅದನ್ನು ಕಂಡ ಮಹಾರಾಜರಿಗೆ ಕಣ್ಣಲ್ಲಿ ನೀರೂರಿತು. 'ಎಲೈ ಗಜರಾಜ, ಮನುಷ್ಯನಿಗಿಂತಲೂ ಕೂಡ ಸ್ವಾತಂತ್ರ್ಯದ ಬೆಲೆಯನ್ನು ನೀನು ಚೆನ್ನಾಗಿ ಅರ್ಥಮಾಡಿಕೊಂಡಿದ್ದೀಯೆ, ಬುದ್ಧಿಶಕ್ತಿಯಲ್ಲಿ ಪ್ರಾಣಿಗಳಿಗಿಂತಲೂ ಮೇಲಾದ ಮನುಷ್ಯ ಈ ಸ್ವಾತಂತ್ರ್ಯದ ಮೌಲ್ಯವನ್ನು ಅರ್ಥಮಾಡಿಕೊಂಡಿಲ್ಲವಲ್ಲಾ !' ಎಂದರು.

**೭. ಆಡಳಿತ ಮಾಡುವ ದೊಡ್ಡವರು ಬಹಳ ಎಚ್ಚರಿಕೆಯಿಂದಿರಬೇಕು: ಮೈಯೆಲ್ಲಾ ಕಣ್ಣಾಗಿರಬೇಕು: ಇಲ್ಲದಿದ್ದರೆ ದೇಶ ಅಧೋಗತಿಗಿಳಿಯುತ್ತದೆ.**

ಟಿಪ್ಪು ರಾಜ್ಯಭಾರ ಮಾಡುತ್ತಿದ್ದ. ಪೂರ್ಣಯ್ಯ ದಿವಾನರಾಗಿದ್ದರು. ಒಮ್ಮೆ ಟಿಪ್ಪು ರಾಮಾಯಣ ಪಠಣ ಮಾಡುವುದನ್ನು ಕೇಳಿದನು. ಟಿಪ್ಪುವಿಗೆ ಬಹಳ ಸಂತೋಷವಾಯಿತು. ರಾಮಾಯಣವನ್ನು ಮನಸಾರೆ ಮೆಚ್ಚಿಕೊಂಡನು. ದಿವಾನರನ್ನು ಕರೆದು 'ದಿವಾನ್ ಹೊಸ್ತು ರಾಮಾಯ್ನ ಬರ್ಸ್ಲಿ. ಅದ್ರೊಳ್ಗೆ ನನ್ಗೂ ಒಳ್ಗೆ ನಾಯ್ಕುಮಾಡು. ಅದ್ರೊಳ್ಗೆ ರಾಮಂದು ಜಾಗ ನನ್ದು ಇರ್ಲಿ' ಎಂದನು.

'ಅಪ್ಪಣೆ ಖಾವಂದ್' ಎಂದು ಪೂರ್ಣಯ್ಯನವರು ಮನೆಗೆ ಬಂದರು. ದಿವಾನ್ ಪೂರ್ಣಯ್ಯನವರನ್ನು ಟಿಪ್ಪುವಿನ ಮಾತ್ತು ತಲೆತಿನ್ನತೊಡಗಿತು. ವಿದ್ವಾಂಸರಿಗೆ ವಿಷಯ ತಿಳಿದು ತಲೆ ಕೆಟ್ಟಿತು. ಪೂರ್ಣಯ್ಯನವರು ತಮ್ಮ ಆತ್ಮೀಯರೊಂದಿಗೆ

ಗೆಳೆಯರೊಂದಿಗೆ, ಪರಿವಾರದೊಂದಿಗೆ, ವಿದ್ವಾಂಸರೊಂದಿಗೆ ವಿಷಯವನ್ನು ಚರ್ಚಿಸಿದರು. ಹಗಲಿರುಳೂ ಚಿಂತಿಸಿ, ಚಿಂತಿಸಿ ಸಾಕಾದರೂ ಏನೂ ಹೊಳೆಯಲಿಲ್ಲ. ಒಂದುದಿನ ಇದೇ ವಿಷಯವನ್ನು ಚಿಂತಿಸುತ್ತಿರುವಾಗ ಅಮ್ಮಾವರು ಒಳಗಿನಿಂದ ಬಂದು 'ನೋಡ್ರಿ ನಮ್ಮ ಮನೆ ಕೆಲಸದಾಕಿ ನಿನ್ನೆಯಿಂದ ಎಲ್ಲಿಗೋ ಓಡಿಹೋಗಿದಾಳಲ್ರಿ. ಇನ್ನೊಬ್ಬಳನ್ನು ಗೊತ್ತುಮಾಡಬೇಕು' ಎಂದರು. ಈ ಮಾತನ್ನು ಕೇಳಿದೊಡನೇ ಪೂರ್ಣಯ್ಯನವರಿಗೆ ಏನೋ ಹೊಳೆಯಿತು. ಟಿಪ್ಪುವಿನ ಸಮಸ್ಯೆಗೆ ಪರಿಹಾರ ಹೊಳೆದಂತಾಯಿತು. ತತ್‌ಕ್ಷಣವೇ ವಿದ್ವಾಂಸರನ್ನೆಲ್ಲಾ ಕರೆಸಿದರು. 'ನೀವು ರಾಮಾಯಣವನ್ನು ಪ್ರಾರಂಭಿಸಿ' ಎಂದರು. ವಿದ್ವಾಂಸರು ಹರಳೆಣ್ಣೆ ಕುಡಿದ ಮುಖವುಳ್ಳವರಾಗಿ 'ಇದೇನು ತಾವು ಹೇಳ್ತಾ ಇರುವುದು. ಇದು ಎಲ್ಲಿಯಾದ್ರು ಉಂಟೆ? ಸುಲ್ತಾನ ಸಾಹೇಬರನ್ನು ಶ್ರೀರಾಮನಿಗೆ ಹೋಲಿಸೋದು ಎಲ್ಲಾದರೂ ಉಂಟೆ. ಕರ್ಮ ಧರ್ಮ ಬೇಡವೇ ?'

'ಅದೆಲ್ಲಾ ನಿಮಗೇಕೆ ಸುಮ್ನೆ ಪ್ರಾರಂಭ ಮಾಡಿ.'

'ಅದ್ಹೇಗಾಗುತ್ತೆ ಸ್ವಾಮಿ. ತಾವು ತಿಳಿದೂ ತಿಳಿದೂ ಮಾತಾಡ್ತಿದ್ದೀರಲ್ಲ.'

ಪೂರ್ಣಯ್ಯನವರು ರೇಗಿ 'ಸಾಕು ಸುಮ್ನಿರ್ರಿ. ನನಗೆ ಗೊತ್ತಿಲ್ಲದೆ ಮಾತಾಡ್ತಿದ್ದೀನಿ ಅಂತ ತಿಳ್ಕೊಂಡ್ರೋ. ಪ್ರಾರಂಭಿಸ್ತಿರೋ ಇಲ್ವೋ, ಹೇಳ್ಬಿಡಿ, ಸುಮ್ನೆ ಪ್ರಾರಂಭಿಸಿದರೆ ಕೈತುಂಬ ಹೊನ್ನು, ಹೊಟ್ಟೆತುಂಬ ಭಕ್ಷ್ಯಭೋಜ್ಯ, ಮೈತುಂಬ ಬೆಲೆಬಾಳೊ ಬಟ್ಟೆ ಬರೆ'

'ಏನ್ ಸ್ವಾಮಿ ತಮ್ಮ ಮಾತು! ಜೋಟ್‌ಬಟ್ಟೆ, ಗೇಣ್‌ಹೊಟ್ಟೆ, ನಾಲ್ಕು ಹೊನ್ನಿಗಾಗಿ ಇಂಥ ಬರವಣಿಗೆ ಮಾಡಲು ಸಾಧ್ಯವೇ ?'

'ನಿಮ್ಮ ನಾಲ್ಗೆ ಮುಂದಾಯಿತು. ಟಿಪ್ಪು ರಾಜ್ಯದಲ್ಲಿ ಮಾತು ಮೀರಿದವರ ಗತಿ ಏನಾದೀತು ಗೊತ್ತೆ ? ನಿಮ್ಮ ಮೂಳೆಗಳು ನಿಮ್ಮ ಕೈಗೆ ಸಿಕ್ಕಾವು' ಎನ್ನುತ್ತಾ ಮನೆ ಬಾಗಿಲಬಳಿ ಇದ್ದ ಸಿಪಾಯಿಯನ್ನು 'ಸಿಪಾಯಿ ನಂಜ' ಎಂದರು. ವಿದ್ವಾಂಸರು ನಡುಗಿದರು. ಸಿಪಾಯಿ ಬರುತ್ತಿದ್ದಂತೆ ತುಟಿ ಅಲುಗಿದವು. 'ಪ್ರಾರಂಭಿಸುತ್ತೇವೆ. ತಮ್ಮ ಚಿತ್ತ'

'ಸರಿ ಹಾಗಾದರೆ ನಾಳೆಯಿಂದಲೇ ಪ್ರಾರಂಭವಾಗಲಿ.'

'ಆಗಬಹುದು' ಎಂದು ವಿದ್ವಾಂಸರು ಹೊರಟುಹೋದರು.

ಪೂರ್ಣಯ್ಯನವರು ಟಿಪ್ಪುವಿನ ಬಳಿ ಬಂದು 'ಖಾವಂದ್. ಎಲ್ಲಾ ಸಿದ್ಧವಾಗಿವೆ. ಬರವಣಿಗೆ ಪ್ರಾರಂಭವಾಗಬೇಕಾಗಿದೆ. ಅದಕ್ಕಾಗಿ ಅಪಾರ ಹಣಬೇಕು. ನಿತ್ಯಹೋಮ, ಶಾಂತಿಕಾರ್ಯ, ಮಂಗಲಕಾರ್ಯ ನಡೆಯಬೇಕು. ಇದಕ್ಕೆಲ್ಲಾ'

'ಬರವಣಿಗೆ ಬರೋಬರ್ ನಡೀತಾ ಇರ್‍ಲಿ. ನೀನು ಯೋಚ್ನೆ ಮಾಡಬೇಡ. ಖಜಾನಿ ದುಡ್ಡು ತಗೊ'

'ದಿವಾನರಿಗೆ ಬಹಳ ಸಂತೋಷವಾಯ್ತು. ಟಿಪ್ಪುವಿನ ಅಪ್ಪಣೆ ಸಿಕ್ಕಿದ್ದು ಸಾಕಾಯಿತು. ನಿತ್ಯ ಸಾವಿರ ಸಾವಿರ ಹೊನ್ನಿನ ಹೊಳೆಯು ಪ್ರವಾಹವಾಗಿ ನಿರಾತಂಕವಾಗಿ ಹರಿಯತೊಡಗಿತು. ಹೊಟ್ಟೆಗಿಲ್ಲದ ವಿದ್ವಾಂಸಮಂದಿಗೆ ಮಹಾಭಾಗ್ಯದ ಬಾಗಿಲು ತೆರೆದಂತಾಯಿತು. ವಿದ್ವಾಂಸರು ಸಾಕಷ್ಟು ಹಣ ಮಾಡಿದರು. ಅವರಿಗೆಲ್ಲಾ ಬರಗೆಟ್ಟ ದೇವರಿಗೆ ಪರ್ವ ಮಾಡಿದಂತಾಯಿತು. ರಾಮಾಯಣ ಬರವಣಿಗೆ ಮಾತ್ರ ಮುಂದುವರಿಯಲೇ ಇಲ್ಲ. ದಿವಾನ್ ಪೂರ್ಣಯ್ಯನವರು ಅವರಿಗೆಲ್ಲಾ 'ಹೆದರಬೇಡಿ ನಡೆಯಲಿ ನಿತ್ಯ ಸಂತರ್ಪಣೆ' ಎಂದು ಅಭಯವನ್ನಿತ್ತಿದ್ದರು. ಪೂರ್ಣಯ್ಯನವರ ಬಲದಿಂದ ಭಯವನ್ನು ಅದುಮಿ ಭೋಗವನ್ನು ಯಥೇಚ್ಛವಾಗಿ ಅನುಭವಿಸಿದರು. ಟಿಪ್ಪು ಆಗಾಗ್ಗೆ ವಿಚಾರಿಸಿದಾಗ ಪೂರ್ಣಯ್ಯ 'ಖಾವಂದ್, ಬಹಳ ಚೆನ್ನಾಗಿ ಕೆಲಸ ಮುಂದುವರಿಯುತ್ತಿದೆ.' ಎಂದಿಷ್ಟೇ ಹೇಳುತ್ತಿದ್ದರು. ಮತ್ತೊಂದು ದಿನ ಟಿಪ್ಪು ಕರೆಸಿ ಕೇಳಿದಾಗ 'ಖಾವಂದ್ ಮುಗಿಯುತ್ತಾ ಬಂದಿದೆ'

'ಎಂದು ಮುಗಿತದೆ'

'ಇಷ್ಟು ಹೊತ್ತಿಗೆ ಅದು ಎಂದೋ ಮುಗಿಯುತ್ತಿತ್ತು. ಆದರೆ ಒಂದು ಸಮಸ್ಯೆ ಬಂದು ಬಿಟ್ಟಿದೆ. ಅದನ್ನು ಬಿಡಿಸದೆ ಮುಗಿಸುವಂತಿಲ್ಲ'.

'ಏನದು'

'ಪೂರ್ತಿಯಾಗಿ ವಿಷಯ ಸಂಗ್ರಹಣೆಯಾಗಿದ್ದು, ಬರವಣಿಗೆ ಅರ್ಧಮುಗಿದು ಅಂತ್ಯ ಭಾಗಕ್ಕೂ ಬರುತ್ತಿದೆ. ಆದರೆ ಮುಗಿಸುವುದಕ್ಕೆ ಮಧ್ಯೇ ಯಾವುದೋ ಒಂದು ಸಮಸ್ಯೆ ಬಂದು, ಎಲ್ಲರ ತಲೆ ತಿನ್ನುತ್ತಿದೆ.'

'ಅದೇನು'

'ರಾಮಾಯಣದಲ್ಲಿಯಾದರೋ ರಾಮನ ಹೆಂಡತಿಯನ್ನು ರಾವಣ ಕದ್ಕೊಂಡುಹೋದ. ಈ ಸಂದರ್ಭದಲ್ಲಿ ತಮ್ಮ ಕಥೆ ಹೇಗೆ ಬರಿಯಬೇಕು ಎಂಬುದು ತಿಳಿಯದೆ ಅಲ್ಲಿಗೆ ಕಥೆ ನಿಂತಿದೆ.'

ಟಿಪ್ಪು ಒಮ್ಮೆಲೇ ಕುಪಿತನಾಗಿ 'ಸಾಕುಸಾಕು. ರಾವಣ, ರಾಮಚಂದ್ರನ ಹೆಂಡತಿಯನ್ನು ಕದ್ದುಕೊಂಡು ಹೋದ ಆ ಕಥೆಗೆ ನನ್ನನ್ನು ಹೋಲಿಸಬೇಡಿ. ಬರೆದದ್ದನ್ನು ಬೆಂಕಿಗೆ ಹಾಕ್ಸಿಬಿಡಿ.'

'ಅಪ್ಪಣೆ ಖಾವಂದ್'

'ನನ್ನ ಮುಂದೇ ಸುಡ್ಬೇಕು'

'ಅಪ್ಪಣೆ ಖಾವಂದ್, ಅದು ಧರ್ಮಗ್ರಂಥ. ಸುಡಬೇಕಾದರೆ ಸುಮ್ಮ ಸುಮ್ಮನೆ ಸುಡುವಂತಿಲ್ಲ. ಹೋಮ, ಜಪ, ತಪ, ಶಾಂತಿ, ಸಂತರ್ಪಣೆಗಳನ್ನು ಮಾಡಿ ಸುಡಬೇಕು.'

'ಹಾಳಾಗ್ಲಿ ಹಾಗೆ ಮಾಡು, ನನ್ನ ಮುಂದೆ ಸುಡಬೇಕು.'

'ಅಪ್ಪಣೆ ಖಾವಂದ್'

ಪೂರ್ಣಯ್ಯನವರಿಗೆ ಒಳಗೊಳಗೇ ಆನಂದ. ವಿದ್ವಾಂಸರುಗಳಿಗೆ ಹಾಲು ಕುಡಿದಷ್ಟು ಆನಂದ. ಬರೆದಿದ್ದರೆ ತಾನೆ, ಸುಡುವ ಪ್ರಶ್ನೆ ! ಬರೆದು ಕಸಕ್ಕೆ ಬಿಸಾಕಿದ ಚೂರು ಚೂರು ಕಾಗದಗಳನ್ನೆಲ್ಲಾ ತರಿಸಿ ರಾಶಿ ಹಾಕಿಸಿದರು. ಭಾರಿ ಸಮಾರಂಭ ಏರ್ಪಾಡಾಯಿತು. ಮಂತ್ರ ಪಠನೆಯಾಯಿತು. ಟಿಪ್ಪು ಸಭೆಯಲ್ಲಿ ಹಾಜರಿದ್ದನು. ವಿದ್ವಾಂಸರಿಗೆಲ್ಲಾ ಭೂರಿ ದಕ್ಷಿಣೆ, ಭಾರಿ ಭಾರಿ ಉಡುಗೊರೆ ಸಂದಾಯವಾಯಿತು. ಹಳೆಯ ಬರವಣಿಗೆಯ ಹಾಳೆಗಳನ್ನು ರಾಶಿ ಹಾಕಿಸಿದ್ದಾಯಿತು. ಟಿಪ್ಪುವಿನ ಎದುರಿಗೇ ಅವುಗಳಿಗೆಲ್ಲ ಶಾಸ್ತ್ರೋಕ್ತವಾಗಿ ಬೆಂಕಿ ಹಚ್ಚಿದುದಾಯಿತು. ತುಪ್ಪ, ಹಾಲು, ಚಿನ್ನ, ಬೆಳ್ಳಿ ಬೆಲೆಬಾಳುವ ಸೀರೆಗಳನ್ನು ಹಾಕಿದುದಾಯಿತು. ಸುಡುವ ಸಂತರ್ಪಣೆಯ ಸಮಾರಂಭ ಭರ್ಜರಿಯಾಗಿ ನಡೆಯಿತು. ಟಿಪ್ಪು ಸಂತೋಷದಿಂದ 'ಅಚ್ಛಾ ಅಚ್ಛಾ ಭಸ್ಮ ಹೋಗಯಾ' ಎಂದು ಸಂತೋಷದಿಂದ ಹೊರಟು ಹೋದ. ಯಜ್ಞದ ಪವಿತ್ರ ಕಪ್ಪು ನೆರೆದವರ ಹಣೆಯನ್ನು ಅಲಂಕರಿಸಿತು. ವಿದ್ವಾಂಸರು ಸಂತೃಪ್ತರಾಗಿ ಪೂರ್ಣಯ್ಯನವರತ್ತ ಕೃತಜ್ಞತೆಯ ದೃಷ್ಟಿ ಹಾಯಿಸಿದರು, ಪೂರ್ಣಯ್ಯನವರು ಮುಗುಳ್ನಗೆ ನಕ್ಕರು.*

—ಶಿವಕುಮಾರ ವಾಣಿಯಿಂದ

**೮. ಮನುಷ್ಯ ಜನ್ಮವೇ ಮುಕ್ತಿದ್ವಾರ. ಎಚ್ಚರಿಕೆಯಿಂದ ಅದರಿಂದ ಹಾಯ್ದು ಬಿಡುಗಡೆ ಹೊಂದದಿದ್ದರೆ ಮತ್ತೆ ಮತ್ತೆ ಜೀವಿ ಜನ್ಮಗಳಲ್ಲಿ ತೊಳಲಬೇಕು ; ನರಳಬೇಕು; ಪರಿತಪಿಸಬೇಕು.**

ಒಂದು ಕೋಟೆಯ ಒಳಗಡೆ ಒಬ್ಬ ಕುರುಡನು ವಾಸಿಸುತ್ತಿದ್ದನು. ಅವನು ಕೋಟೆಯಿಂದ ಹೊರಗೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಅಲ್ಲಿಯ ಯಾಂತ್ರಿಕ ಜೀವನ ತುಂಬ ಬೇಸರ ತಂದಿತ್ತು. ಹೇಗಾದರೂ ಮಾಡಿ ಕೋಟೆಯಿಂದ ಹೊರಕ್ಕೆ ಹೋಗಬೇಕೆನ್ನುವ ಹಂಬಲ ಹೆಚ್ಚಾಯಿತು. ಒಂದು ದಿನ ಮನೆಬಿಟ್ಟು ಧೈರ್ಯಮಾಡಿ ಹೇಗಾದರೂ ಅಲ್ಲಿಂದ ತಪ್ಪಿಸಿಕೊಳ್ಳಲು, ಕೋಟೆಯ ಗೋಡೆಯನ್ನು ಹಿಡಿದು ಬಾಗಿಲನ್ನು ತಡಕಿಕೊಂಡು ಹೊರಟನು. ಸುತ್ತು ಹಾಕುತ್ತಾ ಬಂದನು. ಇನ್ನೇನು ಬಾಗಿಲು ಸಿಕ್ಕಿತು, ಒಂದು ಕೈ ತೆಗೆದು ಒಂದು ಹೆಜ್ಜೆ ಕಿತ್ತು ಇಟ್ಟರೆ ಅದೇ ಬಾಗಿಲು. ಅದಕ್ಕಾಗಿ ಅವನು ಹಲವು ಕಾಲ ಪರಿತಪಿಸುತ್ತಿದ್ದ. ಆದರೆ ಅದೇ ಸಮಯಕ್ಕೆ ಸರಿಯಾಗಿ ಸೊಳ್ಳೆಯೊಂದು ಬೆನ್ನಮೇಲೆ ಕುಳಿತು ರಕ್ತ ಹೀರತೊಡಗಿತು. ಪಾಪ ಸೊಳ್ಳೆ ಕಡಿತದಿಂದ ತಪ್ಪಿಸಿಕೊಳ್ಳಲು ಕುರುಡ ಕೈಎತ್ತಿ ಬೆನ್ನಮೇಲೆ ಸೊಳ್ಳೆಕುಳಿತ ಜಾಗಕ್ಕೆ ಹೊಡೆದುಕೊಂಡ. ಮುಂದೆ ಹೆಜ್ಜೆ ಇಟ್ಟ; ಬಾಗಿಲು ಹಿಂದೆ ಬಿದ್ದಿತು. ಕುರುಡ ಮುಂದಾದ, ದೌರ್ಭಾಗ್ಯ ಅವನನ್ನು ಕಾಡಹತ್ತಿತು. ಬಾಗಿಲಿಗಾಗಿ ಅವನು ಮತ್ತೆ ಮತ್ತೆ ಸುತ್ತಿ ಬರಬೇಕಾಯಿತು, ಸೊಳ್ಳೆ ಅವನ ಭಾಗಕ್ಕೆ ಶನಿಯಾಗಿ ಬಂದು ಕಾಡಿತು.'

**೯. ಇದ್ದುದನ್ನು ಇದ್ದ ಹಾಗೇ ನೇರವಾಗಿ, ಸರಳವಾಗಿ, ಸತ್ಯವಾಗಿ ಹೇಳದೆ, ಅದನ್ನು ವಿಕಾರವಮಾಡಿ, ಹಿಂದು ಮುಂದುಗೊಳಿಸಿ, ಬಣ್ಣಕಟ್ಟಿ, ಸುಳ್ಳನ್ನು ಸತ್ಯದ ತಲೆಯಮೇಲೆ ಹೊಡೆದಂತೆ ಹೇಳಿ, ಕೇಳುವವರನ್ನು ಚಕಿತರನ್ನಾಗಿಸಿ ಹೇಳುವ ಮಾತಿನಲ್ಲಿ ಸಂಪೂರ್ಣವಾದ ನಂಬಿಕೆಯನ್ನು ಉಂಟುಮಾಡುವುದೇ ಪೊಳ್ಳುತನದ ಲಕ್ಷಣ**

ನಾಲ್ಕಾರುಮಂದಿ ವಿನೋದಕ್ಕೆ ಒಂದುಕಡೆ ಸೇರಿದರು. ಅವರಲ್ಲಿ ಒಬ್ಬ ಹೇಳಿದ. 'ನಾನು ಸಾವಿರ ಹೆಡೆಹಾವನ್ನು ಕಂಡೆ' ಕೇಳಿದವರು ಚಕಿತರಾದರು. ದಿಗ್ಭ್ರಾಂತರಾದರು. ಒಮ್ಮೆಲೇ ಅವರು

'ಹೌದೇ, ನಿಜವೇ' 'ಸತ್ಯವೇ' ಎಂದರು. ಅವರಲ್ಲಿ ಒಬ್ಬ ಬುದ್ಧಿವಂತನಿಗೆ ಅನುಮಾನ ಬಂದು 'ಎಲ್ಲಿ' ಎಂದ.

'ಬೆಟ್ಟದಬಳಿ'

'ಬೆಟ್ಟಗಳ ಬಳಿ ಹಾವುಗಳು ಇರುವುದು ಸತ್ಯ ಎಂದು ನಂಬಿದರೂ, ಸಾವಿರಹೆಡೆ ಹಾವು ಎಲ್ಲಾದ್ರೂ ಉಂಟೆ. ಪುರಾಣದಲ್ಲಿ ಹೇಳಿಲ್ಲ. ಯಾವ ಶಾಸ್ತ್ರದಲ್ಲೂ ಅಂಥ ವಿಷಯ ಓದಿಲ್ಲ. ಎಂದೂ ಜನ ಕಂಡು ಅರಿಯದ ವಿಚಾರ. ಎಣಿಕೆ ಮಾಡಿದೆಯಾ ?

* ಅಕಬರ ಬೀರಬಲ್‌ರಿಗೆ ಸಂಬಂಧಿಸಿದ ಕಥೆಗಳಂತೆ ಟಿಪ್ಪುಸುಲ್ತಾನ, ಹೈದರ್. ಪೂರ್ಣಯ್ಯನವರಿಗೆ ಸಂಬಂಧಿಸಿದ ಅನೇಕ ಕಥೆಗಳು ಜನಜನಿತವಾಗಿವೆ. ಅವಕ್ಕೆ ಐತಿಹಾಸಿಕವಾಗಿ ಬೆಲೆ ಇಲ್ಲದಿದ್ದರೂ. ಒಂದು ತತ್ತ್ವವನ್ನು ಚಿತ್ರಿಸಲು ಅವೆಲ್ಲ ಹುಟ್ಟಿರಬಹುದು. ಇಲ್ಲಿ ವ್ಯಕ್ತಿಗಳು ಉಪಲಕ್ಷ್ಯ; ನೀತಿತತ್ತ್ವಗಳು ಪ್ರಧಾನ.

'ಹಾಗಂತೀಯಾ. ಸಾವಿರ ಹೆಡೆ ಅಲ್ಲ. ಒಂದುನೂರು ಅಂತ ಇಟ್ಕೊ.'

'ಏನು ನೂರು! ನಿನ್ನ ಮಾತ್ನ ನಂಬಬಹುದಾ, ವಿಶ್ವಾಸವಿಡಬಹುದಾ.'

'ಏನೋ ಹಾವ್ಗೆ ಒಂಭತ್ತಾದರೂ ಇರಲ್ವೇನೋ, ಅಷ್ಟು ಅಂದಕೊ.'

'ಇದೂ ನಿಜ್ವೆ, ಸತ್ಯವಾಗಿ ಕಂಡ್ಯಾ'

'ಏನೋ ಅಪ್ಪ ಒಂದೈದ್ಹೆಡೆ ಇದ್ದಂಗಿತ್ತು.'

ಅವರು ಮತ್ತೆ ಮತ್ತೆ ಪ್ರಶ್ನಿಸಲು ತಮಾಷೆಗೆಂದು ಹೇಳಿದ ಅವನು ತರ್ಕದ ಗಾಣಕ್ಕೆ ಸಿಕ್ಕಿ ಸುಸ್ತಾಗಿ 'ನ್ಯಾಯವಾಗಿ ಕಂಡದ್ದು ಒಂದು ಹೆಡೆ ಹಾವು.'

'ಕಂಡದ್ದು ನಾಗರಹಾವೇ ತಾನೇ ? ಚೆನ್ನಾಗಿ ಕಂಡ್ಯಾ ?'

'ಇಲ್ಲ ನಾನು ಬರ್‍ತಿದ್ದೆ. ಒಂದು ಹಾವು ಹೋದಂಗಿತ್ತು.'

'ಹಾವ್ನೇ ಕಂಡ್ಯೋ ಇಲ್ಲ ಮತ್ತೇನಾದ್ರೂ............'

'ನಾನು ಬರ್‍ತಿದ್ದೆ. ಒಂದು ಹಾವು ಸರಸರ ಅಂತ ಹೋದಂಗಾತು. ಆದ್ರೆ ಸಣ್ಣಗಿದ್ದ ಅದರ ಬಾಲ ಮಾತ್ರ ಕಂಡಂಗಿತ್ತು. ಹಾವೋ ಹುಳವೋ ಯಾರಿಗೆ ಗೊತ್ತು'

'ಅದು ಹೇಗಿತ್ತು'

'ಹೇಗಿತ್ತೋ ನೋಡ್ದೋರ್‍ಯಾರು ? ಊಟಕ್ಕೆ ಗಂಟೆ ಹೊಡೆದಿತ್ತು. ಹೊತ್ತಾಗಿತ್ತು. ತಟ್ಟೆ ಹಿಡ್ಕೊಂಡು ಅವಸರ ಅವಸರವಾಗಿ ಓಡ್ತಿದ್ದೆ. ಪೊದೆ ಸರಸರ ಅಂದಂಗಾತು.'

ಈ ಕತೆ ಕತೆಯೇ. ಆದರೂ ಇದರಹಿನ್ನೆಲೆಯಲ್ಲಿ ಅಡಗಿರುವ ವಾಸ್ತವಿಕವಾದ ಅಂಶದತ್ತ ಗಮನ ಕೊಡಬೇಕು. ಹೀಗೆ ಸಾವಿರ ಹೆಡೆ ಹಾವು, ನೂರು ಹೆಡೆಹಾವಾಗಿ, ಹುಳುವಾಗಿ, ಕೊನೆಗೆ ಪೊದೆ ಸರಸರ ಎಂದಿತು, ಎಂಬ ಮಾತಿಗೆ ಬಂದು ನಿಂತಿತು.

### ೧೦. ಜಗತ್ತಿನಲ್ಲಿ ತಾವೇ ತಾವಾಗಿ ಮೆರೆದ ವ್ಯಕ್ತಿಗಳೇ ಅಂತ್ಯಕಾಲದಲ್ಲಿ ತಮ್ಮ ಅಭಿಪ್ರಾಯವನ್ನು ಬದಲಿಸಿ, ಜೀವಿತದ ಕೊನೆಯ ಕಾಲದಲ್ಲಿ ಭಗವಂತನಲ್ಲಿ ಭಕ್ತಿಯನ್ನು, ನಂಬಿಕೆಯನ್ನು ವ್ಯಕ್ತಪಡಿಸಿದ್ದಾರೆ

ಇದಕ್ಕೆ ನೆಪೋಲಿಯನ್ ಜೀವನವೇ ಸಾಕ್ಷಿ. 'ಅಸಾಧ್ಯ' ಎಂಬ ಪದವೇ ನನ್ನ ಶಬ್ದಕೋಶದಲ್ಲಿಲ್ಲ, ಎಂದ ನೆಪೋಲಿಯನ್ನನ ಜೀವನದಲ್ಲಿ ಸ್ವಲ್ಪ ಸತ್ಯಾಂಶವುಂಟು. ಜಯದ ಮೇಲೆ ಜಯ, ಗೆಲುವಿನ ಮೇಲೆ ಗೆಲುವು, ದಿಗ್ವಿಜಯ ಹೊಂದಿದ. ಅದರಿಂದ ಪ್ರೇರಿತನಾದ ಅವನಿಗೆ ಜಗತ್ತನ್ನೇ ಜಯಿಸುವ ಹಂಬಲವುಂಟಾಯಿತು. ಆದರೆ ಅದೃಷ್ಟ ಬದಲಿಸಿತು. ಕೊನೆಗೆ ಸೋಲಿನ ಮೇಲೆ ಸೋಲು ಉಂಟಾಯಿತು. ಅಂತ್ಯದಲ್ಲಿ ಹೇಳಿದ 'ಬಲದ ಆಧಾರದ ಮೇಲೆ, ಸರ್ವಾಧಿಕಾರದ ಕತ್ತಿಯ ಮೊನೆಯಲ್ಲಿ ಕಟ್ಟಿದ ಸಾಮ್ರಾಜ್ಯಗಳು ಉರುಳಿದವು. ಕ್ರಿಸ್ತ ಪ್ರೀತಿಯ ಮೇಲೆ ಕಟ್ಟಿದ ಭಗವಂತನ ಸಾಮ್ರಾಜ್ಯ ಸಾವಿರಾರು ವರ್ಷಗಳು ಕಳೆದರೂ ಇಂದೂ ಉಳಿದಿದೆ. ಕ್ರಿಸ್ತನಿಗಾಗಿ ಸಾಯಲು ಲೆಕ್ಕವಿಲ್ಲದ ಮಂದಿ ಸಿದ್ಧರಿದ್ದಾರೆ'—ಇದು ಮಾನವನ ಶಕ್ತಿಯ ಮೇಲೆ ಸಾಮ್ರಾಜ್ಯವನ್ನು ಕಟ್ಟಿದ ಸರ್ವಾಧಿಕಾರಿಯೊಬ್ಬನ ಮಾತು.

### ೧೧. ಸ್ವಾತಂತ್ರ್ಯವೆಂದರೆ ಸ್ವೈರಾಚಾರವಲ್ಲ : ಸ್ವಚ್ಛಂದ ಪ್ರವೃತ್ತಿಯಲ್ಲಿ ಅದೊಂದು ಆತ್ಮವಿಕಾಸಕ್ಕೆ ರಕ್ಷೆ

ಒಂದು ಊರಿನಲ್ಲಿ ಒಂದು ಕುರಿ ಮಂದೆ ಇತ್ತು. ಹಗಲೆಲ್ಲಾ ಕುರುಬನ ರಕ್ಷೆಯಲ್ಲಿರುತ್ತಿತ್ತು. ರಾತ್ರಿಯ ಹೊತ್ತು ಕುರಿಮಂದೆ ರೊಪ್ಪದಲ್ಲಿರುತ್ತಿತ್ತು. ಮಂದೆಗೆ ಸದಾ ಒಂದಿಲ್ಲೊಂದು ರೀತಿಯಲ್ಲಿ ಕಾವಲು ಇದ್ದೇ ಇರುತ್ತಿತ್ತು. ಯಾವೊಂದು ಕುರಿಯೂ ಮಂದೆ ಬಿಟ್ಟು ಹೋಗುವಂತಿರಲಿಲ್ಲ. ಒಡೆಯನ ಆಜ್ಞೆಯನ್ನು ಅವು ಚಾಚೂ ತಪ್ಪದೆ ಸುಖವಾಗಿದ್ದವು. ಆದರೆ ಒಂದು ಎಳೆ ಕುರಿಮರಿ ಮಾತ್ರ ಸದಾ ಅತೃಪ್ತಿಯ ಅಗ್ನಿಕುಂಡದಲ್ಲಿ ಕುದಿಯುತ್ತಿತ್ತು. ಅದಕ್ಕೆ ಬದುಕು ಯಾಂತ್ರಿಕವಾಗಿ ಕಂಡಿತು ; ಬಂಧಿತವಾಗಿ ಭಾಸವಾಯಿತು. ತರುಣ ರಕ್ತದ ಎಳೆಯ ಕುರಿಗೆ ಬಂಧನದ ಬೇಲಿಯ ಬದುಕನ್ನು ಕಿತ್ತೊಗೆದು ಹೊರಕ್ಕೆ ಹೋಗಿ ಸಾಹಸಕಾರ್ಯಗಳನ್ನೆಸಗುವ ಪ್ರವೃತ್ತಿ ದಿನೇ ದಿನೇ ಹೆಚ್ಚಿತು. ತನ್ನ ಸಂಗಡಿಗರನ್ನು ಪ್ರಚೋದಿಸಿತು. ಆದರೆ ಯಾವುವೂ ಅದರ ಕ್ರಾಂತಿಕಾರಿ ಮನೋಭಾವಕ್ಕೆ ಸೊಪ್ಪುಹಾಕಲಿಲ್ಲ. ಅದು ಸಿಡಿಮಿಡಿಗೊಂಡಿತು. ಅದಕ್ಕೆ ನಿರ್ವೀರ್ಯ ಸಂಗಡಿಗರ ಜೊತೆಯ ಬಾಳು ಅಸಹ್ಯವಾಗಿ ಕಂಡಿತು. ಸಮಯಕ್ಕಾಗಿ ಕಾತುರವಾಗಿ ಕಾದು ನಿಂತಿತು. ಒಂದು ರಾತ್ರಿ ಎಲ್ಲೆಲ್ಲೂ ಹಾಲು ಚೆಲ್ಲಿದಂತೆ ಬೆಳದಿಂಗಳು. ಎಳೆ ಕುರಿಗೆ ಹೊರಗೆ ಹೋಗಿ ಅಡ್ಡಾಡಿ ಬರುವ ಮನಸ್ಸಾಯಿತು. ಆಗ ಸರಿಹೊತ್ತು ನಿದ್ರೆಯೇ ಹೊದಿಕೆ

ಯಾಗಿ ಮೌನ ರಾಜ್ಯವಾಳುತ್ತಿತ್ತು. ಅತ್ತ ಇತ್ತ ನೋಡಿ ರೊಪ್ಪದಿಂದ ಚಂಗನೆ ನೆಗೆಯಿತು. ಬೆಳದಿಂಗಳ ಬೆಳಕಿನಲ್ಲಿ ಅದರ ಆನಂದಕ್ಕೆ ಪಾರವೇ ಇಲ್ಲ. ಕುಣಿಯಿತು, ಕುಪ್ಪಳಿಸಿತು. ತನ್ನ ಸಂಗಡಿಗರ ಬಗ್ಗೆ ಅದಕ್ಕೆ ತಿರಸ್ಕಾರ ಮೂಡಿತು. 'ಆಹಾ! ನಾನೆಂಥ ಸ್ವರ್ಗೀಯ ಸೌಂದರ್ಯವನ್ನು ಅನುಭವಿಸುತ್ತಿದ್ದೇನೆ. ಆನಂದದ ಅಮೃತಪಾನ ಮಾಡುತ್ತಿದ್ದೇನೆ. ಈಗ ನನ್ನ ಸಂಗಡಿಗರಾದರೋ ಬೇಲಿಯ ಮುಳ್ಳು ರೊಪ್ಪದ ಕತ್ತಲೆಯಲ್ಲಿ ಹೊಲಸು ವಾಸನೆಯ ಮಧ್ಯೇ ಮೆಲುಕು ಹಾಕುತ್ತಿವೆ. ಅವುಗಳ ಹಣೆಯಲ್ಲಿ ಎಲ್ಲಿ ಇಂಥ ಭಾಗ್ಯ ಬರೆದಿರಬೇಕು.' ಎಂದುಕೊಂಡು ಮನಬಂದಂತೆ ಕುಣಿದು ನೆಗೆದು ಅರಚುತ್ತಾ ಆನಂದದಿಂದ ಮೈಮರೆಯಿತು. ತಾನು ಕುಣಿಯುತ್ತಾ ಕುಣಿಯುತ್ತಾ ರೊಪ್ಪದಿಂದ ಬಹುದೂರ ಕಾಡಿನ ಅಂಚಿಗೆ ಬಂದಿರುವೆನೆಂಬ ಅರಿವೇ ಅದಕ್ಕಾಗಲಿಲ್ಲ. ಅದು ತನ್ನ ಸ್ವಾತಂತ್ರ್ಯ ಮನೋಭಾವದ ಸಾಹಸ ಪ್ರವೃತ್ತಿಯ ಸೌಂದರ್ಯೋಪಾಸನೆಯಲ್ಲಿ ತಲ್ಲೀನವಾಗಿತ್ತು. ಹತ್ತಿರದ ಪೊದೆಯಲ್ಲಿ ಹುಲಿಯೊಂದು ಅವಿತು ಕುರಿಯ ಸ್ವಾತಂತ್ರ್ಯ ಮನೋಭಾವದ ಸ್ವಚ್ಛಂದ ಲೀಲೆಯನ್ನು ಕಣ್ಣಲ್ಲಿ ಕಣ್ಣಿಟ್ಟು ತೀವ್ರಾಸಕ್ತಿಯಿಂದ ಸರ್ವ ಸಿದ್ಧವಾಗಿ ಸಮಯಕ್ಕಾಗಿ ಕಾದು ಸಜ್ಜಾಗಿತ್ತು. ಬೆಳ್ದಿಂಗಳ ಬೆಳಕಿನಲ್ಲಿ ಮಿಂದು ಅಪೂರ್ವ ಶೋಭೆ ಪಡೆದ ಕಾಡು ಕುರಿಯ ಸುಪ್ತ ಸೌಂದರ್ಯಾಸ್ವಾದನೆಯ ಭಾವಗಳನ್ನು ಮಿಡಿಸಿತು. ಮರಗುಟ್ಟುವ ಕಾಡಿನ ಶ್ರುತಿಗೆ ಹೆಜ್ಜೆ ಹಾಕುತ್ತಾ ಹಾರಿ ಹಾರಿ ನೆಗೆ ನೆಗೆದು ಮೂರನೆಯ ತಾಳ ಮುಟ್ಟಿ ತನ್ನನ್ನು ತಾನು ಮರೆತು ಪೊದೆಯ ಬಳಿ ಕುರಿ ನೆಗೆಯಿತು. ಅಲ್ಲೇ ಅವಿತಿದ್ದ ಹುಲಿ ಮೇಲೆ ಹಾರಿ ಒಂದೇ ಏಟಿಗೆ ಅದನ್ನು ಮುಗಿಸಿತು. ಎಳೆಯ ಕುರಿಯ ಸ್ವಾತಂತ್ರ್ಯಪ್ರವೃತ್ತಿ ರಕ್ತವಾಗಿ ಹರಿಯಿತು. ಅದರ ದೇಹ ತುಂಡು ತುಂಡಾಗಿ ಚೆಲ್ಲಾಡಿತು.

**೧೨. ವ್ಯಕ್ತಿ ಭಗವಂತನ ಸಾಕ್ಷಾತ್ಕಾರಕ್ಕೆ ಜಗತ್ತನ್ನು ಬಿಡಬೇಕಾಗಿಲ್ಲ. ಸಂಸಾರ ತೊರೆಯಬೇಕಾಗಿಲ್ಲ. ಕಾಡನ್ನು ಸೇರಬೇಕಾಗಿಲ್ಲ. ತಾನು ಇದ್ದಲ್ಲೇ ಸಾಧನೆಮಾಡಿ ಸಿದ್ಧಿಯನ್ನು ಪಡೆಯಬಹುದು. ಸಾಕ್ಷಾತ್ಕಾರವನ್ನು ಹೊಂದಬಹುದು. ಅದು ಹೆಚ್ಚಾಗಿ ಮನಸ್ಸನ್ನೆ ಅವಲಂಬಿಸಿರುತ್ತದೆ.**

'ಒಬ್ಬ ವಿದ್ವಾಂಸನಿಗೆ ನಗರದ ಯಾಂತ್ರಿಕವಾದ ಕೃತಕ ಜೀವನದಿಂದ ಬೇಜಾರಾಯಿತು. ಹಳ್ಳಿಯ ಮುಗ್ಧವಾದ ಸಹಜ ಜೀವನಕ್ಕೆ ಮಾರುಹೋದನು. ನಗರವನ್ನು ತೊರೆದು, ಹಳ್ಳಿಗೆ ಹೋದನು. ಕೆಲವು ತಿಂಗಳು ಹಳ್ಳಿಯಲ್ಲಿ ಕಾಲ ಹಾಕಿದನು. ಆಗ ಅವನಿಗೆ ಹಳ್ಳಿಯ ಜೀವನದ ಅರಿವಾಯಿತು. ಅಲ್ಲಿ ದ್ವೇಷ. ಅಸೂಯೆ. ಜಗಳ ತಾಂಡವವಾಡುತ್ತಿದ್ದವು. ಅದನ್ನು ಕಂಡು ಅಸಹ್ಯವಾಯಿತು ಅವನಿಗೆ. ನಮ್ಮ ಧರ್ಮ. ಸಂಸ್ಕೃತಿಯ ತವರು ಅರಣ್ಯ. ಅಲ್ಲಿ ಸುಖಶಾಂತಿ ಸಿಕ್ಕೇಸಿಕ್ಕುತ್ತದೆಂದು ಹಳ್ಳಿಯನ್ನು ತೊರೆದು ಕಾಡನ್ನು ಸೇರಿ ಗುಡಿಸಲನ್ನು ಕಟ್ಟಿಕೊಂಡು ವಾಸಿಸತೊಡಗಿದನು. ಕೆಲವು ದಿನಗಳಲ್ಲಿಯೇ ವಿದ್ವಾಂಸನಿಗೆ ಕಾಡಿನ ಜೀವನ ಜಿಗುಪ್ಸೆಗೆ ತಂದಿತು. ಕಾಡಿನಲ್ಲಿ ಬದುಕಿಗಾಗಿ ಹೋರಾಟ ಕ್ಷಣ ಕ್ಷಣವೂ ನಡೆಯುತ್ತಿತ್ತು. ಒಂದು ಪ್ರಾಣಿ ಮತ್ತೊಂದು ಪ್ರಾಣಿಗೆ ಆಹಾರ. ಯಾವ ಜೀವಿಗೂ ಒಂದರೆ ಕ್ಷಣವೂ ಭದ್ರತೆಯಾಗಲೀ. ನೆಮ್ಮದಿಯಾಗಲೀ ಇರುತ್ತಿರಲಿಲ್ಲ. ವಿದ್ವಾಂಸ ಕ್ಷಣಕಾಲ ಚಿಂತಿಸಿ,ಯಾವ ಜೀವಿಯ ಸಹವಾಸವೂ ಬೇಡ, ಎಂದು ಪ್ರಶಾಂತವಾಗಿರುವ ನೀರಿನ ವಾಸವನ್ನು ಬಯಸಿದನು. ಎದೆ ಮಟ್ಟದ ನೀರಿಗೆ ಹೋಗಿ ವಾಸಿಸತೊಡಗಿದನು. ಅಲ್ಲಿ ಎಲ್ಲಿಯೂ ಕಾಣದ ಭೀಕರ ದೃಶ್ಯ ಅವನ ಕಣ್ಣಿಗೆ ಬಿದ್ದಿತು. ಮೀನು ಮೀನನ್ನೇ ನುಂಗಿ ಬದುಕುತ್ತಿದ್ದವು. ಸ್ವಜಾತಿ ಸ್ವಜಾತಿಯನ್ನೇ ನುಂಗಿ ಬದುಕುವುದನ್ನು ಕಂಡೊಡನೆ ಚಂಗನೆ ನೀರಿನಿಂದ ನೆಗೆದು ದಡಕ್ಕೆ ಬಂದನು. ಸುಖಶಾಂತಿಗಳ ಮೃಗಮರೀಚಿಕೆಯ ಬೆನ್ನು ಹತ್ತಿದ ಹಾಗಾಯಿತು. ನಗರದ ಕೃತಕ ಜೀವನ, ಹಳ್ಳಿಯ ಅಸೂಯಾ ಜೀವನ, ಕಾಡಿನ ಕ್ರೌರ್ಯ, ನೀರಿನ ಸ್ವಜಾತಿಭಕ್ಷಣೆಯ ಬಾಳು–ಇದೆಲ್ಲವನ್ನೂ ನೆನೆದಾಗ ಅವನಿಗೆ ಮೈ ಝುಮ್ಮೆಂದಿತು. ಇನ್ನು ಈ ಪ್ರಪಂಚದಲ್ಲಿ ಬದುಕಿ ಪ್ರಯೋಜನವಿಲ್ಲ. ಎಂಬ ತೀರ್ಮಾನಕ್ಕೆ ಬಂದನು. ಆತ್ಮಹತ್ಯೆಯ ಸುಲಭ ಹಾದಿಯನ್ನು ಚಿಂತಿಸ ತೊಡಗಿದನು. ಅದೇ ಮಾರ್ಗದಲ್ಲಿ ಹೋಗುತ್ತಿದ್ದ ಒಬ್ಬ ಸಂನ್ಯಾಸಿ ವಿದ್ವಾಂಸನನ್ನು ಕಂಡನು. ಸಂನ್ಯಾಸಿಗೆ ಅವನ ಸ್ಥಿತಿಗತಿ ಕಂಡು ಮರುಕ ಹುಟ್ಟಿ 'ಅಯ್ಯಾ ಇದೇಕೆ ಇಲ್ಲಿ ಹೀಗಿದ್ದೀಯೆ ? ನಿನ್ನ ಚಿಂತೆಗೆ ಕಾರಣವೇನು ?'

'ಸ್ವಾಮಿ ಹೇಳಿ ಪ್ರಯೋಜನವಾದರೂ ಏನು ? ಈ ಪ್ರಪಂಚವನ್ನು ಬಿಡಲು ಸಿದ್ಧನಾಗುತ್ತಿದ್ದೇನೆ.'

'ಅಯ್ಯಾ ಅಷ್ಟೊಂದು ಜಿಗುಪ್ಸೆಯೇ ನಿನ್ನ ಬದುಕು.' 'ಹೌದು ಸ್ವಾಮಿ. ಜೀವನ ಎಲ್ಲೆಲ್ಲೂ ಅಸಹ್ಯ ಹೊಲಸು ! ನಗರ, ಹಳ್ಳಿ. ಕಾಡು, ನೀರು—ಎಲ್ಲಿಗೆ ಹೋದರೂ ನೆಮ್ಮದಿ ಇಲ್ಲ. ಶಾಂತಿ ಇಲ್ಲ. ಬದುಕಿಯಾದರೂ ಪ್ರಯೋಜನವೇನು ಸ್ವಾಮಿ ?' ಎಂದು ತಾನು ಇದುವರೆವಿಗೂ ಕಂಡುಂಡ ಅನುಭವವನ್ನು ಆ ಸಂನ್ಯಾಸಿಗೆ ಹೇಳಿಕೊಂಡನು.

'ಹಾಗಾದರೆ ಆತ್ಮಹತ್ಯೆಯಿಂದ ನಿನಗೆ ನೆಮ್ಮದಿ ಸಿಕ್ಕುತ್ತದೆಯೇ ? ಶಾಂತಿ ದೊರಕುತ್ತದೆಯೇ? '

'ಸದ್ಯಕ್ಕೆ ಈ ಜಿಗುಪ್ಸಾ ಪ್ರಪಂಚದಿಂದ ಬಿಡುಗಡೆ ದೊರಕುತ್ತದೆ. ಅದೇ ನನಗೆ ಆನಂದವನ್ನುಂಟುಮಾಡುತ್ತದೆ.'

'ಆತ್ಮ ಹತ್ಯೆ ಮಹಾಪಾಪ. ಪ್ರಪಂಚದಲ್ಲಿ ಬದುಕಲಾರದ ಹೇಡಿಗಳು ದುರ್ಬಲ ಚಿತ್ತದಿಂದ ಕರ್ತವ್ಯ ಭ್ರಷ್ಟರಾಗಿ ಕೈಗೊಳ್ಳುವ ಸುಲಭ ಮಾರ್ಗವೇ ಆತ್ಮಹತ್ಯೆ ಎಂದು ತಿಳಿದಿದೆಯೊ?'

'ನಾನೂ ಒಬ್ಬ ವಿದ್ವಾಂಸ. ಓದುವ ಹುಚ್ಚು ಬಾಲ್ಯದಿಂದ ಬಂದಿದೆ. ಅನೇಕ ಶಾಸ್ತ್ರಗಳು, ಗ್ರಂಥಗಳನ್ನು ಓದಿದ್ದೇನೆ. ತಿಳಿದವರೊಂದಿಗೆ ಚರ್ಚೆ ನಡೆಸಿದ್ದೇನೆ, ಎಲ್ಲಾ ರೀತಿಯ ಜೀವನವನ್ನೂ ಕಂಡಿದ್ದೇನೆ. ಕೇಳಿದ್ದೇನೆ, ಅನುಭವಿಸಿದ್ದೇನೆ. ಎಲ್ಲಾ ಆದಮೇಲೆ ಈ ಅಂತ್ಯ ತೀರ್ಮಾನಕ್ಕೆ ಬಂದಿದ್ದೇನೆ.—ಇನ್ನು ಬದುಕಿ ನನಗೂ ಪ್ರಯೋಜನವಿಲ್ಲ, ಪ್ರಪಂಚಕ್ಕೂ ಪ್ರಯೋಜನ ವಿಲ್ಲ. ಈ ಅಪ್ರಯೋಜಕವಾದ ಬದುಕು ಕೊನೆಗಾಣುವುದರಿಂದ ಯಾವ ಪಾಪವೂ ಬರದು. ಆದುದರಿಂದ ಇನ್ನೂ ಒಳ್ಳೆಯದೇ ಆಗುವುದು.'

'ಹಾಗಾದರೆ ಇದರಿಂದ ಯಾರಿಗೂ ತೊಂದರೆಯಾಗದೆ ?'

'ಖಂಡಿತವಾಗಿಯೂ ಇಲ್ಲ. ಚೆನ್ನಾಗಿ ಯೋಚಿಸಿ ನೋಡಿದ್ದೇನೆ'

'ಅಯ್ಯಾ ವಿದ್ವಾಂಸ, ಚೆನ್ನಾಗಿ ಆಲೋಚಿಸಿ ನೋಡು. ಅನೇಕ ಯುಗಗಳ ಜನ್ಮಗಳ ಪುಣ್ಯದ ತಪಸ್ಸಿನ ಫಲದಿಂದ ಮಾನವ ಜನ್ಮ ಪ್ರಾಪ್ತಿ. ಅದನ್ನು ವ್ಯರ್ಥಮಾಡಬಾರದು. ನಿನಗೆ ಕಾಡಿನ ನಾಡಿನ ನೀರಿನ ಬದುಕು ಹೇಗೆ ಅಸ್ವಾಭಾವಿಕವಾಗಿ ಅಸಹ್ಯವಾಗಿ ಕಂಡಿತೋ ಹಾಗೆಯೇ ನಿನ್ನ ಬದುಕೂ ಅಸಹಜ ಅಸ್ವಾಭಾವಿಕವಾಗಿ ಕಾಣುವುದೆಂದು ತಿಳಿ. ಬದುಕು ಹೆಚ್ಚಾಗಿ ನಮ್ಮ ಆಲೋಚನೆಗಳು, ಭಾವನೆಗಳು, ದೃಷ್ಟಿಗಳನ್ನೇ ಅವಲಂಬಿಸಿದೆ. ನೀನು ಆತ್ಮಹತ್ಯೆ ಮಾಡಿಕೊಳ್ಳುವುದರಿಂದ ಇಡೀ ಸಮಾಜ ನಿನ್ನನ್ನು ದೂರುತ್ತದೆ. ಅಲ್ಲದೆ ನಿನ್ನ ಹೆಣ ಕೊಳೆತು ದುರ್ವಾಸನೆಯಿಂದ ಅನೇಕ ವ್ಯಕ್ತಿಗಳ ನಿತ್ಯ ಕರ್ಮಗಳಿಗೆ ಭಂಗ ಬರುತ್ತದೆ. ನಿನ್ನ ಆಲೋಚನೆಯ ಸರಣಿಯೇ ದೋಷದಿಂದ ಕೂಡಿರುವಾಗ ಮತ್ತೊಬ್ಬರನ್ನು ದೂರಿ ಪ್ರಯೋಜನವಾದರೂ ಏನು ?'

'ಸ್ವಾಮಿ ನಿಮ್ಮ ಮಾತಿನ ಸರಣಿಯೇ ಒಂದು ರೀತಿಯಾಗಿದೆ. ನಾನು ಬದುಕಿ ಪ್ರಯೋಜನವಿಲ್ಲ,ಸತ್ತೂ ಪ್ರಯೋಜನ ವಿಲ್ಲ. ಹಾಗಾದರೆ ಏನು ಮಾಡಲಿ. ಈ ಪ್ರಪಂಚಕ್ಕೆ ಹೇಗೋ ಬಂದುಬಿಟ್ಟಿದ್ದೇನೆ. ಇನ್ನು ಬಿಡುಗಡೆಯ ಮಾರ್ಗ ಯಾವುದು ? ಈ ನರಕದಿಂದ ಪಾರಾಗುವ ಒಂದು ಹಾದಿ ತೋರಿಸುವಿರಾ ? ನೆಮ್ಮದಿಯಿಂದ ಬಾಳುವ ಒಂದು ಜಾಗವನ್ನು ತೋರುವಿರಾ ?'

ಸನ್ಯಾಸಿ ಗಹಗಹಿಸಿ ನಕ್ಕುಬಿಟ್ಟನು. ವಿದ್ವಾಂಸನಿಗೆ ಚುಚ್ಚಿದಂತಾಯಿತು.

'ಏನು ಸ್ವಾಮಿ, ನನ್ನ ಬದುಕನ್ನು ಕಂಡರೆ ನಿಮಗೂ ಹಾಸ್ಯವೇ ?'

'ನನ್ನ ಮಾತಿರಲಿ. ಒಂದಿಷ್ಟು ಸರಿಯಾಗಿ ಚಿಂತಿಸಿದರೆ, ಒಳಗಣ್ಣು ತೆರೆದರೆ ನಿನ್ನ ಬದುಕನ್ನು ಕಂಡರೆ ನಿನಗೇ ನಗು ಬರದಿರದು.'

'ಅದು ಹೇಗೆ ಸ್ವಾಮಿ.'

'ಅಯ್ಯಾ ನಿನ್ನನ್ನು ಕಂಡರೆ ನನಗೆ ಮಹಾಭಾರತದ ಒಂದು ಪ್ರಸಂಗ ನೆನಪಿಗೆ ಬರುತ್ತದೆ. ಒಮ್ಮೆ ಭಗವಂತನು ದುರ್ಯೋಧನ ಧರ್ಮರಾಯ ಇಬ್ಬರನ್ನೂ ಕರೆದು, ಧರ್ಮರಾಯನನ್ನು ಕುರಿತು 'ಅಯ್ಯಾ ಧರ್ಮರಾಯ, ಜಗತ್ತಿನಲ್ಲಿ ಯಾರು ಯಾರು ಕೆಟ್ಟವರು ನೋಡಿ ಬಂದು ಹೇಳು' ಎಂದನು, ದುರ್ಯೋಧನನನ್ನು ಕುರಿತು 'ಅಯ್ಯಾ ದುರ್ಯೋಧನ, ಜಗತ್ತಿನಲ್ಲಿ ಒಳ್ಳೆಯ ವರು ಎಷ್ಟು ಮಂದಿ ಇದ್ದಾರೆ ಲೆಕ್ಕ ಹಾಕಿಕೊಂಡು ಬಾ' ಎಂದು ಹೇಳಿ ಕಳುಹಿಸಿದನು. ಇಬ್ಬರೂ ಪ್ರಪಂಚವನ್ನು ಮೂಲೆ ಮೂಲೆ ಸುತ್ತಿ ಬಂದರು. ಧರ್ಮರಾಯನು 'ಕೃಷ್ಣಪರಮಾತ್ಮ, ಜಗತ್ತಿನ ಎಲ್ಲಾ ಜನರನ್ನೂ ನಾನುಕಂಡೆ; ಒಬ್ಬರೂ ಕೆಟ್ಟವರು ನನ್ನ ಕಣ್ಣಿಗೆ ಬೀಳಲೇ ಇಲ್ಲ.' ಎಂದನು, ದುರ್ಯೋಧನನು 'ಭಗವಂತ,ಎಲ್ಲಾ ಸುತ್ತಿಬಂದೆ; ಜಗತ್ತಿನಲ್ಲಿ ಒಳ್ಳೆಯವನು ಎನ್ನುವ ಒಂದು ನರಪಿಳ್ಳೆಯನ್ನೂ ನೋಡಲಿಲ್ಲ.' ಎಂದನು. ಭಗವಂತ ಇಬ್ಬರ ಮಾತನ್ನೂ ಕೇಳಿ ನಕ್ಕನು. ಈ ಪ್ರಸಂಗದಿಂದಲೇ ನಾವು ಕಾಣಬಹುದು: ದುರ್ಯೋಧನನ ದೃಷ್ಟಿಯೇ ಕೆಟ್ಟದಾದುದರಿಂದ ಬರೀ ಕೆಟ್ಟದ್ದೇ ಜಗತ್ತಿನಲ್ಲಿ ಕಂಡಿತು. ಧರ್ಮರಾಯನ ದೃಷ್ಟಿಯು ಒಳ್ಳೆಯದಾದ್ದರಿಂದ ಜಗತ್ತೆಲ್ಲಾ ಒಳ್ಳೆಯದಾಗಿ ಕಂಡಿತು. ಆದ್ದರಿಂದ ಇದಕ್ಕೆಲ್ಲಾ ಮನಸ್ಸೇ ಕಾರಣವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಮನಸ್ಸೇ ಮನುಷ್ಯನ ಬಂಧನಕ್ಕೂ, ಬಿಡುಗಡೆಗೂ, ಪಾಪಕ್ಕೂ, ಪುಣ್ಯಕ್ಕೂ, ನರಕಕ್ಕೂ, ಸ್ವರ್ಗಕ್ಕೂ, ಸುಖಕ್ಕೂ ದುಃಖಕ್ಕೂ, ಪ್ರೀತಿಗೂ, ದ್ವೇಷಕ್ಕೂ ಕಾರಣವಾದುದು. ಮನಸ್ಸು ಅಶುದ್ಧವಾದರೆ, ಆನಂದ, ಅಶುದ್ಧವಾದರೆ ಬದುಕು ಜಿಗುಪ್ಸೆ ಯಾಗುತ್ತದೆ.'

'ನೀನು ಕಾಡಿನಲ್ಲಿರು, ನಾಡಿನಲ್ಲಿರು, ನೀರಿನಲ್ಲಿರು—ಎಲ್ಲೇ ಇರು. ಮನಸ್ಸು ಭಗವಂತನಲ್ಲಿ ಲೀನವಾದರೆ ಅದೇ ಸ್ವರ್ಗ, ಅದೇ ಬಾಳಲು ಯೋಗ್ಯ ಭೂಮಿ. ಈಗ ನೀನು ಮನಸ್ಸಿನ ಗುಲಾಮನಾಗಿ ಒದ್ದಾಡುತ್ತಿರುವುದರಿಂದ ಪೇಚಾಟ. ನಿನ್ನ ಮನಸ್ಸಿನ ಹಿಂದೆ 'ನಾನು' ಎಂಬುದು ಕುಳಿತಿರುವುದರಿಂದ ಒದ್ದಾಟ. ಜಗತ್ತಿನಲ್ಲಿ ನಿನ್ನದೇ ಶ್ರೇಷ್ಠವಾದ ಬದುಕೆಂದು ಭಾವಿಸಿರುವುದೇ ಈ ಹಾರಾಟ, ತೊಳಲಾಟ...........'

'ಹಾಗಾದರೆ ಈ ಮನಸ್ಸನ್ನು ಗೆಲ್ಲಲು ಮಾಡಬೇಕಾದುದೇನು ?'

'ಹೊರಗಿನ ಯಾವ ವಸ್ತುವಿನಿಂದಲೂ, ಶಕ್ತಿಯಿಂದಲೂ ಮನಸ್ಸನ್ನು ಗೆಲ್ಲಲು ಸಾಧ್ಯವಾಗದು. ಮನಸ್ಸು ಪರಮಾತ್ಮನ ಅಧೀನವಾಗಬೇಕು. ಮನಸ್ಸನ್ನು ಹಾಗೇ ಅಧೀನ ಮಾಡಲು ಮನಸ್ಸೇ ಸಾಧನೆಯ ವಸ್ತು. ಮೊದಲು ಮನಸ್ಸನ್ನು ಗೆಲ್ಲು.

ಅನಂತರ ಭಗವಂತನನ್ನೇ ಗೆಲ್ಲುವೆ, ಸ್ವರ್ಗವೂ ನಿನ್ನ ವಶವಾಗುವುದು. ನೀನು ಈಗ ಹೋಗು. ನಗರದಲ್ಲೇ ಸಾಧನೆ ಮಾಡು. ಜಾಗ ಮುಖ್ಯವಲ್ಲ. ನಡೆಸುವ ಜೀವನ. ಬಳಸುವ ಭಾವ, ನೋಡುವ ದೃಷ್ಟಿಯೇ ಮುಖ್ಯ. ಅದನ್ನು ಬದಲಿಸಿ ಬಾಳು: ಸುಖ ಸಿಕ್ಕೇಸಿಕ್ಕುತ್ತದೆ,'

'ಸ್ವಾಮಿ. ಈಗ ನನ್ನ ದೋಷ ಅರಿವಾಯಿತು. ಸತ್ಯ ಕಂಡಿತು, ನನ್ನನ್ನು ಉದ್ಧಾರ ಮಾಡಿದಿರಿ. ಬೆಳಕಿತ್ತು ನನ್ನನ್ನು ಉಳಿಸಿದಿರಿ, ನಾನು ನಿಮಗೆ ಅತ್ಯಂತ ಋಣಿ.'

'ತಕ್ಷಣ ಹೊರಡು, ಚೆನ್ನಾಗಿ ಬದುಕು. ಸತ್ಯಕ್ಕೆ ಚಿರಋಣಿಯಾಗು, ಭಗವಂತನಿಗೆ ಚಿರಋಣಿಯಾಗು, ದೇಶಕ್ಕೆ ಚಿರ ಋಣಿಯಾಗಿ ಬಾಳು. ನೀನು ನಿಂತ ನೆಲವೇ ಸಾಧನಾರಂಗವಾಗಿ ಸ್ವರ್ಗಸುಖ ಸಿಗಲಿ ಹೋಗಿ ಬಾ.'

ವಿದ್ವಾಂಸ ಬಗ್ಗಿ ದೀರ್ಘದಂಡ ನಮಸ್ಕಾರ ಮಾಡಿದನು. ಸಂನ್ಯಾಸಿಯಿಂದ ಆಶೀರ್ವಾದಪಡೆದು, ಸಂನ್ಯಾಸಿ ತೋರಿದ ಹೊಸದೃಷ್ಟಿಯ ಹಾದಿಯಲ್ಲಿ ನಡೆದು ನಗರದ ತನ್ನ ಮನೆ ಸೇರಿದನು. ಅಂದಿನಿಂದ ಎಲ್ಲಾ ಬದಲಿಸಿತು. ನಗರ ಕೃತಕವಾಗಿ ಕಾಣಲಿಲ್ಲ. ಭಗವಂತನ ಸೃಷ್ಟಿ ವಿಚಿತ್ರವಾಗಿ, ಅತ್ಯಾಶ್ಚರ್ಯಕರವಾಗಿ ಕಂಡಿತು. ನಗರದ ಕೃತಕ ಜೀವನದಲ್ಲೇ ಅವನ ಆನಂದದ ನೂತನ ಬದುಕಿನ ಚಿಲುಮೆ ಚಿಮ್ಮಿತು. ಸೃಷ್ಟಿ ಆನಂದ ಕೊಟ್ಟಿತು. ವಿದ್ವಾಂಸನು ಬಹಳ ಸುಖವಾಗಿ ಬಾಳಿದನು. ಸಂನ್ಯಾಸಿಗೆ ಕೃತಜ್ಞನಾಗಿದ್ದನು.

### ೧೩. ಮನಸ್ಸಿನಂತೆ ಮಹಾದೇವ ; ದೃಷ್ಟಿಯಂತೆ ಸೃಷ್ಟಿ

ಒಮ್ಮೆ ಒಬ್ಬ ರಾಜ ಸವಾರಿ ಹೊರಟನು, ಪರಿವಾರ ಹಿಂಬಾಲಿಸಿತ್ತು. ಬಹುದೂರ ಸವಾರಿ ಮಾಡಿದನು. ಬೇಸಿಗೆಯ ದಗೆ, ದಣಿವು ಹೆಚ್ಚಿತು, ಆಯಾಸಗೊಂಡನು, ನೀರಡಿಕೆ ಜಾಸ್ತಿಯಾಯಿತು. ಸ್ವಲ್ಪ ಹತ್ತಿರದಲ್ಲಿ ಹಚ್ಚ ಹಸುರಾದ ಒಂದು ತೋಟ ಕಂಡಿತು. ರಾಜ ತೋಟದ ಬಳಿ ಹೋಗಿ ಅದರ ಮುಂದೆ ನಿಂತನು. ಭವ್ಯವಾದ ಹಣ್ಣುಗಳು ಕಣ್ಣಿಗೆ ಬಿದ್ದವು. ತೋಟದ ಮಾಲೀಕನನ್ನು ಕರೆದು 'ದಾಹ ಹೆಚ್ಚು,ಹಣ್ಣನ್ನು ಕೊಡುತ್ತೀಯಾ' ಎಂದನು. 'ಪ್ರಭುಗಳು ದಯಮಾಡಿಸಬೇಕು, ತಮ್ಮ ಪಾದ ಧೂಳಿಯಿಂದ ನಾನು ಧನ್ಯನಾದೆನು, ದಯಮಾಡಿಸಬೇಕು' ಎಂದು ಸಡಗರದಿಂದ ರಾಜನನ್ನು ಸ್ವಾಗತಿಸಿ ತೋಟದೊಳಕ್ಕೆ ಹೋಗಿ ಎರಡು ದಾಳಿಂಬೆ ಹಣ್ಣುಗಳನ್ನು ಕಿತ್ತನು. ಅವು ಪರಿಪಕ್ವವಾಗಿದ್ದವು. ದಾಳಿಂಬೆ ಬೀಜಗಳನ್ನು ಬಿಡಿಸಿ ಹಿಂಡಿದನು. ಒಂದು ಲೋಟ ರಸ ಬಂದಿತು. ಹಣ್ಣಿನ ರಸ ಬಹು ಮಧುರವಾಗಿತ್ತು. ಹಿಂದೆಂದೂ ಅವನು ಅಂಥ ರಸದ ರುಚಿ ನೋಡಿರಲಿಲ್ಲ. ದೊರೆ ಕುಡಿದ ಅನಂತರ ತೋಟಗಾರನನ್ನು, 'ಕಂದಾಯ ಎಷ್ಟು' ಎಂದು ಕೇಳಿದ.

'ನಾಲ್ಕು ಹೊನ್ನು'

ದೊರೆ ಮಂತ್ರಿಯನ್ನು ಕರೆದು 'ಮಂತ್ರಿ, ನಾಲ್ಕು ಹೊನ್ನು ಈ ತೋಟಕ್ಕೆ ಅತಿ ಕಡಿಮೆ. ಕಂದಾಯವನ್ನು ಹೆಚ್ಚು ಮಾಡು'ಎಂದು ಆಜ್ಞೆಮಾಡಿದನು.

'ಅಪ್ಪಣೆ ಪ್ರಭು' ಎಂದ ಮಂತ್ರಿ.

ತೋಟಿಗ ತನ್ನ ಉಪಕಾರಕ್ಕೆ ದೊರೆ ಮಾಡಿದ ಅಪಕಾರ ಕಂಡು 'ಪ್ರಭು ಒಂದೇ ಒಂದು ಕ್ಷಣ ಬಂದೆ' ಎಂದವನೇ ಓಡಿದ ತೋಟಕ್ಕೆ. ಎರಡು ದಾಳಿಂಬೆ ಹಣ್ಣು ತಂದು ಅದೇ ಲೋಟಕ್ಕೆ ಹಿಂಡಿ 'ಸ್ವೀಕರಿಸಬೇಕು. ದರಿದ್ರನ ಮೇಲೆ ಕೃಪೆ ದೋರಬೇಕು'ಎಂದು ಪ್ರಾರ್ಥಿಸಿದನು.

ರಾಜ ಕುಡಿಯಲು ಲೋಟವನ್ನು ಬಾಯಿಗೆ ಇಟ್ಟುಕೊಂಡು ಒಂದು ಗುಟುಕು ಗುಟುಕಿಸಿ ಲೋಟವನ್ನು 'ಥೂತ್' ಎಂದು ಕೆಳಗಿಟ್ಟನು. ಮೊದಲಿನ ಮಾಧುರ್ಯವಿಲ್ಲ. ಸವಿಯಿಲ್ಲ, ಸಪ್ಪೆ, ಒಗರು. ರಾಜ ರೇಗಿ 'ಯಾವ ಗಿಡದ್ದು ?'

'ಅದೇ ಗಿಡದ್ದು'

ದೊರೆ ಮತ್ತೆ ಮತ್ತೆ ಪ್ರಶ್ನಿಸಿದನು. ತೋಟಗಾರ 'ಅದೇ ಗಿಡದ್ದು ಅದೇ ಕೊಂಬೆಯದು ಪ್ರಭು' ಎಂದನು. ರಾಜನಿಗೊಂದು ಸಮಸ್ಯೆಯಾಯಿತು. ಎಲ್ಲಾ ವಿದ್ವಾಂಸರನ್ನೂ ಕರೆಸಿ ಚರ್ಚಿಸಿದನು. 'ಮೊದಲ ಹಣ್ಣಿನ ರಸ ಸಿಹಿ, ಎರಡನೇ ಸಲ ಅದೇ ಹಣ್ಣಿನ ರಸ ಕಹಿ ಇದಕ್ಕೆ ಕಾರಣವೇನು?' ವಿದ್ವಾಂಸರು ತಲೆ ಕೆಡಿಸಿಕೊಂಡರು. ಶಾಸ್ತ್ರದ ಕಟ್ಟುಗಳನ್ನು ಬಿಚ್ಚಿ ದೂಳ್ಝಾಡಿದರು ಹಗಲಿರುಳು ತಿರುವಿ ಹಾಕಿದರೂ ಸೂಕ್ತವಾದ ಉತ್ತರ ದೊರೆಯಲಿಲ್ಲ. ದೊರೆಗೆ ಸಮಸ್ಯೆ ದಿನೇ ದಿನೇ ತಲೆ ತಿನ್ನತೊಡಗಿತು. ಕೊನೆಗೆ ಒಬ್ಬ ಸಾಧುವನ್ನು ಸಂಧಿಸಿದನು. ದೊರೆ ತನ್ನ ಅಳಲನ್ನು ಸಾಧುವಿನ ಮುಂದೆ ತೋಡಿಕೊಂಡನು. ಸಾಧು ಎಲ್ಲವನ್ನೂ ಕೇಳಿ ತಿಳಿದುಕೊಂಡು ಅನಂತರ 'ಎರಡನೆಯ ಸಲ ರಸವನ್ನು ಕುಡಿಯುವಾಗ ಯಾವುದಾದರೂ ಕೆಟ್ಟ ಯೋಚನೆಯನ್ನು ಮಾಡಿದೆಯಾ ?

'ಹೌದು, ಆ ತೋಟಕ್ಕೆ ಕಂದಾಯ ಹೆಚ್ಚು ಮಾಡುವ ಮನಸ್ಸು ಮಾಡಿದ್ದೆ'

'ಇಗೋ ನಿನ್ನ ಸಮಸ್ಯೆಗೆ ಉತ್ತರ ಇಲ್ಲಿದೆ. ಅದರ ಪರಿಣಾಮವೇ ಇದು. ದುಷ್ಟ ವಾಸನೆಯುಳ್ಳ ಮನಸ್ಸು ತನ್ನ ದುಷ್ಟ ಪ್ರಭಾವವನ್ನು ಹಣ್ಣಿನ ಮೇಲೆಯೂ ಉಂಟುಮಾಡಿದೆ. ಆದ್ದರಿಂದಲೇ ಹಣ್ಣಿನ ರಸ ಸಪ್ಪೆಯಾಯಿತು. ಕೆಟ್ಟಿತು.'

ಆಗ ದೊರೆಗೆ ಜ್ಞಾನೋದಯವಾಯಿತು. ಮನಸ್ಸಿನ ಮಹತ್ವದರಿವಾಯಿತು.

### ೧೪. ಯಾಗ ಎಂದರೇನು ? ಉತ್ತಮವಾದ ಯಾಗ ಯಾವುದು ?

ಒಬ್ಬ ಧರ್ಮಿಷ್ಟನಾದ ಶ್ರೀಮಂತ ಬ್ರಾಹ್ಮಣನಿದ್ದ. ಆತ ಯಜ್ಞಯಾಗಾದಿಗಳನ್ನು ಬಹಳವಾಗಿ ಮಾಡಿಬಿಟ್ಟ. ಹಣವೆಲ್ಲಾ ಖರ್ಚಾಗಿ ಹೋಯಿತು. ಬಡತನ ಕಾಲಊರಿತು. ಪ್ರಸಾದಕ್ಕೂ ಕಷ್ಟವಾಯಿತು. ಆಗ ಅವನ ಪತ್ನಿ ಹೇಳಿದಳು: ತಾವು ಬಹಳ ಯಾಗ ಮಾಡಿದ್ದೀರಿ. ಒಂದು ಯಾಗದ ಫಲವನ್ನು ಕೊಟ್ಟು ಹಣವನ್ನು ತೆಗೆದುಕೊಂಡು ಬಂದರೆ ನಾವು ಕೊಂಚ ಕಾಲ ಸುಖವಾಗಿ ಬಾಳಬಹುದು ಎಂದಳು. ಆಗ ಆ ಸಂಪ್ರದಾಯ ಇತ್ತು. ಆತ ವಿಚಾರ ಮಾಡಿದ: ನಾನು ಯಾಗದ ಫಲವನ್ನು ಕೊಡಬೇಕಾದರೆ, ಒಳ್ಳೆಯ ಗೃಹಸ್ಥನಿಗೆ,ಪುಣ್ಯ ಜೀವಿಗೆ ಕೊಡಬೇಕು, ಬೇರೆಯವರಿಗೆ ಕೊಡತಕ್ಕುದಲ್ಲ ಎನ್ನುವ ವಿಚಾರ ಮಾಡಿ, ಸುಮಾರು ೩೦ ಮೈಲಿ ದೂರ ಒಬ್ಬ ಯೋಗ್ಯ ಸಂಪನ್ನನಾದ ಸಾಹುಕಾರ ಗೃಹಸ್ಥ ಇರುವ ವಿಷಯವನ್ನು ಕೇಳಿ ಆತನಿಗೆ ಯಾಗದ ಫಲವನ್ನು ಕೊಡಬೇಕು ಎನ್ನುವ ಇಚ್ಛೆಯಿಂದ ನಡೆದುಕೊಂಡು ಹೋದ. ಅಲ್ಲಿಗೆ ಹೋದಮೇಲೆ ಸಾಯಂಕಾಲವಾಯಿತು. ಬಹಳ ಹಸಿದಿದ್ದರಿಂದ ಸ್ನಾನಮಾಡಿ ಪೂಜೆ ಮುಗಿಸಿಕೊಂಡು, ಪ್ರಸಾದ ಸ್ವೀಕರಿಸಬೇಕೆಂದು ತಂದ ಬುತ್ತಿಯನ್ನು ತೆಗೆದುಕೊಂಡು ಬಾವಿಯ ಹತ್ತಿರ ಹೋದ. ಅಲ್ಲಿ ಒಂದು ನಾಯಿ ಆಗತಾನೆ ಒಂದು ಮರಿಯನ್ನು ಹಾಕಿತ್ತು. ಅದಕ್ಕೆ ಬಹಳ ಹಸಿವಾದ್ದರಿಂದ ಬ್ರಾಹ್ಮಣನ ಹತ್ತಿರ ಬಂದು ನಿಂತಿತು. ಆಗ ಬ್ರಾಹ್ಮಣನು ಒಂದು ರೊಟ್ಟಿಯನ್ನು ಹಾಕಿದ; ತೃಪ್ತಿಯಾಗಲಿಲ್ಲ. ಮತ್ತೊಂದು ರೊಟ್ಟಿ ಹಾಕಿದ ; ಅದಕ್ಕೂ ಕೂಡ ತೃಪ್ತಿ ಹೊಂದಲಿಲ್ಲ. ಉಳಿದ ಮತ್ತೊಂದುರೊಟ್ಟಿಹಾಕಿ ತಾನು ನೀರು ಕುಡಿದು ಹೊರಟು ಬಂದ, ಆ ಸಾಹುಕಾರನ ಬಳಿ. ಆತ ವಿದ್ವಾಂಸರನ್ನು ಬರಮಾಡಿಕೊಂಡು ಈತ ಮಾಡಿರತಕ್ಕ ಯಾಗದಲ್ಲಿ ಉನ್ನತಫಲವನ್ನು ಕೊಡುವ ಯಾಗ ಯಾವುದೆಂದು ಪ್ರಶ್ನೆ ಮಾಡಿದ. ಅನೇಕ ವಿದ್ವಾಂಸರು ಉತ್ತರವನ್ನು ಹೇಳಿದರು. 'ಈತನು ಬಹಳ ಯಾಗವನ್ನು ಮಾಡಿದ್ದಾನೆ. ಈ ದಿವಸ ತಮ್ಮ ಬಳಿಗೆ ಬರುವ ಮುನ್ನ ಒಂದು ಮಹಾಯಾಗ ಮಾಡಿದ್ದಾನೆ. ಅದಕ್ಕೆ ಸರಿಯಾದದ್ದು ಮತ್ತೊಂದಿಲ್ಲ. ಯಾವ ಯಾಗವು ೩೦ ಮೈಲಿ ನಡೆದುಕೊಂಡು ಬಂದು ತನ್ನ ಆಯಾಸ ಹಸಿವು ಯಾವುದನ್ನು ಗಮನಕ್ಕೆ ತರದೆ, ಒಂದು ನಾಯಿಗೆ ಎಲ್ಲವನ್ನು ಕೊಟ್ಟು ಇವನನ್ನು ಹಸಿವೆಯಿಂದ ಇರಿಸಿದೆಯೋ ಅದೇ ಅತ್ಯಂತ ಶ್ರೇಷ್ಠವಾದ ಯಾಗವು.'

### ೧೫. ಆತ್ಮ ಎಂದರೆ ದೇಹವಲ್ಲ ಅಥವಾ ಅವಯವ ಸಮೂಹವಲ್ಲ, ಮನಸ್ಸೂ ಅಲ್ಲ, ಈ ಎಲ್ಲವುಗಳಲ್ಲಿಯೂ ಇರತಕ್ಕ ಚೈತನ್ಯ. ಅದಕ್ಕೆ ನಾಶವಿಲ್ಲ. ಆ ಆತ್ಮನನ್ನು ಕೊಲ್ಲಲು ಯಾರಿಗೂ ಸಾಧ್ಯವಿಲ್ಲ.

ಚಕ್ರವರ್ತಿ ಅಲೆಕ್ಸಾಂಡರನು ಬಹಳ ಕಾಲದ ಹಿಂದೆ ನಮ್ಮ ದೇಶಕ್ಕೆ ಬಂದ. ೨೫೦೦ ವರ್ಷಗಳ ಹಿಂದಿನ ಮಾತು. ಆತ ಬಹಳ ಭಾಗವನ್ನು ಜಯಿಸಿಬಿಟ್ಟ. ಇನ್ನೂ ಜಯಿಸಬೇಕೆಂದು ಮುಂದೆ ಮುಂದೆ ಹೋಗುತ್ತಾ ಇದ್ದ. ಒಂದು ದೃಶ್ಯ ಅವನ ಕಣ್ಣಿಗೆ ಬಿತ್ತು. ಒಂದು ದಿವಸ ಒಂದು ಕಾಡು, ಅವನು ಹೋಗುತ್ತಾ ಇದ್ದಾನೆ. ಸೈನ್ಯ ಅವನ ಹಿಂಬಾಲಿಸಿದೆ. ಅವನು ಕಮ್ಯಾಂಡರ್ ಉಡುಪನ್ನು ಹಾಕಿಕೊಂಡಿದ್ದನು. ಭಯಂಕರ ಸ್ವರೂಪ ಬಂದಿತ್ತು. ಎಲ್ಲ ಜನರು ಭಯಪಟ್ಟು ಓಡಿಹೋಗುತ್ತಾ ಇದ್ದರು. ಅವನ ಗಮನ ಮುಂದೆ ಹೋಯಿತು. ದೊಡ್ಡ ಒಂದು ಬಂಡೆ, ಅದರ ಕೆಳಭಾಗದಲ್ಲಿ ಒಂದು ಗವಿ. ಅಲ್ಲಿ ಒಬ್ಬ ಸಾಧು ಕುಳಿತುಕೊಂಡಿದ್ದ. ಈತ ಮುಂದೆ ಮುಂದೆ ಹೋಗುತ್ತಾ ಇದ್ದಾನೆ. ಸೈನ್ಯವು ಸಾಗುತ್ತಾ ಇದೆ. ಕೊಂಚವಾದರೂ ಭಯಪಡಲಿಲ್ಲ ಸಾಧು. ಗಂಭೀರವಾಗಿ ಕುಳಿತುಕೊಂಡಿದ್ದ. ಪ್ರಸನ್ನವಾದ ಮುಖಮುದ್ರೆ. ಹತ್ತಿರ ಹೋಗಿ ಮುಂದೆ ನಿಂತುಕೊಂಡ. ಅವನು ಭಯ ಪಡಲಿಲ್ಲ. ಓಡಿಹೋಗಲಿಲ್ಲ ಗಂಭೀರವಾಗಿ ಕುಳಿತುಕೊಂಡಿದ್ದ. ಚಕ್ರವರ್ತಿ ಅವನ್ನು ನೋಡಿದಾ! ನೋಡಿದಾ ಮನಸ್ಸು ಪರಿವರ್ತನೆಯಾಯಿತು. ನಮಸ್ಕಾರ ಮಾಡಿಬಿಟ್ಟ. 'ಯಾರಿಗೂ ತಲೆ ಬಾಗಿರಲಿಲ್ಲ ಸ್ವಾಮಿ, ತಾವು ದೊಡ್ಡವರು ಆ ಮಾತು ಒಪ್ಪಿಕೊಂಡಿದ್ದೇನೆ. ನನ್ನ ಪ್ರಾರ್ಥನೆ ಉಂಟು ತಾವು ನಡೆಸಿಕೊಡಬೇಕು' ಎಂದು ಕೇಳಿದ. 'ಏನಪ್ಪಾ ನಿನ್ನ ಪ್ರಾರ್ಥನೆ'.'ಏನು ಇಲ್ಲಾ ತಾವು ನಮ್ಮ ದೇಶಕ್ಕೆ ಬರಬೇಕು ಎಲ್ಲಾ ಅನುಕೂಲ ಮಾಡಿಕೊಡುತ್ತೇನೆ, ಅಲ್ಲಿತಾವು ಕೊಂಚಕಾಲ ಸುಖವಾಗಿ ಇರಬೇಕು' 'ನಾನು ಬರುವುದಿಲ್ಲ' ನಾನು ಯಾರು ಅನ್ನತಕ್ಕ ವಿಚಾರ ಗೊತ್ತೇನು'. 'ನನಗೆ ಗೊತ್ತಿಲ್ಲ' ನಾನು ಚಕ್ರವರ್ತಿ ಅಲೇಕ್ಸಾಂಡರ ಪ್ರಪಂಚವನ್ನು ಜಯಿಸಬೇಕೆಂದು ಸಂಕಲ್ಪ ಮಾಡಿಕೊಂಡಿದ್ದೇನೆ. ಇಂತಹ ಪ್ರಚಂಡ ಪರಾಕ್ರಮಿಯ ಮುಂದೆ ನಿಮ್ಮಂತ ಸಾಮಾನ್ಯವಾದ ಸಾಧು ನಾನು ಹೇಳಿದ ಮಾತು ಕೇಳದಿದ್ದರೆ ನಿಮ್ಮಗತಿ ಏನಾಗುತ್ತದೆ ಗೊತ್ತೇ'. 'ಗೊತ್ತಿಲ್ಲ'. 'ನಾನು ಕ್ರೂರವಾದ ಶಿಕ್ಷೆ ಮಾಡುತ್ತೇನೆ. ಅಂದರೆ ಅದೇ ಕೊನೆಯ ಶಿಕ್ಷೆ. ಅಂದರೆ ನಿಮ್ಮನ್ನು ಸಂಹಾರ ಮಾಡುತ್ತೇನೆ'. ಈ ಮಾತನ್ನು ಕೇಳಿ ಅವರು ಗಟ್ಟಿಯಾಗಿ

ನಕ್ಕುಬಿಟ್ಟರು. 'ಹುಚ್ಚಾ, ಹುಚ್ಚಾ ! ಸಾಧ್ಯವಿಲ್ಲ'ವೆಂದ 'ಏನು ಸ್ವಾಮಿ ಕೈಯಲ್ಲಿ ಹರಿತವಾದ ಕತ್ತಿ ಇದೆ. ನೂರಾರು ಮಂದಿ ಕೊಲೆ ಮಾಡತಕ್ಕ ಕತ್ತಿ. ನಿಮ್ಮ ಶರೀರ ಬೇರೆ ಕೃಶವಾಗಿದೆ, ಗೆಡ್ಡೆ ಗೆಣಸು ತಿಂದುಕೊಂಡು. ಕೊಲ್ಲುವುದು ಲೀಲಾಜಾಲವಾದ ಕಾರ್ಯ ತಾವು ಸಾಧ್ಯವಿಲ್ಲವೆಂದು ಅನ್ನುತ್ತಿರಲ್ಲ'. 'ಚಕ್ರವರ್ತಿ' ಮೊದಲೆ ಉತ್ತರ ಕೊಟ್ಟಿದ್ದೇನೆ'. ಒಂದು ಕತ್ತಿಯ ಪೆಟ್ಟಲ್ಲ ಹತ್ತು ಕತ್ತಿಯಪೆಟ್ಟಲ್ಲ ಸಾವಿರ ಕತ್ತಿಯ ಪೆಟ್ಟಾದರೂ ನನ್ನನ್ನು ಸಾಯಿಸುವುದು ಸಾಧ್ಯವಿಲ್ಲ'. 'ಏನು ಸ್ವಾಮಿ! ಒಗಟಿನ ಮಾತು, ಇಲ್ಲಯ್ಯಾ ನಿಜವಾದ ಮಾತು'. 'ಅಂದರೆ ನಿನ್ನ ತಿಳಿವಳಿಕೆಯೇ ಬೇರೆ ನನ್ನ ತಿಳುವಳಿಕೆಯೇ ಬೇರೆ. ನೀನು ತಿಳಿದುಕೊಂಡಿರುವದು ವ್ಯಕ್ತಿಯನ್ನು ಕೊಲ್ಲಬಲ್ಲೆನೆಂಬ ಅಹಂಕಾರ ನಿನಗೆ ಉಂಟಾದರೆ, ನಾನು ತಿಳಿದುಕೊಂಡಿರುವುದು ಕೊಲ್ಲಲಿಕ್ಕೆ ಸಾಧ್ಯವಿಲ್ಲವೆಂದು'. 'ಅಂದರೆ ಏನುಸ್ವಾಮಿ !' 'ನಿನ್ನ ತಿಳುವಳಿಕೆಯಲ್ಲಿ ಮನುಷ್ಯಯೆಂದರೆ ಎದುರಿಗೆ ಕಾಣುವ ದೇಹ. ಈ ಭೌತಿಕವಾದ ಸ್ವರೂಪ ಹೌದೋ', 'ಹೌದು ಸ್ವಾಮಿ !' 'ಆದ್ದರಿಂದ ನಿನ್ನ ಕಣ್ಣು ಮುಂದೆ ಕಾಣುವಂತಹ ಸನ್ಯಾಸಿಯ ದೇಹವನ್ನು ನಿನ್ನ ಕತ್ತಿಯಿಂದ ಕೊಲ್ಲುತ್ತೇನೆ ಅನ್ನುವ ಕೆಚ್ಚು ನಿನಗೆ. ಹೌದೊ', 'ಹೌದು ಸ್ವಾಮಿ!' 'ನನ್ನ ತಿಳುವಳಿಕೆ ಅದಲ್ಲ. ಮನುಷ್ಯ ಅಂದರೆ ದೇಹವು ಅಲ್ಲ, ಇಂದ್ರಿಯವು ಅಲ್ಲ, ಮನಸ್ಸು ಅಲ್ಲ. ದೇಹವನ್ನು ಮೀರಿ, ಇಂದ್ರಿಯಗಳನ್ನು ಮೀರಿ, ಮನಸ್ಸನ್ನು ಮೀರಿ, ಎಲ್ಲಕ್ಕೂ ಮೀರಿದ ಒಂದು ಶಕ್ತಿ ಇದೆ. ಅದಕ್ಕೆ ಆತ್ಮಾ ಆತ್ಮಾಯೆಂದು ಹೇಳುತ್ತಾ ಇದ್ದಾರೆ. ಆತ್ಮಾ ನಾಶವಾಗತಕ್ಕದ್ದಲ್ಲ'.

'ನಾನು ಆತ್ಮಭಾವನೆ ಉಳ್ಳವನು. ಇದರಿಂದ ಆತ್ಮರೂಪಿಯಾದ ನನ್ನನ್ನು ಕೊಲ್ಲಲು ಯಾರಿಗೂ ಸಾಧ್ಯವಿಲ್ಲ. ನೀನು ದೇಹರೂಪಿಯಾಗಿರತಕ್ಕಂಥ ಮನುಷ್ಯ ಎಂದು ತಿಳಿದುಕೊಂಡಿದ್ದೀಯೇ, ಕೊಲ್ಲಬಲ್ಲೆನೆಂಬ ಕೆಚ್ಚು ನಿನಗೆ. ಚಕ್ರವರ್ತಿ, ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ ಉತ್ತರ ಹೇಳು, ನಿನಗೆ ಪ್ರೀತಿಯ ಹೆಂಡತಿ 'ಇದ್ದಾಳೆಯೋ', ಇದ್ದಾಳೆ ಸ್ವಾಮಿ'. 'ನಿನಗೆ ಪ್ರೀತಿಯ ಮಗನಿದ್ದಾನೆಯೋ' 'ಇದ್ದಾನೆ ಸ್ವಾಮಿ', 'ಯಾವುದೋ ಒಂದು ಪ್ರಬಲವಾದ ಕಾಯಿಲೆ ಬರುತ್ತದೆ. ಇಬ್ಬರು ಒಂದು ದಿವಸ ಮರಣ ಹೊಂದುತ್ತಾರೆ. ಆವಾಗ ಏನು ಮಾಡುತ್ತೀಯ ನೀನು'. ಹೆಣಗಳ ಮುಂದೆ ಕುಳಿತುಕೊಂಡು ಬಹಳ ದುಃಖವನ್ನು ವ್ಯಕ್ತಮಾಡುತ್ತೀಯಾ ಹೌದೊ,ಅಲ್ಲವೋ'. 'ಹೌದು ಸ್ವಾಮಿ'; 'ನಾನು ಪ್ರಶ್ನೆ ಕೇಳುತ್ತೇನೆ ನಿನ್ನನ್ನು ಯಾವ ದೇಹವನ್ನು ಹೆಂಡತಿಯೆಂದು ನಂಬಿಕೊಂಡಿದ್ದೀಯೋ, ಯಾವ ದೇಹವನ್ನು ಮಗನೆಂದು ನಂಬಿಕೊಂಡಿದ್ದಿಯೋ, ಆ ದೇಹರೂಪಿಯಾದ ಹೆಂಡತಿ,ದೇಹರೂಪಿಯಾದ ಮಗ ಪ್ರತ್ಯಕ್ಷವಾಗಿ ಕಣ್ಣುಮುಂದೆ ಕಾಣುತ್ತಾ ಇರುವಾಗ ದುಃಖಪಡಲಿಕ್ಕೆ ಏನು ಕಾರಣ'. 'ಸ್ವಾಮಿ ಗೊತ್ತಾಗುವುದಿಲ್ಲ'.'ಚಕ್ರವರ್ತಿ ಆ ದೇಹ ನಿಜವಾದ ಹೆಂಡತಿಯಲ್ಲ. ಆ ದೇಹ ನಿಜವಾದ ಮಗನಲ್ಲ. ದೇಹಕ್ಕೆ ಸೊಬಗು ಸೌಂದರ್ಯ ಕೊಟ್ಟ ಹೆಂಡತಿಯೆನ್ನತಕ್ಕ ಮೋಹವೆಂಬ ಚೈತನ್ಯವೇ ಬೇರೆ. ಮಗನೆಂಬ ಮಮಕಾರವನ್ನು ಉಂಟುಮಾಡುವ ಚೈತನ್ಯವೇ ಬೇರೆ. ಎಲ್ಲಿಯವರೆಗೆ ದೇಹದಲ್ಲಿ ಚೈತನ್ಯ ಇರುವದೊ ಅಲ್ಲಿಯವರೆಗೆ ಕೂಡ ಸೊಬಗು, ಸೌಂದರ್ಯ, ಆಸ್ತಿ ಹೆಂಡತಿ ಮಕ್ಕಳು ಇತ್ಯಾದಿ.ಯಾವಾಗ ಆ ಚೈತನ್ಯ ಬಿಟ್ಟು ಹೋಗುತ್ತದೆಯೋ ಆಗ ಮೂರು ಕಾಸಿನ ಕಿಮುತ್ತು ಆ ದೇಹಕ್ಕೆ ಇಲ್ಲ'. ಈ ಮಾತನ್ನು ಕೇಳಿ ಅಲೆಕ್ಸಾಂಡರ್ ಚಕ್ರವರ್ತಿ ಸನ್ಯಾಸಿಗೆ ದೀರ್ಘದಂಡ ನಮಸ್ಕಾರ ಮಾಡಿದ.

## ೧೬. ಕಲಿ ಮಹಿಮೆ

ದ್ವಾಪರಯುಗ ಕೊನೆಯಾಗಿ ಕಲಿಯುಗ ಬರುವ ಕಾಲವಂತೆ. ಒಬ್ಬ ರೈತ ತನ್ನ ಜಮೀನನ್ನು ಇನ್ನೊಬ್ಬನಿಗೆ ಮಾರಿಬಿಟ್ಟ. ಆ ಜಮೀನು ಕೊಂಡ ರೈತನು ಹೊಲ ಉಳುತ್ತಿದ್ದ. ಆಗ ಆತನಿಗೆ ದ್ರವ್ಯದ ರಾಶಿ ಸಿಕ್ಕಿತು. ಆಗ ಆತ ಆ ದುಡ್ಡನ್ನು ನೋಡಿ, ತಾನು ಈ ಜಮೀನನ್ನು ಮಾತ್ರ ಕೊಂಡಿದ್ದೇನೆ ; ಇದರಲ್ಲಿರುವ ನಿಧಿನಿಕ್ಷೇಪವನ್ನಲ್ಲ, ಎಂದುಕೊಂಡು ತನಗೆ ಜಮೀನು ಕೊಟ್ಟ ರೈತನ ಹತ್ತಿರ ಹೋಗಿ, 'ಅಯ್ಯಾ ! ಬಾ, ನಿನ್ನ ಜಮೀನಿನಲ್ಲಿ ದುಡ್ಡಿದೆ. ಅದನ್ನು ತೆಗೆದುಕೊಂಡು ಹೋಗು' ಎಂದನು. ಆಗ ಆ ಜಮೀನು ಮಾರಿದವನು–'ಅಯ್ಯಾ ! ಹೊಲವನ್ನು ನಿನಗೆ ಮಾರಿದ ಮೇಲೆ ಅದರಲ್ಲಿರುವುದೆಲ್ಲಾ ನಿನ್ನದೇ ಆಗಿದೆ. ನನ್ನದೇನೂ ಅಲ್ಲಿ ಉಳಿದಿಲ್ಲ' ಎಂದನು. ಈ ಕಾರಣಕ್ಕಾಗಿ ಅವರಿಬ್ಬರೂ ನ್ಯಾಯಾಧೀಶನ ಬಳಿ ಹೋದರು. ನ್ಯಾಯಾಧೀಶ, 'ಅಯ್ಯಾ, ನೀವಿಬ್ಬರೂ ಇನ್ನು ಎಂಟುದಿನ ಬಿಟ್ಟು ಬನ್ನಿ. ನಿಮ್ಮ ವ್ಯಾಜ್ಯವನ್ನು ತೀರ್ಮಾನಿಸುತ್ತೇನೆ', ಎಂದನು. ಅಷ್ಟರಲ್ಲಿ ಕಲಿಯುಗ ಪ್ರಾರಂಭವಾಗಿಬಿಟ್ಟಿತಂತೆ. ಆಗ ಹಣದ ವಿಚಾರವಾಗಿ ಅವರಿಬ್ಬರಿಗೂ ಕಚ್ಚಾಟ ಪ್ರಾರಂಭವಾಯಿತು. ಮೊದಲಿನ ಅವರ ಸದ್ಭಾವನೆ ಪೂರ್ಣ ಮಾಯವಾಗಿ ಹೋಗಿಬಿಟ್ಟಿತು. ನನ್ನದು ನನ್ನದು ಎಂಬುದಾಗಿ ಇಬ್ಬರೂ ಹೊಡೆದಾಟವನ್ನೇ ಪ್ರಾರಂಭಿಸಿದರು.

## ೧೭. ಬಿಡಬೇಕಾದ್ದನ್ನು ಬಿಡುವುದೇ ವೈರಾಗ್ಯ

ಒಬ್ಬ ಅರಸನಿದ್ದನು. ಅವನು ಮಹಾ ಭೋಗಜೀವಿ. ಹೆಂಡತಿ ಸ್ಫುರದ್ರೂಪಿ. ಅವಳ ಸಹವಾಸದಲ್ಲಿ ಕಾಲಕಳೆಯುತ್ತಾ ರಾಜ್ಯದ ಚಿಂತೆಯನ್ನು ಮರೆತುಬಿಟ್ಟ. ಕೊನೆಗೆ ಹೆಂಡತಿಯು ತನ್ನ ಗಂಡನಿಗೆ ವೈರಾಗ್ಯ ಮಾರ್ಗ ಬೋಧಿಸಿದಳು. ಅರಸನಿಗೆ ವೈರಾಗ್ಯ ಬಂತು. ರಾಜ್ಯ, ಹೆಂಡತಿ, ಎಲ್ಲವನ್ನೂ ತ್ಯಜಿಸಿ ಕಾಡಿಗೆ ಹೋಗಿ ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ಒಂದು ಕುಟೀರಕಟ್ಟಿ

ಕೊಂಡು ಜೀವಿಸಹತ್ತಿದನು. ಕುಟೀರದಲ್ಲಿ ಇವನ ಗಡ್ಡೆಗೆಣಸುಗಳನ್ನು ಇಲಿಗಳು ದಿನಾಲು ಬಂದು ತಿನ್ನತೊಡಗಿದುವು. ಆ ಇಲಿಗಳ ಕಾಟ ತಡೆಯಲಾರದೆ ಒಂದು ಬೆಕ್ಕನ್ನು ಸಾಕಿದನು. ಬೆಕ್ಕಿಗೆ ಹಾಲು ಬೇಕಲ್ಲವೆ ? ಹಾಲಿಗಾಗಿ ಒಂದು ಹಸುವನ್ನು ಕೊಂಡು ಕೊಂಡು ಬಂದನು. ಹಸು ತಂದ ಮೇಲೆ ಹಸುವಿನ ಆರೈಕೆಗೆ ಜನಬೇಕಲ್ಲವೆ ? ಅದಕ್ಕಾಗಿ ಒಬ್ಬ ಆಳನ್ನು ಇಟ್ಟುಕೊಂಡ. ಆ ಆಳಿನ ಸಂಸಾರಕ್ಕೊಂದು ಮನೆ, ಅವನ ಹೆಂಡತಿ ಮಕ್ಕಳಿಗೆ ಅನ್ನ ಬಟ್ಟೆಗಳನ್ನು ಒದಗಿಸಬೇಕಾಯಿತು. ಅದಕ್ಕಾಗಿ ಸ್ವಲ್ಪ ಭೂಮಿಯನ್ನೂ, ಉಳುವುದಕ್ಕೆ ಎರಡೆತ್ತು ಮಾಡಿಕೊಟ್ಟ. ಹೊಲವನ್ನು ಉತ್ತು ಬಿತ್ತಿ ಬೆಳೆ ತೆಗೆಯತೊಡಗಿದಾಗ ಈತನ ಹೆಂಡತಿ ರಾಜಭಟ ವೇಷ ಧರಿಸಿಬಂದು, 'ಅಯ್ಯಾ ! ಈ ಭೂಮಿ ಸರಕಾರದ್ದು, ಯಾರನ್ನು ಕೇಳಿ ಈ ಭೂಮಿಯನ್ನು ಉತ್ತು ಬಿತ್ತಿ ಬೆಳೆ ತೆಗೆದಿದ್ದೀಯೆ? ನಿನಗೆ ದಂಡ ಹಾಕುತ್ತೇನೆ' ಎಂದು ದಂಡಹಾಕಿದಳು. ಭೂಮಿಗೆ ಕಂದಾಯ ಹಾಕಿದಳು. ಆಗ ಆ ರಾಜನಿಗೆ ಮೊದಲಿನ ಸಂಸಾರಕ್ಕಿಂತ ಈ ಸಂಸಾರ ಸಾಕುಬೇಕಾಯಿತು. ಆಗ ರಾಜಭಟವೇಷದಿಂದ ಬಂದಿದ್ದ ಹೆಂಡತಿ 'ನೀವು ಈ ಅರಣ್ಯದಲ್ಲಿರಲು ಕಾರಣವೇನು'? ಎಂದಳು. ರಾಜನು 'ಸಂಸಾರ ಸಾಕಾಗಿ ವೈರಾಗ್ಯಕ್ಕೆ ಮನಸ್ಸುಮಾಡಿ ಈ ಅರಣ್ಯದಲ್ಲಿದ್ದೇನೆ.' ಎಂದನು. 'ಅಯ್ಯೊ! ಇದೇನು ನಿಮ್ಮ ವೈರಾಗ್ಯ? ಅನ್ನಉಣ್ಣುವುದು ಬಿಟ್ಟಿರಿ; ಗೆಡ್ಡೆ ಗೆಣಸುಗಳನ್ನು ತಿನ್ನತೊಡಗಿದಿರಿ. ಆ ಗಡ್ಡೆ ಗೆಣಸು ತಿನ್ನುವ ಇಲಿಗಳ ಕಾಟಕ್ಕೆ ಬೆಕ್ಕು ಸಾಕಿದಿರಿ. ಬೆಕ್ಕಿನ ಹಾಲಿಗೆ ಹಸು, ಹಸುವಿಗೆ ರಕ್ಷಕ, ಅವನ ಜೀವನಕ್ಕೆ ಹೊಲಗದ್ದೆ, ಮನೆ, ಮಠ–ಇಷ್ಟೆಲ್ಲಾ ದಂದುಗವನ್ನು ಇಲ್ಲಿಯೂ ಇಟ್ಟುಕೊಂಡಿದ್ದೀರಿ. ಇದು ನಿಮ್ಮ ಮೊದಲಿನ ಸಂಸಾರದಂತೆಯೇ ಬೆಳೆದು ಬಿಟ್ಟಿದೆ; ಇನ್ನೂ ಬೆಳೆಯುತ್ತದೆ, ಎಂದು ತನ್ನ ರೂಪವನ್ನು ಪ್ರಕಟಿಸಿ 'ಬಿಡುವುದನ್ನು ಬಿಟ್ಟು ಕಟ್ಟಿಕೊಳ್ಳುವುದನ್ನು ಕಟ್ಟಿಕೊಂಡು ಜೀವನ ಸಾಗಿಸುವುದರಲ್ಲಿಯೇ ವೈರಾಗ್ಯವಿದೆ ನಡೆ, ಎಂದು ಮನೆಗೆ ಕರೆದೊಯ್ದಳಂತೆ. ರಾಜನಿಗೂ ಅಷ್ಟೇ ಸಾಕಾಗಿತ್ತು. ಅವನು ಮೊದಲಿನಂತೆ ಕರ್ತವ್ಯದಲ್ಲಿ ನಿರತನಾದ.

### ೧೮. ಭಕ್ತಿಜೀವನಕ್ಕೆ ಓದು ಮುಖ್ಯವಲ್ಲ

ಒಮ್ಮೆ ನಾರದರು ಪರಮೇಶ್ವರನ ಹತ್ತಿರ ಹೋಗಿ 'ದೇವಾ ಶ್ರೇಷ್ಠ ಭಕ್ತನಾರು' ಎಂದು ಪ್ರಶ್ನಿಸಿದ. ಆಗ ಪರಮೇಶ್ವರನು 'ಅಯ್ಯಾ ಭೂಲೋಕದಲ್ಲಿ ಒಂದು ಹಳ್ಳಿಯಿದೆ. ಅಲ್ಲಿ ಒಬ್ಬ ವ್ಯವಸಾಯಗಾರನಿದ್ದಾನೆ. ಅವನೇ ಸದ್ಯಕ್ಕೆ ನನ್ನ ಶ್ರೇಷ್ಠ ಭಕ್ತ' ಎಂದನು. ನಾರದ ತನ್ನನ್ನು ದೇವನು ಶ್ರೇಷ್ಠಭಕ್ತನೆಂದು ಹೇಳುತ್ತಾನೆಂದು ತಿಳಿದುಕೊಂಡಿದ್ದ. ದೇವನ ಮಾತಿನಂತೆ ಭೂಲೋಕದ ಆ ಹಳ್ಳಿಗೆ ನಾರದನು ಬಂದ. ಭೂಲೋಕದ ಆ ಭಕ್ತನು ಪ್ರತಿದಿನ ಬೆಳಿಗ್ಗೆ ನಾಲ್ಕುವರೆ ಘಂಟೆ ಸುಮಾರಿಗೆ ಏಳುತ್ತಿದ್ದ. ಐದು ನಿಮಿಷ ಧ್ಯಾನ ಮಾಡಿ ತನ್ನ ಕೆಲಸದಲ್ಲಿ ತೊಡಗಿ, ೧೧ ಘಂಟೆಯವರೆಗೆ ಅವಿಚ್ಛಿನ್ನವಾಗಿ ದುಡಿದು, ಮನೆಗೆ ಬಂದು ಸ್ನಾನ ಮಾಡಿ ಸ್ವಲ್ಪ ಹೊತ್ತು ಧ್ಯಾನ ಶಿವಪೂಜೆಯಲ್ಲಿ ಕಾಲ ಕಳೆದು ಊಟ ಮಾಡಿ ಒಂದು ಘಂಟೆ ವಿಶ್ರಾಂತಿ ಪಡೆದು ಪುನಃ ಸಾಯಂಕಾಲ ೬ ಘಂಟೆಯ ವರೆಗೆ ಕೆಲಸ ಮಾಡುತ್ತಿದ್ದ. ಆ ಮೇಲೆ ಮನೆಗೆ ಬಂದು, ಮುಖಮಾರ್ಜನೆ ಮಾಡಿ ಸ್ವಲ್ಪ ಹೊತ್ತು ಧ್ಯಾನ ಮಾಡುತ್ತಿದ್ದ. ಪುನಃ ಊಟ ಮಾಡಿ ನಿದ್ರೆ ಮಾಡುತ್ತಿದ್ದ. ಬೆಳಿಗ್ಗೆ ಯಥಾಪ್ರಕಾರ ಕ್ರಿಯಾಮಗ್ನನಾಗುತ್ತಿದ್ದ. ನಾರದನು ಈತನನ್ನು ನೋಡಿ ಶಿವನ ಹತ್ತಿರ ಬಂದು 'ಸ್ವಾಮಿ ಭೂಲೋಕದ ಆ ವ್ಯವಸಾಯಗಾರನೆಂತಹ ಭಕ್ತ? ಅವನಿಗೆ ಓದು ಬರಹವಿಲ್ಲ. ಪುರಾಣಾಗಮವಿಲ್ಲ. ಪೂಜಾ ವಿಧಾನಗಳೇ ಗೊತ್ತಿಲ್ಲ. ಅವಿದ್ಯಾವಂತನಾದ ಅವನು ಹೇಗೆ ಶ್ರೇಷ್ಠ ಭಕ್ತನಾದಾನು?' ಎಂದನು. ಆಗ ಶಿವನು 'ಅಯ್ಯಾ! ನಾರದ, ಅವನಿಗೀಗ ೮೦ ವರ್ಷ ವಯಸ್ಸು. ತನ್ನ ಆಯುಷ್ಯದಲ್ಲಿ ಎಂದೂ ಯಾರಿಗೂ ಅನ್ಯಾಯ ಮಾಡಿಲ್ಲ. ಕೆಟ್ಟದ್ದೆಂದು ಯಾವು ಯಾವುದನ್ನು ಪಟ್ಟಿ ಮಾಡಬಹುದೋ ಅವೊಂದೂ ಅವನಲ್ಲಿಲ್ಲ. ಅವನು ಯಾರ ಅವಲಂಬನವನ್ನೂ ಮಾಡದೆ ಸ್ವತಃ ಕಷ್ಟ ಪಟ್ಟು ದುಡಿದು ಸಿಕ್ಕಿದ ಪ್ರಸಾದವನ್ನು ತೃಪ್ತಿಯಿಂದ ಉಂಡು ಸುಖವಾಗಿದ್ದಾನೆ. ದೇವರನ್ನು ಮೂರುಹೊತ್ತು ಸ್ಮರಿಸುತ್ತಾನೆ. ಇಂಥವನನ್ನೇ ನಾನು ಅತ್ಯಂತ ಶ್ರೇಷ್ಠ ಭಕ್ತನೆಂದು ಕರೆಯುತ್ತೇನೆ. ಅವನು ನನಗೆ ಬಹಳ ಸಮೀಪದವನು' ಎಂದನು. ನಾರದ ನಾಚಿ ಸುಮ್ಮನಾದನಂತೆ.

### ೧೯. ಗುಡುಗಿದ ಮೇಲೆ ಮಳೆ ಬರುವುದು ಸಹಜ

ಸಂಸಾರ ಧರ್ಮದಲ್ಲಿ ಗಂಡ ಹೆಂಡರಲ್ಲಿ ಪರಸ್ಪರ ತಾಳ್ಮೆ ಇರಬೇಕು. ಒಬ್ಬರ ಅವಗುಣವನ್ನು ಇನ್ನೊಬ್ಬರು ತಿದ್ದಿ ಸುಂದರ ಸಂಸಾರವನ್ನಾಗಿ ಮಾಡಿಕೊಳ್ಳಬೇಕು. ಆಗಲೇ ನೆಮ್ಮದಿ, ಸುಖ. ಗ್ರೀಸ್ ದೇಶದ ತತ್ತ್ವಜ್ಞಾನಿ 'ಸಾಕ್ರಟೀಸ್' ಸಂಸಾರಿ. ಸಾಕ್ರಟೀಸ್‌ನಲ್ಲಿಗೆ ದಿನಾಲು ಅನೇಕ ಜನ ಜಿಜ್ಞಾಸುಗಳು ಬರುತ್ತಿದ್ದರು. ಹೆಂಡತಿಗೆ ಇದು ಆಗುತ್ತಿರಲಿಲ್ಲ. ತನ್ನ ಗಂಡ ನನ್ನನ್ನು ನಿರ್ಲಕ್ಷಿಸಿ ಬಂದ ಜನರೊಡನೆ ಅನೇಕ ಘಂಟೆಗಳಕಾಲ ಹೀಗೆ ಕಾಲಕಳೆಯುತ್ತಿದ್ದಾನಲ್ಲ! ಎಂದು ಒಳಗೆ ಗುಡುಗುಡುಗುಡುಗುತ್ತಲೇ ಇದ್ದಳು. ಸಾಕ್ರಟೀಸನಿಗೆ ತನ್ನ ಹೆಂಡತಿಯ ಗೊಣಗುವಿಕೆ ಅರ್ಥವಾಗಿತ್ತು. ಇನ್ನು ಈ ಜನರು ಮನೆಗೆ ಬರದಂತೆಯೇ ಮಾಡಬೇಕೆಂದುಕೊಂಡಳು. ಬಂದ ಜಿಜ್ಞಾಸುಗಳು ಸಾಕ್ರಟೀಸನೊಡನೆ ಮಾತನಾಡಿ ಚರ್ಚೆಮುಗಿಸಿ ಹೊರಹೊರಟರು. ಅವರನ್ನು

ಕಳಿಸಲು ಸಾಕ್ರಟೀಸನೂ ಹೊರಗೆ ಬಂದನು. ಆಗ ಹೆಂಡತಿ ಉಪ್ಪರಿಗೆಯ ಮೇಲೆ ನಿಂತು ಅವರೆಲ್ಲರ ಮೇಲೆ ದಬದಬನೆ ನೀರನ್ನು ಸುರಿದಳು. ಬಟ್ಟೆ ತೊಯ್ಸಿಕೊಂಡ ಆ ಜನ ಜಿಗುಪ್ಸೆಗೊಳಗಾದರು. ಆಗ ಸಾಕ್ರಟೀಸ್ ನಗುತ್ತ 'ಇದುವರೆಗೆ ಗುಡುಗುತ್ತಿದ್ದ ಆಕಾಶ, ಈಗ ಮಳೆ ಸುರಿಸಿತು. ಗುಡುಗಿದ ಮೇಲೆ ಮಳೆ ಬರುವುದು ಸಹಜ. ಇದಕ್ಕೇಕೆ ಅಂಜಬೇಕು' ಎಂದು ಅವರನ್ನು ಸಮಾಧಾನಪಡಿಸಿ ಕಳುಹಿಸಿಕೊಟ್ಟ. ಇಂಥ ಸಮಯದಲ್ಲಿಯೂ ಅವನು ತೋರಿಸಿದ ತಾಳ್ಮೆ ಶ್ಲಾಘ್ಯ.

### ೨೦. ಬರುವಾಗ ಬರಿಕೈ ಹೋಗುವಾಗ ಬರಿಕೈ

ಒಬ್ಬ ಯವನ ದೊರೆಯಿದ್ದ. ಅವನು ಬೇಕಾದಷ್ಟು ರಾಜ್ಯಕೋಶಗಳನ್ನು ಬೆಳಸಿದ್ದ. ಅವನಿಗೆ ಮುಪ್ಪುಬಂತು. ಸಾಯುವ ಕಾಲವು ಸಮೀಪಿಸಿತು. ಸಾಯುವ ಕಾಲದಲ್ಲಿ ತನ್ನ ಸೇವಕರು ಬಂಧು ಬಳಗದವರಿಗೆ 'ನಾನು ಸತ್ತಾಗ ಹೊತ್ತು ಕೊಂಡು ಹೋಗುತ್ತೀರಿ. ಆಗ ನನ್ನ ಎರಡೂ ಕೈಗಳನ್ನೂ ಸಿದಿಕಿಯ ಕೆಳಗೆ ಜೋಲಾಡುವಂತೆ ಮಾಡಿ ಹೊತ್ತುಕೊಂಡುಹೋಗಿರಿ' ಎಂದ. ಅವರು 'ಹಾಗೇಕೆ ಮಾಡಬೇಕು'? ಎಂದು ಪ್ರಶ್ನಿಸಿದರು, ಆಗ ಆ ರಾಜನು 'ನಾನು ಜಗತ್ತಿಗೆ ಬೋಧೆ ಮಾಡುವುದಿದೆ.' 'ನೀವು ಮಾಡುವ ಬೊಧೆ ಯಾವುದು? ಜೀವಂತವಾಗಿರುವಾಗ ಮಾಡದಿರುವ ಬೋಧೆ ಸತ್ತಾಗ ಎಂತಹುದು' ಎಂದರು. ಅದಕ್ಕವನು 'ಅಯ್ಯಾ, ನಾನು ಬರುವಾಗ ಬರಿಗೈಯಿಂದ ಬಂದೆ. ಇಲ್ಲಿಗೆ ಬಂದು ವಿದ್ಯಾವಂತನಾದೆ, ಶಕ್ತಿಸಂಪನ್ನನಾದೆ. ರಾಜ್ಯಕಟ್ಟಿದೆ. ಈ ಕೈಗಳು ಅನೇಕ ಪಾಪಗಳನ್ನೂ ಮಾಡಿದವು. ಹಲವಾರು ಜನಗಳನ್ನು ಸಂಹರಿಸಿದವು. ಏನೇನೊ ಪಾಪ ಮಾಡಿದವು. ಇಷ್ಟೆಲ್ಲ ಮಾಡಿ ಸಂಗ್ರಹಿಸಿದ ಒಂದು ಬಿಡಿ ಕಾಸನ್ನೂ ಈ ಕೈ ಹೋಗುವಾಗ ಹಿಡಿಯಲಿಲ್ಲ. ಈಗ ಪುನಃ ಬರಿಗೈಯಿಂದಲೇ ಹೋಗುತ್ತಿವೆ'. ಹೀಗೆ ಲೌಕಿಕ ಭೋಗಭಾಗ್ಯಗಳು ಕೆಲವು ದಿನವಿರುತ್ತವೆ. ಕೊನೆಗೆ ಅವೆಲ್ಲವೂ ಇವನನ್ನು ಹೊರದೂಡುತ್ತವೆ. ಬರುವಾಗ ಬರಿಗೈ ಹೋಗುವಾಗ ಬರಿಗೈ. ಮಧ್ಯಕಾಲದಲ್ಲಿ ನಮಗೆ ಭೋಗಭಾಗ್ಯಗಳ ಗಳಿಕೆ ಬಳಕೆಗಳ ಅರಿವಾಗಬೇಕು. ಆ ಅರಿವಾಗದಿದ್ದರೆ ಜೀವನವೆಲ್ಲಾ ವ್ಯರ್ಥ.

### ೨೧. 'ನಿಮಗೆ ಆಸೆಯೆಂಬ ಕಜ್ಜಿ ಹತ್ತಿದೆ'

ಒಬ್ಬ ರಾಜನಿದ್ದ. ಅವನಿಗೆ ಅನೇಕ ಜನ ಸೇವಕರಿದ್ದರು. ಬಟ್ಟೆ ತೊಡಿಸಲು ಒಬ್ಬ ಸೇವಕ. ಸ್ನಾನ ಮಾಡಿಸಲು ಇನ್ನೊಬ್ಬ. ಊಟಕ್ಕೆ ಬಡಿಸಲು ಇನ್ನೊಬ್ಬ. ಹಾಸಿ ಹೊದಿಸಲು ಅಡಿಕೆ ಎಲೆಯ ಉಗುಳು ಹಿಡಿಯುವುದಕ್ಕೆ ಒಬ್ಬೊಬ್ಬ...... ಇತ್ಯಾದಿ ಒಂದೊಂದು ಕೆಲಸಕ್ಕೂ ಒಬ್ಬೊಬ್ಬ ಸೇವಕನಂತೆ ಅನೇಕ ಜನ ಸೇವಕರಿಂದ ಸೇವೆ ಮಾಡಿಸಿಕೊಳ್ಳುತ್ತ ಅದನ್ನೇ ಸುಖವೆಂದು ಭಾವಿಸಿಕೊಂಡಿದ್ದ. ಅರಸನು ಒಮ್ಮೆ ಒಬ್ಬ ಬಡ ರೈತನನ್ನು ಕಂಡು 'ಅಯ್ಯಾ ನಿನ್ನನ್ನು ನೋಡಿದರೆ ನನಗೇಕೋ ಕಳವಳ, ನಿನ್ನ ಸೇವೆಗೆಂದು ಯಾರೂ ಇಲ್ಲ. ನನ್ನನ್ನು ನೋಡಿಕೊಂಡು ನಿನ್ನನ್ನು ನೋಡಿದರೆ ಅತೀವ ದುಃಖವಾಗುತ್ತದೆ' ಎಂದನು. ಆಗ ಆ ಬಡ ರೈತನು 'ಸ್ವಾಮಿ' ನಾನು ನಿಮ್ಮ ಈ ಮಾತನ್ನು ಒಪ್ಪುವುದಿಲ್ಲ. ಮೈಗೆ ಕಜ್ಜಿಯನ್ನು ಹತ್ತಿಸಿಕೊಂಡು ಆ ಕಜ್ಜಿಯನ್ನು ತುರಿಸಲಿಕ್ಕೆ ಎರಡಾಳುಗಳನ್ನು ಇಟ್ಟು ತುರಿಸಿಕೊಳ್ಳುತ್ತಾ ಸುಖವಾಗಿದ್ದೇನೆಂದರೆ ಹೇಗೆ ಒಪ್ಪಲಿಕ್ಕಾದೀತು. ಕಜ್ಜಿಯನ್ನೇ ಹತ್ತಿಸಿಕೊಳ್ಳದೆ ತುರಿಸಿಕೊಳ್ಳದೆ ಇರುವವನು ಸುಖಿಯೋ ? ಕಜ್ಜಿಯನ್ನು ಹತ್ತಿಸಿಕೊಂಡು ತುರಿಸಿಕೊಳ್ಳುವವನು ಸುಖಿಯೋ ? ನೀವೇ ವಿಚಾರಿಸಿ. ನಿಮಗೆ ಆಸೆಯೆಂಬ ಕಜ್ಜಿಗಳು ವಿಶೇಷ. ನಿಮ್ಮ ಅವಶ್ಯಕತೆಗಳನ್ನು ನೀವೆ ಪೂರೈಸಿಕೊಳ್ಳಲು ಶಕ್ಯವಿಲ್ಲದ ನಿಮ್ಮ ಸುಖ ಸುಖವೆಂದು ನಾನು ಭಾವಿಸುವುದಿಲ್ಲ. ಅಷ್ಟೇ ಅಲ್ಲ ಯಾವ ವಿಚಾರವಂತರೂ ಹಾಗೆ ಭಾವಿಸಲು ಸಾಧ್ಯವಿಲ್ಲ' ಎಂದನು. ಆಗ ರಾಜನು ತನ್ನ ಹುಚ್ಚುತನಕ್ಕೆ ನಾಚಿ ಸುಮ್ಮನಾದನು.

### ೨೨. 'ಅದು ನಿಜವೋ ಇದು ನಿಜವೋ'

ಜನಕ ಮಹಾರಾಜನಿಗೆ ಒಂದು ರಾತ್ರಿ ಒಂದು ಕೆಟ್ಟ ಕನಸು ಬಿತ್ತು. ಕನಸಿನಲ್ಲಿ ಅವನು ವಿಶೇಷ ಕೋಟಲೆಗೆ ಸಿಕ್ಕಿ ಭಿಕ್ಷೆ ಬೇಡುವಂತಾಯಿತು. ಒಂದು ದಿನ ಭಿಕ್ಷೆ ಬೇಡಿ ತಂದು ಊಟ ಮಾಡಬೇಕೆಂದು ಕುಳಿತುಕೊಂಡಾಗ ಎರಡು ಎತ್ತುಗಳು ಮೈಮೇಲೆ ನುಗ್ಗಿ ಬಂದು ಭಿಕ್ಷೆ ಬೇಡಿ ತಂದ ಅನ್ನವನ್ನು ಮಣ್ಣುಪಾಲು ಮಾಡಿದವು. ಹೊಟ್ಟೆ ಹಸಿವಿನಿಂದ ಕಂಗಾಲಾದನು. ಹೆದರಿಕೆ ಬಂದಂತಾಯಿತು. ಎಚ್ಚರಗೊಂಡು ದಿಗ್ಗನೆ ಎದ್ದು ನಿಂತು ಹೌಹಾರಿ ಹೋದ. ಆಗ ಮೊದಲಿನ ತನ್ನ ಐಶ್ವರ್ಯ, ರಾಜ್ಯ, ಭಂಡಾರ ಎಲ್ಲವೂ ಇದ್ದಂತೆಯೇ ಇತ್ತು. ಸ್ವಪ್ನದ ಈ ಸಮಸ್ಯೆ ಮನಸ್ಸಿನಲ್ಲಿ ಕೊರೆಯತೊಡಗಿತು.

ಬಿದ್ದ ಸ್ವಪ್ನದ ಫಲವನ್ನು ತಿಳಿಯಲು, ರಾಜ್ಯದಲ್ಲಿದ್ದ ಎಲ್ಲ ಋಷಿಗಳನ್ನು ಬರಮಾಡಿಕೊಂಡ. ಅವರೆದುರು 'ಅದು ಸತ್ಯವೋ ಇದು ಸತ್ಯವೋ' ಎಂದು ಪ್ರಶ್ನೆ ಹಾಕಿದನು. ಯಾರೂ ಉತ್ತರ ಕೊಡಲಿಲ್ಲ. ರಾಜನ ಈ ಸಮಸ್ಯೆಗೆ ಉತ್ತರ ಹುಡುಕುವುದರಲ್ಲಿಯೇ ಹತ್ತಿಪ್ಪತ್ತು ವರ್ಷ ಕಳೆದು ಹೋಯಿತು. ಉತ್ತರ ಕೊಡದಿರುವ ಋಷಿಗಳನ್ನೆಲ್ಲಾ ಸೆರೆಗೆ ಹಾಕಿಸಿಬಿಟ್ಟ.

ಇತ್ತ ಋಷಿ ಪತ್ನಿಯರು ತಮ್ಮ ಗಂಡಂದಿರನ್ನು ನೆನೆದು ಕೊರಗತೊಡಗಿದರು. ಸೆರೆ ಸಿಕ್ಕಿದ ಮುನಿಗಳಲ್ಲಿ ಕಹೋಳ ಮುನಿ ಒಬ್ಬ. ಅವನ ಹೆಂಡತಿ ಉದ್ದಾಲಕನ ಮಗಳಾದ ಸುಜಾತೆ. ಅವರ ಹೊಟ್ಟೆಯಲ್ಲಿ ಅಷ್ಟಾವಕ್ರನೆಂಬ ಕುರೂಪಿ ಮಗ ಹುಟ್ಟಿದ್ದ. ಕುರೂಪಿಯಾದರೂ ಮಹಾಜ್ಞಾನಿಯಾದ ಅಷ್ಟಾವಕ್ರ ಇನ್ನೂ ಚಿಕ್ಕವನಿರುವಾಗಲೇ ಅವನ ತಂದೆ ಸೆರೆಮನೆಯಲ್ಲಿದ್ದುದರಿಂದ ತಂದೆಯನ್ನೇ ಕಂಡಿರಲಿಲ್ಲ. ತಾಯಿಯನ್ನು ಕುರಿತು 'ಅಮ್ಮ ನಮ್ಮ ಅಪ್ಪ ಎಲ್ಲಿ ಹೋಗಿದ್ದಾನೆ?' ಎನ್ನಲು ತಾಯಿಯು ಅಪ್ಪಾ, ನಿಮ್ಮ ತಂದೆ ಜನಕನ ಸೆರೆಯಲ್ಲಿ ಕೊಳೆಯುತ್ತಿದ್ದಾನೆ. ಅವನಿಗೇನೋ ಸಂಶಯ ಬಂದಿದೆಯೆಂತೆ ದೇಶದಲ್ಲಿನ ಋಷಿಗಳೆಲ್ಲಾ ಅವನ ಸಂಶಯ ಪರಿಹರಿಸಲಾರದೆ ಹೋದದ್ದರಿಂದ ಅವರನ್ನೆಲ್ಲಾ ಸೆರೆ ಹಾಕಿಸಿದ್ದಾನೆ. ಅವರಲ್ಲಿ ನಿನ್ನ ತಂದೆಯೂ ಒಬ್ಬ' ಎಂದಳು.

ಅಷ್ಟಾವಕ್ರ ನಾನು ಅವನ ಸಂಶಯವನ್ನು ನಿವಾರಣೆ ಮಾಡಿ ತಂದೆಯನ್ನು ಸೆರೆಯಿಂದ ಬಿಡಿಸಿಕೊಂಡು ಬರುತ್ತೇನೆಂದು ಹೇಳಿ ಜನಕನ ನಗರಕ್ಕೆ ಹೊರಟು ಬಂದ. ಅಂದು ನಗರದಲ್ಲಿ ಜನಕನ ಮೆರವಣಿಗೆ. ಆನೆ ಅಂಬಾರಿಯಲ್ಲಿ ಬರುತ್ತಿದ್ದ. ಅಷ್ಟಾವಕ್ರ ನೇರವಾಗಿ ಎದುರಿಗೆ ಹೋಗಿ 'ಜನಕ ಎಂದರೆ ನೀನೆಯೋ ?' ಎಂದ. ಜನಕ ಮಹಾರಾಜನಿಗೆ ಈತನ ದಿಟ್ಟತನ ನೋಡಿ ಭಯ ಬಂತು. 'ನಾನೇ ಜನಕ ಮಹಾರಾಜ' ಎಂದ. 'ನಿನಗೆ ಬಂದ ಸಂಶಯ ಯಾವುದು ?' ಎಂದ ಅಷ್ಟಾವಕ್ರ. ಆಗ ಜನಕ ಮಹಾರಾಜನು 'ಅದು ಸತ್ಯವೋ ? ಇದು ಸತ್ಯವೋ ?' ಎಂದು ಕೇಳಿದ. ಅದಕ್ಕೆ ಅಷ್ಟಾವಕ್ರ 'ಇದು ಹೇಗೊ ಅದು ಹಾಗೆಯೆ' ಸೆರೆಯಲ್ಲಿರುವವರನ್ನು ಬಿಡು. ಸ್ವಪ್ನದಂತೆಯೇ ಈ ಜಗತ್ತೂ ಕೂಡ. ಸ್ವಪ್ನದಲ್ಲಿ ಜಗತ್ತೂ ಸುಳ್ಳು ; ಜಾಗ್ರತಿಯಲ್ಲಿ ಸ್ವಪ್ನವೂ ಸುಳ್ಳು; ಸುಷುಪ್ತಿಯಲ್ಲಿ ಎಲ್ಲವೂ ಸುಳ್ಳು. ಸ್ವಪ್ನವೆಷ್ಟು ಕ್ಷಣಿಕವೊ ನಮ್ಮ ಬಾಳೂ ಅಷ್ಟೇ ಕ್ಷಣಿಕ. ಇದನ್ನರಿತು ವ್ಯವಹರಿಸುವವನೇ ಜಾಣ'–ಎಂದು ಅಷ್ಟಾವಕ್ರ ಹೇಳಿದ. ಕೂಡಲೆ ಜನಕನು ಆನೆಯಿಂದ ಇಳಿದು ಅಷ್ಟಾವಕ್ರನಿಗೆ ನಮಸ್ಕರಿಸಿ ಕರೆದುಕೊಂಡು ಹೋದನಂತೆ.

## ೨೨. ಒಂದು ಮಗುವಿಗಾಗಿ ಅಳಲೆ? ಏಳು ಜನ ಮಕ್ಕಳಿಗಾಗಿ ಅಳಲೆ?

ದಂಪತಿಗಳಿಬ್ಬರು ಅನ್ಯೋನ್ಯವಾಗಿದ್ದರು. ಅವರಿಗೆ ಒಂದು ಗಂಡು ಮಗು ಹುಟ್ಟಿತು. ಬಹಳ ಚೆಂದವಿತ್ತು. ತಂದೆ ತಾಯಿಗಳು ಆ ಮಗುವನ್ನು ಕಂಡು ಹಿರಿ ಹಿರಿ ಹಿಗ್ಗಿ ತಮ್ಮ ಕಷ್ಟವನ್ನೆಲ್ಲಾ ಮರೆತಿದ್ದರು. ಒಂದು ದಿನ ಆ ಮಗು ಸತ್ತು ಹೋಯಿತು. ತಾಯಿಯ ದುಃಖ ಹೇಳತೀರದು. ನೆಲದ ಮೇಲೆ ಬಿದ್ದು ಹೊರಳಾಡಿ ಬಾಯಿ ಬಾಯಿ ಬಡಿದುಕೊಂಡು ಅಳತೊಡಗಿದಳು. ಗಂಡನಿಗೆ ದುಃಖವಾದರೂ ತಡೆದುಕೊಂಡು ಧೈರ್ಯದಿಂದ ಹೆಂಡತಿಯನ್ನು ಸಮಾಧಾನ ಮಾಡುತ್ತಿದ್ದ. ಆಗ ಹೆಂಡತಿಯು ಗಂಡನ ಈ ಸ್ಥಿತಿಯನ್ನು ನೋಡಿ 'ನಿಮಗೆ ಮಗು ಸತ್ತ ಬಗ್ಗೆ ಸಂಕಟವೇ ಆಗಲಿಲ್ಲವೇ, ಒಂದು ತೊಟ್ಟು ಕಣ್ಣೀರನ್ನು ಹಾಕಲಿಲ್ಲವಲ್ಲಾ, ನೀವು ಎಂಥ ನಿಷ್ಕರುಣಿಗಳು.' ಎಂದು ಮೂದಲಿಸಿದಳು. ಗಂಡನು ಆಗ ಹೀಗೆ ಹೇಳಿದ : 'ನಿನ್ನೆ ರಾತ್ರಿ ನಾನು ಮಲಗಿದ್ದಾಗ ಒಂದು ಕನಸು ಕಂಡೆ, ಕನಸಿನಲ್ಲಿ ಒಬ್ಬ ರಾಜನೇ ತನ್ನ ಸುಂದರ ಕುಮಾರಿಯನ್ನು ನನಗೆ ಕೊಟ್ಟು ಲಗ್ನ ಮಾಡಿ ಅರ್ಧ ರಾಜ್ಯವನ್ನು ಕೊಟ್ಟಿದ್ದ. ನನ್ನ ಆ ಸುಂದರಿ ಹೆಂಡತಿಯೊಡನೆ ಅನೇಕ ವರ್ಷ ಸಂಸಾರ ಮಾಡಿದೆ. ನಾಲ್ಕು ಗಂಡು ಮಕ್ಕಳೂ ಮೂರು ಹೆಣ್ಣು ಮಕ್ಕಳೂ ಹುಟ್ಟಿದುವು. ಯಾವುದಕ್ಕೂ ಕೊರತೆಯಿರಲಿಲ್ಲ. ಒಮ್ಮಿಂದೊಮ್ಮೆ ಒಂದೇ ದಿನವೇ ಆ ಎಲ್ಲ ಮಕ್ಕಳೂ ಸತ್ತವು. ರಾಜ್ಯ ಪರರ ಪಾಲಾಯಿತು. ದಿಗ್ಗನೆ ಎದ್ದೆ ಎಲ್ಲವೂ ಮಾಯವಾಗಿಹೋಗಿತ್ತು. ಆ ಏಳು ಮಕ್ಕಳು ಸತ್ತುದಕ್ಕಾಗಿ ಅಳಲೇ? ಅಥವಾ ಈ ಒಂದು ಮಗು ಸತ್ತುದಕ್ಕೆ ಅಳಲೇ? ನೀನೇ ಹೇಳು' ಎಂದ? 'ಸ್ವಪ್ನದಂತೆಯೇ ಈ ಜಗತ್ತು. ಹುಟ್ಟುವವರು ಹುಟ್ಟುತ್ತಾರೆ. ಸಾಯುವವರು ಸಾಯುತ್ತಾರೆ. ಸಾವನ್ನು ತಪ್ಪಿಸುವುದು ಯಾರಿಂದಲೂ ಸಾಧ್ಯವಿಲ್ಲ. ಆದಕಾರಣ ಧೈರ್ಯದಿಂದ ದುಃಖವನ್ನು ನುಂಗಿಕೊಂಡೆ. ದುಃಖವಾಗದೆ ಇರುವುದೆ? ಸುಖ ಬಂದಾಗ ಹಿಗ್ಗುವುದು, ದುಃಖ ಬಂದಾಗ ಅಳುವುದು ಎರಡೂ ಸಲ್ಲವು'—ಎಂದು ಹೆಂಡತಿಯನ್ನು ಸಮಾಧಾನಪಡಿಸಿದ.

## ೨೩. ದುರಾಸೆಯುಳ್ಳವನು ಯಾವುದಕ್ಕೂ ಹೇಸುವುದಿಲ್ಲ

ಹಿಂದೆ ಧಾರಾನಗರದಲ್ಲಿ ಸಿಂಧುಲನೆಂಬ ರಾಜನಿದ್ದನು. ಭೋಜನೆಂಬುವನು ಅವನ ಮಗ. ಭೋಜ ಇನ್ನೂ ಐದು ವರ್ಷದವನಿರುವಾಗಲೇ ಸಿಂಧುಲ ಸತ್ತುಹೋದ. ಅವನು ಸಾಯುವಾಗ ತನ್ನ ರಾಜ್ಯ ಮತ್ತು ಮಗನನ್ನು ತನ್ನ ತಮ್ಮನಾದ ಮುಂಜನಿಗೆ ಒಪ್ಪಿಸಿ ಕಣ್ಮುಚ್ಚಿದ. ಮುಂದೆ ಮುಂಜ ಬಹಳ ವರ್ಷಗಳ ಕಾಲ ರಾಜ್ಯಸುಖವನ್ನನುಭವಿಸಿಕೊಂಡಿದ್ದ. ಹೀಗಿರುವಾಗ ಒಮ್ಮೆ ನೈಮಿತ್ತಿಕನು ಬಂದು 'ಭೋಜನು ಮುಂದೆ ಈ ರಾಜ್ಯಕ್ಕೆ ಒಡೆಯನಾಗುವನು' ಎಂದು ಭವಿಷ್ಯವನ್ನು ಮುಂಜನ ಸಭೆಯಲ್ಲಿ ನುಡಿದನು. ಅದನ್ನು ಕೇಳಿ ರಾಜ್ಯ ಸವಿ ಉಂಡ ಮುಂಜನು ಭೋಜನನ್ನು ಗುಟ್ಟಾಗಿ ಕೊಲ್ಲಿಸಲು ಏರ್ಪಾಡುಮಾಡಿದನು. ತನ್ನ ಸಾಮಂತನಾದ ವತ್ಸನಿಗೆ ಅರಣ್ಯಕ್ಕೆ ಕರೆದೊಯ್ದು ಭೋಜನನ್ನು ಕೊಲ್ಲುವಂತೆ ಅಪ್ಪಣೆ ಮಾಡಿದನು. ಆ ಪ್ರಕಾರವಾಗಿಯೇ ಅವನು ಭೋಜನನ್ನು ಕಾಡಿಗೆ ಕರೆದುಕೊಂಡು ಹೋಗಿ ಕೊಲ್ಲಲುದ್ಯುಕ್ತನಾದನು. ಆಗ ಭೋಜ 'ಅಯ್ಯಾ ! ನನ್ನನ್ನು ಹೇಗೂ

ಕೊಲ್ಲುತ್ತಿದ್ದೀರಿ. ಅದು ರಾಜಾಜ್ಞೆ. ಸಂತೋಷ. ಆದರೆ ಕೊನೆ ಗಳಿಗೆಯಲ್ಲಿ ನನ್ನದೊಂದು ಬಿನ್ನಹವಿದೆ. ಅದನ್ನು ನಡೆಸಿಕೊಡಿ, ಎಂದು ಕಾಗದದಲ್ಲಿ ಒಂದು ಶ್ಲೋಕವನ್ನು ಬರೆದು, ಅದನ್ನು ಮುಂಜನಿಗೆ ತೆಗೆದುಕೊಂಡು ಹೋಗಿ ಕೊಡುವಂತೆ ಹೇಳಿಕೊಟ್ಟನು. ಆ ಶ್ಲೋಕ ಯಾವುದೆಂದರೆ :

ಮಾಂಧಾತಾ ಚ ಮಹೀಪತಿಃ ಕೃತಯುಗಾಲಂಕಾರಭೂತೋಗತಃ ।
ಸೇತುರ್ಯೇನ ಮಹೋದಧೌ ವಿರಚಿತಃ ಕ್ವಾಸೌದಶಾಸ್ಯಾಂತಕಃ ॥
ಅನ್ಯೇಚಾಪಿ ಯುಧಿಷ್ಠಿರ ಪ್ರಭೃತಯೋ ಯಾತಾ ದಿವಂ ಭೂಪತೇ ।
ನೈಕೇನಾಪಿ ಸಮಂ ಗತಾ ವಸುಮತೀ ಮುಂಜ ತ್ವಯಾ ಯಾಸ್ಯತಿ? ॥

ಎಲೈ ಮುಂಜರಾಜನೇ ! ಈ ಭೂಮಿಯನ್ನು ಹಿಂದೆ ಕೃತಯುಗದಲ್ಲಿ ಸತ್ಯಸಂಧನಾದ ಮಾಂಧಾತನೆಂಬ ಮಹಾರಾಜ ಆಳಿದ. ಮುಂದೆ ತ್ರೇತಾಯುಗದಲ್ಲಿ ಸಮುದ್ರಕ್ಕೆ ಸೇತುವೆ ಕಟ್ಟಿ ತ್ರಿಜಗದ್ಭಯಂಕರನಾದ ರಾವಣನನ್ನು ಸಂಹಾರ ಮಾಡಿದ ಶ್ರೀ ರಾಮ ಆಳಿದ. ನಂತರ ದ್ವಾಪರಯುಗದಲ್ಲಿ ಧರ್ಮರಾಯ ಮತ್ತು ಅವನಂಥ ಅನೇಕ ಧರ್ಮವಂತ ರಾಜರು ಆಳಿಹೋದರು. ಅವರಾರೂ ಹೋಗುವಾಗ ಈ ಭೂಮಿಯನ್ನು ಹೊತ್ತುಕೊಂಡು ಹೋಗಲಿಲ್ಲ. ಇಲ್ಲಿಯೇ ಬಿಟ್ಟುಹೋದರು. ಅಂದಮೇಲೆ ನೀನು ಮಾತ್ರ ಸಾಯುವಾಗ ಭೂಮಿಯನ್ನು ಹೊತ್ತುಕೊಂಡು ಹೋಗುವೆಯಾ?' ಇದು ಆ ಶ್ಲೋಕದ ತಾತ್ಪರ್ಯ. ಇದನ್ನು ಓದುತ್ತಿದ್ದಂತೇ ಆ ಕಟುಕನಿಗೇ ಕೊಲ್ಲಲು ಮನಸ್ಸು ಬರಲಿಲ್ಲ. ಮೇಲಾಗಿ ಭೋಜನನ್ನು ಬದುಕಿಸಬೇಕೆಂಬ ಮನಸ್ಸುಳ್ಳವನಾಗಿ ಕೃತಕಭೋಜನಶಿರಸ್ಸನ್ನೂ, ಕಾಗದವನ್ನೂ ತೆಗೆದುಕೊಂಡುಹೋಗಿ ಮುಂಜನಿಗೆ ಕೊಟ್ಟ. ಮುಂಜನಿಗೆ ಕಾಗದವನ್ನು ಓದು ಓದು ತ್ತಿದಂತೆಯೇ ಮನಸ್ಸು ಪರಿವರ್ತನೆಯಾಯಿತು. ತನ್ನ ಹೇಯಕಾರ್ಯಕ್ಕೆ ಪಶ್ಚಾತ್ತಾಪಪಟ್ಟುಕೊಂಡ. ಅಲ್ಲಿದ್ದವರನ್ನೆಲ್ಲಾ ತನ್ನ ಮಗನನ್ನು (ಭೋಜನನ್ನು) ಬದುಕಿಸುವಂತೆ ಅಂಗಲಾಚಿ ಬೇಡಿಕೊಂಡ. ನಂತರ ನಿಜವಾದ ಭೋಜನನ್ನು ತೋರಿಸಿದರು. ಸಂತೋಷಪಟ್ಟ. ಅವನ ರಾಜ್ಯವನ್ನು ಅವನಿಗೊಪ್ಪಿಸಿ ತಾನು ಸುಖವಾಗಿದ್ದ.

---

# ಶ್ರೀಗಳವರ ನುಡಿಕೋಶ

[ಶ್ರೀ ಶ್ರೀಗಳವರು ಕೆಲವು ಪದಗಳಿಗೆ ತಮ್ಮದೇ ಆದ ಅರ್ಥವನ್ನು ಅನುಭವದಿಂದ ವಿಶ್ಲೇಷಿಸಿರುತ್ತಾರೆ. ಅವುಗಳಲ್ಲಿ ಕೆಲವನ್ನು ಅವರ ಉಪದೇಶ, ಭಾಷಣ ಲೇಖನಗಳಿಂದಾಯ್ದು ಇಲ್ಲಿ ಪ್ರಸ್ತುತ ಪಡಿಸಿರುತ್ತದೆ.]

೧) **ಅಧಿಕಾರಿ** — ಭೋಗ ಜೀವನದ ದಾಹದಿಂದ (ದಾಹತ್ರಯಗಳಿಂದ) ವಿಮುಕ್ತನಾದ ತತ್ತ್ವಜ್ಞಾನಿ, ಸಮದರ್ಶಿ.

೨) **ಅಶಾಂತಿ** — ಸಮಾಜ ಹಾಗೂ ರಾಷ್ಟ್ರಜೀವನದಲ್ಲಿ ಅರ್ಥಕಾಮಾದಿಗಳ ಗಳಿಕೆ ಮತ್ತು ಬಳಕೆಗಳ ಜ್ಞಾನಾಭಾವದಿಂದುಂಟಾಗುವ ಪರಿಸ್ಥಿತಿಯ ಅಸ್ತವ್ಯಸ್ತ.

೩) **ಅಶಾಂತಜೀವನ** — ಲಭಿಸಿದ್ದನ್ನು ಕಿರಿದು ಮಾಡಿ, ಲಭಿಸದಿದ್ದುದನ್ನು ಹಿರಿದು ಮಾಡಿ, ಆ ಹಿರಿದರ ಪ್ರಾಪ್ತಿಗಾಗಿ ಕಸಿವಿಸಿಗೊಂಡು ಧಾವಿಸುತ್ತಿರುವ ಅಶಾಂತ ಜೀವನ.

೪) **ಆತ್ಮಹತ್ಯೆ** — ಪ್ರಪಂಚದಲ್ಲಿ ಬದುಕಲಾರದ ಹೇಡಿಗಳು ದುರ್ಬಲಚಿತ್ತದಿಂದ ಕರ್ತವ್ಯಭ್ರಷ್ಟರಾಗಿ ಕೈಗೊಳ್ಳುವ ಸುಲಭ ಮಾರ್ಗ.

೫) **ಆತ್ಮವಿಕಾಸ** — ಅಂತಃ ಶಕ್ತಿಯ ವೃದ್ಧಿ.

೬) **ಉಪಾಧ್ಯಾಯ** — ಕೇವಲ ಅರ್ಥೋಪಜೀವಿಯಾಗಿರದೆ, ಸಮಾಜದ ಗೌರವವನ್ನು ಸಂಪಾದಿಸಿಕೊಂಡು, ಸಮಾಜದ ಕೇಂದ್ರ ಬಿಂದುವಾಗಿ, ನ್ಯಾಯಮೂರ್ತಿಯಾಗಿ, ತನ್ನ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಂಚನೆಯಿಂದ, ನಿರ್ವಹಿಸುವ, Plain living high Thinking ಸರಳ ಜೀವನ, ಉನ್ನತ ಆಲೋಚನೆಗಳೆಂಬ ಸೂತ್ರವನ್ನು ತನ್ನ ಜೀವನದ ತತ್ತ್ವವನ್ನಾಗಿಸಿಕೊಂಡು ಸಾರ್ಥಕ ಜೀವನವನ್ನು ನಡೆಸುವವನು.

೭) **ಕಾಯಕ** — ಮನೋ ಕಾಮನೆಗಳಾಗಲಿ, ಶಾರೀರಿಕ ಇಷ್ಟಾರ್ಥಗಳಾಗಲಿ, ವೈಯುಕ್ತಿಕ ಉದ್ದೇಶದ ಬಾಧ್ಯತೆಗಳಾಗಲಿ–ಇವಾವುದರ ಸಂಪರ್ಕವಿಲ್ಲದೆ ಕೇವಲ ದೇವ ದೇವನ ಸಲುವಾಗಿ ದೇವನ ಅಪ್ಪಣೆಯೆಂದು ಮಾಡಲ್ಪಡುವ ಕರ್ತವ್ಯ.

೮) **ಗುರು** — ತಾನು ಮೊದಲು ಚಿತ್ತಾಕಾಶದ ಅರಿವು ಮಾಡಿಕೊಂಡು, ನಂತರ ಅದನ್ನು ಶಿಷ್ಯನ ಅಂತರಂಗಕ್ಕಿಳಿಸಿ ಅವನ ಸುಪ್ತ ಚೈತನ್ಯವನ್ನು ಉದ್ದೀಪನ ಮಾಡಬಲ್ಲವನು.

೯) **ಗುರಿ** — ಜೀವನದಲ್ಲಿ ಒದಗುವ ನೈರಾಶ್ಯಭೂತವನ್ನು ಹೊಡೆದೋಡಿಸಿ ಮಾನವ ಜೀವನವನ್ನು ದೇವ ಜೀವನವನ್ನಾಗಿಸಲು ಮುಟ್ಟುವ ಉದಾತ್ತ ಧ್ಯೇಯ.

೧೦) **ಜಾಣ** — ಲೌಕಿಕ ಪಾರಮಾರ್ಥಿಕಗಳೆರಡನ್ನೂ ಏಕ ಕಾಲದಲ್ಲಿ ಸಾಧಿಸುವವನು.

೧೧) **ಜೀವನ** — ಪರಮಾತ್ಮನ ಪಥದಲ್ಲಿ ಪ್ರತಿದಿನವೂ ಒಂದೊಂದು ಹೆಜ್ಜೆ ಮುಂದೆ ಸಾಗುವುದು.

೧೨) **ಜೀವನ್ ಮೃತ** — ಅಧಿಕಾರ, ಸಂಪತ್ತು ಮತ್ತು ಭೋಗಜೀವನವೆಂಬ ದಾಹತ್ರಯಗಳಿಗೆ ದಾಸನಾಗಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಪಶು ಪಕ್ಷಿಗಳಂತೆ ಜೀವಿತ ಸಾಗಿಸುವವನು.

೧೩) **ತೃಪ್ತಿ** — ಪರಮಾತ್ಮನು ಕೊಟ್ಟಿರತಕ್ಕಂಥ ಅನೂನ ಶಾರೀರಿಕ ಸಂಪತ್ತಿನಲ್ಲಿ ಹೆಚ್ಚಿನ ಭರವಸೆಯನ್ನಿಡುವುದು.

೧೪) **ಧರ್ಮ** — ಸತ್ಯ ದರ್ಶನಕ್ಕೆ ಆತಂಕವಾಗಿರುವ ಆಸುರೀ ಶಕ್ತಿಗಳ ಮೇಲೆ ದೈವಶಕ್ತಿ ನಡೆಸುವ ದಾಳಿ.

೧೫) **ಬದುಕು** — ನಾವು ಮಾಡಿರುವ ಸಾಧನೆಕಿರಿದು ಮಾಡಬೇಕಾಗಿರುವುದು ಅತ್ಯಂತ ಹಿರಿದು ಎಂಬುದರ ಅರಿವೇ ಬದುಕು.

೧೬) **ಪೊಳ್ಳುತನ** — ಇದ್ದುದನ್ನು ಇದ್ದ ಹಾಗೆ ನೇರವಾಗಿ ಸರಳವಾಗಿ ಸತ್ಯವಾಗಿ ಹೇಳದೆ, ಅದನ್ನು ವಿಕಾರಮಾಡಿ, ಹಿಂದು ಮುಂದು ಮಾಡಿ, ಬಣ್ಣ ಕಟ್ಟಿ, ಸತ್ಯದ ತಲೆಯಮೇಲೆ ಹೊಡೆದಂತೆ ಹೇಳಿ, ಕೇಳುವವರನ್ನು ಚಕಿತರನ್ನಾಗಿಸಿ, ಹೇಳುವ ಮಾತಿನಲ್ಲಿ ನಂಬಿಕೆಯನ್ನುಂಟುಮಾಡುವುದೇ ಪೊಳ್ಳುತನದ ಲಕ್ಷಣ.

೧೭) **ಬ್ರಹ್ಮಚರ್ಯ** — ಕೇವಲ ಬಹಿರ್ಮುಖವಾಗಿರುವ ಐಂದ್ರಿಕ ಪ್ರವೃತ್ತಿಗಳನ್ನು ನಿಗ್ರಹಮಾಡಿ, ಸ್ವಾಭಾವಿಕವಾಗಿ ಪರಸ್ಪರ ಆಕರ್ಷಿತವಾಗಿರುವ ಪ್ರೇಮಜೀವನದ ಉಚ್ಛೃಂಖಲ ಪ್ರವೃತ್ತಿಯನ್ನು ನಿರೋಧಿಸುವುದು.

೧೮) **ಮನೋನಿಗ್ರಹ** — ಮನಸ್ಸಿನ ಪ್ರವೃತ್ತಿಯನ್ನು ತಡೆದು, ಅದನ್ನು ನಿರ್ವಿಷಯಕ ಮಾಡುವುದೆಂದರ್ಥವಲ್ಲ. ಏಕೆಂದರೆ ಮನಸ್ಸು ನಿರ್ವಿಷಯಕವಾಗಲಾರದು. ಆದ್ದರಿಂದ ಅದರ ಸ್ವಚ್ಛಂದ ಪ್ರವೃತ್ತಿಯನ್ನು ತಡೆದು ಸದ್ವಿಷಯಗಳ ಚಿಂತನೆಯಲ್ಲಿ ಅರ್ಥಾತ್ ಪರಮಾತ್ಮನ ಚಿಂತನೆಯಲ್ಲಿ ಪ್ರವಹಿಸುವಂತೆ ಮಾಡುವುದೇ ಮನೋನಿಗ್ರಹ.

೧೯) **ಮಹಾತ್ಮಾ** — ದೀನದಲಿತರ ಉದ್ಧಾರದ ಸಲುವಾಗಿ ತಮ್ಮ ಜೀವನವನ್ನೇ ಮುಡುಪಿಡುವ ಪುಣ್ಯಶಾಲಿ.

೨೦) **ಮಾನವಜನ್ಮ** — ಸೃಷ್ಟಿಯಲ್ಲಿ ಭಗವಂತನು ಕರುಣಿಸಿದ ಅತ್ಯಮೂಲ್ಯವಾದ ವಸ್ತು.

೨೧) **ಮುಗ್ಧರು** — ಧರ್ಮದ ಬಗ್ಗೆ ಆಸ್ಥೆ ಉಳ್ಳವರಾದರೂ ಅದನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿಲ್ಲದವರು. ಧರ್ಮಸಾಧನೆಯೆಂಬುದೊಂದು ಅದ್ಭುತವಾದ ಜೀವನ ವಿಧಾನ, ಅತ್ಯಂತ ಕ್ಲಿಷ್ಟವಾದ ತತ್ತ್ವ, ಜನಸಾಮಾನ್ಯರಿಗೆ ಎಟುಕದ ಮಹಾನ್ (ಸ್ಥಳ), ವಸ್ತು ಇತ್ಯಾದಿಯಾಗಿ ತಪ್ಪುಕಲ್ಪನೆವುಳ್ಳವರು.

೨೨) **ವಾಣಿ** — ಮಾನವನಿಗೆ ಭಗವಂತನು ಕೊಟ್ಟ ಅಪೂರ್ವ ಉಡುಗೊರೆ. ಸತ್ಯದ ಮಾತು ಭಗವಂತನಿಗೆ ಪ್ರೀತಿ. ಅದೇ ಜಪತಪ ಪವಿತ್ರವಾಣಿ; ಭಗವಂತ ಸಾಕ್ಷಾತ್ಕಾರಕ್ಕೆ ಸಾಧನ.

೨೩) **ವಿದ್ಯಾರ್ಜನೆ** — ಒಂದೊಂದು ಕ್ಷಣದಲ್ಲಿಯೂ ಜ್ಞಾನದ ಒಂದೊಂದು ಕಣವನ್ನೂ ಹುಡುಕಿ, ತಿಕ್ಕಿ, ತೊಳೆದು ಕೂಡಿಡುವುದು.

೨೪) **ವಿಶ್ರಾಂತಿ** — ವಿಶ್ರಾಂತಿ ಎಂದರೆ ಗಂಟೆಗಟ್ಟಲೆ ಹಾಸಿಗೆಯ ಮೇಲೆ ಬಿದ್ದಿರುವುದಲ್ಲ. ಹರಟೆಯಲ್ಲಿ ದಿನವೆಲ್ಲಾ ನಿರತರಾಗಿರುವುದಲ್ಲ. ಒಂದು ಕೆಲಸದಲ್ಲಿ ಬೇಜಾರಾದರೆ ಮತ್ತೊಂದರಲ್ಲಿ ತೊಡಗುವುದು. ಅದನ್ನು ಮಾಡಿ ಬೇಸರವಾದರೆ ಮಗುದೊಂದರಲ್ಲಿ ತೊಡಗುವುದು. ಆದ್ದರಿಂದ ಕರ್ಮವಿಚ್ಛಿತ್ತಿ ವಿಶ್ರಾಂತಿಯಲ್ಲ, ಕರ್ಮಪಲ್ಲಟವೇ ವಿಶ್ರಾಂತಿ.

೨೫) **ವಿಚಾರಮತಿಗಳು** — 'ಬ್ರಹ್ಮಚರ್ಯವೇ ಜೀವನ. ವೀರ್ಯನಾಶವೇ ಮೃತ್ಯು.' ಎಂಬ ವಾಣಿಯನ್ನರಿತು ಸತ್ಸಸಂಕಲ್ಪ ಸದ್ಭಾವನೆಗಳಿಂದ ಪ್ರಚೋದಿತರಾಗಿ, ಬ್ರಹ್ಮಚರ್ಯ ಸಾಧನೆಯಲ್ಲಿ ನಿರತರಾಗಿ ತಮ್ಮ ಜೀವನವನ್ನು ಉದಾತ್ತಗೊಳಿಸಿಕೊಳ್ಳುವುದರಲ್ಲಿ ಪ್ರಯತ್ನಶೀಲರಾದ ತರುಣ ತರುಣಿಯರು.

೨೬) **ಶಾಸನ** — ಪ್ರಜೆಗಳ ಬದುಕಿಗೆ ರಕ್ಷಣೆಯ ಬೇಲಿ. ಭಕ್ಷಣೆಯ ಹೋಳಿಗೆಯಲ್ಲ.

೨೭) **ಶಾಂತಿ** — ಇದು ಎರಡು ವಿಧ. ೧) ಪರಾಶಾಂತಿ ೨) ಅಪರಾಶಾಂತಿ. ಪರಾಶಾಂತಿ—ಪರಮಾತ್ಮನ ಸಾಕ್ಷಾತ್ಕಾರ ಹೊಂದುವುದು. ಅಪರಾಶಾಂತಿ—ಸ್ವಾತಂತ್ರ್ಯ, ಸಮತೆ, ಸೌಹಾರ್ದ ಎನ್ನುವ ತತ್ತ್ವಗಳನ್ನು ಎತ್ತಿಹಿಡಿದು ಅಭಾವ, ಅಜ್ಞಾನ, ಅನ್ಯಾಯ, ಅಂಜಿಕೆ,ಹಿಂಸೆ, ತುಳಿತ, ಉಚ್ಚನೀಚ ಕಲ್ಪನೆಗಳು, ಸಂಕುಚಿತ ಭಾವಗಳು—ಇವುಗಳ ಉಪಟಳವಿಲ್ಲದೆ ಮನುಷ್ಯನ ವಿಕಾಸಕ್ಕೆ ಅವಶ್ಯಕವಾದ ಎಲ್ಲಾ ಸೌಲಭ್ಯಗಳ ಸಮಾನಾವಕಾಶವುಳ್ಳ ಒಂದು ಸ್ಥಿತಿ.

೨೮) **ಶ್ರೀಮಂತಿಕೆ** — ಒಂದು ಬಂದರೆ ಸಾವಿರ ಬಯಸುವುದು. ಸಾವಿರ ಬಂದರೆ ಕೋಟಿ ಬಯಸುವುದು. ಕೋಟಿ ಬಂದರೆ ಅದನ್ನೂ ಮೀರಿ ಅಧಿಕವನ್ನು ಬಯಸುವುದು. ಇಂಥ ಮನಸ್ಸಿನ ದುರಾಸೆ.

೨೯) **ಸಾಕ್ಷಾತ್ಕಾರ** — ಜಗತ್ತನ್ನು ಬಿಡದೆ, ಸಂಸಾರವನ್ನುತೊರೆಯದೆ ಕಾಡನ್ನುಸೇರದೆ, ತಾನು ಇದ್ದಲ್ಲಿಯೇ ಸಾಧನೆ ಮಾಡಿ ಸಿದ್ಧಿಯನ್ನೈದುವುದು.

೩೦) **ಸುಖ, ಸುಖಿ** — ಯಾವ ಬಾಹ್ಯ ಉಪಾಧಿಯಿಂದಲೂ ಸಿಗುವ ವಸ್ತುವಲ್ಲ. ಅದು ಅಂತರಿಕವಾಗಿ ಹೊರಹೊಮ್ಮುವ ಮಾನಸಿಕ ತೃಪ್ತಿ. ಯಾರ ಹೃದಯ ಉನ್ನತ ಮಟ್ಟದ್ದೋ ಯಾರ ಬುದ್ಧಿ ಲೋಕೋಪಕಾರಕ ಮಾರ್ಗದ್ದೋ, ಯಾರ ಚಿತ್ತ ತೃಪ್ತ್ಯಬ್ಧಿಯ ಆಳದಲ್ಲಿ ಮುಳುಗಿದೆಯೋ ಅವನೇ ಸುಖಿ, ಅಂತಸ್ಥಿತಿಯೇ ಸುಖ.

೩೧) **ಸಂನ್ಯಾಸಿ** — ಸರ್ವ ಲೋಕೋಪಕಾರ ಬಯಸುವ ಬೃಹತ್ ಸಂಸಾರಿ.

೩೨) **ಸಂಸ್ಕೃತಿ** — ಅಂತರ್ ಜೀವನದ ಸೊಬಗು, ಸೌಂದರ್ಯ, ಹೃದಯ ಮನಸ್ಸುಗಳ ವಿಕಾಸವಾಗಿ, ತನ್ಮೂಲಕ ವಿಶ್ವಪ್ರೇಮವನ್ನು ಹೊರಸೂಸುವ ಮಾತು ಹಾಗೂ ಜಗತ್ಕಲ್ಯಾಣಕಾರಿಯಾದ ಕೃತಿ—ಇವುಗಳು ತೋರಿಬರುವ ಮನೋಪಕ್ವತೆ. 'culture ls what produces sweetness of temper, sanity of mind and strength of spirit.' ಅದೊಂದು ಅಂತರ್ ಬಾಹ್ಯ ಸಂಸ್ಕಾರ ರೂಪವಾದ ಪುಣ್ಯ ವ್ಯಕ್ತಿತ್ವ.

೩೩) **ಸ್ವಾತಂತ್ರ್ಯ** — ಸ್ವೇಚ್ಛಾಚಾರವಲ್ಲ, ಸ್ವಚ್ಛಂದ ಜೀವನವಲ್ಲ. ಅದು ಆತ್ಮವಿಕಾಸದ ರಕ್ಷೆ. ಸಮ್ಮಿತ ರಕ್ಷಕರ ಅಂಕೆಯಲ್ಲಿದ್ದು ಆತ್ಮರಕ್ಷಣೆ ಮಾಡಿಕೊಳ್ಳುವುದು.

೩೬) **ಭಾರತೀಯ** — ಭರತಖಂಡದ ಸಂಸ್ಕೃತಿಯ ದಿವ್ಯ ಬೆಳಕಿಗೆ ಅನೀತಿಯ ಭ್ರಷ್ಟಾಚಾರದ ಕವಚವನ್ನು ತೊಡಿಸಿದ್ದಾರೆ. ಅದನ್ನು ಕಿತ್ತುಹಾಕಿದಾಗ ಮಾನವೀಯತೆಯ ಬಂಗಾರ ಗೋಚರಿಸುತ್ತದೆ, ಜಗತ್ತಿನ ಕಣ್ಣು ತೆರೆಯುತ್ತದೆ. ಹಾಗೆ ಮಾಡುವ ಪ್ರಯತ್ನದಲ್ಲಿ ಕಂಕಣಬದ್ಧನಾದವನೇ ಭಾರತೀಯ.

೩೭) **ಧೀರ** — ಮಾನವನ ಮನ ನೊಂದೀತೆಂದು ಸತ್ಯಕ್ಕೆ ಅಪಚಾರ ಮಾಡದೆ ನಡೆದುಕೊಳ್ಳುವವನು. ಅಥವಾ ಇಂದ್ರಿಯಗಳ ಪಾಟವವನ್ನು ಗೆದ್ದವನು.

೩೮) **ಸ್ವವಿಮರ್ಶೆ** — ಮನುಷ್ಯ ತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಿರಬೇಕು. ಯಾವಾಗ ತನ್ನನ್ನು ತಾನು ವಿಮರ್ಶಿಸಿಕೊಳ್ಳುವನೋ ಆಗ ಮಾತ್ರ ತಾನು ಯೋಗ್ಯನಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು ಬಾಳಲು ಸಾಧ್ಯವಾಗುವುದು. ಆ ರೀತಿಯಾಗಿ ಮಾಡುವ ವಿಚಾರ.

೪೯) **ಸನ್ಮಾನ** — ವ್ಯಕ್ತಿಯನ್ನು ಕರೆಸಿ, ಸಭೆಯಲ್ಲಿ ಕುಳ್ಳಿರಿಸಿ, ಶಾಲು ಹೊದಿಸಿ ಹೂಮಾಲೆ ಹಾಕಿ, ಮಾಡುವುದಲ್ಲ. ಪರಂತು ಆ ವ್ಯಕ್ತಿ ನಡೆದು ಬಂದ ದಾರಿಯನ್ನು ಗುರುತಿಸಿ, ಅವನು ಮಾಡಿರಬಹುದಾದ ಸತ್ಕಾರ್ಯಗಳನ್ನು ಸಜ್ಜನಿಕೆಯಿಂದ ಗುರುತಿಸುವುದೇ ಸನ್ಮಾನ.

೩೪) **ಭಾರತೀಯ** — ನಮ್ಮ ಸಂಸ್ಕೃತಿಯ ದಿವ್ಯ ಬೆಳಕಿಗೆ ಅನೀತಿಯ ಭ್ರಷ್ಟಾಚಾರದ ಕವಚವನ್ನು ಮುಸುಕಿದೆ. ಅದನ್ನು ಕತ್ತರಿಸಿ ಹಾಕಿದಾಗ ಮಾನವೀಯತೆಯ ಪ್ರಕಾಶ ಹೊಳೆಯುತ್ತದೆ. ಜಗತ್ತಿನ ಕಣ್ಣು ತೆರೆಯುತ್ತದೆ. ಅದನ್ನು ಅರಿತವನೇ ಭಾರತೀಯ.

೩೫) **ರಾಜಕಾರಣಿ** — ಒಂದು ತುತ್ತು ಅನ್ನದ ಹಿಂದೆ ಸಾವಿರಾರು ಮಂದಿಯ ಶ್ರಮದ ಶಕ್ತಿ ಸಾಗರವಾಗಿ ನಿಂತಿದೆ. ಅದನ್ನು ಅರಿತವನೇ ರಾಜಕಾರಣಿ.



# ನಾಡಿನ ಒಳ-ಹೊರಗಿನ ಸಂಘ ಸಂಸ್ಥೆಗಳು ಶ್ರೀಗಳಿಗೆ ಅರ್ಪಿಸಿದ ಬಿನ್ನಹದೋಲೆಗಳು

[ಪೂಜ್ಯರಿಗೆ ನಾಡಿನ ಒಳ-ಹೊರಗಿನ ಅನೇಕ ಸಂಘ-ಸಂಸ್ಥೆಗಳು, ಭಕ್ತರು ಜಾತಿಮತ ಭೇದವಿಲ್ಲದೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಬಿನ್ನವತ್ತಳೆ, ಅಭಿನಂದನೆ, ಪ್ರಾರ್ಥನಾಪತ್ರ, ಸನ್ಮಾನ ಪತ್ರಗಳೇ ಮೊದಲಾದುವನ್ನು ಅರ್ಪಿಸಿ ಕೃತ ಕೃತ್ಯರಾಗಿದ್ದಾರೆ. ಇವು ಪೂಜ್ಯರ ಅಪಾರ ಜನಾನುರಾಗದ, ಸರ್ವ ಜನಾದರಣೀಯದ ದ್ಯೋತಕವಾಗಿವೆ ಅವುಗಳೆಲ್ಲವನ್ನು ಇಲ್ಲಿ ಕೊಡುವುದು ಸಾಧ್ಯವಿಲ್ಲ. ಆದ್ದರಿಂದ ಒಂದೆರಡರ ಪೂರ್ಣಪಾಠವನ್ನು ಕೊಟ್ಟು, ಕೆಲವು ಮಹತ್ವದ ಬಿನ್ನವತ್ತಳೆಗಳ ಸಂಗ್ರಹವನ್ನು ಮಾದರಿಗಾಗಿ ಕೊಡಲಾಗಿದೆ]

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದ ೧೮೯೪ನೇ ಶ್ರೀ ಪರೀಧಾವಿ ನಾಮ ಸಂವತ್ಸರದ ಉತ್ತರಾಯಣ ಪುಣ್ಯಕಾಲ ನಿಜವೈಶಾಖ ಶುಕ್ಲಪಕ್ಷ ಚತುರ್ಥ ಶುಭಶುಕ್ರವಾರಕ್ಕೆ ಸಲ್ಲುವ ಕ್ರಿಸ್ತಶತಾಬ್ದ ದಿನಾಂಕ ೧೯೭೨ನೇ ಮೇ ೨೬. ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಶಿವಕುಮಾರಸ್ವಾಮಿಗಳವರ **ರಜತ ಮಹೋತ್ಸವ ಮಹಾಸನ್ಮಾನ ಸಮಾರಂಭ. ಉದ್ಘಾಟಕರು : ಮಾನ್ಯ ಶ್ರೀ ಮೋಹನಲಾಲ್ ಸುಖಾಡಿಯಾರವರು, ಮೈಸೂರು ರಾಜ್ಯದ ರಾಜ್ಯಪಾಲರು. ಅಧ್ಯಕ್ಷರು : ಮಾನ್ಯ ಶ್ರೀ ಡಿ. ದೇವರಾಜ ಅರಸುರವರು, ಮೈಸೂರು ರಾಜ್ಯದ ಮುಖ್ಯಮಂತ್ರಿಗಳು. ಪರಮಪೂಜ್ಯ ಶ್ರೀ. ನಿ. ಪ್ರ. ಶ್ರೀಶಿವಕುಮಾರ** ಸ್ವಾಮಿಗಳವರ ದಿವ್ಯ ಸನ್ನಿಧಿಯ ಶ್ರೀ ಚರಣಕಮಲದಲ್ಲಿ ಭಕ್ತವೃಂದದ ಮತ್ತು ಸಮಸ್ತಸಮಾಜಹಿತೈಷಿಗಳ **ಅನಂತಾನಂತ ಪ್ರಣಾಮಗಳು.**

ಸನ್ನಿಧಿಯ ಅಮೋಘ ಲೋಕ ಸಂಗ್ರಹ ವ್ಯವಸಾಯ ವೃತ್ತಿ, ಬ್ರಹ್ಮಚರ್ಯನಿಷ್ಠೆ, ಸದ್ಗುಣಸಂಪತ್ತು, ಅನಾಥ ಮಕ್ಕಳ ಮೇಲಿರುವ ಅವ್ಯಾಜಪ್ರೇಮ, ಅವಿಶ್ರಾಂತಕಾಯಕ, ಪಾಂಡಿತ್ಯ, ವಿಪುಲದಾಸೋಹ, ಸರಳಜೀವನ ಇತ್ಯಾದಿ ಗುಣ ಸಂಪತ್ತು ನಮ್ಮೆಲ್ಲರನ್ನೂ ಮುಗ್ಧಗೊಳಿಸಿ, ಆನಂದ ಸಾಗರದಲ್ಲಿ ಓಲಾಡಿಸುತ್ತಿದೆ. ತಮ್ಮನ್ನು ಭಜಿಸಿ ದಣಿವನ್ನರಿಯದ ನಮ್ಮ ಜೀವಮಾನದಲ್ಲಿ ಈ ದಿನವೇ ಮಹಾ ಸುದಿನ. ಶ್ರೀ ಸಿದ್ಧೇಶ್ವರರ ಅನುಗ್ರಹದಿಂದ ಉದ್ಭವಿಸಿರುವ ಶ್ರೀ ಸಿದ್ಧಗಂಗಾ ಮಾತೆಯ ತೀರ್ಥಕ್ಷೇತ್ರವು ಶ್ರೀ ಸಿದ್ಧಲಿಂಗೇಶ್ವರಾದಿ ಯೋಗಿಶ್ರೇಷ್ಠರ ದೇವೋನ್ಮಾದಕರ ಆವಾಸವಾಗಿ ಶ್ರೀ ಸಿದ್ಧಗಂಗಾ ಮಠವೆಂದು ಸುಪ್ರಸಿದ್ಧವಾಗಿದೆ. ಮಾಗಡಿ ತಾಲ್ಲೂಕು ವೀರಾಪುರ ಗ್ರಾಮದ ಸಂತ್ಸಂಪ್ರದಾಯಸ್ಥ ಮನೆತನದಲ್ಲಿ ೧೯೦೮ ನೇ ಏಪ್ರಿಲ್ ಮೊದಲನೆಯ ದಿನಾಂಕದಲ್ಲಿ ಜನಿಸಿ, ಉಚ್ಚ ಶಿಕ್ಷಣವನ್ನು ಪಡೆದು, ಲಿಂಗೈಕ್ಯ ಶ್ರೀ ಉದ್ದಾನ ಶಿವಯೋಗಿಗಳ ಸಿದ್ಧ ಹಸ್ತದಿಂದ ೧೯೩೦ ರಲ್ಲಿ ಸಂನ್ಯಾಸಾಶ್ರಮ ದೀಕ್ಷಾನುಗ್ರಹೀತರಾಗಿ, ಆ ಪ್ರಾತಃಸ್ಮರಣೀಯರು ಸರ್ವರ ಸಂಸ್ಕೃತಿಗಾಗಿ ೧೯೧೭ರಲ್ಲಿ ಪ್ರಾರಂಭಿಸಿದ **ಶ್ರೀ ಸಿದ್ಧಲಿಂಗೇಶ್ವರ ವೇದ ಪಾಠಶಾಲೆ ಮತ್ತು ಉಚಿತ ವಿದ್ಯಾರ್ಥಿನಿಲಯದ ಮೇಲ್ವಿಚಾರಣೆಯನ್ನು** ೧೯೪೧ ರ ವರೆಗೆ ಪರಮಾಸಕ್ತಿಯಿಂದ ನಿರ್ವಹಿಸುತ್ತಿದ್ದಿರಿ.

**ಕಾಯಕ ಕೌಶಲ್ಯ ಮೂರ್ತಿಗಳೇ !**

ಉತ್ತಮಶ್ಲೋಕರಾದ ಉದ್ದಾನ ಶಿವಯೋಗಿಗಳು ೧೯೪೧ ರಲ್ಲಿ ಲಿಂಗೈಕ್ಯರಾದ ತರುವಾಯ, ಶ್ರೀ ಮಠದ ಆಧಿಪತ್ಯವನ್ನು ತಾವು ವಹಿಸಿಕೊಂಡು, ಸಂಸ್ಕೃತ ಮಹಾ ಪಾಠಶಾಲೆ ಮತ್ತು ಉಚಿತ ವಿದ್ಯಾರ್ಥಿನಿಲಯಗಳನ್ನು ಬೃಹದಾಕಾರವಾಗಿ ಬೆಳೆಸಿ ಸಹಸ್ರಾರು ಮಕ್ಕಳ ಆಶ್ರಯದಾತರಾಗಿರುವಿರಿ. ಶ್ರೀಮಠದಲ್ಲಿ, ತುಮಕೂರು ಪಟ್ಟಣದಲ್ಲಿ, ಗ್ರಾಮಾಂತರಗಳಲ್ಲಿ ಶಿಶುವಿಹಾರ ಮೊದಲ್ಗೊಂಡು ಕಾಲೇಜುಗಳವರೆಗೂ ಅನೇಕ ವಿದ್ಯಾಸಂಸ್ಥೆ ಮತ್ತು ವಿದ್ಯಾರ್ಥಿ ನಿಲಯಗಳನ್ನು ನಡೆಸುತ್ತಿರುವಿರಿ. ಮಹಾ ಶಿವರಾತ್ರಿಯ ಕಾಲದಲ್ಲಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ರಥೋತ್ಸವ, ಜನಗಳ ಜಾತ್ರೆ, ದನಗಳ ಪರಿಷೆ, ಸರ್ವಾಂಗ ಭರಿತ ವಸ್ತುಪ್ರದರ್ಶನ, ಸದ್ಭಾವಕಾರಕ ಮನರಂಜನೆ, ಸಂಸ್ಕೃತಿ ಪ್ರಚಾರ, ಸಿದ್ಧಗಂಗಾ ತ್ರೈಮಾಸಿಕ ಪ್ರಕಾಶನಾದಿ ನಾನಾ ಮಾರ್ಗಗಳಲ್ಲಿ ಸಮಾಜದ ಕ್ಷೇಮಾಭ್ಯುದಯ ಕಾಯಕನಿರತರಾಗಿರುವ ಸನ್ನಿಧಿಯ ತ್ರಿಕರಣಾದಿಗಳು ಕಲ್ಯಾಣಕ್ರಿಯೆಗಳನ್ನೆಸಗುತ್ತಿರುವುದು ನಮ್ಮ ಪರಮ ಸೌಭಾಗ್ಯ.

**ಭಕ್ತರ ಭಾಗ್ಯನಿಧಿಯೇ !**

ತಮ್ಮ ಅನುಗ್ರಹಕ್ಕಾಗಿ ನಾವು ಎಷ್ಟು ಕೃತಜ್ಞರಾಗಿದ್ದರೂ ತೀರದು. ಅಳಿಲು ಸೇವೆಯಷ್ಟಾದರೂ ನಮ್ಮ ಆತ್ಮತೃಪ್ತಿಯನ್ನು ವ್ಯಕ್ತಪಡಿಸಬೇಕೆಂದು ಅನೇಕ ಸಮಾಜ ಪ್ರಮುಖರು ೧೯೭೮ ನೇ ಮಾರ್ಚಿ ೧೭ ನೇ ದಿನಾಂಕ **ಶ್ರೀ ವೀರೇಂದ್ರ ಪಾಟೀಲರ** ಅಧ್ಯಕ್ಷತೆಯಲ್ಲಿ ಮಹಾಸಭೆ ಸೇರಿ, ಒಂದು ಸಮಿತಿಯನ್ನು ರೂಪಿಸಿ, ಸನ್ನಿಧಿಯವರ ರಜತ ಮಹೋತ್ಸವವನ್ನು ವೈಶಿಷ್ಟ್ಯಸತ್ವಪೂರ್ಣವಾಗಿ ಆಚರಿಸಬೇಕೆಂದು ಸರ್ವಾನುಮತದಿಂದ ನಿಶ್ಚಯಿಸಿದರು.



ಸಿದ್ಧಗಂಗಾ ಬಿ.ಎಡ್. ಕಾಲೇಜಿನ ಸಮಾರಂಭ
ವೊಂದಕ್ಕೆ ಪದ್ಮವಿಭೂಷಣ ಲಿಂ. ಡಿ.ಸಿ. ಪಾವಟೆ
ಯವರು ಆಗಮಿಸಿದ ಸಂದರ್ಭದಲ್ಲಿ ಶ್ರೀಗಳು



...ಯ ಶರಣಬಸವೇಶ್ವರ ದೇವಾಲಯದ
...ರ್ಶಿಗಳಾದ ಶ್ರೀ ಶರಣಬಸಪ್ಪಾ ಅಪ್ಪಾ
...ಸಪ್ಪ ಅಪ್ಪಾ ಅವರು ಶ್ರೀಗಳವರಿಗೆ
ಬಿನ್ನವತ್ತಳೆ ಅರ್ಪಿಸಿದುದು



'ಸಿದ್ಧಗಂಗಾಶ್ರೀ' ಸಂಪಾದಕರು
ಶ್ರೀಗಳವರಲ್ಲಿ ಸಮಾಲೋಚಿಸುತ್ತಿರುವುದು



ಶ್ರೀ ಸಿದ್ಧಗಂಗಾ ಸೈನ್ಸ್, ಆರ್ಟ್ಸ್, ಕಾಮರ್ಸ್ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಬಹುಮಾನ ಆಶೀರ್ವಾದ



ಬೆಂಗಳೂರು ವೀರಶೈವ ಕೋ. ಆ. ಬ್ಯಾಂಕಿನ 'ಸೇಫ್ಟಿ ಲಾಕರ್ಸ್' ಉದ್ಘಾಟನೆಯ ಸಮಾರಂಭದಲ್ಲಿ





ಸಕಲೇಶಪುರ ತಾಲ್ಲೂಕು ಬಾಳ್ಳುಪೇಟೆ ಹೈಸ್ಕೂಲ್ ಪ್ರಾರಂಭೋತ್ಸವದಲ್ಲಿ ಶ್ರೀಗಳು



ತುಮಕೂರ ವೆಂಕಟೇಶಪೆರುಮಾಳ ಮಿಲ್ಲಿನ ಪ್ರಾರಂಭೋತ್ಸವ ಸ



ಶ್ರೀ ಕ್ಷೇತ್ರದ ಬೆಟ್ಟದ ಮೇಲೆ ಬೆಂಗಳೂರಿನ ಮಹಾಲಕ್ಷ್ಮಿ ಲಾಡ್ಜ್ ಮಾಲಿಕರು ಕಟ್ಟಿಸಿದ ಗಣಪತಿ ದೇವಾಲಯದ ಉದ್ಘಾಟನೆ ಶ್ರೀ ಸಿದ್ಧವೀರಪ್ಪನವರಿಂದ



ಚಿತ್ರದುರ್ಗ ಬೃಹನ್ಮಠದಲ್ಲಿ

ಚಿತ್ರದುರ್ಗ ಬೃಹನ್ಮಠದ ದಾಸೋಹ ವ್ಯವಸ್ಥೆಯ ಪರಿಶೀಲನೆಯಲ್ಲಿ →





ಭಾರತ ಸಾಧು ಸಮಾಜದ ಕರ್ನಾಟಕ ಶಾಖೆಯ ಅಧ್ಯಕ್ಷ ಸ್ಥಾನದಲ್ಲಿ ಶ್ರೀಗಳವರು



ಮೈಸೂರಿನ ಶರಣ ಸೇವಾ ಮಂಡಲಿಯ ('ಬಸವ ಬೆಳ್ಕು' ಸಂಚಿಕೆ ಬಿಡುಗಡೆ) ಸಮಾರಂಭದಲ್ಲಿ ಶ್ರೀಗಳು



ರಜತಮಹೋತ್ಸವ ನಿಧಿಗೆ ಬೆಂಗಳೂರಿನ
ಭಕ್ತರು ೩೦ ಸಾವಿರ ರೂಪಾಯಿ
ಭಕ್ತಿಕಾಣಿಕೆ ಅರ್ಪಿಸುತ್ತಿರುವುದು



ಗ್ರಾಮಾಂತರ ಪ್ರದೇಶವೊಂದರಲ್ಲಿ



ಜರುಗಲಿರುವ ಶ್ರೀಗಳವರ ಸುವರ್ಣಮಹೋತ್ಸವ ಸಮಿತಿ ರಚನೆಯ
ಕಾಲದ ಸಭೆಗೆ ಬಂದ ರಾಜ್ಯದ ವಿದ್ಯಾಮಂತ್ರಿ ಶ್ರೀ ಶಂಕರರಾವ್ ಅವರು



ತುಮಕೂರಿನ ಮಹಿಳಾ ಸಮಾಜದಲ್ಲಿ



ಒಂದು ಶಾಲಾ ಸಮಾರಂಭದಲ್ಲಿ



ಶ್ರೀ ಕ್ಷೇತ್ರಕ್ಕೆ ರಾಜ್ಯದ ಮಂತ್ರಿ ಶ್ರೀಮತಿ ಇ. ವಾ. ವಾಜ್ ಆಗಮಿಸಿದಾಗ



ಒಂದು ಶಾಲಾ ಸಮಾರಂಭ



ತುಮಕೂರಿನಲ್ಲಿ ಭಕ್ತರ ಭಕ್ತಿಯ ಸೆರೆಯಲ್ಲಿ



ಬೆಂಗಳೂರಿನ ಒಂದು ಕಾಲೇಜಿನ ಸಮಾರಂಭದಲ್ಲಿ



ವಸ್ತುಪ್ರದರ್ಶನದಲ್ಲಿ ಬಹುಮಾನ ವಿನಿಯೋಗ



ಮೈಸೂರಿನ ಶರಣಸೇವಾಮಂಡಲಿಯ ಸಭೆಯಲ್ಲಿ



ಕರ್ನಾಟಕದ ಗವರ್ನರ್ ಧರ್ಮವೀರ ಅವರು 1971ರಲ್ಲಿ ಶ್ರೀ ಮಠಕ್ಕೆ ಬಂದಾಗ



ವಸ್ತು ಪ್ರದರ್ಶನದ ಮುಕ್ತಾಯ ಸಮಾರಂಭಕ್ಕೆ ರಾಜ್ಯದ ಐ.ಜಿ.ಪಿ. ವೀರಭದ್ರಯನವರು ಬಂದಾಗ





ತುಮಕೂರಿನ ನಿಯಂತ್ರಿತ ಮಾರುಕಟ್ಟೆಯಾರ್ಡಿನ ಶಂಕುಸ್ಥಾಪನೆಯ ಸಮಾರಂಭದಲ್ಲಿ ಶ್ರೀಗಳು

← ಆಧ್ಯಾತ್ಮಿಕ ಕ್ಷೇತ್ರದ ಎರಡು ದಿವ್ಯ ಮೂರ್ತಿಗಳು



ಕರ್ನಾಟಕ ರಾಜ್ಯದ ಶಿಕ್ಷಣಾ ಇಲಾಖಾ ನಿರ್ದೇಶಕ ಶ್ರೀ ಮುಂಚಯ್ಯ ಅವರು ಕ್ಷೇತ್ರದ ವಿದ್ಯಾರ್ಥಿ ಸಂಘಕ್ಕೆ ಭೇಟಿ ಕೊಟ್ಟಾಗಿನ ಸಮಾರಂಭದಲ್ಲಿ ಶ್ರೀಗಳು



…ಕಿ. ಲಕ್ಕಪ್ಪನವರು ಶ್ರೀ ಕ್ಷೇತ್ರದ ವಿದ್ಯಾರ್ಥಿ ಸಂಘಕ್ಕೆ ಭೇಟಿ ಕೊಟ್ಟಾಗ



ಲಕ್ಕಪ್ಪನವರ ಉಪನ್ಯಾಸವನ್ನಾಲಿಸುವ ಕ್ಷೇತ್ರದ ವಿದ್ಯಾರ್ಥಿ ಸಮೂಹ



ಬ್ಯಾಲಕೆರೆ ಗ್ರಾಮಾಂತರ ಬಸವಜಯಂತಿ ಕಾರ್ಯಕ್ರಮಕ್ಕೆ ಆಗಮಿಸಿದಾಗ ಆ ಪ್ರದೇಶದ ಭಕ್ತರ ಭಕ್ತಿಯ ಸೆರೆಯಲ್ಲಿ



ಕ್ಷೇತ್ರದ ವಿದ್ಯಾರ್ಥಿಸಂಘದ ಒಂದು ಸಮಾರಂಭದಲ್ಲಿ



ಸಿದ್ಧಗಂಗಾ ಸೈನ್ಸ್, ಆರ್ಟ್ಸ್ ಮತ್ತು ಕಾಮರ್ಸ್ ಕಾಲೇಜಿನ ವಿದ್ಯಾರ್ಥಿಸಂಘದ
ಒಂದು ಸಮಾರಂಭದಲ್ಲಿ ಶ್ರೀಗಳು

**ನಿತ್ಯತೃಪ್ತಾತ್ಮರೇ !**

ಮಹಾಜನರು ಅಸ್ತಿತ್ವಕ್ಕೆ ತಂದ ಈ ಸಮಿತಿಯು ನಿಧಿಯನ್ನು ಸಂಗ್ರಹಿಸಿ, ಸಾಂಪ್ರತ ವರ್ಷ ಅಂತರರಾಷ್ಟ್ರೀಯವಾಗಿ ಗ್ರಂಥರಜತ ಮಹೋತ್ಸವವನ್ನು ದೇಶವಿದೇಶಗಳಲ್ಲಿ ಆಚರಿಸುತ್ತಿರುವ ಈ ಸುಸಮಯದಲ್ಲಿ **ಶ್ರೀ ಶಿವಕುಮಾರಸ್ವಾಮಿ ಸಾರ್ವಜನಿಕ ಗ್ರಂಥಾಲಯ ಮತ್ತು ಸಂಶೋಧನಾ ಕೇಂದ್ರ**ವನ್ನು ಸನ್ನಿಧಿಯ ನಾಮಾಂಕಿತದಲ್ಲಿ ಸ್ಥಾಪಿಸಲು ಈ ನಿಧಿಯ ಹಣದಿಂದ ಒಂದು ಭವ್ಯ ಭವನವನ್ನು ಶ್ರೀ ಮಠದಲ್ಲಿ ನಿರ್ಮಿಸುತ್ತಾ, ಅದರ ಮತ್ತು ತಮ್ಮ ಸಂಘ-ಸಂಸ್ಥೆ ಮಠ-ಮಾನ್ಯಗಳ ಪೋಷಕವಾಗಿ **ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ** ನಾಮಧೇಯದ ಅಚ್ಚುಕೂಟವನ್ನು ಸಿದ್ಧಪಡಿಸಿ, ಸನ್ನಿಧಿಗೆ ಒಪ್ಪಿಸುತ್ತಿದ್ದೇವೆ. ತಾವು ಸ್ಥಾಪಿಸಲಿರುವ ಭತ್ತದ ಗಿರಣಿಯ ಪೂರಾ ಮೊತ್ತವನ್ನು ಮತ್ತು ತಮ್ಮ ವಿಪುಲ ಸಂಚಾರದ ಸೌಕರ್ಯಕ್ಕಾಗಿ ಒಂದು ಕಾರನ್ನು ನಿಧಿಯ ಹಣದಿಂದ ಒಪ್ಪಿಸುತ್ತಿದ್ದೇವೆ. ಈ ಯತ್ಕಿಂಚಿತ್ ಕೈಂಕರ್ಯವನ್ನು ಕೃಪೆಯಿಟ್ಟು ಸ್ವೀಕರಿಸಿ ಅನುಗ್ರಹಿಸಬೇಕಾಗಿ ಪ್ರಾರ್ಥಿಸುತ್ತೇವೆ.

**ಪೂರ್ಣಪ್ರಜ್ಞ ಮೂರ್ತಿಗಳೇ !**

ಮಾನವರು ತಮ್ಮ ಪೀಳಿಗೆಯ ಯೋಗಕ್ಷೇಮಕ್ಕಾಗಿ ಸ್ಥಾಪಿಸುವ ಸಮಾಜದ ನಿಕಟ ಸಹವರ್ತಿ ಸಂಘ–ಸಂಸ್ಥೆಗಳ ಸಾರೋದ್ಧಾರ ಪುರೋಭಿವೃದ್ಧಿಗಾಗಿ ಮುಂಜಾಗ್ರತೆ ವಹಿಸುವುದು ಆದ್ಯ ಕರ್ತವ್ಯವೆಂಬುದನ್ನು ಭ್ರುತಪಡಿಸುವುದನಾವಶ್ಯಕ. ತಾವು ಸಂಸ್ಥೆ, ಮಠ ಮಾನ್ಯಗಳನ್ನು ಬೃಹದಾಕಾರವಾಗಿ ಬೆಳೆಸುತ್ತಿರುವಿರಿ. ಅವುಗಳ ನಿತ್ಯವ್ಯವಹಾರಾದಿಗಳು ಬಹು ಕ್ಲಿಷ್ಟಕರವಾಗಿವೆ. ಅವುಗಳ ಸುಭವಿಷ್ಯಕ್ಕಾಗಿ ವಿದ್ವತ್ಪೂರ್ಣ, ದಕ್ಷ ಉತ್ತರಾಧಿಕಾರಿ ಸ್ವಾಮಿಗಳನ್ನು ಈಗಲೇ ನೇಮಿಸಿ ತಮ್ಮ ಆಳವಾದ ಅನುಭವವನ್ನು ಅವರಿಗೆ ಧಾರೆ ಎರೆಯುವುದು ಅತ್ಯಂತ ಅವಸರ ಮತ್ತು ಆವಶ್ಯಕವೆಂದು ವಿನಮ್ರತೆಯಿಂದ ಬಿನ್ನವಿಸಿಕೊಳ್ಳುತ್ತೇವೆ. ಭಕ್ತವೃಂದದ ಕಳಕಳಿಯ ಈ ಕೋರಿಕೆಯನ್ನು ಶೀಘ್ರವಾಗಿ ಈಡೇರಿಸುವ ಕೃಪೆಮಾಡಬೇಕೆಂದು ಭಕ್ತಪರಾಧೀನರಾದ ತಮ್ಮನ್ನು ಬೇಡುತ್ತೇವೆ, ಮಹಾಸ್ವಾಮಿ.

**ಕೃಪಾಳು ಮಹಾನುಭಾವರೇ !**

ಸನ್ನಿಧಿಯ ರಜತಮಹೋತ್ಸವದ ಯಶಸ್ವಿ ಆಚರಣೆಗೆ ಸಹಸ್ರಾರು ಮಹನೀಯರು ಪ್ರತ್ಯಕ್ಷ ಪರೋಕ್ಷವಾಗಿ ನೆರವನ್ನಿತ್ತಿರುವರು. ಅವರ ಹೆಸರುಗಳನ್ನೆಲ್ಲಾ ಹೊಗಳಲು ಪ್ರಯತ್ನಪಟ್ಟರೆ ಲೋಪ ಸಂಧಿಯ ಪಾಪಕ್ಕೆ ಪಕ್ಕಾಗಬೇಕಾದೀತು. ಅವರೆಲ್ಲರಿಗೂ ನಮ್ಮ ಹೃತ್ಪೂರ್ಣ ಕೃತಜ್ಞತೆಯನ್ನು ನಿವೇದಿಸಿ, ಸನ್ನಿಧಿಯವರು ಅವರೆಲ್ಲರಿಗೂ ಸರ್ವಮಂಗಳವನ್ನು ಅನುಗ್ರಹಿಸಿ ಆಶೀರ್ವದಿಸಬೇಕೆಂದು ಬೇಡುತ್ತೇವೆ.

ಪ್ರಜಾಪರಿಪಾಲನಾ ಸತ್ಕಾರ್ಯಗಳಲ್ಲಿ ತನು-ಮನ-ಧನಗಳನ್ನು ಸಮರ್ಪಿಸುತ್ತಾ ತಲ್ಲೀನರಾಗಿರುವ ನುರಿತ ರಾಜಕಾರಿಣಿ ರಾಜ್ಯಪಾಲರು ಶ್ರೀ ಮೋಹನಲಾಲ್ ಸುಖಾಡಿಯಾರವರು ಮತ್ತು ದೀನದಲಿತರ ಉದ್ಧಾರ ಸಾಹಸೋದ್ಯೋಗಿ, ರಾಜತಂತ್ರ ಪ್ರವೀಣ ಮುಖ್ಯಮಂತ್ರಿಗಳು ಶ್ರೀ ದೇವರಾಜ ಅರಸುರವರು ನಮ್ಮೆಲ್ಲರ ಮೇಲೆ ಅಪಾರವಾದ ಕೃಪೆಯಿಟ್ಟು ಈ ಸನ್ಮಾನ ಮಹಾಸಮಾರಂಭದಲ್ಲಿ ಅತ್ಯಂತ ಪ್ರಾಮುಖ್ಯವಾಗಿ ಭಾಗವಹಿಸಿರುವುದು ಈ ಮಹೋತ್ಸವಕ್ಕೆ ರನ್ನ ಚಿನ್ನದ ಕಿರೀಟವಿಟ್ಟಂತಾಗಿದೆ. ಅವರಿಗೆ ನಾವು ಚಿರಋಣಿಗಳು. ಜಗನ್ನಿಯಾಮಕನು ಅವರಿಗೆ ಸರ್ವಮಂಗಳವನ್ನು ದಯಪಾಲಿಸಲೆಂದು ಮನಸಾರ ಹಾರೈಸುತ್ತೇವೆ.

ಸನ್ನಿಧಿಯವರ ಸಂಸ್ಥೆ, ಮಠ ಮಾನ್ಯಗಳು ಚಿರಾಯುಗಳಾಗಿರಲಿ. ಶ್ರೀಗಳು ಪರಂಜ್ಯೋತಿಯಾಗಿ ಸದಾ ಬೆಳಗುತ್ತಿರಲೆಂದು ಸರ್ವೇಶ್ವರನನ್ನು ಅನನ್ಯ ಭಕ್ತಿಭಾವದಿಂದ ಪ್ರಾರ್ಥಿಸುತ್ತೇವೆ.

**ಸಿದ್ಧಗಂಗಾ** **ಇಂತು ಭಕ್ತ ಸಮಸ್ತರ ಪರವಾಗಿ ಅನಂತಾನಂತ ಪ್ರಣಾಮಗಳನ್ನು**
೨೬–೫–೧೯೭೨ **ಶ್ರೀಗಳಲ್ಲಿ ಅರ್ಪಿಸುತ್ತಿರುವ ರಜತ ಮಹೋತ್ಸವ ಸಮಿತಿ ಸದಸ್ಯರು**

೨

ಸ್ವಸ್ತಿಶ್ರೀಮನ್ನೃಪ ಶಾಲೀವಾಹನ ಶಕ ೧೮೯೪ ನೆಯ ಪರಿಧಾವಿ ಸಂವತ್ಸರದ ವೈಶಾಖ ಶುಕ್ಲ ಪೂರ್ಣಿಮಾ ಭಾನುವಾರ ೨೮–೫–೧೯೭೨ ರಂದು ಮೈಸೂರು ಸಂಸ್ಥಾನದ ವಿದ್ಯಾಮಂತ್ರಿಗಳಾದ ಶ್ರೀಮಾನ್ ಎ. ಆರ್. ಬದರಿನಾರಾಯಣ್ ಅವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಗಾಂಧಿ ಶಾಂತಿಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀಮಾನ್ ಆರ್. ಆರ್. ದಿವಾಕರ ಅವರಿಂದ ಉದ್ಘಾಟಿಸಲ್ಪಟ್ಟ ಶ್ರೀ ಸಿದ್ಧಲಿಂಗೇಶ್ವರ ವೇದ–ಸಂಸ್ಕೃತ ಮಹಾಪಾಠಶಾಲೆ ಮತ್ತು ಉಚಿತ ವಿದ್ಯಾರ್ಥಿನಿಲಯಗಳ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾಕ್ಷೇತ್ರಾಧ್ಯಕ್ಷರೂ, ತ್ರಿವಿಧದಾಸೋಹಂಭಾವಿಗಳೂ, ಭಕ್ತವಾತ್ಸಲ್ಯಸಂಭೃತ ಭಾವನಾ

**ಸಮುದ್ರರೂ ಆದ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಶ್ರೀ ಕ್ಷೇತ್ರದ ಭಕ್ತವೃಂದ ಹಾಗೂ ಹಳೆಯ ವಿದ್ಯಾರ್ಥಿವೃಂದದವರು ಶ್ರದ್ಧಾಭಕ್ತಿ ವಿಶ್ವಾಸಪೂರ್ವಕ ಅರ್ಪಿಸಿದ ಬಿನ್ನವತ್ತಳೆ.**

ಪರಮಪೂಜ್ಯರೇ,

ಕಲ್ಯಾಣದ ಕ್ರಾಂತಿಯ ನಂತರದಲ್ಲಿ ಸಮಾಜೋದ್ಧರಣದ ಮಹತ್ವಪಾತ್ರವಹಿಸಿದ್ದ ಹರದನಹಳ್ಳಿಯ ಶೂನ್ಯ ಸಿಂಹಾಸನದ ಪರಂಪರೆಯ ಶ್ರೀ ಗೋಸಲಸಿದ್ಧೇಶ್ವರರು ಕ್ರಿ.ಶ. ೧೫ನೆಯ ಶತಮಾನದ ಆದಿಭಾಗದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಈ ಮಠವನ್ನು ಸ್ಥಾಪಿಸಿ ತನ್ಮೂಲಕ ಧರ್ಮೋದ್ಧಾರಕಾರ್ಯತತ್ಪರರಾಗಿದ್ದರೆಂಬುದು ಚಾರಿತ್ರಿಕಸತ್ಯವಿಷಯ ವಾಗಿದೆ. ಪ್ರಭುದೇವ, ಚೆನ್ನಬಸವೇಶ್ವರ, ಸಿದ್ಧರಾಮೇಶ್ವರರ ನಂತರ ಗೋಸಲಸಿದ್ಧೇಶ್ವರರು ಪ್ರಭುದೇವರ ಶೂನ್ಯಪೀಠ ವನ್ನು ಉದ್ಧಾರಗೊಳಿಸಿದ ಕ್ರಾಂತಿಪುರುಷರು. ಅವರು ಸಿದ್ಧಗಂಗೆಯನ್ನು ತಮ್ಮ ತಪೋನುಷ್ಠಾನದ ಸ್ಥಾನವನ್ನಾಗಿ ಮಾಡಿ ಕೊಂಡಿದ್ದರು. ಅವರ ಶಿಷ್ಯಪರಂಪರೆಯಲ್ಲಿ ಬಂದ ಹರದನಹಳ್ಳಿ ಶ್ರೀ ಶಂಕರಾಚಾರ್ಯಸ್ವಾಮಿಗಳು, ಗೋಸಲಚೆನ್ನಬಸವೇಶ್ವರರು, ತೋಂಟದ ಸಿದ್ಧಲಿಂಗೇಶ್ವರರು ಈ ಕ್ಷೇತ್ರದಲ್ಲಿ ಅನೇಕ ವರ್ಷಗಳು ತಪೋನುಷ್ಠಾನಗಳಲ್ಲಿ ನಿರತರಾಗಿ ಧರ್ಮಪ್ರಚಾರ ಮಾಡಿದ್ದಾರೆ. ಇದೇ ಪರಂಪರೆಯಲ್ಲಿ ೧೯ ನೆಯ ಶತಮಾನದಲ್ಲಿ ಶ್ರೀ ನಿ। ಪ್ರ। ರುದ್ರಸ್ವಾಮಿಗಳು, ಶ್ರೀ ಮುಪ್ಪಿನಸ್ವಾಮಿಗಳು, ಶ್ರೀ ಸಿದ್ಧಲಿಂಗ ಸ್ವಾಮಿಗಳೆಂಬುವರು ಈ ಕ್ಷೇತ್ರದ ಪರಂಪರೆಯನ್ನು ಕಾಯ್ದುಕೊಂಡು ಬಂದರು. ಶ್ರೀ ಸಿದ್ಧಲಿಂಗಸ್ವಾಮಿಗಳವರ ಕಾಲದಲ್ಲಿ ಮಹಾಮಹಿಮರಾದ ಅಟವಿಸ್ವಾಮಿಗಳೆಂಬುವರು ಉತ್ತರದಿಂದ ಇಲ್ಲಿಗೆ ಬಂದು ಬಹುಕಾಲ ತಪೋನಿಷ್ಠರಾಗಿದ್ದರು. ಅವರ ನಂತರ ಪುಣ್ಯಶ್ಲೋಕರೂ ಆತ್ಮಶಕ್ತಿಸಂಪನ್ನರೂ ಆದ ಶ್ರೀ ನಿ। ಪ್ರ। ಲಿಂ। ಉದ್ದಾನಶಿವಯೋಗಿಗಳೇ ಶ್ರೀ ಕ್ಷೇತ್ರದ ದಾಸೋಹ, ವಿದ್ಯಾಸಂಸ್ಥೆಗಳೇ ಮೊದಲಾದವುಗಳ ಅಂಕುರಾರ್ಪಣ ಮಾಡಿದ ಪ್ರಪ್ರಥಮ ಮಹನೀಯರು. ಯಾವ ಕಾಲದಲ್ಲಿ ಮತೀಯ ವಿದ್ಯಾರ್ಥಿನಿಲಯಗಳಿಗೆ ಸರ್ಕಾರದ ಮನ್ನಣೆಯಿತ್ತೋ ಯಾವ ಕಾಲದಲ್ಲಿ ಸರ್ಕಾರವೂ ಸಾರ್ವಜನಿಕ ವಿದ್ಯಾರ್ಥಿನಿಲಯಗಳನ್ನು ತೆರೆಯಲು ಮುಂದೆ ಬಂದಿರಲಿಲ್ಲವೋ, ಆ ಕಾಲದಲ್ಲಿ ಅಂದರೆ ಅರವತ್ತು ವರ್ಷಗಳ ಹಿಂದೆಯೇ ಸ್ವಯಂಪ್ರೇರಣೆಯಿಂದ ಸಾರ್ವ ಜನಿಕ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದ ಕೀರ್ತಿ ಶ್ರೀ ಉದ್ದಾನ ಸ್ವಾಮಿಗಳವರದು. ಅಲ್ಲದೆ ಸಂಸ್ಕೃತ ವಿದ್ಯಾಭ್ಯಾಸವನ್ನು ಎಲ್ಲ ಕೋಮಿನವರೂ ಪಡೆಯಲು ಅರ್ಹರೆಂಬುದನ್ನು ತಿಳಿದು ಅದನ್ನು ಕಾರ್ಯರೂಪಕ್ಕೆ ಅರವತ್ತು ವರ್ಷಗಳ ಹಿಂದೆಯೇ ತಂದುದು ಮಹಾಸಾಧನೆ.

ಸಿದ್ಧಗಂಗಾ ಕ್ಷೇತ್ರವು ಒಂದು ಕೋಮಿನ ಸಂಸ್ಥೆಯಲ್ಲ: ಎಲ್ಲ ಕೋಮಿನ ಭಕ್ತರ ಸುಕ್ಷೇತ್ರ. ಎಲ್ಲ ಕೋಮಿನ ಸುಮಾರು ನಾಲ್ಕು ಸಾವಿರ ವಿದ್ಯಾರ್ಥಿಗಳು ಉಚಿತ ಅಶನವಸತಿ ಸೌಕರ್ಯವನ್ನು ಪಡೆದು ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾರೆ. 'ಸರ್ವೇ ಜನಾಸ್ಸುಖಿನೋಭವಂತು' ಎಂಬ ಪುರಾತನೋಕ್ತಿಯು ಶ್ರೀ ಕ್ಷೇತ್ರದಲ್ಲಿ ಕಾರ್ಯರೂಪಕ್ಕೆ ಬಂದಿರುತ್ತದೆ.

**ಕಾಯಕನಿಷ್ಠರೇ,**

ತಾವು ೩-೩-೧೯೩೦ ರಂದು ವಿಧ್ಯುಕ್ತವಾಗಿ ಪುಣ್ಯಶ್ಲೋಕರಾದ ಶ್ರೀ ನಿ। ಪ್ರ। ಶ್ರೀ ಉದ್ಧಾನ ಶಿವಯೋಗಿಗಳವರ ಕರಕಂಜಸಂಜಾತರೆನಿಸಿ ಶ್ರೀಮಠದ ಪೀಠಾಧಿಕಾರ ಪಡೆದು ಅವರ ಆಜ್ಞಾಧಾರಕರಾಗಿ ಶ್ರೀಕ್ಷೇತ್ರದ ಉತ್ತರೋತ್ತರ ಬೆಳವಣಿ ಗೆಯ ಕಾರ್ಯದಲ್ಲಿ ತತ್ಪರರಾದಿರಿ. ಶ್ರೀ ಉದ್ದಾನ ಶಿವಯೋಗಿಗಳು ೧೧-೧-೧೯೪೧ ರಲ್ಲಿ ಲಿಂಗೈಕ್ಯರಾದ ಮೇಲೆ ಶ್ರೀಕ್ಷೇತ್ರದ ಪೂರ್ಣಭಾರ ತಮ್ಮ ಮೇಲೆ ಬಿತ್ತು. ತಾವು ತಮ್ಮ ಗುರುಗಳ ಅಂತಃಕರಣವನ್ನು ಸೂರೆಗೊಂಡವರು. ಸ್ವತಃ ಲಿಂಗಲೀಲಾ ವಿನೋದಚಿತ್ತರು ಹಾಗೂ ವಿದ್ವಾಂಸರು. ಈ ಎಲ್ಲ ಶಕ್ತಿಗಳ ಫಲವಾಗಿ ಸಾರ್ವಜನಿಕ ಕ್ಷೇತ್ರಕ್ಕೆ ಪದಾರ್ಪಣೆಮಾಡಿದುದೇ ತಡ, ಶ್ರೀ ಕ್ಷೇತ್ರದ ಸಮಸ್ತಭಕ್ತರ ಹೃದಯವನ್ನು ಸೂರೆಗೊಂಡಿರಿ. ೧೯೪೧ ರಲ್ಲಿ ಕೇವಲ ನೂರು ಜನ ವಿದ್ಯಾರ್ಥಿಗಳಿಂದ ಕೂಡಿದ್ದ ವೇದ-ಸಂಸ್ಕೃತ ಪಾಠಶಾಲೆ ಮತ್ತು ವಿದ್ಯಾರ್ಥಿನಿಲಯಗಳು ತಮ್ಮ ಅವಿಶ್ರಾಂತ ಶ್ರಮ, ಕಾರ್ಯನಿಷ್ಠೆ ಹಾಗೂ ತಪಸ್ಸುಗಳ ಫಲ ವಾಗಿ ಇಂದು ಸುಮಾರು ನಾಲ್ಕುಸಾವಿರ ವಿದ್ಯಾರ್ಥಿಗಳಿಗೆ ಉಚಿತ ಅಶನವಸತಿ ಶಿಕ್ಷಣ ಸೌಕರಗಳನ್ನೊದಗಿಸಿವೆ. ತಾವು ವಿರಕ್ತ ಶ್ರೇಷ್ಠರಾದರೂ ಲೌಕಿಕಜ್ಞರಾಗಿ ಈಗಿನ ವಿದ್ಯಾರ್ಥಿಗಳ ಅವಶ್ಯಕತೆಗಳಿಗನುಗುಣವಾಗಿ ಶ್ರೀಕ್ಷೇತ್ರದಲ್ಲಿ ಸಂಸ್ಕೃತ ಮಹಾಪಾಠ ಶಾಲೆಯ ಜೊತೆಗೆ ಒಂದು ಜೂನಿಯರ್ ಕಾಲೇಜು. ಎರಡು ಹೈಸ್ಕೂಲುಗಳು, ಒಂದು ಕನ್ನಡ ಪಂಡಿತರ ಕಾಲೇಜು, ವೃತ್ತಿ ಶಿಕ್ಷಣಶಾಲೆ, ಉಪಾಧ್ಯಾಯ ತರಬೇತಿ ಕೇಂದ್ರ, ಮಾಧ್ಯಮಿಕ ಶಾಲೆಯನ್ನು ತೆರೆದು ಅನೇಕ ವಿದ್ಯಾರ್ಥಿಗಳಿಗೆ ಅನುಕೂಲ ಕಲ್ಪಿಸಿ ದ್ದೀರಿ. ಅನತಿ ದೂರದ ತುಮಕೂರಿನಲ್ಲಿ ಸಿದ್ಧಗಂಗಾ ಇಂಜಿನಿಯರಿಂಗ್ ಕಾಲೇಜು, ಸಿದ್ಧಗಂಗಾ ಸೈನ್ಸ್‌ಕಾಲೇಜು, ಸಿದ್ಧಗಂಗಾ ಸಂಜೆ ಕಾಲೇಜು, ಉಪಾಧ್ಯಾಯ ತರಬೇತಿಕೇಂದ್ರಗಳೇ ಮೊದಲಾದುವನ್ನೂ, ಗ್ರಾಮಾಂತರ ಪ್ರದೇಶಗಳಲ್ಲಿ ಸುಮಾರು ೨೨ ಪ್ರೌಢಶಾಲೆಗಳನ್ನು ಮತ್ತು ೩ ಉಚಿತ ವಿದ್ಯಾರ್ಥಿನಿಲಯಗಳನ್ನೂ ತೆರೆದಿದ್ದೀರಿ. ತಮ್ಮ ಸರ್ವಜೀವದಯಾಪರತೆ, ಸಮತಾ ಭಾವ, ಕ್ಷಮಾಶೀಲತೆ, ಸರ್ವಜನ ಸುಖೈಕದೃಷ್ಟಿ, ಸಮಸ್ತ ಕೋಮಿನವರ ಧರ್ಮಸಿದ್ಧಾಂತಗಳ ಬಗೆಗಿರುವ ಗೌರವವೇ ಮೊದ

ಲಾದ ಲೋಕೋತ್ತರ ನಡೆನುಡಿಗಳು ಶ್ರೀಕ್ಷೇತ್ರಕ್ಕೆ ರಾಷ್ಟ್ರೀಯ ಗೌರವವನ್ನು ತಂದಿತ್ತಿರುತ್ತವೆ. ರಾಷ್ಟ್ರದ ಗಣ್ಯನಾಯಕರು ಶ್ರೀಕ್ಷೇತ್ರದ ಕಾರ್ಯಘನತೆಯನ್ನು ಮನಸಾರ ಶ್ಲಾಘಿಸಿದ್ದಾರೆ.

ಶ್ರೀಕ್ಷೇತ್ರದಲ್ಲಿ ಆಶ್ರಯಪಡೆದಿರುವ ಸುಮಾರು ನಾಲ್ಕುಸಾವಿರ ವಿದ್ಯಾರ್ಥಿಗಳಲ್ಲಿ ಅಧಿಕಮಂದಿ ಗ್ರಾಮಾಂತರ ಪ್ರದೇಶಗಳ ಬಡ ಹಾಗೂ ಅನಕ್ಷರಸ್ಥ ಕುಟುಂಬಗಳಿಂದ ಬಂದವರು. ಶ್ರೀಕ್ಷೇತ್ರದಲ್ಲಿ ಅವರಿಗೆ ಆಶ್ರಯ ದೊರಕದಿದ್ದರೆ, ಅವರು ವಿದ್ಯಾವಂತರಾಗುವ ಅವಕಾಶವೇ ಸಾಮಾನ್ಯವಾಗಿ ಇರುತ್ತಿರಲಿಲ್ಲ. ಹೀಗಾಗಿ ಅಧಿಕ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಪ್ರವೇಶ ಕೋರಿ ಬಂದಾಗ ತಮ್ಮ ಜವಾಬ್ದಾರಿ ಹೆಚ್ಚಾಗುವುದೆನ್ನುವುದಕ್ಕಿಂತ ಬಂದವರ ಕಷ್ಟ ಹೆಚ್ಚೆಂದು ಭಾವಿಸಿ ಆಶ್ರಯಕೊಡುತ್ತಿದ್ದೀರಿ. ಈ ಭಾವನೆಯ ಹಿನ್ನೆಲೆಯಲ್ಲಿ ಅಡಗಿರುವ ತಮ್ಮ ಅನುಕಂಪವು ಸರ್ವರನ್ನೂ ಮುಗ್ಧಗೊಳಿಸಿದೆ.

ತಮ್ಮ ಅನುಪಮ ಕಾರುಣ್ಯಭಾವಾದಿಗಳನ್ನು ಗಮನಿಸಿದ ಭಕ್ತವೃಂದ ಕಳೆದ ಮೂರು ದಿನಗಳಿಂದ ತಮ್ಮ ರಜತ ಮಹೋತ್ಸವವನ್ನು ಆಚರಿಸಿ ಪುಣ್ಯಭಾಗಿಯಾಗಿದೆ. ಶ್ರೀಕ್ಷೇತ್ರದಿಂದ ಅನೇಕ ಮುಖಗಳಿಂದ ಉಪಕೃತರಾದ ಸಹಸ್ರಾವಧಿ ವಿದ್ಯಾರ್ಥಿಗಳು ತಮ್ಮನ್ನು ಸಾಕಿ-ಸಲಹಿ ಜೀವನೋಪಾಯವನ್ನು ಕಲ್ಪಿಸಿಕೊಟ್ಟ ಮಾತೃಸಂಸ್ಥೆಗೆ ಕೈಲಾದ ಸೇವೆ ಸಲ್ಲಿಸುವ ಉದ್ದೇಶದಿಂದ ೧೯೫೪ ರಲ್ಲಿ ಹಳೆಯ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿಕೊಂಡಿದ್ದಾರೆ. ತಮ್ಮ ಮಾರ್ಗದರ್ಶನದಲ್ಲಿ ಜಾತ್ರಾ ಕಾಲದಲ್ಲಿ ನಡೆಯುವ ವಸ್ತುಪ್ರದರ್ಶನ ನಿರ್ವಹಣೆ. ಸಿದ್ಧಗಂಗಾ ತ್ರೈಮಾಸಿಕ ಪ್ರಕಟಣೆಯ ಜವಾಬ್ದಾರಿ ಮೊದಲಾದ ಕಾರ್ಯಕ್ರಮಗಳಲ್ಲಿ ಸಂಘವು ತೊಡಗಿದೆ. ಈ ಸಂದರ್ಭದಲ್ಲಿ ಎಲ್ಲ ಹಳೆಯ ವಿದ್ಯಾರ್ಥಿಗಳು ಕೃತಜ್ಞತಾಭಾವದಿಂದ ಶ್ರೀ ಶ್ರೀ ಸನ್ನಿಧಿಯಲ್ಲಿ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮ ಸಲ್ಲಿಸುತ್ತಿದ್ದಾರೆ.

**ತಪೋಧನರೇ,**

ತಮ್ಮ ಆತ್ಮಶ್ರೀಯ ಫಲವಾಗಿ ಬೃಹದಾಕಾರವಾಗಿ ಬೆಳೆದಿರುವ ಶ್ರೀ ಸಿದ್ಧಗಂಗಾ ಮಠ ಮತ್ತು ಅದರ ಅನೇಕ ಅಂಗ ಸಂಸ್ಥೆಗಳು ತಮ್ಮ ತಪೋನಿಷ್ಠೆಯಿಂದ ಹಾಗೂ ಶ್ರೀಕ್ಷೇತ್ರವನ್ನು ಸಹಾ ಕಾಯುತ್ತಿರುವ ದೈವೀಶಕ್ತಿಯ ಕೃಪೆಯಿಂದ ಸದಾ ಕಾಲಕ್ಕೂ ಯಾವ ಕುಂದೂ ಇಲ್ಲದೆ ನಡೆಯುತ್ತವೆಂಬ ಅಚಲ ನಂಬಿಕೆಯನ್ನು ಸಮಸ್ತ ಭಕ್ತವೃಂದ ಹೊಂದಿದೆ. ಉತ್ತರೋತ್ತರ ತಮ್ಮ ಎಲ್ಲ ಶೈಕ್ಷಣಿಕ ಸಂಸ್ಥೆಗಳೂ, ದಾಸೋಹಾದಿ ಕಾರ್ಯಗಳೂ, ಧಾರ್ಮಿಕ ಪ್ರಚಾರವೂ ಇತೋಪ್ಯತಿಶಯವಾಗಿ ಬೆಳೆದು ಸರ್ವಜನರ ಇಷ್ಟಾರ್ಥಗಳನ್ನು ಪೂರೈಸಲೆಂದೂ ತಮ್ಮ ತಪಸ್ಸು ವೃದ್ಧಿಗೊಳ್ಳಲೆಂದೂ ಪರಶಿವನನ್ನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತ. ಶ್ರೀಪಾದಕಮಲಗಳಿಗೆ ಈ ಬಿನ್ನವತ್ತಳೆಯನ್ನು ಸಮರ್ಪಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
೨೮-೫-೧೯೭೭

ಇತಿ ಸನ್ನಿಧಿಯ ಕೃಪಾಪಾತ್ರರಾದ
**ಶ್ರೀ ಕ್ಷೇತ್ರದ ಭಕ್ತವೃಂದ ಮತ್ತು ಹಳೆಯ ವಿದ್ಯಾರ್ಥಿಗಳು**

೩

**ನಿಷ್ಕಾಮಕರ್ಮಿಗಳೇ.**

ಮಹಾತಪಸ್ವಿಗಳ ತಪೋಭೂಮಿಯಾದ ಶ್ರೀ ಕ್ಷೇತ್ರದ ಅಧಿಕಾರ ಸೂತ್ರವನ್ನು ವಹಿಸಿದಂದಿನಿಂದ ಅವಿಚ್ಛಿನ್ನ ಶ್ರಮ ವಹಿಸಿ ಶ್ರೀ ಕ್ಷೇತ್ರದ ಯಶೋಪ್ರಕಾಶವು ಎಲ್ಲೆಡೆಗೂ ಹಬ್ಬಿ ಪ್ರಕಾಶಿಸುತ್ತಿರುವುದು ನಾಡಿನ ಜನರ ಪುಣ್ಯೋದಯವೇ ಸರಿ. ಉದಾರಶೀಲರೂ, ತತ್ತ್ವಸಂಪನ್ನರೂ, ಕಾಯಕತತ್ವ ಅನುಷ್ಠಾನ್ವಿತರೂ ಆದ ತಾವು ಕನ್ನಡ, ಸಂಸ್ಕೃತ, ಆಂಗ್ಲ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದು ಸಮಾಜೋನ್ನತಿಗೆ ವಿದ್ಯೆಯ ಪ್ರಾಧಾನ್ಯತೆಯನ್ನು ಅರಿತು ವೇದಪಾಠಶಾಲೆ, ಸಂಸ್ಕೃತ ಮಹಾಪಾಠಶಾಲೆ, ಪ್ರೌಢಶಾಲೆಗಳನ್ನು ತೆರೆದು ನಾಡಿನ ಮಕ್ಕಳ ಜ್ಞಾನಾರ್ಜನೆಗೆ ದಾತರಾಗಿರುವುದಲ್ಲದೆ ಎಲ್ಲಾ ಜನಾಂಗಕ್ಕೂ ಊಟ ವಸತಿ ಏರ್ಪಡಿಸಿ ರಾಷ್ಟ್ರದಲ್ಲಿ ಒಂದು ನೂತನ ಸುಧಾರಣೆಯ ಆರಾಧಕರಾಗಿರುವುದು ನಮಗೆ ಹೆಮ್ಮೆ.

**ಜ್ಞಾನಿಗಳೇ,**

ತಾವು ತಮ್ಮ ಅಮಿತ ಕಾರ್ಯಗಳ ಮಧ್ಯೆ ಬಿಡುವು ಮಾಡಿಕೊಂಡು ಇಲ್ಲಿಗೆ ದಯಮಾಡಿರುವುದು ನಮ್ಮಗಳ ಹಾಗೂ ಈ ಗ್ರಾಮಾಂತರ ಪ್ರಜೆಗಳ ಪುಣ್ಯ. ತಮ್ಮ ಪಾದಸ್ಪರ್ಶದಿಂದ ನಮ್ಮ ಗ್ರಾಮಗಳು ಒಮ್ಮುಖವಾಗಿ ಬೆಳೆದು ಸುಖ ಸಂತೋಷಗಳು ಲಭಿಸಿ ತಮ್ಮಂತಹವರನ್ನು ಆಗಿಂದಾಗ್ಗೆ ಬರಮಾಡಿಕೊಂಡು ನಾಲ್ಕಾರು ಹಿತವಚನಗಳನ್ನು ಮತ್ತು ಆಶೀರ್ವಾದವನ್ನು ಪಡೆಯಲು ಪರಮೇಶ್ವರನು ಅನುಗ್ರಹಿಸಲಿ.

ಕಡಬ. ೧೫-೫-೧೯೬೬

**ಬೆಟ್ಟಯ್ಯ ಮತ್ತು ರುದ್ರಮ್ಮ**

೪

**ಪರಮಪೂಜ್ಯ ತಪೋಧನರೇ,**

ಜಾತ್ಯತೀತ ಸಮಾಜ ರಚನೆಯ ಕಾರ್ಯವು ಸರ್ಕಾರದ ಕನಸು ಮನಸ್ಸಿನಲ್ಲಿಯೂ ಇಲ್ಲದಿದ್ದವೇಳೆ ಅಂದರೆ ಐವತ್ತು

ವರ್ಷಗಳ ಹಿಂದೆಯೇ ತಮ್ಮ ಪೂಜ್ಯಗುರುವರ್ಯರಾದ ಉದ್ದಾನಶಿವಯೋಗಿಗಳು ಎಲ್ಲಾ ಕೋಮಿನ ವಿದ್ಯಾರ್ಥಿಗಳಿಗೂ ಉಚಿತ ಅಶನ ವಸತಿಗಳ ಸೌಕರ್ಯವನ್ನು ಕಲ್ಪಿಸಿದ್ದುದಲ್ಲದೆ ಗೀರ್ವಾಣವಾಣಿಯನ್ನು ಅಭ್ಯಸಿಸುವ ಅವಕಾಶ ಮಾಡಿಕೊಟ್ಟದ್ದನ್ನು ತಾವು ತಮ್ಮ ಕಾಲದಲ್ಲಿ ಸೂರ್ಮಡಿಯಾಗಿ ಬೆಳೆಸಿಕೊಂಡು ಬಂದಿರುವುದನ್ನು ಯಾರೂ ಮರೆಯುವಂತಿಲ್ಲ.

ಪೂಜ್ಯರಾದ ತಾವು ಇಂದು ಸಮಾರಂಭಕ್ಕೆ ಆಗಮಿಸುವ ಕೃಪೆ ಮಾಡಿದುದಕ್ಕಾಗಿ ನಮ್ಮ ಭಕ್ತಿಪೂರ್ವಕ ಅನಂತ ಪ್ರಣಾಮಗಳು.

ಗದ್ದಿಗೆಮಠ. ತಾ. -೧-೪-೧೯೬೩

ಶ್ರೀ ಮಹಂತೇಶ್ವರಸ್ವಾಮಿ ಭಕ್ತಮಂಡಲಿ

೫

ಪೂಜ್ಯರೇ ತಮ್ಮ ಕ್ಷೇತ್ರದಲ್ಲಿ ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನದಾಸೋಹಗಳನ್ನು ಜಾತಿಯ ಭೇದವಿಲ್ಲದೆ ಒದಗಿಸುತ್ತಿರುವುದು 'ಮಠಶ್ಛಾತ್ರಾದಿನಿಲಯ' ಎನ್ನುವ ನಾಣ್ಣುಡಿಗೆ ಅನ್ವರ್ಥವಾಗಿ, ವಿಶಾಲ ಕರ್ನಾಟಕಕ್ಕೇ ಏಕೆ ವಿಶ್ವಕ್ಕೇ ಅಚ್ಚರಿಯನ್ನುಂಟುಮಾಡಿದೆ.

ಬಿಕ್ಕೋಡು. ೧೯-೫-೧೯೬೦

ಭಕ್ತಮಂಡಲಿ, ವಿರಕ್ತಮಠ

೬

**ತಪೋಮೂರ್ತಿಗಳೇ,**

ಧರ್ಮದ ದೀವಟಿಗೆಯೂ, ಕಲ್ಪನೆಯ ಕಾರಂಜಿಯೂ, ಪ್ರತಿಭೆಯ ಕಲ್ಪತರುವೂ ಆದ ನಮ್ಮ ಕನ್ನಡಸಾಹಿತ್ಯವು ಹಿಂದಿನಿಂದಲೂ ಅರಮನೆ, ಗುರುಮನೆ, ಮಹಮನೆಗಳ ಸಹೃದಯತೆಯ ಪ್ರೋತ್ಸಾಹದಿಂದ ಬೆಳೆದು ಪುಷ್ಟಿಗೊಂಡು ಇಂದು ವೈವಿಧ್ಯತೆ ಪಡೆದಿದೆ. ನಮ್ಮೀ ಚೆಲುವ ಕನ್ನಡನಾಡಿನಲ್ಲಿ ಅನೇಕ ಶಿವಶರಣರೂ, ಸಂತರೂ, ಹರಿದಾಸರೂ, ದಾರ್ಶನಿಕರೂ, ಧರ್ಮಪ್ರಸಾರದ ಕಾರ್ಯವನ್ನು ನಡೆಸುತ್ತ ಸಾಹಿತ್ಯ ಸೇವೆಯನ್ನು ಸತತವಾಗಿ ನಡೆಸಿಕೊಂಡು ಬಂದಿದ್ದಾರೆ. ಈ ಪುಣ್ಯ ಪರಂಪರೆಯನ್ನು ಇಂದಿನ ವಿರಳವೂ ಪುಣ್ಯಮಯವೂ ಆದ ಕೆಲವು ಗುರುಪೀಠಗಳು ಮಾತ್ರ ಮುಂದುವರಿಸಿಕೊಂಡು ಬಂದಿವೆ. ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀಮಠವು ಇಂತಹ ಸತ್ಪರಂಪರೆಯ ಶ್ರೀಮದೂರ್ಜಿತ ಕಾಯಕವನ್ನು ಸತತವಾಗಿ ನಡೆಸಿಕೊಂಡು ಹೋಗುತ್ತಿರುವಲ್ಲಿ ಅಗ್ರಗಣ್ಯವಾಗಿದೆ.

ಸಿದ್ಧಗಂಗಾ ಕ್ಷೇತ್ರವು ಶ್ರೀ ಸಿದ್ಧಲಿಂಗಯತಿವರರ ಪುಣ್ಯಭೂಮಿಯಾಗಿ, ಅಕ್ಷಯ ಗಂಗಾಮೂಲದ ನೆಲೆಯಾಗಿ ಪ್ರಕೃತಿಯ ಬೀಡಾಗಿ, ಶಿವಶರಣರ ಉಪಾಸನಾಭೂಮಿಯಾಗಿ, ಕಣ್ಮನಂಗಳಿಗೆ ಚೇತೋಹಾರಿಯಾಗಿ, ಭಕ್ತರ ಅಭೀಷ್ಟದಾಯಕ ಸ್ಥಳವಾಗಿ ಸುಕ್ಷೇತ್ರವೆನಿಸಿದೆ. ಇಲ್ಲಿ ಜಾತಿ, ಮತ, ಪಂಥಗಳ ಪಥವಿಲ್ಲ. ಇಲ್ಲಿಯ ಪುಣ್ಯಾರಣ್ಯ, ಕ್ಷೇತ್ರದ ಮಹಿಮೆ, ಪಾವನ ಪ್ರಶಾಂತತೆ, ವಿದ್ಯಾಭಿವೃದ್ಧಿ, ವಿಶೇಷವಾದ ನಿತ್ಯದಾಸೋಹ, ನಡೆಯುತ್ತಿರುವ ಲೋಕಸೇವೆ, ಜಾತ್ರೆಯ ಸಂಭ್ರಮ, ಭಕ್ತಿಯ ಊರ್ಧ್ವಮುಖತೆ ಮೊದಲಾದುವು ವೈಶಿಷ್ಟ್ಯವುಳ್ಳವಾಗಿವೆ. ಸಿದ್ಧಗಂಗಾ ಕ್ಷೇತ್ರದಲ್ಲಿ ೧೯೬೪ ಡಿಸೆಂಬರ್‌ನಲ್ಲಿ ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನವೂ ನಡೆದಿದೆ.

ನಿಮ್ಮ ಸರಳ ಮನೋಭಾವ, ಉದಾರದೃಷ್ಟಿ, ಪಾಂಡಿತ್ಯದ ಗಹನತೆ, ಸಚ್ಚಾರಿತ್ರ್ಯ, ಲೋಕಸೇವೆ ಮೊದಲಾದವನ್ನು ಗಮನಿಸಿ ಇತ್ತೀಚೆಗೆ ಕರ್ನಾಟಕ ವಿಶ್ವವಿದ್ಯಾನಿಲಯದವರು 'ಡಾಕ್ಟರ್ ಆಫ್ ಲೆಟರ್ಸ್' ಪ್ರಶಸ್ತಿಯನ್ನಿತ್ತು ಗೌರವಿಸಿದುದು ಕನ್ನಡ ನಾಡಿಗೇ ಭೂಷಣವಾಗಿದೆ. ಇದಕ್ಕಾಗಿ ನಾವೆಲ್ಲರೂ ತಮ್ಮನ್ನು ಭಕ್ತಿಯಿಂದ ಹೃತ್ಪೂರ್ವಕವಾಗಿ ಅಭಿನಂದಿಸಿ ಪ್ರಣಾಮಗಳನ್ನು ಸಮರ್ಪಿಸುತ್ತೇವೆ.

ಚಿತ್ರದುರ್ಗ
೨೭-೪-೬೬

ಕರ್ನಾಟಕ ಸಂಘದ ಅಧ್ಯಕ್ಷರು ಮತ್ತು ಸದಸ್ಯರು
ಅಧ್ಯಕ್ಷತೆ : ಶ್ರೀ ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು
ಉಪಸ್ಥಿತರು : ಎಸ್. ನಿಜಲಿಂಗಪ್ಪ

೭

**ಧರ್ಮ ಪ್ರಭುಗಳೇ,**

ಶ್ರೀ ಕ್ಷೇತ್ರದಲ್ಲಿ ಸಂಕುಚಿತ ಭಾವನೆಯಿಲ್ಲದೆ ದಿನ ನಿತ್ಯವೂ ಸುಮಾರು ಮೂರು ನಾಲ್ಕು ಸಾವಿರ ವಿದ್ಯಾರ್ಥಿಗಳಿಗೆ ಉಚಿತ ಅನ್ನ,ವಸತಿಗಳನ್ನೇರ್ಪಡಿಸಿ ಅವರ ನೈತಿಕ, ಧಾರ್ಮಿಕ ಪ್ರಗತಿಗಾಗಿ ಅಹೋರಾತ್ರಿ ಶ್ರಮಿಸುತ್ತಿರುವ ಸರ್ವಧರ್ಮಪ್ರೇಮಿಗಳಾದ ತಾವು ವಿದ್ಯಾಭಿಮಾನಿಗಳ ಗೌರವಾದರಗಳಿಗೆ ಪಾತ್ರರಾಗಿರುವುದಲ್ಲದೆ ಮಠಾಧಿಪತಿಗಳಿಗೆ ಮಾರ್ಗದರ್ಶಿಗಳಾಗಿರುತ್ತೀರಿ.

ಶ್ರೀ ಸಿದ್ಧಲಿಂಗೇಶ್ವರನು ತಮಗೆ ಇತೋಪ್ಯತಿಶಯವಾದ ಶಕ್ತಿಯನ್ನು ಕರುಣಿಸಿ ತನ್ಮೂಲಕ ಜಗತ್ತಿನ ಉದ್ಧಾರಕ್ಕೂ ಮತ್ತು ಭಕ್ತರ ಮಾರ್ಗದರ್ಶನಕ್ಕೂ ನೆರವಾಗಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಚಿಕ್ಕಮಗಳೂರು. ದಿನಾಂಕ ೨೯–೪–೧೯೬೮ — ಸ್ವಾಗತಸಮಿತಿ ಸದಸ್ಯರು, 'ಶಿವಾನಂದ ಮಂಟಪ'

೮

**ಪರಮಪೂಜ್ಯ ಮಹಾಪಾದರೆ,**

ತಮ್ಮಂತಹ ಪರಮಪುಣ್ಯಪುರುಷರ ಆಗಮನವು ಆಸ್ತಿಕರಿಗೆ ಅತುಲಾನಂದವಾಗಿರುತ್ತದೆ. ಏಕೆಂದರೆ ಮಹಾನುಭಾವರ ಸಂದರ್ಶನವು ಮಹತ್ವದ್ದು. ಇಲ್ಲಿನ ನಮ್ಮೆಲ್ಲರ ಪಾಪಪರಿಹಾರವು ತಮ್ಮ ಪಾದಧೂಳಿಯಿಂದ ೧೫–೪–೧೯೫೩ ರಲ್ಲಿಯೇ ಆಗಬೇಕಾಗಿದ್ದುದು ಇಂದು ಲಭಿಸಿದೆ. ತಮ್ಮ ಗುರು ಪರಂಪರೆಯ ಉದ್ದಾನಶಿವಯೋಗಿಮಹಾಪಾದರು ದನಗೂರು ವೀರಸಿಂಹಾಸನ ಮಠಕ್ಕೂ ಹಾಗೂ ನಮ್ಮ ಬೃಹನ್ಮಠಕ್ಕೂ ದಯಮಾಡಿಸಿ ಭಕ್ತಕೋಟಿಯನ್ನು ಕೃತಾರ್ಥರನ್ನಾಗಿ ಮಾಡಿರುವುದು ಹಲಗೂರಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕಂಥ ಸಂಗತಿಯಾಗಿರುವುದನ್ನು ನಿವೇದಿಸುತ್ತೇವೆ.

ತಾವುಗಳು ಶ್ರೀ ಸಿದ್ಧಗಂಗಾಕ್ಷೇತ್ರದ ಅಧಿಪತಿಗಳಾಗಿ. ಅಧಿಕಾರ ಸ್ವೀಕಾರ ಮಾಡಿಕೊಂಡು, ಭಕ್ತಕೋಟಿಯ ಉದ್ಧಾರವನ್ನು ಉನ್ನತೋನ್ನತವಾಗಿ ಎಸಗಿರುವುದು ಶಿವಕೃಪೆಯೇ ಸರಿ. ಪೀಠಕ್ಕನುಗುಣವಾಗಿ ನಿಷ್ಠೆಯಿಂದ ತಪೋನುಷ್ಠಾನ ಪುರುಷಪುಂಗವರಾಗಿ ಮಹದನುಗ್ರಹ ಮಾಡಿದುದರ ಫಲವೇ ಇಂದು ಕ್ಷೇತ್ರ ಮರ್ತ್ಯದ ಅಮೃತವಾಗಿದೆ. ತಮ್ಮ ಅಭೂತಪೂರ್ವ ಅನುಭವಾನುಗ್ರಹದಿಂದ ಶೈಕ್ಷಣಿಕ ಕ್ಷೇತ್ರವು ಕಾಂತಿದಾಯಕವಾಗಿ ಕಂಗೊಳಿಸುತ್ತಿರುವುದು ಮಹಾಸುಯೋಗವೇ ಸರಿ. ತಾವು ಒಂದು ವ್ಯಕ್ತಿಯಲ್ಲ ; ಒಂದು ಮಹಾಶಕ್ತಿ ಎಂಬುದನ್ನು ಜನತೆ ಮನಗಂಡಿದೆ. ಇಂತಹ ಸಂತಶ್ರೇಷ್ಠರನ್ನು ಭಕ್ತಿಭಾವದಿಂದ ಬರಮಾಡಿಕೊಂಡುದು ಯಥೋಚಿತ ಕರ್ತವ್ಯಕಾರ್ಯವೆಂದು ಭಕ್ತಿಯಿಂದ ಬಿನ್ನವಿಸಿಕೊಳ್ಳುತ್ತೇವೆ.

ಹಲಗೂರು. ತಾ. ೮–೨–೧೯೬೭ — ವೀರಶೈವ ತರುಣ ಮಂಡಲ

೯

**ಶಿವಯೋಗೀಶ್ವರರೇ,**

ಮಹಾ ಶಿವಯೋಗೀಶ್ವರರ ತಪೋಭೂಮಿಯೂ, ಲೌಕಿಕ ಪಾರಲೌಕಿಕ ವಿದ್ಯಾವೈದುಷ್ಯಗಳ ತವರುಮನೆಯೂ, ಕಾಯಕ ಸದ್ಭಾವದ ಮಹತ್ತು ಬೃಹತ್ತುಗಳ ಜ್ವಲಂತ ನಿದರ್ಶನವನ್ನು ಲೋಕಕ್ಕರುಹುತ್ತಿರುವ ಪವಿತ್ರಸ್ಥಾನವೂ ಆದ ಶ್ರೀ ಸಿದ್ಧಗಂಗಾಕ್ಷೇತ್ರದಿಂದ ಪೂಜ್ಯಪಾದರವರು ನಮ್ಮ ಈ ಕಿರುಹಳ್ಳಿಗೆ ದಯಮಾಡಿಸಿ ಶಿವಾನುಭವ ಸಮ್ಮೇಳನವನ್ನು ನೆರವೇರಿಸಿ, ನಮ್ಮೆಲ್ಲರನ್ನು ಪವಿತ್ರಾತ್ಮರನ್ನಾಗಿ, ಕಾಯಕ ಸದ್ಭಾವಸಂಪನ್ನರನ್ನಾಗಿ, ಗುರುಲಿಂಗಜಂಗಮಪ್ರೇಮಿಗಳನ್ನಾಗಿ, ಅಷ್ಟಾವರಣ, ಪಂಚಾಚಾರ, ಷಟಸ್ಥಲಮಾರ್ಗರತರನ್ನಾಗಿ ಮಾಡಬೇಕೆಂಬ ಕೃಪೆದೋರಿದುದು ನಮ್ಮ ಪುರಾಕೃತ ಪುಣ್ಯದ ಪೆರ್ಮೆಯಲ್ಲದೆ ಬೇರಲ್ಲ. ಮಹಾಸನ್ನಿಧಿಯವರು ಉತ್ತರ ವಯಸ್ಸಿನಲ್ಲಿಯೂ ಕೂಡ ಸತತ ಪರಿಶ್ರಮಪಡುತ್ತಾ ಬಸವಾದಿ ಪ್ರಮಥರ ದಿವ್ಯ ನಡೆನುಡಿಗಳನ್ನು ಸಾರ್ವತ್ರಿಕಗೊಳಿಸಿ, ಭಕ್ತವರ್ಗವನ್ನು ಪವಿತ್ರರನ್ನಾಗಿ ಮಾಡಲು ಅಲ್ಲಮಪ್ರಭುದೇವರಂತೆ ಹಳ್ಳಿಹಳ್ಳಿಗಳನ್ನು ಸಂಚರಿಸುತ್ತಾ ದಿವ್ಯಸಂದೇಶವನ್ನು ಸಾರುತ್ತಿರುವುದು, ಭಕ್ತವರ್ಗವನ್ನು ಪರೀಕ್ಷಿಸಿ ಅವರಿಗೆ ಸಮಯೋಚಿತ ಸಲಹೆಯನ್ನು ಕೊಟ್ಟು ಸನ್ಮಾರ್ಗಪ್ರವರ್ತಕರನ್ನಾಗಿ ಮಾಡುತ್ತಿರುವುದು ನಮ್ಮ ಪುಣ್ಯವಿಶೇಷದಿಂದ ಘಟಿಸಿದ ಮಹಾಯೋಗವೆಂದು ತಿಳಿದಿದ್ದೇವೆ.

ಕೊಡಗಿ ಬೊಮ್ಮನಹಳ್ಳಿ. ತಾ. ೨೭–೫–೧೯೭೩ — ವೀರಶೈವ ಬಾಂಧವರು

೧೦

**ಶಿವಯೋಗೀಶ್ವರರೇ,**

ನಮ್ಮ ಜನಾಂಗದವರು ನೂರಾರು ವರ್ಷಗಳಿಂದ ವೀರಶೈವ ಧರ್ಮೀಯರೇ ಆಗಿದ್ದು ಮಧ್ಯೆ ನಮಗೆ ಅಗೋಚರವಾದ ಕಾರಣಗಳಿಂದ ಕೆಲವು ಮಂದಿ ಅಲಿಂಗಿಗಳಾಗಿದ್ದುದು ನಮ್ಮ ದೌರ್ಭಾಗ್ಯ. ಈ ಮನೋವ್ಯಥೆಗೆ ಗುರಿಯಾಗಿದ್ದ ನಮಗೆ ಈ ವರ್ಷ ಮತ್ತು ಹಿಂದಿನ ವರ್ಷ ಕಂಬಾಳು ಸಂಸ್ಥಾನಮಠ ಸುಕ್ಷೇತ್ರದಲ್ಲಿ ಅಲ್ಲಿನ ಶ್ರೀ ಶ್ರೀಗಳವರ ಮತ್ತು ಲೋಕೋತ್ತರ ಕೃಪೆಯ ಸಿದ್ಧಗಂಗಾ ಮಠಾಧೀಶ್ವರರ ಕೃಪೆಯಿಂದ ಲಿಂಗದೀಕ್ಷೆಯನ್ನು ಕೈಗೊಂಡು ನಾವುಗಳು ವೀರಶೈವರಾಗಿ ಈ ದಿನ ಜಂಗಮಕ್ಷೇತ್ರವಾದ ಶ್ರೀ ಸಿದ್ಧಗಂಗೆಗೆ ಸಾಮೂಹಿಕವಾಗಿ ಬಂದು ತಮ್ಮ ದಿವ್ಯದರ್ಶನ ಲಾಭಹೊಂದಿ, ತೀರ್ಥಪ್ರಸಾದ ಸ್ವೀಕಾರಮಾಡಿ, ಶಿವಾನುಭವ ಗೋಷ್ಠಿಯಲ್ಲಿ ಭಾಗಿಗಳಾಗಿರುವ ಸನ್ನಿವೇಶವೊಂದು ನಮ್ಮ ಜೀವಿತದಲ್ಲಿನ ಅಲಭ್ಯಲಾಭವಲ್ಲದೆ ಬೇರೇನು ? ನಮ್ಮ ಜನಾಂಗದ ಭಕ್ತವರ್ಗದವರು ಕಾಯಕಸದ್ಭಾವದಿಂದ ಆಚರಿಸಿ ಆರ್ಜಿಸಿದ ಯತ್ಕಿಂಚಿತ್ ಧನವಿಶೇಷವನ್ನು ಗುರುಲಿಂಗಜಂಗಮ

ಸೇವೆಗಾಗಿ ವಿನಿಯೋಗಿಸಬೇಕೆಂಬ ಸಂಕಲ್ಪದಿಂದ ತ್ರಿವಿಧದಾಸೋಹಿಗಳಾದ ತಮ್ಮ ಪಾದಕ್ಕರ್ಪಿಸಿ, ತನ್ಮೂಲಕ ನಮ್ಮ ಸಂಕಲ್ಪವನ್ನು ಈಡೇರಿಸಿ ಕೊಳ್ಳುವ ಸತ್ಸಮಯವನ್ನು ನಮಗೆ ನಮ್ಮ ಪ್ರಾರ್ಥನೆಯ ಮೇರೆಗೆ ದಯಪಾಲಿಸಿದುದಕ್ಕಾಗಿ ನಾವು ಕೃತಾರ್ಥರೆಂದು ಭಾವಿಸಿದ್ದೇವೆ. ಅನೇಕ ಶಿವಾನುಭವ ಗೋಷ್ಠಿಗಳಲ್ಲಿ ಭಾಗವಹಿಸುವ ಸನ್ನಿವೇಶಗಳನ್ನು ನಮಗೆ ದಯಪಾಲಿಸಬೇಕೆಂದೂ ಪ್ರಾರ್ಥಿಸಿಕೊಳ್ಳುತ್ತೇವೆ. ನಮ್ಮ ಈ ಶ್ರದ್ಧಾ ಭಕ್ತಿವಿಶ್ವಾಸ ಪೂರ್ಣವಾದ ಪ್ರಾರ್ಥನಾ ಪತ್ರವನ್ನು ಸನ್ನಿಧಿಗೆ ಅರ್ಪಿಸುವುದಕ್ಕೆ ಅನುಮತಿಯಿತ್ತು, ವಾತ್ಸಲ್ಯದಿಂದ ಶ್ರೀ ಕ್ಷೇತ್ರದಲ್ಲಿ ನಮ್ಮನ್ನೆಲ್ಲ ಆಶೀರ್ವದಿಸಿದುದಕ್ಕಾಗಿ ಮತ್ತೊಮ್ಮೆ ಮಹಾ ಸನ್ನಿಧಿಗೆ ಸಮಸ್ತ ಜನಾಂಗವೂ ತನ್ನ ಸಾಷ್ಟಾಂಗಪ್ರಣಾಮಗಳನ್ನರ್ಪಿಸುತ್ತದೆ.

ನೂತನವಾಗಿ ವೀರಶೈವ ದೀಕ್ಷೆಯನ್ನು ಪಡೆದ

ಸಿದ್ಧಗಂಗಾ ೧೯-೫-೧೯೭೩

**ಶಿವಗಂಗಾ ಪ್ರಾಂತದ ಸಮಸ್ತ ಭಕ್ತಮಂಡಳಿ.**

೧೧

**ಪೂಜ್ಯ ಸ್ವಾಮೀಜೀಯವರೇ,**

ನಮ್ಮ ನಾಡಿನ ಪವಿತ್ರಕ್ಷೇತ್ರದಲ್ಲಿ ನೆಲೆಸಿ ಭಕ್ತಾದಿಗಳಿಗೆ ಬೋಧಿಸಿ ಅವರನ್ನು ಸನ್ಮಾರ್ಗಿಗಳನ್ನಾಗಿಯೂ, ದೈವಭಕ್ತರನ್ನಾಗಿಯೂ ಮಾಡುತ್ತಿದ್ದೀರಿ. ತಮ್ಮ ದಿವ್ಯಜ್ಞಾನಾನುಭವದ ಪ್ರಯೋಜನವನ್ನು ವಿದ್ಯಾಭಿವೃದ್ಧಿಗಾಗಿ ಹೆಚ್ಚು ವಿನಿಯೋಗಿಸಿ ಪ್ರಾಚೀನ ಕಾಲದ ಗುರುಕುಲಗಳನ್ನು ಪ್ರತ್ಯಕ್ಷವಾಗಿ ಈಗ ಕಣ್ಣಿಗೆ ಕಟ್ಟಿದಂತೆ ತೋರಿಸುತ್ತಾ ಇಂತಹ ಕಷ್ಟಕಾಲದಲ್ಲಿಯೂ ನಾನಾ ದರ್ಜೆಯ ಸಹಸ್ರಾರು ವಿದ್ಯಾರ್ಥಿಗಳಿಗೆ ಊಟ, ವಸತಿ, ವಿದ್ಯೆ ಇವುಗಳನ್ನು ನಡೆಸುವ ತಮ್ಮ ಅದ್ಭುತ ಶಕ್ತಿಯು ದೈವೀಶಕ್ತಿಯ ಪವಾಡದಂತೆ ತೋರುವುದಾಗಿದೆ. ಇದು ಕರ್ನಾಟಕದಲ್ಲೇಕೆ? ಈ ನಮ್ಮ ಭವ್ಯ ಭಾರತದಲ್ಲೇ ಆದರ್ಶಪ್ರಾಯವಾಗಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಇದು ಆಧುನಿಕ 'ನಲಂದ' ಎಂದರೂ ಸಲ್ಲತಕ್ಕದ್ದಾಗಿದೆ.

ಶಿವನಹಳ್ಳಿ, ಬೆಂಗಳೂರು-೧೦. ೨-೩-೭೫

**ಶಿವನಹಳ್ಳಿ ಗ್ರಾಮಸ್ಥರು**

೧೨

**ಅನ್ನದಾನೀಶ್ವರರೇ,**

'ದಾನಗಳಲ್ಲಿ ಅನ್ನದಾನದ ಮುಂದೆ ಇನ್ನು ಮಿಗಿಲಾದ ದಾನವಿಲ್ಲ' ಎಂಬ ಸರ್ವಜ್ಞನ ಉಕ್ತಿಯನ್ನು ತಾವು ಕಾರ್ಯರೂಪಕ್ಕೆ ತಂದ ಮಹಾದಾನಿಗಳು. ತಮ್ಮ ಜೋಳಿಗೆ ಅಕ್ಷಯಪಾತ್ರೆ, ತಮ್ಮ ಶ್ರೀಕ್ಷೇತ್ರದ ಮಹಾಮನೆಯಲ್ಲಿ ಏಕಕಾಲಕ್ಕೆ ಮೂರು ನಾಲ್ಕುಸಾವಿರ ವಿದ್ಯಾರ್ಥಿಗಳು ಶಿವನಾಮಸ್ಮರಣೆಯೊಂದಿಗೆ ಪ್ರಸಾದ ಸ್ವೀಕರಿಸುವ ದೃಶ್ಯ ಅನುಪಮ. ಅನ್ಯಾದೃಶ. ಪ್ರತಿನಿತ್ಯ ಪ್ರಾರ್ಥನೆ ಪ್ರವಚನಗಳಿಂದ ಮಕ್ಕಳ ಮನಸ್ಸಿನಲ್ಲಿ ಭಾರತೀಯ ಸಂಸ್ಕೃತಿಯ ಉತ್ತಮ ಸಂಸ್ಕಾರ ಮೂಡಿಸುವ ತಮ್ಮ ಮಹತ್ಕಾರ್ಯ ಆದರ್ಶಮಯವಾಗಿದೆ.

ಇಂದು ತಾವು ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಕೃಪೆದೋರಿ ದಯಮಾಡಿಸಿ ಆಶೀರ್ವದಿಸಿರುವುದು ನಮ್ಮೆಲ್ಲರ ಪುಣ್ಯಮಯ ಭಾಗ್ಯವೆಂದೇ ಬಗೆದಿರುವೆವು. ದಯಾಮಯನಾದ ಪರಮಾತ್ಮನು ತಮಗೆ ಹೆಚ್ಚಿನ ಆಯುರಾರೋಗ್ಯವನ್ನು ದಯಪಾಲಿಸಿ ಮಾನವ ಸಮಾಜದ ಕಲ್ಯಾಣಕಾರ್ಯಗಳು ನಿರಂತರವಾಗಿ ತಮ್ಮ ಮಾರ್ಗದರ್ಶನದಲ್ಲಿ ನಡೆಯುವಂತಾಗಲೆಂದು ಪ್ರಾರ್ಥಿಸಿ ಅನನ್ಯಭಾವದಿಂದ ಭಕ್ತಿಪೂರ್ವಕವಾಗಿ ಈ ಬಿನ್ನಹದೋಲೆಯನ್ನು ಶ್ರೀ ಪಾದಂಗಳಲ್ಲಿ ಅರ್ಪಿಸುತ್ತೇವೆ.

೧೪-೫-೧೯೭೮

**ಎ. ಸಿ. ಪ್ರಭುರಾಜಶೇಖರ್ ಮತ್ತು ಎ.ಸಿ. ನಿರಂಜನ್**

೧೩

**ಪೂಜ್ಯ ಋಷಿಪುಂಗವರೇ,**

ಇಡೀ ಜಗತ್ತು ಗಾಢಾಂಧಕಾರದಲ್ಲಿ ಮುಳುಗಿದ್ದಾಗ ಧರ್ಮಜ್ಯೋತಿಯ ಪ್ರಕಾಶದಿಂದ ಪುನೀತವಾಗಿಸಿದ ಭರತಖಂಡದ ವಿಭೂತಿಪುರುಷರಲ್ಲೊಬ್ಬರಾಗಿ. ಪರಮತಪಸ್ವಿಗಳೂ. ನಿಗ್ರಹಾನುಗ್ರಹ ಸಮರ್ಥರೂ. ಲಿಂಗಲೀಲಾವಿನೋದಚಿತ್ತರೂ ಆದ ಶ್ರೀ ಸಿ. ಪ್ರ. ಶ್ರೀ ಶ್ರೀ ಉದ್ದಾನ ಶಿವಯೋಗಿಗಳ ಕೃಪಾಕಟಾಕ್ಷದಿಂದ ಶ್ರೀ ಸಿದ್ಧಗಂಗಾ ಸುಕ್ಷೇತ್ರಾಧಿಪತಿಗಳಾದ ನೀವುಗಳು ೧೯೩೦ ರಿಂದಲೂ ಅಹರ್ನಿಶಿ ದುಡಿಯುತ್ತಾ ಶ್ರೀ ಕ್ಷೇತ್ರದ ಧವಳಕೀರ್ತಿಯನ್ನು ಉತ್ತುಂಗಶಿಖರಕ್ಕೇರಿಸಿದ್ದೀರಿ. 'ಕಾಯಕವೇ ಕೈಲಾಸ' ವೆಂಬ ಮಹಾಮಂತ್ರದ ಸಾಕಾರ ರೂಪವಾಗಿ ಸದಾಕಾಲ ಸಮಾಜ, ನಾಡು ಮತ್ತು ನುಡಿಯ ಸರ್ವತೋಮುಖ ಏಳಿಗೆಗೆ ಶ್ರಮಿಸುತ್ತಾ. ಮುಂಬರುವ ಶರಣ ಪರಂಪರೆಗೆ ಸತ್ಸಂಪ್ರದಾಯವನ್ನು ಹಾಕಿ ಕೊಟ್ಟಿರುತ್ತೀರಿ. ಅಲ್ಲದೆ ತಮ್ಮ ನೇತೃತ್ವದಲ್ಲಿ ಶ್ರೀಮಠವು ರಾಷ್ಟ್ರೀಯ ಪುನರುದ್ಧಾರ ಕಾರ್ಯದಲ್ಲಿಯೂ ಸಲ್ಲಿಸುತ್ತಿರುವ ಸೇವೆ ವರ್ಣಿಸಲಸದಳ. ತಮ್ಮಂತಹ ತಪೋಧನರನ್ನು ಪಡೆದಿರುವ ನಮ್ಮ ನಾಡು ಧನ್ಯ.

**ಧರ್ಮಪ್ರವರ್ತಕರೇ,**

ನಾಡಿನ ಜನರಲ್ಲಿ ಧರ್ಮಜಾಗೃತಿಯನ್ನುಂಟು ಮಾಡುವ ಸಲುವಾಗಿ ದೇಹಾಯಾಸವನ್ನು ಲೆಕ್ಕಿಸದೆ ವರ್ಷವಿಡೀ

ನಾಡಿನಾದ್ಯಂತ ಸಂಚರಿಸುತ್ತಾ ತಮ್ಮ ದಿವ್ಯವಾಣಿಯಿಂದ ಜನಮನದ ಕತ್ತಲೆಯ ಕೊಳೆಯನ್ನು ಕಿತ್ತೊಗೆದು ಧರ್ಮಜ್ಯೋತಿಯ ಪ್ರಕಾಶವನ್ನು ನೀಡಿ ಪ್ರಜಾಕೋಟಿಯ ನಿರ್ಮಲಾಂತಃಕರಣವೆಂಬ ನೀಲಾಕಾಶದಲ್ಲಿ ನಕ್ಷತ್ರದಂತೆ ರಾರಾಜಿಸುತ್ತಿದ್ದೀರಿ. ತಮ್ಮ ವಿದ್ವತ್ ಪ್ರತಿಭೆ, ದಾಸೋಹಂಭಾವ, ಲಿಂಗನಿಷ್ಠೆ, ಸರ್ವಲೋಕೋಪಕಾರ ಬುದ್ಧಿ ಇವುಗಳನ್ನು ವೀಕ್ಷಿಸಿ ೧೯೫೪ ರಲ್ಲಿ ಅಂದಿನ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರು ತಾವು ರೂಪಿಸಿದ 'ಸಂಸ್ಕೃತಿ ಪ್ರಸಾರ ಯೋಜನೆ' ಗ್ರಂಥ ರಚನಾಸಭೆಯ ಅಧ್ಯಕ್ಷಸ್ಥಾನವನ್ನಿತ್ತು ಗೌರವಿಸಿರುವುದನ್ನೂ ಕೂಡ ಈ ಸಂದರ್ಭದಲ್ಲಿ ಸ್ಮರಿಸಲು ಅತೀವ ಸಂತೋಷವಾಗುತ್ತದೆ.

೧-೯-೭೬ **ಭಕ್ತಮಂಡಲಿಯವರು. ಮೊಳಕಾಲ್ಮೂರು**

೧೪

**ಪರಮಪೂಜ್ಯರೇ,**

ವಿರಕ್ತರಾದ ತಾವು ಕಮಲಪತ್ರದ ಮೇಲಿರುವ ಜಲಬಿಂದುವಿನಂತೆ. ಇಂದು ನಮ್ಮೆಲ್ಲರ ನಡುವೆ ನಿಂತು ಮಾನವ ಜನಾಂಗದ ಉದ್ಧಾರಕ್ಕಾಗಿ ಶ್ರಮಿಸುತ್ತಾ ಸತ್ಯಧರ್ಮಗಳ ಮಾರ್ಗದರ್ಶಿಗಳಾಗಿರುವಂತೆ ದಯಾಮಯನಾದ ಯಡಿಯೂರು ಮತ್ತು ಸಿದ್ಧಗಂಗಾ ಕ್ಷೇತ್ರದ ಸಿದ್ಧಲಿಂಗೇಶ್ವರಸ್ವಾಮಿಯು ಮತ್ತು ಬ್ರಹ್ಮ, ವಿಷ್ಣು, ಮಹೇಶ್ವರರು ತಮಗೆ ಆಯುರಾರೋಗ್ಯಾದಿ ಸಕಲ ಭಾಗ್ಯಗಳನ್ನು ದಯಪಾಲಿಸಲಿ ಎಂದು ಪ್ರಾರ್ಥಿಸಿ ತಮಗೆ ಮತ್ತೊಮ್ಮೆ ಅನನ್ಯಭಕ್ತಿಯ ಪ್ರಣಾಮಗಳನ್ನು ಅರ್ಪಿಸುತ್ತೇವೆ,

ಚಿಕ್ಕಗೊಂಡನಹಳ್ಳಿ, ೨೬-೧೦-೧೯೭೭. **ಶ್ರೀ ಶೆಟ್ಟಿಗೌಡರು ಹಾಗೂ ಶ್ರೀಮತಿ ಕೆಂಗಮ್ಮನವರು**

೧೫

**ಪೂಜ್ಯರೇ,**

ತಮ್ಮ ದಿನಚರಿಯು ಸರಳಜೀವನ ಮಾದರಿಯಾಗಿದೆ. ಕಾಯೇನ, ವಾಚಾ, ಮನಸಾ ಪ್ರಜಾಕೋಟಿಯ ಅಭ್ಯುದಯದ ಚಿಂತನ, ಮನನ, ಧ್ಯಾನ ಇವುಗಳು ನಿಮ್ಮ ನಿತ್ಯಕರ್ತವ್ಯವಾಗಿವೆ. ತಮಗಿರುವ ದೈವಭಕ್ತಿ ಆದರ್ಶನೀಯವಾದುದು.

ತಮ್ಮ ಜೀವಿತವು ಅಮೂಲ್ಯವೂ ಜನಕೋಟಿಯ ಪ್ರಯೋಜನಕಾರಿಯೂ ಆದುದು. ತಮ್ಮಂತಹ ಧರ್ಮಾತ್ಮರನ್ನು ಮತ್ತು ಗುರುಗಳನ್ನು ಆದರಿಸಿ ಅಭಿನಂದಿಸುವ ಸುಯೋಗ ನಮ್ಮಗಳಿಗೆ ಈದಿನ ದೊರೆತುದಕ್ಕಾಗಿ ಅತ್ಯಾನಂದಪಡುವವರಾಗಿರುತ್ತೇವೆ. ಶ್ರೀ ದಯಾಮಯನಾದ ಜಗದೀಶನು ತಮಗೆ ಪೂರ್ಣಾಯುಷ್ಯವನ್ನು ಕೊಟ್ಟು ಕಾಪಾಡಲಿ. ತಮ್ಮ ಘನವಾದ ಪ್ರಜಾಸೇವಾಕಾರ್ಯಗಳು ನಿರ್ವಿಘ್ನವಾಗಿ ಮುಂದುವರಿಯುವಂತೆ ಅನುಗ್ರಹಿಸಲೆಂದು ಪರಮಾತ್ಮನಲ್ಲಿ ನಾವೆಲ್ಲರೂ ಪ್ರಾರ್ಥಿಸುತ್ತೇವೆ.

೧-೪-೧೯೭೭ **ಕೊಯಿರಾ ಮತ್ತು ಅರುವನಹಳ್ಳಿ ಗ್ರೂಪ್ ಪಂಚಾಯಿತಿ ಸದಸ್ಯರು**

೧೬

**ಪರಮಪೂಜ್ಯ ತಪೋಧನರೇ,**

ತಮ್ಮ ಸರ್ವಜೀವ ದಯಾಪರತೆ, ಸಮತಾಭಾವ ಕ್ಷಮಾಶೀಲತೆ, ಸರ್ವಜನ ಸುಖೈಕದೃಷ್ಟಿ, ಸಮಸ್ತ ಕೋಮಿನವರ ಧರ್ಮಸಿದ್ಧಾಂತಗಳ ಬಗೆಗಿರುವ ಗೌರವ ಮೊದಲಾದ ಲೋಕೋತ್ತರ ನಡೆ ನುಡಿಗಳು ಶ್ರೀ ಕ್ಷೇತ್ರಕ್ಕೆ ರಾಷ್ಟ್ರೀಯ ಗೌರವವನ್ನು ತಂದಿರುತ್ತದೆ, ತಮ್ಮಲ್ಲಡಗಿರುವ ಅನುಕಂಪ, ಕಾಯಕನಿಷ್ಠೆ ಸರ್ವರನ್ನೂ ಮುಗ್ಧಗೊಳಿಸಿದೆ.

ಮಾಗಡಿ ೮-೯-೧೯೭೮. **ಸಾರ್ವಜನಿಕ ವಿನಾಯಕ ಸೇವಾಸಂಘ**

೧೭

**ತಪೋನಿಧಿಗಳೇ !**

ಕನ್ನಡನಾಡಿನ ಪುಣ್ಯಕ್ಷೇತ್ರಗಳ ಮಾಲಿಕೆಯಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿ ವಿದ್ಯೆಯ ಮೇರುಗಿರಿಯಾಗಿ ಮೆರೆಯುತ್ತಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರನ್ನೆತ್ತಿದರೆ ಸಹಸ್ರಾರು ವರ್ಷಗಳ ಪೂರ್ವದಲ್ಲಿ ವೈಭವದಿಂದ ಪ್ರಕಾಶಿಸಿದ ನಾಲಂದಾ ತಕ್ಷಶೀಲಾ ವಿಶ್ವವಿದ್ಯಾನಿಲಯಗಳು ಪುನಃ ಮನಃಪಟಲದ ಮೇಲೆ ಮೂಡಿ ನಿಂದು ಕ್ಷಣಹೊತ್ತಿನ ಮೇಲೆ ಇವು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಕರಗಿ ಲೀನವಾಗಿ ಮತ್ತೆ ಪ್ರತ್ಯಕ್ಷ ಮೈತಳೆದು ನಿಂದಂತೆನಿಸುತ್ತದೆ. ನಾಲ್ಕು ಸಹಸ್ರ ವಿದ್ಯಾರ್ಥಿಗಳನ್ನು ಸಾಕಿ, ಸಲುಹಿ, ಶಿವಪ್ರಸಾದವನ್ನು ಅಕ್ಕರೆಯಿಂದ ಉಣಿಸಿ,ಶಿವವಾಣಿಯಿಂದ ತಣಿಸಿ. ವಿದ್ಯಾಪ್ರಸಾರಕ್ಕಾಗಿ ತಪಿಸುತ್ತಿರುವ ತಮ್ಮ ಮಹಾಕರ್ತೃತ್ವಶಕ್ತಿಯನ್ನು ಕೊಂಡಾಡಿ ಹಾಡದಿರುವ ನಾಲಿಗೆಯೊಂದೂ ಕನ್ನಡನಾಡಿನಲ್ಲಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

**ಕಾಯಕ ಯೋಗಿಗಳೇ !**

ಪ್ರತಿ ವರುಷ ಶಿವರಾತ್ರಿ ಸಮಯದಲ್ಲಿ ಹತ್ತು ದಿನಗಳವರೆಗೆ ಜಾನುವಾರುಗಳ ಜಾತ್ರೆ ಸೇರುವ ಸಂದರ್ಭದಲ್ಲಿ ಪ್ರತಿ

ದಿನವೂ ಸುಮಾರು ಐವತ್ತು ಸಹಸ್ರ ಜನರಿಗೆ ಎರಡು ಹೊತ್ತೂ ಮನದಣಿಯೆ ಪ್ರಸಾದವನ್ನಿತ್ತು ಉಪಚರಿಸುವ ತಮ್ಮ ಅನ್ನ ದಾಸೋಹ ಕಾರ್ಯ ಮಹಾನ್‌ದ ಮಾತೃಹೃದಯದ ದರ್ಶನದಿಂದ ನಾವು ಮೂಕವಿಸ್ಮಿತರಾಗಿದ್ದೇವೆ.

**ವಿದ್ಯಾಪ್ರೇಮಿಗಳೇ,**

'ನುಡಿದರೆ ಲಿಂಗ ಮೆಚ್ಚಿ ಅಹುದಹುದೆನ್ನುತ್ತಿರಬೇಕು' ಎಂಬ ಅಣ್ಣನ ನುಡಿಯಂತೆ ತಾವು ಆಶೀರ್ವಚನಗೈಯುತ್ತಿದ್ದಾಗ ಶ್ರೋತೃವೃಂದಕ್ಕೆ ಲಿಂಗದರ್ಶನದ ಆನಂದದ ಅನುಭವ ಸಹಜವಾಗಿ ಆಗುತ್ತದೆ. ಪಾಂಡಿತ್ಯಪೂರ್ಣವಾದ ಶಿವಾನುಭವ ರಸಾಮೃತದಿಂದ ಓತಪ್ರೋತವಾದ ಸುಂದರಪದಪುಂಜಗಳಿಂದೊಡಗೂಡಿ ನಿರರ್ಗಳವಾಗಿ ಹೊರಬರುವ ಪರಿಣಾಮಕಾರಿಯಾದ ತಮ್ಮ ಶಿವವಾಣಿಯನ್ನು ಆಲಿಸುತ್ತಿದ್ದಂತೆ ಮೈ ಪುಲಕಿತವಾಗುತ್ತದೆ. ಮನ ತಣಿಯುತ್ತದೆ. ಹೃದಯದ ಹಸಿವು ಇಂಗುತ್ತದೆ. ಸಂತಸದ ಶರಧಿ ಭೋರ್ಗರೆದಂತಾಗುತ್ತದೆ. ವಾಗ್-ವೈಖರಿ-ಪರಾ-ಪಶ್ಯಂತಿ ಈ ಚತುರ್ವಿಧವಾಗಿ ಶಿವವಾಣಿಯಾಗಿ ತಮ್ಮ ಶ್ರೀ ಮುಖದಿಂದ ಹೊರಹೊಮ್ಮಿದಾಗ ತಲ್ಲೀನತೆಯಿಂದ ನಾವು ತಲೆದೂಗುತ್ತೇವೆ. ರಸಭಾವದಿಂದ ನಾವು ತಲೆಬಾಗುತ್ತೇವೆ. ತೃಪ್ತರಾಗಿ ತಣಿಯುತ್ತೇವೆ. ಮಣಿಯುತ್ತೇವೆ.

**ಲಿಂಗಪೂಜಾ ನಿಷ್ಠರೇ,**

ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಕಲ್ಪಿಸಿಕೊಂಡಿದ್ದ ಸಮಾಜವಾದವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರದ ಸಿದ್ಧಗಂಗಾ ಗುರುಕುಲವು ಮೂರ್ತಿಮಂತಾಗಿ ನಿಲ್ಲಿಸುತ್ತಿರುವುದನ್ನು ಕಂಡು ನಾವು ಹಿರಿಹಿರಿ ಹಿಗ್ಗುತ್ತೇವೆ. ಧರ್ಮಜಾಗೃತಿಗಾಗಿ ವಿದ್ಯಾಪ್ರಸಾರಕ್ಕಾಗಿ ಅಖಂಡ ೪೮ ವರುಷಗಳ ಕಾಲ ಅಹೋರಾತ್ರಿ ತಪಸ್ಸುಗೈದು. ಲಿಂಗಪೂಜಾಫಲದ ಜಲವನ್ನೆರೆದು, ಭಕ್ತಿಯ ಹೆಮ್ಮರವನ್ನು ಬೆಳೆಯಿಸಿ ಜನತೆಯ ಕಲ್ಯಾಣ ಸಾಧಿಸಿದ ತಮ್ಮಂತಹ ಮಹಾಶಿವಯೋಗಿಗಳನ್ನು ಪ್ರತ್ಯಕ್ಷ ಕಾಣುತ್ತಿರುವ ನಮ್ಮ ಕಣ್ಣುಗಳು ಪುಣ್ಯದ ಬೆಳಕಿನಿಂದ ತುಂಬಿ ಥಳಥಳಿಸುವಂತಾಗಿದೆ.

ಈ ಸೌಭಾಗ್ಯವನ್ನು ದಯಪಾಲಿಸಿದ ತಮ್ಮ ಪಾವನಮಯ ಶಿವಚರಣಗಳಲ್ಲಿ ಈ ಭಕ್ತಿಬಿನ್ನಹದ ಬಿಲ್ವದಳವನ್ನಿರಿಸಿ ನಾವು ಪುನೀತರಾಗುತ್ತಿದ್ದೇವೆ. ತಮ್ಮ ಕೃಪೆ. ದಯೆ, ಪ್ರೀತಿ, ಅಂತಃಕರಣ ಈ ದುರದುಂಡೀಶ್ವರ ಮಠದ ಸದ್ಭಕ್ತರ ಮೇಲೆ ತಮ್ಮ ಜೀವ ಆತ್ಮರಾದ ಮಠಾಧೀಶ ಶ್ರೀ. ಮ. ನಿ. ಪ್ರ. ಸ್ವ. ನೀಲಕಂಠ ಮಹಾಸ್ವಾಮಿಗಳ ಮೇಲೆ ಸರ್ವದಾ ಇರಬೇಕೆಂದು ಅನನ್ಯ ಭಕ್ತಿಯಿಂದ ಅತುಲ ವಿಶ್ವಾಸದಿಂದ ಮಣಿದು ಪ್ರಾರ್ಥಿಸುವ.

ಮುರಗೋಡ ೧೯-೩-೧೯೭೮.

**ಸಮಸ್ತ ಸದ್ಭಕ್ತರು, ಶ್ರೀ ದುರದುಂಡೀಶ್ವರ ಮಠ**

೧೮

ತಪೋಧರರೂ, ಗುರುಗಳೂ ಆದ ತಾವು ನಮ್ಮ ಧರ್ಮಶಾಸ್ತವಿನ ದೇವಸ್ಥಾನದ ಕಟ್ಟಡದ ಶಂಕುಸ್ಥಾಪನಾ ಕಾರ್ಯಕ್ಕೆ ನಮ್ಮ ಆಹ್ವಾನವನ್ನು ಮನ್ನಿಸಿ, ನಮ್ಮಲ್ಲಿಗೆ ಬಂದು ಗುರುಸ್ಥಾನವನ್ನು ನಮಗೆ ಕರುಣಿಸಿ ಶಂಕುಸ್ಥಾಪನೆಯನ್ನು ಯಶಸ್ವಿಯಾಗಿ ನಡೆಸಿಕೊಟ್ಟಿದ್ದಕ್ಕೆ ನಮ್ಮ ಸಮಿತಿಯ ಸದಸ್ಯರುಗಳು ಚಿರಋಣಿಗಳು ಮತ್ತು ಕೃತಜ್ಞರಾಗಿ ನಮ್ಮ ಭಕ್ತಿಪೂರ್ವಕ ಪ್ರಣಾಮಗಳನ್ನು ತಮ್ಮ ಅಡಿದಾವರೆಗಳಲ್ಲಿ ಅರ್ಪಿಸುತ್ತಿದ್ದೇವೆ. ಈ ಸುದಿನವನ್ನು ನಮ್ಮ ಆಜೀವನ ಪರ್ಯಂತ ಸುವರ್ಣ ದಿನವೆಂದು ಜ್ಞಾಪಕದಲ್ಲಿಟ್ಟುಕೊಳ್ಳುತ್ತೇವೆ. ಈ ಕಟ್ಟಡ ಕಾರ್ಯಕ್ಕೆ ತಮ್ಮ ಅನುಗ್ರಹವನ್ನು ಅಪೇಕ್ಷಿಸುತ್ತೇವೆ.

ಕೊನೆಯಲ್ಲಿ ಸರ್ವಶಕ್ತನಾದ ಪರಮಾತ್ಮನು ತಮಗೆ ಯಾವಾಗಲೂ ಪೂರ್ಣ ಆರೋಗ್ಯವನ್ನು ಕೊಟ್ಟು, ತಮ್ಮ ಸೇವೆಯಿಂದ ಸಿದ್ಧಗಂಗಾ ಮಠದ ಕೀರ್ತಿ ಇಡೀ ಪ್ರಪಂಚಕ್ಕೆ ಬೆಳಕನ್ನು ಕೊಡುವ ಮಾದರಿಯಾಗಲಿ ಎಂದು ಪ್ರಾರ್ಥಿಸುತ್ತೇವೆ.

ಮಲ್ಲೇಶ್ವರಂ, ಬೆಂಗಳೂರು. ೯-೭-೧೯೭೯.

**ಅಯ್ಯಪ್ಪ ಸೇವಾಸಮಿತಿ (ರಿ)**

೧೯

ತಾವು ಜ್ಞಾನಸಿಧಿಗಳು, ಹಲವಾರು ಭಾಷೆಗಳ ಪಾಂಡಿತ್ಯವನ್ನು ಪಡೆದು ಅವುಗಳ ಸದುಪಯೋಗವನ್ನು ಪಡೆದಿರುವಿರಿ...ಎಲ್ಲ ಮತಧರ್ಮಗಳ ಸಾರ ಸೂಕ್ತಿಗಳನ್ನು ನಿದರ್ಶನ ನೀಡುತ್ತಾ ನಿರರ್ಗಳವಾದ ಗಂಭೀರ ಶೈಲಿಯಲ್ಲಿ ತಾವು ಮಾತಾಡುತ್ತಿದ್ದು ಶ್ರೋತೃಗಳು ಜಾತಿಮತಗಳ ಸಂಕೀರ್ಣ ವಾತಾವರಣದಿಂದ ಮೇಲೇರಿ ಭಾವೈಕ್ಯತೆಯ ದಿವ್ಯದರ್ಶನ ಪಡೆದಂತೆ ಧನ್ಯರಾಗುತ್ತಾರೆ......

ಶಿಷ್ಯಕೋಟಿಗಳ ಹೃದಯದಲ್ಲಿ ಸದ್ಭಾವನೆಯನ್ನು ಸೃಷ್ಟಿಸಿ ಸದಾಚಾರಗಳ ರಕ್ಷಣಾಕರ್ತರಾಗಿ ... ಶೋಭಿತರಾದ ತಮ್ಮಂತ ಗುರುಗಳ ಅನುಗ್ರಹ ನಮಗೆ ಲಭಿಸಲಿ.

ತುಮಕೂರು ೭-೪-೧೯೭೩.

**ವೀರಶೈವ ಮಹಿಳಾ ಸಮಾಜ (ಅಕ್ಕನ ಬಳಗ)**

**ಜಿ. ಶಾಂತಾದೇವಿ, ಕೆ. ವಿ. ಗಂಗಮ್ಮ**

೨೦

[ಬೆಂಗಳೂರು ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ಅಖಿಲಭಾರತ ವೀರಶೈವಮಹಾಸಭೆಯ ಸ್ವಾಗತಸಮಿತಿಯವರು ತಾ॥ ೨೩-೧೨-೭೩ ರಂದು ಶ್ರೀಶ್ರೀಗಳವರಿಗೆ ಅರ್ಪಿಸಿದ ಬಿನ್ನವತ್ತಳೆ]

**ತ್ರಿವಿಧ ದಾಸೋಹಮೂರ್ತಿಗಳೇ,**

ಕರ್ನಾಟಕದ ಆದರ್ಶ ಗುರುಗಳೆನಿಸಿರುವ ತಾವು ತುಮಕೂರು ಜಿಲ್ಲಾ ಸಿದ್ಧಗಂಗಾಕ್ಷೇತ್ರವಲ್ಲಿರುವ ಶ್ರಿ ಜಗದ್ಗುರು ಗೋಸಲ ಸಿದ್ಧೇಶ್ವರರ ತಪೋಭೂಮಿಯಾದ ವಿರಕ್ತಮಠದ ಅಧ್ಯಕ್ಷರಾಗಿ ತ್ರಿವಿಧದಾಸೋಹಮೂರ್ತಿಗಳಾಗಿ ಪ್ರಖ್ಯಾತರಾಗಿರುತ್ತೀರಿ. ಶ್ರೀಮಠದಲ್ಲಿ ಸಂಸ್ಕೃತ ಕಾಲೇಜು, ದಾಸೋಹ, ಶಿವರಾತ್ರಿ ಜಾತ್ರೆ ಮೊದಲಾದವುಗಳನ್ನು ನಡೆಸುತ್ತಾ ತುಮಕೂರಿನಲ್ಲಿ ಇಂಜಿನಿಯರಿಂಗ್ ಕಾಲೇಜು, ಆರ್ಟ್ಸ್ ಮತ್ತು ಸೈನ್ಸ್‌ಕಾಲೇಜು, ಟೀಚರ್ಸ್ ಟ್ರೈನಿಂಗ್‌ಕಾಲೇಜು ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಅನೇಕ ಹೈಸ್ಕೂಲುಗಳು ಹಾಗೂ ಹಲವು ಪ್ರಸಾದನಿಲಯಗಳನ್ನು ನಡೆಸುತ್ತಾ ರಾಜ್ಯದ ವಿದ್ಯಾಭಿವೃದ್ಧಿಗೆ ಮಿಗಿಲಾದ ಸಹಾಯವನ್ನು ಮಾಡುತ್ತಿದ್ದೀರಿ. ಜಾತಿ ಭೇದವಿಲ್ಲದೆ ಎಲ್ಲರನ್ನೂ ಆತ್ಮೀಯ ಭಾವನೆಯಿಂದ ಕಾಣುವ ನಿಮ್ಮೀ ಪ್ರಯತ್ನವು ಪ್ರಾಚೀನ ಕಾಲದ ನಳಂದ,ತಕ್ಷಶಿಲಾ ಮೊದಲಾದ ವಿಶ್ವವಿದ್ಯಾಲಯಗಳ ಜ್ಞಾಪಕವನ್ನು ತರುತ್ತಿದೆ. ತಾವು ಕನ್ನಡ, ಸಂಸ್ಕೃತ,ಇಂಗ್ಲೀಷ್ ಭಾಷೆಗಳಲ್ಲಿ ವಿದ್ವಾಂಸರಾಗಿ ಜ್ಞಾನವೃದ್ಧರೆನಿಸಿರುತ್ತೀರಿ. ತಮ್ಮ ಉಪನ್ಯಾಸಗಳು ಹಾಗೂ ಉಪದೇಶಗಳು ಜನಗಳ ಮೇಲೆ ಒಳ್ಳೆಯ ಪರಿಣಾಮವನ್ನು ಉಂಟುಮಾಡಿರುತ್ತವೆ. ತಾವು ವಿಶ್ವಹಿಂದೂಪರಿಷತ್ತಿನ ಮಹಾ ಪೋಷಕರಾಗಿರುತ್ತೀರಿ. ತಮ್ಮ ಕಾರ್ಯಕ್ರಮಗಳು ರಾಷ್ಟ್ರೀಯ ಭಾವನೆಯಿಂದ ಪ್ರೇರೇಪಿತವಾಗಿರುತ್ತವೆ. ಆದ್ದರಿಂದಲೇ ತಾವು ಕರ್ನಾಟಕದ ಎಲ್ಲಾ ಮತಬಾಂಧವರ ಗೌರವಕ್ಕೆ ಪಾತ್ರರಾಗಿರುತ್ತೀರಿ. ೧೯೭೦ ರಲ್ಲಿ ಬೊಂಬಾಯಿ ಮಹಾನಗರದಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ಹದಿನೆಂಟನೆಯ ಅಧಿವೇಶನಕ್ಕೆ ತಮ್ಮನ್ನು ಅಧ್ಯಕ್ಷರನ್ನಾಗಿ ಮಾಡಿ ಸಮಾಜಬಾಂಧವರು ತಮಗೆ ಮಿಗಿಲಾದ ಗೌರವವನ್ನು ಸಲ್ಲಿಸಿರುತ್ತಾರೆ. ತಾವು ಅಲ್ಲಿಂದ ಇಲ್ಲಿಯವರೆಗೆ ಮೂರು ವರ್ಷಗಳ ಕಾಲ ಮಹಾಸಭೆಯ ಕೆಲಸವನ್ನು ಸುಗಮವಾಗಿ ನಡೆಸಿಕೊಂಡು ಬಂದಿರುತ್ತೀರಿ. ಬೆಂಗಳೂರಿನಲ್ಲಿ ಮಹಾಸಭೆಯ ಕಾರ್ಯಾಲಯವನ್ನು ತೆರೆದಿರುತ್ತೀರಿ. ಈ ಉಪಕಾರಕ್ಕಾಗಿ ವೀರಶೈವ ಸಮಾಜ ಬಾಂಧವರು ತಮಗೆ ಸದಾ ಕೃತಜ್ಞರಾಗಿರುತ್ತಾರೆ. ನೂತನಾಧ್ಯಕ್ಷರಿಗೆ ತಮ್ಮ ಅಧಿಕಾರವನ್ನು ವಹಿಸಿಕೊಡುವ ಈ ಸುಸಂದರ್ಭದಲ್ಲಿ ತಮ್ಮ ಅಭಿಮಾನ ಮತ್ತು ಆಶೀರ್ವಾದಗಳು ಸದಾ ಮಹಾಸಭೆಯ ಮೇಲಿರಲೆಂದು ಈ ಬಿನ್ನಹಪತ್ರವನ್ನು ಭಕ್ತಿಯಿಂದ ಸಲ್ಲಿಸುತ್ತಿದ್ದೇವೆ.

ಬೆಂಗಳೂರು ೨೩-೧೨-೭೩

ಸ್ವಾಗತ ಸಮಿತಿ ಅಖಿಲ ಭಾರತ ವೀರಶೈವ ಮಹಾಸಭೆ

೨೧

**ಪೂಜ್ಯ ಗುರುಕುಲ ತಿಲಕರೇ,**

ಸುಪ್ರಸಿದ್ಧ ದಾಸೋಹ ಕ್ಷೇತ್ರವೂ, ಲೌಕಿಕ ಪಾರಮಾರ್ಥಿಕ ಜ್ಞಾನ-ವಿಜ್ಞಾನಗಳ ಕೇಂದ್ರವೂ ಎನಿಸಿ, ಭಾರತದಲ್ಲಿ ಖ್ಯಾತಿವೆತ್ತಿರುವ ಶ್ರೀ ಶಿದ್ಧಗಂಗಾ ಕ್ಷೇತ್ರದ ದಿವ್ಯಶಿಲ್ಪಿಗಳಾದ ತಾವು ನಮ್ಮ ಭಕ್ತಿಪೂರ್ವಕ ಕರೆಗೆ ಓಗೊಟ್ಟು ಸೇಡಂ ನಗರಕ್ಕೆ ಆಗಮಿಸಿ ಆಶೀರ್ವಚನವನ್ನೀಯುವ ಈ ಗಳಿಗೆ ನಮ್ಮಗಳ ಜೀವನದ ಅಮೃತಗಳಿಗೆ ಎಂದು ಪರಿಭಾವಿಸುತ್ತೇವೆ. ಧಾರ್ಮಿಕ, ಶೈಕ್ಷಣಿಕ, ನೈತಿಕ, ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಅವಿರತವಾಗಿ ಮಾರ್ಗದರ್ಶನ ಮಾಡುತ್ತ ರಾಷ್ಟ್ರದ ಸರ್ವತೋಮುಖ ಪ್ರಗತಿಯ ಸೀಮೆಗಳಿಗೆಲ್ಲ ಶ್ರೀರಕ್ಷೆಯಾಗಿದ್ದೀರಿ. ಶ್ರೀ ಸಿದ್ಧಗಂಗಾ ಕ್ಷೇತ್ರವಲ್ಲದೆ, ನಾಡಿನ ನೂರಾರು ವಿದ್ಯಾಸಂಸ್ಥೆಗಳೂ ತಾಂತ್ರಿಕ ಶಿಕ್ಷಣ ಸಂಸ್ಥೆಗಳೂ ತಮ್ಮ ಕೃಪಾಶೀರ್ವಾದದ ಫಲವಾಗಿ ಪ್ರಗತಿಯ ಅಗ್ರಶ್ರೇಣಿಯಲ್ಲಿದ್ದು, ಪ್ರಸ್ತುತ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣ ಪಡೆಯುತ್ತಿರುವ ಸಹಸ್ರಾರು ವಿದ್ಯಾರ್ಥಿಗಳಿಗೆ ಅನ್ನ-ಜ್ಞಾನಾದಿ ಸೌಕರ್ಯಗಳನ್ನು ಕಲ್ಪಿಸಿಕೊಟ್ಟ ದಾಸೋಹಮೂರ್ತಿಗಳಾಗಿದ್ದೀರಿ. ಜಾತ್ಯತೀತ ಭಾರತವೆಂದು ಸಾರುತ್ತ ಅಖಂಡ ಭಾರತದ ಉಜ್ವಲ ಸಂಸ್ಕೃತಿಯ ಸಂಕೇತವಾದ ಹಿಂದೂಧರ್ಮದ ಉದಾತ್ತ ತತ್ವಗಳನ್ನು ಗಾಳಿಗೆ ತೂರಿ, ಜಾತಿ-ಜಾತಿಗಳನ್ನೇ ಬಡಿದೆಬ್ಬಿಸಿ ಬದುಕುತ್ತಿರುವ ರಾಜಕಾರಣಿಗಳು ಸಮಾಜ ಜೀವನವನ್ನು ವಿಷಮಯವಾಗಿಸಿರುವ ಇಂದಿನ ಸಂದರ್ಭದಲ್ಲಿ, 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲ ಸಂಗನ ಶರಣರೇ ಕುಲಜರು' ಎಂಬ ಉದಾತ್ತ ತತ್ತ್ವವನ್ನು ಪ್ರತಿಪಾದಿಸಿಕೊಂಡು ಬಂದಿರುವ ವೀರಶೈವ ಮಠಗಳ ಹೊಣೆ ಗುರುತರವಾದುದೆಂದು ಬೇರೆ ಹೇಳಬೇಕಾದುದಿಲ್ಲ. ಬಸವಣ್ಣನವರು ಆರಂಭಿಸಿದ ಧಾರ್ಮಿಕ ಕ್ರಾಂತಿ, ಸಮಾಜ ಸುಧಾರಣೆ, ಅಂಧಶ್ರದ್ಧೆಯ ವಿರುದ್ಧ ಪ್ರತಿಭಟನೆ, ಅಸ್ಪೃಶ್ಯತಾ ನಿವಾರಣೆ, ಸ್ತ್ರೀಯರ ಉದ್ಧಾರ, ಇತ್ಯಾದಿಗಳು ಈ ಕಾಲಕ್ಕೆ ಕೇವಲ ಉದ್ಘೋಷಗಳಾಗಿ ಉಳಿಯದ ರೀತಿಯಲ್ಲಿ ಕಾರ್ಯ ಪ್ರವೃತ್ತರಾದ ತಮ್ಮಂತಹ ಅಗ್ರ ಶ್ರೇಣಿಯಲ್ಲಿರುವ ಮಠಾಧಿಪತಿಗಳತ್ತ ವಿಚಾರವಂತ ಜನ ಆಶಾದೃಷ್ಟಿ ಹೊಂದಿದ್ದಾರೆ. ಗುರು-ದೈವಗಳಲ್ಲಿ ಯಥಾರ್ಥ ಶ್ರದ್ಧೆ ಹೊಂದಿರುವ ಭಾರತದ ಅಸಂಖ್ಯ ಜನಕೋಟಿಯು ಹತಾಶರಾಗದಂತೆ ತಮ್ಮ ಅಸೀಮ ತಪೋಬಲವನ್ನು ಧಾರೆಯೆರೆದು, ಸರ್ವರಲ್ಲಿಯೂ ರಾಷ್ಟ್ರಪ್ರಜ್ಞೆಯನ್ನು ಜಾಗೃತಗೊಳಿಸಿ, ಭಾರತವು ಮತ್ತೆ ತಲೆಯೆತ್ತಿ ಮುನ್ನಡೆದು ತನ್ನ ಅಗ್ರಸ್ಥಾನವನ್ನು ಪಡೆಯುವಂತೆ ಅನುಗ್ರಹಿಸಬೇಕಾಗಿ ಭಕ್ತಿ-ನಮ್ರತೆಗಳಿಂದ ತಮ್ಮ ಸನ್ನಿಧಿಯಲ್ಲಿ ವಿಜ್ಞಾಪಿಸಿಕೊಳ್ಳುತ್ತೇವೆ.

ಸೇಡಂ, ಕಲಬುರ್ಗಿ ಜಿಲ್ಲಾ: ೨೧-೧-೧೯೮೦



ಶ್ರೀ ಕೊತ್ತಲ ಬಸವೇಶ್ವರ ಪಂಚ ಮಂಡಳಿ,

# ಶ್ರೀಗಳವರು ಭಾಗವಹಿಸಿದ ಸಭೆ ಸಮ್ಮೇಲನಗಳು

[ಶ್ರೀಗಳವರು ತಾವು ಕ್ಷೇತ್ರಾಧ್ಯಕ್ಷರಾದಂದಿನಿಂದ ಭಾಗವಹಿಸಿದ ಸಭೆ ಸಮ್ಮೇಲನಗಳು ಲೆಕ್ಕವಿಲ್ಲದಷ್ಟು. ಅವರನ್ನು ಎಲ್ಲ ಸಮಾಜದವರೂ ಅತ್ಯಂತ ಆತ್ಮೀಯತೆಯಿಂದ ಬರಮಾಡಿಕೊಂಡು ಅವರ ಉಪದೇಶಾಮೃತದಿಂದ ತೃಪ್ತರಾಗುತ್ತಾರೆ. ಜೈನ, ಬೌದ್ಧ, ಅಗ್ನಿವಂಶ ಕ್ಷತ್ರಿಯ. ಒಕ್ಕಲಿಗ, ಮಹಮ್ಮದೀಯ, ದ್ವೈತಾದ್ವೈತವಿಶಿಷ್ಟಾದ್ವೈತ ಸಮಾಜ, ಬ್ರಹ್ಮಸಮಾಜ, ದಾಸಕೂಟ, ರಾಮ ಮಂದಿರ, ವೀರಶೈವ, ವೇದಾಂತಪರಿಷತ್-ಎಲ್ಲ ಬಗೆಯ ಸಂಘ ಸಂಸ್ಥೆಗಳವರೂ ಬರಮಾಡಿಕೊಂಡಿದ್ದಾರೆ ಶ್ರೀಗಳವರ ದಿನಚರಿಯನ್ನು ನೋಡಿದರೆ ಕೆಳಗೆ ಸೂಚಿಸಿದ ಅನೇಕ ಪ್ರಕಾರಗಳ ಸಭೆಗಳಲ್ಲಿ ಭಾಗವಹಿಸಿದುದು ನಮಗೆ ಗೋಚರವಾಗುತ್ತದೆ.]

೧. ಶಾಲಾ ಕಾಲೇಜುಗಳ ಪ್ರಾರಂಭ, ಮುಕ್ತಾಯ ಭಾಷಣಗಳು. ೨. ಶಾಲಾ ಕಾಲೇಜುಗಳ ಉದ್ಘಾಟನಾ ಸಮಾರಂಭಗಳು. ೩. ಸ್ವಾತಂತ್ರ್ಯ ದಿನಾಚರಣೆ, ರಿಪಬ್ಲಿಕ್ ಡೇ ಸಮಾರಂಭಗಳು. ೪. ಆಸ್ಪತ್ರೆಗಳ ಉದ್ಘಾಟನೆ. ೫. ಮಿಲ್ಲುಗಳ ಕಾರ್ಖಾನೆಗಳ ಉದ್ಘಾಟನೆ. ೬. ಶಾರದಾ ಪೂಜಾ ಸಮಾರಂಭ. ೭. ವೇದಾಂತ ಪರಿಷತ್ತು. ೮. ವಿಶ್ವ ಹಿಂದೂ ಪರಿಷತ್ ಸಭಾ ಸಂಘಗಳು. ೯. ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಕಾರ್ಯಕ್ರಮಗಳು. ೧೦. ಗೀತಾ ಜಯಂತಿ. ೧೧. ಮಡಿವಾಳಮಾಚಿದೇವ ಜಯಂತಿ. ೧೨. ರಾಮೋತ್ಸವಗಳು. ೧೩. ದಾಸಕೂಟಗಳು. ೧೪. ಪೋಷಕ ಬೋಧಕ ಸಂಘಗಳು. ೧೫. ಕರ್ನಾಟಕ ಸಂಘಗಳು. ೧೬. ವಿದ್ವತ್ಸಮ್ಮೇಲನಗಳು. ೧೭. ಬ್ಯಾಂಕ್ ಕಟ್ಟಡಗಳ ಪ್ರಾರಂಭೋತ್ಸವ. ೧೮. ಎಲ್. ಐ. ಸಿ. ಶಾಖೆಗಳ ಆರಂಭೋತ್ಸವ. ೧೯. ಅಖಿಲ ಭಾರತ ಶಿವಾನುಭವ ಸಮ್ಮೇಳನಗಳು. ೨೦. ಮಾಧ್ವ ಸಮ್ಮೇಳಗಳು. ೨೧. ಸರ್ವ ಧರ್ಮ ಸಮ್ಮೇಳನಗಳು. ೨೨. ಶಿವಾನುಭವ ಸಮ್ಮೇಳನಗಳು. ೨೩. ಬಸವ ಜಯಂತಿ, ಅಕ್ಕನ ಜಯಂತಿ, ತರಳ ಬಾಳು ಹುಣ್ಣಿಮೆ ಜಯಂತಿಗಳು. ೨೪. ಅಖಿಲ ಭಾರತ ಖಾದಿ ಮತ್ತು ಕೈಗಾರಿಕಾ ಸಭೆ ಸಮ್ಮೇಳನಗಳು. ೨೫. ಜೈನ, ಬೌದ್ಧ ವೇದಾಂತ ಸಮ್ಮೇಳನಗಳು. ೨೬. ಒಕ್ಕಲಿಗ, ಅಗ್ನಿವಂಶಕ್ಷತ್ರಿಯ, ಮಹಮದೀಯ ಸಂಘ ಸಂಸ್ಥೆಗಳು. ೨೭. ಜಾತ್ರೆಗಳ ದನಗಳ ಪ್ರದರ್ಶನಗಳ ಸಂಘ ಸಂಸ್ಥೆಗಳು. ೨೮. ವಿದ್ಯಾದಾನ ಭೂದಾನ ಚಳುವಳಿಯ ಚಟುವಟಿಕೆಗಳು. ೨೯. ರಾಜ್ಯದ ಕಡ್ಡಾಯ ಪ್ರಾಥಮಿಕ ಶಾಲಾ ಶಿಕ್ಷಣ ಸಭೆಗಳು. ೩೦. ವಿದ್ಯುಚ್ಛಕ್ತಿಯ ಆರಂಭೋತ್ಸವಗಳು. ೩೧. ಸಂಸ್ಕೃತ ಕಾಲೇಜು-ಪಾಠಶಾಲೆಗಳ ಆರಂಭ ಮುಕ್ತಾಯ ಭಾಷಣಗಳು. ೩೨. ಕವಿಕಾವ್ಯ ಜಯಂತಿ ಸಮ್ಮೇಳನಗಳು. ೩೩. ಶೈವ ಸಂಘ ಸಭೆಗಳು. ೩೪. ಭಾರತ ಸಾಧು ಸಮ್ಮೇಳನಗಳು. ೩೫. ಬ್ರಹ್ಮ ಸಮಾಜಗಳ ಸಂಘ ಸಂಸ್ಥೆಗಳು. ೩೬. ಗಣಪತಿ ಮಹೋತ್ಸವಗಳು. ೩೭. ಅತ್ಯುತ್ತಮ ನಾಟಕ ಸಭಾ ಸಂಘಗಳು. ೩೮. ಸಾಹಿತ್ಯ ಸಮ್ಮೇಳನಗಳು.

ಇವೆಲ್ಲವುಗಳ ದಿನಾಂಕವನ್ನು ನಮೂದಿಸುತ್ತ ಹೋದರೆ ಅದೊಂದು ದೊಡ್ಡ ಕಡಿತವೇ ಆದೀತು. ಮಾದರಿಗಾಗಿ ಈ ಮುಂದೆ ಕೆಲವು ಊರುಗಳಿಗೆ ಹೋಗಿ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸಿದ ಅಂಶವನ್ನು ಓದುಗರ ಅವಗಾಹನೆಗೆ ತರಲಾಗಿದೆ.]

೪-೯-೧೯೩೬ ಶುಕ್ರವಾರ ತುಮಕೂರು ತಾಲ್ಲೂಕು ಕೋರಾಗ್ರಾಮಕ್ಕೆ ಉತ್ಸವದ ನಿಮಿತ್ತ ದಯಮಾಡಿಸಿದುದು.

೧೬-೫-೧೯೩೭ ಭಾನುವಾರ ಬೆಂಗಳೂರು ನಗರದ ಶ್ರೀ ಜಯದೇವ ವಿದ್ಯಾರ್ಥಿನಿಲಯದ ಸಭಾಂಗಣದಲ್ಲಿ ನಡೆದ ಬಸವ ಜಯಂತ್ಯುತ್ಸವದಲ್ಲಿ ಭಾಗವಹಿಸಿ 'ಬಸವ ಮತ್ತು ಜಗತ್ತಿನ ವಿಭೂತಿ ಪುರುಷರು' ಎಂಬ ವಿಷಯದ ಮೇಲೆ ಭಾಷಣ ಮಾಡಿದುದು.

೧೭-೫-೩೭ ಸೋಮವಾರ ಮೈಸೂರು ನಗರದಲ್ಲಿ 'ಶಿವಶರಣರ ಆಧ್ಯಾತ್ಮಿಕ ಸಂಪತ್ತು (Shivasharana's Spirituality) ಎಂಬ ವಿಷಯವನ್ನು ಕುರಿತು ಪ್ರವಚನ ಮಾಡಿದುದು.

೨೯-೩-೧೯೩೮ ಮಂಗಳವಾರ ಮೈಸೂರು ನಗರಕ್ಕೆ ದಯಮಾಡಿಸಿ 'ಶಿವಶರಣರು ಹಾಗೂ ಸಂಸ್ಕೃತಿ ಮತ್ತು ನಾಗರಿಕತೆ' ಎಂಬ ವಿಷಯದ ಬಗ್ಗೆ ಪ್ರವಚನ ನೀಡಿದುದು.

೩೦-೩-೩೮ ಬುಧವಾರ ಮೈಸೂರಿನಲ್ಲಿ 'ಬಸವೇಶ್ವರ ಮತ್ತು ಜಗತ್ತಿನ ಮಹಾಪುರುಷರು' ಎಂಬುದರ ಬಗ್ಗೆ ಭಾಷಣ.

೩-೫-೩೮ ಮಂಳವಾರ ಗದುಗಿನ ಆನಂದಾಶ್ರಮದಲ್ಲಿ 'ಬಸವೇಶ್ವರರು ಮತ್ತು ಸಮಾಜಸುಧಾರಣೆ' ಬಗ್ಗೆ ಪ್ರವಚನ.

೪-೫-೩೮ ಬುಧವಾರ ಮತ್ತು ೫-೫-೩೮ ಗುರುವಾರ ದಾವಣಗೆರೆ ನಗರದಲ್ಲಿ 'ಶಿವಶರಣರು ಮತ್ತು ನಾಗರಿಕತೆ' ಎಂಬುದರ ಬಗ್ಗೆ ಮತ್ತು 'ಶಿವಶರಣರ ಆಧ್ಯಾತ್ಮಿಕ ಸಂಪತ್ತು' ಎಂಬುದರ ಬಗ್ಗೆ ಎರಡುದಿನ ಪ್ರವಚನ.

೬-೧೦-೧೯೪೧ ಸೋಮವಾರ ಮೈಸೂರು ನಗರಕ್ಕೆ ದಯಮಾಡಿಸಿ, ಶ್ರೀ ಸುತ್ತೂರು ಶ್ರೀಗಳವರು ಕಟ್ಟಿಸಿದ ವಿದ್ಯಾರ್ಥಿನಿಲಯವನ್ನು ಉದ್ಘಾಟಿಸಿ, ಆಶೀರ್ವಚನ ನೀಡಿದುದು.

೨೮-೪-೧೯೪೨ ಮಂಗಳವಾರ ತಿಪ್ಪಗೊಂಡನಹಳ್ಳಿ ಚಾಮರಾಜೇಂದ್ರ ಜಲಾಶಯಕ್ಕೆ ಭೇಟಿಯಿತ್ತು, ಲೋಕೋಪಯೋಗಿ ಇಲಾಖಾ ಅಧಿಕಾರಗಳನ್ನು ಕುರಿತು ಅನುಗ್ರಹ ಭಾಷಣ.

೫-೯-೧೯೪೩ ಭಾನುವಾರ ತುಮಕೂರು ನಗರದ ಸರ್ಕಾರಿ ಕಾಲೇಜಿನಲ್ಲಿ 'ಶಿವಶರಣರ ಅಧ್ಯಾತ್ಮ ಸಂಪತ್ತು' ಎಂಬುದರ ಬಗ್ಗೆ ಉಪನ್ಯಾಸ.

೨೬-೮-೧೯೪೪ ಭಾನುವಾರ ಎಡೆಯೂರಿನಲ್ಲಿ ನಡೆದ ವಿಶ್ವಶಾಂತಿ ಪರಿಸಮಾಪ್ತಿ ಕಾರ್ಯಕ್ರಮದಲ್ಲಿ ಭಾಗವಹಿಸಿದುದು.

೨೮-೧-೧೯೪೫ ಭಾನುವಾರ ಶ್ರೀಮಠದಲ್ಲಿ ನಡೆದ ಪತ್ರಕರ್ತರ ಸಮ್ಮೇಲನ ಮತ್ತು ವೃತ್ತ ಪತ್ರಿಕೆಗಳ ಪ್ರದರ್ಶನ ವನ್ನು ಉದ್ಘಾಟಿಸಿದುದು.

೨೮-೪-೪೫ ಶುಕ್ರವಾರ ಶ್ರೀ ಕ್ಷೇತ್ರದಲ್ಲಿ, 'ಗುಬ್ಬಿ ಮಲ್ಲಣಾರ್ಯ ಮಂಟಪ' ದಲ್ಲಿ ನಡೆದ ಅಖಿಲ ಭಾರತ ವೀರಶೈವ ಸಭೆಯ ಸ್ವಾಗತ ಸಮಿತಿಯ ಅಧ್ಯಕ್ಷೀಯ ಭಾಷಣ.

೧೯-೫-೧೯೪೬ ಭಾನುವಾರ ಕುಣಿಗಲ್‌ನಲ್ಲಿ ನಡೆದ ಅಗ್ನಿವಂಶ ಕ್ಷತ್ರಿಯ ಸಂಘದವರು ನಡಸಿದ ಸಮ್ಮೇಲನದಲ್ಲಿ ಅಧ್ಯ ಕ್ಷತೆ ವಹಿಸಿ ಉಪದೇಶ.

೨೯-೬-೪೭ ಭಾನುವಾರ ಹೆಸರುಘಟ್ಟದಲ್ಲಿ ನಡೆದ ಅಗ್ನಿವಂಶ ಕ್ಷತ್ರಿಯ ಸಂಘದ ಅಧಿವೇಶನದ ಅಧ್ಯಕ್ಷ ಪದವಿ ಯನ್ನಲಂಕರಿಸಿದುದು.

೨೮-೧೧-೧೯೪೮ ಭಾನುವಾರ ಶ್ರೀಕ್ಷೇತ್ರದಲ್ಲಿ ಜರುಗಿದ ಜಿಲ್ಲಾ ಸಹಕಾರಿ ಸಂಘಗಳ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು.

೧೮-೬-೧೯೪೯ ಮತ್ತು ೧೯-೬-೧೯೪೯ ರಂದು ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆಯ ರಜತ ಮಹೋತ್ಸವವನ್ನೂ. ಮತ್ತು ಅದರ ಅಂಗವಾಗಿ ಶಿವಾನುಭವ ಸಮ್ಮೇಲನ.ಸರ್ವ ಧರ್ಮ ಸಮ್ಮೇಲನ ಇವುಗಳನ್ನು ನಡೆಸಿದುದು. (ಇದರ ವಿವರ ಪ್ರತ್ಯೇಕವಾಗಿ ಇದೇ ಗ್ರಂಥದಲ್ಲಿ ಮುಂದೆ ಇದೆ.)

೧೯೫೧ ಶ್ರಾವಣಮಾಸ. ಈ ಇಸ್ವಿಯ ಶ್ರಾವಣಮಾಸ ಪೂರ್ತಾ ಶ್ರೀ ಶ್ರೀಗಳವರಿಂದ 'ಪ್ರಭುಲಿಂಗಲೀಲೆ' ಪುರಾಣ ಪ್ರವಚನ ನಡೆದು ಪರಿಸಮಾಪ್ತಿ ಕಾಲದಲ್ಲಿ ೫ ದಿನಗಳು ಮೈಸೂರು ಅರಮನೆ ಪಂಚಗವಿ ಮಠಾಧ್ಯಕ್ಷರೂ ವಿಖ್ಯಾತದಾರ್ಶನಿಕರೂ ಆಗಿದ್ದ ಶ್ರೀ ಶ್ರೀ ಗೌರಿಶಂಕರ ಮಹಾಸ್ವಾಮಿಗಳವರಿಂದ ಪ್ರವಚನ.

೩-೨-೧೯೫೨ ಭಾನುವಾರ ಮಂಡ್ಯದಲ್ಲಿ 'ಕರ್ನಾಟಕ ಸಂಘದ' ಆಶ್ರಯದಲ್ಲಿ ನಡೆದ ಬೃಹತ್ಸಭೆಯಲ್ಲಿ ಭಾಷಣ.

೨೨-೫-೧೯೫೨ ಗುರುವಾರ ಹಾಸನದ ತಣ್ಣೀರುಹಳ್ಳ ಮಠದಲ್ಲಿ ನಡೆದ ಶಿವಾನುಭವ ಸಮ್ಮೇಲನದ ಅಧ್ಯಕ್ಷತೆಯನ್ನು ವಹಿಸಿ ಆಶೀರ್ವಚನ ನೀಡಿದುದು.

೨೨-೧೨-೧೯೫೨ ಸೋಮವಾರ ತಿಪಟೂರಿನ ಸರ್ಕಾರಿ ಪ್ರೌಢಶಾಲೆಯ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವದಲ್ಲಿ ಭಾಗವಹಿಸಿ ಭಾಷಣ ಮಾಡಿದುದು.

೧೦-೮-೧೯೫೩ ಶನಿವಾರ ಮೈಸೂರು ನಗರದಲ್ಲಿ ನಡೆದ ವಿದ್ವತ್‌ಸನ್ಮಾನ ಸಮಿತಿಯ ಸಭೆಯಲ್ಲಿ ಭಾಗವಹಿಸಿದುದು.

೩೧-೮-೧೯೫೩ ಸೋಮವಾರ ಮೈಸೂರು ನಗರದಲ್ಲಿ 'ಶರಣಸಂಘ' ವನ್ನು ಉದ್ಘಾಟಿಸಿದರು.

೧೩-೨-೧೯೫೪ ಶನಿವಾರ ಮಂಡ್ಯಜಿಲ್ಲಾ ಹೇಮಗಿರಿ ಜಾತ್ರೆಯಲ್ಲಿ ಬೃಹತ್ಸಭೆಯನ್ನುದ್ದೇಶಿಸಿ 'ಹಿಂದೂ ಸಂಸ್ಕೃತಿ'ಯ ಬಗ್ಗೆ ಭಾಷಣ.

೨-೧-೧೯೫೪ ಶನಿವಾರ ಬೆಂಗಳೂರುನಗರ ಅಠಾರಾ ಕಛೇರಿಯಲ್ಲಿ ಜರುಗಿದ ಸಾರ್ವಜನಿಕ ಸೇವಾ ಪ್ರಶಸ್ತಿ ನೀಡಿಕೆಯ ಸಂಬಂಧವಾದ ಮೀಟಿಂಗಿನಲ್ಲಿ ಸಂಸ್ಥಾನ ಸಚಿವರುಗಳೊಡನೆ ಸಮಾಲೋಚನೆಯಲ್ಲಿ ಪಾಲ್ಗೊಂಡಿದ್ದುದು.

೯-೧-೧೯೫೪ ಶನಿವಾರ ಮಧುಗಿರಿಯಲ್ಲಿ ಜರುಗಿದ ಭೂದಾನ ಯಜ್ಞ ಸಮ್ಮೇಳನವನ್ನು ಉದ್ಘಾಟಿಸಿದರು.

೧೨-೪-೧೯೫೫ ಮಂಗಳವಾರ ಶಿವಗಂಗೆಯ ಇತಿಹಾಸ ಪ್ರಸಿದ್ಧ ಹೊನ್ನಮನ ಗವಿಮಠದಲ್ಲಿ ನೆರವೇರಿದ ಶಿವಾನುಭವ ಸಮ್ಮೇಲನದ ಅಧ್ಯಕ್ಷತೆ.

೨೨-೮-೧೯೫೫ ಶುಕ್ರವಾರ ಅಜ್ಜಂಪುರ, ಬೀರೂರು, ತಂಗಳಿ, ಕಡೂರು,ಸಕ್ಕರೆಪಟ್ಣ ಮುಂತಾದಸ್ಥಳಗಳಲ್ಲಿ ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸಿದುದು.

೨೨-೮-೧೯೫೫ ಶನಿವಾರ ಮೈಸೂರು ನಗರದಲ್ಲಿ ಸಂಸ್ಕೃತಿ ಪ್ರಸಾರ ಯೋಜನೆಯ ಅಂಗವಾಗಿ ಏರ್ಪಡಿಸಲಾಗಿದ್ದ ಸಂಸ್ಕೃತಿ ಸಪ್ತಾಹ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಆಶೀರ್ವಾದ ನೀಡಿದುದು.

೨೩-೪-೧೯೫೬ ಸೋಮವಾರ ಕಡೂರಿನಲ್ಲಿ ಶ್ರೀರಾಮನವಮಿ ಉತ್ಸವದ ಸಮಾರಂಭದಲ್ಲಿ ಭಾಗವಹಿಸಿ ಉಪದೇಶ ಭಾಷಣ.

೧೧-೮-೫೭ ಶನಿವಾರ ತುಮಕೂರು ನಗರದಲ್ಲಿ 'ಸಾಹಿತ್ಯ ಸಂಘದ' ಉದ್ಘಾಟನೆಯನ್ನು ನೆರವೇರಿಸಿ ಆಶೀರ್ವಾದ ನೀಡಿದುದು.

೧೪-೫-೧೯೫೭ ಮಂಗಳವಾರ ಹುಬ್ಬಳ್ಳಿಯಲ್ಲಿ ನಡೆದ 'ವೇದಾಂತ ಪರಿಷತ್ತಿನಲ್ಲಿ' ಭಾಗವಹಿಸಿದುದು.

೭-೯-೧೯೫೭ ಶನಿವಾರ ಬೀರೂರಿನಲ್ಲಿ ಗಣಪತಿ ಉತ್ಸವದ ಅಧ್ಯಕ್ಷತೆಯನ್ನು ವಹಿಸಿ ಆಶೀರ್ವಾದ ಭಾಷಣವಿತ್ತುದು.

೧೭-೮-೧೯೫೮ ಭಾನುವಾರ ಬೆಂಗಳೂರು ನಗರದಲ್ಲಿ ನಡೆದ 'ಅನುಭವ ಮಂಟಪ'ದ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದುದು.

೮-೧೨-೫೮ ಸೋಮವಾರ ಗೋಡೆಕೆರೆಯಲ್ಲಿ ಕಾರ್ತಿಕ ದೀಪೋತ್ಸವ ಸಮಾರಂಭದಲ್ಲಿ ಭಾಗವಹಿಸಿ ಸಾರ್ವಜನಿಕರನ್ನು ಉದ್ದೇಶಿಸಿ ಉಪದೇಶ ನೀಡಿದುದು.

೧೫-೧-೧೯೬೦ ಶುಕ್ರವಾರ ಬೆಳಗುಂಬದಲ್ಲಿ 'ಶ್ರೀ ಸಿದ್ಧರಾಮೇಶ್ವರ ಜಯಂತ್ಯುತ್ಸವ'ದ ಉದ್ಘಾಟನೆಯನ್ನು ನೆರವೇರಿಸಿದುದು.

೨೦-೩-೬೦ ಭಾನುವಾರ 'ಭಾರತ ಸಾಧುಸಮಾಜ'ದ ವಾರ್ಷಿಕ ಅಧಿವೇಶನದಲ್ಲಿ ಭಾಗವಹಿಸಿದುದು.

೧೯೬೨ ಧರ್ಮಸ್ಥಳದಲ್ಲಿ, ನಡೆದ ಸರ್ವಧರ್ಮ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದುದು.

೬-೧೧-೧೯೬೩, ೭-೧೧-೧೯೬೩ ಬೆಳಗಾವಿ-ಷಹಾಪುರದಲ್ಲಿ ನಡೆದ ಅಖಿಲ ಭಾರತ ಶಿವಾನುಭವ ಸಮ್ಮೇಳನದ ಅಧ್ಯಕ್ಷ ಪದವಿಯನ್ನಲಂಕರಿಸಿ ವಿದ್ವತ್ಪೂರ್ಣ ಭಾಷಣ ಮಾಡಿದುದು.

೨೮-೧೩-೬೩ ಶ್ರೀ ಮಠದಲ್ಲಿ ನಡೆದ ೪೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷ ಭಾಷಣ ಮಾಡಿದುದು.

೧೧-೧-೧೯೬೪ ಶನಿವಾರ ಶ್ರೀ ಕ್ಷೇತ್ರದಲ್ಲಿ ನಡೆದ ಅಖಿಲ ಕರ್ನಾಟಕ ಶಿಕ್ಷಕರ ಸಮ್ಮೇಳನದ ನೇತೃತ್ವವನ್ನು ವಹಿಸಿ, ಸಭೆಯಲ್ಲಿ ಉಪಾಧ್ಯಾಯರನ್ನು ಕುರಿತು ಭಾಷಣ ಮಾಡಿದರು.

೧೮-೪-೧೯೬೫ ಭಾನುವಾರ ನಂಜನಗೂಡಿನಲ್ಲಿ ಬಸವ ಸಮಿತಿಯನ್ನು ಉದ್ಘಾಟಿಸಿದರು.

೫-೫-೬೫ ಬುಧವಾರ ಬೆಂಗಳೂರು ನಗರದಲ್ಲಿ ಜರುಗಿದ ಮಡಿವಳ ಜನಾಂಗದವರ ಮಾಚಿದೇವ ಜಯಂತ್ಯುತ್ಸವದಲ್ಲಿ ಭಾಗವಹಿಸಿ ಭಾಷಣ ಮಾಡಿದರು.

೬-೧೧-೬೫ ಶನಿವಾರ ಕರ್ನಾಟಕ ವಿಶ್ವವಿದ್ಯಾನಿಲಯವು ಶ್ರೀ ಶ್ರೀಗಳಿಗೆ 'ಡಾಕ್ಟರ್ ಆಫ್ ಲಿಟರೇಚರ್' ಪದವಿಯನ್ನು ಅರ್ಪಿಸಿದ ಘಟಿಕೋತ್ಸವ ಸಮಾರಂಭದಲ್ಲಿ ಮಾತನಾಡಿದುದು.

೩೦-೩-೧೯೬೬ ಬುಧವಾರ ದೊಡ್ಡಬಳ್ಳಾಪುರದಲ್ಲಿ ಚಲನಚಿತ್ರ ಮಂದಿರದ ಆರಂಭೋತ್ಸವವನ್ನು ನೆರವೇರಿಸಿ ಉಪದೇಶ ಭಾಷಣ ಮಾಡಿದುದು.

೨-೯-೬೬ ಶುಕ್ರವಾರ ಮಾರಿ ಕಣಿವೆ ಜಲಾಶಯದಲ್ಲಿ ಗಂಗಾಪೂಜಾ ಸಮಾರಂಭದ ಅಧ್ಯಕ್ಷತೆ ವಹಿಸಿ ಉಪದೇಶ ನೀಡಿದುದು.

೭-೧-೧೯೬೭ ಶನಿವಾರ ೮-೧-೬೭ ಭಾನುವಾರ ಬೆಂಗಳೂರಿನ ಗೋಖಲೆ ಸಾರ್ವಜನಿಕ ವಿದ್ಯಾಸಂಸ್ಥೆಯಲ್ಲಿ ಡಾ. ಡಿ.ವಿ. ಗುಂಡಪ್ಪನವರ ಆಹ್ವಾನದ ಮೇರೆಗೆ ಹೋಗಿ ಎರಡುದಿನ ಬಸವಣ್ಣನವರ ಬಗೆಗೆ ವಿದ್ವತ್ಪೂರ್ಣ ಉಪನ್ಯಾಸ ನೀಡಿದುದು.

೩-೪-೬೭ ಸೋಮವಾರ ಚಳ್ಳಕೆರೆ ನೀರು ಸರಬರಾಜು ಯೋಜನೆಯ ಆರಂಭೋತ್ಸವದ ಅಧ್ಯಕ್ಷತೆಯನ್ನು ವಹಿಸಿದ್ದರು.

೧೨-೪-೬೭ ಬುಧವಾರ ಶ್ರೀಶೈಲದ ಮಲ್ಲಿಕಾರ್ಜುನಸ್ವಾಮಿ ದೇವಸ್ಥಾನ, ಶ್ರೀಭ್ರಮರಾಂಬಾ ದೇವಸ್ಥಾನ, ಭಿಕ್ಷಾವರ್ತಿಮಠ ಶ್ರೀ ಸಂಸ್ಥಾನಮಠ ಮುಂತಾದುವುಗಳಿಗೆ ಭೇಟಿನೀಡಿ, ಅಲ್ಲಿ ಭಾರತೀಯ ವಿದ್ಯಾಪೀಠದ ಉದ್ಘಾಟನೆಯನ್ನು ನೆರವೇರಿಸಿದರು.

೨೯-೧೨-೬೭ ಶುಕ್ರವಾರ ಮಣ್ಣೆ, ರಾಂಪುರ, ಮಾಕನಕುಪ್ಪೆ, ಮುದ್ದಲಿಂಗನಹಳ್ಳಿ, ಓಬಳಾಪುರ, ಅಪ್ಪುಗೊಂಡನಹಳ್ಳಿ, ಗೊಲ್ಲರಹಟ್ಟಿ, ಶಿರಗನಹಳ್ಳಿ, ಗೋರಘಟ್ಟ, ಕನ್ನೋಹಳ್ಳಿ ಗ್ರಾಮಸ್ಥರ ಸಾಮೂಹಿಕ ಸಭೆಯ ಅಧ್ಯಕ್ಷತೆ ವಹಿಸಿ- ಉಪದೇಶ ಮಾಡಿದುದು.

೧೯೬೮ ಕಲ್ಯಾಣದಲ್ಲಿ ಜರುಗಿದ ಇತಿಹಾಸ ಪ್ರಸಿದ್ಧವಾದ 'ಶ್ರೀ ಬಸವೇಶ್ವರ ಅಷ್ಟಶತಮಾನೋತ್ಸವದ' ಅಧ್ಯಕ್ಷತೆ ವಹಿಸಿದುದು.

೨೩-೩-೬೮ ಶನಿವಾರ ಮಾನಸ ಗಂಗೋತ್ರಿಯಲ್ಲಿ ಜರುಗಿದ ಶ್ರೀ ಬಸವೇಶ್ವರ ಎಂಟನೆಯ ಶತಮಾನೋತ್ಸವದ ಅಧ್ಯಕ್ಷತೆಯನ್ನು ವಹಿಸಿದುದು.

೨-೬-೧೯೬೯ ಭಾನುವಾರ, ೩-೬-೬೯ ಸೋಮವಾರ ಎರಡುದಿನ ಮುಂಬಯಿ ಮಹಾನಗರದಲ್ಲಿ ನಡೆದ ೧೮ ನೆಯ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷಸ್ಥಾನವನ್ನಲಂಕರಿಸಿದುದು.

೧೩-೧೨-೧೯೬೯ ಶನಿವಾರ.೧೪-೧೨-೬೯ ಭಾನುವಾರ ಎರಡೂ ದಿನ ಉಡುಪಿಯಲ್ಲಿ ನಡೆದ ವಿಶ್ವ ಹಿಂದೂ ಪರಿಷತ್ ಮಹಾಸಭೆಯನ್ನುದ್ದೇಶಿಸಿ ಭಾಷಣ ಮಾಡಿದುದು.

೨೪-೧೨-೬೯ ಗುರುವಾರ ವಿಜಾಪುರ ಜಿಲ್ಲಾ ಹುನಗುಂದದ 'ವಿಜಯಮಹಾಂತೇಶ ವಿದ್ಯಾವರ್ಧಕ ಸಂಘ' ದಾಶ್ರಯ ದಲ್ಲಿ ನಡೆದ ಬೃಹದಧಿವೇಶನದ ಅಧ್ಯಕ್ಷತೆಯನ್ನು ವಹಿಸಿ ಭಾಷಣ ಮಾಡಿದುದು.

೧೩-೧-೧೯೭೦ ಮಂಗಳವಾರ ಸುಬ್ರಮಣ್ಯದಲ್ಲಿ ನಡೆದ ಸರ್ವಧರ್ಮ ಸಮ್ಮೇಳನವನ್ನು ಉದ್ಘಾಟಿಸಿ ಭಾಷಣ.

೨೧-೨-೭೦ ಶನಿವಾರ ಧಾರವಾಡದಲ್ಲಿ ಜರುಗಿದ ತರಳಬಾಳು ಹುಣ್ಣಿಮೆ ಮಹೋತ್ಸವದಲ್ಲಿ ಪಾಲ್ಗೊಂಡು ಉಪದೇಶ ಭಾಷಣ.

೨೭-೧೨-೭೦ ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ನಡೆದ ೪೭ ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಉದ್ಘಾಟನೆಮಾಡಿ ಭಾಷಣ ಮಾಡಿದುದು.

೧೨-೨-೧೯೭೧ ಶುಕ್ರವಾರ ಶಿವಮೊಗ್ಗಾ ಜಿಲ್ಲಾ ಮೂಡಿಯಲ್ಲಿ ಶಿವಾನುಭವ ಸಮ್ಮೇಳನದ ಅಧ್ಯಕ್ಷತೆ ವಹಿಸಿದುದು.

೮-೩-೭೧ ಬುಧವಾರ ಗುಬ್ಬಿಚನ್ನಬಸವೇಶ್ವರ ದೇವಸ್ಥಾನದ ಗೋಪುರದ ಆರಂಭೋತ್ಸವಕ್ಕೆ ದಯಮಾಡಿಸಿದುದು.

೧೩-೩-೭೧ ಶನಿವಾರ ಧರ್ಮಸ್ಥಳದ ಕಾಲೇಜ್ ಕಟ್ಟಡದ ಪ್ರಾರಂಭೋತ್ಸವಕ್ಕೆ ದಯಮಾಡಿಸಿ ಕಟ್ಟಡವನ್ನು ಉದ್ಘಾಟಿಸಿದುದು.

೧೯-೩-೭೧ ಶುಕ್ರವಾರ ಶಿವಮೊಗ್ಗಾ ಜಿಲ್ಲಾ ಹೊಸನಗರ ತಾಲ್ಲೂಕು ಶ್ರೀ ಪದ್ಮಾವತೀದೇವಿ, ಶ್ರೀ ಹೊಂಬುಜ ಜೈನ ಕ್ಷೇತ್ರದ ಸರ್ವಧರ್ಮ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದುದು.

೨೮-೩-೭೧ ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ನಡೆದ ಕವಿ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದುದು.

೪-೧೨-೭೧ ಶನಿವಾರ ಬಳ್ಳಾರಿ ವಾಲ್ಮೀಕಿ ನಾಯಕ ಮಹಾ ಸಮ್ಮೇಳನದ ಅಧ್ಯಕ್ಷ ಪದವಿಯನ್ನಲಂಕರಿಸಿ ಅಮೋಘವಾದ ಭಾಷಣ ಮಾಡಿದುದು.

೫-೧೨-೭೧ ಭಾನುವಾರ ತುಮಕೂರು ಸಾದರ ವಿದ್ಯಾಭಿವೃದ್ಧಿ ಸಂಘದವರು ಏರ್ಪಡಿಸಿದ್ದ ತುಮಕೂರು ಜಿಲ್ಲಾ ಸಾದರ ಸಮ್ಮೇಳನದ ಅಧ್ಯಕ್ಷತೆ ವಹಿಸಿದುದು.

೧-೧-೧೯೭೨ ಶನಿವಾರ ಮಳವಳ್ಳಿಯಲ್ಲಿ ನಡೆದ ಧರ್ಮಸಮ್ಮೇಳನದಲ್ಲಿ ಅಧ್ಯಕ್ಷತೆ ವಹಿಸಿದುದು.

೪-೩-೭೨ ಶನಿವಾರ ಹುಬ್ಬಳ್ಳಿಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಶತಮಾನೋತ್ಸವವನ್ನು ಉದ್ಘಾಟನೆ ಮಾಡಿದರು.

೨೬-೫-೭೨ ಶುಕ್ರವಾರ, ೨೭-೫-೭೨ ಶನಿವಾರ, ೨೮-೫-೭೨ ಭಾನುವಾರ ಶ್ರೀ ಶ್ರೀಗಳವರಿಗೆ ನಾಡಿನ ಸಮಸ್ತ ಭಕ್ತಸ್ತೋಮ ರಜತೋತ್ಸವವನ್ನಾಚರಿಸಿ ತನ್ನ ಅಭೂತಪೂರ್ವಭಕ್ತಿಕೈಂಕರ್ಯವನ್ನು ಸಮರ್ಪಿಸಿತು. ಮತ್ತು ಸಂಸ್ಕೃತಮಹಾಪಾಠಶಾಲೆಯ ಸುವರ್ಣ ಮಹೋತ್ಸವವನ್ನು ವೈಭವದಿಂದ ಆಚರಿಸಲಾಯಿತು. ಈ ಮೂರು ದಿನಗಳ ಸಮಾರಂಭದಲ್ಲೂ ಶ್ರೀಗಳವರು ಮನನೀಯವಾದ ಭಾಷಣಮಾಡಿದರು.

೧-೯-೭೨ ಶುಕ್ರವಾರ ಬೆಳಗಾವಿ ಜೆ.ಎನ್. ಮೆಡಿಕಲ್ ಕಾಲೇಜಿನ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಭಾಷಣ ಮಾಡಿದರು.

೧೫-೯-೭೨ ಶುಕ್ರವಾರ ಕೋಲಾರದಲ್ಲಿ ಜರುಗಿದ 'ವಿಶ್ವಹಿಂದೂ ಪರಿಷತ್ತಿನ' ಕಾರ್ಯಕ್ರಮದಲ್ಲಿ ಭಾಗವಹಿಸಿದುದು.

೭-೫-೭೩ ಸೋಮವಾರ ಮೈಸೂರು ಪುರಭವನದಲ್ಲಿ ನೆರವೇರಿದ ವೀರಶೈವ ಮಂಡಲಿಯ ರಜತಮಹೋತ್ಸವದ ಉದ್ಘಾಟನೆ ಮತ್ತು 'ಬಸವ ಬೆಳ್ಳಿ'ಎಂಬ ಸ್ಮರಣಸಂಚಿಕೆ ಬಿಡುಗಡೆ.

೨೩-೧೨-೭೩ ಭಾನುವಾರ ಬೆಂಗಳೂರು ಲಾಲ್‌ಬಾಗ್ ಗಾಜಿನ ಮನೆಯಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷತೆಯನ್ನು ನೂತನ ಅಧ್ಯಕ್ಷರಾದ ಶ್ರೀ ಜೆ.ಬಿ. ಮಲ್ಲಾರಾಧ್ಯರಿಗೆ ವಹಿಸಿಕೊಟ್ಟುದು.

೧೮-೧೧-೭೪ ಸೋಮವಾರ ಹುನಗುಂದದಲ್ಲಿ ಮಠಾಧಿಪತಿಗಳ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದುದು.

೨೯-೧೨-೭೪ ಭಾನುವಾರ ಬೆಂಗಳೂರು ವಿಜಯನಗರದಲ್ಲಿ ನಡೆದ ಅಖಿಲ ಕರ್ನಾಟಕ ಉದಯಬರಹಗಾರರ ಸಂಘದ ಬೃಹತ್ಸಮಾರಂಭದ ಉದ್ಘಾಟನೆ ಮತ್ತು ಸಂಘದವರು ಅರ್ಪಿಸಿದ ಸನ್ಮಾನ ಸ್ವೀಕಾರ ಮಾಡಿದುದು.

೧೦-೫-೭೫ ಶನಿವಾರ ಬೆಂಗಳೂರು ಇಂದಿರಾನಗರದಲ್ಲಿ ಬಸವ ಜಯಂತ್ಯುತ್ಸವದಲ್ಲಿ ಭಾಗವಹಿಸಿದ್ದರು.

೧೩-೫-೭೫ ಮಂಗಳವಾರ ಬೆಂಗಳೂರು ರವೀಂದ್ರಕಲಾಕ್ಷೇತ್ರದ ಸಮಾರಂಭದಲ್ಲಿ ಭಾಗವಹಿಸಿದುದು.

೧೪-೧-೭೬ ತಿಪಟೂರಿನಲ್ಲಿ ಶ್ರೀ ಗುರುಸಿದ್ಧರಾಮ ಜಯಂತಿಯಲ್ಲಿ ಅಧ್ಯಕ್ಷತೆ ವಹಿಸಿದುದು.

೫-೨-೭೬ ಗುರುವಾರ ಕೊಡಲಿಪೇಟೆ ಕಲ್ಲುಮಠದಲ್ಲಿ ನೆರವೇರಿದ ಶಿವಾನುಭವ ಸಮ್ಮೇಳದ ನೇತೃತ್ವ.

೧-೫-೧೯೭೭ ಭಾನುವಾರ ಇತಿಹಾಸ ಪ್ರಸಿದ್ಧ ಕಂಬಾಳು ಮಠದಲ್ಲಿ ಜರುಗಿದ ಶಿವಾನುಭವದ ನೇತೃತ್ವ.

೩೦-೧೨-೭೭ ಶುಕ್ರವಾರ ಲಿಂ. ನಾಗರತ್ನಮ್ಮ ಹಿರೇಮಠ ಅವರ ಸ್ಮಾರಕ ಗ್ರಂಥ ಬಿಡುಗಡೆ ಸಮಾರಂಭದ ಅಧ್ಯಕ್ಷತೆ.

೮-೧೦-೧೯೭೮ ಭಾನುವಾರ ಶ್ರೀ ಕ್ಷೇತ್ರದಲ್ಲಿ ನಡೆದ ಅಖಿಲ ಕರ್ನಾಟಕ ಸಂಸ್ಕೃತ ದ್ವಿತೀಯ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷತೆ ಮತ್ತು ನೇತೃತ್ವವನ್ನು ವಹಿಸಿದ್ದರು.

೧೧-೧೧-೧೯೭೮ ಭಾನುವಾರ ಕರ್ನಾಟಕದ ಮುಖ್ಯಮಂತ್ರಿ ಶ್ರೀ ಡಿ. ದೇವರಾಜ ಅರಸುರವರಿಗೆ ಅಖಿಲ ಕರ್ನಾಟಕ ವೀರಶೈವ ಮಠಾಧಿಪತಿಗಳ ಸಂಘದವರು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಏರ್ಪಡಿಸಿದ್ದ ಸನ್ಮಾನ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು.

೨೬-೧೧-೭೯ ಸೋಮವಾರ ಹಿರೇಹಳ್ಳಿಯಲ್ಲಿ ಅಂತರ್‌ರಾಷ್ಟ್ರೀಯ ಮಕ್ಕಳ ವರ್ಷದ ಅಂಗವಾಗಿ 'ಮಕ್ಕಳ ಮೇಳದ' ಉದ್ಘಾಟನೆ.



# ಶ್ರೀಗಳವರು ಸಂಚರಿಸಿದ ಊರುಗಳ ಒಂದು ಸ್ಥೂಲ ನೋಟ

[ಶ್ರೀಗಳವರು ಉಪದೇಶಕ್ಕಾಗಿ ದಯಮಾಡಿಸಿದ ಊರುಗಳ ಸಂಖ್ಯೆ ಅಸಂಖ್ಯಾತ. ಅವುಗಳಲ್ಲಿ ಮುಖ್ಯವಾದ ಕೆಲವು ಊರುಗಳ ಹೆಸರನ್ನು ಅವರು ಬರೆದಿಟ್ಟ ಡೈರಿಯನ್ನಾಧರಿಸಿ ಒಂದು ಪಟ್ಟಿ ಮಾಡಿ ಕೊಡಲಾಗಿದೆ]

ಭಾರತದಲ್ಲಿ ಕರ್ನಾಟಕದಲ್ಲಿ ಇಂದು ಅವನತಿಯ ಅಪಾಯಕಾರಿ ಹಾದಿ ಹಿಡಿದಿರುವ ಧಾರ್ಮಿಕ ಅಶ್ರದ್ಧೆ.ತತ್ಪರಿಣಾಮವಾಗಿ ಅಶಾಂತಿಯ ಜೀವನದಲ್ಲಿ ಮನಬಂದಂತೆ ಆಚರಿಸುತ್ತಾ ಸಾಮಾಜಿಕ ಜನಜೀವನವನ್ನೇ ಕಲುಷಿತಗೊಳಿಸುತ್ತಿರುವ, ಜನತೆಯಲ್ಲಿ ಮತ್ತೊಮ್ಮೆ ಧರ್ಮದ ದೀವಿಗೆ ಮೂಡಿಸಿ. ಆಶಾಕಿರಣವನ್ನು ದಶದಿಕ್ಕುಗಳಿಗೂ ಹರಡುವಂತೆ ಮಾಡಲು ಶ್ರೀಗಳವರು ಪಡುತ್ತಿರುವ ಪ್ರಯತ್ನ ಅನೇಕ ಮುಖದಲ್ಲಿ ಅವಿಶ್ರಾಂತವಾಗಿ ನಡೆಯುತ್ತಿದೆ. ಈ ಕಾರ್ಯಕ್ಕಾಗಿ ಶ್ರೀ ಶ್ರೀಗಳವರು ಭಕ್ತರ ಬಿನ್ನಹದ ಮೇರೆಗೆ ಎಲ್ಲಿ ಅಂದರಲ್ಲಿಗೆ ದೇಹ ಶ್ರಮವನ್ನೂ ಲೆಕ್ಕಿಸದೆ ತೆರಳುತ್ತಾರೆ. ತಮ್ಮ ದೈನಂದಿನ ಬದುಕಿನಲ್ಲಿ ಇದೊಂದು ದೊಡ್ಡ ಕಾಯಕವೇ ಆಗಿದೆ. ಆಗೊಮ್ಮೆ ಈಗೊಮ್ಮೆ ಹೀಗೆ ಉಪದೇಶಾರ್ಥವಾಗಿ ಹೋಗುತ್ತಾರೆಂದಲ್ಲ. ಅವರು ಶ್ರೀ ಮಠದಲ್ಲಿರುವುದೇ ಅಪರೂಪವಾಗಿದೆ. ಹೀಗೆ ಹೋಗಿ ಸಭೆ ಸಂಘಗಳಲ್ಲಿ ಭಾಗವಹಿಸಿ ತಮ್ಮ ಅನುಭವ ಪೂರ್ಣವೂ, ಹೃದಯವನ್ನು ನೇರವಾಗಿ ಪ್ರವೇಶಿಸುವಂಥವೂ ಆದ ಮಾತುಗಳಿಂದ ಉಪದೇಶಮಾಡುತ್ತಾರೆ. ನೂರಾರು ದೃಷ್ಟಾಂತ ಕಥೆಗಳು, ಉಪಮಾನಗಳನ್ನು ಉದ್ಧರಿಸಿ ಮಾಡುವ ಉಪದೇಶ ಆಬಾಲವೃದ್ಧರಿಗೆ ಆಪ್ಯಾಯಮಾನ. 'ಪ್ರಾಚೀನ ಅರ್ವಾಚೀನ ವಿಚಾರಧಾರೆಗಳೆರಡನ್ನೂ ಮೈಗೂಡಿಸಿಕೊಂಡು ಮಧ್ಯಮ ಮಾರ್ಗವೊಂದನ್ನನುಸರಿಸಿ ಜೀವನವನ್ನು ರೂಪಿಸಿಕೊಳ್ಳಬೇಕು. ಧರ್ಮ ಬುದ್ಧಿಯನ್ನು ಬೆಳಸಿಕೊಳ್ಳಬೇಕು. ಸುಖದ ಮೂಲ ಧರ್ಮ. ಧರ್ಮವನ್ನು ಯಾರು ರಕ್ಷಿಸುವರೋ ಅವರನ್ನು ಧರ್ಮ ರಕ್ಷಿಸುತ್ತದೆ. ಸಚ್ಚಾರಿತ್ರರು ರಾಷ್ಟ್ರ ಕಟ್ಟುವುದಕ್ಕೆ ಸಿದ್ಧವಾಗಿರಬೇಕು. ರಾಷ್ಟ್ರಧರ್ಮ ದೊಡ್ಡದು' ಎಂಬುದೇ ಇವರ ಉಪದೇಶದ ಪ್ರಧಾನಾಂಶ. ಇಂಥ ಧರ್ಮ ಬುದ್ಧಿಯಿಂದ ರಾಷ್ಟ್ರ ಕಟ್ಟದಿದ್ದರೆ ವಿಪತ್ಪರಂಪರೆಗಳು ಕಾಯ್ದಿವೆ ಎಂದು ಸಯುಕ್ತಿಕವಾಗಿ ಶ್ರೀಗಳವರು ಬೋಧಿಸುತ್ತಾರೆ. ನಮ್ಮ ಧರ್ಮಸಂಸ್ಕೃತಿಗಳು ದುಡಿಮೆಗೆ ಪ್ರಾಧಾನ್ಯತೆ ನೀಡಿವೆ. ರಾಷ್ಟ್ರದ ಮುನ್ನಡೆಗಾಗಿ ಜನರು ಕಷ್ಟಪಟ್ಟು ದುಡಿದು ತಾವೂ ಸುಖ ಪಟ್ಟು, ರಾಷ್ಟ್ರೀಯ ಆದಾಯವನ್ನು ಹೆಚ್ಚಿಸಬೇಕಾದುದು ಅನಿವಾರ್ಯ ; ಅಲ್ಲದೆ ವೈಜ್ಞಾನಿಕ ಆವಿಷ್ಕಾರದ ಫಲವಾಗಿ ವೇಗ ವೇಗವಾಗಿ ಮುಂದುವರಿಯುತ್ತಿರುವ ರಾಷ್ಟ್ರಗಳೊಂದಿಗೆ ಸ್ಪರ್ಧಿಸಿ ತಮ್ಮ ಸ್ಥಾನವನ್ನು ವಿಶ್ವರಾಷ್ಟ್ರಗಳಲ್ಲಿ ಸ್ಥಾಪಿಸಿಕೊಳ್ಳಬೇಕಾದುದು ಅತ್ಯವಶ್ಯಕ. ಆದ್ದರಿಂದ ತಾಂತ್ರಿಕಜ್ಞಾನ, ವೈಜ್ಞಾನಿಕ ಸಂಶೋಧನೆ, ವಾಣಿಜ್ಯಾಭಿವೃದ್ಧಿ. ಕಲಾನುಭವಗಳನ್ನು ನಮ್ಮ ಜನ ಮೈಗೂಡಿಸಿಕೊಂಡೇ ಧಾರ್ಮಿಕ ಶ್ರದ್ಧೆಯನ್ನು ಬೆಳಸಿಕೊಂಡುಬರಬೇಕು...ಮುಂತಾಗಿ ಶ್ರೀ ಶ್ರೀಗಳವರು ರೋಚಕವಾಗಿ, ಹೃದಯಂಗಮವಾಗಿ ಉಪದೇಶಿಸಿಸುತ್ತಾರೆ. ಅದಕ್ಕಾಗಿ ಶ್ರೀ ಶ್ರೀಗಳವರು ದಯಮಾಡಿಸಿದ ಹಲವಾರು ಮುಖ್ಯ ಊರುಗಳ ಹೆಸರುಗಳನ್ನು ಪಟ್ಟಿಗೊಳಿಸಿ ಇಲ್ಲಿ ಕೊಡಲಾಗಿದೆ. ಈ ಪಟ್ಟಿ ಕೇವಲ ಸ್ಥೂಲ. ಈ ಪಟ್ಟಿಯಲ್ಲಿ ಗ್ರಾಮಾಂತರದ ಸಾವಿರಾರು ಹಳ್ಳಿಗಳ ಹೆಸರು ಸೇರ್ಪಡೆಯಾಗಿಲ್ಲ.

ಅಂಬಲಗೆರೆ, ಅಕ್ಕಿರಾಮಪುರ, ಅಗಸರಹಳ್ಳಿ, ಅಜಗಾನಹಳ್ಳಿ. ಅಜ್ಜಂಪುರ, ಅಮೃತೂರು, ಅರಕಲಗೂಡು, ಅರಸೀಕೆರೆ, ಅರುವನಹಳ್ಳಿ, ಅರೆಯೂರು, ಅಳಲಘಟ್ಟ, ಆದಿವಾಲ, ಆನೇಕಲ್, ಆನೇಕೆರೆ, ಇಂಚೇನಹಳ್ಳಿ, ಇರಕಸಂದ್ರ, ಉಡುತಡಿ, ಉಡುಪಿ, ಊರುಕೆರೆ, ಎಡತೊರೆ, ಎಲ್ಲಾಪುರ, ಎಳಂದೂರು, ಎಳನಡು, ಐಡಿಹಳ್ಳಿ, ಐಮಂಗಲ, ಐಹೊಳೆ, ಓಜೇನಹಳ್ಳಿ, ಓಬಳಾಪುರ, ಕಂಚೇನಹಳ್ಳಿ, ಕಂದೀಕೆರೆ, ಕಂಬಾಳು, ಕಡಬ, ಕಡೂರು, ಕಣನೂರು, ಕದರನಹಳ್ಳಿ, ಕನಕಪುರ, ಕನ್ನಸಂದ್ರ, ಕಪ್ಪಡಿಸಂಗಮ, ಕರಿಮಣ್ಣೆ, ಕರೀಕೆರೆ, ಕಲ್ಯಾಣ, ಕಲ್ಲೂರು, ಕಳ್ಳಂಬೆಳ್ಳ, ಕಾಗಲವಾಡ, ಕಾಳೇನಹಳ್ಳಿ, ಕಿರಿಕೊಡಲಿಮಠ, ಕಿರುಗಾವಲು, ಕುಂದುರನಹಳ್ಳಿ, ಕಟ್ಟಪ್ಪನಪಾಳ್ಯ, ಕುಣಿಗಲ್, ಕುದೂರು, ಕೂಡ್ಲಗಿ, ಕೃಷ್ಣರಾಜನಗರ, ಕೆಂಪನದೊಡ್ಡೇರಿ, ಕೆಂಬಳಲು, ಕೆಸ್ತೂರು, ಕೇತೊಹಳ್ಳಿ, ಕೊಂಡಜ್ಜಿ, ಕೊಂಡಾಪುರ, ಕೊಟ್ಟೂರು, ಕೊಡಗಿಬೊಮ್ಮನಹಳ್ಳಿ, ಕೊಣಘಟ್ಟ, ಕೊಪ್ಪ, ಕೊಯಿಮತ್ತೂರು, ಕೊರಟಗೆರೆ, ಕೊಳ್ಳೇಗಾಲ, ಕೋಡಿಹಳ್ಳಿ, ಕೋರಮಂಗಲ, ಕೋಳಾಲ, ಗಂಗಾವತಿ, ಗದ್ದಿಗೆಮಠ, ಗದಗ, ಗಿಡ್ಡೋಬನಹಳ್ಳಿ, ಗುಂಡಿಗೆರೆ, ಗುಂಡ್ಲುಪೇಟೆ, ಗುಡಿಬಂಡೆ, ಗುಬ್ಬಿ, ಗೂಳೂರು, ಗೂಳ್ಯ, ಗೊಪ್ಪೇನಹಳ್ಳಿ, ಗೊಲ್ಲಹಳ್ಳಿ, ಗೋಡೇಕೆರೆ, ಗೌರೀಬಿದನೂರು, ಚಂದ್ರಶೇಖರಪುರ, ಚನ್ನಗಿರಿ, ಚನ್ನಪಟ್ಟಣ, ಚನ್ನರಾಯಪಟ್ಟಣ, ಚಳ್ಳಕೆರೆ, ಚಾಮರಾಜನಗರ, ಚಿಂತಾಮಣಿ, ಚಿಕ್ಕಗೊಂಡನಹಳ್ಳಿ, ಚಿಕ್ಕನಹಳ್ಳಿ, ಚಿಕ್ಕನಾಯಕನಹಳ್ಳಿ, ಚಿಕ್ಕನಾರಮಂಗಲ, ಚಿಕ್ಕಹೆಜ್ಜಾಜಿ, ಚಿಕ್ಕಳ್ಳಿ, ಚಿಕ್ಕಬಳ್ಳಾಪುರ, ಚಿಕ್ಕಬೆಳುವಂಗಲ, ಚಿಕ್ಕಮಗಳೂರು, ಚಿಗಟೇರಿ, ಚೌಡಸೆಟ್ಟಿಹಳ್ಳಿ, ಜಗಳೂರು, ತಂಡಗ, ತಟ್ಟೇಕೆರೆ, ತರೀಕೆರೆ, ತರೂರು, ತಲಕಾಡು, ತಾವರೆಕೆರೆ, ತಿಪಟೂರು, ತಿಪ್ಪಗೊಂಡನಹಳ್ಳಿ, ತಿಪ್ಪಸಂದ್ರ, ತಿಮ್ಮನಾಯಕನಹಳ್ಳಿ, ತೀತಾ, ತೀರ್ಥ

ಹಳ್ಳಿ, ತುರುವೇಕೆರೆ, ತಮ್ಮೇನಹಳ್ಳಿ, ತೊಂಡಿಗೆರೆ, ತೊಟ್ಲುಗೆರೆ, ತ್ಯಾಮಗೊಂಡ್ಲು, ದಂಡಿನಶಿವರ, ದಾಬಸ್‌ಪೇಟೆ, ದಾವಣ ಗೆರೆ, ದಾಸೇನಹಳ್ಳಿ, ದುರುದುಂಡೇಶ್ವರ, ದೇವನಹಳ್ಳಿ, ದೇವರಾಯಪಟ್ಟಣ, ದೊಡ್ಡಗುಣಿ, ದೊಡ್ಡಬಳ್ಳಾಪುರ, ದೊಡ್ಡ ಹೆಜ್ಜಾಜಿ, ಧರ್ಮಸ್ಥಳ, ಧಾರವಾಡ, ನಂಜನಗೂಡು, ನರಗುಂದ, ನರಸೀಪುರ, ನವಿಲುಗುಂದ, ನವಿಲೆ, ನಾಗಪುರ, ನಾಗಮಂಗಲ, ನಾಗವಲ್ಲಿ, ನಾರಸಂದ್ರ, ನಾರಾಯಣಪುರ, ನಿಟ್ಟೂರು, ನಿಡುವಂದ, ನೀಲಗುಂದ, ನೇರಲಾಪುರ, ನೊಣವಿನಕೆರೆ, ಪಟ್ಟದಕಲ್ಲು, ಪಾಂಡವಪುರ, ಪಾಲನಹಳ್ಳಿ, ಪಾಲಸಂದ್ರ, ಪಾವಗಡ, ಪಿರಿಯಾಪಟ್ಟಣ, ಪುರುಷನಹಳ್ಳಿ, ಬಂಗಾರಪೇಟೆ, ಬಂಡಿಹಳ್ಳಿ, ಬಂಡೇ ಮಠ, ಬಳ್ಳಗೆರೆ, ಬಳ್ಳಾರಿ, ಬಾಗಿಲಕೋಟೆ, ಬಾಗೇಪಲ್ಲಿ, ಬಾಗೇವಾಡಿ, ಬಾದಾಮಿ, ಬಿಕ್ಕೋಡು, ಬಿದರೆ, ಬಿಜಾಪುರ, ಬುಕ್ಕಾ ಪಟ್ಟಣ, ಬುಗುಡನಹಳ್ಳಿ, ಬೆಟ್ಟದಹಳ್ಳಿ, ಬೆಂಗಳೂರು, ಬೆಳಗಾಂ, ಬೆಣ್ಣೆಗೆರೆ, ಬೆಲ್ಲೂರು, ಬೆಳಗುಲಿ, ಬೆಳ್ಳಾವಿ, ಬೆಳ್ಳೂರು, ಬೇಗೂರು, ಬೈಂದ್ರಹಳ್ಳಿ, ಬೈಜಾಪುರ, ಬೈಲಹೊಂಗಲ, ಬೊಮ್ಮನಹಳ್ಳಿ, ಬ್ಯಾಡಗಿ, ಬ್ಯಾತಾ, ಬ್ಯಾಲ್ಯ, ಬ್ರಹ್ಮಸಂದ್ರ, ಭಕ್ತರ ಹಳ್ಳಿ, ಭದ್ರಾವತಿ, ಭೈರಸಂದ್ರ, ಮಂಗಳೂರು, ಮಂಡ್ಯ, ಮಣಿಪಾಲ್, ಮದ್ದೂರು, ಮಧುಗಿರಿ, ಮಧುವನಹಳ್ಳಿ, ಮಲ್ಲ ಸಂದ್ರ, ಮಳವಳ್ಳಿ, ಮಾಗಡಿ, ಮಾದಿಕೆರೆ, ಮಾದೇನಹಳ್ಳಿ, ಮಾಯಕೊಂಡ, ಮಾಲೂರು, ಮಾರಶೆಟ್ಟಿಹಳ್ಳಿ, ಮಾವತ್ತೂರು, ಮುಚ್ಚಸೂರು, ಮುದುಗೆರೆ, ಮುರುಗೋಡ, ಮುಳಬಾಗಿಲು, ಮೂಗನಾಯಕನಕೋಟೆ, ಮೆಳೇಕೋಟೆ, ಮೇಳೇಹಳ್ಳಿ, ಮೈಸೂರು, ಮೊಳಕಾಲ್ಮೂರು, ಯಕ್ಕುಂದ, ಯಕ್ಕುಂಡಿ, ಯಲದಡ್ಲು, ರಂಗನಹಳ್ಳಿ, ರಸಗಾನಹಳ್ಳಿ, ರಾಂಪುರ, ರಾಘದೇವನಹಳ್ಳಿ, ರಾಜ ಘಟ್ಟ, ರಾಣಿಬೆನ್ನೂರು, ರಾಮನಗರ, ರಾಮದುರ್ಗ, ರಾವುತನಹಳ್ಳಿ, ರೈತರಪಾಳ್ಯ, ವಡೇರಹಳ್ಳಿ, ವಿಜಯಪುರ, ವೀರರಾಜ ಪೇಟೆ, ವೀರಾಪುರ, ವೀರೇಗೌಡನದೊಡ್ಡಿ, ಶ್ಯಾನುಭೋಗರಹಳ್ಳಿ, ಶಿಕಾರಿಪುರ, ಶಿಡ್ಲಘಟ್ಟ, ಶಿವಮೊಗ್ಗ, ಶಿವಯೋಗಮಂದಿರ, ಶಿವಗಂಗಾ, ಶಿವನಹಳ್ಳಿ, ಶ್ರೀನಿವಾಸಪುರ, ಶ್ರೀರಂಗಪಟ್ಟಣ, ಶ್ರೀಶೈಲ, ಸಂಡೂರು ಸಕಲೇಶಪುರ, ಸಕ್ಕರೆಪಟ್ಣ, ಸತ್ಯ ಮಂಗಲ, ಸಾಗರನಹಳ್ಳಿ, ಸಿದ್ದಾಪುರ, ಸಿರಗುಪ್ಪ, ಸಿರಿಗೆರೆ, ಸಿರಾ, ಸೀಗೇಹಳ್ಳಿ, ಸೀತಕಲ್ಲು, ಸೀಬಿ, ಸುತ್ತೂರು, ಸುಬ್ರ ಹ್ಮಣ್ಯ, ಸುರತ್ಕಲ್, ಸುಲ್ತಾನಪೇಟೆ, ಸುಳ್ಯ, ಸೂರೇನಹಳ್ಳಿ, ಸೂಲುಕೆರೆ, ಸೊಂಡೇಕೊಪ್ಪ, ಸೊರಬ, ಸೋಮವಾರಪೇಟೆ, ಸೋಲೂರು, ಹಂದನಕೆರೆ, ಹರ್ತಿ, ಹನಗೋಡಿ, ಹರಳೂರು, ಹರಪನಹಳ್ಳಿ, ಹರಿಹರ, ಹರಿಯಪ್ಪನಹಳ್ಳಿ, ಹಳೇ ನಿಜಗಲ್, ಹಾವೇರಿ, ಹಾಸನ, ಹಿಂದೂಪುರ, ಹಿರಿಯೂರು, ಹಿರೇಬೆಳಗುಲಿ, ಹಿರೇಹಳ್ಳಿ, ಹಿರೇಗುಂಡಕಲ್ಲು, ಹುಣಸಮಾರನಹಳ್ಳಿ, ಹುಣ ಸೂರು, ಹುಣಸೇಹಳ್ಳಿ, ಹುನಗುಂದ, ಹುಲಿಯೂರು, ಹುಲಿಕುಂಟೆ, ಹುಲಿಕಲ್ಲು, ಹುಳಿಯೂರು, ಹುಸ್ಕೂರು, ಹೆಗ್ಗಡ ದೇವನ ಕೋಟೆ, ಹೆಗ್ಗುಂದ, ಹೆಸರುಘಟ್ಟ, ಹೆಬ್ಬಾಕ ಹೇಮಾಪುರ, ಹೊನ್ನುಡಿಕೆ, ಹೊಸಕೋಟೆ, ಹೊಸದುರ್ಗ, ಹೊಸನಗರ, ಹೊಸ ಪೇಟೆ, ಹೊಸಹಳ್ಳಿ, ಹೊಳಲ್ಕೆರೆ, ಹೊಳೇನರಸೀಪುರ, ಹೊಳವನಹಳ್ಳಿ ಇತ್ಯಾದಿ.



SIT ಗೆ ಶ್ರೀ ಜಗನ್ನಾಥರಾವ್ ಜೋಷಿ ಅವರ ಭೇಟಿ



ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯಿಂದ ಶ್ರೀ ಗುಬ್ಬಿ ವೀರಣ್ಣ
ಶ್ರೀಮತಿ ಜಯಮ್ಮ ಮತ್ತು ಡಾ. ಮೋದಿ ಅವರಿಗೆ ಸನ್ಮಾನ.



SIT ಗೆ ಶ್ರೀ ನಿಜಲಿಂಗಪ್ಪನವರ ಭೇಟಿ



SIT ಗೆ ಆಗಮಿಸಿದ ಶ್ರೀ ಮುರಾರ್ಜಿ ಅವರಿಗೆ ಸ್ವಾಗತ



SIT ಗೆ ಶ್ರೀ ವೀರೇಂದ್ರ ಪಾಟೀಲರ ಭೇಟಿ



SIT ಗೆ ಶ್ರೀ ನವಕಲ್ಯಾಣ ಮಠ ಶ್ರೀಗಳವರ ಭೇಟಿ





S I T ಯಲ್ಲಿ ವಿವಿಧ ಸಮಾರಂಭಗಳು







ನವ ಕಲ್ಯಾಣ ಮಠದ ಕುಮಾರ ಸ್ವಾಮಿಗಳ S I T ಆವರಣ ವೀಕ್ಷಣೆ



ಶ್ರೀ ಸಿದ್ಧರಾಮಣ್ಣನವರಿಂದ ಪುಷ್ಪವೃಷ್ಟಿ






ಶಿಕ್ಷಣ ತಜ್ಞ ಶ್ರೀ ಎ. ಸಿ. ದೇವೇಗೌಡರು S I T ವಿದ್ಯಾರ್ಥಿ ಸಂಘದ ಸಮಾರಂಭಕ್ಕೆ ಆಗಮಿಸಿದಾಗಿನ ದೃಶ್ಯಗಳು



S I T ಗೆ ಆಗಮಿಸಿದ ಅಮೆರಿಕಾ ಕಾನ್ಸುಲ್ ಜನರಲ್ ಮದ್ರಾಸ್ ಅವರೊಂದಿಗೆ ಶ್ರೀಗಳು



S I T ಯಲ್ಲಿ ಉಪನ್ಯಾಸವಿತ್ತ ನವಕಲ್ಯಾಣ ಮಠದ ಕುಮಾರಸ್ವಾಮಿಗಳೊಂದಿಗೆ ಶ್ರೀಗಳು



S I T ಆವರಣದಲ್ಲಿ ಶ್ರೀ ಪೈ ಅವರಿಂದ ಸಂಪಿಗೆ ನೆಡುವಿಕೆ



S I Tಗೆ ಶ್ರೀ ಮುರಾರ್ಜಿ ಭೇಟಿ



↑
S I T ಕೆನೆಡಿ ಇಂಟರ್ ನ್ಯಾಷನಲ್ ಕಟ್ಟಡದ ಪ್ರವೇಶೋತ್ಸವದ
ಇನ್ನೆರಡು ದೃಶ್ಯಗಳು
↓



ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿ ವಿದ್ಯಾಸಂಸ್ಥೆಗಳ
ಮುಖ್ಯರೊಡನೆ ಗವರ್ನರ್ ಶ್ರೀ ಸುಖಾಡಿಯಾ
↓





ಸಿದ್ಧಗಂಗಾ ಸೈನ್ಸ್, ಆರ್ಟ್ಸ್, ಕಾಮರ್ಸ್ ಕಾಲೇಜಿನ ವಾರ್ಷಿಕೋತ್ಸವ



ವಾರ್ಷಿಕೋತ್ಸವಕ್ಕೆ ಬಂದ ನಾಗರಿಕರು ಮತ್ತು ವಿದ್ಯಾರ್ಥಿಗಳು



S I T ಗೆ ಭೇಟಿ ಕೊಟ್ಟ ಶ್ರೀ ಪೈ ಅವರೊಡನೆ



ಶ್ರೀಮಠದಲ್ಲಿ ಗವರ್ನರ್ ಶ್ರೀ ವಿ. ವಿ. ಗಿರಿ ಅವರೊಂದಿಗೆ



ಶ್ರೀ ಸಿದ್ಧಗಂಗಾ ಹೈಸ್ಕೂಲಿನಲ್ಲಿ ಗ್ರಂಥಾವಲೋಕನ



ಶ್ರೀ ಸಿದ್ಧಗಂಗಾ ಸೈನ್ಸ್, ಆರ್ಟ್ಸ್ ಕಾಲೇಜಿನ ವಿಜ್ಞಾನ ಪ್ರಯೋಗಾಲಯ

# ಪತ್ರಿಕೆಗಳಲ್ಲಿ ಮತ್ತು ಗೆಜೆಟಿಯರ್‌ಗಳಲ್ಲಿ ಶ್ರೀಕ್ಷೇತ್ರ ಹಾಗು ಶ್ರೀಗಳು

[ಶ್ರೀಗಳವರನ್ನು ಆಗಾಗ ಪತ್ರಿಕೆಯ ಪ್ರತಿನಿಧಿಗಳು, ಆಕಾಶವಾಣಿಯವರು ಬಂದು ಸಂದರ್ಶಿಸಿ ಶ್ರೀಕ್ಷೇತ್ರ ಮತ್ತು ಶ್ರೀಗಳವರ ನಿಲುವನ್ನು ಪ್ರಕಟಸಿದ್ದಾರೆ. ಬಿತ್ತರಿಸಿದ್ದಾರೆ; ಶ್ರೀಗಳವರೇ ಪತ್ರಿಕೆಗಳಿಗೆ ತಮ್ಮ ನಿಲುವನ್ನು ತಿಳಿಸಿದ್ದಾರೆ. ಕೆಲವು ಪತ್ರಿಕೆಗಳವರು ಸಂದರ್ಶಿಸಿ ಕಂಡುಂಡ ಸತ್ಯವನ್ನು ಪ್ರಕಟಿಸಿದ್ದಾರೆ. ಈ ಸಂಖ್ಯೆ ದೊಡ್ಡದು. ಅವನ್ನೆಲ್ಲ ಹೇಳಹೋಗಿಲ್ಲ. ಪ್ರಕೃತ ಬಂದು ಪತ್ರಿಕಾ ಸಂದರ್ಶನ ಹಾಗೂ ಒಂದು ಆಕಾಶವಾಣಿಯವರ ಸಂದರ್ಶನ ಮತ್ತು ಕೆಲವು ಪತ್ರಿಕಾ ವರದಿ, ಗೆಜೆಟಿಯರ್‌ನ ರಿಪೋರ್ಟ್‌ಗಳು ಇಲ್ಲಿವೆ.]

## ೧. ಸಿದ್ಧಗಂಗೆಯ ಸೋಜಿಗ

(ಪತ್ರಿಕಾ ಸಂದರ್ಶನ)

ಸಂದರ್ಶಕರು:, 'ಜಯಶೀಲ' ಸಂಯುಕ್ತ ಕರ್ನಾಟಕ, ಬೆಂಗಳೂರು

[ಕನ್ನಡನಾಡಿನ ಪ್ರಸಿದ್ಧ ಪತ್ರಿಕೆಗಳಲ್ಲಿ ಒಂದಾದ ಸಂಯುಕ್ತ ಕರ್ನಾಟಕದ ಪ್ರತಿನಿಧಿ 'ಜಯಶೀಲ' ಅವರು ಸಂದರ್ಶಿಸಿ ತಾ॥ ೧೧-೩-೭೫ರಂದು ಪತ್ರಿಕೆಯಲ್ಲಿ ಪ್ರಕಟಿಸಿದ ಪೂರ್ಣ ಪಾಠ]

ನೂರಾರು ವರ್ಷಗಳ ಹಿಂದೆ ಹತ್ತಿತು. ಹತ್ತಿದ ಒಲೆ ಆರಲಿಲ್ಲ, ಆರಿಲ್ಲ.

ಇದೊಂದು ಬೆಳಕು, ಅಗ್ನಿಯ ಬೆಳಕು. ಅಷ್ಟೇ ಅಲ್ಲ, ಜೊತೆಗೆ ಜ್ಞಾನದ ಬೆಳಕು. ಬಾಳ ಬೆಳಗಿಸುವ ಬೆಳಕು.

ಇವೆರಡೂ ಬೇರೆ ಬೇರೆ ಬೆಳಕು. ಆದರೊಂದೇ ಬೆಳಕು, ಜೀವನದ ದಾರಿದೀಪ, ಹುಟ್ಟಿನ ಭೇದವಿಲ್ಲದೆ ನಾಡಿನ ಸಹಸ್ರಾರು ಮಕ್ಕಳಿಗೆ. ಇದರ ದರ್ಶನ ಶ್ರೀ ಸಿದ್ಧಗಂಗಾ ಗುರುಕುಲದಲ್ಲಿ. ಈಗಿನ ಗುರುಗಳ ಕಾಲದಲ್ಲಿ ಇವೆರಡು ಬೆಳಕುಗಳ ಹೆಚ್ಚು ಪ್ರಕಾಶ.ಜ್ಞಾನಸಂಪನ್ನ ಶ್ರೀ ಶಿವಕುಮಾರಸ್ವಾಮಿ ಅವರು ಕುಲದ ಗುರು ಮಾತ್ರ ಅಲ್ಲ, ಕ್ಷೇತ್ರದ ಸ್ವಾಮಿಗಳು ಮಾತ್ರ ಅಲ್ಲ, ಬೆಳಕನ್ನು ಬೀರುತ್ತಿರುವ ಸಮಾಜದ ದೀವಟಿಗೆ.

ಆರಡಿ ಎತ್ತರದ, ಕಾವಿಧಾರಿ ಅಜಾನುಬಾಹು ಬಂದು ಕುಳಿತರು. ಸಂದರ್ಶನವೂ ದಾಸೋಹ ಪ್ರಸ್ತಾಪದೊಡನೆ ಆರಂಭ. ಅಡವಿಸ್ವಾಮಿಗಳ ಕಾಲದಲ್ಲಿ ಇದರ ಆರಂಭ. ಇವರ ಗುರು ಶ್ರೀ ಉದ್ದಾನ ಶಿವಯೋಗಿಗಳಿಂದ ದಾಸೋಹ ದೊಡ್ಡದಾಯಿತು. ೧೯೧೦ ರಲ್ಲಿ ದನದ ಜಾತ್ರೆ ಪ್ರಾರಂಭ. ಈಗ ಇದು ಪ್ರಸಿದ್ಧ ಜಾತ್ರೆ. ೧೯೧೭ ರಲ್ಲಿ ಸಂಸ್ಕೃತ ವಿದ್ಯಾಸಂಸ್ಥೆ. ೧೯೪೧ರಲ್ಲಿ ಶ್ರೀ ಶಿವಕುಮಾರಸ್ವಾಮಿಗಳು ಅಧಿಕಾರಕ್ಕೆ ಸಮಾಜ ಸೇವಾಧಿಕಾರಕ್ಕೆ,ಬಂದದ್ದು ಹಿಂದೆ ೧೦೦ ರಿಂದ ೧೨೦ ವಿದ್ಯಾರ್ಥಿಗಳು, ಹಿಂದೆಯೂ ಆಸ್ತಿ ಜಾಸ್ತಿ ಇರಲಿಲ್ಲ. ಈಗಲೂ ಇಲ್ಲ. ೧೯೪೫ ರಲ್ಲಿ ಕಟ್ಟಡಗಳ ನಿರ್ಮಾಣ ಆರಂಭ.

**ಪ್ರಯಾಸದ ಪಯಣ**

೧೯೧೨ ರಲ್ಲಿ ೧೭ ಎಕರೆ ಖುಷ್ಕಿ ಮಾತ್ರ. 'ನಮ್ಮ ಸ್ವಾಮಿಗಳು ಕೊಂಚ ಆಸ್ತಿ ಸಂಪಾದನೆ ಮಾಡಿದರು' ೧೯೪೧ ರಲ್ಲಿ ೨೫-೩೦ ಎಕರೆ ತರೀ ಜಮೀನು. ಇವರು ಸರ್ಕಾರಕ್ಕೆ ಅರ್ಜಿ ಹಾಕಿ ಕೊಂಚ ಜಮೀನು. ಈಗ ೧೦೦-೧೨೦ ಎಕರೆ ತರೀ ಜಮೀನು ೧೮೦-೨೦೦ ಎಕರೆ ಖುಷ್ಕಿ. 'ಭೂ ಪರಿಮಿತಿ ಕಾರಣ ಸ್ವಲ್ಪ ಜಮೀನು ಹೋಗಬಹುದು ಅಂತ ಕಾಣುತ್ತೆ.'

ಕಳೆದ ವರ್ಷ ವಿದ್ಯಾರ್ಥಿಗಳ ಸಂಖ್ಯೆ ೩೬೦೦.

ಈ ಗುರುಕುಲ ಬೆಳೆದು ಬಂದ ದಾರಿ ಸುಗಮವಾಗಿರಲಿಲ್ಲ. ಪ್ರಯಾಸದ ಪಯಣವೇ. 'ಎಲ್ಲದೇವರ ಕರುಣೆ.' ಹತ್ತಿದ ಒಲೆ ಆರಿಲ್ಲ.'

ಸ್ವಾಮಿಗಳು ಕಳೆದ ವರ್ಷ ತಾವಾಗಿಯೇ ಸರ್ಕಾರದ ನೆರವು ಬೇಡ ಎಂದರು. ಏನು ಕಾರಣ? ಎಂದೆ.

ಸರಕಾರ ಕೊಡುತ್ತಿದ್ದುದು ಎಂದೂ ಸಾಕಾಗುತ್ತಿರಲಿಲ್ಲ ಈಗಲೂ ಖರ್ಚು. ವಿದ್ಯಾರ್ಥಿಗೆ ತಲಾ ೫೦ ರೂಪಾಯಿಗಿಂತ ಕಡಿಮೆ ಇಲ್ಲ. ಕಳೆದ ವಿಧಾನ ಸಭಾಧಿವೇಶನದಲ್ಲಿ ಶಿಕ್ಷಣಮಂತ್ರಿಗಳು ಆಡಿದ ಮಾತಿನ ಸ್ಮರಣೆ.

**ಮನನೋಯಿಸಿದ ಟೀಕೆ :**

'ಅನಾಥಾಲಯಗಳಲ್ಲಿ ಹಗಲು ದರೋಡೆ, ಲೂಟಿ, ವಂಚನೆ ನಡೆಯುತ್ತಿವೆ ಎಂದು ಹೇಳಿದರು. ಆಮೇಲೆ ನಾನು ಯೋಚನೆ ಮಾಡಿದೆ. ತಿರಸ್ಕಾರವಾಗಿ ಮಾತನಾಡಿದ್ದಾರೆ. ಕೆಲವು ಸಂಸ್ಥೆಗಳು ಈ ಆಕ್ಷೇಪಣೆಗೆ ಗುರಿಯಾಗಿರಬಹುದು. ತಪ್ಪು

ಮಾಡುತ್ತಿರಬಹುದು. ಎಲ್ಲಾ ಸಂಸ್ಥೆಗಳಿಗೂ ಒಂದೇ ಮಾತನಾಡುತ್ತಿರುವುದು ಉಚಿತವಲ್ಲ'. ಇವರ ಮನಸ್ಸಿಗೆ ನೋವು ಉಂಟಾಗಲು ಇದೇ ಕಾರಣ.

**ನಿರಾಕರಿಸಿದ್ದೇಕೆ ?**

'ಸರಕಾರ ೧೯೪೦ ವಿದ್ಯಾರ್ಥಿಗಳಿಗೆ ಮಾತ್ರ ಗ್ರಾಂಟ್ ಕೊಡುತ್ತಿತ್ತು. ಇದ್ದ ವಿದ್ಯಾರ್ಥಿಗಳ ಸಂಖ್ಯೆ ೩೬೦೦. ನಾವು ಒಬ್ಬ ವಿದ್ಯಾರ್ಥಿಗೆ ಒಂದು ತಿಂಗಳಿಗೆ ಕಡೆಯಪಕ್ಷ ೩೦-೩೫ ರೂಪಾಯಿಗಳನ್ನಾದರೂ ತುಂಬಬೇಕಾಗಿತ್ತು'. ಸ್ವಾಮಿಗಳು ಗ್ರಾಂಟ್ ನಿರಾಕರಿಸಲು ನಿರ್ಧರಿಸಿ ಪತ್ರಿಕೆಗಳಿಗೆ ಹೇಳಿಕೆ ನೀಡಿದರು.

**ನಿಂತ ಫೈಲು**

ಸರಕಾರದಿಂದ ನೆರವಿನ ಬಗ್ಗೆ ಹೆಚ್ಚು ಕಟ್ಟುನಿಟ್ಟಾದ ನಿಯಮಗಳ ರಚನೆಯು ಪರಿಶೀಲನೆ. ಇವರ ಅಭಿಪ್ರಾಯದ ರೀತ್ಯ 'ಪ್ರಾಯಶಃ ಈ ನಿಯಮಗಳ ಪ್ರಕಾರವಾಗಿ ಯಾವ ಸಂಸ್ಥೆಗೂ ಗ್ರಾಂಟ್ ಸಿಗುತ್ತಿರಲಿಲ್ಲ'.

ಸ್ವಾಮಿಗಳು ಗ್ರಾಂಟ್ ನಿರಾಕರಿಸಿ ಹೇಳಿಕೆ ಕೊಟ್ಟನಂತರ ಸರಕಾರದ ಹೊಸ ನಿಯಮಗಳ ರಚನೆಯು ಫೈಲು ಸಂಚಾರ ನಿಂತಿತಂತೆ. ಅರ್ಥಗರ್ಭಿತ ಮಾತು. ಸಂದರ್ಶನ ಮೆಲುದನಿಯಲ್ಲಿ ಸಾಗುತ್ತಿತ್ತು.

ಈ ವರ್ಷ ಗ್ರಾಂಟೂ ಬೇಡವೆಂದು ಬಿಟ್ಟರಿ. ೧೦೦ ರಿಂದ ೩,೦೦೦ ರವರೆಗೆ ವಿದ್ಯಾರ್ಥಿಗಳು ಈ ಪ್ರಯಾಸ ಪಯಣದ ಪರಿಚಯ ಪಡೆಯಲು ಆಶಿಸಿದೆ.

**ನಡೆದುಬಂದ ದಾರಿ**

'ಇನ್ನೊಂದು ವಿಷಯ ಹೇಳುತ್ತೇನೆ ಕೇಳಿ. ೧೯೧೭ ರಲ್ಲಿ ಈ ವಿದ್ಯಾಸಂಸ್ಥೆ ಪ್ರಾರಂಭವಾಯಿತು. ಆಗಿನ ಸರಕಾರದ ಧೋರಣೆ ಒಂದೊಂದು ಜಾತಿ ಸಂಸ್ಥೆಗಳಿಗೂ ಮಾನ್ಯತೆ ಕೊಡುತ್ತಿತ್ತು. ಬೇರೆ ಜಾತಿಯವರನ್ನು ಸೇರಿಸಿಕೊಳ್ಳಬೇಕೆಂಬ ನಿಬಂಧನೆ ಇರಲಿಲ್ಲ. ಕೋಮುವಾರು ವಿದ್ಯಾರ್ಥಿನಿಲಯಗಳಿಗೆ ಸಹಾಯ ಮತ್ತು ಮಾನ್ಯತೆ ಕೊಟ್ಟಿತ್ತು. ಆದರೆ ನಮ್ಮ ಸ್ವಾಮಿಗಳು ಎಂದು ಹಾಸ್ಟೆಲ್ ಆರಂಭಿಸಿದರೋ ಅಂದಿನಿಂದ ಎಲ್ಲ ಕೋಮಿನ ವಿದ್ಯಾರ್ಥಿಗಳಿಗೂ ಅವಕಾಶ ಕೊಟ್ಟರು'. ಇದೇ ಸಿದ್ಧಗಂಗಾ ಗುರುಕುಲ ನಡೆದ ಒಂದೇ ಹಾದಿ; ತೋರಿಸಿಕೊಟ್ಟ ದಾರಿ.

ಹಳ್ಳಿಗಾಡಿನ ವಿದ್ಯಾರ್ಥಿ ಹೈಸ್ಕೂಲ್ ವಿದ್ಯಾಭ್ಯಾಸಕ್ಕಾಗಿ ತುಮಕೂರಿಗೇ ಹೋಗಬೇಕಾಗಿದ್ದ ಕಾಲ. ಆಕಾಲದಲ್ಲಿ ಈ ಸಂಸ್ಥೆಯಲ್ಲಿ ಎಲ್ಲ ಕೋಮಿನ ವಿದ್ಯಾರ್ಥಿಗಳಿಗೆ ಅವಕಾಶ.

'ಹೇಗೆ ಅಭಿವೃದ್ಧಿ ಆಯಿತೆನ್ನುವುದು, ಹೇಗೆ ಬಂತೆನ್ನುವುದು ನನಗೆ ಗೊತ್ತಿಲ್ಲ. ಇಷ್ಟು ಬಿಲ್ಡಿಂಗ್ ಹೇಗಾಯ್ತು. ಇಷ್ಟೊಂದು ವಿದ್ಯಾರ್ಥಿಗಳು ಹೇಗೆ ಆಶ್ರಯ ಹೊಂದಿದರೆಂಬುದು ಗೊತ್ತಿಲ್ಲ. ನಮ್ಮ ಭೂಮಿಯಿಂದ ಬರತಕ್ಕ ಉತ್ಪತ್ತಿ ಎರಡು ತಿಂಗಳಿಗೂ ಸಾಕಾಗುವುದಿಲ್ಲ.

ಎಲ್ಲ ಸಾರ್ವಜನಿಕರ ಸಹಾಯ, ಜನಬೆಂಬಲವೇ ಈ ಕ್ಷೇತ್ರಕ್ಕೆ ಮೂಲಾಧಾರ. ಸ್ವಾಮಿಗಳ ನಿರಂತರ ಪ್ರವಾಸದ ಮೂಲಕ ಸಹಾಯದ ಸಂಗ್ರಹ. ವಿದ್ಯಾದಾನ ಕ್ಷೇತ್ರ ವಿಸ್ತಾರವಾದಂತೆ ಈಗ ಹೆಚ್ಚು ಪ್ರವಾಸ ಮಾಡಲು ಅವಕಾಶವಾಗುತ್ತಿಲ್ಲ. ಸಿದ್ಧಗಂಗೆಯಲ್ಲಿ ಸಿದ್ಧರಾದವರು ಈಗ ನಾಡಿನ ಹಾಗೂ ರಾಜ್ಯದ ಮೂಲೆ ಮೂಲೆಗಳಲ್ಲಿ.

**ಬೇರೆಯವರಿಗೆ**

ಸಿದ್ಧಗಂಗೆ ವೀರಶೈವರ ವಿರಕ್ತರ ಮಠ. ಕಳೆದ ಕೆಲವು ವರ್ಷಗಳ ಅಂದಾಜಿನಂತೆ ಶೇ. ೬೦ರಷ್ಟು ವಿದ್ಯಾರ್ಥಿಗಳು ಲಿಂಗಾಯಿತರಲ್ಲದವರು.

'ನಿಮಗೆ ಹಲವಾರು ವಿದ್ಯಾರ್ಥಿನಿಲಯಗಳ ಅವಕಾಶವಿದೆ. ಅರ್ಜಿಹಾಕಿಕೊಳ್ಳಿ, ನಾನು ಶಿಫಾರಸು ಮಾಡುತ್ತೇನೆ'– ಸ್ವಾಮಿಗಳು ಲಿಂಗಾಯಿತ ವಿದ್ಯಾರ್ಥಿಗಳಿಗೆ ಹೇಳುತ್ತಿದ್ದ ಮಾತು. ಕಾರಣ ಬೇರೆಯವರಿಗೆ ಹೆಚ್ಚು ಅವಕಾಶ ಸಿಗಲೆಂಬುದೇ ಉದ್ದೇಶ. ಇದೇ ಈ ಸಂಸ್ಥೆಯ ಆದರ್ಶ

**ಬೇಸರ ತಂದ ಘಟನೆ**

ಕಳೆದ ವರ್ಷ ನಡೆದ ಒಂದು ಘಟನೆಯಿಂದ ಸ್ವಾಮಿಗಳಿಗೆ ತುಂಬಾ ಬೇಸರ.

'ಇಷ್ಟು ವಿಶಾಲಭಾವನೆಯಿಂದ ಕೆಲಸ ಮಾಡುತ್ತಿದ್ದರೂ ಕೆಲವು ರಾಜಕಾರಣಿಗಳು ಹಾಗೂ ಕೆಲವು ಉಪಾಧ್ಯಾಯರು ಹೋದವರ್ಷ ನಡೆದ ಕೆಲವು ಘಟನೆಗಳಿಗೆ ಕಾರಣವೆಂದು ಕಾಣುತ್ತೆ. ಇವರಲ್ಲಿ ಮುಖ್ಯವಾಗಿ ಜಾತಿ ಪ್ರಶ್ನೆ ತೆಗೆದುಕೊಂಡು ಲಿಂಗಾಯಿತರು ಹಾಗೂ ನಾನ್-ಲಿಂಗಾಯಿತರು ಎಂಬ ಘರ್ಷಣೆಗೆ ಕಾರಣರಾದರು ಎಂದು ಕಾಣುತ್ತೆ. ಇಲ್ಲಿಯವರೆಗೆ ಆ ಕಲ್ಪನೆ ಕೂಡ ಇರಲಿಲ್ಲ', ಮಾತಿನಲ್ಲಿ ನೋವಿನ ದನಿಯಿತ್ತು.

**ಪ್ರತ್ಯೇಕ ವ್ಯವಸ್ಥೆ ಕಾರಣ**

ಅಡಿಗೆಯೆಲ್ಲ ಒಂದೇ. ಲಿಂಗಾಯಿತ ವಿದ್ಯಾರ್ಥಿಗಳೊಂದಿಗೆ ಬ್ರಾಹ್ಮಣವಿದ್ಯಾರ್ಥಿಗಳಿಗೆ ಪ್ರತ್ಯೇಕ ವ್ಯವಸ್ಥೆ. ಲಿಂಗಾಯಿತರಿಗೆ, ಇತರರಿಗೆ ಬೇರೆ ಭೋಜನ ವ್ಯವಸ್ಥೆ.

ಏಕೆ ಈ ಪ್ರತ್ಯೇಕ ವ್ಯವಸ್ಥೆ ? ಕೇಳಿದೆ.

'ಶ್ರೀಮಠದಲ್ಲಿ ಹಲವು ಧಾರ್ಮಿಕ ಸಂಪ್ರದಾಯ, ಕಟ್ಟಳೆಗಳು ಪರಿಪಾಲನೆಯಲ್ಲಿವೆ. ವಿದ್ಯಾಸಂಸ್ಥೆ ಪ್ರತ್ಯೇಕವಾಗಿಲ್ಲ. ಶ್ರೀಮಠದಲ್ಲಿಯೇ ಒಂದು ಅಂಗವಾಗಿದೆ. ಸಂಪ್ರದಾಯವನ್ನು ಕಾಪಾಡಿಕೊಂಡು ಬರತಕ್ಕದ್ದು ಒಂದು ನಿಯಮ. ಈಗ ನಮ್ಮ ತತ್ತ್ವಕ್ಕನುಸಾರವಾಗಿ ಅರ್ಚನೆ, ನೈವೇದ್ಯ, ಪ್ರಾರ್ಥನೆ.ಶಿವಾನುಭವ ವಿಚಾರ ಇವುಗಳ ಪರಿಪಾಲನೆಯಾಗಬೇಕು'. ಏಕೆ ಪ್ರತ್ಯೇಕ ಭೋಜನ ವ್ಯವಸ್ಥೆ ಎಂಬುದನ್ನು ವಿವರಿಸಿದರು.

ಶ್ರೀಮಠ ಹಾಗೂ ವಿದ್ಯಾರ್ಥಿನಿಲಯ ಪ್ರತ್ಯೇಕ ಮಾಡಲು ಸಾಧ್ಯ. ಆದರೆ ಇದಕ್ಕೆ ಲಕ್ಷಾಂತರರೂಪಾಯಿ ಹಣಬೇಕು.

**ಬಿಟ್ಟಿರುವವರು ಯಾರು ?**

ಧರ್ಮಾನುಚರಣೆ ಹಾಗೂ ಜಾತೀಯತೆ ಬೇರೆ ಬೇರೆಯೆ ?

ಇದಕ್ಕೆ ದೀರ್ಘ ಉತ್ತರ ನೀಡಿದ ಸ್ವಾಮಿಗಳು ಕಡೆಯಲ್ಲಿ ಹೇಳಿದ ಮಾತು 'ಇದೆಲ್ಲಾ ಯೋಚನೆ ಮಾಡದ ಹೊರತು ದಾರಿ ಕಾಣುವಂತಿಲ್ಲ'. ಉತ್ತರದುದ್ದಕ್ಕೂ ಪ್ರಜ್ಞೋದಕ ಎಳೆಯಿತು.

'ಜಾತೀಯತೆ ಹೋಗಬೇಕೆಂಬ ವಾದ. ಅಂದರೆ ಜಾತಿಯನ್ನು ಬಿಡಬೇಕೆಂಬುದು ಅವರ ವಾದವಾದರೆ ಇದನ್ನು ಬಿಟ್ಟಿರತಕ್ಕವರು ಯಾರು ? ಜಾತಿ ಬಿಟ್ಟಿರತಕ್ಕವರಲ್ಲಿ ಎಷ್ಟು ಜನ ಜಾತೀಯತೆಯನ್ನು ಬಿಟ್ಟಿರುತ್ತಾರೆ. ಯಾರು ಜಾತಿ ಬೇಡವೆಂದು ಹೇಳುತ್ತಾರೋ ಅಂಥವರ ವ್ಯವಹಾರದಲ್ಲಿ ನಮ್ಮ ಜಾತಿ. ನಮ್ಮವರು. ತಮ್ಮವರು ಎಂಬುದನ್ನು ಕಾಣುತ್ತೇವೆ. ಅಂಥವರ ಮಟ್ಟಿಗೆ ಜಾತಿ ಪ್ರಶ್ನೆ ಒಂದು Threat (ಬೆದರಿಕೆ)'-ವಾಸ್ತವಿಕ ಪರಿಸ್ಥಿತಿಯ ವಿಶ್ಲೇಷಣೆ.

**ಬದಲು ವ್ಯವಸ್ಥೆ**

ಜಾತೀಯತೆಯಲ್ಲಿರುವ ಲೋಪದೋಷಗಳಿಂದ ಮುಕ್ತವಾದ ಬೇರೆ ಸಂಸ್ಥೆಗಳು. ಇವನ್ನು ಒದಗಿಸಬೇಕು. ಸ್ವಾಮಿಗಳ ಅಭಿಪ್ರಾಯದಲ್ಲಿ ಈ ರೀತಿ ಬದಲು ಸಂಸ್ಥೆಗಳನ್ನು ಒದಗಿಸಿದರೆ ಮಾತ್ರ ಗುರಿಯ ಸಾಧನೆ ಸಾಧ್ಯ.

'ಬದಲು ಸಂಸ್ಥೆಗಳನ್ನು ಕೊಡಲು ಸಾಧ್ಯವೆ' ?-ಸ್ವಾಮಿಗಳೇ ಹಾಕಿದ ಪ್ರಶ್ನೆ.

ಸಧ್ಯದ ವ್ಯವಸ್ಥೆ ಸಾವಿರಾರು ವರ್ಷಗಳಿಂದ ನಡೆದುಬಂದಿರುವ ವ್ಯವಸ್ಥೆ ೬೦ ವರ್ಷಗಳ ಹಿಂದೆ ಸ್ವಾಮಿಗಳು ಚಿಕ್ಕವರಾಗಿದ್ದಾಗ: 'ಒಂದು ಊರಿನಲ್ಲಿ ಹಲವು ಕೋಮುಗಳಿದ್ದವು. ಆದರೆ ದ್ವೇಷ ಅಸೂಯೆಗಳಿರಲಿಲ್ಲ. ಎಲ್ಲರೂ ಅನ್ಯೋನ್ಯತೆಯಿಂದ ಇದ್ದು ವ್ಯವಹಾರದಲ್ಲಿ ಅಣ್ಣ-ತಮ್ಮ, ಅಪ್ಪ-ಅಮ್ಮ. ಅಕ್ಕ-ಭಾವ ಆಗಿದ್ದರು. ವಿಶೇಷ ದಿನಗಳಲ್ಲಿ ಎಲ್ಲರೂ ಒಟ್ಟಿಗೆ ಸೇರುತ್ತಿದ್ದರು. ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ. ಒಂದು ಮನೆಯ ಹೆಣ್ಣುಮಗುವನ್ನು ಕೊಡಬೇಕಾದರೆ ಎಲ್ಲ ಕೋಮಿನವರೂ ಅಸ್ತು ಅನ್ನಬೇಕಾಗಿತ್ತು'-ಹಿಂದಿನ ಜನಜೀವನದ ದರ್ಶನ.

ಅಷ್ಟೊಂದು ಮಧುರ ಬಾಂಧವ್ಯವಿದ್ದರೂ 'ಮೇಲು-ಕೀಳು' ಎಂಬ ಭೇದವಿರಲಿಲ್ಲವೆ ?

'ಕೀಳು-ಮೇಲು ಎಂಬ ಕಲ್ಪನೆ ಅಷ್ಟೊಂದು ತೀಕ್ಷ್ಣವಾಗಿರಲಿಲ್ಲ. ವ್ಯವಹಾರಿಕವಾಗಿ ಯಾವ ತೀಕ್ಷ್ಣತೆಯೂ ಇರಲಿಲ್ಲ. ಒಂದು ವ್ಯತ್ಯಾಸ ಹೊರತಾಗಿ, ಅಂದರೆ ಹರಿಜನರ ಬಗ್ಗೆ ಅದು ಒಂದು ಕಳಂಕ. ಈಗ ಸ್ವಲ್ಪ ಮಾರ್ಪಾಡಾಗಿದೆ. ಇನ್ನು ಮುಂದೆ ಅಷ್ಟು ಬಾಧಕವಾಗಲಾರದು'-ಇವರ ವಿಶ್ವಾಸ.

**ಪ್ರಯತ್ನ ಮಾಡಿದರು**

ಜಾತೀಯತೆ ನಿರ್ಮೂಲನಕ್ಕಾಗಿ ಪ್ರಯತ್ನ ಮಾಡುವುದು ಒಳ್ಳೆಯದಲ್ಲವೆ?

'ಪ್ರಯತ್ನ ಮಾಡಿದರೂ ಕೂಡ ಮೊದಲು ಬದಲು ಸಂಸ್ಥೆಗಳಿರಬೇಕು. ಮನುಷ್ಯನ ಶಕ್ತಿ ಪರಿಮಿತವಾಗಿ ಇರತಕ್ಕಂಥಾದ್ದು ಆಗ ಮನುಷ್ಯ ತನ್ನ ಒಂದು ವಿಚಾರಕ್ಕೆ ಶಕ್ತಿಗೆ ನಿಲುಕತಕ್ಕಂಥ ರೀತಿಯಲ್ಲಿ ಇದೇ ಮಾನವಕುಲವನ್ನೆಲ್ಲವನ್ನೂ ಅವನು ಅಳವಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪರಿಮಿತ ಶಕ್ತಿಯನ್ನು ಅಳವಡಿಸಿಕೊಳ್ಳಲು ನಿರ್ಧಾರಮಾಡಿಕೊಂಡ. ಅದು ಬಹಳ ಮಟ್ಟಿಗೆ ತನ್ನ ಹಾಗೆಯೇ ವಿಚಾರ ಉಳ್ಳವರಾರೋ ಹಾಗಿರತಕ್ಕಂಥವರ ಗುಂಪನ್ನು ಚುನಾಯಿಸಿಕೊಂಡು ತನ್ನ ಸೇವೆಯನ್ನು ಸಲ್ಲಿಸುತ್ತ ಬಂದ ಸೇವೆ ಸಲ್ಲಿಸಬಲ್ಲವನಾಗುತ್ತಾನೆ'-ಸ್ವಾಮಿಗಳ ಮೂಲದತ್ತ ದೃಷ್ಟಿ ಬೀರುತ್ತ ಹೋದರು.

'ಬೇಸಾಯಗಾರನ ಮಗ ತನ್ನ ವೃತ್ತಿಯಲ್ಲಿ ಅನುಭವ ಪಡೆದುಕೊಳ್ಳುತ್ತಾನೆ. ಹಾಗೆಯೇ ಬಡಗಿಯ ಮಗ, ಗಾಣಿಗನ ಮಗ, ತಮ್ಮ ವೃತ್ತಿಗಳನ್ನು ಅವಲಂಬಿಸಿಕೊಂಡು ತಮ್ಮ ವೃತ್ತಿಗಳನ್ನು ಮಗನಿಗೆ, ಮೊಮ್ಮಗನಿಗೆ ಕಲಿಸಿಕೊಡುವುದರಿಂದ ಅದು ಜಾತೀಯತೆಗೆ ಎಡೆ ಕೊಟ್ಟ ಹಾಗಾಯಿತು'.

'ಮನುಷ್ಯನ ಕೊನೆಯ ಗುರಿ ಪರಮಾತ್ಮನ ಸಾಕ್ಷಾತ್ಕಾರ. ಪ್ರಾಯಶಃ ಎಲ್ಲರೂ ಒಂದೇ ಸಮಾನ ರೀತಿಯಲ್ಲಿ ಸಾಧನ ಮಾಡಲಿಕ್ಕೆ ಸಾಧ್ಯವಾಗುವುದಿಲ್ಲ. ಅವರವರ ತಿಳುವಳಿಕೆ ಮಟ್ಟ, ಪರಿಸರ, ಸಂಸ್ಕೃತಿ, ಸಂಸ್ಕಾರ, ಸನ್ನಿವೇಶಗಳಿಗನುಸಾರವಾಗಿ ಒಂದೊಂದು ಗುಂಪು ಒಂದೊಂದು ಸಾಕ್ಷಾತ್ಕಾರ ಮಾರ್ಗವನ್ನು ಮಾಡಿಕೊಂಡಿತು. ಅದು ಒಂದು ರೀತಿಯಲ್ಲಿ ಜಾತೀಯತೆಗೆ ಮಾರ್ಗವಾಯಿತು ಅಂತ ಕಾಣುತ್ತೆ'.

ಈ ಉತ್ತರದ ಕಡೆಯಲ್ಲಿ ಹೇಳಿದ ಮಾತು 'ಇದೆಲ್ಲಾ ಯೋಚನೆ ಮಾಡದ ಹೊರತು ದಾರಿ ಕಾಣುವಂತಿಲ್ಲ.'

**ಸುಲಭ ಜೀವನ ಅಧಿಕ ಸುಖ**

'ಭಾರತ ಸ್ವಾತಂತ್ರ್ಯಾನಂತರದ ಭಾರತ, ಹಿಂದಿನವರು, ನಾಯಕರು ಆಶಿಸಿದ ಮಾರ್ಗದಲ್ಲಿ ಹೋಗುತ್ತಿಲ್ಲ'. 'ಇವರ ಅನುಭವ, ಭಾರತೀಯ ಸಂಸ್ಕೃತಿಯ ಆಧಾರದ ಮೇಲೆ ಭಾರತದ ಪುನರ್‌ನಿರ್ಮಾಣವಾಗಬೇಕು' ಎಂಬ ಅರವಿಂದಘೋಷರ ಮಾತಿಗೆ ಇವರದು ತುಂಬಾ ಒಪ್ಪಿಗೆ.

'ಸ್ವಾತಂತ್ರ್ಯ ಬಂದಮೇಲೆ ಮನುಷ್ಯನಿಗೆ ಸ್ವಾರ್ಥಪರತೆ ಜಾಸ್ತಿಯಾಗಿದೆ. ಅಧಿಕಾರದಾಹ ಜಾಸ್ತಿಯಾಗಿದೆ. ಸುಲಭ ಜೀವನ ಮಾಡಿ ಅಧಿಕ ಸುಖ ಪಡೆಯಬೇಕೆಂಬ ಭ್ರಾಂತಿ ಜಾಸ್ತಿಯಾಗಿದೆ. ಈ ಹಲವಾರು ಕಾರಣಗಳಿಂದ ದೇಶದ ಪ್ರಗತಿ ಕುಂಠಿತವಾಗಿದೆ' ವಿವರಿಸಿದರು.

ಸಂಸ್ಕೃತಕ್ಕೆ ಯಾವ ಸ್ಥಾನವಿರಬೇಕು ? ಸಂಸ್ಕೃತಕ್ಕೆ ಒಂದು ಯೋಗ್ಯವಾದ ಸ್ಥಾನ ಲಭ್ಯವಾದರೆ ದೇಶಕ್ಕೂ ಕ್ಷೇಮ. ಜನತೆಗೆ. ಕಲ್ಯಾಣ ಸಂಸ್ಕೃತದ ಬಗ್ಗೆ ಮಧ್ಯೆ ಹೇಳಿದ ಮಾತು. ನಾನು ಕೇಳಿದ್ದೂ ಮಧ್ಯದಲ್ಲಿ.

**ಸಮಾನ ಅನ್ವಯ**

ಜನ ಅವರ ಮನ ಕುರಿತು ಮಾತನಾಡುವ ಕಾಲದಲ್ಲಿ ಅದು ಜನಸಂಖ್ಯೆಯತ್ತ ಸ್ವಾಭಾವಿಕವಾಗಿ ಹೋಯಿತು.

'ಕುಟುಂಬ ಯೋಜನೆ ಎಲ್ಲರಿಗೂ ಸಮಾನವಾಗಿ ಅನ್ವಯಿಸಬೇಕು. ಇದು ಇವರ ಸ್ಪಷ್ಟ ಅಭಿಪ್ರಾಯ. ಹಿಂದೂಗಳಿಗೆ ಮಾತ್ರ ಅನ್ವಯಿಸಿದರೆ, ಕ್ರಮೇಣ ಹಿಂದೂಗಳ ಸಂಖ್ಯೆ ಕಡಿಮೆಯಾಗುವುದು.

'ಯಾವುದೇ ರಾಷ್ಟ್ರ ಪತನವಾದರೂ, ಕ್ರೈಸ್ತ ಹಾಗೂ ಇಸ್ಲಾಂ ಧರ್ಮಗಳಿಗೆ ಚ್ಯುತಿ ಇಲ್ಲ. ಕಾರಣ ಈ ಧರ್ಮವಿರುವ ಇತರ ರಾಷ್ಟ್ರಗಳಿವೆ. ಹಿಂದೂಧರ್ಮ ಇರುವುದು ಭಾರತದಲ್ಲಿ ಮಾತ್ರ, ಇಲ್ಲಿ ಹಿಂದೂಧರ್ಮ ನಾಶವಾದರೆ ಸಂಪೂರ್ಣ ನಾಶವಾದಂತೆ. ಸಮಾನ ಅನ್ವಯದ ಸಮರ್ಥನೆ, ಧರ್ಮಸೂತ್ರಗಳನ್ನು ಅನುಷ್ಠಾನ ಮಾಡುತ್ತ ಬಂದಿದ್ದರೆ ಈ ಯೋಜನೆಯ ಅಗತ್ಯವೇ ಇಲ್ಲ.

**ನಿಷ್ಠೆಯ ಕೊರತೆ**

ಹಿಂದೂಧರ್ಮದ ಗುರಿಯನ್ನು ಎಷ್ಟು ಜನ ಮುಟ್ಟಿದ್ದಾರೆ. ಬಹಳ ಕಡಿಮೆ. ಬಹುತೇಕ ಜನ ಹುಟ್ಟಿದಾಗಿನಿಂದ ಸಾಯುವವರೆಗೆ ಗುರಿಮುಟ್ಟದೇ ಹೋದರೆ ಅಂಥ ಧರ್ಮ ಇಟ್ಟುಕೊಂಡು ಏನು ಪ್ರಯೋಜನ ?

ಸ್ವಾಮಿಗಳು ಆರಂಭಿಸಿದರು:

'ನಮ್ಮಲ್ಲಿ ಉಂಟಾಗಿರತಕ್ಕ ಪರಿವರ್ತನೆ ಅಂದರೆ ಧರ್ಮದ ಬಗ್ಗೆ ಆಗಿರುವ ನಿಷ್ಠೆಯ ಕೊರತೆ. ನಿಷ್ಠೆ ಯಾವಾಗ ಇಲ್ಲವೋ ಗುರಿಮುಟ್ಟಲು ಸಾಧ್ಯವಿಲ್ಲ. ಈ ಮಾತು ವಿಶೇಷವಾಗಿ ಅನ್ವಯವಾಗುವಂಥಾದ್ದು. ಕೆಲವಾರು ಆಧುನಿಕ ಜನತೆಗೆ, ಕೆಲವಾರು ವರ್ಷಗಳಿಂದ ಹಿಂದಿನ ಕಾಲದಲ್ಲಿ ನಾವು ನಿಜವಾದ ಜೀವನವನ್ನು ಪರಿಶೀಲನೆ ಮಾಡಿದಲ್ಲಿ ಬಹಳ ಮುಂದೆ ತಾವು ಗುರಿ ಮುಟ್ಟುವ ಶಕ್ತಿ ಹೊಂದಿದವರಾಗಿದ್ದರು'.

**ವೀರಶೈವರೂ ಹಿಂದೂಗಳು**

ವೀರಶೈವ ಧರ್ಮ ಹಿಂದೂಧರ್ಮವಲ್ಲವೆಂದು ಕೆಲವರು ವಾದ ಮಾಡುತ್ತಾರೆ, ಹೇಳಿ ಸುಮ್ಮನಾದೆ.

ವೀರಶೈವಧರ್ಮ ಹಿಂದೂಧರ್ಮವಲ್ಲ ಎಂಬ ಮಾತನ್ನು ಸ್ವಾಮಿಗಳು ಒಪ್ಪಲಿಲ್ಲ.

'ಧರ್ಮಗ್ರಂಥಗಳಲ್ಲಿ ನಂಬಿಕೆ. ಪರಮಾತ್ಮನ ಅವತಾರದಲ್ಲಿ ನಂಬಿಕೆ. ಮೋಕ್ಷ ಸಾಧಿಸುವವರೆಗೆ ಪುನರ್‌ಜನ್ಮ, ವರ್ಣಾಶ್ರಮ, ಗೋವು ದೇವರ ಸಮಾನವೆಂಬ ಭಾವನೆ, ದೇವಾಲಯಗಳ ನಿರ್ಮಾಣ ಇವು ಹಿಂದೂ ಧರ್ಮದ ಪ್ರಮುಖ ಲಕ್ಷಣಗಳು. ಪ್ರಾಯಶಃ, ವೀರಶೈವರು ಇವುಗಳನ್ನು ತಿರಸ್ಕಾರ ಮಾಡಿಲ್ಲ. ವೇದಕ್ಕೆ ಮಾನ್ಯತೆ ಕೊಡುತ್ತಿದ್ದಾರೆ. ವೀರಶೈವರು ಪ್ರಾಣವಧೆಯನ್ನು ಮಾತ್ರ ಒಪ್ಪಿಕೊಂಡಿಲ್ಲ ಅಷ್ಟೇ. ಶರಣರು ಪ್ರಾಣವಧೆಗೆ ಪ್ರತಿಭಟನೆ ಮಾಡಿರುವ ಪ್ರಸಂಗವೂ ಉಂಟು. ಬಸವಣ್ಣನವರು ತೀಕ್ಷ್ಣವಾಗಿ ಖಂಡಿಸಿದ್ದಾರೆ'-ವಿವರಿಸಿದರು.

**ಜನ್ಮಭೂಮಿ–ಪುಣ್ಯಭೂಮಿ**

'ಯಾರಿಗೆ ಹಿಂದೂಸ್ಥಾನ ಜನ್ಮಭೂಮಿ ಹಾಗೂ ಪುಣ್ಯಭೂಮಿಯೋ ಅವರೆಲ್ಲ ಹಿಂದೂಗಳೇ' ಸ್ವಾಮಿಗಳು ಸಾವರ್ಕರ್ ಅವರ ಮಾತನ್ನು ನೆನೆದರು.

'ನಮಗೆ ಹಿಂದೂಸ್ಥಾನ ಜನ್ಮಭೂಮಿ, ಪುಣ್ಯಭೂಮಿ. ಜೈನರಿಗೆ ಪುಣ್ಯಭೂಮಿ. ಬುದ್ಧರಿಗೂ ಕೂಡ ಜನ್ಮಭೂಮಿ. ಪುಣ್ಯಭೂಮಿ'-ಸ್ವಾಮಿಗಳು ಮಾಡಿದ ನಿರರ್ಗಳ ವಿವೇಚನಾ ಕಾಲದಲ್ಲಿ ಆಡಿದ ಮಾತೊಂದಿದು.

ನನಗೆ ದೊರೆತ ಶಿವಾನುಭವ ಮುಗಿದಾಗ ಒಂದು ಗಂಟೆ ಉರುಳಿತ್ತು.

## ೨. ಬರಡುಭುವಿ ಹಯನಾಯ್ತು

(ಆಕಾಶವಾಣಿ ಸಂದರ್ಶನ)

[ಬೆಂಗಳೂರು ಆಕಾಶವಾಣಿ ಸಹಾಯಕ ನಿರ್ದೇಶಕರಾಗಿದ್ದ ಶ್ರೀ ವೈ. ಎಸ್. ಕುಮಾರಸ್ವಾಮಿರಾವ್ ಅವರು ಶ್ರೀ ಕ್ಷೇತ್ರವನ್ನೂ ಶ್ರೀಗಳವರನ್ನೂ ಸಂದರ್ಶಿಸಿ ಬರೆದ ಸಂದರ್ಶನ ಲೇಖನ.]

ಹೆಸರಾಂತ ವ್ಯಕ್ತಿಗಳು ಅನೇಕರಿದ್ದಾರೆ ; ಮಹಾಸಂಸ್ಥೆಗಳೂ ಅನೇಕವಿವೆ. ಆದರೆ ಸಂಸ್ಥೆಯೇ ತಾನಾಗಿ, ತಾನೇ ಸಂಸ್ಥೆಯಾಗಿ ಅಭಿಜ್ಞಾನ ತಳೆದ ಮಹಾವ್ಯಕ್ತಿಗಳು ಕಂಡುಬರುವುದು ಬಹು ವಿರಳ. ಅಂತಹ ಮಹಾವ್ಯಕ್ತಿಯೊಬ್ಬರು ತುಮಕೂರು ಜಿಲ್ಲೆಯ ಸಿದ್ಧಗಂಗಾಕ್ಷೇತ್ರದ ವರ್ತಮಾನ ಪೀಠಾಧಿಪತಿಗಳಾದ ಶ್ರೀ ಶಿವಕುಮಾರ ಸ್ವಾಮಿಗಳವರು ಎಂದು ನನ್ನ ನಂಬುಗೆ. ನಾನು ಸಿದ್ಧಗಂಗೆಯ ಹೆಸರು ಕೇಳಿದುದು ಸುಮಾರು ೪೫ ವರ್ಷಗಳ ಹಿಂದೆ ಮೈಸೂರಿನ ಪ್ರೌಢಶಾಲೆಯೊಂದರ ವಿದ್ಯಾರ್ಥಿಯಾಗಿದ್ದಾಗ. ಅಂದಿನ ನನ್ನ ಅನಿಸಿಕೆಯಲ್ಲಿ ಅನೇಕ ಮಠಗಳಂತೆ ಸಿದ್ಧಗಂಗೆಯದೂ ಒಂದು ಮಠ. ಆದರೆ ಸಿದ್ಧಗಂಗೆ ಹಾಗೂ ಶ್ರೀ ಶಿವಕುಮಾರ ಸ್ವಾಮಿಗಳು-ಈ ಎರಡು ಹೆಸರುಗಳನ್ನೂ ನಾನು ಇಂದಿನವರೆಗೆ ನೆನಪಿಡುತ್ತೇನೆಂದು ನನಗೆ ಅಂದು ಅನಿಸಿರಲಿಲ್ಲ. ನಾನು ಸ್ವತಃ ಅಷ್ಟಾಗಿ ಮಠಗಳಿಗೆ ಹೋಗಿ ಬಂದು ಮಾಡಿದ ವ್ಯಕ್ತಿಯಲ್ಲ. ಒಂದು ಮಠದ ಮುಖ್ಯರೆಂದು ಆಡಂಬರ-ಅಟ್ಟಹಾಸ ಮೆರೆವರೆಲ್ಲರನ್ನೂ ಸ್ವಾಮಿಗಳೆಂದು ಭಾವಿಸಿ ಅಡ್ಡಬಿದ್ದವನೂ ಅಲ್ಲ. ನಾನೊಬ್ಬ ಸಾಮಾನ್ಯ ಮನುಷ್ಯ. ಆದರೆ ತುಸ ಜಿಜ್ಞಾಸು ಪ್ರವೃತ್ತಿ ನನ್ನದು. ಮಹತ್ವ ಕಂಡಲ್ಲಿ ನನ್ನ ಶಿರ ತಾನಾಗಿ ಬಾಗುತ್ತದೆ. ಸಂತ ಕಬೀರರು ಹೇಳುತ್ತಾರೆ:

'ಕಬಿರಾಸೋಈ ಪೀರ್ ಹೈ ಜೋಜಾನ್ಯೆ ಪರಪೀರ್
ಜೋಪರ ಪೀರ್‌ನಜಾನ ಈ ಸೋಕಾಫಿರ್ ಬೇಪೀರ್ !'

'ಪೀರ್' ಎಂದರೆ 'ಗುರು' ಮತ್ತು 'ವೇದನೆ' ಎಂಬ ಎರಡು ಅರ್ಥ. ಹಿಂದೀ ಭಾಷೆಯಲ್ಲಿ ಇದರರ್ಥ-'ಯಾವನು ಇತರರ ವೇದನೆಯನ್ನು ಅರಿಯಬಲ್ಲನೋ ಅವನೇ ಗುರು. ಯಾರು ಇತರರ ವೇದನೆಯನ್ನು ಅರಿಯಲಾರನೋ ಅವನು ಅಧರ್ಮಿ, ಸಂವೇದನಾರಹಿತನಾದ ವ್ಯಕ್ತಿ'. ಅಂದಮೇಲೆ ಇತರರ ವೇದನೆಯನ್ನು ಅರಿಯಲಾರದವನು ಮಠದಲ್ಲಿದ್ದರೇನು, ಮಂದಿರದಲ್ಲಿದ್ದರೇನು ? ಅವನಿಂದ ಜನಕೋಟಿಗೆ ಪ್ರಯೋಜನವಿಲ್ಲ. ಮೇಲಾಗಿ ಅಂತಹ 'ಗುರು' ಪರರನ್ನು ವಂಚಿಸುವುದರ ಜೊತೆಗೆ ತನ್ನನ್ನೂ ವಂಚಿಸಿಕೊಳ್ಳುತ್ತಾನೆ.

ಈ ಹಿನ್ನೆಲೆಯಲ್ಲಿ ವೀಕ್ಷಿಸಿದಾಗ ನನ್ನ ದೃಷ್ಟಿಯಲ್ಲಿ ಸಿದ್ಧಗಂಗೆ ಹಾಗೂ ಶ್ರೀ ಶಿವಕುಮಾರ ಸ್ವಾಮಿಗಳು-ಇವೆರಡೂ ಹೆಸರುಗಳು ಮಹತ್ವಪೂರ್ಣವಾದುವು. ಪುರಾಣಪ್ರಸಿದ್ಧವೆಂದಾಗಿ ಸಿದ್ಧಗಂಗೆ ಪವಿತ್ರಕ್ಷೇತ್ರವೋ ಅಲ್ಲವೋ ಎಂಬ ಅನಪೇಕ್ಷಿತ ಜಿಜ್ಞಾಸೆಗೆ ನಾನು ತೊಡಗುವವನಲ್ಲ. ಆದರೆ ಸ್ವಾರ್ಥರಹಿತ ಜನಸೇವಕರ ಅನುಕಂಪದಲ್ಲಿ ತೊಯ್ದು ಪವಿತ್ರವಾದ ತಾಣ ಸಿದ್ಧಗಂಗೆ ! ಅಂತೆಯೇ ಅದಕ್ಕೆ ಅಭ್ಯುದಯ ನೀಡಿದ ಶರಣಶ್ರೇಷ್ಠರು ಶ್ರೀ ಅಟವಿಸ್ವಾಮಿಗಳು ಮತ್ತು ಶ್ರೀ ಉದ್ದಾನ ಶಿವಯೋಗಿಗಳು ಮತ್ತು ಆ ಪರಂಪರೆಯನ್ನು ಜಾಜ್ವಲ್ಯಮಾನವಾಗಿ ಬೆಳಗಿಸುತ್ತಿರುವವರು ಸಿದ್ಧಗಂಗೆಯ ವರ್ತಮಾನ ಉತ್ಸವಮೂರ್ತಿ ಶ್ರೀ ಶಿವಕುಮಾರ ಸ್ವಾಮಿಗಳು ಎಂದಿಷ್ಟು ಮಾತ್ರ ಹೇಳಬಲ್ಲೆ.

'ಏನಕೇನ ಪ್ರಕಾರೇಣ ಪ್ರಸಿದ್ಧಪುರುಷೋಭವ' ಎಂಬುದೊಂದು ನಾಣ್ಣುಡಿಯುಂಟಷ್ಟೆ. ಶ್ರೀಯವರು ಹಾಗೆ ಪ್ರಸಿದ್ಧಿ ಪಡೆದವರಲ್ಲ. ಅದಕ್ಕೆ ಹೊರತಾದ ಮಹಾವ್ಯಕ್ತಿ. ನಾನು ಕಂಡಿರುವಂತೆ 'ಎಲೆ ಮರೆಯ ಕಾಯಿ' ಎಂಬ ಸ್ವಭಾವ ಅವರದು. ಪ್ರಸಿದ್ಧಿಗೆ ಅವರು ಬಾಯಿ ಬಿಟ್ಟವರಲ್ಲ. ಪ್ರಸಿದ್ಧಿಯನ್ನು ಅವರು ಅನುಸರಿಸಿದವರಲ್ಲ. ಇದಕ್ಕೆ ವಿಪರೀತವಾಗಿ ಪ್ರಸಿದ್ಧಿ ಅವರನ್ನು ಅರಸಿದೆ, ಅನುಸರಿಸಿದೆ. ಸಿದ್ಧಗಂಗಾಕ್ಷೇತ್ರ ಮತ್ತು ಶ್ರೀಯವರ ಬೆಸುಗೆ ಎಂದರೆ ಅದು ಮಣಿ ಕಾಂಚನ ಸಂಯೋಗ! ಒಂದರ ಸತ್ವದಿಂದ ಮತ್ತೊಂದಕ್ಕೆ ಕಾಂತಿ, ಬೆಳಕು.

ಸಿದ್ಧಗಂಗೆಗೆ ನಾನು ಕೆಲಸಾರಿ ಹೋಗಿದ್ದೇನೆ. ಬೈಗಿಂದ ಸಂಜೆವರೆಗೆ ತಂಗಿಯೂ ಇದ್ದೇನೆ. ಪ್ರಶಾಂತ ವಾತಾವರಣ! 'ಒಮ್ಮೆ ಬಂದು ಹೋಗು' ಎಂದು ಕೈಬೀಸಿ ಕರೆಯುವ ತಂಗಾಳಿ! ಅದಕ್ಕೆ ಜನ್ಮ ಕೊಟ್ಟ ಪೂರ್ವಾಂಚಲ ಬೆಟ್ಟ ಸಾಲು! ಆ ಬೆಟ್ಟದ ಮೇಲೆ ಶ್ರೀ ಸಿದ್ಧಲಿಂಗೇಶ್ವರ ದೇವಾಲಯ. ಎದುರಿನಲ್ಲಿ ಗಂಗಾಮಾತೆಯ ಮಂದಿರ!...ಮತ್ತು ಪಾರ್ಶ್ವದ ಬೆಟ್ಟದ ತಪ್ಪಲಿನಲ್ಲಿ ಹಿಂದೊಂದು ಕಾಲದಲ್ಲಿ ಸಾಧು-ಸಂತರಿಗೆ ಆಶ್ರಯ ಕೊಟ್ಟಿದ್ದ ಹಲ ಕೆಲವು ಗವಿಗಳು!-ಇವಿಷ್ಟರ ನೆಲೆವೀಡು ಸಿದ್ಧಗಂಗೆ. ಆದರಿಂದಾಗಿ ಸಿದ್ಧಗಂಗೆ ಒಂದು ಕ್ಷೇತ್ರ ಹಾಗೂ ಶರಣಶ್ರೇಷ್ಠರ ಕಾಯಕ ಸ್ಥಲ.

ಮೊದಲ ಬಾರಿ ನಾನು ಸಿದ್ಧಗಂಗೆಗೆ ಹೋದದ್ದು ೧೯೬೮ರಲ್ಲಿ. ತುಮಕೂರು ಜಿಲ್ಲೆಯನ್ನು ಕುರಿತ ರೂಪಕವನ್ನು ಪ್ರಸಾರಕ್ಕಾಗಿ ಅಳವಡಿಸುವ ಕೆಲಸ ನನ್ನ ಪಾಲಿಗೆ ಬಂದಿತ್ತು. ಬಹುದಿನಗಳ ಕನಸು ನನಸಾಗುವುದೆಂಬ ಆಸೆಯಿಂದ ಮನಸ್ಸು ಮಿಡುಕುತ್ತಿತ್ತು. ಸಂಜೆಯಾಗಿತ್ತು. ಕೈಲಿ ಟೇಪ್‌ರೆಕಾರ್ಡರ್ ಹಿಡಿದು ಮಠದ ಸನಿಹಕ್ಕೆ ಹೋಗುತ್ತಿದ್ದಂತೆ ಸಹಸ್ರ ಕಂಠಗಳಿಂದ ಅಲೆಅಲೆಯಾಗಿ ಗಾಯನ ಕೇಳಿಬರುತ್ತಿತ್ತು-'ಜ್ಯೋತಿ ಬೆಳಗುತಿದೆ...ವಿಮಲ ಪರಂಜ್ಯೋತಿ ಬೆಳಗುತಿದೆ!'-ನಿಜಗುಣ ಶಿವಯೋಗಿಗಳ ರಚನೆ. ಒಕ್ಕೊರಲಿನಿಂದ ಸೂಸುತ್ತಿದ್ದಂತೆ ಕೇಳಿಬರುತ್ತಿದ್ದ ಸಾಮೂಹಿಕ ಸರಳ ಗಾಯನ ಕಿವಿಗೆ ಸೊದೆಯಂತಿತ್ತು. ಪ್ರತಿದಿನ ಸಂಜೆ ಸ್ವಾಮಿಗಳ ಸಮ್ಮುಖ. ಸಿದ್ಧಗಂಗಾ ಸಂಸ್ಥಾನದ ಆಶ್ರಯದಲ್ಲಿ ಎದ್ದು ಕಾಣುವ ಛಾತ್ರಾವಾಸಗಳ ಎಲ್ಲ ವಿದ್ಯಾರ್ಥಿಗಳೂ ಪ್ರಾರ್ಥನೆಗೆಂದು ಸಭೆ ಸೇರುತ್ತಾರೆ. ವಚನಗಾಯನ ಮುಂತಾದ ಕಾರ್ಯಕ್ರಮಗಳಾದ ನಂತರ ಸ್ವಾಮಿಗಳು ಸಭೆಯನ್ನುದ್ದೇಶಿಸಿ ಆಶೀರ್ವಚನ ನೀಡುತ್ತಾರೆ. ಆದರೆ ಅಂದು ಸ್ವಾಮಿಗಳು ಸ್ಥಳದಲ್ಲಿರಲಿಲ್ಲ; ಪ್ರವಾಸಹೋಗಿದ್ದರೆಂದು ತಿಳಿಯಿತು. ನನಗೆ ವೇಳೆ ಸಾಕಷ್ಟಿರಲಿಲ್ಲವಾಗಿ ಅಂದಿನ ಧ್ವನಿಮುದ್ರಣ ಒಬ್ಬಿಬ್ಬರು ವಿದ್ಯಾರ್ಥಿಗಳನ್ನು ಸಂದರ್ಶಿಸುವುದರಲ್ಲೇ ಮುಕ್ತಾಯಗೊಂಡಿತು. ಸಂಸ್ಥೆಯ ದೈನಂದಿಕ ಚಟುವಟಿಕೆಗಳನ್ನು ಆದ್ಯಂತ ನೋಡುವುದಾಗಲಿಲ್ಲವೆಂಬ ಕೊರತೆ ಮನಸ್ಸಿನಲ್ಲಿ ಉಳಿಯಿತಾದರೂ ಸರಕಾರಿ ಆದೇಶಕ್ಕೊಳಪಟ್ಟಿದ್ದವನಾದ್ದರಿಂದ ಮಾಡಿದಷ್ಟು ಧ್ವನಿಮುದ್ರಣವನ್ನೇ ರೂಪಕಕ್ಕೆ ಅಳವಡಿಸಿಕೊಳ್ಳುವುದೆಂದು ತೃಪ್ತನಾಗಿ ಹಿಂತಿರುಗಿದೆ. ಇನ್ನೊಮ್ಮೆ ಈ ಸಂಸ್ಥಾನವನ್ನೇ ಕುರಿತು ರೂಪಕ ಪ್ರಸಾರಮಾಡಬೇಕೆಂದು ನಿಶ್ಚಯಿಸಿಕೊಂಡೆ. ಆದರೆ ಸರಕಾರಿ ಕೆಲಸಕ್ಕೆ ಅಂಟಿಕೊಂಡಿರುವ ಸ್ಥಾನಾಂತರಣ ನೀತಿಗೆ ಗುರಿಯಾಗಿ ಗುಲ್ಬರ್ಗಕ್ಕೆ ಹೋಗಬೇಕಾಯಿತು. ನನ್ನ ಆಸೆ ಪೂರ್ಣವಾದುದೆಂದರೆ ಗುಲ್ಬರ್ಗದಿಂದ ವರ್ಗಪಟ್ಟು ನಾನು ಮತ್ತೆ ಬೆಂಗಳೂರಿಗೆ ೧೯೭೩ರಲ್ಲಿ ಬಂದಾಗ.

ನನಗೆ ಸಂಸ್ಕೃತವೆಂದರೆ ಒಂದು ಬಗೆಯ ಮೋಹ. ಸಿದ್ಧಗಂಗಾ ಸಂಸ್ಕೃತಮಹಾಪಾಠಶಾಲೆಯ ಬಗೆಗೆ ಬಹಳ ಕೇಳಿದ್ದೆ. ಸುಮಾರು ೨೫೦೦ ವಿದ್ಯಾರ್ಥಿಗಳು ವಿಭಿನ್ನವರ್ಗಗಳಲ್ಲಿ ವ್ಯಾಸಂಗಮಾಡುವ ಮಹಾಪಾಠಶಾಲೆ! ಅಂದಮೇಲೆ ಇಮ್ಮಡಿ ಉತ್ಸಾಹದಿಂದ ಆವಶ್ಯಕ ತಾಂತ್ರಿಕ ಸಿಬ್ಬಂದಿಯೊಡನೆ ಧ್ವನಿಮುದ್ರಣಕ್ಕಾಗಿ ಪ್ರವಾಸಹೊರಟೆ. ಸಿದ್ಧಗಂಗೆ ಸೇರಿದಾಗ ಬೆಳಿಗ್ಗೆ ೯ ಗಂಟೆ. ಸ್ವಾಮಿಗಳು ನಿತ್ಯಪೂಜೆ ಮುಗಿಸಿ ಜನರಿಗೆ ಭೆಟ್ಟಿಕೊಡುವ ಕಾಲಕಾಯ್ದು ಭೆಟ್ಟಿಯಾದೆ. ಎಂತಹ ವ್ಯಕ್ತಿ! ನಿಸ್ಪೃಹ ನೋಟ! ಭವ್ಯತೆ ಹಾಗೂ ಸರಳತೆಯ ಸಂಗಮ! ಇದೀ ಸಂಸ್ಥಾನದ ಅಧಿಪತಿ ಮತ್ತು ಗುರು! ಆದರೆ ಮಗುವಿನ ಸರಳತೆ! ಮಾತಿನಲ್ಲಿ ಒಂದು ಬಗೆಯ ಮೋಡಿ! ನೋಟ ಮಾತ್ರದಿಂದ ಗೌರವಮೂಡಿಸುವ ವ್ಯಕ್ತಿತ್ವ! ತಾನೇನೂ ಹಿರಿದಾದ ಕೆಲಸ ಮಾಡಿಯೇ ಇಲ್ಲ ಎಂಬ ನಿರಭಿಮಾನ! ಮತ್ತೆ ಪ್ರತಿದಿನ ೩-೪ ಸಾವಿರ ಜನರಿಗೆ ದಾಸೋಹ! ಭತ್ತವೆಲ್ಲಿಂದ ಬರುತ್ತೋ. ರಾಗಿ ಎಲ್ಲಿಂದ ಬರುತ್ತೋ. ಮಿಕ್ಕ ಪರಿಕರಗಳೆಲ್ಲಿಂದ ಬರುತ್ತೋ! ಹೇಗೆ ಬರುತ್ತೋ!-ನಿಜಕ್ಕೂ ಈ ಸಾಧನೆ ಪೂರ್ವಜನ್ಮದ ಸುಕೃತವೇ ಸರಿ. ಇದೊಂದು ಮಹದಾಶ್ಚರ್ಯ!...ಮಠಾಧಿಪತಿಗಳು ಸಮಾಜಸೇವೆಗಾಗಿ ಕೈಯೊಡ್ಡಬಹುದು, ಶಿಕ್ಷಣವ್ಯವಸ್ಥೆಗೆಂದು ಕೈಯೊಡ್ಡಬಹುದು. ಆದರೆ ನಿರಂತರವಾಗಿ ಹಣಕೊಡುವ ಭಕ್ತರು ಬೇಕಷ್ಟೆ!...ಈ ವಿಚಾರ ನನ್ನ ಮೆದುಳನ್ನು ಹೊಕ್ಕಾಗ ನನಗೆ ಗಾಂಧೀಜಿಯವರ ನೆನಪಾಯಿತು. ಅವರನ್ನು ಮೈಸೂರಿನಲ್ಲಿ ಒಮ್ಮೆ ನೋಡಿದ್ದೆ ಸಹ. ಗಾಂಧೀಜಿಯವರು ಸಹ ಕೈಯೊಡ್ಡುತ್ತಿದ್ದರು. ಆದರೆ ನೀಡಿದ ಅವರ ಕೈಮೇಲೆ ಬಡವನ ಬಿಡಿಕಾಸಿಂದ ಹಿಡಿದು ಧನಿಕನ ನೋಟು ಕಂತೆಯವರೆಗೆ ಮಳೆಗರೆಯುತ್ತಿತ್ತು. ಈ ರಹಸ್ಯವನ್ನು ಬಿಡಿಸುವುದು ಕಷ್ಟವೇನಲ್ಲ. ಗಾಂಧೀಜಿಗೆ ಕೊಟ್ಟ ಪ್ರತಿ ಬಿಡಿಕಾಸೂ ರಾಷ್ಟ್ರಸಂಘಟನೆಗೆ ಹಾಗೂ ದಲಿತರ ಉದ್ಧಾರಕ್ಕೆ ವಿನಿಯೋಗವಾಗುವುದೆಂಬ ನಂಬಿಕೆ ಜನರಿಗಿತ್ತು. ಅಂತೆಯೇ ಜನ ಅವರ ಕೈಮೇಲೆ ಹಣದ ಮಳೆಗರೆದರು. ಸ್ವಾಮಿಗಳಾದರೂ ಅದೇ ಮೋಡಿ! ಅವರಿಗಿತ್ತ ಪ್ರತಿಯೊಂದು ಪೈಸಾ ಬಡವಿದ್ಯಾರ್ಥಿಗಳ ಅನ್ನ-ಬಟ್ಟೆ ಮತ್ತು ಶಿಕ್ಷಣಕಾರ್ಯಕ್ಕೆ. ತನ್ಮೂಲಕ ಸಮಾಜದ ಏಳಿಗೆಗೆ ವಿನಿಯೋಗವಾಗುವುದೆಂಬ ನಂಬಿಕೆ ಜನರಿಗಿದೆ; ಅಂತೆಯೇ ಈ ಮಹತ್ಕಾರ್ಯದಲ್ಲಿ ಕಾಯೇನ-ವಾಚಾ-ಮನಸಾ ತಮ್ಮ ಯೋಗ್ಯದಾನ ಕೊಡಲು ಜನ ಮುಂದೆ ಬರುತ್ತಾರೆ. ಕೇಳುವುದು ಸ್ವಾಮಿಗಳ 'ಅರ್ಹತೆಯಿಂದ ಕೂಡಿದ ಹಕ್ಕು' ಎಂದಾದಾಗ ಕೊಡುವುದು ಜನರ ಕರ್ತವ್ಯವಾಗುತ್ತದೆ.

ಈ ಸಂಸ್ಥೆಯ ಇನ್ನೊಂದು ಮುಖ ನನ್ನ ಮೇಲೆ ಪ್ರಭಾವ ಬೀರಿದೆ. ಸ್ವಾಮಿಗಳ ಸಮಾಜಸೇವೆ ಕೇವಲ ಅವರು ಹುಟ್ಟಿಬಂದ ವೀರಶೈವ ಸಮಾಜಕ್ಕಷ್ಟೇ ಸೀಮಿತವಾಗಿಲ್ಲ. ಎಲ್ಲ ಜಾತಿ-ಮತದವರಿಗೂ ಅಲ್ಲಿ ಸ್ವಾಗತವಿದೆ. ಜಾತ್ಯತೀತ ನೀತಿ

ಸೈದ್ಧಾಂತಿಕವಾಗಿ ಮಾತ್ರವಿರದೆ ಪ್ರತ್ಯಕ್ಷವಾಗಿದೆ. ವಿಭಿನ್ನ ಜಾತಿ-ಮತಗಳಿಂದ ಬಂದ ಮತ್ತು ಹರಿಜನ ಹಾಗೂ ಮುಸಲ್ಮಾನ ವಿದ್ಯಾರ್ಥಿಗಳನ್ನು ಸಹ ಸಂಸ್ಕೃತಪಾಠಶಾಲೆ ಮತ್ತು ಛಾತ್ರಾವಾಸದಲ್ಲಿ ನೋಡಿದ್ದೇನೆ; ಅವರನ್ನು ಧ್ವನಿಮುದ್ರಿಸಿಕೊಂಡಿದ್ದೇನೆ. ಅಷ್ಟೇ ಅಲ್ಲ; ಅವರ ವೇದಪಾಠವನ್ನೂ ಧ್ವನಿಮುದ್ರಿಸಿಕೊಂಡು ಪ್ರಸಾರಮಾಡಿದ್ದೇನೆ. ಮಹಾಪಾಠಶಾಲೆಯ ವಿದ್ಯಾರ್ಥಿಗಳ ವೇದಪಠನ ಉತ್ತಮಮಟ್ಟದ್ದೂ ಆಗಿದೆ.

ಸಿದ್ಧಗಂಗಾ ಸಂಸ್ಥಾನದ ಆಶ್ರಯದಲ್ಲಿ ನಡೆಸಲಾಗುತ್ತಿರುವ ವಿದ್ಯಾಸಂಸ್ಥೆ ಸಂಸ್ಕೃತ ಮಹಾಪಾಠಶಾಲೆ ಮಾತ್ರವೆಂದಲ್ಲ. ಅಲ್ಲಿ ಅತ್ಯಾಧುನಿಕ ಶಿಕ್ಷಣನೀಡುವ ಕೆಲಸ ಭರದಿಂದ ಸಾಗಿದೆ. ಒಟ್ಟು ೨೬ ವಿದ್ಯಾಸಂಸ್ಥೆಗಳು* ಶಿಕ್ಷಣ ಪ್ರದಾನಕಾರ್ಯದಲ್ಲಿ ಕಂಕಣತೊಟ್ಟು ನಿಂತಿವೆ. ಇದರಿಂದಾಗಿ ಒಂದು ಕಾಲಕ್ಕೆ ಕೇವಲ ಮರ-ಗಿಡ-ಬೆಟ್ಟಗಳ ಪರಿಸರವಾಗಿದ್ದ ಸಿದ್ಧಗಂಗೆ ಇಂದು ಒಂದು ವಿಶಾಲಗುರುಕುಲವಾಗಿ ಕಂಗೊಳಿಸುತ್ತಿದೆಯಷ್ಟೇ ಅಲ್ಲದೆ, ಒಂದು ದೊಡ್ಡ ಸಮಾಜಸೇವಾಕ್ಷೇತ್ರವಾಗಿ ಪರಿಣಮಿಸಿದೆ. ಪರಂಪರೆ ಹೇಳುವಂತೆ ಕೇವಲ ಧರ್ಮಪರಿಪಾಲನೆಯೇ ಏಕಮಾತ್ರಗುರಿಯಾಗಿರಬೇಕಾದ ಮಠಗಳಿಗೆ ಸಿದ್ಧಗಂಗಾಮಠ ಒಂದು ಅಪವಾದ. ಇದರಿಂದಾಗಿ ಅಲ್ಲಿ ಕಲ್ಲರಳಿ ಹೂ ಆಗಿದೆ. ಬರಡು ಹಯನಾಗಿದೆ! ಇರುವುದನ್ನು ಇರುವಂತೆ ಹೇಳಿದರೆ ಅದು ಉತ್ಪ್ರೇಕ್ಷೆಯೆಂದಾಗಲೀ, ಹೊಗಳಿಕೆಯೆಂದಾಗಲೀ ನಾನು ಭಾವಿಸುವುದಿಲ್ಲ. ನನ್ನ ದೃಷ್ಟಿಯಲ್ಲಿ, ಇಡೀ ಕರ್ನಾಟಕದಲ್ಲಿ, ಧರ್ಮಪರಿಪಾಲನೆಯ ಜತೆಗೆ ಶಿಕ್ಷಣಪ್ರದಾನ ಹಾಗೂ ಸಮಾಜಸೇವಾಕಾರ್ಯ-ಇವೆರಡನ್ನೂ ಧ್ಯೇಯೋದ್ದೇಶವಾಗಿ ಕೈಕೊಂಡು ಅತಿ ಕ್ಷಿಪ್ರವಾಗಿ ಸ್ತುತ್ಯವಾದ ಪ್ರಗತಿ ಸಾಧಿಸಿದ ಸಂಸ್ಥಾನವೆಂದರೆ ಅದು ಸಿದ್ಧಗಂಗೆ ಮತ್ತು ಆ ಮಹತ್ಸಾಧನೆ ಮಾಡಿದ ವ್ಯಕ್ತಿಯೆಂದರೆ ಮಠಾಧೀಶರಾದ ಶ್ರೀ ಶಿವಕುಮಾರ ಸ್ವಾಮಿಗಳು. ಅಂತೆಯೇ ಸಿದ್ಧಗಂಗೆ ಎಂದರೆ ಶ್ರೀಗಳವರು ಮತ್ತು ಶ್ರೀಗಳವರು ಎಂದರೆ ಸಿದ್ಧಗಂಗೆ !

ಇದೇ ಸಂದರ್ಭದಲ್ಲಿ ಸಿದ್ಧಗಂಗೆಯ ಅಕ್ಷುಣ್ಣ ಸಫಲತೆ ಹಾಗೂ ಕೀರ್ತಿಯ ಹಿಂದೆ ಅಡಗಿರುವ ರಹಸ್ಯ, ಹೇಳಿ ಹೆಸರಿಸಲು ಅರ್ಹವಾದ ಸಂಗತಿ. ಅನೇಕ ಇತರೆ ಮಠಗಳಂತೆ ಸಿದ್ಧಗಂಗೆ ಪರಂಪರಾಗತವಾಗಿ ಬಂದ ಸ್ಥಿರ-ಚರ ಸಂಪತ್ತನ್ನು ಹೊಂದಿ ಚಿನ್ನ-ಬೆಳ್ಳಿಯ ಹೊದಿಕೆ. ವಜ್ರದ ವ್ಯಜನಗಳಿಂದ ಮೆರೆದು ಬಂದ ಮಠವಲ್ಲ. ಅಡ್ಡಪಲ್ಲಕ್ಕಿಯನ್ನೇ ತನ್ನ ಗಂತವ್ಯವೆಂದು ಭಾವಿಸಿದ ಮಠವೂ ಅಲ್ಲ. ಅದು ನಿಸ್ಪೃಹ ಶರಣರೇ ಸಂಪತ್ತಾಗಿ ಬೆಳೆದು ಬಂದ ದ್ರವ್ಯಹೀನವಾದ ಮಠವೆಂಬುದು ಅದರ ಪೂರ್ವೇತಿಹಾಸದತ್ತ ಕಣ್ಣು ಹಾಯಿಸಿದರೆ ಗೋಚರಿಸುತ್ತದೆ ಒಮ್ಮೆ, ದಾಸೋಹಕ್ಕೆ ಭಂಗ ಬರುವಂತಾಯಿತಲ್ಲಾ ಎಂದು ಶ್ರೀಗಳವರು ತಲೆಮೇಲೆ ಕೈಹೊತ್ತು ಮರುಗುವಂತಾದಾಗ ಅಜ್ಞಾತ ರೈತನೊಬ್ಬ ತಾನು ಬೆಳೆದ ಬೆಳಸನ್ನೂ ಮತ್ತು ೪೦೦೦ ರೂಪಾಯಿಗಳನ್ನೂ ತಂದು ಸ್ವಾಮಿಗಳ ಪಾದಕ್ಕೆ ಅರ್ಪಿಸಿದ ಮಾರ್ಮಿಕ ಪ್ರಸಂಗ ಚೇತೋಹಾರಿಯಾಗಿದೆ. ಇದು ಸತ್ಕಾರ್ಯನಿಷ್ಠೆ ಹಾಗೂ ನಿಸ್ಪೃಹ ಸೇವಾಭಾವನೆಗೆ ದೊರೆತ ಫಲವಲ್ಲದೆ ಮತ್ತೇನು? ಅಂದರೆ, ಸಿದ್ಧಗಂಗಾ ಮಠದ ಸಂಪತ್ತು, ಆಡಂಬರ-ಅಟ್ಟಹಾಸಗಳಲ್ಲಿ ಕೇಂದ್ರೀಭೂತವಾಗಿರದೆ ಬಡಜನರ ದಾಸೋಹದ ಅಗಳು-ಅಗಳಿನಲ್ಲಿ, ಶಿಕ್ಷಾಲಯಗಳ ಕಲ್ಲು-ಇಟ್ಟಿಗೆಗಳಲ್ಲಿ, ಅವುಗಳನ್ನು ಮುಚ್ಚಿರುವ ಗಾರೆಯ ಕಣ-ಕಣಗಳಲ್ಲಿ, ಬಡ ವಿದ್ಯಾರ್ಥಿಗಳ, ಪುಸ್ತಕಗಳ ಅಕ್ಷರ-ಅಕ್ಷರಗಳಲ್ಲಿ, ಮೇಲಾಗಿ ಅಕ್ಷರ ಕಲಿಸುವ ಗುರುಗಳ ಉತ್ಸಾಹ ನಿರ್ವಹಣೆಯಲ್ಲಿ ಹಂಚಿ ಹರಡಿದೆ. ಈ ಬೃಹತ್ಸಾಧನೆಯ ವಿಧಾತರೆಂದರೆ ಶ್ರೀ ಶಿವಕುಮಾರಸ್ವಾಮಿಗಳು ಎಂದು ಹೇಳಲು ನಾನು ಸಂಕೋಚಪಡುವುದಿಲ್ಲ.

ಇನ್ನೊಮ್ಮೆ, ಸ್ವಾಮಿಗಳ ಸಂದೇಶವನ್ನು ಪ್ರಸಾರಕ್ಕೆಂದು ಧ್ವನಿಮುದ್ರಿಸಿಕೊಳ್ಳುವ ಸಲುವಾಗಿ ಸಿದ್ಧಗಂಗೆಗೆ ಹೋಗುವ ಅವಕಾಶ ನನಗೆ ದೊರೆಯಿತು. ಅಂದಿನ ಸಂಜೆಯ ಪ್ರಾರ್ಥನಾ ಸಭೆಯನ್ನುದ್ದೇಶಿಸಿ ಮಾತನಾಡಿದ ಶ್ರೀಗಳವರು ಉಪನಿಷದ್ವಾಕ್ಯ ಮುಖೇನ ಕಾಯಕದ ಮಹತ್ವವನ್ನು ಸಾಮಾನ್ಯನಿಗೂ ಮನದಟ್ಟಾಗುವಂತೆ ಬಿಡಿಸಿ ಹೇಳಿದರು:

'ಕುರ್ವನ್ನೇವೇಹ ಕರ್ಮಾಣಿ ಜಿ ಜೀವಿಷೇಚ್ಛತಂ ಸಮಾಃ ।
ಏವಂತ್ವಯಿ ನಾನ್ಯಥೇತೋಽಸ್ತಿ ನ ಕರ್ಮಲಿಪ್ಯತೇ ನರೇ' ॥

—'ಕರ್ಮಮಾಡುತ್ತ ಮಾಡುತ್ತಲೇ ಈ ಲೋಕದಲ್ಲಿ ನೂರುವರ್ಷ ಕಾಲ ಬದುಕ ಬಯಸಬೇಕು. ದೇಹಧಾರಿಯಾದ ಮಾನವನಿಗೆ ಇದೇ ಮಾರ್ಗ. ಇದಲ್ಲದೆ ಬೇರೆ ಮಾರ್ಗವಿಲ್ಲ. ಹಾಗಿದ್ದರೆ ಮಾತ್ರ ಮನುಷ್ಯನಿಗೆ ಕರ್ಮ(ಫಲದ ವಾಸನೆ)ಅಂಟುವುದಿಲ್ಲ.'

ಅತಿಸರಳ ವ್ಯಾಖ್ಯೆ ಮತ್ತು ನಿರ್ದಿಷ್ಟವಾಗಿ ಹೇಳುವ ಧಾಟಿ ಸ್ವಾಮಿಗಳದು. ಯಾರಿಗಾದರೂ ಮೆಚ್ಚುಗೆಯಾಗುವ ಶೈಲಿ. ಕಾಯಕ ಹಾಗೂ ನಿಸ್ಪೃಹತೆಯೇ ಮೂರ್ತಿವೆತ್ತ ವ್ಯಕ್ತಿತ್ವ ಅವರದು ಎಂಬುದು ಪೂರ್ವಗ್ರಹಪೀಡಿತರೂ ಒಪ್ಪಬೇಕಾದ ಮಾತು. ನುಡಿದಂತೆ ನಡೆಯುತ್ತಿರುವ ಜೀವಂತ ಉದಾಹರಣೆ ಅವರು. 'ರುಷ್ಟೋವಾ. ತುಷ್ಟೋವಾ' -ಇದು ನನ್ನ ಅನಿಸಿಕೆ.

ಮೇಲಾಗಿ, ಸಿದ್ಧಗಂಗಾ ಕ್ಷೇತ್ರವೆಂದರೆ ಕೇವಲ ಸಂಸ್ಕೃತಮಹಾಪಾಠಶಾಲೆ ಮಾತ್ರವೆಂದಲ್ಲ. ಅಷ್ಟು ಮಾತ್ರವೇ

* ಗ್ರಾಮಾಂತರ ಪ್ರೌಢಶಾಲೆಗಳನ್ನು ಸೇರಿಸಿದರೆ ಈ ಸಂಖ್ಯೆ ಇನ್ನೂ ಹೆಚ್ಚಾಗುವುದು. (ಸಂ)




1. ಸಿದ್ಧಗಂಗಾಗುಹೆ
2. ಸಿದ್ಧಲಿಂಗೇಶ್ವರ ಸ್ಥಾನ
3. ಛತ್ರಗಳು, ಪ್ರಾಚೀನ ದಾಸೋಹ ಕಟ್ಟಡಗಳು
4. ಚಿಕ್ಕ ಪ್ರಾಚೀನ ಮಂಟಪಗಳು
5. ಇನ್ನೊಂದು ಚಿಕ್ಕ ಮಂಟಪ(ಬಂಡೆಯಮೇಲೆ)
6. ನವಗ್ರಹ } (ಭಕ್ತರು ಕಟ್ಟಿಸಿದವು)
7. ಗಣಪತಿ }

20. ಸಾರ್ವಜನಿಕ ವಿದ್ಯಾರ್ಥಿ ನಿಲಯದ ಕಟ್ಟಡ
21. ರೆಸಿಡೆನ್ಸಿಯಲ್ ಹೈಸ್ಕೂಲ್ ಕಟ್ಟಡ
22. ದನದ ಮನೆ
23. ವಿದ್ಯಾರ್ಥಿಗಳ ಊಟದ ಮನೆ
24. ಮರುಳಾರಾಧ್ಯರ ಗದ್ದುಗೆ
25. ಮಹಾನವಮಿ ಮಂಟಪ
26. ಮಾರ್ಕಂಡೇಯ ನಿಲಯ [ವಿದ್ಯಾರ್ಥಿ ವಸತಿ]
26-A ಶ್ರೀಗಳವರು ಪವಡಿಸುವ ಕೊಠಡಿ
27. ದಾಸೋಹ ಗೃಹ
28. ಸಾರ್ವಜನಿಕ ದರ್ಶನಾಶೀರ್ವಾದಗಳಿಗೆ ಶ್ರೀಗಳು ಮುಹೂರ್ತ ಮಾಡುವ ಮಂಚ
29. ಶ್ರೀಗಳ ಆಫೀಸ್ ಮತ್ತು ಮಠದ ಆಫೀಸ್
30. ವಿದ್ಯಾರ್ಥಿ ವಸತಿಗೃಹ
31. ಲಿಂಗಮ್ಮನ ಭಕ್ತಿ ಕಟ್ಟಡ - ತರಗತಿ ಕೊಠಡಿ - ಮತ್ತು ಪೋಸ್ಟ್ ಆಫೀಸ್
31-A ಗದ್ದುಗೆ [ಪ್ರಾಚೀನ]
32. ಪ್ರವಾಸಿಗಳ ಮಂದಿರಗಳು
33. ಪ್ರವಾಸಿಗಳ ಮಂದಿರಗಳು
34. ಸೌದೆರಾಶಿ ಸ್ಥಳ
35. ತೇರು ಜಗುಲಿ
36. ಉದ್ದಾನೇಶ್ವರ ಗದ್ದುಗೆ
37. ಶಿವಲಿಂಗ ಪುಷ್ಪವನ
38. ಒಂದು ಚಿಕ್ಕ ಹೊಂಡ
39. ಹಳೆಯ ಮಠ
39-A. ಶ್ರೀಗಳವರ ಶಿವಪೂಜಾಗೃಹ
39-B. ಹಳೆಯ ವಿದ್ಯಾರ್ಥಿಗಳ ವಸತಿಗೃಹ
40. ಬಿಲ್ವವನ
41. ಊಟದ ಕೊಪ್ಪಲು
42. ಗೆಸ್ಟ್ ಹೌಸ್
42-A. ಲಿಂ. T. N. K. ಸಮಾಧಿ ಸ್ಥಳದ ಬಸವ ಮಂಟಪ
43. ಕಾರ್ ಷೆಡ್-1
44. ಆಫೀಸ್‌ಗಳು
45. ಹಳೆಯ ಸಾಮಾನು ತುಂಬುವ ಕೊಠಡಿ
46. ಅಡವಿ ಸ್ವಾಮಿಗಳ ಗದ್ದುಗೆ
47. ಕಾರ್ ಷೆಡ್-2
48. ವಿದ್ಯಾರ್ಥಿಗಳ ವಸತಿ ಗೃಹ
49. ಪ್ರೈಮರಿ ಸ್ಕೂಲ್
56. ಕ್ಯಾಂಟೀನ್ ಕಟ್ಟಡ
57. ಊಟದ ಕೊಪ್ಪಲು
58. ಛತ್ರದ ಮಿಲ್
59. ಸಿಲ್ವರ್ ಜ್ಯೂಬಿಲಿ ಪುಸ್ತಕ ಭಂಡಾರ - ಪ್ರಿಂಟಿಂಗ್ ಪ್ರೆಸ್ - ವಿಜಯ ಬ್ಯಾಂಕ್ ಮೀಟಿಂಗ್ ಹಾಲ್
60. ವ್ಯವಸಾಯದ ಮನೆ - ಹುಲ್ಲು ಬಣವೆ - ಕಣವದ ಸ್ಥಳ - ಎತ್ತು ದನ ಕರುಗಳ ಸ್ಥಾನ ಇತ್ಯಾದಿ.
61. ವಸ್ತು ಪ್ರದರ್ಶನದ ಬೈಲು
62. ಓ. ಯು. ಸಿ. ಕಾಲೇಜು ಕಟ್ಟಡ
63. ಉಪಾಧ್ಯಾಯರ ಮನೆಗಳು
64. ಉಪಾಧ್ಯಾಯರ ಮನೆಗಳು
65. ಉಪಾಧ್ಯಾಯರ ಮನೆಗಳು
66. ಮಠದ ತೆಂಗಿನ ತೋಟ - ತರಕಾರಿ ತೋಟ
67. ಮಠದ ಸೀಬೆ ತೋಟ
68. ಪಂಪ್ ಸೆಟ್ [ಮಠಕ್ಕೆ ನೀರು ಸರಬರಾಜು]
69. ನಾಟಕದ ಥಿಯೇಟರ್




## ವಿಷಯ ಸೂಚಿ

▲ ಭಾವಿಗಳು
ಪಂಪ್‌ಸೆಟ್ ಭಾವಿಗಳು
● ನಲ್ಲಿಯ ಸೌಕರ್ಯದ ಸ್ಥಳಗಳು
÷ ಕ್ಷೌರಿಕ ಮತ್ತು ಧೋಬಿ ಅಂಗಡಿ
× ಬಿಲ್ವವನ
ಉದ್ದಾನ ಶಿವಯೋಗಿಗಳ ಕಾಲದಲ್ಲಿ ಆದ ಕಟ್ಟಡ ಕಲ್ಯಾಣಿ ಇತ್ಯಾದಿ (ಆದರೂ ಅವೆಲ್ಲಾ ಈಗ ಪರಿಷ್ಕಾರಗೊಂಡಿವೆ)
ಪ್ರಾಚೀನ ಕಟ್ಟಡಗಳು (ಈಗ ಪೂರ್ಣ ಪರಿಷ್ಕಾರಗೊಂಡಿವೆ ಬೆಳೆದಿವೆ)
ಶ್ರೀ. ಶಿವಕುಮಾರ ಸ್ವಾಮಿಗಳವರ ಕಾಲದ ಕಟ್ಟಡ ಭಾವಿ - ಇತ್ಯಾದಿಗಳು

ಆದರೂ ಅದು ಮಹತ್ಸಾಧನೆಯೇ ನಿಜ! ಸುಮಾರು ೧೫೦ ವರ್ಷಗಳ ಹಿಂದೆ ಶ್ರೀ ಅಟವಿಸ್ವಾಮಿಗಳ ಕಾಲದಲ್ಲಿ ಅವರ ಪ್ರಯತ್ನದ ಫಲವಾಗಿ ಕೇವಲ ಮೂರು ವಿದ್ಯಾರ್ಥಿಗಳಿಂದ ಪ್ರಾರಂಭವಾದ ಗವಿಪಾಠಶಾಲೆಯೊಂದು ಪರ್ಣಕುಟಿಯ ಗುರುಕುಲವಾಗಿ ಬೆಳೆದುಬಂದು ಇಂದು ೨೫೦೦ ವಿದ್ಯಾರ್ಥಿಗಳನ್ನುಳ್ಳ ಬೃಹತ್ಸಂಸ್ಥೆಯಾಗಿ ನಿಂತಿದೆ. ಆದರೆ ಮಹತ್ವದ ವಿಷಯವೆಂದರೆ ವರ್ತಮಾನ ಪೀಠಾಧಿಪತಿಗಳಾದ ಶ್ರೀ ಶಿವಕುಮಾರಸ್ವಾಮಿಗಳು ದ್ರಷ್ಟಾರರು. ಅವರು ಅತೀತದ ಅನುಭವ ಹಾಗೂ ವರ್ತಮಾನದ ತಳಹದಿಯ ಆಧಾರದ ಮೇಲೆ ಭವಿಷ್ಯದ ನಿರ್ಮಾಣ ಮಾಡಹೊರಟಿರುವ ಮಹಾಶಿಲ್ಪಿ. ಅಂತೆಯೇ ಅವರು ಪ್ರಾಚೀನ ಸಂಸ್ಕೃತಿಯ ಪುನರುತ್ಥಾನದ ಜತೆಗೇ ಪ್ರಗತಿಪರ ವರ್ತಮಾನ ಹಾಗೂ ಭವ್ಯ ಆಶಾಪೂರ್ಣ ಭವಿಷ್ಯಕ್ಕೆ ಅವಶ್ಯಕವಾದ ಶಿಕ್ಷಣ ಪದ್ಧತಿಗಳನ್ನೂ ತಮ್ಮ ಕಾಯಕದ ಚೌಕಟ್ಟಿಗೆ ಅಳವಡಿಸಿಕೊಂಡಿದ್ದಾರೆ. ಇಂದು ಸಂಸ್ಕೃತಮಹಾಪಾಠಶಾಲೆ ಮಾತ್ರವಲ್ಲದೆ ಮಾಧ್ಯಮಿಕ ಪ್ರೌಢಶಾಲೆಗಳು, ತರಬೇತಿ ಶಿಕ್ಷಣ ಕೇಂದ್ರಗಳು, ಜೂನಿಯರ್ ಕಾಲೇಜು, ಡಿಗ್ರಿಕಾಲೇಜುಗಳು-ಇವೇ ಮೊದಲಾದ ತಾಂತ್ರಿಕ ಕಾಲೇಜುವರೆಗೆ ಒಟ್ಟು ೨೬ ವಿದ್ಯಾಸಂಸ್ಥೆಗಳು ಸಿದ್ಧಗಂಗೆಯ ಸಂಸ್ಥಾನದಲ್ಲಿ ಜೇನುಗೂಡುಗಳಂತೆ ಕಾರ್ಯಗತವಾಗಿವೆ. ಕಣ್ಣಿಗೆ ಕಂಡಂತೆ ನಿರ್ಮಿತವಾದ ಭವ್ಯತೆಯನ್ನೂ ಪವಾಡವೆನ್ನಬಹುದಾದರೆ ಈ ಬೃಹತ್ಕಾರ್ಯ ಒಂದು ಪವಾಡ. ಈ ಎಲ್ಲ ವಿದ್ಯಾಸಂಸ್ಥೆಗಳಲ್ಲಿ ಸುಮಾರು ೫೦೦ ಜನ ಅಧ್ಯಾಪಕರು ಹಾಗೂ ೧೦,೫೦೦ ವಿದ್ಯಾರ್ಥಿಗಳಿದ್ದಾರೆಂದರೆ ಈ ಕ್ಷೇತ್ರದ ಬೃಹತ್ಸಾಧನೆ ಅರಿವಾಗಲು ಸಾಕು. ಈ ಕಾರ್ಯಗಳಿಂದಾಗಿ ಶ್ರೀಗಳವರು ಸಿದ್ಧಗಂಗೆಯಲ್ಲಿ ಪೂರ್ವ-ಪಶ್ಚಿಮ ವಿಚಾರವಾಹಿನಿಗಳ ಸಂಗಮವನ್ನು ನಿರ್ಮಿಸಿದ್ದಾರೆ.

ಶ್ರೀಗಳವರು ಉತ್ತಮ ವಾಗ್ಮಿ ಹಾಗೂ ಬಹುಭಾಷಾ ಪಂಡಿತರು. ಕನ್ನಡ, ಸಂಸ್ಕೃತ ಹಾಗೂ ಇಂಗ್ಲಿಷ್ ಎಂದರೆ ನಿರರ್ಗಳ ಝರಿ! ಯಾವುದೇ ವಿಷಯವನ್ನು ಕುರಿತು ಮಾತನಾಡಿದರೂ ನೇರವಾಗಿ ಕೇಳುಗನ ಮನಮುಟ್ಟುವಂತೆ ಕ್ಲಿಷ್ಟವಾದ ವಿಷಯವನ್ನೂ ಸಹಜವಾಗಿ ನಿರೂಪಿಸಿರುತ್ತಾರೆ. ಆ ನಿರಾಡಂಬರ ಸಹಜ ಸಾತ್ವಿಕ ವ್ಯಕ್ತಿತ್ವದೆದುರು ಕುಳಿತರೆ ಆತ್ಮೀಯ, ಹಿತೈಷಿ ಹಿರಿಯರೊಬ್ಬರ ಮುಂದೆ ಕುಳಿತಂತೆ ಭಾಸವಾಗುತ್ತದೆ. ಒಮ್ಮೆ ದರ್ಶಿಸಿ ಮಾತಾಡಿ ಬಂದರೆ ಮತ್ತೊಮ್ಮೆ ನೋಡಬೇಕೆನಿಸುತ್ತದೆ.

ಈ ಲೇಖನ ಬರೆಯುವ ಮೊದಲು ನನಗೆ ಶ್ರೀಗಳವರನ್ನು ಸಂದರ್ಶಿಸಿ ಎರಡು ಪ್ರಶ್ನೆಗಳನ್ನು ಕುರಿತು ಶಂಕಾ ಸಮಾಧಾನ ಮಾಡಿಕೊಳ್ಳಬೇಕೆನ್ನಿಸಿತು. ಅನುವು ಮಾಡಿಕೊಂಡು ಟೇಪ್ ರೆಕಾರ್ಡರ್ ಕೈಲಿ ಹಿಡಿದು ಹೊರಟು ಬೆಳಿಗ್ಗೆ ಸುಮಾರು ೧೧ ಗಂಟೆ ವೇಳೆಗೆ ಸಿದ್ಧಗಂಗೆ ಸೇರಿದೆ. ಜತೆಯಲ್ಲಿ ಮಿತ್ರರಿಬ್ಬರಿದ್ದರು. ಸ್ವಾಮಿಗಳು ನಿತ್ಯಪೂಜೆಯಲ್ಲಿ ನಿರತರಾಗಿದ್ದರು. ಮಠದ ಹೊರಾಂಗಣದಲ್ಲಿ ಕಾಯ್ದು ಕುಳಿತೆವು. ಅನತಿ ಕಾಲದಲ್ಲೇ ಸ್ವಾಮಿಗಳು ಪೂಜೆ ಮುಗಿಸಿ ಹೊರ ಬಂದು ನಮ್ಮನ್ನು ಬರಮಾಡಿಕೊಂಡರು. ಅವರ ಮೊದಲ ಪ್ರಶ್ನೆ-'ಪ್ರಸಾದವಾಯಿತೆ?' ಆ ಹಿಂದೆ ಸಹ ಅವರನ್ನು ಭೇಟಿಯಾದಾಗ ಅದೇ ಪ್ರಶ್ನೆ ಕೇಳಿದ್ದರೆಂಬುದು ನನಗೆ ನೆನಪಿದೆ. ನನಗೆ ಅನಿಸಿತು: ತಾಯಿಗೆ ಮೊದಲು ಮಗುವಿನ ಹೊಟ್ಟೆಯ ಯೋಚನೆಯಷ್ಟೆ!...ಔಪಚಾರಿಕ ಸಂಭಾಷಣೆಯ ನಂತರ ನಾನು ಶಂಕಾಸಮಾಧಾನದ ಮಾತೆತ್ತಿದೆ. 'ಅಗತ್ಯವಾಗಿ ಕೇಳಿ' ಎಂದರು. ಓದುಗರ ಸಲುವಾಗಿ ನಾನು ಕೇಳಿದ ಪ್ರಶ್ನೆಗಳನ್ನೂ ಮತ್ತು ಅವರು ಹೇಳಿದ ಅವರದೇ ಧ್ವನಿ ಮುದ್ರಿತ ಉತ್ತರಗಳನ್ನೂ ಯಥಾರ್ಥವಾಗಿ ಈ ಕೆಳಗೆ ಪ್ರಸ್ತುತಪಡಿಸುತ್ತಿದ್ದೇನೆ:

ಪ್ರಶ್ನೆ ೧. ಸ್ವಾಮಿಗಳವರಲ್ಲಿ ವಿಜ್ಞಾಪನೆ. ಸಾಮಾನ್ಯವಾಗಿ ಪರಂಪರಾಗತವಾಗಿ ಬಂದಂತೆ ಮಠಗಳು ಧರ್ಮ ಪರಿಪಾಲನೆಯಲ್ಲೇ ನಿರತವಾದ ಸಂಸ್ಥೆಗಳು. ಆದರೆ ತಾವು ಧರ್ಮಪರಿಪಾಲನೆ, ಶಿಕ್ಷಣಪ್ರದಾನ ಮತ್ತು ಸಮಾಜಸೇವಾ ಕಾರ್ಯವನ್ನು ಸಹ ತಮ್ಮ ಕಾಯಕದ ಚೌಕಟ್ಟಿನಲ್ಲಿ ಸಮನ್ವಯಗೊಳಿಸಿಕೊಂಡಿದ್ದೀರಿ. ತಮಗೆ ಈ ಪ್ರೇರಣೆ ಹೇಗೆ ಬಂತು? ಈ ಮೂರೂ ವಿಷಯಗಳ ಸಮನ್ವಯ ಕಷ್ಟಕರವಲ್ಲವೆ?

ಶ್ರೀಗಳವರ ಧ್ವನಿ ಮುದ್ರಿತ ಉತ್ತರ: 'ಮೊದಲು ಇಲ್ಲಿ ವಿದ್ಯಾಸಂಸ್ಥೆ ಪ್ರಾರಂಭವಾದದ್ದು ೧೯೧೭ರಲ್ಲಿ. ಇದನ್ನು ಸ್ಥಾಪನೆ ಮಾಡಿದವರು ನಮ್ಮ ಗುರುಗಳು. ಬಹಳ ಸಣ್ಣ ಪ್ರಮಾಣದಲ್ಲಿ ಆರಂಭ ಮಾಡಿದರು. ಇದು ಕ್ರಮವಾಗಿ ಕೊಂಚ ಬೆಳೆದುಕೊಂಡು ಬಂತು. ೧೯೩೦ರಲ್ಲಿ ನನಗೆ ಆಶ್ರಮವಾಯಿತು. ೪೧ರ ವರೆಗೆ ನಮ್ಮ ಗುರುಗಳಿದ್ದರು. ಅಲ್ಲಿವರೆಗೂ ಕೂಡ ಅವರು ಮಾಡಿದ ಕಾರ್ಯವನ್ನೇ ಹಾಗೇ ಮುಂದುವರೆಸಿಕೊಂಡು ಬರುತ್ತಾ ಇತ್ತು. ಅನಂತರ ಅದು ಕೊಂಚ ವಿಸ್ತೃತವಾಗಿ ಮುಂದುವರೆಯಿತು. ಪ್ರೇರಣೆ ಅದನ್ನು ಆ ನಮ್ಮ ಗುರುಗಳ ಆಶೀರ್ವಾದದಿಂದ ಅವರೇ ಪ್ರೇರಕ ಶಕ್ತಿ ಎಂದರೆ ಅದು ತಪ್ಪಾಗುವುದಿಲ್ಲ. ಆದರೆ ಇತ್ತೀಚಿನ ವಾತಾವರಣವನ್ನು ಪರಿಶೀಲನೆ ಮಾಡಿದ ಮೇಲೆ ಬಹಳ ಮಟ್ಟಿಗೆ ಸಮಾಜಸೇವೆ, ಜನತಾಸೇವೆಯೂ ಕೂಡ ಈ ಮಠಗಳು ಕೈಗೊಳ್ಳಬೇಕಾಗಿರತಕ್ಕಂಥ ಮುಖ್ಯಧ್ಯೇಯ ಎಂದು ಅರಿವಾದ್ದರಿಂದ ಸಾಧ್ಯವಾದ ಮಟ್ಟಿಗೂ ಸೇವೆ ಮಾಡುತ್ತಾ ಬಂದುದಾಗಿದೆ. ಈ ಮೂರನ್ನೂ ಕೂಡಿ ನಡೆಸತಕ್ಕಂಥ ವಿಚಾರ ಪ್ರಶ್ನೆ ಮಾಡಿದಿರಿ. ಪ್ರಾಯಃ ಅದು ಬಹಳ ಕಷ್ಟ

ವಾಗುವುದಿಲ್ಲ ಅಂತ ನನ್ನ ಅನುಭವ. ಏಕೆಂದರೆ ಹಿಂದೆಯೂ ಕೂಡ ಧರ್ಮಸ್ಥಾಪನಾಚಾರ್ಯರಾಗಲೀ, ಅದರ ಪ್ರಚಾರ ಮಾಡಿದಂಥ ದೊಡ್ಡವರಾಗಲೀ ಕೇವಲ ಪಾರಮಾರ್ಥಿಕ ವಿಚಾರಕ್ಕೆ ಮಾತ್ರ ಗಮನಕೊಟ್ಟು ಲೌಕಿಕ ವಿಷಯವನ್ನು ಉದಾಸೀನ ಮಾಡಿಲ್ಲ. ಕಾರಣ, ಲೌಕಿಕ ಜೀವನ ಅನುಲಕ್ಷಿತವಾದಾಗ ಮಾತ್ರ ಪಾರಮಾರ್ಥಿಕ ಜೀವನಕ್ಕೆ ಹೆಚ್ಚಿನ ಬಲವುಂಟಾಗುವುದೇ ಹೊರತು ಹಲವಾರು ವಿಧವಾದ ಕಷ್ಟಕಾರ್ಪಣ್ಯ ಕೂಡಿಕೊಂಡಿರುವಾಗ ಪಾರಮಾರ್ಥಿಕ ಬಲವೂ ಬೆಳವಣಿಗೆಯಾಗುವುದಿಲ್ಲ. ಈ ವಿಷಯವನ್ನು ಅರವಿಂದ ಘೋಷರು ಬಹಳ ಸ್ಪಷ್ಟಪಡಿಸಿದ್ದಾರೆ. ಅವರು ಹೇಳಿದರು: 'Spirituality cannot flourish in the void.' ಅಂದರೆ ಬಟ್ಟಬಯಲಾದ ಹಾಳುಭೂಮಿಯಲ್ಲಿ ಪಾರಮಾರ್ಥಿಕ ಸೇವೆ ಬೆಳೆಯಲಾರದು ಎಂಬುದು ಅವರ ಅಭಿಪ್ರಾಯ. ಪ್ರಾಯಶಃ ನಮ್ಮ ಭಾರತೀಯ ಧರ್ಮ ಈ ಸಂದೇಶವನ್ನೇ ಮೊದಲಿಂದ ಕೊಡುತ್ತಾ ಬಂದಿದೆ. ಧರ್ಮದ ಗುರಿಗಳು ಎರಡು ಎಂಬ ವಿಚಾರವನ್ನು ಬಲ್ಲವರು ಹೇಳಿದ್ದಾರೆ. ಒಂದು ಅಭ್ಯುದಯ, ಮತ್ತೊಂದು ಶ್ರೇಯಸ್ಸು. ಅಭ್ಯುದಯ ಎಂದರೆ ಉತ್ತಮವಾಗಿರತಕ್ಕ ಲೌಕಿಕ ಜೀವನ. ಸುಖ-ಶಾಂತಿ-ಸಮೃದ್ಧಿಗಳಿಂದ ಕೂಡಿಕೊಂಡಿರತಕ್ಕ ಜೀವನ ಇಷ್ಟವಾದದ್ದು. ಅದು ಎಂದಿಗೂ ಕೂಡ ಉದಾಸೀನ ಮಾಡತಕ್ಕಂಥ ವಿಷಯವಲ್ಲ. ಆದರೆ ಅಷ್ಟು ಮಾತ್ರ ತಿಳಿದುಕೊಳ್ಳುವುದರಿಂದ ಮಾನವನು ಚರಮಧ್ಯೇಯ ಮುಟ್ಟಿದಂತೆ ಆಗುವುದಿಲ್ಲ. ಅವನ ಉದಾತ್ತವಾಗಿರತಕ್ಕಂಥ ಜನ್ಮ ದೊಡ್ಡಗುರಿ ಮುಟ್ಟಬೇಕಾಗಿದೆ. ಅದೇ ಪರಮಾತ್ಮನ ಸಾಕ್ಷಾತ್ಕಾರ. ಧರ್ಮವೆನ್ನುವುದು ಈ ಎರಡು ಗುರಿಗಳನ್ನು ಸಾಧನೆ ಮಾಡುವಂಥ ಮಾರ್ಗವನ್ನೇ ತೋರಿಸಿ ಕೊಡುವಂಥಾದ್ದಾಗಿದೆ. ಈ ತತ್ತ್ವವನ್ನು ಅರಿಯದವರು ಧರ್ಮವನ್ನು ಆಕ್ಷೇಪಣೆ ಮಾಡಬೇಕೇ ಹೊರತು, ತತ್ವವನ್ನು ಬಲ್ಲವರು ಆಕ್ಷೇಪಣೆ ಮಾಡುವುದಕ್ಕೆ ಕಾರಣವೇ ಇಲ್ಲ. ಹೀಗಿರುವಾಗ ಧರ್ಮದ ಒಂದು ತತ್ತ್ವವನ್ನು ಪರಿಪಾಲನೆ ಮಾಡುವ ಅಪೇಕ್ಷೆಯುಳ್ಳವರೆಲ್ಲ ಸಾಧ್ಯವಾದ ಮಟ್ಟಿಗೆ ಎರಡನ್ನೂ ಕೂಡಿಸಿ ಸಮನ್ವಯ ಮಾಡಲೇ ಬೇಕಾದ್ದು ಆವಶ್ಯಕ ಅಂತ ನನ್ನ ಅಭಿಪ್ರಾಯ.'

ಪ್ರಶ್ನೆ -೨: ಸ್ವಾಮಿಗಳವರಲ್ಲಿ ಇನ್ನೊಂದು ವಿಜ್ಞಾಪನೆ. ಅದೆಂದರೆ, ಇತ್ತೀಚೆಗೆ ಆಧುನಿಕತೆಯ ಹೆಸರಿನಲ್ಲಿ ಸಾರ್ವಕಾಲಿಕ ಮೌಲ್ಯಗಳು ಉಪೇಕ್ಷಿತವಾಗತೊಡಗಿವೆ. ಆಗಾಗ ನಡೆಯುತ್ತಿರುವ ರಾಜಕೀಯಗೊಂದಲಗಳೂ ವಾತಾವರಣವನ್ನು ಕದಡುತ್ತಿವೆ. ಇಂತಹ ಸನ್ನಿವೇಶದಲ್ಲಿ ಭವಿಷ್ಯವನ್ನು ಕುರಿತು ತಮ್ಮ ಸೂಚನೆ ತಿಳಿಯಬಹುದೆ ?

ಶ್ರೀಗಳವರ ಧ್ವನಿಮುದ್ರಿತ ಉತ್ತರ: 'ಭವಿಷ್ಯಕ್ಕೆ ಸೂಚನೆ ಕೇಳಿದ್ದೀರಿ. ಇದು ಬಹು ಜಟಿಲವಾದ ಪ್ರಶ್ನೆ. ತಥಾಪಿ ಇಂದಿನ ವಾತಾವರಣವನ್ನು ಪರಿಶೀಲನೆ ಮಾಡಿದಾಗ ಇದು ಸಾಮಾನ್ಯವಾಗಿ ಎಲ್ಲರೂ ಚೆನ್ನಾಗಿ ಯೋಚನೆಮಾಡಬೇಕಾದ ಆವಶ್ಯಕವಾದ ವಿಷಯವಾಗುತ್ತದೆ. ಏಕೆಂದರೆ ಸ್ವಾರ್ಥ, ಸ್ವಪ್ರತಿಷ್ಠೆ, ಅಧಿಕಾರದಾಹಗಳಿಂದ ಅನೇಕಮಂದಿ ನಾಯಕರು ದೇಶಹಿತವನ್ನು, ಜನತೆಯ ಕಲ್ಯಾಣವನ್ನು ಮರೆತಿರುವಾಗ ಮುಂದೇನು ಭವಿಷ್ಯ ಎನ್ನುವಂಥ ಒಂದು ವಿಚಾರ ಎಲ್ಲರನ್ನೂ ವಿಶೇಷವಾಗಿ ಕಾಡುತ್ತಾ ಇದೆ. ಇಂಥ ಪರಿಸ್ಥಿತಿ ಉಂಟಾಗಬೇಕಾದರೆ, ನಾನು ತಿಳಿದುಕೊಂಡಿರುವಂತೆ, ನಮ್ಮ ನಾಯಕರು ಧರ್ಮದ ಬಗ್ಗೆ ಸಾಕಷ್ಟು ಶ್ರದ್ಧೆವಹಿಸದೆ ಇರುವುದು, ಧರ್ಮದ ಮಹತ್ವ ಅರಿಯದಿರುವುದು ಮತ್ತು ದೇವರನ್ನು ಮರೆತುಕೊಂಡಿರುವುದು-ಇವೇ ಮುಖ್ಯವಾದ ಕಾರಣವೆಂದು ತೋರುತ್ತದೆ. ಮೊದಲಿಂದ ನಮ್ಮ ಧರ್ಮದ ತತ್ತ್ವಗಳನ್ನು ಅರಿತುಕೊಂಡಿದ್ದರೆ ಅವರಿಗೂ ಚೆನ್ನಾಗಿ ಅರ್ಥವಾಗುತ್ತಿತ್ತು. ಅಧಿಕಾರದಾಹಕ್ಕಿಂತಲೂ ಧರ್ಮರಕ್ಷಣೆ ಮಾಡುವುದು ಅವಶ್ಯಕವೆನ್ನುವುದರ ಮಹತ್ವ. ಆದರೆ ಸಾಕಷ್ಟು ಆ ಕಡೆ ಅವರ ದೃಷ್ಟಿ ಹರಿದಿಲ್ಲವಾಗಿ, ಅಧಿಕಾರಕ್ಕೆ ಅಂಟಿಕೊಳ್ಳುವಂಥ ಒಂದು ಹಂಬಲದಲ್ಲಿ ಅವರು ಜೀವನದ ಹೆಚ್ಚು ಶ್ರೇಷ್ಠಮೌಲ್ಯಗಳನ್ನು ಮರೆತುಕೊಂಡಿದ್ದಾರೆ ಮತ್ತು ದೇಶದ ವಿಚಾರವನ್ನು ಕೂಡ ಮರೆತುಕೊಂಡಿರುವಂತೆ ಭಾಸವಾಗುತ್ತಿದೆ. ಆದ್ದರಿಂದ ಭವಿಷ್ಯ ನಿಜವಾಗಿ ಮೌಲ್ಯಕರವಾಗಬೇಕಾದರೆ ಜನತೆಯಲ್ಲಿ ಧರ್ಮಬುದ್ಧಿ ಜಾಗ್ರತವಾಗಬೇಕು. ಜನ ನೀತಿವಂತರಾಗಬೇಕು; ನೈತಿಕ ಸಂಪತ್ತಿಗೆ ವಿಶೇಷ ಗಮನಕೊಡಬೇಕು. ಯಾವುದೇ ವ್ಯಕ್ತಿ, ಸಮಾಜ, ಇಲ್ಲವೇ ರಾಷ್ಟ್ರಕ್ಕೆ ಒಳ್ಳೆಯದಾಗಬೇಕಾದರೆ ನೈತಿಕಸಂಪತ್ತೇ ಮೂಲಕಾರಣ ಎಂಬ ವಿಚಾರವನ್ನು ತಿಳಿದವರು ಹೇಳಿದ್ದಾರೆ. ಅಂಥ ಒಂದು ಉತ್ತಮ ಜನಾಂಗವನ್ನು ನಿರ್ಮಾಣ ಮಾಡುವ ಯೋಜನೆಗೆ ವಿಶೇಷಗಮನ ಕೊಟ್ಟಾಗ ಮತ್ತು ಅಂಥ ಜನಾಂಗದ ಸೃಷ್ಟಿ ಆದಾಗ ಮತ್ತು ಜನರು ಬೇರೆ ಬೇರೆ ಜವಾಬ್ದಾರಿ ಸ್ಥಾನಗಳಲ್ಲಿ ತಮ್ಮ ತಮ್ಮ ಪಾತ್ರವನ್ನು ನಿರ್ವಹಿಸುವಂಥ ವಾತಾವರಣ ಸೃಷ್ಟಿಯಾದಾಗ ಬಹುಮಟ್ಟಿಗೆ ನಮ್ಮ ದೇಶಕ್ಕೆ ಒಳ್ಳೆಯದಾಗಬಹುದು. ನಾವು ಮಂಗಳವನ್ನು ಕಾಣಬಹುದು ಎಂಬ ಒಂದು ಆಸೆ ತೋರುತ್ತೆ.'

—ಧಿಡೀರನೆ ಕೇಳಿದ ಎರಡು ಕ್ಲಿಷ್ಟವಾದ ಪ್ರಶ್ನೆಗಳಿಗೆ ಶ್ರೀಗಳವರು ಸ್ವಲ್ಪವೂ ಉದ್ವಿಗ್ನರಾಗದೆ, ಕಾಲಾವಕಾಶ ಪಡೆಯದೆ, ಬಹು ಸರಳವಾದ ಮಾತುಗಳಿಂದ 'ಇದಮಿತ್ಥಂ' ಎಂಬಂತೆ ಸ್ಪಷ್ಟೀಕರಿಸಿ ಶಂಕಾಸಮಾಧಾನ ಮಾಡಿದುದು ಅವರ ಪ್ರತ್ಯುತ್ಪನ್ನಮತಿ ಹಾಗೂ ಅಂತಃಪ್ರಜ್ಞೆಯ ದ್ಯೋತಕವಾಗಿದೆ. ನನ್ನ ಜಿಜ್ಞಾಸುಪ್ರವೃತ್ತಿಗೆ ಅವರು ಬೇಸರಗೊಳ್ಳಲಿಲ್ಲ; ಸಂತಸಗೊಂಡರು.

ಹೀಗೆ, ನಾನು ಸ್ವತಃ ನೋಡುಗನಾಗಿ ಕಂಡಂತೆ, ಜಿಜ್ಞಾಸುವಾಗಿ ತಿಳಿದಂತೆ, ಸಂಭಾಷಕನಾಗಿ ಕೇಳಿದಂತೆ, ಮನದಿಂದ ಮೆಚ್ಚಿದಂತೆ ಮತ್ತು ಹೇಳಬೇಕೆನಿಸಿದಂತೆ. ಏನು ಬರೆದರೆ ಹೇಗೋ ಎಂಬ ಸಂಕೋಚವನ್ನು ಬದಿಗೊತ್ತಿ ಸಹಜಪ್ರೇರಣೆಯಿಂದ ಈ ಎರಡು ಮಾತುಗಳನ್ನು ಬರೆದಿದ್ದೇನೆ. ನಾನು ಬರೆದಿರುವುದಾದರೂ ಸಿಂಧುವಿನಲ್ಲಿ ಬಿಂದು ಮಾತ್ರವೆಂದು ನನ್ನ ಭಾವನೆ. ಆದರೆ ಬಿಂದುವಿನಲ್ಲಿ ಸಿಂಧು ಕಾಣುವುದೆಂಬ ನಂಬಿಕೆ ನನಗಿದೆ.

ನಾನು ಸಿದ್ಧಗಂಗೆಯ ಸಂಸ್ಕೃತ ಮಹಾಪಾಠಶಾಲೆಯನ್ನು ಕುರಿತು ಪ್ರಸಾರ ಮಾಡಿದ ರೂಪಕವನ್ನು ಕೇಳಿ ಶ್ರೀಗಳವರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿ ನನಗೊಂದು ಪತ್ರ ಕಳಿಸಿದರು. ಅದನ್ನು ನಾನು ಮಹತ್ತೆಂದು ಭಾವಿಸಿದ್ದೇನೆ.

ಬೆಂಗಳೂರು
(ವೈ.ಎಸ್.ಕೆ. ರಾವ್
೨೫-೧೨-೭೯
ಸಹಾಯಕ ನಿರ್ದೇಶಕರು, ಆಕಾಶವಾಣಿ, ಬೆಂಗಳೂರು)

## ೩. ಶ್ರೀಗಳವರು ಪತ್ರಿಕೆಗಳಿಗೆ ಕೊಟ್ಟ ಒಂದು ಚಾರಿತ್ರಿಕ ಹೇಳಿಕೆ

[೧೯೭೪, ಮೇ ೩೧ ರಂದು ಶ್ರೀ ಶ್ರೀಗಳವರು ಪತ್ರಿಕಾ ಪ್ರತಿನಿಧಿಗಳನ್ನು ಕರೆಸಿ ತಾವು ತಳೆದ ನಿಲುವನ್ನು ವಿವರಿಸಿದರು. ತಮ್ಮ ಲಿಖಿತ ಹೇಳಿಕೆಯನ್ನು ಪ್ರತಿನಿಧಿಗಳಿಗಿತ್ತರು. ಅದರ ಪೂರ್ಣ ಪಾಠವನ್ನು ಕೆಳಗೆ ಕೊಡಲಾಗಿದೆ.]

ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆಯುತ್ತಿರುವ ಉಚಿತ ವಿದ್ಯಾರ್ಥಿನಿಲಯದ ಬಗ್ಗೆ ಕೆಳಕಂಡ ಹಲವು ಮುಖ್ಯ ವಿಷಯಗಳನ್ನು ಮಹಾಜನಗಳ ಅವಗಾಹನೆಗೆ ತರಬಯಸುತ್ತೇವೆ.

**ನಿಲಯವು ರೂಪಿಸಿ ತೋರಿಸಿದ ಆದರ್ಶ**

ನಿಲಯವು ೧೯೧೭ನೆಯ ಇಸವಿಯಲ್ಲಿ ಸ್ಥಾಪಿಸಲ್ಪಟ್ಟಿತು. ವಿದ್ಯಾರ್ಥಿನಿಲಯಗಳನ್ನು ಕೋಮುವಾರು ರೀತ್ಯಾ ಸ್ಥಾಪಿಸಿ ನಡೆಸಲು ಸರ್ಕಾರಗಳೇ ಉತ್ತೇಜನ ನೀಡುತ್ತಿದ್ದ ಕಾಲವದು. ಆದಾಗ್ಯೂ ಪ್ರಾರಂಭದ ದಿನದಿಂದಲೂ ನಿಲಯವು ಎಲ್ಲಾ ಕೋಮಿನ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ನೀಡಿತು. ಜಾತಿರಹಿತ, ವರ್ಗರಹಿತ ಸಮಾಜ ಸ್ಥಾಪನೆಯಾಗಬೇಕೆಂಬ ಮಹದಾಶೆ ಹೊಂದಿ ಆದರ್ಶವನ್ನು ರೂಪಿಸಿ ತೋರಿಸಿತು. ಅಂದು ನಿಲಯವು ಸರ್ಕಾರದಿಂದ ಯಾವುದೇ ಸಹಾಯವನ್ನು ಹೊಂದುತ್ತಿರಲಿಲ್ಲ.

**ಸರಕಾರ ನೀಡಿದ ನೆರವು**

೧೯೩೬ನೆಯ ಇಸವಿಯ ವೇಳೆಗೆ ಸರ್ಕಾರವು ಸಹಾಯಧನವನ್ನು ನೀಡಲು ಮುಂದಾಯಿತು. ಆಗ ನಿಲಯದಲ್ಲಿದ್ದ ನೂರಾರು ವಿದ್ಯಾರ್ಥಿಗಳ ಪೈಕಿ ಕೇವಲ ೧೬ ಮಂದಿಗೆ ತಲಾ ಮಾಹೆಯಾನ ೧ ರೂ. ೫೦ ಪೈಸೆಯಂತೆ ಸಹಾಯಧನ ನೀಡಲಾಗುತ್ತಿತ್ತು. ಕ್ರಮೇಣ ಈ ಸಹಾಯಧನವನ್ನು ತಲಾ ೩ ರೂ.ಗಳಿಗೆ ಹೆಚ್ಚಿಸಲಾಯಿತು. ಉಳಿದ ಹೆಚ್ಚಿನ ವೆಚ್ಚವನ್ನು ನಿಲಯವು ಭರಿಸುತ್ತಿತ್ತು. ಕ್ರಮಕ್ರಮವಾಗಿ ಜೀವನದ ವೆಚ್ಚವು ಏರುತ್ತಿರುವ ವಿಷಯವನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಬಿ.ಡಿ. ಜತ್ತಿಯವರು ಮುಖ್ಯಮಂತ್ರಿಗಳಾಗಿದ್ದ ಸಮಯದಲ್ಲಿ ಮಾಹೆಯಾನ ಸಹಾಯಧನವನ್ನು ೩ ರೂ.ಗಳಿಂದ ೧೦ ರೂ.ಗಳಿಗೆ ಏರಿಸಿತು. ನಿಲಯದ ಶಿಸ್ತಿನ ಜೀವನ, ಮಕ್ಕಳ ಬೆಳವಣಿಗೆಗೆ ಪೋಷಕ ವಾತಾವರಣ, ಉತ್ತಮ ಜ್ಞಾನ ಪ್ರಸರಣಗಳಿಂದ ಆಕರ್ಷಿತಗೊಂಡ ಜನತೆ ವರ್ಷವರ್ಷಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಸೇರಿಸುತ್ತಾ ಬಂದು ಸಂಖ್ಯೆಯು ಅತ್ಯಂತ ಕಡಿಮೆ ಅವಧಿಯಲ್ಲಿಯೇ ಬೃಹತ್ಪ್ರಮಾಣಕ್ಕೇರಿತು. ನಿಲಯದಲ್ಲಿ ಆಶ್ರಯಪೊಂದಿದ್ದ ಸುಮಾರು ೩೬೦೦ಕ್ಕೂ ಮಿಗಿಲಾದ ವಿದ್ಯಾರ್ಥಿವೃಂದದ ಪೈಕಿ ೧೯೪೪ ವಿದ್ಯಾರ್ಥಿಗಳಿಗೆ ಮಾತ್ರ ಸರ್ಕಾರದವರು ತಲಾ ಮಾಹೆಯಾನ ೧೦ ರೂ.ನಂತೆ ಸಹಾಯಧನವನ್ನು ನೀಡುತ್ತಿದ್ದರು. ಅಂದೂ ಸಹ ಜೀವನವೆಚ್ಚವು ಸಾಕಷ್ಟು ಅಧಿಕವಾಗಿಯೇ ಇತ್ತು. ತಲಾ ಒಬ್ಬಾತನಿಗೆ ನಿಲಯದಲ್ಲಿ ಕನಿಷ್ಠ ವೆಚ್ಚ ೩೦ ರೂ. ಆಗುತ್ತಿತ್ತು. ಹೀಗೆ ಸಹಾಯಧನಕ್ಕೆ ಸೇರ್ಪಡೆಯಾಗಿದ್ದ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ಮೂರನೆಯ ಎರಡು ಭಾಗದಷ್ಟು ಮತ್ತು ಎರಡು ಸಾವಿರ ವಿದ್ಯಾರ್ಥಿಗಳ ಸಂಪೂರ್ಣ ವೆಚ್ಚವನ್ನೂ ಶ್ರೀ ಮಠದಿಂದಲೇ ತೂಗಿಸಲಾಗುತ್ತಿತ್ತು. ಈ ವೆಚ್ಚದ ಪ್ರಮಾಣ ಎಷ್ಟೆಂಬುದನ್ನು ಎಲ್ಲರೂ ಸುಲಭವಾಗಿ ಊಹಿಸಬಹುದಾಗಿದೆ.

**ಸಾರ್ವಜನಿಕರ ನೆರವೇ ಮಠದ ಸಂಪತ್ತು**

ಸುಮಾರು ಎರಡು ಮೂರು ವರ್ಷಗಳಿಂದ ಜೀವನದ ವೆಚ್ಚವು ಗಗನಕ್ಕೇರುತ್ತಿರುವ ವಿಷಯವನ್ನು ಗಮನಿಸಿದ ಸರ್ಕಾರ, ಸಹಾಯಧನವನ್ನು ತಲಾ ೨೦ರೂ.ಗಳಿಗೆ ಹೆಚ್ಚಿಸಿತು. ಆದರೆ ಈ ವೇಳೆಗೆ ಸರಾಸರಿ ಮಾಹೆಯಾನ ವೆಚ್ಚವು ೪೫ ರೂ.ಗಳಿಗೆ ಮೀರುವಂತಾಯಿತು. ಸಹಾಯಧನಕ್ಕೆ ಸೇರ್ಪಡೆಯಾಗಿದ್ದ ವಿದ್ಯಾರ್ಥಿಗಳ ಅರ್ಧಕ್ಕೂ ಮಿಗಿಲಾದ ವೆಚ್ಚವೂ ದುಬಾರಿಯಾಗಿದ್ದಿಂದ ಮತ್ತು ಉಳಿದ ವಿದ್ಯಾರ್ಥಿಗಳ ಸಂಪೂರ್ಣ ವೆಚ್ಚವೂ ಸೇರಿದಂತೆ ನಿರ್ವಹಣೆಯು ದುಸ್ಸಾಧ್ಯವಾಗಿತ್ತು. ಇಷ್ಟು ಅಧಿಕ

ಪ್ರಮಾಣದ ವೆಚ್ಚವನ್ನು ಸರಿತೂಗಿಸಲು ಶ್ರೀಮಠಕ್ಕೆ ಯಾವುದೇ ರೀತಿಯ ಮೂಲ ನಿಧಿಯಾಗಲೀ, ಅಪಾರ ಆಸ್ತಿಯಾಗಲೀ ಇಲ್ಲದಿರುವುದನ್ನು ಗಮನಿಸಬೇಕಾಗಿದೆ. ಸಾರ್ವಜನಿಕರ ನೆರವೇ ಈ ಶ್ರೀಮಠದ ಮುಖ್ಯ ಸಂಪತ್ತು. ಸಂಸ್ಥೆಯ ನಿರ್ವಹಣೆಯ ಶ್ರಮವನ್ನು ಆಲೋಚನಾಪರರು ಊಹಿಸಬಹುದು.

**ಜಾತ್ಯತೀತತೆಯನ್ನಾಧರಿಸಿ ನಡೆದಿದೆ**

ಹಿಂದೆಯೇ ಹೇಳಿರುವಂತೆ, ಆದಿಯಿಂದಲೂ ಜಾತ್ಯತೀತತೆಯನ್ನು ಆಧರಿಸಿ ನಡೆದು ಬಂದಿರುವ ಈ ಸಂಸ್ಥೆಯಲ್ಲಿ ೫೦ಕ್ಕೂ ಹೆಚ್ಚು ಮತ ಜಾತಿಗಳ ವಿದ್ಯಾರ್ಥಿಗಳು ಆಶ್ರಯವನ್ನು ಹೊಂದಿದ್ದರು. ಯಾವುದೇ ಕೋಮಿನ ಪ್ರಾಬಲ್ಯತೆ ಇರಲಿಲ್ಲವೆಂಬುದು ಲಗತ್ತಿಸಿರುವ ಪಟ್ಟಿಯಲ್ಲಿ ಸ್ಪಷ್ಟವಾಗಿದೆ.

**ವಿದ್ಯಾ ಸಚಿವರ ಹೇಳಿಕೆ**

ಇತ್ತೀಚೆಗೆ ನಮ್ಮ ರಾಜ್ಯದ ಮಾನ್ಯ ವಿದ್ಯಾಮಂತ್ರಿಗಳು ವಿಧಾನಸಭೆಯಲ್ಲಿ ಅನಾಥಾಲಯಗಳಲ್ಲಿ ಲೂಟಿ, ದರೋಡೆ ಇತ್ಯಾದಿಯಾಗಿ ಆರೋಪಿಸಿದ್ದಾರೆ. ಎಲ್ಲಾ ನಿಲಯಗಳನ್ನು ಒಟ್ಟಾಗಿಯೇ ದೂಷಿಸಿದ್ದಾರೆ. ದೂಷಿಸುವಾಗ ಬಹಳ ಮಾಡಿ, ಮಠಗಳ ಬಗ್ಗೆ ಲಘುವಾಗಿ ಮಾತನಾಡಿದ್ದಾರೆ. ಕೆಲವು ಸಂಸ್ಥೆಗಳಲ್ಲಿ ಸಚಿವರ ಆರೋಪಣೆಗಳಿಗೆ ಸತ್ಯಾಂಶ ಇರಬಹುದು. ಆದರೆ ಎಲ್ಲಾ ಸಂಸ್ಥೆಗಳಿಗೂ ಅನ್ವಯಿಸುವಂತೆ ಮಾಡಿರುವ ಆರೋಪಣೆಗಳು ಅವರಿಗೆ ಶೋಭೆ ತರಲಾರವು. ಸುಮಾರು ದಶಕಗಳು ಶ್ರದ್ಧಾನಿಷ್ಠೆಗಳಿಂದ ಸೇವಾಮನೋಭಾವನೆಯಿಂದ ಪ್ರಾಮಾಣಿಕಸೇವೆ ಸಲ್ಲಿಸುತ್ತಿರುವ ನಿಲಯಗಳಿಗೆ ನಿಜಕ್ಕೂ ವ್ಯಥೆಯಾಗುವಂತೆ ಅವರು ವರ್ತಿಸಿದ್ದಾರೆಂಬುದು ಸತ್ಯ ಸಂಗತಿಯಾಗಿದೆ. ಮಿಗಿಲಾಗಿ ಸಾರ್ವಜನಿಕ ಸಂಸ್ಥೆಗಳನ್ನು ನಡೆಸುತ್ತಿರುವಾಗ ಸಣ್ಣ ಪುಟ್ಟ ಪ್ರಮಾದಗಳಿರಬಹುದೇ ವಿನಾ ಮತ್ತಾವುದೇ ರೀತಿಯ ದೋಷಗಳಿಗೆ ಎಡೆಯಿರುವುದಿಲ್ಲ. ಇಂದು ಸರ್ಕಾರದಿಂದ ನಡೆಸಲ್ಪಡುತ್ತಿರುವ ಅನೇಕ ಸಂಸ್ಥೆಗಳ ಪೈಕಿ ಹಲವು ಅನೇಕ ಲೋಪದೋಷಗಳಿಂದ ಕೂಡಿರುವುದನ್ನು ಕಾಣುತ್ತಿಲ್ಲವೇ ? ಇಷ್ಟಾದರೂ ಸ್ವಂತ ಹಿತವನ್ನು ಕಡೆಗಣಿಸಿ ಸಾರ್ವಜನಿಕ ಹಿತಸಾಧನೆಗಾಗಿ ಸತತ ಶ್ರಮಿಸುತ್ತಿರುವ ಸಂಸ್ಥೆಗಳ ಸೇವೆಯನ್ನು ಗುರುತಿಸಲಾರದಂತಹ ಧೋರಣೆಯನ್ನು ಸಚಿವರಾಗಲೀ ಸರ್ಕಾರವಾಗಲೀ ಹೊಂದುವುದು ಸಾಧುವಲ್ಲ.

**ಹರಿಜನೇತರರೆಲ್ಲರೂ ಶ್ರೀಮಂತರಲ್ಲ**

ಸಚಿವರ ದೃಷ್ಟಿಯಲ್ಲಿ ಹರಿಜನರು ಮಾತ್ರ ಬಡವರು. ಉಳಿದವರೆಲ್ಲರೂ ಬಲ್ಲಿದರು. ಹರಿಜನ ಬಂಧುಗಳ ಮೇಲೆ ಯಾರಿಗೂ ದ್ವೇಷವಿಲ್ಲ. ಸರ್ಕಾರ ಹಾಗೂ ಹರಿಜನ ಮುಖಂಡರುಗಳು ನಿಮ್ಮ ವರ್ಗದವರ ಅಭಿವೃದ್ಧಿಯನ್ನು ಗಮನಿಸುತ್ತಿರುವ ಈ ಹತ್ತಾರು ವರ್ಷಗಳ ಹಿಂದೆಯೇ ಈ ಸಂಸ್ಥೆಯಿಂದ ಅನೇಕ ಮಂದಿ ಹರಿಜನ ವಿದ್ಯಾರ್ಥಿಗಳು ವಿದ್ಯೆಯನ್ನು ಹೊಂದಿ ಹೊರಬಂದಿದ್ದಾರೆ. ಇಂದಿಗೂ ನಿಲಯದಲ್ಲಿ ಸಾಕಷ್ಟು ಮಂದಿ ಹರಿಜನ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದಾರೆ. ಆದರೆ, ಇತರೆ ಕೋಮುಗಳಲ್ಲಿಯೂ ಬಡತನದ ಬವಣೆ ಭೀಕರವಾಗಿರುವುದು ಪ್ರಾಯಃ ವಿದ್ಯಾಮಂತ್ರಿಗಳ ಗಮನಕ್ಕೆ ಬಂದಂತಿಲ್ಲ. ಈ ನಿಲಯದ ನೂರಾರು ವಿದ್ಯಾರ್ಥಿಗಳು (೫೦೦-೬೦೦) ಒಂದೇ ಅಂಗಿ ಒಂದೇ ನಿಕ್ಕರ್‌ಗಳಲ್ಲಿ ವಾಸಿಸುತ್ತಿರುವುದು ವಾಸ್ತವ ವಿಚಾರ. ಒಂದು ಮನೆಯ ಇಬ್ಬರು ಒಂದೇ ಚಾಪೆಯ ಮೇಲೆ ಮಲಗುತ್ತಾರೆ. ಎರಡು ದೇಹಗಳಿಗೂ ಅರ್ಧ ಚಾಪೆ. ಅರ್ಧ ನೆಲ. ಕಂಡವರ ಕಣ್ಣಲ್ಲಿ ನೀರು ತರಿಸುವಂತಹ ದೃಶ್ಯ. ಸಹಸ್ರಾರು ಮಂದಿ ನಿರ್ಗತಿಕರ ಮಕ್ಕಳು ಈ ನಿಲಯದಲ್ಲಿ ಆಶ್ರಯವನ್ನು ಪಡೆದಿದ್ದಾರೆ. ಪ್ರಯುಕ್ತ ಹರಿಜನೇತರರೆಲ್ಲರೂ ಶ್ರೀಮಂತರು ಎನ್ನುವ ವಾದ ಸರಿಯಲ್ಲ. ಅದು ಕೇವಲ ತಪ್ಪು ಕಲ್ಪನೆ. ನಿಲಯದಲ್ಲಿ ಆಶ್ರಯ ದೊರೆಯದೇ ಇದ್ದ ಪಕ್ಷದಲ್ಲಿ ಮನೆಯಲ್ಲಿರಿಸಿಕೊಂಡಾಗಲೀ, ನಗರಗಳಲ್ಲಿರಿಸಿಯಾಗಲೀ ವ್ಯಾಸಂಗ ಮಾಡಿಸಲು ಚೈತನ್ಯವಿಲ್ಲದ ಬಡಜನತೆ ತನ್ನ ಮಕ್ಕಳ ವಿದ್ಯಾಭ್ಯಾಸವನ್ನೇ ಮೊಟಕುಗೊಳಿಸಬೇಕಾಗಿತ್ತು. ಯಾರೇ ಆಗಲಿ ಸಂಸ್ಥೆಯತ್ತ ವಿಶಾಲದೃಷ್ಟಿಯಿಂದ ಅವಲೋಕಿಸಿ ವಾಸ್ತವ ವಿಷಯಗಳನ್ನು ಪರಿಶೀಲಿಸಿದಾಗ ಸತ್ಯಾಂಶ ಗೋಚರವಾಗುತ್ತದೆ.

**ಸಂಪ್ರದಾಯಗಳ ಪಾಲನೆ ಮಠಮಾನ್ಯಗಳ ಆದ್ಯ ಕರ್ತವ್ಯ**

ಈ ನಿಲಯದಲ್ಲಿ ಸಹಪಂಕ್ತಿ ಭೋಜನವಿಲ್ಲೆಂಬುದು ಒಂದು ಆರೋಪಣೆ. ಇದು ಸಾಂಪ್ರದಾಯಕ ಮಠ. ಅನಾದಿ ಕಾಲದಿಂದಲೂ ಅನೂಚಾನವಾಗಿ ನಡೆದು ಬಂದಿರುವ ಪದ್ಧತಿಗಳನ್ನೂ ಸಂಪ್ರದಾಯಗಳನ್ನೂ ಕಾಯ್ದುಕೊಂಡು ಉಳಿಸಿ ಬೆಳೆಸಿಕೊಂಡು ಬರಬೇಕಾದುದು ಮಠಮಾನ್ಯಗಳ ಆದ್ಯ ಕರ್ತವ್ಯವಾಗಿದೆ. ವಿದ್ಯಾರ್ಥಿನಿಲಯವು ಮಠದ ಒಂದು ಅಂಗವಾಗಿ ನಡೆಯುತ್ತಿದೆ. ಬೇರ್ಪಡಿಸುವುದು ಸದ್ಯಕ್ಕೆ ಸಾಧ್ಯವಿಲ್ಲವಾಗಿದೆ. ಪ್ರತ್ಯೇಕ ವ್ಯವಸ್ಥೆಗಳಿಗೆ ಸುಮಾರು ಲಕ್ಷಗಳಷ್ಟು ಹಣ ವಿನಿಯೋಗಿಸಬೇಕಾಗುತ್ತದೆ. ಪ್ರಯುಕ್ತ ಒಂದೇ ಸ್ಥಳದಲ್ಲಿ ಅಡುಗೆಯನ್ನು ತಯಾರ್ಮಾಡಿ ಲಿಂಗಾಯತರಿಗೂ ಇತರೆಯವರಿಗೂ ಪ್ರತ್ಯೇಕ ಅಂಗಣಗಳಲ್ಲಿ ನೀಡಲಾಗುತ್ತಿದೆ. ಬ್ರಾಹ್ಮಣರಿಗೆ ಪ್ರತ್ಯೇಕ ವ್ಯವಸ್ಥೆ ಮಾಡಿದೆ. ಅಡುಗೆಯಲ್ಲಿ ಅಂಗಣದಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ ; ಪಕ್ಷಪಾತವಿಲ್ಲ. ಒಟ್ಟಾಗಿ ಕೂಡಿಸುವುದು ಮಠದಲ್ಲಿ ಸಾಧ್ಯವಿಲ್ಲ. ಮಠವು ತನ್ನ ಸಂಪ್ರದಾಯವನ್ನು ಬಿಡುವುದು ಸಾಧ್ಯವಿಲ್ಲ. ವಿದ್ಯಾರ್ಥಿ

ನಿಲಯವನ್ನೇ ರದ್ದುಪಡಿಸಿದರೂ ಸರಿಯೆ ಮಠ ತನ್ನ ಕರ್ತವ್ಯವನ್ನು ಬಿಡಲಾರದು. ಈ ಭಾವನೆಯ ಮಹತ್ವವು ಸಾಕಷ್ಟು ಅರಿವುಳ್ಳವರು ಹೃದಯವೈಶಾಲ್ಯತೆಯಿಂದ ಆಲೋಚಿಸಿದಾಗ ಅರಿವಾಗಬಲ್ಲುದು. ಜೊತೆಯಲ್ಲಿ ಕುಳಿತು ಭೋಜನ ಮಾಡಿದಾಕ್ಷಣವೇ ಭಾವೈಕ್ಯವಾಗಲಾರದೆಂಬುದು ಸ್ಪಷ್ಟವಾದ ಮಾತು. ಇಂದು ಸಭೆ ಸಮಾರಂಭಗಳಲ್ಲಿ ಕೈ ಕೈ ಕುಲಾಯಿಸಿ ಸಹ ಭೋಜನ ಸ್ವೀಕರಿಸುತ್ತಿರುವ ರಾಜಕೀಯ ವ್ಯಕ್ತಿಗಳೆಷ್ಟು ಮಂದಿ ತಮ್ಮ ತಮ್ಮ ಜಾತಿಗಳ ಅಭಿವೃದ್ಧಿಗಾಗಿ ಶ್ರಮಿಸುತ್ತಿಲ್ಲ ? ಜಾತಿಯ ಸಮ್ಮೇಳನಗಳನ್ನಾಚರಿಸುತ್ತಿಲ್ಲ? ರಾಜಕೀಯ ಕಾರಣಗಳಿಗಾಗಿ ಇಂದು ಜಾತೀಯತೆಯನ್ನು ಉಳಿಸಿಕೊಂಡು ಬರಲಾಗುತ್ತಿದೆ. ಅಲ್ಲದೆ ಅದನ್ನು ಹೆಚ್ಚು ಹೆಚ್ಚು ಪ್ರಜಲಿತಗೊಳಿಸಲಾಗುತ್ತಿದೆ. ಜಾತೀಯತೆ ಎಂಬುದು ನಶಿಸಿ ಹೋಗದಂತೆ ರಾಜಕೀಯ ರಂಗದಲ್ಲಿ ಎಚ್ಚರವಹಿಸಲಾಗುತ್ತಿದೆ. ಆದರೆ ವೇದಿಕೆಗಳ ಮೇಲೆ ಬರೀ ಭಾಷಣಗಳಲ್ಲಿ ಮಾತ್ರ ಜಾತ್ಯತೀತತೆಯ ಸೋಗು ನಡೆಯುತ್ತಿದೆ. ಬಾಹ್ಯದ ಬಣ್ಣದ ಆಡಂಬರ ಪ್ರದರ್ಶಿತವಾಗುತ್ತಿದೆ. ಈ ಸಂದರ್ಭದಲ್ಲಿ ಪುರಾತನ ಸಂದೇಶಗಳನ್ನು ಗಮನಿಸಬಹುದು.

'ಕ್ರಿಯಾದ್ವೈತಂ ನ ಕರ್ತವ್ಯಂ ಭಾವಾದ್ವೈತಂ ಸಮಾಚರೇತ್'

'ಬಳಸದಿರದ್ವೈತವನು ಬಾಹ್ಯದಲ್ಲಿ ನಿನ್ನೊಳಗೇಕೋ ಭಾವನೆಯೊಡಗೂಡು'

**ಸರ್ಕಾರದ ಸಹಾಯ ಧನದ ನಿರಾಕರಣೆ**

ಸರ್ಕಾರವು ಕೆಲವು ಮಂದಿಯ ಭ್ರಾಂತಿಯ ಭಾವನೆಗಳ ಪ್ರಭಾವಗಳಿಂದಾಗಿ ಸಂಸ್ಥೆಯ ಐವತ್ತು ವರ್ಷಗಳಿಗೂ ಮಿಗಿಲಾದ ಪ್ರಾಮಾಣಿಕ ಸೇವೆಯನ್ನು ಗುರುತಿಸಲು ಪ್ರಯತ್ನಿಸದೆ, ಬದಲಾಗಿ ಧಿಕ್ಕರಿಸಿ ಹಲವು ಅಡೆ ತಡೆಗಳನ್ನು ಇರಿಸುವ ಯತ್ನದಲ್ಲಿರುವುದನ್ನು ಅತೀವ ವ್ಯಥೆಯಿಂದ ತಿಳಿಸಬೇಕಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ಸರ್ಕಾರದಿಂದ ವಿದ್ಯಾರ್ಥಿನಿಲಯಕ್ಕೆ ದೊರಕುತ್ತಿದ್ದ ಸಹಾಯಧನವನ್ನು ೧-೬-೭೪ ರಿಂದ ನಿರಾಕರಿಸಿ ಸ್ವಂತ ಆಧಾರದ ಮೇಲೆ ಸಾಧ್ಯವಾದಷ್ಟು ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಸೇರಿಸಿಕೊಂಡು ಉತ್ತಮ ಶಿಕ್ಷಣ ಮತ್ತು ಶಿಸ್ತುಗಳಿಗೆ ಹೆಚ್ಚಿನ ಗಮನಕೊಟ್ಟು ಜ್ಞಾನದಾಸ ಮಾಡುವ ನಿಶ್ಚಯಕ್ಕೆ ಬರಲಾಗಿದೆ. ಸನ್ನಿವೇಶಗಳ ಒತ್ತಡದಿಂದಾಗಿ ಕೈಕೊಂಡಿರುವ ಈ ನಿರ್ಣಯದ ಹಿನ್ನೆಲೆಯನ್ನು ಮಹಾಜನಗಳು ಅರಿಯುವರಾಗಿ ನಂಬಲಾಗಿದೆ. ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳಿಗೆ ಆಶ್ರಯನೀಡಲು ಅವಕಾಶವಿಲ್ಲದಿರುವುದು ವಿಷಾದಕರ. ಈ ಮುಖೇನ ಉಂಟಾಗಿರತಕ್ಕ ಸಹಸ್ರಾರು ಮಂದಿ ಪರಮಕ್ಕಳ ಕಣ್ಣೀರನ್ನು ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾಗಿದೆ.

**ಪಾವಿತ್ರ್ಯ ರಕ್ಷಣೆಗಾಗಿ ಕಾಲೇಜು ರದ್ದು**

ಸಂಖ್ಯೆಯನ್ನು ಕಡಿಮೆ ಮಾಡುವ ಉದ್ದಿಶ್ಯ ಮತ್ತು ಪವಿತ್ರ ವಾತಾವರಣದಲ್ಲಿಯೇ ಶಿಸ್ತು ಸಂಯಮಗಳ ಪರಿಪಾಲನೆಯಲ್ಲಿಯೇ ಸಂಸ್ಥೆಯು ಮುಂದುವರಿಯಬೇಕೆನ್ನುವ ಉದ್ದೇಶದಿಂದ ಶ್ರೀಮಠದಲ್ಲಿ ಜೂನಿಯರ್ ಕಾಲೇಜನ್ನು ಮುಚ್ಚಬೇಕೆನ್ನುವ ನಿರ್ಧಾರವನ್ನು ಅತೀವ ವಿಷಾದದಿಂದ ತಿಳಿಸಬೇಕಾಗಿದೆ. ತುಮಕೂರಿಗೆ ವರ್ಗಾಯಿಸಬೇಕೆನ್ನುವ ಯೋಜನೆಯೂ ಇದೆ. ಒಂದು ವಾರದಲ್ಲಿ ಖಚಿತವಾಗಿ ತಿಳಿಸುವುದಾಗುತ್ತೆ. ಹೇಗಾದರೂ ಪಿ. ಯು. ಸಿ. ಎರಡನೆಯ ತರಗತಿಯ ವಿದ್ಯಾರ್ಥಿಗಳು ತಮ್ಮ ತಮ್ಮ ಅನುಕೂಲತೆಗಳನ್ನು ತಾವು ಮಾಡಿಕೊಳ್ಳಬೇಕೆನ್ನುವ ವಿಷಯವನ್ನು ಸೂಚಿಸಲಾಗಿದೆ.

ಸಿದ್ಧಗಂಗಾ, ೧-೬-೧೯೭೪

**ಶ್ರೀ ಶಿವಕುಮಾರ ಸ್ವಾಮಿಗಳು,**

ಶ್ರೀ ಸಿದ್ಧಗಂಗಾ ಮಠ.

**ತುಮಕೂರು ಡಿ॥ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಆರ್ಫನೇಜ್‌ನಲ್ಲಿ ೧೯೭೩–೭೪ನೆಯ ಸಾಲಿನಲ್ಲಿದ್ದ ೫೩ ಕೋಮುವಾರು ಸಂಖ್ಯೆಯ ವಿವರ**

೧. ಲಿಂಗಾಯಿತರು ೧೬೩೫, ೨. ಒಕ್ಕಲಿಗರು ೧೦೫೪, ೩. ವಿಶ್ವಕರ್ಮ ೬೫, ೪. ದೇವಾಂಗ ೨೦, ೫. ವೈಶ್ಯ ೧೨, ೬. ಕ್ಷತ್ರಿಯ ೧೩, ೭. ತಿಗಳರು ೨೮, ೮. ವಾಲ್ಮೀಕಿ ೬೯, ೯. ಮರಾಠಿಗರು ೧೨, ೧೦. ಸಾದರು ೨೦, ೧೧. ಬಣಜಿಗ ೧೭, ೧೨. ಕುರುಬ ೬೨, ೧೩. ನಾಯಕರು ೧೯, ೧೪. ಪ್ರದ್ವಾಲ್ ೧, ೧೫. ಈರಾ ೧, ೧೬. ಜೈನ ೪, ೧೭. ಬಾರ್‌ಬರ್ ೧೩, ೧೮. ಬಿಳಿಮಗ್ಗದವರು ೫, ೧೯. ಕುಂಬಾರ ೧೭, ೨೦. ಈಡಿಗ ೧೦, ೨೧. ಡೋಬಿ ೨೨, ೨೨. ಶೆಟ್ಟಿ ೧೬, ೨೩. ಉಪ್ಪಾರ ೮, ೨೪. ಬ್ರಾಹ್ಮಣರು ೧೭, ೨೫. ಮುಸ್ಲಿಮರು ೧೩, ೨೬. ರಜಪೂತ್ ೧, ೨೭. ಬಣಗಾರ್ ೨, ೨೮. ಅರಸು ೨, ೨೯. ಬೇಡರು ೯, ೩೦. ಪಟ್ಟಸಾಲಿ ೧, ೩೧. ನಗರ್ತ ೧. ೩೨. ಗಾಣಿಗ ೪, ೩೩. ಕಾಡುಗೊಲ್ಲರು ೬೫, ೩೪. ವೀರರು ೧, ೩೫. ಪೂಜಾರರು ೧, ೩೬. ಪಾಳ್ಳೆಗಾರರು ೧, ೩೭. ನಾಯ್ಡುಗಳು ೩, ೩೮. ವೆಲ್ಲಗೌಡ ೧. ೩೯. ಕ್ರಿಶ್ಚಿಯನರು ೪, ೪೦. ಆದಿ ಕರ್ನಾಟಕ ೧೭, ೪೧. ಆದಿದ್ರಾವಿಡ ೮, ೪೨. ಬೋವಿ ೨೨. ೪೩. ಕಾಡುಕುರುಬ ೩೮, ೪೪. ಎಳವ ೧, ೪೫. ಲಂಬಾಣಿ ೨, ೪೬. ಬುಡುಬುಡಿಕೆ ೧. ೪೭. ಪಳ್ಳಿಕಾರ್ ೨. ೪೮. ಕಿಳ್ಳೀಕೇತ ೧. ೪೯. ದೊಂಬಿದಾಸರು ೧, ೫೦. ತಮಿಳರು ೧, ೫೧. ಕೊರಮ ೧೦, ೫೨. ಕೂರ್ಗಿ ೧, ೫೩. ಯಾದವ ೧.

## ೪. ಡಾ॥ ಶ್ರೀ ಶಿವಕುಮಾರ ಸ್ವಾಮಿಗಳು

ಋಷಿ ಮುನಿಗಳನ್ನು ನೆನಪಿಸುವಂತೆ ಪೂಜ್ಯ ಶಿವಕುಮಾರ ಸ್ವಾಮಿಗಳ ಜೀವನ ಮತ್ತು ಸಾಧನೆಗಳು ಇವೆ. ಹತ್ತಾರು ಸಹಸ್ರ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮತ್ತು ಅನ್ನದಾನವನ್ನೂ ಮಾಡಿ ಅವರ ಬದುಕನ್ನು ಹಸನು ಮಾಡಿದ ಬ್ರಹ್ಮರಿವರು. ಹತ್ತಾರು ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿರುವ ಶ್ರೀಗಳ ಜ್ಞಾನನಿಷ್ಠೆ ಅನುಪಮ. ಇವರ ಉದ್ಬೋಧಕಾರಿ ಉಪನ್ಯಾಸಗಳು ಯಾರನ್ನೂ ಮಂತ್ರಮುಗ್ಧರನ್ನಾಗಿಸುತ್ತವೆ. ಇವರ ವೈಚಾರಿಕ ನಿಷ್ಠೆಯಾದರೋ 'ಧರ್ಮದ ಮೂಲಕ ರಾಷ್ಟ್ರೋನ್ನತಿ'. ಯಾವುದೇ ಜಾತಿ, ಮತ, ಭಾಷೆ, ರಾಜಕೀಯ ನಿಷ್ಠೆಗೆ ಸೇರಿದ ಗುಂಪುಗಳೆಲ್ಲವೂ ಸ್ವಾಮೀಜಿಯವರ ಸಮ್ಮುಖದಲ್ಲಿ ಅವರ ಆಜ್ಞಾಧಾರಕಗಳು. ಅಂತೆಯೇ ಈ ಸಮಾಜದ ಕಶ್ಮಲಗಳ ನಿರ್ಮೂಲನದಲ್ಲಿ ಇವರು ವಿರಕ್ತ, ಸಾಮಾಜಿಕಕಾರ್ಯಕರ್ತ. ಆಧುನಿಕ ಬಸವಣ್ಣನವರೇ ಸರಿ.

ಇವರ ಆಶ್ರಮದ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾ ಪಾಠಶಾಲೆಯು ೩೫೦೦ ವಿದ್ಯಾರ್ಥಿಗಳನ್ನುಳ್ಳ ಜಗತ್ತಿನಲ್ಲಿ ಅತಿ ದೊಡ್ಡ ಸಂಸ್ಕೃತ ಪಾಠಶಾಲೆ. ಪ್ರಸಕ್ತ ಸಂಸ್ಕೃತ ಸಮ್ಮೇಳನವನ್ನು ತಮ್ಮ ಕ್ಷೇತ್ರದಲ್ಲಿ ನಡೆಸುತ್ತಿರುವುದು ಸ್ವಾಮಿಜಿಯವರ ಔದಾರ್ಯ ಮತ್ತು ಸಂಸ್ಕೃತ ನಿಷ್ಠೆಯ ದ್ಯೋತಕವಾಗಿದೆ.

**ಮಂಗಳೂರು** ಅಕ್ಟೋಬರ್ ೧೯೭೮ — **'ಸಂಸ್ಕೃತವಾಣಿ'**

## ೫. ನಿಷ್ಕಾಪಟ್ಯ ನಡೆನುಡಿ

'ಜ್ಞಾನ ದಾಸೋಹ, ಅನ್ನದಾಸೋಹಗಳ ಅಸೀಮ ಸೇವಾಮನೋಭಾವದಿಂದ ಸಕಲಜೀವಾತ್ಮರಿಗೆ ಲೇಸನೇ ಬಯಸುವ ಕಾಯಕಸದ್ಭಾವದಲ್ಲಿ ನಿರತವಾಗಿರುವ ಶ್ರೀ ಸಿದ್ಧಗಂಗಾ ಕ್ಷೇತ್ರದ ಮಹಾನಡಾವಳಿಯೊಂದು ಅದ್ಭುತ ಎನಿಸಿದೆ. ರಚನಾತ್ಮಕವಾದ ಅನೇಕ ಕಾರ್ಯಗಳ ಮಹೋನ್ನತ ಆದರ್ಶದ ಫಲವಾಗಿ ಭಾರತಲ್ಲದಷ್ಟೇ ಅಲ್ಲ, ಹೊರ ದೇಶಗಳಲ್ಲೂ ಪ್ರಸಿದ್ಧಿ ಪಡೆದಿದೆ. ಶ್ರೀ ಕ್ಷೇತ್ರಾಧಿಪತಿಗಳಾದ ಶ್ರೀಮನ್ನಿರಂಜನ ನಿರಾಹಾರಿ ಪ್ರಣವ ಸ್ವರೂಪಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ನಿಷ್ಕಾಪಟ್ಯ ನಡೆ-ನುಡಿ, ಅವಿರತ ರಾಷ್ಟ್ರೀಯ ಸೇವಾಮನೋಭಾವ, ಎಲ್ಲಕ್ಕೂ ಹೆಚ್ಚಾಗಿ ಲಿಂಗತಪಸ್ಸಿನ ಪುಣ್ಯಫಲದ ಕಾರಣವಾಗಿ ಶ್ರೀ ಕ್ಷೇತ್ರಕ್ಕೆ ಈ ಘನತೆ ಗೌರವಗಳೂ ವಿಶ್ವಮಾನ್ಯತೆಯೂ ಪ್ರಾಪ್ತವಾಗಿವೆ. ಅಧ್ಯಾತ್ಮ ವಿಶ್ವವಿದ್ಯಾನಿಲಯದ ಕುಲಪತಿಗಳೆನಿಸಿದ ಶ್ರೀಗಳವರು ತಮ್ಮ ರಚನಾತ್ಮಕ ಕಾರ್ಯಗಳಿಂದ ಆದರ್ಶರಾಗಿದ್ದಾರೆ. ಅಶನ ವಸತಿಗಳನ್ನು ಉಚಿತವಾಗಿ ನೀಡಿ ಮೂರು-ನಾಲ್ಕು ಸಾವಿರ ವಿದ್ಯಾರ್ಥಿಗಳಿಗೆ ಶ್ರೀ ಕ್ಷೇತ್ರದಲ್ಲಿ ವಿದ್ಯಾದಾನ ಮಾಡಿಸುತ್ತಿದ್ದಾರೆ. ಆತ್ಮಕಲ್ಯಾಣದಿಂದ ಲೋಕಕಲ್ಯಾಣಕ್ಕೆ ಸಾಗುವಂತಹ ಆವರಣವನ್ನು ಸೃಷ್ಟಿಸಿ ಅಸಂಖ್ಯಾತ ವಿದ್ಯಾರ್ಥಿಗಳ ಬದುಕನ್ನು ಕಡೆದು ನಾನಾ ಕ್ಷೇತ್ರಕ್ಕೆ ಸೇವೆ ಸಲ್ಲಿಸುವಂತೆ ಅವರನ್ನು ಸಿದ್ಧಗೊಳಿಸುತ್ತಿರುವುದು ನಾಡಿನ ಪುಣ್ಯವೇ ಸರಿ'.

**ತುಮಕೂರು** ೨೫-೨-೧೯೭೯ — **'ತುಮಕೂರು ಟೈಮ್ಸ್'**

## ೬. ಸಂಸ್ಕೃತ ಸಮ್ಮೇಲನ ಮತ್ತು ಶ್ರೀಶ್ರೀಗಳವರು

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಮೂರು ದಿವಸಗಳ ಕಾಲ (೧೩-೧೦-೭೮ ರಿಂದ ೧೫-೧೦-೭೮) ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ತಿನ ದ್ವಿತೀಯ ಸಮ್ಮೇಳನವು ನಡೆಯಿತು. ಮತ್ತು ಬಹು ಯಶಸ್ವಿಯಾಗಿ ಜರುಗಿತು.

ಈ ಸಮ್ಮೇಲನದ ಪ್ರಾಣವೆಂಬಂತೆ ಸರ್ವತ್ರ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಭವ್ಯಾಕೃತಿ ಸಂಚರಿಸುತ್ತಿತ್ತು. ಅವರ ಸಂಸ್ಕೃತ ಪ್ರೇಮ, ಅದರ ಬಗ್ಗೆ ಶ್ರದ್ಧೆ—ಇವುಗಳನ್ನು ಕಂಡ ವಿದ್ವಾಂಸರಿಗೆ ಚೋದ್ಯವೂ, ಅಮಿತಾನಂದವೂ ಆಯಿತು. ಸಮ್ಮೇಲನಕ್ಕೆ ಬಂದ ಅತಿಥಿಗಳನ್ನು, ಪ್ರತಿನಿಧಿಗಳನ್ನು, ಸಪ್ರೇಮವಾಗಿ ವಿಚಾರಿಸಿದರು. ಅನ್ನ ಪಾನಾದಿಗಳ ವ್ಯವಸ್ಥೆಯನ್ನು ಸ್ವಾಮಿಗಳವರೇ ಸ್ವತಃ ಮೇಲ್ವಿಚಾರಿಸಿ ಬಂದ ಅತಿಥಿಗಳನ್ನು ಹರ್ಷಪಡಿಸಿದರು. ಇಂತಹ ಅಭೂತಪೂರ್ವವಾದ ಜ್ಞಾನ ಯಜ್ಞವನ್ನು ಸಾಂಗವಾಗಿ ನಡೆಸಿದ ಔದಾರ್ಯಮೂರ್ತಿಗಳಿಗೆ ನಾಡಿನ ವಿದ್ವಾಂಸರು ಚಿರಋಣಿಗಳು.

ಸಮಾರಂಭವೂ ಕೂಡ ಭವ್ಯವಾಗಿ ಸಜ್ಜೀಕೃತವಾದ ಕಾಳಿದಾಸ ಮಹಾಕವಿ ಮಂಟಪದಲ್ಲಿ ಸಮೀಚೀನವಾಗಿ ನಡೆಯಿತು. ದಿನಂಪ್ರತಿ ಸಂಜೆ ಅನೇಕ ಮನರಂಜನೆಯ ಕಾರ್ಯಕ್ರಮಗಳೂ ನಡೆದವು. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ಸಂಶೋಧನಾ ಇಲಾಖೆಯ ಹಸ್ತಪ್ರತಿಗಳ ಪ್ರದರ್ಶನ ಹಾಗೂ ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜಿನ ಪುಸ್ತಕ ಪ್ರದರ್ಶನ-ಇವೂ ಮನೋಜ್ಞವಾಗಿದ್ದವು.

ಒಟ್ಟಿನಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಸಂಸ್ಕೃತ ಸಮ್ಮೇಲನವು ಸಂಸ್ಕೃತ ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಿಂದ ಉಲ್ಲೇಖನೀಯವಾದುದು, ಎಂಬುದನ್ನು ನಿವೇದಿಸಲು ನಮಗೆ ಅತ್ಯಂತ ಸಂತೋಷವಾಗುತ್ತಿದೆ.

—**ಸುಧರ್ಮಾ**

**ಮೈಸೂರು,** ೧೮-೧೦-೧೯೭೮.

### ಅಭಿನವಬಸವೇಶ್ವರರಾದ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ

## ೭. ಶ್ರೀ ಶಿವಕುಮಾರ ಸ್ವಾಮಿಗಳು

ಸಿದ್ಧಗಂಗಾಕ್ಷೇತ್ರ ತುಮಕೂರಿಂದ ಮೂರು ಮೈಲಿಗಳ ದೂರದಲ್ಲಿದೆ. ಕ್ಯಾತ್ಸಂದ್ರ ರೈಲ್ವೆ ನಿಲ್ದಾಣಕ್ಕೆ ೨ ಫರ್ಲಾಂಗ್ ಹತ್ತಿರದಲ್ಲಿದೆ. ರಮ್ಯವನಶ್ರೀಯ ನಡುವೆ ಈ ತಪೋಶೈಲವು ಧ್ಯಾನಮಗ್ನವಾಗಿದೆ. ಕ್ಷೇತ್ರವನ್ನು ಸಂದರ್ಶಿಸಿದ ಯಾವ ಮನಕ್ಕೆ ಆಗಲಿ ಸಚ್ಚಿದಾನಂದದ ಸ್ಪರ್ಶಾನುಭವವಾಗುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಶರಣರು ನಿಂದ ನೆಲ ಅವಿಮುಕ್ತ ಕ್ಷೇತ್ರ ಎಂಬ ನುಡಿಯ ಸತ್ಯ ಅಂತರಂಗಕ್ಕೆ ಅರಿವಾಗುತ್ತದೆ, ಒಮ್ಮೆ ಈ ಕ್ಷೇತ್ರಕ್ಕೆ ಯಾತ್ರೆಗೈದ ಸಹೃದಯನಿಗೆ.

ಕ್ಷೇತ್ರವನ್ನು ಹೊಕ್ಕ ಕುತೂಹಲಿತ ಹೃದಯಕ್ಕೆ ಆಶ್ಚರ್ಯಪರಂಪರೆಗಳನ್ನೊದಗಿಸಿ ಭಕ್ತಿರಸವನ್ನು ಚಿಮ್ಮಿಸುವ ದಿವ್ಯ ಭವ್ಯ ದೃಶ್ಯಗಳು ಒಂದಾದಮೇಲೊಂದರಂತೆ, ಒಂದಕ್ಕಿಂತ ಒಂದು ಅತಿಶಯವಾದಂತೆ ಎದುರುಗೊಳ್ಳುತ್ತವೆ. ಹೋಗುತ್ತ ಎಡಕ್ಕೆ ಬೃಹತ್ ಕಲ್ಯಾಣಿ, ಬಲಕ್ಕೆ ಶಿಲಾನಿರ್ಮಿತ ವಿಶಾಲಮಠ. ಪಕ್ಕದಲ್ಲಿಯೇ ಮೇಲೆದ್ದು ನಿಂತಿರುವ ಬೃಹದಾಕಾರದ ಶ್ರೀಸಿದ್ಧ ಲಿಂಗೇಶ್ವರ ಸಂಸ್ಕೃತ ಕಾಲೇಜಿನ ಕಲ್ಲುಕಟ್ಟಡ. ಪಾವಟಿಗೆಗಳನ್ನೇರಿ ಹೋದರೆ ಮೇಲ್ಭಾಗದಲ್ಲಿ ಕಿನಾರಿಮಠ, ಗಂಗೋದ್ಭವದ ತಾಣ, ಗುಹೆಗಳು, ಮಂಟಪಗಳು, ತೋಟಗಳು ಇವೆಲ್ಲವೂ ಇದು ಮಹಾಮಹಿಮರಾದ ಸಿದ್ಧಪುರುಷರ ತಪೋಭೂಮಿಯೆಂಬುದನ್ನು ಕೈಯೆತ್ತಿ ಸಾರುತ್ತಿವೆ.

ಧರ್ಮಜಾಗೃತಿಯ ಸ್ಫೂರ್ತಿಕೇಂದ್ರವಾದ ಸಿದ್ಧಗಂಗಾಮಠದ ವಿರಕ್ತ ಗುರುಪರಂಪರೆ ಉಜ್ವಲವಾಗಿದೆ. ಸುಮಾರು ಆರು ಶತಮಾನಗಳ ಹಿಂದೆ ಈ ಮಠ ಮಹಾಮಹಿಮ ಶ್ರೀ ಗೋಸಲ ಸಿದ್ಧೇಶ್ವರರಿಂದ ಸ್ಥಾಪಿತವಾಯಿತು. ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗೇಶ್ವರರೂ ಇಲ್ಲಿ ನಿಂತು ಈ ಬೆಟ್ಟದಲ್ಲಿ ಕೆಲವು ಕಾಲ ತಪಸ್ಸನ್ನಾಚರಿಸಿದರು. ಈ ಕ್ಷೇತ್ರದ ಸರ್ವಸಿದ್ಧಿ-ಪ್ರಸಿದ್ಧಿ ಪ್ರಗತಿಗಳಿಗೆ ಶಕ್ತಿಕೇಂದ್ರ. ಇಲ್ಲಿನ ಕ್ಷೇತ್ರಾಧಿಪತಿಗಳು ಶ್ರೀ ಸಿದ್ಧಲಿಂಗೇಶ್ವರಸ್ವಾಮಿ. ಅವನ ಕೃಪೆಯಿಂದಲೇ ಕ್ಷೇತ್ರದ ಬೆಳವಣಿಗೆ ಮತ್ತು ಮೆರವಣಿಗೆ. ಪ್ರತಿ ವರ್ಷವೂ ಮಹಾಶಿವರಾತ್ರಿಯಿಂದ ಮೊದಲ್ಗೊಂಡು ಹತ್ತು ದಿನಗಳು ಇಲ್ಲಿ ವಿಜೃಂಭಣೆಯ ಜಾತ್ರೆ. ಆಗ ಕೈಕೊಳ್ಳಬೇಕು ಕ್ಷೇತ್ರಕ್ಕೆ ಪುಣ್ಯಯಾತ್ರೆ! ನಿಜಕ್ಕೂ ಪ್ರತಿ ಹೃದಯವೂ ಆಗುವುದು ಭಕ್ತಿರಸದ ಅಕ್ಷಯಪಾತ್ರೆ !! ಅವರಿವರೆನ್ನದೆ ಹಗಲಿರುಳೂ ಬಂದ ಭಕ್ತವೃಂದಕ್ಕೆಲ್ಲ ನಡೆಯುವುದು ನಿತ್ಯದಾಸೋಹ. ಗುರುಮನೆಯ ಪ್ರಸಾದವನ್ನುಂಡು ತಣಿಯುವುದು ಭಕ್ತಸಂದೋಹ. ಕ್ಷೇತ್ರದ ಪುರೋಭಿವೃದ್ಧಿಗೆ ತಪಗೈದ ಶ್ರೀ ಉದ್ದಾನ ಶಿವಯೋಗಿಗಳು ಗುರುಪರಂಪರೆಯಲ್ಲಿ ಮುಖ್ಯರಾದವರು. ಗುರುಕುಲ, ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸಿದರು. ವಿದ್ಯಾದಾನಕ್ಕೆ ಅಂಕುರಾರ್ಪಣ ಹಾಕಿದರು. ಜಾತ್ರೆ ರಥೋತ್ಸವಗಳು ವೈಭವದಿಂದ ಜರುಗುವಂತೆ ಮಾಡಿದರು. ಕ್ಷೇತ್ರದ ಮಹಿಮೆಯನ್ನು ಮತ್ತಷ್ಟು ಹೆಚ್ಚಿಸಿದರು. ತಮ್ಮ ಅಂತರಂಗದ ಶಿಷ್ಯರಾದ ಈಗಿನ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳವರನ್ನು ಸಿದ್ಧಗಂಗಾ ಕ್ಷೇತ್ರಕ್ಕೆ ಸಮರ್ಥ ಉತ್ತರಾಧಿಕಾರಿಗಳೆಂದು ನಿರ್ಧರಿಸಿಕೊಂಡ ತ್ರಿಕಾಲದರ್ಶಿ ಉದ್ದಾನ ಶಿವಯೋಗಿಗಳು ೧೯೩೦ರಲ್ಲಿ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಆಶ್ರಮಾಧಿಕಾರ ನೀಡಿ ಆಶೀರ್ವದಿಸಿದರು.

ಶ್ರೀ ಶಿವಕುಮಾರಸ್ವಾಮಿಗಳವರಲ್ಲಿ ಬಾಲ್ಯದಲ್ಲಿಯೇ ಬಲಿದು ಗಟ್ಟಿಗೊಂಡಿತು, ವೈರಾಗ್ಯ. ಮೇಲಾಗಿ ಉತ್ತಮ ಶಿಕ್ಷಣ, ಸಂಯಮ ಜೀವನ, ದೃಢಸಂಕಲ್ಪ-ಕಾರ್ಯದಕ್ಷತೆ-ವಾಕ್ಪಟುತ್ವ-ಸೇವಾಕಾಂಕ್ಷೆ ಮೈಗೂಡಿಕೊಂಡವು. ಅಧ್ಯಾತ್ಮ ಶಿಕ್ಷಣದ ಜೊತೆಗೆ ಲೌಕಿಕ ವಿದ್ಯೆಯಲ್ಲಿಯೂ ಆಳವಾದ ಅಪಾರ ಪರಿಶ್ರಮ. ಸಂಸ್ಕೃತ-ಕನ್ನಡ ಆಂಗ್ಲಭಾಷೆಗಳಲ್ಲಿ ಉದ್ದಾಮ ಪಾಂಡಿತ್ಯ, ಮೈಸೂರು ವಿಶ್ವವಿದ್ಯಾನಿಲಯದ ಬಿ.ಎ., ಪದವಿ, ಆತ್ಮಾನುಷ್ಠಾನದ ತಪೋಬಲವೆಲ್ಲವು ಕ್ಷೇತ್ರದ ಸರ್ವತೋಮುಖ ಬೆಳವಣಿಗೆಗೆ ವಿನಿಯೋಗ(?) ವಿಸಲು. ಕ್ಷೇತ್ರದ ವತಿಯಿಂದ ಅನ್ನದಾನ ವಿದ್ಯಾದಾನಾದಿ ಜನೋಪಕಾರ್ಯಗಳು ನಡೆಯಲು ಏರ್ಪಾಟು, ವಿದ್ಯಾಸಂಸ್ಥೆಗಳ ಸ್ಥಾಪನೆ, ಪ್ರೈಮರಿಯಿಂದ ಹಿಡಿದು ಕಾಲೇಜು ತನಕ ಶಿಕ್ಷಣ ಸೌಲಭ್ಯ-ಕ್ಷೇತ್ರದಲ್ಲಿಯೇ. ಮೈದುಂಬಿ ಬೆಳೆದು ನಿಂತಿರುವ ಪ್ರೌಢಶಾಲೆ, ಸೈನ್ಸ್ ಕಾಲೇಜು, ಸಂಜೆ ಕಾಲೇಜು, ಉಪಾಧ್ಯಾಯರ ಶಿಕ್ಷಣತರಬೇತಿ ಕೇಂದ್ರ, ಇಂಜಿನಿಯರಿಂಗ್ ಕಾಲೇಜು, ವಿದ್ಯಾರ್ಥಿನಿಲಯಗಳು.

ಅಲ್ಲದೆ ಗ್ರಾಮಾಂತರ ಪ್ರದೇಶಗಳಲ್ಲಿಯ ಮಕ್ಕಳ ಜ್ಞಾನ ಪ್ರಸಾರವಾಗಬೇಕೆಂಬ ಹೆಬ್ಬಯಕೆ. ಸುಮಾರು ಇಪ್ಪತ್ತೆಂಟು ಪ್ರೌಢಶಾಲೆಗಳು, ಬೇಲೂರು, ಸಕಲೇಶಪುರ, ಹಿಂದೂಪುರಗಳಲ್ಲಿ ಸಾರ್ವಜನಿಕ ವಿದ್ಯಾರ್ಥಿನಿಲಯಗಳು-ಮಾನವೀಯತೆಯೇ ಮೂರ್ತಿವೆತ್ತಂತಿರುವ ಶ್ರೀಗಳವರಲ್ಲಿ ಸದಾ ಮನೆ ಮಾಡಿಕೊಂಡಿದೆ ಕಲಿವ ಮಕ್ಕಳ ಕ್ಷೇಮ ಚಿಂತನೆ. ವಿದ್ಯಾರ್ಥಿನಿಲಯದ ಕೊಠಡಿಯೊಂದರಲ್ಲಿ ತಮ್ಮ ವಾಸ. ನಿತ್ಯವೂ ಬಿಡುವಿಲ್ಲದ ಕಾರ್ಯಕ್ರಮ, ಬಂದ ಯಾತ್ರಿಕರನೊಂದೆಡೆಗೆ ದಿವ್ಯವಾಣಿಯ ಸಾಂತ್ವನ, ಮತ್ತು ಭಸ್ಮಧೂಳಿಯ ಸಿದ್ಧಸಂಜೀವಿನೀ ಮಂತ್ರರಕ್ಷೆ. ಧಾನ್ಯ ಸಂಗ್ರಹಕ್ಕಾಗಿ ಅಲ್ಲಲ್ಲಿ ಸಂಚಾರ. ಹಿಡಿದ ಜೋಳಿಗೆಗೆ ಲಕ್ಷ ಕೈಗಳಿಂದ ಅಕ್ಷಯ ಭಿಕ್ಷೆ ಬೆಟ್ಟದೋಪಾದಿಯಲ್ಲಿ ಒಟ್ಟಿ ಬೀಳುವುದು ಧಾನ್ಯದ ರಾಶಿ ರಾಶಿ ಆ ಗಳಿಗೆಯಲ್ಲಿಯೇ ಕರಗುವುದು ಸಿದ್ಧಪ್ರಸಾದವಾಗಿ. ಧನ್ಯೋಸ್ಮಿ ಎನ್ನುವುವು ನಿತ್ಯವೂ ಪ್ರಸಾದವನ್ನುಂಡು ಲಕ್ಷ ಲಕ್ಷ ಚೇತನಗಳು.

ಸುಧಾ ಮೇ 28, 1972



# ಶ್ರೀ ಶಿವಕುಮಾರ ಸ್ವಾಮಿಗಳು

ತುಮಕೂರಿನ ಬಳಿ ಇರುವ ಸಿದ್ಧಗಂಗಾ ಕ್ಷೇತ್ರ ಪುಣೆ–ಬೆಂಗಳೂರು ಹೆದ್ದಾರಿಯ ಒಂದು ಚೆಲುವುದಾಣ. ಹಸುರು ನೆಲ. ಗಿರಿ ಕಾನನ. ನಡುವೆ ಶ್ರೀಮಠ. ತಳಮಳವನ್ನು ತಣ್ಣಗಿಸುವ ನಿಸರ್ಗ ಸನ್ನಿವೇಶ.

ಐಹಿಕ ಆಮುಷ್ಮಿಕಗಳೆರಡರ ನಡುವಣ ಸೇತುವೆಯಾಗಿ ಪರಿಣಮಿಸಿರುವುದು ಇಲ್ಲಿಯ ಪವಾಡ. ಅಲ್ಲಿ ಸಲ್ಲುವ ಮುನ್ನ ಇಲ್ಲಿ ಸಲ್ಲುವ ಹಾಗೆ ಮಾಡುವ ಪ್ರಯತ್ನ.

ಸಿದ್ಧಗಂಗಾ ಕ್ಷೇತ್ರದ್ದು ಆರುನೂರು ವರ್ಷಗಳ ದೀರ್ಘ ಚರಿತ್ರೆ. ಹದಿನಾಲ್ಕನೆಯ ಶತಮಾನದ ಆದಿಕಾಲದಲ್ಲಿ ಶ್ರೀ ಗೋಸಲ ಸಿದ್ಧೇಶ್ವರರು ಇಲ್ಲಿ ನೆಲಸಿದ್ದರಂತೆ. ಶ್ರೀಮಠದ ಮಹಿಮೆಯನ್ನು ಕತ್ತು ಕೊಂಕಿಸಿ ನೋಡುತ್ತಿದೆಯೆಂಬಂತೆ ಹತ್ತಿರದಲ್ಲೇ ತಲೆ ಬಾಗಿ ನಿಂತ ಬೆಟ್ಟದ ಗುಹೆಯಲ್ಲಿ ಸಿದ್ಧೇಶ್ವರರ ಮಹಿಮಾಬಲದಿಂದ ಗಂಗೋದ್ಭವವಾಯಿತಂತೆ. ಆದ್ದರಿಂದಲೇ ಇದು ಸಿದ್ಧಗಂಗಾ ಆಯಿತೆಂದು ಕಥೆ.

ಆಗಿನ ಆ ಸಿದ್ಧಪುರುಷರು ಸಾಂಕೇತಿಕವಾಗಿ ಮಾಡಿದ ಮಹತ್ಕಾರ್ಯವನ್ನು ವಾಸ್ತವಿಕವಾಗಿ ವಿಸ್ತರಿಸಿರುವುದು ಈಗಿನ ಸ್ವಾಮಿಗಳ ಉದಾತ್ತತೆ.

## ನೂತನ ಹೊಣೆಗಾರಿಕೆ

ಗುರುಮನೆಗಳು ಜ್ಞಾನ ಭಕ್ತಿ ವೈರಾಗ್ಯಗಳತ್ತ ಚಿತ್ತ ಹರಿಸಿದರೆ ಸಾಕಾಗಿತ್ತು ಆಗಿನ

ದರೂ ಪದವಿ ಗಳಿಸಿ, ಹೊಟ್ಟೆ ಪಡೆದು ಸಂಪಾದನೆ ಮಾಡಿ ಸಂಸಾರಕ್ಕೆ ಆಧಾರವಾಗುವರೆಂದು ತಂದೆ ತಾಯಿಯರ ಆಸೆ. ಆದರೆ ಮಗನಿಗೋ ವಿರಕ್ತಿ. ಸಂನ್ಯಾಸ ಸ್ವೀಕರಿಸುವೆನೆಂದು ಗುರುವಿಗೆ ಮಾತು ಕೊಟ್ಟ ಮೇಲೆ ಬೇರೇನು ಅಡ್ಡಿ? ಸಂನ್ಯಾಸ ಸ್ವೀಕರಿಸಿಯೂ ಓದು ಮುಗಿಸಿ ಪದವಿ ಗಳಿಸಿದ್ದು ಶ್ರೀ ಶಿವಕುಮಾರ ಸ್ವಾಮಿಗಳ ಮನಸ್ಥೈರ್ಯಕ್ಕೊಂದು ಸಾಕ್ಷಿ.

ಅಲ್ಲಿಂದ ಮುಂದಕ್ಕೆ ಸ್ವಾಮಿಗಳದು ದಿನ ದಿನವೂ ದುಡಿಮೆ. ದಿನಕ್ಕೆ ನಾಲ್ಕೈದು ಗಂಟೆ ಮಾತ್ರವೇ ನಿದ್ರೆ, ವಿಶ್ರಾಂತಿ. ಉಳಿದೆಲ್ಲ ಕಾಲವೂ ಅವರಿಗೆ ಮಾನವರೂಪದ ಶಿವನ ಸೇವೆ.

## ಬಹುಮುಖ ಆಸಕ್ತಿ

ಶ್ರೀ ಶಿವಕುಮಾರ ಸ್ವಾಮಿಗಳಿಗೆ ಅಸಾಧಾರಣವಾದ ಸಾಹಿತ್ಯಪ್ರೇಮ. ಧರ್ಮಾಭಿಮಾನ. ಸರಳಗುಣ. ಕ್ಷಮಾಶೀಲ. ಸರ್ವ

---



ಕಾಲಕ್ಕೆ. ಆದರೆ, ಆಧುನಿಕ ಯುಗದಲ್ಲಿ ಅಜ್ಞ ಜನ ಜಂಗುಳಿಗೆ ಅಶನ, ವಸನ, ವಿದ್ಯೆ ಅಭಿಮಾನಗಳನ್ನು ನೀಡಿ ಅವರನ್ನು ನಿಷ್ಠಾವಂತ ಪ್ರಜೆಗಳನ್ನಾಗಿ ಮಾಡುವುದು ಹೆಚ್ಚಿನ ಹೊಣೆಗಾರಿಕೆ.

ಈ ಶತಮಾನದ ಆದಿಯಿಂದಲೂ ಸಿದ್ಧಗಂಗಾ ಮಠದ್ದು ಈ ಹೆಚ್ಚುಗಾರಿಕೆ. ವೇದ ಸಂಸ್ಕೃತಗಳ ಜೊತೆಗೆ ಪ್ರೌಢಶಾಲೆ, ಶಿಕ್ಷಕರ ಶಿಕ್ಷಣ ಶಾಲೆ, ಕಲಾ, ವಿಜ್ಞಾನ, ವಾಣಿಜ್ಯ ಕಾಲೇಜುಗಳ ಜೊತೆಗೆ ಎಂಜಿನಿಯರಿಂಗ್ ಶಿಕ್ಷಣಕ್ಕೊಂದು ಮಹಾ ವಿದ್ಯಾಸಂಸ್ಥೆ. ಸುತ್ತಣ ಸ್ಥಳಗಳಲ್ಲೆಲ್ಲ ಶಿಕ್ಷಣದ ಬಲೆ. ಒಟ್ಟು ನಲವತ್ತು ವಿದ್ಯಾಸಂಸ್ಥೆಗಳ [illegible]

ಅಧಿಭೌತಿಕ ಆಕರ್ಷಣೆ. [illegible] ಇಲ್ಲಿ ನಡೆಯುವ ಜಾತ್ರೆ [illegible] ಜಾನುವಾರು ಪರಿಷೆ ಜೊತೆಗೆ ಮಯಸ್ಕರ ಜ್ಞಾನಾಭಿವೃದ್ಧಿ, ಐಹಿಕ ಪ್ರಗತಿಗಳಿಗಾಗಿ ಕೃಷಿ ಕೈಗಾರಿಕಾ ಪ್ರದರ್ಶನ ವ್ಯವಸ್ಥೆ.

## ಕೂಡಲ ಸಂಗನ ಕೈ

ಅಖಿಲ ಭಾರತಕ್ಕೇ ಆದರ್ಶಪ್ರಾಯವಾಗಿ ಇಷ್ಟೆಲ್ಲ ಸಂಸ್ಥೆಗಳನ್ನು ನಡೆಸುತ್ತಿರುವ ಮಠಾಧ್ಯಕ್ಷ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಈ ಬಗ್ಗೆ ನಿಶ್ಚಿಂತೆ: 'ಕೂಡುವಾತ [illegible]

ಶ್ರಮದಲ್ಲಿ ಪಡೆದ ವಿದ್ಯೆಯೂ ಅನುಭವವೂ ಬಹುಮಟ್ಟಿಗೆ ಕಾರಣ.

ಶ್ರೀ ಶಿವಕುಮಾರ ಸ್ವಾಮಿಗಳ ಪೂರ್ವಾಶ್ರಮದ ಹೆಸರು ಶಿವಣ್ಣ. ಮಾಗಡಿ ತಾಲೂಕಿನ ವೀರಾಪುರ ಅವರ ಗ್ರಾಮ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಗಾಗಿ ಭೌತಶಾಸ್ತ್ರ ಗಣಿತ ಶಾಸ್ತ್ರಗಳ ಅಧ್ಯಯನ ಮಾಡುತ್ತಿದ್ದಾಗ ಅವರು [illegible] ಸ್ವಾಮಿಗಳಾಗುವರೆಂಬುದು [illegible] ಗೊತ್ತಿರಲಿಲ್ಲ.

## ದೈವದ ಸಂಕಲ್ಪ

ಆದರೆ ದೈವ ಸಂಕಲ್ಪ. ಗುರುವಿನ ಬಲ. 'ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು. ಆಚಾರ [illegible] ಯೆಂಬ [illegible] ಆಗಿನ [illegible] ಮೇಲೆ [illegible]

ಧರ್ಮಗಳ [illegible] ಧಾರಾಳ [illegible] ಪ್ರೇಮ. [illegible] ನಿಸರ್ಗಳ. [illegible]

ಸಭೆ, ಸ[illegible] ಗಳೇ ಮುಂ[illegible] ಸ್ವಾಮಿಗಳ [illegible] ಕೈಯಾರ ಪಟ [illegible] ಸರ್ವದಾ ಚಟು[illegible] ಹಿಂದೆ ಸಿದ್ಧಗಂ[illegible] ಸಾಹಿತ್ಯ ಸಮ್ಮೇ[illegible] ಸ್ವಾಮಿಗಳು ಸ್ಮರಣೀಯ.

## ಬೆಳ್ಳಿ ಹಬ್ಬ

ಕರ್ನಾಟಕ [illegible] ಯಿತು, ಗೌರವಿಸಿ [illegible] ರೋಹಣ ಮಾಡಿ [illegible] ಗಳಾದ್ದರಿಂದ ಅವ[illegible] ಬೆಳ್ಳಿಯ ಹಬ್ಬದ ಮಾರ್ಗದಲ್ಲಿ ಮಠ [illegible] ಸಂಸ್ಥೆಗೆ [illegible] ಕ್ಷವ ಸ್ಮಾರಕವಾಗಿ ಪುಸ್ತಕ ಭಂಡಾರ, ಮ[illegible] ಇಂಥ ಹಬ್ಬಗಳು ಅಷ್ಟಿಷ್ಟು ಮಟ್ಟಿಗೆ ದ[illegible]



[illegible]ಜನೋದ್ಯಾನ' ಕೃತಿಗಾಗಿ ಪ್ರಶಸ್ತಿ ಪಡೆದ ಡಾ|| ಸಿದ್ಧಯ್ಯಪುರಾಣಿಕ್ ಅವರನ್ನು ಕನ್ನಡಸಾಹಿತ್ಯ [illegible]ತ್‌ನಲ್ಲಿ ಸನ್ಮಾನಿಸಿದಾಗ ತೆಗೆದ ಚಿತ್ರ. ಡಾ|| ಶಿವಕುಮಾರಸ್ವಾಮಿಗಳು ಆಶೀರ್ವಾದಮಾಡುತ್ತಿದ್ದಾರೆ. [illegible]ದಲ್ಲಿ ಕೇಂದ್ರ ನೌಕಾ ಮತ್ತು ಸಾರಿಗೆ ಸಚಿವ ವೀರೇಂದ್ರಪಾಟೀಲ್ ರಾಜ್ಯ ತೋಟಗಾರಿಕೆ ಸಚಿವ [illegible]ವೆಂಕಟಪ್ಪ, ವಾರ್ತಾ ಇಲಾಖೆ ನಿರ್ದೇಶಕ ವಿಜಯಸಾಸನೂರ ಮತ್ತು ಸನ್ಮಾನಿತ ಸಿದ್ಧಯ್ಯಪುರಾಣಿಕ್ [illegible]ನು ಕಾಣಬಹುದು.

## ಗರೀಬನ ಅವಕಾಶ

ಬೆಂಗಳೂರು, ಮಾ. ೨–ಆಹ್ವಾನಿತ ಅತಿಥಿಗಳ ಮಧ್ಯೆ ಅವನೊಬ್ಬ ಅನಾಹೂತ. ಆದರೆ ನೇರವಾಗಿ ಮುಖ್ಯಮಂತ್ರಿಗಳ ಬಳಿಗೆ ಹೋಗಿ ಮಾತನಾಡುವ ಅವಕಾಶ ಕಲ್ಪಿಸಿಕೊಂಡ ಆ ಗರೀಬ.

ವಿಧಾನಸೌಧದ ಭವ್ಯ ಬ್ಯಾಂಕ್ವೆಟ್ ಹಾಲ್‌ನಲ್ಲಿ ಶನಿವಾರ ಸಂಜೆ ಆಸೀನರಾಗಿದ್ದ ನೂರಾರು ಮಂದಿ ಆಹ್ವಾನಿತರ ಮಧ್ಯೆ ನುಗ್ಗಿದ ಆತ ವೇದಿಕೆಯ ಮೇಲೆ ಆಸೀನರಾಗಿದ್ದ ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಕೊಳಕುಬಟ್ಟೆ ಧರಿಸಿದವನೊಬ್ಬ ಒಳಗಡೆ ನುಗ್ಗಿದುದನ್ನು ನೋಡಿ ಗಾಬರಿಗೊಂಡ ಕೆಲವರು ಅವನನ್ನು ಒಂದು ಪಕ್ಕಕ್ಕೆ ಕರೆದೊಯ್ದರು.

ಗಪಗಪನೆ ತಿಂಡಿ ತಿಂದು ಕಾಫಿ ಕುಡಿದ ಅವನು ಸನ್ಮಾನ ಸಮಾರಂಭದ ಸ್ವಾಗತ ಭಾಷಣ ನಡೆಯುತ್ತಿದ್ದಂತೆಯೇ ಮತ್ತೆ ವೇದಿಕೆಯತ್ತ ಧಾವಿಸಿ ಮುಖ್ಯಮಂತ್ರಿ, ಗುಂಡೂರಾವ್ ಅವರೊಂದಿಗೆ ಏನನ್ನೋ ಹೇಳಬಯಸಿದ. ಮುಖ್ಯಮಂತ್ರಿಗಳು. ಅವರು ಹೇಳಿದುದನ್ನು ಕೇಳಿ ತಲೆಯಾಡಿಸಿದರು.

ಸಮಾರಂಭದ ಕೊನೆಯಲ್ಲಿ ಮಾತನಾಡಿದ ಸಿದ್ಧಗಂಗಾ ಮಠಾಧೀಶ ಡಾ|| ಶಿವಕುಮಾರಸ್ವಾಮಿಗಳು ಇದನ್ನು ಪ್ರಸ್ತಾಪಿಸಿ, ಬಡವನ ಅಹವಾಲನ್ನು ಸಹನೆಯಿಂದ ಆಲಿಸಿ, ಸಮಾಧಾನ ನೀಡಿದ ಮುಖ್ಯಮಂತ್ರಿಗಳ ನಡೆಯನ್ನು "ಅಧಿಕಾರ ಸ್ಥಾನದಲ್ಲಿರುವವರ ರೀತಿ" ಎಂದು ಪ್ರಶಂಸಿಸಿದರು. ಪ್ರಜಾವಾಣಿ ಸೋಮವಾರ 3ನೇ ಮಾರ್ಚ್ 1986



ಸಾವನದುರ್ಗದ ವೀರಭದ್ರೇಶ್ವರ ದೇವಾಲಯದ
ಎದುರಿನ ಅತಿ ಉತ್ತುಂಗವೆನಿಸಿರುವ
ಏಕಶಿಲಾ ದೀಪಸ್ತಂಭ

(ಸಿದ್ಧಗಂಗಾ ಶಿವಗಂಗಾ ಪರಿಸರ ನಕ್ಷೆನೋಡಿ)



ಸಿದ್ಧಗಂಗಾ ಸೈನ್ಸ್ ಆರ್ಟ್ಸ್ ಕಾಮರ್ಸ್
ಕಾಲೇಜು–ತುಮಕೂರು



ಹುಬ್ಬಳ್ಳಿ ಮೂರುಸಾವಿರ ಮಠದಲ್ಲಿ ನೆರವೇರಿದ್ದ ಮಠಾಧಿಪತಿಗಳ ಸಮ್ಮೇಲನದಲ್ಲಿ
ಅಧ್ಯಕ್ಷತೆ ವಹಿಸಿರುವ ಶ್ರೀಗಳು
(ಚಿತ್ರದಲ್ಲಿ ಸರ್ಪಭೂಷಣ ಮಠದ ಶ್ರೀಗಳವರು ಭಾಷಣ ಮಾಡುತ್ತಿದ್ದಾರೆ)



ಬೆಂಗಳೂರಿನ ಸುಂಕೇನಹಳ್ಳಿಯಲ್ಲಿರುವ ಶ್ರೀ ನಿಜಗುಣ ಮಹಾಮಠದಲ್ಲಿ ನೆರವೇರಿದ ಮಠಾಧಿಪತಿಗಳ
ಸಮ್ಮೇಲನದಲ್ಲಿ ಅಧ್ಯಕ್ಷತೆ ವಹಿಸಿರುವ ಶ್ರೀಗಳು
(ಚಿತ್ರದಲ್ಲಿ ಬೇಲೀ ಮಠದ ಶ್ರೀಗಳು ಭಾಷಣ ಮಾಡುತ್ತಿದ್ದಾರೆ)

ಶ್ರೀಗಳವರು ೧೯೭೯ರಲ್ಲಿ ಪ್ರಾರಂಭಿಸಿದ
ಗ್ರಾಮಾಂತರ ಬಸವ ಜಯಂತಿ ಕಾರ್ಯ
ಕ್ರಮದ ಯೋಜನೆಯ ಅನ್ವಯ
ನಾಗಸೆಟ್ಟಿಹಳ್ಳಿಯಲ್ಲಿನ ಒಂದು ಕಾರ್ಯ
ಕ್ರಮದ ನಾಲ್ಕು ದೃಶ್ಯಗಳು



ಶ್ರೀಗಳವರನ್ನು ಭಕ್ತರು ತಮ್ಮ ಗ್ರಾಮಕ್ಕೆ
ಬರಮಾಡಿಕೊಳ್ಳುವಿಕೆ →



← ಸಭೆಯಲ್ಲಿ ಉಪಸ್ಥಿತರಾಗಿರುವ ಶ್ರೀಗಳು




ಗ್ರಾಮಾಂತರ ಜನರಿಗೆ ಶ್ರೀಗಳವರಿಂದ →
ಬಸವತತ್ತ್ವ ಬೋಧೆ



← ಶ್ರೀಗಳವರ ಉಪದೇಶ ಭಾಷಣವನ್ನು
ಆಲಿಸುತ್ತಿರುವ ಗ್ರಾಮಾಂತ ಪ್ರದೇಶದ
ಅಸಂಖ್ಯಾತ ಭಕ್ತವರ್ಗ



ಲಿಂ। ಉದ್ದಾನ ಶಿವಯೋಗೀಶ್ವರರ ಕೃಪಾದೃಷ್ಟಿಗೊಳಗಾಗಿ ಬಾಲ್ಯದಾರಭ್ಯ
ಶ್ರದ್ಧಾ ಭಕ್ತಿ ವಿಶ್ವಾಸಗಳಿಂದ ಬಾಳಿದ ಕನಕಪುರ ದೇಗುಲ ಮಠದ
ಶ್ರೀ ನಿ. ಪ್ರ. ಮಹಾಲಿಂಗಸ್ವಾಮಿಗಳೊಡನೆ ಶ್ರೀಗಳವರು

ನಿರಂತರ ನಡೆಯುತ್ತಿದೆ ಸಾಹಿತ್ಯಸೇವೆ. ಪಂಡಿತರಿಗೆ ಪ್ರೋತ್ಸಾಹ, ಗ್ರಂಥಪ್ರಕಾಶನ ಮುಂತಾದ ಚಟುವಟಿಕೆಗಳು. ಶ್ರೀಗಳವರ ಉಪದೇಶಾಮೃತಕ್ಕೆ ಚಾತಕಗಳಂತೆ ಕಾತರಿಸಿ ನಾಡಿನ ಸಂಘ-ಸಂಸ್ಥೆಗಳಿಂದ ಬಿಡುವಿಲ್ಲದೆ ಬರುವ ಬಿನ್ನಹಗಳು. ಇಲ್ಲವೆನ್ನದೆ ಅಲ್ಲಲ್ಲಿಗೆ ಬಿಜಯಂಗೈಸಿ ನೀಡುವ ಅಮೋಘ ಉಪದೇಶ ಸಂದೇಶಗಳು-ಶ್ರೀಗಳವರ ನೇರವಾದ ವಿಚಾರಧಾರೆಯಿಂದ ನೇರ್ಪುಗೊಳ್ಳುವುವು. ಜನತೆಯ ಆಚಾರವಿಚಾರಗಳು ಶ್ರೀಗಳವರ ದರ್ಶನ-ಭಾಷಣಗಳಿಂದ ಜ್ಯೋತಿಃಪಥದಲ್ಲಿ ಸಾಗಿ ಸಮಾಜದ ಮುನ್ನಡೆ.

ನಾಡಿನ ವಿದ್ಯಾಪ್ರಗತಿಗೆ ಸಿದ್ಧಗಂಗಾ ಕ್ಷೇತ್ರವು ಸಲ್ಲಿಸುತ್ತಿರುವ ಸೇವೆಯನ್ನು ಹಾಗೂ ಶ್ರೀಗಳವರ ವಿದ್ಯಾಭಿಮಾನವನ್ನು ಗುರುತಿಸಿದ ಕರ್ನಾಟಕ ವಿಶ್ವವಿದ್ಯಾಲಯವು ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನಿತ್ತು ಕೃತಜ್ಞತೆಗಳನ್ನು ಸಮರ್ಪಿಸಿ ತನ್ನ ಹಿರಿಮೆಯನ್ನು ಹೆಚ್ಚಿಸಿಕೊಂಡ ಸದವಕಾಶ. ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷ ಪದವಿ ಮುಂಬಯಿ ಮಹಾನಗರದಲ್ಲಿ ಸಮಾವೇಶಗೊಂಡಿದ್ದ ೧೮ನೆಯ ಮಹಾಧಿವೇಶನದ ಅಧ್ಯಕ್ಷ ಭಾಷಣದಲ್ಲಿ ಚಿತ್ರಿಸಿದ ವಿಶ್ವಸಂದೇಶ: 'ಸಮ್ಮೇಳನ ನಡೆಸುವುದರಲ್ಲಿ ಲಕ್ಷ ಲಕ್ಷ ರೂಪಾಯಿ ವೆಚ್ಚ ಮಾಡಲಾಗಿದೆಯೆ ಹೊರತು ಯಾವ ಸಾಧನೆಯು ಆಗಿಲ್ಲ. ವೀರಶೈವ ಮಹಾಸಭೆಯು ರಚನಾತ್ಮಕ ಹಾಗೂ ಉಪಯುಕ್ತವಾಗಿ ಕೆಲಸ ಮಾಡಬೇಕು. ತಮ್ಮ ಕಾರ್ಯಗಳಿಗೆ ಹೊಸ ಸ್ವರೂಪ ನೀಡಬೇಕು.' ಎಂದು ನಿರ್ದಾಕ್ಷಿಣ್ಯದ ಧೀರಗಂಭೀರವಾಣಿಯಿಂದ ಸಮಾಜವನ್ನು ಎಚ್ಚರಿಸಿ ನೀಡಿದ ಜಂಗಮೋಪದೇಶದ ಶಸ್ತ್ರಚಿಕಿತ್ಸೆ.

ಸಿದ್ಧಗಂಗಾ !-ಇಂದು ಅಭಿನವಕೈಲಾಸ, ಕ್ಷೇತ್ರಾಧ್ಯಕ್ಷರಾದ ಶ್ರೀ ಶಿವಕುಮಾರಸ್ವಾಮಿಯವರೇ ಎರಡನೆಯ ಶಿವ ; ವಿದ್ಯಾರ್ಥಿ-ಯಾತ್ರಾರ್ಥಿಗಳ ಸಂಕುಲವೇ ಇಲ್ಲಿನ ಪ್ರಮಥಗಣ ತಿಂಥಿಣಿ.

ಸಿದ್ಧಗಂಗೆಯಿಂದ ನಡೆದಿದೆ ಒಂದೇ ಸಮನೆ ಈ ಲೋಕದುದ್ಧಾರ ॥<br>
ನೋಡಿ ಒಮ್ಮೆ ಧನ್ಯನಾಗು-ಆಗಲಿ ನಿನ್ನ ಆತ್ಮೋದ್ಧಾರ.

**—ಅಖಂಡ ಕರ್ನಾಟಕದ ಧರ್ಮಕ್ಷೇತ್ರಗಳ ಹಾಗೂ ಮಠಾಧಿಪತಿಗಳ ವಿಶೇಷ ಸಂಚಿಕೆ–ಪುಟ ೪೫.**

## 8. CULTURAL AND LITERARY CENTRE, SIDDHAGANGA

Siddhaganga Kshetra, which is in close proximity to the Tumkur town, is a centre of literary activities of the traditional type. The Gurukula system of education, where the teacher and the taught have peculiar bond of philosophic attachment, still continues at this centre of learning. The peetha which is held in high esteem by the Veerashaivas and also by others is called Sri Niranjana Peetha and Sri Siddheswaraswamy (12th Swami in the line) was renowned for his austerities and spiritual attainments. According to a legend, he had a call from the Almighty to break open a slit in the mighty rock adjoining the place and this act of his created a perennial water source, which was hailed as a gift of God and this water source (the Ganga) gave to the place the name of 'Siddhaganga'. Very near to this Maharaja Chikkadevaraja Wodeyar installed an image of Sri Siddhalingeswara in 1660. The place is a famous centre of pilgrimage. In 1902, the late Swamiji Sri Adaveeshwaraswami started a small Sanskrit Gurukula, where free education in the ancient texts was imparted. The Veda Pathashala attracted young pupils from far and near, and to house them a free hostel was also constructed.

(Gazetteer of India 1969, Mysore State, Tumkur Dist. page 501)

## SIDDHALINGESWARA SAMSKRITA COLLEGE, SIDDHAGANGA

The Sri Siddhalingeswara Samskrita College, Siddhaganga was established as early as 1917 by the Siddhaganga Matha. The College prepares students for the various public examinations in Samskrit, conducted by the State Board of Samskrit Education and Examination. The duration of the entire course from elementary to the degree level is of 13 years. Some of the important subjects taught in the institution are Vyakarana, Alankara, Tarka, Shakti-Vishishtadvaita and Jyotishya. The total number of students in the college was 2,108 who were under the charge of 19 teachers, in 1967-68. The institution was getting a grant of Rs. 59,250 from the Government.

The college is conducting also the Kannada Pandit course of four years duration. The admission qualification for this course is S.S.L.C. There were 18 students in the junior grade and 12 students in the senior grade in this course during 1967-68. The staff consisted of six teachers. (Ib. page 32)

## SIDDHALINGESWARA ORPHANAGE, SIDDHAGANGA

Sri Siddhalingeswara Orphanage, Siddhaganga, Tumkur taluk was started in the year 1917 by the then Swamiji of the Siddhaganga Matha. The institution is now managed by Sri Shivakumaraswamiji, the present head of the Siddhaganga Matha, A non-communal free boarding home for about 2,900 students is maintained by the Matha. The Government is giving a grant at the rate of Rs. 10 per month per boarder, only in respect of 1,870 students. In respect of the remaining 1,030 students, the Matha has to rely on the generous help of the public, both in cash and kind. The annual maintenance cost of the free boarding home comes to about eight lakhs of rupees, out of which Government grant is about Rs. 2,24,000.

Crafts like carpentry and tailoring are also taught in the orphanage, and it is proposed to open an Industrial School shortly. Since the Matha is considered a place of pilgrimage, hundreds of persons visits it almost daily. It has been the tradition of this institution to arrange for the free feeding of all visitors without distinction of caste or creed. During Jatra festivities every year, nearly fifty thousand persons are fed daily for nearly ten to twelve days. (Ib. page 563)

## SRI SIDDHAGANGA INSTITUTE OF TECHNOLOGY

The Sri Siddhaganga Institute Technology (formerly known as Sri Siddhaganga College of Engineering) was established in the year 1963-64 by the Sri Siddhaganga Education Society. The Institute is run in its own permanent buildings, constructed on a 50 acre plot of land on the outskirts of Tumkur town. It is managed by a board consisting of prominent persons from various walks of life. The Institute offers (1) a five-year integrated degree course in engineering of the University of Mysore in Civil, Mechanical and Electrical branches and (2) a four-year condensed B.E. degree course in those branches, for those who have passed the three-year diploma course. It may be mentioned in this connection that this condensed course is offered only in this institution, from among all the three Universities in the State. The intake for the integrated couse is 120 per year (40 in each branch). While that for the condensed course is 60 (20 in each branch).

The Institute has plans to start new courses in engineering namely, (1) Metallurgy (2) Chemical engineering, (3) Electronics and (4) Industrial Engineering. The strength of the students during 1966-67 was 470 and it increased to 599 during the next year.

The strength of the staff was also enhanced from 35 in 1966-67 to 49 in 1967-68 which ncluded a principal, two professors, seven Readers and 32 Lecturers. The institute has been provided with well equipped laboratories and workshops and furniture and the students are given ipractical training in the institute itself without the necessity of going to any other institution for the purpose. The library contains books valued more than Rs. 42,000. In addition to this, the Institution of Engineers (Mysore centre) and Sri Ramanarayan Chellaram's Book Bank have presented books worth more than Rs. 5,000. Accommodation was provided to 280 students in the college hostel during 1966-67. As this was found to be inadequate, facilities were increased so as to accommodate 320 students to meet the growing demand of students who came from several parts of India, including Kerala, Punjab, West Bengal and Rajasthan. (Ib. page 495)

# ಶ್ರೀಗಳವರ ಜೀವನದ ಘಟನೆಗಳು

[ಶ್ರೀ ಮ. ನಿ. ಪ್ರ. ಸ್ವ. ಡಾ॥ ಶ್ರೀಶ್ರೀಗಳವರ ಜೀವನದ ಕೆಲವು ಮಹತ್ವದ ಹಾಗೂ ಸಂಸ್ಮರಣೀಯ ವರ್ಷಗಳು, ದಿನಗಳು]

೧. ೧-೪-೧೯೦೮ ಜನನ : ಮಾಗಡಿ ತಾಲ್ಲೂಕು ವೀರಾಪುರ ಗ್ರಾಮದಲ್ಲಿ: ಜನ್ಮನಾಮ–ಶಿವಣ್ಣ.
೨. ೧೯೧೩ ಪ್ರಾಥಮಿಕ ವಿದ್ಯಾಭ್ಯಾಸ : ವೀರಾಪುರದ ಕೂಲಿಮಠ (ಪಾಲನಹಳ್ಳಿಯಲ್ಲಿ ಕೆಲವುಕಾಲ).
೩. ೧೯೨೧ಮಾಧ್ಯಮಿಕ ವಿದ್ಯಾಭ್ಯಾಸ : ಪೂರ್ಣಗೊಳಿಸಿದುದು ತುಮಕೂರು ತಾಲ್ಲೂಕು ನಾಗವಲ್ಲಿಯಲ್ಲಿ (ತರೂರು)
೪. ೧೯೨೨ ತುಮಕೂರಿನ ಸರಕಾರಿ ಪ್ರೌಢಶಾಲೆಗೆ ಸೇರಿದುದು.
೫. ೧೯೨೬ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದುದು.
೬. ೧೯೨೭ ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿ ಶ್ರೀ ಉದ್ದಾನ ಶಿವಯೋಗಿಗಳವರ ಸಂದರ್ಶನ. ೪ ತಿಂಗಳು ಮಾತ್ರ ಶ್ರೀಶ್ರೀಗಳವರ ಆಶ್ರಯ ಪಡೆದು, ಶ್ರೀಕ್ಷೇತ್ರದ ವಿದ್ಯಾರ್ಥಿನಿಲಯದಲ್ಲಿ ಅಶನ ವಸತಿ ಸೌಕರ್ಯ ವನ್ನು ಪಡೆದದ್ದು.
೭. ೧೯೨೭ ತುಮಕೂರಿನಲ್ಲಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದುದು.
೮. ೧೯೨೭-೩೦ ಬೆಂಗಳೂರಿನ ತೋಟದಪ್ಪ ವಿದ್ಯಾರ್ಥಿನಿಲಯದಲ್ಲಿ ಆಶ್ರಯ ಪಡೆದು, ಸೆಂಟ್ರಲ್ ಕಾಲೇಜಿನಲ್ಲಿ ಬಿ. ಎ. ಪರೀಕ್ಷೆಗಾಗಿ ಓದು ಮುಂದುವರಿಸಿದುದು.
೯. ೧೬-೧-೧೯೩೦ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಉತ್ತರಾಧಿಕಾರಿಗಳಾಗಿದ್ದ ಶ್ರೀ ಮರುಳಾರಾಧ್ಯರ ಸಮಾಧಿ ಕ್ರಿಯೆಗೆ ಬಂದದ್ದು, ಅಂದೇ ಶ್ರೀ ಉದ್ದಾನ ಶಿವಯೋಗಿಗಳವರ ಕೃಪಾಕಟಾಕ್ಷಕ್ಕೆ ಒಳಗಾದದ್ದು.
೧೦. ೩-೩-೧೯೩೦ ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತರಾಧಿಕಾರಿಗಳಾಗಿ ಶ್ರೀ ಉದ್ದಾನ ಶಿವಯೋಗಿಗಳವರಿಂದ ನೇಮಕ ಮತ್ತು ಶ್ರೀ ಶಿವಕುಮಾರಸ್ವಾಮಿಗಳು ಎಂಬ ನೂತನ ನಾಮಧೇಯ ಪಡೆದುದು.
೧೧. ೧೯೩೭ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆಯನ್ನು ಕಾಲೇಜನ್ನಾಗಿ ಪರಿವರ್ತಿಸಿದುದು. ತರ್ಕ, ವ್ಯಾಕರಣ, ಅಲಂಕಾರ ಶಾಸ್ತ್ರ ಭಾಗಗಳ ವಿದ್ವತ್ ಮಟ್ಟದ ವ್ಯಾಸಂಗಕ್ಕೆ ಮೊದಲು ಮಾಡಿದುದು.
೧೨. ೧೧–೧–೧೯೪೧ ಶ್ರೀ ಉದ್ದಾನ ಶಿವಯೋಗಿಗಳವರ ನಿಜೈಕ್ಯ.
೧೩. ೧೯೪೪ ತುಮಕೂರಿನಲ್ಲಿ ಸಿದ್ಧಗಂಗಾ ಪ್ರೌಢಶಾಲೆಯ ಸ್ಥಾಪನೆ.
೧೪. ೨೮–೧–೪೫ ಶ್ರೀ ಕ್ಷೇತ್ರದಲ್ಲಿ ನಡೆದ ಪತ್ರಕರ್ತರ ಸಮ್ಮೇಳನದ ಉದ್ಘಾಟನೆ.
೧೫. ೨೭-೪-೪೫ ತುಮಕೂರಿನಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಧಿವೇಶನದ ಸ್ವಾಗತಾಧ್ಯಕ್ಷತೆ.
೧೬. ೧೮–೬–೪೯ ಶ್ರೀಕ್ಷೇತ್ರದಲ್ಲಿ ಶಿವಾನುಭವ ಸಮ್ಮೇಳನ ಏರ್ಪಡಿಸಿದುದು.
೧೭. ೧೮–೬–೪೯ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮತ್ತು ವೇದಪಾಠಶಾಲೆಯ ರಜತಮಹೋತ್ಸವವನ್ನು ಆಚರಿಸಿದುದು.
೧೮. ೧೯–೬–೪೯ ಶ್ರೀ ಕ್ಷೇತ್ರದಲ್ಲಿ ಸರ್ವಧರ್ಮಸಮ್ಮೇಳನವನ್ನು ಮೈಸೂರು ಅರಮನೆ ಪಂಚಗವಿಮಠಾಧ್ಯಕ್ಷರಾದ ಶ್ರೀ ಗೌರೀಶಂಕರ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆಸಿದದು.
೧೯. ೧೯೫೧ ಶ್ರೀ ಶ್ರೀಗಳವರೇ ಪ್ರಭುಲಿಂಗ ಲೀಲೆಯ ಪ್ರವಚನ ಮಾಡಿದುದು.
೨೦. ೧೯೫೫ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಸ್ಥಾಪನೆ.
೨೧. ೧೯೫೫ ಶ್ರೀಕ್ಷೇತ್ರದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ಸ್ಥಾಪನೆ.
೨೨. ೧೯೫೫ ಸಕಲೇಶಪುರದಲ್ಲಿ ವಿದ್ಯಾರ್ಥಿನಿಲಯ ಸ್ಥಾಪನೆ.
೨೩. ೧೯೫೫-೫೬ ಶ್ರೀಕ್ಷೇತ್ರದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಕಟ್ಟಡ ಕಟ್ಟಿಸಿದುದು.
೨೪. ೧೯೫೬ ತುಮಕೂರಿನಲ್ಲಿ ಸಿದ್ಧಗಂಗಾ ಉಪಾಧ್ಯಾಯರ ಶಿಕ್ಷಣ ತರಬೇತಿ ಸಂಸ್ಥೆಯ ಸ್ಥಾಪನೆ.
೨೫. ೧೯೬೦ ಶ್ರೀಮಠದಲ್ಲಿ ಸಾರ್ವಜನಿಕ ವಿದ್ಯಾರ್ಥಿನಿಲಯ ಕಟ್ಟಡದ ಆರಂಭ.
೨೬. ೧೯೬೦ ಗ್ರಾಮಾಂತರ ಪ್ರದೇಶಗಳಲ್ಲಿ ಅನೇಕ ಪ್ರೌಢಶಾಲೆಗಳ ಸ್ಥಾಪನೆಗೆ ಆರಂಭ.

೨೭. ೨೬-೧-೧೯೬೧ ಶ್ರೀಮಠದಲ್ಲಿ ಉಪಾಧ್ಯಾಯ ಶಿಕ್ಷಣ ತರಬೇತಿ ಸಂಸ್ಥೆಯ ಸ್ಥಾಪನೆ.
೨೮. ೧೯೬೨ ಶ್ರೀ ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯ ಸ್ಥಾಪನೆ.
೨೯. ೧೯೬೨ ಧರ್ಮಸ್ಥಳದಲ್ಲಿ ಸರ್ವಧರ್ಮಸಮ್ಮೇಳನದ ಅಧ್ಯಕ್ಷತೆ.
೩೦. ೧೯೬೩ ಶಿವರಾತ್ರಿಯ ಜಾತ್ರಾ ಸಮಯದಲ್ಲಿ ಶ್ರೀಕ್ಷೇತ್ರದಲ್ಲಿ ಗ್ರಾಮಾಂತರ ವ್ಯವಸಾಯ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಆರಂಭ.
೩೧. ೧೯-೬-೬೩ ತುಮಕೂರಿನಲ್ಲಿ ಸಿದ್ಧಗಂಗಾ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (S.I.T.)ಯ ಸ್ಥಾಪನೆ.
೩೨. ೨೮-೧೨-೬೩ ಶ್ರೀ ಮಠದಲ್ಲಿ ನಡೆದ ೪೫ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷತೆ.
೩೩. ೧೧-೧-೬೪ ಶ್ರೀಮಠದಲ್ಲಿ ಅಖಿಲ ಕರ್ನಾಟಕ ಉಪಾಧ್ಯಾಯರ ಸಮ್ಮೇಳನ : ಶ್ರೀಗಳವರ ನೇತೃತ್ವ.
೩೪. ೧೯೬೫ ಶ್ರೀಕ್ಷೇತ್ರದಲ್ಲಿ ಕನ್ನಡ ಪಂಡಿತ ಪರೀಕ್ಷಾಕಾಲೇಜಿನ ಸ್ಥಾಪನೆ.
೩೫. ೧೪-೧-೧೯೬೫ 'ಸಿದ್ಧಗಂಗಾ' ತ್ರೈಮಾಸಿಕ ಪತ್ರಿಕೆಯನ್ನು ಹಳೆಯವಿದ್ಯಾರ್ಥಿಗಳ ಸಂಘದಿಂದ ಪ್ರಾರಂಭಿಸಲು ಆಶೀರ್ವದಿಸಿದುದು.
೩೬. ೬-೧೧-೬೫ ಕರ್ನಾಟಕ ವಿಶ್ವವಿದ್ಯಾನಿಲಯದವರು ಗೌರವ ಡಿ. ಲಿಟ್. ಪದವಿಯನ್ನು ಅರ್ಪಿಸಿದುದು.
೩೭. ೧೬-೬-೬೬ ತುಮಕೂರಿನಲ್ಲಿ ಸಿದ್ಧಗಂಗಾ ಸೈನ್ಸ್, ಆರ್ಟ್ಸ್ ಮತ್ತು ಕಾಮರ್ಸ್ ಕಾಲೇಜಿನ ಸ್ಥಾಪನೆ.
೩೮. ೧೯೬೮ ಕಲ್ಯಾಣದಲ್ಲಿ ನಡೆದ ಬಸವೇಶ್ವರ ಅಷ್ಟಶತಮಾನೋತ್ಸವದ ನೇತೃತ್ವ.
೩೯. ೨-೬-೧೯೬೯ ಬೊಂಬಾಯಿಲ್ಲಿ ಸಮಾವೇಶಗೊಂಡಿದ್ದ ಅಖಿಲ ಭಾರತ ವೀರಶೈವಮಹಾಸಭೆಯ ಅಧ್ಯಕ್ಷತೆ.
೪೦. ೧೩-೧೨-೬೯ ಉಡುಪಿಯಲ್ಲಿ ವಿಶ್ವಹಿಂದೂ ಪರಿಷತ್ ನೇತೃತ್ವ.
೪೧. ೨೭-೧೨-೭೦ ಬೆಂಗಳೂರಿನಲ್ಲಿ ನಡೆದ ೪೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟನೆ.
೪೨. ೨೬-೫-೭೨ ಪೀಠಾರೋಹಣದ ರಜತ ಮಹೋತ್ಸವ : ಸಮಸ್ತ ಭಕ್ತರ ಅಭೂತಪೂರ್ವ ಭಕ್ತಿಸಮರ್ಪಣೆ.
೪೩. ೨೮-೫-೭೨ ಶ್ರೀ ಸಿದ್ಧಲಿಂಗೇಶ್ವರ ವೇದ ಮತ್ತು ಸಂಸ್ಕೃತ ಮಹಾಪಾಠಶಾಲೆಯ ಸುವರ್ಣ ಮಹೋತ್ಸವ.
೪೪. ೨೮-೫-೭೨ ಶ್ರೀ ಕ್ಷೇತ್ರದಲ್ಲಿ ಶ್ರೀಗಳವರ ರಜತಮಹೋತ್ಸವ ಸವಿನೆನಪಿಗಾಗಿ ನೂತನವಾಗಿ ಕಟ್ಟಿಸಿದ 'ಪ್ರಪುಲ್ಲ ಭವನ'ದ ಆರಂಭೋತ್ಸವ; ನೂತನ ಪುಸ್ತಕ ಭಂಡಾರದ ಆರಂಭೋತ್ಸವ.
೪೫. ೨೮-೫-೭೨ ಶ್ರೀಕ್ಷೇತ್ರದಲ್ಲಿ ಶ್ರೀಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ ಮತ್ತು ಭತ್ತದ ಗಿರಣಿಯ ಆರಂಭೋತ್ಸವ.
೪೬. ೧೯೭೪ ಅಖಿಲ ಭಾರತದ ವೀರಶೈವ ಮಠಾಧಿಪತಿಗಳ ಸಂಘದ ಅಧ್ಯಕ್ಷರಾಗಿ ಆಯ್ಕೆಗೊಂಡದ್ದು.
೪೭. ೧೪-೧-೧೯೭೫ 'ಸಿದ್ಧಗಂಗಾ ತ್ರೈಮಾಸಿಕ'ವನ್ನು ಮಾಸಿಕವಾಗಿ ಪರಿವರ್ತಿಸಿ ಬಿಡುಗಡೆ ಮಾಡಿಸಿದುದು.
೪೮. ೧೦-೫-೭೮ ಶ್ರೀಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಗೆ ನಿತ್ಯರುದ್ರಾಭಿಷೇಕ ಕಾರ್ಯಕ್ರಮದ ಆರಂಭ.
೪೯. ೩-೧೦-೭೮ ಶ್ರೀಕ್ಷೇತ್ರದಲ್ಲಿ ನಡೆದ ಅಖಿಲ ಕರ್ನಾಟಕ ದ್ವಿತೀಯ ಸಂಸ್ಕೃತ ಸಮ್ಮೇಳನದ ಸ್ವಾಗತಾಧ್ಯಕ್ಷತೆ.
೫೦. ೧೯೮೦ ಪೀಠಾರೋಹಣದ ಸುವರ್ಣ ಮಹೋತ್ಸವ ವರ್ಷ ಮತ್ತು ಸಂಸ್ಕೃತ ಮಹಾಪಾಠಶಾಲೆಯ ವಜ್ರ ಮಹೋತ್ಸವ ವರ್ಷ.

# ಶ್ರೀ ಸಿದ್ಧಗಂಗಾಕ್ಷೇತ್ರದ ಶಿಕ್ಷಣ ಸಂಸ್ಥೆಗಳು - ಒಂದು ಪರಿಚಯ *

ವರದಿ : ವಿದ್ವಾನ್ ಪಿ. ಎಸ್. ಚಂದ್ರಶೇಖರಯ್ಯ

ಈ ಅವಿಮುಕ್ತ ಜ್ಞಾನ ಕ್ಷೇತ್ರಕ್ಕೆ ಅನೇಕ ಶತಮಾನಗಳ ಭವ್ಯ ಪರಂಪರೆ ಇದ್ದಂತೆಯೇ, ಅನ್ನ ವಿದ್ಯಾ ದಾಸೋಹಗಳಿಗೆ ಸುಮಾರು ಒಂದು ಶತಮಾನದ ಇತಿಹಾಸ ದೊರೆಯುತ್ತದೆ. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಉತ್ತರ ಕರ್ನಾಟಕದಿಂದ ಇಲ್ಲಿಗೆ ಬಂದು ನಿಂತ ಮಹಿಮಾಮೂರ್ತಿ ಶ್ರೀ ಅಟವೀಶ್ವರರಿಂದ ಅಂಕುರಾರ್ಪಣಗೊಂಡ ಈ ಕ್ರಿಯೆಗಳು ಶ್ರೀ ಉದ್ದಾನೇಶ್ವರರಿಂದ ಮೂರ್ತ ಸ್ವರೂಪವನ್ನು ಪಡೆದುವು. ಶ್ರೀ ಉದ್ದಾನೇಶ್ವರರು ಸ್ವಯಂ ವಿದ್ವಾಂಸರಲ್ಲದಿದ್ದರೂ, ವಿದ್ಯಾಪಕ್ಷಪಾತಿಗಳೂ ಹಾಗೂ ವಿದ್ಯೆಯ ಮಹತ್ವವನ್ನು ಅರಿತವರೂ ಆಗಿದ್ದರು. ದೂರದೃಷ್ಟಿಯುಳ್ಳ ಮಹಾಮಹಿಮರು, ಲೋಕಕಲ್ಯಾಣದಲ್ಲಿ ಆಸಕ್ತಿಯುಳ್ಳವರು, ಸರ್ವಸಮತಾತತ್ತ್ವದ ಭಾವನೆಯುಳ್ಳವರು. ಭೂತ ಭವಿಷ್ಯತ್ತಿನ ಅರಿವಿನ ಪರಿಯನ್ನರಿತವರೂ ಆಗಿದ್ದರು. ಪೂರ್ವ ಜನ್ಮದ ಪುಣ್ಯಸಂಸ್ಕಾರದ ಅರಿವು ಪರಿಪಕ್ವಗೊಂಡ ಶಿವಯೋಗೀಶ್ವರರಾಗಿದ್ದರು. ಇಂಥ ಶಿವಯೋಗೈಕ ನಿಷ್ಠರೂ, ಆತ್ಮೈಶ್ವರ್ಯಾನಂದ ತುಂದಿಲರೂ ಆದ ಅವರ ಆಧ್ಯಾತ್ಮಿಕ ವಿದ್ಯಾಸಂಪತ್ತು, ಲೋಕಸಂಗ್ರಹ. ಅನುಗ್ರಹಾದಿಗಳಿಗೆ ಸಾಧಕವಾಗಿತ್ತು. ಅವರು ಬಡತನದ ಬೇಗೆಯಲ್ಲಿ ಬಳಲುತ್ತಿದ್ದ ಕುಟುಂಬದ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸಿದರು. ಆ ಬಡ ಸಮಾಜದ ಕಣ್ತೆರೆಸಿದರು. ನಿರಕ್ಷರಕುಕ್ಷಿಗಳ ಎದೆಯಲ್ಲಿ ಎರಡಕ್ಷರ ಮೂಡಿಸಬೇಕೆಂಬ ಅವರ ದಿವ್ಯಸಂಕಲ್ಪ ಅವರ ಲೋಕಾನುಗ್ರಹ ದೃಷ್ಟಿಗೆ ಒಂದು ಜ್ವಲಂತ ನಿದರ್ಶನ.

ವಿದ್ಯಾಭ್ಯಾಸ ಪ್ರಸಾರವು ಜನತೆಯಲ್ಲಿ ಎಷ್ಟು ಅಗತ್ಯವೆಂಬುದನ್ನು ಈ ಕ್ಷೇತ್ರಾಧಿಪತಿಗಳು ಬಹು ಹಿಂದೆಯೇ ಮನಗಂಡವರು. ಉದ್ದಾನ ಶಿವಯೋಗಿಗಳು ಚಿಕ್ಕದಾಗಿ ಪ್ರಾರಂಭಿಸಿದ ಈ ಶೈಕ್ಷಣಿಕ ಪ್ರಸಾರ ಕಾರ್ಯವು ಅವರ ಶಿಷ್ಯರಾದ ಶ್ರೀ ಶಿವಕುಮಾರಸ್ವಾಮಿಗಳಿಂದ ಬೃಹದಾಕಾರವಾಗಿ ಬೆಳೆದು ನಿಂತು ಇಂದು ಒಂದು ವಿಶ್ವವಿದ್ಯಾಲಯದ ಸ್ವಾಯತ್ತತೆ ಮತ್ತು ಘನತೆಗಳನ್ನು ಪಡೆಯುವ ಹಂತಕ್ಕೇರಿರುವುದು ನಾಡಿನ ಭಾಗ್ಯವಿಶೇಷವೆಂದು ಹೇಳಬಹುದು. ಉತ್ತರ ಕರ್ನಾಟಕದಲ್ಲಿ ಬ್ರಿಟಿಷರ ಆಳ್ವಿಕೆಯಲ್ಲಿ ಸಾರ್ವಜನಿಕ ಶಿಕ್ಷಣದ ಬಹುಪಾಲು ಜವಾಬ್ದಾರಿಯನ್ನು ಖಾಸಗಿ ಕ್ಷೇತ್ರಗಳೇ ವಹಿಸಿಕೊಂಡವು. ಆಗಲೇ ಕೆ.ಎಲ್.ಇ. ಸಂಸ್ಥೆಗಳಂಥ ಉದಾತ್ತ ಸಂಸ್ಥೆಗಳು ಹುಟ್ಟಿಕೊಂಡವು. ಈ ಬಗೆಯ ಖಾಸಗೀ ಸಂಸ್ಥೆಗಳು ಹಳೆಯ ಮೈಸೂರು ರಾಜ್ಯದಲ್ಲಿರಲಿಲ್ಲ. ತತ್ಫಲವಾಗಿ ಬಹುಜನ ಬಡವರಿಗೆ ಶಿಕ್ಷಣದ ಲಾಭ ದೊರಕಲು ಸರಕಾರವನ್ನೇ ಆಶ್ರಯಿಸಬೇಕಾಗಿತ್ತು. ಅಂಥ ಕಾಲದಲ್ಲಿ ಸಾರ್ವಜನಿಕ ಶಿಕ್ಷಣ ಸಂಸ್ಥೆಗಳನ್ನು ತೆರೆಯಲು ಈ ಕ್ಷೇತ್ರವೇ ಅಗ್ರಪಂಕ್ತಿಗೆ ಸೇರಿತು ಎಂಬುದು ಯಾರಾದರೂ ಅಭಿಮಾನ ಪಡಬೇಕಾದದ್ದೇ.

ಈಗ ಇಲ್ಲಿ ಕ್ಷೇತ್ರದ ವತಿಯಿಂದ ನಡೆಯತಕ್ಕ ಶಾಲಾ ಕಾಲೇಜುಗಳ ಒಂದು ಸಂಕ್ಷೇಪವಾದ ವರದಿಯನ್ನು ಕಾಲಾನುಕ್ರಮದಲ್ಲಿ ಕೊಡಲಾಗಿದೆ. ಆಮೇಲೆ ಕೆಲವು ವಿಶಿಷ್ಟ ವಿದ್ಯಾಸಂಸ್ಥೆಗಳ ಸ್ಥೂಲ ಪರಿಚಯ ಕೊಡಲಾಗಿದೆ.

### ೧. ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮತ್ತು ವೇದ ಮಹಾಪಾಠಶಾಲಾ ಮತ್ತು ವಿದ್ಯಾರ್ಥಿನಿಲಯ

ಶ್ರೀ ಅಟವೀಶ್ವರರು ಶ್ರೀ ಕ್ಷೇತ್ರದ ಬೆಟ್ಟದ ಮೇಲಣ ಗವಿಯಲ್ಲಿ ಮೈದಾಳದ ಶ್ರೀ ನಂಜುಂಡಶಿವಯೋಗಿಗಳೆಂಬ ಘನವಿದ್ವಾಂಸರಿಂದ ಸಂಸ್ಕೃತಾಭ್ಯಾಸವನ್ನು ೧೯ನೆಯ ಶತಮಾನದ ಉತ್ತರಾರ್ಧದಲ್ಲಿಯೇ ಮೊಟ್ಟಮೊದಲು ಪ್ರಾರಂಭಿಸಿದರು. ಅನಂತರ ಶ್ರೀ ಉದ್ದಾನ ಶಿವಯೋಗಿಗಳು ಅಧಿಕೃತವಾಗಿ ೧೯೧೭ರಲ್ಲಿ ಸಂಸ್ಕೃತ ಪಾಠಶಾಲೆಯನ್ನು, ವಿದ್ಯಾರ್ಥಿನಿಲಯವನ್ನು ಶ್ರೀ ಕ್ಷೇತ್ರದಲ್ಲಿಯೇ ಸ್ಥಾಪಿಸಿದರು. ಆ ಸ್ಥಾಪನೆಯ ವರ್ಷದಲ್ಲಿ ೨೦ ಮಂದಿ ವಿದ್ಯಾರ್ಥಿಗಳಿದ್ದರು. ಒಬ್ಬ ಉಪಾಧ್ಯಾಯರಿದ್ದರು. ಈ ಪಾಠಶಾಲೆಯು ೧೯೩೭ರಲ್ಲಿ ಸಂಸ್ಕೃತ ಕಾಲೇಜಾಗಿ ಪರಿವರ್ತನೆಯಾಯಿತು. ೧೯೪೨ರಲ್ಲಿ ಈ ಸಂಸ್ಥೆಯ ರಜತಮಹೋತ್ಸವವನ್ನು ಆಚರಿಸಲಾಯಿತು. ೧೯೬೭ರಲ್ಲಿ ಈ ಮಹಾವಿದ್ಯಾಲಯದ ಸುವರ್ಣಮಹೋತ್ಸವವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸಲಾಯಿತು. ೧೯೭೯-೮೦ರಲ್ಲಿ ಶ್ರೀಮಠದಲ್ಲಿರುವ ಸುಮಾರು ೪ ಸಾವಿರ ವಿದ್ಯಾರ್ಥಿಗಳಲ್ಲಿ ೨೮೦೦ ಮಂದಿ ವಿದ್ಯಾರ್ಥಿಗಳು ಸಂಸ್ಕೃತದ ಅಭ್ಯಾಸಮಾಡುತ್ತಿದ್ದಾರೆ. ವಿದ್ವತ್‌ಮಟ್ಟದವರೆವಿಗೂ ತರ್ಕ, ವ್ಯಾಕರಣ, ಅಲಂಕಾರ ಮತ್ತು ಶಕ್ತಿವಿಶಿಷ್ಟಾದ್ವೈತ ವೇದಾಂತ ವಿಭಾಗಗಳಲ್ಲಿ ಪಾಠಪ್ರವಚನಗಳು ನಡೆಯುತ್ತಿವೆ. ಈಗ ೨೮ ಮಂದಿ ಉಪಾಧ್ಯಾಯರು ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಕ್ಷೇತ್ರದ ಆವರಣಕ್ಕೆ ಪ್ರವೇಶಿಸುತ್ತಿದ್ದಂತೆಯೇ ನೇರ ಎದುರಿಗೆ ಎದ್ದುಕಾಣುವ ಸುಂದರ ಕಟ್ಟಡ ಕಾಲೇಜಿಗಾಗಿ ೧೯೫೫ ರಲ್ಲಿ ಜನ್ಮ ತಳೆದು ಇಡೀ ಕ್ಷೇತ್ರಕ್ಕೆ ಅಲಂಕಾರ ಪ್ರಾಯವಾಗಿ ರಾರಾಜಿಸುತ್ತಿದೆ. ೧೯೧೭ರಂದು ಕೇವಲ ಸಂಸ್ಕೃತ ಪಾಠಶಾಲೆಯಾಗಿ ಜನ್ಮ ತಳೆದ ಈ ವಿದ್ಯಾಸಂಸ್ಥೆ ಇಂದು ಸಂಸ್ಕೃತವೇದ-ಮಹಾಶಾಲೆಯಾಗಿ ರಾಷ್ಟ್ರದಲ್ಲಿಯೇ ದೊಡ್ಡ ವಿದ್ಯಾರ್ಥಿ ಸಮೂಹವನ್ನು ಪಡೆದ ಸಂಸ್ಕೃತ ಮಹಾಪಾಠಶಾಲೆಯೆಂದು ಹೆಸರು ಗಳಿಸಿಕೊಂಡಿದೆ.

---

* ಪುಟ ೧೨೨ರ ನಕ್ಷೆ ನೋಡಿ.

'ಹದವರಿತು ನೆಟ್ಟ ಸಸಿ ವಟವೃಕ್ಷವಾಗಿದೆ' ಎಂಬಂತೆ ಸನ್ನಿವೇಶ ಹಿತಕರ ವಾತಾವರಣ, ಸಮುಚಿತ ಪ್ರೋತ್ಸಾಹ, ಸಮಗ್ರಸಂರಕ್ಷಣೆ, ಸತತಪರಿಶ್ರಮದ ಫಲವೆಲ್ಲವೂ ದೊರೆತಾಗ ಯಾವ ಸಸಿಯೇ ಆಗಲೀ, ಯಾವ ಸಂಸ್ಥೆಯೇ ಆಗಲಿ ಭದ್ರವಾದ ಭುನಾದಿಯ ಮೇಲೆ ನಿಂತು, ಬಿಳಿಲು ಬೇರನ್ನು ಬಿಟ್ಟು ಚಿಗುರೊಡೆದು ರೆಂಬೆ ಕೊಂಬೆಗಳನ್ನು ಚಾಚಿ ನಿಂತು, ಅನೇಕರಿಗೆ ಅನೇಕ ವಿಧವಾದ ಆಶ್ರಯಛಾಯೆಯನ್ನೊದಗಿಸುವ ಮಹಾವೃಕ್ಷವಾಗುತ್ತದೆ. ಕೇಳಿದ್ದನ್ನು ಕೊಡುವ ಕಲ್ಪವೃಕ್ಷವಾಗುತ್ತದೆ. ಈ ಮಾತು ಶ್ರೀ ಕ್ಷೇತ್ರದ ವಿದ್ಯಾಪ್ರಚಾರಕಾರ್ಯವನ್ನು ವೀಕ್ಷಿಸಿದವರಿಗೆ ಅತಿಶಯವೆನಿಸಲಾರದು. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಅಗಾಧವಾದ ಪರಿಶ್ರಮ, ನಿರಂತರವಾದ ಪ್ರಯತ್ನ, ತಪೋಮಹಿಮೆ ಇವು ಮುಪ್ಪುರಿಗೊಂಡು ಈ ಮಹಾ ವಿದ್ಯಾಲಯದ ಬೆಳವಣಿಗೆಗೆ ಪೋಷಕವಾಗಿ ನಿಂತಿವೆ. ಇವರ ಕೃತುಶಕ್ತಿ ಮುಂದೆ ಅನೇಕ ಸಾರ್ವಜನಿಕ ವಿದ್ಯಾಸಂಸ್ಥೆಗಳ ಉಗಮಕ್ಕೆ ಕಾರಣವಾಯಿತು.

### ೨. ಸಿದ್ಧಲಿಂಗೇಶ್ವರ ರೆಸಿಡೆನ್ಸಿಯಲ್ ಮಾಧ್ಯಮಿಕ ಪಾಠಶಾಲೆ

ಈ ಪಾಠಶಾಲೆ ಪ್ರಾರಂಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯ ಅಧೀನದಲ್ಲಿದ್ದು ೧೯೫೪ರಲ್ಲಿ ಪ್ರತ್ಯೇಕವಾಗಿ ತನ್ನ ಅಸ್ತಿತ್ವವನ್ನು ಪಡೆಯಿತು. ಆಗ ವಿದ್ಯಾರ್ಥಿಗಳು ೫೦ ಮಂದಿಯಿದ್ದರು. ಆಗಿನ ಸಿಬ್ಬಂದಿ ಕೇವಲ ಮೂರು ಜನರಿದ್ದರು. ೭೧–೭೨ನೆಯ ಸಾಲಿನಲ್ಲಿ ೧–೪ರ ವರೆಗಿನ ಪ್ರಾಥಮಿಕ ತರಗತಿಗಳು ಪ್ರಾರಂಭವಾದವು. ಅದುವರೆಗೆ ಕೇವಲ ೫ನೆಯ ತರಗತಿಯಿಂದ ಏಳನೆಯ ತರಗತಿಯವರೆಗೆ ಪಾಠಗಳು ನಡೆಯುತ್ತಿದ್ದವು. ೧೯೭೧–೭೨ನೆಯ ಸಾಲಿನಲ್ಲಿ ೭ನೆಯ ತರಗತಿಯಲ್ಲಿ ೨ ರ್‍ಯಾಂಕ್‌ಗಳು ಈ ಶಾಲೆಗೆ ಲಭಿಸಿ, ಇದರ ಕೀರ್ತಿಯನ್ನು ಹೆಚ್ಚಿಸಿದುವು. ೧೯೭೯-೮೦ನೇ ಸಾಲಿನಲ್ಲಿ ಒಟ್ಟು ೬೬೫ ಜನ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ೧೨ ಮಂದಿ ಉಪಾಧ್ಯಾಯ ವರ್ಗದವರು ಸೇವೆ ಸಲ್ಲಿಸುತ್ತಿದ್ದಾರೆ. ಈ ಎಳೆಯ ಮಕ್ಕಳಿಗೂ ಸಹ ಪೂಜ್ಯ ಶ್ರೀ ಶ್ರೀಗಳವರು ಉಚಿತ ಅಶನ-ವಸತಿ ಸೌಕರ್ಯಗಳನ್ನು ಕೊಟ್ಟು ವ್ಯಾಸಂಗಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ.

### ೩. ಸಿದ್ಧಗಂಗಾ ಹೈಸ್ಕೂಲ್, ತುಮಕೂರು

ಜಿಲ್ಲಾ ಕೇಂದ್ರವಾದ ತುಮಕೂರಿನಲ್ಲಿ ಒಂದೇ ಸರ್ಕಾರಿ ಪೌಢಶಾಲೆ ೧೯೪೩ರ ವರೆಗೂ ಇತ್ತು. ಮಕ್ಕಳ ಸಂಖ್ಯೆ ಹೆಚ್ಚಿ ಸರ್ಕಾರಿ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸಕ್ಕೆ ಅನಾನುಕೂಲವಿದ್ದ ಸಂದರ್ಭ. ೧೯೪೪ರಲ್ಲಿ ಪೂಜ್ಯ ಶ್ರೀಗಳವರು ಪರಿಸ್ಥಿತಿಯನ್ನು ಮನಗಂಡು ಮೊದಲು ಬಾಡಿಗೆ ಕಟ್ಟಡದಲ್ಲಿ ಪೌಢಶಾಲೆಯೊಂದನ್ನು ಪ್ರಾರಂಭಿಸಿದರು. ಕೇವಲ ಎರಡು ವರ್ಷಗಳಲ್ಲೇ ಸ್ವಂತ ಕಟ್ಟಡ ನಿರ್ಮಾಣವಾಗಿ, ಹೊಸ ಕಟ್ಟಡಕ್ಕೆ ವರ್ಗಾಯಿಸಲ್ಪಟ್ಟಿತು. ಅದೇ ಈಗ ಶ್ರೀ ಸಿದ್ಧಗಂಗಾ ಪ್ರೌಢಶಾಲೆ ಎಂದು ನಾಮಾಂಕಿತ ಹೊಂದಿದೆ.

ಪ್ರಾರಂಭದಲ್ಲಿ ೮ ಜನ ಸಿಬ್ಬಂದಿ ವರ್ಗದ ಆಶ್ರಯದಲ್ಲಿ ೧೫೫ ವಿದ್ಯಾರ್ಥಿಗಳು ವಿದ್ಯಾರ್ಜನೆಗೆ ದಾಖಲಾದರು. ಆಗ ಇದು ಜಿಲ್ಲೆಯ ಪ್ರಪ್ರಥಮ ಖಾಸಗಿ ಪ್ರೌಢಶಾಲೆ. ಪ್ರಸ್ತುತ ೧೯೭೯-೮೦ನೆಯ ಸಾಲಿನಲ್ಲಿ ೮೫೦ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ೨೬ ಮಂದಿ ಅಧ್ಯಾಪಕ ಸಿಬ್ಬಂದಿಯಿಂದ ಕೂಡಿ, ಅನೇಕ ವಿಧದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದೆ. ಈ ಸಂಸ್ಥೆಯ ಸ್ಥಾಪನೆ ಹಾಗೂ ಅಭಿವೃದ್ಧಿಯ ವಿಷಯ ಮಹತ್ವದ್ದು. ಆದುದರಿಂದ ಇದರ ಬಗೆಗೆ ಇರುವ ಪ್ರತ್ಯೇಕ ಲೇಖನ ಹೆಚ್ಚಿನ ವಿವರಗಳಿಗೆ ಅವಕಾಶ ಮಾಡುತ್ತದೆ; ಅವಲೋಕಿಸಬಹುದು.

### ೪. ಶ್ರೀ ಸಿದ್ಧಗಂಗಾ ವೀರಶೈವ ಉಚಿತ ವಿದ್ಯಾರ್ಥಿನಿಲಯ ಹಿಂದೂಪುರ (ಆಂಧ್ರ)

ಈ ವಿದ್ಯಾರ್ಥಿ ನಿಲಯವು ೧೯೪೬ರಲ್ಲಿ ಶ್ರೀ ಶ್ರೀಗಳವರಿಂದ ಸ್ಥಾಪಿಸಲ್ಪಟ್ಟಿತು. ಆಗ ೯ ಮಂದಿ ವಿದ್ಯಾರ್ಥಿಗಳು ವಿದ್ಯಾರ್ಥಿನಿಲಯದಲ್ಲಿ ಆಶ್ರಯ ಪಡೆದಿದ್ದರು. ೭೮-೭೯ನೆಯ ಸಾಲಿನಲ್ಲಿ ೩೦ ಮಂದಿ ವಿದ್ಯಾರ್ಥಿಗಳು ಸೌಕರ್ಯವನ್ನು ಪಡೆಯುತ್ತಿದ್ದಾರೆ. ವ್ಯವಸ್ಥಿತ ಕಟ್ಟಡ ಮುಂತಾದುವುಗಳನ್ನು ಹೊಂದಿ ಅಭ್ಯಾಸಿಗಳಿಗೆ ಅನುಕೂಲಕರವಾಗಿದೆ. ಇಲ್ಲ ಬಡ ವೀರಶೈವವಿದ್ಯಾರ್ಥಿಗಳಿಗೆ ಅವಕಾಶವನ್ನು ಕಲ್ಪಿಸಲಾಗಿದೆ.

### ೫. ಶ್ರೀ ಸಿದ್ಧಲಿಂಗೇಶ್ವರ ರೆಸಿಡೆನ್ಸಿಯಲ್ ಹೈಯರ್ ಸೆಕೆಂಡರಿ ಸ್ಕೂಲ್, ಶ್ರೀ ಸಿದ್ಧಗಂಗಾ

ಈ ಶಾಲೆಯು ತಾ॥ ೧೬-೩-೧೯೫೫ರಂದು ಶ್ರೀ ಕ್ಷೇತ್ರದಲ್ಲಿಯೇ ಪ್ರಾರಂಭಿಸಲ್ಪಟ್ಟಿತು. ಆ ಕಾಲದಲ್ಲಿ ಶ್ರೀ ಕ್ಷೇತ್ರದ ವಿದ್ಯಾರ್ಥಿ ನಿಲಯದಲ್ಲಿ ಅನೇಕ ಮಂದಿ ಬಡ ವಿದ್ಯಾರ್ಥಿಗಳು ಆಶ್ರಯವನ್ನು ಪಡೆದಿದ್ದರು. ಪ್ರೌಢಶಾಲೆಗೆ ಹೋಗಿ ಬರುವ ವಿದ್ಯಾರ್ಥಿಗಳು ಅಧಿಕವಾಗಿದ್ದರು. ಇವರೆಲ್ಲರೂ ತುಮಕೂರಿಗೆ ಹೋಗಬೇಕಾಗಿತ್ತು. ಆಗ ಈಗಿನಷ್ಟು ವಾಹನ ಸಂಚಾರದ ವ್ಯವಸ್ಥೆಯಿರಲಿಲ್ಲ. ವಿದ್ಯಾರ್ಥಿಗಳು ಕಾಲುನಡಿಗೆಯಲ್ಲೇ ಹೋಗಿ ಬರುತ್ತಿದ್ದರು. ಶ್ರೀ ಶ್ರೀಗಳವರು ಮಕ್ಕಳ ಕಷ್ಟವನ್ನು

ಆರಿತವರಾಗಿ, ಮಠದಿಂದ ಹೋಗಿಬರುವ ವಿದ್ಯಾರ್ಥಿಗಳಿಗಾಗಿ ಈ ಪ್ರೌಢಶಾಲೆಯನ್ನು ಆರಂಭಿಸಿದರು. ಆರಂಭದಲ್ಲಿ ೧೪೮ ಮಂದಿ ವಿದ್ಯಾರ್ಥಿಗಳನ್ನೊಳಗೊಂಡು, ೮ ಮಂದಿ ಅಧ್ಯಾಪಕರು ಸೇವೆ ಸಲ್ಲಿಸುತ್ತಿದ್ದರು.

೧೯೬೫–೬೬ ರಲ್ಲಿ ಈ ಶಾಲೆಯು ಹೈಯರ್ ಸೆಕೆಂಡರಿ ಶಾಲೆಯಾಗಿ ಪರಿವರ್ತನೆಗೊಂಡಿತು. ಆಗ ಒಂದು ವರ್ಷ ಅವಧಿಯ ಪಿ. ಯು. ಸಿ. ಶಿಕ್ಷಣ ಪಡೆಯಲು ಅವಕಾಶವಾಯಿತು.

೧೯೬೮ ನೆಯ ಸಾಲಿನಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಅಧಿಕಗೊಂಡ ಕಾರಣದಿಂದ ಶಿಕ್ಷಣ ಇಲಾಖಾ ನಿರ್ದೇಶಕರ ಅಪ್ಪಣೆ ಪಡೆದು ಶಾಲೆಯನ್ನು ಹೈಯರ್ ಸೆಕೆಂಡರಿ ಮತ್ತು ಜೂನಿಯರ್ ಕಾಲೇಜು ಎಂದು ಎರಡು ಭಾಗ ಮಾಡಲಾಯಿತು. ೧೯೭೮-೭೯ ನೆಯ ಸಾಲಿನಲ್ಲಿ ೧೧೮೬ ಮಂದಿ ವಿದ್ಯಾರ್ಥಿಳು ಅಭ್ಯಾಸ ಮಾಡುತ್ತಿದ್ದರು. ಉಪಾಧ್ಯಾಯರು ಮತ್ತು ಸಿಬ್ಬಂದಿ ವರ್ಗದವರು ಸೇರಿ ೫೦ ಮಂದಿ ಸೇವೆಸಲ್ಲಿಸುತ್ತಿದ್ದರು. ಈಗ ಈ ಸಂಸ್ಥೆಯು ರಜತ ಮಹೋತ್ಸವವನ್ನು ಆಚರಿಸಿಕೊಳ್ಳುವ ಸಿದ್ಧತೆಯಲ್ಲಿದೆ.

### ೬. ಸಿದ್ಧಗಂಗಾ ಉಪಾಧ್ಯಾಯ ತರಬೇತಿ ಸಂಸ್ಥೆ (T. C. H.), ತುಮಕೂರು

ಈ ತರಬೇತಿ ಸಂಸ್ಥೆಯು ೧೯೫೬ ರಲ್ಲಿ ಸ್ಥಾಪನೆಯಾಯಿತು. ತುಮಕೂರಿನಲ್ಲಿರುವ ಸಿದ್ಧಗಂಗಾ ಪ್ರೌಢಶಾಲೆಯ ಆವರಣದಲ್ಲಿ ತನ್ನ ಶಿಕ್ಷಣಕಾರ್ಯವನ್ನು ಪ್ರಾರಂಭಿಸಿತು. ಶಿಕ್ಷಣವನ್ನು ಮುಂದುವರಿಸಲು ಸಾಧ್ಯವಾಗದ ಅನೇಕ ಬಡ ವಿದ್ಯಾರ್ಥಿಗಳಿಗೆ ಈ ಸಂಸ್ಥೆ ಆಶ್ರಯವಿತ್ತಿತು. ದಿನೇ ದಿನೇ ಬೆಳೆದುಬಂದು ೧೯೭೯–೮೦ ನೆಯ ಸಾಲಿನಲ್ಲಿ ೩೬೬ ಮಂದಿ ವಿದ್ಯಾರ್ಥಿಗಳು ತರಬೇತಿಯನ್ನು ಪಡೆಯುತ್ತಿದ್ದಾರೆ. ೧೩ ಮಂದಿ ಉಪಾಧ್ಯಾಯ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದಾರೆ. ಅನೇಕ ಉಪಯುಕ್ತ ಚಟುವಟಿಕೆಗಳಿಂದ ತರಬೇತಿಯನ್ನು ಕೊಡುತ್ತಿರುವ ಉತ್ತಮ ಸಂಸ್ಥೆಗಳಲ್ಲಿ ಇದೂ ಒಂದಾಗಿದೆ.

### ೭. ಶ್ರೀ ಸಿದ್ಧಲಿಂಗೇಶ್ವರ ರೆಸಿಡೆನ್ಸಿಯಲ್ ಟ್ರೈಸಿಂಗ್ ಕಾಲೇಜ್ (T. C. H.), ಶ್ರೀ ಸಿದ್ಧಗಂಗಾ

ಅನೇಕ ಮಂದಿ ಬಡ ವಿದ್ಯಾರ್ಥಿಗಳು ಶ್ರೀ ಕ್ಷೇತ್ರದಲ್ಲಿ ಆಶ್ರಮ ಪಡೆದು, ತುಮಕೂರಿನಲ್ಲಿರುವ ಉಪಾಧ್ಯಾಯ ತರಬೇತಿ ಸಂಸ್ಥೆಗೆ ದಿನಂಪ್ರತಿ ಎರಡುಬಾರಿ ಹೋಗಿ ಬರಬೇಕಾಗಿದ್ದಿತು. ಉಪಾಧ್ಯಾಯ ತರಬೇತಿ ಪಡೆಯಬೇಕೆಂಬ ಅಭಿಲಾಷೆಯ ವಿದ್ಯಾರ್ಥಿಗಳೂ ಹೆಚ್ಚಾದರು. ಈ ಸಮಸ್ಯೆಯನ್ನರಿತ ಶ್ರೀಗಳವರು ಶ್ರೀ ಕ್ಷೇತ್ರದಲ್ಲಿಯೇ ಮತ್ತೊಂದು ಶಿಕ್ಷಕ ತರಬೇತಿ ಸಂಸ್ಥೆಯನ್ನು ೧೯೬೧ ಜೂನ್ ೨೧ ರಂದು ತೆರೆದರು. ಆ ವರ್ಷದಲ್ಲಿ ೧೬೫ ಮಂದಿ ಶಿಕ್ಷಣಾರ್ಥಿಗಳು ದಾಖಲಾದರು. ೮ ಮಂದಿ ಉಪನ್ಯಾಸಕರು ೩ ಮಂದಿ ಸಹಾಯ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ೧೯೭೮–೭೯ ನೆಯ ಸಾಲಿನಲ್ಲಿ ೨೩೭ ಮಂದಿ ವಿದ್ಯಾರ್ಥಿಗಳು ತರಬೇತಿಯನ್ನು ಪಡೆಯುತ್ತಿದ್ದರು. ೧೨ ಮಂದಿ ಉಪನ್ಯಾಸಕರು ಮೂರು ಮಂದಿ ಆಫೀಸ್ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು.

ಶ್ರೀ ಶ್ರೀಗಳವರ ದಿನ ನಿತ್ಯದ ಆಚರಣೆ ಶಿಕ್ಷಣಾರ್ಥಿಗಳಿಗೆ ಉತ್ತಮ ಮಾದರಿ ಪಾಠವಾಗಿದೆ. ನಾಡಿನ ಮೂಲೆ ಮೂಲೆಯಿಂದ ಬಂದ ಬಡ ವಿದ್ಯಾರ್ಥಿಗಳಿಗೆ ಇದೊಂದು ಉತ್ತಮ ನಡವಳಿಕೆಯ ಅಧ್ಯಯನದ ಪಾಠವಾಗಿದೆ. ಈ ಸಂಸ್ಥೆಯು ಪ್ರತಿವಾರವೂ ಕೆಲವು ತನ್ನದೇ ಆದ ವ್ಯವಸ್ಥಿತ ಚಟುವಟಿಕೆಗಳನ್ನು ರೂಪಿಸಿಕೊಂಡು ನವಭಾರತ ನಿರ್ಮಾಣದ ಶಿಲ್ಪಿಗಳೆನಿಸಿದ ಉಪಾಧ್ಯಾಯರನ್ನು ತರಬೇತು ಮಾಡುತ್ತಿದೆ. ವಿದ್ಯಾರ್ಥಿಗಳು ಶ್ರೀ ಕ್ಷೇತ್ರದ ಎಲ್ಲ ವಿಧವಾದ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ವ್ಯಾವಹಾರಿಕ ನೈಪುಣ್ಯವನ್ನು ಪಡೆಯುತ್ತಿದ್ದಾರೆ. ಒಟ್ಟಿನಲ್ಲಿ ನೈತಿಕ, ಆಧ್ಯಾತ್ಮಿಕ, ಧಾರ್ಮಿಕ ಹಾಗೂ ಸಾಮಾಜಿಕ ಸರ್ವಾಂಗೀಣ ಅಭಿವೃದ್ಧಿಗೆ ಈ ಸಂಸ್ಥೆಯು ಯೋಗ್ಯ ವಾತಾವರಣವನ್ನು ಕಲ್ಪಿಸಿದೆ.

### ೮. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ತರೂರು, ಸಿರಾ ತಾಲ್ಲೋಕು

ಈ ಸಂಸ್ಥೆಯು ೧೯೬೨ ರಲ್ಲಿ ೬೬ ಮಂದಿ ವಿದ್ಯಾರ್ಥಿಗಳಿಂದ ಆರಂಭಗೊಂಡಿತು. ಇಬ್ಬರು ಉಪಾಧ್ಯಾಯರು, ಇಬ್ಬರು ಇತರ ಸಿಬ್ಬಂದಿವರ್ಗದವರಿದ್ದರು. ೧೯೬೪–೬೫ ನೆಯ ಸಾಲಿನಲ್ಲಿ ತನ್ನ ಸ್ವಂತ ಕಟ್ಟಡಕ್ಕೆ ವರ್ಗಾಯಿಸಲ್ಪಟ್ಟಿತು. ವ್ಯವಸ್ಥಿತ ಪ್ರಯೋಗಾಲಯ, ಆಟದ ಮೈದಾನ, ಒಂದು ಸಭಾಂಗಣವನ್ನು ಹೊಂದಿದೆ. ೧೯೭೮–೭೯ ನೆಯ ಸಾಲಿನಲ್ಲಿ ೧೭೩ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಉಪಾಧ್ಯಾಯರು ಮತ್ತು ಸಿಬ್ಬಂದಿವರ್ಗದವರು ಸೇರಿ ೧೧ ಮಂದಿ ಸೇವೆ ಸಲ್ಲಿಸುತ್ತಿದ್ದರು.

### ೯. ಶ್ರೀ ಸಿದ್ಧಗಂಗಾ ವಿನಾಯಕ ರೂರಲ್ ಹೈಸ್ಕೂಲ್, ನಿಟ್ಟೂರು, ಗುಬ್ಬಿ ತಾಲ್ಲೋಕು

ಈ ಪ್ರೌಢಶಾಲೆಯು ೧೯೬೨ ರಲ್ಲಿ ಸ್ಥಾಪನೆಯಾಯಿತು. ಆರಂಭದ ವರ್ಷದಲ್ಲಿ ೫೬ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಕೇವಲ ಇಬ್ಬರು ಉಪಾಧ್ಯಾಯರು ನಿಯಮಿತರಾಗಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೩೪೩ ಮಂದಿ ವಿದ್ಯಾರ್ಥಿ–ವಿದ್ಯಾರ್ಥಿನಿಯರು ಅಭ್ಯಾಸ ಮಾಡುತ್ತಿದ್ದಾರೆ. ೭ ಮಂದಿ ಉಪಾಧ್ಯಾಯರು, ಮೂರು ಮಂದಿ ಇತರ ಸಿಬ್ಬಂದಿ ವರ್ಗದವರು ಸೇವೆ ಸಲ್ಲಿಸುತ್ತಿದ್ದಾರೆ. ಈ ಸಂಸ್ಥೆ ಸ್ವಂತ ಕಟ್ಟಡ ಮತ್ತು ವಿಶಾಲವಾದ ಆಟದ ಮೈದಾನವನ್ನು ಹೊಂದಿದೆ.

**೧೦. ಶ್ರೀ ಸಿದ್ಧಗಂಗಾ ಪ್ರಾಕ್ಟೀಸಿಂಗ್ ಎಲಿಮೆಂಟರಿ ಸ್ಕೂಲ್, ತುಮಕೂರು**

ಈ ಸಂಸ್ಥೆಯು ೧೯೬೨ ರಲ್ಲಿ ಜನ್ಮ ತಳೆಯಿತು, ಆ ಪ್ರಾರಂಭದ ವರ್ಷದಲ್ಲಿ ೫೦ ಮಂದಿ ವಿದ್ಯಾರ್ಥಿಗಳಿದ್ದರು. ೨ ಮಂದಿ ಅಧ್ಯಾಪಕರಿದ್ದರು. ೧೯೭೯-೮೦ರಲ್ಲಿ ೪೮೧ ಮಂದಿ ವಿದ್ಯಾರ್ಥಿಗಳೂ, ೮ ಮಂದಿ ಉಪಾಧ್ಯಾಯರೂ ಸೇವೆ ಸಲ್ಲಿಸುತ್ತಿದ್ದಾರೆ.

**೧೧. ಶ್ರೀ ಸಿದ್ಧಗಂಗಾ ಬಾಲೋದ್ಯಾನ, ತುಮಕೂರು**

ಈ ಸಂಸ್ಥೆಯು ಸಣ್ಣ ಪ್ರಮಾಣದಲ್ಲಿ ೧೯೬೨ರಲ್ಲಿ ಸ್ಥಾಪನೆಯಾಯಿತು. ಎಳೆಯ ಮಕ್ಕಳ ಮೇಲೆ ಪ್ರಭಾವ ಬೀರುವ ಹಿತಕರ ವಾತಾವರಣ ಆಕರ್ಷಕವಾಗಿದೆ. ಪ್ರಾರಂಭದಲ್ಲಿ ೩೦ ಮಂದಿ ಎಳೆಯಮಕ್ಕಳು ದಾಖಲಾತಿಯನ್ನು ಪಡೆದಿದ್ದರು. ಒಬ್ಬರು ಉಪಾಧ್ಯಾಯರು ಸೇವೆ ಸಲ್ಲಿಸುತ್ತಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೬೦ ಮಕ್ಕಳು ಇದ್ದಾರೆ. ಒಬ್ಬರು ಅಧ್ಯಾಪಕರಿದ್ದಾರೆ.

**೧೨. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಕಂಚುಗಲ್ ಬಂಡೇಮಠ, ಮಾಗಡಿ ತಾಲ್ಲೋಕು**

ಈ ಸಂಸ್ಥೆಯು ೧೯೬೩ರಲ್ಲಿ ಸ್ಥಾಪನೆಯಾಯಿತು. ಆರಂಭದಲ್ಲಿ ೫೦ ಮಂದಿ ವಿದ್ಯಾರ್ಥಿಗಳಿದ್ದರು. ಮೂರು ಮಂದಿ ಅಧ್ಯಾಪಕರು,ಒಬ್ಬ ನೌಕರ ಸಿಬ್ಬಂದಿಯವರು ನೇಮಕಗೊಂಡಿದ್ದರು. ೧೯೭೮–೭೯ ನೆಯ ಸಾಲಿನಲ್ಲಿ ೪೦೦ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೧೨ ಮಂದಿ ಅಧ್ಯಾಪಕರು, ೪ ಮಂದಿ ಸಿಬ್ಬಂದಿ ವರ್ಗದವರು ಸೇವೆ ಸಲ್ಲಿಸುತ್ತಿದ್ದರು. ಪ್ರೌಢ ಶಾಲೆಯು ಸ್ವಂತ ಕಟ್ಟಡ, ಸುಸಜ್ಜಿತ ಪ್ರಯೋಗಾಲಯವನ್ನು ಹೊಂದಿದೆ. ಸಾರ್ವಜನಿಕ ಉಚಿತ ವಿದ್ಯಾರ್ಥಿನಿಲಯವು ಇಲ್ಲಿನ ಮಹಾಮಠದ ವತಿಯಿಂದ ನಡೆಯುತ್ತಿದ್ದು, ವಿದ್ಯಾರ್ಥಿಗಳ ಅಭ್ಯಾಸಕ್ಕೆ ಅನುಕೂಲವನ್ನೊದಗಿಸಿದೆ. ರಮಣೀಯ ನಿಸರ್ಗದ ಮಡಿಲಲ್ಲಿ ಪ್ರಶಾಂತ ವಾತಾವರಣದಿಂದ ಕೂಡಿದೆ. ಸಂಸ್ಕೃತ ಪಾಠಶಾಲೆಯು ಈ ಮಠದಲ್ಲಿ ನಡೆಯುತ್ತಿದೆ. ಕಂಚುಗಲ್ ಬಂಡೇಮಠದ ಶ್ರೀಗಳವರಾದ ಶ್ರೀ. ನಿ. ಪ್ರ. ಶಿವರುದ್ರಸ್ವಾಮಿಗಳವರ ಮಾರ್ಗದರ್ಶನ ಮತ್ತು ತ್ಯಾಗದ ಫಲವಾಗಿ ಸಮರ್ಪಕ ರೀತಿಯಲ್ಲಿ ಈ ಸಂಸ್ಥೆಯು ಸೇವೆ ಸಲ್ಲಿಸುತ್ತಿದೆ.

**೧೩. ಶ್ರೀ ಸಿದ್ಧಗಂಗಾ ಬಸವೇಶ್ವರ ಪ್ರೌಢಶಾಲೆ, ಸೋಲೂರು, ಮಾಗಡಿ ತಾಲ್ಲೋಕು**

ಶ್ರೀ ಬಸವೇಶ್ವರ ಪ್ರೌಢಶಾಲೆಯು ೧೯೬೩ ರಲ್ಲಿ ಆರಂಭವಾಯಿತು. ಆರಂಭದ ವರ್ಷದಲ್ಲಿ ೬೬ ಮಂದಿ ವಿದ್ಯಾರ್ಥಿಗಳಿದ್ದರು. ಇಬ್ಬರು ಉಪಾಧ್ಯಾಯರು, ಇಬ್ಬರು ಆಫೀಸಿನ ಸಹಾಯಕ ಸಿಬ್ಬಂದಿಯವರಿದ್ದರು. ೧೯೭೮–೭೯ ನೇ ಸಾಲಿನಲ್ಲಿ ೧೪೦ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೬ ಜನ ಉಪಾಧ್ಯಾಯರು. ೪ ಮಂದಿ ಕಛೇರಿ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು.

**೧೪. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಬೂದಿಗೆರೆ, ದೇವನಹಳ್ಳಿ ತಾಲ್ಲೋಕು**

ಈ ಸಂಸ್ಥೆಯು ೧೯೬೩ ರಲ್ಲಿ ಜನ್ಮ ತಳೆಯಿತು. ಆರಂಭದ ವರ್ಷದಲ್ಲಿ ೭೯ ಮಂದಿ ವಿದ್ಯಾರ್ಥಿಗಳು ಅಭ್ಯಾಸವನ್ನು ಆರಂಭಿಸಿದರು. ಉಪಾಧ್ಯಾಯ ಸಿಬ್ಬಂದಿಯವರು ೩ ಮಂದಿ ಇದ್ದರು. ಇದೇ ಗ್ರಾಮದ ಶ್ರೀಮಾನ್ ಆರ್. ಮುದ್ದಪ್ಪನವರು ಈ ಪಾಠಶಾಲೆಗಾಗಿ ಬಹಳ ಶ್ರಮವಹಿಸಿದರು. ಮತ್ತು ಬೆಂಗಳೂರಿನ ಗಣ್ಯದಾನಿಗಳಾದ ಧರ್ಮಪ್ರವರ್ತಕ ಕಂಟ್ರಾಕ್ಟರ್ ಎಂ. ಮರಿಸ್ವಾಮಪ್ಪನವರು ೧೯೬೪ ರಲ್ಲಿ ೬೦,೦೦೦ ರೂ ಬೆಲೆ ಬಾಳುವ ಪ್ರೌಢಶಾಲಾ ಕಟ್ಟಡವನ್ನು ವ್ಯವಸ್ಥಿತ ರೀತಿಯಲ್ಲಿ ಕಟ್ಟಿಸಿಕೊಟ್ಟು ಕೀರ್ತಿಭಾಜನರಾಗಿದ್ದಾರೆ. ೧೯೭೮-೭೯ನೆಯ ಸಾಲಿನಲ್ಲಿ ೫೧೫ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೧೦ಮಂದಿ ಉಪಾಧ್ಯಾಯರು, ೫ ಜನ ಸಿಬ್ಬಂದಿ ವರ್ಗದವರು ಈಗ ಸೇವೆ ಸಲ್ಲಿಸುತ್ತಿದ್ದಾರೆ. ಅಂದವಾದ ಕಟ್ಟಡ. ವಿಶಾಲ ಆಟದಮೈದಾನ. ಶಾಲಾತೋಟ ಇತ್ಯಾದಿ ಸೌಲಭ್ಯದಿಂದ ಕೂಡಿ ಅಭ್ಯಾಸಕ್ಕೆ ಯೋಗ್ಯ ವಾತಾವರಣವಿದೆ.

**೧೫. ಶ್ರೀ ಸಿದ್ಧಗಂಗಾ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (S.I.T.), ತುಮಕೂರು**

ಶ್ರೀ ಸಿದ್ಧಗಂಗಾ ಎಂಜಿನೀಯರಿಂಗ್ ಸಂಸ್ಥೆಯು ೧೯೬೩ರಲ್ಲಿ ಸ್ಥಾಪನೆಯಾಯಿತು. ಆ ವರ್ಷದಲ್ಲಿ ೧೨೧ ಮಂದಿ ವಿದ್ಯಾರ್ಥಿಗಳು ದಾಖಲಾದರು. ಉಪನ್ಯಾಸಕರು ಮತ್ತು ಸಿಬ್ಬಂದಿ ವರ್ಗದವರು ಸೇರಿ ೨೧ ಮಂದಿ ಇದ್ದರು. ಈ ಸಂಸ್ಥೆಯು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಅಭಿವೃದ್ಧಿ ಹೊಂದುತ್ತಾ ಬಂದು ಈಗ ಇದೊಂದು ಶ್ರೇಷ್ಠಮಟ್ಟದ ಒಂದು ವಿದ್ಯಾಸಂಸ್ಥೆಯೆಂದು ದೇಶ ವಿದೇಶಗಳಲ್ಲಿ ಕೀರ್ತಿ ಗಳಿಸಿದೆ. ೧೯೭೮–೭೯ ರಲ್ಲಿ ೧೪೮೮ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೧೬೦ ಮಂದಿ ಉಪಾಧ್ಯಾಯರೂ ಮತ್ತು ಸಿಬ್ಬಂದಿ ವರ್ಗದವರೂ ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥೆಯು ತುಮಕೂರಿನಲ್ಲಿ ಸ್ಥಾಪನೆಯಾದಂದಿನಿಂದ ತುಮಕೂರಿನ ವಿದ್ಯಾಕ್ಷೇತ್ರದ ಇತಿಹಾಸದಲ್ಲಿಯೇ ಒಂದು ಹೊಸಯುಗ ಆರಂಭವಾದ ಹಾಗಾಗಿದೆ. ತುಮಕೂರು ನಗರವು ರಾಷ್ಟ್ರ. ಅಂತರರಾಷ್ಟ್ರದ ಮಟ್ಟದಲ್ಲಿ ಖ್ಯಾತಿ ಗಳಿಸುವಂತಾಗಿದೆ, ಅತ್ಯಾಧುನಿಕ ಸಕಲ ಸೌಕರ್ಯ

ಗಳಿಂದ ಕೂಡಿ ಆಕರ್ಷಕ ಉಪನಗರದಂತೆ ಈ ಸಂಸ್ಥೆಯ ವಾತಾವರಣ ರಾರಾಜಿಸುತ್ತಿದೆ. ರಾಜ್ಯಮಟ್ಟದ, ರಾಷ್ಟ್ರಮಟ್ಟದ ಹಾಗೂ ಹೊರರಾಷ್ಟ್ರಗಳ ಗಣ್ಯರು ಬಂದು, ನೋಡಿ ಆನಂದಿಸಿ ಹೃತ್ಪೂರ್ವಕ ಪ್ರಶಂಸೆಯನ್ನು ಶ್ರೀಶ್ರೀಗಳವರ ಚರಣಗಳಲ್ಲಿ ಸಮರ್ಪಿಸಿದ್ದಾರೆ.

**೧೬. ಶ್ರೀ ಸಿದ್ಧಗಂಗಾ ವೀರಶೈವ ವಿದ್ಯಾರ್ಥಿನಿಲಯ, ಸಕಲೇಶಪುರ, ಹಾಸನಜಿಲ್ಲೆ**

ಈ ವಿದ್ಯಾರ್ಥಿ ನಿಲಯವು ಶ್ರೀ ಶ್ರೀಗಳವರ ಆಡಳಿತಾಧಿಕಾರಕ್ಕೆ ವರ್ಗಾಯಿಸಲ್ಪಟ್ಟದ್ದು ೧-೬-೬೪ರಂದು. ಆ ವರ್ಷದಲ್ಲಿ ೮೦ ಮಂದಿ ವಿದ್ಯಾರ್ಥಿಗಳು ಇಲ್ಲಿ ಆಶ್ರಯ ಪಡೆದಿದ್ದರು. ಒಬ್ಬರು ಮ್ಯಾನೇಜರ್ ಆಗಿ ನೇಮಕಗೊಂಡರು. ೭೮-೭೯ನೆಯ ಸಾಲಿನಲ್ಲಿ ೩೦ ಮಂದಿ ವಿದ್ಯಾರ್ಥಿಗಳಿದ್ದರು. ಒಬ್ಬ ಮ್ಯಾನೇಜರ್‌ರವರು ಅಲ್ಲಿನ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ಮಲೆನಾಡು ಪ್ರಾಂತದ ಬಡ ಮಕ್ಕಳ ವಿದ್ಯಾಭ್ಯಾಸಕ್ಕೆ ಈ ವಿದ್ಯಾರ್ಥಿನಿಲಯ ತುಂಬಾ ಸಹಕಾರಿಯಾಗಿದೆ.

**೧೭. ಶ್ರೀ ಸಿದ್ಧಲಿಂಗೇಶ್ವರ ರೆಸಿಡೆನ್ಸಿಯಲ್ ಕನ್ನಡ ಪಂಡಿತ ಶಿಕ್ಷಣ ಮಹಾವಿದ್ಯಾಲಯ, ಶ್ರೀ ಸಿದ್ಧಗಂಗಾ**

ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಆಶ್ರಯದಲ್ಲಿ ಈ ಸಂಸ್ಥೆಯು ನಡೆಯುತ್ತಿದೆ. ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಬೋಧಕರ ಕೊರತೆ ಇದ್ದುದರಿಂದ ಶ್ರೀ ಶ್ರೀಗಳವರು ೧೯೬೫ರಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಿದರು. ಆಗ ಇಬ್ಬರು ಉಪಾಧ್ಯಾಯರು ೧೨ ಮಂದಿ ವಿದಾರ್ಥಿಗಳಿದ್ದರು. ೧೯೭೮-೭೯ರಲ್ಲಿ ೪೦ ಮಂದಿ ವಿದ್ಯಾರ್ಥಿಗಳು ಆರು ಮಂದಿ ಅಧ್ಯಾಪಕ ಸಿಬ್ಬಂದಿಯವರಿದ್ದರು.

**೧೮. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಪುರುಷನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೋಕು**

ಈ ಸಂಸ್ಥೆಯು ೨-೬-೬೫ರಂದು ಆರಂಭವಾಯಿತು. ಆರಂಭದ ವರ್ಷದಲ್ಲಿ ೫೪ ವಿದ್ಯಾರ್ಥಿಗಳು ವ್ಯಾಸಂಗಮಾಡುತ್ತಿದ್ದರು. ೩ ಜನ ಉಪಾಧ್ಯಾಯ ಮತ್ತು ಸಿಬ್ಬಂದಿ ವರ್ಗದವರು ಇದ್ದರು. ೧೯೭೮-೭೯ರಲ್ಲಿ ೨೬೦ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ಎಂಟು ಮಂದಿ ಅಧ್ಯಾಪಕರು, ನಾಲ್ಕು ಮಂದಿ ಇತರ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥೆಗೆ ೧೯೭೯ನೆಯ ಸಾಲಿನಲ್ಲಿ ಸ್ವಂತ ಕಟ್ಟಡದ ಉದ್ಘಾಟನೆಯಾಯಿತು. ಈ ಕಟ್ಟಡವನ್ನು ಶ್ರೀ ಕ್ಷೇತ್ರದ ಖರ್ಚಿನಿಂದಲೇ ಕಟ್ಟಿಸಿ ಕೊಡಲಾಗಿದೆ. ಉಪಯುಕ್ತ ಆಟದ ಮೈದಾನವನ್ನು ಹೊಂದಿದ ಈ ಶಾಲೆಗೆ ವಿಶಾಲವಾದ ಬಯಲಿದ್ದು, ಪ್ರಶಾಂತ ವಾತಾವರಣದಿಂದ ಕೂಡಿದೆ.

**೧೯. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಗುಡೇಮಾರನಹಳ್ಳಿ, ಮಾಗಡಿ ತಾಲ್ಲೋಕು**

ತಾರೀಖು ೩-೬-೧೯೬೫ರಂದು ಈ ಗ್ರಾಮಾಂತರ ಪ್ರೌಢಶಾಲೆಯು ಜನ್ಮ ತಳೆಯಿತು. ಆರಂಭದ ವರ್ಷದಲ್ಲಿ ೧೩೫ ಮಂದಿ ವಿದ್ಯಾರ್ಥಿಗಳಿದ್ದರು. ನಾಲ್ಕು ಮಂದಿ ಉಪಾಧ್ಯಾಯ ಸಿಬ್ಬಂದಿಯವರಿದ್ದರು. ೧೯೭೯-೮೦ನೆಯ ಸಾಲಿನಲ್ಲಿ ೩೩೫ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೧೫ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥೆಯು ಉಪಯುಕ್ತ ಸ್ವಂತ ಕಟ್ಟಡವನ್ನು. ವಿಶಾಲವಾದ ಮೈದಾನವನ್ನು ಹೊಂದಿ ಅಭ್ಯಾಸಯೋಗ್ಯ ಸಂಸ್ಥೆ ಎನಿಸಿದೆ.

**೨೦. ಶ್ರೀ ಸಿದ್ಧಗಂಗಾ ಗಣೇಶ ಗ್ರಾಮಾಂತರ ಪ್ರೌಢಶಾಲೆ, ಗೂಳೂರು, ತುಮಕೂರು ತಾಲ್ಲೋಕು**

'ಗೂಳೂರು ಗಣೇಶ' ಎಂಬುದು ಈ ನಾಡಿನಲ್ಲಿ ಪ್ರಸಿದ್ಧಿ ಪಡೆದಿರುವುದು ಸರ್ವವಿದಿತವಾಗಿದೆ. ಈ ಗಣೇಶನ ನಾಮಾಂಕಿತದಲ್ಲಿ ಈ ಸಂಸ್ಥೆಯು ೧೯೬೫ರಲ್ಲಿ ಆರಂಭವಾಯಿತು. ಆ ವರ್ಷದಲ್ಲಿ ೫೬ ವಿದ್ಯಾರ್ಥಿಗಳು ಅಭ್ಯಾಸವನ್ನಾರಂಭಿಸಿದರು. ಅಂದಿನ ಆಡಳಿತ ವರ್ಗದಲ್ಲಿ ೩ ಮಂದಿ ಇದ್ದರು. ೧೯೭೮-೭೯ನೆಯ ಸಾಲಿನಲ್ಲಿ ೨೩೮ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೧೧ ಮಂದಿ ಉಪಾಧ್ಯಾಯ ಮತ್ತು ಇತರ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು.

**೨೧. ಶ್ರೀ ಸಿದ್ಧಗಂಗಾ ಮಾರುತಿ ಗ್ರಾಮಾಂತರ ಪ್ರೌಢಶಾಲೆ, ಹೊಸಹಳ್ಳಿ, ಪಾವಗಡ ತಾಲ್ಲೋಕು**

ಈ ಪಾಠಶಾಲೆಯು ಸ್ಥಳೀಯ ಗ್ರಾಮಸ್ಥರಿಂದ ೧೯೬೦ನೆಯ ಸಾಲಿನಲ್ಲಿ ಸ್ಥಾಪನೆಯಾಯಿತು. ದಿನೇ ದಿನೇ ಶಾಲೆಯ ಆಡಳಿತ ವೆಚ್ಚಗಳು ಅಧಿಕಗೊಂಡದ್ದರಿಂದ ಸ್ಥಳೀಯ ಪೋಷಕರು ಶ್ರೀ ಶ್ರೀಗಳವರ ಸನ್ನಿಧಿಗೆ ಈ ಸಂಸ್ಥೆಯ ಜವಾಬ್ದಾರಿಯನ್ನು ೧೯೬೬ರಲ್ಲಿ ಒಪ್ಪಿಸಿದರು. ಈ ಸಂಸ್ಥೆಯಲ್ಲಿ ೧೯೬೦ನೆಯ ಸಾಲಿನಲ್ಲಿ ೫೫ ವಿದ್ಯಾರ್ಥಿಗಳು, ೪ ಮಂದಿ ಅಧ್ಯಾಪಕ ವರ್ಗದವರಿದ್ದರು. ೧೯೭೮-೭೯ನೆಯ ಸಾಲಿನಲ್ಲಿ ೨೨೫ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೭ ಮಂದಿ ಅಧ್ಯಾಪಕರು, ೪ ಮಂದಿ ಸಹಾಯಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಹೊಸಹಳ್ಳಿ ಗ್ರಾಮಸ್ಥರು ಈ ಸಂಸ್ಥೆಗೆ ೧೬ ಎಕರೆ ಭೂಮಿಯನ್ನು ದಾನ ನೀಡಿದ್ದಾರೆ. ಈ ಶಾಲೆಯು ಸ್ವಂತ ಕಟ್ಟಡವನ್ನು ಹೊಂದಿದೆ ಮತ್ತು ಶ್ರೀ ಸಚ್ಚಿದಾನಂದ ಗುರುಕುಲವೆಂಬ ಉಚಿತವಿದ್ಯಾರ್ಥಿನಿಲಯವನ್ನು ಹೊಂದಿ ಬಡಮಕ್ಕಳಿಗೆ ಆಶ್ರಯ ನೀಡಿದೆ. ವಿದ್ಯಾರ್ಥಿಗಳೇ ಸೇರಿ 'ಸಂಚಯಕ ವಿದ್ಯಾರ್ಥಿ ಬ್ಯಾಂಕ್' ಸ್ಥಾಪಿಸಿಕೊಂಡು ಹಣ ಉಳಿತಾಯ ಯೋಜನೆಯನ್ನು ಮಾಡಿಕೊಂಡಿದ್ದಾರೆ. ಈಗ ಈ ಸಂಸ್ಥೆ ಯಶಸ್ವಿಯಾಗಿ ಕಾರ್ಯ ನಿರ್ವಹಣೆಯನ್ನು ಮಾಡುತ್ತಿದೆ.

### ೨೨. ಸಿದ್ಧಗಂಗಾ ವಿಜ್ಞಾನ, ವಾಣಿಜ್ಯ ಮತ್ತು ಕಲಾ ಕಾಲೇಜು, ತುಮಕೂರು

ಮಹಿಳಾ ಕಾಲೇಜಾಗಿ ಈ ಸಂಸ್ಥೆಯು ೧೯೬೬ ರಲ್ಲಿ ಆರಂಭಗೊಂಡಿತು. ಆ ವರ್ಷ ವಿದ್ಯಾರ್ಥಿನಿಯರ ಸಂಖ್ಯೆ ಕೇವಲ ೨೪೯ ಇದ್ದು, ೧೦ ಮಂದಿ ಉಪನ್ಯಾಸಕರು. ೮ ಮಂದಿ ಇತರ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದರು. ಕೇವಲ ಪಿ. ಯು. ಸಿ. ತರಗತಿಗಳಿಂದ ಆರಂಭಗೊಂಡ ಈ ಸಂಸ್ಥೆಯು ಪ್ರಥಮದರ್ಜೆ ಕಾಲೇಜಾಗಿ ಪರಿವರ್ತನೆಗೊಂಡಿತು. ಮೊದಲು ಕೇವಲ ವಿದ್ಯಾರ್ಥಿನಿಯರಿಗಾಗಿ ಸ್ಥಾಪಿತಗೊಂಡ ಈ ಸಂಸ್ಥೆ ವಿದ್ಯಾರ್ಥಿಗಳ ಓದಿಗೂ ಅವಕಾಶವೊದಗಿಸಿತು. ಇಂದು ಕಲಾ, ವಿಜ್ಞಾನ ಮತ್ತು ವಾಣಿಜ್ಯ ವಿಭಾಗಗಳಾಗಿ ಹರಡಿ ನಿಂತ ಬೃಹತ್ ವಿದ್ಯಾಕೇಂದ್ರವೆನಿಸಿದೆ. ಈ ಎಲ್ಲ ವಿಭಾಗಗಳಲ್ಲಿಯೂ ಸೇರಿ ೧೯೧೦ ವಿದ್ಯಾರ್ಥಿ ವಿದ್ಯಾರ್ಥಿನಿಯರು ಅಭ್ಯಾಸ ಮಾಡುತ್ತಿದ್ದಾರೆ. ೭೦ಮಂದಿ ಉಪನ್ಯಾಸಕರೂ. ೩೩ ಮಂದಿ ಇತರ ಸಿಬ್ಬಂದಿಯರು ೧೯೭೮-೭೯ ನೆಯ ಸಾಲಿನಲ್ಲಿ ಸೇವೆಸಲ್ಲಿಸುತ್ತಿದ್ದರು.

ವಿದ್ಯಾರ್ಥಿಗಳು ಪ್ರತಿವರ್ಷವೂ ಪಡೆದಿರುವ ಪ್ರಗತಿ ಹಾಗೂ ರ್‍ಯಾಂಕ್‌ಗಳು ಕಾಲೇಜಿನ ಕೀರ್ತಿಗೋಪುರಕ್ಕೆ ಕಳಸವಿಟ್ಟಂತಾಗಿದೆ. ಅತ್ಯಾಧುನಿಕ ಉಪಕರಣಗಳಿಂದ ಕೂಡಿದ ಸುಸಜ್ಜಿತ ಭೌತ, ರಸಾಯನ ಶಾಸ್ತ್ರ ಹಾಗೂ ಜೀವಶಾಸ್ತ್ರ ವಿಭಾಗಗಳಲ್ಲಿರುವ ಪ್ರಯೋಗಾಲಯುಗಳು ವಿಶ್ವವಿದ್ಯಾನಿಲಯ ನಿಯಮಕ್ಕೊಳಪಟ್ಟಿವೆ. ಸಾಂದರ್ಭಿಕವಾಗಿ ಏರ್ಪಡಿಸುವ ಕಾಲೇಜಿನ ವೈಜ್ಞಾನಿಕ ಮತ್ತು ಶೈಕ್ಷಣಿಕ ವಸ್ತುಪ್ರದರ್ಶನಗಳು ನಗರದ ನಾಗರಿಕರಿಗೆ ಹಾಗೂ ಜ್ಞಾನಪಿಪಾಸುಗಳಿಗೆ ರಸದೌತಣವಾಗುತ್ತಲಿವೆ. ಹದಿನೈದು ಸಹಸ್ರಕ್ಕೂ ಮಿಕ್ಕಿನ ಪುಸ್ತಕಗಳು ಕಾಲೇಜು ಲೈಬ್ರರಿಯಲ್ಲಿ ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಅಭಯಾಶ್ರಯ ನೀಡುತ್ತಿವೆ. ಎಲ್ಲ ಮಟ್ಟದ ಸಾಂಸ್ಕೃತಿಕ ಸಮಾರಂಭ ಹಾಗೂ ಕ್ರೀಡಾಕೂಟಗಳಲ್ಲಿ ಭಾಗವಹಿಸಿ ತಂದ ಪ್ರಶಸ್ತಿಗಳು, ವಿದ್ಯಾರ್ಥಿಗಳ ಮಾನಸಿಕ ಮತ್ತು ದೈಹಿಕ ದಾರ್ಢ್ಯತೆಯ ಉತ್ತಮ ಬೆಳವಣಿಗೆಯ ಕುರುಹಾಗಿವೆ. ಕಾಲೇಜಿನಲ್ಲಿರುವ N. C. C., N. S. S. ಮತ್ತು ಎಲ್ಲ ವಿಧವಾದ ಭಾಷಾಸಂಘ ಸಂಸ್ಥೆಗಳು ತೃಪ್ತಿಕರವಾಗಿ ಕಾರ್ಯ ನಿರ್ವಹಿಸುತ್ತಿರುವುದು ರಾಷ್ಟ್ರೀಯ ಭಾವೈಕ್ಯತೆಯ ಧ್ಯೇಯ ಧೋರಣೆಯನ್ನು ಸಾಧಿಸಲು ಸಹಕಾರ ನೀಡುವಂತಾಗಿವೆ. ವಿದ್ಯಾರ್ಥಿಗಳಲ್ಲಿ ಹುದುಗಿರುವ ಸುಪ್ತಪ್ರತಿಭೆಯನ್ನು ಪ್ರಬುದ್ಧಗೊಳಿಸಲು ಕಾಲೇಜಿನ ವಾರ್ಷಿಕ ಸಂಚಿಕೆ 'ರಸಗಂಗಾ' ಸಹಾಯಕವಾಗಿದೆ. ಈ ಎಲ್ಲ ಚಟುವಟಿಕೆಗಳಿಂದ ವಿದ್ಯಾರ್ಥಿಗಳ ಸರ್ವತೋಮುಖವಾದ ಅಭಿವೃದ್ಧಿಗೆ ಇಲ್ಲಿ ಅವಕಾಶ ದೊರೆಯುತ್ತಿದೆ. ಮತ್ತು ಅನುಭವಿ ಆಚಾರ್ಯ ವರ್ಗದವರ ಸೂಕ್ತ ಮಾರ್ಗದರ್ಶನದಿಂದ ಈ ಸಂಸ್ಥೆ ಉಜ್ವಲ ಭವಿಷ್ಯದತ್ತ ಮುನ್ನಡೆದಿದೆ.

### ೨೩. ಶ್ರಿ ಸಿದ್ಧಗಂಗಾ ಸಂಜೆ ಕಾಲೇಜು, ತುಮಕೂರು

೧೯೬೭ರ ನವೆಂಬರ್ ೧೬ರಂದು ಈ ಸಂಸ್ಥೆಯ ಆರಂಭವಾಯಿತು. ಪಲವು ಹನ್ನೊಂದು ಕಾರಣಗಳಿಂದಾಗಿ ವ್ಯಾಸಂಗವನ್ನು ಮಧ್ಯದಲ್ಲಿಯೇ ಮೊಟಕುಗೊಳಿಸಿಕೊಂಡು ನಿರಾಶೆಯ ನಿಟ್ಟುಸಿರು ಬಿಡುತ್ತಿದ್ದ ವಿದ್ಯಾಕಾಂಕ್ಷಿಗಳಿಗೆ ಈ ಸಂಸ್ಥೆಯ ಪ್ರಾರಂಭ ಒಂದು ಸುವರ್ಣಾವಕಾಶ. ಆರಂಭದ ವರ್ಷದಲ್ಲಿ ೧೨೪ ಮಂದಿ ವಿದ್ಯಾರ್ಥಿಗಳು ದಾಖಲಾತಿಯನ್ನು ಪಡೆದರು. ಅಧ್ಯಾಪಕ ಹಾಗೂ ಸಿಬ್ಬಂದಿ ವರ್ಗದವರು ೧೪ ಮಂದಿ ಇದ್ದರು. ೧೯೭೮-೭೯ನೆಯ ಸಾಲಿನಲ್ಲಿ ೩೯೯ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೩೦ ಮಂದಿ ಉಪನ್ಯಾಸಕರು, ೧೧ ಮಂದಿ ಇತರ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು.

ಈ ಸಂಸ್ಥೆಯು ಆರಂಭದ ವರ್ಷದಲ್ಲಿಯೇ ೬ ರ್‍ಯಾಂಕುಗಳನ್ನು ಗಳಿಸಿಕೊಂಡು, ಅದನ್ನು ಮುಂದುವರಿಸಿಕೊಂಡು ಬಂದಿದೆ. ಸುಮಾರು ಹತ್ತು ಸಹಸ್ರಕ್ಕೂ ಹೆಚ್ಚಿನ ಸಂಖ್ಯೆಯುಳ್ಳ ಪುಸ್ತಕ ಭಂಡಾರದಿಂದ ಕೂಡಿ, ಉತ್ತಮ ಪೀಠೋಪಕರಣಗಳನ್ನು ಹೊಂದಿ, ಅಭ್ಯಾಸಯೋಗ್ಯ ಸಂಸ್ಥೆ ಎನಿಸಿದೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯವರ ಪೂರ್ಣ ಸಲಹಾ ಸಹಕಾರದಿಂದ ಉತ್ತರೋತ್ತರ ಈ ಸಂಸ್ಥೆಯು ಅಭಿವೃದ್ಧಿಯನ್ನು ಹೊಂದುತ್ತಾ ಬಂದಿದೆ. ಮತ್ತು ಶ್ರೀ ಸಿದ್ಧಗಂಗಾ ವಿಜ್ಞಾನ, ವಾಣಿಜ್ಯ ಮತ್ತು ಕಲಾ ಕಾಲೇಜಿನ ಭವ್ಯಕಟ್ಟಡದಲ್ಲಿ ಸುಗಮವಾಗಿ ಸಾಗುತ್ತಿದೆ. ಈ ಸಂಸ್ಥೆಯು ೧೯೭೭-೭೮ರಲ್ಲಿ ತನ್ನ ಹತ್ತನೆಯ ವಾರ್ಷಿಕ ಹಬ್ಬವನ್ನಾಚರಿಸಿಕೊಂಡಿತು.

### ೨೪. ಶ್ರೀ ಸಿದ್ಧಗಂಗಾ ರೆಸಿಡೆನ್ಸಿಯಲ್ ಹೈಸ್ಕೂಲ್, ಶ್ರೀ ಸಿದ್ಧಗಂಗಾ

ಶ್ರೀ ಕ್ಷೇತ್ರದಲ್ಲಿ. ಇದ್ದ ಹೈಯರ್ ಸೆಕೆಂಡರಿ ಸ್ಕೂಲಿನಲ್ಲಿ ವಿದ್ಯಾರ್ಥಿ ಸಂಖ್ಯೆಯು ಅಧಿಕಗೊಂಡ ಕಾರಣ ೧೯೬೮ ರಲ್ಲಿ ಶ್ರೀಕ್ಷೇತ್ರದಲ್ಲಿಯೇ ಮತ್ತೊಂದು ಸನಿವಾಸ ಪ್ರೌಢಶಾಲೆಯನ್ನು ಸ್ಥಾಪಿಸಬೇಕಾಯಿತು. ಅಂತೆಯೇ ಈ ಸಂಸ್ಥೆಯು ಸ್ಥಾಪನೆಗೊಂಡು ಆ ವರ್ಷ ೧೦೦೫ ವಿದ್ಯಾರ್ಥಿಗಳನ್ನು ದಾಖಲು ಮಾಡಿಕೊಂಡಿತು. ೩೩ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ೧೯೭೯ನೆಯ ಸಾಲಿನಲ್ಲಿ ೧೧೦೦ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೩೭ ಮಂದಿ ಅಧ್ಯಾಪಕರು, ೧೧ಮಂದಿ ಇತರ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಮೂರು ತರಗತಿಗಳಿಂದಲೂ. ೨೪ವಿಭಾಗಗಳಿಂದಲೂ (ಸೆಕ್ಷನ್‌ಗಳಿಂದ) ಕೂಡಿದ ಈ ಸಂಸ್ಥೆಯು ಜಿಲ್ಲೆಗೇ ದೊಡ್ಡ ಪ್ರೌಢಶಾಲೆಯಾಗಿದೆ. ಶಿಕ್ಷಣ ಇಲಾಖೆಯ ಆದೇಶದಂತೆ ೧೧-೧-೭೭ರಿಂದ ಈ ಶಾಲೆಯು 'ಸೆಲೆಕ್ಟೆಡ್ ಹೈಸ್ಕೂಲ್' ಎಂದು ಪರಿಗಣಿಸಲ್ಪಟ್ಟಿದೆ.

### ೨೫. ಶ್ರೀ ಸಿದ್ದಗಂಗಾ ಗ್ರಾಮಾಂತರ ಪ್ರೌಢಶಾಲೆ, ಕಲ್ಲೂರು, ಗುಬ್ಬಿ ತಾಲ್ಲೋಕು

ಈ ಸಂಸ್ಥೆಯು ೧೯೬೮ರಲ್ಲಿ ಸ್ಥಾಪನೆಯಾಯಿತು. ಆರಂಭದ ವರ್ಷದಲ್ಲಿ ೪೮ ವಿದ್ಯಾರ್ಥಿಗಳಿದ್ದರು. ೩ ಮಂದಿ ಅದ್ಯಾಪಕ ವರ್ಗದವರು ಸೇವೆ ಸಲ್ಲಿಸುತ್ತಿದ್ದರು. ೧೯೭೯–೮೦ನೆಯ ಸಾಲಿಗೆ ೧೫೦ ಮಂದಿ ವಿದ್ಯಾರ್ಥಿಗಳು ದಾಖಲಾಗಿ ಅಭ್ಯಾಸ ಮಾಡುತ್ತಿದ್ದಾರೆ. ೬ ಮಂದಿ ಅಧ್ಯಾಪಕರು. ೪ ಮಂದಿ ಇತರ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದಾರೆ.

### ೨೬. ಶ್ರೀ ಸಿದ್ಧಲಿಂಗೇಶ್ವರ ವಾಣಿಜ್ಯ ವಿದ್ಯಾಸಂಸ್ಥೆ, ಶ್ರೀ ಸಿದ್ಧಗಂಗಾ

ಈ ಸಂಸ್ಥೆಯು ದಿನಾಂಕ ೧-೧೦-೬೮ರಂದು ಶ್ರೀ ಕ್ಷೇತ್ರದಲ್ಲಿಯೇ ಪ್ರಾರಂಭಿಸಲ್ಪಟ್ಟಿತು. ಆಗ ೨೭ ಮಂದಿ ವಿದ್ಯಾರ್ಥಿಗಳಿದ್ದರು. ಒಬ್ಬ ಉಪಾಧ್ಯಾಯರಿದ್ದರು. ೬ ಇಂಗ್ಲೀಷ್ ಟೈಪ್‌ರೈಟಿಂಗ್ ಮಿಷನ್‌ಗಳು ೧ ಕನ್ನಡ ಮಿಷನ್‌ಗಳಿದ್ದುವು. ೧೯೮೦ರಲ್ಲಿ ೧೮೨ ಮಂದಿ ವಿದ್ಯಾರ್ಥಿಗಳು ಒಬ್ಬ ಉಪಾಧ್ಯಾಯರಿದ್ದಾರೆ. ೮ ಇಂಗ್ಲೀಷ್ ಮಿಷನ್‌ಗಳು, ಮತ್ತು ೨ ಕನ್ನಡ ಮಿಷನ್‌ಗಳಿವೆ. ಈ ಸಂಸ್ಥೆಯು ಆರಂಭದಿಂದಲೂ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಆಶ್ರಯದಲ್ಲಿಯೇ ನಡಯುತ್ತಿದೆ. ಪ್ರತಿ ವರ್ಷವೂ ಉತ್ತಮ ಫಲಿತಾಂಶವನ್ನು ಈ ಸಂಸ್ಥೆ ಗಳಿಸುತ್ತಿದೆ.

### ೨೭. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಕಂದಿಕೆರೆ, ಚಿಕ್ಕನಾಯಕನಹಳ್ಳಿ ತಾಲ್ಲೋಕು

ಈ ಪ್ರೌಢಶಾಲೆಯು ೧೯೭೫ರಲ್ಲಿ ಆರಂಭವಾಯಿತು. ಆ ವರ್ಷದಲ್ಲಿ ೫೭ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೩ ಮಂದಿ ಉಪಾಧ್ಯಾಯ ಸಿಬ್ಬಂದಿಯವರಿದ್ದರು. ೧೯೭೯-೮೦ನೇ ಸಾಲಿನಲ್ಲಿ ೨೦೫ ವಿದ್ಯಾರ್ಥಿಗಳು ಅಭ್ಯಾಸದ ಸೌಲಭ್ಯವನ್ನು ಪಡೆದಿದ್ದರು. ೬ ಮಂದಿ ಅಧ್ಯಾಪಕವರ್ಗದವರು. ೩ ಜನ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥೆಯು ಸ್ವಂತ ಕಟ್ಟಡವನ್ನು ಹೊಂದಿ ಪ್ರಶಾಂತ ವಾತಾವರಣವನ್ನು ಪಡೆದಿದೆ.

### ೨೮. ಶ್ರೀ ಮಲ್ಲಿಕಾರ್ಜುನ ಗ್ರಾಮಾಂತರ ಪ್ರೌಢಶಾಲೆ, ದೊಡ್ಡಗುಣಿ, ಗುಬ್ಬಿ ತಾಲ್ಲೋಕು

ಈ ಸಂಸ್ಥೆಯು ಸ್ಥಳೀಯ ಗ್ರಾಮಸ್ಥರಿಂದ ೧೯೬೬ರಲ್ಲಿ ಸ್ಥಾಪನೆಯಾಯಿತು. ಆ ಸಾಲಿನಲ್ಲಿ ೨೦ ಮಂದಿ ವಿದ್ಯಾರ್ಥಿಗಳು ದಾಖಲಾತಿಯನ್ನು ಪಡೆದರು. ಇಬ್ಬರು ಅಧ್ಯಾಪಕರು ಒಬ್ಬ ಸೇವಕನು ಸೇವೆ ಸಲ್ಲಿಸುತ್ತಿದ್ದರು. ೧೯೭೫ರಲ್ಲಿ ಈ ಸಂಸ್ಥೆಯು ಶ್ರೀ ಕ್ಷೇತ್ರದ ಆಡಳಿತಾಧಿಕಾರಕ್ಕೆ ವರ್ಗಾಯಿಸಲ್ಪಟ್ಟಿತು. ೧೯೭೯–೮೦ನೆಯ ಸಾಲಿನಲ್ಲಿ ೧೨೦ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೬ ಮಂದಿ ಉಪಾಧ್ಯಾಯರು, ೪ ಮಂದಿ ಇತರ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಈ ಶಾಲೆಯ ಪುರೋಭಿವೃದ್ಧಿಗೆ ಸೇವೆಸಲ್ಲಿಸಿದ, ದೊಡ್ಡಗುಣಿ ಗ್ರಾಮದ ಸರ್ವಶ್ರೀ ವೀರಪ್ಪಶೆಟ್ಟರು, ಪುಟ್ಟರೇವಪ್ಪನವರು. ಬಸವರಾಜಪ್ಪನವರು, ಶ್ರೀಮತಿ ಸಿದ್ಧಮ್ಮನವರೂ ಸ್ಮರಣೀಯರು. ಇದು ಸ್ವಂತ ಕಟ್ಟಡವನ್ನು ಹೊಂದಿ ಅಭ್ಯಾಸ ಯೋಗ್ಯ ಸಂಸ್ಥೆಯೆನಿಸಿದೆ.

### ೨೯. ಶ್ರೀ ಸಿದ್ಧಗಂಗಾ ಗಂಗಾಧರೇಶ್ವರ ಪ್ರೌಢಶಾಲೆ, ಆನೇಕೆರೆ, ತುರುವೇಕೆರೆ ತಾಲ್ಲೋಕು

ಈ ಪ್ರೌಢಶಾಲೆಯು ೧೯೭೦ರಲ್ಲಿ ಸ್ಥಾಪನೆಯಾಯಿತು. ಆ ಸಾಲಿನಲ್ಲಿ ೪೦ ಮಂದಿ ವಿದ್ಯಾರ್ಥಿಗಳು ದಾಖಲಾತಿಯನ್ನು ಪಡೆದರು. ೩ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆಯನ್ನು ಆರಂಭಿಸಿದರು. ೧೯೭೯–೮೦ರಲ್ಲಿ ೧೬೨ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೭ ಮಂದಿ ಬೋಧಕವರ್ಗದವರು, ೩ ಮಂದಿ ಸಹಾಯಕ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದಾರೆ.

ಈ ಶಾಲೆಯ ಅಭಿವೃದ್ಧಿಗೆ, ಆನೇಕೆರೆ ಗ್ರಾಮದ ಛೇರ್‌ಮನ್ ಶ್ರೀ ಶಿವನಂಜಪ್ಪನವರು, ರಾಷ್ಟ್ರಪ್ರಶಸ್ತಿ ವಿಜೇತ ಶ್ರೀ ಟಿ.ಎನ್. ಕೃಷ್ಣಮೂರ್ತಿಗಳು ಮತ್ತು ಮಾನ್ಯಶ್ರೀ ಡಾ॥ ಸಿದ್ಧಯ್ಯ ಪುರಾಣಿಕರವರು ಅಪೂರ್ವ ಸೇವೆ ಸಲ್ಲಿಸಿದ್ದಾರೆ. ಮೇಲ್ಕಂಡ ಶಾಲೆಗೆ ಅಮ್ಮಸಂದ್ರ ಸಿಮೆಂಟ್ ಕಾರ್ಖಾನೆಯ ಅಧ್ಯಕ್ಷರಾದ ಶ್ರೀ ಎನ್.ಎಲ್. ಹಮಿರ್ ವಾಸಿಯಾರವರು ಎರಡು ಶಾಲಾ ಕೊಠಡಿಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಸುತ್ತಣ ಗ್ರಾಮಸ್ಥರೂ ಅನೇಕ ರೀತಿಯ ಸಹಾಯ ಸಹಕಾರಗಳನ್ನಿತ್ತು ಪ್ರೋತ್ಸಾಹಿಸಿದ್ದಾರೆ. ಸದ್ಯದಲ್ಲಿಯೇ ಸ್ವಂತ ಕಟ್ಟಡಕ್ಕೆ ವರ್ಗಾಯಿಸಲಿದ್ದು, ಮಕ್ಕಳ ವಿದ್ಯಾಭ್ಯಾಸಕ್ಕೆ ಈ ಶಾಲೆಯಿರುವ ಸ್ಥಳ ಹಿತಕರ ಸನ್ನಿವೇಶದಿಂದ ಕೂಡಿದೆ.

### ೩೦. ಶ್ರೀ ಸಿದ್ಧಗಂಗಾ ಗ್ರಾಮಾಂತರ ಶಾಲಿವಾಹನ ಪ್ರೌಢಶಾಲೆ, ತಂಡಗ, ತುರುವೇಕೆರೆ ತಾಲ್ಲೋಕು

ಈ ಸಂಸ್ಥೆಯು ೧೯೭೦ ನೆಯ ಜೂನ್ ೮ ರಂದು ಜನ್ಮತಳೆಯಿತು. ಆರಂಭದ ವರ್ಷದಲ್ಲಿ ೪೯ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ಇಬ್ಬರು ಉಪಾಧ್ಯಾಯರು ಮತ್ತು ಒಬ್ಬ ಸೇವಕ ಇದ್ದರು. ೧೯೭೮ ರಲ್ಲಿ ೧೪೯ ವಿದ್ಯಾರ್ಥಿಗಳು ಐದು ಮಂದಿ ಉಪಾಧ್ಯಾಯರು, ನಾಲ್ವರು ಸೇವಕ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದರು. ಈ ಸಂಸ್ಥೆಯ ಕಟ್ಟಡಕ್ಕೆ ಶ್ರೀಶ್ರೀಗಳವರಿಂದ ಶಂಕುಸ್ಥಾಪನಾ ಕಾರ್ಯವು ನೆರವೇರಿದೆ. ಕ್ಷಿಪ್ರದಲ್ಲಿಯೇ ಈ ಶಾಲೆ ಸ್ವಂತ ಕಟ್ಟಡವನ್ನು ಹೊಂದುವ ಶುಭ ಸೂಚನೆಗಳಿವೆ.

**೩೧. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಹಿರೇಹಳ್ಳಿ, ತುಮಕೂರು ತಾಲ್ಲೋಕು**

ಈ ಪ್ರೌಢಶಾಲೆಯು ೧೯೭೦ ರ ಜೂನ್ ೧೭ ರಂದು ಆರಂಭವಾಯಿತು, ಆ ವರ್ಷದಲ್ಲಿ ೨೯ ವಿದ್ಯಾರ್ಥಿಗಳು ದಾಖಲಾತಿಯನ್ನು ಪಡೆದಿದ್ದರು. ಉಪಾಧ್ಯಾಯ ಸಿಬ್ಬಂದಿಯವರು ೪ ಮಂದಿ ಇದ್ದರು. ೧೯೭೮-೭೯ ನೆಯ ಸಾಲಿನಲ್ಲಿ ೨೭೦ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೧೫ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥೆಯು ಸ್ವಂತ ಕಟ್ಟಡವನ್ನು ಹೊಂದಿ ಮಕ್ಕಳ ಅಭ್ಯಾಸಕ್ಕೆ ಅನುಕೂಲಕರ ವಾತಾವರಣವನ್ನು ಪಡೆದು ಉತ್ತಮ ಭವಿಷ್ಯದತ್ತ ಮುನ್ನಡೆದಿದೆ.

**೩೨. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಅರೆಯೂರು, ತುಮಕೂರು ತಾಲ್ಲೋಕು**

ಈ ಶಾಲೆಯು ದಿನಾಂಕ ೧೮ ಜೂನ್ ೭೦ರಂದು ಜನ್ಮ ತಳೆಯಿತು. ಆರಂಭದ ವರ್ಷದಲ್ಲಿ ೪೧ ಮಂದಿ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದರು. ಅದು ೩ ಮಂದಿ ಅಧ್ಯಾಪಕ ವರ್ಗದವರನ್ನು ಒಬ್ಬ ಶಾಲಾ ಸೇವಕನನ್ನು ಹೊಂದಿದ್ದಿತು. ೧೯೭೮–೭೯ ರಲ್ಲಿ ೧೪೬ ಮಂದಿ ವಿದ್ಯಾರ್ಥಿಗಳು ಈ ಸಂಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿದ್ದರು. ಏಳು ಮಂದಿ ಉಪಾಧ್ಯಾಯರೂ. ನಾಲ್ಕು ಮಂದಿ ಇತರ ಸಿಬ್ಬಂದಿಯವರು ಆಗ ಸೇವೆ ಸಲ್ಲಿಸುತ್ತಿದ್ದರು. ಈ ಸಂಸ್ಥೆಯು ಸ್ವಂತ ಕಟ್ಟಡವನ್ನು ಹೊಂದಿ ಅಭ್ಯಾಸ ಯೋಗ್ಯ ಸಂಸ್ಥೆಯೆನಿಸಿದೆ. ಇಲ್ಲಿನ ಉಪಾಧ್ಯಾಯರು ಸಾರ್ವಜನಿಕರ ಸಹಾಯದಿಂದ ನೂತನ ವಿಜ್ಞಾನ ಪ್ರಯೋಗಾಲಯವೊಂದನ್ನು ನಿರ್ಮಿಸಲು ಪ್ರಾರಂಭಿಸಿದ್ದಾರೆನ್ನುವುದು ಸ್ತುತ್ಯಾರ್ಹವಾದುದು.

**೩೩. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಅದಲಗೆರೆ, ಗುಬ್ಬಿ ತಾಲ್ಲೋಕು**

೧೯೭೦ನೆಯ ಸಾಲಿನಲ್ಲಿ ಈ ಸಂಸ್ಥೆ ತೆರೆಯಲ್ಪಟ್ಟಿತು. ಅಂದು ೩೧ ಮಂದಿ ವಿದ್ಯಾರ್ಥಿಗಳು ಇದ್ದರು. ೩ ಮಂದಿ ಉಪಾಧ್ಯಾಯ ಸಿಬ್ಬಂದಿಯವರಿದ್ದರು. ೧೯೭೮-೭೯ರಲ್ಲಿ ೧೫೪ ಮಂದಿ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದರು. ೬ ಮಂದಿ ಉಪಾಧ್ಯಾಯರಿದ್ದರು. ೪ ಮಂದಿ ಇತರ ಸಿಬ್ಬಂದಿವರ್ಗದವರು ಸೇವೆಸಲ್ಲಿಸುತ್ತಿದ್ದರು.

**೩೪. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಹಾಲನೂರು, ತುಮಕೂರು ತಾಲ್ಲೋಕು**

೧೯೭೦ರಲ್ಲಿ ಈ ಗ್ರಾಮಾಂತರ ಪ್ರೌಢಶಾಲೆಯು ಆರಂಭವಾಯಿತು. ಆ ಸ್ಥಾಪನೆಯ ವರ್ಷದಲ್ಲಿ ೪೦ ಮಂದಿ ವಿದ್ಯಾರ್ಥಿಗಳಿದ್ದರು. ೩ ಮಂದಿ ಉಪಾಧ್ಯಾಯರು ಒಬ್ಬ ಸೇವಕ ಸಿಬ್ಬಂದಿಯವರಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೧೫೦ ಮಂದಿ ವಿದ್ಯಾರ್ಥಿಗಳು ವ್ಯಾಸಂಗಮಾಡುತ್ತಿದ್ದರು. ೧೧ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದರು.

**೩೫. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಬೆಳಧರ. ತುಮಕೂರು ತಾಲ್ಲೋಕು**

ಸ್ಥಳೀಯ ಗ್ರಾಮಸ್ಥರಿಂದ ೧೮–೬–೬೪ ರಂದು ಆರಂಭಿಸಲ್ಪಟ್ಟ ಈ ಸಂಸ್ಥೆಯನ್ನು ೧೫-೧-೭೧ ರಂದು ಶ್ರೀಕ್ಷೇತ್ರದ ಆಡಳಿತಾಧಿಕಾರಕ್ಕೆ ವಹಿಸಿಕೊಟ್ಟರು. ಆರಂಭದ ವರ್ಷದಲ್ಲಿ ೪೦ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು. ೪ಮಂದಿ ಉಪಾಧ್ಯಾಯ ಸಿಬ್ಬಂದಿಯವರಿದ್ದರು. ೧೯೭೮-೭೯ನೆಯ ಸಾಲಿನಲ್ಲಿ ೧೩೩ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೧೧ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದರು.

**೩೬. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ನಾರಸಂದ್ರ, ಮಾಗಡಿ ತಾಲ್ಲೋಕು**

ಈ ಸಂಸ್ಥೆಯು ತಾರೀಖು ೧–೬–೭೧ ರಂದು ಆರಂಭಗೊಂಡಿತು. ಆ ವರ್ಷದಲ್ಲಿ ೪೩ ಮಂದಿ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರು. ಇಬ್ಬರು ಬೋಧಕ ಸಿಬ್ಬಂದಿಯವರಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೧೯೦ ಮಂದಿ ಅಭ್ಯರ್ಥಿಗಳು ವ್ಯಾಸಂಗಮಾಡುತ್ತಿದ್ದರು. ೧೨ ಮಂದಿ ಉಪಾಧ್ಯಾಯ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದಾರೆ. ಈ ಸಂಸ್ಥೆಯು ಸುಂದರವಾದ ಸ್ವಂತ ಕಟ್ಟಡವನ್ನು ಹೊಂದಿದೆ. ಈ ಕಟ್ಟಡಕ್ಕೆ ೧) ಶ್ರೀ ಎಸ್. ಸಿದ್ಧಪ್ಪ, ಅಕ್ಕಿವ್ಯಾಪಾರಿಗಳು, ಬೆಂಗಳೂರು. ೨) ಶ್ರೀ ಎಸ್. ಸಿ. ಸಿದ್ಧಲಿಂಗಪ್ಪ, ಅಕ್ಕಿವ್ಯಾಪಾರಿಗಳು, ಬೆಂಗಳೂರು. ೩) ಶ್ರೀ ಎನ್. ಆರ್. ರೇವಣ್ಣ, ಎಸ್. ಆರ್. ಎಸ್. ಬಸ್ ಮಾಲೀಕರು, ತುಮಕೂರು ಇವರುಗಳು ಕೊಟ್ಟ ಔದಾರ್ಯದ ನೆರವು ಸ್ತುತ್ಯಾರ್ಹವಾದುದು.

**೩೭. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಮೂಗನಾಯಕನ ಕೋಟೆ, ಗುಬ್ಬಿ ತಾಲ್ಲೋಕು**

ಈ ಪ್ರೌಢಶಾಲೆಯು ಸ್ಥಳೀಯ ಗ್ರಾಮಸ್ಥರಿಂದ ಶ್ರೀ ಶಾರದಾ ವಿದ್ಯಾಸಂಸ್ಥೆಯೆಂಬ ಹೆಸರಿನಿಂದ ೧೯೬೧ರಲ್ಲಿ ಸ್ಥಾಪನೆಗೊಂಡು ೧೯೭೨ ರಲ್ಲಿ ಶ್ರೀಕ್ಷೇತ್ರದ ಆಶ್ರಯಕ್ಕೆ ಒಳಪಟ್ಟಿತು. ಪ್ರಾರಂಭದ ವರ್ಷದಲ್ಲಿ ೪೫ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು. ೮ ಮಂದಿ ಸಿಬ್ಬಂದಿ ವರ್ಗದವರಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೨೦೬ ಮಂದಿ ಅಭ್ಯಾಸ ಮಾಡುತ್ತಿದ್ದರು, ೧೨ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆಸಲ್ಲಿಸುತ್ತಿದ್ದರು. ಆಕರ್ಷಕ ಸ್ವಂತ ಕಟ್ಟಡದಿಂದ ಕೂಡಿದ ಈ ಸಂಸ್ಥೆಯು ಉತ್ತಮ ವಾತಾವರಣದಲ್ಲಿ ಮುನ್ನಡೆಯುತ್ತಿದೆ.

### ೩೮. ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ (ಬಿ.ಇಡಿ. ಕಾಲೇಜು) ತುಮಕೂರು

ತುಮಕೂರು ನಗರದಲ್ಲಿ ಈ ಮಹಾವಿದ್ಯಾಲಯವನ್ನು ೧೯೭೨ರಲ್ಲಿ ಸ್ಥಾಪಿಸಲಾಯಿತು. ಆರಂಭದ ವರ್ಷದಲ್ಲಿ ೧೫೦ ಮಂದಿ ಶಿಕ್ಷಣಾರ್ಥಿಗಳಿದ್ದರು. ಒಬ್ಬರು ಪ್ರಾಚಾರ್ಯರೂ ಸೇರಿ ೬ ಮಂದಿ ಪೂರ್ಣಾವಧಿಯ ಉಪನ್ಯಾಸಕರಿದ್ದರು. ೧೦ ಮಂದಿ ಒಪ್ಪೊತ್ತಿನ ಉಪನ್ಯಾಸಕರಿದ್ದರು ಮತ್ತು ಇತರ ಸಿಬ್ಬಂದಿಯವರು ಮೂರು ಮಂದಿ ಇದ್ದರು. ೧೯೭೮–೭೯ನೆಯ ಸಾಲಿನಲ್ಲಿ ೧೦೨ ಮಂದಿ ಶಿಕ್ಷಣಾರ್ಥಿಗಳಿದ್ದರು. ೮ ಮಂದಿ ಉಪನ್ಯಾಸಕರು, ೭ ಮಂದಿ ಇತರ ಸಿಬ್ಬಂದಿಯವರು ಈಗ ಸೇವೆ ಸಲ್ಲಿಸುತ್ತಿದ್ದಾರೆ. ಈ ಸಂಸ್ಥೆಯು ಸಿದ್ಧಗಂಗಾ ಪ್ರೌಢಶಾಲೆಯ ವಿಶಾಲ ಆವರಣದಲ್ಲಿ ಸುಸಜ್ಜಿತ ಸುಂದರವಾದ ಭವ್ಯ ಕಟ್ಟಡವನ್ನೂ ಹೊಂದಿದೆ. ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ಅಧಿಕ ಸಂಖ್ಯೆಯ ರ್‍ಯಾಂಕುಗಳನ್ನು ಪಡೆದು ಸಂಸ್ಥೆ ತನ್ನದೇ ಆದ ಸ್ಥಾನವನ್ನು ಗಳಿಸಿಕೊಂಡಿದೆ. ಈ ಸಂಸ್ಥೆಯ ಆಶ್ರಯದಲ್ಲಿ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರಿಗೆ ಪ್ರತ್ಯೇಕವಾದ ಎರಡು ವಿದ್ಯಾರ್ಥಿನಿಲಯಗಳಿವೆ. ಪ್ರತಿ ವರ್ಷವೂ ಉತ್ತಮ ಫಲಿತಾಂಶದ ಕಾರಣ ನಮ್ಮ ಹಾಗೂ ನೆರೆಯ ರಾಜ್ಯಗಳಲ್ಲಿ ಈ ಸಂಸ್ಥೆ ಖ್ಯಾತಿಗಳಿಸಿದೆ.

### ೩೯. ಶ್ರೀ ಸಿದ್ಧಗಂಗಾ ನಿವೇದಿತಾ ಪ್ರೌಢಶಾಲೆ. ಕ್ಯಾತಸಂದ್ರ, ತುಮಕೂರು ತಾಲ್ಲೋಕು

ಈ ಶಾಲೆಯು ಸ್ಥಳೀಯರಿಂದ ತಾರೀಖು ೧–೬–೬೮ರಂದು ಆರಂಭಗೊಂಡು, ೧-೬-೭೫ರಂದು ಶ್ರೀ ಕ್ಷೇತ್ರದ ಆಡಳಿತಕ್ಕೆ ಸೇರ್ಪಡೆಯಾಯಿತು. ಈ ಶಾಲೆಯ ಆರಂಭದ ವರ್ಷದಲ್ಲಿ ೩೨ ವಿದ್ಯಾರ್ಥಿಗಳಿದ್ದರು. ೫ ಮಂದಿ ಅಧ್ಯಾಪಕ ಸಿಬ್ಬಂದಿಯವರಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೧೫೦ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ೧೦ ಮಂದಿ ಉಪಾಧ್ಯಾಯ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದಾರೆ.

### ೪೦. ಶ್ರೀ ಸಿದ್ಧಗಂಗಾ ನೆಹರು ಗ್ರಾಮಾಂತರ ಪ್ರೌಢಶಾಲೆ, ಆದಿವಾಲ, ಚಿತ್ರದುರ್ಗ ಜಿಲ್ಲೆ

ಈ ನೆಹರು ಗ್ರಾಮಾಂತರ ಪ್ರೌಢಶಾಲೆಯು ೧೯೬೪ರಲ್ಲಿ ಶ್ರೀ ಯರಗುಂಟೇಶ್ವರ ವಿದ್ಯಾಸಂಸ್ಥೆಯವರ ಆಶ್ರಯದಲ್ಲಿ ಆದಿವಾಲ ಮತ್ತು ಸುತ್ತಮುತ್ತಣ ಗ್ರಾಮಸ್ಥರ ಪರಿಶ್ರಮದಿಂದ ಆರಂಭಗೊಂಡಿತು. ಆ ವರ್ಷದಲ್ಲಿ ೨೪ ವಿದ್ಯಾರ್ಥಿಗಳು ಇಬ್ಬರು ಅಧ್ಯಾಪಕ ಸಿಬ್ಬಂದಿಯವರಿದ್ದರು. ಶ್ರೀಯರಗುಂಟೇಶ್ವರ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ೧೧ ವರ್ಷದ ಸೇವೆ ಸಲ್ಲಿಸಿದ ಈ ಸಂಸ್ಥೆಯನ್ನು ಹೆಚ್ಚಿನ ಅಭಿವೃದ್ಧಿಯನ್ನು ಬಯಸಿ ೧೯೭೫ರ ಡಿಸೆಂಬರ್‌ನಿಂದ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಡಳಿತಾಧಿಕಾರಕ್ಕೆ ವಹಿಸಿಕೊಡಲಾಯಿತು. ಈ ಸಂಸ್ಥೆಯ ಬೆಳವಣಿಗೆಗೆ ಆದಿವಾಲ ಗ್ರಾಮದ ದಾನಿಗಳಾದ ಶ್ರೀ ಜಿ.ಎಸ್. ತಿಪ್ಪೇಸ್ವಾಮಿಯವರು, ಎಂ.ಕೆ. ಶಂಕರಪ್ಪನವರೂ ಬಹಳವಾಗಿ ಸೇವೆ ಸಲ್ಲಿಸಿದ್ದಾರೆ. ೧೯೭೯–೮೦ರ ಸಾಲಿನಲ್ಲಿ ೧೧೮ ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಆರಂಭದ ವರ್ಷದಿಂದ ಉತ್ತಮ ಫಲಿತಾಂಶವನ್ನು ಪಡೆಯುತ್ತಾ ಬಂದ ಈ ಶಾಲೆ ಜಿಲ್ಲೆಯಲ್ಲಿಯೇ ಹೆಸರು ಗಳಿಸಿದೆ.

### ೪೧. ಶ್ರೀ ಸಿದ್ಧಗಂಗಾ ಗ್ರಾಮಾಂತರ ಬಾಪೂಜಿ ಕೇಂದ್ರ ಪ್ರೌಢಶಾಲೆ, ಮಾಚೇನಹಳ್ಳಿ, ತುರುವೇಕೆರೆ ತಾಲ್ಲೋಕು

ಈ ಶಾಲೆಯು ೧೯೬೬ರ ಜೂನ್ ಒಂದನೆಯ ತಾರೀಖಿನಂದು ಪ್ರಾರಂಭವಾಯಿತು. ಪ್ರಾರಂಭದ ವರ್ಷದಲ್ಲಿ ೪೪ ಮಂದಿ ವಿದ್ಯಾರ್ಥಿಗಳು ದಾಖಲಾತಿಯನ್ನು ಪಡೆದರು. ನಾಲ್ಕು ಮಂದಿ ಉಪಾಧ್ಯಾಯ ವರ್ಗದವರಿದ್ದರು. ಇಬ್ಬರು ಸೇವಕ ಸಿಬ್ಬಂದಿಯವರಿದ್ದರು. ೧೯೭೯–೮೦ನೆಯ ಸಾಲಿನಲ್ಲಿ ೧೨೮ ಮಂದಿ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದು ೯ ಮಂದಿ ಅಧ್ಯಾಪಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದಾರೆ. ಈ ಶಾಲೆಗೋಸ್ಕರ ಕಟ್ಟಡವು ನಿರ್ಮಾಣದ ಹಂತದಲ್ಲಿದೆ. ಇಷ್ಟು ಶೀಘ್ರವಾಗಿ ಕಟ್ಟಡವನ್ನು ಒದಗಿಸಲು ಸಹಕರಿಸುತ್ತಿರುವ ಅಲ್ಲಿನ ಜನತೆಯ ಬೆಂಬಲ ಸ್ತುತ್ಯಾರ್ಹವಾದುದು.

### ೪೨. ಶ್ರೀ ಸಿದ್ಧಗಂಗಾ ಕುರುಡ ಮಕ್ಕಳ ಶಾಲೆ, ಶ್ರೀ ಸಿದ್ಧಗಂಗಾ

ದೃಷ್ಟಿಹೀನತೆ ಮಾನವನಿಗೆ ಬಹಳ ಪ್ರಾಚೀನ ಕಾಲದಿಂದಲೂ ಬಂದಿರುವ ಒಂದು ದೈವದ ಶಾಪ. ಅವರ ಜೀವನ ಬಹಳ ಕರುಣಾಜನಕವಾದುದು. ಈ ಕರುಣಾಜನಕ ಸನ್ನಿವೇಶವನ್ನು ಮನಗಂಡ ಶ್ರೀಶ್ರೀಗಳವರು ಅವರಿಗೆ ಜೀವನಕ್ಕೆ ಆಶ್ರಯವಾಗುವ ವ್ಯಾಸಂಗವನ್ನು ಕಲ್ಪಿಸಲು ಕರ್ನಾಟಕ ಅಂಧರ ಕಲ್ಯಾಣ ಸಂಘದ ತಜ್ಞರೊಡನೆ ಸಮಾಲೋಚಿಸಿದರು. ಅವರ ಸಲಹೆಯಂತೆ ದಿನಾಂಕ ೧–೮–೭೮ರಂದು ಶ್ರೀ ಕ್ಷೇತ್ರದಲ್ಲಿಯೇ ಈ ಸಂಸ್ಥೆಯನ್ನು ಸ್ಥಾಪಿಸಿದರು. ಎಲ್ಲಾ ರೀತಿಯ ವಿದ್ಯಾಸಂಸ್ಥೆಗಳನ್ನು ತೆರೆದು ಅನುಕೂಲ ಮಾಡಿ ಕೊಟ್ಟ ಶ್ರೀಗಳವರು ಈ ಬಗ್ಗೆ ಸುಮಾರು ವರ್ಷಗಳಿಂದಲೂ ಆಲೋಚಿಸುತ್ತಿದ್ದು ಈ ಸಮಯದಲ್ಲಿ ಕುರುಡರ ಶಾಲೆ ಆರಂಭವಾಗಿ ಅವರಿಗೆ ಬೆಳಕು ದೊರಕುವಂತಾಯಿತು. ಪ್ರಾರಂಭದಲ್ಲಿ ಒಬ್ಬ ಉಪಾಧ್ಯಾಯರು ಹಾಗೂ ಇಬ್ಬರು ವಿದ್ಯಾರ್ಥಿಗಳಿಂದ ಆರಂಭವಾದ ಈ ಶಾಲೆಯಲ್ಲಿ ಈಗ (೧೯೮೦ರಲ್ಲಿ) ಹದಿನಾಲ್ಕು ಮಂದಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಒಬ್ಬ ಮುಖ್ಯೋಪಾಧ್ಯಾಯರು, ಒಬ್ಬ ಸೇವಕ ಸಿಬ್ಬಂದಿಯವರು ಸೇವೆ ಸಲ್ಲಿಸುತ್ತಿದ್ದಾರೆ. ಈ ಮಕ್ಕಳಿಗೆ ಊಟ, ವಸತಿ ಹಾಗೂ ವಿದ್ಯೆ ಉಚಿತವಾಗಿ ಶ್ರೀ ಕ್ಷೇತ್ರದಿಂದಲೇ ದೊರೆಯುತ್ತಿವೆ. ದೃಷ್ಟಿಹೀನ ಮಕ್ಕಳಿಗೆ ಈ ರೀತಿಯ ಒಂದು

ವ್ಯಾಪಕ ಕಾರ್ಯವನ್ನು ಹಮ್ಮಿಕೊಂಡ, ಕರ್ನಾಟಕದ ಹಿಂದೂ ಧರ್ಮಾಧಿಕಾರಿಗಳಲ್ಲಿ ಶ್ರೀಶ್ರೀಗಳವರೇ ಮೊದಲಿಗರು ಎಂಬು ದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಪ್ರಗತಿಯ ಹಾದಿಯಲ್ಲಿ ಮುನ್ನಡೆಯುತ್ತಿರುವ ಈ ಶಾಲೆ ಏಳನೆಯ ತರಗತಿಯವರೆಗೆ ಸಾಮಾನ್ಯ ಶಿಕ್ಷಣ, ಸಂಗೀತ ಮತ್ತು ಚಿತ್ರದ ಕೆಲಸವೇ ಮೊದಲಾದ ವಿಶೇಷ ಶಿಕ್ಷಣವನ್ನು ಒದಗಿಸುವ ಸದುದ್ದೇಶವನ್ನು ಹೊಂದಿದೆ.

### ೪೩. ಶ್ರೀ ಸಿದ್ಧಗಂಗಾ ಗ್ರಾಮಾಂತರ ಸಂಸ್ಕೃತ ಪಾಠಶಾಲೆ, ಬ್ಯಾಲಕೆರೆ

ಸ್ಥಳೀಯ ಗ್ರಾಮಸ್ಥರಿಂದ ೭೮ ನೆಯ ಸಾಲಿನಲ್ಲಿ ಸ್ಥಾಪನೆಗೊಂಡ ಈ ಸಂಸ್ಥೆ ಯು ೧೯೭೭ ನೆಯ ಸಾಲಿನಲ್ಲಿ ಶ್ರೀಕ್ಷೇತ್ರದ ಆಡಳಿತಾಧಿಕಾರಕ್ಕೆ ವಹಿಸಲ್ಪಟ್ಟಿತು. ಈಗ ಈ ಸಂಸ್ಥೆಯಲ್ಲಿ ೬೦ ಮಂದಿ ವಿದ್ಯಾರ್ಥಿಗಳು. ಒಬ್ಬ ಉಪಾಧ್ಯಾಯರೂ ಇದ್ದಾರೆ.

ಗ್ರಾಮಾಂತರ ವಿದ್ಯಾಸಂಸ್ಥೆಗಳು ಆಯಾಯ ಸ್ಥಳೀಯ ಗ್ರಾಮಸ್ಥರ, ಉದಾರ ತ್ಯಾಗಜೀವಿಗಳ ಹಾಗೂ ನೆರೆಹೊರೆ ಗ್ರಾಮಸ್ಥರ ಸಹಾಯ ಸಹಕಾರಗಳಿಂದ ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತಾ ಬರುತ್ತಿವೆ. ಈ ಎಲ್ಲ ಸಂಸ್ಥೆಗಳು ಎಲ್ಲ ಸಮಾಜ ಬಾಂಧವರ ಹಿತದೃಷ್ಟಿಯಿಂದ ದುಡಿಯುತ್ತಿದ್ದು, ತಮ್ಮ ಸೇವಾಮನೋಭಾವನೆಯಿಂದ ಸಮಾಜ ಸರಕಾರಗಳ ಪ್ರೀತಿ ವಿಶ್ವಾಸಗಳಿಗೆ ಪಾತ್ರವಾಗಿವೆ. ಉತ್ತಮ ಶಿಕ್ಷಕರ ಸತತ ಪ್ರಯತ್ನ, ವಿದ್ಯಾರ್ಥಿಗಳ ಅತ್ಯುತ್ಸಾಹದಿಂದ ಸಂಸ್ಥೆಗಳ ಗುಣಮಟ್ಟ ದಿನೇದಿನೇ ಅಧಿಕಗೊಳ್ಳುತ್ತಿದೆ. ಶ್ರೀ ಕ್ಷೇತ್ರದಲ್ಲಿನ ಮತ್ತು ಗ್ರಾಮಾಂತರ ಸಂಸ್ಥೆಗಳಲ್ಲಿ ೭೯-೮೦ನೆಯ ಸಾಲಿನಲ್ಲಿ ಒಟ್ಟು ಸುಮಾರು ೧೯೪೯ ಮಂದಿ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಸುಮಾರು ೮೭೫ ಮಂದಿ ಅಧ್ಯಾಪಕ ಹಾಗೂ ಸಿಬ್ಬಂದಿಯವರು ಪವಿತ್ರ ಶಿಕ್ಷಣ ದೇವತೆಯ ಆರಾಧಕರಾಗಿ ಉತ್ತಮ ಸೇವೆ ಸಲ್ಲಿಸುತ್ತಿರುವುದು ಹೆಮ್ಮೆಯ ವಿಷಯವಾಗಿದೆ.

ಶ್ರೀ ಉದ್ದಾನ ಶಿವಯೋಗೀಶ್ವರರ ಕಾರುಣ್ಯಪೂರ್ಣ ದೂರದೃಷ್ಟಿಯು ಸಾಫಲ್ಯತೆಯಿಂದ ಕೂಡಿದುದಾಯಿತು. ಅವರ ವಿದ್ಯಾಪ್ರಸಾರ ಕಾರ್ಯ ಶತಾಧಿಕ ಸಹಸ್ರಾಧಿಕವಾಗಿ ಬೆಳೆಯಿತು. ಆ ಶಿವಯೋಗಿಸಿದ್ಧರ ಕರಕಂಜಸಂಜಾತ ಶ್ರೀಶ್ರೀ ಪೂಜ್ಯ ಶಿವಕುಮಾರ ಸ್ವಾಮಿಗಳ ತಪೋಬಲ ಅಪ್ರಮೇಯ ಅನ್ಯಾದೃಶ್ಯವಾದುದು. ಪ್ರಾಚೀನ ಕಾಲದಲ್ಲಿ ಹಲವು ಸಿದ್ಧಾಶ್ರಮ ಗಳು ಅನುಪಮ ಜ್ಞಾನ ವಿದ್ಯಾಕೇಂದ್ರಗಳಾಗಿದ್ದವೆಂದೂ ಅವುಗಳಲ್ಲಿ ಹತ್ತುಸಾವಿರ ವಿದ್ಯಾರ್ಥಿಗಳಿಗೆ ಆಶ್ರಯ ಕೊಟ್ಟ ಕಣ್ವಾದಿ ಮಹರ್ಷಿ ಮೊದಲಾದವರನ್ನು ಕುಲಪತಿಗಳೆಂದೂ ಕರೆದಿರುವುದು ತಿಳಿದು ಬರುತ್ತದೆ. ಅಂತಹ ಸಹಸ್ರಾರು ವಿದ್ಯಾರ್ಥಿಗಳಿಗೆ ಆಶ್ರಯ ನೀಡಿರುವ ಶ್ರೀ ಶ್ರೀಗಳವರು ಆಧುನಿಕ 'ಕುಲಪತಿ'ಗಳೆಂಬ ಅನ್ವರ್ಥಕ ನಾಮಕ್ಕೆ ಇಂದು ಅರ್ಹರೆಂಬುದು ಅತಿ ಶಯೋಕ್ತಿಯಲ್ಲ, ಉತ್ಪ್ರೇಕ್ಷೆಯಲ್ಲ.

## ೧. ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲಾ

(ಬೆಳೆದುಬಂದ ಬಗೆಯ ವಿಶೇಷ ವಿವರಣೆ)

–ವಿದ್ವಾನ್ ಕೆ. ಬಸವರಾಜು.

'ಯಸ್ಮಾತ್ ಭಾರತಾತ್ ಸ್ವಂ ಸ್ವಂ ಚರಿತ್ರಮ್ ।
ಶಿಕ್ಷೇರನ್ ಪೃಥಿವ್ಯಾಂ ಸರ್ವೇ ಮಾನವಾಃ' ॥

ಭರತ ಖಂಡ ಇಡೀ ಜಗತ್ತಿಗೆ ಬೆಳಕನ್ನು ಕೊಟ್ಟಂಥ ರಾಷ್ಟ್ರವಾಗಿದೆ. ಅದರ ಅನಂತ ದರ್ಶನಜ್ಯೋತಿಯ ಹೊಂಬೆಳಗಿನಲ್ಲಿ ಅನೇಕ ರಾಷ್ಟ್ರಗಳು ಬೆಳಕು ಕಂಡಿವೆ. ಅದು ಮಾನವಕೋಟಿಯ ಉದ್ಧಾರ ಪಥವನ್ನು ತೋರಿ ಅಖಂಡ ಜಗತ್ತಿನ ಭವಿಷ್ಯವನ್ನೇ ರೂಪಿಸಿದೆ. ಇಂತಹ ಮೂಲಭೂತವಾದ ಮಹಾನ್‌ಶಕ್ತಿ ಭರತಖಂಡಕ್ಕೆ ಎಲ್ಲಿಂದ ಬಂತು ? ಎಂಬ ಪ್ರಶ್ನೆ ಉದಯವಾದಾಗ, ಸಂಸ್ಕೃತ ಭಾಷಾಸಂಪತ್ತೇ ಅದಕ್ಕೆ ನಿದಾನ ಎಂಬುದೇ ಉತ್ತರವಾಗಿದೆ. ಇಂದೂ ಪಾಶ್ಚಾತ್ಯ ಭೌತಿಕವಿಜ್ಞಾನವು ಸಂಸ್ಕೃತಕ್ಕೆ ಕೆಲಮಟ್ಟಿಗಾದರೂ ಋಣಿಯಾಗಿದೆ. ಅದರ ಆಧಾರದಿಂದ ಗಣಿತ, ಜ್ಯೋತಿಷ್ಯ, ವೈದ್ಯ, ಖಗೋಳಾದಿ ವಿಷಯಗಳಲ್ಲಿ ಹೊಸ ಹೊಸ ಆವಿಷ್ಕಾರಗಳನ್ನು ಅನ್ವೇಷಣೆಗೈಯ್ಯುತ್ತಿದ್ದಾರೆ. ಮುಂಬರುವ ವರ್ಷಗಳಲ್ಲಿ ಆ ರಾಷ್ಟ್ರಗಳು ಇನ್ನೂ ಹೆಚ್ಚು ಹೆಚ್ಚು ಋಣಿಯಾಗಬಲ್ಲುವು. ಅಷ್ಟೇಕೆ, ಜಗತ್ತಿನ ಬೇರೆ ರಾಷ್ಟ್ರಗಳು ಅಜ್ಞಾನಾಂಧಕಾರದಲ್ಲಿ ಮುಳುಗಿದ್ದಾಗ, ವನೇಚರರೆನಿಸಿದ್ದಾಗ, ಭರತಖಂಡದ ಜನಾಂಗ ದಿವ್ಯಭವ್ಯಸಂಸ್ಕೃತಿಯ ಮೇರುವಿನ ಉತ್ತುಂಗಶಿಖರವನ್ನೇರಿ ಧವಳಕೀರ್ತಿಪತಾಕೆಯನ್ನು ಹಾರಿಸಿ ಜಗತ್ತಿನ ಕಣ್ಣುತೆರೆಸಿತ್ತು. ಇದು ಬರೀ ಅಭಿಮಾನದ ಮಾತಲ್ಲ; ಅತಿರೇಕದ ನುಡಿಯೂ ಅಲ್ಲ. ಪಾಶ್ಚಾತ್ಯ ಸತ್ಯಶೋಧಕರೂ, ದಾರ್ಶನಿಕರೂ, ಘನ ವಿದ್ವಾಂಸರೂ ಆದ ಅನೇಕರು ಈ ಬಗೆಗೆ ಮುಕ್ತಕಂಠದಿಂದ ಪ್ರಶಂಸೆ ಮಾಡಿದ್ದಾರೆ. ಅಂಥವರಲ್ಲಿ ಮೋಕ್ಷಮೂಲರ ಮಹಾಶಯನು 'All the Nations of the world dirived their civilization from India. India planted colonies in all parts of the world and that these colonies

afterwards became known as Egypt, Greece, Parsia etc., Scandinavia , China and other countries derived their civilization and learning from hindus` ಎಂದಿದ್ದಾನೆ.

ಆದರೆ ಕಾಲಚಕ್ರ ತಿರುಗಿದಂತೆ ಭಾರತೀಯರಿಗೆ ಪಾಶ್ಚಾತ್ಯರ ಸಂಪರ್ಕ ಒದಗಿದ ನಂತರ ಅವರ ಅತಿ ನಾಗರೀಕತೆಯ ಹುಚ್ಚು ಹೊಳೆಯಲ್ಲಿ ಭಾರತೀಯ ಸಂಸ್ಕೃತಿ ಕೊಚ್ಚಿಹೋಯಿತು. ಅದರೊಂದಿಗೆ ಸಂಸ್ಕೃತದ ಪ್ರಭಾವವೂ ಕುಗ್ಗಿತು. ಎಲ್ಲೆಲ್ಲೂ ಆ ಸಂಸ್ಕೃತಿಯ ಅಣಕು ತಾಂಡವಾಡತೊಡಗಿತು. ಹೀಗೆ ಧರ್ಮ–ಸಂಸ್ಕೃತಿ–ಸಂಸ್ಕೃತಗಳಿಗೆ ಒದಗಿದ ಗಂಡಾಂತರದ ಕಾಲದಲ್ಲಿ ಅವುಗಳನ್ನು ಉಳಿಸಿ ಬೆಳಸಿಕೊಂಡು ಬರಲು ಭರತಖಂಡದ. ಅದರಲ್ಲೂ ವಿಶೇಷವಾಗಿ ಕರ್ನಾಟಕದ ಮಠಮಾನ್ಯಗಳು ಹೆಣ ಗಾಡಿರುವುದು ಕಂಡುಬರುತ್ತದೆ. ಅಂತಹ ಮಠಗಳಲ್ಲಿ ಸಾರ್ವಜನಿಕ ಸೇವೆಯನ್ನೇ ತನ್ನ ಗುರಿಯನ್ನಾಗಿಟ್ಟುಕೊಂಡಿರುವ ಶ್ರೀ ಸಿದ್ಧಗಂಗಾ ಮಠದ ಚರಿತ್ರೆಯು ಉಜ್ವಲವಾಗಿ ಕಂಗೊಳಿಸುತ್ತಿರುವುದು ಎಲ್ಲರೂ ಕಂಡ ಸತ್ಯವಾಗಿದೆ.

ಸಿದ್ಧಗಂಗೆಯಲ್ಲಿ ದಾಸೋಹವು ಎಷ್ಟು ಪ್ರಾಚೀನವೊ, ವೇದ ಸಂಸ್ಕೃತಗಳ ಅಭ್ಯಾಸವೂ ಅಷ್ಟೇ ಪುರಾತನವಾದುದು. ಸುಮಾರು ಹತ್ತೊಂಬತ್ತನೆಯ ಶತಮಾನದಲ್ಲಿಯೇ ಶ್ರೀ ಕ್ಷೇತ್ರದಲ್ಲಿ ಸಂಸ್ಕೃತಾಭ್ಯಾಸವು ಪ್ರಾರಂಭವಾಗಿರುವುದು ಕಂಡುಬರುತ್ತದೆ. ಲೋಕೋಪಕಾರಕ ಸನ್ಮತಿಗಳೂ, ಪರಮ ದಾಸೋಹಂಭಾವಿಗಳೂ, ಶ್ರೀಕ್ಷೇತ್ರದಲ್ಲಿ ದಾಸೋಹ ಕ್ರಿಯೆಯನ್ನು ಸಂಸ್ಥಾಪಿಸಿದವರೂ, ಜನತೆಯಲ್ಲಿ ಆತ್ಮವಿದ್ಯೆಯ ಅರಿವನ್ನುಂಟುಮಾಡಬೇಕೆಂಬ ಘನೋದ್ದೇಶಿತರೂ ಆದ ಲಿಂಗೈಕ್ಯ ಶ್ರೀಅಟವೀಸ್ವಾಮಿಗಳವರು ಮೊದಲಿಗೆ ಮೇಲ್ಭಾಗದ ಗವಿಯಲ್ಲಿಯೇ ದಾಸೋಹಕ್ರಿಯೆ ಮತ್ತು ಸಂಸ್ಕೃತವೇದಾಭ್ಯಾಸವನ್ನು ಆರಂಭಿಸಿದರೆಂದು ಹೇಳಲಾಗುತ್ತಿದೆ. ನಂತರ ಮತಕೂರು (ಈಗಿನ ಮೈದಾಳ) ನಂಜುಂಡಶಿವಯೋಗಿಗಳೆಂಬ ಘನವಿದ್ವಾಂಸರು ಶ್ರೀಕ್ಷೇತ್ರಕ್ಕೆ ಆಗಮಿಸಿ ಶ್ರೀ ಅಟವೀಶ್ವರರ ದಿವ್ಯಪ್ರಭಾವಕ್ಕೊಳಗಾಗಿ ಇಲ್ಲಿಯೇ ನೆಲೆನಿಂತು ಸಂಸ್ಕೃತಅಧ್ಯಾಪನ ಸೇವೆಯನ್ನು ಮುಂದುವರಿಸಿದರು. ಮುಂದೆ ಇನ್ನೊಬ್ಬ ವಿದ್ವಾಂಸರೂ ಉಭಯಭಾಷಾ ವಿಶಾರದರೂ ಆದ ಮಾಗಡಿ ಶ್ರೀ ವೀರಪ್ಪ ಶಾಸ್ತ್ರಿಗಳೆಂಬುವರ ಸೇವೆಯೂ ಕೊಂಚ ಕಾಲ ಸಂದಿತು.

ಮುಂದೆ ಶ್ರೀ ಅಟವಿಸ್ವಾಮಿಗಳವರ ಕರಕಂಜಸಂಜಾತರೂ, ಅತ್ಯದ್ಭುತ ಆತ್ಮಶಕ್ತಿ ಸಂಪನ್ನರೂ, ನಿಗ್ರಹಾನುಗ್ರಹ ಸಮರ್ಥರೂ ಆದ ಶ್ರೀ ಉದ್ದಾನಶಿವಯೋಗಿಗಳವರು ೧೯೧೭ರಲ್ಲಿ ಸಂಸ್ಕೃತ ಪಾಠಶಾಲೆಯನ್ನು ಅಧಿಕೃತವಾಗಿ ಸಂಸ್ಥಾಪಿಸಿದರು. ಶ್ರೀ ಉದ್ಧಾನಸ್ವಾಮಿಗಳ ಸತ್ಸಂಕಲ್ಪಕಾರ್ಯಾನುಮೇಯವಾದುದು, ಅವರು ಅಂದು ಕಟ್ಟಿದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ವೇದ ಪಾಠಶಾಲೆ ಇಂದು ವಿಶ್ವವಿಖ್ಯಾತವಾಗಿ ಬೆಳೆದುನಿಂತಿದೆ. ಸರ್ವರಿಗೂ ಸಂಸ್ಕೃತಾಭ್ಯಾಸವು ಮರೀಚಿಕೆಯಾಗಿದ್ದ ಕಾಲದಲ್ಲಿ. ಅದರ ಶ್ರವಣವೂ ಕೂಡ ಪಾಪಕರ ಎಂಬ ಭಾವನೆ ಬಲಿತಿದ್ದ ಕಾಲದಲ್ಲಿ, ಸಂಸ್ಕೃತ ಪಾಠಶಾಲೆ ಮತ್ತು ಸಾರ್ವಜನಿಕ ವಿದ್ಯಾರ್ಥಿನಿಲಯಗಳನ್ನು ತೆರೆದು ಇಡೀ ಭರತಖಂಡಕ್ಕೆ ಮಾರ್ಗದರ್ಶಕರಾದರೆನ್ನಬಹುದು. ಹೀಗೆ ಅವರ ಸತ್ಪ್ರೇರಣೆಯ ಫಲವಾಗಿ ಕರ್ನಾಟಕದಲ್ಲಿ ಸಂಸ್ಕೃತಪಾಠಶಾಲೆಗಳ ಸ್ಥಾಪನೆಯ ಯುಗವೇ ಪ್ರಾರಂಭವಾಯಿತು.

ಪ್ರಥಮದಲ್ಲಿ ಓರ್ವ ಉಪಾಧ್ಯಾಯ ಮತ್ತು ೨೦ ಮಂದಿ ವಿದ್ಯಾರ್ಥಿಗಳು ಸಂಸ್ಕೃತ ಓದುತ್ತಿದ್ದರು. ಈಗ ಇರುವಂಥ ಭವ್ಯಮಂದಿರವೇನೂ ಇರಲಿಲ್ಲ. ಶ್ರೀಗಳವರು ಮಂಡಿಸುವ ಶ್ರೀಮಠದ ಪ್ರಾಂಗಣವೇ ಪಾಠಶಾಲೆಯಾಗಿತ್ತು. ಸಂಸ್ಕೃತಾಂಗ್ಲಭಾಷಾವಿಶಾರದರೂ ಮೊದಲು ಮಠದ ಉತ್ತರಾಧಿಕಾರಿಗಳೂ ಎನಿಸಿ, ೧೯೩೦ರಲ್ಲಿ ಲಿಂಗೈಕ್ಯರಾದ ಶ್ರೀ ಮರುಳಾರಾಧ್ಯ ಸ್ವಾಮಿಗಳು ಆಗ್ಗೆ ಸಂಸ್ಕೃತವನ್ನು ಅಧ್ಯಾಪನ ಮಾಡುತ್ತಿದ್ದರು. ಆಗ ಪಾಠಶಾಲೆಯು ಪಠ್ಯೇತರ ಚಟುವಟಿಕೆಗಳನ್ನೂ ನಡೆಸುತ್ತಿತ್ತು. ಅವುಗಳಲ್ಲಿ ಕಂಠಪಾಠಸ್ಪರ್ಧೆ, ಅಂತ್ಯಾಕ್ಷರೀಸ್ಪರ್ಧೆ,ಸಮಸ್ಯಾಪೂರ್ಣ. ಆಶುಭಾಷಣ ಮುಂತಾದವುಗಳು ಮುಖ್ಯವಾಗಿದ್ದುವು. ಶ್ರೀ ಉದ್ದಾನಸ್ವಾಮಿಗಳು ತರಗತಿ ನಡೆಯುವ ವೇಳೆಯಲ್ಲಿ ಮಂಚದಲ್ಲಿ ಸುಖಾಸೀನರಾಗಿ ವಿದ್ಯಾರ್ಥಿಗಳನ್ನು ಪರೀಕ್ಷಿಸುತ್ತಿದ್ದರು. ಅವರು ಅಮರಕೋಶವನ್ನು ಹೇಳುವಂತೆ ಮಕ್ಕಳನ್ನು ಕೇಳುತ್ತಿದ್ದರು. 'ದೈವಬಲಕ್ಕಿಂತ ಮನುಷ್ಯ ಪ್ರಯತ್ನವೇ ಹೆಚ್ಚು' ಮುಂತಾದ ಸಮಸ್ಯೆಗಳನ್ನು ಕೊಟ್ಟು ಚರ್ಚೆಮಾಡಿಸುತ್ತಿದ್ದರು. ಚೆನ್ನಾಗಿ ಹೇಳಿದವರಿಗೆ ಸಿಹಿ ಕೊಡುತ್ತಿದ್ದರು. ಮತ್ತು ಸಂಸ್ಕೃತ ಪರೀಕ್ಷೆಯಲ್ಲಿ ಉತ್ತಮವಾಗಿ ಪಾಸಾದವರಿಗೆ ಪಂಚೆ, ಮುಂತಾದ ಉಡುಗೊರೆಗಳನ್ನು ದಯಪಾಲಿಸುತ್ತಿದ್ದರು. ಇದೆಲ್ಲವೂ ಸಂಸ್ಕೃತ ಭಾಷೆಯ ಬಗ್ಗೆ ಅವರಿಗಿದ್ದ ಪ್ರೇಮ ಪ್ರೋತ್ಸಾಹಾದಿಗಳನ್ನು ದ್ಯೋತಿಸುತ್ತದೆ. ಹೀಗೆ ಚಿಕ್ಕದಾಗಿ ಪ್ರಾರಂಭಗೊಂಡ ಸಂಸ್ಕೃತ ವೇದಪಾಠಶಾಲೆ ಶ್ರೀಶ್ರೀಶಿವಕುಮಾರಸ್ವಾಮಿಗಳವರ ಅವಿಶ್ರಾಂತ ಪರಿಶ್ರಮದ ಫಲವಾಗಿ ೧೯೩೭ರಲ್ಲಿ ಮಹಾಪಾಠಶಾಲೆಯಾಗಿ (ಕಾಲೇಜಾಗಿ) ಪರಿವರ್ತನೆಗೊಂಡಿತು. ಮುಂದೆ ಅವರ ದಿವ್ಯ ಪುರೋದೃಷ್ಟಿಯಿಂದ ದಿನೇ ದಿನೇ ತೀವ್ರವಾಗಿ ಬೆಳೆದು ಬೆಳೆದು ಬೃಹದ್ರೂಪವನ್ನು ತಾಳಿತು. ೧೯೪೪ರಲ್ಲಿ ರಜತಮಹೋತ್ಸವವನ್ನು ಆಚರಿಸಿಕೊಂಡಿತು. ನಿಜಕ್ಕೂ ಅದು ಹೆಮ್ಮೆಪಡುವಂಥ ವಿಷಯವಾಗಿದೆ. ಏಕೆಂದರೆ ಖಾಸಗಿಯ ಸಂಸ್ಕೃತಮಹಾಪಾಠಶಾಲೆಗಳು ರಜತ ಮಹೋತ್ಸವವನ್ನು ಆಚರಿಸಿಕೊಳ್ಳುವಷ್ಟು ಸದೃಢವಾಗಿ ಬೆಳೆದು ಬರುವುದೇ ಅಪರೂಪ. ಹೀಗೆ ಅದು ಮುನ್ನಡೆದು ಮುಂದೆ ಘನಸರ್ಕಾರದವರ

ಮನ್ನಣೆ ಸಹಕಾರಗಳಿಂದಲೂ, ಸಾರ್ವಜನಿಕರ ಉದಾರದೇಣಿಗೆ ಸಹಾಯಗಳಿಂದಲೂ ೧೯೬೪ರಲ್ಲಿ ತನ್ನದೇ ಆದ ಭವ್ಯಮಂದಿರ ವನ್ನು ಪಡೆಯಿತು. ಆ ಭವ್ಯ ಮಂದಿರವು ಬೆಟ್ಟದ ಬುಡದಲ್ಲಿ ನಿಸರ್ಗದ ಮಡಿಲಲ್ಲಿ ಶ್ರೀಕ್ಷೇತ್ರಕ್ಕೆ ಕಳಸಪ್ರಾಯವಾಗಿ ಕಂಗೊಳಿ ಸುತ್ತಿದೆ. ಜಾತ್ರೆಯ ಸಮಯದಲ್ಲಿ ವಿದ್ಯುದ್ದೀಪಗಳಿಂದ ಅಲಂಕೃತವಾದಾಗಲಂತೂ ಅದರ ಅಂದ ಚಂದ ಅವರ್ಣನೀಯ.

ಈ ರೀತಿ ಅತ್ಯದ್ಭುತ ಕ್ರಿಯಾಸಂಪನ್ನರೂ. ಅಪಾರ ಸಂಸ್ಕೃತ ಪ್ರೇಮಿಗಳೂ ಆದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರ ಅಕ್ಷಯ ಕೃಪಾಶ್ರಯದಲ್ಲಿ ಈ ಸಂಸ್ಕೃತ ಮಹಾಪಾಠಶಾಲೆಯು ಯಾವ ಕೊರತೆ ಯಿಲ್ಲದೆ ಪರಿಪೂರ್ಣತೆಯತ್ತ ತೀವ್ರವಾಗಿ ಸಾಗಿ ಮುನ್ನಡೆಯುತ್ತ ಬಂದು ೧೯೭೨ ರಲ್ಲಿ ಮತ್ತೊಂದು ವಿಕ್ರಮವನ್ನು ಸ್ಥಾಪಿಸಿತು. ಅದೆಂದರೆ ಸುವರ್ಣ ಮಹೋತ್ಸವ ವನ್ನಾಚರಿಸಿಕೊಂಡುದು. ಆ ಸುವರ್ಣ ಮಹೋತ್ಸವಂತೂ ಕಾಲೇಜಿನ ಇತಿಹಾಸ ಸಂಪುಟದಲ್ಲಿ ಸುವರ್ಣಾಧ್ಯಾಯವನ್ನೇ ತೆರೆ ದಂತಹುದು. ಆಗ ಆ ಮಹಾಪಾಠಶಾಲೆಯು ೨೮ ಮಂದಿ ಉಪಾಧ್ಯಾಯ ಸಿಬ್ಬಂದಿ ವರ್ಗವನ್ನು, ೨೨೬೫ ಮಂದಿ ವಿದ್ಯಾರ್ಥಿ ಗಳನ್ನು ಹೊಂದಿತ್ತು. ಸಂಪ್ರತಿ ಅದು ೩೦೦೦ ವಿದ್ಯಾರ್ಥಿಗಳನ್ನೊಳಗೊಂಡು ಪ್ರೈಮರಿ, ಕಾವ್ಯ, ಸಾಹಿತ್ಯ ಹಾಗೂ ವಿದ್ವತ್ ಹಂತದಲ್ಲಿ ಅಲಂಕಾರ, ತರ್ಕ, ವ್ಯಾಕರಣ ಮತ್ತು ಶಕ್ತಿವಿಶಿಷ್ಟಾದ್ವೈತಗಳೆಂಬ ನಾಲ್ಕು ಶಾಸ್ತ್ರಗಳಲ್ಲಿ ಪರಿಪೂರ್ಣವಾಗಿ ವಿದ್ಯಾ ದಾನಗೈಯ್ಯುವ ಬೃಹತ್ ಕೇಂದ್ರವಾಗಿ ವಿಶ್ವದಾಖಲೆಯನ್ನು ಸಂಖ್ಯಾದೃಷ್ಟಿಯಿಂದ ಸ್ಥಾಪಿಸಿಕೊಂಡಿದೆ. ಜಾತಿ, ಮತ, ಪಂಥಗಳ ಭೇದವಿಲ್ಲದೆ ಹರಿಜನ ಗಿರಿಜನಾದಿ ಸಮಸ್ತ ಕುಲದವರೂ, ಅಷ್ಟೇ ಅಲ್ಲದೆ, ಮಹಮದೀಯ, ಕ್ರೈಸ್ತ ಮುಂತಾದ ಮತದವರೂ ಸಂಸ್ಕೃತವನ್ನು ಓದಿದುದು, ಓದುತ್ತಿರುವುದು ಈ ಕಾಲೇಜಿನ ವೈಶಿಷ್ಟ್ಯವಾಗಿದೆ. ನನಗೆ ತಿಳಿದ ಮಟ್ಟಿಗೆ ಈ ಕ್ರಮ ಬೇರೆ ಎಲ್ಲಿ ಯಾದರೂ ಉಂಟೆ ಎಂಬುದು ಅನುಮಾನ. ಹಿಂದಿನ ತಕ್ಷಶಿಲಾ, ನಲಂದಾ ಮಹಾವಿದ್ಯಾಲಯಗಳನ್ನು ನೆನಪಿಗೆ ತಂದು ಕೊಡುತ್ತಿರುವ ಈ ವಿದ್ಯಾಕೇಂದ್ರವು ೨೦ ನೆಯ ಶತಮಾನದಲ್ಲಿ ಸಂಸ್ಕೃತಾಭ್ಯಾಸದ ಹೊಸ ವಿಕ್ರಮದ ಶಕೆಯನ್ನೇ ಸ್ಥಾಪಿಸಿದೆ. ೧೯೮೦ ರಲ್ಲಿ ಇದು ತನ್ನ ವಜ್ರಮಹೋತ್ಸವವನ್ನು ಆಚರಿಸಿಕೊಳ್ಳಲಿದೆ.

**ಸಂಸ್ಕೃತ ಮಹಾಪಾಠಶಾಲೆಯ ಅಂಗ ಸಂಸ್ಥೆಗಳು**

ಸಂಸ್ಕೃತ ಮಹಾಪಾಠಶಾಲಾ ವಟವಿಟಪಿ ಬೃಹತ್ತಾಗಿ, ವಿಯಚ್ಚುಂಬಿಯಾಗಿ ಬೆಳೆದು ಅನೇಕ ಅಂಗಸಂಸ್ಥೆಗಳನ್ನು ಮೈಗೂಡಿಸಿಕೊಂಡು ನಾಲ್ಕುದಿಕ್ಕುಗಳಿಗೂ ತನ್ನ ಶಾಖೋಪಶಾಖೆಗಳನ್ನು ಪಸರಿಸಿದೆ. ವೇದಪಾಠಶಾಲಾ, ಜ್ಯೋತಿಷ್ಯ ವಿಭಾಗ, ವಾಣಿಜ್ಯ ತರಗತಿ ಮತ್ತು ಕನ್ನಡ ಪಂಡಿತ ಶಿಕ್ಷಣ ಮಹಾವಿದ್ಯಾಲಯಗಳು ಅದರ ನಿಕಟಾಂಗವರ್ತಿಗಳಾಗಿವೆ.

**ವೇದ ಪಾಠಶಾಲಾ**

ಪರಮ ದಾಸೋಹಮೂರ್ತಿಗಳಾದ ಶ್ರೀ ಶ್ರೀ ಅಟವೀಸ್ವಾಮಿಗಳವರೇ ಕೆಲವು ವಟುಗಳಿಗೆ ಮೊದಲಿಗೆ ವೇದಾ ಧ್ಯಯನ ಮಾಡಿಸುತ್ತಿದ್ದರು. ನಂತರ ಅದಕ್ಕೆ ಕೆಲವು ಕಾಲ ಕಾರಣಾಂತರದಿಂದ ವಿಚ್ಛಿತ್ತಿ ಒದಗಿತ್ತಾದರೂ ಮುಂದೆ ಶ್ರೀ ಉದ್ದಾನ ಶಿವಯೋಗಿಗಳವರ ಕೃಪಾಶ್ರಯದಿಂದ ೧೯೧೭ ರಲ್ಲಿ ಪುನರುಜ್ಜೀವನಗೊಂಡಿತು. ಅದ್ಯತನ ಅದು ಸಂಸ್ಕೃತ ಮಹಾಪಾಠಶಾಲೆಯ ನಿಕಟಾಂಗವರ್ತಿಯಾಗಿದ್ದು ನೂರಾರು ಮಂದಿ ವಟುಗಳು ವೇದಾಧ್ಯಯನ ನಡೆಸುತ್ತಿದ್ದಾರೆ. ವೇದಾಧ್ಯಯನಕ್ಕೆ ಇಲ್ಲಿರುವಂತೆ ಉತ್ತಮವಾದ ಅವಕಾಶವು ಅನ್ಯತ್ರ ವಿದ್ಯಾರ್ಥಿಗಳಿಗೆ ದೊರಕುವುದು ದುರ್ಲಭವೆಂದು ಧೈರ್ಯವಾಗಿ ಹೇಳಬಹುದು. ಮೊದಲು ಈ ಪಾಠಶಾಲೆ ಮುಜರಾಯಿ ಇಲಾಖೆಯಿಂದ ೬೦ ರೂಗಳ ಧನಸಹಾಯ ಪಡೆಯುತ್ತಿದ್ದು, ಈಗ ಶಿಕ್ಷಣ ಇಲಾಖೆಯ ಆಶ್ರಯಕ್ಕೊಳಪಟ್ಟು ಪೂರ್ಣ ಧನಸಹಾಯವನ್ನು ಪಡೆಯುತ್ತಿದೆ. ಅದರಲ್ಲಿ ದಕ್ಷರಾದ ಇಬ್ಬರು ವೇದ ವಿದ್ವಾಂಸರಿರುತ್ತಾರೆ. ವೇದಾಭ್ಯಾಸಕ್ಕೆ ಶ್ರೀ ಶ್ರೀಗಳವರು ನೀಡುತ್ತಿರುವ ಉತ್ತೇಜನ ಪ್ರೋತ್ಸಾಹಾದಿಗಳು ಸನಾತನ ಸಂಪ್ರದಾಯವನ್ನು ಉಳಿಸಿಕೊಂಡು ಬೆಳಸಿಕೊಂಡು ಬರಬೇಕೆನ್ನುವವರಿಗೆ ಆನಂದವನ್ನುಂಟುಮಾಡುವ ವಿಷಯವಾಗಿದೆ.

**ಜ್ಯೋತಿಷ್ಯ ವಿಭಾಗ**

ಸಂಸ್ಕೃತ–ವೇದಾಭ್ಯಾಸಗಳ ಜೊತೆಗೆ ಆಸಕ್ತರಾದ ವಿದ್ಯಾರ್ಥಿಗಳು ಜ್ಯೋತಿಷ್ಯವನ್ನೂ ಕಲಿಯುವ ಸದವಕಾಶವನ್ನು ಕಲ್ಪಿಸುವ ಉದ್ದೇಶದಿಂದ ಶ್ರೀಶ್ರೀಗಳವರು ಹತ್ತಾರುವರ್ಷಗಳ ಹಿಂದೆಯೇ ಜ್ಯೋತಿಷ್ಯ ವಿಭಾಗವನ್ನು ತೆರೆದಿದ್ದಾರೆ. ಸ್ವತಃ ಕೈಯಿಂದ ವೇತನವನ್ನು ನೀಡಿ ಮಕ್ಕಳ ಅನುಕೂಲಕ್ಕಾಗಿ ಒಬ್ಬ ಉಪಾಧ್ಯಾಯರನ್ನು ನೇಮಕಮಾಡಿರುತ್ತಾರೆ, ಅನೇಕ ವಿದ್ಯಾರ್ಥಿ ಗಳು ಇಲ್ಲಿ ಜ್ಯೋತಿಷ್ಯವನ್ನು ಆಸಕ್ತಿಯಿಂದ ಕಲಿಯುತ್ತಿದ್ದಾರೆ.

**ಕನ್ನಡ ಪಂಡಿತ ಶಿಕ್ಷಣ ಮಹಾವಿದ್ಯಾಲಯ**

ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆಯ ಅನೇಕ ಅಂಗಸಂಸ್ಥೆಗಳಲ್ಲಿ ಕನ್ನಡ ಪಂಡಿತ ಶಿಕ್ಷಣ ಮಹಾವಿದ್ಯಾ ಲಯವೂ ಒಂದು. ಪ್ರೌಢಶಾಲೆಗಳಲ್ಲಿ ಕನ್ನಡ ಭಾಷಾ ಬೋಧಕರ ಅಭಾವವು ತೀವ್ರವಾಗಿದ್ದ ಕಾಲದಲ್ಲಿ. ಅದರಲ್ಲಿಯೂ ಖಾಸಗೀ ಶಾಲೆಗಳಲ್ಲಿ ಕನ್ನಡ ಪಂಡಿತರು ದೊರೆಯದ ಕಾಲದಲ್ಲಿ ಆ ದುರ್ಭರವಾದ ಕೊರತೆಯನ್ನು ನಿವಾರಿಸುವ ಘನೋದ್ದೇಶದಿಂದ

೧೯೬೬ನೆಯ ಇಸ್ವಿಯ ಭೀಕರ ಆಹಾರಾಭಾವ ಕಾಲದಲ್ಲಿ ಅಸಂಖ್ಯಾತ ಜನರಿಗೆ ಅಚಲ ಧೈರ್ಯದಿಂದ ದಾಸೋಹವನ್ನೇರ್ಪಡಿಸಿದ್ದ ಶ್ರೀ ಕ್ಷೇತ್ರದ ಕಾರ್ಯಕ್ರಮವನ್ನು ಆಗಿನ ರಾಜ್ಯದ ಮುಖ್ಯ ಮಂತ್ರಿ ಶ್ರೀ ಎಸ್.ಎನ್. ರವರು ವೀಕ್ಷಿಸುವ ದೃಶ್ಯ.



೧೯೬೭ರಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ವೇದ ಮಹಾಪಾಠಶಾಲೆ, ಉಚಿತ ವಿದ್ಯಾರ್ಥಿ ನಿಲಯಗಳ ಸುವರ್ಣಮಹೋತ್ಸವ ಮತ್ತು ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ರಜತ ಮಹೋತ್ಸವಕ್ಕಾಗಮಿಸಿದ ಅಪಾರ ಭಕ್ತ ಕೋಟಿಯ ದೃಶ್ಯ.



ಮಹಾಮಹಿಮರಾದ ನಮ್ಮ ಗುರುಗಳ ಕೃಪೆಯಿಂದ ಎಲ್ಲವೂ ನಡೆದುಬಂದಿದೆ; ಬರುತ್ತಿದೆ.

**೧೯೭೩ರಲ್ಲಿ ಶ್ರೀಗಳವರ ರಜತಮಹೋತ್ಸವ**

ಮತ್ತು

**ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ವೇದ ಮಹಾಪಾಠಶಾಲೆಗಳ**
**ಉಚಿತ ವಿದ್ಯಾರ್ಥಿನಿಲಯದ ಸುವರ್ಣ ಮಹೋತ್ಸವಗಳು**
ವೈಭವೋಪೇತವಾಗಿ ಮೂರು ದಿನ ನೆರವೇರಿದ ಸಮಯದ
ವಿವಿಧ ಸಮಾರಂಭಗಳ ದೃಶ್ಯಗಳು.

ಅನ್ನದಾತರಿಗೆ ಕೃತಜ್ಞತೆಯ ಹೂಮಳೆಗರೆವ ಹಳೆಯ ವಿದ್ಯಾರ್ಥಿಗಳು→







ಶಿವಾನುಭವ ಸಮ್ಮೇಲನ



ಸ್ವರ್ಣಮಹೋತ್ಸವ ಉದ್ಘಾಟನೆ



ಶ್ರೀಕ್ಷೇತ್ರದ ಸಮಾರಂಭದಲ್ಲಿ ಪಾಲ್ಗೊಳ್ಳುವ
ಭಕ್ತವೃಂದದ ಒಂದು ನೋಟ





ಸ್ವರ್ಣಮಹೋತ್ಸವ

ಶ್ರೀಗಳವರ

ಸುವರ್ಣಮಹೆ





ಸಮಾರಂಭದಲ್ಲಿ ಪಾಲ್ಗೊಂಡ
ಮೂರುಸಾವಿರ ಮಠದ ಶ್ರೀಗಳು ↑




ಸಾಹಿತ್ಯ ಸಮ್ಮೇಳನ:
ಶ್ರೀ ಜ.ಚ.ನಿ. ಮತ್ತು ದೇ.ಜ.ಗೌ.

ೋತ್ಸವ ಮತ್ತು
ಯದ ದೃಶ್ಯಗಳು



ಕ್ಷೇತ್ರದ ವಿದ್ಯಾಸಂಸ್ಥೆಗಳನ್ನು ಹುಟ್ಟುಹಾಕಿದ
ಕಾರಣಿಕ ತ್ರಿವಿಧ ದಾಸೋಹಿ
ಲಿಂ. ಉದ್ದಾನ ಶಿವಯೋಗಿಗಳಿಗೆ ನಮೋನಮಃ
(ಬೆಂಗಳೂರು ಮೇಯರ್ ತಿವಾರಿ)

‘ಸಮರ್ಪಣೆ’ ಎಂಬ ಗ್ರಂಥ ಸಮರ್ಪಣೆ ಶ್ರೀ ಜಿ. ಶಿವಪ್ಪನವರಿಂದ



ಅನ್ನ–ನೀರು–ನೆಳಲು–ಉಪದೇಶವಿತ್ತು ಸಾಕಿ ಸಲಹಿದ ಶ್ರೀಗಳವರಿಗೆ ಹಳೆಯ
ವಿದ್ಯಾರ್ಥಿಗಳ ಬಿನ್ನವತ್ತಳೆ ಸಹಿತ ಪ್ರಣಾಮ ಸಮರ್ಪಣೆ



ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯ ಪ್ರಾರಂಭ
ಶ್ರೀ ಹುಚ್ಚಮಾಸ್ತಿಗೌಡರಿಂದ





ರಾಜ್ಯದ ಗವರ್ನರ್ ಮತ್ತು ಮುಖ್ಯಮಂತ್ರಿಗಳು ಕ್ಷೇತ್ರದಲ್ಲಿ
ಏರ್ಪಡಿಸಿದ್ದ ಗ್ರಂಥಪ್ರದರ್ಶನ ವೀಕ್ಷಣೆಯಲ್ಲಿ

ಶ್ರೀ ಪುಟ್ಟಸ್ವಾಮಪ್ಪನವರಿಂದ ಶ್ರೀಗಳವರಿಗೆ
ರಜತಕರಂಡ ಸಮರ್ಪಣೆ



ಶೃಂಗೇರಿ ಶಾರದಾಪೀಠದ ಜಗದ್ಗುರುಗಳೊಡನೆ



ಶ್ರೀ ಹೆಚ್. ತಿಪ್ಪೇರುದ್ರಯ್ಯನವರಿಗೆ ಆಶೀರ್ವಾದ



ಕನಕಪುರ ದೇಗುಲಮಠದ ಶ್ರೀಗಳವರಿಗೆ ಚಿನ್ನವತ್ತಳೆ ಸಮರ್ಪಣೆ



ಸುತ್ತೂರು ಶಿವರಾತ್ರಿರಾಜೇಂದ್ರ ಜಗದ್ಗುರುಗಳೊಡನೆ

ಕನಕಪುರ ದೇಗುಲಮಠ ಶಿವಯೋಗಿಗಳಿಂದ ಶ್ರೀಗಳವರ ರಜತಮಹೋತ್ಸವ ಸ್ಮಾರಕ ಗ್ರಂಥ ಭಾಂಡಾರದ ಶಂಕುಸ್ಥಾಪನೆ (ಪ್ರಫುಲ್ಲಭವನ)



ಗ್ರಂಥಭಾಂಡಾರದ ನಿರ್ಮಾಣ ಹಂತದಲ್ಲಿ



ಪೂರ್ಣಗೊಂಡ ಗ್ರಂಥಭಾಂಡಾರ

ಶ್ರೀಶ್ರೀಗಳವರು ಶ್ರೀ ಕ್ಷೇತ್ರದಲ್ಲಿ ೧೯೬೫ ರಲ್ಲಿ ಕನ್ನಡ ಪಂಡಿತ ಶಾಲೆಯೊಂದನ್ನು ಸಂಸ್ಥಾಪಿಸಿದರು. ಇಡೀ ಕರ್ನಾಟಕದಲ್ಲಿರುವುದು ಎರಡೇ ಕನ್ನಡ ಪಂಡಿತ ಕಾಲೇಜುಗಳು. ಒಂದು ಮೈಸೂರಿನಲ್ಲಿ ಸರ್ಕಾರದ ವತಿಯಿಂದ ನಡೆಯುತ್ತಿರುವುದು. ಮತ್ತೊಂದು ಶ್ರೀಶ್ರೀಗಳವರ ಕೃಪಾಶ್ರಯದಲ್ಲಿ ನಡೆಯುತ್ತಿರುವ ಈ ಕಾಲೇಜು. ಕೇವಲ ೧೨ ಮಂದಿ ವಿದ್ಯಾರ್ಥಿಗಳು ಮತ್ತು ಇಬ್ಬರು ಉಪಾಧ್ಯಾಯರುಗಳಿಂದಾರಂಭವಾದ ಈ ಮಹಾವಿದ್ಯಾಲಯವು ಈಗ ಆರುಮಂದಿ ಅಧ್ಯಾಪಕರು ಹಾಗೂ ನಲವತ್ತು ಮಂದಿ ಅಧ್ಯೇತೃಗಳನ್ನೊಳಗೊಂಡಿರುತ್ತದೆ. ಈ ಸಂಸ್ಥೆಗೆ ಶ್ರೀಗಳಿಂದ ಸಂದ ಸೇವೆ ಸ್ಮರಣೀಯವಾದುದು. ಪ್ರಾಚೀನ ಪ್ರೌಢಶಿಕ್ಷಣ ಪರಂಪರೆಯನ್ನು ಉಳಿಸಿಕೊಂಡುಬರುವ ಉದ್ದೇಶದಿಂದಲೂ ಕನ್ನಡ ಪಂಡಿತ ಶಾಲೆಯನ್ನು ಎಂತು ಶ್ರೀಗಳು ಸ್ಥಾಪಿಸಿದರೋ ಅಂತೆಯೇ ಕನ್ನಡ ಪಂಡಿತರ ಸ್ಥಾನಮಾನಗಳನ್ನು ಉನ್ನತಿಗೊಳಿಸಲು ಹೆಣಗಿದ್ದಾರೆ, ಹೆಣಗುತ್ತಿದ್ದಾರೆ. ೧೯೭೦ನೆಯ ಡಿಶೆಂಬರ್ ೨೭ನೇ ತಾರೀಖಿನ ದಿನ ಬೆಂಗಳೂರಿನಲ್ಲಿ ಜರುಗಿದ ೪೭ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಭಾಷಣದಲ್ಲಿ ಶ್ರೀಶ್ರೀಗಳವರು 'ಕನ್ನಡನಾಡಿನಲ್ಲಿ ಕನ್ನಡ ಪಂಡಿತರಿಗೆ ಸರಿಯಾದ ಸ್ಥಾನಮಾನಗಳು ಸಿಗಬೇಕು. ಅವರಿಗೆ ಇತರ ಪದವೀಧರರಂತೆ ವೇತನ ಇತ್ಯಾದಿ ಅಂಶಗಳಲ್ಲಿ ತಾರತಮ್ಯವಿಲ್ಲದಂತೆ ನೋಡಿಕೊಳ್ಳಬೇಕಾದುದು ಆದ್ಯಕರ್ತವ್ಯ...' ಮುಂತಾಗಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿ ಅದು ಕಾರ್ಯರೂಪಕ್ಕೆ ಬರುವಂತೆ ಶ್ರಮಿಸಿದರು. ತತ್ಫಲವಾಗಿ ಅನೇಕ ಸೌಲಭ್ಯಗಳು ಪಂಡಿತರ ಪಾಲಿಗೆ ಉಂಟಾದುವೆಂದು ಹೇಳಬಹುದು. ಶ್ರೀಶ್ರೀಗಳವರ ಸತ್ಪ್ರೇರಣೆಯ ಫಲವೋ ಎಂಬಂತೆ ಅನತಿಕಾಲದಲ್ಲಿಯೇ ಕನ್ನಡ ಪಂಡಿತರಿಗೆ ಮೈಸೂರು ವಿಶ್ವವಿದ್ಯಾನಿಲಯದವರು ಬಿ.ಇಡಿ. ಮತ್ತು ಕನ್ನಡ ಎಂ.ಎ ತರಗತಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಿಕೊಟ್ಟರು.

ಶ್ರೀಕ್ಷೇತ್ರದಲ್ಲಿ ಸ್ಥಾಪನೆಗೊಂಡಿರುವ ಈ ಕನ್ನಡ ಪಂಡಿತ ಶಿಕ್ಷಣ ಮಹಾವಿದ್ಯಾಲಯದಲ್ಲಿ ಅನೇಕರು ಪಂಡಿತರಾಗಿ ಇಂದು ನಾಡಿನಾದ್ಯಂತ ಭಾಷಾಧ್ಯಾಪನ ಕಾರ್ಯದಲ್ಲಿ ನಿರತರಾಗಿದ್ದಾರೆ.

**ಸಂಸ್ಕೃತ ಕಾಲೇಜಿನ ಪುಸ್ತಕ ಭಂಡಾರ**

ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯು ತನ್ನದೇ ಆದ ಸುಸಜ್ಜಿತವಾದ ಪುಸ್ತಕಭಂಡಾರವನ್ನು ಹೊಂದಿರುತ್ತದೆ. ಅದು ಶ್ರೀಶ್ರೀಗಳವರ ಬೆಳ್ಳಿಹಬ್ಬದ ಸವಿನೆನಪಿಗಾಗಿ ಸುಮಾರು ನಾಲ್ಕುಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣಗೊಂಡ ಪ್ರಫುಲ್ಲಭವನದಲ್ಲಿ ವ್ಯವಸ್ಥೆಗೊಂಡಿರುತ್ತದೆ. ಈ ಗ್ರಂಥಾಲಯದಲ್ಲಿ ಸುಮಾರು ೧೨,೦೦೦ಕ್ಕೂ ಮಿಕ್ಕ ಗ್ರಂಥಗಳು ಶೇಖರಿಸಲ್ಪಟ್ಟಿವೆ. ಅವುಗಳಲ್ಲಿ ಸುಮಾರು ಸಂಸ್ಕೃತ ೭೦೦೦, ಕನ್ನಡ ೨೫೦೦, ಇಂಗ್ಲೀಷ್ ೧೦೦೦೦, ಉರ್ದು, ಹಿಂದಿ, ಬಂಗಾಳಿ ೨೦೦, ತೆಲುಗು, ತಮಿಳು, ಮರಾಠಿ ಇತ್ಯಾದಿ ತಾಡವೋಲೆ—೧೦೦ ಹೀಗೆ ಅವನ್ನು ವಿಭಜಿಸಬಹುದು. ಅನ್ಯತ್ರ ಲಭ್ಯವಾಗದಿರುವ ಅತ್ಯಮೂಲ್ಯವಾದ ಅಪೂರ್ವ ಪುಸ್ತಕಗಳನ್ನು, ಓಲೆಗರಿ ಮುಂತಾದ ಪ್ರಾಚೀನ ಹಸ್ತಪ್ರತಿಗಳನ್ನು ಇಲ್ಲಿ ಸಂಗ್ರಹಿಸಿಡಲಾಗಿದೆ. ಕೇಂದ್ರ ಸರ್ಕಾರದ ವಿದ್ಯಾ ಇಲಾಖೆಯವರು, ಮತ್ತಿತರ ಇಲಾಖೆಯವರು ಪ್ರಕಟಿಸಿದ ಪುಸ್ತಕಗಳು ಉಚಿತವಾಗಿ ಬರುತ್ತವೆ. ಇವಲ್ಲದೆ ಶ್ರೀಶ್ರೀಗಳವರಿಗೆ ನಾಡಿನ ಗಣ್ಯಲೇಖಕರು, ಕವಿಗಳು, ಪ್ರಕಾಶಕರು ಕಾಣಿಕೆಯಾಗಿ ಅರ್ಪಿಸಿದ ಅನೇಕ ಅಮೂಲ್ಯ ಕೃತಿಗಳು ಇಲ್ಲಿವೆ. ಈ ಗ್ರಂಥಾಲಯದ ಜೊತೆಗೆ ಒಂದು ಓದುಗೋಣೆಯು (Reading Room) ಇದೆ. ಅಲ್ಲಿ ಅನೇಕ ವಿವಿಧ ಭಾಷೆಯ ಮಾಸಿಕ, ತ್ರೈಮಾಸಿಕ, ಷಾಣ್ಮಾಸಿಕ, ವಾರ್ಷಿಕ ಪತ್ರಿಕೆಗಳನ್ನು ಮತ್ತು ಹಲವಾರು ದೈನಿಕ ವೃತ್ತಪತ್ರಿಕೆಗಳನ್ನೂ ತರಿಸಲಾಗುತ್ತಿದೆ. ಇದೆಲ್ಲದರ ಸುವ್ಯವಸ್ಥೆಗೆ ಸಮರ್ಥ ಸಿಬ್ಬಂದಿ ವರ್ಗವು ಇರುತ್ತದೆ. ಒಟ್ಟಿನಲ್ಲಿ ಈ ಪುಸ್ತಕ ಭಂಡಾರದಲ್ಲಿರುವ ದರ್ಶನ, ಧರ್ಮ, ಶಾಸ್ತ್ರ, ಗಣಿತ, ಖಗೋಳ, ಭೂಗೋಳ, ಕಾವ್ಯ, ಕಲೆ ಮುಂತಾದ ಗ್ರಂಥಕೋಟಿಯು ಸಂಶೋಧನೆಗೆ ಸಾಕಷ್ಟು ಪೋಷಕವಾಗಿದೆ.

ಈ ಸಂಸ್ಕೃತ ಮಹಾಪಾಠಶಾಲೆಯು ಸಾವಿರಾರು ಮಂದಿಗೆ ಸಂಸ್ಕೃತಾಭ್ಯಾಸ ಮಾಡಿಸುತ್ತಿರುವ ಮಹಾವಿದ್ಯಾಲಯವಾಗಿ ವಿಶ್ವದಾಖಲೆಯನ್ನು ಸ್ಥಾಪಿಸಿಕೊಂಡಿರುವುದು ಭರತಖಂಡಕ್ಕೆ ಹೆಮ್ಮೆತರುವಂಥ ವಿಷಯವಾಗಿದೆ. ಅದರಲ್ಲೂ ಕರ್ನಾಟಕದ ಪುಣ್ಯವೇ ಸರಿ. ಅದು ಅನೇಕ ವ್ಯಕ್ತಿಗಳ ಆಧ್ಯಾತ್ಮಿಕ-ಸಾಂಸ್ಕೃತಿಕ ಶಕ್ತಿಸಂಪದಗಳನ್ನು ಸಂವೃದ್ಧಿಗೊಳಿಸಿದೆ. ಸಾವಿರಾರುಮಂದಿ ಎಳೆಯಮಕ್ಕಳ ತಿಳಿಮನಸ್ಸಿನಲ್ಲಿ ಸಾಹಿತ್ಯ, ಧರ್ಮ, ಸಂಸ್ಕೃತಿಯ ಸಂಸ್ಕಾರವನ್ನು ಯಥಾಶಕ್ತಿ ನೀಡಿ ಪೋಷಿಸಿಕೊಂಡುಬಂದಿದೆ. ಈ ಮಹಾಪಾಠಶಾಲೆಯಲ್ಲಿ ಸಂಸ್ಕೃತ ವಿದ್ಯಾಭ್ಯಾಸ ಮಾಡಿದ ಅನೇಕ ವಿದ್ವಾಂಸರು ಇಂದು ವಿಶ್ವವಿದ್ಯಾನಿಲಯಗಳಲ್ಲಿ ಶಾಲಾ ಕಾಲೇಜುಗಳಲ್ಲಿ ಪ್ರಾಚಾರ್ಯರಾಗಿ, ಪ್ರಾಧ್ಯಾಪಕರಾಗಿ, ಅಧ್ಯಾಪಕರಾಗಿ ಸೇವೆಸಲ್ಲಿಸುತ್ತ ಈ ಮಹಾಪಾಠಶಾಲೆಯ ಕೀರ್ತಿಗೊಂದು ಹಿಡಿದ ಕನ್ನಡಿಯಾಗಿ ಕಂಗೊಳಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಸಂಸ್ಕೃತ ಮಹಾಪಾಠಶಾಲೆ ಭಾರತದ ರಚನಾತ್ಮಕ ಕಾರ್ಯದಲ್ಲಿ ತನ್ನ ಪಾಲಿನ ಸೇವೆಯನ್ನು ಶಕ್ತಿಮೀರಿ ಮಾಡಿದೆ, ಮಾಡುತ್ತಿದೆಯೆಂದು ಹೇಳಲು ಅತೀವ ಹೆಮ್ಮೆಯೆನಿಸುತ್ತದೆ.

## ೧೯೪೯ ನೇ ಜೂನ್ ತಿಂಗಳಲ್ಲಿ ನಡೆದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯ ರಜತಮಹೋತ್ಸವದ ಸಂಕ್ಷೇಪ ವರದಿ :

ಯಾವುದೇ ಒಂದು ಸಂಸ್ಥೆಯ ಅಥವಾ ವ್ಯಕ್ತಿಯ ವಯೋಮಾನದಲ್ಲಿ ಪಂಚವಿಂಶತಿ, ಪಂಚಾಶತ, ಷಷ್ಠ್ಯಬ್ದಿ, ಶತಮಾನ ಈ ಘಟ್ಟಗಳು ವಿಶೇಷ ಪರ್ವಸ್ಥಳಗಳು. ಏಕೆಂದರೆ ಅನಿತು ನಿಡುಬಾಳಿನ ಮುನ್ನಡೆಯಲ್ಲಿ ಸಂಭವಿಸಬಹುದಾದ ಎಡರು ತೊಡರುಗಳನ್ನು, ಕಷ್ಟಸುಖಗಳನ್ನು, ಉಬ್ಬರ ಇಳಿತಗಳನ್ನು ಜೀರ್ಣಿಸಿಕೊಂಡು ಈ ಗಡುವನ್ನು ತಲುಪುವ ಹೊತ್ತಿಗೆ ವ್ಯಕ್ತಿ ಜೀವನದಲ್ಲಿ ಅನುಭವ ಪರಿಪಕ್ವಗೊಂಡು ಸ್ವಾನುಭವ ದಕ್ಷತೆಗಳು ಮೈಗೊಂಡು ಸ್ಥಿರಗೊಳ್ಳುತ್ತವೆ. ಉನ್ನತ ವ್ಯಕ್ತಿತ್ವದ ಬೆಳವಣಿಗೆಯೂ ಆಗುತ್ತದೆ. ತತ್‌ಸಂಕೇತಾರ್ಥವಾಗಿ, ಚಿರನೆನಪಿಗಾಗಿ ರಜತೋತ್ಸವ, ಸ್ವರ್ಣೋತ್ಸವ, ವಜ್ರೋತ್ಸವ, ಶತಮಾನೋತ್ಸವಗಳನ್ನು ವಿಜೃಂಭಣೆಯಿಂದ ಆಚರಿಸಿ, ಕೃತಾರ್ಥರಾಗುವುದು ಸತ್‌ಸಂಪ್ರದಾಯವಾಗಿದೆ. ಸಂಘಸಂಸ್ಥೆಗಳ ವಿಚಾರದಲ್ಲೂ ಈ ಮಾತು ಅನ್ವಯಿಸುತ್ತದೆ. ಅದರಂತೆ ಸಿದ್ಧಗಂಗಾ ಮಹಾಕ್ಷೇತ್ರದಲ್ಲಿ ಸ್ಥಾಪನೆಗೊಂಡ ಸಾಕ್ಷಾತ್ ಮಹಾವಿದ್ಯಾಲಯವು ತನ್ನ ರಜತ ಮಹೋತ್ಸವವನ್ನು ಅತಿ ವಿಜೃಂಭಣೆಯಿಂದ ೧೯೪೯ ಇಸ್ವಿ ಜೂನ್ ತಿಂಗಳ ೧೮ ಮತ್ತು ೧೯ನೆಯ ದಿನಾಂಕಗಳಂದು ಆಚರಿಸಿಕೊಂಡುದೊಂದು ಹೆಮ್ಮೆಯ ವಿಚಾರ. ಈ ಉತ್ಸವದ ಅಂಗವಾಗಿ ಸಾಹಿತ್ಯಗೋಷ್ಠಿ, ವಿದ್ವತ್‌ಗೋಷ್ಠಿ, ಸನ್ಮಾನ ಸಮಾರಂಭ, ಸಾರ್ವಜನಿಕ ಸಮಾರಂಭ, ಶಿವಾನುಭವ ಸಮ್ಮೇಲನ, ಸರ್ವಧರ್ಮಸಮ್ಮೇಳನಾದಿ ಅನೇಕ ಸಮಾರಂಭಗಳನ್ನು ಏರ್ಪಡಿಸಲಾಗಿತ್ತು. ೧೮-೬-೪೯ ರಂದು ಬೆಳಿಗ್ಗೆ ಸಮಾರಂಭದ ಉದ್ಘಾಟನೆಯನ್ನು ಆಗಿನ ಮೈಸೂರಿನ ಸುಪ್ರಸಿದ್ಧ ದಿವಾನರಾದ ಶ್ರೀ ರಾಮಸ್ವಾಮಿಮೊದಲಿಯಾರ್‌ರವರು ನೆರವೇರಿಸಿದರು. ಅಧ್ಯಕ್ಷ ಪೀಠವನ್ನು ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆ.ಸಿ. ರೆಡ್ಡಿಯವರು ಅಲಂಕರಿಸಿದ್ದರು. ಶ್ರೀ ರಾಮಸ್ವಾಮಿ ಮೊದಲಿಯಾರ್ ಉದ್ಘಾಟನಾ ಭಾಷಣ ಮಾಡುತ್ತಾ 'ಜನತೆಯಲ್ಲಿ ಆತ್ಮವಿದ್ಯೆಯನ್ನು ಪ್ರಸಾರ ಮಾಡಬೇಕೆಂಬ ಸತ್‌ಸಂಕಲ್ಪದಿಂದ ೧೯೧೭ರಲ್ಲಿಯೇ ಶ್ರೀ ಉದ್ದಾನಸ್ವಾಮಿಗಳವರು ಸ್ಥಾಪಿಸಿ ಜಾತಿಮತಪಂಥಗಳ ಭೇದವಿಲ್ಲದೆ ಸಮಸ್ತ ಕುಲದವರಿಗೂ ಸಂಸ್ಕೃತ ಕಲಿಕೆಯ ಸದಾವಕಾಶವನ್ನು ಕಲ್ಪಿಸಿದುದು ನಾಡಿನ ಸೌಭಾಗ್ಯವೇ ಸರಿ...' ಎಂದು ಮುಂತಾಗಿ ಮಾತನಾಡಿದರು. ನಂತರ ಶ್ರೀ ಕೆ.ಸಿ. ರೆಡ್ಡಿಯವರು ತಮ್ಮ ಅಧ್ಯಕ್ಷಪೀಠದಿಂದ 'ಶ್ರೀ ಸಿದ್ಧಗಂಗಾ ಕ್ಷೇತ್ರದ ಮಹಿಮೆ, ಅದು ಸಾಧಿಸಿರುವ ಸಾಧನೆಗಳು ಬಹು ದೊಡ್ಡವು. ಭರತಖಂಡದ ಸಂಸ್ಕೃತಿಯನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿರುವ ಮಠಮಾನ್ಯಗಳಲ್ಲಿ ಇದು ಅಗ್ರವರ್ತಿಯೆಂದರೆ ತಪ್ಪಾಗದು. ಆಂಗ್ಲ ಸಂಸ್ಕೃತಿಯು ಸರ್ವತ್ರ ಮೆರೆಯುತ್ತಿರುವ ಈ ಕಾಲದಲ್ಲಿ ಭರತಖಂಡದ ಸಂಸ್ಕೃತಿ-ಧರ್ಮಗಳು ಹೆಪ್ಪುಗಟ್ಟಿ ನಿಂತಿರುವ ಸಂಸ್ಕೃತವನ್ನು ಕಲಿಸಲು ಅಂದು ಸಣ್ಣಪ್ರಮಾಣದಲ್ಲಿ ಶಾಲೆಯನ್ನು ಸ್ಥಾಪಿಸಿ, ಬೆಳಸಿ, ಕಾಲೇಜಾಗಿ ಪರಿವರ್ತಿಸಿ ಇಂದು ರಜತೋತ್ಸವವನ್ನು ಆಚರಿಸುತ್ತಿರುವುದು ಹೆಮ್ಮೆ ಪಡುವಂಥ ವಿಷಯವೇ ಆಗಿದೆ...' ಮುಂತಾಗಿ ನುಡಿದರು. ವಂದನಾರ್ಪಣೆಯೊಂದಿಗೆ ಅಂದಿನ ಬೆಳಗಿನ ಸಮಾರಂಭವು ಮುಕ್ತಾಯಗೊಂಡಿತು.

ಉತ್ಸವದ ಅಂಗವಾಗಿ ಸಂಜೆ ಶಿವಾನುಭವ ಸಮ್ಮೇಲನವನ್ನು ಏರ್ಪಡಿಸಲಾಗಿತ್ತು. ಸಮ್ಮೇಲನದ ಉದ್ಘಾಟನೆಯನ್ನು ಅನೇಕ ಭಾಷಾವಿಶಾರದರೂ, ಮಹಾನ್ ದಾರ್ಶನಿಕರೂ, ಧವಳಕೀರ್ತಿಸಂಪನ್ನರೂ ಆದ ಅರಮನೆ ಪಂಚಗವಿ ಮಠಾಧ್ಯಕ್ಷ ಶ್ರೀ ಗೌರೀಶಂಕರ ಮಹಾಸ್ವಾಮಿಗಳು ಮಾಡಿದರು. ಅಧ್ಯಕ್ಷ ಪದವಿಯನ್ನು ಶ್ರೀ ಶ್ರೀ ಸುತ್ತೂರು ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಅಲಂಕರಿಸಿದ್ದರು. ಶ್ರೀ ಶ್ರೀ ಗೌರೀಶಂಕರ ಮಹಾಸ್ವಾಮಿಗಳವರು ಉದ್ಘಾಟನಾ ಭಾಷಣ ಮಾಡುತ್ತ ಶ್ರೀಗಳವರನ್ನು ಕುರಿತು 'ನಿಮ್ಮದು ಮಹಾ ದಂದುಗ, ದೊಡ್ಡ ಶಿವಪೂಜೆ, ಉಪಮಾತೀತ ಶಿವಯೋಗ, ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಬಸವಾದಿ ಪ್ರಮಥರ ತೇಜೋವಿಶಿಷ್ಟ ನಡೆ...' ಮುಂತಾಗಿ ಪ್ರಶಂಸಿದರು. ಅಂದಿನ ಸಭೆಯು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳವರ ಅಧ್ಯಕ್ಷ ಭಾಷಣದೊಂದಿಗೆ ಸಮಾಪ್ತಿ ಪಡೆಯಿತು.

ಮಾರನೆಯ ದಿನ ೧೯-೬-೪೯ರಂದು ರಜತಮಹೋತ್ಸವದ ಅಂಗವಾಗಿ ಸರ್ವಧರ್ಮಸಮ್ಮೇಳನವನ್ನು ವ್ಯವಸ್ಥೆ ಮಾಡಲಾಗಿತ್ತು. ಮೈಸೂರಿನ ಅರಮನೆ ಪಂಚಗವಿಮಠಾಧ್ಯಕ್ಷರಾದ, ಜಗತ್ಪ್ರಸಿದ್ಧ ದಾರ್ಶನಿಕರಾದ, ಶ್ರೀಶ್ರೀ ಗೌರೀಶಂಕರಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಸಮ್ಮೇಳನದ ಉದ್ಘಾಟನೆಯನ್ನು ಅಂದಿನ ಮೈಸೂರು ಸಂಸ್ಥಾನದ ಸರ್ಕಾರದ ಸಚಿವರಾದ ಪಾಮಡಿ ಸುಬ್ಬಾಯಶೆಟ್ಟರು ನೆರವೇರಿಸಿದರು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಕೆ. ಗುರುದತ್, ಐ.ಎ.ಎಸ್. ಅವರು ವಹಿಸಿದ್ದರು. ಸಮ್ಮೇಳನದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಕ್ರಿಶ್ಚಿಯನ್, ಮುಸ್ಲಿಮ್, ಬೌದ್ಧ, ಜೈನಧರ್ಮಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಹೆಸರಾಂತ ಆ ಎಲ್ಲಾ ಪ್ರತಿನಿಧಿಗಳು ತಮ್ಮ ತಮ್ಮ ಮತದರ್ಶನವನ್ನು ಪ್ರೌಢವಾಗಿ, ಸಾಧಾರವಾಗಿ, ಯುಕ್ತಾಯುಕ್ತವಾಗಿ ಮಂಡಿಸಿದರು. ಇವರಲ್ಲದೆ ಹಲವಾರು ಮಂದಿ ಹರ-ಗುರು-ಚರಮೂರ್ತಿಗಳೂ, ಘನವಿದ್ವಾಂಸರು ದಾರ್ಶನಿಕರು, ಸಹೃದಯರು, ಸಾಮಾನ್ಯರು ಎಲ್ಲರೂ ಸಭೆಯಲ್ಲಿ ಉಪಸ್ಥಿತರಿದ್ದರು. ಶ್ರೀ ಪಾಮಡಿ ಸುಬ್ಬರಾಯಶೆಟ್ಟರು ಉದ್ಘಾಟನಾ ಭಾಷಣ ಮಾಡುತ್ತ 'ಶ್ರೀ ಸಿದ್ಧಗಂಗಾಮಠ ಯಾವುದೇ ಒಂದು ಮತದವರ ಮಠವಲ್ಲ, ಸರ್ವಸದ್ಧರ್ಮಗಳ ನೆಲೆ

ವೀಡು...... ಎಂದರು. ಅಧ್ಯಕ್ಷರಾದ ಶ್ರೀ ಕೆ. ಗುರುದತ್ ಅವರು 'ಇಂಥ ಪುಣ್ಯಕ್ಷೇತ್ರದಲ್ಲಿ ಪುಣ್ಯಪುರುಷರಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನೇತೃತ್ವದಲ್ಲಿ, ಶ್ರೀ ಶ್ರೀ ಗೌರಿಶಂಕರ ಮಹಾಸ್ವಾಮಿಗಳವರ ದಿವ್ಯಸಮ್ಮುಖದಲ್ಲಿ ಸರ್ವಧರ್ಮ ಸಮ್ಮೇಳನವು ನಡೆಯುತ್ತಿರುವುದು ಔಚಿತ್ಯಭರಿತವಾಗಿದೆ ಮತ್ತು ಸಿದ್ಧಗಂಗೆಯ ಇತಿಹಾಸದಲ್ಲಿ ಬರೆದಿಡುವಂಥ ವಿಷಯವೂ ಆಗಿದೆ...' ಎಂದು ನುಡಿದರು. ಅಂದಿನ ಆ ಸಮಾರಂಭದೊಂದಿಗೆ ಸಂಸ್ಕೃತ ಮಹಾಪಾಠಶಾಲೆಯ ರಜತ ಮಹೋತ್ಸವವು ಯಶಸ್ವಿಯಾಗಿ ಮುಕ್ತಾಯವಾಯಿತು. ಎರಡು ದಿನಗಳ ಕಾಲ ಈ ಸಮಾರಂಭಕ್ಕೆ ನಾಡಿನ ಮೂಲೆಮೂಲೆಗಳಿಂದ ಅನೇಕ ಜನ ಭಕ್ತಾದಿಗಳು ಆಗಮಿಸಿ ತಮ್ಮ ಗೌರವಾದರಗಳನ್ನು ಪ್ರದರ್ಶಿಸಿದುದು ಚಿರಸ್ಮರಣೀಯವಾಗಿತ್ತು.

### ೧೯೭೨ ನೆಯ ಮೇ ತಿಂಗಳಲ್ಲಿ ನೆರವೇರಿದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ–ವೇದ ಮಹಾಪಾಠಶಾಲಾ ಸುವರ್ಣ ಮಹೋತ್ಸವದ ಸಂಕ್ಷಿಪ್ತ ವರದಿ

ಮಹಾತಪಸ್ವಿಗಳೂ, ಅನಿಮಿತ್ತ ಬಂಧುಗಳೂ ಎನಿಸಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ರಜತಮಹೋತ್ಸವವನ್ನು ಅತ್ಯಂತ ವೈಭವದಿಂದ ನಾಡಿನ ಸಮಸ್ತ ಜನಾಂಗವೂ ಸೇರಿ ೨೮-೫-೧೯೭೨ರಂದು ಆಚರಿಸಿ ತನ್ನ ಸೇವಾಕೈಂಕರ್ಯವನ್ನು ಅಭಿವ್ಯಕ್ತಗೊಳಿಸಿತು. ಇದೇ ಶುಭ ಸಂದರ್ಭದಲ್ಲಿ ಅವರು ಪೋಷಿಸಿಕೊಂಡು ಬಂದ ಮಹಾವಿದ್ಯಾಸಂಸ್ಥೆಯಾದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆಯ ಸುವರ್ಣಮಹೋತ್ಸವವನ್ನು ಆಚರಿಸಲಾಯಿತು. ಆ ಸಮಯದ ದೃಶ್ಯ ಅತ್ಯಂತ ಮನೋಹಾರಿಯಾಗಿತ್ತು. ಸಾಯಂಕಾಲ ಆರು ಗಂಟೆಗೆ ಪ್ರಾರಂಭವಾದ ಸಭೆಯ ಅಧ್ಯಕ್ಷತೆಯನ್ನು ಅಂದಿನ ವಿದ್ಯಾಮಂತ್ರಿಗಳಾಗಿದ್ದ ಶ್ರೀ ಎ. ಆರ್. ಬದರಿನಾರಾಯಣ ಅವರು ವಹಿಸಿದ್ದರು. ಪ್ರಥಮತಃ ವಿದ್ವಾನ್ ಬಿ. ಗಂಗಪ್ಪನವರು ವರದಿ ವಾಚನ ಮಾಡಿದ ಮೇಲೆ ಸಮಾರಂಭದ ಉದ್ಘಾಟನೆಯನ್ನು ಗಾಂಧಿಸ್ಮಾರಕ ನಿಧಿ ಮತ್ತು ಗಾಂಧಿ ಶಾಂತಿಪ್ರತಿಷ್ಠಾನದ ಅಧ್ಯಕ್ಷರಾದ, ಬಿಹಾರದ ಮಾಜಿ ರಾಜ್ಯಪಾಲರಾದ ಶ್ರೀ ಆರ್. ಆರ್. ದಿವಾಕರ್ ಅವರು ನೆರವೇರಿಸಿದರು. ಅಂದಿನ ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀಮಾನ್ ಕೆ. ಎಚ್. ರಂಗನಾಥರವರು ಶ್ರೀ ಸಿದ್ಧಲಿಂಗೇಶ್ವರ ಸಾರ್ವಜನಿಕ ಉಚಿತ ವಿದ್ಯಾರ್ಥಿ ನಿಲಯದ ಸುವರ್ಣಮಹೋತ್ಸವ ಸ್ಮಾರಕ ಫಲಕವನ್ನು ಅನಾವರಣ ಮಾಡಿದರು. ಅಂದಿನ ಬೆಂಗಳೂರು ನಗರದ ಮೇಯರ್ ಶ್ರೀ ಎಂ.ವಿ. ತಿವಾರಿಯವರು ಶ್ರೀ ಶ್ರೀ ಉದ್ಧಾನ ಶಿವಯೋಗಿಗಳವರ ಭಾವಚಿತ್ರವನ್ನು ಅನಾವರಣ ಮಾಡಿದರು. ಉದ್ಘಾಟನಾ ಭಾಷಣವನ್ನು ಮಾಡುತ್ತ ಶ್ರೀ ಆರ್.ಆರ್. ದಿವಾಕರ್‌ರವರು 'ಶ್ರೀ ಸಿದ್ಧಗಂಗಾ ಕ್ಷೇತ್ರದ ಸಾಧನೆ ಬಹುದೊಡ್ಡದು. ಭರತಖಂಡದ ಪ್ರಾಚೀನವೂ, ಸಂಪದ್ಭರಿತವೂ ಆದ ಸಂಸ್ಕೃತ ಭಾಷೆಯ ಪ್ರಚಾರವನ್ನು ಜನತೆಯಲ್ಲಿ ಕಳೆದ ಐವತ್ತು ವರ್ಷಗಳಿಂದಲೂ ಶ್ರೀಕ್ಷೇತ್ರ ಮಾಡಿಕೊಂಡು ಬಂದಿದೆ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಇಂಥ ಸಂಸ್ಥೆಯನ್ನು ನಡಿಸಿಕೊಂಡು ಬರುತ್ತಿರುವುದು ರಾಷ್ಟ್ರಕ್ಕೆ ಹೆಮ್ಮೆಯ ವಿಷಯ...' ಇತ್ಯಾದಿಯಾಗಿ ತಿಳಿಸಿದರು. ಅನಂತರ ಶ್ರೀ ತಿವಾರಿಯವರು ಶ್ರೀ ಶ್ರೀ ಉದ್ಧಾನ ಸ್ವಾಮಿಗಳವರ ಭಾವಚಿತ್ರವನ್ನು ಅನಾವರಣ ಮಾಡುತ್ತಾ ಶ್ರೀ ಉದ್ಧಾನ ಸ್ವಾಮಿಗಳವರ ಅಘಟಿತಘಟನಾಸಾಮರ್ಥ್ಯದ ಬಗ್ಗೆ ಮಾತನಾಡಿದರು. ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಶ್ರೀ ಉದ್ಧಾನ ಸ್ವಾಮಿಗಳವರ ಭಾವಚಿತ್ರದ ಮುಂದೆ ನೂರಾರು ನೀಲಾಂಜನಗಳನ್ನು ಹಚ್ಚುವುದರ ಮೂಲಕ ವೇದಿಕೆಯನ್ನಲಂಕರಿಸಿ, ಪೂಜಾದಿಗಳನ್ನು ಮಾಡಿ, ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಮೇಲೆ ಪುಷ್ಪವೃಷ್ಟಿ ಕರೆದರು. ಆಗ ಕೃತಕೃತ್ಯತೆಯ ಭಾವದಿಂದ ಎಲ್ಲರ ಕಣ್ಣುಗಳೂ ಹನಿಗೂಡಿದುವು. ಅನಂತರ ಸ್ಮಾರಕಫಲಕವನ್ನು ಅನಾವರಣ ಮಾಡಿದ ಶ್ರೀ ಕೆ. ಹೆಚ್. ರಂಗನಾಥರವರು ಉಚಿತ ವಿದ್ಯಾರ್ಥಿನಿಲಯದ ಬಗ್ಗೆ ಮಾತನಾಡಿದರು. ಶ್ರೀ ಹೆಚ್. ಕೆ. ಸಿದ್ಧಗಂಗಯ್ಯನವರು ಹಳೆಯ ವಿದ್ಯಾರ್ಥಿಗಳ ಪರವಾಗಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಬಿನ್ನವತ್ತಳೆಯನ್ನು ಅರ್ಪಿಸಿದರು. ಶ್ರೀ ಎಂ. ಎನ್. ಚನ್ನಬಸಪ್ಪನವರು ಹಳೆಯ ವಿದ್ಯಾರ್ಥಿಗಳ ಪರವಾಗಿ ನಿಧಿಯನ್ನು ಸಮರ್ಪಿಸಿದರು. ನಿಧಿ ಸಮರ್ಪಿಸುವಾಗ ತಮ್ಮನ್ನು ಸಾಕಿ, ಸಲಹಿ, ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಗಳನ್ನಾಗಿ ಕಡೆದು ನಿಲ್ಲಿಸಿದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅನಂತ ಉಪಕಾರವನ್ನು ಸ್ಮರಿಸಿಕೊಂಡು ಉತ್ಕಂಠಿತರಾಗಿ ಮಾತನಾಡಲೇ ಇಲ್ಲ. ಇದು ಮತ್ತೊಮ್ಮೆ ಎಲ್ಲರ ಕಣ್ಣುಗಳನ್ನು ತೇವಗೊಳಿಸಿತು. ನಂತರ ಶ್ರೀ ಮಠದ ವತಿಯಿಂದ ಇದುವರೆವಿಗೂ ಸಂಸ್ಕೃತ ವಿದ್ವತ್ ಪರೀಕ್ಷೆಯಲ್ಲಿ ಪಾಸಾದ ನೂರಾರು ಮಂದಿ ವಿದ್ವಾಂಸರುಗಳಿಗೆ ಅಧ್ಯಕ್ಷರು ಸ್ವರ್ಣಪದಕಗಳನ್ನು ನೀಡಿ, ಸಂಸ್ಕೃತ ಪಾಠಶಾಲೆಯ ಅಧ್ಯಾಪಕ ವಿದ್ವಾಂಸರೆಲ್ಲರಿಗೂ ಶಾಲುಜೋಡಿಗಳನ್ನು ಹೊದಿಸಿದರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಸಂಸ್ಕೃತದ ಕಷ್ಟಾಯ ಕಲಿಕೆಯ ಸಾಧಕ ಬಾಧಕಗಳನ್ನು ವಿವರಿಸುತ್ತಾ ತಮ್ಮ ಅಧಿಕಾರಾವಧಿಯಲ್ಲಿ ಸಂಸ್ಕೃತಕ್ಕಾಗಿ ವಿಶೇಷವಾಗಿ ಪರಿಶ್ರಮಿಸುತ್ತೇನೆಂದು ಆಶ್ವಾಸನೆ ನೀಡಿ ವಿರಮಿಸಿದರು.

ಕೊನೆಯಲ್ಲಿ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಆಶೀರ್ವಚನವಿತ್ತರು. ಅದರ ಪೂರ್ಣಪಾಠ ಇಂತಿದೆ:– 'ನಮ್ಮ ವಿದ್ಯಾಸಂಸ್ಥೆ ೫೫ ವರ್ಷಗಳ ಹಿಂದೆ ನಮ್ಮ ಪೂಜ್ಯಗುರುಗಳಿಂದ ಸ್ಥಾಪಿಸಲ್ಪಟ್ಟಿತು. ಆಗ ಶ್ರೀ ಮಠದಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ಕೇವಲ ೫೦-೬೦. ಅವರು ಈ ಸಂಸ್ಥೆಯನ್ನು ಬಹಳ ಮಮತೆಯಿಂದ ನೋಡಿಕೊಂಡು ಬರುತ್ತಿದ್ದರು. ನಮ್ಮ

ಪೂಜ್ಯ ಗುರುಗಳು ೧೯೪೧ ರಲ್ಲಿ ಲಿಂಗೈಕ್ಯರಾದರು. ಇಲ್ಲಿಗೆ ಒಂದು ಘಟ್ಟ. ಮುಂದೆ ಸಂಸ್ಥೆ ವರ್ಷೇ ವರ್ಷೇ ಬೆಳೆಯುತ್ತಾ ಬಂತು. ನನಗೆ ಹೆಚ್ಚು ಹುಡುಗರನ್ನು ಸಂಸ್ಥೆಯಲ್ಲಿ ಸೇರಿಸುವ ಇಚ್ಛೆ ಇರಲಿಲ್ಲ. ಆದರೆ ಬಡವರು ಬಂದು ತಮ್ಮ ಪರಿಸ್ಥಿತಿಯನ್ನು ಹೇಳಿಕೊಂಡಾಗ ಅವರನ್ನು ಹಿಂದಕ್ಕೆ ಕಳುಹಿಸಲು ಸಾಧ್ಯವಿಲ್ಲದೆ ಸಂಖ್ಯೆ ಬೆಳೆಯಿತು. ಅಲ್ಲದೆ ಟಿ.ಸಿ.ಹೆಚ್. ವಿದ್ಯಾಭ್ಯಾಸದ ಕಾಲ ಮೊದಲು ಒಂದು ವರ್ಷವಿತ್ತು. ಇತ್ತೀಚೆಗೆ ಅದು ಎರಡು ವರುಷವಾದುದರಿಂದ ಅವರೆಲ್ಲ ಮಠದಲ್ಲಿ ನಿಲ್ಲಬೇಕಾಗಿ ಬಂತು. ಮೊದಲು ಪಿ.ಯು.ಸಿ. ಒಂದು ವರ್ಷವಿದ್ದುದು ಈಗ ಎರಡು ವರ್ಷವಾಯಿತು. ಅವರೆಲ್ಲರೂ ಮಠದಲ್ಲಿ ಒಂದು ವರ್ಷಕಾಲ ಹೆಚ್ಚಿಗೆ ನಿಲ್ಲಬೇಕಾಗಿ ಬಂತು. ಈ ಮೂರು ಕಾರಣಗಳಿಂದ ಸಂಖ್ಯೆ ಹೆಚ್ಚಾಯಿತು.

ಉದ್ದಾನಸ್ವಾಮಿಗಳ ನಂತರ ಸಂಸ್ಥೆ ಕೆಲಸ ಮುಗಿಯಿತು ಎಂದು ಜನರು ಅನ್ನುತ್ತಿದ್ದರು. ನಮ್ಮ ಶ್ರೀಗಳವರ ಇಚ್ಛಾಶಕ್ತಿ ದೊಡ್ಡದು. ಅವರ ಸಂಕಲ್ಪಶಕ್ತಿ ನಮ್ಮ ಊಹೆಗೆ ನಿಲುಕದ್ದು. ಅವರ ಆಶೀರ್ವಾದ ಬಲವೇ ನಮಗೆ ರಕ್ಷಾಕವಚ. ನಾವು ಶಿವನ ಮೇಲೆ ಪೂರ್ಣಭಾರ ಹಾಕಿ ಕರ್ತವ್ಯದಲ್ಲಿ ಮುಂದುವರಿಯತಕ್ಕವರು. ಕೊಡುವವನು ಅವನೇ. ಎಲ್ಲವೂ ಈಶ್ವರೇಚ್ಛೆ. ಈ ವಿಚಾರದಲ್ಲಿ ಪೂರ್ಣನಂಬಿಕೆಯಿದೆ. ಇದಕ್ಕೊಂದು ದೃಷ್ಟಾಂತವನ್ನಿಲ್ಲಿ ಕೊಡಬಯಸುತ್ತೇನೆ. ಮಠದಲ್ಲಿ ನಡೆಯುತ್ತಿರುವ ಸಮಾರಂಭಗಳು ಮೊದಲು ೧೯೭೨ನೇ ಇಸ್ವಿ ಮೇ ತಿಂಗಳ ೧೪. ೧೫. ೧೬ನೆಯ ತಾರೀಖಿನಲ್ಲಿ ನಡೆಯತಕ್ಕದ್ದೆಂದು ತೀರ್ಮಾನವಾಗಿತ್ತು. ಈಶ್ವರನೇ ಆ ದಿವಸಗಳನ್ನು ತಪ್ಪಿಸಿದನೆಂದು ನನ್ನ ನಂಬುಗೆ. ಏಕೆಂದರೆ ನಿಮಗೆ ಗೊತ್ತೇ ಇದೆ. ಧಾರಾಕಾರವಾಗಿ ಮೂರು ದಿನವೂ ಸುರಿದ ಮಳೆ. ಆದ್ದರಿಂದ ಕೊನೆಗೆ ೨೬. ೨೭. ೨೮ ಈ ಮೂರು ದಿನಗಳು ನಡೆಯಬೇಕೆಂದು ಗೊತ್ತಾಯಿತು. ೨೫ನೇ ತಾರೀಖು ಮತ್ತೆ ಮಳೆ ಪ್ರಾರಂಭವಾಯಿತು. ರಾತ್ರಿಯೆಲ್ಲ ಮೋಡ ಕವಿದದ್ದನ್ನು ಕಂಡು ನನಗೂ ಭಯವಾಯಿತು. ಆಗ ಅನನ್ಯವಾಗಿ ಶಿವನೇ ಮೂರು ದಿನ ವಿರಾಮಕೊಡು ಎಂದು ಬೇಡಿಕೊಂಡೆ. ಅಂತು ನನ್ನ ಮನಸ್ಸಿನಂತೆ ಎಲ್ಲವೂ ನಡೆದುಹೋಯಿತು. ಇಂಥ ವಿಚಾರದಲ್ಲಿ ಉಳಿದವರಿಗೆ ನಂಬಿಕೆಯಿರಲಿ, ಬಿಡಲಿ. ನನಗಂತೂ ಪೂರ್ಣ ನಂಬಿಕೆಯಿದೆ. ಅಂತಃಕರಣಶುದ್ಧಿಯಿಂದ ದೇವರನ್ನು ಏನನ್ನಾದರೂ ಬೇಡಿದರೆ ಆ ಬೇಡಿಕೆ ವ್ಯರ್ಥವಾಗುವುದಿಲ್ಲವೆಂಬುದು ನನ್ನ ಭಾವನೆ.

ಇನ್ನು ಶ್ರೀಕ್ಷೇತ್ರದಲ್ಲಿ ದಿನೇ ದಿನೇ ಖರ್ಚು ವೆಚ್ಚಗಳು ಹೆಚ್ಚಾದುವು. ಇದು ನನಗೇನೂ ಭಯವನ್ನುಂಟುಮಾಡಲಿಲ್ಲ. ಜಾತ್ರೆಗೆ ಲಕ್ಷೋಪಲಕ್ಷ ಜನರು ಪ್ರತಿವರ್ಷ ಬರುತ್ತಾರೆ, ಬರುತ್ತೀರಿ. ಯಾರು ಯಾರು ಏನೇನು ತರುತ್ತಾರೊ ತಿಳಿಯದು. ಎಷ್ಟೋ ಜನ ರೈಲು, ಗಾಡಿ, ಬಸ್ಸು, ಕಾರುಗಳಲ್ಲಿ ಬರುತ್ತಾರೆ. ಇನ್ನೂ ಕೆಲವರು ಸ್ನಾನಮಾಡಿ ಮಡಿಯುಟ್ಟು ಕಾಲುನಡಿಗೆಯಿಂದ ತಲೆಯಮೇಲೆ ಏನೇನೋ ಗಂಟು ಕಟ್ಟಿಕೊಂಡು ಬರುತ್ತಾರೆ. ಅಂಥವರ ಹೃದಯಸಂಪತ್ತನ್ನು ನಾವು ಅರ್ಥಮಾಡಿಕೊಳ್ಳಬೇಕು. ಅವರ ಸಹಜ ಪ್ರೇರಣೆಯಿಂದ ಸ್ವಲ್ಪವೇ ಆದರೂ ಸಮರ್ಪಿಸುವ ಕಾಣಿಕೆ ಬಹು ದೊಡ್ಡದು. ಇಂಥ ಅನೇಕ ಜನರ ಕಾಣಿಕೆಗಳೇ ಈ ಸಂಸ್ಥೆ ಬೆಳೆಯಲು ಕಾರಣವಾಯಿತೆಂದು ತಿಳಿಸಲಿಚ್ಛಿಸುತ್ತೇನೆ. ನನಗೆ ಯಾರನ್ನೂ ಬೇಡಿ ಗೊತ್ತಿಲ್ಲ. ಅಷ್ಟು ಕೊಡು ಇಷ್ಟು ಕೊಡು ಎಂದು ಕೇಳಲು ಬರುತ್ತಿಲ್ಲ. ಕೊಡು ಎನ್ನುವದಕ್ಕಿಂತ ಕೊಡುವವರೇ ಮುಕ್ತಹಸ್ತದಿಂದ ನಿರೀಕ್ಷಣೆಗೆ ಮೀರಿ ಕೊಡುತ್ತಿದ್ದಾರೆ; ಹಿಂದೆ ಕೊಟ್ಟಿದ್ದಾರೆ. ಉದಾಹರಣೆ ಕೊಡುತ್ತಾ ಬಂದರೆ, ಕಾಲಾತೀತವಾದೀತು. ಒಬ್ಬರಲ್ಲ. ಇಬ್ಬರಲ್ಲ, ಅನೇಕ ಜನ ತ್ಯಾಗಿಗಳು ಮುಕ್ತಹಸ್ತದಿಂದ ಶ್ರೀಕ್ಷೇತ್ರಕ್ಕೆ ತಮ್ಮ ಸರ್ವಸ್ವವನ್ನೇ ಅರ್ಪಿಸಿದ್ದಾರೆ. ಇವರ ಜೊತೆಗೆ ಸರಕಾರದವರೂ ಉದಾರಸಹಾಯ ಮಾಡಿದ್ದಾರೆ. ಅದು ನಮಗೆ ಬೃಹತ್ತರವಾದ ಆಸರೆ.

ಸಂಸ್ಥೆಯನ್ನು ಕಟ್ಟುವುದು ಕಷ್ಟ. ಆಮೇಲೆ ಅದನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುವುದು ಇನ್ನೂ ಕಷ್ಟ. ಶ್ರದ್ಧಾಭಕ್ತಿವಿಶ್ವಾಸಗಳಿಂದ ದುಡಿಯುವರು ಸಂಸ್ಥೆಯಲ್ಲಿದ್ದರೆ ಮಾತ್ರ ಬೆಳೆದೀತು. ನಮ್ಮ ಸಂಸ್ಥೆಗೆ ಅನೇಕ ಜನರು ಶ್ರದ್ಧಾಭಕ್ತಿ ವಿಶ್ವಾಸಗಳಿಂದ ದುಡಿದಿದ್ದಾರೆ. ಜಾತ್ರಾ ಸಮಯದಲ್ಲಿ ಅನೇಕ ಜನ ಹಳ್ಳಿಯ ಬಂಧುಗಳು ಸ್ವಸಂತೋಷದಿಂದ ಯಾವ ಫಲಾಪೇಕ್ಷೆಯಿಲ್ಲದೆ ಬಂದು ಸೇವೆ ಮಾಡುತ್ತಾರೆ. ಅನೇಕ ಕಷ್ಟನಷ್ಟಗಳನ್ನು ಸಹಿಸಿಕೊಂಡು ಅಡಿಗೆಯವರು ಅಡುಗೆ ಮಾಡುತ್ತಿದ್ದಾರೆ. ಇದಲ್ಲದೆ ಹಳೆಯ ವಿದ್ಯಾರ್ಥಿಗಳು ನಿಸ್ವಾರ್ಥಸೇವೆ ಸಲ್ಲಿಸುತ್ತಿದ್ದಾರೆ. ಈ ಎಲ್ಲಾ ಕಾರಣಗಳಿಂದಾಗಿ ಸಂಸ್ಥೆಯ ಕೀರ್ತಿ ಗೌರವಗಳು ಅಧಿಕಗೊಂಡಿವೆ ಎಂದು ಹೇಳಲು ಇಚ್ಛಿಸುತ್ತೇನೆ...' ಮುಂತಾಗಿ ಅಪ್ಪಣೆ ಕೊಡಿಸಿದರು. ವಂದನಾರ್ಪಣೆ ಮಹಾಮಂಗಳಾರತಿಯೊಂದಿಗೆ ಸಭಾಕಾರ್ಯಕ್ರಮಗಳು ಮುಕ್ತಾಯಗೊಂಡವು.

**ಪಂಡಿತ್ ಪರಿಷತ್ :** ಸುವರ್ಣ ಮಹೋತ್ಸವದ ಅಂಗವಾಗಿ ೨೮-೫-೭೨ರ ಸಂಜೆ ೪-೩೦ ರಿಂದ ೬-೦೦ ಘಂಟೆ ವರೆಗೆ ಪಂಡಿತ ಪರಿಷತ್ ನೆರವೇರಿತು. ಪರಿಷತ್ತಿನ ಅಧ್ಯಕ್ಷತೆಯನ್ನು ಬೆಂಗಳೂರು ಶಂಕರಮಠದ ಕಾಶೀ ಸಂಸ್ಕೃತ ವಿಶ್ವವಿದಾನಿಲಯ ನಿವೃತ್ತ ಪ್ರಾಧ್ಯಾಪಕರಾದ ಪಂಡಿತಪ್ರವರ ಶ್ರೀ ರಾಮಚಂದ್ರ ಶಾಸ್ತ್ರಿಗಳವರು ವಹಿಸಿದ್ದರು. ಸಭೆಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ಪ್ರಾಚಾರ್ಯರಾದ ವಿದ್ವಾನ್ ಶ್ರೀ ಹೆಚ್. ಎಲ್. ರಾಮಸ್ವಾಮಿ ಎಂ.ಎ. ಅವರು 'An appreciation of the Taittariyaranyaka Prathama prapataka' ಎಂಬ ವಿಷಯವನ್ನು ಕುರಿತು, ವಿದ್ವಾನ್ ವೈ. ವಿಶ್ವನಾಥ ಶಾಸ್ತ್ರಿಗಳು 'ಸಂಸ್ಕೃತ ಭಾಷಾ ಭಾರತೀಯ ಸಂಸ್ಕೃತೇಃ ಸುಪ್ರತಿಪಾದಿಕಾ' ಎಂಬ ವಿಷಯದ ಮೇಲೂ,

ಮೈಸೂರು ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗದ ಮುಖ್ಯಸ್ಥರಾದ ಪ್ರೊ. ಜಿ. ಮರುಳಸಿದ್ಧಯ್ಯನವರು 'ಸಂಸ್ಕೃತ ಕನ್ನಡ ಭಾಷೆಯೋಃ ಪರಸ್ಪರೋಪಕಾರಃ' ಎಂಬ ವಿಷಯವನ್ನೂ, ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾದ ಶ್ರೀ ಕೆ.ಟಿ. ಪಾಂಡುರಂಗಿಯವರು 'A Plan for the reconstruction of Sanskrit' ಎಂಬುದನ್ನು ಕುರಿತೂ, ನಿವೃತ್ತ ಅಸಿಸ್ಟೆಂಟ್ ಕಲೆಕ್ಟರ್, ವಿದ್ಯಾವಿಭೂಷಣ ಶ್ರೀ ಓ. ಎನ್. ಲಿಂಗಣ್ಣಯ್ಯನವರು 'ರಾಮಾಯಣದಲ್ಲಿ ಸೀತಾದೇವಿ' ಎಂಬ ವಿಷಯದ ಮೇಲೂ, ಮೈಸೂರು ಟ್ರೈನಿಂಗ್ ಕಾಲೇಜಿನ ಸಂಸ್ಕೃತ ಪ್ರಾಧ್ಯಾಪಕರಾದ ಶ್ರೀ ಹೆಚ್. ಕೆ. ಸಿದ್ಧಲಿಂಗಯ್ಯನವರು 'ಸಂಸ್ಕೃತ ಶಿಕ್ಷಣ ವಿಷಯೇ ಕೇಂದ್ರಪ್ರಾಂತಸರ್ವಕಾರಯೋಃ ಐಕರೂಪ್ಯಂ' ಎಂಬ ವಿಷಯವನ್ನು ಕುರಿತೂ, ಬೆಂಗಳೂರು ಗೌ॥ ಸೆಂಟ್ರಲ್ ಹೈಸ್ಕೂಲ್ ಕನ್ನಡ ಪಂಡಿತರಾದ ಶ್ರೀ ಚನ್ನಪ್ಪ ಎರೇಸೀಮೆಯವರು 'ಬಾಣ ಕಾದಂಬರಿ' ಎಂಬ ವಿಷಯವನ್ನು ಅಧಿಕರಿಸಿ ಬರೆದ ಪ್ರಬಂಧಗಳನ್ನು ಓದಿದರು. ಕೊನೆಯಲ್ಲಿ ಅಧ್ಯಕ್ಷರಾದ ಶ್ರೀ ರಾಮಚಂದ್ರ ಶಾಸ್ತ್ರಿಗಳು ಸಂಸ್ಕೃತ ಭಾಷೆಯಲ್ಲಿ ಹೃದಯಂಗಮವಾಗಿ ಭಾಷಣ ಮಾಡಿದರು. ವಂದನಾರ್ಪಣೆಯೊಂದಿಗೆ ಪಂಡಿತ ಪರಿಷತ್ತು ಮುಗಿಯಿತು. ಹೀಗೆ ನಭೂತೋ ನ ಭವಿಷ್ಯತಿ ಎಂಬ ರೀತಿಯಲ್ಲಿ ಆಚರಿಸಿದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ-ವೇದ ಮಹಾಪಾಠಶಾಲೆಗಳ ಸುವರ್ಣ ಮಹೋತ್ಸವವು ಶ್ರೀಕ್ಷೇತ್ರದಲ್ಲಿ ಮತ್ತು ಕಾಲೇಜಿನ ಇತಿಹಾಸದಲ್ಲಿ ಸುವರ್ಣ ವರ್ಣಗಳಿಂದ ಬರೆದಿಡುವಂಥದ್ದು. ಇಂಥ ಶ್ರೀ ಉದ್ದಾನ ಸ್ವಾಮಿಗಳವರ ಸತ್‌ಸಂಕಲ್ಪದಿಂದ ಸ್ಥಾಪಿಸಲ್ಪಟ್ಟು ಶ್ರೀ ಶ್ರೀಗಳವರ ಅವಿಶ್ರಾಂತ ದುಡಿಮೆಯಿಂದ ಇಂದು ವಿಶ್ವವಿಖ್ಯಾತವಾಗಿರುವ, ಈ ಮಹಾಪಾಠಶಾಲೆಯು ರಜತೋತ್ಸವ, ಸ್ವರ್ಣೋತ್ಸವಗಳನ್ನಾಚರಿಸಿಕೊಂಡು ಇದೀಗ ವಜ್ರಮಹೋತ್ಸವವನ್ನು ವೈಭವದಿಂದ ಆಚರಿಸಿಕೊಳ್ಳಲು ಸನ್ನದ್ಧವಾಗಿರುವುದು ಸಂಸ್ಕೃತ ಪ್ರೇಮಿಗಳ ಸುಕೃತ. ನಾಡಿನ ಸೌಭಾಗ್ಯ, ರಾಷ್ಟ್ರದ ಸುದೈವವಾಗಿದೆ. ಸತ್ಸಂಕಲ್ಪದಿಂದ ಸಕಲ ಜೀವಾಳಿಯ ಲೇಸಿಗಾಗಿಯೇ ಸಂಸ್ಥಾಪಿತವಾದ ಈ ಮಹಾಸಂಸ್ಥೆ ತನ್ನ ಸದುದ್ದೇಶದ ಫಲವಾಗಿ ಉತ್ತರೋತ್ತರ ಇನ್ನೂ ಹೆಚ್ಚಿನ ಸೇವೆಯನ್ನು ಲೋಕ ಜೀವನಕ್ಕುಪಯೋಗಿಸಿ ಶ್ರೀಕ್ಷೇತ್ರದ ನಿಷ್ಕಾಮಕರ್ಮದ ಸೇವೆಯ ಯಶೋಧಾವಳ್ಯವನ್ನು ದಿಗಂತ ವಿಶ್ರಾಂತಗೊಳಿಸುವಲ್ಲಿ ಯಾವ ಸಂಶಯವೂ ಬಾರದು.

## ೨. ಶ್ರೀ ಸಿದ್ಧಲಿಂಗೇಶ್ವರ ಉಚಿತ ವಿದ್ಯಾರ್ಥಿನಿಲಯ

**'ಭಿಕ್ಷೆಗೆ ಹೊರಟಿದೆ ಜಂಗಮದ ಜೋಳಿಗೆ. ಲಕ್ಷ ಜನಗಳ ಪೊರೆದಿದೆ'**

ಈ ಕವಿವಾಣಿ ಶ್ರೀ ಸಿದ್ಧಗಂಗಾ ಮಠದ ದಾಸೋಹಕ್ಕೆ ಬರೆದ ಭಾಷ್ಯದಂತಿದೆ. ಈ ನುಡಿ ಯಾವತ್ತೂ ಯಥಾವತ್ತಾಗಿ ಸಾರ್ವಕಾಲಿಕವಾಗಿ ಈ ಮಠಕ್ಕೆ ಅನ್ವಯಿಸುತ್ತದೆ. ಅಷ್ಟೇಕೆ, ಶ್ರೀಕ್ಷೇತ್ರದ ದಾಸೋಹ ನಾಣ್ಣುಡಿಗಾಗಿ ಜನಜನಿತವಾಗಿದೆ. 'ಸಿದ್ಧಗಂಗೆ ಊಟಕ್ಕೆ ಚಂದ; ಶಿವಗಂಗೆ ನೋಟಕ್ಕೆ ಚಂದ' ಎಂಬ ನುಡಿ ಜನರ ಬಾಯಿಂದ ಬಾಯಿಗೆ ಚಲಾವಣೆಗೆ ಬಂದು ಅನುಭವದ ಅರ್ಥವಂತಿಕೆಯನ್ನು ಪಡೆದು ಗಾದೆ ಮಾತಿನ ರೂಪಕ್ಕೆ ತಿರುಗಬೇಕಾದರೆ ಬಹಳಷ್ಟು ಸಮಯ ಬೇಕಾಗುವುದು. ಆದುದರಿಂದ ಈ ಗಾದೆ ಮಾತೇ ಸಾಕು. ಶ್ರೀಮಠದ ದಾಸೋಹ ಪರಂಪರೆಯ ಪ್ರಾಚೀನತೆಯನ್ನು ಸಾರುವುದಕ್ಕೆ.

'ಶಿವನೆ ಶಿವಾರ್ಚನೈಕರತನಾಗಿರಲೋಸುಗಮಾತ್ಮಲೋಕದಿಂ
ದವತರಿಸಿ ಸ್ವಕೀಯ ಘನ ಲೀಲೆಯೊಳೊಯ್ಯನೆ ಮಾನುಷೀಯವ
ಪ್ಪ ವಿಮಳ ವೇಷಮಂ ಧರಿಸಿ ಸರ್ವ ಜಗದ್ಧಿತ ದಿವ್ಯಚೇಷ್ಟೆಯಿಂ
ತವೆ ಪರಿರಂಜಿಪಂ ಪರಮಭಕ್ತಿಮಯ ಸ್ಥಳದೊಳ್ ಶಿವಾಧವಾ ॥

ಎಂಬ ಮೊಗ್ಗೆಯ ಮಾಯಿದೇವರ ಮಾತಿನಂತೆ ಜಗದ್ಧಿತಾರ್ಥವಾಗಿಯೇ ಸಿದ್ಧಗಂಗಾಕ್ಷೇತ್ರದ ಸಮಸ್ತ ಚಟುವಟಿಕೆಗಳು ಮೊದಲಿನಿಂದಲೂ ಕಾರ್ಯರೂಪಕ್ಕೆ ಬಂದಿವೆ.

ಶ್ರೀ ಉದ್ದಾನಸ್ವಾಮಿಗಳವರಿಂದ ೧೯೧೭ರಲ್ಲಿ ಸ್ಥಾಪನೆಗೊಂಡ ಪ್ರಾರಂಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಉಚಿತ ವಿದ್ಯಾರ್ಥಿನಿಲಯದಲ್ಲಿ ಪ್ರಥಮತಃ ವಿವಿಧ ಕೋಮಿನ ೪೦ ಮಂದಿ ವಿದ್ಯಾರ್ಥಿಗಳಿದ್ದರು. ಶ್ರೀ ಉದ್ದಾನಸ್ವಾಮಿಗಳವರು ನಿಲಯದ ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಅಕ್ಕರೆಯಿಂದ ಅತಿವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಅವರ ಅಪಾರವಾದ ಶಿಷ್ಯ ಕಾರುಣ್ಯಾಂತಃಕರಣವನ್ನು ಪ್ರತಿಬಿಂಬಿಸುವ ಹಳೆಯವಿದ್ಯಾರ್ಥಿಗಳ ಅನುಭವದ ಪ್ರಸಂಗಗಳೆರಡನ್ನು ಪ್ರಕೃತ ಉಲ್ಲೇಖಿಸುವುದು ಅಪ್ರಸಂಗವಾಗದು.

ಪ್ರತಿಯೊಂದು ಹಬ್ಬದಲ್ಲಿಯೂ ಪಾಯಸ, ಮಾಲ್ದಿ ದಾಸೋಹ ತಪ್ಪದೇ ನಡೆಯುತ್ತಿತ್ತು. ಶ್ರೀಶ್ರೀಗಳವರೇ ತಮ್ಮ ಅಕ್ಷಯ ಹಸ್ತದಿಂದ ಉಣಬಡಿಸುತ್ತಿದ್ದರು. 'ಚೆನ್ನಾಗಿ ಉಣ್ಣಬೇಕು, ಚೆನ್ನಾಗಿ ಓದಬೇಕು' ಎಂದು ಹೃದಯತುಂಬಿ ಆಶೀರ್ವದಿಸುತ್ತಿದ್ದರು.

ಯುಗಾದಿ ಮುಂತಾದ ಹಬ್ಬ ವಿಶೇಷಗಳಲ್ಲಿ ಪಂದ್ಯಕಟ್ಟಿ ಹೆಚ್ಚಿಗೆ ಹೋಳಿಗೆ ತಿಂದವರಿಗೆ ಬಹುಮಾನ ಕೊಡುತ್ತಿದ್ದರು. ಅದಲ್ಲದೆ ಊಟವಾದ ನಂತರ ತಾವು ಶ್ರೀ ಅಟವೀಸ್ವಾಮಿಗಳ ಗದ್ದುಗೆಯ ಮುಂಭಾಗದಲ್ಲಿ ಮಂಡಿಸಿ ಹುಡುಗರನ್ನು ಕರೆದು 'ಲೋ ಅಣ್ಣಾ, ಇಲ್ಲಿಂದ ಯಾರು ಓಡಿಹೋಗಿ ಮೊದಲು ದೇವಸ್ಥಾನ ಮುಟ್ಟಿಸಿ ಬರುತ್ತೀರೋ ಅವರಿಗೆ ಬಹುಮಾನ ಕೊಡು

ಶ್ರೇಣಿ ಯಾಯವಾಗಿ ಪಂಕ್ತಿ ಕಟ್ಟಿಸಿ ಓದಿಸುತ್ತಿದ್ದರು. (ಈಗಿನ ಸಂಸ್ಕೃತಕಾಲೇಜಿನ ಕಟ್ಟಡವು ಆಗ ಇರಲಿಲ್ಲ. ಆದರೆ ಸ್ವಾಮಿಗಳ ಗದ್ದುಗೆಯ ಎದುರಿಗೆ ಬೆಟ್ಟದ ಮೇಲಿರುವ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ದೇವಸ್ಥಾನವು ಕಾಣಿಸುತ್ತಿತ್ತು.) ಇವುಗಳಲ್ಲದೆ ಪಾಠವನ್ನು ಚೆನ್ನಾಗಿ ಹೇಳಿದವರಿಗೆ, ಸ್ಫುಟವಾಗಿ ಧೈರ್ಯವಾಗಿ ಭಾಷಣ ಮಾಡಿದವರಿಗೆ ಕಲ್ಲುಸಕ್ಕರೆ, ಖರ್ಜೂರಗಳನ್ನು ತರಿಸಿ ಕೊಡುತ್ತಿದ್ದರು. ಉತ್ತಮದರ್ಜೆಯಲ್ಲಿ ಸಂಸ್ಕೃತದಲ್ಲಿ ಪಾಸಾದವರಿಗೆ ಪಂಚೆ, ಅಂಗಿಬಟ್ಟೆ ಮುಂತಾದ ಉಡುಪುಗಳನ್ನು ದಯಪಾಲಿಸುತ್ತಿದ್ದರು.

**ಅಭಿವೃದ್ಧಿ : ರಜತಮಹೋತ್ಸವ**

ಶ್ರೀ ಉದ್ದಾನಶಿವಯೋಗಿಗಳ ನಂತರ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಕಾಲದಲ್ಲಿ ವಿದ್ಯಾರ್ಥಿನಿಲಯದ ಸಂಖ್ಯೆ ದಿನೇ ದಿನೇ ಅಧಿಕಗೊಳ್ಳತೊಡಗಿತು. ೨೫ ವರ್ಷಗಳ ಕಾಲ ಈ ವಿದ್ಯಾರ್ಥಿನಿಲಯವು ಯಶಸ್ವಿಯಾದ ನಿಡುಬಾಳನ್ನು ಸಾಗಿಸಿದುದರ ಸಂಕೇತಾರ್ಥವಾಗಿ ಸಂಸ್ಕೃತ ಕಾಲೇಜಿನ ಜೊತೆಯಲ್ಲಿಯೇ ಅದು ರಜತಮಹೋತ್ಸವವನ್ನು ೧೯೪೯ರಲ್ಲಿ ವೈಭವಪೂರ್ಣವಾಗಿ ಆಚರಿಸಿಕೊಂಡಿತು.

ಮುಂದೆ 'ಭೂತ ತೃಪ್ತಿಯೇ ಭೂತೇಶ ತೃಪ್ತಿ' ಎಂಬ ಮಾತೇ ಮೂರ್ತಿವೆತ್ತಂತಿರುವ ಜಗತ್ಕುಟುಂಬಿ, ವಿದ್ಯಾಪ್ರೇಮಿ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಅವಿಶ್ರಾಂತ ದುಡಿಮೆಯ ಫಲವಾಗಿ ಈ ಉಚಿತ ವಿದ್ಯಾರ್ಥಿನಿಲಯವು ದಿನೇ ದಿನೇ ಶತಾಧಿಕವಾಗಿ, ಸಹಸ್ರಾಧಿಕವಾಗಿ, ಬೃಹತ್ಪ್ರಮಾಣದಲ್ಲಿ ಬೆಳೆದು ಅನೇಕ ಭವ್ಯವಸತಿಗೃಹಗಳನ್ನು ನಿರ್ಮಿಸಿಕೊಂಡು ಇಂದು ೪೦೦೦ ವಿವಿಧ ಕೋಮಿನ ವಿದ್ಯಾರ್ಥಿಗಳ ಅಶನವಸತಿನಿಲಯವೆನಿಸಿ ಭರತಖಂಡದಲ್ಲಿ ಮಾತ್ರವಲ್ಲ, ಇಡೀ ವಿಶ್ವದಲ್ಲೇ ಹೆಸರಾಂತು ವಿಶಿಷ್ಟದಾಖಲೆಯನ್ನು ಸ್ಥಾಪಿಸಿಕೊಂಡಿದೆ. ವಿಚಾರವಂತರನ್ನು ಮೂಕವಿಸ್ಮಿತರನ್ನಾಗಿಸಿದೆ. ಸಾಮಾನ್ಯರಿಗೆ ಕಂಡರಿಯೆವು, ಕೇಳರಿಯೆವು ಎಂಬ ಭಾವನೆಯನ್ನು ಮೂಡಿಸಿದೆ : ನೋಟಕರಿಗೆ ವಿಚಿತ್ರ ಅಚ್ಚರಿಯನ್ನುಂಟುಮಾಡಿದೆ. ಇಂಥ ಉಚಿತ ವಿದ್ಯಾರ್ಥಿನಿಲಯದ ತೀವ್ರವಾದ ಬೆಳವಣಿಗೆಗೆ ಕಾರಣವೇನೆಂಬುದನ್ನು ಶ್ರೀಶ್ರೀಗಳವರೇ ಅದರ ಸುವರ್ಣಮಹೋತ್ಸವ ಸಂದರ್ಭದಲ್ಲಿ ಅಪ್ಪಣೆಕೊಡಿಸಿದ್ದಾರೆ. ಅದನ್ನು ಇಲ್ಲಿ ಉಲ್ಲೇಖಿಸುವುದು ಉಚಿತವಾಗಿದೆ. 'ನಮ್ಮ ವಿದ್ಯಾಸಂಸ್ಥೆ ೫೫ ವರ್ಷಗಳ ಹಿಂದೆ ನಮ್ಮ ಪೂಜ್ಯ ಗುರುಗಳಿಂದ ಸ್ಥಾಪಿಸಲ್ಪಟ್ಟಿತು. ಆಗ ಶ್ರೀಮಠದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಕೇವಲ ೫೦-೬೦. ಅವರು ಈ ಸಂಸ್ಥೆಯನ್ನು ಬಹಳ ಮಮತೆಯಿಂದ ನೋಡಿಕೊಂಡು ಬರುತ್ತಿದ್ದರು. ಅವರ ವಾತ್ಸಲ್ಯಾಮೃತ ವರ್ಷಧಾರೆಯಿಂದ ಬೆಳೆದುಬಂದ ಈ ವಿದ್ಯಾರ್ಥಿನಿಲಯದ ಯಶಸ್ಸು ಎಲ್ಲೆಲ್ಲೂ ಕೀರ್ತಿತವಾಯಿತು. ನಮ್ಮ ಪೂಜ್ಯಗುರುಗಳು ೧೯೪೧ರಲ್ಲಿ ಲಿಂಗೈಕ್ಯರಾದರು. ಇಲ್ಲಿಗೆ ಒಂದು ಘಟ್ಟ. ಮುಂದೆ ಸಂಸ್ಥೆ ವರ್ಷೇ ವರ್ಷೇ ಬೆಳೆಯುತ್ತಾ ಬಂತು. ನನಗೆ ಹೆಚ್ಚು ಹೆಚ್ಚು ಹುಡುಗರನ್ನು ಸೇರಿಸುವ ಇಚ್ಛೆ ಇರಲಿಲ್ಲವಾದರೂ ಬಡವರು ಬಂದು ತಮ್ಮ ಪರಿಸ್ಥಿತಿಯನ್ನು ಹೇಳಿಕೊಂಡಾಗ ಸಾಧ್ಯವಿಲ್ಲವೆಂದು ಹೇಳಿ ಅವರನ್ನು ಹಿಂದಕ್ಕೆ ಕಳುಹಿಸಲು ಮನಸ್ಸುಬಾರದೆ ಅದು ಬೆಳೆಯಿತು. ಅಲ್ಲದೆ ಟಿ.ಸಿ.ಹೆಚ್. ವಿದ್ಯಾಭ್ಯಾಸದ ಕಾಲ ಮೊದಲು ಒಂದು ವರ್ಷವಿತ್ತು. ಇತ್ತೀಚೆಗೆ ಅದು ಎರಡು ವರ್ಷವಾದುದರಿಂದ ಅವರೆಲ್ಲಾ ಒಂದು ವರ್ಷ ಹೆಚ್ಚಾಗಿ ಮಠದಲ್ಲಿ ನಿಲ್ಲಬೇಕಾಗಿ ಬಂತು. ಮೊದಲು ಪಿ.ಯು.ಸಿ. ಶಿಕ್ಷಣ ಒಂದು ವರ್ಷವಿದ್ದುದು ಈಗ ಎರಡು ವರ್ಷವಾಯಿತು. ಅವರೂ ಕೂಡ ಒಂದು ವರ್ಷ ಹೆಚ್ಚಾಗಿ ನಿಲ್ಲಬೇಕಾಯಿತು. ಈ ಮೂರು ಕಾರಣಗಳಿಂದ ಸಂಖ್ಯೆ ಹೆಚ್ಚಾಯಿತು'.

**ಸುವರ್ಣಮಹೋತ್ಸವ**

ಈ ಉಚಿತ ವಿದ್ಯಾರ್ಥಿನಿಲಯವು ೧೯೭೪ ರಲ್ಲಿ ಸುವರ್ಣ ಮಹೋತ್ಸವವನ್ನಾಚರಿಸಿಕೊಂಡಿತು. ಯಾವುದೇ ವ್ಯಕ್ತಿಯ ಅಥವಾ ಸಂಸ್ಥೆಯ ವಯೋಮಾನದಲ್ಲಿ ಮಧ್ಯ ವಯಸ್ಸಿನ ಈ ಬಿಂದು ವಿಶೇಷ ವರ್ಚಸ್ಸುಳ್ಳದ್ದು. ಅಷ್ಟು ದೀರ್ಘಾಯುವನ್ನು ಯಶಃಪೂರ್ಣವಾಗಿ ಹೊಂದಿ ಬೆಳೆದು ಬರುವುದು ಸಾಮಾನ್ಯವಾದ ವಿಷಯವೇನಲ್ಲ, ಏಕೆಂದರೆ ಕಾಲಗರ್ಭದಲ್ಲಿ ಅನೇಕ ಸಾರ್ವಜನಿಕ ವಿದ್ಯಾರ್ಥಿನಿಲಯಗಳು ಅಧಿಕ ಸಂಖ್ಯೆಯಲ್ಲಿ ಹಿಳಬಹುದು, ಕಾರಣಾಂತರದಿಂದ ಕೆಲಸಮಯದಲ್ಲಿಯೇ ಅಸ್ತವಾಗಬಹುದು. ಅದಕ್ಕೆ ಕಾರಣಗಳೂ ಬಹಳ ಇರಬಹುದು. ಸಮಾಜದ ಛಿದ್ರಕಾರಕ ದುಷ್ಟಶಕ್ತಿಗಳ ಪ್ರವಾಹದಲ್ಲಿ ಈಜಿ ಸುಗಮವಾದ ಸಾರ್ಥಕವಾದ ಯಶಸ್ವಿಯಾದ ಬಾಳನ್ನು ನಡೆಸುವಂಥ ಸಂಸ್ಥೆಗಳು ಅತಿ ವಿರಳವೆಂದೇ ಹೇಳಬೇಕು. ಅಂಥವುಗಳಲ್ಲಿ ಆಗಿಂದಾಗ ಅನೇಕ ಏರಿಳಿತಗಳು ಒದಗಿದರೂ ಕಷ್ಟ-ನಷ್ಟಗಳು ಸಂಭವಿಸಿದರೂ, ರಾಜಕೀಯ ಕ್ರೂರದೃಷ್ಟಿಪಾತವಾದರೂ, ಸಾಮಾಜಿಕ ದುಷ್ಟಪ್ರೇತಗಳ ಅಣುಕು ನೋಟ ಇಣುಕಿ ನೋಡಿದರೂ ಅವುಗಳೆಲ್ಲವನ್ನೂ ಶ್ರೀ ಶ್ರೀಗಳವರು ತಮ್ಮ ಕ್ರತುಶಕ್ತಿಯಿಂದ ಜೀರ್ಣಿಸಿಕೊಂಡು ಸಹಸ್ರ ಸಹಸ್ರ ಸಂಖ್ಯೆಯ ಬಡಮಕ್ಕಳಿಗೆ ಆಶ್ರಯವೀಯುವ ಮಹಾವಿಟಪಿಯನ್ನಾಗಿ ಈ ಸಂಸ್ಥೆಯನ್ನು ಮಮತೆಯಿಂದ ಬೆಳೆಸಿಕೊಂಡು ಬಂದಿದ್ದಾರೆ. ಪ್ರಕೃತ ಅದು ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲಾ, ಕಾಲೇಜು, ಸಂಸ್ಕೃತ ಕಾಲೇಜು ಇವುಗಳಲ್ಲಿ ವ್ಯಾಸಂಗಮಾಡುವ ವಿದ್ಯಾರ್ಥಿಗಳಿಗೆ ಉಚಿತ ಅಶನ-ವಸನ-ವಸತಿಗಳ ಸೌಕರ್ಯವನ್ನು ಒದಗಿಸುವ ಕಾಮಧೇನುವಾಗಿ ಕಂಗೊಳಿಸುತ್ತಿದೆ.

ಈ ಉಚಿತ ವಿದ್ಯಾರ್ಥಿನಿಲಯವು ಇತರ ವಿದ್ಯಾರ್ಥಿನಿಲಯಗಳಿಗಿಂತಲೂ ತನ್ನದೇ ಆದ ಕೆಲವು ವೈಶಿಷ್ಟ್ಯಗಳನ್ನು ಹೊಂದಿದೆ. ಮೊದಲನೆಯದಾಗಿ ಇಷ್ಟೊಂದು ಬೃಹತ್ ಸಂಖ್ಯೆಯಲ್ಲಿ ಒಂದೇ ಕಡೆ ವಿವಿಧ ಕೋಮಿನ ವಿದ್ಯಾರ್ಥಿಗಳಿಗೆ ಉಚಿತ ಅಶನ-ವಸತಿಗಳನ್ನೊದಗಿಸಿರುವುದು ಭಾರತದಲ್ಲಿ ಮತ್ತೊಂದು ಎಲ್ಲಿಯಾದರೂ ಇದೆಯೋ ಎಂಬುದನ್ನು ಶೋಧಿಸಿ ಹೇಳಬೇಕು, ಅಥವಾ ಇಲ್ಲವೆಂದೇ ಧೈರ್ಯವಾಗಿ ಹೇಳಬಹುದು. ಎರಡನೆಯದಾಗಿ ಇಲ್ಲಿನ ಪ್ರತಿಯೊಬ್ಬ ವಿದ್ಯಾರ್ಥಿಯೂ ಭರತಖಂಡದ ಸಂಸ್ಕೃತಿಯ ಭಂಡಾರವಾಗಿರುವ ಸಂಸ್ಕೃತವನ್ನು ಕಡ್ಡಾಯವಾಗಿ ಕಲಿಯಬೇಕೆಂಬ ನಿಯಮ. ಈ ನಿಯಮವು ತೋರಿಕೆಗೆ ಕಡ್ಡಾಯವಾಗಿ ಕಂಡುಬಂದರೂ ಪರೋಕ್ಷವಾಗಿ ವಿದ್ಯಾರ್ಥಿಗಳನ್ನು ಸಂಸ್ಕೃತರನ್ನಾಗಿಸುವ, ನೀತಿವಂತರನ್ನಾಗಿ ಮಾಡುವ, ಸತ್ ಪ್ರಜೆಗಳನ್ನು ಸೃಷ್ಟಿಗೈದು ಅವರ ಬಾಳನ್ನು ಹಸನುಗೈಯುವ ಮೂಲೋದ್ದೇಶದಿಂದ ಕೂಡಿದುದಾಗಿದೆ. ಮೂರನೆಯದಾಗಿ ದಿನನಿತ್ಯದ ಪ್ರಾರ್ಥನೆ ಮತ್ತು ಕಾಯಕಗಳಲ್ಲಿ ತಪ್ಪದೇ ಭಾಗವಹಿಸುವುದು. ಪ್ರತಿದಿನ ವಿದ್ಯಾರ್ಥಿಗಳು ಕಾಯಕದಲ್ಲಿ ಭಾಗವಹಿಸುವುದರಿಂದ ದೈಹಿಕಾರೋಗ್ಯವೂ, ಕಾಯಕ ಗೌರವವೂ ದೊರಕೊಂಡರೆ, ಪ್ರಾರ್ಥನೆಯಿಂದ ಮಾನಸಿಕಾರೋಗ್ಯವೂ, ಶುಚಿ, ಶುದ್ಧಿ, ಸಿದ್ಧಿಗಳೂ ಉಂಟಾಗುವುವಲ್ಲದೆ, ಶ್ರೀಶ್ರೀಗಳವರ ಉಪದೇಶಾಮೃತವಾಣಿಶ್ರವಣದಿಂದ ಸದ್ವಿಷಯ ಪ್ರವೃತ್ತಿ, ಸದಾಚಾರ ಸಂಗ್ರಹ, ವ್ಯರ್ಥಕಾಲಹರಣಗೈಯ್ಯದಿರುವಿಕೆ, ಕರ್ತವ್ಯಸ್ಫೂರ್ತಿ ಮುಂತಾದ ಪ್ರಯೋಜನಗಳೂ ಉಂಟಾಗುತ್ತವೆ. ಅದಲ್ಲದೆ ಇದೊಂದು ದೊಡ್ಡ ಸಾಂಸ್ಕೃತಿಕ ಕೇಂದ್ರವಾಗಿರುವುದರಿಂದ ಇಲ್ಲಿ ನಡೆಯುವ ಚರ್ಚಾಕೂಟ, ನಾಟಕಾಭಿನಯ, ಆಟಪಾಟಗಳು ಮುಂತಾದುವುಗಳಲ್ಲಿ ಭಾಗವಹಿಸುವುದರಿಂದ ವಿದ್ಯಾರ್ಥಿಗಳ ಸುಪ್ತ ಪ್ರತಿಭೆಯ ವಿಕಾಸವೂ ಆಗುತ್ತದೆ. ಜೊತೆಗೆ ಎಲ್ಲರೂ ಒಂದೇಕಡೆ ವಾಸಿಸುವುದರಿಂದ ಸೌಹಾರ್ದತೆ, ಸಹೋದರತೆ, ಸಹಬಾಳ್ವೆ, ಸಮಾನತೆ ಮುಂತಾದ ಸಾಮಾಜಿಕ ಸದ್ಗುಣಗಳೂ ಮೈಗೊಳ್ಳುತ್ತವೆ. ಒಟ್ಟಿನಲ್ಲಿ ಈ ಉಚಿತ ವಿದ್ಯಾರ್ಥಿನಿಲಯದಲ್ಲಿ ವಿದ್ಯಾರ್ಥಿಗಳಿಗೆ ಸರ್ವತೋಮುಖವಾದ ಶಿಕ್ಷಣವು ದೊರಕುತ್ತದೆ ಎಂದರೆ ತಪ್ಪಾಗದು. ಇಂಥ ಪ್ರತಿಷ್ಠಿತವೂ, ಅತ್ಯಧಿಕ ಸಂಖ್ಯಾಬಲವುಳ್ಳದ್ದೂ, ಸಮಸ್ತ ಕೋಮಿನ ವಿದ್ಯಾರ್ಥಿ ಪ್ರತಿನಿಧಿ ವಿಶಿಷ್ಟವೂ ಆದ ಉಚಿತ ವಿದ್ಯಾರ್ಥಿನಿಲಯವು ೧೯೮೦ ರಲ್ಲಿ ತನ್ನ ವಜ್ರಮಹೋತ್ಸವವನ್ನು ಆಚರಿಸಿಕೊಂಡು ಒಂದು ಮಹಾ ಮಜಲಿನ ಘಟ್ಟದಲ್ಲಿರುವುದು ಸಮಾಜದ ಒಂದು ಪುಣ್ಯ.

ಈ ಉಚಿತ ವಿದ್ಯಾರ್ಥಿನಿಲಯದಲ್ಲಿ ತಮ್ಮ ಬಾಳನ್ನು ಸುಂದರವಾಗಿ ರೂಪಿಸಿಕೊಂಡು ಹೋದ ಸಾವಿರಾರು ಮಂದಿ ಹಳೆಯ ವಿದ್ಯಾರ್ಥಿಗಳು ಇಂದು ಭರತಖಂಡದ ನಾನಾ ಮೂಲೆಗಳಲ್ಲಿ, ಶಾಲಾಕಾಲೇಜುಗಳೊಳಗೆ ಪ್ರಾಧ್ಯಾಪಕರೂ, ಪ್ರಾಚಾರ್ಯರೂ, ಅಧ್ಯಾಪಕರುಗಳೂ ಆಗಿ, ವಿವಿಧ ಕಛೇರಿಗಳಲ್ಲಿ ಶಿಸ್ತುಗಾರ ಅಧಿಕಾರಿಗಳಾಗಿ ಇತರ ವ್ಯವಸಾಯ ಉದ್ಯಮಾದಿ ವಿವಿಧ ಕ್ಷೇತ್ರಗಳಲ್ಲಿ ಪ್ರತಿಷ್ಠಿತ ವ್ಯಕ್ತಿಗಳಾಗಿ ಶ್ರೀಮಠದ ಕೀರ್ತಿಗೌರವಗಳನ್ನು ಬೆಳಗಿಸುವ ಜೀವಂತ ನಿದರ್ಶನರಾಗಿ ಕಂಗೊಳಿಸುತ್ತಿದ್ದಾರೆ. ಅಲ್ಲದೆ ಅವರೆಲ್ಲ ಸಂಘಟಿತರಾಗಿ ಹಳೆಯ ವಿದ್ಯಾರ್ಥಿ ಸಂಘವನ್ನು ಶ್ರೀಮಠದಲ್ಲಿ ಸ್ಥಾಪಿಸಿಕೊಂಡು ಮಾತೃಸಂಸ್ಥೆಗೆ ಅನೇಕ ದೃಷ್ಟಿಯಿಂದ ತಮ್ಮ ಸೇವೆ ಸಲ್ಲಿಸುತ್ತಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ವಸ್ತುಪ್ರದರ್ಶನ ನಡೆಸುವುದು, ಪತ್ರಿಕೆ ನಡೆಸುವುದು, ವಿಶೇಷ ಉತ್ಸವಾದಿಗಳನ್ನು ಏರ್ಪಡಿಸುವುದು ಇವೇ ಮೊದಲಾದುವುಗಳಾಗಿವೆ.

ಕೊನೆಯದಾಗಿ ಇಂಥ ಧಾರ್ಮಿಕ ಶ್ರದ್ಧೆ, ಸಾಮಾಜಿಕ ಸಹಬಾಳ್ವೆಗಳು ಶಿಥಿಲಗೊಳ್ಳುತ್ತಿರುವ ದುರ್ಧರವಾದ ಸಮಯದಲ್ಲಿಯೂ ಸರ್ಕಾರ ನೀಡುವ ಅನುದಾನದ ಎರಡು ಮೂರರಷ್ಟು ಅಧಿಕ ವೆಚ್ಚದ ಗುರುಭಾರವನ್ನು ಹೊತ್ತು ಈ ವಿದ್ಯಾರ್ಥಿನಿಲಯವನ್ನು ಯಶಸ್ವಿಯಾಗಿ ನಡೆಸುತ್ತಾ, ಸಮಾಜದ ಉದ್ಧಾರವನ್ನು ಯಥಾಶಕ್ತಿ ನಿರ್ವಹಿಸುತ್ತಾ, ತನ್ಮೂಲಕ ರಾಷ್ಟ್ರದ ಉದ್ಧಾರಕ್ಕಾಗಿ ರಚನಾತ್ಮಕ ಕಾರ್ಯಭಾರವನ್ನು ಹೊತ್ತು ಶ್ರೀ ಶ್ರೀಗಳವರು ಹಗಲಿರುಳೂ ಶ್ರಮಿಸುತ್ತಿದ್ದಾರೆ. ಈ ಪರಿಶ್ರಮವು ಅವರಿಗೆ ತಂದುಕೊಡುವ ಫಲವಾದರೋ

'ನತ್ವಹಂ ಕಾಮಯೇ ರಾಜ್ಯಂ ನ ಸ್ವರ್ಗಂ ನ ಪುನರ್ಭವಮ್ ।
ಕಾಮಯೇ ದುಃಖತಪ್ತಾನಾಂ ಪ್ರಾಣಿನಾಂ ಆರ್ತಿನಾಶನಮ್ ॥

ಎಂಬಂತೆ ಬಡವರ ಕಷ್ಟದ ಬೇಗೆಯನ್ನು ಯಥಾಶಕ್ತಿ ತಪ್ಪಿಸಿ ಅವರೆದೆಗೆ ಆದಷ್ಟು ತಣ್ಣೀರೆಯುವುದೇ ಅಲ್ಲವೇ ?

## ೩. ತುಮಕೂರು ಸಿದ್ಧಗಂಗಾ ಹೈಸ್ಕೂಲ್

—ಬಿ. ಮಂಜುನಾಥ್, ಮುಖ್ಯೋಪಾಧ್ಯಾಯರು

**[ಶ್ರೀಗಳವರು ಸ್ಥಾಪಿಸಿದ ಹೈಸ್ಕೂಲುಗಳಲ್ಲಿ ತುಮಕೂರಿನಲ್ಲಿರುವ ಸಿದ್ಧಗಂಗಾಹೈಸ್ಕೂಲೇ ಮೊದಲನೆಯದು. ಈ ಹೈಸ್ಕೂಲ್ ಸ್ಥಾಪನೆಗೆ ಶ್ರೀಗಳವರು ಬಹಳ ಹೆಣಗಿದರು. ಈ ಕಾರಣದಿಂದ ಈ ಹೈಸ್ಕೂಲ್ ಬಗೆಗೆ ಮೊದಲಿನಿಂದಲು ಇಲ್ಲಿ ಉಪಾಧ್ಯಾಯರಾಗಿದ್ದು ಆದರ್ಶ ಉಪಾಧ್ಯಾಯರೆಂದು ರಾಷ್ಟ್ರಪ್ರಶಸ್ತಿ ಗಳಿಸಿ ಈಗಲೂ ಅಲ್ಲಿ ಕೆಲಸ ಮಾಡುತ್ತಿರುವ ಶ್ರೀ ಮಂಜುನಾಥರವರ ಮೂಲಕವೇ ಇದರ ಚರಿತ್ರೆಯನ್ನು ತಿಳಿಯಬೇಕು.]**

ಜ್ಞಾನ, ಭಕ್ತಿ, ವೈರಾಗ್ಯಗಳ ಸಂಗಮವೆನಿಸಿ ಪಾರಮಾರ್ಥಿಕದ ದಿವ್ಯಸಾಧನೆಯನ್ನು ಮಾನವಕಲ್ಯಾಣಕ್ಕಾಗಿ ರೂಪು

ಗೊಂಡಿರುವ ಕನ್ನಡನಾಡಿನ ಧರ್ಮಜ್ಯೋತಿ ವಿಭೂತಿಪುರುಷ, ವಿದ್ಯಾಪಕ್ಷಪಾತಿ ಶ್ರೀ। ಸಿ। ಪ್ರ। ಸ್ವಾ। ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ತುಮಕೂರಿನಲ್ಲಿ ಸ್ಥಾಪಿಸಿದ ಪ್ರೌಢಶಾಲೆಯ ವಿವರವೊಂದನ್ನು ಬರೆಯಲು ನನಗೆ ಅವಕಾಶ ದೊರೆತುದು ನನ್ನ ಭಾಗ್ಯವೆಂದು ಭಾವಿಸುತ್ತೇನೆ. ತುಮಕೂರು ಜಿಲ್ಲೆಯಲ್ಲಿ ಪೂಜ್ಯಪಾದರು ಶಾಲೆಯನ್ನು ಸ್ಥಾಪಿಸಿದುದು ವಿದ್ಯಾಭಿವೃದ್ಧಿಯ ನಾಂದಿರೂಪವಾಯಿತು. ಬಡವ ಬಲ್ಲಿದ ಎಂಬ ಭೇದಭಾವವಿಲ್ಲದೆ 'ಮೊದಲು ಬಂದವರಿಗೆ ಮೊದಲ ಸೇವೆ' ಎನ್ನುವಂತೆ ಸರ್ವರಿಗೂ ಸಮಾನಾವಕಾಶ ಕಲ್ಪಿಸಿ ಕೊಟ್ಟರು. ಅಲ್ಲದೆ ಇದು ಬೆಳೆದು ಬಂದ ಚರಿತ್ರೆಯು ತುಮಕೂರು ಜಿಲ್ಲೆಯ ವಿದ್ಯಾಪ್ರಗತಿಯ ಚರಿತ್ರೆಯೆ ಆಗಿದೆ, ಎಂದು ವಿಖ್ಯಾತಿ ಪಡೆಯಬೇಕಾದರೆ ಅದಕ್ಕೆಲ್ಲಾ ಕಾರಣ ಶ್ರೀಶ್ರೀಗಳವರ ಪವಾಡಸದೃಶವಾದ ಸಾಧನೆಯೇ ಆಗಿದೆ. ಈ ಸಂಸ್ಥೆಯು ಶ್ರೀಗಳವರ ಆಶೀರ್ವಾದದ ಬಲದಿಂದ ತನ್ನದೇ ಆದ ವಿಶೇಷತೆಯನ್ನು ಪಡೆದಿರುವುದು ಸರ್ವವಿದಿತವಾಗಿದೆ.

ಶ್ರೀ ಸಿದ್ಧಗಂಗಾ ಪ್ರೌಢಶಾಲೆಯು ೧೯೪೬ ನೆಯ ಜೂನ್ ತಿಂಗಳಲ್ಲಿ ಸ್ಥಾಪಿತವಾಯಿತು. ಆಗ್ಗೆ ಶ್ರೀ ಶ್ರೀಗಳವರು ತಮ್ಮ ಗುರುಗಳು ಲಿಂಗೈಕ್ಯಾನಂತರ ಶ್ರೀ ಸಿದ್ಧಗಂಗಾ ಕ್ಷೇತ್ರದ ಪೂರ್ಣ ಜವಾಬ್ದಾರಿಯನ್ನು ಹೊತ್ತು ಮೂರು ವರ್ಷಗಳು ಕಳೆದಿದ್ದವು. ಆ ಸಂದರ್ಭದಲ್ಲಿ ಇಡೀ ತುಮಕೂರಿನಲ್ಲಿದ್ದ ಏಕೈಕ ಸರ್ಕಾರಿ ಪ್ರೌಢಶಾಲೆಯಲ್ಲಿ ಸ್ಥಳಾವಕಾಶವಿಲ್ಲದೆ. ತುಮಕೂರಿನ ಹಾಗೂ ಸುತ್ತಮುತ್ತಲಿನ ಮೂರು ತಾಲ್ಲೋಕು ಮಕ್ಕಳಿಗೆ ವ್ಯಾಸಂಗ ಮುಂದುವರಿಸಲು ತೊಂದರೆಯಾಯಿತು. ಆಗ ಜಿಲ್ಲೆಯಲ್ಲೆಲ್ಲಾ ಒಟ್ಟು ಇದ್ದ ಪ್ರೌಢಶಾಲೆಗಳ ಸಂಖ್ಯೆ ಕೇವಲ ೫ ಮಾತ್ರ. ಅವು ಎಲ್ಲಾ ಸರ್ಕಾರಿ ಶಾಲೆಗಳು. ಖಾಸಗಿಯವರು ಶಾಲೆ ಸ್ಥಾಪಿಸಲು ಸರ್ಕಾರದಿಂದ ಸೂಕ್ತ ದ್ರವ್ಯಸಹಾಯ ಮತ್ತು ಪ್ರೋತ್ಸಾಹ ದೊರೆಯದೆ ಇದ್ದ ಕಾಲವದು. ಇಂತಹ ಪರಿಸ್ಥಿತಿಯಲ್ಲಿ ಶ್ರೀಗಳವರು ತುಮಕೂರಿನಲ್ಲಿ ಪ್ರೌಢಶಾಲೆಯನ್ನು ತೆರೆದು ತುಮಕೂರು ಜಿಲ್ಲೆಯ ಶೈಕ್ಷಣಿಕ ಕ್ಷೇತ್ರದ ಪ್ರಗತಿಗೆ ಕಾರಣರಾದರು. ಹೈಸ್ಕೂಲು ಬಾಡಿಗೆ ಕಟ್ಟಡದಲ್ಲಿ ಪ್ರಾರಂಭವಾಗಿ ಮೊದಲನೆಯ ವರ್ಗದಲ್ಲಿಯೇ ೧೫೫ ವಿದ್ಯಾರ್ಥಿಗಳನ್ನು ಪಡೆಯಿತು. ಬಡವರ ಆಶ್ರಯದಾತರಾದ ಶ್ರೀಶ್ರೀಗಳವರು ಶಾಲೆಯ ಶುಲ್ಕಗಳನ್ನು ಖಾಸಗಿ ಶಾಲೆಗಳಂತೆ ಅಧಿಕವಾಗಿ ಪಡೆಯದೆ ಸರ್ಕಾರಿ ಶಾಲೆಯ ಮಟ್ಟದಲ್ಲಿ ಇರಬೇಕೆಂದು ಸೂಚಿಸುತ್ತಾ ಸರ್ಕಾರಕ್ಕೆ ಪತ್ರ ಬರೆದರು. ಅದರಲ್ಲಿ ಕಟ್ಟಬೇಕಾದ ಶಾಲೆಯ ಕೊರತಾಬಜೆಟ್ಟನ್ನು ಶ್ರೀಮಠದ ಸಂಪನ್ಮೂಲಗಳಿಂದಲೇ ಸರಿದೂಗಿಸಲಾಗುವುದೆಂದು ನಮೂದಿಸಿದ್ದು ಗಮನಾರ್ಹವಾದ ವಿಷಯ. ಶ್ರೀಗಳವರು ಪ್ರತಿ ಶನಿವಾರ ಎತ್ತುಗಳಿಂದ ಎಳೆಯಲ್ಪಡುವ ಮೇನಾಗಾಡಿಯಲ್ಲಿ ಶಾಲೆಗೆ ದಯಮಾಡಿಸಿ ಮಕ್ಕಳಿಗೆ ನೀತಿಪಾಠವನ್ನು ಬೋಧಿಸುತ್ತಿದ್ದುದು ಎಲ್ಲರ ಗಮನವನ್ನು ಸೆಳೆಯುವ ವಿಷಯವಾಗಿತ್ತು. ಈ ಶಾಲೆಯ ಉಪಾಧ್ಯಾಯರುಗಳು ಸರ್ಕಾರಿ ಶಾಲೆಯ ಉಪಾಧ್ಯಾಯರುಗಳಿಗಿಂತ ಹೆಚ್ಚಿಗೆ ವೇತನ ಪಡೆಯುತ್ತಿದ್ದುದು ಈ ಸಂಸ್ಥೆಯನ್ನು ಬೆಳೆಸುವಲ್ಲಿ ಶ್ರೀಗಳಿಗಿದ್ದ ಉತ್ಕಟೇಚ್ಛೆಯನ್ನು ಸೂಚಿಸುವ ವಿಷಯವಾಗಿದೆ.

ಶಾಲೆಯನ್ನು ಪ್ರಾರಂಭಿಸುತ್ತಿದ್ದಂತೆಯೇ ಶಾಂತಿನಿಕೇತನದ ರಮ್ಯತೆಯನ್ನು ಕೊಡುತ್ತಿದ್ದ ಭವ್ಯನಿವೇಶನವನ್ನು ಕೊಂಡು ೩ ಲಕ್ಷ ರೂಪಾಯಿ ಅಂದಾಜಿನ ಕಟ್ಟಡ ಪ್ರಾರಂಭಿಸಲಾಯಿತು. ಕೇವಲ ೨ ವರ್ಷದಲ್ಲಿ ಕಟ್ಟಡದ ಒಂದನೇ ಅಂತಸ್ತು ಮುಗಿದುಶಾಲೆಯು ಹೊಸ ಕಟ್ಟಡಕ್ಕೆ ಬಂದದ್ದು ಆಗಿನ ಕಾಲಕ್ಕೆ ತುಮಕೂರಿನ ಇತಿಹಾಸದಲ್ಲಿಯೇ ಒಂದು ಹೊಸ ದಾಖಲೆಯೆಂದರೆ ಅತಿಶಯೋಕ್ತಿ ಎನಿಸಲಾರದು.

ಮತ್ತೆ ಕೇವಲ ಎರಡೇ ವರ್ಷಗಳಲ್ಲಿ ಎರಡನೇಅಂತಸ್ತು ಸಹ ಮುಗಿದು ಮೈಸೂರು ಮಹಾರಾಜರಾಗಿದ್ದ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರಿಂದ ೧೯೪೮ರಲ್ಲಿ ಶಾಲೆಯ ಕಟ್ಟಡ ಉದ್ಘಾಟಿಸಲ್ಪಟ್ಟಿತು. ಉದ್ಘಾಟನಾ ಸಮಾರಂಭದ ಅಂಗವಾಗಿ ಶಾಲೆಯಲ್ಲಿ ವಿಜ್ಞಾನವಸ್ತುಪ್ರದರ್ಶನ ಏರ್ಪಟ್ಟಿದ್ದು ಇದರ ಏರ್ಪಾಟಿಗೆ ಪೂರ್ವಭಾವಿಯಾಗಿ ಅನೇಕ ಸಲ ಶಾಲೆಗೆ ಭೇಟಿಕೊಟ್ಟು ಶ್ರೀಗಳವರು ಸೂಕ್ತ ಸಲಹೆಗಳನ್ನಿತ್ತು ವಸ್ತುಪ್ರದರ್ಶನ ಯಶಸ್ಸು ಗಳಿಸಲು ಕಾರಣರಾದರು. ಮಹಾರಾಜರು ವಸ್ತುಪ್ರದರ್ಶನವನ್ನು ವೀಕ್ಷಿಸಿ ಮೆಚ್ಚಿಗೆ ವ್ಯಕ್ತಪಡಿಸಿದರು. ಈ ಸಮಾರಂಭವು ತುಮಕೂರಿನ ನಾಗರಿಕ ಬಂಧುಗಳಿಗೆ ಅವಿಸ್ಮರಣೀಯ ಸುವರ್ಣ ಸನ್ನಿವೇಶ. ಈ ಸಂದರ್ಭದಲ್ಲಿ ಮಹಾರಾಜರು ಶ್ರೀಗಳವರೊಡನೆ ನಿಂತು ತೆಗೆಸಿರುವ ಛಾಯಾಚಿತ್ರಗಳು ಇಂದೂ ಅಧಿಕ ಸಂಖ್ಯೆಯಲ್ಲಿ ಮಾರಾಟವಾಗುತ್ತಿರುವುದು ವಿಶೇಷ ಸಂಗತಿಯಾಗಿದೆ. ಉದ್ಘಾಟನಾ ಸಮಾರಂಭದ ಸಂದರ್ಭದಲ್ಲಿ ಶಾಲಾ ಕಟ್ಟಡ ನಾಲು ವಿದ್ಯುದ್ದೀಪಗಳಿಂದ ಅಲಂಕೃತವಾಗಿದ್ದು ಮೂರು ದಿನಗಳ ಕಾಲ ಸಂಜೆ ನಗರದ ನಾಗರಿಕರು ಪ್ರವಾಹದಂತೆ ಬಂದು ಕಟ್ಟಡವನ್ನು ಹಾಗೂ ಶಾಲೆಯ ವಾತಾವರಣವನ್ನು ವೀಕ್ಷಿಸಿ ಬೆರಗಾದರು; ವಸ್ತುಪ್ರದರ್ಶನವನ್ನು ಮೆಚ್ಚಿದರು. ನಗರದಲ್ಲೇ ಭವ್ಯಕಟ್ಟಡ: ಇಲ್ಲಿಗೆ ನಿತ್ಯ ಬಂದು ಹೋಗುವ ನೌಕರವರ್ಗ ಹಾಗೂ ಮಕ್ಕಳು ಪುಣ್ಯವಂತರು ಎಂದು ಕೊಂಡಾಡಿದರು. ಹಾಗೂ ಶ್ರೀಗಳ ಈ ಸಾಧನೆಯನ್ನು ತುಮಕೂರು ನಾಗರೀಕರು ಪವಾಡವೆಂದರು. ಈ ಹೈಸ್ಕೂಲಿನ ನಿರ್ಮಾಣಕಾರ್ಯದಲ್ಲಿ ಶ್ರೀಗಳವರು ಹಗಲಿರುಳು ಶ್ರಮಿಸಿದ್ದಾರೆ ಎಂದರೆ ಅದು ಅತಿಶಯೋಕ್ತಿಯಲ್ಲ. ಲಾರಿಗಳಲ್ಲಿ ಕಲ್ಲುಗಳನ್ನು ಸಾಗಿಸುತ್ತಿದ್ದ ಕಾಲವಲ್ಲ. ಅದು ಗಾಡಿಗಳಲ್ಲಿ ಈ ಕ್ಷೇತ್ರದ ಸಮೀಪದ ಬಂಡೆಗಳಿಂದ ಕಲ್ಲು ತುಮಕೂರಿಗೆ ಬರಬೇಕು. ಲಕ್ಷಾಂತರ ಕಲ್ಲುಗಳು. ಎಷ್ಟೋ ಸಲ

ಶ್ರೀಗಳವರೇ ಇತರರಿಗೆ ಮಾದರಿಯಾಗಿ ಕಲ್ಲುಗಳನ್ನು ಎತ್ತಿ ಹೊರಿಸಿ ಕಾಯಕವೇ ಕೈಲಾಸವೆಂದು ತೋರಿಸಿದರು. ಶಾಲೆಯ ಆವರಣದಲ್ಲಿ ನಾವು ಕಂಡ ಒಂದು ಸಂಗತಿ : ಒಂದು ದಿನ ಬೆಳಿಗ್ಗೆ ಸ್ವಾಮೀಜಿಯವರು ಬಂದರು. ಕೆಲವು ಕೆಲಸಗಾರರು ಆಲಸ್ಯದಿಂದ ಕಾಲಹರಣ ಮಾಡುತ್ತಿದ್ದರು. ಕೆಲವರು ಕಲ್ಲುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವ ಕೆಲಸವನ್ನು ಬಹಳ ಉದಾಸೀನದಿಂದ ಮಾಡಲೋ ಬೇಡವೋ ಎಂಬ ಭಾವನೆಯಿಂದ ಮಾಡುತ್ತಿದ್ದರು. ಸ್ವಲ್ಪ ಮೌನವಾಗಿ ಕೆಲಸ ಕಾರ್ಯಗಳನ್ನು ವೀಕ್ಷಿಸಿದರು. ಗಂಭೀರವಾಗಿ ತಾವೂ ಒಂದೊಂದು ಕಲ್ಲನ್ನು ಎರಡೂ ಕೈಯಲ್ಲಿ ಎತ್ತಿಕೊಂಡು ಸಾಗಿಸಲು ಉಪಕ್ರಮಿಸಿದರು. ಅಲ್ಲಿದ್ದ ಕೆಲಸಗಾರರಿಗೆಲ್ಲ ಬಹಳ ನಾಚಿಕೆಯೂ ಗಾಬರಿಯೂ ಆಯಿತು. ಕೆಲಸದಲ್ಲಿ ಹೊಸ ಚೈತನ್ಯ ಮೂಡಿತು. ಅಲ್ಲಿಂದಾಚೆಗೆ ಮೇಸ್ತ್ರಿಯ ಉಸ್ತುವಾರಿ ಇಲ್ಲದೆ ಕೆಲಸಗಾರರು ತಂತಮ್ಮ ಕೆಲಸಗಳನ್ನು ಉತ್ಸಾಹದಿಂದ ಭಕ್ತಿಯಿಂದ ಮಾಡಲು ತೊಡಗಿದರು.

ಶ್ರೀಗಳವರಿಗೆ ಉಪಾಧ್ಯಾಯರುಗಳ ಮೇಲೆ ಬಹಳ ಕನಿಕರ. ಒಂದು ಸಲ ಜನವರಿ ತಿಂಗಳಲ್ಲಿ ಒಬ್ಬ ಉಪಾಧ್ಯಾಯರಿಗೆ ಬೊಂಬಾಯಿಯಲ್ಲಿ ದೊಡ್ಡ ಕೆಲಸ ಸಿಕ್ಕಿದ್ದರಿಂದ ಶಾಲೆಯ ಕೆಲಸ ಬಿಟ್ಟರು. ಆಗ ೩-೪ ಜನ ಉಪಾಧ್ಯಾಯರು ಅವರ ಪೀರಿಯಡ್‌ಗಳನ್ನು ಹಂಚಿಕೊಂಡು ಪಾಠ ಮಾಡಿದರು. ಬಿಟ್ಟ ಉಪಾಧ್ಯಾಯರ ಸಂಬಳವನ್ನೂ ಸಹ ಅವರಿಗೆ ಹಂಚಲಾಯಿತು.

ಶ್ರೀ ಸಿದ್ಧಗಂಗಾ ಹೈಸ್ಕೂಲ್ ಕಟ್ಟಡ ವಿಶಾಲವಾಗಿದ್ದುದರಿಂದ ೧೯೫೭ರಲ್ಲಿ ಹಳೆ ಮೈಸೂರು ವಿಭಾಗದಲ್ಲಿ ಪ್ರಪ್ರಥಮವಾಗಿ ಖಾಸಗಿಯಾದ ಉಪಾಧ್ಯಾಯ ಶಿಕ್ಷಣ ಸಂಸ್ಥೆಯನ್ನು ಇದೇ ಕಟ್ಟಡದಲ್ಲಿ ತೆರೆದರು. ಇದರಿಂದ ಜಿಲ್ಲೆಯ ಸಾವಿರಾರು ತರುಣರು ಶಿಕ್ಷಣ ಪಡೆದು ಬೇರೆ ಬೇರೆ ಜಿಲ್ಲೆಗಳಲ್ಲಿ ಕೆಲಸ ಪಡೆದುಕೊಂಡರು. ಇದರ ಅಂಗವಾಗಿ ಪ್ರಾಕ್ಟೀಸಿಂಗ್ ಪ್ರೈಮರಿ ಶಾಲೆಯನ್ನು ಸಹ ಇದೇ ಆವರಣದಲ್ಲಿ ತೆರೆಯಲಾಯಿತು. ನಂತರ ಈ ಕಟ್ಟಡದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಹುಟ್ಟಿ ಬೆಳೆದು ಹೊಸ ಕಟ್ಟಡಕ್ಕೆ ಹೋಯಿತು. ಹಾಗೆಯೇ ಶ್ರೀ ಸಿದ್ಧಗಂಗಾ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯೂ ಕೂಡ ಇಲ್ಲಿ ಹುಟ್ಟಿ ಸ್ಥಳಾಂತರವಾಯಿತು. ಮತ್ತು ಶ್ರೀ ಸಿದ್ಧಗಂಗಾ ಕಾಲೇಜ್ ಆಫ್ ಎಜುಕೇಷನ್ ಸಹ ಇದೇ ಕಟ್ಟಡದಲ್ಲಿ ಹುಟ್ಟಿ ಬೆಳೆದು ನಂತರ ಸ್ವಂತ ಕಟ್ಟಡಕ್ಕೆ ವರ್ಗಾಯಿಸಲ್ಪಟ್ಟುದು ಶಾಲೆಯ ಚರಿತ್ರಾರ್ಹ ಘಟನಾವಳಿಗಳು.

ಶಾಲೆಯ ಸ್ಥಾಪನೆಯಾದಾಗಿನಿಂದ ಇದು ಒಂದು ಹೆಸರಾಂತ ಶಾಲೆಯಾಗಬೇಕೆಂದು ಶ್ರೀಶ್ರೀಗಳವರ ಮಹದಾಕಾಂಕ್ಷೆಯಾಗಿತ್ತು. ಆದ್ದರಿಂದ ಮೊದಲ ಹತ್ತು ವರ್ಷಗಳ ಕಾಲ ಎಲ್ಲಾ ಹೆಸರಾಂತ ನಿವೃತ್ತ ವಿದ್ಯಾಧಿಕಾರಿಗಳನ್ನು ಈ ಶಾಲೆಗೆ ಮುಖ್ಯೋಪಾಧ್ಯಾಯರುಗಳನ್ನಾಗಿ ನೇಮಿಸಲಾಗುತ್ತಿತ್ತು. ಇದರಿಂದಾಗಿ ಆ ಕಾಲದಲ್ಲಿ ನೇಮಕರಾದ ಅನೇಕ ಜನ ತರುಣ ಉಪಾಧ್ಯಾಯರುಗಳು ಅವರುಗಳಿಂದ ವಿಶೇಷ ಅನುಭವಗಳನ್ನು ಪಡೆದರು. ಇದರಿಂದಾಗಿ ಶಾಲೆಗೆ ಈಗ ರಾಷ್ಟ್ರ ಮಟ್ಟದಲ್ಲೂ ಹಾಗೂ ಅಂತರ್‌ರಾಷ್ಟ್ರೀಯ ಮಟ್ಟದಲ್ಲೂ ಕೀರ್ತಿ ಬಂದಿದೆ. ಹಾಲಿ ೧೫೦೦ರಷ್ಟು ವಿದ್ಯಾರ್ಥಿಗಳನ್ನು, ೩೭ ಜನ ನೌಕರ ವರ್ಗದವರನ್ನು ಪಡೆದಿರುವ ಈ ಶಾಲೆ ಶ್ರೀಗಳವರ ಆಶೀರ್ವಾದದಿಂದ ಅನೇಕ ವೈಶಿಷ್ಟ್ಯಯುತವಾದುದಾಗಿದೆ. ಈ ಶಾಲೆಯಲ್ಲಿ ಹಿಂದೆ ನಡೆದ, ಈಗ ನಡೆಯುತ್ತಿರುವ ಶೈಕ್ಷಣಿಕ ಸಂಶೋಧನೆಗಳಿಗೂ ಹಾಗೂ ಪ್ರಗತಿಪರ ನವೀನ ಬೋಧನಾನಿರೂಪಣೆಗಳಿಗೂ ದೆಹಲಿಯ ರಾಷ್ಟ್ರೀಯ ಶೈಕ್ಷಣಿಕ ಸಂಶೋಧನಾ ಸಂಸ್ಥೆ (N. C. E. R. T.) ಅನೇಕ ಬಾರಿ ಮನ್ನಣೆ ನೀಡಿ ಶಾಲೆ ರಾಷ್ಟ್ರಮಟ್ಟದಲ್ಲಿ ಹೆಸರು ಗಳಿಸುವಂತೆ ಮಾಡಿದೆ. ಶಾಲೆಯ ವಿಜ್ಞಾನ ಸಂಘದ ಆಶ್ರಯದಲ್ಲಿ ರೂಪಿತವಾದ ಗಣಿತ ಹಾಗೂ ವೈಜ್ಞಾನಿಕ ಉಪಕರಣಗಳು ರಾಜ್ಯಮಟ್ಟ ಹಾಗೂ ರಾಷ್ಟ್ರಮಟ್ಟದ ದೆಹಲಿಯ ವಿಜ್ಞಾನ ಮೇಳಗಳಲ್ಲಿ ಹಲವಾರು ಬಾರಿ ಪ್ರದರ್ಶಿಸಲು ಆಯ್ಕೆಯಾಗಿ ಪ್ರಶಸ್ತಿಗಳಿಸಿ ಶಾಲೆಯ ಕೀರ್ತಿಯನ್ನು ಹೆಚ್ಚಿಸಿವೆ. ಶಾಲೆಯ N. C. C. ಸೇವಾದಳ, ಸ್ಕೌಟ್, ಮಾನವೀಯಕ ಸಂಘ, ಕಲಾಸಂಘ ಮತ್ತು ಆಟೋಟಗಳ ಸಂಘಗಳು ತಮ್ಮವೇ ಆದ ರೀತಿಯಲ್ಲಿ ಕೆಲಸ ಮಾಡುತ್ತ ಹಲವಾರು ಪ್ರಶಸ್ತಿಗಳನ್ನು ಗಳಿಸುತ್ತಾ ಮಕ್ಕಳ ಪುರೋಭಿವೃದ್ಧಿಗೆ ಕಾರಣವಾಗಿ ಶಾಲೆಗೆ ಕೀರ್ತಿ ತರುತ್ತಿವೆ.

ಶಾಲೆಯ ಮುಖ್ಯೋಪಾಧ್ಯಾಯರು ಇದೇ ಶಾಲೆಯಲ್ಲಿ ೩೪ ವರ್ಷಗಳ ಕಾಲ ಅವಿಚ್ಛಿನ್ನ ಸೇವೆಸಲ್ಲಿಸಿದವರಾಗಿದ್ದು ಭಾರತ ಸರ್ಕಾರದ ರಾಷ್ಟ್ರಪ್ರಶಸ್ತಿ ಹಾಗೂ ದೆಹಲಿಯ ರಾಷ್ಟ್ರೀಯ ಸಂಶೋಧನಾ ಕೇಂದ್ರದಿಂದ ಅನೇಕ ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಇವರು ಶಾಲೆಯಲ್ಲಿ ರೂಪಿಸಿರುವ ನವೀನ ಬೋಧನಾ ಕ್ರಮವೊಂದಕ್ಕೆ ದೆಹಲಿಯ ಶೈಕ್ಷಣಿಕ ಸಂಶೋಧನಾ ಕೇಂದ್ರದವರು ಮನ್ನಣೆ ನೀಡಿದ್ದಾರೆ. ಈ ಶಾಲೆಯನ್ನು ರಾಷ್ಟ್ರದಲ್ಲಿ ನವೀನ ಬೋಧನಾ ಕ್ರಮಗಳನ್ನು ರೂಪಿಸುವ ರಾಷ್ಟ್ರದ ೨೭ ಉತ್ತಮ ಶಾಲೆಗಳಲ್ಲಿ ಒಂದನ್ನಾಗಿ ಆರಿಸಿದ್ದಾರೆ. ಈ ನವೀನ ಬೋಧನಾಕ್ರಮವು ಯುನೆಸ್ಕೊ ಪ್ರಕಟಿಸಲಿರುವ ಅಂತರರಾಷ್ಟ್ರೀಯ ಮಟ್ಟದ ಪುಸ್ತಕದಲ್ಲಿ ಪ್ರಕಟವಾಗಲಿದೆ. ಯುನೆಸ್ಕೊ ಯೋಜನೆಯ ಪ್ರಕಾರ ಅನೇಕ ಶಿಕ್ಷಣತಜ್ಞರು ಶಾಲೆಗೆ ಭೇಟಿ ಕೊಟ್ಟು ಇಲ್ಲಿ ರೂಪಿಸಿರುವ ಅನೇಕ ಕಾರ್ಯಕ್ರಮಗಳನ್ನು ನೋಡಿ ಮೆಚ್ಚಿಗೆ ವ್ಯಕ್ತಪಡಿಸಿದ್ದಾರೆ. ಈ ಶಾಲೆಯ ಸಹೋಪಾಧ್ಯಾಯರಲ್ಲಿ ಕೆಲವರು ರಾಷ್ಟ್ರೀಯ ಶೈಕ್ಷಣಿಕ ಸಂಶೋಧನಾ ಸಂಸ್ಥೆಯ ಪ್ರಶಸ್ತಿ ಪಡೆದಿರುವರಲ್ಲದೆ ಅವರಲ್ಲೊಬ್ಬರು ಭಾರತ ಸರ್ಕಾರದ ರಾಷ್ಟ್ರಪ್ರಶಸ್ತಿಗೆ ಪಾತ್ರರಾದದ್ದು ಶ್ರೀಗಳವರ ಕೃಪಾಶೀರ್ವಾದಬಲವೇ ಸರಿ. ಈ ಶಾಲೆಯಲ್ಲಿ ರೂಪಿಸಿರುವ ಪ್ರಶ್ನೆಬ್ಯಾಂಕ್, ನೀತಿಶಿಕ್ಷಣಯೋಜನೆ ಮತ್ತು ಗಣಿತ ಹಾಗೂ ವಿಜ್ಞಾನಗಳ ಮಾಡಲ್‌ಗಳು ಇವುಗಳಿಂದ ಹಲವಾರು ಶಾಲೆಗಳು

ಪ್ರಯೋಜನ ಪಡೆದಿವೆ. ಹೀಗೆ ಈ ಶಾಲೆ ಎಲ್ಲ ದಿಸೆಯಲ್ಲೂ ಖ್ಯಾತಿಗಳಿಸಲು ಶ್ರೀಶ್ರೀಗಳವರ ಆಶೀರ್ವಾದವೇ ಕಾರಣವಾಗಿದೆ. ಈ ಶಾಲೆಯಲ್ಲಿ ಸಾಧಿಸಿರುವಷ್ಟು ಬಹುಮುಖಪ್ರತಿಭಾಸಾಧನೆಗಳು ಬೇರೆ ಯಾವ ಒಂದೇ ಶಾಲೆಯಲ್ಲಿ ರಾಷ್ಟ್ರದಲ್ಲಿ ಸಾಧಿಸಿಲ್ಲ ಎಂದು ಘಂಟಾಘೋಷವಾಗಿ ಹೇಳಬಹುದಾಗಿದೆ.

## ೪. ಶ್ರೀ ಸಿದ್ಧಗಂಗಾಸೈನ್ಸ್, ಆರ್ಟ್ಸ್ ಮತ್ತು ಕಾಮರ್ಸ್ ಕಾಲೇಜು ನಡೆದು ಬಂದ ದಾರಿ

**–ಜಿ. ವೃಷಭೇಂದ್ರಪ್ಪ, ಪ್ರಿನ್ಸಿಪಾಲ್**

ಕರ್ನಾಟಕದ ಉದ್ದಗಲದಲ್ಲಿ ಶ್ರೀ ಸಿದ್ಧಗಂಗಾಮಠ ಜನಜನಿತವಾಗಿದೆ; ಧರ್ಮಕ್ಷೇತ್ರವೆಂದು ಹೆಸರಾಗಿದೆ: ಶಿಕ್ಷಣ ಕ್ಷೇತ್ರವೆಂದು ಪ್ರಸಿದ್ಧಿಗೊಂಡಿದೆ. ಪವಿತ್ರ ಇತಿಹಾಸದ ಹಿನ್ನೆಲೆಯನ್ನು ಹೊಂದಿ, ಅನ್ನದಾಸೋಹ, ಜ್ಞಾನದಾಸೋಹದ ಆಗರವಾದ ಶ್ರೀಕ್ಷೇತ್ರದ ಇಂದಿನ ಕೀರ್ತಿಗೆ ಕಾರಣ ಮಹಾಮೂರ್ತಿಗಳಾಗಿ, ತಪೋಪುಂಗವರಾಗಿ, ಸೇವಾಶಂಕರರಾಗಿ, ವೈಚಾರಿಕ ವಿಭೂತಿ ಪುರುಷರಾಗಿ ಕಂಗೊಳಿಸುತ್ತಿರುವ ಪರಮಪೂಜ್ಯ ಶ್ರೀಶ್ರೀ ಡಾ॥ ಶಿವಕುಮಾರಮಹಾಸ್ವಾಮಿಗಳಾಗಿದ್ದಾರೆ. ಶ್ರೀಶ್ರೀಗಳವರೂ, ಶ್ರೀಕ್ಷೇತ್ರವೂ ಅಭಿನ್ನರೂಪದ ರತ್ನಮಂಗಲಕಲಶವೆಂಬಂತಿದೆ. 'ಸದುವಿನಯದ, ಮೃದುವಚನಂಗಳ, ಸದಾ ಸಕಲಜೀವರಿಗೆ ಲೇಸನೆ ಬಯಸುವ ಆ ಮಹಾಪುಣ್ಯಪುರುಷರ ಲೋಕಕೈಂಕರ್ಯಮಣಿಹಕ್ಕೆ ನೂರು ಮುಖಗಳು; ಸಾವಿರ ಶಾಖೆಗಳು. ಶ್ರೀಶ್ರೀಯವರ ಉದಾತ್ತ, ಭವ್ಯಕ್ರಾಂತದರ್ಶಿತ್ವದ ದಿವ್ಯದೃಷ್ಟಿಗೆ ಗೋಚರವಾದುದೆಲ್ಲ 'ನೀನೊಲಿದರೆ ಕೊರಡು ಕೊನರುವುದಯ್ಯಾ' ಎಂಬ ಹಾಗೆ ತ್ರಿಕಾಲಜ್ಞಾನಿಗಳಾದ, ಯಾವೊಂದು ಕುಲ ಪಂಥಗಳಿಗೂ ಸೀಮಿತವಾಗದೆ, ಅನಂತ ದರ್ಶನಗಳ ಮಹಾಗಣಿಯಿಂದ ಎದ್ದು ಬಂದ ಜಂಗಮಪುರುಷಮಣಿಯೆನಿಸಿ,ಪ್ರಾಚೀನ ಅರ್ವಾಚೀನಗಳ ಭಕ್ತಿಸೇತುವಾಗಿ, ವಿಜ್ಞಾನ-ಆಧ್ಯಾತ್ಮಿಕತೆಗಳ ಸಂಗಮರಾದ ಜಂಗಮವರೇಣ್ಯರಾದ ಶ್ರೀಶ್ರೀಯವರ ಕಾಯಕದ ಕಮ್ಮಟದಿಂದ ರೂಪು ತಳೆದಿರುವ ಸಂಘ, ಸಂಸ್ಥೆಗಳು ಬಳ್ಳಿವರಿದಿವೆ; ಸೇವೆ ಸಲ್ಲಿಸುತ್ತಿವೆ. ಸಮಾಜದ ಕುಂದುಕೊರತೆಗಳನ್ನು ಕಾಣುವ ಕಾರುಣ್ಯದ ಕಣ್ಣು ಪರಮಪೂಜ್ಯರಿಗೆ. ಅವರಿಗಿಲ್ಲ ಹಗಲು ರಾತ್ರಿಗಳ ಭೇದ. ಕಾಯಕದಲ್ಲಿ ಗರಿಗೆದರಿದ ಅವರ ಸೇವಾನಿಷ್ಠೆಯ ಮೈಲಿಗಲ್ಲುಗಳು ಅವರು ಸಂಸ್ಥಾಪಿಸಿ ಪೋಷಿಸಿಕೊಂಡು ಬರುತ್ತಿರುವ ಶಿಕ್ಷಣ ಸಂಸ್ಥೆಗಳು. ಒಂದೊಂದು ಸಂಸ್ಥೆಯೂ ಒಂದೊಂದು ಸ್ತಂಭದೀಪ.

'ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ' ಮಹಾಸ್ವಾಮಿಗಳವರ ದಿವ್ಯಅಧ್ಯಕ್ಷತೆಯಲ್ಲಿ ರೂಪಿತವಾಗಿರುವ ಒಂದು ಸೇವಾಸಂಸ್ಥೆ. ಶ್ರೀ ಸಂಸ್ಥೆಯಲ್ಲಿ ತುಮಕೂರು ನಗರ ಹಾಗೂ ಜಿಲ್ಲೆಯ ಗಣ್ಯದಾನಿಗಳೂ ಮತ್ತು ಶ್ರೀಕ್ಷೇತ್ರದ ಅಭಿಮಾನಿಗಳೂ, ಭಕ್ತರೂ, ಕಾರ್ಯಕಾರಿ ಮಂಡಳಿಯ ಸದಸ್ಯರಾಗಿ, ಹಾಗೂ ಗೌರವ ಸದಸ್ಯರಾಗಿ ಸೇವೆಸಲ್ಲಿಸುತ್ತಿದ್ದಾರೆ. ಶ್ರೀ ಸಂಸ್ಥೆಯ ಆಶ್ರಯದಲ್ಲಿ ಸಂಸ್ಥಾಪಿತವಾಗಿ ಪ್ರಗತಿಪಥದಲ್ಲಿ ಮುನ್ನಡೆಯುತ್ತ 'ದೀಪದ ಹೆಜ್ಜೆ' ಗಳನ್ನು ಇಡುತ್ತಿದೆ ಶ್ರೀ ಸಿದ್ಧಗಂಗಾ ಕಲಾ, ವಿಜ್ಞಾನ, ಮತ್ತು ವಾಣಿಜ್ಯ ಕಾಲೇಜು. ತುಮಕೂರು ನಗರದ ಇತಿಹಾಸದಲ್ಲಿ ೧೯೬೬ನೆಯ ವರ್ಷ ಮಹತ್ವದ ವರ್ಷವೆನಿಸಿತು. ಆ ವರ್ಷ ಕಾಲೇಜೊಂದರ ಉದಯವಾಗುವುದಕ್ಕೆ ಕಾರಣವಾದುದು ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮಾರಸ್ವಾಮಿಗಳವರ ಕೃಪಾದೃಷ್ಟಿ ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯವರ ಸೇವಾದೃಷ್ಟಿ. ನಗರದ ಹೆಣ್ಣುಮಕ್ಕಳಿಗಾಗಿ ಪ್ರಾರಂಭವಾದ ಶ್ರೀ ಸಿದ್ಧಗಂಗಾ ಹೆಣ್ಣುಮಕ್ಕಳ ಕಾಲೇಜು ಅನಿವಾರ್ಯ ಹಾಗೂ ಅತೀವ ಅಗತ್ಯಗಳ ಕಾರಣಗಳಿಂದಾಗಿ ಬಾಲಕರನ್ನು ಸೇರಿಸಿಕೊಳ್ಳಬೇಕಾಗಿಬಂದಿತು: ಸಹ-ಶಿಕ್ಷಣದ ಕಾಲೇಜಾಗಿಯೇ ಆರಂಭವಾಯಿತು.

ಕಾಲೇಜಿನ ಪ್ರಪ್ರಥಮ ಗೌರವ ಪ್ರಾಚಾರ್ಯರಾಗಿ, ಪ್ರಾಂಶುಪಾಲರಾಗಿ ಸೇವೆಸಲ್ಲಿಸಿದ ಹಿರಿಮೆ ಶ್ರೀ ಜಿ.ಎಸ್. ಶಿವಣ್ಣನವರದು. ಶ್ರೀಯುತರ ಕಠಿಣ ಪರಿಶ್ರಮ, ನಿಷ್ಕಾಮಂತ ದುಡಿಮೆ, ಕಾಲೇಜಿನ ಮುಖ್ಯ ಜೀವಾಳ. ಅತ್ಯಲ್ಪಕಾಲದಲ್ಲಿಯೇ ಅತಿ ಹೆಚ್ಚು ಸೌಲಭ್ಯಗಳನ್ನು ಕಲ್ಪಿಸಿ ಕಾಲೇಜಿನ ಆರಂಭದ ಹೆಜ್ಜೆಗಳನ್ನು ದೃಢವಾಗಿಡುವುದಕ್ಕೆ ಅನುಕೂಲವಾಯಿತು, ಶ್ರೀಯುತರು, ಗೌರವ ಪ್ರಾಂಶುಪಾಲರಾಗಿದ್ದಾಗ ಅವರಿಗೆ ಸಹಾಯಕರಾಗಿ ನಿಂತು, ಕಾಲೇಜಿನ ಪೂರ್ಣ ಆಡಳಿತದ ನಿರ್ವಹಣೆಯನ್ನು ನಿರ್ವಹಿಸಿದ ಕೀರ್ತಿ ಶ್ರೀ ಪಿ.ಜಿ. ರಾಮಪ್ಪನವರದು. ಕಾಲೇಜಿನ ಉಪಪ್ರಾಂಶುಪಾಲರಾಗಿ ನಿಯಾಮಕರಾದ ಶ್ರೀಯುತರ ನಿಷ್ಕಾಮಶ್ರಮ, ಕಾಲೇಜಿನ ಅಭಿವೃದ್ಧಿಗೆ ಮೊದಲ ಮೆಟ್ಟಿಲಾಯಿತು. ಗೌರವಪ್ರಾಂಶುಪಾಲರಾದ ಶ್ರೀ ಜಿ.ಎಸ್. ಶಿವಣ್ಣನವರು, ಇಂಜಿನಿಯರಿಂಗ್ ಪದವೀಧರರಿದ್ದು, ಅನುಭವ ಶ್ರೀಮಂತರಾಗಿದ್ದು, ಕಾಲೇಜಿನ ಅಸ್ತಿಭಾರವನ್ನು ಹಾಕಿದರು. ಉತ್ಸಾಹದ ಮುತ್ಸದ್ದಿಗಳೆನಿಸಿದ ಡಾ॥ ಟಿ. ತಿಪ್ಪೇಸ್ವಾಮಿಯವರನ್ನು ಕಾಲೇಜಿನ ಪ್ರಾಂಶುಪಾಲರನ್ನಾಗಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯವರು ೧೯೭೦ರಲ್ಲಿ ನೇಮಕ ಮಾಡಿದರು. ಶ್ರೀಯುತರ ಸೇವಾವಧಿಯಲ್ಲಿ ಕಾಲೇಜಿಗೆ ಹೊಸ ಒಂದು ರೂಪವೇ ದೊರೆಯಿತು. ಕೇವಲ ಪಿ.ಯು.ಸಿ. ಹಂತದಲ್ಲಿಯೇ ಉಳಿಯಬಹುದಾಗಿದ್ದ ಕಾಲೇಜನ್ನು ಪ್ರಥಮದರ್ಜೆಯ ಕಾಲೇಜಿನ ಹಂತಕ್ಕೆ ತರುವಲ್ಲಿ ಡಾ। ತಿಪ್ಪೇ

ಸ್ವಾಮಿಯವರು ವಹಿಸಿದ ಕಾರ್ಯಕ್ಷಮತ್ವ ಸ್ಮರಣೀಯವಾದುದು. ೧೯೬೭ರಲ್ಲಿಯೇ ಬಿ.ಎಸ್.ಸಿ. ಪದವೀ ತರಗತಿಗಳನ್ನು ಪ್ರಾರಂಭಿಸಿದ ಯಶಸ್ಸು ಅವರದು. ಅಂತೆಯೇ ೧೯೬೮ರಲ್ಲಿ ಬಿ.ಎ.ಪದವೀ ತರಗತಿಗಳನ್ನು ೧೯೭೦ರಲ್ಲಿ ಬಿ.ಕಾಂ.ಪದವೀ ತರಗತಿಗಳನ್ನು ಪ್ರಾರಂಭಿಸಿದರು. ಶ್ರೀಯುತರ ಸೇವಾವಧಿಯ ಫಲವಾಗಿ ಕಾಲೇಜು ಇಂದು ಸರ್ವತೋಮುಖವಾಗಿ ಬೆಳೆದು, ಅಭಿವೃದ್ಧಿಯ ಹಾದಿಯಲ್ಲಿ ನಡೆದಿದೆ. ಶ್ರೀ ಟಿ. ತಿಪ್ಪೇಸ್ವಾಮಿಯವರ ನಂತರ ಡಾ॥ ಸಿ.ಆರ್. ಪಾಲಸ್‌ರವರು ಪ್ರಾಂಶುಪಾಲರಾಗಿ ನೇಮಕಗೊಂಡರು. ಸರ್ಕಾರಿ ಸೇವೆಯಲ್ಲಿದ್ದು ನಿವೃತ್ತರಾಗಿ ಬಂದ ಶ್ರೀಯುತರು ಅಲ್ಪಕಾಲಾವಧಿಯಲ್ಲಿ ರಾಷ್ಟ್ರೀಯಸೇವಾ ಯೋಜನೆ, ಪೋಷಕಬೋಧಕರ ದಿನಾಚರಣೆಗಳಂಥ ಕಾರ್ಯಕ್ರಮಗಳ ಮೂಲಕ ಶಿಕ್ಷಣಕ್ಷೇತ್ರದ ವಿಸ್ತಾರವನ್ನು ಅರ್ಥಪೂರ್ಣವಾಗಿ ಹೆಚ್ಚಿಸಿದರು. ಶ್ರೀಯುತರ ನಂತರ ಶ್ರೀ ಎಂ. ಬಸವಣ್ಣನವರು ಪ್ರಾಂಶುಪಾಲರಾಗಿ ಸೇವೆಸಲ್ಲಿಸಲಾರಂಭಿಸಿದರು. ಶ್ರೀಯುತರ ಸೇವಾಜೀವನದ ಸಮಯದಲ್ಲಿ ಶೈಕ್ಷಣಿಕ ಮತ್ತು ವೈಜ್ಞಾನಿಕ ವಸ್ತುಪ್ರದರ್ಶನವನ್ನು, ೧೯೭೭-೭೮ರಲ್ಲಿ ಕಾಲೇಜಿನ ಹತ್ತನೇ ವಾರ್ಷಿಕವರ್ಧಂತಿಯ ಆಚರಣೆಯಲ್ಲಿ ಏರ್ಪಡಿಸಿ, ಒಂದು ಹೊಸ ವಿಧಾಯಕ, ಹಾಗೂ ರಚನಾತ್ಮಕಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ಇದರಿಂದ ನಗರಜೀವನದಲ್ಲಿ ಕಾಲೇಜಿನ ವಿಚಾರದಲ್ಲಿ ಹೆಚ್ಚು ಗೌರವಾದರಗಳು, ಆಸಕ್ತಿ ಅಭಿಮಾನಗಳು ಮೂಡುವಂತಾಯಿತು.

ಈ ಪ್ರಾಚಾರ್ಯಪರಂಪರೆಯು, ಭಕ್ತಿಯಿಂದ, ನಿಷ್ಠಾಪೂರ್ಣಸೇವೆಯನ್ನು ಸಲ್ಲಿಸಿ, ಕರ್ನಾಟಕದ ಶಿಕ್ಷಣಸಕ್ಷೆಯಲ್ಲಿ ಉನ್ನತಸ್ಥಾನವೊಂದನ್ನು ಗಳಿಸುವ ದಿಸೆಯಲ್ಲಿ ಯಶಸ್ವಿಯಾಗಿದೆ.

ಯಾವ ಹೂವಿನಲ್ಲಿ ಎಂಥ ಗಂಧವಿರುತ್ತದೋ ಬಲ್ಲವರಾರು ? ಹೂವಿನ ಸೌರಭವನ್ನು ಸವಿದಾಗ ತಾನೇ ತಿಳಿಯುವುದು. ಕಾಲದೇಶಗಳ ಸಂಗಮದೊಂದಿಗೆ, ಸದವಕಾಶ, ಸತತಪ್ರಯತ್ನ, ಸಾರ್ಥಕವಾತಾವರಣ, ಉತ್ತಮಮಾರ್ಗದರ್ಶನ, ಸತ್ಪ್ರೇಮಪೂರ್ಣವಾದ ಪ್ರೋತ್ಸಾಹ ದೊರೆತಾಗ ಬಿತ್ತಿದ ಬೀಜ ಮೊಳೆಯದೆ ? ಬೆಳೆಯದೆ ? ಲೋಕದ ಕಣ್ಣನ್ನು ತನ್ನತ್ತ ಸೆಳೆಯದೆ ? ನಮ್ಮ ಕಾಲೇಜಿಗೆ ಬಂದು, ಸೇರಿದ ಸಹಸ್ರ ಸಹಸ್ರ ವಿದ್ಯಾರ್ಥಿಗಳಿಂದು ರಾಷ್ಟ್ರದ ಸೇವೆಯಲ್ಲಿ ತೊಡಗಿದ್ದಾರೆ. ಅವರಿಗೆ ಹೆಮ್ಮೆ ತಾವು ಶ್ರೀ ಸಿದ್ಧಗಂಗಾ ಕಾಲೇಜಿನ ವಿದ್ಯಾರ್ಥಿಗಳೆಂದು ಹೇಳಿಕೊಳ್ಳುವಲ್ಲಿ, ಅವರಲ್ಲಿಯೂ ಪ್ರತಿಭೆಯ ಪುಣ್ಯದ ಮೊಗ್ಗುಗಳಾಗಿ, ನಮ್ಮ ಕಾಲೇಜಿನಲ್ಲಿ ಬೆಳಕುಕಂಡ ಕೆಲವರು ವಿದ್ಯಾರ್ಥಿಗಳಿಂದು, ಪುಣ್ಯದ ತೆನೆಗಳಾಗಿ ಜೀವಿಸಿದ್ದಾರೆ. ದೇಶದ ಉದ್ದಗಲದಲ್ಲಿ. ಅವರಲ್ಲಿ ಕೆಲವರನ್ನಾದರೂ ಇಲ್ಲಿ ಹೆಸರಿಸುವುದು ಅಪ್ರಾಸಂಗಿಕವಾಗಲಾರದಲ್ಲವೆ ? ರ್‍ಯಾಂಕುಗಳ ಶ್ರೇಣಿಗೆ ನಾಂದಿ ಹಾಕಿದ ಶ್ರೀ ಜಿ. ತಿಮ್ಮೇಗೌಡ, ಅನಂತರ ಅವನ್ನು ಹಂತಹಂತವಾಗಿ ಕಟ್ಟಲು ಕಾರಣರಾದ ಶ್ರೀ ಕೆ.ವಿ. ಶ್ರೀಕುಮಾರ್, ಶ್ರೀ ಶಿವಶಂಕರ್, ಶ್ರೀ ಮಂಜುನಾಥ್. ಕುಮಾರಿಯರಾದ ರೇಣುಕಾಂಬ, ಎಲ್. ವಿಜಯ, ಸಂಧ್ಯ, ಸಿ.ಎಸ್. ಗಾಯತ್ರಿ, ರಮೇಶ, ಮುಂತಾದವರು ಕಾಲೇಜಿನ ಹೆಮ್ಮೆಗೆ ಹೆಸರು ತಂದಿದ್ದಾರೆ. ೧೯೭೦-೭೧ರಲ್ಲಿ ಪ್ರಾರಂಭವಾದ ರ್‍ಯಾಂಕ್‌ಗಳಿಕೆ ಸಂಪ್ರದಾಯ ೧೯೭೭-೭೮ರಲ್ಲಿ ಏಳು ರ್‍ಯಾಂಕುಗಳನ್ನು, ಕಲಾ, ವಿಜ್ಞಾನ ಹಾಗೂ ವಾಣಿಜ್ಯ ವಿಭಾಗಗಳಲ್ಲಿ ಗಳಿಸುವ ಮೂಲಕ ವಿಶ್ವವಿದ್ಯಾಲಯದ ಇತಿಹಾಸದಲ್ಲಿ ತನ್ನದೊಂದು ಉಜ್ವಲ ಪುಟವನ್ನು ತೆರೆಯಿತು. ಪ್ರತಿಭಾವಂತರೆನಿಸಿದ ವಿದ್ಯಾರ್ಥಿಗಳು, ತಮ್ಮ ಸ್ನಾತಕೋತ್ತರ ಶಿಕ್ಷಣಾವಧಿಯಲ್ಲಿಯೂ ಕಾಲೇಜಿನ ಸಭ್ಯಸಂಪ್ರದಾಯ,ಸನ್ನಡತೆಗೆ ಮಾದರಿಯಾಗಿ ಬಾಳುತ್ತಿರುವುದು ನಿಜಕ್ಕೂ ಸಂತಸದ ವಿಷಯ. ಈ ಹೆಮ್ಮೆಯ ಹಿನ್ನೆಲೆಯಲ್ಲಿ ಉಪಾಧ್ಯಾಯವರ್ಗದವರ ಪರಿಶ್ರಮ,ಅನುಭವಾದಿಗಳು ಅಪರಿಮಿತವಾದವು. ಈ ಕಾಲೇಜಿನಲ್ಲಿ ಉತ್ತಮಮಟ್ಟದ ಶಿಕ್ಷಕರು, ಅವಿಶ್ರಾಂತವಾಗಿ ದುಡಿದು ಕಾಲೇಜಿನ ಕೀರ್ತಿಗೆ ಕಲಶಪ್ರಾಯರಾಗಿದ್ದಾರೆ.

ನಮ್ಮ ಕಾಲೇಜಿನ ವಾತಾವರಣ ಪ್ರಶಾಂತವಾಗಿದ್ದು ನಗರದ ಹೃದಯಸ್ಥಾನದಲ್ಲಿದೆ, 'ಸಸ್ಯಕಾಶಿಯಲ್ಲೊಂದು ಕಾಲೇಜು' ಎನಿಸಿದೆ, ಪ್ರಕೃತಿಯ ಸಾವಯವ ಸಂಬಂಧ ಪಡೆದ ಗ್ರಂಥಾಲಯ, ಪ್ರಯೋಗಾಲಯಗಳ ಪೂರ್ಣಪ್ರಯೋಜನ ನೀಡುತ್ತಿರುವುದು. ಕಲಿಯ ಬಂದ ಶಿಕ್ಷಣಾರ್ಥಿಗಳಿಗೆ ಸಹಾಯಕಸಾಧನಗಳಾಗಿ ಜ್ಞಾನದಾಹಕ್ಕೆ ತೃಪ್ತಿಯ ತುತ್ತುನೀಡುತ್ತಿವೆ.

ಶ್ರೀ ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯ ಅಂಗವಾಗಿ ಪ್ರಾರಂಭವಾದ ಶ್ರೀ ಸಿದ್ಧಗಂಗಾ ಕಲಾ, ವಿಜ್ಞಾನ, ವಾಣಿಜ್ಯ ಕಾಲೇಜಿನ ಅಭಿವೃದ್ಧಿಗೆ ಹಲವಾರು ಪುಣ್ಯಜೀವಿಗಳು ಕಾರಣರಾಗಿದ್ದಾರೆ, ಎಲ್ಲರನ್ನೂ ಇಲ್ಲಿ ನೆನೆಯುವುದೇ ನಮ್ಮ ಪವಿತ್ರಕರ್ತವ್ಯ. ಶ್ರೀ ಜಿ. ಯಂ. ಸಿದ್ಧರಾಮಣ್ಣನವರು, ಶ್ರೀ ಟಿ.ಎನ್. ಕೆಂಪಹೊನ್ನಯ್ಯನವರು, ಶ್ರೀ ಸಾಮಿಲ್ ಶಿವಣ್ಣನವರು, ಶ್ರೀ ಎ.ಕೆ. ಪಾರ್ಶ್ವನಾಥ್‌ರವರು, ಮುಂತಾದವರು ನಗರದ ಉದಾರದಾನಿಗಳು, ಶ್ರೇಷ್ಠ ವರ್ತಕರು. ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳಾಗಿ ಸೇವೆಗೈದ ಶ್ರೀ ಕೆ. ತಿಪ್ಪರುದ್ರಯ್ಯನವರು, ಸಹಕಾರ್ಯದರ್ಶಿಗಳಾಗಿ ಸೇವೆಸಲ್ಲಿಸಿದ ಶ್ರೀ ಜಿ. ಎಸ್. ಶಿವಣ್ಣನವರು, ಶ್ರೀ ಎಂ. ಚಿಕ್ಕಣ್ಣಯ್ಯಪ್ಪನವರು, ಇದೀಗ ಕಾರ್ಯದರ್ಶಿಗಳಾಗಿ ಸೇವೆಸಲ್ಲಿಸುತ್ತಿರುವ ಶ್ರೀ ಎಸ್. ಶಿವಪ್ಪನವರು, ಸಹಕಾರ್ಯದರ್ಶಿಗಳಾದ ಶ್ರೀ ಬಿ.ಹೆಚ್. ಕರಕರೆಡ್ಡಿಯವರು, ವಿದ್ಯಾಸಂಸ್ಥೆಯ ಕಾರ್ಯಕಾರಿಮಂಡಳಿ ಸದಸ್ಯರು ಮತ್ತು ಇತರ ಮಹನೀಯರು ಪರೋಕ್ಷವಾಗಿ ಸೇವೆಸಲ್ಲಿಸುತ್ತಿರುವುದನ್ನೂ ಸ್ಮರಿಸುತ್ತೇನೆ.

## ೫. ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ ನಡೆದು ಬಂದ ದಾರಿ

—ಆರ್. ಸಿ. ಸದಾಶಿವನ್, ಪ್ರಿನ್ಸಿಪಾಲರು

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಮಹಾಪೋಷಕರು, ಆದ ಡಾ॥ ಶ್ರೀಶ್ರೀ ಶಿವಕುಮಾರ ಸ್ವಾಮಿಜೀಯವರ ನಿರಂತರ ಪೂಜೆ, ತಪಸ್ಸು, ಅವಿಶ್ರಾಂತ ದುಡಿಮೆ ಹಾಗೂ ಅನಂತ ತ್ಯಾಗ ಇವುಗಳ ಫಲವಾಗಿ ಇಂದು ಕರ್ನಾಟಕ ರಾಜ್ಯದಲ್ಲಿ ಅನೇಕ ವಿದ್ಯಾಸಂಸ್ಥೆಗಳು ರೂಪುಗೊಂಡು ವಿಜೃಂಭಿಸುತ್ತಿವೆ. ವಿದ್ಯಾಭ್ಯಾಸದ ಪ್ರಸರು ಜೀವನವೇ ಪ್ರಜಾಪ್ರಭುತ್ವದ ತಳಹದಿ. ನಮ್ಮ ದೇಶದ ಪ್ರೌಢಶಾಲಾ ಮಕ್ಕಳಿಗೆ ಪರಿಣಾಮಕಾರಿಯಾದ ಶಿಕ್ಷಣ ನೀಡಲು ಬೇಕಾಗುವ ನಿಷ್ಠಾವಂತ ಉಪಾಧ್ಯಾಯರನ್ನು ನಿರ್ಮಿಸುವ ಉದ್ದೇಶದಿಂದ ೧೯೭೨-೭೩ನೇ ಸಾಲಿನಲ್ಲಿ ಸಂಸ್ಥಾಪಿತವಾದ ನಮ್ಮ 'ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾ ವಿದ್ಯಾಲಯವು', ಶ್ರೀ ಸಿದ್ಧಗಂಗಾ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜಿನ ಕಟ್ಟಡದಲ್ಲಿ ಆರಂಭಗೊಂಡು ಇಂದು ತನ್ನದೇ ಆದ ಬೃಹದಾಕಾರವಾದ ಕಟ್ಟಡದಲ್ಲಿ ವಿಜೃಂಭಿಸುತ್ತಿದೆ.

ನಮ್ಮ ಕಾಲೇಜು ೧೯೭೨-೭೩ನೇ ಸಾಲಿನಲ್ಲಿ ೧೫೦ ಮಂದಿ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೂ. ೧೯೭೩-೭೪ನೇ ಸಾಲಿನಲ್ಲಿ ೧೬೦ ಮಂದಿ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೂ ೧೯೭೪-೭೫ನೇ ಸಾಲಿನಲ್ಲಿ ೧೭೧ ಮಂದಿ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೂ. ೧೯೭೫-೭೬ನೇ ಸಾಲಿನಲ್ಲಿ ೧೩೦ ಮಂದಿ ವಿದ್ಯಾರ್ಥಿ- ಉಪಾಧ್ಯಾಯರುಗಳಿಗೂ. ೧೯೭೬-೭೭ನೇ ಸಾಲಿನಲ್ಲಿ ೧೩೦ ಮಂದಿ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೂ. ೧೯೭೭-೭೮ನೇ ಸಾಲಿನಲ್ಲಿ ೭೪ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೂ ೧೯೭೮-೭೯ನೇ ಸಾಲಿನಲ್ಲಿ ೧೦೧ ಮಂದಿ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೂ, ೧೯೭೯-೮೦ನೇ ಸಾಲಿನಲ್ಲಿ ೧೦೩ ಮಂದಿ ವಿದ್ಯಾರ್ಥಿ-ಉಪಾಧ್ಯಾಯರಿಗಳಿಗೂ ಶಿಕ್ಷಣ ಕೊಟ್ಟು ಮತ್ತು ಕೊಡುತ್ತಾ ಅತ್ಯುತ್ತಮ ಫಲಿತಾಂಶವನ್ನು ಪಡೆದಿದೆ. ನಮ್ಮ ಕಾಲೇಜೂ ಸಹ ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯದ ರ‍್ಯಾಂಕುಗಳ ಪಟ್ಟಿಯಲ್ಲಿ ಬಂದಿದೆ ಎಂದು ತಿಳಿಸಲು ಹೆಮ್ಮೆಯಾಗುತ್ತಿದೆ. ೧೯೭೫ನೇ ಸಾಲಿನಲ್ಲಿ ನಮ್ಮ ಕಾಲೇಜು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮೊದಲನೇ ರ‍್ಯಾಂಕ್ ಪಡೆಯಿತು. ಮತ್ತೆ ನಾವು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಿದ ಮೊದಲನೆಯ ಸಾಲಿನಲ್ಲಿ ಮೂರು ರ‍್ಯಾಂಕುಗಳನ್ನು ಪಡೆದೆವು. (ಮೊದಲನೆಯ ರ‍್ಯಾಂಕ್. ಐದನೆಯ ಮತ್ತು ಒಂಬತ್ತನೆಯ ರ‍್ಯಾಂಕ್).

ಕರ್ನಾಟಕ ರಾಜ್ಯದಲ್ಲಿ ೩೪ ಬಿ. ಇಡಿ. ಕಾಲೇಜುಗಳಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಅದರಲ್ಲಿ ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾ ವಿದ್ಯಾಲಯವೂ ಒಂದು. ಆದರೆ ಈ ಕಾಲೇಜು ತನ್ನದೇ ಆದ ಕೆಲವು ವಿನೂತನ ವೈಶಿಷ್ಟ್ಯಗಳಿಂದ ಕೂಡಿದುದಾಗಿದೆ. ಅಂದರೆ ಕಾಲೇಜು ಪ್ರಾರಂಭವಾದ ವರ್ಷದಿಂದಲೇ ತನ್ನದೆ ಆದ ಕಟ್ಟಡವನ್ನು ಪಡೆಯದಿದ್ದರೂ ಸಹ, ವಿದ್ಯಾರ್ಥಿ-ಉಪಾಧ್ಯಾಯರುಗಳಿಗೆ ಅನುಕೂಲವಾಗುವ ರೀತಿ ಕನ್ನಡ ಮತ್ತು ಇಂಗ್ಲೀಷ್ ಮಾಧ್ಯಮಗಳೆರಡರಲ್ಲೂ ತರಗತಿಗಳನ್ನು ೧೯೭೮ರ ವರೆವಿಗೆ ನಡೆಸಿಕೊಂಡು ಬಂದಿರುತ್ತದೆ. ೧೯೭೮ರಿಂದೀಚೆಗೆ ನಮ್ಮ ಕಾಲೇಜಿಗೆ ೭೫ ಮಂದಿ ವಿದ್ಯಾರ್ಥಿ-ಉಪಾಧ್ಯಾಯರುಗಳನ್ನು ಸೇರಿಸಿಕೊಳ್ಳುವಂತೆ ರಾಜ್ಯ ಸರ್ಕಾರದಿಂದ ಆದೇಶ ಬಂದ ಮೇಲೆ ನಾವು ಎರಡೂ ಮಾಧ್ಯಮಗಳನ್ನು ನಡೆಸಲು ಸಾಧ್ಯವಾಗಲಿಲ್ಲವೆಂದು ತಿಳಿಸಲು ವಿಷಾದಿಸುತ್ತೇವೆ. ೧೯೭೬ನೇ ಸಾಲಿನಲ್ಲಿ, ಕನ್ನಡ ಮಾಧ್ಯಮದಲ್ಲಿಯೇ ಓದಿ ಕನ್ನಡದಲ್ಲಿಯೇ ಉತ್ತರ ಬರೆದು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಮೊದಲನೆಯ ರ‍್ಯಾಂಕ್ ಪಡೆದೆವೆಂದು ತಿಳಿಸಲು ಬಹಳ ಹೆಮ್ಮೆಯಾಗುತ್ತಿದೆ. ಇದು ಸಂಸ್ಥೆಯ ಕೀರ್ತಿಗೆ ಇಟ್ಟ ಇನ್ನೊಂದು ಕಳಶವೆನ್ನಬಹುದು. ನಮ್ಮ ಕಾಲೇಜ್ ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಸಹ ಉತ್ತಮ ಕ್ರೀಡಾಪಟುಗಳಾಗಿದ್ದಾರೆ, ಜೊತೆಗೆ ವಾಕ್‌ಪಟುಗಳಾಗಿದ್ದಾರೆ. ಕನ್ನಡ ಮಾಧ್ಯಮದಲ್ಲಿ ಬಿ.ಇಡಿ. ಮಟ್ಟದಲ್ಲಿ ಶಿಕ್ಷಣ ಕೊಟ್ಟ ಪ್ರಥಮ ಮತ್ತು ಏಕೈಕ ಕಾಲೇಜೆಂದರೆ ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ.

ನಾವು ಪ್ರತಿ ಸಾಲಿನಲ್ಲಿಯೂ ಶೈಕ್ಷಣಿಕ ಪ್ರವಾಸವನ್ನು ಕಾಲೇಜಿನಿಂದ ಏರ್ಪಡಿಸುತ್ತೇವೆ. ಈಗಾಗಲೇ ನಾವು ಕನ್ಯಾಕುಮಾರಿಯಿಂದ ಹಿಡಿದು ದೆಹಲಿಯವರೆರಿಗೂ ಪ್ರವಾಸವನ್ನು ವಿದ್ಯಾರ್ಥಿ-ಉಪಾಧ್ಯಾಯರುಗಳಿಗೆ ಅನುಕೂಲವಾಗುವ ರೀತಿ ಏರ್ಪಡಿಸಿ ಯಾವ ಅಡೆ ತಡೆ ಇಲ್ಲದೆ ಮುಗಿಸಿದ್ದೇವೆ.

ನಾಗರಿಕ-ಪೌರ ಶಿಕ್ಷಣ ತರಬೇತಿ ಎನ್ನುವುದು ಬಿ.ಇಡಿ. ಶಿಕ್ಷಣದ ಒಂದು ಅಂಗ. ನಮ್ಮ ವಿದ್ಯಾರ್ಥಿ-ಉಪಾಧ್ಯಾಯರುಗಳಿಗೆ ಸಮಾಜದ ಅರಿವು ಆಗಬೇಕಾಗುವ ದೃಷ್ಟಿಯಿಂದ ಪ್ರತಿ ಸಾಲಿನಲ್ಲಿ ಈ ತರಬೇತಿಯನ್ನು ಮೂರು ದಿನಗಳು ಬೇರೆ ಬೇರೆ ಹಳ್ಳಿಗಳು ಮತ್ತು ಪಟ್ಟಣಗಳಲ್ಲಿ ಏರ್ಪಡಿಸುತ್ತಾ ಬಂದಿರುತ್ತೇವೆ.

ಈ ನಮ್ಮ ಶಿಕ್ಷಣ ಮಹಾವಿದ್ಯಾಲಯವು ರಾಜ್ಯಸರ್ಕಾರದಿಂದಾಗಲೀ ಅಥವಾ ಕೇಂದ್ರ ಸರ್ಕಾರದಿಂದಾಗಲೀ ಧನಸಹಾಯ ಪಡೆಯುವ ಕಾಲೇಜಾಗಿರುವುದರಿಂದ, ಇದರ ಸರ್ವತೋಮುಖ ಅಭಿವೃದ್ಧಿಗೆ ಶ್ರೀಶ್ರೀಗಳವರ ಅವಿಶ್ರಾಂತ ಕಾಯಕ

ಮತ್ತು ಪ್ರಾಂಶುಪಾಲರು ಮತ್ತು ಅಧ್ಯಾಪಕರ ಕಾರ್ಯದಕ್ಷತೆಯಿಂದ ಇಂದು ಎರಡೂವರೆ ಲಕ್ಷ ರೂಗಳಿಗೂ ಅಧಿಕ ವೆಚ್ಚದಿಂದ ನಿರ್ಮಿಸಿರುವ ತನ್ನದೆ ಆದ ಸ್ವಂತ ಕಟ್ಟಡವನ್ನು ಪಡೆದುಕೊಂಡು ವಿಜೃಂಭಿಸುತ್ತಿದೆ.

ಶಿಕ್ಷಣಸಂಸ್ಥೆಗಳಿಗೆ ಗ್ರಂಥ ಭಂಡಾರವು ಒಂದು ಅಂಗವಿದ್ದ ಹಾಗೆ. ಪ್ರಾರಂಭದಲ್ಲಿ ಯಾವ ಗ್ರಂಥ ಭಂಡಾರವೂ ಇಲ್ಲದೆ ಇಂದು ತನ್ನದೇ ಆದ ಗ್ರಂಥಭಂಡಾರವನ್ನು ಪಡೆದು, ಇದರಲ್ಲಿ ಸುಮಾರು ೫೧೦೦ ಶಿಕ್ಷಣಕ್ಕೆ ಸಂಬಂದಪಟ್ಟ ಪಠ್ಯಪುಸ್ತಕಗಳಿದ್ದು, ವಿದ್ಯಾರ್ಥಿ-ಉಪಾಧ್ಯಾಯರುಗಳಿಗೆ ಅನುಕೂಲಕರವಾಗುವ ರೀತಿಯಲ್ಲಿದೆ. ಸುಮಾರು ೮೦.೦೦೦ರೂ. ಬೆಲೆ ಬಾಳುವ ಪುಸ್ತಕಗಳು ಈ ನಮ್ಮ ಗ್ರಂಥಾಲಯದಲ್ಲಿವೆ. ಗ್ರಂಥಾಲಯಕ್ಕೆ ಬೇಕಾಗುವ ಆಧುನಿಕ ಪೀಠೋಪಕರಣಗಳನ್ನು ಹೊಂದಿದ್ದು. ಅವು ಸುಮಾರು ೩೧೫೦೦ ರೂ.ಗಳ ಬೆಲೆಯುಳ್ಳವುಗಳಾಗಿವೆ. ಜೊತೆಗೆ ನಮ್ಮ ಗ್ರಂಥಾಲಯವು ೨೫ ಶೈಕ್ಷಣಿಕ ನಿಯತಕಾಲಿಕ ಪತ್ರಿಕೆಗಳು, ೨೦ ಸಾಮಾನ್ಯವಾದ ನಿಯತಕಾಲಿಕ ಪತ್ರಿಕೆಗಳು, ೮ ದಿನ ಪತ್ರಿಕೆಗಳು ಜೊತೆಗೆ, ಒಂದು ಪ್ರೊಜೆಕ್ಟರ್ (projector) ಯಂತ್ರ, ಒಂದು ಧ್ವನಿ ಮುದ್ರಿಕೆಯ ಯಂತ್ರ. ಒಂದು ರೇಡಿಯೋ ಮುಂತಾದುವುಗಳನ್ನು ಪಡೆದಿರುತ್ತದೆ. ಈ ಮೇಲಿನ ಕೆಲವು ಯಂತ್ರ ಗಳನ್ನು ನಾವು ಯೂನಿರ್ವಸಿಟಿ ಗ್ರ್ಯಾಂಟ್ಸ್ ಕಮಿಷನ್, ದೆಹಲಿ ಇವರಿಂದ ಕೊಡಿಗೆಯಾಗಿ ಪಡೆದಿರುತ್ತೇವೆ.

ವಿದ್ಯಾರ್ಥಿ-ಉಪಾಧ್ಯಾಯರಲ್ಲಿ ಸುಪ್ತವಾಗಿರುವ ವಿಚಾರ ಮತ್ತು ಸಮಸ್ಯೆಗಳ ಮೇಲೆ ಅವರದೆ ಆದ ಆಲೋಚನೆ ಮತ್ತು ಅನುಭವ ಹಾಗೂ ಪ್ರತಿಭೆ ಹೊರಹೊಮ್ಮಲು ಸಹಾಯವಾಗಲೆಂಬ ಸದುದ್ದೇಶದಿಂದ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಅಪೂರ್ವ ಬೆಳಕು ಬೀರಲೆಂಬ ಆಶೆಯು ನಮ್ಮ ಈ ಶಿಕ್ಷಣ ಸಂಸ್ಥೆಯ ಆಶೆಯಾಗಿದೆ. ಇದರಲ್ಲಿನ ವಿಚಾರಶೀಲ ವಿಷಯಗಳ ಸೌಲಭ್ಯವನ್ನು ವಿದ್ಯಾರ್ಥಿ-ಉಪಾಧ್ಯಾಯರು, ಸಮಾಜ ಪಡೆದುಕೊಂಡರೆ ಉದ್ದೇಶ ಸಾಧಿತವಾದಂತೆಯೇ 'ಶಿಕ್ಷಕರು ರಾಷ್ಟ್ರ ನಿರ್ಮಾಪಕರು' ಎಂಬ ಆರ್ಯೋಕ್ತಿಯ ಸತ್ಯತೆಯನ್ನು ನಮ್ಮ ವಿದ್ಯಾರ್ಥಿ ಉಪಾಧ್ಯಾಯರು ತಮ್ಮ ಕಾರ್ಯಕ್ಷೇತ್ರದಲ್ಲಿ ಸಮಾಜಕ್ಕೆ ತೋರಿಸಿ ಕೊಡಬೇಕು. ವ್ಯಕ್ತಿಯಿಂದ ವ್ಯಕ್ತಿಯೂ, ವ್ಯಕ್ತಿಯಿಂದ ವ್ಯಕ್ತಿಯೂ ಪಾವನವಾಗಿ ತನ್ಮೂಲಕ ಸಮಾಜದ ಏಳಿಗೆ ಯನ್ನು ಮಾಡಬೇಕಾಗಿದೆ. ರಾಷ್ಟ್ರದ ಆಡಳಿತ ರಥವನ್ನು ಎಳೆಯಲು ಸಮರ್ಥ ಹಾಗೂ ಪ್ರಾಮಾಣಿಕರಾದ ವ್ಯಕ್ತಿಗಳನ್ನು ತಯಾರಿಸುವ ಶಿಕ್ಷಕರು ಮಾಡಬೇಕಾದ ಆವಶ್ಯಕತೆ ಎಂದಿಗಿಂತ ಇಂದು ಹೆಚ್ಚಾಗಿದೆ. ಈಗಿನ ನಮ್ಮ ಸಮಾಜದ ಅಳಿವು ಮತ್ತು ಉಳಿವು ಇಂದಿನ ನಮ್ಮ ಮಕ್ಕಳ ಜವಾಬ್ದಾರಿಯಾದ್ದರಿಂದ, ಈ ಮಕ್ಕಳನ್ನು ಸತ್‌ಪ್ರಜೆಗಳನ್ನಾಗಿ ಮಾಡುವ ಜವಾಬ್ದಾರಿಯು ಈ ನಮ್ಮ ವಿದ್ಯಾರ್ಥಿ-ಉಪಾಧ್ಯಾಯರುಗಳ ಜವಾಬ್ದಾರಿಯಾಗಿದೆ. ಈ ದಿಶೆಯಲ್ಲಿ ನಮ್ಮ ಉಪನ್ಯಾಸಕ ವರ್ಗವು ಬಹಳ ಶ್ರಮಿಸುತ್ತಿದೆ.

ನಮ್ಮ ಕಾಲೇಜು ಪ್ರಾರಂಭವಾದ ೧೯೭೭ರಲ್ಲಿ ಶ್ರೀಮಾನ್ ಕೆ. ಸಿ. ಶಿವನಂಜಯ್ಯ. ಉಪನ್ಯಾಸಕರು. ಶ್ರೀ ಸಿದ್ಧ ಗಂಗಾ ಕಲಾ, ವಾಣಿಜ್ಯಕಾಲೇಜ್, ಇವರನ್ನು ತಾತ್ಕಾಲಿಕ ಪ್ರಿನ್ಸಿಪಾಲ್‌ರಾಗಿ ನೇಮಕಗೊಂಡ ಎರಡು ತಿಂಗಳೊಳಗೆ ಶ್ರೀ ಆರ್ ಸಿ. ಸದಾಶಿವನ್‌ರವರು ಪ್ರಿನ್ಸಿಪಾಲರಾಗಿ ನೇಮಕಗೊಂಡರು. ಅಂದಿನಿಂದ ಇಂದಿನವರೆವಿಗೆ ಇವರು ಈ ಶಿಕ್ಷಣ ಮಹಾವಿದ್ಯಾ ಲಯದ ಪ್ರಗತಿಗಾಗಿ ದುಡಿಯುತ್ತಾ ಬಂದಿರುತ್ತಾರೆ. ಒಟ್ಟಾರೆ ಈ ನಮ್ಮ ಶಿಕ್ಷಣ ಸಂಸ್ಥೆಯು ಇಡಿ ನಮ್ಮ ಕರ್ನಾಟಕ ರಾಜ್ಯ ಗಳಲ್ಲಿರುವ ಧನಸಹಾಯ ಪಡೆಯದ ಕಾಲೇಜುಗಳಲ್ಲಿ ಪ್ರಥಮ ಸ್ಥಾನದಲ್ಲಿದೆ ಎಂದು ತಿಳಿಸಲು ಸಂತೋಷವಾಗುತ್ತಿದೆ.

ಪ್ರಾರಂಭದಲ್ಲಿ ಪ್ರಾಚಾರ್ಯರನ್ನುಳಿದು ನಾಲ್ಕು ಮಂದಿ ಉಪನ್ಯಾಸಕರಿದ್ದರು. ಇವರ ಜೊತೆಗೆ ಭಾಗಶಃಕಾಲದ (part-time) ಉಪನ್ಯಾಸಕರಿರುತ್ತಿದ್ದರು. ೧೯೭೮ರಿಂದ ಈ ಮಹಾವಿದ್ಯಾಲಯದಲ್ಲಿ ಪೂರ್ಣಕಾಲದ ಉಪನ್ಯಾಸಕರೇ ಕಾರ್ಯನಿರ್ವಹಿಸುವಂತೆ ಶ್ರೀಶ್ರೀಗಳವರು ವ್ಯವಸ್ಥೆ ಮಾಡಿರುತ್ತಾರೆ. ಈಗ ಶ್ರೀ ಆರ್.ಸಿ. ಸದಾಶಿವನ್, ಎಮ್.ಎಸ್‌ಸಿ. ಎಮ್. ಇಡಿ, ಪ್ರಾಚಾರ್ಯರು. ಶ್ರೀ ಆರ್.ಸಿ. ಪುಟ್ಟಬುದ್ಧಿ, ರೀಡರ್ (deputed), ಶ್ರೀ ಕೆ. ಶಂಕರ ರಾಯಲ್, ಪ್ರೊಫೆಸರ್, ಶ್ರೀ ಹೆಚ್. ಮಹಲಿಂಗಪ್ಪ, ಶ್ರೀ ಕೆ. ಶಿವಮೂರ್ತಿ, ಶ್ರೀ ಸಿ. ಹೆಚ್. ಮರಿದೇವರು, ಶ್ರೀ ಎನ್. ಎಸ್. ನಿಜ ಗುಣ ಆರ್ಯ, ಶ್ರೀಮತಿ ಆರ್.ಸಿ. ಜಯಶೀಲ ಇವರು ಉಪನ್ಯಾಸಕರುಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಹಾಗೂ ಶ್ರೀ ಎಸ್. ಪಿ. ಶಿವಶಂಕರ್‌ರವರು ಒಪ್ಪೊತ್ತಿನ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**ತುಮಕೂರಿನ ಪ್ರಗತಿಗೆ ನಾಂದಿಯಾದ**

## ೬. ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಎಸ್. ಐ. ಟಿ.)

–ಪ್ರೊ|| ಚಿಕ್ಕಣ್ಣಯ್ಯಪ್ಪ. ಮಾಜಿ ಪ್ರಿನ್ಸಿಪಾಲ್.

ತುಮಕೂರಿನ ಇತಿಹಾಸದಲ್ಲೇ ಏಕೆ, ಇಡೀ ಕರ್ನಾಟಕದ ಇತಿಹಾಸದಲ್ಲೇ ಸುವರ್ಣಾಕ್ಷರದಲ್ಲಿ ಬರೆಯಬೇಕಾದ ಒಂದು ಮಜಲಿನ ಪವಿತ್ರದಿನ ಎಂದರೆ, ೧೯ನೆಯ ಜೂನ್ ೧೯೬೩ನೆಯ ದಿನ. ಆ ಸುಮುಹೂರ್ತದ ದಿನದಲ್ಲಿ ಸಿದ್ಧಗಂಗಾ

ತಾಂತ್ರಿಕ ಶಿಕ್ಷಣಸಂಸ್ಥೆ (ಎಸ್.ಐ.ಟಿ) ಯು ಶ್ರೀ ಸಿದ್ಧಗಂಗಾ ಎಜುಕೇಷನ್ ಸೊಸೈಟಿಯ ಆಶ್ರಯದಲ್ಲಿ ಪೂಜ್ಯ ಶ್ರೀಶ್ರೀ ಶಿವಕುಮಾರಸ್ವಾಮಿಗಳವರ ಆಶೀರ್ವಾದದೊಂದಿಗೆ ಎಳ್ಳಷ್ಟು ಆಡಂಬರವಿಲ್ಲದೆ ಪ್ರಾರಂಭವಾಯಿತು.

**ಗಗನಕುಸುಮ**

೧೯೬೦ರ ಹಿಂದಿನ ವರ್ಷಗಳಲ್ಲಿ ಇಂಜಿನಿಯರಿಂಗ್ ವಿದ್ಯಾಭ್ಯಾಸವು ಕೇವಲ ಹೆಚ್ಚು ಅಂಕಗಳನ್ನು ಗಳಿಸಿದ ಕೆಲವೇ ವಿದ್ಯಾರ್ಥಿಗಳ ಪಾಲಿಗೆ ಮೀಸಲಾಗಿತ್ತು. ಅನೇಕ ಪ್ರತಿಭಾನ್ವಿತ ವಿದ್ಯಾರ್ಥಿಗಳ ಪಾಲಿಗೆ ನಿಲುಕದ ಗಗನಕುಸುಮವಾಗಿತ್ತು. ವಿದ್ಯಾರ್ಥಿಗಳ ಪ್ರತಿಭೆಯನ್ನು ಪೂರ್ಣವಾಗಿ ಗಳಿಸಿದ ಅಂಕಗಳ ಮೇಲೆ ಅಳೆಯುವುದು ಸೂಕ್ತವಲ್ಲ. ಆದರೂ ಇಂದಿನ ವಿದ್ಯಾಭ್ಯಾಸ ಕ್ರಮದಲ್ಲಿ ಈ ಪರೀಕ್ಷೆಯ ಅಂಕಗಳಿಗೇ ಹೆಚ್ಚು ಪ್ರಾಧಾನ್ಯ. ಅನೇಕ ಸಂದರ್ಭಗಳಲ್ಲಿ ವಿದ್ಯಾರ್ಥಿಯ ಪ್ರತಿಭೆಗೂ ಅವನ ಪರೀಕ್ಷಾ ಫಲಿತಾಂಶಕ್ಕೂ ವಿಷ್ಟೋ ಅಂತರವಿರುತ್ತದೆ. ಗ್ರಾಮಾಂತರಗಳಲ್ಲಿ ಕಲಿಯುವ ಅನೇಕ ವಿದ್ಯಾರ್ಥಿಗಳು ಒಳ್ಳೆಯ ಶಾಲೆಗಳಲ್ಲಿ ನುರಿತ ಶಿಕ್ಷಕರ ಮಾರ್ಗದರ್ಶನದಲ್ಲಿ ವಿದ್ಯಾಭ್ಯಾಸ ಮಾಡುವುದು ಬಹಳ ವಿರಳ. ಮಹಾನಗರಗಳನ್ನು ಬಿಟ್ಟರೆ, ಅನೇಕ ಗ್ರಾಮಾಂತರ ಪ್ರದೇಶಗಳಲ್ಲಿ ಸುಸಜ್ಜಿತ ಶಾಲೆಗಳಿಲ್ಲ. ನುರಿತ ಶಿಕ್ಷಕರಂತೂ ಮೊದಲೇ ಇಲ್ಲ. ಇಂತಹ ಶಾಲೆಗಳಲ್ಲಿ ಓದುವ ವಿದ್ಯಾರ್ಥಿಗಳು ಪಟ್ಟಣದ ಶಾಲೆಗಳ ವಿದ್ಯಾರ್ಥಿಗಳೊಂದಿಗೆ ಸ್ಪರ್ಧಿಸಿ ತಾಂತ್ರಿಕ ಶಿಕ್ಷಣ ಪಡೆಯುವುದು ಸುಲಭಸಾಧ್ಯವಲ್ಲ. ಅವರ ಪಾಲಿಗೆ ಈ ಶಿಕ್ಷಣ ಗಗನಕುಸುಮವೇ ಆಗಿತ್ತು.

**ಗಣ್ಯರಕೊಡುಗೆ**

ಇಂತಹ ಒಂದು ಪರಿಸ್ಥಿತಿಯನ್ನು ಮನಗಂಡು ಗ್ರಾಮಾಂತರಗಳಿಂದ ಬರುವ ವಿದ್ಯಾರ್ಥಿಗಳ ತಾಂತ್ರಿಕ ಮತ್ತು ಔದ್ಯೋಗಿಕ ಶಿಕ್ಷಣಕ್ಕೆ ಅವಕಾಶ ಕಲ್ಪಿಸಿಕೊಡುವ ದೃಷ್ಟಿಯಿಂದ ಪರಮಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳವರು ಈ ವಿದ್ಯಾಸಂಸ್ಥೆಯನ್ನು ಪ್ರಾರಂಭಿಸಿದರು.

ಈ ಮಹಾಕಾರ್ಯಕ್ಕೆ ತುಮಕೂರಿನ ಪ್ರಮುಖ ವಾಣಿಜ್ಯೋದ್ಯಮಿಗಳು ಮತ್ತು ಪ್ರತಿಷ್ಠಿತ ನಾಗರಿಕರು, ಸುತ್ತಮುತ್ತಣ ಗ್ರಾಮಾಂತರ ಪ್ರದೇಶದ ದಾನಿಗಳು ತಮ್ಮ ಸಹಕಾರ ಸಹಾಯಗಳನ್ನು ಅನೇಕ ಬಗೆಯಲ್ಲಿ ಉದಾರವಾಗಿ ಕೊಡಲು ಮುಂದೆ ಬಂದರು. ಇದೆಲ್ಲದರ ಪರಿಣಾಮವಾಗಿ ೧೯೬೩ನೆಯ ಜುಲೈ ೧೯ನೆಯ ದಿನಾಂಕ 'ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ' ಎಂಬ ಪವಿತ್ರನಾಮ ಧರಿಸಿ, ಇಂದಿನ ತುಮಕೂರು ಇಂಜನಿಯರಿಂಗ್ ಕಾಲೇಜು ಅಸ್ತಿತ್ವಕ್ಕೆ ಬಂದಿತು. ಇದರ ಸಂಕ್ಷೇಪ ಹೆಸರು ಎಸ್.ಐ.ಟಿ (S.I.T.) ಎಂದು. ೧೯೮೦ರ ಹೊತ್ತಿಗೆ ಈ ಎಸ್.ಐ.ಟಿ. ಮಹಾಸಂಸ್ಥೆಯಾಗಿ ಬೆಳೆದು ರಾಷ್ಟ್ರದಲ್ಲಿಯೇ ಏಕೆ ಪ್ರಪಂಚದ ಅನೇಕ ದೇಶಗಳಲ್ಲಿ ತನ್ನ ಹಿರಿಮೆಗರಿಮೆಗಳಿಂದ ಉತ್ತಮಸ್ಥಾನವೊಂದನ್ನು ಮೀಸಲುಗೊಳಿಸಿಕೊಂಡಿತೆಂದರೆ ಅತ್ಯುಕ್ತಿಯೆನಿಸದೆಂದು ನಂಬಿದ್ದೇನೆ. ಏಕೆಂದರೆ ಪ್ರಪಂಚದ ಅನೇಕ ರಾಷ್ಟ್ರಗಳ ವಿದ್ಯಾರ್ಥಿಗಳನ್ನು ಇದು ಆಕರ್ಷಿಸುತ್ತಿರುವುದೇ ಇದರ ಗುಣಮಟ್ಟದ ಬಗೆಗೆ ಕೊಡುವ ಯೋಗ್ಯತಾಪತ್ರವಲ್ಲದೆ ಬೇರೆ ಏನನ್ನು ಹೇಳಲಾದೀತು!

ಇಂಥ ಸುಸಜ್ಜಿತ ಎಸ್. ಐ. ಟಿ.ಯ ಮಾತೃಸಂಸ್ಥೆಯೇ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ರಚಿತಗೊಂಡಿರುವ 'ಸಿದ್ಧಗಂಗಾ ಎಜ್ಯುಕೇಷನ್‌ಸೊಸೈಟಿ.' ಈ ಸಂಸ್ಥೆಯ ಹುಟ್ಟು ಹಾಗೂ ಬೆಳವಣಿಗೆಗೆ ಅನೇಕ ಗಣ್ಯರ ಉದಾರವಾದ ಕೊಡುಗೆ ಬಹುಮುಖ್ಯಕಾರಣವಾಗಿದೆ. ಅವರಲ್ಲಿ ಎಲ್ಲರ ಹೆಸರನ್ನು ಉಲ್ಲೇಖಿಸಲಾಗದಿದ್ದರೂ ಪ್ರಮುಖರಾದ ಕೆಲವರ ಹೆಸರನ್ನಾದರೂ ಸ್ಮರಿಸುವುದು ನನ್ನ ಆದ್ಯಕರ್ತವ್ಯವಾಗಿದೆ. ಅವರುಗಳೆಂದರೆ ಲೋಕಸೇವಾನಿರತ ಲಿಂ. ಜಿ.ಎಂ. ಸಿದ್ಧರಾಮಣ್ಣನವರು ದಾನಿಗಳ ಶ್ರೇಣಿಯಲ್ಲೇ ಅಗ್ರಗಣ್ಯರಾದವರು. ಇವರಲ್ಲದೆ ಲಿಂ. ಶ್ರೀ ಟಿ.ಎಚ್. ಕೆಂಪುಹೊನ್ನಯ್ಯನವರು, ಲಿಂ. ಎಂ.ವಿ. ಶಿವಪ್ಪನವರು, ದಿ. ಶ್ರೀ ಎ.ಕೆ. ಪಾರ್ಶ್ವನಾಥರು, ಲಿಂ. ಶ್ರೀ ಜಿ.ಟಿ. ಮಲ್ಲಿಕಾರ್ಜುನಯ್ಯನವರು,ಲಿಂ. ಶ್ರೀ ಸಿದ್ಧಬಸವಯ್ಯನವರು, ಲಿಂ. ಶ್ರೀ ರೇವಣಾರಾಧ್ಯರು, ಶ್ರೀ ಬಿ. ಸಿ. ನಂಜುಂಡಯ್ಯನವರು, ಶ್ರೀ ಟಿ. ಅನಂತರಾಮಸೆಟ್ಟರು. ಶ್ರೀ ಮರಿಸ್ವಾಮಪ್ಪ ಬೆಂಗಳೂರು-ಇವರುಗಳ ಉದಾರವಾದ ಕೊಡುಗೆ ಈ ಸಂಸ್ಥೆ ಬೆಳೆಯಲು ಪ್ರಮುಖ ಕಾರಣವಾಗಿದೆ, ಈ ಮಹಾಸಂಸ್ಥೆಗೆ ಹೇಳಿ ಮಾಡಿಸಿದಂತಿರುವ ಸುಮಾರು ೪೫ ಎಕರೆಗಳಷ್ಟು ಸಮಕಟ್ಟಾದ ವಿಶಾಲ ನಿವೇಶನವನ್ನು ಲಿಂ, ಎಂ, ವಿ. ಶಿವಪ್ಪನವರು ದಾನಮಾಡಿದುದು ಈ ಸಂಸ್ಥೆಯ ಒಂದು ಸುಯೋಗವೇ ಅಲ್ಲದೆ ಬೇರಲ್ಲ. ಎಸ್.ಐ.ಟಿ.ಯ ಇತಿಹಾಸದಲ್ಲಿ ಇದೊಂದು ಉತ್ತಮ ದಾಖಲೆಯೇ ಆಗಿದೆ. ಉಳಿದ ಮಹನೀಯರು ತಮ್ಮ ತಮ್ಮ ಹೆಸರಿನ ಕಟ್ಟಡಗಳನ್ನು ಲಕ್ಷಾಂತರ ರೂಪಾಯಿಗಳ ವ್ಯಯ ಮಾಡಿ ಕಟ್ಟಿಸಿಕೊಡುವುದರ ಮೂಲಕ, ದ್ರವ್ಯವನ್ನು ಕೊಡುವುದರ ಮೂಲಕ. ತಮ್ಮ ಹೆಸರನ್ನು ಈ ಸಂಸ್ಥೆಯ ಚರಿತ್ರೆಯೊಡನೆ ಶಾಶ್ವತಗೊಳಿಸಿಕೊಂಡಿದ್ದಾರೆ. ಅವರೆಲ್ಲರಿಗೆ ಕೃತಜ್ಞತೆಯನ್ನು ಎಲ್ಲರೂ ಸಲ್ಲಿಸಲೇಬೇಕಾದುದು ಅವಶ್ಯವಾದ ಕರ್ತವ್ಯವಾಗಿದೆ

**ಶ್ರೀಗಳವರ ಸಂಕಲ್ಪ**

ಯಾವ ದೇಶವೇ ಆಗಲಿ ಅದರ ಸಂಪತ್ತು ಆ ನಾಡಿನ ಜನತೆಯ ಕ್ರಿಯಾಶಕ್ತಿ ಮತ್ತು ಸಾಮರ್ಥ್ಯವೇ ವಿನಾ ಅದರ ಐಶ್ವರ್ಯವಲ್ಲ. ನಮ್ಮ ನಾಡು ವಿಶಾಲವಾದ ಭೂಖಂಡವನ್ನು ಹೊಂದಿರುವಂತಹುದು. ಇದು ಅಪರಿಮಿತ ಖನಿಜ, ನೀರು. ಅರ

ಣ್ಯವೇ ಮೊದಲಾದ ನೈಸರ್ಗಿಕ ಸಂಪತ್ತನ್ನು ಪಡೆದಿದ್ದರೂ. ಆರ್ಥಿಕವಾಗಿ ಸಾಕಷ್ಟು ಪ್ರಗತಿಯನ್ನು ಪಡೆದಿಲ್ಲ. ಇದರ ಫಲವಾಗಿ ಸಾಮಾನ್ಯ ಜನಜೀವನ ಮಟ್ಟ ಉತ್ತಮಗೊಂಡಿಲ್ಲ. ಈ ಎಲ್ಲ ನೈಸರ್ಗಿಕ ಸಂಪತ್ತನ್ನುಪಯೋಗಿಸಿಕೊಂಡು ಆರ್ಥಿಕ ಪ್ರಗತಿ ತನ್ಮೂಲಕ ಜನಜೀವನಮಟ್ಟವನ್ನು ಉತ್ತಮಪಡಿಸಿ ರಾಷ್ಟ್ರದ ಸರ್ವತೋಮುಖವಾದ ಪ್ರಗತಿಯನ್ನು ಸಾಧಿಸಲು ತಾಂತ್ರಿಕ ಜ್ಞಾನ ಹಾಗೂ ಶಿಲ್ಪಿಗಳ ಸೇವೆ ಬಹುಮುಖ್ಯ. ಇದೆಲ್ಲವನ್ನೂ ಮನಗಂಡು ಮತ್ತು ಅನೇಕ ಪೋಷಕರ ಕೋರಿಕೆಯ ಮೇರೆಗೆ ಪೂಜ್ಯ ಸ್ವಾಮೀಜಿಯವರು ಈ ತಾಂತ್ರಿಕ ಸಂಸ್ಥೆಯ ಪ್ರಾರಂಭಕ್ಕೆ ಸಂಕಲ್ಪಿಸಿದರು. ಅವರ ಪ್ರಬಲ ಸಂಕಲ್ಪಶಕ್ತಿಯ ಫಲವಾಗಿಯೇ ಈ ಸುಸಜ್ಜಿತವಾದ ತಾಂತ್ರಿಕ ಸಂಸ್ಥೆಯು ರಾಷ್ಟ್ರದಲ್ಲಿ ತಲೆಯೆತ್ತಿ ನಿಂತಿದೆಯೆಂದು ಹೇಳಲು ಹೆಮ್ಮೆಯೆನಿಸುತ್ತದೆ.

**ಈ ಮಹಾ ತಾಂತ್ರಿಕ ಸಂಸ್ಥೆಯ ಪ್ರಾರಂಭ**

ಈ ಮಹಾ ಸಂಸ್ಥೆಯು ಪ್ರಥಮತಃ ಪ್ರಾರಂಭವಾದುದು ಈ ಭಾಗದಲ್ಲೆಲ್ಲ ಹೆಸರುವಾಸಿಯಾಗಿರುವಂತಹುದೂ, ಅನೇಕ ಪ್ರೌಢಶಾಲೆಗಳ ಉಗಮಕ್ಕೆ ಕಾರಣವಾದುದೂ ಆಗಿ ಶ್ರೀಶ್ರೀಗಳವರ ವಿಶೇಷ ಪ್ರಯತ್ನದಿಂದ ೧೯೫೪ರಲ್ಲಿಯೇ ತುಮಕೂರಿನಲ್ಲಿ ಮೊಟ್ಟಮೊದಲು ಪ್ರಾರಂಭಗೊಂಡ ಖಾಸಗಿ ಪ್ರೌಢಶಾಲೆಯಾದ ಶ್ರೀ ಸಿದ್ಧಗಂಗಾ ಹೈಸ್ಕೂಲ್ ಕಟ್ಟಡದಲ್ಲಿ. ಇದೇ ಕಟ್ಟಡದಲ್ಲಿ ೧೯೫೮ರಲ್ಲಿ ತುಮಕೂರಿನ ಸರಕಾರಿ ತಾಂತ್ರಿಕ ಶಾಲೆ (ಪಾಲಿಟೆಕ್ನಿಕ್ ಸ್ಕೂಲ್) ಪ್ರಾರಂಭಗೊಂಡುದನ್ನಿಲ್ಲಿ ಸ್ಮರಿಸಬೇಕು. ಪೂಜ್ಯ ಶ್ರೀಶ್ರೀಗಳವರ ಅಪೇಕ್ಷೆಯ ಮೇರೆಗೆ ಆಗ ಮೈಸೂರು ಸರಕಾರದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಎಗ್ಸಿಕ್ಯೂಟಿವ್ ಇಂಜನಿಯರ್ ಆಗಿದ್ದ ಶ್ರೀಮಾನ್ ಜಿ. ಎಸ್. ಶಿವಣ್ಣನವರು ಪ್ರಾಚಾರ್ಯರಾಗಿಯೂ, ಅಸಿಸ್ಟೆಂಟ್ ಇಂಜಿನಿಯರ್ ಆಗಿದ್ದ ಶ್ರೀಮಾನ್ ಎಂ. ಚಿಕ್ಕಣ್ಣಯ್ಯಪ್ಪನವರು ಉಪಪ್ರಾಚಾರ್ಯರಾಗಿಯೂ ಇರಬೇಕೆಂಬುದರ ಮೇರೆಗೆ ಸರಕಾರ ಇವರಿಬ್ಬರ ಸೇವೆಯನ್ನು ಈ ಸಂಸ್ಥೆಗೆ ಎರವಲಾಗಿ ಕೊಟ್ಟಿತು. ಇವರೀರ್ವರೂ ಅತ್ಯಂತ ಉತ್ಸಾಹದಿಂದ ಸಂಸ್ಥೆಯ ಬೆಳವಣಿಗೆಗೆ ತಮ್ಮ ಕೈಲಾದ ಸೇವೆ ಸಲ್ಲಿಸಿದರು. ೧೯೭೦ರಲ್ಲಿ ಶ್ರೀ ಜಿ. ಎಸ್. ಶಿವಣ್ಣನವರು ಲೋಕೋಪಯೋಗಿ ಇಲಾಖೆಗೆ ಮರಳಿ ಹೋದ ಮೇಲೆ ಶ್ರೀ ಚಿಕ್ಕಣ್ಣಯ್ಯಪ್ಪನವರೇ ೧೯೭೮ರ ಜೂನ್ ತಿಂಗಳವರೆಗೆ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದರು. ೧೯೭೮ರ ಜೂನ್-ಜುಲೈ ತಿಂಗಳಿಂದ ಸುರತ್ಕಲ್‌ನಲ್ಲಿರುವ ಕರ್ನಾಟಕ ರೀಜನಲ್ ಇಂಜನಿಯರಿಂಗ್ ಕಾಲೇಜಿನ ನಿವೃತ್ತ ಪ್ರಾಚಾರ್ಯರಾದ ಶ್ರೀ ಬಿ. ಹೆಚ್. ಕರಕರೆಡ್ಡಿಯವರು ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿರುವುದೂ ಒಂದು ಶುಭ ಸೂಚನೆಯೇ ಆಗಿದೆ.

೧೯೬೩ರಲ್ಲಿ ಸ್ವಂತ ಕಟ್ಟಡವಿಲ್ಲದೆ ಸಿದ್ಧಗಂಗಾ ಪ್ರೌಢಶಾಲೆಯಲ್ಲಿ ಕೇವಲ ೧೨೩ ಜನ ವಿದ್ಯಾರ್ಥಿಗಳು ಮತ್ತು ೬ ಜನ ಉಪಾಧ್ಯಾಯ ವರ್ಗದವರಿಂದ ಆರಂಭವಾದ ಈ ತಾಂತ್ರಿಕ ಕಾಲೇಜು ಅಂದಿನಿಂದ ಉತ್ತರೋತ್ತರ ಕಾಲೇಜಿಗೆ ಬೇಕಾದ ಸಕಲ ಸಲಕರಣೆಗಳೊಂದಿಗೆ ಭವ್ಯವಾಗಿ ಪ್ರಗತಿ ಹೊಂದುತ್ತ ಹೊಂದುತ್ತ ಇಂದು ತನ್ನದೇ ಆದ ಭವ್ಯ ಕಟ್ಟಡಗಳು, ಉತ್ತಮೋತ್ತಮ ಪ್ರಯೋಗಾಲಯಗಳು, ವಿದ್ಯಾರ್ಥಿನಿಲಯಗಳು, ಆಟದ ಮೈದಾನ, ಪುಸ್ತಕಭಾಂಡಾರ, ವಾಚನಾಲಯಗಳಿಂದಲೂ ಉತ್ಸಾಹಿಗಳೂ ಕರ್ತವ್ಯಕುಶಲರೂ ಆದ ೮೦ ಜನ ಉಪಾಧ್ಯಾಯ ವರ್ಗ ಮತ್ತು ೮೦ ಜನ ಸಹಾಯಕ ಕಾರ್ಯಕರ್ತರಿಂದಲೂ ಕೂಡಿ ರಾಷ್ಟ್ರಕ್ಕೆ ಅಮೋಘಸೇವೆ ಸಲ್ಲಿಸುತ್ತ ತನ್ನ ಹಿರಿಮೆಗರಿಮೆಗಳನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುತ್ತಿರುವುದೊಂದು ಶುಭ ಸೂಚನೆಯಾಗಿದೆ. ಈ ಕಾಲೇಜಿಗೆ 'ಶ್ರೀ ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ' ಎಂಬ ನಾಮಕರಣವನ್ನು ೧೯೬೫ರಲ್ಲಿ ಮಾಡಲಾಯಿತು. ಕಾಲೇಜಿನ ಸಮಸ್ತ ಸಿಬ್ಬಂದಿ ವರ್ಗದವರು ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಆಚರಿಸಿ ತೋರಿಸಿರುವ ಮಾರ್ಗದಲ್ಲಿ ತಮ್ಮ ತಮ್ಮ ನಿಷ್ಠೆ ಹಾಗೂ ಉದಾತ್ತಧ್ಯೇಯೋದ್ದೇಶ, ಸೇವಾಮನೋಭಾವಾದಿಗಳನ್ನು ತೋರ್ಪಡಿಸುತ್ತ ಉತ್ಸಾಹಿಗಳಾಗಿ ಸಂಸ್ಥೆಯ ಸರ್ವತೋಮುಖವಾದ ಏಳ್ಗೆಗೆ ಒಂದೇ ಕುಟುಂಬದವರಂತೆ ಶ್ರಮಿಸುತ್ತಿರುವುದೊಂದು ಶುಭ ಸೂಚನೆಯಾಗಿದೆ.

**ಶೈಕ್ಷಣಿಕ ವಿಭಾಗಗಳು**

ಈ ತಾಂತ್ರಿಕ ಸಂಸ್ಥೆಯು ಪ್ರಾರಂಭದಲ್ಲಿ ಸಿವಿಲ್, ಎಲೆಕ್ಟ್ರಿಕಲ್, ಮೆಕ್ಯಾನಿಕಲ್ ವಿಭಾಗಗಳಿಂದ ಪ್ರಾರಂಭವಾಯಿತು. ಈಗ ಇವುಗಳ ಜೊತೆಗೆ ಎಲೆಕ್ಟ್ರಾನಿಕ್ಸ್, ಕೆಮಿಕಲ್ಸ್ ಹಾಗೂ ಇನ್‌ಸ್ಟ್ರುಮೆಂಟೇಷನ್ ಟೆಕ್ನಾಲಜಿಗಳನ್ನು ಪ್ರಾರಂಭಿಸಿ ಒಟ್ಟು ಆರು ವಿಭಾಗಗಳಲ್ಲಿ ಶಿಕ್ಷಣವನ್ನು ಒದಗಿಸುತ್ತಿರುವುದೊಂದು ವೈಶಿಷ್ಟ್ಯವಾಗಿದೆ. ಇನ್ನಾವ ಸಂಸ್ಥೆಯಲ್ಲೂ ಒದಗಿಸಲಾಗದ ಒಂದು ಮಹಾಯೋಜನೆಯೆಂದರೆ 'ಡಿಪ್ಲೋಮಾ' ಶಿಕ್ಷಣ ಪಡೆದವರು ತಮ್ಮ ಭವಿಷ್ಯವನ್ನು ಉತ್ತಮ ಪಡಿಸಿಕೊಳ್ಳಲು 'ಕಂಡೆನ್ಸ್‌ಡ್ ಬಿ. ಇ.' ವಿಭಾಗವನ್ನು ೧೯೬೬ರಲ್ಲಿ ತೆರೆದದ್ದು. ಇಂತಹ ಸೌಲಭ್ಯವು ಇದುವರೆಗೆ ಇಡೀ ಕರ್ನಾಟಕದಲ್ಲೇ ಇನ್ನಾವತಾಂತ್ರಿಕ ಸಂಸ್ಥೆಯಲ್ಲೂ ಇಲ್ಲ.

**ಪುಟ್ಟಪ್ರಪಂಚದ ಪ್ರತಿರೂಪ**

ಇಂದು ವೈಭವೋಪೇತವಾಗಿ ಬೆಳೆದು ನಿಂತಿರುವ ಎಸ್.ಐ.ಟಿ. ಯು ಭಾರತದ ಪ್ರತಿರೂಪವಂತಿದ್ದು ಅನೇಕ ರಾಜ್ಯಗಳಿಂದ ಬಂದು ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಂದ ಕಿಕ್ಕಿರಿದು ತುಂಬಿದೆ. ಇಲ್ಲಿನ ವಿದ್ಯಾರ್ಥಿಗಳು ತಮ್ಮ ತಮ್ಮ ಪ್ರಾದೇಶಿಕಾಭಿಮಾನ ಜಾತಿಮತ ಕುಲಪಂಥಗಳ ಸಂಕುಚಿತ ಮನೋಭಾವಗಳಿಂದ ದೂರಸರಿದು ಎಲ್ಲರೂ ಭಾರತೀಯರೆಂಬ ಉದಾತ್ತಧ್ಯೇಯದಿಂದಲೂ ಸೌಹಾರ್ದಮನೋಭಾವದಿಂದಲೂ ತಮ್ಮ ಕರ್ತವ್ಯದಲ್ಲಿ ನಿರತರಾಗಿರುವುದು ಈ ಸಂಸ್ಥೆಯ ಒಂದು ವೈಶಿಷ್ಟ್ಯವಾಗಿದೆ. ಇದರ ಜೊತೆಗೆ ಅನೇಕ ಹೊರದೇಶಗಳ ವಿದ್ಯಾರ್ಥಿಗಳೂ ಇಲ್ಲಿ ಭಾರತೀಯರೊಡನೆ ಭಾರತೀಯರಾಗಿ ಸೌಹಾರ್ದದಿಂದ ಕೂಡಿ ಕಲಿಯುತ್ತಿದ್ದಾರೆ. ಮತ್ತೊಂದು ಮರೆಯಲಾಗದ ಭವ್ಯತೆಯೆಂದರೆ ಈ ವಿದ್ಯಾಸಂಸ್ಥೆಯ ಆವರಣದಲ್ಲಿ ಮೈದಾಳಿ ನಿಂತಿರುವ 'ಕೆನಡಿ ಇಂಟರ್‌ನ್ಯಾಷನಲ್ ಹೌಸ್'. ಪ್ರಪಂಚದ ಶಾಂತಿಸ್ಥಾಪನೆಗಾಗಿ ಹೋರಾಡಿದ ಅಮೇರಿಕಾ ದೇಶದ ಅಧ್ಯಕ್ಷ ದಿ. ಜಾನ್ ಕೆನಡಿಯವರ ಜ್ಞಾಪಕಾರ್ಥವಾಗಿ ಹಾಗೂ ಅವರ ಜೀವಿತದ ಕೊಡುಗೆಯನ್ನು ಪ್ರತಿಯೊಬ್ಬನ ಹೃದಯದಲ್ಲೂ ಮತ್ತೊಮ್ಮೆ ಜ್ಞಾಪಿಸುವ ಉದ್ದೇಶದಿಂದ ಬೆಳೆದು ನಿಂತಿರುವ ಈ ಕಟ್ಟಡವು ಹಲವಾರು ದಾನಿಗಳ ಮತ್ತು ಎಸ್.ಐ.ಟಿ. ಕಾಲೇಜಿನ ನೌಕರರ ಕೊಡುಗೆಯಾಗಿದೆ. ಇನ್ನೊಂದು ಮರೆಯಲಾಗದ ಕೊಡುಗೆ ಈ ಸಂಸ್ಥೆಗೆ ಒಲಿದು ಬಂದುದು: ಈ ಸಂಸ್ಥೆಯ ಶೀಘ್ರಗತಿಯ ಬೆಳವಣಗೆ,ಹಾಗೂ ಗುಣಮಟ್ಟದ ದಾಖಲೆಗಳನ್ನು ಲಕ್ಷೀಕರಿಸಿ ಉತ್ಸಾಹಿತರಾದ ಭಾರತದ ಶ್ರೇಷ್ಠ ಕೈಗಾರಿಕೋದ್ಯಮಿಗಳಲ್ಲೊಬ್ಬರಾದ ಶ್ರೀ ಜೆ.ಡಿ. ಬಿರ್ಲಾರವರದು. ಇವರು ೧೯೭೩ರಲ್ಲಿ ಇಲ್ಲಿಗೆ ಬಂದು ಸುಸಜ್ಜಿತ ಸಭಾಂಗಣವನ್ನು ನಿರ್ಮಿಸಿಕೊಡಲು ದ್ರವ್ಯದ ನೆರವಿತ್ತರು. ಆ ನೆರವಿನಿಂದಾದ ಕಟ್ಟಡವಿಂದು ಭವ್ಯವಾಗಿ ಈ ಕಾಲೇಜಿನ ಆವರಣದಲ್ಲಿ ಮೈದಾಳಿನಿಂತು ಸಂಸ್ಥೆಗೆ ಭೂಷಣಪ್ರಾಯವಾಗಿದೆ.

**ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯ ಇನ್ನಿತರ ಸೇವಾಸಂಸ್ಥೆಗಳು**

ತುಮಕೂರಿನಲ್ಲಿ ಸಾರ್ವಜನಿಕ ಶೈಕ್ಷಣಿಕಪ್ರಗತಿಯನ್ನು ಸಾಧಿಸುವ ಏಕೈಕದೃಷ್ಟಿಯಿಂದ ಜನ್ಮತಾಳಿದ ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯು ಮೇಲೆ ಕಾಣಿಸಿದ ತಾಂತ್ರಿಕ ಸಂಸ್ಥೆಯ ಜೊತೆಗೆ ೧೯೬೬ರಲ್ಲಿಯೇ ಶ್ರೀ ಸಿದ್ಧಗಂಗಾ ಕಲಾ,ವಿಜ್ಞಾನ, ವಾಣಿಜ್ಯ ಮಹಾಪಾಠಶಾಲೆ (ಕಾಲೇಜು)ಯನ್ನೂ, ೧೯೭೦ರಲ್ಲಿ ಸಂಜೆ ಕಾಲೇಜನ್ನೂ, ಪ್ರೌಢಶಾಲಾ ಉಪಾಧ್ಯಾಯ ಶಿಕ್ಷಣ ತರಬೇತಿ ಮಹಾಪಾಠಶಾಲೆ (B.Ed College)ಯನ್ನೂ ಪ್ರಾರಂಭಿಸಿ ಸಹಸ್ರ ಸಹಸ್ರ ಸಂಖ್ಯೆಯ ವಿದ್ಯಾರ್ಥಿಗಳಿಗೆ ಉಪಾಧ್ಯಾಯರಿಗೆ, ಉಪಾಧ್ಯಾಯವೃತ್ತಿಯನ್ನಪೇಕ್ಷಿಸುವವರಿಗೆ ಶಿಕ್ಷಣಸೌಲಭ್ಯ ಕಲ್ಪಿಸಿ, ತುಮಕೂರಿನ ಶೈಕ್ಷಣಿಕ ಇತಿಹಾಸದಲ್ಲಿಯೇ ಒಂದು ನೂತನ ಮನ್ವಂತರವನ್ನುಂಟುಮಾಡಿದೆಯೆಂದರೆ ತಪ್ಪಾಗಲಾರದು. ವಿದ್ಯಾರ್ಥಿ ಸಂಖ್ಯೆಯಲ್ಲಿ ವಿದ್ಯಾಭ್ಯಾಸದ ಗುಣಮಟ್ಟದಲ್ಲಿ ಈ ಸಂಸ್ಥೆಗಳೆಲ್ಲ ತಮ್ಮ ಮೇಲ್ಮೆಯನ್ನುಳಿಸಿಕೊಂಡು ಜನತೆಯ ಅಪಾರ ಪ್ರೀತಿ ವಿಶ್ವಾಸಗಳನ್ನುಗಳಿಸಿವೆ.

**ಶ್ರೀಗಳವರಿಂದ ಪ್ರಗತಿಪಥದಲ್ಲಿ ತುಮಕೂರು**

ಪರಮಪೂಜ್ಯ ಶ್ರೀಶ್ರೀಗಳವರ ಯೋಚನೆ. ಯೋಜನೆ, ಆಶೀರ್ವಾದ ಮಾರ್ಗದರ್ಶನಗಳ ಫಲವಾಗಿ ಪ್ರಾರಂಭವಾದ ಎಸ್. ಐ. ಟಿ. ಯೇ ಮೊದಲಾದ ವಿದ್ಯಾಸಂಸ್ಥೆಗಳ ಪ್ರಾರಂಭದಿಂದ ತುಮಕೂರಿನ ಪ್ರಗತಿಗೆ ನಾಂದಿಯಾಯಿತೆನ್ನಬಹುದು. ಇಂದು ತುಮಕೂರು ನಗರವಾಗಿ ಬೆಳೆಯುತ್ತಿದೆ. ವೈದ್ಯಕೀಯ ಶಿಕ್ಷಣ ಸಂಸ್ಥೆಯೊಂದನ್ನುಳಿದು ಇನ್ನೆಲ್ಲ ವಿದ್ಯಾಸಂಸ್ಥೆಗಳಿಂದ ಊರು ಕಲಕಲಿಸುತ್ತದೆ. ಈ ನಗರದಲ್ಲಿ ವೈದ್ಯಕೀಯ ವಿದ್ಯಾಸಂಸ್ಥೆಯೊಂದು ಜನ್ಮತಾಳಿ ಒಂದು ವಿಶ್ವವಿದ್ಯಾಲಯ ಸ್ಥಾಪನೆಯಾಗುವ ಕಾಲ ಶೀಘ್ರದಲ್ಲಿಯೇ ಬರಲೆಂದು ಆಶಿಸುತ್ತೇನೆ. ಶ್ರೀಶ್ರೀಗಳವರು ಸಂಕಲ್ಪ ಮಾಡಿದರೆ ಇದೇನೂ ದೊಡ್ಡದಲ್ಲವೆಂದು ತಿಳಿದಿದ್ದೇನೆ. ಶ್ರೀಗಳವರ ಸಂಕಲ್ಪಶಕ್ತಿಯೇ ಅಂತಹುದು.

**ನಮೋನಮಃ**

ನಮ್ಮ ನಾಡಿನ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ಎಸ್.ಐ.ಟಿ.ಯ ಪಾತ್ರ ಗಮನಾರ್ಹವಾದುದು. ಇದು ಸಂಬಂಧಪಟ್ಟ ಎಲ್ಲರಿಗೂ ಹೆಮ್ಮೆ ಹಾಗೂ ಸಮಾಧಾನಗಳನ್ನು ತಂದಿದೆ. 'ಕಾಯಕವೇ ಕೈಲಾಸ'ಎಂಬ ದಿವ್ಯ ಸೂತ್ರದಲ್ಲಿ ಅಚಲ ಶ್ರದ್ಧಾಭಕ್ತಿವಿಶ್ವಾಸಗಳನ್ನಿಟ್ಟು ಶ್ರೀ ಪೂಜ್ಯ ಗುರುವರ್ಯರ ಆಶೀರ್ವಾದ ಪಡೆದು ನಮ್ಮ ಯುವಕರನ್ನು ಶ್ರೇಷ್ಠಪ್ರಜೆಗಳನ್ನಾಗಿ ತಯಾರು ಮಾಡುವ ದಿಸೆಯಲ್ಲಿ ಈ ಸಂಸ್ಥೆಯು ಉತ್ತರೋತ್ತರ ವಿಶೇಷ ಪ್ರಗತಿಯನ್ನು ಸಾಧಿಸುವುದರಲ್ಲಿ ಸಂದೇಹವೇ ಇಲ್ಲ. ಅಷ್ಟೊಂದು ಸುಸಜ್ಜಿತವಾಗಿ ಈ ಸಂಸ್ಥೆ ಕಟ್ಟಲ್ಪಟ್ಟಿದೆ. ನಮ್ಮ ನಾಡಿಗೆ, ರಾಷ್ಟ್ರಕ್ಕೆ ಈ ಸಂಸ್ಥೆಯ ಕೊಡುಗೆ ಚಿರಂತನವಾದುದು. ಇದೆಲ್ಲಕ್ಕೂ ಕಾರಣಭೂತರಾದ ಪೂಜ್ಯ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯವಿಭೂತಿತ್ವಕ್ಕೆ. ಲೋಕ ಕಾರುಣ್ಯ ಗುಣಕ್ಕೆ. ತೇಜಸ್ಸಿಗೆ ನಮೋನಮಃ.

ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯ ಸ್ಥಾಪನೆಯ ಪ್ರಮುಖರು ಮತ್ತು ವಿದ್ಯಾಸಂಸ್ಥೆಗಳ ಪ್ರಿನ್ಸಿಪಲ್ ಅವರುಗಳ ಮಧ್ಯದಲ್ಲಿ ಶ್ರೀಗಳು



ಎಜ್ಯುಕೇಷನ್ ಸೊಸೈಟಿಯ ಒಂದು
ಅವಧಿಯ ಕಾರ್ಯಕಾರಿ ಮಂಡಲ ಸದಸ್ಯ
ಮತ್ತು ಉಪಾಧ್ಯಾಯ ವರ್ಗದವರ
ಮಧ್ಯದಲ್ಲಿ ಶ್ರೀಗಳು



ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯ
ಇಬ್ಬರು ಪ್ರಮುಖ ಸದಸ್ಯರಾದ
ಶ್ರೀ ಟಿ. ಎನ್. ಕೆಂಪ್ರಹೊಸ್ನಯ್ಯ
ಶ್ರೀ ಪಾರ್ಶ್ವನಾಥ ಅವರು
ಆಪ್ತಾಲೋಚನೆಯಲ್ಲಿ



ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿಯ ಕಾರ್ಯಕಾರಿ ಸಭೆಯಲ್ಲಿ ಶ್ರೀಗಳು



ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (S I T)ಯ ನಿರ್ಮಾಣ ಹಂತದ ವಿವಿಧ ದೃಶ್ಯಗಳು



S I T ಯಲ್ಲಿ ನೀರಿನ ಟ್ಯಾಂಕ್ ನಿರ್ಮಾಣ ಹಂತದಲ್ಲಿ



S I T ಯ ಇನ್ನೊಂದು ಕಟ್ಟಡದ ಗುದ್ದಲಿ ಪೂಜೆ



S I T ಆವರಣದಲ್ಲಿ ಶ್ರೀ ಸಿದ್ಧರಾಮಣ್ಣ ವಿದ್ಯಾರ್ಥಿನಿಲಯದ ಗುದ್ದಲಿ ಪೂಜೆ



S I T ಇನ್ನೊಂದು ಕಟ್ಟಡದ ಗುದ್ದಲಿ ಪೂಜೆ



ವನಮಹೋತ್ಸವ: ಅಪೋಲೊ ೧೧ರ ನೆನಪು



ಗುದ್ದಲಿ ಪೂಜೆ

S I T ಯ ನಿರ್ಮಾಣ ಹಂತದ ದೃಶ್ಯಾವಳಿಗಳು →





ಶ್ರೀ ಎಸ್. ಆರ್. ಕಂಠಿ (ವಿದ್ಯಾಮಂತ್ರಿ) ಅವರು ಆಗಮಿಸಿದಾಗ ತನಿಖೆ




S I T ಯ ಆವರಣದಲ್ಲಿ ಬಿರ್ಲಾ ಆಡಿಟೋರಿಯಂ ಶಿಲಾನ್ಯಾಸ



ಕೆನಡಿ ಇಂಟರ್‌ನ್ಯಾಷನಲ್ ಗೆಸ್ಟ್‌ಹೌಸ್ ಉದ್ಘಾಟನೆ ಶ್ರೀಗಳವರ ಸಮ್ಮುಖದಲ್ಲಿ ಅಮೆರಿಕಾ ಕಾನ್ಸುಲ್ ಜನರಲ್ ಮದ್ರಾಸ್ ಅವರಿಂದ

S. I. T. ಯ ಒಂದು ಪ್ರಧಾನ ಕಟ್ಟಡದ ದೃಶ್ಯ.



S I T ಆವರಣ: ಅಮೃತಹಸ್ತದಿಂದ ಅಮೃತದಾನದ ಸಸಿಗಳ ನೆಡುವಿಕೆ



ಕ್ಷೇತ್ರದ ವಸ್ತುಪ್ರದರ್ಶನದಲ್ಲಿ ಇದ್ದ S I T ಮಳಿಗೆಯ ಒಂದು ದೃಶ್ಯದ ವೀಕ್ಷಣೆ: ಸಚಿವ ಶ್ರೀ ರಂಗನಾಥ ಅವರಿಂದ



S I T ಯಲ್ಲಿನ ಪ್ರಯೋಗ ಶಾಲೆಗಳ ಈ ಕೆಳಗಿನ ನಾಲ್ಕು ದೃಶ್ಯಗಳು









S. I. T. ವಿದ್ಯಾರ್ಥಿಗಳ ವಾಚನಾಲಯ





←S. I. T. ಪರಿಶೀಲನೆಯಲ್ಲಿ ಶ್ರೀಗಳು



ಶ್ರೀ ಮಠಕ್ಕೆ ವಾಜಪೇಯಿ ಆಗಮನ



↑
ಮಠದಲ್ಲಿ ಶ್ರೀ ಮುರಾರ್ಜಿ ಅವರೊಡನೆ ಸಂಭಾಷಣೆ



S. I. T. ಗೆ ಜಯಚಾಮರಾಜ ಒಡೆಯರ ಆಗಮನದ ಸಮಯದಲ್ಲಿ

# ಶ್ರೀಮಠ ಒಂದು ನ್ಯಾಯಾಲಯ

ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳು ವಿರಕ್ತ ಸಂಪ್ರದಾಯದವರಾದರೂ ಸಾಮಾಜಿಕ ನೆಮ್ಮದಿಯನ್ನು ಕುದುರಿಸಿ ಜನತೆಯ ಸೌಹಾರ್ದ ಬಾಳ್ವೆಗೆ ಸಹಾಯಕವಾಗುವ ಅನೇಕ ರಚನಾತ್ಮಕಕಾರ್ಯಗಳನ್ನು ಮಾಡುತ್ತಾ ಬಂದಿದ್ದಾರೆ. ಅವುಗಳಲ್ಲಿ ಗ್ರಾಮಾಂತರ ಪ್ರದೇಶದ ಜನಗಳ ತಂಟೆ ತಕರಾರುಗಳನ್ನು ಬಗೆಹರಿಸಿ ಅವರು ವೈಷಮ್ಯವನ್ನು ಮರೆತು ಒಗ್ಗಟ್ಟಿನಿಂದ ಬಾಳುವಂತೆ ಮಾಡುವುದೂ ಒಂದು.

ಶ್ರೀಕ್ಷೇತ್ರದಲ್ಲಿ ಉದ್ದಾನಶಿವಯೋಗಿಗಳ ಕಾಲದಿಂದಲೂ ಈ ಅಪೇಕ್ಷಣೀಯ ಸಂಪ್ರದಾಯ ಸಾಗಿ ಬಂದಿದೆ; ಗ್ರಾಮಾಂತರ ಪ್ರದೇಶದ ಜನರ ಅನೇಕ ವ್ಯಾಜ್ಯಗಳು ಇಲ್ಲಿ ತೀರ್ಮಾನವಾಗುತ್ತಾ ಬಂದಿವೆ. ಉದ್ದಾನಶಿವಯೋಗಿಗಳ ವರ್ಚಸ್ಸು, ನಿಷ್ಪಕ್ಷಪಾತವಾದ ಬುದ್ಧಿ ನ್ಯಾಯ ನಿಷ್ಠುರತೆ ಮೊದಲಾದವು ಸುವಿಖ್ಯಾತವಾದವು. ಅಂತೆಯೇ ಸುತ್ತಮುತ್ತಣ ಅನೇಕ ಗ್ರಾಮೀಣ ಜನತೆ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಶ್ರೀ ಸ್ವಾಮಿಗಳವರ ಮರೆಹೊಗುತ್ತಿದ್ದರು. ಶ್ರೀಗಳವರು ಗೊತ್ತಾದ ದಿನ ಎರಡೂ ಪಕ್ಷದವರನ್ನು ಬರಮಾಡಿಕೊಂಡು ಇಬ್ಬರ ಅಹವಾಲುಗಳನ್ನು ಕೇಳಿದ ನಂತರ ನ್ಯಾಯದ ತಕ್ಕಡಿಯಲ್ಲಿ ತೂಗಿ ತಮ್ಮ ನಿರ್ಧಾರವನ್ನು ಸೂಚಿಸಿಬಿಡುತ್ತಿದ್ದರು. ಉಭಯತರೂ ತುಟಿ ಪಿಟಿಕ್ಕೆನ್ನದೆ ಅದನ್ನು ಒಪ್ಪುತ್ತಿದ್ದರು. ಏಕೆಂದರೆ ಪೂಜ್ಯರಲ್ಲಿ ಮುಚ್ಚು-ಮರೆಯಾಗಲಿ, ಪೂರ್ವಗ್ರಹಿಕೆ-ಪಕ್ಷಪಾತಗಳಿಗಾಗಲಿ ಎಡೆಯಿರಲಿಲ್ಲ. ಕತ್ತಿ ಮಸೆಯುತ್ತಾ ಬಂದವರು ಶ್ರೀಗಳವರ ನ್ಯಾಯಕ್ಕೆ ತಲೆಬಾಗಿ, ದಾಸೋಹದಲ್ಲಿ ಸಹಪಂಕ್ತಿಯಲ್ಲಿ ಪ್ರಸಾದಸ್ವೀಕರಿಸಿ ನಗುನಗುತ್ತಾ ಹೋಗುತ್ತಿದ್ದರು. ಹೃದಯ ಹೃದಯಗಳ ನಡುವೆ ದೊಡ್ಡ ಕಂದರಗಳೇರ್ಪಟ್ಟಾಗ ಅವುಗಳ ನಡುವೆ ಪ್ರೀತಿ-ವಿಶ್ವಾಸದ ಸೇತುವನ್ನು ನಿರ್ಮಿಸುವ ಈ ಕಾರ್ಯ ಸಾಮಾಜಿಕ ಜೀವನದ ಹಿನ್ನೆಲೆಯಲ್ಲಿ ಎಷ್ಟು ಮಹತ್ತರವಾದುದೆಂಬುದರಲ್ಲಿ ಎರಡನೆಯ ಮಾತಿಲ್ಲ.

ಕೋರ್ಟು ಕಚೇರಿಗಳಿಗೆ ಹೋಗಿ ಅನೇಕವರ್ಷ ತೊಳಲಿ ಸತ್ತು ಸುಣ್ಣವಾಗಿದ್ದ ಜನರಿಗೆ ಹೀಗೆ ಸುಸೂತ್ರವಾಗಿ ವ್ಯಾಜ್ಯಗಳು ಬಗೆಹರಿಯುವುದನ್ನು ಕಂಡು ನ್ಯಾಯಕ್ಕೆ ಕ್ಷೇತ್ರದ ಕಡೆ ಮುಖಮಾಡಿದರು. ಯಾವ ಖರ್ಚೂ ಇಲ್ಲದೆ ನಿಷ್ಪಕ್ಷಪಾತ ನ್ಯಾಯ ದೊರಕುವುದೆಂಬ ವಿಶ್ವಾಸ ಜನರಲ್ಲಿ ಮೂಡಿತು.

ಶ್ರೀಶ್ರೀ ಶಿವಕುಮಾರಸ್ವಾಮಿಗಳವರೂ ಕೂಡ ನೂರಾರು ಜಟಿಲವಾದ ವ್ಯಾಜ್ಯಗಳನ್ನು ಬಗೆಹರಿಸಿದ್ದಾರೆ. ಶ್ರೀಗಳವರ ದಿನಚರಿಯಿಂದ ಆರಿಸಿದ ಕೆಲವು ಅಂಥ ಮಾದರಿಗಳನ್ನು, ಮತ್ತು ಒಂದು ತೀರ್ಮಾನದ ಪೂರ್ಣಪಾಠವನ್ನು ಈ ಕೆಳಗೆ ಕೊಟ್ಟಿದೆ. ಮನಸ್ತಾಪ ಹೊತ್ತು ಜನ ಶ್ರೀಮಠಕ್ಕೆ ಬರುವುದಿರಲಿ, ಶ್ರೀಗಳವರೇ ಸ್ವತಃ ಆಯಾ ಹಳ್ಳಿಗಳಿಗೆ ಹೋಗಿ ತೀರ್ಮಾನ ಮಾಡಿ ಕದಡಿದ ವಾತಾವರಣವನ್ನು ತಿಳಿಗೊಳಿಸಿದ ನಿದರ್ಶನಗಳೂ ಇವೆ. ಸಮಾಜಜೀವನಕ್ಕೆ ಈ ರೀತಿ ಹೊಂದಿಕೊಂಡಿರುವ ಮಠಮಾನ್ಯಗಳು ತೀರಾವಿರಳ.

೧೬-೩-೧೯೪೨ ಸೋಮವಾರ ಹರಳೂರು ಮತ್ತು ಭೈರಸಂದ್ರ ಗ್ರಾಮಗಳ ವ್ಯಾಜ್ಯವನ್ನು ತೀರ್ಮಾನ ಮಾಡಿದರು.

೫-೫-೪೨ ಮಂಗಳವಾರ ಕಣನೂರು ಶ್ರೀಶ್ರೀಗಳವರ ಮತ್ತು ಗ್ರಾಮಸ್ಥರುಗಳ ವಿವಾದವನ್ನು ಬಗೆಹರಿಸಿದರು.

೨೦-೯-೪೨ ಭಾನುವಾರ ಹರಳೂರು ಗ್ರಾಮದವರ ಗ್ರಾಮದೇವತೆಯ ಸಂಬಂಧವಾದ ವ್ಯವಹಾರವನ್ನು ಫೈಸಲು ಮಾಡಿದರು.

೩೧-೧೨-೧೯೪೩ ಶುಕ್ರವಾರ ಅಂಬಲಗೆರೆ ದೇವಸ್ಥಾನದ ಸಂಬಂಧವಾದ ಜಗಳವನ್ನು ಬಗೆಹರಿಸಿದರು.

೨೦-೧೦-೧೯೪೪ ಶುಕ್ರವಾರ ಗುಡಿಪಾಲಸಂದ್ರದ ಜಮೀನಿನ ಜಗಳವನ್ನು ಬಗೆಹರಿಸಿ ಇತ್ಯರ್ಥಮಾಡಿದರು.

೨೩-೧೦-೪೪ ಸೋಮವಾರ ಮಾರನಾಯ್ಕನಪಾಳ್ಯದ ದೊಡ್ಡ ಜಗಳವೊಂದರ ಬಗ್ಗೆ ರಾತ್ರಿ ೧೨ ಘಂಟೆಯವರೆಗೂ ನ್ಯಾಯಮಾಡಿ ಇಡೀ ಆ ಊರಿನಲ್ಲಿದ್ದ ಅನೈಕಮತ್ಯವನ್ನು ಸರಿಪಡಿಸಿದರು.

೬-೩-೧೯೪೫ ಹಳೇನಿಜಗಲ್ಲಿಗೆ ಶ್ರೀ ಶ್ರೀಗಳವರೇ ಪ್ರಯಾಣಮಾಡಿ ಹಳೇನಿಜಗಲ್ಲು ಮತ್ತು ಹರಳೂರು ಗ್ರಾಮಸ್ಥರ ವ್ಯಾಜ್ಯವನ್ನು ತೀರ್ಮಾನಿಸಿ ಬಂದುದು.

೧೪-೬-೪೭ ಶನಿವಾರ ಹುಲಿಕುಂಟೆ ಲಿಂಗಪ್ಪ ಮತ್ತು ಇಮಾಮ್‌ಖಾನ್ ಇವರುಗಳ ಮಾವಿನ ಫಸಲು ಸಂಬಂಧವಾದ ವ್ಯವಹಾರವನ್ನು ಬಗೆಹರಿಸಿದುದು.

೨೧-೮-೪೭ ಗುರುವಾರ ಶ್ರೀ ಶ್ರೀಗಳವರೇ ಖುದ್ದಾಗಿ ಕಂಚುಗಲ್ ಬಂಡೇಮಠಕ್ಕೆ ದಯಮಾಡಿಸಿ ಹೊನ್ನಮ್ಮನಗವಿ ಮಠದ ವ್ಯವಹಾರವನ್ನು ಇತ್ಯರ್ಥ ಮಾಡಿ ಬಂದುದು.

೧೨-೫-೧೯೪೮ ಚಿಕ್ಕಹಳ್ಳಿಗೆ ಶ್ರೀಶ್ರೀಗಳವರೇ ತೆರಳಿ ಅಲ್ಲಿನ ನ್ಯಾಯವೊಂದನ್ನು ತೀರ್ಮಾನ ಮಾಡಿದುದು.

೨೩-೧೦-೧೯೪೯ ಭಾನುವಾರ ಕುನುಗುಂದದ ವ್ಯವಹಾರವನ್ನು ಮಠಕ್ಕೆ ಉಭಯ ಪಕ್ಷದವರನ್ನು ಕರೆಸಿ ತೀರ್ಮಾನ ಮಾಡಿದುದು.

೧೯-೮-೧೯೫೫ ಬುಧವಾರ ಸಿಟ್ಟೂರು ಸಮ್ಮತು ಬಂಡಿಹಳ್ಳಿ ವೀರಪ್ಪ ಮುಂತಾದವರನ್ನು ಮಠಕ್ಕೆ ಕರೆಯಿಸಿ ಪಂಚಾಯತಿ ನಡೆಸಿ ವ್ಯವಹಾರವನ್ನು ಫೈಸಲು ಮಾಡಿದುದು.

೫-೧೧-೫೫ ಶನಿವಾರ ಚೌಡಸೆಟ್ಟಿಹಳ್ಳಿ ಲಿಂಗಪ್ಪನ ವ್ಯವಹಾರವನ್ನು ತೀರ್ಮಾನಿಸಲು ದಿನಾಂಕವನ್ನು ಗೊತ್ತು ಪಡಿಸಿದುದು.

೧೨-೬-೧೯೫೭ ಬುಧವಾರ ಜೆಣ್ಣೆಹಳ್ಳಿ ಶೀತಕಲ್ಲು ಮುದ್ದಣ್ಣ ಇವರ ವ್ಯಾಜ್ಯವನ್ನು ತೀರ್ಮಾನಿಸುವುದಕ್ಕಾಗಿ ಈ ದಿನ ವನ್ನು ಗೊತ್ತು ಪಡಿಸಿರುತ್ತಾರೆ.

೨೭-೭-೫೭ ಗುರುವಾರ ಅಜ್ಜಗಾನಹಳ್ಳಿ ಸಿದ್ಧಲಿಂಗಪ್ಪ, ಲಿಂಗಣ್ಣ, ಮೆಳೇಹಳ್ಳಿ ಗಂಗಣ್ಣ ಇವರುಗಳನ್ನು ಕರೆಸಿ ಕೊಂಡು ಗದ್ದಿಗೆ ವಿಚಾರವನ್ನು ಇತ್ಯರ್ಥ ಮಾಡಿದುದು.

೨೭-೮-೫೭ ಭಾನುವಾರ ಸಕಲೇಶಪುರದ ಸಂಗಪ್ಪ ಮತ್ತು ಬಿ. ಶಿವಪ್ಪ ಇವರುಗಳ ವ್ಯವಹಾರವನ್ನು ತೀರ್ಮಾನಿಸಿ ಇಬ್ಬರನ್ನು ರಾಜಿ ಮಾಡಿಸಿದುದು.

೨೭-೫-೧೯೫೭ ಭಾನುವಾರ ಬೆಂಗಳೂರು ಶ್ರೀಕಂಠಯ್ಯ, ಪಾಲನಹಳ್ಳಿ ಶಿವಣ್ಣನವರನ್ನು ಕರೆಸಿಕೊಂಡು ಅವರ ವ್ಯವಹಾರವನ್ನು ಬಗೆಹರಿಸಿದುದು.

೩-೮-೧೯೫೯ ಇಂಚೇನಹಳ್ಳಿ ಗಂಗಪ್ಪ, ಹೆಗ್ಗುಂದ ಪಾಳ್ಯದ ಬಸಮ್ಮ ಮತ್ತು ಗಂಗಪ್ಪ-ಇವರುಗಳ ವ್ಯವಹಾರ ಫೈಸ ಲಾಗಿ ಹೀಗೆ ತೀರ್ಮಾನವಾಯಿತು: ೩ ಎಕರೆ ಹೊಲ ಇಂಚೇನಹಳ್ಳಿ ಗಂಗಪ್ಪನ ಮಗನಿಗೆ, ೬ ಎಕರೆ ಹೊಲ ಹೆಗ್ಗುಂದಪಾಳ್ಯದ ಬಸ ಮ್ಮನ ಮಗನಿಗೆ ಕೊಡುವುದು. ಇದಕ್ಕೆ ಉಭಯ ಪಕ್ಷದವರೂ ಒಪ್ಪಿಕೊಂಡು ಹೋಗಿರುತ್ತಾರೆ.

೧೮-೧೦-೫೯ ಚಿಕ್ಕನಾಯಕನಹಳ್ಳಿ ತಾಲ್ಲೂಕು ಅಗಸರಹಳ್ಳಿ ಗ್ರಾಮದ ಲಕ್ಷ್ಮಮ್ಮ ಬಿಳಿಗೆರೆ ಹೈಸ್ಕೂಲಿಗೆ ಆಸ್ತಿ ಯನ್ನು ಬರೆದು ಕೊಟ್ಟಿರುವ ವಿಚಾರವಾಗಿ ಉಂಟಾಗಿರುವ ಭಿನ್ನಾಭಿಪ್ರಾಯಗಳನ್ನು ಬಗೆಹರಿಸುವ ಸಲುವಾಗಿ ಪಂಚಾಯತಿ ಸೇರಿಸಿ ತೀರ್ಮಾನಕ್ಕೆ ಮುಂದಿನ ಭಾನುವಾರವನ್ನು ಗೊತ್ತುಪಡಿಸಿರುವುದು.

೮-೧೦-೧೯೬೪ ಈ ದಿವಸ ಚಂದ್ರಶೇಖರಪುರದ ವ್ಯವಹಾರ ಫೈಸಲಾಗಿ, ದೊಡ್ಡಲಿಂಗಯ್ಯನಿಂದ ೪೪೦ರೂ, ಸಣ್ಣ ಲಿಂಗಯ್ಯನಿಂದ ೪೦೦ರೂ.ಗಳು ಶ್ರೀ ಭದ್ರಾಚಾರ್ಯನಿಗೆ ಸಲ್ಲತಕ್ಕದ್ದೆಂತು ತೀರ್ಮಾನವನ್ನು ಮಾಡಿರುತ್ತಾರೆ.

೯-೧೦-೧೯೬೫ ಕಂಬಾಳು ಗ್ರಾಮದ ನ್ಯಾಯ ವಿಮರ್ಶೆಗೆ ಈ ದಿವಸವನ್ನು ಗೊತ್ತು ಪಡಿಸಿರುತ್ತಾರೆ.

೧೭-೧೦-೬೫ ಶ್ರೀ ಬಿ. ಚನ್ನಪ್ಪ ಮತ್ತು ಮುನಿಶಾಮಪ್ಪ ಇವರುಗಳ ಜಗಳವನ್ನು ತೀರ್ಮಾನ ಮಾಡಿರುತ್ತಾರೆ.

೩-೧-೧೯೬೮ ಮಣಸೇಹಳ್ಳಿ ಹನುಮಪ್ಪ ಮತ್ತು ಚಿಕ್ಕಮ್ಮನವರ ಜಮೀನಿನ ವ್ಯವಹಾರದಲ್ಲಿ ೬೦ ಎಕರೆ ಹನುಮಪ್ಪ ನಿಗೂ ಉಳಿದ ಆಸ್ತಿಯನ್ನು ಚಿಕ್ಕಮ್ಮನವರಿಗೂ ಕೊಡಿಸಿ, ಸಾವಿರಾರು ರೂಪಾಯಿಗಳು ಕೋರ್ಟು ಕಛೇರಿಗೆ ನಷ್ಟವಾಗುತ್ತಿದ್ದು ದನ್ನು ತಪ್ಪಿಸಿದರು.

೨೦-೧-೬೮ ಕೆಂಬಳಲು ಗ್ರಾಮಕ್ಕೆ ಶ್ರೀಶ್ರೀಗಳವರೇ ದಯಮಾಡಿಸಿ ಚನ್ನಪ್ಪ ವಿರೂಪಾಕ್ಷಯ್ಯ ಇವರುಗಳ ವ್ಯವಹಾರ ವನ್ನು ಫೈಸಲಾತಿ ಮಾಡಿದರು. ಅದೇ ದಿವಸ ರುದ್ರಮುನಿಯಪ್ಪ, ರೇವಣ್ಣ, ಸದಾಶಿವಪ್ಪ-ಇವರುಗಳ ವ್ಯಾಜ್ಯ ಬಗೆಹರಿಯಲಿಲ್ಲ.

೨೨-೭-೬೮ ಈ ದಿವಸ ಸಾಯಂಕಾಲ ಗೊಪ್ಪೇನಹಳ್ಳಿ ಪುಟ್ಟಣ್ಣನವರ ದೊಡ್ಡ ವ್ಯಾಜ್ಯದ ವ್ಯವಹಾರಕ್ಕೆ ದಿನ ಗೊತ್ತು ಮಾಡಿ ಅವರನ್ನು ಮಠಕ್ಕೆ ಕರೆಸಿ ಪಂಚಾಯತರ ತೀರ್ಮಾನದಂತೆ ಎಲ್ಲರೂ ನಡೆದುಕೊಳ್ಳ ಬೇಕಾಗಿ ತೀರ್ಮಾನ ಹೇಳಿ ಕಳುಹಿಸಿದ್ದಾರೆ.

೨೭-೧-೧೯೬೯ ಸೋಮವಾರ ತಿಪ್ಪಸಂದ್ರದ ಮಠದ ಪಂಚಾಕ್ಷರೀಸ್ವಾಮಿಗಳು, ಹುಲಿಕಲ್ ಮಠದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಅವರನ್ನು ಕರೆಸಿಕೊಂಡು ಅವರ ಸಮಕ್ಷ ತೋಟಿನ ಮಠದ ವ್ಯವಹಾರವನ್ನು ಇತ್ಯರ್ಥ ಮಾಡಿರುತ್ತಾರೆ.

೧೨-೪-೧೯೬೯ ಶನಿವಾರ ಮಾದೇನಹಳ್ಳಿ ವ್ಯವಹಾರಕ್ಕೆ ಈ ದಿನವನ್ನು ಗೊತ್ತು ಮಾಡಿರುತ್ತಾರೆ.

೧೦-೫-೧೯೬೯ ಶನಿವಾರ ಕಡಬದ ನ್ಯಾಯವನ್ನು ತೀರ್ಮಾನಿಸಿದ್ದಾರೆ,

೧೨-೯-೬೯ ಶುಕ್ರವಾರ ಗುಬ್ಬಿ ಶಂಕರಪ್ಪನವರ ನ್ಯಾಯವನ್ನು ಇತ್ಯರ್ಥಗೊಳಿಸಿರುತ್ತಾರೆ.

೧೪-೫-೧೯೭೦ ಗುರುವಾರ ಅಂಜಲಿಗೆರೆ ಗ್ರಾಮದವರ ವ್ಯವಹಾರವನ್ನು ತೀರ್ಮಾನ ಮಾಡಿರುತ್ತಾರೆ.

೭-೭-೧೯೭೧ ಸೋಮವಾರ ದೊಡ್ಡ ಹೆಜ್ಜಾಜಿ ಚನ್ನಮಲ್ಲಯ್ಯನವರ ವ್ಯವಹಾರವನ್ನು ತೀರ್ಮಾನಿಸಿದ್ದು.

೨೫-೬-೧೯೭೨ ಶನಿವಾರ ಅಂಬಲಗೆರೆ ರೇವಣ್ಣ ಮತ್ತು ಈಶ್ವರಯ್ಯ ಇವರುಗಳ ವ್ಯಾಜ್ಯವನ್ನು ತೀರ್ಮಾನ ಮಾಡಿದುದು.

೧೯-೮-೧೯೭೩ ಭಾನುವಾರ ಪುರುಷನಹಳ್ಳಿಯ ವ್ಯವಹಾರವನ್ನು ತೀರ್ಮಾನ ಮಾಡಿರುತ್ತಾರೆ.

೨-೧೨-೧೯೭೪ ಸೋಮವಾರ ನಾಗವಲ್ಲಿಯ ವಿದ್ಯಾರ್ಥಿ ನಿಲಯಕ್ಕೆ ಸಂಬಂಧಪಟ್ಟ ವ್ಯವಹಾರವನ್ನು ಬಗೆಹರಿಸಿರುತ್ತಾರೆ

೨೯-೬-೧೯೭೫ ಭಾನುವಾರ ಬ್ಯಾಲಕೆರೆ ಮಠಕ್ಕೆ ಸಂಬಂಧಪಟ್ಟ ವ್ಯವಹಾರವನ್ನು ತೀರ್ಮಾನ ಮಾಡಿರುತ್ತಾರೆ.

೨೦-೩-೧೯೭೬ ಶನಿವಾರ ಅಗಸರಹಳ್ಳಿ ಕೇಸನ್ನು ವಿಚಾರಣೆ ಮಾಡಿ ಬಗೆಹರಿಸಿರುತ್ತಾರೆ.

೧೪-೭-೧೯೭೭ ಗುರುವಾರ ದೇವರಾಯಪಟ್ಟಣದ ಶ್ರೀ ವೀರಭದ್ರಪ್ಪನವರ ವ್ಯವಹಾರವನ್ನು ತೀರ್ಮಾನ ಮಾಡಿರುತ್ತಾರೆ.

೫-೫-೧೯೭೯ ಗುಬ್ಬಿ ತಾಲ್ಲೂಕು ಅದಲಗೆರೆ. ಕುಂದರನಹಳ್ಳಿ, ಸಾಗರನಹಳ್ಳಿ ಗ್ರಾಮ ಸಂಬಂಧದ ದೊಡ್ಡ ವ್ಯಾಜ್ಯವನ್ನು ತೀರ್ಮಾನಿಸಿದುದು.

**ವ್ಯಾಜ್ಯ ತೀರ್ಮಾನದ ಒಂದು ಪೂರ್ಣಪಾಠ**

[೫-೫-೧೯೭೯ರಲ್ಲಿ ಬಹುದಿನಗಳಿಂದ ಕೋರ್ಟು ಕಚೇರಿಗಳಲ್ಲಿ ತೀರ್ಮಾನವಾಗದ ಈ ವ್ಯಾಜ್ಯವು ಶ್ರೀಗಳವರ ಸಮ್ಮುಖದಲ್ಲಿ ತೀರ್ಮಾನವಾಯಿತಷ್ಟೆ. ಆ ತೀರ್ಮಾನದ ಪೂರ್ಣ ಪಾಠವನ್ನು ಇಲ್ಲಿ ಅವಲೋಕಿಸಬಹುದು]

ಗುಬ್ಬಿ ತಾಲ್ಲೋಕು ನಿಟ್ಟೂರು ಹೋಬಳಿ ಅದಲಗೆರೆ ಗ್ರಾಮ ಮತ್ತು ಬಿ. ಹೆಚ್ ರೋಡಿನಿಂದ ಕುಂದರಹಳ್ಳಿ ಮಾರ್ಗವಾಗಿ ನಿರ್ಮಾಣವಾಗಬೇಕಾಗಿರುವ ರಸ್ತೆ ವಿಚಾರಲ್ಲಿ ಜಮೀನು ಸ್ವಾಧೀನ ಪಡಿಸಿಕೊಳ್ಳಲು ತುಮಕೂರು ಅಸಿಸ್ಟೆಂಟ್ ಕಮೀಶನರು ಮತ್ತು ಲ್ಯಾಂಡ್ ಅಕ್ವಿಜೇಷನ್ ಆಫೀಸರ್‌ರವರ ಕೋರ್ಟಿನಲ್ಲಿ ಕ್ರಮ ನಡೆದು ಈ ಬಗ್ಗೆ ರಸ್ತೆಗೆ ಜಮೀನು ಬಿಟ್ಟು ಕೊಡಬೇಕಾದ ಈ ಕೆಳಕಂಡ ಜಮೀನುದಾರರುಗಳು ಕರ್ನಾಟಕ ಸರ್ಕಾರದ ಶ್ರೇಷ್ಠ ನ್ಯಾಯಾಲಯ ಮತ್ತು ಗುಬ್ಬಿಯ ಮುನ್ಸಿಫ್‌ರವರ ಕೋರ್ಟು ಹಾಗೂ ಒಕೇಶನ್ ಜಡ್ಜರವರ ಕೋರ್ಟುಗಳಲ್ಲಿ ವಿವಾದಗಳನ್ನು ಹೂಡಿ, ತಡೆ ಆರ್ಡರ್ ಪಡೆದಿರುವುದು ಸರಿಯಷ್ಟೆ. ಈ ಸಂಬಂಧದ ವ್ಯವಹಾರದಲ್ಲಿ ತಾ: ೨೭-೪-೭೯ರಂದು ಗುಬ್ಬಿ ತಾಲ್ಲೋಕ್ ತಹಸಿಲ್ದಾರರವರು ಮತ್ತು ಗುಬ್ಬಿ ಸರ್ಕಲ್ ಪೋಲೀಸ್ ಇನ್ಸ್‌ಪೆಕ್ಟರ್‌ರವರು ಸ್ಥಳಕ್ಕೆ ದಯಮಾಡಿಸಿದಾಗ್ಗೆ ಅದಲಗೇರೆ ಗ್ರಾಮಸ್ಥರು ಕೇಸಿನ ವಿದ್ಯಮಾನಗಳ ಬಗ್ಗೆ ಪೂರ್ಣ ತಿಳುವಳಿಕೆ ಪಡೆದ ನಂತರ ಈ ವಿವಾದವು ಗ್ರಾಮಾಂತರ ಪ್ರದೇಶಗಳಲ್ಲಿ ನಿಮ್ಮಗಳಿಗೆ ಇಂತಹ ದ್ವೇಷಾಸೂಯೆಗಳಿಂದ ಗ್ರಾಮದ ಅವನತಿಗೆ ಕಾರಣವಾಗುತ್ತದೆ. ಪ್ರಯುಕ್ತ ಎಲ್ಲರೂ ಸೌಹಾರ್ದವಾಗಿ ಬಾಳಬೇಕೆಂದು ತಿಳುವಳಿಕೆ ಕೊಟ್ಟು ಹೋದರು.

ನಂತರ ಅದಲಗೆರೆ ಗ್ರಾಮಸ್ಥರಾದ ನಾವುಗಳು ಜವಾಬ್ದಾರಿ ಮತ್ತು ಲೋಕಾನುಭವವುಳ್ಳ ಪ್ರಮುಖರಲ್ಲಿ ಪರ್ಯಾಲೋಚಿಸಲಾಗಿ, ಇಂತಹ ವಿವಾದಗಳನ್ನು ಕಾನೂನು ಬದ್ಧವಾಗಿ ಪರಿಹರಿಸಿಕೊಳ್ಳುವುದು ಕಷ್ಟವೆಂದೂ ಪರಸ್ಪರ ಸೌಹಾರ್ದದಿಂದ ಮಾತ್ರ ಈ ಕಾರ್ಯ ಕೈಗೂಡುವುದೆಂದೂ ತಿಳುವಳಿಕೆ ಕೊಟ್ಟ ಮೇರೆಗೆ, ನಾವುಗಳು ಮಹಾಜ್ಞಾನಿಗಳೂ ಭೂತದಯಾಪರರೂ ಆದ ಶ್ರೀ ಸಿದ್ಧಗಂಗಾಮಠಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ದಿವ್ಯಸನ್ನಿಧಿಯಲ್ಲೇ ಅರಿಕೆ ಮಾಡಿಕೊಂಡು ನಮ್ಮ ಪ್ರಾಂತ್ಯದ ಜನಪ್ರಮುಖರಾದ ಮಾಜಿ ವಿಧಾನಸಭಾ ಸದಸ್ಯರಾದ ಶ್ರೀಮಾನ್ ಚಿಕ್ಕೇಗೌಡರು ಮತ್ತು ದೊಡ್ಡಗುಣಿ ಗ್ರಾಮದ ಶ್ರೀ ಡಿ. ಸಿ. ಶಿವಾನಂದಯ್ಯ, ಹಾಗೂ ಗುಬ್ಬಿ ಮಾಜಿ ಪುರಸಭಾಧ್ಯಕ್ಷರಾದ ಮುರುಡಪ್ಪನವರು ಮತ್ತು ಡಾ॥ ಶ್ರೀಮಾನ್ ಕೆ.ಪಿ ಭಾಸ್ಕರ್‌ರವರು-ಇವರುಗಳನ್ನು ಪಂಚಾಯತದಾರರನ್ನಾಗಿ ಚುನಾಯಿಸಿಕೊಂಡು ತಾ:-೫-೫-೭೯ ನೆಯ ಶನಿವಾರ ಶ್ರೀ ಸಿದ್ಧಗಂಗಾ ಮಠದಲ್ಲಿ ಶ್ರೀ ಸ್ವಾಮೀಜಿಯವರ ಅಧ್ಯಕ್ಷತೆಯಲ್ಲಿ ಮೇಲ್ಕಂಡ ಪಂಚಾಯತದಾರರ ಸಮಕ್ಷ ಅದಲಗೆರೆ ಗ್ರಾಮಸ್ಥರು ಮತ್ತು ರಸ್ತೆಗೆ ಸಂಬಂಧಪಟ್ಟ ಕುಂದರನಳ್ಳಿ ಹಾಗೂ ಸಾಗರನಹಳ್ಳಿ ಗ್ರಾಮದ ಭೂಮಾಲೀಕರೂ ಸೇರಿ, ಈ ಕೆಳಗೆ ಕಂಡಂತೆ ಪಂಚಾಯತದಾರರು ಹೇಳಿದ ತೀರ್ಮಾನಕ್ಕೆ ನಮ್ಮಗಳ ಆತ್ಮಸಂತೋಷದಿಂದ ಒಪ್ಪಿರುತ್ತೇವೆ. ಹಾಗೂ ಇದೇ ಅಖೈರು ತೀರ್ಮಾನವೆಂದು ಒಪ್ಪಿರುತ್ತೇವೆ. ಈ ತೀರ್ಮಾನಗಳಲ್ಲಿ ಸರ್ಕಾರಕ್ಕೆ ಸಂಬಂಧಪಡುವ ವಿಷಯಗಳ ಬಗ್ಗೆ ಕ್ರಮ ಕೈಗೊಂಡು ಸಹಾಯ ಮಾಡುವುದಾಗಿ ಸ್ಥಳೀಯ ತಹಶೀಲ್ದಾರರಾದ, ಎಸ್. ಸಿದ್ಧಗಂಗಯ್ಯನವರು ಮತ್ತು ತುಮಕೂರು ಅಸಿಸ್ಟೆಂಟ್ ಕಮೀಷನರ್ ಶ್ರೀ ಜೆ. ಶ್ರೀನಿವಾಸನ್‌ರವರು ಸಹ ಭರವಸೆ ಕೊಟ್ಟಿರುತ್ತಾರೆ.

**ಪಂಚಾಯತಿದಾರರುಗಳ ತೀರ್ಮಾನಗಳು**

ಸುಮಾರು ೧೯೬೪ ನೆಯ ಸಾಲಿನಲ್ಲಿ ಪಂಚಾಯತರ ಸಮಕ್ಷ ತೀರ್ಮಾನವಾಗಿದ್ದು ಇದುವರೆಗೆ ಕಾರ್ಯಗತವಾಗದೆ ಇರುವ ಶ್ರೀ ಚೆನ್ನರಾಜಯ್ಯನವರ ಖಾನೇ ಸುಮಾರಿ ನಂ. ೧೨/೧ ನಿವೇಶನದಲ್ಲಿ ರಸ್ತೆಗೆ ಅಡ್ಡಲಾಗಿ ಕಟ್ಟಿದ ಗೋಡೆಯಲ್ಲಿ ಪಂಚಾಯತಿಯವರ ತೀರ್ಮಾನದಂತೆ ಉತ್ತರ-ದಕ್ಷಿಣ ಗೋಡೆಯನ್ನು ಹತ್ತುಅಡಿ ಕಿತ್ತು ಹಾಕತಕ್ಕದ್ದು.

ಕುಂದರನಹಳ್ಳಿಯಿಂದ ಅದಲಗೆರೆಗೆ ಬರುವ ರಸ್ತೆಯಲ್ಲೇ ವಿವಾದಕ್ಕೆ ಒಳಪಟ್ಟಿರುವ ಭಾಗಗಳಲ್ಲಿ ಆದಷ್ಟು ಮಾಲೀಕರಿಗೆ ತೊಂದರೆಯಾಗದಂತೆ ಬದಲಾವಣೆಮಾಡಿ ರಸ್ತೆ ಮಾಡತಕ್ಕದ್ದು.

ಕುಂದರನಹಳ್ಳಿ ಸರ್ವೆ ನಂ. ೫೯ರಲ್ಲೇ ಶ್ರೀ ಕೆ. ಎಸ್. ರಾಮಲಿಂಗಯ್ಯ, ಕೆ. ಶಿವಮೂರ್ತಿ ಇವರುಗಳ ಹೆಸರಿನ ತೆಂಗಿನ ತೋಟದಲ್ಲಿ ಇಬ್ಬರ ಹಿಸ್ಸೇ ಮಧ್ಯೇ ತೆಂಗಿನ ಮರಗಳ ಬೇಸಾಯಕ್ಕೆ ಆದಷ್ಟು ತೊಂದರೆಯಾಗದಂತೆ ಈ ಪ್ರದೇಶದಲ್ಲಿ ರಸ್ತೆ ಕಿರಿದಾದರೂ ಸಹ ವಿಶೇಷ ಪರಿಸ್ಥಿತಿಯೆಂದು ಪರಿಗಣಿಸಿ ರಸ್ತೆ ನಿರ್ಮಾಣಮಾಡತಕ್ಕದ್ದು.

ರಸ್ತೆಗಾಗಿ ಜಮೀನುಗಳನ್ನು ಕಳೆದುಕೊಂಡವರಿಗೆ ಬಿದರೆಹಳ್ಳ ಅಮೃತಮಹಲ್ ಕಾವಲಿನಲ್ಲಿ ರವಿನ್ಯೂ ಇಲಾಖೆಯವರು

ಕನಿಷ್ಠ ೨ ಎಕರೆಗೆ ಕಮ್ಮಿ ಇಲ್ಲದಂತೆ ಜಮೀನು ಕೊಡತಕ್ಕದ್ದು. ಈ ಷರತ್ತಿನಂತೆ ಜಮೀನುದಾರರುಗಳು ತಮ್ಮ ಜಮೀನನ್ನು ಬಿಟ್ಟುಕೊಡತಕ್ಕದ್ದು. ಹಾಗೂ ನಗದು ರೂಪದಲ್ಲಿ ಪರಿಹಾರ ಕೇಳತಕ್ಕದ್ದಲ್ಲ. ತೆಂಗಿನ ಮರ ಕಳೆದುಕೊಂಡವರಿಗೆ ಜಮೀನು ಜಾಸ್ತಿಕೊಡಲು ಕೇಳಿಕೊಳ್ಳುವುದು.

ಸದರಿ ಜಮೀನುದಾರರುಗಳು ಹೈಕೋರ್ಟು ಮತ್ತು ಮುನ್ಸಿಫ್ ಕೋರ್ಟಿನ ಮತ್ತು ಕರ್ನಾಟಕ ಸರ್ಕಾರದಲ್ಲಿರುವ ಎಲ್ಲಾ ಕೇಸುಗಳನ್ನು ವಾಪಸು ಪಡೆಯತಕ್ಕದ್ದು.

ಮೇಲ್ಕಂಡ ಲ್ಯಾಂಡ್‌ಅಕ್ವಿಜೇಷನ್ ಕೇಸುಗಳಲ್ಲಿ ಅವಾರ್ಡು ಪಾಸಾಗಿ ಹಣ ಪಡೆಯಲು ನೋಟೀಸು ಕೊಟ್ಟಿರತಕ್ಕಂತಹ ಪ್ರತಿ ಕೇಸಿನಲ್ಲೂ ಸದರಿ ಪಾರ್ಟಿಗಳಿಗೆ ಪರಿಹಾರದ ಹಣದ ಬದಲಿಗೆ ಮೇಲ್ಕಂಡ ಪಂಚಾಯತರ ತೀರ್ಮಾನ ಹಾಗೂ ಜಮೀನು ಕಳೆದುಕೊಂಡಿರುವವರ ಸಮ್ಮತಿಯಂತೆ ಪ್ರತಿಯೊಬ್ಬರಿಗೂ ಜಮೀನು ಕೊಡುವ ಬಗ್ಗೆ ಲ್ಯಾಂಡ್ ಅಕ್ವಿಜೇಷನ್ ನಡವಳಿಕೆಯಲ್ಲಿ ತುಮಕೂರು ಉಪವಿಭಾಗಾಧಿಕಾರಿಗಳು ಅಲಾಯಿದ ಆರ್ಡರು ಮಾಡತಕ್ಕದ್ದು.

ಬಹಳ ದೀರ್ಘಕಾಲದಿಂದಲೂ ವಿವಾದಕ್ಕೊಳಪಟ್ಟು ಸುತ್ತಮುತ್ತಣ ಜನಗಳಲ್ಲಿನ ಕಹಿ ಭಾವನೆಯನ್ನು ಪರಿಹರಿಸಲು ತುಂಬಾ ಶ್ರಮವಹಿಸಿ ಅಖೈರು ತೀರ್ಮಾನದವರೆಗೆ ಸೇವೆ ಸಲ್ಲಿಸಿದ ತಾಲ್ಲೂಕು ತಹಶೀಲ್ದಾರ್ ಶ್ರೀಮಾನ್ ಎಸ್. ಸಿದ್ಧಗಂಗಯ್ಯನವರು ಮತ್ತು ಗುಬ್ಬಿ ಸರ್ಕಲ್ ಇನ್‌ಸ್ಪೆಕ್ಟರ್ ಜಿ. ಬಿ. ಹಿರೇಮಠ ಇವರುಗಳ ಸೇವೆಯನ್ನು ಶ್ಲಾಘಿಸಿ, ಪಂಚಾಯತದಾರರು ಅಭಿನಂದನೆ ಸಲ್ಲಿಸಿದರು.

ಮೇಲ್ಕಂಡ ವ್ಯವಹಾರದಲ್ಲಿ ಬಿಚ್ಚುಮನಸ್ಸಿನಿಂದ ಸಹಕರಿಸಿದ ತಾಲ್ಲೋಕು ಅಭಿವೃದ್ಧಿ ಮಂಡಲಿ ಮುಖ್ಯಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀಮಾನ್ ಎನ್. ಬಸಪ್ಪನವರ ಸೇವೆಯನ್ನು ಶ್ಲಾಘಿಸಲಾಗಿದೆ. ಮೇಲ್ಕಂಡ ಪಂಚಾಯಿತರ ತೀರ್ಮಾನಕ್ಕೆ ನಮ್ಮಗಳ ಖುದ್ದು ರಾಜಿಯಿಂದ ಒಪ್ಪಿ ಓದಿಸಿ ಕೇಳಿ ಸರಿಯಾಗಿದೆ, ಎಂದು ಒಪ್ಪಿ ಸಹಿಮಾಡಿರುತ್ತೇವೆ.

ಸಮಕ್ಷದಲ್ಲಿ ಮಾಜಿ ಎಂ. ಎಲ್. ಎ ; ತಹಸೀಲ್‌ದಾರ್
ಇನ್ನಿತರ ಸರಕಾರಿ ಅಧಿಕಾರಿಗಳ ಸಹಿಗಳು

# ಶ್ರೀ ಕ್ಷೇತ್ರದಲ್ಲಿ ನಡೆದ ಸಭೆ ಸಮ್ಮೇಲನಗಳು

[ಶ್ರೀ ಕ್ಷೇತ್ರ ಸದಾ ಜಾಗೃತಿಯಿಂದಿರುವ ಒಂದು ಮಹಾಕ್ಷೇತ್ರ. ಇಲ್ಲಿ ಶ್ರೀಕ್ಷೇತ್ರಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಲ್ಲದೆ ರಾಜ್ಯ ಮತ್ತು ರಾಷ್ಟ್ರಮಟ್ಟದ ಅನೇಕ ಸಭೆ-ಸಮ್ಮೇಲನ, ಗೋಷ್ಠಿ, ಕ್ರೀಡಾಕೂಟಗಳು ನಡೆಯುತ್ತವೆ. ಅಲ್ಲಿ ನಡೆಯುವ ಚಟುವಟಿಕೆಗಳು ಒಂದು ಮುಖದವಲ್ಲ. ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ, ಮತ್ತು ಶಾರೀರಿಕ-ಇತ್ಯಾದಿ ಹಲವಾರು ಬಗೆಯವು. ಅವೆಲ್ಲವುಗಳ ಪೂರ್ಣವರದಿಯನ್ನು ಪ್ರಕಟಿಸುವುದು ಶಕ್ಯವಲ್ಲದಿದ್ದರೂ ಕೆಲವು ಮಹತ್ವದ ಕಾರ್ಯಕ್ರಮಗಳ ಬಗೆಗೆ ಇಲ್ಲಿ ಸಂಕ್ಷೇಪವಾದ ಒಂದು ಪರಿಚಯವಿದೆ.]

## ೧. ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ-ವೇದ ಮಹಾಪಾಠಶಾಲೆಯ ರಜತಮಹೋತ್ಸವ-೧೯೪೯

೧೮-೬-೧೯೪೯ರಂದು ಶ್ರೀ ಕ್ಷೇತ್ರದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ-ವೇದ ಮಹಾಪಾಠಶಾಲೆಯ ರಜತಮಹೋತ್ಸವವನ್ನು ವೈಭವೋಪೇತವಾಗಿ ಆಚರಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಅಂದಿನ ಮೈಸೂರು ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆ.ಸಿ. ರೆಡ್ಡಿಯವರು ವಹಿಸಿದ್ದರು. ಅಂದಿನ ದಿವಾನರಾಗಿದ್ದ ಶ್ರೀ ರಾಮಸ್ವಾಮಿ ಮೊದಲಿಯಾರ್‌ರವರು ಸಮಾರಂಭವನ್ನು ಉದ್ಘಾಟಿಸಿದರು. ಅನೇಕ ಮಂದಿ ಘನವಿದ್ವಾಂಸರು, ಅಭಿಮಾನಿಗಳು ಕಿಕ್ಕಿರಿದಿದ್ದರು.

### ಅ) ಶಿವಾನುಭವ ಸಮ್ಮೇಲನ-೧೯೪೯

೧೮-೬-೧೯೪೯ರಂದು ಸಂಜೆ ಸಂಸ್ಕೃತ ಕಾಲೇಜಿನ ರಜತೋತ್ಸವದ ಅಂಗವಾಗಿ ಶ್ರೀಮಠದಲ್ಲಿ ಶಿವಾನುಭವ ಸಮ್ಮೇಲನವನ್ನು ಏರ್ಪಡಿಸಲಾಗಿತ್ತು. ಅಧ್ಯಕ್ಷತೆಯನ್ನು ಸುತ್ತೂರು ಶ್ರೀ ಶಿವರಾತ್ರಿರಾಜೇಂದ್ರಮಹಾಸ್ವಾಮಿಗಳವರು ವಹಿಸಿದ್ದರು. ಸಮಾರಂಭದ ಉದ್ಘಾಟನೆಯನ್ನು ಅನೇಕಭಾಷಾವಿಶಾರದರೂ, ಮಹಾದಾರ್ಶನಿಕರೂ, ಮೈಸೂರು ಅರಮನೆ ಪಂಚಗವಿ ಮಠಾಧ್ಯಕ್ಷರೂ ಆಗಿದ್ದ ಶ್ರೀಶ್ರೀ ಗೌರೀಶಂಕರಮಹಾಸ್ವಾಮಿಗಳವರು ನೆರವೇರಿಸಿದರು. ಅನೇಕ ಹರಗುರುಚರಮೂರ್ತಿಗಳೂ ಭಕ್ತರೂ ಸಭೆಯಲ್ಲಿ ನೆರೆದಿದ್ದರು. ಇದೊಂದು ವಿದ್ವತ್ಪೂರ್ಣ ಸಮ್ಮೇಲನವಾಗಿತ್ತು.

### ಆ) ಸರ್ವಧರ್ಮ ಸಮ್ಮೇಲನ-೧೯೪೯

೧೯-೬-೧೯೪೯ ರಂದು ಸಂಸ್ಕೃತ ಕಾಲೇಜಿನ ರಜತಮಹೋತ್ಸವದ ಅಂಗವಾಗಿ ಸರ್ವಧರ್ಮ ಸಮ್ಮೇಲನವನ್ನು ಏರ್ಪಡಿಸಿತ್ತು. ಅಂದಿನ ಸಮಾರಂಭದ ನೇತೃತ್ವವನ್ನು ಶ್ರೀಶ್ರೀ ಗೌರೀಶಂಕರಮಹಾಸ್ವಾಮಿಗಳವರು ವಹಿಸಿದ್ದರು. ಅಧ್ಯಕ್ಷ ಪದವಿಯನ್ನು ಶ್ರೀ ಕೆ. ಗುರುದತ್, ಐ. ಎ. ಎಸ್.ರವರು ಅಲಂಕರಿಸಿದ್ದರು. ಅಂದಿನ ಮೈಸೂರು ಸಂಸ್ಥಾನ ಸರ್ಕಾರದ ಸಚಿವರಾಗಿದ್ದ ಶ್ರೀ ಪಾಮಡಿ ಸುಬ್ರಾಮಶೆಟ್ಟರು ಸಮ್ಮೇಲನವನ್ನು ಉದ್ಘಾಟಿಸಿದರು. ಸಮ್ಮೇಲನದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ಬೌದ್ಧ, ಜೈನ, ಮುಸ್ಲಿಂ, ಕ್ರಿಶ್ಚಿಯನ್ ಧರ್ಮಗಳ ಹೆಸರಾಂತ ಪ್ರತಿನಿಧಿಗಳು ಭಾಗವಹಿಸಿದ್ದರು. ಹಲವಾರು ಮಂದಿ ಘನವಿದ್ವಾಂಸರು, ದಾರ್ಶನಿಕರು, ಹರಗುರುಚರಮೂರ್ತಿಗಳು, ಸಹೃದಯ ಸಜ್ಜನರುಗಳಿಂದ ಸಭೆ ಕಿಕ್ಕಿರಿದಿದ್ದಿತು.

## ೨. ಶ್ರಾವಣ ಮಾಸದ ಪುರಾಣ ಪ್ರವಚನ—೧೯೫೧

೧೯೫೧ನೆಯ ಇಸ್ವಿಯ ಶ್ರಾವಣ ಮಾಸದಲ್ಲಿ ಆ ಮಾಸಪರ್ಯಂತ ಶ್ರೀ ಕ್ಷೇತ್ರದಲ್ಲಿ ಪುರಾಣ ಪ್ರವಚನವು ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ನಡೆಯಿತು. ಶ್ರೀಶ್ರೀಗಳವರೇ ಸ್ವತಃ 'ಪ್ರಭುಲಿಂಗಲೀಲೆ'ಯನ್ನು ಪ್ರವಚಿಸಿದರು. ತತ್‌ಸಂಬಂಧವಾದ ಪರಿಸಮಾಪ್ತಿ ಸಮಾರಂಭಕ್ಕೆ ಮೈಸೂರಿನ ಅರಮನೆ ಪಂಚಗವಿ ಮಠಾಧ್ಯಕ್ಷರೂ, ಪ್ರಸಿದ್ಧ ದಾರ್ಶನಿಕರೂ ಆಗಿದ್ದ ಶ್ರೀಶ್ರೀ ಗೌರೀಶಂಕರ ಮಹಾಸ್ವಾಮಿಗಳವರು ದಯಮಾಡಿಸಿದ್ದರು. ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪ್ರವಚನವನ್ನೂ ಶ್ರೀಶ್ರೀಗೌರೀಶಂಕರ ಮಹಾಸ್ವಾಮಿಗಳವರು ಮೂರು ದಿನಗಳು ಬೆಳಗು ಬೈಗುಗಳಲ್ಲಿ ಮಾಡಿದ ಸಮಾಪ್ತಿ ಭಾಷಣವನ್ನೂ ಕೇಳಲು ಅನೇಕ ನಗರಗಳ ಜಿಜ್ಞಾಸುಗಳು, ಹರಗುರುಚರಮೂರ್ತಿಗಳು, ಶರಣರು, ದಾರ್ಶನಿಕರು, ವಿದ್ವಾಂಸರು, ಭಕ್ತರು, ನೆರೆದಿದ್ದರು. ಆಗ ಶ್ರೀಗಳವರು ಶ್ರೀ ಗೌರೀಶಂಕರ ಸ್ವಾಮಿಗಳವರನ್ನು ಕುರಿತು ಭಾಷಣ ಮಾಡಿದರು *

---

* ಪೂಜ್ಯರ ಅಂದಿನ ಭಾಷಣ ಇದೇ ಗ್ರಂಥದ ಹಿಂದಿನ ಪುಟಗಳಲ್ಲಿ ಬಂದಿದೆ.

## ೩. ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಲನ—೧೯೬೩

೧೯೬೩ನೆಯ ಇಸ್ವಿ ಡಿಸೆಂಬರ್ ಮಾಹೆ ೨೮-೨೯ ಮತ್ತು ೩೦ನೆಯ ದಿನಾಂಕಗಳಂದು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಲನವು ವೈಭವ ಪೂರ್ಣವಾಗಿ ಜರುಗಿತು. ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರೇ ಸ್ವಾಗತ ಸಮಿತಿಯ ಅಧ್ಯಕ್ಷ ರಾಗಿದ್ದುದು ಸಮ್ಮೇಲನದ ವಿಶೇಷವಾಗಿತ್ತು. ಕನ್ನಡ ನಾಡಿನ ವಿಖ್ಯಾತ ಸಾಹಿತಿಗಳಾದ ಡಾ. ರಂ. ಶ್ರೀ. ಮುಗಳಿಯವರು ಸಮ್ಮೇಲನಾಧಿಪತಿಗಳಾಗಿದ್ದರು. ಸಮ್ಮೇಲನದ ಉದ್ಘಾಟನೆಯನ್ನು ಅಂದಿನ ಕರ್ನಾಟಕ ವಿಧಾನಸಭಾಧ್ಯಕ್ಷರಾಗಿದ್ದ ಶ್ರೀ ಬಿ. ವೈಕುಂಠ ಬಾಳಿಗ ಅವರು ಮಾಡಿದರು. ಸಮ್ಮೇಲನದ ಅಂಗವಾಗಿ ಏರ್ಪಡಿಸಿದ್ದ ಪುಸ್ತಕ-ಕಲಾಪ್ರದರ್ಶನವನ್ನು ಮಣಿ ಪಾಲಿನ ಅಕಾಡೆಮಿ-ಆಫ್–ಜನರಲ್ ಎಜ್ಯುಕೇಷನ್ನಿನ ಅಧ್ಯಕ್ಷರಾಗಿದ್ದ, ಈಗ ಕೀರ್ತಿಶೇಷರಾಗಿರುವ ಶ್ರೀ ಟಿ.ಎಂ.ಎ. ಪೈರವರು ಉದ್ಘಾಟಿಸಿದರು. ನಾಡಿನ ಸಾವಿರಾರು ಮಂದಿ ಸುಪ್ರಸಿದ್ಧ ಸಾಹಿತಿಗಳು, ಸಹೃದಯರುಗಳು, ಕವಿಗಳು, ಅಭಿಮಾನಿಗಳು-ಮುಂತಾದವರಿಂದ ಶ್ರೀಕ್ಷೇತ್ರ ಕಿಕ್ಕಿರಿದು ಹೊಸದೊಂದು ಸಾಹಿತಿಗಳ ಲೋಕವೋ ಏನೋ ಎನ್ನುವಂತಿತ್ತು. ಸರಸ್ವತಿಯ ಆರಾಧಕ ರೆಲ್ಲಾ ಒಂದೆಡೆ ಕಲೆತು, ಪರಸ್ಪರ ದರ್ಶನ, ವಾಚನ, ಮಿಲನ, ಒಡನಾಟ, ಓಡಾಟ ಶ್ರೀಶ್ರೀಗಳವರೊಡನೆ ಮಾಡುವ ಸಂಭಾ ಷಣೆ, ಪಡೆಯುವ ಆಶೀರ್ವಾದ-ಮುಂತಾದ ಸಂಭ್ರಮದ ಸಡಗರದ ನೋಟ ಅನ್ಯಾದೃಶವಾಗಿತ್ತು. ಈ ಸಂದರ್ಭದಲ್ಲಿ ಅಧ್ಯಕ್ಷ ಸ್ಥಾನದಿಂದ ಶ್ರೀಯುತ ರಂ. ಶ್ರೀ ಮುಗಳಿಯವರು ನುಡಿದ ಒಂದೆರಡು ಮಾತುಗಳನ್ನು ಉದ್ಧರಿಸುವುದು ಯೋಗ್ಯವೆನಿಸುತ್ತದೆ. "......ತುಮಕೂರು ಜಿಲ್ಲಾ ಮತ್ತು ಶ್ರೀ ಸಿದ್ಧಗಂಗಾಕ್ಷೇತ್ರವು. ಶ್ರೀ ಸಿದ್ಧಲಿಂಗೇಶ್ವರರು, ನಿಟ್ಟೂರು ನಂಜಣ್ಣ, ವಿರಕ್ತ ತೋಂಟದಾರ್ಯ, ಗುಬ್ಬಿಯ ಮಲ್ಲಣಾರ್ಯ. ಮಲ್ಲಣ್ಣಾಚಾರ್ಯ, ಕವಿ ಶಾಂತೇಶ. ಗೂಳೂರು ಸಿದ್ಧವೀರಣ್ಣೊಡೆಯ, ಸಂಪಾ ದನೆಯ ಪರ್ವತೇಶ್ವರ–ಮುಂತಾದ ಹಲವಾರು ಪಂಡಿತ ಕವಿಗಳ ಮತ್ತು ಶಿವಶರಣರ ಪಾದಸ್ಪರ್ಶದಿಂದ ಪುನೀತವಾಗಿದೆ. ಇಂಥ ಜಿಲ್ಲೆಯ ಈ ಪುಣ್ಯಕ್ಷೇತ್ರದಲ್ಲಿ ವಿದ್ಯಾಪ್ರೇಮಿಗಳೂ, ವಿದ್ಯಾದಾನಿಗಳೂ ಆದ ಪರಮಪೂಜ್ಯ ಶ್ರೀ. ನಿ. ಪ್ರ. ಸ್ವ. ಶಿವಕುಮಾರ ಮಹಾಸ್ವಾಮಿಗಳವರ ಸಮರ್ಥ ನೇತೃತ್ವದಲ್ಲಿ ಇದೇ ಜಿಲ್ಲೆಯವರೂ, ಕನ್ನಡ ಸಾಹಿತ್ಯ ಪರಿಷದಧ್ಯಕ್ಷರೂ ಆಗಿರುವ ಮಾನ್ಯ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಚತುರ ಬೆಂಬಲದಿಂದ ಸ್ವಾಗತ ಸಮಿತಿಯು ಸಾಹಿತ್ಯ ಸಮ್ಮೇಲನವನ್ನು ನೆರವೇರಿಸಿರುವುದು ತುಂಬ ಅಭಿನಂದನೀಯ ಸಂಗತಿಯಾಗಿದೆ. ಸುಮಾರು ವರ್ಷಗಳಿಂದ ಈ ತುಮಕೂರು ಜಿಲ್ಲೆಯಲ್ಲಿ ಇದುವರೆಗೆ ಕನ್ನಡ ಸಾಹಿತ್ಯ ಸಮ್ಮೇಲನವು ಆಗಲಿಲ್ಲವೆಂಬ ಅಪವಾದವನ್ನು ಈ ಸಮ್ಮೇಲನವು ಪರಿಹರಿಸಿದೆಯೆನ್ನಬಹುದು. ಇದು ಸಂತೋಷದಾಯಕವಾದ ಸಂಗತಿಯಾಗಿದೆ". ಒಟ್ಟಿನಲ್ಲಿ ಶ್ರೀ ಸಿದ್ಧಗಂಗೆಯಲ್ಲಿ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನೇತೃತ್ವದಲ್ಲಿ ವೈಭವದಿಂದ ನಡೆದ ೪೪ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಲನವು 'ನಭೂತೋನಭವಿಷ್ಯತಿ'. ಹಾಗೂ ಚಿರಸ್ಮರಣೀಯ.

## ೪. ಅಖಿಲ ಕರ್ನಾಟಕ ಶಿಕ್ಷಕರ ಸಮ್ಮೇಲನ-೧೯೬೪

ದಿನಾಂಕ ೧೧–೧–೧೯೬೪ ರಂದು ಶ್ರೀ ಕ್ಷೇತ್ರದಲ್ಲಿ ಅಖಿಲ ಕರ್ನಾಟಕ ಶಿಕ್ಷಕರ ಸಮ್ಮೇಲನವು ಶ್ರೀ ಶ್ರೀಗಳವರ ದಿವ್ಯ ನೇತೃತ್ವದಲ್ಲಿ ನಡೆಯಿತು. ಈ ಸಮ್ಮೇಲನದ ಅಧ್ಯಕ್ಷತೆಯನ್ನು ಅಂದಿನ ಮೈಸೂರು ರಾಜ್ಯದ ವಿದ್ಯಾಮಂತ್ರಿಗಳಾಗಿದ್ದ ಶ್ರೀ ಎಸ್ ಆರ್. ಕಂಠಿಯವರು ವಹಿಸಿದ್ದರು. ಸಮ್ಮೇಳನದ ಉದ್ಘಾಟನೆಯನ್ನು ಅಂದಿನ ಗೃಹಮಂತ್ರಿಗಳಾಗಿದ್ದ ಶ್ರೀ ಕೆ. ಎಚ್. ಪಾಟೀಲ್‌ರವರು ನೆರವೇರಿಸಿದರು. ಮೈಸೂರು ರಾಜ್ಯದ ವಿದ್ಯಾಇಲಾಖಾಧಿಕಾರಿಗಳೂ, ತುಮಕೂರು ಜಿಲ್ಲಾ ವಿದ್ಯಾಧಿಕಾರಿ ಗಳೂ, ಇನ್ನಿತರ ಅಧಿಕಾರಿಗಳೂ, ಹಾಗೂ ಗಣ್ಯವ್ಯಕ್ತಿಗಳೂ ಸಮಾರಂಭದಲ್ಲಿ ಭಾಗವಹಿಸಿದ್ದರು. ನಾಡಿನ ನಾನಾ ಮೂಲೆಯಿಂದ ಸಾವಿರಾರು ಮಂದಿ ಉಪಾಧ್ಯಾಯರುಗಳು ಆಗಮಿಸಿದ್ದರು. ಅಂದು ಶ್ರೀ ಮಠದ ತುಂಬ ಎಲ್ಲಿ ನೋಡಿದರಲ್ಲಿ ಶಿಕ್ಷಕರೇ. ಎಲ್ಲಿ ಕೇಳಿದೊಡಲ್ಲಿ ಶಿಕ್ಷಕರ ಮಾತೆ ಮಾತು. ಹೊಸದೊಂದು ಅಧ್ಯಾಪಕರ ಲೋಕವೇ ಸೃಷ್ಟಿಗೊಂಡಂತೆ ಕಾಣುತ್ತಿತ್ತು, ಎಲ್ಲ ಆಗತ ರಿಗೂ ಶ್ರೀ ಕ್ಷೇತ್ರದ ಆಶ್ರಯದಿಂದಲೇ ಊಟೋಪಚಾರಗಳನ್ನು ವ್ಯವಸ್ಥೆಗೊಳಿಸಲಾಗಿತ್ತು.

## ೫. ಶ್ರೀ ಶಿವಕುಮಾರ ಸ್ವಾಮಿಗಳವರ ರಜತಮಹೋತ್ಸವ ಹಾಗೂ ಸಂಸ್ಕೃತ ಮತ್ತು ವೇದ ಮಹಾಪಾಠಶಾಲೆ ವಿದ್ಯಾರ್ಥಿನಿಲಯಗಳ ಸುವರ್ಣಮಹೋತ್ಸವ

[ತಾ॥ ೨೬–೫–೧೯೭೨ ರಿಂದ ೨೮–೫–೧೯೭೨ ರವರೆಗೆ]

೩–೩–೧೯೩೦ ನೆಯ ಇಸ್ವಿಯಿಂದ ಶ್ರೀ ಕ್ಷೇತ್ರದ ಉತ್ತರಾಧಿಗಳೆಂದು ಉದ್ದಾನ ಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರ ರಾಗಿ ವಿಧ್ಯುಕ್ತ ನಿರಂಜನ ಜಂಗಮಪದಸ್ವೀಕಾರ ಮಾಡಿದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ೧೯೪೧ ನೆಯ ಇಸ್ವಿ ಯಲ್ಲಿ ತಮ್ಮ ಪೂಜ್ಯ ಗುರುವರ್ಯರ ಲಿಂಗೈಕ್ಯಾನಂತರದಲ್ಲಿ ಶ್ರೀ ಕ್ಷೇತ್ರದ ಅಧ್ಯಕ್ಷರಾಗಿ ಈ ೩೧ ವರ್ಷಗಳ ನಿಡುಬಾಳನ್ನು ಸಮಾ

ಜೋತ್ಕರ್ಷಕಾರ್ಯದಲ್ಲಿ ವಿನಿಯೋಗಿಸಿದರು. ಇದನ್ನು ಮನಗಂಡು ಭಕ್ತಕೋಟಿಯು ಶ್ರೀ ಶ್ರೀಗಳವರ ಇತಿಹಾಸ ಪ್ರಸಿದ್ಧವಾದ ಈ ಸೇವೆಯನ್ನು ಗಮನಿಸಿ ಅವರ ಮಹಾವ್ಯಕ್ತಿತ್ವದ ಮಹತ್ತು ಬೃಹತ್ತುಗಳಿಗನುಗುಣವಾಗಿ ರಜತಮಹೋತ್ಸವವನ್ನು ಆಚರಿಸಬೇಕೆಂದು ೨-೩ ವರ್ಷಗಳಿಂದ ಸಿದ್ಧತೆ ಮಾಡಿಕೊಂಡಿತ್ತು. ಶ್ರೀಮಾನ್ ಕೆ. ತಿಪ್ಪೇರುದ್ರಯ್ಯನವರು ಇದರ ಸ್ವಾಗತ ಸಮಿತಿಯ ಅಧ್ಯಕ್ಷರಾಗಿಯೂ, ಶ್ರೀಮಾನ್ ಹೆಚ್. ಬಿ. ಪುಟ್ಟಸ್ವಾಮಪ್ಪನವರು ಕಾರ್ಯದರ್ಶಿಗಳಾಗಿಯೂ ಕಾರ್ಯ ನಿರ್ವಹಿಸಿದರು, ಶ್ರೀ ಕ್ಷೇತ್ರದಲ್ಲಿ ಕ್ರಿ.ಶ. ೧೯೧೭ ರಿಂದ ಅಖಂಡ ಸೇವೆ ಸಲ್ಲಿಸುತ್ತಬಂದು, ನಾಡಿನಲ್ಲಿ ಸಂಸ್ಕೃತ ಭಾಷಾಭ್ಯಾಸ ಮತ್ತು ವೇದಾದಿಗಳ ಅಧ್ಯಯನ ಪ್ರಜ್ಞೆಯನ್ನುಂಟುಮಾಡಿದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆ, ವೇದ ಮಹಾಪಾಠಶಾಲೆ, ವಿದ್ಯಾರ್ಥಿನಿಲಯಗಳ ಸುವರ್ಣ ಮಹೋತ್ಸವಗಳನ್ನು ಶ್ರೀ ಕ್ಷೇತ್ರದ ಪತಿಯಿಂದ ಆಚರಿಸುವ ಸಮಯದಲ್ಲಿ ಮೇಲ್ಕಂಡ ಶ್ರೀ ಶ್ರೀಗಳವರ ರಜತ ಮಹೋತ್ಸವವನ್ನು ಆಚರಿಸಬೇಕೆಂದು ಸಂಕಲ್ಪಿಸಿಕೊಂಡಿದ್ದ ಕಾರಣ ೨೮-೫-೧೯೬೭ ರಂದು ಸ್ವರ್ಣಮಹೋತ್ಸವದ ಆಚರಣೆಗೆ ಶ್ರೀ ಕ್ಷೇತ್ರದಿಂದ ಸಿದ್ಧತೆಗಳು ನಡೆದುವು. ಇದರ ಅಂಗವಾಗಿ ತಾ॥ ೨೬-೫-೬೭ ರಂದು ರಜತ ಮಹೋತ್ಸವವೂ, ರಜತ ಮಹೋತ್ಸವದ ಅಂಗವಾಗಿ ಸಾಹಿತ್ಯಸಮ್ಮೇಲನ, ಮಹಿಳಾಗೋಷ್ಠಿ, ಸರ್ವಧರ್ಮ ಸಮ್ಮೇಳನಗಳೇ ಮೊದಲ್ಗೊಂಡು ಮಹತ್ವದ ಅನೇಕ ಸಮಾರಂಭಗಳೂ ಜರುಗಿದವು. ಕೊನೆಯ ಸಮಾರಂಭವಾಗಿ ಈ ಮೊದಲು ನಡೆದ ಎಲ್ಲಾ ಸಮಾರಂಭಗಳಿಗೂ ಕಿರೀಟಪ್ರಾಯವಾಗಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ-ವೇದ-ಮಹಾಪಾಠಶಾಲೆಗಳ ಮತ್ತು ವಿದ್ಯಾರ್ಥಿನಿಲಯದ ಸುವರ್ಣಮಹೋತ್ಸವಗಳ ಹೃದಯಸ್ಪರ್ಶೀ ಕಾರ್ಯಕ್ರಮಗಳು ನಡೆದುವು. ಭವ್ಯವಾದ ಉದ್ದಾನಶಿವಯೋಗಿ ಸಭಾಭವನದಲ್ಲಿ ದೀಪಾಲಂಕಾರ, ಕಿಕ್ಕಿರಿದು ತುಂಬಿದ ಜನಜಂಗುಳಿ ಇವು ಸ್ವರ್ಗೀಯ ಸೌಂದರ್ಯದಿಂದ ಕೂಡಿದ್ದುವು. ಇದರ ಅಂಗವಾಗಿ ವಿದ್ವತ್ಸಮ್ಮೇಳನವೂ ನಡೆಯಿತು. ಈ ಎಲ್ಲಾ ಕಾರ್ಯಕ್ರಮಗಳ ಸಂಕ್ಷೇಪ ವರದಿಯನ್ನು ಈ ಕೆಳಗೆ ವಿವರವಾಗಿ ಕೊಡಲಾಗಿದೆ.

### ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ರಜತ ಮಹೋತ್ಸವ

[ತಾ॥ ೨೬-೫-೧೯೬೭ ಸಾಯಂಕಾಲ ೪ ರಿಂದ ೮ ಘಂಟೆಯವರೆಗೆ]

ಗೊತ್ತಾದ ಕಾರ್ಯಕ್ರಮಕ್ಕನುಗುಣವಾಗಿ ಮೈಸೂರುರಾಜ್ಯದ ರಾಜ್ಯಪಾಲರಾದ ಘನತೆವೆತ್ತ ಮೋಹನಲಾಲ ಸುಖಾಡಿಯ ಮತ್ತು ಮುಖ್ಯಮಂತ್ರಿಗಳಾದ ಶ್ರೀ ದೇವರಾಜ ಅರಸುರವರುಗಳು ಶ್ರೀ ಕ್ಷೇತ್ರಕ್ಕೆ ದಯಮಾಡಿಸಿದಾಗ ಇಪ್ಪತ್ತೊಂದು ಕುಶಾಲ ತೋಪುಗಳನ್ನು ಹಾರಿಸಲಾಯಿತು. ರಾಜ್ಯದ ಗಣ್ಯವರ್ತಕರು, ವಿಧಾನಸಭಾಸದಸ್ಯರು, ಪ್ರತಿಷ್ಠಿತ ವ್ಯಕ್ತಿಗಳು ಸ್ವಾಗತಿಸಿ, ಶ್ರೀ ಶ್ರೀಗಳವರ ಸನ್ನಿಧಿಗೆ ಕರೆತಂದರು, ಅವರು ಶ್ರೀಗಳವರ ದರ್ಶನಾಶೀರ್ವಾದ ಪಡೆದ ಮೇಲೆ ಸಿಲ್ವರ್ ಜ್ಯೂಬಿಲಿ ಸಮಿತಿಯವರು ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ರಜತಮಹೋತ್ಸವ ಸ್ಮಾರಕವಾಗಿ ಕಟ್ಟಿಸಿರುವ 'ಶ್ರೀ ಶಿವಕುಮಾರಸ್ವಾಮಿ ಸಾರ್ವಜನಿಕ ಗ್ರಂಥಾಲಯ ಮತ್ತು ಸಂಶೋಧನಾ ಕೇಂದ್ರ'ದ ಪ್ರಾರಂಭೋತ್ಸವವನ್ನು ಮೋಹನಲಾಲ ಸುಖಾಡಿಯ ಅವರು ಜ್ಯೋತಿಯನ್ನು ಬೆಳಗಿಸಿ ಉದ್ಘಾಟಿಸಿದರು. ತದನಂತರ ದಾಸೋಹಮಠದ ಮುಂಭಾಗದಲ್ಲಿ ನಿರ್ಮಿಸಲಾಗಿದ್ದ ಭವ್ಯಸಭಾಭವನಕ್ಕೆ ಬಂದು ಸಭೆಯ ಕಾರ್ಯಕ್ರಮವನ್ನು ಉದ್ಘಾಟಿಸಿದರು. ನೂರಾರು ಜನ ಹರಗುರುಚರಮೂರ್ತಿಗಳಿಂದ ವೇದಿಕೆ ವೈರಾಗ್ಯವೇ ಮೈವೆತ್ತು ಬಂದಂತಿತ್ತು. ಲಕ್ಷೋಪಲಕ್ಷ ಜನಗಳು ಆ ಮಹಾಭವನದಲ್ಲಿ ಸಿಸ್ತಿನಿಂದ ಕುಳಿತ ದೃಶ್ಯ ಅಭೂತಪೂರ್ವವಾಗಿತ್ತು. ಶ್ರೀಶ್ರೀಗಳವರ ಮೇಲೆ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ತಂಡ ಮಲ್ಲಿಗೆ ಕನಕಾಂಬರ ಪುಷ್ಪಗಳ ಮಳೆಗರೆದರು. ಅನೇಕರ ಕಣ್ಣುಗಳು ಹನಿಗೂಡಿದುವು. ಅದೊಂದು ಸ್ವರ್ಗೀಯ ದೃಶ್ಯ.

### ಮೋಹನಲಾಲ್ ಸುಖಾಡಿಯ ಅವರ ಉದ್ಘಾಟನಾ ಭಾಷಣ ಸಾರಾಂಶ

ಪ್ರಪ್ರಥಮ ಪ್ರಾರ್ಥನೆಯಾದ ಮೇಲೆ ಚಿತ್ರದುರ್ಗದ ಪ್ರತಿಷ್ಠಿತ ನ್ಯಾಯವಾದಿಗಳಾದ ಶ್ರೀಮಾನ್ ಓ. ವೀರಬಸಪ್ಪನವರು ಸ್ವಾಗತ ಭಾಷಣ ಮಾಡುತ್ತ, ಶ್ರೀಮಠದ ಮಹತ್ತು ಬೃಹತ್ತುಗಳನ್ನು ಅದರ ಹಿನ್ನೆಲೆಯ ಚಾರಿತ್ರಿಕ ಘಟನೆಗಳನ್ನು ವಿವರಿಸುವುದರ ಮೂಲಕ ಸ್ವಾಗತಿಸಿದರು. ಸಮಿತಿಯ ಅಧ್ಯಕ್ಷರಾದ ಶ್ರೀ ಕೆ. ತಿಪ್ಪೇರುದ್ರಯ್ಯ (ಐ.ಎ.ಎಸ್.) ನವರು ಮೋಹನಲಾಲ್ ಸುಖಾಡಿಯಾ ಮತ್ತು ದೇವರಾಜ ಅರಸು ಅವರ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಶ್ರೀ ಬಿ. ಗಂಗಪ್ಪನವರು ಸ್ವಾಗತ ಗೀತೆ ಹಾಡಿದರು. ಶ್ರೀ ಹೆಚ್. ಬಿ. ಪುಟ್ಟಸ್ವಾಮಪ್ಪನವರು ಸಂದೇಶ ವಾಚನ ಮಾಡಿದರು. ಅನಂತರ ಸುಖಾಡಿಯಾರವರು ಉದ್ಘಾಟನಾ ಭಾಷಣ ಮಾಡುತ್ತ 'ಶ್ರೀಕ್ಷೇತ್ರವನ್ನೂ ಇಲ್ಲಿನ ಕ್ಷೇತ್ರಾಧಿಪತಿಗಳಾದ ಶಿವಕುಮಾರಸ್ವಾಮಿಗಳವರನ್ನೂ ಕಂಡರೆ ಎಲ್ಲರ ಹೃದಯದಲ್ಲೂ ಅದ್ಭುತ ಪರಿವರ್ತನೆಯಾಗುತ್ತದೆ. ಇಂಥದೊಂದು ದೊಡ್ಡ ಧಾರ್ಮಿಕ ಸಂಸ್ಥೆಯ ಬಹುಮುಖ ಕಾರ್ಯಚಟುವಟಿಕೆಯನ್ನು ನಾನು ಕೇಳಿಲ್ಲ. ಇದು ಕೇವಲ ಯಾತ್ರಾಸ್ಥಳವಲ್ಲ; ಜ್ಞಾನಕೇಂದ್ರ. ಧರ್ಮಕ್ಕೆ ಜ್ಞಾನದ ಬೆಂಬಲ ಬೇಕೆನ್ನುವುದನ್ನೇ ಈ ಕ್ಷೇತ್ರ ಸಾರುತ್ತದೆ.

ಸಂನ್ಯಾಸಿಯ ಧರ್ಮ ಬಹು ಸತ್ವದಿಂದ ಕೂಡಿದುದು. ಅದು ಕ್ರಿಯಾಮುಖವಾಗಿ ಹೊರಹೊಮ್ಮಿದರೆ ಅಘಟಿತಘಟನೆಯೆನಿಸುತ್ತದೆ. ಸಂನ್ಯಾಸಿಗಳು ಇತರರಿಗಿಂತ ಅಧಿಕತಮವಾದ ಕ್ರಿಯಾಶೀಲರೆಂಬುದಕ್ಕೆ ಶ್ರೀ ಶಿವಕುಮಾರಸ್ವಾಮಿಗಳವರು ಸಾಧಿ

ಸಿರುವ ಈ ಸಾಧನೆಯೇ ಸಾಕ್ಷಿ. ಸೇವಾಕ್ಷೇತ್ರದ ೨೫ ವರ್ಷದ ಅವಧಿಯಲ್ಲಿ ಇಷ್ಟೊಂದು ಪ್ರಗತಿ ಸಾಮಾನ್ಯ ಸಂಗತಿಯಲ್ಲ. ಕನ್ನಡನಾಡಿನ ಬಸವೇಶ್ವರರ ದಿವ್ಯಆದೇಶಗಳನ್ನು ತಲೆಯಮೇಲೆ ಧರಿಸಿ, ಅದನ್ನು ಲೋಕಕ್ಕೆ ಶ್ರೀಸ್ವಾಮಿಗಳು ಸಾರಿದ್ದಾರೆ. ಶ್ರೀ ಬಸವೇಶ್ವರರ ಬಗೆಗೆ, ಅವರ ಅಮರತತ್ತ್ವವಿಚಾರಗಳ ಬಗೆಗೆ ಉತ್ತರಭಾರತದಲ್ಲಿ ಈಗೀಗ ಬಹಳ ಪ್ರಚಾರ ನಡೆದಿದೆ. ಬಸವೇಶ್ವರರು ವಿಶ್ವವಿಭೂತಿಗಳು. ಅವರ ಅನುಯಾಯಿಗಳಾಗಿ ಅವರ ತತ್ತ್ವಗಳನ್ನು ಕಾರ್ಯರೂಪಕ್ಕೆ ತರಲು ಹೊರಟಿರುವ ಶ್ರೀಸ್ವಾಮಿಗಳವರ ಸೇವೆಗೆ ನಾಡು ಕೃತಜ್ಞವಾಗಿರಬೇಕು. ಇಂಥ ಮಹಿಮಾಪುರುಷರ ಮಾರ್ಗದರ್ಶನ ನಾಡಿಗೆ ರಾಷ್ಟ್ರಕ್ಕೆ ಸದಾ ಬೇಕು. ಶ್ರೀಶ್ರೀಗಳವರ ೨೫ ವರ್ಷಗಳ ಸೇವೆಯ ಪರಿಣಾಮವಾಗಿ ಸಮಾಜಕ್ಕಾದ ಅಪಾರಲಾಭವನ್ನು ಕೇಳಿ ನನಗೆ ಬಹಳ ಸಂತೋಷವಾಗಿದೆ. ಶ್ರೀ ಸ್ವಾಮಿಗಳವರ ತಪಸ್ಸು ದೀರ್ಘವಾಗಿ ಬೆಳೆದು ತನ್ಮೂಲಕ ನಾಡಿನ ಹಿತರಕ್ಷಣೆಯಾಗಲೆಂದು ಬೇಡುತ್ತೇನೆ. ಲೌಕಿಕ ಮತ್ತು ಪಾರಮಾರ್ಥಿಕಗಳು ಪರಸ್ಪರ ಪೂರಕವಾಗಿ ಬಾಳಿದರೆ ರಾಷ್ಟ್ರಕ್ಕೆ ಕ್ಷೇಮ. ಇಲ್ಲದಿದ್ದರೆ ಇಲ್ಲ. ಇಂದು ಈ ರಜತಮಹೋತ್ಸವದ ಎಲ್ಲಾ ಕಾರ್ಯಕ್ರಮಗಳು ಉದ್ಘಾಟಿತವಾದುವೆಂದು ಸಭೆಗೆ ತಿಳಿಸಲು ಹರ್ಷಿಸುತ್ತೇನೆ'ಂದು ಹೇಳಿ ವಿರಮಿಸಿದ ಮೇಲೆ ಶ್ರೀ ಕೆ. ತಿಪ್ಪೇರುದ್ರಯ್ಯನವರು ಶ್ರೀಗಳವರಿಗೆ ಬಿನ್ನವತ್ತಳೆ ಅರ್ಪಿಸಿದರು. ವಿಧಾನಸಭಾ ಸದಸ್ಯರಾದ ಗುಬ್ಬಿಯ ಗಟ್ಟಿ ಚಂದ್ರಶೇಖರ ಅವರು ಶ್ರೀಕ್ಷೇತ್ರದ ಹಿರಿಮೆಯನ್ನು ಸರ್ವಕೋಮಿನ ಜನೋದ್ಧಾರ ಕಾರ್ಯದಲ್ಲಿ ಕಳೆದ ಅರವತ್ತು ವರ್ಷಗಳಿಂದಲೂ ಶ್ರೀ ಕ್ಷೇತ್ರವು ಸಾಧಿಸಿದ ಪ್ರಗತಿಯನ್ನು ಸಾರುತ್ತ 'ಕೋಮುವಾರು ದ್ವೇಷಾಸೂಯೆಗಳನ್ನು ಮಾಡುವವರು ಶ್ರೀ ಸಿದ್ಧಗಂಗಾಕ್ಷೇತ್ರವನ್ನು ನೋಡಿ ಪಾಠ ಕಲಿಯಬೇಕು. ಇದು ಒಂದು ಕೋಮಿನ ಸಂಸ್ಥೆಯಲ್ಲ, ನಮ್ಮ ನಾಡಿನ ಸರ್ವಕೋಮಿನವರನ್ನು ಒಂದುಗೂಡಿಸುವ ಪವಿತ್ರ ಸಂಸ್ಥೆ' ಎಂದರು.

'ಈ ಸಂಸ್ಥೆ ನಮ್ಮ ನಾಡುನುಡಿಗಳಿಗೆ, ಧಾರ್ಮಿಕ ಪ್ರಪಂಚಕ್ಕೆ ಸಲ್ಲಿಸಿರುವ ಸೇವೆಯನ್ನು ನಾವು ಶಬ್ದಗಳಿಂದ ವರ್ಣಿಸಲು ಶಕ್ಯವಿಲ್ಲ. ಶ್ರೀಸ್ವಾಮಿಗಳವರ ಅಂತಃಕರಣ ಬಹಳ ಮೃದುವಾದುದು. ಪ್ರಸಂಗದಲ್ಲಿ ವಜ್ರದಷ್ಟು ಕಠೋರ. ಎಂಥ ಕಷ್ಟದ ಪರಿಸ್ಥಿತಿಯನ್ನೂ ಎದುರಿಸುವ ದಿವ್ಯಶಕ್ತಿಯನ್ನು ಪಡೆದಿದ್ದಾರೆ. ಇವರು ಬಸವಣ್ಣನವರು ಹೇಳಿದ ಕಾಯಕತತ್ತ್ವವನ್ನು ಹೇಳುವವರು ಮಾತ್ರವಲ್ಲ. ಅದರಂತೆ ಆಚರಿಸಿ ಲೋಕೋದ್ಧಾರ ಮಾಡಲು ಹುಟ್ಟಿಬಂದ ಸಾಕ್ಷಾತ್ ಶಿವನ ಅವತಾರವೆಂದು ಹೇಳಿದರೆ ತಪ್ಪಲ್ಲ. ಶ್ರೀಮಂತರಲ್ಲದಿದ್ದರೂ ಅವರು ನಡೆಸುವ ಕಾರ್ಯಗಳನ್ನು ಯಾವ ಶ್ರೀಮಂತನೂ ಎಷ್ಟೇ ಹಣ ಖರ್ಚುಮಾಡಿದರೂ ಆಚರಿಸಲು ಶಕ್ಯವಿಲ್ಲ'ವೆಂದು ನುಡಿದರು. ಅನಂತರ ಕ್ಯಾತ್ಸಂದ್ರದ ಗಣ್ಯರಾದ ಕುಂಡಲಗಿರಿ ಶ್ರೀನಿವಾಸಾಚಾರ್ಯರು, 'ಶ್ರೀಶ್ರೀಗಳವರ ಅಪಾರ ವಿದ್ವತ್ತು, ಧರ್ಮಾಚರಣೆ, ಸಂಕಲ್ಪಶಕ್ತಿ, ಕ್ರಿಯಾಶಕ್ತಿಗಳು ಬಹಳ ಎತ್ತರ ಮಟ್ಟದವು. ನಾವು ಅವರ ಅದ್ಭುತವಾದ ಈ ಕಾರ್ಯಕಲಾಪಗಳಿಗೆ ಯಾವಜ್ಜೀವವೂ ಋಣಿಗಳಾಗಿರಬೇಕು. ಅವರ ಮಾರ್ಗದರ್ಶನ ಎಲ್ಲರಿಗೂ ಬೇಕಾದುದು', ಎಂದು ತಿಳಿಸಿದರು. ಅನಂತರ ಗ್ರಂಥ ಭಾಂಡಾರಾಧಿಕಾರಿಗಳಾದ ಶ್ರೀಮಾನ್ ಎಸ್. ಡಿ. ಬಗರಿಯವರ ಗೈರುಹಾಜರಿಯಲ್ಲಿ ಅವರ ಭಾಷಣವನ್ನು ಸಭೆಯಲ್ಲಿ ಓದಲಾಯಿತು. 'ಗ್ರಂಥಗಳು ಜ್ಞಾನಭಂಡಾರದ ಬೀಗದ ಕೈ. ಅವು ಮನುಷ್ಯನ ಮನಸ್ಸನ್ನು ಸ್ವರ್ಗೀಯ ಸುಖಕ್ಕೆ ಒಯ್ಯಬಲ್ಲ ಸೋಪಾನಗಳು. ಆತ್ಮೋದ್ಧಾರದತ್ತ ಕರೆದೊಯ್ಯುವ ದಾರಿದೀಪಗಳು, ನಿಜವಾದ ಸ್ನೇಹಿತರು' ಎಂದು ಎಮಲಿಪಾರಿಸನ್ನರು ಹೇಳಿದ್ದಾರೆ. ಗ್ರಂಥಮುಖದಿಂದ ಬರುವ ಜ್ಞಾನವು ವ್ಯಕ್ತಿ, ಸ್ಥಳ, ಕಾಲಬದ್ಧ ಜ್ಞಾನಗಳನ್ನೆಲ್ಲ ಒಳಗೊಂಡ ಜ್ಞಾನಜ್ಯೋತಿ. ಗ್ರಂಥವು ಹಿಂದಿನ ಇತಿ, ಇಂದಿನ ಸ್ಥಿತಿ, ಮುಂದಿನ ಗತಿಗಳ ಬಗೆಗೆ ತಿಳುವಳಿಕೆ ತೋರುವ ತ್ರಿವೇಣಿ ಸಂಗಮ.

ಕ್ಲೇರನ್ಸ್‌ಡೇರರ ಮಾತಿನಲ್ಲಿ ಹೇಳುವುದಾದರೆ 'ಭಯಂಕರವಾದ ಪರ್ವತಗಳು ನುಚ್ಚುನೂರಾಗುತ್ತವೆ, ಸಾಮ್ರಾಜ್ಯಗಳು ತಲೆಯೆತ್ತಿ ಮರೆಯಾಗುತ್ತವೆ, ನಾಗರಿಕತೆ ಮೂಡಿಮಾಯವಾಗುತ್ತವೆ. ಆದರೆ ಗ್ರಂಥಗಳು ಕಾಲಗರ್ಭದಲ್ಲಿ ನಡೆದುದನ್ನು ನಿತ್ಯನೂತನವಾಗಿ ತಿಳಿಯಪಡಿಸುತ್ತದೆ. ಕಾಲರಾಯನ ಮಡಿಲಲ್ಲಿ ನಶಿಸಿಹೋದ ವ್ಯಕ್ತಿಗಳ ಹೃದಯಾಂತರಾಳವನ್ನು ಅನಂತ ಕಾಲ ಬಿಚ್ಚಿ ತೋರಿಸಲು ಅಮರ ಜೀವಿಗಳೆಂದರೆ ಗ್ರಂಥಗಳೇ. ಹೀಗಿದ್ದ ಮೇಲೆ ಅವಕ್ಕೆ ಕಾಲಮಿತಿಯಂತೂ ಇಲ್ಲವೇಇಲ್ಲ. ಈ ದಿಶೆಯಲ್ಲಿ ಸಿದ್ಧಗಂಗಾ ಕ್ಷೇತ್ರದ ಶ್ರೀ ಶಿವಕುಮಾರಸ್ವಾಮಿಗಳ ನೇತೃತ್ವದಲ್ಲಿ ಸುಮಾರು ೩-೪ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟಲ್ಪಡುತ್ತಿರುವ ಗ್ರಂಥಾಲಯ ಕಟ್ಟಡವು ಯಾವತ್ತೂ ಇಲ್ಲಿ ವಾಸಿಸುವ ಹಾಗೂ ಕ್ಷೇತ್ರಕ್ಕೆ ಭೇಟಿ ಕೊಡಬಹುದಾದ ಮಹಾಜನಗಳಿಗೆ ಉತ್ತಮವಾದ ಗ್ರಂಥಾಲಯ ಸೇವೆಯನ್ನು ಕೊಡಲು ಸಾಧ್ಯವಿದೆ. ಮೈಸೂರು ಘನರಾಜ್ಯಪಾಲರ ಮತ್ತು ರಾಜ್ಯದ ಮುಖ್ಯಮಂತ್ರಿಗಳ ಸಮ್ಮುಖದಲ್ಲಿ ಪ್ರಾರಂಭಿಸಲ್ಪಡುವ ಗ್ರಂಥಾಲಯವು ಉತ್ತಮ ಗ್ರಂಥಾಲಯವಾಗಿ ಬೆಳೆದು ಬರಲೆಂದು ಹಾರೈಸಿ ,ನನ್ನೀ ನಾಲ್ಕು ಮಾತುಗಳನ್ನು ಮುಗಿಸುವೆ'.

ಅನಂತರ ಅಧ್ಯಕ್ಷತೆ ವಹಿಸಿದ್ದ ದೇವರಾಜ ಅರಸುರವರು ಮಾತನಾಡಿ ಶ್ರೀಗಳವರ ಬಗೆಗೆ ತಿಳಿಸುತ್ತ ತಮ್ಮ ಅಪಾರ ಮೆಚ್ಚಿಗೆ ಮತ್ತು ಭಕ್ತಿಭಾವವನ್ನು ಪ್ರಕಟಿಸಿದರು. 'ಇಂದು ನವಭಾರತನಿರ್ಮಾಣ ಕಾರ್ಯದಲ್ಲಿ ನಾವೆಲ್ಲ ತತ್ಪರರಾಗಿದ್ದೇವೆ. ಹೇಗೆ ಮಾಡಬೇಕು, ಹೇಗೆ ನಾವು ಮಾಡಿದರೆ ಎಲ್ಲ ಜನರ ಹಿತಸಾಧನೆಯಾದೀತೆಂಬ ಬಗೆಗೆ ಬಹಳ ಜಿಜ್ಞಾಸೆ ನಡೆಯುತ್ತಿದೆ. ಇಂಥ

ಸಂಧಿಗ್ಧ ಸಮಯದಲ್ಲಿ ದೊಡ್ಡವರು, ಅನುಭವಿಗಳು, ಸರ್ವರ ಹಿತರಕ್ಷಣೆಯಲ್ಲಿ ಮಗ್ನರಾಗಿರುವ ಶ್ರೀ ಸ್ವಾಮೀಜಿಯವರಂಥ ಮಹಾತ್ಮರು ನಮಗೆ ಮಾರ್ಗದರ್ಶನ ಮಾಡಬೇಕಾಗಿದೆ. ಹಿಂದಿನ ಬಸವಣ್ಣನವರಂಥ ವಿಭೂತಿಪುರುಷರು ಹೇಳಿದುದನ್ನು ಹುಡುಕಿ ಕಾರ್ಯಗತಗೊಳಿಸಲು ಸರಕಾರ ಯತ್ನಿಸುತ್ತಿದೆ. ನಾವು ಸಾಮೂಹಿಕ ಸಾಧನೆಗಾಗಿ, ದೀನದಲಿತರ ಉದ್ಧಾರಕ್ಕಾಗಿ, ನಾಡಿನ ಬಡತನ ತೊಲಗಿ ಎಲ್ಲರು ಸುಖವಾಗಿ ಬಾಳುವುದಕ್ಕಾಗಿ ವಿಚಾರ ಮಾಡಬೇಕಾಗಿದೆ. ಸ್ವಾತಂತ್ರ್ಯ ಪಡೆದಾಗಿನಿಂದಲೂ ನಾವು ಘೋಷಣೆಯನ್ನು ಮಾಡುತ್ತಾ ಬಂದಿದ್ದೇವೆ. ಅನೇಕ ಎಡರು ತೊಡರುಗಳ ಮೂಲಕ ಘೋಷಣೆಗಳು ಪೂರ್ಣ ಕಾರ್ಯ ರೂಪಕ್ಕೆ ಬಂದಿಲ್ಲ. ಇವನ್ನೆಲ್ಲ ಕಾರ್ಯರೂಪಕ್ಕೆ ತರಲು ಹೆಣಗುವುದು ನಮ್ಮ ಕರ್ತವ್ಯವಾಗಿದೆ. ಶ್ರೀಶ್ರೀ ಶಿವಕುಮಾರ ಮಹಾ ಸ್ವಾಮಿಗಳು ಮಹಿಮಾಶಾಲಿಗಳು, ಎಲ್ಲಾ ಸಮಾಜದ ಹಿತವನ್ನು ಮೊದಲಿನಿಂದಲೂ ಮಾಡಿಕೊಂಡು ಬಂದವರು. ನಮ್ಮ ನಾಡಿ ನಲ್ಲೇಕೆ, ಬೇರೆನಾಡಿನಲ್ಲೂ ಶ್ರೀ ಸಿದ್ಧಗಂಗಾ ಸಂಸ್ಥೆಯಂಥ ಇನ್ನೊಂದು ಸಂಸ್ಥೆ ನನ್ನ ಕಣ್ಣಿಗೆ ಬಿದ್ದಿಲ್ಲ.

ಸಮಾಜಕ್ಕಾಗಿ, ರಾಷ್ಟ್ರಕ್ಕಾಗಿ ತಮ್ಮ ಸರ್ವಸ್ವವನ್ನೂ ಧಾರೆಯೆರೆದು ಸೇವಾಮನೋಭಾವದಿಂದ ವರ್ತಿಸುವ ಇಂಥ ಮಹಿಮಾಪುರುಷರ ಮಾರ್ಗದರ್ಶನ ನಮಗೆ ಬೇಕು. ಇಂಥ ಸ್ವಾಮಿಗಳನ್ನು ಪಡೆದ ನಮ್ಮನಾಡು ಧನ್ಯವೇ ಸರಿ. ಅವರ ಇಪ್ಪತ್ತೈದು ವರ್ಷಗಳ ತಪಸ್ಸಿನ ಫಲವಾಗಿ ಸರ್ವಸಮಾಜಗಳಿಗಾಗಿರುವ ಉಪಕಾರ ಅಷ್ಟಿಷ್ಟಲ್ಲ. ಅದನ್ನು ಜ್ಞಾಪಿಸಿಕೊಂಡು ಈಗ ನಾವುಗಳೆಲ್ಲ ಸೇರಿ ಈ ಸಿಲ್ವರ್ ಜ್ಯುಬಿಲಿ ಮಹೋತ್ಸವವನ್ನು ಆಚರಿಸುತ್ತಿರುವುದು ಅವಶ್ಯವೂ. ಸೂಕ್ತವೂ ಆಗಿದೆ. ಶ್ರೀ ಪೂಜ್ಯರಾದ ಮಹಾಸ್ವಾಮಿಗಳವರು ಗೋಲ್ಡನ್ ಜ್ಯುಬಿಲಿ. ವಜ್ರಮಹೋತ್ಸವಗಳನ್ನೂ ನೆರವೇರಿಸಿಕೊಳ್ಳಲನುಗ್ರಹವನ್ನು ಪರ ಮಾತ್ಮನು ಮಾಡಬೇಕು. ಅವರು ದೀರ್ಘಕಾಲ ತಪಸ್ಸು ಮಾಡಿ ಸಮಾಜಕ್ಕೆ ಆಶೀರ್ವಾದ ಮಾಡಲಿ ನಾಡು-ರಾಷ್ಟ್ರಗಳಿಗೆ ಉಪ ಕಾರವಾಗಲಿ' ಎಂದು ಪ್ರಾರ್ಥಿಸಿಕೊಂಡರು.

**ಶ್ರೀಶ್ರೀಗಳವರು ಭಕ್ತ ವೃಂದದವರು ತಮ್ಮ ರಜತಮಹೋತ್ಸವವನ್ನಾಚರಿಸಿದಾಗ ಅಪ್ಪಣೆ ಕೊಡಿಸಿದ ಹೃದಯಸ್ಪರ್ಶೀ ಅನುಗ್ರಹ ಭಾಷಣದ ಸಾರಾಂಶ**

ಶ್ರೀ ಕ್ಷೇತ್ರದ ದೀರ್ಘಾವಧಿಯ ಸೇವೆಯನ್ನು ಮನದಂದು ಅಭಿಮಾನಶಾಲಿಗಳಾದ ನೀವೆಲ್ಲರೂ ರಜತ ಮಹೋತ್ಸವ ವನ್ನು ಆಚರಿಸುತ್ತಿರುವುದು ಸರಿಯಷ್ಟೆ. ಈ ಕಾರ್ಯದಲ್ಲಿ ಶ್ರೀ ಕೆ. ತಿಪ್ಪೇರುದ್ರಯ್ಯನವರ, ಶ್ರೀ ಪುಟ್ಟಸ್ವಾಮಪ್ಪನವರ ಹೊಣೆ ಗಾರಿಕೆ ದೊಡ್ಡದು. 'ನಮ್ಮ ಪೂಜ್ಯ ಗುರುಗಳವರು ೧೯೧೧ರಿಂದ ಈ ಕ್ಷೇತ್ರದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡಾಗಿನಿಂದಲೂ ಸಾರ್ವಜನಿಕರ ಹಿತರಕ್ಷಣೆಗೆ ಬದ್ಧಕಂಕಣರಾದ ಮಹಾಮಹಿಮರು. ಅಂದಿನಿಂದಲೂ ಅವರು ಶ್ರೀ ಕ್ಷೇತ್ರದಲ್ಲಿ ದಾಸೋಹಾದಿ ಕ್ರಿಯೆಗಳನ್ನು ಸುವ್ಯವಸ್ಥಿತವಾಗಿ ನಡೆಸಿಕೊಂಡು ಬಂದರು. ಅವರು ೧೯೧೧ರಲ್ಲಿ ಈ ಕ್ಷೇತ್ರದ ಯಾತ್ರೆಯ ಸಂಕಲ್ಪ ಮಾಡಿದರು. ಸಂಕಲ್ಪದಂತೆ ಜಾತ್ರೆ ಪ್ರಾರಂಭವಾಯಿತು. ೧೯೧೭ರಲ್ಲಿ ಸಾರ್ವಜನಿಕ ಮಕ್ಕಳ ಯೋಗಕ್ಷೇಮ ದೃಷ್ಟಿಯಿಂದ ಒಂದು ಉಚಿತ ಸಾರ್ವಜನಿಕ ವಿದ್ಯಾರ್ಥಿನಿಲಯ ತೆರೆದರು. ಯಾವ ಕಾಲದಲ್ಲಿ ಸರಕಾರದವರು ಸಾರ್ವಜನಿಕ ಉಚಿತವಿದ್ಯಾರ್ಥಿನಿಲಯ ತೆರೆ ಯಲು ಮುಂದೆ ಬರುತ್ತಿದ್ದಿಲ್ಲವೋ, ಬೇರೆ ಬೇರೆ ಕೋಮಿನ ಜನಗಳಿಗೆ ಬೇರೆ ಬೇರೆ ವಿದ್ಯಾರ್ಥಿನಿಲಯ ತೆರೆಯುವುದನ್ನು ಪ್ರೋತ್ಸಾಹಿಸುತ್ತಿದ್ದರೋ ಅಂಥ ಕಾಲದಲ್ಲಿ ಈಗ್ಗೆ ಸುಮಾರು ೫೫ ವರ್ಷಗಳ ಹಿಂದೆಯೇ ಈ ಮಹಾಸಾಹಸದ ಕಾರ್ಯಕ್ಕೆ ಕೈಹಾಕಿ 'ಸರ್ವೇಜನಾಃ ಸುಖಿನೋಭವಂತು' ಎಂಬ ಆರ್ಯೋಕ್ತಿಯನ್ನು ಸಾರ್ಥಕಗೊಳಿಸಿದರು. ಅದೇ ಕಾಲದಲ್ಲಿ ಉಚಿತ ಸಾರ್ವಜನಿಕ ಸಂಸ್ಕೃತ-ವೇದ ಪಾಠಶಾಲೆಗಳನ್ನು ತೆರೆದರು. ಸಂಸ್ಕೃತ ಮತ್ತು ವೇದಗಳನ್ನು ಓದಲು ಸರ್ವರೂ ಯೋಗ್ಯರೆಂದು ಆಗ ನಮ್ಮ ಗುರುಗಳು ಘೋಷಿಸಿ ಹಾಗೆ ತೆರೆದುದು ಒಂದು ಸಾಮಾನ್ಯಕಾರ್ಯವಲ್ಲ. ನಾವು ಅವರ ಮಾರ್ಗದರ್ಶನದಲ್ಲಿ ಅವರ ಅನುಗ್ರಹವನ್ನು ತಲೆಯ ಮೇಲೆ ಹೊತ್ತು ನಮ್ಮ ಕಾರ್ಯವನ್ನು ತ್ರಿಕರಣ ಶುದ್ಧಿಯಿಂದ ನಡೆಯಿಸಿಕೊಂಡು ಬರುತ್ತಿದ್ದೇವೆ. ಆದರೂ ನಮ್ಮನ್ನು ಜನ ವಿಶೇಷವಾಗಿ ಹೊಗಳುತ್ತಿದ್ದಾರೆ. ಬಸವಣ್ಣನವರು ತಮ್ಮನ್ನು ಹೊಗಳತಕ್ಕ ಜನಗಳನ್ನು ಕುರಿತು 'ಎನ್ನವರೆನ್ನ ಹೊಗಳಿ ಹೊಗಳಿ ಹೊನ್ನ ಶೂಲಕ್ಕಿಕ್ಕಿದರಯ್ಯಾ' ಎಂದು ಆಡಿದ್ದಾರೆ. 'ಈ ಹೊಗಳಿಕೆಗೆ ಅಡ್ಡಬಾರ' ಎಂದೂ ದೇವನನ್ನು ಪ್ರಾರ್ಥಿಸಿ ದ್ದಾರೆ. ನಾವು ಮಾಡಬೇಕಾದ ಕರ್ತವ್ಯವನ್ನು ಮಾಡಿದ್ದೇವೆ. ನಮಗೆ ಸರ್ವರ ಯೋಗಕ್ಷೇಮವನ್ನು ಕೋರುವುದು ಮುಖ್ಯವಾದ ಕೆಲಸ. ಸರ್ವಲೋಕೋಪಕಾರವನ್ನು ಬಯಸುವುದೇ ಜಂಗಮದ ಧರ್ಮ. ಶಿವಶರಣರು ಒಂದು ಕೋಮಿನವರಲ್ಲ. ಅವರು ವಿವಿಧ ಕೋಮಿನವರು. ಲಿಂಗಧರ್ಮದ ಮಾಧ್ಯಮದಿಂದ ಒಂದಾದವರು. ಕಾಯಕಕ್ಕೆ ವಿಶೇಷ ಮಹತ್ವಕೊಟ್ಟು ಅಭಿಶಾಪ ದಂತಿದ್ದ ದೇಶದ ದಾರಿದ್ರ್ಯವನ್ನು ಎಲ್ಲ ಮುಖದಿಂದಲೂ ಓಡಿಸಲು ಹೆಣಗಿದವರು. ನಾವು ಅವರ ದಿವ್ಯಾದೇಶಗಳನ್ನು ಕಾರ್ಯ ರೂಪಕ್ಕೆ ತರಲು ಹೊರಟವರು. ಅವರು ಕಾಯಕಕ್ಕೆ ಕೊಟ್ಟ ಅರ್ಥಬಾಹುಳ್ಯ ದೊಡ್ಡದು. ಅದನ್ನು ಇಂದಿನ ಜನಾಂಗ ಕಾರ್ಯ ರೂಪಕ್ಕೆ ತಂದಿದ್ದರೆ, ಈಗಿನ ವಿಪ್ಲವಗಳೇ ರಾಷ್ಟ್ರಕ್ಕೆ ಜಗತ್ತಿಗೆ ಉಂಟಾಗವು. ಇಂದು ಜನಾಂಗ ಸ್ವಾರ್ಥಕ್ಕೋಸುಗ ಧರ್ಮ ವನ್ನು ಬಳಸಿಕೊಳ್ಳುತ್ತಿದೆ. ಮುಗ್ಧರಾದ ಜನಗಳ ದುರ್ಲಾಭ ಮಾಡಿಕೊಳ್ಳುತ್ತಿದ್ದಾರೆ. ಇದು ಅಭಿವೃದ್ಧಿ ಶೀಲವಾದ ಯಾವ ರಾಷ್ಟ್ರಕ್ಕೂ ಭೂಷಣವಲ್ಲ. ಸಾಮಾನ್ಯ ಜನಗಳ ಅಜ್ಞಾನವನ್ನು ದುರುಪಯೋಗಪಡಿಸಿಕೊಂಡು ಸ್ವಾರ್ಥಸಾಧಿಸುವ ಮನೋ

ವೃತ್ತಿಯನ್ನು ನಮ್ಮ ಜನ ಕೈಬಿಟ್ಟಾಗ ನಮಗೆ ಕಲ್ಯಾಣವಾಗುವುದು.

ನಮ್ಮ ಮಠದಲ್ಲಿ ಜಾತೀಯತೆಯ ಸೋಂಕು ಇಲ್ಲ. ಈ ಮಠಕ್ಕೆ ಸಾಮಾನ್ಯವಾಗಿ ಎಲ್ಲ ಕೋಮಿನವರೂ ಭಕ್ತರಾಗಿ ಇದ್ದಾರೆ. ವೀರಶೈವರಷ್ಟೆ ಅಲ್ಲ; ಒಕ್ಕಲಿಗರು, ಸಾದರು, ಕುರುಬರು, ಅಗ್ನಿವಂಶಕ್ಷತ್ರಿಯರೇ ಮೊದಲಾದವರು ನಮ್ಮ ಮಠಕ್ಕೆ ಸೇವೆಯನ್ನು ಅಪೂರ್ವವಾಗಿ ಸಲ್ಲಿಸಿದ್ದಾರೆ. ಇಂದೇ ಅಲ್ಲ; ನಮ್ಮ ಗುರುಗಳ ಕಾಲದಿಂದಲೂ ಕೂಡ. ಈಗಲೂ ಸಲ್ಲಿಸುತ್ತಿದ್ದಾರೆ. ತನುಮನಧನಗಳನ್ನು ಅರ್ಪಿಸಿದ್ದಾರೆ; ಅರ್ಪಿಸುತ್ತಿದ್ದಾರೆ. ಅವರು ಅರ್ಪಿಸಲಿ ಬಿಡಲಿ ನಾವಂತೂ ಸರ್ವಜನದ ಹಿತಾಕಾಂಕ್ಷಿಯ ವರು. ಬಸವಾದಿ ಪ್ರಮಥರು ಸಕಲ ಜೀವರಾಶಿಗಳ ಲೇಸನ್ನೇ ಬಯಸುವವರು. ಅವರ ದಿವ್ಯಾದೇಶದಂತೆ ನಮ್ಮ ನಡೆ. ಅನೇಕ ತ್ಯಾಗಶೀಲರು ನಮ್ಮ ಮಠಕ್ಕೆ ತನುಮನಧನಗಳನ್ನು ಅರ್ಪಿಸಿದ್ದಾರೆ. ಅವರಲ್ಲಿ ಒಕ್ಕಲಿಗರಿದ್ದಾರೆ, ಅಗ್ನಿವಂಶ ಕ್ಷತ್ರಿಯರಿದ್ದಾರೆ, ಸಾದುಸಮಾಜದವರಿದ್ದಾರೆ, ವೀರಶೈವರಿದ್ದಾರೆ, ಉಳಿದ ಕೋಮಿನವರೂ ಇದ್ದಾರೆ. ರಾಷ್ಟ್ರಹಿತದೃಷ್ಟಿಯಿಂದ ಯಾವ ಸರಕಾರವೇ ಬರಲಿ ಅದಕ್ಕೆ ಗೌರವ ತೋರಿ ಅವರು ಉತ್ಸಾಹದಿಂದ ಕಾರ್ಯಮಾಡಲು ಅವಕಾಶ ಕಲ್ಪಿಸಬೇಕಾದುದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ಮಠಮಾನ್ಯಗಳು ತಮ್ಮ ಗುರುತರವಾದ ಸರ್ವಸಮಾಜದ ಹಿತಾಕಾಂಕ್ಷೆಯಂಥ ಪವಿತ್ರಕೆಲಸದಿಂದ ದೂರ ಸರಿದು ರಾಜಕೀಯದಲ್ಲಿ ಭಾಗವಹಿಸಬೇಕಾದುದಿಲ್ಲ. ನಾವಂತೂ ಯಾವ ಸರಕಾರವೇ ಬರಲಿ, ಅದಕ್ಕೆ ಬೆಲೆ ಕೊಡುವವರು. ನಮ್ಮ ಹತ್ತಿರ ರಾಜಕೀಯ ವ್ಯಕ್ತಿಗಳು ಬಂದರೂ ನಾವು ಅವರಿಗೆ ಹೇಳುವ ಬುದ್ಧಿವಾದವೂ ಇದೇ. ನಮ್ಮ ಮಠವಂತೂ ರಾಜಕೀಯ ದಿಂದ ಎಂದೆಂದಿಗೂ ದೂರ. ನಮ್ಮ ಕರ್ತವ್ಯದಿಂದ ಯತ್ಕಿಂಚಿತ್ ಸಾಮಾಜಿಕ ಲಾಭವಾಗಬೇಕು. ಅಂಥ ಸನ್ನಿವೇಶ ನಿರ್ಮಾಣ ಕಾರ್ಯದಲ್ಲಿ ಮಠಮಾನ್ಯಗಳು ತೊಡಗಬೇಕು' ಇತ್ಯಾದಿಯಾದ ಹೃದಯಸ್ಪರ್ಶೀಭಾಷಣ ಅಖಂಡಜನಸ್ತೋಮದ ಅಪಾರ ಮೆಚ್ಚುಗೆಗೆ ಪಾತ್ರವಾಯಿತು.

ಅನಂತರ ಶ್ರೀಗಳವರು ಶ್ರೀಮಾನ್ ಸುಖಾಡಿಯಾ ಮತ್ತು ದೇವರಾಜ ಅರಸು ಅವರನ್ನೂ ಉಳಿದ ಎಲ್ಲಾ ಅತಿಥಿ ಗಳನ್ನೂ ಆಶೀರ್ವದಿಸಿ ಫಲತಾಂಬೂಲ ಕೊಟ್ಟು ಕಳುಹಿಸಿದರು. ಇದೇ ದಿನ ಕೆನರಾ ಸಿಂಡಿಕೇಟ್ ಬ್ಯಾಂಕಿನವರು ಶ್ರೀ ಕ್ಷೇತ್ರದ ಘನತೆ ಗೌರವಗಳಿಗೆ ಮಾರು ಹೋಗಿ ಅದರ ಪರಿಚಯ ಮಾಡಿಕೊಡುವ 'ಸಿದ್ಧರ ನೆಲೆವೀಡು ಸಿದ್ಧಗಂಗಾ' ಎಂಬ ಸುಂದರವಾದ ಕಿರುಹೊತ್ತಿಗೆಯ ೧೦ ಸಾವಿರ ಪ್ರತಿಗಳನ್ನು ಉಚಿತವಾಗಿ ಹಂಚಿ ತಮ್ಮ ಭಕ್ತಿಯನ್ನು ಪ್ರಕಟಿಸಿದರು.

**ಶ್ರೀ ಶಿವಕುಮಾರ ಸ್ವಾಮಿಗಳವರ ರಜತ ಮಹೋತ್ಸವದ ಅಂಗವಾಗಿ**

**ಸಾಹಿತ್ಯ ಸಮ್ಮೇಳನ–ಶ್ರೀ ಸಿದ್ಧಗಂಗಾ**

[ತಾ॥ ೨೭-೫-೧೯೭೨ ಕಾಲ : ಬೆಳಗಿನ ೮ ರಿಂದ ೧೨ ಗಂಟೆಯವರೆಗೆ]

ಬೆಳಿಗ್ಗೆ ೮ ಘಂಟೆಗೆ ಸರಿಯಾಗಿ 'ಸಾಹಿತ್ಯ ಸಮ್ಮೇಲನವು' ಉದ್ದಾನಶಿವಯೋಗಿ ಮಂಟಪದಲ್ಲಿ ಭವ್ಯವಾಗಿ ಶ್ರೀ ಮನ್ನಿಡುಮಾಮಿಡಿ ಶ್ರೀ ಶೈಲ ಜಗದ್ಗುರು ಸೂರ್ಯಸಿಂಹಾಸನಾಧೀಶ್ವರ ಶ್ರೀ ಚೆನ್ನಬಸವ ದೇಶಿಕೇಂದ್ರ ಮಹಾಸ್ವಾಮಿಗಳ ವರ ಅಧ್ಯಕ್ಷತೆಯಲ್ಲಿ ನೆರವೇರಿತು. ಪ್ರಥಮತಃ ಪ್ರಾರ್ಥನೆಯಾದ ಮೇಲೆ ಶ್ರೀ ಕೆ. ತಿಪ್ಪೇರುದ್ರಯ್ಯನವರು ಸ್ವಾಗತಕೋರಿದರು. ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯನವರು ಪರಿಚಯ ಭಾಷಣ ಮಾಡಿದರು. ಮೈಸೂರು ವಿಶ್ವವಿದ್ಯಾಲಯದ ಕುಲಪತಿ ಕನ್ನಡದ ಕೆಚ್ಚುನೆಚ್ಚಿನ ಗಂಡುಗಲಿಗಳೂ, ಸುಪ್ರಸಿದ್ಧಲೇಖಕರೂ, ಸಂಘಟಕರೂ ಆದ ಪ್ರೊ. ಜವರೇಗೌಡರು ಸಾಹಿತ್ಯ ಸಮ್ಮೇಲನದ ಉದ್ಘಾಟನಾ ಭಾಷಣ ಮಾಡಿದರು. ಅವರು ತಮ್ಮ ಭಾಷಣದಲ್ಲಿ 'ಸಾಹಿತ್ಯವು ಜನಜೀವನದ ಪ್ರತಿಬಿಂಬ. ಅದು ಮನುಷ್ಯನ ಧರ್ಮಾರ್ಥಕಾಮ ಮೋಕ್ಷಗಳಿಗೆ ಸಹಕಾರಿ. ಪವಿತ್ರ ಕಾವ್ಯಗಳು ಮಾನವನ ಹೃದಯ ಶುದ್ಧಿಯುಂಟುಮಾಡುತ್ತವೆ. ಶ್ರೀ ಕ್ಷೇತ್ರದ ಈ ರೀತಿಯ ಸೇವೆ ಮುಂದುವರಿದು ಶ್ರೀಗಳವರ ತಪಸ್ಸು ವೃದ್ಧಿಗೊಂಡು ನಾಡಿನ ಸಮಸ್ತರ ಕಲ್ಯಾಣ ಸಾಧನೆಯಾಗಲಿ, ಎಂದರು. ಅನಂತರ ಪ್ರೊ. ಮಾಳವಾಡರು ಶ್ರೀ ಕ್ಷೇತ್ರದ ಸೇವೆಯನ್ನು ಮುಕ್ತಕಂಠದಿಂದ ಹೊಗಳುತ್ತ 'ವಿಜಯನಗರ ಕಾಲದ ಸಾಹಿತ್ಯದಲ್ಲಿ ಧರ್ಮದ ಪ್ರಚೋದನೆ' ಎಂಬ ವಿಷಯವಾಗಿ ವಿದ್ವತ್ಪೂರ್ಣ ಭಾಷಣ ಮಾಡಿದರು. ಶ್ರೀಯುತರು 'ಕಾವ್ಯಕ್ಕೆ ಪ್ರೇರಣೆ ಆತ್ಮ ಪರಮಾತ್ಮರ ಅನುಸಂಧಾನವೇ ಆಗಿದೆ. ಉದ್ವಿಗ್ನಚಿತ್ತದಲ್ಲಿ ಮೂಡಿಬಂದ ಶಬ್ದಜಾಲ ಕಾವ್ಯವೆನಿಸಲಾರದು. ಶಾಂತಚಿತ್ತದಲ್ಲಿ ಮೂಡಿಬಂದ ಸಾಹಿತ್ಯವೇ ಶ್ರೇಷ್ಠ ಸಾಹಿತ್ಯವೆನಿಸಿಕೊಳ್ಳುತ್ತದೆ. ಅಂಥ ಸಾಹಿತ್ಯ ನಿರ್ಮಿತಿಗೆ ದೀರ್ಘಕಾಲದ ತಪಸ್ಸು ಬೇಕು. ಶಿವನ ಕಾರಣ್ಯಬೇಕು. ಬಾಳಿನ ಬಗೆಗೆ ನಮ್ಮ ಕಲ್ಪನೆಯನ್ನು ಶುದ್ಧಗೊಳಿಸಬೇಕು. ಪ್ರತಿಯೊಬ್ಬನೂ ತನ್ನ ಬಾಳನ್ನು ಶುದ್ಧಗೊಳಿಸಿ ಕೊಳ್ಳಲು ಯೋಗ್ಯವಾದ ಸಾಹಿತ್ಯವೇ ಸಾಹಿತ್ಯ. ಅದು ಶುಚಿಯಾಗಿರಬೇಕು; ರುಚಿಯಾಗಿರಬೇಕು. ಬಾಳಿನ ಶುದ್ಧಿಗೆ ಮಾರಕ ವಾಗಬಲ್ಲ ಸಾಹಿತ್ಯವು ಸಾಹಿತ್ಯವಲ್ಲ. ಸಾಹಿತ್ಯವು ಚಿರಂತನವಾಗಿ ಉಳಿಯಬೇಕು. ನಿಚ್ಚಂ ಪೊಸತಾಗಿರಬೇಕು' ಎಂದು ನುಡಿದರು,

ಶ್ರೀಮಾನ್ ಹಂಪ ನಾಗರಾಜಯ್ಯನವರು 'ಜೈನ ಸಾಹಿತ್ಯಕ್ಕೆ ಧರ್ಮದ ಕೊಡುಗೆ' ಎಂಬ ವಿಚಾರವಾಗಿ ಮಾತಾಡುತ್ತ 'ಜೈನ ಸಾಹಿತ್ಯದ ಆರಂಭದ ಕಾವ್ಯಾವಲೋಕನ ಮಾಡಿದರೆ ಧರ್ಮ ಮತ್ತು ಸಾಹಿತ್ಯಗಳು ಸಮಸ್ಪರ್ಧಿಯಾಗಿ ಬೆಳೆದು ಬಂದಿರು

ವುದನ್ನು ಕಾಣುತ್ತೇವೆ. ಆದಿತೀರ್ಥಂಕರನ ಸಮವಸರಣ ಮಂಟಪದ ದಿವ್ಯಧ್ವನಿಯಿಂದಲೇ ಸಾಹಿತ್ಯ ಆವಿರ್ಭಾವಾಯಿತೆನ್ನುವುದರ ಅರ್ಥವನ್ನಿಲ್ಲಿ ಗಮನಿಸಬೇಕು. ಭಗವಾನ್ ಜಿನಸೇನಾಚಾರ್ಯರ ಆದಿ ಪುರಾಣ, ಗುಣಭದ್ರಾಚಾರ್ಯರ ಮಹಾಪುರಾಣಗಳೇ ಮುಂದೆ ಬಂದ ಮಹಾ ಮಹಾ ಕವಿಗಳು ವಸ್ತುಗಳನ್ನು ಆರಿಸಿಕೊಳ್ಳಲು ದೊಡ್ಡ ಗಣಿಗಳಾದುವು' ಎಂದರು. ಶ್ರೀಮಾನ್ ಎಲ್. ಬಸವ ರಾಜು ಅವರು 'ವಚನ ಸಾಹಿತ್ಯಕ್ಕೆ ಧರ್ಮಕೊಟ್ಟ ಪ್ರೇರಣೆ' ಎಂಬ ವಿಷಯವಾಗಿಯೂ, ತದನಂತರ ಶ್ರೀ ವರದರಾಜರಾವ್ ಅವರು 'ವೈಷ್ಣವ ಸಾಹಿತ್ಯಕ್ಕೆ ಧರ್ಮದ ಪ್ರೇರಣೆ' ಎಂಬ ವಿಷಯದ ಮೇಲೆಯೂ ಮಾತನಾಡಿದರು. ಶಿವರುದ್ರಪ್ಪನವರು 'ಆಧುನಿಕ ಸಾಹಿತ್ಯಕ್ಕೆ ಧರ್ಮದ ಪ್ರೇರಣೆ' ಎಂಬ ವಿಷಯವಾಗಿ ಭಾಷಣ ಮಾಡಿದರು, ಅಧ್ಯಕ್ಷತೆ ವಹಿಸಿದ್ದ ಶ್ರೀ ಜ. ಚ. ನಿ. ಯವರು ತಮ್ಮ ದೀರ್ಘವಾದ ಮುದ್ರಿತ ಭಾಷಣವನ್ನು ಓದಿದರು ಅದರ ಸಂಕ್ಷೇಪ ರೂಪಹೀಗಿದೆ:

'ಸಾಹಿತ್ಯ ಶಿಲ್ಪಿಗಳೇ, ಸದ್ಭಾವಿಗಳೇ, ಸತ್ಕಲಾ ಜೀವಿಗಳೇ !'

ಈ ಪರಮ ಪುಣ್ಯಕ್ಷೇತ್ರದಲ್ಲಿ, ಈ ಸರ್ವೋನ್ನತ ಶೈಕ್ಷಣಿಕ ಕೇಂದ್ರದಲ್ಲಿ, ಈ ಸಂಸ್ಕೃತಿಯ ಸಿರಿವನೆಯಲ್ಲಿ, ಈ ನಿಸರ್ಗ ಚಲುವಿನ ನೆಲೆಯಲ್ಲಿ ರಾರಾಜಿಸುವ ಸಿದ್ಧರಸಗಂಗೆಯ ರಮ್ಯರಸೆಯಲ್ಲಿ, ತಮ್ಮ ನಿಲವಿನ ಬೆಳುಬಾಳಿನ ಬೆಡಗಿನಿಂದ ಭಾವಪೂರ್ಣ ಭಾಷಣಗಳಿಂದ, ನಾಡಿನ ಹಿರಿ–ಕಿರಿಯರ ಹೃನ್ಮನಗಳನ್ನು ಸೆಳೆದು, ಅತ್ಯಂತ ಹೆಸರಾಂತ ಶ್ರೀ. ಸಿ. ಪ್ರ. ಡಾ|| ಶಿವಕುಮಾರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯುವ ನುಡಿಯೋಲಗದ ಹಿರಿತನದ ಗೌರವವನ್ನು ನಮಗಿತ್ತ ಈ ಸಮ್ಮೇಳನದ ಸಂಚಾಲಕರನ್ನು ಸಂತಸದಿಂದ ನೆನೆಯುತ್ತೇವೆ. ಈ ಬಗೆಯಲ್ಲಿಯೂ ನುಡಿಯೂಳಿಗಕ್ಕೆ ಅನುವಾಯಿತೆಂದು ಆನಂದಿಸುತ್ತೇವೆ. ನಸು ತಲೆಯೆತ್ತಿ ಕಣ್ಣರಳಿಸಿ ಅದೋ ಅಲ್ಲಿ ನೋಡಿ! ನಿಮ್ಮ ನಿಡುನೋಟ ಚಲ್ಲಿ. ಅಲ್ಲಿ ಕಾಣುವುದು ಆ ಬೆಟ್ಟದ ಬೆಡಗು ; ಅದ ರಲ್ಲಿ ಅದೋ ಸತ್ಯಚೇತನರಾಜ ಶ್ರೀ ಸಿದ್ಧಲಿಂಗಯತಿಯ ಸಿದ್ಧರಸಗಂಗೆ! ಬತ್ತದೆ ಪ್ರವಹಿಸುತ್ತಿದೆ. ಮುತ್ತಿಬಂದ ಯಾತ್ರಾರ್ಥಿ ಗಳನ್ನು ಪವಿತ್ರಾತ್ಮರನ್ನಾಗಿಸುತ್ತಿದೆ. ಅದು ಈ ಕ್ಷೇತ್ರದ ರಸಚೇತನ. ಇದೋ ಇಲ್ಲಿ ಮಂಡಿಸಿರುವ ಮಂಗಳಮೂರ್ತಿ ಇಂದಿನ ಈ ನಾಡಿನ ರಸಚೇತನ. ಈ ಚೇತನದಿಂದ ವಿದ್ಯಾಮೃತವು ನಾಡಿಗರ ಓದುಗರ ಹೃದ್ಭೂಮಿಗಳಿಗೆ ಹರಿಯುತ್ತಿದೆ: ಬತ್ತದೆ ಹಚ್ಚ ಹಸುರು ಹಬ್ಬಿ ಹುಲುಸಾದ ಬೆಳೆ ಬೆಳೆಯುತ್ತಿದೆ! ಇಲ್ಲಿನ ಓದುಗರು ಓಡಾಡುವ ತನಿತೋಟಗಳು ; ವಿದ್ಯಾರಣ್ಯರು ; ಜೀವಂತ ಕ್ಷೇತ್ರರು; ಸಾಹಿತ್ಯಗಂಗಾಧರರು. ಇದಕ್ಕಿಂತ ಇನ್ನಾವ ಭಾಗ್ಯ ಬೇಕು'? ಎಂದರು. ಅನಂತರ ಶ್ರೀ. ನಿ. ಪ್ರ. ಶಿವಕುಮಾರ ಸ್ವಾಮಿಗಳವರು ಆಶೀರ್ವಚನ ನೀಡಿದರು.

### ರಜತಮಹೋತ್ಸವದ ಅಂಗವಾಗಿ ನಡೆದ ಸರ್ವಧರ್ಮ ಸಮ್ಮೇಲನದ ಸಂಕ್ಷೇಪ ವರದಿ

(ತಾ|| ೨೫–೭-೭೨ರ ಮಧ್ಯಾಹ್ನ ೨ ರಿಂದ ೫ ಘಂಟೆವರೆಗೆ)

೧ ಘಂಟೆ ೪೫ ನಿಮಿಷಕ್ಕೆ ಸರಿಯಾಗಿ ಆಗಮಿಸಿದ ಹುಬ್ಬಳ್ಳಿ ಮೂರುಸಾವಿರ ಮಠದ ನಿರಂಜನ ಜಗದ್ಗುರು ಶ್ರೀ ಗಂಗಾಧರರಾಜಯೋಗೀಂದ್ರ ಮಹಾಸ್ವಾಮಿಗಳವರನ್ನು ಭವ್ಯಸ್ವಾಗತದೊಡನೆ ಸಭಾವೇದಿಕೆಗೆ ಕರೆತರಲಾಯಿತು. ಅವರ ಉದ್ಘಾಟನಾ ಭಾಷಣದೊಂದಿಗೆ ಸಭೆಯ ಕಾರ್ಯಕ್ರಮಗಳು ೨ ಘಂಟೆಗೆ ಸರಿಯಾಗಿ ಪ್ರಾರಂಭವಾದುವು. ಅಧ್ಯಕ್ಷತೆ ವಹಿಸಿದ್ದ ಪ್ರೊ. ರಾಮಚಂದ್ರರಾವ್‌ರವರು ಅಧ್ಯಕ್ಷಭಾಷಣ ಮಾಡುತ್ತ ಧರ್ಮವು ಮಾನವನ ಮೂಲಭೂತ ಅಗತ್ಯವೆಂದೂ, ಸುಖಿ ಯಾಗಬೇಕೆನ್ನುವವನು ಧರ್ಮದಿಂದಲೇ ಅದನ್ನು ಪಡೆಯಬೇಕೆಂದೂ ತಿಳಿಸಿದ ನಂತರ 'ವಿಶ್ವಶಾಂತಿಗೆ ವಿವಿಧ ಧರ್ಮಗಳ ಕೊಡಿಗೆ' ಎಂಬ ವಿಚಾರವಾಗಿ ಅನೇಕ ವಿದ್ವಾಂಸರು ಮಾತನಾಡಿದರು. ಲಕ್ಷೋಪಲಕ್ಷ ಜನರಿಂದ ಕಿಕ್ಕಿರಿದು ತುಂಬಿದ ಸಭೆಯ ಕಾರ್ಯಕಲಾಪ ಗಳಲ್ಲಿ ಶ್ರದ್ಧಾಭಕ್ತಿಯಿಂದ ಕುಳಿತಿದ್ದ ಆ ಸನ್ನಿವೇಶ ನಿಜಕ್ಕೂ ಅಪೂರ್ವವಾಗಿತ್ತು. ಕೆಲವರಂತೂ ಊಟದ ಅರಿವಿಲ್ಲದೆ ಕುಳಿತು ದುದೂ ಕಂಡುಬಂದಿತು. ಶ್ರೀ ಚಿಕ್ಕರುದ್ರಯ್ಯನವರು ಸ್ವಾಗತ ಕೋರಿದ ನಂತರ ಬೆಂಗಳೂರು ಮಹಾಬೋಧಿ ಸಂಘದ ಕಾರ್ಯ ದರ್ಶಿಗಳಾದ ಶ್ರೀ ಹೆಚ್.ವಿ. ಶ್ರೀರಂಗರಾಜ್ ಅವರು ಬೌದ್ಧ ಸಾಹಿತ್ಯವು ವಿಶ್ವಶಾಂತಿಗೆ ಕೊಟ್ಟ ಕಾಣಿಕೆಯ ಬಗೆಗೂ, ಶ್ರೀ ಏಜಾ ಸುದ್ದೀನ್ ಫೈರೋಜ್‌ರವರು ಇಸ್ಲಾಂ ಧರ್ಮವು ವಿಶ್ವಶಾಂತಿಗೆ ಕೊಟ್ಟ ಕಾಣಿಕೆಯ ಬಗೆಗೂ, ರೆವರೆಂಡ್ ಫಾದರ್ ಪಿಂಟೋ ರವರು ಕ್ರೈಸ್ತಧರ್ಮವು ವಿಶ್ವಶಾಂತಿಗೆ ಕೊಟ್ಟ ಕಾಣಿಕೆಯ ಬಗೆಗೂ, ಡಾ|| ಚಿದಾನಂದಮೂರ್ತಿ ಅವರು ಹಿಂದೂ ಧರ್ಮವು ವಿಶ್ವಶಾಂತಿಗೆ ಕೊಟ್ಟ ಕಾಣಿಕೆಯ ಬಗೆಗೂ ಸಮರ್ಥನೆ ಮಾಡಿ ಮಾತನಾಡಿದರು. ವೀರಶೈವ ಧರ್ಮದ ಬಗೆಗೆ ಶ್ರೀ ಕರಿಬಸಪ್ಪ ಸ್ವಾಮಿಗಳು ಮಾತನಾಡಿದರು. ಶ್ರೀ ಶಿವಕುಮಾರಮಹಾಸ್ವಾಮಿಗಳವರು ಆಶೀರ್ವಾದ ಭಾಷಣ ಮಾಡುತ್ತ, ಧರ್ಮವು ಶ್ರೀಸಾ ಮಾನ್ಯನ ಆಸ್ತಿಯೆಂದೂ, ಪರಧರ್ಮದ್ವೇಷಮಾಡದೆ ತನ್ನ ಧರ್ಮದ ನೆರಳಿನಲ್ಲಿ ಬಾಳ್ವೆ ನಡೆಸಿ, ಕಲ್ಯಾಣ ಸಾಧಿಸಬಹುದೆಂದೂ ಅಪ್ಪಣೆ ಕೊಡಿಸಿದರು. ಶ್ರೀ ಮನ್ನಿರಂಜನ ಮೂರುಸಾವಿರ ಮಠದ ಜಗದ್ಗುರು ಗಂಗಾಧರರಾಜೇಂದ್ರಸ್ವಾಮಿಗಳು ಧರ್ಮ ಸ್ವರೂಪ, ವಿವಿಧಧರ್ಮತತ್ತ್ವಗಳಲ್ಲಿನ ಸಾಮರಸ್ಯ ಮುಂತಾದ ವಿಷಯಗಳನ್ನು ಪ್ರಸ್ತಾಪಿಸಿ, ಸರ್ವಧರ್ಮಗಳೂ ಒಬ್ಬನೇ ಪರಮಾತ್ಮನನ್ನು ಕಾಣಹೊರಟು ಕೊನೆಯಲ್ಲಿ ಅವನಲ್ಲಿ ಐಕ್ಯವಾಗುವುವೆಂದೂ, ಧರ್ಮದ ಹೆಸರಿನಲ್ಲಿ ಪರಸ್ಪರ ದ್ವೇಷಾಸೂಯೆ ಗಳು ಸಲ್ಲವೆಂದೂ ಧರ್ಮಸಾಧನೆಯಿಂದ ಅನೇಕ ಹಿರಿಯ ಗುಣಗಳು ಮನುಷ್ಯನಿಗೆ ಲಭ್ಯವಾಗುವುವೆಂದೂ, ತನ್ಮೂಲಕ ಎಲ್ಲ

ರಿಗೂ ಮೋಕ್ಷಪ್ರಾಪ್ತಿಯೆಂದೂ ತಮ್ಮ ಉದ್ಬೋಧಕ ಭಾಷಣದಿಂದ ಅಪ್ಪಣೆ ಕೊಡಿಸಿದರು. ಪ್ರೊ. ಮರುಳಸಿದ್ಧಯ್ಯನವರು ವಂದನಾರ್ಪಣೆ ಮಾಡಿದರು. ಕಾರ್ಯಕಲಾಪಗಳು ಮುಕ್ತಾಯಗೊಂಡವು.

### ಶ್ರೀಶ್ರೀಗಳವರ ರಜತ ಮಹೋತ್ಸವದ ಅಂಗವಾಗಿ ಮಹಿಳಾಗೋಷ್ಠಿ

(೨೭-೫-೭೨ರ ಸಂಜೆ ೫-೩೦ರಿಂದ ೭-೩೦)

೫-೩೦ ಘಂಟೆಗೆ ಸರಿಯಾಗಿ ಮಹಿಳಾಗೋಷ್ಠಿಯ ಕಾರ್ಯಕ್ರಮಗಳು ಉದ್ದಾನಶಿವಯೋಗೀಶ್ವರರ ಮಂಟಪದಲ್ಲಿ ಮೈಸೂರು ಆಹಾರ ಖಾತೆಯ ರಾಜ್ಯಸಚಿವೆಯರಾದ ಶ್ರೀಮತಿ ಇ.ಇ. ವಾಜ್ ಅವರ ಅಧ್ಯಕ್ಷತೆಯಲ್ಲಿ ನೆರವೇರಿದವು. ಉದ್ಘಾಟನೆ ಮಾಡಿದ ಮೈಸೂರು ವಿಧಾನಸಭಾ ಅಧ್ಯಕ್ಷೆಯರಾದ ಶ್ರೀಮತಿ ನಾಗರತ್ನಮ್ಮ ಕೆ. ಎಸ್ ಅವರು 'ವೇದ ಉಪನಿಷತ್ ಕಾಲಗಳಿಂದಲೂ ಮಹಿಳೆಯರಿಗೆ ಆದ್ಯತೆಯನ್ನು ಭಾರತದಲ್ಲಿ ನೀಡಲಾಗಿದೆ. ಮಹಿಳೆಯರು ಅದರ ಅರ್ಥಮಾಡಿಕೊಂಡು ಕಾಯಕನಿಷ್ಠೆಯನ್ನು ಚೆನ್ನಾಗಿ ಬೆಳೆಸಿಕೊಳ್ಳಬೇಕು. ಸ್ತ್ರೀಯರಿಗಿರುವ ಅಪಾರ ಗೌರವವನ್ನು ಆಕೆ ಸಂಪಾದಿಸಲು ಹೆಣ್ಣಾಗಬೇಕೆಂದೂ ಅದಕ್ಕೆ ಧರ್ಮಮಾರ್ಗದಲ್ಲಿ ನಡೆಯಬೇಕೆಂದೂ ತಿಳಿಸಿದರು. ಶ್ರೀ ಕ್ಷೇತ್ರದ ಮಹತ್ತು ಬೃಹತ್ತುಗಳ ಬಗೆಗೆ ಮಾತನಾಡಿ, ಉದ್ದಾನಸ್ವಾಮಿಗಳವರ ಮತ್ತು ಶ್ರೀಶ್ರೀ ಶಿವಕುಮಾರಸ್ವಾಮಿಗಳವರ ಅಪಾರ ಕಾರುಣ್ಯದ ಬಗೆಗೆ ಮನಸಾರೆ ಕೊಂಡಾಡಿದರು. ಗೋಷ್ಠಿಯಲ್ಲಿ ಭಾಗವಹಿಸಿದ ಸರ್ವಶ್ರೀಮತಿಯರಾದ ರತ್ನಾಸ್ವಾಮಿರಾವ್, ಕಮಲಾ ಹಂಪನಾ, ಶಾಂತಾದೇವಿ ಮಾಳವಾಡ, ಲೀಲಾವತಿ ಆರ್. ಪ್ರಸಾದ್ ಅವರುಗಳು ವಿದ್ವತ್ಪೂರ್ಣವಾಗಿಯೂ ಹೃದಯಸ್ಪರ್ಶಿಯಾಗುವ ಹಾಗೆಯೂ ಮಹಿಳೆಯರು ಧರ್ಮರಕ್ಷಣಾ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಕರ್ತವ್ಯಶೀಲರಾಗಬೇಕೆಂಬ ಬಗೆಗೆ ವಿವರಿಸಿದರು. ವಂದನಾರ್ಪಣೆಯೊಂದಿಗೆ ಸಭಾಕಾರ್ಯಕಲಾಪಗಳು ಮುಕ್ತಾಯವಾದುವು. ಚಾಲಕಿಯರಾದ ಶ್ರೀಮತಿ ಸುಲೋಚನಾದೇವಿ ಆರಾಧ್ಯ ಅವರು ಪ್ರಥಮತಃ ಸ್ವಾಗತ ಕೋರಿದರು: ಶ್ರೀಮತಿ ವಿಶಾಲಾಕ್ಷಿ ಲಕ್ಷ್ಮಣಗೌಡ ಅವರು ವಂದನಾರ್ಪಣೆ ಮಾಡಿದರು.

### ಸಮಾರೋಪ ಸಮಾರಂಭ

(ತಾ॥ ೨೮-೫-೭೨ರ ಬೆಳಗು ೮-೩೦-೧೨ ಘಂಟೆಗೆ)

ಪ್ರಥಮತಃ ರಜತ ಮಹೋತ್ಸವ ಸಮಿತಿಯವರು ಕಟ್ಟಿಸಿದ 'ಪ್ರಫುಲ್ಲಭವನ'ದಲ್ಲಿನ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ ಪ್ರಾರಂಭೋತ್ಸವವನ್ನು ಮೈಸೂರಿನ ಆಗಿನ ಕಂದಾಯ ಮಂತ್ರಿಗಳಾಗಿದ್ದ ಶ್ರೀ ಹುಚ್ಚಮಾಸ್ತಿಗೌಡರು ನೆರವೇರಿಸಿದನಂತರ ಸಭಾಕಾರ್ಯಕ್ರಮಗಳು ನೆರವೇರಿದುವು. ಸಭಾಧ್ಯಕ್ಷತೆಯನ್ನು ಶ್ರೀ ಸಿದ್ಧವೀರಪ್ಪನವರು ವಹಿಸಿದ್ದರು. ಪ್ರಥಮತಃ ಪ್ರಾರ್ಥನೆಯಾದ ಮೇಲೆ ಶ್ರೀ ಗಟ್ಟಿಚಂದ್ರಶೇಖರ ಅವರು ಎಲ್ಲರನ್ನು ಸ್ವಾಗತಿಸುತ್ತ ಶ್ರೀಕ್ಷೇತ್ರದಲ್ಲಿ ನಡೆಯುವ ಕಾರ್ಯಕಲಾಪಗಳನ್ನೂ ಮಠದ ಮಹತ್ತುಬೃಹತ್ತುಗಳನ್ನೂ ರಚನಾತ್ಮಕ ಕಾರ್ಯದಲ್ಲಿ ಶ್ರೀಕ್ಷೇತ್ರದ ಪಾತ್ರವೇನೆಂಬುದರ ಬಗೆಗೂ ಪರಿಚಯವನ್ನು ಮಾಡಿದರು. ಶ್ರೀಮಾನ್ ಎಸ್. ಹುಚ್ಚಮಾಸ್ತಿಗೌಡರು-ಪುಣ್ಯಪುರುಷರ ನೆಲೆವೀಡಾದ ಶ್ರೀ ಸಿದ್ಧಗಂಗಾ ಕ್ಷೇತ್ರದ ಮಹತ್ವವನ್ನು ಅದು ಸಮಾಜದ ಜನಜೀವನದಲ್ಲಿ ಉಂಟು ಮಾಡಿದ ಜಾಗೃತಿಯನ್ನು ಕೊಂಡಾಡಿ ಎಲ್ಲಾ ಸಮಾಜದ ಬಾಂಧವರ ಮಕ್ಕಳಿಗೆ ಅನೇಕ ವಿಧದಲ್ಲಿ ಸಹಾಯ ಮಾಡುತ್ತಿರುವತ್ತ ಶ್ರಮಿಸುವ ಶ್ರಮ, ಧಾರ್ಮಿಕಜ್ಯೋತಿಯನ್ನು ಮುಡಿಸುತ್ತಿರುವ ಪುಣ್ಯಕಾರ್ಯಗಳ ಬಗೆಗೆ ಮನಸಾರ ಶ್ಲಾಘಿಸಿದರು. 'ಅನ್ನಬಟ್ಟೆಗಳಷ್ಟೇ ಮನುಷ್ಯನ ಸುಖಕ್ಕೆ ಕಾರಣವಲ್ಲ. ಅದಕ್ಕೆ ತಕ್ಕ ಮನಶ್ಶಾಂತಿಯೂ ಅವಶ್ಯಕ. ಅಂತಹ ಶಾಂತಿಯನ್ನು ಇಂತಹ ಧಾರ್ಮಿಕ ಸಂಸ್ಥೆಗಳು ಮನುಷ್ಯನಿಗೆ ನೀಡುತ್ತವೆ' ಎಂದು ಹೇಳಿದರು. ಶ್ರೀಯುತರುಗಳಾದ ಬಿ. ಎಸ್. ಹನುಮಂತೇಗೌಡರು, ಎಂ. ರುದ್ರಪ್ಪನವರು, ಟಿ. ತಾರೇಗೌಡರು. ಬಿ. ಎನ್. ಕೇಶವಯ್ಯಂಗಾರ್‌ರವರು, ಮೈಸೂರಿನ ಅಡ್ವೋಕೇಟ್ ಗಂಗಾಧರ್‌ರವರು ಸಮಯೋಚಿತವಾಗಿ ಶ್ರೀಕ್ಷೇತ್ರದ ಬಗೆಗೆ, ಶ್ರೀಗಳವರ ಸೇವೆಯ ಬಗೆಗೆ ಅಪಾರ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ ಮಾತನಾಡಿದರು. ಅಡ್ವೋಕೇಟ್ ಎಚ್. ಗಂಗಾಧರ್ ಅವರು ಮಾಡಿದ ಭಾಷಣ ಹೃದಯಸ್ಪರ್ಶಿಯಾಗಿತ್ತು. ಅವರು ಕ್ಷೇತ್ರದ ಹಳೆಯ ವಿದ್ಯಾರ್ಥಿಗಳೆಂಬುದನ್ನು ಜ್ಞಾಪಿಸಿಕೊಂಡು ಶ್ರೀಕ್ಷೇತ್ರದ ಔದಾರ್ಯದ ಬಗೆಗೆ ಮನಸಾರೆ ಕೊಂಡಾಡಿದರು. ಸಮಾರೋಪ ಭಾಷಣದಲ್ಲಿ ಶ್ರೀ ವೀರೇಂದ್ರ ಪಾಟೀಲರು 'ಧರ್ಮಜಾಗೃತಿ-ಸಮಾಜಜಾಗೃತಿಯೇ ಆಗಿದೆ. ಬಸವೇಶ್ವರರೇ ಮೊದಲಾದವರು ಮಾಡಿದ ಕ್ರಾಂತಿ ಒಂದು ಸಮಾಜದ ಉದ್ಧಾರದ ಕ್ರಾಂತಿಯಲ್ಲ. ಜನಾಂಗಗಳ ಉದ್ಧಾರಕ್ಕೆ, ದೀನದಲಿತರ ಉದ್ಧಾರಕ್ಕೆ ಹೆಣಗಿದ ಮಹಾಕ್ರಾಂತಿ. ಶೋಷಣರಹಿತವಾದ ಸಮಾಜ ರಚನೆಗೆ ಅವಶ್ಯಕವಾದ ವಿದ್ಯಾದಾನವನ್ನು ಶ್ರೀಕ್ಷೇತ್ರದಲ್ಲಿ ಮಹಾಸ್ವಾಮಿಗಳವರು ನಡೆಸುತ್ತಿದ್ದಾರೆ. ಶೋಷಣೆ ಹೋಗಬೇಕಾದರೆ ರಾಷ್ಟ್ರೀಕರಣ ಅಗತ್ಯವೆಂಬುದು ಸುಳಿಗಾಳಿಯಂತೆ ಹಬ್ಬುತ್ತಿದೆ. ಇದರ ಮುಕ್ತಾಯದ ಬಗ್ಗೆ ಅರಿವಿಲ್ಲ. ಉಪಯುಕ್ತ ಸೇವೆಸಲ್ಲಿಸುವ ಸಂಸ್ಥೆಗಳನ್ನು ರಾಷ್ಟ್ರೀಕರಣ ಮಾಡಬಾರದು. ಹಾಗೆ ಮಾಡಿದರೆ ಅವುಗಳ ಉಪಯುಕ್ತ ಸೇವೆ ನಿಂತು ಇನ್ನೂ ಹದಗೆಟ್ಟೀತು. ಉಪಯುಕ್ತವಾದ ಸೇವೆಯ ತತ್ತ್ವವನ್ನು ಶ್ರೀ ಸಿದ್ಧಗಂಗಾ ಶ್ರೀಗಳವರು ತಮ್ಮ ಸಂಸ್ಥೆಯಿಂದ ಆಚರಣೆಗೆ ತರುತ್ತಿದ್ದಾರೆ. ಇಂದಿನ ದಿನಗಳಲ್ಲಿ ಧರ್ಮಶ್ರದ್ಧೆಯಿಂದ ಸಮಾಜ ದೂರ ಸರಿಯುತ್ತಿದೆ. ಇದು ಭೂಷಣವಲ್ಲ. ಧರ್ಮಸಂಸ್ಥೆಗಳು ಅಂಥ ಜನತೆಯನ್ನು

ತಿದ್ದುವ ಪ್ರಮುಖ ಕೇಂದ್ರಗಳು'. ಇತ್ಯಾದಿಯಾಗಿ ಮಾತನಾಡಿದ ಮೇಲೆ ಮೈಸೂರಿನ ಆರೋಗ್ಯಮಂತ್ರಿಗಳಾಗಿದ್ದ ಶ್ರೀ ಸಿದ್ಧವೀರಪ್ಪನವರು ಅಧ್ಯಕ್ಷ ಭಾಷಣ ಮಾಡುತ್ತ 'ಶ್ರೀ ಸಿದ್ಧಗಂಗಾ ಮಠವು ಹಣವನ್ನು ಕೂಡಿಟ್ಟು ಬಡ್ಡಿ ವ್ಯವಹಾರ ಮಾಡಿ ಭಂಡವಾಳ ಮಾಡುವ ಸಂಸ್ಥೆಯಲ್ಲ. ಭಂಡವಾಳ ಸಂಸ್ಥೆಗಳಿಗೆ ಮುಂದೆ ಅಸ್ತಿತ್ವವೂ ಇಲ್ಲವೆಂದು ನುಡಿಯುತ್ತ. 'ಶ್ರೀಕ್ಷೇತ್ರದ ಬಗೆಗೆ, ಅದರ ರಚನಾತ್ಮಕ ಕಾರ್ಯಗಳ ಬಗೆಗೆ ನಮಗೆ ಅಪಾರ ಗೌರವವಿದೆ. ನಾನು ಅನೇಕ ಸಲ ಶ್ರೀಕ್ಷೇತ್ರದ ಶ್ರೀ ಸ್ವಾಮಿಗಳವರ ದರ್ಶನಲಾಭ ಪಡೆದಿದ್ದೇನೆ. ಇಲ್ಲಿನ ಕಾರ್ಯಕ್ರಮಗಳೆಲ್ಲ ಒಂದು ಪವಾಡ. ನಮಗೆ ಇಂಥ ಮಹಾಪುರುಷರ ಮಾರ್ಗದರ್ಶನ ಬೇಕು. ಸರಕಾರ ಇಂದು ದೀನದಲಿತರ ಉದ್ಧಾರಕ್ಕೆ ಕ್ರಾಂತಿಕಾರಕ ಬದಲಾವಣೆ ಮಾಡುತ್ತಿದೆ. ಅಂಥ ಕ್ರಾಂತಿಕಾರಕ ಸಮಾಜ ರಚನೆಯ ಕಾರ್ಯಕ್ಕೆ ಸ್ವಾಮೀಜಿಯವರು ಸಹಕಾರವನ್ನು ನೀಡಿ ಆಶೀರ್ವದಿಸಬೇಕು. ಅವರ ತಪೋಮಯ ಜೀವನ ಕರ್ಮಯೋಗ ಸರ್ವಜನತೆಯಲ್ಲಿರುವ ಅಪಾರ ಕಾರುಣ್ಯಭಾವಗಳಿಂದ ಅವರು ನಮ್ಮ ರಾಷ್ಟ್ರಕ್ಕೆ ಭೂಷಣಪ್ರಾಯರಾಗಿದ್ದಾರೆ. ಅವರ ೨೫ ವರ್ಷಗಳ ದೀರ್ಘಕಾಲದ ಸಮಾಜೋದ್ಧಾರ ಕಾರ್ಯವನ್ನು ಗಮನಿಸಿದ ಭಕ್ತಮಹಾಶಯರು ಈ ಸಮಾರಂಭ ಮಾಡುವುದರ ಮೂಲಕ ತಮ್ಮ ಭಕ್ತಿಯನ್ನು ವ್ಯಕ್ತಿಪಡಿಸಿದುದು ಸಕಾಲಿಕವಾದುದು; ಸಮಂಜಸವಾದುದು', ಎಂದರು.

ಪೂಜ್ಯಪಾದರು ಧರ್ಮದ ಅವಶ್ಯಕತೆಯ ಬಗೆಗೆ ಅನೇಕ ಸುಂದರ ದೃಷ್ಟಾಂತಕಥೆಗಳ ಮೂಲಕ ಆಶೀರ್ವಾದ ಭಾಷಣ ಮಾಡುತ್ತ 'ಶರಣರು ೮೦೦ ವರ್ಷಗಳ ಹಿಂದೆಯೇ ಪ್ರೇಮದ ಆಧಾರದ ಮೇಲೆ ಸಮಾಜವಾದವನ್ನು ಪ್ರತಿಷ್ಠಾಪಿಸಿದ್ದಾರೆ. ಎಲ್ಲ ಕ್ಷೇತ್ರಗಳಲ್ಲೂ ಇಂದು ಶೋಷಣೆಯು ಬೇರೂರಿದ್ದು ಅದು ನಿವಾರಣೆಯಾಗಬೇಕಾಗಿದೆ. ಇಂಥ ಶೋಷಣರಹಿತ ಸಮಾಜ ರಚನೆಯು ಉತ್ತಮ ಸಂಸ್ಥೆಗಳಿಂದ ಮಾತ್ರ ಸಾಧ್ಯ.' ಸಂನ್ಯಾಸಿಗಳಾದವರು, ಸ್ವಾಮಿಗಳಾದವರು ಆಚರಿಸಬೇಕಾದ ಕರ್ತವ್ಯಕರ್ಮಗಳ ರೂಪರೇಖೆಗಳನ್ನು ವಿವರಿಸಿದರು. ೧೨ ಘಂಟೆಯ ಸಮಯಕ್ಕೆ ಸರಿಯಾಗಿ ಸಭಾಕಾರ್ಯಕ್ರಮಗಳು ಪರಿಸಮಾಪ್ತಿಯಾದವು. ಬೆಂಗಳೂರಿನ ಪ್ರಸಿದ್ಧ ವ್ಯಾಪಾರಿಗಳಾದ ಶ್ರೀ ಜಿ. ಶಿವಪ್ಪನವರ ವಂದನಾರ್ಪಣೆಯೊಡನೆ ಅಗಿನ ಸಭಾ ಕಾರ್ಯಕ್ರಮಗಳು ಮುಕ್ತಾಯವಾದುವು.

ಕಾರ್ಯಕ್ರಮಗಳು ಮುಕ್ತಾಯವಾಗುವ ಪೂರ್ವದಲ್ಲಿ ಈ ಸಮಾರಂಭವು ಇಷ್ಟೊಂದು ಯಶಸ್ವಿಯಾಗಿ ಕೊನೆಗೊಳ್ಳಲು ಕಾರಣ ಕರ್ತರಾದ ಶ್ರೀ ಕೆ. ತಿಪ್ಪೇರುದ್ರಯ್ಯನವರಿಗೆ ಶ್ರೀಗಳವರು ಸುವರ್ಣಪದಕ ಮತ್ತು ಶಾಲುಜೋಡಿಯನ್ನು ಹೊದಿಸಿ ಆಶೀರ್ವಾದ ಮಾಡಿದರು. ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಪುಟ್ಟಸ್ವಾಮಪ್ಪ ಮತ್ತು ಚೌಡಯ್ಯನವರಿಗೂ ಖಜಾಂಚಿಗಳಾದ ಶ್ರೀ ಸಿದ್ಧಲಿಂಗಯ್ಯ ಅವರುಗಳಿಗೂ ಶಾಲು ಹೊದಿಸಿ ಆಶೀರ್ವದಿಸಿದರು.

### ಶಿವಾನುಭವ ಸಮ್ಮೇಲನ

(ತಾ॥ ೨೮–೫–೧೯೭೨ರ ಮಧ್ಯಾಹ್ನ ೨ ರಿಂದ ೫ ಘಂಟೆಯವರೆಗೆ)

ಗೋಷ್ಠಿಯಲ್ಲಿ ಪಂಡಿತರತ್ನ ಜಿ. ಶಿವಮೂರ್ತಿಶಾಸ್ತ್ರಿ, ಆಸ್ಥಾನ ವಿದ್ವಾನ್ ನಂಜುಂಡಾರಾಧ್ಯ, ವೇ॥ ಬ್ರ. ಶ್ರೀ ನಾಗಭೂಷಣಶಾಸ್ತ್ರಿ, ಡಾ॥ ಹೆಚ್. ತಿಪ್ಪೇರುದ್ರಸ್ವಾಮಿ, ತುಮಕೂರಿನ ಕರಿಬಸವ ಸ್ವಾಮಿಗಳು ಮೊದಲಾದ ಗಣ್ಯ ವಿದ್ವಾಂಸರೂ ಅನುಭವಿಗಳೂ ಭಾಗವಹಿಸಿ 'ಶಿವಾನುಭವ'ದ ವಿಚಾರವಾಗಿ ಹೃದಯಂಗಮವಾಗಿ ಮಾತನಾಡಿದರು. ಇವಕ್ಕೂ ಪೂರ್ವದಲ್ಲಿ ಸುತ್ತೂರು ಶಿವರಾತ್ರಿ ರಾಜೇಂದ್ರಸ್ವಾಮಿಗಳು ಶಿವಾನುಭವವೆಂದರೇನು ? ಅದನ್ನು ಮೈಗೂಡಿಸಿಕೊಳ್ಳಲು ಭಕ್ತಸ್ಥಲದಿಂದ ಐಕ್ಯಸ್ಥಲದ ವರೆಗೆ ಜೀವನು ಸಾಧಿಸಬೇಕಾದ ಸಾಧನೆಗಳೇನು? ಮುಂತಾದ ಬಗೆಗೆ ತಮ್ಮ ಉದ್ಘಾಟನಾ ಭಾಷಣದಲ್ಲಿ ವಿವರಿಸಿದರು. ಸಮ್ಮೇಲನಾಧ್ಯಕ್ಷರಾದ ಶ್ರೀ ತರಳಬಾಳು ಜಗದ್ಗುರುಗಳವರು ಬಸವಾದಿ ಪ್ರಮಥರ ದಿವ್ಯಸಂದೇಶವನ್ನು ಕಾರ್ಯರೂಪಕ್ಕೆ ತರಲು ಸರ್ವರೂ ಹೆಣಗಬೇಕೆಂದೂ ಅವರು ಸಕಲ ಜೀವರಾಶಿಗಳ ಉದ್ಧಾರಕ್ಕಾಗಿ ಹೆಣಗಿದ ಮಹಾತ್ಮರೆಂದೂ ತಿಳಿಸಿ ನಾವು ಬಸವಾದಿ ಪ್ರಮಥರ ತತ್ತ್ವಗಳನ್ನು ಎಷ್ಟರಮಟ್ಟಿಗೆ ಕಾರ್ಯರೂಪಕ್ಕೆ ತರುತ್ತಿದ್ದೇವೆ? ಎಂದು ಪ್ರಶ್ನಿಸಿ, ಹೀಗೆ ಆಗಬಾರದೆಂದು ಉಪದೇಶಿಸಿದರು. ನಂತರ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರು ಉಪದೇಶ ಭಾಷಣ ಮಾಡಿದರು. ಕೊನೆಯಲ್ಲಿ ಬಿಳಿಗೆರೆ ಶ್ರೀ ಕಂಬಣ್ಣನವರ ವಂದನಾರ್ಪಣೆಯೊಂದಿಗೆ ಸಭೆಯ ಕಾರ್ಯಕಲಾಪಗಳು ಮುಕ್ತಾಯಗೊಂಡವು.

## ೬. ಸಿದ್ಧಗಂಗೆಯಲ್ಲಿ ದ್ವಿತೀಯ ಸಂಸ್ಕೃತ ಸಮ್ಮೇಳನ

(೧೯೭೮ರ ಅಕ್ಟೋಬರ್ ೧೩ ರಿಂದ ೧೫ರವರೆಗೆ)

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ದ್ವಿತೀಯ ಅಖಿಲ ಕರ್ನಾಟಕ ಸಂಸ್ಕೃತ ಸಮ್ಮೇಳನವು ನಡೆಯಿತು. ಇದರಲ್ಲಿ ಸ್ಥಳೀಯರೂ ಮತ್ತು ಪರ ಊರುಗಳಿಂದ ಬಂದವರೂ ಸೇರಿ ೫೦೦ ಮಂದಿ ಸಂಸ್ಕೃತ ವಿದ್ವಾಂಸರು ಮತ್ತು ಸಂಸ್ಕೃತ ಪ್ರೇಮಿಗಳು ಕಲೆತಿದ್ದರು, ಈ ಸಮ್ಮೇಳನವು ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ತಿನ ಆಶ್ರಯದಲ್ಲಿ ಆಯೋಜಿಸಲ್ಪಟ್ಟಿತ್ತು.

ದಿನಾಂಕ ೧೩-೧೦-೧೯೭೮ ರ ಶುಕ್ರವಾರ ಪ್ರಖ್ಯಾತ ಅರ್ಥಶಾಸ್ತ್ರಜ್ಞರೂ ಮತ್ತು ಸಂಸ್ಕೃತಪ್ರೇಮಿಗಳೂ ಆದ ಡಾ॥ ವಿ. ಕೆ. ಆರ್. ವಿ. ರಾವ್ ಅವರು ಸಮ್ಮೇಳನವನ್ನು ಉದ್ಘಾಟಿಸಿದರು, ಸಂಸ್ಕೃತವು ಯಾವುದೇ ಒಂದು ಜನಾಂಗದ ಸೊತ್ತಲ್ಲ, ಎಂಬುದನ್ನು ಸ್ಪಷ್ಟಪಡಿಸಿದ ಡಾ॥ ರಾವ್ ಅವರು 'ಇದು ಜನ ಸಾಮಾನ್ಯರ ಭಾಷೆಯಾಗಲಿ' ಎಂದು ಹಾರೈಸಿದರು. ಈಗಿನ ಸರಕಾರವು ವಯಸ್ಕರ ಶಿಕ್ಷಣಕ್ಕಾಗಿ ಅದೆಷ್ಟೋ ಕೋಟಿ ರೂಪಾಯಿಗಳನ್ನು ಖರ್ಚುಮಾಡುತ್ತಿರುವುದಾಗಿ ತಿಳಿಸಿದ ಡಾ॥ ರಾವ್ ಸಂಸ್ಕೃತ ಶಿಕ್ಷಣವನ್ನು ಸಹ ಮೇಲಿನ ಯೋಜನೆಯ ಒಂದು ಅಂಗವಾಗಿ ಪರಿಗಣಿಸಿ ಆ ಶಿಕ್ಷಣವನ್ನು ನೀಡುವಂತಾಗಬೇಕು ಎಂದು ಅಭಿಪ್ರಾಯಪಟ್ಟರು.

ಪ್ರಾಚೀನ ಹಸ್ತ ಪ್ರತಿಗಳು, ಆಧುನಿಕ ಸಂಸ್ಕೃತ ಪುಸ್ತಕಗಳು ಮತ್ತು ಪೌರಾಣಿಕ ಚಿತ್ರಗಳ ಪ್ರದರ್ಶನ ಈ ಸಮ್ಮೇಲನದ ಒಂದು ಪ್ರಮುಖ ಆಕರ್ಷಣೆಯಾಗಿ ಕಂಗೊಳಿಸುತ್ತಿತ್ತು. ಬೆಂಗಳೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಶ್ರೀ ಟಿ. ಆರ್. ಜಯರಾಮನ್ ಅವರು ಸಮ್ಮೇಳನದ ಸ್ಮೃತಿಸಂಚಿಕೆಯನ್ನು ಮತ್ತು ಸಂಸ್ಕೃತ ವಾಣೀ, ಸುಧರ್ಮಾ ಮತ್ತು ಕಲಾ ದರ್ಶನಗಳ ವಿಶೇಷ ಸಂಚಿಕೆಗಳನ್ನೂ ಸಹ ಬಿಡುಗಡೆ ಮಾಡಿದರು.

ಈ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದವರು ಪ್ರಖ್ಯಾತ ಸಂಸ್ಕೃತಜ್ಞರೂ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಸಂಸ್ಕೃತ ವಿಭಾಗದ ಮುಖ್ಯಸ್ಥರೂ ಆದ ಡಾ॥ ಕೆ. ಕೃಷ್ಣಮೂರ್ತಿಯವರು. 'ರಾಜ್ಯದಲ್ಲಿ ಸಂಸ್ಕೃತದ ಅಭಿವೃದ್ಧಿಗಾಗಿಯೇ ಒಂದು ಸ್ವತಂತ್ರ ಸಂಸ್ಕೃತ ಅಕಾಡೆಮಿ ಸ್ಥಾಪಿತವಾಗಬೇಕು. ಸಂಸ್ಕೃತ ಕಾರ್ಯಕರ್ತರು ಸಂಸ್ಕೃತವನ್ನು ಮನೆ ಮನೆಗೂ ಒಯ್ಯುವ ಕೆಲಸವನ್ನು ಶ್ರದ್ಧಾ-ಭಕ್ತಿ ಮತ್ತು ನಿಸ್ವಾರ್ಥತೆಯಿಂದ ಸಾಧಿಸಬೇಕು. ಸಂಸ್ಕೃತ ಕಲಿಕೆಗೆ ಅವಕಾಶವಿಲ್ಲದ ಶಾಲಾ-ಕಾಲೇಜುಗಳಲ್ಲಿ ಇದರ ಅಧ್ಯಯನಕ್ಕೆ ಅವಕಾಶ ಕಲ್ಪಿಸಬೇಕು' ಎಂದು ತಿಳಿಸಿದರು.

ಪ್ರಥಮ ಸಂಸ್ಕೃತ ಸಮ್ಮೇಳನಾಧ್ಯಕ್ಷರಾಗಿದ್ದು ಈಗಿನ ಅಧ್ಯಕ್ಷರಿಗೆ ಅಧಿಕಾರ ವಹಿಸಿಕೊಡುವ ಮಾತುಗಳನ್ನಾಡಿದ ಪ್ರೊಫೆಸರ್ ಕೆ. ಟಿ. ಪಾಂಡುರಂಗಿಯವರು 'ಸಂಸ್ಕೃತವೆಂದರೆ ಮೂಗು ಮುರಿಯುವ ಕಾಲ ಈಗ ಇಲ್ಲ. ಸಂಸ್ಕೃತವನ್ನು ಇನ್ನಷ್ಟು ಅಭಿವೃದ್ಧಿ ಪಡಿಸುವ ಕಾರ್ಯವು ಈಗ ತುಂಬ ಅವಶ್ಯ ಎಂದರು. ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಅನುಗ್ರಹ ಭಾಷಣ ಮಾಡುತ್ತ 'ಪ್ರತಿಯೊಬ್ಬರೂ ಅಷ್ಟಿಷ್ಟಾದರೂ ಸಂಸ್ಕೃತವನ್ನು ಅಭ್ಯಾಸ ಮಾಡಿಯೇ ತೀರಬೇಕೆ'ಂದು ಅಪ್ಪಣೆಕೊಡಿಸಿದರು.

ಪ್ರಥಮತಃ ಪರಿಷತ್ತಿನ ಅಧ್ಯಕ್ಷರಾದ ಧರ್ಮಸ್ಥಳದ ವೀರೇಂದ್ರಹೆಗ್ಗಡೆ ಅವರು ಸ್ವಾಗತ ಭಾಷಣ ಮಾಡುತ್ತ 'ನಮ್ಮ ರಾಜ್ಯದ ಜನರಿಗೆ ಸಂಸ್ಕೃತದ ಬಗ್ಗೆ ತುಂಬಾ ಅಭಿಮಾನವಿದೆ. ಅವರ ಇಚ್ಛೆಗೆ ತಕ್ಕಂತೆ ಸುಸ್ಕೃತ ಹೇಳಿಕೊಡುವ ಕಾರ್ಯವು ಮಾತ್ರ ತುಂಬಾ ತ್ವರಿತವಾಗಿ ಆಗಬೇಕು' ಎಂದರು. ವಂದನಾರ್ಪಣೆಯಾದ ಮೇಲೆ ಸಂಸ್ಕೃತ ಗೀತೆಗಳ ಗಾಯನದೊಂದಿಗೆ ಮೊದಲ ದಿನದ ಕಾರ್ಯಕ್ರಮದ ಮುಕ್ತಾಯವಾಯಿತು. ತಾ॥ ೧೪-೧೦-೧೯೭೮ ರ ಬೆಳಿಗ್ಗೆ ಶ್ರೀ ಜಿ. ಚನ್ನವೀರ ಸ್ವಾಮಿ, ಡಾ॥ ಎಚ್.ಪಿ. ಮಲ್ಲೇದೇವರು ಮತ್ತು ವಿದ್ವಾನ್ ಎನ್. ರಂಗನಾಥಶರ್ಮಾ ಇವರುಗಳ ಅಧ್ಯಕ್ಷತೆಯಲ್ಲಿ ಕ್ರಮವಾಗಿ ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆ, ರಾಜ್ಯದ ವಿಶ್ವವಿದ್ಯಾಲಯಗಳು ಮತ್ತು ಸಾಂಪ್ರದಾಯಕ ಸಂಸ್ಕೃತ ಶಾಲಾ-ಕಾಲೇಜುಗಳಲ್ಲಿನ ಸಂಸ್ಕೃತ ಶಿಕ್ಷಣದ ಬಗ್ಗೆ ವಿಚಾರ ಗೋಷ್ಠಿಗಳು ನಡೆದವು. ಪಠ್ಯಪುಸ್ತಕಗಳು, ಪಾಠ್ಯಕ್ರಮ, ಪ್ರಶ್ನೆ ಪತ್ರಿಕೆಗಳ ಬಗೆಗಲ್ಲದೆ ಈ ಸಂಸ್ಥೆಗಳಲ್ಲಿ ಸಂಸ್ಕೃತ ಶಿಕ್ಷಣಕ್ಕೆ ಇರುವ ಸಮಸ್ಯೆಗಳ ಬಗೆಗೂ ಅನೇಕರು ಪ್ರಬಂಧಗಳನ್ನು ಮಂಡಿಸಿದರು.

ಅನಂತರ ಮಧ್ಯಾಹ್ನ ಡಾ॥ ದಯಾನಂದ ಶಾನಭಾಗ ಅವರ ಅಧ್ಯಕ್ಷತೆಯಲ್ಲಿ ಸಂಘಟನಾತ್ಮಕ ಅಧಿವೇಶನವು ನಡೆದು ಪರಿಷತ್ತಿನ ನಾನಾವಿಭಾಗಗಳ ಕಾರ್ಯಕರ್ತರು ತಮ್ಮ ವಿಭಾಗಗಳ ವರದಿಯನ್ನು ಓದಿದರು. ಪರಿಷತ್ತಿನ ಘಟನಾವಳಿಗಳು ಮತ್ತು ಮುಂದಿನ ಯೋಜನೆಗಳನ್ನು ಸಭೆಯು ಅಂಗೀಕರಿಸಿತು. ಈ ಮಧ್ಯದಲ್ಲಿ ಸಭಾಸದರ ಕುತೂಹಲವನ್ನು ಕೆರಳಿಸಿದ ಉಪನ್ಯಾಸ ಕಾರ್ಯಕ್ರಮವೊಂದು ನಡೆಯಿತು. ನಾಗಪುರ ವಿಶ್ವವಿದ್ಯಾಲಯದ ಸಂಸ್ಕೃತ ವಿಭಾಗದ ಮುಖ್ಯಸ್ಥರಾದ ಡಾ॥ ಶ್ರೀಧರ ಭಾಸ್ಕರ ವರ್ಣೇಕರ್ ಅವರು ಸಂಸ್ಕೃತದಲ್ಲಿ ಸಂಸ್ಕೃತದ ವೈಭವವನ್ನು ಕುರಿತು ಉಪನ್ಯಾಸ ಮಾಡಿದರು,

ಅಂದು ಸಂಜೆ ಗದಗಿನಲ್ಲಿ ಸಂಸ್ಕೃತ ಕಾಲೇಜೊಂದನ್ನು ಕಟ್ಟಲು ೭ ಲಕ್ಷ ರೂಗಳನ್ನು ದಾನ ಮಾಡಿದ ಶ್ರೀ ದಾನಪ್ಪ ಗುರುಸಿದ್ಧಪ್ಪ ಮೇಲ್ಮಾಳಗಿ ಅವರನ್ನು ಸನ್ಮಾನಿಸಲಾಯಿತು.

ಅಂದಿನ ಮನರಂಜನಾ ಕಾರ್ಯಕ್ರಮವು ವಿಶಿಷ್ಟ ರೀತಿಯದು. ರಂಗದಲ್ಲಿ ಮೊದಲ ಬಾರಿಗೆ ಸಂಸ್ಕೃತ ಯಕ್ಷಗಾನ ಏರ್ಪಟ್ಟದ್ದು ಆಶ್ಚರ್ಯ ಮತ್ತು ಸಂತೋಷದ ಸಂಗತಿ, ಸಂಸ್ಕೃತ ಪರಿಷತ್ತಿನ ಉಡುಪಿ ಶಾಲೆಯ ಕಲಾವಿದರು 'ಮಾಗಧವಧ' 'ಜರಾಸಂಧ ವಧ' ಎಂಬ ಭಾಗವನ್ನು ತುಂಬಾ ಚಿತ್ತಾಕರ್ಷಕವಾಗಿ ಅಭಿನಯಿಸಿದರು.

ಕೊನೆಯದಿನದ ಕಾರ್ಯಕ್ರಮವು ಆರಂಭವಾದದ್ದು ಡಾ॥ ಸರೋಜಿನೀ ಮಹಿಷಿಯವರ ಭಾಷಣದೊಂದಿಗೆ. ಅವರು ಅಂದಿನ ಗೋಷ್ಠಿಗಳ ಉದ್ಘಾಟನಾ ಭಾಷಣ ಮಾಡುತ್ತಾ, ಸಂಸ್ಕೃತಭಾಷೆಯನ್ನು ಸಾರ್ವತ್ರಿಕ ಭಾಷೆಯನ್ನಾಗಿಸಬೇಕೆಂದು ಕರೆಯಿತ್ತರು. ವಿದ್ವಾನ್. ವೈ. ವಿಶ್ವನಾಥಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ 'ಇಂದಿನ ಕಾಲದಲ್ಲಿ ಶಾಸ್ತ್ರಗಳ ಅಧ್ಯಯನದ ಪ್ರಯೋಜನದಲ್ಲಿ

ವ್ಯಾಕರಣ' ಎಂಬ ವಿಷಯದ ಬಗ್ಗೆ ಶಾಸ್ತ್ರಗೋಷ್ಠಿ ನಡೆಯಿತು. ತರ್ಕ, ವ್ಯಾಕರಣ, ವೇದಾಂತ, ಮೊದಲಾದ ಹತ್ತಾರು ಶಾಸ್ತ್ರಗಳ ವಿದ್ವಾಂಸರು ತಮ್ಮ ತಮ್ಮ ಶಾಸ್ತ್ರದ ದೃಷ್ಟಿಯನ್ನು ವಿವರಿಸಿದರು.

ಅನಂತರ ಶ್ರೀ ಪಂಢರೀನಾಥಾಚಾರ್ಯ ಗಲಗಲಿ ಅವರ ಅಧ್ಯಕ್ಷತೆಯಲ್ಲಿ ಕವಿ ಗೋಷ್ಠಿಯು ನಡೆಯಿತು. ರಾಜ್ಯದ ನಾನಾಭಾಗಗಳಿಂದ ಬಂದ ಕವಿಗಳು ಸಂಸ್ಕೃತದಲ್ಲಿ ಹೊಸ ಹೊಸ ಛಂದಸ್ಸುಗಳ ಪ್ರಯೋಗದಲ್ಲಿ ತಮ್ಮ ಕುಶಲತೆಯನ್ನು ಪ್ರದರ್ಶಿಸಿದರು.

ಮಧ್ಯಾಹ್ನ ಶ್ರೀಮತಿ ಡಿ. ಶಾರದಾ ಅವರ ಅಧ್ಯಕ್ಷತೆಯಲ್ಲಿ ಮಹಿಳಾಗೋಷ್ಠಿಯು ಜರುಗಿತು. ಈ ಗೋಷ್ಠಿಯಲ್ಲಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ ವಿದುಷಿಯರ ಮಹಿಳೆಯರ ಸ್ಥಾನಮಾನಗಳ ಬಗ್ಗೆ ಕಳವಳ ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಮಾತನಾಡಿದ ಸಮ್ಮೇಳನಾಧ್ಯಕ್ಷ ಶ್ರೀ ಕೆ. ಕೃಷ್ಣಮೂರ್ತಿಯವರು 'ಮಹಿಳೆಯರಿಗೆ ಸಂಸ್ಕೃತ ಸಾಹಿತ್ಯದಲ್ಲಿ ಮುಕ್ತವಾದ ಅವಕಾಶಗಳನ್ನು ಕೊಡಲಾಗಿದೆ. ಅದನ್ನು ಉಪಯೋಗಿಸಿಕೊಂಡು ಸಂಸ್ಕೃತ ಶಿಕ್ಷಕಿಯರಾದ ಮಹಿಳೆಯರು ಸಂಸ್ಕೃತವನ್ನು ರಕ್ಷಿಸಬಲ್ಲವರಾಗಬೇಕು' ಎಂದು ನುಡಿದರು.

ಇದರ ನಂತರ 'ಸುಧರ್ಮಾ' ದೈನಿಕ ಸಂಸ್ಕೃತ ಪತ್ರಿಕೆಯ ಸಂಪಾದಕರಾದ ಪಂಡಿತ ಕೆ. ಎನ್. ವರದರಾಜಯ್ಯಂಗಾರ್ ಅವರು ಪ್ರಚಾರ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತಾ 'ಸಂಸ್ಕೃತ ಭಾಷೆಯ ಪ್ರಚಾರ ಪ್ರಸಾರದಲ್ಲಿ ಎಲ್ಲರೂ ಸಕ್ರಿಯ ಪಾತ್ರವಹಿಸಬೇಕೆಂದು ಕರೆಯಿತ್ತರು. ಈ ಗೋಷ್ಠಿಯಲ್ಲಿ ಹಲವು ಕಾರ್ಯಕರ್ತರು ಹಲವು ದೃಷ್ಟಿಕೋನಗಳಿಂದ ವಿಮರ್ಶಿಸಿದರು.

**ಸಮಾರೋಪ**

ಸಂಜೆ ೫–೩೦ಕ್ಕೆ 'ಸಮಾರೋಪ ಸಮಾರಂಭ'ವು ಅತ್ಯಂತ ವಿಜೃಂಭಣೆಯಿಂದ ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದ ಶ್ರೀ ಎಸ್. ಮಂಚಯ್ಯನವರು ವಹಿಸಿದ್ದರು. ಅವರು 'ಸಂಸ್ಕೃತ ಭಾಷೆಯ ಪ್ರಚಾರ ಜನಸಾಮಾನ್ಯರಲ್ಲಿ ಆಗಬೇಕಾದರೆ ಅದಕ್ಕೆ ಇನ್ನೂ ಕವಿದಿರುವ 'ಮಡಿ' ಭಾವನೆಯು ದೂರವಾಗಬೇಕು: ಸಂಸ್ಕೃತದ ಅಭಿವೃದ್ಧಿಯ ವಿಷಯದಲ್ಲಿ ಸರ್ಕಾರವು ತನ್ನ ಸಹಕಾರ ಹಸ್ತವನ್ನು ನೀಡುವುದು' ಎಂದರು.

ಬೆಂಗಳೂರಿನ ಎಂ. ಇ. ಎಸ್ ಕಾಲೇಜಿನ ಶ್ರೀ ಎಂ. ಪಿ. ಎಲ್. ಶಾಸ್ತ್ರಿಗಳವರು ತಮ್ಮ ಸಮಾರೋಪ ಭಾಷಣದಲ್ಲಿ ಸರ್ಕಾರವು ವಿದ್ಯಾಭ್ಯಾಸಕ್ಕಾಗಿ ವ್ಯಯ ಮಾಡುವ ಹಣದಲ್ಲಿ ಸಂಸ್ಕೃತಕ್ಕಾಗಿ ೨೮೭೬ರಲ್ಲಿ ಒಂದು ಭಾಗ ಮಾತ್ರ ಮೀಸಲಿಟ್ಟಿದ್ದಾರೆ. ಈ ಮೊತ್ತವನ್ನು ಹೆಚ್ಚಿಸಿ, ಸಂಸ್ಕೃತ ಶಾಸ್ತ್ರಾಧ್ಯಯನಕ್ಕೆ ಪ್ರೇರಕರವಾಗುವಂತೆ ಮಾಸಿಕ ೨೫೦ ರೂ. ವಿದ್ಯಾರ್ಥಿ ವೇತನಗಳನ್ನು ನೀಡಬೇಕೆಂದರು. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಂದೇಶದಿಂದ ಸಮಾರಂಭ ಮುಕ್ತಾಯವಾಯಿತು.

ಈ ಸಮ್ಮೇಲನದ ಗೋಷ್ಠಿಯಲ್ಲಿ ಕೆಲವು ಗಮನ ಸೆಳೆಯುವ ನಿರ್ಣಯಗಳನ್ನು ಕೈಕೊಳ್ಳಲಾಯಿತು. ಅವುಗಳಲ್ಲಿ ಕೆಲವು ಹೀಗಿವೆ :–

೧) ಪ್ರಾಥಮಿಕ ಹಂತದಿಂದಲೇ ಪ್ರಾಯೋಗಿಕವಾಗಿ ಸಂಸ್ಕೃತವನ್ನು ಶಿಕ್ಷಣ ಮಾಧ್ಯಮವನ್ನಾಗಿ ತರಬೇಕು.
೨) ಪ್ರೌಢಶಾಲೆಗಳಲ್ಲಿ ಸಂಸ್ಕೃತವನ್ನು ದ್ವಿತೀಯ ಭಾಷೆಯನ್ನಾಗಿಯೂ ಕಲಿಯಲು ಅವಕಾಶ ಕಲ್ಪಿಸಿಕೊಡಬೇಕು.
೩) ಸಾಂಪ್ರದಾಯಿಕ ಪ್ರಮಾಣ ಪತ್ರಗಳನ್ನು ಹಾಗು ಪದವಿಗಳನ್ನು ಪಡೆದವರಿಗೆ ಸಂಶೋಧನೆ ಮತ್ತು ಉದ್ಯೋಗ ಇವುಗಳಲ್ಲಿ ಹೆಚ್ಚು ಹೆಚ್ಚು ಅವಕಾಶಗಳನ್ನು ಕಲ್ಪಿಸಿಕೊಡಬೇಕು.
೪) ಮೂರು ವಿಶ್ವವಿದ್ಯಾಲಯಗಳ ಸಂಸ್ಕೃತ ಶಿಕ್ಷಣದಲ್ಲಿ ಏಕರೂಪತೆಯನ್ನು ತಂದು ಅವರ ಪಠ್ಯಕ್ರಮಕ್ಕೆ ಕಾಯಕಲ್ಪ ಮಾಡಬೇಕು. ಹಾಗೂ ಅಧ್ಯಾಪಕರಿಗೆ ವಿಶೇಷ ತರಬೇತಿ ವ್ಯವಸ್ಥೆ ಮಾಡಬೇಕು.
೫) ದಕ್ಷಿಣ ಭಾರತದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲು ಸಂಬಂಧಪಟ್ಟವರನ್ನು ಒತ್ತಾಯಿಸಬೇಕು.

# ಶ್ರೀಕ್ಷೇತ್ರದ ವಿದ್ಯಾರ್ಥಿಗಳ ಚಟುವಟಿಕೆಗಳು

[ಶ್ರೀ ಸಿದ್ಧಗಂಗಾಮಠದ ಆವರಣ ಜಾಗೃತಿಗೊಳ್ಳುವುದು ರಾತ್ರಿ ೨.೩೦ರಿಂದ ೩ ಘಂಟೆ ವೇಳೆಗೆ. ಮೊದಲ ಈ ಜಾಗೃತಿ ಶ್ರೀಶ್ರೀಗಳವರದು. ಅವರು ಪ್ರತಿನಿತ್ಯ ರಾತ್ರಿ ೨ ಘಂಟೆಯ ಬ್ರಾಹ್ಮೀವೇಳೆಯಲ್ಲಿ ಸ್ನಾನ ಮುಗಿಸಿ ಶಿವಲಿಂಗ ಪೂಜಾಕ್ರಿಯೆಯಲ್ಲಿ ತೊಡಗಿರುತ್ತಾರೆ, ಆಗ ಹಳೆಯ ಮಠದ ವ್ಯಾಪ್ತಿಯಲ್ಲಿ ಸ್ನಾನ, ಪೂಜೆ. ಮಾಡೆತ್ತುವುದು ಇತ್ಯಾದಿ ಕಾರ್ಯಗಳಲ್ಲಿ ಅನೇಕ ಜನ ಮೂರ್ತಿಗಳು ಮತ್ತು ವಿದ್ಯಾರ್ಥಿಗಳು ತೊಡಗಿರುತ್ತಾರೆ. ಎರಡನೆಯ ಜಾಗೃತಿ ೫ ಘಂಟೆಗೆ ಇನ್ನಿತರ ಮಠದ ಆವರಣದಲ್ಲಾಗುವುದು].

**ದೊಡ್ಡ ಮೊತ್ತದ ವಿದ್ಯಾರ್ಥಿ ಸಮೂಹ :**

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಒಂದೇಕಡೆ ಸುಮಾರು ನಾಲ್ಕುಸಾವಿರ ಜನ ವಿದ್ಯಾರ್ಥಿಗಳಿಂದ ತುಂಬಿದ ವಿದ್ಯಾರ್ಥಿ ನಿಲಯ ರಾಷ್ಟ್ರದಲ್ಲಿಯೇ ದೊಡ್ಡದು. ಆ ವಿದ್ಯಾರ್ಥಿಗಳು ಪ್ರಾಥಮಿಕ ೧ನೆಯ ತರಗತಿಯಿಂದ ಹೈಸ್ಕೂಲ್‌ವರೆಗೆ, ಪಿ.ಯು.ಸಿ. ಡಿಗ್ರಿ ತರಗತಿಗಳು, ಇಂಜನಿಯರಿಂಗ್ ಕಾಲೇಜುಗಳಲ್ಲಿ ಓದುವವರು, ಇವಲ್ಲದೆ ಟಿ.ಸಿ.ಹೆಚ್. ಕನ್ನಡಪಂಡಿತ, ವಾಣಿಜ್ಯ ವಿಭಾಗದ ವಿದ್ಯಾರ್ಥಿಗಳೂ, ಕುರುಡರ ವಿದ್ಯಾಭ್ಯಾಸ ತರಗತಿಗಳಲ್ಲಿ ಓದುವವರೂ ಇದ್ದಾರೆ. ಇವರೆಲ್ಲರ ಒಟ್ಟು ಸಂಖ್ಯೆಯಿಷ್ಟಾದರೆ, ಇವರಲ್ಲಿ ಸುಮಾರು ಎರಡೂವರೆ ಸಾವಿರದಷ್ಟು ವಿದ್ಯಾರ್ಥಿಗಳು ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸಂಸ್ಕೃತ ಪ್ರಾಥಮಿಕ ಒಂದನೆಯ ತರಗತಿಯಿಂದ ತರ್ಕ, ವ್ಯಾಕರಣ, ಅಲಂಕಾರ, ಶಕ್ತಿವಿಶಿಷ್ಟಾದ್ವೈತ ವಿದ್ವತ್ ಮಟ್ಟದವರೆಗೆ ಮತ್ತು ವೇದಭಾಗಗಳನ್ನು ಓದುವವರಾಗಿದ್ದಾರೆ. ಅನೇಕ ಮಠಗಳಿಗೆ ಉತ್ತರಾಧಿಕಾರಿಗಳಾಗುವವರು ಸಮಯನಿಷ್ಠೆ ಕಲಿಯಲು ಅವರವರ ಗುರುಪೋಷಕರಿಂದ ಸಿದ್ಧಗಂಗಾ ಶ್ರೀಗಳವರಲ್ಲಿಗೆ ಕಳಿಸಿಕೊಡಲ್ಪಟ್ಟಿದ್ದಾರೆ. ಇವರೆಲ್ಲ ಹಳೆಯ ಮಠದಲ್ಲಿಯೇ ಇದ್ದು ಶ್ರೀಸ್ವಾಮಿಗಳವರ ಖಾಸಾ ಸೇವೆಯಲ್ಲಿದ್ದು ಎಲ್ಲರೂ ಸಂಸ್ಕೃತ ಮತ್ತು ತಮಗಿಷ್ಟಬಂದ ಇನ್ನಿತರ ವಿದ್ಯಾಭ್ಯಾಸ ಮಾಡುತ್ತಿದ್ದಾರೆ.

**ಪಾಠಪ್ರವಚನ :** ಹೀಗೆ ದೊಡ್ಡ ಸಂಖ್ಯೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಚಟವಟಿಕೆಗಳು ಪ್ರಾರಂಭವಾಗುವುದು ಬೆಳಗಿನ ಐದು ಘಂಟೆಯಿಂದ. ಶ್ರೀ ಸಿದ್ಧಲಿಂಗೇಶ್ವರಸ್ವಾಮಿಗೆ ನಿತ್ಯರುದ್ರಾಭಿಷೇಕ ಪ್ರಾರಂಭವಾಗುವುದು ಇದೇ ಸಮಯದಿಂದ, ಶ್ರೀ ಸಿದ್ಧಲಿಂಗೇಶ್ವರರ ಉಪ್ಪವಡಗೀತೆ, ಶ್ರೀ ರುದ್ರಾದಿ ವೇದ ಘೋಷದ ಪ್ರಸನ್ನಗಂಭೀರಧ್ವನಿ ಬೆಳಗಿನ ನಾಲ್ಕುವರೆ ಘಂಟೆಗೆ ಶ್ರೀ ಸಿದ್ಧಗಂಗಾ ಗಿರಿಯ ಗುಹೆಗಹ್ವರಗಳಲ್ಲಿ ಪ್ರತಿಧ್ವನಿಸುತ್ತಿರುತ್ತದೆ. ಗಂಟೆ ಜೇಗಟೆ, ನಾಗಸ್ವರಗಳ ಮಂಗಳ ಧ್ವನಿ ಮಾರ್ದನಿಗೊಳ್ಳುತ್ತಿರುತ್ತದೆ. ಈ ಧ್ವನಿಗೇಳಿ ಎಚ್ಚೆತ್ತ ಮಠದ ವಿದ್ಯಾರ್ಥಿವೃಂದ ತಮ್ಮ ತಮ್ಮ ಸ್ನಾನ-ಪೂಜೆ-ಇತ್ಯಾದಿ ವ್ಯವಹಾರಗಳಲ್ಲಿ ತೊಡಗುತ್ತಾರೆ. ಅನಂತರ ತಮ್ಮ ನಿತ್ಯದ ಪಾಠಪ್ರವಚನಗಳನ್ನು ನೋಡಿಕೊಂಡು ಸಂಸ್ಕೃತ ಕಾಲೇಜಿಗೆ ಹೋಗುವವರೆಲ್ಲ ೬-೪೫ ಘಂಟೆಗೆ ಸಂಸ್ಕೃತ ಕಾಲೇಜಿನ ವಿಶಾಲ ಪ್ರಾಂಗಣದಲ್ಲಿ ಪ್ರಾರ್ಥನೆಗೆ ಸಿದ್ಧವಾಗಿನಿಂತು, ಸಂಸ್ಕೃತದಲ್ಲಿ ಪ್ರಾರ್ಥನೆ ಸಲ್ಲಿಸಿ ೭ ಘಂಟೆಯಿಂದ ೧೦ ಘಂಟೆಯವರೆಗೆ ವಿವಿಧ ಸಂಸ್ಕೃತ ವಿಭಾಗದ ಪಾಠಪ್ರವಚನದಲ್ಲಿ ತಲ್ಲೀನರಾಗುತ್ತಾರೆ. ೭–೪೫ರಿಂದ ೧೧ ಘಂಟೆಯವರೆಗೆ ಟಿ.ಸಿ.ಹೆಚ್. ತರಗತಿಗಳೂ ಪ್ರಾರಂಭವಾಗುತ್ತವೆ. ಟಿ.ಸಿ.ಹೆಚ್. ವಿದ್ಯಾರ್ಥಿಗಳು ಮಧ್ಯಾಹ್ನ ಪ್ರ್ಯಾಕ್ಟಿಕಲ್ ಪಾಠಪ್ರವಚನ ನಡೆಸುತ್ತಾರೆ. ಕುರುಡರ ಶಾಲೆಯೂ ಈಗಲೇ ಪ್ರಾರಂಭವಾಗುತ್ತದೆ. ಮಧ್ಯಾಹ್ನ ೧೧ ಘಂಟೆಯಿಂದ ಪ್ರಾಥಮಿಕ, ಹೈಸ್ಕೂಲ್, ಹೈಯರ್‌ಸೆಕೆಂಡರಿ, ಕಾಮರ್ಸ್ ತರಗತಿ ಮೊದಲಾದ ವಿವಿಧ ತರಗತಿಯ ಪಾಠಪ್ರವಚನಗಳು ಪ್ರಾರಂಭವಾಗಿ ೫ ಘಂಟೆಯವರೆಗೆ ನಡೆಯುತ್ತವೆ.

**ವಿದ್ಯಾರ್ಥಿಗಳ ಊಟ ಇತ್ಯಾದಿ ವ್ಯವಸ್ಥೆ :** ಶ್ರೀಕ್ಷೇತ್ರದಲ್ಲಿ ಏಕಕಾಲದಲ್ಲಿ ಎಲ್ಲ ವಿದ್ಯಾರ್ಥಿಗಳ ಊಟ ನಡೆಯುವುದಿಲ್ಲ. ಬೆಳಗಿನ ೮.೩೦ ಘಂಟೆಗೆ ತುಮಕೂರು ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗೆಲ್ಲ ಊಟದ ಮೊದಲ ಪಂಕ್ತಿ ಪ್ರಾರಂಭವಾಗಿ ಅದು ಮುಗಿಯುತ್ತಿದ್ದಂತೆ ೧೦.೩೦ ಘಂಟೆಗೆ ಸಂಸ್ಕೃತ ಕಾಲೇಜಿನಲ್ಲಿ ಓದಿಬಂದ ವಿದ್ಯಾರ್ಥಿಗಳ ಊಟ ನಡೆಯುವುದು. ಊಟ ಮುಗಿಸಿಕೊಂಡು ಇವರೆಲ್ಲ ಪ್ರಾಥಮಿಕ ಮತ್ತು ಹೈಸ್ಕೂಲ್‌ಗಳಿಗೆ ಹೋಗಬೇಕು. ಅನಂತರ ೧೨ ಘಂಟೆಗೆ ಟಿ. ಸಿ. ಹೆಚ್. ಕನ್ನಡ ಪಂಡಿತ ತರಗತಿಗಳ ವಿದ್ಯಾರ್ಥಿಗಳ ಊಟ ಪ್ರಾರಂಭಗೊಂಡು ಮುಗಿಯುತ್ತದೆ.

೮-೩೦ಕ್ಕೆ ದೊಡ್ಡದೊಡ್ಡ ಕಡಾಯಿಗಳಲ್ಲಿ ದಾಸೋಹಗೃಹದಲ್ಲಿಮುದ್ದೆ, ಅನ್ನ, ಸಾರು ಸಿದ್ಧವಾಗಿರುತ್ತದೆ. ಶ್ರೀಕ್ಷೇತ್ರಕ್ಕೆ ಬರುವ ಸಾರ್ವಜನಿಕರಿಗೆಲ್ಲ ೮–೩೦ರಿಂದ ಊಟ ಸಾಗುತ್ತಲೇ ಇರುತ್ತದೆಂಬುದು ಇಲ್ಲಿ ಜ್ಞಾಪಿಸಬೇಕಾದ ಅಂಶ. ದಾಸೋಹಕ್ಕೆ ಮಾತ್ರ ಹೊತ್ತು ಗೊತ್ತು ಏನೂ ಇಲ್ಲ; ಇರಲೂಬಾರದು. ಶ್ರೀಕ್ಷೇತ್ರದ ಅತ್ಯಂತ ಪ್ರಮುಖವಾದ, ಆದ್ಯಗಮನದ ಅಂಶ ಇದು.

**ಮಧ್ಯಾಹ್ನ ಉಪಹಾರ :** ೨-೩೦ ಘಂಟೆಗೆ ಖೇರ್‌ಸಂಸ್ಥೆಯ ನೆರವಿನಿಂದ ಪ್ರಾಥಮಿಕ ಮತ್ತು ಹೈಸ್ಕೂಲ್ ತರಗತಿಯಲ್ಲಿ ಓದುವ ವಿದ್ಯಾರ್ಥಿಗಳಿಗೆಲ್ಲ ಉಪಾಹಾರವು ಕೊಡಲ್ಪಡುತ್ತದೆ. ಈ ಉಪಾಹಾರ ಮುಗಿಸಿ ಮಧ್ಯಾಹ್ನದ ತಮ್ಮ ಪಾಠಪ್ರವಚನ

ಕರ್ನಾಟಕ ವಿ. ವಿ. ನಿಲಯ ಶ್ರೀಗಳವರಿಗೆ ಡಿ. ಲಿಟ್. ಪ್ರಶಸ್ತಿಯಿತ್ತ ಸಂದರ್ಭದಲ್ಲಿ
ಸರ್ವಶ್ರೀ ಎಸ್. ಆರ್. ಕಂಠಿ, ಗಜೇಂದ್ರಗಡಕರ, ವಿ. ವಿ. ಗಿರಿ, ಡಿ. ಸಿ. ಪಾವಟೆಯವರೊಡನೆ ಶ್ರೀಗಳು.



ಮೇಲ್ಕಂಡ ಸಮಾರಂಭ ಸಮಯದಲ್ಲಿಯ ಇನ್ನೊಂದು ದೃಶ್ಯ.



ಪೂರ್ವಾಶ್ರಮದಲ್ಲಿ ಅಶನವಸತಿ ಸೌಕರ್ಯವಿತ್ತು ಪೋಷಿಸಿದ ಬೆಂಗಳೂರಿನ ಗುಬ್ಬಿ ತೋಟದಪ್ಪ ವಿದ್ಯಾರ್ಥಿನಿಲಯದಲ್ಲಿ ಏರ್ಪಡಿಸಿದ್ದ ಪುಣ್ಯಜೀವಿ ಲಿಂ. ತೋಟದಪ್ಪನವರ ಶತಮಾನೋತ್ಸವದಲ್ಲಿ ಭಾಗವಹಿಸಲು ಆಗಮಿಸುತ್ತಿರುವ ಶ್ರೀಗಳವರು. (೨೦–೮–೭೮)



ಮೇಲ್ಕಂಡ ಶತಮಾನೋತ್ಸವದ ನೇತೃತ್ವವಹಿಸಿದ ಶ್ರೀಗಳು. ವೇದಿಕೆಯಲ್ಲಿ ಸರ್ವಶ್ರೀ ಎಸ್. ನಿಜಲಿಂಗಪ್ಪನವರು, ಯಜಮಾನ್ ಕೆಂಚಪ್ಪನವರು, ಚೆನ್ನಸೋಮಣ್ಣನವರು, ಎ.ಸಿ. ದೇವೇಗೌಡರನ್ನು ಇತರರನ್ನು ಕಾಣಬಹುದು.

ಬಸವಣ್ಣನವರ ಅಷ್ಟಶತಮಾನೋತ್ಸವವು ಬಸವಕಲ್ಯಾಣದಲ್ಲಿ ನೆರವೇರಿದಾಗ ಆ ಸಭೆಯ ನೇತೃತ್ವವಹಿಸಿದ ಶ್ರೀಗಳು



ಅ. ಭಾ. ವೀರಶೈವ ಮಹಾಸಭಾಧ್ಯಕ್ಷ ಸ್ಥಾನವನ್ನು ಶ್ರೀ ಜೆ. ಬಿ. ಮಲ್ಲಾರಾಧ್ಯರಿಗೆ ಬೆಂಗಳೂರು ಲಾಲಬಾಗಿನ ಗ್ಲಾಸ್‌ಹೌಸ್‌ನಲ್ಲಿ ವಹಿಸಿಕೊಡುತ್ತಿರುವ ಶ್ರೀಗಳು



ಮೂಡಿಯಲ್ಲಿ ನಡೆದ ಶಿವಾನುಭವ ಸಮ್ಮೇಲನವೊಂದರ ನೇತೃತ್ವವಹಿಸಿ ಅಪ್ಪಣೆಕೊಡಿಸುತ್ತಿರುವ ಶ್ರೀಗಳು.



ಬೆಂಗಳೂರು ಬಸವ ಸಮಿತಿಯಲ್ಲಿ
ಬಸವಜಯಂತಿಯ ನೇತೃತ್ವ
(೧೯೬೯)



ತರಳಬಾಳು ಹುಣ್ಣಿಮೆ ಸಮಾರಂಭ
ಬೆಂಗಳೂರಿನಲ್ಲಿ ಜರುಗಿದಾಗ
ಅನುಗ್ರಹ ಭಾಷಣ ಮಾಡುತ್ತಿರುವ
ಶ್ರೀಗಳು



ದೊಡ್ಡಬಳ್ಳಾಪುರದಲ್ಲಿ
ಡಾ. ಮೋದಿಯವರ ನೇತ್ರಚಿಕಿತ್ಸಾ
ಶಿಬಿರದ ಉದ್ಘಾಟನೆ



ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಸ್ವರ್ಣಮಹೋತ್ಸವದ ಮುಕ್ತಾಯ ಸಮಾರಂಭದ ನೇತೃತ್ವ.



ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದವರು ಪ್ರಕಟಿಸಿದ ಚಿನ್ನದಗೆರೆ ಹೊತ್ತಿಗೆಯ ಬಿಡುಗಡೆಯ ಸಮಾರಂಭದಲ್ಲಿ ಆಗಿನ ವಿದ್ಯಾಸಚಿವ ಶ್ರೀ ಕೆ. ವಿ. ಶಂಕರೇಗೌಡರು ಗ್ರಂಥ ಸಮರ್ಪಿಸುವುದು.



ಧಾರವಾಡದ ಡಿಸ್ಟ್ರಿಕ್ಟ್-ಕೋ. ಆ. ಪರಚೇಜ್ ಆಂಡ್ ಸೇಲ್ ಯೂನಿಯನ್‌ನ ರಜತಮಹೋತ್ಸವದ ನೇತೃತ್ವ




ಮೇಲ್ಕಂಡ ಬ್ಯಾಂಕ್ ಪ್ರಾರಂಭೋತ್ಸ
ನೇತೃತ್ವ
(ಕರ್ನಾಟಕ ಗವರ್ನರ್ ಶ್ರೀ ಗೋವಿ
ನಾರಾಯಣರು ಮಾತನಾಡುತ್ತಿದ್ದಾರೆ




ತುಮಕೂರಿನಲ್ಲಿ ನಡೆದ ೩ನೆಯ ಸ್ಟೇಟ್
ಯೂಥ್ ಹಾಸ್ಟಲ್ಸ್ ಅಸೋಷಿಯೇಷ
ಕಾನ್ಫರನ್ಸ್‌ನ ಅಧ್ಯಕ್ಷತೆ.





ಸಿದ್ಧಗಂಗಾ ತ್ರೈಮಾಸಿಕವನ್ನು ಮಾಸಪತ್ರವನ್ನಾಗಿ ಬಿಡುಗ
ಮಾಡಿದ ಡಾ. ಹಾ. ಮಾ. ನಾಯಕರು ಶ್ರೀಗಳಿಗೆ ಅವರ
ಪ್ರತಿಯನ್ನು ಕೊಡುತ್ತಿದ್ದಾರೆ.
(ಎರಡೂ ಚಿತ್ರಗಳ ಸಂದರ್ಭ ಒಂದೇ)



ಶ್ರೀ ಕ್ಷೇತ್ರದಲ್ಲಿ ಸಂಸ್ಕೃತ
ದಿನಾಚರಣೆಯನ್ನಾಚರಿಸಿದ ಸಂದರ್ಭದಲ್ಲಿ
ಆಶೀರ್ವಾದ ಭಾಷಣ.
(ಸರ್ವಶ್ರೀ ಪ್ರೊ. ಕೆ. ಟಿ. ಪಾಂಡುರಂಗಿ
ಡಾ. ಜಿ. ಮರುಳಸಿದ್ಧಯ್ಯ,
ಎಸ್. ಎಸ್. ಮಳೀಮಠ, ಶಿವಶಂಕರ
ಮೊದಲಾದವರನ್ನು ಕಾಣಬಹುದು)

ಶ್ರೀ ಸಿದ್ಧಗಂಗಾ ಶಿಕ್ಷಣ
ಮಹಾ ವಿದ್ಯಾಲಯ (ಬಿ.ಇಡಿ.)
ಕಟ್ಟಡದ ಪ್ರಾರಂಭೋತ್ಸವಕ್ಕೆ
ಆಗಮಿಸಿದ ರಾಜ್ಯದ ಶಿಕ್ಷಣ
ಮಂತ್ರಿ ಶ್ರೀ ಸುಬ್ಬಯ್ಯ ಸೆಟ್ಟಿ
ಅವರೊಡನೆ








ವಸ್ತುಪ್ರದರ್ಶನ ಮುಕ್ತಾಯ
ಸಮಾರಂಭದಲ್ಲಿ ಕೇಂದ್ರ ಮಂತ್ರಿ
ಶ್ರೀ ಗುರುಪಾದಸ್ವಾಮಿ ಮತ್ತು ಕರ್ನಾಟಕ
ವಾರ್ತಾ ಸಚಿವ ರಾಜಶೇಖರಮೂರ್ತಿ
ಅವರೊಡನೆ ಶ್ರೀಗಳು



ತುಮಕೂರಿನ ರೋಟರೇರಿಯ
← ಸಮ್ಮೇಲನದ ಉದ್ಘಾಟನೆ

ಶ್ರೀಮಾತೆ ಮಹಾದೇವಿ ಅವರ
ಕ್ಷೇತ್ರದ ವಿದ್ಯಾರ್ಥಿ ಸಂಘಕ್ಕೆ
ಬಂದಾಗ
↓



ಬೆಂಗಳೂರು ಅರಳೇಪೇಟೆ ಬಸವೇಶ್ವರ ದೇವಾಲಯದ
ಹೊಸ ನಂದೀಧ್ವಜದ ಬಿಡುಗಡೆ.



ಗ್ರಾಮಾಂತರ ಪ್ರದೇಶದ
ಸಮಾರಂಭವೊಂದರಲ್ಲಿ→





SIT ಯ ಬಿರ್ಲಾಭವ
ಪ್ರಾರಂಭೋತ್ಸವದಲ್ಲಿ

ವನ್ನು ೫ಕ್ಕೆ ಮುಗಿಸುವರು. ಬೆಳಗಿನ ೫ ಘಂಟೆಯಿಂದ ಬಿಡುವಿಲ್ಲದ ಚಟುವಟಿಕೆಯಲ್ಲಿ ನಿರತರಾದ ವಿದ್ಯಾರ್ಥಿಗಳಿಗೆಲ್ಲ ೭-೩೦ರವರೆಗೆ ಬಿಡುವು ದೊರೆಯುವುದು. ಈ ಬಿಡುವಿನಲ್ಲಿ ವಿದ್ಯಾರ್ಥಿಗಳು ತಮ್ಮ ಸ್ವಂತದ ಕೆಲಸಕಾರ್ಯಗಳನ್ನು ಮುಗಿಸಿಕೊಂಡು ಶ್ರೀಗಳವರ ಸಮ್ಮುಖದಲ್ಲಿ ನೆರವೇರುವ ಸಾಮೂಹಿಕ ಪ್ರಾರ್ಥನೆಗೆ ೭-೩೦ಕ್ಕೆ ಗುಲಾಬಿ ಬಣ್ಣದ ಉತ್ತರೀಯವನ್ನು ಹೊತ್ತು ಮಠದ ಮುಂಭಾಗದಲ್ಲಿ ಸಾಲುಸಾಲಾಗಿ ಕುಳಿತುಕೊಳ್ಳುವರು. ಇದೊಂದು ಅತ್ಯಂತ ಆಕರ್ಷಣೆಯ ದೃಶ್ಯ. ಅರ್ಧ ಘಂಟೆಯ ಈ ಪ್ರಾರ್ಥನಾ ಸಭೆಯಲ್ಲಿ ಗಗನ ಗಂಭೀರಧ್ವನಿಯಲ್ಲಿ ಸಂಸ್ಕೃತ--ಕನ್ನಡ ಎರಡರಲ್ಲೂ ಪ್ರಾರ್ಥನಾಪದ್ಯಗಳು ಹೇಳಲ್ಪಡುತ್ತವೆ. ಭಗವದ್ಗೀತೆ, ಶಂಕರಾಚಾರ್ಯರ ಸ್ತೋತ್ರ ಪದ್ಯಗಳು, ನಿಜಗುಣ ಶಿವಯೋಗಿಗಳವರ ಸ್ತೋತ್ರಗೀತೆಗಳು. ಮತ್ತು ಇತರ ಗೀತೆಗಳು ಹಾಡಲ್ಪಡುವುವು. ಸುಮಾರು ನಾಲ್ಕುಸಾವಿರ ವಿದ್ಯಾರ್ಥಿಗಳು ಏಕಕಂಠದಿಂದ ತದೇಕಚಿತ್ತರಾಗಿ ಹಾಡುವಾಗಿನ ಸನ್ನಿವೇಶ ಸ್ವರ್ಗೀಯವಾಗಿರುತ್ತದೆ. ಅನಂತರ ಐದಾರು ನಿಮಿಷಗಳು ಶ್ರೀಗಳವರು ತಮ್ಮ ಉಪದೇಶಾಮೃತ ನೀಡುವರು. ೭-೩೦ಕ್ಕೆ ವಿದ್ಯಾರ್ಥಿಗಳ ಮೊದಲ ದೊಡ್ಡ ಪಂಕ್ತಿಯ ಊಟ ಮೂರು ಕಡೆಗಳಲ್ಲಿ ಏಕಕಾಲದಲ್ಲಿಯೇ ನಡೆಯುವುದು. ೮-೩೦ಕ್ಕೆ ದೊಡ್ಡ ತರಗತಿಯ ವಿದ್ಯಾರ್ಥಿಗಳ ಊಟ ನೆರವೇರುವುದು. ಎಲ್ಲರೂ ೧೦ ಘಂಟೆಯವರೆಗೆ ತಮ್ಮತಮ್ಮ ಅಭ್ಯಾಸದಲ್ಲಿ ತೊಡಗಿ ಮಲಗುವರು. ಹೀಗೆ ಬೆಳಗಿನ ೫ ಘಂಟೆಯಿಂದ ರಾತ್ರಿ ೧೦ ಘಂಟೆಯವರೆಗೆ ಮಠದ ಸಮಗ್ರ ಆವರಣ, ಗಿರಿಗುಹೆ ಎಲ್ಲೆಲ್ಲೂ ಕಲಕಲನಿನಾದದಿಂದ ಕೂಡಿ ಸುಮಾರು ೧೭ ಘಂಟೆಗಳ ಕಾಲ ಜಾಗೃತವಾಗಿರುತ್ತದೆನ್ನಬಹುದು. ಇಂಥ ಒಂದು ಸುಂದರ ಸನ್ನಿವೇಶದಲ್ಲಿ ವಿದ್ಯಾಭ್ಯಾಸ ಮಾಡುವ ಮಕ್ಕಳೇ ಧನ್ಯರು.

**ಶ್ರಮದಾನ :** ಈ ಮಧ್ಯದಲ್ಲಿ ಶ್ರಮದ ಕೆಲಸಕಾರ್ಯಗಳಿಗೆ ಮಕ್ಕಳ ದೇಹಮನಸ್ಸುಗಳೆರಡೂ ಒಗ್ಗಬೇಕೆಂದೂ, ಕರ್ತವ್ಯದ ಬಗ್ಗೆ ಅಪಾರ ಗೌರವಭಾವ ತಳೆಯುವ ಚಟವನ್ನು ಅವರು ಬಾಲ್ಯದಿಂದಲೂ ಅಭ್ಯಾಸಮಾಡಬೇಕೆಂದೂ, ಆರೋಗ್ಯ ದೃಢಕಾಯರಾಗಿ ಬಾಳಬೇಕೆಂದೂ, ಯಾವ ಕರ್ತವ್ಯವೇ ಆಗಿರಲಿ, ಮಾಡಿಮುಗಿಸಬಲ್ಲೆನೆಂಬ ಆತ್ಮಪ್ರತ್ಯಯವುಂಟಾಗಬೇಕೆಂದೂ, ಶ್ರಮಜೀವನದ ಅರ್ಥವಾಗಬೇಕೆಂದೂ ವಿಭಾಗ ಕ್ರಮದಲ್ಲಿ ಸಂಸ್ಥೆಯ ಮಕ್ಕಳೆಲ್ಲರಿಂದ ಹೊಲದ ಕೆಲಸ, ಕಟ್ಟಡದ ಕೆಲಸ, ಇನ್ನಿತರ ಮಠದ ಆವರಣದಲ್ಲಿನ ಕೆಲಸ, ಪ್ರಸಂಗದಲ್ಲಿ ಅರಣ್ಯದಿಂದ ಸೌದೆಸೊಪ್ಪನ್ನು ಸಂಗ್ರಹಿಸುವ ಕೆಲಸವೇ ಮೊದಲಾದುವನ್ನು ಮಾಡಿಸಲಾಗುತ್ತಿದೆ. ಸಾಮಾನ್ಯವಾಗಿ ಮಕ್ಕಳ ಈ ಎಲ್ಲ ಕೆಲಸಕಾರ್ಯಗಳು ನಡೆಯುತ್ತಿರುವಾಗ ಸ್ವತಃ ಶ್ರೀಗಳವರೂ ಕೈಮುಟ್ಟಿ ಆಯಾಯ ಕೆಲಸಮಾಡಲುಪಕ್ರಮಿಸುವುದುಂಟು. ಆಗ ಕೇಳಬೇಕೆ ! ವಿದ್ಯಾರ್ಥಿಗಳ ಉತ್ಸಾಹ ಶತಾಧಿಕ.* ಪ್ರಸಂಗದಲ್ಲಿ ಲಘು ಹಾಸ್ಯದ ಮೂಲಕ ಅವರನ್ನು ನಗಿಸಿ ಶ್ರಮಪರಿಹರಿಸುತ್ತಾರೆ.

**ಆಟಪಾಟಗಳು :** ವಿದ್ಯಾರ್ಥಿಗಳ ಆಟಪಾಟಗಳಿಗೂ ಇಲ್ಲಿ ವಿಶೇಷ ವ್ಯವಸ್ಥೆಯಿದೆ. ದೇಶೀಯ ಅನೇಕ ಆಟಗಳ ಜೊತೆಗೆ ಫುಟ್‌ಬಾಲ್. ವಾಲಿಬಾಲ್, ಬ್ಯಾಡ್‌ಮಿಂಟನ್ ಮೊದಲಾದ ಆಟಗಳನ್ನೂ ಇಲ್ಲಿನ ವಿದ್ಯಾರ್ಥಿಗಳು, ಆಡಿ ಅದರ ಲಾಭ ಪಡೆದುಕೊಳ್ಳುತ್ತಾರೆ.

**ಇತರ ಚಟುವಟಿಕೆಗಳು :** ಸಂಸ್ಕೃತ ಕಾಲೇಜಿನ ಅಂಗವಾಗಿ ಆಗಾಗ ಅಂತ್ಯಾಕ್ಷರೀ ಸ್ಪರ್ಧೆ, ಚರ್ಚಾಕೂಟ, ಗೀತಾಕಂಠಪಾಠಸ್ಪರ್ಧೆ, ಪ್ರಬಂಧ. ಆಶುಭಾಷಣ. ವಿದ್ವತ್‌ಮಟ್ಟದ ವಿದ್ಯಾರ್ಥಿಗಳಲ್ಲಿ ವಾಕ್ಯಾರ್ಥಸ್ಪರ್ಧೆ ಮೊದಲಾದವು ನಡೆಯುತ್ತವೆ. ಇಲ್ಲಿನ ಅನೇಕ ಸಂಸ್ಕೃತ ವಿದ್ಯಾರ್ಥಿಗಳು ರಾಜ್ಯಮಟ್ಟದ ವಾಕ್ಯಾರ್ಥ ಸ್ಪರ್ಧೆಯಲ್ಲಿ ಭಾಗವಹಿಸಿದ್ದಾರೆ.

ಶ್ರೀ ಮಠದಲ್ಲಿ ೧೯೪೩-೪೪ ನೆಯ ಇಸ್ವಿಯಿಂದಲೂ ಶ್ರೀ ಸಿದ್ಧಲಿಂಗೇಶ್ವರ ನಾಟಕಮಂಡಳಿ ಎಂಬ ಹವ್ಯಾಸೀನಾಟಕ ಮಂಡಳಿಯಿದೆ. ಈ ಮಂಡಳಿಯ ವತಿಯಿಂದ ಅನೇಕ ನಾಟಕಗಳನ್ನು ಆಡಲಾಗಿದೆ. ಮಾರ್ಕಂಡೇಯ, ಪ್ರಭುಲಿಂಗಲೀಲೆ. ಬಸವೇಶ್ವರ ನಾಟಕಗಳು ಪ್ರಖ್ಯಾತ. ಈ ನಾಟಕಗಳಲ್ಲಿ ವಿದ್ಯಾರ್ಥಿಗಳ ಜೊತೆಗೆ ಉಪಾಧ್ಯಾಯರೂ ಮಠದ ಇತರ ಸಿಬ್ಬಂದಿ ವರ್ಗದವರೂ ಭಾಗವಹಿಸುತ್ತಾರೆ. ಇವುಗಳಲ್ಲಿ ಮಾರ್ಕಂಡೇಯ ನಾಟಕ ಮಠದ ವಿದ್ಯಾರ್ಥಿಗಳಿಗೆ ಒಳ್ಳೆಯ ಹೆಸರುಗಳಿಸಿಕೊಟ್ಟಿತ್ತು. ಈ ನಾಟಕದ ಪ್ರಯೋಗಗಳನ್ನು ತುಮಕೂರು ಬೆಂಗಳೂರುಗಳಲ್ಲಿಯೂ ಯಶಸ್ವಿಯಾಗಿ ಪ್ರಯೋಗಿಸಲಾಗಿದೆ. ಈ ನಾಟಕಗಳ ಪ್ರಯೋಗಗಳಿಂದ ಸಂಗ್ರಹವಾದ ಹಣವನ್ನು ಶ್ರೀಗಳವರು ಉಪಯೋಗಿಸಿ. ಬನ್ನಿಮಂಟಪದ ಬಲಗಡೆ ಇರುವ ಭವ್ಯ ಕಟ್ಟಡ ಕಟ್ಟಿಸಿ. ಅದಕ್ಕೆ ಮಾರ್ಕಂಡೇಯನಿಲಯವೆಂದೇ ಕರೆದುದನ್ನಿಲ್ಲಿ ಜ್ಞಾಪಿಸಬಹುದು. ಸಿದ್ಧಗಂಗಾ ಇಂಜನಿಯರಿಂಗ್ ನಿಧಿಗೆ ಸಿದ್ಧಲಿಂಗೇಶ್ವರ ಕಲಾವೃಂದದವರು ಬಸವೇಶ್ವರ ನಾಟಕ ಆಡಿ ಧನ ಸಂಗ್ರಹ ಮಾಡಿ. ಅರ್ಪಿಸಿದುದನ್ನು ಇಲ್ಲಿ ಜ್ಞಾಪಿಸಬಹುದು. ೧೯೭೯ ರಿಂದ ಈಚೆಗೆ ಈ ನಾಟಕ ಕಂಪನಿಯು ಬಸವೇಶ್ವರ ನಾಟಕವನ್ನು ಗ್ರಾಮಾಂತರ ಜನರ ಮನರಂಜನೆ ಮತ್ತು ಧರ್ಮ,

---

* ಇತ್ತೀಚೆಗೆ ಶ್ರೀಗಳವರು ಕೆಲಸಕಾರ್ಯಗಳ ಒತ್ತಡ ಹಾಗೂ ವಾರ್ಧಕ್ಯಗಳ ಮೂಲಕ ಈ ರೀತಿಯ ಶ್ರಮದ ಕೆಲಸಗಳನ್ನು ಕಡಿಮೆ ಮಾಡಿದ್ದಾರೆ. ಆದರೂ ಮಾಡುವ ಉತ್ಸಾಹ ತೋರುತ್ತಾರೆ. ಮೊದಲು ಕಲ್ಲು ಹೊರಿಸುವುದು, ಹೊಲದಲ್ಲಿ ಹುಲ್ಲು ಕಟ್ಟುವುದು, ಕಣದಲ್ಲಿ ಚಿಕ್ಕ ಪುಟ್ಟ ಕಾರ್ಯ ಮಾಡುವುದು, ಸೌದೆಯೊಡೆಯುವಲ್ಲಿ ಆ ಕಾರ್ಯಕ್ಕೆ ಸಹಾಯ ಮಾಡುವುದು. ಅರಣ್ಯಕ್ಕೆ ಸೌದೆ ತರಲು ಹೋಗುವುದು ಮಾಡುತ್ತಿದ್ದರು. ಈ ಕೆಲಸಕಾರ್ಯಗಳ ಪರಿಶ್ರಮವನ್ನು ತಡೆಯಬಲ್ಲ ದೈಹಿಕ ದಾರ್ಢ್ಯ, ಮಾನಸಿಕ ಉತ್ಸಾಹ, ಕರ್ತವ್ಯ ಪ್ರಜ್ಞೆ ಇವು ಅವರ ದೈವದತ್ತ ಶಕ್ತಿಗಳೆಂದೇ ನೋಡಿದವರಿಗಾಗುವ ಅನುಭವ.

ಸಾಹಿತ್ಯ ಪ್ರಚಾರದೃಷ್ಟಿಯಿಂದ ಮಠದ ಸಮಸ್ತ ಚಿರ್ಚುವಟ್ಟಿಗಳಿಂದಲೇ ಪ್ರದರ್ಶಿಸುವ ಯೋಜನೆ ಹಾಕಿಕೊಂಡಿದೆ. ಅದರಂತೆ ೧೯೭೯ ರಲ್ಲಿ ನಾಲ್ಕು ಹಳ್ಳಿಗಳಲ್ಲಿ ಈ ಪ್ರಯೋಗಮಾಡಿ ನೋಡಲಾಯಿತು. ೧೯೮೦ರಲ್ಲಿ ಐದು ಹಳ್ಳಿಗಳನ್ನು ಆರಿಸಲಾಗಿದೆ.

**ಸಂಯುಕ್ತ ವಿದ್ಯಾರ್ಥಿಸಂಘ :** ಶ್ರೀ ಮಠದಲ್ಲಿರುವ ಎಲ್ಲ ವಿದ್ಯಾಸಂಸ್ಥೆಗಳಿಗೂ ಅನ್ವಯಿಸುವಂತೆ ಸಂಯುಕ್ತ ವಿದ್ಯಾರ್ಥಿ ಸಂಘವೆಂಬ ಸಂಘವಿದೆ. ಇದರ ಆಶ್ರಯದಲ್ಲಿ ಅನೇಕ ಉಪನ್ಯಾಸಗಳು ಪ್ರವಚನಗಳು ನಡೆಯುತ್ತವೆ. ಅದರ ಲಾಭವನ್ನು ವಿದ್ಯಾರ್ಥಿಗಳು ಮಾಡಿಕೊಳ್ಳುವುದರ ಜೊತೆಗೆ, ವಿದ್ಯಾರ್ಥಿಗಳ ಪ್ರತಿಭೆ ಮತ್ತು ಸುಪ್ತಶಕ್ತಿಗಳನ್ನು ಪ್ರಕಟಗೊಳಿಸುವುದಕ್ಕೆ ಕಾರಣವಾದ ಅನೇಕ ಸನ್ನಿವೇಶಗಳನ್ನು ಕಲ್ಪಿಸಲಾಗುತ್ತಿದೆ. ಒಂದೊಂದು ವಿದ್ಯಾಸಂಸ್ಥೆಯವರು ಒಂದೊಂದು ವರ್ಷ ಇದರ ಆಡಳಿತ ಭಾರ ನಿರ್ವಹಿಸುತ್ತಾರೆ. ಇದಕ್ಕೂ ಪೂರ್ವದಲ್ಲಿ ಕ್ಷೇತ್ರದಲ್ಲಿ 'ತೋಂಟದಾರ್ಯ ವಿದ್ಯಾವರ್ಧಿನೀ ಸಭಾ' ಎಂಬ ಹೆಸರಿನ ಸಂಸ್ಥೆಯಿತ್ತು. ಈ ಸಂಸ್ಥೆಯ ಆಶ್ರಯದಲ್ಲಿ ಈ ಎಲ್ಲ ಉದ್ದೇಶಗಳನ್ನೀಡೇರಿಸಲಾಗುತ್ತಿತ್ತು. ಈಗ ಅದರ ಬದಲಾಗಿ ಬೇರೆ ಬೇರೆ ಸಂಸ್ಥೆಗಳು ಈ ಉದ್ದೇಶಗಳನ್ನೆಲ್ಲ ಈಡೇರಿಸಿಕೊಡುತ್ತಿವೆ.

## ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಸಂಘ

ಶ್ರೀ ಕ್ಷೇತ್ರದ ಉದಾರಾಶ್ರಯದಿಂದ ಬೆಳೆದು ಪ್ರಬುದ್ಧರಾದ ವಿದ್ಯಾರ್ಥಿಗಳು ಶ್ರೀ ಕ್ಷೇತ್ರದ ಅನೇಕ ಮುಖ್ಯ ಕಾರ್ಯಬಾಹುಳ್ಯದಲ್ಲಿ ತಾವೂ ಬಿಡುವಾದಾಗ ಪಾಲ್ಗೊಂಡು ತಮ್ಮ ಅಳಿಲು ಸೇವೆಸಲ್ಲಿಸಲು ಶ್ರೀಗಳವರ ಅಪ್ಪಣೆ ಪಡೆದು 'ಹಳೆಯ ವಿದ್ಯಾರ್ಥಿಸಂಘ' ವೆಂಬ ಹೆಸರಿನ ಸಂಘವನ್ನು ೧೯೩೪ ನೆಯ ಇಸ್ವಿಯಂದು ಸ್ಥಾಪಿಸಿದ್ದಾರೆ. ಹಳೆಯ ವಿದ್ಯಾರ್ಥಿಗಳ ಪ್ರಾರ್ಥನೆಯ ಮೇರೆಗೆ ಶ್ರೀ ಶಿವಕುಮಾರಮಹಾಸ್ವಾಮಿಗಳವರೇ ಅದರ ಅಧ್ಯಕ್ಷರಾಗಿರಲು ಒಪ್ಪಿಕೊಂಡುದು ಈ ಸಂಸ್ಥೆಯ ಒಂದು ಪುಣ್ಯವಿಶೇಷ. ಈ ಸಂಘವು ತನ್ನ ಚಟುವಟಿಕೆಗಳಿಂದ ಹಾಲಿ ಇರುವ ಮಠದ ವಿದ್ಯಾರ್ಥಿಗಳಿಗೊಂದು ಮೇಲ್ಪಂಕ್ತಿಯಾಗಿರುವುದಲ್ಲದೆ ಅವರೊಡನೆ ಅನೇಕ ವಿಧದಲ್ಲಿ ಮಧುರ ಬಾಂಧವ್ಯ ಕಲ್ಪಿಸಿಕೊಂಡಿದೆ. ಮಠದಲ್ಲಿ ಯಾವುವೇ ವಿಶೇಷಕಾರ್ಯಕ್ರಮಗಳು ನಡೆಯುತ್ತಿದ್ದರೂ ಅದರ ನೆರವಿಗೆ ಈ ಹಳೆಯ ವಿದ್ಯಾರ್ಥಿಸಂಘ ನಿಂತು, ತನ್ನ ಕೈಲಾದ ಸೇವೆ ಸಲ್ಲಿಸುತ್ತಿದೆ. ಈ ಸಂಘ ನಡೆಸುತ್ತಿರುವ ಸೇವೆಗಳಲ್ಲಿ ಸಿದ್ಧಗಂಗಾ ಮಾಸಪತ್ರ ಪ್ರಕಟಿಸುವುದು, ಪ್ರತಿವರ್ಷ ಜಾತ್ರೆಯ ಸಮಯದಲ್ಲಿ ವಸ್ತು ಪದರ್ಶನ ನಡೆಯಿಸುವುದು ಇವು ಮುಖ್ಯವಾದುವು. ಜಾತ್ರೆಯ ಸಮಯದಲ್ಲಿ ಅನೇಕ ಜನ ಈ ಸಂಘದ ಸದಸ್ಯರು ತಮ್ಮ ತಮ್ಮ ಪಾಲಿನ ಅನೇಕ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿರುವುದನ್ನು ಕಾಣಬಹುದಾಗಿದೆ.

೧) ಸಿದ್ಧಗಂಗಾ ಮಾಸಪತ್ರಿಕೆ : ೧೯೬೫ ರಲ್ಲಿ ಹಳೆಯ ವಿದ್ಯಾರ್ಥಿಸಂಘವು ಶ್ರೀ ಸನ್ನಿಧಿಯವರ ಅಪ್ಪಣೆ ಪಡೆದು ಒಂದು ಸಂಪಾದಕ ಮಂಡಲ ರಚಿಸಿಕೊಂಡು 'ಸಿದ್ಧಗಂಗಾ' ತ್ರೈಮಾಸಿಕ ಸಂಚಿಕೆಯನ್ನು ಮಕರ ಸಂಕ್ರಮಣದಂದು ಬಿಡುಗಡೆಮಾಡಿ ತನ್ನ ಬಹುದಿನಗಳ ಬಯಕೆಯನ್ನು ಈಡೇರಿಸಿಕೊಂಡಿತು. ಪತ್ರಿಕೆಗೆ ಶುಭಕೋರಿ ಶ್ರೀ ರಂ. ಶ್ರೀ ಮುಗಳಿ, ಮಾಸ್ತಿವೆಂಕಟೇಶಯ್ಯಂಗಾರ್, ಪು. ತಿ. ನ. ಮೊದಲಾದ ಹಿರಿಯರು ಆಶೀರ್ವದಿಸಿ ಸಂದೇಶ ಕಳಿಸಿದರು. ಮೊದಲ ಸಂಚಿಕೆಯನ್ನು ಕಂಡು ಆಗಿನ ಮೈಸೂರು ರಾಜ್ಯದ ಮುಖ್ಯಮಂತ್ರಿ ಶ್ರೀ ನಿಜಲಿಂಗಪ್ಪನವರು ಇತರ ಮಂತ್ರಿಗಳಾದ ಸರ್ವ ಶ್ರೀ ಬಿ.ಡಿ. ಜತ್ತಿ, ವೈಕುಂಠಬಾಳಿಗಾ, ಎಸ್. ಆರ್. ಕಂಠಿ, ಕೆ.ಎನ್. ಆಳ್ವಾ, ಆರ್. ಎಂ. ಪಾಟೀಲ, ಕೆ. ಪ್ರಭಾಕರ, ಆಲೂರು ಹನುಮಂತಪ್ಪ ಮೊದಲಾದವರೂ ಇನ್ನಿತರ ನಾಡಿನ ಪ್ರಮುಖರೂ ಪ್ರಶಂಸಿಸಿ ಕಾಗದ ಬರೆದರು. ಹೀಗೆ ತ್ರೈಮಾಸಿಕವಾಗಿ ಪ್ರಾರಂಭಗೊಂಡ ಸಿದ್ಧಗಂಗಾ ಪತ್ರಿಕೆಯು ೧೯೭೫ ನೆಯ ಇಸ್ವಿ ಮಕರಸಂಕ್ರಮಣದಂದು ಮಾಸಪತ್ರಿಕೆಯಾಗಿ ಪ್ರಕಟಗೊಂಡಿತು. ಅದುವರೆಗೆ ಬೆಂಗಳೂರಿನ ಮುದ್ರಣಾಲಯಗಳಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆ ಮಾಸಪತ್ರಿಕೆಯಾದ ಮೇಲೆ ಶ್ರೀಮಠದಲ್ಲಿಯೇ ಸ್ಥಾಪಿತಗೊಂಡ ಶ್ರೀ ಸಿದ್ಧಲಿಂಗೇಶ್ವರ ಮುದ್ರಣಾಲಯದಲ್ಲಿ ಮುದ್ರಣಗೊಳ್ಳತೊಡಗಿತು. ಇಂದು ಈ ಪತ್ರಿಕೆ ಸುಮಾರು ನಾಲ್ಕುಸಾವಿರ ಚಂದಾದಾರರನ್ನೊಳಗೊಂಡು ತನ್ನ ಪಾಲಿನ ಕೆಲಸವನ್ನು ಮುಂದುವರಿಸಿಕೊಂಡು ಬರುತ್ತಿದೆ. ಒಂದು ಸಾವಿರ ಜನ ಆಜೀವ ಸದಸ್ಯ ಬಳಗವನ್ನೂ ಈ ಪತ್ರಿಕೆ ಪಡೆದಿದೆ.

## ೨. ವಸ್ತುಪ್ರದರ್ಶನ

ಸಿದ್ಧಗಂಗಾಕ್ಷೇತ್ರ ಎಂದಿನಿಂದಲೂ ಗ್ರಾಮಾಂತರ ಪ್ರದೇಶದ ಜನಜೀವನದ ಮಟ್ಟವನ್ನು ಅಧಿಕಗೊಳಿಸಲು ಬಹುಮುಖ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ತನ್ನ ಕೈಲಾದ ಸೇವೆಯನ್ನು ಮಾಡುತ್ತ ಬಂದಿರುವ ಒಂದು ಪುಣ್ಯಕ್ಷೇತ್ರವಾಗಿದೆ. ಪ್ರತಿವರ್ಷ ಕ್ಷೇತ್ರದಲ್ಲಿ ಶಿವರಾತ್ರಿಯಂದು ನೆರವೇರುವ ವೈಭವಪೂರ್ಣ ೧೦ ದಿನಗಳ ಶ್ರೀ ಸಿದ್ಧಲಿಂಗೇಶ್ವರ ಯಾತ್ರಾಮಹೋತ್ಸವದಲ್ಲಿ ಗ್ರಾಮಾಂತರ ಪ್ರದೇಶದ ಜನಜೀವನಕ್ಕೆ ಅಗತ್ಯವಾದ ವ್ಯವಸಾಯ ಮತ್ತು ಕೈಗಾರಿಕೆಗಳ ಜ್ಞಾನವನ್ನುಂಟುಮಾಡಿಕೊಡಲು ಒಂದು ವಸ್ತುಪ್ರದರ್ಶನವನ್ನು ತೆರೆಯಲು ಶ್ರೀ ಶಿವಕುಮಾರಮಹಾಸ್ವಾಮಿಗಳವರು ಸಂಕಲ್ಪಮಾಡಿ, ಹಳೆಯವಿದ್ಯಾರ್ಥಿ

ಸಂಘದಲ್ಲಿ ಪ್ರಸ್ತಾಪಿಸಿದರು. ಹಳೆಯ ವಿದ್ಯಾರ್ಥಿ ಸಂಘದವರು ಶ್ರೀಗಳವರ ಈ ಬಯಕೆಯನ್ನು ಈಡೇರಿಸಲು ಮುಂದೆಬಂದು, ಒಂದು ವಸ್ತುಪ್ರದರ್ಶನ ಸಮಿತಿಯನ್ನು ತಮ್ಮಲ್ಲೇ ರಚಿಸಿಕೊಂಡು ೧೯೬೩ರಿಂದಲೂ ವಸ್ತುಪ್ರದರ್ಶನ ನಡೆಸುವ ಭಾರಹೊತ್ತು ನಡೆಸಿಕೊಂಡು ಬರತೊಡಗಿದರು. ೧೯೬೩ರಿಂದ ಈ ವಸ್ತುಪ್ರದರ್ಶನದ ಭಾರಹೊತ್ತು ದುಡಿದ ನಿಷ್ಠಾವಂತರಾದ ಹಳೆಯ ವಿದ್ಯಾರ್ಥಿಗಳ ಸಂಖ್ಯೆ ವಿಪುಲ. ಆದ್ದರಿಂದ ಅವರಾರ ಹೆಸರನ್ನೂ ಹೇಳಲಾಗಿಲ್ಲ. ಶ್ರೀಗಳವರು ಪಾದದಿಂದ ತೋರಿಸಿ ಮಾಡಿದ ಅಪ್ಪಣೆಯನ್ನು ಶಿರಸ್ಸಿನಿಂದ ಮಾಡಿ ಮುಗಿಸುವ ಉತ್ಸಾಹಿ ಹಳೆಯ ವಿದ್ಯಾರ್ಥಿಗಳು ಹಳೆಯ ವಿದ್ಯಾರ್ಥಿಸಂಘದಲ್ಲಿದ್ದಾರೆ. ಎಂದಿನಿಂದಲೂ ಹಳೆಯವಿದ್ಯಾರ್ಥಿಗಳಲ್ಲಿ ವಾತ್ಸಲ್ಯಭಾವವಿಟ್ಟು ಅವರ ಉದ್ಧಾರವನ್ನು ಅಪೇಕ್ಷಿಸುವ ಶ್ರೀಗಳವರಿಗೆ ತಮ್ಮ ಅಳಿಲು ಸೇವೆ ಸಲ್ಲಿಸಬೇಕೆಂಬ ಮನೋಭಾವವೇ ಮಾತೃಸಂಸ್ಥೆಗೆ ವಿವಿಧ ಮುಖಗಳಲ್ಲಿ ತಮ್ಮ ಕೈಲಾದ ಸೇವೆಯನ್ನು ಹಳೆಯ ವಿದ್ಯಾರ್ಥಿ ಸಂಘ ಸಲ್ಲಿಸುತ್ತಿದೆ. ಇದೆಲ್ಲಕ್ಕೂ ಶ್ರೀಗಳವರ ಆಶೀರ್ವಾದವೇ ವಜ್ರಕವಚ. ಹೀಗೆ ನಡೆಸುತ್ತ ಬಂದ ಈ ವಸ್ತುಪ್ರದರ್ಶನ ಜಾತ್ರೆಗೆ ಬರುವ ಎಲ್ಲ ಜನರಿಗೂ ಒಂದು ಪ್ರಮುಖ ಆಕರ್ಷಣೆಯಾಯಿತು. ಪ್ರತಿವರ್ಷ ಸುಮಾರು ಐದಾರು ಲಕ್ಷ ಜನಗಳು ವಸ್ತುಪ್ರದರ್ಶನಕ್ಕೆ ಭೇಟಿ ಯಿತ್ತು ವ್ಯವಸಾಯ, ಕೈಗಾರಿಕೆ, ಕುಶಲಕಲೆ, ವಾಣಿಜ್ಯ, ವಿಜ್ಞಾನ, ಭೂಗೋಳ, ಆರೋಗ್ಯ, ಸಾಂಸ್ಕೃತಿಕ, ರಾಜಕೀಯ ಮತ್ತು ಮನರಂಜನೆಗಳೇ ಮೊದಲಾದ ಬಹುಮುಖಗಳಲ್ಲಿ ತಮ್ಮ ತಮ್ಮ ಜ್ಞಾನಾಭಿವೃದ್ಧಿ ಮಾಡಿಕೊಳ್ಳತೊಡಗಿದರು. ಮೊದಮೊದಲು ವಸ್ತುಪ್ರದರ್ಶನದ ಖರ್ಚುವೆಚ್ಚಗಳು ಅಧಿಕವಾಗಿ ಹಾನಿಯಲ್ಲೇ ನಡೆದರೂ ಎದೆಗುಂದದೆ ಮುಂದುವರೆಯಿತು. ಬರಬರುತ್ತ ಉತ್ಪತ್ತಿ ಮತ್ತು ಖರ್ಚುಗಳು ಸಮನಾಗತೊಡಗಿದವು. ಈಗಲೂ ಇದೇ ರೀತಿಯಲ್ಲಿ ಮುಂದುವರಿದು ಬರುತ್ತಿದೆ. ಗ್ರಾಮಾಂತರ ಪ್ರದೇಶದ ಜನಗಳಿಗೆ ಇಂಥ ವಸ್ತುಪ್ರದರ್ಶನದ ಅವಶ್ಯಕತೆಯನ್ನು ಮನಗಂಡ ರಾಜ್ಯಸರಕಾರವು ತನ್ನ ನೆರವನ್ನು ಪ್ರತಿವರ್ಷವೂ ಕೊಡುತ್ತ ಬರತೊಡಗಿದೆ. ಈ ವಸ್ತುಪ್ರದರ್ಶನಕ್ಕೆ ಕಾಲಕಾಲಕ್ಕೆ ಶ್ರೀ ವಿ. ವಿ. ಗಿರಿ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ವೀರೇಂದ್ರಪಾಟೀಲ್, ಶ್ರೀ ಬಿರ್ಲಾ, ಶ್ರೀ ಜತ್ತಿ, ಶ್ರೀ ಎಂ. ಎಸ್. ಗುರುಪಾದಸ್ವಾಮಿ ಮೊದಲಾದವರೂ ಸಾಮಾನ್ಯವಾಗಿ ಮೈಸೂರಿನ ಅನೇಕ ಮಂತ್ರಿಗಳೂ, ರಾಜ್ಯದ ಇತರ ಗಣ್ಯ ಅಧಿಕಾರಿಗಳೂ, ದೊಡ್ಡ ದೊಡ್ಡ ಕೈಗಾರಿಕೋದ್ಯಮಿಗಳೂ ಸಂದರ್ಶನವಿತ್ತು ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಕೇಂದ್ರ ಸರಕಾರದ ಅನೇಕ ಮಳಿಗೆಗಳೂ ಬರತೊಡಗಿವೆ. ವಸ್ತುಪ್ರದರ್ಶನದಲ್ಲಿ ನಾಟಕ, ಸಂಗೀತ, ಭಾಷಣ-ಇತ್ಯಾದಿ ಮನರಂಜನೆಯ ಕಾರ್ಯಕ್ರಮಗಳೂ ವ್ಯವಸ್ಥಿತ ರೀತಿಯಿಂದ ನಡೆಯುತ್ತಿವೆ. ಹೀಗಾಗಿ ವರ್ಷೇ ವರ್ಷೇ ವಸ್ತುಪ್ರದರ್ಶನ ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರೆಯ ಒಂದು ಪ್ರಮುಖ ಆಕರ್ಷಣೆಯಾಗತೊಡಗಿದೆ. ಕೆಲವೇ ವರ್ಷಗಳಲ್ಲಿ ಈ ವಸ್ತುಪ್ರದರ್ಶನ ರಾಷ್ಟ್ರೀಯ ಮಟ್ಟದ ಸುಸಜ್ಜಿತ ಸಾರ್ವಕಾಲಿಕ ವಸ್ತುಪ್ರದರ್ಶನಾಲಯವಾಗುವುದರಲ್ಲಿ ಅದರ ಕಾರ್ಯಭಾರಹೊತ್ತ ಹಳೆಯ ವಿದ್ಯಾರ್ಥಿಸಂಘಕ್ಕೆ ಅಪಾರ ನಂಬುಗೆಯಿದೆ. ಈ ಕಾರ್ಯಕ್ಕೆ ಮುಖ್ಯವಾಗಿ ಶ್ರೀಗಳವರ ಕೃಪಾಶೀರ್ವಾದವೂ ಕೇಂದ್ರ ಹಾಗೂ ರಾಜ್ಯಸರಕಾರಗಳ ಮತ್ತು ಜನತೆಯ, ಸಂಘಸಂಸ್ಥೆಗಳ ಸಂಪೂರ್ಣ ಸಹಕಾರವೂ ಅವಶ್ಯವಾಗಿದೆ.

## ಶ್ರೀ ಸಿದ್ಧಲಿಂಗೇಶ್ವರ ಯಾತ್ರಾಮಹೋತ್ಸವ

ಸಿದ್ಧಗಂಗಾಕ್ಷೇತ್ರದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಯಾತ್ರಾಮಹೋತ್ಸವವನ್ನು ೧೯೦೯ರಲ್ಲಿಯೇ ಕ್ಷೇತ್ರದ ಇಂದಿನ ಲೋಕೋತ್ತರ ಕೀರ್ತಿಕಲ್ಪವೃಕ್ಷಕ್ಕೆ ನೀರೆರೆದ ಶ್ರೀಮದ್ಧಾನಶಿವಯೋಗಿಗಳು ಪ್ರಾರಂಭಿಸಿದರು. ಜಾತ್ರೆ ಶಿವರಾತ್ರಿಯಿಂದ ೧೦ ದಿನಗಳವರೆಗೆ ನಡೆಯಬೇಕು. ದನಗಳ ಪರಿಷೆ ಕೂಡಬೇಕು, ರಥೋತ್ಸವ, ಬೆಳ್ಳಿಪಲ್ಲಕ್ಕಿ ಉತ್ಸವ ನಡೆಯಬೇಕು. ಜಾತ್ರೆಗೆ ಬಂದ ಜನಗಳಿಗೆಲ್ಲ ಮಠದಲ್ಲಿ ಪ್ರಸಾದವಿತರಣೆಯಾಗಬೇಕು. ಈ ಸಂಕಲ್ಪದಿಂದ ಪ್ರಾರಂಭಿಸಿದುದರಲ್ಲಿ ಈ ಜಾತ್ರೆಯ ವೈಶಿಷ್ಟ್ಯವಡಗಿದೆ. ಈ ಭಾರವನ್ನು ಮೈಮೇಲೆಳೆದುಕೊಂಡು ಜಾತ್ರೆಪ್ರಾರಂಭಿಸಿದರೂ ಅದು ಯಾವ ಊಣೆಯವಿಲ್ಲದೆ ಅಂದಿನಿಂದ ಇಂದಿನವರೆಗೆ 'ನಭೂತೋ ನಭವಿಷ್ಯತಿ' ಎನ್ನುವಂತೆ ನಡೆದುಕೊಂಡು ಬರುತ್ತಿದೆ. ಜಾತ್ರೆಗೆ ಬಂದವರಿಗೆಲ್ಲ ಜಾತ್ರೆಯ ಸಡಗರವಾದರೆ ಕ್ಷೇತ್ರಾಧಿಪತಿಗಳಿಗೆ ಬಂದವರಿಗೆಲ್ಲ ಪ್ರಸಾದವಿತರಣೆಯ ವ್ಯವಸ್ಥೆಯನ್ನು ಮಾಡುವ ದಂದುಗ. ಐದಾರು ಕೊಪ್ಪಲುಗಳನ್ನು ಕಟ್ಟಿಸಿ ಅಲ್ಲಿ ದೊಡ್ಡದೊಡ್ಡ ಕೊಪ್ಪರಿಗೆಗಳಲ್ಲಿ, ಭಾಂಡಗಳಲ್ಲಿ ಪ್ರಸಾದ ಸಿದ್ಧವಾಗಬೇಕು. ಅದರಲ್ಲೂ ರಥೋತ್ಸವದದಿನ, ಬೆಳ್ಳಿಪಲ್ಲಕ್ಕಿಯದಿನ, ಕೊನೆಯದಿನ ಈ ಮೂರು ದಿನಗಳಲ್ಲಿ ಪಾಯಸವಾಗಬೇಕು. ಈ ದಂದುಗವೇನು ಸಾಮಾನ್ಯವಲ್ಲ. ಈ ವ್ಯವಸ್ಥೆಯನ್ನೆಲ್ಲ ಹೇಗೆ ಮಾಡುತ್ತಾರೆ ? ಹೇಗೆ ಪೂರೈಸುತ್ತಾರೆ ? ಎನ್ನುವುದು ನೋಡುವವರಿಗೊಂದು ಆಶ್ಚರ್ಯದ ಸಂಗತಿ. ಕ್ಷೇತ್ರಾಧಿಪತಿಗಳ ಪ್ರಬಲ ಸಂಕಲ್ಪ ಶಕ್ತಿಯಿಂದ ಇದೆಲ್ಲ ನಡೆದುಹೋಗುತ್ತದೆ.

ಜಾತ್ರೆ ಪ್ರಾರಂಭವಾಗುವುದು ಶಿವರಾತ್ರಿಯಂದು. ಆದಿನ ಸ್ವಸ್ತಿವಾಚನ, ಧ್ವಜಾರೋಹಣ, ವಟುಗಳಿಗೆ ಶಿವದೀಕ್ಷಾ ಕಾರ್ಯಕ್ರಮಗಳು ಜರುಗುವುವು. ಮರುದಿನ ಮಧ್ಯಾಹ್ನ ರಥೋತ್ಸವ. ಲಕ್ಷಾಂತರ ಜನಜಂಗುಳಿಯ ಭಕ್ತಿಪೂರ್ವಕ ಜಯಜಯಕಾರದೊಡನೆ ವೈಭವವೋಪೇತವಾಗಿ ಕ್ಷೇತ್ರಾಧಿಪತಿಯಾದ ಶ್ರೀ ಸಿದ್ಧಲಿಂಗೇಶ್ವರರ ರಥೋತ್ಸವದ ಸೌಂದರ್ಯ ಮೈಮನಗಳನ್ನು

ಜರುಗುತ್ತದೆ. ಈ ಸಮಯದಲ್ಲಿ ವೀರಗಾಸೆ, ಡೊಳ್ಳು, ನಂದಿಧ್ವಜ ಕುಣಿತ, ಭಜನೆ ಮೊದಲಾದ ಮನರಂಜನೆಯ ಕಾರ್ಯಗಳೂ ರಥದ ಮುಂದುಗಡೆ ನಡೆಯುತ್ತವೆ. ರಥೋತ್ಸವವಾದ ಮೂರುದಿನಕ್ಕೆ ಬೆಳ್ಳಿಯ ಪಲ್ಲಕ್ಕಿಯ ಅತ್ಯಂತ ಕೀರ್ತಿವೆತ್ತ ಶ್ರೀ ಸಿದ್ಧಲಿಂಗೇಶ್ವರರ ಉತ್ಸವ ಜರುಗುವುದು. ಅದಿನ ಶ್ರೀಕ್ಷೇತ್ರದಲ್ಲಿ ಕಾಲಿಡಲಿಂಬಿಲ್ಲದಷ್ಟು ಜನಜಂಗುಳಿ. ಬೆಳಕು ಹರಿಯುವವರೆಗೆ ಅನೇಕ ಮನರಂಜನೆ, ಭಜನೆ, ಕೀರ್ತನೆ, ಉಪನ್ಯಾಸ, ಮದ್ದು ಸುಡುವುದೇ ಮೊದಲಾದ ಕಾರ್ಯಕ್ರಮಗಳೊಂದಿಗೆ ಜರುಗುವ ಈ ಉತ್ಸವ ಜಾತ್ರೆಯ ದೊಡ್ಡ ಆಕರ್ಷಣೆ. ಮೊದಮೊದಲು 'ಬೆಳ್ಳಿ ಪಲ್ಲಕ್ಕಿ'ಯ ಉತ್ಸವ ಸಾಮಾನ್ಯ ಪಲ್ಲಕ್ಕಿಯಲ್ಲೇ ನಡೆಯುತ್ತಿತ್ತು. ೧೯೫೨ರಲ್ಲಿ ತುಮಕೂರಿನ ಪ್ರಸಿದ್ಧ ವಾಣಿಜ್ಯೋದ್ಯಮಿಗಳೂ, ಶ್ರೀಕ್ಷೇತ್ರದ ಶ್ರದ್ಧಾಸ್ಪದ ಭಕ್ತರೂ ಆಗಿದ್ದ ಲಿಂ. ಟಿ.ಎಸ್.ಕೆಂಪಮೊನ್ನಯ್ಯನವರು ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ಒಂದು ಬೆಳ್ಳಿಯಪಲ್ಲಕ್ಕಿಯನ್ನೇ ಮಾಡಿಸಿ ಕ್ಷೇತ್ರಾಧಿಪತಿಗಳಿಗೆ ಭಕ್ತಿ ಕಾಣಿಕೆಯಾಗಿ ಒಪ್ಪಿಸಿದರು. ಅಂದಿನಿಂದ ಸಾರ್ಥಕವಾಗಿ ಬೆಳ್ಳಿಯ ಪಲ್ಲಕ್ಕಿ ಉತ್ಸವ ನಡೆಯುತ್ತದೆ. ತಮ್ಮ ಸೇವೆ ಸಾರೋದ್ಧಾರವಾಗಿ ನಡೆದುಕೊಂಡುಬರಲು ಅವರು ಸ್ವಲ್ಪ ಇಡುಗಂಟನ್ನೂ ಇಟ್ಟು ಲಿಂಗೈಕ್ಯರಾದರು. ಆ ದಿನದ ಖರ್ಚುವೆಚ್ಚಗಳಿಗೆ ಆ ಇಡುಗಂಟಿನ ಬಡ್ಡಿಯ ನೆರವೂ ಪ್ರತಿವರ್ಷ ಬರುತ್ತದೆ. ಜಾತ್ರೆಯಲ್ಲಿ ಉತ್ತಮರಾಸುಗಳಿಗೆ ಬಹುಮಾನ ಕೊಡುವ ಕಾರ್ಯಕ್ರಮವೂ ಇನ್ನೊಂದು ಪ್ರಮುಖ ಆಕರ್ಷಣೆಯಾಗಿದೆ. ಬೆಳ್ಳಿಯಪಲ್ಲಕ್ಕಿಯ ಮರು ದಿನದಿಂದ ಜಾತ್ರೆ ಇಳಿಮುಖವಾಗುತ್ತ ಹೋಗಿ ೧೦ನೆಯ ದಿನದ ಪಂಚಬ್ರಹ್ಮೋತ್ಸವದೊಡನೆ ಅದು ಹರಿಯುತ್ತದೆ. ಜಾತ್ರೆಯಲ್ಲಿ ಹತ್ತುದಿನವೂ ಅನೇಕ ಸಾಂಸ್ಕೃತಿಕ, ಸಾಹಿತ್ಯಕ ಚಟುವಟಿಕೆಗಳು ಜರುಗುತ್ತವೆ. ಆಸಕ್ತರಿಗೆ ಇದೊಂದು ರಸದೌತಣ.

ಶ್ರೀ ಸಿದ್ಧಗಂಗಾ ಕ್ಷೇತ್ರವಲ್ಲಿ ತೃಣಜಲಸಮೃದ್ಧವಾಗಿರುವುದರಿಂದಲೂ, ದಾಸೋಹ ವ್ಯವಸ್ಥೆಯಿರುವುದರಿಂದಲೂ ಜಾತ್ರೆಗೆ ಶಿವರಾತ್ರಿಗೆ ೮-೧೦ ದಿನ ಮೊದಲೇ ಇತ್ತೀಚೆಗೆ ಜನ ಸೇರತೊಡಗಿತು. ಈ ಕಾರಣದಿಂದ ಕ್ಷೇತ್ರಾಧಿಪತಿಗಳೂ ಕೂಡ ಶಿವರಾತ್ರಿಗಿಂತ ಮೊದಲೇ ಅನೇಕ ಉತ್ಸವಗಳನ್ನು ಪ್ರಾರಂಭಿಸತೊಡಗಿದ್ದಾರೆ. ಶಿವರಾತ್ರಿಯ ಮರುದಿನ ರಥೋತ್ಸವವನ್ನು ಯಥಾಕ್ರಮಮಾಡಿ ಮುಗಿಸಿ, ಅದರ ಮರುದಿನವೇ ಬೆಳ್ಳಿಪಲ್ಲಕ್ಕಿ ಉತ್ಸವ ನೆರವೇರಿಸತೊಡಗಿದ್ದಾರೆ. ಜಾತ್ರೆಯ ಕೊನೆಯಲ್ಲಿ ಮಾಡುತ್ತಿದ್ದ ದನಗಳ ಪ್ರದರ್ಶನವನ್ನು ರಥೋತ್ಸವದ ದಿನವೇ ಇಟ್ಟುಕೊಳ್ಳಲಾಗುತ್ತಿದೆ. ಹೀಗೆ ವೈಭವಪೂರ್ಣವಾದ ಜಾತ್ರೆ ೧೯೦೯ ರಿಂದಲೂ ಇಂದಿನವರೆಗೆ ಅವಿಚ್ಛಿನ್ನವಾಗಿ ನಡೆದುಕೊಂಡುಬಂದು ಈ ಭಾಗದ ಜನಜೀವನಕ್ಕೆ ಸರ್ವವಿಧದಲ್ಲೂ ತನ್ನ ಅವರ್ಣನೀಯ ಕಾಣಿಕೆಯನ್ನು ಸಲ್ಲಿಸುತ್ತ ಬಂದಿರುವುದು ಹೆಮ್ಮೆಯ ವಿಷಯವಾಗಿದೆ.

ಜಾತ್ರೆಗೆ,ಕ್ಷೇತ್ರಕ್ಕೆ ಬರುವವರು ಯಾರೂ ಬರಿಗೈಯಿಂದ ಬರುವುದಿಲ್ಲ. ಎಲ್ಲ ಸಮಾಜದವರೂ ತಮ್ಮತಮ್ಮ ಮೀಸಲು ದವಸಧಾನ್ಯ, ಬೆಲ್ಲ, ಊಟದೆಲೆ, ಹುಣಸೆಹಣ್ಣು, ಕುಂಬಳಕಾಯಿ, ತರಕಾರಿ ಮೊದಲಾದುವನ್ನು ಭಯಭಕ್ತಿಯಿಂದ ಮಡಿಹುಡಿಯಿಂದ ತಂದು ಶ್ರೀಕ್ಷೇತ್ರದ ದಾಸೋಹಕ್ಕೆ ಸಲ್ಲಿಸುತ್ತಾರೆ. ಎಂದಿನಿಂದಲೂ ದಾಸೋಹ ಕ್ಷೇತ್ರವಾದ ಇಲ್ಲಿಗೆ ಹೀಗೆ ಶ್ರದ್ಧಾಭಕ್ತಿಯಿಂದ ತಮ್ಮತಮ್ಮ ಪಾಲಿನ ಭಕ್ತಿ ಕಾಣಿಕೆಯನ್ನು ಸಲ್ಲಿಸುತ್ತಬಂದಿದ್ದಾರೆ. ಈ ಸಂಪ್ರದಾಯ ಅಡವಿಸ್ವಾಮಿಗಳು, ಉದ್ದಾನಸ್ವಾಮಿಗಳವರ ಕಾಲದಿಂದಲೂ ನಡೆದುಬಂದಿದೆ. ಶ್ರೀಶಿವಕುಮಾರಸ್ವಾಮಿಗಳವರ ಕಾಲದಲ್ಲಾದರೋ ಜನತೆಯ ಶ್ರದ್ಧಾಸಕ್ತಿ ಸಹಸ್ರಾಧಿಕವಾಗಿದೆ. ಅವರ ತಪಸ್ಸು, ಸರ್ವಲೋಕಕಾರುಣ್ಯ, ನಿಸ್ವಾರ್ಥಕ್ರಿಯಾಶೀಲತೆ ಮುಂತಾದ ಲೋಕೋತ್ತರ ಗುಣ ಗಣಗಳಿಂದ ಜನತೆಯ ಶ್ರದ್ಧಾಸಕ್ತಿಗಳು ಪರಿಪಕ್ವಗೊಂಡು ಅವರ ಈ ಮಹಾಮಣಿಹದಲ್ಲಿ ತಮ್ಮ ಅಳಿಲು ಕಾಣಿಕೆ ಸಮರ್ಪಿಸುತ್ತಿದೆ. ಒಟ್ಟಿನಲ್ಲಿ ಸಿದ್ಧಗಂಗೆಯ ಶ್ರೀ ಸಿದ್ಧಲಿಂಗೇಶ್ವರಜಾತ್ರೆ, ವೈಶಿಷ್ಟ್ಯಪೂರ್ಣವಾದುದು ; ಅನ್ಯಾದೃಶವಾದುದು. ಹೀಗಾಗಲು ಶ್ರೀಕ್ಷೇತ್ರಾಧಿಪತಿಗಳು ಎಂದಿನಿಂದಲೂ ನಿಸ್ವಾರ್ಥಮನೋಭಾವದಿಂದ ಲೋಕಜೀವನಕ್ಕೆ ಪೂರಕವಾಗಿ ತಮ್ಮ ಬಾಳನ್ನು ಸವೆಸುತ್ತ ಬಂದಿರುವುದೇ ಆಗಿದೆ. ಅಂತೆಯೇ ಇಲ್ಲಿ ಅಘಟಿತ ಘಟನೆಗಳು ನಡೆಯುತ್ತವೆ. ಸಮಸ್ತ ಜನಾಂಗಗಳ ಶ್ರದ್ಧಾಭಕ್ತಿ ವಿಶ್ವಾಸಗಳನ್ನು ಕ್ಷೇತ್ರಗಳಿಸಿದೆ.

## ಸಿದ್ಧಗಂಗಾ ಕ್ಷೇತ್ರದ ದಾಸೋಹ

ಶ್ರೀ ಸಿದ್ಧಗಂಗಾ ಈ ಹೆಸರೆತ್ತಿದೊಡನೆ ಚಿತ್ತಭಿತ್ತಿಯ ಮೇಲೆ ಮೊದಲು ಮೂಡುವ ಚಿತ್ರವೆಂದರೆ ಅಲ್ಲಿಯ ದಾಸೋಹವೇ. ದಾಸೋಹ ಪ್ರಾಧಾನ್ಯತೆಯಿಂದಲೇ ಮಠದ ಕೀರ್ತಿಗೌರವಗಳು ದಿಗಂತ ವಿಶ್ರಾಂತಗೊಂಡಿವೆ. ದಾಸೋಹ ಸದ್ಭಾವದ ಸಾರೋದ್ಧಾರಕ್ಕಾಗಿ ಶ್ರೀಕ್ಷೇತ್ರಾಧಿಪತಿಗಳು ಯಾವ ತ್ಯಾಗವನ್ನೂ ಮಾಡಲಿಕ್ಕೆ ಸಿದ್ಧ. ದಾಸೋಹದ ನಂತರ ಶ್ರೀಕ್ಷೇತ್ರದ ಎರಡನೆಯ ಮುಖ್ಯ ಕರ್ತವ್ಯ ಜ್ಞಾನ ಪ್ರಸಾರ. ಈ ಜ್ಞಾನ ಪ್ರಸಾರೋದ್ದೇಶವೇ ಶ್ರೀಕ್ಷೇತ್ರದಲ್ಲಿ ವಿವಿಧ ಶಿಕ್ಷಣ ಸಂಸ್ಥೆಗಳು ಹುಟ್ಟಿಕೊಳ್ಳಲು ಕಾರಣವಾಗಿದೆ.

ಶ್ರೀ ಕ್ಷೇತ್ರದ ದಾಸೋಹವ್ಯವಸ್ಥೆ ಎಂದಿನಿಂದ ಪ್ರಚಲಿತವಿದೆಯೆಂಬುದು ಗೊತ್ತಾಗುತ್ತಿಲ್ಲವಾದರೂ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಶ್ರೀ ಕ್ಷೇತ್ರಕ್ಕೆ ಗುಬ್ಬಿಯಿಂದ ಆಗಮಿಸಿದ ಅಡವೆಪ್ಪಸ್ವಾಮಿಗಳು ಇಲ್ಲಿನ ದಾಸೋಹವ್ಯವಸ್ಥೆಯನ್ನು

ಉತ್ತಮಪಡಿಸಿದರೆಂದು ತಿಳಿದುಬರುವುದು. ಹಿಂದಿನಿಂದಲೂ ಇಲ್ಲಿ ದಾಸೋಹವ್ಯವಸ್ಥೆ ಇನ್ನಿತರ ಧರ್ಮಕಾರ್ಯಗಳು ನಡೆಯುತ್ತಿದ್ದವೆಂದು ತೋರುತ್ತದೆ. ಏಕೆಂದರೆ ಈ ಮಠದ ಧರ್ಮಕಾರ್ಯಕ್ಕೆಂದೇ ಸಿದ್ಧಗಂಗಾ ಪಾಳ್ಯ ಮತ್ತು ಬೊಮ್ಮೇನಹಳ್ಳಿ ಎಂಬೆರಡು ಗ್ರಾಮಗಳು ಇನಾಮಾಗಿ ಕೊಡಲ್ಪಟ್ಟಿದ್ದವು. ಇಲ್ಲಿನ ಧರ್ಮಕಾರ್ಯಗಳು ಸರಿಯಾಗಿ ನಡೆಯುತ್ತಿಲ್ಲವೆಂದು ೧೮೬೦ ರ ಸುಮಾರಿಗೆ ಆ ಹಳ್ಳಿಗಳನ್ನು ಬ್ರಿಟಿಷ್ ಸರಕಾರ ಹಿಂತೆಗೆದುಕೊಂಡ ಬಗ್ಗೆ ದಾಖಲೆಗಳಿವೆ. ಅಡವಿಸ್ವಾಮಿಗಳ ಆಗಮನದ ನಂತರ ಪುನಃ ಧರ್ಮಕಾರ್ಯಗಳು ವ್ಯವಸ್ಥೆಗೊಂಡ ಹಾಗೆ ತಿಳಿದುಬರುವುದು. ಅವರು ಶ್ರೀ ಸಿದ್ಧಲಿಂಗೇಶ್ವರರಲ್ಲಿ ಹತ್ತಿಸಿದ ಒಲೆ ಆರದಂತೆ ಅನುಗ್ರಹಿಸಬೇಕೆಂದು ಬೇಡಿಕೊಂಡ ಹಾಗೆ ತಿಳಿದುಬರುವುದು. ಶ್ರೀ ಕ್ಷೇತ್ರದ ಈ ರೀತಿಯ ದಾಸೋಹವ್ಯವಸ್ಥೆಗೆ ಅವರ ಜೋಳಿಗೆಯ ಬಲವೇ ಬಲವಾಗಿದ್ದಿತಲ್ಲದೆ ಯಾವ ಸ್ಥಾವರ ಆಸ್ತಿಯ ಉತ್ಪತ್ತಿ ಮಠಕ್ಕೆ ಇರಲಿಲ್ಲ. ಅಡವಿಸ್ವಾಮಿಗಳವರು ೧೯೦೧ ರಲ್ಲಿ ಲಿಂಗೈಕ್ಯರಾದ ಮೇಲೆ ಉದ್ದಾನಶಿವಯೋಗಿಗಳವರ ಕಾಲದಲ್ಲಿ ಮಠದ ದಾಸೋಹವ್ಯವಸ್ಥೆ ತುಂಬಾ ಸಮರ್ಪಕವಾಗಿ ಶ್ರೀ ಕ್ಷೇತ್ರವು ಸದಾ ಕಳಕಳಿಸತೊಡಗಿತು. ಅವರ ಪ್ರಬಲಸಂಕಲ್ಪಶಕ್ತಿಯ ಫಲವಾಗಿ ಎಂದೂ ಯಾವ ಕೊರತೆಯೂ ಆಗದಂತೆ ದಾಸೋಹ ಕಾರ್ಯಗಳು ನಡೆಯತೊಡಗಿದವು. ಉದ್ದಾನ ಶಿವಯೋಗಿಗಳವರ ನಂತರ ಶ್ರೀ ಶಿವಕುಮಾರ ಸ್ವಾಮಿಗಳವರ ಕಾಲದಲ್ಲಂತೂ ದಾಸೋಹದ ಖರ್ಚುವೆಚ್ಚಗಳು ಮುಗಿಲೆತ್ತರಕ್ಕೇರಿದವು. ಈ ಕ್ಷೇತ್ರದ ಪ್ರಥಮ ವೈಶಿಷ್ಟ್ಯ ಇನ್ನಾವುದೂ ಅಲ್ಲ, ಊಣೆಯವಿಲ್ಲದೆ ನಡೆದು ಬರಬೇಕಾದ ದಾಸೋಹ ಕ್ರಿಯೆ ಮಾತ್ರ. ಉಳಿದೆಲ್ಲ ಕಾರ್ಯಕ್ರಮಗಳು ಆಮೇಲೆ ಯೋಚಿಸತಕ್ಕವು. ಶ್ರೀ ಶಿವಕುಮಾರ ಸ್ವಾಮಿಗಳು ಅರ್ಥಪೂರ್ಣವಾಗಿ ದಾಸೋಹ ಕ್ರಿಯೆ ನಡೆದುಕೊಂಡುಬರಲು ಯಾವ ಬೆಲೆಯನ್ನಾದರೂ ತೆತ್ತಾರು, ಎಷ್ಟಾದರೂ ದುಡಿದಾದರು, ಪ್ರಸಂಗದಲ್ಲಿ ತಾವೇ ಅಡಿಗೆಯ ಮನೆಯಲ್ಲಿ ನಿಲ್ಲಲೂ ಸಿದ್ಧ ; ಸೌದೆ ಸೊಪ್ಪು ಹೊಂದಿಸಲೂ ಸಿದ್ಧ. ಅಷ್ಟೊಂದು ಶ್ರದ್ಧೆ ಈ ದಾಸೋಹ ಕ್ರಿಯೆಯಲ್ಲಿ ಶ್ರೀಗಳವರಿಗೆ. ಅವರ ಕ್ರಿಯಾಸಿದ್ಧಿಕಾರಣವಾಗಿ ಇಲ್ಲಿನ ದಾಸೋಹ ಜಗತ್ತಿನ ಅದ್ಭುತವಾಗಿ ನಡೆಯುತ್ತ ಬಂದಿದೆ. ಸಿದ್ಧಗಂಗಾ ಪರಿಸರದಲ್ಲೆಲ್ಲ ಸಿದ್ಧಗಂಗಾದಾಸೋಹಕ್ಕೆ ತಮ್ಮ ತಮ್ಮ ಪಾಲಿನಕಾಣಿಕೆಯನ್ನು ವಸ್ತು ಒಡವೆ. ಎಲೆ, ತರಕಾರಿ. ಹುಣಸಿಹಣ್ಣು,ಅಕ್ಕಿ, ಬೇಳೆ.ಬೆಲ್ಲ ಮುಂತಾದವುಗಳ ರೂಪದಲ್ಲಿ ಯಥಾಶಕ್ತಿತಂದು ಅರ್ಪಿಸುವ ಪದ್ಧತಿ ಈಗಲೂ ಇದೆ. ಇನ್ನಾವ ಸ್ಥಳದಲ್ಲೂ ವಿಶೇಷವಾಗಿ ಕಾಣದ ಶ್ರದ್ಧಾಭಕ್ತಿ ವಿಶ್ವಾಸ ಪೂರ್ವಕ ಕೊಡುಗೆ ಈ ಕ್ಷೇತ್ರಕ್ಕೆ ಸಲ್ಲುತ್ತಿದೆ. ಜಾತ್ರೆಯ ಕಾಲದಲ್ಲಿ ಸ್ನಾನಾದಿಗಳಿಂದ ಶುಚಿರ್ಭೂತರಾಗಿ ಗಂಟುಮೂಟೆಗಳಲ್ಲಿ ದಾಸೋಹಕ್ಕೆ ಪಡಿಪದಾರ್ಥಗಳನ್ನು ಯಾವ ಜಾತಿಮತ ಪಂಥಗಳೆನ್ನದೆ ಎಲ್ಲರೂ ಸಮರ್ಪಿಸಿ ತಮ್ಮ ತಮ್ಮ ಪಾಲಿನ ಪ್ರಸಾದವನ್ನು ಸ್ವೀಕರಿಸಿ ಕ್ಷೇತ್ರದರ್ಶನ ಲಾಭಮಾಡಿಕೊಂಡು ಹೋಗುತ್ತಿದ್ದಾರೆ. ತುಮಕೂರು ಬೆಂಗಳೂರು, ಕೋಲಾರ ಹಿಂದೂಪುರ, ಹಾಸನ. ಸಕಲೇಶಪುರ ವಿಭಾಗಗಳಿಂದ ಶ್ರೀ ಕ್ಷೇತ್ರಕ್ಕೆ ಜನತೆ ಪಡಿಪದಾರ್ಥಗಳನ್ನು ಯಥಾಮತಿ ಸಲ್ಲಿಸುತ್ತಾರೆ.

ಗೋಸಲಸಿದ್ಧೇಶ್ವರರು ಮೊದಲ್ಗೊಂಡು ತೋಂಟದಸಿದ್ಧಲಿಂಗೇಶ್ವರರವರೆಗೆ ಶೂನ್ಯಪೀಠಾಧಿಪತಿಗಳು ತಪಸ್ಸು ಮಾಡಿದ ದಿವ್ಯ ಶಿವಯೋಗ ಭೂಮಿಯಾದ ಈ ಕ್ಷೇತ್ರದಲ್ಲಿ ಆ ಪರಂಪರೆವಿಡಿದುಬಂದ ಜಂಗಮಮೂರ್ತಿಗಳು ಎಂದಿನಿಂದಲೂ ದಾಸೋಹವ್ಯವಸ್ಥೆಯನ್ನು ಅನೂಚಾನವಾಗಿ ನಡೆಸಿಕೊಂಡುಬಂದುದರ ಫಲವಾಗಿಯೋ ಏನೋ 'ಸಿದ್ಧಗಂಗೆಯ ಊಟಚೆಂದ; ಶಿವಗಂಗೆಯ ನೋಟ ಚೆಂದ' 'ಸಿದ್ಧಗಂಗೆ ಊಟಕ್ಕೆ; ಶಿವಗಂಗೆ ನೋಟಕ್ಕೆ' ಇತ್ಯಾದಿ ಇತ್ಯಾದಿ ಗಾದೆಗಳು ಇಂದಿಗೂ ಜನಜೀವನದ ನಾಲಿಗೆಯಿಂದ ದೂರಸರಿದಿಲ್ಲ. ಇದೇ ಈ ಕ್ಷೇತ್ರದ ದಾಸೋಹದ ವೈಶಿಷ್ಟ್ಯ.

## ಶ್ರೀ ಸಿದ್ಧಗಂಗಾಕ್ಷೇತ್ರವು ಮಠಾಧಿಪತಿಗಳ ಶಿಕ್ಷಣ ಕೇಂದ್ರ

ಶ್ರೀ ಸಿದ್ಧಗಂಗಾಕ್ಷೇತ್ರದ ಮೇಲೆ ವಿವರಿಸಿರುವ ಹಲವಾರು ವೈಶಿಷ್ಟ್ಯಗಳ ಜೊತೆಗೆ ಅನೇಕ ಮಠಮಾನ್ಯಗಳಿಗೆ ಸ್ವಾಮಿಗಳಾಗುವವರಿಗೆ ಶಿಕ್ಷಣ, ಆಚಾರವಿಚಾರಸಂಹಿತೆ. ಸಮಯಧರ್ಮಪಾಲನೆಯ ರಹಸ್ಯತತ್ತ್ವಬೋಧನೆಯ ಒಂದು ಕೇಂದ್ರವೂ ಆಗಿ, ಎಂದಿನಿಂದಲೂ ತನ್ನ ಶುಚಿಯನ್ನು ಕಾಪಾಡಿಕೊಂಡು ಬಂದಿರುವ ಒಂದು ಧಾರ್ಮಿಕ ಶಿಕ್ಷಣಕೇಂದ್ರವೂ ಆಗಿದೆ. ಉದ್ದಾನ ಶಿವಯೋಗಿಗಳವರ ಕಾಲದಿಂದಲೂ ಈ ಸಂಪ್ರದಾಯ ಇಲ್ಲಿ ಬೆಳೆದುಬಂದಿದೆ. ಕರ್ನಾಟಕ, ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳಿಂದ ಇಲ್ಲಿಗೆ ಬಂದು ಶಿಕ್ಷಣ ಪಡೆಯುತ್ತಿರುವ ಅನೇಕ ಮಠಗಳ ಉತ್ತರಾಧಿಕಾರಿಗಳನ್ನು ಈಗಲೂ ಮಠದಲ್ಲಿ ನೋಡಬಹುದು. ಇವರೆಲ್ಲರಿಗೆ ಇಲ್ಲಿ ಪ್ರತ್ಯೇಕ ವ್ಯವಸ್ಥೆಯಿದೆ. ಮುಖ್ಯವಾಗಿ ಇವರೆಲ್ಲರೂ ಹಳೆಯಮಠದ ಆವರಣದಲ್ಲಿಯೇ ವಾಸಿಸುತ್ತಾರೆ. ಒಂದಿಲ್ಲೊಂದು ರೀತಿಯಲ್ಲಿ ಇವರೆಲ್ಲ ಮಠಾಧಿಪತಿಗಳ ಸೇವೆಯಲ್ಲಿ ತೊಡಗಿರುತ್ತಾರೆ. ಶ್ರೀಗಳವರ ಪೂಜೆಗೆ ಹೂಪತ್ರಿಗಳನ್ನು ಎತ್ತಿತರುವುದು, ಪೂಜಾಗೃಹದ ಶುಚಿಯನ್ನು ಕಾಪಾಡುವುದು. ಶ್ರೀಗಳವರ ಸ್ನಾನ, ಶಿವಪೂಜೆ, ಪ್ರಸಾದಗಳಿಗೆ ಅಣಿಗೊಳಿಸುವುದು, ಶ್ರೀಗಳವರೊಡನೆ ಪೂಜೆಮಾಡುವುದು. ಪ್ರಸಾದ ಸ್ವೀಕರಿಸುವುದೇ ಮೊದಲಾದಕ್ರಿಯೆಗಳನ್ನು ಮಾಡುವುದರ ಮೂಲಕ ತಮ್ಮ ಸಮಯಧರ್ಮದ ವಿಧಿವಿಧಾನಗಳನ್ನು ಅರಿತುಕೊಳ್ಳುತ್ತಾರೆ. ಉಳಿದ ವೇಳೆಯಲ್ಲಿ ಸಂಸ್ಕೃತ ವೇದ ಜ್ಯೋತಿಷ್ಯ ಶಿಕ್ಷಣ ಮತ್ತು ಅಪೇಕ್ಷೆಪಟ್ಟರೆ ಉಳಿದ ಶಿಕ್ಷಣವನ್ನು ಪಡೆಯಬಹುದು. ಹಳೆಯಮಠದ ಆವರಣವನ್ನು ಸ್ವಚ್ಛವಾಗಿಡುವುದು, ಹೂ

ಗಣಮಾರಗಳನ್ನು ಬೇಳಿಸುವುದು. ಹಳೆಯಮಠಕ್ಕೆ ಶ್ರೀಗಳವರಲ್ಲಿ ಪೂಜೆಗಾಗಿ ಬಂದವರ ಯೋಗಕ್ಷೇಮ ನೋಡುವುದು ಈ ಕಾರ್ಯಗಳು ಇವರ ಇನ್ನಿತರ ಕ್ರಿಯೆಗಳಾಗಿರುತ್ತವೆ. ಶ್ರೀಗಳವರು ಭಿಕ್ಷಾಟನೆಗೆ ಮತ್ತು ಬೇರೆಬೇರೆಕಡೆಗಳಲ್ಲಿ ಭಕ್ತರಮನೆಗೆ ಪೂಜೆಗೆ ದಯಮಾಡಿಸಿದರೆ ಅವರೊಡನೆ ತೆರಳುತ್ತಾರೆ. ಅಲ್ಲಿ ಶ್ರೀಗಳವರ ಪೂಜೆಗೆ ಸಂಬಂಧಿಸಿದ ಕ್ರಿಯೆಗಳನ್ನೆಲ್ಲ ಇವರೇ ಮಾಡುತ್ತಾರೆ. ಮಡಿ ಮಾಡುವುದು, ಪೂಜಾವೇದಿಕೆ ನಿರ್ಮಾಣ, ಪ್ರಸಾದಸಿದ್ಧಗೊಳಿಸುವುದು, ಭಕ್ತರಿಗೆ ಪೂಜಾವಿಧಾನ ತಿಳಿಸುವುದು, ತೀರ್ಥ ಪ್ರಸಾದ ಕೊಡಿಸುವುದು ಮುಖ್ಯವಾಗಿ ಇವರ ಕರ್ತವ್ಯಗಳು. ಒಂದುಬಗೆಯಲ್ಲಿ ಈ ವಟುಗಳಿಗೆಲ್ಲ ಶ್ರೀಗಳವರ ವರ್ತನೆಯೇ ಉಪದೇಶವಾಗುತ್ತದೆ. ಹೀಗೆ ಇಲ್ಲಿ ಉಪದೇಶಪೊಂದಿದ ವಿವಿಧ ಮಠಗಳ ಶ್ರೀಗಳವರು ತಮ್ಮ ಮಠಮಾನ್ಯಗಳಲ್ಲಿ ತಮ್ಮ ಆಚಾರವಿಚಾರಸಂಹಿತೆಯನ್ನು ಕಾಪಾಡಿಕೊಂಡುಬರಲು ತುಂಬಾ ನೆರವಾಗುತ್ತದೆ. ಸಿದ್ಧಗಂಗೆಯಲ್ಲಿ ತಯಾರಾಗಿಬಂದ ಸ್ವಾಮಿಗಳೆಂದರೆ ಎಲ್ಲ ಜನರಿಗೂ ಒಂದು ಗೌರವಭಾವ. ಹಿಂದೆ ಉದ್ದಾನಸ್ವಾಮಿಗಳವರ ಕಾಲದಲ್ಲಿ ಕನಕಪುರ ದೇಗುಲಮಠದ ಶಿವಯೋಗೀಶ್ವರರಾಗಿದ್ದ ಲಿಂ.ನಿರ್ವಾಣಮಹಾಸ್ವಾಮಿಗಳು ತಮ್ಮ ಉತ್ತರಾಧಿಗಳನ್ನಾಗಿ ಸಿದ್ಧಗಂಗೆಯ ಉದ್ದಾನಶಿವಯೋಗಿಗಳವರ ಸೇವೆಯಲ್ಲಿದ್ದ ವಟುವೇಬೇಕೆಂದು ಪಟಹಿಡಿದು. ಉದ್ದಾನಶಿವಯೋಗಿಗಳು ಕಳಿಸಿಕೊಟ್ಟ ಪೂರ್ವಾಶ್ರಮದ 'ಕಾಳಪ್ಪ' ಎಂಬ ವಟುವನ್ನೇ 'ಶ್ರೀ ಮಹಾಲಿಂಗಸ್ವಾಮಿಗಳು' ಎಂಬ ನಾಮಾಂಕಿತದಿಂದ ತಮ್ಮ ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಂಡುದನ್ನಿಲ್ಲಿ ಜ್ಞಾಪಿಸಬಹುದಾಗಿದೆ. ಮೈಸೂರು, ಕೊಡಗು, ಹಾಸನಜಿಲ್ಲೆಗಳ ಅನೇಕ ಮಠಗಳ ಸ್ವಾಮಿಗಳು ಸಿದ್ಧಗಂಗೆಯಲ್ಲಿ ಸಿದ್ಧಿಪಡೆದವರೇ ಆಗಿದ್ದಾರೆ. ಶ್ರೀ ಶಿವಕುಮಾರಮಹಾಸ್ವಾಮಿಗಳು ಬಸವಾದಿಪ್ರಮಥರು ಆಚರಿಸಿತೋರಿಸಿದ ವೀರಶೈವ ಸಮಯನಿಷ್ಠೆಯಲ್ಲಿ ಅಪಾರನಂಬುಗೆಯಿಟ್ಟು ನಡೆಯುವ ಕ್ರಿಯಾಪ್ರಧಾನವಾದಿಗಳು. ಅವರು ತಮ್ಮ ಆಶ್ರಯದಲ್ಲಿರುವ ವಿವಿಧ ಮಠಮಾನ್ಯಗಳ ಶ್ರೀಗಳವರಿಗೆ ಕ್ರಿಯಾಪ್ರಧಾನವಾದಿಗಳಾಗಿ, ಲಿಂಗನಿಷ್ಠಾಗರಿಷ್ಠರಾಗಿ, ನಿಸ್ವಾರ್ಥಸೇವಾಧುರಂಧರರಾಗಿ, ದಾಸೋಹಮೂರ್ತಿಗಳಾಗಿ ಬಾಳಿಬದುಕಿ ಇಹಪರಗಳನ್ನು ಸಾಧಿಸಿರೆಂದು ಉಪದೇಶಿಸಿ ಕಳಿಸಿಕೊಡುತ್ತಾರೆ. ಈ ದೃಷ್ಟಿಯಿಂದ ಶ್ರೀಕ್ಷೇತ್ರವು ಈ ಮುಖದಲ್ಲೂ ತನ್ನ ಅಪರಿಮಿತ ಸೇವೆಯನ್ನು ಸಮಾಜಕ್ಕೆ, ಧರ್ಮಕ್ಕೆಸಲ್ಲಿಸುತ್ತ ಬಂದಿದೆ. ಉದ್ದಾನಸ್ವಾಮಿಗಳವರ ಕಾಲದಿಂದ ಇಂದಿನವರೆಗೆ ಯಾವಯಾವ ಮಠದ ಶ್ರೀಗಳವರು ಇಲ್ಲಿ ಶಿಕ್ಷಣ ಪಡೆದು ಹೋಗಿದ್ದಾರೆಂಬುದರ ಒಂದು ಪಟ್ಟಿಯನ್ನು ಮತ್ತು ಹಾಲಿ ಕ್ರಿ.ಶ. ೧೯೮೦ರಲ್ಲಿ ಶಿಕ್ಷಣ ಪಡೆಯುತ್ತಿರುವವರ ಪಟ್ಟಿಯನ್ನು ಕೊಡಲಾಗಿದೆ.

## ಶ್ರೀ ಕ್ಷೇತ್ರದ ಆಶ್ರಯದಲ್ಲಿದ್ದು ಇಲ್ಲಿ ಶಿಕ್ಷಣ ಪಡೆದ ಬೇರೆ ಬೇರೆ ಮಠಗಳ ಶ್ರೀಗಳವರು

೧) ಶ್ರೀ ನಂಜುಂಡ ಸ್ವಾಮಿಗಳವರು. ದೊಡ್ಡಕೊಡಲಿ ಕಲ್ಲುಮಠ, ಕೊಡ್ಲಿಪೇಟೆ ಕೊಡಗು ಜಿಲ್ಲೆ.
೨) ಶ್ರೀ ಸಿದ್ಧಲಿಂಗ ಸ್ವಾಮಿಗಳು, ದೊಡ್ಡಕೊಡಲಿ ಊರುಮಠ, ಕೊಡ್ಲಿಪೇಟೆ ಕೊಡಗು ಜಿಲ್ಲೆ.
೩) ಶ್ರೀ ಬಸವರಾಜ ಸ್ವಾಮಿಗಳು, ಶಿಡಗಳಲೆಮಠ, ಶನಿವಾರ ಸಂತೆ, ಕೊಡಗು ಜಿಲ್ಲೆ.
೪) ಶ್ರೀ ಗುರುಸಿದ್ಧಸ್ವಾಮಿಗಳು, ಕಿರಿಕೊಡ್ಲಮಠ, ಕೊಡಲಿಪೇಟೆ ಕೊಡಗು ಜಿಲ್ಲೆ.
೫) ಶ್ರೀ ಮಹಾಂತ ಸ್ವಾಮಿಗಳು. ತೊರೆನೂರುಮಠ, ಕೊಡಗು ಜಿಲ್ಲೆ.
೬) ಶ್ರೀ ಶಾಂತಮಲ್ಲ ಸ್ವಾಮಿಗಳು, ಅರಮೇರಿ ಕಳಂಚೇರಿಮಠ, ಕೊಡಗು ಜಿಲ್ಲೆ.
೭) ಶ್ರೀ ಮೃತ್ಯುಂಜಯ ಸ್ವಾಮಿಗಳು, ಸರಗೂರುಮಠ, ಮೈಸೂರು ಜಿಲ್ಲೆ.
೮) ಶ್ರೀ ಮಹಾಂತಸ್ವಾಮಿಗಳು, ದೊಡ್ಡಕೊಡಲಿ ಕಲ್ಲುಮಠ ಕೊಡ್ಲಿಪೇಟೆ, ಕೊಡಗು ಜಿಲ್ಲೆ.
೯) ಶ್ರೀ ಶಿವಲಿಂಗ ಸ್ವಾಮಿಗಳು. ತಣ್ಣೀರು ಹಳ್ಳದ ಮಠ, ಹಾಸನ.
೧೦) ಶ್ರೀ ಧರ್ಮರಾಜೇಂದ್ರ ಸ್ವಾಮಿಗಳು, ಸಂಕಲಾಪುರದ ಮಠ, ಹಾಸನಜಿಲ್ಲೆ.
೧೧) ಶ್ರೀ ಸೋಮಶೇಖರ ಸ್ವಾಮಿಗಳು, ಬಿಕ್ಕೋಡುಮಠ, ಹಾಸನಜಿಲ್ಲೆ.
೧೨) ಶ್ರೀ ಶಿವಲಿಂಗ ಸ್ವಾಮಿಗಳು, ಕೇದಿಗೆ ಮಠ, ಕೊಳಗುಂದ, ಹಾಸನಜಿಲ್ಲೆ.
೧೩) ಶ್ರೀ ಜಯಚಂದ್ರಶೇಖರ ಸ್ವಾಮಿಗಳು, ಜಾಬಾಲುಪುರಿ ಮಠ, ಚಿಕ್ಕಮಗಳೂರು ಜಿಲ್ಲೆ.
೧೪) ಶ್ರೀ ಶಂಕರಾನಂದ ಸ್ವಾಮಿಗಳು, ಕರಡೀಗವಿ ಮಠ, ಚಿಕ್ಕಮಗಳೂರು ಜಿಲ್ಲೆ.
೧೫) ಶ್ರೀ ಷಡಕ್ಷರಿ ದೇವರು, ಗುತ್ತಲಮಠ, ಧಾರವಾಡಜಿಲ್ಲೆ.
೧೬) ಶ್ರೀ ಮೃತ್ಯುಂಜಯ ಸ್ವಾಮಿಗಳು, ನುಗ್ಗೇಹಳ್ಳಿ ಮಠ, ಹಾಸನಜಿಲ್ಲೆ.
೧೭) ಶ್ರೀ ಗುರುಸಿದ್ಧ ಸ್ವಾಮಿಗಳು, ಬಿದರೆಚೌಕಿ ಮಠ, ಮೈಸೂರು ಜಿಲ್ಲೆ.
೧೮) ಶ್ರೀ ಶಿವರುದ್ರ ಸ್ವಾಮಿಗಳು, ಕಾಗಲವಾಡಿ ಮಠ, ಮೈಸೂರು ಜಿಲ್ಲೆ.
೧೯) ಶ್ರೀ ಗಂಗಾಧರ ಸ್ವಾಮಿಗಳು, ಚಿಕ್ಕ ಇಂದುವಾಡಿಮಠ, ಮೈಸೂರುಜಿಲ್ಲೆ.

೨೦) ಶ್ರೀ ಶಿವನಂಜೇ ಸ್ವಾಮಿಗಳು, ಹರವೇಮಠ, ಮೈಸೂರು ಜಿಲ್ಲೆ.
೨೧) ಶ್ರೀ ಸಿದ್ಧಮಲ್ಲ ಸ್ವಾಮಿಗಳು, ನೀಲಕಂಠಸ್ವಾಮಿಮಠ. ಮೈಸೂರು.
೨೨) ಶ್ರೀ ಜಡೇ ಸ್ವಾಮಿಗಳು, ಅಂಗಳಮಠ, ಮೈಸೂರು ಜಿಲ್ಲೆ.
೨೩) ಶ್ರೀ ಸದಾಶಿವ ಸ್ವಾಮಿಗಳು, ಮರಿಯಾಲಮಠ, ಮೈಸೂರು ಜಿಲ್ಲೆ.
೨೪) ಶ್ರೀ ಸದಾಶಿವ ಸ್ವಾಮಿಗಳು. ಕುರುಬೂರು ಮಠ. ಮೈಸೂರು ಜಿಲ್ಲೆ.
೨೫) ಶ್ರೀ ನಂಜುಂಡ ಸ್ವಾಮಿಗಳು, ಬಿನಕನಹಳ್ಳಿ ಮಠ. ಮೈಸೂರು ಜಿಲ್ಲೆ.
೨೬) ಶ್ರೀ ಬಸವರಾಜ ಸ್ವಾಮಿಗಳು, ಕಾರಾಪುರ ಮಠ, ಮೈಸೂರು ಜಿಲ್ಲೆ.
೨೭) ಶ್ರೀ ರೇಣುಕ ಶಿವಾಚಾರ್ಯ ಸ್ವಾಮಿಗಳು, ವೀರಪ್ಪಒಡೆಯರ ಹುಂಡಿ, ಮೈಸೂರು ಜಿಲ್ಲೆ.
೨೮) ಶ್ರೀ ಮಹಾಲಿಂಗ ಸ್ವಾಮಿಗಳು, ಶ್ರೀ ದೇಗುಲಮಠ ಕನಕಪುರ. ಬೆಂಗಳೂರು ಜಿಲ್ಲೆ.
೨೯) ಶ್ರೀ ಚನ್ನವೀರದೇಶಿಕೇಂದ್ರ ಸ್ವಾಮಿಗಳು, ದೊಡ್ಡಮಠ ಅಕ್ಕಿಪೇಟೆ, ಬೆಂಗಳೂರು.
೩೦) ಶ್ರೀ ಮಹಾಂತಸ್ವಾಮಿಗಳು, ಗುರುವಣ್ಣದೇವರಮಠ, ಬೆಂಗಳೂರು.
೩೧) ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು, ಗುರುವಣ್ಣದೇವರಮಠ, ಬೆಂಗಳೂರು.
೩೨) ಶ್ರೀ ಪರ್ವತರಾಜ ಶಿವಾಚಾರ್ಯ ಸ್ವಾಮಿಗಳು, ಹುಣಸಮಾರನಹಳ್ಳಿ ಬೃಹನ್ಮಠ, ಬೆಂಗಳೂರು ಜಿಲ್ಲೆ.
೩೩) ಶ್ರೀ ವಿರೂಪಾಕ್ಷ ಸ್ವಾಮಿಗಳು, ಭೈರಮಂಗಲಮಠ, ಬೆಂಗಳೂರು ಜಿಲ್ಲೆ.
೩೪) ಶ್ರೀ ಶಿವರುದ್ರಸ್ವಾಮಿಗಳು, ಕಂಚುಕಲ್ ಬಂಡೇಮಠ, ಬೆಂಗಳೂರು ಜಿಲ್ಲೆ.
೩೫) ಶ್ರೀ ಶಾಂತವೀರ ಸ್ವಾಮಿಗಳು, ಮಕ್ಕಳ ದೇವರಮಠ. ಕಣ್ಣೂರು, ಬೆಂಗಳೂರು ಜಿಲ್ಲೆ.
೩೬) ಶ್ರೀ ಪಂಚಾಕ್ಷರಿ ಸ್ವಾಮಿಗಳು, ತಿಪ್ಪಸಂದ್ರ ಹಿರೇಮಠ, ಬೆಂಗಳೂರು ಜಿಲ್ಲೆ.
೩೭) ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ಕುಡಿನೀರು ಕಟ್ಟೆ ವಿರಕ್ತಮಠ, ಚನ್ನಪಟ್ಟಣ, ಬೆಂಗಳೂರು ಜಿಲ್ಲೆ.
೩೮) ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು. ಕುಡಿಕೆ ಬೇವೂರುಮಠ, ಬೆಂಗಳೂರು ಜಿಲ್ಲೆ.
೩೯) ಶ್ರೀ ಸಿದ್ಧಲಿಂಗ ಸ್ವಾಮಿಗಳು, ತೋಂಟಿನಮಠ, ಬೆಂಗಳೂರು ಜಿಲ್ಲೆ.
೪೦) ಶ್ರೀ ಷಡಕ್ಷರಿ ಸ್ವಾಮಿಗಳು. ಬಾಸೀಮಠ, ಬೆಂಗಳೂರು ಜಿಲ್ಲೆ.
೪೧) ಶ್ರೀ ಶ್ರೀಗಳವರು ಅರೇಶಂಕರ ದೇವರಮಠ, ಮಾಗಡಿ, ಬೆಂಗಳೂರು ಜಿಲ್ಲೆ.
೪೨) ಶ್ರೀ ಶಿವಕುಮಾರ ಸ್ವಾಮಿಗಳು ಕಲ್ಲಲಬಾಳುಮಠ, ಬೆಂಗಳೂರು ಜಿಲ್ಲೆ.
೪೩) ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು. ಹೊನ್ನಮ್ಮನಗವಿಮಠ, ಬೆಂಗಳೂರು ಜಿಲ್ಲೆ.
೪೪) ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು. ಕಂಬಾಳುಮಠ. ಬೆಂಗಳೂರು ಜಿಲ್ಲೆ.
೪೫) ಶ್ರೀ ಸದಾಶಿವ ಸ್ವಾಮಿಗಳು, ಬಸವಣ್ಣದೇವರಮಠ. ನೆಲಮಂಗಲ, ಬೆಂಗಳೂರು ಜಿಲ್ಲೆ.
೪೬) ಶ್ರೀ ಮಹಾಂತ ಸ್ವಾಮಿಗಳು, ಶ್ರೀ ಮಹಂತೇಶ್ವರಸ್ವಾಮಿ ಗದ್ದುಗೆಮಠ, ಬೆಂಗಳೂರು ಜಿಲ್ಲೆ.
೪೭) ಶ್ರೀ ಸದಾಶಿವ ಸ್ವಾಮಿಗಳು. ಚಿಲುಮೇಮಠ, ಸೋಲೂರು, ಬೆಂಗಳೂರು ಜಿಲ್ಲೆ.
೪೮) ಶ್ರೀ ಸಿದ್ಧಲಿಂಗ ಸ್ವಾಮಿಗಳು, ಬಿಕ್ಕೋಡುಮಠ. ಹಾಸನ ಜಿಲ್ಲೆ.
೪೯) ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು. ಅಂಕನಹಳ್ಳಿ ಗವಿಮಠ, ತುಮಕೂರು ಜಿಲ್ಲೆ.
೫೦) ಶ್ರೀ ಸಿದ್ಧಲಿಂಗ ಶಿವಾನಂದಸ್ವಾಮಿಗಳು, ಸಿದ್ಧಗಂಗಾಮಠ. ಹುಲಿಯೂರುದುರ್ಗ, ತುಮಕೂರು ಜಿಲ್ಲೆ,
೫೧) ಶ್ರೀ ಪಂಡಿತಾರಾಧ್ಯ ಶಿವಾಚಾರ್ಯಸ್ವಾಮಿಗಳು. ಚಿತ್ತಲಹಳ್ಳಿಮಠ, ತುಮಕೂರು ಜಿಲ್ಲೆ.
೫೨) ಶ್ರೀ ಶಿವಸ್ವಾಮಿಗಳು, ಹೊನಗನಹಳ್ಳಿಮಠ, ಮಂಡ್ಯ ಜಿಲ್ಲೆ.
೫೩) ಶ್ರೀ ಶಿವಾನಂದ ಶಿವಾಚಾರ್ಯಸ್ವಾಮಿಗಳು, ವೈದ್ಯನಾಥಪುರಮಠ, ಮಂಡ್ಯ.
೫೪) ಶ್ರೀ ಮಹಾದೇವಸ್ವಾಮಿಗಳು, ಗೋಡೇಗೌಡನಹಳ್ಳಿಮಠ, ಧರ್ಮಪುರಿ ಜಿಲ್ಲೆ ತಮಿಳುನಾಡು.
೫೫) ಶ್ರೀ ಸದಾಶಿವಸ್ವಾಮಿಗಳು. ನೂರೊಂದುಸ್ವಾಮಿಮಠ. ಧರ್ಮಪುರಿ ಜಿಲ್ಲೆ ತಮಿಳುನಾಡು.
೫೬) ಶ್ರೀ ಕರಿಬಸವ ರಾಜೇಂದ್ರಸ್ವಾಮಿಗಳು, ದೇವೇಗೌಡನದೊಡ್ಡಿಮಠ, ಧರ್ಮಪುರಿ ಜಿಲ್ಲೆ ತಮಿಳುನಾಡು.
೫೭) ಶ್ರೀ ತೋಂಟದಾರ್ಯಸ್ವಾಮಿಗಳು. ಕಗ್ಗೆರೆಮಠ. ತುಮಕೂರು ಜಿಲ್ಲೆ,
೫೮) ಶ್ರೀ ಬಸಪ್ಪಸ್ವಾಮಿಗಳು, ತೋಟಹಳ್ಳಿಮಠ, ಬೆಂಗಳೂರು ಜಿಲ್ಲೆ.
೫೯) ಶ್ರೀ ಗುಂಡಪ್ಪಸ್ವಾಮಿಗಳು, ಕುರುಬೂರುಮಠ. ಮೈಸೂರು ಜಿಲ್ಲೆ.

## ಸದ್ಯದಲ್ಲಿ ಶ್ರೀ ಕ್ಷೇತ್ರದ ಆಶ್ರಯದಲ್ಲಿ ಅಭ್ಯಾಸ ಮಾಡುತ್ತಲಿರುವ ಮಠಾಧಿಪತಿಗಳು (೧೯೮೦)

೧) ಶ್ರೀ ಶಿವಲಿಂಗ ಸ್ವಾಮಿಗಳು, ಮೇದಿನೀಮಠ, ಮೈಸೂರು ಜಿಲ್ಲೆ.
೨) ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು. ಸಿದ್ಧಗಿರಿ ಬೃಹನ್ಮಠ. ಚಕ್ರಬಾವಿ. ಬೆಂಗಳೂರು ಜಿಲ್ಲೆ.
೩) ಶ್ರೀ ಪಂಚಾಕ್ಷರಿ ಸ್ವಾಮಿಗಳು. ಹಂಡರಕಳ್ಳಿ ಮಠ, ಮೈಸೂರು ಜಿಲ್ಲೆ.
೪) ಶ್ರೀ ಗಂಗಾಧರ ಸ್ವಾಮಿಗಳು, ತೋಪಿನ ಮಠ ಬೆಂಗಳೂರು ಜಿಲ್ಲೆ.
೫) ಶ್ರೀ ಚಂದ್ರಶೇಖರ ಸ್ವಾಮಿಗಳು, ಬೆಟ್ಟದಹಳ್ಳಿ ಗವೀಮಠ ತುಮಕೂರು ಜಿಲ್ಲೆ.
೬) ಶ್ರೀ ಜಯಚಂದ್ರಶೇಖರ ಸ್ವಾಮಿಗಳು. ಕೇದಿಗೆ ಮಠ. ಕೋಳಗುಂದ ಹಾಸನ ಜಿಲ್ಲೆ.
೭) ಶ್ರೀ ಸಿದ್ಧರಾಮ ದೇಶಿಕೇಂದ್ರ ಸ್ವಾಮಿಗಳು. ಗೋಡೆಕೆರೆ ರಂಭಾಪುರಿ ಮಠ. ತುಮಕೂರು ಜಿಲ್ಲೆ.
೮) ಶ್ರೀ ಚಂದ್ರಶೇಖರ ಸ್ವಾಮಿಗಳು, ಶ್ರೀ ರುದ್ರಮುನೀಶ್ವರ ಸ್ವಾಮಿಮಠ. ಮಾಗಡಿ, ಬೆಂಗಳೂರು ಜಿಲ್ಲೆ.
೯) ಶ್ರೀ ಸಿದ್ಧಲಿಂಗ ಸ್ವಾಮಿಗಳು. ಜಂಗಮ ಮಠ, ಚಿಕ್ಕಮಸ್ಕಲ್ ಬೆಂಗಳೂರು ಜಿಲ್ಲೆ.
೧೦) ಶ್ರೀ ಶಿವಕುಮಾರ ಶಿವಾಚಾರ್ಯ ಸ್ವಾಮಿಗಳು. ಹಿರೇಮಠ ಕುಣಿಗಲ್ಲು ತುಮಕೂರು ಜಿಲ್ಲೆ.
೧೧) ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ಕಳಂಚೇರಿ ಅರಮೇರಿ ಮಠ, ಕೊಡಗು ಜಿಲ್ಲೆ.
೧೨) ಶ್ರೀ ಸ್ವಾಮಿಮಹಾರಾಜ್ ಅಮೋಘೇಶ್ವರ ಮಠ. ಶಿರವಾಳ ಸೊಲ್ಲಾಪುರ ಜಿಲ್ಲೆ-ಮಹಾರಾಷ್ಟ್ರ.



### ಶ್ರೀಕ್ಷೇತ್ರದಲ್ಲಿ
### ೧೯೮೦ನೆಯ ಇಸ್ವಿಯಲ್ಲಿ ವಿವಿಧ ಕೋಮಿನ ವಿದ್ಯಾರ್ಥಿಗಳ ಸಂಖ್ಯೆ ಈ ಕೆಳಗಿನಂತಿದೆ

[ಒಕ್ಕಲಿಗ-೧೨೩೪. ವೀರಶೈವ-೧೮೪೯, ಬ್ರಾಹ್ಮಣ-೧೨, ತಿಗುಳ-೪೩, ಕುರುಬ-೧೧೬, ಬೋವಿ-೨೩, ಬಣಜಿಗ-೩೨, ಮೊದಲಿಯಾರ-೫, ಎ.ಕೆ.-೯. ಸೆಟ್ಟಿ-೧೯. ಗೊಲ್ಲ-೩೮, ರೆಡ್ಡಿ-೩೩, ಕ್ಷತ್ರಿಯ-೧೬. ಅಕ್ಕಸಾಲಿ-೩೭. ಮುಸ್ಲಿಂ-೧೩. ದೇವಾಂಗ-೩೪, ಕ್ರಿಶ್ಚಿಯನ್-೬, ನಾಯ್ಡು-೨೧, ಮರಾಠಿ-೨೦, ವೈಶ್ಯ-೧೨, ನಗರ್ತ-೬, ಯಳವ-೭. ಕುಂಚಿಟಿಗ-೧೭, ಭಜಂತ್ರಿ-೧೩, ಕಾಡುಕುರುಬ-೮. ನಾಯಕ(ಬೇಡ)-೩೯. ಗಾಣಿಗ-೧೧. ಜೆಸ್ತ-೧೦. ವೈಷ್ಣವ-೧೯, ಮಡಿವಾಳ-೨೮. ಕಾಡುಗೊಲ್ಲ-೯, ಸಾದರು-೨೨. ದರ್ಜಿ-೫. ಉಪ್ಪಾರ-೬, ಎ.ಡಿ.-೬, ಕೊರಮ-೩. ಈಡಿಗ-೫. ಲಂಬಾಣಿ-೪. ಜೈನ-೩. ಸಿಳ್ಳೆಕ್ಯಾತ-೩, ಹಳ್ಳಿಕಾರ-೨, ನಾಯಕ್-೩.]

# ಅನಿಸಿಕೆ - ಅಭಿಪ್ರಾಯ - ಅನುಭವ

[ಶ್ರೀ ಕ್ಷೇತ್ರ, ಶ್ರೀಗಳವರು ಮತ್ತು ಕ್ಷೇತ್ರದ ಶಿಕ್ಷಣ ಸಂಸ್ಥೆ ಇವುಗಳ ಬಗೆಗೆ ರಾಷ್ಟ್ರದ ಮುತ್ಸದ್ದಿಗಳು, ರಾಜಕಾರಣಪಟುಗಳು, ಶಿಕ್ಷಣತಜ್ಞರು, ಶ್ರೀಸಾಮಾನ್ಯರೇ ಮೊದಲಾದವರು ತಮ್ಮ ಅನಿಸಿಕೆ, ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಶ್ರೀ ಕ್ಷೇತ್ರದ ಆಶ್ರಯದಲ್ಲಿ ವಿದ್ಯಾಭ್ಯಾಸ ಮಾಡಿ ರಾಷ್ಟ್ರದ ವಿವಿಧ ಕಡೆಗಳಲ್ಲಿ ತಮ್ಮ ತಮ್ಮ ಕಾಯಕದಲ್ಲಿ ನಿರತರಾಗಿರುವ ಅನೇಕರು ತಮ್ಮ ಅನುಭವಗಳನ್ನು ವ್ಯಕ್ತಪಡಿಸಿದ್ದಾರೆ. ಇವುಗಳಲ್ಲಿ ಪ್ರಮುಖವಾದ ಕೆಲವು ಅನಿಸಿಕೆ, ಅಭಿಪ್ರಾಯ, ಅನುಭವಗಳು ಮುಂದೆ ಇವೆ.]

## ೧. ಅನಿಸಿಕೆಗಳು

## ಪವಿತ್ರ ಜೀವನದ ತಪಸ್ವಿ

ನಿಷ್ಠೆ, ಸೇವಾಕಾಂಕ್ಷೆ, ದೃಢನಿಶ್ಚಯ, ಅಡಚಣೆಗಳನ್ನು ಎದುರಿಸುವ ಧೈರ್ಯ, ಜೀವನದಲ್ಲಿ ಪವಿತ್ರತೆ, ನೈರ್ಮಲ್ಯ, ವಿಶಾಲದೃಷ್ಟಿ, ಅಂತಃಕರಣ, ಸತ್ಯಪ್ರೇಮ, ಕಾರುಣ್ಯ, ಮೇಲ್ಮಟ್ಟದ ಧ್ಯೇಯ, ಈ ಸದ್ಗುಣಗಳಲ್ಲಿ ಒಂದೊಂದೇ ಒಬ್ಬೊಬ್ಬರಲ್ಲಿದ್ದರೆ ಸಾಕು, ಸಮಾಜದ ಗೌರವಕ್ಕೆ ಪಾತ್ರನಾಗಿ ಮಾನವತೆಯನ್ನು ಕಾಪಾಡಿಕೊಂಡು ಬರಲು, ಜನರ ನಂಬಿಕೆ ವಿಶ್ವಾಸಗಳಿಸಲು ಸಿದ್ಧಗಂಗಾಕ್ಷೇತ್ರದ ಶ್ರೀಶಿವಕುಮಾರಸ್ವಾಮಿಗಳವರಲ್ಲಿ ಇವೆಲ್ಲವೂ ಒಟ್ಟಾಗಿ ಸೇರಿವೆ; ಕೇಂದ್ರೀಕರಿಸಿವೆ. ಇದು ಸಮಾಜದ ರಾಷ್ಟ್ರದ ಸುದೈವ. ಜೊತೆಗೆ ಪಾಂಡಿತ್ಯವಿದೆ, ತಪಸ್ಸಿದೆ, ಮತ್ತೇನು ಬೇಕು. ಅಂತೆಯೇ ಸಿದ್ಧಗಂಗಾ ಸ್ವಾಮಿಗಳೆಂದರೆ ದೇಶದಲ್ಲೆಲ್ಲಾ ಅದರಲ್ಲೂ ಕರ್ನಾಟಕದಲ್ಲಿ ಎಲ್ಲೆಲ್ಲಿಯೂ ಗೌರವ, ಅಭಿಮಾನ, ಮೆಚ್ಚುಗೆ. ಅದಕ್ಕಾಗಿಯೇ ಭಕ್ತಿಯಿಂದ ಅವರ ಆಶೀರ್ವಾದ ದರ್ಶನ ಪಡೆಯಲು ಜನತೆಯ ಆತುರ. ಅವರ ಅಮೃತವಾಣಿಯನ್ನು ಕೇಳಿ ಅದರಿಂದ ಲಾಭಪಡೆದು ವಿಚಾರಪರರಾಗಿ ಜೀವನವನ್ನು ಉತ್ತಮಪಡಿಸಿಕೊಳ್ಳಲು ಪ್ರೇರಿತರಾಗುವುದಕ್ಕಾಗಿ ಜನರು ಸದಾ ಬರುವುದು.

ಶ್ರೀಗಳವರ ಮಠ ಕೇವಲ ಚಿಕ್ಕದು : ಆಸ್ತಿಯೂ ಹೇಳಿಕೊಳ್ಳುವಷ್ಟಿಲ್ಲ. ಹಿಂದಿನವರು ತಪಸ್ವಿಗಳಾಗಿ ಲಿಂಗಾರ್ಚನೆ ಮಾಡಿಕೊಂಡು ಅನುಕೂಲವಿದ್ದಷ್ಟು ದಾಸೋಹ ನಡೆಸಿಕೊಂಡು ಹೋಗುತ್ತಿದ್ದವರು. ಆದರೆ ಸುತ್ತುಮುತ್ತಲಿನ ಜನ ಅವರುಗಳಲ್ಲಿ ಭಕ್ತಿಯಿಂದ ನಡೆದುಕೊಂಡು ದಾಸೋಹಕ್ಕೆ ನಾನಾ ರೂಪದಲ್ಲಿ ಅಲ್ಪಸ್ವಲ್ಪ ಅನುಕೂಲವಾದಷ್ಟು ಕಾಣಿಕೆ ಅರ್ಪಿಸುತ್ತಿದ್ದರು. ವಿದ್ಯಾವಂತರೂ ಪದವೀಧರರೂ ಗುಣಾಢ್ಯರೂ ವಿದ್ಯಾರ್ಥಿ ದೆಸೆಯಲ್ಲಿಯೇ ತಮ್ಮ ಪ್ರತಿಭೆಯಿಂದ ಜನರ ಅಭಿಮಾನಕ್ಕೆ ಪಾತ್ರರಾದವರೂ ಆಗಿದ್ದ ಈಗಿನ ಶ್ರೀಗಳವರು ಮಠದ ಸ್ವಾಮಿಗಳಾಗಿ ಸುಮಾರು ೫೦ ವರ್ಷಗಳ ಹಿಂದೆ ಬಂದವರು. ಬರೀ ಲಿಂಗಾರ್ಚನೆಯಲ್ಲಿ ನಿರತರಾಗದೆ ಅದರ ಜೊತೆಗೆ ಸಮಾಜದ ಸೇವೆಯಲ್ಲಿಯೂ ನಿರತರಾದರು. ಸಮಾಜ, ರಾಷ್ಟ್ರ ಮುಂದುವರಿಯಬೇಕಾದರೆ ಬಡವರಾದ ಸಾಮಾನ್ಯ ಜನರ ಜೀವನದಲ್ಲಿ ಯೋಗ್ಯ ಮಾರ್ಪಾಡುಗಳಾಗಬೇಕು ; ತಿಳುವಳಿಕೆ ಬೆಳೆಯಬೇಕು. ಅದನ್ನು ಆಗು ಮಾಡಬೇಕಾದ ತಳಹದಿಯೆಂದರೆ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುವುದು ; ಅವರಿಗಾಗಿ ಪ್ರೈಮರಿ ಸೆಕೆಂಡರಿ ಸ್ಕೂಲುಗಳನ್ನು ಸ್ಥಾಪಿಸಿ ನಂತರ ಕಾಲೇಜುಗಳು ವಗೈರೆ ಸ್ಥಾಪಿಸಬೇಕೆಂದು ಶ್ರೀಗಳವರು ನಿರ್ಧರಿಸಿದರು. ಶ್ರೀಮಂತರ ಮಕ್ಕಳು ಹೇಗೋ ಓದುತ್ತಾರೆ. ಅವರ ಬಗ್ಗೆ ಕಳಕಳಿ ಬೇಕಾಗಿಲ್ಲ. ಆದರೆ ಬಡವರ ಮಕ್ಕಳು ವಿದ್ಯಾಭ್ಯಾಸ ಮಾಡಲು ಅಡಚಣೆಗಳು ಹಲವಾರು. ಹಳ್ಳಿಗಳಲ್ಲಿ ಸ್ವಲ್ಪ ದೊಡ್ಡವಾಗುತ್ತಲೇ ಬಡರೈತನ ಸಂಸಾರದ ಖರ್ಚು ಬಾಯಿಗೂಡಿಸಲು ಆ ಮುದ್ದು ಮಕ್ಕಳು ಕೂಲಿಗೆ ಹೋಗಿ ಸಂಸಾರ ನಡೆಸಲು ಸ್ವಲ್ಪಮಟ್ಟಿಗೆ ನೆರವಾಗುತ್ತವೆ. ಹಸಿದ ಹೊಟ್ಟೆಗೆ ಒಂದು ತುತ್ತು ಹಿಟ್ಟು ಸಿಗಲು, ತುಂಡು ಬಟ್ಟೆಯ ಉದ್ದವನ್ನು ಸ್ವಲ್ಪ ಹೆಚ್ಚಿಸಲು ಕಾರಣವಾಗುತ್ತವೆ. ಅವುಗಳ ಭವಿಷ್ಯವು ಅಲ್ಲಿಗೆ ಮುಗಿಯಿತು. ಇದನ್ನರಿತ ಶ್ರೀಗಳವರು ಉಚಿತವಾಗಿ ಆ ಬಡವರ ಮಕ್ಕಳಿಗೆ ಊಟಕ್ಕೂ ಅಲ್ಲದೆ ಸ್ಲೇಟು ಬಳಪ ಪುಸ್ತಕಗಳಿಗೂ ಏರ್ಪಾಡು ಮಾಡಿದರು. ಅದು ನಾಲ್ಕೈದು ದಶಕಗಳಿಂದ ನಡೆದುಕೊಂಡು ಬರುತ್ತಿದೆ, ಅವ್ಯಾಹತವಾಗಿ.

ಶ್ರೀಗಳು ವೀರಶೈವ ಮಠದ ಗುರುಗಳಾದರೂ ಅವರದು ವಿಶಾಲ ದೃಷ್ಟಿ, ಸಕಲರಿಗೂ ಲೇಸನ್ನು ಉಂಟುಮಾಡುವ ಅನುಕಂಪ, ವಿದ್ಯಾಭ್ಯಾಸ ವೀರಶೈವರಿಗೆ ಮೀಸಲಾಗಿರದೆ ಎಲ್ಲಾ ಜಾತಿಯವರಿಗೂ ಹರಿಜನರಿಗೂ ದೊರೆಯುವಂತಾಗಿದೆ. ಇದನ್ನು ಪ್ರಾರಂಭ ಮಾಡಿದವರು ಸಿದ್ಧಗಂಗಾ ಶ್ರೀಗಳೇ ಎಂದರೆ ತಪ್ಪಾಗಲಾರದು. ಈ ಪವಿತ್ರ ಕೆಲಸವನ್ನು ಜನಸಾಮಾನ್ಯರು ಅರಿತು, ಮೆಚ್ಚಿ, ಹೊಗಳಿ, ಈ ಮಹತ್ಕಾರ್ಯಕ್ಕೆ ಬಡವರೂ, ಸಣ್ಣ ಸಣ್ಣ ರೈತರೂ ಸೇರಿಕೊಂಡು ಧನಿಕರೂ ಸಹಕರಿಸಿ ಅನೇಕ ರೀತಿಯಿಂದ ಹೆಚ್ಚಾಗಿ ಸುಗ್ಗಿಯ ಕಾಲದಲ್ಲಿ ಧಾನ್ಯರೂಪದಲ್ಲಿ ಕಾಣಿಕೆ ಅರ್ಪಿಸುತ್ತಾ ಬಂದಿರುತ್ತಾರೆ. ಶ್ರೀಗಳವರಿಗೆ ಅಂದರೆ ಈ ಸಣ್ಣ ಮಠಕ್ಕೆ ಸ್ವಂತ ಹೇಳಿಕೊಳ್ಳುವಷ್ಟು ಆದಾಯವೂ ಇಲ್ಲ. ಆದರೆ ಅವರ ಮನಸ್ಸು ದೊಡ್ಡದು ; ಅವರು ನಡೆಸುತ್ತಿರುವ

ದಾಸೋಹ. ಅವರು ಸಮಾಜದ ಬಡ ಮಕ್ಕಳಿಗೆ ಮಾಡುತ್ತಿರುವ ವಿದ್ಯಾದಾನ ಪವಿತ್ರವಾದವು. ಅದ್ದರಿಂದ ಜನ ಧಾರಾಳವಾಗಿ ಶಕ್ತ್ಯಾನುಸಾರ ಕೊಡುತ್ತಿದ್ದಾರಾದ್ದರಿಂದ ಶ್ರೀಗಳವರು ತಮ್ಮ ಕಾರ್ಯಕಲಾಪಗಳ ವೈವಿಧ್ಯತೆಯನ್ನು ಹೆಚ್ಚಿಸಿ, ಕಾಲೇಜುಗಳೂ ಸಾಲದೆ ಇಂಜನೀಯರಿಂಗ್ ಕಾಲೇಜು ಸಹ ಸ್ಥಾಪನೆ ಆಗಿ, ಲಕ್ಷಾಂತರ ವಿದ್ಯಾವಂತರು. ಸಹಸ್ರಾರು ಪದವೀಧರರು, ನೂರಾರು ಇಂಜನೀಯರುಗಳು ಈ ಸಂಸ್ಥೆಗಳಿಂದ ಆಗಿದ್ದಾರೆ : ಆಗುತ್ತಿದ್ದಾರೆ. ಈ ಮಹತ್ಸಾಧನೆ ವಿರಳ. ಶ್ರೀಗಳವರ ನಂತರ ಉಳಿದ ಬ್ರಾಹ್ಮಣರೇ ಮೊದಲಾದ ಇತರೇ ಧರ್ಮಗಳ ಗುರುಗಳೂ ಇಂತಹ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿರುತ್ತಾರೆ. ಆದರೆ ಅವರಲ್ಲಿ ಅನೇಕರಿಗೆ ಮಠಗಳ ಆಸ್ತಿ ಇದೆ: ಆದಾಯ ಇದೆ: ಧರ್ಮದ ಶ್ರೀಮಂತ ಭಕ್ತರೂ ಬಹಳ ಜನರಿದ್ದಾರೆ. ಆದರೆ ಸಿದ್ಧಗಂಗಾ ಶ್ರೀಗಳವರಿಗೆ ಈ ಅನುಕೂಲಗಳಿಲ್ಲ. ಆದರೂ ಎಲ್ಲರಿಗಿಂತ ಈ ಹೆಚ್ಚಿನ ಕಾರ್ಯಸಾಧನೆ! ಇದರ ಮೂಲ ಅವರ ದಿವ್ಯ ವ್ಯಕ್ತಿತ್ವ.

ಈ ಸಂದರ್ಭದಲ್ಲಿ ಒಂದು ಮಾತು ಹೇಳುವುದು ಅವಶ್ಯಕವೆನಿಸುತ್ತದೆ. ಜ್ಞಾಪಕದಲ್ಲಿರಬೇಕಾದುದ್ದು. ಮರೆಯು ಬಾರದು. ಈ ಶತಮಾನದ ಆದಿಯಲ್ಲಿ ೧೯೦೩ನೆಯ ಇಸ್ವಿಯಲ್ಲಿ ಚಿತ್ರದುರ್ಗ ಮುರುಘಾಮಠದ ಜಗದ್ಗುರುಗಳಾಗಿ ಚುನಾಯಿತ ರಾದ ಜಯದೇವಮಹಾಸ್ವಾಮಿಗಳವರು ವಿದ್ಯಾಭ್ಯಾಸ ಜನಾಂಗದ, ರಾಷ್ಟ್ರದ ಏಳಿಗೆಗೆ ಆಸ್ತಿಭಾರ ಎನ್ನುವುದನ್ನು ಮನಗಂಡು ತಮ್ಮ ಅಧಿಕಾರದ ಅವಧಿಯಲ್ಲಿ ಅರ್ಧಶತಮಾನಕ್ಕಿಂತಲೂ ಹೆಚ್ಚಾದ ದೀರ್ಘಅವಧಿಯಲ್ಲಿ ವಿದ್ಯಾಭ್ಯಾಸಕ್ಕಾಗಿ ದಾರಿದೀಪವಾಗಿ ದುಡಿದು ಉಳಿದೆಲ್ಲರಿಗೂ ಮಾರ್ಗದರ್ಶಿಗಳಾದರು. ಆಗಿನ ಕಾಲದಲ್ಲಿ ಅಂದರೆ ರೂಪಾಯಿಗೆ ಸರಾಸರಿ ೧೬ ಸೇರು ಅಕ್ಕಿ ಮಾರು ತ್ತಿದ್ದ ಕಾಲದಲ್ಲಿ ಭಕ್ತರಿಂದ ಸುಮಾರು ೫೦ ಲಕ್ಷ ರೂಪಾಯಿಗಳನ್ನು ಅಂದರೆ ಈಗಿನ ಕಾಲದ ೧೦ ಕೋಟಿ ರೂಪಾಯಿಗಳಷ್ಟು ಕಾಣಿಕೆಸಂಗ್ರಹಿಸಿ, ಕರ್ನಾಟಕದ ನಾನಾಭಾಗಗಳಲ್ಲಿ, ಮುಖ್ಯಸ್ಥಳಗಳಲ್ಲಿಯೂ ಮಹಾರಾಷ್ಟ್ರದ ಕೆಲವು ಭಾಗಗಳಲ್ಲಿಯೂ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಸಮಾಜಕ್ಕೆ ಸೇವೆಸಲ್ಲಿಸಿದರು. ಸಮಾಜದ ಉದ್ಧಾರಕ್ಕೆ ತಳಹದಿ ಹಾಕಿದರು. ಬಹುಶಃ ನನಗೆ ತಿಳಿದಂತೆ ಹಿಂದುಸ್ಥಾನದ ಯಾವ ಧರ್ಮದ ಗುರುಗಳೂ ಇದನ್ನು ಮಾಡಿರಲಿಲ್ಲ. ಅವರೇ ಮುಂದಾಳುಗಳು. ವೀರಶೈವರಿಗಲ್ಲದೆ ಉಳಿದ ವರಿಗೂ ಅವರ ಸಹಾಯ ದೊರೆಯುತ್ತಿತ್ತು.

ಸಿದ್ಧಗಂಗೆಯ ಶ್ರೀಗಳವರು ಈ ವಿದ್ಯಾದಾನ ದಾಸೋಹದ ಸೇವಾ ಕ್ಷೇತ್ರದ ವ್ಯಾಪ್ತಿಯನ್ನು ವಿಶಾಲಗೊಳಿಸಿದ್ದಾರೆ. ವೈವಿಧ್ಯತೆಯನ್ನು ಅವಶ್ಯ ಕಂಡಂತೆಲ್ಲಾ ಹೆಚ್ಚಿಸಿದ್ದಾರೆ, ಇವುಗಳು ಅವರ ಪ್ರತಿಭೆ ಮತ್ತು ದಕ್ಷತೆಗಳ ರುಜುವಾತು.

ಶ್ರೀಗಳವರ ನಿರಾಡಂಬರದ ಪರಿಶುದ್ಧ ಜೀವನ, ಕಾರ್ಯದಕ್ಷತೆ, ಆಡಳಿತ ನೈಪುಣ್ಯತೆ, ನಿಶ್ಚಿತಕಾರ್ಯಸಾಧನೆ, ದೂರ ದರ್ಶಿತ್ವ ಇವು ಅನೇಕ ಮಠದ ಹಿರಿಯರಿಗೆ ಮಾರ್ಗದರ್ಶನ. ಸಿದ್ಧಗಂಗೆಯ ಶ್ರೀಶಿವಕುಮಾರ ಸ್ವಾಮಿಗಳವರ ಈ ರೀತಿಯ ಬಡ ಜನರ ಸಮಾಜದ ಸೇವೆ ಅನೇಕ ವರ್ಷಗಳವರೆಗೆ ನಡದೇ ಇರಲಿ,

ಚಿತ್ರದುರ್ಗ
೧೯-೭-೧೯೭೯

ಸಿ. ನಿಜಲಿಂಗಪ್ಪ
(ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳು)

## SHRI SIVAKUMARA SWAMI*

Shri Sivakumara Swami of Siddhaganga Math, Tumkur is a name to conjure with. We ordinary men and women are only sojourners but humanity is, for ages, a continuous and constant flow. Most of us live in our own times and for our own sake. Very few think of the past, the present and the future of humanity as a continuing succession of generations which has to go on evolving and progressing to higher stages of culture and development. Shri Sivakumara Swami is one of the few ardent and highly elevated souls who concern themselves with creating opportunities for thousands of young people to learn and progress in various fields of healthy activity. But for Shri Sivakumara Swami's ceaseless efforts, these young people who are living in free hostels and are educating themselves in various institutions would have gone without proper enlightenment and avenues leading to success.

Twenty five years is a pretty long spell of time for continuous and developing efforts to build institutions which in their very nature are non-profit making and are philanthropic, being useful at the same time, for hundreds & thousands. It is one thing for a Raja, Maharajah or for the State, or for a millionaire to start and conduct educational and cultural institutions on their

* ಸಮರ್ಪಣೆ ಗ್ರಂಥದಿಂದ.

own. All of them have some steady source of income. But for a penniless sanyasi, not only to start but to go on developing from year to year such institutions which now can be equated to the campus of a wayside university, is on small matter. The very fact that these institutions are supported by the funds donated mostly by the public, shows not only the popularity of Shri Swamiji but the efficiency and the effective way in which these beneficient activities are conductad by him. It is only those who have the experience of conducting institutions can know how strenuously and assiduously one has to work for satisfying the public in such matters.

Swamiji is not merely a sanyasi who has effectively renounced the world and all earthly possession. He is a learned man, a savant, a man of culture and a lover of all the values India has stood for the past few millennia. Whatever he undertakes, therefore, has a perspective and a vision behind it which is comprehensive and has the whole of human progress as its aim. He would have easily been a narrow, orthodox Swami as many tend to be and restricted himself to the seat or cult to which he was ordained. But his nobler instincts and broader learning made him perceive the unity of humanity as a whole and made him the cynosure of all communities and all kinds of persons, whatever their caste or creed.

Swamiji's Catholic outlook is reflected in almost everything he undertakes. It was not enough for him to start Vedic and Sanskrit sutdies.

He knows the trend of time and he has started schools and colleges, both arts & science. But note that too is not enough. India is already on the threshold of the technological age. He has therefore technical colleges. But then a vast number of students have no means to continue their studies. Swamiji is therefore conducting a cosmopolitan hostel where there is no restriction of caste or creed or community. While he is personally intensely religious and keeps to his ritualistic and other routine, he is amply secular in creating an atmosphere in which people belonging to all religions and creeds can work together for common aims and objects.

All these great qualities of the Swami and his selfless activities have made the nearby Siddhaganga shrine doubly important and it has flowered into a great place of pilgrimage. The fair held at the time of Shivaratri attracts thousands of pilgrims and the cattle market is one of the biggest in the State.

On the one hand, we see casteism, communalism, communism and such other **isms** running riot in the field of politics and in the power-hunting games which go on. On the other-hand, we have such oasis of mutts headed by people like Swamiji who are above any of those sickening and weakening ills of society. One wishes that many more Swamis of this type be born amongst us and give us opportunities to celebrate Silver Jubilees and Golden Jubilees. It is such Swamis and their institutions which are pioneers pointing to better days when a casteless and classless India of Gandhi's dream will emerge.

**ಡಾ॥ ಆರ್.ಆರ್. ದಿವಾಕರ**
ಮಾಜಿ ರಾಜ್ಯಪಾಲರು, ಬಿಹಾರ.

## ಪ್ರಭಾವೀ ಸಂನ್ಯಾಸಿ

ಶ್ರೀ ಸಿದ್ಧಗಂಗಾಮಠದ ಪೀಠವನ್ನು ಅಲಂಕರಿಸಿರುವ ಶ್ರೀಶ್ರೀ ಶಿವಕುಮಾರಸ್ವಾಮಿಗಳವರು ಪೀಠಕ್ಕೆ ಬಂದು ೫೦ ವರ್ಷ ಆಗಿರುವುದರಿಂದ ಸ್ವಾಮಿಗಳನ್ನು ಅಭಿನಂದಿಸಿ ಒಂದು ಉತ್ಸವ ನಡೆಸಲು ಏರ್ಪಾಡಾಗಿರುವುದು ತುಂಬಾ ಸಂತೋಷ. ನಾನು ಸ್ವಾಮಿಗಳನ್ನು ಮೊದಲು ನೋಡಿದ್ದು ಈಗ್ಗೆ ಸರಿಯಾಗಿ ೪೦ ವರ್ಷಗಳ ಹಿಂದೆ. ತುಮಕೂರು ಜಿಲ್ಲೆಯಲ್ಲಿ ಡೆಪ್ಯುಟಿ ಕಮಿಷನರ್ ಆಗಿದ್ದಾಗ. ಆಗ ಸ್ವಾಮಿಗಳು ತರುಣರು. ಇವರ ಹಿರಿಯರು ಮಠದ ಒಡೆಯರಾಗಿದ್ದರು. ಆ ಹಿರಿಯರು ಅತ್ಯಂತ ಪ್ರಭಾವಶಾಲಿಗಳು. ಮಠವನ್ನು ಒಂದು ಜನಪ್ರಿಯ ಸಂಸ್ಥೆಯಾಗಿ ಮಾಡಿದವರು ಆ ಸ್ವಾಮಿಗಳು. ಅವರ ಬಳಿಕ ಪೀಠಕ್ಕೆ ಬಂದ ಶ್ರೀ ಶಿವಕುಮಾರಸ್ವಾಮಿಗಳು ಹಿರಿಯರು ಮಠಕ್ಕೆ ಗಳಿಸಿಕೊಟ್ಟಿದ್ದ ಜನಪ್ರಿಯತೆಯನ್ನು ಬೆಳೆಸಿದರು. ಮಠ ಸುತ್ತಿನ ಪ್ರದೇಶ

ಕ್ಕೆಲ್ಲಾ ಸಂಸ್ಕೃತಿಯ ಕೇಂದ್ರವಾಗುವಂತೆ ಮಾಡಿದರು. ಈಗ ಮಠ ಹಿಂದಿನ ರೀತಿಯ ಸಂಸ್ಕೃತಿ ಕಾರ್ಯಕ್ರಮವನ್ನು ವಿಸ್ತಾರಗೊಳಿಸಿರುವುದಲ್ಲದೆ ಒಂದು ವಿಶ್ವವಿದ್ಯಾಲಯವೆಂಬಂತೆ ಹಲವು ಉನ್ನತ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದೆ. ಸರ್ವಜನರ ಕ್ಷೇಮಕ್ಕಾಗಿ ದುಡಿಯುತ್ತಿದೆ. ಈ ಎಲ್ಲ ಕಾರ್ಯಕ್ರಮಗಳಲ್ಲಿ ಸ್ವಾಮಿಗಳವರ ದೈವಭಕ್ತಿ. ವಿಶಾಲಹೃದಯ. ಸೂಕ್ಷ್ಮಬುದ್ಧಿ. ಕಾರ್ಯದಕ್ಷತೆಗಳು ಪ್ರಕಟವಾಗಿ, ಸ್ವಾಮಿಗಳು ಇಂದಿನ ಪ್ರಮುಖ ದೇಶಸೇವಕರಲ್ಲಿ ಪ್ರಥಮ ಪಂಕ್ತಿಯಲ್ಲಿ ಒಂದು ಸ್ಥಾನವನ್ನು ಪಡೆದಿದ್ದಾರೆ. ಸಂನ್ಯಾಸವೆಂದರೆ ಸರ್ವಸಂಗವನ್ನು ತೊರೆಯುವುದು ಎನ್ನುವುದು ಒಂದು ಭಾವನೆ: ತೊರೆಯುವುದು ಸರಿ, ಸರ್ವಸಂಗವೂ ಸರಿ. ಆದರೆ ಈ ಸರ್ವಸಂಗ ತನ್ನದು ಎನ್ನುವ ಸರ್ವಸಂಗ. ತನ್ನನ್ನು ಮರೆತು ಜನರನ್ನೇ ನೆನೆಯುತ್ತಾ ಸೇವೆ ಸಲ್ಲಿಸುವವರು ಸ್ವಾರ್ಥವನ್ನು ತೊರೆದು ಲೋಕಕ್ಷೇಮದ ವಿಷಯದಲ್ಲಿ ಆಸಕ್ತರಾಗಿರುತ್ತಾರೆ. ಶ್ರೀ ಶಿವಕುಮಾರಸ್ವಾಮಿಗಳು ಇಂಥ ಉನ್ನತ ತರದ ಸಂನ್ಯಾಸಿಗಳು. ತಮ್ಮ ಸೇವೆಯಿಂದ ಇವರು ಸಂನ್ಯಾಸಿಗಳ ಸಮುದಾಯಕ್ಕೆ ಒಂದು ಆದರ್ಶವಾಗಿದ್ದಾರೆ; ಒಂದು ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ಸ್ವಾಮಿಗಳು ಹೀಗೆ ಬಹುಕಾಲ ಲೋಕಸೇವೆಯನ್ನು ನಡೆಸುತ್ತಾ ಬಾಳುವಂತೆ ಭಗವಂತ ಅನುಗ್ರಹಿಸಲಿ ಎಂದು ನಮ್ಮ ಜನರೆಲ್ಲ ಪ್ರಾರ್ಥಿಸಬೇಕು. ಎಲ್ಲರೊಡನೆ ನಾನೂ ಈ ಪ್ರಾರ್ಥನೆಯನ್ನು ಮಾಡುತ್ತಿದ್ದೇನೆ.

೨೫-೪-೭೯ **ಮಾಸ್ತಿ ವೆಂಕಟೇಶ ಅಯ್ಯಂಗಾರ್**

# ನಿರಾಡಂಬರ ಮೂರ್ತಿ

ಶ್ರೀ ಕ್ಷೇತ್ರ ಸಿದ್ಧಗಂಗಾಮಠಾಧ್ಯಕ್ಷರೂ, ಭರತಖಂಡದ ಧಾರ್ಮಿಕಕ್ಷೇತ್ರದಲ್ಲಿ ಚಿರಪರಿಚಿತರೂ, ಗಣ್ಯಸ್ಥಾನವನ್ನು ಪಡೆದಿರುವವರೂ ಆದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಇಂದಿಗೆ ಮೂವತ್ತು ವರ್ಷಗಳ ಹಿಂದೆ ನೇರವಾಗಿ ಸಂದರ್ಶಿಸುವ ಭಾಗ್ಯದೊರಕಿತ್ತು. ಆದರೆ ಅದಕ್ಕೂ ಮುನ್ನ ಅವರ ಅಪ್ರತಿಮ ಸಂಯಮಶಕ್ತಿ, ಶಿವಯೋಗನಿಷ್ಠೆ, ನಿಸ್ವಾರ್ಥ ನಿಷ್ಕಾಮ ಪರೋಪಕಾರ ಮನೋಭಾವ ಹಾಗೂ ತ್ರಿವಿಧದಾಸೋಹದಲ್ಲಿ ಉಜ್ವಲ ಪರಂಪರೆಯನ್ನು ಬೆಳೆಸಿಕೊಂಡಿದ್ದ ಕೀರ್ತಿಯನ್ನು ಗಮನಿಸಿ ಆನಂದಿಸುತ್ತಿದ್ದೆ. ಮೇಲಾಗಿ ಶ್ರೀ ಕ್ಷೇತ್ರದ ಇಂದಿನ ಬೆಳವಣಿಗೆಗೆ ಶ್ರೀಗಳವರು ಬಹುಪಾಲು ಕಾರಣಕರ್ತರೆಂದು ನನ್ನ ಸ್ವಂತ ಅನುಭವ.

ಪ್ರಾಯಶಃ ೧೯೪೭ನೆಯ ಇಸ್ವಿ. ನಾನು ರಾಜ್ಯಸರಕಾರದ ಹಿರಿಯ ಅಧಿಕಾರಿಯಾಗಿ ರೆವಿನ್ಯೂಸೆಕ್ರೆಟರಿ ಹುದ್ದೆಯಲ್ಲಿದ್ದಾಗ ಶ್ರೀ ಸ್ವಾಮಿಗಳವರನ್ನು ಭೇಟಿಮಾಡಿದ್ದೆ. ಸಂಸ್ಥಾನದ ಅನೇಕ ಮಠಗಳಿಗೆ ಮುಜರಾಯಿ ಶಾಖೆಯಿಂದ ಪ್ರಥಮ ದರ್ಜೆಯ ಗೌರವವನ್ನು ದೊರಕಿಸುವ ಅಧಿಕಾರ ನನ್ನ ಪಾಲಿಗೆ ಬಂದಿತ್ತು. ಪ್ರಾಸಂಗಿಕವಾಗಿ ಶ್ರೀ ಸಿದ್ಧಗಂಗಾ ಶ್ರೀಗಳವರನ್ನುದ್ದೇಶಿಸಿ ಸಲಹೆಮಾಡಬೇಕೆಂದು ನಿರ್ಧರಿಸಿದೆ. ಶ್ರೀಗಳವರಿಂದ ಒಂದು ಅಪೇಕ್ಷಾಪತ್ರ ಸರಕಾರಕ್ಕೆ ತಲುಪಿದರೆ, ಶೀಘ್ರವಾಗಿ ಪ್ರಥಮದರ್ಜೆಯೇ ಅಲ್ಲದೆ ವಿಶೇಷ ಗೌರವವನ್ನೂ ಮಂಜೂರು ಮಾಡಿಸಿಕೊಡಲು ಸಿದ್ಧ, ಎಂದು ತಿಳಿಸಿದೆ. ಶ್ರೀಗಳವರು ಒಂದೆರಡು ನಿಮಿಷ ಮೌನದಿಂದಿದ್ದು, ಈ ರೀತಿ ಅಪ್ಪಣೆಕೊಡಿಸಿದರು : 'ಮಲ್ಲಾರಾಧ್ಯರೇ, ಶ್ರೀಮಠದ ಮೇಲಿನ ನಿಮ್ಮ ಅಭಿಮಾನದ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ. ಸರಕಾರದ ಆಜ್ಞೆ ಮಾಡಿಸುವ ನಿಮ್ಮ ಸಾಮರ್ಥ್ಯದ ಬಗೆಗೆ ನನಗೆ ಅನುಮಾನವಿಲ್ಲ. ಆದರೆ ಏಕೆ ನನ್ನನ್ನು ಈ ನಿರ್ಬಂಧಕ್ಕೆ ಸಿಲುಕಿಸಲು ಯೋಚಿಸಿದ್ದೀರಿ ? ಶಿಷ್ಯರ, ಭಕ್ತರ, ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದೇ ಈಶ್ವರಸೇವೆಯೆಂದು ನನ್ನ ಗಾಢವಾದ ನಂಬಿಕೆ. ಶ್ರೀಮಠಕ್ಕೆ ಅವರು ಸಲ್ಲಿಸುತ್ತಿರುವ ಗೌರವಕ್ಕಿಂತ ಆಡಂಬರದ ಗೌರವ ಲಭಿಸುವ ಸರಕಾರದ ಮಾನ್ಯತೆ ಪುರಸ್ಕಾರಗಳಿಂದ ಪ್ರಯೋಜನವೇನು ? ಯೋಚಿಸಿನೋಡಿ' ಎಂದು ಅಪ್ಪಣೆಕೊಡಿಸಿದರು. ಶ್ರೀಗಳವರ ಈ ಉತ್ತರ ನನ್ನ ಮನಸ್ಸನ್ನು ಆಕರ್ಷಿಸಿತು. ನನ್ನ ಲೌಕಿಕ ದೃಷ್ಟಿಯನ್ನು ಖಂಡಿಸುತ್ತಿದ್ದಂತೆ ಭಾಸವಾಯಿತು. ಆ ಪ್ರಸ್ತಾಪವನ್ನು ಅಲ್ಲಿಗೇ ಕೊನೆಗಾಣಿಸಿಬಿಟ್ಟೆ.

ಇತರ ಅನೇಕ ಮಠಾಧೀಶ್ವರರಂತೆ ಅಧಿಕಾರದಾಹ. ಅಟ್ಟಹಾಸ. ಒಡ್ಡೋಲಗ, ಬಿರುದುಬಾವಲಿಗಳ ಮೇಲಿನ ಪ್ರೇಮ, ರತ್ನಖಚಿತ ಕಿರೀಟ, ರಜತ ಸಿಂಹಾಸನ, ಶ್ವೇತಚ್ಛತ್ರಿ, ಪಲ್ಲಕ್ಕಿ ಉತ್ಸವ, ಆನೆ ಅಂಬಾರಿ, ಒಂಟೆ, ಮಕರತೋರಣ. ಇತ್ಯಾದಿ ಲಾಂಛನಗಳಿಗೆ ಮನಸೋಲುವ ಮನೋಭಾವ ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಸಹಸ್ರಗಾವುದ ದೂರದಲ್ಲಿದ್ದಂತೆಂದು ತಿಳಿದುಕೊಂಡೆ. ಶ್ರೀ ಸ್ವಾಮೀಜಿಯವರ ವಿಶಾಲಮನೋಭಾವ ಹಾಗೂ ಶಿವಾರ್ಪಣ ದೃಷ್ಟಿಯಿಂದ ಸಮಾಜವನ್ನು ಉದ್ಧರಿಸುತ್ತಿರುವ ನಿಜಸ್ವರೂಪ ನನಗೆ ಗೋಚರವಾಯಿತು. ಉಜ್ವಲವಾದ ಪರಂಪರೆಯಿಂದ ರಾರಾಜಿಸುತ್ತಿರುವ ಶ್ರೀಮಠದ ಕೀರ್ತಿ ದಿಗಂತ ವಿಶ್ರಾಂತವಾಗಿರುವುದು ಸ್ವಾಮೀಜಿಯವರ ವೈಯಕ್ತಿಕ ಪ್ರಭಾವದಿಂದ, ಅವರ ತಪೋನಿಷ್ಠೆಯಿಂದ, ಅವರ ಲಿಂಗಪೂಜಾಫಲದಿಂದ ಎಂಬ ಅರಿವು ನನಗೆ ಉಂಟಾಯಿತು.

ಸ್ವಾಮೀಜಿಯವರಿಂದ ಅಖಿಲಭಾರತ ವೀರಶೈವ ಮಹಾಸಭೆಯ ಅಧ್ಯಕ್ಷಸ್ಥಾನವನ್ನು ಅಲಂಕರಿಸುವ ಸೌಭಾಗ್ಯ ನನಗೆ ದೊರೆತದ್ದು ೧೯೭೩ನೆಯ ಡಿಸೆಂಬರ್ ೨೩ನೆಯ ತಾರೀಖಿನಂದು. ಅವರು ಆ ಗದ್ದುಗೆಯನ್ನು ಅಲಂಕರಿಸಿದ್ದ ಕಾಲದಲ್ಲಿ ಸಮಾ

ಜದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ. ಸಮಾಜದ ಮೇಲಿನ ಅವರ ಅಭಿಮಾನ, ಆಸಕ್ತಿ, ಶ್ರದ್ಧೆಗಳು ವರ್ಣನಾತೀತ. ಅವರ ಮಾರ್ಗದರ್ಶನದಿಂದ ನನಗೆ ಹೆಚ್ಚಿನ ಉಪಕಾರವಾಗಿದೆ. ಎಂದು ಹೇಳಬೇಕಾಗಿಲ್ಲವಷ್ಟೆ! ಮಹಾಸಭೆಯನ್ನು ಒಂದು ಮಹೋನ್ನತ ಸಂಸ್ಥೆಯನ್ನಾಗಿ ರೂಪಿಸಬೇಕೆಂಬ ಅವರ ಮಹತ್ವಾಕಾಂಕ್ಷೆಯನ್ನು ಈಡೇರಿಸುವ ಪ್ರಯತ್ನದಲ್ಲಿ ತೊಡಗಿರುವ ನನಗೆ, ಮಾರ್ಗಸುಗಮವಾಗಿಲ್ಲ ಎಂದು ಪದೇ ಪದೇ ಭಾಸವಾಗುತ್ತಿದೆ. ಶ್ರೀಗಳವರು ಅಧ್ಯಕ್ಷಸ್ಥಾನವನ್ನು ವಹಿಸಿ ಮಹಾಸಭೆಯ ಗೌರವ, ಘನತೆ, ಕೀರ್ತಿಗಳನ್ನು ಹೆಚ್ಚಿಸಿದ್ದಾರೆಂದರೆ ಅತಿಶಯೋಕ್ತಿಯಲ್ಲ.

ಮಹಾಸ್ವಾಮಿಗಳವರ ವಿದ್ವತ್ತು, ಪಾಂಡಿತ್ಯ, ವೇದಾಂತಪ್ರಜ್ಞೆಗಳ ಬಗೆಗೆ ಮಾತನಾಡಲು ನಾನು ಶಕ್ತನಲ್ಲ. ಲೌಕಿಕವಾಗಿ, ಪಾರಮಾರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಶ್ರೀಗಳವರ ಭಾಷಣಗಳನ್ನು ಕೇಳಿದ್ದೇನೆ. ಏನೂ ಅರಿಯದ ಸಾಮಾನ್ಯ ಮನುಷ್ಯನಿಂದ ಹಿಡಿದು, ಬುದ್ಧಿಜೀವಿಗಳಲ್ಲಿ ಪ್ರಾಜ್ಞರೆನಿಸಿದ ಎಲ್ಲರಿಗೂ ಅವರ ಭಾಷಣಗಳು ಪರಿಣಾಮಕಾರಿಯಾಗಿರುತ್ತವೆ. ಸಭಿಕರ ಮನವನ್ನು ಸೂರೆಗೊಳಿಸುವ ಶಕ್ತಿ ಅವರ ಆ ನುಡಿಮುತ್ತುಗಳಲ್ಲಿರುತ್ತವೆ. ಸುಲಭಶೈಲಿಯಲ್ಲಿ ತರ್ಕಬದ್ಧವಾಗಿ, ಸಮಂಜಸವಾಗಿ, ಆಳವಾದ ಅಭ್ಯಾಸದಿಂದ, ಪರಿಶ್ರಮದಿಂದ ಅಪ್ಪಣೆಕೊಡಿಸುವ ಅವರ ಭಾಷಣಗಳು ಸರ್ವಜನಾದರಣೀಯವಾದವುಗಳು. ಅದರ ಸುಖಾನುಭವ ನನಗೆ ಅನೇಕ ಸಂದರ್ಭಗಳಲ್ಲಿ ಒದಗಿದೆ. ನಾನೂ ಸ್ಫೂರ್ತಿಗೊಂಡಿದ್ದೇನೆ ; ಆನಂದಿಸಿದ್ದೇನೆ. ಸ್ವಾಮೀಜಿಯವರ ಆಚಾರವಿಚಾರ, ಸಚ್ಚಾರಿತ್ರ್ಯ. ನಿರಾಡಂಬರ, ಸರಳಜೀವನ, ಕಾಯಕನಿಷ್ಠೆ, ಶ್ರೀಮಠದ ಮೇಲ್ಮೆಗಾಗಿ ನಡೆಸಿರುವ ಅವಿರತ ಸೇವೆಗಳಿಂದ ಅವರು ಪವಾಡಪುರುಷರೆಂಬ ಕೀರ್ತಿಗೆ ಭಾಗಿಗಳಾಗಿದ್ದಾರೆ. ಎಂದರೆ ಅತಿಶಯೋಕ್ತಿಯೇನಿಲ್ಲ.

ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯನ್ನು ಶ್ರೀಗಳವರಿಗೆ ಕೊಡಮಾಡುವ ಸಂದರ್ಭದಲ್ಲಿ ಲಿಂಗೈಕ್ಯ ಉಪಕುಲಪತಿ ಡಾ॥ ಡಿ.ಸಿ. ಪಾವಟೆಯವರು. ನನ್ನೊಡನೆ ಸಮಾಲೋಚನೆ ನಡೆಸಿದರು. ಆಗ ನನ್ನ ಖಚಿತ ಅಭಿಪ್ರಾಯವನ್ನು ನಿರ್ದಾಕ್ಷಿಣ್ಯವಾಗಿ ಈ ಮಾತುಗಳಲ್ಲಿ ಸೂಚಿಸಿದೆ : 'ಭರತಖಂಡದ ಪ್ರಮುಖ ಮಠಾಧ್ಯಕ್ಷರುಗಳ ಶ್ರೇಣಿಯಲ್ಲಿ ಧ್ರುವತಾರೆಯಂತೆ ಪ್ರಜ್ವಲಿಸುವ ವ್ಯಕ್ತಿಗಳೆಂದರೆ ಶ್ರೀ ಶಿವಕುಮಾರಸ್ವಾಮಿಗಳು. ಅವರು ವೀರಶೈವ ಮಠಾಧ್ಯಕ್ಷರಾದ ಮಾತ್ರಕ್ಕೆ ಏಕೆ ಈ ಮೀನಮೇಷ ? ಇದು ವಿಶ್ವವಿದ್ಯಾಲಯಕ್ಕೆ ಸಲ್ಲುವ ಗೌರವವೆಂದು ಭಾವಿಸಿ ಸಾಧ್ಯವಾದರೆ ಎಲ್.ಎಲ್.ಡಿ. ಗೌರವವನ್ನೇ ಅವರಿಗೆ ಕೊಡುವುದು ಸೂಕ್ತ.' ಪಾವಟೆಯವರು ಬೇರೆ ಮಾತೇ ಆಡಲಿಲ್ಲ.

ಶಿಕ್ಷಣ ಕ್ಷೇತ್ರದಲ್ಲಿ ಶ್ರೀಗಳವರ ಸಿದ್ಧಿಸಾಧನೆಗಳು ವೈವಿಧ್ಯಪೂರ್ಣವಾದುವುಗಳು. ಅದ್ಭುತವಾದ ಪ್ರಗತಿ ಸಾಧಿಸಿದ್ದಾಗಿದೆ. ಸುಮಾರು ನಾಲ್ಕುಸಾವಿರ ವಿದ್ಯಾರ್ಥಿಗಳಿಗೆ ಜಾತಿಮತಪಂಥಗಳ ಭೇದಭಾವನೆಯಿಲ್ಲದೆ ಪ್ರಸಾದನಿಲಯವನ್ನು ನಡೆಸುತ್ತಿರುವುದು ಒಂದು ಪವಾಡವೇ ಸರಿ. ಅವರ ಭಕ್ತವೃಂದ ವೀರಶೈವರಿಗೆ ಮಾತ್ರ ಸೀಮಿತವಾಗಿಲ್ಲ. ಸಮಾಜದ ಎಲ್ಲ ವರ್ಗಗಳೂ ಶ್ರೀಗಳವರಲ್ಲಿ ಪೂಜ್ಯಭಾವನೆಯುಳ್ಳವರಾಗಿದ್ದಾರೆ. ಭಕ್ತಿಕಾಣಿಕೆಯನ್ನು ಸಲ್ಲಿಸುವ ಸನ್ನಿವೇಶ ಎಂಥವರನ್ನಾದರೂ ಪರವಶರನ್ನಾಗಿ ಮಾಡುವುದು. ಭಕ್ತಿಗೆ ಜಾತಿಯ ಸೋಂಕು ಎಲ್ಲಿಬಂತು ? ಒಟ್ಟಿನಲ್ಲಿ ಹೇಳುವುದಾದರೆ ಶ್ರೀ ಶಿವಕುಮಾರಸ್ವಾಮಿಗಳು ಲೋಕಪೂಜ್ಯರು. ಮಾನವ ಕಾಲದ ಉದ್ಧಾರಕರು. ವೀರಶೈವ ಧರ್ಮತತ್ತ್ವಗಳನ್ನು ನಿತ್ಯಜೀವನದಲ್ಲಿ ನಿಷ್ಠೆಯಿಂದ ಅನುಷ್ಠಾನಕ್ಕೆ ತರತಕ್ಕಂಥ ಪುಣ್ಯಾತ್ಮರು; ಮಹಾನುಭಾವರು; ಪರಿಪೂರ್ಣಮೂರ್ತಿಗಳು: ಅತಿಮಾನವರೆಂದರೆ ತಪ್ಪಲ್ಲ. ಸಮಾಜ, ನಾಡು ಸರ್ವಾಂಗಸುಂದರವಾಗಿ ಅಭಿವೃದ್ಧಿಗೊಳ್ಳಬೇಕು, ಕೀಳುಮೇಲೆಂಬ ಭಾವನೆ ತೊಲಗಬೇಕು. ಧರ್ಮದ ಉಪದೇಶದಿಂದಲೇ ನಾಡಿನ ಅಭ್ಯುದಯ ಸಾಧ್ಯವೆಂಬ ಕಟುಸತ್ಯವನ್ನು ಗ್ರಹಿಸಿದವರು. ಶ್ರೀಸ್ವಾಮಿಗಳು. ಅವರ ಲೋಕಾನುಭವ ಅಸಾಧಾರಣವಾದುದು. ಅಧಿಕಾರಿಯಾಗಲಿ, ರಾಜಕಾರಣಿಯಾಗಲಿ, ಜನನಾಯಕನಾಗಲಿ, ಉದ್ಯಮಿಯಾಗಲಿ, ಕೃಷಿಕನಾಗಲಿ. ವೇದಾಂತಿಯಾಗಲಿ ಯಾರಿಗಾದರೂ ಅವಶ್ಯವಿದ್ದಲ್ಲಿ ಸೂಕ್ತ ಮಾರ್ಗದರ್ಶನ ನೀಡುವ ಅಸಾಧಾರಣ ಸಾಮರ್ಥವುಳ್ಳ ವ್ಯಕ್ತಿತ್ವ ಅವರದು. ಈ ಸಕಲಸದ್ಗುಣಸಂಪನ್ನ ಶ್ರೀಗಳವರಲ್ಲಿ ನನಗೆ ಅಪಾರ ಗೌರವವಿದೆ. ಅನೇಕ ವೇಳೆ ಅವರ ಸಂದರ್ಶನದಿಂದ ಸಮಾಜಸೇವೆಗೆ ಸ್ಫೂರ್ತಿ ಪಡೆದಿದ್ದೇನೆ. ಅವರ ಶತಮಾನೋತ್ಸವವನ್ನು ಆಚರಿಸುವ ಸೌಭಾಗ್ಯವನ್ನು ಜಗನ್ನಿಯಾಮಕನಾದ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಬೆಂಗಳೂರು
೯-೫-೭೯

**ಜೆ. ಬಿ. ಮಲ್ಲಾರಾಧ್ಯ**
ಅಖಿಲಭಾರತ ವೀರಶೈವ ಮಹಾಸಭಾಧ್ಯಕ್ಷ

## ಕಾಯಕಯೋಗಿ

ಧರ್ಮ, ಶಿಕ್ಷಣ, ಸಾಹಿತ್ಯ ಹಾಗೂ ಸಂಸ್ಕೃತಿಗಳ ವಿಸ್ತಾರವಾದ ಕ್ಷೇತ್ರಗಳಲ್ಲಿ ಶ್ರೀಗಳವರ ಸಾಧನೆಗಳು ಅನೇಕ. ಸಮಾಜಕ್ಕೆ ಅವರಿಂದ ನಡೆಯುತ್ತಿರುವ ಘನಸೇವೆಯನ್ನು ನಾನು ೧೯೬೦ರಿಂದ ನೋಡುತ್ತಲಿದ್ದೇನೆ. ಆಗ ನಾನು ಸುರತ್‌ಕಲ್ಲಿನಲ್ಲಿರುವ ಪ್ರಾದೇಶಿಕ ಎಂಜಿನಿಯರಿಂಗ್ ಕಾಲೇಜಿನ ಪ್ರಿನ್ಸಿಪಾಲನಾಗಿದ್ದೆ. ಮೈಸೂರು ವಿಶ್ವವಿದ್ಯಾಲಯದ ಸಿಂಡಿಕೇಟಿನ ಸದ

ಸ್ಮರಣೀಯ ಆಗಿದೆ. ೧೯೬೩ರಲ್ಲಿ ನನಗೂ ಸ್ವಾಮಿಗಳವರಿಗೂ ನಿಕಟಸಂಬಂಧ ಬರಲು ಅವರಿಂದ ಮರುವರುಷ ಸ್ಥಾಪಿಸಲ್ಪಟ್ಟ ತಾಂತ್ರಿಕ ಮಹಾವಿದ್ಯಾಲಯವೇ ಕಾರಣವಾಯಿತು. ಈ ವಿದ್ಯಾಲಯವು ಅಸ್ತಿತ್ವದಲ್ಲಿ ಬಂದ ಸಂದರ್ಭವನ್ನು ನಾನು ಇಲ್ಲಿ ಸ್ಮರಿಸದಿರಲಾರೆ. ತುಮಕೂರಿನ ಗಣ್ಯವರ್ತಕರೂ ಉದಾರ ದಾನಿಗಳೂ ಈಗ ಶಿವಾಧೀನರಾಗಿರುವ ಶ್ರೀ ಸಿದ್ಧರಾಮಣ್ಣನವರು ಮೊದಲಿನಿಂದಲೂ ಶ್ರೀ ಸಿದ್ಧಗಂಗಾ ಮಠದ ನಿಸ್ಸೀಮ ಭಕ್ತರಾಗಿದ್ದರು. ಅವರಿಗೆ ಮಕ್ಕಳಿರಲಿಲ್ಲ. ದತ್ತಕ ತೆಗೆದುಕೊಳ್ಳುವ ಮನಸ್ಸೂ ಇರಲಿಲ್ಲ. ಆಗ ನಾನು ಬೆಂಗಳೂರಿನಲ್ಲಿ ಔಷಧೋಪಚಾರ ಪಡೆಯುತ್ತಿದ್ದೆ. ನನ್ನ ಆರೋಗ್ಯದ ಬಗೆಗೆ ವಿಚಾರಿಸಲು ಒಮ್ಮೆ ನನ್ನ ಕಡೆಗೆ ಬಂದಾಗ ತಮ್ಮ ಆಸ್ತಿಯನ್ನು ಯಾವುದಾದರೊಂದು ಒಳ್ಳೆಯ ಕಾರ್ಯಕ್ಕೆ ಉಪಯೋಗಿಸಬೇಕೆಂಬ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು.ಆಗ ಒಂದು ಎಂಜಿನಿಯರಿಂಗ್ ಕಾಲೇಜನ್ನು ಸ್ಥಾಪಿಸುವ ಆವಶ್ಯಕತೆಯನ್ನು ಅವರಿಗೆ ತಿಳಿಸಿ ಆ ಉದ್ದೇಶಕ್ಕಾಗಿ ತಮ್ಮ ಆಸ್ತಿಯನ್ನು ಶ್ರೀ ಸಿದ್ಧಗಂಗಾ ಮಠಕ್ಕೆ ದಾನಮಾಡಬೇಕೆಂದು ಅವರಿಗೆ ಸಲಹೆಮಾಡಿದೆನು. ಅವರು ನನ್ನ ಸೂಚನೆಯನ್ನು ಸಂತೋಷದಿಂದ ಒಪ್ಪಿಕೊಂಡರು. ಆಮೇಲೆ ನಾವು ಸ್ವಾಮಿಗಳವರಿಗೆ ಭೆಟ್ಟಿಯಾಗಿ ಎಲ್ಲ ವಿವರಗಳನ್ನು ತಿಳಿಸಿ, ಅವರ ಆಶೀರ್ವಾದವನ್ನೂ ಪಡೆದೆವು. ಹೀಗೆ ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯವು ೧೯೬೩ರಲ್ಲಿ ಉದಯವಾಯಿತು. ಈಗ ಅದೊಂದು ಹೆಮ್ಮೆಯ ಸಂಸ್ಥೆಯಾಗಿ ಸಾವಿರಾರು ವಿದ್ಯಾರ್ಥಿಗಳಿಗೆ ತಾಂತ್ರಿಕವಿದ್ಯಾದಾನ ಮಾಡುತ್ತಲಿದೆ. ಈ ವಿದ್ಯಾಲಯದ ಸ್ಥಾಪನೆಯ ಕಾರ್ಯದಲ್ಲಿ ಶ್ರೀಗಳವರ ಭಕ್ತರನೇಕರು ಉದಾರ ಧನಸಹಾಯವನ್ನು ಮಾಡಿದ್ದಾರೆ. ಈ ಕಾರ್ಯದ ನಿಮಿತ್ತವಾಗಿ ನಾನು ಶ್ರೀಗಳವರನ್ನು ಅನೇಕ ಸಲ ಕಾಣಬೇಕಾಗುತ್ತಿತ್ತು. ಆದ್ದರಿಂದ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಸಂದರ್ಶಿಸಲು ನನಗೆ ಅನೇಕ ಅವಕಾಶಗಳು ದೊರೆಯುತ್ತಿದ್ದವು. ಪ್ರತಿಸಲ ಅಲ್ಲಿ ಶ್ರೀಗಳವರ ದಿವ್ಯನೇತೃತ್ವದಲ್ಲಿ ನಡೆಯುತ್ತಿದ್ದ ಪೂಜೆ, ಪ್ರಾರ್ಥನೆ, ಪ್ರವಚನ, ಪ್ರಸಾದ ವಿತರಣೆ, ವಿದ್ಯಾರ್ಥಿಗಳ ಅಭ್ಯಾಸ ಹಾಗೂ ಆಟಪಾಟಗಳಲ್ಲಿ ಭಾಗವಹಿಸುವದೊಂದು ನನಗೆ ಅಮೂಲ್ಯ ಅನುಭವವಾಗಿತ್ತು. ಹೀಗಾಗಿ ಈ ಸುಕ್ಷೇತ್ರದಲ್ಲಿ ನಡೆಯುತ್ತಿದ್ದ ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಚಟುವಟಿಕೆಗಳ ಬಗೆಗೆ ನನಗೆ ಒಳ್ಳೇ ಸಮೀಪದ ಪರಿಚಯವಾಯಿತು. ನಾನು ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಯಿದ್ದಾಗಲೂ ಅಲ್ಲಿಗೆ ಅನೇಕಸಲ ಹೋಗುತ್ತಿದ್ದೆ. ಈ ತಾಂತ್ರಿಕ ಮಹಾವಿದ್ಯಾಲಯದ ಇನ್‌ಸ್ಪೆಕ್ಷನ್ ಸಮಿತಿಯ ಅಧ್ಯಕ್ಷನಾಗಿದ್ದುದರಿಂದ ಅದರ ಕಾರ್ಯಕಲಾಪ ನಿರೀಕ್ಷಿಸಿ ಅದು ಸುಭದ್ರ ತಳಹದಿಯ ಮೇಲೆ ಕಾರ್ಯನಿರ್ವಹಿಸಲು ಸಮರ್ಥವಾಗುವಂತೆ ಮಾರ್ಗದರ್ಶನ ಮಾಡುವ ಸದವಕಾಶವೂ ನನ್ನದಾಗಿತ್ತು. ಈಗ ಈ ವಿದ್ಯಾಲಯವು ಇಡೀ ರಾಷ್ಟ್ರದಲ್ಲಿಯೇ ಅತ್ಯುತ್ತಮ ಸಂಸ್ಥೆಯೆಂದು ಹೆಸರು ಗಳಿಸಿರುವುದು ನನಗಂತೂ ಅತ್ಯಂತ ಸಂತೋಷದ ಸಂಗತಿಯಾಗಿದೆ. ಶ್ರೀಗಳವರ ಮಾರ್ಗದರ್ಶನದಲ್ಲಿ ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಹಂತದವರೆಗಿನ ಸಂಸ್ಥೆಗಳ ಕಾರ್ಯಕ್ರಮಗಳನ್ನು ನೋಡಿ ಶೈಕ್ಷಣಿಕ ಸಮಸ್ಯೆಗಳ ಪರಿಹಾರದ ಬಗೆಗೆ ಹೆಚ್ಚಿನ ಬೆಳಕನ್ನೂ ಆಧ್ಯಾತ್ಮಿಕ ತೃಪ್ತಿಯನ್ನೂ ಕಂಡಿದ್ದೇನೆ. ನನ್ನಮಟ್ಟಿಗೆ ಹೇಳುದಾದರೆ ಶ್ರೀಗಳು ಸ್ಫೂರ್ತಿಯ ಸೆಲೆಯಾಗಿದ್ದಾರೆ. ಸಾರ್ವಜನಿಕರ ಉದ್ಧಾರಕ್ಕಾಗಿ ಅನೇಕ ವಿದ್ಯಾಸಂಸ್ಥೆಗಳನ್ನು ನಡೆಸುವ ಕಾರ್ಯದಲ್ಲಿ ಬಂದೊದಗುವ ಎಡರು ತೊಡರುಗಳ ಬಗೆಗೆ ಶ್ರೀಗಳವರೂ ನಾನೂ ಪರಸ್ಪರ ವಿಚಾರವಿನಿಮಯ ಮಾಡುತ್ತಿದ್ದಾಗ, ಅವರ ಅಸದೃಶ ಹಾಗೂ ದಿವ್ಯವ್ಯಕ್ತಿತ್ವದ ಪರಿಚಯವಾಯಿತು. ಅವರೊಬ್ಬ ವ್ಯಕ್ತಿಯೆಂದರೆ ಸಾಲದು : ಅವರೊಂದು ಮಹಾಶಕ್ತಿಯಾಗಿದ್ದಾರೆ. ತಮ್ಮ ಅಧಿಕಾರದ ಈ ೫೦ ವರ್ಷಗಳ ಅವಧಿಯಲ್ಲಿ ಯಾವ ಇಲಾಖೆಯಿಂದಲೂ ಸಾಧಿಸಲಸಾಧ್ಯವಾದ ಕಾರ್ಯವನ್ನು ಶ್ರೀಗಳು ಸಾಧಿಸಿ ನಾಡಿನ ಜನರ ಹಾರ್ದಿಕ ಮೆಚ್ಚುಗೆಗೆ ಹಾಗೂ ಕೃತಜ್ಞತೆಗೆ ಪಾತ್ರರಾಗಿದ್ದಾರಲ್ಲದೆ ಭಾವೀ ಪೀಳಿಗೆಗೆ ದಾರಿದೀಪವಾಗಿದ್ದಾರೆ.

೧೯೦೧ ರಿಂದ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಉದ್ದಾನಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠಾಧೀಶರಾಗಿದ್ದರು. ಅವರ ತರುವಾಯ ಮಠದ ಜವಾಬ್ದಾರಿಯನ್ನು ನಿರ್ವಹಿಸಲು ನಿಯೋಜಿಸಲ್ಪಟ್ಟ ಮರುಳಾರಾಧ್ಯಸ್ವಾಮಿಗಳು ೧೯೩೦ರ ಜನವರಿಯಲ್ಲಿ ಶಿವಾಧೀನರಾಗಲು ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀ ಶಿವಕುಮಾರಸ್ವಾಮಿಗಳನ್ನು ನೇಮಿಸಲಾಯಿತು. ಅಂದಿನಿಂದಮಠದ ಆಡಳಿತವನ್ನು ಶ್ರೀಗಳವರೇ ನೋಡಿಕೊಳ್ಳಹತ್ತಿದರು. ಅಷ್ಟರೊಳಗಾಗಿ ಶ್ರೀಗಳು ಕನ್ನಡ, ಇಂಗ್ಲೀಷ್ ಹಾಗೂ ಸಂಸ್ಕೃತ ಭಾಷೆಗಳನ್ನೂ, ವೇದ, ವೇದಾಂತದರ್ಶನ, ಭಾರತದ ತತ್ತ್ವಶಾಸ್ತ್ರ ಹಾಗು ಶರಣರ ವಚನಶಾಸ್ತ್ರಗಳನ್ನೂ ಆಳವಾಗಿ ಅಭ್ಯಾಸ ಮಾಡಿದ್ದರು. ಶ್ರೀ ಉದ್ದಾನಸ್ವಾಮಿಗಳು ೧೯೪೧ರಲ್ಲಿ ಶಿವೈಕ್ಯರಾಗಲು ಮಠದ ಎಲ್ಲ ಜವಾಬ್ದಾರಿಯನ್ನು ಶ್ರೀ ಶಿವಕುಮಾರಸ್ವಾಮಿಗಳೇ ವಹಿಸಿಕೊಳ್ಳಬೇಕಾಯಿತು. ಅಂದಿನಿಂದ ಅವ್ಯಾಹತವಾಗಿ ನಡೆದುಬಂದ ನಾಡು ನುಡಿ ಹಾಗು ಸಮಾಜಗಳ ಸರ್ವತೋಮುಖ ಸೇವೆಯಲ್ಲಿ ಶ್ರೀ ಸಿದ್ಧಗಂಗಾಮಠದ ಪಾತ್ರ ಅದ್ವಿತೀಯವಾಗಿದೆ ; ಅಪ್ರತಿಮವಾಗಿದೆ. ಶ್ರೀಗಳು ಹಿಂದಿನಿಂದಲೂ ನಡೆಯುತ್ತಬಂದ ಧಾರ್ಮಿಕಕಾರ್ಯಗಳನ್ನು ಮುಂದುವರಿಸಿದರಲ್ಲದೆ ಆಧ್ಯಾತ್ಮಿಕ ಹಾಗು ಭೌತಿಕಜ್ಞಾನ ಹಾಗು ವಿಜ್ಞಾನಗಳ ಪ್ರಸಾರ ಕಾರ್ಯದಲ್ಲಿ ಅದ್ಭುತ ಯಶಸ್ಸನ್ನು ಗಳಿಸಿ, ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಒಂದು ಸ್ವತಂತ್ರ ವಿಶ್ವವಿದ್ಯಾಲಯದ ಮಟ್ಟಕ್ಕೆ ಏರಿಸಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. ೧೯೩೦ರಲ್ಲಿ ಶ್ರೀಗಳು ಮಠದ ಆಡಳಿತವನ್ನು ವಹಿಸಿ

ಕೊಂಡಾಗ ಉಚಿತ ಪ್ರಸಾದ ನಿಲಯ ಹಾಗು ಸಂಸ್ಕೃತ ಪಾಠಶಾಲೆ ಇವೆರಡೇ ಸಂಸ್ಥೆಗಳು ನಡೆಸಲ್ಪಡುತ್ತಿದ್ದವು. ಅಲ್ಲಿಂದೀಚೆಗೆ ಶ್ರೀಗಳವರ ಅವಿಶ್ರಾಂತ ಪರಿಶ್ರಮದ ಫಲವಾಗಿ ಅನೇಕ ಪ್ರಾಥಮಿಕ. ಮಾಧ್ಯಮಿಕ ಹಾಗು ಪ್ರೌಢಶಾಲೆಗಳು, ಶಿಕ್ಷಕರ ತರಬೇತಿ ಕೇಂದ್ರ, ಕಲಾ ಹಾಗು ವಿಜ್ಞಾನ ಮಹಾವಿದ್ಯಾಲಯಗಳು. ಸಂಸ್ಕೃತ ಕಾಲೇಜು ಹಾಗು ವೇದಪಾಠಶಾಲೆ. ತಾಂತ್ರಿಕ ಮಹಾ ವಿದ್ಯಾಲಯ, ಔದ್ಯೋಗಿಕಶಾಲೆ, ವಾಣಿಜ್ಯವಿದ್ಯಾಸಂಸ್ಥೆ ಹಾಗು ಹರಗುರುಚರಮೂರ್ತಿಗಳ ತರಬೇತಿ ಕೇಂದ್ರ ಮತ್ತು ಉಚಿತ ಪ್ರಸಾದ ನಿಲಯಗಳು ಉದಯವಾಗಿ ವರುಷವರುಷ ಸಾವಿರಾರು ವಿದ್ಯಾರ್ಥಿಗಳು ಆಯಾ ಹಂತಗಳಲ್ಲಿ ಶಿಕ್ಷಣಮುಗಿಸಿ ಹೊರಬರು ತ್ತಲಿದ್ದಾರೆ. ಈ ಸಂಸ್ಥೆಗಳಲ್ಲಿ ಅಭ್ಯಾಸ ಮಾಡಲು ಭಾರತದ ಬೇರೆ ಬೇರೆ ಭಾಗಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದಾರೆ. ಉಚಿತ ಪ್ರಸಾದನಿಲಯಗಳಲ್ಲಿ ಜಾತಿಮತ ಭೇದಗಳನ್ನೆಣಿಸದೆ ಎಲ್ಲರಿಗೂ ಪ್ರವೇಶ ಕೊಡಲಾಗುತ್ತದೆ. ಈ ಪ್ರಸಾದನಿಲಯಗಳಲ್ಲಿ ದಿನಾಲು ೪೦೦೦ಕ್ಕಿಂತಲೂ ಹೆಚ್ಚು ವಿದ್ಯಾರ್ಥಿಗಳು ಸಾಮೂಹಿಕವಾಗಿಯೂ ಸಹಪಂಕ್ತಿಗಳಲ್ಲಿಯೂ ಪ್ರಸಾದ ಪಡೆಯುತ್ತಿರು ವುದು ವೈಶಿಷ್ಟ್ಯಪೂರ್ಣವಾಗಿದೆ. ಶಿಸ್ತು. ಸ್ವಚ್ಛತೆ ಹಾಗು ತೇಜಸ್ಸುಗಳಿಂದ ಕೂಡಿದ ನಾಲ್ಕೈದುಸಾವಿರ ವಿದ್ಯಾರ್ಥಿಗಳ ಸಾಮೂ ಹಿಕ ಪ್ರಾರ್ಥನೆಯನ್ನು ಸ್ವತಃ ನೋಡಿಯೇ ಅನುಭವಿಸಿ ಆನಂದಿಸಬೇಕು. ಕೆಲವು ವರ್ಷ ಪ್ರಸಾದನಿಲಯಗಳ ಸಲುವಾಗಿ ಸರ ಕಾರದ ಧನ ಸಹಾಯವನ್ನು ಪಡೆಯದೆ ಎಲ್ಲ ಬಗೆಯ ಆರ್ಥಿಕ ಭಾರವನ್ನು ಭಕ್ತರ ಹಾಗೂ ವಿದ್ಯಾಭಿಮಾನಿಗಳ ಸಹಾಯದಿಂದ ಶ್ರೀಗಳವರೇ ವಹಿಸಿದುದುಂಟು.

ಮಠಕ್ಕೆ ಅತಿ ಸಮೀಪದಲ್ಲಿರುವ ದೇವರಾಯ ಪಟ್ಟಣಕ್ಕೂ ಮಠಕ್ಕೂ ಅತ್ಯಂತ ನಿಕಟ ಸಂಬಂಧವನ್ನು ಕಲ್ಪಿಸಲಾಗಿದೆ. ಈ ಗ್ರಾಮದ ಆರ್ಥಿಕ ಹಾಗು ಸಾಮಾಜಿಕ ಆಗುಹೋಗುಗಳು ಮಠದಲ್ಲಿ ನಡೆಯುತ್ತಿರುವ ಅನೇಕ ಚಟುವಟಿಕೆಗಳಿಗೆ ದೇವರಾಯ ಪಟ್ಟಣವು ಪ್ರಯೋಗಮಂದಿರವಾಗಿದೆ. ಸುತ್ತುಮುತ್ತಲಿನ ಗ್ರಾಮಗಳಿಗೂ ಮಠದ ಪ್ರತಿಭೆ ಪ್ರಭಾವಗಳು ಪರಿಣಮಿಸಿವೆ. ಮಠದಿಂದ ನಡೆಸಲ್ಪಟ್ಟ ಯಾವ ಸಂಸ್ಥೆಗೂ ಪ್ರತ್ಯೇಕ ಆಡಳಿತ ಸಮಿತಿಗಳಿಲ್ಲ. ಪ್ರತಿಯೊಂದು ಸಂಸ್ಥೆಯ ಆಡಳಿತವು ಶ್ರೀಗಳ ವರ ಮಾರ್ಗದರ್ಶನದಲ್ಲಿಯೇ ನಡೆಯುತ್ತಿದೆ. ಸಂಸ್ಕೃತ ಕಾಲೇಜಿನ ತರಗತಿಗಳಿಗೂ ಪ್ರೌಢಶಾಲೆಗಳ ಎಸ್. ಎಸ್. ಎಲ್. ಸಿ. ವರ್ಗಗಳಿಗೂ ಶ್ರೀಗಳು ಸಂಸ್ಕೃತ ಹಾಗು ಇಂಗ್ಲೀಷ್ ವಿಷಯಗಳಲ್ಲಿ ನಿತ್ಯ ಪಾಠಹೇಳುತ್ತಾರೆ. ದಿನದ ೨೪ ತಾಸುಗಳಲ್ಲಿ ನಿದ್ರೆಗೆ ೪ ತಾಸು, ಪೂಜೆ ಪ್ರಾರ್ಥನೆ ಪ್ರಸಾದಗಳಿಗೆ ೪ ತಾಸುಗಳಷ್ಟು ವೇಳೆಯನ್ನು ಹೊರತುಪಡಿಸಿದರೆ ಇನ್ನುಳಿದ ೧೬ ತಾಸುಗಳನ್ನು ಎಲ್ಲ ಸಂಸ್ಥೆಗಳ ಮೇಲ್ವಿಚಾರಣೆ, ಭಕ್ತರಿಗೆ ದರ್ಶನ, ಅತಿಥಿಗಳೊಡನೆ ಆಲೋಚನೆ, ಪಂಡಿತ ಪ್ರಾಧ್ಯಾಪಕರೊಡನೆ ವಿಚಾರ ವಿನಿ ಮಯಗಳಿಗಾಗಿ ಮೀಸಲಿರಿಸಿದ್ದಾರೆ. ಶ್ರೀಗಳ ದಿನದ ಕಾರ್ಯಕ್ರಮವು ಬೆಳಗಿನ ೨-೩೦ ಗಂಟೆಗೆ ಪ್ರಾರಂಭವಾಗಿ ರಾತ್ರಿ ೧೧-೩೦ ಗಂಟೆಗೆ ಮುಗಿಯುತ್ತಿದೆ. ಅವರ ದಿನನಿತ್ಯದ ಕಾರ್ಯಕ್ರಮವು ಎಳ್ಳಷ್ಟೂ ಬಿಡುವಿಲ್ಲದೆ ಚಾಚೂ ತಪ್ಪದೆ ಕಟ್ಟುನಿಟ್ಟಾಗಿ ನಡೆ ಯುತ್ತಿದೆ. ಆಗಾಗ ಶಿಕ್ಷಣ ಸಮಿತಿಗಳಲ್ಲಿ ಭಾಗವಹಿಸುತ್ತಾರೆ. ಪ್ರವಾಸದಲ್ಲಿದ್ದಾಗ ಭಕ್ತರ ಸಮೂಹದಲ್ಲಿ ಶರಣರ ತತ್ವಗಳ ಬಗೆಗೆ ಪ್ರವಚನ ನಡೆಸುತ್ತಾರೆ. ನುಡಿದಂತೆ ನಡೆದು ತೋರಿಸಿದ ಶರಣರ ಕಾಯಕತತ್ತ್ವವನ್ನು ತಮ್ಮ ಜೀವನದ ಸೂತ್ರವನ್ನಾಗಿ ಮಾಡಿಕೊಂಡಿದ್ದಾರೆ. ಭಕ್ತರ ಉದ್ಧಾರ. ಬಡಜನರ ಕಲ್ಯಾಣ, ಶಿಕ್ಷಣ, ಸಾಹಿತ್ಯ, ಸಂಸ್ಕೃತಿಗಳ ಪ್ರಸಾರ, ಧರ್ಮಜಾಗೃತಿ ಮೊದಲಾದ ಸಾರ್ವಜನಿಕ ಹಾಗು ಸರ್ವೋದಯದ ಕ್ಷೇತ್ರಗಳಲ್ಲಿ ತಮ್ಮದೇ ಆದ ಶ್ರೇಷ್ಠಕೊಡುಗೆಯನ್ನು ಸಲ್ಲಿಸುತ್ತಿದ್ದಾರೆ. ಇವರಿಂದಾಗುತ್ತಿರುವ ನಾಡುನುಡಿಗಳ ಅಮೋಘ ಸೇವೆಯನ್ನು ಮೆಚ್ಚಿ. ವೀರಶೈವ ಸಮಾಜವು ಶ್ರೀಗಳವರನ್ನು ಅಖಿಲಭಾರತ ವೀರಶೈವ ಮಹಾಸಭೆಗೆ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. ಅದರಂತೆ ಶಿಕ್ಷಣಕ್ಷೇತ್ರದಲ್ಲಿ ಶ್ರೀಗಳು ಮಾಡುತ್ತಿರುವ ಮಹೋನ್ನತ ಕಾರ್ಯಕ್ಕಾಗಿ ಕರ್ನಾಟಕ ವಿಶ್ವವಿದ್ಯಾಲಯವು ಅವರಿಗೆ ಡಾಕ್ಟರ್ ಆಫ್ ಲೆಟರ್ಸ್ ಎಂಬ ಉನ್ನತಗೌರವ ಪದವಿಯನ್ನು ಕೊಟ್ಟಿತು.

ಶ್ರೀ ಸಿದ್ಧಗಂಗಾಮಠದ ಸುತ್ತಲೂ ಅದರ ಆಶ್ರಯದಲ್ಲಿ ಗ್ರಾಮಾಂತರಗಳಲ್ಲಿಯೂ ಕಾಯಕಗೈಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಎಡಬಿಡದೆ ನಡೆಯುತ್ತಿರುವ ಕಾರ್ಯಕ್ರಮಗಳನ್ನೂ ಅಲ್ಲಿ ಅಭ್ಯಾಸಮಾಡುತ್ತಿರುವ ಸುಮಾರು ನಾಲ್ಕುಸಾವಿರ ವಿದ್ಯಾ ರ್ಥಿಗಳ ಚಟುವಟಿಕೆಗಳನ್ನೂ ಮತ್ತು ಸದಾ ಕಾಯಕದಲ್ಲಿ ನಿರತರಾದ ಶ್ರೀಗಳವರನ್ನೂ ನೋಡಿದಾಗ ಪ್ರಾತಃಸ್ಮರಣೀಯರಾದ ದಿವಂಗತ ವಿಶ್ವಕವಿ ರವೀಂದ್ರನಾಥ ಠಾಕೂರ ಹಾಗು ದಿವಂಗತ ಪಂಡಿತ ಮದನಮೋಹನ ಮಾಲವೀಯ ಇವರುಗಳಿಂದ ಸ್ಥಾಪಿ ಸಲ್ಪಟ್ಟ ವಿಶ್ವಭಾರತಿ ಹಾಗು ಹಿಂದೂ ವಿಶ್ವವಿದ್ಯಾಲಯ ಹಾಗು ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ ವಿಶ್ವವಿದ್ಯಾಲಯಗಳು ನೆನ ಪಿಗೆ ಬರುತ್ತವೆ. ಭವಿಷ್ಯತ್ತಿನಲ್ಲಿಯಾದರೂ ಶ್ರೀ ಸಿದ್ಧಗಂಗಾಕ್ಷೇತ್ರವು ಒಂದು ಸ್ವತಂತ್ರ ವಿಶ್ವವಿದ್ಯಾಲಯವೆಂದು ಪರಿಗಣಿಸಲ್ಪ ಡುವದರಲ್ಲಿ ನನಗೇನೂ ಸಂದೇಹವಿಲ್ಲ. ಶ್ರೀಗಳವರ ಕಾರ್ಯಬಾಹುಳ್ಯ ವಿಸ್ತಾರವಾದದ್ದು; ವ್ಯಕ್ತಿತ್ವ ಭವ್ಯವಾದದ್ದು; ಜೀವನ ದಿವ್ಯವಾದದ್ದು; ಪರಿಶ್ರಮ ಅಪ್ರತಿಮ. ಅವರೊಬ್ಬ ಶ್ರೇಷ್ಠ ಸರ್ವೋದಯ ಸಾಧಕರು. ಮಹಾಶರಣರು. ಇಂಥ ಮಠಾಧೀ ಶರನ್ನು ಪಡೆದಿರುವ ನಾಡು ಧನ್ಯ.

**ಅ.ಸೆ. ಅಡಕೆ**

ಮಾಜಿ ಕುಲಪತಿಗಳು ಕರ್ನಾಟಕ, ವಿಶ್ವವಿದ್ಯಾಲಯ

ಧಾರವಾಡ.

# ಸಿದ್ಧಗಂಗಾ ಸಿದ್ಧಗುರು

ಕರ್ನಾಟಕದ ಶಿವಶರಣರ ಚರಿತ್ರೆಯಲ್ಲಿ ಹಾಗೂ ಆಧ್ಯಾತ್ಮ ಕ್ಷೇತ್ರದಲ್ಲಿ ಸಿದ್ಧಗಂಗೆಗೆ, ಅದರ ಹೆಸರೇ ಸೂಚಿಸುವಂತೆ, ಪವಿತ್ರಸ್ಥಾನವಿದೆ. ನೂರಾರು ವರ್ಷಗಳಿಂದ ನಾಡಿನ ಶಿವಶರಣರು ಅಲ್ಲಿಗೆ ಬಂದು ಹೋಗುತ್ತಿರುವುದು ಮಾತ್ರವಲ್ಲ. ಅಲ್ಲಿ ನಿಂತು ತಪಗೈದು ಮುಕ್ತಿಶ್ರೀಯನ್ನಾಲಿಂಗಿಸಿದ್ದಾರೆ. ಅವರ ತಪಸ್ಸೇ ಮೂರ್ತಿವೆತ್ತಂತೆ, ಅವರು ತಪೋಮಗ್ನರಾಗಿದ್ದಂತೆಯೇ. ಶಿವಾವತಾರವೆತ್ತಿದಂತೆ, ಯಾತ್ರಾರ್ಥಿಗಳನ್ನು ಸನ್ನೆಗೈದು ಸನಿಹಕ್ಕೆ ಕರೆದು ಆಶೀರ್ವಾದ ಮಾಡುವಂತೆ ಕಂಗೊಳಿಸುತ್ತಿರುವ ಬಂಡೆ ಹೆಬ್ಬಂಡೆಗಳ ನಡುವೆ ಹುದುಗಿರುವ ಆಶ್ರಮ ಬಹುಕಾಲದಿಂದ ದುಃಖಾರ್ತರನ್ನು ಸಾಂತ್ವನಗೊಳಿಸುತ್ತ. ಜ್ಞಾನಾರ್ಥಿಗಳನ್ನು ತೃಪ್ತಿಪಡಿಸುತ್ತಾ. ಮುಮುಕ್ಷುಗಳ ಬಯಕೆಯನ್ನು ಈಡೇರಿಸುತ್ತಿದೆ. ಅಲ್ಲಿಯ ಪರಿಸರದ ಪ್ರತಿಯೊಂದು ಸಚರಾಚರ ವಸ್ತುವೂ. ಮಣ್ಣಿನ ಕಣಕಣವೂ ಶಿವಧ್ಯಾನದಲ್ಲಿ ಮಗ್ನವಾದಂತೆ ತೋರುತ್ತಿವೆ.

ಕನ್ನಡನಾಡಿನ ಶೈಕ್ಷಣಿಕ ಇತಿಹಾಸದಲ್ಲಂತೂ ಸಿದ್ಧಗಂಗೆಗೆ ವಿಶಿಷ್ಟ ಸ್ಥಾನವಿದೆ. ಜ್ಞಾನಪ್ರಸಾರಕ್ಕಾಗಲೀ ಶೈಕ್ಷಣಿಕ ಪ್ರಗತಿಗಾಗಲೀ ಸರ್ಕಾರವೊಂದನ್ನೇ ಹೊಣೆ ಮಾಡುವುದು ತರವಲ್ಲ. ಸರ್ಕಾರದಿಂದಲೇ ಅವು ಸಾಧ್ಯ, ಅವು ಸಮರ್ಪಕವಾಗಿ ಕೈಗೂಡುತ್ತವೆ ಎನ್ನುವ ನಿರೀಕ್ಷೆಯೂ ಸುಳ್ಳಾಗುವ ಸಂಭವವುಂಟು. ಶಿಕ್ಷಣವನ್ನು ವಿಕೇಂದ್ರೀಕರಣಗೊಳಿಸಿ, ಅದನ್ನು ಖಾಸಗಿ ಕ್ಷೇತ್ರಕ್ಕೆ ವಹಿಸಿದಷ್ಟು ಅದರ ಮಟ್ಟ ಎತ್ತರವಾಗುತ್ತದೆ, ಅದು ಸರ್ವರಿಗೂ ಸಮಾನವಾಗಿ ಸಿಗುವಂತಾಗುತ್ತದೆ. ಜ್ಞಾನಪ್ರಸಾರ ವ್ಯಾಪಕವಾಗಿಯೂ, ಸುಲಭವಾಗಿಯೂ ಸಾಗುವಂತಾಗುತ್ತದೆ. ಅಷ್ಟೇ ಅಲ್ಲ, ಜ್ಞಾನವಿಕಾಸ ವಿಶ್ವತೋಮುಖವಾಗಿ ಹಾಗೂ ಸಾರ್ಥಕವಾಗಿ ವೃದ್ಧಿಹೊಂದುತ್ತದೆ, ಎನ್ನುವುದಕ್ಕೆ ಮುಂದುವರಿದಿರುವ ಪಾಶ್ಚಾತ್ಯರಾಷ್ಟ್ರಗಳೇ ಸಾಕ್ಷಿಯಾಗಿವೆ. ಕರ್ನಾಟಕದಲ್ಲಿ ಶಿಕ್ಷಣದ ಮುನ್ನಡೆಗೆ ಸಿದ್ಧಗಂಗಾ ಮಠದಂಥ ಖಾಸಗಿಸಂಸ್ಥೆಗಳು ಸಲ್ಲಿಸಿರುವ, ಸಲ್ಲಿಸುತ್ತಿರುವ ಕಾಣಿಕೆ ಅಮೋಘವಾದುದು. ಕೇವಲ ಸರ್ಕಾರದ ಕೈಯನ್ನು ಮಾತ್ರ ಕಾಯ್ದಿದ್ದರೆ ಶಿಕ್ಷಣ ಇಂದಿನಷ್ಟು ವ್ಯಾಪಕವಾಗಿ ಹರಡುತ್ತಿರಲಿಲ್ಲ. ಶ್ರೀಮಂತರಿಂದ ಧನ ಸಹಾಯ ಪಡೆದು ಅದನ್ನು ಸದ್ವಿನಿಯೋಗ ಮಾಡುವುದು ಮಠಗಳ ಒಂದು ಸದುದ್ದೇಶವಾದರೆ. ಶಿಕ್ಷಣ ಪ್ರಸಾರವೂ ಅವುಗಳ ಕಾರ್ಯಕ್ರಮಗಳಲ್ಲೊಂದಾಗಿದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಚಾಲ್ತಿಯಲ್ಲಿರುವ ಶಿಕ್ಷಣ ಸಂಸ್ಥೆಗಳ ಅಳತೆಯ ದೃಷ್ಟಿಯಿಂದ ಸಿದ್ಧಗಂಗಾ ಮಠವೇ ಒಂದು ವಿಶ್ವವಿದ್ಯಾನಿಲಯವಾಗಿದೆ. ಇಂಜಿನಿಯರಿಂಗ್ ಕಾಲೇಜು. ಸಂಸ್ಕೃತ ಕಾಲೇಜು. ಪ್ರಥಮದರ್ಜೆ ಕಾಲೇಜು. ತರಬೇತಿ ಕಾಲೇಜು. ಇಂಥವೇ ಹಲವಾರು ಕಾಲೇಜುಗಳು ಈ ಮಠದ ಆಶ್ರಯದಲ್ಲಿ ನಡೆಯುತ್ತಿವೆ. ಸರ್ಕಾರಿ ಕಾಲೇಜುಗಳು ನಾಚುವಂತೆ ಶ್ರೀಮಠ ಕಣ್ಣೋರೈಸುವಂಥ ಕಟ್ಟಡಗಳನ್ನು ಕಟ್ಟಿಸಿದೆ. ಪ್ರಯೋಗಾಲಯಗಳನ್ನು ಅಣಿಗೊಳಿಸಿದೆ. ಸೌಲಭ್ಯಾನು ಕೂಲಗಳನ್ನು ಸೃಷ್ಟಿಸಿದೆ. ಜೊತೆಗೆ ಅನೇಕ ವಿದ್ಯಾರ್ಥಿಗಳಿಗೆ ಉಚಿತ ಭೋಜನ ವಸತಿ ಸೌಕರ್ಯಗಳನ್ನು ಸಹ ಒದಗಿಸಿದೆ. ವಿದ್ಯಾರ್ಥಿಗಳಂತೂ ನಾಡಿನ ನಾನಾ ಭಾಗಗಳಿಂದ ಬಂದು ಸೇರಿ. ಆ ವಿದ್ಯಾಕ್ಷೇತ್ರವನ್ನು ಮಿನಿಭಾರತವನ್ನಾಗಿ ಪರಿವರ್ತಿಸಿದ್ದಾರೆ. ಆಶ್ರಮದ ವಾತಾವರಣದಿಂದಾಗಿ ಕಾಲೇಜುಗಳ ಆವರಣದಲ್ಲಿ ಸದಾಶಾಂತಿ ತಾಂಡವವಾಡುತ್ತಿರುತ್ತದೆ.

ಮಹಾಸಿದ್ಧಿಗೆ ಮಹಾಸಾಧನೆ ಅತ್ಯಗತ್ಯವಷ್ಟೆ. ಸಿದ್ಧಗಂಗಾ ಕ್ಷೇತ್ರವನ್ನಾಗಲೀ. ಪರಿಸರದ ವಿದ್ಯಾಕ್ಷೇತ್ರವನ್ನಾಗಲೀ ನೋಡಿದಾಗ ಆ ಸಿದ್ಧಿಯ ಹಿಂದಿರುವ ತಪೋವೈಭವವನ್ನು ಅದಕ್ಕೆ ಕಾರಣೀಭೂತವಾದ ಸಿದ್ಧಪುರುಷರ ವ್ಯಕ್ತಿತ್ವವನ್ನೂ ಸುಲಭವಾಗಿ ಊಹಿಸಬಹುದು. ಜನಸಾಮಾನ್ಯರ ದೃಷ್ಟಿಯಲ್ಲಿ ನಮ್ಮಲ್ಲಿರುವ ವಿಶ್ವವಿದ್ಯಾನಿಲಯಗಳು ನಾಲ್ಕು; ನಾಲ್ವರು ಕುಲಪತಿಗಳು. ನಿಜವಾಗಿಯೂ ನಮ್ಮಲ್ಲಿ ಹತ್ತಾರು ವಿಶ್ವವಿದ್ಯಾನಿಲಯಗಳಿವೆ. ಅನಭಿಷಿಕ್ತ ಕುಲಪತಿಗಳೂ ಅಷ್ಟೇ ಮಂದಿ ಇದ್ದಾರೆ. ಅವರು ಬರಿಯ ಕುಲಪತಿಗಳಲ್ಲ. ಮಹಾಶಿಲ್ಪಿಗಳೂ ಅಹುದು. ಅವರಲ್ಲೊಬ್ಬರು ಸಿದ್ಧಗಂಗಾ ಮಠಾಧೀಶರಾದ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳು. ಅವರು ಶ್ರೀ ಸಾಮಾನ್ಯರ ದೀನದಲಿತರ ಗ್ರಾಮೀಣ ಜನರ ಹಿತೈಷಿಗಳಾದ್ದರಿಂದ ಅವರ ಹೆಸರಿನ ಹಿಂದೆ ಯಾವ ಉಪಾಧಿಗಳನ್ನೂ ಹಚ್ಚದೆ. ಅವರನ್ನೂ ಶ್ರೀ ಶಿವಕುಮಾರಸ್ವಾಮಿಗಳೆಂದೇ ಕರೆಯಬಹುದು. ಸ್ವಾಮಿಗಳೆಂತು ಕಠಿಣ ವಿರಕ್ತರೋ ಅಂತೆಯೇ ನಿಷ್ಠಾವಂತ ಕಾಯಕಯೋಗಿಗಳೂ ಅಹುದು. ಅವರು ತಪಸ್ವಿಗಳು ಮಾತ್ರವಲ್ಲ, ಮಹಾವಿದ್ವಾಂಸರೂ ಅಹುದು. ಅವರು ಮೂಗು ಹಿಡಿದುಕೊಂಡು ಜನಸಮೂಹದಿಂದ ದೂರವಾಗಿ, ಮರಬಂಡೆಗಳ ನಡುವೆ ಮರೆಯಾದವರಲ್ಲ. ಸಂತೆಯ ಗಲಿಬಿಲಿಯ ನಡುವಿದ್ದುಕೊಂಡು ವೀರವ್ರತಿಯೆನಿಸಿಕೊಂಡವರು. ತಾವೊಬ್ಬರು ಮುಕ್ತರಾದರೆ ಸಾಲದು, ತಮ್ಮ ಸುತ್ತಮುತ್ತಣ ಜನವೂ ಮೋಕ್ಷಗಾಮಿಗಳಾಗಬೇಕೆಂದು ಬಯಸಿ, ಅವರ ಸರ್ವತೋಮುಖವಾದ ಏಳ್ಗೆಗಾಗಿ ದುಡಿದವರು. ನಮ್ಮ ನಾಡಿನ ಪ್ರಗತಿಗೆ ಕಾಯಕವೊಂದೇ ರಾಜಮಾರ್ಗವೆಂದು ಬಗೆದವರು; ಬಗೆದವರು ಮಾತ್ರವಲ್ಲ, ಸ್ವಾನುಷ್ಠಾನದ ಮೂಲಕ ನೆರೆಹೊರೆಯವರಿಗೆ ದಾರಿದೀಪವಾದವರು. ಸೂಜಿಗಲ್ಲಿನಂತೆ ಭಕ್ತವೃಂದವನ್ನು ಆಕರ್ಷಿಸಿ, ಅವರಿಂದ ಸರ್ವಜನೋಪಯುಕ್ತವಾದ ಧರ್ಮಕಾರ್ಯಗಳನ್ನು ಮಾಡಿಸಿಕೊಂಡು ಮಹಾಸಂಸ್ಥೆಗಳನ್ನು ನಿರ್ಮಾಣಗೈದ ಮಹಾಸಾಹಸಿಗರಿವರು.

ವಿರಕ್ತಸಮುದಾಯದಲ್ಲಿರಲಿ, ಲೌಕಿಕದಲ್ಲಿಯಾದರೂ ಸರಿಯೇ, ಕರ್ತೃತ್ವಶಕ್ತಿಯಲ್ಲಿ ಅವರನ್ನು ಮೀರಿಸುವ ಸಾಹಸಿ

ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾ ವಿದ್ಯಾಲಯ (ಬಿ.ಇಡಿ. ಕಾಲೇಜು)ದ ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳ ಮಧ್ಯದಲ್ಲಿ ಶ್ರೀಗಳು.




ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ (ಬಿ.ಇಡಿ. ಕಾಲೇಜು) ಕಟ್ಟಡ



ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ (ಬಿ.ಇಡಿ. ಕಾಲೇಜು)ದ ಉಪಾಧ್ಯಾಯರು ಮತ್ತು ಅತಿಥಿಗಳ ಮಧ್ಯದಲ್ಲಿ ಶ್ರೀಗಳು.



ಶ್ರೀ ಕ್ಷೇತ್ರದಲ್ಲಿ ಅಖಿಲ ಕರ್ನಾಟಕ ದ್ವಿತೀಯ ಸಂಸ್ಕೃತ ಮಹಾಪರಿಷತ್ ಸಭೆ ನೆರವೇರಿದಾಗ (೧೯೭೮)



ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯದಲ್ಲಿ ಶಿಕ್ಷಣತಜ್ಞ ಎ. ಸಿ. ದೇವೇಗೌಡರ ಭಾಷಣ



ಶ್ರೀ ಕ್ಷೇತ್ರದ ವಿದ್ಯಾರ್ಥಿ ಸಂಘದಲ್ಲಿ ಉಪನ್ಯಾಸ ಕಾರ್ಯಕ್ರಮ



ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯದ ಒಂದು ಕಾರ್ಯಕ್ರಮದಲ್ಲಿ ಶ್ರೀಗಳು



ಉಡುಪಿಯಲ್ಲಿ ನೆರವೇರಿದ
ವಿಶ್ವಹಿಂದೂ ಪರಿಷತ್
ಅಧಿವೇಶನದಲ್ಲಿ ಶ್ರೀಗಳು
ಭಾಷಣ ಮಾಡುತ್ತಿರುವುದು



ತುಮಕೂರಿನ ಹೆಚ್.ಎಂ.ಟಿ.
ಗುದ್ದಲಿ ಪೂಜೆ ಸಮಾರಂಭದಲ್ಲಿ
ಶ್ರೀಗಳು,



ವಿಶ್ವಹಿಂದೂ ಪರಿಷತ್ತಿನ ಉಡುಪಿ
ಅಧಿವೇಶನದಲ್ಲಿ ಶ್ರೀಗಳು
ಭಾಗವಹಿಸಿದಾಗಿನ
ಮತ್ತೊಂದು ಚಿತ್ರ

ಬೆಂಗಳೂರಿನಲ್ಲಿ ನೆರವೇರಿದ
ವಿಶ್ವ ಹಿಂದೂ ಪರಿಷತ್ ಸಭೆಯಲ್ಲಿ
ಶ್ರೀಗಳವರ ಭಾಷಣ →




ಶ್ರೀ ಸಿದ್ಧಲಿಂಗೇಶ್ವರ ವೇದ–ಸಂಸ್ಕೃತ
ಮಹಾಪಾಠಶಾಲೆ ಶ್ರೀ ಸಿದ್ಧಗಂಗಾಕ್ಷೇತ್ರ.
↓



ತುಮಕೂರಿನಲ್ಲಿ ೧೯೪೪ರಂದು ಸ್ಥಾಪಿತವಾಗಿರುವ ಸಿದ್ಧಗಂಗಾ ಹೈಸ್ಕೂಲ್ ಕಟ್ಟಡದ ಮುಂಭಾಗದ ದೃಶ್ಯ




ತುಮಕೂರಿನ ಶ್ರೀ ಸಿದ್ಧಗಂಗಾ ಸೈನ್ಸ್, ಆರ್ಟ್ಸ್, ಕಾಮರ್ಸ್ ಕಾಲೇಜಿನ
ವಾರ್ಷಿಕೋತ್ಸವದಲ್ಲಿ ಶ್ರೀಗಳು.
ತ್ರದಲ್ಲಿ ಲಿಂ. ಶ್ರೀ ಟಿ. ಎಸ್. ಕೆಂಪುಹೊನ್ನಯ್ಯನವರನ್ನು ಕಾಣಬಹುದು.



ಶ್ರೀ ಕ್ಷೇತ್ರದಲ್ಲಿ ಡಿ.ಪಿ.ಐ. ಶ್ರೀರಂಗರಾಜು ಅವರಿಂದ
ಪುಸ್ತಕ ಪ್ರದರ್ಶನ ಉದ್ಘಾಟನೆಯ ಸಮಯದಲ್ಲಿ ಶ್ರೀಗಳು.



ಬೆಂಗಳೂರಿನ ಬಸವ ಸಮಿತಿಯವರ ಬಸವಜಯಂತಿ ಕಾರ್ಯಕ್ರಮದ ನೇತೃತ್ವವಹಿಸಿದ ಶ್ರೀಗಳು
(೧೮-೪-೧೯೮೦)



ಚಿತ್ರದಲ್ಲಿ ಸರ್ವಶ್ರೀ ಜತ್ತಿ, ಚೀಫ್ ಜಸ್ಟಿಸ್ ಚಂದ್ರಶೇಖರ, ವೀರಪ್ಪಮೊಯ್ಲಿ,
ಎಸ್. ಎಸ್. ಮಳೀಮಠ ಅವರನ್ನು ಕಾಣಬಹುದು

ಶ್ರೀ ಕ್ಷೇತ್ರದಲ್ಲಿ ತುಮಕೂರಿನ ಪ್ರಸಿದ್ಧ ದಾನಿಗಳಾದ ಶ್ರೀ ಟಿ. ಎನ್. ಕೆಂಪುಹೊನ್ನಯ್ಯನವರು ಕಟ್ಟಿಸಿಕೊಟ್ಟಿರುವ ಅತಿಥಿ ಗೃಹ



ಮೇಲ್ಕಂಡ ಅತಿಥಿ ಗೃಹ ಕಟ್ಟಡ ಪ್ರವೇಶೋತ್ಸವ ಸಮಾರಂಭದ ದೃಶ್ಯ.

ಗಳು ವಿರಳವೆಂದೇ ಹೇಳಬೇಕು. ವರ್ಷಕ್ಕೊಮ್ಮೆ ಅಭೂತಪೂರ್ವವೆನ್ನುವಂತೆ ನಡೆಯುವ ಜಾತ್ರೆಯ ವೈಭವವೇ ಆ ಶಕ್ತಿಗೆ ಸಾಕ್ಷಿಯಾಗಿದೆ. ೧೯೬೩ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಲನವನ್ನು ನೋಡಿದವರು ಅಥವಾ ಅದರಲ್ಲಿ ಪಾಲ್ಗೊಂಡವರ ನೆನಪುಮಾಸಿಲ್ಲವೆಂದೇ ಹೇಳಬಹುದು. ಪ್ರತಿಯೊಂದು ಕಾರ್ಯಕ್ರಮದಲ್ಲಿಯೂ ಕಾಣುತ್ತಿದ್ದ ಶಿಸ್ತು, ಅಚ್ಚುಕಟ್ಟು, ರುಚಿಗಳು ಕಲಾರಾಧನೆಗೆ ತಕ್ಕಂತಿದ್ದವು. ಯಾವ ಕಡೆಗೆ ಕಣ್ಣು ಹೊರಳಿಸಿದರೂ ಅನುಕರಣೀಯವಾದ ವ್ಯವಸ್ಥೆ ನೋಡಿದವರ ಮನಸ್ಸಿನಲ್ಲಿ ದಿಗ್ಭ್ರಮೆಯನ್ನುಂಟುಮಾಡುವಂತಿತ್ತು. ಸಭೆಯಾಗಲೀ ಗೋಷ್ಠಿಯಾಗಲೀ, ವಸತಿ ಸೌಕರ್ಯವಾಗಲೀ, ಭೋಜನ ವ್ಯವಸ್ಥೆಯಾಗಲೀ ಎಲ್ಲೆಲ್ಲಿಯೂ ಅವರ ತಪಸ್ಸಿನ ಪ್ರಭಾವವೇ ಅಚ್ಚೊತ್ತಿದ್ದಂತಿರುತ್ತಿತ್ತು.

ಕರ್ತೃತ್ವಶಕ್ತಿಯಂತೆಯೇ ಅವರ ವಕ್ತೃತ್ವಸಾಮರ್ಥ್ಯವೂ ಒಂದು ಮಹಾಪೂರದಂತಿದೆ. ಅವರು ಭಾಷಣ ಪ್ರಾರಂಭಮಾಡುವುದೇ ತಡ, ನಿರರ್ಗಳವಾಗಿ ಹರಿಯುತ್ತದೆ. ಸಾಮಾನ್ಯವಾಗಿ ತಾರಸ್ಥಾಯಿಯಲ್ಲಿ ಹೊರಹೊಮ್ಮುವ ಅವರ ದನಿ ಕೊನೆಯತನಕ ಏರಿಳಿತಗಳಿಲ್ಲದೆ ಏಕಪ್ರಕಾರವಾಗಿರುತ್ತದೆ. ವಿಷಯಕ್ಕಾಗಿ ಅವರು ತಡಕಾಡುವುದಿಲ್ಲ, ಮಾತಿಗಾಗಿ ಮುಲುಕುವುದಿಲ್ಲ. ವಿಷಯದ ವಿಶದತೆಯಿಂದಾಗಿ, ಅಭಿವ್ಯಕ್ತಿಯ ಪುಷ್ಟತೆಯಿಂದಾಗಿ ಅವರು ಎಂಥ ಸಭೆಯನ್ನಾದರೂ ತಲೆದೂಗಿಸ ಬಲ್ಲರು.

ಸ್ವಾಮೀಜಿಯವರು ದೈಹಿಕವಾಗಿ ಎಂತು ಆಜಾನುಬಾಹುಗಳೋ ಬೌದ್ಧಿಕವಾಗಿಯೂ ಉನ್ನತವ್ಯಕ್ತಿಗಳಾಗಿದ್ದಾರೆ. ತಮ್ಮ ಔನ್ನತ್ಯವನ್ನು ಪ್ರದರ್ಶಿಸುವ ಇಚ್ಛೆಯಿಲ್ಲದೆಯೋ ತಮ್ಮ ಭಕ್ತವೃಂದದ ಪುಣ್ಯಪಾಪಗಳ ಹೊಣೆಗಾರಿಕೆಯನ್ನು ತಾವೇ ಹೊತ್ತುಕೊಂಡಿರುವುದಕ್ಕಾಗಿಯೋ ಎನ್ನುವಂತೆ ಅವರ ತಲೆ ಯಾವಾಗಲೂ ಬಾಗಿರುತ್ತದೆ. ಅವರ ದೃಷ್ಟಿ ಸದಾ ಅಂತರ್ ಮುಖಿಯಾಗಿರುವಂತೆ ಅವರ ನೇತ್ರಗಳ ರಚನೆಯಿಂದ ಅಭಿವ್ಯಕ್ತವಾಗುತ್ತದೆ. ಅವರನ್ನು ನೋಡಿದಾಗಲೆಲ್ಲಾ

ನೀರಿಂಗೆ ನೈದಿಲೆ ಶೃಂಗಾರ. ಸಮುದ್ರಕ್ಕೆ ತೆರೆಯೇ ಶೃಂಗಾರ :<br>
ನಾರಿಗೆ ಗುಣವೇ ಶೃಂಗಾರ. ಗಗನಕ್ಕೆ ಚಂದ್ರಮನೇ ಶೃಂಗಾರ :<br>
ನಮ್ಮ ಕೂಡಲಸಂಗನ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ.

ಎಂಬ ಬಸವಣ್ಣನವರ ವಚನ ನೆನಪಿಗೆ ಬರುತ್ತದೆ. ಅಷ್ಟೇ ಅಲ್ಲ 'ಕೂಡಲ ಸಂಗನ ಶರಣರ ಕಾಯವೇ ಕೈಲಾಸ'ವೆನ್ನುವ ಮಾತು ಸಹ ಇಂಥ ಹಿರಿಯ ವ್ಯಕ್ತಿಗಳನ್ನು ಕಂಡಾಗ ಹೊರಹೊಮ್ಮಿದಂತೆ ಕಾಣುತ್ತದೆ. ಕನ್ನಡನಾಡಿಗೆ ಹಾಗೂ ಕನ್ನಡ ಸಂಸ್ಕೃತಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ನಾನಾ ಪ್ರಕಾರಗಳಲ್ಲಿ ಅವರಿಂದ ಸಂದಿರುವ ಸಲ್ಲುತ್ತಿರುವ, ಸೇವೆ ಅತ್ಯಮೂಲ್ಯವೆಂಬುದನ್ನು ಕನ್ನಡ ಜನ ಸದಾ ನೆನೆಯಬೇಕಾದುದು ಧರ್ಮ. ಕನ್ನಡ ಜನತೆಯ ಪರವಾಗಿ ಕರ್ನಾಟಕ ವಿಶ್ವವಿದ್ಯಾನಿಲಯ ಅವರಿಗೆ ಡಾಕ್ಟರೇಟ್ ಪದವಿಯನ್ನು ನೀಡುವುದರ ಮೂಲಕ ಸನ್ಮಾನಿಸಿದ್ದು ಸರ್ವೋಚಿತವೆಂದೇ ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಹೃದಯಂ ಸದಯಂ ಯಸ್ಯ ಭಾಷಿತಂ ಸತ್ಯಭೂಷಿತಮ್ ।<br>
ಕಾಯಃ ಪರಹಿತೋ ಪಾಯಃ ಕಲಿಃ ಕುರ್ವೀತ ತಸ್ಯಕಿಮ್ ॥

ಈ ಮಾತು ಸ್ವಾಮೀಜಿಯವರಿಗೆ ಅಕ್ಷರಶಃ ಅನ್ವಯಿಸುತ್ತದೆ. ಅಂಥವರ ಸಂಪರ್ಕದಿಂದ ಪಾಪ ನಶಿಸಿ. ಪುಣ್ಯಲಾಭವಾಗುತ್ತದೆ. ಅವರು ಪ್ರೀತಿಯಿಂದ ಮಾತಾಡಿಸಿದರೆ ಸಾಕು. ಹೃದಯದ ಅಂಧಕಾರವಳಿಯುತ್ತದೆ.

ತಪಾಂಸಿ ಧ್ವಂಸಂತೇ ಪರಿಣಮತಿ ಭೂಯಾನುಪಶಮಃ<br>
ಸಕೃತ್ಸಂವಾದೇಽಪಿ ಪ್ರಥತ ಇಹಚಾಮುತ್ರಚ ಶುಭಂ<br>
ಅಥಪ್ರತ್ಯಾಸಂಗಃ ಕಮಪಿ ಮಹಿಮಾನಂ ವಿತರತಿ<br>
ಪ್ರಸನ್ನಾನಾಂ ವಾಚಃ ಫಲಮಪರಿಮೇಯಂ ಪ್ರಸುವತೇ

–ದೇ. ಜವರೇಗೌಡ

ಮೈಸೂರು<br>
೧೧-೭-೧೯೭೯

(ಮಾಜಿ ಉಪಕುಲಪತಿ ಮೈಸೂರು ವಿ.ವಿ. ಮೈಸೂರು)

# ದೃಷ್ಟಾರ-ಸ್ರಷ್ಟಾರ-ವಕ್ತಾರ

ಸಿದ್ಧಗಂಗಾ ಕ್ಷೇತ್ರದ ಶ್ರೀಶ್ರೀ ಡಾ॥ ಶಿವಕುಮಾರ ಮಹಾಸ್ವಾಮಿಗಳವರು ಕಳೆದ ಮೂರು ದಶಕಗಳಿಂದಲೂ ನನಗೆ ಚಿರಪರಿಚಿತರಾದ ತಪೋಧನರು. ಅವರ ದರ್ಶನಮಾಡಿದಾಗಲ್ಲೆಲ್ಲ ಲೋಕಕಾರುಣ್ಯದಿಂದ ಕೂಡಿದ ವಿಭೂತಿಚೇತನವನ್ನು ದರ್ಶನಮಾಡಿದ ಆನಂದಾನುಭೂತಿ ನನಗುಂಟಾಗುತ್ತದೆ. ನನ್ನ ಹೃದಯದಲ್ಲಿ ಆ ಮೂರ್ತಿ ಸದಾ ನಿತ್ಯನೂತನವಾಗಿ ಕಾಣುತ್ತದೆ. ದಿನದಿನವೂ ಸಹಸ್ರ ಸಹಸ್ರ ಸಂಖ್ಯೆಯ ಜೀವರುಗಳಿಗೆ ಪ್ರಸಾದದಾನ, ವಿದ್ಯಾದಾನ, ಜ್ಞಾನದಾನ ಹೀಗೆ ತ್ರಿವಿಧದಾನದಲ್ಲಿ ಅವರು ಜೀವಿತವನ್ನೆಲ್ಲ ಸವೆಸಿದವರು. ಅಂತೆಯೇ ಅವರ ಜೀವಿತಕ್ಕೊಂದು ಮಹಾಮೌಲ್ಯವುಂಟಾಗಿದೆ : ಅವರ ಸತ್ಕ್ರಿಯಾ

ಚರಣೀಯ ಅವರ ಜೀವಿತಕ್ಕೆ ಪರುಷಶಕ್ತಿಯನ್ನು ತಂದಿತ್ತಿರುವುದರ ಗುಟ್ಟೆಂದು ನನ್ನ ಭಾವನೆ. ಸದಾ ಒಂದಿಲ್ಲೊಂದು ಕಾಯಕದಲ್ಲಿ ನಿರತರಾಗಿರುವ ಶ್ರೀಗಳವರು ಲೋಕಜೀವನಕ್ಕೊಂದು ವರ್ತನೋಪದೇಶದ ಜೀವಂತ ನಿದರ್ಶನರಾಗಿ ಜನಸಾಮಾನ್ಯರಲ್ಲಿ ಕರ್ತವ್ಯಪ್ರಜ್ಞೆಯನ್ನು ಬಡಿದೆಬ್ಬಿಸಿ, ಜಾಗೃತಗೊಳಿಸುವ ಮಂತ್ರಶಕ್ತಿಯೂ ಆಗಿದ್ದಾರೆ.

ಅವರು ಪ್ರಥಮತಃ ದೃಷ್ಟಾರರು ; ಅನಂತರ ಸ್ರಷ್ಟಾರರು ; ಕೊನೆಯದಾಗಿ ವಕ್ತಾರರು. ಈ ಮೂರು ಶಕ್ತಿಗಳು ಅವರ ಜೀವಿತವನ್ನೆಲ್ಲ ವ್ಯಾಪಿಸಿನಿಂತು ಮುಪ್ಪುರಿಗೊಂಡು ಅವರಿಗೆ ಮಹಾತೇಜಸ್ಸನ್ನು ತಂದಿತ್ತಿರುವ ಆತ್ಮಧರ್ಮಗಳು. ಸಮಯನಿಷ್ಠೆಯಲ್ಲಿ ನಿಷ್ಠಾಪಟ್ಟಿದಿಂದ ವ್ಯವಹರಿಸುತ್ತಿರುವ ಅವರು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ವ್ಯಾಖ್ಯೆಯೆನಿಸಿದ್ದಾರೆ. ಲಿಂಗಪೂಜೆ. ಜಂಗಮದಾಸೋಹಗಳು ಅವರ ಅಂತರಂಗ ಬಹಿರಂಗಗಳನ್ನು ವ್ಯಾಪಿಸಿ ನಿಂತಿವೆ. ಇನ್ನಿತರ ದರ್ಶನಗಳ, ಸಮಯಗಳ ಬಗೆಗೆ ಅವರಿಗೆ ಅಪಾರಗೌರವ. 'ದೇವನೊಬ್ಬನೇ ನಾಮ ಹಲವು'. ಎಂಬ ನುಡಿಯ ಅರ್ಥವನ್ನು ಯಥಾವತ್ತಾಗಿ ಶ್ರೀಗಳವರು ಅರಿತು ಆಚರಿಸುವ ಲೌಕಿಕ ಪ್ರಜ್ಞೆಯುಳ್ಳವರು. ಆದುದರಿಂದ ಶ್ರೀಗಳವರನ್ನು ಎಲ್ಲ ಸಮಯದವರೂ ಅಪಾರ ಗೌರವ ಭಾವದಿಂದ ಕಾಣುತ್ತಾರೆ.

ಶ್ರೀಗಳವರು ಈ ನಾಡಿಗೆ, ಈ ಸಮಾಜಕ್ಕೆ, ಈ ಪರಿಸರಕ್ಕೆ ಅಗತ್ಯವಾದ ವ್ಯಕ್ತಿಗಳನ್ನು ರೂಪಿಸುವ ರುವಾರಿಗಳೆನಿಸಿದ್ದಾರೆ. ತಮ್ಮ ಕರ್ಮಕ್ಷೇತ್ರವಾದ ಸಿದ್ಧಗಂಗೆಯ ಕಮ್ಮಟದಿಂದ ಅವರು ಚಲಾವಣೆಗೆ ಬಿಟ್ಟುಕೊಟ್ಟ ಎಲ್ಲ ಬಗೆಯ ಲೋಹಗಳ ನಾಣ್ಯಗಳ ಮೊತ್ತ ಅಧಿಕ ಸಂಖ್ಯೆಯದು. ಲೋಕ ಜೀವನವ್ಯವಹಾರದಲ್ಲಿ ಆ ನಾಣ್ಯಗಳು ಶ್ರೀಮಂತಿಕೆಯನ್ನುಂಟುಮಾಡಿವೆ. ಈ ದೃಷ್ಟಿಯಿಂದ ಶ್ರೀಗಳವರು ಸ್ರಷ್ಟಾರರು. ಶ್ರೀಗಳವರ ಸತ್ಕ್ರಿಯೆ, ಸದಾಚಾರ, ದಾಸೋಹಂಭಾವಗಳು ಅವರ ಮಾತುಗಳಿಗೆ ಮಹಾಶಕ್ತಿಯನ್ನು ತಂದಿತ್ತಿವೆ. ಕನ್ನಡನಾಡಿನ ಮೂಲೆ ಮೂಲೆಗಳನ್ನು ಸಂಚರಿಸಿ ವಿವಿಧ ಸಂಘ, ಸಂಸ್ಥೆ, ಸಭೆ, ಸಮ್ಮೇಲನಗಳಲ್ಲಿ ಭಾಗವಹಿಸಿ, ತಮ್ಮ ಪ್ರಸನ್ನಗಂಭೀರಮಧುರವಾಣಿಯಿಂದ ಅಸಂಖ್ಯಾತ ಆಬಾಲವೃದ್ಧರನ್ನು ತಣಿಸಿದ್ದಾರೆ. ಉಪನ್ಯಾಸಕ್ಕೆ ಶ್ರೀಗಳು ನಿಂತರೆ ವಾಗ್ದೇವಿ ಅವರ ನಾಲಗೆಯಲ್ಲಿ ನರ್ತಿಸುತ್ತಿರುವ ಅನುಭವ ಸಭಿಕರಿಗುಂಟಾಗುತ್ತದೆ. ಸಭೆಯಲ್ಲಿ ಉಪಸ್ಥಿತರಿದ್ದಾಗ ಉಳಿದ ಉಪನ್ಯಾಸಕರು ಮಾತನಾಡುವ ಉಪನ್ಯಾಸಗಳನ್ನು ಅರ್ಧನಿಮೀಲಿತ ನೇತ್ರರಾಗಿ ಕುಳಿತು ಕೇಳಿ ತಮ್ಮ ಉಪದೇಶ ಭಾಷಣದಲ್ಲಿ ಉಪನ್ಯಾಸಕರ ಉಪನ್ಯಾಸಗಳ ಸಾರವನ್ನೆಲ್ಲ ಸಭೆಯ ಗಮನಕ್ಕೆ ಸುಸೂತ್ರವಾಗಿ ತರುವ ಆ ವಿಶಿಷ್ಟ ವಕ್ತಾರಕಲೆ ಅವರೊಬ್ಬರಿಗೇ ಸಿದ್ಧಿಸಿದಂತೆ ತೋರುತ್ತದೆ.

ಅವರ ಪ್ರಾಂಜಲವಾದ ಅಯಸ್ಕಾಂತಸದೃಶ ವ್ಯಕ್ತಿತ್ವದಿಂದ ಆಕರ್ಷಿತರಾದ ಸಹಸ್ರ ಸಹಸ್ರ ಸಂಖ್ಯೆಯ ಜನರಲ್ಲಿ ನಾನೂ ಒಬ್ಬನೆಂದು ತಿಳಿಸಲು ಅತ್ಯಂತ ಹರ್ಷವಾಗುತ್ತದೆ. ಅವರ ಲೋಕಕಲ್ಯಾಣಕಾರಕವಾದ ವಿರಕ್ತಜೀವನದ ಐವತ್ತು ವರ್ಷಗಳ ಸಿದ್ಧಿಸಾಧನೆಗಳ ದಿವ್ಯ ನೆನಪಿಗಾಗಿ ನಾವೆಲ್ಲರೂ ಸೇರಿ 'ಸಿದ್ಧಗಂಗಾಶ್ರೀ' ಎಂಬ ಹೆಸರಿನ ಸಂಭಾವನಾಗ್ರಂಥವನ್ನು ಪ್ರಕಟಿಸುವ ಹೆಬ್ಬಯಕೆಯುಳ್ಳವರಾಗಿದ್ದೇವೆ. ನಮ್ಮ ಈ ಪ್ರಯತ್ನ ಅವರ ಮಹಾಮಾನವತ್ವದ ಮಟ್ಟಕ್ಕೆ ಏರುವುದೋ ಇಲ್ಲವೋ ಆ ಮಾತು ಪ್ರತ್ಯೇಕ ; ನಮ್ಮ ಶಕ್ತಿ ಮೀರಿ ಆ ಗ್ರಂಥವನ್ನು ಪ್ರಕಟಿಸುವ ಪ್ರಯತ್ನವನ್ನಂತೂ ಮಾಡಿದ್ದೇವೆ.

೧೫-೧೧-೭೯.
ಬೆಂಗಳೂರು

**ಹಂಪನಾ**
ಅಧ್ಯಕ್ಷ ಕನ್ನಡಸಾಹಿತ್ಯ ಪರಿಷತ್ತು

## ಸಮನ್ವಯಯೋಗಿ

**(ಡಾ॥ ಶ್ರೀಶ್ರೀ ಶಿವಕುಮಾರಸ್ವಾಮಿಜಿ)**

'ಅಯ್ಯಾ,ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ-ಅಯ್ಯಾ. ನಿಮ್ಮ ಶರಣರು ಇದ್ದಪ್ಪುರವೆ ಕೈಲಾಸವಯ್ಯಾ-ಅಯ್ಯಾ,ನಿಮ್ಮ ಶರಣರು ನಿಂದುದೆ ನಿಜನಿವಾಸವಯ್ಯಾ-ಚನ್ನಮಲ್ಲಿಕಾರ್ಜುನಯ್ಯಾ,ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತಿ ಕ್ಷೇತ್ರವಾಗಿ ಆನುಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು...............'

ನಮ್ಮ ಭಾರತದಲ್ಲಿ ಯತಿಗಳು, ಸನ್ಯಾಸಿಗಳು, ಮಠಾಧೀಶರು, ಗುರುಗಳಿಗೇನೂ ಕೊರತೆ ಇಲ್ಲ: ಯಾಕೆಂದರೆ ಇಲ್ಲಿರುವ ಕಾವಿಯನ್ನುಟ್ಟ ಗುರುಗಳ ಸಂಖ್ಯೆ ಅರವತ್ತೆಂಟು ಲಕ್ಷ. ಆದರೆ ಇವರಲ್ಲಿ ಸಾಚಾ ಎಷ್ಟು ? ಖೋಟಾ ಎಷ್ಟು ? ಸಚ್ಚಾರಿತ್ರರೆಷ್ಟು ದುಶ್ಚಾರಿತ್ರರೆಷ್ಟು ? ಎಂಬುದು ಮಾತ್ರ ಪ್ರಶ್ನಾರ್ಥಕವೇ. ಒಮ್ಮೊಮ್ಮೆ ಒಬ್ಬ ದುಶ್ಚಾರಿತ್ರನನ್ನು ಹುಡುಕಬೇಕೆಂದು ಹೊರಟರೆ ಅವನ ಹಿಂದೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ದುಶ್ಚಾರಿತ್ರರು. ಕಪಟಿಗಳು. ಮೋಸಗಾರರು ಬಂದು ನಿಲ್ಲುತ್ತಾರೆ. ಬಹುಶಃ ಇಂತಹವರನ್ನು ಕಂಡೇ ವಚನಕಾರರು ಲಾಂಛನಕ್ಕೆ ಸರಿಯಾದ ನಡೆನುಡಿ ಇಲ್ಲದೊಡೆ ಛೀ! ಥೂ!! ಎಂಬೆನಯ್ಯಾ!!! ಎಂದು ಉದ್ಗರಿಸಿರಬೇಕು. ಲೋಕದಲ್ಲಿ ಸಜ್ಜನರು, ಧರ್ಮನಿಷ್ಠರು, ತಪೋಧನರು, ಲೋಕಸಂಗ್ರಾಹಕರು ಮಾತ್ರ ದೊರಕು

ವುದು ತೀರ ದುರ್ಲಭ. ಇಂತಹ ಮಹದ್ವ್ಯಕ್ತಿಗಳಲ್ಲಿ ಡಾ॥ ಶ್ರೀಶ್ರೀ ಶಿವಕುಮಾರ ಸ್ವಾಮಿಗಳವರು ಅಗ್ರಗಣ್ಯರು. ಇಡಿ ರಾಷ್ಟ್ರದಲ್ಲಿ ಇಂತಹ ಜ್ಞಾನನಿಷ್ಠರು, ತಪೋಧನರು, ಕರ್ಮಕುಶಲಿಗಳು, ತ್ಯಾಗಜೀವಿಗಳು ಕೈಬೆರಳಿನ ಎಣಿಕೆಗೆ ಸಿಕ್ಕುವಷ್ಟು ದೊರಕುವುದೂ ದುರ್ಲಭವೆಂದರೆ ಇದರಲ್ಲಿ ಅಚ್ಚರಿಯೇನಿಲ್ಲ.

ತಮ್ಮ ವೈಯುಕ್ತಿಕ ಜೀವನವನ್ನು ಅಮರಗೊಳಿಸಿ, ಶ್ರೀಶ್ರೀ ಶಿವಕುಮಾರಸ್ವಾಮಿಗಳವರು ಶ್ರೇಯೋವಂತರೂ, ಪುಣ್ಯಜೀವಿಗಳೂ ಆಗಿರುವರಲ್ಲದೆ ಲೋಕದ ಸಮಷ್ಟಿಜೀವನಕ್ಕೂ ದಾರಿದೀಪಿಗೆಯಾಗಿ ನಿಂತಿದ್ದಾರೆ. ಅವರು ಲೋಕ ಸಂಗ್ರಹಿಗಳು. ಅಜ್ಞಾನಿಗಳು ಫಲಾಪೇಕ್ಷೆಯಿಂದ ಕರ್ಮವನ್ನಾಚರಿಸಿದರೆ ಜ್ಞಾನಿಗಳು ಫಲಾಸಕ್ತಿ ಇಲ್ಲದೆ, ನಿರಪೇಕ್ಷ ಬುದ್ಧಿಯಿಂದ ಕರ್ಮನಿರತರಾಗುತ್ತಾರೆ: ಇದರ ಗುರಿ, ಲೋಕ ಸಂಗ್ರಹ. ಲೋಕ ಸಂಗ್ರಹವೆಂದರೆ ಪರಹಿತವನ್ನೇ ಸ್ವಹಿತವೆಂದು ಭಾವಿಸುವ ಮೇಲ್ಮಟ್ಟದ ಪ್ರಜ್ಞೆ. ಇದೇ ಸ್ಥಿತ ಪ್ರಜ್ಞತ್ವದ ಲಕ್ಷಣ. ಇಂತಹ ವ್ಯಕ್ತಿಜೀವನದಲ್ಲಿ, ವೈಯುಕ್ತಿಕ ಬಾಳಿನಲ್ಲಿ ಸುಖದುಃಖಗಳೆರಡೂ ಕಾಣದಿದ್ದರೂ ಇದರ ಪರಿಣಾಮ ಮಾತ್ರ ಲೋಕಕ್ಕೆ ಕ್ಷೇಮ......ಮತ್ತಿದೇ ಲೋಕಸಂಗ್ರಹ. ಮಾನವನ ಸ್ವಾರ್ಥ ಜೀವನದಿಂದ ಲೋಕ ಸಂಕರವಾದರೆ, ನಿಷ್ಕಾಮ ಕರ್ಮದಿಂದ, ನಿಸ್ವಾರ್ಥ ಸೇವೆಯಿಂದ ಲೋಕಸಂಗ್ರವಾಗುತ್ತದೆ. ಇದನ್ನೇ ಕೃಷ್ಣ ಗೀತೆಯಲ್ಲಿ ಹೇಳಿದುದು.

ಭರ್ತೃಹರಿಯು–'ಏತೇ ಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಾನ್ ಪರಿತ್ಯಜ್ಯಮೇ' ಎಂದರೆ ಸ್ವಹಿತವನ್ನು ಸಂಪೂರ್ಣವಾಗಿ ತ್ಯಜಿಸಿ, ಕೇವಲ ಪರಹಿತಕ್ಕಾಗಿಯೇ ದುಡಿಯುವವರು ಯಾರೋ ಅವರೇ ಸತ್ಪುರುಷರು; ಸಜ್ಜನರು. ಇಂತಹವರ ಕಾರ್ಯವೆಲ್ಲ ಲೋಕಸಂಗ್ರಹವೇ. ಲೋಕದ ಗುಡಿಯಲ್ಲಿ ಚೈತನ್ಯದ ದೇವಮೂರ್ತಿಯನ್ನು ಸ್ಥಾಪಿಸಿ ಮೆರೆಸಲು ಬಂದವರು ಶ್ರೀಶ್ರೀ ಶಿವಕುಮಾರಸ್ವಾಮಿಜಿಯವರು. ಆ ಸಮಾಜ. ಜನತೆ ಇವರಿಗೆ ಎಷ್ಟು ಕೃತಜ್ಞರಾಗಿದ್ದರೂ ಅದು ಅಲ್ಪವೇ. ಆದರೆ ಸ್ವಾಮಿಜಿಯವರು ಅವರಿಂದೇನನ್ನೂ ಬಯಸುವುದಿಲ್ಲ.

ಭಾರತದಲ್ಲಿ ವೀರಶೈವ ಮಠಾಧೀಶ್ವರರು ನಾಡಿನ ಜನತೆಗೆ ಸಲ್ಲಿಸಿರುವ ಸೇವೆ ಅದು ಅಪಾರ. ಅದರಲ್ಲೂ ಶ್ರೀಶ್ರೀ ಶಿವಕುಮಾರಸ್ವಾಮಿಗಳವರು ಅತ್ಯುನ್ನತ ಸೇವೆಯನ್ನು ಸಲ್ಲಿಸಿ ಅಗ್ರಸ್ಥಾನದಲ್ಲಿ ನಿಂತಿದ್ದಾರೆ. ಅವರು ತಮ್ಮ ಜ್ಞಾನ ದಾಸೋಹದಿಂದ ಲಕ್ಷೋಪಲಕ್ಷ ಜ್ಞಾನಪಿಪಾಸುಗಳ ಹೃದಯವನ್ನು ತಣಿಸಿದ್ದಾರೆ; ತಮ್ಮ ಉಜ್ವಲ ಪ್ರವಚನದಿಂದ ಅಗಣಿತ ಜನ ಸಮೂಹವನ್ನು ಭಕ್ತಿಮಾರ್ಗದತ್ತ ಸೆಳೆದು ಅವರ ಜೀವನವನ್ನು ಪಾವನಗೊಳಿಸಿದ್ದಾರೆ. ಮಹಾತಪೋಧನರಾದ ಅವರು ಯೋಗಿಗಳಲ್ಲೆಲ್ಲ ಅಗ್ರಗಣ್ಯರೆನಿಸಿದ್ದಾರೆ. ತಮ್ಮ ಕರ್ಮಕುಶಲತೆಯಿಂದ ನಿಷ್ಕಾಮಕರ್ಮವನ್ನೆಸಗಿ, ಜನಕೋಟಿಯನ್ನು ಋಣಿಗಳನ್ನಾಗಿಸಿದ್ದಾರೆ. ಹೀಗಿರುವುದರಿಂದಲೇ ಅವರನ್ನು ಕೇವಲ ಜ್ಞಾನಯೋಗಿಗಳೆಂದಾಗಲಿ, ಭಕ್ತಿಯೋಗಿಗಳೆಂದಾಗಲೀ, ಕರ್ಮಯೋಗಿಗಳೆಂದಾಗಲಿ ಅಥವಾ ರಾಜಯೋಗಿಗಳೆಂದಾಗಲಿ ಹೆಸರಿಸಿದರೆ ಅದು ತೀರ ತಪ್ಪಾದೀತು; ಅವರು ನಿಜವಾಗಿಯೂ ಸಮನ್ವಯ ಯೋಗಿಗಳು. ಇಂತಹ ಮಹಾಮಹಿಮರಿರುವ ಕ್ಷೇತ್ರವು ಪುಣ್ಯಕ್ಷೇತ್ರವಲ್ಲದೆ ಮತ್ತೇನು ? ಸಿದ್ಧಗಂಗಾಕ್ಷೇತ್ರವು ನಿಜವಾಗಿಯೂ ಪುಣ್ಯತೀರ್ಥವು. ಶ್ರೀಶ್ರೀ ಶಿವಕುಮಾರ ಸ್ವಾಮಿಗಳವರು ಮಹಾಮಹಿಮರು.

'ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ, ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ, ಜ್ಞಾನದಲ್ಲಿ ಪರಮಾನಂದ ನೆಲೆಗೊಂಡ ಬಳಿಕ ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲ ಕಾಣಿರೋ' ಎಂದು ಅನುಭಾವಿಗಳು ಹಾಡಿದುದು ಇಂತಹವರನ್ನು ಕುರಿತಾಗಿಯೇ ಅಲ್ಲದೆ ಮತ್ತೇನು ?

'ಚಿರಮಭಿವರ್ಧತಾಂ ಸಿದ್ಧಗಂಗಾ ಶ್ರೀ' ಎಂದು ಹೃದಯ ತುಂಬಿ ಹಾರೈಸುತ್ತಾ ಈ ಲೇಖನವನ್ನು ಮಂಗಳಗೊಳಿಸುತ್ತೇನೆ.

(ಬಿ. ರಾಘವೇಂದ್ರ)
ಶ್ರೀಶ್ರೀ ರಾಘವೇಂದ್ರಸ್ವಾಮಿಗಳು
ಮಲ್ಲಾಡಿಹಳ್ಳಿ ಅನಾಥ ಸೇವಾಶ್ರಮ

ಮಲ್ಲಾಡಿಹಳ್ಳಿ
೨–೩–೧೯೭೫

## ಆಧುನಿಕ ಕುಲಪತಿ*

ಬಿರುಗಾಳಿ ಬೀಸಿ ಬೆಟ್ಟದೆರೆಗಳು ಸಮುದ್ರದಲ್ಲಿ ಅಲ್ಲೋಲಕಲ್ಲೋಲವನ್ನು ಉಂಟುಮಾಡಿರುವಾಗ, ತಿಮಿತಿಮಿಂಗಿಲಗಳು ಪ್ರಬಲವಾಗಿರುವಾಗ ದಾರಿಗಾಣದೆ ಯಾವ ಬಂಡೆಗೆ ಅಪ್ಪಳಿಸಿ ಎಲ್ಲಿ ಮುಳುಗುವೆನೋ ಎಂದು ಭಯಗ್ರಸ್ತವಾಗಿ ಹೊಯ್ದಾಡುತ್ತಿರುವ ಹಡಗಕ್ಕೆ ದೂರದಲ್ಲಿ ಎತ್ತರದಲ್ಲಿ ಒಂದು ದೀಪಿಗೆಕಂಬ ಕಾಣುತ್ತಿದೆ. ಸರಿಯಾದ ದಿಕ್ಕನ್ನು ತೋರಿಸುತ್ತದೆ. ಇಂದಿನ ಕೋಲಾಹಲಮಯವಾದ ಜೀವನದಲ್ಲಿ ಅಂಥ ದೀಪಿಗೆಕಂಬದಂತೆ ಇರುವ ಅಪರೂಪದ ಮಹಾವ್ಯಕ್ತಿಗಳಲ್ಲಿ ಪರಮಪೂಜ್ಯರಾದ

* ಸಮರ್ಪಣೆ ಗ್ರಂಥದಿಂದ

ಶ್ರೀ ಶಿವಕುಮಾರಸ್ವಾಮಿಗಳು ಒಬ್ಬರು. ನನಗೆ ಅವರ ನಿಕಟಪರಿಚಯವಾದದ್ದು ಒಂದು ದೊಡ್ಡ ಭಾಗ್ಯವೆಂದು ನಾನು ತಿಳಿದಿದ್ದೇನೆ. ಸಿದ್ಧಗಂಗೆಯಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಆರೇಳು ವರ್ಷಗಳ ಹಿಂದೆ ಅಧ್ಯಕ್ಷನಾಗಿ ನಾನು ಹೋದಾಗ, ಪೂಜ್ಯ ಶ್ರೀಗಳ ಪರಿಚಯವಾಯಿತು ಮಾತ್ರವಲ್ಲ, ಮೂರು ನಾಲ್ಕು ದಿನಗಳ ಅವಧಿಯಲ್ಲಿ ಅವರ ಬಗ್ಗೆ ನನ್ನ ಭಕ್ತಿ ಗೌರವಗಳು ಹೆಚ್ಚುವಂಥ ಸನ್ನಿವೇಶಗಳು ನಡೆದುವು. 'ವ್ಯತಿಷಜತಿ ಪದಾರ್ಥಾನ್ ಆಂತರಃ ಕೋಪಿ ಹೇತುಃ'ಎಂದು ಭವಭೂತಿ ಹೇಳಿರುವಂತೆ ಹೃದಯ-ಹೃದಯಗಳ ಮಿಳನವು ಸಂಭವಿಸಿತು. ಸಮ್ಮೇಳನದ ಏರ್ಪಾಟುಗಳಲ್ಲಿ ಶ್ರೀಗಳು ತೋರಿಸಿದ ತೀವ್ರ ಆಸಕ್ತಿ, ಸ್ವಂತವಾಗಿ ನಿಂತುಕೊಂಡು ಎಲ್ಲ ಜನರ ಊಟ ಉಪಚಾರಗಳ ಬಗ್ಗೆ ವಹಿಸಿದ ವಿಶೇಷ ಆಸ್ಥೆ ಇವು ನನ್ನನ್ನು ಬೆರಗುಗೊಳಿಸಿದುವು. ನನ್ನನ್ನು ಮತ್ತು ನನ್ನ ಕುಟುಂಬವರ್ಗದವರನ್ನು ಅವರು ಮಮತೆಯ ಮಕ್ಕಳಂತೆ ಅತ್ಯಂತ ಪ್ರೀತಿಯಿಂದ ನೋಡಿಕೊಂಡರು. ಸಮ್ಮೇಳನದ ಬೇರೆ ಬೇರೆ ಸಂದರ್ಭಗಳಲ್ಲಿ ಅವರು ಮಾಡಿದ ಭಾಷಣಗಳಲ್ಲಿ ಉನ್ನತವಾದ ಗಂಭೀರವಾದ ನಿಲುಮೆ ಎದ್ದು ಕಾಣುತ್ತಿತ್ತು. ಕೊನೆಯ ದಿನದ ಸಮಾರೋಪಪೂರ್ವಕವಾದ ಅವರ ಭಾಷಣವಂತೂ ರೋಮಾಂಚಕಾರಿಯಾಯಿತು. ಅದರಲ್ಲಿ ಅವರ ಹೃದಯವೈಶಾಲ್ಯ ಮತ್ತು ಉನ್ನತಸಂಸ್ಕೃತಿ ಪ್ರಕಟಗೊಂಡುವು. ಈ ಭಾಷಣದಲ್ಲಿ ಅವರು ಹೇಳಿದ ಮಾತು ಅಚ್ಚಳಿಯದಂತೆ ನನ್ನ ನೆನಪಿನಲ್ಲಿ ಉಳಿದಿದೆ. ಅವರೆಂದರು : 'ಸಮ್ಮೇಳನವೆಲ್ಲ ಚೆನ್ನಾಗಿ ನಡೆಯಿತೆಂದು ನನಗೆ ತುಂಬ ಸಂತೋಷವಾಗಿದೆ. ಆದರೆ ಒಂದು ವಿಷಯದಲ್ಲಿ ಮಾತ್ರ ನನಗೆ ತೀವ್ರ ದುಃಖವಾಗಿದೆ'ಎಂದು ಪ್ರಸ್ತಾಪ ಮಾಡಿದೊಡನೆ ಅದೇನಿರಬಹುದು ಎಂದು ನಾವೆಲ್ಲ ಸಚಿಂತರಾದೆವು. ಶ್ರೀಗಳು ತಮ್ಮ ಮಾತನ್ನು ಮುಂದುವರಿಸಿ ಹೇಳಿದರು : 'ಈ ಪುಣ್ಯಕ್ಷೇತ್ರದಲ್ಲಿ ಲಕ್ಷಾವಧಿ ಜನ ಭಕ್ತರು ಕಾಲಕಾಲಕ್ಕೆ ಬಂದು ದಾಸೋಹವನ್ನು ಪಡೆದಿದ್ದಾರೆ. ಇಲ್ಲಿಯ ಅಡಿಗೆಮನೆಯ ಅಗ್ನಿ ಎಂದಿಗೂ ಆರಿಲ್ಲ; ಮತ್ತು ಬಂದವರಿಗೆ ಅನ್ನದಾನವು ಸಂತತವಾಗಿ ನಡೆದಿದೆ. ಈ ಮೂರೂ ದಿನ ಮಾತ್ರ ಅನ್ನದ ವ್ಯಾಪಾರವಾಯಿತು ಎಂಬುದೇ ನನ್ನ ದುಃಖದ ಕಾರಣ. ಸಮ್ಮೇಳನಕ್ಕೆ ಬಂದಿರುವ ಪ್ರತಿನಿಧಿಗಳಿಂದ ಊಟಕ್ಕಾಗಿ ಹಣವನ್ನು ಪಡೆಯಲಾಗಿದೆ. ಅದು ಬೇಡ ಎಂದರೂ ಅನಿವಾರ್ಯವಾಗಿಬಿಟ್ಟಿತು' ಎಂದು ಶ್ರೀಗಳು ಅಪ್ಪಣೆ ಕೊಡಿಸಿದರು. ಸಭೆ ಭಾವಪರವಶವಾಯಿತು, ಸಭೆಗೆಲ್ಲಾ ಕಾಣುವಂತೆ ನನ್ನ ಕಣ್ಣಿಂದ ಪಳಪಳ ಕಂಬನಿಗಳು ಉದುರಿದುವು.

ತರುವಾಯ ಬೇರೆ ಸಂದರ್ಭಗಳಲ್ಲಿ ನಾನು ಸಿದ್ಧಗಂಗಾ ಮಠಕ್ಕೆ ಹೋಗಿ ಬಂದಿದ್ದೇನೆ. ಪೂಜ್ಯ ಶ್ರೀಗಳ ಮಹಾಕಾರ್ಯವನ್ನು ಹತ್ತಿರದಿಂದ ನೋಡಿದ್ದೇನೆ. ಸಾವಿರಾರು ಬಡವಿದ್ಯಾರ್ಥಿಗಳನ್ನು ತಮ್ಮ ಗುರುಕುಲದಲ್ಲಿ ಇಟ್ಟುಕೊಂಡು ಅವರ ಊಟ ವಸತಿಗಳ ಏರ್ಪಾಟುಮಾಡಿ ಅವರಿಗೆ ಶ್ರೀಗಳು ಅನ್ನದಾನ-ವಿದ್ಯಾದಾನಗಳನ್ನು ಮಾಡುತ್ತಾರೆ. ಅಲ್ಲದೆ ಅವರಲ್ಲಿ ಭಾರತೀಯ ಸಂಸ್ಕೃತಿಯ ಸದ್ಗುಣಗಳು ನೆಲೆಸಲೆಂದು ಪ್ರಾರ್ಥನೆ, ಗ್ರಂಥಪಠನ ಮುಂತಾದ ದೈನಂದಿನ ಕಾರ್ಯಕ್ರಮಗಳಿಂದ ವಿವೇಕದಾನವನ್ನೂ ಮಾಡುತ್ತಾರೆ. ಇಷ್ಟೆಲ್ಲ ಮಾಡಲು ಅವರಿಗೆ ಹಣವೆಲ್ಲಿಂದ ಒದಗುತ್ತದೆ ಎಂದು ನಾವು ಯೋಚನೆಗೆ ಒಳಗಾಗಬಹುದೇ ಹೊರತು ಅವರಿಗೆ ಅದರ ಯೋಚನೆಯೇ ಇಲ್ಲ. ಜನಾನುರಾಗ, ಈಶ್ವರಕೃಪೆ ಎಂಬುದೇ ಅವರಿಗೆ ದೊರೆತಿರುವ ಅಕ್ಷಯಪಾತ್ರೆ. ಶಾಲೆ ಕಾಲೇಜುಗಳನ್ನು ಸ್ಥಾಪಿಸಿ ಅವನ್ನೂ ಅವರು ಅಚ್ಚುಕಟ್ಟಾಗಿ ನಡೆಸಿಕೊಂಡು ಬರುತ್ತಿದ್ದಾರೆ. 'ಜ್ಞಾನಿನಾ ಆಚರಿತುಂ ಶಕ್ಯಂ ಸಮ್ಯಕ್ ರಾಜ್ಯಾದಿ ಲೌಕಿಕಂ' ಎಂಬ ವಿದ್ಯಾರಣ್ಯ ಯತಿಗಳ ಉಕ್ತಿ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳ ವಿಷಯದಲ್ಲಿ ಸತ್ಯವಾಗಿ ಪರಿಣಮಿಸಿದೆ.

ಹತ್ತುಸಾವಿರ ಮುನಿಗಳಿಗೆ ಅನ್ನದಾನಾದಿ ಪೋಷಣೆಯಿಂದ ಯಾವ ವಿಪ್ರರ್ಷಿ ಅಧ್ಯಾಪನ ಮಾಡುತ್ತಾನೋ ಅವನನ್ನು ಕುಲಪತಿಯೆಂದು ಕರೆಯುತ್ತಾರೆ ಎಂದು ನಮ್ಮ ನಾಡಿನ ಪ್ರಾಚೀನ ಪರಂಪರೆಯಲ್ಲಿ ಹೇಳಿದೆ. ಕಣ್ವನು ಇಂಥ ಒಬ್ಬ ಕುಲಪತಿಯಾಗಿದ್ದನಂತೆ. ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳು ಆಧುನಿಕ ಕುಲಪತಿಗಳಾಗಿರುವರೆಂದು ನಾವು ಹೆಮ್ಮೆಯಿಂದ ಹೇಳಬಹುದು. ಇಂದು ಅವರ ಆಶ್ರಯದಲ್ಲಿ ಓದುತ್ತಿರುವ ಮಕ್ಕಳೆಲ್ಲ ಮುನಿಗಳಲ್ಲ ನಿಜ. ಮುಂದೆ ಮುನಿಗಳಾಗದೆಯೂ ಹೋಗಬಹುದು. ಆದರೆ ಅವರೆಲ್ಲ ಖಂಡಿತವಾಗಿಯೂ ಒಳ್ಳೆಯ ಸಂಸ್ಕಾರವನ್ನು ಪಡೆದ ವಿದ್ಯಾವಂತರೂ ವಿವೇಕಿಗಳೂ ಆಗುವರು. ಈ ಅರ್ಥದಲ್ಲಿ ಅವರು ಆಧುನಿಕ ಕುಲಪತಿಯ ನೇತೃತ್ವದಲ್ಲಿ ಆಧುನಿಕ ಜೀವನಕ್ಕೆ ಅಣಿಯಾದ ಆಧುನಿಕ ಮುನಿಗಳೇ ಆಗುವರು. ಮುನಿವೇಷ ಇಲ್ಲವೆ ಮುನಿಚರ್ಯೆಗಿಂತ ಮುನಿಮನೋಧರ್ಮ ಮುಖ್ಯವಾದದ್ದು.

ಇಂದಿನ ವಿದ್ಯಾಭ್ಯಾಸ ಪದ್ಧತಿಯ ಬಗ್ಗೆ ಅದರ ಫಲಶ್ರುತಿಯ ಬಗ್ಗೆ ನಮ್ಮ ದೇಶದಲ್ಲಿ ಅದೇಕೆ ಜಾಗತಿಕರಂಗದಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಸ್ವಾತಂತ್ರ್ಯ ಬಂದಮೇಲೆ ಶಿಕ್ಷಣಪ್ರಸಾರವು ಆಗುತ್ತಲಿದೆ. ಆದರೆ ಗುಣಾಭಿವೃದ್ಧಿ ಆಗುತ್ತಿಲ್ಲ, ಚಾರಿತ್ರ್ಯ, ಶೀಲ ಬೆಳೆಯುತ್ತಿಲ್ಲ ಎಂದು ಅನೇಕರು ಗೊಣಗುಟ್ಟುತ್ತಾರೆ. ಚಾರಿತ್ರ್ಯವರ್ಧನೆಗಾಗಿ, ಧಾರ್ಮಿಕ, ನೈತಿಕ ಶಿಕ್ಷಣ ಕೊಡಬೇಕು, ಸಾಮೂಹಿಕ ಪ್ರಾರ್ಥನೆ ಇರಬೇಕು ಎಂದು ಮುಂತಾಗಿ ಹೇಳುತ್ತಾರೆ. ಅಂಥ ಪ್ರಯೋಗಗಳನ್ನು ಮಾಡುತ್ತಾರೆ. ನಿಜವಾಗಿ ಹೇಳಬೇಕಾದರೆ ಚಾರಿತ್ರ್ಯಸಂಪನ್ನರೂ ನಿಷ್ಠಾವಂತರೂ ಆದ ವ್ಯಕ್ತಿಗಳು ಶಿಕ್ಷಕರಾಗುವಂತೆ, ಅವರ ಕಾರ್ಯವನ್ನು

ಸಂಯೋಜಿಸುವ ಮುಖ್ಯಾಧ್ಯಾಪಕರು ಅಷ್ಟೇ ಸುಸಂಸ್ಕೃತರಾಗಿರುವಂತೆ ನಾವು ನೋಡಿಕೊಂಡರೆ ಬಹುಸಂಖ್ಯೆಯ ವಿದ್ಯಾರ್ಥಿಗಳ ಸರ್ವಾಂಗೀಣ ವಿಕಾಸದ ಬಗ್ಗೆ ನಾವು ಯೋಚಿಸಬೇಕಾಗಿಲ್ಲ. ಇತರ ಉಪಾಯಗಳಿಗಿಂತ ಒಳ್ಳೇ ಮೇಲ್ಪಂಕ್ತಿಯೇ ಉತ್ತಮ ಉಪಾಯ. ಇದನ್ನು ಕೂಡ ಹೇಗೆ ಸಾಧಿಸಬೇಕು ಎಂಬುದು ಸಮಸ್ಯೆಯಾಗಿಬಿಟ್ಟಿದೆ. ಆದರೆ ಪೂಜ್ಯ ಶ್ರೀಗಳಂಥ ಕುಲಪತಿಗಳ ಮಾರ್ಗದರ್ಶನವನ್ನು ಪಡೆದರೆ ಈ ಸಮಸ್ಯೆಯನ್ನು ನಾವು ಬಿಡಿಸಬಲ್ಲೆವು. ಅವರು ಕೈಕೊಂಡ ಮಹಾಕಾರ್ಯವು ಹೊಸ ಒಂದು ಪೀಳಿಗೆಯ ನಿರ್ಮಾಣಕ್ಕೆ ಪ್ರೇರಕವಾಗಲಿ ಎಂದು ಭಕ್ತಿ ಗೌರವಪೂರ್ವಕವಾಗಿ ಹಾರೈಸುತ್ತೇನೆ.

ರಂ. ಶ್ರೀ. ಮುಗಳಿ.
ನಿವೃತ್ತ ಕನ್ನಡ ಪ್ರಾಧ್ಯಾಪಕರು, ಬೆಂಗಳೂರು.
ವಿಶ್ವವಿದ್ಯಾಲಯ–ಬೆಂಗಳೂರು

## ಸನಾತನ ಧರ್ಮಪ್ರದೀಪ

**(ಸಿದ್ಧಗಂಗಾ-ಅನ್ವರ್ಥನಾಮ–ಕ್ಷೇತ್ರಶ್ರೀ)**

ಪಾ॥ ಶ್ರೀಶ್ರೀ ಶಿವಕುಮಾರಸ್ವಾಮಿಗಳಿಂದ ಶ್ರೀ ಸಿದ್ಧಗಂಗಾ ಕ್ಷೇತ್ರವು, ಭಕ್ತಿಜ್ಞಾನ ವೈರಾಗ್ಯ ಕಾಯಕಗಳ ದೃಷ್ಟಿಯಿಂದ, ನಿಜವಾಗಿ ಅನ್ವರ್ಥನಾಮವಾಗಿದೆ. ಈ ಜ್ಞಾನಗಂಗೆಯ ಮೂಲ ಚಿಲುಮೆ ಶ್ರೀಶ್ರೀ ಸ್ವಾಮಿಗಳೇ.

ನನ್ನ ಮನಸ್ಸು ಸುಮಾರು ೪೫ ವರುಷಗಳ ಹಿಂದಕ್ಕೆ ಹೋಗುತ್ತದೆ. ಬಹುಶಃ ೧೯೩೦–೩೧ ಇರಬೇಕು. ಆಗ ಬೆಂಗಳೂರಿನಲ್ಲಿ ನಾವು ಕೆಲವು ಗೆಳೆಯರು ವಾರವಾರವೂ ಒಂದೆಡೆ ಸೇರುವ ಒಂದು ವಿನೋದಕೂಟವನ್ನು ಮಾಡಿಕೊಂಡಿದ್ದೆವು. ತಿಂಗಳಿಗೊಂದು ಸಲ, ಯಾವುದಾದರೂ ಒಂದು ಪ್ರೇಕ್ಷಣೀಯ ಸ್ಥಳಕ್ಕೋ ಯಾತ್ರಾಸ್ಥಳಕ್ಕೋ ಹೋಗಿ, ಬೇಸರಿಕೆಯನ್ನು ಕಳೆದುಕೊಂಡು ಬರುವುದು ನಮ್ಮ ಪದ್ಧತಿಯಾಗಿತ್ತು. ಆ ಸಂಘದ ಸದಸ್ಯರು ಯಾರು ಯಾರೆಂಬುದು ಈಗ ನನಗೆ ಚೆನ್ನಾಗಿ ನೆನಪಿಲ್ಲ. ನಾನು ಶ್ರೀ ಪು. ತಿ. ನರಸಿಂಹಾಚಾರ್ಯರು, ದಿವಂಗತ ರಾಮಾರಾಧ್ಯರು, ದಿವಂಗತ ಕೃಷ್ಣಶರ್ಮರು ಇನ್ನೂ ಹತ್ತುಜನ ಇದ್ದೆವು. ಆ ತಿಂಗಳು ಎಲ್ಲಿಗೆ ಹೋಗುವುದೆಂದು ಚರ್ಚೆ ಬಂದಾಗ ಶ್ರೀ ರಾಮರಾಧ್ಯರು 'ಸಿದ್ಧಗಂಗಾ ಕ್ಷೇತ್ರದಲ್ಲಿ ಈಗ ತಾನೇ ಹೊಸ ಸ್ವಾಮಿಗಳು ಪಟ್ಟಾಭಿಷಿಕ್ತರಾಗಿದ್ದಾರೆ. ಸ್ವಾಮಿಗಳು ಯುವಕರು; ಆದರೆ ತುಂಬ ತೇಜಸ್ವಿಗಳು, ಅನೇಕ ವಿಷಯಗಳಲ್ಲಿ ಪರಿಣತರು. ಬಹುಶ್ರುತರು ಅಲ್ಲಿಗೆ ಹೋಗಿಬರೋಣ'ಎಂದು ಹೇಳಿ ನಮ್ಮನ್ನೆಲ್ಲ ಹೊರಡಿಸಿಯೇ ಬಿಟ್ಟರು. ನಾನು, ಪು.ತಿ. ನರಸಿಂಹಾಚಾರ್ಯರು ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರು ಶ್ರೀ ತಿಪ್ಪೇರುದ್ರಯ್ಯನವರು, ಶ್ರೀ ರಾಮಾರಾಧ್ಯರು-ಉಳಿದವರ ಹೆಸರು ನನಗೆ ನೆನಪಿಲ್ಲ–ಹೋಗಿ ಸಿದ್ಧಗಂಗಾ ಮಠದಲ್ಲಿ ಇಳಿದೆವು.

ಆಗ ಸಿದ್ಧಗಂಗಾ ಕ್ಷೇತ್ರದ ಮಠ, ಇನ್ನೂ ಚಿಕ್ಕದಾಗಿತ್ತು. ನಾವು ಹೋದಕೂಡಲೇ ಸ್ವಾಮಿಗಳು ನಮಗೆ ದರ್ಶನವನ್ನು ದಯಪಾಲಿಸಿದರು. ಸ್ವಾಮಿಗಳು ಎಳೆಯ ಹರೆಯದಲ್ಲಿದ್ದರು; ತೇಜಃಪುಂಜವಾದ ಮುಖ, ಲವಲವಿಕೆ, ಕಿಂಚಿತ್‌ವಿನೋದ, ದೃಢವಾದ ನೇರವಾದ ನಿಲುವು, ಸ್ಪಷ್ಟವಾದ ನುಡಿ, ಪಾಂಡಿತ್ಯಪೂರ್ಣಭಾಷಣ ಇಷ್ಟು .ಚಿಕ್ಕವಯಸ್ಸಿನ ಸ್ವಾಮಿಗಳು ಎಂದು ನಮಗೆ ಸ್ವಲ್ಪ ವಿನೋದಸಹ. ನಾವೆಲ್ಲರೂ ಸ್ವಾಮಿಗಳಿಗೆ ಒಂದೊಂದು ಪ್ರಶ್ನೆ ಹಾಕಿದೆವು. ಸ್ವಾಮಿಗಳು ಎಲ್ಲದಕ್ಕೂ ಶಾಂತವಾಗಿ ಸಕಾರಣವಾಗಿ-ದೇವರು ಭಕ್ತಿಗಳ ವಿಷಯ ಬಂದಾಗ ಸ್ವಲ್ಪ ಆವೇಶ ಪೂರಿತರಾಗಿ ಉತ್ತರಿಸಿದರು. 'ಇವರು ನಿಜವಾಗಿ ಒಳ್ಳೆ ಸ್ವಾಮಿಗಳಾಗುತ್ತಾರೆ, ಈ ಕ್ಷೇತ್ರವನ್ನು ಬೆಳಗುತ್ತಾರೆ ಇವರಿಂದ ಈ ಸುತ್ತಲಪ್ರಾಂತ ಅಮೃತಸೇಚನವನ್ನೂ ಜ್ಞಾನಗಂಗೋತ್ರಿಯನ್ನೂ ಪಡೆಯುತ್ತದೆ' ಎಂಬ ನಂಬಿಕೆ ದೃಢವಾಯಿತು.

ಸ್ವಾಮಿಗಳು ತಮ್ಮ ಕರ್ತವ್ಯವನ್ನೂ ಸ್ಥಾನವನ್ನೂ ಗಂಭೀರವಾಗಿ ಪರಿಗಣಿಸಿ ಕಾರ್ಯೋನ್ಮುಖರಾದರು. ತಮ್ಮ ಸ್ವಂತ ಜ್ಞಾನಾರ್ಜನೆ, ತಪಸ್ಸು ಸಾಧನೆಗಳ ಜೊತೆಯಲ್ಲಿ, ಜನೋಪಕಾರಕ್ಕೆ ಅವಶ್ಯಕವಾದ ವಿದ್ಯಾಸಂಸ್ಥೆಗಳನ್ನು ಕಟ್ಟತೊಡಗಿದರು. 'ನಹಿ ಜ್ಞಾನೇನ ಸದೃಶಂ' ಎಂಬ ವಾಕ್ಯವನ್ನು ಪೂರ್ಣವಾಗಿ ಅನುಷ್ಠಾನಕ್ಕೆ ತಂದರು. ಶಿಕ್ಷಣವೇ ಬೆಳಕು ಎಂಬ ನುಡಿಯಂತೆ, ಪ್ರಾಥಮಿಕದಿಂದ ಹಿಡಿದು ಪ್ರೌಢದವರೆಗೆ.ತಾಂತ್ರಿಕ ಶಿಕ್ಷಣವೂ ಸೇರಿದಂತೆ–ಅನೇಕ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದರು. ಅವರಿಗೆ ಯಾವಾಗಲೂ ಹಣದ ತೊಂದರೆ ಆಗಲಿಲ್ಲ. ಅವರ ಸರಸ್ವತಿಗೆ. ಲಕ್ಷ್ಮಿ ಅಡಿಯಾಳಾದಳು. ಶ್ರೀಕ್ಷೇತ್ರ, ಧಾರ್ಮಿಕವಾಗಿ ಮಾತ್ರವೇ ಅಲ್ಲದೆ, ಎಲ್ಲದೃಷ್ಟಿಯಿಂದಲೂ ತುಮಕೂರು ಜಿಲ್ಲೆಗೆ ಮಾತ್ರವೇ ಅಲ್ಲ, ಅಖಿಲ ದೇಶಕ್ಕೂ ಒಂದು ಸ್ಫೂರ್ತಿ ಮತ್ತು ಮಾರ್ಗದರ್ಶನದ ಚಿಲುಮೆಯಾಗಿದೆ.

ಶ್ರೀ ಶ್ರೀಗಳವರು ಕ್ಷೇತ್ರದ ಚಟುವಟಿಕೆಗಳನ್ನು ಸರ್ವತೋಮುಖವಾಗಿ ಅಭಿವೃದ್ಧಿಗೊಳಿಸಿದ್ದಾರೆ. ಈ ಕ್ಷೇತ್ರ, ಸುತ್ತಲ ಪ್ರದೇಶದ ಆಧ್ಯಾತ್ಮ ಅಧಿಭೌತ ಅಧಿದೈವದ ಹೊಣೆಗಾರಿಕೆಯನ್ನೆಲ್ಲ ಹೊತ್ತಿದೆ. ಅನೇಕಜನ ವ್ಯವಹಾರ ಕುಶಲಜ್ಞರಿಗೆ ಸಹ ಕಷ್ಟವಾದ ಈ ದೊಡ್ಡ 'ಸಂಸ್ಥಾನದ' ಎಲ್ಲ ಹೊರೆಯನ್ನು ಶ್ರೀಶ್ರೀ ಶಿವಕುಮಾರಸ್ವಾಮಿಗಳು, ಇಷ್ಟು ಸುಲಭವಾಗಿ

ಸಗುರವಾಗಿ ನಿರ್ವಹಿಸುತ್ತಿರುವುದನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗುವುದು. ನಿಜವಾಗಿ ಸಂಕಲ್ಪಕ್ಕೆ ಇರುವ ಶಕ್ತಿ ಅಸಾಧಾರಣ. ಆದರೆ ಸಂಕಲ್ಪವನ್ನು ಮಾಡುವವರು ಪರಿಶುದ್ಧರೂ ಶ್ರೇಷ್ಠರೂ ಮಾನವಹಿತೈಷಿಗಳೂ ಆಗಿರಬೇಕು. ಪರಮಾತ್ಮನಿಗೆ ಸತ್ಯಕಾಮಾ, ಸತ್ಯಸಂಕಲ್ಪ ಎಂದೇ ಹೆಸರು. ಹಾಗೆಯೇ ಪರಮಾತ್ಮನ ಪ್ರತಿನಿಧಿಗಳಾದ ನಿಷ್ಕಾಮರಾದ ಸಾಧುಸಂತರು, ಸಜ್ಜನರು, ಗುರುಸ್ಥಾನೀಯರು, ಪವಿತ್ರಜೀವಿಗಳಾದುದರಿಂದ–ತಮಗಾಗಿ ಏನನ್ನೂ ಬಯಸದಾದವರಾದುದರಿಂದ ಅವರ ಸಂಕಲ್ಪವೂ ಸತ್ಯಸಂಕಲ್ಪವೇ. ಸಿದ್ಧಗಂಗಾ ಕ್ಷೇತ್ರದ ಶ್ರೀಶ್ರೀಗಳವರ ಸಂಕಲ್ಪಶಕ್ತಿ. ಅಮೋಘವಾದುದು. ಜೊತೆಗೆ ಅವರು ಕರ್ಮಕುಶಲರು. 'ಯೋಗಃ ಕರ್ಮಸು ಕೌಶಲಂ' ಯೋಗಿಯಾದವನೂ ಸಹ ಕರ್ಮಮಾರ್ಗದಲ್ಲಿ ಸದಾ ಜಾಗರೂಕನಾಗಿ ದಕ್ಷನಾಗಿ ಫಲನಿರಪೇಕ್ಷನಾಗಿ ಇರುತ್ತಾನೆ.

ಅನಪೇಕ್ಷಃ ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ
ಸರ್ವಾರಂಭ ಪರಿತ್ಯಾಗೀಯೋಮದ್ಭಕ್ತ ಸ್ಸಮೇಪ್ರಿಯಃ

ಇಲ್ಲಿ ಗೀತಾಚಾರ್ಯನು, 'ದಕ್ಷನು ನನಗೆ ಪ್ರಿಯನಾದವನು' ಎನ್ನುತ್ತಾನೆ. ಶ್ರೀ ಶಿವಕುಮಾರಸ್ವಾಮಿಗಳು ತುಂಬ ದಕ್ಷರು. ತಮ್ಮ ಕೃಪೆಯ ಆವರಣದೊಳಗೆ ಬಂದ ಜೀವರುಗಳನ್ನು–ಈ ಸಿಂಹ (ವೇದಾಂತಕೇಸರಿ) ಮರಿಗಳನ್ನು ಕಾಪಾಡುವಂತೆ ಕಾಪಾಡುತ್ತಾರೆ. ಒಂದು ಕ್ಷಾಮ ಕಾಲದಲ್ಲಿ. ಸಿದ್ಧಗಂಗಾಕ್ಷೇತ್ರ, ಮೂರುಸಾವಿರಕ್ಕಿಂತಲೂ ಹೆಚ್ಚುಜನ ಹಸಿದವರನ್ನು ತಿಂಗಳುಗಟ್ಟಲೆ ಅನ್ನಕೊಟ್ಟು ಕಾಪಾಡಿತು. ಆ ವ್ಯವಸ್ಥೆಯಾದರೂ ಅತ್ಯುತ್ತಮವಾಗಿತ್ತು. ಒಂದು ಕಡೆಯಲ್ಲಿ ಅನ್ನ ಅಥವ ಹಿಟ್ಟನ್ನು ಕೊಡುತ್ತಿದ್ದರು : ಮತ್ತೊಂದುಕಡೆ ಸಾರು ಹುಳಿ ಕೊಡುತ್ತಿದ್ದರು. 'ಅನ್ನಂ ಪ್ರಾಣಮನ್ನಮುಪಾಸಮಾಹುಃ ॥ ಅನ್ನಂ ಬ್ರಹ್ಮಣೋ ಜರಸಂ ವದಂತಿ'. ಸ್ವಾಮಿಗಳು ತುಂಬ ಸ್ವಾತಂತ್ರ್ಯಪ್ರಿಯರು. ಸತ್ಕಾರ್ಯದಲ್ಲಿ ಯಾರ ಹಂಗಿಗೂ ಬಗ್ಗುವವರಲ್ಲ. ಒಂದು ಸಲ ಇವರು. ಸರ್ಕಾರದ ಸಹಾಯವನ್ನು ಪೂರ್ಣವಾಗಿ ತಿರಸ್ಕರಿಸಿ. ಪ್ರಜಾ ಬೆಂಬಲದ ಮೇಲೆಯೇ ಅವಲಂಬಿಸಿದರು.

ಶ್ರೀ ಶಿವಕುಮಾರಸ್ವಾಮಿಗಳು ಅವಿರತ ಚಟುವಟಿಕೆಯ ಕರ್ಮಯೋಗಿ. ನಿಷ್ಠಾವಂತ ತಪಸ್ಸು ವೈರಾಗ್ಯದ ಭಕ್ತಿಯೋಗಿ, ನಿರ್ಲಿಪ್ತ ಸ್ಫಟಿಕಶಿಲಾ ಸ್ವಚ್ಛ ಸಂಗರಹಿತ ಜ್ಞಾನಯೋಗಿ. ಇವರೊಬ್ಬ ಪೂರ್ಣಪುರುಷರು: ಯಾವ ಭಾಗವೂ ಊನವಿಲ್ಲ. ಸಂದರ್ಭಬಂದಾಗಿದಾಗ ಇವರು ಸರ್ಕಾರಿ ಸಮಿತಿಗಳಲ್ಲಿ ಸಹ ಕೆಲಸಮಾಡಿದ್ದಾರೆ. ಅವರೊಂದಿಗೆ ಕೆಲವು ಸಮಿತಿಗಳಲ್ಲಿ ಕೆಲಸ ಮಾಡುವ ಸುಯೋಗ ನನಗೆ ದೊರಕಿತ್ತು. ಅವರ ನಿಷ್ಪಕ್ಷಪಾತದೃಷ್ಟಿ. ಯೋಗ್ಯತೆಗಷ್ಟೇ ಬೆಲೆ ಕೊಡುವ ಗುಣ. ಮಾನವೀಯತೆ, ಶೀಘ್ರನಿರ್ಣಯ ಶಕ್ತಿ ಇವು ನಮಗೆಲ್ಲ ಆದರ್ಶವಾಗಿದ್ದವು. ಜಾತಿ ಪಕ್ಷಪಾತ ಇವಾವುದೂ ಅವರ ಹತ್ತಿರ ಸುಳಿಯವು. ಎಲ್ಲ ಮಾನವರೂ ಎಲ್ಲ ಬಡವರೂ ಅವರ ಅನುಕಂಪಕ್ಕೆ ಅರ್ಹರು. ಅವರ ಎಲ್ಲ ಸಂಸ್ಥೆಗಳಲ್ಲಿಯೂ ಅವರು ಎಲ್ಲ ಜಾತಿಗಳ ಬಡವರಿಗೂ ಯೋಗ್ಯರಿಗೂ ಸ್ಥಳಗಳನ್ನೂ ಉದ್ಯೋಗಗಳನ್ನೂ ಕೊಟ್ಟಿದ್ದಾರೆ. ಅವರು ಸರ್ವಮಾನವ ಬಂಧು. 'ಸರ್ವೇ ಜನಾಃ ಸುಖಿನೋ ಭವಂತು' ಎಂಬುದು ಅವರ ಮಂತ್ರ ಮತ್ತು ಆಚರಣೆ.

ಶ್ರೀ ಶಿವಕುಮಾರ ಸ್ವಾಮಿಗಳು. ಭಾರತೀಯ ಸಂಸ್ಕೃತಿಯ ಅಭಿಮಾನಿಗಳು ; ಸಂಸ್ಕೃತಭಾಷೆಯ ಪ್ರೇಮಿ ಮತ್ತು ಪ್ರಚಾರಕರು. ಸಂಸ್ಕೃತಪಾಠಶಾಲೆಯನ್ನು ಮೊದಲು ಪ್ರಾರಂಭಿಸಿ ಒಬ್ಬ ಅಂಥ ಘನಪಾಠಿಬ್ರಾಹ್ಮಣ ವೇದಪಂಡಿತರಿಂದ ಅಧ್ಯಯನವನ್ನು ಹೇಳಿಸಿದರು. ಈಚೆಗೆ ಅವರ ಸಂಸ್ಥೆಗಳಲ್ಲಿಯೇ ಅನೇಕ ವೇದವಿದ್ವಾಂಸರನ್ನೂ ಸಂಸ್ಕೃತಜ್ಞರನ್ನು ತಯಾರು ಮಾಡಿ, ಸಂಸ್ಕೃತ ಪಾಠಶಾಲೆಗಳನ್ನು ನಡೆಸುತ್ತಿದ್ದಾರೆ. ಸ್ವಾಮಿಗಳ ಅತ್ಯಂತ ಮುಖ್ಯವಾದ ಮತ್ತು ಪರಿಣಾಮಕಾರಿಯಾದ ಕಾರ್ಯವೆಂದರೆ ಧರ್ಮ ಪ್ರಚಾರ. ಸ್ವಾಮಿಗಳು ಧರ್ಮಜ್ಯೋತಿ ಮತ್ತು ಧರ್ಮೋದ್ಧಾರಕರು. ಈಚಿನ ದಿನಗಳಲ್ಲಿ ಅವರು ಬಹಳವಾಗಿ ಧರ್ಮಚಿಂತನೆ ಮತ್ತು ಧರ್ಮಪ್ರಚಾರವನ್ನು ಮಾಡುತ್ತಿದ್ದಾರೆ ; ಮಾಡಿದ್ದಾರೆ. ಭಾರತದ ಆಧ್ಯಾತ್ಮಿಕತೆ, ಸತ್ಯ ಧರ್ಮಕರ್ತವ್ಯಗಳ ನಿಷ್ಠೆ, ದೇಶಪ್ರೇಮ, ದೀನದಲಿತರ ಸೇವೆ. ಜಾತ್ಯತೀತತೆ, ಪರೋಪಕಾರ ಇವುಗಳನ್ನು ಸ್ವಾಮಿಗಳು ತುಂಬ ಶ್ರದ್ಧೆಯಿಂದ ಪ್ರಚಾರ ಮಾಡುತ್ತಿದ್ದಾರೆ. ಜನತೆಯನ್ನು ಸನ್ಮಾರ್ಗಪ್ರವರ್ತಕರನ್ನಾಗಿ ಮಾಡಲು ಶ್ರೀ ಶಿವಕುಮಾರಸ್ವಾಮಿಗಳು ತುಂಬ ಪ್ರಯತ್ನಿಸುತ್ತಿದ್ದಾರೆ. ಇವರ ಪ್ರವಚನಗಳು ವಿವೇಕಪೂರಿತವೂ, ಸ್ಫೂರ್ತಿದಾಯಕವೂ ಸತ್‌ಪರಿಣಾಮ ಪ್ರೇರಿತವೂ ಆಗಿವೆ. ಈಚಿನ ದಿನಗಳಲ್ಲಿ ಸ್ವಾಮಿಗಳು ಅನೇಕ ಧಾರ್ಮಿಕ ಪ್ರವಚನಗಳನ್ನು ಮಾಡಿದ್ದಾರೆ. ಈಗ ಕೆಲವು ವರುಷಗಳ ಕೆಳಗೆ ಶೃಂಗೇರಿ ಜಗದ್ಗುರುಗಳು ಏರ್ಪಡಿಸಿದ್ದ ಒಂದು ಧಾರ್ಮಿಕ ಸಮ್ಮೇಳನದಲ್ಲಿ ಶ್ರೀ ಶಿವಕುಮಾರಸ್ವಾಮಿಗಳವರ ಭಾಷಣವನ್ನು ಕೇಳಿ ನಾನು ತುಂಬ ಪ್ರಭಾವಿತನಾದೆ. ಕರ್ನಾಟಕದಲ್ಲಿ ಮಾತ್ರವೇ ಅಲ್ಲ. ಭಾರತದ ಇತರ ಭಾಗಗಳಲ್ಲಿ ಸಹ ಶ್ರೀ ಶಿವಕುಮಾರಸ್ವಾಮಿಗಳನ್ನು 'ಸನಾತನಧರ್ಮ ಪ್ರದೀಪ'ವೆಂದು ಜನ ಸಂಬೋಧಿಸುತ್ತಾರೆ. ಅವರ ಶೈಲಿ. ವಿವೇಕಾನಂದರ ಶೈಲಿಯಂತೆ ಉದ್ಬೋಧಕವಾಗಿದೆ. ಮಾತು ನಡೆ ಆಚರಣೆ ಎಲ್ಲ ಪರಿಪಕ್ವವಾಗಿ ಅವರು ಸಿದ್ಧಿಯನ್ನು ಹೊಂದಿದವರಾಗಿ ಕಾಣುತ್ತಾರೆ. ವರ್ಷಗಳು ಅವರ ಮೈಮೇಲೆ ಉರುಳಿ ಹೋಗಿದ್ದರೂ ಅವರು ಮಾತ್ರ, ಸುಕ್ಕು ಅರಿಯದ ಜಿತೇಂದ್ರಿಯಮೂರ್ತಿಗಳಾಗಿದ್ದಾರೆ. ಶ್ರೀ ಸ್ವಾಮಿಗಳು ಸದಾ ಆನಂದಮೂರ್ತಿಗಳು, ಅತೀಂದ್ರಿಯ ಜ್ಞಾನವನ್ನು ಪಡೆದವರು ; ಮುಮುಕ್ಷುಗಳು.

ಶ್ರೀ ಸಿದ್ಧಗಂಗಾ ಕ್ಷೇತ್ರ ಜ್ಞಾನ ಕರ್ಮ ಭಕ್ತಿಗಳು ಸಿದ್ಧಿಸಿ ಸಾಕಾರವಾಗಿರುವ ಗಂಗಾ ಕ್ಷೇತ್ರ, ಇದು ಪ್ರಯೋಗ ಕ್ಷೇತ್ರ ಮತ್ತು ಸಿದ್ಧಿಯನ್ನು ಹೊಂದಿದ ಕ್ಷೇತ್ರ. ಒಬ್ಬನೇ ಒಬ್ಬ ಧಾರ್ಮಿಕಪುರುಷ, ಏಕಾಂಗಿಯಾಗಿ ಎಂಥ ಪವಾಡವನ್ನು ಸಾಧಿಸ ಬಲ್ಲನೆಂಬುದಕ್ಕೆ ಇದೊಂದು ಉದಾಹರಣೆ. ಇಲ್ಲಿ ಮಾನವತ್ವ ತನ್ನ ಅತ್ಯುಚ್ಚ ಘನತೆಗೆ ಏರಿ, ಸೇವಾಧರ್ಮಪ್ರಾಮುಖ್ಯ ವಾಗಿ ಸರ್ವರ ಹಿತವನ್ನು ಸಾಧಿಸುತ್ತಿದೆ. ಶ್ರೀ ಶಿವಕುಮಾರಸ್ವಾಮಿಗಳು, ದೊಡ್ಡ ಆಲದಮರದಂತೆ, ಧರ್ಮ; ಸಾಹಿತ್ಯ, ಸೇವೆ ಇವುಗಳಿಗೆಲ್ಲ ಆಕರರಾಗಿದ್ದಾರೆ. ಸ್ವಾಮಿಗಳೇ ದೊಡ್ಡ ವಿದ್ವಾಂಸರು. ತಮ್ಮ ಕ್ಷೇತ್ರದಲ್ಲಿ ಒಂದು ಕನ್ನಡ ಸಾಹಿತ್ಯಸಮ್ಮೇಳನ ವನ್ನೇ ಸೊಗಸಾಗಿ ನಿರ್ವಹಿಸಿಬಿಟ್ಟರು. ಅವರಿಗೆ ವಿಶ್ವವಿದ್ಯಾನಿಲಯ ಡಾಕ್ಟರೇಟ್ ಸಹ ಕೊಟ್ಟಿದೆ. ಅವರ ಅಪಾರವಾದ ಪಾಂಡಿತ್ಯ; ಪಾಂಡಿತ್ಯವನ್ನು ಮೀರಿಸಿದ ಜ್ಞಾನ: ಜ್ಞಾನವನ್ನು ಮೀರಿಸಿದ ಸಿದ್ಧಿ ; ಎಲ್ಲವನ್ನೂ ಮೀರಿಸಿದ ಎಲ್ಲವನ್ನೂ ಆವರಿ ಸಿರುವ ಸ್ವಾಮಿಗಳ ಧಾರ್ಮಿಕ ವ್ಯಕ್ತಿತ್ವ ಈ ಕ್ಷೇತ್ರಕ್ಕೆ ಅನ್ಯಾದೃಶಮಹಿಮೆಯನ್ನು ಕೊಟ್ಟಿದೆ.

ಈ ಕ್ಷೇತ್ರ,ಶ್ರೀಗಳಾದ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ದೀರ್ಘಕಾಲ ನಮ್ಮ ನಡುವೆ ಇದ್ದು ಜನತೆಗೆ ಕಲ್ಯಾಣ ವನ್ನುಂಟಮಾಡುತ್ತ ಆಶೀರ್ವದಿಸುತ್ತ ವಿರಾಜಿಸುತ್ತಿರಲಿ ಎಂದು ಸರ್ವೇಶ್ವರನಲ್ಲಿ ಪ್ರಾರ್ಥಿಸುತ್ತೇನೆ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್**

# ದುರ್ಲಭಜನ್ಮರಾದ ಶ್ರೀಗಳವರು

ಒಬ್ಬರ ಸ್ವಭಾವವನ್ನು ಸರಿಯಾಗಿ ತಿಳಿದುಕೊಳ್ಳುವ ಬಗ್ಗೆ ಸಂಸ್ಕೃತದಲ್ಲಿ 'ಶೀಲಂ ಸಂಪಸತಾಜ್ಞೇಯಂ' ಎಂಬ ಒಂದು ಗಾದೆ ಇದೆ. ಬಹಳ ಕಾಲ ಒಬ್ಬರ ಜೊತೆಯಲ್ಲಿ ವಾಸವಾಗಿದ್ದರೆ ಅವರ ಸ್ವಭಾವದ ಸರಿಯಾದ ಪರಿಚಯವು ತಿಳಿಯುತ್ತದೆ ಎಂದು ಈ ಮಾತಿನ ಅರ್ಥ.

ನಾನು ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜಿನಲ್ಲಿ ಮೂವತ್ತೈದು ವರ್ಷಗಳು ಉಪಾಧ್ಯಾಯನಾಗಿ ಶ್ರೀಶ್ರೀ ಶಿವಕುಮಾರ ಸ್ವಾಮಿಗಳವರ ಸನ್ನಿಧಿಯಲ್ಲಿ ವಾಸವಾಗಿದ್ದುದರಿಂದ ಶ್ರೀಶ್ರೀ ಸ್ವಾಮಿಗಳವರ ಕೆಲವು ಸ್ವಭಾವಗಳ ಸರಿಯಾದ ಪರಿಚಯವು ನನಗೆ ತಿಳಿದಿರುವುದೆಂಬ ಆತ್ಮವಿಶ್ವಾಸದಿಂದ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ.

**ವಿದ್ಯಾ ಮತ್ತು ಅನ್ನದಾನದಲ್ಲಿ ಆಸಕ್ತಿ**

ಜ್ಞಾನವೆಂಬ ದೀಪವು ಮನುಷ್ಯನ ಅಜ್ಞಾನವೆಂಬ ಕತ್ತಲನ್ನು ತೊಲಗಿಸಿ ಅವನ ಜೀವನವನ್ನು ಉತ್ತಮ ಪಡಿಸುವುದ ರಿಂದ ವಿದ್ಯಾದಾನವು ಬಹುಮುಖ್ಯವಾದುದೆಂದು ಶ್ರೀಶ್ರೀಗಳವರು ದೃಢವಾಗಿ ನಂಬಿ ವಿದ್ಯಾದಾನದಲ್ಲಿ ಬಹಳ ಆಸಕ್ತಿಯನ್ನು ಹೊಂದಿರುತ್ತಾರೆ. ಆದರೆ ಕೇವಲ ವಿದ್ಯಾದಾನ ಒಂದೇ ಹೆಚ್ಚು ಉಪಯೋಗವಾಗಲಾರದು. ಯಾಕೆಂದರೆ ಬಡವಿದ್ಯಾರ್ಥಿಗಳಿಗೆ ಭೋಜನ ಮತ್ತು ವಾಸ ಸೌಕರ್ಯವಿಲ್ಲದಿದ್ದರೆ ಓದಲು ಸಾಧ್ಯವಾಗುವುದಿಲ್ಲ. ಈ ತತ್ವವನ್ನು ಚೆನ್ನಾಗಿ ತಿಳಿದಿರುವ ಶ್ರೀಶ್ರೀಗಳ ವರು, ಭೋಜನ ಮತ್ತು ವಾಸಗಳ ಸೌಕರ್ಯದೊಂದಿಗೆ ವಿದ್ಯಾದಾನವನ್ನು ಉತ್ತರೋತ್ತರಾಭಿವೃದ್ಧಿಯಿಂದ ನಡೆಸುತ್ತಿರು ತ್ತಾರೆ. ೧೯೪೦ನೆಯ ವರ್ಷದಲ್ಲಿ ನಾನು ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜಿನಲ್ಲಿ ಉಪಾಧ್ಯಾಯನಾಗಿ ಸೇರಿದ ಕಾಲದಲ್ಲಿ ಒಂದು ನೂರು ಮಂದಿ ವಿದ್ಯಾರ್ಥಿಗಳು ಮಾತ್ರ ಈ ಮಠದಲ್ಲಿ ವ್ಯಾಸಂಗ ಮಾಡುತ್ತಿದ್ದರು. ಬಳಿಕ ಶ್ರೀಶ್ರೀ ಶಿವಕುಮಾರಸ್ವಾಮಿಗಳವರ ಆಸಕ್ತಿ–ಆತ್ಮಶಕ್ತಿ-ಔದಾರ್ಯಗಳ ಬಲದಿಂದ ಈಗ ಮೂರುವರೆ ಸಾವಿರಕ್ಕೂ ಹೆಚ್ಚು ಮಂದಿ ವಿದ್ಯಾರ್ಥಿಗಳು ಈ ಮಠದಲ್ಲಿ ಭೋಜನ-ವಸತಿ ಸೌಕರ್ಯದೊಂದಿಗೆ ವಿದ್ಯಾಭ್ಯಾಸ ಮಾಡುತ್ತಿರುವುದು ಶ್ರೀಶ್ರೀಗಳವರ ಅನ್ನವಿದ್ಯಾದಾನಗಳ ಆಸಕ್ತಿಗೆ ಎಲ್ಲರೂ ನೋಡಬಹುದಾದ ಪ್ರತ್ಯಕ್ಷ ಉದಾಹರಣೆ ಆಗಿದೆ.

**ಬಡವರ ಉದ್ಧಾರಕರ**

ಈಗ ರಾಜಕೀಯ ವ್ಯವಹಾರದಲ್ಲಿ ಎಲ್ಲ ದಿಕ್ಕುಗಳಲ್ಲಿಯೂ 'ಬಡವರ ಉದ್ಧಾರ' ವೆಂಬ ಘೋಷಣೆಯು ಮೊಳಗುವು ದನ್ನು ಕೇಳುತ್ತೇವೆ. ಆದರೆ ನಿಜವಾಗಿ ಬಡವರ ಉದ್ಧಾರಕ್ಕಾಗಿ ದುಡಿಯುವರು ನೋಡಲು ವಿರಳವಾಗಿರುತ್ತಾರೆ. ಶ್ರೀಶ್ರೀ ಶಿವ ಕುಮಾರಸ್ವಾಮಿಗಳಾದರೋ ನಿಜವಾಗಿಯೂ ಬಡವರ ಉದ್ಧಾರಕ್ಕಾಗಿ ದುಡಿಯುವವರಾಗಿದ್ದಾರೆ. ಪ್ರತಿ ವರ್ಷವೂ ಮಠದಲ್ಲಿ ವಿದ್ಯಾವ್ಯಾಸಂಗಕ್ಕೆ ಅವಕಾಶವನ್ನು ಕೋರಿ ಅನೇಕ ಸಾವಿರ ಅರ್ಜಿಗಳು ಬರುತ್ತವೆ. ಮತ್ತು ಶ್ರೀಮಠದಲ್ಲಿದ್ದರೆ ತಮ್ಮ ಮಕ್ಕಳ ಶೀಲವು ಕೆಡುವುದಿಲ್ಲವೆಂಬ ಸದುದ್ದೇಶದಿಂದ ಅನೇಕ ಮಂದಿ ಶ್ರೀಮಂತರೂ ಸಹ ತಮ್ಮ ಮಕ್ಕಳ ಸಲುವಾಗಿ ಅವಕಾಶವನ್ನು ಕೋರಿ ಅರ್ಜಿಗಳನ್ನು ಕಳುಹಿಸುತ್ತಾರೆ. ಹೀಗೆ ಬಂದಿರುವ ಅರ್ಜಿಗಳನ್ನು ಪರಿಶೀಲಿಸಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವ ವಿಷಯದಲ್ಲಿ ಶ್ರೀಶ್ರೀಗಳವರು ತಮ್ಮ ಮನಸ್ಸಿನಲ್ಲಿಯೇ ಇಟ್ಟುಕೊಂಡಿರುವ ಒಂದು ನಿಯಮವನ್ನು ಒಂದು ದಿನ ನನ್ನೊಡನೆ ಮಾತನಾಡುವ ಸಮಯದಲ್ಲಿ ಹೀಗೆ ಅಪ್ಪಣೆ ಮಾಡಿದರು. ಅದೇನೆಂದರೆ: ಶ್ರೀಮಂತರಿಗೆ ಹಣದ ಬಲವಿರುವುದರಿಂದ ನಗರದ

ಹಾಸ್ಟೆಲುಗಳಲ್ಲಿಯೋ ಹೋಟೆಲುಗಳಲ್ಲಿಯೋ ತಮ್ಮ ಮಕ್ಕಳಿಗೆ ಅವರು ಅವಕಾಶವನ್ನು ಕಲ್ಪಿಸಿಕೊಡಬಹುದು. ಬಡವರಿಗೆ ಹಾಗೆ ಮಾಡಲು ಸಾಧ್ಯವಿಲ್ಲವಾದ್ದರಿಂದ ಬಡವರನ್ನೇ ಇಲ್ಲಿ ಸೇರಿಸಿಕೊಳ್ಳಬೇಕು, ಎಂದು ಹೇಳಿದರು. ಶ್ರೀಶ್ರೀಗಳವರ ಈ ಸದುದ್ದೇಶದ ಫಲವಾಗಿ ಕಡುಬಡವಹುಡುಗರಿಗೆ ಇಲ್ಲಿ ಪ್ರವೇಶ ಕಾಲದಲ್ಲಿ ಆದ್ಯತೆ ದೊರೆಯುತ್ತದೆ. ಸ್ವಾರ್ಥವಿಲ್ಲದೆ ಬಡವಿದ್ಯಾರ್ಥಿಗಳ ಹಿತಕ್ಕಾಗಿ ತಮ್ಮ ಶರೀರದ ಶ್ರಮವನ್ನು ಪರಿಗಣಿಸದೆ ಹಗಲಿರುಳು ಕಷ್ಟಪಟ್ಟು ದುಡಿಯುವುದನ್ನು ಶ್ರೀಶ್ರೀಗಳವರು ಯೌವನದ ಪ್ರಾರಂಭದಲ್ಲಿಯೇ ಮೊದಲು ಮಾಡಿ ಈಗ ಎಪ್ಪತ್ತೆರಡು ವರ್ಷಗಳನ್ನೂ ಮೀರಿದ ಮುಪ್ಪಿನಲ್ಲಿಯೂ ಸಹ ಮೊದಲಿನಂತೆಯೇ ದುಡಿಯುತ್ತಿರುವುದು ಬಹಳ ಆಶ್ಚರ್ಯವಾಗಿದೆ. 'ಏತೇಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಾನ್ಪರಿತ್ಯಜ್ಯಯೇ' ಯಾರು ತಮ್ಮ ಹಿತವನ್ನು ಬಿಟ್ಟು ಪರರ ಹಿತಕ್ಕಾಗಿ ದುಡಿಯುವರೋ ಅವರೇ ಸತ್ಪುರುಷರು ಎಂದು ಭರ್ತೃಹರಿಯು ಹೇಳಿರುವ ಸತ್ಪುರುಷರ ಲಕ್ಷಣವು ಇವರಲ್ಲಿ ಚೆನ್ನಾಗಿ ಕಂಡುಬರುತ್ತದೆ.

**ಅಹಂಕಾರವಿಲ್ಲದ ಸ್ವಭಾವ**

ಶ್ರೀಮಠದಲ್ಲಿಯೇ ಭೋಜನ ಸೌಕರ್ಯವನ್ನು ಪಡೆದು ವಾಸವಾಗಿರುವ ಮೂರುವರೆಸಾವಿರಕ್ಕೂ ಮೀರಿದ ವಿದ್ಯಾರ್ಥಿಗಳಲ್ಲದೆ ಶ್ರೀಕ್ಷೇತ್ರದ ದರ್ಶನ ಮತ್ತು ದೇವರ ಸೇವೆಗಾಗಿ ಅನೇಕ ಮಂದಿ ಭಕ್ತರೂ ಹಾಗೂ ಯಾತ್ರಿಕರೂ ಸಹ ನಿತ್ಯವೂ ಬರುತ್ತಾರೆ. ಶ್ರಾವಣಮಾಸ ಮತ್ತು ನವರಾತ್ರಿ ಮುಂತಾದ ವಿಶೇಷ ದಿವಸಗಳಲ್ಲಿ ಹೆಚ್ಚಾಗಿ ಬರುತ್ತಾರೆ. ಬಂದವರಿಗೆಲ್ಲ ಭೋಜನ ಮಾಡಿಯೇ ಹೋಗಬೇಕೆಂದು ಶ್ರೀಗಳವರು ಅಪ್ಪಣೆ ಮಾಡುತ್ತಾರೆ. ಹೀಗೆ ಅನೇಕ ಸಾವಿರ ಜನರಿಗೆ ನಿತ್ಯವೂ ಅನ್ನದಾನವನ್ನು ನಡೆಸುವುದು ಹೇಗೆ ಸಾಧ್ಯವಾಗುತ್ತದೆ, ಎಂದು ನಾನು ಒಂದು ದಿನ ಶ್ರೀಗಳವರನ್ನು ಕೇಳಿದೆನು. ಆದಕ್ಕೆ ಅವರು 'ಶ್ರೀಮಠದ ಜಮೀನಿನಿಂದ ಬರುವ ದವಸಗಳು ಸಾಮಾನ್ಯ ಎರಡು ಅಥವಾ ಮೂರು ತಿಂಗಳುಗಳಿಗೆ ಮಾತ್ರ ಸಾಕಾಗುವುದೆಂದೂ ನಂತರ ಹೇಗೆ ನಡೆಯುವುದೆಂದು ತಮಗೆ ತಿಳಿದಿಲ್ಲವೆಂದೂ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ದಯೆಯಿಂದಲೇ ಎಲ್ಲವೂ ನಡೆಯುವುದೆಂದೂ ಬಹಳ ನಮ್ರತೆಯಿಂದ ಉತ್ತರಿಸಿದರು.

ತಾವು ಬಹಳ ಶ್ರಮಪಟ್ಟು ದುಡಿದು ನಿರ್ವಾಹಮಾಡುತ್ತಿದ್ದರೂ ಸಹ ನಾನು ಮಾಡುವೆನೆಂಬ ಅಭಿಮಾನವಿಲ್ಲದ ಇವರ ಸ್ವಭಾವವನ್ನು ನೋಡಿದರೆ ಮಹಾಕವಿ ಕಾಲಿದಾಸನು ಪರಶಿವನ ವಿಷಯದಲ್ಲಿ ಹೇಳಿದ ಒಂದು ಮಾತು ನೆನಪಾಗುತ್ತದೆ.

'ಅಷ್ಟಾಭಿರ್ಯಸ್ಯಕೃತ್ಸ್ನಂ ಜಗದಪಿತನುಭಿಃ ಬಿಭ್ರತೋನಾಭಿಮಾನಃ' ಅಷ್ಟಮೂರ್ತಿ ಎನಿಸಿದ ಪರಮೇಶ್ವರನು ಪೃಥಿವೀಜಲತೇಜಸ್ಸು ಮುಂತಾದ ತನ್ನ ಎಂಟು ವಿಧ ಶರೀರಗಳಿಂದ ಸಕಲ ಪ್ರಪಂಚವನ್ನು ಧರಿಸಿದ್ದರೂ ಸಹ ಅವನಿಗೆ ನಾನು ಪ್ರಪಂಚವನ್ನು ಧರಿಸಿರುವೆನೆಂಬ ಅಭಿಮಾನವಿಲ್ಲವೆಂದು ಹೇಳಿರುವನು.

**ವಿದ್ಯಾಭ್ಯಾಸದಲ್ಲಿ ಅಭಿರುಚಿ**

ಶ್ರೀ ಶ್ರೀ ಸ್ವಾಮಿಗಳವರಿಗೆ ವಿದ್ಯಾಭ್ಯಾಸ ಮಾಡುವುದರಲ್ಲಿ ಬಹಳ ಅಭಿರುಚಿ ಇದೆ. ಇವರು ತಮ್ಮ ಮತಗ್ರಂಥಗಳನ್ನು ಆಳವಾಗಿ ಅಭ್ಯಾಸ ಮಾಡಿರುವರಲ್ಲದೆ 'ಸರ್ವದರ್ಶನ ಸಂಗ್ರಹ' ಮುಂತಾದ ಶಾಸ್ತ್ರ ಗ್ರಂಥಗಳನ್ನೂ ಅಭ್ಯಾಸಮಾಡಿ ಬೇರೆ ಶಾಸ್ತ್ರಗಳ ಸಿದ್ಧಾಂತಗಳನ್ನೂ ಚೆನ್ನಾಗಿ ತಿಳಿದಿರುತ್ತಾರೆ. ಇವರಿಗೆ ತರ್ಕಶಾಸ್ತ್ರದಲ್ಲಿ ಹೇಳುವ ನಿಷ್ಕೃಷ್ಟವಾದ ಪದಾರ್ಥಗಳ ನಿರೂಪಣೆ, ಮತ್ತು ಲಕ್ಷಣಗಳ ಪರಿಷ್ಕಾರದಲ್ಲಿ ಬಹಳ ಮೆಚ್ಚುಗೆ ಇದೆ. ಇವರು ಹಿಂದೆ ತರ್ಕಶಾಸ್ತ್ರ ಗ್ರಂಥಗಳನ್ನು ಓದುವಾಗ ಬಾಯಿಪಾಠ ಮಾಡಿರುವ ಕೆಲವು ಭಾಗಗಳನ್ನು ನನ್ನ ಮುಂದೆ ಅನೇಕ ಸಾರಿ ಹೇಳಿರುತ್ತಾರೆ. ಈಗಲೂ ಸಹ ವೇದಾಂತಧರ್ಮ-ಶಾಸ್ತ್ರ ಮುಂತಾದವುಗಳಿಗೆ ಸಂಬಂಧಪಟ್ಟ ಅನೇಕ ಗ್ರಂಥಗಳನ್ನು ನಿತ್ಯವೂ ವ್ಯಾಸಂಗ ಮಾಡುತ್ತಲೆ ಇರುವರು. ಆದರೆ ಇವರಿಗೆ ನಾನಾಮುಖವಾದ ಕಾರ್ಯಭಾರಗಳು ಇರುವುದರಿಂದ ಓದಲು ಸಮಯವು ದೊರೆಯುವಂತಿಲ್ಲ. ಆದರೂ ಬೇರೆ ಊರಿಗೆ ಪ್ರಯಾಣ ಮಾಡುವ ಪ್ರಸಂಗದಲ್ಲಿ ಕಾರಿನಲ್ಲಿ ಹೋಗುವ ಮತ್ತು ಬರುವ ಕಾಲವನ್ನು ಇವರು ಓದಲು ಉಪಯೋಗಿಸಿಕೊಳ್ಳುತ್ತಾರೆ. ಇವರು ಒಂದು ಪ್ರಯಾಣ ಕಾಲದಲ್ಲಿ ಎಷ್ಟು ಭಾಗವನ್ನು ಓದಿದರೆಂಬುದನ್ನು ನನಗೆ ಅನೇಕ ಸಾರಿ ತೋರಿಸಿದ್ದರು. 'ಕ್ಷಣಶಃ ವಿದ್ಯಾಂ ಸಾಧಯೇತ್' ಒಂದು ಕ್ಷಣ ಕಾಲವನ್ನೂ ಸಹ ಉದಾಸೀನ ಮಾಡದೆ ವಿದ್ಯೆಯನ್ನು ಸಂಪಾದಿಸಬೇಕೆಂಬ ಪ್ರಾಜ್ಞರ ಸೂಕ್ತಿಯು ಇವರಲ್ಲಿ ಹೊಂದಿಕೆಯಾಗಿದೆ.

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು ಗುಡಾಕೇಶರು**

ಭಗವದ್ಗೀತೆಯಲ್ಲಿ ಅರ್ಜುನನಿಗೆ 'ಗುಡಾಕೇಶ' ಎಂಬ ಪದ ಪ್ರಯೋಗವಿದೆ. ಶ್ರೀ ಶಂಕರಾಚಾರ್ಯರು ಗೀತಾಭಾಷ್ಯದಲ್ಲಿ 'ಗುಡಾಕಾ' ಪದಕ್ಕೆ ನಿದ್ದೆ ಎಂದೂ, ಈಶ ಪದಕ್ಕೆ ಅಧಿಪತಿ ಎಂದೂ ನಿದ್ದೆಗೆ ಅಧಿಪತಿ ಎಂದರೆ ನಿದ್ದೆಯನ್ನು ಜಯಿಸಿದವನು, ಎಂದು ಅರ್ಥ ವಿವರಣೆ ಮಾಡಿರುತ್ತಾರೆ. ಋಗ್ವೇದದಲ್ಲಿ ಒಬ್ಬ ಋಷಿಯು 'ಮಾನೋ ನಿದ್ರಾ ಈಶತ' ನಿದ್ದೆಯು ನಮಗೆ ಅಧಿಪತಿಯಾಗದಿರಲಿ, ಅಂದರೆ ನಾವು ನಿದ್ದೆಗೆ ಅಧೀನರಾಗುವುದುಬೇಡ ಎಂದು ದೇವರನ್ನು ಪ್ರಾರ್ಥಿಸಿರುತ್ತಾನೆ. ಇದರಿಂದ ನಿದ್ದೆಯನ್ನು ಜಯಿಸುವುದು ಆವಶ್ಯಕವೆಂದೂ ಇದಕ್ಕೆ ದೇವರ ಅನುಗ್ರಹವೂ ಕಾರಣವೆಂದೂ ತಿಳಿಯುತ್ತದೆ.

ಶ್ರೀ ಶ್ರೀ ಸ್ವಾಮಿಗಳವರೂ ಸಹ ಪ್ರತಿನಿತ್ಯವೂ ಬೆಳಗಿನ ಜಾವದಲ್ಲಿ ಸುಮಾರು ಎರಡುವರೆ ಘಂಟೆಗೆ ಎಚ್ಚರಗೊಳ್ಳುತ್ತಾರೆ. ಎದ್ದ ಬಳಿಕ ಸುಮಾರು ಅರ್ಧ ಘಂಟೆಯವರೆಗೆ ಪುಸ್ತಕವನ್ನು ಓದುತ್ತಾರೆ, ಆಮೇಲೆ ಸ್ನಾನಾದಿ ನಿತ್ಯಕರ್ಮಾನುಷ್ಠಾನದಲ್ಲಿ ತೊಡಗುತ್ತಾರೆ. ಧನುರ್ಮಾಸದಲ್ಲಿಯಾದರೂ ಇನ್ನೂ ಮೊದಲು ಏಳುತ್ತಾರೆ. ಇದೊಂದು ಅದ್ಭುತವಾದ ಇವರ ನಿತ್ಯದ ಸಾಧನೆಯಾಗಿದೆ.

**ಆಶ್ರಿತರ ಬಂಧುಗಳು**

ಶ್ರೀ ಶ್ರೀ ಸ್ವಾಮಿಗಳವರ ಆಶ್ರಯ ರಕ್ಷೆಯನ್ನು ಪಡೆದು ಬಹುಮಂದಿ ಉಪಾಧ್ಯಾಯರೂ ಹಾಗೂ ಸಿಬ್ಬಂದಿ ವರ್ಗದವರೂ ಜೀವಿಸುತ್ತಿರುವರು. ಈ ಆಶ್ರಿತರಿಗೆ ಮನೆಕಟ್ಟುವುದಕ್ಕಾಗಲೀ, ಮದುವೆ ಮುಂತಾದ ಆವಶ್ಯಕ ಕಾರ್ಯಗಳನ್ನು ಮಾಡುವುದಕ್ಕಾಗಲೀ ಹಣದ ಅಡಚಣೆಯು ಬಂದೇ ಬರುತ್ತದೆ. ಇಂತಹ ಸಂಕಟಸಮಯದಲ್ಲಿ ಶ್ರೀ ಶ್ರೀಗಳವರು ಕರುಣೆಯಿಂದ ಉದಾರವಾಗಿ ಸಾವಿರಗಟ್ಟಲೆ ಹಣವನ್ನು ಸಾಲವಾಗಿ ಅನುಗ್ರಹಿಸುತ್ತಾರೆ. ಇದರಲ್ಲಿ ವಿಶೇಷ ವಿಷಯವೆಂದರೆ ಈ ಹಣಕ್ಕೆ ಬಡ್ಡಿ ಕೊಡಬೇಕಾಗಿಲ್ಲ ಮತ್ತು ಪ್ರತಿತಿಂಗಳು ಅವರವರ ಶಕ್ತಿಗೆ ಅನುಗುಣವಾಗಿ ಕಂತಿನಿಂದ ಈ ಸಾಲವನ್ನು ತೀರ್ಮಾನಮಾಡಬಹುದು. ಇದರಿಂದ ಸಾಲಗಾರನಿಗೆ ಸಾಲದ ಬಗೆಗೆ ದುಃಖದ ಅರಿವೇ ಇಲ್ಲದಂತೆ ಸುಖವಾಗಿ ಸಾಲವು ತೀರಿ ಹೋಗುತ್ತದೆ. ಈ ರೀತಿಯಾಗಿ ಮನೆಕಟ್ಟುವುದಕ್ಕೂ ಮದುವೆ ಮಾಡುವುದಕ್ಕೂ ಶ್ರೀ ಶ್ರೀಗಳವರಿಂದ ಸಾಲದ ಉಪಕಾರವನ್ನು ಸ್ಮರಿಸಿಕೊಳ್ಳುತ್ತೇನೆ.

ಕಾಳಿದಾಸ ಮಹಾಕವಿಯು ದುಷ್ಯಂತಮಹಾರಾಜನ ಜನೋಪಕಾರದ ಬಗ್ಗೆ ವೈತಾಳಿಕನಮುಖದಿಂದ ಹೀಗೆಹೇಳಿದ್ದಾನೆ.

ಅತನುಷು ವಿಭವೇಷು ಜ್ಞಾತಯಸ್ಸಂತು ನಾಮ ।
ತ್ವಯಿತುಪರಿಸಮಾಪ್ತಂ ಬಂಧುಕೃತ್ಯಂ ಪ್ರಜಾನಾಂ ॥

ಮನುಷ್ಯರಿಗೆ ಐಶ್ವರ್ಯವಿರುವ ಕಾಲದಲ್ಲಿ ಬಂಧುಗಳು ಹೆಚ್ಚಾಗಿ ಬಂದು ಸೇರಿಕೊಳ್ಳುತ್ತಾರೆ. ಆದರೆ ಕಷ್ಟಕಾಲದಲ್ಲಿ ಪ್ರಾಯಶಃ ಅನೇಕ ಬಂಧುಗಳು ದೂರಸರಿಯುತ್ತಾರೆ, ಅಂತಹ ಆಪತ್ಕಾಲದಲ್ಲಿ ಬಂಧುಗಳು ಮಾಡಬೇಕಾದ ಕಷ್ಟಪರಿಹಾರದ ಕಾರ್ಯವನ್ನು ದುಷ್ಯಂತನೇ ಮಾಡುತ್ತಾನೆ. ಎಂದು ಈ ಮಾತಿನ ಅಭಿಪ್ರಾಯ. ದುಷ್ಯಂತನ ವಿಷಯದಲ್ಲಿ ಹೇಳಿರುವ ಈ ಮಾತು ಶ್ರೀ ಶ್ರೀ ಸ್ವಾಮಿಗಳವರಿಗೂ ಸರಿಯಾಗಿ ಅನ್ವಯಿಸುತ್ತದೆ.

**ಪ್ರಾಜ್ಞರ ಸಮ್ಮತಿ**

ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ಸ್ವಭಾವದ ಬಗ್ಗೆ ನಾನು ತಿಳಿದಿರುವ ವಿಷಯದಲ್ಲಿ ದೊಡ್ಡವರ ಒಪ್ಪಿಗೆಯೂ ದೊರೆತಿದೆ. ಶ್ರೀ ಶೃಂಗೇರಿಪೀಠಾಧಿಪತಿಗಳಾದ ಶ್ರೀ ಶ್ರೀ ಜಗದ್ಗುರು ಶ್ರೀಮದಭಿನವವಿದ್ಯಾತೀರ್ಥ ಮಹಾಸ್ವಾಮಿಗಳವರು ಕೆಲವು ವರ್ಷಗಳ ಹಿಂದೆ ತುಮಕೂರು ನಗರಕ್ಕೆ ದಯಮಾಡಿಸಿದ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಮಠಕ್ಕೂ ದಯಮಾಡಿಸಿದ್ದರು. ಆಗ ಸಭೆಯಲ್ಲಿ ಶೃಂಗೇರಿ ಶ್ರೀ ಗುರುಗಳವರು ಶ್ರೀ ಶಿವಕುಮಾರಸ್ವಾಮಿಗಳ ವಿಷಯವಾಗಿ ಹೀಗೆ ಅಪ್ಪಣೆಮಾಡಿದರು. ಶಿವಕುಮಾರ ಸ್ವಾಮಿಗಳು ಎಂದು ದೇವರಿಗೆ ಹೆಸರಿದೆ. ಕುಮಾರ ಪದಕ್ಕೆ 'ಬಾಲಕ'ಎಂದರ್ಥ. ಬಾಲಕನೆಂದರೆ ವಯಸ್ಸು ಕಮ್ಮಿಯಾಗಿರುವವನು ಎಂದು ಮಾತ್ರ ಅರ್ಥವಲ್ಲ. 'ಪಾಂಡಿತ್ಯಂ ನಿರ್ವಿದ್ಯಬಾಲ್ಯೇನ ತಿಷ್ಠಾಸೇತ್' ಎಂಬ ಉಪನಿಷದ್ವಾಕ್ಯದಲ್ಲಿ ಬಾಲ್ಯ ಪದಕ್ಕೆ ಶ್ರೀ ಶಂಕರಾಚಾರ್ಯರು, 'ಆತ್ಮ ಪ್ರಶಂಸೆಯನ್ನು ಮಾಡಿಕೊಳ್ಳದೆ ದಂಭದರ್ಪರಹಿತವಾಗಿರುವಿಕೆಯೇ ಬಾಲ್ಯ' ಎಂದು ಅರ್ಥವನ್ನು ಸೂತ್ರಭಾಷ್ಯದಲ್ಲಿ ಹೇಳಿರುತ್ತಾರೆ. ಶ್ರೀ ಶಿವಕುಮಾರಸ್ವಾಮಿಗಳೂ ಸಹ ದಂಭದರ್ಪರಹಿತವಾಗಿರುವುದರಿಂದ ಇವರು ಯಾವಾಗಲೂ ಕುಮಾರರಾಗಿಯೇ ಇರುತ್ತಾರೆ, ಎಂದು ಪ್ರಶಂಸೆಮಾಡಿದರು.

**ದುರ್ಲಭವಾದ ಜನ್ಮವುಳ್ಳವರು**

ನಾಗಾನಂದ ನಾಟಕದಲ್ಲಿ ನಾಯಕನಾದ ಜೀಮೂತವಾಹನನನ್ನು ಕುರಿತು ಒಂದು ಪದ್ಯವು ಹೀಗಿದೆ:

'ಉತ್ಪದ್ಯಂತೇ ವಿಲೀಯಂತೇ ಮಾದೃಶಾಃ ಕ್ಷುದ್ರಜಂತವಃ
ಪರಾರ್ಥೇಬದ್ಧಕಕ್ಷ್ಯಾಣಾಂ ತ್ವಾದೃಶಾಮುದ್ಭವಃ ಕುತಃ'

ಲೋಕದಲ್ಲಿ ಎಷ್ಟೋ ಸಾಮಾನ್ಯ ಪ್ರಾಣಿಗಳು ಹುಟ್ಟುತ್ತವೆ, ಸಾಯುತ್ತವೆ. ಅವುಗಳ ಹುಟ್ಟಿನಿಂದ ಜನಸಾಮಾನ್ಯರಿಗೆ ಏನೂ ವಿಶೇಷವಾದ ಪ್ರಯೋಜನವಿಲ್ಲ. ಸಾವಿನಿಂದ ಹೆಚ್ಚಿನ ನಷ್ಟವೂ ಇಲ್ಲ. ಆದರೆ ಪರೋಪಕಾರಕ್ಕಾಗಿಯೇ ಬದ್ಧಕಕ್ಷ್ಯರಾಗಿರುವವರ ಜನ್ಮವು ಬಹಳ ದುರ್ಲಭವಾದದ್ದು. ಎಂದು ಈ ಪದ್ಯದ ಅಭಿಪ್ರಾಯ. ಹಾಗೆಯೇ ಪರೋಪಕಾರಕ್ಕಾಗಿಯೇ ನಿರಂತರವಾಗಿ ದುಡಿಯುತ್ತಿರುವ ಶ್ರೀಶ್ರೀ ಶಿವಕುಮಾರಸ್ವಾಮಿಗಳಂತಹವರ ಜನ್ಮ ಬಹಳ ದುರ್ಲಭವಾದದ್ದು.

**ಎಲ್ಲರೂ ಬಯಸಬೇಕಾದ ಜೀವನವುಳ್ಳವರು**

ಎಂತಹವರ ಬಹುಕಾಲ ಬದುಕನ್ನು ಬಯಸಬೇಕೆಂಬ ವಿಷಯದಲ್ಲಿ ಒಂದು ನೀತಿ ಪದ್ಯವು ಹೀಗೆ ಬೋಧಿಸುತ್ತದೆ.

'ಯಸ್ಮಿನ್ ಜೀವತಿ ಜೀವಂತಿ ಬಹವಃ ಸತು ಜೀವತು।
ಬಕೋಽಪಿ ಕಿಂ ನ ಕುರುತೇ ಚಂಚ್ವಾ ಸ್ವೋದರ ಪೂರಣಂ॥

ಒಂದು ಬಕಪಕ್ಷಿಯೂ ಸಹ ಕೊಕ್ಕಿನ ಸಹಾಯದಿಂದ ತನ್ನ ಹೊಟ್ಟೆಯನ್ನು ತುಂಬಿಕೊಳ್ಳುತ್ತದೆ. ಆದ್ದರಿಂದ ತನ್ನೊಬ್ಬನ ಹೊಟ್ಟೆಯನ್ನು ತುಂಬಿಕೊಳ್ಳುವುದು ಒಂದು ದೊಡ್ಡ ಕೆಲಸವಲ್ಲ.

ಆದರೆ ಯಾವನೊಬ್ಬನು ಬದುಕಿದ್ದರೆ ಅವನ ಆಶ್ರಯದಿಂದ ಅನೇಕರು ಬದುಕುವರೊ ಅಂತಹ ಮಹಾತ್ಮನ ಬದುಕನ್ನು ಎಲ್ಲರೂ ಬಯಸಬೇಕು. ಎಂದು ಈ ಶ್ಲೋಕದ ಅಭಿಪ್ರಾಯ. ಇದರಂತೆ ಶ್ರೀಶ್ರೀ ಶಿವಕುಮಾರಸ್ವಾಮಿಗಳವರನ್ನು ಆಶ್ರಯಿಸಿ, ಅನೇಕರು ಬದುಕುತ್ತಿರುವುದರಿಂದ ಶ್ರೀಶ್ರೀ ಸ್ವಾಮಿಗಳವರು ಬಹುಕಾಲ ಸುಖವಾಗಿ ಬದುಕಲೆಂದು ದೇವರನ್ನು ಪ್ರಾರ್ಥಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ತಾ॥ ೭-೧-೧೯೮೦ **ವೈ. ವಿಶ್ವನಾಥಶಾಸ್ತ್ರಿ**
ತುಮಕೂರು ಶ್ರೀ ಸಿದ್ಧಗಂಗಾ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ ನಿವೃತ್ತ ಪ್ರಾಧ್ಯಾಪಕ

## ಧನ್ಯತೆ ಪಡೆದೆ*

ಸಲವತ್ತು ವರುಷಗಳ ಹಿಂದಿನ ಮಾತು. ಆಗ ನಾನು ತಾರುಣ್ಯದ ಭರದಲ್ಲಿದ್ದೆ. ನಿತ್ಯವೂ ಇಷ್ಟಲಿಂಗ ಪೂಜೆ ಮಾಡಬೇಕೆಂಬ ಆಸಕ್ತಿ ನನಗೆ ಆಗ ಇರಲಿಲ್ಲ. ನನ್ನ ದೇಹವು ಸ್ಥೂಲವಾಗಿತ್ತು. ಎದೆಯ ಮೇಲಿನ ಲಿಂಗದ ಕರಂಡಕವು ಅನಾನುಕೂಲವೆಂಬ ಭಾವ ಮೂಡುತ್ತಿತ್ತು. ಪಾಶ್ಚಾತ್ಯರೀತಿಯ ವೇಷಕ್ಕಾಗಿ 'ಟಾಯ್' ಧರಿಸುವಾಗಲಂತೂ ಈ ಭಾವ ಹೆಚ್ಚಾಗಿ ಉಂಟಾಗುತ್ತಿತ್ತು, ಆಗ ನಾನು ಪ್ರಥಮ ಸಲ ಸಿದ್ಧಗಂಗಾ ಕ್ಷೇತ್ರ ಸಂದರ್ಶಿಸಿದೆ.

ಈ ಕ್ಷೇತ್ರದ ಮಹಿಮೆಯನ್ನು ಕುರಿತು ಓದಿದ್ದೆ ಕೇಳಿದ್ದೆ. ನವಿಲುಗುಂದದ ಪೂಜ್ಯ ಶ್ರೀ ಬಸವಲಿಂಗಸ್ವಾಮಿಗಳ ಪ್ರೇರಣೆಯಿಂದ ಈ ಕ್ಷೇತ್ರವನ್ನು ಸಂದರ್ಶಿಸುವ ಸಂದರ್ಭ ಒದಗಿ ಬಂದಿತು.

ಅಲ್ಲಿಯ ನಿಸರ್ಗಶೋಭೆ, ಬೆಟ್ಟದ ಹಿತಮಿತವಾದ ಎತ್ತರ, ಬೆಟ್ಟದಗಂಗೆ. ಬೆಟ್ಟದ ಮಡಿಲಲ್ಲಿಯ ಹಳೆಯ ಮಠ, ಇನ್ನಿಷ್ಟು ಕೆಳಗೆ ವಿದ್ಯಾಲಯ, ವಿದ್ಯಾರ್ಥಿ ವಸತಿಗೃಹ, ದೊಡ್ಡದಾದ ಭೋಜನ ಶಾಲೆ–ಇವು ನನ್ನನ್ನು ಆಕರ್ಷಿಸಿದವು. ನಿಸರ್ಗ, ಬೆಟ್ಟ, ಜಲಾಶಯ, ಮಹಿಮಾಪುರುಷರ ತಾಣ. ಏಕಾಂತ, ವಿದ್ಯಾರ್ಥಿಗಳು, ಅವರ ವ್ಯಾಸಂಗದ ಕೊಠಡಿಗಳು ನನಗೆ ಸಂತಸವನ್ನು ತರುವ ಸಂಗತಿಗಳಾಗಿವೆ. ಇವನ್ನೆಲ್ಲ ಏಕತ್ರ ಕಾಣುವ ಅನುಕೂಲತೆಯಿಂದಾಗಿ ಪ್ರಥಮ ಸಂದರ್ಶನದಲ್ಲಿಯೇ ಈ ಕ್ಷೇತ್ರವು ನನ್ನಲ್ಲಿ ಒಲವನ್ನು ತುಂಬಿತು. ಸೌಜನ್ಯದ ಸಹಜವಾದ ಆತಿಥ್ಯ, ಒಳ್ಳೆಯ ಊಟತಿಂಡಿ. ವಿದ್ಯಾವ್ಯಾಸಂಗ, ಧರ್ಮಗಳನ್ನು ಕುರಿತ ಸಂಭಾಷಣೆಗೆ ಅವಕಾಶ ಇವೂ ನನಗೆ ಅಲ್ಲಿ ಒದಗಿ ಬಂದವು.

ಕ್ಯಾತಸಂದ್ರ ರೈಲ್ವೆ ನಿಲ್ದಾಣದ ಬಳಿ ಪಕ್ಕಕ್ಕೆ ತಿರುಗಿ ಮುಂದೆ ಸಾಗಿದರೆ ಒಂದು ವಿಶಾಲ ಬೀದಿ. ರೈಲ್ವೆ ಲಾಯಿನ್ ಆಚೆಗಿನ ಬೀದಿಯನ್ನು ಪ್ರವೇಶಿಸಿದಾಗ ನಾವು ಸಿದ್ಧಗಂಗಾಕ್ಷೇತ್ರದ ಪರಿಸರದಲ್ಲಿ ಕಾಲಿಡುತ್ತೇವೆ. ರೈಲ್ವೆ ಲಾಯಿನ್ ಈಚೆಗೆ ಸಂತೆಯಗಲಭೆ. ಆಚೆಗೆ ಪ್ರಶಾಂತ ಪವಿತ್ರ ಮಂದಿರ.

ಬೆಟ್ಟದ ಮೇಲೆ ಗಂಗೆಯಿರುವ ಸ್ಥಳದಲ್ಲಿ ಚಿಕ್ಕದಾದ ಒಂದು ಹಳೆಯ ಕಟ್ಟಡ, ಅಲ್ಲಿಯೊಂದು ಕಟ್ಟೆ, ಪರಮಪವಿತ್ರವಾದ ಪರಂಪರೆಯುಳ್ಳ ಸ್ಥಳವದು. ಮಹಿಮಾ ಪುರುಷ ಶ್ರೀ ಎಡೆಯೂರು ಸಿದ್ಧಲಿಂಗೇಶ್ವರರು ಲಿಂಗಪೂಜೆ ಮಾಡಿಕೊಂಡ ಸ್ಥಳ. ಅಲ್ಲಿ ಬೆಳಗಿನ ಐದು ಗಂಟೆಗೆ ಲಿಂಗಪೂಜೆಯನ್ನು ಮಾಡಿಕೊಳ್ಳಬೇಕೆಂಬ ಸಲಹೆಯನ್ನು ಮಾಡಲಾಯಿತು. ಬೆಳಗು ಬೇಗನೆ ಏಳುವುದು, ಆಗ ಸ್ನಾನಮಾಡುವುದು, ಬೆಟ್ಟ ಏರುವುದು, ಲಿಂಗಪೂಜೆ ಮಾಡಿಕೊಳ್ಳುವುದು—ಇವು ನಮಗೆ ಆಸ್ಥೆಯ ವಿಷಯಗಳಾಗಿರಲಿಲ್ಲ. ಆಸ್ಥೆಯಿಲ್ಲದಾಗ ಮಾನವನಿಗೆ ಮರೆವು ಆಲಸ್ಯಗಳು ಸಹಜ. ಅಚ್ಚರಿಯ ಮಾತೆಂದರೆ ಅಂದು ನನಗೆ ಬೆಳಗಿನಲ್ಲಿ ಬೇಗನೆ ಎಚ್ಚರವಾಯಿತು. ಬೆಟ್ಟಕ್ಕೆ ಹೋದೆ, ಲಿಂಗಪೂಜೆಮಾಡಿಕೊಂಡೆ. ಅದು ನನ್ನಲ್ಲಿ ಅದ್ಭುತವಾದ ಪರಿಣಾಮವನ್ನುಂಟುಮಾಡಿತು. ಆ ಸಮಯ, ಆ ಸ್ಥಳ, ಅಲ್ಲಿಯ ವಾತಾವರಣ, ಲಿಂಗಪೂಜೆಯ ಕಾಲದ ಅನುಭವ ಇವು ನನ್ನ ಮನದಲ್ಲಿ ಅಚ್ಚಳಿಯದೆ ಉಳಿದು ನಿಂತಿವೆ. ಪ್ರತಿನಿತ್ಯ ಇಷ್ಟಲಿಂಗ ಪೂಜೆ ಮಾಡಿಕೊಳ್ಳಬೇಕೆಂದು ನಾನು ನಿರ್ಧರಿಸಿದೆ. ಇಂದಿಗೂ ಅದನ್ನು ಪಾಲಿಸುತ್ತಿರುವೆ. ಉರಿಬಿಸಿಲಿನಲ್ಲಿ ಶಿಷ್ಟಾಚಾರಕ್ಕೆಂದು ಕೊರಳಿಗೆ 'ಟಾಯ್' ಬಿಗಿಯುವ ನನಗೆ ಎದೆಯ ಮೇಲೆ ಲಿಂಗದ ಕರಂಡಕ ಅನಾನುಕೂಲವಾಗಬೇಕಾಗಿಲ್ಲವೆಂದು ಭಾವಿಸಿದೆ. ಹೀಗೆ ಪ್ರಥಮ ದರ್ಶನದಲ್ಲಿಯೇ ನನ್ನಲ್ಲಿ ಭಕ್ತಿಯನ್ನು ಕುದುರಿಸಿದ ತಾಣವೆಂದು ನಾನು ಈ ಕ್ಷೇತ್ರವನ್ನು ಯಾವಾಗಲೂ ಸ್ಮರಿಸುತ್ತೇನೆ. ಮೂರು ನುಡಿಗಳಲ್ಲಿಯೇ ಹೇಳುವುದಾದರೆ ನಾನು ಸಿದ್ಧಗಂಗೆಗೆ ಹೋದೆ. ಲಿಂಗಪೂಜೆ ಮಾಡಿಕೊಂಡೆ. ಧನ್ಯತೆ ಪಡೆದೆ ಎಂದು ಹೇಳಬಯಸುತ್ತೇನೆ.

---

* ಸಿದ್ಧಗಂಗಾ ತ್ರೈಮಾಸಿಕದಿಂದ

ಇದಾದ ನಂತರ ತುಮಕೂರು ನಗರದ ಮಾರ್ಗವಾಗಿ ಪ್ರಯಾಣ ಮಾಡುವ ಸಂದರ್ಭಗಳಲ್ಲಿ ತಪ್ಪದೆ ಸಿದ್ಧಗಂಗೆಯಲ್ಲಿ ತಂಗಿ ಹೋಗುವ ಪರಿಪಾಠವನ್ನಿಟ್ಟುಕೊಂಡಿದ್ದೇನೆ. ಟ್ರೈನಿನಲ್ಲಿ ಹೋಗುವಾಗ ಬೆಟ್ಟವನ್ನು ರಾತ್ರಿಯಾದರೆ ಅಲ್ಲಿಯ ದೀಪವನ್ನು ಆಸಕ್ತಿಯಿಂದ ನಿರೀಕ್ಷಿಸುತ್ತೇನೆ.

ಈಚೆಗೆ ಸಿದ್ಧಗಂಗೆಯಲ್ಲಿ ಅನ್ನದಾಸೋಹದ, ವಿದ್ಯಾದಾಸೋಹದ ಕಾರ್ಯವು ವಿಶಾಲವಾಗಿ ಬಹುಮುಖವಾಗಿ ಹಬ್ಬಿದೆ. ಹೊಸ ಕಟ್ಟಡಗಳು ಎದ್ದಿವೆ. ಜನರಲ್ ಹಾಸ್ಟೆಲ್ ಎದ್ದು ಕಾಣುವಂತಿದೆ. ಆಧುನಿಕ ಸೌಕರ್ಯಗಳಿಂದ ಕೂಡಿದ ಅಥಿತಿಗೃಹ ನಿರ್ಮಾಣವಾಗಿದೆ. ಸಾಹಿತ್ಯ ಸಂಸ್ಕೃತಿ ಧರ್ಮಗಳನ್ನು ಕುರಿತ ವಿವಿಧ ಚಟುವಟಿಕೆಗಳು ರೂಪುಗೊಂಡಿವೆ. ಜಾತ್ರೆಯ ಕಾಲಕ್ಕೆ ಲೌಕಿಕ ಬಾಳಿನ ಅಭಿವೃದ್ಧಿಯ ದಿಸೆಯಲ್ಲಿ ಕಾರ್ಯಕ್ರಮಗಳು ವ್ಯಾಪಕವಾಗಿ ಸಂಘಟಿತವಾಗುತ್ತಿವೆ. ಇಂದು ಸಿದ್ಧಗಂಗೆ ಲೌಕಿಕ ಆಧ್ಯಾತ್ಮಿಕ ಬಾಳಿನ ಸಜೀವ ಕೇಂದ್ರವಾಗಿ ಪರಿಣಮಿಸಿದೆ. ಇದಕ್ಕೆ ಈಗಿನ ಪೂಜ್ಯ ಪೀಠಾಧ್ಯಕ್ಷ ಡಾ। ಶ್ರೀ ಶಿವಕುಮಾರ ಸ್ವಾಮಿಗಳ ಅದ್ವಿತೀಯವೆನಿಸುವ ಪ್ರಭಾವಶಾಲಿ ವ್ಯಕ್ತಿತ್ವ ವಿಶೇಷವು ಕಾರಣವಾಗಿದೆ. ಇಂದಿನ ಅಸ್ತವ್ಯಸ್ತ ಕಾಲದಲ್ಲಿಯೂ ಇಂತಹ ಸ್ವಾಮಿಗಳು ಇರುವುದು ನಮ್ಮ ಸಮಾಜದ ಪುಣ್ಯವಿಶೇಷವೆಂದು ನಾನು ಭಾವಿಸುತ್ತೇನೆ. ಸುವಿದ್ಯಾಸಂಪನ್ನತೆ, ಪ್ರಗತಿಪರ ದೃಷ್ಟಿ, ಲೋಕಕಲ್ಯಾಣದ ಮನೋಭಾವ, ಪ್ರತಿಭೆ, ಪಾಂಡಿತ್ಯ, ಧರ್ಮನಿಷ್ಠೆ, ಬೆರಗುಗೊಳಿಸುವ ದುಡಿಮೆ, ಇಂದಿನ ಸಮಾಜ, ಸರಕಾರಗಳನ್ನು ಕುರಿತು ಸವಿವರವಾದ ಸಾಕಲ್ಯವಾದ ತಿಳುವಳಿಕೆ, ಸೂಕ್ಷ್ಮ ನಿರೀಕ್ಷಣೆ, ಯಥೋಚಿತ ವಿಮರ್ಶೆ, ಭಕ್ತರಲ್ಲಿ, ಸಾರ್ವಜನಿಕರಲ್ಲಿ, ವಿದ್ಯಾವಂತರಲ್ಲಿ, ಪ್ರತಿಷ್ಠಿತರಲ್ಲಿ, ಸರಕಾರದಲ್ಲಿ ಅವರಿಗಿರುವ ಗೌರವ ಪುರಸ್ಸರ ಸ್ಥಾನ, ಕ್ಷೇತ್ರಕ್ಕೆ ಬರುವವರನ್ನು ಆತ್ಮೀಯವಾಗಿ ಕಾಣುವ ಅವರ ವಿಶಾಲ ದೃಷ್ಟಿ ಇವುಗಳಿಗೆ ನಾನು ಮಾರುಹೋಗಿದ್ದೇನೆ. ಈಗಲೂ ಬೆಳಗಿನ ಐದು ಗಂಟೆಗೆ ಅವರೊಂದಿಗೆ ಲಿಂಗಪೂಜೆಗೆ ಕುಳಿತು ಅವರನ್ನು ನಿಟ್ಟಿಸುವಾಗ ಪ್ರಭುದೇವರ ಸಾನ್ನಿಧ್ಯವಾದಂತೆ ಭಾಸವಾಗುತ್ತಿದೆ. ಇಂಥಹ ತೇಜಃಪುಂಜ ಸತ್ವಶಾಲಿ ಸ್ವಾಮಿಗಳಿಂದಾಗಿ ಈ ಕ್ಷೇತ್ರದ ಘನತೆ ಹೆಚ್ಚಿದೆ. 'ಖ್ಯಾತಿ, ಪೂಜಾಲಾಭದಿಚ್ಛೆಗೆ ಕೋಳು ಹೋಗಿ ಮಠಮಂದಿರಗಳು ಹಸಗೆಡುತ್ತಿರುವ ಸನ್ನಿವೇಶವಿರುವಾಗ 'ಪೂಜ್ಯ ಶಿವಕುಮಾರಸ್ವಾಮಿಗಳ ಉಪಸ್ಥಿತಿಯು ಮನಸ್ಸಿಗೆ ನೆಮ್ಮದಿಯನ್ನು ತರುತ್ತಿದೆ.

ಈ ಕ್ಷೇತ್ರದಲ್ಲಿ ಧಾರ್ಮಿಕ ಕರ್ಮಗಳು ತೃಪ್ತಿಕರವಾಗಿ ನಡೆಯುತ್ತಿವೆ. ಸ್ವಾಮಿಗಳ ಪ್ರಭಾವದಿಂದಾಗಿ ಇಲ್ಲಿ ನಿಷ್ಠಾವಂತ ಕಾರ್ಯಕರ್ತರು ರೂಪುಗೊಳ್ಳುತ್ತಾರೆ. ಹಿಂದೆ ಬೆಟ್ಟದ ಗಂಗೆಯ ಬಳಿ ಶ್ರೀ ಗಂಗಾಧರದೇವರು ಅರ್ಚನೆ ಮಾಡುತ್ತಿದ್ದರು. ಅದರ ಸಾತ್ವಿಕ ಕಳೆ, ಸವಿಯಾದ ಸ್ವಭಾವ, ಮಂತ್ರ ಪಠಣದ ಅಸ್ಖಲಿತ ವಾಣಿಗಳನ್ನು ನಾನು ಮರೆಯಲಾರೆ. ಈಗ ಅಲ್ಲಿ ಅವರ ಭಾವಚಿತ್ರವಿದೆ. ಹೊಸ ಪೀಳಿಗೆಯ ತರುಣರು ಅರ್ಚನೆಯ ಕಾಯಕವನ್ನು, ಮಂತ್ರ ಪಠಣವನ್ನು ಅವರ ರೀತಿಯಲ್ಲಿ ನಡೆಸುವ ಹೊರೆಯನ್ನು ಹೊತ್ತಿದ್ದಾರೆ. ಇಲ್ಲಿ ನಡೆಸುವ ಧಾರ್ಮಿಕ ವಿಧಿಗಳ ವಿವರ ನನ್ನ ಉದ್ದೇಶವಾಗಿಲ್ಲ.

ಒಮ್ಮೆ ಅನಿರೀಕ್ಷಿತವಾಗಿ ಈ ಕ್ಷೇತ್ರಕ್ಕೆ ನಾನು ಹೋಗಬೇಕಾಯಿತು. ರೈಲ್ವೇಲಾಯಿನಿನ ಆಚೆಗಿನ ಬೀದಿಯನ್ನು ಪ್ರವೇಶಿಸಲು ಸಾಧ್ಯವಿಲ್ಲದಂತೆ ಜನಸಮೂಹ ಸೇರಿತ್ತು. ಆಗ ಜಾತ್ರೆ ಸೇರಿತ್ತು. ಇದು ನನಗೆ ಹೊಸ ಅನುಭವ. ಹೇಗೋ ನುಸುಳಿಗೊಂಡು ಹೋದೆ. 'ಸ್ವಾಮಿಗಳೆಲ್ಲಿ ?' ಎಂದು ಕೇಳಿದೆ. 'ಅಗೋ ಅಲ್ಲಿ, ಎದುರಿಗೆ ಕುಳಿತಿದ್ದಾರೆ'ಎಂದು ಹೇಳಿದರು. ಎದುರಿಗೆ ನೋಡಿದಾಗ ಸ್ವಾಮಿಗಳು ನನ್ನ ಕಣ್ಣಿಗೆ ಬೀಳಲಿಲ್ಲ. ಮತ್ತೆ ಮತ್ತೆ ಕೇಳಿ ಸನಿಹಕ್ಕೆ ಹೋದೆ. ಸ್ವಾಮಿಗಳ ಸುತ್ತಲೂ ವಿಪರೀತ ಜನಸಂದಣಿ. ಆಗ ಅವರು ಭಕ್ತರಿಗೆ 'ಯಂತ್ರ ತಂತ್ರ' ಕಟ್ಟುವ ಕಾರ್ಯದಲ್ಲಿ ನಿರತರಾಗಿದ್ದರು. ಈ ದಿಸೆಯಲ್ಲಿ ಜನತೆಗೆ ಅವರಲ್ಲಿ ಅಪಾರವಾದ ಶ್ರದ್ಧೆ. ಈ ವಿದ್ಯೆಯಲ್ಲಿಯೂ ಸ್ವಾಮಿಗಳು ನಿಷ್ಣಾತರೆಂಬುದು ಆಗ ನನಗೆ ಹೊಳೆಯಿತು. ಜನಸಂದಣಿಯ ಮಧ್ಯದಲ್ಲಿ ವಾತ್ಸಲ್ಯಪೂರ್ವಕವಾಗಿ ನನ್ನನ್ನು ಕಂಡರು. ಹೊರಗೆ ಜಾತ್ರೆಯ ವೈಭವ, ಉಪಯುಕ್ತಪ್ರದರ್ಶನಗಳು. ಜನತೆಯ ಲೌಕಿಕ ಬಾಳಿನ ಅಭಿವೃದ್ಧಿಯ ದಿಸೆಯಲ್ಲಿ ಈ ಕ್ಷೇತ್ರವು ಕೈಕೊಂಡ ಕಾರ್ಯದ ಪರಿಚಯ ನನಗೆ ಒದಗಿತು.

ವಿದ್ಯಾರಂಗದಲ್ಲಿ ಸಿದ್ಧಗಂಗಾ ಕ್ಷೇತ್ರ, ಅಲ್ಲಿಯ ಪೀಠಾಧ್ಯಕ್ಷರ ಸಾಧನೆಗಾಗಿ ನಾವೆಲ್ಲ ಗೌರವದಿಂದ ತಲೆಬಾಗಬೇಕು. ಅಲ್ಲಿ ಏಕತ್ರ ಸೇರಿರುವ ವಿದ್ಯಾರ್ಥಿಗಳ ಸಂಖ್ಯೆಯೇ ನಮ್ಮನ್ನು ಬೆರಗುಗೊಳಿಸುವುದು. ವಿದ್ಯಾಕ್ಷೇತ್ರದ ವಿವಿಧ ಶಾಖೆಗಳಲ್ಲಿಯ ವ್ಯಾಸಂಗದ ಅನುಕೂಲತೆಯನ್ನು ಅಲ್ಲಿ ಕಲ್ಪಿಸಲಾಗಿದೆ. ಅಲ್ಲದೆ ಎತ್ತರದ ಹಂತವನ್ನು ಸಾಧಿಸುವ ದೃಷ್ಟಿಯೂ ಅಲ್ಲಿದೆ. ಬಹುದೊಡ್ಡ ಸಂಖ್ಯೆಯ ವಿದ್ಯಾರ್ಥಿಗಳಿಗೆ ಅನ್ನದಾನ ಮಾಡುವ ಕಾರ್ಯ ಈ ಕಾಲದಲ್ಲಿ ಕಷ್ಟಕರವಾದುದು. ಆದರೆ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳು ಆ ಕಾರ್ಯವನ್ನು ಒಂದುಲೀಲೆಯಂತೆ ಭಾವಿಸುತ್ತಾರೆ. ಹಣ ಧಾನ್ಯ ಸಂಗ್ರಹಕ್ಕಾಗಿ ಅವರು ಊರೂರಿಗೆ, ಮನೆಮನೆಗೆ, ಅಂಗಡಿ ಅಂಗಡಿಗೆ ಹೋಗುತ್ತಾರೆ. ಆಗ ಹಣ ಕಾಳುಗಳ ಸಂಗ್ರಹದೊಂದಿಗೆ ನಾಡಿನ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯ ಬಗೆಗೆ ವಿಷಯ ಸಂಗ್ರಹವನ್ನು ಸಂಶೋಧನೆಯ ವಿದ್ಯಾರ್ಥಿಯಂತೆ ಮಾಡುತ್ತಾರೆ. ಅವರಿಗೆ ಎಲ್ಲ ಬಗೆಯ ಅಂಕಿಸಂಖ್ಯೆಗಳು ಹೆಸರುಗಳು ಮುಖೋದ್ಗತ. ಅವರ ಪರಿಶೀಲನೆ, ನಿರ್ಣಯ, ಸಮರ್ಪಕವಿಮರ್ಶೆ, ಪ್ರಕಾಶಮಯ. ಅವರೊಂದಿಗೆ ಒಂದು ಗಂಟೆಯ ಸಂಭಾಷಣೆಯೆಂದರೆ ಒಳ್ಳೆಯ ಶಿಕ್ಷಣ ಪಡೆದಂತೆ.

ಒಮ್ಮೆ ಬೆಳಗಿನ ಆರು ಗಂಟೆಗೆ ಅವರನ್ನು ಬೀಳ್ಕೊಳ್ಳಲು ಹೋದಾಗ ಸ್ವಾಮಿಗಳು ಕಾಲೇಜ್ ವರ್ಗಗಳ ವಿದ್ಯಾರ್ಥಿಗಳಿಗೆ ಪಾಠ ಹೇಳುವುದನ್ನು ಕಂಡೆ. ಹಣ ಕಾಳು ಸಂಗ್ರಹಿಸುವ ಹೊಣೆಯೊಂದಿಗೆ ಕಾಲೇಜಿನ ವಿದ್ಯಾರ್ಥಿಗಳಿಗೆ ಪಾಠವನ್ನೂ ಹೇಳುವ ಹೊಣೆ ವಹಿಸಿಕೊಂಡ ಈ ಸ್ವಾಮಿಗಳ ಬಗೆಗೆ ನನ್ನ ಗೌರವ ಇಮ್ಮಡಿಸಿತು. ಬೆಳಗಿನ ಮೂರು ಗಂಟೆಯಿಂದ ರಾತ್ರಿ ಹನ್ನೊಂದು ಗಂಟೆಯವರೆಗೆ ಕಾರ್ಯನಿರತರಾಗಿರುವ ಅವರ ಅಗಾಧ ಕಾರ್ಯಶಕ್ತಿಯೂ ಅಸಾಮಾನ್ಯವೆಂದೇ ಹೇಳಬೇಕು.

ಸೀಮಿತ ಸ್ಥಳಾವಕಾಶದಲ್ಲಿ ಇಲ್ಲಿ ವಿದ್ಯಾರ್ಥಿಗಳು ದೊಡ್ಡ ಸಂಖ್ಯೆಯಲ್ಲಿ ಸೇರುವ ದೃಶ್ಯವೂ ನನ್ನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿದೆ. ಸ್ವಾಮಿಗಳು ಪಾಠ ಹೇಳುತ್ತಿರುವಾಗ ಕಟ್ಟೆಯಮೇಲೆ, ಸೋಪಾನಗಳ ಮೇಲೆ, ನೆಲದ ಮೇಲೆ ವಿದ್ಯಾರ್ಥಿಗಳು ಕುಳಿತುದನ್ನು ನಾನು ಕಂಡೆ. ಕೋಣೆಗಳು ತುಂಬಿ ಹೊರಸೂಸಿ ದೊರಗೆ ಸ್ಥಳವಿರುವಲ್ಲಿ ವಿದ್ಯಾರ್ಥಿಗಳು ಮಲಗುವುದುಂಟು. ವರಾಂಡ, ಅಂಗಳ, ಉದ್ಯಾನ, ಬೀದಿಗಳಲ್ಲಿಯ ದೀಪಗಳ ಕೆಳಗೆ ಕುಳಿತು ವಿದ್ಯಾರ್ಥಿಗಳು ಓದುತ್ತಿರುವುದನ್ನು ಕಂಡಿದ್ದೇನೆ. ವಿದ್ಯಾರ್ಜನೆಗಾಗಿ ಹೀಗೆ ಪರಿಶ್ರಮಿಸುವ ಇಲ್ಲಿಯ ವಿದ್ಯಾರ್ಥಿಗಳ ಬಗೆಗೆ ನನ್ನ ಹೃದಯ ತುಂಬಿ ಬರುತ್ತಿದೆ. ಇಷ್ಟೊಂದು ಜನ ವಿದ್ಯಾರ್ಥಿಗಳು ಈ ಕ್ಷೇತ್ರಕ್ಕೆ ಆಕರ್ಷಿತವಾಗುವುದು ಪೂಜ್ಯ ಸ್ವಾಮಿಗಳ ವ್ಯಕ್ತಿತ್ವ ವಿಶೇಷದಿಂದಲೇ.

ಸಿದ್ಧಗಂಗಾ ಕ್ಷೇತ್ರದ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳ, ಅಲ್ಲಿಯ ವಿದ್ಯಾರ್ಥಿಗಳ ಬಗೆಗೆ ನನ್ನ ಆಕರ್ಷಣೆ ಹಿರಿದು. ಅಂತೆಯೆ ಅಲ್ಲಿ ನಾನು ಅನೇಕಸಲ ತಂಗಿ ಸಂತಸಪಟ್ಟಿದ್ದೇನೆ. ಪೂಜ್ಯ ಶ್ರೀಗಳ ಸಾನಿಧ್ಯದಲ್ಲಿ ನನ್ನ ಮನಸ್ಸಿಗೆ ಒಳ್ಳೆಯ ಆಹಾರವನ್ನು, ಸಂಸ್ಕಾರವನ್ನು ಪಡೆದಿದ್ದೇನೆ.

**ಎಸ್. ಎಸ್. ಮಾಳವಾಡ**
ನಿವೃತ್ತ ಕನ್ನಡ ಪ್ರಾಧ್ಯಾಪಕರು, ಕರ್ನಾಟಕ ವಿ.ವಿ. ಧಾರವಾಡ.

## ಮಹಾನ್ ಸಾಧಕ ಸಿದ್ಧಗಂಗಾಶ್ರೀ

ಕರ್ನಾಟಕದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಅರಿಯದ ಜನತೆ ಇರಲಾರದು. ಆ ಪವಿತ್ರ ಕ್ಷೇತ್ರಕ್ಕೆ ಪ್ರಾಂತೀಯ, ರಾಷ್ಟ್ರೀಯ, ಅಂತರ ರಾಷ್ಟ್ರೀಯ ಖ್ಯಾತಿಯನ್ನು ದೊರಕಿಸಿಕೊಟ್ಟ ಮಹತ್ವ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಡಾ॥ ಶ್ರೀಶ್ರೀ ಶಿವಕುಮಾರ ಸ್ವಾಮಿಯವರಿಗೆ ಸಲ್ಲುತ್ತದೆ. ಶ್ರೀಯವರ ಸೇವಾ ಕ್ಷೇತ್ರಗಳು ಹಲವಾರು. ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಆಡಿ ಆಚರಿಸಿದ ಬದುಕಿನ ಮೌಲ್ಯಗಳನ್ನು ಇಪ್ಪತ್ತನೆಯ ಶತಮಾನದಲ್ಲಿ ಸಜೀವವಾಗಿ ಆಚರಣೆಗೆ ತಂದ ಶ್ರೀಯವರದು ಮಹಾನ್ ಚೇತನ. ಸಕಲ ಜೀವಿಗಳಿಗೆ ಲೇಸನ್ನೇ ಮಾಡುವ, ಬಯಸುವ ಮಹಾನ್ ತಪಸ್ವಿ. ಮಹಾಮೇರುಸದೃಶ ಘನ ವ್ಯಕ್ತಿತ್ವದ ಜ್ಞಾನಯೋಗಿ. ಅವರು ನಡೆಸಿಕೊಂಡು ಬರುತ್ತಿರುವ ಒಂದೊಂದು ಕಾರ್ಯಗಳೂ ಜನತೆಗೆ ಅನೇಕ ರೀತಿಯ ಉಪಯೋಗಗಳನ್ನು ನೀಡುತ್ತಿರುವುದನ್ನು ನೋಡಿದರೆ ಅವರು ಭೂಲೋಕದ ಕಲ್ಪವೃಕ್ಷ ಎಂಬಂತಿದ್ದಾರೆ. ಈ ಭೂಕಲ್ಪವೃಕ್ಷದ ತಂಪು ನೆರಳಿನಲ್ಲಿ ಲಕ್ಷೋಪಲಕ್ಷ ಜನ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡು ಬದುಕಿನ ನಾನಾ ಕ್ಷೇತ್ರಗಳಲ್ಲಿ ಸತ್ಪ್ರಜೆಗಳಾಗಿ ಬಾಳುತ್ತಿದ್ದಾರೆ. ಪರಿಪಕ್ವ ಹೃದಯಿಗಳಾದ ಶ್ರೀಯವರ ಕೃಪಾಶೀರ್ವಾದಗಳಲ್ಲಿ ನಾನಾ ಕೋಮಿನ ಜನ, ಭೇದಭಾವಗಳನ್ನು ಮರೆತು ವ್ಯಕ್ತಿತ್ವ ವಿಕಾಸವನ್ನು ಮಾಡಿಕೊಂಡಿದ್ದಾರೆ. ಶ್ರೀಯವರ ಪವಾಡ ಸದೃಶವಾದ ದಿವ್ಯ ಸಾಧನೆ ಈ ಕಾಲದ ಬದುಕಿನ ಆಶ್ಚರ್ಯಗಳಲ್ಲಿ ಒಂದಾಗಿದೆ.

ಸಂನ್ಯಾಸಿಯಾಗಿ ಜೀವನದಲ್ಲಿ ಸಕ್ರಿಯವಾಗಿ ಭಾಗವಹಿಸದೆ, ಕೇವಲ ಆತ್ಮೋದ್ಧಾರವೇ ಬದುಕಿನ ಸಾರ ಸರ್ವಸ್ವ ಎಂದು ಬಗೆಯದೆ, ಅನೇಕ ಕ್ರಿಯಾತ್ಮಕವಾದ ಯೋಜನೆಗಳನ್ನು ಹಾಕಿಕೊಂಡು ಅವುಗಳ ಸಾಧನೆಯೇ ಪರಮ ಗುರಿಯೆಂಬಂತೆ ಹಗಲೂ ಇರುಳೂ ದುಡಿಯುತ್ತಿರುವ ಶ್ರೀ ಶಿವಕುಮಾರಸ್ವಾಮಿಗಳು ನಿಜವಾಗಿಯೂ ಪರಮ ನಿರಂಜನ. ವಿದ್ಯೆಯ ಮತ್ತು ವಿದ್ಯಾದಾನದ ಪ್ರಾಮುಖ್ಯತೆಯನ್ನು ಅರಿತ ಶ್ರೀಯವರು ಅನೇಕ ಪ್ರೌಢಶಾಲೆಗಳನ್ನೂ, ವಿಜ್ಞಾನ, ಕಲಾ, ವಾಣಿಜ್ಯ, ಶಿಕ್ಷಣ ಮತ್ತು ತಾಂತ್ರಿಕ ಮಹಾ ವಿದ್ಯಾಲಯಗಳನ್ನೂ ನೆಟ್ಟು ನೀರೆರೆದು ಬೆಳೆಸುತ್ತಿದ್ದಾರೆ. ಈ ಬೆಳೆಯ ಸತ್ಫಲವನ್ನು ಇಡೀ ನಾಡೇ ಭೋಗಿಸುತ್ತಿದೆ. ಶ್ರೀಯವರು ಜ್ಞಾನವನ್ನರಸಿ ಬರುವ ವಿದ್ಯಾರ್ಥಿಗಳಿಗೆ ಪ್ರಿಯಗುರು : ದೀನದಲಿತರಿಗೆ ಕರುಣಾಮಯಿಯಾದ ಕಾಮಧೇನು.

ಅನ್ನದಾನವು ವಿದ್ಯಾದಾನದಷ್ಟೇ ಏಕೆ ಇನ್ನೂ ಶ್ರೇಷ್ಠವಾದದ್ದೆಂದು ಶ್ರೀಗಳವರು ಮನಗಂಡು ಉಚಿತ ಅನ್ನಸಂತರ್ಪಣೆಯನ್ನು ಏರ್ಪಡಿಸಿದರು. ಬಸವಣ್ಣನವರು ಹೇಳಿದ 'ನಿತ್ಯ ನಿತ್ಯ ದಾಸೋಹ' ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಜೀವಂತವಾಗಿ ಅರಳಿದೆ. ಹಸಿದ ಹೊಟ್ಟೆಯನ್ನು ಮೊದಲು ತೃಪ್ತಿಪಡಿಸಿ, ಅನಂತರ ಜ್ಞಾನದಾಹವನ್ನು ತೃಪ್ತಿಪಡಿಸುವ ಮಹಾನ್ ಕಾರ್ಯವೂ ನಡೆಯುತ್ತಿದೆ. ಇಡೀ ಭಾರತದಲ್ಲಿಯೇ ಇಷ್ಟೊಂದು ಬೃಹತ್ ಪ್ರಮಾಣದಲ್ಲಿ ಸಾವಿರಾರು ಜನರ ಅನ್ನದಾನ ಇನ್ನು ಯಾವುದೇ ಒಂದು ಧಾರ್ಮಿಕ ಕೇಂದ್ರದಲ್ಲಿ ನಡೆಯುತ್ತಿಲ್ಲ, ಎಂದರೆ ಅತಿಶಯೋಕ್ತಿ ಆಗಲಾರದು.

ಜನತೆಯ ನೋವನ್ನು ಕೊರತೆಯನ್ನು ಅರಿತ ಶ್ರೀಯವರು ಅವರಿಗೆ ತಮ್ಮ ಅಪೂರ್ವವಾದ ಜ್ಞಾನಗಂಗೋತ್ರಿಯನ್ನು ಅವಿರತವಾಗಿ ಭಾಷಣಗಳ ಮೂಲಕ ಧಾರೆಯೆರೆದಿದ್ದಾರೆ. ತಮ್ಮ ಅಪೂರ್ವವಾದ ಅಭ್ಯಾಸದಿಂದ, ಧ್ಯಾನದಿಂದ, ಚಿಂತನೆಯಿಂದ ಸಂಚಯಿಸಿಕೊಂಡು ಬಂದ ಜ್ಞಾನಾಮೃತವನ್ನು ನಿರ್ವಂಚನೆಯಿಂದ ಹರಿಸಿದ್ದಾರೆ. ಅವರ ವಾಗ್ಮಿತೆಯ ಕಲೆಗೆ ಮನಸೋತಿರುವ ಜನಸ್ತೋಮ ಕಿಕ್ಕಿರಿದು ಸೇರುತ್ತದೆ. ಅವರ ಶ್ರೀಕಂಠದಿಂದ ಹೊಮ್ಮುವ ವಾಣಿಗೆ ಆತ್ಮೀಯತೆಯೂ, ಚಿಕಿತ್ಸಕಗುಣವೂ, ಜ್ಞಾನತೃಷೆಯಡಗಿಸುವ ದಿವ್ಯಶಕ್ತಿಯೂ, ಅಪೂರ್ವ ತೇಜಸ್ಸೂ ಇದೆ. ಅಂತಹ ಮಹತ್ತರವಾದ ಭಾಷಣಕಲೆ ಅವರಿಗೆ ದೈವದತ್ತವಾಗಿ ಲಭ್ಯವಾಗಿದೆ. ಕೆಲವರು ಇವರನ್ನು ಕರ್ನಾಟಕದ ವಿವೇಕಾನಂದ ಎಂದು ಕರೆದುದೂ ಉಂಟು.

ಸರಳತೆಯೇ ಮೂರ್ತಿವೆತ್ತ ಅವರ ದಿವ್ಯ ವ್ಯಕ್ತಿತ್ವ ಕರ್ನಾಟಕ ಜನತೆಯ ಹೃದಯವನ್ನು ಈ ಐವತ್ತು ವರ್ಷಗಳಲ್ಲಿ ವಿಶೇಷವಾಗಿ ಸೂರೆಗೊಂಡಿದೆ. ತಾವಾಗಿ ಹಚ್ಚಿಕೊಂಡ, ನೆಟ್ಟು ಬೆಳೆಸಿದ ಯೋಜನೆಗಳಲ್ಲಿ ತೊಡಗಿ ಅವಿಶ್ರಾಂತವಾಗಿ ದುಡಿಯುತ್ತಿರುವ ಈ ಜ್ಞಾನಯೋಗಿ, ಕರ್ಮಯೋಗಿ ವಯಸ್ಸಿನ ಶ್ರಮವನ್ನೂ ಲೆಕ್ಕಿಸದೆ ಕಾಯಕಯೋಗದಲ್ಲಿ ನಿರತರಾಗಿದ್ದಾರೆ. ಕರ್ನಾಟಕದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಒಂದಾಗಿ ಬೆರೆತು ಅದರ ಕೇಂದ್ರವಾಗಿದ್ದಾರೆ. ಶ್ರೀಯವರು ನೆಟ್ಟು ಬೆಳೆಸಿದ ಜ್ಞಾನವೃಕ್ಷದ ಒಂದೊಂದು ಜ್ಞಾನ ಶಾಖೆಗಳೂ ಈಗ ಜ್ಞಾನದ ಬೆಳಲನ್ನು ಬಿಡುತ್ತಿವೆ.

ಶ್ರೀಯವರ ಮನಸ್ಸು ವಿಶ್ವವಿಶಾಲವಾದುದು. ಅವರ ಅಚಲ ದೃಢಚಿತ್ತದಿಂದಲೇ ಹಾಕಿಕೊಂಡ ಯೋಜನೆಗಳೆಲ್ಲವೂ ಅರಳಲು ಸಾಧ್ಯವಾಗಿದೆ. ಶ್ರೀಯವರ ನಿಸ್ವಾರ್ಥ ಅವಿರತ ಶ್ರಮದ ಫಲದಿಂದ ತುಮಕೂರು ಒಂದು ವಿದ್ಯಾಕೇಂದ್ರವಾಗಿಯೂ ಸಾಂಸ್ಕೃತಿಕ ಕೇಂದ್ರವಾಗಿಯೂ ಭವ್ಯವಾಗಿ ಅರಳಿದೆ. ಅಲ್ಲಿ ತಮ್ಮ ಪ್ರಿಯಗುರುವಿನ ಕೃಪಾಶೀರ್ವಾದಗಳಲ್ಲಿ ಅರಳಿದ ವಿದ್ಯಾಕುಸುಮಗಳು ದೇಶವಿದೇಶಗಳಲ್ಲಿ ತಮ್ಮ ಜ್ಞಾನಸೌರಭವನ್ನು ಸೂಸುತ್ತಿವೆ.

ಕಳೆದ ಐವತ್ತಕ್ಕೂ ಮೇಲ್ಪಟ್ಟು ವರ್ಷಗಳಲ್ಲಿ ಲೋಕಸಂಚಾರಮಾಡಿ, ಅನ್ನದಾನ, ವಿದ್ಯಾದಾನ, ಜ್ಞಾನದಾನಗಳನ್ನು ಮಾಡಿ ಕರ್ನಾಟಕದ ಸಾಂಸ್ಕೃತಿಕ ಕೇಂದ್ರ ಚೇತನಗಳಲ್ಲಿ ಒಂದಾದ ಶ್ರೀಯವರ ಸೇವೆ ಅಪೂರ್ವವಾದದ್ದು ಮತ್ತು ಅನುಪಮವಾದದ್ದು. ದಾರಿದೀಪ ಸದೃಶವಾದ ಈ ಸಂಪಾದೀಪದ ಮಹಾನ್ ಚೇತನದ ಅಧಿಕಾರ ಸ್ವೀಕರಿಸಿದ ಐವತ್ತು ವರ್ಷಗಳ ಮಹತ್ವಪೂರ್ಣ ಚಿನ್ನದ ಹಬ್ಬವನ್ನು ಆಚರಿಸುತ್ತಿರುವುದು ಅತ್ಯಂತ ಸ್ತುತ್ಯಾರ್ಹವಾದ ಮತ್ತು ಅತ್ಯಂತ ಶ್ಲಾಘ್ಯವಾದ ಕಾರ್ಯವಾಗಿದೆ.

ಪಿ. ಮಲ್ಲಿಕಾರ್ಜುನಪ್ಪ
ಮಾಜಿ ಪಿ. ಯು. ಸಿ. ಬೋರ್ಡ್ ಡೈರೆಕ್ಟರ್

# ಅನ್ನದಾನ-ವಿದ್ಯಾದಾನಗಳ ಸಂಗಮ

ಶ್ರೀಕ್ಷೇತ್ರ ಸಿದ್ಧಗಂಗೆಯು ಇಡಿಯ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದ ತೀರ್ಥಸ್ಥಳ. ಈ ಕ್ಷೇತ್ರ ದಿನೇ ದಿನೇ ಕೀರ್ತಿಗಳಿಸುತ್ತಿರಲು ಮುಖ್ಯ ಕಾರಣ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರು. ಶ್ರೀಶ್ರೀಗಳವರು 'ಕಾಯಕವೇ ಕೈಲಾಸ' ಎಂಬ ವಚನದಂತೆ ನಡೆಸುತ್ತಿರುವ ಮಹಾಕಾಯಕವೆಂದರೆ ಅನ್ನದಾನ ಮತ್ತು ವಿದ್ಯಾದಾನ. ಸಾವಿರಾರು ಬಡವಿದ್ಯಾರ್ಥಿಗಳು ಶ್ರೀ ಸಿದ್ಧಗಂಗಾ ಮಠದ ಆಶ್ರಯದಲ್ಲಿ ಬೆಳೆದು ತಮ್ಮ ಜೀವನವನ್ನು ಉತ್ತಮ ಮಾರ್ಗದಲ್ಲಿ ನಡೆಸುತ್ತಿದ್ದಾರೆ. ಇಂದಿಗೂ ಅನೇಕ ಸಾವಿರ ವಿದ್ಯಾರ್ಥಿಗಳು ಅಲ್ಲಿ ಅನ್ನ, ವಿದ್ಯೆ ಪಡೆಯುತ್ತಿದ್ದಾರೆ.

'ಅನ್ನದಾನಂ ಮಹಾದಾನಂ' ಎಂಬುದು ಎಲ್ಲರಿಗೂ ತಿಳಿದ ಸಂಗತಿ. ಪ್ರಾಣಿಗೆ ಜೀವಿಸಲು ಅನ್ನ ಮುಖ್ಯ. ಅನ್ನದಿಂದಲೇ ಬಹುಕಾಲ ಮತ್ತು ಸುಖದಿಂದ ಪ್ರಾಣಧಾರಣೆ ಸಾಧ್ಯ. 'ಶರೀರಮಾದ್ಯಂ ಖಲು ಧರ್ಮಸಾಧನಮ್' ಎಂದು ಕಾಳಿದಾಸನು ಧರ್ಮಸಾಧನೆಗೆ ಶರೀರ ಬೇಕೇಬೇಕೆಂದು ಸಾರಿ ಹೇಳಿದ್ದಾನೆ. ಆದರೆ ಶರೀರವು ಧರ್ಮಸಾಧನೆಯಲ್ಲಿ ತೊಡಗಬೇಕಾದರೆ ಅದಕ್ಕೆ ಯೋಗ್ಯವಾದ ಆಹಾರ ಬೇಕು. 'ಬುಭುಕ್ಷಿತಃ ಕಿಂ ನ ಕರೋತಿ ಪಾಪಮ್' ಎಂದು ಸುಭಾಷಿತಕಾರರು ನುಡಿದು, ಉಪವಾಸವಿದ್ದವ ಅನ್ನಕ್ಕಾಗಿ ಯಾವ ಪಾಪಕಾರ್ಯಕ್ಕೂ ಹೇಸುವದಿಲ್ಲವೆಂದು ಎಚ್ಚರಿಸಿದ್ದಾರೆ. ಹನ್ನೆರಡು ವರುಷ ಬರಗಾಲ ಬಿದ್ದಾಗ ವಿಶ್ವಾಮಿತ್ರ ಮಹರ್ಷಿಗಳು ಚಾಂಡಾಲನ ಮನೆಯಲ್ಲಿ ನಾಯಿಯಮಾಂಸವನ್ನು ಸಹ ತಿನ್ನಲು ಹಿಂಜರಿಯಲಿಲ್ಲವೆಂಬ ಕಥೆ ಮಹಾಭಾರತದಲ್ಲಿ ಬಂದಿದೆ. ಆದ್ದರಿಂದಲೇ ಅನ್ನದಾನ ಬಹುಮುಖ್ಯವಾದ ದಾನ. ಅನ್ನದಾನಕ್ಕೆ ಸರಿಸಮವಾದ ದಾನವೇ ಇಲ್ಲವೆಂದು ಕೆಳಗಿನ ಸುಭಾಷಿತ ಹೇಳುತ್ತಿದೆ:–

ತುರಗಶತಸಹಸ್ರಂ ಗೋಗಜಾನಾಂ ಚ ಲಕ್ಷಂ ಕನಕರಜತಪಾತ್ರಂ ಮೇದಿನೀಂ ಸಾಗರಾಂತಾಮ್ ।
ವಿಮಲಕುಲವಧೂನಾಂ ಕೋಟಿಕನ್ಯಾಶ್ಚ ದದ್ಯಾನ್ನಹಿ ನಹಿ ಸಮಮೇತೈರನ್ನದಾನಂ ಪ್ರಧಾನಮ್॥

ಅಂದರೆ, 'ಒಂದು ಲಕ್ಷ ಕುದುರೆಗಳನ್ನು, ಆಕಳುಗಳನ್ನು, ಆನೆಗಳನ್ನು, ಬಂಗಾರ-ಬೆಳ್ಳಿ ಪಾತ್ರೆಗಳನ್ನು, ಸಮುದ್ರದಿಂದ ಸುತ್ತುವರೆದ ಭೂಮಂಡಲವನ್ನು, ಸತ್ಕುಲದಲ್ಲಿ ಜನಿಸಿದ ಕೋಟಿ-ಕೋಟಿ ಕನ್ನೆಯರನ್ನು ದಾನವಾಗಿ ಕೊಟ್ಟರೂ-ಈ ಯಾವ ದಾನವೂ ಅನ್ನ ದಾನಕ್ಕೆ ಸಮಾನವಾದುದಲ್ಲ. ಅನ್ನದಾನವೇ ಪ್ರಧಾನದಾನವು.'

ಹಾಗೆಯೇ ವಿದ್ಯಾದಾನವೂ ಬಹಳ ಮುಖ್ಯವಾದದ್ದು. ಅನ್ನವು ಶರೀರದ ಬೆಳೆವಣಿಗೆಗೆ ಕಾರಣವಾದರೆ ವಿದ್ಯೆಯು ಮಾನವನ ಇಡಿಯ ವ್ಯಕ್ತಿತ್ವವನ್ನೇ ಅರಳಿಸುತ್ತದೆ. ಮಾನವನಲ್ಲಿಯ ಸುಪ್ತಶಕ್ತಿಗಳೆಲ್ಲ ಜಾಗೃತವಾಗಿ ಸರಿಯಾದ ಮಾರ್ಗಗಳಲ್ಲಿ ಹರಿಯತೊಡಗುವದು ವಿದ್ಯೆಯ ಕಾರಣದಿಂದಲೇ. 'ವಿದ್ಯಾವಿಹೀನಃ ಪಶುಭಿಃ ಸಮಾನಃ' 'ವಿದ್ಯೆಯಿಲ್ಲದವ ಹದ್ದಿಗಿಂತ ಕಡೆ' ಎಂದು ಮುಂತಾಗಿ ವಿಚಾರವಂತರು ಸಾರಿ ಹೇಳಿದ್ದಾರೆ. ಮತ್ತು ಪ್ರತಿಯೊಬ್ಬ ಮನುಷ್ಯನಿಗೂ ಸೂಕ್ತವಾದ ವಿದ್ಯೆ ದೊರೆಯುವ ವ್ಯವಸ್ಥೆ ಪ್ರತಿಯೊಂದು ಸಮಾಜದಲ್ಲಿಯೂ ಇರಬೇಕೆಂದು ಆಗ್ರಹಪಡಿಸಿದ್ದಿದೆ. ವಿದ್ಯೆಯು ತಂದೆ, ತಾಯಿ ಮತ್ತು ಹೆಂಡತಿ ಇವರ ಕರ್ತವ್ಯವನ್ನು ಪೂರೈಸಿ ಹಣವನ್ನೂ ಒದಗಿಸಿಕೊಟ್ಟು ದಶದಿಕ್ಕುಗಳಲ್ಲಿ ಕೀರ್ತಿಯನ್ನು ಬೆಳಗಿಸುತ್ತದೆಯೆಂದು ಕೆಳಗಿನ ಸುಭಾಷಿತ ದಲ್ಲಿ ಹೇಳಿದೆ.

> ಮಾತೇವ ರಕ್ಷತಿ ಪಿತೇವ ಹಿತೇ ನಿಯುಂಕ್ತೇ ಕಾಂತೇವ ಚಾಪಿ ರಮಯತ್ಯಪನೀಯ ಖೇದಮ್ ।
> ಲಕ್ಷ್ಮೀಂ ತನೋತಿ ವಿತನೋತಿ ಚ ದಿಕ್ಷು ಕೀರ್ತಿಂ ಕಿಂ ಕಿಂ ನ ಸಾಧಯತಿ ಕಲ್ಪಲತೇವ ವಿದ್ಯಾ ॥

ವಿದ್ಯೆಯು ತಾಯಿಯಂತೆ ಕಾಪಾಡುತ್ತದೆ: ತಂದೆಯಂತೆ ಹಿತಕರವಾದ ಕೆಲಸಗಳಲ್ಲಿ ತೊಡಗಿಸುತ್ತದೆ: ದುಃಖವನ್ನು ದೂರ ಮಾಡಿ ಪ್ರೀತಿಯ ಹೆಂಡತಿಯಂತೆ ಸುಖ ನೀಡುತ್ತಧೆ: ಧನವನ್ನು ತಂದು ಪೂರೈಸುತ್ತದೆ: ಮತ್ತು ಹತ್ತು ದಿಕ್ಕುಗಳಲ್ಲಿ ಕೀರ್ತಿಯನ್ನು ಹಬ್ಬಿಸುತ್ತದೆ, ಹೀಗೆ ಬೇಡಿದ್ದನ್ನು ಪೂರೈಸುವ ಕಲ್ಪಲತೆಯಂತೆ ವಿದ್ಯೆಯು 'ಏನನ್ನು ಕೊಡುವದಿಲ್ಲ?' ಎಂದು ಸುಭಾಷಿತ ಕಾರರು ಕೇಳಿದ್ದಾರೆ.

ಇದು ವಿದ್ಯೆಯ ಮಹತಿ! ಅದು ಅನ್ನದ ಹಿರಿಮೆ !! ಅಂದಬಳಿಕ ಅನ್ನದಾನ-ವಿದ್ಯಾದಾನಗಳ ಸಂಗಮವಾದರೆ ಅದರ ಹಿರಿಮೆ-ಗರಿಮೆಗಳನ್ನು ಬಣ್ಣಿಸುವುದೆಂತು !!! ಪ್ರಾಚೀನಕಾಲದಲ್ಲಿ ನಮ್ಮ ಭಾರತವು ನೂರಾರು, ಸಾವಿರಾರು ವಿದ್ಯಾರ್ಥಿಗಳುಳ್ಳ 'ಗುರುಕುಲ'ಗಳ ಆಗರವಾಗಿತ್ತೆಂದು ನಾವು ಇತಿಹಾಸದಲ್ಲಿ ಓದುತ್ತೇವೆ. ಅಂತಹ ಗುರುಕುಲಗಳನ್ನು ನೋಡಬಯಸುವವರು ಇಂದು ಶ್ರೀ ಸಿದ್ಧಗಂಗೆಗೆ ಭೇಟಿ ನೀಡಬೇಕು. ಅಲ್ಲಿ ಬೆಳೆಯುವ ಮಕ್ಕಳ ಯೋಗ-ಕ್ಷೇಮವನ್ನು ಶ್ರೀ ಶ್ರೀ ಸ್ವಾಮಿಗಳವರು ಎಷ್ಟೊಂದು ವಾತ್ಸಲ್ಯದಿಂದ ನೋಡುತ್ತಾರೆಂಬುದನ್ನು ಆ ಪುಣ್ಯಕ್ಷೇತ್ರದಲ್ಲಿ ಒಂದೆರಡು ದಿನ ವಾಸಿಸಿ ಅವಲೋಕಿಸಬೇಕು. ಅಂಥ ವರ ಜೀವನವೇ ಸಾರ್ಥಕ: ಧನ್ಯ.

ಶ್ರೀ ಶ್ರೀ ಸ್ವಾಮಿಗಳವರ ಅನುಗ್ರಹ ಸಕಲರನ್ನೂ ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

ಧಾರವಾಡ **ಡಾ. ದಯಾನಂದ ನರಸಿಂಹ ಶಾನಭಾಗ**
೨೩-೧೨-೧೯೭೮ ಸಂಸ್ಕೃತ ರೀಡರ್ ಕ. ವಿ. ವಿ.

## ಕರ್ತೃತ್ವಶಕ್ತಿಯ ಶ್ರೀಮಂತ ಸಾಕಾರ

ನಾನು ಪೂಜ್ಯ ಡಾ॥ ಶಿವಕುಮಾರಸ್ವಾಮೀಜಿಯವರನ್ನು ಮೊಟ್ಟಮೊದಲು ಕಂಡದ್ದು ಮತ್ತು ಅವರ ಭಾಷಣ ಕೇಳಿದ್ದು ಇಂದಿಗೆ ೨೫ ವರ್ಷಗಳ ಹಿಂದೆ. ಅದೇ ಆಗ ಹದಿವಯಸ್ಸು ದಾಟಿದ್ದೆ. ವಿಜಾಪೂರದಲ್ಲಿ ಬಂಥನಾಳ ಪೂಜ್ಯ ಸಂಗನಬಸವ ಶಿವ ಯೋಗಿಗಳ ಹಿರಿತನದಲ್ಲಿ ೭೭೦ ಅಮರ ಗಣಾಧೀಶ್ವರರ ಪೂಜಾ ಮಹೋತ್ಸವ ಸಡಗರದಿಂದ ನೆರವೇರಿತ್ತು. ಆಗ ಸರ್ವಧರ್ಮ ಸಮ್ಮೇಳನ ನಡೆದಿತ್ತು. ಅದೆಷ್ಟೋ ವಿದ್ವಾಂಸರು ವಿವಿಧ ಧರ್ಮಗಳ ವಿಷಯ ಕುರಿತು ವ್ಯಾಖ್ಯಾನ ಮಾಡಿದರು. ಆದರೆ ನನ್ನ ಎಳೆವಯಸ್ಸಿನ ನಿರ್ಮಲ ಮನಸ್ಸಿನಲ್ಲಿ ನೆಲೆಯೂರಿ ನಿಂತವರು ಪೂಜ್ಯ ಶ್ರೀಗಳು ಒಬ್ಬರು ಮಾತ್ರ. ಮರೆತರೂ ಮರೆಯಲಾಗದ ಮಧುರ ಸ್ಮೃತಿಯಾಗಿದೆ. ಉಳಿದ ವಿದ್ವಾಂಸರ ಹೆಸರುಗಳನ್ನು ಅದೆಷ್ಟು ನೆನೆಸಿದರೂ ನೆನಪಾಗಲೊಲ್ಲದು. ಪೂಜ್ಯ ಶ್ರೀಗಳ ವಾಗ್ವೈಖರಿ ಹಸಿಗೋಡೆಯಲ್ಲಿ ಹರಳಿಟ್ಟಂತೆ ಇಂದಿಗೂ ನನ್ನ ಉಸಿರಿನಲ್ಲಿ ಹಸಿರಾಗಿದೆ. ಅವರ 'ಆದ್ದರಿಂದಲೇನೆ' ಎಂಬ ಶಬ್ದ ಪ್ರಯೋಗ ಮತ್ತು ಅದರ ಉಚ್ಚಾರಣೆಯ ವೈಶಿಷ್ಟ್ಯ ಸ್ವಾಮಿಗಳಿಗೆ ಮಾತ್ರ ಸೀಮಿತವಾಗಿದೆ. ಈ ಶಬ್ದಪ್ರಯೋಗದಲ್ಲಿ ಅವರ ಸಾತ್ವಿಕಶಕ್ತಿ ಸಮರಸವಾಗಿ ಸೇರುತ್ತದೆ. ಈ ಪದಪ್ರಯೋಗ ಅನ್ಯರಿಗೆ ಅನನುಕರಣೀಯ. ಅನಂತರ ನಾನು ಉಪನ್ಯಾಸಕನಾದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಸವೇಶ್ವರ ಅಷ್ಟಶತಮಾನೋತ್ಸವ ಆಚರಣೆಯ ಮುಕ್ತಾಯ ಸಮಾರಂಭದ ಪೂಜ್ಯ ಶ್ರೀಗಳ ಅಧ್ಯಕ್ಷ ಭಾಷಣವನ್ನು ಆಲಿಸಿ ಮಂತ್ರಮುಗ್ಧನಾದೆ. ಅವರ ವಾಗಾಡಂಬರ, ವಿಚಾರವೈಖರಿಗಳ ವೈಭವದಲ್ಲಿ

ತೇಲಾಡಿದೆ. ಇದೆಲ್ಲ ದೂರಿನಿಂದ ಕಂಡು ಕೇಳಿದ್ದು ಮಾತ್ರ. ಆದರೆ ನಾನೇ ವಿಜಾಪೂರದ ನ್ಯೂ ಆರ್ಟ್ಸ್ ಕಾಲೇಜಿನಲ್ಲಿ ಹಿರಿಯ ಉಪನ್ಯಾಸಕನಾಗಿ ಸ್ನೇಹಸಮ್ಮೇಳನದ ನಿಮಂತ್ರಕನಾಗಿ ಪೂಜ್ಯ ಶ್ರೀಗಳನ್ನು ನಮ್ಮ ವಿದ್ಯಾಲಯದ ಸ್ನೇಹಸಮ್ಮೇಳನದ ಮುಖ್ಯ ಅತಿಥಿಗಳನ್ನಾಗಿ ಆಹ್ವಾನಿಸಲು ಸಿದ್ಧಗಂಗಾ ಶ್ರೀಕ್ಷೇತ್ರಕ್ಕೆ ಶ್ರೀ ಎನ್. ಬಸವರಾಧ್ಯರೊಂದಿಗೆ ಹೋದಾಗ ನೇರವಾದ ದರ್ಶನ. ಸ್ಪರ್ಶನ ವಿಚಾರ ಮಂಥನ ದೊರೆಯಿತು. ಪೂಜ್ಯ ಶ್ರೀಗಳ ಕಾಯಕನಿಷ್ಠೆ ಕರ್ತವ್ಯತತ್ಪರತೆಗಳನ್ನು ಕಂಡು ಮೌನದಲ್ಲಿ ತಲೆ ಬಾಗಿದೆ; ತಲೆದೂಗಿದೆ. ಅವರು ಹಾಕಿಕೊಂಡ ಯೋಜನೆ ಯೋಚನೆಗಳಿಂದ ವಿಚಲಿತರಾಗದ ವಿಶಿಷ್ಟ ಮನೋಧರ್ಮವನ್ನು ಕಂಡು ಮೆಚ್ಚಿಕೊಂಡೆ. ತಮ್ಮ ಕೃಪಾಶೀರ್ವಾದದಿಂದ ನಡೆಯುಲಿರುವ ವಿದ್ಯಾಸಂಸ್ಥೆಗಳ ವ್ಯವಸ್ಥೆಯಲ್ಲಿ ತಲ್ಲೀನರಾಗಿದ್ದರು. ಅವುಗಳನ್ನು ಕುರಿತು ಹಾಕಿಕೊಂಡ ಹವಣಿಕೆಗಳನ್ನೆಲ್ಲ ಹಣ್ಣಾಗಿಸಲು ಮೈಮಣ್ಣಾಗಿಸಲೂ ಪೂಜ್ಯರು ಸಿದ್ಧರು ಬದ್ಧರು. ಅವರು ನನ್ನ ಆಮಂತ್ರಣವನ್ನು ನಿರಾಕರಿಸಿದರೂ ನನಗೆ ನಿರಾಶೆಯೆನಿಸಲಿಲ್ಲ. ಪೂಜ್ಯರ ಮನದ ಮಹದಾಸೆಯವನ್ನು ಕೇಳಿ ನನಗೆ ವಿದ್ಯುಚ್ಛಕ್ತಿ ಒದಗಿದಂತಾಯಿತು. ಎಲ್ಲಿಲ್ಲದ ಬಲ ಮೈಗೂಡಿತು. ಅವರ ಪ್ರಚಾರಪ್ರಿಯುತೆಯಲ್ಲಿಯ ನಿರಾಸೆಯನ್ನು ನಿರೀಕ್ಷಿಸಿ ನನ್ನ ಜಂಘ ಜರ್‍ರನೆ ಜರಿಯಿತು.

ಮರುವರ್ಷ ಕೊಟ್ಟ ಮಾತಿನಂತೆ ಪೂಜ್ಯ ಶ್ರೀಗಳು ನಮ್ಮ ವಿದ್ಯಾಲಯದ ಮುಖ್ಯ ಅತಿಥಿಗಳಾಗಿ ಆಗಮಿಸುವ ಮೂಲಕ ಅವರ ನೆನಪಿನ ನಿಷ್ಠೆ ಮತ್ತು ವಚನ ಪರಿಪಾಲನೆಯ ಆಚರಣೆಗಳನ್ನು ಅನುಭವಿಸಿ ಶ್ರೀಗಳ ಪಾದ ಮುಟ್ಟಿ ನಮಸ್ಕರಿಸಿದೆ. ನಾನು ಸಿಕ್ಕ-ಸಿಕ್ಕ ಸ್ವಾಮಿಗಳ ಪಾದ ಮುಟ್ಟುವವನಲ್ಲ. ಅವರ ಪುರಾಣ ಕೇಳಿ ಮರುಳಾಗುವವನೂ ಅಲ್ಲ. ನನ್ನ ಜೀವಮಾನದಲ್ಲಿ ಬಹುಶಃ ನಾಲ್ಕೈದು ಸ್ವಾಮಿಗಳಿಗೆ ಮಾತ್ರ ನಾನು ನನ್ನ ಮೈಮಣಿಸಿರಬೇಕು. ಅವರಲ್ಲಿ ನನಗೆ ಹಿರಿಯರು ಪೂಜ್ಯ ಶ್ರೀಗಳು.

ನಾನು ಹೋದವರ್ಷ ಜಮಖಂಡಿ ಕಾಲೇಜಿನ ನನ್ನ ಕನ್ನಡ ವಿಭಾಗದ ಸಹೋದ್ಯೋಗಿ ಉಪನ್ಯಾಸಕರು ಮತ್ತು ವಿದ್ಯಾರ್ಥಿ-ವಿದ್ಯಾರ್ಥಿನಿಯರನ್ನು ಕೂಡಿಕೊಂಡು ಪ್ರವಾಸ ಕೈಕೊಂಡಿದ್ದೆ. ಸಿದ್ಧಗಂಗೆಯ ಕ್ಷೇತ್ರ, ಆ ಕ್ಷೇತ್ರದಿಂದ ನಡೆಯುವ ವಿದ್ಯಾಲಯಗಳು ಮತ್ತು ಉಚಿತ ಊಟ ವ್ಯವಸ್ಥೆಗಳನ್ನು ಹಾಗೂ ಇವೆಲ್ಲವುಗಳ ನೇತಾರರಾದ ಕರ್ತೃತ್ವಶಕ್ತಿಯ ಶ್ರೀಮಂತ ಸಾಕಾರ ಮೂರ್ತಿಗಳಾದ ಪೂಜ್ಯ ಶ್ರೀಗಳ ಬಗೆಗೆ ಇರುವ ಗೌರವಾದರ- ಅಭಿಮಾನಗಳಿಂದಾಗಿ ಸುಮಾರು ಸಂಜೆಯ ೮ ಘಂಟೆಗೆ ಬೆಂಗಳೂರಿಗೆ ಹೋಗುವ ಮಾರ್ಗದಲ್ಲಿ ಆಕಸ್ಮಿಕವಾಗಿ ಒಮ್ಮೆಲೆ ವಾಹನವನ್ನೇ ಮಠಕ್ಕೆ ಹೊರಳಿಸಿದೆ. ಪೂಜ್ಯ ಶ್ರೀಗಳ ದರ್ಶನ ಮಾತ್ರ ನನ್ನ ಉದ್ದೇಶವಾಗಿತ್ತು. ಮೊದಲೇ ಬೆಂಗಳೂರಿನ ಜಯದೇವ ಹಾಸ್ಟೆಲನ್ನು ನನ್ನ ವಿದ್ಯಾಗುರುಗಳಾದ ಶ್ರೀ ಬಿ.ಟಿ. ಸಾಸನೂರು ಅವರ ನೆರವಿನಿಂದ ಕಾಯ್ದಿರಿಸಿಕೊಂಡಿದ್ದೆ. ಆದರೆ ಸ್ವಾಮಿಗಳು ನಮ್ಮ ಸಂಕಲ್ಪವನ್ನು ಸುಳ್ಳುಮಾಡಿದರು. ಒತ್ತಾಯದಿಂದ ೨೦ಕ್ಕೂ ಮಿಕ್ಕಿದ ನಮಗೆ ನಮ್ಮ ಉತ್ತರಕರ್ನಾಟಕದ ಭೋಜನವನ್ನು ಪ್ರತ್ಯೇಕವಾಗಿ ಸಿದ್ಧಪಡಿಸಿ ಉಣಿಸಿದರು. ಅಂದು ನಾವು ಸ್ವೀಕರಿಸಿದ್ದು ಆಹಾರವಾದರೆ ಮೈಸೇರಿದ್ದು ಪೂಜ್ಯರ ನಿರ್ಮಲ ಅಂತಃಕರಣವೆಂದು ನನಗೆ ಮನವರಿಕೆಯಾಗಿದೆ. ನಮಗೆಲ್ಲ ವಸತಿ ಗೃಹಗಳಲ್ಲಿ ಸೌಕರ್ಯದ ಏರ್ಪಾಡನ್ನು ಸ್ವತಃ ಸ್ವಾಮಿಗಳೇ ಹೊತ್ತದ್ದನ್ನು ನೋಡಿದಾಗ ವಿದ್ಯೆ, ವಿದ್ಯಾರ್ಥಿ, ವಿದ್ಯಾಬೋಧಕರ ಬಗ್ಗೆ ಅವರಲ್ಲಿ ಇರುವ ಅಮರಪ್ರೇಮಕ್ಕೆ ಇದೊಂದು ನಿತಾಂತನಿದರ್ಶನ. ನಮ್ಮ ಆಹಾರ ಸಿದ್ಧವಾಗುವ ಎರಡು ಗಂಟೆಗಳ ಕಾಲ ನಾನು ಸ್ವಾಮಿಗಳ ಸಾಮೀಪ್ಯದ ಸಹವಾಸಿಯಾಗಿದ್ದೆ. ಆಗ ದೇಶದ ರಾಜಕೀಯ, ವೀರಶೈವ ಸಮಾಜದ ಸಂಘಟನೆ, ವಿದ್ಯಾಲಯಗಳ ಆಡಳಿತ, ವಿದ್ಯಾರ್ಥಿಗಳ ಮೇಲೆ ಇರಬೇಕಾದ ಹಿಡಿತ ಮೊದಲಾದವುಗಳನ್ನು ಕುರಿತು ದೀರ್ಘವಾದ ಚರ್ಚೆ ನಡೆಯಿಸಿದೆ. ಅವರು ಅದೆಂಥ ಆಸಕ್ತಿಯಿಂದ ವಿಚಾರವಿನಿಮಯ ಮಾಡಿದರೆಂಬುದನ್ನು ಸ್ಮರಿಸಿಕೊಂಡಷ್ಟೂ ಸಂತೋಷವಾಗುತ್ತದೆ. ೬ ರಿಂದ ೧೦ ವರ್ಷವಯಸ್ಸಿನ ೧೦೦ಕ್ಕೂ ಮಿಕ್ಕಿದ ಎಳೆಮಕ್ಕಳನ್ನು ಒತ್ತಟ್ಟಿಗೆ ಕೂಡ್ರಿಸಿ ಸಂಸ್ಕೃತ ಅಮರಕೋಶವನ್ನು ಕಂಠಪಾಠ ಮಾಡಿಸುತ್ತಿರುವ, ಬರಹೋಗುವ ದರ್ಶನಾರ್ಥಿಗಳನ್ನು ಸಂತೋಷಪಡಿಸುತ್ತಿರುವ, ವಿದ್ಯಾರ್ಥಿಗಳಿಗಾಗಿ ಊಟದ ವ್ಯವಸ್ಥೆಯ ಮೇಲ್ವಿಚಾರಣೆಯನ್ನು ನೇರವಾಗಿ ಮಾಡುತ್ತಿರುವ, ಮಠದ ಆಯ-ವ್ಯಯಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸುವ, ಮಠದ ವಸ್ತು-ಒಡವೆಗಳ ವಿತರಣೆಯ ಅವಲೋಕನ ಮಾಡುವ, ವಿದ್ಯಾಲಯಗಳ ಮುಖ್ಯಸ್ಥರೊಂದಿಗೆ ವಿಚಾರ ಮಂಥನ ನಡೆಸುವ ಪೂಜ್ಯರ ಕರ್ತವ್ಯದಕ್ಷತೆ, ಬಹುಶ್ರುತಜ್ಞಾನ, ಲೋಕವ್ಯವಹಾರ, ಇವೆಲ್ಲವುಗಳನ್ನು ಮೀರಿ ಅವರಲ್ಲಿ ಇರುವ ಆತ್ಮಶ್ರೀಯ ಅಪಾರ ಶಕ್ತಿಗೆ ಅದೆಂಥವನೂ ಮಣಿಯಲೇಬೇಕು.

ಪೂಜ್ಯರ ಪರಧರ್ಮ ಸಹಿಷ್ಣುತೆ ಮತ್ತು ವಿದ್ಯಾರ್ಥಿಗಳ ಮೇಲೆ ಇರುವ ಅಗಾಧ ಪ್ರೀತಿಗಳ ನಿದರ್ಶನವೊಂದು ನನಗೆ ಅಂದು ಮಠದಲ್ಲಿಯೇ ಲಭಿಸಿತು. ನಮ್ಮ ಕರ್ನಾಟಕದ ಇಂದಿನ ವಿಧಾನಸಭೆಯ ಶಾಸಕರಾದ ಶ್ರೀ ಸಿ. ಇಬ್ರಾಹಿಮ್ ಎಂಬ ಮುಸಲ್ಮಾನ ಬಂಧುವೊಬ್ಬರು ಬಂದು ಪೂಜ್ಯರ ಪಾದಕ್ಕೆ ಹಣೆಹಚ್ಚಿ ಹಣದ ಚೀಲವೊಂದನ್ನು ಗುರುದಕ್ಷಿಣೆಯಾಗಿ ಕೊಟ್ಟು ಹೋದರು. ಅವರು ಹೋದ ಮೇಲೆ ನಾನು ಪೂಜ್ಯ ಶ್ರೀಗಳನ್ನು ಕೇಳಲು ವಿವರಗಳನ್ನೆಲ್ಲ ವಿವರಿಸಿದರು. ಶ್ರೀ ಇಬ್ರಾಹಿಮ್‌ರವರು ಪೂಜ್ಯರ ವಿದ್ಯಾಲಯದ ವಿದ್ಯಾರ್ಥಿಯಾಗಿ ಉಚಿತ ಊಟ, ವಸತಿ ಸೌಲಭ್ಯಗಳನ್ನು ಪಡೆದವರಂತೆ. ಈಗ ದಿನನಿತ್ಯ ಕನಿಷ್ಠ ಐದು ಪೈಸೆಯಂತೆ ಹಣ ಕಲೆಹಾಕಿ ಸಿದ್ಧಗಂಗಾ ಕ್ಷೇತ್ರದ ಮುಖಾಂತರ ಹೋಗುವಾಗ ಬಂದು ಮಠಕ್ಕೆ ಭೇಟಿಕೊಟ್ಟು ಪೂಜ್ಯರ

ದರ್ಶನ ಪಡೆದು ಗುರುದಕ್ಷಿಣೆ ಕೊಡುತ್ತಾರಂತೆ ಶ್ರೀ ಇಬ್ರಾಹಿಮರು. ಇದು ನನ್ನ ಕಣ್ಣ ಮುಂದೆ ನಡೆದದ್ದು. ಆದರೆ ಇಂಥ ಭಕ್ತಶಿಷ್ಯರು ಅದೆಷ್ಟೋ ಜನರಿದ್ದಾರೆಂದು ಆಮೇಲೆ ತಿಳಿಯಿತು. ಅಂತೆಯೇ ಪೂಜ್ಯದಲ್ಲಿ ಪ್ರಸಂಗದಲ್ಲಿ ಸರಕಾರವನ್ನು ತಿರಸ್ಕರಿಸಿ, ಸಮಾಜವನ್ನು ಪುರಸ್ಕರಿಸುವ ಮನೋಧೈರ್ಯ ಮಹಾಶಕ್ತಿಗಳು ಹೆಪ್ಪುಗಟ್ಟಿವೆ. ನಾನು ಮರುದಿನ ಮುಂಜಾನೆ ನನ್ನ ತಂಡದೊಂದಿಗೆ ಅವರ ಅಪರಾತಿಥ್ಯದ ಅನುಗ್ರಹದ ಉಪ್ಪಿಟ್ಟನ್ನು ಹೊಟ್ಟೆ ಬಿರಿಯುವಂತೆ ಸ್ವೀಕರಿಸಿ. ಮನಸ್ಸಿಲ್ಲದ ಮನಸ್ಸಿನಿಂದ ಬೀಳ್ಕೊಂಡು ಬೆಂಗಳೂರಿಗೆ ಹೋದೆ.

ನನಗೆ ವಿವೇಕಾನಂದರ ನೆನಪಾದರೆ ಪೂಜ್ಯ ಶ್ರೀ ಡಾ|| ಶಿವಕುಮಾರಸ್ವಾಮೀಜಿಯವರ ಸ್ಮರಣೆ ಬರುತ್ತದೆ. ಅದರಂತೆ ಪೂಜ್ಯಶ್ರೀಗಳು ಸ್ಮೃತಿಗೆ ಬಂದರೆ ವಿವೇಕಾನಂದರ ಚಿತ್ರ ಕಣ್ಣಮುಂದೆ ಕಟ್ಟುತ್ತದೆ. ಸಂಘಟನಾಶಕ್ತಿ, ಕರ್ತವ್ಯದಕ್ಷತೆ, ಸಮಾಜಕ್ಕೆ ಸರ್ವಾರ್ಪಣದ ಪರೋಪಕಾರಗಳ ಸಾಕಾರ ಮೂರ್ತಿ ಸಿದ್ಧಗಂಗೆಯ ಕ್ಷೇತ್ರದ ಶ್ರೀಗಳವರೆಂದರೆ ಅತಿಶಯೋಕ್ತಿಯಾಗದು. ಅಂತಹ ಧೀಮಂತ ಧೀಶಕ್ತಿಗೆ. ಶ್ರೀಮಂತ ಉದಾರ ಬುದ್ಧಿಗೆ ಅನಂತ ನಮನಗಳು.

**ಪ್ರೊ. ಸಂಗಮನಾಥ ಜಿ. ಹಂಡಿ ಎಂ. ಎ.**
ಮುಖ್ಯಸ್ಥ ಮತ್ತು ಹಿರಿಯ ಉಪನ್ಯಾಸಕ ಕನ್ನಡ ವಿಭಾಗ
ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ. ಜಮಖಂಡಿ

## ಸಿದ್ಧಗಂಗೆಯ ಒಂದು ಅನುಭವ

ಪದವೀಧರ ಪ್ರಾಧ್ಯಾಪಕ ಉಪಕುಲಪತಿಗಳಾದವರೂ ಸಹ ಪವಾಡಮಹಾತ್ಮೆ. ಆಶೀರ್ವಾದ, ಯಂತ್ರ ಮಂತ್ರ ಇವುಗಳನ್ನು ಕುರಿತು ತಿರಸ್ಕಾರ ಅಪಹಾಸ್ಯಗಳಿಂದ ಅಲ್ಲಗಳೆದು ಮಾತನಾಡಿ ಹೇಳಿಕೆಗಳಿಂದಲೂ ಲೇಖನಗಳಿಂದಲೂ ಪ್ರಸಿದ್ಧರಾಗಲೆಳಸುತ್ತಿರುವ ಈ ಕಾಲದಲ್ಲಿ ಈಗ ನಾನು ಬರೆಯುತ್ತಿರುವ ವಿಚಾರವೂ ಸಹ ಹಾಗೆ ಪ್ರಸಿದ್ಧರಾಗಲೆಳಸುತ್ತಿರುವವರಿಗೆ ಒಂದು ಬಗೆಯ ಆಹಾರವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಆದರೂ ಇದು ಸ್ವಂತ ಅನುಭವವಾದ್ದರಿಂದ ನಿರೂಪಿಸುವುದು ತಪ್ಪಾಗಲಾರದೆಂದು ಭಾವಿಸಿದ್ದೇನೆ.

ಸರ್ಕಾರವೇ ಕುಟುಂಬ ಕಲ್ಯಾಣ ಯೋಜನೆಯ ಪ್ರಚಾರದಲ್ಲಿ ಶ್ರದ್ಧೆಯಿಂದ ನಿರತವಾಗಿರುವಾಗ, ಈಗ ನಾನು ಹೇಳುವ ವಿಚಾರವು ಕಾಕತಾಳೀಯವಾಗಿಯೂ ಕಾಣಬಹುದು. ಆದರೂ ಇಂದಿಗೂ ಸಂತಾನಭಾಗ್ಯವಿಲ್ಲದ ಎಷ್ಟೋ ದಂಪತಿಗಳು ಊರೂರಲ್ಲಿಯೂ ಇರುವ ಅಶ್ವತ್ಥಕಟ್ಟೆ. ನಾಗರಕಟ್ಟೆಗಳನ್ನು ಅರುಣೋದಯಕ್ಕೆ ಮೊದಲೇ ಮಿಂದು ಮಡಿಯುಟ್ಟು ಹೋಗಿ ಪೂಜಿಸಿ ಪ್ರದಕ್ಷಿಣೆ ಸುತ್ತುತ್ತಿರುವುದನ್ನೂ ನಂತರ ಋತುಗತಿಯನ್ನನುಸರಿಸಿ ಅವರಲ್ಲಿ ಬಹುಜನ ಸಂತಾನವಂತರಾಗುವುದನ್ನೂ ಎಲ್ಲರೂ ಕಾಣುತ್ತಿಲ್ಲವೆ? ಇದು ಮಾನಸಿಕ ಪರಿಣಾಮವಿರಬಹುದು ಅಥವಾ ಕಾಕತಾಳೀಯವಿರಬಹುದು, ಇಲ್ಲವೆ ದೈವಕೃಪೆ ಇರಬಹುದು ಈ ಯಾವುದೂ ಅಲ್ಲವೆನ್ನುವುದಂತೂ ವಿತಂಡವಾದ.

ಇನ್ನು ಸ್ವಂತ ಅನುಭವ : ಸುಮಾರು ಮುವತ್ತೈದು ವರುಷಗಳ ಹಿಂದಿನ ಮಾತು. ನನಗೆ ವಿವಾಹವಾಗಿ ಮೂರು ವರುಷ ಕಳೆದಿದ್ದರೂ ಮಕ್ಕಳಾಗಿರಲಿಲ್ಲ. ಶ್ರೀಮತಿ ಎಂ. ಪಾರ್ವತಮ್ಮನವರೆಂಬ ಹಿರಿಯರೊಬ್ಬರು ನಮ್ಮ ಕುಟುಂಬದ ಹಿತೈಷಿಗಳಾಗಿ ನಮ್ಮ ಮನೆಗೆ ಆಗಾಗ್ಗೆ ಬರುತ್ತಿದ್ದರು, ವಯೋವೃದ್ಧೆ ಜ್ಞಾನವೃದ್ಧೆಯಾದ ಈ ಅಜ್ಜಿಯವರು ಈಗಲೂ ಇದ್ದಾರೆ.

ಒಂದು ದಿನ ನನ್ನನ್ನು ಕಂಡು 'ಏನಪ್ಪಾಜಿ ಇನ್ನೂ ನಮಗೆಲ್ಲ ಬಾಯಿ ಸಿಹಿ ಮಾಡುವುದು ಯಾವಾಗ? ಸುಮ್ಮನೆ ದಿನ ಕಳೆಯುತ್ತಿದ್ದರೆ ಹೇಗೆ'? ಎಂದರು. 'ನಿಮಗೆ ಏನು ಸಿಹಿ ಅಪೇಕ್ಷೆ ಹೇಳಿ. ಈ ದಿನವೇ ಮಾಡಿಸೋಣ' ಎಂದೆ.

ಅದಕ್ಕೆ ಅವರು 'ಬರಿಯ ಸಿಹಿ ಯಾವಾಗ ಎಲ್ಲಿಬೇಕಾದರೂ ಸಿಕ್ಕುತ್ತದೆ. ತೊಟ್ಟಿಲುತೂಗುತ್ತಾ ಲಾಲಿಪದ ಹೇಳುತ್ತಾ ಸಿಹಿ ತಿನ್ನಿಸಬೇಕು. ಅದು ಯಾವಾಗ? ಹೇಳಿ' ಎಂದರು. ಅದಕ್ಕೆ 'ಶಿವನಕೃಪೆಯಾದರೆ ಅದೇನು ದೊಡ್ಡ ವಿಷಯವಲ್ಲ ಬಿಡಿ ಎಂದೆ'. ಅವರು 'ಗುರುಕೃಪೆ ಕ್ಷೇತ್ರಯಾತ್ರೆ ತೀರ್ಥಸ್ನಾನ ಇವುಗಳನ್ನು ಏಕಕಾಲದಲ್ಲಿ ಮಾಡಿದರೆ ನಿಮ್ಮ ಮನೋಭೀಷ್ಟಸಿದ್ಧಿಯಾಗುತ್ತದೆ. ವೃಥಾ ಕಾಲಕಳೆಯಬೇಡಿ' ಎಂದರು. ಅದಕ್ಕೆ 'ಏನುಮಾಡಬೇಕೆನ್ನುತ್ತೀರಿ'? ಎನ್ನಲು 'ಏನೂ ಇಲ್ಲ ನಾಳೆ ಸೋಮವಾರ ಬೆಳಿಗ್ಗೆ ಸಿದ್ಧಗಂಗೆಗೆ ಹೊರಡಿರಿ ನಾನೂ ಬರುತ್ತೇನೆ. ಅಲ್ಲಿಂದ ಒಂದು ವರುಷ ತುಂಬುವುದರೊಳಗಾಗಿ ನಿಮಗೆ ಗಂಡುಮಗುವಾಗುತ್ತದೆ ನನ್ನ ಮಾತನ್ನು ನಂಬಿ. ಸಂದೇಹಪಡಬೇಡಿ' ಎಂದರು.

ಅವರ ಆಗ್ರಹದ ಸಲಹೆಗೆ ಒಪ್ಪಿ, ನಮ್ಮ ಮನೆಯಿಂದ ಮೂವರೂ ಶ್ರೀಮತಿ ಪಾರ್ವತಮ್ಮನವರೂ ಅವರು ಹೇಳಿದ ದಿನ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಪ್ರಯಾಣ ಮಾಡಿದೆವು.



ವಸ್ತುಪ್ರದರ್ಶನದ ಒಂದು ಮುಕ್ತಾಯ ಸಮಾರಂಭದಲ್ಲಿ ಶ್ರೀಗಳು



ವಸ್ತುಪ್ರದರ್ಶನಕ್ಕೆ ಭೇಟಿಕೊಟ್ಟಿದ್ದ ಪ್ರಖ್ಯಾತ ವಾಣಿಜ್ಯೋದ್ಯಮಿ ಶ್ರೀ ಬಿರ್ಲಾ (೧೯೬೯)



# ವಸ್ತುಪ್ರದರ್ಶನದ ಪ್ರಾರಂಭ ವ
# ಮುಕ್ತಾಯ ಸಮಾರಂಭ

(ಚಿತ್ರಗಳಲ್ಲಿ ಸರ್ವಶ್ರೀ ವಿ. ವಿ. ಗಿರಿ, ಆಲೂರು ಹನ
ಕೊಠಾವಳಿ ನಾಯ್ಕರ್ ಅವರುಗಳನ್ನು ಇತರ ಪ್ರತಿ
ಕಾಣಬಹುದು.)







ಇದೂ ಒಂದು ಮಳಿಗೆ



ರಾಷ್ಟ್ರ ನಾಯಕರಿಗೆ ಶುಭ ಹಾರೈಕೆಗಳು



ಭಾರತದ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರಿಗೆ ಆಶೀರ್ವಾದ

ಕರ್ನಾಟಕದ ಗವರ್ನರ್ ಧರ್ಮವೀರ ಅವರಿಗೆ ಆಶೀರ್ವಾದ




ಶ್ರೀ ಕ್ಷೇತ್ರದಲ್ಲಿ ಜರುಗಿದ ಮಠಾಧಿಪತಿಗಳ ಸಮ್ಮೇಳನದಲ್ಲಿ
ಕರ್ನಾಟಕದ ಮುಖ್ಯಮಂತ್ರಿ ಶ್ರೀ ಡಿ. ದೇವರಾಜ ಅರಸು ಅವರಿಗೆ ಸನ್ಮಾನ



ಗವರ್ನರ್ ಶ್ರೀ ಗೋವಿಂದನಾರಾಯಣ ದಂಪತಿಗಳಿಗೆ ಆಶೀರ್ವಾದ




S I T ಯಿಂದ ನಿವೃತ್ತರಾದ ಪ್ರಿನ್ಸಿಪಾಲ್ ಶ್ರೀ ಶಿವಣ್ಣನವರಿಗೆ ಶುಭ ಹಾರೈಕೆ



ಶ್ರೀ ಸಿದ್ಧರಾಮಣ್ಣನವರಿಂದ ಸಿದ್ಧಗಂಗಾ ಎಜ್ಯುಕೇಷನ್ ಸೊಸೈಟಿ ನಿಧಿಗಾಗಿ ೩೦ ಸಾವಿರ ರೂಪಾಯಿ ಚೆಕ್ ಸ್ವೀಕಾರ

ನಾವುಗಳು ಕ್ಷೇತ್ರಕ್ಕೆ ತಲುಪಿದಾಗ ಕ್ಷೇತ್ರಾಧಿಪತಿಗಳಾದ ಶ್ರೀಗಳವರು ಪ್ರಾತಃಕಾಲದ ಲಿಂಗಾರ್ಚನಾದಿ ವಿಧಿಗಳನ್ನು ಮುಗಿಸಿ ಶ್ರೀಮಠದ ಎಲ್ಲ ವಿಭಾಗಗಳ ಮೇಲ್ವಿಚಾರಣೆಯ ಒಂದು ಸುತ್ತನ್ನು ಮುಗಿಸಿ ಬಂದು,ಬರುವ ಭಕ್ತಮಂಡಲಿಗೆ ಸಂದರ್ಶನ ವನ್ನು ನೀಡಲು ನಿಗದಿಯಾಗಿದ್ದ ಸ್ಥಳದಲ್ಲಿ ಮಂಡಿಸಿದ್ದರು.

ನಾವುಗಳು ಸಾಷ್ಟಾಂಗ ಪ್ರಣಾಮವನ್ನು ಸಲ್ಲಿಸಿದಾಗ ಕುಳ್ಳಿರಲು ತಿಳಿಸಿ ಯೋಗಕ್ಷೇಮವನ್ನು ವಿಚಾರಿಸಿದರು. ಕೊಂಚ ಹೊತ್ತಿನ ನಂತರ ಒಬ್ಬ ಸೇವಕನನ್ನು ಕರೆದು ನಮ್ಮನ್ನು ಪ್ರಸಾದಕ್ಕೆ ಕರೆದುಕೊಂಡು ಹೋಗುವಂತೆ ತಿಳಿಸಿದರು.

ಆಗ ನಮ್ಮನ್ನು ಕರೆದುಕೊಂಡು ಹೋಗಿದ್ದ ಶ್ರೀಮತಿ ಪಾರ್ವತಮ್ಮನವರು ಶ್ರೀಗಳವರಿಗೆ ನಮ್ಮನ್ನು ಶ್ರೀಕ್ಷೇತ್ರಕ್ಕೆ ಕರೆತಂದಿರುವ ಉದ್ದೇಶವನ್ನು ತಿಳಿಸಿದರು. ಆಗ ಶ್ರೀಗಳವರು 'ಹಾಗಾದರೆ ಹೋಗಿ ಮೊದಲು 'ಸಿದ್ಧಗಂಗಾ' ತೀರ್ಥಸ್ನಾನ ವನ್ನು ಮಾಡಿಸಿ ನಂತರ ಮೇಲೆ ಹೋಗಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಪೂಜೆಯನ್ನು ಮುಗಿಸಿಕೊಂಡು ಬನ್ನಿ' ಎಂದು ಅಪ್ಪಣೆ ಕೊಟ್ಟರು. ಅವರ ಅಪ್ಪಣೆ ಪ್ರಕಾರ ಹೋಗಿ ಸಿದ್ಧಗಂಗಾ ತೀರ್ಥಸ್ನಾನ, ಸಿದ್ಧಲಿಂಗೇಶ್ವರ ಪೂಜೆಗಳನ್ನು ಮುಗಿಸಿಕೊಂಡು ಬಂದು ಶ್ರೀಗಳಿಗೆ ಪ್ರಣಾಮವನ್ನರ್ಪಿಸಿದ ಬಳಿಕ ಶ್ರೀಗಳವರು ನನ್ನ ಶ್ರೀಮತಿಯ ಹಣೆಗೆ ವಿಭೂತಿಯನ್ನು ಧರಿಸಿ ಆಕೆಯ ಮಸ್ತಕದ ಮೇಲೆ ತಮ್ಮ ಹಸ್ತವನ್ನಿರಿಸಿ ಕ್ಷಣಕಾಲ ಧ್ಯಾನಾಸಕ್ತರಾಗಿ ಬಳಿಕ 'ಶಿವಾನುಗ್ರಹದಿಂದ ನಿಮ್ಮ ಇಷ್ಟಾರ್ಥ ಸಿದ್ಧಿಸುತ್ತದೆ; ನಿಶ್ಚಿಂತ ರಾಗಿರಿ' ಎಂದು ಆಶೀರ್ವದಿಸಿ 'ಇನ್ನು ವೇಳೆಯಾಯಿತು ಪ್ರಸಾದಕ್ಕೆ ತೆರಳಿರಿ' ಎಂದು ಕಳುಹಿಸಿದರು.

ಪ್ರಸಾದ ಸ್ವೀಕಾರಾನಂತರ ಶ್ರೀಗಳ ಚರಣಕ್ಕೆ ಎಲ್ಲರೂ ಭಕ್ತಿಪೂರ್ವಕ ಪ್ರಣಾಮವನ್ನು ಸಲ್ಲಿಸಿ, ಫಲ ಮಂತ್ರಾಕ್ಷತೆಯ ಆಶೀರ್ವಾದವನ್ನು ಪಡೆದು ಪ್ರಯಾಣ ಮಾಡಿದೆವು.

ಮುಂದೆ ಒಂದು ವರುಷ ತುಂಬಿದಾಗ ನನ್ನ ಶ್ರೀಮತಿಯು ಮೊದಲನೆಯ ಗಂಡುಮಗುವನ್ನು ಪ್ರಸವಿಸಿದಳು. ಮೂರ ನೆಯ ವರುಷಕ್ಕೆ ಮತ್ತೊಂದು ಗಂಡುಮಗುವನ್ನು, ಮುಂದಿನ ಮೂರುಮೂರು ವರುಷಗಳಿಗೆ ಒಂದೊಂದು ಹೆಣ್ಣುಮಕ್ಕಳನ್ನೂ ಪಡೆದಳು. ಈಗ ಎಲ್ಲರಿಗೂ ವಿವಾಹವಾಗಿ ಮಕ್ಕಳೂ ಆಗಿವೆ.

ಈ ವಿಚಾರದಲ್ಲಿ ಶ್ರದ್ಧೆ ಅಥವಾ ಅಶ್ರದ್ಧೆಗಳನ್ನು ತಾಳಲು ಎಲ್ಲರೂ ಸ್ವತಂತ್ರರು. ಆದರೆ ಶ್ರೀಶ್ರೀಗಳವರ ಅಧಿಕಾರ ಆರೋಹಣದ ಈ ಸುವರ್ಣಮಹೋತ್ಸವ ಸಂದರ್ಭದಲ್ಲಿ ಸ್ವತಃ ಪಡೆದ ಈ ಅನುಭವವನ್ನು ಹೇಳಿಕೊಳ್ಳದಿದ್ದರೆ ಅದು ಅಂತ ರಂಗದಲ್ಲಿಯೇ ಕುಮುಲುತ್ತಾ ಇರುತ್ತದೆಯಾದ್ದರಿಂದ ನಡೆದುದನ್ನು ನಿರೂಪಿಸಿದ್ದೇನೆ.

ಬೆಂಗಳೂರು —ಮಾ. ನಂ. ನಂಜಪ್ಪ

## ದೊಡ್ಡ ದೀಪ

ಒಂದು ಸಾವಿರದಾ ಒಂಭೈನೂರಾ ಅರವತ್ತನಾಲ್ಕನೇ ಇಸ್ವಿ ಅಕ್ಟೋಬರ ಮೂವತ್ತರಂದು, ನಾವು ಮೂವರು ಶಿಕ್ಷಕರು, ಅರವತ್ತು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಕರ್ನಾಟಕದಲ್ಲಿ ಪ್ರವಾಸ ಮುಗಿಸಿ, ಬೆಳಿಗ್ಗೆ ಸುಮಾರು ೬-೩೦ಗಂಟೆಗೆ ಸಿದ್ಧ ಗಂಗಾ ತಲುಪಿದೆವು. ಶ್ರೀಗಳವರು ಜಪತಪದಲ್ಲಿ ನಿರತರಾಗಿರಬೇಕೆಂದು ನಮ್ಮೆಲ್ಲರ ಕಲ್ಪನೆಯಾಗಿತ್ತು. ಆದರೆ ಶ್ರೀಗಳವರ ಕಾಯಕ ಅಣ್ಣ ಬಸವಣ್ಣನವರ ತತ್ತ್ವದಂತೆ ನಡೆದಿತ್ತು. ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳುತ್ತಿದ್ದರು. ಈ ಸಂಗತಿ ತಿಳಿದ ಕೂಡಲೆ ನಮಗೆಲ್ಲ ಆಶ್ಚರ್ಯ. ಪಾಠ ಮುಗಿಯುವವರೆಗೆ ತಡೆಯಲು ಹೇಳಿದರು. ಆಮೇಲೆ ಸುಮಾರು ೪೦–೪೫ ನಿಮಿಷ ನಮಗೆಲ್ಲ ತಮ್ಮ ಆಶೀರ್ವಚನ ಕೊಟ್ಟು ಪುಳಕಿತರನ್ನಾಗಿ ಮಾಡಿದರು. ಯಾವ ಮೂಢನಂಬಿಕೆಗೆ ಬಲಿಯಾ ಗದ, ಜನರನ್ನು ಸುಲಿಯದ ಇಂತಹ ಸ್ವಾಮಿಗಳು ಇರುವರೆಂದು ನಮ್ಮಲ್ಲಿ ವಿಶ್ವಾಸ ಮೂಡಿತು. ಅನಾವಶ್ಯಕವಾದ ಸಭೆ, ಸಮಾ ರಂಭ, ಉತ್ಸವ ಮುಂತಾದವುಗಳನ್ನು ನಿದರ್ಶನ ಸಹಿತ ಖಂಡಿಸಿ ಮಾತಾಡಿದರು. ಶಿಕ್ಷಣ, ಶಿಕ್ಷಕರು, ವಿದ್ಯಾರ್ಥಿಗಳು ಯಾವ ರೀತಿಯಲ್ಲಿರಬೇಕೆನ್ನುವುದನ್ನು ತಮ್ಮ ಅನುಭವ ಶ್ರೀಮಂತಿಕೆಯಿಂದ ತಿಳಿಹೇಳಿದರು. ಅವರ ವಾಣಿ ನಮ್ಮನ್ನೆಲ್ಲ ಮಂತ್ರಮುಗ್ಧ ರನ್ನಾಗಿಸಿತು. ಸ್ವಲ್ಪ ಸಮಯ ಅವರ ಸಂಗಡ ಇದ್ದರೂ ಸತ್ವಗುಣವು ರಜೋಗುಣವನ್ನು ಗೆದ್ದು ನಮ್ಮೆಲ್ಲರನ್ನು ಸರಿಯಾದ ಮಾರ್ಗಕ್ಕೆ ಹಚ್ಚಿತು. ನಮ್ಮೆಲ್ಲರ ಜೀವನ ಅಂದಿನಿಂದ ಬದಲಾಯಿತು. ದೊಡ್ಡ ದೀಪದ ತೇಜಸ್ಸಿನಲ್ಲಿ ಸಣ್ಣದೀಪದ ಬೆಳಕು ಅಡಕವಾಗುವಂತಾಯಿತು. ನಮ್ಮೆಲ್ಲರ ಭಾವ ಅರಿತ ಶ್ರೀಗಳವರಲ್ಲಿ ಕರುಣಾರಸವು ಥಟ್ಟನೆ ನದಿಯಾದಂತೆ ಆಗಿ ಪ್ರಸಾದ ಸ್ವೀಕರಿಸಲು ಹೇಳಿದರು. ಅವರ ಆಶೀರ್ವಚನ ನಮ್ಮನ್ನೆಲ್ಲ ರಕ್ಷಿಸುತ್ತದೆ ಮತ್ತು ದಾರಿದೀಪವಾಗಿದೆ ಎಂದು ಈಗಲೂ ಸಹ ಆಗಿನ ನನ್ನ ವಿದ್ಯಾರ್ಥಿಗಳು ಹೇಳುತ್ತಿರುತ್ತಾರೆ. ಅಲ್ಲಿಯ ಪ್ರಾರ್ಥನೆಯಲ್ಲಿಯೂ ಭಾಗವಹಿಸಿದ್ದೆವು, ಅಲ್ಲಿಯ ಸಾವಿರಾರು ವಿದ್ಯಾರ್ಥಿಗಳ ಏಕಕಂಠನಾದವು ನಮ್ಮೆಲ್ಲರನ್ನು ನಿರ್ಮಲಗೊಳಿಸಿತು; ಶುದ್ಧರನ್ನಾಗಿ ಮಾಡಿತು; ಪವಿತ್ರರನ್ನಾಗಿಸಿತು. ಶ್ರೀಗಳ ವರು ಆ ಪ್ರಜ್ಞಾನ ಘನವಂತರು. ಇನ್ನೂ ನೂರು ವರ್ಷ, ಸಾವಿರ ವರ್ಷ ತಮ್ಮ ಪವಿತ್ರವಾಣಿಯಿಂದ, ಪರಿಶುದ್ಧ ಜೀವನದಿಂದ

ಲೋಕವನ್ನು ರಕ್ಷಿಸುವಂತೆ, ಮುನ್ನಡೆಸುವಂತೆ, ಅವರಿಗೆ ಆಯುರಾರೋಗ್ಯಭಾಗ್ಯಗಳನ್ನು ಆ ದಯಾಮಯನಾದ ದೇವರು ಕೊಡಲಿಯೆಂದು ನಾವು ಪ್ರಾರ್ಥಿಸುತ್ತೇವೆ.

ಸಂಕೇಶ್ವರ, ೩-೫-೧೯೭೯

**ಎಸ್.ಬಿ. ಖೋದಾನಪುರ್**
ಸಂಕೇಶ್ವರ ಕಾಲೇಜಿನ ಸಮಾಜಶಾಸ್ತ್ರದ ರೀಡರ್

## ದೇವಪುರುಷ ಸಿದ್ಧಗಂಗಾ ಶ್ರೀಗಳು

ಮಠಗಳ ಸಾಲಿಗೆ ಸಿದ್ಧಗಂಗಾಕ್ಷೇತ್ರ ಸೇರಿದರೂ ಉಳಿದ ಮಠಗಳಲ್ಲಿ ನಡೆಯುವ ಕಾರ್ಯವಿಧಾನಕ್ಕಿಂತ ಶ್ರೇಷ್ಠಕಾಯಕ ಇಲ್ಲಿ ನಡೆಯುತ್ತಿದೆ ಎಂದು ಹೇಳಬಹುದು. ಸಿದ್ಧಗಂಗಾಮಠವು ಸರ್ವಧರ್ಮಸಮ್ಮೇಳನದ ಸಾರ್ವಜನಿಕ ಸತ್ಸಂಪ್ರದಾಯಕ್ಕೆ ಹೆಸರಾಗಿದೆ.

ನಿದರ್ಶನವಾಗಿ ೧೯೬೧ ರಲ್ಲಿ ಸಾರ್ವಜನಿಕ ಕಾರ್ಯಪ್ರಯುಕ್ತ ಸ್ವಾಮೀಜಿಯವರನ್ನು ಭೇಟಿ ಮಾಡಬೇಕಾದ ಸಂದರ್ಭ ಒದಗಿ ಬಂತು. ಶಿರಾ ತಾಲ್ಲೋಕು ಕಳ್ಳಂಬೆಳ್ಳ ಹೋಬಳಿಯ ತರೂರಿನಲ್ಲಿ ಗ್ರಾಮಾಂತರ ಪ್ರೌಢಶಾಲೆಯನ್ನು ಆರಂಭಿಸುವುದಕ್ಕಾಗಿ ಸರ್ವಶ್ರೀ ಆರ್. ಸಿದ್ಧಯ್ಯ (ನಿವೃತ್ತ ಮುಖ್ಯ ಇಂಜಿನಿಯರ್), ಎನ್. ಎಸ್, ಕೆಂಗರಾಮಯ್ಯ, ಕೆ. ವೀರಣ್ಣ, ಆರ್. ಸಿದ್ದಯ್ಯ, ಹೆಚ್. ವೀರಣ್ಣ, ಸೂರಪ್ಪ ಇತ್ಯಾದಿ ಸಮಾಜಸೇವಾಸಕ್ತರೊಂದಿಗೆ ಊರೂರು ಸುತ್ತಿ ನಮ್ಮಗಳ ಉತ್ಸಾಹಕ್ಕೆ ನಿರೀಕ್ಷಿಸಿದ ಪ್ರೋತ್ಸಾಹ ಹಳ್ಳಿಯ ಮುಖ್ಯಸ್ಥರಿಂದ ದೊರಕದಾಗ ಈಗ ನಿವೃತ್ತರಾಗಿರುವ ಮುಖ್ಯ ಇಂಜಿನಿಯರ್ ಶ್ರೀ ಆರ್. ಸಿದ್ಧಯ್ಯನವರು ಹಿಡಿದ ಕೆಲಸದ ಸಾಧನೆಗಾಗಿ ಶ್ರೀ ಸಿದ್ಧಗಂಗಾ ಶ್ರೀಗಳವರ ಮೊರೆ ಹೊಕ್ಕರು. ಶ್ರೀಗಳು ಸಕಲ ವಿಷಯವನ್ನು ಕೂಲಂಕಷವಾಗಿ ಪರಾಮರ್ಶಿಸಿ ತಮ್ಮ ಅಭಯಹಸ್ತ ನೀಡಿ ಆಶೀರ್ವಾದ ಮಾಡಿದ ಕಾರಣ ಇಂದಿನ ತರೂರು ಶ್ರೀಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ಹತ್ತಾರು ಹಳ್ಳಿಗಳ ರೈತರು, ಕೂಲಿಕಾರರು, ಅಬಲರು, ಸಬಲರು, ಹಿಂದುಳಿದವರು, ಮುಂದುವರಿದವರು, ಹರಿಜನ ಗಿರಿಜನರು ಇತ್ಯಾದಿ ಮಕ್ಕಳಿಗೆ 'ತಮಸೋಮಾ ಜ್ಯೋತಿರ್ಗಮಯ'ದಂತೆ ಅನಾದಿಕಾಲದ ಮೌಢ್ಯ ಭಾವನೆಗಳನ್ನು ಅಳಿಸಿ ನವನಾಗರೀಕತೆಯ ಹೊಸಬಾಳಿನತ್ತ ಸಾಗಲು ನಾಂದಿಯಾಗಿದೆ, ಎಂಬುದು ಸತ್ಯಸಂಗತಿ.

ವಿಶ್ಲೇಷಣಾರ್ಥಪೂರಕ ಮತ್ತೊಂದಂಶವೆಂದರೆ ದೇಹಿ ಎಂದು ಬಂದವಗೆ ಜೀವನೋಪಾಯ ಮಾರ್ಗ ಕಲ್ಪಿಸುವ ದಯಾಪರತೆ ಶ್ರೀಗಳಲ್ಲಿ ರಕ್ತಗತವಾಗಿದೆ, ಎಂಬುದು ತರೂರಿನಲ್ಲಿ ಪ್ರೌಢಶಾಲೆ ಪ್ರಾರಂಭವಾದ ನಂತರ ಉಪಾಧ್ಯಾಯರ ಹುದ್ದೆಗೆ ಶ್ರೀ ಸಿ.ಜೆ. ರಾಜಣ್ಣನವರು ಅರ್ಜಿಸಲ್ಲಿಸಿ ಆಯ್ಕೆಗಾಗಿ ಕಾದಿರುವ ವಿಷಯ ಈ ಬರಹಗಾರನಿಗೆ ಗೊತ್ತಾಗಿ, ನೇರವಾಗಿ ಸ್ವಾಮೀಜಿಯವರನ್ನು ಶ್ರೀಸಿದ್ಧಗಂಗಾಕ್ಷೇತ್ರದಲ್ಲಿ ಅಪರಾಹ್ನ ಭೇಟಿಯಾಗಿ ಅರಿಕೆ ಮಾಡಿಕೊಂಡೆವು. ಸ್ಥಳೀಯ ಉಪಾಧ್ಯಾಯರಿದ್ದರೆ ಪುರೋಗತಿಗೆ ಶ್ರಮಿಸುತ್ತಾರೆ ಮುಂತಾಗಿ ಅರಿಕೆ ಮಾಡಿಕೊಂಡಾಗ ಸೌಜನ್ಯದಿಂದ ಆಲಿಸಿ, ಪರಾಂಬರಿಸುತ್ತೇನೆಂದು ಹೇಳಿಕಳಿಸಿದ ತರುವಾಯ ಉಪಾಧ್ಯಾಯ ಹುದ್ದೆಗೆ ಅರ್ಜಿದಾರರು ಆಯ್ಕೆಯಾಗಿ ಕೆಲಸಕ್ಕೆ ಹೋಗುತ್ತಿರುವುದು ತಿಳಿದಾಗ 'ಅಳಿಲು ಸೇವೆ ಮುಳಲು ಭಕ್ತಿ' ಎಂಬುದಕ್ಕೆ ಪುಷ್ಟಿ ದೊರೆತು, ಆದ ಸಂತೋಷ ಅಪಾರ. ಇದರಿಂದ ಮತೀಯ ಭಾವನೆಯಾಗಲಿ, ಹಣದ ಪ್ರಭಾವವಾಗಲಿ, ರಾಜಕೀಯ ಹಿನ್ನೆಲೆಯಾಗಲಿ, ಸ್ವಜನಪಕ್ಷಪಾತವಾಗಲಿ ಸ್ವಾಮಿಗಳಲ್ಲಿ ಮನೆ ಮಾಡಿರದೆ ಆಗಿನಿಂದಲೆ ಮಾನವೀಯತೆಯ ಸಹಜ ಭಾವನೆ ಮರುಕೊಳಿಸಿ ಮನುಷ್ಯನಿಗೊಂದು ಬಾಳುವೆಗೆ ದಾರಿದೀಪದ ಚೈತನ್ಯದ ಚಿಲುಮೆ ಪ್ರಧಾನವಾಗಿ ತುಂಬಿದೆ, ಎಂಬುದು ಭಾಸವಾಗುತ್ತದೆ.

ಹೀಗೆ ಶ್ರೀ ಶಿವಕುಮಾರಸ್ವಾಮಿಗಳಲ್ಲಿ ದೈವದತ್ತವಾದ ಧಾರ್ಮಿಕ ಪ್ರವೃತ್ತಿಗಳು ಅವರ ವಾಸ್ತವ್ಯದ ಸ್ಥಳದ ಮಹಿಮೆಯ ಹಿರಿಮೆಯನ್ನು ಎತ್ತಿಹಿಡಿದು ಜನಸ್ತೋಮದ ಜಾತ್ರೆ ಸಿದ್ಧಗಂಗೆಯಲ್ಲಿ ನಡೆಯುವಂತಾಗಿ, ಅನೇಕ ಶಾಲೆಗಳು, ಕಾಲೇಜು, ತಾಂತ್ರಿಕ ಕಾಲೇಜು ಇತ್ಯಾದಿಗಳು ಜನ್ಮವೆತ್ತಿ ಮೆರೆಯಲು ಕಾರಣೀಭೂತರಾಗಿ ಅವರು ದೇವಪುರುಷರೆನಿಸಿದ್ದಾರೆ. ಈ ಕ್ಷೇತ್ರದಲ್ಲಿ ಇನ್ನೂ ವಿಶಾಲವಾಗಿ ವೈದ್ಯಕೀಯ ಕಾಲೇಜು, ಸಂಶೋಧನಾ ಕ್ಷೇತ್ರ, ವ್ಯವಸಾಯ ವಿಸ್ತರಣಾ ವಿಭಾಗ, ಇತ್ಯಾದಿ ಅಂಗಗಳು ಬೆಳೆದು ಸುತ್ತಮುತ್ತಲ ಪಟ್ಟಣಿಗರು, ಗ್ರಾಮವಾಸಿಗಳು, ಗುಡಿಸಲು ಜೋಪಡಿ ವಾಸಿಗಳು ಮುಂತಾದವರಿಗೆ ಸ್ವಾಮಿಗಳ ಸತ್ಕಾರ್ಯಗಳು ವರಪ್ರದಾನವಾಗಲೆಂಬುದು ನಮ್ಮ ಹಾರೈಕೆ.

**ಕೆ. ಎನ್. ವೆಂಕಟಪ್ಪ**
ಮುಖ್ಯಕಾರ್ಯಾಧಿಕಾರಿ, ಕೈಗಾರಿಕಾ ವಿಭಾಗ
ರಾಜ್ಯ ಸಹಕಾರ ಯೂನಿಯನ್
ಬೆಂಗಳೂರು.

# ಸಿದ್ಧಗಂಗೆಯ ಶಿವ-ಶ್ರೀ ಸನ್ನಿಧಿಯಲ್ಲಿ ಕಾಯಕಕ್ಕೆ ಹೊಸ ಭಾಷ್ಯ

ಪ್ರಸಿದ್ಧ ಗಿರಿಕ್ಷೇತ್ರಗಳ ವಿಶಾಲ ಹರವಿನ ನಡುವೆ ಇಂದು ಸಿದ್ಧಗಂಗೆಯ ಶಿವಕ್ಷೇತ್ರವು ಎದ್ದುಕಾಣುವಂತಾಗಿದೆ. ನಾಡಿನ ಉದ್ದಗಲಕ್ಕೂ ಈ ಪುಣ್ಯಕ್ಷೇತ್ರದ ಶರಣಶಂಖದ ನಿಸ್ವನ ಪುಂಖಾನುಪುಂಖವಾಗಿರುವುದು, ಈ ಶತಮಾನದ ಪ್ರತ್ಯಕ್ಷ ಪವಾಡವೆನಿಸಿದೆ. ಸಕಲ ಜೀವಾತ್ಮರಿಗೆ ಲೇಸ ಬಯಸಿ, ಕೃತಿಗಿಳಿಸಿದ ಮಹಾಚೇತನವೊಂದು ಈ ಹರನೆಲೆಯಲ್ಲಿ ಸನ್ನಿಧಿಗೊಂಡಿದೆ. ಕಾಯಕದ ಆಧುನಿಕ ಭಾಷ್ಯವನ್ನು ರೂಪಿಸಿದೆ.

ಕಂಗೊಳಿಸುವ ದೃಷ್ಟಿಕಾಯಕ, ಮೈದುಂಬಿರುವ ಮಾನಸ ಕಾಯಕ. ಕಿವಿಗೆ ಒಗ್ಗುವ ಧ್ವನಿಕಾಯಕ, ನುಡಿಗೆ ಬೆಂಬಲಿಸುವ ನಡೆಯ ಕಾಯಕ-ಇವೆಲ್ಲಕ್ಕೂ ದಿಗ್ದರ್ಶನ ಸಿದ್ಧಗಂಗಾ ಶ್ರೀ ಕ್ಷೇತ್ರದ ನಿತ್ಯಕಾಯಕವಾಗಿದೆ. ಅರ್ಥಾತ್ ಪರಂಪರೆಯ 'ಕಾಯಕ'ಶಬ್ದದ ಅರ್ಥವು, ತನ್ನ ಮೈಯನ್ನು ವಿಶಾಲಿಸಿಕೊಂಡಿರುವ ಬಗೆಯನ್ನು ಕಾಣುವ ಹಂಬಲವಿದ್ದರೆ, ಶ್ರದ್ಧೆ ಇದ್ದರೆ ಈ ಕ್ಷೇತ್ರ ಒಂದು ಸೂಕ್ತ ಸದುತ್ತರ. ಹೀಗಾಗಿ ಕಾಯಕದ ಅರ್ಥದ ಹಿನ್ನೆಲೆಯನ್ನು ಗಮನಿಸುವುದು ಒಳ್ಳಿತು.

ಶರಣರ ಸೊಳ್ನುಡಿ 'ಕಾಯಕ'. ಕಾಯವನ್ನು ದಂಡಿಸುವುದು ಎಂಬರ್ಥದಲ್ಲಿ ರೂಪುಗೊಂಡ ಈ ಶಬ್ದಕ್ಕೆ ತಾತ್ವಿಕ ನೆಲಗಟ್ಟನ್ನು ಒದಗಿಸಿ ವಿಶಿಷ್ಟ ಮೆರುಗನ್ನು ಶರಣರು ಒದಗಿಸಿದರು. ಕಾಯಕವನ್ನು ಭಕ್ತಿಯಲ್ಲಿ, ನೇಮದಲ್ಲಿ, ನಿಷ್ಠೆಯಲ್ಲಿ, ನಿತ್ಯ ಬದುಕಿನಲ್ಲಿ ಗಳಿಗೆ ಗಳಿಗೆಗಳ ಚಿಂತನದಲ್ಲಿ ಅಳವಡಿಸಿಕೊಂಡ ಅವರು ಆ ಶಬ್ದವನ್ನು ಮಾನವ ನಿರ್ಮಿತ ಮಿತಿಯಿಂದ,ದೇವವ್ಯಾಪಕತೆಗೆ ಒಯ್ದರು. ಮಗುದೊಂದು ರೀತಿಯಿಂದ ಯೋಚಿಸಿದರೆ, 'ಕಾಯ' ಎಂದರೆ ದೇಹ. 'ಕ' ಎನ್ನುವುದು ಕರ್ತೃತ್ವಸೂಚಕ ಪ್ರತ್ಯಯ. ದುಡಿಮೆ ಎನ್ನುವ ಸಾಮಾನ್ಯ ಅರ್ಥದಿಂದ ಮುಂದೆ ಸಾಗಿ, 'ಕಾಯಕ' ದಲ್ಲಿ 'ಕ'ಶಬ್ದದ ನಂತರ ಬಿಂದುವಿನ ಸ್ಥಾನದಲ್ಲಿ ಅನಾಗತ ಊಹೆ ಮಾಡಿದರೆ 'ಕಾಯಕಳೆ'ಎಂಬ ಪದ ಮೂಡುವುದಿಲ್ಲವೆ? ಅಂದರೆ ಮರ್ತ್ಯಭಾವ ಕಳೆದು, ಅಮಳೇಶ್ವರತ್ವಕ್ಕೇರುವ ಒಂದು 'ಕಾಯಕ'ವದು ಉತ್ಪತ್ತಿ ಭಾವ ಅಳಿದು, ನಿಷ್ಪತ್ತಿ ನೆಲೆಗೆ ಸಲ್ಲುವುದು. ಅಂತೆಯೇ ಅದೊಂದು ಆಚರಣ ಹಿತ ತತ್ತ್ವ; ಅಚಲ ಶರಣ ತತ್ತ್ವ; ಆದರ್ಶ ತತ್ತ್ವ ಎನಿಸುತ್ತದೆ. ಆ ಕಾಯಕವೇ ಕೈಲಾಸವಲ್ಲವೇ? ಕಾಯ ಕಳೆದ ಮೇಲೆ ಆಪ್ಪುವುದು ಕೈಲಾಸ ತಾನೆ.

'ಕಾಯಕ' ಶಬ್ದವು ದೇಹಕ್ಕೆ ಸಂಬಂಧಪಟ್ಟ ವಿಶೇಷಣಾರ್ಥದಲ್ಲಿ ಮಾತ್ರ ವಚನಕಾರರ ಕಾಲದವರೆವಿಗೂ ಬಳಕೆಯಲ್ಲಿತ್ತು. ಆದರೆ ಶರಣರು ಈ ಶಬ್ದದಲ್ಲಿ ತಾವು ಕಂಡ ವಿಶಿಷ್ಟ ತತ್ತ್ವವೊಂದನ್ನು ಇಡಿಕಿರಿಸಿ ಅದೊಂದು ವ್ಯಾಪಕವೂ, ಪಾರಿಭಾಷಿಕವೂ ಆದ ಶಬ್ದವಾಗುವಂತೆ ಮಾಡಿದರು...ಕಾಯಕ ಶಬ್ದಕ್ಕೆ ಚನ್ನಬಸವಣ್ಣನ ಮಾತಿನಲ್ಲಿ ಸೂತ್ರೀಕರಿಸಿ ಹೇಳಬೇಕೆಂದರೆ 'ತನುಮನ ಬಳಲಿಸಿ ತಂದು ದಾಸೋಹವ' ಮಾಡುವುದು. ಕಾಯಕವು ಜೀವನೋಪಾಯ ಹಾಗೂ ಆತ್ಮಸಿದ್ಧಿಗಳೆರಡಕ್ಕೂ, ಸಾಧನವಾದುದರಿಂದ ಅದರಲ್ಲಿ ಕೀಳು ಮೇಲುಗಳೆಂಬ ಭಾವನೆಗೆ ಅವಕಾಶವಿಲ್ಲವೆಂದು 'ವಚನಕಾರರು ಹೇಳಿದರು'....ಹೀಗೆ 'ಶರಣರು ಕಲ್ಪಿಸಿದ ಕಾಯಕತತ್ತ್ವ ತುಂಬ ಶ್ರೇಷ್ಠವಾದ ಒಂದು ವೈಚಾರಿಕ ಕಾಣಿಕೆಯಾಗಿದೆ'. ಇಲ್ಲಿ ವೈಚಾರಿಕತೆ ಅಷ್ಟೇ ಅಲ್ಲ, ಆಚರಣೆಯೂ ಅನುವಾಗಿದೆ ಎನಿಸುತ್ತದೆ.

ಈ ದೃಷ್ಟಿಯಿಂದ ಸಿದ್ಧಗಂಗೆಯಲ್ಲಿ ನಡೆಯುತ್ತಿರುವ ಕಾಯಕ ಇನ್ನೂ ವ್ಯಾಪಕವೆನಿಸುತ್ತದೆ. ಆತ್ಮಸಿದ್ಧಿಯ, ಜೀವನೋಪಾಯದ ಮಿತಿಯಲ್ಲುಳಿಯದೆ, ಜ್ಞಾನ-ಧ್ಯಾನ, ದಾಸೋಹ, ಚಾರಿತ್ರ್ಯನಿರ್ಮಾಣ, ಆಚಾರ-ವಿಚಾರ, ದುಡಿಮೆಯ ಮಹತ್ವ ಇತ್ಯಾದಿಗಳ ಅರಿವನ್ನು, ವಿವಿಧ ಮಜಲುಗಳಲ್ಲಿ, ಹೊಸ ಆಯಾಮಗಳಲ್ಲಿ ತೋರುವ ಕಾಯಕ ಈ ಕ್ಷೇತ್ರದಲ್ಲಿ ನಡೆಯುತ್ತಿದೆ. ಏರಿದ್ದು ಗದ್ದುಗೆಯಾದರೂ ಆಧ್ಯಾತ್ಮದ ಅಂಗಳದಲ್ಲಿಯೂ ಸಮಷ್ಟಿಹಿತವನ್ನು ಕಾಯುವ, ಸಮೂಹಮಾಧ್ಯಮವಾಗಿರುವ ಶಿವಶಕ್ತಿ ಈ ಕ್ಷೇತ್ರದ್ದಾಗಿದೆ. ವಿದ್ಯಾರ್ಥಿಗಳಿರಲಿ, ವಿವಿಧ ವೃತ್ತಿಕಾಯಕದವರಿರಲಿ ವರ್ತಮಾನದ ಸಮಾಜಹಿತ, ಭಾವೀಪೀಳಿಗೆಯ ಹಿತದ ಕಲ್ಪನೆಯನ್ನು ಮುಂದಿಟ್ಟು ವಿದ್ಯಾಸಂಸ್ಥೆಗಳನ್ನು ಕ್ಷೇತ್ರದಾಸರೆಯಲ್ಲಿ ನೇರ್ಪುಗೊಳಿಸುತ್ತಿರುವ ಕಾಯಕ ಕುರಿತು ಏನೆನ್ನೋಣ! ಶಾಲೆಯ ಗೋಡೆ, ಹಾಸ್ಟೆಲಿನ ಗೋಡೆಯನ್ನು ಕಟ್ಟುವಾಗ ವಿದ್ಯಾರ್ಥಿಗಳೊಡನೆ, ಆಸರೆ ಅರಸಿ ಬಂದವರ ಜೊತೆಗೆ ಹೆಗಲು ಕೊಟ್ಟು, ಕಲ್ಲು ಹೊತ್ತು ಬೆವರಿನ ಬೆಲೆಯನ್ನು ಕಾಯಕದ ಘನದಲ್ಲಿ ಕಾಣುವಂತೆ ಉತ್ತೇರಣೆ ಮಾಡುವ, ಗೊಮ್ಮಟ ಚೇತನದಂತೆ ಚಲಿಸುವ ಶ್ರೀಗುರು ಸನ್ನಿಧಿ, ವ್ಯಕ್ತಿಯಲ್ಲ; ಶ್ರೀ ಸಿದ್ಧಲಿಂಗೇಶ್ವರ ಮಾನಸಶಕ್ತಿಯ ಒಂದು ಮೂರ್ತರೂಪ; ನೆಲೆಗೊಂಡ ನನಸು.

ಈ ಸಿದ್ಧಲಿಂಗೇಶ್ವರ ಕ್ಷೇತ್ರದ ಸಂಕಲ್ಪ ಗಂಗೋತ್ರಿ ಹರಿದು ನಿರ್ಮಿಸಿದ ವೈಶಾಲ್ಯತೆಯಲ್ಲಿ ಮಿಂದು ಪುನೀತರಾಗಿ ಇಂದಿನ ಬದುಕಿನಲ್ಲಿ ಕಾಯಕದ ಮರ್ಮ ತಿಳಿದ ಜೀವಿಗಳು ಅಗಣಿತ. ಅಲ್ಲದೆ, ಸಾರ್ವಜನಿಕ ಸಮೂಹ ಶಕ್ತಿಯ ಭಕ್ತಿಯ ಭೋರ್ಗರೆವ ಪ್ರವಾಹವನ್ನು ಕಾಯಕದ ಆಣೆಕಟ್ಟಿನಲ್ಲಿ ಸೆರೆಹಿಡಿದು ಸಂಯಮಿಸಿ ಸಮಾಜದ ಭೂಮಿಗೆ ಹದನಾಗಿ ಹರಿಸಿರುವ ಕೃತುಶಕ್ತಿಯಿಂದಾಗಿ, ಆರೋಗ್ಯಕರ ವಾತಾವರಣ, ಹಿತಕರ ಪರಿಸರದ ನಿರ್ಮಾಣ ಈ ಕ್ಷೇತ್ರದಲ್ಲಿ ಆವಿರ್ಭವಿಸಿದೆ. ವಿದ್ಯಾವಂತರು,

ವಿಚಾರವಂತರು ತುಂಬುಹೃದಯದಿಂದ ನಮಿಸಿ ಗೌರವಿಸುವ ಪರಿಸರ ನಿರ್ಮಾಣವೂ ಇಲ್ಲಿ ಬೆಳಗಿದೆ. ಇನ್ನು [ಹರಿಹರನ ಶಿವಗಣ ಪ್ರಪಂಚದ ವ್ಯಕ್ತಿಗಳು, ಜೀವನದಲ್ಲಿ ಕೈಕೊಂಡ ವೃತ್ತಿಗಳನ್ನೇ ಅಧ್ಯಾತ್ಮಕ್ಕೆ ಅಳವಡಿಸಿಕೊಳ್ಳುವ ಕೌಶಲವುಳ್ಳವರು] ಹರಿಹರನು ತನ್ನ ರಗಳೆಗಳ ಮೂಲಕ ತನ್ನ ಶಿವಗಣ ಪ್ರಪಂಚದ. ಆಕಳ ಕಾಯುವ ಅನಯನಾರ, ಒಕ್ಕಲುಮಗ ಇಳೆಯಾಂಡ ಗುಡಿಮಾರ, ಬೇಡರವನಾದ ಕಣ್ಣಪ್ಪ, ಛತ್ರಕೊಯ್ಯುವ ಅರಿವಾಳ್ತಾಂಡ, ಬಟ್ಟೆ ಹಸನು ಮಾಡುವ ಕುರುಂಪೆತೊಂಡ, ಕುಂಬರ ಗುಂಡಯ್ಯ- ಇವರ ಚಿತ್ರಣದಲ್ಲಿ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂಬ ಸೂತ್ರವನ್ನು ಒಪ್ಪಿ ಹೇಳಿದ್ದಾನೆ. ಯಾವುದೇ ಕಾಯಕವಿರಲಿ ಅರಿತು ಆಚರಿಸುವ ಶ್ರದ್ಧೆಯಲ್ಲಿ ಸಿದ್ಧಿ ಲಭ್ಯವಾಗುತ್ತದೆ. ಅಂತೇ ವಿವಿಧ ಕಾಯಕ ನಡೆಸುವ ಸಮಾಜ ವರ್ಗದಿಂದ ಬಂದು, ಸಿದ್ಧಗಂಗೆಯ ಭಕ್ತಿ, ಶ್ರದ್ಧೆ, ಪರಿಶ್ರಮ, ಚಾರಿತ್ರ್ಯನಿರ್ಮಾಣ, ಜಿಜ್ಞೆಯ ಗರಡಿಮನೆಯಲ್ಲಿ ಸಾಧಕಮಾಡಿ ನಿಂದು ಸಲ್ಲಬೇಕೆಂದವರ ಸರತಿಯಲ್ಲಿ ಸಾಧಕಮಾಡಿ. ನಿಂದು ಸಲ್ಲಬೇಕೆಂದವರ ಸರತಿಯ ಸಾಲು (ಕ್ಯೂ) ಅಧಿಕ. ಇಲ್ಲಿ ಸಲ್ಲುವ ಶಕ್ತಿ ಪಡೆದು, ಎಲ್ಲಿಯೂ ಸಲ್ಲುವ ಶಕ್ತಿ ಗಳಿಸಿಕೊಳ್ಳುವ ತವಕ, ಅವರಲ್ಲಿರುವವರೆವಿಗೂ ನಿತ್ಯಕಾಯಕವೆನಿಸಿದೆ. ಅದಕ್ಕೆ ಪ್ರೇರಕಶಕ್ತಿ ಸುಸ್ಪಷ್ಟ.

> 'ಕೃಷಿಕೃತ್ಯ ಕಾಯಕದಿಂದಾದಡೇನು ? ತನುಮನ ಬಳಲಿಸಿ ತಂದು ದಾಸೋಹವ ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ ...... ಇಂತಪ್ಪವರ ನಾನು ನೆರೆ ನಂಬಿ ನಮೋ, ನಮೋ ಎಂಬೆನಯ್ಯ ಕೂಡಲ ಸಂಗಮದೇವಾ.'

—ಪೀಠದಲ್ಲಿ ಕುಳಿತು ಆಜ್ಞೆಮಾಡಿ ದಾಸೋಹ ಮಾಡಿದೆ ಎನ್ನುವುದಕ್ಕಿಂತ, ಆಧುನಿಕ ಸಮಾಜದ ಮಿಡಿತವನ್ನು ಗುರುತಿಸಿ, ಸದ್‌ಭಕ್ತರ ಮನೆಯ ಬಳಿಗೆ ಸಾಗಿಬರುವ ಸಂತ-ಭಗವಂತನಂತೆ, ಲೌಕಿಕರ, ಶ್ರದ್ಧಾನ್ವಿತರ ಹೃದಯವನ್ನು ನಡೆಯಲ್ಲಿ, ನುಡಿಯಲ್ಲಿ, ಆಚರಣ ಶುದ್ಧಿಯಲ್ಲಿ ಆಕರ್ಷಿಸುವ ಕಾಯಕ ಶ್ರೀಕ್ಷೇತ್ರದ್ದು; ಕಾವಿಬಟ್ಟೆಯುಟ್ಟು ಅಂತರಂಗದಲ್ಲಿ ಕಪಟಿಗಳಾದವರನ್ನು ಕುರಿತು ವೇಮನ ಹೀಗೆ ಹೇಳುತ್ತಾನೆ :

> 'ಪರಮ ಹಂಸ ನನುಚು ಪರವಗಟ್ಟುಕ ಭೂಮಿ
> ಪರಧನಮುಲಕಾಸ ಪಡೆದು ವಾಡು
> ಪರಮಹಂಸ ಗಾಡು ಪರಮ ಹಿಂಸುಡ ಟಂಡ್ರು'

'ಪರಮಹಂಸನೆಂದು ಹೇಳಿಕೊಂಡು ಪ್ರತಿಷ್ಠೆ ಬೆಳಸಿಕೊಳ್ಳುತ್ತ ಪರಧನಕ್ಕೆ ಆಸೆ ಪಡುವವನು ಪರಮಹಿಂಸಕನೇ ಹೊರತು ಪರಮಹಂಸನಲ್ಲ.' ಈ ಆಧುನಿಕ ಸಮಾಜದಲ್ಲಿ ಕಂಡುಬರುವ ಕೆಲವು ವೈಪರೀತ್ಯ ಮಾದರಿಗಳಿಗೆ ಹಿಡಿವ ಕನ್ನಡಿಯಲ್ಲಿ ಕಾಣುವ ವ್ಯಂಗ್ಯ ಪ್ರತಿಫಲನವೆನಿಸುತ್ತವೆ ಈ ನುಡಿಗಳು. ಈ ಸನ್ನಿವೇಶಕ್ಕೆ ಹೋಲಿಸಿದಾಗ, 'ಸಿದ್ಧಗಂಗಾಶ್ರೀ'ಯ 'ಕಾವಿ'ಯ ಮಹತ್ತು ಅರಿವಾಗುತ್ತದೆ. ವಿಚಾರವಂತರಲ್ಲಿಯೂ ಸಮುಚಿತ ಗೌರವವನ್ನು ಸಾಕ್ಷಾತ್ಕರಿಸಿಕೊಂಡ ಆ 'ಶ್ರೀ' ಸದಾಚಾರದಲ್ಲಿ ಮೈವೆತ್ತು ಬಂದಿದೆ.

ಸದಾಚಾರದಲ್ಲಿ ಕಾಯಕಕ್ಕೆ ಆದ್ಯತೆ ಹೆಚ್ಚು. ಗೌರವ, ಭಕ್ತಿ, ಶ್ರದ್ಧೆ, ಹೊಸ ಕಾಣ್ಕೆಗಳು ಅದರ ಪೂರ್ಣಾವಧಿ ಸಂಗಡಿಗರು. ಆ ಕಾರಣ 'ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು' ಅವನೂ ಕಾಯಕನಿರತವಾಗಬೇಕು. ಅರ್ಥಾತ್ ಪ್ರತ್ಯಕ್ಷ ಶಿವನೂ ಕಾಯಕ ಮಾಡಬೇಕು. ಗುರುವಾಗಲಿ ಜಂಗಮನಾಗಲಿ ಭಿಕ್ಷೆಬೇಡದೆ ಕಾಯಕ ಮಾಡತಕ್ಕದ್ದು ಎನ್ನುವ ಮಾತು ಸ್ವಯಂಸಿದ್ಧಿಗೂ ಕಾರಣವಾಗುತ್ತದೆ.

> 'ಗುರುವಾದಡೂ ಕಾಯಕದಿಂದವೇ ಜೀವನ್ಮುಕ್ತಿ. ಲಿಂಗವಾದಡೂ ಕಾಯಕದಿಂದವೇ ಶಿಲೆಯ ಕುಲ ಹರಿವುದು. ಜಂಗಮವಾದಡೂ ಕಾಯಕದಿಂದ ವೇಷದ ಪಾಶ ಹರಿವುದು. ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು.'

—ಈ ಮಾತು ಎಂತಹ ಉಗ್ಗಡಣೆ ! 'ಸಿದ್ಧಗಂಗಾಶ್ರೀ'ಗಳವರ ಬದುಕಿಗೆ ಅನ್ವಯಿಸಿ ನೋಡಿದಾಗ ಈ ಮಾತಿನ ಸಾರ್ಥಕ ಅನ್ವಯವಿರುವ ಕಾರಣ, ಅವರು ಅದ್ವಿತೀಯರು.

ಇನ್ನು ಸಿದ್ಧಗಂಗೆಯಲ್ಲಿ ಕಂಡ 'ನಯನಕಾಯಕ', 'ಶ್ರವಣಕಾಯಕ'ದ ಕೆಲವು ಘಟನೆಗಳನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುವುದು ಉಚಿತವೆನಿಸುತ್ತದೆ.

ಡಿಸೆಂಬರ್ ೧೯೬೩. ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಿದ್ಧಗಂಗೆಯಲ್ಲಿ ನಡೆದ ಸಂದರ್ಭ. ಸಂಜೆಯ ಗೋಷ್ಠಿಯಲ್ಲಿ ನೆರೆದ ಜನತೆ. ಅಧ್ಯಕ್ಷರು ಆಸೀನರಾದರೂ, ಗುಸುಗುಸು ಗುಂಗಿನಲ್ಲಿಯೇ ಇತ್ತು. ಆಗ ಎಲ್ಲಿಯೋ ಕಾಣದಂತೆ ಕುಳಿತಿದ್ದ ಸಿದ್ಧಗಂಗಾ ಶ್ರೀಗಳವರು ಎದ್ದು ಹಿಂದೆ-ಮುಂದೆ ದೃಷ್ಟಿಕಾಯಕ ನಡೆಸಿದ್ದೇ ತಡ, ಗುಸುಗುಸು ಮಾಯವಾಗಿತ್ತು. ನಯನಕಾಯಕ ಸಾಧಿಸಿದ ಪರಿ ಅದು. ಮಾತಿಲ್ಲ, ಹಸ್ತಚಲನೆಯಿಲ್ಲ. ಇಷ್ಟೇ ಅಲ್ಲ, ಕೋರಿಕೆಯನ್ನು ಅವರ ಬಳಿ ಹೊತ್ತು ನಡೆದವರಿಗೆ, ಮಾತಿನ ಮೌನದಲ್ಲಿ ತೀರ್ಪು. ಅರ್ಥೈಸಿಕೊಳ್ಳುವ ಅರಿವಿದ್ದರೆ ಅದೊಂದು ಜ್ಯೋತಿರ್ಲಿಂಗ.

ಸಮಾಜದ ಹಲವು ವೇದಿಕೆಗಳಿಗೆ ಶ್ರೀಗಳವರು ಆಹ್ವಾನಿಸಲ್ಪಟ್ಟಾಗ, ಅವರ ಚಿಂತನೆಯ ಮುಕ್ತಾಫಲಗಳು ಸಮಾಜದ ಶಿವ-ಶ್ರೀಮಾನಸಕ್ಕೆ ನಿವೇದನವಾಗುತ್ತವೆ. ಅವರ ಅಸ್ಖಲಿತವಾಣಿಯ ಸಂದೇಶ ಎದೆಯನ್ನು ಆರಳಿಸುತ್ತದೆ.

ಅಶನ, ಆಸರೆ, ಅಧ್ಯಾತ್ಮ ಬಿಜ್ಜೆ, ಕಾಯಕ ಕಾರಣ ನೆಲೆಯಾಗಿ ರೂಪುಗೊಂಡಿರುವ ಸಿದ್ಧಗಂಗೆ, ಯಾತ್ರಾರ್ಥಿಗಳಿಗೆ ಪುಣ್ಯಕ್ಷೇತ್ರ; ಆಧುನಿಕರಿಗೆ ಸಮಾಜಸೇವೆಯ ಆದರ್ಶಕ್ಷೇತ್ರ. ಹೀಗೆ ಹಲವು ಹತ್ತುಗಳ ದಕ್ಷನಿರ್ವಹಣೆಯಲ್ಲಿ ಸಮಾಜದ ಒಳತಿಗಾಗಿ ಶ್ರಮಿಸುವ ಶ್ರದ್ಧೆಯಲ್ಲಿ ಶೋಷಣೆ ಶೂನ್ಯಮಟ್ಟದಲ್ಲಿರುವುದು ಸ್ವಾಗತಾರ್ಹ. 'ಅಂತೇ. ತನುಕರಗಿದವರಲ್ಲಿ ಮಜ್ಜನ, ಮನ ಕರಗಿದವರಲ್ಲಿ ಪುಷ್ಪ, ಹದುಳಿಗರಲ್ಲಿ ಗಂಧಾಕ್ಷತೆ, ಭಾವಶುದ್ಧವಿದ್ದವರಲ್ಲಿ ಧೂಪ, ಅರಿವು ಕಣ್ದೆರೆದವರಲ್ಲಿ ಆರತಿ, ಪರಿಣಾಮಿಗಳಲ್ಲಿ ನೈವೇದ್ಯ'ವನ್ನು ಪಡೆದು, ಶ್ರೀ ಸಿದ್ಧಲಿಂಗೇಶ್ವರನಿಗೆ ಅರ್ಪಿಸುವ ಕಾಯಕದಲ್ಲಿ, ಸಮಾಜಸೇವೆಯನ್ನು ಅವಿಭಾಜ್ಯ ಅಂಗವಾಗಿರಿಸಿಕೊಂಡಿರುವುದು ಸಂತೋಷ ಸಂಗತಿ. ಇದರಿಂದಾಗಿ ಆಧುನಿಕ ಯುಗಪ್ರಜ್ಞೆಯನ್ನು ಅಳವಡಿಸಿಕೊಂಡು ಕಾಯಕ ತತ್ತ್ವಕ್ಕೆ ನೀಡಿದ ಹೊಸ ಪ್ರಾಯೋಗಿಕ ಭಾಷ್ಯ ಸಿದ್ಧಿಯ ಔನ್ನತ್ಯ ಸಿದ್ಧಗಂಗೆಯ ಶಿವ-ಶ್ರೀ ಸದನದಲ್ಲಿ ಕಾಣುತ್ತದೆ. ಸಾಮಾನ್ಯ ಶ್ರೀಯನ್ನು ದೇವಶ್ರೀಯನ್ನಾಗಿಸುವ ಹವಣು ಹೆಪ್ಪುಗಟ್ಟಿದೆ. ಆಧುನಿಕ ಸಮಾಜದಲ್ಲೊಂದು ಆವಿಷ್ಕಾರವೆನಿಸಿದೆ. ಕುಂದೆಣಿಸಬೇಕೆಂದರೆ ಅದು ಅವರವರ ಭಾವದರಿವು. ಒತ್ತಡದ ಒಗ್ಗರಣೆಯಿಲ್ಲ,ವೈಚಾರಿಕತೆಗೆ ತಡೆಯಿಲ್ಲ. ಮಿತಿ ಇದ್ದರೆ, ಗುಣ ಮೆಚ್ಚಲು ಅಡ್ಡಿ ಏನು ? ಈ ಸಂದರ್ಭದಲ್ಲಿ ಎಂ.ಆರ್. ಶ್ರೀ ಅವರ ಮಾತು ಸ್ಮರಣಯೋಗ್ಯವೆನಿಸುತ್ತದೆ; ಅದು ಸಿದ್ಧಗಂಗಾಶ್ರೀಕ್ಷೇತ್ರಕ್ಕೂ ಅನ್ವಯಿಸುವಂತಿದೆ. 'ವಚನಧರ್ಮದ ಸಮಾಜ ಹೀಗೆ ಒಂದು ರೀತಿಯಲ್ಲಿ ದೊಡ್ಡ ಸಹಕಾರ ಸಂಘ; ಮತ್ತೊಂದು ರೀತಿಯಲ್ಲಿ ಸಮತಾವಾದ ರಾಷ್ಟ್ರ............ಈ ಸಮಾಜ ವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವುದಕ್ಕೂ, ಅದನ್ನು ತಕ್ಕ ಮಾರ್ಗಗಳಲ್ಲಿ ಮುಂದುವರಿಸುವುದಕ್ಕೂ ವೀರಶೈವ ಮಠಗಳು ನೂರಾರು ದೇಶದಲ್ಲೆಲ್ಲ ಹಬ್ಬಿವೆ' (ಎಂ. ಆರ್. ಶ್ರೀನಿವಾಸಮೂರ್ತಿ : ವಚನ ಧರ್ಮಸಾರ, ಪು.೨೨೩)

ಅಂದಮೇಲೆ 'ಸಿದ್ಧಗಂಗಾಶ್ರೀ'ಕ್ಷೇತ್ರವು, ಕಾಯಕಸಿದ್ಧಿಯ ಅದ್ವಿತೀಯ ಸಂಕೇತವಾಗಿ ಎದ್ದುಬಂದಿದೆ ಎಂದರೆ ಉತ್ಪ್ರೇಕ್ಷೆಯಲ್ಲ.

**ಎಂ. ಜಿ. ನಾಗರಾಜ್**

# ೨. ಅಭಿಪ್ರಾಯಗಳು

[ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಮತ್ತು ಅದರ ವತಿಯಿಂದ ನಡೆಯುವ ವಿದ್ಯಾಸಂಸ್ಥೆಗಳಿಗೆ ರಾಜ್ಯ ಮತ್ತು ರಾಷ್ಟ್ರಮಟ್ಟದ ಪ್ರಮುಖರನೇಕರು ಸಂದರ್ಶನವಿತ್ತು, ಇಲ್ಲಿನ ವಿದ್ಯಾರ್ಥಿವೃಂದ,ದಾಸೋಹಕ್ರಿಯೆಗಳನ್ನು ಕಂಡು ಪ್ರಭಾವಿತರಾಗಿದ್ದಾರೆ. ಶ್ರೀಗಳವರು ಆಚರಿಸುತ್ತಿರುವ ವಿವಿಧ ಮುಖಗಳ ರಚನಾತ್ಮಕ ಕಾರ್ಯಕ್ರಮಗಳ ಬಗೆಗೆ ತಮ್ಮ ಅಪಾರ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಶ್ರೀಗಳವರ ಕೃಪಾಶೀರ್ವಾದ ಪಡೆದಿದ್ದಾರೆ. ಅವರಲ್ಲಿ ಪ್ರಮುಖರ ಹೆಸರನ್ನು ಉಲ್ಲೇಖಿಸಬಹುದು :

ದಿವಾನ್ ಮಿರ್ಜಾ ಇಸ್ಮಾಯಿಲ್, ರಾಮಸ್ವಾಮಿಮೊದಲಿಯಾರ್, ಲಕ್ಷ್ಮಣಸ್ವಾಮಿಮೊದಲಿಯಾರ್, ಜಯಚಾಮರಾಜೇಂದ್ರ ಒಡೆಯರ್, ಕರ್ನಾಟಕ ಮುಖ್ಯಮಂತ್ರಿಗಳಾಗಿದ್ದ ಕೆ.ಸಿ. ರೆಡ್ಡಿ, ಕೆ. ಹನುಮಂತಯ್ಯ, ಎಸ್. ನಿಜಲಿಂಗಪ್ಪ, ವೀರೇಂದ್ರಪಾಟೀಲ್, ಡಿ. ದೇವರಾಜಅರಸು, ಗುಂಡೂರಾವ್; ಬಾಬುರಾಜೇಂದ್ರ ಪ್ರಸಾದ್, ಆಚಾರ್ಯಕೃಪಲಾನಿ, ಆರ್. ಆರ್. ದಿವಾಕರ, ಡಿ.ಸಿ. ಪಾವಟೆ, ಅಟಲ್ ಬಿಹಾರಿ ವಾಜಪೇಯಿ, ಅದ್ವಾನಿ,ಎಂ.ಜಿ. ರಾಮಚಂದ್ರನ್, ಇಂದಿರಾಗಾಂಧಿ, ಬಿರ್ಲಾ, ವಿ. ಕೆ. ಆರ್.ವಿ. ರಾವ್, ಅಮೇರಿಕಾ ಕಾನ್ಸೊಲ್ ಜನರಲ್, ಮದ್ರಾಸು, ಚಿತ್ರದುರ್ಗದ ಜಯದೇವಮುರುಗರಾಜೇಂದ್ರಸ್ವಾಮಿಗಳು, ಶೃಂಗೇರಿ ಜಗದ್ಗುರುಗಳು, ಉಡುಪಿಪೇಜಾವರ ಮಠದ ಶ್ರೀಗಳು, ಧಾರವಾಡದ ಮೃತ್ಯುಂಜಯಸ್ವಾಮಿಗಳು, ನವಿಲುಗುಂದದ ಬಸವಲಿಂಗಸ್ವಾಮಿಗಳು, ಮೈಸೂರಿನ ಗೌರೀಶಂಕರಸ್ವಾಮಿಗಳು, ವೀರೇಂದ್ರಹೆಗ್ಗಡೆ ಮುಂತಾದವರು ಮುಖ್ಯರು. ಇವರಲ್ಲದೆ ಸಾಮಾನ್ಯವಾಗಿ ಕರ್ನಾಟಕ ರಾಜ್ಯದ ಉಳಿದ ಮಂತ್ರಿಗಳೆಲ್ಲರೂ ಒಂದಿಲ್ಲೊಂದು ಸಂದರ್ಭದಲ್ಲಿ ಶ್ರೀಕ್ಷೇತ್ರವನ್ನು ಸಂದರ್ಶಿಸಿದ್ದಾರೆನ್ನಬಹುದು. ರಾಜ್ಯ ಮತ್ತು ಕೇಂದ್ರ ಸರಕಾರಗಳ ಉನ್ನತಾಧಿಕಾರಿಗಳೂ, ಅನೇಕ ಪಾಶ್ಚಾತ್ಯ ರಾಷ್ಟ್ರದ ಪ್ರವಾಸಿಗಳೂ, ಜಿಜ್ಞಾಸುಗಳೂ ಇತರ ಸಂದರ್ಶಕರೂ ಶ್ರೀಮಠದ ಕಾರ್ಯಕ್ರಮಗಳನ್ನು ಕಂಡು ಪ್ರಭಾವಿತರಾಗಿದ್ದಾರೆ. ಈ ಮುಂದೆ ಕೆಲವರ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಡಲಾಗಿದೆ. ಒಬ್ಬರೇ ಬೇರೆ ಬೇರೆ ಸಂದರ್ಭಗಳಲ್ಲಿ ಬಂದಾಗ ವ್ಯಕ್ತಪಡಿಸಿದ ಬೇರೆ ಬೇರೆ ಅಭಿಪ್ರಾಯಗಳೂ ಇದರಲ್ಲಿವೆ]

His Holiness Shri Shiva Kumara Swamiji of Siddhaganga on whom we are conferring the honorary degree of Doctor of Literature is a great idialist and humanitarian who has served in many ways the noble cause of education first, by adding to his own traditional learning and culture a more formal academic training in Sanskrit literature and Philosophy, and then by his generous efforts to diffuse education at all levels among the people. In the Sanskrit College at Siddhaganga, that home of great saints, eight hundred students receive traning in all branches of Sanskrit learning. At the same time, because education has long been the preserve of the more

affluent or privileged classes, His Holiness has arranged for the maintenance, under conditions of rigorous discipline, of as many as two thousand and two hundred young men of all communities, and for inculcating in them a love of simple living with a sense of the dignity of all labour. Lover of literature that he is, and conscious of its social role, he has played host at Siddhaganga to the Kannada Literary Conference. Yet, not all his classical scholorship and cultural tastes have blinded His Holiness to the more pressing needs of the present times: among the many institutions he has sponsored is a College of Engineering: so that Siddhaganga Math has become, in more than one way, not only a source of rapidly expanding educational enterprise, but a centre of inspiration for social and national service'.

**V. V. Giri**
Governor of Karnataka

(ಶ್ರೀಗಳವರಿಗೆ ಕರ್ನಾಟಕ ವಿಶ್ವವಿದ್ಯಾಲಯವು 'ಡಾಕ್ಟರೇಟ್' ನೀಡಿದ ಸಂದರ್ಭದಲ್ಲಿ ಮಾಡಿದ ಕುಲಪತಿಯ ಭಾಷಣದಿಂದ)

Sree Siddhaganga Mutt under the able and dynamic leadership of the Swamiji has been doing such good work for the people all round for such a long time that my wife and I were very keen to pay a visit to this Mutt. Our wish has been fulfilled today and we are very happy to have had Swamiji's darshan and seen the various arrangements. The Kitchen which has continuously been running since 1917 now feeds more than 4,000 people every day including about 3,500 students, who receive education here with Sanskrit and spiritual teaching as compulsory parts of their learning. What a wonderful system this is and what fine future citizens could come out of such a system! We have high praise for this.

We wish all success and prosperity to those who are benefitting from all these activities unit the benign blessings of Lord Basaveswara.

**Govinda Narayan**
Governor of Karnataka

ಶ್ರೀ ಕ್ಷೇತ್ರವನ್ನೂ ಇಲ್ಲಿನ ಕ್ಷೇತ್ರಾಧಿಪತಿಗಳಾದ ಶ್ರೀ ಶಿವಕುಮಾರ ಸ್ವಾಮಿಗಳವರನ್ನೂ ಕಂಡರೆ ಎಲ್ಲರ ಹೃದಯದಲ್ಲೂ ಅದ್ಭುತ ಪರಿವರ್ತನೆಯಾಗುತ್ತದೆ. ಇಂಥದೊಂದು ದೊಡ್ಡ ಧಾರ್ಮಿಕ ಸಂಸ್ಥೆಯ ಬಹುಮುಖ ಕಾರ್ಯ ಚಟುವಟಿಕೆಗಳನ್ನು ನಾನು ಕಂಡಿಲ್ಲ ; ಕೇಳಿಲ್ಲ. ಇದು ಕೇವಲ ಯಾತ್ರಾಸ್ಥಳವಲ್ಲ ; ಜ್ಞಾನಕೇಂದ್ರ. ಧರ್ಮಕ್ಕೆ ಜ್ಞಾನದ ಬೆಂಬಲ ಬೇಕೆನ್ನುವುದನ್ನೇ ಈ ಕ್ಷೇತ್ರ ಸಾರುತ್ತದೆ. ಸಂನ್ಯಾಸಿಯ ಧರ್ಮ ಬಹು ಸತ್ವದಿಂದ ಕೂಡಿದುದು. ಅದು ಕ್ರಿಯಾಮುಖವಾಗಿ ಹೊರ ಹೊಮ್ಮಿದರೆ ಅಘಟಿತ ಘಟನೆಯೆನಿಸುತ್ತದೆ. ಸಂನ್ಯಾಸಿಗಳು ಇತರರಿಗಿಂತ ಅಧಿಕತಮವಾದ ಕ್ರಿಯಾಶೀಲರೆಂಬುವುದಕ್ಕೆ ಶ್ರೀ ಶಿವಕುಮಾರ ಸ್ವಾಮಿಗಳವರು ಸಾಧಿಸಿರುವ ಈ ಸಾಧನೆಯೇ ಸಾಕ್ಷಿ. ಸೇವಾಕ್ಷೇತ್ರದ ೨೫ ವರ್ಷಗಳ ಅವಧಿಯಲ್ಲಿ ಇಷ್ಟೊಂದು ಪ್ರಗತಿ ಸಾಮಾನ್ಯ ಸಂಗತಿಯಲ್ಲ. ಕನ್ನಡನಾಡಿನ ಬಸವೇಶ್ವರರ ದಿವ್ಯ ಆದರ್ಶಗಳನ್ನು ತಲೆಯ ಮೇಲೆ ಧರಿಸಿ, ಅದನ್ನು ಲೋಕಕ್ಕೆ ಶ್ರೀಗಳವರು ಸಾರಿದ್ದಾರೆ...... ಅವರ ಅನುಯಾಯಿಗಳಾಗಿ ಅವರ ತತ್ತ್ವಗಳನ್ನು ಕಾರ್ಯರೂಪಕ್ಕೆ ತರಲು ಹೊರಟಿರುವ ಶ್ರೀ ಸ್ವಾಮಿಗಳವರ ಸೇವೆಗೆ ನಾಡು ಕೃತಜ್ಞವಾಗಿರಬೇಕು. ಇಂಥ ಮಹಾಪುರುಷರ ಮಾರ್ಗದರ್ಶನ ನಾಡಿಗೆ ರಾಷ್ಟ್ರಕ್ಕೆ ಸದಾ ಬೇಕು. ಶ್ರೀ ಶ್ರೀಗಳವರ ೨೫ ವರ್ಷಗಳ ಸೇವೆಯ ಪರಿಣಾಮವಾಗಿ ಸಮಾಜಕ್ಕಾದ ಅಪಾರ ಲಾಭವನ್ನು ಕೇಳಿ, ಬಹಳ ಸಂತೋಷವಾಗಿದೆ. ಶ್ರೀ ಸ್ವಾಮಿಗಳವರ ತಪಸ್ಸು ದೀರ್ಘವಾಗಿ ಬೆಳೆದು ತನ್ಮೂಲಕ ನಾಡಿನ ಹಿತರಕ್ಷಣೆಯಾಗಲೆಂದು ಬೇಡುತ್ತೇನೆ. ಲೌಕಿಕ ಪಾರಮಾರ್ಥಿಕಗಳು ಪರಸ್ಪರ ಪೂರಕವಾಗಿ ಬಾಳಿದರೆ ರಾಷ್ಟ್ರಕ್ಕೆ ಕ್ಷೇಮ ; ಇಲ್ಲದಿದ್ದರೆ ಇಲ್ಲ.

**ಮೋಹನಲಾಲ್ ಸುಖಾಡಿಯಾ**
೨೬-೫-೭೨ ಕರ್ನಾಟಕದ ಮಾಜಿ ರಾಜ್ಯಪಾಲರು
(ಶ್ರೀಶ್ರೀಗಳವರ ರಜತ ಮಹೋತ್ಸವದ ಉದ್ಘಾಟನಾ ಭಾಷಣ ವರದಿಯಿಂದ)

The Agricultural and Industrial Exhibition is growing bigger year by year. It is but right that attention has been focussed specially on the agricultural front which is the need of the hour. One is pleased by the enthusiasm shown by the organisers of the exhibition to make it

attractive under the inspiring guidance of the Swamiji. Surely the Exhibition will, on the coming years, attract many more stalls to give an idea to the rural population about the progress the country has achieved in agriculture and industrial sectors.

**Veerendra Patil**
Ex-Chief Minister of Karnataka.

It is a great pleasure to visit the Mutt and to observe the progress made by the boarders in the study of Vedic texts. The situation of the Mutt and the Hostel is ideal to elevate the minds of the residents and the place is in several respects suited for a more developed institution.

**N.S. Subba Rao**
State D.P.I. (Old Mysore).

The present condition of the Institution and its increasing utility and influence are due to the patriotic and unselfish efforts of the Swamiji. It is hoped that its utility would grow more and more and become an important symbol of religious inspiration in the State.

**P.G. D'Souza**
Muzarai Commissioner
to the State of Mysore.

The Siddhaganga Mutt is a holy place eminently fitted to create a suitable atmosphere for a Sanskrit Patashala. The revered Swamiji is anxious to train the youth in Sanskrit learning. The Brahmacharies cannot have a better Gurukulavasa than this sanctified place. The Swamiji is highly educated in English and Sanskrit. Under his fostering care the Institution is bound to develop in every way in the near future.

**K.H. Ramaiah**
Registrar of Co-operative Societies,
Govt. of Mysore.

There are a large number of students studying Sanskrit in this Veda and Sanskrit College. It is very gratfying that this college and the free hostel are open to the students of all communities ever since their inceptions in as far back as 1917.

**ABDUL WAZID**
Revenue Commissioner,
Govt. of Mysore.

Mrs. Recknagel and I were greatly honoured by your kindness in receiving us at Sree Siddhaganga mutt and later participating in the ceremonies dedicating the Kennedy International House at the Siddaganga Institute of Technology. We both greatly enjoyed the opportunity of meeting you and of seeing the fine work which is being done under your guidance and blessings both at the Siddhaganga Mutt and at the Institute of Technology. You and those working with you can truly take great pride in your achievements.

Please accept our warmest best wishes for an ever brighter future for the Education Society and the Institute as they move forward under your direction.

**THOMAS M. RECKNAGEL**
Consulate General of the
United States of America.

The Siddhaganga Institute of Technology is a magnificient undertaking and a splendid achievement. The blessings of the Swamiji are there and the very generous donors like Sri Siddaram-

anna and Sri T. N. Kempahonniah add to it. The Professors are there with all the earnestness that is necessary. These have made this one of the best Technical Institutions in the State. Let it grow, develop and serve the country.

I wish the students all success.

**S. NIJALINGAPPA**
Chief Minister of Mysore

27-2-1966

It is my delight and pleasure to observe that the Siddaganga Institute of Technology is a promising to be a leading Institution in the career of the Nation.

I wish the staff, the management and students, all success.

**I. M. MAGDUM**
Chief Engineer, P. W. D.

2-8-1966

Visited this great Institution today and I am much impressed by its spirit. I hope it will continue to grow from strength and strength and fulfil its great mission of giving educational opportunities to all classes of people.

I also hope that this education the students obtain will be the means of making our country strong and united.

**D. C. PAVATE**

14-9-66

Progress achieved during the short period is spectacular. Undoubtedly, this is one of the few best Engineering Colleges of the State. Entire credit goes to the management, staff and students of this Institution.

I wish them every success in their endeavours.

**VEERENDRA PATIL**
Chief Minister

14-19-1967

The Siddhaganga Institute of Technology is one more useful Institution to the existing Institutions in Tumkur. In a very short time, the Town will know how much the place has grown as a result of this.

Mysore State has an advantage for Research and Engineering. The atmosphere is congenial. The Mysore Engineers will be in demand all the World over, if the past is an indication.

I was happy to go round and see the recent addition in buildings, equipment and Library. A large number of men devoted in the advancement of technical education have responded to the efforts of the Swamiji and I have no doubt the Institution will have a proud record in the years to come.

**T. M. A. PAI**
Chairman, Syndicate Bank Ltd.
& President, Academy of Genl. Edn., Manipal

16-11-67

I was delighted to visit this Institution. It is an outstanding example of what can be achieved when there is a sense of purpose and dedication behind the venture. The staff are young and identified with the Institution, the equipment is excellent and first things have been given the first place in the construction programme. The inspiration behind it colours the entire campus and is the best guarantee for the great things which its students will do.

I wish great and glorious success for the Institution, its staff and students as also the for the public spirited devoted men who are behind it.

**Dr. V. K. R. V. RAO**
Union Minister for Transport & Shipping
and M. P. from Mysore State

24-3-68

I was happy to visit this Institution. I have yet to see a private Institution so well managed. With students from all parts of Bharat, the Institute has become a symbol of national integration aud a great example for all those who want to build the country on the basis of voluntary efforts. I wish success to the Institution.

14-10-68

**A.B. Vajpayee,** M.P.

Today is the first time I saw the College laboratories and the campus in general. I was very favourably impressed by the equipment and the neat and clean arrangement of the Labs and class-rooms. The whole atmosphere is very pleasant and conducive to academic life. I consider that the students are lucky to have such a good mixture of quiet life and yet in the proximity of the town to have the urban facilities. I must congratulate the authorities for their thoughtful efforts in the field of Technical Education.

**V.M. Ghatge**

17-9-69

General Manager, H.A.L.,
Bangalore

ಬಿರುಗಾಳಿ ಬೀಸಿ ಬೆಟ್ಟದೆರೆಗಳು ಸಮುದ್ರದಲ್ಲಿ ಅಲ್ಲೋಲಕಲ್ಲೋಲವನ್ನುಂಟುಮಾಡಿರುವಾಗ ದಾರಿಗಾಣದೆ ಯಾವ ಬಂಡೆಗೆ ಅಪ್ಪಳಿಸಿ ಎಲ್ಲಿ ಮುಳುಗುವೆನೋ ಎಂದು ಭಯಗ್ರಸ್ತವಾಗಿ ಹೊಯ್ದಾಡುತ್ತಿರುವ ಹಡಗಕ್ಕೆ ದೂರದ ಎತ್ತರದಲ್ಲಿ ಒಂದು ಕೈದೀವಿಗೆಯ ಕಂಬ ಕಾಣುತ್ತದೆ; ಸರಿಯಾದ ದಿಕ್ಕನ್ನು ತೋರಿಸುತ್ತದೆ. ಇಂದಿನ ಕೋಲಾಹಲಮಯವಾದ ಜೀವನದಲ್ಲಿ ಅಂಥ ಕೈದೀವಿಗೆಯ ಕಂಬದಂತೆ ಇರುವ ಅಪರೂಪದ ಮಹಾವ್ಯಕ್ತಿಗಳಲ್ಲಿ ಪರಮಪೂಜ್ಯರಾದ ಶ್ರೀಶ್ರೀ ಶಿವಕುಮಾರಸ್ವಾಮಿಗಳು ಒಬ್ಬರು.

**ಡಾ॥ ರಂ. ಶ್ರೀ. ಮುಗಳಿ**

(ಸಮರ್ಪಣೆ ಗ್ರಂಥದ 'ಆಧುನಿಕ ಉಪಕುಲಪತಿ' ಲೇಖನದಿಂದ)

ಸಿದ್ಧಗಂಗಾಮಠವು ಹಣವನ್ನು ಕೂಡಿಟ್ಟು ಬಡ್ಡಿ ವ್ಯವಹಾರಮಾಡಿ ಬಂಡವಾಳ ಮಾಡುವ ಸಂಸ್ಥೆಯಲ್ಲ...ಇದರ ರಚನಾತ್ಮಕ ಕಾರ್ಯಗಳ ಬಗೆಗೆ ನಮಗೆ ಅಪಾರ ಗೌರವವಿದೆ. ಇಲ್ಲಿನ ಕಾರ್ಯಕ್ರಮಗಳೊಂದು ಪವಾಡ. ನಮಗೆ ಇಂಥ ಮಹಾ ಪುರುಷರ ಮಾರ್ಗದರ್ಶನ ಬೇಕು.

೨೮-೫-೭೨

**ಹೆಚ್. ಸಿದ್ಧವೀರಪ್ಪ**

(ರಜತಮಹೋತ್ಸವ ಸಮಯದಲ್ಲಿ ಮಾಡಿದ ಭಾಷಣದಿಂದ)

ವಿದ್ಯಾರಂಗದಲ್ಲಿ ಶ್ರೀ ಸಿದ್ಧಗಂಗಾಕ್ಷೇತ್ರಾಧ್ಯಕ್ಷರ ಸಾಧನೆಗಾಗಿ ನಾವೆಲ್ಲ ಗೌರವದಿಂದ ತಲೆಬಾಗಬೇಕು. ಬೆಳಗಿನ ಎರಡು ವರೆ ಮೂರು ಘಂಟೆಯಿಂದ ರಾತ್ರಿ ಹನ್ನೊಂದು ಗಂಟೆಯವರೆಗೆ ಕಾರ್ಯನಿರತರಾಗಿರುವ ಅವರ ಅಗಾಧ ಕಾರ್ಯಶಕ್ತಿಯು ಅಸಾ ಮಾನ್ಯವೆಂದೇ ಹೇಳಬೇಕು. ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳು ಆ ಕಾರ್ಯವನ್ನು ಒಂದು ಲೀಲೆಯಂತೆ ಭಾವಿಸುತ್ತಾರೆ.

ಧಾರವಾಡ

**ಪ್ರೊ. ಎಸ್. ಎಸ್. ಮಾಳವಾಡ**

ಶ್ರೀ ಶಿವಕುಮಾರಮಹಾಸ್ವಾಮಿಗಳವರ ವಿದ್ವತ್ತು, ಧರ್ಮಾಚರಣೆ, ಸಂಕಲ್ಪಶಕ್ತಿ, ಕ್ರಿಯಾಶಕ್ತಿಗಳು ಬಹಳ ಎತ್ತರ ಮಟ್ಟದವು. ನಾವು ಅವರ ಅದ್ಭುತವಾದ ಈ ಕಾರ್ಯಕಲಾಪಗಳಿಗೆ ಯಾವಜ್ಜೀವವೂ ಋಣಿಗಳಾಗಿರಬೇಕು. ಅವರ ಮಾರ್ಗ ದರ್ಶನ ಎಲ್ಲರಿಗೂ ಬೇಕಾದುದು.

೨೬-೫-೭೨

**ಕುಂಡಲಗಿರಿ ಶ್ರೀನಿವಾಸಾಚಾರ್ಯ**

(ಶ್ರೀಗಳವರ ರಜತಮಹೋತ್ಸವದಂದು ಮಾಡಿದ ಭಾಷಣದಿಂದ)

ಇಂದು ನವಭಾರತ ನಿರ್ಮಾಣಕಾರ್ಯದಲ್ಲಿ ನಾವೆಲ್ಲ ತತ್ಪರರಾಗಿದ್ದೇವೆ. ಹೇಗೆ ಮಾಡಬೇಕು ; ಹೇಗೆ ನಾವು ಮಾಡಿವರೆ ಎಲ್ಲ ಜನರ ಹಿತಸಾಧನೆಯಾದೀತೆಂಬುದರ ಬಗೆಗೆ ಬಹಳ ಜಿಜ್ಞಾಸೆ ನಡೆಯುತ್ತಿದೆ. ಇಂಥ ಸಂದಿಗ್ಧ ಸಮಯದಲ್ಲಿ ದೊಡ್ಡವರು, ಅನುಭಾವಿಗಳು, ಸರ್ವರ ಹಿತರಕ್ಷಣೆಯಲ್ಲಿ ಮಗ್ನರಾಗಿರುವ ಶ್ರೀ ಸ್ವಾಮೀಜಿಯವರಂಥ ಮಹಾತ್ಮರು ನಮಗೆ ಮಾರ್ಗದರ್ಶನ ಮಾಡಬೇಕಾಗಿದೆ. ಹಿಂದಿನ ಬಸವಣ್ಣನವರಂಥ ವಿಭೂತಿಪುರುಷರು ಹೇಳಿದುದನ್ನೂ ಹುಡುಕಿ ಕಾರ್ಯಗತಗೊಳಿಸಲು ಸರಕಾರ ಯತ್ನಿಸುತ್ತಿದೆ. ನಾವು ಸಾಮೂಹಿಕ ಸಾಧನೆಗಾಗಿ ದೀನದಲಿತರ ಉದ್ಧಾರಕ್ಕಾಗಿ, ನಾಡಿನ ಬಡತನ ತೊಲಗಿಸುವುದಕ್ಕಾಗಿ,

ಎಲ್ಲರೂ ಸುಖವಾಗಿ ಬಾಳುವುದಕ್ಕಾಗಿ ಈ ವಿಚಾರ ಮಾಡಬೇಕಾಗಿದೆ. ಸ್ವಾತಂತ್ರ್ಯಪಡೆದಾಗಿನಿಂದಲೂ ಈ ಘೋಷಣೆಯನ್ನು ಮಾಡುತ್ತ ಬಂದಿದ್ದೇವೆ. ಅನೇಕ ಎಡರುತೊಡರುಗಳ ಮೂಲಕ ಯೋಜನೆಗಳು ಪೂರ್ಣವಾಗಿ ಕಾರ್ಯರೂಪಕ್ಕೆ ಬಂದಿಲ್ಲ. ಇವನ್ನೆಲ್ಲ ಕಾರ್ಯರೂಪಕ್ಕೆ ತರಲು ಹೆಣಗುವುದು ನಮ್ಮ ಕರ್ತವ್ಯವಾಗಿದೆ. ಶ್ರೀ ಶಿವಕುಮಾರಸ್ವಾಮಿಗಳು ಮಹಿಮಾಶಾಲಿಗಳು. ಎಲ್ಲ ಸಮಾಜಗಳ ಹಿತಚಿಂತನೆಯನ್ನು ಮೊದಲಿನಿಂದಲೂ ಮಾಡಿಕೊಂಡು ಬಂದವರು. ನಮ್ಮ ನಾಡಿನಲ್ಲೇಕೆ ಬೇರೆ ನಾಡಿನಲ್ಲೂ ಸಿದ್ಧಗಂಗಾ ಸಂಸ್ಥೆಯಂಥ ಇನ್ನೊಂದು ಸಂಸ್ಥೆ ನನ್ನ ಕಣ್ಣಿಗೆ ಬಿದ್ದಿಲ್ಲ. ಸಮಾಜಕ್ಕಾಗಿ, ರಾಷ್ಟ್ರಕ್ಕಾಗಿ ತಮ್ಮ ಸರ್ವಸ್ವವನ್ನೂ ಧಾರೆಯೆರೆದು ಸೇವಾಮನೋಭಾವದಿಂದ ವರ್ತಿಸುವ ಇಂಥ ಮಹಿಮಾಪುರುಷರ ಮಾರ್ಗದರ್ಶನ ನಮಗೆ ಬೇಕು. ಇಂಥ ಸ್ವಾಮಿಗಳವರನ್ನು ಪಡೆದ ನಮ್ಮ ನಾಡು ಧನ್ಯವೇ ಸರಿ. ಅವರ ಇಪ್ಪತ್ತೈದು ವರ್ಷಗಳ ತಪಸ್ಸಿನ ಫಲವಾಗಿ ಸರ್ವಸಮಾಜಗಳಿಗೆ ಆಗಿರುವ ಉಪಕಾರ ಅಷ್ಟಿಷ್ಟಲ್ಲ. ಅದನ್ನು ಜ್ಞಾಪಿಸಿಕೊಂಡು, ಈಗ ನಾವೆಲ್ಲರೂ ಸೇರಿ, ಈ ರಜತಮಹೋತ್ಸವವನ್ನು ಆಚರಿಸುತ್ತಿರುವುದು ಅಗತ್ಯವೂ ಸೂಕ್ತವೂ ಆಗಿದೆ. ಶ್ರೀ ಪೂಜ್ಯರಾದ ಮಹಾಸ್ವಾಮಿಗಳವರು ಸ್ವರ್ಣಮಹೋತ್ಸವ, ವಜ್ರಮಹೋತ್ಸವಗಳನ್ನು ನೆರವೇರಿಸಿಕೊಳ್ಳಲು ಅನುಗ್ರಹವನ್ನು ಪರಮಾತ್ಮನು ಮಾಡಲಿ: ಅವರು ದೀರ್ಘಕಾಲ ತಪಸ್ಸು ಮಾಡಿ ಸಮಾಜಕ್ಕೆ ಆಶೀರ್ವಾದ ಮಾಡಲಿ; ನಾಡು ರಾಷ್ಟ್ರಗಳಿಗೆ ಉಪಕಾರವಾಗಲಿ.

೨೬-೫-೭೨

**ಡಿ. ದೇವರಾಜ ಅರಸು**
ಕರ್ನಾಟಕದ ಮುಖ್ಯಮಂತ್ರಿ
(ರಜತಮಹೋತ್ಸವದ ಅಧ್ಯಕ್ಷ ಭಾಷಣದಿಂದ)

ಶ್ರೀ ಸಿದ್ಧಗಂಗಾಕ್ಷೇತ್ರದ ಶ್ರೀ ಶಿವಕುಮಾರಸ್ವಾಮಿಗಳ ನೇತೃತ್ವದಲ್ಲಿ ಸುಮಾರು ೩-೪ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟಲ್ಪಡುತ್ತಿರುವ ಗ್ರಂಥಾಲಯ ಕಟ್ಟಡವು ಯಾವತ್ತೂ ಇಲ್ಲಿ ವಾಸಿಸುವ ಹಾಗು ಕ್ಷೇತ್ರಕ್ಕೆ ಭೇಟಿ ಕೊಡಬಹುದಾದ ಮಹಾಜನಗಳಿಗೆ ಉತ್ತಮವಾದ ಗ್ರಂಥಾಲಯ ಸೇವೆಯನ್ನು ಕೊಡಲು ಸಾಧ್ಯವಿದೆ. ಮೈಸೂರು (ಕರ್ನಾಟಕದ) ಘನ ರಾಜ್ಯಪಾಲರ ಮತ್ತು ರಾಜ್ಯದ ಮುಖ್ಯಮಂತ್ರಿಗಳ ಸಮ್ಮುಖದಲ್ಲಿ ಪ್ರಾರಂಭಿಸಲ್ಪಡುವ ಗ್ರಂಥಾಲಯವು ಉತ್ತಮ ಗ್ರಂಥಾಲಯವಾಗಿ ಬೆಳೆದು ಬರಲೆಂದು ಹಾರೈಸುತ್ತೇನೆ.

**ಎನ್. ಡಿ. ಬಗರಿ**
ರಾಜ್ಯದ ಕೇಂದ್ರ ಗ್ರಂಥಾಲಯಾಧಿಕಾರಿ ಹಾಗು
ಸಾರ್ವಜನಿಕ ಗ್ರಂಥಾಲಯಗಳ ಮುಖ್ಯಾಧಿಕಾರಿ
(ರಜತಮಹೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣದಿಂದ)

ಈ ಪರಮ ಪುಣ್ಯಕ್ಷೇತ್ರದಲ್ಲಿ, ಈ ಸರ್ವೋನ್ನತ ಶೈಕ್ಷಣಿಕ ಕೇಂದ್ರದಲ್ಲಿ, ಈ ಸಾಂಸ್ಕೃತಿಕ ಸಿರಿಮನೆಯಲ್ಲಿ, ಈ ನಿಸರ್ಗ ಚಲುವಿನ ನೆಲೆಯಲ್ಲಿ ರಾರಾಜಿಸುವ ಸಿದ್ಧರಸಗಂಗೆಯ ರಮ್ಯ ರಸೆಯಲ್ಲಿ ತಮ್ಮ ನಿಲವಿನ ಬೆಳವಿನ ಬೆಡಗಿನ ಭಾವಪೂರ್ಣ ಭಾಷಣಗಳಿಂದ ನಾಡಿನ ಹಿರಿಕಿರಿಯರ ಹೃನ್ಮನಗಳನ್ನು ಸೆಳೆದು ಅತ್ಯಂತ ಹೆಸರಾಂತ ಶ್ರೀ ನಿರಂಜನ ಪ್ರಣವಸ್ವರೂಪಿ ಡಾ॥ ಶಿವಕುಮಾರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯುವ ನುಡಿಯೋಲಗದ ಹಿರಿತನದ ಗೌರವವನ್ನು ನಮಗಿತ್ತ ಸಮ್ಮೇಲನ ಸಂಚಾಲಕರನ್ನು ಸಂತಸದಿಂದ ನೆನೆಯುತ್ತೇನೆ......ನಸು ತಲೆಯೆತ್ತಿ ಕಣ್ಣರಳಿಸಿ ಅದೋ ಅಲ್ಲಿ ನೋಡಿ! ನಿಮ್ಮ ನಿಡುನೋಟ ಚೆಲ್ಲಿ! ಅಲ್ಲಿ ಕಾಣುವುದು ಆ ಬೆಟ್ಟದ ಬೆಡಗು, ಅದರಲ್ಲಿ ಅದೋ ಸತ್ಯಚೇತನರಾದ ಶ್ರೀ ಸಿದ್ಧಲಿಂಗಮುನಿಗಳ ಸಿದ್ಧರಸಗಂಗೆ ಬತ್ತದೆ ಪ್ರವಹಿಸುತ್ತದೆ. ಮುತ್ತಿಬಂದ ಯಾತ್ರಾರ್ಥಿಗಳನ್ನು ಪವಿತ್ರಾತ್ಮರನ್ನಾಗಿಸುತ್ತದೆ. ಇದು ಈ ಕ್ಷೇತ್ರದ ರಸಚೇತನ ಇದೋ ಇಲ್ಲಿ ಮಂಡಿಸಿರುವ ಮಂಗಳಮೂರ್ತಿ (ಶ್ರೀ ಶಿವಕುಮಾರಸ್ವಾಮಿಗಳವರನ್ನು ತೋರಿಸಿ) ಇಂದಿನ ಈ ನಾಡಿನ ರಸಚೇತನ.

**ಡಾ॥ ಜ. ಚ. ನಿ. ಅವರು**

೨೭-೫-೭೨

(ರಜತ ಮಹೋತ್ಸವದ ಸಾಹಿತ್ಯ ಸಮ್ಮೇಲನಾಧ್ಯಕ್ಷ ಭಾಷಣದಿಂದ)

ಧರ್ಮಜಾಗೃತಿ ಸಮಾಜಜಾಗೃತಿಯೇ ಆಗಿದೆ. ಬಸವೇಶ್ವರರೇ ಮೊದಲಾದವರು ಮಾಡಿದ ಕ್ರಾಂತಿ ಒಂದು ಸಮಾಜದ ಉದ್ಧಾರದ ಕ್ರಾಂತಿಯಲ್ಲ, ಜನಾಂಗಗಳ ಉದ್ಧಾರಕ್ಕೆ ಹೆಣಗಿದ ಮಹಾಕ್ರಾಂತಿ. ಶೋಷಣೆರಹಿತವಾದ ಸಮಾಜರಚನೆಗೆ ಅವಶ್ಯಕವಾದ ವಿದ್ಯಾದಾನವನ್ನು ಶ್ರೀ ಕ್ಷೇತ್ರದಲ್ಲಿ ಮಹಾಸ್ವಾಮಿಗಳವರು ನಡೆಸುತ್ತಿದ್ದಾರೆ. ಶೋಷಣೆ ಹೋಗಬೇಕಾದರೆ ರಾಷ್ಟ್ರೀಕರಣ ಅಗತ್ಯವೆಂಬುದು ಸುಳಿಗಾಳಿಯಂತೆ ಹಬ್ಬುತ್ತಿದೆ. ಇದರ ಮುಕ್ತಾಯದ ಬಗ್ಗೆ ಅರಿವಿಲ್ಲ. ಉಪಯುಕ್ತ ಸೇವೆ ಸಲ್ಲಿಸುವ ಸಂಸ್ಥೆಗಳನ್ನು ರಾಷ್ಟ್ರೀಕರಣ ಮಾಡಬಾರದು. ಹಾಗೆ ಮಾಡಿದರೆ ಅವುಗಳ ಉಪಯುಕ್ತಸೇವೆ ನಿಂತು

ಇನ್ನೂ ಹದಗೆಟ್ಟೀತು! ಉಪಯುಕ್ತವಾದ ಸೇವೆಯ ತತ್ತ್ವವನ್ನು ಶ್ರೀ ಸಿದ್ಧಗಂಗಾ ಶ್ರೀಗಳವರು ತಮ್ಮ ಸಂಸ್ಥೆಯಿಂದ ಆಚರಣೆಗೆ ತರುತ್ತಿದ್ದಾರೆ.

**ವೀರೇಂದ್ರ ಪಾಟೀಲ್**

೨೭-೫-೭೨ ಕರ್ನಾಟಕದ ಮಾಜಿ ಮುಖ್ಯ ಮಂತ್ರಿ

(ರಜತ ಮಹೋತ್ಸವದ ಸಮಾರೋಪ ಸಮಾರಂಭದಲ್ಲಿ ಮಾಡಿದ ಭಾಷಣದಿಂದ)

ಶ್ರೀ ಸಿದ್ಧಗಂಗಾ ಕ್ಷೇತ್ರದ ಸಾಧನೆ ದೊಡ್ಡದು. ಭರತಖಂಡದ ಪ್ರಾಚೀನವೂ ಸಂಪದ್ಭರಿತವೂ ಆದ ಸಂಸ್ಕೃತಭಾಷೆಯ ಪ್ರಚಾರವನ್ನು ಜನತೆಯಲ್ಲಿ ಶ್ರೀ ಕ್ಷೇತ್ರವು ೫೦ ವರ್ಷಗಳಿಂದ ಮಾಡಿ ಮಹೋಪಕಾರ ಮಾಡಿದೆ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಇಂಥ ಸಂಸ್ಥೆಯನ್ನು ಸಾರ್ವಜನಿಕ ಸೇವಾದೃಷ್ಟಿಯಿಂದ ನಡೆಸಿಕೊಂಡು ಬಂದಿರುವುದು ರಾಷ್ಟ್ರಕ್ಕೆ ದೊಡ್ಡ ಹೆಮ್ಮೆಯ ವಿಷಯ.

**ಆರ್. ಆರ್. ದಿವಾಕರ**

೨೮-೫-೭೨ ಬಿಹಾರದ ಮಾಜಿ ಗವರ್ನರ್

(ಶ್ರೀಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ
ಸ್ವರ್ಣಮಹೋತ್ಸವದ ಉದ್ಘಾಟನಾ ಭಾಷಣದಿಂದ)

ಭರತಖಂಡದ ಪ್ರಾಚೀನವೂ ಸಂಪದ್ಭರಿತವೂ ಆದ ಈ ಭಾಷೆಯನ್ನು ಎಲ್ಲರೂ ಕಲಿಯುವಂತಾಗಬೇಕು. ಈ ಕಾರ್ಯಕ್ಕಾಗಿ ನಾನು ನನ್ನ ಅಧಿಕಾರಾವಧಿಯಲ್ಲಿ ವಿಶೇಷವಾಗಿ ಪ್ರಯತ್ನಿಸುತ್ತೇನೆ. ಅದರ ಸಾಧಕ ಬಾಧಕಗಳನ್ನು ಪರಿಶೀಲಿಸುತ್ತೇನೆ. ಶ್ರೀ ಸಿದ್ಧಗಂಗಾ ಕ್ಷೇತ್ರವು ಸಾಧಿಸಿದ ಸಾಧನೆ ಅಪಾರ ಹೆಮ್ಮೆಯನ್ನುಂಟುಮಾಡುವಂತಹುದು. ನಾನು ಈ ಸಂಸ್ಥೆಯನ್ನು ಕಂಡು ಪ್ರಭಾವಿತನಾಗಿದ್ದೇನೆ. ಸಂಸ್ಕೃತ ಕಾಲೇಜೊಂದು ಸುವರ್ಣಮಹೋತ್ಸವವನ್ನು ಆಚರಿಸಿಕೊಳ್ಳುತ್ತಿರುವುದು ಹೆಮ್ಮೆಯ ವಿಷಯವೇ ಸರಿ.

**ಎ.ಆರ್. ಬದರಿನಾರಾಯಣ್**

೨೮-೫-೭೨ ಕರ್ನಾಟಕದ ಮಾಜಿ ವಿದ್ಯಾಮಂತ್ರಿ

(ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜಿನ
ಸ್ವರ್ಣಮಹೋತ್ಸವದ ಅಧ್ಯಕ್ಷ ಭಾಷಣದಿಂದ)

ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಯುವ ಕಾರ್ಯಾಕಲಾಪಗಳು ಅತ್ಯದ್ಭುತ.

**ಕೆ.ಹೆಚ್. ಪಾಟೀಲ್**

ಕರ್ನಾಟಕದ ಮಾಜಿ ಅರಣ್ಯಮಂತ್ರಿ

ಸಿದ್ಧಗಂಗಾಕ್ಷೇತ್ರ ಒಂದು ಚೇತನಪೂರ್ಣ ಕಾಯಕಕೇಂದ್ರ. ಕ್ಷೇತ್ರವೇ ಒಂದು ವಸ್ತುಪ್ರದರ್ಶನಕೇಂದ್ರ.

**ವೀರೇಂದ್ರ ಹೆಗ್ಗಡೆ**

ಧರ್ಮಸ್ಥಳದ ಧರ್ಮಾಧಿಕಾರಿ

ಪರಮ ಪೂಜ್ಯರಾದ ಡಾ॥ ಶ್ರೀಶ್ರೀ ಶಿವಕುಮಾರಸ್ವಾಮೀಜಿಯವರನ್ನು ಈ ಸಮಯದಲ್ಲಿ ಸಂದರ್ಶಿಸುವ ಭಾಗ್ಯ ನಮಗೆ ಲಭ್ಯವಾದುದು ಒಂದು ಸುಯೋಗ. ಶ್ರೀ ಸಿದ್ಧಗಂಗಾ ಕ್ಷೇತ್ರದ ಪಾವನತೆಯನ್ನು, ಅಲ್ಲಿ ಅವರು ನಡೆಸುತ್ತಿರುವ ಅನ್ನದಾನದ, ಜ್ಞಾನದಾನದ, ದಾಸೋಹದ ಕೀರ್ತಿಯನ್ನು ಕೇಳಿದ್ದೇವೆ. ಎಲ್ಲರ ಹಿತವನ್ನು ಕೋರುವಂತಹ. ಮಾನವೀಯ ಧರ್ಮದ ದೃಷ್ಟಿಯುಳ್ಳ ವಿಶಾಲವಾದ ವ್ಯಾಪಕ ಭಾವನೆಯನ್ನು ತಳೆದಂತಹ ಗುರುಗಳು, ಗುರುಪೀಠಗಳು ಜನತೆಗೆ ಅತ್ಯವಶ್ಯವಾಗಿ ಬೇಕು. 'ಪರಹಿತಸಾಧನೆಯೇ ಪರಮಾರ್ಥಸಾಧನೆ'ಎಂಬ ಸರಳವಾದ ತತ್ತ್ವವನ್ನು ನಮ್ಮ ಜೀವನವಲ್ಲಿ ಸಾಧ್ಯವಾದಷ್ಟು ತಿಳಿದುಕೊಂಡಾಗ, ಅದೇ ಧರ್ಮಕ್ಕೆ ದಾರಿ ತೋರುವ ದೀಪವಾಗುತ್ತದೆ. ಈ ದೀಪವನ್ನು ಮಾನವನ ಹೃದಯದಲ್ಲಿ ಬೆಳಗುವಂತೆ ಮಾಡಬಲ್ಲವರು ಜಗತ್ತಿನ ಕಲ್ಯಾಣವನ್ನು ಕೋರುವ ಜಗದ್ಗುರುಗಳು. ಅಂತಹ ಒಂದು ಸ್ಥಾನಗೌರವವನ್ನು ಹೊಂದಿರುವ ಶ್ರೀಶ್ರೀ ಶಿವಕುಮಾರಸ್ವಾಮೀಜಿಯವರನ್ನು ತಾವು ತುಮಕೂರಿನ ಜನತೆ ಪಡೆದಿರುವುದು ಅಭಿನಂದನೀಯ.

ತುಮಕೂರು **ಶ್ರೀಮತಿ ಸತ್ಯಪ್ರೇಮಕುಮಾರಿ**

ಜಯಚಾಮರಾಜ ಒಡೆಯರ್ ಮೈಸೂರು

೬-೪-೬೪ (ತುಮಕೂರಿನ ವೀರಶೈವ ಮಹಿಳಾಸಮಾಜದ
ರಜತಮಹೋತ್ಸವದ ಉದ್ಘಾಟನಾ ಭಾಷಣದಿಂದ)

ತಮ್ಮ ವಿದ್ವತ್ತಿನಿಂದಲೂ. ತಪಸ್ಸಿನ ಪ್ರಭಾವದಿಂದಲೂ ಜೀವನದ ಏಳುಬೀಳುಗಳು ಕಷ್ಟಕಾರ್ಪಣ್ಯ ಇವುಗಳ ಆಚೆ ನಿಂತು ವಿವೇಕ ಮತ್ತು ಸಮಚಿತ್ತಗಳು ಮೇಳೈಸಿದ ಮಾರ್ಗದರ್ಶನವನ್ನು ನಮ್ಮ ದೇಶದ ಯತಿವರ್ಯರು ಅನುಗ್ರಹಿಸುತ್ತಾ ಬಂದಿದ್ದಾರೆ. ಪೂಜ್ಯ ಶ್ರೀಶ್ರೀ ಶಿವಕುಮಾರಸ್ವಾಮಿಗಳು ಇಂದು ಇಲ್ಲಿ ದಯಮಾಡಿಸಿರುವುದು ಆ ಭವ್ಯ ಸಂಪ್ರದಾಯಕ್ಕೆ ಅನುಗುಣವಾಗಿದೆ. ಸ್ವತಃ ಉದ್ದಾಮಪಂಡಿತರೂ, ವಿದ್ವತ್ ಪಕ್ಷಪಾತಿಗಳೂ ಆಗಿದ್ದಾರೆ. ಆಧುನಿಕ ಕಾಲದ ಅಗತ್ಯಗಳನ್ನು ಗುರುತಿಸಿ, ಹಿಂದಿನ ಚರಿತ್ರೆ ಪರಂಪರೆಗಳ ಬೆಳಕಿನಲ್ಲಿ ದಾರಿತೋರಬಲ್ಲ ಹಿರಿಯರು ಅವರು.

**ಜಿ. ನಾರಾಯಣ್**

(೪೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತ ಭಾಷಣದಿಂದ)

**ಶ್ರೀಗಳವರ ಸಮ್ಮುಖದಲ್ಲಿ ಕೂಡಿದ್ದ**

## ಶ್ರೀಮಠದ ವಿದ್ಯಾರ್ಥಿ ವೃಂದಕ್ಕೆ ಮುರಾರ್ಜಿ ಅವರ ಸಂದೇಶ

'...ನಿಮ್ಮ ಈ ಸಾಮೂಹಿಕ ಪ್ರಾರ್ಥನೆಯನ್ನು ಕಂಡು ನನಗೆ ಬಹಳ ಸಂತೋಷವಾಗಿದೆ. ಇಷ್ಟೊಂದು ದೊಡ್ಡ ಮೊತ್ತದ ವಿದ್ಯಾರ್ಥಿಸಮೂಹವನ್ನು ಯಾವುದೇ ಒಂದು ಧಾರ್ಮಿಕ ಸಂಸ್ಥೆಯಲ್ಲಿ ಇದುವರೆಗೆ ಕಂಡಿಲ್ಲ; ಮತ್ತು ಕೇಳಿಲ್ಲ. ನೀವು ಇಲ್ಲಿರುವುದೇ ನಿಮ್ಮ ಅದೃಷ್ಟ. ಸತ್ಯ, ನ್ಯಾಯ. ಸಹಬಾಳ್ವೆ, ನೀತಿ–ಇವುಗಳನ್ನು ಮೈಗೂಡಿಸಿಕೊಂಡು ಬನ್ನಿ......!

ತಾ. ೧೯-೯-೭೯ರ ಪ್ರಾರ್ಥನಾಸಭೆಗೆ

ಕೇಂದ್ರದ ಮಾಜಿಪ್ರಧಾನಿ ಮುರಾರ್ಜಿ ಅವರ

ಭೇಟಿಯ ಸಮಯದ ಭಾಷಣದಿಂದ

ಶ್ರೀ ಶ್ರೀಗಳವರ ಘನತರವಾದ ಮತ್ತು ಸ್ಫೂರ್ತಿದಾಯಕವಾದ ಅಧ್ಯಕ್ಷತೆಯಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವು ದಿನ ದಿನವೂ ಅಭಿವೃದ್ಧಿ ಹೊಂದುತ್ತಿದೆ. ಪೌರಸ್ತ್ಯ ಮತ್ತು ಪಾಶ್ಚಾತ್ಯ ವಿದ್ಯೆಗಳೆರಡರಲ್ಲಿಯೂ ವಿಶೇಷ ಪರಿಶ್ರಮವುಳ್ಳವರೂ, ಸಹೃದಯರೂ, ಸದ್ಗುಣಮಂಡಿತರೂ ಮತ್ತು ಸಮದರ್ಶಿಗಳೂ ಆಗಿರುವ ಶ್ರೀಶ್ರೀಗಳವರು ಈ ಪೀಠವನ್ನಲಂಕರಿಸಿದಾಗಿನಿಂದಲೂ ಈ ಕ್ಷೇತ್ರವು ನವಚೈತನ್ಯದಿಂದ ಕಂಗೊಳಿಸಿದೆ. ಶಿಷ್ಯವರ್ಗದ ಶ್ರೇಯೋಭಿವೃದ್ಧಿಗಾಗಿ ಸತತವಾಗಿ ಶ್ರಮಿಸಿ ಅವರಲ್ಲಿ ಅನುಗ್ರಹ ಮಾಡುತ್ತಾರೆ. ಶ್ರೀಶ್ರೀಗಳವರು ಬಗೆಬಗೆಯ ಐಹಿಕಾಮುಷ್ಮಿಕ ವಿಚಾರಗಳನ್ನು ಕುರಿತು ಧರ್ಮಬೋಧೆಮಾಡುತ್ತಾರೆ. ಜಾತಿ, ಮತ, ಪಂಗಡ, ಭೇದವಿಲ್ಲದೆ ಸಮಸ್ತರಲ್ಲಿ ತೋರಿಸುವ ವಿಶ್ವಾಸವು ಸಮಸ್ತ ಲೋಕದ ಅಸಾಧಾರಣ ಸಮತಾ ದೃಷ್ಟಿಯನ್ನು ತೋರಿಸುತ್ತದೆ. ಶ್ರೀಶ್ರೀಗಳವರ ಅಧ್ಯಕ್ಷತೆಯಲ್ಲಿ ಶ್ರೀ ಕ್ಷೇತ್ರವು ವಿಶೇಷ ಖ್ಯಾತಿಯನ್ನು ಗಳಿಸಿಯೂ, ಗಳಿಸುತ್ತಲೂ ಇರುವುದರಲ್ಲಿ ಸ್ವಲ್ಪವೂ ಆಶ್ಚರ್ಯವಿಲ್ಲ.

**ಸಿ. ಕೆ. ವೆಂಕಟರಾಮಯ್ಯ**

೬-೬-೧೯೪೯ **'ಕಿರಣ ಪತ್ರಿಕೆಯಿಂದ'**

'...ಪುಣ್ಯಜ್ಯೋತಿ ಶ್ರೀಶ್ರೀ ಶಿವಕುಮಾರಸ್ವಾಮಿಗಳವರು ಶ್ರೀ ಸಿದ್ಧಗಂಗಾಮಠದ ಅಧ್ಯಕ್ಷರಾಗಿ ೧೯೩೦ರಲ್ಲಿ ಅಧಿಕಾರ ಸ್ವೀಕರಿಸಿದರು. ಪೂಜ್ಯರು ಸರ್ವಸಮಾಜಗಳ ಸರ್ವಾಂಗೀಣ ಪ್ರಗತಿಗೆ ಅಹರ್ನಿಸಿ ದುಡಿಯುತ್ತ ಬಂದಿದ್ದು, ೧೯೮೦ರಲ್ಲಿ ೫೦ ವರ್ಷಗಳ ಮಹತ್ವಪೂರ್ಣ ಬದುಕಿನ ಚಿನ್ನದ ಹಬ್ಬವನ್ನಾಚರಿಸುವ ಈ ಶುಭಸಮಯದಲ್ಲಿ...ಸಂಭಾವನಾಗ್ರಂಥವನ್ನು ಹೊರತರುತ್ತಿರುವುದು ಒಂದು ಹೆಮ್ಮೆಯ ವಿಷಯ. ಶ್ರೀಶ್ರೀ ಶಿವಕುಮಾರಸ್ವಾಮಿಗಳವರು ಶಿಕ್ಷಣಕ್ಷೇತ್ರದಲ್ಲಿ ನಮ್ಮ ರಾಜ್ಯದ ಬಡ ಮಕ್ಕಳಿಗೆ ಆಶ್ರಯದಾತರಾಗಿ ಅಮೂಲ್ಯ ಸೇವೆಯನ್ನು ಸಲ್ಲಿಸಿದ್ದಾರೆ. ಸಾಮಾಜಿಕವಾಗಿ ಮೇಲು-ಕೀಳು, ಬಡವ-ಬಲ್ಲಿದ ಎಂಬ ಯಾವ ಭೇದಭಾವವಿಲ್ಲದೆ ನಮ್ಮ ದೇಶ ಭಾರತ, ನಾವೆಲ್ಲರೂ ಭಾರತೀಯರು ಎಂಬ ಭಾವನೆಯು ಎಲ್ಲರಲ್ಲೂ ಮೂಡುವಂತೆ ಮಾಡಲು ಈ ಗ್ರಂಥ ಜ್ಞಾನದ ಬೆಳಕನ್ನು ಬೆಳಗಲಿ'.

**ಕೆ. ಪ್ರಭಾಕರ**

ಕರ್ನಾಟಕ ಸಮಾಜ ಕಲ್ಯಾಣ ಸಚಿವರು.

'.......ನಿಮ್ಮದು ಮಹಾದಂದುಗ: ದೊಡ್ಡ ಶಿವಪೂಜೆ; ಉಪಮಾತೀತ ಶಿವಯೋಗ. ಇನ್ನೇನು ಹೇಳಲಿಸ್ವಾಮಿ! ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಬಸವಾದಿ ಪ್ರಮಥರ ತೇಜೋವಿಶಿಷ್ಟನಡೆ......'

ಮೈಸೂರು ಅರಮನೆ ಪಂಚಗವಿ ಮಠಾಧ್ಯಕ್ಷರಾಗಿದ್ದ

ಶ್ರೀ ನಿ. ಪ್ರ. **ಗೌರೀಶಂಕರ ಮಹಾಸ್ವಾಮಿಗಳು.**

(೧೯೫೧ರಲ್ಲಿ ಶ್ರೀಮಠದಲ್ಲಿ ನಡೆದ ಪುರಾಣಪರಿಸಮಾಪ್ತಿಕಾಲದ ಭಾಷಣದ ಆಧಾರದಿಂದ)

'......ಸಿದ್ಧಗಂಗಾ ಕ್ಷೇತ್ರ ಧಾರ್ಮಿಕ ಭೂಮಿಯಾಗಿ ಹುಟ್ಟಿ, ಸಾಂಸ್ಕೃತಿಕ ಸಂಸ್ಥೆಯಾಗಿ ಬೆಳೆದು, ಸುಪ್ರಸಿದ್ಧ ವಿದ್ಯಾಕೇಂದ್ರವೆಂಬುದಾಗಿ ಕೀರ್ತಿವೆತ್ತು, ಇಂದು ಕನ್ನಡನಾಡಿನ ಕಣ್ಣಾಗಿ ಬೆಳೆದಿದೆ ; ಬೆಳೆಯುತ್ತಿದೆ. ಇಲ್ಲಿನ ಧರ್ಮಗುರುಗಳಾದ ಡಾ॥ ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಲಕ್ಷಾಂತರಮಂದಿ ತಮ್ಮ ಬದುಕನ್ನು ರೂಪಿಸಿಕೊಂಡಿದ್ದಾರೆ. ಅವರೆಂದೂ ಈ ಕ್ಷೇತ್ರವನ್ನು ಮರೆಯುವಂತಿಲ್ಲ. ಅಷ್ಟೇ ಅಲ್ಲ ; ಇಲ್ಲಿ ಅನೇಕ ಚೈತನ್ಯಮೂರ್ತಿಗಳನ್ನು ಕಡೆಯುವಂಥ ಕಾರ್ಯ ಹಾಗೂ ಜಾತ್ಯತೀತ ರಾಷ್ಟ್ರದ ಅಸ್ತಿಭಾರ ಹಾಕುವಂಥ ಕಾರ್ಯ ನಿರಾತಂಕವಾಗಿ ನಡೆದಿದೆ ; ನಡೆಯುತ್ತಿದೆ......'

**ಮಾರ್ಗದ ಮಲ್ಲಪ್ಪನವರು**
ಕರ್ನಾಟಕ ರಾಜ್ಯ ಸಚಿವರು
(ತಾ. ೧೮-೧೧-೭೯ರಂದು ಮಠಕ್ಕೆ ಬಂದು ಮಾಡಿದ ಭಾಷಣದಿಂದ)

'......ಶ್ರೀಕ್ಷೇತ್ರ ಮತ್ತು ಶ್ರೀಶ್ರೀಗಳು ಹಾಗು ನನ್ನ ಸಂಬಂಧ ಚಿರನೂತನ. ಶ್ರೀಗಳವರ ದಿವ್ಯವ್ಯಕ್ತಿತ್ವ, ನಿಸ್ವಾರ್ಥ ಸೇವೆ, ಕರುಣಾಳುತನ ಅನ್ಯತ್ರ ಅತಿವಿರಳ. ಶ್ರೀಕ್ಷೇತದಲ್ಲಿ ಶ್ರೀಗಳವರ ಸಾನ್ನಿಧ್ಯದಲ್ಲಿ ಜಾತಿಮತ ವರ್ಗಗಳ ತಾರತಮ್ಯವಿಲ್ಲ. ಮಹಾತಪಸ್ವಿಗಳಾದ ಶ್ರೀಗಳವರು ನಿರಂತರವಾಗಿ ಅಸಂಖ್ಯಾತಮಂದಿಗೆ ಇಹಪರ ಸಾಧನವಾದ ಧರ್ಮಜ್ಞಾನ. ಅನ್ನದಾನಗಳನ್ನು ಮಾಡುತ್ತ ಬಂದಿರುವರು. ಇಲ್ಲಿ ಜಾತಿ ಜಾತಿಗಳ ನಡುವೆ ಭೇದವಿಲ್ಲ ; ಬಡವಬಲ್ಲಿದರ ನಡುವೆ ಅಂತರವಿಲ್ಲ. ಸರ್ವಸಮಾನತೆಯನ್ನು ಶ್ರೀಕ್ಷೇತ್ರದಲ್ಲಿ ಕಾಣಬಹುದು. ಶ್ರೀಗಳವರ ನಿರಂತರ ತಪಸ್ಸಿನ ಫಲದಿಂದ ಅಸಂಖ್ಯಾತಮಂದಿ ತಮ್ಮ ಜ್ಞಾನವನ್ನು ವೃದ್ಧಿಪಡಿಸಿಕೊಂಡಿದ್ದಾರೆ. ಇದೇ ಇಹಪರಗಳಿಗೆ ಸಾಧನ. ಇಂತಹಕ್ಷೇತ್ರ. ಹಾಗು ಇಂತಹ ದಿವ್ಯಮಹಾತಪಸ್ವಿ ಶ್ರೀಶ್ರೀಗಳವರನ್ನು ಬೇರೆಲ್ಲೂ ನಾವು ಕಾಣಲಾಗದೆಂದರೆ ಅತಿಯಾಗದು. ದೇವನಲ್ಲಿ ನನ್ನ ಬಿನ್ನಹವೇನೆಂದರೆ ಶ್ರೀಕ್ಷೇತ್ರದಮಹಿಮೆ. ಹಾಗು ಶ್ರೀಗಳವರ ಕೃಪೆ, ಲೋಕೋಪಕಾರಕ ರಚನಾತ್ಮಕ ಕಾರ್ಯ ಸುದೀರ್ಘವಾಗಿ ಮುಂದುವರಿಯಲಿ.

ಬೆಂಗಳೂರು **ವಾಸುದೇವಾಚಾರ್ಯ**
೨-೧-೧೯೮೦ ರಿ॥ ತರ್ಕಪ್ರಾಧ್ಯಾಪಕ ಸಿದ್ಧಲಿಂಗೇಶ್ವರ ಸಂಸ್ಕೃತಮಹಾಪಾಠಶಾಲೆ

## ಸಿದ್ಧಗಂಗೆ ಅಚಲ-ಅಜರಾಮರ

ಸಿದ್ಧಗಂಗೆಯನ್ನು ನೋಡದೆ ಇರುವವರು ವಿರಳವೆಂದೇ ಹೇಳಬೇಕು. ಸಿದ್ಧಗಂಗೆಯನ್ನು ಎಷ್ಟು ಸಲ ನೋಡಿದರೂ ಮತ್ತೆ ಮತ್ತೆ ನೋಡಬೇಕೆನ್ನುವ ಆಕರ್ಷಣೆ ಅಲ್ಲಿನ ಒಂದು ಮಹತ್ವ. ಸಿದ್ಧಳಾದ ಗಂಗೆಯದರ್ಶನಮಾತ್ರದಿಂದಲೇ ಪಾಪಪರಿಹಾರವಾಗುತ್ತದೆ. ಗಂಗಾಪಾನವಂತೂ ಮತ್ತಷ್ಟು ಪವಿತ್ರ.

ಸಿದ್ಧಗಂಗೆಯನ್ನು ಹಲವಾರು ಸಾರಿ ನೋಡಿದ್ದೇನೆ. ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರ ವೀರವೈರಾಗ್ಯ, ವಿದ್ಯಾಪ್ರೌಢಿಮೆ, ಅಖಂಡದಾಸೋಹ-ಇವು ಚಿರನೂತನ. ಕರ್ನಾಟಕದ ಮಠಮಾನ್ಯಗಳ ಇತಿಹಾಸದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರು ಅಚಲ-ಅಜರಾಮರ.

**ಡಿ. ಎಂ. ಶ್ರೀನಿವಾಸಮೂರ್ತಿ**
ದುರ್ಬಲ ಬಂಧು ದೊಡ್ಡಬಳ್ಳಾಪುರ.

ಪೂಜ್ಯಪಾದ ಶ್ರೀಸ್ವಾಮಿ ಶಿವಕುಮಾರಸ್ವಾಮಿಗಳು...ನಮ್ಮ ಇಡಿ ಭಾರತ ದೇಶಕ್ಕೆ ತಿಲಕಪ್ರಾಯರಾಗಿ ತಮ್ಮ ಶಾಂತಿಯಿಂದ, ನಡೆ ನುಡಿಯಿಂದ ಅನೇಕರಿಗೆ ಮಾದರಿಯಾಗಿದ್ದಾರೆ. ಇಂಥ ಮಹಾತ್ಮರಾದ ಶಿವಕುಮಾರಸ್ವಾಮಿಯವರಿಗೆ ನನ್ನ ವೈಯಕ್ತಿಕ ಮತ್ತು ಕರ್ನಾಟಕ ಶಾಖೆಯ ಭಾರತ ಸಾಧು ಸೇವಾ ಸಮಾಜದ ಪರವಾಗಿ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಶ್ರೀ ಸ್ವಾಮಿಜಿಯವರು ಪ್ರಪ್ರಥಮವಾಗಿ ಭಾರತ ಸಾಧು ಸೇವಾ ಸಮಾಜಕ್ಕೆ ಸೇರಿ, ತಾ॥ ೧-೩-೧೯೫೮ ರಿಂದ ಕರ್ನಾಟಕ ರಾಜ್ಯಶಾಖೆಯ ಅಧ್ಯಕ್ಷರಾಗಿ, ಧರ್ಮಸಮ್ಮೇಲನಗಳನ್ನೇರ್ಪಡಿಸಿ, ಇಡಿ ಭಾರತದ ಕೀರ್ತಿಗೆ ಪಾತ್ರರಾಗಿದ್ದಾರೆ. ಅಲ್ಲದೆ ಸಮಾಜದ ಉನ್ನತ ಸ್ಥಿತಿಗೆ ಕಾರಣರಾಗಿದ್ದಾರೆ. ಭಾರತ ಸಮಾಜದ ದೆಹಲಿ ಕೇಂದ್ರದಲ್ಲಿ ಸ್ವಾಮಿಜಿಯವರು ಜನರಲ್ ಕೊಸಿಲ್‌ನಲ್ಲಿ ಆಯ್ಕೆಯಾದರು. ಎರಡು ವರ್ಷಗಳ ಕಾಲ ಶ್ರೀಸ್ವಾಮಿಜಿಯವರ ಅಧ್ಯಕ್ಷತೆಯಲ್ಲಿ ನಡೆದ ಭಾರತಸಾಧುಸಮಾಜವು ಅವರು ಹಾಕಿಕೊಟ್ಟ ಮೇಲ್ಪಂಕ್ತಿಗನುಸಾರ ನಡೆಯುತ್ತಲಿದೆ. ಸ್ವಾಮಿಜಿಯವರು ಚಿರಕಾಲ ಬಾಳಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಬೆಂಗಳೂರು-೨೬. **ಸ್ವಾಮಿ ಶಿವದಾಸ**
೨-೫-೧೯೭೯ ಅಧ್ಯಕ್ಷ ಭಾರತ ಸಾಧುಸೇವಾ ಸಮಾಜ
ಕರ್ನಾಟಕಶಾಖೆ

# ೩. ಅನುಭವ

[ಶ್ರೀ ಕ್ಷೇತ್ರದ ವಿದ್ಯಾರ್ಥಿಸಮುದಾಯ, ಸಹಸ್ರ ಸಹಸ್ರ ಸಂಖ್ಯೆಯದು. ಶ್ರೀ ಕ್ಷೇತ್ರದಲ್ಲಿ ಅವರೆಲ್ಲ ವಿದ್ಯಾಭ್ಯಾಸ ಮಾಡುವ ಕಾಲದಲ್ಲಾದ ಅನುಭವಗಳು ವೈವಿಧ್ಯಮಯ. ಅನೇಕ ಸಂಖ್ಯೆಯ ಅನುಭವಗಳನ್ನೆಲ್ಲ ಈ ಗ್ರಂಥದಲ್ಲಿ ಪ್ರಕಟಿಸುವುದು ಶಕ್ಯವಿಲ್ಲ ವಾಯಿತು, ಕೆಲವು ಜನ ಶ್ರೀಗಳವರ ಮತ್ತು ಇತರರ ಅನುಭವಗಳು ಈ ಮುಂದೆ ಇವೆ]

## ಕರ್ತವ್ಯ ನಿಷ್ಠ ಶಿವಯೋಗಿಗಳು

'ಶಿವನೇ ಜಂಗಮರೂಪಧರಿಸಿ ಲೋಕವನುದ್ಧರಿಸಲೆಂದು ಚರಿಸುತ್ತಿರ್ಪ.
.....ನೀನೇ ಬಂದು ನಿರಂಜನಾಹ್ವಯದೆ ಮತ್ತಂ ಲೋಕಮಂ ರಕ್ಷಿಸಲ್
....ಚರಲಿಂಗಾಕಾರಮಂ ತಾಳ್ದುದಕ್ಕೇನೆಂದಾಂ ನುತಿಪೇಂ
ತವಾಧಿಕಮಿದಂ ಶ್ರೀ ಸಿದ್ಧಲಿಂಗೇಶ್ವರಾ'.

–ಸಿದ್ಧಲಿಂಗೇಶ್ವರ ಏಕೋತ್ತರಶತಸ್ಥಲ

ಜೀವನಕ್ಕಾಗಿ ಹೋರಾಡುವುದು ಚೈತನ್ಯಜಗತ್ತಿನ ಪ್ರಮುಖಕಾರ್ಯವಾಗಿರುವುದು. ಚೇತನದ ಶಿಖರದಲ್ಲಿರುವ ಮಾನವನೂ ಅದರಿಂದ ಹೊರತಲ್ಲ. ಪ್ರಾಕೃತ ಜಗತ್ತಿನ ಸಾಮಾನ್ಯಧರ್ಮವೇ ಅದಾಗಿರುವಂತಿದೆ. ಆದರೆ, ಮಾನವಧರ್ಮದ ಶ್ರೇಷ್ಠತೆಯನ್ನರಿತ ಹಿರಿಯ ಸಾಧಕರು 'ಬದುಕುವುದಕ್ಕಾಗಿ ತಿನ್ನು, ತಿನ್ನುವುದಕ್ಕಾಗಿ ಬದುಕಬೇಡ' ಎಂದರು. ಇದರಿಂದ ಮಾನವನು ಜೀವಿಸುವುದು ಒಂದು ಉನ್ನತ ಧ್ಯೇಯವನ್ನು ಸಾಧಿಸುವುದಕ್ಕಾಗಿ ಎಂಬುದು ಧ್ವನಿತವಾಗುತ್ತದೆ. ಆ ಧ್ಯೇಯ ಸಾಧನೆಯಿಲ್ಲದ ಬಾಳು ಬಾಳಲ್ಲ. ಸಾಧಕನ ಬಾಳು ಜೀವನದ ಹಂತಗಳಲ್ಲಿ ಸಿಹಿ-ಕಹಿಗಳ, ಹಿಗ್ಗು-ತಗ್ಗುಗಳ ಅನುಭವದಿಂದ ಸಾಕ್ಷಾತ್ಕಾರ ಫಲ ಪಡೆಯಬೇಕಾಗುತ್ತದೆ. ಶಿವತನ್ಮಯತೆ ಹೊಂದಬೇಕಾಗುತ್ತದೆ. ಅದೇ ಮಾನವನ ಆತ್ಮೋನ್ನತಿಯ ಮಾರ್ಗ.

ಕಾಲ ದೇಶ ಪರಿಸ್ಥಿತಿಗಳಿಗನುಗುಣವಾಗಿ, ಜಗತ್ತಿನ ನಾನಾಭಾಗಗಳಲ್ಲಿ ಮಾನವನ ಜೀವನಾದರ್ಶಗಳನ್ನು ಗುರುತಿಸಿದ ಮಹಿಮಾಪುರುಷರು ಉದಯಿಸಿ, ಅಲ್ಲಲ್ಲಿನ ಜನಾಂಗಗಳಿಗೆ ಜೀವನಧರ್ಮವನ್ನು ಬೋಧಿಸಿದರು.

ವೀರಶೈವ ಧರ್ಮಪ್ರವರ್ತಕರಾದ ಆಚಾರ್ಯರು, ಶರಣರು ಇಡೀ ಮಾನವ ಪೀಳಿಗೆಯ ಉದ್ಧಾರಕ್ಕಾಗಿ ಒಂದು ಉತ್ಕೃಷ್ಟ ಧರ್ಮದ ಹೆಬ್ಬಾಗಿಲು ತೆರೆದರು. ವ್ಯಷ್ಟಿಯಿಂದ ಸಮಷ್ಟಿಗೆ—ಸಮಷ್ಟಿರೂಪ ಪರಬ್ರಹ್ಮನವರೆಗೆ ಅರಿದು ಆಚರಿಸಿ ದಾರಿತೋರಿದರು. ಪರವಸ್ತು ತನ್ನಲ್ಲೇ ಅಂತರ್ಗತವಾದ ರಹಸ್ಯವನ್ನು ಹಲವು ನಿದರ್ಶನಗಳೊಂದಿಗೆ ಅವರು ಬೋಧಿಸಿದರು. ವೀರಶೈವ ದಾರ್ಶನಿಕರು ನಿರಾಕಾರ ಸ್ವರೂಪನಾದ ಪರಮಾತ್ಮನೇ ಗುರು ಜಂಗಮರೂಪದಿಂದ ಲೋಕೋದ್ಧಾರಕ್ಕಾಗಿ ಅವತರಿಸುವನೆಂದು ಹೇಳಿದ್ದಾರೆ. ಅಂತಹ 'ನಿರಂಜನಾಹ್ವಯದೆ...ಚರಲಿಂಗಾಕಾರಮಂ ತಾಳ್ದು' ಬಂದ ಜಂಗಮರೂಪೀ ಮಹಾಮಹಿಮನವನೇ.

### ಜಂಗಮದ ಕರ್ತವ್ಯ

ಉನ್ನತ ಚೈತನ್ಯರೂಪೀ ಮಾನವನಿಗೆ ಮಹತ್ತರ ಕರ್ತವ್ಯವುಂಟಷ್ಟೆ. ಕರ್ತವ್ಯ ದ್ವಿಮುಖವಾದದ್ದು. ಒಂದು ಆಂತರಿಕ, ಮತ್ತೊಂದು ಬಾಹ್ಯ. ಬಾಹ್ಯಕರ್ತವ್ಯ ಜೀವಧಾರಣೆ,ಲೋಕಜೀವನಕ್ಕೆ ಸಂಬಂಧಪಟ್ಟದ್ದು. ಆಂತರಿಕವೆಂಬುದು ಆತ್ಮೋದ್ಧಾರಕ್ಕೆ ಸಂಬಂಧಪಟ್ಟದ್ದು. ಆದರೂ ಇವೆರಡೂ ಭಿನ್ನವಲ್ಲ. ಪರಸ್ಪರಪೂರಕವಾದವು. ಬಾಹ್ಯಾಭ್ಯಂತರವುಳ್ಳವು. ಆಂತರಿಕ-ಬಾಹ್ಯ ಸತ್‌ಚಿತ್ ಸ್ವರೂಪ ನಿಷ್ಠಾಬಲವುಳ್ಳ ಮಹಾನುಭಾವರೇ ಜಗದುದ್ಧಾರ ಕಾರ್ಯಸ್ವರೂಪರು. ಇಂತಹ ದೈವೀಶಕ್ತಿಯುಳ್ಳವರೇ ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು.

ಇಡೀ ರಾಷ್ಟ್ರದಲ್ಲೇ ಸುಪರಿಚಿತರಾದ ಡಾ॥ ಶ್ರೀಶ್ರೀ ಶಿವಕುಮಾರಸ್ವಾಮಿಗಳವರು ಸುಸಂಸ್ಕೃತ ಮನೆತನದಲ್ಲಿ ಜನಿಸಿ, ಬಾಲ್ಯಾರಭ್ಯ ಉನ್ನತ ನಡೆನುಡಿ ಸಂಪನ್ನರಾಗಿ ಉತ್ತಮ ಶಿಕ್ಷಣ ಪಡೆದವರು. ೫೦ ವರ್ಷಗಳ ಹಿಂದೆಯೇ ಪದವೀಧರರಾಗಿ, ಲೌಕಿಕ ಶಿಕ್ಷಣವನ್ನು ಕರತಲಾಮಲಕವಾಗಿ ಮಾಡಿಕೊಂಡವರು. ಉನ್ನತ ಸಂಸ್ಕೃತಭಾಷಾಶಿಕ್ಷಣ ಪಡೆದು ಶಾಸ್ತ್ರಾಧ್ಯಯನ ಮಾಡಿದವರು. ಚಿಕ್ಕಂದಿನಿಂದಲೂ ಅವರಲ್ಲಿ ದಯೆ, ಕ್ಷಮೆ, ಕಿಂಕುರ್ವಾಣತೆ, ದೈವೀಭಕ್ತಿ ಜಂಗಮ ಸೇವಾಭಾವ, ಹಿರಿಯರಲ್ಲಿ ಗೌರವಭಾವ ಇತ್ಯಾದಿ ಸಾತ್ವಿಕ ಗುಣಗಳು ಮನೆಮಾಡಿಕೊಂಡಿದ್ದವು. ತಾತ್ವಿಕ ಗ್ರಂಥಾವಲೋಕನದಲ್ಲಿ ಆಸಕ್ತಿಯಿತ್ತು.

ಹಿಂದಿನ ಶ್ರೀ ಕ್ಷೇತ್ರಾಧಿಪತಿಗಳಾಗಿದ್ದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಉದ್ದಾನಸ್ವಾಮಿಗಳವರು ಅವರ ಉತ್ತಮ ವ್ಯಕ್ತಿತ್ವವನ್ನು ಗುರುತಿಸಿ, ಅವರನ್ನು ತಮ್ಮ ಕ್ಷೇತ್ರದ ಉತ್ತರಾಧಿಕಾರಿಗಳನ್ನಾಗಿ ಆರಿಸಿಕೊಂಡರು. ತಪೋನಿಷ್ಠರಾದ

ಶ್ರೀಗಳವರ ಕೃಪಾಪಾತ್ರರಾದ ಮೇಲಂತೂ ಕಿರಿಯ ಶ್ರೀಗಳವರ ಜೀವನದ ಪ್ರಮುಖ ಘಟ್ಟ ಪ್ರಾರಂಭವಾಯಿತು. ಹಿರಿಯ ಗುರುಗಳ ಅಪ್ಪಣೆಯಂತೆ ಶ್ರೀಮಠದ ಕಾರ್ಯನಿಮಿತ್ತ ಗ್ರಾಮಾಂತರಗಳಿಗೆ ಹೋಗಿ ಬರುವ ಕಾರ್ಯಗಳಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ಅವರೊಂದಿಗಿದ್ದು ಸೇವೆ ಸಲ್ಲಿಸುವ ಭಾಗ್ಯ ನಮಗೂ ಅಲ್ಪಸ್ವಲ್ಪ ಲಭ್ಯವಾಗಿತ್ತು.

ಶ್ರೀ ಕ್ಷೇತ್ರದ ವಿವಿಧ ವ್ಯವಹಾರಗಳ ಮತ್ತು ದಾಸೋಹ ಕಾರ್ಯಗಳ ಜವಾಬ್ದಾರಿ ಅವರ ಪಾಲಿಗೆ ಬಂದಿತು. ಪೂಜಾ ಸೇವೆಗಳ ಮತ್ತು ಅತಿಥಿ ವ್ಯವಸ್ಥೆ ಕೆಲಸಗಳೂ ಅವರ ಮೇಲ್ವಿಚಾರಣೆಗೆ ಒಳಪಟ್ಟವು.

ಹಿರಿಯಗುರುಗಳಾದ ಶ್ರೀ ಶ್ರೀ ಉದ್ದಾನಶಿವಯೋಗಿಗಳು ವಾಸ್ತವಿಕವಾಗಿ ಮೃದುಹೃದಯವುಳ್ಳವರು. ನಿಗ್ರಹಾನುಗ್ರಹ ಸಮರ್ಥರು, ಪರಮದಾಸೋಹಮೂರ್ತಿಗಳು, ತಪೋನಿಷ್ಠರು ಮತ್ತು ವಿದ್ಯಾಭಿಮಾನಿಗಳು; ಆದರೆ, ವ್ಯಾಪಕವಾಗಿ ಬೆಳೆಯುತ್ತಿದ್ದ ಕ್ಷೇತ್ರದ ಕಾರ್ಯಗಳ ನಿರ್ವಹಣೆಗೂ ಪೂಜಾನುಷ್ಠಾನಕ್ಕೂ ತಕ್ಕವರನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ಅವರು ಕಿರಿಯ ಶ್ರೀಗಳವರಿಗೆ ಅನೇಕ ಕಠಿಣ ಪರೀಕ್ಷೆಗಳನ್ನೊಡ್ಡುತ್ತಿದ್ದರು. ಹೃದಯ ಭೇದಕ ಪ್ರಸಂಗಗಳೂ ಇರುತ್ತಿದ್ದವು. ಅಂತಹ ಅನೇಕ ನಿದರ್ಶನಗಳನ್ನು ನಾವು ಕಣ್ಣಾರ ಕಂಡಿದ್ದೇವೆ. ಕಿರಿಯ ಶ್ರೀಗಳವರು ಅಂತಹ ಸಂದರ್ಭಗಲ್ಲಿ ಬಹಳ ಸಹನೆ ಶಾಂತಿಯಿಂದ ವರ್ತಿಸಿ, ಕಾರ್ಯ ನಿರ್ವಹಿಸುತ್ತಿದ್ದರು. ಅಂತಹ ಕಠಿಣ ಪ್ರಸಂಗಗಳ ಸೂಕ್ಷ್ಮತೆಯನ್ನು ಹಿರಿಯ ಗುರುಗಳಲ್ಲಿ ಅರಿಕೆ ಮಾಡಿದಾಗ ಅವರು 'ನೂರಾರು ಉಳಿಯಘಾತಗಳಿಗೀಡಾದ ಶಿಲೆ ಉತ್ತಮ ಲಿಂಗವಾಗಿ ರೂಪಗೊಂಡು ಸಂಸ್ಕಾರ ಬಲದಿಂದ ಪೂಜಾರ್ಹವಾಗುವುದಿಲ್ಲವೆ!' ಎಂದು ಉದ್ಗರಿಸುತ್ತಿದ್ದುದು ನಮ್ಮ ನೆನಪಿನಲ್ಲಿದೆ. ಕಿರಿಯ ಶ್ರೀಗಳು ಕಿಂಚಿತ್ತೂ ಮನೋವಿಹ್ವಲತೆಯಿಲ್ಲದೆ ಗುರ್ವಾಜ್ಞೆಯನ್ನು ಮಹತ್ತರವಾಗಿ ಭಾವಿಸುತ್ತಿದ್ದರು.

### ಅಲ್ಲಿಯೂ ಇಲ್ಲಿಯೂ ಸಲ್ಲುವರು

ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಇಷ್ಟೆಲ್ಲಾ ಕಾರ್ಯಗಳನ್ನು ದಕ್ಷತೆಯಿಂದ ನಿರ್ವಹಿಸಲು ಅವರಿಗೆ ಸಹಾಯಕವಾಗಿದ್ದುದು ಅವರಲ್ಲಿದ್ದ ತತ್ತ್ವನಿಷ್ಠೆ. ಅವರ ಆಂತರಿಕ-ಬಾಹ್ಯಕರ್ತವ್ಯಗಳು ಪೂರ್ಣಗೊಳ್ಳಲು ಅವರಲ್ಲಿರುವ ಪೂಜಾನಿಷ್ಠೆ, ವೀರವೈರಾಗ್ಯ, ಸಮತಾಭಾವ, ದಯಾಘನತೆಗಳು ಪೋಷಕವಾಗಿವೆ. ಅವರ ಲೌಕಿಕ ಸಮಾಜಸೇವಾಭಾವ ಬತ್ತದ ಬುಗ್ಗೆಯಂತಿದೆ. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ' ಎನ್ನುವ ಮಹಾತ್ಮಾ ಬಸವೇಶ್ವರರ ವಾಣಿಯ ಸಹಜತೆಯನ್ನು ಮನಗಂಡಿರುವವರು ಅವರು. ಈ ಬಗ್ಗೆ ಪೂಜ್ಯ ಶರಣರ ಪ್ರಸಾದವಾಣಿಯನ್ನು ಕೇಳೋಣ.

ಮಹಾಕವಿ ಹರಿಹರದೇವನ ನುಡಿ:

'ಇಲ್ಲಿ ಜಗಕ್ಕೆ ಪೂಜಿತರುಮಲ್ಲಿ ಪರಕ್ಕೆ ವಿಶೇಷಪೂಜ್ಯರಿಂ—<br>ತಿಲ್ಲಿಯುಮಲ್ಲಿಯುಂ ಮೆಱೆವರೆಲ್ಲಿಯುಮೆಮ್ಮ ಶಿವಾರ್ಚಕರ್'

ಶ್ರೀ ನಿಜಗುಣ ಶಿವಯೋಗಿಗಳ ವಾಣಿ :

'ಜಾಣನು ಲೌಕಿಕಪಾರಮಾರ್ಥವೆರಡನು ಮಾಣದೆ ಕೂಡಿ ನಡೆಸುತಿಹನು।...<br>ಸಕಲ ಸಂಸಾರದೊಳಗೆ ಬೆರೆದಿಹನು ಗುರುಶಂಭುಲಿಂಗವೇ ತಾನಾದ ಶರಣನಾ ಸಂಸಾರ ವಿಲ್ಲಾತಗೆ'

ಶಿವಯೋಗಿ ಸಿದ್ಧರಾಮೇಶ್ವರರು ಅಪ್ಪಣೆಕೊಡಿಸಿರುವಂತೆ :

'ಶಿವಾಚಾರ ಸಂಪನ್ನರಾಗಿ ಯೋಗದ ಹೊಲಬನರಿವವರು ಇತ್ತಲೂ ಚರಿಸುವರು ಲೌಕಿಕವ ;<br>ಅತ್ತಲೂ ಚರಿಸುವರು ಪರಮಾರ್ಥವ ; ಕಪಿಲ ಸಿದ್ಧ ಮಲ್ಲಿನಾಥನೆಂಬ ಮಹಾಬಯಲ ಕೂಡಿಪ್ಪರು !

ಪರಮ ವಿರಕ್ತರಾದರೂ ಲೋಕ ಲೌಕಿಕ ಸಂಬಂಧಗಳಲ್ಲಿ ಅಂಟಿಯೂ ಅಂಟದೆ 'ಬೆಂದನುಲಿ'ಯಂತಿರುವವರು ಅವರು. ಶಿವಯೋಗದ ಹೊಲಬಿಗರಾದರೂ ತಮ್ಮ ಆಶ್ರಮ ಧರ್ಮಕ್ಕೆ ವಿರೋಧವಲ್ಲದ ಲೋಕ ವ್ಯವಹಾರವನ್ನು ನಿರಾಕರಿಸುವವರಲ್ಲ.

### ಕಾಯಕ ನಿರತರು

ಲಿಂಗಾಂಗಿಯು ಕಾಯಕನಿರತನಾಗಿರಬೇಕು. ಲೌಕಿಕಾರ್ಥವಲ್ಲಿಯೂ ಮಾನವ ಬದುಕಬೇಕಾದರೆ ಆಹಾರಬೇಕು, ಆಹಾರ ಬೇಕಾದರೆ ದುಡಿಯಬೇಕು. ವೀರಶೈವಪರಿಭಾಷೆಯಲ್ಲಿ ಕಾಯಕವೆಂದರೆ ಶಿವರೂಪಿಗಳಾದ ಗುರುಲಿಂಗ ಜಂಗಮ ಪ್ರಸಾದ ಸಿದ್ಧಿಗಾಗಿ ಮಾಡುವ ಕಸಬು. ಪ್ರಸಾದ ಪಡೆದು ಪ್ರಸಾದ ಕಾಯರಾಗಬೇಕು. ಪ್ರಸಾದ ಸ್ವರೂಪರಾಗಬೇಕು, ಅರ್ಥಾತ್ ಶಿವಸ್ವರೂಪರಾಗಬೇಕು. ಆದ್ದರಿಂದ ಮಾನವರೂಪಿಗಳಾದ ಗುರುಜಂಗಮರಿಗೂ ಕಾಯಕವಿರಬೇಕು.

ಶಿವಶರಣರ ಪ್ರಸಾದೋಕ್ತಿ ಇದು :

'ಗುರುವಾದಡೂ ಕಾಯಕದಿಂದವೇ ಜೀವನ್ಮುಕ್ತಿ; ಲಿಂಗವಾದಡೂ ಕಾಯಕದಿಂದವೇ ಶಿಲೆಯಕುಲ ಹರಿವುದು.<br>ಜಂಗಮವಾದಡೂ ಕಾಯಕದಿಂದವೇ ವೇಷದ ಪಾಶವು ಹರಿವುದು. ಇದು ಚೆನ್ನಬಸವಣ್ಣಪ್ರಿಯ ಚಂದೇಶ್ವರಲಿಂಗದ ಅರಿವು'

ಗುರುಜಂಗಮರ ಕಾಯಕ ಭಕ್ತರ ಮನೆಗಳ ಚಿಕ್ಕ-ದೊಡ್ಡ ಸಂಸ್ಥೆಗಳ ಸಮಾರಂಭಗಳಲ್ಲಿ ದೀಕ್ಷಾದಿಕಾರ್ಯ ನಿರ್ವಹಣೆ, ಲಿಂಗಪೂಜೆ, ತತ್ತ್ವಾರ್ಥ ಬೋಧೆ, ಸಮಾಜಸಮಸ್ಯೆಗಳ ಪರಿಹಾರ ಮುಂತಾದುವು. ಚಿಕ್ಕ-ದೊಡ್ಡದೆಗೆ ದಯಮಾಡಿಸುವ ವೇಳೆಯಲ್ಲಿ ದೂರ ಪ್ರಯಾಣದಿಂದಾಗುವ ಆಯಾಸವನ್ನು ಶ್ರೀಗಳವರು ಗಮನಿಸುವುದಿಲ್ಲ. ನಿದ್ರಾಭಂಗವನ್ನೂ ಗಮನಿಸುವುದಿಲ್ಲ. ಭಕ್ತರ ಭಕ್ತಿಯನ್ನು ಸ್ವೀಕರಿಸಿ,ಮಾರ್ಗದರ್ಶನ ಮಾಡಿ ಪಾದೋದಕ ಪ್ರಸಾದವನ್ನು ನೀಡುವುದರಲ್ಲಿ ತಮ್ಮ ಕರ್ತವ್ಯವನ್ನು ವಿತರಣೆಯಿಂದ ನಿರ್ವಹಿಸುವರು.

ಈ ಎಲ್ಲಾ ಕಾರ್ಯನಿರ್ವಹಣೆಗೂ ಸಾಕಷ್ಟು ದೈಹಿಕಶಕ್ತಿ ಅತ್ಯಗತ್ಯವಷ್ಟೆ. ಶ್ರೀ ಶ್ರೀಗಳವರು ವಿದ್ಯಾರ್ಥಿದೆಸೆಯಿಂದಲೂ ದೈಹಿಕ ವ್ಯಾಯಾಮಕ್ಕೆ ಹೆಚ್ಚು ಗಮನವೀಯುತ್ತಿದ್ದರು. ವ್ಯಾಯಾಮದೊಂದಿಗೆ ಯೋಗಾಸನಗಳನ್ನೂ ಅಭ್ಯಾಸಿಸುತ್ತಿದ್ದರು. 'ಶರೀರಮಾದ್ಯಂ ಖಲು ಧರ್ಮಸಾಧನಂ' ಎಂಬ ಆರ್ಯೋಕ್ತಿಯಂತೆ, ಧರ್ಮಾಚರಣೆಗೆ ದೇಹಬಲ ಅಗತ್ಯವೇ ಆಗಿದೆ.

### ದೈನಂದಿನ ಕರ್ತವ್ಯ ನಿರ್ವಹಣೆ

ದಿನವಹಿ ಶ್ರೀಗಳವರು ನಡೆಸುತ್ತಿರುವ ಕರ್ತವ್ಯ ನಿರ್ವಹಣೆಯಲ್ಲಿ ವಯೋಧರ್ಮದ ತೊಡಕಾಗಲೀ,ಬೇಸರವಾಗಲೀ, ಆಯಾಸವಾಗಲೀ ಅವರಿಗೆ ಅಡ್ಡಿ ಬರುವಂತಿಲ್ಲ. ಪ್ರತಿದಿನ ಬೆಳಗಿನ ಜಾವ ೨-೩೦-೩ ಘಂಟೆಗೆ ಎದ್ದು ತಮ್ಮ ನಿತ್ಯಾಹ್ನಿಕಗಳನ್ನು ಮುಗಿಸುವುದು, ಅಲ್ಪ ವ್ಯಾಯಾಮ, ಗ್ರಂಥಾವಲೋಕನ, ೩ ಘಂಟೆಯಿಂದ ೬ ಘಂಟೆಯವರೆಗೆ ಪೂಜೆ ಶಿವಯೋಗಾನುಷ್ಠಾನ, ಅನಂತರ ಆಡಳಿತ ಸಂಬಂಧ ಕಾಗದಪತ್ರಗಳ ಅವಲೋಕನ, ದರ್ಶನಾರ್ಥಿಗಳಿಗೆ ಸಂದರ್ಶನ, ಪ್ರೌಢಶಾಲಾವಿದ್ಯಾರ್ಥಿಗಳಿಗೆ ಪಾಠಪ್ರವಚನ, ಪ್ರಾರ್ಥನಾಸಭೆಯಲ್ಲಿ ವಿದ್ಯಾರ್ಥಿಗಳಿಗೆ ಧರ್ಮೋಪದೇಶ ಮಾಡುವುದು ಇವು ಶ್ರೀಗಳವರ ದೈನಂದಿನ ಕಾರ್ಯಗಳು. ದಾಸೋಹಕಾರ್ಯದಲ್ಲಂತೂ ಶ್ರೀ ಶ್ರೀಗಳವರು ಹೆಚ್ಚು ಆಸಕ್ತಿವಹಿಸುವರು. ಭೋಜನಸಮಯದಲ್ಲಿ ಭೋಜನಶಾಲೆಗೆ ತಾವೇ ದಯಮಾಡಿಸಿ ಪ್ರಸಾದ ನೀಡುವುದನ್ನು ತಾವೇ ಖುದ್ದು ಪರಿಶೀಲಿಸುವರು. ದರ್ಶನಾರ್ಥಿಗಳಲ್ಲಿ ಪ್ರತಿಯೊಬ್ಬರಿಗೂ 'ಪ್ರಸಾದ ತೆಗೆದುಕೊಳ್ಳಿ' ಎನ್ನುವುದು ಅವರ ನಿತ್ಯಪದ್ಧತಿ. ಕ್ಷೇತ್ರಕ್ಕೆ ಬಂದವರು ಪ್ರಸಾದ ಸ್ವೀಕರಿಸದೆ ಹೋಗುವ ಸಂಭವವೇ ಇರುವುದಿಲ್ಲ.

ಅಲ್ಲದೆ, ದೂರಗ್ರಾಮಗಳ ಚಿಕ್ಕ-ದೊಡ್ಡ, ಸಂಘ, ಸಂಸ್ಥೆ, ಸಮ್ಮೇಳಗಳು ಸಮಾರಂಭಗಳಲ್ಲಿ ಭಾಗವಹಿಸಿ, ಉಪದೇಶ ಭಾಷಣ ನೀಡುವುದು, ಪ್ರಾರಂಭೋತ್ಸವಗಳನ್ನು ನೆರವೇರಿಸುವುದು, ಯಂತ್ರಧಾರಣ, ಆಶೀರ್ವಚನ ನೀಡುವುದು, ದಾಸೋಹಕಾರ್ಯಗಳ ವೀಕ್ಷಣೆ, ಈ ಮಧ್ಯೆ ಶ್ರೀ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಶಿಕ್ಷಣ ಸಂಸ್ಥೆಗಳ ವ್ಯವಹಾರಗಳನ್ನು ಅವಲೋಕಿಸುವುದು ಇವುಗಳೂ ಸೇರಿವೆ.

ಶ್ರೀ ಕ್ಷೇತ್ರದ ಲೋಕಶಿಕ್ಷಣಕಾರ್ಯಗಳಲ್ಲಿ ವಿಜ್ಞಾನ ಮತ್ತು ಕಲಾಶಾಲೆಗಳು, ಪ್ರೌಢಶಾಲೆಗಳು, ಮಾಧ್ಯಮಿಕಶಾಲೆಗಳು, ಶೈಕ್ಷಣಿಕ ಕಾಲೇಜು, ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾಪಾಠಶಾಲೆ ಮತ್ತು ವೇದಪಾಠಶಾಲೆಗಳು, ಮತ್ತು ಕ್ಷೇತ್ರದ ವ್ಯಾಪ್ತಿಗೆ ಸೇರಿದ ಇತರ ಪ್ರೌಢಶಾಲೆಗಳು ಮುಂತಾದುವುಗಳ ವ್ಯವಸ್ಥೆ ಮುಖ್ಯವಾದುವು. ಸುಮಾರು ೪೦೦೦ ಸಂಖ್ಯಾಬಲವುಳ್ಳ ಪ್ರಸಾದನಿಲಯದ ವ್ಯವಸ್ಥೆ, ವಾರ್ಷಿಕ ರಥೋತ್ಸವ, ಜಾತ್ರೆಗಳು, ಅನೂಚಾನವಾಗಿ ನಡೆದು ಬಂದ ದಾಸೋಹಕಾರ್ಯಗಳೂ ಸೇರಿವೆ. ಬಿಡುವಿನ ಕಾಲದಲ್ಲಿ ಮಠದ ವ್ಯವಸಾಯ ಕ್ಷೇತ್ರಗಳ ಮತ್ತು ಆಡಳಿತಕಾರ್ಯದ ಮೇಲ್ವಿಚಾರಣೆ ನೋಡುವರು. ಶ್ರೀ ಕ್ಷೇತ್ರದಲ್ಲಿ ಆಗಾಗ್ಗೆ ರಾಜ್ಯಮಟ್ಟದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಸಭೆ ಸಮ್ಮೇಳನಗಳೂ ಶಿವಾನುಭವ ಸಮ್ಮೇಳನಗಳೂ ನಡೆಸಲ್ಪಡುತ್ತವೆ. ರಾಷ್ಟ್ರನಾಯಕರೂ ಬಹುಸಂಖ್ಯೆಯಲ್ಲಿ ಸಾರ್ವಜನಿಕರೂ ಆಗಾಗ್ಗೆ ಶ್ರೀಗಳವರ ಸಂದರ್ಶನ ಭಾಗಿಗಳಾಗುತ್ತಿರುವರು.

ಈ ಎಲ್ಲಾ ಶಿಕ್ಷಣ ಸಂಸ್ಥೆಗಳಿಗೆ ಅಗತ್ಯವಾದ ಭವ್ಯವಾದ ಕಟ್ಟಡಗಳೂ ಪುಸ್ತಕಭಂಡಾರ ಸಭಾಮಂದಿರಗಳೂ ವಿದ್ಯಾರ್ಥಿವಸತಿಗೃಹಗಳೂ ಅತಿಥಿಗೃಹಗಳೂ ಕ್ಷೇತ್ರದ ಘನತೆಗೆ ಸಾಕ್ಷೀಭೂತವಾಗಿ ನಿಂತಿವೆ. ಶ್ರೀ ಗೋಸಲಸಿದ್ಧೇಶ್ವರರಅನುಷ್ಠಾನ ದೇವಮಂದಿರ, ಶ್ರೀ ಅಡವಿಸ್ವಾಮಿಗಳ ಮತ್ತು ಶ್ರೀ ಉದ್ದಾನಸ್ವಾಮಿಗಳ ಗದ್ದುಗೆಗಳು ಶ್ರೀ ಕ್ಷೇತ್ರದ ಮಹತ್ತ್ವವನ್ನು ಹೆಚ್ಚಿಸಿವೆ.

ಮತ್ತೊಂದು ಮಹತ್ತರ ಕಾರ್ಯವೆಂದರೆ-ಅನೇಕ ಮಠಾಧೀಶ್ವರರು ಅಲ್ಲಿ ಪ್ರೌಢ ಮತ್ತು ಧಾರ್ಮಿಕ ಶಿಕ್ಷಣ ಪಡೆದೂ ಪಡೆಯುತ್ತಲೂ ಇದ್ದಾರೆ. ಆ ಶಿಕ್ಷಣಕ್ಕೆ ಶ್ರೀಗಳವರು ಉತ್ತಮ ಸನ್ನಿವೇಶವನ್ನು ಒದಗಿಸಿರುವರಲ್ಲದೆ, ಅವರಿಗೆ ತಕ್ಕ ಅನುಷ್ಠಾನ ಮತ್ತು ಧಾರ್ಮಿಕ ಸ್ಫೂರ್ತಿಯನ್ನೀಯುತ್ತಿರುವರು.

### ಶ್ರೀಶ್ರೀಗಳವರ ವ್ಯಕ್ತಿ ಮಹತ್ತ್ವ

ಈ ಎಲ್ಲಾ ಕರ್ತವ್ಯ ನಿರ್ವಹಣೆಗೂ ಹಿರಿದಾದ ಸದ್ಭಕಾರ್ಯಗಳಿಗೂ ಮೂಲವಾದುದು ಅವರ ಅಪ್ರತಿಹತವಾದ



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಗ್ರಂಥಾಲಯದೊಳನೋಟ–(೧)



ಗ್ರಂಥಾಲಯದೊಳನೋಟ–(೨)



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಬತ್ತದ ಮಿಲ್ಲು



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಬತ್ತದ ಮಿಲ್ಲಿನ ಒಳನೋಟ



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ



ಫ್ಲೋರ್‌ಮಿಲ್ ಒಳನೋಟ



(ವೇದಿಕೆಗಳ ಮೇಲೆ ಸರ್ವಶ್ರೀ ಮೋಹನಲಾಲ್ ಸುಖಾಡಿಯ
ದೇವರಾಜ ಅರಸು, ಕೆ. ಹನುಮಂತಯ್ಯ, ಜವರೇಗೌ
ಸಿದ್ಧವೀರಪ್ಪ ಮೊದಲಾದ ವರಿಷ್ಠರನ್ನೂ, ಹರಗುರು
ಮೂರ್ತಿ ಸಮೂಹವನ್ನೂ ಇತರ ಪ್ರತಿಷ್ಠಿತರನ್ನೂ ಕಾ
ಬಹುದು.)

## ಉತ್ತರಾಧಿಕಾರ ಮಹೋತ್ಸವದ ವಿವಿಧ ದೃಶ್ಯಗಳು - ೧೯೭೫











ಉತ್ತರಾಧಿಕಾರ ಸಮಯದಲ್ಲಿ ನೆರವೇರಿಸಿದ ಮಹಿಳಾ ಗೋಷ್ಠಿಯ ದೃಶ್ಯ



ಶ್ರೀ ಕ್ಷೇತ್ರದ ಎತ್ತುಗಳು



ದಾಸೋಹಕ್ಕೆ ಪಾಲ್ಗರೆವ ಎಮ್ಮೆಗಳ ಹಿಂಡು




ಶ್ರೀ ಕ್ಷೇತ್ರದಲ್ಲಿ ಔಷಧಾಲಯದ ಉದ್ಘಾಟನೆ



ಶ್ರೀಕ್ಷೇತ್ರದ ಹುಲ್ಲಿನ ಬಣವೆಗಳು














ವಸ್ತುಪ್ರದರ್ಶನದ ವಿವಿಧ ಮಳಿಗೆಗಳು ಹಾಗು ಪ್ರಾರಂಭ



ವಸ್ತುಪ್ರದರ್ಶನ ವೇದಿಕೆಯ ಮೇಲೆ ಶ್ರೀ ಧರ್ಮವೀರ (ಕರ್ನಾಟಕ ಗವರ್ನರ್) ಅವರೊಂದಿಗೆ ಶ್ರೀಗಳು



ಸರ್ಕಾರದ ಒಂದು ದೊಡ್ಡ ಮಳಿಗೆ

## ಮುಕ್ತಾಯ ಸಮಾರಂಭದ ವಿವಿಧ ದೃಶ್ಯಾವಳಿಗಳು



ವಸ್ತುಪ್ರದರ್ಶನದ ವೇದಿಕೆಯ ಮೇಲೆ ಶ್ರೀ ವಿ. ವಿ. ಗಿರಿಯವರೊಂದಿಗೆ




ವಸ್ತುಪ್ರದರ್ಶನ ವೇದಿಕೆಯ ಮೇಲೆ ವೀರೇಂದ್ರ ಹೆಗ್ಗಡೆಯವರೊಂದಿಗೆ



ಶ್ರೀ ಕೆ. ಹೆಚ್. ಪಾಟೀಲರೊಂದಿಗೆ

ಪವಿತ್ರ ವ್ಯಕ್ತಿತ್ವ, ಶ್ರೀಶ್ರೀಗಳವರ ಶಿವಯೋಗನಿಷ್ಠೆ ದೈವೀಗುಣಗಳು ಅವರ ವ್ಯಕ್ತಿತ್ವವನ್ನು ರೂಪಿಸಿವೆ. ಶ್ರೀ ಸಿದ್ಧರಾಮ ಶಿವಯೋಗಿಗಳೆನ್ನುವಂತೆ—

'....ಶಿವಭಕ್ತರಧಿಕರೆಂಬ ಕಾರಣವದೇನಯ್ಯ ? ನಿತ್ಯಲಿಂಗಾರ್ಚನೆ ಮೂರುವೇಳೆ ;
ಲಿಂಗಾರ್ಚನೆಗೊಮ್ಮೆ ಲಿಂಗತ್ರಯ ಪೂಜೆ ; ಪೂಜೆಗೊಮ್ಮೆ ಮಹಾಪ್ರಣವ ಜಪ ;
ಜಪಕ್ಕೊಮ್ಮೆ ನಿಜಧ್ಯಾನ ; ನಿಜಧ್ಯಾನಕ್ಕೊಮ್ಮೆ ಚಿತ್ತಿನ ಲಯ ನೋಡಾ, ಕಪಿಲಸಿದ್ಧಮಲ್ಲಿಕಾರ್ಜುನಾ'.

'ಶರಣನ ಸಂಭ್ರಮ ಲಿಂಗಪೂಜೆ, ಜಂಗಮದಾಸೋಹ ನೋಡಯ್ಯಾ; ಶರಣನ ಸಂಭ್ರಮ ಅನುಭವ ಓದಿ
ಭವವ ಗೆಲಿಯುವುದು; ಅದೇ ಸಂಭ್ರಮಕಾರ್ಯ ನೋಡಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯಾ'.

ಶ್ರೀ ಶಾಂತಮಲ್ಲಸ್ವಾಮಿಗಳು ತಮ್ಮ ಅನುಭವ ಮುದ್ರೆಯಲ್ಲಿ ಹೀಗೆ ಹೇಳಿದ್ದಾರೆ :

'ಶಾಂತಿ ಸರ್ವ ಭೂತದಯೆಯು । ದಾಂತಿ ನಿಸ್ಪೃಹತ್ವ ಸತತ ।
ಕಾಂತಿ ಮನದ ಹರುಷ ಸಹಜ ಪೂರ್ಣಬೋಧೆಯು
ಕ್ಷಾಂತಿ ಚಿತ್ರಗರ್ವ ಮೈತ್ರ । ಕಂತು ವಿಜಯ ವಿಷಯ ಹರಣ ।
ಸಂತಸಂಗಳಿಂದ ಚರಿಪ ಪ್ರಭು ವಿರಕ್ತನು '

ಶಾಂತಿ, ಭೂತದಯೆ, ದಮೆ, ನಿಸ್ಪೃಹತೆ, ಶಿವತೇಜಸ್ಸು, ಮನಸ್ಸಿನ ಪ್ರಸನ್ನತೆ, ಕ್ಷಮೆ, ನಿರಹಂಕಾರ, ಸಹೃದಯತೆ, ನಿಷ್ಕಾಮವೃತ್ತಿ, ವಿಷಯ ವಿಮುಖತೆ, ಹರ್ಷ ಈ ಗುಣಗಳು ವಿರಕ್ತರಿಗೆ ಇರಬೇಕಾದ ಸಹಜ ಗುಣಗಳು. ಈ ಗುಣಗಳು ಶ್ರೀ ಶ್ರೀಗಳವರ ವ್ಯಕ್ತಿತ್ವವನ್ನು ರೂಪಿಸಿವೆ.

### ಪ್ರಸಾದವಾಣಿಯ ಪ್ರಭಾವ

ಶ್ರೀ ಶ್ರೀಗಳವರ ಭಾಷಣವಾಗಲೀ, ಅಧ್ಯಕ್ಷತೆಯ ಸಮಾರೋಪ ಆಶೀರ್ವಚನವಾಗಲೀ ಅದು ಬರಿಯ ಭಾಷಣವಲ್ಲ; ಪ್ರಸಾದವಾಣಿ. ಅತಿ ಮಾನವ ಗುಣಗಳಿಂದ ಕೂಡಿದ,ಪರಿಪೂತವಾದ ತುಂಬಿದ ಹೃದಯದಿಂದ ಹೊರಹೊಮ್ಮಿದ ವಾಣಿ,ಪ್ರಸಾದ ವಾಣಿಯಾಗಿ ಶ್ರೋತೃಗಳ ಮನಃಪಟಲದ ಮೇಲೆ ಶಾಶ್ವತ ಪರಿಣಾಮವನ್ನುಂಟುಮಾಡುತ್ತದೆ. ತಮ್ಮ ಉಪದೇಶ ಭಾಷಣದಲ್ಲಿ ಶ್ರೀಗಳವರು ಮಾನವಜನ್ಮದ ಶ್ರೇಷ್ಠತೆ, ಹಿಂದೂಧರ್ಮದ ಸ್ವರೂಪ, ವೀರಶೈವಧರ್ಮದ ವೈಶಿಷ್ಟ್ಯ, ನೀತಿ ಮಹತ್ತ್ವಗಳನ್ನು ವಿವರಿಸುವರು. ಕೇವಲ ವೈಜ್ಞಾನಿಕ ಮನೋಧರ್ಮದಿಂದ ಮುನ್ನಡೆಯುತ್ತಿರುವ ಇಂದಿನ ನಾಗರಿಕ ಜನಾಂಗಗಳು ದೇವರು ಧರ್ಮ - ಈ ಬಗೆಗೆ ಹೆಚ್ಚಿನ ಆಸಕ್ತಿವಹಿಸಬೇಕೆಂದೂ, ಧಾರ್ಮಿಕಮನೋಭಾವವನ್ನು ಬೆಳೆಸಿಕೊಳ್ಳದ ಮಾನವ ಅವನತಿ ಹೊಂದುವನೆಂದೂ ಅಂತಹ ಸಮಾಜ ಅಧೋಗತಿಗಿಳಿಯುವುದೆಂದೂ ಅಪ್ಪಣೆ ಕೊಡಿಸುವರು. ಅವರ ದರ್ಶನ-ಆಶೀರ್ವಾದ ಅಪರಿಶುದ್ಧನನ್ನು ಪರಿಶುದ್ಧನನ್ನಾಗಿಯೂ ನಾಸ್ತಿಕನನ್ನು ದೈವಭಕ್ತನನ್ನಾಗಿಯೂ ಮಾಡುತ್ತದೆ. ಸಾಂಸಾರಿಕ ವೇದನೆ ಮತ್ತು ಲೌಕಿಕಗೊಂದಲಗಳ ಸುಳಿಯಲ್ಲಿ ಸಿಕ್ಕ ದಾರಿಗಾಣದವನನ್ನು ಸುಗಮ ಮಾರ್ಗಕ್ಕೆಳೆಯುತ್ತದೆ. ಇದು ಅವರ ಕರ್ತವ್ಯನಿಷ್ಠೆಯ ದ್ಯೋತಕ.

ಒಟ್ಟಿನಲ್ಲಿ ಹೇಳಬಹುದಾದರೆ, ಶ್ರೀ ಸಿದ್ಧಗಂಗಾ ಕ್ಷೇತ್ರದ ಆದ್ಯರಾದ ಶ್ರೀ ಗೋಸಲಸಿದ್ಧೇಶ್ವರರು, ಶ್ರೀ ಅಡವಿ ಸ್ವಾಮಿಗಳು ಮತ್ತು ಶ್ರೀ ಉದ್ದಾನಸ್ವಾಮಿಗಳವರ ಕೃಪಾಬಲವೂ ಮಹತ್ತ್ವವೂ ಒಂದುಗೂಡಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಲ್ಲಿ ಮೂಡಿಬಂದಿದೆಯೆಂಬುದು ಅತಿಶಯೋಕ್ತಿಯಲ್ಲ.

**ಶ್ರೀ ಮಹಾಲಿಂಗಸ್ವಾಮಿಗಳು**
ಕನಕಪುರ ದೇಗುಲಮಠ

೮-೩-೧೯೭೯

## ನಾ ಕಂಡ ಶಿವಯೋಗಿದ್ವಯ

ನಾನು ೧೯೩೩ ನೇ ಇಸವಿ ಜೂನ್ ತಿಂಗಳು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ವಿದ್ಯಾಭ್ಯಾಸಕ್ಕೆ ಬಂದೆನು. ಆಗ ನನಗೆ ೧೨ ವರ್ಷಗಳು ಮಾತ್ರ. ನಮ್ಮ ಪೂಜ್ಯ ಶ್ರೀ ಬಸವಯ್ಯ ಸ್ವಾಮಿಗಳು, ಕೆಂಪಸಾಗರದ ಪಟೇಲ್ ಬಸಪ್ಪ,ಹೇರೋಹಳ್ಳಿ ಬಾಳಯ್ಯನವರು, ಮೂಗನಪುರದ ಪಟೇಲ್ ಸಾವಂದಯ್ಯ, ನೀಲಸಂದ್ರದ ಶ್ರೀ ಪಟೇಲ್ ಪುಟ್ಟೇಗೌಡರು ಈ ಭಕ್ತ ಮಂಡಲಿಯವರು ನನ್ನನ್ನು ಕರೆ ತಂದು ಶ್ರೀ ಮಠಕ್ಕೆ ವಿದ್ಯಾಭ್ಯಾಸಕ್ಕೆ ಬಿಟ್ಟರು. ನಾನು ಬಂದ ಹೊಸದರಲ್ಲಿ ಶ್ರೀ ನಿ. ಪ್ರ. ಶ್ರೀ ಶಿವಕುಮಾರಸ್ವಾಮಿಗಳವರು ಒಂದು ಸಣ್ಣ ಕೊಠಡಿಯಲ್ಲಿ ಅಧ್ಯಯನ ಮಾಡುತ್ತಾ ಕುಳಿತಿದ್ದರು. ನಾವೆಲ್ಲರೂ ಹೋಗಿ ಅವರಿಗೆ ನಮಸ್ಕಾರ ಮಾಡಿದೆವು, ನಮ್ಮನ್ನು ವಿಚಾರಿಸಿ ಸಕಲ ವಿಷಯಗಳನ್ನು ತಿಳಿದುಕೊಂಡು ಪೂಜ್ಯ ಹಿರಿಯ ಗುರುಗಳಾದ ಶ್ರೀ ಉದ್ದಾನ ಶಿವಯೋಗಿಗಳ ಸಮೀಪಕ್ಕೆ ಕಳುಹಿಸಿಕೊಟ್ಟರು. ಅವರ ವಾಸ ಹಳೇಮಠದಲ್ಲಿ ಇತ್ತು. ಯಾವಾಗಲೂ ಪರಮಾತ್ಮನ ಧ್ಯಾನದಲ್ಲಿಯೇ ತಲ್ಲೀನರಾಗಿ ಕುಳಿತಿದ್ದ ಪೂರ್ಣ ಪರಂಜ್ಯೋತಿ ಸ್ವರೂಪರಾಗಿದ್ದ ಶ್ರೀ ಉದ್ದಾನ ಶಿವಯೋಗಿಗಳ ದರ್ಶನವನ್ನು ಮಾಡಿದೆವು. ಶ್ರೀಗಳು

ನನ್ನನ್ನು ನೋಡಿ ಮಾತನಾಡಿಸಿದರು. ಅವರದು ಕಂಚಿನಂತಹ ಕಂಠ. ಅವರ ಧ್ವನಿ ಕೇಳಿಯೇ ನನಗೆ ಭಯವುಂಟಾಯಿತು. ನಮ್ಮ ಸಂಗಡ ಬಂದಿದ್ದ ಪಟೇಲ್ ಬಸವೇಗೌಡರು ಶ್ರೀಗಳ ಪಾದವನ್ನು ಒತ್ತುವಂತೆ ಹೇಳಿದರು. ಆ ಪಾದ ಮುಟ್ಟಿದರೆ ನನಗೆ ಭಯವಾಗುತ್ತದೆಂದು ಅರಿತ ನಾನು ಭಯದಿಂದ ಶ್ರೀಗಳವರ ಪಾದವನ್ನು ಮುಟ್ಟಿ ಒತ್ತುತ್ತಿರಲು ಶ್ರೀಗಳು ಸೊಳ್ಳೆ ಮುಟ್ಟಿದ ಹಾಗೆ ಆಗುತ್ತಿದೆ ಎಂದು ಹೇಳಿದರು. ಯಾವಾಗಲೂ ಶ್ರೀಗಳು 'ಶಿವೋಹಂ' 'ಶಿವೋಹಂ' ಎಂದು ಧ್ಯಾನಾಸಕ್ತರಾಗಿ ಕುಳಿತು ಶಿವಯೋಗ ನಿಷ್ಠರಾಗಿ ಶಿವನಲ್ಲಿಯೇ ಬೆರೆಯಲು ಹಗಲಿರುಳು ತಮ್ಮ ಜೀವನವನ್ನು ಆ ಧ್ಯಾನದಲ್ಲಿಯೇ ಕಳೆಯುತ್ತಿದ್ದರು.

ರಾತ್ರಿ ೯ ಗಂಟೆಗೆ ಸ್ನಾನಮಾಡಿ ಸರ್ವರೂ ಪೂಜೆಗೆ ಹೋದೆವು. ಬಹಳಕಾಲ ಅಂತರ್‌ಧ್ಯಾನದಲ್ಲಿ ಕುಳಿತಶ್ರೀಗಳನ್ನು ನೋಡಿ ನನಗೆ ಮತ್ತಷ್ಟು ಭಯವಾಯಿತು. ನಮ್ಮೆಲ್ಲರಿಗೆ ಭಸ್ಮಧಾರಣೆ ಮಾಡಿ ಪೂಜೆ ಮುಗಿಸಿ ತೀರ್ಥ ಪ್ರಸಾದವಿತ್ತರು. ನನಗೆ ಭಯ ಮತ್ತು ಆಯಾಸದಿಂದಾಗಿ ನಿದ್ರೆ ಬಂದುದರಿಂದ ಶ್ರೀಗಳ ಕೊಠಡಿಯಲ್ಲಿಯೇ ಒಂದು ಮೂಲೆಯಲ್ಲಿಮಲಗಿದೆ. ನಮ್ಮ ಪೂಜ್ಯ ಶ್ರೀಗಳು ಮತ್ತು ಉದ್ದಾನ ಶಿವಯೋಗಿಗಳು ಬಹಳ ಹೊತ್ತಿನ ತನಕ ಮಾತನಾಡುತ್ತಲೇ ಕುಳಿತಿದ್ದರು. ನಂತರ ಪಂಚಾಕ್ಷರಿ ಮಂತ್ರವನ್ನು ಪಠಿಸುತ್ತಾ ಹಳೇಮಠ (ಯೋಗಮಂಟಪ) ದ ಸುತ್ತಲೂ ತಿರುಗುತ್ತಲೇ ಇದ್ದರು. ಅವರ ಜೊತೆಯಲ್ಲಿ ನಮ್ಮ ಗುರುಗಳೂ ಸಹ ಇದ್ದರು. ಇದನ್ನು ನೋಡಿ ನನಗೆ ಮತ್ತಷ್ಟು ಭಯವುಂಟಾಗಿ ಮೈಯಲ್ಲಿ ಜ್ವರ ಬಂದಿತು. ಬೆಳಿಗ್ಗೆ ಮೇಲೇಳಲೂ ಸಾಧ್ಯವಾಗುತ್ತಿಲ್ಲ. ಶ್ರೀಗಳು ನನ್ನ ಸ್ಥಿತಿಯನ್ನು ನೋಡಿ ಹೋಗು ಸ್ನಾನಮಾಡಿಕೊಂಡು ಬಾ, ದೇವರ ಪೂಜೆಯನ್ನು ಮಾಡು ಎಲ್ಲವೂ ಸರಿಹೋಗುತ್ತೆ ಎಂದರು. ಸ್ನಾನ ಪೂಜೆ ನಂತರ ಭಸ್ಮಧಾರಣೆ ಮಾಡಿಸಿದರು. ಮೈಯಲ್ಲಿದ್ದ ಬಿಸಿ ಮಾಯವಾಗಿ ಏನೋ ಒಂದು ರೀತಿಯ ಹರ್ಷ, ಸಮಾಧಾನ, ಸಂತೋಷ, ಮನಸ್ಸಿಗೆ ನೆಮ್ಮದಿ ದೊರಕಿದಂತಾಯಿತು. ಪ್ರಾತಃಕಾಲ ೭ ಗಂಟೆಯ ಸಮಯವಾಗಿರಬಹುದು ಶ್ರೀಗಳು ನನ್ನನ್ನು ಕುರಿತು ನಮ್ಮ ಚಿಕ್ಕ ಸ್ವಾಮಿಗಳ ಹತ್ತಿರ ಹೋಗಿರಿ ಎಂದು ಅಪ್ಪಣೆ ಮಾಡಿದರು.

ನಮ್ಮ ಶ್ರೀಗಳು ಮತ್ತು ನಾನು ಶ್ರೀ ಶಿವಕುಮಾರಸ್ವಾಮಿಗಳವರು ಇದ್ದ ಕೊಠಡಿಗೆ ಬಂದು ಬಿನ್ನವಿಸಿಕೊಂಡು ಶ್ರೀಗಳ ಅಪ್ಪಣೆಯನ್ನು ತಿಳಿಸಿದೆವು. ಆನಂದದಿಂದ ಅವರು ನನ್ನನ್ನು ಬರಮಾಡಿಕೊಂಡು 'ದಾಸೋಹ ಮಹಡಿಯಲ್ಲಿ ಟ್ರಂಕು ಇಟ್ಟುಕೊಂಡು ಇದ್ದು, ಚೆನ್ನಾಗಿ ಅಭ್ಯಾಸ ಮಾಡಬೇಕು, ಎಂದು ಅಪ್ಪಣೆ ನೀಡಿದರು. ಅಲ್ಲಿ ಅನೇಕ ಮಠಾಧಿಪತಿಗಳು ಮಾತ್ರ ಇದ್ದರು. ಅವರ ಸಹಕಾರವಿತ್ತು. ಶ್ರೀಗಳವರಿಗೆ ಪ್ರತ್ಯೇಕವಾದ ಪೂಜಾ ಕೊಠಡಿ ಒಂದಿತ್ತು. ದಾಸೋಹ ಮಠದ ಹಿಂಭಾಗದಲ್ಲಿ ಒಂದು ಪುರಾತನ ಬಾವಿಇತ್ತು. ಇದನ್ನು 'ಕಾಶಿಬಾವಿ' ಎಂದು ಕರೆಯುತ್ತಿದ್ದರು. ಆ ಬಾವಿಯಲ್ಲಿ ಮಠಾಧಿಪತಿಗಳು ಸ್ನಾನ ಮಾಡುತ್ತಿದ್ದರು. ಶ್ರೀಗಳವರ ಮಡಿ ಮತ್ತು ಪೂಜಾಕಾರ್ಯಕ್ಕೆ ನೀರನ್ನು ಆ ಬಾವಿಯಿಂದಲೇ ತರುತ್ತಿದ್ದರು. ಕೆಲವರು ಚಿಕ್ಕ ಹುಡುಗರಲ್ಲಿ ನಾನೂ ಒಬ್ಬನಾಗಿದ್ದೆ. ನಮ್ಮ ದಿನನಿತ್ಯದ ಕರ್ತವ್ಯವೆಂದರೆ ಸಂಜೆ ೫ ಗಂಟೆಗೆ ಸ್ನಾನಮಾಡಿ ಶ್ರೀಗಳವರ ಪೂಜೆಗೆ ಬಿಲ್ವಪತ್ರೆ ತರುವುದು. ಸಂಜೆ ೭ ಗಂಟೆಗೆ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಬೇಕಾದ್ದಿತು. ಆಗ ಸುಮಾರು ಒಂದುನೂರು ವಿದ್ಯಾರ್ಥಿಗಳು ಇದ್ದರು. ಪ್ರಾರ್ಥನಾ ಮಂದಿರಕ್ಕೆ ಶ್ರೀ ಶಿವಕುಮಾರಸ್ವಾಮೀಜಿಗಳು ಪ್ರತಿನಿತ್ಯ ದಯಮಾಡಿಸುತ್ತಿದ್ದರು. ಅವರ ಮುಖದಲ್ಲಿ ಉತ್ಸಾಹ, ನಗು, ಭಕ್ತಿ, ಶ್ರದ್ಧೆಗಳೆಲ್ಲವೂ ಎದ್ದು ಕಾಣುತ್ತಿದ್ದವು. ಎಂತಹ ನಾಸ್ತಿಕ ವ್ಯಕ್ತಿಯ ಮನಸ್ಸನ್ನೂ ಪರಿವರ್ತಿಸುವಂತಹ ಶಕ್ತಿ ಅವರಲ್ಲಿ ತುಂಬಿದ್ದಿತು. ಅವರ ಕೈಯಲ್ಲಿ ಬೆತ್ತದ ಹಂಬು ೬ ಅಡಿ ಉದ್ದವಿತ್ತು. ನಾನು ಅವರ ಕಡೆ ನೋಡಿ, ಶ್ರೀಗಳು ನನ್ನ ಕಡೆ ಬಾರದಿದ್ದರೆ ಸಾಕು ಎಂದು ಮನಸ್ಸಿನಲ್ಲಿಯೇ ದೇವರನ್ನು ಪ್ರಾರ್ಥಿಸುತ್ತಿದ್ದೆ.

ಅಲ್ಲಿಯ ವಾತಾವರಣಕ್ಕೆ ಹೊಂದಿಕೊಳ್ಳಲು ನನಗೆ ಸುಮಾರು ೨ ತಿಂಗಳಾಯಿತು. ಅನಂತರ ಶ್ರೀ ಶಿವಕುಮಾರಸ್ವಾಮಿಗಳವರ ಪೂಜಾ ಮನೆಗೆ ಪ್ರವೇಶ ದೊರೆಯಿತು. ಆಗ ನಾವು ಶ್ರೀಗಳಿಗೆ ಸ್ನಾನಕ್ಕೆ ನೀರುಕಾಯಿಸುವುದು, ಬೆಳಗಿನ ಜಾವ ೪ ಗಂಟೆಗೆ ಸ್ನಾನಕ್ಕೆ ಸಿದ್ಧಮಾಡಿ ಪೂಜೆಗೆ ಅವಶ್ಯಕವಾದ ಎಲ್ಲ ಸಿದ್ಧತೆಗಳನ್ನು ಮಾಡುವ ಕಾರ್ಯದಲ್ಲಿ ನಿಯಮಿತನಾಗಿದ್ದೆನು. ಶ್ರೀಗಳವರು ಪೂಜೆ ಮುಗಿಸಿ ೬ ಗಂಟೆಗೆ ಸಾಮೂಹಿಕ ಪ್ರಾರ್ಥನಾ ಮಂದಿರಕ್ಕೆ ದಯಮಾಡಿಸುತ್ತಿದ್ದರು. ನಾನು ಚಿಕ್ಕವಯಸ್ಕನಾದದ್ದರಿಂದ ನನ್ನ ಮನಸ್ಸಿನಲ್ಲಿಯೇ 'ಇವರಿಗೆ ನಿದ್ರೆಯೇ ಬರುವುದಿಲ್ಲವೆ ?' ಎಂದು ಅಂದುಕೊಳ್ಳುತ್ತಿಲಿದ್ದೆ. ಕೆಲವು ವೇಳೆ ಶ್ರೀ ಉದ್ದಾನಶಿವಯೋಗಿಗಳು ಶ್ರೀ ಶಿವಕುಮಾರಸ್ವಾಮಿಗಳನ್ನುಗದರಿಸುತ್ತಿದ್ದರು,ಶ್ರೀಗಳು ಸಿಟ್ಟುಮಾಡಿಕೊಳ್ಳದೆ ಅವರ ಬಗ್ಗೆ ಯೋಚಿಸಿ ತಪ್ಪುಗಳಿದ್ದರೆ ತಿದ್ದಿಕೊಳ್ಳುತ್ತಿದ್ದರು. ಶ್ರೀಗಳಿಗೆ ವಿದ್ಯಾರ್ಥಿಗಳನ್ನು ಕಂಡರೆ ತುಂಬಾ ಪ್ರೀತಿ ವಾತ್ಸಲ್ಯವಿದ್ದಿತು. ಪ್ರತಿನಿತ್ಯ ವಿದ್ಯಾರ್ಥಿಗಳ ಊಟದ ವೇಳೆಗೆ ತಾವೇ ಬಂದು ನೋಡಿ ಊಟ ಬಡಿಸುತ್ತಾ ಇದ್ದರು. ಕೆಲವು ವೇಳೆ ಮುದ್ದೆ ತಿರುವುತ್ತಲೂ ಇದ್ದರು. ಅವರ ಧ್ಯೇಯಧೋರಣೆ ಎಂದರೆ ದುಡಿಮೆ ಮತ್ತು ಅರ್ಜನೆ. ಈ ಎರಡರ ಸಮನ್ವಯವನ್ನೇ ಶಿವಶರಣರು 'ಕಾಯಕ' ಎಂದು ಕರೆದಿದ್ದನ್ನು ತಮ್ಮ ನಿತ್ಯಜೀವನದಲ್ಲಿ ಅರಿತು ಆಚರಿಸಿ ತೋರಿಸಿ ಕೊಡುತ್ತಿದ್ದರು.

ನಮಗೆಲ್ಲ ಶಿವಶರಣರು ಹೇಳಿರುವ ವಚನವನ್ನು ಹೇಳುತ್ತಾ ಕಾಯಕದ ಮಹತ್ವವನ್ನು ವಿವರಿಸುತ್ತಿದ್ದರು. ಅವರು ಕೊಡುತ್ತಿದ್ದ ಉದಾಹರಣೆಯ ವಚನಗಳು ಒಂದಲ್ಲ ಎರಡಲ್ಲ ನೂರಾರು. ಅಷ್ಟೇ ಅಲ್ಲ ಅದನ್ನು ಕಾರ್ಯತಃ ಮಾಡಿ ತೋರಿಸಿ ಕೊಡುತ್ತಿದ್ದರು. ವಿದ್ಯಾರ್ಥಿಗಳು ಮಾಡುತ್ತಿದ್ದ ಹಲವು ಕೆಲಸಕಾರ್ಯಗಳಲ್ಲಿ ಅವರೂ ಭಾಗವಹಿಸುತ್ತಿದ್ದರು.

ನಿರಾಡಂಬರ ಜೀವನದ ಅವರಲ್ಲಿ ಆಶೆ ಆಕಾಂಕ್ಷೆಸೊಗಡು ಕಿಂಚಿತ್ತು ಇರಲಿಲ್ಲ. ಅಲ್ಲಿಯೇ ಒಬ್ಬ ಭಕ್ತ ಸುಬ್ಬಣ್ಣ ಎಂಬ ಮುದುಕನಿದ್ದ. ಆತನು ನನಗೆ ಕೆಲವು ಸಾರಿ 'ಶ್ರೀಸಿದ್ಧಲಿಂಗೇಶ್ವರರು ಮತ್ತೊಮ್ಮೆ ಅವತರಿಸಿದ್ದಾರೆ. ಇವರ ಕಾಲದಲ್ಲಿ ಶ್ರೀಮಠವು ಪ್ರಬುದ್ಧಮಾನಕ್ಕೆ ಬರುತ್ತದೆ ನೋಡುತ್ತಿರಿ' ಎಂದು ಹೇಳುತ್ತಿದ್ದ. ಅವನ ಮಾತು ಅಕ್ಷರಶಃ ನಿಜವಾಗಿ ಕಾಣುತ್ತಿದೆ. ಆ ತಾತನು 'ಇದು ಶಿವನ ಸಾನ್ನಿಧ್ಯ. ಇಲ್ಲಿ ಅನೇಕ ಮಹಾಪುಂಗವರು ನೆಲಸಿಹೋಗಿದ್ದಾರೆ. ಇಂತಹ ಸ್ಥಳದಲ್ಲಿ ನಾವು ಜೀವಿಸುತ್ತಿರುವುದು ನಮ್ಮ ಭಾಗ್ಯವೇ ಸರಿ' ಎಂದು ಹಿಂದೆ ನಡೆದಂತಹ ಕೆಲವು ಕಥೆಗಳನ್ನೂ, ಶ್ರೀ ಉದ್ದಾನ ಶಿವಯೋಗಿಗಳ ಕಾಲದ ಕೆಲವಾರು ಕಥೆ, ಪವಾಡಗಳನ್ನೂ ನಮಗೆ ವಿವರಿಸುತ್ತಿದ್ದ, ಶ್ರೀಶಿವಕುಮಾರಸ್ವಾಮಿಗಳು ಭೂಲೋಕಕ್ಕೆ ಅವತಾರ ಮಾಡಿದ ಶಿವನ ಒಂದು ಅಂಶ ಮಾತ್ರ. ಇವರು ಸಾಮಾನ್ಯ ಶ್ರೀಗಳಲ್ಲ, ಇವರೊಬ್ಬರು ಮಹಾಪುರುಷರು ಶಿವಯೋಗಿಗಳು; ಆದ್ದರಿಂದ ಶ್ರೀ ಉದ್ದಾನ ಶಿವಯೋಗಿಗಳು ಇವರನ್ನು ಶ್ರೀ ಮಠಕ್ಕೆ ಸ್ವಾಮಿಗಳನ್ನಾಗಿ ಆಯ್ಕೆ ಮಾಡಿದ್ದಾರೆ, ಎಂದು ಹೇಳುತ್ತಿದ್ದ.

೧೨ ನೆಯ ಶತಮಾನದಲ್ಲಿ ಜೀವಿಸಿದ್ದ ಬಸವೇಶ್ವರರು ದಾಸೋಹ, ಕಾಯಕ ಈ ಕಾರ್ಯಗಳಿಗೆ ಹೆಚ್ಚಿನ ಮಹತ್ವವನ್ನಿತ್ತಿದ್ದರು. ನಿಜವಾಗಿ ಹೇಳಬೇಕೆಂದರೆ ಅಣ್ಣನ ಆದರ್ಶಗುಣಗಳನ್ನು ಶ್ರೀಗಳು ತಮ್ಮ ನಿಜಜೀವನದಲ್ಲಿ ಆಚರಣೆಗೆ ತಂದು ಕಾರ್ಯ ಮಾಡಿ ತೋರಿಸಿಕೊಟ್ಟರು. ತಮಗೆ ಬಿಡುವು ಸಿಕ್ಕಾಗ ತಾವು ಕಂಡ ಶಿವಾದ್ವೈತ ತತ್ತ್ವದ ಜ್ಞಾನದ ಬೆಳಕನ್ನು ಜನತೆಗೆ ಉಪದೇಶಿಸುತ್ತಿದ್ದಾರೆ. ಅವರ ಉಪದೇಶದಲ್ಲಿ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರಗಳಿಗೆ, ಶಿವಯೋಗ ಮಾರ್ಗಕ್ಕೆ ಹೆಚ್ಚಿನ ಮಹತ್ವವನ್ನು ನೀಡುತ್ತಿರುತ್ತಾರೆ. ಅವರು ಕೆಲವು ಸಾರಿ ವಚನಕಾರರ ವಚನಗಳನ್ನು ಬಳಸಿಕೊಂಡು ಜನಸಾಮಾನ್ಯರ ಉದ್ಧಾರಕ್ಕಾಗಿ, ಜನಗಳಲ್ಲಿ ತುಂಬಿರುವ ಮೌಢ್ಯವನ್ನು ಹೋಗಲಾಡಿಸಲು, ಅಂಧಕಾರವನ್ನು ಕಳೆಯಲು, ಉಪನ್ಯಾಸಗಳಲ್ಲಿ ಉದಾಹರಣೆಗೆ ಕೊಡುತ್ತಿದ್ದುದು ನನಗೆ ಇನ್ನೂ ಜ್ಞಾಪಕವಿದೆ. ಶ್ರೀಗಳವರು ಸಕಲ ಜೀವಾತ್ಮರಿಗೆ ಲೇಸನೇ ಬಯಸುವವರಾಗಿ ಬೆಳಗುತ್ತಿದ್ದಾರೆ. ನಾಡಿನ ಮೂಲೆ ಮೂಲೆಗಳಲ್ಲಿಯೂ ಧಾರ್ಮಿಕ, ಶೈಕ್ಷಣಿಕ, ಧಾರ್ಮಿಕ ಇತಿಹಾಸದಲ್ಲಿಯೇ ಅವರ ಹೆಸರು ಧ್ರುವತಾರೆಯಂತೆ ಮಿನುಗುಟ್ಟುತ್ತಿದೆ.

ನಾಡಿನ ಜನತೆಗೆ ಅವರ ಸೇವೆ ಅಪಾರವಾದುದು; ಸಮಾಜದ ಉದ್ಧಾರಕ್ಕಾಗಿ ಬಹಳ ಶ್ರಮವಹಿಸಿ ಕಾರ್ಯನಿರ್ವಹಿಸುತ್ತಿದ್ದಾರೆ. ನಾಡಿನ ಎಲ್ಲಾ ವರ್ಗದ ಜನತೆಯನ್ನು ಪ್ರೀತಿಸುತ್ತಾ' ಇವನಾರವ ಇವನಾರವ ಎಂದೆನಿಸದೆ, ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯ' ಎಂಬಂತೆ ಎಲ್ಲಾ ಮಾನವರನ್ನು ತಮ್ಮಂತೆಯೇ ಕಂಡ ವ್ಯಕ್ತಿಗಳು. ಇವರ ಸೇವೆ ಜನತೆಗೆ ಅಪಾರವಾದುದಾಗಿದೆ. ವಿರಕ್ತ ಶ್ರೇಷ್ಠರಾದರೂ ಲೌಕಿಕದ ತಜ್ಞರಾದ ಶ್ರೀಗಳು ಶ್ರೀಮಠದಲ್ಲಿ ಉಚಿತ ವಿದ್ಯಾರ್ಥಿನಿಲಯ ತೆರೆದು ದೀನ ದಲಿತರಾದ ಅನಾಥರಾದ ದೇಶದ ಎಲ್ಲಾ ಭಾಗದ ಹಾಗೂ ಎಲ್ಲಾ ಕೋಮಿನ ವಿದ್ಯಾರ್ಥಿಗಳಿಗೆ ಸಮಾನ ಅವಕಾಶವನ್ನು ಕಲ್ಪಿಸಿ ಕೊಟ್ಟಿರುತ್ತಾರೆ. ಶ್ರೀ ಸಿದ್ಧಗಂಗಾ ಗುರುಕುಲವು ರಾಷ್ಟ್ರೀಯ ಹಾಗೂ ಧಾರ್ಮಿಕ ಐಕ್ಯತೆಗಳ ಸಂಕೇತವಾಗಿ, ಇಡೀ ರಾಷ್ಟ್ರಕ್ಕೆ ಮಾದರಿಯಾಗಿದೆ. ಶ್ರೀಕ್ಷೇತ್ರದ ವಿದ್ಯಾರ್ಥಿಗಳು ಪ್ರಾಥಮಿಕ ಶಾಲೆ, ಮಾಧ್ಯಮಿಕಶಾಲೆ, ಪ್ರೌಢಶಾಲೆ, ಉಪಾಧ್ಯಾಯ ಶಿಕ್ಷಣಶಾಲೆ, ಸಂಸ್ಕೃತಕಾಲೇಜು. ತುಮಕೂರಿನ ಪ್ರಥಮದರ್ಜೆಕಾಲೇಜು. ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಈ ಸಂಸ್ಥೆಗಳಲ್ಲಿ ಅಭ್ಯಾಸ ಮಾಡುತ್ತಿದ್ದಾರೆ. ಇವೆಲ್ಲವೂ ಶ್ರೀಗಳವರ ಕರ್ತೃತ್ವಶಕ್ತಿಯ ಪ್ರತೀಕವಾಗಿವೆ. ಇದರ ಜೊತೆಗೆ ಶ್ರೀಕ್ಷೇತ್ರದ ಆಶ್ರಯದಲ್ಲಿ ಅನೇಕ ಗ್ರಾಮಾಂತರ ಪ್ರೌಢಶಾಲೆಗಳು ನಡೆಯುತ್ತಿವೆ. ಸಕಲೇಶಪುರ, ಬೇಲೂರು ಮತ್ತು ಹಿಂದೂಪುರದಲ್ಲಿ ಶ್ರೀಕ್ಷೇತ್ರದ ಆಶ್ರಯದಲ್ಲಿ ಸಾರ್ವಜನಿಕ ವಿದ್ಯಾರ್ಥಿನಿಲಯಗಳು ನಡೆಯುತ್ತಿವೆ. ಇಷ್ಟೆಲ್ಲವನ್ನು ನೋಡಿದ ನನಗೆ ಆ ಸುಬ್ಬಣ್ಣ ಹೇಳಿದ ಮಾತು ಇಂದು ಸತ್ಯವಾಗಿ ಕಣ್ಣು ಮುಂದೆ ಬಂದು ನಿಲ್ಲುತ್ತದೆ. ಆ ಮಾತುಗಳು ಅಕ್ಷರಶಃ ನಿಜವಾದವು. ಶ್ರೀಕ್ಷೇತ್ರವು ೫೦ ವರ್ಷಗಳಲ್ಲಿ ಶ್ರೀ ಪೂಜ್ಯಪಾದರಾದ ಶ್ರೀ ಶಿವಕುಮಾರಸ್ವಾಮಿಗಳ ನೇತೃತ್ವದಲ್ಲಿ ಅಗಾಧ ಪ್ರಗತಿಯನ್ನು ಸಾಧಿಸಿರುವುದನ್ನು ಕಾಣಬಹುದು. ಈ ಕ್ಷೇತ್ರದಲ್ಲಿ ದಾಸೋಹವು ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಪ್ರತಿದಿನ ಬರುವ ಸಾವಿರಾರು ಯಾತ್ರಿಕರಿಗೂ ನಡೆಯುತ್ತಿದೆ.

ಅವರಲ್ಲಿದ್ದ ತಪಸ್ಸು, ಅವರ ಉದಾರಗುಣ, ಬುದ್ಧಿಶಕ್ತಿಗಳು ಅವರನ್ನು ಪ್ರಪಂಚದಲ್ಲಿ ಮಹೋನ್ನತ ವ್ಯಕ್ತಿಯನ್ನಾಗಿ ಮಾಡಿದ್ದಷ್ಟೇ ಅಲ್ಲದೆ ಸಮಾಜದ ಪೂಜನೀಯ ವ್ಯಕ್ತಿಯನ್ನಾಗಿಯೂ ಆಯ್ಕೆಮಾಡಿವೆ. ಅವರ ಸಮಕಾಲೀನರಾದ ಶ್ರೀ ಮಹಾಲಿಂಗಸ್ವಾಮಿಗಳು (ಕನಕಪುರ ದೇಗುಲಮಠದ ಮಠಾಧ್ಯಕ್ಷರು) ಸಹ ಶ್ರೀ ಶಿವಕುಮಾರಸ್ವಾಮಿಗಳನ್ನು ಹೊಗಳುತ್ತಿದ್ದಾರೆ. ಅವರ ಕಾಯಕನಿಷ್ಠೆಯ ಬಗ್ಗೆ ತುಂಬಾ ಪ್ರಶಂಸೆಯ ಮಾತನ್ನು ಆಡುತ್ತಿದ್ದಾರೆ. ಸಮಾಜದ ಉದ್ಧಾರಕಾರ್ಯದಲ್ಲಿ ಆಸಕ್ತರಾಗಿದ್ದಾರೆ. ಜಾತಿ ಮತದ ಗೊಂದಲವಿಲ್ಲದೆ ಸರ್ವರೂ ತಮ್ಮವರೆಂಬ ಭಾವನೆಯನ್ನು ಮನದಲ್ಲಿ ಇಟ್ಟು ಸಕಲಜೀವಾತ್ಮರಿಗೆ ಲೇಸನ್ನೇ ಬಯಸುತ್ತಾ ತೊಂದರೆಗೆ ಗುರಿಯಾದ ಮಾನವರಿಗೆ ವಿಮೋಚನೆಯ ಮಾರ್ಗವನ್ನು ತೋರಿಸುತ್ತಾ, ರಾಜಕಾರಣಿಗಳಿಗೂ ತತ್ತ್ವೋಪದೇಶವನ್ನು ಮಾಡುವರು. ಧರ್ಮಾಚರಣೆಯ ಮಾರ್ಗದಲ್ಲಿ ನಡೆಯುವಂತೆ ಹೇಳುವರು. ತಾವು ನಡೆದು ತತ್ತ್ವೋಪದೇಶವನ್ನು ಜನತೆಗೆ ಬೋಧಿಸುತ್ತಾ, ತನ್ನದು, ತನ್ನವರೆನ್ನದೆ ವಿರಕ್ತಜೀವನವನ್ನು ಸಾರ್ಥಕಪಡಿಸಿಕೊಂಡು ಬದುಕಿ ಬಾಳುವೆ ನಡೆಸುತ್ತಿದ್ದಾರೆ. ಮುಂದಿನ ಹರಗುರುಚರಮೂರ್ತಿಗಳಿಗೂ ಮಾರ್ಗದರ್ಶಕರಾಗಿ, ದಾರಿದೀಪಿಗೆಯಾಗಿ, ದಿವ್ಯಜ್ಯೋತಿಯಂತೆ

ಪ್ರಕಾಶಮಾನವಾಗಿ ಪ್ರಜ್ವಲಿಸುತ್ತಾ ನಾಡಿನ ಮೂಲೆಮೂಲೆಗೂ ಆ ಕಿರಣಗಳನ್ನು ಕೆರಳಿಸಿ ಪವಿತ್ರಕರಗಳಲ್ಲಿ ಹಣತೆ ಹಿಡಿದು ಅಂಧಕಾರದಲ್ಲಿರುವ ಜನತೆಗೆ ಬೆಳಕನ್ನು ನೀಡುತ್ತಿದ್ದಾರೆ. ಧರ್ಮಾಚರಣೆಯೇ ಐಶ್ವರ್ಯದ ರಕ್ಷಣೋಪಾಯ; ಉಪಕಾರ ಸ್ಮರಣೆಯೇ ಮನುಷ್ಯನ ಬಲ; ಪರೋಪಕಾರವೇ ಅಧಿಕಾರಕ್ಕೆ ಪ್ರಯೋಜನ; ಗುರುದೇವತಾ ವಿಶ್ವಾಸವೇ ನಿಜಮಂತ್ರ; ಮತ ಮತಗಳ, ಧರ್ಮ ಧರ್ಮಗಳ ತಿಕ್ಕಾಟವನ್ನು ದೂರ ಮಾಡಿ, ಸದ್ಧರ್ಮಬುದ್ಧಿಯಿಂದ ನಡೆದರೆ ಆತ್ಮಶುದ್ಧಿ ಮತ್ತು ಕ್ರಿಯಾ ಶುದ್ಧಿ. ಧರ್ಮಜೀವನ ಮಾನವರನ್ನು ವಿಕಾಸದತ್ತ ಸಾಗಿಸಿ ಚೈತನ್ಯವನ್ನು ನೀಡುತ್ತದೆ. ಧರ್ಮಜೀವನದಿಂದ ಬೆಳೆದ ಸಮಾಜ ಬಹುದಿನ ಬಾಳಿ ನಾಡಿನ ಕಾರ್ಯಕ್ಕೆ ನೆರವಾಗಬಲ್ಲದು ಎಂದು ಹೇಳುತ್ತಾ ನಮ್ಮ ಹಿಂದಿನ ಮಾನವಕುಲವನ್ನು ಉದ್ಧಾರ ಮಾಡಿದ ಜಗದ್ಗುರು ರೇಣುಕಾಚಾರ್ಯರ ಆದರ್ಶಗಳನ್ನು, ಕಲ್ಯಾಣದ ಶಿವಾನುಭವಮಂಟಪದಲ್ಲಿ ಬಸವಾದಿ ಶಿವಶರಣರು ಜನಸಾಮಾನ್ಯರ ಉದ್ಧಾರಕ್ಕಾಗಿ ಬೋಧಿಸಿದ ಸಾಮಾಜಿಕ, ನೈತಿಕ, ಧಾರ್ಮಿಕ, ಶೈಕ್ಷಣಿಕ ಮಾನಸಿಕ, ದರ್ಶನಗಳ ವೈಶಿಷ್ಟ್ಯಗಳನ್ನು ಭಕ್ತರಿಗೆ ಅರಿವು ಮಾಡಿಕೊಡುತ್ತಾ, ಶ್ರೀಗಳು ಈ ಕಾರ್ಯಗಳ ಜೊತೆಗೆ ಶ್ರಾವಣ, ಕಾರ್ತಿಕ, ಧನುರ್ಮಾಸಗಳಲ್ಲಿ ಪೂಜೆಗಳನ್ನು ವೈಭವದಿಂದ ನಡೆಸುತ್ತಾ, ಶಿವರಾತ್ರಿ ಜಾತ್ರೆಯಲ್ಲಿ ಹೂವಿನ ಪಾಲಕಿ ಉತ್ಸವ ಇತ್ಯಾದಿ ಅನೇಕ ಉತ್ಸವಗಳನ್ನು ೧೦ ದಿನಗಳ ಕಾಲ ವಿಜೃಂಭಣೆಯಿಂದ ನಡೆಸುತ್ತಾ, ಬಂದ ಭಕ್ತರಿಗೆಲ್ಲರಿಗೂ ಶ್ರೀಮಠದಲ್ಲಿಯೇ ಪ್ರಸಾದ ವಿನಿಯೋಗ ಮಾಡಿಸುತ್ತಾ ನಾಡಿನ ಜನರಿಗೆ ಆತ್ಮಶ್ರೀಯನ್ನು ಕರುಣಿಸುವ ಮುಕ್ತಿಮಂದಿರವಾಗಿ ಬೆಳಗುತ್ತಿದ್ದಾರೆ. ಈ ಮಹಾನುಭಾವರ ಆಶೀರ್ವಾದದ ವಜ್ರಕವಚ ನಮ್ಮೆಲ್ಲರಿಗೂ ರಕ್ಷಣೆಯನ್ನು ನೀಡಿದೆ. ಇವರ ಆಶೀರ್ವಾದದಿಂದ ನಾವು ಶ್ರೀಮಠದಲ್ಲಿ ನಿಶ್ಶಂಕೆಯಿಂದ ಇರೋಣವಾಗಿರುತ್ತೆ.

ಶ್ರೀಗಳು ಲೋಕಕಲ್ಯಾಣಕ್ಕೋಸ್ಕರ ಚಿರಕಾಲ ಬಾಳಿ ಬದುಕಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

**ಶ್ರೀ ಸಿದ್ಧಲಿಂಗಶಿವಾಚಾರ್ಯಸ್ವಾಮಿಗಳು,**
ಅಂಕನಹಳ್ಳಿ ಗವಿಮಠ

# ವಾತ್ಸಲ್ಯಶ್ರೀ

ಅನೇಕ ಕಾರಣಗಳಿಂದಾಗಿ ಇಡೀ ದೇಶದಲ್ಲಿ ಅದ್ವಿತೀಯವೆನಿಸಿದ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ದೇಶದ ವಿವಿಧ ಭಾಗಗಳಿಗೆ ಹಾಗೂ ವಿವಿಧ ಪಂಥಗಳಿಗೆ ಸೇರಿದ ನಾಲ್ಕು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿಗಳ ಏರ್ಪಾಡಿದೆ. ಪ್ರಪಂಚದಲ್ಲೇ ಅತ್ಯಂತ ಹೆಚ್ಚಿನ ವಿದ್ಯಾರ್ಥಿ ಸಂಖ್ಯೆಯುಳ್ಳ ಸಂಸ್ಕೃತ ಮಹಾವಿದ್ಯಾಲಯ ಇಲ್ಲಿದೆ. ಶ್ರೀ ಕ್ಷೇತ್ರಕ್ಕೆ ಪ್ರತಿ ನಿತ್ಯ ಬಂದು ಹೋಗುವ ಸಾವಿರಾರು ಯಾತ್ರಿಕರಿಗೆ ಜಾತಿಮತಗಳ ಬೇದವಿಲ್ಲದೆ ದಾಸೋಹ ವ್ಯವಸ್ಥೆ ಇದೆ. ಶ್ರೀಕ್ಷೇತ್ರದ ಆಶ್ರಯದಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳು, ಉಪಾಧ್ಯಾಯ ಶಿಕ್ಷಣಶಾಲೆಗಳು, ಇಂಜಿನಿಯರಿಂಗ್ ಕಾಲೇಜು ಮುಂತಾದ ಅನೇಕ ವಿದ್ಯಾಸಂಸ್ಥೆಗಳು ನಡೆಯುತ್ತಿವೆ. ಇಷ್ಟೆಲ್ಲಾ ಗುರುತರ ಜವಾಬ್ದಾರಿಗಳ ನಿರ್ವಹಣೆ ಶ್ರೀಕ್ಷೇತ್ರದ ವತಿಯಿಂದ ಸುಲಲಿತವಾಗಿ ನಡೆಯಲು ಸಾಧ್ಯವಾಗಿಸಿರುವ ಪವಾಡಶಕ್ತಿಯೆಂದರೆ ಸಕಲ ಜೀವಾತ್ಮರ ಬಗ್ಗೆ ಶ್ರೀ ಕ್ಷೇತ್ರಾಧ್ಯಕ್ಷರಾದ ಶ್ರೀ ಶಿವಕುಮಾರಮಹಾಸ್ವಾಮಿಗಳವರಿಗಿರುವ ಅಪಾರ ವಾತ್ಸಲ್ಯ. ಶ್ರೀಶ್ರೀಗಳವರು ಕೈಗೊಳ್ಳುವ ಪ್ರತಿ ಕಾಯಕದಲ್ಲೂ ಈ ಮಹಾವಾತ್ಸಲ್ಯದ ಪ್ರಭಾವವನ್ನು ಕಾಣುತ್ತೇವೆ. ಶ್ರೀ ಶ್ರೀಗಳವರು ಅನುಸರಿಸುವ ಕಾರ್ಯವಿಧಾನಗಳಲ್ಲಿ ಕೆಲವೊಂದನ್ನು ಅವಲೋಕಿಸುವುದರ ಮೂಲಕ ಈ ವಾತ್ಸಲ್ಯ ಶ್ರೀಯ ಪರಿಚಯಮಾಡಿಕೊಡುವುದು ಈ ಕಿರುಲೇಖನದ ಉದ್ದೇಶ.

ಶ್ರೀ ಕ್ಷೇತ್ರದಲ್ಲಿ ಶ್ರೀ ಸ್ವಾಮೀಜೀಯವರನ್ನು ಸಂದರ್ಶಿಸಲು ಬರುವ ಜನರು ಯಾವ 'ಭೇಟಿಯ ಕಾಲ'ಕ್ಕೂ ಕಾಯಬೇಕಾಗಿಲ್ಲ. ಬೇರೆ ಹಲವೆಡೆಯಲ್ಲಿರುವಂತೆ ಯಾವ ಏಜೆಂಟರ ಮೂಲಕವೂ ಪೂರ್ವಾನುಮತಿಯನ್ನು ಪಡೆಯಬೇಕಿಲ್ಲ. ಚಿಕ್ಕವರಾಗಲಿ, ದೊಡ್ಡವರಾಗಲಿ, ಬಡವರಾಗಲಿ, ಬಲ್ಲಿದವರಾಗಲಿ ನೇರವಾಗಿ ಶ್ರೀ ಪೂಜ್ಯಪಾದರನ್ನು ಸಂದರ್ಶಿಸಬಹುದಾದ ಉಚ್ಚ ಸಂಪ್ರದಾಯ ಶ್ರೀಕ್ಷೇತ್ರದಲ್ಲಿ ಚಲಾವಣೆಯಲ್ಲಿದೆ. ಈ ಕ್ರಮದಿಂದ ಶ್ರೀಶ್ರೀಗಳವರಿಗೆ ಅಧಿಕಕಾಲವ್ಯಯ ಹಾಗೂ ಶ್ರಮ ಆಗಬಹುದು. ಆದರೆ ದರ್ಶನವನ್ನಪೇಕ್ಷಿಸಿ ಬರುವವರ ಬಗೆಗಿರುವ ಅವರ ವಾತ್ಸಲ್ಯದ ಮುಂದೆ ಈ ಶ್ರಮ ಗೌಣ.

ಶ್ರೀಕ್ಷೇತ್ರದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ನಾಲ್ಕು ಸಾವಿರಕ್ಕೂ ಮಿಕ್ಕಿದ ಮಕ್ಕಳ ಬಗ್ಗೆ ಶ್ರೀಗಳವರಿಗೆ ಅಪರಿಮಿತ ವಾತ್ಸಲ್ಯ. ಈ ವಾತ್ಸಲ್ಯವು ಶ್ರೀಮಠಕ್ಕೆ ಮಕ್ಕಳನ್ನು ಸೇರಿಸಿಕೊಳ್ಳುವ ಸಮಯದಲ್ಲಿಯೇ ಪ್ರಕಟಗೊಳ್ಳುತ್ತದೆ. ಪ್ರತಿ ಅಭ್ಯರ್ಥಿಯನ್ನೂ ಸ್ವತಃ ವಿಚಾರಿಸಿ, ಅವನ ಅಗತ್ಯಗಳನ್ನು ತಿಳಿದು ಶ್ರೀಗಳು ತೀರ್ಮಾನ ಕೈಗೊಳ್ಳುತ್ತಾರೆ. ಈ ಕ್ರಮದಿಂದ ಸಹಾಯ ಕೋರಿಬಂದ ವಿದ್ಯಾರ್ಥಿಯು ಯಾವ ಕಮಿಟಿ ಮೆಂಬರಿನ ಹಂಗಿಗೂ ಒಳಗಾಗಬೇಕಿಲ್ಲ. ಪ್ರತಿ ಶಿಕ್ಷಣ ವರ್ಷದ ಆರಂಭದಲ್ಲಿ ಒಂದು ತಿಂಗಳಿಗೂ ಹೆಚ್ಚುಕಾಲ ಶ್ರೀಗಳವರು ಈ ಬಗ್ಗೆ ಶ್ರಮವಹಿಸಬೇಕಾಗುತ್ತದೆ. ಅವರಿಗೆ ಮಕ್ಕಳ ಬಗ್ಗೆ ಇರುವ ವಾತ್ಸಲ್ಯದ

ಮುಂದೆ ಈ ಶ್ರಮವು ಯಾವ ಲೆಕ್ಕಕ್ಕೂ ಇಲ್ಲ. ಅನೇಕ ಬಾರಿ, ಶ್ರೀ ಸ್ವಾಮಿಗಳವರ ಹಿತೈಷಿ ಭಕ್ತರು ಈ ಬಗ್ಗೆ 'ಕಮಿಟಿಯೊಂದನ್ನು ಮಾಡಿ, ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಿಸಿದ ಕೆಲಸವನ್ನು ಅದಕ್ಕೆ ವಹಿಸಿದರೆ ತಮಗೆ ಸ್ವಲ್ಪ ಕೆಲಸ ಕಡಿಮೆಯಾಗುತ್ತದೆ' ಎಂದು ಅತ್ಯಂತ ಒಳ್ಳೆಯ ಭಾವನೆಯಿಂದಲೇ ಮಾಡಿದ ಸಲಹೆಗೆ ಶ್ರೀಗಳವರ ಚುಟುಕು ಉತ್ತರ : 'ಹೌದು, ಒಳ್ಳೆಯ ಸಲಹೆ ; ಯೋಚನೆ ಮಾಡಬಹುದು'. ಸಲಹೆ ೫೦ ವರ್ಷಗಳಿಂದಲೂ ಯೋಜನಾ ಮಟ್ಟದಲ್ಲಿಯೇ ಉಳಿದಿದೆ !

ಶ್ರೀಕ್ಷೇತ್ರದ ವಿದ್ಯಾರ್ಥಿನಿಲಯದ ಮಕ್ಕಳು ಊಟ ಮಾಡುವ ವೇಳೆಯಲ್ಲಿ ದಿನಕ್ಕೆರಡು ಬಾರಿಯೂ ಭೋಜನ ಶಾಲೆಯಲ್ಲಿ ಹಾಜರಿದ್ದು,ಮಕ್ಕಳಿಗೆ ಉಣಬಡಿಸುವುದು ಶ್ರೀಗಳವರ ಕಾಯಕಗಳಲ್ಲೊಂದು. ೫೦ ವರ್ಷಗಳಿಂದ ನಿರಂತರವಾಗಿ ನಡೆದು ಬಂದಿರುವ ಶ್ರೀಗಳವರ ಈ ಕಾಯಕಕ್ಕೆ ಮಕ್ಕಳ ಬಗ್ಗೆ ಅವರಿಗಿರುವ ಅಗಾಧವಾತ್ಸಲ್ಯವಲ್ಲದೆ ಮತ್ತೇನು?

ಉಪಾಧ್ಯಾಯ ವರ್ಗದವರಾಗಲಿ, ಸಿಬ್ಬಂದಿ ವರ್ಗದವರಾಗಲಿ, ಅಥವಾ ಬೇರೆ ಯಾರೇ ಆಗಲಿ 'ಉಚಿತವಿದ್ಯಾರ್ಥಿನಿಲಯದವ'ರೆಂದು ಇಲ್ಲಿನ ಮಕ್ಕಳ ಬಗ್ಗೆ ತಿರಸ್ಕಾರಭಾವನೆಯಿಂದ ವರ್ತಿಸಿದರೆ, ಅಂತಹವರ ಬಗ್ಗೆ ಶ್ರೀಸ್ವಾಮಿಗಳವರು ಕಿಡಿಕಿಡಿಯಾಗುತ್ತಾರೆ. ಉದಾಹರಣೆಗಾಗಿ, ಶ್ರೀಕ್ಷೇತ್ರದ ಪ್ರತಿಯೊಬ್ಬ ವಿದ್ಯಾರ್ಥಿಯೂ ವಾರಕ್ಕೆರಡು ದಿನಗಳು ಸಾಯಂಕಾಲ ಶ್ರೀಮಠದ ಕೆಲಸಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾನೆ. ಈ ಶ್ರಮದಾನದಲ್ಲಿ ಶ್ರೀಗಳವರಾದಿಯಾಗಿ ಮಠದ ಸಿಬ್ಬಂದಿಯವರೆಲ್ಲಾ ಭಾಗವಹಿಸುತ್ತಾರೆ. ಮಕ್ಕಳ ಶಕ್ತಿಗೆ ಮೀರಿದ ಕೆಲಸವನ್ನು ಯಾರಾದರೂ (ಸಿಬ್ಬಂದಿ ವರ್ಗದವರು) ಅವರಿಗೆ ವಹಿಸಿದರೆ, ಆ ಬಗ್ಗೆ ಶ್ರೀಗಳವರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿ 'ಅವರು ನಿಮ್ಮ ಮಕ್ಕಳೇ ಆಗಿದ್ದರೆ, ಅವರಿಗೆ ಈ ಕೆಲಸವನ್ನು ವಹಿಸುತ್ತಿದ್ದೀರಾ? ಯೋಚಿಸಿ' ಎಂದು ಬುದ್ಧಿವಾದ ಹೇಳಿದ್ದುಂಟು.

ಶ್ರೀಗಳವರು ಖಾಯಿಲೆ ಬಿದ್ದ ವಿದ್ಯಾರ್ಥಿಗಳ ಯೋಗಕ್ಷೇಮಗಳನ್ನು ವಿಚಾರಿಸಿ ಅವರ ಉಪಚಾರಕ್ಕೆ ವ್ಯವಸ್ಥೆ ಮಾಡುತ್ತಾರೆ. ಮಕ್ಕಳ ಮಧ್ಯೆ ಉಂಟಾಗಬಹುದಾದ ಸಣ್ಣಪುಟ್ಟ ಕಲಹಗಳನ್ನು ಸ್ವತಃ ಬಗೆಹರಿಸಿ ಬುದ್ಧಿ ಹೇಳುತ್ತಾರೆ. ಊರಿಗೆ ಹೋಗುವ ವಿದ್ಯಾರ್ಥಿಗಳು ಖುದ್ದಾಗಿ ಶ್ರೀಗಳವರ ಅನುಮತಿಯನ್ನು ಪಡೆದು ಹೋಗಬೇಕು. ಈ ಕೆಲಸಗಳಿಗೆಲ್ಲಾ ತಗಲುವ ಕಾಲವನ್ನು ವ್ಯರ್ಥವೆಂದು ಶ್ರೀಗಳವರು ಎಂದೂ ತಿಳಿದಿಲ್ಲ. ಹೆಚ್ಚೇನು? ಇಲ್ಲಿರುವ ಮಕ್ಕಳಿಗೆಲ್ಲಾ 'ಸಪಿತಾ, ಪಿತರಸ್ತಾಸಾಂ ಕೇವಲಂ ಜನ್ಮ ಹೇತವಃ'. ಈ ರೀತಿ ಶ್ರೀಗಳವರ ವಾತ್ಸಲ್ಯವನ್ನುಂಡು ಬೆಳೆದ ಶ್ರೀಮಠದ ವಿದ್ಯಾರ್ಥಿಗಳಿಗೆ ತಾವು ಬೇರೆ ಅಲ್ಲ, ಮಠವು ಬೇರೆ ಅಲ್ಲ ಎಂಬ ಭಾವನೆ ಸ್ವಾಭಾವಿಕವಾಗಿ ಮೈಗೂಡುತ್ತದೆ. ಅಂತೆಯೇ ಅವರಾಡುವ ಮಾತುಗಳಲ್ಲಿ 'ನಮ್ಮ ಮಠ' 'ನಮ್ಮ ಸ್ವಾಮಿಗಳು' ಮುಂತಾದ ಆತ್ಮೀಯಪದಗಳು ಹಾಸುಹೊಕ್ಕಾಗಿರುತ್ತವೆ. ಪ್ರವಾಸಕ್ಕೆ ತೆರಳಿದ ಶ್ರೀಸ್ವಾಮಿಗಳವರು ಕಾರಿನಲ್ಲಿ ದಯಮಾಡಿಸಿದರೆನ್ನಿ. ಆ ಕಾರನ್ನು ದಾರಿಯಲ್ಲಿ ನೋಡಿದ ಶ್ರೀಮಠ ವಿದ್ಯಾರ್ಥಿಗಳ ಬಾಯಿಂದ ಬರುವ ಅತ್ಯಂತ ಸ್ವಾಭಾವಿಕ ಉದ್ಗಾರ : 'ಅಗೋ ನಮ್ಮ ಕಾರುಬಂತು'! 'ಸ್ವಾಮಿಗಳವರ ಕಾರುಬಂತು' ಎಂಬುದಾಗಿ ಅವರ ಬಾಯಿಂದ ಬರುವುದೇ ಇಲ್ಲ.

ಶ್ರೀಗಳವರ ವಾತ್ಸಲ್ಯಪೂರ್ಣವ್ಯಕ್ತಿತ್ವದಿಂದ ಪ್ರಭಾವಿತರಾದ ಶ್ರೀ ಮಠದ ಸಿಬ್ಬಂದಿಯವರಿಗೆ 'ಎಂಟುಗಂಟೆಗಳ' ವ್ಯಾಧಿಯಿಲ್ಲ. ಉದಾಹರಣೆಗಾಗಿ, ಶ್ರೀಮಠದ ಪಾಕಶಾಲೆಯನ್ನು ತೆಗೆದುಕೊಳ್ಳೋಣ. ನಾಲ್ಕು ಸಾವಿರ ವಿದ್ಯಾರ್ಥಿಗಳ ಹಾಗೂ ಸಾವಿರಾರು ಯಾತ್ರಿಕರ ಊಟದ ವ್ಯವಸ್ಥೆಯು ಇಲ್ಲಿ ನಡೆಯುತ್ತದೆ. ಗುರುತರ ಜವಾಬುದಾರಿಯನ್ನು ಹೊತ್ತು ಅಡಿಗೆ ಕಾಯಕದಲ್ಲಿ ನಿರತರಾಗಿರುವವರ ಸಂಖ್ಯೆ ಹತ್ತಕ್ಕಿಂತ ಹೆಚ್ಚಿಲ್ಲ. ಸುಮಾರು ಮುಂಜಾನೆ ೫ ಗಂಟೆಗೆ ಪ್ರಾರಂಭವಾದ ಅವರ ಕಾಯಕ ರಾತ್ರಿ ೧೦ ಗಂಟೆಯ ವರೆಗೆ ನಿರಂತರವಾಗಿ ನಡೆದಿರುತ್ತದೆ. ದೈಹಿಕಶ್ರಮವನ್ನು ಲೆಕ್ಕಿಸದೆ ಧನ್ಯಭಾವದಿಂದ ಅವರನ್ನು ಕಾಯಕ ನಿರತರನ್ನಾಗಿಸಿರುವುದು ಶ್ರೀ ಸ್ವಾಮಿಗಳವರ ನಿರ್ಮಲಾಂತಃಕರಣವಲ್ಲದೆ ಮತ್ತೇನು ? ಇದೇ ರೀತಿ, ಶ್ರೀಮಠದ ಜಮೀನಿನಲ್ಲಿ ಕೆಲಸ ಮಾಡುವವರು, ದನಕರುಗಳ ಉಸ್ತುವಾರಿ ನೋಡುವವರು ಮುಂತಾದ ಎಲ್ಲಾ ವಿಭಾಗಗಳ ಕೆಲಸದವರನ್ನೂ ಮುಖತಃ ಭೇಟಿ ಮಾಡಿ, ಅವರಲ್ಲಿ ಉತ್ಸಾಹ ತುಂಬುವುದು ಶ್ರೀಗಳವರ ದಿನಚರಿ.

ಎಷ್ಟು ಶ್ರಮದ ಕೆಲಸವೇ ಆಗಿರಲಿ, ಶ್ರೀ ಸ್ವಾಮಿಗಳವರು ಅವರೊಡನಿದ್ದರೆ ಕೆಲಸ ಮಾಡುವವರಿಗೆ. ಅವರಲ್ಲಿಯೂ ಶ್ರೀಮಠದ ವಿದ್ಯಾರ್ಥಿಗಳಿಗೆ, ಎಲ್ಲಿಲ್ಲದ ಆನಂದ ಹಾಗೂ ಉತ್ಸಾಹ. ೧೯೪೫ ನೆಯ ಇಸವಿಯ ಮಾತು : ಶ್ರೀಮಠದಿಂದ ಸುಮಾರು ೨ ಮೈಲಿ ದೂರದಲ್ಲಿನ ಮೈದಾಳ ಕೆರೆ ಬಯಲಿನ ಮಠದ ಗದ್ದೆಯಿಂದ ಬತ್ತದ ಕೊಯ್ಲನ್ನು ಮಠಕ್ಕೆ ಸಾಗಿಸುವ ಕೆಲಸ ತಲೆ ಹೊರೆಯಲ್ಲಿಯೇ ಹೊತ್ತುಸಾಗಿಸಬೇಕಾಗಿತ್ತು. ಮಳೆಬರುವ ಸೂಚನೆ ತೀವ್ರವಾಗಿದ್ದರಿಂದ ಎಷ್ಟು ವೇಳೆಯಾದರೂ ಆದಿನವೇ ಕೆಲಸ ಮುಗಿಯಬೇಕಿತ್ತು. ಸುಮಾರು ೨೦೦ವಿದ್ಯಾರ್ಥಿಗಳು ಶ್ರೀ ಸ್ವಾಮಿಗಳವರೊಟ್ಟಿಗೆ ಸಾಯಂಕಾಲ ೪ಗಂಟೆಗೆ ಕೆಲಸ ಪ್ರಾರಂಭಿಸಿದರು. ಶ್ರೀ ಗಳವರು ಹೊರೆ ಕಟ್ಟಿ ಹೊರಿಸುವುದು, ವಿದ್ಯಾರ್ಥಿಗಳು ಮಠಕ್ಕೆ ಸಾಗಿಸುವುದು. ವಿದ್ಯಾರ್ಥಿಗಳಿಗೆ ಹೊರೆ ಇಳಿಸಿ ವಾಪಸ್ಸು ಬರುವಾಗಲಾದರೂ ಕೊಂಚ ವಿಶ್ರಾಂತಿ ದೊರಕುತ್ತಿತ್ತು. ಶ್ರೀ ಸ್ವಾಮಿಗಳವರಿಗಾದರೋ, ಹೊರೆ ಕಟ್ಟಿ ಹೊರಿಸುವ ಕೆಲಸ ಸತತವಾಗಿ ನಡೆದೇ ಇತ್ತು. ಸುಮಾರು ರಾತ್ರಿ ೧೦-೩೦ ಗಂಟೆಗೆ ಮಠದಿಂದ ಊಟವನ್ನು ಗದ್ದೆಗೇ ತರಿಸಿ ಎಲ್ಲಾ ವಿದ್ಯಾರ್ಥಿ

ಗಳಿಗೂ ಶ್ರೀ ಸ್ವಾಮಿಗಳವರು ಊಟಬಡಿಸಿದರು. ಕೆಲಸ ಮುಂದುವರಿಯಿತು. ಶ್ರೀ ಸ್ವಾಮಿಗಳವರು ಮಾತ್ರ ಪೂಜೆಗೆ ದಯ ಮಾಡಿಸಲೇ ಇಲ್ಲ. ಕೆಲಸ ಪೂರ್ಣಗೊಂಡು ಎಲ್ಲರೂ ಮಠವನ್ನು ಸೇರುವ ಹೊತ್ತಿಗೆ ರಾತ್ರಿ ೧ ಗಂಟೆ. ಕೇವಲ ಎರಡು ತಾಸುಗಳ ವಿಶ್ರಾಂತಿ ಪಡೆದು, ೩ ಗಂಟೆಗೆ ದಿನಚರಿಯಂತೆ ಶ್ರೀಗಳು ಪೂಜೆಗೆ ದಯಮಾಡಿಸಿದರು. ಆ ದಿನ ರಾತ್ರಿ ೨ ಗಂಟೆಗೆ ಮಳೆ ಬಂದೇ ಬಂದಿತು. ಅಲ್ಲಿಯವರೆಗೆ ನಡೆದ ಕೆಲಸದ ಬಗ್ಗೆ ಎಲ್ಲರಿಗೂ ಅತ್ಯಂತ ತೃಪ್ತಿ ಹಾಗೂ ಹೆಮ್ಮೆ. ಶ್ರೀಮಠದ ಕೆಲಸಕಾರ್ಯಗಳಲ್ಲಿ ಇಂತಹ ಪ್ರಸಂಗಗಳು ಸಾವಿರಾರು. ಪ್ರತಿ ಸಂದರ್ಭದಲ್ಲಿಯೂ ಶ್ರೀಗಳವರ ವಾತ್ಸಲ್ಯಪೂರ್ಣ ವ್ಯಕ್ತಿತ್ವವು ಎಲ್ಲರಲ್ಲಿಯೂ ಶಕ್ತಿ ಉತ್ಸಾಹಗಳನ್ನು ತುಂಬುವ ಮಹಾಶಕ್ತಿಯಾಗಿದೆ.

ಶ್ರೀ ಶಿವಕುಮಾರಸ್ವಾಮಿಗಳವರ ವಾತ್ಸಲ್ಯ ಶ್ರೀಮಠದ ವಿದ್ಯಾರ್ಥಿಗಳಿಗೆ ಅಥವಾ ಸಿಬ್ಬಂದಿವರ್ಗದವರಿಗೆ ಸೀಮಿತ ವಾಗಿಲ್ಲ. ಅದರ ವಿಸ್ತಾರ ಇಡೀ ಜೀವಕೋಟಿಗೆ ಎನ್ನಬಹುದು. ಸುಮಾರು ೧೫ ವರ್ಷಗಳ ಹಿಂದೆ ತುಮಕೂರುಜಿಲ್ಲೆ ಹಾಗೂ ಸುತ್ತಮುತ್ತಣ ಪ್ರದೇಶದಲ್ಲಿ ಮಳೆಯಿಲ್ಲದ್ದರಿಂದ ಭೀಕರಕ್ಷಾಮ ಉಂಟಾಯಿತು. ಬಡಜನರು ಸಹಸ್ರಾರು ಸಂಖ್ಯೆಯಲ್ಲಿ ಸಹಾ ಯವನ್ನಪೇಕ್ಷಿಸಿ ಬಂದಾಗ, ಶ್ರೀಸ್ವಾಮಿಗಳವರು ಒಂದು ಕ್ಷಣವೂ ಹಿಂದೆ ಮುಂದೆ ನೋಡದೆ, ಅವರೆಲ್ಲರಿಗೂ ಶ್ರೀಮಠದಲ್ಲಿ ತಿಂಗಳು ಗಟ್ಟಲೆ ಊಟದ ವ್ಯವಸ್ಥೆ ಮಾಡಿದರು. ರಥದಬೀದಿಯ ತುಂಬಾ ಪಂಕ್ತಿಪಂಕ್ತಿಯಾಗಿ ಕುಳಿತು ಕೃತಜ್ಞತೆಯಿಂದ ಪ್ರಸಾದ ಸ್ವೀಕರಿಸು ತ್ತಿದ್ದ ಸಾವಿರಾರು ಜನರನ್ನು ನೋಡುವುದೇ ಒಂದು ಅಪೂರ್ವ ಅನುಭವವಾಗಿತ್ತು. ಶ್ರೀಮಠದಲ್ಲಿದ್ದ ಅಲ್ಪ ಸ್ವಲ್ಪ ದಾಸ್ತಾನು ಈ ರೀತಿ (ಕ್ಷಾಮ ಪೀಡಿತ ಜನರಿಗೆ ಊಟ ಹಾಕುವುದರ ಮೂಲಕ) ವ್ಯಯವಾಗಿ ಹೋದರೆ ಮುಂದೆ ಸಂಸ್ಥೆಗೆ ತೊಂದರೆಯಾಗಬಹು ದಲ್ಲವೇ ಎಂಬ ಸಂಶಯವನ್ನು ಶ್ರೀಮಠದ ಕೆಲವು ಹಿತೈಷಿಗಳು ವ್ಯಕ್ತಪಡಿಸಿದಾಗ, ಶ್ರೀಗಳವರ ಉತ್ತರ: 'ಈಗ ನಮಗಿರುವುದು ಎರಡೇ ದಾರಿ ; ಅವರಿಗೆ ಊಟ ಹಾಕಬೇಕು ಅಥವಾ ಅವರು ಸಾಯಲು ಬಿಡಬೇಕು. ಎರಡನೆಯದಂತೂ ಸಾಧ್ಯವಿಲ್ಲದ ಮಾತು. ಶ್ರೀಮಠದಲ್ಲಿರಬಹುದಾದ ಅಲ್ಪ ಸ್ವಲ್ಪ ಸಂಗ್ರಹವೂ ಕೂಡ ಶ್ರೀ ಸಿದ್ಧಲಿಂಗನ ಕೃಪೆಯಿಂದ ಬಂದದ್ದು ; ಅದು ಅವನ ಮಕ್ಕಳ ಹಸಿವುನಿವಾರಣೆಗೆ ಉಪಯೋಗವಾಗಲಿ'.

ದೈವ ಕೃಪೆ. ಮಾರನೇ ವರ್ಷ ತುಮಕೂರು ಹಾಗೂ ಸುತ್ತಮುತ್ತಣ ಪ್ರದೇಶದಲ್ಲಿ ಸಮೃದ್ಧಿಯಾಗಿ ಬೆಳೆಯಾಯಿತು. ಉಪಕೃತ ಜನರು (ಅವರಲ್ಲಿ ಹಳ್ಳಿಯ ಹಾಗೂ ಅನಕ್ಷರಸ್ಥರೇ ಹೆಚ್ಚಾಗಿ) ತಲೆ ಹೊರೆಯಲ್ಲಿ, ಗಾಡಿಗಳಲ್ಲಿ ತಾವು ಬೆಳೆದ ದವಸ ಧಾನ್ಯಗಳನ್ನು ತಾವಾಗಿಯೇ ಅತ್ಯಂತ ಪ್ರೀತಿ ಹಾಗೂ ಭಕ್ತಿಯಿಂದ ಶ್ರೀಮಠಕ್ಕೆ ತಂದು ಅರ್ಪಿಸುವ ಮೂಲಕ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಶ್ರೀ ಸ್ವಾಮಿಗಳವರ ಮಾತಿನಲ್ಲೇ ಹೇಳುವುದಾದರೆ 'ಆ ವರ್ಷ ಧಾನ್ಯ ಸಂಗ್ರಹಕ್ಕಾಗಿ ಭಿಕ್ಷಕ್ಕೆ ಹೋಗುವುದು ಹಾಗಿರಲಿ, ತಾನಾಗಿ ಬಂದ ಧಾನ್ಯವನ್ನು ಇಡಲು ಮಠದ ಕಣಜಗಳಲ್ಲಿ ಸ್ಥಳ ಸಾಲಲಿಲ್ಲ'. ಎಲ್ಲರ ಬಗ್ಗೆ ಶ್ರೀಗಳಿಗಿರುವ ಅನು ಕಂಪ ಹಾಗೂ ವಾತ್ಸಲ್ಯಗಳಲ್ಲದೆ ಬೇರೇನು ತಾನೇ ಈ ಪವಾಡವನ್ನು ಸಾಧಿಸಬಲ್ಲದು ?

'ಸಕಲ ಪ್ರಾಣಿಗಳಲ್ಲಿ ದಯೆ' ಶ್ರೀಗಳವರ ಸಹಜ ಗುಣ. ಮಠದ ಆವರಣದಲ್ಲಿಯೋ. ಹೊಲಗದ್ದೆಗಳಲ್ಲಿಯೋ ಹಾವೊಂದು ಕಾಣಿಸಿಕೊಂಡಾಗ, ಅದನ್ನು ಕೊಲ್ಲಲು ಪ್ರಯತ್ನಿಸುವುದು ಹುಡುಗರ ಸ್ವಭಾವ. ಆ ಸಂದರ್ಭದಲ್ಲಿ ಶ್ರೀಗಳವರು ಆ ಸ್ಥಳದಲ್ಲಿದ್ದರೆ ಆ ಹಾವು ಪುಣ್ಯಮಾಡಿತ್ತೆಂದೇ ಅರ್ಥ. 'ನೀವು ಅದಕ್ಕೆ ತೊಂದರೆ ಮಾಡದಿದ್ದರೆ ಅದು ನಿಮಗೆ ಯಾವ ಹಾನಿಯನ್ನೂ ಮಾಡದು ; ಅದನ್ನು ಕೊಲ್ಲಬಾರದು' ಎಂದು ಹುಡುಗರಿಗೆ ವಿವೇಕ ಹೇಳುವ ಹೊತ್ತಿಗೆ ಹಾವು ಕುತ್ತಿನಿಂದ ಪಾರಾಗಿ ಹೋಗಿರುತ್ತದೆ. ಸಾವಿರಾರು ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿರುವ ಈ ಸುಕ್ಷೇತ್ರದಲ್ಲಿ ಇದುವರೆಗೆ ವಿಷಜಂತು ಗಳಿಂದ ತೊಂದರೆಯುಂಟಾಗುವ ಯಾವ ಸಂದರ್ಭವೂ ಬಂದಿಲ್ಲ.

ಶ್ರೀಮಠಕ್ಕೆ ಯಾತ್ರೆ ಬರುವವರ ಪೈಕಿ ತರಹೆವಾರಿ ಜನಗಳು ಇರುತ್ತಾರೆ. ಕೆಲವೊಮ್ಮೆ ಮಠದಲ್ಲಿ ಸಣ್ಣಪುಟ್ಟ ಕಳ್ಳ ತನ ಮಾಡಿ ಸಿಕ್ಕಿಬಿದ್ದಿರುವವರೂ ಉಂಟು. ಸಿಬ್ಬಂದಿಯವರು ಹಾಗೂ ವಿದ್ಯಾರ್ಥಿಗಳು ಅಂತಹ ಕಳ್ಳನಿಗೆ ನಾಲ್ಕಾರು ಏಟು ಮುಂತಾದ ಶಿಕ್ಷೆಕೊಡಲು ಪ್ರಯತ್ನಿಸುವುದು ಸ್ವಾಭಾವಿಕ. ಇಂತಹ ಸುದ್ದಿ ಶ್ರೀ ಸ್ವಾಮಿಗಳವರ ಕಿವಿಗೆ ಬಿದ್ದಕೂಡಲೇ, ಕಳ್ಳ ನನ್ನು ಸನ್ನಿಧಿಗೆ ಕರೆತರಲು ಅಪ್ಪಣೆಯಾಗುತ್ತದೆ. 'ಇವನಿಗೆ ಸರಿಯಾಗಿ ಬುದ್ಧಿ ಕಲಿಸಬೇಕು : ಪೋಲೀಸರಿಗೆ ಕೊಡಬೇಕು....' ಎಂದೆಲ್ಲಾ ಹೇಳುತ್ತಾ ಅವನನ್ನು ಅನುಸರಿಸಿ ಬರುವ ಗುಂಪನ್ನು ಗದರಿಸಿ ವಾಪಸ್ಸು ಕಳುಹಿಸುತ್ತಾರೆ. ಅವನನ್ನು ಕರುಣೆಯಿಂದ ವಿಚಾರಿಸಿ, ಅವನು ಮಾಡುತ್ತಿರುವ ಕೆಲಸ ಸರಿಯಲ್ಲವೆಂದು ವಿವೇಕ ಹೇಳಿ, ಅವನಿಗೆ ಮಠದಲ್ಲಿ ಊಟ ಹಾಕಿಸಿ, ಮಠದ ಆವರಣ ವನ್ನು ಅವನು ಬಿಡುವವರೆಗೆ ಅವನಿಗೆ ರಕ್ಷಣೆ ಒದಗಿಸಿ ಕಳುಹಿಸಿಕೊಡುತ್ತಾರೆ. ಅವನು ಕಳ್ಳತನ ಮಾಡಿದನೆನ್ನುವುದಕ್ಕಿಂತ, ಆತನು ಹಾಗೆ ಮಾಡಲು ಅವನ ಪರಿಸ್ಥಿತಿ ಎಷ್ಟು ಕಷ್ಟದ್ದಿತ್ತೋ ಎನ್ನುವುದು ಈ ಕರುಣಾಮೂರ್ತಿಯ ಹೃದಯವನ್ನು ಹಿಂಡು ತ್ತದೆ. ಬಸವಣ್ಣನ ನಿಜಭಕ್ತರು ಬೇರಾವ ರೀತಿಯಲ್ಲಿ ತಾನೇ ವ್ಯವಹರಿಸಲು ಸಾಧ್ಯ ?

ತಪ್ಪು ಮಾಡಿದವನನ್ನು ದಾರಿಗೆ ತರಲು ಶಿಕ್ಷೆಯೊಂದು ಮಾರ್ಗವಾದರೂ, ಆ ತಪ್ಪು ಆಗುವುದೇಕೆ? ಕಾರಣವಾದ ಮೂಲಸಮಸ್ಯೆಯನ್ನು ಹುಡುಕಿ ಅದಕ್ಕೆ ಪರಿಹಾರ ಒದಗಿಸುವುದು ಅತ್ಯಂತ ಸೂಕ್ತವಿಧಾನವೆನ್ನುವುದು ಶ್ರೀಗಳವರ ತೀರ್ಮಾನ.

ಅಂತೆಯೇ ಶ್ರೀಮಠದ ವಿದ್ಯಾರ್ಥಿಗಳು ಸಣ್ಣಪುಟ್ಟ ತಪ್ಪುಗಳನ್ನು ಮಾಡಿದಾಗ ಅಥವಾ ಪರೀಕ್ಷೆಯಲ್ಲಿ ನಪಾಸಾದಾಗ, ಶ್ರೀಗಳವರು ಆ ಬಗ್ಗೆ ತೀವ್ರ ಅಸಮಾಧಾನ ವ್ಯಕ್ತಪಡಿಸುತ್ತಾರಾದರೂ, ಅವರಿಗೆ ಊಟ ಸಲ್ಲಿಸುವ ಅಥವಾ ಅವರನ್ನು ವಿದ್ಯಾರ್ಥಿನಿಲಯದಿಂದ ಹೊರಹಾಕುವ ಯಾವ ಕಠಿಣಕ್ರಮವನ್ನೂ ಕೈಕೊಳ್ಳುವುದಿಲ್ಲ. ಯಾರಾದರೂ ಅವರ ಮಕ್ಕಳು ಪರೀಕ್ಷೆಯಲ್ಲಿ ನಪಾಸಾದರೆ ಅವರನ್ನು ಉಪವಾಸ ಹಾಕುವರೇ ಅಥವಾ ಮನೆಯಿಂದ ಹೊರದೂಡುವರೇ ?

ಶ್ರೀಮಠದ ವತಿಯಿಂದ ನಡೆಯುತ್ತಿರುವ ಅನೇಕ ವಿದ್ಯಾಸಂಸ್ಥೆಗಳಲ್ಲಿ ನೂರಾರು ಉಪಾಧ್ಯಾಯರು ಹಾಗೂ ಸಿಬ್ಬಂದಿ ವರ್ಗದವರು ಕೆಲಸಮಾಡುತ್ತಾರೆ. ಅವರಲ್ಲಿ ಯಾರಾದರೂ ಅಕ್ರಮವ್ಯವಹಾರದಲ್ಲಿ ತೊಡಗಿದ್ದು, ಅದು ಶ್ರೀಗಳವರ ಗಮನಕ್ಕೆ ಬರುವುದುಂಟು. ಅಂತಹ ಸಂದರ್ಭದಲ್ಲಿ ಅತ್ಯಂತ ಹೆಚ್ಚಿಗೆ ನೋವನ್ನನುಭವಿಸುವವರು ಶ್ರೀ ಸ್ವಾಮಿಗಳವರು. 'ಅವರು ಏನು ಮಾಡುತ್ತಿದ್ದಾರೆನ್ನುವುದು ಅವರಿಗೆ ತಿಳಿಯದು. ದೇವರೇ ಅವರನ್ನು ಕ್ಷಮಿಸು' ಎಂದು ಶ್ರೀ ಗುರುಸಿದ್ಧಲಿಂಗನಲ್ಲಿ ಮರುಕದಿಂದ ಪ್ರಾರ್ಥಿಸುತ್ತಾರೆ. ಸಂಸ್ಥೆಯ ಅಧ್ಯಕ್ಷರಾಗಿ, ಏನಾದರೂ ಔಪಚಾರಿಕ ಶಿಕ್ಷೆಯನ್ನು ಕೊಡಬಹುದೇ ವಿನಾ ಉಗ್ರಕ್ರಮವನ್ನೆಂದೂ ಕೈಗೊಂಡಿಲ್ಲ. ಈ ಬಗ್ಗೆ, ಸಾಮಾನ್ಯಸ್ತರದಲ್ಲಿ ಯೋಚನೆ ಮಾಡುವ ಸಮ್ಮಂತಹವರಿಗೆ ಶ್ರೀ ಸ್ವಾಮಿಗಳವರ ಈ ಕಾರ್ಯವಿಧಾನವು ತುಸು ಅಸಮಾಧಾನವನ್ನು ತರಲೂಬಹುದು. ಆದರೆ ಬುದ್ಧಿ ಹಾಗೂ ಹೃದಯಗಳ ಪರಿಪಕ್ವತೆಯನ್ನು ಪಡೆದಿರುವ ಆ ದಿವ್ಯಚೇತನ ಈ ಸಮಸ್ಯೆಗಳನ್ನು ನೋಡುವ ದೃಷ್ಟಿಯೇ ಬೇರೆ. ವ್ಯಕ್ತಿಯೊಬ್ಬನ ಮೇಲೆ ಕಠಿಣಕ್ರಮವನ್ನು ಕೈಗೊಂಡರೆ, ಆದರಿಂದ ವ್ಯಕ್ತಿಯ ಮೇಲಾಗುವ ಪರಿಣಾಮ, ಅವನನ್ನವಲಂಬಿಸಿರುವ ಅವನ ಸಂಸಾರದ ಕಷ್ಟಸ್ಥಿತಿ ಇವುಗಳ ಬಗ್ಗೆ ಶ್ರೀಗಳವರ ವಿಶಾಲಹೃದಯ ಸ್ಪಂದನಗೊಳ್ಳುತ್ತದೆ. ಬೇರೆಯವರ ಕಷ್ಟವೇ ತಮ್ಮ ಕಷ್ಟ ಎಂದು ತಿಳಿದಿರುವ ಈ ಮಹಾಚೇತನವು ಅಂತಹ ಸಂದರ್ಭಗಳಲ್ಲಿ ತೆಗೆದುಕೊಳ್ಳುವ ತೀರ್ಮಾನವು ಸಾಮಾನ್ಯಮಟ್ಟದ ನನಗೆ ಅರ್ಥವಾಗುವುದು ಕಷ್ಟವೇ ಸರಿ.

ಶ್ರೀ ಪೂಜ್ಯ ಸ್ವಾಮಿಗಳವರ ೫೦ ವರ್ಷಗಳ ಅವಿರತ ಸೇವೆಯ ಚಿನ್ನದ ಹಬ್ಬದ ಸಂದರ್ಭದಲ್ಲಿ ಶ್ರೀಗಳವರ ವಾತ್ಸಲ್ಯದ ಅಮೃತವನ್ನುಂಡು ಬೆಳೆದ ಹಾಗೂ ಬೆಳೆಯುತ್ತಿರುವ ಸಾವಿರಾರು ವಿದ್ಯಾರ್ಥಿಗಳು ಹಾಗೂ ಅಪಾರ ಭಕ್ತವೃಂದ ಶ್ರೀಗುರುಸಿದ್ಧಲಿಂಗನಲ್ಲಿ ಸಲ್ಲಿಸುವ ಒಕ್ಕೊರಲಿನ ಪ್ರಾರ್ಥನೆ :

'ಚಿರಮಭಿವರ್ಧತಾಂ ಶ್ರೀ ಶಿವಕುಮಾರ ವಾತ್ಸಲ್ಯ ಶ್ರೀಃ'

**ಡಾ॥ ಎಂ. ಎನ್. ಚನ್ನಬಸಪ್ಪ**
ಗಣಿತಶಾಸ್ತ್ರದ ಪ್ರಾಧ್ಯಾಪಕರು
ಸುರತ್ಕಲ್ ಇಂಜಿನಿಯರಿಂಗ್ ಕಾಲೇಜು

## ದಿವ್ಯಚೇತನದ ಸಾಕಾರಮೂರ್ತಿ

ಇಪ್ಪತ್ತೇಳು ವರ್ಷದ ಹಿಂದಿನ ಸ್ಮರಣೆ ನನ್ನನ್ನು ಆಗಿಂದಾಗ್ಗೆ ಚಕಿತಗೊಳಿಸಿ, ಶ್ರದ್ಧಾಪೂರ್ವಕ ಪ್ರಾಮಾಣಿಕ ಜೀವನಕ್ಕೆ ಪ್ರತಿಕ್ಷಣದಲ್ಲಿಯೂ ಪ್ರೇರೇಪಿಸುತ್ತದೆ. ನನ್ನ ದೈನಂದಿನ ಕಾರ್ಯದಲ್ಲಿ ಏನು ಮಾಡಬೇಕಾದರೂ ನನ್ನನ್ನು ಪ್ರೇರೇಪಿಸಿದ ಶಕ್ತಿಯು ನನಗೆ ಜ್ಞಾಪಕ ಬರುತ್ತದೆ. ಈ ಪ್ರೇರಕಶಕ್ತಿಯೇ ಶ್ರೀ ಸಿದ್ಧಲಿಂಗೇಶ್ವರರ ಪಾದಸನ್ನಿಧಿಯಲ್ಲಿ ಉಜ್ವಲ ತಪಸ್ಸನ್ನಾಚರಿಸಿ ತಮ್ಮದೇ ಆದ 'ಕಾಯಕವೇ ಕೈಲಾಸ' ಎನ್ನುವ ರೀತಿಯನ್ನನುಸರಿಸಿ, ಸಹಸ್ರಾರು ಮಕ್ಕಳ ಭವಿಷ್ಯವನ್ನು ನಿರ್ಮಿಸುತ್ತಿರುವ ತಪೋಮೂರ್ತಿ, ತ್ರಿವಿಧ ದಾಸೋಹಮೂರ್ತಿ, ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.

**ನಾಡಿನ ಭಾವೀ ಭವ್ಯ ಪೀಳಿಗೆಯನ್ನು ರೂಪಿಸುವ ದಿವ್ಯಶಿಲ್ಪಿ**

ನನ್ನ ಜೂನಿಯರ್ ಇಂಟರ್ ಮೀಡಿಯಟ್ ಪರೀಕ್ಷೆಯನ್ನು ಬಹು ಕಷ್ಟದಿಂದ ಮುಗಿಸಿ ಸೀನಿಯರ್ ಇಂಟರ್ ಮೀಡಿಯಟ್ ಪರೀಕ್ಷೆಗೆ ತರಬೇತಿ ಪಡೆಯಲು ನನಗೆ ಊಟಕ್ಕೆ ಮಾರ್ಗವಿಲ್ಲದಾಯಿತು. ಮನೆಯ ಕಡೆಯಿಂದ ಅನುಕೂಲ ಸಿಕ್ಕುವ ನಂಬಿಕೆ ಇಲ್ಲವಾಯಿತು. ನನ್ನ ತಂದೆಯವರು ಅವರ ಸ್ನೇಹಿತರೊಬ್ಬರ ಮುಖಾಂತರ ಶ್ರೀಶ್ರೀ ಶ್ರೀಗಳವರಿಗೆ ಒಂದು ಪತ್ರ ತಂದುಕೊಟ್ಟಾಗ ನಾನು ಮತ್ತು ನನ್ನ ಸಹೋದರ ಇಬ್ಬರಿಗೂ ವಿದ್ಯಾಭ್ಯಾಸಕ್ಕೆ ಶ್ರೀಗಳವರು ಅನುಮತಿ ನೀಡಿದರು. ನಮ್ಮ ವಯಸ್ಸಿಗೆ ಸರಿಯಾಗಿ ಪಂಚೆ ಸುತ್ತಿಕೊಳ್ಳುವುದೂ ಬರುತ್ತಿರಲಿಲ್ಲ. ಅನೇಕ ವಿದ್ಯಾರ್ಥಿಗಳ ಸಹವಾಸದಿಂದ, ಶ್ರೀಕ್ಷೇತ್ರದ ಜೀವನಕ್ಕೆ ನಮ್ಮನ್ನು ಬಹುಬೇಗ ಅಳವಡಿಸಿಕೊಂಡೆವು. ಆದರೆ ಶ್ರೀಗಳವರ ದರ್ಶನ ಬೆಳಿಗ್ಗೆ ಮತ್ತು ಸಂಜೆ ಆಗುತ್ತಿತ್ತು. ಪ್ರಾರ್ಥನಾ ಸಭೆಯಲ್ಲಿ ಬರಿಮೈಯಲ್ಲಿ ಪಂಚೆಯುಟ್ಟು ಶ್ರೀಗಳವರ ಪಾದಕ್ಕೊಮ್ಮೆ ನಮಸ್ಕರಿಸಿದಾಗ ನಮ್ಮ ಮೈ ರೋಮಾಂಚನಗೊಂಡು ಆಯಾಸ ಪರಿಹಾರವಾಗಿ ನಮ್ಮ ಅಧ್ಯಯನಕ್ಕೆ ಹಾದಿ ಹಸನಾಗುತ್ತಿತ್ತು. ವಾರಕ್ಕೊಮ್ಮೆ ಶ್ರೀಗಳವರ ಆಶೀರ್ವಚನ 'ಜಯನಿಲಯ'ದ ಮಹಡಿಯಮೇಲೆ ಮಧ್ಯಾಹ್ನ ೧ ಗಂಟೆಯಿಂದ ೪-೩೦ರವರೆವಿಗೆ ನಿರರ್ಗಳವಾಗಿ ಸಿಕ್ಕುತ್ತಿದುದು ಇಂದಿಗೂ ಅಚ್ಚಳಿ

ಯದೆ ಮನಸ್ಸಿನ ಮೇಲೆ ಅಚ್ಚೊತ್ತಿದಂತಿದೆ. ಒಂದು ಭಾನುವಾರ ಹೇಳಿದ ಕಥೆ ಆಗಾಗ್ಗೆ ಈಗಲೂ ಜ್ಞಾಪಕಕ್ಕೆ ಬರುತ್ತದೆ. ಆ ಕಥೆ ಹೀಗಿದೆ:–

ಒಬ್ಬ ತಂದೆಗೆ ಮೂರುಜನ ಗಂಡು ಮಕ್ಕಳು. ತಂದೆ ಮೂರು ಜನರಿಗೂ ತನ್ನ ಪರಿಶ್ರಮದಿಂದ ವಿದ್ಯಾಭ್ಯಾಸ ಕೊಡುತ್ತಿರುತ್ತಾನೆ. ವಿದ್ಯಾಭ್ಯಾಸ ಕೊಡುವ ಕಾಲಕ್ಕೆ ಒಂದುದಿನ ಮೂರುಜನ ಮಕ್ಕಳನ್ನೂ ಕರೆದು ತಲಾ ಒಂದೊಂದು ರೂಪಾಯಿ ಕೊಟ್ಟು, ನಂತರ ಮಕ್ಕಳ ಬುದ್ಧಿಶಕ್ತಿ ಪರೀಕ್ಷೆ ಮಾಡಲು ಮೂವರು 'ಒಂದು ಕೊಠಡಿ ತುಂಬುವ ವಸ್ತುವನ್ನು ಕೊಂಡು ತನ್ನಿ' ಎಂದು ಹೇಳುತ್ತಾನೆ. ಮೊದಲ ಮಗ ಒಂದು ರೂಪಾಯಿ ಕೊಟ್ಟು ಕೊಠಡಿಯು ತುಂಬಾ ತುಂಬುವ ಭತ್ತದ ಹುಲ್ಲನ್ನು ತರುತ್ತಾನೆ. ಎರಡನೆಯವನು ಕೊಠಡಿಯು ತುಂಬಾ ಹರಡಲು ಕಡಲೆ ಹಿಟ್ಟನ್ನು ತರುತ್ತಾನೆ. ಮೂರನೆಯವನು ಎರಡು ಮೇಣದ ಬತ್ತಿಗಳನ್ನು ಕೊಂಡು ಉಳಿದ ಹಣ ವಾಪಸ್ಸು ತರುತ್ತಾನೆ. ಕಡೆಯ ಮಗ ಎರಡು ಮೇಣದ ಬತ್ತಿಗಳನ್ನು ಹೊತ್ತಿಸಿ ಕೊಠಡಿಯು ತುಂಬಾ ಬೆಳಕನ್ನು ಚೆಲ್ಲುತ್ತಾನೆ. ತಂದೆಯು ಆಗ ಕಡೇ ಮಗನ ಬುದ್ಧಿವಂತಿಕೆಯನ್ನು ಪ್ರಶಂಸಿಸುತ್ತಾನೆ. ಶ್ರೀಗಳವರು ಈ ಕಥೆಯಿಂದ ತಿಳಿಯಬೇಕಾದ ಗೂಢಾರ್ಥವನ್ನೂ, ನಮ್ಮ ಜೀವನಕ್ಕಾಗಿ ಬೇಕಾದ ಪ್ರಯೋಜನವನ್ನೂ ಹಲವಾರು ಸಾರಿ ಒತ್ತಿಹೇಳುತ್ತಿದ್ದರು. ಅಂದರೆ ವಿದ್ಯಾರ್ಥಿಗಳಾದ ನಾವು ಜೀವನದಲ್ಲಿ ಜ್ಞಾನಸಂಪಾದನೆ ಮಾಡುವುದು ಮುಖ್ಯ ಉದ್ದೇಶವಾಗಿರಬೇಕು ಎನ್ನುವುದನ್ನು ಒತ್ತೊತ್ತಿ ಹೇಳುತ್ತಿದ್ದರು. ಸಂಸ್ಕೃತ ವಾಕ್ಯದಂತೆ 'ನಹಿ ಜ್ಞಾನೇನ ಸದೃಶಂ' ಅಂದರೆ ಜ್ಞಾನಕ್ಕೆ ಸರಿಸಮಾನವಾದುದು ಯಾವುದೂ ಇಲ್ಲ ಎಂದು ಶ್ರೀಗಳವರು ಅಪ್ಪಣೆ ಕೊಡಿಸುತ್ತಿದ್ದರು.

ನಮ್ಮ ಓದಿನ ಬಗ್ಗೆ ಶ್ರೀಸ್ವಾಮೀಜಿಯರ ಆಸ್ಥೆ ಈಗಲೂ ನನಗೆ ಭಯ ಮೂಡಿಸುತ್ತದೆ. ಬೆಳಗಿನ ಜಾವ ೪ ಗಂಟೆಗೆ ಪ್ರತಿದಿನ ರೂಮುಗಳಿಗೆ ಭೇಟಿ ನೀಡಿ ಕೈಯಲ್ಲಿದ್ದ ಬೆತ್ತದಿಂದ ನಮ್ಮ ಶರೀರದ ಶಕ್ತಿನೋಡಿ ಏಟುಕೊಟ್ಟು ಎಬ್ಬಿಸುತ್ತಿದ್ದರು. ನಮ್ಮ ಅನೇಕ ಮಿತ್ರರು ಸ್ವಾಮೀಜಿಯವರು ಹೋದ ನಂತರ ಮತ್ತೆ ಮಲಗುವ ರೂಢಿ; ಸ್ವಾಮೀಜಿ ನಮ್ಮಂತಹ ವಿದ್ಯಾರ್ಥಿಸ್ತೋಮವನ್ನು ನೋಡಿದವರು; ಆಕಸ್ಮಿಕವಾಗಿ ಎಲ್ಲಾ ವಿದ್ಯಾರ್ಥಿಗಳನ್ನು ಎಚ್ಚರಿಸಲು ಎರಡನೇ ಬಾರಿಗೂ ಭೇಟಿಕೊಡುತ್ತಿದ್ದರು.ಇದಾವ ತಂದೆ ತಾಯಿಗಳಿರುವ ಆಸ್ಥೆ?. ಎಸ್. ಎಸ್. ಎಲ್. ಸಿ. ಮತ್ತು ಪಿ.ಯು.ಸಿ. ವಿದ್ಯಾರ್ಥಿಗಳಿಗೆ ಸಂಜೆ ಪ್ರತಿದಿನ ಇಂಗ್ಲೀಷು ಮತ್ತು ಸಂಸ್ಕೃತವನ್ನು ಸ್ವಾಮೀಜಿಯವರೇ ಖುದ್ದಾಗಿ ಬೋಧಿಸುತ್ತಿದ್ದರು. ಮಕ್ಕಳ ಭವಿಷ್ಯದ ಬಗ್ಗೆ ಯೋಜನೆಯನ್ನು ಹಾಕಿಕೊಂಡು ಕಾರ್ಯಗತ ಮಾಡುತ್ತಿದ್ದರು. ಸ್ವಾಮೀಜಿಯವರಿಗೆ ಇದಾವ ಜವಾಬ್ದಾರಿ ಎಂದು ಈಗಲೂ ನನಗೆ ನೆನಪಿಗೆ ಬರುತ್ತಿರುತ್ತದೆ.

**ಕಾಯಕದ ಕಾರ್ಯಾಚರಣೆಯ ಕಾರ್ಯಕರ್ತ**

ಸ್ವಾಮೀಜಿಯವರು ಕೇವಲ ಬೋಧಕರು ಮಾತ್ರವಲ್ಲ, ಪ್ರಾಯೋಗಿಕ ಪರಿಶ್ರಮದ ಮಾರ್ಗದರ್ಶಿಗಳೂ ಅಭ್ಯಾಸಿಗಳೂ ಆಗಿದ್ದರು. ಪ್ರತಿಭಾನುವಾರ ಸಂಜೆ ೫ ಗಂಟೆಯಿಂದ ಶರೀರಶ್ರಮದ ಕೆಲಸವನ್ನು ನಾವೆಲ್ಲಾ ಮಾಡಬೇಕಾಗಿತ್ತು. ಈ ಸಂದರ್ಭಗಳಿಂದ ನನ್ನ ಮನಸ್ಸಿನ ಮೇಲೆ ಮೂಡಿರುವ ಅಗಾಧ ಪರಿಣಾಮಗಳು ನನ್ನ ಜೀವನಕ್ಕೆ ಮೆರುಗುಕೊಟ್ಟಿವೆ. ಶ್ರೀಶ್ರೀಗಳವರು ಕಟ್ಟಡಕ್ಕೆ ಬೇಕಾಗುವ ಕಲ್ಲುಗಳನ್ನು ಎತ್ತಿ ಎತ್ತಿ ನಮ್ಮ ತಲೆಯ ಮೇಲೆ ಹೊರಿಸುತ್ತಿದ್ದರು. ವೈಯಕ್ತಿಕವಾಗಿ ನಾನು ಎರಡೆರಡು ಕಲ್ಲುಗಳನ್ನು ಹೊತ್ತು ಹೋಗುತ್ತಿದ್ದೆ. ಸ್ವಾಮೀಜಿಯವರು ಅನೇಕ ಸಾರಿ ನಗುಮುಖದಿಂದ 'ಇವನೆಷ್ಟು ಒರಟ' ಎಂದು ಹೇಳುತ್ತಿದ್ದ ಉತ್ತೇಜಿತ ಮಾತುಗಳು ಸ್ವಾಮೀಜಿಯವರೊಡನೆ ಎಷ್ಟು ಹೊತ್ತು ಕೆಲಸ ಮಾಡಿದರೂ ನಮಗೆ ಆಯಾಸವಾಗುತ್ತಿರಲಿಲ್ಲ. ಇದು ನನ್ನ ಸ್ವಂತ ಅನುಭವ. ಸ್ವಾಮೀಜಿಯವರು ಸ್ವತಃ ಶರೀರಶ್ರಮವನ್ನು ಧಾರೆಯೆರೆಯುತ್ತಿದ್ದರು.ಇಂದು ನಮ್ಮ ಸಮಾಜವನ್ನು ಪೀಡಿಸುತ್ತಿರುವ ರಾಕ್ಷಸಾಕಾರದ ಸಮಸ್ಯೆಯೆಂದರೆ ನಡೆನುಡಿಗಳ ಅಂತರ ಮತ್ತು ಸಾಮರಸ್ಯವಿಲ್ಲದಿರುವುದು. ಶ್ರೀಶ್ರೀಗಳವರು ನಡೆನುಡಿಗಳನ್ನು ಒಂದೇ ರಥದ ಗಾಲಿಗಳಂತೆ ನಡೆಸುತ್ತಿದ್ದರು ಎನ್ನುವುದನ್ನು ನಾವೆಲ್ಲಾ ಕಣ್ಣಾರೆ ಕಂಡು ನಿತ್ಯಜೀವನವನ್ನು ರೂಪಿಸಿಕೊಂಡಿದ್ದೇವೆ. ಶ್ರೀಗಳವರ ಕಾರುಣ್ಯಮಯ ಜೀವನ ಅಂದರೆ ಬಡವರಿಂದ ಕೆಲಸ ಮಾಡಿಸಿ ತಾವು ನೋಡಿದವರಲ್ಲ; ಬಡವರಂತೆ ತಾವೂ ಬೆವರು ಸುರಿಸಿದವರು.

**ಒಗ್ಗಟ್ಟು, ಸಹಕಾರ ಸಮತೆಗಳ ದಿಗ್ದರ್ಶಿ**

ಒಗ್ಗಟ್ಟಿನ ಬಲ ಅಪಾರ. ಸಾಮೂಹಿಕ ಸಾಮರಸ್ಯ ನಾಡಗುಡಿಯ ಪೂಜೆಯ ಮಹಾತಂತ್ರ ಎಂದರಿತ ಸ್ವಾಮೀಜಿ ತಾರುಣ್ಯದ ಹೊಸ್ತಿಲಲ್ಲೇ ತನ್ನ ಮಡಿಲ ಮಕ್ಕಳ ಮನಸ್ಸಿನ ತೆರೆಯ ಮೇಲೆ ಮಾಸದ ಕೂಡಿ ಬಾಳುವ, ಕೂಡಿ ನಲಿಯುವ, ಕೂಡಿ ಉಣ್ಣುವ ಚಿತ್ರಬರೆಯುತ್ತಿದ್ದರು. ಜಾತ್ರೆಯಾದ ನಂತರ ದನಗಳ ಕಸವನ್ನು ಕೂಡಿ ಹಾಕುವುದು ಪದ್ಧತಿ. ಎಲ್ಲಾ ಮಕ್ಕಳೂ ಈ ಕೆಲಸ ಮಾಡುತ್ತಿದ್ದರು. ಈ ಕೆಲಸವು ಸಾಕಷ್ಟು ದೊಡ್ಡ ಯೋಜನೆಯೇ ಆಗಿರುತ್ತಿತ್ತು. ಈ ಯೋಜನೆ ಮುಗಿದ ನಂತರ ಎಲ್ಲಾ ವಿದ್ಯಾರ್ಥಿಗಳಿಗೂ ಸಿಹಿ ಮಾಲದಿ ಊಟ, ಸ್ವಾಮೀಜಿಯವರೇ ಖುದ್ದು ನಿಂತು ಒತ್ತಾಯ ಪೂರ್ವಕವಾಗಿ ಜನನಿಯೋಪಾದಿಯಲ್ಲಿ ಉಣಬಡಿಸುತ್ತಿದ್ದ ವಿಷಯ ನಾವಾರೂ ನಮ್ಮ ಜೀವನದಲ್ಲಿ ಮರೆಯುವಂತಿಲ್ಲ.

**ಕರುಣೆಯ ಕಡಲು**

ತನ್ನ ಮಡಿಲ ಮಕ್ಕಳು ಮುದುಡಿ ಮರುಗಬಾರದೆಂಬುದೇ ಸ್ವಾಮೀಜಿಯವರ ಕೋಮಲ ಹೃದಯದ ಕರೆ. ಇಂಟರ್ ಮೀಡಿಯಟ್ ಬಿ.ಎ., ಬಿ.ಎಸ್.ಸಿ. ಓದುವ ವಿದ್ಯಾರ್ಥಿಗಳು ಪರೀಕ್ಷಾಕೇಂದ್ರಕ್ಕೆ ಹೋಗಿ ಬರಲು ಬೇಸಿಗೆ ಕಾಲದಲ್ಲಿ ಶ್ರಮ ವೆಂದು ಭಾವಿಸಿ ಶ್ರೀಗಳವರು ನಮ್ಮನ್ನು ತುಮಕೂರಿನ ಜಯದೇವ ಹಾಸ್ಟೆಲ್ ಮತ್ತು ಸಿದ್ಧರಾಮಣ್ಣ ಹಾಸ್ಟೆಲ್‌ಗಳಿಗೆ ಕಳುಹಿಸಿ ಅಲ್ಲಿಯೇ ಊಟ ಮತ್ತು ವ್ಯವಸ್ಥೆಗಳನ್ನು ಏರ್ಪಾಡು ಮಾಡುತ್ತಿದ್ದರು. ಇದಾವ ಜನ್ಮದ ಋಣವೆಂದು ನನಗೆ ಭಾಸವಾಗುತ್ತಿತ್ತು. ನನ್ನ ಮನಸ್ಸಿನ ಮೇಲೆ ಮಾಡಿರುವ ಮಹತ್ತರ ಪರಿಣಾಮಗಳಲ್ಲಿ ಇದೊಂದಾದರೂ ಇಂತಹ ಅನೇಕ ನಿದರ್ಶನಗಳಿವೆ.

**ಮಾತೆಯ ಮಡಿಲು**

ತಾಯಿಗಿಂತ ಮಿಗಿಲಾದ ದೈವವಿಲ್ಲವೆನ್ನುತ್ತಾರೆ. ತನ್ನ ಕರುಳ ಕುಡಿಯ ಉದ್ಧಾರಕ್ಕಾಗಿ ಅವಳು ಸದಾ ಚಡಪಡಿಸುತ್ತಾಳೆ. ತನ್ನ ಮಗ ವಿಶೇಷ ದಿನಗಳಲ್ಲಿ ಉಂಡುಟ್ಟು ನಲಿಯಬೇಕು. ಅವನ ಪಾಲು ಉಳಿದರೆ ಹೆತ್ತೊಡಲಿಗೆ ಅನ್ನ ಸೇರದು. ಯಾರು ಹೆತ್ತ ಮಕ್ಕಳಾದರೇನು ತನ್ನ ಮಡಿಲಮಮತೆಯ ಜೀವಿಗಳೆಲ್ಲಾ ಸ್ವಾಮೀಜಿಯವರ ದೃಷ್ಟಿಯಲ್ಲಿ ತನ್ನ ಕರುಳ ಕುಡಿಯೇ! ಅವರಿ ಗಾಗಿ ಹಂಬಲ, ಕಾತರ! ಎಲ್ಲಿಯ ನಂಟು ಈ ಬಾಂಧವ್ಯದಲ್ಲಿ. ಒಂದು ಬಾರಿ ನನ್ನ ಬಿ.ಎಸ್.ಸಿ. ಪರೀಕ್ಷೆ ನಡೆಯುತ್ತಿತ್ತು. ಉಗಾದಿ ಹಬ್ಬ, ಪರೀಕ್ಷೆಯ ಮಧ್ಯೆ ಬಂತು. ನಾನು ಶ್ರೀಗಳವರ ಕೃಪೆಯಿಂದ ಜಯದೇವ ಹಾಸ್ಟೆಲ್‌ನಲ್ಲಿ ತಾತ್ಕಾಲಿಕವಾಗಿ ಉಳಿದಿದ್ದೆ. ಜಯದೇವ ಹಾಸ್ಟೆಲ್‌ನವರು ಒಳ್ಳೆ ಹಬ್ಬದ ಊಟ ಹಾಕಿದ್ದರು. ಅದರ ಪರಿಣಾಮವಾಗಿ ಸೊಗಸಾದ ನಿದ್ದೆಯಾಯಿತು. ಸುಮಾರು ೫ ಗಂಟೆ ಸಮಯ ಸ್ವಾಮೀಜಿಯವರ ಕಾರು ಜಯದೇವ ಹಾಸ್ಟೆಲಿನೊಳಕ್ಕೆ ಬಂತು. ನಮಗೆಲ್ಲಾ ಸ್ವಾಮೀಜಿಯವರು ಬಂದರೆನ್ನುವ ಭಯ, ಸಂತೋಷ ಮತ್ತು ಆಶ್ಚರ್ಯ. ಆದರೂ ಸ್ವಾಮೀಜಿ ಬಂದಿರಲಿಲ್ಲ, ಆದರೆ ಬಂದಿದ್ದು ನಮ್ಮೆಲ್ಲರ ಪಾಲಿನ ಕ್ಷೇತ್ರದಲ್ಲಿ ತಯಾರಾದ ಒಬ್ಬಟ್ಟುಗಳು; ಕಾರಿನಲ್ಲಿ ಬಂದಿದ್ದವರು ನಮ್ಮ ಮಿತ್ರರುಗಳು. ಸ್ವಾಮೀಜಿಯವರು ಒಬ್ಬಟ್ಟುಗಳನ್ನು ನಮ್ಮೆಲ್ಲಾ ವಿದ್ಯಾರ್ಥಿಗಳಿಗೂ ಉಣಬಡಿಸಿ ಅವರ ಯೋಗಕ್ಷೇಮ ವಿಚಾರಿಸಿ ಬನ್ನಿ ಎಂದು ಕಳುಹಿಸಿದ್ದಾರೆಂದು ಹೇಳಿದ ಮಾತು ಗಳು ನನ್ನನ್ನು ಈಗಲೂ ಜ್ಞಾಪಿಸಿಕೊಂಡಾಗ ಮೂಕನನ್ನಾಗಿ ಮಾಡುತ್ತವೆ. ಗೌರೀ ಗಣೇಶ ಹಬ್ಬಗಳಲ್ಲಿ ಊಟದ ವೈಖರಿಯೇ ಬೇರೆ. ಸ್ವಾಮೀಜಿಯವರೇ ಖುದ್ದು ನಿಂತು ಕಡುಬು ಪಾಯಸಗಳನ್ನು ಬಡಿಸಿ ಊಟ ಮಾಡುವ ದೃಶ್ಯವನ್ನು ಕಂಡು ಸಂತೋಷ ಪಡುತ್ತಿದ್ದರು. ಅದಾವ ತಾಯಿಯ ಪ್ರೀತಿಯು ನಮಗೆ ಉಣಬಡಿಸಿತು? ನನಗೆ ಬರುವ ಪ್ರಶ್ನೆಗೆ ಉತ್ತರವೇ ಕಾರುಣ್ಯ ಮೂರ್ತಿ ಶ್ರೀಶ್ರೀ ಶಿವಕುಮಾರಸ್ವಾಮಿಗಳು.

ಶ್ರೀಶ್ರೀಗಳವರು ವರ್ಷಕ್ಕೊಮ್ಮೆ ಮಲೆನಾಡು ಪ್ರವಾಸಕ್ಕಾಗಿ ಪ್ರತಿವರ್ಷವೂ ಹೋಗುತ್ತಿದ್ದರು. ನಾವು ವಿದ್ಯಾರ್ಥಿ ಗಳಾಗಿದ್ದಾಗ ಶ್ರೀಗಳು ಸುಮಾರು ಇಪ್ಪತ್ತು ದಿವಸಗಳಷ್ಟು ಕಾಲ ಈ ಮಲೆನಾಡು ಪ್ರವಾಸಕ್ಕಾಗಿ ಹೋದಾಗ ಕ್ಷೇತ್ರವು ನಮ ಗೊಂದು ರೀತಿಯ ತಾಯಿಯಿಲ್ಲದ ಮನೆಯಂತೆ ಭಾಸವಾಗುತ್ತಿತ್ತು. ಕಾಲೇಜಿಗೆ ಹೋಗಿ ಬಂದಾಗಲೆಲ್ಲಾ ಶ್ರೀಗಳಿಲ್ಲದ ಮಠ 'ಬಿಕೋ' ಎನಿಸುತ್ತಿತ್ತು. ನಾನು ಜೂನಿಯರ್ ಬಿ.ಎಸ್.ಸಿ. ಓದುತ್ತಿದ್ದೆ. ಕಾಲೇಜು ಆ ದಿನ ಎರಡು ಗಂಟೆಗೆ ಮುಗಿದಿತ್ತು. ನಾನು ಮಠಕ್ಕೆ ಸುಮಾರು ೪ ಗಂಟೆಗೆ ಬಂದಿದ್ದೆ. ಅಂದು ಸ್ವಾಮೀಜಿಯವರು ಮಲೆನಾಡು ಪ್ರವಾಸ ಮುಗಿಸಿ ಬರುತ್ತಾರೆಂದು ತಿಳಿದಿದ್ದೆ. ಸ್ವಾಮೀಜಿಯವರು ಸುಮಾರು ೪-೩೦ಕ್ಕೆ ಬಂದರು. ನಾವೆಲ್ಲರೂ ಮಠದ ಆಫೀಸಿನ ಹತ್ತಿರ ವೃತ್ತಪತ್ರಿಕೆ ಓದುತ್ತಿದ್ದೆವು. ಸ್ವಾಮೀ ಜೀಯವರು ಕಾರಿನಿಂದ ಬಂದಿಳಿದರು. ಇಳಿದ ಕೂಡಲೇ ಜೊತೆಯಲ್ಲಿ ತಂದಿದ್ದ ಕಡಲೇಪುರಿ ಮತ್ತು ಹಣ್ಣು ಹಂಪಲುಗಳನ್ನು ನಮಗೆಲ್ಲಾ ಮತ್ತು ಸ್ವಾಮೀಜಿಯವರ ಕಾರು ನೋಡಿ ಓಡಿಬಂದ ಮಿಡ್ಲ್‌ಸ್ಕೂಲ್ ವಿದ್ಯಾರ್ಥಿಗಳಿಗೆ ಹಂಚಿದರು. ಇದು ಸರ್ವೇ ಸಾಮಾನ್ಯವಾಗಿ ತಾಯಾದವಳು ಜಾತ್ರೆಗೆ, ತೌರಿಗೆ ಅಥವಾ ಇನ್ನಾವುದಾದರೂ ಸಂತೆ ಹಬ್ಬ ಹರಿದಿನಗಳಿಗೆ, ದೇವಸ್ಥಾನಗಳಿಗೆ ಹೋಗಿ ಬಂದಾಗ ಮಕ್ಕಳಿಗೆ ಹಂಚುವ ಪ್ರೀತಿಯ ಕಾಣಿಕೆಯಂತೆ. ಆ ದಿನ ಮಲೆನಾಡು ಪ್ರವಾಸದಿಂದ ಸ್ವಾಮೀಜಿಯವರು ಬಂದಿ ದ್ದಾರೆ ಎನ್ನುವುದು ಎಲ್ಲಾ ಹುಡುಗರಿಗೂ ಸಡಗರವೋ ಸಡಗರ. ರಾತ್ರಿ ಊಟಕ್ಕೆ ವಿಶೇಷತಹವಾದ ಸಿಹಿ ಹಾಕಿಸುತ್ತಿದ್ದ ವಿಷಯ ಈಗಲೂ ನನಗೆ ಅಚ್ಚಳಿಯದೆ ನಿಂತಿದೆ. ಇದು ಸ್ವಾಮೀಜಿಯವರ ಮಾತೃವತ್ ಮಮತೆಗೆ ದ್ಯೋತಕ.

**ದೀನರ ದಾರಿದೀಪ**

ದೀನನ ಕಣ್ಣೀರನ್ನು ಪನ್ನೀರನ್ನಾಗಿ ಪರಿವರ್ತಿಸುವ ಪಾವನಮೂರ್ತಿ ಸ್ವಾಮೀಜಿ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ನಾನು ಬಿ.ಎಡ್. ಓದುವಾಗ ಉತ್ತರ ಇಂಡಿಯಾಕ್ಕೆ ಪ್ರವಾಸ ಹೋಗುವ ಅವಕಾಶ ಒತ್ತಾಯ ಪೂರ್ವಕವಾಗಿ ಮೂಡಿ ಬಂತು. ಆದರೆ ಮನೆಯ ಕಡೆಯಿಂದ ಈ ವಿಷಯ ವಿರೋಧವಾಯಿತು. ತೌರುಮನೆಯಂತಿದ್ದ ಸ್ವಾಮೀಜಿಯವರಿಗೆ ಪತ್ರದ ಮುಖೇನ ಪ್ರವಾಸದ ಉದ್ದೇಶ್ಯ ಮತ್ತು ಆಸೆಯನ್ನು ನಿಷ್ಕಲ್ಮಷವಾಗಿ ನಿವೇದಿಸಿಕೊಂಡೆ. ಆ ಹೊತ್ತಿಗೆ ನಾನು ಪ್ರವಾಸದ ಬಗ್ಗೆ ನಿರಾಸೆ ಹೊಂದಿ ಕಾಲೇಜಿನ ಪ್ರಾಚಾರ್ಯರ ಕ್ರೋಧಕ್ಕೆ ಪಾತ್ರನಾಗಿ ಪರಿತಪಿಸುತ್ತಿದ್ದೆ. ಸುಮಾರು ೪-೫ ದಿನಗಳು ಕಳೆ ದವು. ಶ್ರೀಗಳವರ ಆಶೀರ್ವಾದ ಪತ್ರ ಮತ್ತು ನೂರೈವತ್ತು ರೂಪಾಯಿಗಳ ಚೆಕ್ಕು ಬಂತು. ಸುಖವಾಗಿ ಉತ್ತರ ಭಾರತದ ಪ್ರವಾಸ

ಮುಗಿಸಿ ಕಲ್ಕತ್ತಾದಲ್ಲಿ ಸುಲಭ ಬೆಲೆಗೆ ಸಿಕ್ಕಿದ ಜೀವನದಲ್ಲಿಯೇ ಹೊಂದಬಹುದಾದ ಮೊದಲ ಉಲ್ಲನ್ ಸೂಟನ್ನು ಹೊಲಿಸಿಕೊಂಡಾಯ್ತು. ಪರೀಕ್ಷೆ ಮುಗಿದ ನಂತರವೇ ಕೆಲಸವು ಸಿಕ್ಕಿ ಉಪಾಧ್ಯಾಯ ವೃತ್ತಿಗೆ ಸೇರಿಕೊಂಡೆ. ಮುಂದಿನ ತಿಂಗಳಲ್ಲಿಯೇ ಶ್ರೀಶ್ರೀಯವರಿಗೆ ಐವತ್ತು ರೂಪಾಯಿಗಳನ್ನು ಮನಿಯಾರ್ಡರ್ ಮಾಡಿದೆ. ಸ್ವಾಮೀಜಿಯವರು ಪತ್ರ ಬರೆದು ನಿಧಾನವಾಗಿ ಸಾಲ ತೀರಿಸಬಹುದು. ಅಗತ್ಯವಸ್ತುಗಳನ್ನೂ ಮತ್ತು ವೃತ್ತಿಗೌರವಕ್ಕೆ ಬೇಕಾದ ಬಟ್ಟೆಗಳನ್ನು ಹೊಲಿಸಿಕೊಳ್ಳುವುದು ಎಂದು ಆದೇಶವಿತ್ತರು. ಸ್ವಾಮೀಜಿಯವರ ಆದೇಶದಂತೆ ನಡೆದುಕೊಂಡು ನಂತರ ಸಾಲ ತೀರಿಸಿದೆ. ಬಹುಶಃ ನನ್ನ ಅಭಿಪ್ರಾಯದಲ್ಲಿ ಯಾವುದೋ ಜನ್ಮದ ಒಂದು ಪುಣ್ಯಶಕ್ತಿಯೇ ಹೊರತು ಮಾನವ ಶಕ್ತಿಯಲ್ಲ ಈ ತಪೋಮೂರ್ತಿ.

**ಸತ್ಯಾಸತ್ಯತೆಯ ಪ್ರಬಲ ಪರೀಕ್ಷಕರು**

ಸ್ವಾಮೀಜಿ ಶಿಷ್ಯರ ಮೇಲಿರುವ ಪ್ರೀತಿಯನ್ನು ಯಾವ ಕಾರಣದಿಂದಲೂ ಕಳೆದುಕೊಳ್ಳುತ್ತಿರಲಿಲ್ಲ. ಪರೀಕ್ಷಿಸಿ ಪ್ರತಿಪಾದಿಸುವ ಶಕ್ತಿ ಬಲವಾಗಿತ್ತು. ದುರಾದೃಷ್ಟವಶಾತ್ ಒಂದು ಬಾರಿ ನಾನು ಈ ಪರೀಕ್ಷೆಗೆ ಸಿಕ್ಕೆ. ನನ್ನ ಊರಿನ ಹಲವು ಜನ ಬಂದು ನನ್ನ ಮೇಲೆ ಸಲ್ಲದ ಆರೋಪಗಳನ್ನು ಸ್ವಾಮೀಜಿಯವರ ಮುಂದೆ ಮಾಡಿದರು. ಸ್ವಾಮೀಜಿಯವರ ಮನಸ್ಸು ಕದಡುವಷ್ಟು ಆರೋಪಗಳು. ಆದರೆ ಸ್ವಾಮೀಜಿಯವರಿಗೆ ಅಂತರ್ಮುಖದೃಷ್ಟಿ ಬಹುತೀಕ್ಷ್ಣವಾದದ್ದು. ನನ್ನ ಭಕ್ತಿ ಶ್ರದ್ಧೆ ಯಥಾವತ್ತಾಗಿತ್ತು. ಹಲವಾರು ಸಾರಿ ನನ್ನನ್ನು ಪೂಜ್ಯರು ಪರೀಕ್ಷಾ ದೃಷ್ಟಿಯಿಂದ ನೋಡಿದರು. ಸ್ವಾಮೀಜಿಯವರ ಪರೀಕ್ಷೆಯಲ್ಲಿ ನಾನು ಉತ್ತೀರ್ಣನಾದೆ. ಆಂತರಿಕ ಪ್ರೇಮವು ನನ್ನನ್ನು ಕೂಗಿ ಕರೆಯಿತು. ಮಗು ತಾಯಿಯ ಮಡಿಲು ಸೇರುವಂತೆ ಪಾದಗಳಿಗೆ ನಮಸ್ಕರಿಸಿ ಎಂದಿನಂತಾದೆ.

**ನುಡಿದಂತೆ ನಡೆಯುವ ನಿಷ್ಠಾವಂತ**

ಸ್ವಾಮೀಜಿಯವರು ತಮ್ಮ ವಿದ್ಯಾರ್ಥಿಗಳ ಮೇಲೆ ಇಟ್ಟಿರುವ ಅಸೀಮ ಪ್ರೀತಿಗೆ ಸಾಕ್ಷಿ ಆಧಾರಗಳು ಅವರ ಪ್ರೀತಿ ಅನುಭವಿಸಿರುವ ನಮಗೆಲ್ಲರಿಗೂ ಗೊತ್ತು. ಒಂದು ಸಾರಿ ನಾನು ಚಿಕ್ಕಬಳ್ಳಾಪುರದ ಶಿಕ್ಷಣ ಕಾಲೇಜಿನ ಪ್ರಾಚಾರ್ಯನಾಗಿ ಒಂದು ಸಮಾರಂಭಕ್ಕೆ ಶ್ರೀಗಳವರನ್ನು ಆಹ್ವಾನಿಸಿದ್ದೆ. ಅಂದು ವಿಶೇಷವಾದ ಮಳೆ, ಸ್ವಾಮೀಜಿಯವರ ಆರೋಗ್ಯ ಕೆಟ್ಟಿತ್ತು ಎಂದು ತಿಳಿಯಿತು. ಸ್ವಾಮೀಜಿಯವರು ಸಮಾರಂಭಕ್ಕೆ ಕಾಲಕ್ಕೆ ಸರಿಯಾಗಿ ಬಂದೇಬಂದರು. ಬೇರೆ ಯಾರಾಗಿದ್ದರೂ ಈ ಸ್ಥಿತಿಯಲ್ಲಿ ಖಂಡಿತ ಬರುತ್ತಿರಲಿಲ್ಲ. ಆದರೆ ಅವರ ಕಾರ್ಯತತ್ಪರತೆ, ನಿಷ್ಠೆಗೆ ಮತ್ತು ಕೊಟ್ಟ ಮಾತಿಗೆ ತಪ್ಪದೆ ಇರುವುದು ಈ ಎಲ್ಲ ಉನ್ನತ ಆದರ್ಶ ಗುಣಗಳ ಕಳಶಪ್ರಾಯರು ಸ್ವಾಮೀಜಿ.

**ಪಾಹಿ ಎಂದು ಪ್ರಾರ್ಥಿಸಿದವರಿಗೆ ಪ್ರತ್ಯಕ್ಷದೈವ**

'ನೆನೆದವರ ಮನದಲ್ಲಿ ಇಷ್ಟಶಕ್ತಿ' ಎನ್ನುವುದನ್ನು ನಾನೊಮ್ಮೆ ಶ್ರೀಶ್ರೀಗಳನ್ನು ಕನಸಿನಲ್ಲಿ ಕಂಡು ನನ್ನ ಭವಿಷ್ಯಕ್ಕೆ ಹಾರೈಸಿದ ಒಂದು ಸನ್ನಿವೇಶವನ್ನು ಪ್ರಮಾಣಪೂರ್ವಕವಾಗಿ ನಿವೇದಿಸಿಕೊಳ್ಳುತ್ತಿದ್ದೇನೆ. ಸುಮಾರು ನಾಲ್ಕು ವರ್ಷಗಳ ಹಿಂದೆ ನನ್ನ ಜೀವನಕ್ಕೆ ಮೈಲಿಗಲ್ಲಾಗಿ ಹೊಸವೃತ್ತಿಗೆ ಆಯ್ಕೆಯಾದೆ. ನಿರಾಸೆ ಹೊಂದಿದ ಕೆಲವರು ನ್ಯಾಯಾಲಯದಲ್ಲಿ ನಮ್ಮ ವಿರುದ್ಧ ಕೇಸನ್ನು ದಾಖಲ್ಮಾಡಿದರು. ಜೀವನದಲ್ಲಿ ಪಡೆಯಬಹುದಾದ ಒಂದುವೃತ್ತಿ ಸಿಕ್ಕಿದಾಗಲೂ ತೊಂದರೆಯಾಯಿತಲ್ಲಾ! ಎಂದು ವ್ಯಾಕುಲದಿಂದ ಒಂದು ದಿನ ನಿದ್ದೆ ಮಾಡಿದೆ. ಸುಮಾರು ೪ ಗಂಟೆ ಬೆಳಗಿನ ಝಾವ ಶ್ರೀ ಶ್ರೀಗಳವರ ದರ್ಶನ ಮತ್ತು ಅಭಯ 'ಯಾರು ಏನೇ ಮಾಡಿದರೂ ನೀನು ಚಿಂತೆ ಮಾಡಬೇಡ. ನಿಮ್ಮ ಮೇಲೆ ಹಾಕಿರುವ ಕೇಸು ಊರ್ಜಿತವಾಗುವುದಿಲ್ಲ' ಎನ್ನುವ ಅಶರೀರವಾಣಿಯಾದಂತಾಯಿತು. ಅಭಯ, ನಾನು ಈ ಮಾತನ್ನು ನನ್ನ ಶ್ರೀಮತಿಗೆ ತಿಳಿಸಿ ಕೇಸಿನ ಬೆಳವಣಿಗೆಯನ್ನು ನೋಡುತ್ತಿದ್ದೆ. ಆದರೆ ಕೇವಲ ಹತ್ತು ತಿಂಗಳುಗಳಲ್ಲಿಯೇ ಕೇಸು ನಮ್ಮ ಪರವಾಗಿ ಖುಲಾಸೆಯಾಯಿತು, ಹೀಗೆ ನನ್ನಭಾಗದ ಭಗವಂತನೇ ಶ್ರೀಶ್ರೀಗಳು ಎಂದು ನನಗೆ ಭಾಸವಾಗುತ್ತದೆ.

**ಮಡಿಲ ಮಕ್ಕಳ ರಕ್ಷಾಕವಚ**

ಶ್ರೀಶ್ರೀಗಳವರ ಪ್ರೀತಿಯೇ ನಮ್ಮೆಲ್ಲರ ರಕ್ಷಾಕವಚ. ಇದು ನಮ್ಮೆಲ್ಲರ ಅಪೂರ್ವ ಭಾಗ್ಯ.

ಮಾತಾ ಮಮತೆಯು ವಿಶಾಲವಾದುದು, ಅನಂತ ಶರಧಿಗೂ ಮಿಗಿಲಹುದು.
ಎಲ್ಲಿಯೇ ಇರಲಿ ಎಂತಾದರೂ ಇರಲಿ, ನಿನ್ನೊಲುಮೆಯು ಎಂದಿಗೂ ನನಗಿರಲಿ,
ಪರ್ವತವಾದರೂ ಹಾರುವೆನು, ಸಾಗರವಾದರೂ ದಾಟುವೆನು,
ನಿನ್ನೊಲುಮೆಯ ನುಡಿಯೊಂದಿರಲಿ. ಆಶೀರ್ವದಿಸೌ ತಾಯೇ
ಮಾತೆಯು ಸವಿನುಡಿ ಮಾತೆಯ ಹಿತನುಡಿ. ಶ್ರೇಷ್ಠವು ಸಕ್ಕರೆ ಹಾಲಿನೊಲು.

ಎನ್ನುವ ಮಾತುಗಳು ಶ್ರೀಶ್ರೀಗಳು ತಮ್ಮ ಶಿಷ್ಯರ ಮೇಲಿಟ್ಟಿರುವ ಪ್ರೀತಿಯನ್ನು ಸಾರುತ್ತವೆ. ನನ್ನ ಜೀವನ ಸುಕೃತಪೋ ಎಂಬಂತೆ

ಸಾಗರದಾಚಿನ ಸಂಯುಕ್ತ ಸಂಸ್ಥಾನದ ವಿಶ್ವವಿದ್ಯಾನಿಲಯದಲ್ಲಿ ಸ್ನಾತಕೋತ್ತರ ಪದವಿಗೆ ಅಧ್ಯಯನ ಮಾಡುತ್ತಿದ್ದೆ. ಚಾತುರ್ಮಾಸಿಕ ಪರೀಕ್ಷೆಯೊಂದು ನನ್ನ ಪದವಿಯನ್ನು ನಿರ್ಧರಿಸುತ್ತಿತ್ತು. ಕಷ್ಟಪಟ್ಟು ವ್ಯಾಸಂಗ ಮಾಡಿದ್ದೆ. ಆದರೂ ಶ್ರೀಗಳವರ ಆಶೀರ್ವಾದಕ್ಕೆ ಬೇಡಿ ಪತ್ರ ಬರೆದೆ. ಶ್ರೀಗಳವರು ಮರುದಿನವೇ ನನಗೆ ಸಾಗರೋತ್ತರ ಪತ್ರಹಾಕಿ ನನ್ನ ಜಯಕ್ಕೆ ಆಶೀರ್ವಾದ ಕಳುಹಿಸಿದರು. ಪರೀಕ್ಷೆಯಲ್ಲಿ ನಾನು ಪ್ರಥಮ ಮತ್ತು ದ್ವಿತೀಯ ಶ್ರೇಣಿಯ ಅಂಕಗಳನ್ನು ಗಳಿಸಿ ಉತ್ತೀರ್ಣನಾದೆ. ನಾನು ಉತ್ತೀರ್ಣನಾದ ವಿಷಯ ಈಗಲೂ ಶಾಂತಚಿತ್ತದಿಂದ ಮೇಲಿಂದ ಮೇಲೆ ಜ್ಞಾಪಿಸಿಕೊಳ್ಳುತ್ತೇನೆ. ಶ್ರೀಗಳವರು ತಮ್ಮ ವಿದ್ಯಾರ್ಥಿಗಳ ಮೇಲೆ ಇಟ್ಟಿರುವ ಪ್ರೀತಿ ಅನಂತ ಶರಧಿಗೂ ಮಿಗಿಲಾದದ್ದು ಎನ್ನುವುದು ನನ್ನ ಭಾವನೆ.

**ಮಕ್ಕಳ ಅಭಿಪ್ರಾಯವನ್ನು ಮನ್ನಿಸಿ ಗೌರವಿಸುವ ಮಹಾತ್ಮ**

೧೯೫೫ರ ಜೂನ್‌ನಲ್ಲಿ ನಾನು ಶಿಕ್ಷಕನಾಗಲು ಬೇಕಾದ ಅಗತ್ಯ ಶೈಕ್ಷಣಿಕ ಅರ್ಹತೆ ಸಂಪಾದಿಸಿಕೊಂಡೆ. ಸರ್ಕಾರದಿಂದ ಶಿಕ್ಷಕ ವೃತ್ತಿಗೆ ಆಜ್ಞೆಯಾಯಿತು. ಹೊಸದಾಗಿ ಶಿಕ್ಷಕವೃತ್ತಿಯನ್ನು ಆರಿಸಿಕೊಂಡು ಕೆಲಸ ಪ್ರಾರಂಭಿಸಿದೆ. ಕೂಡಲೇ ಶ್ರೀಗಳವರಿಗೆ ಪತ್ರ ಬರೆದು ನಾನು ಆರಂಭಿಸಿದ ವೃತ್ತಿಯ ಬಗ್ಗೆ ತಿಳಿಸಿ ಆಶೀರ್ವಾದ ಬೇಡಿ ಪತ್ರ ಬರೆದೆ. ಸುಮಾರು ನಾಲ್ಕೈದು ದಿನಗಳು ಕಳೆದವು. ಶ್ರೀಗಳವರ ಆಶೀರ್ವಾದ ಪತ್ರ ಬಂತು: ಕೂಡಲೇ ಕ್ಷೇತ್ರಕ್ಕೆ ಹೊರಟು ಪ್ರೌಢಶಾಲೆಯ ಅಧ್ಯಾಪಕ ವೃತ್ತಿಗೆ ಸೇರಬೇಕೆಂದು ಆದೇಶ. ಬರುವ ಮೊದಲು ಮಾತಾಪಿತೃಗಳ ಅನುಮತಿ ಪಡೆದು ಬರುವುದು ಎಂದು ಪತ್ರದಲ್ಲಿ ಆದೇಶಿಸಲಾಗಿತ್ತು. ಸರ್ಕಾರಿ ಕೆಲಸದ ವ್ಯಾಮೋಹ ಮತ್ತು ಕೆಲವು ಅಂದಿನ ಪ್ರಕ್ಷುಬ್ಧ ಪರಿಸ್ಥಿತಿಗಳು ವೈಯಕ್ತಿಕವಾಗಿ ಪರಿಣಾಮ ಮಾಡಿದ್ದವು. ಆಗ ಶ್ರೀಗಳವರಿಗೆ ಪತ್ರ ಬರೆದು ದೂರದಲ್ಲಿಯೇ ಇದ್ದು ದಿವ್ಯಮೂರ್ತಿಯ ಸೇವೆ ಮಾಡಬೇಕೆಂದು ತೀರ್ಮಾನಿಸಿದ ಇರಾದೆಯನ್ನು ತಿಳಿಸಿದೆ. ಆಗ ಶ್ರೀಗಳ ಆಶೀರ್ವಾದ 'ಕ್ಷೇತ್ರದ ಸಿಹಿ ಅನುಭವಗಳು ನಿನ್ನ ಜೀವನಕ್ಕೆ ಬೆಳಕಾಗಿರಲಿ' ಎಂದು ಬಂದಿತು. ನಿಜಕ್ಕೂ ಈ ಸನ್ನಿವೇಶ ಶ್ರೀಗಳು ತಮ್ಮ ವಿದ್ಯಾರ್ಥಿಗಳ ಮೇಲೆ ಇಟ್ಟಿರುವ ಪ್ರೀತಿಯದ್ಯೋತಕವೇ ವಿನಾ ಮತ್ತೇನಿಲ್ಲ.

**ಅನ್ನ ಬುದ್ಧಿರಸಗಳನ್ನೆರವ ಈ ಕಾಮಧೇನು ಚಿರಕಾಲವಿರಲಿ**

ಶ್ರೀಶ್ರೀಗಳನ್ನು ದರ್ಶನ ಮಾಡುವುದೆಂದರೆ ನಮಗೆ ಈಗಲೂ ಅದೇ ಭಕ್ತಿ. ಉತ್ಸಾಹ, ಮಮತೆ. ಗೌರವ. ಶ್ರೀಗಳವರಿಗೂ ನಮ್ಮನ್ನು ಕಂಡಾಗ ಅದೇ ಮಮತೆ ಆನಂದಗಳು ಉಕ್ಕುವುದನ್ನು ಕಾಣುತ್ತೇವೆ. ಬಹು ಹರ್ಷಚಿತ್ತರಾಗಿ ಬರಮಾಡಿಕೊಂಡು ತಮ್ಮದೇ ಆದ ಸುಹಾಸಮಯ ಪೂರ್ಣ ರೀತಿಯಲ್ಲಿ ಯೋಗಕ್ಷೇಮ ಅಭ್ಯುದಯಗಳನ್ನು ವಿಚಾರಿಸಿ. ಬಂದ ಉದ್ದೇಶಗಳನ್ನು ಕೇಳಿ ಅವುಗಳನ್ನು ಚಿಂತಿಸಿ. ಮಥಿಸಿ ಪರಿಹಾರದ ಹಾದಿತೋರಿ. ಎಲ್ಲಾ ಕೆಲಸವಾದ ಮೇಲೆ 'ಊಟ ಮಾಡಿ ಹೋಗಿ' ಎಂಬ ಪ್ರಾಸಾದಿಕ ಆಶೀರ್ವಾದ ಕೇಳಿದರೆ 'ದುಂಬಿ ಕಮಲದ ಮಡಿಯಲ್ಲಿ,ಮೃದು ತಲ್ಪದ ಆಸರೆಯಲ್ಲಿ,ಮನದಣಿಯೆ ಉಂಡುಂಡು ಕೃತಜ್ಞತೆಗೆ ವಾಣಿಯಿಲ್ಲದೆ ಗುಂಯ್‌ಗುಟ್ಟುವಂತೆ' ಕಣ್ಣಾಲಿಯಲ್ಲಿ ಹೊರಹೊಮ್ಮುವ ಮಮತಾಶ್ರು ಬಿಂದುಗಳಿಂದ ಮೌನ ಮೂಕರಂತೆ ಬರಲಾರದೆ ಹಿಂದಿರುಗುತ್ತೇವೆ. ಈ ಗುರು-ಶಿಷ್ಯರ ಸಮಾಗಮ-ಅಗಲಿಕೆಗಳು 'ತೌರೂರ ತಿಟ್ಟ ಹತ್ತಿ ತಿರುಗಿ ನೋಡುವ. ಮಮತೆಯ ಮಗಳ ಕರುಳ ಮಿಡಿತದಂತಿರುತ್ತದೆ. ಮನ ಮಾರ್ದನಿಸುತ್ತದೆ.

ನೆನೆವುದಾದರೆ, ಗುರುವಂ ನೆನೆ. ಅಂತಾದರೆ ಆವ ಗುರುವಂ ನೆನೆವೆ ?  
ನೆನೆವುದೆನ್ನ ಮನ ಅಶನವಸನವನಿತ್ತು, ಜ್ಞಾನ ದೇಗುಲಕೆ ಕೊಂಡೊಯ್ದ  
ಶ್ರೀ ಸಿದ್ಧಗಂಗಾ, ಗುರು ಶ್ರೀಶ್ರೀ ಶಿವಕುಮಾರ ಗುರು ಪಾದವಂ.  
ಕಾಯಕಲ್ಪವನೊಂದುವುದು, ಈ ಗುರುವ ನೆನೆದೊಡೆ ಎನ್ನ  
ಮನ, ತಾಯನಗಲಿದ ಕರುವೊಲು, ಮಿಡಿವುದು. ಶ್ರೀ ಗುರುವಿನಡಿಗೆ ನಮೋ ನಮೋ.

ಕಾಣದ ದೇವರು ಊರು ಊರಲ್ಲೂ ನೂರಾರು. ಆದರೆ ಧರ್ಮಕರ್ಮಗಳ ಹಾದಿ ತೋರಿ, ಆ ದೇವರಡಿಗೆ ನಡೆಸಿವ ಈ ಪ್ರತ್ಯಕ್ಷ ಗುರುವೇ ನನ್ನ ಪಾಲಿನ ದೇವರು. ಎಲ್ಲ ರೀತಿಯಲ್ಲೂ ಹಿಂದುಳಿದ ಅಸಂಖ್ಯಾತ ಬಡಮಕ್ಕಳಿಗೆ ಕಾಮಧೇನು ಕಲ್ಪವೃಕ್ಷಗಳಾಗಿ ದಾರಿ ತೋರುತ್ತಿರುವ ಈ ಕ್ಷೇತ್ರ ಹಾಗೂ ಸ್ವಾಮೀಜಿಯವರ ಸೇವೆ ಅನಂತಕಾಲ ನಾಡಿಗೆ ಸಲ್ಲಲಿ ಎಂಬುದೇ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಪಾದಸನ್ನಿಧಿಯಲ್ಲಿ ನನ್ನ ಭಕ್ತಿಪೂರ್ವಕ ಪ್ರಾರ್ಥನೆ.

**ಕೆ. ಎನ್. ಭೀಮಯ್ಯ**  
ಪ್ರಿನ್ಸಿಪಾಲ್, ಜೂನಿಯರ್ ಕಾಲೇಜು,ಕೊರಟಗೆರೆ

## ಪಾವನ ಸಂಗಮ

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ॥  
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ॥

ಪರಶಿವನ ಕಳೆಯಾಗಿ ಸಂಚರಿಸಿ, ಇಲ್ಲಿ ಅಲ್ಲಿಗಳೆಂಬ ಮುಟ್ಟುವ ಸಮದಾರಿಯನ್ನು ಬೋಧಿಸಿ, ತಮ್ಮ ಸದಾಚಾರದಿಂದ ಜನತೆಯನ್ನು ಕರುಣಿಸಿದ ಶಿವಶರಣರು ಲೋಕವಂದ್ಯರು. ಅವರು ಕರ್ಮ, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಹಂತ ಹಂತವಾಗಿ ಹತ್ತಿ, ಕೈಲಾಸವನ್ನು ಮುಟ್ಟಿ ಶಿವಸಾಮರಸ್ಯ ಪಡೆದವರು. ಅಧರ್ಮವು ಧರ್ಮವನ್ನು ತೊತ್ತಳ ತುಳಿದಾಗ ಕಾಲಗರ್ಭದಲ್ಲಿ ಒಮ್ಮೊಮ್ಮೆ ಈ ಲೋಕಮಾನ್ಯರು ವಿರಳವಾಗಿ ಕಾಣಿಸಿಕೊಳ್ಳುತ್ತಾರೆ. ಈ ಗುಂಪಿಗೆ ಸೇರಿದ ಶಿವಶರಣ ಸಿದ್ಧಲಿಂಗೇಶ್ವರರು ತಪಗೈದ ತಾಣ ಸಿದ್ಧಗಂಗೆ. ಈ ವಿರಕ್ತಪೀಠವನ್ನು ಅಂದಿನಿಂದ ಇಂದಿನವರೆಗೆ ಪೂಜ್ಯಯೋಗಿಗಳ ಪರಂಪರೆಯು ಅಲಂಕರಿಸಿತು. ಇಲ್ಲಿನ ಆಶ್ರಮದಲ್ಲಿ ನಿರ್ಮಾಣಗೊಂಡ ಭಕ್ತಿಯ ವಾತಾವರಣದಲ್ಲಿ ದಿವ್ಯಜ್ಯೋತಿ ಬೆಳಗಿತು. ಭಯಭಕ್ತಿಗಳಿಂದ ಬಂದ ಭಕ್ತವೃಂದ ಪುನೀತವಾಯಿತು.

ಜೀವಿಗೆ ಕರ್ಮವು ನಿಯತ. ಉಸಿರಾಡುವುದೂ, ನೋಡುವುದೂ, ಕೇಳುವುದೂ ಕರ್ಮವೇ. ಆಶೆ, ಸ್ಮರಣೆಗಳೂ ಮಾನಸಿಕ ಕರ್ಮವೇ. ದೈಹಿಕ–ಮಾನಸಿಕ, ಅಂತರಂಗಿಕ–ಬಾಹ್ಯ ಹೀಗೆ ಕರ್ಮಗಳು ಸಾವಿರಾರು. ಜೀವಿಯು ತಿಳಿದೋ ತಿಳಿಯದೆಯೋ ಒಂದಲ್ಲೊಂದು ಕರ್ಮದಲ್ಲಿ ನಿರತವಾಗಿರುತ್ತದೆ. 'ನ ಹಿ ಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯಕರ್ಮಕೃತ್', ಮಾನವನೂ ಕರ್ಮದಿಂದಲೇ ಬಾಳಬೇಕು, ಬದುಕಬೇಕು. ಜೀವನಕ್ಕೆ ಕರ್ಮದ ಬೆಸುಗೆಯು ಅಭೇದ್ಯ. ಇದು ಅಂಟಿಕೊಂಡ ಬಂಧನವೂ ಆಗಬಲ್ಲದು ; ಕೈಲಾಸವನ್ನು ತಲುಪಿಸುವ ಸಾಧನವೂ ಆಗಬಲ್ಲದು. ಕರ್ಮಾಚರಣೆಯು ಒಂದು ಕಲೆ. ಅದರಲ್ಲಿ ಕೌಶಲವಿರಬೇಕು. ಆಗ ಅದು ಬಂಧನವಾಗದೆ ಬಿಡುಗಡೆಯಾಗುತ್ತದೆ; ಶೃಂಖಲೆಯಾಗದೆ ಆಭರಣವಾಗುತ್ತದೆ ; ಅಂತೆಯೇ ಯೋಗವೆನಿಸುತ್ತದೆ. 'ಯೋಗಃ ಕರ್ಮಸು ಕೌಶಲಂ' ಫಲವನ್ನು ಶಿವನಿಗೆ ಅರ್ಪಿಸಿ ಮುಕ್ತಸಂಗನಾಗಿ ಕರ್ಮವನ್ನು ಆಚರಿಸಬೇಕು. ಅವನಿಗೆ ಸಿದ್ಧಿ–ಅಸಿದ್ಧಿಗಳು ಸಮ. ಅವನಿಗೆ ದ್ವೇಷ್ಯರೂ ಇಲ್ಲ; ಪ್ರಿಯರೂ ಇಲ್ಲ. 'ಸಮತ್ವಂ ಯೋಗ ಉಚ್ಯತೇ', ಸಮತಾಗುಣವಿಲ್ಲದೆ ಕರ್ಮದ ಬಂಧನ ತೊಲಗದು. ಸುಡುವುದು ಬೆಂಕಿಯ ಪ್ರಕೃತಿ ; ಕರುಣಿಸುವುದು ಧರ್ಮದ ಪ್ರಕೃತಿ. ಚಂದ್ರನು ಹರ್ಮ್ಯ ಕುಟೀರಗಳ ಮೇಲೆ ಸಮವಾಗಿ ತಿಂಗಳನ್ನು ಚೆಲ್ಲುತ್ತಾನೆ ; ಬಡವ–ಬಲ್ಲಿದ, ಓದಿದವ–ಓದದವ, ಮೇಲುವರ್ಗದವ–ಕೀಳುವರ್ಗದವ ಮುಂತಾದ ಭೇದವಳಿಯದೆ ಸಮತಾಗುಣ ಸಿದ್ಧಿಸದು. ಜ್ಞಾನವು ಮುಸುಕಿರುವ ಮಾಯೆಯನ್ನು ಕಳಚುತ್ತದೆ. ಆಗ ಕರ್ಮವು ಶುದ್ಧವಾಗುತ್ತದೆ. ಕರ್ಮಲೇಪವು ತಪ್ಪುತ್ತದೆ :

'ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥

ಸಂನ್ಯಾಸದ ಸೋಗಿನಿಂದ ದೇವರು ಮತ್ತು ಧರ್ಮದ ಹೆಸರಿನಲ್ಲಿ ಭಿಕ್ಷುಕರ ತಂಡದ ನಿರ್ಮಾಣವಾಗಬಾರದು. ದುಡಿಯದ ಜನರಿಂದ ದೇಶ ಬರಡಾಗುತ್ತದೆ. ಸಂಸಾರಗಳು ಹಾಳಾಗುತ್ತವೆ. ಇಂತಹ ಜನರು ತಮ್ಮ ಸುಖವನ್ನಲ್ಲದೆ ದೇವರು ಮತ್ತು ಧರ್ಮಗಳನ್ನೂ ನಾಶಮಾಡುತ್ತಾರೆ.

'ಬ್ರಹ್ಮಕ್ಕೆ ಬಾಯ್ದೆರೆದು ಮಾತನಾಡಿ, ಪರ ಬೊಮ್ಮದ ವೇಷವ ನುಡಿದು, ಒಮ್ಮನ
ಅಂಬಲಿಯನಿಕ್ಕೆಂದು ಹಲುಬುತ್ತಾ ಹೊಲಬುಗೆಟ್ಟವರ ಕಂಡು, ಅವರಿಗೆ ಫಲಪದವಿಲ್ಲೆಂದ
ಅಂಬಿಗರ ಚೌಡಯ್ಯ'

ಕೈಕೆಸರಾದರೆ ಬಾಯಿ ಮೊಸರು. ಬೆವರು ಸುರಿಸಿ ದುಡಿದುದನ್ನು ಅರ್ಪಿಸಿದರೆ ಶಿವನಿಗೆ ತೃಪ್ತಿ.

'ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ
ದುರಾಸೆಯಿಂದ ಬಂದುದು ಅನರ್ಪಿತ'.

ಶ್ರೀ ಸಿದ್ಧಗಂಗಾ ಗುರುಪೀಠವನ್ನು ಅಲಂಕರಿಸಿದ ಭಕ್ತಿ, ಜ್ಞಾನ, ವೈರಾಗ್ಯಗಳ ನಿಧಿಯಾಗಿ ಕರ್ಮಯೋಗವನ್ನು ಮೆರೆದ ಮಹಾಶಿವಯೋಗಿ ಶ್ರೀ ಶಿವಕುಮಾರಸ್ವಾಮಿಗಳವರ ಲೋಕಕಾರುಣ್ಯವು ಅದ್ವಿತೀಯ. ಆತ್ಮೋದ್ಧಾರದ ಜೊತೆಗೆ ಲೋಕೋದ್ಧಾರದ ಅವರ ಪರಿಯು ಅದ್ಭುತ.

'ಲೋಕೋಽಯಂ ಕರ್ಮ ಬಂಧನಃ' ಸೂರ್ಯನೂ ಈ ನಿಯಮಕ್ಕೆ ಹೊರತಲ್ಲ. ಅವನು ಎಂದಿನಂತೆ ಮೂಡಿ ಮೂಡಲಸೆರಗನ್ನು ಮಾರೆತ್ತರ ಅಳೆದಿದ್ದಾನೆ. ಹಕ್ಕಿಗಳು ಗೂಡುಗಳನ್ನು ಬಿಡುತ್ತವೆ. ದನಕರುಗಳು ಎದ್ದುನಿಂತು ಮೈಮುರಿಯುತ್ತವೆ. ಲೋಕವು ನಿದ್ದೆ ಕಳೆದು ಕೆಲಸದಲ್ಲಿ ತೊಡಗಿದೆ.

ಟಪ್, ಟಪ್,

ಟಪ್, ಟಪ್,

ಎಲ್ಲರ ಕಿವಿಗಳು ಸದ್ದು ಬಂದ ಕಡೆಗೆ ತಿರುಗಿದವು. ಕ್ಷಣಕಾಲದಲ್ಲಿ ಸುಂದರ ಕೇಗುದುರೆಯೊಂದು ಬಂದು ಊರಮುಂದೆ ನಿಂದು ಕೆನೆಯಿತು. ಕಾಲಲ್ಲಿ ಮರದ ಆವುಗೆ, ಮೈಯಲ್ಲಿ ಕಾವಿನಿಲುವಂಗಿ, ಹಣೆಯಲ್ಲಿ ಭಸ್ಮತ್ರಿಪುಂಡ್ರ, ತಲೆಯಲ್ಲಿ ಕಾಷಾಯ

ಪಾವುಡ, ಮುಖದಲ್ಲಿ ಹೊರಚೆಲ್ಲುವ ದಿವ್ಯಕಳೆಗಳಿಂದ ರಾರಾಜಿಸುವ ಮಂಗಳಮೂರ್ತಿ ಶ್ರೀ ಶಿವಕುಮಾರಸ್ವಾಮಿಗಳವರು ಮೃದುವಾಗಿ ಕುದುರೆಯ ಮೈದಡವಿ ಕೆಳಗಿಳಿದರು. ಲೋಕಕಲ್ಯಾಣಕ್ಕಾಗಿ ಕಲ್ಯಾಣದ ಬಸವೇಶ್ವರರೇ ಗ್ರಾಮಕ್ಕೆ ಬಂದಂತಾಯಿತು. ಅರಳಿಕಟ್ಟೆಯ ಮೇಲೆ ಕುಳಿತು ಹಗ್ಗಗಳನ್ನು ಹೊಸೆಯುತ್ತಿದ್ದವರು.ಮರದ ನೆರಳಿನಲ್ಲಿ ನೇಗಿಲುಗಳಿಗೆ ಗುಳಗಳನ್ನು ತೊಡಿಸುತ್ತಿದ್ದವರು, ಜಗ್ಗನೆದ್ದು ನಿಂತರು. ಹೊಲಗದ್ದೆಗಳಿಗೆ ಹೊರಟಿದ್ದವರು ಓಡೋಡಿ ಬಂದರು. ನೀರು ತರಲು ಬಾವಿಗೆ ಹೊರಟಿದ್ದ ಹೆಂಗಸರು ಬಂದು ಕೊಡಗಳನ್ನು ಕೆಳಗಿಟ್ಟು ನಿಂತರು. ಸ್ವಾಮಿಗಳವರ ಸುತ್ತ ಗ್ರಾಮವು ಗುಂಪು ಕೂಡಿತು ; ಭಕ್ತಿಯಿಂದ ಅವರ ಕಾಲ್ಗೆರಗಿತು. ಶ್ರೀಗಳವರು ಮನದುಂಬಿ ಹರಸಿದರು ; ಒಬ್ಬೊಬ್ಬರನ್ನೂ ಹೆಸರಿಸಿ ಮಳೆ–ಬೆಳೆ. ಕಷ್ಟ–ಸುಖಗಳನ್ನು ವಿಚಾರಿಸಿದರು ; ಉತ್ತಮ ಬೇಸಾಯ, ಮಕ್ಕಳ ವಿದ್ಯಾಭ್ಯಾಸ ಮುಂತಾದ ವಿಷಯವಾಗಿ ಉಪಯುಕ್ತ ಸಲಹೆಗಳನ್ನಿತ್ತರು. ಪ್ರಶಾಂತರೂ ಪ್ರಸನ್ನರೂ ಆದ ಶ್ರೀಸ್ವಾಮಿಗಳವರ ದರ್ಶನ ಮತ್ತು ಮೃದು ಮಧುರ ಮಾತುಗಳಿಂದ ಹಳ್ಳಿಯ ಜನರ ಹೃದಯದಲ್ಲಿ ಹೊಸ ಬೆಳಕು ಮೂಡಿತು. ಜೀವನದಲ್ಲಿ ಭರವಸೆ ಚಿಗುರಿತು. ದೇಹದಲ್ಲಿ ದುಡಿಯುವ ಚೈತನ್ಯ ಉದಯಿಸಿತು.

ಸ್ವಾಮಿಗಳವರು ಆ ಗ್ರಾಮಕ್ಕೆ ಸೇರಿದ್ದ ತಮ್ಮ ಆಶ್ರಮದ ಗದ್ದೆಯ ಕಡೆ ಹೊರಟರು. ಊರಿನ ಹಿರಿಯರು ಜೊತೆ ನಡೆದರು. ರೈತರು ಕೆಸರುಗದ್ದೆಗಿಳಿದು ಆಗಲೇ ಪೈರನ್ನು ನೆಡುತ್ತಿದ್ದರು. ಸ್ವಾಮಿಗಳವರು ಬದುವಿನ ಮೇಲೆ ನಡೆದು ಕೆಲವರನ್ನು ಮಾತನಾಡಿಸಿ. ಕೆಲವರನ್ನು ಹಾಸ್ಯಮಾಡಿ. ಕೆಲವರನ್ನು ಹುರಿದುಂಬಿಸಿ ನಗುನಗುತ್ತ ತಾವೂ ಗದ್ದೆಗಿಳಿದರು. ಹರಸುವ ಕೈಗಳಲ್ಲಿ ಪೈರಿನ ತೆಕ್ಕೆಹಿಡಿದು ಜನರೊಡನೆ ಬೆರೆತು ಪೈರು ನೆಟ್ಟರು. ಆ ಜನರ ಉತ್ಸಾಹ ಕೋಡಿ ಒಡೆಯಿತು. ಗದ್ದೆಯಲ್ಲಿ ಹರ್ಷವು ಹರಿಯಿತು. ತಾಸಿನ ಕೆಲಸ ಅರ್ಧತಾಸಿನಲ್ಲಿ ಮುಗಿಯಿತು. ಮಾಡಿದ ಕೆಲಸ ಮಹಾದೇವನ ಪೂಜೆಯಾಯಿತು. ಬದುಕು ಬಂಗಾರವಾಯಿತು.

ನಿಷ್ಕರ್ಮಿಯಾಗಿ ಯಾವನೂ ಬಾಳಲಾರ. 'ಕಾರ್ಯತೇಹ್ಯವಶಃ ಕರ್ಮ ಸರ್ವಃ ಪ್ರಕೃತಿ ಜೈರ್ಗುಣೈಃ' ಶಿವನೇ ಆದರೂ ಕಾಯಕ ಮಾಡಬೇಕು. 'ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು'. ಗೀತಾಚಾರ್ಯನು 'ಉತ್ಸೀದೇಯುರಿಮೇ ಲೋಕಾಃನಕುರ್ಯಾಂ ಕರ್ಮಚೇದಹಂ' ಎಂದು ಸಾರಿದ್ದಾನೆ. ಕುರುಕ್ಷೇತ್ರದ ಯುದ್ಧವಿರಾಮ ಸಮಯದಲ್ಲಿ ಪಾಂಡವರು ತಮ್ಮ ಶಿಬಿರದಲ್ಲಿ ಪೂಜಾದಿಗಳಲ್ಲಿ ತೊಡಗಿದ್ದಾಗ ಕೃಷ್ಣನು ತನ್ನ ಪೀತಾಂಬರದಲ್ಲಿ ಬೇಯಿಸಿದ ಕಡಲೆಯನ್ನು ತುಂಬಿ ರಥದ ಕುದುರೆಗಳಿಗೆ ತಿನ್ನಿಸುತ್ತಿದ್ದನಂತೆ. 'ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದಡೂ ಮರೆಯಬೇಕು'. ಕೃಷಿಯ ಮಾಡಿ ಉಣ್ಣದೆ ಹಸಿವು ಹಿಂಗುತ್ತದೆಯೆ ? ಮಂತ್ರದ ಮಾವಿನಕಾಯಿ ಉದುರುತ್ತದೆಯೇ? ಕಾಯಕವೇ ಕೈಲಾಸವೆಂಬ ಮಾತಿನ ಮರ್ಮವನ್ನು ಶ್ರೀಗಳವರು ಅರುಹಿದ ಪರಿಯಿದು.

ದುಡಿಮೆಯನ್ನು ಮರೆಯಿಸುವ ಓದು ಮೊಂಡು ಆಯುಧ. ಅದರಿಂದ ಬಾಳು ಹಸನಾಗದು. ಆಶ್ರಮದ ವಿದ್ಯಾರ್ಥಿಗಳು ಸಂಜೆ ವೇಳೆಯಲ್ಲಿ ಯಾವುದಾದರೊಂದು ಕೆಲಸ ಮಾಡುವುದು ವಾಡಿಕೆ. ಒಂದು ದಿನ ಸಂಜೆ ಸ್ವಾಮಿಗಳವರು ಆಶ್ರಮದ ಬೆಟ್ಟದ ತಪ್ಪಲಿನ ಕಡೆಗೆ ಹೊರಟರು. ವಿದ್ಯಾರ್ಥಿಗಳು ಕಟ್ಟಡಕ್ಕಾಗಿ ಸೈಜು ಕಲ್ಲುಗಳನ್ನು ಎತ್ತಿನ ಗಾಡಿಯಲ್ಲಿ ಸಾಗಿಸುತ್ತಿದ್ದರು. ಗಾಡಿಯಲ್ಲಿ ಕಲ್ಲುಗಳನ್ನು ಗಿಟಕಿ ತುಂಬಲಾಗುತ್ತಿದ್ದಿತು. ಎತ್ತುಗಳು ಏದುಸಿರು ಬಿಡುತ್ತ ಸಾಗುತ್ತಿದ್ದವು. ಹುಡುಗರು ಅವುಗಳನ್ನು ಬಡಿಯುತ್ತಿದ್ದರು. ಸ್ವಾಮಿಗಳವರು ಅದನ್ನು ಕಂಡೂ ಕಾಣದವರಂತೆ ಕಲ್ಲುತುಂಬುವ ಸ್ಥಳಕ್ಕೆ ಬಂದರು. ಸ್ವಲ್ಪ ಹೊತ್ತಿನಲ್ಲಿ ಗಾಡಿಯು ಹಿಂದಿರುಗಿತು. ಬಾಲಕರೊಡನೆ ಸ್ವಾಮಿಗಳವರೂ ಕೂಡಿ ಹೆಚ್ಚಾಗಿಯೇ ಕಲ್ಲುಗಳಿಂದ ಗಾಡಿ ತುಂಬಿದರು. ಅವರು ಗಾಡಿ ಓಡಿಸುತ್ತಿದ್ದ ಬಾಲಕರನ್ನು 'ಹೊತ್ತಾಯಿತು, ಇನ್ನು ಎತ್ತುಗಳು ಬೇಡ, ನೀವೇ ಎಳೆದು ಬಿಡಿ' ಎಂದರು. ಆ ಹುಡುಗರು ನೊಗಹಿಡಿದು, ಎಳೆಯಲಾರದೆ ಬೆವರುತ್ತಿದ್ದರು. ಆಗ ಸ್ವಾಮಿಗಳವರು 'ಏಕೆ? ಎಳೆಯಿರಿ. ಮೂಕಪ್ರಾಣಿಗಳನ್ನು ಬಡಿಯುತ್ತಿದ್ದಿರಿ' ಎಂದು ಎಚ್ಚರಿಸಿ, ಗಾಡಿಯನ್ನು ನೂಕುವಂತೆ ಉಳಿದವರಿಗೆ ಹೇಳಿದರು. ಆಗ ಹುಡುಗರ ಅರಿವು ಕಣ್ಣುತೆರೆಯಿತು. 'ಸಾಕಾರ ನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬ್ರೊಮ್ಮ'.

ಸಿದ್ಧಗಂಗಾ ಗುರುಕುಲಾಶ್ರಮದ ಕೀರ್ತಿಯು ಭಾರತದಲ್ಲೆಲ್ಲಾ ಹರಡಿದೆ. ಕರ್ನಾಟಕಕ್ಕೆ ಬರುವ ಯಾತ್ರಿಕರು ತಪ್ಪದೆ ಇಲ್ಲಿಗೂ ಭೇಟಿಕೊಡುತ್ತಾರೆ. ಒಮ್ಮೆ, ಉತ್ತರಭಾರತದಿಂದ ಯಾತ್ರಿಕರ ತಂಡವೊಂದು ಬಂದಿಳಿಯಿತು. ಬೇಗ ಸ್ವಾಮಿಗಳವರ ದರ್ಶನ ಪಡೆಯಬೇಕೆಂಬ ತವಕ ಅವರಲ್ಲಿ ತುಂಬಿದ್ದಿತು. ಸ್ವಾಮಿಗಳವರು ಕಾಷಾಯವಸ್ತ್ರ ಧರಿಸಿ ಗಡ್ಡ ಬೆಳಸಿ ಯೋಗದಂಡ ಜಪಸರಗಳನ್ನೂ ಹಿಡಿದು, ವ್ಯಾಘ್ರಚರ್ಮದ ಮೇಲೆ ಕಣ್ಮುಚ್ಚಿ ಕುಳಿತಿರುತ್ತಾರೆಂದು ಆ ಯಾತ್ರಿಕರು ಭಾವಿಸಿದರು. ಅವರು ಅಲ್ಲಲ್ಲಿ ಅಡ್ಡಾಡಿದರು. ಅವರ ಕಲ್ಪನೆಯ ಮೂರ್ತಿ ಕಾಣಿಸಲಿಲ್ಲ, ಪಾಠಶಾಲೆಯಲ್ಲಿ ಪಕ್ಕದಲ್ಲಿ ಒಂದು ದೊಡ್ಡ ಮಾವಿನಮರವಿದ್ದಿತು. ಅದರ ನೆರಳಿನಲ್ಲಿ ಜನರ ಚಿಕ್ಕದೊಂದು ಗುಂಪಿದ್ದಿತು. ಬಿಳಿ ಅಂಗಿಗಳನ್ನು ತೊಟ್ಟಿದ್ದ ಬೋಳು ತಲೆಯ ಹುಡುಗರು ಮತ್ತು ಅವರ ನಡುವೆ ಕಾಷಾಯವಸ್ತ್ರಧಾರಿಯಾದ ಮಧ್ಯಮ ವಯಸ್ಸಿನವರೊಬ್ಬರು ಸೌದೆ ಸೀಳುತ್ತಿದ್ದರು. ಕೊಡಲಿ ಪೆಟ್ಟುಗಳ ಧ್ವನಿಯು ಆಶ್ರಮದ ಮೌನವನ್ನು ಸೀಳುತ್ತಿದ್ದಿತು. ಸಮರಸದ ಉಲ್ಲಾಸವು ಹರಿಯುತ್ತಿದ್ದಿತು. ಇದನ್ನು ಕಂಡ ಯಾತ್ರಿಕರ ತಂಡ ನಲಿ

ಯಿತು. ಸ್ವಾಮಿಗಳವರು ಎಲ್ಲಿದ್ದಾರೆಂದು ಅವರು ಒಬ್ಬ ಹುಡುಗನನ್ನು ಕೇಳಿದರು. ಆಗ ಕಾಷಾಯವಸ್ತ್ರದ ವ್ಯಕ್ತಿ 'ಆಶ್ರಮದ ಅಂಗಳದಲ್ಲಿ ಮಂಚದ ಬಳಿ ಕುಳಿತುಕೊಳ್ಳಿ, ಸ್ವಾಮಿಗಳು ದಯಮಾಡಿಸುತ್ತಾರೆ' ಎಂದು ಹೇಳಿತು. ಕೆಲವು ನಿಮಿಷಗಳಲ್ಲಿ ಮಹಾ ಸ್ವಾಮಿಗಳವರು ಬಂದು ಮಂಚದಲ್ಲಿ ಕುಳಿತರು. ಕಾದು ಕುಳಿತಿದ್ದ ಭಕ್ತರು ಎದ್ದು ಸಾಷ್ಟಾಂಗ ವಂದಿಸಿದರು. 'ಅವರೇ ಇವರು' ಗುಸುಗುಸು ಹಬ್ಬಿತು ಯಾತ್ರಿಕರಲ್ಲಿ. ಅವರು ಸೋಜಿಗದ ಸಮುದ್ರದಲ್ಲಿ ಮುಳುಗಿದರು. ವಂದಿಸಿದ ಯಾತ್ರಿಕರನ್ನು ಆದರದಿಂದ ಮಾತನಾಡಿಸಿ, ಊಟ ಮಾಡುವಂತೆ ಸ್ವಾಮಿಗಳವರು ತಿಳಿಸಿದರು. ಬೆಟ್ಟದ ತಡಿಯಲ್ಲಿ ನಿಸರ್ಗದ ನಡುವೆ ಗುರುಕುಲ, ಎಲ್ಲ ಕುಲ ಗೋತ್ರಗಳ ವಿದ್ಯಾರ್ಥಿವೃಂದ, ಊಟಕ್ಕೆ ದಾಸೋಹ, ಜ್ಞಾನಕ್ಕೆ ಶಾಲೆಗಳು, ಭಕ್ತಿಗೆ ದೇವಮಂದಿರ, ಕಾಯಕದ ವ್ರತ, ತಪಸ್ವಿಗಳೂ ವೈರಾಗ್ಯಸಂಪನ್ನರೂ ಆದ ಮಹಾಸ್ವಾಮಿಗಳು—ಇವನ್ನು ಕಂಡು ಯಾತ್ರಿಕರು ಮಂತ್ರಮುಗ್ಧರಾದರು.

ಕೆಲಸದಿಂದ ದೂರಸರಿದರೆ ನೈಷ್ಕರ್ಮ್ಯವು ಸಿದ್ಧಿಸದು. 'ನ ಕರ್ಮಣಾಮನಾರಂಭಾತ್ ನೈಷ್ಕರ್ಮ್ಯಂ ಪುರುಷೋಽಶ್ನುತೇ । ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ॥' ಮಠಮಂದಿರಗಳಲ್ಲಿ ನೆಲೆಸಿ, ಬಿನ್ನ ತೀರಿಸಿ, ಕಾಣಿಕೆಗೆ ಕೈಯೊಡ್ಡುವುದು ಸಂನ್ಯಾಸವಲ್ಲ. ಅದರಿಂದ ಕರ್ಮಬಂಧನದ ಬಿಡುಗಡೆಯೂ ದೊರೆಯದು.

'ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೇ ಅಯ್ಯ?'
'ಹಾವಿನ ಬಾಯ ಹಲ್ಲು ಕಳೆದು ಹಾವಾಡಿಸಬಲ್ಲರೆ
ಹಾವಿನ ಸಂಗವೇ ಲೇಸು ಕಂಡಯ್ಯ',

ಕರ್ಮತ್ಯಾಗವು ಕರ್ಮಬಂಧನವನ್ನು ಬಿಡಿಸಲಾರದು. ಫಲವನ್ನು ಶಿವಾರ್ಪಣ ಮಾಡಿ ಕರ್ಮವನ್ನಾಚರಿಸಿಯೇ ತೀರ ಬೇಕು. ಇದು ಕರ್ಮವನ್ನು ಮಾಡಿಯೂ ಮಾಡದ ಒಂದು ಪವಾಡ.

'ನಾನಾವ ಕರ್ಮಂಗಳ ಮಾಡಿದಡೆಯು, ಆ ಕರ್ಮಫಲ ಭೋಗವ ನೀ ಕೊಡುವೆ
ಎಂಬುದ ನಾ ಬಲ್ಲೆನು. ನೀ ಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರಿಯ ಮಾಡೆನು.'

ಮಾಡುವಾತನೂ ತಾನಲ್ಲ ; ನೀಡುವಾತನೂ ತಾನಲ್ಲ : ಕರ್ಮಫಲವೂ ತನ್ನದಲ್ಲ. ಈ ಎಚ್ಚರ ತಪ್ಪಿದರೆ—

'ಚಿಕ್ಕ ಸಂಸಾರವನು ಸಡಿಲಿಸಿ ಹೊಕ್ಕನಲ್ಲಾ ಹಿರಿಯ ಸಂಸಾರಕ್ಕೆ' ಎಂದಾಗುತ್ತದೆ.

ಕೆಲವರು ಕೆಲಸ ಮಾಡುವುದನ್ನು ಅಗೌರವವೆಂದು ತಿಳಿಯುತ್ತಾರೆ ಬೇಸಾಯಗಾರರನ್ನೂ ಕಾರ್ಮಿಕರನ್ನೂ ಕಡೆಗಾಣುತ್ತಾರೆ. ಕೆಲಸಗಳಲ್ಲಿ ಮೇಲು–ಕೀಳುಗಳೆಣಿಸುತ್ತಾರೆ. ದೇವರ ಹೆಸರಿನಲ್ಲಿ ಭಿಕ್ಷೆ ಬೇಡಿಯಾರು ; ಧರ್ಮದ ಹೆಸರಿನಲ್ಲಿ ದಕ್ಷಿಣೆ ಪಡೆದಾರು ; ಬೆವರು ಸುರಿಸಿ ದುಡಿಯಲಾರರು. ಇಂಥವರಿಗೆ ಇಹವೂ ಇಲ್ಲ ; ಪರವೂ ಇಲ್ಲ. ಈ ಜನರಿಗೆ ಮಾರ್ಗದರ್ಶನದ ಅಗತ್ಯವಿದೆ. ಶ್ರೀಗಳವರು ಅಡುಗೆ ಮಾಡುವುದು, ಬಡಿಸುವುದು, ಬತ್ತದ ಪೈರಿಗೆ ಗೂಡೆಯಿಂದ ನೀರು ಹಾಕುವುದು, ಪಾಠ ಹೇಳುವುದು–ಹೀಗೆ ಆಶ್ರಮದ ಎಲ್ಲ ಕೆಲಸಗಳಲ್ಲಿ ಭಾಗವಹಿಸುತ್ತಾರೆ. ಇದರಿಂದ ಕಾಯಕದ ಜಾಗೃತಿಯುಂಟಾಗುತ್ತದೆ. ಸುಂದರವೂ ಸುಪುಷ್ಟವೂ ಆದ ಸಮಾಜದ ನಿರ್ಮಾಣವಾಗುತ್ತವೆ.

'ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ಕ್ಷೀರದೊಳಗಣ ತುಪ್ಪ,
ಕ್ರಿಯಾಮಥನವಿಲ್ಲದೆ ಕಾಣ ಬಂದುದೇ ಕಾಷ್ಠದೊಳಗಣ ಅಗ್ನಿ,
ಇದು ಕಾರಣ ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ
ಮಹಂತಂಗೆ ಸತ್ಕ್ರಿಯಾಚರಣೆಯೇ ಸಾಧನ ಕಾಣಿ ಭೋ'

ಶ್ರೀ ಉದ್ದಾನಶಿವಯೋಗಿಗಳಿಂದ ಅನುಗ್ರಹ ಪಡೆದ ಶ್ರೀ ಶಿವಕುಮಾರಸ್ವಾಮಿಗಳವರು ದೊಡ್ಡ ವಿದ್ವಾಂಸರು ; ಜಗದ್ವಿಭೂತಿಗಳ ಸಂದೇಶಗಳನ್ನು ತುಲನಾತ್ಮಕವಾಗಿ ಪರಿಶೀಲಿಸಿದವರು ; ಸಕಲ ಧರ್ಮಗಳ ಸಾರವನ್ನು ತಿಳಿದವರು; ವಿಜ್ಞಾನ ಅಧ್ಯಾತ್ಮಗಳ ಸಹಯೋಗವನ್ನು ಬಲ್ಲವರು ; ಜನಜೀವನ ಸಮಸ್ಯೆಗಳನ್ನು ಅರ್ಥಮಾಡಿಕೊಂಡವರು. ಇಂಥ ಈ ವಿರಕ್ತಜೀವ ಲೋಕದ ದುಃಖವನ್ನು ನೋಡಿ ಮರುಕಗೊಂಡು ಎದ್ದು ನಿಂತಿತು. ಕರ್ಮ ಸೊಂಟ ಕಟ್ಟಿತು. ಜ್ಞಾನ ಕರ್ಮಗಳ ಕೂಟ ವೈರಾಗ್ಯದ ಕಿರೀಟ ಧರಿಸಿತು. ಲಿಂಗಾಂಗ ಸಾಮರಸ್ಯ ವೈರಾಗ್ಯದ ನಿಟುಕಿನಲ್ಲಿ ನಿಂದಿತು. ಈ ನಿಸ್ಸಂಗ ಶಿವಯೋಗಿಗಳು ಯೋಗಗಳ ಪಾವನ ಸಂಗಮವಾದರು. ಸಾರ್ವಜನಿಕ ವೇದಿಕೆಗಳಲ್ಲಿ ಅವರ ಅಮರವಾಣಿ ಮಾರ್ದನಿಗೊಂಡಿತು. ಅವರ ನೆಲೆಯು ದೀನ ದಲಿತರ ಪರಮಾವಲಂಬನವಾಯಿತು. ಶ್ರೀಗಳವರ ಆದರ್ಶ ಇಹಪರಗಳ ಸುವರ್ಣ ಸೇತುವೆಯಾಯಿತು.

'ವೇದಂಗಳಿಗೆ ಅಭೇದ್ಯನಾದ ಶಿವನ ಭೇದಿಸಿ ಕಂಡರು ನೋಡಾ ಶರಣರು.
ಶಾಸ್ತ್ರಂಗಳಿಗಸಾಧ್ಯನಾದ ಶಿವನ ಸಾಧಿಸಿ ಕಂಡರು ನೋಡಾ ಶರಣರು.'

ಮೈಸೂರು

ವಿದ್ವಾನ್ ಹೆಚ್. ಕೆ. ಸಿದ್ಧಗಂಗಯ್ಯ
ನಿವೃತ್ತ ಸಂಸ್ಕೃತ ಅಧ್ಯಾಪಕ.

## ತೋಳ ಬಂತು ತೋಳ

ಸುಮಾರು ನಲವತ್ತು ವರ್ಷಗಳ ಹಿಂದೆ ನಾನು ತುಮಕೂರಿನ ಕಾಲೇಜಿನಲ್ಲಿ ಇಂಟರ್ ಓದುತ್ತಿದ್ದೆ. ನನಗೆ ಶ್ರೀ ಸಿದ್ಧಗಂಗಾ ಮಠದಲ್ಲಿ ಶ್ರೀಶ್ರೀ ಶಿವಕುಮಾರಸ್ವಾಮಿಯವರ ದಯೆಯಿಂದ ಅಲ್ಲಿ ಊಟ ಮತ್ತು ವಸತಿಗೆ ಅನುಕೂಲವಿತ್ತು. ಸ್ವಾಮಿಯವರು ಬಹಳ ಶಿಸ್ತಿನಿಂದ ಹುಡುಗರನ್ನು ನೋಡಿಕೊಳ್ಳುತ್ತಿದ್ದರು. ಬೆಳಿಗ್ಗೆ ಐದು ಗಂಟೆಗೇ ಏಳಬೇಕು ಮತ್ತು ರಾತ್ರಿ ಒಂಬತ್ತೂವರೆ ಗಂಟೆಯ ನಂತರ ಮಲಗಬೇಕು. ಇದು ಕಡ್ಡಾಯ. ಉಲ್ಲಂಘಿಸಬಾರದೆಂದು ನಿಯಮವಿತ್ತು.

ನಮ್ಮ ರೂಮಿನಲ್ಲಿ ಅದೇ ಕಾಲೇಜಿನಲ್ಲಿ ಓದುತ್ತಿದ್ದ ಲಿಂಗಯ್ಯ ಎಂಬ ಹುಡುಗನು ಇದ್ದ. ಇವನಲ್ಲದೆ ಇನ್ನೂ ಮೂರು ಜನ ವಿದ್ಯಾರ್ಥಿಗಳು ಆ ರೂಮಿನಲ್ಲಿ ಇದ್ದೆವು. ಲಿಂಗಯ್ಯನಿಗೆ ರಾತ್ರಿ ಏಳೂವರೆಗೆ ಊಟ ಮಾಡಿ ರೂಮಿಗೆ ಬಂದರೆ ತೂಕಡಿಕೆ ಪ್ರಾರಂಭವಾಗುತ್ತಿತ್ತು. ಅವನನ್ನು ದಿನವೂ 'ಏ ಏಳೋ ಲಿಂಗಯ್ಯ. ಸ್ವಾಮಿಯವರು ಬಂದರು ಏಳೋ' ಎಂದು ತಿವಿದು ತಿವಿದು ಎಚ್ಚರಿಸುತ್ತಿದ್ದೆವು. ಎಚ್ಚರಿಸುವುದೇನು ಪೀಡಿಸುತ್ತಿದ್ದೆವು ಅಂತಲೇ ಹೇಳಬೇಕು. ಅವನು ಸ್ವಲ್ಪ ದಿನ ಗಾಬರಿಯಿಂದ ಏಳುತ್ತಿದ್ದ. ಕೊನೆಕೊನೆಗೆ ನಾವು ಸುಮ್ಮನೆ ಹೇಳುತ್ತಿದ್ದೇವೆಂದು ಎಷ್ಟು ತಿವಿದರೂ ಏಳುತ್ತಿರಲೇ ಇಲ್ಲ, ಅಲ್ಲಾಡುತ್ತಿರಲೂ ಇರಲಿಲ್ಲ.

ಒಂದು ದಿನ ಹೀಗೆ ನಾವು ಓದುತ್ತಾ ಕುಳಿತಿದ್ದೆವು. ರಾತ್ರಿ ಸುಮಾರು ಒಂಬತ್ತು ಗಂಟೆಗೆ ಸ್ವಾಮಿಯವರು ಎಂದಾದರೂ ಒಮ್ಮೊಮ್ಮೆ ಹುಡುಗರು ಎದ್ದಿರುವರೋ ಇಲ್ಲವೋ ಎಂದು ನೋಡಲು ಬರುತ್ತಿದ್ದಂತೆ, ಅಂದೂ ಬಂದರು. ಲಿಂಗಯ್ಯ ಯಥಾ ಪ್ರಕಾರ ಮಲಗಿ ಗೊರಕೆ ಹೊಡೆಯುತ್ತಿದ್ದ. ಸ್ವಾಮಿಗಳು ಬಾಗಿಲಲ್ಲಿ ಬಂದು ನಿಂತರು. ನಾವು ಗಾಬರಿಯಿಂದ 'ಲೇ ಲಿಂಗಯ್ಯ ಏಳೋ, ಸ್ವಾಮಿಯವರು ಬಂದವರೇ, ಏಳೋ' ಎಂದು ಪಿಸುಗುಟ್ಟುತ್ತಾ ಎಬ್ಬಿಸಲು ಪ್ರಯತ್ನಿಸಿದೆವು. ಉಹೂಂ, ಲಿಂಗಯ್ಯ ಜಪ್ಪಯ್ಯ ಎಂದರೂ ಕದಲಲೇ ಇಲ್ಲ. ಜೋರಾಗಿ ಅಲುಗಾಡಿಸಿದಾಗ ಅವನಿಗೆ ಎಚ್ಚರವಾಯಿತು. ಮುಸುಕಿನಲ್ಲಿಯೇ ಹೇಳಿದ 'ಏ ಏನ್ರೋ ಅದು, ಯಾಕೆಸತಾಯಿಸ್ತಿರೋ' ಎಂದ. ಕೋಪದಿಂದಲೇ, 'ಸ್ವಾಮಿಯವರು ಬಂದಿದ್ದಾರೆ ಏಳೋ' ಎಂದು ನಾವು ಪಿಸುಗುಟ್ಟಿದರೆ ಅವನು ಜೋರಾಗಿಯೇ 'ಬೋ.........ಮಕ್ಕಳು, ನನ್ನ ನಿದ್ದೆ ಕೆಡಿಸ್ತಾರೆ. ಸ್ವಾಮಿ ಅಂತೇ ಸ್ವಾಮಿ. ಯಾವ ಸ್ವಾಮಿಗಳೋ? ಅವರಿಗೇನು ಬೇರೆ ಕೆಲಸ ಇಲ್ವಾ' ಎಂದು ಸಿಡುಗುಟ್ಟುತ್ತ ಮುಸುಕು ತೆಗೆದ.

ಸ್ವಾಮಿಯವರು ಇವನ ಮಾತನ್ನು ಕೇಳುತ್ತ ಬಾಗಿಲಲ್ಲಿ ನಿಂತಿದ್ದವರು ಶಾಂತವಾಗಿ ಹೇಳಿದರು. 'ಲಿಂಗಯ್ಯಾ, ಏಳಪ್ಪ, ಏಳೋ' ಎಂದು ಸ್ವಲ್ಪ ಎತ್ತಿದ ಧ್ವನಿಯಲ್ಲಿ ಕೂಗಿದರು. ಸ್ವಾಮಿಗಳ ಮಾತನ್ನು ನಿಜವಾಗಿಯೇ ಕೇಳಿದ ಲಿಂಗಯ್ಯನಿಗೆ ಗಾಬರಿಯಾಯಿತು. ಕಂಬಳಿಯನ್ನು ಪಕ್ಕಕ್ಕೆ ಎಸೆದವನೇ 'ಅಯ್ಯಯ್ಯಪ್ಪೋ, ಅಯ್ಯಯ್ಯಪ್ಪೋ ಇನ್ನು ಬಿಡ್ತಾರೇನಪ್ಪೋ' ಎಂದವನೇ ಒಂದೇ ಉಸಿರಿಗೆ ರೂಮಿನಿಂದಾಚೆ ನೆಗೆದು ಓಡಿ ಕತ್ತಲಲ್ಲಿ ಮರೆಯಾಗಿಯೇ ಬಿಟ್ಟ. ಸ್ವಾಮಿಯವರು 'ಬಾರೋ ಲಿಂಗಯ್ಯ ಬಾರೋ' ಎಂದು ಕೂಗುತ್ತಲೇ ಇದ್ದರು.

ಸ್ವಾಮಿಯವರ ಅಪ್ಪಣೆಯಂತೆ ಅವನನ್ನು ಕತ್ತಲಲ್ಲಿ ಹುಡುಕಲು ನಾವೆಲ್ಲಾ ಹೋದರೂ ಅವನು ಸಿಕ್ಕಲಿಲ್ಲ. ಸ್ವಾಮಿಯವರು ಏನು ಮಾಡಿ ಬಿಡುತ್ತಾರೋ ಎಂದು ಹೆದರಿ ಅವನು ಆ ರಾತ್ರಿ ಹೇಗೋ ಕಳೆದು ಮಾರನೇ ದಿನ ಊರಿಗೆ ಹೋಗಿದ್ದ. ಎಂಟು ದಿನದ ನಂತರ ಅವನ ತಂದೆತಾಯಿಗಳು ಅವನನ್ನು ಮಠಕ್ಕೆ ವಾಪಸ್ಸು ಕರೆದುಕೊಂಡು ಬಂದರು. ಭಯದಿಂದ ಅವನು ನಡುಗುತ್ತಿದ್ದ. ಸ್ವಾಮಿಯವರು ಅವನಿಗೆ ಏನು ಶಿಕ್ಷೆ ಕೊಡುತ್ತಾರೋ ಎಂದು ನಾವೆಲ್ಲಾ ನೋಡುತ್ತಿದ್ದೆವು. ಲಿಂಗಯ್ಯ ಸ್ವಾಮಿಯವರ ಚರಣಗಳ ಮೇಲೆ ತಲೆಯಿಟ್ಟು ಬಿಕ್ಕಳಿಸುತ್ತಾ ಪಾದಗಳನ್ನು ಗಟ್ಟಿಯಾಗಿ ಹಿಡಿದಿದ್ದಾನೆ. ಸ್ವಾಮಿಯವರು ಮುಗುಳುನಗುತ್ತಾ 'ಲಿಂಗಯ್ಯ, ಓದೋ ಹುಡುಗರು ಹಾಗೆ ನಿದ್ದೆ ಮಾಡುತ್ತಾರೇನೋ, ಹಾಗೆ ಮಾಡಬಾರದು. ಹೋಗು ಚೆನ್ನಾಗಿ ಓದಿ ಬುದ್ಧಿವಂತನಾಗು' ಎಂದು ಕರುಣೆಯಿಂದ ಆಶೀರ್ವದಿಸಿ ಕಳುಹಿಸಿದರು.

ಇಂಥಾ ಕರುಣಾಹೃದಯಿ ಶ್ರೀಶ್ರೀ ಸ್ವಾಮಿಯವರಿಗೂ, ನಮ್ಮಂಥವರಿಗೆಲ್ಲಾ ಆಸರೆಯಾಗಿರುವ ಶ್ರೀ ಮಠಕ್ಕೂ ಶರಣು, ಶರಣು.

ಎಂ. ಮರಿಯಪ್ಪ
ಎಗ್ಝಿಕ್ಯೂಟಿವ್ ಇಂಜಿನಿಯರ್
ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ

೭-೫-೭೯
ಬೆಂಗಳೂರು

## ಶ್ರೀಶ್ರೀಗಳವರ ತಾತ್ತ್ವಿಕ-ಸೂಕ್ಷ್ಮಕಾಯ

ವೀರಶೈವ ಮಠಗಳು ಕನ್ನಡನಾಡಿನಲ್ಲಿ ಸರಿಸುಮಾರು ಹಳ್ಳಿಗೊಂದರಂತೆ ಇರಬಹುದು. ಈ ಮಠಗಳಲ್ಲಿ ಪರಂಪರಾಗತ ಸ್ವಾಮಿಗಳವರೂ ಇರಬಹುದು. ಆದರೆ, ಸಾಮಾಜಿಕ, ಧಾರ್ಮಿಕ ಹಿತದೃಷ್ಟಿಯಿಂದ ಹಾಗೂ ಪುರೋಗಾಮಿತ್ವ ದೃಷ್ಟಿಯಿಂದ ಸೇವೆ ಕೈಗೊಂಡಿರುವ ಮಠ ಯಾವುದೂ ಇಲ್ಲ ಎಂಬುದಂತೂ ಸತ್ಯ. ಇದಕ್ಕೆ ಕಾರಣವೇನೇ ಇದ್ದರೂ, ಮುಖ್ಯವಾಗಿ ಅಶನ-

ವಸತಿಗಳನ್ನಿತ್ತು, ಪರಂಪರಾಗತ ಹಾಗೂ ಆಧುನಿಕ ಈ ಉಭಯ ರೀತಿಯ ವಿದ್ಯಾಭ್ಯಾಸವನ್ನು ನೀಡುವ ಮಠಗಳು ಬೆರಳೆಣಿಕೆ ಯಷ್ಟು. ಇಂತಹವುಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವು ಶಿರೋಮಣಿ.

ಈ ಪವಿತ್ರ ತಪೋಭೂಮಿಯಲ್ಲಿ ಸಾಗಿಬಂದ ಪರಂಪರೆಯಂತೆ ಅಧಿಕಾರವನ್ನು ವಹಿಸಿಕೊಂಡಿರುವ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಕೇವಲ ವ್ಯಕ್ತಿಯಂತೂ ಅಲ್ಲ. ಅದರೆ ಒಂದು ಅತ್ಯದ್ಭುತ ಶಕ್ತಿ, ಅಂತೆಯೇ ಒಂದು ಅವರ್ಣನೀಯವೂ ಭಾವಗೋಚರವೂ ಆದ 'ಪರತತ್ತ್ವ'.

ಮಹಾಕವಿ ಬಾಣನು ತಪಸ್ಸಿನ ಪ್ರಭಾವ, ಸತ್ಪುರುಷರ ಸ್ವಭಾವಾದಿಗಳನ್ನು ಹೀಗೆ ವಿವರಿಸಿದ್ದಾನೆ:-

೧) ಪ್ರಾಯೇಣ ಅಕಾರಣ ಮಿತ್ರಾಣಿ ಅತಿಕರುಣಾರ್ದ್ರಾಣಿ ಚಸದಾಖಲು ಭವಂತಿ ಸತಾಂ ಚೇತಾಂಸಿ (ಸತ್ಪುರುಷರ ಮನಸ್ಸು ಯಾವ ಕಾರಣವನ್ನೂ ಬಯಸದೆ ಮೈತ್ರಿ ಹೊಂದುವಂತಹುದು ಮತ್ತು ಎಂದೆಂದಿಗೂ ದಯಾರಸದಿಂದ ತುಂಬಿರು ವಂತಹದು.) ೨) ಅಹೋ ಪ್ರಭಾವಸ್ತಪಸಾಂ (ತಪಸ್ಸುಗಳ ಪ್ರಭಾವ ಆಶ್ಚರ್ಯಜನಕ.) ೩) ...ಪ್ರತನುತಪಸಾಮಪಿ ತೇಜಃ ಪ್ರಕೃತ್ಯಾದುಃಸಹಂ ಭವತಿ (ಅಲ್ಪ ತಪಸ್ಸುಳ್ಳವರ ತೇಜಸ್ಸೂ ಸ್ವಾಭಾವಿಕವಾಗಿಯೇ ಸಹಿಸಲಸಾಧ್ಯ. ಇನ್ನು ಪ್ರಭೂತ ತಪಸ್ಸುಳ್ಳ ವರ ವಿಷಯದಲ್ಲಿ ಹೇಳುವುದಿನ್ನೇನು.?) ೪) ನಾಸ್ತಿ ಖಲ್ವಸಾಧ್ಯಂನಾಮ ತಪಸಾಂ (ತಪಸ್ಸುಗಳಿಗೆ ಅಸಾಧ್ಯವಾದುದು ಯಾವುದೂ ಇಲ್ಲ) ಇತ್ಯಾದಿ. ಈ ಎಲ್ಲವೂ ಶ್ರೀಶ್ರೀಗಳವರ ವಿಷಯದಲ್ಲಿ ಅನ್ವರ್ಥವಾಗಿವೆ.

ನಿಗೂಢವಾದ ತಪಸ್ಸು, ಬೆಳಗುವ ತೇಜಸ್ಸು, ಭಕ್ತರನ್ನು ತಣಿಸುವ ಉದಾರ ಮನಸ್ಸು, ಮೊದಲಾದವು ಶ್ರೀಶ್ರೀಗಳವರ ದಿವ್ಯತ್ವವನ್ನು ಪ್ರಕಟಗೊಳಿಸುತ್ತಿವೆ.

ಶ್ರೀಶ್ರೀಗಳವರು ಸ್ಥೂಲಕಾಯ-ಸೂಕ್ಷ್ಮಕಾಯಗಳೆಂಬ ಎರಡು ಕಾಯವುಳ್ಳವರು. ಕೇವಲ ಶ್ರೀಗುರುವೆಂಬ ಭಾವನೆ ಯಿಂದ ಸ್ಥೂಲ ಕಾಯಕ್ಕೆ ಗೌರವವನ್ನು ಸಮರ್ಪಿಸಬಹುದಾದರೂ, ಅಂತರಿಕ ಪರಿಶುದ್ಧಿ, ಗುರುಪಾದ ಸೇವಾಕಾಂಕ್ಷೆ, ಆತ್ಮ ಯೋಗಾದಿಗಳುಳ್ಳವರಿಗೆ ಶ್ರೀಶ್ರೀಗಳವರಲ್ಲಿ ಗೋಚರಿಸುವುದು ಸೂಕ್ಷ್ಮಕಾಯ. ಅದನ್ನರಿಯುವುದು ಸಾಮಾನ್ಯರಿಗೆ ಸುಲಭ ಸಾಧ್ಯವಲ್ಲ.

ವೀರಶೈವಧರ್ಮದಲ್ಲಿ ಪ್ರಚುರವಾಗಿರುವ ಅಷ್ಟಾವರಣಗಳ ಪೈಕಿ ಗುರು-ಲಿಂಗ-ಜಂಗಮವು ಪೂಜ್ಯ ವಸ್ತುವೆನ್ನಲಾ ಗಿದೆ. ಇವರಲ್ಲಿ ಕಾರ್ಯಭೇದದಿಂದ ಈ ಭೇದವೇ ಹೊರತು ವಸ್ತುತಃ ಭೇದವಿಲ್ಲವೆಂಬ ಅಭಿಪ್ರಾಯವೂ ಪ್ರಸಿದ್ಧವಷ್ಟೆ! ಈ ದೃಷ್ಟಿಯಿಂದ ಶ್ರೀಶ್ರೀಗಳವರನ್ನು ಪರಿಶೀಲಿಸಿದಾಗ-ಉಪದೇಶ ನೀಡುವ ಸಂದರ್ಭದಲ್ಲಿ ಶ್ರೀಗುರುವೂ, ಪೂಜೆ ಕೈಗೊಳ್ಳುವಾಗ ಶ್ರೀಲಿಂಗವೂ, ಅನುಗ್ರಹಿಸುವ ಸಂದರ್ಭದಲ್ಲಿ ಶ್ರೀ ಜಂಗಮವೂ—ಹೀಗೆ ಈ 'ತ್ರಿವಿಕ್ರಮತ್ವ' ಶ್ರೀಶ್ರೀಗಳವರಲ್ಲಿ ಇರುವುದನ್ನು ಎಲ್ಲರೂ ಅರಿಯಬಹುದಾಗಿದೆ.

ದೈವಭಕ್ತಿಯುಳ್ಳವರಿಗೆ ದೈವದೊಲುಮೆ ದೊರಕೊಳ್ಳುವಂತೆ, ಶ್ರೀಶ್ರೀಗಳವರ ವಿಷಯದಲ್ಲಿ, ಶ್ರದ್ಧಾ-ಭಕ್ತಿಗಳುಳ್ಳ ವರಿಗೆ ಶ್ರೀಶ್ರೀಗಳವರ 'ನೈಜತತ್ತ್ವ' ಹೃದಯಗೋಚರವಾಗುತ್ತದೆ. ಆದ್ದರಿಂದಲೇ ವೇದಾಂತಿಗಳು 'ಪರತತ್ತ್ವ'ವನ್ನು 'ಸರ್ವಾಂತರ್ಯಾಮಿ' ಎಂದು ಕರೆದರು. ಶ್ರೀಶ್ರೀಗಳವರ 'ಸೂಕ್ಷ್ಮಕಾಯತೆ' ನಿಗ್ರಹಾನುಗ್ರಹ ಸಮರ್ಥವಾದುದು ; ಅಘಟಿತ ಘಟನಾ ಸಾಮರ್ಥ್ಯವುಳ್ಳದ್ದು ; ಅವರ್ಣನೀಯವಾದುದು ಮತ್ತು ಅನುಪಮವಾದುದು ; ಮೇಲಾಗಿ ಅನುಭವೈಕವೇದ್ಯವಾ ದುದು. ಇದು ಶ್ರೀಶ್ರೀಗಳವರ ಉಪಾಸಕರ ಅನುಭವಕ್ಕೆ ವೇದ್ಯವಿರಬಹುದು.

ಬ್ರಹ್ಮಸೃಷ್ಟಿಯಲ್ಲಿ ಅನೇಕ ಜೀವರುಗಳು ಜನಿಸಿದಂತೆ ನಾನೂ ಜನಿಸಿದೆ. ಶ್ರೀಗುರುಕೃಪೆ ತನ್ನ ಸನ್ನಿಧಿಗೆ ನನ್ನನ್ನು ಸೆಳೆಯಿತು. ಹತ್ತಾರು ವರ್ಷಗಳು ಶ್ರೀ ಸನ್ನಿಧಿಯಲ್ಲಿ ಅಭ್ಯಾಸಮಾಡಿ ಜೀವನದ ಮಾರ್ಗಕ್ಕೊಂದು ಒಂದು ವೃತ್ತಿಯನ್ನೂ ಶ್ರೀ ಗುರುಕೃಪೆಯಿಂದಲೇ ಕೈಗೊಂಡೆ. ನನ್ನ ಜೀವನದ ಈವರೆಗಿನ ಆಗು-ಹೋಗುಗಳಲ್ಲಿ ನಾನು ಅದೆಷ್ಟೋ ಸಿಹಿ-ಕಹಿಗಳನ್ನು ನುಂಗಿರಬಹುದು. ಈ ಎಲ್ಲ ಸಂದರ್ಭಗಳಲ್ಲಿ ಶ್ರೀ ಗುರುಕಾರುಣ್ಯರಕ್ಷೆ ನನ್ನನ್ನು ಬೆಂಬಿಡದೆ ಹರಸಿದೆ, ಕರುಣಿಸಿದೆ. ಇವರಲ್ಲಿ ಉತ್ಪ್ರೇಕ್ಷೆ-ಅತಿಶಯೋಕ್ತಿ-ಈ ಯಾವುದೂ ಇಲ್ಲ. ಕೇವಲ ಇದು ಶ್ರೀಗುರುಮಹಿಮೆ.

ಮಾನಸಿಕ ತೊಂದರೆ-ಗೊಂದಲಗಳ ಸಂದರ್ಭದಲ್ಲಿ ಶ್ರೀಗುರುಧ್ಯಾನ ಮಾಡುತ್ತಾ ಮಲಗುವುದು ನನ್ನ ರೂಢಿ. ಇಂತಹ ಪರಿಸ್ಥಿತಿಗಳಲ್ಲಿ ಶ್ರೀಶ್ರೀಗಳವರ ದಿವ್ಯಾಕೃತಿ ಸ್ವಪ್ನದಲ್ಲಿ ಗೋಚರಿಸಿ ಜೀವನ ಸಮಸ್ಯೆಗಳಿಗೆ ಪರಿಹಾರಸೂತ್ರವನ್ನು ಸೂಚಿಸಿ, ಧೈರ್ಯವನ್ನು ತುಂಬಿ, ಆಶೀರ್ವದಿಸಿ ಅನುಗ್ರಹಿಸಿರುವ ಸನ್ನಿವೇಶಗಳದೆಷ್ಟೋ! ಇವು ಆ ಪರತತ್ತ್ವಕ್ಕೇ ವೇದ್ಯ.

ಪೂಜಾಕಾಲದಲ್ಲಿ ಧ್ಯಾನಮಗ್ನನಾಗಿದ್ದಾಗಲೂ ಗೋಚರಿಸಿ ಅನುಗ್ರಹಿಸಿದೆ, ಈ ದಿವ್ಯ ಶ್ರೀಗುರುತಪಃಪ್ರಭೆ.

'ಹರ ಮುನಿದರೆ ಗುರುಕಾಯ್ವ; ಗುರು ಮುನಿದರೆ ಆರು ಕಾಯ್ವರು?' 'ಶಿವೇ ರುಷ್ಟೇ ಗುರುಸ್ತ್ರಾತಾ, ಗುರೌರುಷ್ಟೇ ನ ಕಶ್ಚನ' ಎಂಬುದು ಶಿವಗೀತೆಯ ವಾಕ್ಯ. ಆದರೆ, ರಕ್ಷಕನಾದ ಶ್ರೀಗುರುವೇ ಕೋಪಕೊಂಡರೂ ಸಹ, ನಮ್ಮ ಅಚಲವಾದ ಭಕ್ತಿ ವಿಶ್ವಾಸಗಳಿಂದ, ಅಂತರಿಕ ತಪಸ್ಸಿನಿಂದ, ಶ್ರೀಗುರುವಿನ ಕೋಪವನ್ನು ಶಮನಗೊಳಿಸುವುದಷ್ಟೇ ಅಲ್ಲದೆ, ಶ್ರೀಗುರುತತ್ತ್ವ

ALL INDIA VEERSHAIVA MAHASABHA

18th SESSION, BOMBAY

# अखिल भारत वीरशैव महासभा

१८ वे अधिवेशन, मुंबई

## सिद्ध गंगेचे श्रीशिवकुमार महास्वामीजी "आधुनिक विवेकानंद"

पुण्यक्षेत्र असलेले-सिद्धगंगा गाव बंगलोर शहरापासून ४० मैलावर आहे. नैसर्गिक दृष्ट्या सुंदर व आदर्श असून सर्व स्थरांतील लोकांनी गौरविलेले आहे. ते भारतमातेच्या मुकुटातील हिऱ्याप्रमाणे व कर्नाटकाचा जणू कस्तुरी टिळाच या प्रमाणे चमकत आहे. सिद्धगंगा क्षेत्र पाहिलेले व त्याबद्दल ऐकलेले नसतील असे क्वचितच लोक मिळतील.

कलियुगात अधर्म, अन्याय, कुकर्म इत्यादिमुळें शैवधर्म कमकुवत होत असताना अनेक धर्म उद्धारकांनी श्रम घेऊन नास्तीकता नाहीशी केली. चौदाव्या शतकाचे सुरवातीपासून श्री गोसल सिद्धेश्वर, श्री तोंट्य सिद्धलिंगेश्वर, श्री शानानंदजी श्री शंकराचार्यजी, श्री. गुब्बी चन्न बसवेश्वर इत्यादि प्राचीन युगपुरुषांच्या तोडीचे श्री शिवकुमार महास्वामी आहेत असे म्हटल्यास अतिशयोक्ति होणार नाही.

"कार्य हेच कैलास" (कायकवे कैलास) असे ठळक अक्षरांत लिहिलेले सिद्धगंगा शिखराकडे पाहिले असतांना आपल्या दृष्टोत्पत्तीस पडेल, आणि हाच महास्वामीजींचा ब्रीद तारकमंत्र आहे. कार्य करून कैलास निर्माण करावे हे श्री बसवेश्वरांच्या उक्तीप्रमाणे सिद्धीस न्यावे हीच त्यांची इच्छा आहे. त्यांची दिनचर्या, दिवसभराचे काम व अंगमाना भोजन आदि कार्यक्रम पाहिल्यावर, ते जणू प्रतिबसवेश्वरच वाटतात. त्यांचा कर्मयोग पाहिल्यावर ते श्री सिद्धरामेश्वराप्रमाणे शोभतात.

**जन्म:** मागडी तालुक्यातील विरापुर गावी श्रीचा जन्म झाला. त्यांचे वडील श्री होन्नाप्पा व मातोश्री श्रीमती गंगाम्मा होत. तेच आजचे शिवकुमार स्वामीजी होत.

**बालपण:** श्रीं चे बालपण पुण्य क्षेत्रात व नंतर बेंगलोर येथे गेले. बेंगलोर येथे बी. ए. चे शिक्षण घेत असतांना उद्दान शिवयोगींच्या दृष्टोत्पत्तीस पडले. त्यांची लांब असलेली बोटे, भव्य कपाळ, विशाल छाती, आजानुबाहू सतेज अंगकांती, उज्वल राजाला शोभेल असे तेज पाहून त्यांनी मनोमन विचार केला कीं हा मुलगा आपल्या गादीला वारस म्हणून योग्य होईल व त्यादृष्टीनें त्यांनीं त्यास विचारले. त्यावर स्वामीजींच्या मनांत विचार आले कीं प्रथमपासून संसार व प्रपंचाची ओढ असलेल्या मनास, विरक्ताश्रम स्विकार करण्यांस लावण्याचे कठीण काम असताना सुद्धा मनाची सिद्धता करून प्रपंच व संसाराचा हव्यास सोडून विरक्त होऊन कांही तरी महानकार्य करण्याचे त्यांनी योजिले व श्रेष्ठ असलेल्या सिद्धगंगा गुरुपिठाचा त्यांनी स्वीकार केला. अनेक लंकांच्या मुखांत षडाक्षरी मंत्राप्रमाणे यांचे नांव ओठांवरच सर्वश्रेष्ठ आहे.

जनसेवा म्हणजे जनार्दनाची सेवा हे त्यांनीं प्रत्यक्ष कृतीतून दाखवले आहे. त्यांच्या अधिकारांत सध्या संस्कृत महापाठशाळा, प्राथमिकशाळा, माध्यमिकशाळा, सायन्सकॉलेज

A proud moment as Karnataka's Rohini Vijaya receives the shield from Shivakumaraswamy of Siddaganga Math following the victory in the Junior National at Tumkur.

[illegible]

ಶ್ರೀ ಸಿದ್ಧಗಂಗಾ ಕ್ಷೇತ್ರ ರಜತ ಮಹೋತ್ಸವದ ಅಂಗವಾಗಿ ನಡೆದ ಕನ್ನಡ ಸಾಹಿತ್ಯ ಸಮ್ಮೇಲನ

ಸೂರ್ಯ ಸಿಂಹಾಸನಾಧೀಶ್ವರ

ಡಾ|| ಜ. ಚ. ನಿ. ಅವರ

ಅಧ್ಯಕ್ಷ ಭಾಷಣ

ಸಾಹಿತ್ಯ ಶಿಲ್ಪಿಗಳೇ, ಸದ್ಭಾವಿಗಳೇ, ಸಕ್ಕಲಾ ಜೀವಿಗಳೇ!

ಈ ಪರಮ ಪುಣ್ಯಕ್ಷೇತ್ರದಲ್ಲಿ, ಈ ಸರ್ವೋನ್ನತ ಶೈಕ್ಷಣಿಕ ಕೇಂದ್ರದಲ್ಲಿ ಈ ಸಾಂಸ್ಕೃತಿಕ ಸಿರಿವನಿಯಲ್ಲಿ, ಈ ನಿಸರ್ಗ ಚಲುವಿನ ನೆಲೆಯಲ್ಲಿ ರಾರಾಜಿಸುವ ಸಿದ್ಧರಸಗಂಗೆಯ ರಮ್ಯರಸೆಯಲ್ಲಿ, ತಮ್ಮ ನಿಲವಿನ ಬೆಳುಬಾಳಿನ ಬೆಡಗಿನಿಂದ ಭಾವಪೂರ್ಣ ಭಾಷಣಗಳಿಂದ, ನಾಡಿನ ಹಿರಿ-ಕಿರಿಯರ ಹೃನ್ಮನಗಳನ್ನು ಸೆಳೆದು ಅತ್ಯಂತ ಹೆಸರಾಂತ ಶ್ರೀ ನಿ. ಪ್ರ. ಡಾ|| ಶಿವಕುಮಾರ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯುವ ನುಡಿಯೋಲಗದ ಹಿರಿತನದ ಗೌರವವನ್ನು ನಮಗಿತ್ತ ಈ ಸಮ್ಮೇಳನದ ಸಂಚಾಲಕರನ್ನು ಸಂತಸದಿಂದ ನೆನೆಯುತ್ತೇವೆ. ಈ ನೆಲೆಯಲ್ಲಿಯೂ ನುಡಿಯೋಲಗಕ್ಕೆ ಅನುವಾಯಿತೆಂದು ಆನಂದಿಸುತ್ತೇವೆ.

ಸ್ವಸು ತಲೆ ಎತ್ತಿ ಕಣ್ಣರಳಿಸಿ ಅದೋ ಅಲ್ಲಿ ನೋಡಿ! ನಿಮ್ಮ ನಿಡುನೋಟವೆಲ್ಲ. ಅಲ್ಲಿ ಕಾಣುವುದು ಆ ಬೆಟ್ಟದ ಬೆಡಗು: ಅದರಲ್ಲಿ ಅದೋ ಸತ್ಯಚೇತನರಾದ ಶ್ರೀ ಸಿದ್ಧಲಿಂಗಯತಿಯ ಸಿದ್ಧರಸಗಂಗೆ! ಬತ್ತದೆ ಪ್ರವಹಿಸುತ್ತಿದೆ. ಮುತ್ತಿಬಂದ ಯಾತ್ರಾರ್ಥಿಗಳನ್ನು ಪವಿತ್ರಾತ್ಮರನ್ನಾಗಿಸುತ್ತಿದೆ. ಅದು ಈ ಕ್ಷೇತ್ರದ ರಸಚೇತನ. ಇದೋ ಇಲ್ಲಿ ಮಂಡಿಸಿರುವ ಮಂಗಳಮೂರ್ತಿ ಇಂದಿನ ಈ ನಾಡಿನ ರಸಚೇತನ. ಈ ಚೇತನದಿಂದ ವಿದ್ಯಾಮೃತವು ನಾಡಿಗರ ಓದುಗರ ಹೃದ್ಭೂಮಿಗಳಿಗೆ ಹರಿಯುತಿದೆ ಬತ್ತದೆ! ಹಚ್ಚ ಹಸುರು ಹಬ್ಬಿ ಹುಲುಸಾದ ಬೆಳೆ ಬೆಳೆಯುತ್ತಿದೆ! ಇಲ್ಲಿನ ಓದುಗರು ಓಡಾಡುವ ತನಿತೋಟಗಳು: ವಿದ್ಯಾರಣ್ಯರು: ಜೀವಂತಕ್ಷೇತ್ರರು: ಸಾಹಿತ್ಯಗಂಗಾಧರರು. ಇದಕ್ಕಿಂತ ಇನ್ನೇನು ಬೇಕು?

[illegible]

# ನಲವತ್ತನಾಲ್ಕನೆಯ ಅಖಿಲಭಾರತ ಕನ್ನಡ ಸಾಹಿತ್ಯಸಮ್ಮೇಳನ

ಸಿದ್ಧಗಂಗಾ ಕ್ಷೇತ್ರ ತುಮಕೂರು.

[illegible]

ಶ್ರೀ ರಂಗನಾಥ ಶ್ರೀನಿವಾಸ ಮುಗಳಿ ಅವರ

ಅಧ್ಯಕ್ಷ ಭಾಷಣ

•

ಸ್ವಾಗತ ಸಮಿತಿ.

ಸಿದ್ಧಗಂಗಾ ಕ್ಷೇತ್ರ - ತುಮಕೂರು

ತುಮಕೂರು ಜಿಲ್ಲೆ ಮತ್ತು ಶ್ರೀ ಸಿದ್ಧಗಂಗಾ ಕ್ಷೇತ್ರವು ಶ್ರೀ ಸಿದ್ಧಲಿಂಗೇಶ್ವರ, [illegible] ನಂಜಣ್ಣ, ವಿರಕ್ತ ತೋಂಟದಾರ್ಯ, ಗುಬ್ಬಿಯ ಮಲ್ಲಣಾರ್ಯ ಮತ್ತು ಮಲ್ಲ[illegible], ಕವಿ ಶಾಂತೇಶ, ಗೂಳೂರು ಸಿದ್ಧವೀರಣಾಚಾರ್ಯ, ಸಂಪಾದನೆಯ ಪರ್ವತೇಶ್ವರ, ಮುಂತಾದ ಹಲವಾರು ಮನ್ನಣೆವೆತ್ತ ಪಂಡಿತ ಕವಿಗಳ ಮತ್ತು ಶರಣರ ಪಾದಸ್ಪರ್ಶದಿಂದ ಪುನೀತವಾಗಿವೆ; ಅವರ ಕೃತಿಗಳಿಂದ ಪ್ರಖ್ಯಾತವಾಗಿವೆ. ಇಂಥ ಜಿಲ್ಲೆಯ ಈ ಪುಣ್ಯ ಕ್ಷೇತ್ರದಲ್ಲಿ, ವಿದ್ಯಾಪ್ರೇಮಿಗಳೂ ವಿದ್ಯಾದಾನಿಗಳೂ ಆದ ಪೂಜ್ಯ ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳ ಸಮರ್ಥ ನೇತೃತ್ವದಲ್ಲಿ, ಇದೇ ಜಿಲ್ಲೆಯವರೂ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿರುವ ಮಾನ್ಯ ಶ್ರೀ ಜಿ. ಶಿವಮೂರ್ತಿಶಾಸ್ತ್ರಿಗಳ ಚತುರ ಬೆಂಬಲದಿಂದ ಸ್ವಾಗತ ಸಮಿತಿಯು ಸಾಹಿತ್ಯ ಸಮ್ಮೇಲನವನ್ನು ನೆರವೇರಿಸಿರುವುದು ತುಂಬ ಅಭಿನಂದನೀಯ ಸಂಗತಿಯಾಗಿದೆ. ಸುಮಾರು ಐವತ್ತು ವರ್ಷಗಳಲ್ಲಿ ಇದುವರೆಗೆ ಕನ್ನಡ ಸಾಹಿತ್ಯ ಸಮ್ಮೇಲನವು ಈ ತುಮಕೂರು ಜಿಲ್ಲೆಯಲ್ಲಿ ಆಗಲಿಲ್ಲೆಂಬ ಅಪವಾದವನ್ನು ಈ ಸಮ್ಮೇಲನ ಪರಿಹರಿಸಿದೆ ಎನ್ನಬಹುದು. ಇದು ಸಂತೋಷದಾಯಕವಾದ ಸಂಗತಿಯಾಗಿದೆ

—ರಂ. ಶ್ರೀ. ಮುಗಳಿ

ಬೊಂಬಾಯಿಯಲ್ಲಿ ಜರುಗಿದ ಅ.ಭಾ. ವೀರಶೈವ ಮಹಾಸಭೆಯ ನೆನಪಿನ ಸಂಚಿಕೆಯ ಮುಖಪುಟ ಹಾಗು ಶ್ರೀಗಳವರನ್ನು ಕುರಿತ ಲೇಖನ ಮತ್ತು ಶ್ರೀಮಠದ ಇನ್ನಿತರಕಡೆಯ ಸಮಾರಂಭದ ಕೆಲವು ಸಾಕ್ಷ್ಯ ಬರವಣಿಗೆಗಳನ್ನು ಕಾಣಬಹುದು.

ದಡಿಯಲ್ಲಿಯೇ ಸುಭದ್ರವಾದ ಸ್ಥಾನವೊಂದನ್ನು ಗಳಿಸುವುದರಲ್ಲಿ ಯಾವ ಸಂದೇಹವೂ ಇಲ್ಲವೆಂಬುದನ್ನು ಅನುಭವಕ್ಕೆ ತಂದುಕೊಂಡಿದ್ದೇನೆ.

ನಂಬಿದವರಿಗೆ ಇಂಬ ನೀವೆನೆಂಬುದೇ ಶ್ರೀಗುರುವಿನ ಸತ್ಸಂಕಲ್ಪ. ಇದು ತನ್ನ ಭಕ್ತಕೋಟಿಯ ಉದ್ಧಾರಕ್ಕಾಗಿಯೇ ಹೌದು. 'ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ ಕೈಹಿಡಿದು ನಡೆಸೆನ್ನನು' ಎಂಬ ನಮ್ಮ ಪ್ರಾರ್ಥನೆಯನ್ನು ಮನ್ನಿಸದಿರಲು ಶ್ರೀಚಿತ್ತಕ್ಕೆ ಸಾಧ್ಯವೇ ಇಲ್ಲ. ಏಕೆಂದರೆ ನಮ್ಮ ರಕ್ಷಣೆಯೇ ಅಲ್ಲದೆ ನಮ್ಮ ಭವಬಂಧನವನ್ನು ದೂರಮಾಡಿಕೊಳ್ಳಬೇಕಾದ ಕರ್ತವ್ಯ ಶ್ರೀಶ್ರೀ ಗುರುವಿನದೇ ಅಲ್ಲವೇ !

ಇಂತಹ ಪರಾತ್ಪರ ಪರತತ್ತ್ವವು ನಮ್ಮ ಹೃದಯಗಹ್ವರದಲ್ಲಿ ಸದಾ ನೆಲೆನಿಂತು ಕಾಪಾಡಲಿ. ಅನುಗಾಲವೂ ಈ ಶ್ರೀಗುರುದಿವ್ಯಪ್ರಭೆಗೆ ನಮೋ ನಮೋ ಎಂಬೆ.

ವಿದ್ವಾನ್. ಬಿ. ರಾಜಶೇಖರಯ್ಯ<br>ಅಲಂಕಾರಶಾಸ್ತ್ರ ಉಪಪ್ರಾಧ್ಯಾಪಕ ಮಹಾರಾಜ<br>ಸಂಸ್ಕೃತ ಮಹಾಪಾಠಶಾಲೆ, ಮೈಸೂರು-೧

## ಅನುಗ್ರಹದ ರಕ್ಷಾಕವಚ

ಉದ್ದಾನಸ್ವಾಮಿಗಳು ಎಂದರೆ ಎಲ್ಲರಿಗೂ ಭಯವೆ. ಅವರಿಗೆ ಒಂದಿಷ್ಟು ಮುಂಗೋಪ ಜಾಸ್ತಿ. ಯಾರೂ ಅಷ್ಟು ಸುಲಭವಾಗಿ ಕಂಡು ಮಾತನಾಡುತ್ತಿರಲಿಲ್ಲ. ಎಂಥ ವ್ಯಕ್ತಿಯಾದರೂ ಅವರನ್ನ ನೇರವಾಗಿ ಕಾಣಲು ಹಿಂದೆ ಮುಂದೆ ನೋಡುತ್ತಿದ್ದರು. ಆದರೆ ಎಲ್ಲರಿಗೂ ಅವರನ್ನು ಕಂಡರೆ ಗೌರವ, ಮಿಗಿಲಾಗಿ ಭಕ್ತಿ. ಯಾರನ್ನಾದರೂ ದೂರದಿಂದಲೇ ಅನುಗ್ರಹಿಸಿ ಆಶೀರ್ವದಿಸುವ ದಿವ್ಯವ್ಯಕ್ತಿತ್ವ ಅವರದು. ಸ್ವಾಮಿಗಳು ಒಳ್ಳೆಯದನ್ನಾಗಲಿ ಕೆಟ್ಟದ್ದನ್ನಾಗಲಿ ಹೇಳಲು ಹಿಂದೆ ಮುಂದೆ ನೋಡುವವರಲ್ಲ. ಅನ್ನಿಸಿದ್ದನ್ನ ಮುಖದ ನೇರಕ್ಕೇ ಕಡ್ಡಿ ತುಂಡಾದಂತೆ ನುಡಿವ ಹರಿತ ನಾಲಿಗೆಯವರು. ಮಠಕ್ಕೆ ಸೇರುವ ವಿದ್ಯಾರ್ಥಿಗಳ ಯೋಗ್ಯತೆಯನ್ನು ಮುಖ ನೋಡುತ್ತಿದ್ದಂತೆ ಅಳೆಯುತ್ತಿದ್ದರು. ಬಲಗೈ ತೋರ ಬೆರಳನ್ನು ಮೂಗಿನ ಬಲದ ಹೊಳ್ಳೆ ಮೇಲಿಟ್ಟು ಒಂದು ಸಾರಿ ಉಸಿರು ಎಳೆದುಬಿಟ್ಟು ಮತ್ತೆ ಮುಖ ನೋಡಿ ಮಾತನಾಡಿದರೆ ಮುಗಿಯಿತು. ಆ ನುಡಿ ಶಾಸನವಾಗಿಬಿಡುತ್ತಿತ್ತು. 'ಬಿಡಣ್ಣ ಜಾಗ' ಎಂದೂ, 'ತಿಂಡಿಪೋತ ನಿನಗೆ ವಿದ್ಯೆ ಒಂದು ಕೇಡು' ಎಂದೂ, 'ಹುಡುಗ ಮುಂದುವರಿಯಲ್ಲ. ಪ್ರಯತ್ನ ವ್ಯರ್ಥ' ಎಂದೂ, 'ಚನ್ನಾಗಿ ನಿಗ ಇಟ್ಟು ಓದು-ಮಠದಲ್ಲಿ ಇರು' ಎಂದೂ ತಮಗೆ ಅನ್ನಿದ್ದನ್ನ ಅಂದುಬಿಡುತ್ತಿದ್ದರು. ಅವರ ಮಾತು ಸತ್ಯವಾಗಿಯೂ ಇರುತ್ತಿತ್ತು. ಯಾರೂ ಅವರ ಮಾತಿಗೆ ಚಕಾರವೆತ್ತದಂತೆ ಅವರ ನುಡಿಯನ್ನ ಪ್ರಸಾದವೆಂದೇ ಸ್ವೀಕರಿಸಿ ನಡೆಯುತ್ತಿದ್ದರು. ಅವರಿಗೆ ಮೆಚ್ಚಿಗೆಯಾಗುವಂತೆ ನಡೆದುಕೊಂಡು ಆತ್ಮೀಯತೆಯನ್ನುಗಳಿಸಿದವರ ಸಂಖ್ಯೆ ಬೆರಳೆಣಿಸುವಷ್ಟು ಎಂದೇ ಹೇಳಬೇಕು. ಒಮ್ಮೆ ಅಂಥ ಆತ್ಮೀಯತೆ ಬೆಳೆಯಿತು ಎಂದರೆ ಮುಗಿಯಿತು. ಆತನ ಹಿಂದಿನ ಜನ್ಮದ ಪುಣ್ಯದಫಲ ಎಂದೇ ಭಾವಿಸಬೇಕು. ಶ್ರೀ ಶಿವಕುಮಾರಸ್ವಾಮಿಯವರಿಗೆ ತುಮಕೂರಿನಲ್ಲಿ ಎಫ್.ಎ.ನಲ್ಲಿ ಓದುತ್ತಿದ್ದಾಗ ನಗರದಲ್ಲಿ 'ಕಾಲರ' ಬಂದು ಮಠದಲ್ಲಿ ಆಶ್ರಯ ಬೇಡಲು ಹೋದಾಗ ಉದ್ದಾನಸ್ವಾಮಿಗಳು ಸಾಧ್ಯವಿಲ್ಲವೆಂದಿದ್ದರಂತೆ.

ನಮ್ಮ ತಂದೆಯವರು ಉದ್ದಾನಸ್ವಾಮಿಗಳ ಪೆಟ್ಟಿಗೆಗಾಡಿಯ ಕಾಯಕ ಮಾಡಿಕೊಂಡಿದ್ದರು. ಅವರ ಹೆಸರು ಬಾಳಪ್ಪ ಎಂದು. ಆಗಿನ್ನೂ ನಾನು ಕಾತ್ಸಂಪ್ರದ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದೆ. ಅದೂ ಸ್ವಾಮಿಗಳೇ ನಾನು ಮಠದಲ್ಲಿ ತಿರುಗುತ್ತಿದ್ದುದನ್ನ ಕಂಡು 'ಕೂಳ್ಬಡಕ' ಎಂದು ಬೈದು ಶಾಲೆಗೆ ಅಟ್ಟಿದ್ದರು. ನನಗೆ ಎಷ್ಟು ಕಷ್ಟಪಟ್ಟರೂ ವಿದ್ಯೆ ಅಷ್ಟಾಗಿ ಹತ್ತುತ್ತಿರಲಿಲ್ಲ. ಮಾಧ್ಯಮಿಕಶಾಲೆಯ ವಿದ್ಯಾಭ್ಯಾಸದೊಂದಿಗೆ ಮಠದಲ್ಲಿ ಸಂಸ್ಕೃತ ವಿದ್ಯಾಭ್ಯಾಸ ಜೊತೆ ಜೊತೆಯಾಗಿ ನಡೆಯುತ್ತಿತ್ತು. ಶ್ರೀ ಮರುಳಾರಾಧ್ಯರು ಸಂಸ್ಕೃತ ಪಾಠ ಹೇಳಿಕೊಡುತ್ತಿದ್ದರು. ಆಗಿನ್ನೂ ಅವರು ಮಠದ ಮರಿಗಳಾಗಿರಲಿಲ್ಲ.

ಮುಂದಿನ ಮಠದ 'ಮರಿಗಳು' ಎಂದು ಹೆಸರಿಸಲ್ಪಟ್ಟಿದ್ದರು. ಅವರಿಗೆ ಸಂಸ್ಕೃತದಲ್ಲಿ ಒಳ್ಳೆಯ ವಿದ್ವತ್ತಿತ್ತು. ಉದ್ದಾನಸ್ವಾಮಿಗಳು ಮಠದ ಮಂಚದ ಮೇಲೆ ಕುಳಿತಿದ್ದಾಗ ಅವರ ಮುಂದೆ ಸಂಸ್ಕೃತ ಪಾಠ ನಡೆಯುತ್ತಿತ್ತು. ಅವರಿಗೆ ಸಂಸ್ಕೃತ ಎಂದರೆ ವ್ಯಾಮೋಹ; ಆದ್ದರಿಂದ ನಿತ್ಯಅಭ್ಯಾಸ ಅವರ ಮುಂದೇ ನಡೆಯುವುದು ರೂಢಿ. ಶ್ರೀ ಮರುಳಾರಾಧ್ಯರು ನಿಂತೇ ಪಾಠ ಕೇಳಬೇಕು ಮತ್ತು ಹೇಳಬೇಕು. ವಿದ್ಯಾರ್ಥಿಗಳಾದ ನಾವೂ ಅಷ್ಟೆ; ಕೈಕಟ್ಟಿ ನಿಂತೇ ಪಾಠಪ್ರವಚನದಲ್ಲಿ ಭಾಗವಹಿಸುತ್ತಿದ್ದೆವು. ಆಗ ನಮ್ಮ ಸಂಖ್ಯೆ ಕೇವಲ ೧೦ ಅಥವಾ ೧೨ ಇರಬಹುದು. ಉದ್ದಾನಸ್ವಾಮಿಗಳು ಗಮನವಿಟ್ಟು ನಮ್ಮ ಅಭ್ಯಾಸ ನೋಡುತ್ತಿದ್ದರು. ಶ್ರೀ ಮರುಳಾರಾಧ್ಯರು ನನ್ನನ್ನ ಒಂದು ಪ್ರಶ್ನೆ ಕೇಳಿದರು. ನಾನು ಉತ್ತರ ತಿಳಿಯದೆ ತಲೆತಗ್ಗಿಸಿ ನಿಂತೆ. ಮತ್ತೆ ಮತ್ತೆ ನನ್ನನ್ನೇ ಕೇಳಿದರು. ಉತ್ತರ ಹೊಳೆಯದೆ ಬಾಯಿಬಿಡದೆ ಬೆಪ್ಪಾಗಿ ನಿಂತೆ. ಶ್ರೀ ಮರುಳಾರಾಧ್ಯರು ತುಸು ಸಿಟ್ಟಿನಿಂದ 'ಬಾಯ್ ಬಿಡ್ತೀಯೋ ಇಲ್ವೋ' ಎಂದರು ಗಡುಸಾಗಿ. ಅದಕ್ಕೂ ನಾನು ಮಿಸುಕದೇ ನಿಂತೆ. ಇಷ್ಟನ್ನೂ ನೋಡುತ್ತಿದ್ದ ಉದ್ದಾನಸ್ವಾಮಿ

ಗಳು ರೇಗಿ ಎದ್ದು ಬಂದವರೆ ಕಾಲಿನ ಅಪ್ಪುಗೆಯನ್ನು ಕೈಗೆ ಕಳಚಿಕೊಂಡು ಲಟಲಟನೆ ಮುಖಮೋರೆ ನೋಡದೆ ಬಿಗಿದರು. ಅಚಾತುರ್ಯದಿಂದ ಒಂದು ಏಟು ಬಲಗಣ್ಣಿನ ಕೆಳಗೆ ಬಿದ್ದು ರಕ್ತ ಚಿಲ್ಲೆಂದು ಚಿಮ್ಮಿತು. ಮರುಮಾತನಾಡದೆ ಶ್ರೀ ಮರುಳಾರಾಧ್ಯರಿಗೆ ಫಳ್ತದ ಗೂಡಿನಲ್ಲಿರುವ 'ಫೋಳ್ತಾ' ಎಂದು ತರಿಸಿಕೊಂಡು. ಕೈಮುಟ್ಟಿ ಹಚ್ಚಲು ಮತ್ತೆ ಅವರಿಗೇ ಕೊಟ್ಟರು. ಅವರು ನನ್ನ ಹಣೆಗೆ ಫೋಳ್ತವನ್ನು ಅದುಮಿ ರಕ್ತ ನಿಲ್ಲಿಸಿದರು. ಅಂದಿಗೆ ಪಾಠ ಅನಿರೀಕ್ಷಿತವಾಗಿ ಮುಕ್ತಾಯಗೊಂಡಿತು. ಸ್ವಲ್ಪ ಹೊತ್ತಿನ ನಂತರ ಉದ್ದಾನಸ್ವಾಮಿಗಳೇ ನನ್ನನ್ನು ಕರೆದು 'ಏ ಅಣ್ಣಾ, ನಿನಗೆ ಸಂಸ್ಕೃತ ಬೇಡ' ಎಂದರು. ಕೆಲಕಾಲಾನಂತರ ಅಂದರೆ ನನಗೆ ಅಷ್ಟು ಹೊತ್ತಿಗೆ ವಿದ್ಯೆ ಬೇಕು ಅನ್ನಿಸತೊಡಗಿತ್ತು. ಕಲಿಯಲೇ ಬೇಕು ಎಂಬ ಹಠಹುಟ್ಟಿತು. ಅಂದಿನ ಘಟನೆಯಿಂದ ಜ್ಞಾನದ ಕಣ್ಣು ತೆರೆಯಿತು. ಗುರುವಿನ ಪಾದಸ್ಪರ್ಶದಿಂದ ಧನ್ಯನಾದೆ. ವಿದ್ಯೆಯ ಗಮಲು ಹೆಚ್ಚಿತು. ಕ್ಯಾತ್ಸಂದ್ರದ ಮಾಧ್ಯಮಿಕ ಶಾಲೆ ಮುಗಿಸಿ ತುಮಕೂರಿಗೆ ಪ್ರೌಢಶಾಲೆಗೆ ಹೋದೆ. ಹೀಗೆ ಉದ್ದಾನಸ್ವಾಮಿಗಳ ಒದೆತ ನನ್ನ ಜ್ಞಾನದ ಒರತೆಯ ಕಣ್ಣುಬಿಡಿಸಿ ಬದುಕಿಗೊಂದು ನೆಲೆಯನ್ನು ಕಾಣಿಸಿತು. ಸ್ವಾಮಿಗಳ ಸಿಟ್ಟು ಅನುಗ್ರಹದ ರಕ್ಷಾಕವಚವಾದುದು ನನ್ನ ಅದೃಷ್ಟವೇ ಸರಿ. ಅಲ್ಲದೆ ಅವರೇ ನನ್ನ ಪ್ರೌಢಶಾಲೆಯ ವಿದ್ಯಾಭ್ಯಾಸ ಮುಂದುವರಿಯಲು ಬೆಂಬಲವಾದರು. ಅನಂತರ ಅವರೇ ಒಂದು ದಿನ ನನ್ನನ್ನು ಕರೆದು 'ಲೊ ಅಣ್ಣಾ, ಸಂಸ್ಕೃತಾನೇ ಮುಂದುವರಿಸು' ಎಂದು ಅಪ್ಪಣೆ ಕೊಡಿಸಿದರು. ಅವರ ಮಾತನ್ನ ಚಾಚೂ ತಪ್ಪದೆ ಕೇಳಿದೆ. ಅಂದಿನಿಂದ ಸಂಸ್ಕೃತ ನನ್ನ ಬದುಕಿನ ದಾರಿದೀಪವಾಗಿ ಮುಂದೆ ಮಠದಲ್ಲಿ ಬೋಧಿಸುವ ಶಕ್ತಿಯನ್ನು ಒದಗಿಸಿತು.

ಉದ್ದಾನಸ್ವಾಮಿಗಳವರಿಗೆ ದಾಸೋಹದ ಪ್ರಸಾದಕ್ಕೂ, ಶಿವಪೂಜೆಯ ಪ್ರಸಾದಕ್ಕೂ ಭೇದವಿಲ್ಲ. ಒಮ್ಮೊಮ್ಮೆ ದಾಸೋಹದ ಸಾರನ್ನೇ ತರಿಸಿ ಪ್ರಸಾದ ಸ್ವೀಕರಿಸುತ್ತಿದ್ದರು. ಚೆನ್ನಾಗಿರದಿದ್ದರೆ ಅಡಿಗೆಯವರ ಮೇಲೆ ಸಿಟ್ಟಾಗುತ್ತಿದ್ದರು. ಅಡಿಗೆ ರುಚಿಕರವಾಗಿರದಿದ್ದರೆ ಮುಂಗೋಪದಿಂದ ಉರಿಯುವ ಕೊಳ್ಳಿಯನ್ನೇ ಅಡಿಗೆಯವರ ಮುಖಕ್ಕೆ ಚಾಚುತ್ತಿದ್ದರು. ದಾಸೋಹದ ಅಡಿಗೆ ರುಚಿಕರವಾಗಿದ್ದು ಬಂದ ಭಕ್ತರು ಪ್ರಸಾದ ಸ್ವೀಕರಿಸಿ ಸಂತೃಪ್ತರಾಗಬೇಕೆಂಬುದೇ ಸ್ವಾಮಿಗಳ ಇಚ್ಛೆ.

ಬೇಸಿಗೆ ಕಾಲ ಬಂತೆಂದರೆ ಮಠದ ತೋಟದ ಕಲ್ಯಾಣಿಗೆ ಹೇಗೊ ಎಲ್ಲರ ಕಣ್ಣು ತಪ್ಪಿಸಿ ವಿದ್ಯಾರ್ಥಿಗಳು ಈಜಲು ಹೋಗುತ್ತಿದ್ದರು. ಅದೂ ಅಲ್ಲದೆ ತೋಟದ ಸೀಬೆ, ದಾಳಿಂಬೆ, ಪರಂಗಿ ಮುಂತಾದ ಹಣ್ಣುಗಳನ್ನು ಕದ್ದು ತಿನ್ನುತ್ತಿದ್ದರು. ಹೀಚನ್ನೇ ಕಿತ್ತು ರೆಂಬೆಕೊಂಬೆ ಮುರಿದು ಬೆಳೆಯನ್ನೇ ಧ್ವಂಸಮಾಡಿಬಿಡುತ್ತಿದ್ದರು. ಇದು ಸ್ವಾಮಿಗಳಿಗೆ ಒಮ್ಮೆ ಗೊತ್ತಾಗಿ ತೋಟದ ಬಾಗಿಲಿಗೆ ಬಂದು ನಿಂತರು. ಬಾವಿಯಿಂದ ಹುಡುಗರ ಕೇಕೆ ಚೆಲ್ಲಾಟ ಕಿವಿಗೆ ಬೀಳುತ್ತ ಕೆಂಡ ಕೆಂಡವಾದರು. 'ಪ್ರಾಣ ಕಳ್ಕೊಂಡ್ರೆ ತಂದೆತಾಯಿಗಳಿಗೆ ಜವಾಬು ಹೇಳುವವರು ಯಾರು' ಎಂಬ ಚಿಂತೆ ಒಂದು ಕಡೆಯಾದರೆ, ಮತ್ತೊಂದು ಕಡೆ ಪೂಜೆಗೆ ಹೂ ದೊರೆಯುತ್ತಿರುವ, ಕಷ್ಟಪಟ್ಟು ಬೆಳೆಸಿರುವ ತೋಟ ಹಾಳಾಗುತ್ತಿದೆಯಲ್ಲಾ ಎಂಬ ವ್ಯಥೆ. ಕಣ್ಣು ಕೆಂಪು ಮುಕ್ಕಳಿಸುತ್ತಿದ್ದುವು. ಪಕ್ಕದಲ್ಲಿ ಕಡ್ಡಿ ಕಣ್ಣಿಗ ಬಿದ್ದಿತು. ಹತ್ತಿರವೇ ಬೆಳ್ಳಾರಹಳ್ಳಿ ಬಸವಯ್ಯ ಕಣ್ಣಿಗೆ ಬಿದ್ದ. 'ಲೊ ಅಣ್ಣಾ, ಈ ಕಡ್ಡಿ ಎತ್ತಿ ಕೈಗೆಕೊಡು' ಎಂದರು; ಆತ ಹೆದರಿ ಹಿಂದೆ ಮುಂದೆ ನೋಡದೆ ಬೇಲಿ ನೆಗೆದು ಗದ್ದೆ ಕಡೆ ಓಟಕಿತ್ತ. ಇದನ್ನ ಕಂಡ ವಿದ್ಯಾರ್ಥಿಗಳು ಬಟ್ಟೆ ಎತ್ತಿಕೊಂಡು ಬರಿಮೈಲಿ ದಿಕ್ಕಾಪಾಲಾದರು. ಸ್ವಾಮಿಗಳು ಹತ್ತಾರು ಹೆಜ್ಜೆ ದಾಪುಗಾಲು ಹಾಕಿ ದೂರದವರನ್ನ 'ಹಿಡ್ಕೊಳ್ರೋ ಅಣ್ಣಾ, ಒಬ್ಬನ್ನ ಹಿಡ್ಕಳ್ರಿ' ಎಂದು ಗಡುಸಾಗಿ ಕೂಗುವ ಹೊತ್ತಿಗೆ ಒಬ್ಬರೂ ಸಿಗದಂತೆ ಎಲ್ಲರೂ ತಪ್ಪಿಸಿಕೊಂಡಿದ್ದರು. ಮಾರನೆಯ ದಿನ ಸಂಸ್ಕೃತ ತರಗತಿಗೆ ಬಂದು 'ಬೆಳ್ಳಾರಹಳ್ಳಿ ಅಣ್ಣ ಬಂದಿದ್ದಾನೆಯೇ' ಎಂದು ವಿಚಾರಿಸಿ ಬಾರದುದನ್ನ ಕಂಡು ಶಿವಕುಮಾರ ಸ್ವಾಮಿಗಳವರಿಗೆ 'ಬೆಳ್ಳಾರಹಳ್ಳಿ ಅಣ್ಣನ್ನ ಮಠಕ್ಕೆ ಸೇರಿಸ್ಬೇಡಿ ಓಡ್ಸಿ.' ಎಂದು ಅಪ್ಪಣೆ ಕೊಡಿಸಿದರು. ಚಿಕ್ಕ ಸ್ವಾಮಿಗಳಿಗೆ ಯಾವ ವಿಷಯವೂ ಗೊತ್ತಿರಲಿಲ್ಲ. ಚನ್ನಬಸವಯ್ಯನಿಂದಲೇ ವಿಷಯ ತಿಳಿದರು. 'ಇದ್ನೆ ಕಲಿ' ಎಂದು ಕಿವಿ ಹಿಂಡಿ 'ದೊಡ್ಡ ಸ್ವಾಮಿಗಳ ಕಣ್ಣಿಗೆ ಕೆಲವು ದಿನ ಕಾಣದೆ ಇರು' ಎಂದರು. ಶಿವಕುಮಾರಸ್ವಾಮಿಗಳವರದು ಎಂದೂ ಹೆಂಗರುಳು. ದೊಡ್ಡವರು ಕ್ರಮೇಣ ಮರೆತರು. ಕಾವ್ಯ ಪರೀಕ್ಷೆಯ ಫಲಿತಾಂಶ ಬಂದಿತು. ಫೇಲಾದವರನ್ನ ಕರೆದು ವಿಚಾರಿಸಿ ಬೈದು ನಾಲ್ಕು ಬಿಗಿಯುತ್ತಿದ್ದರು. ಪೂಜೆಗೆ ಹೂ ಪತ್ರೆ ಎತ್ತಿ ಹಳೆಮಠದಲ್ಲಿ ಬಟ್ಟೆ ಮಡಿಮಾಡುತ್ತಿದ್ದ ಚನ್ನಬಸವಯ್ಯನನ್ನ ಕರೆದು 'ಯಾಕೋ ಅಣ್ಣ ಫೇಲಾಗಿದ್ದೀ' ಎಂದು ಮಂಚದ ಮೇಲಿದ್ದ ಯೋಗದಂಡ ಎತ್ತಿಕೊಂಡು ಬೀಸಿದರು. ಬಸವಯ್ಯ ಬೀಸಿದ ರಭಸಕ್ಕೆ 'ಹೋಯ್ತು ಪ್ರಾಣ' ಎಂದು ಪಕ್ಕಕ್ಕೆ ಸರಿದು ತಪ್ಪಿಸಿಕೊಂಡು ದೂರ ನಿಂತು ಎರಡು ಪರೀಕ್ಷೆ ಕಟ್ಟಿದ್ದೆ ಪಾಸಾಗಿದ್ದೀನಿ' ಎಂದು ಎರಡು ಬೆರಳಿಂದ ತೋರಿಸಿ ಹೆದರಿ ನಡುಗುತ್ತಿದ್ದ. ಈಗಿನ ಕನಕಪುರದ ದೇಗುಲಮಠದ ಸ್ವಾಮಿಗಳಾದ ಕಾಳಪ್ಪನವರು. ಬಸವಯ್ಯನ ನೆರವಿಗೆ ಬಂದು 'ಹುಡ್ಗ ಚನ್ನಾಗಿ ಓದ್ತಾನೆ. ಕಾವ್ಯ ಪಾಸಾಗಿದ್ದಾನೆ' ಎಂದರು. ಆಗ ಉದ್ದಾನಸ್ವಾಮಿಗಳು ಸಂತೋಷದಿಂದ ಪಿನ್ನೀಪಂಚೆ ತರಿಸಿ ಬಸವಯ್ಯನಿಗೆ ಉಡುಗೊರೆಯಾಗಿ ಕೊಟ್ಟು ಆಶೀರ್ವದಿಸಿದರು. ಚೆನ್ನಾಗಿ ಓದಿ ಮುಂದುಬರೋ ವಿದ್ಯಾರ್ಥಿಗಳನ್ನು ಕಂಡರೆ ಉದ್ದಾನಸ್ವಾಮಿಗಳಿಗೆ ಪಂಚಪ್ರಾಣ. ಪ್ರತಿಭಾವಂತ ವಿದ್ಯಾರ್ಥಿಗಳು ಮಠದ ಆಸ್ತಿ ಎಂದೇ ಪರಿಗಣಿಸುತ್ತಿದ್ದರು. ಪ್ರತಿಭಾನುಸಾರ ಮಂಚದಬಳಿ ವಿದ್ಯಾರ್ಥಿಗಳಿಗೆ ಚರ್ಚಾಸ್ಪರ್ಧೆ ಇರುತ್ತಿತ್ತು. ಇದ್ದಕ್ಕಿದ್ದ ಹಾಗೆ 'ಪುರುಷಪ್ರಯತ್ನವೇ ಶ್ರೇಷ್ಠ'- 'ಲೊ ಅಣ್ಣ ಮಾತಾಡು' ಎನ್ನುತ್ತಿದ್ದರು. ಉಗಾದಿ ಹಬ್ಬದಂದು ಅಡವಿಸ್ವಾಮಿ ಗದ್ದುಗೆಯಿಂದ ಬೆಟ್ಟದ ದೇವಸ್ಥಾನ ಮುಟ್ಟಿ

ಬರುವಂತೆ ಓಟದ ಸ್ಪರ್ಧೆ–ಹೀಗೆ ವಿದ್ಯಾರ್ಥಿಗಳ ಸರ್ವತೋಮುಖ ವ್ಯಕ್ತಿತ್ವದ ವಿಕಾಸಕ್ಕೆ ಗಮನ ಕೊಡುತ್ತಿದ್ದರು.

ಮಠದಲ್ಲಿ ವಿದ್ಯಾರ್ಥಿಜೀವನ ಕಟ್ಟುನಿಟ್ಟಾಗಿತ್ತು. ತಲೆ ಬೋಳಿಸಬೇಕಾಗಿತ್ತು. ಕಚ್ಚೆ ಪಂಚೆ ಅಥವಾ ಲುಂಗಿ ಧರಿಸಬಹುದಿತ್ತು. ಪೈಜಾಮ ಅಥವಾ ಪ್ಯಾಂಟು ನಿಷಿದ್ಧ. ಹೊಟೇಲು ಸಿನಿಮಾಗಳಿಗೆ ಕಾಲಿಡುವಂತಿಲ್ಲ. ವಿಶೇಷ ಸಂದರ್ಭ ಬಿಟ್ಟರೆ ಆಗಾಗ್ಗೆ ವಿದ್ಯಾರ್ಥಿಗಳು ಊರಿಗೆ ಹೋಗಿ ಬರುವಂತಿರಲಿಲ್ಲ. ಸ್ವಾಮಿಗಳು ಆಗಾಗ್ಗೆ ವಿದ್ಯಾರ್ಥಿಗಳ ಕೊಠಡಿಗೆ ಬರುತ್ತಿದ್ದರು. ಚಾಚೂ ತಪ್ಪದೆ ಶಿಸ್ತನ್ನು ಎಲ್ಲರೂ ಪಾಲಿಸಬೇಕು. ತಪ್ಪಿದರೆ ಮೈಗೆ ಎಣ್ಣೆ ಹಚ್ಚಿಕೊಂಡು ಬೆತ್ತದ ರುಚಿಗೆ ಸಿದ್ಧ ವಿರಲೇಬೇಕು.

ಉದ್ದಾನ ಸ್ವಾಮಿಗಳು ಹಣದ ವಿಷಯವಾಗಿ ಎಚ್ಚರದಿಂದಿರುತ್ತಿದ್ದರು. ಮಠದ ಆದಾಯ ಮತ್ತು ವ್ಯಯದ ಬಗ್ಗೆ ಸದಾ ಕಣ್ಣಿಟ್ಟಿರುತ್ತಿದ್ದರು. ಅವರಿಗೆ ಯಾರೇ ಆಗಲಿ ಸದಾ ಸಂಪಾದಿಸುತ್ತಿರಬೇಕು. ಅದೂ ಚಿಕ್ಕ ಸ್ವಾಮಿಗಳಿಂದಲೂ ಇದನ್ನು ನಿರೀಕ್ಷಿಸುತ್ತಿದ್ದರು. ಸಂಪಾದನೆ ಎಂದರೆ ಸರ್ಕಿಟು ಹೋಗಬೇಕು. ಸರ್ಕಿಟು ಎಂದರೆ ಮಠಕ್ಕೆ ಸಂಪಾದನೆ, ಸಂಪಾದಿಸಿದರೇ ದಾಸೋಹ ನಿರಂತರವಾಗಿ ನಡೆಯುವುದು. ದಾಸೋಹ ನಡೆಯುತ್ತಿರುವುದರಿಂದಲೇ 'ಶಿವಗಂಗೇಲಿ ನಿದ್ದೆಗಂಗೆಇಲ್ಲ. ಸಿದ್ಧ ಗಂಗೇಲಿ ಮುದ್ದೆಗ್ಗೆ ಅನ್ನಿಲ್ಲ' ಅನ್ನೋ ಗಾದೆ ಗ್ರಾಮೀಣ ಭಕ್ತಾದಿಗಳ ಬಾಯಿಂದ ಹುಟ್ಟಿದ್ದು. ಇಂಥ ಗಾದೆ ಹುಟ್ಟಲು ಉದ್ದಾನಸ್ವಾಮಿಗಳ ಬಂಡವಾಳ ಶಿವಪೂಜೆ ಪೆಟ್ಟಿಗೆ, ಶಿವಪೂಜೆ ಮರಿ ವೀರಪ್ಪತಾತ. ಅದೊಂದು ನಿಧಿ ಭದ್ರವಾಗಿ ಕಾಯ್ದ ಜೀವ. ಶಿವಪೂಜಾಪೆಟ್ಟಿಗೆಯೇ 'ಟ್ರೆಸರಿ'. ಅದೊಂದು ಅಕ್ಷಯ ಪೆಟ್ಟಿಗೆ. ಮಠದ ವ್ಯವಹಾರದ ಕೇಂದ್ರ ಬಿಂದು. ಆಗ ನಾನು ಇನ್ನೂ ಹುಡುಗ ಆದರೂ ನಾನು ಆಗ ಉಗ್ರಾಣವನ್ನು ನೋಡಿಕೊಳ್ಳುತ್ತಿದ್ದೆ. ಒಮ್ಮೆ ಉಪ್ಪು ಮುಗಿದು ಉದ್ದಾನಸ್ವಾಮಿಗಳ ಬಳಿ ಹೋಗಿ 'ಉಗ್ರಾಣದಲ್ಲಿ ಉಪ್ಪಿಲ್ಲ. ಮುಗಿದಿದೆ' ಎಂದು ಜೋರಾಗಿ ಕೇಳುವಂತೆ ಕೂಗಿ ದೂರದಿಂದ ಓಡಿ ಹೋಗುತ್ತಿದ್ದೆ ನನ್ನನ್ನು ಕರೆದು 'ಲೋ ಅಣ್ಣ ಇಲ್ನೋಡು ನನ್ನ ಕಪ್ನೀನೇ ಹರಿದುಹೋಗಿದೆ. ಇನ್ನು ದುಡ್ಡೆಲ್ಲಿ ತರೋಣ. ಅಯ್ನೋರಿದಾರೆ ಕೇಳ್ಕೋಗು' ಅನ್ನುತ್ತಿದ್ದರು. ಈ ರೀತಿ ಅನೇಕ ಬಾರಿ ಹೇಳುತ್ತ ಮುಗಿದ ಸಾಮಾನುಗಳನ್ನ ತರಿಸು ಎಂದು ಹಣವನ್ನೂ ನನ್ನ ವಶಕ್ಕೆ ಕೊಡುತ್ತಿದ್ದರು. ಚಿಕ್ಕಸ್ವಾಮಿಗಳಿಗೆ ವ್ಯವಹಾರ ಗೊತ್ತಾಗಲಿ, ಜವಾಬ್ದಾರಿ ತಿಳಿಯಲಿ ಎಂದು ಹೀಗೆ ಎಲ್ಲರ ಮುಂದೆ ನುಡಿಯುತ್ತಿದ್ದರು. ಶ್ರೀ ಶಿವಕುಮಾರಸ್ವಾಮಿಗಳವರ ಪೂರ್ವಾಶ್ರಮದ ಸಂಬಂಧಿ ನಾಗವಲ್ಲಿಯ ಪಟೇಲ್ ಗಂಗಪ್ಪನವರಿಂದ ಬರಬೇಕಾದ ಬಾಕಿ ಮಠಕ್ಕೆ ಬಹಳ ಕಾಲದಿಂದ ಸಂದಾಯವಾಗಿರಲಿಲ್ಲ. ಸ್ವಾಮಿಗಳು ಚಿಕ್ಕೋರು ವಸೂಲಿ ಮಾಡಲಿಲ್ಲವೆಂದು ಸಿಟ್ಟಾದರು. ಬಿರುನುಡಿಗಳನ್ನಾಡಿದರು. ಇದಾವುದೂ ಗೊತ್ತಿರದ ಚಿಕ್ಕವರು ಹೋಗಿ ನಿಷ್ಠೂರವಾಗಿಯೇ ವಸೂಲಿ ಮಾಡಿಕೊಂಡು ಬಂದರು. ರಕ್ತ ಸಂಬಂಧದ ಮಮತೆಯನ್ನ ಕತ್ತರಿಸಿ ವೀರವೈರಾಗ್ಯ ಮೂಡಿಸುವ ಶಿಕ್ಷಣದ ತತ್ರಗಳಲ್ಲಿ ಇದೊಂದು. ಚಿಕ್ಕವರು ಸ್ವಂತ ಕಾಲಿನ ಮೇಲೆ ನಿಲ್ಲುವಂಥ ಸಾಮರ್ಥ್ಯವನ್ನೂ. ಭವಿಷ್ಯತ್ತಿನ ಸ್ವತಂತ್ರ ವ್ಯಕ್ತಿತ್ವದ ವಿಕಾಸಕ್ಕೆ ಭದ್ರವಾದ ಬುನಾದಿಯನ್ನೂ ಹಲವಾರು ವಿಧದಲ್ಲಿ ಉದ್ದಾನಶಿವಯೋಗಿಗಳು ಹಾಕಿದರು. ಅವರನ್ನು ಅನೇಕ ವಿಧ ಪರೀಕ್ಷೆಗೊಳಗುಪಡಿಸಿ, ತಿದ್ದಿ, ತೀಡಿ, ಕಡೆದು ಸುಂದರಮೂರ್ತಿಗಳನ್ನಾಗಿ ಮಾಡಿಯೇ ತಾವು ೧೯೩೦ ರಲ್ಲಿ ಲಿಂಗೈಕ್ಯರಾದರು. ಸುಮಾರು ೧೧ ವರ್ಷಗಳವರೆಗೆ ಚಿಕ್ಕವರೂ ಉದ್ದಾನಸ್ವಾಮಿಗಳವರ ವಿವಿಧ ಪರೀಕ್ಷೆಗಳಲ್ಲಿ ಪ್ರಥಮಶ್ರೇಣಿಯಲ್ಲೇ ತೇರ್ಗಡೆಹೊಂದಿ, ಇಂದು ಈ ಮಹಾಸಂಸ್ಥೆಯನ್ನು ತೇಜೋವಿಶೇಷದಿಂದ ಬೆಳಗುವಂತೆ ಮಾಡಿದ್ದಾರೆಂದು ನನ್ನ ಭಾವನೆ. ಈ ಮಹಾಸಂಸ್ಥೆಯಲ್ಲಿ ಸೇವೆ ಮಾಡಿ ಮುಗಿಸುವ ಭಾಗ್ಯವೂ ನನ್ನದಾದುದು. ನನ್ನ ಪುಣ್ಯವಿಶೇಷವೆಂದು ಬಗೆದಿದ್ದೇನೆ.

ಬಿ. ಗಂಗಪ್ಪ
ನಿವೃತ್ತ ಸಂಸ್ಕೃತ ಉಪಪ್ರಾಧ್ಯಾಪಕ
ಶ್ರೀ ಸಿದ್ಧಗಂಗಾಕ್ಷೇತ್ರ

# ನನ್ನ ಕ್ಷೇತ್ರದ ಪ್ರವೇಶ

೧೯೩೨ನೇ ಇಸವಿ ಜೂನ್‌ಮಾಹೆ ೨೪ರಂದು ನಮ್ಮ ತೀರ್ಥರೂಪರ ಜೊತೆಯಲ್ಲಿ ಸಂಸ್ಕೃತಾಭ್ಯಾಸಕ್ಕಾಗಿಯೇ ಶ್ರೀ ಕ್ಷೇತ್ರಕ್ಕೆ ಬಂದೆನು. ನನಗೆ ಆಗಿನ್ನೂ ೧೬ ವರ್ಷಗಳು. ಸಂಜೆ ಐದುವರೆ ಘಂಟೆ ಇರಬಹುದು. ಬಂದ ನಾವಿಬ್ಬರೂ ದಾರಿಯ ಎಡಭಾಗದಲ್ಲಿರುವ ಕಲ್ಯಾಣಿಯಲ್ಲಿ ಕೈಕಾಲು ತೊಳೆದುಕೊಂಡು ವಿಶ್ರಾಂತಿಗಾಗಿ ಅಲ್ಲೆ ಸ್ವಲ್ಪ ಹೊತ್ತು ಕುಳಿತೆವು. ಕಲ್ಯಾಣಿಯ ಸೋಪಾನಗಳ ಮೇಲೆ ಹುಡುಗರ ಓಡಾಟ. ನೂಕಲಾಟ. ಒಂದು ಕಡೆ ಕುಸ್ತಿಯೂ ನಡೆದಿತ್ತು. ಒಬ್ಬನು ಬಿದ್ದನು, ಮತ್ತೊಬ್ಬನು ಓಡಿದನು. ಈ ದೃಶ್ಯವನ್ನು ನೋಡಿದ ನಮ್ಮಣ್ಣನವರು ಈ ಹುಡುಗರ ಮಧ್ಯೆ ನೀನು ಇಲ್ಲಿ ಇರಲಾಗುವುದಿಲ್ಲ. ಸ್ವಾಮಿಗಳನ್ನು ಕೇಳುವುದೇ ಬೇಡ, ಸ್ವಾಮಿಗೆ ಪೂಜೆ ಮಾಡಿಸಿಕೊಂಡು ನಾಳೆಯೇ ಹೊರಟು ಬಿಡೋಣ ಎಂದರು. ನಾನೇನೂ ಉತ್ತರ ಕೊಡಲಿಲ್ಲ.

ಮಠಕ್ಕೆ ಹೋಗಿ ಮಂಚದ ಮೇಲೆ ಮಂಡಿಸಿದ್ದ ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದೆವು. ನಾವು ಮಲೆನಾಡಿನವರೆಂಬುದೂ ನಮ್ಮದು ಕಿರುವಾಲೆ ಎಂಬುದೂ ಸ್ವಾಮಿಗಳಿಗೆ ಗೊತ್ತಿತ್ತು. ಆತ್ಮೀಯತೆಯಿಂದ ಸ್ವಾಮಿಗಳು ಮಳೆ ಬೆಳೆ ವಿಚಾರಿಸಿ ನನ್ನನ್ನು ಕುರಿತು 'ನೀನು ಸಂಸ್ಕೃತ ಓದಲು ಬಂದಿರುವೆಯಾ'? ಎಂದು ಪ್ರಶ್ನಿಸಲು. ನಾನು 'ತಮ್ಮ ಅಪ್ಪಣೆ ಮೇರೆಗೆ ಬಂದಿ

ದೇವ ಬುದ್ಧಿ' ಎಂದು ಸಾಷ್ಟಾಂಗ ನಮಸ್ಕಾರ ಮಾಡಿದೆನು. ಆಗಲೆ ಘಂಟೆ ಎಂಟುವರೆಯಾಗಿತ್ತು. ಶ್ರೀಗಳು ಹೋಗಿ ಊಟ ಮಾಡಿ, ಎಂದು ಹೇಳಿ ಒಬ್ಬ ಹುಡುಗನನ್ನು ಜೊತೆಯಲ್ಲಿ ಕಳುಹಿಸಿದರು. ಆ ಹುಡುಗನು ಉಗ್ರಾಣಕ್ಕೆ ಹೋಗಿ, ಉಗ್ರಾಣದ ಅಧಿಕಾರಿಗಳಿಗೆ ಏನೋ ಹೇಳಿದನು. ಅವನ ಜೊತೆಯಲ್ಲೇ ಹೋದ ನಾವು ಪೂಜೆ ಮುಗಿಸಿ ಹೊರಬರಲು 'ಬನ್ನಿ ಊಟ ಮಾಡುವಿರಂತೆ' ಎಂದರು. ಹುಡುಗರೆಲ್ಲಾ ಗುಂಪಾಗಿ ಊಟಕ್ಕೆ ಹೋಗಿ ಸಾಲಾಗಿ ಕುಳಿತುಕೊಳ್ಳುತ್ತಿದ್ದರು. ಹುಡುಗರ ಗಡಿಬಿಡಿ ನಮ್ಮನ್ನು ಆಕರ್ಷಿಸಿತು. ನಾವೂ ಅಲ್ಲಿಗೆ ಹೋದೆವು. ಆಗ ಒಬ್ಬ ಹುಡುಗನು ನಮ್ಮಲ್ಲಿಗೆ ಬಂದು ನಮ್ಮನ್ನು ಊಟಕ್ಕೆ ಬನ್ನಿ ಎಂದು ಕರೆದನು.

ಅದಕ್ಕೆ ನಮ್ಮ ತೀರ್ಥರೂಪರು 'ಪ್ರಸಾದಕ್ಕೆ ಪ್ರತ್ಯೇಕತೆ ಏಕೆ'? ಎಂದು ಅಲ್ಲೇ ಕುಳಿತರು. ನಾನೂ ಹುಡುಗರ ಮಧ್ಯೆ ಕುಳಿತೆನು. ನನಗೆ ಯಾರೋ ಒಂದು ತಟ್ಟೆ ಕೊಟ್ಟರು. ಅಣ್ಣನವರಿಗೆ ಬಂದು ಎಲೆ ಹಾಕಿದರು. ಅಡಿಗೆಯವನು ಎಲ್ಲರಿಗೆ ಮುದ್ದೆ ಬಡಿಸಿದನು. ಮತ್ತೊಬ್ಬನು ಸಾರು ಬಡಿಸುತ್ತಾ ಬಂದನು. ಎಲೆಯ ಮೂಲೆಯಲ್ಲಿ ಮುದ್ದೆ ಕುಳಿತಿತ್ತು. ಸಾರು ಹೊಳೆಯಾಗಿ ಹರಿದಿತ್ತು. ನಮ್ಮಣ್ಣನವರು ಪ್ರಸಾದವನ್ನೆಂದೂ ಬಿಟ್ಟವರಲ್ಲ. ಏನು ಮಾಡುವುದೆಂದು ಯೋಚಿಸುತ್ತಿರುವಷ್ಟರಲ್ಲೇ ಬಂದು ನೀಡಿದ ಅನ್ನವನ್ನು ಗುಂಡಿ ಮಾಡಿದರು. ಸಾರು ನಿಂತಿತು. ಮುದ್ದೆ ಮುಗಿಸಿ ಪ್ರಸಾದ ಪೂರ್ತಿ ಮಾಡಿದರು.

ಸ್ವಾಮಿಗಳಿಗೆ ಹೇಗೋ ವಿಚಾರ ತಿಳಿದು ಬೆಳಿಗ್ಗೆ ನಾವು ಪೂಜೆಗೆ ಹೋದಾಗ ನೀವು ಹಳೇಮಠದಲ್ಲಿ ಇರಿ ಎಂದು ಅಪ್ಪಣೆ ಕೊಡಿಸಿದರು, ನಾಲ್ಕು ದಿವಸ ನಾವು ಅಲ್ಲೇ ಇದ್ದೆವು.

ನಾವು ಗುರುವಾರ ಮಠಕ್ಕೆ ಬಂದೆವು. ನನಗೆ ಎಷ್ಟೇ ಕಷ್ಟವಾದರೂ ನಾನು ಇಲ್ಲೇ ಓದಲು ಇರುತ್ತೇನೆಂದು ನಮ್ಮಣ್ಣನವರಲ್ಲಿ ತಿಳಿಸಿದೆ. ಹಾಗಾದರೆ ನಾನು ಸೋಮವಾರ ಹೋಗುತ್ತೇನೆಂದರು. ಮಧ್ಯೆ ಭಾನುವಾರ. ಮಧ್ಯಾಹ್ನ ಎರಡೂವರೆ ಘಂಟೆ ಇರಬಹುದು. ಹುಡುಗರೆಲ್ಲಾ ಸಭಾಂಗಣದಲ್ಲಿ ಸೇರಿದ್ದರು. ಸ್ವಾಮಿಗಳೂ ದಯಮಾಡಿಸಿದರು. ಎಲ್ಲರೂ ಸ್ವಾಮಿಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ನಾವೂ ಮಾಡಿದೆವು. ಅಂದಿನ ಭಾಷಣದ ವಿಷಯ:—'ಸಹವಿದ್ಯಾಭ್ಯಾಸ' ವಿಷಯದ ಮೇಲೆ ನಾಲ್ಕಾರು ಹುಡುಗರು ಭಾಷಣ ಮಾಡಿದರು. ನಮ್ಮಣ್ಣನವರು ಏಳು ನೀನೂ ನಾಲ್ಕು ಮಾತನಾಡು ಎಂದರು. ಯಾವ ವಿಷಯವೂ ನನಗೆ ಗೊತ್ತಿಲ್ಲ. ಬಂದು ನಾಲ್ಕೇ ದಿವಸವಾಗಿದೆ. ಆದರೂ ಅಣ್ಣನ ಆಜ್ಞೆ. ಎದ್ದು ನಿಂತೆ. ಮೈ ಬೆವರುತ್ತಿತ್ತು. ಸ್ವಾಮಿಗಳು ನನ್ನನ್ನು ಹತ್ತಿರಕ್ಕೆ ಕರೆದು 'ಮಾತನಾಡುತ್ತೀಯಾ'? ಎಂದರು. ತಲೆಹಾಕಿದೆ. 'ಮಾಡು ಮಾಡು' ಎಂದು ಪ್ರೋತ್ಸಾಹಿಸಿದರು. ಬೆವರು ಒರಸಿಕೊಂಡು 'ಕ್ಷೇತ್ರ ಒಂದು ಮಹಾವೃಕ್ಷ. ಸ್ವಾಮಿಗಳು ಇದನ್ನು ಬೆಳಸುತ್ತಿದ್ದಾರೆ. ಎಲ್ಲಾ ಪಕ್ಕಿಗಳೂ ಮರವನ್ನಾಶ್ರಯಿಸುವಂತೆ ನಾವೂ ಪಕ್ಕಿಗಳ ಹಾಗೆ. ಎಲ್ಲಿಂದೆಯಿಂದ ಬಂದು ಇಲ್ಲಿ ಆಶ್ರಯ ಪಡೆದಿದ್ದೇವೆ. ಮರದಿಂದ ಪಕ್ಷಿಗಳು ತಮ್ಮ ಗುರಿಯನ್ನು ಸಾಧಿಸಲು, ತಮಗೆ ತೋರಿದ ದಿಕ್ಕಿಗೆ ಹಾರಿ ಹೋಗುವಂತೆ ನಮ್ಮ ಓದು ಮುಗಿದ ಮೇಲೆ ಎಲ್ಲೆಲ್ಲಿಗೋ ಹೋಗಲು ಶ್ರೀಗಳು ನಮಗೆ ದಾರಿ ತೋರುತ್ತಾರೆ' ಎಂದು ಹೇಳಿ ಮಾತು ಮುಗಿಸಿದೆನು. ಯಾರೋ ಚಪ್ಪಾಳೆ ತಟ್ಟಿದರು. 'ಚೋಟ ಪರವಾಗಿಲ್ಲ' ಎಂದು ಯಾರೋ ಅಂದರು. ಈ ಮಧ್ಯೆ ನಾನು ಕುಳಿತು ಉಸಿರಾಡಿದೆ. ಬೆವರು ಒರಸಿಕೊಂಡೆ. ಗೆದ್ದೆನೆಂದುಕೊಂಡಿರಲು ಮುಂದಿನ ಭಾನುವಾರವೂ ಶ್ರೀಗಳು ನನ್ನ ಕಡೆಗೆ ಬೆಟ್ಟು ಮಾಡಿ 'ಬಾಮಾತನಾಡು' ಎನ್ನೋಣವೇ. ಈಗಲೂ ನಾನು ಏನಾದರೂ ನಾಲ್ಕು ಮಾತನಾಡಲು ಕಲಿತಿದ್ದರೆ ಅದು ಶ್ರೀಗಳ ಅನುಗ್ರಹವೆಂದು ನೆನಸಿಕೊಳ್ಳುತ್ತೇನೆ.

**ಕೆ. ಎಂ. ಬಸಪ್ಪ**
ಪ್ರಾಧ್ಯಾಪಕ ಚಾಮರಾಜೇಂದ್ರ
ಸರಕಾರಿ ಕಾಲೇಜು ಬೆಂಗಳೂರು-೧೮

## ಶ್ರೀಗಳವರ ಒಲುಮೆಯ ಪ್ರಭಾವ

ಯಜ್ಞಗಳಲ್ಲಿ ಜಪಯಜ್ಞ, ಸ್ಥಾವರಗಳಲ್ಲಿ ಹಿಮಾಲಯ, ಆನೆಗಳಲ್ಲಿ ಐರಾವತ, ಧೇನುಗಳಲ್ಲಿ ಕಾಮಧೇನು, ಮೃಗಗಳಲ್ಲಿ ಸಿಂಹ, ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ, ಆಯುಧಗಳಲ್ಲಿ ವಜ್ರ, ನದಿಗಳಲ್ಲಿ ಗಂಗೆ ಹಾಗೆಯೇ ಗುರುಕುಲದ ಮಠಾಧ್ಯಕ್ಷರಲ್ಲಿ ಶ್ರೀಶ್ರೀ ಶಿವಕುಮಾರಸ್ವಾಮಿಗಳು. ಇವರನ್ನು ಕುರಿತು ಬರೆಯುವುದು ನನ್ನ ಸಣ್ಣ ಮಿದುಳಿಗೆ, ಸಣ್ಣ ಲೆಕ್ಕಣಿಗೆ ಸಾಧ್ಯವಿಲ್ಲ. ಉಪ್ಪು ಸಮುದ್ರದ ಆಳ ನೋಡಲು ಹೋದಂತೆ. ಉಪ್ಪೇನೋ ಕರಗಿಬಿಡುತ್ತದೆ. ಆದರೆ ಬೆಂಡು ಮುಳುಗುವುದೂ ಇಲ್ಲ, ಕರಗುವುದೂ ಇಲ್ಲ. ಸಮುದ್ರದ ಮೇಲೆ ತೇಲುತ್ತ ತೇಲುತ್ತಲೇ ಅದರ ವಿಸ್ತಾರವನ್ನು ನೋಡುವುದಲ್ಲವೆ? ಹಾಗೆಯೇ ನಾನು ಶ್ರೀಗಳವರ ವ್ಯಕ್ತಿತ್ವ ವಿಸ್ತಾರದ ಬಗ್ಗೆ ಒಂದೆರಡು ಮಾತುಗಳನ್ನು ಬರೆದು ವಿರಮಿಸುವೆನೆ ಹೊರತು ಆಳನೋಡಲಾರೆ.

ನಾನು ಪ್ರೌಢಶಾಲಾಭ್ಯಾಸಕ್ಕೆಂದು ಮಠ ಸೇರಿದ ಇಸ್ವಿ ೧೯೪೦. ಒಂದು ಸಲ ಇಲ್ಲಿಗೆ ಬಂದು ಮಹಾನುಭಾವರಾದ ಶ್ರೀ ಉದ್ದಾನಸ್ವಾಮಿಗಳವರ ದರ್ಶನ ಪಡೆದಿದ್ದೆ. ಸಣ್ಣ ವಯಸ್ಸಿನ ನಾನು ಅವರ ಮುಂದೆ ಕುಳಿತು ಮಠದ ಹಾರ್ಮೋನಿಯಂ ನುಡಿಸಿಕೊಂಡು ಕೆಲವು ಶಿವಶರಣರ ವಚನಗಳನ್ನು ಹಾಡಿ ಅವರ ಪ್ರೀತಿ ಗಳಿಸಿದ್ದೆ. 'ಹುಡುಗ ಫಸ್ಟಾಗಿ ಹಾಡ್ತಾನೆ ಫಸ್! ಫಸ್ಟ್'!

ಎಂದು, ಕಲ್ಲುಸಕ್ಕರೆ ಕೊಟ್ಟು ತಿನ್ನಿಸಿ ಅಲ್ಲಿಯೇ ತಟ್ಟೆಯಲ್ಲಿದ್ದ ಬೆಳ್ಳಿರೂಪಾಯಿ ಜೇಬಿಗೆ ತುಂಬಿಸಿದ್ದರು. ನನಗೆ ಮಠ ಎಂದರೆ ಸ್ವಾಮಿಗಳು ಎಂದರೆ, ಹೀಗಿರುತ್ತಾರೆ, ಅವರ ಮುಂದೆ ಹಾಡಿದವರಿಗೆ ಜೇಬು ತುಂಬುತ್ತದೆ ಎಂಬ ಕಲ್ಪನೆಯಾಯಿತು. ನನ್ನನ್ನು ಮಠಕ್ಕೆ ಸೇರಿಸಲು ಕರೆದುಕೊಂಡು ಬಂದಿದ್ದ ನನ್ನ ಒಬ್ಬ ವಿದ್ಯಾಗುರುಗಳನ್ನು ನೋಡುತ್ತ ಶ್ರೀ ಉದ್ದಾನಶಿವಯೋಗಿಗಳು ಹೇಳಿದರು: 'ಈ ಹುಡುಗನ್ನ ನಮ್ಮ ಮಠದಲ್ಲಿಯೇ ಇರಿಸ್ಕೋ ಅಂತ **ಹೊಸ ಅಯ್ನೋರಿಗೆ** (ಶ್ರೀಶ್ರೀ ಶಿವಕುಮಾರಸ್ವಾಮಿಗಳವರಿಗೆ) ಹೇಳು ಹೋಗು' ಎಂದರು.

ಪೂಜ್ಯ ಉದ್ದಾನಸ್ವಾಮಿಗಳ 'ಶಿಫಾರಸು' ನನಗೆ ಸಿಕ್ಕಿದ್ದು ಎಂಥ ಸುದೈವ! ನಾನು ಮಠಸೇರಿದ ಕೆಲವೇ ತಿಂಗಳಲ್ಲಿ 'ಜನಪ್ರಿಯ ಕಲಾವಿದ'ನಾಗಿಬಿಟ್ಟೆ. ಏನು ಸೋಜಿಗ!

ಒಂದು ದಿನ ರಾತ್ರಿ ೯–೩೦ರ ಸಮಯ. ನನ್ನ ಕೊಠಡಿಯಲ್ಲಿದ್ದಾಗ ಆಫೀಸಿನ ಜವಾನ 'ನಿಮ್ಮನ್ನು ಸ್ವಾಮಿಗಳು ಕರೆದುಕೊಂಡು ಬಾ ಎಂದರು' ಎಂದ. ನಾನು ಹೋದೆ. ಶ್ರೀಗಳವರು ಮಲಗುವ ಕೋಣೆಯ ಹಾಸಿಗೆ ಮೇಲೆ ಕುಳಿತು ಏನೋ ಹಾಡುತ್ತಿದ್ದರು. 'ಬಾ ಒಳಗೆ ಆ ಪೆಟ್ಟಿಗೆಯಲ್ಲಿ ಹಾರ್ಮೋನಿಯಂ ಇದೆ ತೆಗೆದುಕೋ, ಇದನ್ನು ಹಾಡು' ಎಂದು ಪುಸ್ತಕ ಕೊಟ್ಟರು. ನನಗೆ ಗಾಬರಿಯಾಯಿತು. ಆ ಪುಸ್ತಕ ನಾನು ನೋಡಿದ್ದೇ ಇಲ್ಲ. ಆ ಹಾಡು ನಾನು ಕೇಳಿದ್ದೇ ಅಲ್ಲ. ಸರ್ಪಭೂಷಣ ಶಿವಯೋಗಿಗಳ 'ಪಾಲಯ ಫಣಿಭರಣ' ಎಂಬ ಆ ಹಾಡನ್ನು ಅಭ್ಯಾಸಮಾಡಿದ್ದೇ ಇಲ್ಲ. ಏನು ಮಾಡಲಿ ? 'ಗುರುವೇ, ನೀನೇ ಗತಿ' ಎಂದು ಹಾರ್ಮೋನಿಯಂ ನುಡಿಸುತ್ತ ಹಾಡಲು ಮೊದಲು ಮಾಡಿದೆ. ಯಾವುದೊ ಧಾಟಿ, ಯಾವುದೋ ತಾಳ, ಏನೋ ಹಾಡಿದೆ. ಶ್ರೀಗಳವರು ತಾಳಹಾಕುತ್ತ ಕೇಳುತ್ತ ಕೇಳುತ್ತ ಹಾಗೆಯೆ ಹಾಸಿಗೆಯಲ್ಲಿ ಪವಡಿಸಿದರು. ಅವರಿಗೆ ನಾ ಹಾಡಿದ್ದು ರುಚಿಸಿತೆ? ಆಶ್ಚರ್ಯ! ಹಾಡು ಮುಗಿಯಿತು. 'ನೀನು ಈ ಪುಸ್ತಕ ಇಟ್ಟುಕೊಂಡು ಹಾಡುಗಳನ್ನು ಕಲಿತುಕೊ, ಇನ್ನು ಹೋಗು' ಎಂದರು.

'ನೀನೊಲಿದರೆ ಕೊರಡು ಕೊನರುವುದಯ್ಯ' ಎಂದ ಅಣ್ಣನ ಉಕ್ತಿಯ ಮರ್ಮ ನನ್ನ ವಿಚಾರದಲ್ಲಿ ಸಾರ್ಥಕವಾಗಿದೆ. ಶ್ರೀಗಳವರ ಒಲವು ನನ್ನ ಸಂಗೀತಕಲೆಯ ಶಕ್ತಿಯ ವಿಕಾಸಕ್ಕೆ ಅಂದು ರಾತ್ರಿ ನಾಂದಿಯಾಯಿತು. ಅಂದಿನಿಂದ ರಾತ್ರಿ ವೇಳೆ ಶ್ರೀ ಗುರುವರ್ಯರ ಸನ್ನಿಧಿಯಲ್ಲಿ ನಾನು ಹಾಡುತ್ತ ಹಾಡುತ್ತ ಬಂದೆ. ನನ್ನ ಸಂಗೀತ ಸೇವೆ ಅಲ್ಲಿ ಸಫಲವಾಗತೊಡಗಿತು. ತಿಂಗಳುಗಳು ಉರುಳಿದಂತೆ ಬಸವೇಶ್ವರ ವಚನ, ಸರ್ಪಭೂಷಣರ, ನಿಜಗುಣರ ಹಾಡುಗಳು ಒಂದೊಂದಾಗಿ ನನಗೆ ಕಂಠಸ್ಥವಾಗುತ್ತ ಬಂದವು. ನನ್ನ ಸಂಗೀತಕಲೆಯೊಡನೆ ಆತ್ಮವಿಕಾಸದ ಮಾರ್ಗವೂ ಗೋಚರವಾಗಿದ್ದು ಶ್ರೀಶ್ರೀಗಳವರು ನನ್ನ ಮೇಲೆ ಬೀರಿದ ಒಲವೇ ಸೈ. ಮುಂದೆ ಉದ್ದಾನಸ್ವಾಮಿಗಳವರು ಲಿಂಗೈಕ್ಯರಾದರು. ಅವರ ಶಿಷ್ಯರಾದ ಪೂಜ್ಯ ಶಿವಕುಮಾರಸ್ವಾಮಿಗಳವರ ವಾತ್ಸಲವೂ ನನ್ನ ಮೇಲೆ ಅಧಿಕ.

ಸಂಗೀತವೆಂದರೆ ಶ್ರೀಗಳವರಿಗೆ ಬಹಳ ಆಸೆ. ಭಕ್ತಿಗೀತೆಗಳೆಂದರೆ ಇನ್ನಷ್ಟು ಪ್ರೇಮ. ಕಲೆಯಲ್ಲಿ ವಿಶೇಷ ಒಲವು, ವಿದ್ಯಾರ್ಥಿಗಳು ಅಭಿನಯಿಸುವ ನಾಟಕ, ಹಾಡುವ ಸಂಗೀತ, ಅವರಿಗೆ ಆನಂದಕಾರಕ. ವಿದ್ಯಾರ್ಥಿಗಳೆಲ್ಲಾ ಸೇರಿ, ಒಮ್ಮೆ 'ಮಾರ್ಕಂಡೇಯ ನಾಟಕ'ವನ್ನಾಡಲು ಸಿದ್ಧತೆ ಮಾಡಿಕೊಂಡೆವು. ರಾತ್ರಿ ಊಟವಾದ ಬಳಿಕ ನಾಟಕಾಭ್ಯಾಸ ಪ್ರಾರಂಭ. ಈ ನಾಟಕಕ್ಕೆ ನಾನೇ ಹಾಡುಗಳನ್ನು ಬರೆದು ಪಾತ್ರಧಾರಿಗಳಿಗೆ ಹೇಳಿಕೊಡುತ್ತಿದ್ದೆ. ಶ್ರೀಗಳವರು ಪಾದರಕ್ಷೆಗಳ ಶಬ್ದಮಾಡುತ್ತ ಪ್ರತಿದಿನ ಕೊಠಡಿಕೆ ದಯಮಾಡಿಸುತ್ತಿದ್ದರು. ಆ ಹಾಡುಗಳನ್ನು ಕೇಳಿ, ಅಭಿನಯವನ್ನು ನೋಡಿ ಪ್ರಶಂಸಿಸುತ್ತಿದ್ದರು. ಈ ನಾಟಕ ತುಮಕೂರು ಬೆಂಗಳೂರುಗಳಲ್ಲಿ ಅಭಿನಯಿಸಲ್ಪಟ್ಟು 'ಕಂಪನಿ'ಗೆ ಕೀರ್ತಿಯನ್ನೂ ಮಠಕ್ಕೆ ನಾಲ್ಕೆಂಟು ಸಾವಿರ ರೂಪಾಯಿಗಳ ಲಾಭವನ್ನೂ ಗಳಿಸಿಕೊಟ್ಟದ್ದು ಒಂದು ಪವಾಡವೇ ಸರಿ. ವಿದ್ಯಾರ್ಥಿಗಳು ಕಲೆಯ ಬಗ್ಗೆ ಹೊಸಬಗೆಯ ಅನುಭವವನ್ನೂ ಗುರುಕುಲಕ್ಕಾಗಿ ತಾವು ಮಾಡಬಹುದಾದ ಸೇವಾಬುದ್ಧಿಯನ್ನು ಚಿಗುರಿಸಿಕೊಳ್ಳಲು ಇದು ಎಂಥ ಆದರ್ಶಯುತವಾದ ದಿವ್ಯ ವಾತಾವರಣ ಸೃಷ್ಟಿ! ಶ್ರೀಗಳವರ ಕಲಾಭಿಮಾನ ಅಂದಿನಿಂದ ಇಂದಿನವರೆಗೂ ಶ್ರೀ ಕ್ಷೇತ್ರದಲ್ಲಿ ನಂದದ ಜ್ಯೋತಿಯಾಗಿಯೇ ಇದೆ.

ಮಕ್ಕಳಲ್ಲಿ ಸುಪ್ತವಾಗಿರುವ ಗುಪ್ತವಾಗಿರುವ ಶಕ್ತಿ ಶ್ರೀಗಳವರ ಸತ್ಸಂಕಲ್ಪಬಲದಿಂದ ಸಕ್ರಿಯಪ್ರೋತ್ಸಾಹದಿಂದ ವಿಕಸಿಸುತ್ತಿದೆ ಎಂಬುದಕ್ಕೆ ಇದೊಂದು ಉದಾಹರಣೆ ಅಷ್ಟೆ.

**ಶ್ರೀಗಳವರು ಶಿಕ್ಷಿಸುವುದೆಂದರೆ ಶಿಕ್ಷಣದ ಸಿದ್ಧಿಗೆ.** ಸನ್ಮಾರ್ಗದರ್ಶಕ **ಶ್ರೀಗಳು ಕೆನ್ನೆಹಿಂಡುವುದು ಕಿವಿಹಿಂಡುವುದು** ವಿದ್ಯಾರ್ಥಿಗಳಿಗೆ ಬಹು **ರುಚಿಕರವಾದ ಶಿಕ್ಷೆ.** ಇವನು ಮಹಾಪಂಡಿತ ಎಂದು ಒಮ್ಮೆ ನನ್ನ ಕಿವಿಹಿಂಡಿದ್ದರು. ಇಂದು ನಾನು ಮಹಾ ಅಲ್ಲದೆ ಹೋದರೂ ಪಂಡಿತನಂತೂ ಆಗಿಯೇ ಇರುವೆ. ಶ್ರೀಗಳವರು ಪ್ರೀತಿಯಿಂದ **ಬಯ್ದು ಹೊಡೆಯುತ್ತಾರೆ.** ಅವರಿಂದ **ಬೈಸಿಕೊಂಡವರಿಗೆ** ಅದು **ಆಶೀರ್ವಚನ, ಹೊಡೆಸಿಕೊಂಡವರಿಗೆ ಹೊನ್ನಸುರಿಮಳೆ**

ಟಿ. ವಿ. ಮುತ್ತಾಚಾರ್ಯ
೬೩, ೩ನೇ ರಸ್ತೆ, ಗವಿಪುರವಿಸ್ತರಣೆ
ಬೆಂಗಳೂರು–೧೯

೨೨-೩-೧೯೭೯

# ಸಿದ್ಧಗಂಗೆಯಲ್ಲಿ ಸಿದ್ಧರು ಕ್ರಾಸ್ ಬಿಟ್ಟರು*

ಬಹಳ ವರ್ಷಗಳ ಹಿಂದಿನ ಮಾತು. ಆಗ ನನಗೆ ೧೪ ವರ್ಷ ವಯಸ್ಸು. ೧೯೨೪ನೆಯ ಮೇ ೨೪ನೆಯ ದಿನ ನಾನು ಸಿದ್ಧಗಂಗೆಯನ್ನು ಮೊಟ್ಟಮೊದಲು ನೋಡಿದೆನು. ಬಹುಶಃ ಅಂದು ಬುಧವಾರವೇನೋ! ಸರಿಯಾಗಿ ನೆನಪಿಲ್ಲ. ಅಂದು ಪ್ರಾತಃಕಾಲ ೭ ಘಂಟೆ ಸಮಯ. ತುಮಕೂರಿನಿಂದ ಬರುವ ದಾರಿ, ಬಂಡೆಪಾಳ್ಯವನ್ನು ದಾಟಿ ಸಿದ್ಧಗಂಗೆಗೆ ಬರುತ್ತದೆ. ದೂರದಿಂದಲೇ ಸಿದ್ಧಗಂಗೆ ಬೆಟ್ಟ ಭಕ್ತರನ್ನು ನೋಡುತ್ತಿರುತ್ತದೆ. ಆ ಬೆಟ್ಟದ ನಡುವಿನಲ್ಲಿ ಸಿದ್ಧಲಿಂಗೇಶ್ವರಸ್ವಾಮಿಯ ಗುಡಿ-ಗುಡಿಯ ಗೋಪುರ ಬೆಳ್ಳಗೆ ಕಾಣುತ್ತದೆ. ಪಾಳ್ಯವನ್ನು ಬಿಟ್ಟು ತಗ್ಗಿಗಿಳಿದರೆ, ದಾರಿಯ ಪಕ್ಕದಲ್ಲಿ ಬಲಗಡೆ ವಿಶಾಲವಾದ ಕಲ್ಯಾಣಿ! ಎಡಗಡೆ ದೊಡ್ಡ ದೊಡ್ಡ ಮರಗಳು. ಬೆಟ್ಟದಡಿಯ ಬಯಲಿನಲ್ಲಿ ದಾರಿಗರಿಗೆ ನೆಳಲು ನೀಡುತ್ತನಿಂತಿವೆ. ಎದುರಿಗೆ ಮಹಾನವಮಿಯ ಮಂಟಪ. ಆ ಮಂಟಪದ ಬಲಬದಿಯಲ್ಲಿ ಅಗಲವಾದ ಕಲ್ಲುಕಟ್ಟಡದ ಬಾವಿ. ಆ ಬಾವಿಯಿಂದ ಹತ್ತಾರು ವಿದ್ಯಾರ್ಥಿಗಳು ಆ ಸಮಯದಲ್ಲಿ ನೀರೆಳೆಯುತ್ತಿದ್ದರು. ಆ ನೀರು ಮಠದ ದಾಸೋಹ ಶಾಲೆಗೆ. ಅಡುಗೆ ಮನೆಗೆ ಮತ್ತು ಸ್ನಾನದ ಮನೆಗೆ ಒದಗುತ್ತಿತ್ತು. ಆ ವಿದ್ಯಾರ್ಥಿಗಳೆಲ್ಲ ಆ ಮಠದ ವಟುವೃಂದ. ಅವರ ಹಣೆಯಲ್ಲಿ ವಿಭೂತಿ ಆ ಎಳೆ ಬಿಸಿಲಿನಲ್ಲಿ ಬೆಳ್ಳಗೆ ಹೊಳೆಯುತ್ತಿತ್ತು. ಅದು ದೂರಕ್ಕೆ ಕಾಣುತ್ತಿತ್ತು. ಬೆಳ್ಳನೆಯ ಉತ್ತರೀಯಗಳನ್ನು ಹೊದ್ದಿದ್ದ ಆ ವಟುವೃಂದ ಬಿಳಿಯ ಕೊಕ್ಕರೆಯ ಹಿಂಡಿನಂತೆ ಕಾಣುತ್ತಿತ್ತು. ಅಲ್ಲಿಯೇ ಮಾವಿನತೋಪು. ತೆಂಗಿನತೋಟ. ಹಕ್ಕಿಗಳ ಕಲರವದಿಂದ ಪ್ರಕೃತಿದೃಶ್ಯ ಆನಂದದಾಯಕವಾಗಿತ್ತು. ನಾನು ಆ ಬಾವಿಯ ಹತ್ತಿರಕ್ಕೆ ಬಂದೆ. ಎಲ್ಲರೂ ಹೊಸಬನಾದ ನನ್ನನ್ನು ನೋಡುತ್ತ ನಿಂತರು. ನಾನು ಉಟ್ಟಿದ್ದ ಪಂಚೆ, ತೊಟ್ಟಿದ್ದ ಅಂಗಿ, ಇಟ್ಟಿದ್ದ ಕುಲಾವಿ, ಆ ಕುಲಾವಿಯ ಕೆಳಗೆ ನನ್ನ ಕತ್ತಿನ ಮೇಲೆ ಕುಳಿತಿದ್ದ ಕೂದಲಿನ ಗಂಟು, ಹಿಡಿದಿದ್ದ ಕೊಡೆ, ಭುಜದ ಮೇಲಿದ್ದ 'ಟವಲು'—ಇವೆಲ್ಲಾ ನಾನು ಹಳ್ಳಿಯ ಹುಡುಗ ಎಂಬುದನ್ನು ಅವರಿಗೆ ಹೇಳುತ್ತಿದ್ದವು. ಇವೆಲ್ಲಕ್ಕಿಂತಲೂ, ನಾನು ಕಾಲಿಗೆ ಹಾಕಿಕೊಂಡಿದ್ದ ಬೆಳ್ಳಿಯ ಕಾಲಂದಿಗೆ ಅವರಿಗೆ ಹೆಚ್ಚು ಸೋಜಿಗವಾಗಿ ತೋರಿರಬಹುದು. ನಾನು ತುಮಕೂರು ರೈಲ್ವೆ ಸ್ಟೇಷನ್‌ನಲ್ಲಿಯ ನೀರಿನಲ್ಲಿ ಮುಖ ತೊಳೆದುಕೊಂಡು, ವಿಭೂತಿ ಧರಿಸಿಕೊಂಡು ಬಂದಿದ್ದೆನು. ನನ್ನ ವಿಭೂತಿ ಪಟ್ಟೆಗಳು ಆ ಮಠದ ಹುಡುಗರ ವಿಭೂತಿ ಪಟ್ಟೆಗಳಿಗಿಂತಲೂ ಕಮ್ಮಿಯೇನೂ ಆಗಿರಲಿಲ್ಲ. ನಾನು ವಿಭೂತಿಯನ್ನು ನೀರಿನಲ್ಲಿ ಕಲಸಿ ಧರಿಸಿಕೊಂಡಿದ್ದೆ; ಅದು ನಿತ್ಯಾಲಂಕಾರವೇ ಆಗಿತ್ತು. ನಾನು ಮಾಹೇಶ್ವರರ ಸಂಪ್ರದಾಯದ ವಾತಾವರಣದಲ್ಲಿ ಬೆಳೆಯುತ್ತಿದ್ದವನು. ಆ ವಿದ್ಯಾರ್ಥಿಗಳಲ್ಲಿ ಒಬ್ಬನು ನನ್ನ ಹತ್ತಿರಕ್ಕೆ ಬಂದು ಮಾತನಾಡಿಸಿದನು.

'ಯಾವೂರ್ರಿ! ಏನು ಬಂದದ್ದು? ನಿಮ್ಮ ಹೆಸರೇನು'?—ಎಂದು ಪ್ರೀತಿಯಿಂದ ಕೇಳಿದನು.

ನಮ್ಮ ಊರು ಇಲ್ಲಿಗೆ ಮೂರು ಗಾವುದ ದೂರಇದೆ ಎಂದು ಅದರ ಹೆಸರು ಹೇಳಿದೆ. ನನ್ನ ಹೆಸರೂ ಹೇಳಿದೆ. ನಾನು ಇಂಗ್ಲೀಷ್ ಓದಲು ಮಠದಲ್ಲಿರಬೇಕೆಂದು ಬಂದಿದ್ದೇನೆ. ನನಗೆ ಲೋಯರ್ ಸೆಕೆಂಡರಿ ಪರೀಕ್ಷೆ ಆಗಿದೆ. ಸಂಸ್ಕೃತ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿಯೂ ಪಾಸ್ ಆಗಿದ್ದೇನೆ ಎಂದೂ ತಿಳಿಸಿದೆನು.

'ಇಲ್ಲಿ ಪ್ರತಿಯೊಬ್ಬರೂ ಸಂಸ್ಕೃತ ಓದಲೇಬೇಕು. ನಿಮಗೆ ಸಂಸ್ಕೃತ ಬರುವುದರಿಂದ ನಿಮ್ಮನ್ನು ಧಾರಾಳವಾಗಿ ಸೇರಿಸಿಕೊಳ್ಳುತ್ತಾರೆ. ಈಗ ಇನ್ನೂ ಬೇಸಿಗೆ ರಜಾ ಇದೆ. ಇನ್ನೇನು ೮-೧೦ ದಿನಕ್ಕೆ ಸ್ಕೂಲು ಬಾಗಿಲು ತೆಗೆಯುತ್ತೆ. ವಿದ್ಯಾರ್ಥಿಗಳು ಇನ್ನೂ ಬಂದಿಲ್ಲ. ಅಲ್ಲಿ ಮಠದ ಮುಂದೆ ದೊಡ್ಡ ಸ್ವಾಮಿಗಳು ಮಂಚದ ಮೇಲೆ ಕುಳಿತಿದ್ದಾರೆ. ನೀವು ಹೋಗಿ ಅವರಿಗೆ ನಮಸ್ಕಾರಮಾಡಿ. ನಮಸ್ಕಾರ ಅಂದರೆ ಅವರ ಮುಂದೆ ಅಡ್ಡಬೀಳಬೇಕು. ಯಾವೂರು ಅಂತ ಕೇಳ್ತಾರೆ, ನೀವು ಎಲ್ಲಾ ವಿಚಾರವನ್ನು ಹೇಳಿಕೊಳ್ಳಿರಿ. ಸ್ವಾಮಿಗಳನ್ನು 'ಬುದ್ಧಿ' ಎಂದು ಹೇಳಬೇಕು. ಅವರು ಒಂದೊಂದು ಮಾತನ್ನು ಎರಡೆರಡು ಸಲ ಆಡುತ್ತಾರೆ, ಗಟ್ಟಿಯಾಗಿ ಗದರಿಸಿಕೊಂಡು ಮಾತನಾಡುತ್ತಾರೆ; ನೀವು ಗಾಬರಿ ಬೀಳಬೇಡಿ, ಹೆದರಿಕೊಳ್ಳಬೇಡಿ. ಸ್ವಾಮಿಗಳು ತುಂಬಾ ಒಳ್ಳೆಯವರು ಎಂದು ಹಿನ್ನೆಲೆಯನ್ನು ಚಿತ್ರಿಸಿದರು. ಅದರಿಂದ ನನಗೆ ತುಂಬಾ ಉಪಕಾರವಾಯಿತು. ನಾವು ಮಾತನಾಡುತ್ತಿದ್ದಾಗ ಆ ಹುಡುಗರು ತಮ್ಮ ಕಾರ್ಯದಲ್ಲಿ ನಿರತರಾಗಿದ್ದರು. ಸ್ವಾಮಿಗಳ ಹೆಸರೇನು? ಎಂದು ಕೇಳಿದೆನು. ಅವರ ಹೆಸರು ಉದ್ದಾನಸ್ವಾಮಿಗಳು...ಎಂದು ಅವರು ಹೇಳಿದರು, 'ಹುಡುಗರು ದಿನವೂ ಬಾವಿಯಿಂದ ನೀರೆಳೆಯಬೇಕೆ'? 'ಹೌದು; ದಿನವೂ ವಿದ್ಯಾರ್ಥಿಗಳು ಬೆಳಿಗ್ಗೆ ನೀರೆಳೆಯಬೇಕು. ಯಾತ್ರಿಕರಿಗೆ, ಸ್ವಾಮಿಗಳ ಸ್ನಾನಕ್ಕೆ ಮೊದಲು ನೀರು ಬೇಕೇ ಬೇಕು.' ಎಂದರು. 'ಅಂದಹಾಗೆ,ನಿಮ್ಮ ಹೆಸರೇನು? ನೀವು ಏನು ಓದುತ್ತಿದ್ದೀರಿ ನಿಮ್ಮ ನಿಮ್ಮದು ಯಾವೂರು'? ಎಂದು ಕೇಳಿದೆ ನಾನು. 'ನನ್ನ ಹೆಸರು ರೇವಣ್ಣ; ಅದಲಗೆರೆ ನಮ್ಮೂರು. ನಾನು ಈ ಸಾರಿ ಹೈಸ್ಕೂಲಿಗೆ ಸೇರಬೇಕು. ನಾನು ಇಲ್ಲಿಗೆ ಬಂದು ಎರಡು ವರ್ಷವಾಯಿತು' ಎಂದರು.

---

* ಸಿದ್ಧಗಂಗಾ ತ್ರೈಮಾಸಿಕಕ್ಕೆ ೧೯೭೦ರಲ್ಲಿ ಬರೆದ ಲೇಖನದಿಂದ.

ನಾನು ಬಾವಿಯ ಹತ್ತಿರದಿಂದ ಮಠದ ಮುಂದುಗಡೆಗೆ ಹೋದೆ. ಅಲ್ಲಿ ಮಠದ ಕೈಸಾಲೆಯಲ್ಲಿ ಬಲಗಡೆ ಜಗುಲಿಯ ಮೇಲ್ಭಾಗದ ದೊಡ್ಡ ಮಂಚದ ಮೇಲೆಗೆ ಉದ್ದಾನಸ್ವಾಮಿಗಳು ಮಂಡಿಸಿದ್ದರು. ಶ್ಯಾಮಲವರ್ಣ! ಕಾವಿಯ ಕಪಿನಿಯನ್ನು ಧರಿಸಿ, ತಲೆಗೆ ಕಾವಿಯ ಪಾಗು ಸುತ್ತಿದ್ದರು. ಭಕ್ತವೃಂದ ಆ ವಿರಕ್ತಮೂರ್ತಿಯ ಕಾಲುಮುಟ್ಟಿ ಕಣ್ಣಿಗೆ ಒತ್ತಿಕೊಳ್ಳುತ್ತಿತ್ತು ; ಅನೇಕ ಹೆಣ್ಣುಮಕ್ಕಳು ಕೈಜೋಡಿಸಿಕೊಂಡು ಅಲ್ಲಲ್ಲಿ ನಿಂತಿದ್ದರು. ಶ್ರೀಗಳು ಯಂತ್ರ ಬರೆಯುತ್ತಿದ್ದರು ; ಆಗಾಗ ಯಂತ್ರ ಬರೆಯುವ ತಗಡುಗಳನ್ನು ಅವರೇ ಕತ್ತರಿಯಿಂದ ಪ್ರಮಾಣಾನುಸಾರವಾಗಿ ಕತ್ತರಿಸಿಕೊಳ್ಳುತ್ತಿದ್ದರು ; ಎಡಗಡೆ ಕೈಸಾಲೆಯಲ್ಲಿ ಎರಡು--ಮೂರು ರಾಗಿ ಕಲ್ಲುಗಳನ್ನು ಹಿಡಿದು ಹೆಂಗಸರು ರಾಗಿ ಬೀಸುತ್ತಿದ್ದರು.

ನಾನು ಕಂಬದ ಮರೆಯಲ್ಲಿ ಸ್ವಲ್ಪಹೊತ್ತು ನಿಂತುಕೊಂಡು ಆ ವಿರಕ್ತಮೂರ್ತಿಯನ್ನು ನೋಡಿದೆ. ನನ್ನಲ್ಲಿ ಭಯಭಕ್ತಿ ಸಮ್ಮಿಶ್ರ ಮನೋಭಾವ ಮೂಡಿತು; ಅವಕಾಶ ಲಭಿಸಿತು. ನಾನು ಮುಂದೆಬಂದು ಶ್ರೀಗಳವರ ಎದುರಿಗೆ ಅಡ್ಡಬಿದ್ದು ಸಾಷ್ಟಾಂಗ ಹಾಕಿ ಎದ್ದು ನಿಂತುಕೊಂಡೆ.

'ಯಾರು? ಯಾರು? ಯಾವೂರು? ಯಾವೂರು? ಏನು ಬಂದದ್ದು? ಏನು ಏನು?' ಸ್ವಾಮಿಗಳಿಂದ ಬಂದ ಸ್ವಾಗತ; ಗಂಡುಧ್ವನಿ, ವಿರಕ್ತಹೃದಯ !

'ನನ್ನ ಹೆಸರು ಲಿಂಗಣ್ಣಯ್ಯ,ನಮ್ಮ ಊರು ಮುಂದಗೆರೆ, ಶ್ರಾವಂಡನಹಳ್ಳಿಯಿಂದ ಬಂದೆ. ಮಠದಲ್ಲಿ ಸೇರಿ ಇಂಗ್ಲಿಷ್ ಓದಬೇಕೆಂದು ಬಂದಿದ್ದೇನೆ. ನಮ್ಮ ಊರಿನಲ್ಲಿ ಇಂಗ್ಲಿಷ್ ಸ್ಕೂಲ್ ಇಲ್ಲ. ನಾನು ಕನ್ನಡ ಮತ್ತು ಸಂಸ್ಕೃತ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸ್‌ಮಾಡಿದ್ದೇನೆ' ಎಂದು ಬಿನ್ನವಿಸಿದೆ. ಶಬಾಸ್ ! ಸಂಸ್ಕೃತ ಓದಿದ್ದೀಯಾ! ಅಮರಪಾಠ ಆಗಿದೆಯೋ?

'ಆಗಿದೆ; ಬುದ್ಧೀ!'

'ಕಾಲೋದಿಷ್ಟೋಪ್ಯನೇಹಾಪಿ'-ಹೇಳು

ಕಾಲೋದಿಷ್ಟೋಽಪ್ಯನೇಹಾಪಿ ಸಮಯೋಽಪ್ಯಥ ಪಕ್ಷತಿಃ

ಪ್ರತಿಪದ್ಧೇಇಮೆ ಸ್ತ್ರೀ ತ್ವೇತದಾದ್ಯಾಸ್ತಿಥ ಯೋದ್ವಯೋಃ॥

–ಎಂದು ನಿರರ್ಗಳವಾಗಿ ನಾಲ್ಕು ಸಾಲು ಹೇಳಿದೆ.

'ಭೇಷ್; ಭೇಷ್! ಗಂಡಕ್ಷರ, ಹೆಣ್ಣಕ್ಷರ ಎಲ್ಲಾ ಚೆನ್ನಾಗಿ ಉಚ್ಚರಿಸುತ್ತಾರೆ' ಎಂದು 'ಮರುಳಯ್ಯಾ! ಮರುಳಯ್ಯ'! ಎಂದು ಯಾರನ್ನೋ ಕರೆದರು. ನಾನು ಸುತ್ತಲೂ ನೋಡಿದೆ, ಎದುರುಗಡೆಯ ಪಾಠಶಾಲೆಯಿಂದ ಎತ್ತರವಲ್ಲದ ಒಬ್ಬ ವ್ಯಕ್ತಿ ಕೈಲಿ ಬೆತ್ತಹಿಡಿದುಕೊಂಡು ಬಂದರು. ಅವರು ಮುಂದೆ ಆ ಮಠದ ಸ್ವಾಮಿಯಾಗತಕ್ಕವರೆಂದು ಆಮೇಲೆ ನನಗೆ ಗೊತ್ತಾಯಿತು.

'ನೋಡು ನೋಡು ! ಇವನಿಗೆ ಸಂಸ್ಕೃತ ಬರುತ್ತಂತೆ! ಅಮರ ಚೆನ್ನಾಗಿ ಹೇಳ್ತಾನೆ. ಇವನನ್ನು ಪಾಠಶಾಲೆಗೆ ಸೇರಿಸಿಕೊಳ್ಳಬಹುದು' ಎಂದು ಹೇಳಿದರು. ಅಷ್ಟು ಹೊತ್ತೂ ರೇವಣ್ಣ ಮಠದ ಮುಂದುಗಡೆಯೇ ಮರೆಯಲ್ಲಿ ನಿಂತುಕೊಂಡು ಇವನ್ನೆಲ್ಲಾ ನೋಡುತ್ತಿದ್ದನಂತೆ.

ಮಠದಲ್ಲಿ ಸ್ನಾನಮಾಡಿದೆ. ಪ್ರಸಾದವೂ ಆಯಿತು. ನಾನು ಅಂದಿನಿಂದ ಮಠದ ವಿದ್ಯಾರ್ಥಿಯಾದೆ. ಅನೇಕ ಸಿದ್ಧರಲ್ಲಿ ನಾನೂ ಸಿದ್ಧನಾದೆ. ಸ್ವಾಮಿಗಳು ಹುಡುಗರನ್ನು 'ಸಿದ್ಧಪ್ಪ' ಎಂದೇ ಕರೆಯುತ್ತಿದ್ದರು.

ಮಠದ ನಾಯಿಯ ಹೆಸರು 'ಸಿದ್ಧ'! ಗಾಡಿಯ ಎತ್ತುಗಳ ಹೆಸರೂ 'ಸಿದ್ಧ'! ಎಲ್ಲ ಹುಡುಗರ ಹೆಸರೂ ಅವರಿಗೆ ಪರಿಚಯವಿರಲಿಲ್ಲ! ಆದ್ದರಿಂದ ಅವರಿಗೆ ನಾವೆಲ್ಲ 'ಸಿದ್ಧ'ರೇ ಆಗಿದ್ದೆವು.

ಸ್ವಾಮಿಗಳ ಎದುರಿನಲ್ಲಿ ಯಾವ ವಿದ್ಯಾರ್ಥಿಯೂ ಸುಳಿಯುತ್ತಿರಲಿಲ್ಲ. ಅವರನ್ನು ಕಂಡರೆ ನಮಗೆಲ್ಲಾ ಭಯ! ಅಕಸ್ಮಾತ್ ಅವರಿಗೆ ಎದುರಾಗಿ ಸಿಕ್ಕಿದರೆ 'ಬಾ! ಇಲ್ಲಿ ಸ್ವರವ್ಯಯಂ ಸ್ವರ್ಗನಾಕ'ಹೇಳು ಎಂದಾಗಲಿ,'ಲಕ್ಷ್ಮೀಃ -ಪದ್ಮಾಲಯಾ ಪದ್ಮಾ' ಹೇಳು ಎಂದಾಗಲಿ, 'ಈಶ್ವರಶ್ಶರ್ವಈಶಾನಃ' ಹೇಳು ಎಂದಾಗಲಿ, ಅವರಿಗೆ ಇಷ್ಟಬಂದ ಯಾವುದೋ ಸಾಲನ್ನು ಅಮರದಿಂದ ಉದ್ಧರಿಸಿ,ಅದನ್ನು ಪೂರ್ತಿ ಹೇಳುವಂತೆ ಹುಡುಗರನ್ನು ಕೇಳುತ್ತಿದ್ದರು. ಸರಿಯಾಗಿ ಹೇಳಿದರೆ ಬದುಕಿದರು; ಇಲ್ಲವಾದರೆ ಬಿಸಿಬಿಸಿ ನಾಲ್ಕು ಏಟು ತಪ್ಪುತ್ತಿರಲಿಲ್ಲ. ನನಗೆ ಒಂದು ಕಾಂಡ ಅಮರ ಹೃದ್ಗತವಾಗಿತ್ತು. ಎಲ್ಲಿ ಕೇಳಿದರೂ ಸ್ಪಷ್ಟವಾಗಿ ತಡೆಬಡೆಯಿಲ್ಲದೆ ಹೇಳುತ್ತಿದ್ದೆ. ಇದನ್ನು ತಿಳಿದಿದ್ದ ಸ್ವಾಮಿಗಳು ನಾನು ಎದುರಾಗಿ ಸಿಕ್ಕಿದರೂ ನನ್ನನ್ನು ಕೇಳುತ್ತಿರಲಿಲ್ಲ.

ರಾತ್ರಿ ೯ ಘಂಟೆ ಆದ ಮೇಲೆ ಸ್ವಾಮಿಗಳು ವಿದ್ಯಾರ್ಥಿಗಳ ಕೊಠಡಿಗಳ ಹತ್ತಿರ ಬಂದು ಕಿಟಕಿಯಲ್ಲಿ ಇಣುಕಿ ನೋಡುತ್ತಿದ್ದರು. ಅವರು ಎಂದು, ಎಷ್ಟು ಹೊತ್ತಿಗೆ, ಎಲ್ಲಿಗೆ ಬರುತ್ತಾರೆಂಬುದನ್ನು ಯಾರೂ ಊಹಿಸುವಂತಿರಲಿಲ್ಲ. ಯಾವ ವಿದ್ಯಾರ್ಥಿಯೇ ಆಗಲಿ ತೂಕಡಿಸುತ್ತಿದ್ದರಾಗಲಿ, ಹರಟೆ ಹೊಡೆಯುತ್ತಿದ್ದರಾಗಲಿ ಅವರಿಗೆ ವಾಗ್ದಂಡನೆ ತಪ್ಪುತ್ತಿರಲಿಲ್ಲ. ಒಂದೊಂದು ಕೊಠಡಿಯಲ್ಲಿಯೂ ನಾಲ್ಕು-ಐದು ಜನ 'ಸಿದ್ಧ'ರಿರುತ್ತಿದ್ದರು. ಬೆಳಗಿನ ಜಾವ ಎಲ್ಲರೂ ಎದ್ದು ಓದಬೇಕಾಗಿತ್ತು. ಆಗ ಸುಮಾರು ೪೦ ಮಂದಿ ವಿದ್ಯಾರ್ಥಿಗಳಿದ್ದರು. ಅರಸೀಕೆರೆ ಬಸಪ್ಪ, ಅಜಗಾನಹಳ್ಳಿ ಸಿದ್ಧಲಿಂಗಯ್ಯ ಇವರಿಬ್ಬರೂ ವಯಸ್ಸಾದ ವಿದ್ಯಾರ್ಥಿ

ಗಳು. ಅವರು ಆಗ ಎಫ್. ಎ. ತರಗತಿಯಲ್ಲಿದ್ದರು. ಅವರು ಸುಮಾರು ೨೫ ವರ್ಷದ ತರುಣರಾಗಿದ್ದರು. ಸ್ವಾಮಿಗಳು ಅವರನ್ನು ಯಾವಾಗಲೂ ದಂಡಿಸುತ್ತಿರಲಿಲ್ಲ. ಸ್ವಾಮಿಗಳ ಸ್ನಾನವಾದ ಮೇಲೆ ಇವರಿಗೆ ದಿನವೂ ಸ್ನಾನಕ್ಕೆ ಬಿಸಿನೀರು: ಸ್ವಾಮಿಗಳ ಊಟವಾದ ಮೇಲೆ ದಿನವೂ ಇವರಿಗೆ ಖಾಸಾ ಅಡುಗೆಯ ಪ್ರಸಾದ ಸಿಕ್ಕುತ್ತಿತ್ತು. ಅಡುಗೆಯ ನಂಜುಂಡಯ್ಯನಿಗೆ ಇವರಿಬ್ಬರ ಮೇಲೆ ಅಪಾರ ವಿಶ್ವಾಸವಿತ್ತು.

ಪ್ರತಿ ಭಾನುವಾರ ಮಧ್ಯಾಹ್ನ ೩ ಘಂಟೆಗೆ ಸ್ವಾಮಿಗಳು ಮಂಚದ ಮೇಲೆ ಮಂಡಿಸಿರುತ್ತಿದ್ದರು. ಮಠದ ಮುಂಭಾಗದಲ್ಲಿ ನಾವೆಲ್ಲಾ ಸಾಲಾಗಿ ನಿಲ್ಲುತ್ತಿದ್ದೆವು. ಶ್ರೀ ಉದ್ದಾನಶಿವಯೋಗೀಶ್ವರರೆಂದರೆ ಆರು ಅಡಿ ಎತ್ತರದ ನಿಲುವು: ಶಿವಯೋಗ ಕಾಂತಿ ಮುಖದಲ್ಲಿ; ಶಿವದೃಷ್ಟಿ ಕಣ್ಣುಗಳಲ್ಲಿ: ಕಾವಿಯ ಮುಕುಟ ಶಿರದಲ್ಲಿ: ಕಾವಿಯ ಕಫಿನಿ ಧರಿಸಿ. ಕೈಯಲ್ಲಿ ಹೊಗೆಸೊಪ್ಪನ್ನು ಉಜ್ಜುತ್ತಾ ಅಧ್ಯಕ್ಷರಾಗಿರುತ್ತಿದ್ದರು. ಅವರು ಆರಿಸಿದ ವಿದ್ಯಾರ್ಥಿ ಅವರೆದುರಿಗೆ ಅವನಿಗೆ ಇಷ್ಟವಾದ ವಿಚಾರವನ್ನು ಕುರಿತು ಉಪನ್ಯಾಸ ಮಾಡಬೇಕಾಗಿತ್ತು. ಅವನು ಉಪನ್ಯಾಸವನ್ನು ಬರೆದುಕೊಂಡು ಬಂದಿದ್ದರೂ ಅದನ್ನು ಓದಬಹುದಾಗಿತ್ತು. ಆ ಕಾಲದಲ್ಲಿ 'ಪ್ರಬಂಧ ರಚನೆ' ಎಂಬ ಒಂದು ಪುಸ್ತಕ ಯಾವುದೋ ತರಗತಿಗೆ ಪಠ್ಯ ಪುಸ್ತಕವಾಗಿತ್ತು. ಅದನ್ನು ಬಲ್ಲ 'ಸಿದ್ಧರು' ಅದರಿಂದ ಯಾವುದಾದರೂ ಒಂದು ಪ್ರಬಂಧವನ್ನು ಬರೆದುಕೊಂಡು ಬಂದು ಓದುತ್ತಿದ್ದರು. ನಾನೂ ಅದೇ ಗುಂಪಿಗೆ ಸೇರಿದ್ದೆ. ಆದರೆ. ನಾನು ಆ ವಿಷಯವನ್ನು ಕಂಠಪಾಠ ಮಾಡಿಕೊಂಡು ಬಂದು. ನನ್ನ ಸ್ವಂತ ಭಾಷಣದಂತೆ ಮಾತನಾಡುತ್ತಿದ್ದೆ. ಇದರಿಂದ ನನ್ನ ಜ್ಞಾಪಕಶಕ್ತಿ ಕುದುರಿತು. ಎಲ್ಲರಿಗಿಂತಲೂ ಚೆನ್ನಾಗಿ 'ಬಸಪ್ಪ-ಬಸಪ್ಪ ಟೀಚರ್ ಮಾಡುತ್ತಾನೆ, ಟೀಚರ್ ಮಾಡುತ್ತಾನೆ' ಎಂದು ಸ್ವಾಮಿಗಳು ಪ್ರಶಂಸೆ ಮಾಡುತ್ತಿದ್ದರು. ಲೆಕ್ಚರ್ ಮಾಡುತ್ತಾನೆಂಬುದನ್ನು ಟೀಚರ್ ಮಾಡುತ್ತಾನೆ ಅಂತ ಹೇಳುತ್ತಿದ್ದರು. ಅವರು ವಿದ್ಯಾವಂತರಲ್ಲ: ಶಿವಾನುಭವ ವಿದ್ಯಾಗರಿಷ್ಠರು. ಆ ಕಾಲದಲ್ಲಿಜಹರುದ್ದೀನ್ ಮೆಕ್ಕಿ ಸಾಹೇಬರು, ತುಮಕೂರು ಜಿಲ್ಲಾ ಡೆಪ್ಯುಟಿ ಕಮೀಷನರ್. ಅವರು ಒಮ್ಮೆ ಜಾತ್ರೆಯಲ್ಲಿ ಶ್ರೀಮಠಕ್ಕೆ ಬಂದಿದ್ದರು. ಸ್ವಾಮಿಗಳು ನನ್ನನ್ನು ಕರೆದು ಅವರಿಗೆ ತೋರಿಸಿ. 'ಇವನು ಬಸಪ್ಪ. ಕನ್ನಡದಲ್ಲಿ ಚೆನ್ನಾಗಿ ಟೀಚಿಂಗ್ ಮಾಡುತ್ತಾನೆ' ಎಂದು ಪರಿಚಯ ಮಾಡಿಸಿದರು. ಅಂದು ಅವರ ಎದುರಿಗೆ 'ಸಿದ್ಧಗಂಗಾ ಜಾತ್ರೆ' ಎಂಬ ವಿಚಾರವಾಗಿ ನನ್ನ ಭಾಷಣವೂ ಆಯಿತು. ಅವರೂ ಸಂತೋಷಪಟ್ಟರು ನಾನು ಆಗ ಹೈಸ್ಕೂಲ್ ನಾಲ್ಕನೇ ಫಾರಂನಲ್ಲಿ ಓದುತ್ತಿದ್ದೆ. ನನಗೆ ಹದಿನಾರು ವರ್ಷ ವಯಸ್ಸು. ನಾನು ಸ್ವಾಮಿಗಳ ಮೆಚ್ಚುಗೆಗೇನೋ ಪಾತ್ರನಾಗಿದ್ದೆ. ಅವರ ಎದುರಿಗೇ ಸುಳಿದಾಡುವ ಸ್ವಾತಂತ್ರ್ಯವೂ ನನಗೆ ಲಭಿಸಿತ್ತು. ನನಗೆ ಅದೊಂದು ಹೆಮ್ಮೆಯೂ ಆಗಿತ್ತು. ಆದರೆ ಈ ನನ್ನ ಹೆಮ್ಮೆ ಒಂದು ಸಾರಿ ಅಪಾಯಕ್ಕೆ ಸಿಕ್ಕಿ ಪಾರಾಯಿತು.

ಆಗ ಮಠದಲ್ಲಿ ಗದ್ದಿಗೆ ಅಯ್ಯನವರು ಎಂಬ ಒಬ್ಬ ವಿರಕ್ತರು ಉಗ್ರಾಣದ ಯಜಮಾನರಾಗಿದ್ದರು. ಅವರ ಹೆಸರು ಶ್ರೀ ನಂಜುಂಡಸ್ವಾಮಿಗಳೆಂದು. ಅವರು ಮಠದ ಮುಂದಿರುವ ಗದ್ದುಗೆಯ ಪೂಜೆ ಮಾಡುತ್ತಿದ್ದುದರಿಂದ ಅವರು ಎಲ್ಲರಿಗೂ ಗದ್ದುಗೆ ಅಯ್ಯನವರಾಗಿದ್ದರು. ನಿಟ್ಟೂರು ಅಡವಪ್ಪ, ಹುಚ್ಚಪ್ಪ, ಬಸಪ್ಪ. ಕೋರದ ಸಿದ್ಧಲಿಂಗಯ್ಯ. ಕಂಬಾಳು ಸಿದ್ದಪ್ಪ. ಬಾಣವಾಡಿ ಶಿವಣ್ಣ. ಬಿ. ಗಂಗಪ್ಪ ಇವರೆಲ್ಲಾ ನನ್ನ ಸಹಪಾಠಿಗಳಾಗಿದ್ದರು. ಇನ್ನೂ ಅನೇಕ ವೀರಶೈವೇತರ ವಿದ್ಯಾರ್ಥಿಗಳೂ ಅಲ್ಲಿದ್ದರು. ಹಬ್ಬಗಳಲ್ಲಿ ಮಾಲ್ದಿ. ಪಾಯಸ ತಪ್ಪುತ್ತಿರಲಿಲ್ಲ. ಸ್ವಾಮಿಗಳೇ ನಮಗೆ ಮಾಲ್ದಿ ಪುಡಿಯನ್ನು ಬಡಿಸಿ ತಣಿಯುತ್ತಿದ್ದರು. ಅವರು ವಿದ್ಯಾರ್ಥಿಗಳನ್ನು ಎಷ್ಟೇ ದಂಡಿಸಿದರೂ, ಅವರಿಗೆ ಸಂತೃಪ್ತಿಯಾಗಿ ಪ್ರಸಾದವಿಟ್ಟು ಸಂತೈಸುತ್ತಿದ್ದರು. ಒಂದು ದಿನ ಕೆಲವರು ನಾಲ್ಕಾರು ಹಿರಿಯ 'ಸಿದ್ಧರು' ತಲೆಗೂದಲನ್ನು ಕತ್ತರಿಸಿ ಹಾಕಿ 'ಕ್ರಾಪ್' ಬಿಡಿಸಬೇಕೆಂದು ನಿರ್ಧರಿಸಿದರು. ನಾನೂ ಅವರಲ್ಲಿ ಸೇರಿದ್ದೆ. ಕ್ರಾಪ್ ಮಾಡಿಸಿಕೊಂಡಿದ್ದ ಅನೇಕ ವಿದ್ಯಾರ್ಥಿಗಳನ್ನು ನಾವು ತುಮಕೂರು ಹೈಸ್ಕೂಲಿನಲ್ಲಿ ನೋಡುತ್ತಿದ್ದೆವು. ಅಲ್ಲದೆ ನಮ್ಮ ತಲೆಯಲ್ಲಿ ಹೇನು, ಸೀರೂ ಇರುತ್ತಿದ್ದುವು. ಮಠದಲ್ಲಿ ಕೆಲಸ ಮಾಡುತ್ತಿದ್ದ ಕಾಮಕ್ಕ ಎಂಬ ಅಜ್ಜಿ ಆಗಾಗ ನಮ್ಮ ತಲೆಗಳನ್ನು ಚೊಕ್ಕಮಾಡುತ್ತಿದ್ದಳು. ನಾವು ಕ್ರಾಪ್ ಬಿಡಿಸುವುದಂತೂ ಸ್ವಾಮಿಗಳಿಗೆ ತಿಳಿಯುವಂತಿಲ್ಲ. ಅವರಿಗೆ ತಿಳಿದರೆ ಮಠದಿಂದ ಓಡಿಸಿಬಿಡುತ್ತಾರೆ. ಒದೆಗಳಂತೂತಪ್ಪುವುದಿಲ್ಲ! ಏನಾದರೂ ಆಗಲಿ ಕ್ರಾಪ್‌ಮಾಡಿಸಲು ನಿರ್ಧರಿಸಿದೆವು.

ಕಾರ್ತಿಕಮಾಸದ ಭಾನುವಾರ. ನಾವು ನಾಲ್ಕೈದು ಜನ ಯಾರಿಗೂ ತಿಳಿಯದಂತೆ ಬೆಟ್ಟದ ತಪ್ಪಲಿಗೆ ಹೋದೆವು, ಬಂಡೇಪಾಳ್ಯದ ಹಜಾಮ 'ಸಿದ್ಧಪ್ಪ'—ಹೆಸರು ಸರಿಯಾಗಿ ನೆನಪಿಲ್ಲ—ನಮಗೆಲ್ಲಾ ಬೆಟ್ಟದ ಬುಡದಲ್ಲಿ. ಹಳೆಯ ಮಠದ ಆಚೆ ತೋಪಿನಲ್ಲಿ ಜುಟ್ಟುಗಳನ್ನು ಕತ್ತರಿಸಿ 'ಕ್ರಾಪ್' ಮಾಡಿಯೇಬಿಟ್ಟ. ಒಬ್ಬೊಬ್ಬರೂ ಅವನಿಗೆ ಒಂದೊಂದಾಣೆ ಕೊಟ್ಟೆವು. ಅವನ ಕನ್ನಡಿಯಲ್ಲಿಯೇ ನಮ್ಮ ನಮ್ಮ ಮುಖಗಳನ್ನು ನೋಡಿಕೊಂಡು ಹಿಗ್ಗಿದೆವು. ಎಲ್ಲರೂ ಹಳೆಯ ಮಠದ ಬಾವಿಯ ಹತ್ತಿರ ನೀರು ಸೇದಿಕೊಂಡು ಸ್ನಾನಮಾಡಿದೆವು. ಶಿವಪೂಜೆಯೂ ಆಯಿತು. ತಲೆಯಮೇಲೆ ಮುಸುಕು ಹಾಕಿಕೊಂಡು ಹೊಸ ಮಠದ ಅಡುಗೆ ಮನೆಯತ್ತ ಸಾಗಿದೆವು. ಅನೇಕರು ಆಗಲೇ ಊಟ ಮಾಡಿದ್ದರು. ನಾವೂ ಅತ್ತ ಇತ್ತ ನೋಡಿಕೊಂಡು ಅಡುಗೆ ಮನೆಗೆ ಹೋಗಿ ಕತ್ತಲೆಯ ಜಾಗದಲ್ಲಿ ಊಟಕ್ಕೆ ಕುಳಿತೆವು. ಸ್ವಾಮಿಗಳ ದಂಡನೆಯನ್ನಾದರೂ ತಪ್ಪಿಸಿಕೊಳ್ಳಬಹುದು ಆದರೆ, ಅಡುಗೆಯ ನಂಜುಂಡಯ್ಯನ ಕಾಟವನ್ನು ತಪ್ಪಿಸಿಕೊಳ್ಳಲು ಯಾರಿಗೂ ಸಾಧ್ಯವಿರಲಿಲ್ಲ. ಅವನು ನಮ್ಮ ಕ್ರಾಪುಗಳನ್ನು ನೋಡಿಯೇಬಿಟ್ಟ. ಇಷ್ಟೇ

ಅಲ್ಲ, ಗೋ ಶಾಲೆ ಬಾಳಯ್ಯ, ಮಜ್ಜನದ ಮನೆ ರೇವಣಸಿದ್ಧಯ್ಯ, ದನದ ಕೊಟ್ಟಿಗೆ ಚನ್ನಪ್ಪ ಇವರೆಲ್ಲಾ ನಮ್ಮನ್ನು ಕಂಡು ಅಲ್ಲಿಯೇ ಗೇಲಿ ಮಾಡಿದರು. ಹಾಗೂ ಹೀಗೂ ಈ ಸುದ್ದಿ ಸ್ವಾಮಿಗಳಿಗೂ ವರದಿಯಾಯಿತಂತೆ. ಕಾರ್ತಿಕ ಸೋಮವಾರ ಬಂಡೇಪಾಳ್ಯದ ಹಜಾಮ ಸಂಜೆವೇಳೆ ಬೆಟ್ಟದ ಮೇಲೆ ದೇವಸ್ಥಾನದಲ್ಲಿ ಓಲಗ ಊದಲು. ಪದ್ಧತಿಯಂತೆ ಅವರ ಅಣ್ಣನ ಜೊತೆಯಲ್ಲಿ ಬಂದಿದ್ದ. ಅವನು ಬರೀ ಶೃತಿ ಹಿಡಿಯುತ್ತಿದ್ದ: ಅವರ ಅಣ್ಣ ನಾಗಸ್ವರ ನುಡಿಸುತ್ತಿದ್ದ. ಸಂಜೆಯ ಪೂಜಾ ಸಮಯಕ್ಕೆ. ಸ್ವಾಮಿಗಳು ಬೆಟ್ಟದ ಮೇಲಕ್ಕೆ ಬರುತ್ತಿದ್ದಾರೆಂದು ಯಾರೋ ಅವನಿಗೆ ಹೇಳಿದರು. ಅವನು ಹೆದರಿಬಿಟ್ಟ ! ಪೂಜೆ ಆಗುತ್ತಿತ್ತು. ಮಂಗಳಾರತಿ ಸಮಯ. ಅವನು ಶೃತಿಯನ್ನು ನಿಲ್ಲಿಸಿ, ದೇವಸ್ಥಾನದ ಮೆಟ್ಟಿಲು ಇಳಿದು. ಆ ಕತ್ತಲೆಯಲ್ಲಿ ಎಲ್ಲಿಯೋ ಅಡಗಿಬಿಟ್ಟ. ಬರೀ ನಾಗಸ್ವರವೇ ನುಡಿಯುತ್ತಿತ್ತು. ಶೃತಿ ಇಲ್ಲದೆ ಪೂಜೆ ಆಯಿತು. 'ಸಿದ್ಧ'ರಿಗೆ ಕ್ರಾಪ್ ಮಾಡಿದ ಹಜಾಮನನ್ನು ಸ್ವಾಮಿಗಳು ಛಳಿಸಿಬಿಡುತ್ತಾರೆಂದು ಅವರೂ ಗಾಬರಿಯಾಗಿದ್ದರು.

ನಮ್ಮ 'ಕ್ರಾಪ್' ಮಠದಲ್ಲಿ ಎಲ್ಲರ ಮಾತುಗಳಿಗೂ ಒಳಗಾಯಿತು. ಮರುದಿನ ರಾತ್ರಿ ನಾವೆಲ್ಲ ಊಟಕ್ಕೆ ಕುಳಿತಿದ್ದೆವು. ಸ್ವಾಮಿಗಳು ಕೈಯಲ್ಲಿ ಕತ್ತರಿ ಹಿಡಿದುಕೊಂಡು ಊಟದ ಮನೆಗೆ ಬಂದರು. ಅರ್ಧ ಊಟ ಆಗಿತ್ತು. ಕತ್ತರಿಯಿಂದ ಗಾಳಿಯನ್ನು ಕತ್ತರಿಸುತ್ತ—'ಯಾರು ? ಯಾರು ? ಕ್ರಾಪ್ ಮಾಡಿಸಿದವರು. ಕ್ರಾಪ್ ಮಾಡಿಸಿದವರು ಎಲ್ಲಿ! ಎಲ್ಲಿ!' ಎಂದು ಉದ್ದಕ್ಕೂ ಒಬ್ಬೊಬ್ಬರ ತಲೆಯನ್ನೂ ನೋಡುತ್ತ ಬಂದರು. ಯಾವಾಗಲೂ ಎರಡು ಮೂರು ಸಾಲುಗಳಲ್ಲಿ ನಾವೆಲ್ಲ ಊಟಕ್ಕೆ ಕುಳಿತಿರುತ್ತಿದ್ದೆವು. ಆಗ ಊಟದ ಮನೆ ಈಗಿರುವಂತಿರಲಿಲ್ಲ: ಅದು ಕಿರಿದಾಗಿತ್ತು. ಅದರಲ್ಲಿ ಕತ್ತಲೆ ತೆಳುವಾಗಿ ಹರಡಿರುತ್ತಿತ್ತು. ಸ್ವಾಮಿಗಳು ಮುಂದು ಮುಂದಕ್ಕೆ ಬಂದಾಗ 'ಕ್ರಾಪ್ ಸಿದ್ಧರು' ನುಸುಳಿಕೊಂಡು ಹೋಗಿ ಸ್ವಾಮಿಗಳು ನೋಡಿ ಬಂದಿದ್ದ ಹಿಂದಿನ ಸಾಲುಗಳಿಗೆ ಸೇರಿಬಿಟ್ಟರು. ನಾನು ಕಲ್ಲು ಕಂಬದ ಮರೆಯಲ್ಲಿ ಕುಳಿತಿದ್ದೆ. ಸ್ವಾಮಿಗಳು ನನ್ನನ್ನೂ ನೋಡಿದರು. 'ಯಾರು! ಯಾರು!! ಬಸಪ್ಪ! ಬಸಪ್ಪ! ಬಸಪ್ಪ! ನೀನು ಚೆನ್ನಾಗಿ ಟೀಚರ್ ಮಾಡ್ತೀಯಾ! ಕ್ರಾಪ್ ಮಾಡಿಸಿಕೊಂಡವರು ಯಾರು? ಕ್ರಾಪ್ ಮಾಡಿಸಿಕೊಂಡವರು ಯಾರು? ಇದು ಸರಿಯೇ? ನೀನೇ ಟೀಚರ್ ಮಾಡು! ಟೀಚರ್ ಮಾಡು'-ಎಂದರು. ಕತ್ತಲಲ್ಲಿ ನನ್ನ ತಲೆಯ ಕ್ರಾಪ್ ಅವರಿಗೆ ಕಾಣಲಿಲ್ಲವೇನೋ. ಸೀಮೆಎಣ್ಣೆಯ ಬುಡ್ಡಿಯ ಬೆಳಕು ಆ ಊಟದ ಮನೆಗೆ ಸಾಕಾಗುತ್ತಿರಲಿಲ್ಲ. ನಾನು ಎದ್ದು ನಿಂತುಕೊಂಡು 'ಬುದ್ಧೀ ನಾವೆಲ್ಲ ಇಂಗ್ಲಿಷ್ ಓದುತ್ತೇವೆ. ಇಂಗ್ಲಿಷ್ ಸಂಸ್ಕೃತಿ ದೇಶವನ್ನೆಲ್ಲ ತುಂಬಿಕೊಂಡು ಬಂದಿದೆ. ಭಾಷೆಗೆ ತಕ್ಕ ವೇಷ ಇದ್ದರೆ ತಪ್ಪೇನೂ ಇರಲಾರದು, ಬುದ್ಧೀ. ಈ ಹೊತ್ತಲ್ಲ ನಾಳೆಯಾದರೂ ಇಂಗ್ಲಿಷ್ ಓದಿದವರು 'ಕ್ರಾಪ್' ಬಿಡುತ್ತಾರೆ. ಮಠಗಳಿಗೆ ಸ್ವಾಮಿಗಳು ಆಗುವವರು ಮಾತ್ರ 'ಕ್ರಾಪ್' ಬಿಡಬಾರದು ಬುದ್ಧಿ ಇದರ ಮೇಲೆ ತಮ್ಮ ಚಿತ್ತ' ಎಂದುಬಿಟ್ಟೆ. ಅದನ್ನು ಕೇಳಿ ಅವರು ನಕ್ಕುಬಿಟ್ಟರು., ಉದ್ದಾನಸ್ವಾಮಿಗಳು ನಕ್ಕರೆಂದರೆ ಕೈಲಾಸ ಧರೆಗಿಳಿದು ಬಂದಂತೆ!

'ಸರಿ! ಸರಿ! ನೀವೆಲ್ಲ ಇಂಗ್ಲಿಷ್‌ನವರಂತೆ ಬುದ್ಧಿವಂತರಾಗಬೇಕು. ನಮ್ಮ ಧರ್ಮ ಬಿಡಬಾರದು. ಸ್ನಾನ ಶಿವಪೂಜೆ ಬಿಡಬಾರದು. ನೀವೆಲ್ಲಾ ಚೆನ್ನಾಗಿ ಓದಿ ಪಾಸ್ ಮಾಡಬೇಕು. ಪಾಸ್ ಮಾಡದೇ ಇದ್ದವನ .'ಕ್ರಾಪ್' ಕತ್ತರಿಸಿ ಹಾಕೋಣ'. ಎಂದು ಹೇಳಿಕೊಂಡು ಸ್ವಾಮಿಗಳು ದಯಮಾಡಿಸಿದರು. ನಮ್ಮ ಊಟ ಮುಗಿಯಿತು. ಮಠದಲ್ಲಿ 'ಕ್ರಾಪ್' ಚಿಗುರಿತು. ಹಜಾಮನಿಗೂ ಧೈರ್ಯ ಬಂತು. ಇಂಥ ಹಲವಾರು ಪ್ರಸಂಗಗಳಲ್ಲಿ ಉದ್ದಾನಶಿವಯೋಗೀಶ್ವರರು ಉದಾರ ಹೃದಯದಿಂದ ವಿದ್ಯಾರ್ಥಿಗಳನ್ನು ನಡೆಸಿಕೊಂಡರು. ಅನುಗ್ರಹಿಸಿದರು. ಅವರ ತಪಃಪ್ರಭಾವದಿಂದ ನಮ್ಮ ಜೀವನತಪಸ್ಸು ಸಿದ್ಧಿಸಿತು. ಇಂದು ಶ್ರೀ ಸಿದ್ಧಗಂಗಾಕ್ಷೇತ್ರ ಪೂಜ್ಯ ಶ್ರೀ ಶಿವಕುಮಾರಸ್ವಾಮಿಗಳವರ ಸಾನ್ನಿಧ್ಯಬಲದಿಂದ ಭೂಕೈಲಾಸದಂತೆ ಶೋಭಿಸುತ್ತಿದೆ. ಅಂದು ಮಠದಲ್ಲಿದ್ದವರು ೪೦ ಮಂದಿ ಸಿದ್ಧರು.

ಓ. ಎನ್. ಲಿಂಗಣ್ಣಯ್ಯ
(ನಿವೃತ್ತ ಅಸಿಸ್ಟೆಂಟ್ ಕಮೀಷನರ್)

## ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸರ್ವಧರ್ಮ ಸಮನ್ವಯ

ಧರ್ಮವೆಂದರೆ ಸದ್ವಿಚಾರಪ್ರೇರಿತಆಚಾರಪರಂಪರೆಗಳ ಸಮುದಾಯವೆಂದು ಹೇಳಬಹುದು. ವಿಚಾರವಿಲ್ಲದ ಆಚಾರ, ವಿವೇಕವಿಲ್ಲದ ಸಂಪ್ರದಾಯಗಳೇ ಮೌಢ್ಯ. ಉತ್ತಮ ನೀತಿಮತ್ತೆಯನ್ನುಳ್ಳ ವ್ಯಕ್ತಿಯ ನೈಷ್ಠಿಕಅನುಷ್ಠಾನವೇ ಅಧ್ಯಾತ್ಮಶಕ್ತಿಯ ಕೇಂದ್ರ. ಪ್ರತಿಧರ್ಮದ ಪರಮ ಗುರಿ ಅತ್ಮಶಕ್ತಿಯನ್ನು ಬೆಳೆಸಿ, ವ್ಯಕ್ತಿತ್ವವಿಕಾಸವನ್ನುಂಟುಮಾಡುವುದೇ ಆಗಿದೆ. ಆತ್ಮಶಕ್ತಿಯು ಧರ್ಮಾಚರಣೆಯ ದ್ಯೋತಕವಾದರೆ ವ್ಯಕ್ತಿತ್ವ ವಿಕಾಸವು ಸಾಮಾಜಿಕ ಹೊಂದಾಣಿಕೆಯ ಪ್ರತೀಕವಾಗುತ್ತದೆ. ಇದನ್ನೇ ಸ್ಥೂಲವಾಗಿ ಜ್ಞಾನಕರ್ಮಗಳ ಸಮಾಗಮವೆನ್ನಬಹುದು.

ಮಾನವನಿಗೆ ಜ್ಞಾನಕರ್ಮಗಳ ವಿಚಾರ, ತ್ಯಾಗಗಳ ಮಹತ್ವವನ್ನು ತಮ್ಮ ದೈನಂದಿನ ಜೀವನದ ಮೂಲಕ ತೋರಿಸುವ ಸಲುವಾಗಿಯೇ ಅನೇಕ ಮಹಾತ್ಮರ ಸಾಧುಸಂತರ ಸನ್ಯಾಸಿಗಳ ಉದಯದ ಪರಂಪರೆ ಅವ್ಯಾಹತವಾಗಿ ಸಾಗುತ್ತಲೇ ಇದೆ.

ಆದರೆ ಮೌಢ್ಯ, ಆಸೆ, ಆಮಿಷ ಸ್ವಾರ್ಥಗಳಿಗೆ ಬಲಿಯಾದ ಬಹುಪಾಲು ಮಾನವರ ಕಣ್ಣುಕಿವಿಗಳು ಇಂತಹವರನ್ನು ಕಂಡು ಕೇಳಿ ತಿಳಿಯಲಸಮರ್ಥವಾಗಿವೆ. ಕಾರಣ: ಮಾನವನ ಅಂತರ್ಮುಖಿ ಶಕ್ತಿ ಕುಂಠಿತವಾಗುತ್ತಿದೆ.

ಒಬ್ಬ ವಿದ್ಯಾರ್ಥಿಯು ಸರ್ವತೋಮುಖವಾದ ಪ್ರಗತಿಯಾಗಬೇಕಾದರೆ ಅವನ ಬೌದ್ಧಿಕ, ಮಾನಸಿಕ, ಭಾವನಾತ್ಮಕ, ಶಾರೀರಿಕ, ನೈತಿಕ ಸಾಮರ್ಥ್ಯ ಬೆಳೆಯಬೇಕು. ಇದೇರೀತಿ ಬಡವ ಬಲ್ಲಿದರು, ದುರ್ಬಲ ಪ್ರಬಲರು, ದೈತ್ಯದೀನರು, ಉಚ್ಚ ನೀಚರು ಎಂಬ ಭೇದವಿಲ್ಲದೆ ಪ್ರತಿ ವ್ಯಕ್ತಿಗೂ ಪ್ರಗತಿ ಪಥದ ಮಾರ್ಗತೆರೆದಿದ್ದರೆ ಮಾತ್ರ ಒಂದು ದೇಶ ಉದ್ಧಾರವಾಗಬಲ್ಲುದು. ಇಂತಹ ಸರ್ವಗ್ರಾಹ್ಯ ಸಮಾನಾವಕಾಶಗಳನ್ನು ಕಲ್ಪಿಸುವುದಕ್ಕಾಗಿಯೇ ಧರ್ಮಸ್ಥಾಪಕರ, ಮಹಾತ್ಮರ ಅವತಾರವಾಗುತ್ತಿದೆ. ಈ ಮಹಾತ್ಮರೆಲ್ಲರ ಮಾರ್ಗಗಳು ಬೇರೆ ಎಂಬಂತೆ ತೋರುಗಾಣಿಕೆಗೆ ನಮಗೆ ತೋರುತ್ತಿವೆ. ಆದರೆ ಗುರಿ ಮಾತ್ರ ಒಂದೆ. ಒಂದು ಮಹಾಧರ್ಮದ ನೈಷ್ಠಿಕ ಅನುಯಾಯಿಯಾಗಿ ಅನುಭವ ಪಡೆದು ತಾನು ತಿಳಿದ ವೈಚಾರಿಕ ಕಂಪನ್ನು ಅಖಂಡ ಜನತೆಗೆ ಹಂಚಿ ಉಣಬಡಿಸುವ ಕ್ರಿಯಾಶೀಲ ವ್ಯಕ್ತಿಗಳ ಅಭಾವ ಅಪರಿಮಿತವಾಗಿದೆ. ನಮ್ಮ ನಮ್ಮ ಧರ್ಮಗಳಲ್ಲಿ ನಮಗೆ ಆಳವಾದ ಅನುಭವ ತಿಳುವಳಿಕೆ ಬಂದರೆ, ಇತರ ಧರ್ಮಗಳ ನಿರ್ಣಾಯಕ ಗುರಿಗಳ ಅರಿವೂ ನಮಗಾಗುತ್ತದೆ. ಇಂದು ಕಂಡುಬರುತ್ತಿರುವ ಧರ್ಮವಿದ್ವೇಷಕ್ಕೆ ನಮ್ಮ ಧರ್ಮಗಳಲ್ಲಿ ನಮಗಿರುವ ಅನಾದರ, ಲಘುಭಾವನೆಗಳೇ ಕಾರಣ. ಅಂದರೆ ಸರ್ವಧರ್ಮ ಸಮನ್ವಯ ದೃಷ್ಟಿ ಜನತೆಗೆ ಬರಬೇಕಾದರೆ ಸ್ವಧರ್ಮ ಜ್ಞಾನವೇ ದಿವ್ಯೌಷಧ. ಸ್ವಧರ್ಮದ ಸಂಪೂರ್ಣ ಅರಿವಿಲ್ಲದ ನಾವು ವಿದ್ಯುಚ್ಛಕ್ತಿಯಿಲ್ಲದ ಗಾಜಿನ ಗೋಳಕಗಳ ಗೊಂಚಲಿನಂತೆ ನಿರ್ವೀರ್ಯರಾಗಿ ನಿಸ್ತೇಜರಾಗಿದ್ದೇವೆ.

ಮಹಾತ್ಮರ ತತ್ತ್ವಗಳು ಸಪ್ತಸ್ವರ ಸಂಯೋಜನಾಬದ್ಧ ವೀಣೆಯಿದ್ದಂತೆ. ವೀಣೆಯೇ ನುಡಿಯಲಾರದು. ಕೈಯಾಡಿಸಿ, ಕೊರಳು ಬೆರಳಿನ ಶ್ರುತಿಗೂಡಿಸಿ ನುಡಿಸಬಲ್ಲ ವೈಣಿಕ ಬೇಕೇ ಬೇಕು. ಇಂತಹ ವೈಣಿಕ ದೊರೆಯದಿದ್ದರೆ ವೀಣೆಯೇ ವ್ಯರ್ಥವಾಗುತ್ತದೆ. ವೀಣೆಯಷ್ಟೇ ಪ್ರಾಮುಖ್ಯತೆ ವೈಣಿಕನಿಗೂ ಇದೆ. ಅದೇ ರೀತಿ ಒಂದು ಧರ್ಮದ ತತ್ತ್ವಗಳನ್ನು ವಿಮರ್ಶಿಸಿ, ಅರಿತು, ಕ್ರಿಯೆಯಲ್ಲಿ ಅಳವಡಿಸಿಕೊಂಡ ದಿವ್ಯಾತ್ಮನು ಮಾತ್ರ ಮಾನವನಿಗೆ ಅಧ್ಯಾತ್ಮ ಸಂದೇಶ ನೀಡಲು ಸಮರ್ಥ. ಒಂದು ಧರ್ಮದ ವೈಚಾರಿಕ ಕ್ರಾಂತಿಗೆ, ಭಕ್ತಿಯ ನೆಲೆಗೆ, ನೀತಿಯ ನೆಲೆಗೆ, ಭಾವಾನುಭೂತಿಯ ಬೆಡಗಿಗೆ ಒಳಗಾದ ಮಹಾವ್ಯಕ್ತಿಗೆ ಇತರ ಎಲ್ಲಾ ಧರ್ಮಗಳ ಪರಮ ಗುರಿಯ ಅರಿವಾಗುವುದೂ ಸಾಧ್ಯ. ಶಬ್ದಾಡಂಬರಗಳಲ್ಲಿ ತೊಳಲಾಡುವ ನಮಗೆ ಪರಸ್ಪರ ವಿರೋಧವಂತೆ ಕಂಡುಬರುವ ಮಹಾತ್ಮರ ನಡೆ ನುಡಿಗಳೆಲ್ಲವೂ ಬಿಂಬ ಪ್ರತಿಬಿಂಬದಂತೆ ಪ್ರತಿಮಾನುಭೂತಿ ಸಂವೇದನೆಯನ್ನುಂಟುಮಾಡುವುವು. ಇಂತಹ ಹಿರಿಯ ಅನುಯಾಯಿಗಳು ಎಲ್ಲಾ ಧರ್ಮಪರಂಪರೆಯಲ್ಲಿಯೂ ಉದಯಿಸುತ್ತಲೇ ಇದ್ದಾರೆ. ಆದ್ದರಿಂದ ನಾವು ನಿರಾಶರಾಗಬೇಕಿಲ್ಲ.

ಬುದ್ಧನ ಕರುಣೆ, ಶಂಕರರ ವಿಚಾರ, ರಾಮಾನುಜರ ಮಮತೆ, ಬಸವಣ್ಣನವರ ಭಕ್ತಿಗಳನ್ನು ಮೆಚ್ಚಿ ಆನಂದಿಸದ ಯಾವ ವ್ಯಕ್ತಿಯೂ ಅಮರ ಜೀವಿಯಾಗಲಾರ. ಬುದ್ಧಸಮಾಜದ ಸಂಘಗಳು ಧರ್ಮಭೇದವಿಲ್ಲದೆ ಸಾಮಾನ್ಯ ಜನತೆಗೆ ಶೈಕ್ಷಣಿಕ ನೈತಿಕ ಮೌಲ್ಯಗಳನ್ನೊದಗಿಸಿ ವೈದ್ಯಕೀಯ ನೆರವನ್ನೂ ಒದಗಿಸುತ್ತಿದ್ದುದು ಕಂಡುಬರುತ್ತದೆ.

ಆದರೆ ವೀರಶೈವ ಸಂಪ್ರದಾಯದಲ್ಲಿ ಸ್ಥಾಪಿತವಾದ ಮಠಗಳು ಜನಗಳ ಜೀವನದಮೇಲೆ ಅಚ್ಚಳಿಯದ ಪ್ರಭಾವ ಬೀರುತ್ತಿವೆ. ಧರ್ಮ, ಜ್ಞಾನ, ಭಕ್ತಿಪ್ರಸಂಗದಲ್ಲಿ ಹಿರಿಯ ಪಾತ್ರವಹಿಸಿವೆ. ಜಾತಿಭೇದವಿಲ್ಲದೆ ಸಮಾಜದಲ್ಲಿ ನೈತಿಕಸ್ಥಿರತೆಯನ್ನು ಕಾಪಾಡುವುದರಲ್ಲಿ ಈ ಮಠಗಳು, ಕ್ಷೇತ್ರಗಳು ಉತ್ತಮ ಪಾತ್ರವನ್ನು ಈಗಲೂ ನೆರವೇರಿಸುತ್ತಿವೆ. ಈ ದಿಸೆಯಲ್ಲಿ ರಾಮಕೃಷ್ಣಾಶ್ರಮಗಳೂ ಸಾಕಷ್ಟು ಸೇವೆಯನ್ನು ಸಲ್ಲಿಸುತ್ತಿವೆ.

ಸಂಘ, ಆಶ್ರಮ, ಮಠ, ಕ್ಷೇತ್ರಗಳು ಸಾವಿರಾರು ; ಕೆಲವು ಸಂಪ್ರದಾಯದ್ಯೋತಕಗಳು. ಕೆಲವು ಗುರುಭಕ್ತ ಧರ್ಮ ಪ್ರತೀಕಗಳು. ಕೆಲವು ಉತ್ಸವ ಪರಂಪರೆಗಳಿಗೆ ಮೀಸಲಾದುವುಗಳು. ಇನ್ನೂ ಕೆಲವು ಸಂಪೂರ್ಣ ಸ್ವಜಾತೀಯವಾದವುಗಳು. ಆದರೆ ಅಲ್ಲಲ್ಲಿ ಕೆಲವು ಅಖಂಡ ಜನತೆಯ ಪ್ರಾತಿನಿಧಿಕ ಸಂಸ್ಥೆಗಳಾಗಿ, ಸಾರ್ವಜನಿಕ ಭಕ್ತಿಕ್ಷೇತ್ರಗಳಾಗಿ, ಜ್ಞಾನಯಜ್ಞವೇದಿಕೆಗಳಾಗಿ ಬಾಳಿ, ಬೆಳಗುತ್ತಿವೆ. ಇಂತಹ ಮಹಾಕ್ಷೇತ್ರಗಳಲ್ಲಿ ಶ್ರೀ ಸಿದ್ಧಗಂಗಾಕ್ಷೇತ್ರವು ಪ್ರಮುಖವಾದುದು. ಭವ್ಯಪ್ರಾಚೀನ ತಪೋಮಯ, ವೈಶಿಷ್ಟ್ಯಮಯ ಕ್ರಿಯಾಕಲಾಪಗಳ ತೇಜದಿಂದ ದೇಶದ ಜನತೆಯನ್ನು ಆಶೀರ್ವದಿಸುತ್ತಿದೆ.

೧೯೪೫ರಲ್ಲಿ ಈ ಕ್ಷೇತ್ರದ ವಿದ್ಯಾರ್ಥಿಯಾಗಿದ್ದುದು ನನ್ನ ಸುಕೃತ. ಧರ್ಮಜಾತಿ ಪಂಗಡಗಳ ಭೇದವಿಲ್ಲದೆ ಅನ್ನಜ್ಞಾನ ದಾನ ಪಡೆಯಲು ಇಲ್ಲಿ ಎಲ್ಲರಿಗೂ ಮುಕ್ತದ್ವಾರ. ಊಟ ವಸತಿಗಳನ್ನು ಕಲ್ಪಿಸಿರುವ ಇನ್ನೂ ಕೆಲವು ಕ್ಷೇತ್ರಗಳು ನಮ್ಮ ದೇಶದಲ್ಲಿವೆ. ಆದರೆ ಸಂಸ್ಕೃತ ಭಾಷೆಯನ್ನು ಕಲಿಯಲು ಈ ಕ್ಷೇತ್ರವಲ್ಲಿ ಮಾತ್ರವೆಂಬುದು ಸತ್ಯಸಂಗತಿ. ಉಚಿತ ಊಟ ವಸತಿ ಬೋಧನೆ ದೊರೆಯುತ್ತಿರುವ ಈ ಕ್ಷೇತ್ರ ದೀನದಲಿತ ವಿದ್ಯಾರ್ಥಿಗಳ ಕಾಮಧೇನು. ಆಗ ಕೇವಲ ೩೦೦ ವಿದ್ಯಾರ್ಥಿಗಳಿದ್ದೆವು. ಇಂದು ೪೦೦೦ ವಿದ್ಯಾರ್ಥಿಗಳಿದ್ದಾರೆ. ಇವರೆಲ್ಲರೂ ಸಂಸ್ಕೃತ ಓದಲೇಬೇಕು ಆದರೆ ಇತ್ತೀಚೆಗೆ ಕೆಲವರಿಗೆ ವಿನಾಯಿತಿ ದೊರೆ

ತಿದೆ. ಶಿಕ್ಷಣಕ್ಷೇತ್ರದ ವೈವಿಧ್ಯಪೂರ್ಣ ಪಾಠಶಾಲೆಗಳು ಶ್ರೀಕ್ಷೇತ್ರದ ಆಶ್ರಯದಲ್ಲಿ ಬೆಳಗುತ್ತಿವೆ. ಪರಮಪೂಜ್ಯ ಶ್ರೀಶ್ರೀಗಳ ನೇತೃತ್ವದಲ್ಲಿ ಕ್ಷೇತ್ರದ ಸಾರಸ್ವತಪೀಠ ನಿತ್ಯನೂತನ ಉತ್ಸಾಹದಿಂದ ಬೆಳಗುತ್ತಿದೆ.

ಶ್ರೀಶ್ರೀಗಳವರು ಸಂಸ್ಕೃತ, ಇಂಗ್ಲೀಷ್, ಕನ್ನಡಗಳಲ್ಲಿ ಪರಿಣತರು. ಈ ಭಾಷೆಗಳಲ್ಲಿರುವ ಗಣ್ಯ ದರ್ಶನಶಾಸ್ತ್ರಗಳನ್ನು ವೈಚಾರಿಕ ದೃಷ್ಟಿಯಿಂದ ಮನನಮಾಡಿಕೊಂಡಿದ್ದಾರೆ. ಯಾವ ಧರ್ಮ ಜಾತಿಗಳ ಪಕ್ಷಪಾತವಿಲ್ಲದೆ ಎಲ್ಲಾ ವಿದ್ಯಾರ್ಥಿಗಳಲ್ಲೂ ಆದರ, ಅಭಿಮಾನಗಳನ್ನಿಟ್ಟಿದ್ದಾರೆ. ವೀರಶೈವೇತರ ಜಾತಿ ಪಂಗಡಗಳ ಮಕ್ಕಳಿಗೆ ಸಾಕಷ್ಟು ಆಶ್ರಯವಿಲ್ಲವೆಂಬ ಅನುಕಂಪದಿಂದ ಕೂಡಿದ್ದಾರೆ. ಸ್ವಧರ್ಮದ ನಾಯಕರಲ್ಲಿಯೇ ಕಾಣದ ಔದಾರ್ಯ, ಸಹಾಯ, ಆಶೀರ್ವಾದಗಳನ್ನು ಶ್ರೀಶ್ರೀಗಳವರಲ್ಲಿ ಕಂಡು ಧನ್ಯರಾದ ಹತ್ತಾರು ಸಹಸ್ರ ಶಿಷ್ಯ ಪರಂಪರೆ ಈ ಕ್ಷೇತ್ರಕ್ಕೆ ಮೀಸಲಾಗಿದೆಯೆಂದಮೇಲೆ ಈ ಕ್ಷೇತ್ರದ ಪವಿತ್ರ ಭಾವನೆಗೆ ಮತ್ಯಾವ ಸಾಕ್ಷಿಯೂ ಬೇಕಿಲ್ಲ. ಎಂತಹ ವಿಷಮ ಸಂದರ್ಭದಲ್ಲಿಯೂ ಮತ ಧರ್ಮಗಳ ಪಕ್ಷಪಾತಮಾಡದೆ ಅಚಲಮನಸ್ಕರಾದ ಧೀರ ಗಂಭೀರ ಕ್ರಿಯಾಶೀಲ ಯೋಗಿಗಳಾದ ಶ್ರೀಶ್ರೀಗಳವರು ಈ ಕ್ಷೇತ್ರದ ಕುಲಪತಿಗಳಾಗಿ, ಗುರುಗಳಾಗಿ, ಬೋಧಕರಾಗಿರುವುದು ನಮ್ಮ ನಾಡಿನ ಪುಣ್ಯ ವಿಶೇಷ.

ಶ್ರೀಕ್ಷೇತ್ರದ ಆಸ್ತಿ ವರಮಾನಗಳಿಂದ ಕೇವಲ ೨೦೦ ಅಥವಾ ೩೦೦ ವಿದ್ಯಾರ್ಥಿಗಳಿಗೆ ಮಾತ್ರ ಊಟ ವಸತಿ ಕಲ್ಪಿಸಬಹುದು. ಕಾಣಿಕೆಯನ್ನು ಕೊಡಲೇಬೇಕಾದ ಯಾವ ಧಾರ್ಮಿಕ ಪಂಗಡದ ಭಕ್ತರೂ ಈ ಕ್ಷೇತ್ರಕ್ಕಿಲ್ಲ. ಕಾಣಿಕೆ ತಪ್ಪದೆ ಬರುವ ಮಠಗಳ ಆರ್ಥಿಕ ಪರಿಸ್ಥಿತಿ ಭದ್ರವಾಗಿರುತ್ತದೆ. ಕ್ಷೇತ್ರಕ್ಕೆ ಬಂದು ದರ್ಶನ ಪಡೆದು ಊಟಮಾಡಿ ಹೋಗುವ ಭಕ್ತರೇ ಬಹಳ. ಒಂದು ಸಾರಿ ಶ್ರೀಕ್ಷೇತ್ರದ ಶಿಷ್ಯರಾದರೆ ಅವರು ಆಜೀವ ಪರ್ಯಂತ ಶಿಷ್ಯರೇ. ಇವರ ಸೇವೆಯೆಂದರೆ ಆಗಾಗ ಮಠಕ್ಕೆ ಹೋಗಿ ಶ್ರೀಶ್ರೀಗಳವರ ದರ್ಶನ ಪಡೆದು, ತಮ್ಮ ವರ್ಗಾವರ್ಗಿ, ಉದ್ಯೋಗ ಕಷ್ಟಗಳನ್ನು ಬಿನ್ನವಿಸಿಕೊಂಡು ಪರಿಹಾರ ಬೇಡಿಕೊಳ್ಳುವುದು. ಮೊದಲೇ ಅವಿರಳ ಕಾರ್ಯಕ್ರಮಗಳಿಂದ ಬಳಲಿದ ಶ್ರೀಶ್ರೀಗಳವರಿಗೆ ಮತ್ತಷ್ಟು ಬಳಲಿಕೆಯನ್ನುಂಟುಮಾಡುವುದು. ಅಂತೂ ನಮ್ಮ ಕೆಲಸವಂತೂ ಆಗಿಯೇ ಆಗುತ್ತದೆ. ಏಕೆಂದರೆ ನಾವು ಶಿಷ್ಯರಲ್ಲವೆ? ನಮಗೆ ಗುರುಗಳಾದದ್ದಕ್ಕೆ ಶ್ರೀಶ್ರೀಗಳವರು ಸಹಾಯ ಮಾಡಲೇಬೇಕು. ಅದುವರೆಗೂ ನಾವು ಬಿಡಬೇಕಲ್ಲ. ಹೀಗೆಯೇ ಬೆಳೆದು ಬಂದಿದೆ ನಮ್ಮ ಕ್ಷೇತ್ರದ ಶಿಷ್ಯ ಪರಂಪರೆ.

ಶ್ರೀ ಶ್ರೀಗಳವರೂ 'ನೀವು ಎಲ್ಲಿಯೇ ಇರಿ', ನೈಷ್ಠಿಕ ಜೀವಿಗಳಾಗಿ ಬದುಕಿರಿ. 'ನಿಮಗೆ ಶ್ರೀ ಸಿದ್ಧಲಿಂಗೇಶ್ವರನ ಅನುಗ್ರಹವಿದೆ, ಅನುಗ್ರಹವಾಗುತ್ತದೆ' ಎಂದು ಎದೆ ತುಂಬಿ ಹರಸುವರು. ಇಲ್ಲಿಯ ಮಹತ್ಕಾರ್ಯಗಳನ್ನು ಕಂಡ ಶ್ರೀಮಂತ ಭಕ್ತರು, ಕೆಲವುಸಾಮಾನ್ಯ ಜನತೆ ಆಗಾಗ ಕೊಡುಗೈಯಿಂದ ಕಾಣಿಕೆಯರ್ಪಿಸುತ್ತಾರೆ. ಆದರೆ ೪೦೦೦ ವಿದ್ಯಾರ್ಥಿಗಳ ಊಟ. ದಿನದ ೪೦೦–೫೦೦ ಜನರ ದಾಸೋಹ ಊಟಗಳಿಗೆ ಎಷ್ಟು ಹಣ ಬೇಕು? ಇಲ್ಲಿಯ ಬೃಹತ್ ಕಟ್ಟಡ ನಿರ್ಮಾಣದ ಭಾರವೇನು? ಅಲ್ಪ ಆದಾಯದ ಮಠವು ಅನ್ನದಾನದ ಮಹಾಮನೆಯಾದುದು ಹೇಗೆ? ಅನೇಕ ಪಾಠಶಾಲೆಗಳು ಅನುಭವ ಮಂಟಪವಾದುದು ಹೇಗೆ? ಇದೊಂದು ನಮ್ಮ ಬಗೆಗಾಣದ ಒಗಟು. ಇದೊಂದು ವೈಚಾರಿಕ ಕ್ರಾಂತಿಯ ಪವಾಡವೆಂದೇ ಹೇಳಬಹುದು. ತಪೋಮಯ ವ್ಯಕ್ತಿಯ ಮಹತ್ಕಾರ್ಯವೆಂದು ಮಾತ್ರ ಹೇಳಲು ಸಾಧ್ಯ.

ಪ್ರತಿ ಸಾಯಂಕಾಲ ಸಾಮೂಹಿಕ ಪ್ರಾರ್ಥನೆ, ೪೦೦೦ ವಿದ್ಯಾರ್ಥಿಗಳೂ ಶಿಸ್ತಿನಿಂದ ನಮ್ರರಾಗಿ ನಿಂತಿರುವುದು, ಶ್ರೀಶ್ರೀಗಳವರು ಅಪ್ಪಣೆಕೊಡಿಸುವ ಭಗವದ್ಗೀತೆ ಮತ್ತು ಶಂಕರಾಚಾರ್ಯರು,ನಿಜಗುಣ ಶಿವಯೋಗಿಗಳ ಗೀತೆಗಳನ್ನು ಒಕ್ಕೊರಲಿನಿಂದ ಪಠಿಸುವುದು ಎಂತಹ ಅಲೌಕಿಕ ಭಾವನಾತ್ಮಕ ದೃಶ್ಯ—ಕಂಡು ಕೇಳಬೇಕು ಈ ಓಂಕಾರ ನಿನಾದವನ್ನು. ಸನಿಹದ ಬೆಟ್ಟ ಮಾರ್ದನಿಗುಡುತ್ತದೆ. ನಮ್ಮೆದೆ ಮಿಡಿದು ಪ್ರತಿಧ್ವನಿಗುಡಲಾರದೆ? ಅಲ್ಲದಿದ್ದರೆ ನಾವು ಕಲ್ಲಿಗೂ ಕಠಿಣರು. ನಮ್ಮನ್ನು ಯಾವ ಧರ್ಮವೂ ಏನೂ ಮಾಡಲಾರದು.

ಬರೆಯುತ್ತ ಹೊರಟರೆ ಬಹಳವಾಗುತ್ತದೆ. ಎಷ್ಟು ಬರಹ ಬರೆದರೂ ಕಡಿಮೆ ಎನಿಸುತ್ತದೆ. ಶ್ರೀಕ್ಷೇತ್ರದಲ್ಲಿ ೧೯೪೯ ರಲ್ಲಿ ನಡೆದ ಸರ್ವಧರ್ಮ ಸಮ್ಮೇಳನದ ಒಂದು ಘಟನೆಯನ್ನು ಚಿತ್ರಿಸಿ ಈ ಲೇಖನ ಮುಗಿಸುತ್ತೇನೆ.

ಶ್ರೀಶ್ರೀಗಳವರಿಗೆ ಎಲ್ಲಾ ಮಹಿಮರುಗಳ ದರ್ಶನಗಳಲ್ಲಿ ಬಹಳ ಆದರ. ಅಂದೂ ಇಂದೂ ಉತ್ತಮ ವಿದ್ವಾಂಸರ ಸಂಗಡ ಸಮಯ ದೊರೆತಾಗಲೆಲ್ಲಾ ವಿಚಾರ ವಿನಿಮಯ ನಡೆಸುವುದೇ ಹವ್ಯಾಸವಾಗಿದೆ. ಎಲ್ಲಾ ಧರ್ಮದರ್ಶನಗಳ ವಿಚಾರ ಪೂರಿತ ಸಭೆ ನಡೆಸಬೇಕೆಂದು ತೀರ್ಮಾನಿಸಿದರು. ಭವ್ಯವಾದ ವೇದಿಕೆ, ಸಭಾಮಂಟಪ ಸಿದ್ಧವಾಯಿತು. ಎಲ್ಲಾ ಧರ್ಮದರ್ಶನಗಳನ್ನು ಅಧಿಕೃತವಾಗಿ ಪ್ರತಿನಿಧಿಸಬಲ್ಲ ವಿದ್ವಾಂಸರಿಗೆ ಆಹ್ವಾನವಿತ್ತರು. ಸಭೆಯ ಅಧ್ಯಕ್ಷರು ಶ್ರೀ ಆರ್ಕಾಟ್ ರಾಮಸ್ವಾಮಿ ಮೊದಲಿಯಾರರು, ಉದ್ಘಾಟಕರು ಶ್ರೀ ಕೆ. ಸಿ. ರೆಡ್ಡಿಯವರು. ಸುಮಾರು ೭-೮ ಸಾವಿರ ಸಭಾಸದಸ್ಯರು. ಎಲ್ಲರಿಗೂ ಉಚಿತ ಅನ್ನ ಸಂತರ್ಪಣೆ. ವಿಚಾರ ಪೂರಿತ ಉಪದೇಶವಾಣಿ, ಸುಖಭೋಜನ, ಮತ್ತೇನು ಬೇಕು ?

ಮೊದಲನೆಯ ದಿನ ಬೌದ್ಧ, ಜೈನ, ಕ್ರೈಸ್ತ, ಇಸ್ಲಾಂ, ವೈಷ್ಣವ ಧರ್ಮದರ್ಶನಗಳನ್ನು ಅನೇಕ ವಿದ್ವಾಂಸರು ವಿಚಾರ ಪೂರಿತ, ನಿದರ್ಶನ ಪೂರ್ವಕ, ತರ್ಕಬದ್ಧ ವಾಣಿಯಲ್ಲಿ ಪ್ರತಿಪಾದಿಸಿದರು. ಯಾರ ಮನಸ್ಸಿಗೂ ನೋವಾಗದಂತೆ, ಯಾವ ಧರ್ಮವನ್ನೂ ಖಂಡಿಸದೆ ಗಂಭೀರ ಶೈಲಿಯಲ್ಲಿ ಪ್ರತಿಪಾದಿಸಿದರು. ಮೊದಲೇ ಪ್ರಾಸ್ತಾವಿಕ ಸಂದೇಶದಲ್ಲಿ ಶ್ರೀಶ್ರೀಗಳವರು.

'ಮಾತು ಗಂಭೀರವಾಗಿರಲಿ. ಟೀಕೆ ಟಿಪ್ಪಣಿಗಳು ಕಟುವಾಗಿರಬಾರದು, ಔಚಿತ್ಯದ ಮೇರೆ ಮೀರಿ ಯಾವ ಧರ್ಮವನ್ನೂ ತಿರಸ್ಕರಿಸಬಾರದು. ಮಾತಿನಲ್ಲಿ ಸಂಯಮವಿರಲಿ. ಖಂಡನೆಗಿಂತಲೂ ಮಂಡನೆಯೇ ಈ ಮಹಾ ಸಭೆಯ ಗುರಿಯಾಗಿರಲಿ' ಎಂದು ಎಚ್ಚರಿಸಿದರು. ಇದರಂತೆಯೇ ಮೊದಲನೇ ದಿನದ ಕಾರ್ಯಕ್ರಮ ಯಶಸ್ವಿಯಾಯಿತು.

ಎರಡನೆಯ ದಿನ ಬೆಳಗಿನ ೯ ಘಂಟೆಗೆ ಸಭೆ ಸೇರಿತು. ಒಬ್ಬ ವಿದ್ವಾಂಸರು ವೀರಶೈವ ಧರ್ಮದರ್ಶನಗಳಲ್ಲಿ ವಿಚಾರ ಪೂರಿತ ಉಪನ್ಯಾಸ ಮಾಡಿದರು. ಆದರೆ ಕೊನೆ ಕೊನೆಗೆ ಏಕೋ ಏನೋ ಬೌದ್ಧ ಧರ್ಮದ ಮೇಲೆ ಗದಾಪ್ರಹಾರ ಮಾಡತೊಡಗಿದರು. ಪ್ರಸಿದ್ಧ ಕವಿಗಳು ಬಳಸಿದ 'ಪರವಾದಿಗಳು' ಎಂಬ ಬಿರುದನ್ನು ಬೌದ್ಧರು ನಾಸ್ತಿಕರು ಎಂದು ಹೇಳಿದರು. ಅಷ್ಟೇ ಅಲ್ಲ, ಬುದ್ಧನ ನಡೆನುಡಿಗಳಲ್ಲಿ ಅನೇಕ ಸಂದೇಹಾಸ್ಪದವಾದ ಮಾತುಗಳನ್ನಾಡಲು ಪ್ರಾರಂಭಿಸಿದರು. ಆಗ ಶ್ರೀಶ್ರೀಗಳವರು ಅವರಿಗೆ ಉಪನ್ಯಾಸ ನಿಲ್ಲಿಸಲು ಸೂಚನೆ ಕೊಟ್ಟರು.

ಶ್ರೀಶ್ರೀಗಳು ವೇದಿಕೆಯ ಮೇಲೆ ನಿಂತು 'ಪ್ರತಿಯೊಬ್ಬರೂ ತಮ್ಮ ಧರ್ಮವನ್ನು ಸಮರ್ಥಿಸಿಕೊಳ್ಳಬಹುದು. ಆದರೆ ಭಗವಾನ್ ಬುದ್ಧದೇವನಂತಹ ಮಹಾ ಕಾರುಣಿಕನನ್ನು ವಿಮರ್ಶಿಸಿ ತೀರ್ಮಾನ ಕೊಡಲು ಈ ವೇದಿಕೆಯನ್ನು ಉಪಯೋಗಿಸಿಕೊಳ್ಳುವುದು ಮೂರ್ಖತನ. ಇದರಿಂದ ನನಗೂ ಇತರ ವಿಚಾರವಂತರಿಗೂ ಬಹಳ ವ್ಯಥೆಯಾಗಿದೆ' ಎಂದು ತಿಳಿಸಿ ವ್ಯಗ್ರಮನದಿಂದ ಸಭೆಯನ್ನು ಮಧ್ಯಾಹ್ನಕ್ಕೆ ಮುಂದುವರಿಸಿದರು. ಶ್ರೀಶ್ರೀಗಳವರು ಆ ದಿನದ ಮಧ್ಯಾಹ್ನದ ಭೋಜನವನ್ನೇ ನಿರಾಕರಿಸಿದರು. ೩೦-೪೦ ಸಾವಿರ ರೂಪಾಯಿ ಖರ್ಚು ಮಾಡುತ್ತಿರುವುದು ವ್ಯರ್ಥವೆ? ಧರ್ಮ ವಿದ್ವೇಷದ ಹೊಗೆಯನ್ನು ನಂದಿಸಲು ಪ್ರಯತ್ನಿಸುವ ಮಹಾಮಂಟಪದಿಂದಲೇ ದ್ವೇಷದ ಕಿಡಿಗಳು ಹಾರುವವಲ್ಲಾ ಎಂದು ವ್ಯಥೆ.

ಶ್ರೀಶ್ರೀಗಳವರಿಗೆ ಬುದ್ಧದೇವನ ವಿಷಯದಲ್ಲಿ ಬಹಳ ಆದರ. ಮಮತೆ. ಆ ಮಹಾವ್ಯಕ್ತಿಯ ಮಾನವೀಯತೆಗೆ ಮಾರುಹೋಗಿದ್ದರು. ಅಂತಹ ಮಹಾ ಮಹಿಮನಿಗೆ ಹೀನಾಯದ ಮಾತುಗಳನ್ನಾಡಿದ್ದು ಅವರ ಮನಸ್ಸಿನ ಅಧ್ಯಾತ್ಮ ಚಿಲುಮೆಯನ್ನೇ ಕೆರಳಿಸಿದಂತಾಗಿತ್ತು. ಆ ಉಪನ್ಯಾಸಕರ ಮೇಲೆ ಕಣ್ಣುಗಳು ಕಿಡಿ ಕಾರಿದರೂ, ಬಾಯಿಂದ ಬಿರುನುಡಿಗಳು ಬರಲಿಲ್ಲ. ಮಧ್ಯಾಹ್ನದ ಸಭೆಯಲ್ಲಿ ಮೊದಲು ಬುದ್ಧದೇವನ ಘನತೆಯ ವಿಷಯದಲ್ಲಿ ಮಾತಾಡಬೇಕೆಂದು ನನಗೆ ಆದೇಶ ಬಂದಿತು. ನಾನು ಬೆದರಿದೆ, ನಾನು ಅಸಮರ್ಥನೆಂದು ಬೇಡಿಕೊಂಡೆ. ಸನ್ನಿಧಿಯವರು ಬಿಡಲಿಲ್ಲ. 'ಮಾತಾಡು' ಎಂದಪ್ಪಣೆ ಮಾಡಿದರು. ಶ್ರೀ ಶ್ರೀಗಳವರೇ **ಕೆಲವು ಸೂಚನೆ ಸಲಹೆ ಕೊಟ್ಟರು.**

ಮಧ್ಯಾಹ್ನ ವೇದಿಕೆಯ ಮೇಲೆ ನಿಂತೆನು. ಏನೋ ನಡುಗು, ತೊದಲು, ಕ್ಷಣಮಾತ್ರ. ಅನಂತರ ಬುದ್ಧದೇವನ ಘನತೆ, ತ್ಯಾಗ, ಕರುಣೆಗಳ ಬಗ್ಗೆ ನಿದರ್ಶನಗಳು ಸಮೇತ ನಿರರ್ಗಳವಾಗಿ ಮಾತಾಡಿದೆನು. ಶ್ರೀಶ್ರೀಗಳವರ ಅನಂತರ ಉಳಿದ ಇತರ ಧರ್ಮದರ್ಶನಗಳ ಮೇಲೆ ವ್ಯಾಖ್ಯಾನವಾಯಿತು. ಮೂರನೆಯ ದಿನ ಶ್ರೀಶ್ರೀಗಳವರು ಎಲ್ಲಾ ದರ್ಶನಗಳ ಸಮನ್ವಯವನ್ನು ಹೃದಯಂಗಮವಾಗಿ ವಿವೇಚಿಸಿ ವಿವರಿಸಿದರು. ಮಹಾತ್ಮರ ಹೃದಯದಲ್ಲಿ ಹರಿಯುತ್ತಿರುವ ಸಮಾನವಭಾವ, ಕಾಲಧರ್ಮವನ್ನನುಸರಿಸಿ ಹೇಗೆ ಜನತೆಗೆ ಸಂದೇಶ ನೀಡಲು ಸಮರ್ಥವಾಯಿತೆಂಬುದನ್ನು ವಿವರಿಸಿದರು.

ಮೂರನೆಯ ದಿನ ಸಮಾರಂಭ ಮುಕ್ತಾಯವಾಯಿತು.ಎಲ್ಲಾ ಧರ್ಮದ ವಿದ್ವಾಂಸರಿಗೂ ಸಂಭಾವನೆಗಳನ್ನು ಕೊಟ್ಟು ಆಶೀರ್ವದಿಸಿ ಆತ್ಮೀಯ ಅಕ್ಕರೆಯಿಂದ ಬೀಳ್ಕೊಟ್ಟರು. ಇಂತಹ ವೈಶಾಲ್ಯಭಾವ,ಅಪೂರ್ವವಾದುದು. ಒಂದು ಮಹಾಧರ್ಮದ ಜೀವಂತ ಸತ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು, ಅನುಭಾವಿಗಳಾದವರಿಗೆ ಮಾತ್ರ ಇಂತಹ ವಿಶ್ವಭ್ರಾತೃತ್ವ ಭಾವನೆ ಬರಲು ಸಾಧ್ಯ. ರಾಮಕೃಷ್ಣ ಪರಮಹಂಸರು ಕಾಳಿಕಾದೇವಿಯ ಭಕ್ತರು. ಇವರ ಪರಮ ಧ್ಯೇಯ ಮಾತೆಯ ಸಾಕ್ಷಾತ್ಕಾರ ತಪಸ್ಸಿನ ಫಲದಿಂದ ಈ ಸಿದ್ಧಿ ಪಡೆದರು. ತದನಂತರ ಕಾಳಿಕಾದೇವಿಯ ಮೂಲಕವೇ ಇತರ ಧರ್ಮಗಳ ಪ್ರವಾದಿಗಳ ದರ್ಶನವನ್ನು ಪಡೆದರಂತೆ.

ಶ್ರೀಶ್ರೀಗಳವರ ವಿಚಾರ ಸರಣಿಯಿಂದ ಯಾವ ಪೂರ್ವ ಪಶ್ಚಿಮ ದರ್ಶನ ಶಾಸ್ತ್ರಗಳಾಗಲಿ, ಸನಾತನ ನೂತನ ಸಂಪ್ರದಾಯಗಳಾಗಲಿ ವಂಚಿತವಾಗಿಲ್ಲ. ಅದರದರ ಸ್ಥಾನದಲ್ಲಿ ಅವರ ಮಹತ್ವವನ್ನು ಮನಮುಟ್ಟುವಂತೆ ವಿವರಿಸುವ ಅನುಭವ ಪಡೆದಿದ್ದಾರೆ. ಜೊತೆಗೆ ಶ್ರೀಶ್ರೀಗಳವರು ಉತ್ತಮ ಸಾಹಿತಿಗಳು. ಹಳಗನ್ನಡ ಕಾವ್ಯಗಳಲ್ಲಿ ಅಪಾರ ಅಭಿಮಾನ. ಸಂಸ್ಕೃತ, ಇಂಗ್ಲೀಷ್ ಸಾಹಿತ್ಯಗಳಲ್ಲಿ ಅಭಿರುಚಿ. ಟಾಲ್‌ಸ್ಟಾಯ್ ಸಾಹಿತ್ಯವಂತೂ ಇವರ ಅತಿ ಮೆಚ್ಚುಗೆಗೆ ಪಾತ್ರವಾಗಿದೆ. ಸರ್ವಧರ್ಮ ಸಮ್ಮೇಳನ ಮಾತ್ರವಲ್ಲ,೧೯೬೩ರ ಡಿಸೆಂಬರ್‌ನಲ್ಲಿ ಸಾಹಿತ್ಯ ಸಮ್ಮೇಳನ ಶ್ರೀಕ್ಷೇತ್ರದಲ್ಲಿ ಸೇರಿತ್ತು. ಆಗ ರಂ. ಶ್ರೀ. ಮುಗಳಿಯವರು ಅಧ್ಯಕ್ಷರಾಗಿದ್ದರು. ಮೂರು ದಿನಗಳ ಈ ಕಾರ್ಯಕ್ರಮಗಳಲ್ಲಿ ಸನ್ನಿಧಿಯವರ ವ್ಯಕ್ತಿತ್ವ ಎದ್ದು ಕಾಣುತ್ತಿತ್ತು. ಬಂದವ

ರೆಲ್ಲರಿಗೂ ಉಚಿತವಾದ ಸುಖಭೋಜನ, ಧರ್ಮ, ಸಾಹಿತ್ಯ, ಸಂಸ್ಕೃತಿ ಎಲ್ಲಾ ಜೀವರ ಸುಖದ ಬಯಕೆಗಳಿಗಾಗಿ ತಮ್ಮ ತಪೋಮಯ ಜೀವನವನ್ನೇ ಧಾರೆಯೆರೆದಿರುವ ಶ್ರೀಶ್ರೀಗಳವರಿಗೆ ನಾವು ಸಲ್ಲಿಸುತ್ತಿರುವ, ಸಲ್ಲಿಸಬೇಕಾದ ಕಾಣಿಕೆಯೇನು ? ಜನತೆಯೇ ಇದನ್ನು ಯೋಚಿಸಬೇಕು. ಅನೇಕ ತ್ಯಾಗಗಳ ಕಾರಣದಿಂದ ಕಟ್ಟಿ ಬೆಳೆಸಿದ ಈ ಮಹಾಸಂಸ್ಥೆಯ ಲಾಭವನ್ನು ಸರ್ವಮತೀಯರೂ ಬಳಸಿಕೊಳ್ಳಬೇಕಾದ ಹಾಗೆ ಶ್ರೀ ಕ್ಷೇತ್ರದೊಡನೆ ನಡೆದುಕೊಂಡು ಜನ ಸುಖಿಸಬೇಕು.

ಶ್ರೀ ಶ್ರೀಗಳವರು ಏನೇ ತೊಡರು, ಕ್ಲೇಶಗಳು, ಶ್ರಮಗಳಾದರೂ ತಮ್ಮ ಅವ್ಯಾಹತ ಕರ್ಮಯೋಗದ ಮಹಿಮೆಯಿಂದ ಶ್ರೀ ಕ್ಷೇತ್ರವನ್ನು ಶಾರದೆಯ ಪೀಠವನ್ನಾಗಿಸಿದ್ದಾರೆ. ಶ್ರೀ ಕ್ಷೇತ್ರದ ತಪೋಮಯ ವಾತಾವರಣ ಶ್ರೀ ಶ್ರೀಗಳವರಿಗೆ ನಿತ್ಯನೂತನ ಚೇತನವನ್ನೀಯುತ್ತಿದೆ. ಇಂತಹ ಮಹತ್ಪ್ರಯತ್ನದಲ್ಲಿ ಮಗ್ನರಾದ ಯೋಗಿಗಳಿಗೆ ಜನತೆ ನಾಡು ಸರ್ವಕಾಲಕ್ಕೂ ಕೃತಜ್ಞರಾಗಿರಬೇಕೆಂಬುದೇ ನಮ್ಮ ಹಾರೈಕೆ.

**ಕೆ. ಕೊಟ್ರಪ್ಪರೆಡ್ಡಿ**
ಕನ್ನಡ ಪಂಡಿತ, ಗೌ॥ ಟಿ.ಟಿ.ಐ.
ದಾವಣಗೆರೆ

# ಪ್ರತ್ಯಕ್ಷ ದೈವ

ಪರಮಾತ್ಮ ತುಂಬಾ ಕರುಣಾಮಯಿ. ಮಾನವನಿಗೆ ಸದಸದ್ವಿವೇಚನೆ ನೀಡಿ ಭವಬಂಧನದಿಂದ ಬಿಡುಗಡೆ ಮಾಡಿ ನಿತ್ಯ ಸುಖಿಯನ್ನಾಗಿಸುವ ಅಪಾರ ಹಂಬಲ ಪರಮಾತ್ಮನಿಗಿದೆ. ಅದಕ್ಕೋಸ್ಕರ ಅಗತ್ಯವಾದ ಅರಿವನ್ನು ಮೂಡಿಸಿ ಅಮೂಲ್ಯ ವ್ಯಕ್ತಿತ್ವವನ್ನು ಬೆಳೆಸುವಂಥ ಮಹಾಕಾರ್ಯವನ್ನು ಯಶಸ್ವಿಯಾಗಿ ಜರುಗಿಸಲು ಸಾಧ್ಯವಾಗುವುದಕ್ಕೆ ದಿವ್ಯ ಚೇತನರು ಅವತರಿಸುವಂತೆ ಮಾಡುತ್ತಾನೆ. ಅಂಥ ವ್ಯಕ್ತಿಗಳು ಪರಮಾತ್ಮನ ಸ್ವರೂಪರು; ಪ್ರತಿನಿಧಿಗಳು. ಹೀಗೆ ನಮ್ಮ ಶಿವಕುಮಾರ ಪ್ರಭುಗಳೂ ಸಹ ಪರಮಾತ್ಮನ ಪ್ರತಿನಿಧಿಯಾಗಿದ್ದಾರೆ : ಸ್ವರೂಪರಾಗಿದ್ದಾರೆ. ಮಾನವತೆಯ ಉದ್ಧಾರದ ಕಾರ್ಯದಲ್ಲಿ ತೊಡಗಿ ಯಶಸ್ವಿಯಾಗಿ ಐವತ್ತು ವರ್ಷಗಳನ್ನು ಮುಗಿಸಿದ್ದಾರೆ. ಈಗ ಶ್ರೀಶ್ರೀಗಳವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುವುದು ನಮ್ಮೆಲ್ಲರ ಆದ್ಯಕರ್ತವ್ಯವಾಗಿದೆ.

ಶಿವಕುಮಾರ ಪ್ರಭುಗಳು ಇದು ನಮ್ಮದು. ಇದು ಬೇರೆಯವರದು ಎಂಬ ಸಂಕುಚಿತ ಮನೋಭಾವನೆಯನ್ನು ಬಿಟ್ಟು ಇಡೀ ಜಗತ್ತೇ ತನ್ನ ಕುಟುಂಬ ಎಂಬ ವಿಶಾಲ ಭಾವನೆಯನ್ನು ತಳೆದು ಉದಾರ ಚರಿತರಾಗಿದ್ದಾರೆ. ಮಾನವ ಜೀವನದ ಪರಮಗುರಿಯನ್ನು ಸಾಕ್ಷಾತ್ಕರಿಸಿಕೊಂಡು ತಮ್ಮ ಬದುಕಿಗೆ ಅರ್ಥವನ್ನು ಗಳಿಸಿಕೊಂಡಿದ್ದಾರೆ. ನಮ್ಮೆಲ್ಲರ ದೃಷ್ಟಿಯಲ್ಲಿ ಮಹಾತ್ಮರೆನಿಸಿಕೊಂಡಿದ್ದಾರೆ. ಶ್ರೀಶ್ರೀಗಳವರು ಜೀವನದ ಪ್ರಮುಖ ಶಾಶ್ವತ ಮೌಲ್ಯವಾದ ಪರೋಪಕಾರಕ್ಕೆ ಸಂಪೂರ್ಣಬದ್ಧರಾಗಿ ಅಪಾರ ಸಂಖ್ಯೆಯ ಜನರಿಗೆ ಆಶ್ರಯ ನೀಡಿದ್ದಾರೆ. ಇನ್ನೂ ಸಹ ಮೌಢ್ಯ ಹಾಗೂ ದೌರ್ಬಲ್ಯಗಳಿಂದ ತೊಳಲುತ್ತಿರುವ ಜನರನ್ನು ಸನ್ಮಾರ್ಗಕ್ಕೆ ಒಯ್ಯಲು ಹೆಣಗುತ್ತಿದ್ದಾರೆ.

ಮಾನವನ ಬದುಕಿನ ಪರಮಗುರಿಯನ್ನು ಸಾಧಿಸಲು ಮೂರು ಮಾರ್ಗಗಳನ್ನು ನಮ್ಮ ಪೂರ್ವಿಕರು ಪ್ರದಿಪಾದಿಸಿದ್ದಾರೆ. ಅವುಗಳೆಂದರೆ ಜ್ಞಾನಮಾರ್ಗ, ಕರ್ಮಮಾರ್ಗ ಮತ್ತು ಭಕ್ತಿಮಾರ್ಗ. ನಮ್ಮ ಶಿವಕುಮಾರ ಪ್ರಭುಗಳು ಈ ಮೂರು ಮಾರ್ಗಗಳ ಸುಂದರ ಸಮನ್ವಯವನ್ನು ಸಾಧಿಸಿದ ಅಪರೂಪದ ಚೇತನರು. ಶ್ರೀ ಕ್ಷೇತ್ರದಲ್ಲಿ ಪ್ರತಿನಿತ್ಯ ಸಂಜೆಯ ಸುಮಧುರ ವಾತಾವರಣದಲ್ಲಿ ಸಮವಸ್ತ್ರಧರಿಸಿ ಸಹಸ್ರಾರು ಸಂಖ್ಯೆಯಲ್ಲಿ ಬಾಲಕರು ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗುತ್ತಾರೆ. ಅದೊಂದು ಅಪೂರ್ವ ದೃಶ್ಯ; ಅದು ಶ್ರೀ ಕ್ಷೇತ್ರದ ಅನೇಕ ವೈಶಿಷ್ಟ್ಯಗಳಲ್ಲೊಂದು; ಆ ಸಮಯದಲ್ಲಿ ಶ್ರೀಗಳವರು ಏನೇ ಕಾರ್ಯವಿದ್ದರೂ ಅದನ್ನು ಬಿಟ್ಟು ಸುಮಾರು ಅರ್ಧ ಘಂಟೆಯ ಸಮಯ ಜ್ಞಾನಪಿಪಾಸುಗಳಾದ ಬಾಲಕರಿಗೆ ದಿವ್ಯಜ್ಞಾನ ರಾಶಿಯಿಂದ ತುಂಬಿದ ಹಿತವಚನವನ್ನು ನೀಡುತ್ತಾರೆ. ಶ್ರೀಶ್ರೀಗಳವರ ಒಂದೊಂದು ಮಾತು ದಿವ್ಯೌಷಧ. ಇಂಥ ಔಷಧ ಸೇವನೆಯಿಂದ ಬಾಲಕರ ಮೌಢ್ಯ ಹಾಗೂ ದೌರ್ಬಲ್ಯಗಳು ದೂರವಾಗಿ ಅವರಲ್ಲಿ ನವಚೈತನ್ಯಮೂಡುತ್ತದೆ. ಇದರಿಂದಾಗಿ ಅನೇಕ ಬಾಲಕರು ತಮ್ಮ ಬದುಕನ್ನು ಉಜ್ವಲಗೊಳಿಸಿಕೊಂಡು ಸಮಾಜದ ಪ್ರಾಮಾಣಿಕ ಸೇವಕರಾಗಿದ್ದಾರೆ. ಹೀಗೆ ಕ್ಷೇತ್ರಜೀವನದಿಂದ ಲಭ್ಯವಾದ ಸಂಸ್ಕಾರದಿಂದ ಅನೇಕರ ಬದುಕು ಅರ್ಥವತ್ತಾಗಿದೆ.

ಶ್ರೀಶ್ರೀಗಳವರ ದಿನಚರಿಯಂತೂ ಬಿಡುವಿಲ್ಲದ್ದು. ಅವರ ಪ್ರಸಾದ ಸ್ವೀಕಾರವಂತೂ ತುಂಬಾ ಕ್ರಮಬದ್ಧವಾದುದು. ಸಾಮಾನ್ಯರಿಗಂತೂ ಅಂಥ ಶಿಸ್ತನ್ನು ಸಾಧಿಸಲು ಸಾಧ್ಯವೇ ಇಲ್ಲ. ಬೆಳಗಿನ ಜಾವ ಎರಡುವರೆ ಘಂಟೆಗೆ ಪ್ರಾರಂಭವಾದ ಕಾರ್ಯಕ್ರಮ ಮುಗಿಯುವುದು ರಾತ್ರಿ ಹತ್ತು-ಹನ್ನೊಂದು ಗಂಟೆಗೆ. ಈ ವೇಳೆಯಲ್ಲಿ ಅನೇಕ ಕಾರ್ಯಗಳಲ್ಲಿ ಅವರು ಮುಳುಗಿರುತ್ತಾರೆ.

ಮಂತ್ರಿಗಳೇ ಆಗಲಿ ತೀರ ಸಾಮಾನ್ಯ ಗ್ರಾಮಾಂತರ ಬಂಧುಗಳೇ ಆಗಲಿ. ತಾರತಮ್ಯವಿಲ್ಲದೆ ಸಂದರ್ಶನ ನೀಡುವುದು ಇವರ ವಿಶಿಷ್ಟ ಗುಣಗಳಲ್ಲೊಂದು. ಸರ್ವಜ್ಞನ ಮಾತಿನಲ್ಲಿ ಹೇಳಬೇಕಾದರೆ ದೇಹವನ್ನು ದಂಡಿಸುತ್ತಾ ಕರಣವನ್ನು ಖಂಡಿಸುತ್ತಾ ಕರ್ಮಯೋಗಿಗಳಾಗಿದ್ದಾರೆ. ಬಸವಣ್ಣನವರ ಮಾತಿನಲ್ಲಿ ಹೇಳುವುದಾದರೆ ಕಾಯಕದಲ್ಲಿ ಕೈಲಾಸವನ್ನು ಕಂಡಿದ್ದಾರೆ. ಇದಲ್ಲದೆ, ಬಾಲಕರೊಂದಿಗೆ ಸೇರಿ ಬಾಲಕರಂತೆಯೇ ಶ್ರಮದಾನ ಮಾಡಿದ್ದಾರೆ. ಅಡಿಗೆಯವರೊಂದಿಗೆ ಸೇರಿ ಅಡಿಗೆ ಮಾಡಿದ್ದಾರೆ. ಆದುದರಿಂದ ಇಂಥ ಲೋಕೋತ್ತರ ವ್ಯಕ್ತಿಗಳ ನಡೆನುಡಿ ಅರಿಯಲು ನಮ್ಮಂಥ ಸಾಮಾನ್ಯ ವ್ಯಕ್ತಿಗಳಿಂದಾಗುವುದಿಲ್ಲ. ಬೆಳಗಿನ ಜಾವದ ನಿಶ್ಶಬ್ದದ ನೀರವತೆಯಲ್ಲಿ ಸುಮಾರು ಮೂರು ಗಂಟೆಗಳ ಅವಧಿಯಲ್ಲಿ ಶ್ರೀಶ್ರೀಗಳವರ ಇಷ್ಟಲಿಂಗಾರ್ಚನೆಯಂತೂ ತುಂಬಾ ವಿಶಿಷ್ಟವಾದುದು. ಇದರಿಂದ ಅದೆಷ್ಟೋ ಶಾಂತಿಯನ್ನು ಅನುಭವಿಸುತ್ತಾರೆ. ಇದರಿಂದಸಂಪಾದಿಸಿದ ಅಪಾರ ಆತ್ಮಶಕ್ತಿಯಿಂದ ಮಾನವರನ್ನು ಪ್ರಭಾವಿತರನ್ನಾಗಿ ಮಾಡಿದ್ದಾರೆ. ಹೀಗೆ ಶಿವಕುಮಾರ ಪ್ರಭುಗಳು ಜೀವನದ ಮೌಲ್ಯಗಳಲ್ಲಿ ನಿಷ್ಠರಾಗಿ, ಜೀವನದ ಪರಮಗುರಿಯ ಸಾಧನೆಯ ಮಾರ್ಗಗಳ ತ್ರಿವೇಣೀ ಸಂಗಮವಾಗಿ ಯೌಗಿಕ ಪುರುಷರಾಗಿದ್ದಾರೆ. ಇಂಥ ವಿಭೂತಿ ಪುರುಷರ ದರ್ಶನ ಮಾತ್ರದಿಂದ ನಮ್ಮ ಜನ್ಮ ಸಾರ್ಥಕವಾಗುತ್ತದೆ. ದೇವರನ್ನು ಅರಸಿ ಎಲ್ಲಿಯೂ ಹೋಗಬೇಕಿಲ್ಲ. ಈ ಅವಿಮುಕ್ತಕ್ಷೇತ್ರಕ್ಕೆ ಬಂದು ಪ್ರತ್ಯಕ್ಷ ದೈವವಾದ ಶ್ರೀ ಶಿವಕುಮಾರ ಪ್ರಭುಗಳನ್ನು ಕಂಡು ಪುನೀತನಾಗಿದ್ದೇನೆ.

**ಬಿ. ಎಸ್. ಮಹಾದೇವಯ್ಯ**
ಸಂಸ್ಕೃತ ವಿಭಾಗದ ಮುಖ್ಯಸ್ಥರು
ಸರ್ಕಾರಿ ಕಲಾ ಕಾಲೇಜು
**ಚಿತ್ರದುರ್ಗ**

## ಗುರುಪಥದಲ್ಲಿ ಶ್ರೀಗಳು

**'ಅನ್ಯಂ ನಯಾತಿಹಿ ವಿಭೂತಿರಪತ್ಯ ಭಾಜಾಮ್'**

೧. ಇದೊಂದು ಸಂವಿಧಾನದ ಲೋಕನ್ಯಾಯ. ಪಿತ್ರಾರ್ಜಿತಸಂಪತ್ತು ಅವನ ನಂತರ ಅವನ ಮಗನಿಗೆ ಸೇರಬೇಕಲ್ಲದೆ ಬೇರೆಯವರಿಗೆ ದಕ್ಕುವಂತಿಲ್ಲ ಎಂಬುದು ಈ ನ್ಯಾಯದ ಅಂತರಾರ್ಥ. ಮನೋವಿಜ್ಞಾನವನ್ನು ಆಶ್ರಯಿಸಿ ಇದರರ್ಥವನ್ನು ಹಿಗ್ಗಲಿಸಿ ಹೇಳುವುದಾದರೆ ಸ್ಥಿರಚರಸ್ವತ್ತು ಮಾತ್ರವಲ್ಲ, ಅವನ ಗುಣಗಳು. ಪ್ರವೃತ್ತಿಗಳು, ಗತಿಗಮನಾದಿಗಳೂ ಮಗನಿಗೆ ಅಂಟಿಬರುತ್ತವೆಯೆನ್ನಬಹುದು. ಇದು ಲೋಕಸಾಮಾನ್ಯ. ಇದನ್ನು ಗುರುಶಿಷ್ಯ ಸಂಬಂಧಕ್ಕೂ ವಿಸ್ತರಿಸಿದರೆ ತಪ್ಪಾಗದು. ಗುರುವಿನಂತೆ ಶಿಷ್ಯ ಎಂಬ ಲೋಕೋಕ್ತಿಯೂ ಈ ಅರ್ಥವನ್ನೇ ಬಿಂಬಿಸುವಂತಿದೆ.

ಈ ಮಾತಿನ ಹಿನ್ನೆಲೆಯಲ್ಲಿ ಶ್ರೀಮದುದ್ದಾನಶಿವಯೋಗಿಗಳವರಿಂದ ಅವರ ಕರಕಮಲ ಸಂಜಾತರಾದ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಅನುಗತವಾಗಿಬಂದ ಕೆಲವು ಗುಣಗಳನ್ನು ತಿಳಿಯಪಡಿಸುವುದೇ ಪ್ರಕೃತವಾಗಿದೆ,

೨. ಮಹಾಪುರುಷರ ಗಮನ ಅಲೋಕ್ಯಸಾಮಾನ್ಯವಾದುದು. 'ನಮಯತೀವಧರಿತ್ರೀ' ಎಂಬಂತೆ ಧೀರಗಂಭೀರವಾದುದು. ಆ ತೆರನಾದುದು ಶ್ರೀ ಉದ್ದಾನಶಿವಯೋಗಿಗಳವರ ನಡಿಗೆ. ಅಂಥ ಉದ್ದಾನಸ್ವಾಮಿಗಳವರ ಗಮನದ ಗತಿಯನ್ನು ಶ್ರೀಶ್ರೀಶಿವಕುಮಾರ ಮಹಾಸ್ವಾಮಿಗಳವರಲ್ಲಿಯೂ ಕಾಣುತ್ತೇವೆ. ಪೂಜ್ಯಚರಣರು ನಡೆಯುವಾಗ ಅತ್ತ-ಇತ್ತ, ಹಿಂದು-ಮುಂದು ತಿರುಗುವುದಿಲ್ಲ, ತಿರುಗಿ ನೋಡುವುದಿಲ್ಲ. ಅವರ ಗಮನ, ದೃಷ್ಟಿ, ಏಕಾಭಿಮುಖ ಪಾದವಿಕ್ಷೇಪ ಸಾಮಾನ್ಯರಿಂದ ಅನನುಕರಣೀಯ. ಪೂಜ್ಯಪಾದರು ಪಾದುಕೆ (ಹಾವುಗೆ)ಗಳನ್ನು ಮೆಟ್ಟಿ ಬೆಟ್ಟವನ್ನೂ ಹತ್ತಬಲ್ಲರು. ಕೆಸರುಗದ್ದೆಯ ಸಣ್ಣ ಬದುವಿನ ಮೇಲೆ ಓಡಾಡುತ್ತಾರೆ. ಹತ್ತಾರು ಮೈಲಿ ಸುತ್ತಾಡುತ್ತಾರೆ. ಪ್ರತಿದಿನದ ಕೆಲಸಕಾರ್ಯಗಳ ಪರಿವೀಕ್ಷಣೆಗಾಗಿ ಶ್ರೀಮಠದ ಸುತ್ತಮುತ್ತ ತಿರುಗಾಡುವುದು ಐದಾರು ಮೈಲಿಗೇನೂ ಕಡಿಮೆಯಾಗದು. ಜಾತ್ರಾ ಸಮಯದಲ್ಲಿ ಓಡಾಡುವುದಂತೂ ಹತ್ತಾರು ಮೈಲಿಗೂ ಹೆಚ್ಚು. ಒಟ್ಟಿನಲ್ಲಿ ಅವರ ನಡಿಗೆ ಲೋಕೋತ್ತರವಾದುದು. ಅದು ಉದ್ದಾನಶಿವಯೋಗಿಗಳವರಿಂದ ಬಂದಂತಹುದು.

೩. ಶ್ರೀ ಉದ್ದಾನಸ್ವಾಮಿಗಳವರು ಬಹಳ ವೇಗವಾಗಿ ಮಾತನಾಡುತ್ತಿದ್ದರು. ಮಾತನಾಡುವಿಕೆಯಲ್ಲಿ ಅವರದು ತಾರಸ್ವನಿ. ಮಾತಾಡುವ ಆತುರದಲ್ಲಿ ಪುನರುಕ್ತಿ ಹೆಚ್ಚು. ರೂಢಿ ಇಲ್ಲದವರು ಅವರ ಮಾತನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಾಗುತ್ತಿರಲಿಲ್ಲ. ಅವರಂತೆ ಶ್ರೀಶ್ರೀ ಶಿವಕುಮಾರ ಮಹಾಸ್ವಾಮಿಗಳವರೂ ಹಾಗೆಯೇ ಮಾತನಾಡುತ್ತಾರೆ. ಬೇಗ ಅವರ ಮಾತನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ. (ಆದರೆ ಪ್ರವಚನ, ಭಾಷಣ, ಉಪನ್ಯಾಸ, ಬೋಧನೆ ಮಾಡುವಾಗ ಅಲ್ಲ.)

೪. ಕಾಯಕಮಗ್ನರಾಗಿರುವಾಗ ಮಧ್ಯೇ ಕಣ್ಮುಚ್ಚಿ ತೂಕಡಿಸುತ್ತಿದ್ದರಂತೆ ಉದ್ದಾನಸ್ವಾಮಿಗಳವರು. ತಮ್ಮ ಗುರುಗಳಂತೆ ಶ್ರೀಶ್ರೀಗಳವರೂ ಕೂಡ ಆಫೀಸಿನಲ್ಲಿ ಕಾಗದ ಪತ್ರಗಳನ್ನು ನೋಡುವಾಗ, ಮಂಚದಲ್ಲಿ ಮಂಡಿಸಿ ಯಂತ್ರವನ್ನು ಬರೆಯುವಾಗ. ಸಭೆಯಲ್ಲಿ ಉಪಸ್ಥಿತರಿರುವಾಗ ಮಧ್ಯೇ ಮಧ್ಯೇ ತೂಕಡಿಸುತ್ತಾರೆ. (ಯೋಗಶಾಸ್ತ್ರದಲ್ಲಿ ಅದು ನಿದ್ರೆಯಲ್ಲ.) ಕಾಗದ ಪತ್ರಗಳಿಗೆ ಹಸ್ತಾಕ್ಷರಿಸುವಾಗ ತೂಕಡಿಸಿ ಒಮ್ಮೊಮ್ಮೆ ಒಂದೇ ಹಸ್ತಾಕ್ಷರವನ್ನು ನಾಲ್ಕಾರುಬಾರಿ ಮಾಡುತ್ತಾರೆ. ಆದರೂ

ಆದರಲ್ಲಿ ಭಿನ್ನತೆಯಾಗಲಿ, ವ್ಯತ್ಯಾಸವಾಗಲಿ ಕಂಡುಬರುವುದಿಲ್ಲ. ಸಭೆಯಲ್ಲಿಯೂ ಅಷ್ಟೆ. ತಾವು ತೂಕಡಿಸುತ್ತಿದ್ದರೂ ಬೇರೆಯ
ವರು ಹೇಳಿದುದೆಲ್ಲವನ್ನೂ ಗ್ರಹಿಸುತ್ತಾರೆ.

ಶ್ರೀಮದುದ್ದಾನಶಿವಯೋಗಿಗಳವರ ಭೂತಾನುಕಂಪೆ ಅನುಪಮವಾಗಿತ್ತು. ಅವರಿಗೆ ಗೋವುಗಳನ್ನು ಕಂಡರೆ ಅಪಾರ
ವಾದ ಪ್ರೀತಿ. ಅವುಗಳಿಗೆ ಹುಲ್ಲುಹಾಕಿ ಮೈಯುಜ್ಜಿ ತಮ್ಮ ಭೂತದಯೆಯನ್ನು ವ್ಯಕ್ತಪಡಿಸುತ್ತಿದ್ದರು. ಅಂಥ ಪ್ರಾಣಿದಯೆ
ಶ್ರೀಶ್ರೀ ಶಿವಕುಮಾರಮಹಾಸ್ವಾಮಿಗಳವರಲ್ಲಿಯೂ ಇಳಿದು ಬಂದಿದೆ. ಅವರು ಮಠದ ಆವರಣದಲ್ಲಿ ತಿರುಗಾಡುತ್ತಿರುವಾಗ
ಅವರನ್ನು ಕಂಡಕೂಡಲೆ ಗೋವುಗಳು 'ಕರು. ತಾಯ ಕಂಡು ಬಳಿಗೆ ಜಿಗಿದು ಬರುವಂತೆ' ಬಳಿಗೆ ಓಡಿಬರುತ್ತವೆ. ತಮ್ಮ ಮೂಕ
ಭಾಷೆಯಿಂದ ಅನಿಸಿಕೆಯನ್ನು ಅರುಹುತ್ತವೆ. ಆಗ ಶ್ರೀಶ್ರೀಗಳವರು ಸ್ವಲ್ಪಹೊತ್ತು ಅಲ್ಲಿಯೇ ನಿಂತು ಅವುಗಳ ಮೈತುರುಚಿ
ತಮ್ಮ ದಯೆಯನ್ನು ಪ್ರಕಟಿಸುತ್ತಾರೆ.

ಆಶ್ರಮ ಸಂಪ್ರದಾಯದಂತೆ ಶ್ರೀಮಠದಲ್ಲಿ ಪಾರಿವಾಳಗಳನ್ನು ಮತ್ತು ಜಿಂಕೆಗಳನ್ನು ಸಾಕಲಾಗುತ್ತಿದೆ. ಶ್ರೀಶ್ರೀಗಳ
ವರು ಪಾರಿವಾಳಗಳ ವಾಸ್ತವ್ಯಕ್ಕಾಗಿ ಶ್ರೀಕ್ಷೇತ್ರದ ಎಲ್ಲ ಕಟ್ಟಡಗಳ ಮೇಲೆಯೂ ಸಣ್ಣ ಸಣ್ಣ ಸಾವಿರಾರು ಗೂಡುಗಳನ್ನು ಮಾಡಿ
ಸಿದ್ದಾರೆ. ಉದ್ದಾನ ಸ್ವಾಮಿಗಳಂತೆ ಶ್ರೀಶ್ರೀಗಳವರೂ ಕೂಡ ತಾವು ಮಂಚದ ಮೇಲೆ ಮಂಡಿಸಿ ಯಂತ್ರಧಾರಣೆ ಮಾಡುವ
ಸಮಯಕ್ಕೆ ಸರಿಯಾಗಿ ಆ ಪಾರಿವಾಳಗಳ ಪರಿವಾರ ಎಲ್ಲಿದ್ದರೂ ಅಲ್ಲಿಗೆ ಬರುತ್ತವೆ. ಆಗ ಶ್ರೀಗಳವರು ಯಂತ್ರದ ತಟ್ಟೆಯಲ್ಲಿ
ರುವ ಕಾಳುಗಳನ್ನು ಅವುಗಳಿಗೆ ಎರಚುತ್ತಾರೆ. ಅವು ನಿರ್ಭೀತಿಯಿಂದ ತಿಂದು ತೃಪ್ತಿಪಡೆದು ಹಾರಿಹೋಗುತ್ತವೆ.

ತಮ್ಮ ಗುರುಗಳ ಅನೇಕ ಸಂಪ್ರದಾಯಗಳು ಯಥಾವತ್ತಾಗಿ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಬಂದಿವೆ. ಅಂತಹ
ವುಗಳಲ್ಲಿ ಜಾತ್ರೆಯ ಕೆಲಸ–ಕಾರ್ಯಗಳನ್ನು ಉದ್ದಾನಶಿವಯೋಗಿಗಳವರು ಯಾರು ಯಾರಿಗೆ ಯಾವ ಯಾವ ಕಾರ್ಯಗಳನ್ನು
ನೇಮಿಸಿದ್ದರೋ ಅವರೇ ಇಂದು ಆಯಾಯ ಕಾರ್ಯಗಳನ್ನು ಮಾಡಿಕೊಂಡು ಬರುತ್ತಿರುವುದೂ ಒಂದು. ಅಂದಿನ ಅವರ ಆದೇಶ
ದಂತೆ ಯಾರು ತೇರನ್ನು ಸಿಂಗರಿಸುತ್ತಿದ್ದರೋ ಅವರೇ ಅದನ್ನು ಇಂದೂ ಮುಂದುವರಿಸುತ್ತಿದ್ದಾರೆ. ಜಾತ್ರೆಯಲ್ಲಿ ಯಾರು ಯಾರು
ಯಾವ ಯಾವ ಕೊಪ್ಪಲುಗಳನ್ನು ಹಾಕಿ ದಾಸೋಹ ಕ್ರಿಯೆಯಲ್ಲಿ ಭಾಗಿಗಳಾಗುತ್ತಿದ್ದರೋ ಅವರೇ ಇಂದೂ ಮಾಡುತ್ತಿ
ದ್ದಾರೆ. ಉತ್ಸವ ಸೇವಾ ಕಾರ್ಯದಲ್ಲಿಯೂ ಇದೇ ನಿಯಮ. ಈ ಹೊತ್ತು ಅವರಿಗಿಂತ ಅತಿಶಯವಾಗಿಯೇ ಅದ್ದೂರಿಯಾಗಿ
ಮಾಡುವ ಮಂದಿ ಬೇಕಾದಷ್ಟು ಇದ್ದರೂ ಹಿಂದಿನಿಂದಬಂದ ಭಕ್ತರ ಮನ್ನಣೆಯನ್ನು ತಪ್ಪಿಸಿರುವುದಿಲ್ಲ.

**ವಿದ್ವಾನ್ ಕೆ. ಬಸವರಾಜು** ಎಂ. ಎ. ಬಿ. ಇಡಿ.



# ಶ್ರೀಕ್ಷೇತ್ರದಲ್ಲಿ ಉತ್ತರಾಧಿಕಾರ ಮಹೋತ್ಸವ

ಶ್ರೀ ಶಿವಕುಮಾರಮಹಾಸ್ವಾಮಿಗಳವರು ೧೯೩೦ನೆಯ ಇಸ್ವಿಯಿಂದ ಶ್ರೀ ಸಿದ್ಧಗಂಗಾ ಮಹಾಕ್ಷೇತ್ರದ ಹಾಗೂ ಶ್ರೀ ಮಠದ ಶುಚಿರುಚಿ. ಶುದ್ಧಿಸಿದ್ಧಿಗಳನ್ನು ತಮ್ಮ ನಿಷ್ಕಾಪಟ್ಯ ನಡೆನುಡಿಗಳಿಂದಲೂ, ಲಿಂಗತಪಸ್ಸಿನ ಹಿರಿಮೆಗರಿಮೆಗಳಿಂದಲೂ ಮಹಾತೇಜಸ್ಸಂಪನ್ನಗೊಳಿಸಿದರು. ಲೋಕದ ಜನತೆಯ ಕಲ್ಯಾಣಕ್ಕಾಗಿ ಶಕ್ತಿಮೀರಿ ಶ್ರಮಿಸಿದರು. ವಿರಕ್ತ ಜೀವನದ ಆದರ್ಶವನ್ನು ಮೆರೆದರು. ಅನೇಕ ಶಿಕ್ಷಣಸಂಸ್ಥೆಗಳನ್ನು ಮಮತೆಯಿಂದ ಸ್ಥಾಪಿಸಿದರು; ಅವನನ್ನು ಬೆಳೆಸಿದರು; ಹೆಮ್ಮರಗಳನ್ನಾಗಿಸಿದರು. ಅವರ ಅಪಾರಕಾರುಣ್ಯದ ಫಲವನ್ನು ಲೋಕ ಅನುಭವಿಸಿತು. ಭಕ್ತಕೋಟಿ ಶ್ರೀಮಠಕ್ಕೆ ಉತ್ತರಾಧಿಕಾರಿಗಳನ್ನು ಮಾಡಬೇಕೆಂದೂ, ತಮ್ಮ ಉತ್ತರ ವಯಸ್ಸಿನಲ್ಲಿನ ಈ ಅವಿರತ ಶ್ರಮದ ಕಾರ್ಯಕಲಾಪಗಳ ಭಾರವನ್ನು ಕಡಿಮೆ ಮಾಡಿಕೊಳ್ಳುವುದರ ಜೊತೆಗೆ ಮುಂದಿನವರಿಗೆ ಯೋಗ್ಯತರಬೇತಿಯನ್ನು ಈಗಿನಿಂದಲೇ ಕೊಡಬೇಕೆಂದೂ ಅನಂತ ಬಗೆಯಲ್ಲಿ ಪ್ರಾರ್ಥಿಸತೊಡಗಿತು. ಆದರೆ ಅದೊಂದು ಸುಲಭದ ಕೆಲಸವೇನಲ್ಲ. ಯಾರು ಅಂದರವರಿಗೆ ಉತ್ತರಾಧಿಕಾರ ಕೊಟ್ಟು ತಮ್ಮ ಹೊಣೆಗಾರಿಕೆಯನ್ನು ಹೇಗೋ ಹಾಗೆ ಮುಗಿಸಿಬಿಡುವಂತಹುದಲ್ಲ. ಶ್ರೀಗಳವರ ಅಂತಃಕರಣ ದಿಕ್ಕುದಿಕ್ಕಿಗೂ ಹರಿಯಿತು. ಅವರ ದಿವ್ಯಾನುಭೂತಿಯ ಕಕ್ಷಗೆ ಒಳಪಡುವ ವಟುಗಳು ಅನೇಕ ವರ್ಷಗಳವರೆಗೆ ಲಭ್ಯವಾಗಲಿಲ್ಲ. ಶ್ರೀಗಳವರ ಅಭಿಪ್ರಾಯವಿಷ್ಟು :

'ಶ್ರೀಕ್ಷೇತ್ರ ಮಹಾಮಹಾತಪಸ್ವಿಗಳೂ ಲೋಕಕಾರುಣ್ಯಾಕಾಂಕ್ಷಿಗಳೂ ಆದ ಹರದನಹಳ್ಳಿ ನಿರಂಜನ ಜಗದ್ಗುರು ಗೋಸಲ ಸಿದ್ಧೇಶ್ವರರ ಪರಂಪರೆಯವರದು. ಈ ಸುಕ್ಷೇತ್ರವನ್ನು ಶ್ರೀಮದನಾದಿ ತೋಂಟದ ಸಿದ್ಧಲಿಂಗೇಶ್ವರರು ತಮ್ಮ ಪವಿತ್ರ ಪಾದಧೂಳಿಂದ ಪವಿತ್ರಗೊಳಿಸಿದ್ದಾರೆ. ಇಂಥ ಅವಿಮುಕ್ತಕ್ಷೇತ್ರ ಎಂದಿನಿಂದಲೂ ಗುರುಲಿಂಗಜಂಗಮ ದಾಸೋಹ. ಸಾರ್ವಜನಿಕ ಹಿತಚಿಂತನೆ ಮಾಡಿಕೊಂಡು ಧಾರ್ಮಿಕ ಪ್ರಜ್ಞೆಯನ್ನು ಜನತೆಯಲ್ಲಿ ಉಂಟುಮಾಡಿಕೊಂಡುಬಂದಿದೆ. ರಾಷ್ಟ್ರೀಯ ಅಭಿವೃದ್ಧಿ ದೆಸೆಯಲ್ಲಿ ತನ್ನ ಕಾಣಿಕೆಯನ್ನು ಶಕ್ತಿಮೀರಿ ಸಲ್ಲಿಸುತ್ತ ಬಂದಿದೆ. ಇಂಥ ಮಹಾಕ್ಷೇತ್ರಕ್ಕೆ ಉತ್ತರಾಧಿಕಾರಿಗಳಾಗಬೇಕಾದವರು ಮುಖ್ಯವಾಗಿ ಭಕ್ತಿ, ಜ್ಞಾನ, ವೈರಾಗ್ಯಸಂಪನ್ನರಾಗಿರಬೇಕು. ಲಿಂಗಪೂಜಾನಿಷ್ಠೆ, ಸಮತಾಭಾವ, ದಾಸೋಹಕಾರ್ಯದಲ್ಲಿ ಮಮತೆ, ಬ್ರಹ್ಮಚರ್ಯೆಯ ಪಾಲನಾದಿ ಸದ್ಗುಣ ವಿಶಿಷ್ಟವುಳ್ಳವರಾಗಬೇಕು'. ಅಂಥವರನ್ನು ಹುಡುಕುವ ಕಾರ್ಯದಲ್ಲಿ ಶ್ರೀಗಳವರು ಅನೇಕ ವರ್ಷಗಳವರೆಗೆ ಭಕ್ತರ ಬೇಡಿಕೆಯನ್ನು ತಳ್ಳುತ್ತಲೇ ಬಂದರು. ಭಕ್ತರು ಹೇಳುವ ಅನೇಕ ವಟುಗಳ ಬಗೆಗೆ ಪ್ರತ್ಯಕ್ಷಾಪ್ರತ್ಯಕ್ಷವಾಗಿ ಪರೀಕ್ಷಿಸಿದರು. ೧೯೭೦ರವರೆಗೆ ಈ ಕಾರ್ಯವನ್ನು ಶ್ರೀಗಳವರು ಮಾಡುತ್ತಲೇ ಬಂದರೂ ಯೋಗ್ಯವಟುಗಳು ಕಣ್ಣಿಗ ಬೀಳಲಿಲ್ಲ. ಕೊನೆಗೊಮ್ಮೆ ಸೀತಕಲ್ಲು ಗ್ರಾಮದಲ್ಲಿ ೮-೯-೧೯೪೪ರಲ್ಲಿ ಜನ್ಮತಳೆದು ಶ್ರೀಮಠದಲ್ಲಿಯೇ ಅನೇಕ ವರ್ಷ ವಿದ್ಯಾಭ್ಯಾಸಮಾಡಿ, ಸಿದ್ಧಗಂಗಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ (ಎಸ್.ಐ.ಟಿ.ಯಲ್ಲಿ) ಶಿಕ್ಷಕವೃತ್ತಿಯನ್ನು ಕೈಕೊಂಡಿದ್ದ ಬಿ. ಇ. ಪದವೀಧರ ಚಿ॥ ಜಗದೀಶ ಅವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಳ್ಳಬೇಕೆಂದು ಅನೇಕ ಜನರ ಅಭಿಪ್ರಾಯ ಸಂಗ್ರಹಮಾಡಿ ತೀರ್ಮಾನ ಕೈಕೊಂಡರು. ಸ್ವಾಮಿಗಳವರ ಈ ತೀರ್ಮಾನ ಭಕ್ತಕೋಟಿಗೆ ಸಮಾಧಾನದ ನಿಟ್ಟುಸಿರು ಬಿಡುವಂತಾಯಿತು. ದೇಶವೆಲ್ಲ ಹರ್ಷಗೊಂಡು ತನ್ನ ಉತ್ಸಾಹಾತಿರೇಕವನ್ನು ಪ್ರದರ್ಶಿಸಿತು. ರಾಜ್ಯಮಟ್ಟದ ಸ್ವಾಗತ ಸಮಿತಿಯು ಬೆಂಗಳೂರಿನ ಗಣ್ಯರೆನಿಸಿದ ಶ್ರೀ ವರ್ಮಾ ಕೆ.ಎಂ ನಂಜಪ್ಪನವರ ಅಧ್ಯಕ್ಷತೆಯಲ್ಲಿ ರೂಪುಗೊಂಡು ಕರ್ತವ್ಯೋನ್ಮುಖವಾಯಿತು. ಉತ್ತರಾಧಿಕಾರ ಮಹೋತ್ಸವದ ಸಿದ್ಧತೆಗಳು ಮಠದಲ್ಲಿ ಅಭೂತಪೂರ್ವವಾಗಿ ನಡೆದುಹೋದವು. ಶ್ರೀಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ತುಂಬಿದುತ್ಸಾಹದಿಂದ ತಮ್ಮ ತಮ್ಮ ಪಾಲಿನ ಸೇವಾಕಾರ್ಯದಲ್ಲಿ ನಿರತರಾದರು.

ಪೂರ್ವಾಶ್ರಮದ ಚಿ॥ 'ಜಗದೀಶ' ಅವರಿಗೆ 'ಶ್ರೀ ಗೌರೀಶಂಕರಸ್ವಾಮಿಗಳು' ಎಂಬ ನೂತನಾಭಿಧಾನವಿಟ್ಟು ತಾ॥ ೨೧-೫-೧೯೭೦ರ ಬ್ರಾಹ್ಮೀ ಮುಹೂರ್ತದಲ್ಲಿ ಷಟ್‌ಸ್ಥಲೋಪದೇಶಪೂರ್ವಕ ನಿರಂಜನ ಚರಜಂಗಮಾಧಿಕಾರವನ್ನು ಶ್ರೀಗಳವರು ದಯಪಾಲಿಸಿದರು. ಈ ಉತ್ತರಾಧಿಕಾರ ಮಹೋತ್ಸವಕ್ಕೆ ನಾಡಿನ ಮೂಲೆ ಮೂಲೆಗಳಿಂದ ಬಂದ ಲಕ್ಷ ಲಕ್ಷ ಸಂಖ್ಯೆಯ ಭಕ್ತಕೋಟಿ ಉತ್ಸಾಹದಿಂದ ತನ್ನ ಪಾಲಿನ ಭಕ್ತಿಕೈಂಕರ್ಯವನ್ನು ಪ್ರದರ್ಶಿಸಿತು. ಆಗಿನ ರಾಜ್ಯಪಾಲರಾಗಿದ್ದ ಶ್ರೀ ಮೋಹನಲಾಲ್‌ಸುಖಾಡಿಯಾ, ಮುಖ್ಯಮಂತ್ರಿಗಳಾಗಿದ್ದ ಶ್ರೀ ದೇವರಾಜ ಅರಸು ಇನ್ನಿತರ ಅನೇಕ ಕರ್ನಾಟಕದ ಮಂತ್ರಿ ಮಹೋದಯರು, ಆಗಮಿಸಿದ್ದರು. ಹುಬ್ಬಳ್ಳಿ ಮೂರುಸಾವಿರ ಮಠದ ಜಗದ್ಗುರು ಶ್ರೀಗಂಗಾಧರರಾಜೇಂದ್ರಸ್ವಾಮಿಗಳು, ಸುತ್ತೂರು ಶಿವರಾತ್ರಿರಾಜೇಂದ್ರ ಜಗದ್ಗುರುಗಳು, ತರಳಬಾಳು ಜಗದ್ಗುರು ಶಿವಕುಮಾರಶಿವಾಚಾರ್ಯಸ್ವಾಮಿಗಳು, ಆನಂದಪುರಮಠದ ಜಗದ್ಗುರು ಸಚ್ಚಿದಾನಂದ ಮಹಾಸ್ವಾಮಿಗಳು, ಕನಕಪುರದೇಗುಲಮಠದ ಮಹಾಲಿಂಗಸ್ವಾಮಿಗಳು, ಬೆಂಗಳೂರು ಸರ್ಪಭೂಷಣಮಠದ ಶಿವಕುಮಾರಮಹಾಸ್ವಾಮಿಗಳು, ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ ಇವರೇ ಮೊದಲಾದ ನೂರಾರುಜನ ಹರಗುರುಚರಮೂರ್ತಿ

ಗಳು ಧರ್ಮಾಧಿಕಾರಿಗಳು ಧರ್ಮಜಿಜ್ಞಾಸುಗಳೂ ಸಭೆಯಲ್ಲಿ ಪಾಲ್ಗೊಂಡು ತಮ್ಮ ತಮ್ಮ ಸಲ್ಪರಕೆಗಳನ್ನು ಕೋರಿದರು. ನಾಡಿನ ಇತರ ಗಣ್ಯರು ಸಭೆಯಲ್ಲಿ ಪಾಲ್ಗೊಂಡು ಹರ್ಷ ವ್ಯಕ್ತಪಡಿಸಿದರು. ನಾಡಿನ ಸಮಸ್ತ ಪತ್ರಿಕೆಗಳು ಅಗ್ರಲೇಖನ ಬರೆದುವು. ವಿಶೇಷ ಪುರವಣಿಗಳು ಹೊರಬಂದವು. ರಾಷ್ಟ್ರದ ಗಣ್ಯರ ಅಸಂಖ್ಯ ಸಂದೇಶಗಳ ಸುರಿಮಳೆಯಾಯಿತು. ದಾಸೋಹ ವ್ಯವಸ್ಥೆಯಂತೂ ಅಭೂತಪೂರ್ವವಾಗಿ ನಡೆದುಹೋಯಿತು. ಈ ಮಹೋತ್ಸವದ ಅಂಗವಾಗಿ ಸರ್ವಧರ್ಮ ಸಮ್ಮೇಲನ, ಶಿವಾನುಭವ ಗೋಷ್ಠಿ, ಮಹಿಳಾಗೋಷ್ಠಿಯಂಥ ಅನೇಕ ಸಮಾರಂಭಗಳು ಅಭೂತಪೂರ್ವವಾಗಿ ನಡೆದುವು. ಮೂರುದಿನಗಳು ನಡೆದ ಈ ಸಾಂಸ್ಕೃತಿಕ, ಧಾರ್ಮಿಕ ಸಮಾರಂಭಗಳಲ್ಲಿ ನಾಡಿನ ಅನೇಕ ವಿದ್ವಾಂಸರು ಭಾಗವಹಿಸಿದ್ದರು. ಕೊನೆಯದಿನ ಈ ಮಹೋತ್ಸವದ ಅಂಗವಾಗಿ ಕ್ಷೇತ್ರಾಧಿಪತಿ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಬೆಳ್ಳಿಯಪಲ್ಲಕ್ಕಿಯ ಉತ್ಸವ ನಡೆದು, ಕ್ಷೇತ್ರಕ್ಕಾಗಮಿಸಿದ ಅಪಾರ ಭಕ್ತಕೋಟಿಯನ್ನು ತಣಿಸಿ, ಸಂತೋಷವಾರ್ಧಿಯಲ್ಲಿ ಮುಳುಗಿಸಿತು. ಇಷ್ಟೊಂದು ವೈಭವೋಪೇತವಾಗಿ ಶ್ರೀಶ್ರೀ ಶಿವಕುಮಾರ ಸ್ವಾಮಿಗಳು ತಮ್ಮ ಶಿಷ್ಯೋತ್ತಮರ ನೇಮಕ ವಿಚಾರದ ಈ ಸಮಾರಂಭವನ್ನು ಮಾಡಿ ಮುಗಿಸಿದುದು ಇತಿಹಾಸ ಪುಟಗಳಲ್ಲಿ ಉಲ್ಲೇಖನಾರ್ಹವಾದುದಾಗಿತ್ತು. ಶಿಸ್ತಿನಲ್ಲಿ, ನಿಯಮದಲ್ಲಿ, ಆತಿಥ್ಯದಲ್ಲಿ, ಉತ್ಸಾಹಾತಿರೇಕದಲ್ಲಿ ಈ ಸಮಾರಂಭ ಶ್ರೀಕ್ಷೇತ್ರದ ಸಮಾರಂಭಗಳಲ್ಲೆಲ್ಲ ಅತ್ಯಂತ ಖ್ಯಾತಿ ಪಡೆಯುವಂತೆ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಆಚರಿಸಿದುದು, ಅವರ ಹೃದಯಾಂತರಾಳದಲ್ಲಿ ಹುದುಗಿರುವ ಪ್ರೀತಿವಿಶ್ವಾಸಗಳಿಗೆ ವ್ಯಾಖ್ಯೆ ಬರೆದಂತಿತ್ತೆಂದು ನಾಡಿನುದ್ದಗಲಕ್ಕೂ ಜನ ಕೊಂಡಾಡಿತು. ಪತ್ರಿಕೆಗಳವರು ಕೊಂಡಾಡಿದರು. ಹಿರಿಯರೆಲ್ಲ ಹಿರಿಹಿರಿ ಹಿಗ್ಗಿದರು.



# ಸಿದ್ಧಗಂಗಾ ಮಹಾತ್ಮ್ಯೆ

೧

ಗುರುಸಿದ್ಧಲಿಂಗನು ಕಲ್ಲುಬಂಡೆಯ ಮೇಲೆ ।
ಚರಣಾಂಕಿತಗೆಯ್ಯಲ್ಲಿ ।
ದುರಿತನಾಶನ ಸಿದ್ಧಗಂಗೆಯೆನ್ನುವ ತೀರ್ಥ ।
ಸುರಸದಿಂದುದಿಸಿತಾಕ್ಷಣದಿ ।

೨

ವರ ಪುಣ್ಯಕರ ಸಿದ್ಧಗಂಗಾತೀರ್ಥವ ಕಂಡು !
ಪಿರಿಯರು ಸಹ ಲಿಂಗಾರ್ಚನೆಯ ।
ನೆರೆಗೆಯ್ಯುತಿರಲಭ್ರದೊಳು ದುಂದುಭಿಯ ನಾದ ।
ಕರಗೈದರಮರರುತ್ಸವದಿ ॥

೩

ಕಾಮಿತ ಫಲವೀವ ಕಲುಷನಾಶವಗೈವ
ರಾಮಣೀಯಕ ಸಿದ್ಧಗಂಗಾ ।
ಕೋಮಲ ತೀರ್ಥವ ಪಾದದಿಂದಲಿ ಸಿದ್ಧ
ಸ್ವಾಮಿ ನಿರ್ಮಿಸಿದ ಕೇಳಭವ॥

೪

ಹೊಸ ಮಹಿಮೆಯ ಸಿದ್ಧಗಂಗಾತೀರ್ಥದ ಬಳಿ ।
ಎಸೆದಿಪ್ಪ ಸಿದ್ಧೇಶನೆಡೆಗೆ ।
ವಿಷರೋಗಾಸ್ಪಿತನಾಗಿ ತಿಗುಳಾಣ್ಯದಿಂದಲು ।
ಬ್ಬಸಗೊಳುತೋರ್ವನೈತಂದ ।

೫

ಶಾರದವರುಗೈದ ಮಾಟಮರುಪೆ ವಿಷ ।
ಪೂರೈಸುತ ಬಳಲುತಲಿ ।
ವೀರಣ್ಣಾರ್ಯನೆನಿಪನು ಬಂದು ಸಿದ್ಧನ
ಸಾರಸಾಂಘ್ರಿಗೆ ನಮಿಸಿದನು ॥

೬

ರೋಗತಿಮಿರ ಮಾರ್ತಾಂಡ ಮಹಾವಿಷ ।
ರೋಗಸುಪರ್ಣನೆಯೆನ್ನ
ರೋಗವ ಪರಿಹರಿಸೆಂದು ದ್ರಾವಿಡಭಾಷೆ ।
ಯಾಗಮದಿಂ ಸ್ತುತಿಸಿದನು ॥

೭

ವಿಷರೋಗಾಸ್ಪಿತನ ನುಡಿಯ ಕೇಳಿ ವನವಾಸಿ ।
ಬೆಸಸಿದ ಸಿದ್ಧಗಂಗೆಯೊಳು ।
ಸುಸರದಿ ನೀನು ಸ್ನಾನವ ಮಾಡೆ ಭವರೋಗ
ವಿಷಹರವಹುದೆನುತವಗೆ ।

೮

ಅನಿಮಿಷವಂದ್ಯನ ನುಡಿಕೇಳಿ ವೀರಣಾ ।
ರ್ಯನು ಘನ ಹರುಷವ ತಾಳಿ ।
ಮನಸಲಪಿಂದ ಸ್ನಾನವ ಮಾಡೆ ವಿಷರೋಗ
ಕ್ಷಣದೊಳು ಪರಿಹಾರವಾಯ್ತು ॥

೯

ವೀರಣಾರ್ಯನು ವಿಷರೋಗವರ್ಜಿತನಾಗಿ
ಹೇರಳ ಸಂತಸಗೊಂಡು
ಮಾರವೈರಿಯ ಸ್ತುತಿಸಿದನು ಕನ್ನಡಭಾಷೆ
ಬರದೆ ತಿಗುಳಭಾಷೆಯೊಳು ॥

—ಹೇರಂಬ ಕವಿ

# ಕವಿಕಾಣಿಕೆ

[ಶ್ರೀ ಕ್ಷೇತ್ರ ಹಾಗೂ ಶ್ರೀಗಳವರ ಬಗೆಗೆ ಕನ್ನಡ ಹಾಗೂ ಸಂಸ್ಕೃತ ಭಾಷೆಯಲ್ಲಿ ಅನೇಕ ಜನ ಕವಿಗಳು ತಮ್ಮ ಕವನ ಕಾಣಿಕೆ ಸಮರ್ಪಿಸಿದ್ದಾರೆ. ಅವೆಲ್ಲವುಗಳನ್ನು ಪ್ರಕಟಿಸಲು ಸಾಧ್ಯವಾಗಲಿಲ್ಲ. ಪ್ರಕೃತ ಕೆಲವು ಕವಿಗಳ ಕಾಣಿಕೆ ಇಲ್ಲಿವೆ.]

## ಬಾಳಭಾಗ್ಯ

ತಾಯ ಬಸಿರಿಂದ ಬಂದೆವು—ಬತ್ತಲು.
ಹೋಗುವುದು ನಾಳೆ ಹಾಗೇ ; ಒಂದಿಷ್ಟು ಸೌದೆ, ಬೆಂಕಿ ;
ಇಲ್ಲವೇ, ವಿದ್ಯುತ್ ಪ್ರಭಾವದಲಿ—ಯಾರಿಗೂ
ಕಾಣಿಸದ—ಬೂದಿ.
ಹುಗಿದರೊ ನೆಲವಗೆದು : ಮಣ್ಣೆರಚು ; ಕಲ್ಲಹಾಸು :
(ಒರಲೆ ತಿನ್ನಲಿಯೆಂದು)
ಕೊಂಡೇನು ತಂದದ್ದು ? ಏನನೊಯ್ದೇವು ಒಡನೆ?
ನೆನಪು ನಮ್ಮದು ನಾಲ್ವರಿಗೆ ಸರಿ, ಸವಿ ಕಂಡರಾಯ್ತು.
ತಾಯ್ತಂದೆ ಇತ್ತದ್ದು ಎಲುಗೂಡು ;ಎರಡು ಮನೆ ಚೇಗು.
ಬಲವೊ ರುಗ್ಣತೆಯೊ ಹೇಳಬೇಕಾರು ?
ನಾವೇನು ಸೇರಿಸಿದೆವೊ ಅದು ಮಾತ್ರ ನಾವು
ಹಣ್ಣಾಗಿ ತಿನಿಸಾದರಾರ್ಗನ್ನ ಅದು ನಮ್ಮ ಕೊಡುಗೆ :
ಬಿಟ್ಟುಹೋಗುವುದು ನಮ್ಮ ಕೆಡಕು-ಒಳಿತು.
ಯಾರಿಗೇನಾಯ್ತೊ ನಮ್ಮಿಂದ—ನೋವೊ ನಲಿವೊ
ನೆರವೊ ನಷ್ಟವೊ ಕಷ್ಟವೊ ಅರಿತರಾಗಿತ್ತು.

ಇನ್ನಷ್ಟು ಒಳಿತಾಗಿ ನಡೆದಿದ್ದರಾಗಿತ್ತು
ಎನಿಸುವುದು ಹಲವು ಬಾರಿ : ಆಗದುದನೆಣಿಸಿ.
ನಾವಾಡಿದುದು ಮಾಡಿದುದು ಯಾರಿಗೇನಾಯ್ತೊ
ಯತ್ನವಿಲ್ಲದೆಯೆ, ಕೈಮೀರಿ, ಕ್ಷಣಗುಪ್ತಿಗಾಗಿ.
ಉಟ್ಟದ್ದು ತೊಟ್ಟದ್ದು ಕೊಟ್ಟದ್ದು ಇಲ್ಲದ್ದು
ಇಲ್ಲವೆಂದದ್ದು, ಗೋಣಗಿ ದಾಕ್ಷಿಣ್ಯಕ್ಕೆ ಸಿಕ್ಕಿದ್ದು—
ಯಾವುದರ ಬೆಲೆ ಫಲಿಸಿತ್ತು ಹೇಗೊ.
ಕೊಂಡ ದಾನಕ್ಕಂತು, ಇತಿಯಿಲ್ಲ, ಮಿತಿಯಿಲ್ಲ ; ಲೋಕ
ವಿತ್ತದ್ದು ಅಪರಂಪಾರ. ನೆನಸೆ ಅಳುಕುವುದು ಮನಸು.
ನಾವಿತ್ತ ಅಲ್ಪಕ್ಕೆ ನಮ್ಮೆಡೆಗೆ ಬಂದದ್ದು ಲಕ್ಷ
ಪತ್ತು ಹುಟ್ಟಿಗೆ ಸಂದು ಸಾಕಾಗುವಷ್ಟು.
ಆ ನೆನಪು ಸಕಲ ಸಾಫಲ್ಯ
ನುಡಿದು ಕೈಮುಗಿವೆವು.
ಅದುವೆ ಕಾಪಾಗಿ ಬಾಳಸಂಪತ್ತು
ನೆಮ್ಮದಿಯನೂಡುತಿರಲಿ.

—ವಿ. ಸೀತಾರಾಮಯ್ಯ

## ಲೋಕರತಿ-ಧರ್ಮಸೆರೆ-ಶಿವಸಿದ್ಧಿ

ಧರ್ಮಾಧರ್ಮಗಳ ಕೋಶಕೋಶದೊಳು
ಜಗವ ಮೆದ್ದು ಕೊಬ್ಬಿಹ ಜೀವಾತ್ಮ
ನವ ನಿರ್ಮಿತಿ ಜಾಗರದೊಳು ಮಲಗುವ-
ನಿರವನು ಹೊಸದಾಗಿಸಲಧ್ಯಾತ್ಮ
ಹೊಕ್ಕ ಜೀವಕೂ ಹೊರಬಹ ಜೀವಕೂ
ಎಂಥ ವಿಕೃತಿ ಎಂಥಾಕಾರ!
ಮುಮುಕ್ಷು ಜೀವಕೆ ಜೀವನ್ಮುಕ್ತನ
ಗೀಳು ಹತ್ತುವುದೆ ಉದ್ಧಾರ.
ನೆಲದೊಳು ದೇಕುವ ಜೀವಿಗೆ ಖೇಚರ
ಗತಿಯನು ಕೊಡುವುದು ಧರ್ಮಸೆರೆ
ಸೆರೆಗಳೆವೂರ್ಜೆಯ ಗುರುಕೃಪೆಯೊದಗಿಪ್ಪ-
ದರ್ಪಣಭಾವದಿ ತೆಪ್ಪಗಿರೆ.

ಜೀವಕಾಮ ತಣಿಯದೆ ಜೀವಾತ್ಮಕೆ
ಬರಿಮಾತೆನಿಸುವುದಾತ್ಮರತಿ
ಗುರೂಪದೇಶದ ತಣ್ಪನಿಗಂಜೆಯ
ತುಪ್ಪುಳದಂತಿಹುದವನ ಮತಿ.
ಧರ್ಮಗಹ್ವರದಿ ತೊಡುವೊಡೆ ಚೇತನ
ಅಂತಃಕರಣಾರ್ಪಣ ದೀಕ್ಷೆ
ಇಹುದವಗಾ ಹಿತಸಾಧಕ ಸ್ವಾಪದಿ
ಸಂಯಮಿ ಗುರುಕರುಣಾ ರಕ್ಷೆ.
ಲೋಕದ ರತಿ ಧರ್ಮದಿ ಸೆರೆ ಸದ್ಗುರು-
ವಚನೋದನ ಪಾಚನ ಬುದ್ಧಿ
ಒಂದೇ ಜನ್ಮದಿ ಪಡೆವ ಜೀವನೇ
ಧನ್ಯನಾತಗೆಯೆ ಶಿವಸಿದ್ಧಿ.

—ಪು. ತಿ. ನರಸಿಂಹಾಚಾರ್

# ಶ್ರೀ ಸಿದ್ಧಗಂಗೆಯ ಶ್ರೀಚರಣಕ್ಕೆ

ಪರನ ಕರುಣೋದಯದ ತೆರದಲಿ ಬೆಳಗು ತೆರೆಯುವ ಹೊತ್ತಿಗೆ ।
ವೇದಘೋಷದ ದಿವ್ಯಲಹರಿಯು ಮನವ ತೊಳೆಯಲು ಮೆಲ್ಲಗೆ ।
ಬರುವ ಶ್ರೀಗುರು ಪಾದುಕೆಯ ದನಿ ಅನುರಣಿತವಾಗಲು ಮೌನಕೆ ।
ಸಿದ್ಧಗಂಗೆಯ ನೆಲವು ಜಲವೂ ನಮಿಸಿ ನಿಲುವುದು ಸುಮ್ಮಗೆ ॥೧॥

ಬೆಟ್ಟ ಬಂಡೆಯ ನಡುವೆ ಗಿಡ ಮರ ಹೂವನೆತ್ತಿರೆ ಪೂಜೆಗೆ ।
ದೇಗುಲದ ಪೂಜಾರತಿಯ ಗಂಟೆಯ ಮೊಳಗು ಮುಟ್ಟಲು ಬಾನಿಗೆ ।
ಧೂಪಗಂಧವು ಮಂದಮಂದಾನಿಲನ ಜೊತೆಯೊಳು ಮನಸಿಗೆ ।
ಸಂಭ್ರಮವನುಕ್ಕಿಸೆ ಬೆಳಗು ಇಳಿವುದು ಸಿದ್ಧಗಂಗೆಯ ಕ್ಷೇತ್ರಕೆ ॥೨॥

ಇಲ್ಲಿ ಇಲ್ಲ ಪವಾಡದದ್ಭುತ ಅಥವ ಉತ್ಸವದಬ್ಬರ ।
ಮುಡಿಯನೆತ್ತಿದೆ ಸರಳ ಸಾಧಾರಣದ ಬದುಕಿನ ಗೋಪುರ ।
ಅದರ ಮೇಲಿದೆ ತ್ಯಾಗಧ್ವಜ ಕೈಬೀಸಿ ಕರೆವುದು ಪಥಿಕರ ।
ಪರಮ ನಿರಪೇಕ್ಷೆಯಲ್ಲಿ ದಿನವೂ ಸೇವೆಗಾಗಿದೆ ಸರ್ವರ । ॥೩॥

ಭಿಕ್ಷೆ ಹೊರಟಿದೆ ಜಂಗಮದ ಜೋಳಿಗೆ ಲಕ್ಷಜನಗಳ ಪೊರೆದಿದೆ ।
ತೀರ್ಥವಾಗಿದೆ ಭಕ್ತರಿಗೆ ಜೊತೆಗೇ ಸ್ಫೂರ್ತಿಯಾಗಿದೆ ಬುದ್ಧಿಗೆ ।
ಬಂದ ಹಣತೆಗೆ ಎಣ್ಣೆ-ಬತ್ತಿಯ ದೀಪ್ತದಾನವ ಮಾಡಿದೆ ।
ರಕ್ಷೆಯಾಗಿದೆ ಮುಗಿಲನೇರಿದ ಎಷ್ಟೊ ರೆಕ್ಕೆಯ ಹಾದಿಗೆ ॥ ॥೪॥

ಸದ್ದುಗದ್ದಲವಿರದ ಸಾಧನೆ ಇಲ್ಲಿ ಗದ್ದುಗೆಯೇರಿದೆ ।
ಕಾಯಕವೆ ಕೈಲಾಸವೆನ್ನುವ ಮಾತು ಕೃತಿಯೊಳು ಮೂಡಿದೆ ।
ಕಾವಿಯುಡುಗೆಯನುಟ್ಟು ನಭವೇ ಕಿರಣ ಹಸ್ತವ ಚಾಚಿದೆ ।
ಎಲ್ಲ ನನ್ನವರೆನುವ ಭಾವದ ಕರುಣೆಯೇ ಕಣ್ತೆರೆದಿದೆ ॥ ॥೫॥

—ಡಾ. ಜಿ. ಎಸ್. ಶಿವರುದ್ರಪ್ಪ

# ಅಲ್ಪತನಕಳಿವಿಲ್ಲಿ !

ಕವಿಸಮಯವೆನ್ನುವಿಯ ಸುರನದಿಯ ? ಬಾ, ನೋಡು
ಸಿದ್ಧಗಂಗೆಯ ಯೋಗಿವರನ ನಡೆಯ !
ಕಲ್ಪನೆಯು ಎನ್ನುವಿಯ ಸುಧೆಯನ್ನು ? ಬಾ, ಕೇಳು
ಶಿವಯೋಗಿ ಪುಂಗವನ ಸಿವಸಿರಿಯ ನುಡಿಯ !
ಸರ್ವಾಂಗ ಲಿಂಗಮಯ, ಮೈವೆತ್ತ ಕರುಣೆ ದಯ,
ಸರ್ವರನು ಪ್ರೀತಿಸುವ ದಿವ್ಯಹೃದಯ !
ಗುರಿಯು ಸಕಲರ ಉದಯ, ವರವು ಸರ್ವರಿಗಭಯ,
ಶ್ರೀಮಠವು ಎಲ್ಲರಿಗೆ ನಿತ್ಯಾಶ್ರಯ !
ಏನೆಂಬೆ ಶಿವಕುಮಾರನ ಮೋಡಿ, ಗಾರುಡವ ?
ಬರಿಗೈಯೆ ಬೊಕ್ಕಸವು, ನಿಧಿ ನಿಧಾನ !

ಲಕ್ಷ ಕರ ತೆಗೆದರೂ ತುಂಬಿರುವ ಜೋಳಿಗೆಯು
ಕೈಕೊಳುತಲಿದೆ ಪಂಚಪರುಷಗಳ ನಮನ !
ಧರ್ಮದೇರಿಗೆ ಶರಣದರ್ಶನದ ಕಟ್ಟೆಯಿದೆ,
ಸಕಲ ಸದ್ಗತಿಯೆಂಬ ಸೋಪಾನವುಂಟು,
ವಿದ್ಯೆಕಲೆಗಳ ಜಲದಿ ಅಧ್ಯಾತ್ಮಪರಪೀದ,
ಶ್ರೀಮಠದ ಸರಸಿಯಲಿ ಸೈಪು ನೂರೆಂಟು !
ಅಲ್ಪತನಕಳಿವಿಲ್ಲಿ! ಜಲ್ಪತನಕೆಡೆಯೆಲ್ಲಿ ?
ಅತ್ಯುಚ್ಚ ಅನುಭಾವಿ ನೆಲೆಸಿರುವನಿಲ್ಲಿ
ಕಾಯಕಕೆ ಕಳೆಯಿತ್ತು, ಬದುಕಿಗೇ ಬೆಲೆಯಿತ್ತು,
ನಾಡಿನಾಚೆಗು ಶಿವದ ಬೆಳಕು ಚೆಲ್ಲಿ !

—ಡಾ. ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಶ್ರೀ

ಬೆಟ್ಟ-ಬಂಡೆಯ ನಡುವೆ ಗಂಗೆ ಪುಟಿದದ್ದೆಂದೊ !
ಜನಜೀವನದ ಕಷ್ಟಕೋಟಲೆಯ ಸ್ತರದಲ್ಲಿ
ಇಳಿದು ತಂಪಿಸಿ, ಮತ್ತೆ ಮೇಲೆದ್ದು ಬರುವಲ್ಲಿ
ಸಿದ್ಧ, ಸೇವಾಕ್ಷೇತ್ರ : ನಿತ್ಯದಾಸೋಹಕ್ಕೆ
ವಿದ್ಯಾವಿಶಾಲತೆಗೆ, ನೂತನ-ಪುರಾತನದ
ಚೇತನವ ಹಿಡಿದು ಹೂಡಿ ಜನಮನೋರಥಕೆ.
ಜಾತ್ರೆಯೂ ಬೇಕು ಸರ್ವರುತ್ಸಾಹ ಸೌಂದರಕೆ.
ಏಕಾಂತ ಪಾತ್ರೆಯು ತುಂಬಿ ತೀರದ ನಿನಾದ.
ಕಂಡಿಹನು ನಾನವರನೊಮ್ಮೆ ಹತ್ತಿರದಿಂದ-
ತ್ಯಾಗದೆತ್ತರಕೆ ತೂಗಿ, ಮುಗಿಲು ಸುತ್ತಲು ಬಾಗಿ
ನೆಲದ ಬದುಕಿಗೆ ಕರುಣೆ ಕಾಯಕದಲ್ಲಿ ಕರಗಿ
ಮಿರುಗುವ ವಿಭೂತಿ : ನಿರ್ಭಾವದಲಿ ನಡೆಯುವಂದ.
ಮನದೊಳಗೆ ಆಗೀಗ ಸದ್ದಿಲ್ಲದೆಯೆ ಮೂಡಿ
ಗೆದ್ದವರು : ಪಡೆದದ್ದಲ್ಲ ಹೇಗೊ ಕಾಡಿ-ಬೇಡಿ.

—ಚೆನ್ನವೀರ ಕಣವಿ

# ಸಿದ್ಧಗಂಗೆಯ ಬೆಳಕು

ಗವಿಯ ಹೊಗಲಿಲ್ಲ ; ಬೋಧಿಯನರಸಿ ಮರಗಿಡವ
ಬುಡಕ್ಕೂ ಹೊಗಲಿಲ್ಲ ; ಆಳ ತನ್ನೊಳಗಿಳಿದು
ಕಂಡುದನದೆಲ್ಲರಿಗು ಹಂಚುವಾಸೆಯ ಹೊತ್ತು
ಸಿದ್ಧಗಂಗೆಗೆ ಬೆಳಕ ತಿಲಕವಿಟ್ಟವರಿವರು !
ಮುಹಮನೆಯ ಹೊಕ್ಕಂತೆ ಸ್ವಾಗತಿಸುವುದು ಪ್ರೀತಿ ;
ಅನುಭವದ ಅಮೃತ ಮೈತೆರೆಯುವುದು : ಭಕ್ತಿಯಲಿ
ನಿಂದವರು, ಹರಕೆಯೊಪ್ಪಿಸಲೆಂದು ಬಂದವರು,
ನುಡಿಯೆ ನಡೆಯಾಗುವುದ ಕಾಂಬ ಕೌತುಕದವರು,
ಜೇನಕ್ಕರೆಗೆ ಬಾಯಾರಿ ಜಾತ್ರೆ ನೆರೆದವರು
ಎಲ್ಲರೆದುರೂ ಇವರು ಬೆಟ್ಟಕೇ ಕೈಕಾಲು-
ಗಳು ಮೂಡಿ ನಡೆದಂತೆ ಸಾಕಾರವಾಗುವರು
ಶರಣಲೋಕದಲಿ ನಮ್ಮನುಸಿರಾಡಿಸುವರು
ಜ್ಞಾನದಲಿ ಪ್ರೀತಿಯಲಿ ಶಿವಕುಮಾರರು ಇವರು
ಬೆಳೆಯುತ್ತ ಹೋಗುವರು, ನಾವು ಬೆಳೆಬೆಳೆದಷ್ಟು.

—ಜಿ. ಎಸ್. ಸಿದ್ಧಲಿಂಗಯ್ಯ

## ಸಿದ್ಧಗಂಗಾ ಪ್ರಕೃತಿ-ಸಂಸ್ಕೃತಿ

ಬೆಟ್ಟಗಳು ಬಳಸಿರುವ ರಮ್ಯ ಪರಿಸರದಿ
ಯಾವ ಪುಣ್ಯಕೊ ಏನೊ, ಜಲಕುಂಭ ತುಂಬಿ ॥೧॥
ಸಲಿಲ ಲೀಲೆಗೆ ತಾನು, ಗಿರಿಯೊಂದನಾಯ್ದು,
ಸಿದ್ಧರಾಗಿರೆ ಗಂಗಾ, ಇದು ಸಿದ್ಧಗಂಗಾ ॥೨॥
ಗಿರಿ ಅದೇ ಶಿವನ ಜಡೆ ನೆಗೆದಳದೊ ಗಂಗೆ
ಧ್ಯಾನ ಮುದ್ರಿತ ಶಿವನ ತೃಪ್ತಿ ತುಳುಕಿತೆನೆ ॥೩॥
ಒದಗಿ ಬರಲೀ ನೆಲಕೆ ಸಲಿಲ ಹೀಗೆ
ಪುಳಕ ತಳೆದಳು ಪ್ರಕೃತಿ-ಸಂಸ್ಕೃತಿಯ ಗುರಿಗೆ ॥೪॥
ತೀರ್ಥ ಹೊನಲಿಡೆ ಸುತ್ತುವರಿಯಿತ್ತು ಕ್ಷೇತ್ರ
ಪುಣ್ಯವಾರಂಭಕ್ಕೆ ಮೂಲ ಶಿವ ಚಿತ್ತ ॥೫॥
ಕಲ್ಲು ಕುಸುಮಿಸಿತದೋ ಶಿಲೆ ಶಿಲ್ಪವಾಯ್ತು
ಅರುಹು ಮೆಲು ಮೆಲ್ಲನೆಯೆ ಅರಳತೊಡಗಿತ್ತು ॥೬॥
ಕಾಲಾನುಕ್ರಮದಲ್ಲಿ ಬೆಳಕಿನಿಂ ಬೆಳಕು
ಹೊಮ್ಮಿಬರೆ ಹೊಸತು ಬೆಳೆ ಹೊಗರಲಸುವಾಯ್ತು ॥೭॥
ಅನುಭವದಿ ಅನುಭಾವ ಸುಳಿದ ಹಾಗೆ
ನೀತಿ ಧರ್ಮದಿ ಕಿರಣ ಸೂಸಿ ಬರದಿಹವೇ ? ॥೮॥
ಪರಮಾತ್ಮ ಸಂಕಲ್ಪ ದಿಟಕೆ ಸಲುವವೊಲು
ಶಿವಕುಮಾರಸ್ವಾಮಿ ದಯಮಾಡಿಸಿದರು. ॥೯॥
ಉತ್ತರದ ನಿಲವಿನೊಳು ಸಚ್ಚೇತನವು ತೀವಿ
ಕೊಂಡು ಕಾಯಕ ಸಾಗೆ ದೊರೆಯದೇ ಸಿದ್ಧಿ. ॥೧೦॥
ಪ್ರಕೃತಿ ಮೂಲದೊಳು ಇದು ಸಿದ್ಧಗಂಗಾಕ್ಷೇತ್ರ.
ಬೆಳೆದು ಬಹು ಹವಣದೊಳು ಸತ್ಸಾಧನಾ ಕ್ಷೇತ್ರ. ॥೧೧॥
ಶಿವಪಥದಿ ಇದು ಇಂದು ವಿವಿಧ ವಿದ್ಯಾಕ್ಷೇತ್ರ
ಸುವಿಶಾಲವಾಗುತಿದೆ ಸಂಸ್ಕೃತಿಯು ಸತತ. ॥೧೨॥
ಔರಣಕೆ ತೋರಣವ ಕಟ್ಟಿಹರು ಎನುವಂತೆ
ಕಳೆ ತಳೆದಿಹವು ಕಣಾ ವಿವಿಧ ವಿದ್ಯಾಸಂಸ್ಥೆ. ॥೧೩॥
ಸುಜ್ಞಾನ ವಿಜ್ಞಾನ ಪ್ರತಿ ಪ್ರತಿಭೆ ತಾನು
ಸುಪರಿಣಾಮವ ಪಡೆವ ರಚನೆಯಿಲ್ಲಿಹುದು. ॥೧೪॥
ಗ್ರಂಥಾಲಯವು ಶುದ್ಧ ಅಧ್ಯಯನ ಕೇಂದ್ರ
ಮನ ಮನಗಳನು ಬೆಳಗಿ ಬಹವು ಅರುಹಿನ ಕಿರಣ ॥೧೫॥
ಶಿವಪ್ರಸಾದದ ನಿಲಯ ಒಳಿತಹ ಅತಿಥಿಗೃಹ
ಎಲ್ಲ 'ಬನ್ನಿರಿ' ಎನುವ ಆದರ್ಶವಲಯ. ॥೧೬॥
ಸತತ ನಡೆಯುವುದಿಲ್ಲಿ ಜ್ಞಾನದಾಸೋಹ
ಸವಿದು ತಣಿಯುವ ಎದೆಗೆ ಇದುವೆ ಜಗದಮೃತ ॥೧೭॥
ಒಳಿತು ಕಾರ್ಯಕ್ಕೆ ನಿಷ್ಠೆ ತಾ ಮೂಲಸೂತ್ರ
ಶುಭಕೆ ಯೋಜಿಪುದೆಲ್ಲವನು ಇಲ್ಲಿ ಚಿನ್ನೇತ್ರ ॥೧೮॥
ಕರುಣೆ ತೆರೆಗೊಳುತಿರಲು ಸ್ವಾಮಿಯೆದೆಯಿಂದ
ಜೀವನಕೆ ಸತ್ಪಥವು ಯಾವಾಗಲೂ ಸುಗಮ. ॥೧೯॥
ಜಗದ ನೆಲೆ ಜೀವ ಸೆಲೆ ಏಕೆ ಅನುಮಾನ ?
ಜೀವದಯೆ ದೇವದಯೆ ಅದ್ವೈತಗಾನ. ॥೨೦॥

—ಡಾ. ಡಿ. ಎಸ್. ಕರ್ಕಿ

## ಶಿವಕುಮಾರಸ್ವಾಮಿ ಎನಿಪುದಚ್ಚರಿಯೆ ?

ಶಿವಕುಮಾರರೆ ಆಗಿ ಶಿವಪಥದ ಕುರುಹುಗಳು
ಶಿವದೀಕ್ಷೆ ಪಡೆದಂದೆ ಸಿದ್ಧ ನಿಮಗೆ;
ಭವರೋಗಿಗಳಿಗಭವಸಿದ್ಧೌಷಧವನೀವ
ವೈದ್ಯನಾಥರು ನಿಮ್ಮ ನೆಲೆ ಸಿದ್ಧಗಂಗೆ.
ಸದಸದ್ವಿವೇಕ ವಿಜ್ಞಾನಿ, ಸತ್ಪಥಗಾಮಿ,
ಸತ್ಕರ್ಮಮರ್ಮವನು ಬಲ್ಲಿರಾಗಿ
ಪದುಮ ನೀರಲಿ ನಿಂತ ನಿಲುವಿನುಪಮೆಗೆ ಸಂದ
ಕರ್ಮಫಲನಿರಪೇಕ್ಷ ಕರ್ಮಯೋಗಿ.
ಜ್ಞಾನದಾಹಾರ್ತರಿಗೆ ಜ್ಞಾನಪಾನವಗೈಸಿ
ಪಾವನದ ಜೀವನದ ಗಂಗೆಯಲಿ ಮಿಸಿಸಿ
ಭಾನು ನೀವಾಗಲವರಜ್ಞಾನತಿಮಿರಕ್ಕೆ
ಗುರುಪದವದೊಪ್ಪಿತ್ತು ನಿಮಗೆ ಸೊಗಸಿ.
ಧರ್ಮಸಾಧನೆಗೆ ಮಾನವನೊಡಲು ಮೊದಲೆಂಬ
ವಾಸ್ತವವ ಮನಗಂಡ ಧರ್ಮವಿದರು;
ಒಮ್ಮನದಿ ಸಾಹಸ್ರಸಂಖ್ಯಾಕ ಛಾತ್ರರಿಗೆ
ಉಣಲಿರಲು ಎಡೆ ಕಲ್ಪಿಸಿದ ಸದ್ಗುರು.
ಹೊಟ್ಟೆಬಟ್ಟೆಗೆ ದಾರಿ ಮಾಡಿಕೊಡುವಾ ಕಲಿಕೆ
ಇಹದಿರವಿಗಾಯಿತ್ತು; ಅದರ ಕೂಡ
ಕಟ್ಟಕಡೆ ಕೈವಲ್ಯ ಪಯಣಕ್ಕೆ ಬುತ್ತಿಯನು
ಕಟ್ಟಿಕೊಟ್ಟೆಸಗಿಹಿರಿ ಇಹಪರದ ಜೋಡ.
ಮೂರನ್ನು ದೂರಿಟ್ಟು ಆರನ್ನು ಆರಿಸುತ
ಒಂಬಂತೆಂಬುದಕಗುಳಿಯೇರಿಸಿಟ್ಟು
ಮಿಾರದಂತಾಣತಿಯ ಹತ್ತನ್ನು ಹತ್ತಿಕ್ಕಿ
ಕಡೆಗೇಕವೆಲ್ಲವೂ ನಿಮಗೆಮಗೆ ಗುಟ್ಟು.
ಶಿವೋಹಂ ಶಿವೋಹಂ ದಾಸೋಹದೊಳಗಾಗೆ
ದಾಸೋಹದೂಳಿಗಕೆ ದೇಹ ಮುಡಿಪಾಗೆ
ದೇಹದೇಗುಲಕೊಲಿದು ಶಿವನೆ ಬಿಜಮಾಡಿಸಿರೆ
ಶಿವಕುಮಾರಸ್ವಾಮಿ ಎನಿಪ್ಪುದಚ್ಚರಿಯೆ ?

—'ರಾಘವ'
(ಎಂ. ವಿ. ಸೀತಾರಾಮಯ್ಯ)

## ಶಿವ ಸುಪ್ರಭಾತ

ಹಿಮಗಿರಿಯ ಧ್ಯಾನಮುದ್ರೆಯ ರೆಪ್ಪೆಬಿಚ್ಚಿ
ನಗುವ ನೀಲಾಗಸದ ನೆನಹಿನಲಿ ಮೈಮುರಿದು,
ಜಟಾವಿನ್ಯಾಸಗಳ ಬಳಿವಿಡಿದು, ಸಾವಿರದ ತೋಳ ಚಾಚಿ
ಹಾಡಿ ಜೋಗುಳ ವಿಶ್ವಚೈತನ್ಯ ಸಮ್ಮುದಕೆ
ಬೆಟ್ಟದಿಕ್ಕಟ್ಟುಗಳ ಕೊರೆದು, ಮೈದಾನದಲಿ ಹರಿದು
ಮಣ್ಣಿನ ಒಡಲ ತಣಿಸಿ, ಮಮತೆಯ ಉಣಿಸಿ
ಹಸಿರ ಬಸಿರಲಿ ಉಸಿರು ಕುಸುರಗಳ ಬಿಡಿಸಿ
ಗುಪ್ತಗಾಮಿನಿಯಾದ ಜಲನಾಳ ಮೈದಳೆದು
ಹೊಮ್ಮಿ ಈ ಕ್ಷೇತ್ರದಲಿ ಶುದ್ಧಳಾದಳು ಗಂಗೆ-ಸಿದ್ಧಗಂಗೆ
ಸಿದ್ಧಗಂಗೆಯು ಅಮೃತ ಪರಿಸರದ ಕಣಕಣದಿ
ಮಿಡಿಯುತಿದೆ ಕಾರುಣ್ಯ ಕಣ್ದೆರೆದು ಅನವರತ ; ಶಿವಸುಪ್ರಭಾತ.
ಮಂತ್ರಪಿಂಡದ ಧವಳಚಿತ್ತದಲಿ ಶುಭವಂಶವಾಹಿಗಳು ಬೆರೆದು,
ನಡೆದಾಡುತಿದೆ ದಿವ್ಯಕಾಯ ನಿಶ್ಯಬ್ದದಲಿ ರೂಪ ತಳೆದು
ಬಯಲಗೋಲಕ ಚುಳುಕುಗೊಂಡು ಘನಮನಸದನ
ಕೊರಳ ಕರಡಿಗೆ ಬೆರಗು !

ಹೃದಯದಾಳದ ಕರುಣೆ ಹೆಪ್ಪುಗಟ್ಟಿದ ಹದನು ! ಸಂಚಲಿಪ ರುದ್ರಾಕ್ಷಿ
ಅರುಣೋದಯದ ಕಾಂತಿ ತಂತಾನೆ ರೂಪಾಂತು ಭಕ್ತಿ ಬಣ್ಣಕೆ ತಿರುಗಿ
ಕಾಯಕ್ಕೆ ಗರಿಗರಿಯ ಮೆರಗು ಚೆಂಗಾವಿ ;
ಆಚಾರನಿಷ್ಠೆಗಳು ಕೆತ್ತಿ ರೂಹಿಟ್ಟಿರುವ ಮೆಟ್ಟಿದಾವುಗೆ
ಹೆಜ್ಜೆ, ಕಲ್ಯಾಣ ಪಥದಲ್ಲಿ ಕುರುಹಿಟ್ಟು ಸುಳಿದಿರುಗಿ
ಸುಳಿವ ಜಾಗರ ಬಿಜ್ಜೆ.
ಚಿತ್ತದೋಂಕಾರಕ್ಕೆ ಬರೆಹ ಕೈಬೆತ್ತ,
ಊರಿದಾಗೊಮ್ಮೊಮ್ಮೆ ಪ್ರೀತಿವಾತ್ಸಲ್ಯಗಳು
ನೂತ ನುಡಿಪರುಷ !

ಅಡಿಗಡಿಗು ಕಂಡವರ ಮೈದಡವಿ
ಮರವೆ ಮೈಲಿಗೆ ಕಳೆದು ಮೆಯ್ಗರೆವ ಹರುಷ !

ನೆತ್ತಿಯಲಿ 'ಬಯಲ' ಬೀಜದ ಬಿತ್ತು
ಆರರಲಿ ಪಲ್ಲವಿಸಿ ಅಂಗಾಂಗ ನಿಷ್ಪತ್ತಿ
ಆಗಾಗ ವ್ಯೋಮಕಾಯದ ಗೊತ್ತು !

ಬವಣೆ ಬೇಗುದಿಗಳಲಿ ಸಿಲುಕಿ
ಕಣ್ಣೀರಿನಲಿ ಚರಣ ತೊಳೆಯುವ
ಜೀವವೃಂದಕ್ಕೆ ಕಾಯಕದ ದೀಕ್ಷೆ ; ರಕ್ಷೆ !

ಕಾಯಕದ ಶಿಲ್ಪಕ್ಕೆ ಗೋಪುರವ ರೂಪಿಸುತ
ವಾಸ್ತವದ ಕ್ಷಿತಿಜದಲಿ ಪಥಿಕ, ರೂವಾರಿ,
ನಿನಗೆ ಬಾಗಿದೆ ಮುಗಿಲು ಧನ್ಯತೆಯ ಸೂಸುತ್ತ,
ಬೆಳಕಬಾಗಿಲ ತೆರೆದು ಹರಸುತಿದೆ ಹತ್ತುದಿಶೆ!

—ದೇವೇಂದ್ರಕುಮಾರ ಹಕಾರಿ

# ಭಕ್ತರ ಹರಕೆ

ವೀರಶೈವಾಚಾರ ಸಂಪದ
ಸಾರಧರ್ಮವಿಚಾರ ಭಕ್ತಾ
ಧಾರಷಟ್‌ಸ್ಥಲ ತತ್ವಶಾಸ್ತ್ರಾಗಾರದಿಂ ಮೆರೆವ
ಚಾರುಸುಸ್ಥಿರ ಸತ್ಯಸುಗುಣಾ
ಪಾರ ಕರುಣಾಕಾರ ಸುಕೃತಸು
ಮೇರುವೆನಿಸಿತು ಸಿದ್ಧಗಂಗಾಕ್ಷೇತ್ರ ಶಿವಗಾತ್ರ ॥೧॥

ಚರಕುಲಾನ್ವಯವಾರ್ಧಿಚಂದ್ರರು
ನಿರತವಿರತಾನಂದ ನಿಲಯರು
ಪರಮ ದಾಸೋಹಿಗಳು ಜೀವರ ಲೇಸ ಬಯಸುವರು
ನಿರುಪಮರು ಶ್ರೀಮಠದ ಜಂಗಮ
ಚರಿತಪಾಲರು ಲಿಂಗಪೂಜಾ
ಭರಿತ ಭಕ್ತೋದ್ಧಾರ ಕಾಯಕರೆನಿಸಿ ಬಾಳಿದರು ॥೨॥

ಆ ಮಹಿತ ಜಂಗಮದ ಭಕ್ತಾ
ಗಮವ ಬೆಳಗಲು ಸಿದ್ಧಗಂಗಾ
ವ್ಯೋಮಪೀಠಾಧಿಕಾರಿಯಾದರು ಶಿವಕುಮಾರಕರು
ಸುಮನಸರು ಸುಜ್ಞಾನಪಂಡಿತ
ಸುಮತಿಗಳು ಸುವಿಚಾರಶೀಲರು
ಸಮತೆಯಿಂ ಜೀವಾತ್ಮರೆಲ್ಲರ ನೋವ ನೆನೆಯುವರು ॥೩॥

ದೀನಜನರ ಜ್ಞಾನಿ ಬಡವರ
ಹೀನ ಬಾಳಂ ತೊಡೆವ ಸುಜ್ಞಾ
ನಾನುಭವಗಳನೀವ ವಿದ್ಯಾಶಾಲೆಗಳ ರಚಿಸಿ
ಮಾನವತ್ವವ ನಿಲಿಸಿ ಸಕಲಜ
ನಾನುರಾಗವ ಗಳಿಸಿ ಅನುದಿನ
ಅನ್ನದಾನದಿ ತಣಿಸಿ ಎಲ್ಲೆಡೆ ಕೀರ್ತಿಗಳಿಸಿದರು ॥೪॥

ಸೇವೆಯೇ ಸ್ವಾಮಿತ್ವವೆಂಬುವ
ಸೇವೆಯೇ ಶಿವಪೂಜೆಯೆಂಬುವ
ಭಾವದಿಂ ನಡೆದೀ ಸಮಾಜವೆ ಶಿವನ ರೂಪೆಂದು
ಯಾವ ಸುಕೃತದ ಫಲವೊ ಕರ್ನಾ
ಟಾವನಿಯ ಜನ ಬಸವನಂತಹ
ಪಾವನಾತ್ಮನ ಶಿವಕುಮಾರನ ಪಡೆದು ಧನ್ಯರಲಾ ॥೫॥

ಮಠದ ಮೋಹದಿ ಮಹಿಮೆ ಮರೆತರು
ಬಿಟ್ಟರಾ ಮಹಿಮೆಯಲಿ ಮಠವನು
ಮಠವ ಮಹಿಮೆಯ ಕಟ್ಟಿ ಸಲಹಿದೆ ನಾಡಜನತೆಯನು
ದಿಟ್ಟಜಂಗಮ ಘನಸಮಾಜದ
ಶ್ರೇಷ್ಠಜಂಗಮ ಶರಣಧರ್ಮದ
ಕಟ್ಟಳೆಯ ನಿಷ್ಠೆಯಲಿ ನಿಲಿಸಿದ ದಿಟ್ಟಜಂಗಮನು ॥೬॥

ಗುರುನಿರೂಪವ ಲಿಂಗಮಾರ್ಗಾ
ಚರಣೆಯಲಿ ಸದ್ಭಕ್ತರನುದಿನ
ಮರೆಯದಲೆ ನಡೆ ನುಡಿಯೊಳಂ ವರ್ತಿಸುವ ತೆರನರಿದು
ಚರಿಸಿ ಲಿಂಗ ಸಮಾಜತತ್ತ್ವವ
ನರುಹಿ ರಕ್ಷಿಪ ಜಂಗಮಾಹ್ವಯ
ನಿರತಕಾಯಕ ಶಿವಕುಮಾರಸ್ವಾಮಿ ಪೂಜ್ಯನಲಾ ॥೭॥

ಲಿಂಗ ಅಂಗವದಾಗೆ ಭಕ್ತಿಯು
ಅಂಗ ಲಿಂಗವದಾಗೆ ಮುಕ್ತಿಯು
ಅಂಗಲಿಂಗ ಸಮೈಕ್ಯ ಯೋಗಾನಂದ ನೀನಲ್ತೆ
ತುಂಗಚರಿತಾಮೃತವು ನಿನ್ನಯ
ಮಂಗಳಾಕರ ಸ್ವರ್ಣದುತ್ಸವ
ಕಂಗಳಿಗೆ ಜನಕರ್ಣಹೃದಯಂಗಳಿಗೆ ಮಂಗಳವು ॥೮॥

ಜನರ ಸಂಸ್ಮರಣೆಯಲಿ ಸುಳಿಯುತ
ಜನರ ಸತ್ಕೃತಿಗಾಗಿ ಶ್ರಮಿಸುತ
ಜನಮನದ ಶಿವಸಿದ್ಧಗಂಗಾಸ್ವಾಮಿ ನೀನಾಗಿ
ಜನರ ಸನ್ನುತಿ ಚಿನ್ನವಾಗುತ
ಜನರ ಬಾಳಿನ ರನ್ನವಾಗುತ
ನನ್ನಿ ಭಕ್ತಿಯ ಬೆಳಗಿ ಬಾಳ್ಕೆ ಹರಕೆ ಭಕ್ತರದು ॥೯॥

—**ಕೆ. ದೊಡ್ಡನಗೌಡ, ಜೋಳದರಾಶಿ.**

# ಬೃಹತ್ ಸಂಸಾರಿ

ನಿಯತಿ ಕೇಳುತ್ತಿಹುದು ಯಕ್ಷಪ್ರಶ್ನೆಯನೊಂದು
"ಸತಿಗೆ ಪತಿಯಾಗಿ ಮನೆಮಕ್ಕಳನು ಸಲಹುತ್ತ
ಪುಟ್ಟಸಂಸಾರಕ್ಕೆ ಹೊಣೆಯಾಗಿ ನಿಲ್ಲುವಿಯೊ,
ಇಲ್ಲದಿರೆ ದೇವನಿಗೆ ಸತಿಯಾಗಿ ಈ ಬೃಹತ್
ಸಂಸಾರದುಬ್ಬೆಗವ ನೀ ತಣಿಸಿ ಗೆಲ್ಲುವೆಯೋ?" ॥೧॥

ಪುಟ್ಟಸಂಸಾರ ಹೊಣೆ ಬಲು ಸುಗುಮವೆಂದರಿತು
ಸಂಸಾರಿಯಾಗುತಿದೆ ಬಹುಸಂಖ್ಯೆಯಲಿ ಲೋಕ ।
ಮನೆಯೊಂದೆ ಸತಿಯೊಬ್ಬಳೇ ಎಂದು ಹತ್ತಾರು
ಸಂತಾನ ಭಾರದಲಿ ಕುಸಿಯುವನು ಬಾಯ್‌ಮೂಕ ॥೨॥

ಸುಂಕತಪ್ಪಿಸಲೆಂದು ಸುತ್ತು ದಾರಿಯಲೋಡಿ
ಬಂದ ಗಾಡಿಗೆ ತಪ್ಪದಾಯಿತ್ತು ಆ ಸುಂಕ ।
ಸುಂಕ ತಪ್ಪಿಸುವ ಆ ತಪ್ಪುದಾರಿಯ ಹಿಡಿದು
ಸಾಗಿದವನೆನಿಸುವನು ಲೋಕದಲಿ ಬಲುಮಂಕ ॥೩॥

ಸಂಸಾರದೀ ಗಸಣೆ ಬೇಡ ತನಗೆಂದವಗೆ
ಸಂನ್ಯಾಸದೀಕ್ಷೆಯೆನಿಸುವದು ಘನತರ ಯುಕ್ತಿ ।
ಸಂನ್ಯಾಸವೃತ್ತಿ ಸಂಸಾರವೃತ್ತಿಗು ಜಟಿಲ
ವಾಗಿರಲು ದೊರೆಯುವುದೆ ಆ ದಾರಿಯಲಿ ಮುಕ್ತಿ ॥೪॥

ಸಂಸಾರ ಸಂನ್ಯಾಸ ಒಂದು ಬಿಟ್ಟೊಂದಿಲ್ಲ
ಒಂದಂತರಂಗವಿನ್ನೊಂದು ತಾ ಬಹಿರಂಗ ।
ಸಂಸಾರಕೊಳಸತ್ತ್ವ ಸಂನ್ಯಾಸವನಿವಾರ್ಯ
ಸಂನ್ಯಾಸದೊಳಸೂತ್ರ ಸಂಸಾರ ಚತುರಂಗ ॥೫॥

ಸಿದ್ಧಗಂಗೆಯ ದೀಪ ಶಿವಕುಮಾರಸ್ವಾಮಿ
ಸಂನ್ಯಾಸಿ ಹೊತ್ತಿಹನು ಈ ದೇಶಸಂಸಾರ ।
ದೇವನಿಗೆ ಸತಿಯಾಗಿ ಲೋಕ-ಮನೆವಾರ್ತೆಯನು
ನಿಸ್ತರಿರುತಿಹ ಧೀರನೇಕಾಂಗಿ ರಣವೀರ ॥೬॥

ಮನೆ-ನಾಡು, ಕುಲ-ಕೋಟಿಗಳ ದಾಟಿ ಭಾರತದ
ಜೀವನಾಡಿಯ ತಣಿಸಲೆರೆಯುವನು ಸುಧೆಯನ್ನು ।
ವಿದ್ಯೆ ನೆತ್ತಿಗೆ ಮತ್ತೆ ಅನ್ನ ಹೊಟ್ಟೆಗೆ ನೀಡಿ
ಮನುಜಕುಲ ಸೃಷ್ಟಿಸಲು ಎದೆಗೆ ಬಿಸಿಯೂಡುವನು ॥೭॥

ವಿದ್ಯಾರ್ಥಿಗಳಿಗೆ ಗುರು ದಲಿತರಿಗೆ ಕಲ್ಪತರು
ಕಾವ್ಯಕಲೆಗಳಿಗೆ ನವಸ್ಫೂರ್ತಿ ತಾನಾಗುವನು ।
ಸರ್ವಧರ್ಮಗಳಾಚೆ ಚಾಚಿರುವ ಶಿವಯೋಗ
ವಿಜ್ಞಾನಿ ತಾನಾಗಿ ಬಿಡುಗಣ್ಣನಾಂತಿಹನು ॥೮॥

ಶತಮಾನದರ್ಧ ಕಳೆಯಿತು ಸೇವೆಗಣಿಯಾಗಿ
ಸಾವಿರದ ಯುವವೃಂದವನು ನೀಡಿ ತಣಿದವನು ।
ಸಂನ್ಯಾಸಿಯಾದವಗೆ ಲೋಕಸಂಸಾರವೇ
ಆದರ್ಶವೆನುವಂತೆ ಶಿವನಡಿಗೆ ಮಣಿದವನು ॥೯॥

ಶಿವಕುಮಾರಸ್ವಾಮಿ ಕರುವಿಟ್ಟ ಜೀವತತಿ
ಕಂಗೊಳಿಸುತಿರಲಿ ಕರುನಾಡಿನಲಿ ಚಿರಕಾಲ ।
ಸಿದ್ಧಗಂಗೆಯ ಸಿದ್ಧಿ ಸಿದ್ಧಹಸ್ತವನೆತ್ತಿ
ಪಸರಿಸಲಿ ನವಸಾಮರಸ್ಯದಲಿ ಶ್ರೀಜಾಲ ॥೧೦॥

—ಸಿಂಪಿ ಲಿಂಗಣ್ಣ

# ಸಿದ್ಧಗಂಗಾ ಕ್ಷೇತ್ರ*

ಸಿದ್ಧಗಂಗಾ ಗಿರಿಯ ಮೇಲೆ ನೋಡು ।
ಸಿದ್ಧಗಂಗಾಕ್ಷೇತ್ರ ಮಹಿಮೆಯನು ಹಾಡು ।
ನಡೆ ಮುಂದೆ ಯಾತ್ರಿಕನೆ ಸೋಪಾನವೇರಿ
ತಡವೇಕೆ ಹತ್ತಿನ್ನು ಖಗದಂತೆ ಹಾರಿ ।
ಗಣರಾಜ ಶೋಭಿಪನು ಗಿರಿಯ ಮೂಲದಲಿ
ಗಣನಾಥ ಸಿದ್ಧೇಶನಿಹನು ಮಧ್ಯದಲಿ ।
ಸುತ್ತೆಲ್ಲ ನೋಡುವೊಡೆ ಬೆಟ್ಟಗಳ ಸಾಲು
ಚಿತ್ತದಲಿ ಉಕ್ಕುವುದು ಸಂತಸದ ಹಾಲು ।
ಅಚ್ಚ ಹಸುರಿನ ಬಯಲು ಹಾಸು ತಳದಲ್ಲಿ
ಸ್ವಚ್ಛ ನೀರದಜಾಲ ಗಗನತಲದಲ್ಲಿ ।
ಕೀಳುತನವನು ಬಿಟ್ಟು ಮೇಲೇರೆ ಮನಸು
ಬಾಳಿನಲಿ ಹೊಳೆಯುವುದು ಸಗ್ಗಿಗರ ಸೊಗಸು ।
ಅಲ್ಲುಂಟು ಮನಕೆ ಸಂತಸವೀವ ತಂಪು
ಅಲ್ಲುಂಟು ತಂಗಾಳಿ ತರುತಿರುವ ಕಂಪು ।

ಸಿದ್ಧಲಿಂಗನ ಚಿಲುಮೆಯಲ್ಲಿಹುದು ತೀರ್ಥ
ಸಿದ್ಧಿಸಲು ಸಕಲಾರ್ಥ ಶ್ರೀಪಾದತೀರ್ಥ ।
ಮಿಂದು ಬಾ, ಯಾತ್ರಿಕನೆ, ಪುಣ್ಯಜಲದಲ್ಲಿ!
ನಿಂದು ಬಾ ಸಿದ್ಧಲಿಂಗನ ಎದುರಿನಲ್ಲಿ ।
ಆತ್ಮೋನ್ನತಿಯ ಸಿದ್ಧಗಿರಿಯಲ್ಲಿ ನಿಲ್ಲು
ಆತ್ಮಚಿಂತನೆಯಲ್ಲಿ ನೋಡು ಎಲ್ಲೆಲ್ಲು ।
ಆನಂದ ಲಿಂಗವೇ ಸಿದ್ಧಗಿರಿ ನೋಡು
ಆನಂದಭಾವದಲಿ ದೇವನನು ಹಾಡು ।
ಅಲ್ಲಿಹುದು ಉದ್ದಾನಶಿವಯೋಗ ಶಾಂತಿ
ಅಲ್ಲಿಹುದು ಪ್ರಮಥಗಣ ಶಿವಧರ್ಮ ಕಾಂತಿ ।

— ಓ. ಎಸ್. ಲಿಂಗಣ್ಣಯ್ಯ

* ಸಿದ್ಧಗಂಗಾ ತ್ರೈಮಾಸಿಕದಿಂದ

## ಶಿವತೇಜ ಶಿವಕುಮಾರಸ್ವಾಮಿ ಶರಣಾರ್ಥಿ

ಶಿವಕಳೆಯೆ ಅವತರಿಸಿ ಇಳೆಗಿಳಿದು ಬಂದಂತೆ
ಶಿವಯೋಗ ಸಾಕಾರ ದೇವಮಾನವಮೂರ್ತಿ
ಶಿವತತ್ತ್ವ ಸಿದ್ಧಾಂತ ಧೀಮಂತ ಶಿವಯೋಗಿ
ಶಿವತೇಜ ಶಿವಕುಮಾರಸ್ವಾಮಿ ಶರಣಾರ್ಥಿ ॥೧॥

ಸಿದ್ಧಗಂಗೆಯ ಸಿದ್ಧ ಕರ್ನಾಟಕದ ಬುದ್ಧ,
ಸರ್ವಾಂಗ ಪರಿಶುದ್ಧ, ಶರಣ ತತ್ತ್ವಪ್ರಬುದ್ಧ,
ಅಕ್ಷಯದ ನೀತಿನಿಧಿ ಸಿಕ್ಷೇಪ ಸಮೃದ್ಧ !
ಶಿವತೇಜ ಶಿವಕುಮಾರಸ್ವಾಮಿ ಶರಣಾರ್ಥಿ ॥೨॥

ಅಲ್ಲಮನ ವೈರಾಗ್ಯ, ಚನ್ನಬಸವನ ಜ್ಞಾನ
ಬಸವೇಶ್ವರನ ಭಕ್ತಿ, ಸಿದ್ಧರಾಮನ ಕ್ರಿಯೆ
ಸರ್ವಗುಣ ಪರಿಪೂರ್ಣ ದಿವ್ಯಚೇತನಮೂರ್ತಿ
ಶಿವತೇಜ ಶಿವಕುಮಾರಸ್ವಾಮಿ ಶರಣಾರ್ಥಿ ॥೩॥

ನೆಲದಿ ಚಲಿಸುವ ಪಾದ, ವ್ಯೋಮಚಿಂತನೆಯ ತಲೆ
ಮುಗಿಲಮುಟ್ಟುವ ತೆರದ ದಿವ್ಯಭವ್ಯಾಕಾರ
ವಿಶ್ವವನೆ ಬಾಚಿ ತಬ್ಬುವ ಮನೋವೈಶಾಲ್ಯ
ವಿಶ್ವಮಾನವ ಪ್ರೇಮಿ ಶ್ರೀಸ್ವಾಮಿ ಶರಣಾರ್ಥಿ ॥೪॥

'ವ್ಯಾಸ' ರಚಿಸಿದ 'ಭಾರತ' ವ ಕನ್ನಡಕ್ಕಿಳಿಸಿ
ನಾರಣಪ್ಪನು 'ಕುಮಾರವ್ಯಾಸ'ನಾದಂತೆ
ಶಿವನೊಲವ ನೆಲಕಿಳಿಸಿ ಸರ್ವಜನಕುಣಬಡಿಸಿ
ಬೆಳಗುತಿಹ 'ಶಿವಕುಮಾರಸ್ವಾಮಿ' ಶರಣಾರ್ಥಿ ॥೫॥

ಕಾಯಕದ ಕೈಲಾಸ, ಅನುಭಾವದಾವಾಸ
ಸಕಲ ಜೀವಾತ್ಮರಿಗೆ ಲೇಸಿನಾಸರೆಯಾಗಿ
ಮಾನವೀಯ ಉದಾತ್ತ ಮೌಲ್ಯಗಳ ನೆಲೆಯಾಗಿ
ಶೋಭಿಸುವ ಸಿದ್ಧಗಂಗಾಧಿಪತಿ ಶರಣಾರ್ಥಿ ॥೬॥

ಸಿದ್ಧಗಂಗೆಯ ಶಿಲೆಯು ಜಲವ ಚಿಮ್ಮಿಸುವಂತೆ
ನಿನ್ನಮೃತ ಕ್ರತುಶಕ್ತಿಯಿಂ ಕಾಡು ನಾಡಾಯ್ತು
ನಾಡಿನುದ್ದಗಲ ಬೆಳಗಿದೆ ನಿನ್ನ ಸತ್ಕೀರ್ತಿ
ಶಿವತೇಜ ಶಿವಕುಮಾರಸ್ವಾಮಿ ಶರಣಾರ್ಥಿ ॥೭॥

ಅಶನಾರ್ಥಿ, ವಿದ್ಯಾರ್ಥಿ, ಜ್ಞಾನಾರ್ಥಿ, ಧರ್ಮಾರ್ಥಿ,
ಎಲ್ಲರಿಗು ಉಣಬಡಿಪ ಪುಣ್ಯಸಿರಿ ದಾಸೋಹ ;
'ಸಿದ್ಧಗಂಗಾಕ್ಷೇತ್ರ' ವಾಯ್ತು 'ನವಕಲ್ಯಾಣ'
ಸರ್ವಾಶ್ರಮವ ಪಡೆದು ಸರ್ವಜನ ಸಂದೋಹ ॥೮॥

ವಿವಿಧ ವಿದ್ಯಾಸಂಸ್ಥೆಗಳ ತಾಯಿಮಡಿಲಾಗಿ
ತ್ರಿವಿಧದಾಸೋಹ ನಡೆಸುವ ಪುಣ್ಯಬೀಡಾಗಿ
ವಿಶ್ವವಿದ್ಯಾಕ್ಷೇತ್ರವಿದು ಎನಿಸಿ ಮೆರೆದಿರುವ
ಸಿದ್ಧಗಂಗಾಕ್ಷೇತ್ರ ಶ್ರೀಗುರುವೆ ಶರಣಾರ್ಥಿ ॥೯॥

ಇಲ್ಲಿರುವ ಕಲ್ಲಿನಲಿ ಮಹಿಮೆ ಮೈವೆತ್ತಿಹುದು ;
ಸೆಲೆಗೊಂಡ ಸಲಿಲವಿದು ಅಮೃತಜೀವನ ತೀರ್ಥ
ಶರಣ ತತ್ತ್ವದ ಗಾಳಿ ಪರಿಸರದಿ ಪಸರಿಸಿದ
ಸಂಸ್ಕೃತಿಯ ಸುಕ್ಷೇತ್ರ ಸದ್ಗುರುವೆ ಶರಣಾರ್ಥಿ ॥೧೦॥

ಉದ್ದಾಮ ಶಿವಜೀವಿ, ಉತ್ತುಂಗ ಅನುಭಾವಿ
ನಿನ್ನ ನುಡಿಯೇ ಜಪವು, ನಿನ್ನ ನಡೆಯೇ ತಪವು;
ನೀ ಬಾಳು ಚಿರಕಾಲ, ದೇವದೀವಿಗೆಯಾಗಿ
ಶಿವತೇಜ ಶಿವಕುಮಾರಸ್ವಾಮಿ ಶರಣಾರ್ಥಿ ॥೧೧॥

—ನ.ಮ.ಕೊ.ಸೋಗಿ

## ಶ್ರೀಸಿದ್ಧಗಂಗಾ ಶಿವಕುಮಾರಸ್ವಾಮಿ ಸ್ತೋತ್ರ

ಸಿದ್ಧಗಂಗಾ ಕ್ಷೇತ್ರ–ಶಿವಕುಮಾರಸ್ವಾಮಿ
ಎರಡಲ್ಲ. ಕ್ಷೇತ್ರ ಕಾಶೀ–ವಿಶ್ವನಾಥನೋಲ್.
ಆಧಾರ–ಆಧೇಯ. ಲಿಂಗಾಂಗಸಮರಸಂ
ಸಿದ್ಧಲಿಂಗನ ಪುಣ್ಯಪಾದಗಂಗೋತ್ರಿಯಿಂ
ಹರಿದು ಬಂದಳು ಗಂಗೆ. ಅಂದಿನಿಂದೀ ಜಲವು
ಈ ನೆಲವು ಈ ಗಾಳಿ ಈ ಬಾಳಿನುಸಿರೆಲ್ಲ
ಸಿದ್ಧಗಂಗಾ, ಇದು ಜ್ಞಾನಗಂಗಾ॥.
ಇಲ್ಲಿರ್ಪ ಕಣಕಣಗಳಲ್ಲೆಲ್ಲ ಚೇತನವು
ಮಹದಾತ್ಮಚಿಂತನೆಯು ಹರಿದು ಪೆರ್ದೊರೆಯಾಗಿ
ಮಡುವಾಗಿ ನಿಂತಿಹುದು, ಪುಣ್ಯತೀರ್ಥಾಗಿಹುದು
ನೆಲವು ಕ್ಷೇತ್ರಾಗಿಹುದು, ಕೈಲಾಸವಿಲ್ಲಿಹುದು
ಎಂಬ ಪ್ರಾಕ್ತನದ ಕಥೆಗಳನೆಲ್ಲ ಪ್ರತ್ಯಕ್ಷ
ಸತ್ಯಮಪ್ಪಂತೆ ತೋರಿರ್ಪರಾರ್ ಓ ಮಹಾ
ಜ್ಞಾನಿ ಶಿವಯೋಗಿ ಶಿವಕುಮಾರಸ್ವಾಮಿ
ಶರಣರಂತರ್ಯಾಮಿ ಬಸವಕಾಯಕ ಧರ್ಮಿ.
ನೀನಲ್ಲದಿನ್ನಾರು ? ನಿನ್ನಿರುವಿಕೆಯೇ ಸಾಕ್ಷಿ
ನಿನ್ನಂಗ ರೋಮರೋಮಗಳಷ್ಟು ಸದ್ವಿನಯ
ವಿದ್ಯಾರ್ಥಿಗಳಿಗನ್ನವಸತಿವಸನದ ಜೊತೆಗೆ
ದೇಹಾತ್ಮ ಬಲ ವೃದ್ಧಿ ಶುದ್ಧಿ ನಿಯಮಾಚಾರ
ಸಂಸ್ಕಾರ ದೀಕ್ಷೆಯನ್ನಿತ್ತು ನೀನಾಗಿರುವೆ
ಅಭಿನವ ನಿರಂಜನ ಬಸವರಾಜ ಗುಣತೇಜ
ಆದರ್ಶ ಸುಸಮಾಜ ಸುರಭೂಜ.
ಪ್ರಿಯಗುರುವೆ
ವಿದ್ಯಾನಿಧಿ ಪ್ರಭುವೆ, ಶಿವಕಲಾಮೃತ ವಿಭುವೆ !
ಸಿದ್ಧಗಂಗಾ ಸ್ಥಾನ ಸೀಮೆ ಪರಿಮಿತಕಲ್ಲ
ನಿನ್ನ ಪುಣ್ಯಜ್ಯೋತಿ; ನರಜಾತಿ ಕುಲಕೆಲ್ಲ
ನೀನಾಗಿರುವ ಲಿಂಗ ಚಿಜ್ಜ್ಯೋತಿ. ಬೆಳಗುತಿಹೆ
ನಿತ್ಯ ವೈವಿಧ್ಯದಿಂ ಕಲೆ ಧರ್ಮ ಶಾಸ್ತ್ರದೊಳ್
ವಿಜ್ಞಾನ ಪ್ರಜ್ಞಾನ ಸಾಮಾನ್ಯಜ್ಞಾನದೊಳ್
ಮೇರು ಸದೃಶಂ ನಿನ್ನ ತನುವು. ತಪವಸದೃಶಂ.
ಜಪವಸಂಖ್ಯಂ. ಶೂನ್ಯಸಂಪಾದನೆಯೆ ಸಿದ್ಧಿ.
ಪೂರ್ಣದಿಂ ಪೂರ್ಣಕೊಯ್ಯುವ ಮಹಾ ಸಾಹಸಂ
ದೀನ ದಲಿತೋದ್ಧಾರ ರಚನಾ ವಿವೇಚನೆಯೆ
ಪ್ರಾಣಲಿಂಗದ ಮಂತ್ರ. ಸೂಕ್ಷ್ಮಹೃದಯದ ತಂತ್ರ
ಭಾವ ಕಾರಣದ ಮಹದಾನಂದ ನಿನಗೆಂದು?......
ನಾವೆಲ್ಲ ನಿನ್ನಡಿಯ ಪಾತ್ರತೆಯನರಿತೆಂದು.
ಈ ಸುವರ್ಣೋತ್ಸವವು ಶತಶತದಿ ಬೆಳೆದೆಂದು.

—ಬಸವೇಶ್ವರ ಶಿವಪ್ಪ ತುಪ್ಪದ

## ಶ್ರೀಸಿದ್ಧಗಂಗಾ ಶ್ರೀಗುರು

ಲಕ್ಷದೀಪಾರ್ಜನೆಯ ಮಾಡಲೊಲ್ಲೆ ಹಸಿದ ಹೊಟ್ಟೆಗೆ ತುತ್ತು ಅನ್ನವನೀವುದನುಳಿದು,
ನಿತ್ಯದೀಪಾರತಿಯ ಮಾಡಲೊಲ್ಲೆ ಕಾಣಬಂದವರ ಕಷ್ಟ-ಕ್ಷೇಮಗಳನಾಲಿಸುವುದನುಳಿದು,
ಸತ್ಯಶುದ್ಧಕಾಯಕದ ಪ್ರಚಾರವನು ಬಿಡಲೊಲ್ಲೆ
ಮೌನ ಪಂಚಾಕ್ಷರಿಯ ಜಪದುಪಾಸನೆಯಿಂದ ಶ್ರೀ ಸಿದ್ಧಗಂಗಾ ಶ್ರೀಗುರು.
ನೀವು ವಿರಾಟ್‌ಮೂರ್ತಿ, ನಾನು ಪುಟ್ಟಕನ್ನಡಿಹರಳು
ನೀವು ಅನಂತಾಕಾಶ, ನಾನು ಇಬ್ಬನಿಯ ಕಿರುಹನಿ
ನೀವು ಹೆಗ್ಗಡಲು, ನಾನೊಂದು ಹುಲುದೆರೆ
ನೀವು ಶ್ರೀಶೈಲಗಿರಿ, ನಾನೊಂದು ತುಂಬೆಗಿಡ
ನಿಮ್ಮ ವ್ಯೋಮ ವ್ಯಕ್ತಿತ್ವವನು ನಾನೆಂದು ತಿಳಿಯ ಬಲ್ಲೆ ?
ಶ್ರೀಸಿದ್ಧಗಂಗಾ ಶ್ರೀಗುರು
ಹಾಡಿ ದಣಿಯೆನು ನಿಮ್ಮ ಹೊಗಳಿ ದಣಿಯೆನು
ನೋಡಿ ದಣಿಯೆನು ನಿಮ್ಮ ನುಡಿ ಕೇಳಿ ದಣಿಯೆನು
ನೀಡಿ ನೀ ದಣಿಯೆ, ಬೇಡಿ ನಾ ದಣಿಯೆ
ನೀಡಿ ಜಂಗಮವಾದೆ, ಬೇಡಿ ನಾ ಭವಿಯಾದೆ
ಅಣ್ಣನವರೆಂದಂತೆ ಆನು ಒಲಿದಂತೆ ಹಾಡುವೆ
ಶ್ರೀಸಿದ್ಧಗಂಗಾ ಶ್ರೀಗುರು.

—ಹರತಿ ವೀರೇಶ

## ಸಿದ್ಧಗಂಗೆಯಲ್ಲಿ : ಕೆಲವು ಅನಿಸಿಕೆಗಳು

ಶೂನ್ಯ ಸೀಮೆಗಳಿಂದ ಸಿದ್ಧಗಂಗೆಯ ಸೇಕ
ಗುಡ್ಡಗಳ ಲಿಂಗಕ್ಕೆ,
ಹೊತ್ತು ತಿರುಗುವ ಬಸವಳಿದ ಭೂಮಿ ಕೇಳಿದೆ
'ನಾನು ಬಿರುಗಾಳಿ ಗುಕ್ಕೆ?'
ಮಣ್ಣಿನಾಳಗಳಲ್ಲಿ ಗೊಬ್ಬರದ ಹಗಿವು ;
ಮೊಂಡು ನೇಗಿಲು,
ಎತ್ತುಗಳ ಹಾಗೆ ನೊಗ ಎತ್ತಲಾರದ
ಎತ್ತಲೂ ಏಳಲಾರದ ರೈತಕೋಟಿಗೆ
ಪ್ರತಿದಿನವು ಸಾವೇ ಗುಳಿಗೆ.
ಮುರುಕುಗುಡಿಸಲು ಮಾಲೆ ಧರಿಸಿದ ಹಸಿವು
ದಾಸೋಹಗೇಹಗಳ ಮೇಲೆ ಹಾಯಿದು ಬಂದು
ಬಸ್ಸನೇರಿದೆ ; ನಗರ ಸೇರಿದೆ ;
ಬೆಳಕುವೇಗದ ನಾಗರೀಕ ಮೊಟ್ಟೆಯೊಡೆದು
ಚಿಗಿಯುವ ದಿನವ ಕಾಯುತ್ತಿದೆ
ಇಲ್ಲಿ ನಾಗಲಿಂಗವೃಕ್ಷದ ನೆರಳು ;

ಅಲ್ಲಿ ಕೆರೆಯುಸಿರ ತಂಗಾಳಿ ಇನಿಬೆರಳು ;
ಗುಡ್ಡಗಳ ಮಡಿಲಲ್ಲಿ ಗೆಜ್ಜೆ ಕಟ್ಟಿದ ಮೇಕೆ ಕೊರಳು
ಗಂಟೆ ಬಡಿದಿದೆ ಈಗ ; ಗಡುವು ಮೀರಿದೆ ಈಗ ;
ವೇಳೆಯಾಳಾಗಿ ನಾ ಮನ ಕೊಡವಿದೆ.
ಗಂಟೆ ಸೈರನ್ನಲ್ಲಿ ಮಠ ಮಟ ಮಟ ಮಧ್ಯಾಹ್ನದಲ್ಲಿ
ಕರಗಿ ಹೋಗುವ ಮೊದಲು
ಹಠದ ನೇಗಿಲ ಹೊತ್ತು ನಡೆಯಬೇಕು,
ಬಸವವಾಣಿಯ ಜಲದ ಕೊಳಕುಗಳ ತೆಗೆದೆಸೆದು
ಬಸವಳಿದ ನೆಲಕೆ ಹರಿಸಬೇಕು.
ಹೊಸ ಸೂರ್ಯ, ಹೊಸ ಮೋಡ
ಹೊಸ ರುಧಿರ ಮಳೆಗರೆಸಿ
ಬೆಸಲಾಗಬೇಕು ನೆಲ ಮತ್ತೆ ಹೊಸತಾಗಿ
ಜೋಳವಾಳಿಯು
ತೀರಲೇಬೇಕು ಇಂದು ಮೊದಲಾಗಿ.

—ಶಿವಪ್ರಕಾಶ

## ಶ್ರೀ ಸಿದ್ಧಗಂಗೆ 'ತ್ರಿವೇಣಿಸಂಗಮ ಗಂಗೆ'

ಶ್ರೀಸಿದ್ಧಗಂಗಾ ಕ್ಷೇತ್ರಮಿದು ಮುಕ್ತಿಯ ಮಂಗಳಮನೆಯಾಗಿಪ್ಪುದು ನೋಡಾ
ಶ್ರೀಸಿದ್ಧಗಂಗೆಯಿಂ 'ಧರ್ಮಗಂಗೆ'ಯುದಿಸಿ ಹರಿಯುತಿರ್ಪಳು ನೋಡಾ
ಶ್ರೀಸಿದ್ಧಗಂಗೆಯಿಂ 'ಜ್ಞಾನಗಂಗ' ಜನಿಸಿ ಹರಿಯುತಿರ್ದಳು ನೋಡಾ
ಶ್ರೀಸಿದ್ಧಗಂಗೆಯಿಂ 'ಪ್ರಸಾದಗಂಗೆ'ಯುದ್ಭವಿಸಿ ಪ್ರವಹಿಸುತಿರ್ಪಳು ನೋಡಾ
ಇಂತು ಧರ್ಮದಾನ, ಜ್ಞಾನದಾನ, ಅನ್ನದಾನ
ಈ ತ್ರಿವಿಧ ದಾಸೋಹ ಮೂರು ಸಾಸಿರದೆಂಟುನೂರ್ ಮಕ್ಕಳಿಗೆ
ದಿನವಿಡಿ ನಡೆಯುತಿಪ್ಪುದು ನೋಡಾ
ಕಂತು ಹರರೂಪಿ ಶಿವಕುಮಾರಸ್ವಾಮೀಜಿ ಮಾತೃಪ್ರೇಮದಿಂ-
ದಿಂತು ಸಕಲ ಧರ್ಮದ ವಿದ್ಯಾರ್ಥಿಗಳೆಲ್ಲರನುಂ
ರಕ್ಷಿಸುತಿರ್ಪರು ನೋಡಾ
ಅಂದು ಅನ್ನಪ್ರಸಾದ ಸಿದ್ಧತೆಗಾಗಿ ಹೊತ್ತಿಸಿರ್ದ ಬೆಂಕಿ
ಯಿಂದಿಗೂ ಆರಿಲ್ಲ ನೋಡಿರಯ್ಯಾ
ಶ್ರೀಸ್ವಾಮಿ ಕೃಪೆಯಲ್ಲಿ ಇಪ್ಪತ್ತಾರು ವಿದ್ಯಾಸಂಸ್ಥೆಗಳು
ನಡೆಯುತಿಪ್ಪವು ನೋಡಿರಯ್ಯಾ
ಹತ್ತುಸಾವಿರಕ್ಕೂ ಮಿಕ್ಕಿ ಮಕ್ಕಳು ಓದುತ್ತಿಹರು ನೋಡಿರಯ್ಯಾ
ಪ್ರತಿವರ್ಷ ಇಪ್ಪತ್ತೊಂದು ಲಕ್ಷಕ್ಕೂ ಮಿಕ್ಕಿ
ಹಣ ವೆಚ್ಚವಾಗುತಿರ್ಪುದು ನೋಡಿರಯ್ಯಾ
ಪ್ರಪಂಚದೊಳಿಂತಪ್ಪ "ವಿಶ್ವಧರ್ಮಸಂಸ್ಥೆ" ಬೇರೊಂದಿಲ್ಲ! ಪವಾಡಮಿದು
ಸತ್ಯ ಕಾಣಾ ! ಶ್ರೀಶೈಲ ಮಲ್ಲಿಕಾರ್ಜುನ !!

—ಶ್ರೀ ಮೋಟಗಿ ಮಲ್ಲಿಕಾರ್ಜುನ

# ಶ್ರೀಪಾದಸ್ತೋತ್ರ ನವರತ್ನಮಾಲಿಕೆ

ಶ್ರೀಮದ್ಭಾಸುರ ಭಸ್ಮರೇಖಧವಳಂ ಸದ್ಯೋಗ ಸಂಸಿದ್ಧನುಂ ।
ಶ್ರೀಮಚ್ಚಿದ್ಧರನಂತನಿತ್ಯಸುಖದಂ ಸುಜ್ಞಾನಸಂವರ್ಧನುಂ
ಶ್ರೀಮತ್ಪುಣ್ಯವರಪ್ರದಾತ್ಮಕ ಶಿವಂ ಶ್ರೀಸಿದ್ಧಗಂಗಾಪ್ರಿಯಂ
ಶ್ರೀಮತ್ರೀಮದಿ ಭಕ್ತರಂ ಸಲಹುಗೆ ಶ್ರೀಸಿದ್ಧಲಿಂಗೇಶ್ವರಂ ॥೧॥

ಉದ್ದಾನೇಶಂ ಮೆಚ್ಚಿದ ।
ಬುದ್ಧಿಯ ಸುಕುಮಾರಮೂರ್ತಿ ಮದ್ಗುರುಮೂರ್ತೀ ।
ಶುದ್ಧಾಂತಃಕರಣಮೂರ್ತಿ ।
ಸಿದ್ಧರ ಕೃಪೆಯಾಂತಮೂರ್ತಿ ಚಿದ್ಘನಮೂರ್ತೀ ॥೨॥

ಪೋದದೊಳೋದುತೆ ವೇದವ ।
ಸಾದರದಿಂದರಿಯುತಾಗಮಂಗಳನೆಲ್ಲಂ ।
ಭೇದಿಸುತುಪನಿಷದರ್ಥವ ।
ಶೋಧಿಸಿ ದರ್ಶನ ಪುರಾಣಮಿತಿಹಾಸಗಳಂ ॥೧॥

ಜ್ಞಾನಮಯಂ ಬೋಧನಸು ।
ಜ್ಞಾನಮಯಂ ಸತ್ಯಯೋಗ ಸದ್ಧರ್ಮಮಯಂ ।
ಧ್ಯಾನಮಯಂ ಮೌನಸುವಿ ।
ಜ್ಞಾನಮಯಂ ಶಿವಕುಮಾರ ಶಿವಯೋಗಮಯಂ ॥೪॥

ಸಿದ್ಧರ ನೆರವಿನ ಗಂಗೆಯು ।
ಸಿದ್ಧರನುದ್ಧರಿಸೆ ಸಿದ್ಧಲಿಂಗೇಶ್ವರನುಂ ।
ಬುದ್ಧಿಯ ಜನತತಿಗರುಹಲ್ ।
ಉದ್ದಾನೇಶಸುತ ಸಿದ್ಧಗಂಗಾಧ್ಯಕ್ಷಂ ॥೫॥

ಶ್ರೀಗುರು ನಿಂದುದೆ ಸತ್ಪಥ ।
ಶ್ರೀಗುರು ನೀವೆಂದು ನುಡಿವ ನುಡಿ ಶಿವಮಂತ್ರಂ ।
ಶ್ರೀಗುರು ನಿಂದೆಡೆ ಕಾಶಿಯು ।
ಶ್ರೀಗುರು ಪೊಕ್ಕ ಮಡು ತೀರ್ಥ ಸದ್ಗುರುವರನೇ ॥೬॥

ನಿಮ್ಮಾಶ್ರಮ ಜಗದಾಶ್ರಮ ।
ನಿಮ್ಮಾಶ್ರಯ ಜಗದಧೀಶನಾಶ್ರಯ ಮತ್ತೀ ।
ನಿಮ್ಮಾಶ್ರಮ ವಟುಪುಣ್ಯಮ
ದಮ್ಮಮ್ಮಾ ಪೇಳ್ವುದೇನು ಪುಣ್ಯಪ್ರಭುವೇ ॥೭॥

ನಿಮ್ಮಯ ದರ್ಶನ ಪುಣ್ಯಂ ।
ನಿಮ್ಮ ಶ್ರೀಪಾದ ಸೋಂಕೆ ಪುಣ್ಯಮಗಣ್ಯಂ ।
ನಿಮ್ಮಯ ಸೇವೆಯು ಪುಣ್ಯಂ ।
ನಿಮ್ಮಾಶೀರ್ವಾದ ಪುಣ್ಯ ಪುಣ್ಯಕೆ ಪುಣ್ಯಂ ॥೮॥

ಧರೆಯೊಳ್ ಧಾರ್ಮಿಕತತ್ವಮಂ ಪ್ರಕಟಿಸಲ್ ಪುಟ್ಟಿರ್ಪ ಪಂಚಾನನಂ ।
ನರರಜ್ಞಾನದ ಕುತ್ತಮಂ ಬಿಡಿದಿಡಲ್ ಬಂದಿರ್ಪ ಧನ್ವಂತರೀ ।
ತಿರೆಯೊಳ್ಬೇಳ್ಪರಭೀಷ್ಟವನ್ನೊಡರಿಸಲ್ ನಿಂದಿರ್ಪ ಕಲ್ಪದ್ರುಮಂ ।
ಗುರುದೇವಂ ಶಿವಪುತ್ರನೀಗೆ ನಲವಿಂದೆಮ್ಮಿಷ್ಟಸಂಸಿದ್ಧಿಯಂ ॥೯॥

—ಎಂ. ನಂಜುಂಡಯ್ಯ

# ಕಮ್ಮಟ

ಪುರಾಣ ಪುಣ್ಯಕಥೆಗಳಿಗೇನು ಕೊರತೆ ನಮ್ಮಲ್ಲಿ ?
ರಾಮರಾವಣರ ಕಥೆಗಳನು ಅದೆಷ್ಟು ಕೇಳಿಲ್ಲ! ಓದಿಲ್ಲ!
ರಾಮಲಕ್ಷ್ಮಣರ ಸ್ಪರ್ಶ ಮಾತ್ರದಿಂದಲೇ ಅಹಲ್ಯೆಯ ಅನಾವರಣ,
ದಶಕಂಠರಾವಣನ ಸೀತಾಪಹರಣ, ವೀರಹನುಮನ ಭಕ್ತಿ ಪೌರುಷಗಳು
ಧರ್ಮಜನ ಧರ್ಮಯಜ್ಞ; ಭೀಮಾರ್ಜುನರ ಪೌರುಷ ಪರಾಕ್ರಮಗಳು,
ದ್ರೌಪದಿಯ ವಸ್ತ್ರಾಪಹರಣ, ಕೃಷ್ಣನ ಔದಾರ್ಯ ತಂತ್ರ ಕುತಂತ್ರಗಳು
ತೇಲಿ ಬಂದುವು ನನ್ನ ನೆನಪಿನಾ ಹೊಳೆಯಲ್ಲಿ, ಸಾಕು ಸಾಕೆನಿಸಿತು,
ಅವು ಬರೀ ಓದಲು, ಕೇಳಲು ಇರುವುವಷ್ಟೆ ಎನಿಸಿತು !
ಆಗಿನ ಭಗವಾನ ಉವಾಚ–ಅವನ ವಿಶ್ವರೂಪದರ್ಶನ,
ಯಜ್ಞಯಾಗಾದಿಗಳು, ದಾಸೋಪದಾಸರಿಗೆ
ಧರ್ಮದಾ ದರೋಡೆಕೋರರಿಗೆ, ಸಕಲಸಂಪತ್ತು.
ಜನಕೇನು ಬಂತು ಇದರಿಂದ ಕಿಮ್ಮತ್ತು ?
ಈ ಎಲ್ಲಾ ಮುಗಿದ ಕತೆಗಳ ಮೆಟ್ಟಿನಡೆದಿದ್ದೆ
ಬಯಲು ದಾರಿಯ ಹಿಡಿದು ಬಹುದೂರ ನಡೆದಿದ್ದೆ.
ಬೆಟ್ಟದಾ ಬುಡದಲ್ಲಿ, ಹಸಿರು ಬನದೊಡಲಲ್ಲಿ
ಶ್ರೀಕೊಳದ ದಡದಲ್ಲಿ ಶ್ರೀಸಿದ್ಧಲಿಂಗೇಶನಡಿಯಲ್ಲಿ
ಕಂಡಿದ್ದೆ ; ಕರ್ತಾರನ ಕಮ್ಮಟವ, ದಿವ್ಯದರ್ಶನವ
ಈ ಧರ್ಮಕಮ್ಮಟದಿ, ಉಪದೇಶಕೆಡೆಯಿಲ್ಲ,
ಯಜ್ಞಯಾಗಾದಿಗಳಲ್ಲಿಲ್ಲ; ಮಡಿಮೈಲಿಗೆಯ ಸೋಂಕಿಲ್ಲ.
ಈ ಕರ್ಮಕಮ್ಮಟದಿ, ದೇಹವೇ ಅಡಿಗಲ್ಲು;
ತನುಮನವು ದುಡಿಯುತಿರೆ, ಕಾಯಕವೆ ಕೈಂಕರ್ಯ, ಸಕಲ ಸಂಪದವು
ಈ ಧರ್ಮಕಮ್ಮಟದಿ, ದಾಸೋಹವೆ ದಿವ್ಯಮಂತ್ರ;
ಗುರುವರನ ಕೈಗುಣವುಹೇಳಲಸದಳವು !
ಕೊಡಬೇಕೆಂಬ ಕೈಗೆ, ಎರಡು ಕೊಡುವುದು ಭೂಮಿ !
ಇಡಬೇಕೆಂಬಾತಂಗೆ, ಹಿಡಿಯು ಇಮ್ಮಡಿಸುವುದು !
ತುಂಬಿ ತುಳುಕುವುದಲ್ಲಿ, ದವಸಧಾನ್ಯಗಳು.
ಈ ಕಲಿಯ ಕಮ್ಮಟದಿ, ಮೇಲುಕೀಳೆಂದಿಲ್ಲ, ಜಾತಿವಿಜಾತಿಗಳಿಲ್ಲ.
ಎಲ್ಲರೂ ಒಂದೆಂಬ ಭಾವೈಕ್ಯವನೆ ಕಾಣುವೆವು.
ಬಂದು ಹೋಗುವರೆಷ್ಟೋ? ಅಲ್ಲೇ ಇರುವವರೆಷ್ಟೋ?
ಎಲ್ಲರಿಗೂ ಒಂದೇ ಸ್ವಾಗತವು ದಾಸೋಹದರಮನೆಯಲ್ಲಿ.
ಈ ಧರ್ಮಕಮ್ಮಟದಿ ದಯೆಯೇ ಜೀವ ಜೀವಾಳ
ಕೈಲಾಗದವರು, ಅನಾಥರು ವೃದ್ಧರು ವಿದ್ಯಾರ್ಥಿಗಳಿರಲಿ
ಪಶುಪಕ್ಷಿಗಳೇ ಇರಲಿ ಎಲ್ಲರಿಗೂ ಇಲ್ಲಿ ಆಶ್ರಯವು.
ಈ ನಮ್ಮ ಕಮ್ಮಟದಿ, ಪ್ರಭುವಿನಾಣತಿಯಂತೆ, ಸೇವೆಮಾಳ್ಪುದೇ ಪೂಜೆ.
ನಡೆದಂತೆ ನುಡಿವುದು, ನುಡಿದಂತೆ ನಡೆವುದೇ ಪುನಸ್ಕಾರ.
ಗುರುವಿನಾಣತಿಯಂತೆ ಪ್ರೀತಿ ದಯೆ ಕರುಣೆಗಳು ದಿವ್ಯೋಪದೇಶಗಳು
ಗುರುಲಿಂಗಜಂಗಮದ ನರನಾಡಿ ಮಿಡಿತಗಳು
ಈ ಧರ್ಮ ಕರ್ಮ ಸಂಗಮದಿ, ಜನಕೆಲ್ಲವುಂಟು ಶಾಂತಿಸೌಭಾಗ್ಯಗಳು.

—ಹಡವನಹಳ್ಳಿ ಚಿಕ್ಕಬಸವಯ್ಯ

## ಮೌನ ಚೇತನಶಕ್ತಿ

ಭಾವ ಜಾಗೃತರಾಗಿ; ಭ್ರಾಂತಿ ಮೂಲವ ತೊಡೆದ
ಭಕ್ತಿ ಕರ್ಮ ಜ್ಞಾನಜ್ಯೋತಿ ನೀವು ;
ಅಂತರಂಗದ ಅರಿವ ಬಾಹ್ಯ ಬದುಕಿಗೆ ತಂದ
ಅನುಭಾವ ಪರಿಣಾಮ ಮಹತಿ ನೀವು !

ನಿಷ್ಠೆ ನಿಯಮದ ಪಾತ್ರ, ಭಕ್ತಿ ಸಮರಸ ಪ್ರಜ್ಞೆ
ನಿರ್ವಿಕಾರದ ದೃಷ್ಟಿ ಸೂತ್ರ ನೀವು :
ಮಾತು ಮನದೆತ್ತರವ ಮೀರಿ ನಿಂತಿಹ ಸಿದ್ಧಿ
ಮೌನ ಚೇತನಶಕ್ತಿಮಂತ್ರ ನೀವು !

ಸತ್ಯ ಸಾಕ್ಷಾತ್ಕಾರ, ಸ್ಥಿತಪ್ರಜ್ಞೆ ಮಂದಾರ
ಸಾಹಿತ್ಯ ಸೌಂದರ್ಯ ನಿಧಿಯು ನೀವು;
ಧರ್ಮ ಜೀವನಮಾರ್ಗದರ್ಶನದ ಮೇಲು
ದಿವ್ಯದಾಸೋಹದಾ ಮೂರ್ತಿ ನೀವು !

'ಕಾಯಕವೇ ಕೈಲಾಸ' ಶ್ರುತಿಯ ಕೃತಿಗೈತಂದ
ಕರ್ಮಯೋಗದ ತತ್ತ್ವಶೀಲ ನೀವು;
ಮೇಲು ಕೀಳುಗಳೆಂಬ ಮಾಲಿನ್ಯವನೆ ಕಳೆದ
ಮಾನವೀಯತೆಯ ಘನ ಮೌಲ್ಯ ನೀವು !

—ಗೊ. ರು. ಚನ್ನಬಸಪ್ಪ

## ಆನಂದರೂಪ

ಯಾರ ಕಂಡರೆ ಶಿರವು ತಾನಾಗಿ ಮಣಿಯುವುದೊ
ಯಾರು ದಿಟ್ಟಿಸೆ ಇದಿರು ದಿಟ್ಟಿಸಲು ಅಸದಳವೊ
ಯಾರು ಮರ್ತ್ಯಕೆ ಬಂದೂ ಅಮರ್ತ್ಯರಂತಿಹರೊ
ಯಾರು ಪ್ರಕೃತಿಯ ಧರ್ಮ–ಆತ್ಮಾಧೀನವೆನಿಸಿದರೊ
ಯಾರ ವಾಣಿಯು ಕೇಳ್ವ ಹೃದಯ ಪರಿವರ್ತಿಪುದೊ
ಯಾರು ಹೇಳಿದರೇನ ಹೂಂಗುಟ್ಟಿ ತನ್ನದನೆ ಎಸಗುವರೊ
ಯಾರು 'ಪ್ರಸಾದ ಮಾಡಿ ಹೋಗಿರಿ' ಮಂತ್ರ ಪಠಿಸುವರೊ
ಯಾರು 'ಸಕಲ (ರ) ವಿದ್ಯಾನಿವಾಸ' ವಾಗಿಹರೊ
ಯಾರು ದೀನರ ಕಂಬನಿಯ ತೊಡೆವುತ್ತಿಹರೊ
ಯಾರು ಏನೇ ಆಪತೊದಗಲು (ಯಾರನೂ) ಕೇಳಲೊಲ್ಲರೊ
ಯಾರು ಎಲ್ಲೆಡೆ ಧರ್ಮಸಾರವದೊಂದೆಯೆಂಬರೊ
ಯಾರು 'ಸಮ'ವನು ಎಲ್ಲ(ದ)ರಲಿ ದರ್ಶಿಪರೊ
ಯಾರು ಸತಿಯರನೆಲ್ಲ (ತಾಯಿ) ಗಂಗಾಂಬೆಗೆತ್ತುವರೊ
ಯಾರು ಶರಣರ ಪಥದಿ ನಡೆವರೊ ಅನವರತ
ಯಾರು ಲೋಕವನೆಲ್ಲ ತನ್ನಂತೆ ನೋಡುವರೊ
ಯಾರು 'ಲೋಕದ ಗುರುವು' ಎಂಬಗ್ಗಳಿಕೆ ಬಯಸರೊ
ಯಾರು ಗುರುವಿನ ಕರುಣೆಗಳಿಸಿದ ಸಿದ್ಧಪುರುಷರೊ
ಯಾರು ಶಿಷ್ಯರ ಅಂತರಂಗವ ತೊಳಗಿ ಬೆಳಗುತ್ತಿಹರೊ
ಯಾರು ಗುರುಗಳ ವಿರತರುಂತರ ಲೇಶ ಕಾಣಿಸರೊ
ಯಾರು ಜೀವಾತ್ಮರುಗಳೆಲ್ಲಕು ಲೇಸ ಬಯಸುವರೊ
ಯಾರು ಸತ್‌ಚಿತ್ ಆನಂದಸ್ವರೂಪರೊ
ಮಾರಮರ್ದನರವರೆ ಪ್ರಣವಸ್ವರೂಪರು
ಸದ್ಗುರುರಾಜ ಘನತೇಜ
ಸಿದ್ಧಗಂಗಾಧ್ಯಕ್ಷ ಶ್ರೀಶಿವಕುಮಾರ ವಿಭು
ನೂರ್ಕಾಲ ಬಾಳ್ಗೆ ; ಅಧ್ಯಾತ್ಮರವಿಕಿರಣಮಂ ಪಸರಿಸುಗೆ.

—ಕೆ. ಪಿ. ಶಿವಲಿಂಗಯ್ಯ

# ಶ್ರೀ ಪ್ರಶಸ್ತಿ

ಶ್ರೀಮಹಿಮ ಪೂರ್ಣಪಾತ್ರಂ
ಸೋಮ ಪ್ರೇಮಾಘ್ರ್ಯ ವಿಮಲ ಜೀವನ ಸೂತ್ರಂ
ಕ್ಷೇಮ ವ್ಯೋಮ ಪತತ್ರಂ
ಭೂಮಂಡಲ ಮಹಿತ ಸಿದ್ಧಗಂಗಾ ಕ್ಷೇತ್ರಂ ॥೧॥

ಕಮನೀಯ ಸ್ತವಮಾನನೀಯ ಮನಿಶಂ ಸಂಭಾವ್ಯಮುಂ ಯೋಗಿಸಂ
ಯಮಿ ಸುಜ್ಞಾನ ಸಹಸ್ರರಶ್ಮ್ಯುದಯ ಪೂರ್ವಾದ್ರೀಂದ್ರ ಸನ್ಮಸ್ತಕಂ
ವಿಮಲಂ ಶೈವ ತಪೋಗ್ನಿದಗ್ಧ ದುರಿತಾರಣ್ಯಾಂತಮೀ ಪ್ರಾಂತಮ
ಪ್ರಮದಂ ಸುಪ್ರಮುದಪ್ರದಂ ಬುಧಜನಾನಂದಹೃದಾಂಭಃಪ್ರದಂ ॥೨॥

ವಿಜಯಂ ವಿದ್ಯೆ ಸುರೂಪಮುಂ ವಿಭವಮುದ್ಯತ್ಕೀರ್ತಿ ದೀರ್ಘಾಯು ನೀ
ರಜೆಯೈಹಾಭ್ಯುದಯಕ್ಕಮಾ ಪರಮನಿಃಶ್ರೇಯಕ್ಕೆ ಪೊತ್ತೊಯ್ವ ವಾ
ಹಜವಂ ನಿಶ್ಚಯದಿಂ ದಯಾಸಹಿತ ಧರ್ಮಂ ತಾಸದೀಶಾಂಘ್ರಿಪಂ
ಕಜಸೌರಭ್ಯಮದಾದುದೀ ಶಿವಕುಮಾರಸ್ವಾಮಿ ರೂಪಾತ್ಮಕಂ ॥೩॥

ಕಲುಷಕ್ಕಾಸರೆಯಿಲ್ಲ ವಂಚನೆಗೆ ತಾಣಂ ಕಾಣದೆತ್ತೆತ್ತಲೀ
ಸ್ಥಲದೊಳ್ ಚೌರ್ಯಕೆ ದಾರಿಗಾಣದನೃತ ವ್ಯಾಪಾರವೇ ನಾಸ್ತಿ ಕೂ
ಗೋಲೆಯೆಂಬುಕ್ತಿಯದಿಲ್ಲವನ್ಯವನಿತಾಸಕ್ತರ್ಕಳಿಲ್ಲಂ ದಲೆಂ
ಬುಲಿ ಪರ್ವಿರ್ಪುದು ಸಿದ್ಧಗಂಗೆಯೊಳೆನಲ್ಕೇನೆಂಬ ಪೆಂಪೊಪ್ಪುಗುಂ ॥೪॥

ನೀಲಾಭ್ರಕ್ಕೆ ಪಗಲ್ಗೆ ನೇಸರಿರುಳ್ಗಾ ತಿಂಗಳ್ ಕೊಳಕ್ಕಂಬುಜಂ
ಶೀಲ ಛಾತ್ರವರರ್ಗೆ ಮೂರ್ಧಮುಕುಟಂ ಶ್ರೀರಾಜವೇಷಕ್ಕೆ ಮೇಣ್
ಫಾಲೋದ್ಭಾಸಿ ವಿಭೂತಿ ಶೈವಜನಕೀ ಕರ್ನಾಟಕಂ ಧರ್ಮದು
ಚ್ಛಾಲಾರಂ ಸುಪವಿತ್ರ ಸಿದ್ಧವರ ಗಂಗಾಕ್ಷೇತ್ರಮುತ್ಸತ್ರದಿಂ ॥೫॥

ಯತಿ ಪಾರಂಪರ್ಯ ಧರ್ಮಪ್ರಸರಣ ಕರಣೋದ್ದಿಷ್ಟ ಸಂಚಾರಬದ್ಧರ್
ಕೃತ ವಿಶ್ವಪ್ರೇಮ ಸಂಭಾಷಣ ಗುಣಹಿತ ಬೋಧಾಮೃತೋದ್ಧರ್ತಲೋಕರ್
ಪತಿತ ತ್ರಾಣಾತಿನಿಷ್ಠರ್ ಸಕಲಜನಮನಃಕಂಜಹಂಸರ್ ಪ್ರಲಿಂಗಾ
ಯತ ಸಿದ್ಧಾಂತಾಂಶು ಸೂರ್ಯರ್ ಮಠಪತಿಗಳವರ್ಗಾಶ್ರಯ ಕ್ಷೇತ್ರಮಲ್ತೇ? ॥೬॥

ಕೃತೆಯೊಳ್ ನಾಲ್ಗಾಲೊಳಂ ನಿರ್ಭಯದೆ ಚರಿಸುವಾ ಧರ್ಮಧೇನು ವ್ರಜಕ್ಕಾ
ಕಥೆ ಮತ್ತಾ ತ್ರೇತೆಯೊಳ್ ಮೂರಡಿಯೆ ಮರುಯುಗಂ ಬಂದೊಡಾ ಧೇನು ತಾನಿ
ನ್ನದೆ ಇರ್ಕಾಲಿಂದೆ ನಿಲ್ಗುಂ ಕಲಿಯುಗದೊಳಗಿಂದೇಕಪಾದಸ್ಥಮೆಂಬರ್
ಬುಧರೀಗಳ್ ಸಿದ್ಧಗಂಗಾ ಮಹಿಮೆ ಕೃತೆಯ ಸಂಸ್ಥಾಪಿಸಲ್ ಬದ್ಧದೀಕ್ಷಂ ॥೭॥

ತರಿಕಾಕೀರ್ಣ ಮನಕ್ಕೆ ಹರ್ಷರಸಗಂಗಾ ಸ್ರೋತಮಜ್ಞಾನ ದು
ರ್ಲಂಕಾಧೀಶಶಿರಕ್ಕೆ ರಾಘವಶರಂ ಕ್ಷುದ್ಭೂತದುಚ್ಚಾಟ ವಂ
ತ್ರಾಂಕಂ ತಾನೆನೆ ನಿಚ್ಚಮುಂ ನಡೆವ ದಾಸೋಹಾನ್ವಿತಂ ಜಾಣೆನೊಳ್
ರಂಕಂ ವಾಗ್ವರನಪ್ಪ ಮೈಮೆಗೆ ಸುಧಾಪಾತ್ರಂ ದಲೀ ಕ್ಷೇತ್ರಮೈ ॥೮॥

ಶಿವಯೋಗೀಂದ್ರ ಪರಂಪರಾಪ್ರಮುಖರಾದರ್ ಶೂನ್ಯಸಿಂಹಾಸನಾ
ಧಿವರ ಶ್ರೀ ಪ್ರಭುದೇವರಿಂ ತೊಡಗಿ ಲೋಕೋದ್ಧಾರನಿಷ್ಠರ್ ಪವಾ
ಡವನಲ್ಲಲ್ಲೆಸಗಿರ್ದು ಸತ್ಕೃತಿಗಳಿಂ ಸಾಹಿತ್ಯಮಂ ವೃದ್ಧಿಗೆ
ಯ್ದವರೀ ಕ್ಷೇತ್ರವನೆಯ್ದೆ ಗೆಯ್ದರವನೀಸಂಭಾವನಂ ಪಾವನಂ ॥೯॥

ವರಯೋಗೀಂದ್ರರೊಳಾದ ತೋಂಟದರೆನಿಪ್ಪಾ ಸಿದ್ಧಲಿಂಗೇಶ್ವರರ್
ಮೆರೆದಾ ಗೋಸಲಸಿದ್ಧಯೋಗಿಯಟವೀಶರ್ ಶ್ರೀಮದುದ್ದಾನರಾ
ಕರಸಂಜಾತರೆನಿಪ್ಪ ಶ್ರೀ ಶಿವಕುಮಾರಸ್ವಾಮಿಗಳ್ ಶ್ರೀಗಳೀ
ಶ್ವರರೀ ಪುಣ್ಯಮಠಕ್ಕನಲ್ಪೊರೆವೆನೇನೀ ಕ್ಷೇತ್ರದೊಂದಾಯಮಂ ॥೧೦॥

ಕುಲಿಶಂ ಪಾತಕನಿಚಯಾ
ಚಲಕೆನೆ ವಿಷಹಾರಿಯಾಗಿ ಶಿವಯೋಗಿವರೋ
ಜ್ವಲ ಬಲದೊಳೊಗೆದ ಗಂಗಾ
ಜಲಂ ಸಮುದ್ಧರಿಪೆನೆನುತೆ ಮೊರೆಗುಂ ಪರಿಗುಂ ॥೧೧॥

ಮಾತಂ ಭಾವಕೆ ಕಾರ್ಯಕನ್ವಯಿಸುತೀ ಸುಕ್ಷೇತ್ರ ಚಾರಿತ್ರ ವಿ
ಖ್ಯಾತಿಜ್ಯೋತಿಯನೆಯ್ದೆ ವಿಸ್ತರಿಸಿ ನಿಚ್ಚಂ ಶೀಲಸಂಪಾದನೋ
ಪೇತ ಧ್ಯಾನಶಿವಾರ್ಚನಾಧ್ಯಯನ ದಾಸೋಹಕ್ರಿಯೋತ್ಸಾಹದಿಂ
ಪೂತಾತ್ಮಸ್ಥಿತರೊಪ್ಪುತಿರ್ಪರಿದೊ ವಿಶ್ವಪ್ರೇಮಿಗಳ್ ಸ್ವಾಮಿಗಳ್ ॥೧೨॥

ರಸಸಂಲಗ್ನರೆ ನಾಡಿನೇಳ್ಗೆಗೆ ಸದಾ ಸಾಹಾಯ್ಯ ಸದ್ಬಂಧು ದುಃ
ಖಿಸುತಿರ್ಪರ್ಗೆ ಸಬೋಧನೋದ್ಯತರೆ ಸದ್ವಿದ್ಯಾರ್ಥಿವೃಂದಕ್ಕೆ ಸೂ
ರ್ಯಸಮಾನಾತ್ಮರೆ ಅಜ್ಞತಾ ನಿಶೆಗೆ ಸತ್ಸಂಯೋಜಕರ್ ಭಿನ್ನಹಿಂ
ದು ಸಮಾಜಕ್ಕೆನೆ ಪೋಲ್ವರಾರ್ ಶಿವಕುಮಾರಸ್ವಾಮಿಯೊಳ್ ಸ್ವಾಮಿಗಳ್ ॥೧೩॥

ಸ್ವಾಂತಸ್ವಾಸ್ಥ್ಯವಸಪ್ರಮತ್ತಗುಣಮಂ ದೈವೈಕದೊಳ್ ನಿರ್ಮಲಾ
ಕ್ರಾಂತಶ್ರೀಯುತ ನಿಷ್ಠೆಯಂ ಸಕಲ ಕಲ್ಯಾಣೇಚ್ಛೆಯಂ ಜಾತಿ ಪಂ
ಥಾಂತಃಪ್ರಾಂತವಿಭೇದ ದೂರತೆಯ ನಿಷ್ಕಾಮಾನ್ವಿತಂ ಕರ್ಮಯೋ
ಗಾಂತಶ್ಶಕ್ತಿಯನೀಗೆ ತಾಮೆಮಗೆ ವಿಶ್ವೇಶಾತ್ಮರೀ ಸ್ವಾಮಿಗಳ್ ॥೧೪॥

ಮಿರುಗುವ ತಾರೆ ರಶ್ಮಿಯದು ತಾಂ ತನಗಲ್ಪವಿದೆಂದು ಗೋಪ್ಯವಾ
ಗಿರದು ಶಶಾಂಕನಿಲ್ಲವೆನಗೆನ್ನಯ ಕಾಂತಿಯದೆಂದು ಕೆಮ್ಮನಾ
ಗಿರನೆನಗಲ್ಲದಾರ್ಗಿದೆ ಸುತೇಜಮಿದಂ ಕೊಡೆನೆಂದುಪೇಕ್ಷಿಸಂ
ಖರಕರನಂತು ಲೋಕಹಿತಕಾರಿಗಳಪ್ಪುದು ತಪ್ಪರುತ್ತಮರ್ ॥೧೫॥

ನೇಮಂ ಸ್ವಾತ್ಮವಿಕಾಸಕೆಂದು ಧನಮಾ ಕೋಶಂಗಳೊಳ್ ತುಂಬಲೆಂ
ದಾಮೋದಂ ಗುರುಜೀಶಕೈವಲಕಮೆಂದುದ್ಯೋಗಮೆಲ್ಲಂ ಸ್ವದೇ
ಹಾಮೋಹಕ್ಕೆನೆ ಬಾಳ್ದು ಬಂದಡಿಗೆ ಕುಂಬಿಟ್ಟಾಗ ಕೊಟ್ಟಾಗ ಕೋ
ಪಾಮಂದತ್ವದೆ ಭಕ್ತರಂ ಸುಲಿದು ತಿಂಬರ್ ಸ್ವಾಮಿಗಳ್ ಯೋಚಿಸಲ್ ॥೧೬॥

ನೆಮನಂ ಸಲ್ಗೆಮ ಸಿದ್ಧಗಂಗೆಗೆ ಮಹಾಪಾಪಘ್ನ ತೀರ್ಥಕ್ಕೆ ದಿ
ವ್ಯಮುನೀಂದ್ರಾರ್ಚನೆಯಿಂ ತಪಃಕ್ರಿಯೆಗಳಿಂದಂ ಪೂತಮಾಗೊಪ್ಪುವು
ತ್ತಮ ಭೂಮಾತೆಗೆ ಯೋಗಸಿದ್ಧಯತಿ ಪಾರಂಪರ್ಯಕೀ ಕ್ಷೇತ್ರದ
ಲ್ಲಮಿತಾಸಕ್ತಿಯು ಭಕ್ತಿಯುಂ ತಳೆದ ವಿಪ್ರವ್ರಾತ ಸನ್ಮಾರ್ಗಕಂ ॥೧೭॥

ವೋದಂ ಜ್ಞಾನ ವಿಬೋಧಮೆಂದು ಬಗೆದೀ ಶ್ರೀಗಳ್ ಸುಶಿಷ್ಯರ್ಗೆ ವಿ
ದ್ಯಾದಾನೌದನದಾನದಿಂ ವಸತಿಸೌಕರ್ಯಂಗಳಿಂ ಕಲ್ಪವೋಲ್
ಗೈದರ್ ಸಂಸ್ಕೃತವೇದ ಲೌಕಿಕಮೆನಿಪ್ಪಾ ಕಲ್ಪಿಯಂ ಸರ್ವಥ
ರ್ಮೋದಾರರ್ ಕವಿ ಕಾವ್ಯಕಾರರಖಿಳ ಶ್ರೀಸ್ವಾಮಿಗಳ್ ಸ್ವಾಮಿಗಳ್ ॥೧೮॥

ಸಮಾಪ್ತಿಕಂದ

ಇದು ಗೀತೆಯಂತೆ ಕವಿಕಾ
ವ್ಯದ ವರ್ಣನೆಯಂತೆ ಧರ್ಮವಿಜಯಾಜಿದಿನಾಂ
ಕದವೊಲ್ ಮೊದಲಕ್ಕರ ಪದ
ಪದಿನೆಂಟರ ಶ್ರೀಪ್ರಶಸ್ತಿ ಕವಿಕೇಶವನಿಂ ॥

—ಟಿ. ಕೇಶವಭಟ್ಟ

## ಸಿದ್ಧಗಂಗೆಯೊಳಗೊಂದು ಬುದ್ಧಿಗಂಗೋತ್ರಿ

ನಿರಾಭಾರೀ ನಮಸ್ತುಭ್ಯಂ ಮುಖಂ ವ್ಯಾಹರತೇ ಯದಾ
ತನ್ಮುಖಂ ಪಾವನಂ ತೀರ್ಥಂ ಸರ್ವಪಾಪವಿನಾಶನಂ
ಅಪಾರ ಕಲ್ಯಾಣ ಗುಣಾರ್ಣವಾಯ ಶ್ರೀಮನ್ನಿರಾಭಾರಿ ನಿರಂಜನಾಯ
ಶಿವಾನುಭಾವೀ ಸ್ತುತಸದ್ಗುಣಾಯ ಶಿವಕುಮಾರೇಶಾಯ ನಮೋ ನಮೋಸ್ತು.

ವಚನ: ಮರ್ತ್ಯಲೋಕದ ಮುಗ್ಧರಬಾಳು ಹಾಳಾಗಿ ಹೋಗಬಾರದೆಂದು ಕರ್ತನಟ್ಟಿದನಯ್ಯ ಒಬ್ಬ ಕ್ರಿಯಾಶೀಲ ಕರುಣಾಮೂರ್ತಿಯ. ಆ ಕರ್ತವ್ಯದಕ್ಷ ಕಾರುಣ್ಯಮೂರ್ತಿಯು ಬಂದು ಸಿದ್ಧಗಂಗೆಯ ತೀರ್ಥವಂ ತನ್ನ ಕ್ರತುಶಕ್ತಿಯಿಂ ವಿದ್ಯಾವಾರಿಧಿಯಾಗಿ ಭೋರ್ಗರೆವಂತೆ ನಿರ್ಮಿಸಿ, ಸಿದ್ಧಗಂಗೆಯೊಳಗೊಂದು 'ಬುದ್ಧಿಗಂಗೋತ್ರಿ'ಯಂ ನಿರ್ಮಿಸಿದ ಪರಿಯ ನೋಡಿ ಭೋ ! ಅವಿದ್ಯಾಗಣ, ಅಜ್ಞಾನಿಗಣ, ದಾರಿದ್ರ್ಯಗಣಂಗಳನೆಲ್ಲ ಹಿಡಿತಂದು ಅಸಂಖ್ಯಾತ ವಿದ್ಯಾವಿಹೀನರಂ ಕರೆದು ಜಾತಿ ಕುಲ ಮತ ಪಂಥ ಗಂಡು ಹೆಣ್ಣು ಭಾಷೆ ಭೇದಂಗಳೊಂದನೂ ಲೆಕ್ಕಿಸದೆ ಮೋಸಶೋಷಣೆಗಳಿಗೆ ಈಡಾಗುವ ಮಂದಬುದ್ಧಿಯೊಂದಕೇ ಮರುಗಿ ಅವರಿಗೆಲ್ಲ ಅಶನ ವಸನ ಅಂಕಣ ಭೋಜನಂಗಳ ನೀಡಿ, ವಿದ್ಯೆ ವಿಜ್ಞಾನ ವ್ಯವಹಾರ ಸುಜ್ಞಾನಂಗಳ ಪಸಾರಮನಿಕ್ಕಿ ಸದ್ವಿದ್ಯೆಯ ಕುಳಸ್ಥಳದ ಮಹಾಪವಾಡಮಂ ಮೆರೆದು ತೋರಿ, ಜಗವೆಲ್ಲ ಕಣ್ಣಾಗಿ ನೋಡುತ್ತಿರೆ ಸದ್ವಿದ್ಯೆಯಸಂದೀಪ್ತ್ವಜಮನೆತ್ತಿಸಿ ಮರ್ತ್ಯರನ್ನು ಮಹಂತರೆನ್ನಿಸುವ ನಿಕ್ಷ್ಯಣಿಕೆಯಾದ ಪರಿಯ ಅಚ್ಚರಿಯ ಕಾಣಿ ಭೋ! ಸಿದ್ಧಗಂಗೆಯೊಳಗಿಪ್ಪ ಈ ಬುದ್ಧಿಗಂಗೋತ್ರಿಯು ಸಿದ್ಧರಾಗಿ ನಾಡಿನ ಒಳಹೊರಗಿಪ್ಪ ವಿದ್ಯಾಗಣಂಗಳ ತಿಂಥಿಣಿಯು ಕಂಡೆನ್ನ ಮನ ಉಬ್ಬಿ ಕೊಬ್ಬಿ ಹರುಷವಾರಿಧಿಯೊಳೀಜಾಡಿ ಮುದವಟ್ಟು ತೇಲಾಡುತಿದ್ದಿತಯ್ಯ. ನಮ್ಮ ಶಿವಕುಮಾರ ನಿರಾಭಾರಿಗುರುವರೇಣ್ಯನ ವಿದ್ಯಾದಾಸೋಹದ ಘನವನೇನೆಂದುಪಮಿಸುವೆನಯ್ಯಾ ನಂಜುಂಡಲಿಂಗವೇ.

—ಮಾ. ನಂ. ನಂಜಪ್ಪ

# ಸಿದ್ಧಗಂಗೆಯ ಮಠ

ಮಣ್ಣಿನಮಠ! ಕಲ್ಲಿನಮಠ! ಗಚ್ಚಿನಮಠ! ಗಾರೆಯಮಠ! ಗಿರಿಯಮಠ! ಹಿರಿಯ ಮಠ! ದಶಮಠ! ಶತಮಠ! ಸಹಸ್ರಮಠ! ಲಕ್ಷಮಠ! ಇಂತಪ್ಪ ಬಿರುದಿನ ಮಠಂಗಳು ಬಹು ಬಹಳ ದಾಸೋಹಂ ಬಿರುದಿನ ಮಠಂಗಳು ಅತಿವಿರಳ! ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ ದಾಸೋಹಂ ಬಿರುದಿನ ಮಠವು ಸಿದ್ಧಗಂಗೆಯ ಮಠವು!

ಶ್ರೀಸಿದ್ಧಗಂಗೆಯು ಸಿದ್ಧಪುರುಷರ ಬೀಡಾಗಿಹುದು! ಶುದ್ಧ ಪುರುಷರ ನಾಡಾಗಿಹುದು! ಪ್ರಸಿದ್ಧ ಪುರುಷರ ನಾಡಾಗಿಹುದು! ಧರ್ಮದ ರಂಗದೊಳು, ಸಂಸ್ಕೃತಿಯ ರಂಗದೊಳು, ವಿದ್ಯೆಯ ರಂಗದೊಳು, ದಾಸೋಹದ ರಂಗದೊಳು ಉತ್ತುಂಗಶಿಖರವ ಮುಟ್ಟಿ, ಮೆಟ್ಟಿ, ಘಟ್ಟಿಗೊಂಡಿಹುದು! ಗೋಸಲಯತಿವರನು ಗಂಗೆಯ ನಿರ್ಮಿಸಿ, ಮಠವ ಸ್ಥಾಪಿಸಿದ ಪಠದ ಭೂಮಿ ಇದು! ತೋಂಟದ ಯತಿವರನು ವಚನಂಗಳ ರಚಿಸಿ, ಜ್ಞಾನವ ಬಿತ್ತರಿಸಿದ ಪಾವನಭೂಮಿ ಇದು! ಅಟವೀಶ ಯತಿವರನು ಕೈಕೊಂಡು, ದಾಸೋಹವ ಅನುಷ್ಠಾನವ ನಡೆಸಿದ ನಿಷ್ಠೆಯ ಭೂಮಿ ಇದು! ಉದ್ಧಾನ ಯತಿವರನು ಮಕ್ಕಳಿಗೆ ವಿದ್ಯೆಯ ಕಲಿಸಿದ ವಿಶಿಷ್ಟ ಭೂಮಿ ಇದು! ಇಂತೀ ಯತಿವರರೆಲ್ಲರ ವಿವಿಧ ಕಾರ್ಯಂಗಳ ಒಂದುಗೂಡಿಸಿ ಲೋಕ ಅಚ್ಚರಿಗೊಂಬಂತೆ ಶಿವಕುಮಾರ ಯತಿವರನು ಇಂದು ಸಮಗ್ರ ಸೇವೆಯ ಸಲ್ಲಿಸುತ್ತಾ, ಜಗದ ನಿಜಗುರುವಾಗಿ ಶೋಭಿಪ ಶುಭ್ರಭೂಮಿ ಇದು! ಇಂತಪ್ಪ ಮಹಾ ಪುಣ್ಯಕ್ಷೇತ್ರಕ್ಕೆ, ಇಂತಪ್ಪ ಮಹಾಗುರುಪರಂಪರೆಗೆ ನಾವು ಅಹರ್ನಿಶಿ ನಮೋ ನಮೋ ನಮೋ ಎನುತಿಹೆವು ಬಸವಲಿಂಗಪ್ರಿಯ ಕಟ್ಟೆಯ ಬಸವೇಶ್ವರನಲ್ಲಿ!

—**ಜೀರಿಗೆಕಟ್ಟೆ ಬಸವಪ್ಪ**

# ಸಿದ್ಧಗಂಗಾಷ್ಟಕಂ

ಸುರನುತಪಾಲಿನಿ ಮುನಿಗಣಮಾಲಿನಿ ಬುಧಗಣತೋಷಿಣಿ ವಿಷ್ಣುನುತೇ
ಬಹುಸುಖದಾಯಿನಿ ಮಂಗಲಕಾರಿಣಿ ಭವಜಯಕಾರಿಣಿ ಪಾಲಯಮಾಮ್ ॥೧॥

ಪಾಪವಿನಾಶಿನಿ ಜೂಟವಿಭೂಷಿಣಿ ಶಂಭುವಿಲಾಸಿನಿ ಭಕ್ತನುತೇ
ಭಕ್ತಿವಿದಾಯಿನಿ ಮುಕ್ತಿಸದಾಯಿನಿ ರೋಗನಿವಾರಿಣಿ ಪಾಲಯಮಾಮ್ ॥೨॥

ಯೋಗವಿಭಾವಿನಿ ಮೋಹವಿನಾಶಿನಿ ದುಃಖನಿವಾರಿಣಿ ಸಿದ್ಧಿಯುತೇ
ಪಶುಪತಿಭೂಷಿಣಿ ಸುರಪತಿಸೇವಿನಿ ಭವಭಯ ಹಾರಿಣಿ ಪಾಲಯಮಾಮ್ ॥೩॥

ಸಜ್ಜನರಕ್ಷಿಣಿ ಖಲಜನಮಾರಿಣಿ ಮಣಿಗಣಶೋಭಿನಿ ಸರ್ವನುತೇ
ಮಂಗಲರೂಪಿಣಿ ಶೋಕನಿವಾರಿಣಿ ಹಿಮಗಿರಿನಂದಿನಿ ಪಾಲಯಮಾಮ್ ॥೪॥

ತ್ರಿಭುವನ ಪೋಷಿಣಿ ದುರ್ಗತಿನಾಶಿನಿ ಶಂಕರತೋಷಿಣಿ ಹರ್ಷಯುತೇ
ದನುಜನಿರೋಧಿನಿ ಸುರಗಣನಂದಿನಿ ಪಾಪವಿಮೋಚಿನಿ ಪಾಲಯಮಾಮ್ ॥೫॥

ಸಹಸ್ರಶಃ ಸಂತಿ ನಕಿಂ ಸ್ರವಂತ್ಯಃ ಪುನಂತಿ ಯಾಃ ಸ್ನಾನವಶೇನ ದೇಹಮ್
ನ ಕೇವಲಂ ಗಾತ್ರಶುಚಿಂ ತ್ವದೀಯೇ ಭಜಂತಿ ಮುಕ್ತಿಂ ಚ ಜನಾಃ ಪ್ರವಾಹೇ ॥೬॥

ಯಾಚೇ ನ ಗಂಗೇ । ವರಸಿದ್ಧಗಂಗೇ ತ್ವಾಂ ರಾಜ್ಯಲಕ್ಷ್ಮೀಮಭಿಮಾನಧಾತ್ರೀಮ್
ಅಭ್ಯರ್ಥಯೇ ಬದ್ಧಶಯದ್ವಯೋಽಹಮ್ । ಸದಾಮುದಾ ತೇಽಂಘ್ರಿಸರೋಜ ಪೂಜಾಮ್ ॥೭॥

ಸಹಸ್ರಂ ವಿದ್ಯಂತೇ ಜನನೀ ವಿಬುಧಾಃ ಕ್ಷುದ್ರಫಲದಾ । ನಯಾಚೇ ಸ್ವಪ್ನೇ ವಾ ಕೃಪಣ ಇವತಾನ್ ದೈನ್ಯವಚನೈಃ
ತ್ವಮೇಕಾ ಶಕ್ತಾ ಭೋಃಕುಲುಷಿತ ಧಿಯಾಂ ಪಾಪಹರಣೇ। ತತಸ್ತ್ವಾಂ ಯಾಚೇಽಹಂ ನಿರುಪಮ
ಸುಖಾಂ ಮೋಕ್ಷ ಪದವೀಮ್ ॥೮॥

—**ವಿದ್ವಾನ್ ಬಿ. ಗಂಗಪ್ಪ**

# ಶ್ರೀ ಶಿವಕುಮಾರಸ್ವಾಮ್ಯಷ್ಟಕಂ

ಶ್ರೀಗುರುವೆ ನಿಜದರಿವೆ ಶಾಂತಿಸುಖದಾಗರವೆ
ಭೋಗಭಾಗ್ಯವನೀವ ಭೂತಳದ ಸುರತರುವೆ
ನಾಗಭೂಷಣಭಕ್ತಜನರ ಭಾಗ್ಯೋದಯವೆ ದೀನಜನ
ವರಬಂಧುವೆ ।

ತ್ಯಾಗತಳಹದಿ ಮೇಲೆ ನಿಂತ ಸುರಮಂದಿರವೆ
ಯೋಗಿಜನಮರಕತವೆ ಸೌಂದರ್ಯಸಾಗರವೆ
ಬಾಗಿ ಮಣಿಯುವೆ ಪ್ರಭುವೆ ಸಿದ್ಧಗಂಗಾ ಮಠದ
ಶಿವಕುಮಾರೇಶ ವಿಭುವೆ ॥೧॥

ಶಿವರೂಪಮಂ ಧರಿಸಿ ಭುವಿಯ ಮೇಲವತರಿಸಿ
ಶಿವಶರಣ ತಿಂಥಿಣಿಯು ನಡೆದ ಮಾರ್ಗದಿ ಗಮಿಸಿ
ಸವಳಿಸಪ್ತಾವರಣ ಪರಮ ಪಂಚಾಚಾರ ಷಟ್ಸ್ಥಲಂಗಳ
ಬೋಧಿಸಿ ।

ಭವಭವದಿ ಬಂದಿಳಿಗೆ ಬಹುವಾಗಿ ಬಳಲುತಿಹ
ಶಿವಭಕ್ತಸಂತತಿಯ ತ್ರೈಮಲವ ಕಳೆಯುತಿಹ
ಭವರೋಗ ಸದ್ವೈದ್ಯ ಶಿವಕುಮಾರೇಶಭವನಾಶಗೈಯೋ
ಪ್ರಭುವರಾ ॥೨॥

ವರವಿದ್ಯೆ ಕುಲವನಿತೆ ಸವೆಯದಾನಂದ ಸುತ
ವಿರತಿಯನುಕೂಲಜನ ಶಾಂತಿಸಖ ಮತಿಗೇಹ
ಪರಭಕ್ತಿಮಾತೆ ಸುಚರಿತಪಿತ ಕ್ಷಮೆಭೃತ್ಯನಾಚಾರ
ಸುಕ್ಷೇತ್ರವು ।

ಸಿರಿಗುವರಿ ಸತ್ಯ ದಾಸಿಯಹಿಂಸೆ ತೊತ್ತನಪ
ಹರಣ ಮೈತ್ರ್ಯಾದಿಪೌತ್ರರು ಧರ್ಮರಥ ನಂಬು
ಗೆ ರಹಸ್ಯಜನ ಮುಕ್ತಿದೇಶವರಿವೆ ಗುರುವಹ
ಶಿವಕುಮಾರೇಶ ಶರಣು ॥೩॥

ಕುಲಜಾತಿ ಮತವರ್ಣ ಯಾವುದನು ಲೆಕ್ಕಿಸದೆ
ದಲಿತಸೇವೆಯೆ ದೈವಸೇವೆಯೆಂಬುದ ತಿಳಿದು
ಬಲುಬಳಲಿ ಬಡತನದಿ ಬಳಿಸಾರ್ದ ಹಲವಾರು
ದಶನೂರು ಮಕ್ಕಳುಗಳ ।

ಒಲುಮೆಯಿಂ ಮೈದಡವಿ ವಸ್ತ್ರವೋದನವಿತ್ತು
ಸಲಿಗೆಯಿಂ ಸಂತೈಸಿ ವಿದ್ಯೆಬುದ್ಧಿಯ ಕಲಿಸಿ
ಸಲೆ ಮುದದಿ ಪೊರೆಯುತಿಹ ಕಾರುಣ್ಯಗುಣಸಿಂಧು
ಕೃಪೆದೋರು ದೀನಬಂಧು ॥೪॥

ಮಾರಮರ್ದನರೂಪಿ ಮೃದುಮಧುರಸಲ್ಲಾಪಿ
ಸಾರಗುಣಸಂಪನ್ನ ಶರಣಸಂಕುಲರನ್ನ
ಪಾರಮಾರ್ಥಜ್ಞಾನಿ ಷಟ್ಸ್ಥಲಸುವಿಜ್ಞಾನಿ
ಸುಜ್ಞಾನವರದಾನಿಯು ।

ಚಾರುಮಂಗಳಮೂರ್ತಿ ಶಾಶ್ವತಾಮಲಕೀರ್ತಿ
ಕಾರುಣ್ಯಘನಶರಧಿ ವೈರಾಗ್ಯಪುಣ್ಯನಿಧಿ
ವೀರಶೈವಾಚಾರನಿಷ್ಠ ಜಂಗಮಶ್ರೇಷ್ಠ ಶಿವಕುಮಾರೇಶ
ಶರಣು ॥೫॥

ರವಿಯುದಯಕೇಳೆಂಟು ಘಳಿಗೆ ಮುನ್ನವೆ ಎದ್ದು
ಜವದಿಂದ ಶೌಚಾದಿಗಳ ಮುಗಿಸಿ ಮೌನದಿಂ
ತವೆ ಮಿಂದು ಮಡಿಯುಟ್ಟು ತಾದಾತ್ಮ್ಯದಿಂದಿ
ಷ್ಟಲಿಂಗಾರ್ಚನೆಯ ತೀರಿಸಿ

ಭುವಿಜನರ ಮಂಗಳ ಜಪತಪವನಾಚರಿಸಿ
ಕವಿಜನರ ಕಲ್ಪನೆಗೆ ಸಿಗದ ಶಿವನೊಳ್ಬೆರೆವ
ಶಿವಶರಣಕುಲತಿಲಕ ಶಿವಕುಮಾರೇಶ ವಿಭು ಶಿವಪಾದ
ತೋರೋ ಪ್ರಭು ॥೬॥

ಸ್ವಾಮಿಯಾದವರಾವ ನೇಮನಿಷ್ಠೆಯ ಹಿಡಿದು
ಪ್ರೇಮಪಥದಿಂ ನಡೆಯಬೇಕೆಂಬುದಂ ತೋರಿ
ಕಾಮಿಸದೆ ಕಾಮಿನೀಕಾಂಚನಂಗಳನುಳಿದು
ವೈರಾಗ್ಯಮೂರ್ತಿಯೆನಿಸಿ ।

ವ್ಯೋಮಕೇಶನ ಬೆರೆಯೆ ಹಗಲಿರುಳು ತಪಿಸುತಿಹ
ಕಾಮಾರಿಭಕ್ತಜನ ಹೃದಯದೊಳ್ನೆಲೆಸಿರ್ಪ
ಸೋಮಧರಸಮರೂಪ ಶಿವಕುಮಾರೇಶ ವಿಭು
ಬಿಡದೆಮ್ಮ ಕಾಯೋ ಪ್ರಭು ॥೭॥

ಮಿಸುನಿವಣ್ಣದ ಮೈಗೆ ಹಸನು ಕಾವಿಯ ಧರಿಸಿ
ಲಸಿತಭಸಿತವ ಪೂಸಿ ನೊಸಲ ಮಿಗೆ ಸಿಂಗರಿಸಿ
ಎಸೆವ ರುದ್ರಾಕ್ಷಿಯಿಂ ಕೊರಳನ್ನಲಂಕರಿಸಿ
ವಿನಯದಿಂದನವರತವು ।

ತುಸು ಬಾಗಿ ಶೋಭಿಸುವ ತಲೆಗೆ ಮುಂಡಾಸಿರಿಸಿ
ಮಸುಳಿಸದ ಸೂರ್ಯಸಮತೇಜದಿಂ ಕಂಗೊಳಿಪ
ಅಸಮಾಕ್ಷಸಮರೂಪ ಶಿವಕುಮಾರೇಶ ವಿಭು ಸದ್ಗತಿಯ
ತೋರೋ ಪ್ರಭು ॥೮॥

—ಪಿ. ಬಸವಣ್ಣ, ಕೊಳ್ಳೇಗಾಲ

# ಶ್ರೀ ಶಿವಕುಮಾರ ಯತೀಂದ್ರ ಪ್ರಶಸ್ತಿ ಶತಕಮ್

ಅಸ್ತಿ ಕರ್ಣಾಟಕೋನಾಮ । ನೀವೃದ್ಭಾರತಮಂಡಲೇ ।
ಸರ್ವಕರ್ಣೇಷ್ವಟನ್ ಲೋಕೇ ಪ್ರಾಪ್ತಾನ್ವರ್ಥಾಭಿಧಾನವಾನ್ ॥೧॥

ನಾನಾತರುಸಮಾಕೀರ್ಣಕಾನನೈಃ ಪರಿಶೋಭಿತಃ ।
ಗುಹಾವಸ್ಥಿತಯೋಗೀಂದ್ರ ಸಹಸ್ರಾಂಚಿತಭೂಧರಃ ॥೨॥

ಕಾವೇರೀತುಂಗಭದ್ರಾದಿ ತಟಿನೀಶತಪಾವನಃ ।
ಪಂಪಾಗರಲಪುರ್ಯಾದಿ ಮಹಾಕ್ಷೇತ್ರಪವಿತ್ರಿತಃ ॥೩॥

ಸರ್ವಧರ್ಮಮತಾಚಾರ್ಯದಿವ್ಯಬೋಧನಿನಾದಿತಃ ।
ದ್ವೈತಾದ್ವೈತಶಿವಾದ್ವೈತ ಗುರುಪೀಠಾತ್ತಗೌರವಃ ॥೪॥

ಸದ್ದೇವಮಾತೃಕ ನದೀಮಾತೃಕೈಸ್ಸುಮನೋಹರಃ ।
ವಾಪೀಕೂಪತಟಾಕಾದಿ ಜಲಾಶಯಸುಸಂಭೃತಃ ॥೫॥

ಶಿವಾಚಾರಾಭಿಸಂಪನ್ನ ಪ್ರಜಾತತಿ ವಿಭೂಷಿತಃ ।
ಸತ್ಯ ಲೋಕಪ್ರತಿಚ್ಛಂದ ಇವ ಸರ್ವಶುಭಂಕರಃ ॥೬॥

ಸಿದ್ಧಗಂಗಾಚಲಸ್ತತ್ರ ಪ್ರವಿಭಾತಿ ಶಿಲೋಚ್ಚಯಃ ।
ಕರ್ಣಾಟವಸುಧಾದೇವ್ಯಾಃ ಕಿರೀಟ ಇವ ಶೋಭನಃ ॥೭॥

ಕ್ರೋಶತ್ರಯಮಿತೇದೂರೇ ಶಿವಗಂಗಾಮಹೀಧರಾತ್ ।
ವಿರಾಜತೇ ದ್ರೋಣಪುರ್ಯಾಃ ಕ್ರೋಶಮಾತ್ರೇ ಧರಾಧರಃ ॥೮॥

ಕೈಲಾಸಂ ಶೀತಬಹುಲಂ ವಿಹಾಯಾತ್ರ ಮಹೇಶ್ವರಃ ।
ಹಿತೋಷ್ಣೇ ವಸತೇ ನಿತ್ಯಂ ಧೃತಸಿದ್ಧೇಶ್ವರಾಭಿದಃ ॥೯॥

ಸಿದ್ಧಸಾಧಕಯೋಗೀಂದ್ರ ಗಣಾಧಿಷ್ಠಿತಕಂದರಃ ।
ಅತಿಶೇತೇ ಮಹಿಮ್ನಾಯಂ ಶ್ರೀ ಶೈಲಮಪಿಪರ್ವತಃ ॥೧೦॥

ಕದಾಚಿಚ್ಛಿವಯೋಗೀಂದ್ರಃ ಆಯಯೌ ಕಟಕಂ ಗಿರೇಃ ।
ಗೋಸಲೋಪಪದೋಪೇತ ಸಿದ್ಧೇಶ್ವರಸುನಾಮಭಾಕ್ ॥೧೧॥

ವಾಣಿಜ್ಯಪುರಮಧ್ಯಸ್ಥ ಜಗದ್ಗುರು ಮಹಾಮಠೇ ।
ಕ್ರಮಾತ್ಪಂಚ ದಶಸ್ವೋಯಂ ಶಿವಾಂಶಪ್ರಭವೋ ಮುನಿಃ ॥೧೨॥

ಸ್ವಹಸ್ತಕಂಜಸಂಜಾತಂ ಶಂಕರಾಚಾರ್ಯನಾಮಕಮ್ ।
ಸ್ವಪೀಠೇ ಸ್ಥಾಪಯಿತ್ವಾಽಥ ಲೋಕಾನುಗ್ರಹಕಾಮ್ಯಯಾ ॥೧೩॥

ಶಿವಧರ್ಮೋಪದೇಶಾಯ ಪ್ರಸ್ಥಿತೋದಕ್ಷಿಣಾಂದಿಶಮ್ ।
ಏಕೋತ್ತರಶತೈಸ್ಸಾಕಂ ವಿರಕ್ತೈರನುಯಾಯಿಭಿಃ ॥೧೪॥

ಪ್ರಶಾಂತರಮಣೀಯಂ ತಂ ಸವಿಲೋಕ್ಯ ಗಿರಿಂ ಶುಭಮ್ ।
ಶಿವಯೋಗರತಸ್ತತ್ರ ನ್ಯವಸಚ್ಛಿವದೇಶಿಕಃ ॥೧೫॥

ಕದಾಚಿದರ್ಧರಾತ್ರೇಸಃ ಕಟಕಸ್ಥಮಠೇ ಗುರುಃ ।
ಸ್ಥಿತಃ ಶುಶ್ರಾವ ಸಹಸಾ ಕರುಣಾಕ್ರಂದನ ಧ್ವನಿಮ್ ॥೧೬॥

ಕಿಮೇತದಿತಿ ಸಂಭ್ರಾಂತಃ ಝಡಿತ್ಯುತ್ಥಾಯ ಯೋಗಿರಾಟ್ ।
ರವಾನುಸರಣಂಕುರ್ವನ್ ಯಯೌ ಪರ್ವತಮಸ್ತಕಮ್ ॥೧೭॥

ತತ್ರಾಪಶ್ಯತ್ಸ್ವ ಶಿಷ್ಯಂಸಃ ಗುಹಾಯಾಂ ಜ್ವರಪೀಡಿತಮ್ ।
ಕ್ರೋಶಂತಂ ವಾರಿವಾರೀತಿ ವಿಲುಠಂ ತಂ ಧರಾತಲೇ ॥೧೮॥

ತೃಷಾರ್ತಂತಂ ಪರಿತ್ರಾತುಂ ಕೃಪಾಪರವಶೋ ಮುನಿಃ ।
ಜಾನುನಾ ದಕ್ಷಿಣೇನಾಶು ಪ್ರಜಘಾನ ಗುಹಾಶಿಲಾಮ್ ॥೧೯॥

ನಿಸ್ಸಸಾರ ಶಿಲಾತ್ತಸ್ಮಾತ್ ಜಲಧಾರಾ ಸುಶೀತಲಾ ।
ಸಿದ್ಧೇಶ್ವರಯತೀಶಾನಪ್ರಭಾವಾತ್ಪರಮಾದ್ಭುತಾತ್ ॥೨೦॥

ಜಲಪಾನಾತ್ತೃಷಾ ಶಾಂತಾ ಹಸ್ತಸ್ಪರ್ಶಾನ್ಮುನೇಸ್ತದಾ ।
ಜ್ವರೋಪ್ಯಪಗತಸ್ಸದ್ಯಃ ನನಾಮ ಸಚ ದೇಶಿಕಮ್ ॥೨೧॥

ಅದ್ಯಾಪಿ ನಿಸ್ಸರಂತೀ ಸಾ ಜಲಧಾರಾ ಸುಪಾವನಾ ।
ದೃಶ್ಯತೇ ಸಿದ್ಧಗಂಗೇತಿ ಪುಣ್ಯನಾಮ್ನಾ ಪ್ರಕೀರ್ತಿತಾ ॥೨೨॥

ತತ್ತೀರ್ಥಸೇವನಾನ್ಮರ್ತ್ಯಃ ಕೃತಕೃತ್ಯೋ ಭವಿಷ್ಯತಿ ।
ಐಹಿಕಾಮುಷ್ಮಿಕಾತ್ಪಾಪಾನ್ನಿರ್ಮುಕ್ತಸ್ಸುಖಮೇಷ್ಯತಿ ॥೨೩॥

ಏವಂ ಗೋಸಲ ಸಿದ್ಧೇಶಃ ಸ್ವಪ್ರಭಾವಂ ಪ್ರದರ್ಶಯನ್ ।
ಧವಲೀಚಕಾರ ಭುವನಂ ಕೀರ್ತ್ಯಾ ವಿತತಯಾ ಮುನಿಃ ॥೨೪॥

ಶ್ರೀ ವೀರಶೈವಂ ಭುವನೇ ಪ್ರಸಾರ್ಯ । ಸಿದ್ಧೇಶ್ವರೋ ಗೋಸಲಪೂರ್ವನಾಮಾ ॥
ಪ್ರವರ್ತಯಿತ್ವಾ ಮಠ ಸಂಪ್ರದಾಯಂ । ಶಿವೈಕತಾಂ ಪ್ರಾಪ ಶಿವಾಂಶ ಜಾತಃ ॥೨೫॥

ವಾಣಿಜ್ಯ ಪುರಪೀಠಸ್ಥ ನಿರಂಜನ ಯತೀಶ್ವರಃ ।
ಶಂಕರಾಚಾರ್ಯ ಯೋಗೀಂದ್ರಃ ಸಿದ್ಧೇಶ್ವರಕರಾಬ್ಜಭೂಃ ॥೨೬॥

ಗೋಸಲೋ ಚೆನ್ನಬಸವರಾಜೇಂದ್ರಶ್ಚ ನಿರಂಜನಃ ।
ಶ್ರೀ ಶಂಕರ ಶಿವಾಚಾರ್ಯ ಪಾಣಿಪಂಕಜ ಸಂಭವಃ ॥೨೭॥

ಉದ್ದಾನ ಸಿದ್ಧಲಿಂಗೇಶ ಯೋಗೀಶೋ ಮಹಿಮಾಂಚಿಂತಃ ।
ಶ್ರೀ ಚೆನ್ನಬಸವೇಶಾನ ಕರಕಂಜ ಸಮುದ್ಭವಃ ॥೨೮॥

ಏತೇ ಜಂಗಮಯೋಗೀಂದ್ರಾಃ ನಿರಂಜನ ಪದಾಂಕಿತಾಃ ।
ಮಹಾನುಭಾವಾ ವಿಖ್ಯಾತಾಃ ಶಿವಯೋಗ ಧುರಂಧರಾಃ ॥೨೯॥

ವೀರಶೈವಮಹಾತತ್ತ್ವಮಹಾಂಭೋನಿಧಿಪಾರಗಾಃ ।
ಸದ್ಬೋಧವೃಷ್ಟಿಶಮಿತ ಲೋಕಸಂತಾಪ ಸಂಚಯಾಃ ॥೩೦॥

ಸಿದ್ಧಗಂಗಾಚಲತಟ ವಿರೂಢಂ ಮಠ ಭೂರುಹಮ್ ।
ವರ್ಧಯಾಮಾಸುರಾಚಾರ್ಯಾಃ ಕೃತಭೂರಿ ಪರಿಶ್ರಮಾಃ ॥೩೧॥

ಫಲಾಯ ಕಲ್ಪತೇ ಯೋಽಯಮದ್ಯಾಪಿ ಮಹತೇ ಧ್ರುವಮ್ ।
ಯೇನ ಜೀವಂತಿ ಬಹವಃ ನಾನಾ ಮಾನವ ಪಕ್ಷಿಣಃ ॥೩೨॥

ಉದ್ದಾನಸಿದ್ಧಲಿಂಗೇಶಃ ದೀರ್ಘದರ್ಶೀ ನಿರಂಜನಃ ।
ಚಕ್ರೇ ಸ್ವಕರಸಂಜಾತಂ ಸಿದ್ಧಗಂಗಾ ಮಠಾಧಿಪಮ್ ॥೩೩॥

ತತಃ ಪ್ರವೃತ್ತಾ ವಿತತಾ ದೇವಗಂಗೇವ ಪಾವನೀ ।
ಸಿದ್ಧಗಂಗಾ ಮಠಾಧೀಶ ಗುರುವಂಶ ಪರಂಪರಾ ॥೩೪॥

ಭುವನಾನಂದ ಜನನೀ ಜನತಾ ಪಾಪಹಾರಿಣೀ ।
ವೀರಶೈವ ಸುತತ್ತ್ವೌಘಃ ಪರಿಪೂರ್ಣಾ ಸುನಿರ್ಮಲಾ ॥೩೫॥

ಬಭೂವ ತಸ್ಯಾಂ ಚ ಪರಂಪರಾಯಾಂ । ಕಾಲೇಗತೇ ಭೀಷ್ಮ ಇವಾತಿ ಪೂತಃ ॥
ಗಂಗಾತಟಿನ್ಯಾಂ ಬಹುಪಾವನಾಯಾಂ । ಉದ್ದಾನಯೋಗೀಶ್ವರ ನಾಮಧೇಯಃ॥೩೬॥

ಉದ್ದಾನಶಿವಯೋಗೀಂದ್ರಃ ಉದ್ದಾನಾಜ್ಞನತಾಮನಃ ।
ಪೀಠೇಽಪಿ ಗುರುಪೀಠಾಧಿಪತ್ಯಂ ನಿರ್ವ್ಯೂಢವಾನ್ ಖಲು ॥೩೭॥

ಯಾತ್ರಾಂ ಪ್ರವರ್ತಯಾಮಾಸ ಸಿದ್ಧೇಶ್ವರ ರಥೋತ್ಸವೇ ।
ಯದಾ ಮಹದ್ಗವಾಂಬೃಂದಂ ಪ್ರತಿವರ್ಷಂ ಮಿಲಿಷ್ಯತಿ ॥೩೮॥

ಸಂಗತಾನಾಂ ಸಮೇಷಾಂಚ ಯಾತ್ರಾಯಾಂ ಭೂರಿಭೋಜನಮ್ ।
ಕಲ್ಪಯಾಮಾಸ ಯೋಗೀಂದ್ರಃ ಯದದ್ಯಾಪಿ ಪ್ರವರ್ತತೇ ॥೩೯॥

ಪಾಠಶಾಲಾಃ ಛಾತ್ರಶಾಲಾಃ ಬಹವಃ ಸ್ಥಾಪಿತಾಸ್ತಥಾ ।
ಛಾತ್ರಾಣಾಮನ್ನದಾನಸ್ಯ ವ್ಯವಸ್ಥಾಪಿ ಕೃತಾಮುನಾ ॥೪೦॥

ಉದ್ದಾನಶಿವಯೋಗೀಂದ್ರ ಮಹಿಮಾ ಕೇನ ವರ್ಣ್ಯತೇ ।
ಸ್ವಯಂ ಪ್ರೇರಿತ ಭಕ್ತೌಘಃ ಧನಧಾನ್ಯಂ ಪ್ರಯಚ್ಛತಿ ॥೪೧॥

ಏವಂ ಗುರುತರಂ ಭಾರಮುದ್ವಹನ್ ದೇಶಿಕೇಶ್ವರಃ
ಜರಾಭಿಭೂತ ಮಾತ್ಮಾನಂ ವಿದಿತಾ ನಮುಪೋದಸಃ ॥೪೨॥

ಏತದ್ಧರ್ಮಧುರಂ ಕೋವಾ ವಹತೇ ಮದನಂತರಮ್ ।
ಇತಿ ಚಿಂತಾಪರೋಯೋಗೀ ನಾಧ್ಯಗಚ್ಛನ್ಮನಃ ಶ್ಯಮಮ್ ॥೪೩॥

ಏಕದಾ ಶಿವಪೂಜಾಂತೇ ಸುಖಾಸೀನಂ ಮಠಾಧಿಪಮ್ ।
ಉಪಗಮ್ಯಯುವಾ ಕಶ್ಚಿತ್ ಪಾದಯೋಃ ಪ್ರಣತೋಽಭವತ್ ॥೪೪॥

ಪ್ರಸನ್ನಗಂಭೀರ ಮನೋಹರಾಕೃತಿಃ। ನಾಪ್ಯುನ್ನತೋನಾಪ್ಯತಿಖರ್ವವಿಗ್ರಹಃ ।
ಕವಾಟವಿಸ್ತಾರಿ ಭುಜಾಂತರಾಂಚಿತಃ ಗಜೇಂದ್ರ ಹಸ್ತೋಪಮ ಬಾಹುಶೋಭಿತಃ॥೪೫॥

ಅರ್ಕಾಂಶು ಭಿನ್ನಾಂಬುಜಮಂಜುಲೋಚನಃ ಸಿತಾಂಶುರಮ್ಯಂಕುಮುದಾಧಿನಾಯಕಮ್
ಮುಖೇನ ಮಂದಸ್ಮಿತ ಭೂರಿಶೋಭಿನಾ। ಜಯಂತಮಾಸೇಚನಕೇನನೇತ್ರಯೋಃ ॥೪೬॥

ತ್ರಿಪುಂಡ್ರ ಸಂಭೂಷಿತ ಫಾಲಪಟ್ಟಃ । ಕರ್ಣಾವತಂಸೀಕೃತ ಬಿಲ್ವಪತ್ರಃ ।
ಪವಿತ್ರ ಸೂತ್ರಗ್ರಥಿತೇಷ್ಟಲಿಂಗ। ಕರಂಡಕಾಕಲ್ಪ ಮನೋಜ್ಞಕಂಠಃ ॥೪೭॥

ಏವಂಮಹಾಪುರುಷ ಲಕ್ಷಣಚಾರುದೇಹಃ ।
ಬಾಲೋಪ್ಯ ಬಾಲ ಇವ ದರ್ಶಿತಧೀರಭಾವಃ ॥

ಭೂಮಿಂಗತಃ ಶಿವಕುಮಾರ ಇತಿ ಪ್ರಜಾನಾಂ।
ತನ್ವನ್‌ಮತಿಂ ಮನಸಿ ಮಾನವಮಂಗಲಾಯ ॥೪೮॥

ತಮಾಲೋಕ್ಯ ಮುನಿಃ ಸದ್ಯಃ ಯುವಾನಂ ವಿಸ್ಮಯಾನ್ವಿತಃ ।
ತದ್ಗುಣಾಕೃಷ್ಟಹೃದಯಃ ಪ್ರಸನ್ನವದನೋಽಭವತ್ ॥೪೯॥

ಕಸ್ತ್ವಂ ಬಾಲಕ ಕುತ್ರತ್ಯಃ ಕಿಮಾಗಮನಕಾರಣಮ್ ।
ತ್ವಾಂದೃಷ್ಟ್ವಾ ದ್ರುವತಿಸ್ವಾಂತಂ ಚಂದ್ರಾಚ್ಚಂದ್ರೋಪಲೋಯಥಾ ॥೫೦॥

ಭಗವನ್, ವೀರಪುರೋನಾಮ ಗ್ರಾಮೋ ಮಾಗಡಿಮಂಡಲೇ ।
ಅಸ್ತಿ ವೀರಶಿವಾಚಾರ ನಿರತೈರುಪಶೋಭಿತಃ ॥೫೦॥

ತದ್ಗ್ರಾಮಾಭಿಜನೋಽನಾಮ್ನಾ ಶಿವಪ್ಪೋಽಹಂ ಸಮಾಗತಃ ।
ಕೃತಾರ್ಥಯಿತುಮಾತ್ಮಾನಂ ಭವಚ್ಚರಣದರ್ಶನಾತ್ ॥೫೨॥
ವಿದ್ಯಾರ್ಜನಾಸಕ್ತಮನಾಃ ಯಾಮಿ ಕಲ್ಯಾಣಪತ್ತನಮ್ ।
ಮಹಾವಿದ್ಯಾಲಯೇಽತ್ರ ಪಠಿತುಂ ಸಿದ್ಧಿತಮ್ ಮಯಾ ॥೫೩॥
ಪದವೀಮಧಿಗಂತುಂಮೇ ಪ್ರತ್ಯಾಶಾಕುಲಿತಂಮನಃ ।
ಅನುಗ್ರಹೋಽವಿಧಾತವ್ಯಃ ಮನ್ಮನೋರಥಸಿದ್ಧಯೇ ॥೫೪॥
ನಿವೇದಯಂತಂ ತರುಣಂ ಗುರುರ್ಮಧುರಯಾ ಗಿರಾ ।
ತನ್ಮಸ್ತಕನ್ಯಸ್ತಕರಃ ಸ್ಮಿತಪೂರ್ವಮಭಾಷತ ॥೫೫॥
ಸಿದ್ಧೇಶ್ವರ ಪ್ರಸಾದೇನ ಶುಭೋದರ್ಕಂ ಭವಿಷ್ಯತಿ ।
ಕರಿಷ್ಯಸಿ ಮಹಾಕಾರ್ಯಂ ಕೀತಿಮಾನ್ ವರ್ಧಸೇ ಧ್ರುವಮ್ ॥೫೬॥
ಏವಂ ಸಯೋಗಿವರಲಭ್ಧ ಮಹಾಪ್ರಸಾದಃ ।
ಸಂಮೋದಪೂರ್ಣಹೃದಯಸ್ತರುಣೋಜಗಾಮ ॥
ಶಿಷ್ಯೋಽಯಮೇವ ಭವಿತೇತಿ ಗುರುಃ ಪ್ರಹರ್ಷಾತ್ ।
ಆಶಾಂಕುರಂನಿಹಿತವಾನ್ ಹೃದಯಾಲವಾಲೇ ॥೫೭॥
ಕಾಲೇಗತೇ ಸಮೇಧಾವೀ ತರುಣಃ ಸ್ನಾತಕೋಽಭವತ್ ।
ದೇವಹೊಣ ಸ್ವಭಾಷಾಸು ಪರಾಂ ಪ್ರೌಢಿಮುಪೇಯಿವಾನ್ ॥೫೮॥
ವೀರಶೈವ ಮಹಾಂಬೋಧೇರಭೂತ್ಪಾರಂಗತಃ ಸುಧೀಃ ।
ಪಾಶ್ಚಾತ್ಯ ಭಾರತೀಯೇಷು ದರ್ಶನೇಷ್ವಪಿ ಕೋವಿದಃ ॥೫೯॥
ಗೋಷ್ಠೀಷು ಗಹನಂ ತತ್ತ್ವಂ ವಿವೃಣ್ವನ್ ಸಾಧುಯುಕ್ತಿಭಿಃ
ವಾಗ್ಮೀ ಸರ್ವತ್ರ ದೇಶೇಽಸ್ಮಿನ್ ಲೇಭೇ ವಿಖ್ಯಾತಿ ಮುತ್ತಮಾಮ್ ॥೬೦॥
ಏವಂ ಕಲಾಭಿರುಪೋಽಯಂ ಪೂರ್ಣಚಂದ್ರಸಮೋಽಯುವಾ ।
ಗುರುಸಂದರ್ಶನೋತ್ಕಂಠಃ ಕದಾಚಿನ್ಮಠಮೇಯಿವಾನ್ ॥೬೧॥
ಗುರುಣಾ ಹರ್ಷ ಗುರುಣಾ ವಾತ್ಸಲ್ಯಾದಭಿನಂದಿತಃ ।
ಉವಾಸ ತಸ್ಮಿನ್ ಸುಕ್ಷೇತ್ರೇ ಕತಿಚಿದ್ದಿವಸಾನ್‌ಯುವಾ ॥೬೨॥
ಏಕದಾ ಗುರುರಾಡೇನಂ ಸಮಾಹೂಯೇದಮಬ್ರವೀತ್ ।
ನತೋತ್ತಮಾಂಗಮೇಕಾಂತೇ ಮಧುರಾಕ್ಷರಗುಂಫಿತಮ್ ॥೬೩॥
ವತ್ಸ, ಸಂಪ್ರಾಪ್ತ ವಿದ್ಯೋಽಸಿ ಪ್ರಕೃಷ್ಟಗುಣವಾನಸಿ ।
ಅಸ್ತಿ ಮೇ ಹೃದಯೇ ಕಿಂಚಿತ್ ತತ್ಪೂರಯಿತುಮರ್ಹಸಿ ॥೬೪॥
ಮಠಭಾರಮಹಂ ಜೀರ್ಣೈರಂಗೈರ್ವೋಢುಂ ನ ಪಾರಯೇ ।
ಇತಃಪರಮತೋಽನ್ಯಸ್ಮಿನ್ ನಿಕ್ಷೇಪ್ತುಂ ತ್ವರತೇಮನಃ ॥೬೫॥
ತ್ವದನ್ಯಂ ನಹಿ ಪಶ್ಯಾಮಿ ಬಾಢಮಸ್ಯ ಕ್ಷಮಂ ಜನಮ್ ।
ಅತಃ ಕ್ಷೇತ್ರಾಧಿಕಾರೇತ್ವಾಂ ನಿಯೋಜಯಿತು ಮುತ್ಸಹೇ ॥೬೬॥
ಗೃಹಸ್ಥಶ್ಚೇದಾತ್ಮ ಸುಖಂ ಯತಿಶ್ಚೇಜ್ಜನ ತಾ ಸುಖಮ್ ।
ವಿಜ್ಞೋಽಸಿತ್ವಂ ಮಹಾಬುದ್ಧೇ ನಿರ್ಣಯಂ ಕುರು ಸಾಂಪ್ರತಮ್ ॥೬೭॥
ಅತರ್ಕಿತಾ ಮಿಮಾಂ ವಾಣೀಂ ಗುರುವಕ್ತ್ರಾದ್ವಿ ನಿರ್ಗತಾಮ್ ।
ಶ್ರುತ್ವಾನ ಪಾರಯಾಮಾಸ ಗದಿತುಂ ತರುಣಸ್ತದಾ ॥೬೮॥
ತತೋಽವಿಚಿಂತ್ಯ ಸುಚಿರಂ ಉವಾಚ ವಿನಿಯಾನ್ವಿತಃ ।
ಗುರೋರಾಜ್ಞಾಂಚ ಪಾದೌಚ ವಹಾಮಿ ಶಿರಸಾ ಮುದಾ ॥೬೯॥
ತಮಾಲಿಂಗ್ಯ ತತೊಯೋಗೀ ವ್ಯಸೃಜದ್ಧರ್ಷತುಂದಿಲಃ ।
ಆಯಾಹಿ ಶೀಘ್ರಂ ಪಿತರಾವನುಮಾನ್ಯೇತಿಸಂದಿಶನ್ ॥೭೦॥

ಗುರೋರ್ನಿರ್ದೇಶೇನ ಮಠಾಧಿಕಾರೀ । ವರ್ಗೈಸ್ತಥಾ ಭಕ್ತಗಣೈಃ ಪ್ರಹೃಷ್ಟೈಃ
ಸರ್ವಾಣಿ ವಸ್ತೂನಿ ಸುಸಂಭೃತಾನಿ ಪಟ್ಟಾಧಿಕಾರೋತ್ಸವ ಮಂಗಲಾಯ ॥೭೧॥
ಉದ್ದಾನೇಂದ್ರ ಮಠಾಧಿಪಃ ಪ್ರಮುದಿತಃ ಶುಕ್ಲಾಖ್ಯ ಸಂವತ್ಸರೇ
ಮಾಸೇ ಫಾಲ್ಗುನಕೇ ತೃತೀಯ ದಿವಸೇ ಪಕ್ಷೇಚ ಶುಕ್ಲೇ ಶುಭೇ
ರೇವತ್ಯಾಂ ಶಶಿವಾಸರೇ ಸ್ವಕರಸಂಜಾತಸ್ಯ ಪಟ್ಟೋತ್ಸವಂ
ಕೃತ್ವಾ ಭಕ್ತಜನಾವೃತಃ ಶಿವಕುಮಾರಖ್ಯಾಂ ವ್ಯಧಾನ್ಮಂಗಲಾಮ್ ॥೭೨॥
ಮಠಾಧಿಕಾರಂ ಸಕಲಂಚ ತಸ್ಮೈ । ಪ್ರದಾಯ ಶಿಷ್ಯಾಯ ಗುಣೋಜ್ವಲಾಯ ।
ಸ್ವಯಂ ವಿರಕ್ತಃ ಶಿವಯೋಗನಿಷ್ಠಃ ನಿನಾಯಕಾಲಂ ಸಚ ವೃದ್ಧಯೋಗೀ ॥೭೩॥
ತದನು ಶಿವಕುಮಾರಸ್ವಾಮಿ ವರ್ಯೋಽಪಿ ನೂತ್ನಂ
ಗುರುವರಕರಕಂಜಾತ್ಪ್ರಾಪ್ಯ ಪೀಠಾಧಿಪತ್ಯಮ್
ಗುರುಚರಣ ಗತಾಯಾಮೇವ ಗಚ್ಛನ್ ಪದವ್ಯಾಂ
ಸುನಿಹಿತ ಮತಿರಾಸೀಲ್ಲೋಕ ಭವ್ಯಂ ವಿಧಾತುಮ್ ॥೭೪॥
ಅನ್ನದಾನಾತ್ಪರಂದಾನಂ ವಿದ್ಯತೇ ನಹಿ ಭೂತಲೇ ।
ಅತಏವಶ್ರುತೌ ಪ್ರೋಕ್ತಂ ಬಹ್ವನ್ನಂ ಪ್ರಾಪ್ನುಯಾದಿತಿ ॥೭೫॥
ಪ್ರಾಥಮ್ಯಮನ್ನದಾನಸ್ಯ ವಿಚಿಂತ್ಯ ಮಠರಾಣ್ಮವಃ ।
ಸಿದ್ಧಗಂಗಾ ಮಹಾಕ್ಷೇತ್ರೇ ಅನ್ನಸತ್ರಂ ವ್ಯಕಲ್ಪಯತ್ ॥೭೬॥
ಅದ್ಯಾಪಿಯತ್ರ ಮೃಷ್ಟಾನ್ನಂ ಛಾತ್ರಾಶ್ಚಾತಿಥಯಸ್ತಥಾ ।
ಭಕ್ತಾಶ್ಚ ಗಣನಾತೀತಾಃ ಅಶ್ನಂತಿ ಪ್ರತ್ಯಹಂ ಮುದಾ ॥೭೭॥
ವಿದ್ಯಯೈವ ಪರಂಶ್ರೇಯಃ ಯತಸ್ಸಂಪದ್ಯತೇ ನೃಣಾಮ್ ।
ಅತಸ್ತಸ್ಯಾಃಪ್ರಚಾರೇಣ ಪ್ರಭವೇಜ್ಜಗತೀಹಿತಮ್ ॥೭೮॥
ಇತಿ ನಿಶ್ಚಿತ್ಯಯತಿನಾ ಗ್ರಾಮಪ್ರಾಂತೇಷ್ವನೇಕಶಃ ।
ವಿದ್ಯಾರ್ಥಿನಿಲಯೋಪೇತಾಃ ಕಲ್ಪಿತಾಃ ಪಾಠಶಾಲಿಕಾಃ ॥೭೯॥
ಮಹಾಶಿಲ್ಪಕಲಾಶಾಲಾಂ ತುಮಕೂರುಪುರೇ ಗುರುಃ ।
ವಿಜ್ಞಾನಪ್ರೌಢಶಾಲಾಂಚ ಕಲ್ಪಯಾಮಾಸಯತ್ನತಃ ॥೮೦॥
ಸಿದ್ಧಗಂಗಾಯತೀಂದ್ರಸ್ಯ ಕೀರ್ತಿಸ್ತಂಭಾಃ ಪ್ರತಿಷ್ಠಿತಾಃ ।
ಕಿಮಿತ್ಯೇತಾಃ ವಿರಾಜಂತೇ ಪಾಠಶಾಲಾಧರಾತಲೇ ॥೮೧॥
ವಿದ್ಯಾಶಾಲಾ ಮಹತ್ಯೇಕಾ ದೇಶಭಾಷಾ ವಿವೃದ್ಧಯೇ ।
ನಿರ್ಮಿತಾ ಭಾತಿ ತತ್ಕೀರ್ತಿ ವೈಜಯಂತೀವ ಭಾಸುರಾ ॥೮೨॥
ಶಿವಕುಮಾರ ನಿರಂಜನಯೋಗಿರಾಟ್ । ಸುರಗವೀಪರಿವರ್ಧನ ತತ್ಪರಃ ।
ಸಕಲಶಾಸ್ತ್ರ ಸುಪಂಡಿತಮಂಡಿತಂ । ಗುರುಕುಲಂ ಪರಿಕಲ್ಪಿತವಾನಯಮ್ ॥೮೩॥
ಚಿರಾನ್ನಾಥವತೀವಾಣೀ ಭೋಜರಾಜಾದನಂತರಮ್ ।
ಸಿದ್ಧಗಂಗಾ ಮಠಾಧೀಶಂ ಪ್ರಾಪ್ಯನಾಥಂ ಮುನೀಶ್ವರಮ್ ॥೮೪॥
ಶಿವಕುಮಾರ ಯತೀಶ್ವರಭಾಸ್ಕರಃ । ಧನಿಕಸಾಗರಲಬ್ಧಧನೋದಕಃ ।
ಭುವನಮಂಗಲ ವೃಷ್ಟಿಸುವರ್ಷಣಾತ್ । ಭವತಿ ಸರ್ವಜನೈರಭಿನಂದಿತಃ ॥೮೫॥
ಗ್ರಾಮೀಣಕಲಹವಹ್ನಿಂ । ನಿರ್ಣಯಪಾನೀಯಧಾರಯಾ ಕಾಲೇ
ಶಮಯಂತಂ ಪೀಠಪತಿಂ । ಸಾದರಮುದ್ವೀಕ್ಷತೇ ಜನತಾ ॥೮೬॥
ಯಂತ್ರ ಪ್ರಯೋಗಾದಥ ಭಸ್ಮದಾನಾದಾರ್ತಿಂ ಜನಾನಾಂ ವಿನಿವಾರಯಂತಮ್
ತಂ ಸಿದ್ಧಗಂಗಾಮಠ ದೇಶಿಕೇಂದ್ರಂ ಜಾನಂತಿ ಸಿದ್ಧೇಶ್ವರಮೇವ ಸರ್ವೇ ॥೮೭॥
ನ ಶ್ವೇತಚ್ಛತ್ರಧರಣಂ ನಾಪಿವ್ಯಜನವೀಜನಮ್
ನೋಪವೇಶಃ ಸಿಂಹಪೀಠೇ ನ ಕಿರೀಟಸ್ಯ ಧಾರಣಮ್ ॥೮೮॥

ನೈವಾತ್ಮಾನಂಖ್ಯಾಪಯತಿ ಜಗದ್ಗುರುರಿತಿಸ್ವಯಮ್
ಜಗದ್ಗೌರವಪಾತ್ರತ್ವ ಕಾರಣಾತ್ಸ ಜಗದ್ಗುರುಃ ॥೮೯॥

ಪಾರಲೌಕಿಕ ಸಂಸಿದ್ಧೇರೈಹಿಕಾಚರಣಂ ಯತಃ
ಮೂಲಂ ತತ್ಕಾಯಿಕಂ ಕರ್ಮ ಕರ್ತವ್ಯಂ ಶ್ರದ್ಧಯಾ ಜನೈಃ ॥೯೦॥

ಇತಿ ಪ್ರಬೋಧಯನ್ ನಿತ್ಯಂ ಸ್ವಯಂ ಕಾಯಕ ನಿಷ್ಠಿತಃ
ಪ್ರೇರಯತ್ಯಸಕೃಲ್ಲೋಕಂ ಕಾಯಕೇ ಶರ್ಮದಾಯಕೇ ॥೯೧॥

ಯದ್ಬೋಧಯತಿ ವಾಗ್ಮೀಸಃ ಗೋಷ್ಠೀಷು ಜನಮಂಡಲಮ್
ತತ್ಸರ್ವಮಾಚರನ್ ಯತ್ನಾತ್ ಆಚಾರ್ಯತ್ವ ಮುಪೇಯಿವಾನ್ ॥೯೨॥

ಏವಂ ಜನಹಿತಂತನ್ವನ್ ಸ್ವದೇಹ ನಿರಪೇಕ್ಷಯಾ
ನ ಜ್ಞಾತವಾನ್ ಗತಂ ಕಾಲಂ ಜೀರ್ಣಂಚ ಸ್ವಶರೀರಕಮ್ ॥೯೩॥

ಭಕ್ತೈಃ ಕೃತಾಮಥ ಸಯೋಗಿವರೋ ನಿತಾಂತಂ।
ವಿಜ್ಞಾಪನಾಂ ಹೃದಿನಿಧಾಯ ಮಠಾಧಿಕಾರಮ್।
ಆತ್ಮಾನುರೂಪಗುಣ ಶಿಕ್ಷಣಶೀಲರಮ್ಯೇ।
ಶಿಷ್ಯೇ ನಿಧಾನ ಮುಚಿತಂ ಹೃದಿ ನಿಶ್ಚಿಕಾಯ। ॥೯೪॥

ಅನ್ನೇನಾತಿಥಯೋಧನೇನ ವಿಬುಧಾಃ ಬೋಧೈರ್ಮುಮುಕ್ಷೂತ್ಕರಾಃ ।
ಛಾತ್ರಾಃ ಛಾತ್ರನಿಕೇತನ ಪ್ರಭೃತಿಭಿಃ ತೈಸ್ತೈರ್ವ್ಯವಸ್ಥಾಕ್ರಮೈಃ ॥
ಇಷ್ಟಾರ್ಥೈರಪಿ ಸಂಗತಾರ್ಥಿನಿಕರಾಃ ಸಂತರ್ಪಿತಾಸ್ಸರ್ವದಾ ।
ವಾಂಛಾ ಕಸ್ಯ ಕದಾ ಭವೇನ್ನಸಫಲಾ ಶ್ರೀ ಸಿದ್ಧಗಂಗಾಧಿಪಾತ್ ॥೯೫॥

ಶಿವಕುಮಾರ ಯತೀಶ್ವರ ತಲ್ಲಜಃ। ವಿಜಯತೇ ಧರಣೀತಲಮಾನಿತಃ ।
ವಿಬುಧಲೋಕಹಿತಾಯ ಸದೋದ್ಯತಃ ।
ಶಿವಕುಮಾರ ಸಮಾನಮಹಾಯಶಾಃ ॥೯೬॥

ಕೋವಾಗುಣಾನ್ ಶಿವಕುಮಾರ ಯತೀಶ್ವರಸ್ಯ ।
ಸಂವರ್ಣನೇ ಪ್ರಭವಿತಾಸುಗುಣಾಕರಸ್ಯ ॥
ರತ್ನಾಕರಸ್ಥಿತ ಮಹೋಜ್ವಲ ರತ್ನಜಾಲಂ।
ಕೋವಾ ನರೋಗಣಯಿತುಂ ಪ್ರಭವೇದ್ಧರಾಯಾಮ್ ॥೯೭॥

ಅಸ್ಮಿನ್‌ಸ್ವರ್ಣಮಹೋತ್ಸವೇ ಮಠಪತೇಃ ಪಟ್ಟಾಭಿಷೇಕಾತ್ಪರಂ।
ಪಂಚಾಶದ್ಗತವತ್ಸರೇ ಶಿವಕುಮಾರಾಖ್ಯಸ್ಯ ಯೋಗೀಶಿತುಃ ॥
ಸರ್ವೇಭಕ್ತಜನಾಃ ಪ್ರಮೋದಭರಿತಾಃತಸ್ಮೈ ಪ್ರಣಾಮಾಂಜಲಿಂ ।
ಕುರ್ವಂತ್ಯದ್ಯ ಶುಭೇದಿನೇ ಗುಣಗಣಾನ್‌ತಸ್ಯ ಪ್ರಶಂಸಂತಿಚ ॥೯೮॥

ಜೀಯಾದ್ಭಕ್ತಜನಾವನೈಕ ನಿರತಃ ಶ್ರೀಪಾರ್ವತೀ ವಲ್ಲಭಃ
ಜೀಯಾದಾಗಮವೇದ ಜಾತಮಹಿತಂ ಶ್ರೀ ವೀರಶೈವಂ ಮತಮ್
ಜೀಯಾದ್ಯೋಗಿ ಸುರೂಪಭೃತ್ಪರಶಿವಃ ಶ್ರೀ ಸಿದ್ಧಗಂಗಾಧಿಪಃ
ಜೀಯಾತ್ಕ್ಷೇತ್ರಮಿದಂ ಶಿವೋವಿತನುತಾತ್ಸರ್ವತ್ರ ಸನ್ಮಂಗಲಮ್ ॥೯೯॥

ನಾರಾಯಣೇನ ಕವಿನಾ । ಪ್ರಶಸ್ತಿ ಶತಕಂ ಕೃತಮ್
ಸಿದ್ಧಗಂಗಾ ಮಠಾಧೀಶ । ಸುಗುಣಾ ಕೃಷ್ಟಚೇತಸಾ ॥೧೦೦॥

—ವಿದ್ವಾನ್. ಹ.ವೆ. ನಾರಾಯಣಶಾಸ್ತ್ರಿ

## ಜಂಗಮ ಪುರುಷ

ಎಲ್ಲರೊಳಗೊಂದಾಗಿ, ಎಲ್ಲರಿಗೂ ಬೇಕಾಗಿ
ಎಲ್ಲರೆಲ್ಲಾ ಏಳಿಗೆ ಸಾಧಿಸಲು,ಎಲ್ಲವನು ಧಾರೆಯೆರೆದ ಗುರುನೀನು
ಅಣ್ಣಬಸವಣ್ಣ, ಚನ್ನಬಸವಣ್ಣ
ಅಲ್ಲಮರ ಸೊಳ್ಳುಡಿಯ ಕೇಳಿಹೆವು ಮಾತ್ರ
ಇವರೆಲ್ಲರನು ಕಾಣುತಿಹೆವು–ನಿನ್ನಲ್ಲಿ ಓ ಗುರುವೆ !
'ಕಾಯಕ'ಕೆ ಅರ್ಥ ನೀನು; ಅನ್ನದಾನಕೆ ಮೊದಲು ನೀನು
ಜ್ಞಾನದಾನಕೆ ಗುರು ನೀನು ಓ ಗುರುವೆ,ಬಾಳಿನ ಅರ್ಥವೇ ನೀನು,
ನಿನ್ನ ಬಳಿ ಬಂದವರು ಬಿಡುಗಡೆಯ ಪಡೆವರು
ನಿನ್ನೊಡನೆ ನುಡಿದವರು ಮೂಕವಿಸ್ಮಿತರು
ನಿನ್ನಡಿಯು ಸೋಂಕಿದಡೆ, ಪಾಪ ತಾನೋಡುವುದು ಗುರುವೆ !
ಬಳಿಗೆ ಬಂದವರನೆಲ್ಲ ಬಂಗಾರವಾಗಿಸುವ
ಸಿದ್ಧಗಂಗೆಯ ಸಿದ್ಧಪುರುಷ ನೀನೊಂದು ಜಂಗಮಪುರುಷ.

—ಆರ್. ರಾಚಪ್ಪ

## ಸಿದ್ಧಗಂಗೆಯ ನಂದಾದೀವಿಗೆ

ಮಂದಾರ ಹಂದರದೊಳು, ಸುಂದರ ಹಸುರಿನ ಹಾಸುಗೆ
ಚೆಂದದ ಕಪ್ಪು ಬೆಟ್ಟ ಅಲ್ಲಿದೆ, ಸ್ಥಾವರಲಿಂಗದ ರೂಹಿನಲಿ;
ಸಂದಿದೆ ಇಲ್ಲಿ ಜಂಗಮ ಸಂಗಮ, ಅಂದಿನಿಂದ ಇಂದು ಮಿಗೆ
ಅಂದು ಅಲ್ಲಮ ಸಿದ್ಧರಾಮ ಸಿದ್ಧಲಿಂಗ,ಇಂದು ಶಿವಕುಮಾರ
ಮಹಾಮಹಿಮಶ್ರೀಗಳು.
ವಿಶ್ವಧರ್ಮದ ಜ್ಞಾನವಾಹಿನಿ ಸಿದ್ಧಗಂಗೆಯಾಗಿ ಇಲ್ಲಿ ಮೂಡಿ
ಶುದ್ಧಾಶುದ್ಧತೆ ಮರ್ಮವ ಸಾರಿ ಉದ್ಧರಿಸೆ ಮನುಕುಲವ
ಹರಿದಿಹಳು ಸಿದ್ಧಗಂಗೆ.
ಸದ್ದುಗದ್ದಲವಿಲ್ಲದೆ ಎದ್ದುನಿಂದು ವಿದ್ಯಾದಾನದ ಕಾಯಕ
ಕೈಕೊಂಡು
ಸಿದ್ಧಗಂಗೆಯ ಸಿದ್ಧಿಸ್ಥಾನದಿ ಶುದ್ಧಜೀವನ ದೀಕ್ಷೆನೀಡುತಲಿ,
ಸಿದ್ಧಗಂಗೆಯ ನಂದಾದೀವಿಗೆ, ನಿತ್ಯ ಬೆಳಗುತಿದೆ.

—ವಿವೇಕಾನಂದ

## ರಕ್ಷಿಸೆನ್ನ ವರಗುರು ಶಿವಕುಮಾರ

ಶರಣು ಜ್ಞಾನೇಶ ಶ್ರೀ ಶಿವಕುಮಾರೇಶ
ಈಶಾ ನಿನ್ನಡಿಗೆ ಶರಣು ಶರಣೇಶ।
ಅರ್ಪಿಸುವೆ ನಿನ್ನ ಪದತಲಕೆ ಎನ್ನ ನಮನ
ಅಂತದರಿಂದಾಗುವುದದೆನ್ನ ಜೀವನ ಪಾವನ ॥೧॥

ಸಿದ್ಧಗಂಗೆಯ ದಯಾನಿಧಿಯು ನೀನು
ಸಿದ್ಧಗಂಗೆಯ ಧರ್ಮಸುಧೆಯು ನೀನು ।
ಸಿದ್ಧಗಂಗೆಯ ವಾರ್ಧಿವರ್ಧನ ಕಳಾಚಂದ್ರ ನೀನು
ವಿಲಸಿತ ವಿಮಲ ದಿವಸೇಂದ್ರ ನೀನು ॥೨॥

ನೀನೆ ಪರತರ ಪುಣ್ಯ ಮೂರ್ತಿಯು
ನೀನೆ ಗುರುಕುಲ ಚಕ್ರವರ್ತಿಯು
ನೀನೆ ದಾಸೋಹದ ಧರ್ಮದಾ ಕೋಶ
ಸ್ತುತಿಪೆ ನಿನ್ನ ಚಿತ್ಕೋಶ ಭಕ್ತರ ಈಶ ॥೩॥

ಗಗನದಿಂ ಬೀಳ್ವವನಿಗೆ ಆಧಾರದ ತೆರದಿ
ಕಡಲಿನೊಳು ಮುಳುಗುತ್ತಿರ್ದವನಿಗೆ ತೆಪ್ಪದತೆರದಿ।
ಇರುವೆ ನೀನದರಿಂದ ನಂಬಿಹೆನು ನಿನ್ನನೇ
ಸಲಹೆನ್ನ ಗುರುವರ ಶಿವಕುಮಾರ ಸ್ವಾಮಿಯೇ ॥೪॥

ನಿನಗೆ ಶರಣೆನ್ನದಾ ಮನುಜನ ಬಾಳು ವ್ಯರ್ಥ
ನಿನ್ನ ಸೇವಿಸುವವರಿಗಾರಿಗಿಹುದು ಸ್ವಾರ್ಥ।
ಆದಾರಿಗುಂಟು ಸದ್ಗತಿ ಪಡೆಯದೆ ನಿನ್ನ ದರ್ಶನ
ನನ್ನ ಜೀವನ ಪಾವನ ಇರಲು ನಿನ್ನಾಶೀರ್ವಚನ ॥೫॥

ಈಕ್ಷಿಸೆನ್ನ, ರಕ್ಷಿಸೆನ್ನ ವರಗುರು ಶಿವಕುಮಾರ
ಕರಣೆಯಿಂದಲಿ ಕಾಯೋ ಎನ್ನ ದೇವ ಸುಕುಮಾರ
ಸಕಲ ಸದ್ಗುಣಗಳನ್ನಿತ್ತು ಸಲಹೆನ್ನ ಅಭಯಂಕರ
ನೀನೊಲಿದರೆ ಆಗುವುದೆನ್ನ ಜೀವನ ಗುಣದಾಗರ ॥೬॥

ಕೆ. ಎನ್. ಶಿವರಾಜ

# ಶ್ರೀ ಸಿದ್ಧಗಂಗಾ ಮಹಿಮೆ*

೧

ಶ್ರೀನಿರಂಜನ ಪರಮಪಾವನ
ಮಾನಸೋದ್ಭವದಹನ ವಿಬುಧವಿ
ತ್ರಾಸ ವಂದಿತ ಚರಣ ಸುಗುಣಾಭರಣ ಕಲಿಹರಣ ।
ಮೌನಿ ವೃಂದಾವರಣ ವರ ಸು-
ಜ್ಞಾನ ಮಂದಿರ ಜಗವ ರಕ್ಷಿಕೆ
ಸಾನುರಾಗದೊಳಲ್ಲಮಪ್ರಭುರಾಯನನವರತ ॥

೨

ಶರಣ ಮಾನಸಹಂಸ ಸುಗುಣಾ–
ಭರಣ ಸುಜನೋತ್ತಂಸ ಭಕುತರ
ದುರಿತಕುಲವಿಧ್ವಂಸ ಬುಧಜನವಿನುತ ಪರಹಂಸ ।
ವರ ನಿರಂಜನ ಪರತರಾಮಯ–
ಹರನು ಜಂಗಮ ಚಿತ್ಸ್ವರೂಪನು
ಗುರುವು ಗೋಸಲ ಸಿದ್ಧದೇಶಿಕನೀಗೆ ಮಂಗಲವ ॥

೩

ಸುಮನಸಾರ್ಚಿತಪಾದಪಂಕಜ
ಸುಮಶರಾಂತಕ ದೇವ ಭಾಕ್ತಿಕ
ಸುಮಗಳಿಂದರ್ಚಿಸುವ ಭಕುತರ ಪೊರೆಯೆ ತಿರೆಯೊಳಗೆ।
ಸುಮನದಿಂ ವರಸಿದ್ಧಗಂಗಾ
ಶ್ರಮದೆ ನೆಲೆಸಿಹ ಯೋಗಿ ಪುಂಗವ
ವಿಮಲಮತಿ ಗುರು ಸಿದ್ಧಲಿಂಗನು ಪೊರೆಗೆ ಮೂಜಗವ ॥

೪

ಸಿದ್ಧಜನಸುಜ್ಞಾನದಾಯಿನಿ
ಶುದ್ಧಮಾನಸ ವಿಬುಧ ಪೋಷಿಣಿ
ಸಿದ್ಧಗೋಸಲ ಮೌನಿಹೃದಯಾಂಭೋಜ ಸಂಜನನಿ ।
ಸಿದ್ಧವಂದಿತೆ ವಿಬುಧವಾಹಿನಿ
ಶುದ್ಧವಿದ್ಯಾರಸಿಕ ತೋಷಿಣಿ
ಸಿದ್ಧಗಂಗಾಮಾತೆ ರಕ್ಷಿಕೆ ಜಗವನನವರತ ॥

೫

ಪರಮಪಾವನಚರಿತ ವರಗುಣ
ಭರಿತನನುಪಮ ನಿತ್ಯ ಸುಖಕರ
ಶರಣಜನಮಂದಾರ ಮುಕ್ತಿವಿಹಾರಭವದೂರ ।
ಧರೆಯ ಪಾವನ ಸಿದ್ಧಗಂಗೆಯ
ನಿರುಪಮಿತ ದಾಸೋಹಮೂರುತಿ
ನಿರಯಹರನಟವೀಶ ಯತಿವರನೀಗೆ ಸಂಪದವ ॥

೬

ವೇಷಭೂಷಣ ವಿಷಯಪಟುತರ
ದಾಸೆಯಾಮಿಷ ತೊರೆದು ಭಕುತರ
ಪಾಶಬಂಧನ ಪರಿದು ಪರಶಿವನಡಿಯೆಸಂಗೊಳಿಸಿ ।
ದೇಸಿಗರಿಗುಣಬಡಿಪ ಕಾಯಕ
ವೀಶಸೇವೆಯಿದೆನುತೆ ಸಲಿಸಿದ
ನೀಶನುದ್ದಾನೇಶ ಮುನಿವರನೀಗೆ ಮಂಗಲವ ॥

೭

ಧರೆಯ ಕಳ್ತಲೆ ಕಳೆಯೆ ಬುಧನುತ
ಚರಣಸರಸಿಜ ಸಿದ್ಧಲಿಂಗನ
ಕರುಣೆಯಿಂ ವರಸಿದ್ಧಗಂಗಾಕ್ಷೇತ್ರಪತಿಯೆನಿಸಿ ।
ತೆರೆದು ವಿದ್ಯಾಲಯಗಳನುದಿನ
ಹರುಷದಿಂ ವಿದ್ಯಾರ್ಥಿವೃಂದವ
ಪೊರೆವ ಶಿವಕುಮರೇಶ ಕುಲಪತಿಗಕ್ಕೆ ಮಂಗಲವು ॥

೮

ಅರಿವೆ ದೈವದ ಮೈಯ ಬೆಳಗೆಂ
ದರಿದು ಮತಕೋಮುಗಳನೆಣಿಸದೆ
ನಿರುತ ವಿದ್ಯಾರ್ಥಿಗಳ ಪೋಷಿಪ ಗುರುವಿನಡಿಗೆರಗಿ ।
ಕರೆಕರೆದು ಜನತತಿಯು ನಿರುತವು
ಪರಿಪರಿಯ ಸಾಹ್ಯವನು ನೀಡುತೆ
ಪರತರೋತ್ಸಾಹದಲಿ ಭಕ್ತಿಯಸಲಿಸಿ ಸೇವಿಪುದು ॥

೯

ಜಯಕೆ ಪಾವನ ಪುಣ್ಯಮೂರುತಿ
ಜಯಕೆ ಪುಣ್ಯಾರಣ್ಯ ದೀಧಿತಿ
ಜಯಕೆ ಶ್ರೀಕರ ಸಿದ್ಧಗಂಗಾಪೂತಮಹಿತಯತಿ ।
ಜಯಕೆ ವರದಾಸೋಹ ಸನ್ಮತಿ
ಜಯಕೆ ವಿದ್ಯಾದಾನಹಿತಮತ
ಜಯಕೆ ಶಿವಕುಮರೇಶಮುನಿಪತಿ ವಿಹಿತ ಧೀ ವಿತತಿ ॥

೧೦

ಮಂಗಲಂ ಶ್ರೀ ಭಾರತಾಂಬೆಗೆ
ಮಂಗಲಂ ಕರ್ನಾಟಜನನಿಗೆ
ಮಂಗಲಂ ಶ್ರೀ ಸಿದ್ಧಗಂಗಾಕ್ಷೇತ್ರಪಾಲಕಗೆ ।
ಮಂಗಲಂ ಸದ್ಭಕ್ತವೃಂದಕೆ
ಮಂಗಲಂ ವರಸಿದ್ಧಗಂಗೆಯ
ತುಂಗದುತ್ಸವಸಮಿತಿಸನ್ನುತವಿಬುಧಜನತತಿಗೆ ॥

—ಎಂ. ಜಿ. ನಂಜುಂಡಾರಾಧ್ಯ

*ಸಮರ್ಪಣೆ ಗ್ರಂಥದಿಂದ

# ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ

ಶ್ರೀ ಸಿದ್ಧಲಿಂಗೇಶ್ವರನ ಪಾದರಜದಿಂದತೀವ ಪಾವನವೆನಿಸಿರ್ಪ
ಶ್ರೀ ಸಿದ್ಧೇಶ್ವರ ಕೃಪಾದೃಷ್ಟಿಯಿಂದತೀವ ಪೂತಮೆನಿಸಿರ್ಪ
ಶ್ರೀ ಸಿದ್ಧಶಿವಯೋಗಿಪುಂಗವರ ವಾಸದಿಂದತೀವಪುಣ್ಯವೆನಿಸಿರ್ಪ
ಶ್ರೀ ಸಿದ್ಧಗಂಗಾಕ್ಷೇತ್ರಾಧಿಪನೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೧॥
ಆವ ಮಾಪುಣ್ಯಕ್ಷೇತ್ರದಧಿಪತಿಯಾಗಿ ರಾರಾಜಿಸಿರ್ಪೆಗುರುದೇವ
ಆವ ಮಾಪುಣ್ಯಕ್ಷೇತ್ರಕ್ಕಾಧಾರವಾಗಿನೀಂ ವಿರಾಜಿಸಿರ್ಪೆಗುರುದೇವ
ಆವ ಮಾಪುಣ್ಯಕ್ಷೇತ್ರಮಂ ಪಾದರಜದಿಂಪಾವನಂಗೊಳಿಸಿರ್ಪೆದೇವ
ಆವ ಪುಣ್ಯಮೂರ್ತಿನೀನೆಲೆಗೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೨॥
ಶಿಷ್ಯತಾನಾಗಿರುತಿರ್ದು ಸಿದ್ಧಶ್ರೀ ಉದ್ದಾನಶಿವಯೋಗಿವರ್ಯನಿಗೆ
ಶುಶ್ರೂಷೆಯಂ ಮಾಡುತ್ತಲತ್ಯುಚ್ಛಶ್ರದ್ಧಾಭಕ್ತಿಯಿಂ ತನುಸವೆಸಿ ನೀ ಸತ್
ಶಿಷ್ಯನೆಂದೆಂಬ ಕೀರ್ತಿಯಂ ಪಡೆದ ಮಹಾಮಹಿಮನಾಗಿರ್ದುಜಗದಿ
ಶಿಷ್ಯವಾತ್ಸಲ್ಯಮಯಿಯಾಗಿರ್ಪ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥ ॥೩॥
ಗುರುಪುಂಗವರೊಳಗ್ರಗಣ್ಯನಾಗಿರ್ಪೆ ಮಹಾಮಹಿಮಶಿವಯೋಗಿ
ಗುರುಪೆಸರಂಪೆತ್ತ ಪರಮೇಶ್ವರಂ ನಿನಾಗಿರ್ಷೆ ಸಿದ್ಧಶಿವಯೋಗಿ
ಗುರುವೆಂಬಭಿಧಾನಮಂ ಅನ್ವರ್ಥಗೊಳಿಸಿರ್ಪೆನೀಂ ಮಹಾಶಿವಯೋಗಿ
ಗುರುವೆ ಸದ್ಗುರುವೆ ಶ್ರೀ ಗುರುವೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೪॥
ಅನ್ನದಾನಂ ಪಿರಿದಪ್ಪುದೆಂಬ ತತ್ವದಾ ನನ್ನಿಯನವಧರಿಸಿ ನೀಂ
ಅನ್ನದಾನಮಂ ಪಿರಿದಾಗಿ ಧರೆಯೊಳಗೆಸಗುತಿರ್ಪನ್ನದಾನಿ ನೀಂ
ಅನ್ನದಾನದಿಂ ಭೂತಸಂದೋಹಮಂ ತೃಪ್ತಿಬಡಿಸುತ್ತಲಿರುತಿರ್ಪೆ ನೀಂ
ಸನ್ನುತನೆ ಶಿವಯೋಗಿ ಶ್ರೀ ಶಿವಕುಮಾರೇಶ್ವರನೆ ರಕ್ಷಿಪ್ಪುದೆಮ್ಮಂ ॥೫॥
ವಿದ್ಯಾದಾನಮದುವೆ ಅನ್ನದಾನದಿಂದಧಿಕವೆಂಬುದಂ ನೀಂ ತಿಳಿದು
ವಿದ್ಯೆಯೇ ಸಕಲ ಸಂಪದ್ವಿನಯಕ್ಕಾಧಾರಮೆಂಬುದನೀ ತಿಳಿದು,
ವಿದ್ಯೆಯಿಂದಲೇ ಮೋಕ್ಷವಶವರ್ತಿತಾನಹುದೆಂಬುದದಂನೀಂ ತಿಳಿದು
ವಿದ್ಯಾದಾನಿನೀಗಿರುತಿರ್ಪೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೬॥
ವಿದ್ವಜ್ಜನಕ್ಕಾಧಾರ ವಿದ್ಯೆಗೂ ಆಧಾರಭೂತ ಗುರು ನೀನಾಗಿರುವೆ
ವಿದ್ವಜ್ಜನ ಮಾನ್ಯಂ ವಿದ್ವಜ್ಜನಭೂಷಣಮಾದಗುರು ನೀನಾಗಿರುವೆ,
ವಿದ್ವಜ್ಜನ ಪ್ರೇಮಿ, ವಿದ್ವಜ್ಜನಸ್ತುತ್ಯನಾಗಿರ್ಪಗುರುನೀನಾಗಿರುವೆ
ವಿದ್ವಜ್ಜನಾಗ್ರಗಣ್ಯನಾಗಿರ್ಪೆ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೭॥
ನವಯೌವನದೊಳೆನೀಂ ಸಂಸಾರಸುಖಭೋಗಂಗಳನಪೇಕ್ಷಿಸದೆ
ನವತಾರುಣ್ಯದಾಕಾಂಕ್ಷೆಗಳನೆಲ್ಲಮಂ ತೃಣಕೆಣೆಮಾಡಿ ತ್ಯಜಿಸಿ
ವಿವಿಧಚಾಪಲ್ಯಗೊಳಗಾಗಿಸುವ ಸಕಲೇಂದ್ರಿಯಂಗಳಂ ಜಯಿಸಿ
ದಿವ್ಯಸಂನ್ಯಾಸಕ್ಕೊಲಿದ ಶ್ರೀ ಶಿವಕುಮಾರೇಶ್ವರನೆ ರಕ್ಷಿಪ್ಪುದೆಮ್ಮಂ ॥೮॥
ಪರಮೇಶ್ವರಂ ತಾನೊಲಿದು ನರರೂಪಮಂ ಧರಿಸಿರ್ಪತೆರನಂತೆ
ಪರಜಂಗಮದವೇಷಮಂ ಧರಿಸಿ ಧರೆಯೊಳ್ಚರಿಸುತಿರುವಂತೆ
ನರರಂಭವಸಾಗರದೆ ಮುಳುಗಿ ಬಳಲಿ ತೊಳಲುತ್ತಿರ್ಪವರಂ
ಭರದಿಂದಲುದ್ಧರಿಸಲ್ಬಂದ ಶ್ರೀ ಶಿವಕುಮಾರೇಶ ರಕ್ಷಿಪ್ಪುದೆಮ್ಮಂ ॥೯॥

—ವಿದ್ವಾನ್ ಹೆಚ್. ಸದಾಶಿವಯ್ಯ

# ನಮನ ಸಪ್ತಕ

ಶಿವಕುವರ ಶ್ರೀ ಗುರುವೆ ನಮನವು । ಶಿವಕುವರ ಸದ್ಗುರುವೆ ನಮನವು ।
ಶಿವಕುವರ ಹೃದ್ಗುರುವೆ ನಿನ್ನಡಿದಾವರೆಗೆ ನಮನ ॥
ಶಿವಕುವರ ಚಿದ್ಗುರುವೆ ನಮನವು । ಶಿವಕುವರ ಮದ್ಗುರುವೆ ನಮನವು ।
ಶಿವಕುವರ ನಮನಗಳು ಘನತರ ತ್ರಿವಿಧದಾಸೋಹಿ ॥೧॥

ವಸುಧೆಯೊಳಗವತರಿಸಿ ಬಂದಿಹ । ಅಸಮ ನೇತ್ರನರೂಪ ಮಹಿಮನೆ
ಅಸಮ ಪಾವನ ಸಿದ್ಧಗಂಗೆಯ ಮಹಮಠಾಧೀಶ ॥
ಅಸಮಗುರುವರ ಸಿದ್ಧಲಿಂಗನ । ಅಸಮ ಚರಣದ್ವಯವು ಮೆಟ್ಟಿದ ।
ಅಸಮಭೂಸುಕ್ಷೇತ್ರದಧಿಪತಿ ಪೂಜ್ಯನಮನಗಳು ॥೨॥

ಕುಶಲವನು ಸಕಲರಿಗೆ ಬಯಸುತ । ಕುಶಲವನು ಸಕಲರಿಗೆ ನೀಡುತ ।
ಕುಶಲಮಯವನ್ನಾಗಿಸಲು ಈ ಜಗವನೆಡಬಿಡದೆ ॥
ಕುಶಲಮತಿ ನೀನಾಗಿ ಶ್ರಮಿಸುವ । ಕುಶಲ ಭೂಷಣ ಕುಶಲಪೂರಣ ।
ಕುಶಲಕಾರಣ ಸಿದ್ಧಗಂಗಾಧೀಶ ನಮನಗಳು ॥ ॥೩॥

ಮಾರನನು ಸರಿಗಟ್ಟಿ ನಿಲ್ಲುತ । ಮಾರನನು ಸದೆಬಡಿದು ಕೊಲ್ಲುತ ।
ಮಾರನನು ಸುಟ್ಟುರುಹಿಬಿಟ್ಟಿಹ ಬಿರುದ ಧರಿಸಿರುತ ॥
ಮಾರನೆಂದಿಗು ಸುಳಿಯದಂದದಿ । ದೂರದಲ್ಲಿಯೆ ನಿಲ್ಲಿಸಿರುತಿಹ ।
ಮಾರಹರಗುರು ಶಿವಕುಮಾರೇಶ್ವರನೆ ನಮನಗಳು ॥೪॥

ರವಿಯ ತೆರದಲಿ ನಾಡಿನಲಿಬಲು । ಕವಿದ ಅಜ್ಞಾನಾಂಧಕಾರವ ।
ಜವದಿ ಬಿಡಿಸುವ ಧೀರವೀರನೆ ಶೂರಪ್ರತಿನಿತ್ಯ ॥
ಭವಿಯ ಭಕ್ತನಮಾಡಲಿಕೆ ನೀ । ಬುವಿಯೊಳಗೆ ಸಂಚರಿಪ ಸುರತರು ।
ಶಿವಕುವರ ಭವಹರನೆ ಪ್ರಣವಾಕಾರ ನಮನಗಳು ॥೫॥

'ಸ್ವಾಮಿಯಾದವ ಜಗದಿಖಂಡಿತ । ನೇಮಿಯಾಗಿರಬೇಕು' ಎಂಬುದ ।
ನೇಮದಿಂದಾಚರಿಸಿ ತೋರಿಸಿ ಘನಮಹಾಸ್ವಾಮಿ ॥
ಕಾಮಕ್ರೋಧಾದಿಗಳನರಿಯದ । ಆ ಮಹಾಶಿವಮಂತ್ರರೂಪನೆ ।
ಸ್ವಾಮಿ ನಿರುಪಮ ಶಿವಕುಮಾರೇಶ್ವರನೆ ನಮನಗಳು ॥೬॥

ಮಿಥ್ಯತಥ್ಯದ ಭೇದವನು ಪ್ರತಿ । ನಿತ್ಯವೂ ಭಕ್ತರಿಗೆ ಸಾರುವ ॥
ಉತ್ತಮೋತ್ತಮ ಪುರುಷಮೂರುತಿ ಸಚ್ಚಿದಾನಂದ ॥
ನಿತ್ಯವೂ ನಿನ್ನಡಿಯ ಭಜಿಪ ಸು । ಚಿತ್ತವನು ಕರುಣಿಪುದು ಕಣ್ಮಣಿ ।
ಸತ್ಯಮೂರುತಿ ದಿವ್ಯಭವ್ಯ ಜ್ಯೋತಿ ನಮನಗಳು ॥೭॥

ಹೆಚ್.ಎಸ್. ಗುರುಸಿದ್ಧಪ್ಪ

## ಆದರ್ಶ ಶಿಲ್ಪಿ

ಸಿದ್ಧಗಂಗೆಯ ಸಿದ್ಧಪುರುಷ,
ನಿನ್ನ ಹೆಸರನು ನೆನೆಯೆ ಬಣ್ಣಬಣ್ಣದ ಮುಗಿಲು
ನುಣ್ಣನೆ ತೇಲುವುವು ಕಣ್ಣ ಕಣ್ಣಂಚಿನಲಿ,
ಮನವೆಂಬನವಿಲು ಕುಣಿಯುವುದು ಕೇಕೆ ಹಾಕಿ.

ದಾಸೋಹ ವ್ರತವನು ಕೊಟ್ಟು ನಿಷ್ಠೆ ನಿಬ್ಬೆರಗಿನಲಿ
ದಿವರಾತ್ರಿಯೆನ್ನದಾಮಣಿಹದಲಿಸವೆದಿಹಿರಿ,
ದಿಕ್ಕನರಿಯದ ಜನಕೆ ದಿಕ್ಕುಗಾಣಿಸುತಿಹಿರಿ.

ದೀನದಲಿತರ ಸೇವೆ ನಿಮ್ಮ ಬಾಳಿನ ತುಡಿತ
ದೀಪತಾನುರಿದು ಲೋಕವ ಬೆಳಕುಮಾಳ್ಪಂತೆ,
ಹಿಡಿದ ಲಿಂಗದ ತಪವು ಲೋಕಕ್ಷೇಮಕೆ ಮುಡಿಪು.

ನಿಮ್ಮ ನುಡಿ ಬಿರಿದಮಲ್ಲಿಗೆಯರಳ ಸೌರಭ್ಯ ಸೌಂದರ್ಯ.
ಅಂತರಂಗದ ಚೆಲುವು ಮೊಗದಿ ಮಿಂಚುತ್ತಿಹುದು,
ಚಂದ್ರನುದಯದ ಚೆಲುವು ಮಂದಹಾಸದಲಿ.

ಲೋಕಲೌಕಿಕರಂತೆ ಪದವಿಡುವಿರೀರಸೆಯಲ್ಲಿ
ಆದರಾನಡೆಯು ನಡೆಗೆಟ್ಟ ನಡೆಯಹುದು ;
ನುಡಿಗೆಟ್ಟನುಡಿ ನಿಮ್ಮ ಮಾತಿನಾವೋಡಿ.

ಲೋಕ ಜಗಮನವೆಂಬ ಗಡಸು ಶಿಲೆಯನು ನೀವು
ಕಡೆಯುವಿರಿ ದಿವ್ಯದಾದರ್ಶದುಳಿಯಿಂದ,
ಕಡೆದು ಮುರ್ತಿಯಗೊಳಿಸುತಾದಿರಾದರ್ಶಶಿಲ್ಪಿ.

—ಶಾರದಾ ರಾಜಶೇಖರ

## ಸ್ವಾರ್ಥಮಲ್ತೀ ಶ್ರೀಸಾಹಸಂ

ಅಃ! ನಿಂತು ನೋಡಿಲ್ಲಿ !
ಪದಾರ್ಥಂ ಪ್ರಸಾದಪದವಿಗೇರ್ವ
ಅಪೂರ್ವ ಸಮಯವನ್ !
ಲಭ್ಯಮಾ ಪದಾರ್ಥಮನ್ಯತ್ರ
ಮನೆಗಳಲಿ ಮೇಣಾಪಣಂಗಳಲಿ
ಕಿಂತು ದೊರೆಯದೀ ಪ್ರಸಾದವೆಲ್ಲಿಯುಂ.
ಪ್ರಸಾದವ ಕಾಂಬಡೆ ಉಂಬಡೆ
ಬಾ ಇಲ್ಲಿ ಸಿದ್ಧಗಂಗೆಯಲಿ ಕೊಪ್ಪಲಲಿ
ಸ್ವೀಕರಿಸಿ ಧನ್ಯನಾಗುವೆ
ಮೇಣ್ ತೃಪ್ತನೆನಿಸುವೆ.

ಜನರು ಜಂಗಮರಾಗಿ ಕುಳಿತಿರೆ
ನೇಮದಲಿ ಶಿವಸಮಯಧಾರಿಗಳಾಗಿರೆ
ಹುಡುಗರುತ್ಸಾಹದಲಿ ಉಣಬಡಿಸುತಿರೆ
ಮಧ್ಯದೊಳ್ 'ಶ್ರೀ'ಗಳಿರೆ
ನಿಷ್ಠೆಯಿಂ ಜಪಿಸುವರ್
ಶಿವತತ್ತ್ವ ನುಡಿಗಳನ್.

ಪ್ರಸಾದವೆಲ್ಲರ್ಗಂ ವಿನಿಯೋಗವಾಗಿರೆ,
ಅರ್ಪಿಸುವರು ಲಿಂಗಕ್ಕೆ ಬೋನವನ್
'ಶಿವಯೋಗಿನಿ ಸಂತೃಪ್ತೇ ತೃಪ್ತೋ
ಭವತಿ ಶಂಕರಃ...'ಎಂಬ ಮಂತ್ರದೊಡನೆ.
ಬರಿ ಕೂಗಿನ ಮೊತ್ತಮಲ್ತಿದು
ಹಾಗಾದರದೇನೆಂಬೆಯಾ?
ಕಾಯಕದ ಕಲ್ಪನೆಯ ಸಗ್ಗಕ್ಕೊಯ್ವ
ಓಂಕಾರದೇರ್‌ಕಣಾ

ಸ್ವಾರ್ಥಮಲ್ತೀ 'ಶ್ರೀ' ಸಾಹಸಂ
ಸಾರ್ಥಕಮದು ಪರಮಸಾಹಸಂ
ಪುರುಷಾರ್ಥಮದೊಂದು
ಗಂತವ್ಯಂ ಮಹಾಮಣಿಹಕ್ಕೆ
ಬಣ್ಣನೆಯ ನುಡಿಯಲ್ತು
ಮೇಣತ್ಯುತ್ಸಾಹ ಜಲ್ಪಮುಮಲ್ತು
ಕಣ್‌ಕಂಡದ್ಭುತ ದರ್ಶನಂ ಕಣಾ!

—ವಿದ್ವಾನ್. ಕೆ. ಬಸವರಾಜು

# ಶ್ರೀ ಸಿದ್ಧಗಂಗಾ ಕ್ಷೇತ್ರಮ್*

ದೇವಗಿರಿಮಹಾರಣ್ಯೇ ಶ್ರೀರಾಮಗಿರಿಸನ್ನಿಧೌ ।
ಕಕುದ್ಗಿರಿಪುರೋಭಾಗೇ ಸಿದ್ಧಗಂಗಾಮಹಾಗಿರಿಃ ॥೧॥

ಪುಣ್ಯಭೂರುಹ ಸಂತಾನೈರ್ಗಗನೋಲ್ಲೇಖಿಶಾಖಿಭಿಃ ।
ತಪೋನುಷ್ಠಾನ ಯೋಗ್ಯಾಭಿರ್ಗುಹಾಭಿಶ್ಚ ಮನೋಹರಃ ॥೨॥

ಗೌತಮೇನ ಮುನೀಂದ್ರೇಣ ಕೃತಾಶ್ರಮಪದೋಮುರ್ಹಾ ।
ಗೋಹತ್ಯಾಪಾಪಶಾಂತ್ಯರ್ಥಂ ಶಿವಾರಾಧನಕಾಂಕ್ಷಿಣಾ ॥೩॥

ಗೋಸಲಾ ಸಿದ್ಧದೇವಾದಿ ಶಿವಯೋಗೀಂದ್ರ ಪುಂಗವೈಃ ।
ಶ್ರೀಚನ್ನಬಸವೇಂದ್ರೈಶ್ಚ ಪವಿತ್ರಿಕೃತ ಸಾನುಮಾನ್ ॥೪॥

ಭಕ್ತಾಭೀಷ್ಟಪ್ರದಾನೇನ ಪಾರಿವ್ರಾಜ್ಯಪಯೋಧಿನಾ ।
ಸಿದ್ಧಲಿಂಗಾಭಿಧಾನೇನ ಯೋಗಿನಾನಿಲಯೀಕೃತಃ ॥೫॥

ಶ್ರೀಸಿದ್ಧೇಶಪ್ರಸಾದೇನ ಶಿಲಾಮಧ್ಯೇ ಶಿವಾಜ್ಞಯಾ ।
ಸಮುದ್ಭೂತಾ ಜಟಾಗಂಗಾ ಸಿದ್ಧಗಂಗೇತಿ ಸಂಜ್ಞಿತಾ ॥೬॥

ಶಿವಾಜ್ಞಾಂ ಶಿರಸಾ ಧೃತ್ವಾ ಗಂಗಾಚಾತ್ರವಿರಾಜತೇ ।
ಭಗೀರಥ ಪ್ರಯತ್ನೇನ ಸ್ವರ್ಗಾದ್ಭುವಮುಪಾಗತಾ ॥೭॥

ಅಭೀಪ್ಸಿತಾರ್ಥದಾದೇವೀ ಭಕ್ತೈರ್ನಿತ್ಯಮುಪಾಸಿತಾ ।
ರಾಜತೇ ಮರ್ತ್ಯಲೋಕೇಸ್ಮಿನ್ ಕಾಮಧೇನುರಿತೀರಿತಾ ॥೮॥

ತಸ್ಯ ಪಾದ ಪ್ರದೇಶೇಸ್ಮಿನ್ ಪಾಠಶಾಲಾ ಮನೋಹರಾ।
ಸಚ್ಛಾಸ್ತ್ರನಿವಹೈರ್ನಿತ್ಯಂ ವಿದ್ವದ್ಭಿಶ್ಚ ವಿಭೂಷಿತಾ ॥೯॥

ಯತ್ರಾನ್ನದಾಸೋಹಮಭೂತಪೂರ್ವಂ
ತತ್ವಾರ್ಥಚಿಂತಾ ಪರಿಭಾಷಣಂ ಚ ।
ಉದ್ಘೋಷ್ಯಮಾಣಾಧ್ಯಯನಂಚ ನಿತ್ಯಂ
ಸಿದ್ಧಾಶ್ರಮೋಽಯಂ ಮಧುರಂ ವಿಭಾತಿ ॥೧೦॥

—ಎಂ. ಜಿ. ನಂಜುಂಡಾರಾಧ್ಯ

*ಜೀವಜ್ಯೋತಿ ಗ್ರಂಥದಿಂದ

# ತುಂಬಿತುಳುಕಿತು ಪೀಠಕಿವನಿಂದ ಸತ್ಕೀರ್ತಿ*

ಶ್ರೀ ನಿರಂಜನ ಶಿವಕುಮಾರ ಗುರುವೆನ್ನುವಭಿ
ಧಾನದಿಂದೀಕ್ಷೇತ್ರಪತಿಯಾಗಿ ತಾ ನಿಂದ
ಇವ ಪರಮಶಿವಯೋಗಿ ಶಿವಸತ್ಸುಖದ ಭೋಗಿ
ನಡೆನುಡಿಯೊಳೊಂದಾಗಿ ನಡೆಯುತಿಹ ಸುವಿರಾಗಿ
ಅನುಭಾವವದುಮಾಗಿಯಿದ್ದಿಹುದು ಹಣ್ಣಾಗಿ
ಸರ್ವರೊಳಗನುರಾಗಿಯಂತೆಯೇ ವಿರಾಗಿ
ತಾನುತನ್ನವರೆಂಬ ಬಡವಬಲ್ಲಿದರೆಂಬ
ಉಚ್ಚನೀಚವದೆಂಬ ಜಾತಿವರ್ಣಗಳೆಂಬ
ತಾರತಮ್ಯವನುಳಿದು, ಲೋಕಸೇವೆಯೆ ಶಿವನ
ಸೇವೆಯೆಂಬುವ ಭಾವದಿಂ ನಡೆವ ಧನ್ಯಾತ್ಮ
ಏನಿವನ ತೇಜಸ್ಸು ! ಏನಿವನ ಓಜಸ್ಸು !
ಏನಿವನ ದಾಸೋಹ ಭಾವದಾ ಹುಮ್ಮಸ್ಸು !
ಜನ ನೆರೆದು ಉಂಡಷ್ಟು ತಣಿಯದಿವನ ಮನಸ್ಸು
ಜನದ ತೃಪ್ತಿಯ ಕಂಡು ನಲಿವುದಿವನ ತಪಸ್ಸು

ಶಕ್ತಿಯಿಂ ಯುಕ್ತನಾದಾಗಲೇ ಪರಶಿವಂ
ಶಕ್ತನಾಗುವನೆಂತೊ ಸೃಷ್ಟಿಕಾರ್ಯಕ್ಕಂತೆ
ಶ್ರೀ ಶಿವಕುಮಾರಗುರುವರನ ದಿವ್ಯಜ್ಞಾನ–
ಕಸಮಕ್ರಿಯಾಶಕ್ತಿಯಿರದೆ ತಾ ಮೇಳವಿಸಿ
ಸೃಜನಾತ್ಮಕದ ಮಹಾಶಕ್ತಿಯುದ್ಭವವಾಯ್ತು
ಋಜುತೆಗಾ ಕ್ರತಶಕ್ತಿ ಬಿಡದೆ ತಲೆವಾಗಿಸಿತು
ಸಿದ್ಧಗಂಗೆಯು ಸಕಲ ವಿದ್ಯೆಗಳ ತವರಾಗಿ
ಉದ್ಧಾರವಾಗುತಿದೆ ಜನಕೋಟಿ ಋಣಿಯಾಗಿ.

ಶರಣರೀಭೂಮಿಯೊಳಗೆಸಗಿದ ತಪಃಫಲವೊ !
ನೆರಭಕ್ತಜನಗೈದ ಭೂರಿಪುಣ್ಯದ ಫಲವೊ !
ವೀರಶೈವದ ತತ್ತ್ವ ಸಾಕಾರಮಾಯಿತೊ !
ಸಾರತರ ಕಾಯಕವೆಯದು ರೂಪುಗೊಂಡಿತೊ !
ಎಂಬುವೊಲು ಮೆರೆವನೀ ಪರಮಜಂಗಮಮೂರ್ತಿ !
ತುಂಬಿ ತುಳುಕಿತು ಪೀಠಕಿವನಿಂದ ಸತ್ಕೀರ್ತಿ !

—ಪಂಡಿತ ಹೆಚ್.ಎಂ. ರಾಮಾರಾಧ್ಯ

*ಸಿದ್ಧಗಂಗಾ ತ್ರೈಮಾಸಿಕದಿಂದ



ಶ್ರೀಕ್ಷೇತ್ರದ ಒಂದು ವಿಹಂಗಮ ದೃಶ್ಯ



ವಿದ್ಯಾರ್ಥಿಗಳೊಡನೆ ಕಾಯಕಮಗ್ನ ಶ್ರೀಗಳು



# ದರ್ಶನಶ್ರೀ

**ಒಳಗಡೆಯಲ್ಲಿ :**

ಭಾರತೀಯ ಸಂಸ್ಕೃತಿಯಲ್ಲಿ ಧರ್ಮದ ಸಮನ್ವಯಸ್ವರೂಪ.
ದ್ವೈತಾದ್ವೈತವಿಶಿಷ್ಟಾದ್ವೈತಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಗಳು.
ಜೈನಬೌದ್ಧ ಚಾರ್ವಾಕದರ್ಶನಗಳು.
ನಾಥಪಂಥ ಅರವಿಂದದರ್ಶನ ಕಾಶ್ಮೀರಶೈವಗಳು.
ಥಿಯಾಸಫಿ (ಬ್ರಹ್ಮವಿದ್ಯೆ) ಕ್ರೈಸ್ತ, ಸೂಫಿ ಮತಗಳು.
ಶೈವಪ್ರಭೇದ, ಶೈವವೀರಶೈವಗಳ ತಾತ್ತ್ವಿಕವಿಶ್ಲೇಷಣೆ.
ವೀರಶೈವ ಮಠಗಳ ಪರಂಪರೆ.
ವೀರಶೈವ ಧರ್ಮದ ಪ್ರಾಚೀನತೆ.
ವೀರಶೈವದರ್ಶನ : ಶಿವಶಕ್ತಿಯರ ಸಂಬಂಧ.
ಸೃಷ್ಟಿಯ ವಚನಗಳು (ಜೀವ-ಜಗತ್ತು ಈಶ್ವರ ತತ್ತ್ವವಿಶ್ಲೇಷಣೆ).
ಲಿಂಗ ತತ್ತ್ವದ ಉಗಮ–ವಿಕಾಸ.
ತತ್ತ್ವಗಳು.
ಮೂವತ್ತಾರು ತತ್ತ್ವಗಳು ಮತ್ತು ಏಕೋತ್ತರ ಶತಸ್ಥಲ.
ಅಷ್ಟಾಂಗ ಯೋಗ-ಶಿವಯೋಗ.
ನವವಿಧಭಕ್ತಿ-ಷಡ್ವಿಧಭಕ್ತಿ.
ದೀಕ್ಷೆ.
ಅರವತ್ತುನಾಲ್ಕು ಶೀಲಗಳು–ಕಾಯಕ.
ಅನುಭಾವ.
ಕರಣದಹಸಿಗೆ ಮತ್ತು ಮಿಶ್ರಾರ್ಪಣ.
ಮಂತ್ರಗೋಪ್ಯ.
ಲಿಂಗಾಂಗ ಸಾಮರಸ್ಯ.
ಶಿವಯೋಗ–ಇತ್ಯಾದಿ.

# ಭಾರತೀಯ ಸಂಸ್ಕೃತಿಯಲ್ಲಿ ಧರ್ಮದ ಸಮನ್ವಯ ಸ್ವರೂಪ

—ಪ್ರೊ. ಎಸ್.ಎಸ್. ರಾಘವಾಚಾರ್

## ೧. ನಾಗರಿಕತೆ ಮತ್ತು ಸಂಸ್ಕೃತಿ

ಇತಿಹಾಸದ ಶೋಧನೆಯಲ್ಲಿ ಸಾಮಾನ್ಯವಾಗಿ ನಾಗರಿಕತೆ ಮತ್ತು ಸಂಸ್ಕೃತಿಗೆ ಬೇರೆ ಬೇರೆ ಲಕ್ಷಣಗಳನ್ನು ಹೇಳುವುದುಂಟು. ನಾಗರೀಕತೆ ಎಂದರೆ ಮಾನವನು ತನ್ನ ದೈಹಿಕ ಮತ್ತು ಬಾಹ್ಯಜೀವನಕ್ಕೆ ಬೇಕಾದ ಸೌಕರ್ಯಗಳನ್ನು ತನ್ನ ಪ್ರಜ್ಞಾ ಬಲದಿಂದ ವ್ಯವಸ್ಥಿತ ರೀತಿಯಲ್ಲಿ ಒದಗಿಸಿಕೊಳ್ಳುವುದು. ಈ ವಲಯಕ್ಕೆ ಸೇರಿದ್ದು ವ್ಯವಸಾಯ, ಕೈಗಾರಿಕೆಗಳು, ಮನೆಮಟ ಕಟ್ಟಿಕೊಳ್ಳುವುದು, ಸ್ವರಕ್ಷಣೆಗೆ ಬೇಕಾದ ಸಾಧನಗಳನ್ನು ಒದಗಿಸಿಕೊಳ್ಳುವುದು ಮುಂತಾದುವು. ಬೇರೆ ಪ್ರಾಣಿಗಳು ತೋರಿಸದ ಈ ಕೌಶಲ ಸಮುದಾಯಕ್ಕೆ ನಾಗರಿಕತೆ ಎನ್ನುವುದು ವಾಡಿಕೆ. ಇವುಗಳಿಗೆ ಸೇರಿದ ಸಮಸ್ತ ಸಾಮಾಜಿಕ ಶಿಸ್ತುಗಳೂ ಇದರಲ್ಲಿ ಅಂತರ್ಗತವಾಗಿವೆ. ಹೀಗೆಯೇ ಮನುಷ್ಯನ ಬುದ್ಧಿ ಅಥವಾ ಆತ್ಮಕ್ಕೆ ಸಂಬಂಧಪಟ್ಟ, ಅಂದರೆ ಆಂತರಿಕ ಆಕಾಂಕ್ಷೆಗಳಿಗೆ ಉತ್ತರ ವಾಗಿ ಕಲ್ಪಿಸಿಕೊಳ್ಳುವ ವ್ಯವಸ್ಥೆಗಳಿಗೆ ಸಂಸ್ಕೃತಿ ಎನ್ನಲಾಗಿದೆ. ಇವು ಬಾಹ್ಯಜೀವನದ ಸಾಧನವಾಗಿರದೆ, ಆತ್ಮತೃಪ್ತಿಗೋಸ್ಕರ ಎಸಗುವ ಕಾರ್ಯಕಲಾಪಗಳು. ಇಲ್ಲಿ ಸೌಂದರ್ಯೋಪಾಸನೆ, ಕಲೆಗಳು, ಕಾವ್ಯಾನಂದ, ಸ್ವಾರ್ಥವಿಲ್ಲದೆ ಪರಕಲ್ಯಾಣಕ್ಕಾಗಿಯೇ ದುಡಿಯುವ ನೈತಿಕಶೀಲ, ವಿಜ್ಞಾನ ಮತ್ತು ಜಿಜ್ಞಾಸೆಯ ರೂಪದಲ್ಲಿ ನಡೆಸಬಹುದಾದ ಸತ್ಯಾನ್ವೇಷಣೆ ಇವು ಮುಖ್ಯಾಂಶಗಳು. ನಾಗರಿಕತೆ ದೇಹಪೋಷಣೆಗಾದರೆ, ಸಂಸ್ಕೃತಿಯು ಆತ್ಮವಿಕಾಸವಾಗಿದೆ.

## ೨. ಸಂಸ್ಕೃತಿ ಮತ್ತು ಧರ್ಮ

ಸಂಸ್ಕೃತಿಯಲ್ಲಿ ಸ್ಥಾನಹೊಂದಿರುವ ಮತ್ತೊಂದು ಅಂಶವೆಂದರೆ ಧರ್ಮ. ಧರ್ಮ ಶಬ್ದಕ್ಕೆ ನೀತಿನಿಯಮಗಳೆಂದು ಅರ್ಥವಿದ್ದರೂ, ಅದರ ಮುಖ್ಯವಾದ ಅರ್ಥ ಆಧ್ಯಾತ್ಮಿಕತೆ. ಆಧ್ಯಾತ್ಮಿಕ ದೃಷ್ಟಿಯಿಂದ ಜೀವನವನ್ನು ರೂಪಿಸಿಕೊಳ್ಳುವುದಕ್ಕೆ ಧರ್ಮವೆಂದು ಪರಿಭಾಷೆ. ಇದು ಇಂಗ್ಲಿಷಿನ 'Religion' ಎಂಬ ಶಬ್ದದ ಪ್ರತಿನಿಧಿ. ಎಲ್ಲಾ ಪ್ರಬುದ್ಧವಾದ ಸಂಸ್ಕೃತಿಯಲ್ಲೂ ಈ ಅರ್ಥದ ಧರ್ಮಕ್ಕೆ ಸ್ಥಾನವಿದೆ. ಇತ್ತೀಚಿನ ಕೆಲವು ಸಂಸ್ಕೃತಿಗಳಲ್ಲಿ ಇದನ್ನು ತೆಗೆದುಹಾಕಲು ಸಾಕಷ್ಟು ಪ್ರಯತ್ನವಾಗಿದ್ದರೂ, ಆ ಪ್ರಯತ್ನ ಪೂರ್ಣವಾಗಿ ಸಫಲವಾಗಿದೆ ಎಂದು ಹೇಳುವಂತಿಲ್ಲ.

## ೩. ಭಾರತ ಸಂಸ್ಕೃತಿ ಮತ್ತು ಧರ್ಮ

ಮೇಲೆ ಸೂಚಿಸಿದಂತೆ ಸಾಮಾನ್ಯವಾಗಿ ಎಲ್ಲಾ ಸಂಸ್ಕೃತಿಯಲ್ಲೂ ಧರ್ಮವಿದ್ದರೂ, ಭಾರತ ಸಂಸ್ಕೃತಿಯ ವೈಶಿಷ್ಟ್ಯ ವೇನೆಂದರೆ, ಧರ್ಮಕ್ಕೆ ಅಂಶಸ್ಥಾನವನ್ನು ಕೊಡದೆ ಅದಕ್ಕೆ 'ಅಂಶಿ'ಯ ಸ್ಥಾನವನ್ನು ಕೊಟ್ಟಿದೆ. ಅಂದರೆ ಸೌಂದರ್ಯ ಸೇವೆ, ನೈತಿಕ ನಿಯಮಗಳು, ತತ್ತ್ವಾನ್ವೇಷಣೆ ಇವೇ ಮೊದಲಾದ ಸಂಸ್ಕೃತಿಯ ಇತರ ಅಂಗಗಳೆಲ್ಲಾ ಧರ್ಮದಿಂದ ವ್ಯಾಪ್ತವಾಗಿ, ಧರ್ಮವೇ ಸಂಸ್ಕೃತಿಯ ಆತ್ಮಸ್ವರೂಪವಾಗಿದೆ. ಜೀವನ ಎಲ್ಲ ಧ್ಯೇಯಸಾಧನೆ ಧರ್ಮದ ಸ್ಫೂರ್ತಿಯಿಂದ ನಡೆಯಬೇಕೆನ್ನುವುದು ಈ ಸಂಸ್ಕೃತಿಯ ಮೂಲತತ್ತ್ವ. ಭಾರತದಲ್ಲೇ ಮೂರು ಪ್ರಧಾನವಾದ ಧರ್ಮಪರಂಪರೆಗಳು ಹುಟ್ಟಿಬೆಳೆದವು. ಇವು ವೈದಿಕ ಧರ್ಮ–ಇದರಲ್ಲೇ ಅನೇಕ ಶಾಖೆಗಳುಂಟು-ಜೈನಧರ್ಮ, ಹಾಗೆಯೇ ಬೌದ್ಧಧರ್ಮ; ಈ ಧರ್ಮಗಳ ಸ್ಥೂಲಪರಿಚಯ ಮಾಡಿಕೊಂಡರೂ, ಪ್ರಪಂಚದ ಇತರ ಧರ್ಮಗಳ, ಅಂದರೆ ಯಹೂದ್ಯಧರ್ಮ, ಕ್ರೈಸ್ತಧರ್ಮ, ಇಸ್ಲಾಂಧರ್ಮ, ಹಾಗೆಯೇ ಸರಥುಷ್ಟ್ರಧರ್ಮ, ಚೈನಾದೇಶದ ಎರಡು ಧರ್ಮಪಂಥಗಳು, ಇವುಗಳೆಲ್ಲದರ ಮುಖ್ಯತತ್ತ್ವಗಳ ಸಂವಾದವನ್ನು ಸ್ಪಷ್ಟವಾಗಿ ಇವುಗಳಲ್ಲಿ ಕಾಣಬಹುದು. ಹೀಗೆ ವಿಶ್ವಧರ್ಮಗಳ ಪ್ರತಿನಿಧಿಯಂತಿರುವ ಭಾರತಧರ್ಮ ಭಾರತಸಂಸ್ಕೃತಿಯ ಉಗಮ ಸ್ಥಾನವಾಗಿದೆ.

## ೪. ಭಾರತಧರ್ಮದ ವ್ಯಾಪಕ ಸಂದೇಶ

ವಿಶಾಲವಾದ ಭಾರತಧರ್ಮದ ಮುಖ್ಯ ಬೋಧನೆಗಳನ್ನು ವಿಶ್ಲೇಷಣೆ ಮಾಡಿದರೆ, ಆ ಮೂಲಕ ಸರ್ವಧರ್ಮಗಳ ಸಮನ್ವಯದ ಸಾಧ್ಯತೆ ಅರಿವಾಗುವುದಲ್ಲದೆ, ಧರ್ಮದ ನಿಮಿತ್ತದಿಂದ ಜನಾಂಗಗಳ ದ್ವೇಷ ಮತ್ತು ಅಸಹನೆ ತೀವ್ರ ಅಯುಕ್ತ ವೆಂದೂ ಸ್ಪಷ್ಟಪಡುವುದು. ಈ ಮೂಲ ತತ್ತ್ವಗಳನ್ನು ಸ್ಥೂಲವಾಗಿಯಾದರೂ ನಿರೂಪಿಸುವುದು ಈ ಕಾರಣದಿಂದ ಅಗತ್ಯ ವಾಗಿದೆ.

ಅ) ಜ್ಞಾನ:—ಧರ್ಮದಲ್ಲಿ ಮನುಷ್ಯನ ಜ್ಞಾನಕ್ಕೆ ಸಂಬಂಧಪಟ್ಟ ಮೀಮಾಂಸೆ ನಡೆದಿದೆ. ಸಾಮಾನ್ಯವಾಗಿ ಲೌಕಿಕ ದೃಷ್ಟಿಯಲ್ಲಿ ಜ್ಞಾನವೆಂದರೆ ನಮ್ಮ ಪ್ರತ್ಯಕ್ಷ ಅನುಭವ ಹಾಗೂ ಅದರ ಮೇಲೆ ನಾವು ಮಾಡಬಹುದಾದ ತರ್ಕಬದ್ಧವಾದ ಊಹೆ ಅಥವಾ ಅನುಮಾನ. ಧರ್ಮಕ್ಕೆ ಇಷ್ಟೇ ಸಾಲದು. ಪಕ್ವವಾದ ಪ್ರಜ್ಞೆಗೆ ಇವುಗಳನ್ನೂ ಮೀರಿದ ಲೋಕಾತೀತ ಪರತತ್ತ್ವ ವಿಷ

ಯಕಜ್ಞಾನ ಅಥವಾ ದರ್ಶನ ಬರುತ್ತದೆಂದು ಧರ್ಮಸಿದ್ಧಾಂತ ಮಾಡುತ್ತದೆ. ಇದಕ್ಕೆ ಸಾಕ್ಷಾತ್ಕಾರ, ಕೇವಲ ಜ್ಞಾನ, ಮಹಾ ಬೋಧೆ ಎಂದು ಬೇರೆ ಬೇರೆ ಹೆಸರುಗಳನ್ನು ಕೊಡಲಾಗಿದೆ. ಬುದ್ಧನಿಗೆ ಇದು ಮಹಾಬೋಧಿ ವೃಕ್ಷದ ಕೆಳಗೆ ಲಭಿಸಿತು. ಜೈನ ತೀರ್ಥಂಕರರೆಲ್ಲಾ ಇದನ್ನು ತಮ್ಮ ಸಾಧನೆಯ ಕೊನೆಯ ಸೋಪಾನದಲ್ಲಿ ಹೊಂದಿದರು. ಉಪನಿಷತ್ಕಾರರು ಇದನ್ನು ದರ್ಶನ ಎಂದು ವ್ಯವಹರಿಸುತ್ತಾರೆ. ಮೋಸಸ್, ಯೇಸು, ಮಹಮ್ಮದ್ ಪೈಗಂಬರರು ಎಲ್ಲರೂ ಈ ಜ್ಞಾನಲಾಭದಿಂದ ಪೂರ್ಣತೆ ಹೊಂದಿದ ಪ್ರವಾದಿಗಳಾದರೆಂದು ನಂಬಲಾಗಿದೆ.ಅವರಉಪದೇಶಕ್ಕೆ ಶಾಸ್ತ್ರವೆಂದು ಹೆಸರು. ಆ ಶಾಸ್ತ್ರದ ಪ್ರಾಮಾಣ್ಯಕ್ಕೆ ಮೂಲ ಈ ಪರಮಾರ್ಥಾನುಭವ. ಈ ರೀತಿಯ ಲೋಕೋತ್ತರ ತತ್ತ್ವಸಾಕ್ಷಾತ್ಕಾರವನ್ನು ಒಪ್ಪದಿರುವ ಯಾವ ಧರ್ಮವೂ ಪ್ರಪಂಚ ದಲ್ಲಿ ಪ್ರಚಲಿತವಾಗಿಲ್ಲ. ಈ ಸಾಕ್ಷಾತ್ಕಾರವನ್ನು ಪ್ರತಿ ಸಾಧಕನೂ ತನ್ನ ಸಾಧನದ ಚರಮಸಿದ್ಧಿಯಲ್ಲಿ ಪಡೆಯಬಹುದು, ಪಡೆ ಯಬೇಕೆಂದು ಧರ್ಮಗಳೆಲ್ಲಾ ಸಾರುತ್ತವೆ.

ಆ) **ತತ್ತ್ವ:**—ತತ್ತ್ವವೆಂದರೆ ವಸ್ತುಗಳ ನೈಜಸ್ವರೂಪ. ಸಾಮಾನ್ಯದೃಷ್ಟಿಗೆ ಪ್ರಕೃತಿ 'ತತ್ತ್ವ'ವೆಂದು ಭಾಸ ವಾಗುತ್ತದೆ. ಸ್ವಲ್ಪ ಮುಂದೆ ವಿಚಾರಿಸಿದರೆ, ಜೀವಂತ ಪ್ರಾಣಿಗಳ ಸಾರಭೂತವಾದ ಚೇತನವು 'ತತ್ತ್ವ'ವೆಂದು ಅರಿವಾಗುತ್ತದೆ. ಇನ್ನೂ ಮುಂದೆ ಸಾಗಿದರೆ, ಈ ಅಚೇತನ ಪ್ರಕೃತಿ ಮತ್ತು ಸಾಮಾನ್ಯ ಜೀವಗಳನ್ನು ಮೀರಿದ, ಅತ್ಯಂತ ಉತ್ಕೃಷ್ಟ ಮತ್ತು ಅನಂತವಾದ ಪರಮಾತ್ಮ, ಈಶ್ವರ ಅಥವಾ ಉಪನಿಷತ್ತುಗಳು ಸಾರುವ ಬ್ರಹ್ಮವೆಂಬ ತತ್ತ್ವ ಪ್ರಾಮಾಣಿಕವಾಗಿ ತತ್ತ್ವವೆಂದು ಕಂಡುಬರುತ್ತದೆ. ನಿರೀಶ್ವರವಾದದಂತೆ ತೋರುವ ಜೈನ ಮತ್ತು ಬೌದ್ಧಧರ್ಮಗಳಲ್ಲೂ, ಕೊನೆಯಲ್ಲಿ ಧರ್ಮವನ್ನೋ ಅಥವಾ ಬುದ್ಧನನ್ನೋ ಈ ಅನಂತ ವಸ್ತುವೆಂದು ಪರಿಗಣಿಸಲಾಗಿದೆ. ಲೋಕಾತೀತ ಅನುಭವ ಮತ್ತು ಈ ಲೋಕಾತೀತವಾದ ಅನಂತ, ಅದ್ವಯ ತತ್ತ್ವವನ್ನು ಎಲ್ಲ ಭಾರತೀಯ ಧರ್ಮಗಳೂ ಅಷ್ಟೇಕೆ, ಎಲ್ಲ ವಿಶ್ವಧರ್ಮಗಳೂ ಸಾರುತ್ತವೆ.

ಇ) **ಪುರುಷಾರ್ಥ:**—ಮಾನವ ಜೀವನದ ಗುರಿ ಏನೆಂಬುವುದು ಎಲ್ಲ ಧರ್ಮಗಳಲ್ಲೂ ಎತ್ತಿರುವ ಒಂದು ಮೂಲ ಪ್ರಶ್ನೆ. ಇದು ಕೇವಲ ಇಂದ್ರಿಯ ಸುಖವಾಗಲಿ, ಆರ್ಥಿಕ ಸಂಪತ್ತಾಗಲಿ, ಲೌಕಿಕ ಪ್ರತಿಷ್ಠೆ ಇಷ್ಟೇ ಆಗಲಾರದು. ಇವು ನಶ್ವರ ಮತ್ತು ಪರಿಮಿತವಾದುವು. ಅಪರಿಮಿತವಾದ ಸರ್ವೋತ್ಕೃಷ್ಟವಾದ ಪುರುಷಾರ್ಥ ಒಂದಿದೆ ಎಂದು ಎಲ್ಲ ಧರ್ಮಗಳೂ ವಾದಿ ಸುತ್ತವೆ. ಇದಕ್ಕೆ ಭಾರತೀಯ ಪರಿಭಾಷೆಯಲ್ಲಿ ಮೋಕ್ಷವೆಂದು ಹೆಸರು. ಹೆಸರೇ ಸೂಚಿಸುವಂತೆ ಇದು ಸಂಕೋಚ ತಂದೊಡ್ಡುವ ಪ್ರತಿಬಂಧಕಗಳೆಲ್ಲದರಿಂದಲೂ ಬಿಡುಗಡೆ ಹೊಂದಿ ಮನುಷ್ಯನ ಆತ್ಮ ತನ್ನ ಸ್ವಾಭಾವಿಕ ಪೂರ್ಣತೆಯನ್ನು ಹೊಂದುವುದು. ಇದನ್ನು ಹೊಂದಲು ಒಂದೇ ಒಂದು ಮಾರ್ಗ. ಮೂಲತತ್ತ್ವವಾದ ಈಶ್ವರ ಅಥವಾ ಬ್ರಹ್ಮನಿಂದ ವಿಮುಖವಾದದ್ದರಿಂದ ಜೀವ ಚೈತನ್ಯಕ್ಕೆ ಸಂಕೋಚ, ಅಪೂರ್ಣತೆ ಬಂದಿರುವುದು; ಆ ಕಾರಣದಿಂದ ಆ ಅಂತಿಮತತ್ತ್ವದಲ್ಲಿ ಸಮಾವೇಶಗೊಳ್ಳು ವುದೇ ಪೂರ್ಣತೆಗೆ ದಾರಿ. ಬ್ರಹ್ಮಾನುಭವವನ್ನು ಸಿದ್ಧಿಸಿಕೊಳ್ಳುವುದೇ ಮೋಕ್ಷ. ಇದನ್ನೆ 'Kingdom of God' ಎಂದು ಕ್ರೈಸ್ತಧರ್ಮದಲ್ಲಿ ನಿರ್ದೇಶಿಸುವುದು. ಇದಕ್ಕೆ ಭಾರತೀಯ ದರ್ಶನಗಳಲ್ಲಿ ಕೈವಲ್ಯ, ನಿರ್ವಾಣ, ಬ್ರಹ್ಮಭಾವ, ಅಪವರ್ಗ ಮೊದ ಲಾದ ಶಬ್ದಗಳನ್ನು ಬಳಸಲಾಗಿದೆ. ನದಿಯು ಸಮುದ್ರ ಸೇರುವುದರಿಂದ ಬರುವ ವೈಶಾಲ್ಯ ಮತ್ತು ಶಾಂತಿಗೆ ಇದನ್ನು ಉಪನಿ ಷತ್ತುಗಳು ಹೋಲಿಸುತ್ತವೆ. ಇದು ಉಪಮೆಗೆ ಮೀರಿದ ಆತ್ಮಕಲ್ಯಾಣದ ಆವಿರ್ಭಾವ.

ಈ) **ಸಾಧನಮಾರ್ಗಗಳು:**—ಭಗವದ್ ತತ್ತ್ವದಲ್ಲಿ ಜೀವತತ್ತ್ವವನ್ನು ಸಮರ್ಪಿಸುವುದು ಮೋಕ್ಷವಾದರೆ. ಇದರ ಸಾಧನೆಯ ಮಾರ್ಗಗಳನ್ನು ಚಿಂತಿಸಬೇಕಾಗುತ್ತದೆ. ಈ ಸಾಧನೆಗಳು ಜೀವನದಲ್ಲಿ ಸಿದ್ಧವಾಗಿರುವ ಶಕ್ತಿಗಳನ್ನು ಅವಲಂಬಿಸುತ್ತವೆ. ಆ ಶಕ್ತಿಗಳನ್ನು ಮೂರು ವಿಧವಾಗಿ ವಿಂಗಡಿಸಲಾಗಿದೆ. ಜ್ಞಾನಶಕ್ತಿ, ಕ್ರಿಯಾಶಕ್ತಿ ಹಾಗೆಯೇ ಭಾವಶಕ್ತಿಗಳು ಅವಾಗಿವೆ. ಜ್ಞಾನ ಶಕ್ತಿಯನ್ನು ಉಪಯೋಗಿಸಿಕೊಂಡು, ವಿಚಾರಮಾಡಿ ಪರತತ್ತ್ವವನ್ನು ಸೇರುವುದಕ್ಕೆ ಜ್ಞಾನಯೋಗವೆಂದು ಹೆಸರು. ಕ್ರಿಯಾಶಕ್ತಿ ಯನ್ನು ನಿಸ್ವಾರ್ಥತೆಯಿಂದ ಈಶ್ವರ ಪ್ರಾಪ್ತಿಗೋಸ್ಕರ ಲೋಕಕಲ್ಯಾಣಕ್ಕೆ ಉಪಯೋಗಿಸುವುದು ಕರ್ಮಯೋಗವೆಂದೆನಿಸಿ ಕೊಳ್ಳುತ್ತದೆ, ಭಾವಶಕ್ತಿಯನ್ನು ಪ್ರೇಮವಾಗಿ ಪರಿವರ್ತಿಸಿಕೊಂಡು, ಸರ್ವಪ್ರೇಮವನ್ನು ಆ ಮಹದ್ವಸ್ತುವಿಗೆ ಧಾರೆಯೆರೆಯು ವುದು ಭಕ್ತಿಯೋಗವೆನಿಸುತ್ತದೆ. ಈ ಮೂರು ಪರಸ್ಪರ ವಿರುದ್ಧವಾದ ಅಥವಾ ಬೇರೆ ಬೇರೆಯಾದ ಪಂಥಗಳಲ್ಲಿ ಅನುಭವಿಸಿ ಸಮುಚ್ಚಯಗೊಳಿಸಿ ಸರ್ವತೋಮುಖವಾಗಿ ಪರತತ್ತ್ವವನ್ನು ಕುರಿತು ಭಾವಿಸುವುದೇ ಶ್ರೇಯೋಮಾರ್ಗ. ಎಲ್ಲ ಧರ್ಮಗಳಲ್ಲೂ ಇವು ಉಪದಿಷ್ಟವಾಗಿವೆ. ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿ ಇದನ್ನು ವಿಶೇಷ ರೀತಿಯಲ್ಲಿ ಉಪದೇಶಿಸಲು ಹುಟ್ಟಿರುವ ಶಾಸ್ತ್ರವೆ ಶ್ರೀಮದ್ಭಗವದ್ಗೀತಾ.

ಸಣ್ಣ ಸಣ್ಣ ವಿಷಯಗಳನ್ನು ಬಿಟ್ಟು ಮೂಲ ತತ್ತ್ವಗಳನ್ನು ವಿಮರ್ಶಿಸಿದರೆ ಭಾರತೀಯ ಧರ್ಮವು ಸರ್ವಧರ್ಮಗಳ ಸಮನ್ವಯವನ್ನು ಖಚಿತವಾಗಿ ನೀಡುತ್ತದೆ, ಇಂತಹ ಧರ್ಮವೇ ನಮ್ಮ ಸಂಸ್ಕೃತಿಯ ಕೇಂದ್ರ ಸ್ಫೂರ್ತಿ. ಎಲ್ಲ ಧರ್ಮಗಳೂ ಏಕ ಮಾತ್ರ ಧರ್ಮಗಂಗೆಯ ಬೇರೆ ಬೇರೆ ದಡಗಳು. ಈ ಗಂಗೆಯ ಜೀವದಾಯಕ ಜಲದಿಂದ ಪೋಷಿತವಾಗುವ ಬೆಳೆಯೇ ಸಂಸ್ಕೃತಿಯ ಇತರ ಅಂಗಗಳು, ಈ ಸಂಪತ್ತನ್ನು ನಾವು ರಕ್ಷಿಸಿದಷ್ಟೂ ಅದು ನಮ್ಮನ್ನು ರಕ್ಷಿಸಬಲ್ಲದು.

# ದ್ವೈತ

—ಪ್ರೊ. ಕೆ.ಟಿ. ಪಾಂಡುರಂಗಿ

ಭಾರತದಲ್ಲಿ ಪ್ರಚಲಿತವಾಗಿರುವ ಮತ–ಧರ್ಮಗಳಲ್ಲಿ ದ್ವೈತಮತವು ಒಂದು ಪ್ರಮುಖವಾದ ಮತಧರ್ಮವಾಗಿದೆ. ಇದರ ಅನುಯಾಯಿಗಳು ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಕೇರಳ, ಗೋವಾ ಪ್ರದೇಶಗಳಲ್ಲಿ ಅಧಿಕಸಂಖ್ಯೆಯಲ್ಲಿಯೂ; ವೃಂದಾವನ, ಗಯಾ, ಚಿತ್ರಕೂಟಗಳಲ್ಲಿ ಕೆಲವರೂ ಇರುವರು. ಬಂಗಾಲದಲ್ಲಿ ಪ್ರಚಲಿತವಿರುವ ಚೈತನ್ಯಸಂಪ್ರದಾಯವು ಮಧ್ವಸಂಪ್ರದಾಯದ ಒಂದು ಶಾಖೆಯಾಗಿದೆ. ಅವರ ಗುರುಪರಂಪರೆಯಲ್ಲಿ ಶ್ರೀ ಮಧ್ವಾಚಾರ್ಯರಿಂದ ಶ್ರೀ ವ್ಯಾಸರಾಜರವರೆಗಿನ ಮಾಧ್ವಯತಿಗಳನ್ನು ಗುರುಗಳೆಂದು ಪರಿಗಣಿಸುತ್ತಾರೆ. ವೈದಿಕಧರ್ಮದ ವೇದಾಂತದರ್ಶನದ ಮತತ್ರಯಗಳಲ್ಲಿ ದ್ವೈತಮತವು ಒಂದು ಪ್ರಧಾನ ಮತವಾಗಿದೆ. ಈ ಮತದ ಸಿದ್ಧಾಂತಗಳನ್ನು ತಿಳಿದುಕೊಂಡು ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಎಲ್ಲ ವರ್ಗದವರಿಗೂ ಅಧಿಕಾರವಿದೆ. ಅಧಿಕಾರವನ್ನು ವೇದಾಧಿಕಾರ, ತಂತ್ರಾಧಿಕಾರ ಮತ್ತು ನಾಮಾಧಿಕಾರ ಎಂದು ವಿಂಗಡಿಸಿ ಆಧ್ಯಾತ್ಮಿಕ ಸಾಹಿತ್ಯದ ಅಧ್ಯಯನ ಮತ್ತು ಸಾಧನಕ್ರಮದಲ್ಲಿ ಭಿನ್ನಕ್ರಮಗಳನ್ನು ಹೇಳಿದ್ದರೂ ಆಧ್ಯಾತ್ಮಿಕ ಉನ್ನತಿಯ ಅಧಿಕಾರವನ್ನು ಈ ಮತದಲ್ಲಿ ಎಲ್ಲರಿಗೂ ಕೊಡಲಾಗಿದೆ. 'ಅಂತ್ಯಜಾ ಅಪಿ ಯೇ ಭಕ್ತಾ ನಾಮಜ್ಞಾನಾಧಿಕಾರಿಣಃ' ಎಂದು ಅಂತ್ಯಜರಿಗೂ ಆಧ್ಯಾತ್ಮಿಕ ಸಾಧನೆಯ ಅಧಿಕಾರವಿರುವುದನ್ನು ಶ್ರೀಮಧ್ವಾಚಾರ್ಯರು ತಮ್ಮ ಭಾಷ್ಯದಲ್ಲಿ ಸಾರಿದ್ದಾರೆ. ಆದುದರಿಂದಲೇ ಅಪರೋಕ್ಷಜ್ಞಾನಿಗಳೇ ರಚಿಸಬೇಕೆಂಬ ನಿರ್ಬಂಧವಿರುವ ಹರಿದಾಸ ಸಾಹಿತ್ಯದ ನಿರ್ಮಾತೃಗಳಲ್ಲಿ ಒಬ್ಬರಾದ ಕನಕದಾಸರು ಈ ಮತದಲ್ಲಿಯ ಗಣ್ಯಪುರುಷರೆನಿಸಿದ್ದಾರೆ. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಅಕ್ಕಸಾಲಿಗರೇ ಮೊದಲಾದವರು ಈ ಮತದ ಅನುಯಾಯಿಗಳಾಗಿದ್ದಾರೆ.

ಐತಿಹಾಸಿಕವಾಗಿ ಶ್ರೀ ಮಧ್ವಾಚಾರ್ಯರು ಕ್ರಿ. ಶ. ೧೩ ನೇ ಶತಮಾನದಲ್ಲಿ ಈ ಮತದ ಪ್ರತಿಷ್ಠಾಪನೆಯನ್ನು ಮಾಡಿದ್ದರೂ ಈ ಮತದ ತತ್ತ್ವಗಳೂ, ಸಂಪ್ರದಾಯಗಳೂ ಬಹು ಪ್ರಾಚೀನವಾದವು. ವೇದ, ಉಪನಿಷತ್, ಪಂಚರಾತ್ರಾಗಮ ಸಂಹಿತೆಗಳು, ಗೀತೆ, ಇತಿಹಾಸ–ಪುರಾಣಗಳು ಈ ಮತದ ಆಕರಗ್ರಂಥಗಳು—

> ಋಗ್ಯಜುಃ ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್ ।
> ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
> ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ॥

ಎಂದು ಈ ಮತದ ಆಕರಗ್ರಂಥಗಳನ್ನು ನಿರ್ದೇಶಿಸಲಾಗಿದೆ. ದ್ವೈತಮತದ ಮೌಲಿಕ ಸಿದ್ಧಾಂತಗಳು ಇವು—

೧) ವಿಷ್ಣುವು ಸರ್ವೋತ್ತಮನು, ಸರ್ವಗುಣಪೂರ್ಣನು, ಸ್ವತಂತ್ರನು, ಸರ್ವನಿಯಾಮಕನು, ಸರ್ವಾಂತರ್ಯಾಮಿಯು, ಜ್ಞಾನಾನಂದಮಯನು, ಸರ್ವಜ್ಞನು, ಸರ್ವಕರ್ತನು, ಅಚಿಂತ್ಯಾದ್ಭುತ ಶಕ್ತಿಯುಕ್ತನು. ಈ ಎಲ್ಲ ಮಾಹಾತ್ಮ್ಯವುಳ್ಳ ವಿಷ್ಣು ಸರ್ವೋತ್ತಮತ್ವವು ಈ ಮತದ ಕೇಂದ್ರ ಸಿದ್ಧಾಂತ. ಈ ವಿಷ್ಣುವೇ ವೇದಾಂತದ ಬ್ರಹ್ಮತತ್ತ್ವವು.

೨) ಜೀವ ಮತ್ತು ಜಗತ್ತು ವಿಷ್ಣುವಿಗೆ ಅಧೀನವಾದ ಆದರೆ ಸತ್ಯವಾದ ತತ್ತ್ವಗಳು. ಅವು ಮಾಯೆಯಿಂದ ಕಂಡು ಬರುವಂಥವಲ್ಲ. ಜೀವರು ಅನೇಕರು, ಅಲ್ಪಜ್ಞರು, ಅಲ್ಪಶಕ್ತಿಯುಳ್ಳವರು ; ಸಾತ್ತ್ವಿಕ, ರಾಜಸ, ತಾಮಸ, ಎಂಬ ಸ್ವಭಾವ ಭೇದವುಳ್ಳವರು. ಪರಮಾತ್ಮನಿಗಿಂತ ಅತ್ಯಂತ ಭಿನ್ನರು, ಅವನ ಪ್ರತಿಬಿಂಬರು. ಜೀವರು ಪರಸ್ಪರವಾಗಿಯೂ ಭಿನ್ನರು. ಜಡದಿಂದಲೂ ಭಿನ್ನರು. ಜಗತ್ತು ಜಡಪ್ರಕೃತಿಯಿಂದ ಉಂಟಾಗುತ್ತದೆ. ಇದು ಜೀವಪರಮಾತ್ಮರಿಗಿಂತ ಭಿನ್ನವಾದುದು, ಸತ್ಯವಾದುದು.

೩) ನಿಷ್ಕಾಮಕರ್ಮಾನುಷ್ಠಾನ, ಜ್ಞಾನ, ಭಕ್ತಿ, ಭಗವತ್ಪ್ರಸಾದ ಇವು ಆಧ್ಯಾತ್ಮಿಕ ಉನ್ನತಿಯ ಸಾಧನಗಳು. ಕರ್ಮಸಂನ್ಯಾಸವು ಉಚಿತವಲ್ಲ. ಅದು ಸಾಧ್ಯವೂ ಇಲ್ಲ. ಅದರಿಂದ ಪ್ರಯೋಜನವೂ ಇಲ್ಲ. ಭಗವದಾರಾಧನರೂಪವಾಗಿ ಭಕ್ತಿಯಿಂದ ಸ್ವವಿಹಿತಕರ್ಮಾನುಷ್ಠಾನವನ್ನು ಮಾಡುವದೇ ಧರ್ಮ. ಭಗವಂತನು ಸ್ವತಂತ್ರ ; ಜೀವರು ಪರತಂತ್ರ. ಭಗವಂತನೇ ಸರ್ವವ್ಯಾಪಾರಗಳನ್ನು ಮಾಡಿಸುವವನು : ಕರ್ತೃತ್ವ, ಭೋಕ್ತೃತ್ವ, ಸಾಧನಗಳು, ಫಲ ಎಲ್ಲವೂ ಅವನಿಗೇ ಸೇರಿದ್ದು ; ಅವನ ಪ್ರೇರಣೆಯಿಂದಲೇ ಎಲ್ಲವೂ ನಡೆಯುವದು.

> ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
> ಯದನುಗ್ರಹತಃ ಸಂತಿ, ನ ಸಂತಿ ಯದುಪೇಕ್ಷಯಾ ॥

ಎಲ್ಲ ಪದಾರ್ಥಗಳು, ಕಾಲ, ಕರ್ಮ, ಆಯಾ ಪದಾರ್ಥಗಳ ಸ್ವಭಾವ, ಜೀವರು ಈ ಎಲ್ಲವೂ ಅವನ ಅನುಗ್ರಹವಿದ್ದರೆ ತಮ್ಮ

ತಮ್ಮ ವ್ಯಾಪಾರವನ್ನು ಮಾಡಲು ಸಮರ್ಥರು ; ಇಲ್ಲವಾದರೆ ಇಲ್ಲ, ಇತ್ಯಾದಿಯಾಗಿ ಭಗವಂತನ ಮಹಿಮೆಯನ್ನು ತಿಳಿದುಕೊಳ್ಳುವದೇ ಜ್ಞಾನ. ಇಂಥ ಮಾಹಾತ್ಮ್ಯಜ್ಞಾನಸಹಿತವಾದ ಸ್ನೇಹವೇ ಭಕ್ತಿ. ಈ ಭಕ್ತಿಯಿಂದ ಭಗವಂತನು ಪ್ರಸನ್ನನಾಗಿ ಅಜ್ಞಾನವನ್ನು ಪರಿಹರಿಸಿ ಜೀವರಿಗೆ ತನ್ನ ಅಪರೋಕ್ಷದರ್ಶನವನ್ನು ಕೊಡುವನು. ಜೀವರು ತಮ್ಮ ಸ್ವರೂಪಾನಂದಾವಿರ್ಭಾವವನ್ನು ಪಡೆಯುವರು. ಇದು ದ್ವೈತಮತದಲ್ಲಿಯ ಪರಮಾತ್ಮಸ್ವರೂಪ, ಜೀವ-ಜಗತ್ತುಗಳ ಸ್ವರೂಪ ಮತ್ತು ಆಧ್ಯಾತ್ಮಿಕ ಉನ್ನತಿಯ ಸಾಧನಗಳ ಸ್ವರೂಪದ ಸಂಕ್ಷಿಪ್ತ ವಿವರಣೆ.

ದ್ವೈತಮತದ ಈ ಮೌಲಿಕಸಿದ್ಧಾಂತಗಳು ವೇದ, ಉಪನಿಷತ್ತುಗಳು, ಪಂಚರಾತ್ರಾಗಮ, ಗೀತೆ ಮತ್ತು ಇತಿಹಾಸ–ಪುರಾಣಗಳಲ್ಲಿ ಅಡಕವಾಗಿಯೇ ಇದ್ದವು. ಬ್ರಹ್ಮತರ್ಕವೇ ಮೊದಲಾದ ಪ್ರಾಚೀನಗ್ರಂಥಗಳಲ್ಲಿ ಇವುಗಳನ್ನು ಯುಕ್ತಿಯಿಂದ ಸಮರ್ಥಿಸಲಾಗಿತ್ತು. ಐತಿಹಾಸಿಕ ಕಾಲದಲ್ಲಿ ಶ್ರೀ ಮಧ್ವಾಚಾರ್ಯರು ೧೩ ನೇ ಶತಮಾನದಲ್ಲಿ ಅವತರಿಸಿ ಇವುಗಳನ್ನು ಪುನಃ ಪ್ರತಿಷ್ಠಾಪಿಸಿ ದ್ವೈತಮತವನ್ನು ದೃಢಪಡಿಸಿದರು.

'ವಿಷ್ಣು' ಮತ್ತು 'ನಾರಾಯಣ' ಇವರ ಉಲ್ಲೇಖವು ವೇದದಲ್ಲಿಯೇ ಬಂದಿದೆ. ಪುರುಷಸೂಕ್ತದ ಋಷಿಯು ನಾರಾಯಣನೆಂಬುದು ಪ್ರಸಿದ್ಧವಿದೆ. ಸಮುದ್ರಶಾಯಿಯ ನಾಭಿಯಲ್ಲಿ ವಿಶ್ವವೆಲ್ಲ ಅಡಗಿರುವ ಉಲ್ಲೇಖವು ಋಗ್ವೇದದ ೧೦ ನೆಯ ಮಂಡಲದ ೮೨ ನೆಯ ಸೂಕ್ತದಲ್ಲಿ ಬಂದಿದೆ. ೧ನೆಯ ಮಂಡಲದ ೧೬೪ ನೆಯ ಸೂಕ್ತದಲ್ಲಿ 'ಪ್ರಕೃತಿ' ಯ ಏಳು ಹಂತದ ವಿಕೃತಿಗಳು ವಿಷ್ಣುವಿನ ಅಧೀನವಾಗಿವೆ ಎಂಬ ಉಲ್ಲೇಖ ಬಂದಿದೆ. ಋಗ್ವೇದದಲ್ಲಿ ಒಂದುನೂರು ಸಲ 'ವಿಷ್ಣು'ವಿನ ಉಲ್ಲೇಖ ಬಂದಿದೆ. ಬೇರೆ ಪೌರಾಣಿಕ ದೇವತೆಗಳ ಉಲ್ಲೇಖವಿಲ್ಲ. ಶತಪಥಬ್ರಾಹ್ಮಣ, ತೈತ್ತಿರೀಯ ಆರಣ್ಯಕ, ಇತ್ಯಾದಿಗಳಲ್ಲಿ ನಾರಾಯಣನ ಉಲ್ಲೇಖವಿದೆ. ಯಜುರ್ವೇದದಲ್ಲಿ 'ಯಜ್ಞ'ವನ್ನು 'ವಿಷ್ಣು'ವೆಂದು ಕರೆಯಲಾಗಿದೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಕೃಷ್ಣ ಆಂಗಿರಸ ದೇವಕೀಪುತ್ರನ ಉಲ್ಲೇಖವಿದೆ. ನಿರುಕ್ತದಲ್ಲಿ 'ಅಗ್ನಿರ್ದೇವಾನಾಮವಮಃ, ವಿಷ್ಣುಃ ಪರಮಃ, ತದಂತರಾ ಸರ್ವಾದೇವತಾಃ' ಎಂದು ವಿಷ್ಣುಸರ್ವೋತ್ತಮತ್ವವನ್ನು ಸ್ಪಷ್ಟವಾಗಿ ಹೇಳಲಾಗಿದೆ. ತ್ರಿವಿಕ್ರಮ, ವಾಮನ, ವರಾಹ ಅವತಾರಗಳೂ ವೈದಿಕ ವಾಙ್ಮಯದಲ್ಲಿ ಉಲ್ಲೇಖಿಸಲ್ಪಟ್ಟಿವೆ. ಮಹಾಭಾರತದ 'ನಾರಾಯಣೀಯ' ವಿಭಾಗದಲ್ಲಿ ವಾಸುದೇವ, ಸಂಕರ್ಷಣ ಇತ್ಯಾದಿ ವ್ಯೂಹಪಂಚಕದ ವಿವರ ಬಂದಿದೆ. ಹೀಗೆ 'ವಿಷ್ಣು' ದೇವತೆಯು ಮತ್ತು ವಿಷ್ಣುಸರ್ವೋತ್ತಮತ್ವಸಿದ್ಧಾಂತದ ಪರಂಪರೆ ಬಹಳ ಪ್ರಾಚೀನವಾದುದು. ಆದರೆ ಶ್ರೀ ಮಧ್ವಾಚಾರ್ಯರು 'ವಿಷ್ಣು' ಓರ್ವ ಪೌರಾಣಿಕದೇವತೆ ಎಂಬ ಸ್ಥೂಲ ನೆಲೆಗೇ ನಮ್ಮ ದೃಷ್ಟಿ ನಿಲ್ಲದಂತೆ ಅವನು 'ಬ್ರಹ್ಮತತ್ತ್ವ' ಎಂಬುದನ್ನು ಪ್ರತಿಪಾದಿಸಿದರು. ನಿರ್ಗುಣ, ನಿರಾಕಾರ ಎಂಬ ನೆಲೆಗೇ ಬ್ರಹ್ಮತತ್ತ್ವವು ನಿಲ್ಲದಂತೆ ಅದೊಂದು ಅನಂತಗುಣಪರಿಪೂರ್ಣ 'ತತ್ತ್ವ' ವೆಂಬುದನ್ನು ಪ್ರತಿಪಾದಿಸಿದರು. ಅವರ ಈ 'ವಿಷ್ಣು-ಬ್ರಹ್ಮ ಐಕ್ಯ' ಸಿದ್ಧಾಂತವು ವೇದಾಂತದಲ್ಲಿ ಒಂದು ಕ್ರಾಂತಿಯನ್ನುಂಟುಮಾಡಿತು. ಅನಂತಕಲ್ಯಾಣಗುಣಪರಿಪೂರ್ಣ, ಜ್ಞಾನಾನಂದಮಯ, ಸ್ವತಂತ್ರ, ಸರ್ವಾಂತರ್ಯಾಮಿ, ಸರ್ವನಿಯಾಮಕ ಎಂಬ ಈ 'ಬ್ರಹ್ಮ-ವಿಷ್ಣು' ತತ್ತ್ವವನ್ನು ಈ ಸ್ವರೂಪಕ್ಕೆ ಚ್ಯುತಿ ಬರದಂತೆ ಯಾವ ಹೆಸರಿನಿಂದಲೂ ಕರೆಯಬಹುದು ಎಂದು ಶ್ರೀ ಮಧ್ವಾಚಾರ್ಯರು ಸಾರಿದರು.

'ಸ ಅಂತಕಃ. ಸ ರುದ್ರಃ. ಸ ಈಶಃ ಯ ಪರಃ'
'ಈಶಾನಾದೇವ ಚ ಈಶಾನೋ ಮಹಾದೇವೋ ಮಹತ್ತ್ವತಃ'
'ಶಿವಃ ಸುಖಾತ್ಮಕತ್ವೇನ ಶರ್ವಃ ಸಂರೋಧನಾದ್ ಹರಿಃ'

ಎಂದು ಶಿವನ ನಾಮಗಳೆಲ್ಲವೂ ವಿಷ್ಣುವಿಗೆ ಅನ್ವಯಿಸುವವು ಎಂದು ಸಾರಿದರು. 'ಏಷ ಹಿ ಏವ ಶೂನ್ಯಃ' ಎಂದು ಅವನನ್ನು ಶೂನ್ಯನೆಂದೂ ಕರೆಯಬಹುದೆಂದರು. ವಸ್ತುತಃ ಎಲ್ಲ ನಾಮಗಳು ಪದಗಳೂ ಮುಖ್ಯವಾಗಿ 'ಸರ್ವೋತ್ತಮ' ಪರಮಾತ್ಮನನ್ನೇ ಬೋಧಿಸುವವು, ಅನಂತರದಲ್ಲಿಯೇ ಆಯಾ ದೇವತೆಗಳನ್ನೂ ವಸ್ತುಗಳನ್ನೂ ಬೋಧಿಸುವವು ಎಂದು ಸಾರಿದರು. ಆದುದರಿಂದ ಶ್ರೀ ಮಧ್ವಾಚಾರ್ಯರ ಪ್ರಧಾನ ಸಿದ್ಧಾಂತವಾದ 'ವಿಷ್ಣು-ಸರ್ವೋತ್ತಮತ್ವ' ಸಿದ್ಧಾಂತವನ್ನು ಈ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಬೇಕು. ಶಿವ-ವಿಷ್ಣು ಸರ್ವೋತ್ತಮತ್ವದ ಪೌರಾಣಿಕ ವಿವಾದವೆಂದು ಗ್ರಹಿಸಬಾರದು. ಬ್ರಹ್ಮತತ್ತ್ವ ಮತ್ತು ವಿಷ್ಣುದೇವತೆ ಈ ಸಮನ್ವಯವು ಮತ್ತು ಅದರ ಸರ್ವೋತ್ತಮತ್ವ, ಸ್ವತಂತ್ರತ್ವ, ಸರ್ವಗುಣಪೂರ್ಣತ್ವವು ಅವರ ತತ್ತ್ವಜ್ಞಾನ ಮತ್ತು ಧರ್ಮಗಳ ಕೇಂದ್ರ ಬಿಂದುವು.

ಶ್ರೀ ಮಧ್ವಾಚಾರ್ಯರು ಉಡುಪಿಯಿಂದ ಏಳು ಮೈಲಿ ದೂರದಲ್ಲಿರುವ 'ಪಾಜಕ ಕ್ಷೇತ್ರ' ವೆಂಬ ಹಳ್ಳಿಯಲ್ಲಿ ಕ್ರಿ. ಶ. ೧೨೩೮ರಲ್ಲಿ (ವಿಲಂಬಿ ಸಂವತ್ಸರ ಮಾಘಶುದ್ಧ ಸಪ್ತಮಿಯ ದಿನ) ಅವತರಿಸಿದರು. ಉಡುಪಿಯ ಅನಂತೇಶ್ವರ ದೇವಾಲಯದಲ್ಲಿ ವಾಸವಾಗಿದ್ದ ಅಚ್ಯುತಪ್ರೇಕ್ಷಾಚಾರ್ಯರಿಂದ ಸಂನ್ಯಾಸವನ್ನು ಪಡೆದರು. ಅವರಲ್ಲಿಯೇ ವಿದ್ಯಾಭ್ಯಾಸವನ್ನು ಮಾಡಿದರು. ಇವರ ಸಂನ್ಯಾಸನಾಮ ಆನಂದತೀರ್ಥರು. ಮುಂದೆ ಪೂರ್ಣಪ್ರಜ್ಞರು, ಮಧ್ವಾಚಾರ್ಯರು ಎಂಬ ಹೆಸರುಗಳಿಂದಲೂ ಪ್ರಸಿದ್ಧರಾದರು.

ಅಚ್ಯುತಪ್ರೇಕ್ಷರು ಏಕದಂಡೀ ಏಕಾಂತೀ ವೈಷ್ಣವ ಸಂಪ್ರದಾಯಕ್ಕೆ ಸೇರಿದವರಾಗಿದ್ದರು. ಇವರಿಂದ 'ಇಷ್ಟಸಿದ್ಧಿ'ಯೇ ಮೊದಲಾದ ಅದ್ವೈತ ಗ್ರಂಥಗಳನ್ನು ಕೇಳಿದಾಗ ಶ್ರೀ ಮಧ್ವಾಚಾರ್ಯರಿಗೆ ಆ ಸಿದ್ಧಾಂತವು ಅಸಮರ್ಪಕ ಎನಿಸಿತು. ಗುರುಗಳೊಡನೆ ವಾದಿಸತೊಡಗಿದರು. ವೇದೋಪನಿಷತ್ತುಗಳ ದ್ವೈತಪರವಾದ ಅರ್ಥವನ್ನು ವಿವರಿಸತೊಡಗಿದರು. ತಮ್ಮ ಸಿದ್ಧಾಂತವನ್ನು ಪ್ರಚುರಪಡಿಸಲು ದಕ್ಷಿಣಭಾರತದ ವಿದ್ವತ್ ಕೇಂದ್ರಗಳಾದ ಶ್ರೀರಂಗ, ರಾಮೇಶ್ವರ, ಕನ್ಯಾಕುಮಾರಿ ಮೊದಲಾದ ಸ್ಥಳಗಳಿಗೆ ಹೋದರು. ಬಳಿಕ ಉತ್ತರಭಾರತದ ಅನೇಕ ವಿದ್ಯಾಕೇಂದ್ರಗಳನ್ನು ಸಂದರ್ಶಿಸುತ್ತಾ ಬದರಿಕಾಶ್ರಮಕ್ಕೆ ಹೋದರು. ಅಲ್ಲಿ ತಮ್ಮ 'ಗೀತಾಭಾಷ್ಯ'ವನ್ನು ರಚಿಸಿ ಶ್ರೀ ವೇದವ್ಯಾಸರಿಗೆ ಸಮರ್ಪಿಸಿ ಮರುಪ್ರಯಾಣವನ್ನು ಕೈಕೊಂಡರು. ಮಾರ್ಗದಲ್ಲಿ ಗೋದಾವರೀ ತೀರದ ಪುಣತಾಂಬೆಯಲ್ಲಿ ಶೋಭನಭಟ್ಟ (ಆನಂದಭಟ್ಟ) ಎಂಬ ಘನ ವಿದ್ವಾಂಸರನ್ನು ವಾದದಲ್ಲಿ ಜಯಿಸಿ ಅವರನ್ನೂ ಅವರ ಶಿಷ್ಯರನ್ನೂ ತಮ್ಮ ಮತಕ್ಕೆ ಪರಿವರ್ತಿಸಿದರು. ಈ ಶೋಭನಭಟ್ಟರು ಕಾಕತೀಯ ರುದ್ರದೇವನ ರಾಜಗುರುಗಳಾಗಿದ್ದರು. ಶ್ರೀ ಮಧ್ವಾಚಾರ್ಯರಿಂದ ಸಂನ್ಯಾಸವನ್ನು ತೆಗೆದುಕೊಂಡು ಪದ್ಮನಾಭತೀರ್ಥರು ಎಂಬ ನಾಮದಿಂದ ಮುಂದೆ ಪ್ರಸಿದ್ಧರಾದರು. ಕಾಕತೀಯ ರಾಜರಲ್ಲಿದ್ದ ಹುಕ್ಕ-ಬುಕ್ಕರನ್ನು ಕಂಪಲಿಗೆ ಕಳಿಸಿ ಮುಂದೆ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಿಸಿದವರಲ್ಲಿ ಇವರೂ ಒಬ್ಬರು. ಶ್ರೀ ಮಧ್ವಾಚಾರ್ಯರು ಒರಿಸ್ಸಾದಲ್ಲಿದ್ದ ಶ್ಯಾಮಶಾಸ್ತ್ರಿಗಳೆಂಬ ಇನ್ನೊಬ್ಬ ವಿದ್ವಾಂಸರನ್ನೂ ತಮ್ಮ ಮತಕ್ಕೆ ಪರಿವರ್ತಿಸಿದರು. ಇವರು ಮುಂದೆ ನರಹರಿ ತೀರ್ಥರೆಂದು ಪ್ರಸಿದ್ಧರಾದರು. ಇವರು ಮುಂದೆ ಕೆಲಕಾಲ ಕಲಿಂಗ ದೇಶದ ರಾಜ್ಯಭಾರವನ್ನು ನಿರ್ವಹಿಸಿದರು. ಶ್ರೀ ಕುರ್ಮದಲ್ಲಿ ಇವರ ಶಾಸನಗಳಿವೆ. ಹೀಗೆ ಅನೇಕ ವಿದ್ವಾಂಸರನ್ನು ತಮ್ಮ ಮತಕ್ಕೆ ಪರಿವರ್ತಿಸಿ ಶ್ರೀ ಮಧ್ವಾಚಾರ್ಯರು ಉಡುಪಿಗೆ ಮರಳಿದರು. ಅಲ್ಲಿ ಬ್ರಹ್ಮಸೂತ್ರ ಮತ್ತು ಉಪನಿಷತ್ತುಗಳಿಗೆ ಭಾಷ್ಯಗಳನ್ನು ಬರೆದರು. ಶ್ರೀ ಶಂಕರಾಚಾರ್ಯರು ಉಪನಿಷತ್ತುಗಳು, ಬ್ರಹ್ಮಸೂತ್ರ ಮತ್ತು ಗೀತೆ ಎಂಬ ವೇದಾಂತದ ಪ್ರಸ್ಥಾನತ್ರಯಕ್ಕೆ ಭಾಷ್ಯಗಳನ್ನು ಬರೆದು ಅದ್ವೈತ ಮತವನ್ನು ಪ್ರತಿಪಾದಿಸಿದ್ದರು. ಬ್ರಹ್ಮನು ನಿರ್ಗುಣ, ನಿರಾಕಾರ, ಜಗತ್ತೆಲ್ಲ ಮಾಯೆ ಎಂಬ ಅವರ ನಿರ್ಗುಣವಾದವೂ ಮಾಯಾವಾದವೂ ಶ್ರೀ ಮಧ್ವಾಚಾರ್ಯರಿಗೆ ಸಮ್ಮತವಾಗಲಿಲ್ಲ. ಇದು ಶ್ರುತಿ-ಸೂತ್ರಗಳ ಅಭಿಪ್ರಾಯವಲ್ಲ ಎಂದು ಅವರಿಗನಿಸಿತು. ಆದುದರಿಂದ ತಾವು ವೇದಾಂತ ಪ್ರಸ್ಥಾನತ್ರಯಕ್ಕೆ ಬೇರೆ ಭಾಷ್ಯ ಬರೆದು ಬ್ರಹ್ಮನು ಗುಣಪೂರ್ಣ, ಜಗತ್ತು ಸತ್ಯ ಎಂದು ಪ್ರತಿಪಾದಿಸಿದರು. ಎರಡನೆಯ ಸಲ ಉತ್ತರ ಭಾರತದ ಯಾತ್ರೆಯನ್ನು ಕೈಕೊಂಡು ಮತ್ತೊಮ್ಮೆ ಬದರಿಕಾಶ್ರಮಕ್ಕೆ ಹೋಗಿ ಬಂದರು. ಅಸ್ಸಾಂ, ಸೌರಾಷ್ಟ್ರಗಳಂಥ ಪೂರ್ವ-ಪಶ್ಚಿಮದ ಮೂಲೆಯ ಪ್ರಾಂತಗಳಿಗೂ ಹೋಗಿ ಮತ ಪ್ರಚಾರವನ್ನು ಮಾಡಿದರು. ಇವರು ೩೭ ಗ್ರಂಥಗಳನ್ನು ರಚಿಸಿರುವರು. ಅವುಗಳನ್ನು ಹೀಗೆ ವಿಂಗಡಿಸಬಹುದು—

(೧) ಋಗ್‌ಭಾಷ್ಯ, ಉಪನಿಷದ್‌ಭಾಷ್ಯಗಳು, ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಾದಿ ಸೂತ್ರವ್ಯಾಖ್ಯಾನಗಳು, ಗೀತಾಭಾಷ್ಯ (೧೭ ಗ್ರಂಥಗಳು).

(೨) ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ, ತಂತ್ರಸಾರ ಇತ್ಯಾದಿ ಸ್ತೋತ್ರ ಪೂಜಾದಿ ಗ್ರಂಥಗಳು (೧೦ ಗ್ರಂಥಗಳು).

(೩) ದಶಪ್ರಕರಣಗಳು (೧೦ ಗ್ರಂಥಗಳು).

ಅವರ ಈ ಗ್ರಂಥದ ಯೋಜನೆಯನ್ನು ನೋಡಿದರೆ ವೈದಿಕ ಧರ್ಮದ ಆಧ್ಯಾತ್ಮಿಕ ಆಕರಗ್ರಂಥಗಳ ಸಾರವನ್ನೆಲ್ಲ ಒದಗಿಸುವದು ಅವರ ಉದ್ದೇಶವೆಂಬುದು ಸ್ಪಷ್ಟವಾಗುವುದು. ಪೂರ್ವಮೀಮಾಂಸಕರೂ, ಅದ್ವೈತಿಗಳೂ ಋಗ್ವೇದಕ್ಕೆ ಕೇವಲ ಕರ್ಮಪರವಾದ ಅರ್ಥವನ್ನು ಮಾಡುವರು. ಅದರ ಆಧ್ಯಾತ್ಮಿಕ ಅರ್ಥವನ್ನು ಗಮನಿಸುವದಿಲ್ಲ. ಆದರೆ ಶ್ರೀಮಧ್ವಾಚಾರ್ಯರು ತಮ್ಮ ಋಗ್‌ಭಾಷ್ಯದಲ್ಲಿ ವೇದ ಮಂತ್ರಗಳ ಆಧ್ಯಾತ್ಮಿಕ ಅರ್ಥವನ್ನು ವಿವರಿಸುವರು. ಉಪನಿಷದ್‌ಭಾಷ್ಯಗಳಲ್ಲಿ 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಏಕಮೇವಾದ್ವಿತೀಯಂ ಬ್ರಹ್ಮ', 'ನೇಹ ನಾನಾಸ್ತಿ ಕಿಂಚನ', ಇತ್ಯಾದಿ ಶ್ರುತಿವಾಕ್ಯಗಳು ಅದ್ವೈತವನ್ನು ಬೋಧಿಸುವದಿಲ್ಲ ಎಂದು ಸ್ಪಷ್ಟಪಡಿಸಿದರು. 'ತತ್ತ್ವಮಸಿ' ಎಂಬ ವಾಕ್ಯವು ನೀನು (ಜೀವನು) ಬ್ರಹ್ಮನಿಗೆ ಅಧೀನನಾಗಿರುವಿ. ಅವನಿಗೆ ಸದೃಶನಾಗಿರುವಿ, ಅಂದರೆ ಸತ್-ಚಿತ್ ಸ್ವರೂಪನಾಗಿರುವಿ ಎಂದು ಬೋಧಿಸುವದೇ ಹೊರತು ಅವನ ಹೊರತಾಗಿ ನೀನು (ಜೀವನು) ಇಲ್ಲವೇ ಇಲ್ಲ ಎಂದು ಬೋಧಿಸುವದಿಲ್ಲ. ಅಲ್ಲಿ ಕೊಟ್ಟಿರುವ ಒಂಬತ್ತು ದೃಷ್ಟಾಂತಗಳೂ ಬ್ರಹ್ಮನಿಗಿಂತ ಭಿನ್ನನಾದ ಆದರೆ ಅವನಿಗೆ ಅಧೀನನಾದ ಜೀವನಿರುವನೆಂದೇ ಬೋಧಿಸುವವು. ಇದರಂತೆಯೇ 'ಅಹಂ ಬ್ರಹ್ಮಾಸ್ಮಿ' ಎಂಬಲ್ಲಿಯೂ ನಾನು (ಜೀವನು) ಬ್ರಹ್ಮನಿಗೆ ಸದೃಶನಾಗಿರುವೆನು ಅಥವಾ ಅಧೀನನಾಗಿರುವೆನೆಂದು ಅರ್ಥವು. 'ಅಗ್ನಿಃ ಮಾಣವಕಃ' 'ಸಿಂಹೋ ಮಾಣವಕಃ'-ಹುಡುಗನು ಬೆಂಕಿಯಾಗಿರುವನು, ಹುಡುಗನು ಸಿಂಹನಾಗಿರುವನು. ಎಂಬ ಪ್ರಯೋಗಗಳಲ್ಲಿ ಹುಡುಗನು ಬೆಂಕಿಯಂತೆ ತೇಜಸ್ವಿಯೂ ಸಿಂಹದಂತೆ ಪರಾಕ್ರಮಿಯೂ ಆಗಿರುವನೆಂದು ಅರ್ಥವು. ಬೆಂಕಿಯನ್ನು ಬಿಟ್ಟು ಹುಡುಗನೇ

ಇಲ್ಲ, ಸಿಂಹ ಹೊರತಾಗಿ ಹುಡುಗನೇ ಇಲ್ಲ ಎಂದು ಅರ್ಥವಲ್ಲ 'ಏಕಮೇವಾದ್ವಿತೀಯಮ್' ಎಂದರೆ ಸ್ವಾತಂತ್ರ್ಯ ಸರ್ವಜ್ಞತ್ವಾದಿ ವಿಷಯಗಳಲ್ಲಿ ಬ್ರಹ್ಮನಿಗೆ ಸಮಾನರು ಅಥವಾ ಉತ್ತಮರು ಯಾರೂ ಇಲ್ಲವೆಂದೇ ಅರ್ಥ. ಬ್ರಹ್ಮನ ಹೊರತಾಗಿ ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ ಎಂದರ್ಥವಲ್ಲ ಇತ್ಯಾದಿಯಾಗಿ ಅದ್ವೈತಪರವೆಂದು ತೋರುವ ವಾಕ್ಯಗಳ ಸರಿಯಾದ ಅರ್ಥವನ್ನು ವಿವರಿಸುವರು. ಗೀತಾಭಾಷ್ಯದಲ್ಲಿ ಜ್ಞಾನ-ಕರ್ಮಗಳಿಗೆ ವಿರೋಧವಿಲ್ಲ. ಕರ್ಮದ ಸರ್ವಥಾ ಪರಿತ್ಯಾಗವು ಉಚಿತವಲ್ಲ. ಜ್ಞಾನಿಗಳೂ ಕರ್ಮಮಾಡಬೇಕು. ಫಲಾಪೇಕ್ಷೆಯಿಲ್ಲದೆ ಭಗವದರ್ಪಣಬುದ್ಧಿಯಿಂದ ವಿಹಿತ ಕರ್ಮಗಳನ್ನು ಮಾಡುವವದೇ ಕರ್ಮಯೋಗವು. ಇಂಥ ನಿಷ್ಕಾಮಕರ್ಮಾನುಷ್ಠಾನವು ಜ್ಞಾನಕ್ಕೂ ಭಕ್ತಿಗೂ ಸಹಾಯಕವಾಗುವುದು. ಜ್ಞಾನಿಗಳಿಗೂ ಮುಕ್ತರಿಗೂ ಜ್ಞಾನಾಭಿವೃದ್ಧಿಗೂ ಆನಂದಾಭಿವೃದ್ಧಿಗೂ ಸಹಾಯಕವಾಗುವದು ಎಂದು ಕರ್ಮಯೋಗದ ಹೊಸ ಸ್ವರೂಪವನ್ನು ವಿವರಿಸಿರುವರು. ಬ್ರಹ್ಮಸೂತ್ರ ಭಾಷ್ಯದಲ್ಲಿ ಗುಣಪೂರ್ಣ ಬ್ರಹ್ಮನ ಸ್ವರೂಪವನ್ನೂ ಅವನ ಅಪರೋಕ್ಷಜ್ಞಾನದ ಸಾಧನಗಳನ್ನೂ ಅದರ ಫಲವನ್ನೂ ವಿವರಿಸಿರುವರು. ಬ್ರಹ್ಮಸೂತ್ರಗಳಿಗೆ ಅವರು ಬರೆದ ಅನುವ್ಯಾಖ್ಯಾನವೆಂಬ ಇನ್ನೊಂದು ವ್ಯಾಖ್ಯಾನ ಗ್ರಂಥವು ಅಪೂರ್ವವಾದ ವಾದಗ್ರಂಥವು. ಎರಡು ಸಾವಿರ ಶ್ಲೋಕಗಳಿರುವ ಈ ಗ್ರಂಥದಲ್ಲಿ ಭಾರತೀಯ ತತ್ತ್ವಜ್ಞಾನದ ಎಲ್ಲಾ ಪ್ರಧಾನ ಸಮಸ್ಯೆಗಳನ್ನೂ ವಿಮರ್ಶಿಸಿರುವರು. ಪ್ರಮಾಣಗಳ ಸ್ವರೂಪ, ಖ್ಯಾತಿವಾದ, ಕಾರ್ಯತಾವಾದ, ಅಜ್ಞಾನದ ಸ್ವರೂಪ, ಕಾರ್ಯ-ಕಾರಣ ವಿಚಾರ ಇತ್ಯಾದಿ ಪ್ರಮುಖ ದಾರ್ಶನಿಕ ವಿಷಯಗಳ ಮೇಲೆ ಎಲ್ಲ, ದಾರ್ಶನಿಕರ ಅಭಿಪ್ರಾಯಗಳನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿರುವರು.

ಶ್ರೀ ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯನಿರ್ಣಯ ಒಂದು ಅಪೂರ್ವವಾದ ಗ್ರಂಥ. ತಾವು ಎರಡು ಸಲ ಭಾರತದ ಯಾತ್ರೆಯನ್ನು ಕೈಕೊಂಡಾಗ ಮಹಾಭಾರತದ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿ ಮಹಾಭಾರತದ ಶುದ್ಧಪಾಠವನ್ನು ನಿರ್ಣಯಿಸಿ ಅದರ ಸಾರಸಂಗ್ರಹರೂಪವಾದ ಈ ಗ್ರಂಥವನ್ನು ಬರೆದಿರುವರು.

'ಕ್ವಚಿದ್‌ಗ್ರಂಥಾನ್ ಪ್ರಕ್ಷಿಪಂತಿ ಕ್ವಚಿದಂತರಿತಾನಪಿ ।
ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ ಕ್ವಚಿದನ್ಯಥಾ॥'

ಎಂದು ಗ್ರಂಥಗಳು ಕಲುಷಿತವಾಗಬಹುದಾದ ರೀತಿಗಳನ್ನು ವಿವರಿಸಿರುವರು.

'ದೇಶೇ ದೇಶೇ ತಥಾ ಗ್ರಂಥಾನ್ ದೃಷ್ಟ್ವಾ ಚೈವ ಪೃಥಗ್ವಿಧಾನ್ ।'

ಎಂದು ತಾವು ಅನೇಕ ಹಸ್ತಪ್ರತಿಗಳನ್ನು ಪರಿಶೀಲಿಸಿರುವುದನ್ನು ವಿವರಿಸಿರುವರು. ಅವರ ಈ ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಅನೇಕ ಧರ್ಮಸೂಕ್ಷ್ಮದ ಪ್ರಸಂಗಗಳನ್ನು ವಿಶ್ಲೇಷಿಸಿ ನಿರ್ಣಯಗಳನ್ನು ಒದಗಿಸಿರುವರು. ಭಾಗವತತಾತ್ಪರ್ಯನಿರ್ಣಯದಲ್ಲಿ ಭಾಗವತದಲ್ಲಿಯ ಆಧ್ಯಾತ್ಮಿಕಶ್ಲೋಕಗಳನ್ನು ಸಂಗ್ರಹಿಸಿರುವರು. ತಂತ್ರಸಾರವು ಮೂರ್ತಿಶಿಲ್ಪ, ಪೂಜಾಕ್ರಮ, ಬೀಜಾಕ್ಷರಜಪ ಇತ್ಯಾದಿಗಳನ್ನು ವಿವರಿಸುವುದು.

ತತ್ತ್ವಸಂಖ್ಯಾನ, ತತ್ತ್ವವಿವೇಕ, ಖಂಡನತ್ರಯ ಇತ್ಯಾದಿಯಾದ ದಶಪ್ರಕರಣಗಳು ವೇದಾಂತದ ವಿವಿಧ ವಿಷಯಗಳನ್ನು ನಿರೂಪಿಸುವ ಪ್ರಕರಣಗ್ರಂಥಗಳು.

ಶ್ರೀ ಮಧ್ವಾಚಾರ್ಯರು ತತ್ತ್ವಗಳನ್ನು ಸ್ವತಂತ್ರ ಮತ್ತು ಪರತಂತ್ರ ಎಂದು ವಿಂಗಡಿಸಿ ಪರಮಾತ್ಮನೊಬ್ಬನೇ ಸ್ವತಂತ್ರ ತತ್ತ್ವ, ಜೀವ ಜಗತ್ತುಗಳು ಪರತಂತ್ರ. ಅಂದರೆ ಪರಮಾತ್ಮತಂತ್ರ ತತ್ತ್ವಗಳು ಎಂದು ಹೇಳಿದ್ದರಿಂದ ಈ ಮತಕ್ಕೆ ದ್ವೈತವೆಂಬ ಹೆಸರು ಬಂದಿತು. ಜೀವ, ಜಡ, ಪರಮಾತ್ಮರಲ್ಲಿ ಪಂಚವಿಧವಾದ ಭೇದವನ್ನು ಪ್ರತಿಪಾದಿಸಿದ್ದರಿಂದಲೂ ಈ ಮತಕ್ಕೆ ದ್ವೈತವೆಂಬ ಹೆಸರು ಬಂದಿತು. ಅದ್ವೈತಮತದಲ್ಲಿ 'ಬ್ರಹ್ಮ' ಒಂದೇ ತತ್ತ್ವವನ್ನು ಒಪ್ಪಿ ಉಳಿದುದೆಲ್ಲ ಮಾಯೆಯೆಂದು ಹೇಳಿದ್ದರಿಂದ ಅದು ಅದ್ವೈತ ಅಥವಾ ಬ್ರಹ್ಮಾದ್ವೈತವೆನಿಸಿತು. ಅವರಲ್ಲಿ ಎರಡು ಸತ್ಯವಾದ ತತ್ತ್ವಗಳೇ ಇಲ್ಲದ್ದರಿಂದ ಭೇದವೆಲ್ಲ ಮಾಯಿಕವಾಗಿ ಅಭೇದವೇ ಉಳಿಯಿತು. ಈ ಎರಡನ್ನೂ ಬಲವಾಗಿ ವಿರೋಧಿಸಿದ್ದರಿಂದ 'ದ್ವೈತ' ಮತವು ದ್ವೈತವಾಯಿತು. ಆದುದರಿಂದ ಒಂದಕ್ಕಿಂತ ಹೆಚ್ಚು ತತ್ತ್ವಗಳನ್ನು ಸತ್ಯವೆಂದು ಒಪ್ಪುವುದೂ ಈ ತತ್ತ್ವಗಳಲ್ಲಿ ಭೇದವನ್ನು ಒಪ್ಪುವುದೂ ದ್ವೈತಮತದ ವೈಶಿಷ್ಟ್ಯವು.

ವೇದಾಂತಶಾಸ್ತ್ರವು ತಾನು ಹೇಳುವ ಎಲ್ಲ ತತ್ತ್ವಗಳನ್ನೂ ಶ್ರುತಿಯ ಆಧಾರದಿಂದ ಮೊದಲು ಹೇಳಿ ಬಳಿಕ ಅದನ್ನು ಯುಕ್ತಿಯಿಂದ ಸಮರ್ಥಿಸುವುದು. ಜಗತ್ತು 'ಸತ್ಯ' ವೆಂಬುದನ್ನು ಶ್ರುತಿಯಲ್ಲಿ ಸ್ಪಷ್ಟವಾಗಿ ಅನೇಕ ಕಡೆಗೆ ಹೇಳಲಾಗಿದೆ.

೧) ಯಾಥಾತಥ್ಯತೋ ಅರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ (ಈಶ). ೨) ವಿಶ್ವಂ ಸತ್ಯಂ ಮಘವಾನಾ (ಋ ೨.೨೪.೧೨).೩) ಯಚ್ಚಿಕೇತ ಸತ್ಯಮಿತ್ (ಋ). ೪) ಯತ್ ಸತ್ಯರೂಪಂ ಜಗದೇತದೀದೃಕ್ ಸೃಷ್ಟಾತು ಅಭೂತ್ ಸತ್ಯ

ಕರ್ಮಾ ಮಹಾತ್ಮಾ-ಇತ್ಯಾದಿಯಾಗಿ ಅನೇಕ ಶ್ರುತಿಗಳಲ್ಲಿ ಜಗತ್ತು ಸತ್ಯವೆಂದು ಸಾರಲಾಗಿದೆ. ಜಗತ್ತು ' ಸತ್ಯ'ವೆಂಬುದು ಪ್ರತ್ಯಕ್ಷ ಸಿದ್ಧವೂ ಆಗಿದೆ. ಜಗತ್ತು ಅಜ್ಞಾನದಿಂದ ಉಂಟಾಗಿದೆ.ಅದೊಂದು ಭ್ರಮೆ ಎಂಬ ವಾದವನ್ನು ದ್ವೈತವು ಒಪ್ಪುವದಿಲ್ಲ. ಒಂದು ವಸ್ತುವನ್ನು ಇನ್ನೊಂದು ವಸ್ತುವಿನ ಭ್ರಮೆಯಾಗಬೇಕಾದರೆ ಅವೆರಡೂ ಎಲ್ಲಿಯಾದರೂ ಇರಬೇಕು. ಎಲ್ಲಿಯೂ ಇಲ್ಲದಿರುವ ವಸ್ತುವಿನ ಭ್ರಮೆ ಬರುವುದು ಸಾಧ್ಯವಿಲ್ಲ. ರಜ್ಜುವನ್ನು ಸರ್ಪವೆಂದು ಭ್ರಮಿಸಬೇಕಾದರೆ ಆ ವ್ಯಕ್ತಿಯು ಸರ್ಪವನ್ನು ಮೊದಲು ನೋಡಿರಬೇಕು. ಎಲ್ಲಿಯೂ ಇಲ್ಲದ, ಎಂದೂ ಕಾಣದ ಸರ್ಪದ ಭ್ರಮೆಯುಂಟಾಗಲು ಸಾಧ್ಯವಿಲ್ಲ. ಬ್ರಹ್ಮಾತಿರಿಕ್ತವಾದ ಜಗತ್ತೇ ಎಲ್ಲಿಯೂ ಯಾವಾಗಲೂ ಇಲ್ಲವೆಂದರೆ ಅಂಥ ಜಗತ್ತು ಇದ್ದಂತೆ ಭ್ರಮೆಯುಂಟಾಗುವದಾದರೂ ಹೇಗೆ ? ಅಲ್ಲದೆ ಇಂಥ ಮಾಯಾಮಯ ಜಗತ್ತನ್ನು ಸೃಷ್ಟಿಸುವವನಾದರೆ ಅವನೆಂಥ ಸೃಷ್ಟಿಕರ್ತ ! ಎಂಬುದು ದ್ವೈತಿಗಳ ವಾದ.

ಜೀವರೂ ಕೂಡ ಬ್ರಹ್ಮಭಿನ್ನರು ಮತ್ತು ಸತ್ಯರು. ಬ್ರಹ್ಮನೇ ಅವಿದ್ಯೆಯಿಂದ ಜೀವರೂಪವನ್ನು ತಾಳಿದನು ಎಂದು ಹೇಳುವದು ಸರಿಯಲ್ಲ. ಜೀವರು ಬ್ರಹ್ಮನ ಪ್ರತಿಬಿಂಬರು. ಬ್ರಹ್ಮನೇ ಅಲ್ಲ. ಪ್ರತಿಬಿಂಬ ಅಂದರೆ ಅವನಿಗೆ ಸದೃಶರು ಮತ್ತು ಅವನ ಅಧೀನರು. ಬ್ರಹ್ಮನು ಸತ್-ಚಿತ್-ಆನಂದರೂಪನು ಜೀವರೂ ಸತ್-ಚಿತ್-ಆನಂದರೂಪರು. ಆದರೆ ಜೀವರ ಈ ಸ್ವರೂಪ ಬ್ರಹ್ಮನಿಗೆ ಅಧೀನ, ಕಿಂಚಿತ್ ಸದೃಶ. ಜೀವರ ಸ್ವರೂಪ, ಸತ್ತಾ, ಪ್ರವೃತ್ತಿ, ಪ್ರಮಿತಿ ಎಲ್ಲವೂ ಬ್ರಹ್ಮನಿಗೆ ಅಧೀನ. ಹೀಗೆ ಅಧೀನವಾಗಿಯೂ ಸದೃಶವಾಗಿಯೂ ಇರುವದೇ ಪ್ರತಿಬಿಂಬತ್ವವು. ಜೀವರು ಅಣುಸ್ವರೂಪರು. ಅವರಿಗೆ ಕರ್ತೃತ್ವ, ಭೋಕ್ತೃತ್ವಗಳು ಇರುವವು. ಸಾಂಖ್ಯ ಪುರುಷರಂತೆ ನಿರ್ಲಿಪ್ತರಲ್ಲ. ಜೀವರಲ್ಲಿ ಸಾತ್ತ್ವಿಕ, ರಾಜಸ, ತಾಮಸ ಎಂಬ ಸ್ವರೂಪ ಭೇದವನ್ನು ಒಪ್ಪುವರು. ಈ ವರ್ಗೀಕರಣವನ್ನು ಶ್ರುತಿ-ಸ್ಮೃತಿ-ಪ್ರಮಾಣಗಳಿಂದಲೂ ಅನುಭವದಿಂದಲೂ ಸಮರ್ಥಿಸುವರು. ಎಲ್ಲರೂ ಸಾತ್ತ್ವಿಕರೆಂದು ಹೇಳಬೇಕಾದುದೇನೋ ಮೆಚ್ಚಿಗೆಯಾಗುವ ಪಕ್ಷ. ಆದರೆ ಲೋಕಸ್ವಭಾವ ವಿಶ್ಲೇಷಣೆಯು ಇದನ್ನು ಸಮರ್ಥಿಸುವದಿಲ್ಲ. ಶಾಸ್ತ್ರವೂ ಸಮರ್ಥಿಸುವದಿಲ್ಲ. ಆದರೆ ತಾತ್ತ್ವಿಕವಾಗಿ ಈ ಸ್ವರೂಪಭೇದವನ್ನು ಒಪ್ಪಿದ ಮಾತ್ರದಿಂದ ವೈಯಕ್ತಿಕ ರಾಗದ್ವೇಷಗಳಿಂದ ವ್ಯಕ್ತಿಗಳನ್ನು ಸಾತ್ತ್ವಿಕ-ರಾಜಸ-ತಾಮಸರೆಂದು ನಮ್ಮ ಇಷ್ಟಬಂದಂತೆ ವರ್ಣಿಸುವದು ಶಾಸ್ತ್ರ ಸಮ್ಮತವೂ ಅಲ್ಲ, ಲೋಕ ಸಮ್ಮತವೂ ಅಲ್ಲ. ಇಂದು ನಿಷ್ಠುರವಾದಿಯಾದ ವ್ಯಕ್ತಿಯು ಸ್ವರೂಪತಃ ರಾಜಸನಾಗಿರದೆ ಸಾತ್ತ್ವಿಕನಾಗಿರಬಹುದು.ಇಂದು ಸೌಮ್ಯನಂತೆ ಕಾಣುವವನು ಸ್ವರೂಪತಃ ತಾಮಸನೇ ಆಗಿರಬಹುದು. ಆದುದರಿಂದ ಪ್ರತ್ಯಕ್ಷ ವ್ಯವಹಾರದಲ್ಲಿ ಎಲ್ಲರೂ ಸಾತ್ತ್ವಿಕತೆಯ ಕಡೆಗೇ ಪ್ರವೃತ್ತರಾದರೆ, ಸಾತ್ತ್ವಿಕರೆಂದು ಗ್ರಹಿಸಿಯೇ ವ್ಯವಹರಿಸತೊಡಗಿದರೆ ಗಟ್ಟಿ-ಜೊಳ್ಳು ಕಾಳುಗಳ ವಿಂಗಡಣೆ ತಾನಾಗಿಯೇ ಆಗುವದು. ಆಧ್ಯಾತ್ಮಿಕ ಉನ್ನತಿಯ ಪ್ರಯತ್ನದಲ್ಲಿಯೂ ಇದೇ ಮಾತು ಅನ್ವಯಿಸುವದು. ನಮ್ಮ ನಮ್ಮ ಸ್ವರೂಪವನ್ನು ನಾವಾಗಿಯೇ ರಾಜಸ, ತಾಮಸ ಎಂದು ಹೀಯಾಳಿಸಿಕೊಳ್ಳದೆ ಆಧ್ಯಾತ್ಮಿಕ ಉನ್ನತಿಯ ಕಡೆಗೆ ಪ್ರವೃತ್ತರಾದರೆ, ಅಲ್ಲದ ಜೀವ ಸಲ್ಲದೇ ಇರುವುದು ತಾನಾಗಿಯೇ ಪ್ರಕಟವಾಗುವುದು. ಆದುದರಿಂದ ಸತ್-ಪ್ರವೃತ್ತಿ, ದುಷ್ಟ ಪ್ರವೃತ್ತಿಗಳಿಗೆ ತಾತ್ತ್ವಿಕ ವರ್ಗೀಕರಣದ ಭಯವನ್ನು ಇಟ್ಟುಕೊಳ್ಳದೆ, ಅಥವಾ ಅದನ್ನು ದೂಷಿಸದೆ ಮುಂದುವರೆಯಲು ಯಾವ ಆತಂಕವೂ ಇಲ್ಲ.

ಬ್ರಹ್ಮನೂ ಸತ್ಯ, ಜೀವರೂ ಸತ್ಯ, ಜಗತ್ತೂ ಸತ್ಯ ಎಂದಾದ ಮೇಲೆ ಅವರು ಪರಸ್ಪರ ಭಿನ್ನಸ್ವರೂಪ ಸ್ವಭಾವವವರೆಂದಾದ ಮೇಲೆ ಅವರಲ್ಲಿ ಸತ್ಯವಾದ ಭೇದವಿರುವುದು ಕ್ರಮಪ್ರಾಪ್ತ. ಈ ಭೇದವನ್ನು ೧) ಜೀವ ಜೀವಭೇದ ೨) ಜೀವ-ಜಡಭೇದ ೩) ಜಡ-ಜಡಭೇದ ೪) ಜೀವ-ಪರಮಾತ್ಮಭೇದ ೫) ಜಡ-ಪರಮಾತ್ಮ ಭೇದ ಎಂದು ಪಂಚಭೇದಗಳನ್ನಾಗಿ ದ್ವೈತಿಗಳು ವಿವರಿಸುತ್ತಾರೆ.' ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ' ಎಂಬುದು ಅವರ ಸ್ಪಷ್ಟವಾದನಿಲುವು.

ಹೀಗೆ ಪರಮಾತ್ಮನ ಪ್ರತಿಬಿಂಬರೂ, ಪರಮಾತ್ಮಭಿನ್ನರೂ ಆದ ಜೀವರು ಅವಿದ್ಯಾ, ಪ್ರಕೃತಿ, ಕಾಮಕರ್ಮಗಳ ಬಂಧನದಿಂದ ಸಂಸಾರದಲ್ಲಿ ಬಿದ್ದು ಜನ್ಮ, ಮರಣ, ಜರಾ, ವ್ಯಾಧಿ ಇತ್ಯಾದಿ ದುಃಖದಿಂದ ಬಳಲುವರು. ಅವಿದ್ಯೆಯಿಂದ ಪರಮಾತ್ಮನ ಸ್ವರೂಪವೂ ಜೀವನ ನಿಜಸ್ವರೂಪವೂ ಮರೆಯಾಗಿರುವುದು. ಪ್ರಕೃತಿಯಿಂದ ಸೂಕ್ಷ್ಮ ಮತ್ತು ಸ್ಥೂಲ ಶರೀರಗಳು ಬಂದಿರುವವು. ಕಾಮಕರ್ಮಗಳಿಂದ ಮತ್ತೆ ಮತ್ತೆ ಜನ್ಮ-ಮರಣಗಳು ಬರುವಂತೆ ಪಾಪ-ಪುಣ್ಯಗಳ ಸಂಗ್ರಹವಾಗುವದು. ಇವರಿಂದ ದಾಟಲು ಪರಮಾತ್ಮನ ಅಪರೋಕ್ಷ ಜ್ಞಾನ ಮತ್ತು ಪ್ರಸಾದ ಅಗತ್ಯ. ಅದನ್ನು ಸಂಪಾದಿಸಲು ವಿಹಿತ ಕರ್ಮಾನುಷ್ಠಾನ, ಭಕ್ತಿ ಅವಶ್ಯಕ. ಭಕ್ತಿಯು ಕೇವಲ ಮೂಢಭಕ್ತಿಯಲ್ಲ. ಪರಮಾತ್ಮನ ಮಹಾತ್ಮ್ಯವನ್ನು ತಿಳಿದುಕೊಂಡು ಅವನಲ್ಲಿ ಪರಮ ಸ್ನೇಹವನ್ನು ಮಾಡುವುದೇ ಭಕ್ತಿಯು.

ಪರಮಾತ್ಮನ ಸೇವೆಯು ಅಂಕನ, ನಾಮಕರಣ, ಭಜನ ಎಂದು ಮೂರು ವಿಧವಾಗಿದೆ. ದ್ವಾದಶ ನಾಮಗಳನ್ನೂ ಶಂಖಚಕ್ರಾದಿ ಮುದ್ರೆಗಳನ್ನೂ ಹಾಕಿಕೊಳ್ಳುವದೇ ಅಂಕನವು. ಪರಮಾತ್ಮನ ಹೆಸರುಗಳನ್ನು ಮಕ್ಕಳು ಮೊಮ್ಮಕ್ಕಳಿಗೆ ಇಡುವುದೇ ನಾಮಕರಣವು. ಭಜನವು ಹತ್ತು ಪ್ರಕಾರದ್ದಿರುವದು.

೧) ಸತ್ಯ ಮಾತನಾಡುವದು. ೨) ಹಿತಕರವಾದ ಮಾತನಾಡುವದು. ೩) ಪ್ರಿಯವಾದ ಮಾತನಾಡುವದು. ೪) ಆಧ್ಯಾತ್ಮಿಕ ಸಾಹಿತ್ಯವನ್ನು ಓದುವದು. ಇವು ನಾಲ್ಕು ವಾಣಿಯಿಂದ ಮಾಡುವ ಭಜನೆಗಳು ೫) ದಾನಧರ್ಮ ಮಾಡುವದು. ೬) ಆಪತ್ತಿಗೆ ಒಳಗಾದವರಿಗೆ ಸಹಾಯ ಮಾಡುವದು. ೭) ಅನಾಥರಿಗೆ ಸಹಾಯ ಮಾಡುವದು. ಇವು ಮೂರು ಶರೀರದಿಂದ ಮಾಡುವ ಭಜನಗಳು. ೮) ದಯೆಯನ್ನು ಮಾಡುವದು. ೯) ಸತ್ಕರ್ಮಗಳನ್ನೇ ಮಾಡಲು ಇಚ್ಛಿಸುವದು. ೧೦) ಸತ್-ಶಾಸ್ತ್ರದಲ್ಲಿ ವಿಶ್ವಾಸವನ್ನಿಡುವದು ಇವು ಮೂರು ಮಾನಸಿಕ ಭಜನಗಳು. ಹೀಗೆ ಹತ್ತು ವಿಧವಾದ ಭಜನಗಳನ್ನು ಮಾಡಿ ಪರಮಾತ್ಮನ ಸೇವೆಯನ್ನು ಮಾಡುತ್ತಾ ಅವನಲ್ಲಿ ಭಕ್ತಿಯನ್ನು ಮಾಡಿ ಅವನ ಅಪರೋಕ್ಷ ಜ್ಞಾನವನ್ನು ಪಡೆದು ಅವನ ಪ್ರಸಾದದಿಂದ ಮುಕ್ತಿಯನ್ನು ಪಡೆಯಬೇಕು. ಮುಕ್ತಿಯಲ್ಲಿ ಜೀವನು ಆತ್ಮೈಕ್ಯವನ್ನು ಪಡೆಯುವದಿಲ್ಲ. ಅವನಿಂದ ಭಿನ್ನನಾಗಿಯೇ ಇದ್ದು, ಪ್ರಾಕೃತ ದೇಹವಿಲ್ಲದೆ, ಸ್ವರೂಪ ದೇಹೇಂದ್ರಿಯಗಳಿಂದ ಆನಂದವನ್ನು ಅನುಭವಿಸುವನು.

ಈ ಎಲ್ಲ ಸಿದ್ಧಾಂತಗಳು ಶ್ರೀ ಮಧ್ವಾಚಾರ್ಯರ ೩೭ ಗ್ರಂಥಗಳಲ್ಲಿ ಅಡಕವಾಗಿವೆ. ಈ ಸಿದ್ಧಾಂತಗಳನ್ನು ನಿರಂತರವಾಗಿ ಪ್ರಚುರ ಪಡಿಸಲು ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ದ್ವಾರಕೆಯಿಂದ ತಂದ ಶ್ರೀ ಕೃಷ್ಣನ ಮಠವನ್ನು ಕಟ್ಟಿಸಿ ಎಂಟು ಜನ ಬಾಲಸಂನ್ಯಾಸಿಗಳನ್ನು ನಿಯಮಿಸಿ ಅಷ್ಟಮಠಗಳನ್ನು ಸ್ಥಾಪಿಸಿದರು. ಸುಮಾರು ೮೦ ವರ್ಷಕಾಲ ತಮ್ಮ ಸಿದ್ಧಾಂತಗಳ ಪ್ರಚಾರ ಮಾಡಿ ಕ್ರಿ.ಶ. ೧೩೧೭ರಲ್ಲಿ (ಪಿಂಗಲ ಸಂವತ್ಸರದ ಮಾಘ ಶುದ್ಧ ನವಮಿ) ಉಡುಪಿಯ ಅನಂತೇಶ್ವರ ದೇವಸ್ಥಾನದಲ್ಲಿ ಐತರೇಯ ಭಾಷ್ಯವನ್ನು ಪ್ರವಚನ ಮಾಡುತ್ತಿದ್ದಂತೆಯೇ ಪುಷ್ಪವೃಷ್ಟಿಯಾಗಿ ಹೂವುಗಳ ಮಧ್ಯೇ ಅದೃಶ್ಯರಾದರು.

ಘಟ್ಟದ ಮೇಲೆ ಅವರ ಪ್ರಧಾನ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರ ಪರಂಪರೆಯಲ್ಲಿ ಶ್ರೀ ಉತ್ತರಾದಿಮಠ, ಶ್ರೀ ವ್ಯಾಸರಾಜಮಠ ಮತ್ತು ಶ್ರೀ ರಾಘವೇಂದ್ರಸ್ವಾಮಿಗಳವರ ಮಠಗಳು ಬೆಳೆದುಬಂದವು. ಗೌಡ ಸಾರಸ್ವತ ಮಾಧ್ವ ಸಮಾಜಕ್ಕೆ ಗೋಕರ್ಣ ಪರ್ತಗಾಳಿ ಮಠವೂ ಕಾಶೀ ಮಠವೂ ಬೆಳೆದುಬಂದವು. ಈಗ ಸುಮಾರು ೨೩ ಮಾಧ್ವ ಸಂಪ್ರದಾಯದ ಮಠಗಳು ಪ್ರಚಲಿತವಾಗಿವೆ.

ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆ ಶ್ರೀ ಜಯತೀರ್ಥರು ಉನ್ನತಮಟ್ಟದ ವ್ಯಾಖ್ಯಾನಗಳನ್ನು ಬರೆದಿರುವರು. ತಮ್ಮ ಶ್ರೇಷ್ಠ ವ್ಯಾಖ್ಯಾನಗಳಿಂದ ಇವರು ಟೀಕಾಚಾರ್ಯರೆಂದೇ ಪ್ರಸಿದ್ಧರಾಗಿರುವರು. ಇವರ ಗ್ರಂಥಗಳಲ್ಲಿ ಶ್ರೀ ನ್ಯಾಯಸುಧಾ ಗ್ರಂಥವು ಶ್ರೇಷ್ಠವಾದುದು. ಭಾರತೀಯ ತತ್ತ್ವಶಾಸ್ತ್ರದ ಗ್ರಂಥಗಳಲ್ಲಿ ಇದು ಬಹು ಗಣ್ಯವಾದ ಸ್ಥಾನವನ್ನು ಪಡೆದಿದೆ. ಶ್ರೀ ವ್ಯಾಸರಾಜರು ದ್ವೈತಮತದ ಇನ್ನೊಬ್ಬ ಶ್ರೇಷ್ಠಗ್ರಂಥಕಾರರು, ಇವರ ಚಂದ್ರಿಕಾ, ನ್ಯಾಯಾಮೃತ, ತರ್ಕತಾಂಡವ ಎಂಬ ಗ್ರಂಥಗಳು ವ್ಯಾಸತ್ರಯೀ ಎಂದು ಪ್ರಸಿದ್ಧವಾಗಿವೆ. ಉಡುಪಿ ಸೋದೆಮಠದ ಶ್ರೀ ವಾದಿರಾಜತೀರ್ಥರು ಶ್ರೇಷ್ಠಕವಿಗಳೂ ದಾರ್ಶನಿಕರೂ ಆಗಿದ್ದರು. ಇವರ ಯುಕ್ತಿಮಲ್ಲಿಕಾ ಎಂಬ ಗ್ರಂಥವು ದ್ವೈತಮತದ ಇನ್ನೊಂದು ಉನ್ನತ ಗ್ರಂಥವು. ಶ್ರೀ ವಿದ್ಯಾಧೀಶರು, ಶ್ರೀ ವಿಜಯೀಂದ್ರರು, ಶ್ರೀ ರಾಘವೇಂದ್ರಸ್ವಾಮಿಗಳು, ಶ್ರೀ ಶ್ರೀನಿವಾಸತೀರ್ಥರು, ಶ್ರೀ ಸತ್ಯನಾಥರು. ಶ್ರೀ ಪಾಂಡುರಂಗ ಆನಂದ ಭಟ್ಟಾರಕರು, ಶ್ರೀ ಪಾಂಡುರಂಗಿ ಕೇಶವಭಟ್ಟಾರಕರು, ತಾಮ್ರಪರ್ಣಿಯವರು, ಉಮರ್ಜಿಯವರು ಇತ್ಯಾದಿ ಅನೇಕಾನೇಕ ಗ್ರಂಥಕರ್ತರು ದ್ವೈತವಾಙ್ಮಯದ ಕಣಜವನ್ನು ತುಂಬಿದ್ದಾರೆ.

ಹರಿದಾಸ ವಾಙ್ಮಯವು ದ್ವೈತವಾಙ್ಮಯದ ಇನ್ನೊಂದು ಮುಖ್ಯವಾದ ಅಂಗವು. ವೇದಾಂತದ ತತ್ತ್ವಗಳನ್ನು ಕನ್ನಡದಲ್ಲಿ ತಿಳಿಸಿಕೊಡುವುದೂ, ಇತಿಹಾಸ–ಪುರಾಣಗಳಲ್ಲಿ ಬಂದ ಆಧ್ಯಾತ್ಮಿಕ ಮತ್ತು ನೈತಿಕ ಬೋಧನೆಗಳನ್ನು ತಿಳಿಗನ್ನಡದಲ್ಲಿ ಬಿಡಿಸಿ ಹೇಳುವುದೂ ಈ ವಾಙ್ಮಯದ ಉದ್ದೇಶ. ಇದರಲ್ಲಿ ಸಂಗೀತ, ಜನಪದಶೈಲಿ, ನೈತಿಕ ಪುನರುತ್ಥಾನ, ಧಾರ್ಮಿಕ ಡಾಂಭಿಕತನದ ನಿಂದೆ, ಆಧ್ಯಾತ್ಮಿಕ ತತ್ತ್ವಪ್ರತಿಪಾದನೆ ಸೊಗಸಾಗಿ ಸಮ್ಮಿಲಿತವಾಗಿರುತ್ತವೆ. ಈ ಹರಿದಾಸ ವಾಙ್ಮಯವನ್ನು ಶ್ರೀ ನರಹರಿತೀರ್ಥರು ಆರಂಭಿಸಿದರು. ಶ್ರೀಪಾದರಾಜರು, ಶ್ರೀ ವ್ಯಾಸರಾಜರು, ಶ್ರೀ ವಾದಿರಾಜರು, ಶ್ರೀ ರಾಘವೇಂದ್ರರೇ ಮೊದಲಾದ ಯತಿಶ್ರೇಷ್ಠರು ಮುಂದುವರಿಸಿದರು. ಶ್ರೀ ಪುರಂದರದಾಸರು, ಶ್ರೀ ಕನಕದಾಸರು, ಶ್ರೀ ವಿಜಯದಾಸರು, ಶ್ರೀ ಜಗನ್ನಾಥದಾಸರೇ ಮೊದಲಾದವರು ವಿಪುಲವಾಗಿ ಹರಿದಾಸವಾಙ್ಮಯವನ್ನು ಸೃಷ್ಟಿಸಿದರು. ಶ್ರೀ ಪುರಂದಾಸರು ಸಂಗೀತ ಮತ್ತು ಹರಿದಾಸ ಸಾಹಿತ್ಯ ಎರಡಕ್ಕೂ ಪಿತಾಮಹರೆನಿಸಿದರು. ಈ ವಾಙ್ಮಯದಲ್ಲಿ ಲಲಿತವಾದ ಕೃತಿಗಳೂ ಇರುವವು, ವಿದ್ವತ್ಪೂರ್ಣವಾದ ಕೃತಿಗಳೂ ಇರುವವು. ದ್ವೈತವಾಙ್ಮಯಕ್ಕೂ ಕನ್ನಡ ಸಾಹಿತ್ಯಕ್ಕೂ ಕರ್ನಾಟಕ ಸಂಗೀತಕ್ಕೂ ಹರಿದಾಸವಾಙ್ಮಯದ ಸೇವೆ ಅಪೂರ್ವವಾಗಿದೆ.

ಹೀಗೆ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅಪಾರವಾದ ವಾಙ್ಮಯವನ್ನು ಪಡೆದಿರುವ ಅನೇಕ ಜ್ಞಾನಿಗಳೂ ತಪಸ್ವಿಗಳೂ ಆದ ಗ್ರಂಥಕರ್ತರನ್ನು ಪಡೆದಿರುವ ಭಾರತದ ಮತ್ತು ಕರ್ನಾಟಕದ ಸಾಂಸ್ಕೃತಿಕ ಪರಂಪರೆಯ ಒಂದು ಅವಿಭಾಜ್ಯ ಅಂಗವಾದ ದ್ವೈತವೇದಾಂತದ ಬೋಧನೆಗಳನ್ನು ಮೂರು ಮಾತುಗಳಲ್ಲಿ ಸಂಗ್ರಹಿಸಬಹುದು:—

(೧) ಪರಮಾತ್ಮನು ಸರ್ವಗುಣಪರಿಪೂರ್ಣನು, ಸ್ವತಂತ್ರನು, ಸರ್ವನಿಯಾಮಕನು, ಸರ್ವಾಂತರ್ಯಾಮಿಯು, ಸರ್ವೋತ್ತಮನು.

(೨) ಜೀವ-ಜಗತ್ತುಗಳು ಸತ್ಯ, ಪರಮಾತ್ಮನಿಗೆ ಅಧೀನ. ಜೀವರು ತಮ್ಮ ಆಧ್ಯಾತ್ಮಿಕ ಉನ್ನತಿಯನ್ನು ಮಾಡಿಕೊಳ್ಳಲು ಸಾಧನ ಕ್ಷೇತ್ರವೆಂದು ಈ ಸಂಸಾರಕ್ಕೆ ಬಂದಿರುವರು. ಇದು ಅವರನ್ನು ಕೆಳಕ್ಕೆ ನೂಕಿದ್ದಲ್ಲ. ಆದರೆ ಮೇಲಕ್ಕೆತ್ತಲು ಅವಕಾಶ ಕಲ್ಪಿಸಿದ್ದು. ಆಧ್ಯಾತ್ಮಿಕ ಉನ್ನತಿಯ ಅಧಿಕಾರ ಎಲ್ಲ ಸಜ್ಜೀವಿಗಳಿಗೂ ಇದೆ.

(೩) ವಿಹಿತ ಕರ್ಮಾನುಷ್ಠಾನ ಅಂದರೆ ಸಕ್ರಿಯ ಜೀವನವೇ ಆಧ್ಯಾತ್ಮಿಕ ಉನ್ನತಿಯ ಮೊದಲ ಹೆಜ್ಜೆ. ಕರ್ಮವು ಜ್ಞಾನಕ್ಕೆ ವಿರುದ್ಧವಲ್ಲ, ಆದರೆ ಸಹಾಯಕ. ಕೇವಲ ಪೂಜಾದಿಗಳು ಮಾತ್ರ ಕರ್ಮವಲ್ಲ. ಸತ್ಯ, ಪರೋಪಕಾರ, ಸದ್ವರ್ತನೆ, ನಾನಾಜನ ಶುಶ್ರೂಷೆ ಇವೆಲ್ಲ ವಿಹಿತಕರ್ಮದ ಅವಿಭಾಜ್ಯ ಅಂಗಗಳು.

## ಅದ್ವೈತ

**—ವಿದ್ವಾನ್ ಎನ್. ರಂಗನಾಥಶರ್ಮಾ**

ವೇದಾಂತದರ್ಶನಗಳಲ್ಲಿ ಅದ್ವೈತದರ್ಶನವು ಅತ್ಯಂತ ಪ್ರಾಚೀನವೆಂದು ಹೇಳಬಹುದಾಗಿದೆ. ನ್ಯಾಯ, ವೈಶೇಷಿಕ, ಸಾಂಖ್ಯ, ಮೀಮಾಂಸಾದರ್ಶನಗಳ ಪ್ರಾಚೀನ ಗ್ರಂಥಗಳಲ್ಲಿ ತಮಗೆ ಪ್ರತಿಕಕ್ಷಿಗಳಾದ ವೇದಾಂತಿಗಳ ಸಿದ್ಧಾಂತವನ್ನು ಅನುವಾದಿಸಿರುವುದುಂಟು. ಆ ಗ್ರಂಥಗಳಲ್ಲಿ ವೇದಾಂತವೆಂದರೆ ಅದ್ವೈತದರ್ಶನವೆಂದೇ ತಿಳಿದು ಅನುವಾದಿಸಿರುವುದರಿಂದ ಅದ್ವೈತವು ಅತ್ಯಂತ ಪ್ರಾಚೀನವೆನ್ನುವುದಕ್ಕೆ ಪುಷ್ಟಿ ದೊರೆಯುತ್ತದೆ. ಅವೈದಿಕದರ್ಶನಗಳೆನಿಸಿದ ಪುರಾತನ ಬೌದ್ಧಜೈನ ಗ್ರಂಥಗಳಲ್ಲಿಯೂ ಸಹ ವೇದಾಂತವೆಂಬ ಹೆಸರಿನಿಂದ ಅದ್ವೈತದರ್ಶನವನ್ನೇ ಪರಾಮರ್ಶಿಸಿರುವುದರಿಂದ ಈ ಅಭಿಪ್ರಾಯ ದೃಢವಾಗುತ್ತದೆ. ಅಲ್ಲದೆ ಉಪಲಬ್ಧ ವೇದಾಂತ ಭಾಷ್ಯಗಳಲ್ಲಿ ಶ್ರೀ ಶಂಕರಾಚಾರ್ಯರ ಭಾಷ್ಯವೇ ಅತಿ ಪ್ರಾಚೀನವೆಂಬುದು ಸರ್ವಸಂಮತ. ಶ್ರೀ ಶಂಕರಾಚಾರ್ಯರು ತಮ್ಮ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಅದ್ವೈತವನ್ನು ವೇದಾಂತ ಸಿದ್ಧಾಂತವೆಂದೂ ಔಪನಿಷದ ಸಿದ್ಧಾಂತವೆಂದೂ ಹೇಳಿ, ಉಳಿದ ಸಾಂಖ್ಯಾದಿ ದರ್ಶನಗಳನ್ನು ವಿಸ್ತಾರವಾಗಿ ನಿರಾಕರಿಸಿದ್ದಾರೆ. ವೇದಾಂತದರ್ಶನದಲ್ಲಿ ದ್ವೈತಾದಿ ಭೇದಗಳಿದ್ದುವೆಂದು ಅವರ ಯಾವ ಗ್ರಂಥದಲ್ಲಿಯೂ ಸುಳಿವು ದೊರೆಯುವುದಿಲ್ಲ. ಅದ್ವೈತದಲ್ಲಿಯೇ ಜ್ಞಾನಕರ್ಮ ಸಮುಚ್ಚಯವಾದ-ಮುಂತಾದ ಅವಾಂತರ ಭೇದಗಳಿದ್ದುವು, ದ್ವೈತವೇದಾಂತದ ನಾಮಮಾತ್ರ ನಿರ್ದೇಶವೂ ಶಂಕರಭಾಷ್ಯದಲ್ಲಿ ದೊರೆಯುವುದಿಲ್ಲ.

ಶ್ರೀ ಶಂಕರಾಚಾರ್ಯರ ಕಾಲ ಕ್ರಿ.ಶ. ೮ನೆಯ ಶತಮಾನವೆಂದು ಬಹುಮಂದಿ ಐತಿಹಾಸಿಕರ ಮತ. ಆಚಾರ್ಯರು ಅದ್ವೈತ ಸಿದ್ಧಾಂತದ ಸ್ಥಾಪಕರೆಂಬ ಹೇಳಿಕೆ ಸಾಧುವಲ್ಲ. ಇವರ ಪರಮಗುರುಗಳಾದ ಗೌಡಪಾದಾಚಾರ್ಯರ ಮಾಂಡೂಕ್ಯಕಾರಿಕೆಗಳಲ್ಲಿಯೇ ಅದ್ವೈತದರ್ಶನವು ವ್ಯವಸ್ಥಿತವಾಗಿರುವುದನ್ನು ಕಾಣಬಹುದು. 'ಸಂಪ್ರದಾಯವಿದ ಆಹುಃ' ಎಂದು ಅಲ್ಲಲ್ಲಿ ಉಲ್ಲೇಖಿಸುವ ಶ್ರೀ ಶಂಕರಾಚಾರ್ಯರ ನುಡಿಗಳಿಂದ ಅದ್ವೈತಸಿದ್ಧಾಂತವು ಗುರುಶಿಷ್ಯ ಪರಂಪರೆಯ ಮೂಲಕ ದೀರ್ಘಕಾಲದಿಂದಲೇ ರೂಢಿಯಲ್ಲಿತ್ತೆಂದು ಹೇಳಬಹುದು. ಆದರೆ ಬೌದ್ಧ ಸಾಂಖ್ಯಾದಿ ದರ್ಶನಗಳನ್ನು ವಿಸ್ತಾರವಾಗಿ ಖಂಡಿಸಿ,ಈ ಸಿದ್ಧಾಂತಕ್ಕೆ ಒಂದು ವ್ಯವಸ್ಥಿತವಾದ ರೂಪವನ್ನಿತ್ತು ಪುನಃ ಪ್ರತಿಷ್ಠೆ ಮಾಡಿದವರು ಆಚಾರ್ಯರೇ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ಆಚಾರ್ಯರು ತಮ್ಮ ಬ್ರಹ್ಮಸೂತ್ರಭಾಷ್ಯ, ಉಪನಿಷದ್ಭಾಷ್ಯ, ಗೀತಾಭಾಷ್ಯಗಳಲ್ಲಿಯೂ ವಿವೇಕಚೂಡಾಮಣಿ, ಉಪದೇಶಸಾಹಸ್ರಿ ಮುಂತಾದ ಪ್ರಕರಣಗ್ರಂಥಗಳಲ್ಲಿಯೂ ಈ ಸಿದ್ಧಾಂತವನ್ನು ಸ್ಫುಟವಾಗಿ ಪ್ರತಿಪಾದಿಸಿದ್ದಾರೆ. ಪದ್ಮಪಾದರ ಪಂಚಪಾದಿಕಾ, ಸುರೇಶ್ವರಾಚಾರ್ಯರ ನೈಷ್ಕರ್ಮ್ಯಸಿದ್ಧಿ, ಅಮಲಾನಂದರ ವೇದಾಂತಕಲ್ಪತರು,ಅಪ್ಪಯ್ಯದೀಕ್ಷಿತರ ಕಲ್ಪತರು ಪರಿಮಳ, ವಾಚಸ್ಪತಿಮಿಶ್ರರ ಭಾಮತೀ, ಪ್ರಕಾಶಾತ್ಮರ ಸಂಕ್ಷೇಪಶಾರೀರಕ,ವಿದ್ಯಾರಣ್ಯರ ಪಂಚದಶಿ, ಮಧುಸೂದನ ಸರಸ್ವತಿಗಳ ಅದ್ವೈತ ಸಿದ್ಧಿ, ಶ್ರೀಹರ್ಷನ ಖಂಡನಖಂಡಖಾದ್ಯ ಇತ್ಯಾದಿಯಾಗಿ ಸಾವಿರಾರು ಗ್ರಂಥಗಳು ಅದ್ವೈತದರ್ಶನಕ್ಕೆ ಅಮೂಲ್ಯವಾದ ಕಾಣಿಕೆಯನ್ನು ಸಲ್ಲಿಸಿವೆ.

ದರ್ಶನಗಳನ್ನು ಎರಡು ಗುಂಪಾಗಿ ವಿಂಗಡಿಸಬಹುದು-ಆತ್ಮವಿದೆ ಎನ್ನುವ ಆತ್ಮಾಸ್ತಿತ್ವವಾದ ಒಂದು, ಆತ್ಮವಿಲ್ಲವೆನ್ನುವ ಆತ್ಮನಾಸ್ತಿತ್ವವಾದ ಇನ್ನೊಂದು. ಚಾರ್ವಾಕರೂ ಬೌದ್ಧರೂ ಆತ್ಮನಾಸ್ತಿತ್ವವಾದಿಗಳು. ಜೈನಸಾಂಖ್ಯಾದಿಗಳು ಆತ್ಮಾಸ್ತಿತ್ವವಾದಿಗಳು. ಈ ಅಸ್ತಿತ್ವವಾದಿಗಳಲ್ಲಿ ಅದ್ವೈತಿಗಳನ್ನು ಬಿಟ್ಟು ಉಳಿದವರೆಲ್ಲರೂ ಜೀವಾತ್ಮರು ಅನಂತ ಸಂಖ್ಯೆಯಲ್ಲಿದ್ದಾರೆಂದೂ ಆತ್ಮಾತಿರಿಕ್ತವಾಗಿ ಜಗತ್ತು ಇದೆಯೆಂದೂ ಹೇಳುತ್ತಾರೆ. ಅದ್ವೈತಿಗಳು ಮಾತ್ರ ಆತ್ಮವು ಅದ್ವಿತೀಯವಾಗಿ ಒಂದೇ ಇದೆಯೆಂದೂ

ಆತ್ಮಾತಿರಿಕ್ತವಾದ ಜಗತ್ತು ಮಿಥ್ಯೆ ಎಂದೂ ಹೇಳುತ್ತಾರೆ. ಆತ್ಮವೆಂಬುದೇ ಬ್ರಹ್ಮವಸ್ತು ಅದೇ ಜೀವವಾಗಿ ವ್ಯವಹಾರಗೋಚರವಾಗಿದೆ.

'ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ'

'ಬ್ರಹ್ಮ ಒಂದೇ ಸತ್ಯವಾದುದು. ಜಗತ್ತೆಂಬುದು ಮಿಥ್ಯಾ-ಸುಳ್ಳು, ಜೀವನು ಬ್ರಹ್ಮವೇ ಹೊರತು ಬೇರೆಯಲ್ಲ' ಎಂಬುದು ಅದ್ವೈತದರ್ಶನದ ಸಾರ. ಆದರೆ ನಮ್ಮ ಪ್ರತಿದಿನದ ವ್ಯವಹಾರದಲ್ಲಿ ನಾನಾಪದಾರ್ಥಗಳಿಂದ ಕೂಡಿದ ಜಗತ್ತೂ, ಅನಂತ ಜೀವಗಳೂ ಗೋಚರಿಸುತ್ತಿವೆ. ದ್ವೈತವು ಸ್ಪಷ್ಟವಾಗಿದೆ. ದ್ವೈತವಿಲ್ಲದೆ ವ್ಯವಹಾರವೇ ನಡೆಯುವುದಿಲ್ಲ. ಹೀಗೆ ಅತ್ಯಂತಸ್ಫುಟವಾಗಿ ಭೇದವು ಕಾಣುತ್ತಿರುವಾಗ ಆತ್ಮ ಒಂದೇ ಎನ್ನುವುದೂ ಜಗತ್ತು ಮಿಥ್ಯೆ ಎನ್ನುವುದೂ ಹೇಗೆಂಬ ಪ್ರಶ್ನೆ ಸಹಜವಾಗಿ ಹುಟ್ಟಿಕೊಳ್ಳುತ್ತದೆ. ಇದೀಗ ವಿಚಾರಮಾಡಬೇಕಾದ ವಿಷಯ. ಲೋಕದಲ್ಲಿ ಮಂದ, ಮಧ್ಯಮ, ಉತ್ತಮ-ಎಂದು ಮೂರು ಬಗೆಯ ಅಧಿಕಾರಿಗಳಿರುತ್ತಾರೆ. ಅಧಿಕಾರಾನುಗುಣವಾಗಿ ಅವರಿಗೆ ಆಯಾ ಶಾಸ್ತ್ರದಲ್ಲಿ ಪ್ರವೇಶವುಂಟು. ಲೌಕಿಕಶಾಸ್ತ್ರಗಳಲ್ಲಿಯೇ ಈ ವ್ಯವಸ್ಥೆ ಇರುವಾಗ ಅಧ್ಯಾತ್ಮಶಾಸ್ತ್ರದಲ್ಲಿ ಇದು ಮುಖ್ಯವಾಗಿರುತ್ತದೆ. ಈ ಅಧಿಕಾರ ಭೇದದಿಂದ ವ್ಯವಹಾರಮಾರ್ಗ, ವಿಚಾರಮಾರ್ಗ, ವಿಜ್ಞಾನಮಾರ್ಗ-ಎಂದು ಮಾರ್ಗಗಳನ್ನು ಸ್ಥೂಲವಾಗಿ ವಿಂಗಡಿಸಬಹುದು.

**೧. ವ್ಯವಹಾರಮಾರ್ಗ**

ನಮ್ಮ ಜಾಗ್ರದವಸ್ಥೆಯೇ ವ್ಯವಹಾರದಲ್ಲಿ ಗಣ್ಯವಾಗಿದೆ. ಇದರಲ್ಲಿ ಪದಾರ್ಥಗಳೆಲ್ಲವೂ ವ್ಯಾವಹಾರಿಕವಾಗಿ ಸತ್ಯವೆಂದೇ ಪರಿಗಣಿಸಲ್ಪಡುತ್ತವೆ. ಧರ್ಮಶಾಸ್ತ್ರಾದಿಗಳೆಲ್ಲವೂ ವ್ಯವಹಾರದಲ್ಲಿರುವ ಮಂದಾಧಿಕಾರಿಗಳಿಗಾಗಿ 'ಅವಿದ್ವದ್ವಿಷಯಾಣಿ ಶಾಸ್ತ್ರಾಣಿ' 'ಶಾಸ್ತ್ರಗಳು ಬ್ರಹ್ಮಜ್ಞಾನಿಗಳಲ್ಲದವರಿಗಾಗಿ' ಎಂದು ಶ್ರೀ ಶಂಕರಾಚಾರ್ಯರು ಅಲ್ಲಲ್ಲಿ ಉದ್ಘೋಷಿಸಿದ್ದಾರೆ. ಇದನ್ನನುಸರಿಸಿ ಪುಣ್ಯ ಪಾಪ, ಸ್ವರ್ಗನರಕ, ಈಶ್ವರಭಕ್ತ, ಗುರುಶಿಷ್ಯ, ಕ್ರಮ, ಪ್ರಮಾಣ, ಪ್ರಮೇಯ-ಮುಂತಾದವು ವ್ಯವಸ್ಥಿತವಾಗಿವೆ. ದ್ವೈತವು ವ್ಯಾವಹಾರಿಕ ಸತ್ಯ. ಎಲ್ಲಿಯವರೆಗೆ ಬ್ರಹ್ಮವಸ್ತುವಿನ ಅಪರೋಕ್ಷ ಜ್ಞಾನವಾಗುವುದಿಲ್ಲವೋ ಅಲ್ಲಿಯವರೆಗೆ ವಿಧಿ ನಿಷೇಧಶಾಸ್ತ್ರಗಳೆಲ್ಲವೂ ಪ್ರಮಾಣಗಳೇ. ನಿಸ್ತ್ರೈಗುಣ್ಯನಾದ ಬ್ರಹ್ಮಜ್ಞಾನಿಗೆ ಸರ್ವವೂ ಬ್ರಹ್ಮಮಯವಾಗಿ ತೋರುವುದರಿಂದ ವಿಧಿನಿಷೇಧಗಳಿಗೆ ಅವನು ವಿಷಯನೇ ಆಗುವುದಿಲ್ಲ. ಆದ್ದರಿಂದ ಭಗವದ್ಗೀತೆಯಲ್ಲಿ 'ತ್ರೈಗುಣ್ಯವಿಷಯಾವೇದಾಃ ನಿಸ್ತ್ರೈಗುಣ್ಯೋಭವಾರ್ಜುನ' ಎಂದು ಭಗವಂತನು ಹೇಳಿರುತ್ತಾನೆ.

**೨. ವಿಚಾರಮಾರ್ಗ**

ಜನ್ಮಾಂತರಾರ್ಜಿತವಾದ ಪುಣ್ಯದಿಂದ ಮನುಷ್ಯನಿಗೆ ಸತ್ಸಂಗವೂ ಸದ್ಗುರುಲಾಭವೂ ಆಗುತ್ತದೆ. ಇದರಿಂದ ಅವನು ಶಾಸ್ತ್ರಾನುಸಾರಿಯಾದ ವಿಚಾರಮಾರ್ಗವನ್ನೇರುತ್ತಾನೆ. ಆತನಿಗೆ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಫಲಭೋಗವಿರಾಗ, ಶಮಾದಿಷಟ್ಕಸಂಪತ್, ಮುಮುಕ್ಷುತ್ವ-ಎಂಬ ನಾಲ್ಕು ಸಾಧನಸಂಪತ್ತುಗಳು ಉಂಟಾಗುತ್ತವೆ. ಇವುಗಳ ಸಂಕ್ಷಿಪ್ತವಾದ ವಿವರಣೆ ಹೀಗೆ:–

೧. ನಿತ್ಯಾನಿತ್ಯವಸ್ತುವಿವೇಕ :-ಪರಮಾತ್ಮನೊಬ್ಬನೇ ನಿತ್ಯ, ಉಳಿದುದೆಲ್ಲವೂ ಅನಿತ್ಯ, ನಾಶವಾಗತಕ್ಕದ್ದು ಎಂಬ ವಿವೇಕಬುದ್ಧಿ.

೨. ಇಹಾಮುತ್ರ ಫಲಭೋಗವಿರಾಗ :-ಮೇಲ್ಕಂಡ ವಿವೇಕದಿಂದ ಇದು ಹುಟ್ಟುತ್ತದೆ. 'ಈ ಲೋಕದ ಸುಖವಾಗಲಿ ಸ್ವರ್ಗದ ಸುಖವಾಗಲಿ ನನಗೆ ಬೇಡ, ಇದು ಅನಿತ್ಯ, ದುಃಖಸಂಮಿಶ್ರ' ಎಂಬ ಬುದ್ಧಿ.

೩. ಶಮಾದಿಷಟ್ಕಸಂಪತ್ :-ಶಮ, ದಮ, ಉಪರತಿ, ತಿತಿಕ್ಷಾ, ಸಮಾಧಾನ, ಶ್ರದ್ಧೆ ಇವು ಶಮಾದಿಷಟ್ಕಗಳು. ಶಮ-ಮನೋನಿಗ್ರಹ, ದಮ-ಇಂದ್ರಿಯನಿಗ್ರಹ, ಉಪರತಿ-ವಿಷಯತ್ಯಾಗ, ಸಮಾಧಾನ-ಶೀತೋಷ್ಣಾದಿಗಳನ್ನು ಸಹಿಸಿಕೊಳ್ಳುವ ಮನೋಭಾವ, ಶ್ರದ್ಧೆ-ಶಾಸ್ತ್ರದಲ್ಲಿಯೂ ಗುರುವಾಕ್ಯದಲ್ಲಿಯೂ ಅಚಲವಿಶ್ವಾಸ–ಇವು ಎರಡನೆಯ ಸಾಧನವಾದ ಫಲಭೋಗ ವಿರಾಗದಿಂದ ಬರತಕ್ಕವು.

೪. ಮುಮುಕ್ಷುತ್ವ :– ಇದು ಮುಕ್ತನಾಗಬೇಕೆಂಬ ತೀವ್ರವಾದ ಇಚ್ಛೆ. ಮೇಲ್ಕಂಡ ಮೂರು ಸಾಧನಗಳಿಂದ ಈ ಇಚ್ಛೆ ಹುಟ್ಟುತ್ತದೆ.

ಈ ಸಾಧನಗಳಿಂದ ಶ್ರಮಿಸುವ ಮಧ್ಯಮಾಧಿಕಾರಿಯು ಶ್ರವಣಮನನಗಳಿಂದ ವ್ಯಾವಹಾರಿಕ ವಸ್ತುಗಳೆಲ್ಲವೂ ಮಿಥ್ಯೆ, ಅಸತ್ಯ, ದುರ್ನಿರೂಪ, ಅನಿರ್ವಚನೀಯ, ಮಾಯಾಕಲ್ಪಿತ, ಸ್ವಪ್ನದ ವಸ್ತುಗಳಂತೆ ಕ್ಷಣಿಕ, ಅಸಾರ, ಹೇಯ-ಎಂಬುದನ್ನು ನಿಶ್ಚಯಿಸಿಕೊಳ್ಳುತ್ತಾನೆ. ಇವನು ಪರೋಕ್ಷಜ್ಞಾನಿಯ ಮಟ್ಟಕ್ಕೆ ಏರಬಹುದು.

೩. ವಿಜ್ಞಾನ ಮಾರ್ಗ

ಎರಡನೆಯ ವಿಚಾರಮಾರ್ಗದಲ್ಲಿ ಚೆನ್ನಾಗಿ ಶ್ರಮಿಸಿದವನು ಈ ವಿಜ್ಞಾನಮಾರ್ಗವನ್ನೇರುತ್ತಾನೆ. ಇವನು ಉತ್ತಮಾಧಿಕಾರಿ. ಜಾಗ್ರತ್, ಸ್ವಪ್ನ, ಸುಷುಪ್ತಿಗಳೆಂಬ ಅವಸ್ಥಾತ್ರಯಕ್ಕೆ ಸಾಕ್ಷಿಯಾಗಿರುವ ಮತ್ತು ಅವಸ್ಥಾತ್ರಯವಿಲ್ಲದ ತುರೀಯವಾದ ಪರಬ್ರಹ್ಮವೇ ನಾನೆಂಬ ಪರಿಶುದ್ಧ ಜ್ಞಾನವನ್ನು ಈತನು ಪಡೆಯುತ್ತಾನೆ. ಈತನಿಗಾಗಿಯೇ ಶ್ರುತಿಯು 'ನೇತಿ ನೇತಿ' ಎಂಬ ಪ್ರತಿಷೇಧಮಾರ್ಗದಿಂದ ಆತ್ಮವ್ಯತಿರಿಕ್ತವಸ್ತು ಇಲ್ಲವೆಂದೂ ಆತ್ಮಸ್ವರೂಪವು ಅವರ್ಣನೀಯವಾಗಿದ್ದು 'ಇದಲ್ಲ, ಇದಲ್ಲ' ಎಂಬ ಪ್ರತಿಷೇಧ ಮಾರ್ಗದಿಂದಲೇ ಅದನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದೂ ಉಪದೇಶಿಸುತ್ತದೆ. ಹೀಗೆ ಪರಿಶುದ್ಧ ಜ್ಞಾನವನ್ನು ಪಡೆದವನು ಅಪರೋಕ್ಷಜ್ಞಾನಿ ಎನಿಸುತ್ತಾನೆ; ಇವನು ಜೀವನ್ಮುಕ್ತ.

ಅಧಿಕಾರಿ ಭೇದದಿಂದ ಹೀಗೆ ಶಾಸ್ತ್ರವು ವ್ಯವಸ್ಥಿತವಾಗಿದೆ. ಆದ್ದರಿಂದ ಒಂದನ್ನೊಂದು ಕಲಬೆರಕೆಯಾಗಿ ತಿಳಿದುಕೊಂಡು ಅತಿಪ್ರಸಂಗದ ಶಂಕೆಯನ್ನು ಮಾಡತಕ್ಕದ್ದಲ್ಲ.

**ಅದ್ವೈತ ವೇದಾಂತದಲ್ಲಿ ಪದಾರ್ಥ ವಿಭಾಗ** (ವ್ಯವಹಾರಾನುಸಾರಿಯಾದ ವಿಚಾರಮಾರ್ಗ)

ತತ್ತ್ವ, ಅತತ್ತ್ವ ಎಂದು ಪದಾರ್ಥವು ಎರಡು ವಿಧ. ತತ್ತ್ವವೆಂದರೆ ಆತ್ಮ. ಆತ್ಮನು ದೇಶಕಾಲಪರಿಚ್ಛೇದವಿಲ್ಲದ ವಿಭುವೂ ಶಾಶ್ವತವೂ ಆದ ಬ್ರಹ್ಮ. ಬ್ರಹ್ಮವು ಸಚ್ಚಿದಾನಂದಸ್ವರೂಪ, ಅದ್ವಿತೀಯ, ನಿತ್ಯಶುದ್ಧಬುದ್ಧ ಮುಕ್ತಸ್ವರೂಪ, ಸಪ್ತಸ್ವರೂಪ, ನಿರ್ಗುಣ, ನಿಷ್ಕ್ರಿಯ, ಪ್ರಶಾಂತ.

ತತ್ತ್ವಕ್ಕೆ ವ್ಯತಿರಿಕ್ತವಾದುದು ಅತತ್ತ್ವ. ನಮಗೆ ತೋರಿಬರುವ ಪ್ರಪಂಚವೆಲ್ಲವೂ ಅತತ್ತ್ವದಲ್ಲಿ ಸೇರುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ನಮಗೆ ಗೋಚರಿಸುವ ಘಟ, ಪಟ, ಅಶ್ವ-ಮೊದಲಾದುವೆಲ್ಲವೂ ಅತತ್ತ್ವಗಳು. ಇವು ವ್ಯಾವಹಾರಿಕವಾಗಿ ಸತ್ಯಗಳೇ ಹೊರತು ಪಾರಮಾರ್ಥಿಕವಾಗಿ ಇವು ಮಿಥ್ಯಾ ಎಂದು ಅಭಿಪ್ರಾಯ. ಘಟವನ್ನು ನೋಡಿ ಇದು ಗಡಿಗೆ ಎನ್ನುತ್ತೇವೆ. ಅದನ್ನು ಒಡೆದಾಗ ಚಿಪ್ಪುಗಳು ಎನ್ನುತ್ತೇವೆ. ಮಣ್ಣಿನ ರೂಪ ಬದಲಿಸಿದಂತೆ ಅದಕ್ಕೆ ಚಿಪ್ಪು, ಗಡಿಗೆ–ಎಂಬ ವಿಭಿನ್ನನಾಮಗಳು ಬರುತ್ತವೆ. ಆದ್ದರಿಂದಲೇ '**ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ**' ಎನ್ನುತ್ತದೆ ಶ್ರುತಿ. 'ಎಲ್ಲವೂ ಮಣ್ಣಿನ ವಿಕಾರ, ಮಾತಿನಿಂದ ಮಾತ್ರವೇ ಇದು ವಿಭಿನ್ನವಾಗಿದೆ. ವಾಸ್ತವವಾಗಿ ಮಣ್ಣೆಂಬುದೇ ಸತ್ಯ'! ಇದು ಒಂದು ದೃಷ್ಟಾಂತ. ಮಣ್ಣಿನ ಮೂಲವೇನೆಂದು ಶೋಧಿಸುತ್ತ ಹೋದಾಗ ಅಖಂಡವಾದ ಬ್ರಹ್ಮವೊಂದೇ ಉಳಿಯುವುದೆಂದು ತಾತ್ಪರ್ಯ. ನಾಮರೂಪಗಳೆಲ್ಲವೂ ಕಲ್ಪಿತವಾದ್ದರಿಂದ ನಾಮರೂಪಾತ್ಮಕವಾದ ಜಗತ್ತು ಮಿಥ್ಯಾ. ಇದು ಅತತ್ತ್ವ.

ಅತತ್ತ್ವವು ಅನಿರ್ವಚನೀಯ, ಅತ್ಯಂತಾಸತ್-ಎಂದು ಎರಡು ವಿಧ. ಘಟಪಟಾದಿ ವಸ್ತುಗಳು ಅನಿರ್ವಚನೀಯವೆಂದರೇನೆಂಬುದನ್ನು ಮುಂದೆ ಅನಿರ್ವಚನೀಯ ಖ್ಯಾತಿಯನ್ನು ಪ್ರಸ್ತಾಪಿಸಿದಾಗ ವಿವರಿಸಲಾಗುತ್ತದೆ. ಅನಿರ್ವಚನೀಯವು ವ್ಯಾವಹಾರಿಕ, ಪ್ರಾತಿಭಾಸಿಕ-ಎಂದು ಎರಡು ವಿಧ. ವ್ಯವಹಾರಕ್ಕೆ ಗೋಚರಿಸುವ ಘಟಪಟಾದಿಗಳು ವ್ಯಾವಹಾರಿಕ. ಭ್ರಾಂತಿಯಿಂದ ಕಾಣುವ ರಜ್ಜುಸರ್ಪ, ಶುಕ್ತಿರಜತ ಮೊದಲಾದವೂ ಸ್ವಪ್ನದಲ್ಲಿ ಗೋಚರಿಸುವ ವಸ್ತುಗಳೂ ಪ್ರಾತಿಭಾಸಿಕ ವ್ಯಾವಹಾರಿಕ ಪ್ರಮಾಣಗಳಿಗೂ ಮಿಥ್ಯೆ ಎನಿಸಿ ಪ್ರತಿಭಾಸಕ್ಕೆ-ತೋರಿಕೆಗೆ ಮಾತ್ರ ವಿಷಯವಾಗುವುದರಿಂದ ಇವು ಪ್ರಾತಿಭಾಸಿಕಗಳು.

ಶಶಶೃಂಗ, ಗಗನಕುಸುಮ, ಕೂರ್ಮಕ್ಷೀರ-ಮೊದಲಾದವು ಅತ್ಯಂತಾಸತ್. ಈ ಶಬ್ದಗಳನ್ನು ಹೇಳಿದಾಗ ಅರ್ಥಮಾತ್ರದ ಪ್ರತೀತಿಯಾಗುತ್ತದೆ. ವ್ಯವಹಾರದಲ್ಲಿ ಇವು ಇಲ್ಲ. ಈ ಪ್ರತೀತಿಗೆ 'ವಿಕಲ್ಪ' ಎಂದು ಪಾರಿಭಾಷಿಕವಾದ ಹೆಸರು. ಈ ವಿಕಲ್ಪಗೋಚರವಾದ ಪದಾರ್ಥ ಅತ್ಯಂತಾಸತ್.

ಇವುಗಳಲ್ಲಿ ಅತ್ಯಂತಾಸತ್ತನ್ನು ಪರೀಕ್ಷಿಸಬೇಕಾದ್ದಿಲ್ಲ. ಇಲ್ಲದ್ದನ್ನು ಪರೀಕ್ಷಿಸುವುದಾದರೂ ಏಕೆ? ಪ್ರಾತಿಭಾಸಿಕವು ತಾತ್ಕಾಲಿಕವಾಗಿ ಸತ್ಯವೆನಿಸಿದರೂ ಪರೀಕ್ಷಿಸಿದಾಗ ವ್ಯವಹಾರದಲ್ಲಿ ಮಿಥ್ಯೆಯೇ. ಹಾಗೆಯೇ ವ್ಯಾವಹಾರಿಕವಾಗಿ ಸತ್ಯವೆನಿಸಿರುವುದೂ ಪರಮಾರ್ಥದಲ್ಲಿ ಜ್ಞಾನಿಗೆ ಮಿಥ್ಯೆಯೆಂದು ನಿಶ್ಚಿತವಾಗುವುದು.

ಪರೀಕ್ಷೆಗೆ ಉಪಯುಕ್ತವಾದವು ಪ್ರಮಾಣಗಳು. ಪ್ರತ್ಯಕ್ಷ, ಅನುಮಾನ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ, ಶಬ್ದ-ಎಂಬಿವು ಪ್ರಮಾಣಗಳು. ಉಪನಿಷದ್ರೂಪವಾದ ಶಬ್ದಪ್ರಮಾಣವು ಉಳಿದೆಲ್ಲ ಪ್ರಮಾಣಗಳಿಗಿಂತ ಪ್ರಬಲವಾದುದು. 'ವ್ಯವಹಾರೇ ಭಟ್ಟನಯಃ' ಎಂಬ ಉದ್ಘೋಷದಂತೆ ವೇದಾಂತಿಗಳು ಭಟ್ಟಮೀಮಾಂಸಕರ ಮತವನ್ನನುಸರಿಸಿ ಹಲವಾರು ವ್ಯವಸ್ಥೆಗಳನ್ನು ಒಪ್ಪುತ್ತಾರೆ. ಅಲ್ಲಲ್ಲಿ ನ್ಯಾಯ ವೈಶೇಷಿಕಮತಗಳನ್ನು ವಾದಗ್ರಂಥಗಳಲ್ಲಿ ಅಂಗೀಕರಿಸಿರುವುದು ಕಂಡುಬರುತ್ತದೆ. ಸೃಷ್ಟಿ ಪ್ರಕಾರವನ್ನು ಹೇಳುವಾಗ ಸಾಂಖ್ಯಮತದ ಕೆಲವು ಅಂಶಗಳನ್ನೂ ಸಾಧನ ಪ್ರಕಾರಗಳನ್ನೂ ಹೇಳುವಾಗ ಯೋಗಮತವನ್ನು ಅಂಗೀಕರಿಸಿದ್ದಾರೆ. ಆಯಾ ದಾರ್ಶನಿಕರೇ ಒಪ್ಪಿದ ವ್ಯವಸ್ಥೆಯನ್ನನುಸರಿಸಿ ಆ ಎಲ್ಲ ಇತರ ದರ್ಶನಗಳನ್ನು ಖಂಡಿಸುವ ಒಂದು ದಿಟ್ಟ ನಿಲುವು ಅದ್ವೈತವಾದ ಗ್ರಂಥಗಳಲ್ಲಿದೆ. ವ್ಯವಹಾರವೆಲ್ಲವೂ ಕಲ್ಪಿತವಾದ್ದರಿಂದ ವ್ಯಾವಹಾರಿಕ ವ್ಯವಸ್ಥೆ ಹೀಗೆಯೇ

ಇರಬೇಕೆಂಬ ನಿರ್ಭರವಿಲ್ಲ. ಉದಾಹರಣೆಗೆ, ಅಭಾವವೆಂಬ ಪದಾರ್ಥವನ್ನೊಪ್ಪಬೇಕೆ? ಬೇಡವೇ? ಗುಣಾತಿರಿಕ್ತವಾದ ದ್ರವ್ಯವೆಂಬುದುಂಟೆ? ಅಥವಾ ಗುಣಸಮೂಹವೇ ದ್ರವ್ಯವೊ? ಎರಡೂ ಪಕ್ಷಗಳನ್ನಂಗೀಕರಿಸಿ ವಾದ ಮಾಡಿರುವ ಸಂದರ್ಭ ಅದ್ವೈತ ಗ್ರಂಥಗಳಲ್ಲುಂಟು.

**ಸೃಷ್ಟಿ**

ವೇದಾಂತದಲ್ಲಿ ಪ್ರಪಂಚದ ಸೃಷ್ಟಿಕ್ರಮವು ಬಹುಶಃ ಸಾಂಖ್ಯಮತದಂತೆಯೇ ಇದೆ. ಸಾಂಖ್ಯರು ಪುರುಷ, ಪ್ರಕೃತಿ ಎಂಬ ಎರಡು ಮೂಲಪದಾರ್ಥಗಳನ್ನೊಪ್ಪುತ್ತಾರೆ. ಪುರುಷನೆಂದರೆ ಜೀವಾತ್ಮ; ಇವನು ನಿರ್ಗುಣ, ಉದಾಸೀನ, ಅಕರ್ತ. ಜೀವಾತ್ಮರು ವಸ್ತುತಃ ಅನಂತ ಸಂಖ್ಯೆಯಲ್ಲಿದ್ದಾರೆ. ಅವ್ಯಕ್ತವಾದ ಪ್ರಕೃತಿಯಿಂದ ವ್ಯಕ್ತವಾದ ಸಕಲ ಪ್ರಪಂಚದ ಸೃಷ್ಟಿಯೂ ಆಗಿದೆಯೆಂದು ಸಾಂಖ್ಯರ ಸಿದ್ಧಾಂತ.

ಆತ್ಮನು ನಿರ್ಗುಣ, ಉದಾಸೀನ, ಅಕರ್ತ ಎಂಬುದು ಅದ್ವೈತದರ್ಶನಕ್ಕೂ ಮಾನ್ಯವಿದೆ. ಆದರೆ ಜೀವಾತ್ಮರು ವಸ್ತುತಃ ಅನಂತರೆಂಬುದು ಅದ್ವೈತಿಗಳಿಗೆ ಸಂಮತವಲ್ಲ. ಕೇವಲ ಉಪಾಧಿಭೇದದಿಂದ ಜೀವರು ಅನಂತಸಂಖ್ಯೆಯಲ್ಲಿರುವಂತೆ ಭಾಸವಾಗುತ್ತದೆ. ಪ್ರಕೃತಿ ಪುರುಷರ ಆಚೆಗೆ ಪರಬ್ರಹ್ಮವೆಂಬ ಒಂದೇ ಮೂಲತತ್ತ್ವವಿದೆ. ಈ ಪರಬ್ರಹ್ಮದಿಂದಲೇ ಪ್ರಕೃತಿ ಪುರುಷ ಮೊದಲಾದವು ಹುಟ್ಟಿವೆ. ಸಾಂಖ್ಯಮತದಲ್ಲಿ ಪ್ರಕೃತಿಯು ಸ್ವತಂತ್ರ. ವೇದಾಂತದಲ್ಲಾದರೋ ಇದು ಸ್ವತಂತ್ರವಲ್ಲ. ಪರಮೇಶ್ವರನ ಇಚ್ಛೆಗೆ ಒಳಪಟ್ಟುದು. ಪ್ರಕೃತಿಯನ್ನು ವೇದಾಂತ ಪರಿಭಾಷೆಯಲ್ಲಿ ಮಾಯೆ ಎನ್ನುತ್ತಾರೆ. ಸಾಂಖ್ಯರು ಈಶ್ವರನನ್ನು ಒಪ್ಪುವುದಿಲ್ಲ. ಅದ್ವೈತಿಗಳು ಒಪ್ಪುತ್ತಾರೆ. ಮಾಯೋಪಹಿತ ಚೈತನ್ಯವೇ ಈಶ್ವರ.

ಪ್ರಕೃತಿಯು ಸತ್ತ್ವರಜಸ್ತಮೋ ಗುಣಗಳೆಂಬ ಗುಣತ್ರಯ ರೂಪವಾದದ್ದು ಇದಕ್ಕೆ ಅವ್ಯಕ್ತವೆಂದೂ ಹೆಸರು. ಅವ್ಯಕ್ತದಿಂದ ಮಹತ್, ಮಹತ್ತಿನಿಂದ ಅಹಂಕಾರ, ಅಹಂಕಾರದಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಪಂಚತನ್ಮಾತ್ರೆಗಳು ಕ್ರಮವಾಗಿ ಉದಿಸಿದವು. ಶಬ್ದದಿಂದ ಸ್ಪರ್ಶ, ಸ್ಪರ್ಶದಿಂದ ರೂಪ, ಹೀಗೆ ಇವು ಆಕಾಶಾದಿಪಂಚಮಹಾಭೂತಗಳ ಸೂಕ್ಷ್ಮರೂಪಗಳು. ಇವು ತ್ರಿಗುಣಾತ್ಮಕ ಪ್ರಕೃತಿಜನ್ಯವಾದ್ದರಿಂದ ಒಂದೊಂದರಲ್ಲಿಯೂ ಮೂರುಗುಣಗಳು ಸೇರಿಕೊಂಡಿವೆ. ಈ ತನ್ಮಾತ್ರೆಗಳ ಸತ್ತ್ವಗುಣಾಂಶದಿಂದ ಅಂತಃಕರಣ ಉದಿಸಿತು. ವೃತ್ತಿಭೇದದಿಂದ ಇದು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಎಂದು ನಾಲ್ಕು ವಿಧವಾಗಿದೆ. ಇದು ಪಂಚತನ್ಮಾತ್ರೆಗಳ ಸಮಷ್ಟಿರೂಪ. ಅವುಗಳ ಸತ್ತ್ವಾಂಶದಿಂದಲೇ ವ್ಯಷ್ಟಿರೂಪದಲ್ಲಿ ಪಂಚಜ್ಞಾನೇಂದ್ರಿಯಗಳು ಹುಟ್ಟಿದವು. ಹೀಗೆಯೇ ಶಬ್ದಾದಿಗಳ ರಜೋಗುಣಾಂಶದಿಂದ ಸಮಷ್ಟಿರೂಪದಲ್ಲಿ ವ್ಯಾನ, ಉದಾನ, ಸಮಾನ, ಪ್ರಾಣ, ಅಪಾನಗಳೆಂಬ ಪಂಚವಾಯುಗಳೂ ವ್ಯಷ್ಟಿರೂಪದಲ್ಲಿ ವಾಕ್, ಪಾಣಿ, ಪಾದ, ಗುಹ್ಯ, ಗುದಗಳೆಂಬ ಪಂಚಕರ್ಮೇಂದ್ರಿಗಳೂ ಉದಿಸಿದವು. ಇಲ್ಲಿ ಕರ್ಮೇಂದ್ರಿಯಗಳೆಂದರೆ ಕೈ ಕಾಲು ಮೊದಲಾದ ಸ್ಥೂಲೇಂದ್ರಿಯಗಳಲ್ಲ ಇವುಗಳಲ್ಲಿ ಅಂತರ್ಗತವಾಗಿ ಇವುಗಳಿಗೆ ಶಕ್ತಿಯನ್ನೀಯುವ ಸೂಕ್ಷ್ಮೇಂದ್ರಿಯ.

ಅಂತಃಕರಣ ಚತುಷ್ಟಯ, ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ವಾಯು ಪಂಚಕ ಈ ೧೯ ತತ್ತ್ವಗಳು ಸೇರಿದ ಸಮೂಹಕ್ಕೆ ಸೂಕ್ಷ್ಮಶರೀರವೆಂದೂ ಲಿಂಗ ಶರೀರವೆಂದೂ ವ್ಯವಹಾರವಿದೆ.

ಪಂಚತನ್ಮಾತ್ರೆಗಳ ತಮೋಗುಣಾಂಶದಿಂದ ಆಕಾಶಾದಿ ಪಂಚಮಹಾಭೂತಗಳು ಹುಟ್ಟಿದವು. ಇವುಗಳಿಂದ ಪ್ರಾಣಿಗಳ ಸ್ಥೂಲಶರೀರದ ಉತ್ಪತ್ತಿ. ಅವಿದ್ಯೆಗೆ ಕಾರಣಶರೀರವೆಂದು ಹೆಸರಿದೆ. ಈ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳನ್ನು ತ್ರಿಪುರಗಳೆಂದೂ ಈ ತ್ರಿಪುರಗಳ ಅಭಿಮಾನವನ್ನು ನಾಶಮಾಡಿ ಮೋಕ್ಷವನ್ನೀಯುವ ಪರಮಾತ್ಮನನ್ನು ತ್ರಿಪುರಾಂತಕೇಶ್ವರ ಎಂದೂ ಪುರಾಣಗಳಲ್ಲಿ ವರ್ಣಿಸಿದೆ.

**ಪಂಚೀಕರಣ**

ಪಂಚೀಕರಣವೆಂದರೆ ಐದಾಗಿ ವಿಭಾಗಿರುವುದೆಂದು ಅರ್ಥ. ಸ್ಥೂಲ ಸೃಷ್ಟಿಯನ್ನು ನಿರೂಪಿಸುವುದಕ್ಕಾಗಿ ಈ ಪ್ರಕ್ರಿಯೆಯನ್ನು ಬಳಸಲಾಗಿದೆ. ಶಬ್ದತನ್ಮಾತ್ರೆಗಳ ತಾಮಸಾಂಶದಿಂದ ಹುಟ್ಟಿದ ಆಕಾಶಾದಿ ಪಂಚಮಹಾಭೂತಗಳು ಪರಸ್ಪರ ಸಂಮಿಶ್ರವಾಗಿ ಸ್ಥೂಲ ಜಗತ್ತಿಗೆ ಕಾರಣವಾದವು ಎಂದು ಸಾರಾಂಶ. ಆಕಾಶದಲ್ಲಿ ಶುದ್ಧಾಕಾಶದ ಅರ್ಧಭಾಗ ಉಳಿದಿದೆ. ಉಳಿದ ಅರ್ಧವು ನಾಲ್ಕು ಭಾಗಗಳಾಗಿ ವಾಯು ಮೊದಲಾದ ಇತರ ನಾಲ್ಕು ಭೂತಗಳಲ್ಲಿ ಸೇರಿದೆ. ಇದೇ ರೀತಿಯಲ್ಲಿ ಇತರ ಭೂತಗಳು ವಿಭಕ್ತವಾಗಿ ಉಳಿದ ನಾಲ್ಕು ಭೂತಗಳಲ್ಲಿ ಸೇರಿಕೊಂಡಿವೆ.'......ಆತ್ಮನ ಆಕಾಶಃ ಸಂಭೂತಃ, ಆಕಾಶಾದ್ವಾಯುಃ, ವಾಯೋರಗ್ನಿಃ ಇತ್ಯಾದಿ ತೈತ್ತಿರೀಯ ಶ್ರುತಿಯನ್ನು ಆಧರಿಸಿ ಈ ಪಂಚೀಕರಣ ಪ್ರಕ್ರಿಯೆ ಬಂದಿದೆ. ಛಾಂದೋಗ್ಯದ ಆರನೆಯ ಅಧ್ಯಾಯದಲ್ಲಿ ತೇಜಸ್ಸು, ಜಲ, ಪೃಥ್ವಿ ಈ ಮೂರರ ಸೃಷ್ಟಿಕ್ರಮವನ್ನು ಹೇಳಿದ್ದು, ಇದಕ್ಕೆ ತ್ರಿವೃತ್ಕರಣವೆಂದು ಹೆಸರಿದೆ. ಹೇಗಿದ್ದರೂ ತಾತ್ಪರ್ಯವು ಒಂದೇ ಎಂದು ಸಿದ್ಧಾಂತ. ಸೃಷ್ಟ್ಯಾದಿ ಪ್ರಪಂಚದ ವಿವರಣೆ ವೇದಾಂತಕ್ಕೆ ಮುಖ್ಯ ತಾತ್ಪರ್ಯವಲ್ಲವೆಂದೂ ಅದರಿಂದ

ಯಾವ ಪುರುಷಾರ್ಥವೂ ದೊರೆಯದೆಂದೂ ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. **(ನಹ್ಯಯಂ ಸೃಷ್ಟ್ಯಾದಿ ಪ್ರಪಂಚವಿಷಯಃ ಪ್ರತಿಪಿಪಾದಯಿಷಿತಃ ನಹಿತತ್ಪ್ರತಿಬದ್ಧಃ ಕಶ್ಚಿತ್ ಪುರುಷಾರ್ಥೋಃ ದೃಶ್ಯತೇ ಶ್ರೂಯತೇ ವಾ-ಸೂ. ಭಾ ೧-೪-೧೪)**

**ಪ್ರಳಯ**

ಪ್ರಳಯವು ನಿತ್ಯ, ನೈಮಿತ್ತಿಕ,ಪ್ರಾಕೃತ, ಆತ್ಯಂತಿಕ-ಎಂದು ನಾಲ್ಕು ವಿಧ. ಪ್ರತಿದಿನವೂ ಜೀವರಿಗೆ ಒದಗುವ ಸುಷುಪ್ತಿ ನಿತ್ಯಪ್ರಳಯ. ಇದರಲ್ಲಿ ಜೀವರ ಸಮಸ್ತ ಶಕ್ತಿಗಳು ಕಾರಣರೂಪದಲ್ಲಿರುತ್ತವೆ. ಜಾಗ್ರತ್ತಿನಲ್ಲಿ ಕಾರ್ಯರೂಪಕ್ಕೆ ಬರುತ್ತವೆ. ಸುಷುಪ್ತಿಯಲ್ಲೂ ಕಾರಣರೂಪದಿಂದ ಇರುವ ಪ್ರಯುಕ್ತ ಪಾಪ, ಪುಣ್ಯ, ಸ್ಮೃತಿ-ಮೊದಲಾದುವುಗಳಿಗೆ ಬಾಧೆ ಇಲ್ಲ.

ಬ್ರಹ್ಮನ ಅಹೋರಾತ್ರಿಗಳಲ್ಲಿ ನಡೆಯುವ ಲೋಕತ್ರಯಪ್ರಳಯವೇ ನೈಮಿತ್ತಿಕ ಪ್ರಳಯ. ಇದು ಪುರಾಣ ಪ್ರಸಿದ್ಧ. ಪ್ರಕೃತಿಯೆಂಬ ಮಾಯೆಯಲ್ಲಿ ಬ್ರಹ್ಮಾಂಡವು ಲೀನವಾಗುವುದು ಪ್ರಾಕೃತಪ್ರಳಯ. ಇದು ಜೀವನ್ಮುಕ್ತರಿಗೆ ಲಭಿಸ ತಕ್ಕದ್ದು. ಇವರಿಗೆ ಪ್ರಾರಬ್ಧಕರ್ಮಲೇಶವಿರುವುದರಿಂದ ಲೋಕಾನುಗ್ರಹಕ್ಕಾಗಿ ಶಾಸ್ತ್ರೋಪದೇಶವನ್ನು ಮಾಡುತ್ತಿರುವರು. ಆತ್ಯಂತಿಕ ಪ್ರಳಯವೆಂದರೆ ಮೋಕ್ಷ: ವಿದೇಹಕೈವಲ್ಯ. ಬ್ರಹ್ಮಸಾಕ್ಷಾತ್ಕಾರದಿಂದಾಗುವ ಅವಿದ್ಯಾನಿವೃತ್ತಿಯೇ ಇದು.

**ಈಶ್ವರ**

ಅದ್ವೈತದರ್ಶನದಲ್ಲಿ ಸರ್ವಜ್ಞನೂ ಸರ್ವಶಕ್ತನೂ ಅಂತರ್ಯಾಮಿಯೂ ಜಗನ್ನಿಯಾಮಕನೂ ಆದ ಈಶ್ವರನಿದ್ದಾನೆಂದು ಒಪ್ಪಲಾಗಿದೆ. ಈಶ್ವರನೆಂದರೆ ಈಶಿತವ್ಯವಾದ ಎಂದರೆ ನಿಯಮ್ಯವಾದ ಜಗತ್ತು ಇರಬೇಕು. ಜಗತ್ತು ಮಾಯಾಕಲ್ಪಿತವಾದ್ದರಿಂದ ಈಶ್ವರನು ಮಾಯೋಪಾಧಿಯೆಂದು ಅಂಗೀಕರಿಸಬೇಕು. ಜಗತ್ಕಾರಣವಾದ ಬ್ರಹ್ಮವೇ ಜಗತ್ತಿನ ಅಪೇಕ್ಷೆಯಿಂದ ಈಶ್ವರನೆನಿಸುತ್ತದೆ. ಸಂಸಾರಕ್ಕೆ ಬೀಜವಾದ ಮಾಯೆ, ಶಕ್ತಿ ಅಥವಾ ಪ್ರಕೃತಿಯನ್ನು ಸ್ವಾಧೀನಪಡಿಸಿಕೊಂಡಿರುವ ಮಾಯಾವಿಶಿಷ್ಟ ಬ್ರಹ್ಮವೇ ಈಶ್ವರ. 'ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ' 'ಅವಿದ್ಯಾಕೃತನಾಮರೂಪೋಪಾಧ್ಯನುರೋಧೀ ಈಶ್ವರಃ (ಸೂ.ಭಾ. ೨-೧-೧೪). ಈಶ್ವರನು 'ಶಾಸ್ತ್ರಯೋನಿ' ಎಂದರೆ ವೇದಗಳ ಉದ್ಗಮಸ್ಥಾನ. ಈಶ್ವರನು ಮಾಯಾಶಕ್ತಿಗೆ ಒಡೆಯ. ಜೀವರಾದರೋ ಅದಕ್ಕೆ ಅಧೀನರು. ಅಲ್ಪಜ್ಞರು, ಅಲ್ಪಶಕ್ತರು.

ಈಶ್ವರನು ಒಬ್ಬನೇ ಲೋಕಾನುಗ್ರಹಕ್ಕಾಗಿ-ಭಕ್ತರ ಉದ್ಧಾರಕ್ಕಾಗಿ ಆತನು ತನ್ನ ಮಾಯೆಯಿಂದ ವಿಭಿನ್ನರೂಪಗಳನ್ನು ತಳೆಯಬಹುದು. ಜಗತ್ತಿನಲ್ಲಿ ಅವತರಿಸಬಹುದು. ಈಶ್ವರನ ಉಪಾಸನೆಯಿಂದ ಜೀವರಿಗೆ ಕಲ್ಯಾಣಉಂಟು. ದೈವಭಕ್ತಿ ಮೋಕ್ಷ ಸಾಧನಗಳಲ್ಲಿ ಉತ್ತಮವಾದುದು. 'ಈಶ್ವರಾನುಗ್ರಹಾದೇವ ಪುಂಸಾಮದ್ವೈತವಾಸನಾ' (ಪಂಚದಶೀ).

ಈಶ್ವರನು ಜಗತ್ತಿಗೆ ಕಾರಣನೆಂದಾಗ ಮಾಯೆಯನ್ನು ಪ್ರಧಾನವಾಗಿಟ್ಟು ಉಪಾದಾನಕಾರಣನೆಂದೂ ಚೈತನ್ಯವನ್ನು ಪ್ರಧಾನವಾಗಿ ತಿಳಿದು ನಿಮಿತ್ತಕಾರಣನೆಂದೂ ಗ್ರಹಿಸಬೇಕು. ಏಕೆಂದರೆ, ಮಾಯಾವಿಶಿಷ್ಟ ಚೈತನ್ಯವೇ ಈಶ್ವರ.

**ಜೀವ**

ಪ್ರತಿಯೊಬ್ಬರಲ್ಲಿಯೂ 'ನಾನು' ಎಂಬ ಅಹಂಪ್ರತ್ಯಯಗಮ್ಯನಾದ ಆತ್ಮನೇ ಜೀವ. ಈಶ್ವರನಾದರೋ ಜೀವನನ್ನು ತನ್ನ ಚೈತನ್ಯದಿಂದ ಬೆಳಗುತ್ತಿರುವ ಸಾಕ್ಷಿ. ಜೀವನು ಈಶ್ವರನಾದ ಸಾಕ್ಷಿಗೆ ವಿಷಯ. ಜೀವನು ದೇಹಾದಿಸಂಘಾತದಲ್ಲಿರುವವನು. ಸುಖದುಃಖಗಳನ್ನು ಅನುಭವಿಸತಕ್ಕವನು. ಪ್ರತಿದೇಹಕ್ಕೂ ಒಬ್ಬನಾಗಿ ಅನಂತಸಂಖ್ಯೆಯಲ್ಲಿದ್ದಾನೆ. ಸೂರ್ಯನು ಒಬ್ಬನೇ ಆದರೂ ವಿಭಿನ್ನಜಲಾಶಯಗಳಲ್ಲಿ ಕಾಣುವ ಸೂರ್ಯಪ್ರತಿಬಿಂಬಗಳು ಹೇಗೆ ಅನಂತವೋ ಹಾಗೆ, ಈತನು ವ್ಯವಹಾರದೃಷ್ಟಿಯಿಂದ ಮಾತ್ರ ದೇಹಸಂಬಂಧ ಉಳ್ಳವನು. 'ನಾನು ನನ್ನದು' ಎಂಬ ಅಭಿಮಾನ ಈತನಿಗೆ ದೇಹೇಂದ್ರಿಯಗಳಲ್ಲಿದೆ. ಬ್ರಹ್ಮವೇ ಜೀವವಾಗಿ ತೋರುತ್ತದೆ. ಇದನ್ನು ಆತ್ಮಾಭ್ಯಾಸವೆಂದೂ ಅಂತಃಕರಣೋಪಹಿತ ಚೈತನ್ಯವೆಂದೂ ಹೇಳುತ್ತಾರೆ. ಜೀವನಿಗೆ ಜನನಮರಣಗಳಿಲ್ಲ. ಜನನವೆಂದರೆ ಶರೀರ ಸಂಯೋಗ. ಮರಣವೆಂದರೆ ಶರೀರವಿಯೋಗ.

ಜೀವನಿಗೆ ಬ್ರಹ್ಮಸ್ವಭಾವವೇ ಇದೆಯಾದ್ದರಿಂದ ಅವನು ಜ್ಞಾನಸ್ವರೂಪನೇ. ಹಾಗಾದರೆ ಇಂದ್ರಿಯಗಳಿಂದ ಆಗಬೇಕಾದದ್ದೇನು? ಎನ್ನಬಹುದು. ರೂಪ, ಗಂಧ-ಮುಂತಾದ ವಿಷಯ ವಿಶೇಷವನ್ನು ವಿಂಗಡಿಸಿ ತಿಳಿಯುವುದಕ್ಕಾಗಿ ಇಂದ್ರಿಯಗಳು ಬೇಕು. ಹಾಗಾದರೆ ಸುಷುಪ್ತಿಯಲ್ಲಿ ಜ್ಞಾನವೇಕಿಲ್ಲ? ಏಕಿಲ್ಲವೆಂದರೆ, ಅಲ್ಲಿ ಬೆಳಗಲ್ಪಡಬೇಕಾದ ವಿಷಯವೇ ಇಲ್ಲವಾದ್ದರಿಂದ. 'ವಿಷಯಾಭಾವಾದಿಯಮಚೇತಯಮಾನತಾ, ನ ತು ಚೈತನ್ಯಾಭಾವಾತ್-(ಸೂ.ಭಾ. ೨-೩-೧೮)' ಸುಷುಪ್ತಿಯಲ್ಲಿ ಸ್ವರೂಪ ಜ್ಞಾನವೂ ಸುಖಾನುಭವವೂ ಉಂಟು.

ಜೀವನು ಬ್ರಹ್ಮಸ್ವರೂಪವೇ ಆದ್ದರಿಂದ ಅವನು ಹುಟ್ಟುವುದೂ ಇಲ್ಲ. ಸಾಯುವುದೂ ಇಲ್ಲ. ಮಹಾಕಾಶದಿಂದ ಘಟಾಕಾಶಗಳು ಉತ್ಪನ್ನವಾಗುವಂತೆ ಜೀವರು ಬ್ರಹ್ಮದಿಂದ ಹುಟ್ಟುವಂತೆ ತೋರುತ್ತಾರೆ. ಘಟದೊಳಗಿನ ಆಕಾಶ ಮಹಾಕಾಶವಲ್ಲದೆ ಬೇರೆಯಲ್ಲ. ವಸ್ತುತಃ ಘಟವೂ ಆಕಾಶದ ಕಾರ್ಯವೇ. ಅದೂ ಆಕಾಶಕ್ಕಿಂತ ಬೇರೆಯಲ್ಲ. ದೇಹವೂ ಬ್ರಹ್ಮಕ್ಕಿಂತ ಬೇರೆಯಲ್ಲ.

ಒಂದು ಘಟಕಾಶದಲ್ಲಿ ಧೂಳಿ, ಹೊಗೆ ಮುಂತಾದದ್ದು ಸೇರಿಕೊಂಡಿದ್ದರೆ ಅದು ಇತರ ಘಟಕಾಶಗಳಲ್ಲಿ ಸೇರಿಕೊಂಡಿರುವುದಿಲ್ಲ. ಘಟವೇ ಅದಕ್ಕೆ ಪರಿಚ್ಛೇದಕ. ಹಾಗೆಯೇ ಜೀವರ ಸುಖದುಃಖ, ಪಾಪ ಪುಣ್ಯಾದಿಗಳು ಆಯಾ ಜೀವರಿಗೆ ಮಾತ್ರ ಸಂಬಂಧಿಸಿದವು. ಪರಮಾರ್ಥದಲ್ಲಿ ಧೂಳಿ ಹೊಗೆಗಳಿಗೂ ಆಕಾಶಕ್ಕೂ ಸಂಬಂಧವೇ ಇಲ್ಲ. ಆಕಾಶವು ಅಮೂರ್ತಸ್ವಭಾವವಾಗಿರುವುದರಿಂದ ಯಾವುದೂ ಅದಕ್ಕೆ ಅಂಟಿಕೊಳ್ಳುವುದಿಲ್ಲ. ಸುಖ, ದುಃಖ, ರಾಗ, ದ್ವೇಷಾದಿಗಳು ಜೀವನಿಗೆ ಸೇರಿದವುಗಳಲ್ಲ. ಪರಮಾರ್ಥದಲ್ಲಿ ಅಂತಃಕರಣಕ್ಕೆ ಸೇರಿದವು.

ಅಂತಃಕರಣೋಪಹಿತ ಚೈತನ್ಯವೇ ಜೀವ. ಚೈತನ್ಯ ಸ್ವರೂಪನಾದ ಆತ್ಮನು ಅಂತಃಕರಣ ಸಂಬಂಧದಿಂದ ಸಂಸಾರಿಯಾಗಿ ಜೀವನೆನಿಸಿದ್ದಾನೆ. ಅಂತಃಕರಣವು ಅಣುವಾದ್ದರಿಂದ ಜೀವಗೂ ಅಣುಪರಿಮಾಣನೆಂದು ಹೇಳುವುದುಂಟು. ಕೈಗನ್ನಡಿಯಲ್ಲಿ ಸೂರ್ಯನ ಪ್ರತಿಬಿಂಬವನ್ನು ಕಂಡು ಸೂರ್ಯನು ಚಿಕ್ಕವನೆಂದು ಹೇಳಿದಂತೆ. ಜೀವನಿಗೆ ಸ್ತ್ರೀ, ಪುರುಷ, ನಪುಂಸಕ ಎಂಬ ಭೇದವಿಲ್ಲ. ಆ ವ್ಯವಹಾರ ದೇಹೋಪಾಧಿಯಿಂದ ಬಂದಿದೆ. ಜೀವನ ಕರ್ತೃತ್ವ, ಭೋಕ್ತೃತ್ವಗಳು ಔಪಾಧಿಕವಾದವು. ಸ್ವಾಭಾವಿಕವಲ್ಲ.

**ಅಧ್ಯಾಸ**

ಅಧ್ಯಾಸವೆಂದರೆ ಸಾಮಾನ್ಯವಾಗಿ ಭ್ರಮೆಯೆಂದು ಹೇಳಬಹುದು. 'ಸ್ಮೃತಿರೂಪಃ, ಪರತ್ರಪೂರ್ವದೃಷ್ಟಾವಭಾಸಃ' ಎಂದು ಭಾಷ್ಯಕಾರರು ಸೂತ್ರಭಾಷ್ಯದ ಆರಂಭದಲ್ಲಿ ಇದರ ಲಕ್ಷಣವನ್ನು ಹೇಳಿದ್ದಾರೆ. 'ನೆನಪಿನ ರೂಪವಾಗಿರುವ, ಇನ್ನೊಂದರಲ್ಲಿ ಹಿಂದೆ (ಮತ್ತೊಂದೆಡೆ) ಕಂಡುದರ ತೋರಿಕೆ ಅಧ್ಯಾಸ' 'ಎರಡರ ವಿವೇಚನೆಯಿಲ್ಲದೆ ಉಂಟಾದ ಭ್ರಮೆ' 'ಒಂದರಲ್ಲಿ ಬೇರೊಂದರ ಧರ್ಮವನ್ನು ಕಲ್ಪಿಸುವುದು' ಒಟ್ಟಿನಲ್ಲಿ ಅಧ್ಯಾಸವೆಂದರೆ ಮಿಥ್ಯಾಜ್ಞಾನ. ಈ ಪ್ರಕರಣದಲ್ಲಿಯೇ 'ಅಧ್ಯಾಸೋ ನಾಮ ಆತಸ್ಮಿನ್‌ತದ್ಬುದ್ಧಿಃ' ಎಂದೂ ಭಾಷ್ಯದಲ್ಲಿದೆ. 'ಅಧ್ಯಾಸವೆಂದರೆ, ಅದಲ್ಲದ್ದರಲ್ಲಿ ಅದೆಂಬ ಬುದ್ಧಿ'

ಪರಮಾರ್ಥದಲ್ಲಿ 'ಅಹಂ' ಎಂದರೆ ಆತ್ಮ. ಆದರೆ ಮನುಷ್ಯನು ದೇಹೇಂದ್ರಿಯ ಸಂಘಾತವನ್ನು 'ಅಹಂ' ಎಂದು ತಿಳಿದಿದ್ದಾನೆ. ಇದು ಅಧ್ಯಾಸ. ಆತ್ಮನಲ್ಲಿ ದೇಹೇಂದ್ರಿಯ ಸಂಘಾತ ಅಧ್ಯಸ್ತ. ರಜ್ಜುವನ್ನು ಸರ್ಪವೆಂದು ತಿಳಿಯುವುದು ಅಧ್ಯಾಸ. ರಜ್ಜುವಿನಲ್ಲಿ ಸರ್ಪವು ಅಧ್ಯಸ್ತ. ಬ್ರಹ್ಮವನ್ನು ಜಗತ್ತೆಂದು ತಿಳಿಯುವುದು ಅಧ್ಯಾಸ. ಬ್ರಹ್ಮದಲ್ಲಿ ಜಗತ್ತು ಅಧ್ಯಸ್ತ. ಲೋಕ ವ್ಯವಹಾರವೆಲ್ಲವೂ ಈ ಅಧ್ಯಾಸದಿಂದ ನಡೆಯುತ್ತದೆ. ಏಕೆಂದರೆ, ವ್ಯವಹಾರದಲ್ಲಿ 'ನಾನು, ಜಗತ್ತು' ಎಂಬ ಎರಡು ಅಂಶ ಸೇರಿಕೊಂಡೇ ಇರುತ್ತದೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಸ ಆತ್ಮಾ, ತತ್ತ್ವಮಸಿ' ಮುಂತಾದ ಶ್ರುತಿ ವಾಕ್ಯಗಳಿಂದ ಸಚ್ಚಿದಾನಂದವೂ ಅನಂದವೂ ಆದ ಬ್ರಹ್ಮವೇ ಪರಮಾರ್ಥದಲ್ಲಿ 'ನಾನು' ಎಂದು ಗೊತ್ತಾಗಿದೆ. ಹಾಗೆಯೇ 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಶ್ರುತಿಗಳಿಂದ ಜಗತ್ತೆಲ್ಲವೂ ವಾಸ್ತವವಾಗಿ ಬ್ರಹ್ಮ ಸ್ವರೂಪವೆಂದು ತಿಳಿದುಬರುತ್ತದೆ. 'ಯಸ್ಯ ಸರ್ವಮಾತ್ಮೈವಾಭೂತ್ ತತ್‌ಕೇನ ಕಂ ಪಶ್ಯೇತ್...' ಎಂಬಂತೆ ಸರ್ವವೂ ಬ್ರಹ್ಮಮಯವೆಂಬ ಅರಿವು ಬಂದಾಗ ವ್ಯವಹಾರ ನಡೆಯಲು ಶಕ್ಯವೇ ಇಲ್ಲ. ಅಧ್ಯಾಸದಿಂದ ದ್ವೈತಬುದ್ಧಿ ಇರುವಾಗಲೇ ವ್ಯವಹಾರ ಸಾಧ್ಯ.

**ವಿವರ್ತವಾದ**

ಆತ್ಮನಿಂದ ಜಗತ್ತು ಹುಟ್ಟುತ್ತದೆ. ಬೀಜದಿಂದ ಮೊಳಕೆ ಹುಟ್ಟುತ್ತದೆ. ಹಾಲಿನಿಂದ ಮೊಸರಾಗುತ್ತದೆ--ಇಂಥ ಸ್ಥಳಗಳಲ್ಲಿ ಆತ್ಮ, ಬೀಜ, ಹಾಲು-ಇವು ಕಾರಣ. ಜಗತ್ತು, ಮೊಳಕೆ, ಮೊಸರು–ಇವು ಕಾರ್ಯ. ಕಾರ್ಯಕಾರಣಭಾವವನ್ನು ಹೇಳುವಾಗ ದಾರ್ಶನಿಕರಲ್ಲಿ ವಿಭಿನ್ನಮತಗಳಿವೆ. ಮುಖ್ಯವಾದ ಸಾರವಿಷ್ಟು: ಕಾರಣಕ್ಕಿಂತ ಭಿನ್ನವಾಗಿ ಮೊದಲು ಇಲ್ಲದ ಹೊಸ ಕಾರ್ಯವು ಹುಟ್ಟುತ್ತದೆ. ಎಂಬುದೊಂದು ವಾದ. ಇದು ಅಸತ್ಕಾರ್ಯವಾದ. ಇದು ತಾರ್ಕಿಕಸಂಮತ. ಕಾರಣಕ್ಕಿಂತ ಕಾರ್ಯವು ಅತ್ಯಂತ ಭಿನ್ನವಲ್ಲವೆಂದೂ ಹಾಲೇ ಮೊಸರಾಗಿಯೂ ಬೀಜವೇ ಮೊಳಕೆಯಾಗಿಯೂ ಪರಿಣಮಿಸುವುದೆಂದೂ ಇನ್ನೊಂದು ವಾದ. ಇದು ಪರಿಣಾಮ ವಾದ. ಸಾಂಖ್ಯಸಂಮತ. ಇವನ್ನು ಸತ್ಕಾರ್ಯವಾದವೆಂದೂ ಹೇಳುತ್ತಾರೆ. ಅದ್ವೈತದರ್ಶನವು ತಾರ್ಕಿಕರ ಅಸತ್ಕಾರ್ಯವಾದವನ್ನು ಒಪ್ಪುವುದಿಲ್ಲ. ವ್ಯವಹಾರ ಸ್ಥಿತಿಯಲ್ಲಿ ಸಾಂಖ್ಯರ ಪರಿಣಾಮವಾದವನ್ನು ಅಂಗೀಕರಿಸಿದರೂ ಪರಮಾರ್ಥ ಸ್ಥಿತಿಯಲ್ಲಿ ಅಂಗೀಕರಿಸುವುದಿಲ್ಲ. ಏಕೆಂದರೆ, 'ಆತ್ಮನಿಂದ ಜಗತ್ತು ಹುಟ್ಟುತ್ತದೆ' ಎಂಬಲ್ಲಿ ಅಸತ್ಕಾರ್ಯವಾದಕ್ಕೆ ಅವಕಾಶವೇ ಇಲ್ಲ, ಆತ್ಮಾತಿರಿಕ್ತವಾದ ಇನ್ನೊಂದು ವಸ್ತುವೇ ಇಲ್ಲವಾದ್ದರಿಂದ. ಆತ್ಮನು ನಿಮಿತ್ತಕಾರಣನೆನ್ನುವುದು ಸರಿಯಲ್ಲ. ಆತ್ಮನು ಅಕರ್ತನೆಂದು ಶ್ರುತಿಯು ಸಾರುವುದರಿಂದ, ಪರಿಣಾಮ ವಾದವೂ ಅಂಗೀಕಾರ್ಯವಲ್ಲ, ಆತ್ಮವು ಜಗತ್ತಾಗಿ ಪರಿಣಮಿಸುವುದಿಲ್ಲವಾದ್ದರಿಂದ. ಆತ್ಮನು ಅಪರಿಣಾಮಿ, ಅವಯವರಹಿತ, ಕೂಟಸ್ಥ. ಪರಿಣಾಮವಾದದಲ್ಲಿ ಕಾರಣಕ್ಕೆ ಅವಯವಗಳಿದ್ದು ಅದು ರೂಪಾಂತರವನ್ನು ಹೊಂದುತ್ತದೆ. ಅಲ್ಲದೆ ಕಾರ್ಯದ ಗುಣಗಳನ್ನು ಕಾರಣವು ಪಡೆದಿರುತ್ತದೆ. ಆತ್ಮನಾದರೋ ಅವಯವ ರಹಿತ. ಕಾರ್ಯವಾದ ಜಗತ್ತಿನ ಗುಣಧರ್ಮಗಳು ಆತ್ಮನಲ್ಲಿಲ್ಲ.

ಆದ್ದರಿಂದ ಅದ್ವೈತವು ವಿವರ್ತವಾದವನ್ನು ಎತ್ತಿಹಿಡಿದಿದೆ. ವಿವರ್ತವೆಂದರೆ ಒಂದು ವಸ್ತು ಯಾವ ಬದಲಾವಣೆ ಹೊಂದದೆ ಇನ್ನೊಂದು ವಸ್ತುವಾಗಿ ತೋರುವುದು. ರಜ್ಜುಸರ್ಪಸ್ಥಳ ಉದಾಹರಣೆ. ಹಗ್ಗವು ಹಾವಾಗಿ ಭ್ರಾಂತನಿಗೆ ಕಾಣುತ್ತದೆ. ಹಗ್ಗದಲ್ಲಿ ಯಾವ ಬದಲಾವಣೆಯೂ ಆಗಿರುವುದಿಲ್ಲ. ಅದು ಇದ್ದಂತೆಯೇ ಇರುತ್ತದೆ. ಹಾಗೆ ಅದ್ವಿತೀಯನಾದ ಆತ್ಮನು ವಿವರ್ತದಿಂದ ವಿವಿಧ ನಾಮ ರೂಪಗಳನ್ನು ಪಡೆದ ಜಗತ್ತಾಗಿ ಕಾಣುತ್ತಾನೆ.

### ಅನಿರ್ವಚನೀಯ ಖ್ಯಾತಿ

ಖ್ಯಾತಿಯೆಂದರೆ ಪ್ರತೀತಿ, ಜ್ಞಾನ. ಇದನ್ನು ಮುಖ್ಯವಾಗಿ ಭ್ರಾಂತಿಸ್ಥಳದಲ್ಲಿ ಬಳಸುತ್ತಾರೆ. ಆತ್ಮಖ್ಯಾತಿ, ಅಸತ್ ಖ್ಯಾತಿ, ಅಖ್ಯಾತಿ, ಅನ್ಯಥಾಖ್ಯಾತಿ, ಅನಿರ್ವಚನೀಯಖ್ಯಾತಿ-ಎಂದು ಖ್ಯಾತಿಪಂಚಕ. ಅದ್ವೈತಸಿದ್ಧಾಂತವು ಅನಿರ್ವಚನೀಯ ಖ್ಯಾತಿಯನ್ನೊಪ್ಪುತ್ತದೆ.

ಹಗ್ಗವನ್ನು ಹಾವೆಂದೂ, ಕಪ್ಪೆ ಚಿಪ್ಪನ್ನು ಬೆಳ್ಳಿಯೆಂದೂ, ದಾಸವಾಳ ಹೂವಿನ ಬಳಿ ಇರುವ ಸ್ಫಟಿಕವನ್ನು ಕೆಂಪು ಸ್ಫಟಿಕವೆಂದೂ ತಿಳಿಯುವುದು ಭ್ರಾಂತಿ. ಸಮೀಪಕ್ಕೆ ಹೋಗಿ ಪರೀಕ್ಷಿಸಿದಾಗ ಹಾವೂ, ಬೆಳ್ಳಿಯೂ, ಸ್ಫಟಿಕದ ಕೆಂಪೂ ನಿವೃತ್ತವಾಗಿ, ಇದು ಹಗ್ಗ, ಇದು ಕಪ್ಪೆಚಿಪ್ಪು, ಇದು ಬೆಳ್ಳಗಿರುವ ಸ್ಫಟಿಕವೆಂಬ ಜ್ಞಾನ ಉಂಟಾಗುತ್ತದೆ. ಮೊದಲು ಬಂದ ಜ್ಞಾನ ಬಾಧಿತವಾಗುವುದರಿಂದ ಅದು ಭ್ರಾಂತಿ : ಮಿಥ್ಯಾಜ್ಞಾನ. ಹಗ್ಗದಲ್ಲಿ ಕಂಡ ಹಾವು ಸತ್ ಅಲ್ಲ, ಮುಂದೆ ಬಾಧಿತವಾಗುವುದರಿಂದ ಅದು ಗಗನಕುಸುಮದಂತೆ ಅಸತ್ ಅಲ್ಲ, ಆ ಕಾಲದಲ್ಲಿ ಪ್ರತೀತವಾಗುವುದರಿಂದ. ಏಕಕಾಲದಲ್ಲಿ ಸತ್, ಅಸತ್ ಎರಡೂ ಆಗಲಾರದು, ವಿರುದ್ಧವಾದ್ದರಿಂದ. ಆದ್ದರಿಂದ ಇದು ಸದಸದ್ವಿಲಕ್ಷಣ, ಅನಿರ್ವಚನೀಯ. ಈ ಭ್ರಾಂತಿ, ಭ್ರಾಂತಿವಿಷಯವಾದ ಸರ್ಪ–ಎರಡೂ ಅನಿರ್ವಚನೀಯ. ಹೀಗೆ ಪರಬ್ರಹ್ಮದಲ್ಲಿ ಅಧ್ಯಸ್ತವಾದ ಪ್ರಪಂಚ ಅನಿರ್ವಚನೀಯ. ಏಕೆಂದರೆ, ಪರಮಾರ್ಥಾವಸ್ಥೆಯಲ್ಲಿ ಪ್ರಪಂಚವು ಬಾಧಿತವಾಗಿ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಅನುಭವ ಬರುತ್ತದೆ.

ಹಗ್ಗವನ್ನು ನೋಡಿ ಹಾವು ಎಂಬ ಯಾವ ಪ್ರತೀತಿ ಬರುವುದೋ ಅದಕ್ಕೆ ಖ್ಯಾತಿ ಎಂದು ಹೆಸರು. ಅದರ ನಿವೃತ್ತಿಗೆ ಬಾಧೆ ಎಂದು ಹೆಸರು. ಶಶಶೃಂಗ, ಗಗನಕುಸುಮ- ಮೊದಲಾದವು ಅತ್ಯಂತಾಸತ್. ಅವುಗಳಿಗೆ ಇಂದ್ರಿಯಗಳಿಂದ ಹುಟ್ಟುವ ಖ್ಯಾತಿ ಇಲ್ಲ. ಯಾವುದು ಸತ್ ಆಗಿದೆಯೋ ಅದಕ್ಕೆ ಬಾಧೆ ಇಲ್ಲ. ಯಾವುದಕ್ಕೆ ಮೊದಲು ಖ್ಯಾತಿಯೂ ಅನಂತರ ಬಾಧೆಯೂ ಇದೆಯೋ ಅದು ಅನಿರ್ವಚನೀಯ. ವ್ಯವಹಾರದಿಶೆಯಲ್ಲಿ ಪ್ರಪಂಚದ ಖ್ಯಾತಿಯಿದೆ. ಬ್ರಹ್ಮಜ್ಞಾನವಾದಾಗ ಪ್ರಪಂಚಕ್ಕೆ ಬಾಧೆಯಿದೆ. ಸುಷುಪ್ತಿಯಲ್ಲಿ ಪ್ರಪಂಚದ ನಿವೃತ್ತಿ ಸರ್ವಾನುಭವಸಿದ್ಧವೂ ಹೌದು. ಆದ್ದರಿಂದ ಪ್ರಪಂಚ ಅನಿರ್ವಚನೀಯ.

ಹೀಗೆ ಅದ್ವೈತವು ಪ್ರಪಂಚವನ್ನು ಮಿಥ್ಯೆಯೆಂದು ಹೇಳಿದರೂ ಪರಮಾರ್ಥದಲ್ಲಿ ಸತ್ಯವಾದ ಬ್ರಹ್ಮವನ್ನು ಒಪ್ಪಿದೆ. ಬೌದ್ಧರಾದರೋ ಪರಮಾರ್ಥದಲ್ಲಿಯೂ ಪ್ರಪಂಚವು ಅಸತ್ ಎಂದೂ ಶೂನ್ಯವೆಂದೂ ಹೇಳುತ್ತಾರೆ. ಆದ್ದರಿಂದ ಅದ್ವೈತ ದರ್ಶನವು ಬೌದ್ಧಮತಕ್ಕೆ ಸಂಪೂರ್ಣ ವಿರೋಧಿಯಾದದ್ದು.

ಪ್ರಪಂಚವು 'ತತ್ತ್ವಾನ್ಯತ್ವಾಭ್ಯಾಂ ದುರ್ನಿರೂಪಂ' ಎಂದು ಶ್ರೀಶಂಕರಾಚಾರ್ಯರು ಹೇಳಿದ್ದಾರೆ. ಇದು ಅನಿರ್ವಚನೀಯದ ಇನ್ನೊಂದು ಲಕ್ಷಣ. ಚಿನ್ನವು ಒಡವೆಯಾಗುತ್ತದೆ, ಮಣ್ಣು ಮಡಕೆಯಾಗುತ್ತದೆ. ಚಿನ್ನ ಮತ್ತು ಮಣ್ಣು ಕಾರಣ. ಒಡವೆ ಮತ್ತು ಮಡಕೆ ಕಾರ್ಯ. ಇಲ್ಲಿ ಕಾರ್ಯವು ಕಾರಣದಿಂದ ಭಿನ್ನವೆ? ಅಭಿನ್ನವೆ? ಭಿನ್ನವಾದರೆ ಚಿನ್ನವನ್ನೂ ಒಡವೆಯನ್ನೂ ಬೇರೆ ಬೇರೆ ತೋರಿಸಬೇಕಾಗುತ್ತದೆ. ಅಭಿನ್ನವಾದರೆ ಒಡವೆಯ ಕೆಲಸ ಚಿನ್ನದ ಗಟ್ಟಿಯಿಂದಲೂ ಆಗಬೇಕಾಗುತ್ತದೆ. ಚಿನ್ನದ ಗಟ್ಟಿಯನ್ನೇ ಉಂಗುರವೆಂದೂ ಬಳೆಯೆಂದೂ ತಿಳಿದು ಜನರು ಬಳಸಲಿ ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಇಲ್ಲಿ ಭೇದವನ್ನಾಗಲಿ ಅಭೇದವನ್ನಾಗಲಿ ವ್ಯವಸ್ಥಾಪಿಸುವುದು ಶಕ್ಯವಲ್ಲ. ಇದು ದುರ್ನಿರೂಪ ; ಅನಿರ್ವಚನೀಯ.

### ಅಧ್ಯಾರೋಪ–ಅಪವಾದ

'ಯತೋ ವಾಚೋ ನಿವರ್ತಂತೇ' ಎಂದು ಯಾವ ಬ್ರಹ್ಮವಸ್ತುವನ್ನು ವರ್ಣಿಸಲು ಸಾಧ್ಯವಿಲ್ಲವೆಂದು ಉಪನಿಷತ್ತು ಹೇಳಿದೆಯೋ ಅದನ್ನೇ ಶ್ರುತಿಸ್ಮೃತಿಗಳು ಸೃಷ್ಟಿಕರ್ತ ಇತ್ಯಾದಿಯಾಗಿ ವರ್ಣಿಸಿವೆ. ನಿರ್ಧರ್ಮಕವಾದ ಬ್ರಹ್ಮವನ್ನು ಪರಿಚಯ ಮಾಡಿಕೊಡುವುದಕ್ಕೆ ಸಾಧ್ಯವಿಲ್ಲವೆಂದೂ ಅದನ್ನು ನಿಷೇಧಮುಖದಿಂದಲೇ ತಿಳಿಯಬೇಕೆಂದೂ 'ಅಥಾತ ಆದೇಶೋ ನೇತಿನೇತಿ' ಇತ್ಯಾದಿ ಶ್ರುತಿಗಳು ಪ್ರವೃತ್ತವಾಗಿವೆ. ಆದರೂ ಕೆಲವು ಧರ್ಮಗಳನ್ನು ಬ್ರಹ್ಮದಲ್ಲಿ ಹೇಳಿಯೂ ಇವೆ. ಇವುಗಳ ಸಮನ್ವಯಕ್ಕಾಗಿ ಅಧ್ಯಾರೋಪಾಪವಾದ ನ್ಯಾಯವನ್ನು ವೇದಾಂತದಲ್ಲಿ ಬಳಸಿಕೊಂಡಿದೆ.

ಅಧ್ಯಾರೋಪವೆಂದರೆ ಅದರಲ್ಲಿಲ್ಲದ ಧರ್ಮವನ್ನು ಅದರಲ್ಲಿ ಆರೋಪಿಸುವುದು. ಅನಂತರ ಆ ಧರ್ಮವನ್ನು ಅಲ್ಲಗಳೆಯುವುದು ಅಪವಾದ. ಈ ಪ್ರಕ್ರಿಯೆಯಿಂದ ವಾಕ್ಕಿಗೆ ಅಗೋಚರವಾದ ಬ್ರಹ್ಮವಸ್ತುವನ್ನು ಪ್ರಕರಾಂತರವಾಗಿ ವಾಕ್ಕಿನಿಂದ ಪರಿಚಯಮಾಡಿಕೊಡಲು ಸಾಧ್ಯ.

'ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ' ಎಂಬುದು ಸಂಪ್ರದಾಯವಿದರ ಪ್ರಾಚೀನವಚನ. 'ನಿಷ್ಪ್ರಪಂಚವಾದ ಆತ್ಮತತ್ತ್ವವನ್ನು ಅಧ್ಯಾರೋಪಾಪವಾದಗಳಿಂದ ವಿವರಿಸಲಾಗುತ್ತದೆ'. ಉದಾಹರಣೆಗೆ:

'ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ' 'ಚತುಷ್ಪಾತ್' 'ಸರ್ವತಃಪಾಣಿಪಾದಂ' 'ಯಃ ಸರ್ವಜ್ಞಃ ಸಃ ಸರ್ವವಿತ್'—ಇತ್ಯಾದಿ ಶ್ರುತಿಗಳಲ್ಲಿ ಆತ್ಮನು ಸವಿಶೇಷನೆಂದೂ ರೂಪಯುಕ್ತನೆಂದೂ ಹೇಳಲಾಗಿದೆ. ಈ ವಿಶೇಷಗಳೆಲ್ಲವೂ ಔಪಾಧಿಕಗಳು. ಇವೆಲ್ಲವೂ ಉಪಾಸನಾರ್ಥವಾಗಿಯೂ ಆತ್ಮನು ಇದ್ದಾನೆಂದೂ ತಿಳಿಸಿಕೊಡುವುದಕ್ಕಾಗಿಯೂ ಹೊರಟಿರುವ ಶ್ರುತಿಗಳು, ಸರ್ವಕರ್ಮತ್ವಾದಿಧರ್ಮಗಳು ಅಧ್ಯಾರೋಪಿತವಾಗಿವೆ. 'ಅಶಬ್ದಮಸ್ಪರ್ಶಮರೂಪಮವ್ಯಯಂ' 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ನಸತ್ ತನ್ನಾಸದುಚ್ಯತೇ' 'ಸರ್ವೇಂದ್ರಿಯವಿವರ್ಜಿತಂ' ಮುಂತಾದ ವಾಕ್ಯಗಳಿಂದ ಆತ್ಮನು ನಿರ್ವಿಶೇಷನೆಂದು ಹೇಳಿ ಅವನಲ್ಲಿ ಸಕಲವಿಶೇಷವನ್ನು ಅಪವಾದದಿಂದ ನಿಷೇಧಿಸಿದೆ. 'ಆತ್ಮಾವಾ ಅರೇ ಶ್ರೋತವ್ಯಃ' ಎಂದು ಆತ್ಮನಿಗೆ ಜ್ಞೇಯತ್ವವನ್ನು ಹೇಳಿ, 'ಅನ್ಯದೇವ ತದ್ವಿದಿತಾತ್...' ಎಂದು ಆತನು ಅಜ್ಞೇಯನೆಂದು ತಿಳಿಸಿದೆ. ಆತ್ಮನು ಜ್ಞಾನಕ್ಕೆ ವಿಷಯನೇ ಅಲ್ಲ, ಅತನು ಸದಾ ವಿಷಯಿ ಎಂದು ತಿಳಿಸಿಕೊಡುವುದೂ ಅಧ್ಯಾತ್ಮಜ್ಞಾನಕ್ಕಾಗಿ ಯತ್ನಿಸಬೇಕೆಂಬುದೂ ಶ್ರುತಿಯ ತಾತ್ಪರ್ಯ. ಈ ಪ್ರಕ್ರಿಯೆಯಿಂದ ಬ್ರಹ್ಮದಲ್ಲಿ ಆರೋಪಿತ ಧರ್ಮಗಳನ್ನು ಅಲ್ಲಗಳೆದು ಬ್ರಹ್ಮಸ್ವರೂಪದ ಯಥಾರ್ಥತೆಯನ್ನು ಗೊತ್ತುಪಡಿಸಲಾಗುತ್ತದೆ.

**ಮಾಯೆ**

ಅದ್ವೈತದರ್ಶನದಲ್ಲಿ ಮಾಯೆಯ ಸ್ಥಾನ ದೊಡ್ಡದು. ಜಗತ್ತಿನ ಸೃಷ್ಟಿಯಿಂದ ಹಿಡಿದು ಸಕಲವ್ಯವಹಾರಗಳ ಉಪಪತ್ತಿಯನ್ನು ಮಾಯೆಯ ನೆರವಿನಿಂದ ನಿರೂಪಿಸಬೇಕಾಗಿದೆ. 'ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂತು ಮಹೇಶ್ವರಂ' ಇತ್ಯಾದಿ ಶ್ರುತಿಗಳೂ 'ಮಮ ಮಾಯಾ ದುರತ್ಯಯಾ' ಇತ್ಯಾದಿ ಗೀತಾವಚನಗಳೂ ಮಾಯೆಯ ಅಸ್ತಿತ್ವವನ್ನು ಘೋಷಿಸಿವೆ. ಇದಕ್ಕೆ ಅವ್ಯಕ್ತ, ಪ್ರಕೃತಿ, ಅವಿದ್ಯೆ ಎಂದೂ ಹೆಸರಿದೆ. ಇದೊಂದು ಪರಮೇಶ್ವರನ ಶಕ್ತಿ. ತ್ರಿಗುಣಾತ್ಮಕ; ಅನಾದಿ. ಪ್ರತಿಯೊಬ್ಬ ಜೀವಿಯೂ ಇದರ ಬಂಧನದಲ್ಲಿ ಸಿಕ್ಕಿದ್ದಾನೆ. 'ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ತರತ್ಯವಿದ್ಯಾಂ ವಿತತಾಂ...' ಇತ್ಯಾದಿ ಪ್ರಮಾಣಗಳಿಂದ ಜ್ಞಾನಿಗೆ ಇದರ ಬಂಧನದಿಂದ ನಿವೃತ್ತಿಯುಂಟು. ಇದು ಸತ್ ಅಲ್ಲ, ಜ್ಞಾನದಿಂದ ಬಾಧಿತವಾಗುವುದರಿಂದ. ಅಸತ್ ಅಲ್ಲ, ಜ್ಞಾನಕ್ಕೆ ಮೊದಲು ಗೋಚರವಾಗಿರುವುದರಿಂದ. ಹಾಗೆಯೇ ಇದು ಬ್ರಹ್ಮಕ್ಕಿಂತ ಭಿನ್ನವಲ್ಲ, ಭಿನ್ನವಾದರೆ ಬ್ರಹ್ಮವು ಅದ್ವಿತೀಯವಾಗಲಾರದು. ಅಭಿನ್ನವೂ ಅಲ್ಲ, ಜ್ಞಾನದಿಂದ ಬಾಧಿತವಾಗಿರುವುದರಿಂದ, ಬ್ರಹ್ಮವು ಬಾಧಿತವಲ್ಲ. ಆದ್ದರಿಂದ ಇದು ಅನಿರ್ವಚನೀಯವಾದ ಪರಮೇಶ್ವರನ ಒಂದು ಶಕ್ತಿ. ಇದಕ್ಕೆ ಆವರಣ, ವಿಕ್ಷೇಪ ಎಂಬ ಎರಡು ಸ್ವಭಾವಗಳುಂಟು. ರಜ್ಜುಸರ್ಪಸ್ಥಳದಲ್ಲಿ ರಜ್ಜುವಿನ ಸ್ವರೂಪವನ್ನು ಮರೆಮಾಡುವುದು ಆವರಣ. ಸರ್ಪವಾಗಿ ತೋರಿಸುವುದು ವಿಕ್ಷೇಪ. ಈ ಮಾಯೆ ಬ್ರಹ್ಮಸ್ವರೂಪವನ್ನು ಮರೆಮಾಡಿ ಪ್ರಪಂಚರೂಪವನ್ನು ತೋರಿಸುತ್ತದೆ.

**ಪಂಚಕೋಶಪ್ರಕ್ರಿಯೆ**

ತೈತ್ತಿರೀಯೋಪನಿಷತ್ತಿನ ಆನಂದವಲ್ಲಿಯಲ್ಲಿ ಈ ಪ್ರಕ್ರಿಯೆಯಿಂದ ಆತ್ಮಸ್ವರೂಪವನ್ನು ತಿಳಿಸಿಕೊಟ್ಟಿದೆ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ-ಎಂಬ ಪಂಚಕೋಶಗಳನ್ನಿಲ್ಲಿ ಹೇಳಿದೆ. ಸ್ಥೂಲ ಶರೀರವು ಅನ್ನಮಯ ಕೋಶ. ಪಂಚಪ್ರಾಣಗಳೂ ಕರ್ಮೇಂದ್ರಿಯಗಳೂ ಸೇರಿ ಪ್ರಾಣಮಯಕೋಶ, ಮನಸ್ಸು ಜ್ಞಾನೇಂದ್ರಿಯಗಳು ಸೇರಿ ಮನೋಮಯಕೋಶ. ಬುದ್ಧಿ, ಜ್ಞಾನೇಂದ್ರಿಯಗಳು ಸೇರಿ ವಿಜ್ಞಾನಮಯಕೋಶ, ಅವಿದ್ಯಾಸಹಿತನಾದ ಆತ್ಮ ಆನಂದಮಯಕೋಶ. ಸ್ಥೂಲದೃಷ್ಟಿಯಿಂದ ಕಂಡದ್ದನ್ನು ಸೂಕ್ಷ್ಮದೃಷ್ಟಿಯಿಂದ ವಿಚಾರ ಮಾಡುತ್ತ ಆತ್ಮಸ್ವರೂಪವನ್ನು ತಿಳಿಸಿಕೊಡುವುದು ಈ ಪ್ರಕ್ರಿಯೆಯ ಉದ್ದೇಶ. ಮೊದಲು ಅನ್ನಮಯವಾದ ದೇಹವನ್ನು ಆತ್ಮವೆಂದು ಹೇಳಿ, ಅನಂತರ ಪ್ರಾಣ, ಮನಸ್ಸು, ಬುದ್ಧಿಗಳನ್ನು ಕ್ರಮವಾಗಿ ಆತ್ಮವೆಂದುತೋರಿಸುತ್ತ ಆನಂದಮಯನಾದ ಜೀವನನ್ನು ಆತ್ಮನೆಂದು ಹೇಳಿ, ತರುವಾಯ ಅದಕ್ಕೂ ಮುಂದೆ ಹೋಗಿ ಆನಂದವೇ ಆತ್ಮಸ್ವರೂಪವೆಂದು ಈ ಉಪನಿಷತ್ತಿನಲ್ಲಿ ತಿಳಿಸಿಕೊಟ್ಟಿದೆ. ಸ್ಥೂಲಾರುಂಧತೀ ನ್ಯಾಯಕ್ಕೆ ಇದು ಸಮವಾದುದು. ಅರುಂಧತೀನಕ್ಷತ್ರ ಅತ್ಯಂತ ಚಿಕ್ಕದು. ಒಮ್ಮೆಗೇ ಅದನ್ನು ಗುರುತಿಸಲಾಗುವುದಿಲ್ಲ. ಆದ್ದರಿಂದ ದೊಡ್ಡದಾಗಿ ಮಿರುಗುವ ನಕ್ಷತ್ರವನ್ನು ಮೊದಲು ತೋರಿಸಿ, ಆಮೇಲೆ ಅದರ ಪಕ್ಕದಲ್ಲಿರುವುದನ್ನು ಪರಿಚಯಮಾಡಿಸಿ, ಕಡೆಯಲ್ಲಿ ಅತಿ ಸೂಕ್ಷ್ಮವಾಗಿರುವ ಅರುಂಧತೀನಕ್ಷತ್ರವನ್ನು ತೋರಿಸುತ್ತಾರೆ. ಅದೇ ರೀತಿಯಿಂದ ಇಲ್ಲಿ ನಿರ್ವಿಶೇಷವಾದ ಬ್ರಹ್ಮವನ್ನ ಗುರುತಿಸಿ ಕೊಟ್ಟಿದೆ.

**ಅವಸ್ಥಾತ್ರಯ ಪರೀಕ್ಷೆ**

ಪ್ರತಿಯೊಬ್ಬನಿಗೂ ಜಾಗ್ರತ್, ಸ್ವಪ್ನ, ಸುಷುಪ್ತಿ-ಎಂಬ ಮೂರು ಅವಸ್ಥೆಗಳು ಅನುಭವಗೋಚರವಾಗಿವೆ. ಲೋಕದಲ್ಲಿ ಜಾಗ್ರತ್ತಿನ ಅನುಭವದ ಆಧಾರದಿಂದಲೇ ವಸ್ತುನಿರ್ಣಯವನ್ನು ಮಾಡುತ್ತಿದ್ದಾರೆ. ಜಾಗ್ರತ್ತಿನಲ್ಲಿ ಆಗುವ ಅನುಭವಕ್ಕಿಂತ

ಸ್ವಪ್ನದ ಅನುಭವ ಬೇರೆಯಾಗಿರುತ್ತದೆ. ಜಾಗ್ರತ್ತಿನ ದೃಷ್ಟಿಯಿಂದ ಸ್ವಪ್ನ ಸುಳ್ಳು; ಸ್ವಪ್ನದ ದೃಷ್ಟಿಯಿಂದ ಜಾಗ್ರತ್ ಸುಳ್ಳು. ಸುಷುಪ್ತಿಯಲ್ಲಿ (ಗಾಢನಿದ್ರೆಯಲ್ಲಿ) ಜಾಗ್ರತ್, ಸ್ವಪ್ನಗಳೆರಡೂ ಸುಳ್ಳಾಗಿ ಪರಿಣಮಿಸುತ್ತವೆ. ಸುಷುಪ್ತಿಯಲ್ಲಿ ಆನಂದಮಾತ್ರ ವಿರುತ್ತದೆ. ಹೀಗೆ ಮೂರು ಅವಸ್ಥೆಗಳಲ್ಲಿ ಮೂರುಬಗೆಯ ಅನುಭವಗಳಿರುವಾಗ ಜಾಗ್ರತ್ತಿಗೆ ಮಾತ್ರ ಹೆಚ್ಚಿನ ಬೆಲೆಯನ್ನು ಕೊಡುವುದು ಸರಿಯಲ್ಲ. ತತ್ತ್ವನಿರ್ಣಯ ಮಾಡುವಾಗ ಈ ಮೂರು ಅವಸ್ಥೆಗಳನ್ನೂ ಪರೀಕ್ಷಿಸಬೇಕು. ಅವಸ್ಥಾತ್ರಯಕ್ಕೂ ತತ್ತ್ವನಿರ್ಣಯದಲ್ಲಿ ಸಮಾನವಾದ ಬೆಲೆಯನ್ನು ಕೊಟ್ಟಿರುವುದು ಅದ್ವೈತಸಿದ್ಧಾಂತದ ಒಂದು ವಿಶೇಷ. ಜೀವಾತ್ಮರಿಗೆ ಒದಗುವ ಈ ಮೂರು ಅವಸ್ಥೆಗಳು ಆಕಸ್ಮಿಕಗಳಲ್ಲವೆಂದೂ ಆತ್ಮಸ್ವರೂಪವನ್ನು ನಿರ್ಣಯಿಸಿಕೊಳ್ಳಲು ಇವು ದೇವದತ್ತವಾದ ವರಗಳೆಂದೂ ಹೇಳಬೇಕಾಗಿದೆ.

ಮಾಯಾಕಲ್ಪಿತಗಳಾದ ಇಂದ್ರಿಯ ಮನಸ್ಸುಗಳಿಂದ ಜಾಗ್ರದವಸ್ಥೆಯಲ್ಲಿ ಆತ್ಮನು ನಾನಾವಿಷಯಗಳನ್ನು ಭೋಗಿಸುತ್ತಾನೆ. ಈ ಸ್ಥಿತಿಯಲ್ಲಿ ಆತ್ಮನಿಗೆ ವೈಶ್ವಾನರನೆಂದು ಹೆಸರು. ಸ್ವಪ್ನಾವಸ್ಥೆಯಲ್ಲಿ ಅವಿದ್ಯಾಕಾಮಕರ್ಮಗಳಿಂದ ಪ್ರೇರಿತನಾಗಿ ಬಾಹ್ಯಸಂಸ್ಕಾರವಶದಿಂದ ಮನಸ್ಸಿನಿಂದ ಮಾತ್ರ ವಿಷಯವನ್ನನುಭವಿಸುತ್ತಾನೆ. ಇವನಿಗೆ ತೈಜಸ ಎಂದು ಹೆಸರು. ಸುಷುಪ್ತಿಯಲ್ಲಾದರೋ ಮಾನಸಸ್ಪಂದವೂ ಇಲ್ಲದ್ದರಿಂದ ಆತ್ಮನು ಯಾವ ದ್ವೈತಜಾಲವನ್ನೂ ಕಾಣದೆ ಸ್ವಸ್ವರೂಪವಾದ ಆನಂದದಲ್ಲಿ ಮುಳುಗಿರುತ್ತಾನೆ. ಇವನು ಆನಂದಭುಕ್. ಈತನಿಗೆ ಪ್ರಾಜ್ಞನೆಂದು ಹೆಸರು. ಈತನು 'ಸ್ವಮಪೀತೋಭವತಿ = ಸ್ವಸ್ವರೂಪವಾದ ಬ್ರಹ್ಮದಲ್ಲಿ ಲೀನನಾಗುತ್ತಾನೆ' (ಛಾಂ. ೬-೮-೧) ಇದಕ್ಕೆ ಸತ್ಯಂಪತ್ತಿ ಎಂದು ಹೆಸರು.

ಈ ಪ್ರಾಜ್ಞನ ಸ್ವರೂಪವನ್ನರಿತಾಗ ನಾವು ಆತ್ಮನ ನಿಜಸ್ವರೂಪದ ಹತ್ತಿರಕ್ಕೆ ಬಂದಂತಾಗುತ್ತದೆ. ಸಕಲದುಃಖ ನಿವೃತ್ತಿಯೂ ವಿಷಯಭೋಗವಿಲ್ಲದೆಯೇ ದೊರಕುವ ಕೇವಲಾನಂದದ ಸ್ಥಿತಿಯೂ ಇಲ್ಲಿ ಗೊತ್ತಾಗುತ್ತದೆ. ಆದರೆ ಪ್ರಾಜ್ಞನಿಗೆ ಅವಿದ್ಯಾಬೀಜ ಇರುತ್ತದೆ. ಆದ್ದರಿಂದ ಮತ್ತೆ ಜಾಗ್ರತ್ತಿಗೆ ಬಂದು ಸಂಸಾರಿಯಾಗುತ್ತಾನೆ. ಜಾಗ್ರತ್‌ಸ್ವಪ್ನಗಳಲ್ಲಿ ತತ್ತ್ವದ ಅನ್ಯಥಾ ಗ್ರಹಣವಿದೆ. ಸುಷುಪ್ತಿಯಲ್ಲಿ ಅನ್ಯಥಾ ಗ್ರಹಣವಿಲ್ಲದಿದ್ದರೂ ತತ್ತ್ವದ ಅಗ್ರಹಣ-ಅಜ್ಞಾನ ಇದೆ. ಆದ್ದರಿಂದ ಈ ಮೂರು ಅವಸ್ಥೆಗಳನ್ನೂ ದಾಟಿದ ನಾಲ್ಕನೆಯ ಸ್ಥಿತಿ ಆತ್ಮನದು. 'ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ, ಸ ಆತ್ಮಾ, ಸ ವಿಜ್ಞೇಯಃ (ಮಾಂ. ೧-೭) ಎನ್ನುತ್ತದೆ ಉಪನಿಷತ್ತು. (ಇದರ ಹೆಚ್ಚಿನ ವಿವರಣೆಗೆ ಮಾಂಡೂಕ್ಯೋಪನಿಷತ್ತಿನ ಶಾಂಕರ ಭಾಷ್ಯವನ್ನೂ, ಗೌಡಪಾದರ ಮಾಂಡೂಕ್ಯಕಾರಿಕೆಗಳನ್ನೂ ವಿದ್ಯಾರಣ್ಯರ ಪಂಚದಶಿಯನ್ನೂ ನೋಡಬಹುದು).

**ವಾಕ್ಯಾರ್ಥವಿಚಾರ**

೧. ಲಕ್ಷಣ: ಶ್ರುತಿಗಳಲ್ಲಿ ಬ್ರಹ್ಮದ ಲಕ್ಷಣವನ್ನು ನಿರೂಪಿಸಿರುತ್ತದೆ. ಲಕ್ಷಣವೆಂದರೆ ವಸ್ತುವನ್ನು ಗುರುತಿಸುವ ಅಸಾಧಾರಣಧರ್ಮ. ಇದು ಸ್ವರೂಪಲಕ್ಷಣ, ತಟಸ್ಥ ಲಕ್ಷಣ ಎಂದು ಎರಡುವಿಧ. 'ಸತ್ಯ ಜ್ಞಾನಮನಂತಂ ಬ್ರಹ್ಮ, ವಿಜ್ಞಾನಮಾನಂದಂ ಬ್ರಹ್ಮ' ಮೊದಲಾದವು ಸ್ವರೂಪಲಕ್ಷಣಗಳು. ಬ್ರಹ್ಮವು ಸತ್ಯವೂ ಜ್ಞಾನಸ್ವರೂಪವೂ ಅನಂತವೂ ಆನಂದ ಸ್ವರೂಪವೂ ಎಂದು ಬ್ರಹ್ಮದ ಸ್ವರೂಪವನ್ನು ಇಲ್ಲಿ ಹೇಳಿದೆ. ಕೆಲವು ಸ್ಥಳದಲ್ಲಿ ಇನ್ನೊಂದು ಬಗೆಯಲ್ಲಿ ವಸ್ತುವನ್ನು ಗುರುತಿಸಲಾಗುತ್ತದೆ. 'ಕಾಗೆ ಕುಳಿತಿರುವುದು ದೇವದತ್ತನ ಮನೆ' ಎಂದು ಉದಾಹರಣೆ. ಇಲ್ಲಿ ಕಾಗೆ ಹಾರಿಹೋದರೂ ಅದು ದೇವದತ್ತನ ಮನೆಯೇ ಆಗಿರುತ್ತದೆ. ಆದ್ದರಿಂದ ಕಾಗೆಯೆಂಬುದು ದೇವದತ್ತನ ಗೃಹಕ್ಕೆ ಪರಿಚಾಯಕವಾದರೂ ಕಾಗೆ ಅಲ್ಲಿ ಇರಲೇಬೇಕಾಗಿಲ್ಲ. ಇದು ತಟಸ್ಥ ಲಕ್ಷಣ. 'ಯತೋವಾ ಇಮಾನಿ ಭೂತಾನಿ ಜಾಯಂತೇ' ಎಂದು ಪ್ರಾಣಿಗಳ ಕಾರಣತ್ವವನ್ನು ಬ್ರಹ್ಮದಲ್ಲಿ ಹೇಳಿದೆ. ಸಿದ್ಧಾಂತದಲ್ಲಿ ಕಾರಣತ್ವವೆಂಬ ಧರ್ಮವನ್ನು ಬ್ರಹ್ಮದಲ್ಲಿ ಒಪ್ಪುವುದಿಲ್ಲ. ಆದ್ದರಿಂದ ಇದು ಪರಿಚಾಯಕವಾದ ತಟಸ್ಥಲಕ್ಷಣ.

೨. ಲಕ್ಷಣಾ: ಶಬ್ದಕ್ಕೆ ಅರ್ಥವನ್ನು ಬೋಧಿಸುವ ಸಾಮರ್ಥ್ಯವಿದೆಯಷ್ಟೆ. ಇದು ಅಭಿಧಾ, ಲಕ್ಷಣಾ ಎಂದು ಎರಡು ವಿಧ. ಲೋಕಪ್ರಸಿದ್ಧವಾದ ಅರ್ಥವನ್ನು ಬೋಧಿಸುವ ಶಕ್ತಿಗೆ ಅಭಿಧಾ ಎಂದು ಹೆಸರು. 'ಗೋವು ಹುಲ್ಲನ್ನು ಮೇಯುತ್ತದೆ, ಟೋಪಿಯನ್ನು ಧರಿಸಿದವನು ಹೋಗುತ್ತಿದ್ದಾನೆ' ಮುಂತಾದವು ಇದಕ್ಕೆ ಉದಾಹರಣೆಗಳು. ಆದರೆ 'ಟೋಪಿ ಹೋಗುತ್ತಿದೆ' ಎಂದು ಹೇಳಿದಾಗ ಟೋಪಿಯನ್ನು ಧರಿಸಿದವನು ಎಂಬ ಅರ್ಥಮಾಡಬೇಕಾಗುತ್ತದೆ. ಇಲ್ಲಿ ಟೋಪಿಗೆ ಅದನ್ನು ಧರಿಸಿದವನು ಎಂಬ ಅರ್ಥ ಲಕ್ಷಣೆಯಿಂದ ಬರುತ್ತದೆ. ಲಕ್ಷಣೆಯ ಅನೇಕ ಪ್ರಕಾರಗಳಲ್ಲಿ 'ಜಹದಜಹಲ್ಲಕ್ಷಣಾ' ಎಂಬುದೊಂದು. ಜಹತ್ = ಬಿಡುವುದು. ಅಜಹತ್ = ಬಿಡದಿರುವುದು. ಕೆಲವು ಸಂದರ್ಭದಲ್ಲಿ ವಾಚ್ಯಾರ್ಥದ ಒಂದಂಶವನ್ನು ಬಿಟ್ಟು ಇನ್ನೊಂದಂಶವನ್ನು ಬಿಡದೇ ಇರಬೇಕಾಗುತ್ತದೆ. ಇಲ್ಲಿ ಜಹದಜಹಲ್ಲಕ್ಷಣಾ ಪ್ರವೃತ್ತವಾಗುವುದು. ಕಾಶಿಯಲ್ಲಿ ಎಂದೋ ಕಂಡಿರುವ ದೇವದತ್ತನನ್ನು ಬೆಂಗಳೂರಲ್ಲಿ ನೋಡಿದಾಗ 'ಸೋಽಯಂ ದೇವದತ್ತಃ-ಅವನೇ ಈ ದೇವದತ್ತ' ಎಂಬ ಪ್ರತ್ಯಭಿಜ್ಞೆ ಉಂಟಾಗುತ್ತದೆ. ಸಃ ಎಂದರೆ ಇನ್ನೊಂದು ದೇಶ ಕಾಲಾವಸ್ಥೆಗೆ ಒಳಗಾದವನು. ಅಯಂ ಎಂದರೆ ಈಗಿನ ದೇಶಕಾಲಾವಸ್ಥೆಗೆ ಒಳಗಾದವನು. ಇವರಿಬ್ಬರೂ ಒಬ್ಬನೇ ಎನ್ನುವುದು ವಿರುದ್ಧವಾಗುತ್ತದೆ. ಆದ್ದರಿಂದ ಕಾಶಿಯ ಮತ್ತು ಬೆಂಗಳೂರಿನ ದೇಶಕಾಲಾವಸ್ಥೆಗಳನ್ನು ಬಿಟ್ಟು ವ್ಯಕ್ತಿಯನ್ನು ಮಾತ್ರಗ್ರಹಿಸಿ ಒಬ್ಬನೇ ಎಂದು ಸಮನ್ವಯಿಸಿ ಕೊಳ್ಳಬೇಕಾಗುತ್ತದೆ.

ಇದಕ್ಕೆ 'ತತ್ತ್ವಮಸಿ' ಎಂಬ ಮಹಾವಾಕ್ಯ ಉದಾಹರಣೆ. ಆರುಣಿ ಎಂಬವನು ತನ್ನ ಮಗನಾದ ಶ್ವೇತಕೇತುವಿಗೆ ಬ್ರಹ್ಮೋಪದೇಶವನ್ನು ಮಾಡುವಾಗ ಈ ವಾಕ್ಯ ಬಂದಿದೆ. ತತ್ ಎಂದರೆ ಪ್ರಕೃತಾನುರೋಧವಾಗಿ ಸರ್ವಶಕ್ತನೂ ಸರ್ವಜ್ಞನೂ ಆದ ಆತ್ಮನೆಂದರ್ಥ. ತ್ವಂ ಎಂದರೆ ಅಲ್ಪಶಕ್ತನೂ ಅಲ್ಪಜ್ಞನೂ ಜೀವಾತ್ಮನೂ ಆದ ನೀನು ಎಂದರ್ಥ. ವಿರುದ್ಧ ವಿಶೇಷಣಗಳು ಇರುವುದರಿಂದ ಐಕ್ಯವನ್ನು ಹೇಳುವುದು ಹೇಗೆ? ಆದ್ದರಿಂದ ವಿಶೇಷಣಗಳನ್ನು ಬಿಟ್ಟು ವಿಶೇಷ್ಯವಾದ ಶುದ್ಧಚೈತನ್ಯವನ್ನು ಮಾತ್ರ ಗ್ರಹಿಸಿ ಐಕ್ಯವನ್ನು ಹೇಳಬೇಕು. ಇಲ್ಲಿ ಜಹದಜಹಲ್ಲಕ್ಷಣಾ ಪ್ರವೃತ್ತವಾಗುತ್ತದೆ.

**ಬಂಧ-ಮೋಕ್ಷವ್ಯವಹಾರ**

ಜೀವನು ಯಾವಾಗಲೂ ಈಶ್ವರಸ್ವರೂಪನೇ ಆಗಿದ್ದರೆ ಬಂಧಮೋಕ್ಷಗಳೆಂಬುದು ಹೇಗೆ? ಯಾರಿಗೆ ಬಂಧ? ಯಾರಿಗೆ ಮೋಕ್ಷ? ಅವಿದ್ಯೆಯಿಂದ ಜೀವನು ಬದ್ಧನಾಗಿದ್ದೇನೆಂದು ತಿಳಿದುಕೊಂಡಿದ್ದಾನೆ. ದೇಹೇಂದ್ರಿಯಗಳಲ್ಲಿ ಆತ್ಮಬುದ್ಧಿಯುಂಟಾಗಿ ಸುಖದುಃಖಗಳನ್ನು ಅಂತಃಕರಣದಿಂದ ಅನುಭವಿಸುತ್ತಾನೆ. ನಾನು ಸಂಸಾರಿ ಎಂದು ತಿಳಿದಿರುವುದೇ ಬಂಧ. ಈ ಅಜ್ಞಾನದ ನಿವೃತ್ತಿಯೇ ಮೋಕ್ಷ. ಮೋಕ್ಷವೆಂದರೆ ಲೋಕಾಂತರದಲ್ಲಿ ದೊರಕತಕ್ಕ ವಸ್ತುವಲ್ಲ. ಕರ್ಮದಿಂದ ಅದನ್ನು ಉತ್ಪಾದಿಸತಕ್ಕದ್ದಲ್ಲ. ಅದು ಸಂಸ್ಕಾರ್ಯವೂ ಅಲ್ಲ, ವಿಕಾರ್ಯವೂ ಅಲ್ಲ. ಅಜ್ಞಾನಗ್ರಂಥಿಯ ಭೇದನವಾಗಿ ಆತ್ಮನು ಸ್ವಸ್ವರೂಪದಲ್ಲಿ ನಿಲ್ಲುವುದೇ ಮೋಕ್ಷ.

> ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।
> ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ (ಗೌ,ಮಾಂ.ಕಾರಿಕಾ ೧-೧೬)

'ಅನಾದಿಯಾದ ಮಾಯೆಯಿಂದ ನಿದ್ರಿಸುತ್ತಿರುವ ಜೀವನು ಯಾವಾಗ (ಗುರೂಪದೇಶದಿಂದ) ಎಚ್ಚರಗೊಳ್ಳುವನೋ ಆಗ ತಾನು ಜನ್ಮಾದಿವಿಕಾರವಿಲ್ಲದವನೆಂದೂ ನಿದ್ರೆಯೆಂಬ ಮಾಯಾಬಂಧದಿಂದ ರಹಿತನೆಂದೂ ಆದ್ದರಿಂದ ಅನ್ಯಥಾಗ್ರಹಣರೂಪವಾದ ಸ್ವಪ್ನವಿಲ್ಲದವನೆಂದೂ ಅದ್ವಿತೀಯನಾದ ಆತ್ಮನೆಂದೂ ತಿಳಿದುಕೊಳ್ಳುತ್ತಾನೆ.'

'ಬ್ರಹ್ಮ ವೇದ ಬ್ರಹ್ಮೈವ ಭವತಿ' (ಮುಂ. ೩-೨-೯)–'ಬ್ರಹ್ಮವನ್ನರಿತವನು ಬ್ರಹ್ಮವೇ ಆಗುವನು' ಮುಂತಾದ ಶ್ರುತಿವಾಕ್ಯಗಳಿಂದ ಬ್ರಹ್ಮಭಾವದಲ್ಲಿ ಅವಸ್ಥಿತಿಯೇ ಮೋಕ್ಷವೆಂದು ಗೊತ್ತಾಗುತ್ತದೆ.

**ಜೀವನ್ಮುಕ್ತಿ**

ಅದ್ವೈತದರ್ಶನವು ಜೀವನ್ಮುಕ್ತಿಯನ್ನು ಒಪ್ಪುತ್ತದೆ ಎಂಬುದೊಂದು ವಿಶೇಷ. ದೇಹವಿರುವಾಗಲೇ ಜೀವನು ಮುಕ್ತನಾಗಬಹುದು. ಜ್ಞಾನವೇ ತರಣೋಪಾಯವಾದ್ದರಿಂದ ಬ್ರಹ್ಮಸಾಕ್ಷಾತ್ಕಾರವು ಯಾರಿಗಾಗುವುದೋ ಅವನು ಮುಕ್ತನೇ. ದೇಹವು ಪ್ರಾರಬ್ಧಕರ್ಮವಶದಿಂದ ಉಳಿದಿರುತ್ತದೆ. 'ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ' ಎಂದು ಜ್ಞಾನದಿಂದ ಕರ್ಮಕ್ಷಯವನ್ನು ಹೇಳಿದ್ದರೂ ಪ್ರಾರಬ್ಧಕರ್ಮ ಒಂದನ್ನು ಬಿಟ್ಟು ಉಳಿದಕರ್ಮಗಳು ನಶಿಸುತ್ತವೆ, ಎಂದು ವ್ಯವಸ್ಥೆ ಮಾಡಲಾಗಿದೆ. ಪ್ರಾರಬ್ಧಕರ್ಮಭೋಗವೂ ಅನ್ಯರ ದೃಷ್ಟಿಯಿಂದಲೇ ಹೊರತು ಜೀವನ್ಮುಕ್ತನ ದೃಷ್ಟಿಯಿಂದಲ್ಲ. ಜೀವನ್ಮುಕ್ತಿಯನ್ನು ಒಪ್ಪುವುದರಿಂದಲೇ ಗುರುಶಿಷ್ಯ ಪರಂಪರೆಯಿಂದ ಸಂಪ್ರದಾಯವು ಮುಂದುವರಿಯುತ್ತದೆ. ಜೀವನ್ಮುಕ್ತಿಯನ್ನು ಒಪ್ಪದಿದ್ದರೆ ಬದುಕಿದವನು ಜ್ಞಾನಿಯೇ ಅಲ್ಲವೆನ್ನಬೇಕಾದೀತು. ಆತನಿಗೆ ಉಪದೇಶಾಧಿಕಾರವೇ ಇಲ್ಲವೆ ಹೋದೀತು. ಈ ಕೆಳಗಣ ವಾಕ್ಯಗಳು ಜೀವನ್ಮುಕ್ತಿಗೆ ಪ್ರಮಾಣ.

೧. ಅತ್ರ ಬ್ರಹ್ಮ ಸಮಶ್ನುತೇ (ಕಠ. ೬-೧೪) ಇಲ್ಲಿ-ಈ ದೇಹದಲ್ಲಿ ಬ್ರಹ್ಮವನ್ನು ಸೇರುತ್ತಾನೆ. ೨. ವಿದ್ವಾನ್ ಅಮೃತ ಇಹ ಭವತಿ (ಪು. ಸೂ.) ಬ್ರಹ್ಮಜ್ಞಾನಿಯು ಇಲ್ಲಿಯೇ ಅಮೃತ(ಮುಕ್ತ) ನಾಗುತ್ತಾನೆ. ೩. ಯಃ ಸದಾ ಮುಕ್ತ ಏವ ಸಃ (ಗೀತಾ ೫-೨೮) ಇಚ್ಛಾಭಯಕ್ರೋಧರಹಿತನಾದ ಮುನಿಯು ಮುಕ್ತನೆ ಸರಿ. ೪. ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ (ಗೀತಾ. ೫–೧೯) ಯಾರ ಮನಸ್ಸು ಸಮಭಾವವೆನಿಸಿದ ಬ್ರಹ್ಮದಲ್ಲಿ ನೆಲೆಸಿದೆಯೋ ಅವರು ಇಲ್ಲಿಯೇ (ಬದುಕಿರುವಾಗಲೇ) ಜನ್ಮವನ್ನು ಗೆದ್ದಿರುತ್ತಾರೆ.

**ಮೋಕ್ಷಸಾಧನ**

ಮೋಕ್ಷವು ನಿತ್ಯಸಿದ್ಧವಾದುದು. ಅದನ್ನು ಹೊಸದಾಗಿ ಸಾಧಿಸಬೇಕಾದದ್ದಿಲ್ಲ. ಮೋಕ್ಷವು ನಿತ್ಯಸಿದ್ಧವಾಗಿರುವ ಬ್ರಹ್ಮಾತ್ಮಸ್ವರೂಪವೇ. ಬಂಧವು ಅವಿದ್ಯಾಕೃತವಾದ್ದರಿಂದ ಅವಿದ್ಯಾನಿವೃತ್ತಿ ಸಾಧ್ಯ. ಅವಿದ್ಯೆಯೆಂದರೆ ಅಜ್ಞಾನ. ಅದರ ನಿವೃತ್ತಿ ಜ್ಞಾನದಿಂದ ಮಾತ್ರ.

> ತಮೇವ ವಿದಿತ್ವಾ ಅತಿಮೃತ್ಯುಮೇತಿ ।
> ನಾನ್ಯಃ ಪಂಥಾ ವಿದ್ಯತೇಽಯನಾಯ ॥

'ಆತ್ಮವನ್ನು ತಿಳಿದೇ ಮೃತ್ಯುವಾದ ಸಂಸಾರವನ್ನು ದಾಟುತ್ತಾನೆ. ಸಂಸಾರವನ್ನು ದಾಟಲು ಬೇರೆ ಮಾರ್ಗವಿಲ್ಲ' ಆದ್ದರಿಂದ ಮೋಕ್ಷಕ್ಕೆ ಜ್ಞಾನವು ಸಾಧನವೆಂದು ಪರ್ಯಾಯವಾಗಿ ಹೇಳಿದಂತಾಗುತ್ತದೆ. ಸಮ್ಯಗ್‌ಜ್ಞಾನ ಉದಯಿಸಬೇಕಾದರೆ ಹಲವು ಸಾಧನಗಳನ್ನು ಅವಲಂಬಿಸುವುದು ಆವಶ್ಯಕ. 'ಶಮದಮಾದಿ ಸಂಸ್ಕೃತಂ ಮನಃ ಆತ್ಮದರ್ಶನೇ ಕರಣಂ' ಎಂದು ಶ್ರೀ ಶಂಕರಾಚಾರ್ಯರು ಹೇಳಿದ್ದಾರೆ. ಶಮದಮಾದಿಗಳಿಂದ ಸಂಸ್ಕಾರ ಹೊಂದಿದ ಮನಸ್ಸು ಆತ್ಮಜ್ಞಾನಕ್ಕೆ ಸಾಧನ. ಆದ್ದರಿಂದ ಹಿಂದೆ ವಿಚಾರ ಮಾರ್ಗದಲ್ಲಿ ಹೇಳಿದ ಸಾಧನ ಚತುಷ್ಟಯವನ್ನು ಇಲ್ಲಿ ಮೋಕ್ಷ ಸಾಧನವೆಂದು ಪರಿಗಣಿಸಬೇಕು.

**ಕರ್ಮ**

ಯಾವನಿಗೆ ಬ್ರಹ್ಮಜ್ಞಾನವಾಗಿಲ್ಲವೋ ಆತನು ಶಾಸ್ತ್ರೋಕ್ತವಾದ ಕರ್ಮವನ್ನು ಮಾಡಲೇಬೇಕು. ನಿಷಿದ್ಧವಾದದ್ದನ್ನು ವರ್ಜಿಸಲೇಬೇಕು. ಫಲಕಾಮನೆಯಿಂದ ಮಾಡುವ ಕರ್ಮ ಮುಮುಕ್ಷುವಿಗೆ ಹಿತಕರವಲ್ಲ. ಅದು ಮತ್ತೆ ಬಂಧಕವೇ ಆಗುತ್ತದೆ. ಆದ್ದರಿಂದ ಭಗವದ್ಗೀತೆಯಲ್ಲಿ ನಿಷ್ಕಾಮಕರ್ಮವನ್ನು ಬೋಧಿಸಿದೆ. ಶಾಸ್ತ್ರೋಕ್ತವಾದ ಕರ್ಮವನ್ನು ಫಲಾಪೇಕ್ಷೆ ಇಲ್ಲದೆ ಮಾಡಿದಾಗ ಅದು ಚಿತ್ತಶುದ್ಧಿಗೆ ಕಾರಣವಾಗುತ್ತದೆ. ಹೀಗೆ ಪರಂಪರೆಯಿಂದ ಕರ್ಮವು ಜ್ಞಾನಕ್ಕೆ ಉಪಯುಕ್ತವಾಗುತ್ತದೆ.

**ಭಕ್ತಿ**

ಅದ್ವೈತದರ್ಶನದಲ್ಲಿ ಭಕ್ತಿಗೆ ಪ್ರಮುಖಸ್ಥಾನ ಉಂಟು. ಇದನ್ನೇ ಸಗುಣೋಪಾಸನೆ ಎನ್ನುತ್ತಾರೆ. ಉಪನಿಷತ್ತುಗಳಲ್ಲಿಯೂ ಭಗವದ್ಗೀತೆಯಲ್ಲಿಯೂ ಇದನ್ನು ವಿಶೇಷವಾಗಿ ಸ್ತುತಿಸಿದೆ. ಭಕ್ತಿಯಿಂದ ಮನಸ್ಸಿನ ಕಶ್ಮಲಗಳು ತೊಡೆದುಹೋಗುತ್ತವೆ. ಈಶ್ವರನು ಪ್ರಸನ್ನನಾಗಿ ಸತ್ಸಂಗವನ್ನು ಸದ್ಗುರು ಲಾಭವನ್ನೂ ಅನುಗ್ರಹಿಸುತ್ತಾನೆ. ನಿಷ್ಕಾಮಕರ್ಮದಂತೆ ಭಕ್ತಿಯೂ ಚಿತ್ತಶುದ್ಧಿಗೆ ಅತ್ಯಂತ ಸಹಕಾರಿ.

**ಪ್ರಮಾಣ**

ಅದ್ವೈತದರ್ಶನಕ್ಕೆ ಅನುಗುಣವಾದ ಕೆಲವು ಪ್ರಮಾಣವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ—

೧. ಏಕಮೇವಾದ್ವಿತೀಯಂ ಬ್ರಹ್ಮ (ಛಾಂ. ೬-೨-೨) ಬ್ರಹ್ಮವು ಒಂದೇ ಆಗಿ ದ್ವಿತೀಯ ವಸ್ತುರಹಿತವಾಗಿದೆ. ೨. ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ. ೨-೧) ಸತ್ಯವೂ ಜ್ಞಾನಸ್ವರೂಪವೂ ಅನಂತವೂ ಆದದ್ದು ಬ್ರಹ್ಮ. ೩. ಆನಂದೋ ಬ್ರಹ್ಮೇತಿ ವ್ಯಜಾನಾತ್ (ತೈ. ೩-೧) ಆನಂದವೇ ಬ್ರಹ್ಮವೆಂದು (ಭೃಗು) ತಿಳಿದುಕೊಂಡನು. ೪. ಸ ತ್ವಮೇವ ತ್ವಮೇವ ತತ್ (ಕೈವಲ್ಯ೧-೧೬) ಬ್ರಹ್ಮವು ನೀನೇ, ನೀನೇ ಬ್ರಹ್ಮ. ೫. ತತ್ರಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ (ಈಶ. ೭) ಏಕತ್ವವನ್ನು ಕಾಣತಕ್ಕವನಿಗೆ ಶೋಕವೆಲ್ಲಿದೆ? ಮೋಹವೆಲ್ಲಿದೆ? ೬. ಮೃತ್ಯೋಃ ಸ ಮೃತ್ಯುಮಾಪ್ನೋತಿಯ ಇಹ ನಾನೇವ ಪಶ್ಯತಿ (ಕಾ. ೪-೧೦) ಯಾರು ಇಲ್ಲಿ ಅನೇಕವಸ್ತುವಿದೆಯೆಂದು ತಿಳಿಯುವನೋ ಅವನು ಮೃತ್ಯುವಿನಿಂದ ಮೃತ್ಯುವಿನ ಬಾಯಿಗೆ ಇಳಿಯುವನು. ೭. ಸರ್ವಂ ಖಲ್ವಿದಂ ಬ್ರಹ್ಮ (ಛಾ. ೩-೧೪-೧) ಇದೆಲ್ಲವೂ ಬ್ರಹ್ಮವೇ ಸರಿ. ೮. ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ (ಬೃ. ೧-೪-೧೦) ನಾನು ಬ್ರಹ್ಮನಾಗಿದ್ದೇನೆ, ಎಂದು ಯಾವಾತನು ತಿಳಿಯುವನೋ ಅವನು ಈ ಸರ್ವವೂ (ಬ್ರಹ್ಮ) ಆಗಿಬಿಡುತ್ತಾನೆ.

**ಉಪಸಂಹಾರ**

ಹೀಗೆ ಅದ್ವೈತವನ್ನು ಬೋಧಿಸುವ ಮತ್ತು ದ್ವೈತವನ್ನು ನಿಷೇಧಿಸುವ ಶ್ರುತಿವಾಕ್ಯಗಳನ್ನು ಹೇರಳವಾಗಿ ಉದಾಹರಿಸಬಹುದು, ಅದ್ವೈತವನ್ನು ನಿರಾಕರಿಸುವ ಶ್ರುತಿವಾಕ್ಯವು ನಮಗೆ ದೊರೆತಿಲ್ಲವೆಂಬುದೊಂದು ವಿಶೇಷ. ಆದರೆ ದ್ವೈತಮಾರ್ಗದಲ್ಲಿ ನಿಂತು ಅರ್ಥಮಾಡಬೇಕಾದ ದ್ವೈತಸೂಚಕವಾದ 'ದ್ವಾಸುಪರ್ಣಾ ಸಯುಜಾ ಸಖಾಯಾ...' ಮುಂತಾದ ಶ್ರುತಿವಾಕ್ಯಗಳು ಉಂಟು. ಇವುಗಳ ಸಮನ್ವಯ ಅದ್ವೈತದರ್ಶನಕ್ಕೆ ಕಠಿಣವಲ್ಲ, ಜ್ಞಾನೋದಯಕ್ಕೆ ಪೂರ್ವದಲ್ಲಿ ಕರ್ಮ ಮತ್ತು ಸಗುಣೋಪಾಸನೆಗಳನ್ನು ಈ ದರ್ಶನವು ಅಂಗೀಕರಿಸಿ ಔಪಾಧಿಕವಾದ ಜೀವೇಶ್ವರಭೇದವನ್ನು ಒಪ್ಪಿದೆ. ಆದ್ದರಿಂದ ದ್ವೈತಬೋಧಕ ಶ್ರುತಿಗಳನ್ನು ಸಮಂಜಸವಾಗಿ ಸಮನ್ವಯಗೊಳಿಸಲು ಸಾಧ್ಯವಾಗಿದೆ. ಇದು ಯಾವದರ್ಶನಕ್ಕೂ ವಿರುದ್ಧವಾಗದಂತೆ ಎಲ್ಲದರ್ಶನಗಳ ಸಾರವನ್ನು ಅಧಿಕಾರಿ ಭೇದದಿಂದ ತನ್ನಲ್ಲಿ ಅಳವಡಿಸಿಕೊಂಡಿದೆ.

ಆತ್ಮನಲ್ಲಿ ಸ್ತ್ರೀ, ಪುರುಷ—ಎಂಬ ಭೇದವನ್ನಾಗಲಿ ಉತ್ತಮ, ಮಧ್ಯಮ, ಕನಿಷ್ಠ ಎಂಬ ತಾರತಮ್ಯವನ್ನಾಗಲಿ ಈ ದರ್ಶನವು ಒಪ್ಪುವುದಿಲ್ಲ. ಮೋಕ್ಷಸ್ಥಿತಿಯಲ್ಲಿ ಯಾವ ತರತಮಭಾವವೂ ಇಲ್ಲ. ಸನ್ಮಾರ್ಗದಲ್ಲಿ ಪ್ರಯತ್ನಿಸುವ ಸಕಲ ಜೀವರಿಗೂ ಮೋಕ್ಷದ ಬಾಗಿಲು ತೆರೆದಿದೆ.

ಅದ್ವೈತದರ್ಶನವು ಏಕೇಶ್ವರವಾದವನ್ನು ಪುರಸ್ಕರಿಸುತ್ತದೆ. ಈಶ್ವರನು ನಿರಾಕಾರನಾದರೂ ಸಾಕಾರನೂ ಆಗಬಲ್ಲ, ಜಗದಾಕಾರನೂ ಆಗಬಲ್ಲ. ಮಾಯಿಕವಾದ ದೇಹದಿಂದ ಅವನು ಸ್ತ್ರೀದೇವತೆಯೂ ಹೌದು; ಪುರುಷದೇವತೆಯೂ ಹೌದು. ಬ್ರಹ್ಮ, ವಿಷ್ಣು, ಶಿವ—ಮುಂತಾದವರೆಲ್ಲರೂ ಭಕ್ತರು ಕಲ್ಪಿಸಿಕೊಂಡ ಸಗುಣಮೂರ್ತಿಗಳು. ಸಗುಣೋಪಾಸನೆ ನಿರ್ಗುಣೋಪಾಸನೆಗೆ ಮೊದಲನೆಯ ಹಂತವೆಂದು ಈ ದರ್ಶನವು ತಿಳಿಯುತ್ತದೆ.

ಮಹಾತ್ಮರು ಬೋಧಿಸಿದ ಎಲ್ಲ ಮತಗಳಿಗೂ ಇಲ್ಲಿ ಪುರಸ್ಕಾರ ಉಂಟು. ಅದೆಲ್ಲವೂ ಶ್ರೇಯಸ್ಕರವೇ, ಆದರೆ ಅಧಿಕಾರ ಭೇದದಿಂದ ಅದು ವ್ಯವಸ್ಥಿತವಾಗುತ್ತದೆ. ಮತೀಯ ಭಾವನೆಗಳಿಗೂ ಮತೀಯಲಾಂಛನಗಳಿಗೂ ಈ ದರ್ಶನದಲ್ಲಿ ಪುರಸ್ಕಾರವೂ ಇಲ್ಲ, ತಿರಸ್ಕಾರವೂ ಇಲ್ಲ. ಸೋಪಾನಕ್ರಮದಿಂದ ಉತ್ತಮಾಧಿಕಾರಿಗೆ ಗಮ್ಯವಾದುದು ಅದ್ವೈತವೇ.

## ವಿಶಿಷ್ಟಾದ್ವೈತ

—ಡಾ॥ ಎ. ಎಸ್. ಅನಂತರಂಗಾಚಾರ್ಯ

ವೇದಾಂತದರ್ಶನದ ಪ್ರಕಾರಗಳಲ್ಲಿ ವಿಶಿಷ್ಟಾದ್ವೈತವೂ ಒಂದು. ಈ ಸಿದ್ಧಾಂತವು ಶ್ರುತಿಸ್ಮೃತಿ, ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರತಿಪಾದಿತವಾಗಿದ್ದು ಅತಿ ಪ್ರಾಚೀನಕಾಲದಿಂದಲೂ ಆಚರಣೆಯಲ್ಲಿರುತ್ತದೆ. 'ವಿಶಿಷ್ಟಾದ್ವೈತದರ್ಶನ' ಎಂಬ ಹೆಸರು ಇದಕ್ಕೆ ಮೊದಲು ಇದ್ದಂತೆ ಕಂಡು ಬರುವುದಿಲ್ಲ. ಇದನ್ನು ಪ್ರಾಯಃ 'ವೈಷ್ಣವಧರ್ಮ' ಎಂದೋ 'ಭಾಗವತ ಧರ್ಮ' ಎಂದೋ ಕರೆಯುತ್ತಿದ್ದಿರಬಹುದು. ಭಗವಾನ್ ರಾಮಾನುಜರು ಈ ಸಿದ್ಧಾಂತದ ಪ್ರವರ್ತನವನ್ನು ಮಾಡಿದ ಕಾರಣ ಇದನ್ನು 'ರಾಮಾನುಜದರ್ಶನ' ಎಂಬುದಾಗಿ ಕರೆದರೆಂದು ಕಾಣುತ್ತದೆ. ಸರ್ವದರ್ಶನ ಸಂಗ್ರಹಕಾರರು ರಾಮಾನುಜದರ್ಶನ ಎಂದೇ ಈ ಸಿದ್ಧಾಂತವನ್ನು ನಿರೂಪಿಸಿದ್ದಾರೆ. ಈ ಸಿದ್ಧಾಂತದ ಅಸಾಧಾರಣವಾದ ತತ್ತ್ವಸ್ವರೂಪಕ್ಕನುಗುಣವಾಗಿ 'ವಿಶಿಷ್ಟಾದ್ವೈತ ದರ್ಶನ' ಎಂಬ ಹೆಸರು ಈಗ ರೂಢಿಗೆ ಬಂದಿದೆ.

ಈ ದರ್ಶನ ಅದ್ವೈತ ಮತ್ತು ದ್ವೈತದರ್ಶನಗಳಿಗೆ ಸಮನ್ವಯವಾಗುವ ಮಧ್ಯಸ್ಥದೃಷ್ಟಿಯನ್ನು ಹೊಂದಿದೆ. ದ್ವೈತ ಭಾವವನ್ನು ವಾಸ್ತವಿಕವಾಗಿ ಪುರಸ್ಕರಿಸಿ ಚೇತನರಿಗೂ ಈಶ್ವರನಿಗೂ ಪ್ರಕೃತಿಗೂ ಸ್ವಾಭಾವಿಕವಾದ ಭೇದವನ್ನೇ ಈ ದರ್ಶನ ಸಾಧಿಸಿದರೂ, ಚೇತನಾಚೇತನಪದಾರ್ಥಗಳಿಗೆಲ್ಲ ಆತ್ಮವಾದ ಬ್ರಹ್ಮವಸ್ತು ಚೇತನಾಚೇತನಗಳಿಂದ ವಿಶಿಷ್ಟವಾಗಿ ಅದ್ವಿತೀಯ ವಾದುದೆಂದು ಶ್ರುತಿ ಪ್ರಮಾಣಕ್ಕನುಸಾರವಾಗಿ ಸಾಧಿಸಿ, ವಿಶಿಷ್ಟವಸ್ತುವಿನ ಅದ್ವೈತವನ್ನು ಒಪ್ಪುತ್ತದೆ. ಪ್ರಕಾರ ಪ್ರಕಾರಿಭಾವ ವನ್ನೂ ಶರೀರ–ಶರೀರಿ ಸಂಬಂಧವನ್ನೂ ಪ್ರತಿಪಾದಿಸಿ ನಾನಾತ್ವ ಮತ್ತು ಏಕತ್ವಗಳ ಸಮನ್ವಯವನ್ನು ಈ ಸಿದ್ಧಾಂತ ಸಾಧಿಸಿ 'ಸರ್ವಶ್ರುತಿ ಮುಖ್ಯಾರ್ಥಾವಬೋಧಕತ್ವ' ವನ್ನು ಪ್ರತಿಪಾದಿಸಿದೆ. 'ಅಶೇಷ ಚಿದಚಿತ್ಪ್ರಕಾರಂ ಬ್ರಹ್ಮ ಏಕಮೇವ ತತ್ತ್ವಂ' ಎಂದು ವೇದಾಂತ ದೇಶಿಕರು ಈ ಅಂಶವನ್ನು ಹೇಳುತ್ತಾರೆ. ಶಂಕರಾಚಾರ್ಯರ ಸ್ವರೂಪಾದ್ವೈತಕ್ಕಿಂತ ಇದು ಬೇರೆಯಾದುದು. ಶಂಕರರು 'ನಿರ್ವಿಶೇಷ ಬ್ರಹ್ಮೈಕತ್ವವನ್ನು' ಪ್ರತಿಪಾದಿಸಿದರೆ ಈ ಸಿದ್ಧಾಂತ ಚೇತನಾಚೇತನಗಳೆಂಬ ವಿಶೇಷಣಗಳಿಂದ ಕೂಡಿದ ವಿಶೇಷ್ಯ ವಸ್ತು ಒಂದೇ ಎಂದು ಉದ್ಘೋಷಿಸುತ್ತದೆ. ವಿಶೇಷ್ಯವಸ್ತು ಒಂದೇ ಆದರೂ ವಿಶೇಷಣಬಹುತ್ವವನ್ನು ಇಲ್ಲಿ ಅಂಗೀಕರಿಸಲಾಗಿದೆ. ಕಾರಣಾವಸ್ಥೆಯಲ್ಲಾಗಲೀ ಕಾರ್ಯಾವಸ್ಥೆಯಲ್ಲಾಗಲೀ ಬ್ರಹ್ಮವಸ್ತುವಿಗೆ ಚೇತನಾಚೇತನಗಳು ವಿಶೇಷಣಗಳಾಗಿರುತ್ತವೆ. ಚೇತನಾ ಚೇತನ ಪದಾರ್ಥಗಳು ಬ್ರಹ್ಮವಸ್ತುವನ್ನು ಯಾವ ಅವಸ್ಥೆಯಲ್ಲಿಯೂ ಬಿಟ್ಟಿರಲಾರವು. ಅವು ಅತ್ಯಂತ ಪರತಂತ್ರಗಳಾಗಿ ಸ್ವತಂತ್ರವಾದ ಬ್ರಹ್ಮವಸ್ತುವಿಗೆ ವಿಶೇಷಣಗಳಾಗಿವೆ. ಇವುಗಳನ್ನು ವಿಶೇಷಣಗಳನ್ನಾಗಿ ಹೊಂದಿರುವುದೇ ಬ್ರಹ್ಮವಸ್ತುವಿನ ವೈಶಿಷ್ಟ್ಯವಾಗಿದೆ. ಭಗವಾನ್ ರಾಮಾನುಜರು ಈ ದರ್ಶನದ ವೈಶಿಷ್ಟ್ಯವನ್ನು ತಮ್ಮ ವೇದಾರ್ಥಸಂಗ್ರಹದಲ್ಲಿ—'ಸರ್ವಶರೀರ ತಯಾ ಸರ್ವಪ್ರಕಾರಂ ಬ್ರಹ್ಮೈವ ಅವಸ್ಥಿತಮಿತಿ **ಅಭೇದಃ ಸಮರ್ಥಿತಃ**: ಏಕಮೇವ ಬ್ರಹ್ಮ ನಾನಾಭೂತಚಿದಚಿದ್ವಸ್ತು ಪ್ರಕಾರಂ ನಾನಾತ್ವೇನ ಅವಸ್ಥಿತಮಿತಿ **ಭೇದಾ ಭೇದೌ**; ಅಚಿದ್ವಸ್ತುನಶ್ಚ ಚಿದ್ವಸ್ತುನಶ್ಚ ಈಶ್ವರಸ್ಯಚ ಸ್ವರೂಪಸ್ವಭಾವವೈಲಕ್ಷಣ್ಯಾತ್ ಅಸಂಕರಾಚ್ಚ **ಭೇದಃ ಸಮರ್ಥಿತಃ**' ಎಂದು ಹೇಳಿದ್ದಾರೆ. ಚೇತನಾ ಚೇತನ ವಿಶಿಷ್ಟವಾದ **ಬ್ರಹ್ಮವಸ್ತು ಅವಿಕಾರಿ**ಯಾದುದು. ಆಗುವ ವಿಕಾರಗಳೆಲ್ಲಾ ಅದರ ಶರೀರ ಸ್ಥಾನೀಯಗಳಾದ ಚೇತನಾಚೇತನಗಳಿಗೆ. ಅಚೇತನಕ್ಕೆ ಸ್ವರೂಪ ವಿಕಾರವೂ ಚೇತನ ಗಳಿಗೆ ಜ್ಞಾನಸಂಕೋಚ ರೂಪವಾದ ವಿಕಾರವೂ ಸಂಭವಿಸುವುವು. ಬ್ರಹ್ಮವಸ್ತು ಮಾತ್ರ ಯಾವ ದೋಷಕ್ಕೂ ಒಳಗಾಗದೆ 'ಅವಿ ಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ' ಎಂದು ಹೇಳಿದಂತೆ ನಿತ್ಯಶುದ್ಧವಾಗಿಯೇ ಇರುತ್ತದೆ. ಹೀಗೆ ಈ ಸಿದ್ಧಾಂತ **'ಚಿದಚಿದ್ವಿಶಿಷ್ಟವಾದ ಬ್ರಹ್ಮ ಒಂದೇ ತತ್ತ್ವ'** ಎಂದು ಸ್ಥಾಪಿಸುತ್ತದೆ.

ಉಪನಿಷತ್ಪ್ರತಿಪಾದ್ಯವಾದ ಪರಬ್ರಹ್ಮವಸ್ತುವೇ ಶ್ರೀಮನ್ನಾರಾಯಣನೆಂಬುವುದು ಈ ದರ್ಶನದ ಸಿದ್ಧಾಂತ. ಋಗ್ವೇದದ ಪುರುಷಸೂಕ್ತ, ವಿಷ್ಣುಸೂಕ್ತಗಳಲ್ಲಿಯೂ ತೈತ್ತಿರೀಯ, ಕಠ, ಮೈತ್ರೀ, ಮಹಾನಾರಾಯಣ ಮೊದಲಾದ ಉಪನಿಷತ್ತು ಗಳಲ್ಲಿಯೂ ಶ್ರೀಮದ್ಭಗವದ್ಗೀತೆಯಲ್ಲಿಯೂ ಪ್ರತಿಪಾದಿಸಿರುವ ವಿಷ್ಣುಪಾರಮ್ಯವನ್ನು ಈ ಸಿದ್ಧಾಂತ ಎತ್ತಿಹಿಡಿದಿದೆ. ಪಾಂಚ ರಾತ್ರ ಆಗಮಗಳಲ್ಲಿ ಪ್ರತಿಪಾದಿಸಿರುವ ಭಾಗವತ ಸಂಪ್ರದಾಯಕ್ಕನುಗುಣವಾಗಿದೆ. ಈ ಸಿದ್ಧಾಂತದ ಈಶ್ವರಭಾವನೆ. ಈ ಆಗಮ ಗಳಲ್ಲಿ ಶ್ರೀಮನ್ನಾರಾಯಣನ ಪರಮ ಕಾರಣತ್ವವನ್ನು ಪ್ರತಿಪಾದಿಸಿದೆ. ಜಯಾಖ್ಯ ಸಂಹಿತೆಯಲ್ಲಿ ಹೇಳುವ ಬ್ರಹ್ಮಸರ್ಗ, ಪ್ರಧಾನಸರ್ಗ, ಮತ್ತು ಶುದ್ಧಸರ್ಗಗಳು ಸೃಷ್ಟಿಯ ಮೂರು ಬಗೆಗಳಾಗಿವೆ. ಚತುರ್ಮುಖ ಬ್ರಹ್ಮನಸೃಷ್ಟಿ, ಮಧುಕೈಟಭರಿಂದ

ಸೇವಾಪಹಾರ ಹಾಗೂ ಅವರ ನಿರಸನ ಮೊದಲಾದವು ಬ್ರಹ್ಮಸೃಷ್ಟಿಗೂ, ಪ್ರಕೃತಿಯ ಇಪ್ಪತ್ತುನಾಲ್ಕು ತತ್ತ್ವಗಳ ಸೃಷ್ಟಿ ಪ್ರಧಾನ ಸೃಷ್ಟಿಗೂ ವಾಸುದೇವನು ತನ್ನ ಸಂಕಲ್ಪಕ್ಕನುಸಾರವಾಗಿ ಅಚ್ಯುತ, ಸತ್ಯ, ಪುರುಷ ಎಂಬ ರೂಪಗಳನ್ನು ಹೊಂದುವುದು ಶುದ್ಧಸರ್ಗಕ್ಕೂ ಅನ್ವಯಿಸುವುವು. ಭಗವಂತನು ಜ್ಞಾನಾನಂದಸ್ವರೂಪನಾಗಿ ಕಾಲದೇಶಗಳ ಪರಿಚ್ಛೇದಗಳನ್ನು ಮೀರಿದ್ದಾನೆಂದೂ ಚೇತನಾಚೇತನ ತತ್ತ್ವಗಳನ್ನು ವ್ಯಾಪಿಸಿದ್ದಾನೆಂದೂ,

'ಚೇತನಾಚೇತನಾಸ್ಸರ್ವೇ ಭೂತಾಃ ಸ್ಥಾವರ ಜಂಗಮಾಃ ।
ಪೂರಿತಾಃ ಪರಮೇಶೇನ ರಸೇನೌಷಧಯೋ ಯಥಾ ॥' (ಜಯಾಖ್ಯ IV-೯೩)

ಹೀಗೆ ಜಯಾಖ್ಯ ಸಂಹಿತೆ ಹೇಳುತ್ತದೆ. ಮುಕ್ತ್ಯವಸ್ಥೆಯಲ್ಲಿ ನಾಮರೂಪ ಭೇದಗಳನ್ನು ಕಳೆದುಕೊಂಡು ಚೇತನರು ಭಗವಂತನಿಗೆ ಸದೃಶ್ಯರಾಗುವರೆಂದೂ ಅವನೊಂದಿಗೆ ಸೇರಿಹೋಗುವುದಿಲ್ಲನೆಂದೂ ಪಾಂಚರಾತ್ರಾಗಮ ತಿಳಿಸುತ್ತದೆ. ಬೇರೆ ಬೇರೆ ನದಿಗಳ ನೀರು ಸಮುದ್ರವನ್ನು ಸೇರಿದಾಗ ಸಮುದ್ರದೊಡನೆ ಸೇರಿ ಸಮುದ್ರೋದಕಕ್ಕೆ ಸಮಾನವಾಗುತ್ತದೆ. ಆಗ ಇದು ಇಂಥ ನದಿಯ ನೀರೆಂದು ಹೇಳುವುದಕ್ಕಾಗುವುದಿಲ್ಲ. ಹಾಗೆಯೇ ಮುಕ್ತರು ಭಗವಂತನನ್ನು ಸೇರಿದಾಗ ಅವನಿಗೆ ಸದೃಶರಾಗುತ್ತಾರೆ. ಆದರೆ ಅವನಿಂದ ಭಿನ್ನರಾಗಿರುತ್ತಾರೆ ಎಂದು

'ಸರಿತ್ಸಂಘಾತ್ ಯಥಾತೋಯಂ ಸಂಪ್ರವಿಷ್ಟಂ ಮಹೋದಧೌ ।
ಅಲಕ್ಷ್ಯಶ್ಚೋದಕೇಭೇದಃ ಪರಸ್ಮಿನ್ ಯೋಗಿನಾಂ ತಥಾ ॥' (ಜಯಾಖ್ಯ IV-೧೨೩)

ಹೇಳಿದೆ. ಭಗವಂತನು ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು ಎಂಬ ಷಡ್ಗುಣಗಳನ್ನು ಹೊಂದಿರುವನೆಂದೂ, ಅವನು ಲಕ್ಷ್ಮೀವಿಶಿಷ್ಟನಾಗಿದ್ದಾನೆಂದೂ, ಚತುರ್ವ್ಯೂಹಗಳಲ್ಲಿರುವನೆಂದೂ ಸಂಸಾರದಿಂದ ಬಿಡುಗಡೆ ಹೊಂದಿ ಆ ಭಗವಂತನನ್ನು ಸೇರಲು ಅಂಗಪಂಚಕಗಳಿಂದ ಕೂಡಿದ ಶರಣಾಗತಿ ಉಪಾಯವೆಂದೂ ಪಾಂಚರಾತ್ರಾಗಮಗಳು ಬೋಧಿಸುತ್ತವೆ. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಈ ಅಂಶಗಳೆಲ್ಲಾ ಅಂಗೀಕೃತವಾಗಿವೆ. ಪಾಂಚರಾತ್ರಾಗಮಗಳ ಉಪದೇಶದ ಮತ್ತು ಉಪನಿಷತ್ತುಗಳ ಉಪದೇಶದ ಸಮನ್ವಯವನ್ನು ವಿಶಿಷ್ಟಾದ್ವೈತದರ್ಶನದಲ್ಲಿ ಕಾಣಬಹುದು.

ಪಾಂಚರಾತ್ರಾಗಮಗಳಂತೆ ಮಹಾಭಾರತದ ಭಗವದ್ಗೀತೆ, ನಾರಾಯಣೀಯಗಳೂ, ವಿಷ್ಣುಪುರಾಣ ಶ್ರೀಮದ್ರಾಮಾಯಣಗಳೂ ಹಾಗೆಯೇ ತಮಿಳು ಪ್ರಬಂಧಗಳೆಂದು ಹೆಸರಾಗಿರುವ ತಮಿಳುಭಾಷೆಯಲ್ಲಿ ಆಳ್ವಾರರುಗಳಿಂದ ಹಾಡಲ್ಪಟ್ಟಿರುವ ಪ್ರಬಂಧಗಳೂ ಈ ಸಿದ್ಧಾಂತಕ್ಕೆ ಆಧಾರಗಳಾಗಿವೆ. ಹೀಗೆ ಶ್ರುತೀತಿಹಾಸಪುರಾಣಗಳೂ ಪಾಂಚರಾತ್ರಾಗಮಗಳೂ ದ್ರಾವಿಡ ಪ್ರಬಂಧಗಳೂ ಈ ದರ್ಶನವನ್ನು ರೂಪಿಸಿವೆ.

**ತತ್ತ್ವವಿಭಾಗ**

ಈ ದರ್ಶನಕ್ಕನುಸಾರವಾಗಿ ತಿಳಿಯಬೇಕಾದ ವಿಚಾರಗಳನ್ನೆಲ್ಲಾ ಐದು ಬಗೆಯಾಗಿ ನಿರೂಪಿಸಿದ್ದಾರೆ.

ಪ್ರಾಪ್ಯಸ್ಯ ಬ್ರಹ್ಮಣೋರೂಪಂ ಪ್ರಾಪ್ತುಶ್ಚ ಪ್ರತ್ಯಗಾತ್ಮನಃ ।
ಪ್ರಾಪ್ತ್ಯುಪಾಯಂ ಫಲಂ ಚೈವ ತಥಾ ಪ್ರಾಪ್ತಿವಿರೋಧಿಚ ॥
ವದಂತಿಸಕಲಾವೇದಾಃ ಸೇತಿಹಾಸಪುರಾಣಕಾಃ ।

ಎಂದು ಈ ಐದು ಅಂಶಗಳನ್ನು ಪರಬ್ರಹ್ಮಸ್ವರೂಪ, ಜೀವಸ್ವರೂಪ, ಉಪಾಯಸ್ವರೂಪ, ಫಲಸ್ವರೂಪ ಮತ್ತು ಆ ಪ್ರಾಪ್ತಿಗೆ ಇರುವ ವಿರೋಧಸ್ವರೂಪ ಎಂದು ವಿವರಿಸಿದ್ದಾರೆ. ಇದಕ್ಕೆ ಅರ್ಥಪಂಚಕಗಳೆಂದು ಹೆಸರು. ಉಪಾಸನೆಗನುಕೂಲವಾಗುವಂತೆ ತಿಳಿಯಬೇಕಾದ ವಿಚಾರಗಳನ್ನೆಲ್ಲಾ ಇವುಗಳು ಒಳಗೊಂಡಿರುತ್ತವೆ. ಶ್ರುತಿಯಲ್ಲಿ ಹೇಳಿರುವಂತೆ ಭೋಕ್ತಾ, ಭೋಗ್ಯ ಮತ್ತು ಪ್ರೇರಿತಾ ಎಂದೂ ವಿಭಾಗ ಮಾಡಬಹುದು. ಇದನ್ನೇ ಚಿತ್, ಅಚಿತ್ ಮತ್ತು ಈಶ್ವರ ಎಂಬ ತತ್ತ್ವತ್ರಯವೆಂದೂ ವಿಭಾಗ ಮಾಡುವುದುಂಟು. ಚಿತ್ ಎಂಬುದು ಅನಂತ ಜೀವಾತ್ಮರನ್ನೂ ಅಚಿತ್ ಎಂಬುದು ಅಚೇತನವಾದ ಪ್ರಕೃತಿಯನ್ನೂ ಇವೆರಡು ತತ್ತ್ವಗಳಿಗೂ ಧಾರಕನೂ, ನಿಯಾಮಕನೂ ಶೇಷಿಯೂ ಆದ ಪರಮಾತ್ಮನನ್ನು ಈಶ್ವರ ಎಂಬುದೂ ನಿರೂಪಿಸುತ್ತದೆ. ಹೇಗೆ ವಿಭಾಗ ಮಾಡಿದರೂ ಸಿದ್ಧಾಂತದ ಸ್ವರೂಪದಲ್ಲಿ ಯಾವ ಬದಲಾವಣೆಯೂ ಇರುವುದಿಲ್ಲ. ರಾಮಾನುಜರು ಈ ವಿಭಾಗವನ್ನೆಲ್ಲಾ 'ಸ್ವಾಧೀನ ತ್ರಿವಿಧ ಚೇತನಾಚೇತನ ಸ್ವರೂಪ ಸ್ಥಿತಿ ಪ್ರವೃತ್ತಿಭೇದಂ' ಎಂಬಲ್ಲಿ ಸೂಚಿಸಿದ್ದಾರೆ. ವೇದಾಂತ ದೇಶಿಕರು ಪ್ರಮೇಯವನ್ನು ವಿಭಾಗ ಮಾಡುವ ಕ್ರಮ ಮುಂದಿನ ಪುಟದಲ್ಲಿದೆ.




**ಅವ್ಯಕ್ತ ಪ್ರಕೃತಿತತ್ತ್ವ:** ಇದರಿಂದಲೇ ಪ್ರಪಂಚವು ರೂಪಿಸಲ್ಪಟ್ಟಿದೆ. ಕಾಲತತ್ತ್ವವೂ ಜಡವಾದುದೇ. ತನಗೆ ತಾನೇ ಪ್ರಕಾಶಿಸಬಲ್ಲ ಸ್ವಭಾವವನ್ನುಳ್ಳವು ಪ್ರತ್ಯಕ್‌ತತ್ತ್ವಗಳು. ಜೀವ ಮತ್ತು ಈಶ್ವರ ಇವರು ಸ್ವಯಂ ಪ್ರಕಾಶವಾಗಿ ತಮಗೆತಾವೇ ಪ್ರಕಾಶಿಸುವರು. ಮತ್ತೊಬ್ಬರಿಗೇ ಪ್ರಕಾಶಿಸುವ ನಿತ್ಯವಿಭೂತಿ (ಅಥವಾ ಶುದ್ಧ ಸತ್ತ್ವ) ಮತ್ತು ಮತಿ (ಅಥವಾ ಧರ್ಮಭೂತ ಜ್ಞಾನ) ಇವೆರಡೂ ಈ ಸಿದ್ಧಾಂತಕ್ಕೆ ಅಸಾಧಾರಣವಾದ ತತ್ತ್ವಗಳು. ಇವೆಲ್ಲಾ ಸ್ವತಂತ್ರವಾಗಿ ಇರಬಲ್ಲವು ಮತ್ತು ಬೇರೆ ಬೇರೆ ಅವಸ್ಥೆಗಳನ್ನು ಹೊಂದಬಲ್ಲವು. ಆದರೆ ಇವುಗಳಂತೆ ಅಲ್ಲದೆ ಈ ದ್ರವ್ಯಗಳನ್ನೇ ಆಶ್ರಯಿಸಿರುವುವು ಅದ್ರವ್ಯಗಳು. ಅವುಗಳು ಹತ್ತು ಬಗೆಯಾಗಿವೆ. ಹೀಗೆ ಈ ಸಿದ್ಧಾಂತ ಧರ್ಮ ಧರ್ಮಿಗಳೆರಡರ ಸತ್ಯತ್ವವನ್ನು ನಿತ್ಯತ್ವವನ್ನೂ ಅಂಗೀಕರಿಸಿದೆ.

**ಪ್ರಕೃತಿ:** ಜಡದ್ರವ್ಯಗಳಲ್ಲಿ ಇದು ಒಂದು. ಇದಕ್ಕೆ ಮೂಲಪ್ರಕೃತಿ, ಅವಿದ್ಯಾ, ಮಾಯಾ, ಅವ್ಯಕ್ತ, ಅಕ್ಷರ ಎಂದು ಹೆಸರುಗಳಿವೆ. ಇದು ಸತತವಾಗಿ ವಿಕಾರಕ್ಕೊಳಗಾಗುತ್ತಿರುತ್ತದೆ. ಇದಕ್ಕೆ ಸ್ವತಃ ಕ್ರಿಯಾಶಕ್ತಿ ಇಲ್ಲ, ಇದೂ ಈಶ್ವರನಿಗೆ ಅಧೀನವಾಗಿ ಅವನ ಸಂಕಲ್ಪಕ್ಕನುಸಾರವಾಗಿ ಪರಿಣಾಮಹೊಂದುತ್ತದೆ. ಇದು ಪರಿಣಾಮ ಹೊಂದಿ ಮಹತ್ತು, ಅಹಂಕಾರ ಪಂಚತನ್ಮಾತ್ರೆಗಳು, ಪಂಚಭೂತಗಳು ಮತ್ತು ಏಕದಶೇಂದ್ರಿಯಗಳಾಗಿ ರೂಪುಗೊಂಡು ಜೀವಾತ್ಮರುಗಳಿಗೆ ಶರೀರೇಂದ್ರಿಯಗಳಾಗಿ ಒದಗುತ್ತವೆ. ಜೀವರುಗಳಿಗೆ ಅಶ್ರಯವಾದ ಜಗತ್ತಿನ ರೂಪವನ್ನು ಹೊಂದುತ್ತದೆ.

> 'ಅಚೇತನಾ ಪರಾರ್ಥಾಸಾ ನಿತ್ಯಾ ಸತತವಿಕ್ರಿಯಾ ।
> ತ್ರಿಗುಣಾ ಕರ್ಮಿಣಾಂ ಕ್ಷೇತ್ರಂ ಪ್ರಕೃತೇರೂಪ ಮುಚ್ಯತೇ ॥'

ಎಂದು ಇದನ್ನು ಹೇಳಿದೆ. ಈ ಸಿದ್ಧಾಂತಕ್ಕನುಸಾರವಾಗಿ ಪ್ರಕೃತಿಯೂ ಬ್ರಹ್ಮಾತ್ಮಕವಾಗಿದೆ.

**ಕಾಲ:** ಕಾಲವು ನಿತ್ಯವಾದುದೇ. ಅದಕ್ಕೆ ಮೊದಲು ಇಲ್ಲ: ಕೊನೆಯೂ ಇಲ್ಲ. ಮಾಯಾತತ್ತ್ವದಿಂದ ಕಾಲ ಹುಟ್ಟುವುದೆಂಬ ವಾದವನ್ನು ಈ ಸಿದ್ಧಾಂತ ಅಂಗೀಕರಿಸುವುದಿಲ್ಲ. ಸೃಷ್ಟಿಗೆ ಮೊದಲು, ಅನಂತರ ಎಂಬ ಉಲ್ಲೇಖಗಳೇ ಕಾಲದ ಸಾರ್ವಕಾಲಿಕತ್ವವನ್ನು ಸಮರ್ಥಿಸುತ್ತವೆ. ಕಾಲ ನಿತ್ಯವೂ ಆದುದು ಸತ್ಯವೂ ಆದುದು; ಇಲ್ಲಿನ ಪ್ರಪಂಚದಲ್ಲಿ ಕಾಲ ಹೇಗೆ ನಿತ್ಯವಾಗಿ ಸಂಬಂಧಿಸಿದೆಯೋ ಹಾಗೆಯೇ ಕಾಲ ನಿತ್ಯವಿಭೂತಿಯೊಡನೆ ಸಂಬಂಧಿಸಿದೆ. ಆದರೆ ಅಲ್ಲಿ ಅದು ಇತರ ಪದಾರ್ಥಗಳಿಗೆ ಅಧೀನವಾಗಿರುತ್ತದೆ. 'ಕಾಲಂ ಸಪಚತೇ ತತ್ರನ ಕಾಲಸ್ತತ್ರವೈ ಪ್ರಭುಃ', 'ಸದಾ ಪಶ್ಯಂತಿ ಸೂರಯಃ' ಎಂಬುವು ಇದಕ್ಕೆ ಆಧಾರಗಳಾಗಿವೆ. ಕಾಲವು ಪದಾರ್ಥಗಳಿಗೆ ವಿಶೇಷಣವಾಗಿಯೇ ಉಪಲಬ್ಧವಾಗುತ್ತದೆಯೇ ವಿನಾ ಸ್ವತಂತ್ರವಾಗಿರುವುದಿಲ್ಲ. 'ಕಾಲಸ್ಯ ಪದಾರ್ಥವಿಶೇಷಣತಯೈವ ಪ್ರತೀತೇಃ ತಸ್ಯ ಪೃಥಗಸ್ತಿತ್ವನಾಸ್ತಿತ್ವಾದಯೋ ನವಕ್ತವ್ಯಾಃ' ಎಂದು ಈ ಅಂಶವನ್ನು ಭಾಷ್ಯಕಾರರು ಹೇಳಿದ್ದಾರೆ. ಕಾಲವು ಪ್ರಕೃತಿಪುರುಷರಿಗಿಂತಲೂ ಭಗವಂತನಿಗಿಂತಲೂ ಬೇರೆಯಾದ ತತ್ತ್ವ. ಈ ಕಾಲವೂ ಸಹ ಭಗವದ್ವಿಭೂತಿಯೇ ಆದುದು, ಇದೂ ಜಡದ್ರವ್ಯವಾಗಿದೆ.

**ನಿತ್ಯವಿಭೂತಿ:** ಪ್ರಕೃತಿಯು ಸತ್ತ್ವರಜಸ್ತಮೋಗುಣಗಳೊಡನೆ ಕೂಡಿದುದಾದರೆ ರಜಸ್ಸುತಮಸ್ಸುಗಳ ಸಂಪರ್ಕವಿಲ್ಲದೆ ಇರುವ ಶುದ್ಧಸತ್ತ್ವವು ನಿತ್ಯವಿಭೂತಿ ಎನಿಸುವುದು. ಇದು ದೇಶವಿಶೇಷವಾಗಿ ವೈಕುಂಠ ಅಥವಾ ಪರಮಪದ ಎಂದು ಪ್ರಸಿದ್ಧ

ವಾಗಿದೆ. ಇದು ನಿತ್ಯವಾದುದು; ಅಪರಿಚ್ಛಿನ್ನವಾದುದು. ಅಪ್ರಾಕೃತವಾದ ಈ ದಿವ್ಯಲೋಕ ಭಗವಂತನ ದಿವ್ಯವಾಸಸ್ಥಾನವಾಗಿದೆ. ಸರ್ವಶೇಷಿಯಾದ ಶ್ರೀಮನ್ನಾರಾಯಣನ ಸಂಕಲ್ಪಕ್ಕನುಗುಣವಾಗಿ ಇದು ವಿವಿಧವಾದ ಪರಿಣಾಮಗಳನ್ನು ಹೊಂದಿ ನಿತ್ಯರ, ಮುಕ್ತರ ಹಾಗೂ ಈಶ್ವರನ ಶರೀರಾದಿಗಳಾಗುತ್ತವೆ. ಈ ಶುದ್ಧಸತ್ತ್ವವನ್ನು 'ರಜಸಃ ಪರಾಕೇ' 'ತಮಸಃ ಪರಸ್ತಾತ್' ಎಂದು ಶ್ರುತಿ ಹೇಳುತ್ತದೆ–ಇದು 'ಪರಮವ್ಯೋಮ' ಎಂದು ಕರೆಯಲ್ಪಡುತ್ತದೆ. ಇದು ಅಚೇತನವಾದುದು. ಪ್ರಕೃತಿಯಂತೆ ಇದು ಭಗವಂತನ ಸ್ವರೂಪವನ್ನು ಮರೆಸದ ಕಾರಣ, ವಿಪರೀತ ಜ್ಞಾನವನ್ನುಂಟುಮಾಡದ ಕಾರಣ, ಭಗವಂತನ ಜ್ಞಾನವನ್ನು ಬೆಳಗುವ ಕಾರಣ ಇದನ್ನು ಸ್ವಯಂ ಪ್ರಕಾಶವೆಂದೂ ಹೇಳಲಾಗಿದೆ.

ಧರ್ಮಭೂತಜ್ಞಾನ: ಧರ್ಮಭೂತಜ್ಞಾನವು ಈ ಸಿದ್ಧಾಂತ ಅಂಗೀಕರಿಸಿರುವ ಅಸಾಧಾರಣವಾದ ತತ್ತ್ವ. ಶ್ರುತಿಗಳು ಆತ್ಮನನ್ನು ನಿರೂಪಿಸುವಾಗ ಅವನು ಜ್ಞಾನಸ್ವರೂಪಿ ಎಂದೂ ಜ್ಞಾನವಿಶಿಷ್ಟನೆಂದೂ ಹೇಳುತ್ತವೆ. ಜ್ಞಾನ ಹೀಗಾಗಿ ಎರಡು ಬಗೆ. ಒಂದು ಧರ್ಮಿಜ್ಞಾನ. ಇದನ್ನೇ ಸ್ವರೂಪಜ್ಞಾನ ಎಂದೂ ಹೇಳಿದೆ. ನಮ್ಮ ಆತ್ಮಸ್ವರೂಪವು ನಮಗೇ 'ಅಹಂ ಅಹಂ' ಎಂದು ಗೋಚರಿಸುತ್ತದೆ. ಇದನ್ನೇ 'ಸ್ವಸ್ಮೈಭಾಸಮಾನತ್ವ' ಎಂದು ಹೇಳಿದ್ದಾರೆ. ಸ್ವಯಂಪ್ರಕಾಶನಾದ ಆತ್ಮನನ್ನು ತಿಳಿಯಲು ಬೇರೆ ಒಂದು ಸಾಧನ ಬೇಕಾಗಿಲ್ಲ. ಈ ಆತ್ಮಸ್ವರೂಪವು ಯಾವಾಗಲೂ ಏಕರೂಪವಾಗಿರುತ್ತದೆ. ಇದಕ್ಕೆ ಸಂಕೋಚ ವಿಕಾಸಗಳಿಲ್ಲ. ಹೀಗೆ ಜ್ಞಾನಸ್ವರೂಪಿಯಾದ ಆತ್ಮನಿಗೆ ಜ್ಞಾನವೆಂಬ ಧರ್ಮವೂ ಇದೆ. ಈ ಧರ್ಮಭೂತಜ್ಞಾನ ಎಲ್ಲ ಆತ್ಮರುಗಳಿಗೂ ಉಂಟು. ಇದರ ಮೂಲಕವೇ ಆತ್ಮನು ಇತರ ವಿಚಾರಗಳನ್ನು ತಿಳಿಯುತ್ತಾನೆ. ಈ ಧರ್ಮಭೂತಜ್ಞಾನವು ವಿಷಯ ಪ್ರಕಾಶನಕಾಲದಲ್ಲಿ ತನ್ನ ಆಶ್ರಯಕ್ಕೆ ಸ್ವಯಂಪ್ರಕಾಶವಾಗಿರುತ್ತದೆ. 'ಇದಂ' ಎಂಬುದನ್ನರಿಯಲು ಸಾಧಕವಾದ ಈ ಜ್ಞಾನ ಧರ್ಮಭೂತಜ್ಞಾನ ಎಂದು ಕರೆಯಲ್ಪಟ್ಟಿದೆ. ಇದಕ್ಕೆ ಸಂಕೋಚವಿಕಾಸಗಳುಂಟು. ಸಂಸಾರಾವಸ್ಥೆಯಲ್ಲಿ ಸಂಕೋಚ. ಮುಕ್ತ್ಯವಸ್ಥೆಯಲ್ಲಿ ವಿಕಾಸ. ಮತ್ತೊಬ್ಬರ ಆತ್ಮಸ್ವರೂಪವನ್ನು ಧರ್ಮಭೂತಜ್ಞಾನದಿಂದ ನಾವು ಅರಿಯುವೆವು. ಈ ಧರ್ಮಭೂತ ಜ್ಞಾನವನ್ನು ಜ್ಞಾನಾಂತರದಿಂದ ತಿಳಿಯಬಹುದು. ಆದುದರಿಂದ ಈ ಸಿದ್ಧಾಂತದಲ್ಲಿ ಆತ್ಮರುಗಳು ಜ್ಞಾನಸ್ವರೂಪರೂ ಆಗಿರುವಂತೆ ಜ್ಞಾನಗುಣಕರೂ ಆಗಿದ್ದಾರೆ. ಅದ್ವೈತಸಿದ್ಧಾಂತದಲ್ಲಿ ಕೇವಲಸ್ವರೂಪಜ್ಞಾನವನ್ನು ಅಥವಾ ಧರ್ಮಿಜ್ಞಾನವನ್ನು ಮಾತ್ರ ಅಂಗೀಕರಿಸಿದೆ. ಆದುದರಿಂದ ಅದಕ್ಕೆ ವಿಷಯಿತ್ವ ಇಲ್ಲ. ಇಲ್ಲಿಯಾದರೋ ಧರ್ಮಭೂತಜ್ಞಾನವನ್ನು ಒಪ್ಪಿರುವುದರಿಂದ ವ್ಯವಹಾರವನ್ನು ಯುಕ್ತಿಯುಕ್ತವಾಗಿ ಸಮರ್ಥಿಸಬಹುದು. ಸುಖ, ದುಃಖ, ಇಚ್ಛೆ, ದ್ವೇಷ ಮೊದಲಾದವುಗಳೆಲ್ಲಾ ಧರ್ಮಭೂತ ಜ್ಞಾನದ ಬೇರೆಬೇರೆ ಪ್ರಕಾರಗಳು. ಈ ಧರ್ಮಭೂತಜ್ಞಾನಕ್ಕೂ ಆತ್ಮನಿಗೂ ಅಪೃಥಕ್‌ಸಿದ್ಧ ಸಂಬಂಧವಿದೆ ಎಂಬುದನ್ನು 'ನವಿಜ್ಞಾತುಃ ವಿಜ್ಞಾತೇಃ ವಿಪರಿಲೋಪೋವರ್ತತೇ' ಎಂದು ಶ್ರುತಿಪ್ರಕಾಶ ಪಡಿಸುತ್ತದೆ.

**ಜೀವಾತ್ಮರು :** ಅದ್ವೈತವು ಬೋಧಿಸಿದ ಜೀವಬ್ರಹ್ಮಾದ್ವೈತಕ್ಕೆ ಪ್ರತಿಯಾಗಿ ಜೀವನು ಬ್ರಹ್ಮಕ್ಕಿಂತ ಪ್ರತ್ಯೇಕವಾದ ಒಂದು ಸತ್ಯ ಎಂದು ಈ ದರ್ಶನ ಶ್ರುತಿಪ್ರಮಾಣಗಳಿಗನುಸಾರ ಬೋಧಿಸಿತು. 'ಜ್ಞಾಜ್ಞೌ ದ್ವಾವಜಾವೀಶನೀಶೌ', 'ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ' ಮೊದಲಾದ ಶ್ರುತಿಗಳು ಜೀವಬ್ರಹ್ಮಭೇದವನ್ನು ಉಪದೇಶಿಸುತ್ತವೆ. ಇದಕ್ಕನುಗುಣವಾಗಿ ಬ್ರಹ್ಮಸೂತ್ರಗಳಲ್ಲಿ ಜೀವಾತ್ಮರು ಅಜರು, ಅಣುಸ್ವರೂಪರು, ಜ್ಞಾತೃಗಳು ಕರ್ತೃತ್ವಯುಕ್ತರು ಮತ್ತು ಪರಮಾತ್ಮನ ಅಂಶಭೂತರು ಎಂಬುವುದನ್ನು ಆತ್ಮಾಧಿಕರಣ, ಜ್ಞಾಧಿಕರಣ, ಕರ್ತ್ರಧಿಕರಣ, ಪರಾಧಿಕರಣ ಮತ್ತು ಅಂಶಾಧಿಕರಣಗಳಲ್ಲಿ ಸ್ಥಾಪಿಸಲಾಗಿದೆ. ಇತಿಹಾಸಪುರಾಣಗಳ ತಾತ್ಪರ್ಯವೂ ಸಹ ಜೀವಬ್ರಹ್ಮಭೇದವನ್ನೇ ಸ್ಥಾಪಿಸುತ್ತವೆ. ಇವೆಲ್ಲ ಪ್ರಮಾಣಗಳಿಗನುಸಾರವಾಗಿ ಜೀವಾತ್ಮನ ಸ್ವರೂಪವನ್ನು ಯಾಮುನರು

'ದೇಹೇಂದ್ರಿಯಮನಃ ಪ್ರಾಣಧೀಭ್ಯೋಽನ್ಯೋಽನನ್ಯಸಾಧನಃ ।
ನಿತ್ಯೋವ್ಯಾಪೀ ಪ್ರತಿಕ್ಷೇತ್ರಮಾತ್ಮಾ ಭಿನ್ನಃ ಸ್ವತಃ ಸುಖೀ॥'

ಎಂದು ಪ್ರತಿಪಾದಿಸಿದ್ದಾರೆ. ದೇಹ, ಇಂದ್ರಿಯ, ಮನಸ್ಸು, ಪ್ರಾಣ ಮತ್ತು ಬುದ್ಧಿಗಳಿಗಿಂತ ಆತ್ಮಸ್ವರೂಪ ಬೇರೆಯಾದುದು. ಬುದ್ಧಿಯನ್ನೇ ಕೆಲವರು ಆತ್ಮನೆಂದು ವರ್ಣಿಸುವರು. ಬುದ್ಧಿ ಎಂದರೆ ಜ್ಞಾನ ಅಥವಾ ಮತಿ ಅಥವಾ ವಿಜ್ಞಾನ. ಇದಕ್ಕೆ ಆಶ್ರಯವಾದವನು ಆತ್ಮನು. ಆತ್ಮನು ಜ್ಞಾನಸ್ವರೂಪನಾಗಿರುವಂತೆ ಜ್ಞಾನಾಶ್ರಯನೂ ಆಗಿದ್ದಾನೆ. ಶುದ್ಧವಿಜ್ಞಾನವೇ ಆತ್ಮನಾಗದು. ಅದು ತನ್ನನ್ನು ತಾನು ತಿಳಿಯಲಾರದು. ಜ್ಞಾನವು ನಿರ್ವಿಷಯಕವಾಗಿಯಾಗಲೀ ನಿರಾಶ್ರಯವಾಗಿಯಾಗಲೀ ಇರಲಾರದು. ಜ್ಞಾನವೂ ಒಂದು ಧರ್ಮವಾದುದರಿಂದ ಅದು ಅದರ ಆಶ್ರಯವನ್ನೂ ಸೂಚಿಸುತ್ತದೆ. ಹೀಗೆ ಈ ಸಿದ್ಧಾಂತ ಆತ್ಮರುಗಳು ಜ್ಞಾನಸ್ವರೂಪರಾಗಿ ಜ್ಞಾನವನ್ನು ಧರ್ಮವನ್ನಾಗಿ ಹೊಂದಿದ್ದಾರೆ ಎಂದು ಸಾಧಿಸಿದೆ.

ಆತ್ಮರುಗಳು ಅನಂತರು: ಒಬ್ಬರಿಗಿಂತ ಒಬ್ಬರು ಭಿನ್ನರು. ಅವರವರಿಗೆ ಅವರವರದೇ ಆದ ಸುಖದುಃಖಾದಿಗಳು, ಜ್ಞಾನಶಕ್ತ್ಯಾದಿಗಳು ಇರುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಆತ್ಮರುಗಳೆಲ್ಲರೂ ಜ್ಞಾನಸ್ವರೂಪರಾಗಿ ಒಂದೇ ಬಗೆಯಾಗಿ

ದ್ದಾರೆ. ಅವರ ಸ್ವರೂಪದಲ್ಲಿ ಸಾಮ್ಯವಿದೆ. ಬದ್ಧಾವಸ್ಥೆಯಲ್ಲಿ ಅವರ ಧರ್ಮಭೂತಜ್ಞಾನದಲ್ಲಿ ವೈಷಮ್ಯವಿದ್ದರೂ ಮುಕ್ತ್ಯವಸ್ಥೆಯಲ್ಲಿ ಸಾಮ್ಯವಿರುತ್ತದೆ. ಜೀವರುಗಳ ವೈಷಮ್ಯಕ್ಕೆ ಅವರವರ ಕರ್ಮ ಕಾರಣ. ಜೀವರುಗಳು ಕೇವಲ ತೋರಿಕೆಯಲ್ಲ. ಅವರು ಸತ್ಯಭೂತರಾಗಿ ನಿಜವಾಗಿಯೂ ಅನೇಕರಾಗಿದ್ದಾರೆ. **ಆತ್ಮನಿಗೆ ಕರ್ತೃತ್ವವುಂಟು.** ಆದರೆ ಈ ಕರ್ತೃತ್ವ ಭಗವಂತನಿಂದ ಕೊಡಲ್ಪಟ್ಟುದು. ಪಕ್ಷಪಾತ ರಹಿತನಾದ ಭಗವಂತನು ಜೀವರುಗಳು ಶುಭಾಶುಭಕರ್ಮಗಳಿಗನುಗುಣವಾಗಿ ಫಲಪ್ರಧಾನ ಮಾಡುವವನಾಗಿದ್ದಾನೆ.

**ಜೀವರು ಸ್ವಯಂಪ್ರಕಾಶರು :** ಅವರು ಜ್ಞಾನ ಸ್ವರೂಪರಾಗಿರುವುದು ಇದಕ್ಕೆ ಕಾರಣ. ಆತ್ಮನು ತನಗೆ ತನ್ನನ್ನು ತೋರಿಸಿಕೊಳ್ಳುತ್ತಾನೆ ಎಂದು ಇದರ ಅರ್ಥ. ಹಾಗೆ ತನ್ನನ್ನು ತೋರಿಸಿಕೊಳ್ಳುವಾಗ ಏಕತ್ವ, ಪ್ರತ್ಯಕ್ತ್ವ ಮೊದಲಾದವುಗಳಿಂದ ವಿಶಿಷ್ಟವಾಗಿರುವಂತೆ ತೋರಿಸಿಕೊಳ್ಳುತ್ತಾನೆ. ಜ್ಞಾನಸ್ವರೂಪನಿವನು. 'ಏಷ ಹಿ ದ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ' ಎಂದು ಶ್ರುತಿ ಆತ್ಮನಜ್ಞಾತೃತ್ವವನ್ನು 'ಬೋದ್ಧಾ' ಎಂಬುದರಿಂದ ಹೇಳಿ ಹಾಗೆ ತಿಳಿಯುವ ಆರು ಪ್ರಕಾರಗಳನ್ನು ಹಿಂದಿನ ಆರು ಪದಗಳಿಂದ ತಿಳಿಸಿ, 'ವಿಜ್ಞಾನಾತ್ಮಾ' ಎಂಬ ಶಬ್ದದಿಂದ ಅವನು ಜ್ಞಾನ ಸ್ವರೂಪನೂ ಆಗಿದ್ದಾನೆ ಎಂದು ನಿರೂಪಿಸುತ್ತದೆ. **ಆತ್ಮರು ನಿತ್ಯರುಗಳು.** ಇವನು ಅವಿನಾಶಿಯಾದವನು. ಆಕಸ್ಮಿಕವಾಗಿ, ತೋರಿ ಮರೆಯಾಗುವವನಲ್ಲ. 'ನಜಾಯತೇ ಮ್ರಿಯತೇ ವಾ' ಎಂದು ಉಪನಿಷತ್ತೂ ಗೀತೆಯೂ ಇವನ ನಿತ್ಯತ್ವವನ್ನು ಸ್ಥಾಪಿಸುತ್ತವೆ. ಈ ಸಿದ್ಧಾಂತಕ್ಕನುಸಾರವಾಗಿ **ಆತ್ಮರುಗಳು ಅಣುಸ್ವರೂಪಿಗಳು.** ಉತ್ಕ್ರಾಂತಿ, ಗತಿ, ಪುನರ್ಜನ್ಮ, ಭಗವತ್ಪ್ರಾಪ್ತಿ ಮೊದಲಾದವುಗಳೆಲ್ಲಾ ಇವನಿಗೆ ಉಂಟಾಗುತ್ತವೆ. ಆದರಿಂದಲೇ ಅಣುಪರಿಮಾಣವನ್ನುಳ್ಳ ಆತ್ಮನು ದೇಹದ ಯಾವುದೋ ಭಾಗದಲ್ಲಿರುತ್ತಿದ್ದರೂ ತನ್ನ ಧರ್ಮಭೂತಜ್ಞಾನದ ಮೂಲಕ ಸಮಸ್ತ ವ್ಯಾಪಾರಗಳನ್ನು ಮಾಡಲು ಸಮರ್ಥನಾಗಿದ್ದಾನೆ. ಜೀವರುಗಳು ಬದ್ಧರು, ನಿತ್ಯರು, ಮುಕ್ತರು ಎಂದು ಮೂರು ಬಗೆ. ಎಲ್ಲ ಜೀವರುಗಳಿಗೂ ಮೋಕ್ಷ ಪಡೆಯುವ ಸಾಧ್ಯತೆ ಇದೆ. ಮೋಕ್ಷಕ್ಕೆ ಅರ್ಹತೆ ಯಾರಿಗೂ ಇಲ್ಲದೆ ಇಲ್ಲ. ಆದರೆ ಅದು ಅವರವರ ಸಾಧನವನ್ನವಲಂಬಿಸುತ್ತದೆ. ಜೀವರುಗಳು ಈಶ್ವರನಿಗಿಂತ ಬೇರೆಯಾಗಿದ್ದರೂ ಸ್ವತಂತ್ರವಾಗಿರುವವರಲ್ಲ. ಇವರು ಈಶ್ವರನ ನಿಯಮನಕ್ಕೆ ಎಲ್ಲ ಅವಸ್ಥೆಗಳಲ್ಲಿಯೂ ಒಳಗಾಗಿದ್ದಾರೆ.

ಮುಕ್ತ್ಯವಸ್ಥೆಯಲ್ಲಿಯೂ ಇವರು ಈಶ್ವರನಿಗೆ ಶೇಷಭೂತರಾಗಿಯೇ ಇರುತ್ತಾರೆ. ಚೇತನಾಚೇತನ ಪದಾರ್ಥಗಳು ಬ್ರಹ್ಮ ವಸ್ತುವಿಗೆ ಪ್ರಕಾರ ಅಥವಾ ಅಂಶ ಎಂದು ಶ್ರುತಿ ಹೇಳುವುದನ್ನು ಈ ಸಿದ್ಧಾಂತ ಎತ್ತಿಹಿಡಿಯುತ್ತದೆ. ಬ್ರಹ್ಮಾಂಶರು ಜೀವರುಗಳು ಎಂಬುದನ್ನು ವಿವರಿಸುತ್ತಾ ರಾಮಾನುಜರು, 'ವಿಶಿಷ್ಟವಾದ ವಸ್ತುವಿನಲ್ಲಿ ವಿಶೇಷಣ ಒಂದು ಅಂಶ. ಇದು ವಿಶೇಷಣಾಂಶ, ಇದು ವಿಶೇಷ್ಯಾಂಶ ಎಂದು ತಿಳಿದವರು ಹೇಳುತ್ತಾರೆ. ವಿಶೇಷಣ ವಿಶೇಷ್ಯಗಳಲ್ಲಿ ಅಂಶಾಂಶಿಭಾವವಿದ್ದರೂ ಸ್ವಭಾವ ವೈಲಕ್ಷಣ್ಯವಿರುತ್ತದೆ. ಹೀಗೆ ಜೀವ ಪರರಲ್ಲಿ ಅಂಶಾಂಶಿತ್ವವೂ ಸ್ವಭಾವ ಭೇದವೂ ಉಪಪನ್ನವಾಗುತ್ತವೆ.' ಎಂದು ವಿಶೇಷಣ ವಿಶೇಷ್ಯಭಾವದ ಮೂಲಕ ಪ್ರತಿಪಾದಿಸುತ್ತಾರೆ.

**ಬ್ರಹ್ಮಸ್ವರೂಪ :** ಈ ಸಿದ್ಧಾಂತಕ್ಕನುಗುಣವಾಗಿ ಬ್ರಹ್ಮವು ಸಗುಣ; ನಿರ್ಗುಣವಲ್ಲ. ಬ್ರಹ್ಮಸತ್ಯತ್ವವನ್ನೂ ಬ್ರಹ್ಮ ವಸ್ತುವಿನ ವಿಭೂತಿಯನ್ನೂ ಈ ಸಿದ್ಧಾಂತ ಮಾನ್ಯಮಾಡುತ್ತದೆ. ಉಪನಿಷತ್ಪ್ರತಿಪಾದ್ಯವಾದ ಪರಬ್ರಹ್ಮವೇ ಈಶ್ವರನಾಗಿದ್ದಾನೆ. ಸರ್ವಾಂತರ್ಯಾಮಿಯಾದ ವಾಸುದೇವನು ಇವನೇ. ಬ್ರಹ್ಮವು ಹೇಗೆ ಸತ್ಯವೋ ಹಾಗೆಯೇ ಅವನ ವಿಭೂತಿಯಾದ ಜಗತ್ತೂ ಸತ್ಯ; ಜೀವರೂ ಸತ್ಯ; ಬ್ರಹ್ಮವಸ್ತು ಎಲ್ಲ ಕಲ್ಯಾಣ ಗುಣಗಳಿಗೂ ನೆಲೆವನೆಯಾಗಿ ಯಾವ ಒಂದು ದೋಷವೂ ಇಲ್ಲದೆ ಇರುವುದಾಗಿದೆ. 'ಬ್ರಹ್ಮ ಶಬ್ದೇನ ಚ ಸ್ವಭಾವತೋ ನಿರಸ್ತನಿಖಿಲ ದೋಷಃ ಅನವಧಿಕಾತಿಶಯಾ ಸಂಖ್ಯೇಯ ಕಲ್ಯಾಣಗುಣ ಗಣಃ ಪುರುಷೋತ್ತಮೋ ಅಭಿಧೀಯತೇ' ಎಂದು ರಾಮಾನುಜರು ಬ್ರಹ್ಮಶಬ್ದವನ್ನು ವಿವರಿಸುತ್ತಾರೆ. ನಿರ್ಗುಣಶ್ರುತಿಗಳು ಹೇಯಗುಣಗಳ ನಿಷೇಧವನ್ನು ಮಾಡುತ್ತವೆ; ನಿರ್ವಿಶೇಷ ವಸ್ತುವನ್ನು ಹೇಳುವುದಿಲ್ಲ.

'ನಿರ್ವಿಶೇಷ ಚಿನ್ಮಾತ್ರವೇ ಬ್ರಹ್ಮ' ಎಂಬ ಅದ್ವೈತವಾದವನ್ನು ಈ ಸಿದ್ಧಾಂತ ಒಪ್ಪುವುದಿಲ್ಲ. ಪ್ರತ್ಯಕ್ಷ, ಅನುಮಾನ ಅಥವಾ ಶಬ್ದ ಪ್ರಮಾಣಗಳು ನಿರ್ವಿಶೇಷ ವಸ್ತುವನ್ನು ಸ್ಥಾಪಿಸಲಾರವು. ಇವೆಲ್ಲವೂ ಸವಿಶೇಷವಸ್ತುವನ್ನೇ ಹೇಳುತ್ತವೆ ಎಂಬುದು ಈ ದರ್ಶನದ ನಿಶ್ಚಯ. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಮೊದಲಾದ ಶ್ರುತಿವಾಕ್ಯಗಳಿಗನುಸಾರವಾಗಿ ಅದ್ವಿತೀಯವಾದ ಬ್ರಹ್ಮವಸ್ತುವಿಗೆ ವಿಶೇಷಣ ಬಹುತ್ವವುಂಟೆಂಬುದು ಸಿದ್ಧವಾಗುತ್ತದೆ. ವಿಕಾರಕ್ಕೊಳಗಾಗುವ ಅಚೇತನವನ್ನೂ, ಆ ಅಚೇತನದೊಡನೆ ಸಂಬಂಧಿಸಿದ ಚೇತನವನ್ನೂ ವ್ಯಾವೃತ್ತಿಮಾಡಿ ಯಾವಾಗಲೂ ಸಂಕೋಚಕ್ಕೊಳಗಾಗದ ಜ್ಞಾನೈಕಾಕಾರವನ್ನು ಬ್ರಹ್ಮ ವಸ್ತು ಹೊಂದಿದೆ ಎನ್ನುವುದನ್ನು 'ಜ್ಞಾನ' ಶಬ್ದ ತಿಳಿಸುತ್ತದೆ. ನಿರುಪಾಧಿಕವಾದ ಸತ್ತೆಯನ್ನು 'ಸತ್ಯ' ಶಬ್ದ ತಿಳಿಸುತ್ತದೆ. ದೇಶ ಕಾಲವಸ್ತು ಪರಿಚ್ಛೇದ ಬ್ರಹ್ಮಕ್ಕೆ ಇಲ್ಲವೆನ್ನುವುದನ್ನು 'ಅನಂತ' ಶಬ್ದ ತಿಳಿಸುತ್ತದೆ. ಹೀಗೆ ಬ್ರಹ್ಮವಸ್ತುವಿನ ಸಗುಣತ್ವವೇ ಸ್ಥಾಪಿತವಾಗಿದೆ. ಬ್ರಹ್ಮವಸ್ತು ವೇದ್ಯವೂ ಹೌದು ವಾಚ್ಯವೂ ಹೌದು. ಆದರೆ ಅದನ್ನು ಪೂರ್ಣವಾಗಿ ತಿಳಿಯುವುದಕ್ಕಾಗದು. ಪೂರ್ಣವಾಗಿ ಮಾತಿನಿಂದ ಹೇಳುವುದಕ್ಕೂ ಆಗದು. ಅಷ್ಟು ಅಪಾರವಾದ ಮಹಿಮೆಯನ್ನು ಅದು ಹೊಂದಿದೆ. ಬ್ರಹ್ಮವಸ್ತು

ವಿಗೆ ಉಭಯ ಲಿಂಗತ್ವವಿದೆ. ಎಂದರೆ ಎಲ್ಲ ಮಂಗಳ ಗುಣಗಳನ್ನು ಹೊಂದಿದೆ; ದೋಷ ದೂರವಾಗಿದೆ. 'ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕಃ ವಿಜಿಘತ್ಸಃ ಅಪಿಪಾಸಃ' ಎಂಬುವು ಬ್ರಹ್ಮವಸ್ತುವಿನಲ್ಲಿ ಯಾವ ದೋಷವೂ ಇಲ್ಲವೆಂದು ಸಾಧಿಸುತ್ತವೆ. 'ಸತ್ಯಕಾಮಃ ಸತ್ಯಸಂಕಲ್ಪಃ' ಎಂಬ ಈ ಎಲ್ಲ ಮಂಗಳಗುಣಗಳೂ ಅದರಲ್ಲಿವೆ ಎಂದು ಹೇಳುತ್ತವೆ. ಬ್ರಹ್ಮವಸ್ತು ಅಖಿಲ ಜಗತ್ಕಾರಣ. ಅದು ಅಭಿನ್ನನಿಮಿತ್ತೋಪಾದಾನ ಕಾರಣ ಈ ಜಗತ್ತಿಗೆ. ಸೂಕ್ಷ್ಮಚಿದಚಿದ್ವಿಶಿಷ್ಟವಾದ ಬ್ರಹ್ಮ ವಸ್ತುಕಾರಣವಾಗಿ ಸ್ಥೂಲಚಿದಚಿದ್ವಿಶಿಷ್ಟವಾದ ಬ್ರಹ್ಮವಸ್ತುಕಾರ್ಯವಾಗಿದೆ. ಕಾರಣಾವಸ್ಥೆಯಲ್ಲಿಯೂ ಕಾರ್ಯಾವಸ್ಥೆಯಲ್ಲಿಯೂ ಬ್ರಹ್ಮವಸ್ತು ಸಂಬಂಧಿಸಿದ್ದರೂ ಅದು ನಿರ್ವಿಕಾರವಾದುದು. ಪ್ರಕೃತಿಯೇ ಮಹತ್ತು, ಅಹಂಕಾರ, ಇಂದ್ರಿಯ, ಪಂಚಭೂತವಾಗಿ ಪರಿಣಾಮ ಹೊಂದುತ್ತವೆ. ಜೀವರುಗಳ ಧರ್ಮಭೂತಜ್ಞಾನ ಸಂಕೋಚ ವಿಕಾಸ ಹೊಂದುತ್ತವೆ. ಆದರೆ ಈಶ್ವರತತ್ತ್ವಕ್ಕೆ ಯಾವ ವಿಕಾರವೂ ಉಂಟಾಗುವುದಿಲ್ಲ. ಈಶ್ವರನ ಸರ್ವಾತಿಶಾಯಿಯಾದ ಸ್ವರೂಪ ಇದು.

ಬ್ರಹ್ಮವಸ್ತು ಸರ್ವಾಧಾರವೂ, ಸರ್ವನಿಯಾಮಕವೂ ಸರ್ವಶೇಷಿಯೂ, ಸರ್ವಶರೀರಿಯೂ ಆದುದೆಂದು ಈ ಸಿದ್ಧಾಂತ ಪ್ರತಿಪಾದಿಸುತ್ತದೆ. 'ಶರೀರ-ಶರೀರಿ ಭಾವಸಂಬಂಧವನ್ನು ಪ್ರತಿಪಾದಿಸಿ ಬ್ರಹ್ಮವಸ್ತುವಿಗೆ ಉಳಿದ ಚೇತನಾಚೇತನ ಪದಾರ್ಥಗಳೆಲ್ಲಾ ಶರೀರವೆಂದು ಸ್ಥಾಪಿಸುವುದು ಈ ಸಿದ್ಧಾಂತದ ಅಸಾಧಾರಣವಾದ ತತ್ತ್ವವಾಗಿದೆ. ಈ ಸಂಬಂಧದ ಮೂಲಕವೇ ವಿಶಿಷ್ಟೈಕ್ಯವನ್ನು ಈ ಸಿದ್ಧಾಂತ ಸಾಧಿಸಿದೆ. ಶರೀರ ಶರೀರಿ ಸಂಬಂಧವನ್ನು ನಿರೂಪಿಸುವಾಗ ಶರೀರ ಲಕ್ಷಣವನ್ನು ರಾಮಾನುಜರು 'ಯಸ್ಯ ಚೇತನಸ್ಯ ಯದ್ದ್ರವ್ಯಂ ಸರ್ವಾತ್ಮನಾ ಸ್ವಾರ್ಥೇ ನಿಯಂತುಂ ಧಾರಯಿತುಂ ಚ ಶಕ್ಯಂ ತಚ್ಛೇಷತೈಕಸ್ವರೂಪಂ ಚ ತತ್ತಸ್ಯ ಶರೀರಂ' ಎಂದು ಹೇಳಿದ್ದಾರೆ. ಶರೀರವೆಂದರೆ ಕರ್ಮೋಪಭೋಗಕ್ಕೆ ಬಂದಿರುವುದಲ್ಲ. ಇಂದ್ರಿಯಾಶ್ರಯವಾದುದೂ ಅಲ್ಲ. ಆದರೆ ಯಾವುದಕ್ಕೆ ಒಬ್ಬ ಚೇತನನು ಆಧಾರವಾಗಿದ್ದಾನೆಯೋ, ಯಾವುದಕ್ಕೆ ನಿಯಾಮಕನಾಗಿದ್ದಾನೆಯೋ ಯಾವುದನ್ನು ತನ್ನ ಪ್ರಯೋಜನಕ್ಕಾಗಿಯೇ ಹೊಂದಿದ್ದಾನೆಯೋ ಅದು ಶರೀರ. ಹಾಗೆ ಆಧಾರನೂ ನಿಯಾಮಕನೂ ಶೇಷಿಯೂ ಆದವನು ಶರೀರಿ. ನಮ್ಮ ಶರೀರಕ್ಕೂ ಹೀಗೆಯೇ ನಾವು ಆತ್ಮರುಗಳಾಗಿರುವುದು. ಶರೀರ ಆಧೇಯ, ನಿಯಾಮ್ಯ ಮತ್ತು ಶೇಷ. ಆತ್ಮಾ ಆಧಾರ, ನಿಯಾಮಕ ಮತ್ತು ಶೇಷಿ. ಈ ಸಂಬಂಧವೇ ಈಶ್ವರನಿಗೂ ಚೇತನಾಚೇತನ ಪದಾರ್ಥಗಳಿಗೂ ಇರುವುದು. ಸಕಲ ಚೇತನಾಚೇತನ ಪದಾರ್ಥಗಳಿಗೂ ಈಶ್ವರ ಆಧಾರ, ನಿಯಾಮಕ. ಶೇಷಿ. ಆದುದರಿಂದ ಅವನು ಸರ್ವಶರೀರಿ. ಶರೀರದ ದೋಷ ಶರೀರಿಗೆ ಉಂಟಾಗದು. ಹೀಗೆ ಬ್ರಹ್ಮವಸ್ತುವಿಗೂ ಜಗತ್ತಿಗೂ ಜೀವರುಗಳಿಗೂ ಸಂಬಂಧವಿದೆಯೆಂದು ಈ ದರ್ಶನ ಪ್ರತಿಪಾದಿಸುತ್ತದೆ. ಪರಬ್ರಹ್ಮಸ್ವರೂಪನಾದ ಶ್ರೀಮನ್ನಾರಾಯಣನು ಸರ್ವಶಕ್ತನಾಗಿರುವಂತೆ ಸರ್ವರಕ್ಷಕನೂ ಆಗಿದ್ದಾನೆ. ಅವನು ದಿವ್ಯಮಂಗಳ ವಿಗ್ರಹಯುಕ್ತನಾಗಿ ಪರವ್ಯೂಹಾದಿ ಪಂಚವ್ಯೂಹಗಳಲ್ಲಿರುತ್ತಾ ಶರಣಾಗತ ರಕ್ಷಣದೀಕ್ಷಿತನಾಗಿರುತ್ತಾನೆ. ಭಗವಂತನ ಅವತಾರಗಳು ಸತ್ಯವಾದವು. ಅವತಾರ ಕಾಲದಲ್ಲಿಯೂ ಅವನಿಗೆ ಜ್ಞಾನಸಂಕೋಚಾದಿಗಳಿಲ್ಲ. ಅವನು ವೈಷಮ್ಯ ನೈರ್ಘೃಣ್ಯಗಳಿಲ್ಲದವನಾಗಿ ಪರಮ ಕಾರುಣಿಕನಾಗಿ, ಸೌಲಭ್ಯಗುಣವಿಶಿಷ್ಟನಾಗಿ ತನ್ನನ್ನು ಆಶ್ರಯಿಸಿದವರನ್ನೆಲ್ಲಾ ರಕ್ಷಿಸುವವನಾಗಿದ್ದಾನೆ.

**ಮೋಕ್ಷೋಪಾಯ :** ಈ ಸಿದ್ಧಾಂತದಲ್ಲಿ ಭಗವಂತನೇ ಪ್ರಧಾನವಾಗಿ ಮೋಕ್ಷೋಪಾಯನಾಗಿದ್ದಾನೆ. ಮೋಕ್ಷೋಪಾಯ ಎರಡುಬಗೆ-ಸಿದ್ಧೋಪಾಯ ಮತ್ತು ಸಾಧ್ಯೋಪಾಯ ಎಂದು. ಪಕ್ಷಪಾತಾದಿಗಳಿಲ್ಲದವನೂ ಸರ್ವಸಮನೂ ಆದ ಈಶ್ವರನು ತಾನು ಸರ್ವಸ್ವತಂತ್ರನಾದರೂ ತನಗೆ ವೈಷಮ್ಯನೈರ್ಘೃಣ್ಯಾದಿಗಳುಂಟಾಗದಿರುವುದಕ್ಕಾಗಿ ನಮ್ಮಿಂದ ಒಂದು ಸಾಧ್ಯೋಪಾಯವನ್ನು ಅನುಷ್ಠಿಸುವಂತೆ ಮಾಡಿಸಿ, ಅದನ್ನೇ ವ್ಯಾಜವನ್ನಾಗಿ ಇಟ್ಟುಕೊಂಡು ನಮ್ಮನ್ನು ರಕ್ಷಿಸುತ್ತಾನೆ. ಸಿದ್ಧೋಪಾಯನಾದ ಭಗವಂತನನ್ನು ಪ್ರಸನ್ನಗೊಳಿಸಿಕೊಳ್ಳುವ ಉಪಾಯವೇ ಸಾಧ್ಯೋಪಾಯ. ಇದನ್ನೇ 'ಭಕ್ತಿಪ್ರಪತ್ತಿಪ್ರಮುಖಂ ತದ್ವಶೀಕಾರ ಕಾರಣಂ' ಎಂದು ಹೇಳಿದ್ದಾರೆ. ಭಕ್ತಿ ಮತ್ತು ಪ್ರಪತ್ತಿಗಳು ಭಗವಂತನನ್ನು ಒಲಿಸಿಕೊಳ್ಳುವ ಉಪಾಯಗಳು.

**ಭಕ್ತಿಯೋಗ :** ಮೋಕ್ಷೋಪಾಯವನ್ನು ವಿವೇಚಿಸುತ್ತಾ ರಾಮಾನುಜರು ಉಪಾಸನಾತ್ಮಕವಾದ ಜ್ಞಾನ ಮೋಕ್ಷೋಪಾಯವೆಂದು ಶ್ರುತಿಗಳಲ್ಲಿ ವಿಧಿಸಿರುವುದನ್ನು ಸೂಚಿಸಿದ್ದಾರೆ. 'ವಾಕ್ಯಾರ್ಥಜ್ಞಾನಾತ್ ಅನ್ಯದೇವ ಧ್ಯಾನೋಪಾಸನಾದಿಶಬ್ದವಾಚ್ಯಂ ಜ್ಞಾನಂ ವೇದಾಂತವಾಕ್ಯೈರ್ವಿಧಿತ್ಸಿತಂ' ಎಂದು ವಾಕ್ಯಾರ್ಥಜ್ಞಾನ ಧ್ಯಾನಕ್ಕೆ ಉಪಕಾರಕ, ಧ್ಯಾನಮೋಕ್ಷಕ್ಕೆ ಉಪಾಯ. ಇದನ್ನೇ ಧ್ರುವಾನುಸ್ಮೃತಿ, ಭಕ್ತಿವೇದನ, ಉಪಾಸನ ಎಂದು ಕರೆಯುತ್ತಾರೆ. ಇದನ್ನು ರಾಮಾನುಜರು 'ತಸ್ಯೈವ ವೇದನಸ್ಯ ಧ್ಯಾನರೂಪಸ್ಯ ಅಹರಹರನುಷ್ಠೀಯಮಾನಸ್ಯ ಅಭ್ಯಾಸಾಧೇಯಾತಿಶಯಸ್ಯ ಆಪ್ರಯಾಣಾದನುವರ್ತಮಾನಸ್ಯ ಬ್ರಹ್ಮಪ್ರಾಪ್ತಿ ಸಾಧನತ್ವಾತ್' ಎಂದು ಪ್ರತಿಪಾದಿಸಿದ್ದಾರೆ. ಭಕ್ತಿಯ ಉತ್ಪತ್ತಿಗೆ ವಿವೇಕ, ವಿಮೋಕ, ಅಭ್ಯಾಸ, ಕ್ರಿಯಾ, ಕಲ್ಯಾಣ, ಅನವಸಾದ ಮತ್ತು ಅನುದ್ಧರ್ಷ ಎಂಬ ಸಾಧನ ಸಪ್ತಕಗಳನ್ನು ವಿಧಿಸಿದೆ.

ಸಾಮಾನ್ಯ ಭಕ್ತಿಯು ಶಾಸ್ತ್ರಾಧ್ಯಯನದಿಂದಲೂ ಸತ್ಸಂಗದಿಂದಲೂ ಉಂಟಾಗುತ್ತದೆ. ಅಂಥವನು ಕರ್ಮಯೋಗವನ್ನನುಷ್ಠಿಸಿ ಜ್ಞಾನಯೋಗದ ಮೂಲಕವಾಗಿಯಾಗಲೀ ಅಥವಾ ನೇರವಾಗಿಯೇ ಆಗಲೀ ಆತ್ಮಾವಲೋಕನವನ್ನು ಹೊಂದು

ತ್ತಾನೆ. ಭಗವದಾರಾಧನರೂಪವಾಗಿ, ಆತ್ಮಯಾಥಾತ್ಮ್ಯ ಜ್ಞಾನಪೂರ್ವಕವಾಗಿ ಫಲಾಭಿಸಂಧಿ ಇಲ್ಲದೆ ನಿಯತವಾಗಿ ಮಾಡುವ ಕರ್ಮವಿಶೇಷ ಕರ್ಮಯೋಗ. ಪ್ರಕೃತಿಗಿಂತ ವಿಲಕ್ಷಣನೂ, ಈಶ್ವರನಿಗೆ ಶೇಷಭೂತನೂ, ಜ್ಞಾನಸ್ವರೂಪನೂ ಆದ ಜೀವಾತ್ಮನ ಸ್ವರೂಪವನ್ನು ನಿರಂತರವಾಗಿ ಚಿಂತಿಸುವುದು ಜ್ಞಾನಯೋಗ. ಜೀವಾತ್ಮ ಸಾಕ್ಷಾತ್ಕಾರ ಪರಮಾತ್ಮ ಸಾಕ್ಷಾತ್ಕಾರಕ್ಕೆ ಪೂರ್ವ ಭಾವಿಯಾದುದು. ತನ್ನ ಸ್ವರೂಪವನ್ನರಿತವನು ತಾನು ಭಗವಂತನಿಗೇ ಸೇರಿದವನೆಂಬುದನ್ನು ಮನಗಂಡು ತನಗೆ ಸ್ವಾಮಿಯೂ ಸರ್ವವಿಧಬಂಧುವೂ ಆದ ಪರಮಾತ್ಮನನ್ನು ಸೇರಲು ಅವನನ್ನು ಪ್ರೀತಿಯಿಂದ ನಿರಂತರವಾಗಿ ಧ್ಯಾನಿಸುವನು. ಭಗವಂತನನ್ನು ಹೀಗೆ ನಿರತಿಶಯವಾದ ಪ್ರೀತಿಯೊಡನೆ ಧ್ಯಾನಿಸುವುದು ಭಕ್ತಿಯೋಗ. ಈ ಬಗೆಯ ಅನುಧ್ಯಾನ ನಿರಂತರವಾಗಿರಬೇಕು. ಈ ಭಕ್ತಿಯೋಗವನ್ನು ಮೋಕ್ಷಕ್ಕಾಗಿ ಅನುಷ್ಠಿಸುವಾಗ ಅದರ ಗಾಢತೆಗೆನುಗುಣವಾಗಿ ಮೂರು ಪರ್ವಗಳು ಅದರಲ್ಲಿರುತ್ತವೆ. ಭಗ ವಂತನನ್ನು ಪಡೆಯಬೇಕೆಂಬ ಉತ್ಕಟವಾದ ಇಚ್ಛೆ ಪರಭಕ್ತಿ.

ಈ ಪರಭಕ್ತಿ ತೀವ್ರವಾದಾಗ ಭಗವತ್ಪ್ರಸಾದದಿಂದ ಭಗವಂತನ ಸಾಕ್ಷಾತ್ಕಾರ ತತ್ಕಾಲದಲ್ಲಿ ಆಗುವುದು. ಇದಕ್ಕೆ ಪರ ಜ್ಞಾನ ಎಂದು ಹೆಸರು. ಹಾಗೆ ಆ ಭಗವಂತನನ್ನು ಸಾಕ್ಷಾತ್ಕರಿಸಿದ ಮೇಲೆ ಆ ಅನುಭವ ನಿರಂತರವಾಗಿರಬೇಕೆಂಬ ಉತ್ಕಟೇಚ್ಛೆ ಪರಮಭಕ್ತಿ. ಇದು ಭಗವಂತನ ಕೃಪೆಯಿಂದ ದರ್ಶನ ಸಮಾನಾಕಾರತೆಯನ್ನು ಹೊಂದಿ, ಭಗವಂತನ ನಿತ್ಯಸಂಶ್ಲೇಷವನ್ನೂ ನಿತ್ಯಕೈಂಕರ್ಯವನ್ನೂ ಕೊಡಿಸಿಕೊಡುತ್ತದೆ.

**ಪ್ರಪತ್ತಿ ಅಥವಾ ಶರಣಾಗತಿ :** ಭಕ್ತಿಯೋಗವನ್ನನುಷ್ಠಿಸುವುದಕ್ಕೆ ಅಶಕ್ತರಾದವರು ತನ್ನ ರಕ್ಷಣೆಯ ಭಾರವನ್ನು ಆ ಭಗವಂತನ ಮೇಲೆಯೇ ಹಾಕಿ ಅವನಲ್ಲಿ ಮರೆಹೋಗುವುದು ಪ್ರಪತ್ತಿ ಎನಿಸುವುದು. ಭಕ್ತಿಯೋಗ ಸಿದ್ಧಿಸಬೇಕಾದರೂ ಭಗ ವಂತನಲ್ಲಿ ಅದಕ್ಕಾಗಿ ಶರಣಾಗತಿ ಮಾಡಲೇಬೇಕು. ಹೇಗೆ ಇತರ ಪ್ರಯೋಜನಗಳಿಗಾಗಿ ಭಗವಂತನಲ್ಲಿ ಪ್ರಪತ್ತಿ ಮಾಡುವೆವೋ ಹಾಗೆ ಮೋಕ್ಷಕ್ಕಾಗಿ ಭಗವಂತನಲ್ಲಿ ಪ್ರಪತ್ತಿ ಮಾಡಿದರೆ ಅದರಿಂದ ಪ್ರಸನ್ನನಾದ ಭಗವಂತ ಮೋಕ್ಷವನ್ನೂ ಕರುಣಿಸುವನೆಂದು ಈ ಸಿದ್ಧಾಂತ ಪ್ರತಿಪಾದಿಸುತ್ತದೆ. ಪ್ರಪತ್ತಿಮಾಡಲು ಆವಶ್ಯಕವಾಗಿ ಬೇಕಾದುದೇನು ಎಂದರೆ, ಮೊದಲನೆಯದಾಗಿ ನಮಗೂ ಭಗವಂತನಿಗೂ ಇರುವ ಸಂಬಂಧಜ್ಞಾನ; ಎರಡನೆಯದಾಗಿ ಕರ್ಮ, ಜ್ಞಾನ ಅಥವಾ ಭಕ್ತಿಗಳನ್ನು ಅನುಷ್ಠಿಸಲು ನಮಗೆ ಸಾಮರ್ಥ್ಯವಿಲ್ಲವೆಂಬ ನಿಚ್ಚಳವಾದ ಅರಿವು. ಇದೇ ಆಕಿಂಚನ್ಯ; ಮೂರನೆಯದಾಗಿ ಅವನನ್ನು ಬಿಟ್ಟು ಬೇರೆ ಗತಿಯಿಲ್ಲವೆಂಬ ದೃಢನಿಶ್ಚಯ, ಅವನು ನಮ್ಮನ್ನು ರಕ್ಷಿಸುವನೆಂಬ ಮಹಾವಿಶ್ವಾಸ. ಭಗವಂತನಿಗೆ ಅನುಕೂಲರಾಗಿ ನಡೆದುಕೊಳ್ಳುವುವೆಂದೂ ಅವನಿಗೆ ಪ್ರಾತಿಕೂಲ್ಯವನ್ನು ಆಚರಿಸುವುದಿಲ್ಲವೆಂದೂ ಅಂಥವನು ಸಂಕಲ್ಪ ಮಾಡುತ್ತಾನೆ. ಈ ಎಲ್ಲ ಭಾವನೆಗಳೊಡನೆ ರಕ್ಷಿಸಲ್ಪಡ ಬೇಕಾದ ಆತ್ಮವಸ್ತುವನ್ನು ಆ ಪರಮಾತ್ಮನ ಪಾದಗಳಲ್ಲಿ ಒಪ್ಪಿಸಿ ನಿರ್ಭರನೂ ನಿರ್ಭಯನೂ ಆಗುವನು. ಈ ಪ್ರಪತ್ತಿಯನ್ನ ನುಷ್ಠಿಸಲು ಜಾತಿ, ಕುಲ, ಲಿಂಗ, ಗುಣ ಭೇದಗಳಿಲ್ಲ; ಎಲ್ಲರಿಗೂ ಅಧಿಕಾರವಿದೆಯೆಂದು ಈ ಸಿದ್ಧಾಂತ ಹೇಳುತ್ತದೆ. ಭಕ್ತಿ ಯೋಗಕ್ಕೆ ಅಧಿಕಾರಿಗಳಾದವರು, ಅದಕ್ಕೆ ಅರ್ಹತೆ ಇಲ್ಲದವರು ಎಲ್ಲರೂ ಯಾವ ಭೇದವೂ ಇಲ್ಲದೆ ಭಗವಂತನಲ್ಲಿ ಪ್ರಪತ್ತಿ ಯನ್ನನುಷ್ಠಿಸಬಹುದು. ಭಕ್ತಿಯೋಗದಂತೆ ಅಲ್ಲದೆ ಇದನ್ನು ಒಮ್ಮೆ ಮಾತ್ರ ಒಂದು ಪ್ರಯೋಜನಕ್ಕಾಗಿ ಅನುಷ್ಠಿಸಬೇಕು. ಭಕ್ತಿಯೋಗದಿಂದ ಹೇಗೆ ಇತರ ಪ್ರಯೋಜನಗಳನ್ನು ಪಡೆಯಬಹುದೋ ಹಾಗೆ ಇತರ ಪ್ರಯೋಜನಗಳಿಗಾಗಿಯೂ ಪ್ರಪತ್ತಿ ಮಾಡಬಹುದು.

ಮುಕ್ತನಾದವನು ಭಗವಂತನ ಪರಮಪದವನ್ನು ಸೇರಿ ಆ ಭಗವಂತನ ದಿವ್ಯಾನುಭವದ ಆನಂದದಲ್ಲಿ ಯಾವದಾತ್ಮ ಭಾವಿಯಾಗಿರುವನು ಎಂದು ಈ ಸಿದ್ಧಾಂತ ಶ್ರುತಿ ಪ್ರಮಾಣಗಳಿಗನುಸಾರ ನಿರೂಪಿಸುತ್ತದೆ. ಮುಕ್ತ್ಯವಸ್ಥೆಯಲ್ಲಿಯೂ ಜೀವಾ ತ್ಮರು ಪರಬ್ರಹ್ಮನಿಗಿಂತ ಬೇರೆಯಾಗಿ ಅವನೊಡನೆ ಇರುತ್ತಾ ಅವನ ನಿತ್ಯಕೈಂಕರ್ಯವನ್ನು ಎಂದೆಂದೂ ನಡೆಸುತ್ತಿರುತ್ತಾರೆಂಬುದು ಈ ಸಿದ್ಧಾಂತದ ನಿಶ್ಚಯ. ಈ ಸಿದ್ಧಾಂತದ ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು—

೧) ಶ್ರುತಿ ವಾಕ್ಯಗಳೆಲ್ಲವೂ ಪ್ರಮಾಣವೇ ಆದ ಕಾರಣ ಅವುಗಳಿಗೆಲ್ಲ ಮುಖ್ಯಾರ್ಥವನ್ನು ಹೇಳಿ ಘಟಕಶ್ರುತಿಗಳ ಸಹಾಯದಿಂದ ಭೇದವಾಕ್ಯಗಳಿಗೂ ಅಭೇದ ವಾಕ್ಯಗಳಿಗೂ ಸಮಂಜಸವಾದ ಅರ್ಥ ಹೇಳಬೇಕು. ೨) ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬುವು ಮೂರು ಪ್ರಮಾಣಗಳು. ೩) ಪ್ರಕೃತಿ ಜೀವಾತ್ಮರು, ಮತ್ತು ಭಗವಂತ ಎಂಬ ಈ ಮೂರುತತ್ತ್ವ ಗಳೂ ಒಂದಕ್ಕಿಂತ ಒಂದು ಬೇರೆಯಾಗಿ ಸತ್ಯಭೂತವಾಗಿವೆ. ೪) ಜಗತ್ತು ಎಲ್ಲ ಅವಸ್ಥೆಗಳಲ್ಲಿಯೂ ಸತ್ಯ. ನಮ್ಮ ಅನುಭವವೂ ಎಲ್ಲ ಅವಸ್ಥೆಗಳಲ್ಲಿಯೂ ಸತ್ಯವಾದುದು. ೫) ಪ್ರಕೃತಿಯು ಬ್ರಹ್ಮಾತ್ಮಕವಾದುದು. ಅದು ಸ್ವತಂತ್ರವಾಗಿ ಪರಿಣಾಮ ಹೊಂದು ವುದಿಲ್ಲ. ೬) ಜೀವರುಗಳು ಅನಂತರು, ಪರಸ್ಪರ ಭಿನ್ನರು, ನಿತ್ಯರು, ಜ್ಞಾನಸ್ವರೂಪರು, ಜ್ಞಾನಗುಣಕರು, ದೇಹಾದಿವಿಲಕ್ಷ ಣರು, ಅಣುಸ್ವರೂಪರು, ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವವಿಶಿಷ್ಟರು ಮತ್ತು ಪರಮಾತ್ಮನಿಗೆ ಶೇಷಭೂತರು. ೭) ಬ್ರಹ್ಮ ವಸ್ತು ಸಗುಣವೇ ವಿನಾ ನಿರ್ಗುಣವಲ್ಲ. ಪರಬ್ರಹ್ಮವು ಶ್ರೀಮನ್ನಾರಾಯಣ. ಸಕಲ ಕಲ್ಯಾಣಗುಣ ಪರಿಪೂರ್ಣ, ದೋಷದೂರ, ಸರ್ವಶಕ್ತ, ಸರ್ವಕಾರಣ, ಸರ್ವಶೇಷಿ, ಸರ್ವಾಧಾರ, ಸರ್ವನಿಯಾಮಕ, ಸರ್ವಶರೀರಿ, ೮) ಬದ್ಧಾವಸ್ಥೆಯಲ್ಲಿ ಜೀವಾತ್ಮರು

ಗಳ ಧರ್ಮಭೂತಜ್ಞಾನ ಅವರ ಅನಾದಿ ಕರ್ಮದ ಕಾರಣ ಸಂಕುಚಿತವಾಗಿದೆ. ಮುಕ್ತ್ಯವಸ್ಥೆಯಲ್ಲಿ ಈ ಧರ್ಮಭೂತಜ್ಞಾನ ವಿಕಾಸಗೊಳ್ಳುತ್ತದೆ. ಆದರೆ ಜೀವಾತ್ಮರ ಸ್ವರೂಪಜ್ಞಾನ ಎಂದೆಂದೂ ಒಂದೇ ಬಗೆಯಾಗಿ ಶುದ್ಧವಾಗಿರುತ್ತದೆ. ೯) ಭಗವಂತನ ನಿತ್ಯಾನುಭವ ಮತ್ತು ನಿತ್ಯಕೈಂಕರ್ಯವೇ ಚೇತನರೆಲ್ಲರ ಪರಮಪುರುಷಾರ್ಥ. ೧೦) ಕರ್ಮಯೋಗ ಜ್ಞಾನಯೋಗಗಳನ್ನು ಅಂಗಗಳನ್ನಾಗಿ ಹೊಂದಿರುವ ಭಕ್ತಿಯೋಗವು ಹೇಗೆ ಮೋಕ್ಷೋಪಾಯವೋ ಹಾಗೆಯೇ ಪ್ರಪತ್ತಿಯೂ ಮೋಕ್ಷೋಪಾಯ.

ವಿಶಿಷ್ಟಾದ್ವೈತದರ್ಶನ ಒಂದು ಬಗೆಯ ಜೀವನಕ್ರಮ. 'ನಾನು, ನನಗೆ, ನನ್ನದು' ಎಂಬ ಭಾವವನ್ನು ಬಿಟ್ಟು ಎಲ್ಲವೂ ಭಗವಂತನದು ಎಂಬ ಭಾವವನ್ನು ಬೆಳೆಸಿಕೊಳ್ಳಲು ಅದು ದಾರಿ ತೋರುತ್ತದೆ. ಎಲ್ಲ ಚೇತನಾಚೇತನಗಳಲ್ಲಿ ಅಂತರ್ಯಾಮಿಯಾಗಿರುವ ಆ ಪರಮಾತ್ಮನನ್ನು ಗುರುತಿಸಿ ಅವನಿಗೆ ಅನುಕೂಲವಾಗಿರುವಂತೆ ನಡೆಯಬೇಕೆಂದು ಈ ದರ್ಶನ ಹೇಳುತ್ತದೆ.

'ಚರಾಚರಾಣಿಭೂತಾನಿ ಸರ್ವಾಣಿಭಗವದ್ವಪುಃ।
ಅತಸ್ತದಾನುಕೂಲ್ಯಂ ಮೇ ಕರ್ತವ್ಯಮಿತಿ ನಿಶ್ಚಯಃ'॥

ಎಂಬುದು ಅವರ ಆದೇಶ. ಲೋಕದಲ್ಲಿರುವ ಸಮಸ್ತ ಪದಾರ್ಥಗಳಲ್ಲಿಯೂ ಸರ್ವಾಂತರನನ್ನೇ ಕಂಡು ಲೋಕದಲ್ಲಿರುವ ಸಮಸ್ತರಲ್ಲಿಯೂ ಗೌರವಭಾವನೆ ಬೆಳೆಸಿ, ಎಲ್ಲರಿಗೂ ಅನುಕೂಲವಾಗುವಂತೆ ಯಾರೊಬ್ಬರಿಗೂ ಅನಾನುಕೂಲವಾಗದಂತೆ ನಡೆದು ತನ್ನೆಲ್ಲ ವ್ಯಾಪಾರಗಳಿಂದ ಭಗವಂತನನ್ನು ಆರಾಧಿಸಬೇಕೆಂಬುದು ಈ ಸಿದ್ಧಾಂತದ ಉಪದೇಶ.

## ಶಕ್ತಿವಿಶಿಷ್ಟಾದ್ವೈತ

**—ವಿದ್ವಾನ್ ವೈ. ವಿಶ್ವನಾಥಶಾಸ್ತ್ರೀ**

('ಶ್ರೀಕರಭಾಷ್ಯ ಶ್ರೀಕಂಠ ಭಾಷ್ಯಗಳಲ್ಲಿ ಪ್ರತಿಪಾದಿತವಾಗಿರುವಂತೆ')

ಧರ್ಮಾರ್ಥಕಾಮಮೋಕ್ಷಗಳೆಂದು ಪ್ರಸಿದ್ಧವಾದ ನಾಲ್ಕುವಿಧ ಪುರುಷಾರ್ಥಗಳಲ್ಲಿ, ದುಃಖಸಂಪರ್ಕವಿಲ್ಲದ ನಿರಂತರ ನಿರತಿಶಯ ದಿವ್ಯಸುಖಾನುಭವರೂಪವೂ, ನಿತ್ಯವೂ ಆಗಿರುವುದರಿಂದ ಮೋಕ್ಷವೇ ಮುಖ್ಯವಾದ ಪುರುಷಾರ್ಥವೆಂದು ಪರಿಗಣಿಸಲ್ಪಟ್ಟಿದೆ. **'ತಮೇವವಿದಿತ್ವಾಽತಿಮೃತ್ಯುಮೇತಿ।ನಾನ್ಯಃಪಂಥಾ ವಿದ್ಯತೇಽಯನಾಯ'** ಇವೇ ಮುಂತಾದ ಅನೇಕ ಪ್ರಮಾಣಗಳಿಂದ ಈ ಮೋಕ್ಷಕ್ಕೆ ಪರಬ್ರಹ್ಮಜ್ಞಾನವೇ ಕಾರಣವೆಂದು ತಿಳಿದುಬರುತ್ತದೆ. ಈ ಪರಬ್ರಹ್ಮಸ್ವರೂಪವನ್ನು ಉಪನಿಷತ್ತುಗಳೆಂಬ ವೇದಭಾಗಗಳು ಪ್ರತಿಪಾದನೆ ಮಾಡುತ್ತವೆ. ಈ ಉಪನಿಷತ್ತುಗಳ ಸಿದ್ಧಾಂತರೂಪವಾದ ಅರ್ಥವು ಅತಿಗಹನವಾಗಿರುವುದರಿಂದ ನ್ಯಾಯಬದ್ಧವಾಗಿ ಇವುಗಳ ತಾತ್ಪರ್ಯಾರ್ಥವನ್ನು ನಿರ್ಣಯ ಮಾಡುವುದಕ್ಕಾಗಿ ಸರ್ವಜ್ಞರೂ ಪರಮಕಾರಣಿಕರೂ ಆದ ಪೂಜ್ಯ ಭಗವದ್ಬಾದರಾಯಣಾಚಾರ್ಯರೆಂಬ ಶ್ರೀಮತ್ ವ್ಯಾಸಮುನಿಗಳು **'ಅಥಾತೋಬ್ರಹ್ಮಜಿಜ್ಞಾಸಾ'** ಎಂಬ ಸೂತ್ರವೇ ಮೊದಲಿರುವ ನಾಲ್ಕು ಅಧ್ಯಾಯಗಳುಳ್ಳ ವೇದಾಂತಶಾಸ್ತ್ರವನ್ನು ಸೂತ್ರರೂಪವಾಗಿ ರಚಿಸಿ ಮೋಕ್ಷಾರ್ಥಿಗಳಿಗೆ ತತ್ತ್ವಜ್ಞಾನಾನುಗ್ರಹದಿಂದ ಮಹೋಪಕಾರವನ್ನು ಮಾಡಿರುತ್ತಾರೆ.

ಅತಿಗಂಭೀರವಾದ ಈ ವೇದಾಂತ ಸೂತ್ರಗಳಿಗೆ ಅನೇಕ ಆಚಾರ್ಯರು ಭಾಷ್ಯಗಳನ್ನು ಬರೆದಿರುತ್ತಾರೆ. ಶಿವಭಕ್ತಾಗ್ರೇಸರರಾದ ಶ್ರೀಶ್ರೀಕಂಠಾಚಾರ್ಯರೂ ಮತ್ತು ಶ್ರೀಶ್ರೀಪತಿಪಂಡಿತಾಚಾರ್ಯರೂ ಸಹ ಈ ವ್ಯಾಸಸೂತ್ರಗಳಿಗೆ ಸಗುಣ ಶಿವಪರವಾಗಿ ಭಾಷ್ಯವನ್ನು ರಚಿಸಿರುವರು. ಶ್ರೀಶ್ರೀಪತಿಪಂಡಿತಾಚಾರ್ಯರು ತಮ್ಮ ಭಾಷ್ಯಕ್ಕೆ 'ಶ್ರೀಕರ' ಭಾಷ್ಯವೆಂದು ಹೆಸರಿಸಿರುವರು. ಈ ಎರಡು ಭಾಷ್ಯಗಳಲ್ಲಿಯೂ ಶಕ್ತಿವಿಶಿಷ್ಟಾದ್ವೈತಸಿದ್ಧಾಂತದ ಅನೇಕ ಅಂಶಗಳು ಪ್ರತಿಪಾದಿತವಾಗಿರುತ್ತವೆ.

**ಶೈವಾಗಮ ಪ್ರಾಮಾಣ್ಯವಿಚಾರ**

ಈ ಎರಡು ಭಾಷ್ಯಗಳಲ್ಲಿಯೂ ಶೈವಾಗಮಗಳಿಗೆ ವೇದಸಮವಾದ ಪ್ರಾಮಾಣ್ಯವನ್ನು ಪ್ರತಿಪಾದನೆ ಮಾಡಿರುತ್ತಾರೆ. ಕಾಮಿಕ ಮೊದಲು ವಾತುಲ ಕೊನೆಯಾಗಿರುವ ಇಪ್ಪತ್ತೆಂಟು ಆಗಮಗಳಿಗೆ ಶೈವಾಗಮವೆಂದು ಹೆಸರು.

**'ಅಸ್ಯಮಹತೋಭೂತಸ್ಯ ನಿಶ್ವಸಿತಮೇತತ್ ಯದೃಗ್ವೇದೋ ಯಜುರ್ವೇದಃ ಸಾಮವೇದಃ'** ಎಂಬ ಶ್ರುತಿವಚನದಿಂದ ವೇದರಾಶಿಯು ಪರಶಿವನಿಂದ ನಿಟ್ಟುಸಿರಿನಂತೆ ಪ್ರಯತ್ನವಿಲ್ಲದೆ ಉತ್ಪನ್ನವಾಯಿತೆಂದು ತಿಳಿಯುವುದರಿಂದ ಈಶ್ವರನಿಂದ ನಿರ್ಮಿತವಾದದ್ದೆಂದು ಸಿದ್ಧವಾಗಿದೆ.

'ಅಷ್ಟಾದಶಪುರಾಣಾನಾಂ ಕರ್ತಾಸತ್ಯವತೀಸುತಃ ।
ಕಾಮಿಕಾದಿಪ್ರಭೇದಾನಾಂ ಯಥಾ ದೇವೋಮಹೇಶ್ವರಃ'

ಎಂಬ ಸೂತಸಂಹಿತಾ ವಚನದಿಂದ ಶೈವಾಗಮಗಳು ಶಿವನಿರ್ಮಿತವೆಂದು ಸಿದ್ಧವಾಗುತ್ತದೆ.

ಹೀಗೆ ವೇದಗಳಿಗೂ ಶೈವಾಗಮಗಳಿಗೂ ಶಿವನೊಬ್ಬನೇ ಕರ್ತೃವಾಗಿರುವುದರಿಂದಲೂ, ಪಂಚಬ್ರಹ್ಮ-ಪ್ರಣವ-ಪಂಚಾಕ್ಷರೀ ಮೊದಲಾದ ಮಂತ್ರಗಳೂ, ಲಿಂಗಾರ್ಚನ-ಭಸ್ಮಧಾರಣಾದಿ ಧರ್ಮಗಳೂ ವೇದದಲ್ಲಿಯೂ ಶೈವಾಗಮಗಳಲ್ಲಿಯೂ

ಪ್ರತಿಪಾದಿತವಾಗಿರುವುದರಿಂದಲೂ ವೇದಗಳೂ ಶೈವಾಗಮಗಳೂ ಸಮಪ್ರಮಾಣವಾಗಿವೆ ಎಂದು ಶ್ರೀಶ್ರೀಕಂಠಾಚಾರ್ಯರು ಪ್ರತಿಪಾದಿಸಿದ್ದಾರೆ. ಶ್ರೀಶ್ರೀಪತಿಪಂಡಿತರೂ ಸಹ ತಮ್ಮ ಭಾಷ್ಯದಲ್ಲಿ ಈ ವಿಷಯವನ್ನು ಹೇಳಿರುವುದಲ್ಲದೆ ಇನ್ನೂ ಕೆಲವು ವಿಶೇಷಾಂಶಗಳನ್ನೂ ಪ್ರತಿಪಾದಿಸಿರುತ್ತಾರೆ. ಅದೇನೆಂದರೆ: **'ಸದ್ಯೋಜಾತೇನ ಋಗ್ವೇದಂ ವಾಮದೇವೇನ ಯಾಜುಷಂ'** ಎಂದು ಸ್ಮೃತಿಯಲ್ಲಿ ಪರಮೇಶ್ವರನ ಒಂದೊಂದು ಮುಖದಿಂದ ಒಂದೊಂದು ವೇದಗಳ ನಿರ್ಮಾಣವನ್ನು ಹೇಳಿ

> 'ಈಶಾನೇನ ಮುಖೇನೈವ ಕಾಮಿಕಾದ್ಯಾಗಮಾಂಸ್ತಥಾ ।
> ಜನಯಾಮಾಸವಿಶ್ವೇಶಃ ಸರ್ವಸಿದ್ಧಿಪ್ರದಾಯಕಃ ॥'

ಎಂದು ಕಾಮಿಕ ಮೊದಲಾದ ಆಗಮಗಳು ಸಾಕ್ಷಾತ್ ಪರಮೇಶ್ವರನ ಈಶಾನ್ಯ ಮುಖದಿಂದ ನಿರ್ಮಿತವಾದವು ಎಂದು ಪ್ರತಿಪಾದಿಸಿರುತ್ತಾರೆ. ಮತ್ತು ಶೈವಾಗಮಗಳಲ್ಲಿ ಪ್ರಧಾನವಾಗಿ ಪ್ರತಿಪಾದಿತವಾಗಿರುವ **'ಪತಿ-ಪಶು-ಪಾಶ'**ಗಳೆಂಬ ಮೂರು ಪದಾರ್ಥಗಳೂ ವೇದದಲ್ಲಿ :

> 'ಏತಾವಂತೋ ವೈಪಶವಃ ದ್ವಿಪಾದಶ್ಚತುಷ್ಪಾದಃ,
> ಏಷಾಮೀಶೇಪತಿಃಪಶೂನಾಂ, ಧ್ಯಾನ ನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ॥'

ಇವೇ ಮುಂತಾದ ವಚನಗಳಿಂದ ಪ್ರತಿಪಾದಿತವಾಗಿರುವುದರಿಂದ ಶೈವಾಗಮಗಳು ವೇದ ಸಮಪ್ರಮಾಣಗಳೆಂದು ಸಮರ್ಥನೆ ಮಾಡಿರುತ್ತಾರೆ.

**ಶಿವನೇ ವೇದಾಂತ ಸೂತ್ರ ಪ್ರತಿಪಾದ್ಯವಾದ ಪರಬ್ರಹ್ಮ ವಸ್ತುವು**

**'ಅಥಾತೋ ಬ್ರಹ್ಮಜಿಜ್ಞಾಸಾ'** ಎಂಬ ಮೊದಲಿನ ವ್ಯಾಸಸೂತ್ರದಲ್ಲಿರುವ ಬ್ರಹ್ಮಪದಕ್ಕೆ ಶಿವನೇ ಅರ್ಥವೆಂದು ಶ್ರೀಶ್ರೀಕಂಠಾಚಾರ್ಯರು ಹೀಗೆ ಸಮರ್ಥನೆ ಮಾಡಿರುತ್ತಾರೆ:

> 'ಯತೋವಾ ಇಮಾನಿಭೂತಾನಿ ಜಾಯಂತೇ ಯೇನ ಜಾತಾನಿಜೀವಂತಿ ।
> ಯತ್ಪ್ರಯಂತ್ಯಭಿಸಂ ವಿಶಂತಿ । ತದ್ಬ್ರಹ್ಮ ॥'

ಇವೇ ಮುಂತಾದ ಉಪನಿಷದ್ವಾಕ್ಯಗಳು ಸಕಲವಸ್ತುಗಳ ಉತ್ಪತ್ತಿ–ಸ್ಥಿತಿ–ಲಯಗಳಿಗೆ ಕಾರಣವಾದ ವಸ್ತುವೇ ಬ್ರಹ್ಮವೆಂದು ಬ್ರಹ್ಮ ಲಕ್ಷಣವನ್ನು ಬೋಧಿಸುತ್ತವೆ. ಸಕಲ ಪ್ರಪಂಚಕ್ಕೂ ಕಾರಣವಾದ ಸೃಷ್ಟಿಪೂರ್ವದಲ್ಲಿರುವ ಈ ಬ್ರಹ್ಮವಸ್ತುವು ಯಾವುದೆಂದು ವಿಚಾರಮಾಡಿದರೆ **'ಯದಾತಮಸ್ತನ್ನದಿವಾ ನರಾತ್ರಿರ್ನಸನ್ನಚಾಸನ್ ಶಿವ ಏವ ಕೇವಲಃ'** ಎಂಬ ಶ್ವೇತಾಶ್ವತರೋಪನಿಷತ್ತಿನ ಮಂತ್ರವು, ಯಾವ ಕಾಲದಲ್ಲಿ ಸೂರ್ಯಚಂದ್ರಾದಿಗಳ ಪ್ರಕಾಶವಿಲ್ಲದ ಕಾರಣ ಹಗಲು ರಾತ್ರಿಗಳೆಂಬ ವಿಭಾಗವಿಲ್ಲದೆ ಅಂಧಕಾರ ಮಾತ್ರವೇ ಇರುವುದೊ ಅಂತಹ ಪ್ರಳಯಕಾಲದಲ್ಲಿ ಶಿವನೊಬ್ಬನೇ ಸಾಕ್ಷಿಯಾಗಿರುತ್ತಾನೆ. ಎಂದು ಬೋಧಿಸುವುದರಿಂದ ಶಿವನೇ ಜಗತ್ಕಾರಣವಾದ ಬ್ರಹ್ಮವಸ್ತುವೆಂದು ಸಿದ್ಧವಾಗುತ್ತದೆ. ಶ್ರೀಶ್ರೀಪತಿಪಂಡಿತಾಚಾರ್ಯರೂ ಸಹ

> 'ಮಯ್ಯೇವ ಸಕಲಂ ಜಾತಂ ಮಯಿಸರ್ವಂ ಪ್ರತಿಷ್ಠಿತಂ ।
> ಮಯಿಸರ್ವಂ ಲಯಂಯಾತಿ ತದ್ಬ್ರಹ್ಮಾದ್ವಯಮಸ್ಮ್ಯಹಂ ॥'

ಇವೇ ಮುಂತಾದ ಅನೇಕ ಪ್ರಮಾಣಗಳಿಂದ ಶಿವನೇ ಪ್ರಪಂಚದ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನೆಂದು ತಿಳಿಯುವುದರಿಂದ ಶಿವನೆ ಪರಬ್ರಹ್ಮನೆಂದು ಸಮರ್ಥನೆ ಮಾಡಿರುತ್ತಾರೆ.

**ಸಗುಣಬ್ರಹ್ಮ**

ಈ ಇಬ್ಬರು ಆಚಾರ್ಯರ ಸಿದ್ಧಾಂತದಲ್ಲಿಯೂ ಪರಬ್ರಹ್ಮರೂಪನಾದ ಪರಶಿವನು ನಿರ್ಗುಣ ಸ್ವರೂಪನಲ್ಲ. ಸಗುಣ ಸ್ವರೂಪನೇ ಆಗಿರುತ್ತಾನೆ, ಯಾಕೆಂದರೆ : **'ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ'** ಎಂಬ ಉಪನಿಷದ್ವಾಕ್ಯವು ಶಿವನಿಗೆ ಜ್ಞಾನ-ಶಕ್ತಿ, ಬಲಶಕ್ತಿ, ಕ್ರಿಯಾಶಕ್ತಿ ಮುಂತಾದ ಅನೇಕ ವಿಧವಾದ ಶಕ್ತಿ ಸಂಪತ್ತನ್ನು ತಿಳಿಸಿ ಶಕ್ತಿಯು **'ಸ್ವಾಭಾವಿಕೀ'** ಎಂದೂ ಹೇಳಿರುವುದರಿಂದ ಶಿವನು ಸರ್ವಕಾಲದಲ್ಲಿಯೂ ಶಕ್ತಿಸಂಪನ್ನನೇ ಹೊರತು ಯಾವಾಗಲೂ ನಿರ್ಗುಣನಲ್ಲವೆಂದು ತಿಳಿಯುತ್ತದೆ.

ಮತ್ತು **'ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ'** ಇವೇ ಮುಂತಾದ ಉಪನಿಷದ್ವಾಕ್ಯಗಳಿಂದ ಉಮಾಸಹಿತವಾದ ಮತ್ತು ನೀಲವರ್ಣದ ಕಂಠವುಳ್ಳ, ಮೂರು ಕಣ್ಣುಗಳುಳ್ಳ ಪ್ರಶಾಂತವಾದ ದಿವ್ಯಮಂಗಳ ವಿಗ್ರಹವಿಶಿಷ್ಟನೆಂದು ತಿಳಿಯುವುದರಿಂದ ಶಿವನು ಸಗುಣನೇ ಆಗಿರುತ್ತಾನೆ.

**ಪರಶಕ್ತಿಯ ಮಹಿಮೆ**

ಶ್ರೀಶ್ರೀಕಂಠಾಚಾರ್ಯರು ತಮ್ಮ ಭಾಷ್ಯದ ಅನೇಕಪ್ರಕರಣಗಳಲ್ಲಿ ಪರಶಕ್ತಿಯ ಮಹಿಮೆಯನ್ನು ಪ್ರತಿಪಾದಿಸಿರು

ತ್ತಾರೆ. **'ಸರ್ವತ್ರ ಪ್ರಸಿದ್ಧೋಪದೇಶಾತ್'** ಎಂಬ ಅಧಿಕರಣದಲ್ಲಿ (೧-೨-೧) ಶಕ್ತಿಯ ವಿಚಾರವಾಗಿ ಹೀಗೆ ನಿರೂಪಣೆ ಮಾಡಿರುತ್ತಾರೆ. ಶ್ರುತಿ-ಸ್ಮೃತಿ-ಇತಿಹಾಸ-ಪುರಾಣ ಮೊದಲಾದ ಪ್ರಮಾಣಗಳ ಆಧಾರದಿಂದ ಚೇತನಾಚೇತನಾತ್ಮಕವಾದ ಪ್ರಪಂಚವೆಲ್ಲವೂ ಪರಶಕ್ತಿಯ ಪರಿಣಾಮವಾಗಿರುತ್ತದೆ. ಈ ಪರಶಕ್ತಿಯು ಪರಮೇಶ್ವರನಲ್ಲಿರುವ ಮಹಾಜ್ಞಾನ-ಮಹಾನಂದ-ಮಹಾಸತ್ತಾರೂಪವಾಗಿದ್ದು ಪರಶಿವನಿಗೆ ಸ್ವರೂಪವೂ ಗುಣವೂ ಆಗಿರುತ್ತದೆ. ಈ ಪರಶಕ್ತಿಯ ವಿಷಯದಲ್ಲಿ ಹೆಚ್ಚು ಮಾತುಗಳನ್ನು ಹೇಳಿ ಪ್ರಯೋಜನವೇನು ? ಈ ಪರಶಕ್ತಿ ಇಲ್ಲದೆ ಪರಶಿವನು ಸರ್ವಜ್ಞನೂ ಸರ್ವಕಾರಣನೂ ಎಲ್ಲರಿಗೂ ಅನುಗ್ರಹ ಮಾಡುವವನೂ ಎಲ್ಲರಿಂದಲೂ ಪೂಜಿಸಲ್ಪಡುವವನೂ ಎಲ್ಲ ಪ್ರದೇಶಗಳಲ್ಲಿ ವ್ಯಾಪಿಸಿಕೊಂಡಿರುವವನೂ ಆಗಲಾರನು ಮತ್ತು ಮಹೇಶ್ವರ-ಮಹಾದೇವ ಇವೇ ಮೊದಲಾದ ಶ್ರೇಷ್ಠ ಪದಗಳಿಂದ ಹೇಳಲು ಯೋಗ್ಯನಾದವನೂ ಸಹ ಆಗಲಾರನು.

'ಶಕ್ತಯೋಽಸ್ಯ ಜಗತ್ಸರ್ವಂ ಶಕ್ತಿಮಾಂಸ್ತು ಮಹೇಶ್ವರಃ ।
ತಾದಾತ್ಮ್ಯಮನಯೋರ್ನಿತ್ಯಂ ವಹ್ನಿದಾಹಕಯೋರಿವ'॥

ತಾತ್ಪರ್ಯ—ಈ ಪ್ರಪಂಚವೆಲ್ಲವೂ ಪರಮೇಶ್ವರನ ಶಕ್ತಿಯ ಪರಿಣಾಮವೇ ಆಗಿದೆ. ಬೆಂಕಿಯಲ್ಲಿ ಅಡಗಿರುವ ದಾಹಶಕ್ತಿಯನ್ನು ಬೆಂಕಿಯಿಂದ ಬೇರ್ಪಡಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆ ಈ ಪರಶಕ್ತಿಯು ಪರಮೇಶ್ವರನಿಂದ ಬೇರ್ಪಡಿಸಲು ಸಾಧ್ಯವಿಲ್ಲದಂತೆ ಅವನಲ್ಲಿ ಅಭಿನ್ನವಾಗಿರುವುದು. **'ಏಕಾನೇಕ ಸ್ವರೂಪೇಣ ಭಾತಿಭಾನೋರಿವ ಪ್ರಭಾ'** ಸೂರ್ಯ ಬಿಂಬದಲ್ಲಿ ಪ್ರಭೆಯಂತೆ ಈ ಪರಶಕ್ತಿಯು ಪರಶಿವನಲ್ಲಿ ಒಂದೇ ರೂಪದಿಂದಲೂ, ಮತ್ತು ಪ್ರಪಂಚವನ್ನು ನಿರ್ಮಾಣ ಮಾಡುವುದು ಪಾಲನೆಮಾಡುವುದು ಮೊದಲಾದ ನಾನಾ ರೂಪವಾಗಿಯೂ ಇರುತ್ತದೆ. **'ಯ ಇಮಾನ್ ಲೋಕಾನೀಶತೇ ಈಶಿನೀಭಿಃ'** ಪರಶಿವನು ನಾನಾರೂಪವಾದ ಈ ಶಕ್ತಿಯ ಬಲದಿಂದಲೇ ಪ್ರಪಂಚಕ್ಕೆ ಅಧಿಪತಿಯಾಗಿರುತ್ತಾನೆ. ಹೀಗೆ ಅನೇಕ ವಿಧವಾಗಿ ಪರಶಕ್ತಿಯ ಮಹಿಮೆಯನ್ನು ನಿರೂಪಣೆ ಮಾಡಿರುತ್ತಾರೆ.

ಶ್ರೀಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಈ ಪರಶಕ್ತಿಯು ಆಯಾಯಕಾರ್ಯಗಳ ನಿರ್ವಹಣೆಗಾಗಿ ಅನೇಕ ಚೇತನ ರೂಪವನ್ನು ಹೊಂದುವುದೆಂದೂ ಪ್ರಮಾಣ ವಚನದಿಂದ ಹೀಗೆ ನಿರೂಪಣೆ ಮಾಡಿರುತ್ತಾರೆ.

'ಭೋಗೇಭವಾನೀ ಪುರುಷೇಚವಿಷ್ಣುಃ ಕ್ರೋಧೇಚಕಾಲೀಸಮರೇಚದುರ್ಗಾ।
ಏಕೈವಶಕ್ತಿಃ ಪರಮೇಶ್ವರಸ್ಯ ಭಿನ್ನಾಚತುರ್ಧಾವಿನಿಯೋಗಕಾಲೇ'

ತಾತ್ಪರ್ಯ—ಒಂದೇ ಶಕ್ತಿಯು ಪರಮೇಶ್ವರನಿಗೆ ಭೋಗಕಾಲದಲ್ಲಿ ಭವಾನೀ ರೂಪವಾಗಿಯೂ, ಪುರುಷರ ಕಾರ್ಯಕ್ಕೆ ಅನುಕೂಲವಾಗಿ ವಿಷ್ಣುರೂಪವಾಗಿಯೂ, ಸಿಟ್ಟಿನಕಾಲದಲ್ಲಿ ಕಾಲೀರೂಪವಾಗಿಯೂ. ಯುದ್ಧಕಾಲದಲ್ಲಿ ದುರ್ಗಾರೂಪವಾಗಿಯೂ ಆಯಾಯಕಾರ್ಯಗಳನ್ನು ನಿರ್ವಾಹಮಾಡುತ್ತದೆ.

**ಲಿಂಗಧಾರಣ ವಿಚಾರ**

ಶ್ರೀಕಂಠಭಾಷ್ಯದಲ್ಲಿ ಲಿಂಗಧಾರಣ ವಿಚಾರವು ಎಲ್ಲಿಯೂ ಕಂಡುಬರುವುದಿಲ್ಲ. ಶ್ರೇಷ್ಠವಾದ ಕೆಲವು ಧರ್ಮಗಳು ವೇದದಲ್ಲಿಯೂ ಮತ್ತು ಆಗಮದಲ್ಲಿಯೂ ಸಮವಾಗಿ ಹೇಳಲ್ಪಟ್ಟಿವೆ ಎಂದು ಪ್ರತಿಪಾದಿಸುವ ಸಂದರ್ಭದಲ್ಲಿ **''ಪತ್ಯುರಸಾಮಂಜಸ್ಯಾತ್'** (೨-೨-೮) ಎಂಬ ಅಧಿಕರಣದಲ್ಲಿ **'ಭಸ್ಮೋದ್ಧೂಳನ-ತ್ರಿಪುಂಡ್ರಧಾರಣ-ಲಿಂಗಾರ್ಚನ-ರುದ್ರಾಕ್ಷಧಾರಣಾದಿ ಪರಧರ್ಮಾಣಾಂ'** ಎಂಬ ಭಾಗದಲ್ಲಿ ಲಿಂಗಾರ್ಚನವೆಂಬ ಪದವಿದೆ. ಸ್ಪಷ್ಟವಾಗಿ ಲಿಂಗಧಾರಣ ಪದವಿರುವುದಿಲ್ಲ. ಶ್ರೀಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಅನೇಕ ಸ್ಥಳಗಳಲ್ಲಿ ಲಿಂಗಧಾರಣೆಯನ್ನು ಪ್ರತಿಪಾದನೆಮಾಡಿರುತ್ತಾರೆ. **'ಅಥಾತೋ ಬ್ರಹ್ಮ ಜಿಜ್ಞಾಸಾ'** ಎಂಬ ಮೊದಲ ಸೂತ್ರದಲ್ಲಿರುವ 'ಅಥ' ಪದಕ್ಕೆ ಪರಶಿವನ ಇಷ್ಟಲಿಂಗಧಾರಣರೂಪವಾದ ಪಾಶುಪತದೀಕ್ಷಾನಂತರವೆಂದು ಅರ್ಥವನ್ನು ಬರೆದಿರುತ್ತಾರೆ. ಮತ್ತು ಕೆಲವು ಸೂತ್ರಗಳಿಗೂ, ಶ್ರುತಿವಾಕ್ಯಗಳಿಗೂ ಲಿಂಗಧಾರಣ ಪರವಾಗಿ ಭಾಷ್ಯವನ್ನು ಬರೆದಿರುತ್ತಾರೆ.

'ಉಪಾಸನಾ ತ್ರೈವಿಧ್ಯಾತ್' (೧-೧-ಸೂತ್ರ ೩೨) ಎಂಬ ಸೂತ್ರ ಭಾಗಕ್ಕೆ ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗವೆಂಬ ಹೆಸರುಳ್ಳ ಪರಶಿವಬ್ರಹ್ಮೋಪಾಸನೆಯು ಮೂರು ವಿಧವೆಂದು ಪ್ರತಿಪಾದಿಸಿರುತ್ತಾರೆ. **'ತಸ್ಯಾಭಿಧ್ಯಾನಾದ್ಯೋಜನಾತ್ತತ್ವಭಾವಾದ್ಭೂಯಶ್ಚಾಂತೇವಿಶ್ವಮಾಯಾ ನಿವೃತ್ತಿಃ'** ಎಂಬ ಶ್ವೇತಾಶ್ವತರೋಪನಿಷತ್ತಿನ ವಾಕ್ಯದಲ್ಲಿ 'ಯೋಜನಾತ್' ಎಂದರೆ ಶರೀರದಲ್ಲಿ ಧಾರಣೆ ಮಾಡುವುದರಿಂದ ಎಂದು ಬಾಹ್ಯಲಿಂಗಧಾರಣೆಯೂ **'ಅಭೀಧ್ಯಾನಾತ್'** ಎಂದರೆ ಮನಸ್ಸಿನಲ್ಲಿ ಧ್ಯಾನ ಮಾಡುವುದರಿಂದ ಎಂದು ಅಂತರ್ಲಿಂಗಧಾರಣೆಯೂ ಪ್ರತಿಪಾದಿತವಾಗುತ್ತದೆ ಎಂದು ಹೇಳಿರುತ್ತಾರೆ. ಮತ್ತು **'ಸರ್ವತ್ರ ಪ್ರಸಿದ್ಧೋಪದೇಶಾತ್'** (೧-೨-೧-) ಎಂಬ ಸೂತ್ರದ ಭಾಷ್ಯದಲ್ಲಿ ಹೀಗೆ ಪ್ರತಿಪಾದನೆ ಮಾಡಿರುತ್ತಾರೆ. ಹಿಂದೆ ಅಲ್ಲಲ್ಲಿ ಪ್ರಾಸಂಗಿಕವಾಗಿ ಸೂತ್ರಗಳಲ್ಲಿ ಲಿಂಗಧಾರಣೆಯನ್ನು ಪ್ರತಿಪಾದಿಸಿದ್ದರೂ ಸ್ಪಷ್ಟವಾಗಿ ಬಾಹ್ಯಲಿಂಗಧಾರಣೆಯನ್ನು ಪ್ರತಿಪಾದಿಸುವುದಕ್ಕಾಗಿಯೇ

ಈ ಸೂತ್ರವು ಪ್ರವೃತ್ತವಾಗಿದೆ. 'ಸರ್ವತ್ರ' ಎಂದರೆ ವೇದ-ವೇದಾಂತ-ಆಗಮ-ಸ್ಮೃತಿ-ಪುರಾಣ-ಇತಿಹಾಸಾದಿಗಳಲ್ಲಿ ಪ್ರಸಿದ್ಧವಾದ ಪರಶಿವಲಿಂಗಧಾರಣೆಯು ಉಪಾಸನೆಯು ವಿಹಿತವಾಗಿರುತ್ತದೆ.

ತೈತ್ತಿರೀಯೋಪನಿಷತ್ತಿನಲ್ಲಿ **'ನಿಧನಪತಯೇ ನಮಃ'** ಎಂದು ಶುರುಮಾಡಿ **'ಊರ್ಧ್ವಲಿಂಗಾಯನಮಃ'** ಮುಂತಾದ ವಾಕ್ಯಗಳಿಂದ ಲಿಂಗಕ್ಕೆ ಸರ್ವಾತ್ಮಕತ್ವವನ್ನು ಬೋಧಿಸಿ. **'ಏತತ್ಸೋಮಸ್ಯಸೂರ್ಯಸ್ಯ ಸರ್ವಲಿಂಗ ಸ್ಥಾಪಯ ತಿ। ಪಾಣಿಮಂತ್ರಂ ಪವಿತ್ರಂ'** ಎಂಬ ವಾಕ್ಯದಿಂದ ಬಾಹ್ಯಲಿಂಗಧಾರಣೆಯು ವಿಹಿತವಾಗಿದೆ. ಈ ವಾಕ್ಯದಲ್ಲಿ 'ಸೋಮಸ್ಯ' ಎಂಬ ಪದಕ್ಕೆ **ಉಮಯಾ ಸಹಿತಃ ಸೋಮಃ** ಎಂದು ವ್ಯುತ್ಪತ್ತಿಯಿಂದ 'ಪಾರ್ವತೀಸಹಿತ ಪರಶಿವ' ಎಂಬರ್ಥವು. ಸೂರ್ಯಮಂಡಲ ಮಧ್ಯದಲ್ಲಿರುವ ಉಮಾಸಹಿತನಾದ ಪರಶಿವನ ಸ್ಫಟಿಕಲಿಂಗ ಮುಂತಾದ ನಾನಾಬಗೆಯ ಲಿಂಗವನ್ನು ಭೂಮಿಯಲ್ಲಿ ಸ್ಥಾಪಿಸುವುದು. ಮತ್ತು ಶರೀರದಲ್ಲಿ ಧರಿಸುವುದು ಎಂದು ಈ ವಾಕ್ಯವು ಬೋಧಿಸುತ್ತದೆ. 'ಪಾಣಿಮಂತ್ರಂ' ಎಂಬಲ್ಲಿ ಮಂತ್ರಪದಕ್ಕೆ **'ಮನನಾತ್ ತ್ರಾತ್ರಾಯತೇ'** ಎಂಬವ್ಯುತ್ಪತ್ತಿಯಿಂದ ನಿರಂತರವಾಗಿ ಚಿಂತನೆ ಮಾಡುವುದರಿಂದ ಕಾಪಾಡುವ ಲಿಂಗವು ಎಂದರ್ಥ. ಪಾಣಿಮಂತ್ರಂ ಎಂಬ ಪದದಿಂದ ಈ ಲಿಂಗವನ್ನು ಪೂಜೆಯ ಕಾಲದಲ್ಲಿ ವಾಮಹಸ್ತದಲ್ಲಿ ಧಾರಣೆ ಮಾಡಬೇಕೆಂದು ಪ್ರತಿಪಾದಿತವಾಗುತ್ತದೆ. **'ಪವಿತ್ರಂ'** ಎಂಬ ಪದದಿಂದ ಅಶುಚಿಯಾದ ಶರೀರ ಸಂಬಂಧದಿಂದ ಲಿಂಗವು ಅಶುಚಿಯಾಗದೆ ಯಾವಾಗಲೂ ಶುಚಿಯಾಗಿರುವುದೆಂದೂ ಈ ಪವಿತ್ರವಾದ ಲಿಂಗ ಸಂಬಂಧದಿಂದ ಶರೀರವು ಯಾವಾಗಲೂ ಪವಿತ್ರವೆಂದೂ ಪ್ರತಿಪಾದಿತವಾಗುತ್ತದೆ. ಈ ಅರ್ಥವು ವಾತೂಲಾಗಮದಲ್ಲಿ ಸ್ಫುಟವಾಗಿ ಹೀಗೆ ಹೇಳಲ್ಪಟ್ಟಿದೆ:

> 'ಪವಿತ್ರ ಕರಣಾತ್ಪುಂಸಾಂ ಪವಿತ್ರಮಿತಿ ಕಥ್ಯತೇ ।
> ತಸ್ಮಾತ್ಸರ್ವೇಷು ಕಾಲೇಷು ಧಾರಯೇಲ್ಲಿಂಗಮುತ್ತಮಂ॥ ಲಿಂಗಧಾರೀಸದಾಶುದ್ಧಃ॥

ತಾತ್ಪರ್ಯ—ಮನುಷ್ಯರನ್ನು ಶುದ್ಧಿ ಮಾಡುವುದರಿಂದ ಲಿಂಗವು ಪವಿತ್ರಂ ಎಂದು ಹೇಳಲ್ಪಡುತ್ತದೆ. ಆದ್ದರಿಂದ ಎಲ್ಲ ಕಾಲದಲ್ಲಿಯೂ ಲಿಂಗಧಾರಣೆ ಮಾಡಬೇಕು. ಲಿಂಗ ಧರಿಸಿದವನು ಯಾವಾಗಲೂ ಶುದ್ಧನಾಗಿರುತ್ತಾನೆ,

### ಬ್ರಹ್ಮಾದಿದೇವತೆಗಳಿಗೂ ಲಿಂಗಧಾರಣೆ

ಶ್ರೀಶ್ರೀಪತಿಪಂಡಿತಾಚಾರ್ಯರು **'ವಿಕ್ಷಿತಗುಣೋಪಪತ್ತೇಶ್ಚ'** (೧-೨-೧) ಎಂಬ ಸೂತ್ರದ ಭಾಷ್ಯದಲ್ಲಿ ಬ್ರಹ್ಮಾದಿ ದೇವತಗಳಿಗೂ ಸಪ್ರಮಾಣವಾಗಿ ಲಿಂಗಧಾರಣೆಯನ್ನು ಹೀಗೆ ಪ್ರತಿಪಾದಿಸಿರುತ್ತಾರೆ. ಲಿಂಗಪುರಾಣದಲ್ಲಿ ಜ್ಯೋತಿರ್ಲಿಂಗದ ಆವಿರ್ಭಾವವಾದ ಮೇಲೆ ಶ್ರೀಮಹಾವಿಷ್ಣುವು ಶ್ರೀ ಮಹಾದೇವನನ್ನು ಕುರಿತು 'ಎಲೊ ಮಹಾದೇವನೆ, ನನಗೂ ಬ್ರಹ್ಮನಿಗೂ ಸಹ ಶಿವದೀಕ್ಷೆಯೊಂದಿಗೆ ನಿನ್ನ ಲಿಂಗವನ್ನು ಅನುಗ್ರಹ ಮಾಡು' ಎಂದು ಪ್ರಾರ್ಥಿಸಲು–

> 'ಇಂದ್ರನೀಲಮಯಂ ಲಿಂಗಂ ವಿಷ್ಣವೇ ಬ್ರಹ್ಮಣೋಮಮ।
> ಪದ್ಮರಾಗಮಯಂ ಲಿಂಗಂ ದತ್ವಾ ದೀಕ್ಷಾಂಚಕಾರಯತ್ ॥'

ಪರಶಿವನು ಇಂದ್ರನೀಲಮಯವಾದ ಲಿಂಗವನ್ನು ವಿಷ್ಣುವಿಗೂ, ಪದ್ಮರಾಗಮಯವಾದ ಲಿಂಗವನ್ನು ಬ್ರಹ್ಮನಿಗೂ ದೀಕ್ಷಾ ವಿಧಾನದಿಂದ ಕೊಟ್ಟನು. **'ವಕ್ಷಸ್ಥಲೇಹರಿರ್ಲಿಂಗಂ ಮೂರ್ಧ್ನಿಚಾಪಂಪಿತಾಮಹಃ'** ವಿಷ್ಣುವು ಎದೆಯ ಮೇಲೆ ಬ್ರಹ್ಮನು ತಲೆಯ ಮೇಲೆ ಲಿಂಗವನ್ನು ಧರಿಸಿ ಸಂತುಷ್ಟರಾದರು ಎಂದು ಬ್ರಹ್ಮಾದಿಗಳಿಗೂ ಲಿಂಗಧಾರಣೆಯು ಹೇಳಲ್ಪಟ್ಟಿದೆ. ಹೀಗೆ ಶ್ರೀಶ್ರೀಪತಿ ಪಂಡಿತಾಚಾರ್ಯರು ಅನೇಕ ವೇದಾಂತ ಸೂತ್ರಗಳಿಗೂ ಶ್ರುತಿವಾಕ್ಯಗಳಿಗೂ ಲಿಂಗಧಾರಣ ಪರವಾಗಿ ವ್ಯಾಖ್ಯಾನವನ್ನು ಮಾಡಿರುತ್ತಾರೆ.

### ಸೂರ್ಯಮಂಡಲ ಮಧ್ಯದಲ್ಲಿ ಉಪಾಸ್ಯದೇವತಾ ವಿಚಾರ

ಛಾಂದೋಗ್ಯೋಪನಿಷತ್ತಿನಲ್ಲಿ **'ಅಥಯಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ'** ಇತ್ಯಾದಿ ವಚನದಿಂದ ಸೂರ್ಯಮಂಡಲ ಮಧ್ಯದಲ್ಲಿ ಹಿರಣ್ಮಯ ಪುರುಷನ ಉಪಾಸನೆಯನ್ನು ಹೇಳಿ **'ತಸ್ಯಯಥಾಕಪ್ಯಾಸಂ ಪುಂಡರೀಕ ಮೇವಮಕ್ಷಿಣೀ'** ಎಂದು ಆ ದೇವತೆಯ ಸ್ವರೂಪವನ್ನು ವರ್ಣಿಸಿದೆ. ಈ ವಾಕ್ಯದಲ್ಲಿರುವ **'ಅಕ್ಷಿಣೀ'** ಎಂಬ ದ್ವಿವಚನಾಂತ ಪದದಿಂದ ಆ ದೇವತೆಗೆ ಎರಡು ಕಣ್ಣುಗಳು ಎಂದು ಸ್ಪಷ್ಟವಾಗಿ ತೋರುತ್ತದೆ. ಮತ್ತು ಈ ವಾಕ್ಯದ **'ಕಪ್ಯಾಸಂ'** ಎಂಬ ಪದಕ್ಕೆ ಕೆಲವರು ವ್ಯಾಖ್ಯಾನಕಾರರು ಕಪಿಯ ಪೃಷ್ಠಭಾಗವೆಂದು ಅರ್ಥವನ್ನು ಸ್ವೀಕರಿಸಿ ಸೂರ್ಯಮಂಡಲದ ಮಧ್ಯದಲ್ಲಿರುವ ದೇವತೆಯ ಎರಡು ಕಣ್ಣುಗಳು ಕಪಿಯಪೃಷ್ಠ ಭಾಗದಂತೆ ಕೆಂಪಗಿರುವ ಪದ್ಮಕ್ಕೆ ಸಮಾನವಾಗಿವೆ ಎಂದು ವಿವರಿಸಿರುತ್ತಾರೆ. ಪರಶಿವನಿಗಾದರೋ ಮೂರು ಕಣ್ಣುಗಳಿರುವುದರಿಂದ ಈ ವಾಕ್ಯದಲ್ಲಿ ಎರಡು ಕಣ್ಣುಗಳೆಂದು ಹೇಳಿರುವುದು ವಿರೋಧವಾಗುತ್ತದೆಂದು ಸಂದೇಹವು ತೋರುತ್ತದೆ. ಈ ಸಂದೇಹಕ್ಕೆ ಶ್ರೀಶ್ರೀಕಂಠಾಚಾರ್ಯರೂ ಶ್ರೀಶ್ರೀಪತಿಪಂಡಿತಾಚಾರ್ಯರೂ ಸಹ ತಮ್ಮ ಭಾಷ್ಯದಲ್ಲಿ **'ಅಂತಸ್ತದ್ಧರ್ಮೋಪದೇಶಾತ್'** (೧-೧-೨೧) ಎಂಬ ಅಧಿಕರಣದಲ್ಲಿ ಒಂದೇ ವಿಧವಾದ ಸಮಾಧಾನವನ್ನು ಹೀಗೆ ಹೇಳಿರುತ್ತಾರೆ.

ಈ ವಾಕ್ಯದಲ್ಲಿ 'ಕಪ್ಯಾಸಂ' ಎಂಬ ಪದಕ್ಕೆ ಸೂರ್ಯನಿಂದ ಅರಳಿಸಲ್ಪಟ್ಟ ಎಂದರ್ಥ. ಹೇಗೇಂದರೆ— '**ಕಮುದಕಂ ರಶ್ಮಿಭಿಃ ಪಿಬತೀತಿ ಕಪಿರಾದಿತ್ಯಃ। ತೇನಾಸಿತಂ ವಿಕಸಿತಂ**' 'ಕ' ಎಂಬ ಅಕ್ಷರಕ್ಕೆ ನೀರು ಎಂದೂ ಸೂರ್ಯನು ಕಿರಣಗಳಿಂದ ನೀರನ್ನು ಸ್ವೀಕರಿಸುವುದರಿಂದ 'ಕಪಿ' ಪದಕ್ಕೆ ಸೂರ್ಯನೆಂದೂ ಅರ್ಥ. ಸೂರ್ಯನಿಂದ ವಿಕಾಸಹೊಂದಿದ ಪದ್ಮದಂತಿರುವ ಎರಡು ಕಣ್ಣುಗಳುಳ್ಳ ದೇವತೆಯು ಎಂದರ್ಥವಾಗುತ್ತದೆ. ಶಿವನಿಗೆ ಮೂರು ಕಣ್ಣುಗಳಿದ್ದರೂ ಬೆಂಕಿಯ ರೂಪವಾದ ಮೂರನೇ ಕಣ್ಣು ಯಾವಾಗಲೂ ಮುಚ್ಚಿಕೊಂಡಿದ್ದು ಎರಡೇ ಕಣ್ಣುಗಳು ಅರಳಿದ ಪದ್ಮದಂತೆ ವಿಕಸಿತವಾಗಿರುವುದರಿಂದ 'ಅಕ್ಷಿಣೀ' ಎಂಬ ದ್ವಿವಚನಾಂತ ಪದವು ಶಿವನ ವಿಷಯದಲ್ಲಿ ವಿರುದ್ಧವಾಗುವುದಿಲ್ಲ,

**ಪರಶಿವನಿಗೆ ಶರೀರವಿದ್ದರೂ ಶರೀರ ಪ್ರಯುಕ್ತವಾದ ದೋಷಗಳಿಲ್ಲ**

'**ಉಮಾ ಸಹಾಯಂ ಪರಮೇಶ್ವರಂ ಪ್ರಭುಂತ್ರಿಲೋಚನಂ ನೀಲಕಂಠಂ ಪ್ರಶಾಂತಂ**' ಇವೇ ಮುಂತಾದ ಪ್ರಮಾಣಗಳಿಂದ, ಪಾರ್ವತೀಸಹಿತವಾಗಿಯೂ ಮೂರು ಕಣ್ಣುಗಳಿಂದ ರಮಣೀಯವಾಗಿಯೂ ನೀಲಕಂಠ ವಿಶಿಷ್ಟವಾಗಿಯೂ ಇರುವ ಪ್ರಶಾಂತ ದಿವ್ಯಮಂಗಳ ವಿಗ್ರಹವು ಪರಮೇಶ್ವರನಿಗೆ ಅಸಾಧಾರಣವಾದದ್ದೆಂದು ತಿಳಿದುಬರುತ್ತದೆ. ಈ ಶರೀರ ಸಂಬಂಧದಿಂದ ಪರಮೇಶ್ವರನಿಗೆ ದುಃಖಗಳೂ ಬರಬಹುದು ಎಂಬ ಆಕ್ಷೇಪಕ್ಕೆ ಇಬ್ಬರೂ ಭಾಷ್ಯಕಾರರು '**ಸಂಭೋಗ ಪ್ರಾಪ್ತಿರಿತಿಚೇನ್ನವೈಶೇಷ್ಯಾತ್**' ಎಂಬ ಸೂತ್ರದ ಭಾಷ್ಯದಲ್ಲಿ ಹೀಗೆ ಸಮಾಧಾನವನ್ನು ಹೇಳಿದ್ದಾರೆ. ಪರಶಿವನ ಶರೀರವು ಜೀವಾತ್ಮರ ಶರೀರಕ್ಕಿಂತಲೂ ವಿಲಕ್ಷಣವಾದದ್ದು. ಜೀವಾತ್ಮರ ಶರೀರಗಳು ಅವರ ಹಿಂದಿನ ಕರ್ಮಗಳಿಂದ ಬಂದಿವೆ. ಪರಶಿವನ ಶರೀರವಾದರೋ ತನ್ನ ಇಚ್ಛೆಯಿಂದಲೇ ಸ್ವೀಕರಿಸಲ್ಪಟ್ಟಿರುವುದರಿಂದ ಕರ್ಮಗಳಿಂದ ಬಂದುದಲ್ಲ. ಕರ್ಮಮೂಲಕವಾದ ಶರೀರ ಸಂಬಂಧದಿಂದಲೇ ದುಃಖಗಳು ಪ್ರಾಪ್ತವಾಗುತ್ತವೆ. ಪರಶಿವನಾದರೋ 'ಅಪಹತಪಾಪ್ಮಾ' ಎಂಬ ಶ್ರುತಿವಚನದಿಂದ ಪಾಪಸಂಬಂಧವಿಲ್ಲದವನೆಂದು ಸಿದ್ಧವಾಗಿರುವುದರಿಂದ ಅವನಿಗೆ ಶರೀರ ಪ್ರಯುಕ್ತವಾದ ದುಃಖಗಳು ಸಂಭವಿಸುವುದಿಲ್ಲ.

**ಪ್ರಪಂಚವೆಲ್ಲವೂ ಪರಶಿವನ ಶರೀರವು**

ಪರಮೇಶ್ವರನಿಗೆ '**ಉಮಾಸಹಾಯಂ**' ಎಂದು ಹಿಂದೆ ಹೇಳಿದ ಶ್ರುತಿಸಿದ್ಧವಾದ ದಿವ್ಯಮಂಗಳ ವಿಗ್ರಹವಲ್ಲದೆ ಪ್ರಪಂಚವೆಲ್ಲವೂ ಅವನ ಶರೀರವೆಂದು ಶ್ರೀಶ್ರೀಕಂಠಾಚಾರ್ಯರು '**ಸರ್ವತ್ರಪ್ರಸಿದ್ಧೋಪದೇಶಾತ್**' (೧-೨-೧) ಎಂಬ ಅಧಿಕರಣದ ಭಾಷ್ಯದಲ್ಲಿ '**ಸರ್ವಚಿದಚಿತ್ಪ್ರಪಂಚ ಶರೀರ ವಿಶಿಷ್ಟ ಬ್ರಹ್ಮ**' ಎಂದು ಹೇಳಿದ್ದಾರೆ. ಪ್ರಪಂಚವೆಲ್ಲವೂ ಪರಶಿವನ ಶರೀರವಾಗುವುದು ಹೇಗೆಂದರೆ : ೧) '**ಅನೇನ ಜೀವೇನಾತ್ಮನಾನುಪ್ರವಿಶ್ಯನಾಮರೂಪೇವ್ಯಾಕರವಾಣಿ**' ೨) **ಯಃ ಪೃಥ್ವಿವ್ಯಾಂ ತಿಷ್ಠನ್ ಪೃಥಿವೀ ಮಂತರೋಯಮಯತಿ**' ೩) '**ಯಸ್ಯಪೃಥಿವೀ ಶರೀರಂ**' ಇವೇ ಮುಂತಾದ ಉಪನಿಷದ್ವಾಕ್ಯಗಳಿಂದ ಪರಶಿವನು ತನ್ನಿಂದ ನಿರ್ಮಿತವಾದ ವಸ್ತುಗಳಿಗೆ ನಾಮರೂಪಗಳ ವ್ಯವಸ್ಥೆ ಮಾಡುವುದಕ್ಕಾಗಿ ಆ ವಸ್ತುಗಳಲ್ಲಿ ಆತ್ಮರೂಪದಿಂದ ಅನುಪ್ರವೇಶಮಾಡಿ ಅವುಗಳನ್ನು ನಿಯಮನ ಮಾಡುವುದರಿಂದ ಪೃಥಿವೀ ಮುಂತಾದ ಎಲ್ಲ ವಸ್ತುಗಳೂ ಪರಶಿವನ ಶರೀರವೆಂದು ಸಿದ್ಧವಾಗುತ್ತದೆ.

'ವಿಗ್ರಹಂ ದೇವದೇವಸ್ಯಜಗತೇತಚ್ಚರಾಚರಂ ।
ಏತಮರ್ಥಂ ನಜಾನಂತಿ ಪಶವಃಪಾಶ ಗೌರವಾತ್' ॥

ತಾತ್ಪರ್ಯ–ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಪರಮೇಶ್ವರನ ಶರೀರವಾಗಿದೆ. ಆದರೆ ಸಾಮಾನ್ಯ ಜನರು ಮಾಯಾಪಾಶದಿಂದ ಈ ಅರ್ಥವನ್ನು ತಿಳಿದುಕೊಂಡಿಲ್ಲ. ಎಂಬ ಪುರಾಣ ವಚನಗಳೂ ಸಹ ಪ್ರಪಂಚವೇ ಪರಮೇಶ್ವರನ ಶರೀರವೆಂಬುದನ್ನು ಸ್ಪಷ್ಟಪಡಿಸುತ್ತವೆ,

'ದೇಹಿನೋಯಸ್ಯಕಸ್ಯಾಪಿ ನಿಗ್ರಹಃಕ್ರಿಯತೇಯದಿ ।
ಅನಿಷ್ಟಮಷ್ಟಮೂರ್ತೇಸ್ತನ್ನಾತ್ರ ಕಾರ್ಯಾವಿಚಾರಣಾ' ॥

ಪ್ರಪಂಚವೆಲ್ಲವೂ ಪರಮೇಶ್ವರನ ಶರೀರವಾದ್ದರಿಂದ ಯಾವುದಾದರೊಂದು ಜಂತುವಿಗೆ ಪೀಡೆ ಮಾಡಿದರೂ ಅದು ಪರಮೇಶ್ವರನಿಗೇ ಅನಿಷ್ಟ ಮಾಡಿದಂತಾಗುತ್ತದೆ.

'ಸರ್ವೋಪ ಕಾರಕರಣಂ ಸರ್ವಾನುಗ್ರಹಣಂ ತಥಾ ।
ಸರ್ವಾಭಯಪ್ರದಾನಂಚ ಶಿವಸ್ಯಾರಾಧನಂ ವಿದುಃ ॥'

ತಾತ್ಪರ್ಯ-- '**ಯಸ್ಯಾತ್ಮಾಶರೀರಂ**' ಎಂಬ ಶ್ರುತಿವಚನದಿಂದ ಎಲ್ಲ ಜೀವರೂ ಪರಶಿವನ ಶರೀರವಾದ್ದರಿಂದ ಪರರಿಗೆ ಉಪಕಾರ ಮಾಡುವುದೂ, ಅಭಯಪ್ರದಾನಮಾಡುವುದೂ ಸಹ ಪರಮೇಶ್ವರನ ಪೂಜೆಯೇ ಆಗುತ್ತದೆ. ಹೀಗೆ ಪ್ರಪಂಚವೆಲ್ಲವೂ ಪರಮೇಶ್ವರನ ಶರೀರವಾದ್ದರಿಂದ ಯಾವ ವಸ್ತುವಿನಲ್ಲಿಯೂ ದ್ವೇಷಾಸೂಯೆಗಳನ್ನು ಮಾಡದೆ ಶಾಂತನಾಗಿರಬೇಕೆಂದು ವಿಸ್ತರವಾಗಿ ಪ್ರತಿಪಾದನೆ ಮಾಡಿರುತ್ತಾರೆ,

ಪ್ರಪಂಚವೆಲ್ಲವೂ ಪರಶಿವನ ಶರೀರವೆಂಬ ಶ್ರೀಶ್ರೀಕಂಠಾಚಾರ್ಯರ ಸಿದ್ಧಾಂತವನ್ನು ಶ್ರೀಶ್ರೀಪತಿಪಂಡಿತರು ತಮ್ಮ ಭಾಷ್ಯದ ಕೆಲವು ಪ್ರಕರಣಗಳಲ್ಲಿ ಹೇಳಿದ್ದರೂ ಕೆಲವು ಪ್ರದೇಶಗಳಲ್ಲಿ ಇದನ್ನು ನಿರಾಕರಿಸಿರುತ್ತಾರೆ. ಶ್ರೀಶ್ರೀಕಂಠಾಚಾರ್ಯರು ಉದಾಹರಿಸಿರುವ **'ಯಸ್ಯಪೃಥಿವೀ ಶರೀರಂ'** ಮುಂತಾದ ವಾಕ್ಯಗಳಿಗೆ ಪೃಥಿವ್ಯಾದಿಗಳು ಪರಮೇಶ್ವರನ ಶರೀರವೆಂಬ ಯಥಾ ಶ್ರುತಾರ್ಥದಲ್ಲಿ ಮುಖ್ಯ ತಾತ್ಪರ್ಯವಿಲ್ಲ. ಈ ಪ್ರಕರಣದಲ್ಲಿರುವ **'ಏಷತ ಆತ್ಮಾ ಅಂತರ್ಯಾಮ್ಯಮೃತಃ'** ಎಂಬ ಪ್ರಧಾನ ವಾಕ್ಯಾನುಸಾರವಾಗಿ ಪರಮೇಶ್ವರನು ಸರ್ವಾಂತರ್ಯಾಮಿ ಎಂಬ ಅರ್ಥದಲ್ಲಿ ಎಲ್ಲ ವಾಕ್ಯಗಳಿಗೂ ಮುಖ್ಯ ತಾತ್ಪರ್ಯವೆಂದು ಪ್ರತಿಪಾದಿಸಿರುತ್ತಾರೆ.

**ಮೋಕ್ಷಸ್ವರೂಪ**

ಮೋಕ್ಷಸ್ವರೂಪ ವಿಷಯದಲ್ಲಿ ಶ್ರೀಶ್ರೀಕಂಠಾಚಾರ್ಯರಿಗೂ, ಶ್ರೀಶ್ರೀಪತಿಪಂಡಿತಾಚಾರ್ಯರಿಗೂ ಮತಭೇದವಿರುತ್ತದೆ. ಶ್ರೀಶ್ರೀಕಂಠಾಚಾರ್ಯರು ಹೀಗೆ ಪ್ರತಿಪಾದಿಸಿರುತ್ತಾರೆ: **'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ'** **'ಅಧಿಕಂತು ಭೇದನಿರ್ದೇಶಾತ್'** ಇವೇ ಮುಂತಾದ ಅನೇಕ ಅಧಿಕರಣಗಳಲ್ಲಿ ಜೀವಾತ್ಮರಿಗೂ ಪರಬ್ರಹ್ಮಶಿವನಿಗೂ ಭೇದವನ್ನು ಸಿದ್ಧಾಂತ ಮಾಡಿರುವುದರಿಂದ ಮುಕ್ತಿಯಲ್ಲಿಯೂ ಸಹ ಜೀವಾತ್ಮರಿಗೂ ಶಿವನಿಗೂ ಭೇದವೇ ಇರುತ್ತದೆ. ಅಭೇದವಿಲ್ಲ. **'ನಿರಂಜನಃ ಪರಮಂ ಸಾಮ್ಯಮುಪೈತಿ'** ಎಂಬ ಸ್ಮೃತಿಯಿಂದಲೂ **'ಮುಕ್ತಃಶಿವಸಮೋಭವೇತ್'** ಎಂಬ ಸ್ಮೃತಿಯಿಂದಲೂ ಪರಶಿವನ ಅತ್ಯಂತ ಸಾದೃಶ್ಯ ಪ್ರಾಪ್ತಿಯೇ ಮೋಕ್ಷವೆಂದೂ **'ಬ್ರಹ್ಮವೇದ ಬ್ರಹ್ಮೈವಭವತಿ'** ಎಂಬ ವಾಕ್ಯದಲ್ಲಿ 'ಬ್ರಹ್ಮೈವ' ಎಂಬ ಪದಕ್ಕೆ ಬ್ರಹ್ಮಸಾದೃಶ್ಯವೆಂದೇ ಅರ್ಥವೆಂದೂ **'ಅವಿಭಾಗೇನ ದೃಷ್ಟತ್ವಾತ್'** ಎಂಬ ಅಧಿಕರಣದಲ್ಲಿ ಸಿದ್ಧಾಂತ ಮಾಡಿರುತ್ತಾರೆ. **'ನಿರವಧಿಕ ಪರಮಾನಂದ ನಿಷ್ಕಲಂಕ ಶಿವತ್ವ ಪ್ರಾಪ್ತಿರ್ಹಿಮುಕ್ತಿಃ'** ಎಂಬ ಭಾಷ್ಯಭಾಗದಲ್ಲಿ ಶಿವತ್ವಪ್ರಾಪ್ತಿಯನ್ನು ಮುಕ್ತಿ ಎಂದು ಹೇಳಿದ್ದರೂ ಶಿವತ್ವವೆಂಬ ಪದಕ್ಕೆ 'ಶಿವತ್ವಂನಾಮ ನಿಖಿಲಮಲ ಸಂಪರ್ಕರಹಿತ ನಿರತಿಶಯ ಮಂಗಲಾಸ್ಪದತ್ವರೂಪ ಶಿವಸದೃಶಸ್ವಭಾವತ್ವಂ' ಅಂದರೆ ಯಾವ ಮಲಸಂಬಂಧವೂ ಇಲ್ಲದೆ ನಿರತಿಶಯಮಂಗಳಗಳಿಗೆ ಆಧಾರವಾದ ಪರಶಿವನ ಸಾದೃಶ್ಯವೇ ಶಿವತ್ವವೆಂದು ತಾವೇ ವಿವರಣೆ ಮಾಡಿರುತ್ತಾರೆ. ಹಾಗೆಯೇ **'ಶಿವಸಾಯುಜ್ಯಂ'** ಎಂಬ ಪದವನ್ನು ಭಾಷ್ಯದಲ್ಲಿ ಪ್ರಯೋಗ ಮಾಡಿದ್ದರೂ ಬೇರೆಯವರು ಹೇಳುವಂತೆ ಸಾಯುಜ್ಯ ಪದಕ್ಕೆ ಶಿವನಲ್ಲಿ ಅಭೇದ ಹೊಂದುವುದೆಂಬ ಅರ್ಥವನ್ನು ಹೇಳುವುದಿಲ್ಲ. **'ಉಕ್ತಂ ಬ್ರಹ್ಮಣಾಸಾದೃಶ್ಯಂ ಸಾಯುಜ್ಯಂ ಮುಕ್ತಾನಾಂ'** ಎಂಬ ಗ್ರಂಥಭಾಗದಿಂದ ಮುಕ್ತರಿಗೆ ಬ್ರಹ್ಮಸಾಯುಜ್ಯವೆಂದರೆ ಬ್ರಹ್ಮಸಾದೃಶ್ಯವೆಂದೇ ಹೇಳಿರುತ್ತಾರೆ. ಆದ್ದರಿಂದ ಇವರ ಮತದಲ್ಲಿ ಶಿವನ ಅತ್ಯಂತ ಸಾದೃಶ್ಯವೇ ಮೋಕ್ಷವು.

ಮುಕ್ತರಿಗೂ ಪರಶಿವನಿಗೂ ಯಾವ ಅಂಶದಲ್ಲಿ ಸಾದೃಶ್ಯವೆಂದರೆ— **'ಸೋಽಶ್ನುತೇಸರ್ವಾನ್ ಕಾಮಾನ್‌ಸಹ॥ ಬ್ರಹ್ಮಣಾ ವಿಪಶ್ಚಿತಾ'** ಎಂಬ ವಚನದಿಂದ ಮುಕ್ತನು ಪರಶಿವನಂತೆ ದಿವ್ಯ ಸುಖಾನುಭವವನ್ನು ಹೊಂದುವನೆಂದು ತಿಳಿಯುವುದರಿಂದ ದಿವ್ಯ ಸರ್ವಸುಖಾನುಭವದಲ್ಲಿ ಸಾದೃಶ್ಯವು ಸಂಭವಿಸುತ್ತದೆ. ಮತ್ತು ಮುಕ್ತನಿಗೆ ಪಶುತ್ವ ನಿವೃತ್ತಿಯಾಗುವುದರಿಂದ **'ಸರ್ವಜ್ಞತ್ವ-ಅನಾದಿಬೋಧತ್ವ -ನಿತ್ಯತೃಪ್ತತ್ವ-ಸ್ವತಂತ್ರತ್ವ-ಸರ್ವಶಕ್ತಿಮತ್ವ-ಅಲುಪ್ತಶಕ್ತಿಕತ್ವ-ಅನಂತಶಕ್ತಿಮತ್ವ'** ವೆಂಬ ಕಲ್ಯಾಣಗುಣಗಳೂ ಪ್ರಾಪ್ತವಾಗುತ್ತವೆ. ಈ ಗುಣಗಳು ಶಿವನಿಗೂ ಸ್ವಾಭಾವಿಕವಾಗಿಯೇ ಇರುವುದರಿಂದ ಮುಕ್ತರು ಶಿವಸದೃಶರಾಗುತ್ತಾರೆ. ಮುಕ್ತರು ಸ್ವತಂತ್ರರು ಎಂದರೆ ಇವರಿಗೆ ಪಶುತ್ವ ನಿವೃತ್ತಿಯಾಗಿ ಶಿವನ ಆಜ್ಞಾರೂಪವಾದ ವೇದಗಳ ವಿಧಿನಿಷೇಧ ಮಾರ್ಗಗಳಿಂದ ಬಿಡುಗಡೆ ಹೊಂದಿರುವುದರಿಂದ ಇವರಿಗೆ ಶಿವನು ನಿಯಾಮಕನಲ್ಲವೆಂದೂ **'ಅತಏವಚಾನನ್ಯಾಧಿಪತಿಃ'** ಎಂಬ ಅಧಿಕರಣದಲ್ಲಿ ಪ್ರತಿಪಾದಿಸಿರುತ್ತಾರೆ. ಹೀಗೆ ಮೋಕ್ಷಾವಸ್ಥೆಯಲ್ಲಿ ಪರಶಿವನಿಗೂ ಮುಕ್ತರಿಗೂ ಸಾದೃಶ್ಯವು ಪ್ರಾಪ್ತವಾಗುತ್ತದೆ. ಅಭೇಧವಿಲ್ಲ. ಎಂದು ಶ್ರೀಶ್ರೀಕಂಠಾಚಾರ್ಯರ ಸಿದ್ಧಾಂತವು.

**ಮೋಕ್ಷ ವಿಷಯದಲ್ಲಿ ಶ್ರೀಶ್ರೀಪತಿಪಂಡಿತರ ಮತ**

ಶ್ರೀಶ್ರೀಪತಿಪಂಡಿತಾಚಾರ್ಯರು **'ಅಧಿಕಂತು ಭೇದನಿರ್ದೇಶಾತ್'** ಎಂಬ ಸೂತ್ರದ ಭಾಷ್ಯದಲ್ಲಿ ಮೋಕ್ಷದ ವಿಷಯದಲ್ಲಿ ಶ್ರೀಶ್ರೀಕಂಠಾಚಾರ್ಯರ ಮತವನ್ನು ನಿರಾಕರಿಸಿ ತಮ್ಮ ಮತವನ್ನು ಹೀಗೆ ಸಮರ್ಥನೆ ಮಾಡಿರುತ್ತಾರೆ. ಮುಕ್ತಾತ್ಮರಿಗೆ ದಿವ್ಯಮಂಗಳವಿಗ್ರಹ-ಸರ್ವಜ್ಞತ್ವ-ಸರ್ವೈಶ್ವರ್ಯ ಮೊದಲಾದ ಪರಶಿವನ ಸಾದೃಶ್ಯ ಪ್ರಾಪ್ತಿಯೇ ಮೋಕ್ಷವು. ಕೈವಲ್ಯಂ ಎಂದರೆ ಶಿವನಲ್ಲಿ ಅಭೇದವನ್ನು ಹೊಂದುವುದು ಎಂಬ ಮೋಕ್ಷವು ಸಂಭವಿಸುವುದಿಲ್ಲ ಎಂದು ಶ್ರೀಶ್ರೀಕಂಠಾಚಾರ್ಯರು ಹೇಳಿರುವುದು ಯುಕ್ತವಲ್ಲ. ಶಿವನ ಸಾದೃಶ್ಯವೆಂಬ ಮೋಕ್ಷವು ಶ್ರುತಿಯಲ್ಲಿ ಪ್ರತಿಪಾದಿತವಾಗಿರುವಂತೆ ಶಿವನ ಅಭೇದರೂಪವಾದ ಕೈವಲ್ಯವೆಂಬ ಮೋಕ್ಷವೂ ಶ್ರುತಿವಚನಗಳಲ್ಲಿ ಪ್ರತಿಪಾದಿತವಾಗಿರುತ್ತದೆ.

**ಜೀವನೇ ಶಿವನಾಗುವನು**

ಜೀವನು ಶಿವನಿಗಿಂತ ಭಿನ್ನನಾಗಿದ್ದು ಭೇದ ಮತ್ತು ಅಭೇದವು ಪರಸ್ಪರ ವಿರುದ್ಧವಾಗಿರುವುದರಿಂದ ಜೀವನಿಗೆ ಸ್ವಾಭಾವಿಕವಾದ ಜೀವತ್ವ ನಿವೃತ್ತಿಯಾಗಿ ಶಿವತ್ವವು ಪ್ರಾಪ್ತವಾಗುವುದು ಹೇಗೆಂದರೆ : ಸಂಸಾರದಿಶೆಯಲ್ಲಿ ಶಿವಜೀವರಿಗೆ ಭೇದವೂ ಮೋಕ್ಷದಿಶೆಯಲ್ಲಿ ಅಭೇದವೂ ಸಂಭವಿಸುಬಹುದಾದ್ದರಿಂದ ಭೇದ ಮತ್ತು ಅಭೇದಕ್ಕೆ ಕಾಲಭೇದದಿಂದ ವಿರೋಧ ಪರಿಹಾರವಾಗುತ್ತದೆ. (೧) ಶುಕ್ತಿಜಲನ್ಯಾಯ (೨) ಲೋಹರಸನ್ಯಾಯ (೩) ಭ್ರಮರಕೀಟನ್ಯಾಯ (೪) ನದೀಸಮುದ್ರನ್ಯಾಯದಿಂದ ಕೆಲವು ವಸ್ತುಗಳು ಸ್ವಾಭಾವಿಕವಾದ ತಮ್ಮ ಸ್ವರೂಪವನ್ನು ಬಿಟ್ಟು ಬೇರೆ ಸ್ವರೂಪವನ್ನು ಪಡೆಯುವ ಬಗೆಗೆ ಲೋಕ ಸಮ್ಮತವಾದ ಉದಾಹರಣೆಗಳೂ ಇವೆ.

**೧) ಶುಕ್ತಿಜಲನ್ಯಾಯ**

'ಶುಕ್ತಿಲಬ್ಧಜಲಂ ಲೋಕೇಮೌಕ್ತಿಕಂಭವತಿ ಧ್ರುವಂ ।
ಭಕ್ತಿಸಂಯುಕ್ತ ಜೀವೋಪಿ ಶಿವೋ ಭವತಿನಾನ್ಯಥಾ॥'

ಸಮುದ್ರದಲ್ಲಿ ಕಪ್ಪೆಯ ಚಿಪ್ಪುಗಳ ಮೇಲೆ ಬೀಳುವ ಸ್ವಾತೀಮಳೆಯ ನೀರಿನ ಹನಿಗಳು ತಮ್ಮ ನೀರಿನ ಸ್ವರೂಪವನ್ನು ತೊರೆದು ಮುತ್ತಿನ ಮಣಿಗಳ ಸ್ವರೂಪವನ್ನು ಹೊಂದುವಂತೆ ದೃಢತರವಾದ ಭಕ್ತಿಯೋಗ ಬಲದಿಂದ ಜೀವನು ತನ್ನ ಸ್ವಾಭಾವಿಕವಾದ ಜೀವಭಾವವನ್ನು ತೊರೆದು ಶಿವನ ಸ್ವರೂಪವನ್ನು ಹೊಂದುವನು.

**೨) ಲೋಹರಸನ್ಯಾಯ**

'ರಸವೇಧಾದ್ಯಥಾತಾಮ್ರಂ ಕಾಂಚನಂ ಭವತಿ ಧ್ರುವಂ ।
ಗುರೋಃ ಕಟಾಕ್ಷವೇಧೇನ ಶಿವೋ ಭವತಿ ಶಂಕರಃ ॥'

ತಾತ್ಪರ್ಯ–ಕೆಲವು ವಿಶಿಷ್ಟವಾದ ಓಷಧಿಗಳ ರಸಲೇಪನದಿಂದ ತಾಮ್ರವು ಚಿನ್ನವಾಗುವಂತೆ ಶ್ರೇಷ್ಠಸದ್ಗುರುವಿನ ಕಟಾಕ್ಷಪಾತದಿಂದ ಜೀವನು ಶಿವನಾಗುತ್ತಾನೆ.

**೩) ಭ್ರಮರಕೀಟನ್ಯಾಯ**

'ಭೃಂಗಧ್ಯಾನಾದ್ಯಥಾ ಕೀಟೋಭೃಂಗರೂಪೋಭವೇತ್ಸದಾ ।
ಶಿವಧ್ಯಾನಾತ್ತಥಾಜೀವೋ ಶಿವೋಭವತಿನಾನ್ಯಥಾ ॥'

ಭೃಂಗದ ಗೂಡಿನಲ್ಲಿ ಸಿಕ್ಕಿರುವ ಕೀಟವು ಭಯದಿಂದ ನಿರಂತರವಾಗಿ ಭೃಂಗವನ್ನೇ ಧ್ಯಾನಮಾಡುತ್ತಿದ್ದು ಕೊನೆಗೆ ಆ ಕೀಟವೇ ಭೃಂಗರೂಪವನ್ನು ಹೊಂದುವಂತೆ ಜೀವನು ನಿರಂತರ ಶಿವಧ್ಯಾನದಿಂದ ಶಿವನೇ ಆಗುತ್ತಾನೆ.

**೪) ನದೀಸಮುದ್ರನ್ಯಾಯ**

ಈ ನ್ಯಾಯವು ಉಪನಿಷತ್ತಿನಲ್ಲಿಯೇ ಹೀಗೆ ಪ್ರತಿಪಾದಿತವಾಗಿದೆ.

'ಯಥಾನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂಗಚ್ಛಂತಿನಾಮರೂಪೇ ವಿಹಾಯ ।
ತಥಾವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ'

ಬೇರೆ ಬೇರೆಯಾದ ಹೆಸರನ್ನೂ ಆಕಾರವನ್ನೂ ಹೊಂದಿರುವ ಗಂಗಾದಿನದಿಗಳು ಸಮುದ್ರವನ್ನು ಹೊಂದಿದ ಮೇಲೆ ತಮ್ಮ ನಾಮರೂಪಗಳನ್ನು ಬಿಟ್ಟು ಸಮುದ್ರರೂಪವನ್ನು ಹೊಂದುವಂತೆ ಬ್ರಹ್ಮಜ್ಞಾನಿಯು ಜ್ಞಾನಯೋಗಬಲದಿಂದ ತನ್ನ ನಾಮರೂಪಗಳನ್ನು ಬಿಟ್ಟು ಪರಮಪುರುಷನಲ್ಲಿ ಐಕ್ಯವನ್ನು ಹೊಂದುತ್ತಾನೆ. ಈ ನ್ಯಾಯಗಳ ಉದಾಹರಣೆಗಳಿಂದ ಜೀವನಿಗೆ ಸ್ವಾಭಾವಿಕವಾದ ಜೀವಭಾವವು ನಿವಾರಣೆಯಾಗಿ ಮೋಕ್ಷದಶೆಯಲ್ಲಿ ಶಿವಭಾವವು ಪ್ರಾಪ್ತವಾಗುವುದೆಂದು ಸಿದ್ಧವಾಗುತ್ತದೆ.

ಮತ್ತು '**ಬ್ರಹ್ಮವಿತ್ ಬ್ರಹ್ಮೈವ ಭವತಿ**' ಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿದವನು ಬ್ರಹ್ಮವೇ ಆಗುತ್ತಾನೆ ಇತ್ಯಾದಿ ಅನೇಕ ಶ್ರುತಿವಚನಗಳಿಂದ ಮೋಕ್ಷದಿಶೆಯಲ್ಲಿ ಜೀವನಿಗೆ ಶಿವಭಾವವು ಬೋಧಿತವಾಗಿರುತ್ತದೆ. ಆದ್ದರಿಂದ ಅಧಿಕಾರಿಗಳ ತಾರತಮ್ಯಕ್ಕೆ ಅನುಗುಣವಾಗಿ ಸಾಲೋಕ್ಯ-ಸಾಮೀಪ್ಯ-ಸಾರೂಪ್ಯ-ಸಾಯುಜ್ಯ (ಕೈವಲ್ಯ) ಎಂದು ಮೋಕ್ಷವು ನಾಲ್ಕು ವಿಧವಾಗಿ ಪ್ರಮಾಣ ಸಿದ್ಧವಾಗಿರುತ್ತದೆ ಎಂದು ಶ್ರೀಶ್ರೀಪತಿಪಂಡಿತಾರಾಧ್ಯರ ಮತವು.

# ಜೈನಸಿದ್ಧಾಂತದ ಸಾಮಾನ್ಯ ಸ್ವರೂಪ

—ಡಾ. ಎಂ. ಡಿ. ವಸಂತ್‌ರಾಜ್

ಮನುಷ್ಯನು ತನ್ನ ಸುಖದುಃಖಗಳ ಮೂಲಕಾರಣಗಳನ್ನು ವಿಶ್ಲೇಷಿಸಿ ತಿಳಿಯಲು ಬಹು ಪ್ರಾಚೀನ ಕಾಲದಿಂದಲೂ ಯತ್ನಿಸಿದ್ದಾನೆ. ಈ ಯತ್ನದ ಫಲರೂಪದಿಂದ ಉದಯಿಸಿ ಉಳಿದು ಬೆಳೆದುಬಂದ ವಿಚಾರಗಳಲ್ಲಿ 'ದರ್ಶನ'ವು ಒಂದು. ಇಂತಹ ದಾರ್ಶನಿಕ ಚಿಂತನೆಯ ಬಹು ಪುರಾತನಸಾಹಿತ್ಯವು ಭಾರತದೇಶದ ಉಜ್ವಲ ಸಂಸ್ಕೃತಿಯ ಸಾಕ್ಷಿಗಳಲ್ಲೊಂದಾಗಿ ಉಳಿದುಬಂದಿದೆ. ಭಾರತೀಯ ದಾರ್ಶನಿಕ ಚಿಂತನೆಯನ್ನು ಪ್ರಧಾನವಾಗಿ ವೈದಿಕ ಮತ್ತು ಅವೈದಿಕ ಎಂದು ಎರಡು ವಿಭಾಗ ಮಾಡಿದ್ದಾರೆ. ವೇದಗಳ ಪ್ರಾಮಾಣ್ಯ–ಪಾರಮ್ಯವನ್ನು ಅಂಗೀಕರಿಸುವ ದರ್ಶನಗಳು ವೈದಿಕದರ್ಶನಗಳು, ವೇದಪ್ರಾಮಾಣ್ಯ–ಪಾರಮ್ಯವನ್ನು ಅಂಗೀಕರಿಸದಿರುವ ದರ್ಶನಗಳು ಅವೈದಿಕದರ್ಶನಗಳು. ವೈದಿಕ ಮತ್ತು ಅವೈದಿಕ ಎಂಬ ಹೆಸರುಗಳ ಬದಲಾಗಿ ಆಸ್ತಿಕ ಮತ್ತು ನಾಸ್ತಿಕ ಎಂಬ ಹೆಸರುಗಳ ಬಳಕೆಯಿರುವುದಾದರೂ, ಲಾಕ್ಷಣಿಕ ಅನ್ವರ್ಥತೆಯ ಅಪೇಕ್ಷೆಯಿಂದ ಈ ಹೆಸರುಗಳು ಸಂಗತವಾಗುವುದಿಲ್ಲ. ಆದ್ದರಿಂದ 'ನಾಸ್ತಿಕ' ಎಂಬುದು ಕೇವಲ ಅಧಿಕ್ಷೇಪಾರ್ಥದಿಂದ ಪ್ರಯುಕ್ತವಾಗಿದೆ–ಎಂದು ಹೇಳಬಹುದು. ಅವೈದಿಕ ದರ್ಶನದಲ್ಲಿ ಈಗ ಕಂಡುಬರುವಂತೆ ಪ್ರಧಾನವಾಗಿ ಜೈನ, ಬೌದ್ಧ ಮತ್ತು ಚಾರ್ವಾಕ ಎಂಬ ಮೂರು ವಿಭಾಗಗಳಿವೆ. ಇವುಗಳಲ್ಲಿ ಚಾರ್ವಾಕ ಪಂಥವು ಅವೈದಿಕವೆಂದೆನ್ನಿಸಿಕೊಂಡಿರುವುದಾದರೂ ಅದರ ಪ್ರತಿರೋಧಿಯಾಗಿ ಆ ಮತಪಂಥದಿಂದಲೇ ಒಡಮೂಡಿ ಸಿಡಿದುನಿಂತ ದಾರ್ಶನಿಕ ಚಿಂತನೆಯಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹೀಗೆಯೇ ಜೈನ ಮತ್ತು ಬೌದ್ಧ ದಾರ್ಶನಿಕ ಚಿಂತನೆಗಳೂ ಮೌಲಿಕವಾಗಿ ವೈದಿಕಪಂಥದಿಂದಲೇ ಹೊರಹೊಮ್ಮಿ ಸ್ವತಂತ್ರರೂಪ ತಳೆದುವೆಂದು ವೈದಿಕಮತಾಭಿಮಾನಿಗಳಾದ ಕೆಲವರು ವಿದ್ವಾಂಸರ ಅಭಿಪ್ರಾಯವಿದೆ. ಆದರೆ ಇದರ ವಿರುದ್ಧವಾಗಿ, ವೈದಿಕಮತಪಂಥವು ಭಾರತದೇಶದಲ್ಲಿ ಅವತರಣವಾಗಿ ಪ್ರಸರಣ ಹೊಂದುವ ಮುನ್ನವೇ ಇಲ್ಲಿ ಸಂನ್ಯಾಸ ಆಶ್ರಮದ ಪಾರಮ್ಯವುಳ್ಳದ್ದಾಗಿದ್ದ ಧರ್ಮಪಂಥಗಳಿದ್ದುವೆಂದು ಮತ್ತು ಇವುಗಳನ್ನು ಶ್ರಮಣಪಂಥದ ಧರ್ಮಗಳೆಂದು ಕರೆಯಲಾಗುತ್ತಿದ್ದಿತೆಂದೂ ಕೆಲವರು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[1] ಪರಂಪರಾಗತ ಪ್ರಾಚೀನ ಹೇಳಿಕೆಯೊಂದರನುಗುಣವಾಗಿ ನಿರ್ಗ್ರಂಥ, ಶಾಕ್ಯ, ತಾಪಸ, ಗೇರುಯ ಮತ್ತು ಆಜೀವ ಎಂಬ ಐದು ಪಂಥಗಳು ಶ್ರಮಣಧರ್ಮಪಂಥದ ಶಾಖೆಗಳೆಂದು ಗಣನೆ ಹೊಂದಿವೆ.[2] ಭಾರತದೇಶದಲ್ಲಿ ವೈದಿಕಧರ್ಮಪಂಥದ ಅವತರಣ ಮತ್ತು ಪ್ರಸರಣವಾಗುವ ಮುನ್ನವೇ ಶೈವಧರ್ಮಪಂಥವು ಇಲ್ಲಿ ಅಸ್ತಿತ್ವದಲ್ಲಿದ್ದಿತೆಂಬ ಅಭಿಮತವು ಪ್ರಾಯಿಕವಾಗಿ ಎಲ್ಲ ವಿದ್ವಾಂಸರಿಂದ ಅಂಗೀಕೃತವಾದುದಾಗಿದೆ. ಪ್ರಾಚೀನವಾದ ಈ ಶೈವ ಧರ್ಮಪಂಥವು ಶ್ರಮಣಧರ್ಮಪಂಥಗಳಲ್ಲೊಂದಾಗಿ ಪರಿಗಣನೆ ಹೊಂದಿರುವುದೆ ಹೇಗೆ ಎಂಬುದು ವಿಮರ್ಶೆಯ ಸಂಗತಿಯಾಗಿದೆ. ಆದರೆ ಶೈವಧರ್ಮಪಂಥದ ಪರಮಾರಾಧ್ಯದೇವನಾದ ಶಿವನನ್ನು ಕುರಿತ ಪೌರಾಣಿಕ ಕಥನಾಂಶಗಳು ಹಾಗೂ ಜೈನಧರ್ಮಪಂಥದ ಪ್ರಥಮ ತೀರ್ಥಂಕರನಾದ ಋಷಭನಾಥನನ್ನು ಕುರಿತ ಅನೇಕ ಪೌರಾಣಿಕ ಕಥನಾಂಶಗಳು ಸಮಾನ ತರವಾಗಿವೆ.[3] ಶಿವನಿಂದಾದ ತ್ರಿಪುರದಹನದ ಪೌರಾಣಿಕ ಸಂಗತಿಯು ಜನ್ಮ–ಜರಾ–ಮರಣ ರೂಪದ ನಗರತ್ರಯ ದಹನರೂಪದ ಆಧ್ಯಾತ್ಮಿಕ ಅರ್ಥದೊಡನೆ ಜೈನ ಸಂಪ್ರದಾಯದಲ್ಲಿ ಸಿದ್ಧಪರಮಾತ್ಮನ ಸ್ತುತಿಯಾಗಿ ಬಹಳ ಪ್ರಾಚೀನ ಕಾಲದಿಂದಲೂ ಉಳಿದು ಬಂದಿದೆ.[4] ಈ ಪ್ರಕಾರದ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿ ಪರ್ಯಾಲೋಚಿಸಿದಲ್ಲಿ ಶೈವ ಮತ್ತು ಜೈನ ಧರ್ಮಪಂಥಗಳು ಮೂಲತಃ ಏಕೈಕ ಸ್ರೋತಸ್ಸಿನಿಂದ ಮೂಡಿ ಕವಲೊಡೆದು ಭಿನ್ನಧಾರೆಗಳಾಗಿ ಹರಿದುಬಂದಿವೆಯೆಂದು ಹೇಳಬಹುದು. ಒಂದು ವಸ್ತುವಿನ ಸ್ವರೂಪವನ್ನು ತಿಳಿಯಲು ಅದರ ಪೂರ್ವಾಪರ ಸನ್ನಿವೇಶ ಮತ್ತು ಪರಿಸರಗಳ ಪರಿಚಯವು ವಿಶೇಷ ರೀತಿಯಿಂದ ಸಹಾಯಕವಾಗುವುದು. ಇದರಂತೆ ಜೈನದಾರ್ಶನಿಕ ಚಿಂತನೆಯು ವೈದಿಕಮತಾವತರಣದಿಂದ ಪೂರ್ವಕಾಲೀನವಾದುದು. ಶ್ರಮಣಪಂಥದ ಒಂದು ಶಾಖೆಯಾಗಿದೆ ಮತ್ತು ಶೈವಧರ್ಮಪಂಥದೊಡನೆಸಾಹೋದರ್ಯ ಸಂಬಂಧವುಳ್ಳುದಾಗಿದೆ ಎಂಬಿವೇ ಮುಂತಾದ ಚಾರಿತ್ರಿಕ ಹಿನ್ನೆಲೆಯನ್ನು ಗಮನದಲ್ಲಿರಿಸಿ ಪರಿಶೀಲಿಸಿದಲ್ಲಿ ವಿಚಾರಮಂಥನದ ವಿಶಿಷ್ಟ ಸಾರ್ಥಕತೆಯುಳ್ಳದ್ದಾಗುವುದು.

ಭಾರತೀಯ ದಾರ್ಶನಿಕ ಚಿಂತನೆಗಳನ್ನು 'ಸಿದ್ಧಾಂತ'ಗಳೆಂದು ಹೆಸರಿಸುವ ರೂಢಿಯಿದೆ. ಭಾರತೀಯರ ದೃಷ್ಟಿಯಲ್ಲಿ ದಾರ್ಶನಿಕ ಚಿಂತನೆ ಅಥವಾ ಸಿದ್ಧಾಂತವು ಕೇವಲ ಒಂದು ಚಿಂತನೆ ಅಥವಾ ವಿಚಾರಮಾತ್ರವಲ್ಲ ; ಅದು ಮಾನವ ಜೀವನದ ನಡೆ

1. ಎ.ನೇ. ಉಪಾಧ್ಯೆ ಸಂಪಾದಿತ 'ಪ್ರವಚನಸಾರ' ಉಪೋದ್ಘಾತ ಪು.ಸಂ. ೮೩—೯೨.
2. ಇದೇ ಗ್ರಂಥ ಪು.ಸಂ. ೮೪-ಅ.ಟಿ.೧. 'ಣಿಗ್ಗಂಠ-ಸಕ್ಕ-ತಾವಸ-ಗೇರುಯ-ಆಜೀವ ಪಂಚಹಾ ಸಮಣಾ.'
3. 'ವಾಯ್ಸ್ ಆಫ್ ಅಹಿಂಸಾ'—ಋಷಭ ವಿಶೇಷಾಂಕ.
4. ಜೇಹಿಂ ಝಾಣಗ್ಗಿ ಬಾಣೇಹಿಂ ಅ ಇದಡ್ಢಯಂ ಜಮ್ಮಜರಮರಣಯರತ್ತಯಂ ದಡ್ಢಯಂ ।

ನುಡಿ ಆಚಾರ ವ್ಯವಹಾರಗಳ ತಳಹದಿಯಾಗಿದೆ. ಸಾರಾಂಶತಃ ಹೇಳುವುದಾದರೆ ವಸ್ತುಸ್ವರೂಪದ ತಾತ್ತ್ವಿಕ ಚಿಂತನೆಯು ಸಿದ್ಧಾಂತದ ಆತ್ಮವಾಗಿದೆಯಾದರೆ ಆಚಾರವು ಅದರ ಶರೀರವಾಗಿದೆ. ಈ ರೀತಿಯಿಂದ ಭಾರತೀಯ ದಾರ್ಶನಿಕ ಸಿದ್ಧಾಂತದಲ್ಲಿ ವಿಶ್ವಸ್ವರೂಪದ ತಾತ್ತ್ವಿಕ ವಿಚಾರಮಾತ್ರವಲ್ಲದೆ ಮಾನವನ ಬದುಕಿನ ಮಾರ್ಗದರ್ಶನವೂ ಅಂತರ್ಗತವಾಗಿದೆ.

ಜೈನ ಸಿದ್ಧಾಂತದಲ್ಲಿ ವಿಶ್ವದ ಸ್ವರೂಪವನ್ನು ನವಪದಾರ್ಥ ಅಥವಾ ಸಪ್ತತತ್ತ್ವಗಳ ರೂಪದಿಂದ ಪ್ರತಿಪಾದನೆ ಮಾಡಿದೆ. ನವಪದಾರ್ಥ ಮತ್ತು ಸಪ್ತತತ್ತ್ವಗಳ ನಡುವೆ ಸಂಖ್ಯಾಪೇಕ್ಷೆಯಿಂದ ಭೇದವಿದೆಯೇ ಹೊರತಾಗಿ ಅರ್ಥಾಪೇಕ್ಷೆಯಿಂದ ಭೇದವಿಲ್ಲ : ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ-ಇವು ನವಪದಾರ್ಥಗಳು. ಇವುಗಳಲ್ಲಿ ಪುಣ್ಯ ಮತ್ತು ಪಾಪಗಳು ಆಸ್ರವ ಮತ್ತು ಬಂಧಗಳ ಪ್ರಕಾರಮಾತ್ರಗಳಾಗಿವೆ. ಆದ್ದರಿಂದ ಪುಣ್ಯಾಸ್ರವ, ಪಾಪಾಸ್ರವ ಮತ್ತು ಪುಣ್ಯಬಂಧ, ಪಾಪಬಂಧ ಎಂಬುದಾಗಿ ಪುಣ್ಯ ಮತ್ತು ಪಾಪಗಳು ಆಸ್ರವ ಮತ್ತು ಬಂಧ ಪದಾರ್ಥಗಳಲ್ಲಿಯೇ ಅಂತರ್ಗತವಾಗುವುವು[5]. ಹೀಗೆ ಈ ಪುಣ್ಯ ಮತ್ತು ಪಾಪಗಳ ಹೊರತಾದ ಮಿಕ್ಕ ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷಗಳು ಸಪ್ತತತ್ತ್ವ ಎಂಬ ಹೆಸರಿನಿಂದ ವ್ಯವಹೃತವಾಗಿವೆ. ಇವುಗಳಲ್ಲಿ ಕೊನೆಯ ಆಸ್ರವಾದಿ ಐದು ತತ್ತ್ವಗಳು ಮೊದಲಿನೆರಡು ತತ್ತ್ವಗಳಾದ ಜೀವ ಮತ್ತು ಅಜೀವಗಳ ಸಂಬಂಧಜನ್ಯವಾದ ಕಾರ್ಯಭಾವ ಮಾತ್ರಗಳಾಗಿವೆಯಲ್ಲದೆ ದ್ರವ್ಯರೂಪದಿಂದ ಸ್ವತಂತ್ರವಾದ ಅಸ್ತಿತ್ವವುಳ್ಳವಾಗಿಲ್ಲ. ಜೀವ ಮತ್ತು ಅಜೀವಗಳು ಮಾತ್ರ ದ್ರವ್ಯಾತ್ಮಕವಾದ ಸ್ವತಂತ್ರ ಅಸ್ತಿತ್ವವುಳ್ಳವಾಗಿದ್ದು 'ದ್ರವ್ಯ' ಎಂಬ ಹೆಸರಿನಿಂದಲೂ ವರ್ಗೀಕರಣ ಹೊಂದಿವೆ.[6] ಗುಣ ಮತ್ತು ಪರ್ಯಾಯಗಳುಳ್ಳದ್ದು ದ್ರವ್ಯ.[7] ಪರ್ಯಾಯವೆಂದರೆ ವಸ್ತುವಿನ ಅವಸ್ಥಾಂತರ, ವಸ್ತುವಿನ ಯಾವ ಅವಸ್ಥಾಂತರ ಅಥವಾ ಪರ್ಯಾಯಗಳಲ್ಲಿಯೂ ಅವಿರಹಿತವಾಗಿ ನಿರಂತರವಾಗಿ ವಸ್ತುವಿನಲ್ಲಿ ಸಂಗತವಾಗಿರುವ ಧರ್ಮವು ಗುಣ. ಉದಾಹರಣೆಯಾಗಿ : ಒಬ್ಬನೇ ಜೀವನು ದೇವ, ಮಾನವ, ತಿರ್ಯಾಂಚ, ನಾರಕಿ ಎಂಬ ಅವಸ್ಥಾಂತರಗಳನ್ನು ಹೊಂದುವನು. ಈ ಅವಸ್ಥಾಂತರಗಳು ಆ ಜೀವನ ಪರ್ಯಾಯಗಳು.[8] ಆದರೆ ಯಾವ ಜೀವನೇ ಆಗಿರಲಿ, ಅವನು ಯಾವ ಪರ್ಯಾಯದಲ್ಲಿಯೇ ಇರಲಿ, ಅವನಲ್ಲಿ ಚೇತನಧರ್ಮವು ಅವಿರಹಿತವಾಗಿ, ನಿರಂತರವಾಗಿ ಇದ್ದೇ ಇರುವುದು. ಈ ಚೇತನವು ಜೀವನ ಗುಣ. ಈ ರೀತಿಯಾಗಿ ದ್ರವ್ಯ ವರ್ಗಕ್ಕೆ ಸೇರಿದ ಎಲ್ಲ ವಸ್ತುಗಳೂ ಗುಣ ಮತ್ತು ಪರ್ಯಾಯಗಳುಳ್ಳವಾಗಿರುತ್ತವೆ. ದ್ರವ್ಯದ ಲಕ್ಷಣವನ್ನು ಮತ್ತೊಂದು ರೀತಿಯಿಂದ 'ಸತ್' ಎಂಬುದಾಗಿ ಹೇಳಿದ್ದಾರೆ.[9] ಸತ್ ಎಂದರೆ ಉತ್ಪಾದ, ವ್ಯಯ ಮತ್ತು ಧ್ರುವತ್ವವುಳ್ಳದ್ದು.[10] ಒಂದು ಅವಸ್ಥೆ ಹೋಗಿ ಮತ್ತೊಂದು ಅವಸ್ಥೆ ಬರುವುದು ಉತ್ಪಾದ. ಹಿಂದಿನ ಅವಸ್ಥೆ ಕಳೆದುಹೋಗುವುದು ವ್ಯಯ, ಈ ಎರಡು ಅವಸ್ಥಾಂತರಗಳಿಗೂ ಆಧಾರವಾಗಿ ಅವಿನಾಶಿಯಾಗಿರುವ ವಸ್ತುಭಾವ ಧ್ರುವತ್ವ. ಉದಾಹರಣೆಯಾಗಿ ಒಬ್ಬ ಜೀವನು ಮನುಷ್ಯ ಪರ್ಯಾಯದಲ್ಲಿರುತ್ತಾನೆ; ಆಯುಷ್ಯಾವಸಾನದಲ್ಲಿ ಮನುಷ್ಯ ಪರ್ಯಾಯದ ವ್ಯಯವಾಗಿ ದೇವಪರ್ಯಾಯದ ಉತ್ಪಾದವಾಗಬಹುದು, ಆದರೆ ಈ ವ್ಯಯ ಮತ್ತು ಉತ್ಪಾದಗಳು ಜೀವನಲ್ಲಿ ಆಗಿವೆ; ಈ ಅವಸ್ಥಾಂತರಗಳಲ್ಲಿ ಜೀವನು. ಎಂದರೆ ಜೀವಭಾವದಿಂದ ಅವನ ನಾಶವಾಗಲಿ ಉತ್ಪತ್ತಿಯಾಗಲಿ ಆಗಿರುವುದಿಲ್ಲ. ಎಲ್ಲ ಅವಸ್ಥಾಂತರಗಳಲ್ಲಿಯೂ ಜೀವನು ಧ್ರುವನಾಗಿರುತ್ತಾನೆ. ಹೀಗೆಯೇ ನಾನಾಪ್ರಕಾರದ ಆಭರಣಪ್ರಕಾರಗಳು ಮತ್ತು ಆ ಪ್ರಕಾರಗಳಲ್ಲಿ ಸಾತತ್ಯದಿಂದಿರುವ ಚಿನ್ನವನ್ನು ಉತ್ಪಾದ, ವ್ಯಯ ಮತ್ತು ಧ್ರುವತ್ವಗಳಿಗೆ ಉದಾಹರಣೆಯಾಗಿ ಕಾಣಬಹುದು. ಇದರಿಂದ ಜೈನತಾತ್ತ್ವಿಕಚಿಂತನೆಯನುಗುಣವಾಗಿ 'ಸತ್' ಎಂಬುದು ನಿತ್ಯಾನಿತ್ಯಾತ್ಮಕವಾಗಿದೆ; ಧ್ರುವತ್ವದ ಅಪೇಕ್ಷೆಯಿಂದ ನಿತ್ಯವಾಗಿದೆ; ಮತ್ತು ಪರ್ಯಾಯಗಳ ಅಪೇಕ್ಷೆಯಿಂದ ಅನಿತ್ಯವಾಗಿದೆ. ಹೀಗೆ 'ಸತ್‌ದ್ರವ್ಯ ಲಕ್ಷಣಂ' ಎಂಬ ಪ್ರಕಾರದ ಲಕ್ಷಣ ಕಥನದಲ್ಲಿಯೂ ಫಲಿತಾಂಶದಿಂದ 'ಗುಣ ಪರ್ಯಾಯವತ್ ದ್ರವ್ಯಂ' ಎಂಬ ಲಕ್ಷಣಾರ್ಥವೇ ಸಂಗತವಾಗಿದೆ.

---

5. 'ಇಹ ಪುಣ್ಯಪಾಪಗ್ರಹಣಂ ಚ ಕರ್ತವ್ಯಂ, ನವಪದಾರ್ಥಾ ಇತ್ಯನ್ಯೈರುಕ್ತತ್ವಾತ್ ನ ಕರ್ತವ್ಯಂ, ತಯೋರಾಸ್ರವೇ ಬಂಧೇಚಾಂತರ್ಭಾವಾತ್'—ಸರ್ವಾರ್ಥಸಿದ್ಧಿ ಪ್ರಥಮೋಧ್ಯಾಯಃ—ಚತುರ್ಥಸೂತ್ರ ವ್ಯಾಖ್ಯಾನಂ.

6. ('ಜೀವಮಜ್ಜೀವಂ ದವ್ವಂ-ದ್ರವ್ಯಸಂಗ್ರಹ ಗಾಹೆ-೧)
   ದವ್ವಂ ಜೀವಮಜೀವಂ ಜೀವೋ ಪುಣ ಚೇದಣೋವಜೋಗಮು ।
   ಪೋಗ್ಗಲದವ್ವಪ್ಪಮುಹಂ ಅಚೇದಣಂ ಹವದಿ ಅಜ್ಜೀವಂ ॥೩೫॥ ಪ್ರವಚನಸಾರ, ಅ.೨.

7. ಗುಣಪರ್ಯಾಯವತ್ ದ್ರವ್ಯಂ—ತತ್ವಾರ್ಥಸೂತ್ರ-ಅಧ್ಯಾಯ ೫, ಸೂತ್ರ ೧೩೮.

8. ಣರಣಾರಯತಿರಿಯಸುರಾ ಸಂಠಾಣಾದೀಹಿಂ ಅಣ್ಣಹಾ ಜಾದಾ ।
   ಪಜ್ಜಾಯಾ ಜೀವಾಣಂ ಉದಯಾದೀಹಿಂ ಣಾಮಕಮ್ಮಸ್ಸ ॥೬೧॥ ಇದೇ. ಪ್ರ.ಸಾ. ಅ. ೨

9. ಸತ್ ದ್ರವ್ಯಲಕ್ಷಣಂ—ತತ್ವಾರ್ಥಸೂತ್ರ-ಅಧ್ಯಾಯ ೫, ಸೂ. ೨೯

10. ಉತ್ಪಾದವ್ಯಯಧ್ರೌವ್ಯಯುಕ್ತಂ ಸತ್-ಇದೇ. ತ.ಸೂ. ಅ. ೫, ಸೂ. ೩೦

**ಜೀವ :** ಜೀವದ ನಿರ್ದೇಶಕವಾಗಿ 'ಆತ್ಮ' ಎಂಬುದು ವಿಶೇಷವಾಗಿ ಬಳಕೆಯಲ್ಲಿರುವ ಪರ್ಯಾಯ ಪದ. ಜೀವದ ಲಕ್ಷಣವನ್ನು ಕುಂದಕುಂದಾಚಾರ್ಯ್ಯರ ಪಂಚಾಸ್ತಿಕಾಯ ಪಾಹುಡದಲ್ಲಿ ಮುಂದಿನಂತೆ ಹೇಳಿದೆ.

ಜೀವೊತ್ತಿ ಹವದಿ ಚೇದಾ ಉವಓಗವಿಸೇಸಿದೋ ಪಹೂ ಕತ್ತಾ ।
ಭೊತ್ತಾಯ ದೇಹಮೆತ್ತೋಣ ಹಿ ಮುತ್ತೋ ಕಮ್ಮಸಂಜುತ್ತೋ ॥೨೭॥
ಕಮ್ಮಮಲವಿಪ್ಪಮುಕ್ಕೊ ಉಡ್ಢಂ ಲೋಗಸ್ಸ ಅಂತಮಧಿಗಂತಾ ।
ಸೋ ಸವ್ವಣಾಣದರಿಸೀ ಲಹದಿ ಸುಹಮಣಿಂದಿಯ ಮಣಂತಂ ॥೨೮॥

[ಜೀವನೆಂಬುವನು ಚೇತನಸ್ವರೂಪನು, ಜ್ಞಾನ ಮತ್ತು ದರ್ಶನಗಳ ಉಪಯೋಗವುಳ್ಳವನು, ಪ್ರಭುವು, ಕರ್ತೃವೂ ಭೋಕ್ತೃವೂ ಆಗಿದ್ದಾನೆ ; ತಾನು ಹೊಂದಿದ ಶರೀರದ ಅಳತೆಯುಳ್ಳವನು, ಮೂರ್ತನಲ್ಲದಿದ್ದರೂ ಕರ್ಮಸಂಯುಕ್ತನಾಗಿದ್ದಾನೆ. (೨೭) ]

[ಕರ್ಮದ ಕಲಂಕದಿಂದ ಪೂರ್ಣವಾಗಿ ಬಿಡುಗಡೆ ಹೊಂದಿ, ಮೇಗಣ ಲೋಕದ ತುದಿಯನ್ನು ಸೇರುವನು ಸರ್ವಜ್ಞನೂ, ಸರ್ವದರ್ಶಿಯೂ ಆಗಿದ್ದು ಅನಿಂದ್ರಿಯವಾದ ಅನಂತಸುಖವನ್ನು ಹೊಂದಿರುವನು. (೨೮)]

ಜೈನಮಾನ್ಯತೆಯನುಸಾರ ಜೀವರಾಶಿಯು ಅನಂತವಾದುದು. ಈ ಜೀವರಾಶಿಯನ್ನು ಪ್ರಧಾನವಾಗಿ ಸಂಸಾರಿ ಮತ್ತು ಮುಕ್ತ ಎಂದು ಎರಡು ಪ್ರಕಾರವಾಗಿ ವಿಭಾಗಿಸಿದೆ. ಕರ್ಮದ ಬಂಧನಕ್ಕೆ ಒಳಗಾಗಿ ಜನನ ಮರಣಗಳಿಗೊಳಗಾಗಿ ದೇವ, ಮನುಷ್ಯ, ತಿರ್ಯಂಚ ಮತ್ತು ನರಕ ಎಂಬ ನಾಲ್ಕು ಗತಿಗಳಲ್ಲಿ ಅಲೆಯುವ ಜೀವರುಗಳು ಸಂಸಾರಿ ಜೀವರು. ಕರ್ಮಬಂಧನದಿಂದ ಪರಿಪೂರ್ಣವಾಗಿ ಬಿಡುಗಡೆ ಹೊಂದಿದವರು ಮುಕ್ತಜೀವರು. ಇವರನ್ನು ಸಾಧಾರಣವಾಗಿ ಸಿದ್ಧರು ಎಂದು ಹೆಸರಿಸುವ ರೂಢಿಯಿದೆ.

ಚೇತನವು ಜೀವನ ವಿಶಿಷ್ಟ ಲಕ್ಷಣಗಳಲ್ಲಿ ಪ್ರಧಾನವಾದುದು. ಜ್ಞಾನ ಮತ್ತು ದರ್ಶನಗಳು ಚೇತನದ ಎರಡು ಅವಸ್ಥೆಗಳು. ಜೀವನು ಯಾವ ಅವಸ್ಥೆಯಲ್ಲಿಯೇ ಇರಲಿ, ತನ್ನ ಈ ಚೇತನಗುಣಧರ್ಮದಿಂದ ವಿರಹಿತನಾಗಿರುವುದಿಲ್ಲ. ಜೀವನು ಚೈತನ್ಯದ ಈ ಅವಸ್ಥಾಭೇದಗಳಾದ ಜ್ಞಾನ ಮತ್ತು ದರ್ಶನಗಳ ಉಪಯೋಗವುಳ್ಳವನಾಗಿರುತ್ತಾನೆ. ಚೈತನ್ಯದಂತೆ ಪ್ರಭುತ್ವ ಕರ್ತೃತ್ವ ಮತ್ತು ಭೋಕ್ತೃತ್ವಗಳೂ ಇವನ ವಿಶಿಷ್ಟ ಗುಣಧರ್ಮಗಳೇ ಆಗಿವೆ. ದೇಹಪರಿಮಾಣವೆಂದರೆ, ಜೀವನು ಸಾಂಸಾರಿಕ ಸ್ಥಿತಿಯಲ್ಲಿ ಯಾವ ಒಂದು ಕಾಲದಲ್ಲಿ ಯಾವ ಒಂದು ಶರೀರವನ್ನು ಹೊಂದಿರುವನೋ ಆ ದೇಹದ ಅಳತೆಯುಳ್ಳವನಾಗಿರುತ್ತಾನೆ. ಮುಕ್ತನಾದಾಗ ತಾನು ಹಿಂದೆ ಯಾವಶರೀರದಿಂದ ಮುಕ್ತಿ ಪಡೆದನೋ ಆ ಶರೀರದಿಂದ ಕಿಂಚಿನ್ಮಾತ್ರ ಕಡಿಮೆಯದಾದ ಪರಿಮಾಣವುಳ್ಳವನಾಗಿರುತ್ತಾನೆ. ಕರ್ಮಬಂಧದ ಅವಸ್ಥೆಯಲ್ಲಿದ್ದರೂ ಜೀವನು ಮೂರ್ತನಾಗಿರುವುದಿಲ್ಲ; ಮೂರ್ತ ಗುಣಧರ್ಮವು ಪುದ್ಗಲದ ಗುಣಧರ್ಮವಾಗಿದೆ. ಕರ್ಮಕಲಂಕದ ಭಾರದಿಂದ ಬಿಡುಗಡೆ ಹೊಂದಿದ ಜೀವನು ಊರ್ಧ್ವಗಾಮಿಯಾಗಿ ಲೋಕದ ತುದಿಯನ್ನು ಸೇರುವನು ; ಸರ್ವಜ್ಞನೂ, ಸರ್ವದರ್ಶಿಯೂ ಆದ ಅವನು ಅಶರೀರಿಯಾಗಿದ್ದು ಇಂದ್ರಿಯ ಸಂಭೂತವಲ್ಲದ ಆತ್ಮಾಧಿಷ್ಠಿತವಾದ ಅನಂತಸುಖವನ್ನು ಹೊಂದುವನು.

**ಅಜೀವ :** ಪುದ್ಗಲ, ಧರ್ಮ. ಅಧರ್ಮ, ಆಕಾಶ ಮತ್ತು ಕಾಲ–ಇವು ಐದು ಅಜೀವ ದ್ರವ್ಯಭೇದಗಳು. ಜೀವದ ಚೇತನ ಗುಣವಿಲ್ಲವಾದ್ದರಿಂದ ಇವುಗಳನ್ನು ಅಜೀವ ದ್ರವ್ಯಗಳೆಂದು ಹೇಳಿದೆ. ಇವುಗಳಲ್ಲಿ ಸ್ಪರ್ಶ, ರಸ, ಗಂಧ ಮತ್ತು ವರ್ಣಗಳುಳ್ಳದ್ದು ಪುದ್ಗಲವು. ಇಂದ್ರಿಯಗ್ರಾಹ್ಯವಾಗಿರುವುದರಿಂದ ಇದನ್ನು ಮೂರ್ತದ್ರವ್ಯವೆನ್ನುವರು. ಶಬ್ದವು ಇದರ ಪರ್ಯಾಯ ಮಾತ್ರವಾಗಿದೆ. ಇತರ ಸಿದ್ಧಾಂತಗಳಲ್ಲಿ ಹೇಳಲಾಗಿರುವ ಪೃಥಿವೀ, ಅಪ್, ತೇಜಸ್, ವಾಯು ಮತ್ತು ಮನಸ್ಸುಗಳು ಈ ಪುದ್ಗಲದ್ರವ್ಯದಲ್ಲಿಯೇ ಅಂತರ್ಗತವಾಗಿವೆ. ಪುದ್ಗಲವು ಅಣು ಮತ್ತು ಸ್ಕಂಧ ಎಂದು ಪ್ರಧಾನವಾದ ಎರಡು ಭೇದವುಳ್ಳದ್ದಾಗಿದೆ. ಅಣುಗಳ ಪೂರಣ ಮೂಲಕ ಸ್ಕಂಧಗಳಾಗುವುವು ಮತ್ತು ಸ್ಕಂಧಗಳ ಗಲನದಿಂದ ಅಣುಗಳಾಗುವುವು. ಈ ರೀತಿಯದಾದ ಪೂರಣ ಮತ್ತು ಗಲನಕ್ರಿಯಾಲಕ್ಷಣದಿಂದ ಪುದ್ಗಲ ಎಂಬ ಹೆಸರು ಅನ್ವರ್ಥವಾಗುವುದು. ಈ ಪುದ್ಗಲವನ್ನು ಮತ್ತೊಂದು ಅಪೇಕ್ಷೆಯಿಂದ ಸೂಕ್ಷ್ಮ–ಸೂಕ್ಷ್ಮ, ಸೂಕ್ಷ್ಮ. ಸೂಕ್ಷ್ಮ–ಸ್ಥೂಲ, ಸ್ಥೂಲ-ಸೂಕ್ಷ್ಮ. ಸ್ಥೂಲ ಮತ್ತು ಸ್ಥೂಲ-ಸ್ಥೂಲ ಎಂದು ಆರುಪ್ರಕಾರವಾಗಿ ವಿಂಗಡಿಸಿದ್ದಾರೆ. ಪರಮಾಣು, ಕರ್ಮವರ್ಗಣಾ, ಚುಕ್ಷು ಹೊರತಾದ ಇತರ ಇಂದ್ರಿಯಗಳ ವರ್ಣ ಮುಂತಾದ ವಿಷಯಗಳು, ಛಾಯಾ, ಜಲ ಮತ್ತು ಪೃಥ್ವಿ-ಇವು ಅನುಕ್ರಮವಾಗಿ ಸೂಕ್ಷ್ಮ-ಸೂಕ್ಷ್ಮಾದಿ ವಿಭಾಗಗಳಿಗೆ ದೃಷ್ಟಾಂತಗಳು.[11] ಧರ್ಮ ಮತ್ತು ಅಧರ್ಮಗಳು ಅಜೀವ ದ್ರವ್ಯದ ಎರಡನೇ ಮತ್ತು ಮೂರನೇ ಭೇದಗಳು, ಲೋಕಸಾಧಾರಣವಾಗಿ ಧರ್ಮ ಮತ್ತು ಅಧರ್ಮ ಪದಗಳು ಪುಣ್ಯ, ಪಾಪ, ಒಳ್ಳೆಯದು, ಕೆಟ್ಟದ್ದು, ನ್ಯಾಯ, ಅನ್ಯಾಯ. ಸದಾಚಾರ, ದುರಾಚಾರ ಎಂದು ಮುಂತಾದ ಅರ್ಥಗಳಲ್ಲಿ ಪ್ರಯುಕ್ತವಾಗಿವೆ. ಜೈನಮತದಲ್ಲಿ ಈ ಪದಗಳು ಲೋಕಸಾಧಾರಣವಾದ ಈ ಅರ್ಥಗಳಲ್ಲಿ ಪ್ರಯುಕ್ತವಾಗಿಲ್ಲವೆಂದೇನಿಲ್ಲ. ಉದಾಹರಣೆಯಾಗಿ-'ದೇಶಯಾಮಿ ಸಮೀಚೀನಂ ಧರ್ಮಂ ಕರ್ಮನಿಬರ್ಹಣಂ' ಎನ್ನುವಲ್ಲಿ ಧರ್ಮಪದವು

11. ಪುಢವೀ ಜಲಂ ಚ ಛಾಯಾ ಚ ಉರಿಂದಿಯ ವಿಸಯಕಮ್ಮಪರಮಾಣೂ ।
ಛವ್ವಿಹಭೇಯಂ ಭಣಿಯಂ ಪೊಗ್ಗಲದವ್ವಂ ಜಿಣವರೇಹಿಂ ॥ ಪ್ರ. ಸಾ. ಅಂ ೨, ಗಾಹೆ ೪೦ರ ಜಯಸೇನ ಕೃತ ತಾತ್ಪರ್ಯವೃತ್ತಿ.

ಲೋಕಸಾಧಾರಣವಾದ ಸದಾಚಾರ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಆದರೆ ದ್ರವ್ಯಭೇದ ಸೂಚಕವಾಗಿ ಪ್ರಯುಕ್ತವಾಗಿರುವಲ್ಲಿ ಈ ಪದಗಳು ಮುಂದಿನಂತೆ ಜೈನಮತದಲ್ಲಿ ಮಾತ್ರ ಕಂಡುಬರುವ ಸೈದ್ಧಾಂತಿಕ ಅರ್ಥವುಳ್ಳವಾಗಿವೆ. ಗಮನೋದ್ಯತವಾದ ಮೀನಿಗೆ ನೀರು ಸಹಕಾರಿಯಾಗಿರುವಂತೆ ಗಮನೋದ್ಯತ ಜೀವ ಮತ್ತು ಪುದ್ಗಲಗಳಿಗೆ ಧರ್ಮದ್ರವ್ಯವು ಸಹಕಾರಿಯಾಗಿದೆ; ಹೀಗೆಯೇ ಸ್ಥಿತಿ, ಎಂದರೆ ನಿಲುಗಡೆಗೆ ಉದ್ಯತವಾದ ಜೀವಪುದ್ಗಲಗಳಿಗೆ ಅಧರ್ಮವು ಸಹಕಾರಿಯಾಗಿದೆ. ಆಕಾಶವು ಅಜೀವ ದ್ರವ್ಯದ ನಾಲ್ಕನೇ ಪ್ರಕಾರವಾಗಿದೆ; ಇದು ಇತರ ಎಲ್ಲ ದ್ರವ್ಯಗಳಿಗೆ ಅವಕಾಶ ಕೊಡುವ ಗುಣವುಳ್ಳದ್ದಾಗಿದೆ. ಅಜೀವದ್ರವ್ಯದ ಐದನೇ ಭೇದವಾದ ಕಾಲವು ವ್ಯವಹಾರ ಮತ್ತು ಪರಮಾರ್ಥಕಾಲ ಎಂಬ ಭೇದಗಳಿಂದ ಎರಡು ಪ್ರಕಾರವಾಗಿದೆ. ಲೋಕ ಸಾಧಾರಣವಾಗಿ ಬಳಕೆಯಲ್ಲಿರುವ ಸಮಯ, ಆವಲಿ, ಘಳಿಗೆ, ಗಂಟೆ ಮುಂತಾದ ಕಾಲವಿಭಾಗಗಳು ವ್ಯವಹಾರ ಕಾಲ ಭೇದ ಗಳು. ದ್ರವ್ಯಗಳಲ್ಲಿ ಪರ್ಯಾಯಗಳ ಹೇತುವಾದ ವರ್ತನೆಯು ಪರಮಾರ್ಥಕಾಲಲಕ್ಷಣ. ಹೀಗೆ ಜೀವದ್ರವ್ಯ ಮತ್ತು ಅಜೀವದ್ರವ್ಯದ ಪುದ್ಗಲ, ಧರ್ಮ, ಅಧರ್ಮ, ಆಕಾಶ ಹಾಗೂ ಕಾಲ ಎಂಬ ಐದು ಭೇದಗಳು ಒಟ್ಟು ಸೇರಿ ಆರು ದ್ರವ್ಯ ಗಳೆಂದು ಗಣನೆಹೊಂದಿವೆ. ಈ ಆರು ದ್ರವ್ಯಗಳಿಂದ ತುಂಬಿರುವುದೇ ಲೋಕವು. **'ಷಡ್ ದ್ರವ್ಯ ಭರಿತೋ ಲೋಕಃ'** ಎಂದು ಲೋಕದ ಲಕ್ಷಣವನ್ನು ಹೇಳಿದೆ.

**ಆಸ್ರವ :** ಜೀವನು ಸಾಂಸಾರಿಕ ಸ್ಥಿತಿಯಲ್ಲಿ ಹೇಗೆ ಕರ್ಮವಶನಾಗಿ ಅವಸ್ಥಾಂತರಗಳನ್ನು ಹೊಂದಿ ಸುಖದುಃಖಭಾಗಿ ಯಾಗುವನು ಹಾಗೂ ಕರ್ಮದಿಂದ ಬಿಡುಗಡೆ ಪಡೆದು ಶುದ್ಧ ಸ್ವರೂಪನಾಗಿ ಆತ್ಮಾಯತ್ತವಾದ ಅನಂತಸುಖವನ್ನು ಹೇಗೆ ಹೊಂದುವನು ಎಂಬುದು ಆಸ್ರವಾದಿ ಐದು ತತ್ತ್ವಗಳ ಪ್ರರೂಪಣೆಯ ವಿಷಯವಾಗಿದೆ. ಪರಲೋಕವನ್ನು ಒಪ್ಪಿರುವ ಸಿದ್ಧಾಂತ ಗಳೆಲ್ಲವೂ ಕರ್ಮ ಸಂಬಂಧಿಯಾದ ಅಂಶವೊಂದರ ಬಗ್ಗೆ ಸಹಮತವುಳ್ಳವಾಗಿವೆ, ಅದೆಂದರೆ : ಪ್ರತಿಯೊಂದು ವ್ಯಕ್ತಿಯ ರಾಗ ದ್ವೇಷಯುಕ್ತವಾದ ಕರ್ಮವು ಅವನ ಮೇಲೆ ಸಂಸ್ಕಾರವುಂಟುಮಾಡುತ್ತದೆ. ಕರ್ಮ ಅಥವಾ ಅವರ ಪ್ರವೃತ್ತಿಯು ಕ್ಷಣಕಾಲದ ವ್ಯಾಪ್ತಿಯದಾದರೂ ಸಂಸ್ಕಾರವು ಬಹುದೀರ್ಘಕಾಲ ಉಳಿದಿರುತ್ತದೆ. ಸಂಸ್ಕಾರದಿಂದ ಪ್ರವೃತ್ತಿಯುಂಟಾಗುವುದು, ಮತ್ತೆ ಪ್ರವೃತ್ತಿಯಾದ ಸಂಸ್ಕಾರವುಂಟಾಗುವುದು. ಹೀಗೆ ಪ್ರವೃತ್ತಿ ಮತ್ತು ಸಂಸ್ಕಾರಗಳ ಪರಂಪರೆಯು ಅನಾದಿಕಾಲದಿಂದ ನಡೆದು ಬಂದಿದೆ. ಈ ಸಂಸ್ಕಾರವು ಶುಭಪ್ರಕಾರದ್ದಾಗಿರಬಹುದು ಅಥವಾ ಅಶುಭಪ್ರಕಾರದ್ದಾಗಿರಬಹುದು ; ಸಂಸ್ಕಾರದ ಪ್ರಕಾರಗಳನ್ನು ಧರ್ಮ, ಅಧರ್ಮ, ಪುಣ್ಯಕರ್ಮ, ಪಾಪಕರ್ಮ ಎಂದು ಮುಂತಾಗಿ ಕರೆಯಲಾಗಿದೆ. ಈ ಸಂಸ್ಕಾರ ರೂಪದ ಕರ್ಮದ ಸ್ವರೂ ಪವು ಜೈನಸಿದ್ಧಾಂತದಲ್ಲಿ ಇತರ ಸಿದ್ಧಾಂತಗಳ ಅಪೇಕ್ಷೆಯಿಂದ ಅಂಶಿಕವಾಗಿ ಭಿನ್ನತರವಾಗಿದೆ. ಜೈನಸಿದ್ಧಾಂತಾನುಸಾರ ಈ ಸಂಸ್ಕಾರವು ಕೇವಲ ಭಾವರೂಪಮಾತ್ರದ್ದಾಗಿರದೆ ದ್ರವ್ಯಾತ್ಮಕವಾದ ವಸ್ತುಸ್ವರೂಪವುಳ್ಳದ್ದಾಗಿಯೂ ಇದೆ. ಇದರ ಸ್ವರೂ ಪವನ್ನು ಕುಂದಕುಂದ ಸ್ವಾಮಿಯವರು ಮುಂದಿನಂತೆ ಹೇಳಿದ್ದಾರೆ.

> **ಪರಿಣಮದಿ ಜದಾ ಅಪ್ಪಾ ಸುಹಮ್ಮಿ ಅಸುಹಮ್ಮಿ ರಾಗದೋಸಜುದೋ ।**
> **ತಂ ಪವಿಸದಿ ಕಮ್ಮರಯಾಣಾಣಾವರಣಾದಿ ಭಾವೇಹಿಂ ॥ ೯೫ ॥** ಪ್ರ. ಸಾ. ಅ. ೨

'ರಾಗದ್ವೇಷಯುಕ್ತನಾದ ಆತ್ಮನು ಶುಭ ಅಥವಾ ಅಶುಭಕ್ರಿಯೆಗಳಲ್ಲಿ ಪ್ರವೃತ್ತಿ ಹೊಂದಿದಾಗ ಕರ್ಮ ರಜವು ಜ್ಞಾನಾವರಣಾದಿ ರೂಪದಿಂದ ಅವನಲ್ಲಿ ಪ್ರವೇಶಿಸುವುದು'.

ಅನಾದಿ ಕಾಲದಿಂದ ಕರ್ಮಬಂಧನಕ್ಕೊಳಗಾಗಿರುವ ಜೀವಿಗಳಲ್ಲಿ ಕಾಯ, ವಚನ ಮತ್ತು ಮನಸ್ಸುಗಳ ಕ್ರಿಯೆ ನಡೆದಿರು ತ್ತದೆ. ಈ ಕ್ರಿಯೆಗಳ ನಿಮಿತ್ತದಿಂದ ಆತ್ಮಪ್ರದೇಶದಲ್ಲಿ ಪರಿಸ್ಪಂದವಾಗುವುದು. ಈ ಪರಿಸ್ಪಂದವನ್ನು ಯೋಗವೆನ್ನುವರು. ಯೋಗರೂಪವಾದ ಈ ಪ್ರಣಾಲಿಕೆಯ ಮೂಲಕ ಆತ್ಮಪ್ರದೇಶಕ್ಕೆ ಪೌದ್ಗಲಿಕವಾದ ಕರ್ಮದ ಆಸ್ರವವಾಗುವುದು. ಹೀಗೆ ಆಸ್ರವವಾಗುವ ಕರ್ಮವನ್ನು, ಆತ್ಮನಲ್ಲಿ ಅದು ಉಂಟುಮಾಡುವ ಫಲದ ಅಪೇಕ್ಷೆಯಿಂದ, ಘಾತಿ ಮತ್ತು ಅಘಾತಿ ಎಂದು ಪ್ರಧಾನವಾಗಿ ಎರಡು ಪ್ರಕಾರವಾಗಿ ವಿಂಗಡಿಸಬಹುದು ; ಆತ್ಮನ ಸ್ವಾಭಾವಿಕ ಗುಣಗಳನ್ನು ಘಾತ ಮಾಡುವ ಕರ್ಮ ಪ್ರಕಾರವು ಘಾತಿಕರ್ಮ ; ಆತ್ಮನ ಗುಣಕ್ಕೆ ಹಾನಿತಾರದೆ ಅವನನ್ನು ಸಾಂಸಾರಿಕ ಬಂಧನದಲ್ಲಿರಿಸುವ ಕರ್ಮ ಪ್ರಕಾರವು ಅಘಾತಿಕರ್ಮ. ಪುನಃ ಘಾತಿಕರ್ಮವು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ ಮತ್ತು ಅಂತರಾಯ ಎಂಬ ನಾಲ್ಕು ಪ್ರಧಾನ ಭೇದವುಳ್ಳದ್ದಾಗಿಯೂ, ಅಘಾತಿಯು ವೇದನೀಯ, ಆಯುಷ್ಯ, ನಾಮ ಮತ್ತು ಗೋತ್ರ ಎಂಬ ನಾಲ್ಕು ಮುಖ್ಯ ಭೇದ ಗಳುಳ್ಳದ್ದಾಗಿಯೂ ಇವೆ. ಈ ಕರ್ಮಗಳ ಹೆಸರುಗಳು ಅನ್ವರ್ಥಗಳಾಗಿದ್ದು ಅವು ಆತ್ಮನಲ್ಲಿ ಆಯಾಯ ಪ್ರಕಾರದ ಫಲವುಂಟು ಮಾಡುತ್ತವೆ. ಈ ಎಂಟು ಕರ್ಮಪ್ರಕಾರಗಳಲ್ಲಿ ಸುಖಾನುಭವ ಕೊಡುವ ಸದ್‌ವೇದ್ಯ, ದೇವ, ಮನುಷ್ಯ, ತಿರ್ಯಕ್ ಪ್ರಕಾರದ ಶುಭ ಆಯು ಮನುಷ್ಯ ಗತಿ, ದೇವಗತಿ ಇವೇ ಮುಂತಾದ ಫಲದಾಯಕ ಪ್ರಕಾರವಾದ ನಾಮಕರ್ಮ ವಿಭಾಗ, ಉಚ್ಚ ಗೋತ್ರ-ಇವು ಪುಣ್ಯ ಕರ್ಮಗಳು; ಇತರ ಪ್ರಕಾರಗಳು ಪಾಪಕರ್ಮಗಳು.

**ಬಂಧ:** ಆಸ್ರವವಾದ ಕರ್ಮಪುದ್ಗಲವು ಜೀವದೊಡನೆ ಹೊಂದುವ ಸಂಬಂಧವನ್ನು ಬಂಧವೆನ್ನುವರು. ಇದು ಬಂಧದ ಪ್ರಥಮದಶೆ. ಅನಂತರದಲ್ಲಿ ಪ್ರಧಾನತಯಾ ಇದರ ನಾಲ್ಕು ಪ್ರಕಾರಗಳನ್ನು ಹೇಳಿದೆ. ಜ್ಞಾನಾವರಣಾದಿ ಕರ್ಮಗಳು ಅವುಗಳ ಕಾರ್ಯ ನಡೆಸುವ ಸಾಮರ್ಥ್ಯ ಪೊಂದುವುವು ; ಉದಾಹರಣೆಯಾಗಿ : ಜ್ಞಾನಾವರಣೀಯವು ವಸ್ತುಸ್ವರೂಪಜ್ಞಾನ ವಾಗದಂತೆ ತಡೆಯುಂಟುಮಾಡುವ ಕಾರ್ಯಶಕ್ತಿಯುಳ್ಳದ್ದಾಗುವುದು. ಇದೇ ರೀತಿಯಾಗಿ ಇತರ ಕರ್ಮಗಳಲ್ಲಿಯೂ ಆಯಾಯ ಕಾರ್ಯಶಕ್ತಿಯುಂಟಾಗುವುದು. ಇದು ಪ್ರಕೃತಿ ಬಂಧ. ಈ ಕರ್ಮಗಳು ತಮ್ಮ ಈ ಸ್ವಭಾವದಿಂದ ಪರಿಚ್ಯುತಿ ಹೊಂದದೆ ಕಾಲದ ಒಂದು ಅವಧಿಯಪರ್ಯಂತ ಇರುವ ಸ್ಥಿತಿಯನ್ನು ಹೊಂದುವುವು ; ಇದು ಸ್ಥಿತಿಬಂಧ. ಕರ್ಮಗಳು ಕಾಲದ ಅವಧಿಯ ಕೊನೆಯಲ್ಲಿ ಅಥವಾ ಕಾರಣ ನಿಮಿತ್ತದಿಂದ ವಿಪಾಕಗೊಂಡು ಫಲ ಕೊಡುವುವು.-ಇದು ಅನುಭಾಗಬಂಧವು, ಆತ್ಮ ಪ್ರದೇಶದಲ್ಲಿ ಬಂದು ಸೇರಿದ ಕರ್ಮ ಪರಮಾಣುಗಳ ಸಂಖ್ಯೆ ನಿಯತವಾಗುವುದು ಪ್ರದೇಶ ಬಂಧ. ಈ ರೀತಿಯಾಗಿ ಆಸ್ರವ ಮತ್ತು ಬಂಧ ತತ್ತ್ವಗಳು ಆತ್ಮನ ಭವಭ್ರಮಣೆಯ ಕಾರಣ ಮತ್ತು ರೀತಿಯನ್ನು ವಿಶದಪಡಿಸುತ್ತವೆ.

**ಸಂವರ:** ನೂತನವಾಗಿ ಕರ್ಮದ ಆಸ್ರವವಾಗುವುದರ ನಿರೋಧವಾಗುವುದನ್ನು ಸಂವರವೆನ್ನುವರು-ಇದು ಭಾವ ಸಂವರ ಮತ್ತು ದ್ರವ್ಯ ಸಂವರವೆಂದು ಎರಡು ಪ್ರಕಾರವಾಗಿದೆ. ಸಂಸಾರಕ್ಕೆ ನಿಮಿತ್ತವಾದ ಕ್ರಿಯೆಗಳಿಂದ ನಿವೃತ್ತಿ ಹೊಂದು ವುದು ಭಾವಸಂವರವು, ಇದರ ನಿಮಿತ್ತದಿಂದ ಕರ್ಮ ಸುದ್ಗಲವು, ಇದರ ನಿಮಿತ್ತದಿಂದ ಕರ್ಮಪುದ್ಗಲಗಳ ಆಸ್ರವವಾಗ ದಿರುವುದು ದ್ರವ್ಯ ಸಂವರವು.

**ನಿರ್ಜರಾ:** ನೂತನವಾಗಿ ಆಸ್ರವವಾಗುವ ಕರ್ಮನಿರೋಧವು ಸಂವರದ ಮೂಲಕ ಆಗುವುದಾದರೂ ಪೂರ್ವಾ ರ್ಜಿತ ಕರ್ಮಗಳ ಬಿಡುಗಡೆಯು ಮುಕ್ತಿಸಿದ್ಧಿಗೆ ಅತ್ಯವಶ್ಯಕ. ಏಕದೇಶ ರೂಪದಿಂದ ಆಗುವ ಕರ್ಮದ ಬಿಡುಗಡೆಯು ನಿರ್ಜ ರೆಯು. ಇದು ಸವಿಪಾಕ ನಿರ್ಜರೆ ಮತ್ತು ಅವಿಪಾಕ ನಿರ್ಜರೆಯೆಂದು ಎರಡು ವಿಧ. ಕರ್ಮಗಳು ನಿಯತ ಕಾಲಾಂತ್ಯದಲ್ಲಿ ಫಲವಿತ್ತ ಬಳಿಕ ಆಗುವ ಬಿಡುಗಡೆ ಸವಿಪಾಕ ನಿರ್ಜರೆಯು. ಸವಿಪಾಕ ಕಾಲದ ಪೂರ್ವಭಾವಿಯಾಗಿಯೇ ಪಾಕಗೊಳಿಸುವ ಮೂಲಕ ಆಗುವ ಬಿಡುಗಡೆಯು ಅವಿಪಾಕ ನಿರ್ಜರೆಯು ಸಂವರ ಪೂರ್ವಕ ತಪಸ್ಸಿನ ಮೂಲಕ ಆಗುವ ನಿರ್ಜರೆಯು ಮುಕ್ತಿ ಸಾಧಕವು.

**ಮೋಕ್ಷ**—ಪರಿಪೂರ್ಣವಾಗಿ ಕರ್ಮದಿಂದ ಬಿಡುಗಡೆ ಹೊಂದುವುದು ಮೋಕ್ಷವು. ಮುಕ್ತಾತ್ಮನು ಊರ್ಧ್ವಲೋಕದ ತುದಿಯಲ್ಲಿ ಹೋಗಿ ನಿಲ್ಲುವನು. ಇವನು ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ, ಸೂಕ್ಷ್ಮತ್ವ, ಅವಗಹನ, ಅಗುರುಲಘುತ್ವ ಮತ್ತು ಅವ್ಯಾಬಾಧತ್ವ ಎಂಬ ಎಂಟು ಗುಣಯುಕ್ತನಾಗಿ ಪರಮಾತ್ಮಸ್ವರೂಪದಲ್ಲಿರುವನು.

**ತತ್ತ್ವಜ್ಞಾನವಾಗುವ ಬಗೆ**—`ಪ್ರಮಾಣನಯೈರಧಿಗಮಃ'–(ತ.ಸೂ; ಅ.೧.ಸೂ.೬) ಪ್ರಮಾಣ ಮತ್ತು ನಯಗಳ ಮೂಲಕ ಜೀವಾದಿ ತತ್ತ್ವಗಳ ಜ್ಞಾನವಾಗುವುದು. ವಸ್ತುವನ್ನು ಪೂರ್ಣವಾಗಿ ತಿಳಿಯುವ ಜ್ಞಾನವು ಪ್ರಮಾಣವು ; ವಸ್ತುವಿನ ಏಕದೇಶವನ್ನು ತಿಳಿಯುವ ಜ್ಞಾನವು ನಯವು.[12] ಪ್ರಮಾಣವು ಸ್ವಾರ್ಥ ಮತ್ತು ಪರಾರ್ಥ ಎಂದು ಎರಡು ಪ್ರಕಾರವಾಗಿದೆ ಜ್ಞಾತೃವು ಯಾವುದರ ಮೂಲಕ ತಾನೇ ತಿಳಿದುಕೊಳ್ಳುವನೋ ಅದು ಸ್ವಾರ್ಥಪ್ರಮಾಣವು, ಇದರಿಂದ ಸ್ವಾರ್ಥ ಪ್ರಮಾಣವು ಜ್ಞಾನರೂಪವೇ ಆಗಿದೆ; ಯಾವುದರ ಮೂಲಕ ಅನ್ಯರಿಗೆ ತಿಳಿವಳಿಕೆಯುಂಟುಮಾಡಲಾಗುವುದೋ ಅದು ಪರಾರ್ಥಪ್ರಮಾಣವು, ಅನ್ಯರಿಗೆ ವಚನಮೂಲಕ ತಿಳಿಯಪಡಿಸಬೇಕಾಗುವುದರಿಂದ ಪರಾರ್ಥಪ್ರಮಾಣವು ವಚನರೂಪವಾಗಿರುವುದು. ಜ್ಞಾನವನ್ನು ಮತಿ, ಶ್ರುತ, ಅವಧಿ, ಮನಃಪರ್ಯಾಯ ಮತ್ತು ಕೇವಲ ಎಂದು ಐದು ಪ್ರಕಾರವಾಗಿ ವಿಭಾಗ ಮಾಡಿದೆ. ಇವುಗಳಲ್ಲಿ ಜ್ಞಾನಾ ತ್ಮಕವಾದ ಶ್ರುತವು ಸ್ವಾರ್ಥ ಪ್ರಮಾಣವಾಗಿಯೂ ವಚನಾತ್ಮಕವಾದ ಶ್ರುತವು ಪರಾರ್ಥ ಪ್ರಮಾಣವಾಗಿಯೂ ಇದೆ. ನಯವು ಶ್ರುತಜ್ಞಾನದ ಭೇದವಾಗಿದೆ.

ಜ್ಞಾನಭೇದಗಳನ್ನು ಹೇಳುವಲ್ಲಿ ಜೈನದರ್ಶನವು ಸಾಧಾರಣವಾಗಿ ಅನ್ಯತ್ರ ಕಂಡುಬಾರದಿರುವ, ತನ್ನದೇ ಆದ ವೈಶಿ ಷ್ಟ್ಯವುಳ್ಳದ್ದಾಗಿದೆ. ಕರ್ಮಬದ್ಧ ಆತ್ಮನಲ್ಲಿ ಜ್ಞಾನವು, ಜ್ಞಾನಾವರಣೀಯ ಕರ್ಮದಿಂದ ಆವರಣ ಹೊಂದಿರುವುದಾದ್ದರಿಂದ, ಪೂರ್ಣಾಭಿವ್ಯಕ್ತಿಯುಳ್ಳದ್ದಾಗಿರುವುದಿಲ್ಲ. ಈ ರೀತಿಯಾಗಿ ಕರ್ಮಬದ್ಧ ಅವಸ್ಥೆಯಲ್ಲಿರುವ ಜೀವನಲ್ಲಿ ಮತಿ, ಶ್ರುತ, ಅವಧಿ ಮತ್ತು ಮನಃ ಪರ್ಯಾಯ ಎಂಬ ನಾಲ್ಕು ಪ್ರಕಾರದ ಜ್ಞಾನಭೇದಗಳಾಗಬಹುದು. ಇವುಗಳಲ್ಲಿ ಮತಿಜ್ಞಾನವು ಇಂದ್ರಿಯ ಮತ್ತು ಮನಸ್ಸುಗಳ ಸಹಕಾರದಿಂದ ಅಭಿವ್ಯಕ್ತಿ ಹೊಂದುವುದು. ಶ್ರುತವು ಮತಿಜ್ಞಾನಪೂರ್ವಕವಾಗಿ ಆಗುವುದು. ಸ್ಮೃತಿ, ಸಂಜ್ಞಾ, ಚಿಂತಾ ಮತ್ತು ಅಭಿನಿಬೋಧಗಳು ಮತಿಜ್ಞಾನದ ನಾಮಾಂತರಗಳು. ಇವುಗಳಲ್ಲಿ ಚಿಂತಾ ಮತ್ತು ಅಭಿನಿಬೋಧಗಳು ಅನುಕ್ರಮವಾಗಿ ನೈಯಾಯಿಕ ದಾರ್ಶನಿಕರ ತರ್ಕ ಮತ್ತು ಅನುಮಾನಗಳೊಡನೆ ಸಮಾನತೆಯುಳ್ಳವಾಗಿವೆ.[12a] ಶ್ರುತಜ್ಞಾನವು

12. ಸಕಲಾದೇಶಃ ಪ್ರಮಾಣಾಧೀನಃ ವಿಕಲಾದೇಶೋ ನಯಾಧೀನ ಇತಿ.
ಸರ್ವಾರ್ಥಸಿದ್ಧಿ-ಸೂ. ೬ರ ವ್ಯಾಖ್ಯಾನ.

12a. ತ. ಸೂ; ಪ್ರ. ಅ. ಸೂ. ೧೩; ಶ್ರೀ ಪಂ. ಕೈಲಾಸಚಂದ್ರಶಾಸ್ತ್ರಿಯವರ ಹಿಂದೀ ವ್ಯಾಖ್ಯಾನ.

ಇತರ ದಾರ್ಶನಿಕರ ಆಗಮ ಪ್ರಾಮಾಣ್ಯದೊಡನೆ ಸಾದೃಶ್ಯತೆಯುಳ್ಳದ್ದಾಗಿದೆ. ಮತಿ ಮತ್ತು ಶ್ರುತಜ್ಞಾನಗಳು ವಾಸ್ತವವಾಗಿ ಪರೋಕ್ಷಜ್ಞಾನಗಳಾಗಿವೆ. ಆದರೆ ವ್ಯಾವಹಾರಿಕ ದೃಷ್ಟಿಯಿಂದ ತರ್ಕಗ್ರಂಥಗಳಲ್ಲಿ ಇವುಗಳನ್ನು ಸಾಂವ್ಯವಹಾರಿಕ ಪ್ರತ್ಯಕ್ಷಗಳೆಂದು ಹೆಸರಿಸಲಾಗಿದೆ. ಅವಧಿ, ಮನಃಪರ್ಯಾಯ ಮತ್ತು ಕೇವಲಜ್ಞಾನಗಳು-ಈ ಜ್ಞಾನಗಳು-ಇತರ ದಾರ್ಶನಿಕರಲ್ಲಿ ಮಾನ್ಯತೆ ಹೊಂದಿರುವ ಆರ್ಷ ಪ್ರತ್ಯಕ್ಷದೊಡನೆ ಸ್ಥೂಲ ರೀತಿಯ ಸಾದೃಶ್ಯತೆಯುಳ್ಳವಾಗಿವೆ.

ಇತರ ದಾರ್ಶನಿಕರಲ್ಲಿ ಕೆಲವರು ಇಂದ್ರಿಯಾರ್ಥ ಸನ್ನಿಕರ್ಷವನ್ನು, ಮತ್ತೆ ಕೆಲವರು ಇಂದ್ರಿಯವನ್ನು ಮತ್ತೂ ಕೆಲವರು ಜ್ಞಾನವನ್ನು ಪ್ರಮಾಣವನ್ನಾಗಿ ಅಂಗೀಕರಿಸಿದ್ದಾರೆ. ಜೈನದರ್ಶನಾನುಸಾರ ಮತಿ ಮುಂತಾದ, ಮೇಲೆ ಹೇಳಿದ, ಐದು ಜ್ಞಾನಗಳು ಪ್ರಮಾಣಗಳಾಗಿವೆ. ಇವುಗಳಲ್ಲಿ ತತ್ತ್ವಾರ್ಥಸೂತ್ರದನುಸಾರವಾಗಿ, ಮತಿ ಮತ್ತು ಶ್ರುತಜ್ಞಾನಗಳು ಪರೋಕ್ಷ ಪ್ರಮಾಣಗಳಾಗಿಯೂ ಅವಧಿ, ಮನಃ ಪರ್ಯಾಯ ಮತ್ತು ಕೇವಲಜ್ಞಾನಗಳು ಪ್ರತ್ಯಕ್ಷ ಪ್ರಮಾಣಗಳಾಗಿಯೂ ಇವೆ.

**ಅನೇಕಾಂತವಾದ**—ಜೈನಸಿದ್ಧಾಂತದನುಸಾರ ಗುಣ ಕ್ರಿಯೆ, ಸಂಬಂಧ ಮುಂತಾದುವು ದ್ರವ್ಯದ ಅವಸ್ಥಾಂತರಗಳಾಗಿವೆ: ಅವು ದ್ರವ್ಯದಿಂದ ಭಿನ್ನವಾದವುಗಳಲ್ಲ. ದ್ರವ್ಯದ ಲಕ್ಷಣ ಸತ್. ಸತ್ ಆಗಿರುವುದೇ ದೃಷ್ಟಿಭೇದದಿಂದ ಅಸತ್ ಆಗಿಯೂ ಇದೆ. ಆದ್ದರಿಂದ ಅಸತ್ ಅಥವಾ ಅಭಾವವೆಂಬ ಸ್ವತಂತ್ರ ತತ್ತ್ವವಿಲ್ಲ. ಒಂದು ವಸ್ತುವು ತನ್ನ ಸ್ವರೂಪದ ಅಪೇಕ್ಷೆಯಿಂದ ಸತ್ ಆಗಿದೆಯಾದರೆ ಪರವಸ್ತು ರೂಪದ ಅಪೇಕ್ಷೆಯಿಂದ ಅಸತ್ ಆಗಿದೆ. ಉದಾಹರಣೆಯಾಗಿ : ಜೀವ ಮತ್ತು ಪುದ್ಗಲಗಳೆರಡೂ ದ್ರವ್ಯಗಳೇ ಆಗಿರುವುವಾದರೂ ತಮ್ಮ ತಮ್ಮ ಸ್ವರೂಪಗಳ ಜೀವ ಮತ್ತು ಪುದ್ಗಲಗಳೇ ಆಗಿರುವುವಲ್ಲದೆ, ಜೀವವು ಪುದ್ಗಲವಾಗದು ಹಾಗೆಯೇ ಪುದ್ಗಲವು ಜೀವವಾಗದು. ಈ ಚಿಂತನೆಯಂತೆ ಜೀವನು ಸ್ವಸ್ವರೂಪದಿಂದ ಜೀವನಾಗಿದ್ದಾನೆ ಎಂಬುದು ಎಷ್ಟು ಸತ್ಯವೋ ಅಷ್ಟೇ, ಅದು ಪರವಸ್ತುವಾದ ಪುದ್ಗಲರೂಪದ ಅಪೇಕ್ಷೆಯಿಂದ ಪುದ್ಗಲವಲ್ಲ ಎಂಬುದೂ ಸತ್ಯ. ಹೀಗೆ ವಸ್ತುವು ಏಕಸಮಯದಲ್ಲಿ ಸ್ವಸ್ವರೂಪದಿಂದ ಸದ್ಭಾವವುಳ್ಳದ್ದಾಗಿಯೂ ಪರವಸ್ತುವಿನ ಅಪೇಕ್ಷೆಯಿಂದ ಅಸದ್ಭಾವವುಳ್ಳದ್ದಾಗಿಯೂ ಇದೆ. ಈ ಪ್ರಕಾರವಾಗಿ ವಸ್ತುಸ್ವರೂಪವು ಏಕಾಂತಾತ್ಮಕವಾಗಿರದೆ ಅನೇಕಾಂತಾತ್ಮವಾಗಿದೆ.

**ಸ್ಯಾದ್ವಾದ**—ವಸ್ತುವಿನ ಅನೇಕ ಧರ್ಮಗಳನ್ನು ಏಕಸಮಯದಲ್ಲಿ ಹೇಳಬಹುದಾದ ಶಕ್ತಿಯು ಶಬ್ದದಲ್ಲಿಲ್ಲ : ವಸ್ತುವಿನಲ್ಲಿರುವ ಅನೇಕಧರ್ಮಗಳಲ್ಲಿ ಯಾವ ಒಂದು ಧರ್ಮವನ್ನು ಹೇಳುವ ಆಶಯವಿರುವುದೋ ಆ ಧರ್ಮವು ಮುಖ್ಯವೆನಿಸಿಕೊಳ್ಳುವುದು, ಮಿಕ್ಕ ಇತರ ಧರ್ಮಗಳು ಗೌಣವೆನಿಸಿಕೊಳ್ಳುವುವು. ಉದಾಹರಣೆಯಾಗಿ, ನರೇಶನು ಸುರೇಶನ ಪುತ್ರನಾಗಿದ್ದಾನೆ, ದಿನೇಶನ ಭ್ರಾತೃವಾಗಿದ್ದಾನೆ, ಮಹೇಶನ ಪಿತೃವಾಗಿದ್ದಾನೆ. ಹೀಗೆ ಇಲ್ಲಿ ನರೇಶನಲ್ಲಿ ಪಿತೃತ್ವ, ಭ್ರಾತೃತ್ವ, ಪುತ್ರತ್ವವೇ ಮುಂತಾದ ಅನೇಕ ಧರ್ಮಗಳಿದ್ದರೂ, ಹೇಳುವ ಸಮಯದಲ್ಲಿ ಯಾವುದಾದರೊಂದು ಧರ್ಮವು ವಿವಕ್ಷಿತವಾಗಿದ್ದು ಅದು ಮುಖ್ಯಧರ್ಮವೆನಿಸಿಕೊಳ್ಳುವುದು ಮತ್ತು ಇತರ ಧರ್ಮಗಳು ಗೌಣವೆನ್ನಿಸಿಕೊಳ್ಳುವುವು. ಜೈನಸಿದ್ಧಾಂತದನುಸಾರ ವಿವಕ್ಷಿತವಾದ ಮುಖ್ಯಧರ್ಮದಿಂದ ಇತರವಾದ ಗೌಣಧರ್ಮಗಳ ಸೂಚಕವಾಗಿ ವಾಕ್ಯಗಳಲ್ಲಿ ಸ್ಯಾತ್ ಶಬ್ದದ ಯೋಜನೆಯು ಅಂತರ್ವಾಹಿಯಾಗಿರುವುದು. ಸ್ಯಾತ್ ಎಂದರೆ ಕಥಂಚಿತ್, ಅಥವಾ ಒಂದು ದೃಷ್ಟಿಕೋಣದಿಂದ ಅಥವಾ ಒಂದು ಅಪೇಕ್ಷೆಯಿಂದ ಎಂದರ್ಥ. ವಸ್ತುವಿನ ಅನೇಕಾಂತ ಧರ್ಮಸ್ವರೂಪ ಕಥನಕ್ಕೆ ಈ ಸ್ಯಾದ್ವಾದವು ಅತ್ಯಗತ್ಯವಾಗಿದೆ. 'ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದಸ್ತಿನಾಸ್ತಿ, ಸ್ಯಾದವಕ್ತವ್ಯಂ, ಸ್ಯಾದಸ್ತಿಅವಕ್ತವ್ಯಂ, ಸ್ಯಾನ್ನಾಸ್ತಿಅವಕ್ತವ್ಯಂ, ಸ್ಯಾದಸ್ತಿನಾಸ್ತಿಅವಕ್ತವ್ಯಂ ಎಂಬ ರೂಪದ ಈ ಸ್ಯಾದ್ವಾದವನ್ನು ಸಪ್ತಭಂಗೀನಯವೆಂದೂ ಹೆಸರಿಸಿದೆ.

**ಆಚಾರಧರ್ಮ**—ಕರ್ಮಬಂಧದಿಂದ ಜೀವನು ಬಿಡುಗಡೆ ಪಡೆದು ಶಾಶ್ವತವಾದ ಅನಂತಸುಖಸಿದ್ಧಿ ಪಡೆಯುವ ಸಾಧನಮಾರ್ಗವು ಆಚಾರಧರ್ಮವು. 'ಸಮ್ಯಗ್ದರ್ಶನ ಜ್ಞಾನಚಾರಿತ್ರಾಣಿ ಮೋಕ್ಷಮಾರ್ಗಃ' ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ ಮತ್ತು ಸಮ್ಯಕ್ಚಾರಿತ್ರಗಳು ಮೋಕ್ಷಸಾಧನಮಾರ್ಗವಾಗಿವೆ. ಇವುಗಳನ್ನು ರತ್ನತ್ರಯವೆಂದು ಹೆಸರಿಸುವ ವಾಡಿಕೆಯಿದೆ. ತತ್ತ್ವಾರ್ಥ ಶ್ರದ್ಧೆಯು ಸಮ್ಯಗ್ದರ್ಶನವು ಸಮ್ಯಗ್ದರ್ಶನವಿಲ್ಲದವನ ಧರ್ಮಾಚರಣೆಯು ಮುಖ್ಯ ಸಾಧಕವಾಗುವುದಿಲ್ಲ. ಸಮ್ಯಗ್ದರ್ಶನ ಸಂಪನ್ನನು ಮಾತ್ರ ಸಮ್ಯಗ್‌ಜ್ಞಾನ ಚಾರಿತ್ರ ಸಂಪನ್ನನಾಗಬಲ್ಲನಲ್ಲದೆ ಅನ್ಯಥಾ ಅಲ್ಲ. ಮುಕ್ತಿಸಾಧನೆಯಲ್ಲಿ ನೂತನ ಕರ್ಮಗಳ ಆಸ್ರವವಾಗದಂತೆ ಯತ್ನಶೀಲನಾಗಿರಬೇಕಾದ ಅಗತ್ಯವಿದೆ: ಈ ಆಸ್ರವ ನಿರೋಧಮಾಡಲು ಸಮ್ಯಕ್ತ್ವಶಾಲಿಯು ಮಾತ್ರ ಸಮರ್ಥನಾಗಿರುತ್ತಾನೆ.

ಜೀವನು ಕರ್ಮವಶನಾಗಿರುವುದಕ್ಕೆ ಅವನ ರಾಗ, ದ್ವೇಷ, ಮೋಹಭಾವಗಳು ಮತ್ತು ಈ ಭಾವವಶವಾಗಿ ನಡೆಯುವ ಕೃತ್ಯಗಳು ಕಾರಣವಾಗಿವೆ. ಆದ್ದರಿಂದ ಮನವಚನಕಾಯ ತ್ರಿಕರಣಗಳನ್ನು ಈ ರಾಗದ್ವೇಷ ಮೋಹಭಾವಗಳಿಂದ ಶುದ್ಧವಾಗಿರಿಸಲು ಯತ್ನಮಾಡಬೇಕಾಗುವುದು. ಈ ಶುದ್ಧತೆಯ ಸಾಧನೆಯು ಒಮ್ಮೆಗೇ ಆಗಲಾರದು; ಆದ್ದರಿಂದ ತ್ರಿಕರಣವನ್ನು ಶುಭ ಪ್ರವೃತ್ತಿಯಲ್ಲಿ ತೊಡಗಿಸಿ ಅಂತಿಮವಾಗಿ ಶುದ್ಧತೆಯನ್ನು ಸಾಧಿಸಬಹುದು. ಜೈನ ಆಚಾರಧರ್ಮವು ಈ ಪ್ರಕಾರದ ಯೋಜನೆಯುಳ್ಳದ್ದಾಗಿದೆ.

ರಾಗದ್ವೇಷಮೋಹಭಾವ ಪ್ರೇರಿತನಾಗಿ ವ್ಯಕ್ತಿಯು ದುಷ್ಕೃತ್ಯಗಳಲ್ಲಿ ತೊಡಗುವುದು ಸರ್ವಸಾಧಾರಣವಾಗಿ ಕಂಡ ವಿಷಯವಾಗಿದೆ. ಮೊದಲನೆಯದಾಗಿ ಈ ಭಾವಗಳ ಮೂಲದ ದುಷ್ಕೃತ್ಯಗಳಿಂದ ಸಾಧಕನು ತ್ರಿಕರಣಪೂರ್ವಕವಿರತನಾಗಬೇಕಾದ ಅಗತ್ಯವಿದೆ. ಇಂತಹ ದುಷ್ಕೃತ್ಯಗಳಲ್ಲಿ ಪ್ರಧಾನವಾದುದು ಹಿಂಸೆ. ಸಾಧಾರಣವಾಗಿ ಅನ್ಯಜೀವಿಯನ್ನು ಕೊಲೆಮಾಡುವುದನ್ನು ಹಿಂಸೆ ಎಂದು ತಿಳಿಯಲಾಗಿದೆ. ಆದರೆ ಜೈನಧಾರ್ಮಿಕ ಚಿಂತನೆಯನುಸಾರ 'ಹಿಂಸೆ' ಎಂಬುದು ವಿಶಿಷ್ಟ ಅರ್ಥವ್ಯಾಪ್ತಿ ಹೊಂದಿದೆ. 'ಜೀವಿಗಳಿಗೆ ಹಿಂಸೆಯಾಗದಂತೆ ತ್ರಿಕರಣಪೂರ್ವಕ ಜಾಗೃತಿ ವಹಿಸಿರುವ ವ್ಯಕ್ತಿಯಿಂದ, ಅವನಿಗೆ ಗೋಚರವಾಗದಂತೆ, ಅವನ ಕಾಯದ ಚಲನವಲನ ನಿಮಿತ್ತದಿಂದ ಜೀವಿಯೊಂದರ ಪ್ರಾಣಹಾನಿಯಾದಲ್ಲಿ ಅದು ಹಿಂಸೆಯೆನಿಸುವುದಿಲ್ಲ; ಆದರೆ ಇದರ ವಿರುದ್ಧ ವಾಗಿ ಕ್ರೋಧ, ಮಾನ, ಮಾಯಾ, ಲೋಭಕಷಾಯಗಳ ಪರಿಣಾಮದಿಂದ ಪ್ರಮತ್ತನಾಗಿ ಜೀವಿಯೊಂದಕ್ಕೆ ಹಾನಿಯುಂಟು ಮಾಡಬೇಕೆಂಬ ಭಾವದ ಉದಯ ಮಾತ್ರದ ನಿಮಿತ್ತದಿಂದಲೇ ಅವನಿಂದ ವಾಸ್ತವವಾಗಿ ಪ್ರಾಣಹಾನಿ ಸಂಭವಿಸಿರದಿದ್ದರೂ. ಅವನಿಗೆ ಹಿಂಸೆಯ ಪಾಪವು ಸಂಘಟಿಸುವುದು.[14] ಹೀಗೆ ಕಾಯನಿಮಿತ್ತದಿಂದಾಗುವ ಹಿಂಸೆಗಿಂತಲೂ ಅದರ ಮೂಲದಲ್ಲಿರುವ ಕ್ರೋಧಾದಿ ಭಾವಜನ್ಯವಾದ ಹಿಂಸೆ, ಪರಿಣಾಮವೇ ತೀವ್ರವಾದುದು. ಘೋರವಾದುದು. ಆತನ ಅಧಃಪತನ ಹೇತುವು. ಆದ್ದರಿಂದ ಆತ್ಮೋನ್ನತಿಯ ದಾರಿಯಲ್ಲಿ ನಡೆಯಲಪೇಕ್ಷಿಸುವವನು ಇಂತಹ ಹಿಂಸೆಯಿಂದ ವಿರತಿ ಹೊಂದಬೇಕಾದ ಅರ್ಥಾತ್ ಅಹಿಂಸಾವ್ರತಧಾರಕನಾಗಬೇಕಾದ ಅಗತ್ಯವಿದೆ. ಈ ಅಹಿಂಸೆಯು ಜೈನ ಆಚಾರಧರ್ಮದ ಉಸಿರಾಗಿದೆ. ಸಾಧಾರಣವಾಗಿ ಅಹಿಂಸೆ–ಕೊಲೆ ಮಾಡದಿರುವುದು,ಅಸ್ತೇಯ-ಕಳ್ಳತನ ಮಾಡದಿರುವುದು, ಅಮೃಷಾವಾದ–ಸುಳ್ಳಾಡದಿರುವುದು, ಬ್ರಹ್ಮಚರ್ಯ-ಲೈಂಗಿಕಪ್ರವೃತ್ತಿಯಲ್ಲಿ ತೊಡಗಿರುವುದು ಮತ್ತು ಅಪರಿಗ್ರಹ–ಭೋಗೋಪಭೋಗ ಸಾಮಗ್ರಿಗಳನ್ನು ಲೋಭವಶನಾಗಿ ಸಂಚಯವ ಮಾಡದಿರುವುದು–ಈ ಐದು ವ್ರತಗಳು ಜೈನ ಆಚಾರ ಧರ್ಮದಲ್ಲಿ ಪ್ರಸಿದ್ಧವಿವೆ. ಆದರೆ, ವಾಸ್ತವವಾಗಿ ಹೇಳುವು ದಾದರೆ, ಈ ಐದು ವ್ರತಗಳಲ್ಲಿ ಕೊನೆಯ ನಾಲ್ಕು ವ್ರತಗಳು ಮೊದಲನೆಯದಾದ ಅಹಿಂಸಾ ವ್ರತದ ಪೋಷಕಗಳಾಗಿ ಯೋಜಿತ ವಾಗಿವೆ. ಜೈನ ಆಚಾರಧರ್ಮವನ್ನು ವ್ಯಕ್ತಿಯ ಪಾಲನಾಶಕ್ತಿಯ ಆಧಾರದಿಂದ ಪ್ರಧಾನವಾಗಿ ಎರಡು ಪ್ರಕಾರವಾಗಿ ಹೇಳಿದೆ. ಕೌಟುಂಬಿಕ ಜೀವನದಲ್ಲಿದ್ದುಕೊಂಡು ಆಚಾರಧರ್ಮವನ್ನು ಅಣುಮಾತ್ರಸ್ವರೂಪದಿಂದ ಪಾಲನೆಮಾಡುವ ಗೃಹಸ್ಥನ ಆಚಾರ ಧರ್ಮವು ವಿಕಲಚಾರಿತ್ರಧರ್ಮವು ಇದೇ ಶ್ರಾವಕಧರ್ಮವು. ಶ್ರಾವಕನು ಅಹಿಂಸಾದಿ ಐದುವ್ರತಗಳನ್ನು ಅಣುಮಾತ್ರಸ್ವರೂಪ ದಿಂದ ಪಾಲನೆಮಾಡುವವನಾದ್ದರಿಂದ, ಪಂಚಾಣುವ್ರತಧಾರಿ ಎನ್ನಿಸಿಕೊಳ್ಳುವನು. ಎರಡನೆಯ ಆಚಾರ ಧರ್ಮವು ಮುನಿ ಧರ್ಮವು ; ಇದನ್ನು ಸಕಲ ಚಾರಿತ್ರಧರ್ಮವೆನ್ನುವರು. ಮುನಿಯ ಆಚಾರ ಧರ್ಮವು ಎಲ್ಲ ಪ್ರಕಾರದಿಂದ ಮಹತ್ವಾದುದಾಗಿ ರುವುದು ಆದ್ದರಿಂದ ಮುನಿಗಳ ಪಾಲನೆಯ ಪಂಚವ್ರತಗಳನ್ನು ಪಂಚಮಹಾವ್ರತಗಳೆನ್ನುವರು. ಶ್ರಾವಕನಿಗಾಗಲಿ, ಮುನಿಗೇ ಆಗಲಿ ಕೇವಲ ಐದು ವ್ರತಗಳ ಪಾಲನೆಯೇ ಆಚಾರಧರ್ಮವಾಗಿದೆಯೆಂದಲ್ಲ ; ಆತ್ಮೋನ್ನತಿಸಾಧಕವಾದ ಇನ್ನೂ ಅನೇಕಾನೇಕ ಯಮನಿಯಮಗಳ ಅನುಶಾಸನವಿದೆ. ಪ್ರಾಧಾನ್ಯತೆಯ ಅಪೇಕ್ಷೆಯಿಂದ ಪಂಚವ್ರತಗಳಿಗೆ ಆದ್ಯತೆ ಕೊಡಲಾಗಿದೆ.

ಗೃಹಸ್ಥಗೆ ಷಡಾವಶ್ಯಕಕ್ರಿಯೆಗಳು ಆದಿಷ್ಟವಾಗಿವೆ. ಇವುಗಳಲ್ಲಿ ಮೊದಲನೆಯದು ದೇವಪೂಜೆ ಹೀಗೆಯೇ ಮುನಿ ಗಳಿಗೆ ಸ್ತವನ ಮತ್ತು ವಂದನ ಕ್ರಿಯೆಗಳು ಆದಿಷ್ಟವಾಗಿವೆ. ಜೈನದರ್ಶನವು ಜಗನ್ನಿಯಾಮಕನಾದ ಈಶ್ವರನನ್ನು ಅಂಗೀಕರಿಸು ವುದಿಲ್ಲೆಂಬುದು ಪ್ರಸಿದ್ಧ ವಿಷಯ ; ಹೀಗಿರುವಲ್ಲಿ ದೇವಪೂಜಾ, ಸ್ತವನ, ವಂದನ ಮುಂತಾದ ಕ್ರಿಯೆಗಳ ಆದೇಶವು ಹೇಗೆ ಸಮಂಜಸವಾಗುವುದು ಎಂಬ ಪ್ರಶ್ನೆ ಉದ್ಭೂತವಾಗುವುದು. ಈ ಪ್ರಶ್ನೆಗೆ ಉತ್ತರವನ್ನು ಸ್ವಾಮಿ ಸಮಂತಭದ್ರರ ಈ ಮುಂದಿನ ಸ್ತುತಿಪದ್ಯದಲ್ಲಿ ಕಾಣಬಹುದು:

ನ ಪೂಜಯಾರ್ಥಸ್ತ್ವಯಿ ವೀತರಾಗೇ । ನ ನಿಂದಯಾ ನಾಥ ವಿವಾಂತವೈರೇ ।
ತಥಾಪಿ ತೇ ಪುಣ್ಯ ಗುಣಸ್ಮೃತಿರ್ನಃ ಪುನಾತು ಚಿತ್ತಂ ದುರಿತಾಂಜನೇಭ್ಯಃ ॥ ೨ ॥[15]

[ವೀತರಾಗನಾದ ನಿನ್ನಲ್ಲಿ ಪೂಜೆಯಿಂದ ಅರ್ಥವಿಲ್ಲ, ವೈರಭಾವವನ್ನು ಪರಿಪೂರ್ಣವಾಗಿ ಕೊನೆಗಾಣಿಸಿರುವ ನಿನ್ನಲ್ಲಿ ನಿಂದೆಯಿಂದ ಅರ್ಥ ವಿಲ್ಲ; ಹಾಗಾದರೂ ನಿನ್ನ ಪಾವನಗುಣ ಸ್ಮರಣೆಯು ನಮ್ಮ ಚಿತ್ತವನ್ನು ದುಃಖದಾಯಕವಾದ ಕಲ್ಮಷದ ಭಾವಗಳಿಂದ ಕಾಪಾಡಿ ಪವಿತ್ರವಾಗಿರಿಸಲಿ.]

ಪರಮಾತ್ಮನ ಗುಣಗಳ ಚಿಂತನೆ, ವೀತರಾಗ ಸ್ವರೂಪದ ಚಿಂತನೆಯಲ್ಲಿ ಮನಸ್ಸನ್ನು ತೊಡಗಿಸುವ ಮೂಲಕ ಶುಭ ಪರಿಣಾಮವನ್ನು ಜಾಗೃತವಾಗಿಸಿಕೊಳ್ಳುವುದು ದೇವಪೂಜೆ, ಸ್ತವನ, ವಂದನೆ ಮುಂತಾದ ಕ್ರಿಯೆಗಳ ಉದ್ದೇಶವಾಗಿರುವು

14. ಪ್ರಮತ್ತಯೋಗಾತ್ ಪ್ರಾಣವ್ಯಪರೋಪಣಂ ಹಿಂಸಾ-ತ.ಸೂ. ಅ.೭, ಸೂ.೧೩. ;
'ಸ್ವಯಮೇವಾತ್ಮನಾತ್ಮಾನಂ ಹಿನಸ್ತ್ಯಾತ್ಮಾಪ್ರಮಾದವಾನ್ । ಪೂರ್ವಂ ಪ್ರಾಣ್ಯಂತರಾಣಾಂತು ಪಶ್ಚಾತ್ಸ್ಯಾದ್ವಾ ನ ವಾ ವಧಃ ।—ಇದೇ ಸೂತ್ರ—ಸ.ಸಿ. ವ್ಯಾಖ್ಯಾನ. ಮರದುವ ಜಿಯದುವ ಜೀವೋ ಅಯದಾ ಚಾರಸ್ಸಣಿಚ್ಛಿದಾ ಹಿಂಸಾ।
ಪಯದಸ್ಸಣತ್ಥಿ ಬಂಧೋ ಹಿಂಸಾಮಿತ್ತೇಣ ಸಮಿದಸ್ಸ ॥ಪ್ರವಚನಸಾರ, ೩—೧೭.

15. ಸ್ವಯಂಭೂಸ್ತೋತ್ರ-ವಾಸುಪೂಜ್ಯ ತೀರ್ಥಂಕರ ಸ್ತುತಿ.

ದೆಂಬುದು ಮೇಲಿನ ಸ್ತುತಿಪದ್ಯದಿಂದ ಸ್ಪಷ್ಟವಾಗುವುದು. ಇಷ್ಟಲ್ಲದೆ ಸಾಧಕನು ತನ್ನಲ್ಲಿ ಹುದುಗಿರುವ ಪರಮಾತ್ಮ ಸ್ವರೂಪದ ಆವಿಷ್ಕಾರ ಮಾಡಿಕೊಳ್ಳುವುದಕ್ಕಾಗಿಯೂ ಪರಮಾತ್ಮ ಸ್ತವನವು ಯೋಜಿತವಾಗಿದೆ. ಸದ್ಯ ಪ್ರವರ್ತಿತವಿರುವ ಯುಗದಲ್ಲಿ ವೃಷಭಾದಿ ಮಹಾವೀರ ಪರ್ಯಂತರಾದ ಚತುರ್ವಿಂಶತಿ ತೀರ್ಥಂಕರರು ಲೋಕಕ್ಕೆ ಮುಕ್ತಿಮಾರ್ಗವನ್ನು ತೋರಿದರಾದ್ದರಿಂದ ವಿಶೇಷತಃ ಈ ತೀರ್ಥಂಕರ ಆರಾಧನೆಯು ಆಚರಣೆಯಲ್ಲಿದೆ. ಪರಮಗುರು ಸ್ವರೂಪ, ಲೋಕೋತ್ತಮ ಸ್ವರೂಪದಿಂದ ಅರಿಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸರ್ವಸಾಧು ಎಂಬ ಪಂಚಪರಮೇಷ್ಠಿಗಳ ಆರಾಧನೆಯು ಆಚರಣೆಯಲ್ಲಿದೆ.

ಆತ್ಮಸಾಧನೆಯಪಥದಲ್ಲಿ ಅದಿನ್ನೂ ಹೆಚ್ಚಿನ ಪ್ರಗತಿ ಸಾಧಿಸದಿರುವ ಗೃಹಸ್ಥರು ಜಿನಶಾಸನ ದೇವತೆಗಳನ್ನು ಯಕ್ಷ ಯಕ್ಷೀ ದೇವತೆಗಳನ್ನು ಪೂಜಿಸುವರು. ಈ ದೇವ ದೇವತೆಗಳು ಸಾಂಸಾರಿಕ ಬಂಧನವುಳ್ಳವರೇ ಆಗಿದ್ದಾರಾದರೂ ಜಿನೇಶ್ವರನ ಸಾಕ್ಷಾತ್ ದರ್ಶನ ಪಡೆದ ಸಮ್ಯಗ್ದೃಷ್ಟಿಗಳಾಗಿದ್ದಾರೆ. ಇವರು ಜಿನಧರ್ಮದ ಸಂರಕ್ಷಕರಾಗಿದ್ದಾರೆ. ಆದ್ದರಿಂದ ಧರ್ಮ ವಾತ್ಸಲ್ಯದಿಂದ ಇವರನ್ನು ಅರ್ಚನೆ ಮಾಡುವ ರೂಢಿಯಿದೆ. ಇಷ್ಟಲ್ಲದೆ ಲೋಕ ಸಾಧಾರಣವಾಗಿ ಕಂಡುಬರುವ ಅನಿಷ್ಟ ನಿವಾರಣೆ ಮತ್ತು ಇಷ್ಟಾರ್ಥ ಸಿದ್ಧಿಯ ಅಪೇಕ್ಷೆಯಿಂದಲೂ ಜಿನಶಾಸನ ದೇವತೆಗಳ–ಯಕ್ಷಯಕ್ಷೀ ದೇವತೆಗಳನ್ನು ಪೂಜಿಸುವುದು ಆಚರಣೆಯಲ್ಲಿದೆ. ಈ ರೀತಿಯದಾದ ಜಿನ ಶಾಸನ ದೇವತೆಗಳನ್ನು ಪೂಜಿಸುವ ಆಚರಣೆಯು ಲೌಕಿಕ ಮಾತ್ರದ್ದಾಗಿದೆ, ಪಾರಮಾರ್ಥಿಕವಾದುದಲ್ಲ. ಸೋಮದೇವ ಸೂರಿಯವರು ಇಂತಹ ಲೌಕಿಕ ವಿಧಿಗಳನ್ನು ಕುರಿತು-'ಸಮ್ಯಕ್ತ್ವದ ಹಾನಿಯನ್ನಾಗಲಿ ವ್ರತದ ಅಪಚಾರ ದೋಷವನ್ನಾಗಲಿ ಉಂಟುಮಾಡದಿರುವ ಎಲ್ಲ ಲೌಕಿಕ ವಿಧಿಯೂ ಜೈನರಿಗೆ ಪ್ರಮಾಣವು (ಆಚರಣೀಯವು)'[16]-ಎಂದು ಹೇಳಿದ್ದಾರೆ.

ದೇವಪೂಜಾ, ವಂದನ, ಸ್ತವನಾದಿಕ್ರಿಯೆಗಳು ಪುಣ್ಯ ಸಂಚಯನಕ್ಕೆ ಕಾರಣಗಳು. ಸಮ್ಯಕ್ತ್ವಸಂಪನ್ನನ ಪುಣ್ಯವು ಭೋಗೋಪಭೋಗಸುಖಸಿದ್ಧಿಗೆ ಮಾತ್ರವಲ್ಲದೆ, ಪರೋಕ್ಷವಾಗಿ ಮುಕ್ತಿಹೇತುಕವೂ ಆಗುವುದು. ಮುಕ್ತಿಸಿದ್ಧಿಯು ಪುಣ್ಯ ಮತ್ತು ಪಾಪವೆಂಬ ಎರಡೂ ಪ್ರಕಾರದ ಕರ್ಮದ ಬಿಡುಗಡೆಯಿಂದಾಗುವುದು. ಇಂತಹುದಾದ ಬಿಡುಗಡೆಗೆ ತಪಸ್ಸು ಸಾಧನವಾಗಿದೆ.—'ಕರ್ಮಕ್ಷಯಾರ್ಥಂ ತಪ್ಯತ ಇತಿ ತಪಃ'—ತಪಸ್ಸು ಬಾಹ್ಯ ಮತ್ತು ಅಭ್ಯಂತರವೆಂದು ಪ್ರಧಾನವಾಗಿ ಎರಡು ಪ್ರಕಾರವಾಗಿದೆ. ಬಾಹ್ಯದ್ರವ್ಯಾಪೇಕ್ಷೆಯುಳ್ಳದ್ದು ಅಥವಾ ಇತರ ವ್ಯಕ್ತಿಗಳಿಗೆ ಗೋಚರಿಸುವಂತಹುದು ಬಾಹ್ಯತಪಸ್ಸು: ಇದು ಅನಶನ ಎಂದರೆ ಉಪವಾಸಾದಿಯಾಗಿ ಆರು ಪ್ರಕಾರವಾಗಿದೆ. ಮನಸ್ಸಿನ ನಿಯಮನಾರ್ಥವಾಗಿರುವ ಅಭ್ಯಂತರ ತಪಸ್ಸು ಆರು ಪ್ರಕಾರವಾಗಿದೆ. ಈ ಪ್ರಕಾರಗಳಲ್ಲಿ ಧ್ಯಾನವು ಒಂದು. ಆರ್ತ, ರೌದ್ರ, ಧರ್ಮ್ಯ ಮತ್ತು ಶುಕ್ಲ ಎಂಬ ಧ್ಯಾನದ ನಾಲ್ಕು ಪ್ರಕಾರಗಳಲ್ಲಿ ಕೊನೆಯ ಎರಡು ಮೋಕ್ಷಕಾರಣಗಳಾಗಿವೆ. ಶುಕ್ಲಧ್ಯಾನದ ಮೂಲಕ ಸಮಸ್ತಕರ್ಮಗಳಿಂದ ಬಿಡುಗಡೆ ದೊರೆಯುವುದು. ಪರಿಪೂರ್ಣವಾಗಿ ನಿಸ್ಸಂಗನಾದ ಮಹಾಮುನಿಗೆ ಮಾತ್ರ ಶುಕ್ಲಧ್ಯಾನವು ಸಾಧ್ಯವಾಗುವುದು. ಶುಕ್ಲಧ್ಯಾನದ ಮೂಲಕ ಕರ್ಮಗಳನ್ನು ಪರಿಪೂರ್ಣವಾಗಿ ಕ್ಷಯಗೊಳಿಸಿ ಸಮಸ್ತ ಸಂಸಾರ ಕ್ಲೇಶಗಳಿಂದ ಬಿಡುಗಡೆ ಹೊಂದಿ ಪರಿಶುದ್ಧ ಸ್ವರೂಪನಾಗಿ ಮೋಕ್ಷಪದವಿ ಪಡೆದು ಸಿದ್ಧಪರಮೇಷ್ಠಿಯಾಗುವನು.

---

16. ಸರ್ವ ಏವಹಿ ಜೈನಾನಾಂ ಪ್ರಮಾಣಂ ಲೌಕಿಕೋ ವಿಧಿಃ । ಯತ್ರ ಸಮ್ಯಕ್ತ್ವಹಾನಿರ್ನ ನ ಯತ್ರ ವ್ರತದೂಷಣಂ ॥ ೧ ॥ ಯಶಸ್ತಿಲಕ ಚಂಪೂ.

# ಬೌದ್ಧ ದರ್ಶನ

ಮೂಲ : ಪೂಜ್ಯ ಶ್ರೀ ಆಚಾರ್ಯ ಬುದ್ಧರಖ್ಖಿತ
ಅನು : ಉಪಾಸಕ ಡಿ.ವಿ. ರಾಜಾರಾಂ.

''ಚರಥ, ಭಿಕ್ಕವೆ, ಚಾರಿಕಂ, ಬಹುಜನಹಿತಾಯ: ಬಹುಜನ ಸುಖಾಯ, ಲೋಕಾನುಕಂಪಾಯ;
ಹಿತಾಯ, ಸುಖಾಯ, ದೇವಮನುಸ್ಸಾನಂ ದೇಸೇಥ ಭಿಕ್ಕವೆ, ಧಮ್ಮಂ ಆದಿಕಲ್ಯಾಣಂ.
ಮಜ್ಝೆಕಲ್ಯಾಣಂ, ಪರಿಯೋಸನ ಕಲ್ಯಾಣಂ''

ಈ ಉದ್ಘೋಷದ ಯಶೋಗಾಥೆಯೊಂದಿಗೆ ಪ್ರಾರಂಭವಾದದ್ದು ಬುದ್ಧಶಕೆ. ಜಗತ್ತಿನ ಜಂಜಡದ ಬಲೆಯಲ್ಲಿ ಸಿಲುಕಿ, ಸಂಸಾರದ ಸರಹದ್ದಿನಲ್ಲಿಯೇ ಸುತ್ತುತ್ತಾ. ಹುಟ್ಟು–ಸಾವುಗಳ ಈ ಅಂತರವಲ್ಲಿ ತನ್ನ ಪರೆ ಕಳಚದೆ, ಪರಿಧಿಯಲ್ಲಿಯೇ ಉಳಿಯುವ ಜೀವಿಗೆ, ಚೈತನ್ಯಧಾರೆಯ ಅಮೃತವರ್ಷಗರೆದು, ಬೌದ್ಧಿಕವಾಗಿ, ಭಾವುಕವಾಗಿ, ಭೌತಿಕವಾಗಿ ಬೆಳವಣಿಗೆಯ ಹಂತಹಂತವನ್ನು ಅನಾವರಣಮಾಡಿ. ಆಚ್ಛಾದಿತ ಅನಂತತೆಯ ಬೆಳಕಿನಲ್ಲಿ, ನೆನಕೆ, ನುಡಿ, ನಡೆಯನ್ನು ನೇರವಾಗಿಸಿಕೊಂಡು, ನಿರ್ವಾಣದತ್ತಸಾಗುವ ಸಾಧನೆಯನ್ನು ನಿಮಿತ್ತವಾಗಿಸಿ, ಬದುಕಿ ಬೆಳೆದ. ಬದುಕಿ ಉಳಿದ. ಬದುಕಿಬೆಳಗುತ್ತಿರುವ ಬುದ್ಧಭಗವಾನರ ಉತ್ಸರ್ಗದ ಧರ್ಮ ದುಂದುಭಿ ಇದು. ಇದು ಬುದ್ಧಪಾದದ ಸುತ್ತಬೆಳೆದ ಮಹತ್ತಿನ ಮೇರು. ಮಾನವತೆ ಮಡುಕಟ್ಟಿದ ಸೆಲೆ, ನಿರ್ವಾಣದ ನೆಲೆ.

ಅಂತರ್ಯದ ತುಮುಲದಿಂದ, ಪ್ರತಿಕ್ರಿಯೆಯ ಚಳುವಳಿಗಳಿಂದ ಹುಟ್ಟಿದ ಧರ್ಮಗಳಲ್ಲಿ ಅತ್ಯಂತ ಪ್ರಬಲ ಹಾಗೂ ಪ್ರಮುಖವಾದದ್ದು ಬೌದ್ಧಧರ್ಮ. ಅದರ ಉಗಮದ ಕಾಲ ಒಂದು ಕ್ರಾಂತಿಯುಗ. ದೇಶದಲ್ಲಿ ೬೩ಕ್ಕಿಂತ ಹೆಚ್ಚು ಪ್ರಬಲ ಮತಗಳಿದ್ದು, ಅಲ್ಲಲ್ಲಿಯೇ ಜಾತಿ. ಕುಲಾಚಾರ. ಕುಲಧರ್ಮಗಳ ಹೆಸರಿನಲ್ಲಿ, ಗೋಡೆಗಳನ್ನು ಕಟ್ಟಿಕೊಂಡು, ಸ್ವಾರ್ಥಸಾಧನೆಯಲ್ಲಿಯೇ ಕಾಲಕಳೆದು ಅನ್ಯರನ್ನು ತುಳಿದು ಬೆಳೆಯಲು ಹವಣಿಸುತ್ತಿದ್ದ ಕಾಲ. ಕರ್ಮಮಾರ್ಗದವರು ಯಜ್ಞಯಾಗಾದಿಗಳಿಗೇ ಮಹತ್ವಕೊಟ್ಟು, ಪ್ರಾಣಿವಧೆ ಮಾಡುತ್ತಿದ್ದರು: ಜನರನ್ನು ಪ್ರತ್ಯೇಕಿಸುತ್ತಿದ್ದರು. ಜ್ಞಾನಮಾರ್ಗದವರು ತಮ್ಮೆಲ್ಲ ಸಾಧನೆಯ ಸಾರವನ್ನು ಸಂಸ್ಕೃತದಲ್ಲಿ ಸೆರೆಹಿಡಿದಿಟ್ಟು ಶಿಕ್ಷಣ–ಸಂಸ್ಕೃತಿ–ಸ್ಥಿರಸ್ಥೈರ್ಯವನ್ನು ಸಾಮಾನ್ಯರಿಂದ ಶೂನ್ಯವಾಗಿಸಿದ್ದರು. ಅಲ್ಲದೆ ಜ್ಞಾನ, ಕರ್ಮ, ಯೋಗ ಈ ಎಲ್ಲವೂ ಕೆಲವೇ ಮತದವರಿಗೆ ಮೀಸಲಾಗಿದ್ದು, ಅನ್ಯರು ಪಾಲಿಸುವುದಿರಲಿ, ಆ ಜನರನ್ನೇ ನೋಡಲು ಸಾಧ್ಯವಿರಲಿಲ್ಲ. ಅಂತಹ ಜಾತೀಯತೆಯ ಜಾಡ್ಯವೇ ಆಡಂಬರವಾಗಿ, ಅಂಧಶ್ರದ್ಧೆ, ಸಂಪ್ರದಾಯಬದ್ಧತೆ, ಇವೇ ಮೆರೆಯುತ್ತಿದ್ದವು. ಯಾವುದು ಧರ್ಮ, ಯಾವುದು ಸಂಸ್ಕೃತಿ, ಯಾವುದು ಜೀವನಧ್ಯೇಯಸಾಧನೆ ಈ ಎಲ್ಲವೂ ತಮ್ಮ ಸತ್ವ ಕಳೆದುಕೊಂಡು. ಸ್ವಾರ್ಥಸಾಧನೆಯೇ ಸರ್ವಾರ್ಥಸಿದ್ಧಿಯಾಗಿ ಪಶುಜೀವನದ ಪುನರಾರಂಭವಾಗಿತ್ತು.

**ಶಕಪುರುಷ**

ಇಂತಹ ಸನ್ನಿವೇಶದಲ್ಲಿ, ಶಕಪುರುಷ ಬುದ್ಧನು ಶುದ್ಧೋದನ ಮಾಯಾದೇವಿಯವರ ಮಗನಾಗಿ ಜನ್ಮತಾಳಿದನು. ೧೬ನೆಯ ವಯಸ್ಸಿನಲ್ಲಿ ಯಶೋಧರೆಯೆಂಬ ಸುಂದರಿಯೊಡನೆ ವಿವಾಹ. ೨೯ನೆಯ ವಯಸ್ಸಿನವರೆಗೂ ಐಹಿಕ ಸುಖಕಾಮನೆಗಳಲ್ಲಿ ಮಗ್ನ. ಪುತ್ರ ರಾಹುಲನ ಜನನ. ಮತ್ತೊಂದು ಸಂಕೋಲೆ. ರಾಜಕುಮಾರ ಸಿದ್ಧಾರ್ಥನನ್ನು ಕಂಡರೆ ಸಮಾಧಾನಸ್ಥಿತಿಯ ಲಕ್ಷಣಗಳು ಕಂಡುಬರುತ್ತಿದ್ದರೂ, ಐಹಿಕಸುಖದ ಪರಿಪೂರ್ಣದ ನಡುವೆ ಅವನಲ್ಲಿ ತಲ್ಲಣವಿತ್ತು. ಈ ಪರಿಯ ಮನೋಧರ್ಮದಲ್ಲಿ ಆತ ರಾಜಧಾನಿಯನ್ನು ನೋಡಲು ಹೊರಹೊರಟಾಗ. ದಿಕ್ಕಿಲ್ಲದ ಮುದುಕನ ದೃಶ್ಯ. ಎದೆ ಬಿರಿಯುವಂತಹ ಯಾತನೆಯನ್ನು ಅನುಭವಿಸುತ್ತಿದ್ದ ರೋಗಿಯ ದೃಶ್ಯ, ಶರೀರ ವಿರೂಪಗೊಂಡ ಭೀಕರ ಮರಣದ ದೃಶ್ಯ ಇವು ಮನದಲ್ಲಿ ಗಾಢಚಿಂತನೆಯ ಮಹಾಪೂರವನ್ನೇ ಹರಿಸಿದ್ದವು. ಜೀವನವು ದುಃಖಮಯವಾಗಿದ್ದರೂ, ಅದರಲ್ಲೂ ಸಾರ್ಥಕ್ಯಗೊಳಿಸುವಂತಹ ಧ್ಯೇಯ ಹೊಂದಿದ್ದು, ಸತ್ಯಾನ್ವೇಷಣೆಯಲ್ಲಿ, ಸಾವು–ನೋವಿಗೆ ಅರ್ಥಹುಡುಕಿ ಬದುಕನ್ನು ಸಾರ್ಥಕಪಡಿಸಬೇಕೆಂಬುದು ಸಿದ್ಧಾರ್ಥನ ಮನಸ್ಸಿನಲ್ಲಿ ದೃಢವಾಯಿತು. ಸತ್ಯಾನ್ವೇಷಕ ಸಂನ್ಯಾಸಿಯಾಗಬೇಕು, ಸ್ವಾರ್ಥಪೂರಿತ ಪ್ರಾಪಂಚಿಕತೆ ಬಿಡಬೇಕು ಎಂದು ನಿರ್ಧರಿಸಿದನು. ರಾತ್ರಿ ತನ್ನ ಪ್ರಿಯ ಮಡದಿ ಯಶೋಧರೆ, ಮುದ್ದಿನ ಮಗ ರಾಹುಲನನ್ನು ಕಂಡಾಗ ಸಂಸಾರದ ಸುಖವೂ, ಸಂನ್ಯಾಸದ ಶುಭವೂ ಹೊಯ್ದಾಡಿ ಗೃಹತ್ಯಾಗದ ಮುಹೂರ್ತವನ್ನು ನಿರ್ಧಾರ ಮಾಡಿದವು. ಅದು ಆಷಾಢ ಶುಕ್ಲ ಪೂರ್ಣಿಮೆಯ ಪರ್ವದಿನ. ಸಿದ್ಧಾರ್ಥ ಮನೆ ತೊರೆದು. ಮರಗಳಡಿಯಲ್ಲಿ ವಾಸಮಾಡಿದ. ಮುಂಡನ ಮಾಡಿಸಿಕೊಂಡು ಜ್ಞಾನಾರ್ಜನೆಗಾಗಿ ಸಂನ್ಯಾಸಿಯಾದನು. ಆಗ ಪ್ರಕಾಂಡ ಪಂಡಿತರಾಗಿದ್ದ ಆಲಾರಕಾಲಾಮ, ಉದ್ದಕರಾಮಪುತ್ರ ಇವರಲ್ಲಿ ಅಭ್ಯಾಸ ಮಾಡಿದನು. ಅದರಲ್ಲಿ ತೃಪ್ತಿ ದೊರಕಲಿಲ್ಲ, ತನ್ನ ಪ್ರಶ್ನೆಗಳಿಗೆ ಉತ್ತರ ದೊರಕಲಿಲ್ಲ. ಊಟ, ನಿದ್ರೆ ಬಿಟ್ಟು ದೇಹ ದಂಡಿಸಿ ತಪಶ್ಚರ್ಯೆ ಮಾಡಿದನು. ದೇಹ ಕೃಶವಾಯಿತು. ಮನ ಡೋಲಾಯಮಾನವಾಯಿತು. ಆದರೂ ಪ್ರಶ್ನೆಗೆ ಉತ್ತರ ದೊರಕಲಿಲ್ಲ: ಸಾವು–ನೋವಿನ ಅರ್ಥ

ವ್ಯಾಪ್ತಿಗೆ ಸಿಲುಕದೆ, ಶ್ರಮ ನಿರಸನವಾಯಿತು. ಆಗ ಅವನ ಕಠಿಣ ತಪಶ್ಚರ್ಯೆಯನ್ನು ನೋಡಿ ಐದುಜನ ಅವನ ಶಿಷ್ಯರಾದರು. ಅವನೊಂದಿಗೆ ಓಡಾಡುತ್ತಾ, ತಾವೂ ದೇಹದಂಡನೆಯಲ್ಲಿ ಕಾಲಕಳೆಯುತ್ತಿದ್ದರು. ಇಂತಹ ಕ್ಲೇಶದಿಂದ, ದೇಹ ಕೃಶವಾಯಿತೇ ವಿನಾ ಪ್ರಜ್ಞೆ ಉದಿಸಲಿಲ್ಲ. ಆಗ, ದೇಹ, ಮನ, ಎರಡನ್ನೂ ಸುಸ್ಥಿತಿಯಲ್ಲಿರಿಸಿಕೊಂಡು ಸಾಧನೆಮಾಡಿದಾಗ ಮಾತ್ರ, ಮನೋಮಯವಾದ, ನಿತ್ಯ–ಸತ್ಯಸನಾತನವಾದ 'ಧರ್ಮ'ದ ಆಲೋಕ ಆಗುವುದು, ಎಂದು ಸಿದ್ಧಾರ್ಥನು ಮನಗಂಡನು. ಆಹಾರ ಸೇವಿಸಲು ಮೊದಲು ಮಾಡಿದನು. ಇದನ್ನು ಕಂಡ ಐವರು ಶಿಷ್ಯರು ಸಿದ್ಧಾರ್ಥನನ್ನು ಬಿಟ್ಟು ತೆರಳಿದರು.

ಏಕಾಂಗಿಯಾಗಿ, ಏಕಸತ್ಯತೆಯನ್ನು ಅರಸುತ್ತಾ ಸಿದ್ಧಾರ್ಥ ತನ್ನ ಕಾರ್ಯಸಾಧನೆಯಲ್ಲಿ ಮಗ್ನನಾದನು. ಅನೇಕ ದಿನಗಳ ಕಾಲ ಸುತ್ತಾಡಿದನು. ಧ್ಯಾನಮಗ್ನನಾದನು. ಒಂದು ದಿನ, ಮರದ ಕೆಳಗೆ ಕುಳಿತು ಧ್ಯಾನಮಗ್ನನಾದಾಗ, ಅವನು ಸತತವಾಗಿ ಸಾಧನೆ ಮಾಡಿದ ಶ್ರಮ ಫಲಕೊಡುವ ಪರಿಪೂರ್ಣಶೃಂಗಸನ್ನಿಧಿ ಸಿದ್ಧವಾಗಿತ್ತು. ಅಂದು ಜಗದ ಕತ್ತಲೆಯನ್ನು ಅಳಿಸಿ, ಬೆಳಕು ಬೆಳಗಿಸುವ ಭಾರತದ ಜ್ಞಾನಸೂರ್ಯನ ಉದಯದ ಮಹಾತೂರ್ಯವನ್ನು ವೈಶಾಖಶುಕ್ಲಪೂರ್ಣಿಮೆಯ ಚಂದ್ರ ಜಗತ್ತಿಗೆ ಸಾರಲು ತನ್ನ ಪೂರ್ಣತೆಯಲ್ಲಿ ಮೈಳೈಸಿಕೊಂಡು ಮೂಡಿನಿಂತಿದ್ದ. ಆ ಮಹಾಸಮಯದಲ್ಲಿ ಸಿದ್ಧಾರ್ಥ ಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡು, ಅಂದಿನಿಂದ ಬೋಧಿ (ಜ್ಞಾನ) ಪಡೆದ ಭಗವಾನ್ ಬುದ್ಧರಾದರು. ಉರುವೇಲವೆಂಬಲ್ಲಿ ಉತ್ತಿಷ್ಠರಾದರು. ಬುದ್ಧತ್ವ ಪ್ರಾಪ್ತವಾದ ಬುದ್ಧಭೂಮಿ ಬುದ್ಧಗಯಾದ ಬೋಧಿ ಮರದಡಿಯಲ್ಲಿ. ಆ ಮರವೇ ಇಂದು ಬೋಧಿವೃಕ್ಷವೆಂದು ಖ್ಯಾತಿಪಡೆದಿದೆ. ಜೀವನತತ್ತ್ವಸಾಕ್ಷಾತ್ಕಾರವಾದ ಮೇಲೆ ಧರ್ಮಸಾರಥ್ಯವಹಿಸಿದ ಬುದ್ಧ ಸರ್ವಜ್ಞನಾದ, ಧರ್ಮಚಕ್ರ ಪ್ರವರ್ತಿಸಿದ ಚಕ್ರವರ್ತಿಯಾದ.

> 'ಸ್ವಾಕ್ಖಾತಾ ಭಗವತೋ ಧಮ್ಮೋ, ಸನ್ದಿಟ್ಠಿಕೋ ಅಕಾಲಿಕೋ, ಏಹಿಪಸ್ಸಿಕೋ,
> ಓಪನಯಿಕೋ, ಪಚ್ಚತ್ತಂ ವೇದಿತಬ್ಬೋ ವಿಞ್ಞೂಹೀತಿ.'

'ಪ್ರಕೃತದಲ್ಲಿಯೇ ಕಾಣುವಂಥಾದ್ದು, ಸಕಾಲಿಕ ಫಲ ತರುವಂಥಾದ್ದು. 'ಬಾ, ನೀನೇ ದರ್ಶಿಸು' ಎಂದು ಆಹ್ವಾನಿಸುವಂಥಾದ್ದು, ಊರ್ಧ್ವಮುಖಿಯಾಗಿ ನಡೆಸುವಂಥಾದ್ದು. ಪ್ರತ್ಯಕ್ಷವಾಗಿ ತನಗೆ ತಾನೇ ಅರಿತುಕೊಳ್ಳುವಂಥಾದ್ದು, ಇಂತಹದು ಭಗವಂತನಿಂದ ಬೋಧಿಸಲ್ಪಟ್ಟ ಧರ್ಮ'.

ಧರ್ಮ, ಬುದ್ಧರು ಬೋಧಿಸಿದಂತೆ ಎನ್ನುವುದಕ್ಕಿಂತ ಅವರು ಅನುಸರಿಸಿದಂತೆ, ತಮ್ಮ ಜೀವಿತದಲ್ಲಿ ಸಾಧಿಸಿದಂತೆ ಎಂದರೆ ಸರ್ವವಿದಿತವಾದೀತು. ಧರ್ಮವೆಂದರೆ ಬದಿಗಿರುವ ಒಂದು ಕಂತೆ ಎಂದು ಹೇಳದೆ, ತನ್ನ ತಾ ಸನ್ನಡತೆಯಲ್ಲಿ ನಡೆಸುವುದೇ ಧರ್ಮ ಎಂದರು ಬುದ್ಧರು. ಬೌದ್ಧದರ್ಶನದ ಕೈದೀವಿಗೆಯಾದ ಧಮ್ಮಪದದಲ್ಲಿ ಬರುವ ಗಾಥೆ ಹೀಗಿದೆ :

> ಸಬ್ಬಪಾಪಸ್ಸ ಅಕರಣಂ । ಕುಸಲಸ್ಸ ಉಪಸಂಪದಾ
> ಸಚಿತ್ತ ಪರಿಯೋಧಪನಂ । ಏತಂ ಬುದ್ಧಾನುಸಾಸನಂ ॥

'ಎಲ್ಲಾ ಪಾಪಗಳನ್ನೂ ಮಾಡದಿರುವುದು, ಎಲ್ಲಾ ಕುಶಲಗಳನ್ನೂ ಅಮಿತವಾಗಿ ಆಚರಿಸುವುದು ಚಿತ್ತಶುದ್ಧಿ ಮಾಡಿ, ಅಭಿವೃದ್ಧಿ ಮಾಡುವುದು. ಇದೇ ಬುದ್ಧರ ಶಾಸನ'. ಇಂತಿರುವ ಧರ್ಮಶಾಸನವನ್ನು ಸಾದರಪಡಿಸಿದ ಬುದ್ಧರು ಹೇಳಿರುವ ಮತ್ತೊಂದು ಉಕ್ತಿ : **'ಸೋಧಮ್ಮಂ ಪಸ್ಸತಿ, ಸೋ ಮಂ ಪಸ್ಸತಿ'**—'ಯಾರು ಧರ್ಮವನ್ನು ಅರಿತು, ಅನುಸರಿಸುತ್ತಾರೋ, ಅವರು ನನ್ನನ್ನು ಅರಿತುಕೊಳ್ಳುತ್ತಾರೆ.' ಅಂದರೆ ಬುದ್ಧಕಾಯ–ಧಮ್ಮಕಾಯ ಒಂದೇ. ಧಮ್ಮ ತ್ರಿವಿಧ ಲಕ್ಷಣ ಉಳ್ಳಂಥಾದ್ದು. ೧) **ಪರಿಯತ್ತಿ**:– ಉಪದೇಶಿತ ಅಥವಾ ಅನುಗತವಾದದ್ದು. ಜ್ಞಾನಭಂಡಾರವಾಗಿ, ಜ್ವಲಂತವಾಗಿದ್ದು, ಜೀವಂತವಾಗಿ, ಜೀವನ ಧ್ಯೇಯವಾಗಿ, ನೀತಿನಡೆವಳಿಕೆಯಾಗಿ, ಬದುಕಿಗಾಸರೆಯಾಗಿರುವ ಸತ್ವಶೀಲ ಸಂಸ್ಕೃತಿಯಾಗಿರುವಂಥಾದ್ದು. ೨) **ಪಟಿಪತ್ತಿ** : ಪರಿಯತ್ತಿಯಾಗಿರುವ ಅಖಂಡತತ್ವವನ್ನು, ಸತ್ವವನ್ನು ಅನುದಿನದಲ್ಲಿ ಮಾತು, ಕೃತಿ, ಮತಿಯ ಮೂರು ದ್ವಾರಗಳಲ್ಲಿ, ಶೀಲ, ಸಮಾಧಿ, ಪ್ರಜ್ಞೆಯಾಗಿ ಪರಿವರ್ತಿಸಿ, ಅನುಷ್ಠಾನಕ್ಕೆ ತರುವಿಕೆ. ಪರಿಯತ್ತಿಯ ಸಕ್ರಿಯ ಪ್ರವೃತ್ತಿಯೇ ಪಟಿಪತ್ತಿ. ೩) **ಪಟಿವೇಧ**: ಪರಿಯತ್ತಿಯ ಸತ್ವವನ್ನು ಪಟಿಪತ್ತಿಯಾಗಿ ಅನುಷ್ಠಾನಕ್ಕೆ ತಂದನಂತರ, ಪ್ರಜ್ಞಾಪ್ರಾಸಾದವಾದ ನಿರ್ವಾಣದ ಬೋಧಿಪ್ರಾಪ್ತ, ಆ ಸತ್ಯದ ಆವಿಷ್ಕಾರವೇ. ಪಟಿವೇಧ. ಈ ಧಮ್ಮಕಾಯ ಎರಡು ಮುಖವಿರುವಂತಾದ್ದು. ಒಂದು: ಸಾಮಾನ್ಯರಿಗೂ ಅರ್ಥವಾಗುವ 'ದಿನಚರ್ಯೆ'ಯ ಧಮ್ಮ ; ಸಾಧಕರ ಅರಿವಿಗೆ ನಿಲುಕುವ ಅಭಿಧಮ್ಮ ಇನ್ನೊಂದು ಮುಖ. ಧರ್ಮಕಾಯದ ನೆಲೆ–'ಚತುರಾರ್ಯ ಸತ್ಯ ಮತ್ತು ಆರ್ಯ ಅಷ್ಟಾಂಗಿಕ ಮಾರ್ಗ'. ಅಂದರೆ ನಾಲ್ಕು ನಿತ್ಯಸತ್ಯದ ತಳಹದಿಯ ಮೇಲೆ, ಎಂಟು ಸಮ್ಯಕ್ ಮಾರ್ಗಾಚರಣೆಯ ಸಾಧನೆಯಿಂದ ಉನ್ನತಿಯನ್ನು–ನಿಬ್ಬಾಣ(ನಿರ್ವಾಣ)ವನ್ನು ಸಾಧಿಸುವ ಸೂತ್ರ ಇದು. ಈ ದರ್ಶನ ತತ್ವಗಳನ್ನು ಅರ್ಥೈಸಿಕೊಂಡು, ಮಾನಸಿಕ ಆಸ್ರವಗಳನ್ನು ನಿವಾರಿಸಿಕೊಂಡು, ಚೇತಸಿಕಗಳನ್ನು ಉದ್ದೀಪನಮಾಡಿಕೊಂಡು, ಮನೋಮಯನಾಗಿ, ಶೀಲ, ಸಮಾಧಿ, ಪ್ರಜ್ಞಾವಂತನಾಗಿ, ಸಾಧನೆ ನಡೆಸಿದರೆ, ನಿರ್ವಾಣದ ಮಹಾಶಾಂತಿಯತ್ತ ನಡೆಸುವುದು ಈ ಧರ್ಮ. ಕರ್ಮಕ್ಷಯದ ಪಥವೇ ಈ ಧರ್ಮಪಥ.

### ಧಮ್ಮಜೀವನ

ಭಗವಾನ್ ಬುದ್ಧರು ವ್ಯಕ್ತಿಯಾದರು. ಧಮ್ಮಶಕ್ತಿಯಾಯಿತು. ಆದರೆ, ಈ ಶಕ್ತಿ ಅಂತಸ್ತವಾಗುಳ್ಳ ವ್ಯಕ್ತಿಯ ಪ್ರಭಾವದ ಸಾಮೀಪ್ಯ ಪಡೆದು ಸೀಮಾತೀತರಾದವರು ಅಸಂಖ್ಯಾತರು. ತಮ್ಮ ೩೫ನೇ ವಯಸ್ಸಿನಲ್ಲಿ, ಬೋಧಿ ಪಡೆದಂದಿನಿಂದ ನಾಲ್ವತ್ತೈದು ವರ್ಷಗಳ ಕಾಲ ಧರ್ಮಚಕ್ರ ಪ್ರವರ್ತನದ ಸಾರಥ್ಯವಹಿಸಿದರು. ಸೌರಶಕ್ತಿ ತಾನು ಪ್ರಸರಿಸುವ ಪ್ರತಿಕಿರಣದಲ್ಲೂ ಬೆಳಕು, ಬಿಸಿ ಹೊಂದಿದ್ದು, ಅದರ ಉಗಮದ ಅಗಾಧ ಉತ್ಕೃಷ್ಟವನ್ನು ಸೂಚಿಸುವ ರೀತಿ. ಈ ಧರ್ಮವನ್ನು ದಿನಸಿತ್ಯದಲ್ಲಿ ಪ್ರತಿಫಲನಮಾಡದಿದ್ದರೆ. ಎಂದೋ ಒಂದುದಿನ ಪ್ರತ್ಯೇಕವಾಗಿ ಸಾಧಿಸಬೇಕಾದ ವಿದ್ವತ್ತಾದೀತು ಗ್ರಂಥಸ್ಥವಾಗಿ ಅಸ್ತಂಗತವಾದೀತು ಎಂಬುದನ್ನರಿತರು. ಅರಿತು ನಡೆಯುವ ಜನಸಮೂಹವೂ ಬೆಳೆಯಿತು. ಸಚ್ಚಾರಿತ್ರ್ಯ ಪಡೆದವರಾಗಿ, ಸ್ವಾರ್ಥ ಸವರಿದವರಾಗಿ, ಲೋಕಹಿತಕ್ಕಾಗಿ ಧರ್ಮಜೀವನ ನಡೆಸಿದವರನ್ನು 'ಸಂಘ' ಎಂದು ಗುರುತಿಸಿದರು. ಬೋಧಿಪಡೆದವರು–ಬುದ್ಧರು. ಅವರು ಉಪದೇಶಿಸಿದುದು–ಧಮ್ಮ. ಉಪದೇಶವನ್ನು ಅನುಸರಿಸುವವರು–ಸಂಘ. ಹೀಗೆ ತ್ರಿರತ್ನಗಳು ಮೈತಾಳಿದವು.

'ಬುದ್ಧಂ ಸರಣಂ ಗಚ್ಛಾಮಿ ; ಧಮ್ಮಂ ಸರಣಂ ಗಚ್ಛಾಮಿ ; ಸಂಘಂ ಸರಣಂ ಗಚ್ಛಾಮಿ'

ಈ ಸಂಸಾರದ ದುಃಖಸಾಗರದಲ್ಲಿ ಬುದ್ಧರು ಅಂಬಿಗರಾದರು. ಧಮ್ಮ ದೋಣಿಯಾಯಿತು, ಸಂಘ ಯಾತ್ರಿಕರಾದರು.

### ಜೀವನಾದರ್ಶ

ಜೀವನವನ್ನು ಆದರ್ಶಮಯವಾಗಿ ಮಾಡಲಿಕ್ಕೆ ಅಥವಾ ಆದರ್ಶವನ್ನು ಜೀವನದಲ್ಲಿ ಮೇಳೈಸಲಿಕ್ಕೆ, ಬದುಕಿನಲ್ಲಿ ಸಾಂದ್ರತೆಯನ್ನು ಸಾಧಿಸಲಿಕ್ಕೆ ಭಗವಾನ್ ಬುದ್ಧರು ಸಾರಿದ–'ಮಧ್ಯಮಾ ಪ್ರತಿಪದ' (ಮಜ್ಝಿಮಾ ಪಟಿಪದ) ಅಂದರೆ ಆರ್ಯ ಅಷ್ಟಾಂಗಿಕ ಮಾರ್ಗ ನೇರ ನಡೆ ಉಳ್ಳದ್ದು. ಆಸೆಯ ಸುಳಿಯಿಂದ ಪಾರಾಗಬೇಕಾದರೆ, ಆಸವಗಳ ಕ್ಷಯಮಾಡಬೇಕಾದರೆ, ಅನಂತತೆಯನ್ನು ಸಿದ್ಧಿಸಿಕೊಳ್ಳಬೇಕಾದರೆ ಸಾಧಕನು ಕ್ರಮಿಸಬೇಕಾದ ಕಕ್ಷೆಯ ನಕ್ಷೆ ಇದು.

೧) ಸಮ್ಮಾದಿಟ್ಠಿ (ಸಮ್ಯಕ್ ದೃಷ್ಟಿ) ೨), ಸಮ್ಮಾಸಂಕಪ್ಪೋ (ಸಮ್ಯಕ್‌ಸಂಕಲ್ಪ), ೩) ಸಮ್ಮಾವಾಚಾ (ಸಮ್ಯಕ್‌ವಾಚಾ), ೪) ಸಮ್ಮಾಕಮ್ಮನ್ತೊ (ಸಮ್ಯಕ್‌ಕರ್ಮಾಂತ). ೫) ಸಮ್ಮಾ ಆಜೀವೊ (ಸಮ್ಯಕ್ ಆಜೀವ), ೬) ಸಮ್ಮಾವಾಯಾಮೊ (ಸಮ್ಯಕ್ ವ್ಯಾಯಾಮ), ೭) ಸಮ್ಮಾಸತಿ (ಸಮ್ಯಕ್ ಸ್ಮೃತಿ) ೮) ಸಮ್ಮಾಸಮಾಧಿ (ಸಮ್ಯಕ್ ಸಮಾಧಿ). ಐಹಿಕಲೋಲುಪತೆ ಹಾಗೂ ಶಾರೀರಕ ಕ್ಲೇಶ ಕೋಟಲೆಗಳೆರಡು ಅಂತಗಳನ್ನು ಮೀರಿ, ಮಾನಸಿಕ ಮತ್ತು ಶಾರೀರಿಕ ವ್ಯವಸ್ಥಿತ ಅಭಿವೃದ್ಧಿಗೆ ದಾರಿ ಇವು. ಇದು ಅಂಧಶ್ರದ್ಧೆ. ಅವಿಶ್ವಾಸದಿಂದ ಆರಂಭವಾಗುವ ಬದುಕಲ್ಲ. ಸಮ್ಯಕ್‌ದೃಷ್ಟಿಯಿಂದ, 'ಪ್ರಜ್ಞಾ ಹಿ ಪರಮಾ ಗತಿಃ' ಎಂಬ ಸೂಕ್ತಿಯಿಂದ ಪ್ರಾರಂಭವಾಗುವ ಸತ್ಯ ನಿಷ್ಠುರ. ಅಚಲ ಸತ್ಯಾನ್ವೇಷಣೆ. ಪ್ರತಿಯೊಂದನ್ನೂ ಪರೀಕ್ಷಿಸಿ. ತನ್ನ ಜೀವನದಲ್ಲಿ ಅನುಭವಿಸಿ, ಅದು ಸರಿ, ಗುರಿಸಾಧಿಸಲು ಸರಿದಾರಿ ಎಂದು ಮನನ ಮಾಡಿಕೊಂಡ ನಂತರವೇ 'ಮಾರ್ಗ'ದಲ್ಲಿ ಮುಂದಿನ ಹೆಜ್ಜೆಗೆ ಕಂಕಣ. ಹೀಗೆ ಆದಿ ಕಂಡದ್ದು. ಸಮ್ಯಕ್‌ಸ್ಮೃತಿಯಿಂದ ಒಡಗೂಡಿ, ಸಮ್ಯಕ್‌ಸಮಾಧಿಯ ಅನಂತಜ್ಞಾನವನ್ನು ಪಡೆದು 'ನಿರ್ವಾಣ'ವನ್ನು ತಲುಪುವುದು. ಶೀಲ, ಸಮಾಧಿ. ಪ್ರಜ್ಞೆ—ಈ ಮೂರು ಮುಪ್ಪುರಿಗೊಂಡು, ಪರಿಪೂರ್ಣಪಾರಮಿತಗಳಾದ ನಂತರವೇ ಪರಮಪದ–ನಿರ್ವಾಣ. ಗುರಿ ಒಳ್ಳೆಯದಿದ್ದು. ನಡೆಸುವ ದಾರಿ ಸರಿಯಿರದಿದ್ದರೆ ಸಾಗುವ ಬಗೆ ಹೇಗೆ? ಆದ್ದರಿಂದ ಮಾತು, ಕೃತಿ ಹಾಗೂ ಜೀವನ ನಿರ್ಧರಣೆ ಎಲ್ಲವೂ ಗುರಿಗೆ ಪೂರಕವಾಗಿರಬೇಕು; ಮಾರಕವಾಗಿರಬಾರದು. ಆದ್ದರಿಂದ ಶೀಲಶುದ್ಧಿ–ಸಮ್ಯಕ್‌ವಾಚಾ, ಕಮ್ಮಂತ, ಆಜೀವ ಇದರ ಸಾಧನೆಯಾಗಬೇಕು. ನಂತರ ಸಮ್ಯಕ್ ವ್ಯಾಯಾಮ, ಸ್ಮೃತಿ. ಸಮಾಧಿ, ಕಾಯಶುದ್ಧಿಯೊಂದಿಗೆ, ಮಾನಸಿಕ ಶುದ್ಧಿಗೆ ಸೋಪಾನವಾಗಿ, ನಿರಂತರ ಪರಿಶ್ರಮದ ಪುರುಷಾರ್ಥಸಾಧನೆ, ಏಕಾಗ್ರ-ಜಾಗ್ರತಭಾವ ಹಾಗೂ ಕೇಂದ್ರೀಕೃತ ಮನೋಧಾರಣೆ, ಸಮಾಧಿ. ಈ 'ಶೀಲ' ಹಾಗೂ 'ಮಾನಸಿಕ' ಸುಸ್ಥಿರತೆಗೆ ಅಡಿಗಲ್ಲು. ಸಮ್ಯಕ್‌ದೃಷ್ಟಿ ಹಾಗೂ ಸಮ್ಯಕ್‌ಸಂಕಲ್ಪ, ನಿಚ್ಚಳ ನೋಟ ಹಾಗೂ ಸುಸ್ಥಿರಸ್ಥೈರ್ಯ, ಬದುಕಿನ ಬಂಡಿ ಗುರಿ ಸೇರಲು, ದಾರಿಯ ಸಾಗಿಸಲು ಬೇಕಾದ ಎತ್ತುಗಳು. ಅತ್ತ ಸರಿದರೂ ಕಷ್ಟ, ಇತ್ತ ಸರಿದರೂ ಕಷ್ಟ. ದಾರಿಗುಂಟ ಸಾಗಬೇಕು. ಹೀಗೆ ಆದರ್ಶಜೀವನದ ಹರಿದಾರಿಯನ್ನು ಸರಳವಾಗಿ ನಿರೂಪಿಸಿ ನಡೆವವರಿಗೆ, ಕೈದೀವಿಗೆಯಾಗಿರಲೆಂದು ಧರ್ಮಸನಾತನವನ್ನು ಶ್ರೀಸಾಮಾನ್ಯರ ಆಡುಭಾಷೆಯಾದ ಪಾಲಿಭಾಷೆಯಲ್ಲಿಯೇ ಅವರಿರುವ ಸ್ಥಳಕ್ಕೆ ಹೋಗಿ, ಪ್ರತಿಪಾದಿಸಿದರು.

### ದರ್ಶನತತ್ತ್ವ

೧) ದುಃಖ ಅರಿಯ ಸಚ್ಚಂ ೨) ದುಃಖ ಸಮುದಯ ಅರಿಯ ಸಚ್ಚಂ ೩) ದುಃಖನಿರೋಧ ಅರಿಯಸಚ್ಚಂ ೪) ದುಃಖ ನಿರೋಧಗಾಮಿನಿ ಪಟಿಪದ ಅರಿಯ ಸಚ್ಚಂ, ಬದುಕನ್ನು ಅದರ ಕಡೆಯ ಮೂಲವಸ್ತುವಿನವರೆಗೂ ವಿಶ್ಲೇಷಿಸುತ್ತಾ ಹೋದರೆ, ಉಳಿಯುವುದು ಅದರ ಮೂಲ–'ಕ್ರಿಯೆ'ಯ ರೂಪವಾಗಿ. ಅಂದರೆ ಪ್ರತಿದಿನ ಪ್ರತಿಕ್ಷಣ ಕಾರ್ಯಮಗ್ನರಾಗಿರುತ್ತೇವೆ. ಯಾವುದೋ ಒಂದು ರೀತಿಯ ಕಾರ್ಯತತ್ಪರತೆ ಜೀವಿಯಲ್ಲಿ ಅಂತರ್ಗತವಾಗಿರುತ್ತದೆ. ಈ ಕ್ರಿಯಾಕಾಂಡದಲ್ಲಿ ತನ್ನನ್ನೇ

ಕಳೆದುಕೊಳ್ಳುತ್ತಾನೆ ಮಾನವ. ಸಾರ–ಅಸಾರಗಳನ್ನು ಅರಿಯಲಾಗದ. ಕೊನೆಯಿರದ ಹೋರಾಟದ ಬದುಕು ಇದು. ಕಷ್ಟ ಕಾರ್ಪಣ್ಯದಿಂದ ರೂಪಿತವಾದ ಅಪೂರ್ಣತೆ ಹಾಗೂ ದುಃಖವೇ ಇದರ ಮೂಲ. ಅದೇ ನಿಷ್ಠುರಸತ್ಯವನ್ನು ಆವಿಷ್ಕಾರಮಾಡಿ ಜಗತ್ತಿಗೆ ನೀಡಿದರು ಭಗವಾನರು.

**೨) ದುಃಖ ಆರ್ಯಸತ್ಯ, ದುಃಖ ಶ್ರೇಷ್ಠಸತ್ಯ:** ಜನನವು ದುಃಖ, ಜರೆಯು ದುಃಖ, ವ್ಯಾಧಿಯು ದುಃಖ, ಮರಣವು ದುಃಖ, ಶೋಕ, ಕ್ರಂದನ, ಶಾರೀರಿಕವೇದನೆ, ಮಾನಸಿಕವೇದನೆ, ಕಳವಳ, ಖಿನ್ನತೆ ಇವು ದುಃಖ. ಅಪ್ರಿಯರೊಂದಿಗೆ ಬೆರೆಯುವುದು ದುಃಖ, ಪ್ರಿಯರಿಂದ ವಿಯೋಗ ಹೊಂದುವುದು ದುಃಖ, ಇಷ್ಟಪಟ್ಟದ್ದು ದೊರಕದಿರುವುದು ದುಃಖ, ಸಂಕ್ಷೇಪವಾಗಿ ಐದು ಉಪಾದಾನ ಸ್ಕಂಧಗಳು–ಶರೀರಕ್ಕೆ ಸಂಬಂಧಿಸಿದ ರೂಪ, ಮನಸ್ಸಿಗೆ ಸಂಬಂಧಿಸಿದ ವೇದನಾ, ಸಂಜ್ಞಾ, ಸಂಖಾರ, ವಿಜ್ಞಾನ, ಇವು ದುಃಖ'. ಹೀಗೆ ದುಃಖದ ರಾಶಿಯೇ ಜೀವನ.

**೩) ದುಃಖ ಸಮುದಯ ಆರ್ಯಸತ್ಯ, ದುಃಖದ ನಿವಾರಣೆ ಶ್ರೇಷ್ಠಸತ್ಯ:** 'ಈ ತೃಷ್ಣೆಯನ್ನು ನಿಶ್ಶೇಷವಾಗಿಸುವ, ಅಶೇಷ ವಿರಾಗದಿಂದ ನಿರೋಧಿಸಿ, ಅದನ್ನು ತೊರೆದು, ಅದರ ಸುಳಿಯಲ್ಲಿ ಸಿಕ್ಕದೆ, ಅದಕ್ಕೆ ಆಶ್ರಯಕೊಡದೆ ಬಿಡುಗಡೆ ಹೊಂದುವುದು'

ದುಃಖ ಇದೆ, ದುಃಖದ ಹುಟ್ಟು ಇದೆ, ದುಃಖದ ನಿವಾರಣೆಯೂ ಇದೆ. ಇದು ಬುದ್ಧಧರ್ಮದ ವಿಶೇಷಉಕ್ತಿ. ದುಃಖ ಇದೆ ಎಂದ ಮಾತ್ರಕ್ಕೆ ಹತಾಶನಾಗಿ ಪರಿತಪಿಸುವ ಅಗತ್ಯ ಇಲ್ಲ. ಅದರ ನಿವಾರಣೆಯೂ ಇದೆ. ಆದರೆ ಅದು ಸಾಧಕನ ಮಾರ್ಗ.

**೪) ದುಃಖ ನಿರೋಧಗಾಮಿನಿ ಪಟಿಪದಾ ಆರ್ಯಸತ್ಯ, ದುಃಖನಿವಾರಣೆಯಮಾರ್ಗ ಶ್ರೇಷ್ಠಸತ್ಯ :** ಇದೇ ಆರ್ಯ ಅಷ್ಟಾಂಗಿಕ ಮಾರ್ಗ–ಸಮ್ಯಕ್‌ದೃಷ್ಟಿ, ಸಮ್ಯಕ್ ಸಂಕಲ್ಪ, ಸಮ್ಯಕ್‌ವಾಚಾ, ಸಮ್ಯಕ್ ಕರ್ಮಾಂತ, ಸಮ್ಯಕ್‌ಆಜೀವ, ಸಮ್ಯಕ್ ವ್ಯಾಯಾಮ, ಸಮ್ಯಕ್ ಸ್ಮೃತಿ, ಸಮ್ಯಕ್ ಸಮಾಧಿ.

ದುಃಖದ ನಿವಾರಣೆ ಹೇಗೆ? ಅದು ತನಗೆ ತಾನು ಸಾಧಿಸಬೇಕಾದ ಮಾರ್ಗ ಬೇರೆ ಯಾರೋ ನಿನಗಾಗಿ ತರುವ ವಸ್ತುವಲ್ಲ. ಬೇರೆಯವರು ಕೇವಲ ದಾರಿಯ ದೀಪಗಳು ಎಂದರು ಬುದ್ಧರು–'ಅತ್ತಾಹಿ ಅತ್ತನೋ ನಾಥೋ, ಕೋ ಹಿ ನಾಥೋ ಪರೋಸಿಯಾ' ನಂತರ 'ತುಮ್ಹೇಹಿ ಕಿಚ್ಚಂ ಆತಪ್ಪಂ, ಅಕ್ಖಾತಾರೋ ತಥಾಗತಾ' ನೀನೇ ಶ್ರಮವಹಿಸಿ ಸಾಧಿಸಬೇಕಾದ್ದು. ಬುದ್ಧರು (ತಥಾಗತರು) ದಾರಿತೋರಿಸುವವರು ಮಾತ್ರ.

**ತತ್ತ್ವಮೂಲ**

ಜೀವಿಗಳ ಎಲ್ಲಾ ಬಂಧನಕ್ಕೂ ಕೊಂಡಿ–ಆಸೆ. ತನ್ನಲ್ಲೇ ಉದ್ಭವಿಸಿ, ಉಸಿರ ಪಡೆದು, ಉಲ್ಲಾಸ ನಿರ್ಮಿಸಿ, ನೂರ್ಮಡಿ, ಸಾವಿರ ಮಡಿಯಾಗಿ ರೆಂಬೆ ಕೊಂಬೆಗಳಾಗಿ ಚಿಮ್ಮಿ, ಎಲೆ, ಹೂ, ಹಣ್ಣುಗಳಾಗಿ, ಅಭಿವೃದ್ಧಿಯಾಗಿ. ದುಃಖದ ಜಾಲಹರಡಿ. ತನ್ನ ಹರಡಿದ ವಿಸ್ತಾರದ ರೆಂಬೆಗಳಿಂದ ನಿರ್ಮಿತವಾದ ಕತ್ತಲಿನ ದುಃಖಸಮುದ್ರದಲ್ಲಿ ಮುಳುಗಿಸಿ. ಸ್ವಚ್ಛಂದ ಆನಂದದ ಬೆಳಕನ್ನು ತಡೆಹಿಡಿದು. ನಪುಂಸಕ ಬೆಳಕಿನ ಬದುಕಾಗಿಸುವ ವಿಕ್ರಮ ವೃಕ್ಷ ಆಸೆ. ಕೇಂದ್ರಬಿಂದು-ಆಸೆ, ಪರಿಧಿಯೂ-ಆಸೆ, ಪಳಯುಳಿಕೆಯಾಗಿಸುವುದೂ-ಆಸೆ. ಆದ್ದರಿಂದ ದುಃಖದ ಹೇತುವನ್ನೇ ನಾಶ ಮಾಡಿದರೆ ದುಃಖವೆಲ್ಲಿಯದು ? ಇದು ಬೌದ್ಧ ಪ್ರಜ್ಞೆ; ಅದನ್ನೂ ಸಹ ಪ್ರತೀತ್ಯ ಸಮುತ್ಪಾದ-ಕಾರ್ಯಕಾರಣ ಸಂಬಂಧ ಎಂಬ ಸೂತ್ರದಲ್ಲಿ ವಿವರಿಸಿದ್ದಾರೆ ಬುದ್ಧ ಭಗವಾನರು : ಅವಿದ್ಯೆಯ ಕಾರಣವಾಗಿ ಸಂಸ್ಕಾರಗಳು ಉಂಟಾಗುತ್ತವೆ ; ಸಂಸ್ಕಾರ ಕಾರಣವಾಗಿ ವಿಜ್ಞಾನ ; ವಿಜ್ಞಾನವು ಕಾರಣವಾಗಿ ನಾಮ-ರೂಪ ; ನಾಮ-ರೂಪಗಳು ಕಾರಣವಾಗಿ ಷಡಾಯತನ (ಮನವೂ ಸೇರಿ ಆರು ಇಂದ್ರಿಯ); ಷಡಾಯತನಗಳು ಕಾರಣವಾಗಿ ಸ್ಪರ್ಶ : ಸ್ಪರ್ಶವು ಕಾರಣವಾಗಿ ವೇದನಾ (ಅನುಭವ) ; ವೇದನೆಯು ಕಾರಣವಾಗಿ ತೃಷ್ಣಾ ; ತೃಷ್ಣೆಯು ಕಾರಣವಾಗಿ ಉಪಾದಾನ : ಉಪಾದಾನವು ಕಾರಣವಾಗಿ ಭವ : ಭವವು ಕಾರಣವಾಗಿ ಹುಟ್ಟು (ಜಾತಿ) ; ಹುಟ್ಟು ಕಾರಣವಾಗಿ ಜರಾ, ಮರಣ, ಶೋಕ, ಕ್ರಂದನ-ಶಾರೀರಿಕ ವೇದನೆ, ಮಾನಸಿಕ ವೇದನೆ ಖಿನ್ನತೆಗಳು ಉಂಟಾಗುತ್ತವೆ. ಹೀಗೆ ಇಡೀ ದುಃಖದ ರಾಶಿಯೇ ಹುಟ್ಟುತ್ತದೆ. ಆದ್ದರಿಂದ ಆರ್ಯಅಷ್ಟಾಂಗಿಕ ಮಾರ್ಗದಲ್ಲಿ ಮೊದಲನೆಯದು ಸಮ್ಯಕ್‌ದೃಷ್ಟಿ. ಅವಿದ್ಯೆಯ ನಿವಾರಣೆಯಾದರೆ. ಉಳಿದೆಲ್ಲವೂ ನಿವಾರಣೆಯಾದಂತೆ.

**ಮೂಲಪಾಳಿ**

ಅನಿಚ್ಚ-ದುಃಖ-ಅನತ್ತಾ

'ಸಬ್ಬೇ ಸಂಖಾರಾ ಅನಿಚ್ಚಾತಿ', 'ಸಬ್ಬೇ ಸಂಖಾರಾ ದುಃಕ್ಖಾತಿ'<br>
'ಸಬ್ಬೇ ಧಮ್ಮಾ ಅನತ್ತಾ'ತಿ 'ಯದಾ ಪಞ್ಞಾಯ ಪಸ್ಸತಿ,<br>
ಅಥ ನಿಬ್ಬಿನ್ದತಿ ದುಕ್ಖೇ ಏಸ ಮಗ್ಗೋ ವಿಸುದ್ಧಿಯಾ'

ಎಲ್ಲಾ ಸಂಸ್ಕಾರಗಳು ಅನಿತ್ಯ. ಎಲ್ಲಾ ಸಂಸ್ಕಾರಗಳೂ ದುಃಖ. ಎಲ್ಲಾ ಧರ್ಮಗಳು (ಯಾವುದೇ ಸ್ಥಿತಿಯ ಆಗು-

ಹೋಗುಗಳು) ಅನಾತ್ಮ ಎಂಬುದಾಗಿ ಪ್ರಜ್ಞೆಯ ಮೂಲಕ ಅರಿತಾಗ ಮಾತ್ರ ದುಃಖದಿಂದ ವಿಮೋಚನೆ ಉಂಟು—ಇದು ವಿಶುದ್ಧಿಯ ಮಾರ್ಗ.

**ಸ್ವಸ್ತಿಶ್ರೀ**

ಬೌದ್ಧಮತದ ಮೂಲಸಿದ್ಧಾಂತತತ್ತ್ವಗಳನ್ನು ವಿಶದವಾಗಿಯೂ ಸಂಪೂರ್ಣವಾಗಿಯೂ ಪರಿಚಯಿಸುವುದು ಶ್ರಮ ಸಾಧ್ಯದ ಕೆಲಸ. ಭಗವಾನರು ಮುಖ್ಯವಾಗಿ ಮಾನವ ಜೀವನದಲ್ಲಿನ ಕಠೋರ ಸತ್ಯವಾದ 'ದುಃಖ'ದ ಸಮಸ್ಯೆಯ ನಿವಾರಣೆಯ ಕರ್ತೃವಾದರು. ವರ್ಣಾಶ್ರಮದ ಸಾಮಾಜಿಕ ವ್ಯವಸ್ಥೆಯನ್ನು ಖಂಡಿಸಿ, ವೃತ್ತಿ-ಪ್ರವೃತ್ತಿಗಳ ಬಗ್ಗೆ ತಿಳಿಸಿದರು. ಸಿದ್ಧಿ-ಸಾರ್ಥಕತೆ, ಜೀವನವನ್ನು ಅರಿಯುವುದರಲ್ಲಿ, ಸರಿದಾರಿಯಲ್ಲಿ ನಡೆಯುವುದರಲ್ಲಿ, ನಿರ್ವಾಣ ಸಾಧಿಸುವಲ್ಲಿ ಇದೆ ಎಂಬುದನ್ನು ವಿಶದೀಕರಿಸಿದರು. ಹೀಗೆ ವ್ಯಕ್ತಿನಿಷ್ಠವಾದ ಧರ್ಮವಾಗದೆ, ನಿರ್ಗುಣ ನಿರಾಕಾರನಾಗಿ, ಮೈತ್ರಿ, ಕರುಣೆ, ದಾನ, ಶೀಲ, ಸಮಾಧಿ ಮುಂತಾದ ಸುಗುಣ ಸಾಕಾರನಾಗಬೇಕೆನ್ನುತ್ತಾರೆ. ಮರೆಮಾಚಿದ ಮಾಣಿಕ್ಯವಾಗದೆ, ಮಾನವಕಲ್ಯಾಣಕ್ಕಾಗಿ ಆವಿಷ್ಕರಿಸಿ 'ಓ ಭಿಕ್ಷುಗಳೇ, ಲೋಕ ಹಿತಕ್ಕಾಗಿ, ಸುಖಕ್ಕಾಗಿ ಈ ಸತ್ಯವನ್ನು ಸಾರಿ' ಎಂಬ ದಿಟ್ಟ, ಧೀರೋಕ್ತಿಯ ಉದ್ಘೋಷದಿಂದ ಆರಂಭವಾಗಿ, ತಮ್ಮ ಜೀವಿತದ ಅಂತ್ಯದವರೆಗೂ–೪೫ ವರುಷಗಳ ಕಾಲ ಚರಿಸುತ್ತಾ, ಕಲ್ಯಾಣಕಾರೀ ಧರ್ಮಪ್ರವರ್ತಿಸಿದರು ಭಗವಾನ್ ಬುದ್ಧರು. ಅಂತಹ ಮಾನವ ಕಲ್ಯಾಣದ ಸ್ವಸ್ತಿಶ್ರೀ-ಬುದ್ಧಧರ್ಮ.

'ಸಬ್ಬೇ ಭವಂತು ಸುಖಿತತ್ತಾ'

# ಚಾರ್ವಾಕ ದರ್ಶನ

—ಡಾ॥ ಗೋವಿಂದ ಅ. ಜಾಲಿಹಾಳ

ಚಾರ್ವಾಕ ದರ್ಶನವು ಅಥವಾ ತತ್ತ್ವಸಿದ್ಧಾಂತವು ಭಾರತೀಯ ಸ್ವಭಾವವಾದ (Naturalism)ದ ಮತ್ತು ಭೌತ (Materialism)ದ ಮುಖ್ಯ ಪ್ರತಿನಿಧಿಯಾಗಿರುತ್ತದೆ. ಭಾರತೀಯ ದರ್ಶನಗಳ ಇತಿಹಾಸದಲ್ಲಿ ಸ್ವಭಾವವಾದದ ಮತ್ತು ಭೌತವಾದದ ವಿಚಾರ ಪ್ರಣಾಲಿಗಳು ವೇದೋಪನಿಷತ್ತುಗಳ ಕಾಲದಲ್ಲಿಯೇ[1] ಕಂಡುಬರುತ್ತಿದ್ದರೂ ಅವು ಖಚಿತವಾದ ಸಿದ್ಧಾಂತದ ಸ್ವರೂಪವನ್ನು ಪಡೆದುದು ಉಪನಿಷತ್ಪಶ್ಚಾತ್ಕಾಲದ ಆಜೀವಕ ಮತ್ತು ಚಾರ್ವಾಕ ದಾರ್ಶನಿಕರ ಕಾಲದಲ್ಲಿ ಎಂದು ಹೇಳಬಹುದು. ಈ ಎರಡು ಪಂಥಗಳ ದಾರ್ಶನಿಕರ ಪೈಕಿ ಆಜೀವಕರ ಬಗ್ಗೆ ನಮಗೆ ಐತಿಹಾಸಿಕವಾಗಿ ಹೆಚ್ಚು ಖಚಿತವಾದ ಮಾಹಿತಿ ದೊರೆಯುತ್ತದೆ. ಆಜೀವಕ ದಾರ್ಶನಿಕರಾದ ಪುರಾಣ ಕಸ್ಸಪ, ಅಜಿತಕೇಸಕಂಬಲಿ ಮತ್ತು ಮಖ್ಖಲಿ ಗೋಶಾಲ ಮುಂತಾದವರು ಹೆಚ್ಚುಕಡಿಮೆ ಬುದ್ಧ-ಮಹಾವೀರರ ಕಾಲದವರಾಗಿದ್ದರು. ಸಾಂಪ್ರದಾಯಿಕ ಕರ್ಮಸಿದ್ಧಾಂತದಲ್ಲಿ ಅಪನಂಬಿಕೆ, ಸ್ವತಂತ್ರಸಂಕಲ್ಪ ಹಾಗೂ ಪುರುಷಪ್ರಯತ್ನಗಳಿಗೆ ಎಳ್ಳಷ್ಟೂ ಆಸ್ಪದವಿಲ್ಲದಂಥ ಅಪ್ರತಿಹತವಾದ ನಿಯತಿ–ತತ್ತ್ವದ ಪ್ರತಿಪಾದನೆ, ಪರಮಾಣು ತತ್ತ್ವದ ಪ್ರತಿಪಾದನೆ ಮತ್ತು ನೈತಿಕ ವಿತಂಡವಾದ ಇವು ಆಜೀವಕ-ಸಿದ್ಧಾಂತದ ಮುಖ್ಯತತ್ತ್ವಗಳಾಗಿದ್ದವು. ಚಾರ್ವಾಕ ದರ್ಶನದ ಬಗ್ಗೆ ಹಾಗೂ ಅದರ ದಾರ್ಶನಿಕರ ಬಗ್ಗೆ ನಮಗೆ ಇಷ್ಟು ಖಚಿತವಾದ ಐತಿಹಾಸಿಕ ವಿವರಗಳು ದೊರೆಯುವುದಿಲ್ಲ. ಈ ದರ್ಶನದ ಅಥವಾ ತತ್ತ್ವಸಿದ್ಧಾಂತದ ಮೂಲ ಗ್ರಂಥವಾದ ಬೃಹಸ್ಪತಿ ಸೂತ್ರವು (ಸುಮಾರು ಕ್ರಿ.ಪೂ. ೬೦೦ರಷ್ಟು ಪ್ರಾಚೀನವಾದುದು) ಉಪಲಬ್ಧವಿಲ್ಲವಾದುದರಿಂದ ಈ ಸಿದ್ಧಾಂತವನ್ನು ಕುರಿತ ಮಾಹಿತಿಯನ್ನು ನಾವು ಮುಖ್ಯವಾಗಿ

೧) ಶ್ರೀ ಶಂಕರಾಚಾರ್ಯರ 'ಸರ್ವಸಿದ್ಧಾಂತಸಾರಸಂಗ್ರಹ' (ಕ್ರಿ.ಶ. ೮ನೇ ಶತಮಾನ)
೨) ಶ್ರೀ ಮಾಧವಾಚಾರ್ಯರ (ಶ್ರೀ ವಿದ್ಯಾರಣ್ಯರ) 'ಸರ್ವದರ್ಶನ ಸಂಗ್ರಹ' (ಕ್ರಿ.ಶ. ೧೪ನೇ ಶತಮಾನ)
೩) ಜಯರಾಶಿ ಭಟ್ಟನ 'ತತ್ತ್ವೋಪಪ್ಲವ ಸಿಂಹ' (ಕ್ರಿ.ಶ. ೭ನೇ ಶತಮಾನ)

ಈ ತಾತ್ವಿಕ ಗ್ರಂಥಗಳಿಂದ (೪) 'ಪ್ರಬೋಧ ಚಂದ್ರೋದಯ' ಎಂಬ ಪ್ರಾಚೀನ ಸಂಸ್ಕೃತ ನಾಟಕದಿಂದ ಮತ್ತು (೫) ಇತರ ಮತಗಳ ದಾರ್ಶನಿಕ ಗ್ರಂಥಗಳಲ್ಲಿ ಬರುವ ಚಾರ್ವಾಕಮತದ ಉಲ್ಲೇಖಗಳಿಂದ ಹಾಗೂ ಚಾರ್ವಾಕವಾದದಮಂಡನ-ಖಂಡನಗಳಿಂದ ಮಾತ್ರ ಪಡೆಯಬಹುದಾಗಿದೆ. ಹೀಗಾಗಿ ಈ ದರ್ಶನದ ಬಗ್ಗೆ ಈಗ ಉಪಲಬ್ಧವಿರುವ ಮಾಹಿತಿಯು

---

1. ಉದಾ : ಛಾಂದೋಗ್ಯ, ಬೃಹದಾರಣ್ಯಕ, ಕೌಷೀತಕಿ ಮತ್ತು ಸ್ವಸಂವತ್ ಉಪನಿಷತ್ತುಗಳಲ್ಲಿ ಶತಪಥ ಬ್ರಾಹ್ಮಣದಲ್ಲಿ ಹಾಗೂ ಉದ್ದಾಲಕ ಜಾತಕದಲ್ಲಿ ಉಲ್ಲೇಖಿತವಾಗಿರುವ ವಿರೋಚನ, ಉಷಸ್ತಿ, ಬುಡಿಲ, ಬಕ, ರೈಕ್ವ, ಪೈಂಗ್ಯ, ಉದ್ದಾಲಕ ಮುಂತಾದ ಸ್ವಭಾವವಾದಿ ಮತ್ತು ಭೌತವಾದಿ ದಾರ್ಶನಿಕರ ವಿಚಾರಧಾರೆಗಳನ್ನು ನೋಡಬಹುದು.

ಐತಿಹಾಸಿಕವಾಗಿ ಹಾಗೂ ತಾತ್ವಿಕವಾಗಿ ಸಮಗ್ರವಾದುದೆಂದಾಗಲಿ, ಸಂಪೂರ್ಣವಾಗಿ ವಿಶ್ವಾಸಾರ್ಹವಾದುದೆಂದಾಗಲಿ ಅಥವಾ ನಿಷ್ಪಕ್ಷಪಾತವಾದ ನಿರೂಪಣೆಯನ್ನು ಉಳ್ಳದ್ದಾಗಿರುವುದೆಂದಾಗಲಿ ಹೇಳಲು ಬರುವಂತಿಲ್ಲ. ಆದರೂ ಮೇಲೆ ಹೆಸರಿಸಿದ ನಾಲ್ಕು ಪ್ರಾಚೀನ ಗ್ರಂಥಗಳಿಂದ ಹಾಗೂ ದಿವಂಗತ ಡಾ. ಎಸ್. ಎನ್. ದಾಸಗುಪ್ತ ಅವರ 'A History of Indian Philosophy'. ದಿವಂಗತ ಪ್ರೊ.ಎಂ. ಹಿರಿಯಣ್ಣನವರ 'Outlines of Indian Philosophy, 'ದಕ್ಷಿಣಾರಂಜನ ಶಾಸ್ತ್ರೀ ಅವರ 'A short History of Indian Materialism' ಮತ್ತು 'Charvak a-Shashti', ಡಾ. ಎಸ್. ಚಟರ್ಜಿ ಹಾಗೂ ಡಾ. ಡಿ. ದತ್ತ ಇವರುಗಳ 'An Introduction to Indian Philosophy' ಹಾಗೂ ಪ್ರೊಫೆಸರ್ ಡೇಲ್ ರೈಪೆ ಅವರ 'The Naturalistic Tradition in Indian Philosophy' ಮುಂತಾದ ಕೆಲವು ಆಧುನಿಕ ಗ್ರಂಥಗಳಿಂದ ನಾವು ತಕ್ಕಮಟ್ಟಿಗೆ ಈ ಸಿದ್ಧಾಂತದ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಬಹುದಾಗಿದೆ.

**'ಚಾರ್ವಾಕ' ಶಬ್ದದ ಅರ್ಥ ಮತ್ತು ವ್ಯಾಪ್ತಿ:**

ಈ ದರ್ಶನದ ಹೆಸರಾದ 'ಚಾರ್ವಾಕ' ಎಂಬ ಶಬ್ದದ ಅರ್ಥವು ಖಚಿತವಾಗಿ 'ಇದೇ' ಅಥವಾ 'ಇಷ್ಟೇ' ಎಂದು ಹೇಳಲು ಬರುವುದಿಲ್ಲ. ಸಾಮಾನ್ಯವಾಗಿ ಅದಕ್ಕೆ ಈ ಕೆಳಗಿನ ಮೂರು-ನಾಲ್ಕು ಅರ್ಥಗಳನ್ನು ಹೇಳಲಾಗುತ್ತದೆ :

೧) ಮೂಲತಃ 'ಚಾರ್ವಾಕ' ಇದು ಈ ದರ್ಶನದ ಸಂಸ್ಥಾಪಕನಾದ ಬೃಹಸ್ಪತಿಯು ತನ್ನ ದರ್ಶನವನ್ನು ಮತ್ತು ಸಿದ್ಧಾಂತವನ್ನು ಮೊಟ್ಟಮೊದಲು ಯಾರಿಗೆ ಬೋಧಿಸಿದನೋ ಆ ಶಿಷ್ಯನ ಹೆಸರು (ಜರ್ಮನ್ ವಿದ್ವಾಂಸ ಮ್ಯಾಕ್ಸಿಮುಲ್ಲರ್ ಈ ಅರ್ಥವನ್ನು ಸಮರ್ಥಿಸಿದ್ದಾನೆ),

ಮಹಾಭಾರತದಲ್ಲಿ 'ಚಾರ್ವಾಕ' ಎಂಬ ಹೆಸರಿನ ವ್ಯಕ್ತಿಯೊಬ್ಬನು ಯುಧಿಷ್ಠಿರನಿಗೆ ಭೆಟ್ಟಿಯಾಗಿದ್ದನೆಂಬ ಉಲ್ಲೇಖ ಬರುತ್ತದೆ.

೨) 'ಚಾರ್ವಾಕ' ಎಂಬ ಶಬ್ದವು ಸಂಸ್ಕೃತದ 'ಚರ್ವ' (ತಿನ್ನು) ಎಂಬ ಧಾತುವಿನಿಂದ ಉತ್ಪನ್ನವಾಗಿರುತ್ತದೆಂದೂ, ಈ ಮತದ ದಾರ್ಶನಿಕರು ಕೇವಲ ತಿಂದುಂಡು ಸುಖವನ್ನು ಭೋಗಿಸುವಂಥವರಾಗಿದ್ದು ಯಾವುದೇ ಧಾರ್ಮಿಕ ಇಲ್ಲವೇ ನೈತಿಕ ಹೊಣೆಗಾರಿಕೆಯನ್ನು ಒಪ್ಪಿಕೊಳ್ಳದಂಥವರಾಗಿದ್ದುದರಿಂದ, ಅವರನ್ನು 'ಚಾರ್ವಾಕರು', ಎಂದರೆ 'ಬರೀ ತಿನ್ನುಣ್ಣುವಂಥವರು' ಎಂದು ಕರೆಯುತ್ತಿದ್ದರು ಎಂದೂ ಇನ್ನೊಂದು ಅರ್ಥವಿವರಣೆ ಇದೆ (ಇದನ್ನು ದಿ. ಡಾ. ಎಸ್.ಎನ್. ದಾಸಗುಪ್ತ ಅನುಮೋದಿಸಿದ್ದಾರೆ).

೩) 'ಚಾರ್ವಾಕ' ಶಬ್ದವನ್ನು 'ಚಾರು + ವಾಕ್' ಎಂದು ವಿಶ್ಲೇಷಿಸಬೇಕೆಂದೂ. ಹಾಗೆ ವಿಶ್ಲೇಷಿಸಿ ಅದರ ಅರ್ಥವನ್ನು 'ಸುಂದರವಾಗಿ. ಎಂದರೆ ಸವಿಯಾಗಿ, ಮಾತನಾಡುವಂಥವರು' (the sweet tongued ones) ಎಂಬುದಾಗಿ ನಿಷ್ಪತ್ತಿಸುವುದು ಹೆಚ್ಚು ಸೂಕ್ತ. ಹಾಗೆ ಮಾಡಿದಲ್ಲಿ ಅದು ಚಾರ್ವಾಕರ ಮೇಲ್ನೋಟಕ್ಕೆ ಆಕರ್ಷಣೀಯವಾಗಿ ಕಾಣುವ ಥಳಕಿನ ಸಿದ್ಧಾಂತಕ್ಕೆ ಹೆಚ್ಚು ಯಥಾರ್ಥವಾಗಿ ಅನ್ವಯಿಸುತ್ತದೆ ಅನ್ನುವುದು ಸಂಸ್ಕೃತ ವ್ಯಾಕರಣದ ಕರ್ತೃವಾದ ವ್ಹಿಟ್ನೀಯ ಮತ್ತು ದಿ.ಪ್ರೊ.ಎಂ. ಹಿರಿಯಣ್ಣನವರ ಅಭಿಪ್ರಾಯವಾಗಿರುತ್ತದೆ.

**ಚಾರ್ವಾಕ ಮತ್ತು ಲೋಕಾಯತ**

ಚಾರ್ವಾಕಮತವು 'ಲೋಕಾಯತ ಮತ' ಎಂಬ ಇನ್ನೊಂದು ಹೆಸರಿನಿಂದಲೂ ಪ್ರಸಿದ್ಧವಿದೆ. 'ಲೋಕಾಯತ' ಎಂಬ ಪದಕ್ಕೆ ಸಾಮಾನ್ಯವಾಗಿ ಈ ಕೆಳಗಿನ ಅರ್ಥ–ವಿವರಣೆಗಳನ್ನು ಕೊಡಲಾಗುತ್ತದೆ :

೧) ಚಾರ್ವಾಕ ಮತದ ಸಂಸ್ಥಾಪಕನಾದ ಬೃಹಸ್ಪತಿಯು 'ಲೋಕಾ' ಎಂಬವಳ ಮಗನಾದ ಕಾರಣ ಅವನಿಂದ ಸ್ಥಾಪಿತವಾದ ಮತಕ್ಕೆ 'ಲೋಕಾಯತ ಮತ' (ಲೋಕಾ ಎಂಬವಳಿಂದ ಬಂದಂಥವನ ಮತ) ಎಂಬ ಹೆಸರು.

೨) ಚಾರ್ವಾಕ ಮತವು ಈ ಲೋಕದ, ಎಂದರೆ ಈ ಜಗತ್ತಿನ, ಅಸ್ತಿತ್ವವನ್ನಷ್ಟೇ ಒಪ್ಪಿಕೊಂಡು ಸ್ವರ್ಗಾದಿ ಪರಲೋಕಗಳ ಅಸ್ತಿತ್ವವನ್ನು ನಿರಾಕರಿಸುತ್ತದಾದ್ದರಿಂದ ಅದಕ್ಕೆ 'ಲೋಕಾಯತ ಮತ' ಎಂದರೆ 'ಈ ಲೋಕದವರ' ಅಥವಾ 'ಈ ಲೋಕವಷ್ಟೇ ಉಂಟು ಎಂದು ಅನ್ನುವವರ' ಮತ ಎಂದು ಹೆಸರು.

೩) 'ಲೋಕಾ' ಎಂದರೆ (ಸಂಸ್ಕೃತದಲ್ಲಿ) 'ಜನರು' ಎಂಬರ್ಥವಿರುವುದರಿಂದ 'ಲೋಕಾಯತ ಮತ' ಎಂದರೆ ಜನರಲ್ಲಿ, ಅರ್ಥಾತ್ ಜನಸಾಮಾನ್ಯರಲ್ಲಿ, ಹೆಚ್ಚಾಗಿ ಪ್ರಚಲಿತವಾಗಿರುವ ಮತ ಎಂಬರ್ಥ. 'ಸರ್ವದರ್ಶನ ಸಂಗ್ರಹ'ಕಾರರಾದ ಮಾಧವಾಚಾರ್ಯರು ಈ ಅರ್ಥವನ್ನು ಪುರಸ್ಕರಿಸುತ್ತಾರೆ: 'ಜನಸಾಮಾನ್ಯರಲ್ಲಿ ಹೆಚ್ಚಿನವರು ಅನುಕೂಲ ಸಿಂಧು ಮತ್ತು ಸುಖಾನುಭೋಗ–ಸಂಹಿತೆಗಳ ಪ್ರಕಾರ ಅರ್ಥ ಮತ್ತು ಕಾಮ ಇವೆರಡೇ ಪರಮ ಪುರುಷಾರ್ಥಗಳೆಂದು ಭಾವಿಸಿ. ಪರಲೋಕದಲ್ಲಿನ ವಸ್ತುಗಳೆಲ್ಲವುಗಳ ಅಸ್ತಿತ್ವವನ್ನು ಅಲ್ಲಗಳೆದು, ಕೇವಲ ಚಾರ್ವಾಕ-ಸಿದ್ಧಾಂತವನ್ನು ಅನುಸರಿಸುತ್ತಿರುವುದು ಕಂಡುಬರು

ತ್ತದೆ. ಆದ್ದರಿಂದ ಆ ಸಿದ್ಧಾಂತಕ್ಕೆ 'ಲೋಕಾಯತ ಮತ' ಎಂಬ ಇನ್ನೊಂದು ಹೆಸರು. ಈ ಹೆಸರು ತುಂಬಾ ಅನ್ವರ್ಥಕವೇ ಆಗಿದೆ.' ['ಸರ್ವದರ್ಶನ ಸಂಗ್ರಹ' ಪ್ರಕರಣ ೧. ಚಾರ್ವಾಕದರ್ಶನ, ಪ್ಯಾರಾ ೧. (ಕನ್ನಡಾನುವಾದ ನನ್ನದು)] ಹೀಗೆ 'ಲೋಕಾಯತ ಮತ' ಎಂದರೆ ಲೋಕದಲ್ಲಿ ಅಥವಾ ಜನರಲ್ಲಿ ರೂಢಿಯಲ್ಲಿರುವ ಮತ ಸಿದ್ಧಾಂತ ಎಂಬ ಈ ಮೇಲೆ ವಿವರಿಸಿದ ಅರ್ಥವನ್ನು ಮಾಧವಾಚಾರ್ಯರಂತೆ ಇನ್ನೂ ಅನೇಕ ದಾರ್ಶನಿಕರು ಮತ್ತು ವಿದ್ವಾಂಸರು ಪುರಸ್ಕರಿಸುತ್ತಾರೆ. ಈ ಅರ್ಥವನ್ನು ಪುರಸ್ಕರಿಸುವಲ್ಲಿ ನಾವು ಒಂದು ಐತಿಹಾಸಿಕ ಸಂಗತಿಯನ್ನು ಗಮನಿಸಬೇಕೆಂದು ನನಗೆ ಅನಿಸುತ್ತದೆ. ಅದೆಂದರೆ, ಈಗ ನಮಗೆ ಗೊತ್ತಿರುವ ಹಾಗೆ, ನಮ್ಮ ದೇಶದ ಇತಿಹಾಸದ ಯಾವ ಕಾಲದಲ್ಲೂ ಅಥವಾ ಯುಗದಲ್ಲೂ (ಪ್ರಾಚೀನವಾಗಲಿ, ಅರ್ವಾಚೀನವಾಗಲಿ ಅಥವಾ ಆಧುನಿಕವಾಗಲಿ) ಚಾರ್ವಾಕ ಅಥವಾ ಲೋಕಾಯತ ಮತವು ತಾತ್ತ್ವಿಕವಾಗಿ ಅಥವಾ ವೈಚಾರಿಕವಾಗಿ (Theoretically) ಹೆಚ್ಚಿನ ಜನರ, ಇಲ್ಲವೆ ಜನಸಾಮಾನ್ಯರ, ದರ್ಶನ ಅಥವಾ ಸಿದ್ಧಾಂತವಾಗಿದ್ದಂತೆ ಕಂಡು ಬರುವದಿಲ್ಲ. ಹೀಗಿದ್ದ ಮೇಲೆ ಚಾರ್ವಾಕ ಅಥವಾ ಲೋಕಾಯತ ಮತವು ಜನಸಾಮಾನ್ಯರ ಮತ ಎಂದು ನಾವು ಯಾವ ಅರ್ಥದಲ್ಲಿ ತಾನೇ ಹೇಳಬಹುದು? ನಾವು ಹೀಗೆ ಹೇಳಬಹುದಾದ ಒಂದೇ ಒಂದು ಅರ್ಥವೆಂದರೆ ಲೋಕಾಯತ ಮತವು ತಾತ್ತ್ವಿಕವಾಗಿ, ವೈಚಾರಿಕವಾಗಿ ಹಾಗೂ ಶಾಬ್ದಿಕವಾಗಿ ಯಾವ ಕಾಲದಲ್ಲೂ ಜನಸಾಮಾನ್ಯರ ಮತವಾಗಿರದೇ ಇದ್ದರೂ ಅದು ಹೆಚ್ಚಿನ ಜನರ ಪ್ರತ್ಯಕ್ಷ ಆಚಾರದಲ್ಲಿ ಅವರ ದಿನನಿತ್ಯದ ವ್ಯವಹಾರಗಳಲ್ಲಿ ಎಲ್ಲ ಕಾಲದಲ್ಲೂ ಸ್ಫುಟವಾಗಿ ವ್ಯಕ್ತವಾಗುವಂಥ ದರ್ಶನ ಅಥವಾ ತತ್ತ್ವ ಸಿದ್ಧಾಂತವಾಗಿರುತ್ತವೆ ಅನ್ನುವುದು ! ಇರಲಿ. ಇದಿಷ್ಟು ಚಾರ್ವಾಕ ದರ್ಶನದ ಹೆಸರಿನ ವಿಚಾರವಾಯ್ತು. ಇನ್ನು ಈ ಹೆಸರಿನ ಒಳಗೆ ಇರುವ ದರ್ಶನದ ಅಥವಾ ಸಿದ್ಧಾಂತದ 'ಅಂತರ್ಯ'ದ ವಿಚಾರ:

**ಚಾರ್ವಾಕರ ಪ್ರಮಾಣ–ಸಿದ್ಧಾಂತ (Epistemology) :**

ಚಾರ್ವಾಕ ಮತದ ಪ್ರಕಾರ ಖಾತ್ರಿ (Certain)ಯಾದ ನಿರ್ದುಷ್ಟ (Valid)ವಾದ ಮತ್ತು ಯಥಾರ್ಥ (True) ವಾದ ಜ್ಞಾನಕ್ಕೆ 'ಪ್ರತ್ಯಕ್ಷ' (Perception) ವೇ ಪ್ರಮಾಣವು. ಇನ್ನಿತರ ಭಾರತೀಯ ತತ್ವಸಿದ್ಧಾಂತಗಳು ಒಪ್ಪಿಕೊಳ್ಳುವ 'ಅನುಮಾನ' (Inference) ಹಾಗೂ 'ಶಬ್ದ ಮತ್ತು ಶ್ರುತಿ'(Verbal and Vedic Testimony) ಗಳನ್ನು ಜ್ಞಾನಕ್ಕೆ ಯೋಗ್ಯವಾದ ಆಧಾರಗಳೆಂದು ಅಥವಾ ಪ್ರಮಾಣಗಳೆಂದು ಚಾರ್ವಾಕ ಸಿದ್ಧಾಂತವು ಒಪ್ಪಿಕೊಳ್ಳುವುದಿಲ್ಲ. [ಈ ವಿಷಯದಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ಕೆಲವು ಚಾರ್ವಾಕರು 'ಅನುಮಾನ' ದ ಕೆಲವು ಪ್ರಕಾರಗಳನ್ನು ಮಾತ್ರ ತಿರಸ್ಕರಿಸಿದ್ದರೆಂದೂ, ಇಡೀ ಅನುಮಾನ ಪ್ರಮಾಣವನ್ನಲ್ಲವೆಂದೂ, 'ನ್ಯಾಯಮಂಜರಿ' ಮುಂತಾದ ಕೆಲವು ಪ್ರಾಚೀನ ಗ್ರಂಥಗಳಿಂದ ತಿಳಿದುಬರುವುದು.]

**ನ್ಯಾಯ ಅಥವಾ ಅನುಮಾನ ಪ್ರಾಮಾಣ್ಯವನ್ನು ಕುರಿತು ಚಾರ್ವಾಕರ ವಿಮರ್ಶೆಯು ಮುಖ್ಯವಾಗಿ ಹೀಗಿದೆ:**

೧) ನ್ಯಾಯ ಅಥವಾ ಅನುಮಾನ ಮುಖೇನ ನಾವು ತಲುಪುವ ತೀರ್ಮಾನವು ಅಥವಾ ನಿರ್ಣಯವು ಮೂಲದಲ್ಲಿ ಪ್ರತ್ಯಕ್ಷಾನುಭೂತ ಸತ್ಯವನ್ನೇ ಅವಲಂಬಿಸಿರುವಂಥದು.

೨) ಪ್ರತ್ಯಕ್ಷ–ವೇದ್ಯ ವಸ್ತುಗಳಿಂದ ಅನುಮಾನ–ವ್ಯಾಪ್ತಿಯು (Inferentiul Relation) ತಂತಾನೇ ಹುಟ್ಟಿಕೊಳ್ಳುವುದಿಲ್ಲ.

೩) ಅನುಮಾನ–ಸಿದ್ಧಜ್ಞಾನವು (Inferential knowledge) ಅನೇಕಬಾರಿ ಪ್ರತ್ಯಕ್ಷ–ಜ್ಞಾನ (Direct or Perceptual knowledge) ದಿಂದ ಅಲ್ಲಗಳೆಯಲ್ಪಡುತ್ತದೆ.

೪) ಅನುಮಾನ ಕ್ರಿಯೆಗೆ ಆಧಾರಭೂತವಾದ 'ವ್ಯಾಪ್ತಿ'(Necessary relation)ಯನ್ನು ಸಿದ್ಧಮಾಡುವ ಯಾವ ಅಂಶವೂ ಆ ಕ್ರಿಯೆಯಲ್ಲಿಲ್ಲ.

೫) ಪ್ರತ್ಯಕ್ಷಾನುಭವಜನ್ಯಜ್ಞಾನದ ಸ್ಫುಟವಾದ ಭಾವನೆಗಳೊಂದಿಗೆ ಹೋಲಿಸಿದರೆ ಅನುಮಾನ ಅಥವಾ ತರ್ಕ (ನಿಗಮನ ಅಥವಾ ಅನುಗಮನ) ಸಿದ್ಧಜ್ಞಾನದಿಂದ ನಮ್ಮ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳು ಅಥವಾ ಅಭಿಪ್ರಾಯಗಳು ಮಸಕುಮಸಕಾಗಿರುತ್ತವೆ.

೬) ತರ್ಕ ಅಥವಾ ಅನುಮಾನ ಎಂದರೆ ಗೊತ್ತಿರುವ ವಿಷಯದಿಂದ ಗೊತ್ತಿರದ ವಿಷಯಕ್ಕೆ ನಮ್ಮ ಅರಿವಿನ ಅಥವಾ ಬುದ್ಧಿಯ ಅನಿಶ್ಚಿತ ಸ್ವರೂಪದ ನೆಗೆತ. ಉದಾ: ನಾವು ಒಂದು ಪರ್ವತಪ್ರದೇಶದಲ್ಲಿ ನೋಡಿದ ಹೊಗೆಯ ದೃಶ್ಯದಿಂದ ಅಲ್ಲಿ ಬೆಂಕಿ ಇದೆ ಅನ್ನುವುದನ್ನು ಅನುಮಾನಿಸಿದಾಗ ಅಥವಾ ತರ್ಕಿಸಿದಾಗ ನಮ್ಮ ಬುದ್ಧಿಯು ನಾವು ನೋಡಿದ ಹೊಗೆಯಿಂದ ನಾವು ನೋಡದಿರುವ ಬೆಂಕಿಯೆಡೆಗೆ ಅರಿವಿನ ಅಂಧಕಾರ-ಸ್ಥಿತಿಯಲ್ಲಿ ನೆಗೆಯುತ್ತದೆ. ಇಲ್ಲಿ ನೈಯ್ಯಾಯಿಕರಂಥ ತರ್ಕಶಾಸ್ತ್ರಜ್ಞರು ಪ್ರಾಯಶಃ ನಮ್ಮ ಬುದ್ಧಿಯ ಇಂಥ ನೆಗೆತವು ಹೊಗೆ ಮತ್ತು ಬೆಂಕಿ ಇವುಗಳ ನಡುವಣ ಅವ್ಯಾಹತವಾದ 'ವ್ಯಾಪ್ತಿ'ಯನ್ನು

ಕುರಿತ ಈ ಮೊದಲಿನ ನಮ್ಮ ಜ್ಞಾನದಿಂದಾಗಿ ಸಮರ್ಥನೀಯವೆನಿಸುತ್ತದೆ ಎಂಬುದನ್ನು ಎತ್ತಿ ತೋರಿಸುತ್ತ ಇಲ್ಲಿ ವಾದದ ಅಥವಾ ಅನುಮಾನ-ಕ್ರಿಯೆಯ ಸಂಪೂರ್ಣವಾದ ಅಭಿವ್ಯಕ್ತಿಯು ಈ ಕೆಳಗಿನಂತಿರುತ್ತದೆಂದು ಹೇಳುತ್ತಾರೆ:

೧) ಹೊಗೆಯಿರುವಂಥ ಎಲ್ಲ ಸನ್ನಿವೇಶಗಳಲ್ಲಿ ಬೆಂಕಿಯಿರುವುದು ಕಂಡುಬರುತ್ತದೆ

೨) ಈ ಪರ್ವತದ ಸನ್ನಿವೇಶವು ಹೊಗೆಯಿರುವಂಥ ಒಂದು ಸನ್ನಿವೇಶವಾಗಿರುತ್ತದೆ

೩) ಆದುದರಿಂದ ಈ ಪರ್ವತದ ಸನ್ನಿವೇಶವು ಬೆಂಕಿಯಿರುವಂಥ ಒಂದು ಸನ್ನಿವೇಶವಾಗಿರುತ್ತದೆ. (ನಿರ್ಣಯ)

ಈ ಬಗೆಯ ತರ್ಕದ ಅಥವಾ ಅನುಮಾನದ ಸ್ವರೂಪವನ್ನು ವಿಮರ್ಶಿಸುತ್ತ ಚಾರ್ವಾಕರು ಹೀಗೆ ಹೇಳುತ್ತಾರೆ :

ಮೇಲಿನ ಈ ನಿರ್ಣಯವು ಈ ವಾದದಲ್ಲಿ ಮಧ್ಯ ಪದ (Middle Term)ವಾಗಿರುವ 'ಹೊಗೆ' ಮತ್ತು ಸಾಧ್ಯಪದ (Major Term)ವಾಗಿರುವ 'ಬೆಂಕಿ' ಇವೆರಡರ ನಡುವೆ 'ವ್ಯಾಪ್ತಿ' (Invariable Relation)ಯನ್ನು ಪ್ರತಿಪಾದಿಸುವಂಥ ಸಾಧ್ಯ-ವಾಕ್ಯ (Major Premise)ವು ನಿಃಸಂಶಯವಾಗಿಯೂ ಸತ್ಯವನ್ನು ಹೇಳುತ್ತಿದ್ದರೆ ಮಾತ್ರ ತರ್ಕಸಮ್ಮತವೆನಿಸುತ್ತದೆ. ಆದರೆ 'ಹೊಗೆ' ಇರುವಂಥ ಎಲ್ಲಾ ಸನ್ನಿವೇಶಗಳಲ್ಲಿ ಬೆಂಕಿಯು ಉಪಸ್ಥಿತಿ (Presence) ಇದೆ ಎನ್ನುವುದರ ಸಂಪೂರ್ಣ (ಎಂದರೆ ಇಂಥ ಎಲ್ಲಾ ಸಂಭಾವ್ಯ ಸನ್ನಿವೇಶಗಳ) ಪರಿಜ್ಞಾನ ನಮಗೆ ಇದ್ದರೆ ಮಾತ್ರ ಈ ಮೇಲಿನ 'ವ್ಯಾಪ್ತಿ'ಯು ಸಿದ್ಧವಾಗುತ್ತದೆ; ಇಲ್ಲವಾದರೆ ಇಲ್ಲ. ಆದರೆ ಇಂಥ ಎಲ್ಲಾ ಸನ್ನಿವೇಶಗಳ ಪರಿಜ್ಞಾನ ನಮಗಿರುವುದು ಸಾಧ್ಯವಿಲ್ಲ. ಯಾಕೆಂದರೆ, ಭೂತ ಮತ್ತು ಭವಿಷ್ಯತ್ ಕಾಲಗಳಲ್ಲಿನ ಇಂಥ ಸನ್ನಿವೇಶಗಳ ಮಾತು ಒತ್ತಟ್ಟಿಗಿರಲಿ, ಈಗ ವರ್ತಮಾನ ಕಾಲದಲ್ಲಿ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿರುವ ಹೊಗೆ ಮತ್ತು ಬೆಂಕಿಗಳ ಎಲ್ಲಾ ಸನ್ನಿವೇಶಗಳನ್ನು ಈಕ್ಷಿಸುವುದು ಕೂಡ ನಮಗೆ ಸಾಧ್ಯವಿಲ್ಲ. ಆದ್ದರಿಂದ ಪ್ರತ್ಯಕ್ಷಾನುಭವದ ಆಧಾರದ ಮೇಲೆ ಯಾವ 'ವ್ಯಾಪ್ತಿ'ಯನ್ನು ಸಿದ್ಧ ಮಾಡುವುದೂ ಸಾಧ್ಯವಿಲ್ಲ. ಇನ್ನು ಈ 'ವ್ಯಾಪ್ತಿ'ಯು ಬೇರೊಂದು ಅನುಮಾನ (Inference)ವನ್ನು ಆಧರಿಸಿರುತ್ತದೆ ಎಂದು ಹೇಳುವುದು ಕೂಡ ಸಾಧ್ಯವಿಲ್ಲ. ಯಾಕೆಂದರೆ, ನಾವು ಹಾಗೆ ಹೇಳಿದರೆ ಆ ಬೇರೊಂದು ಅನುಮಾನ(Inference)ದ ತರ್ಕಬದ್ಧತೆಯನ್ನು ಸಹ ನಾವು ಇದೇ ರೀತಿಯಾಗಿ ಸಿದ್ಧ ಮಾಡಬೇಕಾಗುತ್ತದೆ.

೪) ಇನ್ನು ಈ 'ಹೊಗೆಯ ಸನ್ನಿವೇಶ' ಮತ್ತು 'ಬೆಂಕಿಯ ಸನ್ನಿವೇಶ' ಇವೆರಡರ ನಡುವಣ 'ವ್ಯಾಪ್ತಿ'ಯನ್ನು ನಾವು ಹೊಗೆಯ ಮತ್ತು ಬೆಂಕಿಯ ಎಲ್ಲಾ ಸನ್ನಿವೇಶಗಳಲ್ಲೂ ತಪ್ಪದೇ ಹಾಜರ್ ಇರುವಂಥ 'ಹೊಗೆತನ' (Smokeness) ಮತ್ತು 'ಬೆಂಕಿತನ' (fireness) ಇವುಗಳಂಥ ಯಾವುದೇ 'ಸಾಮಾನ್ಯ'ಗಳ (Universals or class-characters) ಪ್ರತ್ಯಕ್ಷ–ದರ್ಶನದ ಆಧಾರದಿಂದ ಸಿದ್ಧಮಾಡುವುದು ಕೂಡ ಸಾಧ್ಯವಿಲ್ಲ. ಯಾಕೆಂದರೆ ಅಂಥ 'ಸಾಮಾನ್ಯ'ಗಳು ಪ್ರತ್ಯಕ್ಷ-ಗೋಚರವಲ್ಲ.

೫) ಹಾಗೆಯೇ ಈ 'ವ್ಯಾಪ್ತಿ'ಯನ್ನು ನಾವು ಕಾರ್ಯ-ಕಾರಣ ಸಂಬಂಧದ ಆಧಾರದ ಮೇಲಿಂದ ಕೂಡ ಸಿದ್ಧ ಮಾಡುವುದು ಸಾಧ್ಯವಿಲ್ಲ. ಯಾಕೆಂದರೆ ಕಾರ್ಯ–ಕಾರಣ ಸಂಬಂಧವು ಕೂಡ ಒಂದು ಪ್ರಕಾರದ 'ವ್ಯಾಪ್ತಿ'ಯೇ ಆಗಿರುವುದರಿಂದ ಅದನ್ನು ಕೂಡ, ಈ ಮೇಲೆ ಹೇಳಿದ ಕಾರಣಗಳಿಂದಾಗಿ ಪ್ರತ್ಯಕ್ಷಾನುಭವದಿಂದ ಸಿದ್ಧ ಮಾಡುವುದು ಸಾಧ್ಯವಿಲ್ಲ.

೬) ನಮ್ಮ ವಿಭಿನ್ನ ಅನುಭವಗಳಲ್ಲಿ ಅನೇಕ ಸಲ ಕಂಡುಬರುವ ಏಕರೂಪತೆಗಳಿಗೆ (Uniformities) ಅಥವಾ ಸಾದೃಶ್ಯತೆಗಳಿಗೆ (Similarities) ವಸ್ತುಗಳಲ್ಲಿ ಅಂತರ್ಗತವಾಗಿರುವ ಅವುಗಳ ಸ್ವಭಾವ ಗುಣಗಳೇ ಕಾರಣವಾಗಿರುತ್ತವೆ ಮತ್ತು ಈ ಸ್ವಭಾವ ಗುಣಗಳು ಕಾಲಾಂತರದಲ್ಲಿ ಬದಲಾವಣೆ ಹೊಂದಬಲ್ಲಂಥವಾಗಿರುತ್ತವೆ. ಹೀಗಾಗಿ 'ವ್ಯಾಪ್ತಿ'ಯನ್ನು ನಾವು ನಮ್ಮ ವಿಭಿನ್ನ ಅನುಭವಗಳಲ್ಲಿ ವ್ಯಕ್ತವಾಗುವ ಏಕರೂಪತೆಯ ಆಧಾರದ ಮೇಲಿಂದ ಸಹ ಸಿದ್ಧಮಾಡುವುದು ಸಾಧ್ಯವಿಲ್ಲ. ಆದ್ದರಿಂದ 'ವ್ಯಾಪ್ತಿ'ಯ ಆಧಾರದ ಮೇಲೆ ನಿಂತಿರುವ ಅನುಮಾನ-ಪ್ರಾಮಾಣ್ಯವನ್ನು ನಾವು ಒಪ್ಪುವುದು ಸಾಧ್ಯವಿಲ್ಲ.

**ಶಬ್ದ–ಪ್ರಾಮಾಣ್ಯ ಮತ್ತು ಶ್ರುತಿ–ಪ್ರಾಮಾಣ್ಯ :**

ಚಾರ್ವಾಕರು ಶ್ರುತಿ ಗ್ರಂಥಗಳ (ವೇದೋಪನಿಷತ್ತುಗಳ) ಪ್ರಾಮಾಣ್ಯವನ್ನು ಮೂಲಭೂತವಾಗಿ ನಿರಾಕರಿಸಿದ್ದರು. ಅವರ ಈ ನಿರಾಕರಣೆಗೆ ಅವರು ಶಬ್ದ-ಪ್ರಾಮಾಣ್ಯ (Verbal Testimony)ವನ್ನು ಅತ್ಯಂತ ಸೀಮಿತ ಅರ್ಥದಲ್ಲಿ ಮತ್ತು ವ್ಯಾಪ್ತಿಯಲ್ಲಿ ಮಾತ್ರ ಒಪ್ಪಿಕೊಳ್ಳುತ್ತಿದ್ದುದು, ವೇದೋಪನಿಷತ್ತುಗಳ ಅಪೌರುಷೇಯತ್ವವನ್ನೇ ಅವರು ಮೂಲಭೂತವಾಗಿ ಪ್ರಶ್ನಿಸುತ್ತಿದ್ದುದು ಹಾಗೂ ಅವರು ಮುಕ್ತ ವಿಚಾರಧಾರೆಯ ಪುರಸ್ಕರ್ತರಾಗಿದ್ದುದು ಮುಖ್ಯ ಕಾರಣಗಳಾಗಿದ್ದವು.

**ಶಬ್ದ–ಪ್ರಾಮಾಣ್ಯ**

ಭಾರತದ ಆಸ್ತಿಕ ದರ್ಶನ (ವೇದಪ್ರಾಮಾಣ್ಯವನ್ನು ಒಪ್ಪುವ ದರ್ಶನ) ಗಳಿಗೆಲ್ಲ ಹಾಗೂ ಬೌದ್ಧ ಮತ್ತು ಜೈನ ಈ ನಾಸ್ತಿಕ (ವೇದಪ್ರಾಮಾಣ್ಯವನ್ನು ಒಪ್ಪದಿರುವ) ದರ್ಶನಗಳಿಗೆ ಕೂಡ ಮಾನ್ಯವಾಗಿರುವ ಶಬ್ದ-ಪ್ರಾಮಾಣ್ಯ (The Evidence of Verbal Testimony) ವನ್ನು ಕುರಿತು ಚಾರ್ವಾಕರ ಅಭಿಪ್ರಾಯ ಹೀಗಿದೆ: ನಾವು ನೇರವಾಗಿ, ಎಂದರೆ

ಪ್ರತ್ಯಕ್ಷವಾಗಿ ಕೇಳುವ 'ಶಬ್ದ'ವು ನಾವು ಕೇಳಿದ್ದಷ್ಟರ ಮಟ್ಟಿಗೆ ಮಾತ್ರ ನಂಬಲರ್ಹವಾದ ಪ್ರಮಾಣವಾಗಬಹುದು. ಆದರೆ ಆ ಮಟ್ಟಿಗೆ 'ಶಬ್ದ'ವು ಕೂಡ 'ಪ್ರತ್ಯಕ್ಷ-ಜ್ಞಾನ' (Perceptual knowledge) ಎಂದೇ ಅನಿಸುವುದು. ಆದರೆ ನಾವು ಕೇಳುವ ಶಬ್ದವು ನಾವು ಕೇಳದ್ದನ್ನು ಮತ್ತು ಕಾಣದ್ದನ್ನು ಕುರಿತು ಹೇಳಿದರೆ (ಉದಾ : ವೇದಾದಿ ಶ್ರುತಿಗಳು ಹೇಳುವಂತೆ) ಆಗ ಅದು ಸಂಪೂರ್ಣವಾಗಿ ವಿಶ್ವಸನೀಯವಾದ ಪ್ರಮಾಣವೆಂದೆನಿಸಲಾರದು.

**ಶ್ರುತಿ-ಪ್ರಾಮಾಣ್ಯ :**

ಅನೇಕರು ವೇದಾದಿ ಶ್ರುತಿ ವಾಕ್ಯಗಳನ್ನು ಪ್ರಮಾಣವೆಂದು ಶ್ರದ್ಧಾಪೂರ್ವಕವಾಗಿ ತಿಳಿಯುತ್ತಾರೆ. ಆದರೆ ನಿಜವಾಗಿ ನೋಡಿದರೆ, ವೇದಾದಿ ಶ್ರುತಿಗ್ರಂಥಗಳು ಅಜ್ಞ ಮತ್ತು ಮುಗ್ಧ ಜನರನ್ನು ನಂಬಿಸಿ, ವಂಚಿಸಿ ಅವರಿಂದ ದುಡ್ಡು ಸೆಳೆಯುವಂಥ ಕೆಲವು ಧೂರ್ತ ಪುರೋಹಿತವರ್ಗದ ಜನರ ಕೃತಿಗಳಾಗಿವೆ, ಅಷ್ಟೇ. ನಿಜವಾಗಿ ನೋಡಿದರೆ, ವೈದಿಕ ಕರ್ಮಾಚರಣೆಯಿಂದ ನಮಗೆ ಸ್ವರ್ಗಪ್ರಾಪ್ತಿ ಮುಂತಾದ ಯಾವ ಲಾಭವೂ ಇಲ್ಲ. ಅವುಗಳಿಂದ ಆಗುವ ಲಾಭ ಪುರೋಹಿತರುಗಳಿಗೆ ಮಾತ್ರ—ದಾನ ದಕ್ಷಿಣೆಗಳ ರೂಪದಲ್ಲಿ.

**ಚಾರ್ವಾಕರ ಅಸ್ತಿತ್ವತತ್ವ ಸಿದ್ಧಾಂತ (Ontology) :**

ಚಾರ್ವಾಕರ ಅಸ್ತಿತ್ವತತ್ವ ಸಿದ್ಧಾಂತ (Ontology)ವು ಭೌತವಾದ (Materialism)ವಾಗಿತ್ತು[2]. ಆದರೆ ಪಂಚ ಮಹಾಭೂತಗಳ ಪೈಕಿ ಚಾರ್ವಾಕರು ಪೃಥ್ವಿ, ಅಗ್ನಿ, ಜಲ ಮತ್ತು ವಾಯು ಈ ನಾಲ್ಕನ್ನು ಮಾತ್ರ ಒಪ್ಪಿಕೊಂಡಿದ್ದರು. ಐದನೆಯದಾದ 'ಆಕಾಶ'ವು ಪ್ರತ್ಯಕ್ಷ-ಗೋಚರವಲ್ಲವೆಂದು ಚಾರ್ವಾಕರು ಅದರ ಅಸ್ತಿತ್ವವನ್ನು ಒಪ್ಪಿಕೊಂಡಿರಲಿಲ್ಲ. ತಾವು ಒಪ್ಪಿಕೊಂಡ ಈ ಚತುರ್ಮಹಾಭೂತಗಳಿಂದಲೇ ಪ್ರಪಂಚದ ಸಮಸ್ತವಸ್ತುಗಳು ಮತ್ತು ಸಮಸ್ತಜೀವಿಗಳು ಉಂಟಾಗಿರುತ್ತವೆಂದು ಅವರು ತಿಳಿದಿದ್ದರು.

**ಆತ್ಮ :** ದೇಹದಿಂದ ಭಿನ್ನವಾಗಿರಬಹುದಾದಂಥ, ವಿಭಿನ್ನದೇಹಗಳನ್ನು ಜನ್ಮಾಂತರಗಳಲ್ಲಿ ಧಾರಣ ಮಾಡಬಹುದಾದಂಥ, ಇಂದ್ರಿಯ ಗೋಚರವಾಗದಷ್ಟು ಸೂಕ್ಷ್ಮವಾದಂಥ, ಹುಟ್ಟು-ಸಾವುಗಳು ಇಲ್ಲದೆ ಅಮರವಾದಂಥ ಮತ್ತು ಅಭೌತಿಕವಾದಂಥ ಶುದ್ಧ ಚೈತನ್ಯ ಅಥವಾ ಪ್ರಜ್ಞಾ-ಸ್ವರೂಪದ 'ಆತ್ಮ' ಎಂಬ ವಸ್ತುವು ಇಲ್ಲ ಎನ್ನುವುದು ಖಟ್ಟಾ ಭೌತವಾದಿಗಳಾಗಿದ್ದ ಚಾರ್ವಾಕರ ಖಚಿತವಾದ ಅಭಿಪ್ರಾಯವಾಗಿತ್ತು. ವೇದ ವೇದಾಂತ ಮುಂತಾದ ಆಧ್ಯಾತ್ಮಗ್ರಂಥಗಳು ಯಾವುದನ್ನು 'ಆತ್ಮ' ಎಂದು ಕರೆಯುವುವೋ ಅದು 'ಚೈತನ್ಯವಿಶಿಷ್ಟವಾದ ದೇಹ'ವೇ ವಿನಾ ಬೇರೇನೂ ಅಲ್ಲ ಅನ್ನುವುದು ಅವರ ವಾದವಾಗಿತ್ತು. ಚಾರ್ವಾಕರು ಪ್ರಜ್ಞೆಯ ಅಥವಾ ಚೈತನ್ಯ (Consciousness)ದ ಅಸ್ತಿತ್ವವನ್ನು ಒಪ್ಪುತ್ತಿದ್ದರು. [ಈ ಬಾಬತ್ತಿನಲ್ಲಿ ಚಾರ್ವಾಕರ ಸಿದ್ಧಾಂತವು ವ್ಯಾಟ್ಸನ್, ಪಾವ್ಲೋವ್ ಮುಂತಾದ ಆಧುನಿಕ ಕಾಲದ ಶೀಘ್ರಗಾಮಿ ಚರ್ಯಾಮೂಲತತ್ವವಾದಿಗಳ (Radical Behaviourists) ಸಿದ್ಧಾಂತಕ್ಕಿಂತ ಭಿನ್ನವಾಗಿತ್ತು]; ಯಾಕೆಂದರೆ ಚೈತನ್ಯ ಅಥವಾ ಪ್ರಜ್ಞೆಯು ಪ್ರತ್ಯಕ್ಷ ಇಂದ್ರಿಯಾನುಭವವೇದ್ಯವಾದಂಥದು. ಆದರೆ ಈ ಚೈತನ್ಯ ಅಥವಾ ಪ್ರಜ್ಞೆಯು 'ಆತ್ಮ' ಎಂಬ ಯಾವುದೇ ಅಗೋಚರವಾದ ಅಭೌತಿಕ ವಸ್ತುವಿನ ಗುಣವಿಶೇಷ ಅನ್ನುವುದನ್ನು ಮಾತ್ರ ಚಾರ್ವಾಕರು ಒಪ್ಪುತ್ತಿರಲಿಲ್ಲ. ಈ ವಿಷಯದಲ್ಲಿ ಚಾರ್ವಾಕರ ವಾದವು ಸ್ಥೂಲವಾಗಿ ಹೀಗಿತ್ತು : ಚೈತನ್ಯ ಅಥವಾ ಪ್ರಜ್ಞೆಯು ಭೌತಿಕ ಶರೀರದಲ್ಲಿ ವಾಸವಾಗಿರುವುದನ್ನು ನಾವು ಕಾಣುತ್ತೇವಾದ್ದರಿಂದ ಅದು ಆ ಶರೀರದ ಗುಣಲಕ್ಷಣವೇ ಆಗಿರಬೇಕು. ಜನರು, ಅದರಲ್ಲೂ ವೇದಾಂತಿಗಳು, 'ಆತ್ಮ' ಎಂದು ಭ್ರಮಿಸುವುದು ಈ ಚೈತನ್ಯವಿಶಿಷ್ಟವಾದ ಶರೀರವನ್ನೇ. ಅಭೌತಿಕವಾದ 'ಆತ್ಮ' ಎಂಬ ವಸ್ತುವನ್ನು ಯಾರೂ ಎಂದೂ ಕಂಡರಿಯರು. ತದ್ವಿರುದ್ಧವಾಗಿ, ನಾವು 'ನಾನು ದಪ್ಪಗಿದ್ದೇನೆ', 'ನಾನು ಕುಂಟನಿದ್ದೇನೆ', 'ನಾನು ಕುರುಡನಿದ್ದೇನೆ' ಇತ್ಯಾದಿಗಳಂಥ ನಮ್ಮ ಅನೇಕ ದಿನನಿತ್ಯದ ಅನುಭವಗಳಲ್ಲಿ ಮತ್ತು ಹೇಳಿಕೆಗಳಲ್ಲಿ ಆತ್ಮ-ಶರೀರಗಳ ಅಭಿನ್ನತೆಯನ್ನು[3] ಪ್ರತ್ಯಕ್ಷವಾಗಿ

---

2. ಜಯರಾಶಿ ಭಟ್ಟನ 'ತತ್ತ್ವೋಪಪ್ಲವ ಸಿಂಹ'ವು ಚಾರ್ವಾಕ ಸಿದ್ಧಾಂತದ ಪ್ರಮುಖ ಗ್ರಂಥಗಳಲ್ಲೊಂದೆಂದು ಪರಿಗಣಿತವಾಗಿದೆ (ನೋಡಿ : A source book in Indian Philosophy, ed. S. Radhakrishnan & C. A. Moore Princeton University Press, 1960, P. 228) ಆದರೆ ಇತ್ತೀಚೆಗೆ ವಾಲ್ಟರ್ ರೂಬೆನ್ ಮತ್ತು ಡೇಲ್ ರೈಪೆ ಮುಂತಾದ ಪಾಶ್ಚಾತ್ಯ ವಿದ್ವಾಂಸರು ನಡೆಸಿದ ಸಂಶೋಧನೆಯಿಂದ ಜಯರಾಶಿ ಭಟ್ಟನು ಭೌತವಾದಿಯಾಗಿರದೆ ಕೇವಲ ಸ್ವಭಾವವಾದಿ ಇಲ್ಲವೆ ಅಜ್ಞೇಯವಾದಿ (Agnostic) ಯಾಗಿದ್ದನೆಂದು ತಿಳಿದುಬಂದಿದೆ. ಆದ್ದರಿಂದ ಜಯರಾಶಿ ಭಟ್ಟನನ್ನು ನಾವು ಅಸ್ತಿತ್ವತತ್ವ ಸಿದ್ಧಾಂತದಲ್ಲಿ ಚಾರ್ವಾಕನೆಂದು ಪರಿಗಣಿಸದೆ ಕೇವಲ ಪ್ರಮಾಣ ಸಿದ್ಧಾಂತ (Epistemology)ದ ಮಟ್ಟಿಗೆ ಚಾರ್ವಾಕನೆಂದು ಪರಿಗಣಿಸಬೇಕು.

3. ಈ ವಿಷಯದಲ್ಲಿ ಉಪನಿಷತ್ತುಗಳು, ವೇದಾಂತಸೂತ್ರಗಳು ಮತ್ತು ಭಾಷ್ಯಗ್ರಂಥಗಳು ಇವುಗಳಲ್ಲಿ ಬರುವ, ಇಲ್ಲಿನ ಸಿದ್ಧಾಂತಕ್ಕೆ ವಿರುದ್ಧವಾದ ಆತ್ಮ-ಶರೀರ-ಭಿನ್ನತಾಪರ ವಾದಗಳನ್ನು ಮತ್ತು ವಿವರಣೆಗಳನ್ನು ನೋಡಬಹುದು.

ಕಂಡುಕೊಳ್ಳುತ್ತೇವೆ. 'ಆತ್ಮ' ಎನ್ನುವುದು ಶರೀರದಿಂದ ಭಿನ್ನವಾದ ಬೇರೊಂದು ವಸ್ತುವಾಗಿದ್ದರೆ ಈ ಮೇಲಿನ ಹೇಳಿಕೆಗಳೆಲ್ಲ ಅರ್ಥಹೀನವೆಂದೆನಿಸುತ್ತವೆ.

ನೆಲ, ನೀರು, ಬೆಂಕಿ ಮತ್ತು ಗಾಳಿ ಈ ನಾಲ್ಕು ಮೂಲಭೂತವಾದ ವಸ್ತುಗಳಾವುದರಲ್ಲೂ ಸಮಗೆ ಕಂಡುಬರದ 'ಚೈತನ್ಯ' ಅಥವಾ 'ಪ್ರಜ್ಞೆ' ಎಂಬ ಗುಣವು ಆ ನಾಲ್ಕು ವಸ್ತುಗಳಿಂದ ಉಂಟಾದ ಶರೀರದಲ್ಲಿ ಹೇಗೆ ವ್ಯಕ್ತವಾಗುವುದು ಎಂಬ ಪ್ರಶ್ನೆಗೆ ಚಾರ್ವಾಕರು 'ವೀಳ್ಯದೆಲೆ, ಸುಣ್ಣ ಮತ್ತು ಅಡಿಕೆ ಈ ಮೂಲ ವಸ್ತುಗಳಲ್ಲೊಂದರಲ್ಲೂ ಕಂಡುಬರದ ಕೆಂಪು ಬಣ್ಣವು ಆ ಎಲ್ಲ ವಸ್ತುಗಳನ್ನೂ ನಾವು ಬಾಯಿಯಲ್ಲಿ ಒಂದುಗೂಡಿಸಿ ಜಗಿಯುವಾಗ ಹೇಗೆ ಉತ್ಪನ್ನವಾಗುವುದೋ ಹಾಗೆ' ಎಂದು ಉತ್ತರಿಸುತ್ತಾರೆ. ಹೀಗೆ ಚಾರ್ವಾಕ ಮತದ ಪ್ರಕಾರ ಚೈತನ್ಯ ಅಥವಾ ಪ್ರಜ್ಞೆಯು ಭೂತ-ಪದಾರ್ಥಗಳ ವಿಶಿಷ್ಟ ಪ್ರಕಾರದ ಸಂಯೋಜನೆಯ ಒಂದು ಪರಿಣಾಮ ಇಲ್ಲವೇ ಉಪ-ಪರಿಣಾಮ ಮಾತ್ರವಾಗಿರುತ್ತದೆ. ಶರೀರವನ್ನು ಬಿಟ್ಟು ಹೊರಗೆ ಚೈತನ್ಯಕ್ಕೆ, ಅಥವಾ ಪ್ರಜ್ಞೆಗೆ, ಅಥವಾ ಆತ್ಮಕ್ಕೆ ಸ್ವತಂತ್ರವಾದ ಅಸ್ತಿತ್ವವಿದೆ ಅನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಆದಕಾರಣ ಆ ಚೈತನ್ಯವು ಅಥವಾ ಆತ್ಮವು ಅಮರವಾಗಿದೆ ಎಂದು ತಿಳಿಯುವುದಕ್ಕೆ ಕೂಡ ಯಾವ ಆಧಾರವೂ ಇಲ್ಲ. ಆದ್ದರಿಂದ ಒಬ್ಬ ಜೀವಿಯ ಸಾವಿನೊಂದಿಗೆ ಆ ಜೀವಿಯ ಸಮಸ್ತ ಅಸ್ತಿತ್ವವೂ ಅಳಿಯುತ್ತದೆ. ಹೀಗಾಗಿ ಪುನರ್ಜನ್ಮ ಮತ್ತು ಸ್ವರ್ಗ, ನರಕ ಹಾಗೂ ಮರುಜನ್ಮಗಳಲ್ಲಿ ನಮ್ಮ ಕರ್ಮಫಲದ ಅನುಭೋಗ ಮುಂತಾದ ಕಲ್ಪನೆಗಳೆಲ್ಲ ಅರ್ಥಹೀನವಾದಂತಾಗಿರುತ್ತವೆ.

**ದೇವರು ಮತ್ತು ಸೃಷ್ಟಿ :**

'ಆತ್ಮ'ದಂತೆಯೇ 'ದೇವರು' ಕೂಡ ಇಂದ್ರಿಯಗೋಚರನಲ್ಲವಾದ್ದರಿಂದ ದೇವರ ಅಸ್ತಿತ್ವವು ಕೂಡ ಒಂದು ಸುಳ್ಳು ಕಲ್ಪನೆಯೇ ಆಗಿರುತ್ತದೆ. ಚತುರ್ವಿಧವಾದ ಭೂತ-ದ್ರವ್ಯಗಳು ತಮ್ಮ ಸ್ವಾಭಾವಿಕವಾದ ಗುಣವಿಶೇಷಗಳಿಂದ ಸಮಸ್ತ ಜಗತ್ತನ್ನು ತಮ್ಮಷ್ಟಕ್ಕೆ ತಾವೇ ಸೃಷ್ಟಿಸುತ್ತವೆ (ಸ್ವಭಾವವಾದ). ಈ ಸೃಷ್ಟಿಕ್ರಿಯೆಗೆ 'ದೇವರು' ಎಂಬ ಸೃಷ್ಟಿಕರ್ತನ ಅವಶ್ಯಕತೆಯಿಲ್ಲ.

**ಸೃಷ್ಟಿಯ ಉದ್ದೇಶರಾಹಿತ್ಯ :**

ಈ ವಿಶ್ವವು ಯಾವುದೇ ಉದ್ದೇಶಸಾಧನೆಗೋಸ್ಕರ ಯಾರಿಂದಲೇ ಆಗಲಿ ಸೃಷ್ಟವಾಯಿತು ಎಂದು ಭಾವಿಸುವುದಕ್ಕೆ ಯಾವ ಆಧಾರವೂ ಇಲ್ಲ. ಆದ್ದರಿಂದ ಈ ವಿಶ್ವಸೃಷ್ಟಿಗೆ ಯಾವುದೇ 'ಯೋಜನೆ' ಎಂಬುದಾಗಲಿ ಅಥವಾ ಯಾವನೇ 'ಯೋಜಕ'ನೆಂಬುವನಾಗಲಿ ಇಲ್ಲ. ಹೀಗಾಗಿ 'ದೇವರು' ಎಂದು ಕರೆಯಲ್ಪಡುವವನು ಇಲ್ಲ.

**ಚಾರ್ವಾಕರ ನೀತಿಸಿದ್ಧಾಂತ (Ethics)**

ಚಾರ್ವಾಕರ ನೀತಿ-ಸಿದ್ಧಾಂತವು ಸುಖ-ತತ್ವ(Pleasure-principle)ವನ್ನು ಆಧರಿಸಿದಂಥದಾಗಿರುತ್ತದೆ. ಜೀವನವು ಸುಖ-ದುಃಖಗಳೆರಡರ ಮಿಶ್ರಣವಾಗಿದೆ, ಆದ್ದರಿಂದ ನಾವು ಜೀವನದಲ್ಲಿನ ಸುಖವನ್ನು ಸಾಧ್ಯವಾದಷ್ಟೂ ಹೆಚ್ಚಿಸಿ, ದುಃಖವನ್ನು ಸಾಧ್ಯವಾದಷ್ಟೂ ಕಡಿಮೆ ಮಾಡುವುದೇ ಜಾಣತನವೆಂದು ಚಾರ್ವಾಕರ ಅಭಿಮತ. ಬೌದ್ಧ-ಜೈನ ಮತದವರಿಗಿದ್ದಂತೆ, ಅಥವಾ ನ್ಯಾಯ ಮತ್ತು ಸಾಂಖ್ಯ ಸಿದ್ಧಾಂತಿಗಳಿಗಿದ್ದಂತೆ, ಜೀವನದಲ್ಲಿನ ದುಃಖದಿಂದ ಸಂಪೂರ್ಣವಾಗಿ ಮುಕ್ತವಾದ 'ಕೈವಲ್ಯ' ಅಥವಾ 'ಅಪವರ್ಗ' ಎಂಬ ಆತ್ಯಂತಿಕವಾದ ಮುಕ್ತಿ-ಸ್ಥಿತಿಯ ಅಸ್ತಿತ್ವದಲ್ಲಿ ಚಾರ್ವಾಕರಿಗೆ ವಿಶ್ವಾಸವಿರಲಿಲ್ಲ. ಅಂಥ ಸುಖ-ದುಃಖಮುಕ್ತವಾದ 'ಮುಕ್ತಿ-ಸ್ಥಿತಿ' ಎಂದರೆ ಮರಣವೇ ಸೈ [ ಮರಣಮೇವ ಅಪವರ್ಗಃ (ಬೃಹಸ್ಪತಿ ಸೂತ್ರ)] ಎಂಬುದು ಅವರ ಅಭಿಪ್ರಾಯವಾಗಿತ್ತು. ಈ ಜೀವನದಲ್ಲಿ ಸುಖವು ಯಾವಾಗಲೂ ದುಃಖಮಿಶ್ರಿತವಾಗಿರುತ್ತದಾದ್ದರಿಂದ ನಾವು ಸುಖಪ್ರಾಪ್ತಿಗೆಳಸದೆ ನಮ್ಮ ಆಶೆ-ಆಕಾಂಕ್ಷೆಗಳನ್ನೆಲ್ಲ ಕಠೋರವಾಗಿ ದಮನಮಾಡಿಕೊಂಡು, ನಿವೃತ್ತಿಮಾರ್ಗವನ್ನನುಸರಿಸಿ, ಸುಖ-ದುಃಖಗಳೆರಡರಿಂದಲೂ ಮುಕ್ತವಾದ 'ಮುಕ್ತಿ-ಸ್ಥಿತಿ'ಯ ಅನುಸಂಧಾನ ಮಾಡಬೇಕೆಂದು ಹೇಳುವವರೆಲ್ಲ ಮೂರ್ಖರು ಎಂದು ಚಾರ್ವಾಕರು ಅನ್ನುತ್ತಿದ್ದರು. ಅಂಥ ನಿವೃತ್ತಿಮಾರ್ಗಗಳನ್ನು ಟೀಕಿಸುತ್ತ ಅವರು 'ಹಣ್ಣಿಗೆ ಹೊರಗೆ ಸಿಪ್ಪೆ ಇದೆಯೆಂಬುದಕ್ಕಾಗಿ ಅದರೊಳಗಿನ ತಿರುಳನ್ನು ಯಾರಾದರೂ ಬಿಸುಟುವರೇ ? ಹಾಗೆಯೇ ಜೀವನದಲ್ಲಿ ದುಃಖವಿದೆ ಎಂಬುದಕ್ಕಾಗಿ ಅದರಲ್ಲಿನ ಸುಖವನ್ನು ಯಾರಾದರೂ ತ್ಯಜಿಸುವರೇ?' ಎಂದು ಕೇಳುತ್ತಿದ್ದರು. ಅವರ ಅಭಿಪ್ರಾಯದಲ್ಲಿ ಜೀವನದ ಪರಮೋದ್ದೇಶವು ಇಡೀ ಜೀವನದಲ್ಲಿ ಪರಮಾವಧಿ ಸುಖವನ್ನು ಅನುಭವಿಸುವುದೇ ಆಗಿದ್ದಿತು. 'ಯಾವಜ್ಜೀವೇತ್, ಸುಖಂಜೀವೇತ್' ಅನ್ನುವುದೇ ಚಾರ್ವಾಕ ನೀತಿಯ ಮೂಲ ಮಂತ್ರವಾಗಿದ್ದಿತು. ಚಾರ್ವಾಕರ ಈ ನೀತಿಸಿದ್ಧಾಂತವನ್ನು ಟೀಕಿಸುತ್ತ ದಿವಂಗತ ಪ್ರೊಫೆಸರ್ ಎಂ. ಹಿರಿಯಣ್ಣನವರು ತಮ್ಮ 'Outlines of Indian Philosophy' ಎಂಬ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ: 'The Carvaka is so impatient of obtaining pleasure that he does not even try to secure freedom from pain. He makes a compromise with evil, instead of overcoming it.'[4] ಆದರೆ ನನ್ನ ಅಭಿಪ್ರಾಯದಲ್ಲಿ ಪ್ರೊ. ಹಿರಿಯಣ್ಣನವರ ಈ ಟೀಕೆಯು ಸರಿಯಾದುದಲ್ಲ. ಯಾಕೆಂದರೆ, ಮೊದಲನೆಯ

4. M. Hiriyanna: Outlines of Indian Philosophy (George Allen & Unwin Ltd; London), 1970, P.194

ದಾಗಿ, ದುಃಖದಿಂದ ಸಂಪೂರ್ಣವಾಗಿ ಮುಕ್ತವಾದ ಜೀವನಾವಸ್ಥೆಯ, ಇಲ್ಲವೇ ಜೀವನೋತ್ತರಾವಸ್ಥೆಯ, ಅಸ್ತಿತ್ವದಲ್ಲಿ ಚಾರ್ವಾಕರಿಗೆ ನಂಬಿಗೆಯಿರಲಿಲ್ಲ. ಹೀಗಾಗಿ ಅವರು, ತಮ್ಮ ಸಿದ್ಧಾಂತಕ್ಕನುಗುಣವಾಗಿ, ಈ ಜೀವನದ ದುಃಖಸಮ್ಮಿಶ್ರವಾದ ಸುಖದ ಪ್ರಾಪ್ತಿಗೋಸ್ಕರವಷ್ಟೇ ಪ್ರಯತ್ನಿಸಬೇಕಾಗಿತ್ತು. ಎರಡನೆಯದಾಗಿ, ಸುಖವನ್ನು ದುಃಖದಿಂದ ಎಳ್ಳಷ್ಟೂ ಬೇರ್ಪಡಿಸಲೆತ್ನಿಸದೆಯೇ ಹಾಗೆಯೇ ಅನುಭವಿಸಬೇಕು ಎಂದೇನು ಚಾರ್ವಾಕರು ಹೇಳಿರಲಿಲ್ಲ. ಅವರು ಹೇಳಿದ್ದು 'ದುಃಖದಿಂದ ಸಂಪೂರ್ಣವಾಗಿ, ಇಲ್ಲವೇ ಆತ್ಯಂತಿಕವಾಗಿ, ಮುಕ್ತವಾದ ಸುಖ' ಎಂಬ ಸ್ಥಿತಿಯು ಅಥವಾ ಅವಸ್ಥೆಯು ಈ ಲೋಕದಲ್ಲಿ ಅಥವಾ ಬೇರೆ ಲೋಕದಲ್ಲಿ (ಬೇರೆ ಲೋಕವೇ ಇಲ್ಲವಾದ್ದರಿಂದ) ಇಲ್ಲ ಎಂದು ಮಾತ್ರ. ಆದ್ದರಿಂದ, ಮೇಲಿನ ಉದ್ಧರಣೆಯಲ್ಲಿ ಪ್ರೊ. ಹಿರಿಯಣ್ಣನವರು ಹೇಳುವಂತೆ, ಜೀವನದಲ್ಲಿನ 'ದುಃಖ'ವೆಂಬ ಅನಿಷ್ಟ (Evil) ವನ್ನು ನಿವಾರಿಸುವ-ಅರ್ಥಾತ್ ಸಂಪೂರ್ಣವಾಗಿ, ಇಲ್ಲವೇ ಆತ್ಯಂತಿಕವಾಗಿ, ನಿವಾರಿಸುವ—ಪ್ರಶ್ನೆಯೇ ಚಾರ್ವಾಕಮತದ ಪ್ರಕಾರ ಉದ್ಭವಿಸುವುದಿಲ್ಲ ಎಂದು ಹೇಳಬಹುದು. ಆದರೆ ಈ ಕಾರಣದಿಂದಾಗಿ ಚಾರ್ವಾಕರು ಅನಿಷ್ಟ (Evil) ದೊಂದಿಗೆ ರಾಜಿ (compromise) ಮಾಡಿಕೊಳ್ಳುತ್ತಾರೆ ಎಂದು ಭಾವಿಸುವುದು (ಪ್ರೊ. ಹಿರಿಯಣ್ಣನವರು ಭಾವಿಸಿದಂತೆ) ಸರಿಯಲ್ಲ. ಹೇಕೆಂದರೆ 'That which can not be cured, must be endured' ಎಂಬ ನಾಣ್ಣುಡಿಯಂತೆ, ಚಾರ್ವಾಕರು ಜೀವನದಲ್ಲಿ 'ದುಃಖ' ಅಥವಾ 'ಅನಿಷ್ಟ'ವು ಅನಿವಾರ್ಯವೆಂದು ತಿಳಿದಿದ್ದರಾದ್ದರಿಂದ ಅದನ್ನು ನಾವು ಸಹಿಸಿಕೊಂಡೇ ಅಥವಾ ತಾಳಿಕೊಂಡೇ ಜೀವನದಲ್ಲಿನ ಸುಖವನ್ನು ಉಪಭೋಗಿಸಬೇಕು ಎಂಬ ಅಭಿಪ್ರಾಯದವರಾಗಿದ್ದರು ಎಂದು ಮಾತ್ರ ನಾವು ಭಾವಿಸಬಹುದು. ಮೇಲಾಗಿ ಈ ಜೀವನದಲ್ಲಿನ ದುಃಖದ ಅಥವಾ ಅನಿಷ್ಟದ ಪ್ರಮಾಣವನ್ನು ಕಡಿಮೆಮಾಡಲು ನಾವು ಪ್ರಯತ್ನಿಸಬಾರದು ಎಂದೇನೂ ಚಾರ್ವಾಕರು ಹೇಳಿಲ್ಲ; ತದ್ವಿರುದ್ಧವಾಗಿ, ಅದರ ಪ್ರಮಾಣವನ್ನು ಕಡಿಮೆಮಾಡಲು ನಾವು ಪ್ರಯತ್ನಿಸಬೇಕು–ಕರ್ಮಸಿದ್ಧಾಂತ ಮುಂತಾದ ಯಾವುದೇ ಅಂಧಶ್ರದ್ಧೆಗಳಿಂದ ಬಾಧಿತರಾಗದೇ ಪ್ರಯತ್ನಿಸಬೇಕು–ಅನ್ನುವುದೇ ಚಾರ್ವಾಕರ ನೀತಿತತ್ತ್ವದ ಮುಖ್ಯ ಪಾಠವಾಗಿದ್ದಿತು.

**ಚಾರ್ವಾಕರು ಮತ್ತು ಪುರುಷಾರ್ಥಗಳು :**

ನಮ್ಮಲ್ಲಿ ಸಾಂಪ್ರದಾಯಿಕವಾಗಿ ಸ್ವೀಕೃತವಾದ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧಪುರುಷಾರ್ಥಗಳ ಪೈಕಿ ಚಾರ್ವಾಕರು ಅರ್ಥ ಮತ್ತು ಕಾಮ ಇವೆರಡನ್ನು ಒಪ್ಪಿಕೊಂಡಿದ್ದರು ಹಾಗೂ ಮೋಕ್ಷವನ್ನು ಸ್ಪಷ್ಟವಾಗಿ ಅಲ್ಲಗಳೆದಿದ್ದರು. ಇನ್ನು ಮೊದಲನೆಯದಾದ 'ಧರ್ಮ'ವನ್ನು ಕೂಡ ಚಾರ್ವಾಕರು ಅಲ್ಲಗಳೆದಿದ್ದರು ಎನ್ನುವುದು ಅನೇಕರ ಅಭಿಪ್ರಾಯವಾಗಿದೆ. 'ಸಾಂಪ್ರದಾಯಿಕವಾದ ಧರ್ಮ'ದ ನಿಯಮ-ನಿಬಂಧನೆಗಳನ್ನು ಚಾರ್ವಾಕರು ಮನ್ನಿಸಿದ್ದಿಲ್ಲವೆನ್ನುವುದೇನೋ ನಿಜ. ಆದರೆ 'ಧರ್ಮ' ಎಂದರೆ ಕೇವಲ ಮತ-ಧರ್ಮ (ಹಿಂದೂ, ಬೌದ್ಧ, ಜೈನ, ಮುಸ್ಲಿಮ್, ಕ್ರಿಶ್ಚನ್ ಇತ್ಯಾದಿ) ಎಂದಾಗಲಿ, ಅಥವಾ ಕೇವಲ ಸಂಪ್ರದಾಯ-ಧರ್ಮ (ವೈದಿಕ ಧರ್ಮ, ವರ್ಣಾಶ್ರಮಧರ್ಮ ಇತ್ಯಾದಿ) ಎಂದಾಗಲಿ ನಾವು ತಿಳಿಯುವ ಕಾರಣವಿಲ್ಲ. ಯಾಕೆಂದರೆ 'ಧರ್ಮ' ಶಬ್ದದ ಅರ್ಥವು ಇನ್ನೂ ಬಹಳೇ ವ್ಯಾಪಕವಾದಂಥದೂ, ಮೂಲಭೂತವಾದಂಥದೂ, ಸಂಕೀರ್ಣವಾದಂಥದೂ, ಸಂದಿಗ್ಧವಾದಂಥದೂ ಆಗಿದೆ. ಅದು 'ಸಮಾಜ-ಧರ್ಮ', 'ನೀತಿ'. ವಸ್ತುಗಳ ಮತ್ತು ವ್ಯಕ್ತಿಗಳ 'ಗುಣ ಧರ್ಮ' ಮತ್ತು 'ಸ್ವಭಾವ-ಧರ್ಮ' ಮುಂತಾದ ಹೆಚ್ಚು ವ್ಯಾಪಕವಾದ ಹಾಗೂ ಮೂಲಭೂತವಾದ ಅರ್ಥಗಳನ್ನು ಕೂಡ ಒಳಗೊಳ್ಳುವಂಥದು. ಈ ಹೆಚ್ಚು ವ್ಯಾಪಕವಾದ ಮತ್ತು ಮೂಲಭೂತವಾದ ಅರ್ಥದಲ್ಲಿ 'ಧರ್ಮ'ವನ್ನು ಚಾರ್ವಾಕರು ಒಂದು ರೀತಿಯಲ್ಲಿ ಒಪ್ಪಿಕೊಂಡಿದ್ದರು ಎಂದೇ ಹೇಳಬೇಕು. ಯಾಕೆಂದರೆ, ಸುಖತತ್ತ್ವೋಪಾಸಕರಾದ ಅವರು ಜೀವನದಲ್ಲಿಯ ಸುಖದ ಪ್ರಮಾಣವನ್ನು ಹೆಚ್ಚಿಸುವುದು ಮತ್ತು ದುಃಖದ ಪ್ರಮಾಣವನ್ನು ಕಡಿಮೆಮಾಡುವುದು ಎಲ್ಲ ಮಾನವರ 'ಕರ್ತವ್ಯ' ಅಥವಾ 'ಧರ್ಮ' ಎಂದೇ ಭಾವಿಸಿದ್ದರು. ಮತ್ತು ಈ 'ಕರ್ತವ್ಯ'ವನ್ನು ಅಥವಾ 'ಧರ್ಮ'ವನ್ನು ಪಾಲಿಸಲು ಎಲ್ಲರೂ ತಂತಮ್ಮ ಸ್ವಾಭಾವಿಕ ಪ್ರವೃತ್ತಿಗಳನ್ನು ಮತ್ತು ಆಶೆ--ಆಕಾಂಕ್ಷೆಗಳನ್ನು ಸ್ವಲ್ಪಲ್ಲ–ಸ್ವಲ್ಪವಾದರೂ ನಿಯಂತ್ರಿಸಿಕೊಳ್ಳಬೇಕಾಗುತ್ತದೆಂಬುದನ್ನು ಧೂರ್ತ–ಚಾರ್ವಾಕರಲ್ಲದಿದ್ದರೂ[5] ಶಿಷ್ಟ ಅಥವಾ ಸುಶಿಕ್ಷಿತ ಚಾರ್ವಾಕರು ಒಪ್ಪಿಕೊಂಡಿದ್ದರು. 'ಕಾಮಸೂತ್ರ'ದ

---

5. ಚಾರ್ವಾಕರಲ್ಲಿ 'ಧೂರ್ತ' ಮತ್ತು 'ಶಿಷ್ಟ ಅಥವಾ ಸುಶಿಕ್ಷಿತ' ಎಂಬ ಎರಡು ಪ್ರಕಾರದ ದಾರ್ಶನಿಕರು ಸಾಂಪ್ರದಾಯಿಕವಾಗಿ ಗುರುತಿಸಲ್ಪಟ್ಟಿದ್ದಾರೆ. ಧೂರ್ತಚಾರ್ವಾಕರು, ಅವರ ಹೆಸರೇ ಸೂಚಿಸುವಂತೆ ಧೂರ್ತರೂ, ಯಾವುದೇ ನೀತಿ, ನಿಯಮ ಮತ್ತು ಪ್ರಾಮಾಣಿಕತೆಗಳಿಗೆ ಒಳಪಡದಂಥವರೂ, ಆಗಿದ್ದರು. ದೇವರು, ಆತ್ಮ, ಧರ್ಮ, ನೀತಿ ಇವಾವುದರಲ್ಲೂ ಅವರಿಗೆ ವಿಶ್ವಾಸವಿರಲಿಲ್ಲ. ಅವರ ಪ್ರಕಾರ ನೆಲ, ಜಲ, ವಾಯು ಮತ್ತು ಅಗ್ನಿ ಈ ಚತುರ್ಮಹಾಭೂತಗಳಷ್ಟೇ ನಿಜ-ವಸ್ತುಗಳಾಗಿದ್ದವು. ಮತ್ತು ದೇಹವು ಅಥವಾ ಶರೀರವು ಈ ನಾಲ್ಕು ಮಹಾಭೂತಗಳ ಆಣವಿಕ (Atomic) ಜೋಡಣೆ ಮಾತ್ರವಾಗಿದ್ದಿತು. ಇದಕ್ಕೆ ವಿರುದ್ಧವಾಗಿ, ಶಿಷ್ಟ ಅಥವಾ ಸುಶಿಕ್ಷಿತ ಚಾರ್ವಾಕರು ದೇಹದ ಜೊತೆಗೆ 'ಆತ್ಮ' ಎಂಬ ಒಂದು ವಸ್ತುವು ಇದೆಯೆಂಬುದಾಗಿಯೂ, ಆದರದು ದೇಹದ ಜೊತೆಗೇ ನಾಶಹೊಂದುತ್ತದೆಂಬುದಾಗಿಯೂ ಅಭಿಪ್ರಾಯಪಟ್ಟಿದ್ದರು. ಧೂರ್ತಚಾರ್ವಾಕರು ಧರ್ಮ ಮತ್ತು ನೀತಿ ಇವೆರಡನ್ನೂ ಹೆಚ್ಚು-ಕಡಿಮೆ ಪೂರ್ತಿಯಾಗಿ ತಿರಸ್ಕರಿಸಿದ್ದರು. ಆದರೆ ಶಿಷ್ಟ ಅಥವಾ ಸುಶಿಕ್ಷಿತ ಚಾರ್ವಾಕರು ಅವೆರಡನ್ನು ಅವುಗಳ ಸಾಂಪ್ರದಾಯಿಕ ಅರ್ಥದಲ್ಲಿ ಮಾತ್ರ ತಿರಸ್ಕರಿಸಿದ್ದರು.

ಕರ್ತೃವಾದ ವಾತ್ಸ್ಯಾಯನನು ನೀತಿ–ಸಿದ್ಧಾಂತದ ಮಟ್ಟಿಗೆ ಚಾರ್ವಾಕ–ದಾರ್ಶನಿಕನೆಂದೇ ಪರಿಗಣಿಸಲ್ಪಡುವನು. ಅವನನ್ನು ನಾವು ಅತ್ಯಂತ ಶಿಷ್ಟನಾದ ಮತ್ತು ಸುಶಿಕ್ಷಿತನಾದ ಚಾರ್ವಾಕೋತ್ತಮ ಎಂದು ಪರಿಗಣಿಸಬಹುದು. ವಾತ್ಸ್ಯಾಯನನಂತೂ ಚತುರ್ವಿಧ ಪುರುಷಾರ್ಥಗಳಲ್ಲಿ 'ಅರ್ಥ' ಮತ್ತು 'ಕಾಮ' ಇವೆರಡನ್ನಷ್ಟೇ ಅಲ್ಲದೆ 'ಧರ್ಮ'ವನ್ನು ಕೂಡ ಮಾನ್ಯಮಾಡಿದ್ದನು. ಆದರೆ ಧರ್ಮವನ್ನು ಕುರಿತ ಅವನ ವ್ಯಾಖ್ಯೆಯು ವೇದಾಂತಿಗಳ ಮತ್ತು ಮೀಮಾಂಸಕರ ವ್ಯಾಖ್ಯೆಗಿಂತ ಬಹಳ ಭಿನ್ನವಾಗಿತ್ತು. ಅವನು 'ಅರ್ಥ' ಮತ್ತು 'ಧರ್ಮ' ಇವೆರಡೂ ಕಾಮ–ಸಾಧನೆಗೆ (ಕಾಮಿತ ಫಲಸಾಧನೆಗೆ) ಸಾಧನಗಳು ಅಥವಾ ಉಪಾಯಗಳು ಮಾತ್ರ ಎಂದು ಭಾವಿಸಿದ್ದನು. ಮೋಕ್ಷಕ್ಕಾಗಿ ಧರ್ಮ (ವೇದಾಂತಿಗಳು ಭಾವಿಸಿದಂತೆ), ಇಲ್ಲವೇ ಧರ್ಮಕ್ಕಾಗಿಯೇ ಧರ್ಮ (ಪೂರ್ವಮೀಮಾಂಸಕರು ಭಾವಿಸಿದಂತೆ)ಎಂಬ ವಿಚಾರಗಳನ್ನು ಮತ್ತು ಧೋರಣೆಗಳನ್ನು ವಾತ್ಸ್ಯಾಯನನು ಪೂರ್ತಿಯಾಗಿ ಒಪ್ಪಿಕೊಂಡಿರಲಿಲ್ಲ; ಇತರ ಚಾರ್ವಾಕರಂತೂ ಅವುಗಳನ್ನು ಪೂರ್ತಿಯಾಗಿ ತಿರಸ್ಕರಿಸಿದ್ದರು. ಆದರೆ ಇದರರ್ಥ ಚಾರ್ವಾಕರು ಒಟ್ಟಾರೆ 'ಧರ್ಮ' ಎಂಬುದರ ಕಲ್ಪನೆಯನ್ನೇ ಅಲ್ಲಗಳೆದಿದ್ದರು ಎಂದಾಗುವುದಿಲ್ಲ. ಆದರೂ ಚಾರ್ವಾಕಮತವನ್ನು ಅನೇಕರು ಆ ರೀತಿಯಲ್ಲಿ ಅರ್ಥೈಸಿದ್ದಾರೆ—ಅಪಾರ್ಥೈಸಿದ್ದಾರೆ. ಉದಾಹರಣಾರ್ಥವಾಗಿ, ದಿವಂಗತ ಪ್ರೊಫೆಸರ್ ಎಂ. ಹಿರಿಯಣ್ಣನವರಂಥ ಅತ್ಯಂತ ನಿಷ್ಪಕ್ಷಪಾತಿಗಳಾದ ಮತ್ತು ಉದಾರಮನಸ್ಕರಾದ ಘನವಿದ್ವಾಂಸರು ಕೂಡ ಚಾರ್ವಾಕಮತವನ್ನು ಈ ಕೆಳಗಿನಂತೆ ತಪ್ಪಾಗಿ ಅರ್ಥೈಸಿದ್ದಾರೆ : 'One may think of a School of thought without the ideal of moksa, but not without that of dharma also. It may be that death is final and nothing remains afterwards; but to believe in an ideal of life devoid of dharma is to reduce man to the level of the brute. It is difficult to believe that there could ever have existed such a school of thought.'[6] ನಮ್ಮ ಇನ್ನೊಬ್ಬ ಘನ ತತ್ತ್ವಶಾಸ್ತ್ರಜ್ಞರಾದ ದಿವಂಗತ ಡಾ. ಎಸ್. ರಾಧಾಕೃಷ್ಣನ್ ಅವರಂತೂ ಚಾರ್ವಾಕಮತವನ್ನು ಇನ್ನೂ ಹೆಚ್ಚು ತಪ್ಪಾಗಿ ಅರ್ಥೈಸಿದ್ದಾರೆ. ಉದಾಹರಣಾರ್ಥವಾಗಿ, ತಮ್ಮ 'Indian Philosophy' ಎಂಬ ಗ್ರಂಥದಲ್ಲಿ ಚಾರ್ವಾಕಮತವನ್ನು ವಿಮರ್ಶಿಸುತ್ತ ಡಾ. ರಾಧಾಕೃಷ್ಣನ್ ಹೀಗೆ ಬರೆಯುತ್ತಾರೆ: There was a distrust of everything good, high pure and compassionate'.[7] ಚಾರ್ವಾಕಮತವನ್ನು ಕುರಿತ ಡಾ. ಎಸ್. ರಾಧಾಕೃಷ್ಣನ್ನರ ಈ ಹೇಳಿಕೆಯನ್ನು ತಮ್ಮ ಮಹತ್ವದ ಸಂಶೋಧನ ಗ್ರಂಥವಾದ 'The Naturalistic Tradition in Indian Thought' (Motilal & Banarasidass, Delhi, 1964) ಎಂಬ ಕೃತಿಯಲ್ಲಿ ವಿಮರ್ಶಿಸುತ್ತ ಅಮೇರಿಕನ್ ವಿದ್ವಾಂಸರಾದ ಡೇಲ್ ರೈಪೆ (Dale Riepe) ಅವರು ಈ ರೀತಿ ಬರೆಯುತ್ತಾರೆ: 'We cannot agree with Radhakrishnan who says of Carvaka : 'There was a distrust of everything good, high, pure and compassionate'. He may be correct with regard to 'compassionate' and one need not quarrel with the rest if he had explicitly stated what we think he meant, namely : 'There was a distrust of everything traditionally regarded as good, high, pure and compassionate'. It may be said from the available meterial that Carvaka holds truth, integrity, consistency and freedom of thought in the highest esteem. This is aside from the question of whether we regard these things as noble or ignoble.'[8] ಪ್ರೊಫೆಸರ್ ಡೇಲ್ ರೈಪೆ ಅವರ ಈ ಹೇಳಿಕೆ ನಿಜವಾದದ್ದು–ಕನಿಷ್ಠ ಪಕ್ಷ 'ಸುಶಿಕ್ಷಿತ ಚಾರ್ವಾಕ'ರಿಗೆ ಸಂಬಂಧಿಸಿದಂತೆ ನಿಜವಾದದ್ದು–ಎಂದು ನನಗನಿಸುತ್ತದೆ. ಕೀರ್ತಿಶೇಷ ವಿದ್ವಾಂಸರುಗಳಾದ ಪ್ರೊ. ಎಂ, ಹಿರಿಯಣ್ಣ ಮತ್ತು ಡಾ. ಎಸ್. ರಾಧಾಕೃಷ್ಣನ್ ಇವರಿಬ್ಬರೂ (ಇಬ್ಬರೂ ಅದ್ವೈತಸಿದ್ಧಾಂತಿಗಳು)–ಅದರಲ್ಲೂ ಡಾ. ರಾಧಾಕೃಷ್ಣನ್ನರು–ಚಾರ್ವಾಕ ಮತವನ್ನು ಸಾಕಷ್ಟು ತಪ್ಪಾಗಿ, ಪೂರ್ವಗ್ರಹಪೀಡಿತರಾಗಿ ಅರ್ಥೈಸಿದ್ದರು (ಆದರೂ ಇವರಿಬ್ಬರೂ–ಅದರಲ್ಲೂ ಪ್ರೊ. ಹಿರಿಯಣ್ಣನವರು–ಈ ವಿಷಯದಲ್ಲಿ ಇತರ ವೇದಾಂತಿಗಳಿಗಿಂತ ಎಷ್ಟೋ ವಾಸಿ!) ; ಹೀಗಾಗಿ ಅವರು ಚಾರ್ವಾಕರ ವಿರೋಧವು ವೇದೋಪನಿಷತ್ತುಗಳ (ಮುಖ್ಯವಾಗಿ ವೈದಿಕ ಕರ್ಮಕಾಂಡದ) ಅನುಸಾರವಾಗಿ ಸಾಂಪ್ರದಾಯಿಕವಾಗಿ ರೂಢವಾದ ಧರ್ಮವನ್ನು ಕುರಿತು ಹಾಗೂ ಸ್ವರ್ಗ–ಮೋಕ್ಷಗಳ

6. Outlines; P. 194
7. S. Radhakrishnan: Indian Philosophy (George Allen & Unwin Ltd., London); 1948, Vol. I.,P. 281
8. Dale Riepe : The Naturalistic Tradition in Indian Thought (Motilal Banarasidass, Delhi); 1964, Pp. 75–76.

ಕಲ್ಪನೆಯನ್ನು ಕುರಿತು ಇದ್ದಿತೇ ಹೊರತು ಒಟ್ಟಾರೆ ಧರ್ಮದ ಕಲ್ಪನೆಯನ್ನೇ ಕುರಿತು ಇದ್ದಿರಲಿಲ್ಲ ಅನ್ನುವುದನ್ನು ಹಾಗೂ ಚಾರ್ವಾಕ ದಾರ್ಶನಿಕರ ಸೈದ್ಧಾಂತಿಕ ಪ್ರಯತ್ನವು ಅರ್ಥ–ಕಾಮುಗಳ–ಅದರಲ್ಲೂ ಕಾಮದ–ಪ್ರಾಧಾನ್ಯತೆಯ ಬೆಳಕಿನಲ್ಲಿ ಧರ್ಮದ ವ್ಯಾಖ್ಯೆಯನ್ನು, ವ್ಯಾಪ್ತಿಯನ್ನು ಮತ್ತು ಮಹತ್ವವನ್ನು ಪುನರ್ವಿಮರ್ಶಿಸುವುದಾಗಿತ್ತು ಅನ್ನುವುದನ್ನು ಅರಿಯಲಾರದೇ ಹೋದರು. ಆದರೆ ಪ್ರೊ. ಡೇಲ್‌ರೈಪೆ ಅವರಂಥ ಪಾಶ್ಚಾತ್ಯ ತತ್ತ್ವಶಾಸ್ತ್ರಜ್ಞರು ತಮ್ಮ ಹೆಚ್ಚು ವಸ್ತುನಿಷ್ಠವೂ,ನಿಷ್ಪಕ್ಷಪಾತ ದೃಷ್ಟಿಯವೂ, ಪೂರ್ವಗ್ರಹಮುಕ್ತವೂ ಮತ್ತು ಅಲಿಪ್ತವೂ ಆದಂಥ ದೃಷ್ಟಿ-ಧೋರಣೆಗಳಿಂದಾಗಿ ಚಾರ್ವಾಕರ ಸಿದ್ಧಾಂತದಲ್ಲಿನ ಈ ಮೇಲಿನ ಸೂಕ್ಷ್ಮಾಂಶಗಳನ್ನು ಅರಿತುಕೊಂಡರು ಮತ್ತು ಮೆಚ್ಚಿಕೊಂಡರು. ಚಾರ್ವಾಕರಲ್ಲಿ (ಅರ್ಥಾತ್, ಸುಶಿಕ್ಷಿತ ಚಾರ್ವಾಕರಲ್ಲಿ) ಸತ್ಯಪ್ರಿಯತೆ, ಋಜುತ್ವ, ಮತ್ತು ತರ್ಕಸಂಬದ್ಧತೆ ಈ ಸದ್ಗುಣಗಳು ಕಂಡುಬರುತ್ತವೆ ಅನ್ನುವುದಕ್ಕೆ ಪ್ರೊಫೆಸರ್ ರೈಪೆ ಈ ಕೆಳಗಿನ ಕಾರಣಗಳನ್ನು ಕೊಡುತ್ತಾರೆ: ೧) 'ಪ್ರಮಾ' ಅಥವಾ ಸತ್ಯವು ಅವರಿಗೆ ಪವಿತ್ರವೆಂದು ಪರಿಗಣಿಸಲ್ಪಟ್ಟ ಶ್ರುತಿ ಗ್ರಂಥಗಳಲ್ಲಿ ಕಂಡುಬರದೇ ಇದ್ದುದರಿಂದಾಗಿ ಚಾರ್ವಾಕರು ಅದನ್ನು ಪ್ರತ್ಯಕ್ಷಾನುಭವದಲ್ಲಿಯೂ, ಅಂಥ ಅನುಭವವನ್ನು ಆಧರಿಸಿದ ಹೇಳಿಕೆಗಳಲ್ಲಿಯೂ ಕಂಡುಹಿಡಿಯಲು ಉಜ್ಜುಗಿಸಿದರು. ೨) ಆ ಬಳಿಕ, ಸತ್ಯವು ನಮ್ಮ ಪ್ರತ್ಯಕ್ಷಾನುಭವವನ್ನು ಆಧರಿಸಿರುತ್ತದೆ ಅನ್ನುವುದನ್ನು ಒಮ್ಮೆ ಒಪ್ಪಿಕೊಂಡ ನಂತರ, ಅವರು ಅದು (ಸತ್ಯವು) ಅನು–ಗಮನ–ನಿಗಮನಾತ್ಮಕವಾದ (Inductive and Deductive) ಅನುಮಾನ (Inference) ವನ್ನು ಆಧರಿಸಿರುತ್ತದೆ ಎಂಬ ನಂಬಿಕೆಯನ್ನು ಕೈಬಿಟ್ಟು ತಮ್ಮ ತರ್ಕಸಂಬದ್ಧತೆಯನ್ನು ನಿದರ್ಶಿಸಿದರು. (೩) ಶ್ರುತಿಪ್ರಾಮಾಣ್ಯವನ್ನು ಅನುಸರಿಸುತ್ತಿದ್ದಂಥ ಬಲಾಢ್ಯರಾದ ವೈದಿಕ ಪುರೋಹಿತ ವರ್ಗದವರ ಹೆದರಿಕೆ–ಬೆದರಿಕೆಗಳಿಗೆ ಮಣಿಯದೆ, ಕೇವಲ ಪ್ರತ್ಯಕ್ಷಾನುಭವಜನ್ಯ–ಜ್ಞಾನದ ಬೆಂಬತ್ತಿ ಚಾರ್ವಾಕರು ತಮ್ಮ ಋಜುತ್ವವನ್ನು ಮತ್ತು ಧೈರ್ಯವನ್ನು ತೋರಿಸಿದರು. ಈ ವಿಷಯದಲ್ಲಿ ಚಾರ್ವಾಕರ ಋಜುತ್ವವು ಸಾಂಖ್ಯದರ್ಶನದ ಸಂಸ್ಥಾಪಕನಾದ ಕಪಿಲಮುನಿಯ ಋಜುತ್ವಕ್ಕಿಂತ ಮೇಲ್ಮಟ್ಟದ್ದಾಗಿತ್ತು ಎಂದು ಹೇಳಬಹುದು. (೪) ವಿಚಾರ ಸ್ವಾತಂತ್ರ್ಯವನ್ನು ತಮ್ಮ ಸಮಕಾಲೀನರಾಗಿದ್ದ ಇನ್ನಿತರ ವಿಚಾರಿ (Thinkers) ಗಳಿಗಿಂತ ಹಾಗೂ ತತ್ವಸಿದ್ಧಾಂತಿಗಳಿಗಿಂತ ಹೆಚ್ಚಾಗಿ ಚಾರ್ವಾಕರೇ ತಮ್ಮ ಚಿಂತನೆಯಲ್ಲಿ, ಸಿದ್ಧಾಂತದಲ್ಲಿ ಮತ್ತು ಆಚಾರದಲ್ಲಿ ತೋರಿಸಿದ್ದರಾದ್ದರಿಂದ ಅದನ್ನು ಅವರು ಮನ್ನಿಸಿದ್ದರೆಂಬುದು ಸುಸ್ಪಷ್ಟ ಮತ್ತು ಸ್ವಸ್ಪಷ್ಟ.

**ಚಾರ್ವಾಕರು ಮತ್ತು ವರ್ಣಾಶ್ರಮ ಧರ್ಮ:**

ಚಾರ್ವಾಕರ ಸಮಾಜ–ನೀತಿ ಮತ್ತು ಸಮಾಜ–ಧರ್ಮಗಳನ್ನು ಕುರಿತು ಐತಿಹಾಸಿಕವಾಗಿ ಖಚಿತವಾದ ಮತ್ತು ವಿಶ್ವಾಸಾರ್ಹವಾದ ಮಾಹಿತಿಯು ನಮಗೆ ಹೆಚ್ಚಾಗಿ ದೊರೆಯುವುದಿಲ್ಲವಾದರೂ,[9] ಚಾರ್ವಾಕರು ವೈದಿಕ ಸಂಪ್ರದಾಯದ ವರ್ಣಾಶ್ರಮ ವ್ಯವಸ್ಥೆಯನ್ನು ಮತ್ತು ಧರ್ಮವನ್ನು ಒಪ್ಪಿಕೊಂಡಿರಲಿಲ್ಲ ಎಂದು ತಿಳಿಯುವುದಕ್ಕೆ ಸಾಕಷ್ಟು ಆಧಾರಗಳಿವೆ. ಮೊದಲನೆಯದಾಗಿ, ಚಾರ್ವಾಕರು ವೇದ ಪ್ರಾಮಾಣ್ಯವನ್ನೇ ಒಪ್ಪಿಕೊಂಡಿರಲಿಲ್ಲ. ಹೀಗಾಗಿ ವರ್ಣಾಶ್ರಮ ವ್ಯವಸ್ಥೆಯು ವೇದ-ಪ್ರಣೀತವಾದುದೆಂಬ ಕಾರಣಕ್ಕಾಗಿ ಅದನ್ನು ಒಪ್ಪಿಕೊಳ್ಳುವ ಪ್ರಮೇಯವೇ ಚಾರ್ವಾಕರಿಗೆ (ವೈದಿಕ ಸಿದ್ಧಾಂತಗಳಿಗಿದ್ದಂತೆ) ಇರಲಿಲ್ಲ. ಬೃಹಸ್ಪತಿ ಸೂತ್ರದಲ್ಲಿ ಉಕ್ತವಾಗಿವೆ[10] ಎಂದು ಹೇಳಲಾದ ಈ ಕೆಳಗಿನ ಹೇಳಿಕೆಗಳು ಚಾರ್ವಾಕರಿಗೆ ವರ್ಣಾಶ್ರಮ ಧರ್ಮದಲ್ಲಿ ವಿಶ್ವಾಸವಿರಲಿಲ್ಲ ಅನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತವೆ:

೧) ಚತುರ್ವರ್ಣಗಳ ಮತ್ತು ಚತುರಾಶ್ರಮಗಳ ಕ್ರಿಯಾಕರ್ಮಗಳು ಯಾವ ನಿಜವಾದ ಫಲವನ್ನೂ ಕೊಡುವುದಿಲ್ಲ.

೨) ಅಗ್ನಿಹೋತ್ರ, ಮೂರು[11] ವೇದಗಳು, ಸನ್ಯಾಸಿಯ ತ್ರಿಕಾಷ್ಠ, ಭಸ್ಮಲೇಪನ ಮುಂತಾದವುಗಳು ಜ್ಞಾನ ಹಾಗೂ ಪೌರುಷ ಇಲ್ಲದವರ ಜೀವನ ನಿರ್ವಹಣಕ್ಕಾಗಿ ಪ್ರಕೃತಿಯು ಯೋಜಿಸಿದ ಉಪಾಯಗಳಾಗಿವೆ.

೩) ಜ್ಯೋತಿಷ್ಟೋಮ ಯಜ್ಞದಲ್ಲಿ ಬಲಿ ಕೊಡಲ್ಪಟ್ಟ ಪಶುವು ಸ್ವರ್ಗಕ್ಕೆ ಹೋಗುವುದು ನಿಜವಾಗಿದ್ದ ಪಕ್ಷದಲ್ಲಿ ಬಲಿ ಕೊಡುವವನು ಈ ಕೂಡಲೇ ತನ್ನ ಸ್ವಂತ ತಂದೆಯನ್ನೇ ಬಲಿಕೊಟ್ಟು ಅವನನ್ನು ಸ್ವರ್ಗಕ್ಕೆ ಯಾಕೆ ಏರಿಸಬಾರದು ?

---

9. ಈ ವಿಷಯದಲ್ಲಿ ಹೆಚ್ಚಿನ ಮಾಹಿತಿಯನ್ನು ಮತ್ತು ವಿವರಣೆಯನ್ನು ನಾವು ಪ್ರೊ. ದೇವೀ ಪ್ರಸಾದ ಚಟ್ಟೋಪಾಧ್ಯಾಯರ 'Lokayata' A study in Ancient Indian Materialism' (People's Publishing House, New Delhi, 1959) ಎಂಬ ಗ್ರಂಥದಿಂದ ಪಡೆಯಬಹುದು. ಆದರೆ ಆ ಗ್ರಂಥದಲ್ಲಿ ಕೊಡಲಾದ ಎಲ್ಲಾ ಮಾಹಿತಿಗಳು ಮತ್ತು ವಿವರಣೆಗಳು ಐತಿಹಾಸಿಕವಾಗಿ ಸಮಾನ ರೀತಿಯಲ್ಲಿ ಪ್ರಮಾಣ ಭೂತವಾದಂಥವು ಎಂದು ಪರಿಗಣಿಸುವುದು ಸಾಧ್ಯವಿಲ್ಲ.

10. ನೋಡಿ: ಮಾಧವಾಚಾರ್ಯ: ಸರ್ವದರ್ಶನ ಸಂಗ್ರಹ, ಪ್ರಕರಣ: ೧, ಅಂತ್ಯಭಾಗ.

11. ಪಾಶ್ಚಾತ್ಯ ವಿದ್ವಾಂಸರು 'ಬೃಹಸ್ಪತಿ ಸೂತ್ರ'ವು ಕ್ರಿ.ಪೂ. ಸುಮಾರು ೬೦೦ರಲ್ಲಿ ರಚಿತವಾಗಿರಬಹುದೆಂದು ಅಭಿಪ್ರಾಯ ಪಡುತ್ತಾರೆ. ಆದರೆ ಇಲ್ಲಿ 'ಮೂರು ವೇದಗಳು' ಎಂದು ಅಂದಿರುವುದರಿಂದ ನಾಲ್ಕನೆಯ ವೇದವಾದ ಅಥರ್ವವೇದವು ರಚಿತವಾದ ಕಾಲಕ್ಕಿಂತ ಮುಂಚಿತವಾಗಿಯೇ ಈ ಸೂತ್ರವು ರಚಿಸಲ್ಪಟ್ಟಿರಬಹುದು ಎಂದು ತಿಳಿಯುವುದಕ್ಕೆ ಅವಕಾಶವಿದೆ.

೪) ಶ್ರಾದ್ಧದಲ್ಲಿ ಸಂತರ್ಪಣೆ ಮಾಡುವುದರಿಂದ ಸತ್ತು ಸ್ವರ್ಗ ಸೇರಿದವರಿಗೆ ಸಂತೃಪ್ತಿ ಉಂಟಾಗುವುದು ನಿಜವಾಗಿದ್ದ ಪಕ್ಷದಲ್ಲಿ ಇಲ್ಲಿ ಈಗ ಜೀವಂತವಾಗಿರುವ ಜನರಿಗೆ ಕೂಡ ಅವರು ಬೇರೆ ಊರಿಗೆ ಪ್ರಯಾಣ ಹೊರಡುವಾಗ ದಾರಿ-ಬುತ್ತಿ, ಇಲ್ಲವೆ ಸೀದಾ ಪದಾರ್ಥಗಳನ್ನು ಕೊಟ್ಟು ಕಳಿಸುವುದು ಅವಶ್ಯವೆನಿಸಬಾರದು. ಆದ್ದರಿಂದ ಶ್ರಾದ್ಧ ಮುಂತಾದ ಕ್ರಿಯಾಕರ್ಮ ಗಳನ್ನು ಬ್ರಾಹ್ಮಣರು ಕೇವಲ ತಮ್ಮ ಉದರಂಭರಣಕ್ಕೋಸ್ಕರ ಸ್ಥಾಪಿಸಿರುವುರೇ ಹೊರತು ಅವುಗಳಿಂದ ಬೇರೆ ಯಾವ ಫಲ ಪ್ರಾಪ್ತಿಯೂ ಇಲ್ಲ.[12]

**ಉಪಸಂಹಾರ :**

ಈ ಲೇಖನದುದ್ದಕ್ಕೂ ಚಾರ್ವಾಕ ಮತದ ಗುಣವಿಶೇಷಗಳನ್ನೇ ವಿಸ್ತಾರವಾಗಿ ಪ್ರಸ್ತಾಪಿಸಿರುವುದನ್ನು ಹಾಗೂ ಚರ್ಚಿಸಿರುವುದನ್ನು ವಾಚಕರು ಕಾಣಬಹುದಾಗಿದೆಯೇ ವಿನಾ ಈ ಮತದ ದೋಷಗಳನ್ನು ಕುರಿತ ಪ್ರಸ್ತಾಪ ಮತ್ತು ಚರ್ಚೆಗಳ ನ್ನಲ್ಲ. ನಾನಿಲ್ಲಿ ಚಾರ್ವಾಕ ಮತದ ದೋಷಗಳನ್ನು ಕುರಿತು ಪ್ರಸ್ತಾಪಿಸದೇ ಇದ್ದುದಕ್ಕೆ ಹಾಗೂ ಅವುಗಳನ್ನು ಚರ್ಚಿಸದೇ ಇದ್ದುದಕ್ಕೆ ಮುಖ್ಯ ಕಾರಣಗಳು ಎರಡು : ಒಂದನೆಯ ಕಾರಣವೆಂದರೆ, ಭಾರತದ ಇನ್ನಿತರ ಎಲ್ಲಾ ದರ್ಶನಗಳ ಗ್ರಂಥಗಳಲ್ಲಿ ಚಾರ್ವಾಕ ಮತದ ದೋಷಗಳ–ಮತ್ತು ಕೇವಲ ಅದರ ದೋಷಗಳ–ಚರ್ಚೆಯು ವಿಪುಲವಾಗಿ ಕಂಡುಬರುತ್ತದೆ.[13] ಹೀಗಾಗಿ ಈಗ ಹೆಚ್ಚು ಅವಶ್ಯಕವಾಗಿರುವುದು ಚಾರ್ವಾಕ ಮತದ ಗುಣಗಳ ಚರ್ಚೆಯೇ ಹೊರತು ಅದರ ಅವಗುಣಗಳ ಅಥವಾ ದೋಷ ಗಳ ಚರ್ಚೆಯಲ್ಲ.ಎರಡನೆಯದು ಸ್ಥಳಾಭಾವದ್ದು.

**ಗ್ರಂಥ-ಸೂಚಿ**

(ಸಂಸ್ಕೃತ ಭಾಷೆಯಲ್ಲಿ)

೧. ಋಗ್ವೇದ : ೧, ೨, ೩ ಮತ್ತು ೧೦ನೆಯ ಮಂಡಲಗಳು.
೨. ಛಾಂದ್ಯೋಗ್ಯ ಉಪನಿಷತ್ : ಅಧ್ಯಾಯ ೮.
೩. ಮೈತ್ರೀ ಉಪನಿಷತ್ : ಅಧ್ಯಾಯ ೭.
೪. ಶ್ವೇತಾಶ್ವತರ ಉಪನಿಷತ್ : ಅಧ್ಯಾಯಗಳು ೧ ಮತ್ತು ೬.
೫. ಬೃಹದಾರಣ್ಯಕೋಪನಿಷತ್ : ಶಾಂಕರಭಾಷ್ಯ, ೫೫೨
೬. ವೇದಾಂತ ಸೂತ್ರಗಳು : ಶಾಂಕರಭಾಷ್ಯ, ೩ : ೩, ೫೩-೪.
೭. ಮಹಾಭಾರತ : ಶಲ್ಯಪರ್ವ, ಶಾಂತಿಪರ್ವ.
೮. ವಿಷ್ಣುಪುರಾಣ.
೯. ಮನುಸ್ಮೃತಿ.
೧೦. ವಾತ್ಸ್ಯಾಯನ-ಕಾಮಸೂತ್ರ : ಪ್ರಕರಣಗಳು ೧ ಮತ್ತು ೨.
೧೧. ಜಯರಾಶಿಭಟ್ಟ : ತತ್ವೋಪಪ್ಲವಸಿಂಹ (ಗಾಯಕವಾಡ್ ಓರಿಯಂಟಲ್ ಸೀರೀಜ್, ಬಡೋದಾ).
೧೨. ಶಂಕರಾಚಾರ್ಯ : ಸರ್ವಸಿದ್ಧಾಂತ ಸಾರಸಂಗ್ರಹ.
೧೩. ಮಾಧವಾಚಾರ್ಯ : ಸರ್ವದರ್ಶನಸಂಗ್ರಹ.
೧೪. ಜಯಂತಭಟ್ಟ : ನ್ಯಾಯಮಂಜರೀ (ವಿಜಯನಗರಂ ಸೀರೀಜ್).
೧೫. ಗುಣರತ್ನ : ತರ್ಕರಹಸ್ಯದೀಪಿಕಾ.
೧೬. ಶ್ರೀಹರ್ಷ : ನೈಷಧೀಯ ಚರಿತ.
೧೭. ಕೃಷ್ಣಮಿಶ್ರ : ಪ್ರಬೋಧಚಂದ್ರೋದಯ.
೧೮. ವೇದಾಂತಸೂತ್ರಗಳು : ಭಾಸ್ಕರಭಾಷ್ಯ, ೩ : ೩, ೫೩.
೧೯. ವಾಚಸ್ಪತಿಮಿಶ್ರ ಭಾಮತೀ : ೨ : ೧, ೧೪, ೩ : ೩, ೫೩.
೨೦. ದಕ್ಷಿಣಾರಂಜನಶಾಸ್ತ್ರಿ : ಚಾರ್ವಾಕಷಷ್ಟಿ (ಬುಕ್‌ಕಂಪನಿ, ಕಲ್ಕತ್ತಾ).

(ಇಂಗ್ಲಿಷ್ ಭಾಷೆಯಲ್ಲಿ)

1. Chatterjee, S. & Datta, D : An Introduction to Indian Philosophy (University of Calcutta), 6th Edition, 1960.
2. Dakshinaranjan Shastri : A Short History of Indian Materialism (Book Company, Calcutta).

---

12. ಮಾಧವಾಚಾರ್ಯ : ಸರ್ವದರ್ಶನ ಸಂಗ್ರಹ, ಪ್ರಕರಣ : ೧, ಅಂತ್ಯಭಾಗ.
13. ಚಾರ್ವಾಕ ಮತದ ಪ್ರಮಾಣ-ಸಿದ್ಧಾಂತ, ಅಸ್ತಿತ್ವತತ್ವ-ಸಿದ್ಧಾಂತ ಮತ್ತು ನೀತಿ-ಸಿದ್ಧಾಂತ ಇವುಗಳಲ್ಲಿನ ದೋಷಗಳ ಮತ್ತು ನ್ಯೂನತೆಗಳ ಚರ್ಚೆಗಾಗಿ ವಿಭಿನ್ನ ಬೌದ್ಧ, ಜೈನ, ನ್ಯಾಯ, ಮೀಮಾಂಸ ಮತ್ತು ವೇದಾಂತ ದರ್ಶನಗಳ ಗ್ರಂಥಗಳನ್ನು ಅವಲೋಕಿಸಬಹುದು.

3. Dale Riepe : The Naturalistic Tradition in Indian Thought (Motilal Banarasidass, Second Issue : 1964).
4. Dasgupta Surendranath : A History of Indian Philosophy (Cambridge University Press, 1922; Motilal Banarasidass, 1975), Vol. I.
5. Debiprasad Chattopadhyaya : Lokayata, A study in Ancient Indian Materialism. (People's Publishing House, New Delhi, 1959).
6. Madhava Acharya : The Sarva-Darshana-Samgraha (Translated by Cowell & Gough) (Kegan Paul, London, 1914) (Cosmo Publications, NewDelhi, 1976).
7. M. Hiriyana : Outlines of Indian Philosophy (George Allen & Unwin, Ltd. London) 8th Impression, 1970.
8. Radhakrishnan, S : Indian Philosophy (George Allen & Unwin, Ltd. London, 1948); Vol. I.
9. Radhakrishnan & Moore : A Source book in Indian Philosophy (Princeton University Press); Second Printing : 1960).

# ನಾಥಪಂಥ

**—ಎಂ. ಜಿ. ನಂಜುಂಡಾರಾಧ್ಯ**

ಭಾರತದ ಪ್ರಸಿದ್ಧ ಮತ ಪಂಥಗಳಲ್ಲಿ ನಾಥಪಂಥವೂ ಒಂದು. ಅದರ ಅಸ್ತಿತ್ವವು ಪುರಾತನವಾದುದೆಂದು ತೋರುತ್ತದೆ. ಕ್ರಿ.ಶ. ೭ನೆಯ ಶತಮಾನದಿಂದ ಈ ಪರಂಪರೆಯ ಕೆಲವರು ವ್ಯಕ್ತಿಗಳು ಇತಿಹಾಸದಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಪರಂಪರೆಯ ಮೂಲ ಪುರುಷರು ನವನಾಥಸಿದ್ಧರೆಂದು ಪ್ರಸಿದ್ಧರಾಗಿದ್ದಾರೆ. ಈ ಪಂಥವು ಕಾಪಾಲಿಕ ಭೈರವ ಸಂಪ್ರದಾಯಕ್ಕೆ ಸೇರಿದ್ದು. ಸುಧಾಕರ ಚಂದ್ರಿಕಾ, ನೇಪಾಲ ಕ್ಯಾಟ್‌ಲಾಗ್ ಮತ್ತು ನವನಾಥ ಕಥಾ ಮುಂತಾದ ಗ್ರಂಥಗಳಲ್ಲಿ ಈ ಪರಂಪರೆಯ ಹೆಸರುಗಳು ಭಿನ್ನಭಿನ್ನವಾಗಿ ದೊರೆಯುತ್ತವೆ. ಸ್ಕಾಂದಪುರಾಣ–ಕೇದಾರಖಂಡ (ಅ.೭೪. ಪು-೮೨)ದಲ್ಲಿ ೧. ಆದಿನಾಥ, ೨. ಅನಾದಿನಾಥ, ೩. ಕೂರ್ಮನಾಥ, ೪. ಭವನಾಥ, ೫. ಸತ್ಯನಾಥ. ೬. ಸಂತೋಷನಾಥ ೭. ಮತ್ಸ್ಯೇಂದ್ರನಾಥ, ೮. ಗೋಪೀನಾಥ ಮತ್ತು ೯. ಗೋರಕ್ಷನಾಥ ಎಂಬುವರನ್ನು ನವನಾಥರೆಂದು ಹೆಸರಿಸಲಾಗಿದೆ.

ಪ್ರಾಣತೋಷಿಣೀ ಎಂಬ ಗ್ರಂಥದ ಪ್ರಕಾರ ನವನಾಥರ ಪರಂಪರೆ ಹೀಗಿದೆ:—೧. ಪರಮಾನಂದನಾಥ, ೨. ಪ್ರಕಾಶಾನಂದನಾಥ, ೩. ಕುಲೇಶ್ವರಾನಂದನಾಥ. ೪. ಕೋಲೇಶಾನಂದನಾಥ, ೫. ಭುಜಗಾನಂದನಾಥ, ೬. ಸಹಜಾನಂದನಾಥ. ೭. ಗಂಗತಾನಂದನಾಥ, ೮. ಲೋಕಾನಂದನಾಥ, ಮತ್ತು ೯. ವಿಮಲಾನಂದನಾಥ ಎಂದು ಹೇಳಲಾಗಿದೆ. ಈ ಹೆಸರುಗಳು ಹಿಂದೆ ಹೇಳಿದ ಆದಿನಾಥ ಮುಂತಾದವರ ಪರ್ಯಾಯನಾಮಗಳೊ ಅಥವಾ ಬೇರೆಯೊ ಎಂಬುದು ಗೊತ್ತಾಗುವುದಿಲ್ಲ.

ಇದರಂತೆ ಮಹಾರ್ಣವ ತಂತ್ರದಲ್ಲಿ ೧. ಗೋರಕ್ಷನಾಥ, ೨. ಜಾಲಂಧರನಾಥ, ೩. ನಾಗಾರ್ಜುನನಾಥ, ೪. ಸಹಸ್ರಾರ್ಜುನನಾಥ, ೫. ದತ್ತಾತ್ರೇಯನಾಥ. ೬. ದೇವದತ್ತನಾಥ, ೭. ಜಡಭರತನಾಥ. ೮. ಆದಿನಾಥ, ಮತ್ತು ೯. ಮತ್ಸ್ಯೇಂದ್ರನಾಥರನ್ನು ನವನಾಥರೆಂದು ಕರೆಯಲಾಗಿದೆ.

ಇವರಲ್ಲಿ ಮತ್ಸ್ಯೇಂದ್ರನು ಗೋರಕ್ಷನ ಗುರುವೆಂದು ಸ್ಕಾಂದಪುರಾಣ ಹೇಳಿದರೆ, ಮಹಾರ್ಣವತಂತ್ರವು ಗೋರಕ್ಷನನ್ನು ನವನಾಥರ ಮೊದಲಿಗನೆಂದು ಹೆಸರಿಸಿ ಮತ್ಸ್ಯೇಂದ್ರನನ್ನು ಕಡೆಯವನನ್ನಾಗಿ ಚಿತ್ರಿಸಿದೆ.

ಗೋರಕ್ಷನಾಥನು ಭಾರತದ ಪ್ರಸಿದ್ಧ ಹಠಯೋಗಿಗಳಲ್ಲಿ ಒಬ್ಬ. ಈತ ಆರಂಭಿಸಿದ ಪಂಥಕ್ಕೆ 'ಕಾನ್‌ಫಟ್'ಪಂಥವೆಂಬ ಪರ್ಯಾಯ ನಾಮವಿದೆ. ಈತ ತನ್ನ ಶಿಷ್ಯರನ್ನು ಗುರ್ತಿಸಲು ಕಿವಿಸೀಳುವ ಪದ್ಧತಿ ತಂದುದರಿಂದ ಇದಕ್ಕೆ 'ಕಾನ್‌ಫಟ್' ಎಂಬ ಹೆಸರು ಬಂದಿತಂತೆ ! ಇವರು ಸೀಳಿದ ಕಿವಿಗಳಲ್ಲಿ ದೊಡ್ಡ ಕುಂಡಲಗಳನ್ನು ಧರಿಸುತ್ತಾರೆ.

ಗೋರಖ್ ಎಂಬುದು ಗೋರಕ್ಷ ಎಂಬ ಸಂಸ್ಕೃತಪದದ ತದ್ಭವ. ಈತ ಕ್ರಿ.ಶ. ಏಳನೆಯ ಶತಮಾನದವನೆಂದೂ ನೇಪಾಳ ರಾಜಮನೆತನಕ್ಕೆ ಸೇರಿದವನೆಂದೂ ಪ್ರತೀತಿಯಿದೆ. ಯೋಗಸಾಧನೆಯಿಂದ ವಜ್ರಶರೀರಿ ಎನಿಸಿಕೊಂಡಿದ್ದ ಗೋರಕ್ಷ ಕ್ರಿ.ಶ. ೧೨ನೆಯ ಶತಮಾನದ ರೇವಣಸಿದ್ಧ, ಅಲ್ಲಮಪ್ರಭು ಮತ್ತು ಸಿದ್ಧರಾಮರೊಡನೆ ವಾದಿಸಿದಂತೆ ವೀರಶೈವ ಗ್ರಂಥಗಳಲ್ಲಿ ಉಕ್ತವಾಗಿದೆ.

ಈತನ ಗ್ರಂಥಗಳು ಹಠಯೋಗ ಮತ್ತು ಗೋರಕ್ಷಶತಕ ಮುಂತಾದವು. ಈ ಸಿದ್ಧಾಂತ ಪ್ರತಿಪಾದಕವಾದ ಗ್ರಂಥಗಳಲ್ಲಿ ಅಮರೌಘಶಾಸನ, ಗೋರಕ್ಷ ಸಿದ್ಧಾಂತ ಸಂಗ್ರಹ, ಸಿದ್ಧಾಂತ ಪದ್ಧತಿ ಮತ್ತು ಯೋಗಬೀಜ ಮುಂತಾದವು ಪ್ರಸಿದ್ಧ

ವಾಗಿವೆ. ಈ ಸಂಪ್ರದಾಯದ ಮಠಗಳು ಕರ್ನಾಟಕದಲ್ಲಿ ಮಂಗಳೂರಿನ ಕದಲೀಪೀಠ. ವಿಟ್ಠಲಯೋಗಿಮಠ, ಚುಂಚನಗಿರಿ ಪೀಠಗಳಲ್ಲಿ ಉಳಿದುಕೊಂಡಿವೆ.

**ನಾಥಪಂಥದ ಸ್ವರೂಪ**

ನಾಥಪಂಥದ ಮುಖ್ಯ ಪ್ರಮೇಯ ಅತ್ಯಾಶ್ರಮಿಗಳ ವಿಷಯ. ಇದು ಆಶ್ರಮಾತೀತ ಸ್ಥಿತಿ. ಅವರ ಕಲ್ಪನೆಯಲ್ಲಿ ಅತ್ಯಾಶ್ರಮಿಯೇ ಅವಧೂತ. ಅವಧೂತನ ಸ್ವರೂಪವನ್ನು ಕುರಿತು ಸಿದ್ಧ ಸಿದ್ಧಾಂತ ಪದ್ಧತಿಯಲ್ಲಿ 'ಯೋಗಿಗಳ ವ್ಯವಹಾರವು ನಿಯತವಾದುದಲ್ಲ. ಒಂದೆಡೆ ಭೋಗಿಯಾಗಿಯೂ, ಮತ್ತೊಂದೆಡೆ ತ್ಯಾಗಿಯಾಗಿಯೂ, ಮಗುದೊಂದೆಡೆ ನಗ್ನನಾಗಿಯೂ, ಇನ್ನೊಂದೆಡೆ ರಾಜನಂತೆಯೂ ಆಚಾರವಂತನಂತೆಯೂ ಇರುವವನೇ ಅವಧೂತ' ಎಂದು ಹೇಳಿದೆ. ಅವಧೂತ ಎಂಬ ಪದದಲ್ಲಿನ ಅಕ್ಷರಗಳಿಗೆ ಇರುವ ನಿರುಕ್ತಿ ಹೀಗಿದೆ :–

ಅ–ಕಾರವು ಆಶಾಪಾಶವಿಮುಕ್ತನೂ ಸ್ವಭಾವ ನಿರ್ಮಲನೂ ಆದ ಆನಂತಾನಂದ ಬ್ರಹ್ಮವನ್ನು ತಿಳಿದವನನ್ನು ಸೂಚಿಸುತ್ತದೆ. ವ–ಕಾರವು ವಾಸನೆಗಳನ್ನು ಜಯಿಸಿ, ನಿರ್ದುಷ್ಟವಚನವುಳ್ಳವನಾಗಿ, ಕಾಲಾನುಗುಣವಾಗಿ ಕಾರ್ಯವೆಸಗುವುದನ್ನು ಬೋಧಿಸುತ್ತದೆ. ಧೂ–ಕಾರವು ಶರೀರವು ಧೂಳಿಧೂಸರಿತವಾಗಿದ್ದರೂ ಚಿತ್ತವು ವಿಷಯುಗಳಿಂದ ವಿಮುಖವಾಗಿ,ಧ್ಯಾನಮಗ್ನವಾಗಿರಬೇಕು ಎಂದು ಸೂಚಿಸುತ್ತದೆ. ಚಿಂತೆ, ಚೇಷ್ಟೆ, ಅಹಂಕಾರಗಳನ್ನು ದೂರಮಾಡಿ ತತ್ತ್ವಚಿಂತನೆಯ ಪಾರವನ್ನು ಹೊಂದಿರುವುದು ತ ಕಾರದ ಲಕ್ಷಣ. ಇದನ್ನೇ ಅವಧೂತ ಗೀತೆಯಲ್ಲಿ ಹೀಗೆ ಹೇಳಿದೆ—

ಆನಂತಾನಂದ ಬ್ರಹ್ಮಜ್ಞಃವಃಕಾರಂ ತಸ್ಯಲಕ್ಷಣಂ
ವಾಸನಾ ವರ್ಜಿತಾ ಯೇನ ವಕ್ತವ್ಯಂಚ ನಿರಾಮಯಂ ।
ವರ್ತಮಾನೇಷು ವರ್ತೇತ ವ ಕಾರಂ ತಸ್ಯಲಕ್ಷಣಂ ॥
ಧೂಲಿ ಧೂಸರ ಗಾತ್ರಾಣಿ ಧೂತಚಿತ್ತಂ ನಿರಾಮಯಂ ।
ಧ್ಯಾನ (?) ಧಾರಣ ನಿರ್ಮುಕ್ತಂ ಧೂಕಾರಂ ತಸ್ಯಲಕ್ಷಣಂ ॥
ತತ್ತ್ವಚಿಂತಾಯೇನ ಧೂತಾ ಚಿಂತಾಚೇಷ್ಟಾವಿವರ್ಜಿತಾ ।
ತಮಹಂಕಾರ ನಿರ್ಮುಕ್ತಂ ತಕಾರಂ ತಸ್ಯಲಕ್ಷಣಂ॥

**ಅವಧೂತನ ಸ್ಥಿತಿ ಎಂತಹುದು :**

'ಬ್ರಹ್ಮನಿಂದ ಮೊದಲ್ಗೊಂಡು ಸ್ಥಾವರ ಪರ್ಯಂತವಾದ ಸಮಸ್ತ ಜಗತ್ತು ತನ್ನಲ್ಲಿ ಭೇದಾಭೇದವಿಲಕ್ಷಣರೂಪದಿಂದ ಅಡಗಿದೆ. ಅದು ತನಗಿಂತ ಪ್ರತ್ಯೇಕವಾಗಿಯೂ ಇರುವುದಿಲ್ಲ. ತನ್ನಲ್ಲಿ ಅಭೇದರೂಪದಿಂದಲೂ ಇರುವುದಿಲ್ಲ. ಆದ್ದರಿಂದ ಅದು ಭೇದ ರೂಪವೂ ಅಲ್ಲ. ಅಭೇದ ರೂಪವೂ ಅಲ್ಲ. ಭೇದಾಭೇದಗಳು ಪರಸ್ಪರ ವಿರುದ್ಧವಾದ್ದರಿಂದ ಎರಡೂ ಒಬ್ಬನಿಗೆ ಇರಲು ಸಾಧ್ಯವಿಲ್ಲ. ಅದಕ್ಕಾಗಿ ಈ ಸ್ಥಿತಿಯನ್ನು ಉಭಯ ವಿಲಕ್ಷಣ ಎಂದು ಹೇಳಲಾಗಿದೆ. ಆದ್ದರಿಂದ ಅವಧೂತನು ಪಂಚಮಾಶ್ರಮಿ ಎನಿಸಿದ್ದಾನೆ. ಆಶಾಪಾಶ ವಿಮುಕ್ತನಾಗಿ ನಿರ್ಮಲನಾಗಿ ಆನಂದಸ್ವರೂಪ ಬ್ರಹ್ಮವನ್ನು ತಿಳಿದವನೇ ಅವಧೂತನು.

'ಆದಿ ಮಧ್ಯಾಂತ ಮುಕ್ತೋಽಹಂ ನ ಬದ್ಧೋಽಹಂ ಕದಾಚನ ।
ಸ್ವಭಾವನಿರ್ಮಲಃ ಶುದ್ಧಃ ಇತಿ ಮೇ ನಿಶ್ಚಲಾಮತಿಃ ॥
ನ ಬದ್ಧೋ ನೈವ ಮುಕ್ತೋಽಹಂ ನ ಚಾಹಂ ಬ್ರಾಹ್ಮಣಃ ಪೃಥಕ್ ।
ನ ಕರ್ತಾ ನೈವ ಭೋಕ್ತಾಹಂ ವ್ಯಾಪ್ಯವ್ಯಾಪಕ ವರ್ಜಿತಃ ॥
ನ ಜಾತೋಽಹಂ ಮೃತೋವಾಪಿ ನ ಕರ್ಮ ಶುಭಾ ಶುಭಮ್ ।
ಶುದ್ಧೋಽಹಂ ನಿರ್ಗುಣಂ ಬ್ರಹ್ಮ ಬಂಧಮುಕ್ತೌ ಕಥಂ ಮಮ ॥
ಭೇದಾಭೇದವಿನಿರ್ಮುಕ್ತಂ ವರ್ತತೇ ಕೇವಲಂ ಶಿವಃ॥'

(—ಗೋರಕ್ಷಸಿದ್ಧಾಂತ ಸಂಗ್ರಹವು ೬೧)

ಈ ಪಂಥದ ಗ್ರಂಥಗಳಲ್ಲಿ 'ನಾಥ' ಶಬ್ದನಿರ್ವಚನವೂ ಉಕ್ತವಾಗಿದೆ. ನಾ = ಅನಾದಿಯಿಂದ, ಥ = ಇರುವುದು. ತ್ರಿಲೋಕಕಾರಣನಾಗಿ ಅನಾದಿ ರೂಪದಿಂದಿರುವ ಗೋರಕ್ಷನಾಥನೇ ನಾಥಪದವಾಚ್ಯನೆಂದು ಅವರ ಕಲ್ಪನೆ.

ನಾಕಾರೋಽನಾದಿ ರೂಪಂ ಸ್ಯಾತ್ ಥಕಾರಃ ಸ್ಥಾಪ್ಯತೇ ಸದಾ ।
ಭುವನತ್ರಯಮೇವೈಕಃ ಶ್ರೀ ಗೋರಕ್ಷನಮೋಽಸ್ತುತೇ ॥ (—ರಾಜಗುಹ್ಯ)

ಈ ನಾಥಪಂಥೀಯರು ಆನಂದರೂಪ ಮೋಕ್ಷ ಕೊಡುವುದರಲ್ಲಿ ಉದಾರಿಗಳು, ಬ್ರಹ್ಮಾನುಭವ ಪಡೆದವರು; ಅಜ್ಞಾನರಹಿತರು; ಆದ್ದರಿಂದಲೇ ಅವರನ್ನು ಶ್ರೀನಾಥ, ಶ್ರೀಗುರು ಎಂದು ಕರೆಯಲಾಗಿದೆ. ಇಂಥವರ ದೃಷ್ಟಿಯಲ್ಲಿ ವೇದಶಾಸ್ತ್ರ ಪುರಾಣಗಳು ಗಣಿಕೆಯರಂತೆ ಪ್ರಮಾಣಗಳಲ್ಲಿ. ಶಾಂಕರೀ ಮುದ್ರೆಯು ಕುಲವಧುವಿನಂತೆ ಪ್ರಮಾಣಭೂತವಾದದ್ದು.

ಸ್ವಕರ್ತವ್ಯ ನಿಷೇಧವೇ ಅವಧೂತಸಿದ್ಧಾಂತ. ಸರ್ವಾತೀತವಾದ ಬ್ರಹ್ಮಸ್ವರೂಪವನ್ನು 'ನೇತಿನೇತ್ಯಾತ್ಮಾ' ಎಂಬ ನಿಷೇಧರೂಪದಿಂದ ನಿರೂಪಿಸುವಂತೆ ಈ ಅವಧೂತಾವಸ್ಥೆಯನ್ನು ನಿಷೇಧಾತ್ಮಕವಾಗಿಯೇ ನಿರೂಪಿಸಲಾಗಿದೆ. ಆದ್ದರಿಂದಲೇ ಅನ್ಯಧರ್ಮಗಳೆಲ್ಲವೂ ಅವಧೂತರಿಗೆ ನಿಷಿದ್ಧ. ಅವಧೂತಯೋಗಿಗಳು ಸಾಧನಾವಸ್ಥೆಯಲ್ಲಿ ಸಂನ್ಯಾಸಾಶ್ರಮದಲ್ಲಿ ಹೇಳಿರುವ ಯಮ-ನಿಯಮಾದಿ ಕರ್ತವ್ಯಗಳನ್ನು ಆಚರಿಸಬೇಕೆಂಬ ವಿಧಿಯಿದೆ. ಸಿದ್ಧಿಯನ್ನು ಪಡೆಯುದವನು ಸಾಧನಗಳನ್ನು ತ್ಯಾಗಮಾಡ ಬಾರದು ಎಂಬ ವಿಶೇಷ ನಿಯಮವು ಯೋಗಿಗಳ ಮತದಲ್ಲಿಯೂ ಇದೆ. ಏಣಿಯ ಸಹಾಯದಿಂದ ಉಪ್ಪರಿಗೆಗೆ ಏರಿದವನು ಏಣಿಯನ್ನು ಕಡೆಗಣಿಸಬಾರದೆಂಬುದು ಇದರ ರಹಸ್ಯ. ಬಾಯಲ್ಲಿ ಮಾತ್ರ 'ಅಹಂಬ್ರಹ್ಮಾಸ್ಮಿ' ಎಂದದ್ದರಿಂದ ಅವನು ಬ್ರಹ್ಮ ಭಾವ ಪಡೆಯಲಾರ. ಬ್ರಹ್ಮಾನುಭವ ಅಳವಡುವುದೇ 'ಸಿದ್ಧಿ' ಎನಿಸುವುದು. ಅವರಿಗೇ 'ಸಿದ್ಧ'ರೆಂಬ ಹೆಸರು ಅನ್ವಯ ವಾದೀತು! ವ್ಯಾವಹಾರಿಕಸ್ಥಿತಿಯಲ್ಲಿ ಎಲ್ಲರೂ ಶ್ರುತಿಸ್ಮೃತಿ ಪ್ರತಿಪಾದಿತವಾದ ಎಲ್ಲ ಧರ್ಮಗಳನ್ನು ಆಚರಿಸಬೇಕು. ಸಿದ್ಧಾವಸ್ಥೆ ಗೇರಿದವನ ದೃಷ್ಟಿಯಲ್ಲಿ ಅವು ಗೌಣ ಎಂದು ತಾತ್ಪರ್ಯ.

ಎಲ್ಲ ಮತಗಳಲ್ಲಿ ಯೋಗಮತವೇ ಶ್ರೇಷ್ಠ. ಎಲ್ಲ ಮತಗಳು ಯೋಗಕ್ಕೆ ಅಂಗವಾಗಿವೆಯೆಂಬುದು ಇವರ ಹೇಳಿಕೆ. ಸನಾತನ ಧರ್ಮಕ್ಕೆ ಪ್ರತ್ಯಕ್ಷಸಿದ್ಧವಾದ ಪ್ರತ್ಯೇಕಫಲವಿದೆ. ಅದನ್ನು ಯೋಗಿಗಳು ಸಾಧಿಸಿ ಅನುಭವಿಸುತ್ತಿರುವರು ಎಂಬುದು ಈ ಪಂಥದ ಅಭಿಪ್ರಾಯ. ಈ ಪಂಥದಲ್ಲಿ ನಾಥನು ಅಖಂಡಸ್ವರೂಪ. ಆ ಸ್ವರೂಪವು ಪರಿಚ್ಛಿನ್ನಸ್ವರೂಪದ ಮೇಲೆ ಇದೆ. ನಾಥನು ಅಖಂಡ ಚಿದ್ರೂಪ. ಆ ನಾಥನಲ್ಲಿ ಧ್ವನಿಯಿದೆ. ಅದು ಸ್ಫೋಟರೂಪ ಶಬ್ದಬ್ರಹ್ಮ. ನಾದವು ಸಂಸಾರಕ್ಕೆ ಉಪಾದಾನ ಕಾರಣವಾದ ಶಕ್ತಿಸಂಬಂಧವುಳ್ಳದ್ದು. ಬಿಂದುವು ಸಂಸಾರವನ್ನು ರಚಿಸುವ ಆದಿಪ್ರಕೃತಿ ಅಥವಾ ಶಕ್ತಿ.

**ಪ್ರಣವಸ್ವರೂಪ ನಿರೂಪಣ :**

ಓಂಕಾರದಲ್ಲಿರುವ ಅ–ಉ–ಮಗಳು ತ್ರಿಮೂರ್ತ್ಯಾತ್ಮಕವಾದವು. ಅ = ವಿಷ್ಣು, ಉ = ರುದ್ರ, ಮ = ಬ್ರಹ್ಮ, ಓಂಕಾರವು ಮಹಾಸಿದ್ಧರಿಗೆ ಧ್ಯೇಯ. ಓಂಕಾರದಲ್ಲಿನ ಉ = ರುದ್ರ ಮತ್ತು ಅರ್ಧಮಾತ್ರೆ ಎನಿಸಿರುವ ಮ್ = ಶಕ್ತಿ. ಬಿಂದು ನಾದ ರೂಪ. ಇದು ದ್ವೈತಾದ್ವೈತ, ಸಾಕಾರ-ನಿರಾಕಾರಗಳಿಗೆ ಅತೀತವಾದದ್ದು. ಅದ್ವೈತದ ಮೇಲಿನ ಸ್ಥಿತಿ ಇದು.

ಮಹಾಸಿದ್ಧರು ನಾಥ. ಶಕ್ತಿ. ರುದ್ರರನ್ನು ಧ್ಯಾನಿಸುತ್ತಾರೆ. ಧ್ವನಿರೂಪವೂ ನಿರಾಕಾರವೂ ಆಗಿರುವ ಆದಿನಾಥನೇ ಸೃಷ್ಟಿಪ್ರಳಯಗಳಲ್ಲಿ ನಿರ್ವಿಕಾರನಾಗಿರುವ ರುದ್ರ. ಆದ್ದರಿಂದ ಬ್ರಹ್ಮವಿಷ್ಣುಗಳ ಧ್ಯಾನಕ್ಕಿಂತ ನಾಥ, ಶಿವ, ಶಕ್ತಿಗಳ ಧ್ಯಾನವೇ ಶ್ರೇಷ್ಠ. ಈ ಮೂರರಲ್ಲಿಯೂ ಸಹ ನಾಥಧ್ಯಾನವು ಅತಿಶ್ರೇಷ್ಠ.

ನಾಥಧ್ಯಾನಕ್ಕೆ ಏರುವುದು ಅಷ್ಟು ಸುಲಭವಲ್ಲ. ಅದು ಸಂಪೂರ್ಣ ಯೋಗಶಾಸ್ತ್ರವನ್ನು ಅವಲಂಬಿಸಿದೆ. ಇಲ್ಲಿ ಮೊದಲು ಬ್ರಹ್ಮಗ್ರಂಥಿ(ಸ್ವಾಧಿಷ್ಠಾನ ಚಕ್ರ)ಯನ್ನು ಭೇದಿಸಬೇಕು. ಅನಂತರ ವಿಷ್ಣುಗ್ರಂಥಿ (ಮಣಿಪೂರಕ ಚಕ್ರ)ಭೇದನವಾಗ ಬೇಕು. ಮುಂದೆ ಹೃದಯ ಸಮೀಪದ (ಅನಾಹತ ಚಕ್ರ)ದ ಹತ್ತಿರವಿರುವ ಕಂಠದೇಶದಲ್ಲಿರುವ ವಿಶುದ್ಧಿಚಕ್ರದಲ್ಲಿ ಅವಿದ್ಯಾ ಜೀವಶಕ್ತಿರೂಪ ರುದ್ರಗ್ರಂಥಿ ಭೇದನವಾಗಬೇಕು. ಹೀಗೆ ಮಾಡಿ ಮೇಲೇರುವ ಪ್ರಾಣವಾಯುವಿನ ಮೂಲಕ ಆಜ್ಞಾ ಚಕ್ರವೆಂಬ ಬ್ರಹ್ಮದ್ವಾರದಲ್ಲಿ ಜ್ಞಾನಚಕ್ರದ ಬಾಗಿಲನ್ನು ತೆರೆದು ಜ್ಞಾನಜ್ಯೋತಿಯನ್ನು ಕಾಣಬೇಕು. ಯೋಗಶಾಸ್ತ್ರದಲ್ಲಿ–

> ಬ್ರಹ್ಮಗ್ರಂಥಿಂ ತತೋಽಭಿತ್ವಾ ವಿಷ್ಣುಗ್ರಂಥಿಂ ಭಿನತ್ತ್ಯಸೌ ।
> ರುದ್ರಗ್ರಂಥಿಂ ತತೋಭಿತ್ವಾ ಛಿತ್ವಾಮೋಹಮಯಿಂಲತಾಂ ।
> ಉದ್ಘಾಟಯತ್ಯಯಂ ವಾಯುಃ ಬ್ರಹ್ಮದ್ವಾರಂ ಸುಗೋಪಿತಂ ॥

ಎಂದು ಹೇಳಿದೆ.

ನಾಥಜೀಯ ಅಂಶವೇ ನಾದ. ಆ ನಾದದ ಅಂಶವಾಗಿ ಶರೀರದಲ್ಲಿ ಪ್ರಾಣವಿದೆ. ಪ್ರಾಣದ ಮೇಲೆ ನಾಥಜಿ ಶಾಸನ ಮಾಡು ತ್ತಾನೆ. ಈ ದೃಷ್ಟಿಯಿಂದ ಪ್ರಾಣವು ಶಿಷ್ಯ. ನಾಥಜಿ ಗುರು. ಶಕ್ತಿಯ ಅಂಶವು ಬಿಂದು. ಬಿಂದುವಿನ ಅಂಶ ಶರೀರ. ಇದರಿಂದ ಈ ಶರೀರವು ಪುತ್ರಸ್ಥಾನದಲ್ಲಿದೆ. ಶರೀರಕ್ಕೆ ಕಾರಣರಾದ ತಂದೆತಾಯಿಯರಿಗಿಂತ ಪರಮಾರ್ಥದಲ್ಲಿ ಗುರುವೇ ಮುಖ್ಯ. ಮಗನಿ ಗಿಂತ ಶಿಷ್ಯನಿಗೇ ಪ್ರಾಧಾನ್ಯ.

**ಸೃಷ್ಟಿಕ್ರಮ**

ಯೋಗ ಸಂಪ್ರದಾಯದಂತೆ ಶಿವನಿಂದ ಭೈರವ, ಅವನಿಂದ ಶ್ರೀಕಂಠ, ಶ್ರೀಕಂಠನಿಂದ ಸದಾಶಿವ, ಸದಾಶಿವನಿಂದ ಈಶ್ವರ, ಈಶ್ವರನಿಂದ ರುದ್ರ, ರುದ್ರನಿಂದ ವಿಷ್ಣು, ವಿಷ್ಣುವಿನಿಂದ ಬ್ರಹ್ಮರು ಪ್ರಕಟವಾದುದಾಗಿ ತಿಳಿದುಬಂದಿದೆ. ಇದು ಮಂತ್ರಶಾಸ್ತ್ರಕ್ಕೂ ಸಮ್ಮತ. ಆದರೆ ಅವಧೂತರು ಹೇಳುವ ಕ್ರಮವು ಬೇರೆ, ಅವರ ಕ್ರಮದಂತೆ ಈ ಕ್ರಮಗಳೆಲ್ಲ ಯೋಗದಿಂದ ಬಂದದ್ದು. ಆದ್ದರಿಂದ ಇವೆಲ್ಲಕ್ಕೂ ಯೋಗವೇ ಮೂಲ. ಅವಧೂತನಿಂದ ಭಿಕ್ಷುಕ, ಭಿಕ್ಷುಕನಿಂದ ಬ್ರಹ್ಮಚಾರಿ, ಬ್ರಹ್ಮಚಾರಿ

ಯಿಂದ ಗೃಹಸ್ಥರು ಎಂದು ಹೇಳಲಾಗಿದೆ. ಒಂದೊಂದು ಗುಣ-ಲಕ್ಷಣ ಹೀನವಾಗಿ ಇದರ ಏರ್ಪಾಡು. ಇದಕ್ಕೆ ಸಂತಾನ ಎಂದು ಹೆಸರು.

ಗೃಹಸ್ಥ ಮತ್ತು ಅವಧೂತರಲ್ಲಿ ಯಾರು ಗೌಣ, ಯಾರು ಮುಖ್ಯ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಒಂದು ದೃಷ್ಟಿಯಿಂದ ಕಾರಣರೂಪನಾಗಿರುವ ಗೃಹಸ್ಥ ಮುಖ್ಯ. ಸಾಧ್ಯ ರೂಪನಾದ ಅವಧೂತನು ಗೌಣ. ಆದರೆ ಜ್ಞಾನಿಗಳ ದೃಷ್ಟಿಯಿಂದ ಸಾಧನ (ಕಾರಣ) ರೂಪನಾದ ಗೃಹಸ್ಥನಿಗಿಂತ ಸಿದ್ಧಿ(ಫಲ)ರೂಪನಾದ ಅವಧೂತನೇ ಶ್ರೇಷ್ಠ.

**ಆಚಾರ–ವಿಚಾರ**

ತತ್ತ್ವಜ್ಞಾನಿಗಳು ಆಚಾರ ಮತ್ತು ವಿಚಾರಗಳಲ್ಲಿ ವಿಚಾರಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ಈ ಸಿದ್ಧಾಂತದಲ್ಲಿ ಆಚಾರವೇ ಇಲ್ಲವೆಂದಲ್ಲ; ಆದರೆ ಅಲ್ಲಿ ವಿಚಾರಪೂರ್ವಕವಾದ ಆಚಾರಕ್ಕೆ ಬೆಲೆ ಹೆಚ್ಚು. ಈ ದಿಸೆಯಲ್ಲಿ ಇಲ್ಲಿ ತತ್ತ್ವವಿಚಾರವೇ ಮುಖ್ಯ ಉಳಿದ ಆಚಾರಗಳು ಗೌಣ.

**ಆಚಾರಸ್ವರೂಪ:** ಪ್ರಾತಃಕಾಲದಲ್ಲೆದ್ದು ಗುರುವಂದನೆ ಮಾಡಿ, ಶೌಚಾದಿಗಳನ್ನು ಮುಗಿಸಬೇಕು. ಸಂಜೆ ಶುಚಿರ್ಭೂತನಾಗಿ ತತ್ಕಾಲ ಪೂಜೆ ಎಸಗಬೇಕು. ಬಹಿರ್ದೇಶಕ್ಕೆ ಹೋಗಿ ಬಂದ ಮೇಲೆ ೧೧ ಸಲ ಮೃತ್ತಿಕಾಶೌಚ ಮಾಡಬೇಕು. ಒಂದೆರಡು ಕೊಡನೀರಿನಿಂದ ಸ್ನಾನ. ಇದಿಷ್ಟೆ ಆಚಾರ. ಇದಕ್ಕಿಂತ ಹೆಚ್ಚಿನದು ಅತ್ಯಾಚಾರ. ಅದು ನಿಷಿದ್ಧ.

ಮಹಾಸಿದ್ಧರು ಯೋಗಕ್ಕೆ ಮಹತ್ವ ಕೊಟ್ಟಿದ್ದಾರೆ. ಅಸತ್ಯವಾದ ಭ್ರಮೆ ಅವರಿಗೆ ಬೇಡ. ಯೋಗಿಗಳ ಮತದಲ್ಲಿ ಪ್ರಾರಬ್ಧಕರ್ಮಕ್ಕಿಂತ ಯೋಗಸಾಧನೆ ಮುಖ್ಯ. ಇವರಿಗೆ ಶೃಂಗಾರವು ವರ್ಜ್ಯ. ಹಿಂದೆ ಶಂಕರಾಚಾರ್ಯರು ಶೃಂಗಾರ ಪರಿಚಯಕ್ಕಾಗಿ ರಾಜನ ಶರೀರವನ್ನು ಪ್ರವೇಶಿಸಬೇಕಾಯಿತು. ಏಕೆಂದರೆ ಸಂನ್ಯಾಸಿ ಶರೀರವು ಸ್ತ್ರೀಸಂಗಕ್ಕೆ ಅನರ್ಹ ಎಂಬುದು ಇದರ ತಾತ್ಪರ್ಯ. ಆದರೆ ಏನು? ಶಂಕರರ ಮತದಲ್ಲಿ ಆತ್ಮರು ಆ ಎರಡೂ ಶರೀರಗಳಲ್ಲಿಯೂ ಒಂದೇ ತಾನೆ! ಎಂಬುದನ್ನು ಅವರು ಯೋಚಿಸಿದಂತೆ ಕಾಣುವುದಿಲ್ಲ.

ಶ್ರೀನಾಥ ಸೂತ್ರದಲ್ಲಿ ಯೋಗಿಯು ಆಚಾರ ಮತ್ತು ಬ್ರಹ್ಮ ವಿಚಾರಗಳೆರಡರಲ್ಲಿಯೂ ಇರುವನೆಂದು ಹೇಳಿದೆ.

'ಆಚಾರೇ ಬ್ರಹ್ಮವಿಚಾರೇ ಯೋಗೀತಿ'-ಶ್ರೀನಾಥ ಸೂತ್ರಂ' ಆಚಾರವು ಬ್ರಹ್ಮ ವಿಚಾರಕ್ಕೆ ಮೆಟ್ಟಲು. ಬ್ರಹ್ಮ ವಿಚಾರಕ್ಕೆ ಹಾದಿ. ಯೋಗ ಮತ್ತು ಭೋಗಗಳಲ್ಲಿ ಮುಕ್ತಿಗೆ ಯೋಗವೇ ಅಗತ್ಯವೆಂದು ಇವರ ಮತ.

**ದ್ವೈತ–ಅದ್ವೈತ**

ದ್ವೈತವೇ ಸರಿ ಎಂದು ಕೆಲವರೂ, ಅದ್ವೈತವೇ ಸರಿ ಎಂದು ಕೆಲವರೂ ವಾದಿಸುತ್ತಾರೆ. ಶರೀರ ಮತ್ತು ಶರೀರಿ (ಆತ್ಮ)ಗಳಲ್ಲಿ ದ್ವೈತವಿದೆ. ಅದ್ವೈತಿಗಳು ಶರೀರವು ಮಿಥ್ಯೆ ಎಂದು ಹೇಳುತ್ತಾರೆ, ಚೈತನ್ಯ ಮತ್ತು ಜಡ ಶರೀರ ಎರಡೂ ಸೇರಿ ಪರಿಪೂರ್ಣ ವಸ್ತು. ಇದು ಪರಮಾದ್ವೈತವೆಂದು ಮಹಾಸಿದ್ಧರ ಮತ. ಸರ್ವಾತೀತವಾದ ನಾಥ ತೇಜಸ್ಸು ಚಕ್ರವರ್ತಿ.

ಜ್ಞಾನಿಗಳ ಸ್ವತಂತ್ರ ಜ್ಞಾನವು ಕರ್ಮನಿರಪೇಕ್ಷ ಎಂದು ಕೆಲವರ ಮತ. ಕರ್ಮದಿಂದ ಚಿತ್ತಶುದ್ಧಿ, ಆ ಮೇಲೆ ಕರ್ಮತ್ಯಾಗ ಎಂದು ಅವರು ಸಾಧಿಸುತ್ತಾರೆ. ಜ್ಞಾನದಿಂದ ಮುಕ್ತಿ ಎಂದು ಹೇಳಲಾಗಿದೆ. ವ್ಯವಹಾರದಲ್ಲಿ ಮಗ್ನರಾಗಿ ಮಾತಿನಲ್ಲಿ 'ನಾನು ಬ್ರಹ್ಮ' ಎಂಬುವರು ಉಭಯಭ್ರಷ್ಟರು.

> ಗೃಹ ಕರ್ಮ ಸಮಾಸಕ್ತಮಹಂ ಬ್ರಹ್ಮೇತಿವಾದಿನಂ
> ಕರ್ಮಬ್ರಹ್ಮೋಭಯ ಭ್ರಷ್ಟಂ ತಂ ತ್ಯಜೇದಂತ್ಯಜಂ ಯಥಾ ॥

**ಮಹಾಸಿದ್ಧರು ಗಾರ್ಹಸ್ಥ್ಯದಿಂದ ದೂರವಿರಲು ಕಾರಣವೇನು**

ಸ್ತ್ರೀ ಇಲ್ಲದೆ ಗಾರ್ಹಸ್ಥ್ಯವಿಲ್ಲ. ಸ್ತ್ರೀಯೇ ಗೃಹಸ್ಥಧರ್ಮದ ಮೂಲ. ತಿಂಗಳಿಗೆ ಮೂರುದಿನ ಋತುಧರ್ಮ, ಸಂತಾನಕ್ಕಾಗಿ ಋತುದಾನ. ಸುಖಕ್ಕಾಗಿ ವಿಷಯೋಪಭೋಗ. ಗೃಹವಾಸ, ಭೋಜನ, ಶರೀರಪುಷ್ಟಿ, ಅದರಿಂದ ಕಾಮೋದ್ದೀಪನ. ಅದರಿಂದ ಭೋಗ ಇತ್ಯಾದಿಗಳು ಯೋಗಸಾಧನೆಗೆ ಕಂಟಕಗಳೆಂದು ಮಹಾಸಿದ್ಧರ ಭಾವನೆ. ಅದಕ್ಕಾಗಿ ಅವರು ಗಾರ್ಹಸ್ಥ್ಯದಿಂದ ದೂರ ಸರಿದಿದ್ದಾರೆ.

ಈ ಸಿದ್ಧರ ಇಷ್ಟದೈವ ನಾಥಜೀ. ಅವನು ಸ್ತ್ರೀಪರಿಗ್ರಹ ಮಾಡಿಕೊಳ್ಳಲಿಲ್ಲ. ಸಮಸ್ತ ದೇವತೆಗಳು ಮನು ಮುನಿಗಳೆಲ್ಲರೂ ಸ್ತ್ರೀವಶರೇ. ನಾಥನೊಬ್ಬನೆ ಮಾಯೆಯನ್ನು ಜಯಿಸಿದವನು. ಈ ಬಗ್ಗೆ ಭರ್ತೃಹರಿಯು—

> ಶಂಭು ಸ್ವಯಂಬು ಹರಯೋ ಹರಿಣೇಕ್ಷಣಾನಾಂ
> ಯೇನಾಃ ಕ್ರಿಯಂತ ಸಹಸಾ ಗೃಹಕುಂಭ ದಾಸಾಃ ।
> ವಾಚಾಮಗೋಚರ ಚರಿತ್ರ ವಿಚಿತ್ರಿತಾಯ
> ತಸ್ಮೈ ನಮೋ ಭಗವತೇ ಮಕರಧ್ವಜಾಯ ॥

ಎಂದು ಕಾಮದೇವನಿಗೆ ವಂದಿಸಿದ್ದಾನೆ. ಆದ್ದರಿಂದ ಗೃಹಸ್ಥನು ಎಷ್ಟೇ ಜ್ಞಾನಿಯಾದರೂ ಸ್ತ್ರೀವಶನೇ. ವೈರಾಗ್ಯ ಬೇಕಾದವನು ಅವಧೂತನಾಗಲೇಬೇಕು. ಈ ದಿಸೆಯಲ್ಲಿ ಮೀನನಾಥನ ಉಕ್ತಿಯೊಂದಿದೆ—

> ಹರಕೋಪಾನಲೇನೈವ ಭಸ್ಮೀಭೂತಃ ಕೃತಃ ಸ್ಮರಃ ।
> ಅರ್ಧನಾರೀ ಶರೀರೋಹಿ ತೇನ ತಸ್ಮೈನಮೋಽಸ್ತುತೇ ॥

ಎಂದರೆ ಕಾಮನು ಹರನ ಹಣೆಗಣ್ಣಬೆಂಕಿಯಿಂದ ಸುಟ್ಟರೂ ಅವನು ಶಿವನನ್ನು ಅರ್ಧನಾರೀ ಶರೀರನನ್ನಾಗಿ ಮಾಡಿದ! ಎಂದ ಮೇಲೆ ಶಿವ–ಶಕ್ತಿಗಳನ್ನು ಅಗಲಿಸುವುದು ದುಸ್ತರ. ಚಂದ್ರ ಚಂದ್ರಿಕೆಗಳಂತೆ, ಸೂರ್ಯಪ್ರಕಾಶಗಳಂತೆ ಶಿವ–ಶಕ್ತಿಗಳಿಗೆ ಅವಿನಾಭಾವಸಂಬಂಧವುಂಟು. ಮಹಾಸಿದ್ಧರು ಕಾಮೋಪಭೋಗಕ್ಕೆ ಸಮರ್ಥರಾದರೂ ಅವರು ಅದನ್ನು ತ್ಯಾಗಮಾಡುವುದರಲ್ಲಿಯೇ ವಿಶೇಷವಾದ ಆಸಕ್ತಿಯುಳ್ಳವರು. ಅವರ ಭೋಗವು ಸಂಸಾರಿಗಳ ಭೋಗದಂತೆ ಅತ್ಯಾಸಕ್ತವಾದದ್ದಲ್ಲ. ಅದು ಅನಾಸಕ್ತಿ ಯೋಗಕ್ಕೆ ಸೇರಿದ್ದು.

**ಭಗವಂತನೆಂದರೆ ನಾಥನೇ !**

ಷಡ್ಗುಣೈಶ್ವರ್ಯ ಸಂಪನ್ನನೇ ಭಗವಂತ. ಆ ಷಟ್‌ಗುಣಗಳು ಯಾವುವು ? ೧. ಸಮಗ್ರಐಶ್ವರ್ಯ, ೨. ಧರ್ಮ, ೩. ಯಶಸ್ಸು, ೪. ಶ್ರೀ. ೫. ಜ್ಞಾನ ಮತ್ತು ೬. ವೈರಾಗ್ಯಗಳು. ರುದ್ರ–ವಿಷ್ಣುಗಳು ಸ್ತ್ರೀ ಪರಿಗ್ರಹ ಮಾಡಿರುವುದರಿಂದ ಅವರಲ್ಲಿ ಧರ್ಮವೈರಾಗ್ಯಗಳಿಲ್ಲ. ಆದ್ದರಿಂದ ಅವರು ಭಗವಂತ ಪದವಾಚ್ಯರಲ್ಲ. ಆ ಎಲ್ಲ ಐಶ್ವರ್ಯಗಳು ನಾಥನಲ್ಲಿ ಮಾತ್ರ ಇರುವುದರಿಂದ ನಾಥನೇ ಭಗವಂತ.

**ನಾಥ ಪಂಥದಲ್ಲಿ ಶಬ್ದ ಸೃಷ್ಟಿಕ್ರಮ**

ಶಬ್ದವು ಮೊದಲು ಸೂಕ್ಷ್ಮವಾಗಿತ್ತು. ಅನಂತರ ಅದು ಸ್ಥೂಲರೂಪು ತಳೆಯಿತು. (ಪರಾ–ಪಶ್ಯಂತೀ–ಮಧ್ಯಮಾ–ವೈಖರಿಗಳ ಕ್ರಮಕ್ಕೆ ಹೋಲಿಸಿ) ಪ್ರಣವ–ಗಾಯತ್ರಿ ಮತ್ತು ಯೋಗಶಾಸ್ತ್ರಗಳು ಸೂಕ್ಷ್ಮಶಬ್ದಸೃಷ್ಟಿ; ಬ್ರಹ್ಮಗಾಯತ್ರಿ, ಮೂರು ವೇದಗಳು ಸ್ಥೂಲ ಶಬ್ದಸೃಷ್ಟಿ.

ಯೋಗಶಾಸ್ತ್ರದಿಂದ ತಂತ್ರವು ಹುಟ್ಟಿತು. ವೇದದಿಂದ ಸ್ಮೃತ್ಯಾದಿಗಳು ಹುಟ್ಟಿದವು. ನವನಾಥರ ನಂತರ ೧೨ ಮಂದಿ ನಾಥರೂ ೮೦ ಮಂದಿ ಸಿದ್ಧರೂ ಆದರು. ಅವರಿಂದ ದ್ವಾದಶ ಪಂಥವೂ, ಅನಂತರ ಸಿದ್ಧ ಪುರುಷರೂ ಉಂಟಾದರು. ಸದಾಶಿವ-ಭೈರವ. ಅವನಿಂದ ವಿಷ್ಣು-ಬ್ರಹ್ಮ-ಸೂರ್ಯ, ಚಂದ್ರ-ಇಂದ್ರಾದಿಗಳಾದರು. ಮತ್ತೆ ಯೋಗದಿಂದ ಪಾತಂಜಲ, ಸಾಂಖ್ಯಾದಿಗಳುಂಟಾದವು. ಆ ಯೋಗದಿಂದಲೇ ಜ್ಯೋತಿಷ್ಯ, ನ್ಯಾಯಾದಿಗಳು; ಧರ್ಮಶಾಸ್ತ್ರ, ವ್ಯಾಕರಣ, ಪುರಾಣಾದಿಗಳು ಹೀಗೆ ಈ ಪಂಥದಲ್ಲಿ ಪ್ರವೃತ್ತಿ ನಿವೃತ್ತಿ ಎಂಬ ಎರಡು ಮಾರ್ಗಗಳೂ ಇವೆ.

**ವರ್ಣಾಶ್ರಮಗಳಿಲ್ಲ**

ನಾಥಪಂಥದಲ್ಲಿ ವರ್ಣಾಶ್ರಮಾದಿಗಳ ಅಂತರವಿಲ್ಲ. ದೇಹಾದಿ ಅಭಿಮಾನಗಳನ್ನು ಬಿಟ್ಟು ಪರಮನಾಥನ ಯಥಾರ್ಥ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು ಎಲ್ಲರಿಗೂ ಅಧಿಕಾರವುಂಟು. ಹಾಗೆ ಸಾಕ್ಷಾತ್ಕರಿಸಿಕೊಂಡವನು ಸ್ವಯಂ ನಾಥಸ್ವರೂಪಿಯೇ ಆಗುತ್ತಾನೆ. ಗುಣಾತೀತನೇ ಮುಕ್ತಿಗೆ ಅಧಿಕಾರಿ.

**ಮುಕ್ತ್ಯುಪಾಯ**

ಕೈವಲ್ಯೋಪನಿಷತ್ತಿನಲ್ಲಿ 'ಏಕಾಂತಸ್ಥಾನದಲ್ಲಿ ಸುಖಾಸನದಲ್ಲಿ ಸಶಿನ ಶರೀರಿಯಾಗಿ ಕುಳಿತು, ಇಂದ್ರಿಯಗಳನ್ನು ನಿಗ್ರಹಿಸಿ, ಪವಿತ್ರ ಮನಸ್ಸಿನಿಂದ ಧ್ಯಾನಮಾಡುವವನೇ' ಅವಧೂತನು ಎಂದು ಹೇಳಿದೆ. ಮುಕ್ತಿಸಾಧನೆಗೆ ಆದಿನಾಥನ ಮುಖಾಂಬುಜದಿಂದ ನಿರ್ಗತವಾಗಿರುವ ಯೋಗಮಾರ್ಗವೇ ಮುಖ್ಯ.

> 'ಯೋಗಮಾರ್ಗಂ ಪರೇಣ್ನಿತ್ಯಂ ಕಿಮನ್ಯೈಃ ಶಾಸ್ತ್ರವಿಸ್ತರೈಃ ।
> ಯತ್ ಸ್ವಯಂಚಾದಿನಾಥಸ್ಯ ನಿರ್ಗತಂ ವದನಾಂಬುಜಾತ್॥

(—ವಿವೇಕಮಾರ್ತಾಂಡೇ)

**ನಾಥ ಪಂಥದ ಕೆಲವು ವೈಶಿಷ್ಟ್ಯಗಳು**

ಸಂಧ್ಯಾವಿಧಿ–ಸಂಧ್ಯೆ ಎಂದರೆ ಎರಡು ಕಾಲಗಳ ಸೇರಿಕೆ ಅಲ್ಲ. ಅದು ಸುಷುಮ್ನಾನಾಡಿಯಲ್ಲಿ ಪ್ರಾಣವಾಯುವಿನ ಸೇರಿಕೆ. ಇದೇ ಸಂಧಿ. ಇದನ್ನು ಆಚರಿಸುವುದೇ ಸಂಧ್ಯಾವಿಧಿ.

> ನ ಸಂಧ್ಯಾಸಂಧಿರಿತ್ಯಾಹುಃ ಸಂಧ್ಯಾಸಂಧಿರ್ನಿಗದ್ಯತೇ ।
> ಸುಷುಮ್ನಾ ಸಂಧಿಗಃ ಪ್ರಾಣಃ ಸಾ ಸಂಧ್ಯಾ ಸಂಧಿರುಚ್ಯತೇ ॥

**ಪರಾವಿದ್ಯೆ ಯಾವುದು ?**–ಯಾವುದರಿಂದ ಅಕ್ಷರವು ತಿಳಿಯುವುದೋ ಅದೇ ಪರಾವಿದ್ಯೆ. ಅದು ಯೋಗವಿದ್ಯೆಯೆ ! ಯೋಗವನ್ನು ಬಿಟ್ಟು ಉಳಿದ ವಿದ್ಯೆಗಳೆಲ್ಲ ಅಪರಾವಿದ್ಯೆಗಳು.

**ಯೋಗ ಯಾವುದು ?**–ಷಡಂಗಗಳಿಂದ ಕೂಡಿದ್ದು ಯೋಗ; ಪ್ರತ್ಯಾಹಾರ, ಧ್ಯಾನ, ಪ್ರಾಣಾಯಾಮ, ಧಾರಣ, ತರ್ಕ ಮತ್ತು ಸಮಾಧಿಗಳೇ ಷಡಂಗಗಳು—

ಪ್ರತ್ಯಾಹಾರಃ ತಥಾಧ್ಯಾನಂ ಪ್ರಾಣಾಯಾಮೋಽಥಧಾರಣಮ್ ।
ತರ್ಕಶ್ಚೈವ ಸಮಾಧಿಶ್ಚ ಷಡಂಗೋ ಯೋಗ ಉಚ್ಯತೇ ॥ (—ಅಮೃತಬಿಂದೂಪನಿಷತ್)

**ಪ್ರತ್ಯಾಹಾರವೆಂದರೇನು ?**–ಶಬ್ದಾದಿ ಪಂಚ ವಿಷಯಗಳನ್ನು, ಅತಿ ಚಂಚಲವಾದ ಮನಸ್ಸನ್ನು ನಿರೋಧಿಸಿ ಆತ್ಮ ಸ್ವರೂಪವನ್ನು ಧ್ಯಾನಿಸುವುದೇ ಪ್ರತ್ಯಾಹಾರ.

ಎಲ್ಲ ಸಾಧನೆಗಳಿಗಿಂತ ಧ್ಯಾನವೇ ಶ್ರೇಷ್ಠ. ಯಾರು ಒಂದು ಮುಹೂರ್ತ ಕಾಲವಾದರೂ ಮನಸ್ಸನ್ನು ಸ್ಥಿರಪಡಿಸಿ ಕೊಂಡು ತುದಿ ಮೂಗಿನಲ್ಲಿ ದೃಷ್ಟಿಯಿಟ್ಟು, ಧ್ಯಾನಿಸುವರೋ ಅವರು ಪಾಪದೂರರು. ತತ್ತ್ವಜ್ಞಾನವಾದವನಿಗೆ ವೇದಾದಿ ಶಾಸ್ತ್ರಗಳು ಬೇಕಿಲ್ಲ. ತುಪ್ಪವು ದೊರೆತ ಮೇಲೆ ಹಾಲು ಮತ್ತು ಅದರ ಸಂಸ್ಕಾರಗಳು ಬೇಕೆ ?

**ಯೋಗಿ ಎಂದರೆ ಯಾರು ?**–ನಾದ, ವಿಭೂತಿ, ಆದೇಶ ಎಂಬ ಮುದ್ರೆಗಳನ್ನು ಧಾರಣ ಮಾಡಿಕೊಂಡವನು ಯೋಗಿ.

**ಮುದ್ರಾ ಎಂದರೆ ಏನು ?**–ಮುದ್ = ಪ್ರಸನ್ನತೆ ; ಅದನ್ನು ಬಯಸುವ ಜೀವಾತ್ಮ ; ರಾ = ದಾನ ಎಂದರೆ ಶುಭಾ-ಶುಭಕರ್ಮ ಫಲವನ್ನು ಕೊಡುವ ಈಶ್ವರ. ಹೀಗೆ ಜೀವ-ಪರಮಾತ್ಮರ ಐಕ್ಯವೇ ಮುದ್ರಾ ಶಬ್ದಾರ್ಥ.

**ಯೋಗಿಯು ಧಾರಣ ಮಾಡುವ ಮುದ್ರೆಗಳು:**–ಛುರಿಕೆ, ನಾದ, ಆದೇಶ, ವಿಭೂತಿಗಳು–ಈ ಮುದ್ರೆಗಳಿಂದ ದೇವತಾ ಸಮೂಹವು ಪ್ರಸನ್ನವಾಗುವುದು. ರಾಕ್ಷಸರು (ಆಸುರೀ ಪ್ರವೃತ್ತಿಗಳು) ದೂರ ಸರಿಯುವರು. ಇವುಗಳಲ್ಲಿ ಛುರಿಕೆ (ಚೂರಿ) ಯೋಗಸಿದ್ಧಿ ಪಡಿಯಲು ಸಾಧನ.

**ನಾದ**–ಯೋಗಿಯು 'ಅನಾಹತ ಶೃಂಗೀ' ಶೃಂಗಿ (ಜಿಂಕೆ ಕೊಂಬು)ಯನ್ನು ಊದಿ ನಾದಮಾಡಬೇಕು.

**ಆದೇಶ**–ಜೀವಾತ್ಮ ಪರಮಾತ್ಮರ ಏಕತೆಯೇ ಆದೇಶ. ಇದನ್ನು ಉಪದೇಶ ಮಾಡುತ್ತಿರುವವನೇ ಯೋಗಿ.

**ವಿಭೂತಿ**–ಯೋಗಿಗಳು ಭಸ್ಮಧಾರಣ ಮಾಡಿಕೊಳ್ಳಬೇಕು. ಅಂಥವನೇ ಧ್ಯಾನಕ್ಕೆ ಅರ್ಹನು.

**ಮುಕ್ತಿ**–ಪರಮ ಪುರುಷಾರ್ಥವೇ ಮುಕ್ತಿ. ಅದು ಅವಧೂತರ ಯೋಗಸಾಧನೆಯ ಫಲ. ನಾಥಸ್ವರೂಪದಿಂದ ಇರುವುದೇ ಮೋಕ್ಷ. ಆತ್ಮವು ಸ್ವಸ್ವರೂಪಸ್ಥಿತಿಯಲ್ಲಿರುವುದೇ ಆ ಸ್ಥಿತಿ.

ಇಂಥ ವಿದ್ಯೆಯನ್ನು ಸಾಧಿಸಲು ಸದ್ಗುರು ಬೇಕು ; ಅವನ ಸಹಾಯದಿಂದ ಸುಸಂಸ್ಕಾರಿಯಾದ ಶಿಷ್ಯ (ಸಾಧಕ)ನು ಅತಿ ಮಹತ್ತಾದ ಈ ಸಿದ್ಧಿಯನ್ನು ಪಡೆಯಬಹುದು. ಶಂಕರರೂ ಸಹ ನಾಥಪಂಥಕ್ಕೆ ಶರಣಾದರು ಎಂದು ಈ ಪಂಥೀಯರು ಹೇಳುತ್ತಾರೆ. ಶ್ರೀ ಶಂಕರಾಚಾರ್ಯರ ಕಾಲಭೈರವಾಷ್ಟಕವು ಇದಕ್ಕೆ ನಿದರ್ಶನ. ಅವರು ಕಾಪಾಲಿಕನಿಗೆ ಸೋತು ವೈರಾಗ್ಯ ಪಡೆದು ವಿಷ್ಣುಸ್ತುತಿಮಾಡಿದರು. ಅದರಿಂದ ಅವರಿಗೆ ಚಿತ್ತಶಾಂತಿ ಬರಲಿಲ್ಲ. ಅನಂತರ ವೈದ್ಯನಾಥನನ್ನು ಪೂಜಿಸಿ 'ಅಪ ರಾಧ ಕ್ಷಮಾಪಣ ಸ್ತೋತ್ರ' ಬರೆದರು. ಮತ್ತೆ ಶಕ್ತಿಯನ್ನು ಆರಾಧಿಸಿ 'ಸೌಂದರ್ಯ ಲಹರಿ' ಬರೆದರು. ಆದರೂ ಅವರಿಗೆ ಚಿತ್ತಶಾಂತಿ ಲಭಿಸಲಿಲ್ಲ. ಆಗ ತಾರಾನಾಥನೆಂಬ ಸಿದ್ಧನು ಶಂಕರರಿಗೆ ಯೋಗವನ್ನು ಉಪದೇಶಿಸಿದನು. ಆಗ ಅವರಿಗೆ ಪರಮ ಶಾಂತಿ ಲಭಿಸಿತು. ಆಗ ಅವರು 'ವಜ್ರಸೂಚಿ' ಉಪನಿಷತ್ತಿಗೆ ವ್ಯಾಖ್ಯೆ ಬರೆದರು. ಶಂಕರರು ಸಿದ್ಧರಾದ ಮೇಲೆ 'ಸಿದ್ಧಾಂತ ಬಿಂದು'ಗ್ರಂಥ ರಚಿಸಿದರು. ಸಿದ್ಧಾಂತ ಎಂದರೆ ಸಿದ್ಧರ ತಾತ್ಪರ್ಯ ಎಂದು ಅರ್ಥ. ಕಡೆಗೆ ಅವರು ಅವಧೂತಾವಸ್ಥೆ ಪಡೆದ ಮೇಲೆಯೇ ಅವರಿಗೆ ಆತ್ಮಸಿದ್ಧಿ ಲಭಿಸಿತು. ಆದರೆ ಅವರ ಮತ ಕಾಪಾಲಿಕವಲ್ಲ ; ಅದು ಅವಧೂತಮತ, ಕಾಪಾಲಿಕ ಮತ ಸ್ಥಾಪಕನೂ ನಾಥನೇ ಎಂದು ಶಾಬರತಂತ್ರದಲ್ಲಿ ಹೇಳಿದೆ.

**ಕಾಪಾಲಿಕ ಪರಂಪರೆ : ೧೨ ಮಂದಿ**

ಆದಿನಾಥ, ಅನಾದಿನಾಥ, ಕಾಲ, ಅತಿಕಾಲಕ, ಕರಾಲ, ವಿಕರಾಲ, ಮಹಾಕಾಲ, ಕಾಲಭೈರವನಾಥ, ವಟುಕ, ಭೂತ ನಾಥ, ವೀರನಾಥ, ಶ್ರೀಕಂಠ ಇವರೆಲ್ಲ ಕಹಿಸೋರೆ (ತುಂಬಿ ಫಲ) ಕಾಯ ಹಿಡಿದಿರುವುದರಿಂದ ಕಾಪಾಲಿಕರೆನಿಸಿದರು. ಇವರ ಗುರುಗಳು ೧೨ ಮಂದಿ. ನಾಗಾರ್ಜುನ, ಜಡಭರತ, ಹರಿಶ್ಚಂದ್ರ, ಸತ್ಯನಾಥ, ಭೀಮನಾಥ, ಗೋರಕ್ಷ, ಚರ್ಪಟ, ಅವದ್ಯ, ವೈರಾಗ್ಯ, ಕಂಥಾದಾರಿ, ಜಲಂಧರ, ಮಲಯಾರ್ಜುನ ಎಂದು. ಶಾಕ್ತಮತಗಳ ಉಪದೇಶಕನೂ ನಾಥನೇ, ತಂತ್ರಗ್ರಂಥಗಳ ಕರ್ತನೂ ನಾಥನೇ ಈ ಎಲ್ಲ ಮತಗಳಲ್ಲಿ ಅವಧೂತ ಮತವೇ ಶ್ರೇಷ್ಠ ಎಂದು ಇವರ ಅಭಿಮತ.

**ಅವಧೂತರ ಮುಖ್ಯಚಿಹ್ನೆಗಳು**:-ಇವರಲ್ಲಿ ನಾದ, ಮುದ್ರೆ, ಭಸ್ಮ, ಶೇಲಿ ಮತ್ತು ಉಣ್ಣೆಯ ಯಜ್ಞೋಪವೀತಗಳಿರಬೇಕಂತೆ.

**ನಾಥಮತ ಪ್ರಭೇದಗಳು ಆರು**:-ಸೌರ, ಶೈವ, ಶಾಕ್ತ, ವಾಮ, ದಕ್ಷಿಣ, ವೀರ ಮತ್ತು ಕೌಲ. ಇವುಗಳಲ್ಲೆಲ್ಲ ಅವಧೂತವೇ ಶ್ರೇಷ್ಠ.

**ಕಾಪಾಲಿಕ ಮಾರ್ಗವು ಏಕೆ ಪ್ರಕಟವಾಯಿತು ?**

ವಿಷ್ಣುವಿನ ಎಲ್ಲ ಅವತಾರಗಳಲ್ಲಿಯೂ ಆತ ಮದೋನ್ಮತ್ತನಾದನು. ಆ ಮದವನ್ನು ಇಳಿಸಲು ಪ್ರತಿ ಅವತಾರದ ಅಗತ್ಯವುಂಟಾಯಿತು. ಅವುಗಳ ಮರ್ದನಕ್ಕಾಗಿ ೨೪ ಕಾಪಾಲಿಕರೂಪು ಧರಿಸಬೇಕಾಯಿತು. ಆ ಅವತಾರಗಳಲ್ಲಿ ವಿಷ್ಣುವಿನ ಅವತಾರಗಳ ತಲೆಯನ್ನು ಕತ್ತರಿಸಿ ಕೈಲಿ ಹಿಡಿದುದರಿಂದ 'ಕಾಪಾಲಿಕ'ಎಂಬ ಹೆಸರು ಶಿವನಿಗೆ ಬಂತು. ಅದರ ಮೂಲ ಹೀಗಿದೆ:—

'ಕಾಪಾಲಿಕ ಮಾರ್ಗಃ ಕಿಮರ್ಥಂ ಪ್ರಟೀಕೃತ ಇತ್ಯಪೇಕ್ಷಾಯಾಂ ಆಹ-ವಿಷ್ಣೋಃ ಚತುರ್ವಿಂಶತಿ ಅವತಾರಾಃ ತೇ ಚ ಕಾರ್ಯಾಂತೇ ಮದೋನ್ಮತ್ತಾ ಜಾತಾಃ।......ವಿರುದ್ಧಾಚಾರೋಪರಿ ನಾಥೇನ ಕೋಪಂ ಕೃತ್ವಾ ಚತುರ್ವಿಂಶತ್ಯವತಾರೋಪರಿ ಚತುರ್ವಿಂಶತಿ ಕಾಪಾಲಿಕ ರೂಪಾಣಿ ಧೃತ್ವಾ,...ತತ್ರ ಸರ್ವೇಷಾಮವತಾರಾಣಾಂ ಕಾಪಾಲಾನಿಭಿನ್ನಾನಿ, ಕೃತಾನಿ, ಸ್ವಕರ್ಯೈಸ್ತಾನಿ ಧೃತಾನಿ. ತೇನ ಕಾಪಾಲಿಕಾ ಜಾತಾ–' ಮುಂತಾದ ವಿಚಾರಗಳು **ಈ ಪಂಥದ ಪ್ರಮೇಯಗಳಲ್ಲಿ** ಕೆಲವು.

**ವೀರಶೈವ**

ನಾಥಪಂಥವು ಕಾಪಾಲಿಕ ಮತಪ್ರಭೇದಗಳಲ್ಲಿ ಒಂದು. ಈ ಪಂಥಗಳಲ್ಲಿ ಓಂಕಾರಕ್ಕೆ ಪ್ರಾಧಾನ್ಯವಿದೆಯಾದರೂ ಅವರು ವೇದೋಪನಿಷತ್ತುಗಳನ್ನು ಒಪ್ಪುವವರಲ್ಲ. ಇವರು ತಂತ್ರಶಾಸ್ತ್ರವನ್ನು ಅನುಮೋದಿಸುವರಾದರೂ ಅವು ಅವೈದಿಕ ಆಗಮಗಳು.

ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ರೇಣುಕರು ಹೇಳುವಂತೆ 'ಆಗಮುಗಳು ಬಹುವಿಧವಾಗಿವೆ. ಶೈವ, ಪಾಶುಪತ, ಸೋಮ,ಲಾಕುಲ ಎಂಬ ಪ್ರಭೇದಗಳು. ಅವುಗಳಲ್ಲಿ ಶೈವವು ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತ ಎಂದು ನಾಲ್ಕುವಿಧ. ಇವುಗಳಲ್ಲಿ ವಾಮವು ಶಕ್ತಿ ಪ್ರಧಾನವಾದದ್ದು, ಭೈರವಾತ್ಮಕವಾದದ್ದು. ದಕ್ಷಿಣ ಮಿಶ್ರಗಳು ಸಪ್ತಮಾತೃ ಪರ–ವೇದಸಮ್ಮತವಾದವು. ಈ ಪ್ರಭೇದಗಳಲ್ಲಿ ಸಿದ್ಧಾಂತವೊಂದನ್ನು ಬಿಟ್ಟು ಉಳಿದವು ಅವೈದಿಕ. ವೇದಸಮ್ಮತವಾದ ಕಾಮಿಕಾದಿವಾತುಲಾಂತವಾದ ೨೮ ಆಗಮುಗಳಿಗೆ ಸಿದ್ಧಾಂತವೆಂದು ಹೆಸರು' ಎಂದು ಹೇಳಿರುವುದರಿಂದ ಭೈರವಾತ್ಮಕವಾದ (ಕಾಪಾಲಿಕ) ಪ್ರಭೇದಗಳಲ್ಲಿ ನಾಥಪಂಥವು ಸೇರುತ್ತದೆ.

ನಾಥ ಪಂಥದಲ್ಲಿ ನಾಥ ಶಬ್ದಕ್ಕೆ ತ್ರಿಲೋಕಕಾರಣನಾದ ಅನಾದಿರೂಪದಿಂದಿರುವ ಗೋರಕ್ಷನೇ ನಾಥನೆಂದು ಹೇಳಿದೆ. ಆದರೆ ನಾಥ ಶಬ್ದ ಪ್ರಯೋಗವು ಶಿವನ ಹೆಸರುಗಳಲ್ಲಿ ಒಂದು. ವೈದ್ಯನಾಥ ಶ್ರೀನಾಥ ಪ್ರಯೋಗಗಳು ಹಿಂದಿನಿಂದಲೂ ಬಳಕೆಯಲ್ಲಿವೆ. ಸಿದ್ಧಾಂತ ಶಿಖಾಮಣಿ ಕರ್ತೃ ಶಿವಯೋಗಿಯ ತಂದೆಯ ಹೆಸರು ಸಿದ್ಧನಾಥ. ಸಿದ್ಧಾಂತ ಶಿಖಾಮಣಿಗೆ ಸಂಸ್ಕೃತದಲ್ಲಿ ವ್ಯಾಖ್ಯೆಯನ್ನು ಬರೆದಿರುವ ಶ್ರೀಮನ್ ಮರಿತೋಂಟದಾರ್ಯರು 'ಶ್ರೀನಾಥಃ ಸೋಮಮೂರ್ತಿಃ ಎಂದು ತಮ್ಮ ಮಂಗಲ ಶ್ಲೋಕದಲ್ಲಿ ಶ್ರೀನಾಥನನ್ನು ನೆನೆದಿದ್ದಾರೆ. ಕೇವಲ ಇದಿಷ್ಟೇ ಈ ಕಾರಣದಿಂದ ವೀರಶೈವಕ್ಕೆ ನಾಥಪಂಥದೊಡನೆ ಸಂಬಂಧವನ್ನು ಕಲ್ಪಿಸುವುದು ಸೂಕ್ತವಲ್ಲ.

ವೀರಶೈವದ ಉಗಮ ಮತ್ತು ಪ್ರಗತಿಗಳು ಹಿಂದಿನಿಂದಲೂ ವೇದಾಗಮ ಸಮ್ಮತವಾಗಿಯೇ ಪ್ರತಿಪಾದಿತವಾಗಿವೆ. ಈ ಸಿದ್ಧಾಂತವು ವೇದಸಮ್ಮತವಾದ ಮೂವತ್ತಾರು ತತ್ತ್ವಗಳ ಹಿನ್ನೆಲೆಯಲ್ಲಿ ಸ್ಥಾಪಿತವಾಗಿದೆ. ಈ ಮತದಲ್ಲಿ ಮುಖ್ಯವೆನಿಸಿರುವ ಲಿಂಗಧಾರಣವು ಅನೇಕ ವೇದಮಂತ್ರಗಳಲ್ಲಿ ಪ್ರತಿಪಾದಿತವಾಗಿರುವ ವಿಷಯವು. ವೀರಶೈವ ಸಿದ್ಧಾಂತಗ್ರಂಥಗಳೆನಿಸಿರುವ ಶ್ರೀಕರ ಭಾಷ್ಯ, ಕ್ರಿಯಾಸಾರ, ಲಿಂಗಧಾರಣಚಂದ್ರಿಕಾ ಮುಂತಾದ ಎಲ್ಲ ಗ್ರಂಥಗಳಲ್ಲಿಯೂ ಧಾರಾಳವಾಗಿ ವ್ಯಾಖ್ಯಾನಿಸಲಾಗಿದೆ.

ವೀರಶೈವದ ಮುಖ್ಯಧರ್ಮಗಳೆನಿಸಿದ ಅಷ್ಟಾವರಣ, ಪಂಚಾಚಾರ ಷಟ್‌ಸ್ಥಳಗಳು ವೈದಿಕವೆಂಬುದನ್ನೂ ವೀರಶೈವ ಮತಾಚಾರ್ಯರು ತಮ್ಮ ಗ್ರಂಥಗಳಲ್ಲಿ ಪ್ರತಿಪಾದಿಸಿದ್ದಾರೆ. ಈ ಎಲ್ಲ ದೃಷ್ಟಿಗಳಿಂದಲೂ ನಾಥಪಂಥಕ್ಕೂ ವೀರಶೈವಕ್ಕೂ ಅನೇಕ ದೃಷ್ಟಿಗಳಿಂದ ಹೋಲಿಕೆಯು ಕಂಡು ಬರುವುದಿಲ್ಲವಾದರೂ ನಾಥಪಂಥದ ಅನೇಕ ಪ್ರಮೇಯಗಳು ವೀರಶೈವಸಮ್ಮತವಾದುವೇ ಆಗಿವೆ.

ವೀರಶೈವವು ಒಪ್ಪಿರುವ ಅತಿವರ್ಣಾಶ್ರಮತ್ವವು ನಾಥಪಂಥದಲ್ಲಿಯೂ ಉಕ್ತವಾಗಿದೆ, ಆದರೆ ಅದು ಆಶ್ರಮಾತೀತ ಎಂಬ ಅರ್ಥದಲ್ಲಿ. ನಾಥಪಂಥದಲ್ಲಿ ಶಿಖಾಯಜ್ಞೋಪವೀತಗಳನ್ನು ಕುರಿತು ಹೇಳಿರುವ ಮಾತು ವೀರಶೈವಕ್ಕೂ ಸಮ್ಮತವೇ ಆಗಿದೆ. ಈ ಬಗ್ಗೆ ಗೋರಕ್ಷ ಸಿದ್ಧಾಂತ ಸಂಗ್ರಹದಲ್ಲಿ 'ಬ್ರಹ್ಮಜ್ಞಾನ ಪ್ರಾಪ್ತಿಯಾದ ಮೇಲೆ ಬ್ರಹ್ಮತಂತುಧಾರಣವು ಅಗತ್ಯ. ಆದರೆ ಈ ಸೂತ್ರವನ್ನು ಧರಿಸಿದವರು ಹೆಚ್ಚಾಗಿ ಜಾತಿಯ ಅಭಿಮಾನಿಗಳು; ಅವರು ಯಜ್ಞೋಪವೀತದ ಅರ್ಥವನ್ನು ಸರಿಯಾಗಿ ಗ್ರಹಿಸಿಲ್ಲ'.

ಸಶಿಖಂ ವಪನಂಕೃತ್ವಾ ಬಹಿಃ ಸೂತ್ರಂ ತ್ಯಜೇದ್ಬುಧಃ ।
ಯದಕ್ಷರಂ ಪರಂ ಬ್ರಹ್ಮ ತತ್‌ಸೂತ್ರಮಭಿಧಾರಯೇತ್ ॥

ಜ್ಞಾನಿಯಾದವನು ಬಾಹ್ಯದ ಶಿಖೆಯನ್ನು ತೆಗೆಸಿ, ಹೊರಗಿನ ನೂಲಿನಸೂತ್ರವನ್ನು ತ್ಯಾಗ ಮಾಡಬೇಕು. ನಿಜವಾದ ಸೂತ್ರ ವೆಂದರೆ ಪರಬ್ರಹ್ಮವೇ. ಅಂಥ ಪರಬ್ರಹ್ಮವನ್ನು ಸೂಚಿಸುವುದರಿಂದ ಅದಕ್ಕೆ ಸೂತ್ರವೆಂಬ ಹೆಸರು ಬಂದಿದೆ. ಆ ಬ್ರಹ್ಮವೆಂಬ ಸೂತ್ರದಲ್ಲಿ ಈ ಲೋಕಗಳೆಲ್ಲ ದಾರದಲ್ಲಿ ಮಣಿಗಳು ಪೋಣಿಸಿದಂತೆ ಇವೆ. ಬ್ರಹ್ಮಭಾವವನ್ನು ಧರಿಸುವುದಕ್ಕೇ ಸೂತ್ರಧಾರಣ ವೆಂದು ಹೆಸರು. ಈ ಬಗೆಯ ಸೂತ್ರಕ್ಕೆ ಉಚ್ಛಿಷ್ಟಾದಿ ಯಾವ ಮೈಲಿಗೆಯೂ ಇರುವುದಿಲ್ಲ. 'ಜ್ಞಾನವೆಂಬ ಯಜ್ಞೋಪವೀತ ವನ್ನು ಒಳಗೆ ಧಾರಣಮಾಡಿಕೊಂಡಿರುವವನೇ ಸೂತ್ರದ ತತ್ತ್ವಾರ್ಥವನ್ನು ತಿಳಿದವನು. ಶಿಖೆ ಎಂದರೆ ಜ್ಞಾನರೂಪವಾದ ಶಿಖೆ. ಹೀಗೆ ಜ್ಞಾನರೂಪವಾದ ಶಿಖೆ ಮತ್ತು ಯಜ್ಞೋಪವೀತಗಳನ್ನು ಧರಿಸಿದವನೇ ನಿಜವಾದ ಬ್ರಾಹ್ಮಣ' ಎಂಬ ನಿರ್ವಚನ ವನ್ನು ವೀರಶೈವ ಗ್ರಂಥಗಳಲ್ಲಿಯೂ ಕಾಣಬಹುದು.

**ವೀರಶೈವನು ಅತಿವರ್ಣಾಶ್ರಮಿ**

ನಾಥಪಂಥವು ತನ್ನನ್ನು 'ಅತ್ಯಾಶ್ರಮಿ' ಎಂದು ಹೇಳಿಕೊಂಡಿದೆ. ಎಂದರೆ ಆಶ್ರಮಾತೀತ ಸ್ಥಿತಿಯನ್ನೂ ಅದು ವರ್ಣಿ ಸಿದೆ. ಆದರೆ ಇಲ್ಲಿ ಆಶ್ರಮ ಶಬ್ದದಿಂದ ವರ್ಣಕ್ಕೂ ಲಾಕ್ಷಣಿಕವಾಗಿ ಅನ್ವಯಿಸುತ್ತದೆ. ಇದರಿಂದ ವೀರಶೈವವೂ ಅತಿವರ್ಣಾಶ್ರಮಿ ಎನಿಸಿದೆ. ಇಲ್ಲಿನ 'ಅತಿ' ಶಬ್ದವು ನಾಥಪಂಥವು ಹೇಳಿದ 'ಅತಿಕ್ರಾಂತ' (ಮೀರಿದ) ಎಂಬ ಅರ್ಥದಲ್ಲಿಲ್ಲ. ಅದು 'ಅತಿಶಯ' ಎಂಬ ಅರ್ಥದಲ್ಲಿದೆ. ಇದರ ವ್ಯುತ್ಪತ್ತಿಯನ್ನು ಹೀಗೆ ಮಾಡಲಾಗಿದೆ: 'ವರ್ಣಶ್ಚ ಆಶ್ರಮಶ್ಚ ವರ್ಣಾಶ್ರಮೌ; ಅತಿಶಯಿತೌ ವರ್ಣಾಶ್ರಮೌಯಯೋಸ್ತೌ ಅತಿವರ್ಣಾಶ್ರಮೌ' ಎಂದು ಮಾಡಬೇಕೇ ಹೊರತು 'ಅತಿಕ್ರಾಂತೌ ವರ್ಣಾಶ್ರಮೌಯತಸ್ತೌ' ಎಂದು ಮಾಡಬಾರದು. ಈ ದೃಷ್ಟಿಯಿಂದ ವೀರಶೈವವು ಅತಿವರ್ಣಾಶ್ರಮಿಯಾದರೂ ಅದು ವರ್ಣಾಶ್ರಮಗಳನ್ನು ತಿರಸ್ಕರಿಸಿ ದ್ದಲ್ಲ; ಅದಕ್ಕೆ ಬದಲಾಗಿ ವೀರಶೈವದಲ್ಲಿ ವರ್ಣಾಶ್ರಮ ವ್ಯವಹಾರವಿದ್ದರೂ ಅದರಲ್ಲಿ ಒಂದು ಅತಿಶಯವಿದೆ. ಅದನ್ನು ವೀರ ಶೈವಾಚಾರ್ಯರು ಹೀಗೆ ವ್ಯಾಖ್ಯಾನಿಸಿದ್ದಾರೆ:-

ಬ್ರಾಹ್ಮಣಃ ಕ್ಷತ್ರಿಯಶ್ಚಾಪಿ ವೈಶ್ಯಃ ಶೂದ್ರಏವ ವಾ ।
ಯಸ್ತು ಲಿಂಗಾಂಗ ಸಂಯುಕ್ತಾಃ ಸ ಏವಾತ್ಯಾಶ್ರಮೀ ಭವೇತ್ ॥
ಬ್ರಹ್ಮಚಾರೀ ಗೃಹಸ್ಥೋವಾವಾನಪ್ರಸ್ಥೋಯತಿಸ್ತುವಾ ।
ಯಸ್ತು ಲಿಂಗಾಂಗ ಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ ॥

ಎಂಬ ಉಕ್ತಿಗಳಲ್ಲಿ ಈ ವೈಶಿಷ್ಟ್ಯವು ಉಕ್ತವಾಗಿದೆ ಎಂದರೆ 'ಶಕ್ತಿಪಾತದಿಂದ ಪರಿಶುದ್ಧನಾಗಿ ಗುರುಕೃಪೆಗೆ ಪಾತ್ರನಾದವನು ಯಾವುದೇ ವರ್ಣ ಅಥವಾ ಆಶ್ರಮದಲ್ಲಿದ್ದರೂ ಅವನು ಲಿಂಗಧಾರಣವನ್ನು ಶಿವದೀಕ್ಷೆಯ ಮೂಲಕ ಪಡೆದಲ್ಲಿ ಅತ್ಯಾಶ್ರಮಿ ಎನಿಸುವನು.' ಇವೇ ಮುಂತಾದ ಕೆಲವು ಅನಿಸಿಕೆಗಳು ವೀರಶೈವದಲ್ಲಿಯೂ ಅಲ್ಪಸ್ವಲ್ಪ ಬದಲಾವಣೆಯಿಂದ ಒಪ್ಪಿಗೆ ಪಡೆದಿವೆ. ಶಿವ-ಶಕ್ತಿಗಳ ಸಂಬಂಧದ ವಿಷಯದಲ್ಲಿಯೂ ಸಹ ಈ ಎರಡು ಪಂಥಗಳಲ್ಲಿ ಏಕವಾಕ್ಯತೆಯಿರುತ್ತದೆ.

ಒಟ್ಟಿನಲ್ಲಿ ನಾಥಪಂಥದ ಉಗಮ, ಉದ್ದೇಶ, ಸಾಧನೆ ಮತ್ತು ಸಿದ್ಧಿಗಳಿಗೂ, ವೀರಶೈವದ ಉಗಮ, ಉದ್ದೇಶ, ಸಾಧನ ಮಾರ್ಗ ಮತ್ತು ಮೋಕ್ಷ ಸ್ವರೂಪಗಳಿಗೂ ಅನೇಕ ದೃಷ್ಟಿಯಿಂದ ಹೋಲಿಕೆ ಕೂಡುವುದಿಲ್ಲ. ಆದರೂ ನಾಥ ಪಂಥದ ಕೆಲವು ಅನಿಸಿಕೆಗಳು ಗ್ರಾಹ್ಯವಾಗಿವೆ. ಉದಾರವಾಗಿವೆಯಾದರೂ ಅವು ಸಾಮಾನ್ಯ ಮಾನವನಿಗೆ ಅನುಸರಿಸಲು ಸುಲಭವಲ್ಲವೆಂಬುದನ್ನು ಮರೆಮಾಚುವಂತಿಲ್ಲ. ಸ್ತ್ರೀಯರ ಬಗೆಗೆ, ಗಾರ್ಹಸ್ಥ್ಯದ ಬಗೆಗೆ ಅಲ್ಲಿ ತೋರಿಸಿರುವ ಔದಾಸೀನ್ಯವು ಅಲ್ಲಿರುವ ಅವ್ಯವಹಾರಿಕೆ ಯನ್ನು ಸ್ಪಷ್ಟಮಾಡುತ್ತದೆ. ಇಷ್ಟಾದರೂ ಈ ಪಂಥದಲ್ಲಿನ ಪ್ರಮೇಯಗಳನ್ನು ಆಳವಾಗಿ ಅಭ್ಯಾಸಮಾಡುವುದರ ಮೂಲಕ ಭಾರತದ ಅಧ್ಯಾತ್ಮ ವಿಕಾಸದಲ್ಲಿ ಈ ಪಂಥದ ಸಾಧನೆಯನ್ನು ಅರಿಯುವುದು ಅತ್ಯಗತ್ಯ.

# ಶ್ರೀ ಅರವಿಂದ ದರ್ಶನ

—ರಂಗನಾಥ ದಿವಾಕರ

ಶ್ರೀ ಅರವಿಂದರು ಜೀವಂತರಿರುವಾಗ ಕೂಡ ಅವರ ದರ್ಶನ ಸುಲಭವಿರಲಿಲ್ಲ. ಜಡರೂಪದ ದರ್ಶನವೇ ಅಷ್ಟೊಂದು ದುರ್ಲಭವಿರುವಾಗ ಅವರ ಸೂಕ್ಷ್ಮ ದಿವ್ಯಚೈತನ್ಯದ ಅಪರರೂಪವಾದ ಅವರ ತತ್ವಜ್ಞಾನದ ಅರಿವು ಅಷ್ಟೊಂದು ಸಹಜಗಮ್ಯ ವಲ್ಲ ಎಂಬುದು ಕ್ರಮಪ್ರಾಪ್ತ. ಗಾಂಧಿ ಅವರು ತಮ್ಮ ತತ್ವಜ್ಞಾನವನ್ನು ಕುರಿತು ಗ್ರಂಥರೂಪವಾಗಿ ಏನೂ ಬರೆಯಲಿಲ್ಲ. ಅವರ ಗಂಭೀರವಾದ ಜೀವನ, ಗಭೀರವಾದ ವಿಚಾರ, ಅತಂದ್ರಿತವಾದ ನಿಷ್ಕಾಮ ಕರ್ಮ ಇವುಗಳನ್ನೆಲ್ಲ ಆಲೋಚಿಸಿ ಅವರ ತತ್ವಜ್ಞಾನ ವನ್ನು ತಿಳಿದುಕೊಳ್ಳಬೇಕಾಗಿದೆ. ಅದೇ 'ಗಾಂಧೀದರ್ಶನ' ಎನಿಸುವದು. ಶ್ರೀ ಅರವಿಂದರು ಬರೆದ ಅವರ ತತ್ವಜ್ಞಾನ ಮಹಾ ಸಾಗರ ರೂಪವಾಗಿದೆ. ಅದರ ಮಂಥನಮಾಡಿ, ಹಾಲುಕಡೆದು ಬೆಣ್ಣೆ ತೆಗೆದಂತೆ,ಆಳವಾಗಿ ವಿಚಾರಿಸಿದರೆ ಮಾತ್ರ ಅವರ 'ದರ್ಶನ' ಸ್ವರೂಪ ಸ್ವಲ್ಪಮಟ್ಟಿಗೆ ದೃಗ್ಗೋಚರವಾಗುವದು. ಗಾಂಧಿಯವರು ತಮ್ಮ ತತ್ವಜ್ಞಾನವನ್ನು ಬರೆಯಲಿಲ್ಲ, ಆದುದರಿಂದ 'ಗಾಂಧಿ ದರ್ಶನ' ಸುಗಮವಲ್ಲ. ಶ್ರೀ ಅರವಿಂದರು ತಮ್ಮ ತತ್ವಜ್ಞಾನದ ಒಂದು ಮಹೋದಧಿಯನ್ನು ನಮ್ಮೆದುರು ಇಟ್ಟರು, ಆದುದರಿಂದ'ಶ್ರೀ ಅರವಿಂದ ದರ್ಶನ' ದುರ್ಗಮವಾಯಿತು! ಅಂತೂ ನನ್ನಂಥ ಸಾಮಾನ್ಯ ಮಾನವನಿಗೆ ಎರಡೂ ದರ್ಶನಗಳು ಸಹಜವಾಗಿ ತಿಳಿಯುವಂಥವಲ್ಲ.

ಈ ಎರಡೂ ದರ್ಶನಗಳು ಬರೀ ಭಾರತೀಯರಿಗಾಗಿ ಜನ್ಮತಾಳಲಿಲ್ಲ. ಅವು ವಿಶ್ವಮಾನವನಿಗಾಗಿ ಅವತರಿಸಿದವುಗಳು. ಮಾನವನು ಬರೀ ಹುಟ್ಟು-ಬುದ್ಧಿಯಿಂದ ನಡೆಯುವ ಪ್ರಾಣಿಯಲ್ಲ. ಅವನು ತನ್ನ ಅಂತರಾಳದ ಪ್ರಗಮನ ಶೀಲಪ್ರೇರಣೆಯ ಮೂಲಕ ತನ್ನ ಬುದ್ಧಿಯಿಂದ ಪ್ರಗತಿಯನ್ನು ಹೊಂದುವ ಪುರುಷಾರ್ಥವುಳ್ಳ ಮಹಾಪ್ರಾಣಿಯು. ಈ ಅವನ ಪುರೋಗಮನದಲ್ಲಿ ಈ ಎರಡು ದರ್ಶನಗಳು ಮಾರ್ಗದರ್ಶಿಯಾದವುಗಳು. ಇವರಿಬ್ಬರ ದರ್ಶನಗಳ ಪ್ರಮೇಯಗಳು ಅನುಭವಸಿದ್ಧ, ತರ್ಕಶುದ್ಧ, ಪ್ರಮಾಣಬದ್ಧ ಹಾಗೂ ಕರ್ಮಕ್ಷೇತ್ರದಲ್ಲಿ ಪರೀಕ್ಷಿತವಾದವುಗಳು.

ಇಲ್ಲಿ ಶ್ರೀ ಅರವಿಂದ ದರ್ಶನವಷ್ಟೇ ಪ್ರಸ್ತುತ, ಆದುದರಿಂದ ಅದನ್ನಷ್ಟೆ ಸಂಕ್ಷೇಪವಾಗಿ ನಿದರ್ಶಿಸುವಾ:

ಪರಂಪರಾಗತ ದೃಷ್ಟಿಯಿಂದ ನೋಡುವುದಾದರೆ, ಈ ವಿಶ್ವದಲ್ಲಿ ಜೀವ, ಜಗತ್ತು, ಈಶ್ವರ ಈ ಮೂರು ವಸ್ತುವರ್ಗ ಗಳಿರುವವು. ಉಸಿರಾಡಿಸುವ ಪ್ರಾಣಿಮಾತ್ರಗಳೆಲ್ಲ ಜೀವವರ್ಗ, ಆ ಶಕ್ತಿ ಇಲ್ಲದ ಜಡಪದಾರ್ಥಗಳೆಲ್ಲ ಜಗತ್ತು. ಇವೆರಡಕ್ಕೂ ಕಾರಣೀಭೂತವಾದ ಶಕ್ತಿಯೇ ಈಶ್ವರ. ಇವೆಲ್ಲವುಗಳಾಚೆಗೆ ಇದ್ದುದೇ ಅಮೇಯ, ಅವ್ಯಕ್ತ, ಅನಂತವೆ ಮೂಲ. ಅದರಲ್ಲಿಯೇ ಇವುಗಳ ಲೀಲಾರೂಪವಾದ ಚಲ್ಲಾಟ. ಅದಕ್ಕೆ ಕ್ರೀಡೆ ಎಂದೂ ಹೇಳಬಹುದು. ಕಾರಣ, ಉದ್ದೇಶ, ಇಚ್ಛೆ, ಪ್ರಾಪ್ತವ್ಯ ಇವು ಯಾವವೂ ಇಲ್ಲದೆ ನಡೆಯುವ ಕ್ರಿಯಾಮಾಲೆಯೇ ಕ್ರೀಡೆ ಎನಿಸುವುದು. ಈ ಕ್ರೀಡೆ ಎಂಬುದರಲ್ಲಿ 'ನಾನು' ಎಂಬುದಕ್ಕೆ, ದ್ವಂದ್ವಗಳಿಗೆ, ತ್ರಿಗುಣಗಳಿಗೆ ಸಹ ಸ್ಥಾನವಿಲ್ಲ. ಇದೊಂದು ಕ್ರೀಡೆ, ಲೀಲಾವಿಹಾರ ಎಂಬ ಸಾಕ್ಷಿತ್ವವೆ ಜ್ಞಾನದ ಲಕ್ಷಣ. ಆದರೆ ಇದೊಂದು ಲೆತ್ತದಾಟವಲ್ಲ-'ಗಾಡ್ ಡಝ್‌ನಾಟ್ ಪ್ಲೇ ವುಯಿಥ್ ಡಾಯಿಸ್' ಎಂದು ಆಧುನಿಕ ಮಹಾವಿಜ್ಞಾನಿ ಐನ್‌ಸ್ಟಾಯಿನ್ ಉಸುರಿದ್ದಾನೆ. ಈ ಲೀಲೆಗೆ ಹಲವು ನಿಯಮ ನಿರ್ಬಂಧಗಳಿವೆ. ಇದಕ್ಕೆ ನಿಯಮಬದ್ಧವಾದ ಚದುರಂಗದಾಟ ಎನ್ನುವುದೇ ಉಚಿತ. **'ಸ್ವಯಂಭೂಃ ಯಾಥಾತಥ್ಯತೋ ಅರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ'** (ಈಶ ಉಪನಿಷತ್ತು).

ಇದನ್ನೆಲ್ಲ ತಿಳಿದುಕೊಳ್ಳಲು, ಸಾಕ್ಷಾತ್ಕರಿಸಲು, ಅದರಂತೆ ವರ್ತಿಸಲು 'ಪೂರ್ಣಯೋಗ' 'ಇಂಟೀಗ್ರಲ್' ಯೋಗ ಎಂಬ ಸಾಧನವನ್ನು ಶ್ರೀ ಅರವಿಂದರು ಹೇಳಿಕೊಟ್ಟಿದ್ದಾರೆ. ತನ್ನನ್ನು, ತನ್ನ ಸರ್ವಸ್ವವನ್ನು ಸಂಪೂರ್ಣವಾಗಿ ಪರಮಾತ್ಮನಿಗೆ ಅರ್ಪಿಸಿ ಬಿಡುವುದೆ ಆ ಯೋಗದ ಮುಖ್ಯ ಲಕ್ಷಣ. 'ನಾನು' ಎಂಬುದೇ ಇಲ್ಲದಂತಾದ ಮೇಲೆ ಏನು ಉಳಿಯುವದು? ಪರ ಮಾತ್ಮಶಕ್ತಿ, ವಿಶ್ವಾತ್ಮಶಕ್ತಿ ಅದರ ಲೀಲಾರೂಪ ವಿಶ್ವ ಅಷ್ಟೇ. ಆದರೆ ಅದು ಹುಚ್ಚಾಪಟ್ಟೆ ಕುಣಿಯುವದಿಲ್ಲ! ಭರತನಾಟ್ಯಕ್ಕೆ ಅದು ತಾಂಡವನೃತ್ಯವಿದ್ದರೂ ತಾಲ ಬದ್ಧತೆ ಇದೆ; ಅದರಂತೆ ಸತ್ಯವಿದ್ದ ಪರಮಾತ್ಮನ ಆವಿಷ್ಕಾರವು–ಲೀಲೆಯು–ಋತದಿಂದ ವಿಶ್ವಧರ್ಮದಿಂದ 'ಕಾಸ್ಮಿಕ್ ಲಾ' ದಿಂದ ನಿಯಮಿತವಿದೆ. ಆದುದರಿಂದಲೇ ಅದರಲ್ಲಿ ಆನಂದೋತ್ಪತ್ತಿ, ಆನಂದದ ಆವಿರ್ಭಾವ, ಆನಂದೋದ್ರೇಕ ತುಂಬಿತುಳುಕುತಿದೆ.

ಶ್ರೀ ಅರವಿಂದ ದರ್ಶನದಲ್ಲಿ ವ್ಯಕ್ತಕ್ಕೆ ಅವ್ಯಕ್ತದಷ್ಟೇ ಮಹತ್ವ. ವ್ಯಕ್ತ ಜಡಸೃಷ್ಟಿಯಲ್ಲಿ ಕೂಡ ಅವ್ಯಕ್ತ ದರ್ಶನ ಪಡೆಯುವದಷ್ಟೇ ಪೂರ್ಣತೆಯಲ್ಲ. ಈ ಜಡಸೃಷ್ಟಿಯನ್ನೆ ಪರಿವರ್ತಿಸಿ ಇದರಲ್ಲಿ ಪೂರ್ಣತೆಯನ್ನು ವ್ಯಕ್ತಪಡಿಸುವದೇ ಪ್ರಗ–ಮನದ, ಪ್ರಗತಿಯ, ಪರಿವರ್ತನದ ಮೂಲ ಉದ್ದೇಶ. ವಚನಕಾರರ ಒಂದು ಚಿಕ್ಕ ವಾಕ್ಯ ಈ ಮಾತನ್ನು ಸ್ಪಷ್ಟಪಡಿಸುವದು: **'ಇಹದಲ್ಲಿ ಸಲ್ಲದೇ ಇದ್ದುದು ಪರದಲ್ಲಿ ಸಲ್ಲಬಲ್ಲದೇ ?'** ಮೋಕ್ಷವೆಂದರೆ ಈ ಜಗತ್ತನ್ನು ಬಿಟ್ಟು, ಇದನ್ನು ಇದ್ದಕ್ಕಿದ್ದಂತೆಯೇ ಇಟ್ಟು ನಾವು ಎಲ್ಲಿಯಾದರೂ ಹೋಗುವುದಲ್ಲ; ಈ ಜಗತ್ತನ್ನೆ, ಈ ದೇಹವನ್ನೆ ದೈವೀಜಗತ್ತನ್ನು, ದೈವೀದೇಹವನ್ನು ಮಾಡು

ವಮ ನಿಜಮೋಕ್ಷ. ಯೋಗವೆಂದರೆ ಜಗತ್ತಿನಾಚೆಗೆ ಹೋಗುವುದಲ್ಲ, ಈ ಜಗತ್ತನ್ನೆ ಪರಿವರ್ತಿಸುವುದು. ದೇಹವನ್ನೆ ದೇಗುಲವನ್ನಾಗಿಸುವುದು, ಜೀವವನ್ನೆ ದೇವನನ್ನಾಗಿಸುವುದು. ಅದು ಕೂಡ ಕೇವಲ ವ್ಯಕ್ತಿಮಾತ್ರವನ್ನಲ್ಲ, ಇಡೀ ವಿಶ್ವದಲ್ಲಿಯ ಜೀವರಾಶಿಗಳನ್ನೆಲ್ಲ ದೇವರೂಪಗಳನ್ನಾಗಿಸುವುದು. ಅಲ್ಲಿಯವರೆಗೆ ಯಾರಿಗೂ ಯಾವ ತರಹದ ಬಿಡುವೂ ಇಲ್ಲ. ವೈಯಕ್ತಿಕ ಮೋಕ್ಷಕ್ಕೆ ಅರವಿಂದ ದರ್ಶನದಲ್ಲಿ ಸ್ಥಾನವಿಲ್ಲ. ಅದೊಂದು ನಿರ್ವಾಣ ಹೊರತು ಮೋಕ್ಷವಲ್ಲ. ಸಾಮೂಹಿಕ, ಸಾಂಘಿಕ, ಸಾರ್ವತ್ರಿಕ ಮೋಕ್ಷವೇ ಮೋಕ್ಷ. ಅರವಿಂದದರ್ಶನದಲ್ಲಿ ಸಮರ್ಪಿತ ಕರ್ಮಕ್ಕೆ ಜ್ಞಾನದಷ್ಟೇ ಮಹತ್ವ. ತ್ಯಾಗಯುಕ್ತ ನಿರಾಸಕ್ತ ಭೋಗಕ್ಕೆ ಯೋಗದಷ್ಟೇ ಮಹತ್ವ. ಜಡ-ಚೇತನ ಇವೆರಡು ಪ್ರತ್ಯೇಕ-ವಸ್ತುಗಳಲ್ಲ. ಅವು ಅವಸ್ಥಾ ಮಾತ್ರಗಳು. ಆಧುನಿಕ ವಿಜ್ಞಾನವು ಕೂಡ, ಎಲ್ಲವೂ ಶಕ್ತಿರೂಪ (ಎನರ್ಜಿ), ಜಡ ಎಂಬುದು ಅಥವಾ ಪ್ರತ್ಯೇಕ ಅಸ್ತಿತ್ವ ಎಂಬುದು ಯಾವ ವಸ್ತುವಿಗೂ ಇಲ್ಲೇ ಇಲ್ಲ ಎಂದು ಸಾರಿದೆ.

ಶ್ರೀ ಅರವಿಂದರು ಪಾಶ್ಚಾತ್ಯ ತತ್ವಜ್ಞಾನ-ಸಾಹಿತ್ಯಗಳನ್ನು ಅರಗಿಸಿಕೊಂಡವರು, ಪಾಶ್ಚಾತ್ಯ ವಿಜ್ಞಾನದ ತಿರುಳನ್ನರಿತವರು. ಅದೇ ರೀತಿ ಭಾರತೀಯ ಜ್ಞಾನ-ವಿಜ್ಞಾನವನ್ನು ಆತ್ಮಸಾತ್ ಮಾಡಿಕೊಂಡವರು. ಹತ್ತಾರು ವರುಷ ಅತ್ಯಂತ ಕಠೋರ ತಪಸ್ಸನ್ನು ಮಾಡಿದವರು. ಯೋಗಾಭ್ಯಾಸದಲ್ಲಿ ತನ್ನ ಜೀವನಸರ್ವಸ್ವವನ್ನು ವ್ಯಯಿಸಿದವರು. ಅದರ ಫಲಸ್ವರೂಪವೇ ಅವರ ಅರವಿಂದ ದರ್ಶನ. ಅವರ ಶತಾಬ್ದಿಯ ಕಾಲಕ್ಕೆ ಮೂವತ್ತು ಸಂಪುಟಗಳಲ್ಲಿ ಅವರು ಬರೆದದ್ದೆಲ್ಲ ಪ್ರಸಿದ್ಧವಾಗಿದೆ. ಅವರ ತಪಃಪ್ರಭಾವ, ಯೋಗಮಾರ್ಗದ ಆಕರ್ಷಣ ಇವು ಅವರ ಪಾಂಡಿಚೇರಿ ಆಶ್ರಮದಲ್ಲಿ ಎರಡುಸಾವಿರ ಜನರ ಸಮರ್ಪಿತ ಜೀವನದ ರೂಪದಿಂದ ಈ ಕ್ಷಣ ನಮಗೆ ಪ್ರತ್ಯಕ್ಷವಾಗಿವೆ. ಅವರು ವಿಶ್ವಮಾನವನ ಮಾರ್ಗದರ್ಶದಕ್ಕಾಗಿಯೇ ಜನ್ಮತಾಳಿದಂತೆ ಎಂದು ಹೇಳಿದರೆ ಅದು ಅತಿಶಯೋಕ್ತಿ ಆಗದು. ಅವರು ಈ ಭಾರತದಲ್ಲಿ ಹುಟ್ಟಿದುದು ನಮ್ಮೆಲ್ಲರ ಪರಮಭಾಗ್ಯ. ಅವರ ತೇಜದಿಂದ ಜ್ಞಾನಪ್ರಕಾಶದಿಂದ ಹೊಸ ಮಾನವ ಜೀವನ ಮೂಡಿಬರಬೇಕು. ಅದೇ ಅವರ ದರ್ಶನದ ಸಾರ್ಥಕ್ಯ.

## ಥಿಯಾಸಫಿ

**—ಟಿ. ವಿ. ರಾಚಪ್ಪ**

'ಥಿಯಾಸೊಫಿಯಾ'ಎಂಬುದು ಗ್ರೀಕ್ ಭಾಷೆಯ ಪದ. ಥಿಯಾಸ್ ಎಂದರೆ ದೇವತೆ. ಸೋಫಿಯಾ ಎಂದರೆ ಜ್ಞಾನ. 'ಥಿಯಾಸಫಿ' ಎಂದರೆ ಎಲ್ಲಕ್ಕೂ ಮೂಲಭೂತವಾಗಿರುವ ಮಹಾಚೈತನ್ಯದ ವಿಷಯವಾಗಿ ಮುಂದುವರೆದ ದೇವತೆಗಳು ಹೊಂದಿರುವ ದಿವ್ಯಜ್ಞಾನ ಎಂದು ಅರ್ಥ. ಇದಕ್ಕೆ ಪೌರಸ್ತ್ಯ ಸಿದ್ಧಾಂತದಲ್ಲಿ 'ಬ್ರಹ್ಮವಿದ್ಯೆ'ಎಂಬ ಹೆಸರಿದೆ. 'ಥಿಯಾಸಫಿ' ಎಂಬುದು ಒಂದು ಸಿದ್ಧಾಂತವಲ್ಲ. ಸಿದ್ಧಾಂತವೆಂದರೆ, ಅನುಮಾನ ಪ್ರಮಾಣದ ಆಧಾರದ ಮೇಲೆ ಕಟ್ಟಲ್ಪಟ್ಟಿರುವ ಸಮಂಜಸವಾದ ತಿಳಿವಳಿಕೆ ರೂಪವಾದ ಕಟ್ಟಡ. ಅನುಮಾನವೆಂದರೆ ಕಾರ್ಯದಿಂದ ಕಾರಣವನ್ನು ಊಹಿಸುವ ತರ್ಕಶಾಸ್ತ್ರದ ನಿಯಮವು. ಆದರೆ ಇಂತಹ ಊಹೆಯು ಒಂದೊಂದು ಸಂದರ್ಭದಲ್ಲಿ ತಪ್ಪಾಗಬಹುದು. ಆತ್ಮಸಾಕ್ಷಾತ್ಕಾರದ ಮೂಲಕ ಪಡೆದ ಅನುಭವವು ಎಲ್ಲ ಪ್ರಮಾಣಗಳಿಗಿಂತಲೂ ಖಚಿತವಾದುದು. ಏಕೆಂದರೆ ಮನಸ್ಸು ಹೊರಮುಖವಾಗಿ ಕೆಲಸ ಮಾಡತಕ್ಕ ಸ್ವಭಾವದ್ದು. ಸತ್ಯವು ಹೊರಗಿನ ದೃಷ್ಟಿಗೆ ಗೋಚರವಾಗುವುದಿಲ್ಲ. ಆದುದರಿಂದ ಥಿಯಾಸಫಿ ರೂಪದಲ್ಲಿ ಅಭಿವ್ಯಕ್ತವಾಗಿರುವ ದಿವ್ಯಜ್ಞಾನವೆಲ್ಲವೂ ಥಿಯಾಸಫಿ ಸಮಾಜದ ಹಿಂದಿರುವ ಜೀವನ್ಮುಕ್ತ ಮಹಾತ್ಮರುಗಳ ಅನುಭವದ ಆಧಾರವನ್ನು ಪಡೆದಿರುತ್ತದೆ. ಇಷ್ಟೇ ಅಲ್ಲದೆ ಅಂತಹ ಜೀವನ್ಮುಕ್ತ ಮಹಾತ್ಮರ ವೃದ್ಧ ಶಿಷ್ಯರಾದ ಹೆಚ್. ಬಿ. ಬ್ಲಾವಟ್ಸ್ಕಿ ಅಮ್ಮನವರು, ಡಾ॥ ಅನಿಬೆಸೆಂಟ್ ಮತ್ತು ಯೋಗಿ ಲೆಡ್‌ಬೀಟರ್ ಇವರುಗಳಿಂದ ಆ ದಿವ್ಯಜ್ಞಾನದ ಎಷ್ಟೋ ಭಾಗವು ಅವರು ಬೆಳೆಸಿಕೊಂಡ ದಿವ್ಯದೃಷ್ಟಿಯ ಮೂಲಕ ಅವಧರಿಸಲ್ಪಟ್ಟಿದೆ. ಉದಾಹರಣೆಗಾಗಿ ಚಂದ್ರಗೋಳದಲ್ಲಿ ಭೂತಕೋಟಿಗಳ ಸಂಸರಣವು ನಡೆಯುತ್ತಿಲ್ಲ–ಅದು ಬಿಲವಾಗಿ ನಶಿಸುತ್ತಿರುವ ಗೋಳವು–ಎಂಬ ಅಂಶವನ್ನು ಯೋಗಿ ಲೆಡ್‌ಬೀಟರ್‌ರವರು ೬೦-೭೦ ವರ್ಷಗಳ ಹಿಂದೆಯೇ ಬರೆದಿಟ್ಟಿರುತ್ತಾರೆ. ಈ ಸಂಗತಿಯನ್ನು ವಾಸ್ತವಾಂಶವೆಂದು ಈಚಿನ ವಿಜ್ಞಾನಿಗಳು ರುಜುವಾತುಪಡಿಸಿರುತ್ತಾರೆ. ಅಲ್ಲದೆ ಹಿಂದಿನ ಶತಮಾನದ ಕೊನೆಯ ಭಾಗದಲ್ಲಿ,ಎಂದರೆ ೧೮೮೮ನೆಯ ಇಸವಿಯಲ್ಲಿ ಹೆಚ್.ಬಿ.ಬಾವಟ್ಸ್ಕಿ ಅಮ್ಮನವರು ಬರೆದಿರುವ Secret-doctrine (ಗುಪ್ತವಿದ್ಯೆ)ಎಂಬ ಗ್ರಂಥದಲ್ಲಿಯೂ ಕೂಡ ಚಂದ್ರಗೋಳವು ಸತ್ತ ಕ್ಷೇತ್ರವೆಂದು ನಮೂದಿದೆ. ಈ ಗ್ರಂಥವನ್ನು ಜೀವನ್ಮುಕ್ತ ಮಹಾತ್ಮರುಗಳೇ ಅವರ ದೇಹವನ್ನು ಪ್ರವೇಶಮಾಡಿ ಬರೆದಿರುತ್ತಾರೆಂಬ ದಾಖಲೆ ಇದೆ. ಇದು ನಂಬಿಕೆಗೆ ಅರ್ಹವಾದುದು. ಏಕೆಂದರೆ, ಬ್ಲಾವಟ್ಸ್ಕಿ ಅಮ್ಮನವರು ಕಾಲೇಜಿನಲ್ಲಿ ಓದಿ ವ್ಯಾಸಂಗ ಮಾಡಿದವರಲ್ಲ. ಅವರ ಆ ಬೃಹದ್ಗ್ರಂಥವು ಮತ-ವಿಜ್ಞಾನ. ತತ್ತ್ವಜ್ಞಾನ ಮತ್ತು ಆಧ್ಯಾತ್ಮಿಕ ತಿಳಿವಳಿಕೆಯ ಎಲ್ಲಾ ಶಾಖೆಗಳಲ್ಲೂ ಪಾಂಡಿತ್ಯವನ್ನು ಪಡೆದಿರುವಂತಹ ಮಹಾವ್ಯಕ್ತಿಗಳಿಂದ ಮಾತ್ರ ಬರೆಯಲು ಸಾಧ್ಯವಾದುದು. ಅಲ್ಲದೆ ಈ ರೀತಿಯ ಗ್ರಂಥ ಭೂಗೋಳ ಸೃಷ್ಟಿಯಾದ ೨೦೦ ಕೋಟಿ ವರ್ಷಗಳಿಂದ

ಇಲ್ಲಿಯವರೆಗೆ ಹೊರಬಂದಿಲ್ಲವೆಂದು ಅನೇಕ ತಜ್ಞರು ಅಭಿಪ್ರಾಯಪಡುತ್ತಾರೆ. ಈ ಕಾರಣಗಳಿಂದ ಇಂತಹಉದ್ಗ್ರಂಥವನ್ನು ಬರೆಯುವ ಕಾರ್ಯದಲ್ಲಿ ಜೀವನ್ಮುಕ್ತ ಮಹಾತ್ಮರ ಮಾರ್ಗದರ್ಶನವು ಅಗತ್ಯವೆಂಬುದು ಎದ್ದುಕಾಣತಕ್ಕಂಥ ಅಂಶ.

'ಸತ್ಯಾನ್ನಾಸ್ತಿ ಪರೋ ಧರ್ಮಃ' ಎಂಬುದು ನಮ್ಮ ಥಿಯಾಸಫಿ ಸಮಾಜದ ಮುಖ್ಯ ಧ್ಯೇಯ. ಸತ್ಯವೆಂದರೆ: ಯಾವುದರಿಂದ ಈ ಪ್ರಪಂಚವು ಅಭಿವ್ಯಕ್ತವಾಗಿದೆಯೋ, ಯಾವುದರ ಆಧಾರದ ಮೇಲೆ ಅದು ನಿಂತಿದೆಯೋ ಅಂತ್ಯದಲ್ಲಿ ಯಾವುದರೊಳಕ್ಕೆ ಹೋಗಿ ಅದು ಸೇರಿಕೊಳ್ಳುತ್ತದೆಯೋ ಅಂತಹ ನಿತ್ಯವಾದುದೂ, ಅರಿವಿನ ಸ್ವರೂಪದ್ದೂ ಮಂಗಳಪ್ರದವೂ ಪ್ರಶಾಂತವೂ ಆದ ಏಕೈಕ ಚೈತನ್ಯವೆಂಬ ಪರಬ್ರಹ್ಮತತ್ತ್ವ. ಅದು ತನ್ನ ಅಮೃತದ ಕಿರಣಗಳನ್ನು ಪ್ರತಿಯೊಂದು ವಸ್ತುವಿನ ಮೇಲೆಯೂ ಪ್ರಸರಿಸುತ್ತಲೇ ಇರುತ್ತದೆ. ಎಂದರೆ ಪ್ರತಿಯೊಂದು ಜೀವಿಯು ತನ್ನಂತೆಯೇ ಸಾಯದೆ ಇರುವ ಸ್ವಭಾವವನ್ನು ಮೈಗೂಡಿಸಿಕೊಳ್ಳುವುದಕ್ಕೆ ತಕ್ಕ ಅನುಗ್ರಹಶಕ್ತಿಯನ್ನು ಎಲ್ಲದರ ಮೇಲೂ ವರ್ಷಿಸುತ್ತಿದೆ. ಇದನ್ನು ನಮ್ಮ ಶಿವಶರಣರು 'ಪ್ರಥಮದಲ್ಲಿನ ಅಖಂಡಾದ್ವಯ, ಅನುಪಮ, ನಿರವಯವ, ನಿರಂಜನ, ಸರ್ವಶೂನ್ಯ, ಸಚ್ಚಿದಾನಂದ ಪರಿಪೂರ್ಣವೆಂಬ ನಿಃಕಲ ಲಿಂಗವು' ಎಂಬುದಾಗಿ ವರ್ಣಿಸಿರುತ್ತಾರೆ.

ಇದನ್ನು ನಮ್ಮ ವೇದಾಂತದಲ್ಲಿ ಸತ್ ಎಂದು ಹೇಳುತ್ತಾರೆ. ಸತ್, ಎಂದರೆ ಒಳ್ಳೆಯದೂ ಮತ್ತು ನಿತ್ಯವೂ ಎಂದರೆ ದೇಶ ಕಾಲಗಳಿಗೆ ಅತೀತವೂ ಆಗಿರುವಂಥದು. ಆದುದರಿಂದ, ಇದನ್ನು ನಿರುಪಾಧಿಕ ಚೈತನ್ಯ ಅಥವಾ ಶೂನ್ಯವೆಂದು ಕರೆಯುತ್ತಾರೆ. ಇದರಲ್ಲಿ ಉಂಟಾಗುವ ಮೊದಲಿನ ಅಭಿವ್ಯಕ್ತಿಯೇ ಶಿವಶಕ್ತ್ಯಾತ್ಮಕ ಚೈತನ್ಯ. ಇದೂ ಕೂಡ ಅಭಿವ್ಯಕ್ತವಾದ ಪ್ರಪಂಚಕ್ಕೆ ಅತೀತವಾದುದು. ಒಂದು ದೃಷ್ಟಿಯಿಂದ, ಆ ನಿರುಪಾಧಿಕ ಚೈತನ್ಯಕ್ಕೂ ಮತ್ತು ದೇಶ ಕಾಲಗಳಿಗೆ ಒಳಗಾಗಿರುವ ಅಭಿವ್ಯಕ್ತ ಪ್ರಪಂಚಕ್ಕೂ ಮಧ್ಯಮಸ್ಥಿತಿ ಎಂದು ಇದನ್ನು ಭಾವಿಸಬೇಕಾಗುತ್ತದೆ. ಈ ಮಹಾ ಚೈತನ್ಯದಿಂದ ಅನಂತರ ಅಭಿವ್ಯಕ್ತವಾದ ಚೈತನ್ಯವೇ ವಿಷ್ಣುಮೂರ್ತಿ. ವಿಷ್ಣುವಿನ ಪ್ರಜ್ಞೆಯಲ್ಲಿ ಪ್ರಕೃತಿಯೇ ಬೇರೆ, ಪುರುಷನಾದ ತಾನೇ ಬೇರೆ ಎಂಬ ಅರಿವು ಪ್ರಥಮತಃ ಉದಯವಾಗುತ್ತದೆ. ಅನಂತರ ಮಹಾಬುದ್ಧಿ ಎಂಬ ಬ್ರಹ್ಮಚೈತನ್ಯವು ಅಭಿವ್ಯಕ್ತವಾಗುತ್ತದೆ. ಆತನಿಂದ ಪಂಚಭೂತಾತ್ಮಕವಾದ ಪ್ರಪಂಚವು ಉತ್ಪತ್ತಿಯಾಗುತ್ತದೆ. ಹೀಗೆ ಒಂದೇ ಆಗಿದ್ದ ಮಹಾಚೈತನ್ಯದಲ್ಲಿ ಮೂವರು ಮೂರ್ತಿಗಳು ಏಕಕಾಲದಲ್ಲಿ ಅಭಿವ್ಯಕ್ತವಾಗುತ್ತಾರೆ. ಉದಾಹರಣೆಗಾಗಿ 'ನಾನು' ಎಂಬ ಸ್ವಪ್ರಜ್ಞೆಯು ಹುಟ್ಟಬೇಕಾದರೆನಾನು ಅಲ್ಲದ್ದು (ಪ್ರಕೃತಿ) ಮತ್ತೊಂದು ಇರಬೇಕು. ಆದರೆ ಆಗಲೇ ಅವೆರಡರ ಮಧ್ಯೇ ಒಂದು ಸಂಬಂಧವು ಇದ್ದೇ ಇರುತ್ತದೆ. ಹೀಗೆ ಒಂದು ಇದ್ದುದು ಮೂರು ಆಗುತ್ತದೆ. 'ನಾನು' ಎಂಬುದೇ ಶಿವಚೈತನ್ಯ. 'ನಾನು' ಅಲ್ಲದ್ದು ಎಂಬುದೇ ಬ್ರಹ್ಮಚೈತನ್ಯ,ಎಂದರೆ ಪ್ರಕೃತಿಯ ಹಿಂದಿರುವ ಚೈತನ್ಯ. ಇವೆರಡಕ್ಕೂ ಮಧ್ಯೇ ಇರುವ ಸಂಬಂಧವೇ ವಿಷ್ಣುಚೈತನ್ಯ. ಇದನ್ನು ತತ್ತ್ವದೃಷ್ಟಿಯಿಂದ ದೈವೀ ಪ್ರಕೃತಿ ಎಂದೂ ಹೇಳುವುದುಂಟು. ಈ ಪ್ರಪಂಚವು ಅಭಿವ್ಯಕ್ತವಾದಾಗ ಇದಕ್ಕೆ ಬ್ರಹ್ಮನು ತನ್ನ ಇರುವಿಕೆಯನ್ನು ಸಾಲವಾಗಿ ಕೊಡುತ್ತಾನೆ. ಎಂದರೆ ಈ ಪ್ರಪಂಚವು ತಾನೇ ಎಂದು ಈಶ್ವರ ಚೈತನ್ಯವು ಭಾವಿಸಿದಂತಾಯಿತು. ಕಲ್ಪಾಂತ್ಯದಲ್ಲಿ ಇದು ತಾನಲ್ಲವೆಂದು ಭಾವಿಸಿದಾಗ ಪ್ರಳಯವಾಗುತ್ತದೆ.

**ಜೀವಾತ್ಮರುಗಳ ಅಭಿವ್ಯಕ್ತಿ**

ಆ ಮಹಾಶಿವಚೈತನ್ಯದಲ್ಲಿ ಜೀವಾತ್ಮರುಗಳು ಉದಯವಾಗುತ್ತಾರೆ. ಇದನ್ನು ಬೋಧಿಸತಕ್ಕ ಗುರುಶಿಷ್ಯ ಸಂವಾದವು ಹೀಗಿರುತ್ತದೆ :

**ಗುರು:-** ಈ ಗಾಢಾಂಧಕಾರದ ಮಧ್ಯೇ ನಿನ್ನ ದೃಷ್ಟಿಯನ್ನು ಊರ್ಧ್ವಮುಖಮಾಡಿ ನೋಡು ಶಿಷ್ಯನೇ, ಏನು ಕಾಣುತ್ತದೆ?.

**ಶಿಷ್ಯ:-** ಸ್ವಾಮಿ ಅಸಂಖ್ಯಾತ ಕಿಡಿಗಳನ್ನು ಒಳಗೊಂಡಿರುವ ಒಂದು ಮಹಾಜ್ವಾಲೆಯು ಕಂಗೊಳಿಸುತ್ತದೆ. ಅದರಲ್ಲಿ ಇರುವ ಕಿಡಿಗಳಿಗೂ ಆ ಮಹಾಚೈತನ್ಯಕ್ಕೂ ನಿತ್ಯ ಸಂಬಂಧವಿರುತ್ತದೆ. ಆದುದರಿಂದ ಅವು ಕ್ರಮೇಣ ಪ್ರಜ್ವಲಿಸಿ ಆ ಮಹಾಜ್ವಾಲೆಯಂತೆಯೇ ಅಭಿವೃದ್ಧಿಯಾಗುವುವೇ ವಿನಾ ತಣ್ಣಗಾಗತಕ್ಕವಲ್ಲ.

**ಗುರು:-** ಶಿಷ್ಯನೆ, ಚೆನ್ನಾಗಿ ಹೇಳಿದೆ. ಈಗ ನಿನ್ನ ಹೃದಯ ಮಧ್ಯದಲ್ಲಿ ಒಂದು ಜ್ಯೋತಿ ಉರಿಯುತ್ತಿದೆ. ನಿನ್ನ ನೆರೆಯವನ ಹೃದಯದಲ್ಲಿಯೂ ಕೂಡ ಮತ್ತೊಂದು ಜ್ಯೋತಿಯು ಉರಿಯುತ್ತಿದೆ. ಇವೆರಡೂ ಬೇರೆ ಬೇರೆಯೋ, ಒಂದೇಯೋ ?

**ಶಿಷ್ಯ:-** ಸ್ವಾಮಿ, ಇರುವುದೊಂದೇ ಮಹಾಜ್ಯೋತಿ. ಅದರ ಒಂದೊಂದು ಕಿರಣವೂ ಒಬ್ಬೊಬ್ಬನ ಹೃದಯದಲ್ಲಿ ಪ್ರಕಾಶಿಸುತ್ತವೆ. ಅದನ್ನು ಜನರು ದೇಹಭ್ರಾಂತಿಗೆ ಒಳಗಾಗಿ 'ನನ್ನ ಆತ್ಮ' 'ನಿನ್ನ ಆತ್ಮ' ಎಂದು ಹೇಳುತ್ತಾರೆ. ಉದಯವಾದ ಜೀವಾತ್ಮರುಗಳಿಗೆ, ಪುರುಷಾತ್ಮರೆಂದು (monod) ಎಂದು ಕರೆದಿದೆ. ಇದಕ್ಕೆ ಉಪನಿಷತ್ತಿನಲ್ಲಿ 'ಪ್ರಜ್ಞಾನಾಂಶು' ಎಂದು ಕರೆದಿದೆ. ಈ ಜೀವಾತ್ಮರುಗಳು ಆದಿಲೋಕಕ್ಕೆ (ಶಿವಲೋಕಕ್ಕೆ) ಸಂಬಂಧಪಟ್ಟವರಾದರೂ ಎರಡನೆಯ ಲೋಕವಾದ ವೈಕುಂಠಕ್ಕೆ ಇಳಿದು ವಿಷ್ಣುವಿನ ರಕ್ಷಣೆಗೆ ಒಳಪಟ್ಟು ತಮ್ಮ ಸಂಸರಣ ಕ್ಷೇತ್ರವಾದ ಪಂಚಭೂತಾತ್ಮಕ ಲೋಕಗಳು ಸೃಷ್ಟಿಯಾಗುವವರೆಗೆ ವಿಷ್ಣುಲೋಕದಲ್ಲೇ ಕಾದಿ

ರುತ್ತಾರೆ. ಬ್ರಹ್ಮನಿಂದ ಸೃಷ್ಟಿಯಾದ ಲೋಕಗಳೆಲ್ಲವೂ ಉದಯವಾಗುತ್ತವೆ, ಕಣ್ಮರೆಯಾಗುತ್ತವೆ. ಆದರೆ ನನ್ನನ್ನು ಎಂದರೆ ವಿಷ್ಣುಲೋಕವನ್ನು ಹೊಂದಿದವನಿಗೆ ಪುನರ್ಜನ್ಮವು ಇಲ್ಲವೆಂಬ ಭಗವದ್ಗೀತೆಯ ಪ್ರಮಾಣವಿದೆ.*

ಮೇಲ್ಕಂಡ ಸೃಷ್ಟಿ ಕ್ರಮವನ್ನು ನಮ್ಮ ಶಿವಶರಣರು: 'ಏನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂ ತಾನೇ ಸ್ವಯಂಭುಲಿಂಗಸ್ಥಲವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ, ಆ ಶಿವಶಕ್ತ್ಯಾತ್ಮಕದಿಂದ ಆದುದು ಆತ್ಮ, ಆತ್ಮ ದಿಂದ ಆದುದು ಆಕಾಶ, ಆಕಾಶದಿಂದ ಆಯಿತ್ತು ವಾಯು, ವಾಯುವಿನಿಂದ ಆಯಿತ್ತು ಅಗ್ನಿ, ಅಗ್ನಿಯಿಂದ ಆಯಿತ್ತು ಅಪ್ಪು, ಅಪ್ಪುವಿನಿಂದ ಆಯಿತ್ತು ಪೃಥ್ವಿ, ಪೃಥ್ವಿಯಿಂದ ಆಯಿತ್ತು ಜಗಜೀವನವೆಲ್ಲವು. ನಿಮ್ಮ ನೆನಹು ಮಾತ್ರದಿಂದ ಆದುವು ಸಿಮ್ಮಲಿಗೆಯ ಚೆನ್ನರಾಮಾ' ಈ ರೀತಿ ವಿವರಿಸಿದ್ದಾರೆ.

ಥಿಯಾಸಫಿ ಸಾಹಿತ್ಯದ ಪ್ರಕಾರವೂ ಕೂಡ ಸೃಷ್ಟಿಕ್ರಮವು ಈ ಮಾರ್ಗವನ್ನೇ ಅನುಸರಿಸುತ್ತದೆ. ಮೊದಲು ಆಕಾಶ ತತ್ತ್ವ ಅನಂತರ ಕ್ರಮವಾಗಿ ವಾಯು, ತೇಜಸ್ಸು, ಅಪ್ಪು ಮತ್ತು ಪೃಥ್ವಿ ಈ ರೀತಿ ಸೃಷ್ಟಿಯಾದುವು. ಈ ತತ್ತ್ವಗಳ ವಿಚಾರ ಜನರಿಗೆ ಸ್ಪಷ್ಟವಾಗಿ ತಿಳಿದಂತೆ ತೋರುವುದಿಲ್ಲ. ಈ ಸ್ಥೂಲಲೋಕಕ್ಕೆ ಸಂಬಂಧಪಟ್ಟ ಅಪ್ಪು, ತೇಜಸ್ಸು, ವಾಯು, ಆಕಾಶತತ್ತ್ವಗಳೇ ಅಲ್ಲ. ಈ ಪೃಥ್ವಿತತ್ತ್ವವು ಪ್ರಧಾನವಾಗಿರುವುದರಿಂದಲೂ ಉಳಿದವುಗಳು ಗೌಣವಾಗಿರುವುದರಿಂದಲೂ ಇದಕ್ಕೆ ಪೃಥ್ವಿತತ್ತ್ವವೆಂದು ಹೆಸರು ಬಂದಿದೆ. ಇದಕ್ಕಿಂತಲೂ ಸೂಕ್ಷ್ಮವಾದ ಅಪ್ಪು ಪ್ರಧಾನವಾದ ತತ್ತ್ವವು ಮತ್ತೊಂದಿದೆ. ಇದನ್ನು ಭುವರ್ಲೋಕವೆಂದು ಕರೆಯುತ್ತಾರೆ. ಅಪ್ಪು ತತ್ತ್ವಕ್ಕಿಂತಲೂ ಕ್ರಮಶಃ ಸೂಕ್ಷ್ಮವಾಗಿರುವ ಅಗ್ನಿ(ತೇಜಸ್ಸು), ವಾಯು ಮತ್ತು ಆಕಾಶತತ್ತ್ವಗಳು ಒಂದಕ್ಕಿಂತಲೂ ಒಂದು ಸೂಕ್ಷ್ಮವಾಗಿರುತ್ತವೆ. ಮನುಷ್ಯನ ಪ್ರಜ್ಞೆಯ ದೃಷ್ಟಿಯಿಂದ ಈ ತತ್ತ್ವವನ್ನೇ ಏಳುಲೋಕಗಳನ್ನಾಗಿ ವಿಂಗಡಿಸಿರುತ್ತಾರೆ. ಭೂಃ–ಭುವಃ–ಸುವಃ–ಮಹಃ (ಈ ಕೊನೆಯಪೆರಡೂ ಮನಸ್ತತ್ತ್ವದ ಭಾಗಗಳು) ಜನಃ–ತಪಃ–ಸತ್ಯಂ (ಈ ಕೊನೆಯಪೆರಡೂ ಆಕಾಶತತ್ತ್ವದ ಭಾಗಗಳು). ಈಗ ಇವುಗಳನ್ನೆಲ್ಲ ಮನುಷ್ಯನ ಪ್ರಜ್ಞೆಯ ದೃಷ್ಟಿಯಿಂದ ಮೇಲಿನಿಂದ ಎಂದರೆ ಸೂಕ್ಷ್ಮತಮ ಸ್ಥಿತಿಯಿಂದ ಆತ್ಮಲೋಕ, ಬುದ್ಧಿಲೋಕ, ಶುದ್ಧಮನಸ್ಸಿಗೆ ಸಂಬಂಧಪಟ್ಟ ಅರೂಪಲೋಕ–ಕಾಮ ಮನಸ್ಸಿಗೆ ಸಂಬಂಧಪಟ್ಟ ರೂಪಲೋಕ, ಅಪ್‌ತತ್ತ್ವಕ್ಕೆ ಸಂಬಂಧಪಟ್ಟ ಕಾಮಲೋಕ ಮತ್ತು ಸ್ಥೂಲಲೋಕ ಅಥವಾ ಭೂಲೋಕ ಎಂದು ಕರೆಯುತ್ತಾರೆ. ಹೀಗೆ ಪ್ರತಿಯೊಂದು ತತ್ತ್ವದಲ್ಲೂ ಉಳಿದ ನಾಲ್ಕು ತತ್ತ್ವಗಳು ಸೇರಿಕೊಂಡಿರುತ್ತವೆ. ಆದರೆ ಅವು ಗೌಣಸ್ಥಾನದಲ್ಲಿರುತ್ತವೆ. ಯಾವ ತತ್ತ್ವವು ಪ್ರಧಾನವಾಗಿದೆಯೋ ಅದು ಅರ್ಧಭಾಗದಷ್ಟಿದ್ದರೆ ಉಳಿದ ತತ್ತ್ವಗಳು 'ಧಾಮಾಪಾ' ಪ್ರಕಾರ ಪ್ರತಿಯೊಂದು $\frac{1}{8}$ ಭಾಗದಷ್ಟಿರುತ್ತವೆ.

ಮೇಲ್ಕಂಡಂತೆ ಸತ್ಯಲೋಕದಿಂದ ಭೂಲೋಕದವರೆಗೂ ಸೃಷ್ಟಿಕಾರ್ಯವು ಮುಂದುವರಿದ ಕೂಡಲೇ ವಿಷ್ಣುಲೋಕದಲ್ಲಿರುವ ಪುರುಷಾತ್ಮರುಗಳು ತಮ್ಮ ಲೋಕದ ಚಿಚ್ಛಕ್ತಿಯಿಂದ ಮಾಡಲ್ಪಟ್ಟ ಸೂತ್ರವನ್ನು ಕೆಳಕ್ಕೆ ಕಳುಹಿಸುತ್ತಾರೆ. ಆ ಸೂತ್ರವು ಆಕಾಶತತ್ತ್ವದ ಒಂದು ಅಣುವನ್ನು ಹೊಂದಿಸಿಕೊಂಡು ಆ ಮೂಲಕ 'ಆತ್ಮ' ಎಂಬ ಹೆಸರನ್ನು ಪಡೆಯುತ್ತದೆ. ಅಲ್ಲಿಂದ ಇನ್ನೂ ಒಂದು ಅಂತಸ್ತು ಕೆಳಕ್ಕೆ ಇಳಿದ ಸೂತ್ರವು ವಾಯುತತ್ತ್ವದ ಒಂದು ಅಣುವನ್ನು ಸಂಬಂಧಿಸಿಕೊಂಡು 'ಬುದ್ಧಿ' ಎಂಬ ಹೆಸರನ್ನು ಪಡೆಯುತ್ತದೆ. ಅಲ್ಲಿಂದ ತೇಜಸ್ತತ್ತ್ವಕ್ಕೆ ಇಳಿದು ಅಲ್ಲೂ ಒಂದು ಅಣುವನ್ನು ತನ್ನದಾಗಿ ಮಾಡಿಕೊಂಡು 'ಶುದ್ಧ ಮನಸ್ಸು' ಎಂಬ ಹೆಸರನ್ನು ಪಡೆಯುತ್ತದೆ. ಅನಂತರ ಆ ಸೂತ್ರವು ಹಿಂತಿರುಗಿ ಊರ್ಧ್ವಮುಖವಾಗಿ ಹತ್ತಿ ತನ್ನ ಮೂಲ ಸ್ವರೂಪವಾದ ಪುರುಷಾತ್ಮನಿಗೆ ಸೇರಿಕೊಳ್ಳುತ್ತದೆ. ಆದುದರಿಂದಲೇ ಈ ಮೂಲ ಚೈತನ್ಯವಾದ ಜೀವಾತ್ಮನಿಗೆ (ಶಿವಚೈತನ್ಯದ ಒಂದು ಕಿಡಿ) ಅವ್ಯಕ್ತಾತ್ಮವೆಂದು ಉಪನಿಷತ್ತಿನಲ್ಲಿ ಕರೆದಿದೆ. ಅನಂತರ ಎಂದರೆ ಬುದ್ಧಿತತ್ತ್ವದಿಂದ ಒಂದು ಸೂತ್ರವು ಹೊರಟು ಕೆಳಗಿನ ರೂಪಲೋಕ (ಅಣು ಸಂದಾಯ), ಕಾಮಲೋಕ (ಒಂದು ಅಣು), ಮತ್ತು ಸ್ಥೂಲಲೋಕ (ಒಂದು ಅಣು)–ಇವುಗಳಲ್ಲಿ ಒಂದೊಂದು ಪ್ರಕೃತಿ ಕಣವನ್ನು ದೇಹ ಬೀಜವನ್ನಾಗಿ ಆರಿಸಿಕೊಂಡು ದೇಹಾತ್ಮವು ಅಭಿವ್ಯಕ್ತವಾಗುವುದಕ್ಕೆ ಅವಕಾಶವಾಗುತ್ತದೆ.

**ತತ್ತ್ವದರ್ಪಣ :**

ಇಲ್ಲಿ ಗಮನಿಸಬೇಕಾದ ಒಂದು ತತ್ತ್ವವಿದೆ. ಅದೇನೆಂದರೆ ಪಶುಜನ್ಮದಿಂದ ಮಾನವಜನ್ಮಕ್ಕೆ ಹತ್ತುವವರೆಗೂ ಮೇಲ್ಕಂಡಂತೆ ದೇಹಾತ್ಮವು ಮನುಷ್ಯನಿಗೆ ಇರುವಂತೆ ಪಶುಗಳಿಗೆ ಇರುವುದಿಲ್ಲ. ಮನುಷ್ಯಜನ್ಮಕ್ಕೆ ಬರುವುದಕ್ಕೆ ಮುಂಚಿನ ಬೆಳವಣಿಗೆಯ ಅಂತಸ್ತುಗಳು ಈ ರೀತಿ ಇರುತ್ತವೆ. ನಮಗೆ ಸ್ಪಷ್ಟವಾಗಿ ಕಾಣುವಂತೆ ಕಲ್ಲು, ಮಣ್ಣು, ಲೋಹ ಮೊದಲಾದ ಖನಿಜಸ್ಥಿತಿ ಕೇವಲ ಕೆಳಗಿನ ಮಟ್ಟದ್ದು. ಆದರೆ ಖನಿಜಾವಸ್ಥೆಗೆ ಇಳಿಯುವುದಕ್ಕೆ ಮುಂಚಿನ ಭಗವತ್‌ಚೈತನ್ಯದ ಅವರೋಹಣ ಕ್ರಮವು ಈ ರೀತಿ ಇರುತ್ತದೆ. ಆದಿತತ್ತ್ವದಿಂದ ಒಂದೊಂದು ಮೆಟ್ಟಿಲಾಗಿ ಇಳಿದುಕೊಂಡು ಬಂದ ಭಗವತ್‌ಚೈತನ್ಯವು ಅರೂಪ ಲೋಕದಲ್ಲಿ ಒಂದನೇ ಭೂತವರ್ಗವಾಗಿಯೂ, ರೂಪಲೋಕದಲ್ಲಿ ಎರಡನೇ ಭೂತವರ್ಗವಾಗಿಯೂ ಅನಂತರ ಕಾಮಲೋಕ

* ಆ ಬ್ರಹ್ಮಭುವನಾಲ್ಲೋಕಾಃ। ಪುನರಾವರ್ತಿನೋಽರ್ಜುನ । ಮಾಮುಪೇತ್ಯತುಕೌಂತೇಯ । ಪುನರ್ಜನ್ಮನವಿದ್ಯತೇ॥

## ತತ್ತ್ವದರ್ಪಣ

| | |
|---|---|
| ಕೈಲಾಸ<br>ಆದಿತತ್ತ್ವ | ತ್ರಿಮೂರ್ತಿಗಳ ಆವಿರ್ಭಾವ<br>ಶಿವ |
| ವೈಕುಂಠ<br>ಅನುಪಾದಕತತ್ತ್ವ | ವಿಷ್ಣು |
| ಆಕಾಶತತ್ತ್ವ | ಬ್ರಹ್ಮ<br>ಆತ್ಮ |
| ವಾಯುತತ್ತ್ವ | ಬುದ್ಧಿ |
| ತೇಜಸ್ತತ್ತ್ವ | ಶುದ್ಧ ಮನಸ್ಸು.<br>ಕಾರಣ ದೇಹ. |
| ಅಪ್ ತತ್ತ್ವ | ಮನೋದೇಹ.<br>ಕಾಮದೇಹ. |
| ಪೃಥ್ವಿತತ್ತ್ವ | ಪರಮಾಣು. ಪ್ರಾಣಮಯ.<br>ಅಣು.<br>ಸೂಕ್ಷ್ಮ ಅತಿವಾಯು.<br>ಸ್ಥೂಲ ಅತಿವಾಯು. ಅನ್ನಮಯ.<br>ವಾಯು ದ್ರವ ಘನ. |

ದಲ್ಲಿ ಮೂರನೇ ಭೂತ ವರ್ಗವಾಗಿಯೂ ಅಭಿವ್ಯಕ್ತವಾಗಿ ಅನಂತರ ಖನಿಜಾವಸ್ಥೆಗೆ ಇಳಿಯುತ್ತದೆ. ಈ ಅಂತಸ್ತಿನಲ್ಲಿ ಜೀವಾತ್ಮನು ತನ್ನ ರೂಪವನ್ನು ಇದ್ದದ್ದು ಇದ್ದಂತೆಯೇ ಕಾಪಾಡಿಕೊಳ್ಳುವ ಅರ್ಹತೆಯನ್ನು ಪಡೆದುಕೊಳ್ಳುತ್ತಾನೆ. ಏಕೆಂದರೆ ಖನಿಜಾವಸ್ಥೆಯಲ್ಲಿನ ರೂಪಗಳು ಸ್ಥಿರವಾದುವು. ಅನಂತರ ಸಸ್ಯದ ಅಂತಸ್ತಿನಲ್ಲಿ ಬಾಗುವ ಮತ್ತು ಹೊಂದಿಕೊಳ್ಳುವ ಸ್ವಭಾವವನ್ನು ಕಲಿಯುತ್ತಾನೆ. ಉದಾಹರಣೆಗಾಗಿ ನೆಲದಮೇಲೆ ಬಿದ್ದಿರುವ ವಸ್ತುವನ್ನು ತೆಗೆದುಕೊಳ್ಳಬೇಕಾದರೆ ನಮ್ಮ ದೇಹವು ಬಾಗ ಬೇಕಾಗುತ್ತದೆ. ಅನಂತರ ಚಲಿಸುವ ನೈಪುಣ್ಯತೆಯನ್ನು ಪಶು ಅಂತಸ್ತಿನಲ್ಲಿ ಕಲಿಯುತ್ತಾನೆ. ಇದರಿಂದ ವ್ಯಕ್ತಪಡುವುದೇನೆಂದರೆ ಜೀವಾತ್ಮನು ಹೊಂದಿರುವ ಶಕ್ತಿ ವಿಶೇಷಗಳನ್ನೆಲ್ಲ ತಾನೇ ಸ್ವಪ್ರಯತ್ನದಿಂದ ಪಡೆದಿರುತ್ತಾನೆ ವಿನಾ ಹೊರಗಿನಿಂದ ಅನುಗ್ರಹೀತವಾದುವು ಸರ್ವಥಾ ಅಲ್ಲ.

ಪಶುಗಳು ಮಾನವ ಸಂಸರ್ಗದಿಂದ ಮಾನವರಾಗುತ್ತವೆ. ಜೀವಾತ್ಮನು ಮಾನವ ಹಂತಕ್ಕೆ ನೊಟ್ಟ ಮೊದಲು ಹತ್ತಿದಾಗ ಪಶುವಿನ ಆತ್ಮವು ಆ ಮನುಷ್ಯನ ಕಾರಣದೇಹವಾಗಿ ರೂಪಗೊಳ್ಳುತ್ತದೆ. ಅದುವರೆಗೂ ಬುದ್ಧಿ ಮಟ್ಟದಲ್ಲಿ ಕಾದಿದ್ದ ಆತ್ಮಬುದ್ಧಿಯ ಸೂತ್ರವು ಅದರೊಳಕ್ಕಿಳಿದು ಮನಸ್ತತ್ತ್ವ ಎಂದು ಎನಿಸಿಕೊಳ್ಳುತ್ತದೆ. (ಪಶುಗಳಿಗೆ ಕಾರಣ ದೇಹವಿರುವುದಿಲ್ಲ.) '**ಭೂಮಿರಾಪೋಽನಲೋವಾಯುಃ ಖಂಮನೋ ಬುದ್ಧಿರೇವಚ ಅಹಂಕಾರಂ ಇತೀಯಂ ಮೇ ಭಿನ್ನಾಪ್ರಕೃತಿರಷ್ಟಧಾ॥**' ಈ ಭಗವದ್ಗೀತೆಯ ಶ್ಲೋಕದ ಪ್ರಕಾರ ಪೃಥ್ವಿಯಾದಿ ಆಕಾಶತತ್ತ್ವದವರೆಗೂ ಇರುವ ಪಂಚಮಹಾಭೂತಗಳು ಹೊರಗಿನ ಕ್ಷೇತ್ರವನ್ನೂ ಮನಸ್ಸು-ಬುದ್ಧಿ ಮತ್ತು ಅಹಂಕಾರ ತತ್ತ್ವ-ಈ ಮೂರು ಮನುಷ್ಯನೊಳಗಿರುವ ಪ್ರಜ್ಞೆಯ ಉಪಕರಣಗಳನ್ನೂ ಸೂಚಿಸುತ್ತವೆ. ಇಲ್ಲಿ ಅಹಂಕಾರತತ್ತ್ವವೆಂಬುದೇ ಥಿಯಾಸಫಿ ಪರಿಭಾಷೆಯಲ್ಲಿ ಆತ್ಮವೆಂಬುದು. ಏಕೆಂದರೆ 'ನಾನು' ಎಂಬ ಕರ್ತೃತ್ವ ಭಾವನೆಯನ್ನು ಸೂಚಿಸುವುದೇ ಆತ್ಮತತ್ತ್ವವು ಎಂದರೆ ಶಿವತತ್ತ್ವದ ಅಂಶವು. ಪಶುಗಳಲ್ಲಿ ಈ 'ನಾನು' ಎಂಬ ಭಾವನೆ ಇರುವುದಿಲ್ಲ.

ಪುರುಷಾತ್ಮವು ಮೇಲಿನ ಲೋಕದಿಂದ ಕೆಳಗಿನ ಲೋಕಗಳಿಗೆ ತನ್ನ ಪ್ರತಿನಿಧಿಗಳಾದ ಅಂತರಾತ್ಮವನ್ನು (ಆತ್ಮ-ಬುದ್ಧಿ-ಮನಸ್ಸು ಎಂಬ ಮೂರರ ಸಮುಚ್ಚಯವನ್ನು) ಮತ್ತು ಕೆಳಗಿನ ಮನಸ್ಸು, ಕಾಮ ಮತ್ತು ಸ್ಥೂಲರೂಪವಾದ-ದೇಹಾತ್ಮವನ್ನು ಕಳುಹಿಸಿರುವ ಉದ್ದೇಶವು ಕೆಳಗಿನ ಮಟ್ಟದ ಪ್ರಕೃತಿಯನ್ನು (ದೇಹಸ್ವಭಾವವನ್ನು) ಗೆಲ್ಲುವುದೇ ಆಗಿರುತ್ತದೆ.

ಇಂದ್ರಿಯಗಳಿಗಿಂತ ಶಬ್ದ ಸ್ಪರ್ಶಾದಿ ವಿಷಯಗಳು ಪ್ರಬಲವಾದುವು. ವಿಷಯಗಳಿಗಿಂತ ಮನಸ್ಸು ಪ್ರಬಲವಾದುದು. ಏಕೆಂದರೆ ಆಕರ್ಷಣೀಯವಾದ ವಿಷಯಗಳಿಗೆ ಬೆಲೆ ಕೊಟ್ಟಿರುವುದೇ ಮನಸ್ಸು. ಅನೇಕರು ಯುಗಾದಿ ಹಬ್ಬದ ದಿವಸ ಬೇವಿನ ಹೂವನ್ನು ತಿನ್ನುವುದಕ್ಕೆ ಇಷ್ಟಪಡುವುದಿಲ್ಲ. ಆದರೆ ಶ್ರೀ ಸಿದ್ಧಗಂಗಾ ಸ್ವಾಮೀಜಿಯವರು ಬೇವಿನ ಚಕ್ಕೆ ಕಷಾಯವನ್ನು ದೇಹ ದಾರ್ಢ್ಯ ದೃಷ್ಟಿಯಿಂದ ತೆಗೆದುಕೊಳ್ಳುತ್ತಾರೆ. ಮೇಲ್ಮಟ್ಟದ ದೃಷ್ಟಿಯಿಂದ ಕೆಳಮಟ್ಟದ ಕಹಿಯು ಅಮೃತವಾಗುತ್ತದೆ. ಈ

ಮನಸ್ಸೂ ಕೂಡ ಚಂಚಲವಾದುದು. ಇದಕ್ಕಿಂತಲೂ ಬುದ್ಧಿಯು ಪ್ರಬಲವಾದುದು. ಬುದ್ಧಿಗಿಂತಲೂ ಆತ್ಮವು ಹೆಚ್ಚು ವೀರ್ಯ
ವತ್ತಾದುದು. ಆತ್ಮಕ್ಕಿಂತಲೂ ಪುರುಷಾತ್ಮವು ಪರಾತ್ಪರವಾದುದು. ಅವ್ಯಕ್ತಾತ್ಮಕ್ಕಿಂತಲೂ ಪುರುಷ ಎಂದರೆ ಬ್ರಹ್ಮಾಂಡಾಧಿ
ಪತಿಯು ಸರ್ವೋತ್ತಮನಾದವನು. ಆ ಪದವಿಯೇ ಅತ್ಯಂತ ಉತ್ಕೃಷ್ಟವಾದುದು. ಅಲ್ಲಿಗೆ ನಮ್ಮ ಬೆಳವಣಿಗೆಯು ಅಂತಸ್ತನ್ನು
ನಮ್ಮ ಹಿರಿಯರು ಮುಕ್ತಾಯ ಮಾಡಿರುತ್ತಾರೆ. ಅಲ್ಲಿಂದಾಚೆಗೆ ಪಡೆಯುವಂತಹ ಅಭಿವೃದ್ಧಿಯು ಕೇವಲ ಕ್ಷೇತ್ರವಿಸ್ತಾರಕ್ಕೆ ಸಂಬಂಧ
ಪಟ್ಟುದೇ ವಿನಾ ವಸ್ತುತಃ ಗುಣಕ್ಕೆ ಸಂಬಂಧಪಟ್ಟುದಲ್ಲ. ಅವರು ಬ್ರಹ್ಮಾಂಡಾಧಿಪತಿಯು ಅಂತಸ್ತಿಗೆ ಪರಾಕಾಷ್ಠತೆ ಎಂದು
ಹೇಳಿರುವುದು ಈ ಕಾರಣದಿಂದ ಇರಬಹುದು. ಆದರೆ, ಬ್ರಹ್ಮಾಂಡಾಧಿಪತಿಗಿಂತಲೂ ಅನೇಕ ಬ್ರಹ್ಮಾಂಡಗಳನ್ನೊಳಗೊಂಡ
ವಿಶ್ವಾಂಡಾಧಿಪತಿಗಳು (Gallaxy) ಇರುತ್ತಾರೆ. ಆ ವಿಶ್ವಾಂಡಾಧಿಪತಿಗಳಿಗಿಂತಲೂ ಮುಂದುವರಿದ ಉತ್ತಮ ದರ್ಜೆಯ
ವಿಶ್ವಾಂಡಾಧಿಪತಿಗಳು (Super Gallaxy) ಇರುತ್ತಾರೆ. ಆ ಉತ್ತಮ ದರ್ಜೆಯ ವಿಶ್ವಾಂಡಾಧಿಪತಿಗಳಿಗಿಂತಲೂ ಸರ್ವ
ನಿಯಾಮಕನಾದ ಮಹಾವಿಷ್ಣುವು ಇರುತ್ತಾನೆ. ಈತನಿಗೆ ಮಹೇಶ್ವರನೆಂದು ಹೆಸರು. ಈತನನ್ನೇ ಗೀತೆಯಲ್ಲಿ ಪುರುಷೋತ್ತಮ
ನೆಂದು ಕರೆದಿರುವುದು. ನಮ್ಮಲ್ಲಿ ವಿಷ್ಣು, ಮಹಾವಿಷ್ಣುವೆಂಬುದಾಗಿ ಪದಗಳ ಪ್ರಯೋಗವಿದೆ. ಈ ಪ್ರತಿಯೊಂದು ಶಬ್ದಕ್ಕೂ
ಅನ್ವಯವಾದ ಅರ್ಥವಿದೆ. ಉದಾಹರಣೆಗಾಗಿ ನಮ್ಮ ಬ್ರಹ್ಮಾಂಡಾಧಿಪತಿಯನ್ನು ಸೂರ್ಯನಾರಾಯಣ ಎಂದರೆ ವಿಷ್ಣುವೆಂದು
ಕರೆಯುವುದು ಪ್ರಸಿದ್ಧವಾಗಿದೆ. ಮೇಲ್ಕಂಡಂತೆ ಎಲ್ಲಾ ಬ್ರಹ್ಮಾಂಡಾಧಿಪತಿಗಳಿಗೂ ಮತ್ತು ಅವರಿಗಿಂತ ಎರಡು ಅಂತಸ್ತು
ಉನ್ನತಮಟ್ಟಗಳ ಅಧಿಕಾರಿಗಳಿಗೂ ಸರ್ವನಿಯಾಮಕನಾದವನು ಮಹಾವಿಷ್ಣುವೇ. ಮೇಲ್ಕಂಡ ಜೀವಾತ್ಮರುಗಳು ಆತನಂತೆಯೇ
ಬೆಳೆದು ಬೆಳೆದು ಆತನ ಅಂತಸ್ತನ್ನು ಮುಟ್ಟುವುದು ಖಚಿತ. ಏಕೆಂದರೆ ಎಲ್ಲಾ ಜೀವಾತ್ಮರುಗಳಲ್ಲಿರುವುದೂ ಮತ್ತು ಮಹಾ
ವಿಷ್ಣುವಿನಲ್ಲಿರುವುದೂ ಆ ಶಿವಚೈತನ್ಯಾಂಶಗಳೇ. ಆ ಮಹಾವಿಷ್ಣುವೂ ಕೂಡ ಎಲ್ಲಾ ಜೀವಾತ್ಮರುಗಳಂತೆಯೇ ಶಿವನ ಮಗನೇ.
ಹೌದು. ಆದರೆ ಆತನು ಹಿಂದಿನ ಅಸಂಖ್ಯಾತ ಕಲ್ಪಗಳಲ್ಲಿ ಅನುಭವಗಳನ್ನು ಪಡೆದು ಈಗ ಉತ್ತಮೋತ್ತಮ ಬೆಳವಣಿಗೆಯ
ಅಂತಸ್ತನ್ನು ಪಡೆದಿರುತ್ತಾನೆ.

ಈತನಿಗೆ ಸಗುಣಬ್ರಹ್ಮನೆಂಬ ಮತ್ತೊಂದು ಹೆಸರೂ ಇರುತ್ತದೆ'.........**ಪೂರ್ಣಾತ್ ಪೂರ್ಣಮುದಚ್ಯತೇ**' ಎಂಬ
ಉಪನಿಷತ್ತಿನ ಸೂತ್ರದ ಪ್ರಕಾರ ಪೂರ್ಣದಿಂದ ಪೂರ್ಣವೇ ಹುಟ್ಟುತ್ತದೆ. ಒಂದು ಗೋದಿಕಾಳು ತೆಗೆದುಕೊಂಡರೆ, ಅದು ಆ
ಗಿಡಕ್ಕೆ ಸಂಬಂಧಪಟ್ಟ ಎಷ್ಟೋ ತೆನೆಗಳಲ್ಲಿ ಒಂದು ತೆನೆಯ ಒಂದು ಅಂಶ ಆದರೂ ಗೋದಿಗಿಡದ ಪೂರ್ಣತೆ ಎಲ್ಲವೂ ಆ ಗಿಡದ
ಒಂದೊಂದು ಗೋದಿ ಕಾಳಿನಲ್ಲೂ ಬೀಜರೂಪವಾಗಿ ಅಡಗಿರುತ್ತದೆ. ಏಕೆಂದರೆ ಅದು ಬಿತ್ತಿ ಫಲಿಸಿದರೆ ತನ್ನ ತಾಯಿ ಗಿಡವಷ್ಟೇ
ಪೂರ್ಣಫಲವನ್ನು ಕೊಡಬಲ್ಲದು. ಆದುದರಿಂದ ಪ್ರತಿಯೊಬ್ಬ ಜೀವಾತ್ಮನಿಗೂ ತನ್ನ ತಂದೆಯ ಪೂರ್ಣತೆಯ ಕಡೆಗೆ ಬೆಳೆದು
ಕೊಂಡು ಹೋಗಲು ಅವಕಾಶವಿರುತ್ತದೆ. ಮೇಲ್ಕಂಡ ಮಹಾವಿಷ್ಣುವಿನ ಬೆಳವಣಿಗೆಗೆ ಸಂಬಂಧಪಟ್ಟ ತತ್ತ್ವವನ್ನು ನಮ್ಮ
ಥಿಯಾಸಫಿ ಸಮಾಜದ ಮುಖಂಡರಲ್ಲೊಬ್ಬರಾದ ಡಾ॥ ಅನಿಬೆಸೆಂಟ್‌ರವರು ತಮ್ಮ 'ಪ್ರಜ್ಞೆಯ ಅಧ್ಯಯನ' (A Study
in consciousness) ಎಂಬ ಗ್ರಂಥದಲ್ಲಿ ಬರೆದು ವಿವರಿಸಿರುತ್ತಾರೆ.

ಜಗತ್ತಿನಲ್ಲಿ ಎರಡು ಹೆದ್ದಾರಿಗಳಿರುತ್ತವೆ. ಒಂದನ್ನು ಕತ್ತಲಮಾರ್ಗವೆಂದೂ, ಮತ್ತೊಂದನ್ನು ಬೆಳಕಿನಮಾರ್ಗವೆಂದೂ
ಕರೆದಿರುತ್ತಾರೆ. ಕತ್ತಲ ಮಾರ್ಗವೇ ಪ್ರವೃತ್ತಿ–ಬೆಳಕಿನ ಮಾರ್ಗವೇ ನಿವೃತ್ತಿ. ಪ್ರವೃತ್ತಿ ಮಾರ್ಗದಲ್ಲಿ ಜನರು ದೇಹವೇ
ತಾವೆಂಬ ಕತ್ತಲಲ್ಲಿ ಬಾಳುತ್ತಾರೆ. ಆದುದರಿಂದ ದೇಹೇಂದ್ರಿಯಗಳಿಗೆ ಸುಖವಾದುದನ್ನೇ ಮಾಡುತ್ತಾ ಹೋಗುತ್ತಾರೆ. ಆ ರೀತಿ
ಸುಖಸಂಪಾದನೆ ಮಾಡುವ ದಾರಿಯಲ್ಲಿ ಇತರರಿಗೆ ಆಗುವ ಹಿಂಸೆಯನ್ನು ಗಮನಿಸುವುದಿಲ್ಲ. ಆ ಮೂಲಕ ದುಷ್ಕರ್ಮದ ಫಲ
ವನ್ನು ಅನುಭವಿಸಬೇಕಾಗುತ್ತದೆ. ಭಗವತ್ ಚೈತನ್ಯ ಸ್ವಭಾವವೇ ಧರ್ಮ ಕಟ್ಟಳೆಯು. ಅದಕ್ಕೆ ವಿರೋಧವಾಗಿ ನಡೆಯುವಂಥ
ವರಿಗೆ ಅದು ಕರ್ಮಕಟ್ಟಳೆಯಾಗಿ ಪರಿಣಮಿಸುತ್ತದೆ. ಸಮಸ್ತ ಜೀವರಾಶಿಗಳಿಗೆ ಕಾಯೇನ-ವಾಚಾ–ಮಾನಸಾ ಒಳ್ಳೆಯದನ್ನು
ಮಾಡುವುದೇ ಧರ್ಮ. ಯಾರು ಯಾರು ಇತರರಿಗೆ ಎಷ್ಟೆಷ್ಟು ತೊಂದರೆಯನ್ನುಂಟುಮಾಡುತ್ತಾರೆಯೋ ಅಷ್ಟಷ್ಟು ಕಷ್ಟವನ್ನು
ಅನುಭವಿಸಬೇಕಾಗುತ್ತದೆ. ಮನುಷ್ಯನು ಪ್ರವೃತ್ತಿ ಮಾರ್ಗದಲ್ಲಿ ದೇಹಾಭಿಮಾನಕ್ಕೆ ಒಳಗಾಗಿ, ಕೆಟ್ಟ ಕರ್ಮಗಳನ್ನು ಮಾಡುವ
ಅವಕಾಶವಿರುತ್ತದೆ. ತನ್ನ ಹಿಂದಿನ ಅಜ್ಞಾನದ ದೆಶೆಯಿಂದ ಮಾಡಿದ ಕರ್ಮದ ಮೂಲಕ ಉಂಟಾಗುವ ದುಃಖದಿಂದ ಅನುಭವ
ವನ್ನು ಪಡೆದು ಎಂದರೆ ಎಲ್ಲರಿಗೂ ಒಳ್ಳೆಯದನ್ನೇ ಮಾಡಬೇಕೆಂಬ ಭಗವಂತನ ಸಂಕಲ್ಪವನ್ನು ಅರಿತುಕೊಂಡು ನಿವೃತ್ತಿಮಾರ್ಗಕ್ಕೆ
ಪರಿವರ್ತಿತನಾಗುತ್ತಾನೆ. ಅನಂತರ ತಾಯಿಯು ತನಗೆ ತೊಂದರೆಯಾದಾಗೂ ಮಗುವಿನ ಪೋಷಣೆಯ ಕಾರ್ಯದಲ್ಲಿ ಸಹಜವಾಗಿ
ತೊಡಗುವಂತೆ '**ಸರ್ವ ಭೂತ ಹಿತೇ ರತಾಃ**' ಎಂಬ ಗೀತಾ ಆದೇಶದಂತೆಯೂ ಸಮಸ್ತ ಜೀವರಾಶಿಗಳಿಗೆ ಲೇಸನ್ನೇ ಬಯಸು
ವರು ನಮ್ಮ ಕೂಡಲ ಸಂಗಮನ ಶರಣರು ಎಂಬ ಬಸವೇಶ್ವರರ ಉಕ್ತಿಯಂತೆಯೂ ತನ್ನ ಸ್ವಂತ ಸುಖ-ದುಃಖಗಳನ್ನು ಒತ್ತಟ್ಟಿ
ಗಿಟ್ಟು ತನ್ನ ತಂದೆಯಾದ ಈಶ್ವರನಂತೆ ಲೋಕಕಲ್ಯಾಣ ಕಾರ್ಯದಲ್ಲಿ ತೊಡಗುತ್ತಾನೆ. ಆ ಲಾಗಾಯಿತು ತನ್ನ ಒಳಗಿನಿಂದ ಮಿಡಿ
ಯುವ ಅಂತರಾತ್ಮನ ವಾಣಿಯನ್ನು ಗಮನಿಸುತ್ತಾ ಕೆಟ್ಟುದನ್ನು ಬಿಟ್ಟು, ಒಳ್ಳೆಯದನ್ನೇ ಹೃತ್ಪೂರ್ವಕವಾಗಿ ಮಾಡುವಂತಹ




ಜೀವಿತವು ಆತನದಾಗುತ್ತದೆ. ಈ ಅಂತಸ್ತಿಗೆ ಮುಮುಕ್ಷುತ್ವವೆಂದು ಹೆಸರು. ಸಾಧಕನು ಈ ಅಂತಸ್ತನ್ನು ತಲುಪಿದ ಕೂಡಲೇ ಜೀವನ್ಮುಕ್ತ ಮಹಾಪುರುಷರ ಆಶ್ರಯವು ಆತನಿಗೆ ಲಭ್ಯವಾಗುತ್ತದೆ. ಆಗ ಅಲ್ಲಿಂದಾಚೆಗೆ ಒಬ್ಬಾನೊಬ್ಬ ಜೀವನ್ಮುಕ್ತ ಗುರುವಿನ ನೇತೃತ್ವದಲ್ಲಿ ಪರೀಕ್ಷಾ ಶಿಷ್ಯ–ಸ್ವೀಕೃತಶಿಷ್ಯ – ಗುರುಪುತ್ರ ಎಂಬ ಆಧ್ಯಾತ್ಮಿಕ ಮೆಟ್ಟಲುಗಳನ್ನು ಹತ್ತಿಕೊಂಡುಹೋಗಿ ಮೊದಲನೆಯ ದೀಕ್ಷೆಗೆ ಅರ್ಹನಾಗುತ್ತಾನೆ. ಈ ಅಂತಸ್ತಿಗೆ ಮನುಷ್ಯನು ಹತ್ತಬೇಕಾದರೆ ತನ್ನ ಅಂತರಾತ್ಮನ ವಾಣಿಯಂತೆ ಬಹುಭಾಗ ನಡೆಯುವಷ್ಟು ಪರಿವರ್ತನೆಯಾಗಿರಬೇಕು. ದೇಹಾತ್ಮವು ಅಂತರಾತ್ಮದೊಡನೆ ಈ ರೀತಿ ಸಮರಸಗೊಂಡಾಗ ಮೊದಲನೆ ದೀಕ್ಷೆ ಲಭಿಸುವುದು. ಮುಮುಕ್ಷುತ್ವವೆಂಬ ಶಬ್ದವು ಸಾಂಪ್ರದಾಯಕವಾದ ಹಿಂದೂ ಸಂಸ್ಕೃತಿಗೆ ಸೇರಿದುದು. ಆದರೆ ಥಿಯಾಸಫಿ ಸಮಾಜದ ಮಹಾತ್ಮರಲ್ಲೊಬ್ಬರು ಇದನ್ನು ಪ್ರೇಮವೆಂದು ಕರೆದಿರುತ್ತಾರೆ. ಏಕೆಂದರೆ, ಮುಮುಕ್ಷುತ್ವವೆಂದರೆ ಪರಮಾತ್ಮನಲ್ಲಿ ಒಂದಾಗುವಿಕೆಯನ್ನು ಬಯಸುವುದೇ ಆಗಿದೆ. ಈ ರೀತಿಯಾದ ಬಯಕೆಗಿಂತ ಆತನಂತೆಯೇ ಪ್ರೇಮವನ್ನು ಬೆಳೆಸಿಕೊಳ್ಳುವುದು ಸಹಜವಾದ ಮಾರ್ಗವೆಂದು ಗುರುಗಳು ಬೋಧಿಸುತ್ತಾರೆ.

ಮೇಲ್ಕಂಡ ಶಿಷ್ಯತ್ವಗಳ ಮೂರು ಅಂತಸ್ತುಗಳು ವೀರಶೈವ ಪರಿಭಾಷೆಯಲ್ಲಿ ಭಕ್ತಿಸ್ಥಲಕ್ಕೆ ಸಂಬಂಧಪಟ್ಟುವು. ಅನಂತರ ದೇಹಸ್ವಭಾವವನ್ನೂ ಮನಸ್ಸನ್ನೂ ಆದಷ್ಟು ಗೆದ್ದು ಪರಿಶುದ್ಧ ಮಾಡಿಕೊಂಡಾಗ ಎಂದರೆ ಮೊದಲನೆಯ ದೀಕ್ಷೆಯಲ್ಲಿ ಸಾಧಕನ ಪ್ರಜ್ಞೆಯು ಬುದ್ಧಿಲೋಕದ ಮಟ್ಟಕ್ಕೆ ಹತ್ತುತ್ತದೆ. ಈ ಅಂತಸ್ತಿಗೆ ವೀರಶೈವ ಪರಿಭಾಷೆಯಲ್ಲಿ ಮಹೇಶಸ್ಥಲವೆಂದು ಹೆಸರು. ಅಲ್ಲಿಂದ ಬುದ್ಧಿಲೋಕದ ಪ್ರಜ್ಞೆಯು ವಿಕಾಸವಾಗುತ್ತಾ ಹೋಗುತ್ತದೆ. ಯಾವಾಗ ಸಾಧಕನು ಸ್ವಕಾಯದೃಷ್ಟಿ ಎಂದರೆ ತನ್ನ ದೇಹ ಸಂಬಂಧಪಟ್ಟಂತೆಯೇ ಯೋಚಿಸುವುದು: ವಿಚಿಕಿತ್ಸ ಎಂದರೆ ಕರ್ಮ-ಪುನರ್ಜನ್ಮಗಳಲ್ಲಿ ಸಂಶಯಪಡುವುದು ಮತ್ತು ಮತಗಳಿಗೆ ಸಂಬಂಧಪಟ್ಟ ಒಣಾಚಾರಣೆಗಳಿಗೆ ಮರುಳಾಗುವುದು. ಈ ಮೂರು ದೋಷಗಳನ್ನು ಕಳಚಿಹಾಕಿದ ಮೇಲೆ ಸಾಧಕನು ಎರಡನೆಯ ದೀಕ್ಷೆಯನ್ನು ಪಡೆಯುತ್ತಾನೆ. ಈ ಬೆಳವಣಿಗೆಯ ಹಂತಕ್ಕೆ ವೀರಶೈವ ಪರಿಭಾಷೆಯಲ್ಲಿ ಪ್ರಸಾದಿ ಎಂದು ಹೆಸರು-ಎಂದರೆ ತನಗೆ ಹೊರಗಿನಿಂದ ಬರುವಂತಹ ಸುಖ–ದುಃಖಾದಿಗಳೆಲ್ಲಾ ಈಶ್ವರನಿಂದ ಅನುಗ್ರಹೀತವಾದ ಪ್ರಸಾದವೆಂದು ಭಾವಿಸುತ್ತಾನೆ. ಅನಂತರ ತನ್ನ ಮನಸ್ಸನ್ನು ಬುದ್ಧಿಮಟ್ಟದ ಪ್ರಜ್ಞೆಯಿಂದಲೇ ಸ್ಫೂರ್ತಿಗೊಂಡು ಕೆಲಸಮಾಡುವಂತೆ ಸಾಧಿಸುವ ಪ್ರಯತ್ನದಲ್ಲಿ ಜಯವನ್ನು ಗಳಿಸುತ್ತಾನೆ. ಆಗ ಆತನಿಗೆ ಮೂರನೆಯ ದೀಕ್ಷೆಯು ಲಭ್ಯವಾಗುತ್ತದೆ. ಇದಕ್ಕೆ ವೀರಶೈವ ಸಂಸ್ಕೃತಿಯು ಪ್ರಾಣಲಿಂಗವೆಂಬ ಹೆಸರಿಟ್ಟಿದೆ. ಮೂರನೆಯ ದೀಕ್ಷೆಗೂ ನಾಲ್ಕನೆಯ ದೀಕ್ಷೆಗೂ ಮಧ್ಯೇ ಕಾಮರಾಗ ಮತ್ತು ಕ್ರೋಧ ಈ ಎರಡು ದೋಷಗಳಿಗೆ ಸಂಬಂಧಪಟ್ಟ ಬೇರುಗಳನ್ನೂ ಸಹ ಕಿತ್ತುಹಾಕಬೇಕು. ಈ ಎರಡು ದೋಷಗಳನ್ನು ಸಾಧಕನು ಮೊದಲೇ ಕಳಚಿಹಾಕಿದಾಗ್ಗೂ ಅವುಗಳ ವಾಸನೆಯು ಗರಿಕೆ ಬೇರಿನ ರೂಪದಲ್ಲಿ ಹೃದಯದಲ್ಲಿ ಮುಂದುವರಿಯುವುದಕ್ಕೆ ಸಾಧ್ಯ. ಆದುದರಿಂದ ಇವುಗಳನ್ನು ಬೇರುಸಹಿತ ಕಳಚಿಹಾಕಬೇಕು. ಗಣೇಶನಿಗೆ ಹಿಂದೂಸಂಪ್ರದಾಯದಲ್ಲಿ ಗರಿಕೆ ಪತ್ರವನ್ನು ಅರ್ಪಿಸುವ ವಾಡಿಕೆಯಿದೆ. ಇದರ ಅಂತರಾರ್ಥವೇ ಮೇಲ್ಕಂಡ ಕಾಮಕ್ರೋಧಗಳಿಗೆ ಸಂಬಂಧಪಟ್ಟುದು. ಮೇಲ್ಕಂಡಂತೆ ಕಾಮಕ್ರೋಧಗಳ ವಾಸನೆಗಳನ್ನು ಮೂಲೋತ್ಪಾಟನೆ ಮಾಡಿದ ನಂತರ ಸಾಧಕನಿಗೆ ನಾಲ್ಕನೆಯ ದೀಕ್ಷೆಯು ಕೊಡಲ್ಪಡುವುದು. ಈ ಬೆಳವಣಿಗೆಯ ಅಂತಸ್ತಿಗೆ ವೀರಶೈವ ಪರಿಭಾಷೆಯಲ್ಲಿ ಶರಣನೆಂದು ಹೇಳುತ್ತಾರೆ. ಅಲ್ಲಿಂದಾಚೆಗೆ ಐದು ಪ್ರತಿಬಂಧಕಗಳನ್ನು ಎಂದರೆ ರೂಪರಾಗ, ಅರೂಪರಾಗ, ಉದ್ದಚ್ಚ, ಮೊನೊ ಮತ್ತು ಅವಿದ್ಯೆ ಎಂಬುವುಗಳನ್ನು ಕಳಚಿಹಾಕಬೇಕು. ರೂಪರಾಗ ಎಂದರೆ

ಯಾವುದಾದರೂ ಒಂದು ರೂಪಕ್ಕೆ ಮೋಹಿತನಾಗಿರುವುದು. ಅರೂಪರಾಗ ಎಂದರೆ ಲೋಕಕಲ್ಯಾಣಕ್ಕಾಗಿ ಜನ್ಮವೆತ್ತುವ ಸದವಕಾಶವಿದ್ದಾಗಲೂ ಕೂಡ ನಾಮರೂಪಾತೀತವಾದ ಮೇಲ್ಮಟ್ಟದ ಅಂತಸ್ತಿಗೇನೇ ಅಂಟಿಕೊಂಡು ಜನ್ಮ ಎತ್ತುವುದಕ್ಕೆ ಇಷ್ಟಪಡೆದಿರುವುದು. ಉದ್ಧಚ್ಚ ಎಂದರೆ ಸಿಡುಕುತನ, ಎಂದರೆ ಅಸಹನೆ. ಮನುಷ್ಯನು ತನ್ನ ಸ್ವಭಾವವನ್ನು ಶುದ್ಧೀಕರಿಸಿಕೊಂಡಂತೆಲ್ಲಾ ಅಲ್ಪಸ್ವಲ್ಪ ಕಲ್ಮಷವನ್ನೂ ಸಹ ಸಹಿಸಿಕೊಳ್ಳುವುದಕ್ಕೆ ಕಷ್ಟವಾಗುತ್ತದೆ. ಆದಾಗ್ಯೂ ಪ್ರೇಮಕ್ಕೆ ಹೆಚ್ಚು ಬೆಲೆ ಕೊಡುವುದರ ಮೂಲಕ ಎಂತಹ ಪರಿಸ್ಥಿತಿಯನ್ನಾದರೂ ಸಹಿಸಿಕೊಳ್ಳುವ ಸ್ವಭಾವವನ್ನು ಬೆಳೆಸಿಕೊಳ್ಳಲು ಸಾಧ್ಯ. ಮಾನೊ ಎಂದರೆ ವ್ಯಕ್ತಿಗೆ ಸಂಬಂಧಪಟ್ಟ ಸ್ವಾಭಿಮಾನ. ಅವಿದ್ಯೆ ಎಂದರೆ ಕರ್ತೃತ್ವ ಭಾವನೆಯನ್ನು ಕಳಚಿಹಾಕುವುದು, ಉದಾಹರಣೆಗಾಗಿ ಥಿಯಾಸಫಿ ಸಮಾಜದ ಮುಖಂಡರಲ್ಲೊಬ್ಬರಾದ ಯೋಗಿ ಲೆಡ್‌ಬೀಟರ್‌ರವರು ಇದಕ್ಕೆ ಸಂಬಂಧಪಟ್ಟಂತೆ ತಮಗಾದ ಅನುಭವವನ್ನು ಬರೆದಿಟ್ಟಿರುತ್ತಾರೆ. 'ನಾನು ಒಂದು ಉನ್ನತ ಮಟ್ಟದ ಯೋಗದಮೆಟ್ಟಿಲಿನಲ್ಲಿ ಇದ್ದಾಗ ನನಗೆ ನಮ್ಮ ಬ್ರಹ್ಮಾಂಡಾಧಿಪತಿಯು ತನ್ನ ಸಹೋದ್ಯಮಿಗಳಾದ ಇತರೆ ಬ್ರಹ್ಮಾಂಡಾಧಿಪತಿಗಳೊಡನೆ ಸಮಾವೇಶಗೊಂಡಿದ್ದ ಒಂದು ದಿವ್ಯಸಭೆಯ ದರ್ಶನವಾಯಿತು. ಆಗ, ನನಗೆ ಮತ್ತೊಂದು ಹೊಳಪೂ ಆಯಿತು. ಏಕೆಂದರೆ ನಾನು ಅದುವರೆಗೆ ಮಾಡಿದ್ದ ಒಳ್ಳೆಯ ಕೆಲಸಗಳನ್ನೆಲ್ಲಾ ನಾನೇ ಮಾಡಿದ್ದೆನೆಂದು ತಿಳಿದುಕೊಂಡಿದ್ದೆ. ಆ ಸನ್ನಿವೇಶದಲ್ಲಿ ಆ ತಿಳಿವಳಿಕೆಯು ತಪ್ಪಾದುದೆಂದೂ ಆ ಪರಮಾತ್ಮನೇ ನನ್ನ ಮೂಲಕ ಆ ಒಳ್ಳೆಯ ಕೆಲಸಗಳನ್ನೆಲ್ಲಾ ಮಾಡಿದವನು ಎಂಬ ದಿವ್ಯಾನುಭವವು ಉಂಟಾಯಿತು' ಎಂಬುದಾಗಿ ಒಂದು ಕಡೆ ಬರೆದಿರುತ್ತಾರೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಯಾವಾಗ ಮನುಷ್ಯನು ದೇಹಭಾವನೆಯನ್ನು ಕಳಚಿಹಾಕಿ ಸರ್ವಾತ್ಮಭಾವನೆಯಿಂದ ಲೋಕಹಿತಾರ್ಥವಾಗಿ ಬಾಳುತ್ತಾನೆಯೋ ಆ ಲಾಗಾಯಿತು ಈಶ್ವರನೇ ಆತನ ಮೂಲಕ ಕೆಲಸ ಮಾಡುವಂತೆ ಆಗುತ್ತದೆ. ಪುರುಷಸೂಕ್ತದಲ್ಲಿ ಪರಮಾತ್ಮನಿಗೆ ಸಾವಿರ ತಲೆ, ಸಾವಿರ ಕರ–ಚರಣಾದಿಗಳು ಇರುತ್ತವೆ ಎಂದು ವರ್ಣಿಸಲ್ಪಟ್ಟಿದೆ. ಮೇಲ್ಕಂಡಂತೆ ಪರಾರ್ಥಭಾವನೆಯಿಂದ ಬಾಳುವಂತಹ ಭಕ್ತರ ಶೀರ್ಷಾದಿ ಅವಯವಗಳೆಲ್ಲವೂ ಆತನವೇ ಆಗುತ್ತವೆಯಲ್ಲವೇ ! ಇದು ಅವಿದ್ಯೆ ಅಥವಾ ಕರ್ತೃತ್ವ ಭಾವನೆಯನ್ನು ಕಳಚಿಹಾಕಿದ ಬೆಳವಣಿಗೆ ಅಂತಸ್ತು. ಅಂತಹ ಸಾಧಕನ ಅಂತರಾತ್ಮವು ತನ್ನ ಮೂಲ ಸ್ವರೂಪವಾದ ಪುರುಷಾತ್ಮರೊಡನೆ ಒಂದಾಗುವ ಮೂಲಕ ಐದನೇ ದೀಕ್ಷೆಯು ಲಭಿಸುತ್ತದೆ ಎಂದರೂ ಒಂದೇ, ಜೀವನ್ಮುಕ್ತ ಪದವಿಯು ಲಭ್ಯವಾಗುತ್ತದೆ ಎಂದರೂ ಒಂದೇ. ಈ ಅಂತಸ್ತಿಗೆ ವೀರಶೈವ ಪರಿಭಾಷೆಯಲ್ಲಿ ಐಕ್ಯಸ್ಥಲವೆಂದು ಹೆಸರು. ವೇದಾಂತ ಪರಿಭಾಷೆಯಲ್ಲಿ ಮೊದಲನೇ ದೀಕ್ಷೆ ಪಡೆದವನನ್ನು ಪರಿವ್ರಾಜಕನೆಂದೂ, ಎರಡನೆಯ ದೀಕ್ಷೆ ಪಡೆದವನನ್ನು ಕುಟೀಚಕನೆಂದೂ, ಮೂರನೆಯ ದೀಕ್ಷೆ ಪಡೆದವನನ್ನು ಹಂಸನೆಂದೂ ನಾಲ್ಕನೆಯ ದೀಕ್ಷೆ ಪಡೆದವನನ್ನು ಪರಮಹಂಸನೆಂದೂ, ಐದನೆ ದೀಕ್ಷೆ ಪಡೆದವನನ್ನು ಜೀವನ್ಮುಕ್ತನೆಂದೂ ಕರೆಯುತ್ತಾರೆ. ಸಾಧಕನಿಗೆ ಈ ಮಟ್ಟವನ್ನು ತಲುಪಬೇಕಾದರೆ ಅನೇಕಾನೇಕ ಜನ್ಮಗಳು ಬೇಕಾಗುತ್ತವೆ. ಆ ರೀತಿ ಜೀವನ್ಮುಕ್ತಿಯನ್ನು ಸಾಧಿಸಿದ ಮಹಾತ್ಮರು ಈಗಲೂ ಇರುತ್ತಾರೆ. ಮೇಲ್ಕಂಡ ಜೀವನ್ಮುಕ್ತ ಮಹಾತ್ಮರ ಅಂತಸ್ತು ಎಂದರೆ ಐದನೆ ದೀಕ್ಷೆಗಿಂತಲೂ ಮುಂದುವರಿದ ದೀಕ್ಷಾ ಅಂತಸ್ತುಗಳಿರುತ್ತವೆ. ಇವುಗಳಿಗೆ ಸಂಬಂಧಪಟ್ಟ ಸಾಧನಗಳು ಯಾವುವು ಎಂಬುದು ನಮಗೆ ಪರಿಷ್ಕಾರವಾಗಿ ತಿಳಿಯದು. ಆರನೆಯ ದೀಕ್ಷೆಯನ್ನು ಹೊಂದಿದವರು ಮಾತ್ರ ಶಾಖಾಧಿಪತಿಗಳಾಗಿ ಕೆಲಸ ಮಾಡಬಲ್ಲರು. ಇಂತಹ ಶಾಖೆಗಳು ಏಳು ಇರುತ್ತವೆ. 'ಮಹರ್ಷಯಃ ಸಪ್ತ' ಎಂಬ ಗೀತಾಪ್ರಮಾಣವು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ. ಒಂದನೆಯದೇ ರಾಜರ್ಷಿ ಶಾಖೆ. ಇದರ ಅಧಿಪತಿಗಳು ಮೌರ್ಯಮಹರ್ಷಿಗಳು. ಎರಡನೆಯದು ದೇವರ್ಷಿ ಶಾಖೆ. ಇದರ ಅಧಿಪತಿ ದೇವಾಪಿ ಮಹರ್ಷಿಗಳು. ಮೂರರಿಂದ ಏಳರವರೆಗೂ ಮಹಾಚೋಹಾನ್ ಎಂಬ ಏಳನೇ ದೀಕ್ಷೆಯನ್ನು ಪಡೆದ ಮಹಾಪುರುಷರ ನೇತೃತ್ವದಲ್ಲಿ ಕೆಲಸ ಮಾಡತಕ್ಕ ಐದು ಜನ ಶಾಖಾಧಿಪತಿಗಳು ಬ್ರಹ್ಮಋಷಿಗಳೆಂದು ಹೆಸರು ಪಡೆದಿರುತ್ತಾರೆ.

ಒಂದನೇ ರಾಜರ್ಷಿ ಶಾಖೆಯಲ್ಲಿ ಏಳನೆಯ ದೀಕ್ಷೆಯನ್ನು ಪಡೆದ ವೈವಸ್ವತಮನು. ಎಂಟನೆ ದೀಕ್ಷೆಯನ್ನು ಪಡೆದ ಜನ ಸನಕಾದಿ ಕುಮಾರರು, ಒಂಬತ್ತನೆ ದೀಕ್ಷೆಯನ್ನು ಪಡೆದ ಸನತ್ಕುಮಾರಪ್ರಭುಗಳೂ ಇರುತ್ತಾರೆ. ಎರಡನೇ ಶಾಖೆಗೆ ಸಂಬಂಧಪಟ್ಟಂತೆ ಏಳನೆ ದೀಕ್ಷೆಯನ್ನು ಪಡೆದ ಮೈತ್ರೇಯ ಋಷಿಗಳು ಇರುತ್ತಾರೆ. ಜಗತ್ತಿನ ಮೇಲೆ ಪ್ರಚಾರದಲ್ಲಿರುವ ಮತಗಳು ಮತ್ತು ವಿದ್ಯಾಭ್ಯಾಸ ಇವುಗಳಿಗೆ ಸಂಬಂಧಪಟ್ಟ ಪುರೋಭಿವೃದ್ಧಿಯ ಕಾರ್ಯವು ಅವರ ನೇತೃತ್ವದಲ್ಲಿ ನಡೆಯುತ್ತದೆ. ಇವರಿಗಿಂತ ಒಂದು ದರ್ಜೆ ಮುಂದುವರೆದು ಉದ್ಧ ಪದವಿಯನ್ನು ಹೊಂದಿರುವ ಗೌತಮ ಬುದ್ಧರು ಎರಡನೆ ಮೂರ್ತಿಯ ವಿಷ್ಣುವಿನ ಪ್ರತಿನಿಧಿಯಾಗಿ ಮೇಲಿನ ಲೋಕಗಳಲ್ಲಿ ಕೆಲಸ ಮಾಡುತ್ತಾರೆ.

**ಲೋಕಕಲ್ಯಾಣ ಹೊಣೆಗಾರಿಕೆ :**

ಲೋಕ ಕಲ್ಯಾಣದ ಜವಾಬ್ದಾರಿಯನ್ನು ಹೊತ್ತಿರುವುದು ಶ್ವೇತರ್ಷಿ ಸಂಘವು. ಇದು ಶಿವನನ್ನು ಪ್ರತಿನಿಧಿಸುವ ಸನತ್ಕುಮಾರ ಪ್ರಭುಗಳ ಆಡಳಿತಕ್ಕೆ ಒಳಪಟ್ಟಿದೆ. ದೇವರ್ಷಿ ಶಾಖೆಯಲ್ಲಿ ವ್ಯಾಸಪೀಠದಲ್ಲಿದ್ದುಕೊಂಡು ವಿಷ್ಣುವಿನ ಪ್ರತಿನಿಧಿಯಾಗಿ ಕೆಲಸ ಮಾಡತಕ್ಕವರು ಮೈತ್ರೇಯ ಋಷಿಗಳು. ಮೇಲೆಯೇ ಹೇಳಿದಂತೆ ಬ್ರಹ್ಮನ ಪ್ರತಿನಿಧಿಯಾಗಿ ಐದು ಶಾಖೆಗಳನ್ನು ನೋಡಿಕೊಳ್ಳುತ್ತಿರುವವರು ಮಹರ್ಷಿ ಮಹಾಚೋಹಾನ್‌ರವರು. ಈ ಅಧಿಕಾರದಲ್ಲಿರುವ ವ್ಯಕ್ತಿಯ ಹೆಸರು ನಮಗೆ ತಿಳಿ

ಯದು. ಮೇಲ್ಕಂಡ ಮಹಾಸಮಾಜಕ್ಕೆ ಸಂಬಂಧಪಟ್ಟ ಇಬ್ಬರು ಶಾಖಾಧಿಪತಿ ಋಷಿವರ್ಯರು ಎಂದರೆ ಮಹಾತ್ಮ ಮೌರ್ಯ ಮತ್ತು ಕುಥೂಮಿ ಇವರಿಬ್ಬರೂ ಪರಮ ಕರುಣೆಯಿಂದ ವಿಜ್ಞಾನವು ಕಂಡುಹಿಡಿದಿರುವ ಆಕಾಶ ವಿಮಾನಾದಿ ಸೌಕರ್ಯಗಳು ಪ್ರಪಂಚದ ನಾನಾ ಮೂಲೆಗಳ ಜನಗಳ ಸಂಪರ್ಕವನ್ನು ಹೆಚ್ಚು ಒತ್ತಾಗಿ ಮಾಡಿರುವ ಟೆಲಿಫೋನ್ ಮತ್ತು ಟೆಲಿವಿಷನ್ ಮೊದಲಾದ ಅಭಿಪ್ರಾಯ ವಿನಿಮಯ ಸಾಧನೆಗಳು ಇರುವ ಕಾಲ ಎಂದರೆ ಕಲಿಯುಗದ ಪ್ರಥಮ ಐದು ಸಹಸ್ರ ವರ್ಷಗಳು ತುಂಬುವುದರೊಳಗಾಗಿ ಸಮಸ್ತ ಮತಗಳಿಗೂ ಜ್ಯೋತಿಪ್ರಾಯವಾದ ಥಿಯಸಾಫಿಕಲ್ ಸೊಸೈಟಿಯನ್ನು ೧೮೭೫ನೇ ಇಸವಿ ನವಂಬರ್ ೧೭ರಂದು ತಮ್ಮ ಪಾಶ್ಚಾತ್ಯ ಶಿಷ್ಯರ ಮೂಲಕ ಸ್ಥಾಪಿಸಿರುತ್ತಾರೆ. ಇದಕ್ಕೆ ಪ್ರಥಮತಃ ೨೫-೩೦ ವರ್ಷಗಳವರೆಗೂ ದುಡಿದಂತಹ ರಷ್ಯಾದೇಶದ ಹಿಂದಿನ ರಾಜಮನೆತನಕ್ಕೆ ಸೇರಿದ ಹೆಚ್.ಪಿ. ಬ್ಲಾವಟ್ಸ್ಕಿ (H.P. Blavatsky) ಮತ್ತು ಅಮೇರಿಕಾ ದೇಶದಲ್ಲಿ ಎದ್ದು ಕಾಣುವ ನಿಸ್ವಾರ್ಥತೆ, ಪ್ರಾಮಾಣಿಕತೆ ಮತ್ತು ದಕ್ಷತೆ ಇವುಗಳಿಗೆ ಹೆಸರಾಂತ ಕರ್ನಲ್ ಅಲ್ಕಾಟ್ ಇವರಿಬ್ಬರನ್ನೂ ಈ ಸಂಸ್ಥೆಯ ಹೊರಗಿನ ಸ್ಥಾಪಕರೆಂದು ಭಾವಿಸಲಾಗಿದೆ. ಅನಂತರ ಡಾ॥ ಸಿ.ಡಬ್ಲ್ಯೂ. ಅನಿಬೆಸೆಂಟ್, ಲೆಡ್‌ಬೀಟರ್, ಶ್ರೀ ಸಿ. ಜಿನರಾಜದಾಸ, ಡಾ॥ಜಾರ್ಜ್, ಎಸ್.ಅರುಂಡೇಲ್ ಮತ್ತು ಮಾಜಿ ಅಧ್ಯಕ್ಷರಾದ ಎನ್.ಶ್ರೀರಾಂ ಇವರುಗಳೆಲ್ಲಾ ಈ ಸಂಸ್ಥೆಯ ಅಭಿವೃದ್ಧಿಗಾಗಿ ಶ್ರಮಿಸಿರುತ್ತಾರೆ. ಪಾಶ್ಚಾತ್ಯರ ಮೂಲಕ ಈ ಸಂಸ್ಥೆಯು ಅಸ್ತಿತ್ವಕ್ಕೆ ಬಂದುದಕ್ಕೆ ಒಂದು ಉಚಿತವಾದ ಕಾರಣವು ಎದ್ದು ಕಾಣುತ್ತದೆ.ಪಾಶ್ಚಾತ್ಯ ನಾಗರಿಕತೆಯು ಎಲ್ಲೆಲ್ಲೂ ಹಬ್ಬಿರುವುದರಿಂದಲೂ ಪೌರಸ್ತ್ಯರೂ ಕೂಡ ಆ ಪ್ರಭಾವಕ್ಕೆ ಒಳಗಾಗಿ ತಮ್ಮ ಆಧ್ಯಾತ್ಮಿಕ ಸಂಸ್ಕೃತಿಯನ್ನು ಮರೆತಿರುವುದರಿಂದಲೂ ಶ್ರೀರಾಮನು ತನ್ನ ಭಕ್ತನಾದ ವಿಭೀಷಣನ ಮೂಲಕ ರಾವಣನ ದೌರ್ಜನ್ಯವನ್ನು ಮೂಲೋತ್ಪಾಟನೆ ಮಾಡಿದಂತೆ ಪಾಶ್ಚಾತ್ಯರ ನಾಸ್ತಿಕ ಭಾವನೆಯನ್ನು (Materialism) ನಾಶ ಮಾಡಿ ಪೌರಸ್ತ್ಯರಲ್ಲಿ ಆಧ್ಯಾತ್ಮಿಕ ಮನೋಭಾವನೆಯನ್ನು ಜಾಗೃತಿಗೊಳಿಸುವುದಕ್ಕೋಸ್ಕರ ಋಷಿವರ್ಯರು ತಮ್ಮ ಶಿಷ್ಯರನ್ನು ಪಾಶ್ಚಾತ್ಯ ದೇಶದಲ್ಲಿ ಹುಟ್ಟಿಸಿ ಅವರ ಬೋಧೆಗಳ ಮೂಲಕ ಎಲ್ಲಾ ಜನಕ್ಕೂ ನಂಬಿಕೆ ಹುಟ್ಟುವಂತೆ ಏರ್ಪಡಿಸಿರುತ್ತಾರೆ. ಈ ಮಹಾಸಂಸ್ಥೆಯ ಉದ್ದೇಶಗಳು ಒಂದನೆಯದು ಜಾತಿ–ವರ್ಣ–ಕುಲ–ದೇಶ–ಲಿಂಗ–ಈ ಭೇದಗಳಿಗೆ ಅತೀತವಾದ ಸಾರ್ವತ್ರಿಕ ಸಹೋದರಭಾವದ ಅಂಕುರವನ್ನು ಸ್ಥಾಪಿಸುವುದು, ಎರಡನೆಯದು ಮತ ಮತ್ತು ವಿಜ್ಞಾನ ಇವುಗಳ ಹೊಂದಾಣಿಕೆ ದೃಷ್ಟಿಯಿಂದ ವ್ಯಾಸಂಗ ಕೈಗೊಳ್ಳುವುದು, ಮೂರನೆಯದು ಪ್ರಕೃತಿಯಲ್ಲಿ ಅಡಗಿರುವ ಗುಪ್ತ ಕಟ್ಟಳೆಗಳನ್ನು ಮನುಷ್ಯನಲ್ಲಿ ಅಡಗಿರುವ ಗುಪ್ತ ಶಕ್ತಿಗಳನ್ನೂ ಕಂಡುಕೊಳ್ಳುವುದು. ಈ ಮೂರರ ಪೈಕಿ ಮೊದಲನೆ ಉದ್ದೇಶವನ್ನು ಕಡ್ಡಾಯವಾಗಿ ಒಪ್ಪಿಕೊಳ್ಳುವವರು ಮಾತ್ರ ಈ ಸಂಸ್ಥೆಗೆ ಸದಸ್ಯರಾಗಿ ಸೇರಲು ಅವಕಾಶವಿರುತ್ತದೆ. ಈ ಸಾರ್ವತ್ರಿಕ ಸಹೋದರ ಭಾವನೆಯಲ್ಲಿ ಜ್ಞಾನಧರ್ಮಗಳ ತತ್ತ್ವಾರ್ಥವು ಅಡಗಿರುತ್ತದೆ. ಆದುದರಿಂದ ಆಧ್ಯಾತ್ಮಿಕ ಬೆಳವಣಿಗೆಗೆ ಇದು ಅಡಿಗಲ್ಲಿನಂತೆ ಇರುತ್ತದೆ.

ಸದ್ಯದಲ್ಲಿ ಪ್ರಪಂಚದುದ್ದಕ್ಕೂ ಇರುವ ೬೦ ರಾಷ್ಟ್ರಗಳಲ್ಲಿ ಈ ಸಮಾಜದ ಶಾಖೆಗಳು ಕೆಲಸ ಮಾಡುತ್ತಿವೆ. ಈ ಸಂಸ್ಥೆಯ ಪ್ರಧಾನ ಕೇಂದ್ರ ಮದರಾಸಿನ ಹತ್ತಿರದ ಅಡಿಯಾರ್‌ನಲ್ಲಿದೆ. ಇಂಡಿಯಾ ವಿಭಾಗದ ಪ್ರಧಾನ ಕೇಂದ್ರವು ವಾರಣಾಸಿ (Banaras) ಯಲ್ಲಿದೆ. ಸತ್ಯವನ್ನೇ ಪರಮ ಧ್ಯೇಯವನ್ನಾಗಿಟ್ಟುಕೊಂಡಿರುವ ಈ ಸಂಸ್ಥೆಯು ಎಲ್ಲಾ ಮತಗಳಿಗೂ ಹುರುಪು ಉತ್ಸಾಹಗಳನ್ನು ನೀಡುವ ಸ್ಥಿತಿಯಲ್ಲಿರುತ್ತದೆ. ಇದಕ್ಕೆ ನಿದರ್ಶನವಾಗಿ ಎಲ್ಲಾ ಮತಾನುಯಾಯಿಗಳೂ ಇದಕ್ಕೆ ಸದಸ್ಯರಾಗಿ ಒಬ್ಬ ದೇವನ ಮಕ್ಕಳಂತೆ ಸೌಹಾರ್ದತೆಯಿಂದ ಪ್ರಪಂಚದ ಸಾರ್ವತ್ರಿಕ ಸಹೋದರಭಾವನೆಯ ಒಂದು ಅಂಕುರದಂತೆ ಕೆಲಸ ಮಾಡುತ್ತಿರುತ್ತಾರೆ. ವೀರಶೈವ ಮತದ ಹಿಂದಿನ ಶರಣರು ಈಗ್ಗೆ ಎಂಟು ಶತಮಾನಗಳ ಹಿಂದೆಯೇ ಕೀಳು–ಮೇಲು ಎಂಬ ಸಾಂಪ್ರದಾಯಿಕ ಪದ್ಧತಿಗಳನ್ನು ಅತಿಗಳೆದು ಹೇಗೆ ಪತಿತರನ್ನು ಪಾವನರನ್ನಾಗಿ ಮಾಡುವ ಕಾರ್ಯದಲ್ಲಿ ನಿರತರಾಗಿದ್ದರೋ ಹಾಗೆಯೇ ಈಗಿನ ಈ ಸಂಸ್ಥೆಯ ಶರಣರೂ ಸಹ ಈಗಿನ ಕಾಲದ ಪರಿಸ್ಥಿತಿಗಳಿಗೆ ತಕ್ಕಂತೆ ಮತ್ತು ಪ್ರಪಂಚವ್ಯಾಪ್ತಿ ಆ ಕಾರ್ಯವು ಫಲಪ್ರದವಾಗುವ ರೀತಿಯಲ್ಲಿ ಶ್ರಮಿಸುತ್ತಿದ್ದಾರೆ. ಅದರ ಫಲಿತಾಂಶವಾಗಿ ಸಹಸ್ರಾರು ತಲೆಮಾರು ಕಾಲದಿಂದಲೂ ಮಾಂಸಾಹಾರ, ಮಧ್ಯಪಾನ ಮತ್ತು ಧೂಮಪಾನಾದಿ ಚಟಗಳಿಗೆ ದಾಸರಾಗಿದ್ದವರು ಸಾತ್ವಿಕ ಮತ್ತು ಪರಿಶುದ್ಧ ಜೀವನಕ್ಕೆ ಪರಿವರ್ತಿತರಾಗಿರುತ್ತಾರೆ. ಸಕಲ ಜೀವರಾಶಿಗಳಿಗೆ ಲೇಸನೇ ಬಯಸುವವರಾಗಿ ಸೇವಾಕಾರ್ಯದಲ್ಲಿ ನಿರತರಾಗಿರುತ್ತಾರೆ, ಇದೆಲ್ಲ ಸತ್ಸಂಗದ ಮಹಿಮೆ.

# ಕ್ರೈಸ್ತಧರ್ಮ

**—ಪ್ರಶಾಂತ್ ಮಾಡ್ತ, ಪುಣೆ**

ಮಾನವ ಪ್ರಶ್ನಾಜೀವಿ. ವೈಚಾರಿಕತೆ ಅವನ ಮೂಲಭೂತ ಲಕ್ಷಣ. ದೈನಂದಿನ ಹತ್ತು ಹಲವು ಸಮಸ್ಯೆಗಳು ಅವನ ಈ ವೈಚಾರಿಕತೆಯನ್ನು ಕೆಲಕಾಲ ಮುಚ್ಚಿಟ್ಟರೂ, ಎಂದಾದರೂ ಈ ವೈಚಾರಿಕತೆ ತಟಕ್ಕನೆ ಮೇಲೇರಿ ಬಂದು ಅವನನ್ನು ಆವರಿಸುತ್ತದೆ. ತನ್ನ ಅಸ್ತಿತ್ವವನ್ನು ಕುರಿತೋ ತನ್ನ ಸುತ್ತುಮುತ್ತಲಿರುವ ವಾಸ್ತವದ ಕುರಿತೋ ಮಾನವ ಹಲವು ಪ್ರಶ್ನೆಗಳನ್ನು ಒಡ್ಡಿ, ಕೊನೆಗೆ ತನಗೆ ತಾನೇ ಒಂದು ಮಹಾಪ್ರಶ್ನೆಯಾಗುತ್ತಾನೆ. ನಾನು ಯಾರು ? ಈ ಜಗತ್ತು ಎಂದರೆ ಏನು ? ಬದುಕಿನ ಅರ್ಥವೇನು ? ತನ್ನ ಜೀವನವನ್ನು ಆವರಿಸಿರುವ ಈ ಗೂಢತತ್ವದ ನಿಜರೂಪವೇನು ? ಈ ಪ್ರಶ್ನೆಗೆ ಅವನು ರೂಪಿಸುವ ಉತ್ತರ ಈ ಪ್ರಶ್ನೆಯಷ್ಟೇ ಮಹತ್ವಪೂರ್ಣವಲ್ಲ. ಕಾಲ, ಈ ಪ್ರಶ್ನೆಯನ್ನು ಪರಿಹರಿಸಲಾರದು. ವಿವಿಧ ಕಾಲಗಳಲ್ಲಿ ವಿವಿಧ ರೂಪಗಳನ್ನು ಧರಿಸಿ ಮತ್ತೆ ಎದ್ದು ಬರುವ ಈ ಪ್ರಶ್ನೆ ಮಹಾಪ್ರಶ್ನೆಯಾಗಿಯೇ ಉಳಿಯುತ್ತದೆ. ಈ ಪ್ರಶ್ನೆಗೆ ಯಾವನೂ ಹೊರತಾಗುವಂತಿಲ್ಲ, ಯಾಕೆಂದರೆ ಈ ಪ್ರಶ್ನೆಗೆ ಅವನು ರೂಪಿಸುವ ಉತ್ತರವಿನ್ಯಾಸದಲ್ಲಿ ಮಾನವನ ತೃಪ್ತಿ, ಆನಂದ, ಗುರಿಗಳು ಹುದುಗಿಕೊಂಡಿವೆ. ನಮ್ಮ ಬದುಕಿನಲ್ಲಿ ಈ ಪ್ರಶ್ನೆ ಅನಿವಾರ್ಯವಾಗಿರುವಂತೆ, ಉತ್ತರವೂ ಅಂತರ್ಗವಾಗಿದೆ. ಬದುಕಿನಲ್ಲಿ ಯಾವುದು ಅರ್ಥಪೂರ್ಣವೋ ಅದೇ ಈ ಪ್ರಶ್ನೆಗೆ ತೃಪ್ತಿಕರವಾದ ಉತ್ತರವೂ ಹೌದು.

'ನಾನು ಯಾರು' ಎಂಬುದು ಮಾನವನ ಆದಿಪ್ರಶ್ನೆ. ಮಾನವ ಪ್ರಜ್ಞಾಪೂರ್ವ ಜೀವಿಯಾದುದರಿಂದಲೇ ಈ ಪ್ರಶ್ನೆಗೆ ಆಸ್ಪದವಿದೆ. 'ನಾನು ಯಾರು ? ದನವೆಂದರೆ ಏನು?' ಎಂಬ ಪ್ರಶ್ನೆಯನ್ನು ಒಂದು ದನ ಕೇಳಲಾರದು. ನಿನ್ನೆ–ಇಂದು–ನಾಳೆಗಳಲ್ಲಿ ಹುದುಗಿ ಚರಿತ್ರಾಜೀವಿಯಾದ, ಪ್ರಜ್ಞಾಜೀವಿಯಾದ ಮನುಷ್ಯನಿಗೆ ಮಾತ್ರ ಇಂತಹ ಪ್ರಶ್ನೆಗಳು ಸಾಧ್ಯ. ಯಾವುದೇ ಒಂದು ಕ್ಷಣದಲ್ಲಿ ಮಾನವ ತನ್ನತ್ತಲೇ ಬಾಗಿ, ಈ ಪ್ರಶ್ನೆಯನ್ನು ಎದುರಿಸುವುದು ಕಡ್ಡಾಯವಾಗುತ್ತದೆ. ತನಗೂ, ತನ್ನ ಸುತ್ತಮುತ್ತಲೂ ಹರಡಿರುವ ವಸ್ತುಗಳಿಗೂ ಏನೋ ವ್ಯತ್ಯಾಸವಿದೆ ಎಂಬ ಅರಿವು ಅವನಲ್ಲಿ ಈ ಕ್ಷಣದಲ್ಲಿ ಮೂಡುತ್ತದೆಯಲ್ಲದೆ, ಮಾನವ ತನಗೆ ತಾನೇ ಒಂದು ಒಗಟಾಗುತ್ತಾನೆ. ಇತರ ವಸ್ತುಗಳಿಗೆ ನೀಡುವಂತೆ ಮಾನವನನ್ನು ವ್ಯಾಖ್ಯಾನವೊಂದರ ಚೌಕಟ್ಟಿನಲ್ಲಿಡುವುದು ಅಸಾಧ್ಯ. ಭೌತಿಕ ಮಾತ್ರವಲ್ಲದ ಪಾರಮಾರ್ಥಿಕ ಆಯಾಮ ಅವನಲ್ಲಿದೆ. ಅಗ್ರಾಹ್ಯವಾದ ಅಭಿವ್ಯಕ್ತಿಯಲ್ಲಿ ಅಡಕವಾಗಿರಿಸಲಾರದ ಅನುಭವದಿಂದ ಮಾನವ ಕೂಡಿದ್ದಾನೆ. ಈ ಗೂಢತತ್ವ, ಅಗ್ರಾಹ್ಯ ಆಯಾಮವೇ ಪರಮಾತ್ಮನೆಂದು ನಂಬಿದಾಗಲೇ ಧರ್ಮದ ಉಗಮ. ಈ ಅಗ್ರಾಹ್ಯ ಆಯಾಮವೇ ಆತನ ಮೂಲ, ನಿಯತಿ, ನಿಯಂತ್ರಕ ಶಕ್ತಿ ಹಾಗೂ ಪರಮಗುರಿಯಾಗುತ್ತದೆ. ತನ್ನ ಬದುಕು ಪರಿಮಿತವಾದುದು, ಅಪೂರ್ಣ, ಈ ಬದುಕಿಗೊಂದು ಅಂತ್ಯವಿದೆ ಎಂಬ ಅರಿವೇ ಮಾನವನಲ್ಲಿ, ಅಮಿತವಾದ, ಅನಂತವಾದ, ಪೂರ್ಣವಾದ ಗೂಢತತ್ತ್ವವಿರಲೇಬೇಕು ಎಂಬ ಭಾವನೆಯನ್ನು ಪ್ರಚೋದಿಸುತ್ತದೆಯಲ್ಲದೆ, ಆ ಗೂಢತತ್ತ್ವವನ್ನು ಅನುಭವಿಸಲು ಗ್ರಾಹ್ಯಗೊಳಿಸಲು ಅವನನ್ನು ಉತ್ತೇಜಿಸುತ್ತದೆ ಎನ್ನಬಹುದು. ಆದುದರಿಂದ ಈ ಗೂಢತತ್ತ್ವವಾದ ಪರಮಾತ್ಮನ ಬಗ್ಗೆ ಯಾವುದೇ ನಿರೂಪಣೆ, ಮಾನವ ಅಸ್ತಿತ್ವದ ಮೂಲಭೂತ ವಿವೇಚನೆಯೂ ಹೌದು. 'ಪರಮಾತ್ಮನೆಂದರೆ ಯಾರು?' ಎಂಬ ಪ್ರಶ್ನೆಯಲ್ಲಿ 'ನಾನು ಯಾರು' ಎಂಬ ಪ್ರಶ್ನೆ ಅನನ್ಯವಾಗಿ ಅಂತರ್ಗತವಾಗಿದೆ. 'ನಾನು ಯಾರು' ಎಂಬ ಪ್ರಶ್ನೆಯ ಉತ್ತರದೊಡನೆ ಪರಮಾತ್ಮನೆಂದರೆ ಯಾರು ಎಂಬ ಸಮಸ್ಯೆಗೆ ಉತ್ತರವನ್ನು ಮಾನವ ಕಂಡುಹಿಡಿಯಲು ಪ್ರಯತ್ನಿಸುತ್ತಾನೆ. ಆದುದರಿಂದಲೇ ದೇವರೇ ಮಾನವನ ವಿಮರ್ಶೆಯಾಗುತ್ತಾನೆ ಎನ್ನಬಹುದು. ಪರಮಾತ್ಮನು ತನಗೆ ಸಮಸ್ಯೆಯಾದಾಗ ಮಾನವ ತನಗೆ ತಾನೇ ಒಂದು ಮಹಾಸಮಸ್ಯೆಯಾಗುತ್ತಾನೆ. ಧರ್ಮವೆಂಬುದು ಬದುಕಿಗೊಂದು ಅರ್ಥವನ್ನು ರೂಪಿಸಲು ಮಾಡಿದ ಮಾನವನ ನಿರಂತರ ಪ್ರಯತ್ನ. ಬದುಕೆಂಬ ಪ್ರಶ್ನೆಗೆ ಸಿಗುವ ಉತ್ತರ ಬದುಕನ್ನೂ ಮೀರಿ ಹರಡಿದೆ. ಪರಮಾತ್ಮನೇ ಮಾನವನಾಗಿ ಬಂದು, ಪುನಃ ಈ ಪ್ರಶ್ನೆಯನ್ನು ಒಡ್ಡಿ ಉತ್ತರವನ್ನು ನೀಡಿದಾಗ, ಮಾನವನ ಈ ಮೂಲಭೂತ ಸಮಸ್ಯೆ ಬಗೆಹರಿಯುತ್ತದೆ. ಈ ಉತ್ತರವು ಸಿಕ್ಕಾಗ ಅದೊಂದು ಸಾಮಾನ್ಯ ಅನುಭವವಲ್ಲ, ಮಾನವ ಬದುಕನ್ನು ಪೂರ್ಣವಾಗಿ ಅರ್ಥಭರಿತವಾಗಿ ಮಾಡುವ ಚೇತನ. ಬದುಕಿನ ಅರ್ಥಪೂರ್ಣತೆಯೊಂದಿಗೆ ಹಲವು ಮೌಲ್ಯಗಳು ಮಾನವಬದುಕನ್ನು ಅನಿವಾರ್ಯವಾಗಿ ಸೇರುತ್ತವೆ.

ಕ್ರೈಸ್ತರಿಗೆ ಈ ಅನಂತ, ಅಮಿತ, ಪೂರ್ಣವಾದ ಗೂಢತತ್ವವು ಅಸ್ಪಷ್ಟವಾಗಿರುವ ಶೂನ್ಯವಲ್ಲ. ಅಗ್ರಾಹ್ಯವೆಂದು ಕಾಣುವ ಈ ಆಯಾಮ ಗ್ರಾಹ್ಯವಾಗುವುದು ಚಾರಿತ್ರಿಕ ವ್ಯಕ್ತಿಯಾದ ಯೇಸುವಿನ ಮೂಲಕ. ಯೇಸುವಿನಲ್ಲಿ ದೈವತ್ವ–ಮನುಷ್ಯತ್ವ ಒಂದುಗೂಡಿದೆ. ಪರಮಾತ್ಮನೆಂದರೆ, ಮಾನವಚರಿತ್ರೆ ರೂಪಿಸಿದ ಭ್ರಮಾಮೂಲವಾದ ಕಲ್ಪನೆಯಲ್ಲ. ತನ್ನ ಬಗ್ಗೆಯೇ ವಿವೇಚಿಸಿದಾಗ, ಮಾನವನಿಗೆ ಗ್ರಾಹ್ಯವಾಗುವ ಪಾರಮಾರ್ಥಿಕ ಶಕ್ತಿಯಿದು. ಈ ಶಕ್ತಿ ಮಾನವರೂಪವನ್ನು ಧರಿಸಿ ಯೇಸುವಿನಲ್ಲಿ ಪೂರ್ಣವಾಗಿ ರೂಪುಗೊಂಡಿತು. ಯೇಸುವಿನ ಮೂಲಕ ಪರಮಾತ್ಮ, ತನ್ನ ಸೃಷ್ಟಿಯಾದ ಮಾನವನೊಡನೆ ಸೌಹಾರ್ದ

ಸಂಬಂಧವನ್ನು ಸ್ಥಾಪಿಸಿದ್ದಾನೆ. ಸರ್ವಸೃಷ್ಟಿಯೂ ಈ ದೇವಪ್ರೇಮದ ಪ್ರಕಟರೂಪ. ಪರಮಾತ್ಮ ಅಗ್ರಾಹ್ಯವಾದರೂ ವ್ಯಕ್ತಿಗತ. ಪರಮಾತ್ಮನ ಸನ್ನಿಧಿಯಲ್ಲಿ ಪ್ರತಿ ವ್ಯಕ್ತಿಯೂ ಅನನ್ಯ, ಅತ್ಯಮೂಲ್ಯ. ಈ ದೇವಪ್ರೇಮವೇ ಮಾನವನ ಮೇಲೆ ತನ್ನ ಹಕ್ಕನ್ನು ಸಾಧಿಸಿದೆಯಲ್ಲದೆ, ಮಾನವನಿಗೆ ಅವನಿಗಿಂತಲೂ ಮಿಗಿಲಾದ ಉದ್ದೇಶವೊಂದನ್ನು ಸೃಷ್ಟಿಸಿದೆ. ಈ ಉದ್ದೇಶವನ್ನು ಮಾನವನ ಅಂತರಾಳದಲ್ಲಿ ಬರೆಯಲಾಗಿದೆ. ದೇವಪ್ರೇಮವು ಮಾನವನಿಗೆ ಒಂದು ಆಹ್ವಾನ. ಈ ಆಹ್ವಾನವನ್ನು ಸ್ವೀಕರಿಸುವ ಅಥವಾ ನಿರಾಕರಿಸುವ ಸ್ವಾತಂತ್ರ್ಯ ಮಾನವನಿಗಿದೆ. ದೇವರು ಈಯುವ ಈ ಆಹ್ವಾನಕ್ಕೆ ಮಾನವನ ಪ್ರತಿಕ್ರಿಯೆಯೇನು? ಶ್ರದ್ಧೆ. ವಿನೀತ ಶ್ರದ್ಧೆಯಿಂದ ಒಡಗೂಡಿದ ಮಾನವ ತನ್ನ ಪರಿಮಿತವಾದ ಅನುಭವಲೋಕವನ್ನು ಮೀರಿ, ಆ ಅಮಿತವಲಯಕ್ಕಾಗಿ ಹಾತೊರೆಯಬೇಕು. ಈ ಅನಂತವಲಯ ಅವನ ಯೋಜನೆ ಲೆಕ್ಕಾಚಾರಗಳನ್ನು ಮೀರಿ ನಿಲುತ್ತದೆ. ಕ್ರೈಸ್ತಧರ್ಮದ ನಂಬಿಕೆಗಳನ್ನು ಒಂದೇ ಮಾತಿನಲ್ಲಿ ಕ್ರೋಢೀಕರಿಸುವುದಾದರೆ–ತನ್ನ ಪ್ರೀತಿಯನ್ನು ಸ್ವೀಕರಿಸಲು ಮಾನವನಿಗೆ ಪರಮಾತ್ಮನ ಆಹ್ವಾನ, ಈ ಆಹ್ವಾನವನ್ನು ವಿನೀತಶ್ರದ್ಧೆಯಲ್ಲಿ ಮಾನವನ ಸ್ವೀಕರಣ. ಪರಮಾತ್ಮನಿಗೆ ಶ್ರದ್ಧಾಪೂರ್ಣ ಅರ್ಪಣೆಯ ಮೂಲಕ, ಅವನಲ್ಲಿ ಪರವಶನಾಗುವುದೇ ಕ್ರೈಸ್ತಧರ್ಮದ ತಿರುಳು, ಆಶಯ, ಮೂಲಕಾರ್ಯ.

**ಕ್ರೈಸ್ತಧರ್ಮದ ಮೂಲಾಶಯಗಳು :**

ತತ್ವವಿನ್ಯಾಸವೊಂದನ್ನು ಆಧರಿಸಿ ಪ್ರತಿಯೊಂದು ಧರ್ಮವೂ ಜನ್ಮತಾಳುತ್ತದೆ. ಮಾನವನ ಜಗತ್ತಿನ, ಜಗತ್ತಿನಲ್ಲಿ ಮಾನವನ ಸ್ಥಾನ–ಇವುಗಳ ಕುರಿತು ಧರ್ಮ ಕೆಲವು ತತ್ವಗಳನ್ನು ರೂಪಿಸಿ ಅವುಗಳನ್ನು ಅಂಗೀಕರಿಸುತ್ತದೆ. ಮಾನವನ ವಾಸ್ತವಸ್ಥಿತಿ. ಹಾಗೂ ಪೂರ್ಣಸ್ಥಿತಿ ಇವುಗಳ ನಿರೂಪಣೆಯೇ ಧರ್ಮದ ಚೌಕಟ್ಟಾಗುತ್ತದೆ. ಜಗತ್ತಿನಲ್ಲಿ ಮಾನವನ ಸ್ಥಾನಮಾನಗಳೇನು ಎಂಬುದರ ಬಗ್ಗೆ ನಿರ್ಧಾರ, ಈ ಚೌಕಟ್ಟಿನೊಳಗೆ ಸಂಭವಿಸುತ್ತದೆ ಎನ್ನಬಹುದು.

ಧರ್ಮದ ಈ ಕಲ್ಪನಾವಿನ್ಯಾಸವು ವ್ಯಕ್ತವಾಗುವುದು, ಆ ಧರ್ಮದ ಪುರಾಣಗಳ, ಆಚರಣೆಗಳ ಹಾಗೂ ಸಾಮಾಜಿಕ ಜೀವನದ ಮೌಲ್ಯಗಳ ಮೂಲಕವೆನ್ನಬಹುದು. ಇವು ಅಮೂರ್ತವಾದ ಕಲ್ಪನಾವಿನ್ಯಾಸವನ್ನು ಕಾರ್ಯರೂಪದಲ್ಲಿ ಪ್ರಕಟಪಡಿಸುತ್ತವೆ.ಆದರೆ ಈ ಮೂರ್ತ ಕಾರ್ಯರೂಪಗಳೇ ಧರ್ಮದ ತಿರುಳು ಎನ್ನುವಂತಿಲ್ಲ. ಆದುದರಿಂದ ಒಂದು ಧರ್ಮದ ಗೌರವವನ್ನು, ತಿರುಳನ್ನು ಅರಿಯಲು, ಆ ಧರ್ಮದ ಮೂಲಾಶಯ (MOTIF)ಗಳೇನು ಎಂಬುದನ್ನು ಕಂಡುಹಿಡಿಯುವುದು ಅತ್ಯವಶ್ಯಕ. ಮೂಲಾಶಯಗಳೆಂದರೆ ಹಾಡಿನಲ್ಲಿ, ಸಂಗೀತದಲ್ಲಿ ಆಗಾಗ್ಗೆ ಪುನರಾವರ್ತನೆಗೊಳ್ಳುವ ಪಲ್ಲವಿ ಇದ್ದಂತೆ. ಹಾಡಿನ ಸಂಗೀತದಲ್ಲಿ ನಿರಂತರವಾದ, ಮಾರ್ದನಿಸುವ ಅಂಶವೊಂದಿದೆ. ಈ ಅಂಶವನ್ನು ಆಧರಿಸಿ ಇತರ ಸಂಗೀತಧ್ವನಿಗಳು ರೂಪಿತವಾಗುತ್ತವೆ. ಈ ನಿರ್ದಿಷ್ಟಶ್ರುತಿಯ ಸ್ವರವೇ ಆ ಹಾಡಿನ ಮೂಲಾಶಯ. ಇದೇ ರೀತಿಯಲ್ಲಿ, ಪ್ರತಿ ಧರ್ಮದಲ್ಲೂ, ಅದರ ತತ್ವಾಚರಣೆಗಳನ್ನು ಸುಸಂಬದ್ಧವಾಗಿ ಪೋಣಿಸುವ, ಗುಪ್ತಗಾಮಿನಿಯಾಗಿ ನಿರಂತರವಾಗಿ ಹರಿಯುವ ಕೆಲವು ಮೂಲಾಶಯಗಳಿವೆ. ಹಿಂದೂಧರ್ಮದ ಮೂಲಾಶಯಗಳನ್ನು ಅರಿಯದಿದ್ದರೆ, ಆ ಧರ್ಮವೆಂದರೆ ದನಪೂಜಕರ, ಸರ್ಪಪೂಜಕರ, ಸಸ್ಯಾಹಾರಿಗಳ ಸಮುದಾಯ ಎಂದು ತಪ್ಪು ತಿಳಿದುಕೊಳ್ಳುವ ಸಾಧ್ಯತೆಯಿದೆ. ಇದೇ ರೀತಿ ಕ್ರೈಸ್ತಧರ್ಮದ ಮೂಲಾಶಯಗಳನ್ನು ಅರ್ಥಮಾಡಿಕೊಳ್ಳದ ಜನ, ಕ್ರೈಸ್ತಧರ್ಮವೆಂದರೆ ಮತಾಂತರವೆಂದೇ, ಶಿಲುಬೆಪೂಜಕರೆಂದೇ, ಪಾಶ್ಚಾತ್ಯ ಸಂಸ್ಕೃತಿಯನ್ನು ಇತರರ ಮೇಲೆ ಹೇರುವ ಮಿಶನರಿಗಳೆಂದೇ ಭಾವಿಸುವುದು ಸಾಮಾನ್ಯ. ಆದುದರಿಂದ ಯಾವುದೇ ಧರ್ಮದ ಮಹತ್ತನ್ನು ಅರ್ಥಮಾಡಿಕೊಳ್ಳಲು, ಅದರ ಸಾರಸ್ವರೂಪವಾದ ಆಶಯಗಳೇನು ಎಂದು ತಿಳಿಯುವುದು ಅತ್ಯಗತ್ಯ.

**೧. ಕ್ರೈಸ್ತಧರ್ಮ ಚಾರಿತ್ರಿಕ :** ಚರಿತ್ರೆಯಲ್ಲಿ ದೇವರು ತನ್ನನ್ನೇ ಸದಾ ಪ್ರಕಟಗೊಳಿಸುತ್ತಾ ಇದ್ದು, ಯೇಸುವಿನ ಮೂಲಕ ಪರಮಾತ್ಮನೇ ಪ್ರಕಟವಾದ. ಯೇಸುವಿನಿಂದ ಸ್ಥಾಪಿತವಾದ ಕ್ರೈಸ್ತಧರ್ಮ ಚರಿತ್ರೆಯ ಒಂದು ಹಂತದಲ್ಲಿ ಪ್ರಾರಂಭವಾಯಿತು. ಇದೊಂದು ಅನನ್ಯ ಚಾರಿತ್ರಿಕ, ಪ್ರೀತಿಪೂರ್ವಕ ಘಟನೆ. ಈ ಚಾರಿತ್ರಿಕ ಘಟನೆಯಿಂದಾಗಿ ದೇವ–ಮಾನವರ ಮಧ್ಯೆ ಹೊಸ ಸಂಬಂಧವೊಂದು ಏರ್ಪಟ್ಟಿತು. ಚರಿತ್ರೆಯ ಚೌಕಟ್ಟಿನೊಳಗೆ ದೇವರು ಮಾನವನ ವಿಮೋಚನಾ ಕಾರ್ಯವನ್ನು ಮಾಡಿ ಪೂರೈಸುತ್ತಾರೆ. ಕ್ರೈಸ್ತಧರ್ಮದ ಅಭಿಪ್ರಾಯದಂತೆ,ವಿಮೋಚನಾಚರಿತ್ರೆಯಲ್ಲಿ ಎರಡು ಹಂತಗಳಿವೆ. ಯೇಸುಕ್ರಿಸ್ತನ ಆಗಮನವೇ ಈ ಚರಿತ್ರೆಯ ಕೇಂದ್ರಬಿಂದು. ಯೇಸುಕ್ರಿಸ್ತರನ್ನು ಲೋಕವಿಮೋಚನೆಗೆ ಕಳುಹಿಸುವ ಮೊದಲು, ಪರಮಾತ್ಮ ಪ್ರವಾದಿಗಳ ಹಾಗೂ ಮಹಾಮುಖಂಡರ ಮೂಲಕ ತನ್ನ ಜನರನ್ನು ವಿಮೋಚನೆಗೆ ಸಿದ್ಧಗೊಳಿಸಿದ. ಕೊನೆಗೆ ಯೇಸುವಿನ ಮೂಲಕ ತಾನೇ ಮಾನವಚರಿತ್ರೆಯನ್ನು ಪ್ರವೇಶಿಸಿ ಮಾನವರಕ್ಷಣ ಶುಭಸಂದೇಶವನ್ನು ಸಾರಿದ. ಹಿಂದೂಧರ್ಮದ ನಂಬಿಕೆಯಂತೆ ಸಂಸಾರ ಸದಾ ಆವರ್ತಚಲನೆಯಲ್ಲಿದೆ. ಆದುದರಿಂದ ಹಲವು ಜನ್ಮಗಳಿರಲು ಸಾಧ್ಯ. ಕ್ರೈಸ್ತಧರ್ಮದ ನಂಬಿಕೆಯಂತೆ ಚರಿತ್ರೆಯ, ಮಾನವಬದುಕಿನ, ಪುನರಾವರ್ತನೆ ಅಸಾಧ್ಯ. ಬದುಕಿಗೆ ಖಂಡಿತವಾದ ಪ್ರಾರಂಭ ಗಡುವಿದೆ. ಈ ಜೀವನ, ಮರಣದ ನಂತರವೂ ಮಹತ್ತಾದ ರೀತಿಯಲ್ಲಿ ಮುಂದುವರಿಯುತ್ತದೆ. ಹೀಗೆ ಮರಣವು ಅಂತ್ಯವಲ್ಲ, ಒಂದು ಹಂತವಷ್ಟೇ. ಯೇಸುವಿನಿಂದ ಪ್ರಾರಂಭವಾದ ಕ್ರೈಸ್ತಧರ್ಮ ಕಾಲಕ್ರಮೇಣ ಪ್ರತಿಯೊಬ್ಬರಿಗೂ ತಲುಪುತ್ತದೆ. ಮಾನವ ಜನಾಂಗದ ಸಾರ್ವತ್ರಿಕ ಧರ್ಮ ತಾನೆಂದು

ಕ್ರೈಸ್ತಧರ್ಮ ಸಂಜಿಪೆ. ಚರಿತ್ರೆಯ ಒಂದು ನಿಶ್ಚಿತ ಕಾಲದಿಂದ ಪ್ರಾರಂಭವಾದುದರಿಂದ ಅದು ಚಾರಿತ್ರಿಕಧರ್ಮ. ಮಾನವ ಜನಾಂಗಕ್ಕೆಲ್ಲಾ ಯೇಸುವಿನ ಶುಭಸಂದೇಶವನ್ನು ಸಾರಲು ಅದು ಉದ್ದೇಶಿಸಿರುವುದರಿಂದಾಗಿ ಅದೊಂದು ಸಾರ್ವತ್ರಿಕಧರ್ಮವೂ ಹೌದು. ಕ್ರೈಸ್ತಧರ್ಮ ಎಂದೂ ಒಂದು ವರ್ಣದ, ವರ್ಗದ ಆಸ್ತಿಯಾಗಿರಲಿಲ್ಲ. ಮಾನವರೆಲ್ಲರೂ ಯೇಸುವಿನ ಶುಭಸಂದೇಶಕ್ಕೆ ಓಗೊಡಲು ಅರ್ಹರು. ಆದುದರಿಂದಲೇ ಇಂದು ಕ್ರೈಸ್ತಧರ್ಮವು ಜಗತ್ತಿನ ನಾಲ್ಕು ಮೂಲೆಗಳಿಗೂ ಹರಡಿ ಎಲ್ಲಾ ಸಂಸ್ಕೃತಿಗಳಲ್ಲೂ ಬೇರುಬಿಟ್ಟಿದೆ.

೨. **ಪ್ರೇಮರೂಪಿ ಪರಮಾತ್ಮ :** ಪರಮಾತ್ಮ ಸೃಷ್ಟಿಕರ್ತ, ತನ್ನ ಸೃಷ್ಟಿಯ ಪೂರ್ಣನಿಯಂತ್ರಕ. ಸರ್ವವ್ಯಾಪಿ. ಈ ಸೃಷ್ಟಿ. ಪ್ರಕೃತಿ ಅವನ ಅಂಶವಲ್ಲ. ಅವನ ವಿರುದ್ಧವಾಗಿ ನಿಲ್ಲುವ ಇನ್ನೊಂದು ಗೂಢತತ್ತ್ವವಲ್ಲ, ಜಗತ್ತು ಅವನಿಂದ ಸೃಷ್ಟಿಸಲ್ಪಟ್ಟಿತು. ಆದುದರಿಂದ ಜಗತ್ತು ಅವನ ಅಧೀನವಲ್ಲಿದೆ. ಯಾವುದೇ ಮಾಧ್ಯಮದ ಸಹಾಯವಿಲ್ಲದೆ ಈ ಜಗತ್ತನ್ನು ಪರಮಾತ್ಮ ಸೃಷ್ಟಿಸಿದನಾದುದರಿಂದ, ಅವನ ವಿಧಿಯಂತೆ ನಿಯಂತ್ರಿತವಾಗಿರುವ ಜಗತ್ತು ಅವನ ವಿರುದ್ಧ ತತ್ತ್ವವಾಗುವಂತಿಲ್ಲ. ಪರಮಾತ್ಮನ ಮಹತ್ತಿಗಾಗಿ ಮಾತ್ರ ಈ ಜಗತ್ತಿನ ಸೃಷ್ಟಿಯಾಯಿತು. ಈ ಸೃಷ್ಟಿಯೇ ಅವನ ಪ್ರೇಮದ ಮೊದಲ ಪ್ರಕಟರೂಪ. ಮಾನವನನ್ನು ಈ ಸೃಷ್ಟಿಯ ಕೇಂದ್ರವ್ಯಕ್ತಿಯನ್ನಾಗಿ ರಚಿಸಲಾಯಿತು. ಮಾನವನು ಮರ್ತ್ಯನಾದುದರಿಂದ ಅವನು ಈ ಸ್ಥಿತಿಯಲ್ಲಿ ಪರಮಾತ್ಮನನ್ನು ಕಣ್ಣಾರೆ ಕಾಣುವಂತಿಲ್ಲ. ತಾತ್ವಿಕದೃಷ್ಟಿಯಿಂದ ದೇವರು ತ್ರಿರೂಪಿ ಎಂದು ಕ್ರೈಸ್ತರು ನಂಬುತ್ತಾರೆ. ಯೇಸುಕ್ರಿಸ್ತನ ಮೂಲಕ ಪರಮಾತ್ಮ ತನ್ನನ್ನೇ ಮಾನವಚರಿತ್ರೆಯಲ್ಲಿ ಪ್ರಕಟಗೊಳಿಸಿದ. ಪರಮಪಿತ ದೇವರು ತನ್ನ ಸುತನಾದ ಯೇಸುವಿನ ಮೂಲಕ ಮಾನವನೊಡನೆ ಸೌಹಾರ್ದಸಂಬಂಧವನ್ನು ಏರ್ಪಡಿಸಿದ. ಯೇಸುಕ್ರಿಸ್ತ ಪರಮಪಿತನ ಅವಿಚ್ಛಿನ್ನ ಅಂಶ. ಈ ಅಂಶವೇ ಪೂರ್ಣಮಾನವರೂಪಿಯಾಯಿತು. ಆದುದರಿಂದ ಯೇಸುಕ್ರಿಸ್ತ ಪೂರ್ಣದೇವರೂ ಹೌದು, ಪೂರ್ಣಮನುಷ್ಯನೂ ಹೌದು. ಯೇಸುಕ್ರಿಸ್ತನ ಮರಣದ ನಂತರ, ಮಾನವರೂಪದ ಅಂತ್ಯದೊಂದಿಗೆ, ಪರಮಪಿತ ದೇವರು ತನ್ನ ಪವಿತ್ರಾತ್ಮನನ್ನು ಜಗತ್ತಿನಲ್ಲಿ ಇರಗೊಳಿಸಿ, ಯೇಸುಕ್ರಿಸ್ತರ ಪುನರಾಗಮನದ ತನಕ ಚೇತನರೂಪಿಯಾಗಿ ಮಾನವನೊಡನೆ ಇರುವರು. ಈ ಪವಿತ್ರಾತ್ಮಚೇತನವೇ ಇಂದು ಜಗತ್ತನ್ನು ತನ್ನ ಪೂರ್ಣಗುರಿಯತ್ತ ಮುನ್ನಡೆಸುತ್ತದೆ. ಹೀಗೆ, ಜಗತ್ತಿನ ಸೃಷ್ಟಿಕರ್ತ ಪಿತ ದೇವರು, ತನ್ನ ಸುತ ಯೇಸುಕ್ರಿಸ್ತನನ್ನು ವಿಮೋಚಕನಾಗಿ ಜಗತ್ತಿಗೆ ಕಳುಹಿಸಿದರು. ಯೇಸುಕ್ರಿಸ್ತರ ನಿರ್ಗಮನದೊಂದಿಗೆ ಪವಿತ್ರಾತ್ಮ ಚೇತನವು ಈಗ ಜಗತ್ತಿನಲ್ಲಿ ಕಾರ್ಯನಿರತವಾಗಿದೆ. ಪಿತ, ಸುತ, ಪವಿತ್ರಾತ್ಮರು ಪರಮಾತ್ಮನ ತ್ರಿರೂಪಗಳು. ದೇವರು ಒಬ್ಬನೇ ಆದರೆ ತ್ರಿರೂಪಿ. ಪರಮಾತ್ಮನ ನಿಜರೂಪವನ್ನು ಗ್ರಹಿಸಲು ಮಾನವನ ಬುದ್ಧಿಶಕ್ತಿಗೆ ಅಸಾಧ್ಯ. ಯೇಸುಕ್ರಿಸ್ತ ಮಾನವಚರಿತ್ರೆಯನ್ನು ಪ್ರವೇಶಿಸಿ ಪರಮಾತ್ಮನ ಸ್ವರೂಪವೇನೆಂದು ತನ್ನ ಜೀವನ, ಕಾರ್ಯ, ಬೋಧನೆಗಳ ಮೂಲಕ ತೋರಿಸಿದನು.

ಪರಮಾತ್ಮ ಪ್ರೇಮಮಯಿ ಎಂದು ಯೇಸು ಸಾರಿದ. ಈ ಪ್ರೇಮಸ್ವರೂಪಿಯಾದ ದೇವರು, ಮಾನವನಿಗೆ ತನ್ನನ್ನೇ ಪ್ರಕಟಗೊಳಿಸಲು ನಿಶ್ಚಯಿಸಿದಾಗ, ತನ್ನ ಸುತನಾದ ಯೇಸುವನ್ನು ಲೋಕಕ್ಕೆ ಕಳುಹಿಸಿದ. ತಾನು ಮಾನವನನ್ನು ಪ್ರೀತಿಸುತ್ತೇನೆ ಎಂದು ಯೇಸುವನ್ನು ಈ ಲೋಕಕ್ಕೆ ಕಳುಹಿಸುವುದರಿಂದ ಸೇರಿಸಿದ. ಯೇಸುವಿನ ಮೂಲಕ ದೇವರೇ ಮನುಷ್ಯರಾದರು. ಬೈಬಲ್ ಗ್ರಂಥದಲ್ಲಿ ಪರಮಾತ್ಮ ಮಾನವ ಜನಾಂಗಕ್ಕೆ ಹೇಳಿರುವಂತೆ–

> ತಾಯಿ, ತಾನು ಹೆತ್ತ ಮಗುವಿನ ಮೇಲೆ ಕರುಣೆಯಿಡದೆ, ಅದನ್ನು ಮರೆತಾಳೇ ? ಮರೆಯಲೂ ಬಹುದು. ಆದರೆ ನಾನೆಂದೂ ನಿನ್ನನ್ನು ಮರೆಯಲಾರೆ. ಇಗೋ, ನನ್ನ ಅಂಗೈಯಲ್ಲಿ ನಿನ್ನನ್ನು ಚಿತ್ರಿಸಿದ್ದೇನೆ.
>
> (ಯೆಶಾಯ 49 : 15-16)

ಪರಮಾತ್ಮ ಮಾನವನನ್ನು ಅನನ್ಯವಾಗಿ ಪ್ರೀತಿಸುತ್ತಾನೆ. ಇದು ತಾಯಿಯ ಮಮತೆಗಿಂತಲೂ ಹೆಚ್ಚು. ಮಾನವನಿಗಾಗಿಯೇ ಪರಮಾತ್ಮ ಮಾನವರೂಪಿಯಾದ. ಯಹೂದ್ಯರು ದೇವರ ನಾಮವನ್ನು ಉಚ್ಚರಿಸುವುದೂ ಮಹಾಪಾಪವೆಂದು ಭಾವಿಸಿದ್ದರು. ಇಂತಹ ಸನ್ನಿವೇಶದಲ್ಲಿ ಯೇಸು ಬಂದು, ದೇವರ ಬಗ್ಗೆ ತಾತ್ವಿಕವ್ಯಾಖ್ಯಾನ ನೀಡದೆ, ದೇವರೆಂದರೆ ಯಾರು ಎಂಬ ಪ್ರಶ್ನೆಗೆ ಒಂದೇ ಪದದಲ್ಲಿ ಉತ್ತರವಿತ್ತ–ದೇವರು ನಮ್ಮ 'ತಂದೆ', ದೇವರನ್ನು ಯೇಸು 'ಅಬ್ಬಾ' ಎಂದು ಕರೆದ. ಅಬ್ಬಾ ಎಂದರೆ ಅಪ್ಪಾ, ಪಪ್ಪಾ ಎನ್ನುವ ಮಗುವಿನ ತೊದಲ್ನುಡಿ. ನಾವೆಲ್ಲರೂ ಈ ಮಮತಾಪೂರ್ಣ ತಂದೆಯ ಮಕ್ಕಳು. ತಂದೆಯ ಈ ಪ್ರೀತಿಗೆ ಮಕ್ಕಳ ಪ್ರತಿಕ್ರಿಯೆಯೇನು ?– 'ಆಮೆನ್' ಅಥವಾ 'ತಥಾಸ್ತು'–ಎಲ್ಲವೂ ನಿನ್ನ ಅಭಿಲಾಷೆಯಂತೆ ನಡೆಯಲಿ ಎಂದು ಹೇಳುವ ವಿನೀತಶ್ರದ್ಧೆ. ಅಬ್ಬಾ ಹಾಗೂ ಆಮೆನ್-ಇವೆರಡೂ ಪದಗಳೂ ದೇವಸ್ವರೂಪವನ್ನು, ದೇವ-ಮಾನವ ಸಂಬಂಧವನ್ನು ಸೂಚಿಸುತ್ತವೆ. ಕ್ರೈಸ್ತಧರ್ಮದ ಆಶಯಗಳನ್ನೆಲ್ಲಾ ಕ್ರೋಢೀಕರಿಸಿ ಹೇಳುವುದಾದರೆ–ದೇವರು ಮನುಷ್ಯರನ್ನು ಅನನ್ಯವಾಗಿ ಪ್ರೀತಿಸುತ್ತಾನೆ. ಈ ಪ್ರೀತಿಯ ಸಂಕೇತವಾಗಿ, ಮಾನವವಿಮೋಚನೆಗಾಗಿ, ಯೇಸುವಿನ ಮೂಲಕ, ದೇವರು ತನ್ನ ನಿಜರೂಪವನ್ನು ಪ್ರಕಟಿಸಿದನು.

ಯೇಸುವಿನ ಮೂಲಕ ಮಾತ್ರ, ಪರಮಾತ್ಮನ ನಿಜರೂಪವನ್ನು ಅರಿಯಲು ಸಾಧ್ಯ. ಯೇಸುವಿನಲ್ಲೇ ದೇವರೂಪದ

ಪ್ರಕಟನೆ. ಯೇಸು ದೇವರಂತೆ, ದೇವರು ಯೇಸುವಿನಂತೆ, ಯೇಸುವೇ ದೇವರು. ದೇವರೇ ಮಾನವ ಪರಿಸ್ಥಿತಿಯನ್ನು ಪ್ರವೇಶಿಸಿ ಮಾನವನ ಕಷ್ಟನಷ್ಟ-ನೋವು-ನಲಿವು–ಸಾವುಗಳಲ್ಲಿ ಪಾಲುಗೊಂಡು, ನಂತರ ಪುನರುತ್ಥಾನಗೊಂಡು ಮಾನವನಿಗೂ ಪುನರುತ್ಥಾನವನ್ನು ವಾಗ್ದಾನಿಸಿದರು. ಯೇಸು ದೇವಸುತ. ಅವನು ದೇವರ ಅವತಾರವೆನ್ನುವಂತಿಲ್ಲ. ಪಾಪಿಗಳನ್ನು ಶಿಕ್ಷಿಸಲು, ಸಾತ್ವಿಕರನ್ನು ರಕ್ಷಿಸಲು ಅವನು ಮಾನವನಂತೆ ಅವತರಿಸಲಿಲ್ಲ. ಅವನು ಪೂರ್ಣಮಾನವನಾಗಿ, ಪಾಪಿಗಳ, ವಿಮೋಚನೆಗಾಗಿ ಮಾನವಪರಿಸ್ಥಿತಿಯಲ್ಲಿ ಬೆರೆತುಹೋದ. ಯೇಸು ದೇವರೂ ಹೌದು, ಮನುಷ್ಯನೂ ಹೌದು, ಆದರೆ ಸಂದರ್ಭಕ್ಕೆ ತಕ್ಕಂತೆ ದ್ವಿಪಾತ್ರಧಾರಿಯಾಗುತ್ತಿರಲಿಲ್ಲ. ಲೀಲಾಪ್ರಕಟನೆ ಯೇಸುವಿನ ಉದ್ದೇಶವಾಗಿರಲಿಲ್ಲ. ದೇವರು ಮಮತಾಪೂರ್ಣ ತಂದೆ, ಸರ್ವರೂ ಅವನ ಅಚ್ಚುಮೆಚ್ಚಿನ ಮಕ್ಕಳು, ಪಾಪಿಗಳ ವಿಮೋಚನೆಗೆ ಅವನು ಕಾರ್ಯನಿರತನಾಗಿದ್ದಾನೆ ಎಂಬ ಶುಭಸಂದೇಶವನ್ನು ಹೊತ್ತುಕೊಂಡು ದೇವಸುತನಾದ ಯೇಸು ಮಾನವನಾದ. ಆದುದರಿಂದ ಕ್ರೈಸ್ತರ ನಂಬಿಕೆಯುಂತೆ, ತಾತ್ವಿಕದೃಷ್ಟಿಯಲ್ಲಿ ದೇವರು ತ್ರಿರೂಪಿ. ಅವನು ಮಮತಾಪೂರ್ಣ ತಂದೆ. ಮಾನವವಿಮೋಚನೆಯ ಜವಾಬ್ದಾರಿಯನ್ನು ದೇವರೇ ಸ್ವೀಕರಿಸಿದ್ದಾನೆ. ಆದುದರಿಂದಲೇ ಪರಮಾತ್ಮನನ್ನು ಹೇಗೆ ಸಂಬೋಧಿಸಬೇಕೆಂದು ಯೇಸುವೇ ನಮಗೆ ಕಲಿಸಿದ್ದಾನೆ:–

> 'ಪರಲೋಕದಲ್ಲಿರುವ ನಮ್ಮ ತಂದೆಯೇ
> ನಿಮ್ಮ ನಾಮಕ್ಕೆ ಸ್ತೋತ್ರವಾಗಲಿ
> ನಿಮ್ಮ ರಾಜ್ಯ ಬರಲಿ......'

**೩. ದೇವ ಪ್ರತಿರೂಪಿ ಮಾನವ :** ದೇವಸೃಷ್ಟಿಯಲ್ಲಿ ಮಾನವನಿಗೆ ಕೇಂದ್ರಸ್ಥಾನ. ಸೃಷ್ಟಿ ಮಾನವ ಕೇಂದ್ರವಾಗಿದೆ. ಜಗತ್ತನ್ನು ಸೃಷ್ಟಿಸಿದುದೇ ಮಾನವನ ಸೌಕರ್ಯಕ್ಕಾಗಿ. ದೇವನು ಮಾನವನಾದುದು ಮಾನವವಿಮೋಚನೆಗಾಗಿ. ಮಾನವ ದೇವರ ಅತ್ಯಂತ ಆತ್ಮೀಯ ಸೃಷ್ಟಿ. ತನ್ನ ಉದ್ದೇಶಸಾಧನೆಯಲ್ಲಿ ಮಾನವ ಚರಿತ್ರೆಯನ್ನು ಸೃಷ್ಟಿಸುತ್ತಾ ಇರುತ್ತಾನೆ. ಮಾನವ ಅಸ್ತಿತ್ವವೇ ಚರಿತ್ರೆಯಲ್ಲಿ ಹುದುಗಿದೆ. ದೇವರ ಸೃಷ್ಟಿಯಲ್ಲಿ ಅವನಿಗೆ ಅತ್ಯುತ್ತಮ ಸ್ಥಾನ. ಅವನಿಗಾಗಿ ಇತರ ವಸ್ತುಗಳ ಸೃಷ್ಟಿಯಾಯಿತು. ಈ ಜಗತ್ತಿನಲ್ಲಿ ತನ್ನ ಸ್ಥಾನವೇನೆಂದು ಗ್ರಹಿಸಲು. ತನ್ನ ಬಗ್ಗೆ ವಿವೇಚಿಸಲು, ಎಲ್ಲವನ್ನೂ ಅರ್ಥೈಸಲು ಮಾನವನಿಗೆ ಶಕ್ತಿಯಿದೆ. ಇದಲ್ಲದೆ, ದೇವರೊಡನೆ ಅನನ್ಯವಾದ ಸಂಬಂಧವನ್ನು ಇಟ್ಟುಕೊಳ್ಳಲು ಮಾನವನೊಬ್ಬನಿಗೆ ಮಾತ್ರ ಸಾಧ್ಯವಿರುವುದರಿಂದ ಮಾನವನು ದೇವರ ಪ್ರತಿರೂಪ ಎಂದು ಬೈಬಲ್ ಹೇಳುತ್ತದೆ.

ಮಾನವನಿಗಿರುವುದು ಭೌತಿಕದೇಹ ಮಾತ್ರವಲ್ಲ. ಪ್ರಜ್ಞಾಶಕ್ತಿಯೂ ಇದೆ. ತಾನೇನು ಮಾಡುತ್ತಿದ್ದೇನೆ, ತಾನೇನು ಯೋಚಿಸುತ್ತಿದ್ದೇನೆ ಎಂದು ವಿವೇಚಿಸುವ ಅಂತರ್-ವಿವೇಚನಾ ಶಕ್ತಿ ಅವನಲ್ಲಿದೆ.ಭೌತಿಕದೇಹದಿಂದ ಭಿನ್ನವಾದ ಈ ಶಕ್ತಿಯನ್ನು 'ಆತ್ಮ'ವೆನ್ನಬಹುದು. ದೇಹ-ಆತ್ಮಗಳೆರಡೂ ಇದ್ದಾಗ 'ವ್ಯಕ್ತಿ'. ನಿನ್ನೆ-ಇಂದು-ನಾಳೆಗಳ ಕಾಲಪರಿಮಾಣದಲ್ಲಿ 'ಅಹಂ' ಇರುವುದರಿಂದ, ವ್ಯಕ್ತಿಗೊಂದು ಚರಿತ್ರೆ ಇರಲು ಸಾಧ್ಯ.

ಮಾನವನಿಗೆ ಆತ್ಮವೆಂಬ ಅಹಂಪ್ರಜ್ಞೆ ಇರುವುದರಿಂದಲೇ ನಿರ್ಧಾರಕ ಶಕ್ತಿಯೊಂದು ಅವನಲ್ಲಿ ಮನೆಮಾಡಿಕೊಂಡಿರುತ್ತದೆ. ತಾತ್ವಿಕವಾಗಿ ನೋಡುವುದಾದರೆ ಈ ನಿರ್ಧಾರಕ ಶಕ್ತಿಯೊಂದಿಗೆ ಅವನಿಗೆ ಮಹತ್ತರ ಜವಾಬ್ದಾರಿಯೂ ಇದೆ. ತಾನೇನು ಮಾಡಬೇಕು, ಮಾಡಕೂಡದು ಎಂಬ ನಿರ್ಧಾರವನ್ನು ಕೈಗೊಳ್ಳುವ ನೈತಿಕಸ್ವಾತಂತ್ರ್ಯವನ್ನು ವ್ಯಕ್ತಿ ಬಳಸಿಕೊಳ್ಳಬೇಕಾಗುತ್ತದೆ. ಈ ಸ್ವಾತಂತ್ರ್ಯ ಮಾನವನ ಮೂಲಭೂತಗುಣವಾದರೂ ಅದಕ್ಕೊಂದು ಪರಿಮಿತಿಯಿದೆ. ಈ ಸ್ವಾತಂತ್ರ್ಯವಿಲ್ಲದೆ ನೈತಿಕ ಜೀವನವೂ ಇಲ್ಲ. ಸ್ವಾತಂತ್ರ್ಯದ ಚೌಕಟ್ಟಿನೊಳಗೆ ಮಾತ್ರ ನೈತಿಕಜೀವನ ಅರ್ಥಪೂರ್ಣ. ಇಂತಹ ಹಲವು ಸ್ವತಂತ್ರವ್ಯಕ್ತಿಗಳಿಂದ ಸಮಾಜವು ರೂಪಿತವಾಗುತ್ತದೆ. ಈ ಮಾನವ ಸಮುದಾಯಕ್ಕೆ ತನ್ನದೇ ಆದ ಸ್ವಾತಂತ್ರ್ಯವಿರುವಂತೆ, ನೈತಿಕ ಜವಾಬ್ದಾರಿಯೂ ಇದೆ. ಒಂದು ಸಮಾಜದಲ್ಲಿ ಅನ್ಯಾಯ ಅನಾಚಾರಗಳು ತಾಂಡವವಾಡುತ್ತಿದ್ದರೆ, ಆ ಸಮಾಜ ತನ್ನ ಜವಾಬ್ದಾರಿಯನ್ನು ನಿರ್ಲಕ್ಷಿಸಿದೆ ಎಂಬುದು ಖಂಡಿತ. ವ್ಯಕ್ತಿ ಹಾಗೂ ಸಮಾಜದ ಈ ಸ್ವಾತಂತ್ರ್ಯ–ಜವಾಬ್ದಾರಿಗಳ ವಿವೇಚನೆ, ಕ್ರೈಸ್ತಧರ್ಮ ಮಾನವನನ್ನು ಕಲ್ಪಿಸಿರುವ ರೀತಿಯನ್ನು ನಿರೂಪಿಸಲು ಅತ್ಯಗತ್ಯ. ಮೂಲತಃ ದೇವಪ್ರತಿರೂಪಿಯಾದ ಮಾನವ ತನ್ನ ಪಾಪಗಳಿಂದಾಗಿ ಭ್ರಷ್ಟನಾಗಿದ್ದಾನೆ ಎಂದು ಕ್ರೈಸ್ತನಂಬಿಕೆ. ಪಾಪಪ್ರವೃತ್ತಿ ಅವನಲ್ಲಿ ಮನೆಮಾಡಿದೆ. ಪರಮಾತ್ಮನು ತನಗಿತ್ತ ಮುಕ್ತಕೊಡುಗೆಯಾದ ಸ್ವಾತಂತ್ರ್ಯವನ್ನು ಮಾನವ ದುರುಪಯೋಗಗೊಳಿಸಿ, ದೇವರಿಗೆ ಅವಿಧೇಯವಾದನು. ದೇವರನ್ನೇ ನಿರಾಕರಿಸುವ ಈ ಉಲ್ಲಂಘನೆ ಮಾನವ ಜನಾಂಗದಲ್ಲೇ ಪಾಪಪ್ರವೃತ್ತಿಯನ್ನು ಹುಟ್ಟಿಸಿತು. ಈ ಪಾಪಪ್ರವೃತ್ತಿಗೆ ಒಬ್ಬ ವ್ಯಕ್ತಿ ಜವಾಬ್ದಾರನಲ್ಲದಿದ್ದರೂ, ಸಮಾಜದ ಅಂಗವಾಗಿರುವ ಪ್ರತಿಯೊಬ್ಬರೂ ಈ ಪಾಪಪ್ರವೃತ್ತಿಯಲ್ಲಿ ತೊಳಲಾಡುತ್ತಿದ್ದಾರೆ. ಮಾನವಸ್ವಭಾವದ ಈ ಮೂಲಭೂತ ಅಂಶವನ್ನು ಅಲ್ಲಗಳೆಯುವಂತಿಲ್ಲ. ತನ್ನನ್ನು ಸೃಷ್ಟಿಸಿದ ಪರಮಾತ್ಮನನ್ನು ಎದುರಿಸಿ ಅವನ ವಿಧಿಯ ವಿರುದ್ಧ ಬಂಡಾಯವೇಳುವ ಪ್ರವೃತ್ತಿಯಿದು. ಕ್ರೈಸ್ತರ ನಂಬಿಕೆಯಂತೆ ಪರಮಾತ್ಮನು ಪ್ರೇಮರೂಪಿ, ಅತ್ಯಂತ

ಆತ್ಮೀಯ. ಮಾನವಸಮುದಾಯ ಈ ಪ್ರೇಮವನ್ನು ತಿರಸ್ಕರಿಸಿ ಅನ್ಯಾಯ ಅನಾಚಾರಗಳಲ್ಲಿ ತೊಡಗುತ್ತದೆ. ದೇವಸ್ನೇಹದ ತಿರಸ್ಕಾರವೇ ಪಾಪ.

ಪಾಪಬಂಧನದಲ್ಲಿ ಸಿಲುಕಿದ ಮಾನವ ಮುಕ್ತನಾಗುವುದೆಂತು? ತನ್ನ ಈ ಹೀನಸ್ಥಿತಿಯಿಂದ ಮಾನವನೇ ಮೇಲೇರು ವಂತಿಲ್ಲ. ಪ್ರೇಮರೂಪಿ ತಂದೆಯಾದ ದೇವರು ಮಾನವನನ್ನು ಈ ಪಾಪಪ್ರವೃತ್ತಿಯ ಶಾಪದಿಂದ ಮುಕ್ತಗೊಳಿಸಬೇಕು. ಸ್ವಾತಂತ್ರ್ಯವನ್ನು ದುರುಪಯೋಗಗೊಳಿಸಿದ ಭ್ರಷ್ಟ ಮಾನವಜನಾಂಗವನ್ನು ದೇವರೇ ಉದ್ಧರಿಸಬೇಕು. ಪಾಪಪ್ರವೃತ್ತಿಯಿಂದಾಗಿ ದೇವಪ್ರತಿರೂಪ ಕೊಳೆಯಾಯಿತೇ ವಿನಾ ನಾಶವಾಗಲಿಲ್ಲ. ಯಾಕೆಂದರೆ ನಾವು ಪಾಪಿಗಳೆಂಬ ಪ್ರಜ್ಞೆ, ಸಾತ್ವಿಕತೆಯ ಆಶೆ ಮಾನವ ನಲ್ಲಿ ಇನ್ನೂ ಇದೆ. ಯೋಗ್ಯವಾದುದು ಏನು ಎಂದು ನಮಗೆ ತಿಳಿದಿದೆ. ತನ್ನ ಪ್ರಯತ್ನದಿಂದಲೇ ವಿಮೋಚನೆ ಅಸಾಧ್ಯವೆಂದು ಮಾನವನಿಗೆ ಗೊತ್ತು. ಪಾಪಪ್ರವೃತ್ತಿಗೆ ತೊತ್ತಾದ ಮಾನವನನ್ನು ವಿಮೋಚಿಸಲು ದೇವರೇ ಮುಂದಾಗುತ್ತಾನೆ. ದೈವಾನು ಗ್ರಹವೇ ಈ ವಿಮೋಚನಾ ಕಾರ್ಯವನ್ನು ಮಾಡುತ್ತದೆ. ಈ ಅನುಗ್ರಹ ಮುಕ್ತಕೊಡುಗೆ, ಬಲಾತ್ಕಾರವಾಗಿ ಇತ್ತುದ್ದಲ್ಲ. ಸ್ವಂತ ಶಕ್ತಿಯಿಂದ ಸಾಧಿಸಲಾರದ ವಿಮೋಚನೆಯನ್ನು ದೈವಪ್ರಸಾದವು ಮಾಡಿ ಮುಗಿಸುತ್ತದೆ. ಈ ಅನುಗ್ರಹದ ಸ್ವೀಕಾರ–ನಿರಾ ಕರಣ ಮಾನವನಿಗೆ ಬಿಟ್ಟದ್ದು. ಈ ಅನುಗ್ರಹದ ಪ್ರಭಾವದಿಂದ, ಮಾನವ ದೇವರತ್ತ ಪುನಃ ತಿರುಗಿ ಪರಿವರ್ತನೆಗೊಳ್ಳುತ್ತಾನೆ. ಈ ಪರಿವರ್ತನೆಯೇ ಕ್ರೈಸ್ತಧರ್ಮದ ಭಕ್ತಿಸಾರ. ಕ್ರೈಸ್ತಧರ್ಮದ ಸ್ವೀಕಾರವೇ ಈ ಪರಿವರ್ತನೆಯ ಸಂಕೇತ. ಒಟ್ಟಿನಲ್ಲಿ, ಮೂಲತಃ ಭ್ರಷ್ಟರೂಪಿಯಾದ ಮಾನವ ದೈವಾನುಗ್ರಹದಿಂದ ಪುನಃ ದೇವರ ಆಪ್ತಸೃಷ್ಟಿಯಾಗಿ ಅವನ ಪ್ರತಿರೂಪಿಯಾಗು ತ್ತಾನೆ. ಯೇಸುವೇ ಈ ಮಹತ್ತರವಾದ ಅನನ್ಯ ಪ್ರಸಾದವೆನ್ನಬಹುದು.

**೪. ವಿಮೋಚನಾ ಧರ್ಮ:** ವಿಮೋಚನೆಯೇ ಕ್ರೈಸ್ತಧರ್ಮದ ಒಳತಿರುಳು, ಸರ್ವಸಾರ ಲಕ್ಷಣ. ಅದು ವಿಮೋ ಚನಾ ಧರ್ಮವಾದುದರಿಂದಲೇ ಪಾರಮಾರ್ಥಿಕ ಅಂಶವೂ ಅಂತರ್ಗತವಾಗಿದೆ. ಪ್ರತಿಧರ್ಮದಲ್ಲೂ ಪಾರಮಾರ್ಥಿಕ ಆಯಾಮ ವಿದ್ದೇ ಇದೆಯಾದರೂ, ಈ ಆಯಾಮದಲ್ಲಿ ಹಲವು ಮಜಲುಗಳಿರುವುದು ಸಾಧ್ಯ. ಪಾರಮಾರ್ಥಿಕ ಅಂಶ ಒಂದು ಧರ್ಮದ ಗೌಣ ಅಂಶವಾಗಿರಬಹುದು ಅಥವಾ ಖಚಿತಾಂಶವಾಗಿರಬಹುದು, ಪಾರಮಾರ್ಥಿಕ ಆಯಾಮವು ಒಂದು ಧರ್ಮದ ಖಚಿತಾಂಶ ವಾದಾಗ, ಬದುಕಿಗೆ, ವಾಸ್ತವಕ್ಕೆ, ಈ ಅಂಶವೇ ಒರೆಗಲ್ಲಾಗುತ್ತದೆ. ಕ್ರೈಸ್ತಧರ್ಮದಲ್ಲಿ ಪಾರಮಾರ್ಥಿಕ ಅಂಶವು ಖಚಿತಾಂಶ ವಾಗಿದ್ದು, ವಿಮೋಚನೆಯು ಅದರ ವಿಶಿಷ್ಟಲಕ್ಷಣವಾಗಿದೆ. ವಿಮೋಚನೆ ಪ್ರಪ್ರಥಮವಾಗಿ ದೈವ–ಮಾನವ ಸಂಬಂಧದ ಕುರಿತಾ ಗಿದೆ. ದೇವರು ಸದಾ ಒಳಿತನ್ನೇ ಅಪೇಕ್ಷಿಸುವುದರಿಂದಾಗಿ, ಪಾಪಿ ಮಾನವ ದೇವರಿಂದ ದೂರವಾಗುತ್ತಾನೆ. ಮಾನವನನ್ನು ಹತ್ತಿರ ತರಲು, ಸೌಹಾರ್ದಸಂಬಂಧವನ್ನು ಪುನಃ ಉಂಟುಮಾಡಲು ದೇವರೇ ಮಾನವನನ್ನು ವಿಮೋಚಿಸಬೇಕಾಗುವುದು ಅತ್ಯ ಗತ್ಯ. ಪಾಪಬಂಧನದಿಂದ ವಿಮೋಚಿತನಾದ, ದೇವರಿಂದ ರಕ್ಷಿತನಾದ, ಸಾತ್ವಿಕ ವ್ಯಕ್ತಿಗೆ ದೇವಸಾನ್ನಿಧ್ಯ ಸಾಧ್ಯ.

ಸಾವು–ನೋವುಗಳು ಪ್ರತಿಯೊಬ್ಬರ ಅನುಭವವಾದುದರಿಂದಾಗಿ, ಮುಕ್ತಿ, ವಿಮೋಚನೆಗಳು ಮಾನವನ ಮೂಲಭೂತ ಆಶಯಗಳಾಗಿರುತ್ತವೆ. ಕ್ರೈಸ್ತಧರ್ಮದ ನಂಬಿಕೆಯಂತೆ, ಪರಮಾತ್ಮನೇ ಈ ಕಾರ್ಯವನ್ನು ಸಾಧಿಸಲು ಮುಂದಾಗುತ್ತಾನೆ. ಈ ಕಾರ್ಯದಲ್ಲಿ ಮಾನವನ ಸಹಕಾರವೂ ಅತ್ಯಗತ್ಯ. ಯಹೂದಿ ಧರ್ಮದ ಅಂಗವಾಗಿ ಹುಟ್ಟಿದ ಕ್ರೈಸ್ತಧರ್ಮ ಕಾಲಕ್ರಮೇಣ ಸ್ವತಂತ್ರ ಮತವಾಯಿತು. ಯಹೂದಿಜನಾಂಗ, ತಾವು ದೇವರು ಆರಿಸಿದ ಜನಾಂಗವೆಂದೂ ಹಾಗೂ ತಮ್ಮ ರಕ್ಷಣೆಗಾಗಿ ದೇವರು ವಿಮೋಚಕನನ್ನು ಕಳುಹಿಸುವರು ಎಂಬ ನಿರೀಕ್ಷೆಯಲ್ಲಿದ್ದರು. ದೇವರಿಂದ ವಿಮುಖವಾದ ಈ ಜನಾಂಗವನ್ನು ಒಂದು ಒಪ್ಪಂದದ ಮೂಲಕ ದೇವರು ಪುನಃ ತನ್ನದಾಗಿರಿಸುವನು ಎಂಬ ನಂಬಿಕೆ ಅವರದು. ಲೌಕಿಕ ಅಭಿವೃದ್ಧಿ, ಸಾಂಸಾರಿಕ ತೃಪ್ತಿ, ಸಾಮಾಜಿಕ ಸಮಭಾವ, ಗುಲಾಮಗಿರಿಯಿಂದ ಬಿಡುಗಡೆಗಳೇ ಈ ವಿಮೋಚನೆ ಎಂದು ಯಹೋದ್ಯರು ದೃಢವಾಗಿ ನಂಬಿದ್ದರು. ಆದರೆ ಯೇಸುವಿನ ಆಗಮನದಿಂದಾಗಿ ಈ ಮನೋಭಾವ ಬದಲಾಗಿ, ವಿಮೋಚನೆ ಎಂಬುದು ಐಹಿಕ ಸಂದರ್ಭದಲ್ಲಿ ಮಾತ್ರವಲ್ಲ, ಮೂಲಭೂತವಾಗಿ ಇದು ದೇವರಿಂದ ವಿಮುಖವಾಗಿ ಭ್ರಷ್ಟವಾದ ಮಾನವಸಮುದಾಯವನ್ನು ಪುನಃ ದೇವರೊಡನೆ ರಾಜಿ ಗೊಳಿಸುವುದು ಎಂಬ ಅರ್ಥ ಬಂತು. ದೇವರೇ ಚರಿತ್ರೆಯ ಮೂಲಕ ಕಾರ್ಯಗತಗೊಳಿಸುವ ಈ ವಿಮೋಚನೆಯಲ್ಲಿ ಯೇಸು ಕ್ರಿಸ್ತನ ಆಗಮನ ಅತ್ಯಂತ ಮಹತ್ವದ ಘಟ್ಟವಾಗುತ್ತದೆ. ಮುಕ್ತಿಸಂದೇಶವೇ ಯೇಸುವಿನ ಶುಭಸಂದೇಶ. ಮಾನವನ ವಿಮೋ ಚನಾ ಕಾರ್ಯವು ಈಗಾಗಲೇ ಪ್ರಾರಂಭವಾಗಿದೆ. ಯಹೋದ್ಯರು ನಂಬಿದಂತೆ ಬರೇ ಧಾರ್ಮಿಕ ನಿಯಮ ಆಚರಣೆ, ಸಂಪ್ರದಾಯ ಗಳನ್ನು ಕುರುಡರಂತೆ ಅನುಸರಿಸಿದರೆ ಈ ಮುಕ್ತಿಯು ಸಿಗಲಾರದು. ದೇವಪ್ರೀತಿಯನ್ನು ಶ್ರದ್ಧೆಯಿಂದ ಸ್ವೀಕರಿಸುವುದೇ ವಿಮೋ ಚನೆಗೆ ಹಾದಿ. ಮಾನವಜೀವನವೊಂದು ಅವಿರತ ಯಾತ್ರೆ, ಈ ಯಾತ್ರೆಯೊಂದಿಗೆ ವಿಮೋಚನೆಯೂ ಒಂದು ಪ್ರಕ್ರಿಯೆ.

> 'ದೇವರನ್ನು ವಿಶ್ವಾಸಿಸುವ ಯಾವನೂ ನಾಶವಾಗದೆ, ನಿತ್ಯಜೀವನವನ್ನು ಹೊಂದುವುದಕ್ಕಾಗಿ
> ತಮ್ಮ ಏಕಕುಮಾರನನ್ನು ಕಳುಹಿಸುವಷ್ಟು ದೇವರು ಲೋಕವನ್ನು ಪ್ರೀತಿಸಿದರು. ದೇವರು
> ತಮ್ಮ ಕುಮಾರನನ್ನು ಕಳುಹಿಸಿದ್ದು ಲೋಕದ ಮೇಲೆ ತೀರ್ಪಿಡುವುದಕ್ಕಲ್ಲ, ಲೋಕವನ್ನು ರಕ್ಷಿಸುವುದಕ್ಕೆ.'
>
> (ಅರುಳಪ್ಪ 3 : 16–17)

ಮಾನವವಿಮೋಚನೆಗಾಗಿ ಬಂದ ಯೇಸು, ದೇವರ ಕ್ಷಮಾಪೂರ್ಣ ಸ್ನೇಹವನ್ನು ಸಾರಿದನು. ಈ ವಿಮೋಚನಾಕಾರ್ಯದಲ್ಲಿ ದೇವರದ್ದೇ ಪ್ರಥಮಹೆಜ್ಜೆ. ದೇವರ ಅಗಣಿತ ಪ್ರೇಮವೇ ಇದಕ್ಕೆ ಕಾರಣ. ದೇವಸಾನ್ನಿಧ್ಯವನ್ನು ಗಳಿಸುವುದೇ ಮುಕ್ತಿಯ ಪೂರ್ಣಸ್ಥಿತಿ. ಈ ಕಾರ್ಯ ಹಂತಹಂತಗಳಲ್ಲಿ ಕಾರ್ಯಗತಗೊಂಡು, ಆ ಪರಮದಿನದಲ್ಲಿ ಪೂರ್ಣವಾಗುತ್ತದೆ. ಆ ಪರಮದಿನದಲ್ಲಿ ನಾವು ದೇವರ ಮಹತ್ತನ್ನು ಕಣ್ಣಾರೆಕಂಡು ಪೂರ್ಣವಾಗಿ ಅನುಭವಿಸುವೆವು. ದೇವರು ಯೇಸುವಿನ ಮೂಲಕ ಕಾರ್ಯಗತಗೊಳಿಸಿದ ಈ ವಿಮೋಚನಾ ಕಾರ್ಯದಲ್ಲಿ ಮಾನವ ನಿಷ್ಕ್ರಿಯನಲ್ಲ. ಪರಮಾತ್ಮನ ಆಹ್ವಾನವನ್ನು ವಿನೀತಶ್ರದ್ಧೆಯಿಂದ ಸ್ವೀಕರಿಸಿ, ಅವನ ಅನುಗ್ರಹದ ಸಹಾಯದಿಂದ ಪಾಪಗಳಿಂದ ವಿಮುಖನಾಗುವುದು ಅತ್ಯಗತ್ಯ. ಹೀಗೆ ಸೃಷ್ಟಿಯ ಆದಿಯಿಂದಲೂ ಪ್ರಾರಂಭವಾದ ಭ್ರಷ್ಟಮಾನವನ ವಿಮೋಚನಾಕಾರ್ಯವು ಯೇಸುವಿನ ಆಗಮನದಲ್ಲಿ ನಿರ್ದಿಷ್ಟಘಟ್ಟವನ್ನು ತಲುಪಿ, ಪರಮದಿನದಲ್ಲಿ ಪೂರ್ತಿಗೊಳ್ಳುವುದು.

**೫. ದೇವರ ಪ್ರೀತಿಗೆ ಸಾಕ್ಷಿ–ಯೇಸು :** ಚಾರಿತ್ರಿಕ ಧರ್ಮವಾದ ಕ್ರೈಸ್ತಧರ್ಮ ಕೆಲವು ಸಾರ್ವತ್ರಿಕ ತತ್ತ್ವಗಳನ್ನು ಆಧರಿಸಿ ಹುಟ್ಟಿದೆ, ಕೆಲವು ನಿಶ್ಚಿತ ಚಾರಿತ್ರಿಕ ಘಟನೆಗಳನ್ನು ಆಧರಿಸಿ ಹುಟ್ಟಿ ಬೆಳೆಯಿತು. ವಿಮೋಚಕನಾದ ಯೇಸುವಿನ ಆಗಮನವೇ, ಕ್ರೈಸ್ತಧರ್ಮದ ಉಗಮ. ಸುಮಾರು ಎರಡುಸಾವಿರ ವರ್ಷಗಳ ಹಿಂದೆ, ದೇವಸುತನು ದೇವಪಿತನ ಆದೇಶದಂತೆ ಮಾನವ ಚರಿತ್ರೆಯನ್ನು ಪ್ರವೇಶಿಸಿದನು. ಯಹೂದಿ ಜನಾಂಗದಲ್ಲಿ ಬಡ ಬಡಗಿಯೊಬ್ಬನ ಮಗನಾಗಿ, ನೆಲೆಯಿಲ್ಲದೆ, ದನದ ಹಟ್ಟಿಯಲ್ಲಿ ಹುಟ್ಟಿ, ತನ್ನ ೩೩ನೇ ವಯಸ್ಸಿನಲ್ಲಿ ಸಮಾಜದ್ರೋಹಿ ಎಂಬ ಅಪಾದನೆಯ ಮೇಲೆ ಶಿಲುಬೆಯ ಶಿಕ್ಷೆಗೆ ಗುರಿಯಾಗಿ ಸಾಮಾನ್ಯ ಆರೋಪಿಯಂತೆ ಮರಣಹೊಂದಿದನು. ಈ ವ್ಯಕ್ತಿ, ತನ್ನ ಜೀವಮಾನಕಾಲದಲ್ಲಿ, ತನ್ನೂರಿನಿಂದ ೬೦ ಮೈಲುಗಳನ್ನು ಮೀರಿ ಪ್ರಯಾಣಮಾಡಲಿಲ್ಲ. ಅವನಿಗೆ ಆಸ್ತಿಪಾಸ್ತಿಗಳೇನೂ ಇರಲಿಲ್ಲ, ಅವನ್ನು ಗಳಿಸುವ ಗೋಜಿಗೂ ಹೋಗಲಿಲ್ಲ. ಯಾವ ಮಹಾವಿದ್ಯಾಲಯವನ್ನು ಕಂಡವನಲ್ಲ, ಸೈನ್ಯವನ್ನು ಕೂಡಿಸಲಿಲ್ಲ, ರಾಜ್ಯವನ್ನು ಕಟ್ಟಲಿಲ್ಲ. ಆದರೂ ಈ ಮಹಾನ್ ವ್ಯಕ್ತಿಯನ್ನು ಮಾನವಜನಾಂಗ ದಿನಂಪ್ರತಿ ಸ್ಮರಿಸುತ್ತದೆ. ಸಮಾಜದ್ರೋಹಿಗಳಿಗೆಂದು ಮೀಸಲಾದ ಶಿಲುಬೆಯನ್ನು ತಮ್ಮ ಪವಿತ್ರ ಸಂಕೇತವನ್ನಾಗಿ ಸ್ವೀಕರಿಸುತ್ತದೆ. ಯೇಸುವಿನ ಬದುಕಿನ ನೇರ ವಿವರಣೆ ನಮಗೆ ದೊರೆತಿಲ್ಲ. ಅವನ ಶಿಷ್ಯರು ತಾವು ಕೇಳಿದ ಯೇಸುವಿನ ನುಡಿಗಳನ್ನು, ಅವನ ಕಾರ್ಯಗಳನ್ನು ಕುರಿತು ಬರೆದಿಟ್ಟರು. ಈ ಅಲ್ಪಸ್ವಲ್ಪ ಬರಹಗಳೇ ಯೇಸುವಿನ ಜೀವನದ ಚಿತ್ರವೊಂದನ್ನು ರೂಪಿಸುತ್ತವೆ. ೩೦ ವರ್ಷಗಳ ಕಾಲ ತನ್ನ ಹುಟ್ಟೂರಿನಲ್ಲಿ ಬಡಗಿಯ ಕೆಲಸವನ್ನು ಮಾಡಿಕೊಂಡಿದ್ದ ಯೇಸು, ಬರೇ ಮೂರು ವರ್ಷಗಳಕಾಲ ಬೋಧನಾಕಾರ್ಯದಲ್ಲಿ ತೊಡಗಿದ.

> 'ದೇವರ ಚೈತನ್ಯವು ನನ್ನಲ್ಲಿದೆ. ಶೋಷಿತರಿಗೆ ಶುಭಸಂದೇಶವನ್ನು ಸಾರಲು ನನ್ನನ್ನು ಅಭಿಷೇಕಿಸಿದರು.
> ಬಂಧಿತರನ್ನು ಮುಕ್ತಗೊಳಿಸಲು ಅಂಧರಿಗೆ ದೃಷ್ಟಿಯನ್ನೀಯಲು, ಕುಗ್ಗಿದವರನ್ನು ವಿಮೋಚಿಸಲು,
> ದೇವರು ನೇಮಿಸಿರುವ ಶುಭಯುಗವನ್ನು ಪ್ರಕಟಿಸಲು ಅವರು ನನ್ನನ್ನು ನೇಮಿಸಿರುವರು'

—ಎಂದು ಸಾರಿ ಯೇಸು ತನ್ನ ಕಾರ್ಯಕ್ರಮವನ್ನು ಪ್ರಕಟಗೊಳಿಸಿದನು. ದೇವರಾಜ್ಯ ಕುರಿತು ಶುಭಸಂದೇಶವನ್ನು ಸಾರುತ್ತಾ ಹೋದಂತೆ ಅವನಿಗೆ ಹಲವು ಅನುಯಾಯಿಗಳು ಸಿಕ್ಕಿದರು. ತನ್ನ ಜೀವಿತಕಾಲದಲ್ಲಿ ಯೇಸುವನ್ನು ಯಾರೂ ಗುರುತಿಸಲಿಲ್ಲ. ತಮ್ಮ ವಿಮೋಚಕನು ಮಹಾಪವಾಡಪುರುಷನಾಗಿರಬಹುದು. ರಾಜವಂಶದಲ್ಲಿ ಜನಿಸಬಹುದು ಎಂಬ ನಿರೀಕ್ಷೆಯಲ್ಲಿದ್ದ ಯಹೋದ್ಯರಿಗೆ ಈ ಬಡ ಬಡಗಿಯ ಮಾತುಗಳು ಅಸಂಬದ್ಧವಾಗಿ ಕಂಡದ್ದು ಆಶ್ಚರ್ಯವೇನಲ್ಲ. ದೇವಕಾರ್ಯವನ್ನು ತಮ್ಮ ಅಪೇಕ್ಷೆಯ ಚೌಕಟ್ಟಿನೊಳಗೆ ಇರಿಸಿದ ಜನರಿಗೆ ಯೇಸು ಸಮಾಜದ್ರೋಹಿ, ಸಂಪ್ರದಾಯವಿರೋಧಿಯಾಗಿ ಕಂಡನು. ಸಮಾಜದ್ರೋಹಿಯಾಗಿ ಕಂಡ ಈ ದೇವಸುತನನ್ನು ಹಿಡಿದು ಶಿಲುಬೆಗೇರಿಸಿ, ಅವನ ಕಾರ್ಯವೆಲ್ಲಾ ವಿಫಲವಾಯಿತೆಂದು ಭಾವಿಸಿದ ಜನರು, ಕಾಲಕ್ರಮೇಣ ಅವನ ಶುಭಸಂದೇಶವನ್ನು ಸ್ವೀಕರಿಸಿದರು. ಯೇಸುವಿನ ಮರಣವೇ ಮಾನವ ವಿಮೋಚನೆಯ ಮುಖ್ಯ ಸಂದೇಶವಾಯಿತು.

ಯೇಸುವಿನ ಬದುಕೇ ಅವನ ಸಂದೇಶವಾಗಿತ್ತು. ಅವನ ಜೀವನವೂ ಸರಳ, ಬೋಧನೆಯೂ ಅಷ್ಟೇ ಸರಳವಾಗಿತ್ತು. ದೇವರು ಕ್ರೂರ ನ್ಯಾಯಾಧೀಶನೆಂದು ಭಾವಿಸಿದ್ದ ಜನರಿಗೆ, ಈ ದೇವರೆಷ್ಟು 'ಮಾನವೀಯ'ನೆಂದು ಹೇಳಿ, ತಾವೇ ಸರ್ವಶಕ್ತರೆಂದು ಭಾವಿಸಿದ್ದ ಜನರನ್ನು 'ಮಾನವೀಯ'ರನ್ನಾಗಿ ಮಾಡಿದ. ಯೇಸುವಿನ ಬೋಧನೆಗಳಲ್ಲಿ ಒಂದು ಹೊಸ ಆಯಾಮವಿತ್ತು. ಅವನ ಮಾತುಗಳೆಲ್ಲಾ ಆಹ್ವಾನರೂಪಿಯಾಗಿ, ಒತ್ತಾಯಭಾವದಿಂದ ಕೂಡಿದ್ದುವು. ದೇವರ ಬಗ್ಗೆ, ಮಾನವನ ಬಗ್ಗೆ, ದೇವ–ಮಾನವ ಸಂಬಂಧದ ಬಗ್ಗೆ ಹೊಸದೃಷ್ಟಿಕೋನವನ್ನೇ ಅವನು ರೂಪಿಸಿದ. ಅವನ ಮಾತುಗಳಲ್ಲಿ ತಾತ್ವಿಕ ಸಂಕೀರ್ಣತೆ ಇರಲಿಲ್ಲ. ಸರಳ ಕಥೆಗಳ ಮೂಲಕ, ಉಪಮೆ, ಸಾಮಿತಿಗಳನ್ನು ಉಪಯೋಗಿಸಿ, ತಾನು ತಂದ ಶುಭಸಂದೇಶವನ್ನು ಸಾರಿದನು. 'ಶುದ್ಧ ಹೃದಯಿಗಳು ಭಾಗ್ಯವಂತರು', ಏಕೆಂದರೆ ಅವರು ದೇವರನ್ನು ಕಾಣುವರು...ನೀತಿಯ ನಿಮಿತ್ತ ಹಿಂಸೆಯನ್ನು ಸಹಿಸುವವರು ಭಾಗ್ಯವಂತರು, ಏಕೆಂದರೆ ಮೋಕ್ಷರಾಜ್ಯವು ಅವರದು.......ಬಲಿಯನ್ನು ಅರ್ಪಿಸಲು ಬಂದಾಗ, ನಿನ್ನ ಸಹೋದರನು ನಿನ್ನ

ಮೇಲೆ ವಿರೋಧವಾಗಿದ್ದಾನೆಂದು ತಿಳಿದರೆ, ಆ ಕಾಣಿಕೆಯನ್ನು ಪೀಠದ ಮುಂದೆ ಇಟ್ಟು, ಮೊದಲು ನಿನ್ನ ಸಹೋದರನೊಡನೆ ರಾಜಿಯಾಗು, ನಂತರ ಬಂದು ನಿನ್ನ ಕಾಣಿಕೆಯನ್ನು ಅರ್ಪಿಸು......ಯಾರಾದರೂ ನಿನ್ನ ಬಲಗೆನ್ನೆಗೆ ಹೊಡೆದರೆ, ಎಡಗೆನ್ನೆಯನ್ನು ತೋರಿಸು. ಯಾರಾದರೂ ಒಂದು ಮೈಲು ಬರಬೇಕೆಂದು ಬಲಾತ್ಕರಿಸಿದರೆ ಅವನೊಡನೆ ಇನ್ನೆರಡು ಮೈಲು ಹೋಗು... ನಿನ್ನ ಸ್ನೇಹಿತರನ್ನು ಪ್ರೀತಿಸಿ, ಶತ್ರುಗಳನ್ನು ದ್ವೇಷಿಸಿ ಎಂದು ಹೇಳಲಾಗಿದೆ. ನಾನು ನಿಮಗೆ ಹೇಳುವುದೇನೆಂದರೆ, ನಿಮ್ಮ ಶತ್ರುಗಳನ್ನು ಪ್ರೀತಿಸಿರಿ. ನಿಮ್ಮನ್ನು ಹಿಂಸಿಸುವವರಿಗಾಗಿ ಪ್ರಾರ್ಥಿಸಿರಿ. ಈ ಮೂಲಕ ಪರಲೋಕದಲ್ಲಿರುವ ನಿಮ್ಮ ಪಿತನ ಯೋಗ್ಯ ಮಕ್ಕಳಾಗುವಿರಿ. ಅವರು ಒಳ್ಳೆಯವರ ಮೇಲೂ ಕೆಟ್ಟವರ ಮೇಲೂ ತಮ್ಮ ಸೂರ್ಯನು ಉದಯಿಸುವಂತೆಯೂ, ನೀತಿವಂತರ ಮೇಲೂ, ಅನೀತಿವಂತರ ಮೇಲೂ ಮಳೆಗರೆಯುವಂತೆಯೂ ಮಾಡುತ್ತಾರೆ. ನಿಮ್ಮನ್ನು ಪ್ರೀತಿಸುವವರನ್ನೇ ನೀವು ಪ್ರೀತಿಸಿದರೆ ನಿಮಗೆ ಯಾವ ಸಂಭಾವನೆ ದೊರೆಯುವುದು ? ಇದನ್ನು ಸುಂಕದವರೂ ಮಾಡುವುದಿಲ್ಲವೇ ?'

ಯೇಸುವಿನ ಬೋಧನೆಯನ್ನು ಕೇಳಿದ ಜನರು, 'ಯಾವನೂ ಇವನಂತೆ ಬೋಧಿಸಲಿಲ್ಲ' ಎಂದುಕೊಳ್ಳುವಂತಾಯಿತು. ಜನರು ನಂಬಿದ ಕುರುಡು ಮೌಲ್ಯಗಳನ್ನು ಬುಡಸಮೇತ ಅಲುಗಾಡಿಸಿ, ಅವೆಷ್ಟು ಟೊಳ್ಳು ಎಂದು ಯೇಸು ತೋರಿಸಿದನು. ಮಾನವೀಯತೆಯನ್ನು ನಿರ್ಧರಿಸುವ ಹೊಸ ವರ್ಗಸರಣಿಯೊಂದನ್ನು ಬೋಧಿಸಿದನು. 'ಸತ್ಯವೇನೆಂದು ಅರಿಯಿರಿ, ಸತ್ಯವೇ ನಿಮ್ಮನ್ನು ಮುಕ್ತವಾಗಿರಿಸುವುದು'. ಯೇಸುವಿನ ನುಡಿಗಳೆಲ್ಲಾ, ವಿವರಣೆಯ ಅಗತ್ಯವಿಲ್ಲದ ಸ್ಪಷ್ಟನುಡಿಗಳು.

ಯೇಸು ಸಂದೇಶದ ಸಾರವೇನು ? ದೇವರು ಮಾನವನನ್ನು ಅಪರಿಮಿತವಾಗಿ ಪ್ರೀತಿಸುತ್ತಾನೆ. ಮಾನವ ಈ ಮಮತೆಯನ್ನು ಸ್ವೀಕರಿಸಬೇಕು. ದೇವರು ತನ್ನನ್ನು ಪ್ರೀತಿಸಿದಂತೆ, ತಾನು ಇತರರನ್ನು ನಿಸ್ವಾರ್ಥದಿಂದ ಪ್ರೀತಿಸಬೇಕು. ದೇವರಲ್ಲಿ ಪೂರ್ಣವಿಶ್ವಾಸವಿರಬೇಕು–'ಆಕಾಶದ ಪಕ್ಷಿಗಳನ್ನು ನೋಡಿ ಅವು ಬಿತ್ತುವುದಿಲ್ಲ, ಕೊಯ್ಯುವುದಿಲ್ಲ, ಕಣಜಗಳಲ್ಲಿ ತುಂಬಿಡುವುದಿಲ್ಲ. ಆದರೂ ಪರಲೋಕದಲ್ಲಿರುವ ನಿಮ್ಮ ತಂದೆ ಅವುಗಳನ್ನು ಪೋಷಿಸುತ್ತಾನೆ. ಅವುಗಳಿಗಿಂತ ನೀವು ಮೇಲಾದವರಲ್ಲವೇ? ...ಬಯಲಿನಲ್ಲಿ ಹೂಗಳು ಹೇಗೆ ಬೆಳೆಯುತ್ತವೆ, ಎಂದು ಗಮನಿಸಿ. ಅವು ದುಡಿಯುವುದೂ ಇಲ್ಲ, ನೂಲುವುದೂ ಇಲ್ಲ... ಈ ಹೊತ್ತು ಇದ್ದು, ನಾಳೆ ಒಲೆಯ ಪಾಲಾಗುವ ಬಯಲಿನ ಹುಲ್ಲಿಗೆ ದೇವರು ಹೀಗೆ ಉಡಿಸಿದರೆ ನಿಮಗೆ ಇನ್ನೇನು ಮಾಡಲಾರನು ?...ನಿಮ್ಮಲ್ಲಿ ಯಾರಾದರೂ ರೊಟ್ಟಿಯನ್ನು ಕೇಳುವ ತನ್ನ ಮಗನಿಗೆ ಕಲ್ಲನ್ನೆತ್ತಿ ಕೊಡುವನೇ ? ಅಥವಾ ಮೀನನ್ನು ಕೇಳಿದರೆ ಹಾವನ್ನು ಕೊಡುವನೇ? ಕೆಟ್ಟವರಾದ ನೀವು, ನಿಮ್ಮ ಮಕ್ಕಳಿಗೆ ಒಳ್ಳೆಯವುಗಳನ್ನೇ ಕೊಡಬಲ್ಲವರಾದರೆ, ಪರಲೋಕದಲ್ಲಿರುವ ನಿಮ್ಮ ತಂದೆಯು ತಮ್ಮನ್ನು ಬೇಡುವವರಿಗೆ ಎಷ್ಟು ಅಧಿಕವಾಗಿ ಒಳ್ಳೆಯದನ್ನೇ ಕೊಡಲಾರರು ?'

ಯೇಸು ಅನೇಕ ಪವಾಡಗಳನ್ನು ಮಾಡಿದ್ದರೂ, ತನ್ನ ಶಕ್ತಿಯನ್ನು, ಮಹತ್ತನ್ನು ಲೋಕಕ್ಕೆ ಸಾರುವ ಉದ್ದೇಶದಿಂದ ಅವನ್ನು ಮಾಡಲಿಲ್ಲ. ಬಡಜನರ ನೋವನ್ನು ಪರಿಹರಿಸಲು ಕೆಲವು ಪವಾಡಗಳನ್ನು ಮಾಡಿದ್ದ. ಈ ಪವಾಡಗಳಿಗೆ ಅವನೇನು ಮಹತ್ವವನ್ನೀಯಲಿಲ್ಲ. ಜನರನ್ನು ಬೆರಗುಗೊಳಿಸಲೆಂದು, ತನ್ನ ಬಗ್ಗೆ ಅವರು ಕೌತುಕಗೊಳ್ಳಬೇಕೆಂದು ಅವನ ಅಪೇಕ್ಷೆಯಾಗಿರಲಿಲ್ಲ. ಯೇಸು ದೇವಸುತನೆಂದೂ, ತಮ್ಮ ವಿಮೋಚಕನೆಂದೂ ನಂಬುವ ಕ್ರೈಸ್ತರು, ತಮ್ಮ ವಿಶ್ವಾಸವನ್ನು ಈ ಪವಾಡಗಳ ಮೇಲಿಡದೆ, ಯೇಸುಕ್ರಿಸ್ತನ ಬೋಧನೆಗಳನ್ನು, ಅವನ ಜೀವನ ಮರಣವನ್ನು ತಮ್ಮಲ್ಲಿಯೂ ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಯೇಸು ಎಲ್ಲರಿಗೂ ಒಳಿತನ್ನೇ ಮಾಡುತ್ತಾ ಹೋದನು. ಸಮಾಜದ ಅತ್ಯಂತ ನಿಕೃಷ್ಟ ವರ್ಗದವರೆಂದು ಪರಿಗಣಿತರಾದವರೊಂದಿಗೆ, ರೋಗಿಗಳೊಂದಿಗೆ, ಹಾದರವೃತ್ತಿಯಲ್ಲಿ ಸಿಲುಕಿದವರೊಂದಿಗೆ ಅಲೆದಾಡಿ, ಅವರ ನೋವನ್ನು ಕಳೆದ, ಎಲ್ಲರಿಗೂ 'ಉಪಶಮನ'ವನ್ನು ತರುವುದೇ ಅವನ ಕಾರ್ಯವಾಯಿತು. ನಿರಾಶೆಯ ಕಂದರದಿಂದ ಜನರನ್ನು ಮೇಲೆತ್ತಿ, ಆಂತರಿಕ ನೋವನ್ನು ಉಪಶಮನಗೊಳಿಸುವುದೇ ಅವನ ಗುರಿಯಾಯಿತು. ಯೇಸುವಿನ ಈ ವರ್ತನೆಯನ್ನು ಕಂಡ ಜನರು, 'ಸರ್ವಪೂರ್ಣರಾದ, ಒಳ್ಳೆಯವರಾದ ದೇವರು ಮಾನವರೂಪವನ್ನು ಧರಿಸಿದರೆ, ಇವರಂತೆ ಇರಬಹುದು' ಎಂದು ಭಾವಿಸುವಂತಾಯಿತು.

ಯೇಸು ಏನನ್ನೂ ಮುಚ್ಚುಮರೆ ಮಾಡಲಿಲ್ಲ. ಜನರಿಂದ ದೂರವಾದ ಏಕಾಂಗಿ ಬದುಕು ಅವನದಲ್ಲ. ಮಾನವನ ಬಗ್ಗೆ ದೇವರಿಗೆ ಇರುವ ಮಾತೃವಾತ್ಸಲ್ಯ, ಇದು ಕಾರಣವಾಗಿ ಜನರಲ್ಲಿ ಮೂಡಬೇಕಾದ ಸಹೋದರ ಪ್ರೇಮ–ಇದೇ ಅವನ ಬೋಧನೆ. ಇಸ್ರಾಯೆಲ್ ದೇಶದ ಮರಳುಗಾಡಿನ ಏರಿಳಿತಗಳ ಮೇಲೆ ಊರಿಂದೂರಿಗೆ, ಶುಭಸಂದೇಶವಾಹಕನಾಗಿ ಅವನು ಸಾಗಿದ. ತಾನು ಪ್ರಕಟಪಡಿಸಬೇಕಾದ ಸತ್ಯವನ್ನು, ಮರದ ಕೆಳಗೆ ದಿನ್ನೆಗಳ ಮೇಲೆ, ದೋಣಿಯಲ್ಲಿ ನಿಂತು, ಎಲ್ಲೆಂದರಲ್ಲಿ ತನ್ನ ಸುತ್ತ ಸಂದಣಿಸಿದ ಜನರಿಗೆ ಸಾರಿದ. ಆಚರಣೆ ಮುಖ್ಯವಲ್ಲ, ಹೃದಯವಂತಿಗೆ ಮುಖ್ಯವೆಂದು ಸಾರಿಸಾರಿ ಹೇಳಿದ. ಈ ಕಾರಣದಿಂದಲೇ ಸಂಪ್ರದಾಯದ ಅಂಧರಾದ ಪುರೋಹಿತರ ಕೋಪದ್ವೇಷಕ್ಕೆ ತುತ್ತಾದ. ವಿರೋಧವನ್ನು ಎದುರಿಸಬೇಕಾದಾಗ ಯೇಸು ಎದೆಗುಂದಲಿಲ್ಲ, ಅನ್ಯಾಯ ಅನಾಚಾರಗಳೊಂದಿಗೆ ಒಪ್ಪಂದಮಾಡಿಕೊಳ್ಳುವ, ಅವುಗಳಿಗೆ ಬಗ್ಗುವ ವ್ಯಕ್ತಿತ್ವ ಅವನದಲ್ಲ. ತಾನೇ ಸತ್ಯ, ಬೆಳಕು ಹಾಗೂ ಜೀವನ, ನಿಜವಾದ ದಾರಿ ನಾನೇ ಎಂದು ಮುಕ್ತವಾಗಿ ಸಾರಿದ. ದೇವಪ್ರೀತಿಯಿಂದ ವಿಮುಖರಾದ,

ಸಂಪ್ರದಾಯಕ್ಕೆ ಶರಣುಹೋಗಿ ಸತ್ತವರನ್ನು ಹೊಸಬದುಕಿಗೆ ಎಚ್ಚರಗೊಳಿಸಿದ. ಕೊನೆಗೆ ತನ್ನನ್ನೇ ಬಲಿಯನ್ನಾಗಿ ಅರ್ಪಿಸಿ ಮಾನವ ವಿಮೋಚನೆಯನ್ನು ಸಾಧಿಸಿದ.

**೬. ಕ್ರೈಸ್ತಧರ್ಮಸಭೆ–ಸಾರ್ವತ್ರಿಕ ವಿಮೋಚನೆಯ ಸಂಕೇತ :** ಕ್ರೈಸ್ತಧರ್ಮದ ನಂಬಿಕೆಯಂತೆ, ಯೇಸು ಪರಮಾತ್ಮನ ಪೂರ್ಣವಿಶದರೂಪ. ಮಾನವ ಜನಾಂಗದ ವಿಮೋಚನಾವಿನ್ಯಾಸವನ್ನು ಪರಮಾತ್ಮ, ಯೇಸುವಿನ ಮೂಲಕ ವ್ಯಕ್ತಗೊಳಿಸಿದ. ದೇವ–ಮಾನವರ ಸೌಹಾರ್ದಸಂಬಂಧ, ಯೇಸುವಿನ ರಕ್ಷಣಕಾರ್ಯದಿಂದಾಗಿ ಸಾಧ್ಯವಾಯಿತು. ಯೇಸುವಿನ ಈ ಕಾರ್ಯಸಾಧನೆಯಿಂದಾಗಿ, ಮಾನವಜನಾಂಗ ಇಂದು ತನ್ನ ವಿಮೋಚನೆಯ ಅಂತಿಮ ಹಂತದಲ್ಲಿದೆ. ಯೇಸುವಿನ ಆಗಮನ ಹಾಗೂ ಇನ್ನು ಮುಂದೆ ಸಂಭವಿಸಲಿರುವ ಅವನ ಪುನರಾಗಮನ, ಇವೆರಡು ಹಂತಗಳ ಮಧ್ಯದ ಸಂಕ್ರಮಣ ಅವಧಿಯಿದು. ಇಂದು ಮಾನವ ಜನಾಂಗ ಎರಡು ಆಗಮನಗಳ ಮಧ್ಯಮ ಘಟ್ಟದಲ್ಲಿದೆ. ಪ್ರಥಮ ಆಗಮನದಲ್ಲಿ, ದೇವರು ಯೇಸುವಿನ ಮೂಲಕ ದೇಹರೂಪಿಯಾಗಿ ಬಂದು, ಈ ಅಂತಿಮ ಹಂತವನ್ನು ಪವಿತ್ರಾತ್ಮರನ್ನು ಕಳುಹಿಸುವುದರ ಮೂಲಕ ಉದ್ಘಾಟಿಸಿದರು. ಇನ್ನು ಮುಂದೆ ಸಂಭವಿಸಲಿರುವ ಪುನರಾಗಮನಕಾಲವೇ ಚರಿತ್ರೆಯ ಅಂತ್ಯವಾಗುತ್ತದೆ. ಆಗ ಯೇಸು ತನ್ನ ಮಹದ್ರೂಪದಲ್ಲಿ ಪ್ರತ್ಯಕ್ಷರಾಗುವರು, ಎಂಬ ನಿರೀಕ್ಷೆ. ಇಂದಿನ ಸಂಕ್ರಮಣಕಾಲದ ಕಾಲಾವಧಿಯು ಪರಮಾತ್ಮನಿಗೆ ಮಾತ್ರ ತಿಳಿದಿದೆ. ತನ್ನ ಮರಣದ ನಂತರ, ಬರುವ ಸಂಕ್ರಮಣವಧಿಯಲ್ಲಿ, ತಾನು ಪ್ರಾರಂಭಿಸಿದ ವಿಮೋಚನಾ ಕಾರ್ಯವನ್ನು ಮುಂದುವರಿಸಲು, ಯೇಸುವೇ ಕ್ರೈಸ್ತಧರ್ಮ ಸಭೆಯನ್ನು ಸ್ಥಾಪಿಸಿದನು. ಇದೇ ಕ್ರೈಸ್ತಧರ್ಮಸಮುದಾಯ. ಈ ಸಭೆಯು ಸಾರ್ವತ್ರಿಕ ವಿಮೋಚನೆಯ ಸಂಕೇತ ಹಾಗೂ ಮಾಧ್ಯಮ. ಯೇಸುವಿನಿಂದ ಪ್ರಾರಂಭವಾದ ಕಾರ್ಯವನ್ನು, ಪವಿತ್ರಾತ್ಮರ ಚೈತನ್ಯದ ಸಹಾಯದಿಂದ ಕ್ರೈಸ್ತಧರ್ಮ ಸಭೆಯು ಮುಂದುವರಿಸುತ್ತಲಿದೆ, ಅದು ಮುಂದುವರಿದ ಹಂತ ಮಾತ್ರವಲ್ಲದೆ, ಬರಲಿರುವ ಹೊಸಯುಗದ, ಪರಮಜೀವನದ ಆದಿರೂಪವೂ ಹೌದು. ಅದೊಂದು ಯಾತ್ರಿಕ ಜನತೆಯ ಸಮುದಾಯ. ಪವಿತ್ರಾತ್ಮರೇ ಇದರ ಮಾರ್ಗದರ್ಶಿ, ಇದು ದೇವರ ಹೊಸಜನಾಂಗ, ದೇವರೇ ಆರಿಸಿದ ಜನತೆ. ಈ ಜನತೆ ಇನ್ನು ವಿಮೋಚನೆಗಾಗಿ ಹಾತೊರೆಯಬೇಕಾಗಿಲ್ಲ. ಈಗಾಗಲೇ ವಿಮೋಚನೆ ಸಾಧ್ಯತಾರೂಪದಲ್ಲಿ, ಸಾರರೂಪದಲ್ಲಿ ಕ್ರೈಸ್ತಧರ್ಮಸಭೆಯಲ್ಲಿ ಅಡಗಿದೆ. ಇದು ನಿರೀಕ್ಷಾಯುಗ, ಕ್ರೈಸ್ತಧರ್ಮಸಭೆ ಯೇಸುವಿನ ಕಾರ್ಯದ ವಿಸ್ತರಿತರೂಪ. ಯೇಸುಕ್ರಿಸ್ತನ ಶುಭಸಂದೇಶವನ್ನು ಜಗತ್ತಿಗೆ ಸಾರಿ, ಜಗತ್ತನ್ನು ದೇವರಾಜ್ಯವನ್ನಾಗಿ ಪರಿವರ್ತಿಸುವ ಜವಾಬ್ದಾರಿ ಇದಕ್ಕಿದೆ. ಆದುದರಿಂದ ಕ್ರೈಸ್ತಧರ್ಮಸಭೆಯು ಯೇಸುಕ್ರಿಸ್ತನ ಶುಭಸಂದೇಶವನ್ನು ಸಾರುವುದು ಮಾತ್ರವಲ್ಲ, ಅದಕ್ಕೆ ತಕ್ಕಂತೆ ಜೀವಿಸಲು ಪ್ರಯತ್ನಿಸುತ್ತದೆ. ತಾನೊಂದು ಯಾತ್ರಿಕ ಸಮುದಾಯ, ಈ ಲೋಕವು ತನ್ನ ಶಾಶ್ವತ ನೆಲೆಯಲ್ಲ ಎಂಬ ನಂಬಿಕೆಯಿಂದ ಕೂಡಿದ್ದರೂ, ಜಗತ್ತನ್ನು ದೇವರಾಜ್ಯವನ್ನಾಗಿ ಮಾಡುವ ಕಾರ್ಯದಲ್ಲಿ, ಮಾನವನನ್ನು ಮಾನವೀಯನನ್ನಾಗಿ ಮಾಡಲು ಅದು ಪ್ರಯತ್ನಿಸುತ್ತಿದೆ, ಆದರೂ ಇಹಲೋಕವು ಮಾನವನ ಪರಮಾರ್ಥವಲ್ಲ, ಅದೊಂದು ಸಾಪೇಕ್ಷಸ್ಥಿತಿ, ಯಾತ್ರಿಕಜನತೆಯ ತಂಗುದಾಣ ಎಂಬುದನ್ನು ಮರೆಯದೆ. ಈ ತಂಗುದಾಣವನ್ನೇ ಯೋಗ್ಯ ಪರಿಸರವನ್ನಾಗಿ ಮಾಡುವ ಜವಾಬ್ದಾರಿಯನ್ನು ಕ್ರೈಸ್ತಧರ್ಮಸಭೆಯು ಸ್ವೀಕರಿಸಿದೆ.

**೭ ಪರಮಾರ್ಥ-ಪರಮಹಂತ :** ಸಾವು ಎಲ್ಲವನ್ನೂ ಅಂತ್ಯಗೊಳಿಸದು. ಸಾವು ಸಾವಲ್ಲ, ಹೊಸಜೀವನದ ಹುಟ್ಟು. ಮಾನವಯಾತ್ರಿಕನ ನಿರಂತರ ಯಾತ್ರೆಯಲ್ಲಿ ಸಾವೂ ಒಂದು ಹಂತ. ಸಾವಿನ ನಂತರ ನವಜೀವನವೊಂದು ಅವನಿಗೆ ಕಾದು ಕೊಂಡಿದೆ. ವಿಮೋಚನಾ ಕಾರ್ಯವು ಪ್ರಾರಂಭವಾಗುವುದು ಪರಮಾತ್ಮನಿಂದ, ಅವನಲ್ಲೇ ಅದು ಕೊನೆಗೊಳ್ಳುವುದು. ಆ ಹಂತದಲ್ಲಿ ದೇವ-ಮಾನವನ ನಿಜಸಂಬಂಧವು ಪೂರ್ಣಸ್ಥಿತಿಗೆ ತಲುಪುವುದು. ಆಗ ಮಾನವ ದೇವರಲ್ಲಿ ತಲ್ಲೀನನಾಗುವನು. ಇಹಲೋಕದಲ್ಲಿ ಹಲವು ಹಂತಗಳಲ್ಲಿ ಬೆಳೆದ ವಿಮೋಚನೆಯ ಪ್ರತಿಫಲ ಇಲ್ಲಿ ದೊರೆಯುವುದು. ವಿನೀತ ಶ್ರದ್ಧೆಯಿಂದ, ತನ್ನ ವಿಮೋಚಕನಾದ ಯೇಸುವಿನ ಜೀವನ, ಮರಣ, ಪುನರುತ್ಥಾನದಲ್ಲಿ ಸಹಭಾಗಿಯಾದ ಮಾನವ, ಯೇಸುವಿನ ಪೂರ್ಣಸ್ಥಿತಿಯಲ್ಲೂ ಸಹಭಾಗಿಯಾಗುತ್ತಾನೆ. ಮಾನವನ ಇಹಜೀವನವೇ ಸಾಂಕೇತಿಕವಾಗಿ, ಜೀವನ, ಮರಣ, ಪುನರುತ್ಥಾನ. ಕ್ರೈಸ್ತನಿಗೆ ಸಾವು ಅಂತ್ಯವಲ್ಲ, ಅದು ಪಾಪದ ಮೇಲೆ ವಿಜಯ. ಪಾಪದ ಪ್ರತಿಫಲವಾಗಿ ಸಾವು ಬಂದಿತು. ಪುನರುತ್ಥಾನ ವಿಮೋಚನೆಯ ಪ್ರತೀಕ. ಸಾವಿನ ನಂತರದ ಜೀವನ ಪೂರ್ಣ ಅಮೃತಮಯ, ಆನಂದಮಯ. ಈ ಪರಿಪೂರ್ಣತೆ ಇಹಲೋಕದಲ್ಲಿ ಸಾಧ್ಯತಾರೂಪದಲ್ಲಿದ್ದು, ಪರಲೋಕದಲ್ಲಿ ನಿಜವಾಗುತ್ತದೆ. ದೇವರನ್ನು ಶ್ರದ್ಧೆಯಿಂದ ಸ್ವೀಕರಿಸಿದವನಿಗೆ ಪೂರ್ಣಜೀವನದ ಆನಂದ, ದೈವಸಂಯೋಗ. ಯೇಸುವಿನ ಪುನರಾಗಮನದೊಂದಿಗೆ ಸತ್ತವರೆಲ್ಲಾ ಜೀವಂತರಾಗಿ, ದೇವವಿಧಿಗೆ ಅನುಸಾರವಾಗಿ ಪ್ರತಿಫಲವನ್ನು ಪಡೆಯುವರು. ಬೈಬಲ್‌ನಲ್ಲಿ ಉಲ್ಲೇಖಿಸಿರುವಂತೆ–

> 'ತನ್ನನ್ನು ಪ್ರೀತಿಸುವವರಿಗಾಗಿ ದೇವರು ಕಾದಿರಿಸಿದ।
> ಸ್ಥಿತಿಯನ್ನು ಕಣ್ಣು ಕಾಣಲಿಲ್ಲ, ಕಿವಿ ಕೇಳಲಿಲ್ಲ।
> ಮನುಷ್ಯನಿಗೆ ಅದು ಕಲ್ಪನಾತೀತ'।

ಈ ಸ್ಥಿತಿಯಲ್ಲಿ ಪಾಪವು ಹೊರತಾಗಿ, ಎಲ್ಲವೂ ನವೀನವಾಗುವುದು. ಪರಮ ರೂಪದಿಂದ ಬೆಳಗುವುದು. ಇಲ್ಲಿ ಮಾನವ ಚರಿತ್ರೆ, ವಿಮೋಚನಾ ಚರಿತ್ರೆಗಳ ಅಂತ್ಯ. ಈ ಹೊಸ ಜೀವನ ದೇವರು ಕ್ರಿಸ್ತನ ಮೂಲಕ ಮಾನವ ಜನಾಂಗಕ್ಕೆ ಇತ್ತ ಕೊಡುಗೆ. ಈ ಅನಂತ ಜೀವನದಲ್ಲಿ ದೇವರೊಡನೆ ನಿರಂತರ ಸೌಭಾಗ್ಯ-ಸಂಸರ್ಗ ಸಾಧ್ಯವಾಗುತ್ತದೆ.

'ನೀನು ನನಗೆ ಜೀವ ಮಾರ್ಗವನ್ನು ತೋರಿಸುವೆ ।
ನಿನ್ನ ಸಮ್ಮುಖದಲ್ಲೇ ಪರಿಪೂರ್ಣ ಆನಂದ ।
ನಿನ್ನ ಸಾನಿಧ್ಯದಲ್ಲಿ ಶಾಶ್ವತ ಭಾಗ್ಯ' । (ಕೀರ್ತನೆ ೧೬ : ೧೧)

**೮. ದೇವರಾಜ್ಯ–ಮಾನವ ಧರ್ಮ :** ಯೇಸುವಿನ ಬೋಧನೆಗಳಲ್ಲಿ ಆಗಾಗ್ಗೆ 'ನನ್ನ ತಂದೆಯ ರಾಜ್ಯ'ಎಂಬ ಮಾತು ಬರುತ್ತಿತ್ತು. ದೇವರಾಜ್ಯವೆಂದರೇನು ? ದೇವರಾಜ್ಯದ ಶುಭ ಸಂದೇಶವನ್ನು ಯೇಸು ಈ ರೀತಿಯಲ್ಲಿ ಹೇಳಿದ್ದರು. ಪ್ರತಿಯೊಬ್ಬರೂ ತಮ್ಮ ಜೀವನವನ್ನು ಪರಿವರ್ತಿಸಿಕೊಳ್ಳಬೇಕು, ಯಾಕೆಂದರೆ ದೇವರಾಜ್ಯ ಇನ್ನೇನು ಬರುವುದರಲ್ಲಿದೆ. ದೇವರ ಪ್ರೀತಿ ಪೂರ್ವಕ ಕರುಣೆಯೇ ದೇವರಾಜ್ಯದ, ವಿಮೋಚನೆಯ ಮುನ್ಸೂಚನೆಗಳು. ಕಟ್ಟಕಡೆಗೆ ಲೋಕವೆಲ್ಲಾ ದೇವರಾಜ್ಯವಾಗಿ ಪರಿವರ್ತಿತವಾಗುತ್ತದೆ. ಈ ಶುಭ ಸಂದೇಶವನ್ನು ಕೇಳಿದ ನಾವೆಲ್ಲಾ ಆನಂದಿಸಬೇಕು.

ದೇವರಾಜ್ಯವೆಂದರೆ ಹೊಸಯುಗವೊಂದರ ಪ್ರಾರಂಭ. ಆದುದರಿಂದ ಇದೇ ಶುಭ ಕಾಲ. ಹೊಸಯುಗ ಎಂದು ಯೇಸು ಪುನಃ ಪುನಃ ಹೇಳಿದ. ತನ್ನ ಮೂಲಕ ದೇವರಾಜ್ಯ ಉದ್ಘಾಟನೆಯಾಯಿತು, ಉದಯವಾಯಿತು.'ಹಿರಿಯರ ಪ್ರವಾದಿಗಳ ಆಶಯ ನಿರೀಕ್ಷೆಗಳು ನನ್ನಲ್ಲಿ ಪೂರ್ಣಗೊಂಡವು' ಅನೇಕ ತಲೆಮಾರುಗಳ ನಿರೀಕ್ಷೆಯಾದ ದೇವಪುತ್ರ ಇಗೋ ಇಲ್ಲಿರುವನು, ದೇವರು ಮಾನವ ಚರಿತ್ರೆಯನ್ನು ಪ್ರವೇಶಿಸಿ ಮಾನವ ಸಮಾಜವನ್ನು ದೇವರಾಜ್ಯವನ್ನಾಗಿ ಮಾಡಲು ತತ್ಪರನಾಗಿದ್ದಾನೆ ಎಂದು ಯೇಸು ಕರೆಯಿತ್ತನು. ಇದೊಂದು ಸಂಧಿಕಾಲ, ನಿರ್ಧಾರಕ ಸಮಯ. ಈ ಸಂಧಿಕಾಲವನ್ನು ಹಲವು ಸಾಮಿತಿಗಳ ಮೂಲಕ ಯೇಸು ವಿವರಿಸಿದ. ಈ ಕಾಲ ಒಂದು ವಿವಾಹದ ಔತಣದಂತೆ. ಈ ಔತಣಕ್ಕೆ ಎಲ್ಲರಿಗೂ ಕರೆಯಿದೆ. ಆದುದರಿಂದ ಜೊಳ್ಳಾದ ಆಚರಣೆಗಳನ್ನು ತೊಡೆದುಹಾಕಿ, ಹೊಸ ಬಟ್ಟೆಗಳನ್ನು ಧರಿಸಿ ದೇವರಾಜ್ಯಕ್ಕೆ ಸಿದ್ಧರಾಗಿ. ಈ ದೇವರಾಜ್ಯದಲ್ಲಿ ಮಾನವ–ದೇವ ಸಂಬಂಧವೇನು? ಒಂದೆರಡು ಸಾಮಿತಿಗಳ ಮೂಲಕ ಯೇಸು ಇದನ್ನು ವಿಶದೀಕರಿಸಿದ : ಓರ್ವ ಐಶ್ವರ್ಯವಂತನಿಗೆ ಇಬ್ಬರು ಮಕ್ಕಳು. ಇವರಲ್ಲಿ ಕಿರಿಯವನು ತಂದೆಯೊಡನೆ ಜಗಳವಾಡಿ ತನ್ನ ಪಾಲಿಗೆ ಬರುವ ಆಸ್ತಿಯನ್ನು ತೆಗೆದುಕೊಂಡು, ದೂರ ದೇಶಕ್ಕೆ ಹೋದ. ಸ್ನೇಹಿತರ ಬಳಗದೊಡನೆ ಭೋಗಾಸಕ್ತನಾಗಿ ಜೀವಿಸಿದ ಈ ಯುವಕನ ಆಸ್ತಿಯೆಲ್ಲಾ ಕರಗಿಹೋಯಿತು. ಆಗಲೇ ಆ ಊರಿನಲ್ಲಿ ಕ್ಷಾಮವೂ ತಲೆದೋರಿತು. ಹೊಟ್ಟೆ ಪಾಡಿಗಾಗಿ ಅವನು ಹಂದಿ ಮಂದೆಗಳನ್ನು ಕಾಯುವ ಕೆಲಸಕ್ಕೆ ಸೇರಿ, ಹಂದಿಗಳಿಗೆ ನೀಡುವ ಆಹಾರವನ್ನೇ ತಿನ್ನಬೇಕಾಯಿತು. ಇಂತಹ ದುಸ್ಥಿತಿಯಲ್ಲಿ ಅವನಿಗೆ ಜ್ಞಾನೋದಯವಾಯಿತು. ಮನೆಗೆ ಹಿಂದಿರುಗಿ, ತನ್ನ ತಂದೆಯೊಡನೆ ಕ್ಷಮೆ ಕೇಳುವುದೇ ಮೇಲೆಂದು ನಿಶ್ಚಯಿಸಿ ಊರಿಗೆ ಹಿಂದಿರುಗಿದ. ಅವನಿಗಾಗಿಯೇ ಕಾದುಕೊಂಡಿದ್ದ ತಂದೆ ಅವನನ್ನು ಆಲಿಂಗಿಸಿ ಸ್ವಾಗತಿಸುತ್ತಾನೆ. ಪರಮಾತ್ಮನೂ ಈ ತಂದೆಯಂತೆ. ಪಾಪದಿಂದ ದೂರ ಹೋದ ತನ್ನ ಮಗನನ್ನು ಪುನಃ ಸ್ವಾಗತಿಸುತ್ತಾನೆ. ಪ್ರೇಮಮಯಿ ತಂದೆ, ತನ್ನನ್ನು ವಿರೋಧಿಸಿ ಹೋಗಿ ವಿನೀತನಾಗಿ ಹಿಂದಿರುಗಿದ ಮಗನಿಗೆ ವಿವರಣೆ ನೀಡಿ ಕ್ಷಮೆಯನ್ನು ಕೇಳಲೂ ಅವಕಾಶ ನೀಡಲಾರ. ಅವನು ಬಾಯಿತೆರೆಯುವ ಮೊದಲೇ, ತಂದೆ ಅವನನ್ನು ಆಲಿಂಗಿಸಿ. ಹೊಸ ಬಟ್ಟೆಗಳನ್ನು ತೊಡಿಸಿ, ತನ್ನ ಆನಂದವನ್ನು ಪ್ರಕಟಿಸಲು ಔತಣವನ್ನು ಏರ್ಪಡಿಸುತ್ತಾನೆ. ದೇವರು ಮಾನವನ ತಪ್ಪು–ಒಪ್ಪುಗಳನ್ನು ನಿರ್ಧರಿಸಿ ತಕ್ಕುದಾದ ಶಿಕ್ಷೆಯನ್ನು ಈಯುವ ನ್ಯಾಯಧೀಶನಲ್ಲ. ಅವನು ಮಮತಾಪೂರ್ಣ ತಂದೆ. ದೇವರ ಪ್ರೇಮ ಒಂದು ರೀತಿಯಲ್ಲಿ ಹುಚ್ಚುಪ್ರೇಮ. ದೇವರ ಈ ವರ್ತನೆ, ಮಾನವ ಸಂದರ್ಭದಲ್ಲಂತೂ ಅಸಂಬದ್ಧವೋ ಎನ್ನುವಂತಿದೆ. ಮಾನವನೊಡನೆ ವ್ಯವಹರಿಸುವಾಗ ದೇವರು ಸಾಮಾನ್ಯ ವಿವೇಚನೆ, ಪರಿಶೀಲನೆ, ಒಪ್ಪು ತಪ್ಪುಗಳನ್ನು ಮರೆತು, ಪ್ರೀತಿಯನ್ನು ಮಾತ್ರ ಸುರಿಸುತ್ತಾನೆ. ಅವನು ಒಬ್ಬ ಒಳ್ಳೆಯ ಕುರುಬನಂತೆ. ತನಗಿರುವ ನೂರು ಕುರಿಗಳಲ್ಲಿ, ಒಂದು ಕುರಿಯು ಮಂದೆಯನ್ನು ಬಿಟ್ಟು ಅಡ್ಡ ದಾರಿ ಹಿಡಿದು. ಮುಳ್ಳುಗಂಟೆಯಲ್ಲಿ ಸಿಕ್ಕಿಬಿದ್ದಾಗ, ಕುರುಬ ಸರಿದಾರಿಯಲ್ಲಿ ಸಾಗಿದ ತೊಂಬತ್ತೊಂಬತ್ತು ಕುರಿಗಳನ್ನು ಅಲ್ಲೇ ಬಿಟ್ಟು, ಅಡ್ಡದಾರಿ ಹಿಡಿದ ಆ ಒಂದು ಕುರಿಮರಿಯನ್ನು ಹುಡುಕಲು ಹೋಗುತ್ತಾನೆ. ಆ ಕುರಿಮರಿ ಸಿಕ್ಕಾಗ, ಅದನ್ನು ಹೆಗಲ ಮೇಲೇರಿಸಿ, ತನ್ನ ನೆರೆಹೊರೆಯವರನ್ನು ಕರೆದು. ತನ್ನ ಸಂತೋಷವನ್ನು ಪ್ರಕಟಿಸುತ್ತಾನೆ. ದೇವರ ಈ ವರ್ತನೆ ನಮಗಂತೂ ಅನುಚಿತವೆನಿಸಬಹುದು. ದೇವರು ತನ್ನ ಸ್ಥಾನಕ್ಕೆ, ಗೌರವಕ್ಕೆ ತಕ್ಕಂತೆ ವರ್ತಿಸಬೇಡವೇ ! ನಾವಾದರೋ, ಆ ಕಿರಿಯ ಮಗನ್ನು 'ಒಂದೆರಡು ದಿನ ಬಿಟ್ಟು ಬಾ. ಇನ್ನು ಮುಂದೆ ಒಳ್ಳೆಯವನಾಗುತ್ತೇನೆ ಎಂದು ಆಣೆಯಿಡು' ಎಂದು ಹೇಳುತ್ತಿದ್ದೆವೋ ಏನೋ ! ತೊಂಬತ್ತೊಂಬತ್ತು ಒಳ್ಳೆಯ ಕುರಿಗಳನ್ನು ಬಿಟ್ಟು, ಒಂದು ಕೆಟ್ಟ ಕುರಿಗಾಗಿ ಶ್ರಮ ಪಡುವುದೇ ? ದೇವರನ್ನು ನಮ್ಮ ಅಚ್ಚಿನಲ್ಲೇ ರೂಪಿಸುವ ಮಂದಿಗೆ ದೇವರ ಈ ವರ್ತನೆ ಅನುಚಿತ, ಅಸಂಬಂದ್ಧ, ಆದರೆ ದೇವಪ್ರೇಮವೆಂಬುದು ತಾಯಿಯ ಹುಚ್ಚು ಪ್ರೇಮದಂತೆ.

'ವೈದ್ಯನಿರುವುದು ರೋಗಿಗಳಿಗೆ ಹೊರತು ಆರೋಗ್ಯವಂತರಿಗಲ್ಲ... ನಾನು ಕರುಣೆಯನ್ನು ಅಪೇಕ್ಷಿಸುವೆನೇ ವಿನಾ ಬಲಿಕಾಣಿಕೆಗಳನ್ನಲ್ಲ. ನಾನು ಪಾಪಿಗಳಿಗಾಗಿ ಬಂದಿರುವೆನೇ ಹೊರತು, ನೀತಿವಂತರಿಗಾಗಿ ಅಲ್ಲ...'

ದೇವರಿಗೆ ನಾವೆಲ್ಲಾ ಸಾಲಗಾರರು. ಈ ಸಾಲವನ್ನು ಮರುಪಾವತಿಮಾಡಲು ನಾವು ಅಸಮರ್ಥರು. ಮರುಪಾವತಿ ಮಾಡುವುದು ಹೇಗೆ ಎಂದು ತಲೆಗೆಡಿಸಿಕೊಳ್ಳುತ್ತಿರುವಾಗಲೇ, ದೇವರು ತನ್ನ ಔದಾರ್ಯದಿಂದ, ಸಾಲದ ಲೆಕ್ಕಪುಸ್ತಕವನ್ನೇ ತೆಗೆದು ಬಿಸಾಡುತ್ತಾನೆ. ಇಂತಹ ಕ್ಷಮಾಪೂರ್ಣಪ್ರೀತಿಯೇ ಹೊಸಯುಗದ, ದೇವರಾಜ್ಯದ ನಿಯಮ, ಸಂವಿಧಾನ. ಈ ಹೊಸ ಯುಗದ ಉದಯವಾದುದರಿಂದ ಜನರು ಸಂತೋಷಿಸಬೇಕು. ದೇವರಾಜ್ಯವೆಂದರೆ ಹೊಲದಲ್ಲಿ ಅಕಸ್ಮಾತ್ತಾಗಿ ಸಿಕ್ಕಿದ ನಿಧಿಯಂತೆ. ಈ ನಿಧಿಯನ್ನು ಕಂಡುಹಿಡಿದ ವ್ಯಕ್ತಿ, ತನ್ನ ಇತರ ಆಸ್ತಿಯನ್ನೆಲ್ಲಾ ಮಾರಿ ಈ ಹೊಲವನ್ನು ಖರೀದಿಸುತ್ತಾನೆ. ದೇವಪ್ರೀತಿಯನ್ನು ಅನುಭವಿಸಿದ ವ್ಯಕ್ತಿ ತನ್ನದೆನ್ನುವ ಎಲ್ಲವನ್ನೂ ಮಾರಿ, ದೇವಪ್ರೀತಿಗೆ ಅಂಟಿಕೊಳ್ಳುತ್ತಾನೆ.

ಮಾನವನು ಕೇಳುವ ಕೆಲವು ಮೂಲಭೂತ ಪ್ರಶ್ನೆಗಳಿಗೆ ಈ ದೇವರಾಜ್ಯ ಕಲ್ಪನೆ ಉತ್ತರವನ್ನೀಯುತ್ತದೆ. ವಾಸ್ತವವೆಂಬುದು ಒಳ್ಳೆಯದೋ, ಕೆಟ್ಟದ್ದೋ ?–ಈ ಪ್ರಶ್ನೆಗೆ ಯೇಸುವಿನ ಉತ್ತರ: ಈ ವಾಸ್ತವ ಮೂಲಭೂತವಾಗಿ ಒಳ್ಳೆಯದು, ಔದಾರ್ಯದಿಂದ ಕೂಡಿದೆ. ದೇವರ ಸ್ವರೂಪವೇನು ?–ದೇವರು ಉದಾರಿ, ಪ್ರೇಮಮಯಿ, ಕ್ಷಮಾಪೂರ್ಣ. ವಿವೇಚಿತನಾದ ವ್ಯಕ್ತಿಯಾರು ?–ದೇವರ ಶುಭಸಂದೇಶವನ್ನು ಕೇಳಿ, ಅದರಲ್ಲಿ ಪರವಶವಾದವನು. ಮನುಷ್ಯನ ಗುರಿ ಯಾವುದು?-ದೇವರಾಜ್ಯ ಸಾವಿನೊಡನೆ ಅಂತ್ಯವಾಗದು. ಕಟ್ಟಕಡೆಗೆ ಎಲ್ಲವೂ ಸುಗಮವಾಗುವುದು. ಕಷ್ಟನಷ್ಟಗಳು ನೋವು–ನಲಿವುಗಳು ತಾತ್ಕಾಲಿಕ. ದೇವಪ್ರೀತಿಯು ಇವನ್ನೆಲ್ಲಾ ಜಯಿಸುವುದು.

ದೇವರಾಜ್ಯಕಲ್ಪನೆಯ ಮೂಲಕ ಯೇಸು ಸಾರಿದ ಶುಭಸಂದೇಶವೆಂದರೆ–ಮಾನವನ ಅಸ್ತಿತ್ವ ಶೂನ್ಯವಲ್ಲ, ಮಾಯೆಯಲ್ಲ. ದೇವರಾಜ್ಯವೆಂದರೆ ಪ್ರೇಮರಾಜ್ಯ. ಆದುದರಿಂದ ಕ್ರೈಸ್ತಭಕ್ತನೆಂದರೆ, ಧಾರ್ಮಿಕ ನಿಯಮಗಳನ್ನು ಚಾಚೂತಪ್ಪದೆ ಪಾಲಿಸಿ, ಆಗಾಗ್ಗೆ ದಾನಧರ್ಮಗಳಲ್ಲಿ ತೊಡಗುವವನಲ್ಲ. ದೇವರು ತನ್ನನ್ನು ಪ್ರೀತಿಸಿದಂತೆ, ತಾನು ಇತರರನ್ನು ಪ್ರೀತಿಸಬೇಕೆಂದು ನಂಬಿರುವವನೇ ನಿಜವಾದ ಕ್ರೈಸ್ತಭಕ್ತ. ಆದುದರಿಂದ ಯೇಸುವಿನ ಶುಭಸಂದೇಶವನ್ನು ತನ್ನಲ್ಲಿ ಅಳವಡಿಸಿದ ವ್ಯಕ್ತಿ, ಲೋಕದಲ್ಲಿರಬಹುದಾದ ಒಳಿತನ್ನು ತಿರಸ್ಕರಿಸಲಾರ. ಮಾನವಸಮಸ್ಯೆಗಳಿಂದ ಓಡಿಹೋಗಲಾರ, ಸಾವು–ನೋವುಗಳಿಂದಾಗಿ ಹತಾಶನಾಗಲಾರ. ಈ ಸಮಸ್ಯೆಗಳಿಗೆ ರಾಜಕೀಯ, ಆರ್ಥಿಕ ಪರಿಹಾರಗಳು ಯೋಗ್ಯಉತ್ತರವಲ್ಲ ಎಂಬುದೂ ಅವನಿಗೆ ತಿಳಿದಿದೆ. ದೇವರ ಪ್ರೀತಿಯನ್ನು ಅರಿತು, ಮಾನವನ ಆಂತರಿಕ ಬದುಕು ನೇರವಾದಾಗ, ಸಾಮಾಜಿಕ ಅಂಕುಡೊಂಕುಗಳೂ ಸರಿಯಾಗುತ್ತವೆ. ಇಲ್ಲದಿದ್ದರೆ, ಈ ಸಮಸ್ಯೆಯನ್ನು ಪರಿಹರಿಸಿದೆವು ಎಂದು ನಿಟ್ಟುಸಿರು ಬಿಡುತ್ತಿರುವಾಗಲೇ ಇನ್ನೊಂದು ಸಮಸ್ಯೆ ಚಿಗುರುತ್ತದೆ. ವೈಜ್ಞಾನಿಕ ಸಂಶೋಧನೆಗಳೊಂದಿಗೆ, ಇತ್ತ, ಸಮಸ್ಯೆಗಳು ಕೂಡಾ ರೂಪಾಂತರಗೊಂಡು ಸಂಕೀರ್ಣವಾಗುತ್ತಾ ಹೋಗುತ್ತವೆ. ಮಾನವ 'ಮಾನವೀಯ'ನಾದಗಲೇ ಎಲ್ಲಾ ಸಮಸ್ಯೆಗಳ ಪರಿಹಾರ ಸಾಧ್ಯ. ಮಾನವನನ್ನು ಮಾನವೀಯನನ್ನಾಗಿ ಮಾಡಲು ಪರಮಾತ್ಮನೇ ಮಾನವನಾಗಬೇಕಾಯಿತು. ಮಾನವನ ಬದುಕಿನಲ್ಲಿ ಹತಾಶೆ, ಅಂಧಕಾರಗಳು, ನೋವು ಸಾವುಗಳೇನೊ ಇವೆ. ಆದರೆ ಅವುಗಳು ಅಂತಿಮವಲ್ಲ, ನಿರ್ಧಾರಕ ಅಂಶಗಳಲ್ಲ. ಮಾನವ ಈ ಸಮಸ್ಯೆಗಳನ್ನು ಮೀರಿ ನಿಲ್ಲಬಲ್ಲ; ಯಾಕೆಂದರೆ ಅವನು ದೇವರ ಪ್ರೀತಿಯ ಮಗ.

ದೇವರಾಜ್ಯವನ್ನು ಈ ಲೋಕದಲ್ಲಿ ಉಂಟುಮಾಡಲು ಕ್ರೈಸ್ತಧರ್ಮವು ತತ್ಪರವಾಗಿದೆ. ಮಾನವನಲ್ಲಿ ಆಂತರಿಕ ಪರಿವರ್ತನೆಯನ್ನು ಉಂಟುಮಾಡಿ, ಹೊಸಮಾನವಜನಾಂಗವನ್ನು ಸೃಷ್ಟಿಸುವುದು ಕ್ರೈಸ್ತಧರ್ಮದ ಗುರಿ. ಯೇಸುವಿನ ಶುಭಸಂದೇಶವನ್ನು ಈ ಹೊಸಜನಾಂಗದ ಸಂವಿಧಾನವನ್ನಾಗಿ ಇಟ್ಟು, ದೇವರಾಜ್ಯವನ್ನು ಕಟ್ಟಿದರೆ ಮಾನವ ಮಾನವೀಯನಾಗುತ್ತಾನೆ ಎಂಬುದೇ ಅದರ ದೃಢವಿಶ್ವಾಸ. ಪ್ರತಿಯೊಬ್ಬನು ತನ್ನ ಚಿಂತನಾ ರೀತಿಯನ್ನು, ಆಸಕ್ತಿಗಳನ್ನು ಇತರರೆಡೆಗೆ ಹೊರಳಿಸಿದರೆ ಮಾತ್ರ ಬದುಕು ಸುಗಮವಾಗಲು ಸಾಧ್ಯ; ಇಲ್ಲದಿದ್ದರೆ ಈ ಬಾಳು ಒಂದು ನರಕವನ್ನು ತಪ್ಪಿಸುವ ಹವಣಿಕೆಯಲ್ಲಿ ಇನ್ನೊಂದು ನರಕಕ್ಕೆ ಬೀಳುವ ಬರೇ ಚದುರಂಗದಾಟವಾಗುತ್ತದೆ. ಮಾನವಸಮಾಜವೆಲ್ಲಾ ಒಂದು ಕುಟುಂಬವಾಗಬೇಕು. ಈ ಕುಟುಂಬದಲ್ಲಿ ದೇವರೇ ತಂದೆ, ಮಾನವರೆಲ್ಲಾ ಸಹೋದರ-ಸಹೋದರಿಯರು.

ಧರ್ಮವೆಂಬುದು ಮಾನವನ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನಕ್ಕೆ ಹೊರತಾಗಿ ನಿಲ್ಲುವ ವಿಶಿಷ್ಟ ಆಯಾಮವಲ್ಲ. ಮಾನವನ ಎಲ್ಲಾ ವ್ಯವಹಾರ ಆಯಾಮಗಳನ್ನು ತನ್ನಲ್ಲಿ ಧರಿಸಿರುವುದೇ ಧರ್ಮ. ಆದುದರಿಂದ ಧರ್ಮವೆಂಬುದು, ಮಾನವನ ಸರ್ವತೋಮುಖ ಅಭಿವೃದ್ಧಿಗೆ ಸಹಾಯಕವಾಗಲೇಬೇಕು. ಆರ್ಥಿಕಸಮಾನತೆ ವ್ಯಕ್ತಿಯನ್ನು ಪೂರ್ಣವ್ಯಕ್ತಿಯನ್ನಾಗಿ ಮಾಡಲಾರದು. ದೇವಪ್ರೀತಿಯೇ ನಮ್ಮಲ್ಲಿ ಸಮಾನತೆಯನ್ನು ಮೂಡಿಸಲು ಸಾಧ್ಯ.

ಯೇಸು ಒಂದು ವರ್ಗದ, ಮತದ ಆಸ್ತಿಯಲ್ಲ. ಮಾನವಜನಾಂಗದ ಮುಂದಾಳು. ಮಾನವ ಅಸ್ತಿತ್ವದ ಅರ್ಥವನ್ನು ಹುಡುಕುವವರಿಗೆಲ್ಲಾ ಅವನು ಸಿಕ್ಕೇಸಿಗುತ್ತಾನೆ. ಗಾಂಧೀಜಿಯವರು ಒಮ್ಮೆ ಹೇಳಿದಂತೆ-'ಹಿಮಾಲಯದ ಗುಹೆಯೊಂದರಲ್ಲಿ

ಯೇಸು ಇಪ್ಪಾನೆಂದು ತಿಳಿದರೆ, ಆ ಕೂಡಲೇ ನಾನು ಅಲ್ಲಿಗೆ ಹೋಗಲು ಸಿದ್ಧ. ಆದರೆ ಅವನು ಅಲ್ಲಿರಲಾರ. ಮಾನವ ಸಮಾಜದಿಂದ ಹೊರತಾಗಿ ಅವನನ್ನು ಕಾಣುವಂತಿಲ್ಲ' ಶೋಷಿತರ, ಬಡವರ, ಅಸಹಾಯಕರ ರಕ್ಷಕನಾಗಿ ಬಂದ ಯೇಸು ಮಾನವ ಸಮಾಜದ ಅತ್ಯಂತ ಮೂಲಸ್ಥಿತಿಯನ್ನೇ ಸರಿಪಡಿಸಲು ಮುಂದಾದ. ತಾನೂ ಮಾನವನಾಗಿ ಅಸಹಾಯಕತೆಯನ್ನೂ, ಅಸ್ಪೃಶ್ಯ ಭಾವದ ಹತಾಶೆಯನ್ನು, ಸಾವನ್ನು ಅನುಭವಿಸಿದ. ಈ ಮೂಲಸ್ಥಿತಿಯಲ್ಲಿ ಎಲ್ಲ ಮಾನವರೂ ಸರಿಸಮ. ತಲೆಬುರುಡೆಯೊಂದನ್ನು ಪರಿಶೀಲಿಸಿ, ಇದು ಐಶ್ವರ್ಯವಂತನದೋ, ಬಡವನದೋ, ಪಾಪಿಯದೋ, ಉತ್ತಮವರ್ಗದವನದೋ ಎಂದು ನಿರ್ಧರಿಸುವಂತಿಲ್ಲ. ಮಾನವಕ್ಲೇಶಗಳ ಪರಿಸ್ಥಿತಿಯಲ್ಲಿ ಕೃತಕ ವರ್ಗೀಕರಣಗಳೆಲ್ಲಾ ನಶಿಸಿಹೋಗುತ್ತವೆ. 'ಶಿಲುಬೆಗೇರಿಸಲ್ಪಟ್ಟ ದೇವರು' ಮಾನವನಿಗೊಂದು ಮಹತ್ವದ ಪಾಠವನ್ನು ಕಲಿಸಿದರು. ತಾನೇ ದೇವರೆಂದು ಭಾವಿಸಲು, ಹವಣಿಸುತ್ತಿದ್ದ ಮನುಷ್ಯನಲ್ಲಿ 'ಮಾನವೀಯತೆ'ಯನ್ನು ಮೂಡಿಸಿ ಪರಿಪೂರ್ಣ ಮಾನವನಾಗುವುದು ಹೇಗೆ ಎಂಬುದನ್ನು ತೋರಿಸಲು, ದೇವರೇ ಮಾನವನಾಗಬೇಕಾಯಿತು. 'God became man, in order, out of proud and unfortunate Gods to make real men'.—LUTHER

## ಸೂಫೀಧರ್ಮ ಮತ್ತು ವೀರಶೈವ ಅನುಭಾವ ಸಾಹಿತ್ಯ

—ಷಣ್ಮುಖಯ್ಯ ಅಕ್ಕೂರಮಠ

ಲೋಕದ ಅನುಭಾವ ಚರಿತ್ರೆಯಲ್ಲಿ ಭಗವಂತನನ್ನು ಭಕ್ತರು ಹಲವು ಬಗೆಯ ಭಾವನೆಗಳಿಂದ ಉಪಾಸನೆ ಮಾಡಿದ್ದಾರೆ. ದಾಸ್ಯ-ಸಖ್ಯ-ವಾತ್ಸಲ್ಯ-ಮಧುರ ಮತ್ತು ಶಾಂತಿ ಇವು ಐದು ಭಕ್ತಿಯ ಭಾವನೆಗಳು. ಸತಿ-ಪತಿ ಭಾವದ ಉಪಾಸನೆಯ ಕುರುಹುಗಳು ಅನುಭವ ಸಾಹಿತ್ಯವನ್ನು ಅವಲೋಕಿಸಿದಾಗ ಅಲ್ಲಲ್ಲಿ ಕಂಡುಬರುತ್ತವೆ. ಬೌದ್ಧರ ಸಹ ಜೀವ ತತ್ವ, ವೈಷ್ಣವ ಮತ್ತು ಇಸ್ಲಾಂ ಧರ್ಮದ ಸೂಫಿ ಮತತತ್ವಗಳಲ್ಲಿ ಕಂಡುಬರುವ 'ಮಧುರ ಭಕ್ತಿ' ವೀರಶೈವ ಅನುಭಾವಿಗಳ 'ಸತಿ-ಪತಿ' ಭಾವದ ತತ್ವಗಳು ಅನುಭಾವ ಸಾಹಿತ್ಯದಲ್ಲಿ ಸುಪ್ರಸಿದ್ಧವಾಗಿವೆ. ಜಾಗತಿಕ ಧಾರ್ಮಿಕ ಇತಿಹಾಸವನ್ನು ಅವಲೋಕಿಸಿದಾಗ ಪ್ರತಿಯೊಂದು ಧರ್ಮಕ್ಕೂ ಎರಡು ಮುಖಗಳಿರುವುದುಕಂಡುಬರುತ್ತದೆ, ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಒಂದು ಮುಖ ಸಿದ್ಧಾಂತದ್ದು ; ಮತ್ತೊಂದು ಅನುಭಾವದ್ದು, ಅವು ಪರಸ್ಪರ ಪೂರಕವಾದವುಗಳು. ಸಿದ್ಧಾಂತದಲ್ಲಿ ತತ್ವಗಳ ವ್ಯವಸ್ಥಿತ ನಿರೂಪಣೆ, ನಿರ್ಣಯ ಕಂಡುಬಂದರೆ, ಅನುಭಾವದಲ್ಲಿ ಅವುಗಳ ಸಾಕ್ಷಾತ್ಕಾರವಾಗುತ್ತದೆ. ದ್ವೈತ ಸಿದ್ಧಾಂತದಲ್ಲಿ ದಾಸ ಕೂಟ ವ್ಯಾಸಕೂಟವಿದ್ದಂತೆ, ವಿಶಿಷ್ಟಾದ್ವೈತಿಗಳಲ್ಲಿ ಉಭಯ ವೇದಾಂತ ಮಾರ್ಗಾವಲಂಬಿಗಳಿರುವಂತೆ, [ಆಚಾರ್ಯರ ಸಿದ್ಧಾಂತ ಮಾರ್ಗ ; ಆಳ್ವಾರರ ಅನುಭವ ಮಾರ್ಗ] ಶಿವಾದ್ವೈತಿಗಳಲ್ಲಿ ಸಿದ್ಧಾಂತ ಮಾರ್ಗ ಶಿವಶರಣರ ಅನುಭವ ಮಾರ್ಗಗಳಿರುವಂತೆ, ಕ್ರೈಸ್ತ-ಬೌದ್ಧರಲ್ಲೂ ಉಂಟು. ಇದೇ ರೀತಿಯಾಗಿ ಇಸ್ಲಾಂ ಧರ್ಮದಲ್ಲೂ ಸಿದ್ಧಾಂತ ಹಾಗೂ ಅನುಭವ ಪಂಥವೆಂದು ಎರಡು ವಿಧ ಮಾರ್ಗಗಳು. ಅನುಭವ ಪಂಥದ ಭಕ್ತ ಸಮೂಹವನ್ನೇ 'ಸೂಫಿ'ಗಳೆಂದು ಇಸ್ಲಾಂ ಧರ್ಮದಲ್ಲಿ ಕರೆಯುತ್ತಾರೆ. ಇಸ್ಲಾಂ ಅನುಭಾವಿಗಳು (ಸೂಫಿಗಳು) (Mistics) ಭಗವಂತನನ್ನು ಸತೀರೂಪದಲ್ಲಿ ಆರಾಧಿಸುತ್ತಾರೆ. ಭಗವಂತ ಪ್ರಿಯತಮೆಯಾಗಿ ಭಕ್ತ ಪ್ರಿಯತಮನಾಗಿ ಭಾವ ಲೋಕದಲ್ಲಿ ವ್ಯವಹರಿಸುತ್ತಾರೆ. ಸೂಫೀಧರ್ಮ ಪ್ರೇಮಧರ್ಮ. ಈ ಪ್ರೇಮಗಂಗೆಯ ಗಂಗೋತ್ರಿ ಅರಬಸ್ತಾನದ ಮರುಭೂಮಿ. ಸೂಫೀಧರ್ಮ ಇಸ್ಲಾಂ ಧರ್ಮದ ಅಂಗವಾಗಿದ್ದು ಅದರಷ್ಟೇ ಪ್ರಾಚೀನವೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಇಸ್ಲಾಂ ಧರ್ಮದಲ್ಲಿ ಸಿದ್ಧಾಂತ ಆಚಾರ ಸಂಪ್ರದಾಯಕ್ಕೆ ಪ್ರಾಧಾನ್ಯತೆ ಇದ್ದರೆ ಸೂಫೀ ಧರ್ಮದಲ್ಲಿ ಅನುಭವಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕಂಡುಬರುತ್ತದೆ. 'ಸನಾತನ ಇಸ್ಲಾಂ ಧರ್ಮದ ಪ್ರಕಾರ ಆತ್ಮ–ಪರಮಾತ್ಮರ ಮಧ್ಯೇ ವೈಯಕ್ತಿಕ ಸಂಬಂಧ ಸಾಧ್ಯವಿಲ್ಲ, ಆದರೆ ಸೂಫಿಗಳ ಪ್ರಕಾರ ಪರಮಾತ್ಮ, ಪರಮ ಸುಂದರನಾಗಿ ಕಾಣುತ್ತಾನೆ.'[1] ಸಿದ್ಧರು–ಯೋಗಿಗಳು–ಹಾಗೂ ವೇದಾಂತಿಗಳಂತೆ ಸೂಫಿಗಳು ಅದ್ವೈತದಲ್ಲಿ ಭಾವನೆಯುಳ್ಳವರು.

**'ಸೂಫೀ-ಪದದ ಅರ್ಥ' : ಸೂಫೀ ಯಾರು ?**

ಸೂಫೀ ಶಬ್ದಕ್ಕೆ ಹಲವರು ಹಲವು ರೀತಿಯಲ್ಲಿ ಅರ್ಥೈಸಿರುವುದು ಕಂಡುಬರುತ್ತದೆ. 'ಸೂಫೀ' ಶಬ್ದ ಗ್ರೀಕಿನ 'ಸೋಫೋಸ್' ಎಂದರೆ (ಜ್ಞಾನ) ಎಂಬುದರಿಂದ ಬಂದಿದೆ ಎಂದು ಕೆಲವರ ಅಭಿಪ್ರಾಯ. ಸಫ್ ಎಂದರೆ ಪಂಕ್ತಿ, ದೇವರ ಮುಂದೆ ಪಂಕ್ತಿಯಲ್ಲಿ ನಿಲ್ಲುವ ಭಕ್ತರೆಂದು ಕೆಲವರ ಅಭಿಪ್ರಾಯ. ಸಫ್ ಎಂದರೆ ಮದೀನಾದ ಮಸೀದಿಯ ಎದುರಿಗಿರುವ 'ಜಗಲಿ'ಯ ಹೆಸರು ಎಂದು ಹಲವರ ಅಭಿಪ್ರಾಯ. ಬಹುಜನ ವಿದ್ವಾಂಸರ ಅಭಿಪ್ರಾಯದಂತೆ ಸೂಫಾ ಎಂದರೆ ಉಣ್ಣೆಯ ಬಟ್ಟೆಯನ್ನು ಇಲ್ಲವೆ ಕುಲಾವಿ ತೊಟ್ಟವರು ಎಂದು–ಅಭಿಪ್ರಾಯಪಡುತ್ತಾರೆ'[2]

1. ಸಾಹಿತ್ಯ ಮತ್ತು ಯುಗಧರ್ಮ.
2. 'ಕಾಶ್ಮೀರ ಔರ್ ಹಿಂದೀ ಸೂಫೀಕಾವ್ಯಕಾ ತುಲನಾತ್ಮಕ ಅಧ್ಯಯನ'

ಸರಳ ಅರ್ಥದಲ್ಲಿ ಹೇಳುವುದಾದರೆ 'ಸೂಫಿ' ಎಂದರೆ ಪರಮಾತ್ಮನನ್ನು ಪ್ರಿಯತಮೆಯರೂಪದಲ್ಲಿ ಉಪಾಸನೆ ಮಾಡುವವನು'[3] ಶಿಬಲೀ ಎನ್ನುವ ಸೂಫಿ ಹೀಗೆ ಹೇಳುತ್ತಾನೆ: 'ಯಾರ ಮನಸ್ಸು ಇಡೀ ಮಾನವಕೋಟಿಯನ್ನು ತನ್ನ ಸಂತಾನಕ್ಕೆ ಸಮ ಎಂದು ತಿಳಿದು ಎಲ್ಲರಿಗೂ ಹೊಣೆ ಆದಾಗಲೇ ಅವನು ಸೂಫಿ' ಮತ್ತೊಬ್ಬ ಬಶರ್ ಹಾಫಿ ಹೀಗೆ ಅಭಿಪ್ರಾಯ ಪಡುತ್ತಾನೆ: 'ಯಾರ ಮನಸ್ಸು ಭಗವಂತನ ವಿಷಯದಲ್ಲಿ ಸಾಫ್–ಎಂದರೆ ಸ್ವಚ್ಛ–ತಿಳಿ ಆಗಿರುತ್ತದೆಯೋ ಅವನೇ ಸೂಫಿ'[4] ಇವೆಲ್ಲ ಅಭಿಪ್ರಾಯಗಳನ್ನು ಗಮನಿಸಿದಾಗ ಸೂಫಿಗಳೆಂದರೆ ಉಣ್ಣೆಯಬಟ್ಟೆ ಧರಿಸುತ್ತಿದ್ದ ಭಗವದ್ಭಕ್ತರು–ಸಂತರು–ಫಕೀರರು ಎಂದು ಅವರನ್ನು ಕರೆಯಬಹುದಾಗಿದೆ. ಇಸ್ಲಾಂ ಧರ್ಮದ ಸೂಫಿಗಳು ಆತ್ಮ–ಪತಿ, ಪರಮಾತ್ಮ–ಸತಿ ಎಂಬ ಮಧುರಭಾವದ ಭಕ್ತರು. ಇವರಲ್ಲಿ ಭಕ್ತಪ್ರಿಯನಾದರೆ ಭಗವಂತ 'ಪ್ರೇಯಸಿ'ಯಾಗಿದ್ದಾನೆ. ಶರಣರ ಲಿಂಗಪತಿ–ಶರಣಸತಿ ಭಾವ ಇಲ್ಲಿ ಕೊಂಚ ವ್ಯತಿರಿಕ್ತವಾಗಿದೆ. ಸೂಫಿಗಳು ಪ್ರಿಯತಮೆಯನ್ನು 'ಸಾಕಿ' ಎಂದೂ ಭಗವಂತನಲ್ಲಿರುವ ದಿವ್ಯಪ್ರೇಮವನ್ನು 'ಇಷ್ಕೇ ಹಕೀಕ್' ಎಂದೂ ಕರೆಯುತ್ತಾರೆ. ಪ್ರಿಯತಮೆಯ ವಿರಹದಲ್ಲಿ ಪ್ರತಿಯೊಬ್ಬ ಸೂಫಿಯೂ ವಿರಹ ತಾಪವನ್ನೂ ಅನುಭವಿಸುತ್ತಾನೆ. ಸೂಫಿಗಳಲ್ಲಿ ಬಹುಮಂದಿ ಅರಬ್–ಇರಾನಿಯನ್ನರಿದ್ದರು; ಸಂತರ ಸಿರಿಯಾ, ಇಜಿಪ್ತ್ ದೇಶಗಳಿಂದ ಕೆಲವರು ಬಂದರು. ಇದರಲ್ಲಿ ಸ್ತ್ರೀ ಪುರುಷರಿಬ್ಬರೂ ಇದ್ದಾರೆ. 'ಹೆಣ್ಣಾಗಲೀ ಗಂಡಾಗಲೀ ಸಚ್ಚಾರಿತ್ರ್ಯ–ತ್ಯಾಗಮನೋಭಾವ–ಆಡಂಬರ ರಹಿತ ಇಂದ್ರಿಯ ಸುಖ ರಹಿತ ಭೌತಿಕ ಸಂಪತ್ತನ್ನು ಬಿಟ್ಟ ಮಹಾತ್ಮ, ಅಥವಾ ಮಹಾತ್ಮಳು ಸೂಫೀಧರ್ಮದಲ್ಲಿ ಆದರ್ಶ ವ್ಯಕ್ತಿಗಳೆನಿಸುತ್ತಾರೆ.[5] ಹಜರತ್ ಮಹಮ್ಮದರ ಜ್ಞಾನವು ಗ್ರಂಥಜ್ಞಾನ ಹಾಗೂ ಹೃದಯಜ್ಞಾನ (ಆತ್ಮ) ವೆಂದು ಎರಡು ವಿಧ. ಮಹಮ್ಮದರ ಸ್ವಾತ್ಮ ಜ್ಞಾನವನ್ನೇ ಆಧಾರವಾಗಿಟ್ಟುಕೊಂಡು ಸೂಫೀ ತತ್ತ್ವವು ಅಭಿವ್ಯಕ್ತವಾಗಿದೆ. ಮಹಮ್ಮದರು ಸ್ವಾತ್ಮಾನುಭವದಿಂದ ಕಂಡ ಜ್ಞಾನವನ್ನೇ ಸೂಫಿಗಳು ತಮ್ಮ ಅನುಭವದಲ್ಲಿ ಅಳವಡಿಸಿಕೊಂಡರು.

**ಮತ ಚರಿತ್ರೆ**

**ಇತಿಹಾಸಕಾರರು :** ಸೂಫೀಸಂತರ ಇತಿಹಾಸವನ್ನು ನಾಲ್ಕು ಭಾಗಗಳಾಗಿ ವಿಂಗಡಿಸುತ್ತಾರೆ.[6] **ಆದಿಯುಗ. ಪೂರ್ವ** ಮಧ್ಯಯುಗ, ಉತ್ತರಮಧ್ಯಯುಗ, ಆಧುನಿಕಯುಗ.

೧) **ಆದಿಯುಗ** ಸುಮಾರು ೭–೮ನೆಯ ಶತಮಾನ [ತಾಪಸ ಜೀವನ ಯುಗ]. ಈ ಯುಗದ ಸೂಫಿಗಳು ಸತ್ಯಸಂಧರು. ಪ್ರಾಮಾಣಿಕರು–ವಿರಾಗಶೀಲರು, ಸಂಪ್ರದಾಯ ನಿಷ್ಠರಾಗಿದ್ದರು. ಈ ಯುಗದ ಸೂಫಿಗಳಲ್ಲಿ ಇಬ್ರಾಹಿಂ, ಅದಂ, ಪುಜಮಾಲ್, ರಬಿಯಾ ಮೊದಲಾದವರು ಪ್ರಸಿದ್ಧರಾಗಿದ್ದಾರೆ.

೨) **ಪೂರ್ವಮಧ್ಯಯುಗ** ೯ನೆಯ ಶತಮಾನ [ತತ್ವಪ್ರತಿಪಾದನಾಯುಗ]. ಈ ಕಾಲದಲ್ಲಿ ಸೂಫಿಗಳಲ್ಲಿ ಭಾವಾತ್ಮಕ ಚಿಂತನೆ ಮೂಡಿತು. ಸುಲೇಮಾನ್–ದಾರಾನೀ–ಜೂಲ್‌ನೂನ್–ಮನಸೂರ್–ತತ್ತ್ವಜ್ಞಾನಿ ಅಲ್‌ಗಜಾಲೀ ಇವರು ಈ ಯುಗದ ಪ್ರಸಿದ್ಧ ಸೂಫಿಗಳು.

೩) **ಉತ್ತರ ಮಧ್ಯಯುಗ** [ಮತಸ್ಥಾಪನಾಯುಗ]. ೧೨–೧೩–೧೪ನೆಯ ಶತಮಾನಗಳು. ಈ ಎರಡುನೂರು ವರ್ಷಗಳ ಕಾಲ ಸೂಫಿ ಮತದ ಪ್ರಚಾರ ದೇಶ ವಿದೇಶಗಳಲ್ಲಿ ಹರಡಿತು, ಅಷ್ಟೇಅಲ್ಲ; ಸೂಫೀಮತದ ಧವಲಕೀರ್ತಿಯನ್ನು ಕಾವ್ಯದ ಮೂಲಕ ಹರಡಿದವರು ಶೇಖ್‌ಸಾದಿ, ಅತ್ತಾರ್, ರೂಮಿ, ಹಾಫೀಜ್, ಜಾಮಿ, ಉಮರಖಯ್ಯಾಂ ಇವರು ಪ್ರಮುಖರು.

೪) **ಆಧುನಿಕ ಯುಗ** [ಪತನ ಯುಗ]. ಆಧುನಿಕಯುಗ ೧೫ ಶ. ನಂತರ. ಇದು ಸೂಫೀಧರ್ಮದ ಪತನಯುಗವೆಂದು ಕರೆಯುತ್ತಾರೆ. ಈ ಕಾಲದಲ್ಲಿ ಜನರು ಸೂಫೀ ಶಬ್ದವನ್ನು ಅಪಾರ್ಥದಲ್ಲಿ ಬಳಸತೊಡಗಿದರು. ಅಶ್ಲೀಲ ಶೃಂಗಾರದ ಕವಿತೆಗಳನ್ನು ಸೂಫಿಗಳ ತಲೆಗೆ ಕಟ್ಟಿದರು.

'ಸೂಫೀಮತವನ್ನು ಪ್ರಚಾರಮಾಡಿದ ಸಂಪ್ರದಾಯಗಳಲ್ಲಿ ನಾಲ್ಕುಮುಖ್ಯವಾದವು. ಚಿಸ್ತಿಯಾ–ಸುಹರ್‌ವರ್ಧಿಯಾ–ಕಾರಿದಿಯಾ ಮತ್ತು ನಕಶ್ ಬಂದಿಯಾ'[7] 'ಭಾರತದಲ್ಲಿ ಸೂಫಿಧರ್ಮವನ್ನು ಪ್ರಚಾರ ಮಾಡಿದ ಶ್ರೇಯಸ್ಸು 'ಹಜರತ್ ದಾತಾ ಹಂಜ್' ನಿಗೆ ಸಲ್ಲುತ್ತದೆ.'[8]

**ಸೂಫೀಧರ್ಮ-ತತ್ವ–ಸಿದ್ಧಾಂತ [ದಾರ್ಶನಿಕ ಹಿನ್ನೆಲೆ]**

ಸೂಫಿಯು ಪ್ರೇಮ ಧರ್ಮಿಯಾಗಿದ್ದಾನೆ. ಅವನಿಗೆ ಚಲುವೇ ದೇವರು. ಒಲವೇ ಪೂಜೆಯಾಗಿದೆ. 'ಆತ್ಮ ಪತಿ ಪರಮಾತ್ಮ ಸತಿ' ಎನ್ನುವ ಮಧುರ ಭಾವದ ತತ್ವವನ್ನು ಇವರು ಉಪಾಸನೆಗೆ ಆಯ್ದುಕೊಂಡರು. ಸತ್ಯ ಒಂದೇ. ಸೃಷ್ಟಿಯೂ. ಸೃಷ್ಟಿಕರ್ತನೂ ಅವನೇ. ಒಂದು ದೃಶ್ಯ ಮತ್ತೊಂದು ಅದೃಶ್ಯ. ಮೂಲತಃ ಪರಮಾತ್ಮನು ನಿರ್ಗುಣ. ಅವಿದ್ಯೆಯಿಂದ ಸಗುಣ

3. ಸಂತ ಸಾಹಿತ್ಯ.
4. ಇಸ್ಲಾಂ ಧರ್ಮ.
5. ಇಸ್ಲಾಂ ಸಂಸ್ಕೃತಿ.
6. ಹಿಂದೀ ಸಾಹಿತ್ಯ
7. ಅದೇ
8. ಹಿಂದೀ ಸಾಹಿತ್ಯಕ್ಕೆ ಆಲೋಚನಾತ್ಮಕ ಇತಿಹಾಸ.

ನಾಗುತ್ತಾನೆ. ಈ ಸಗುಣ ಪ್ರಭಾವಗಳೇ ನಮಗೆ ಕಾಣುವ ಪ್ರಪಂಚ. ಸೂಫಿಗಳಲ್ಲಿ ಕೆಲವರು ದ್ವೈತಸ್ಥಿತಿಯುಳ್ಳವರೂ, ಮತ್ತೆ ಕೆಲವರು ಅದ್ವೈತ ಸ್ಥಿತಿಯಲ್ಲಿರುವವರೂ ಇದ್ದರು. ಆದರೂ ಅವರು ಈ ಪ್ರಪಂಚವನ್ನು 'ಮಾಯೆ' ಎಂದು ಭಾವಿಸಲಿಲ್ಲ. 'ಸತ್ಯ ವಸ್ತುಗಳ ವ್ಯಕ್ತರೂಪ' ಎಂದು ಭಾವಿಸಿದ್ದರು. ಮನುಷ್ಯನು ಪರಮಾತ್ಮನ ಅಂಶಕೂಡ. ದೇವರು ಸೌಂದರ್ಯಮಯ, ಅಥವಾ ಚನ್ನಿಗ ಚಲುವ. ಸೂಫಿ ತತ್ವದ ಅಡಿಗಲ್ಲು 'ಪ್ರೇಮಮಯ ಭಕ್ತಿ' 'ಮಧುರ ಭಾವದ ಭಕ್ತಿ'. ದೇವರನ್ನು ಕಾಣಲು ಸೂಫಿಗಳು ಸರಳವಾದ ಸಹಜವಾದ, ಎಲ್ಲರಿಗೂ ಒಪ್ಪಿಗೆಯಾಗುವ, ಅನುಸರಿಸಲು ಸುಲಭವಾದ ಭಕ್ತಿಯ ಮಾರ್ಗವನ್ನೇ ಅವಲಂಬಿಸಿದ್ದಾರೆ. ಸೃಷ್ಟಿಗೂ ಸ್ಥಿತಿಗೂ ಪ್ರೇಮವೇ ಕಾರಣ. 'ಅಜ್ಞೇಯವಾದ ದೇವರನ್ನು ಪ್ರೇಮರೂಪದಲ್ಲಿ ಕಾಣಬಹುದೆಂದು ಅವರ ಅಭಿಮತ'[9] ಮನುಷ್ಯನಿಗೆ ಮೂರು ಸ್ವಭಾವಗಳಿವೆ ಎಂದು ಸೂಫಿಗಳು ಭಾವಿಸುತ್ತಾರೆ. ಅವುಗಳು ಇಂದ್ರಿಯ-ಬುದ್ಧಿ-ಆತ್ಮಗಳಿಗೆ ಸಂಬಂಧಿಸಿವೆ. ಇವುಗಳನ್ನು ಹಿಂದೂದರ್ಶನದ ತಮಸ್ಸು-ರಜಸ್ಸು ಹಾಗೂ ಸಾತ್ವಿಕ ಗುಣಗಳಿಗೆ ಹೋಲಿಸುತ್ತಾರೆ.'[10]

ಆಧ್ಯಾತ್ಮಿಕ ಪ್ರೇಮವನ್ನು ಸೂಫಿಗಳು ಸರ್ವಶ್ರೇಷ್ಠವೆಂದು ಭಾವಿಸುತ್ತಾರೆ. ಅಷ್ಟೇ ಅಲ್ಲ; ಅದರ ಉಪಾಸನೆ-ಸಾಧನೆಯನ್ನು ಒಂದು ಯಾತ್ರೆ (ಹಜ್) ಎಂದು ಭಾವಿಸುತ್ತಾರೆ. ಅಧ್ಯಾತ್ಮಿಕ ಶಿಕ್ಷಣ ಪಡೆಯುವಾಗ ಸಾಧಕನಾದ ಸೂಫಿಯು ಕೆಲವು ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕಾಗುತ್ತದೆ. ಆ ನಿಯಮಗಳನ್ನು ನಾಲ್ಕು ವಿಧವಾಗಿ ವಿಂಗಡಿಸುತ್ತಾರೆ. ಅವುಗಳಿಗೆ ಸಾಧನೆಯ 'ಸ್ಥಲ'ಗಳು ಹಂತಗಳು ಎಂದು ಕರೆಯುತ್ತಾರೆ. ಇವುಗಳಿಗೆ ಮುಖಾಮಾತ್ ಎಂದು ಅವರ ಪರಿಭಾಷೆ.

**೧) ಶರೀಅತ್ ೨) ತರೀಕತ್ ೩) ಮಾರೀಫತ್ ೪) ಹಕೀಕತ್**—ಇವೇ ಆ ನಾಲ್ಕು ವಿಧಗಳು.

**೧) ಶರೀಅತ್ :** ಸಾಧಕನು ಪ್ರೇಮಮಾರ್ಗದಲ್ಲಿ ಭಗವಂತನ ಉಪಾಸನೆಯ ಹಾದಿಯಲ್ಲಿರುವಾಗ ಮೊದಲನೆಯ ಹಂತವಾದ ಶರೀಅತ್‌ನಲ್ಲಿ ಧರ್ಮಗ್ರಂಥಗಳ ಪಠಣ, ನಮಾಜ್, ಉಪವಾಸ, ಯಾತ್ರೆ (ಹಜ್) ಮೊದಲಾದ ವಿಧಿ-ನಿಷೇದಗಳ ಆಚಾರ ನಿಯಮಗಳನ್ನು ತಪ್ಪದೇ ಪಾಲಿಸಬೇಕಾಗುತ್ತದೆ. ಧ್ಯಾನದಿಂದ ಚಿತ್ತವೃತ್ತಿಗಳನ್ನು ಕಳೆದುಕೊಂಡು ಬದುಕನ್ನು ಸದಾಚಾರದ ಶಕ್ತಿಗೆ ಒಳಪಡಿಸಿಕೊಳ್ಳುತ್ತಾನೆ. ಇದನ್ನು ಶರಣರ ಭಕ್ತ ಸ್ಥಲಕ್ಕೆ ಹೋಲಿಸಬಹುದಾಗಿದೆ.

**೨) ತರೀಕತ್:** [ಉಪಾಸನೆ] ಇದು ಸಾಧಕನು ಏರಬಹುದಾದ ಎರಡನೆಯ ಹಂತ. ಇಲ್ಲಿ ಸಾಧಕನಾದ ಸೂಫಿಯು ಸದಾಚಾರ ಸಂಪನ್ನನಾಗಿ ಹೃದಯಶುದ್ಧಿಯಿಂದ ಸರಿಯಾದ ಗುರುವನ್ನು ಹುಡುಕಿಕೊಂಡು [ಪರ್ಶಿಯನ್-ಪೀರ್ : ಅರಬ್ಬೀ-ಷೇಕ್] ಅವನಿಂದ ಸರಿಯಾದ ಶಿಕ್ಷಣ ಪಡೆಯುತ್ತಾನೆ. ಗುರುವಿನಲ್ಲಿ ಸಂದೇಹಿಸದೆ ಆಜ್ಞಾನುವರ್ತಿಯಾಗಿ ಅವನ ಸಾಧನೆ, ನಿಷ್ಠೆಯಿಂದ ಮುಂದುವರಿಯುತ್ತದೆ. ಭಕ್ತಿಮಾರ್ಗ ದೃಢವಾಗುತ್ತದೆ. ಮನೋನಿಷ್ಠೆ (ಫನಾಫಿಷೇಕ್) ನೆಲೆಗೊಳ್ಳುತ್ತದೆ. ಗುರುವಿನ ಅನುಗ್ರಹಕ್ಕೆ ಸಾಧಕನು ಪಾತ್ರನಾದರೆ ಸೂಫಿ ವಸ್ತ್ರ(ಖಿರಕ್)ವನ್ನು ದಯಪಾಲಿಸುತ್ತಾನೆ. ಏಕಾಂತ ಹಾಗೂ ಮೌನಸಾಧನೆ ಮಾಡಬೇಕು. ಸಾಧಕನಾದ ಸೂಫಿಯ ಮನೋನಿಷ್ಠೆಯನ್ನು ವೀರಶೈವ ಶರಣರ ಷಟ್‌ಸ್ಥಲ ಸಾಧನೆಯ ಮಹೇಶ ಸ್ಥಲಕ್ಕೂ ಸೂಫಿಗಳ ಗುರುಭಕ್ತಿಶ್ರದ್ಧೆಯನ್ನು ಗುರುಕಾರುಣ್ಯಸ್ಥಲಕ್ಕೂ ಹೋಲಿಸಬಹುದು. ಸಾಲಿಕ್ (ಸಾಧಕನು) ಚತುರ್ವಿಧ ಸೂಫಿ ಸ್ಥಲಗಳಲ್ಲಿ ಮೂರನೆಯ 'ಹಂತ'ವಾದ ಮಾರೀಫತ್ ಅಥವಾ ಪೂರ್ಣಜ್ಞಾನವನ್ನು ಪಡೆಯಲು ಅಂತರಂಗ ಪರಿಶುದ್ಧಿಗಾಗಿ (ಅಂತರಿಕವಾದ ಸಾಧನೆಯಲ್ಲಿ) ತೊಡಗುತ್ತಾನೆ. ಮನೋಶುದ್ಧಿಗೆ-ಪರಿಶುದ್ಧಿಗೆ ಅಂತರಂಗದಲ್ಲಿ ಸಾಧನೆ ಮಾಡುವಾಗ ಸಾಧಕನಿಗೆ ಏಳು ಹಂತಗಳನ್ನು ತಿಳಿಸುತ್ತಾರೆ. ಅವು ಮನೋವೈಜ್ಞಾನಿಕವಾದ ವಿಕಾಸದ ಸಪ್ತ ಸ್ಥಲಗಳೆಂದು ಕರೆಯುತ್ತಾರೆ. ಸಾಧನೆಯ ನಾಲ್ಕು ಅವಸ್ಥೆಗಳಾದ ಶರೀಕತ್ ತರೀಕತ್-ಮಾರೀಫತ್-ಹಕೀಕತ್ ಇವು ಸಾಧಕನು ಸಾಧಿಸಬಹುದಾದ ಬಾಹ್ಯ ಕ್ರಿಯಾ ಸಾಧನೆಗಳು. ಸಾಧಕನು ಶರೀಕತ್‌ನಲ್ಲಿ ವಿಧಿ-ವಿಧಾನಗಳನ್ನು ಪರಿಪಾಲಿಸುತ್ತಾ ಉಪಾಸನೆಯ ಹಾದಿಯಲ್ಲಿ ಎರಡನೆಯ ಸ್ಥಲವಾದ ತರೀಕತ್‌ನಲ್ಲಿ ಗುರುದೀಕ್ಷೆ ಹೊಂದಿ ಮೂರನೆಯ ಅವಸ್ಥೆ ಮಾರೀಫತ್ ಅಥವಾ (ಪೂರ್ಣಜ್ಞಾನ) ಪಡೆಯುವ ಮೊದಲು ಸಾಧಕನು ಮನಸ್ಸಿನ ಪರಿಶುದ್ಧಿಯನ್ನು ಪಡೆದುಕೊಂಡ ನಂತರ ಪೂರ್ಣಜ್ಞಾನಕ್ಕೆ ಅರ್ಹನಾಗುತ್ತಾನೆ.

ಮುರೀದನಿಗೆ (ಸಾಧಕನಿಗೆ) ಮಾರೀಫತ್ ಅವಸ್ಥೆಗೆ (ಪೂರ್ಣಜ್ಞಾನಸ್ಥಿತಿಗೆ) ಹೋಗಲು ಮನೋರಂಗದಲ್ಲಿ ಸಾಧಕನು ಏಳು ಹಂತಗಳನ್ನು ದಾಟಬೇಕು. ನಾಲ್ಕು ಅವಸ್ಥೆಗಳು ಬಾಹ್ಯರೂಪದ ಸಂಸ್ಕಾರಗಳಿಗೆ ಸಂಬಂಧಿಸಿದರೆ ಸಪ್ತ ಹಂತಗಳು (ತತ್ತ್ವ) ಅಂತರಿಕಸಂಸ್ಕಾರಕ್ಕೆ ನೆರವಾಗುತ್ತವೆ. 'ಅಂತರಿಕಸಂಸ್ಕಾರಕ್ಕೆ ನೆರವಾಗುವ ಸ್ಥಲಗಳು ಸತಸೌಉತರೆಪಾರ (ಏಳುನೂರು) ಅವಾಂತರಗಳೂ ಉಂಟು. ಅವುಗಳನ್ನೆ ಸ್ಥೂಲವಾಗಿ ಸಪ್ತಸೋಪಾನ ತತ್ತ್ವಗಳೆಂದು ಕರೆಯುತ್ತಾರೆ.'[11] ಅವುಗಳು(ಮುಕಾಮಾತ್‌ಗಳು):

9. 'ಹಿಂದೀ ಸಾಹಿತ್ಯ ಕಾ ಇತಿಹಾಸ'
10. 'ಸೂಫಿಮತ ಸಾಧನಾ ಔರ್ ಸಾಹಿತ್ಯ'
11. ಸೂಫೀ ಕಾವ್ಯ ಸಂಗ್ರಹ.

**೧. ತಾಬಾ** **೨. ಜಹದ್** **೩. ಸಬ್ರ** **೪. ಶುಕ್ರ** **೫. ರಿಜಾಅ** **೬. ತವಕ್ಕುಲ್** **೭. ರಜಾ.** ಇವುಗಳನ್ನು ಅನುತಾಪ–ಆತ್ಮಸಂಯಮ–ವೈರಾಗ್ಯ–ಧೈರ್ಯ–ವಿಶ್ವಾಸ–ಸಂತೋಷ ಹಾಗೂ ಪ್ರೇಮವೆಂದೂ ಕರೆಯುತ್ತಾರೆ.[12]

**೧. ತಾಬಾ :** ಈ ಹಂತದಲ್ಲಿ ಸಾಧಕನು ಅನುತಾಪದಿಂದ ಜೀವನು ಭಗವಂತನ ವಿರಹದಲ್ಲಿ ಪಶ್ಚಾತ್ತಾಪ ಪಟ್ಟು ಪರಿಶುದ್ಧನಾಗುತ್ತಾನೆ. **೨) ಜಹದ್ :** ಇಲ್ಲಿ ಸಾಧಕನು ಇಂದ್ರಿಯಗಳ ಸಂಯಮ ಹಾಗೂ ಮನೋನಿಗ್ರಹ ಸಾಧಿಸುತ್ತಾನೆ. **೩) ಸಬ್ರ :** ಇಲ್ಲಿ ಸಾಧಕನು ವಿರಾಗ ಶೀಲನಾಗಿ ಲೋಭಮೋಹಗಳಿಂದಾವೃತವಾದ ಮನದ ಕಾಳಿಕೆಗಳನ್ನು ಕಳೆದುಕೊಂಡು 'ಪ್ರಿಯತಮೆ' ಭಗವಂತನನ್ನು ಅವಲಂಬಿಸುತ್ತಾನೆ. **೪) ಶುಕ್ರ :** ಈ ಹಂತದಲ್ಲಿ ಸಾಧಕನಿಗೆ ಭಗವಂತನ ಚಿಂತನೆಯಲ್ಲಿ ಈಶ್ವರೀಯ ಜ್ಞಾನದ ಅರಿವು ಉಂಟಾಗುತ್ತದೆ. **೫) ರಿಜಾಅ :** ಈ ಹಂತದಲ್ಲಿ ಸಾಧಕನು ಧೈರ್ಯ–ಆತ್ಮವಿಶ್ವಾಸ ಪಡೆದು ದೇವೋನ್ಮಾದದ ನಿಬ್ಬೆರಗಿನಲ್ಲಿ ಬಂದು ನಿಂತು ಎಲ್ಲೆಲ್ಲೂ ದೇವರನ್ನು ಕಾಣುತ್ತಾನೆ. **೬) ತವಕ್ಕುಲ್ :** ಈ ಹಂತದಲ್ಲಿ ಸಾಧಕನಿಗೆ ಭಗವಂತನಲ್ಲಿ ಪೂರ್ಣ ನಿಷ್ಠೆ ಬಲಿತು ಆತ್ಮವಿಶ್ವಾಸದಿಂದ ಸತ್ಯದ ಅರಿವು ಉಂಟಾಗುತ್ತದೆ. ಜ್ವಾಲೆಯು ಧೂಮವನ್ನು ಕಳೆದುಕೊಂಡಂತೆ ಆತ್ಮ ವಿಶುದ್ಧಿ ಪಡೆಯುತ್ತಾನೆ. **೭) ರಜಾ :** ಇದು ಸಾಧಕನ ಆಂತರಿಕ ಸಾಧನೆಯ ಮನೋವಿಕಾಸ ಪರಿಶುದ್ಧಿಯ ದಾರಿಯಲ್ಲಿ ಏಳನೆಯ ಸೋಪಾನ. 'ಪ್ರೇಮ ಮೂರ್ತಿಯಾದ ಭಗವಂತನಲ್ಲಿ ಪ್ರೇಮೈಕ್ಯನಾಗುತ್ತಾನೆ. ಪರಮಾತ್ಮನ ಪ್ರೇಮರಾಶಿಯಲ್ಲಿ (ನೂರ್) ಭಕ್ತ (ಸೂಫಿ) ಪ್ರೇಮಿ ಲೀನನಾಗುತ್ತಾನೆ'[13]

ಹೀಗೆ ಆಂತರಿಕವಾದ ಮನೋರಂಗದಲ್ಲಿ ಮಾನಸಿಕ ಸಾಧನೆಯ ನಂತರ ಸೂಫಿ ಸಾಧಕ ಮೂರನೆಯ ಅವಸ್ಥೆಯಾದ **ಮಾರಿಫತ್** ಕಡೆಗೆ ಸಾಗುತ್ತಾನೆ. ಈ ಅವಸ್ಥೆಯಲ್ಲಿ ಅವನಿಗೆ ದೇಹ-ಮನಸ್ಸು ಪರಿಪಕ್ವವಾಗಿ ಮನಃಕಷಾಯಗಳನ್ನು ನೀಗಿ ಪೂರ್ಣಜ್ಞಾನ ಉಂಟಾಗುತ್ತದೆ. ಇದು ಸಾದಾ ಕೋರಾ ಜ್ಞಾನವಲ್ಲ; ಹೃದಯದ ನಿಜವಾದ ಸಹಾನುಭೂತಿ. ಇಶ್ಕ-ವಜ್ದ್-ವಸ್ಲ ಎನ್ನುವ ಹೆಸರುಗಳಿಂದಲೂ ಇದನ್ನು ಕರೆಯುತ್ತಾರೆ. ೪. **ಹಕೀಕತ್** ಇದು ಸಾಧಕನ ಚರಮಾವಸ್ಥೆ-ಸಿದ್ಧಾವಸ್ಥೆ. ಸತ್ಯ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. 'ಪ್ರೇಮಿ-ಪ್ರಿಯತಮೆ'ಯಲ್ಲಿ ಸಮರಸ ಭಾವದಲ್ಲಿ ಲೀನನಾಗಿ ಐಕ್ಯನಾಗುತ್ತಾನೆ. ಈ ಸ್ಥಿತಿಗೆ '**ಅನಲಹಕ್**' ಎಂದೂ ಕರೆಯುತ್ತಾರೆ. ಶಂಕರರ 'ಅಹಂಬ್ರಹ್ಮಾಸ್ಮಿ'-ಪ್ರಭುದೇವರ 'ನಾ ದೇವನಲ್ಲದೆ ನೀ ದೇವನೆ' ಎನ್ನುವ ಸ್ಥಿತಿಗೆ ಬಂದು ತಲುಪುತ್ತಾನೆ. ಇದನ್ನು ವೀರಶೈವರ ಐಕ್ಯಸ್ಥಲಕ್ಕೆ ಹೋಲಿಸಬಹುದಾಗಿದೆ. ಸೂಫೀ ಧರ್ಮದ ಶರೀಅತ್ ಅವಸ್ಥೆಯನ್ನು ವೀರಶೈವ ಧರ್ಮದ ಭಕ್ತಸ್ಥಲಕ್ಕೂ **ತರಿಕತ್** ಅವಸ್ಥೆಯನ್ನು ಮಹೇಶ ಸ್ಥಲಕ್ಕೂ, ಮಾರಿಫತ್ ಅವಸ್ಥೆಯನ್ನು ಪ್ರಸಾದಿ. ಪ್ರಾಣಲಿಂಗಿ-ಶರಣ ಸ್ಥಳಗಳಿಗೂ, ಕೊನೆಯದಾದ ಹಕೀಕತ್‌ನ್ನು ಐಕ್ಯಸ್ಥಲಕ್ಕೂ ಸ್ಥೂಲವಾಗಿ ಅನ್ವಯಿಸಿ ಹೇಳಬಹುದು. ಸೂಫಿ ಧರ್ಮದಲ್ಲಿರುವ ಮನೋವೈಜ್ಞಾನಿಕವಾದ ಮನೋವಿಕಾಸದ-ಸೂಕ್ಷ್ಮಾತಿ ಸೂಕ್ಷ್ಮ 'ಸಾತಸೌ ಉತರೆ ಪಾರ್' (ಏಳು ನೂರು) ಅವಾಂತರ ಸ್ಥಲಗಳನ್ನು ವೀರಶೈವ ಧರ್ಮದ ಏಕೋತ್ತರ (ನೂರೊಂದು) ಸ್ಥಲಗಳಿಗೆ ಹೋಲಿಸಬಹುದೆಂದು ತೋರುತ್ತದೆ. ಏಕೋತ್ತರ ಶತಸ್ಥಲಗಳು ಅಂತರಂಗದ ಮನೋವಿಕಾಸದ ಸಂಸ್ಕಾರ ಕ್ರಿಯೆಗಳಾಗಿವೆ. ಸೂಫೀ ಧರ್ಮದ ನಾಲ್ಕು ಅವಸ್ಥೆಗಳನ್ನು ಕ್ರಮವಾಗಿ ಕರ್ಮಕಾಂಡ–ಉಪಸನಾಕಾಂಡ-ಜ್ಞಾನಕಾಂಡ-ಸಿದ್ಧಾವಸ್ಥೆ ಎಂದು ಹಿಂದೂಧರ್ಮದ ಪರಿಭಾಷೆಯಲ್ಲಿ ಕರೆಯಬಹುದಾಗಿದೆ.

ಸೂಫಿಯು ತನ್ನ ಸಾಧಕಾವಸ್ಥೆಯ ಕೊನೆಯ ಹಂತವಾದ 'ಹಕೀಕತ್'ನ ಉಚ್ಚ ಸ್ಥಿತಿಯನ್ನು ತಲುಪಿದ ಮೇಲೆ 'ಕಿಸಕೀ ಶಾದೀ ಕಿಸಕಾ ಗಮ್, ಹೊ ಅಲ್ಲಾ ಹೋ ದಮ್ ಪರ್ ದಮ್' ಎನ್ನುವ ನಿಲುವಿಗೆ ಬಂದು ನಿಲ್ಲುತ್ತಾನೆ. ಇಲ್ಲಿ ಸಿದ್ಧಾಂತಕ್ಕಿಂತ ಅನುಭವಕ್ಕೆ ಪ್ರಾಧಾನ್ಯ. ಅನುಭವವೆಂದರೆ ಸ್ಥೂಲಾರ್ಥದಲ್ಲಿ 'ಸತ್ಯದ ಅರಿವು' ಅನುಭಾವವೆಂದರೆ '**ಸತ್ಯಾನ್ವೇಷಣೆ**'ಅನುಭೂತಿ ಎಂದರೆ '**ಸತ್ಯಸಾಕ್ಷಾತ್ಕಾರ**' ವೆನ್ನುವ ಶರಣ ಸಾಹಿತ್ಯ ಪರಿಭಾಷೆಯ ದೃಷ್ಟಿಯಿಂದ ಸೂಫಿ ಮತ ಸಾಧನೆಯನ್ನು ಪರಿಶೀಲಿಸಿದಾಗ ಸಾಧನೆಯ ಹಾದಿಯಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸ ಕಂಡುಬಂದರೂ ಪಡೆಯುವ ಸತ್ಯಸಾಕ್ಷಾತ್ಕಾರ ಏರಿ ನಿಲ್ಲುವ ನೆಲೆ ಒಂದೇ ಆಗಿದೆ ಎಂಬುದು ಮೇಲ್ಕಂಡ ತತ್ವ ವಿವರಣೆಯಿಂದ ಸಹೃದಯರಿಗೆ ಸುಲಭ ಗೋಚರವಾಗುತ್ತದೆ. ದೈವೀ ಜ್ಞಾನವೇ ಅನುಭವ, ದೈವೀ ಅನ್ವೇಷಣೆಯೇ ಅನುಭಾವ, ದೈವೀ ಸಾಕ್ಷಾತ್ಕಾರವೇ ಅನುಭೂತಿ ಇಂಥ ಸಾಧನೆಯ ಹಾದಿಯಲ್ಲಿರುವ ಸಾಧಕನಾದ ಸೂಫಿ ಅಥವಾ ಶರಣನಿಗೆ ಮಾತ್ರ ದೇವರ ದರ್ಶನ–ಕೃಪೆ ಸಾಧ್ಯ. ಸೂಫೀ ಧರ್ಮದಲ್ಲಿ ಉಪಾಸ್ಯ ಹಾಗೂ ಉಪಾಸಕನ ಮಧ್ಯೇ ಆತ್ಮೀಯ (ರೂಹ್) ಹಾರ್ದಿಕವಾದ ಸಂಬಂಧ ಏರ್ಪಡುತ್ತದೆ. ವೀರಶೈವ ಶರಣರಲ್ಲೂ ಹಾಗೆಯೇ ಎಂಬುದು ಬೇರೆ ಹೇಳಬೇಕಾಗಿಲ್ಲ. ಭಕ್ತ ದೇವರ ನಡುವೆ ಪುರೋಹಿತರ ಸಲಹೆ-ಅವಶ್ಯಕತೆ-ಅನಗತ್ಯ. 'ಹೃದಯದ ಕಗ್ಗನ್ನು ಚಿಕಿತ್ಸೆ ಮಾಡಿ ಅದರ ಮೂಲಕ ದೇವರನ್ನು ನೋಡುವುದೇ ಆಗಿದೆ' ಎನ್ನುತ್ತಾನೆ ಒಬ್ಬ ಸೂಫೀ ಸಂತ.[14] ದೇವರು ಆಧ್ಯಾತ್ಮಿಕ

---

2. ಭಾರತೀಯ ಪ್ರೇಮಾಖ್ಯಾನ ಕೀ ಪರಂಪರಾ  13. ಜಾಗತಿಕ ಧರ್ಮಗಳು.  14. ಜಾಗತಿಕ ಧರ್ಮಗಳು.

ಪ್ರಪಂಚ ಭೌತಿಕವೆಂದು ಸೂಫಿಗಳ ಅಭಿಮತ. ಸೂಫಿಗಳು ಮನಸ್ಸು (ಹೃದಯ)-ಆತ್ಮ-ಅರಿವು-ಸಾಕ್ಷಿ-ಅಂತಃಸಾಕ್ಷಿ ಇವುಗಳನ್ನು ಸೂಕ್ಷ್ಮ ಇಂದ್ರಿಯಗಳೆಂದು ಭಾವಿಸುತ್ತಾರೆ ಮತ್ತು ಈ ಇಂದ್ರಿಯಗಳು ದೇವನ ಸಾನ್ನಿಧ್ಯಕ್ಕೆ ಸಹಾಯಕವಾದವುಗಳು ಎಂದು ತಿಳಿಯುತ್ತಾರೆ. ಅಹಂಕಾರ-ಭೂಮಿ-ನೀರು-ಅಗ್ನಿ-ವಾಯು ಇವು ಪಂಚಭೂತಗಳು. ಇವು ಭೌತಿಕ ಪ್ರಪಂಚವನ್ನು ನಿರ್ಮಿಸುತ್ತವೆ ಎಂದು ಅವರು ತಿಳಿಯುತ್ತಾರೆ ಸೂಫಿಗಳು. ಆಕಾಶತತ್ವವನ್ನು ಮನ್ನಿಸುವುದಿಲ್ಲ.[15] 'ದೇವರು' ಹಾಗೂ 'ಪ್ರಪಂಚ'ದ ಬಗೆಗೆ ಸೂಫೀ ಮತ:

> 'ಈ ಸೃಷ್ಟಿ ದೇವರದು; ಇದನ್ನು ನಿರ್ಮಿಸಲು ಅವನ ದಯೆಯೇ ಕಾರಣ. ಈ ಪ್ರಪಂಚದ ಅಪರಿಮಿತ ವೈವಿಧ್ಯದ ಹಿಂದೆ ಅವನು ಒಕಮೇವ ಶಾಶ್ವತ ತತ್ತ್ವವಾಗಿದ್ದಾನೆ. ಪರಮೇಶ್ವರ ಸ್ವರೂಪ-ಲಕ್ಷಣ-ಕ್ರಿಯೆಗಳು ಅತ್ಯಂತಿಕವಾಗಿ ದೇವರವೇ ಆಗಿವೆ. ನೀರಿನಿಂದ ಹಿಮವು ನಿರ್ಮಾಣವಾಗುವಂತೆ ಭಗವಂತನಿಂದ ಪ್ರಪಂಚವು ರೂಪಗೊಂಡಿದೆ. ಈ ವಿಶ್ವದಲ್ಲಿ ಸಮಸ್ತವೂ ಭಗವಂತನ ಕ್ರಿಯೆ ಇದನ್ನು ಅರಿಯುವುದೇ ಅನುಭವದ ಸಾಕ್ಷಾತ್ಕಾರ. ಭಗವಂತನಲ್ಲಿಡುವ ಪ್ರೇಮವೇ ಸೂಫಿ ಧರ್ಮದ ಪ್ರಾಣ ಮಂತ್ರ'[16]

ಭಾರತೀಯ ಅನುಭಾವಿಗಳ ಪ್ರಕಾರ ಆತ್ಮ ಸ್ತ್ರೀ, ಪರಮಾತ್ಮ ಪುರುಷ. ಆದರೆ ಸೂಫಿಗಳಲ್ಲಿ ಆತ್ಮ ಪುರುಷ ಪರಮಾತ್ಮ ಸ್ತ್ರೀ ಆಗಿದ್ದಾನೆ. ಪರಮಾತ್ಮನ ವಿರಹ ಸೂಫಿಗಳಲ್ಲಿ ಭಕ್ತನ ಬಹುದೊಡ್ಡ ಸಿಧಿಯಾಗಿದೆ. ಸೂಫೀ ಮತ ಇಸ್ಲಾಂ ಧರ್ಮದ ಸುಧಾರಣಾ ಮತ. ಅದರ ಕರ್ಮಕಾಂಡವನ್ನೇ ಪ್ರತಿಭಟಿಸಿ ನಿಂತ ವಿಶಾಲ ಹಾಗೂ ಉದಾರ ತತ್ವಗಳನ್ನೊಳಗೊಂಡ ವ್ಯಾಪಕ ಮತವೆಂದು ಪ್ರಸಿದ್ಧವಾಗಿದೆ.

'ಸೂಫಿ ಮತದಲ್ಲಿ ಯಾತ್ರೆ (ಸಫರ)ಗೆ ಮೂರು ಸ್ಥಳಗಳು ಮುಖ್ಯವಾದವುಗಳು. ಅವುಗಳನ್ನು ಪ್ರಸ್ಥಾನ ತ್ರಯಗಳೆಂದು ಕರೆಯುತ್ತಾರೆ. ಅವೇ ಅರಬ್-ಇರಾನ್ ಮತ್ತು ಭಾರತ. ಸೂಫಿ ಮತ ಅರಬ್ ದೇಶದಲ್ಲಿ ಜ್ಞಾನಮಾರ್ಗ ಪ್ರಧಾನವಾಗಿ, ಇರಾನ್‌ದಲ್ಲಿ ಆಧ್ಯಾತ್ಮಿಕ ಪ್ರೇಮ ಮಾರ್ಗ ಪ್ರಧಾನವಾಗಿ, ಭಾರತದಲ್ಲಿ ಭಕ್ತಿ-ಜ್ಞಾನ-ಕರ್ಮ ಮಾರ್ಗಗಳಲ್ಲಿ ಸಾಗಿ ಬಂದಿದೆ'[17]

ಸೂಫಿಗಳು ಮನೋಲೋಕದ ವಿಕಾಸದ ಹಂತದಲ್ಲಿ ನಾಲ್ಕು ಲೋಕಗಳಿವೆ ಎಂದು ನಂಬುತ್ತಾರೆ. **೧. ನಾಸೂತ:** ಇದು ನರಲೋಕ. ಈ ಸ್ಥಿತಿ (ಹಾಲ್)ಯಲ್ಲಿ ಸಾಧಕನು ಹಿಂದೆ ವಿವರಿಸಿದ ನಾಲ್ಕು ಅವಸ್ಥೆಗಳಲ್ಲಿ ಪ್ರಥಮಾವಸ್ಥೆಯಾದ 'ಶರೀಯತ್'ನ ಧರ್ಮಶಾಸ್ತ್ರದ ವಿಧಿ ನಿಷೇಧಗಳನ್ನು ಪರಿಪಾಲಿಸುತ್ತಾನೆ. **೨. ಮಲಕೂತ :** ದೇವಲೋಕದ ಸ್ಥಿತಿ (ಹಾಲ್) ಯಲ್ಲಿ ಶುದ್ಧಾತ್ಮನಾಗಿ ತರೀಕತ್ (ಉಪಸನೆ) ಅವಸ್ಥೆಯ ಕಡೆಗೆ ಉಪಾಸನೆ ಸಾಧನೆಯತ್ತ ಸಾಗುತ್ತಾನೆ. **೩. ಜಬರೂತ್ :** ಐಶ್ವರ್ಯ ಲೋಕದ ಸ್ಥಿತಿ (ಹಾಲ್)ಯಲ್ಲಿ ಮಾರಿಫತ್ ಅಥವಾ ಪೂರ್ಣ ಜ್ಞಾನದ ಅವಸ್ಥೆಯಲ್ಲಿ ದೈವಭಕ್ತಿ ಸಂಪನ್ನನಾಗಿ ಆಧ್ಯಾತ್ಮಿಕ ಶಕ್ತಿ ಪಡೆಯುತ್ತಾನೆ. ಕೊನೆಯ ಸ್ಥಿತಿ (ಹಾಲ್) **೪. ಲಾಹೂತ್ :** ಇದು ಮಾಧುರ್ಯ ಲೋಕ. ಈ ಸ್ಥಿತಿಯಲ್ಲಿ ಹಕೀಕತ್ ಅಥವಾ ದೈವ ಸಾಕ್ಷಾತ್ಕಾರದ ಅವಸ್ಥೆಯಲ್ಲಿ ಮಧುರ ಭಾವನೆಯಿಂದ ದೈವ ಸಾಕ್ಷಾತ್ಕಾರ ಪಡೆಯುತ್ತಾನೆ. ಇದು ಶರಣರ ಲಿಂಗಾಂಗ ಸಾಮರಸ್ಯದ ಸ್ಥಳವೆಂದು ಹೇಳಬಹುದು.

**ಸೂಫೀ ಧರ್ಮದಲ್ಲಿ ನಾಲ್ಕು ಆಚಾರಗಳು :**

**೧) ನಮಾಜ್ : (ಪ್ರಾರ್ಥನೆ), ೨) ಜಕಾತ್ : (ಧ್ಯಾನ), ೩) ರೋಜಾ : (ದೈವಾಜ್ಞೆ). ೪) ಹಜ್ : (ತೀರ್ಥಯಾತ್ರೆ)** ಈ ನಾಲ್ಕು ಆಚಾರಗಳನ್ನು ಸಾಧಕನು ತಪ್ಪದೆ ಆಚರಿಸಬೇಕಾಗುತ್ತದೆ. ಸೂಫಿಧರ್ಮದಲ್ಲಿ ಸಾಧಕಾವಸ್ಥೆಯಲ್ಲಿ ನಾಲ್ಕು ಯಾತ್ರೆಗಳಿವೆ ಎಂದು ನಂಬುತ್ತಾರೆ. **ಮೋಮಿನ್ (ಪೂರ್ವಾವಸ್ಥೆ), ಸಾಲಿಕ್ (ಸಾಧಕಾವಸ್ಥೆ), ಆರಿಫ್–(ಜ್ಞಾನಾವಸ್ಥೆ), ಹಕ್ (ಪರಮಜ್ಞಾನಾವಸ್ಥೆ)** ಸಾಧಕನ ಈ ನಾಲ್ಕು ನಿಲುಗಡೆಗಳನ್ನು (ನಿಲ್ದಾಣ) ಯಾತ್ರೆಗಳೆಂದು ಕರೆಯುತ್ತಾರೆ.

ಸೂಫಿಗಳ ಸಾಧನಾವಸ್ಥೆಗಳನ್ನು (ಅಧ್ಯಾತ್ಮಯಾತ್ರೆಯ ಸೋಪಾನಗಳನ್ನು) ಅಭ್ಯಾಸಿಗಳ ಅನುಕೂಲಕ್ಕಾಗಿ ಈ ರೀತಿ ರೇಖಾಚಕ್ರದ ಮೂಲಕ ತೋರಿಸಲಾಗಿದೆ.

## ಮುಕಾಮತ್ (ಯಾತ್ರೆ) ಯ ನಕ್ಷೆ

15. 'ಕಾಶ್ಮೀರ ಔರ್ ಹಿಂದೀ ಸೂಫಿ ಕಾವ್ಯಕಾತುಲನಾತ್ಮಕ ಅಧ್ಯಯನ'
16. ಸೂಫಿ ಮತ ಸಾಧನಾ ಔರ್ ಸಾಹಿತ್ಯ.
17. ಸೂಫಿ ಮತ ಔರ್ ಹಿಂದೀ ಸಾಹಿತ್ಯ.

| ಸಂಖ್ಯೆ | ಅವಸ್ಥೆ | ಲೋಕದಶಾ | ಯಾತ್ರೆ | ಆರಂಭ | ಮಧ್ಯ | ಅಂತ |
|---|---|---|---|---|---|---|
| ೧ | ಶರೀಅತ್ | ನಾಸೂತ್ | ಮೋಮಿನ್ | ಅಬ್ದ | ಇಶ್ಕ | ಇಶ್ಕ |
| ೨ | ತರೀಕತ್ | ಮಲಕೂತ್ | ಸಾಲಿಕ್ | ಇಶ್ಕ | ಜಹದ್ | ಮ್ವಾರಿಫ್ |
| ೩ | ಮಾರೀಫತ್ | ಜಬರೂತ್ | ಆರಿಫ್ | ಮ್ವಾರಿಪ್ | ವಜ್ದ | ಹಕೀಕ್ |
| ೪ | ಹಕೀಕತ್ | ಲಾಹೂತ್ | ಹಕ್ | ಹಕೀಕ್ | ವಸ್ಲ | ಫನಾ |

**ಸೂಫಿ ಪಾರಿಭಾಷಿಕ ಪದಗಳಿಗೆ ಅರ್ಥಸಹಾಯ**[18]

೧) **ಅವಸ್ಥೆಗಳು:** ೧. ಶರೀಯತ್ = ವಿಧಿವಿಧಾನ ಅನುಸರಣೆ, ೨. ತರೀಕತ್ = ಉಪಸನಾ–ಅನುಭವ, ೩, ಮಾರೀಫತ್ = ಪೂರ್ಣಜ್ಞಾನ, ೪. ಹಕೀಕತ್ = ದೈವಸಾಕ್ಷಾತ್ಕಾರ

೨) **ಲೋಕದಶಾ :** ೧. ನಾಸೂತ = ನರಲೋಕ, ೨. ಮಲಕೂತ = ದೇವಲೋಕ, ೩. ಜಬರೂತ = ಐಶ್ವರ್ಯಲೋಕ, ೪. ಲಾಹೂತ = ಮಾಧುರ್ಯಲೋಕ.

೩) **ಯಾತ್ರೆಗಳು :** ೧. ಮೋಮಿನ್ = ಪೂರ್ವಾವಸ್ಥೆಯಾತ್ರೆ, ಸಾಲಿಕ್ = ಸಾಧಕಾವಸ್ಥೆಯಾತ್ರೆ, ೩, ಆರಿಫ್ = ಜ್ಞಾನಾವಸ್ಥೆ ಯಾತ್ರೆ, ೪. ಹಕ್ = ಪರಮಜ್ಞಾನಾವಸ್ಥೆಯಾತ್ರೆ.

೪) **ಆರಂಭ:** ೧. ಅಬ್ದ = ಕೃತಿ, ೨. ಇಶ್ಕ = ಪ್ರೇಮ, ೩. ಮ್ವಾರಿಫ್ = ಗುಣಸಂಪನ್ನ. ೪. ಹಕೀಕ್ = ಪೂರ್ಣಜ್ಞಾನ.

೫) **ಮಧ್ಯ :** ೧. ಇಶ್ಕ = ಪ್ರೇಮ. ೨. ಜಹದ್ = ತ್ಯಾಗ, ೩. ವಜ್ದ = ಆನಂದ, ೪. ವಸ್ಲ = ಐಕ್ಯ.

೬) **ಅಂತ :** ೧. ಇಶ್ಕ = ಪ್ರೇಮ, ೨. ಮ್ವಾರಿಪ್ = ಗುಣಸಂಪನ್ನ, ೩. ಹಕೀಕ್ = ಪೂರ್ಣಜ್ಞಾನ, ೪. ಫನಾ = ಮೋಕ್ಷ.

**ಸೂಫಿ ತತ್ವದ ಲಕ್ಷ್ಯ :** ಸಂಸಾರದಲ್ಲಿ ತಾಪತ್ರಯಗಳನ್ನು ಅನುಭವಿಸುತ್ತಲೇ ಭಗವಂತನ ಸಾಕ್ಷಾತ್ಕಾರ ಪಡೆಯುವುದು ಇದರ ಲಕ್ಷ್ಯವಾಗಿದೆ. ಶಿವ-ಜೀವರ ಬಗ್ಗೆ ಸೂಫಿ ಧರ್ಮದಲ್ಲಿ: ಆತ್ಮ ಪರಮಾತ್ಮರಲ್ಲಿ ಭೇದವಿಲ್ಲ. ಭೇದ ಕೇವಲ ವ್ಯವಹಾರಿಕವಾಗಿದ್ದು ವಾಸ್ತವವಲ್ಲ. ಮಾನವ ಈಶ್ವರನ ಪ್ರತಿರೂಪ. ಜಗತ್ತು ದೇವನ ಅಂಶದ ಬೆಳಕು ಎಂದು ಅಭಿಪ್ರಾಯ ವ್ಯಕ್ತವಾಗಿದೆ. 'ಸಂಸಾರ ಈಶ್ವರನ ಅಚಿತ್ ರೂಪ. ಜೀವಾತ್ಮ ಚಿತ್ ರೂಪ. ಜೀವಿಗೂ, ಜಗತ್ತಿಗೂ ತಾತ್ವಿಕ ಸಂಬಂಧವಿಲ್ಲ. ಭ್ರಮೆಯೇ ಬಂಧನ. ಭ್ರಮೆ ಬಯಲಾದಾಗ ಜೀವಾತ್ಮ ಮೃತ್ಯುವಿನಿಂದ ಪಾರಾಗಿ ಮುಕ್ತಿ ಪಡೆಯುತ್ತಾನೆ'.[19] ಸೂಫಿಗಳು ಮಾಯೆಯನ್ನು ವಿಘ್ನವೆಂದು ತಿಳಿಯುವುದಿಲ್ಲ. ಪ್ರತಿಯಾಗಿ ಸಾಧಕನನ್ನು ಪರೀಕ್ಷೆಗೆ ಈಡುಮಾಡುವ ಒರೆಗಲ್ಲು[cut stone] ಎಂದು ಭಾವಿಸುತ್ತಾರೆ. ಇಸ್ಲಾಂ ಚಿಂತನೆಯಲ್ಲಿ ಮೂರು ಪ್ರವಾಹಗಳು ಕಂಡುಬರುತ್ತವೆ.

೧) ಸಿದ್ಧಾಂತ (ಕಲಾಮ್) ೨) ದರ್ಶನ (ಹಿಕ್ಮತ್) ೩) ಅನುಭಾವ (ತಸಉಫ್) ವೀರಶೈವಧರ್ಮದಲ್ಲೂ ಶಿವಾದ್ವೈತ ಸಿದ್ಧಾಂತ, ಷಟ್‌ಸ್ಥಲದರ್ಶನ, ಶರಣರ–ಅನುಭಾವಸಾಹಿತ್ಯವೆಂಬ ಮೂರು ಚಿಂತನೆಯ ಪ್ರವಾಹಗಳನ್ನು ಗುರುತಿಸಬಹುದಾಗಿದೆ. ಯಾವುದೇ ಧರ್ಮದಲ್ಲಿ ಎರಡು ಮಾರ್ಗಗಳಿರುತ್ತವೆ ಒಂದು ಸಿದ್ಧಾಂತಮಾರ್ಗ : ಇದರಲ್ಲಿ ಬುದ್ಧಿ ತರ್ಕಕ್ಕೆ ಆದ್ಯತೆ. ವಾದ–ಪ್ರತಿವಾದಗಳ ಕಸರತ್ತು ಖಂಡನ–ಮಂಡನಗಳ ವಿಧಾನವಿರುತ್ತದೆ. ಮತ್ತೊಂದು ಅನುಭವ ಮಾರ್ಗ: ಇದರಲ್ಲಿ ಪ್ರಯೋಗಕ್ಕೆ ಆದ್ಯತೆ. ಅದು ಹೃದಯ ಪ್ರಧಾನ. ಆತ್ಮಸಾಕ್ಷಿ ರೂಪದ್ದು. ಅಲ್ಲಿ ವಾದಕ್ಕಿಂತ ಹಾದಿಗೆ (ಸಾಧನೆಗೆ)

18. ಅರಬಿ-ಫಾರ್ಸಿ ಹಾಗೂ ಸೂಫೀ ಪಾರಿಭಾಷಿಕ ಶಬ್ದಗಳಿಗೆ ಅರ್ಥಸಹಾಯ ಹಾಗೂ ಮುಕಾಮತ್ (ಯಾತ್ರೆ) ಚಕ್ರಕ್ಕೆ ಆಧಾರಗ್ರಂಥ 'ಕಾಶ್ಮೀರ ಔರ್ ಸೂಫಿ ಕಾವ್ಯಕಾ ತುಲನಾತ್ಮಕ ಅಧ್ಯಯನ'

19. ಸೂಫೀ ಮತ ಔರ್ ಹಿಂದೀ ಸಾಹಿತ್ಯ.

ಹೆಚ್ಚು ಬೆಲೆ. ಸೂಫಿತತ್ತ್ವ ಪವಿತ್ರ ಕುರಾನಿನ ತತ್ತ್ವಗಳನ್ನೇ ಅವಲಂಬಿಸಿದೆ. ಆದರೂ ಅದು ಹಿಂದೂ-ಕ್ರೈಸ್ತ ಗ್ರೀಕ್-ತತ್ತ್ವ ಗಳನ್ನು ನಿರಾಕರಿಸಲಿಲ್ಲವೆಂಬುದು ಗಮನಾರ್ಹ ಅಂಶವಾಗಿದೆ.

**ಇಸ್ಲಾಂ ಮತ್ತು ಸೂಫಿ ಮತ ಭೇದ**

ಮುಸಲ್ಮಾನರು 'ಕುರಾನ್' ಅನ್ನು ಧರ್ಮದ ಕಾನೂನ್ ಗ್ರಂಥವೆಂದು ಕರೆಯುತ್ತಾರೆ. ಸೂಫಿಗಳು ಭಕ್ತಿಗೆ ಪ್ರಾಧಾನ್ಯತೆ ನೀಡಿದರು. ಸಂಗೀತ ನೃತ್ಯಗಳನ್ನು ಗೌರವಿಸಿದರು. ಆದರೆ ಕುರಾನ್ ಸಂಗೀತ-ನೃತ್ಯಗಳನ್ನು ಬಹಿಷ್ಕರಿಸಿತ್ತು. ಸಾಮಾನ್ಯವಾಗಿ ಹಿಂದು-ಬೌದ್ಧ-ಜೈನ-ವೀರಶೈವ-ಗ್ರೀಕ್ ದಾರ್ಶನಿಕರು ತಮ್ಮ ಸಿದ್ಧಾಂತ ಗ್ರಂಥಗಳಲ್ಲಿ ಸಂಗೀತ-ನೃತ್ಯಗಳಿಗೆ ಹೆಚ್ಚು ಮಹತ್ವ ಕೊಟ್ಟಿರುವುದು ಕಂಡುಬರುವುದಿಲ್ಲ. ಅವು ಸಾಧಕನ ಮನಸ್ಸನ್ನು ವಿಚಲಿತಗೊಳಿಸುತ್ತವೆ. ಅವು ವಿಲಾಸದ ಸಾಧನೆಗಳೆಂದು ಅವರ ಗ್ರಹಿಕೆ.[20] ದೇವರನ್ನು ಭಯದಿಂದ ಭಜಿಸುವುದಕ್ಕಿಂತ ಪ್ರೇಮದಿಂದ ಆರಾಧಿಸುವುದು ಮೇಲು ಎಂದು ಸೂಫಿಗಳ ಅಭಿಮತ. ಶೈವ-ವೈಷ್ಣವ ಭಕ್ತಿಪಂಥಗಳ ಸಾಧಕರ ದೃಷ್ಟಿಯೂ ಇದೇ ಆಗಿದೆ. ಶಿವಶರಣರ-ಆಳ್ವಾರ್ ನಾಯನಾರ್ ಗಳ, ಚೈತನ್ಯ, ಕಬೀರ, ರಮಾನಂದರ ದೃಷ್ಟಿಯೂ ಇದೇ. ಅಷ್ಟೇ ಅಲ್ಲದೆ ಕ್ರೈಸ್ತ-ಬೌದ್ಧ-ಜೈನ-ಗ್ರೀಕ್ ಅನುಭಾವಿಗಳೂ ಭಗವಂತನನ್ನು 'ಪ್ರೇಮಸ್ವರೂಪಿ'ಯನ್ನಾಗಿ ಕಂಡು ಆರಾಧಿಸಿದ್ದಾರೆ. ಜಗತ್ತಿನ ಅನುಭವಿಗಳೆಲ್ಲ ಸಖಿ-ಸತಿ-ಪತಿ-ಪಿತೃ-ಮಾತೃ-ಸ್ವಾಮಿ ಭಾವಗಳಲ್ಲಿ ಅನುಸಂಧಾನಮಾಡಿರುವುದು ಕಂಡುಬರುತ್ತದೆ. ಸೂಫಿಗಳು ಅಲ್ಲಾನನ್ನು ಸತೀರೂಪದಲ್ಲಿ ಆರಾಧಿಸಿದ್ದಾರೆ. ವೀರಶೈವ ಶರಣರು ಪತಿರೂಪದಲ್ಲಿ ಉಪಾಸನೆ ಮಾಡಿದ್ದಾರೆ. ಸೂಫಿಗಳ ಪ್ರಭಾವ ಪರ್ಶಿಯಾ ದೇಶದ ಅನೇಕ ಕವಿಗಳ ಮೇಲಾಗಿರುವುದು ಕಂಡುಬರುತ್ತದೆ. ರೂಮಿ-ಜಾಮಿ-ಅತ್ತರ್-ಹಾಫಿಜ್-ಸಾದಿ-ಉಮರ್ ಮೊದಲಾದವರು, ಶರಣರ ಪ್ರಭಾವ ಕರ್ನಾಟಕದಲ್ಲಿ ಹರಿಹರ-ರಾಘವಾಂಕ-ಚಾಮರಸ-ಭೀಮ ಕವಿಗಳ ಮೇಲಾದಂತೆ. 'ಸೂಫಿಗಳು ಮುಸ್ಲಿಂ ರಷ್ಟೇ ದೈವಭಕ್ತರಾಗಿದ್ದರೂ ಸಂಪ್ರದಾಯನಿಷ್ಠ ಸನಾತನಿಗಳು ಅವರನ್ನು ಮುಸ್ಲಿಮರೆಂದು ಪರಿಗಣಿಸುತ್ತಿರಲಿಲ್ಲ. ಸೂಫಿಗಳ ತತ್ತ್ವ ಚರಣೆಯನ್ನು ಸನಾತನಿಗಳು ಒಪ್ಪುತ್ತಿರಲಿಲ್ಲ. ಪ್ರೇಮ ಮಾನವರಿಗೆ ಪರಿಚಿತವಾದ ಅನುಭವ. ಪ್ರೇಮದ ಸೌಂದರ್ಯಮೂರ್ತಿ ಹೆಣ್ಣು. ಆ ಹೆಣ್ಣನ್ನೇ ದೇವರೆಂದು ಸೂಫಿಗಳು ಭಾವಿಸಿದರು. ಸೂಫಿಗಳು ಪ್ರೇಮಪೂಜಾರಿಗಳು. ಹೆಣ್ಣಿನ ಸೌಂದರ್ಯ ಲಕ್ಷಣಕ್ಕೆ ಸೂಫಿಗಳು ಕೆಲವು ಸಂಕೇತ ತತ್ತ್ವಗಳನ್ನು ಬಳಸಿದರು. ಹೆಣ್ಣಿನ ಮುಂಗುರುಳು ಮಾಯೆಯ ತೆರೆ. ತುಟಿಗಳು ದೈವರಹಸ್ಯದ ಸಂಕೇತ. ಹೃದಯದ ಬಟ್ಟಲು ಇತ್ಯಾದಿ'[21]

'The Sufism adopts the symbolic style because there is no other way of interpreting mystical experience'[22] ಅನುಭಾವ ತತ್ತ್ವಗಳನ್ನು ವ್ಯಾಖ್ಯಾನಿಸುವುದರಲ್ಲಿ ಸಂಕೇತಗಳ ಪಾತ್ರ ಬಹಳ ಮಹತ್ವದ್ದಾಗಿರುತ್ತದೆ. ದೇವರನ್ನು 'ಇನಿಯನ ರೂಪದಲ್ಲಿ' ಕಂಡಿರುವ ಮನೋಭಾವ ವೇದ-ಬೈಬಲ್-ಉಪನಿಷತ್ ಸಿದ್ಧಾಂತಶಿಖಾಮಣಿ-ಭಗವದ್ಗೀತೆಗಳಲ್ಲೂ ಕಂಡುಬರುತ್ತದೆ. ಪ್ರೇಮಮಾರ್ಗದಿಂದ ಶ್ರೇಯಸ್ಸಿನತ್ತ ಸಾಗುವ ಸಾಧನಾ ತತ್ತ್ವವೇ ಸೂಫೀಧರ್ಮವಾಗಿದೆ. 'ಪ್ರಿಯತಮ-ಪ್ರಿಯತಮೆ-' 'ಇನಿಯ-ಇನಿಯಳು-' 'ಪ್ರಿಯ-ಪ್ರೇಯಸಿ' ರೂಪದ-ಭಾವದಲ್ಲಿ ಐಕ್ಯಸ್ಥಿತಿ ಪಡೆದು 'ಅನಲ್‌ಹಕ್' (ಅಹಂಬ್ರಹ್ಮಾಸ್ಮಿ) ಅವಸ್ಥೆಗೇರುವ ಅನುಭಾವಿಗಳೆಲ್ಲ ಸೂಫಿಗಳಾಗುತ್ತಾರೆ. ಸೂಫಿಗಳೆನ್ನುವ ಶಬ್ದ ಅಂಕಿತ ನಾಮವಲ್ಲ; ಅದು ಸಾಧನೆಯ ಸಿದ್ಧಿಯ ಅರ್ಹತೆಯಿಂದ ಅನ್ವರ್ಥಕನಾಮವೂ ಹೌದು.

ಅರಬಿಯಾದಲ್ಲಾಗಲೀ, ಆಸ್ಟ್ರೇಲಿಯಾದಲ್ಲಾಗಲೀ, ಇಂಡಿಯಾದಲ್ಲಾಗಲೀ, ಇಂಡೋನೇಶ್ಯಯದಲ್ಲಾಗಲೀ, ಕರ್ನಾಟಕದಲ್ಲಾಗಲೀ, ಕಾಶ್ಮೀರದಲ್ಲಾಗಲೀ ಜಗತ್ತಿನ ಅನುಭಾವಿಗಳ ವಿಚಾರಧಾರೆ ಅಲ್ಪ-ಸ್ವಲ್ಪ ವ್ಯತ್ಯಾಸದಿಂದ ಒಂದೇ ವಿಧವಾಗಿರುವುದು ಕಂಡುಬರುತ್ತದೆ. Great men think alike ಎಂದಿರುವುದು ಇದೇ ಅರ್ಥದಲ್ಲಿ.

**ಸೂಫೀ ಧರ್ಮದ ಅವನತಿ**

ಇಸ್ಲಾಂ ಧರ್ಮದ ಸೂಫಿಗಳು ಕ್ರಿ. ಶ. ೮ನೆಯ ಶತಮಾನದಿಂದ ೧೫ನೆಯ ಶತಮಾನಗಳವರೆಗೆ ಆಗಿಹೋದರು. ಸೂಫೀ ಧರ್ಮ ಅವನತಿ ಹೊಂದಲು ಧರ್ಮದ ಚರಿತ್ರೆಕಾರರು ಹಲವಾರು ಕಾರಣಗಳನ್ನು ನೀಡುತ್ತಾರೆ. ಅವುಗಳಲ್ಲಿ ಪ್ರಮುಖವಾದವುಗಳು : ೧. ಮುಂದೆ ಬಂದ ಸೂಫಿಗಳ ಅಜ್ಞಾನ-ಅಶ್ರದ್ಧೆ. ಚರ್ವಿತ-ಚರ್ವಣೆಯ ವಿಚಾರ ವಿನಿಮಯ, ೨. ಇರಾನಿನ ಸಾಮಾಜಿಕ ಕ್ರಾಂತಿ ಹಾಗೂ ಧಾರ್ಮಿಕ ಆಂದೋಲನ. ೩) ಪಾಶ್ಚಾತ್ಯ ಸಂಸ್ಕೃತಿಯ-ಪ್ರಭಾವ. ೪) ಮಧ್ಯ ಏಷ್ಯದಲ್ಲಿ ರಶ್ಯದ ಪ್ರಭಾವ. ೫) ಮುಸ್ಲೀಮರ ಬಲಹೀನತೆ. ನಂತರ ೬) ಭಾರತದಲ್ಲಿ ಮುಗಲ್ ಸಾಮ್ರಾಜ್ಯದ ಪತನ. ಈ ಎಲ್ಲ ಕಾರಣಗಳಿಂದ ಸೂಫೀ ಧರ್ಮ ಅವನತಿಯ ಹಾದಿಯತ್ತ ಸಾಗಿತು. ಯಾವುದೇ ಧರ್ಮ ಪತನ ಹೊಂದಲು ಮೇಲ್ಕಂಡ ಆರು ಕಾರಣಗಳಲ್ಲಿ ಮೂರೇ ಸಾಕೆಂದು ತೋರುತ್ತದೆ.

---

20. ಸಾಹಿತ್ಯ ಮತ್ತು ಯುಗಧರ್ಮ. 21. ಸಾಹಿತ್ಯ ಮತ್ತು ಯುಗಧರ್ಮ 22. Sufism

ಸೂಫೀ ಧರ್ಮ ತಾಪಸ ಜೀವನದಲ್ಲಿ ಮೊದಲಾಗಿ, ಒಂದು ದರ್ಶನತತ್ವವಾಗಿ ಪರಿಣಮಿಸಿ, ಕ್ರಮೇಣ ಅನುಭಾವ ವಿದ್ಯೆಯಾಗಿ ಪರ್ಯವಸಾನ ಹೊಂದಿ, ಕರ್ಮವ್ರತಗಳು ಹೆಚ್ಚಿ ಸೋಮಾರಿತನ ಬೆಳೆದು, ತಿರುಪೆ ಮೋಸಗಳಿಗೀಳಿಯಿತು23 ಯಾವುದೇ ಧರ್ಮವಾದರೂ, ಪವಿತ್ರ ಜೀವನದ ಆಚಾರ್ಯನಿಂದ ಅದು ಉದಯಿಸಿ (ಸಿದ್ಧಾಂತ ರೂಪವನ್ನು ಪಡೆದು) ಪವಿತ್ರಾತ್ಮರಾದ ಅನುಭಾವಿಗಳಿಂದ ಅಭಿವೃದ್ಧಿ ಹೊಂದಿ, ಪುರೋಹಿತರ ಕೈಯ್ಯಲ್ಲಿ ಸಿಕ್ಕು ಮರಣ ಹೊಂದುತ್ತದೆ, ಎನ್ನುವ ರೂಢಿ ಮಾತಾಗಲೀ, ಸಂಗೀತವು ಕವಿಯಲ್ಲಿ ಹುಟ್ಟಿ ಗವಾಯಿಗಳಲ್ಲಿ ಬೆಳೆದು ಕೊರವನ ಹತ್ತಿರ ಬಂದು ಸತ್ತಿತು, ಎನ್ನುವ ರೂಢಿ ಮಾತನ್ನಾಗಲೀ ನಾವು ನೆನಪಿಸಿಕೊಂಡಾಗ ಜ್ಞಾನವಾಗಲೀ-ಧರ್ಮವಾಗಲೀ, ಅವುಗಳ ಅವಸಾನಕ್ಕೆ ಹೆಚ್ಚು ಕಾರಣಗಳನ್ನು ಹುಡುಕಬೇಕಾಗಿಲ್ಲವೆಂದು ಕಂಡುಬರುತ್ತದೆ.

**ಸೂಫಿಗಳ ಅಮರವಾಣಿ**

'ಸೂಫೀ ಪಂಥದ ಬೀಜಾವಾಪನೆ 'ಆದಂ'ನಲ್ಲಿ, ಅಂಕುರ 'ನೂಹ'ನಲ್ಲಿ, ಅದರ ಮೊಗ್ಗು 'ಇಬ್ರಾಹಿಂ'ನಲ್ಲಿ, ಮೂಸಾ ನಲ್ಲಿ ಅದು ಅರಳಿ, ಮಸೀಹನಲ್ಲಿ ಪರಿಪಾಕಗೊಂಡು ಮತ್ತೆ ಮಹಮ್ಮದನಲ್ಲಿ, 'ಮಧುವಿನ' ಫಲಾಗಮನವಾಯಿತು (ಸಂತರ ಅಭಿಪ್ರಾಯ).24

'ಸ್ವಾಮಿ, ದೇವರೇ ನಾನು ನರಕಕ್ಕೆ ಹೆದರಿ ನಿನ್ನನ್ನು ಪ್ರಾರ್ಥಿಸಿದರೆ ನನ್ನನ್ನು ನರಕದಲ್ಲಿ ದಹಿಸಿ ಬಿಡು. ಸ್ವರ್ಗಕ್ಕೆ ಆಶಿಸಿ ನಿನ್ನನ್ನು ಧ್ಯಾನ ಮಾಡಿದರೆ ಸ್ವರ್ಗದ ಸುಖವನ್ನು ನನ್ನಿಂದ ಕಿತ್ತುಕೊಂಡುಬಿಡು. ನಿನ್ನನ್ನು ಪ್ರೀತಿಸಲೆಂದೇ ಪ್ರೀತಿಸಿದ್ದೇನೆ.

'ನನ್ನ ಹೃದಯದಲ್ಲಿ ಎಷ್ಟೊಂದು ಪ್ರೇಮ ತುಂಬಿದೆ ಎಂದರೆ ಅದರಲ್ಲಿ ಇತರರನ್ನು ದ್ವೇಷಿಸಲು ಎಡೆಯೇ ಇಲ್ಲ.'

(ಸಂತರಮಣಿ ರಬಿಯಾ)

'ಸ್ವಾರ್ಥದ ಕಾಮನೆಗಳಿಂದ ಮಾಡುವ ಭಕ್ತಿಯು ಹಣದ ಪ್ರತಿಫಲದ ಅಪೇಕ್ಷೆಯಿಂದ ದುಡಿದ ಕೂಲಿಯ ಕೆಲಸದಂತೆ'

(ಸೂಫಿ)25

'ನೀನು ಇಲ್ಲವಾದಾಗ ದೇವರು ಇದ್ದಾನೆ' 'ಸೌಂದರ್ಯ ಪ್ರೇಮಕ್ಕೆ, ಪ್ರೇಮವು ಸಾಕ್ಷಾತ್ಕಾರಕ್ಕೆ ಹಾದಿಮಾಡಿಕೊಡು ತ್ತದೆ. ಈ ಸಾಕ್ಷಾತ್ಕಾರದಲ್ಲಿ ದ್ವೈತವು ನಾಶವಾಗಿ ಪ್ರೇಮಿಗಳು ಒಂದಾಗುತ್ತಾರೆ. ಈ ಸೌಂದರ್ಯದ ಅಭೀಪ್ಸೆಯು ದೇವ-ಜೀವರ ಸಂಬಂಧಕ್ಕೆ ಮೂಲವಾಗುತ್ತದೆ'. 'ಅಹಂನಿಂದ ರಕ್ಷಿಸುವ ಏಕಮಾತ್ರ ವಸ್ತುವೆಂದರೆ ಪ್ರೇಮ. ಪ್ರಾಪಂಚಿಕ ಪ್ರೇಮದಿಂದಲೂ ನೀನು ಮುಖ ತಿರುವುಬೇಡ, ಏಕೆಂದರೆ ಪರಮ ಸತ್ಯವನ್ನು ಮುಟ್ಟಲು ಅದು ನಿನಗೆ ನೆರವಾದೀತು'

(ಜಾಮಿ)

'ಪ್ರೇಮಯೋಗಿಗಳಾದ ಸೂಫಿಗಳಿಗೆ ಯಾವುದೂ ತ್ಯಾಜ್ಯವಲ್ಲ ಎಲ್ಲವೂ ಪೂಜ್ಯ. ಅವರ ವ್ಯಾಪಾರ ತ್ಯಾಗದಿಂದ ಹೆಚ್ಚುತ್ತದೆ, ಸಂಗ್ರಹದಿಂದ ಕುಗ್ಗುತ್ತದೆ'26.

'ನಾನು ನನ್ನ ಆತ್ಮ ಪರಿಶುದ್ಧಿ ಮಾಡಿಕೊಳ್ಳುವುದರಲ್ಲಿ ತೊಡಗಿದ್ದೇನೆ ಇತರರು ಉಪನ್ಯಾಸ ಕೊಡುವುವರಲ್ಲಿ ಕಾಗದ ಕರಿದು ಮಾಡುವುದರಲ್ಲಿ ತೊಡಗಿದ್ದಾರೆ'

(ಅಬೀದ್ ಅಜಮಿ)

'ನಾನು ದೇವರನ್ನು ಪ್ರೀತಿಸುತ್ತೇನೆ. ಆದ್ದರಿಂದ ಅವನನ್ನು ಪೂಜಿಸುತ್ತೇನೆ. ದೇವರಿಗೆ ಅಂಜುವವನಿಗೆ ಎಲ್ಲರೂ ಅಂಜುತ್ತಾರೆ'

(ಫುಸಯಲ್)

'ನಿಜವಾದ ಪ್ರೇಮಿ ತನ್ನ ಪ್ರೇಮಿ ಕೋರಿದ್ದನ್ನು ಮಾಡುತ್ತಾನೆ. ತಾಪಸಿ ಸ್ವರ್ಗದ ಬಯಕೆಗೆ ಇಲ್ಲಿಯ ಭೋಗ ತೊರೆಯುತ್ತಾನೆ. ಆದರೆ, ಸೂಫಿ ಸ್ವರ್ಗಸುಖವನ್ನು ಬಿಟ್ಟವನು.' 'ತನ್ನ ಪ್ರೇಮಿಯು ಪಕ್ಕದಲ್ಲಿ ಬೇರೊಬ್ಬನನ್ನು ನೋಡು ವವನು ಪ್ರೇಮಿಯನ್ನು ನೋಡಲಾರ'

(ಯ್ಯಾಹಾ)

'ಒಬ್ಬ ದೇವರಿಂದ ಮತ್ತೊಬ್ಬ ದೇವರನ್ನು ಅರಸುತ್ತಾ ಹೋದೆ ಒಳಗಿನಿಂದ ದನಿ ಬಂತು-ನೀನೇ ನಾನು'.

(ಬಾಯಿಸೀದ್)

'ಒಂದು ಜನಾಂಗವನ್ನು ಆಳುವುದಕ್ಕಿಂತ ತನ್ನನ್ನು ತಾನು ಆಳಿಕೊಳ್ಳುವುದು ಒಳ್ಳೆಯದು'

(ಅಧಮ್)

ಸೂಫಿ ಈ ಪ್ರಪಂಚದ ಅತಿಥಿ. ಅತಿಥಿಗೆ ತಕ್ಕ ನಡತೆ ಇರಬೇಕು. ದೇವರು ಬಡಿಸಿದ್ದನ್ನು ಉಣಬೇಕೇ ಹೊರತು ಕೇಳುವ ಅಧಿಕಾರವಿಲ್ಲ. ಪ್ರೇಮಿ ದೇವರು ಕರುಣಿಸುವ ಅನುಗ್ರಹ'

(ಮಾರೂಫ್ ಕರ್ಖಿ)

'ಒಂದು ಹೃದಯದಲ್ಲಿ ಎರಡು ಪ್ರೇಮಕ್ಕೆ ಎಡೆಯಿಲ್ಲ. ದೇವರ ಪ್ರೇಮ ಅಥವಾ ಪ್ರಪಂಚದ ಪ್ರೇಮ ಎರಡರಲ್ಲಿ ಒಂದು ಮಾತ್ರ ಇರಲು ಸಾಧ್ಯ.'

(ಅಧಮ್)

'ದೇವರನ್ನು ದೇವರ ಮೂಲಕ ಮಾತ್ರ ತಿಳಿಯಬಹುದು. ನಾನು ಅವನ ಜ್ಯೋತಿಯನ್ನೇ ನೋಡಿ ಅದರಲ್ಲಿ ಮಗ್ನನಾಗಿ ನಾನೂ ಜ್ಯೋತಿಯಾದೆ'

(ನೂರಿ)

23. ಇಸ್ಲಾಂ ಸಂಸ್ಕೃತಿ. 24. ಹಿಂದೀ ಸಾಹಿತ್ಯ. 25. ಜಾಗತಿಕ ಧರ್ಮಗಳು. 26. ಇಸ್ಲಾಂ ಸಂಸ್ಕೃತಿ.

'ಸೂಫಿ ಧರ್ಮವೆಂದರೆ–ದೇವರಲ್ಲಿ ಮಡಿಯಬೇಕು. ದೇವರಲ್ಲಿ ಬಾಳಬೇಕು. ಸೂಫಿ ಕಾಲಡಿಯ ನೆಲದಂತೆ ಅಥವಾ ಮಳೆಗರೆವ ಮೋಡದಂತೆ ಇರಬೇಕು. ಸೂಫಿಯು ಒಳಗು ದೇವರು, ಹೊರಗು ಮನುಷ್ಯ.' (ಜುನಯಿದ್)

ಒಂದು ಸಲ ಒಬ್ಬ ಸೂಫಿ ಸಂತನ ಬಳಿಗೆ ಮೂರು ವಸ್ತುಗಳನ್ನು ಕಳಿಸಿದರು :
ಮೇಣದ ಬತ್ತಿ, ಸೂಜಿ, ಕೂದಲು. ಜೊತೆಯಲ್ಲಿ ಈ ಸಂದೇಶ :
ಮೇಣದ ಬತ್ತಿಯಂತೆ ನೀನು ಉರಿದು ಇತರರಿಗೆ ಬೆಳಕು ಆಗು.
ಸೂಜಿ ತಾನು ಬೆತ್ತಲೆ ; ಆದರೆ ಇತರರಿಗೆ ಬಟ್ಟೆ ಹೊಲಿದು ತೊಡಿಸುತ್ತದೆ.

ಇದೇ ರೀತಿ ನೀನೂ ಕೂಡ ಇಡೀ ಜನತೆಗೆ ನಿಷ್ಕಾಮ ಸೇವೆಮಾಡು, ಆಗ ನೀನು ಕೂದಲಿನಂತೆ ಕೋಮಲ, ಸಹನಶೀಲ, ನಿರ್ಭಯ, ಎತ್ತಲೂ ಮಣಿಯಬಲ್ಲ ಜೀವ ಆಗುತ್ತೀಯೆ.[27]

'ನಿನ್ನ ಕಾಲಿನ ಕೆಳಗೆ ತುಳಿಸಿಕೊಳ್ಳುವ ಇರುವೆಗಳ ಸ್ಥಿತಿ ಏನೋ ನಿನಗೆ ಅರ್ಥವಾದರೆ ಆಗ ನಿನಗೆ ತಿಳಿಯುತ್ತದೆ ಆನೆಯ ಕಾಲಿನ ತುಳಿತಕ್ಕೆ ಸಿಕ್ಕರೆ ನನ್ನ ಅವಸ್ಥೆ ಏನು ಎಂಬುದು; ಪರರ ದುಃಖವನ್ನು ನಮ್ಮ ದುಃಖಕ್ಕೆ ಹೋಲಿಸಿಕೊಂಡಲ್ಲದೆ ನಾವು ಅದನ್ನು ಅನುಭವಿಸದೆ, ನಮಗೆ ಅದರ ನಿಜಸ್ವರೂಪ ತಿಳಿಯುವುದೇ ಇಲ್ಲ'

'ಎಂಥ ಹರಿತವಾದ ಕತ್ತಿ ಆದರೂ ಮೃದುವಾದ ರೇಷಿಮೆಯನ್ನು ಕತ್ತರಿಸಲಾರದು; ಸವಿನುಡಿ, ನಮ್ರತೆಗಳಿದ್ದರೆ ಒಂದು ಕೂದಲಿನ ಎಳೆಯಿಂದ ಒಂದು ಆನೆಯನ್ನು ಕೂಡಾ ಎಲ್ಲಿಗೆ ಬೇಕೋ ಅಲ್ಲಿಗೆ ಕರೆದೊಯ್ಯಬಹುದು' (ಶೇಖ್‌ಸಾದಿ)

'ಪ್ರೇಮ ಇರದಿದ್ದರೆ ಜಗತ್ತು ರೂಪುಗೊಳ್ಳುತ್ತಿರಲಿಲ್ಲ. ಪ್ರೇಮವಿಲ್ಲದ ಬಾಳು ಶೂನ್ಯ.
ಪ್ರೇಮ ಕೂಡಿಸುತ್ತದೆ. ಪ್ರೇಮ ಸುಡುತ್ತದೆ. ಜಗತ್ತಿನಲ್ಲಿ ಇರುವುದೆಲ್ಲ ಪ್ರೇಮದ ಉರಿ.
ಬೆಂಕಿ ಅದರ ಬಿಸಿ. ಗಾಳಿ ಅದರ ಕಸಿಬಿಸಿ. ನೀರು ಪ್ರೇಮದ ಹರಿವು. ಬೂದಿ ಅದರ ಬಿಂದು.
ಸಾವು ಪ್ರೇಮದ ಮೂರ್ಛೆ. ಬಾಳು ಅದರ ಎಚ್ಚರ. ಇರುಳು ಪ್ರೇಮದ ನಿದ್ದೆ.
ಹಗಲು ಅದರ ಜಾಗರ. ಸನ್ಮಾರ್ಗ ಪ್ರೇಮಕ್ಕೆ ಹತ್ತಿರ. ತಪ್ಪು ಅದಕ್ಕೆ ಬಲುದೂರ.
ಸ್ವರ್ಗ ಪ್ರೇಮದ ಹಿಗ್ಗು. ನರಕ ಪ್ರೇಮದ ಬಿಗ್ಗು' (ಒಬ್ಬ ಸೂಫಿ)[28]

'ತಾಬಿಯಾ ಒಂದು ಸಲ ಅಡವಿಯಲ್ಲಿದ್ದಳು. ಕಾಡಿನ ಪಶು-ಪಕ್ಷಿಗಳೆಲ್ಲ ಆಕೆಯನ್ನು ಬಳಸಿ ನಿಂತವು. ಆಗ ಅತ್ತಕಡೆಯಿಂದ ಬರುತ್ತಿದ್ದ ಸಂತ ಹಸನ್ ಬಸರಿ ಎಂಬಾತನನ್ನು ನೋಡುತ್ತಲೇ ಪಶುಪಕ್ಷಿಗಳು ಅಂಜಿ ಅತ್ತ–ಇತ್ತ ಓಡಿದವು. ಹಸನ್ ಕೇಳಿದ : ತಂಗಿ, ಈ ಪಶುಪಕ್ಷಿಗಳು ಪ್ರೀತಿಯಿಂದ ನಿನ್ನನ್ನು ಬಳಸಿ ನಿಂತಿವೆ. ನನ್ನನ್ನು ನೋಡುತ್ತಲೇ ಓಡಿಹೋಗುತ್ತಿವೆಯಲ್ಲ! ಏಕೆ, ಏನು ಕಾರಣ?

'ಅಣ್ಣ, ನೀನು ಏನು ತಿಂದಿದ್ದೆ?' ಹಸನ್: ಮಾಂಸ ! ತಾಬಿಯಾ : ಈಗ ನೀನೇ ಯೋಚಿಸು! ಈ ಪಶುಪಕ್ಷಿಗಳನ್ನೂ ನೀನು ತಿನ್ನುತ್ತಿದ್ದರೆ ಇವು ನಿನ್ನನ್ನು ನೋಡಿ ಅಂಜಿ ಓಡಿಹೋಗಬಾರದೇ? [29]

**ವೀರಶೈವ ಅನುಭಾವ ಸೂಫಿ ಅನುಭಾವಗಳ ತೌಲನಿಕ ಅಧ್ಯಯನ**

ವೀರಶೈವ ಅನುಭಾವ ಸಾಹಿತ್ಯಕ್ಕೆ ಹಿನ್ನೆಲೆಯಾದುದು ವೀರಶೈವ–ಧರ್ಮ–ಸಿದ್ಧಾಂತ ತತ್ವಗಳು. ಬಲ್ಲ ಧರ್ಮಗಳಂತೆ ವೀರಶೈವ ಧರ್ಮದಲ್ಲೂ ಎರಡು ಮಾರ್ಗಗಳುಂಟು. ಒಂದು ಸಿದ್ಧಾಂತ ಮಾರ್ಗ ಮತ್ತೊಂದು ಅನುಭಾವ ಮಾರ್ಗ. ಪ್ರಾಚೀನವಾದ ವೀರಶೈವ ಸಿದ್ಧಾಂತ ತತ್ವಗಳನ್ನು ಶರಣರು ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತಂದು ತಮ್ಮ ಅನುಭವವನ್ನು (ದೈವೀ ಅನುಭವ) ಕನ್ನಡದ ವಚನಗಳ ಮಾಧ್ಯಮದಲ್ಲಿ ಅಭಿವ್ಯಕ್ತಗೊಳಿಸಿದರು. ಶರಣರ ಅನುಭಾವದ ಗೀತೆಗಳೇ ಅನುಭಾವ ಸಾಹಿತ್ಯವೆಂದು ಪ್ರಸಿದ್ಧಿಯನ್ನು ಹೊಂದಿದೆ. ಶರಣರ ವಚನ ಸಾಹಿತ್ಯ ಕನ್ನಡ ಭಾಷೆಯನ್ನು ದೈವೀ ವಾಣಿಯ ಮಟ್ಟಕ್ಕೇರಿಸಿತಲ್ಲದೆ, ಜಾಗತಿಕ ಅನುಭಾವ ಸಾಹಿತ್ಯಕ್ಕೆ ಅಮೋಘವಾದ ಕಾಣಿಕೆ ನೀಡಿತು. ಇಂತಹ ವಿಶ್ವಮಾನ್ಯವಾದ ಅನುಭಾವ ಸಾಹಿತ್ಯದ ಹಿನ್ನೆಲೆಗೆ ಕಾರಣವಾದ ಧರ್ಮ ಸಿದ್ಧಾಂತ ತತ್ವಗಳ ಬಗೆಗೆ ಪರಿಚಯ ಅಗತ್ಯವೆಂದು ತೋರುತ್ತದೆ.

**ವೀರಶೈವ ಧರ್ಮದ ಇತಿಹಾಸ**

ಭಾರತದಲ್ಲಿ ಸಿದ್ಧಾಂತ ದರ್ಶನಗಳು ಅನೇಕವಾಗಿವೆ. ಅವುಗಳಲ್ಲಿ ಕೆಲವು ಹೆಚ್ಚು ಬೆಳಕಿಗೆ ಬಂದು ಪ್ರಚಾರದಲ್ಲಿವೆ, ಮತ್ತೆ ಕೆಲವು ಹೆಚ್ಚು ಪ್ರಚಾರವಿಲ್ಲದೆ 'ನೆಲದ ಮರೆಯ ನಿಧಾನ'ದಂತೆ ಕಣ್ಮರೆಯಾಗಿವೆ. ಭಾರತೀಯ ಧಾರ್ಮಿಕ ಇತಿಹಾಸದಲ್ಲಿ ವೀರಶೈವರ ಶಿವಾದ್ವೈತ ಸಿದ್ಧಾಂತ ಹಾಗೂ ಷಟಸ್ಥಲ ದರ್ಶನಗಳು ಹೆಚ್ಚು ಉಲ್ಲೇಖನೀಯವಾಗಿಲ್ಲ. ಕಾರಣ ಭಾಷೆಯ ತೊಡಕು. ಬೇರೆ ಬೇರೆ ಮತ ಪಂಥಗಳ ಭಾವನೆಯ ಕೆಡುಕೂ ಇದಕ್ಕೆ ಕಾರಣಗಳೆಂದು ತೋರುತ್ತದೆ.

---

27. ಇಸ್ಲಾಂಧರ್ಮ 28. ಇಸ್ಲಾಂಧರ್ಮ 29. ಇಸ್ಲಾಂಧರ್ಮ

ವೀರಶೈವ ಧರ್ಮ ಪ್ರಾಚೀನವಾದುದು. ಶಿವಾಗಮಗಳ ಉತ್ತರ ಭಾಗದಲ್ಲಿ ಅದರ ನೆಲೆಯನ್ನು ಗುರುತಿಸಬಹುದಾಗಿದೆ. ಶಿವಾಗಮಗಳೇ ವೀರಶೈವ ಧರ್ಮ ಗಂಗೆಯ ಗಂಗೋತ್ರಿ. ಶಿವಾಗಮಗಳಲ್ಲಿ ಝರಿಯಾಗಿ ಹರಿದು ಸಿದ್ಧಾಂತ ಭಾಷ್ಯ ಗ್ರಂಥಗಳಲ್ಲಿ ನದಿಯಾಗಿ ಹರಿದು, ವಚನ ಸಾಹಿತ್ಯದ ಮೂಲಕ ಮಹಾಪೂರವಾಗಿ ಪ್ರವಹಿಸಿತು.

ವೀರಶೈವ ಸಿದ್ಧಾಂತವನ್ನು ಸರ್ವಾಂಗ ಸಂಪೂರ್ಣವಾಗಿ ಶಾಸ್ತ್ರೀಯ ಪರಿಭಾಷೆಯಲ್ಲಿ ನಿರೂಪಿಸುವ, ಷಟ್‌ಸ್ಥಲ ದರ್ಶನ ಗ್ರಂಥವಾದ ಸಿದ್ಧಾಂತ ಶಿಖಾಮಣಿಯಲ್ಲಿ 'ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ। ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂಪರಂ' ॥[30] ಎನ್ನುವ ಈ ಶ್ಲೋಕವನ್ನು ಅವಲೋಕಿಸಿದಾಗ ವೀರಶೈವ ಧರ್ಮ ಆಗಮ ಮೂಲವಾದುದು ಎನ್ನುವುದಕ್ಕೆ ಬೇರೆ ಪ್ರಮಾಣ ಬೇಕಿಲ್ಲ.

ಶ್ರೀ ಎಸ್. ಎನ್. ದಾಸಗುಪ್ತರು ವೀರಶೈವ ಧರ್ಮ ಉಪನಿಷತ್ತಿನಷ್ಟೇ ಪ್ರಾಚೀನವೆಂದು ಅಭಿಪ್ರಾಯ ಪಡುತ್ತಾರೆ. 'The kernal of veerashaiva thought is almost as early as the upanishats'[31] ಹಾಗೂ ಕರ್ನಾಟಕದ ಖ್ಯಾತ ವಿದ್ವಾಂಸರಾದ ಶಂ.ಬಾ. ಜೋಶಿ ಅವರು ವೀರಶೈವ ಧರ್ಮದ ಬೇರುಗಳು ಋಗ್ವೇದದಲ್ಲೇ ಇವೆ ಎಂದು ತಿಳಿಸುತ್ತಾರೆ.[32]

ಈ ಎಲ್ಲ ಅಭಿಪ್ರಾಯಗಳನ್ನು ಗಮನಿಸಿದಾಗ ವೀರಶೈವ ಧರ್ಮ ಪ್ರಾಚೀನವಾದುದು ಎಂದು ತಿಳಿಯಬಹುದಾಗಿದೆ. ಹಿಂದೂ ಸಂಪ್ರದಾಯವೆಂಬ ಸಾಗರದಲ್ಲಿ ಅನೇಕ ದರ್ಶನ ಪ್ರವಾಹಗಳಲ್ಲಿ ವೀರಶೈವ ದರ್ಶನ ಪ್ರವಾಹವೂ ಪ್ರಾಚೀನವಾದುದು ಎಂಬುದರಲ್ಲಿ ಸಂಶಯವಿಲ್ಲ. ಎಷ್ಟು ಪ್ರಾಚೀನ ? ಎಂಬುದು ನಿಚಿತವಾಗಿ ತಿಳಿಯುವದಿಲ್ಲ. ಶ್ರೀಪತಿ ಪಂಡಿತರು ತಮ್ಮ ಶ್ರೀಕರ ಭಾಷ್ಯದಲ್ಲಿ ವೀರಶೈವ ಧರ್ಮದ ಲಕ್ಷಣವನ್ನು ವಿವರಿಸುತ್ತಾ ಹೀಗೆ ಹೇಳುತ್ತಾರೆ.

> 'ದ್ವೈತಾ ದ್ವೈತ ಮತೇಶುದ್ಧೇ ವಿಶೇಷಾದ್ವೈತ ಸಂಜ್ಞಕೇ।
> ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ॥

ಎಂದು ಧರ್ಮದ ಲಕ್ಷಣವನ್ನು ಸೊಗಸಾಗಿ ನಿರೂಪಿಸಿದ್ದಾರೆ.[33]

ಪ್ರಾಚೀನವಾದ ವೀರಶೈವ ಸಿದ್ಧಾಂತ–ದರ್ಶನ–ತತ್ತ್ವಗಳನ್ನು ತಮ್ಮ ನಡೆ–ನುಡಿಯಲ್ಲಿ ಸಾಧಿಸಿ ತೋರಿಸಿದ ಸಾಧಕ ವೃಂದವನ್ನೇ ಶರಣರೆಂದು ಕರೆಯುತ್ತೇವೆ. ಕರ್ನಾಟಕದ ಇತಿಹಾಸದಲ್ಲಿ ೧೨ನೆಯ ಶತಮಾನವು ಧಾರ್ಮಿಕ ಸಾಮಾಜಿಕ–ಆರ್ಥಿಕ ಸುಧಾರಣಾ ದೃಷ್ಟಿಯಿಂದ ಸುವರ್ಣಕಾಲವಾಗಿದೆ. ಆ ಕಾಲದಲ್ಲಿ ವೀರಶೈವರ ತತ್ತ್ವಾಚರಣೆಯಲ್ಲಿ ಶೈವ–ವೈದಿಕ ಧರ್ಮಗಳ ಪ್ರಭಾವದಿಂದಾಗಿ ಅನೇಕ ಅಸಂಗತಿಗಳು ತಲೆದೋರಿ, ಕಂದಾಚಾರ ಪದ್ಧತಿಗಳು ಬೆಳೆದು ಧರ್ಮದ ತತ್ತ್ವಗಳು ನಿಜಾಚರಣೆಯಲ್ಲಿ ನಿಷ್ಕ್ರಿಯೆಯಾಗಿದ್ದವು. ಧರ್ಮವೊಂದು ಕೂಪಜಲವಾಗಿತ್ತು ಸಂಪ್ರದಾಯಗಳಲ್ಲಿ ಗೊಡ್ಡುತನ ಬೆಳೆದಿತ್ತು. ಪ್ರಾಚೀನ ವೀರಶೈವ ಸಿದ್ಧಾಂತದ ನಿಜ ಹೃದಯವನ್ನು ಅರಿತಿದ್ದ ಬಸವಣ್ಣನವರು ಈ ಧರ್ಮದಲ್ಲಿ ಪ್ರವೇಶಮಾಡಿ ಈ ಧರ್ಮದ ತತ್ತ್ವಗಳನ್ನು ಪ್ರಾಯೋಗಿಕ ವಿಮರ್ಶೆಗೆ ಒಳಪಡಿಸಿ, ಧರ್ಮಪ್ರಚಾರ ಮಾಡಿದರು ಧರ್ಮದ ಪುನರುಜ್ಜೀವನವಾಯಿತು. ವೀರಶೈವ ಧರ್ಮ ದೇಶದ ನಾನಾಭಾಗಗಳಿಂದ ಜನಗಳನ್ನು ತಂಡೋಪತಂಡವಾಗಿ ತನ್ನತ್ತ ಆಕರ್ಷಿಸಿತು.

ಬಸವಣ್ಣನವರೆಂಬ ಪ್ರತಿಭಾಪೂರ್ಣ ಭಾನುವಿನ ಬೆಳಕಿಗೆ ಕೈಮುಗಿದು ಅನೇಕ ಜನ ಶರಣರು–ಶರಣೆಯರು–ಸಂಘಟಿತರಾದರು, ಬಸವಣ್ಣನವರ ಹಿರಿಯತನದಲ್ಲಿ ಸಾಮಾಜಿಕ–ಧಾರ್ಮಿಕ ಕಾಯಕದ ಮೂಲಕ ಆರ್ಥಿಕರಂಗದಲ್ಲೂ ಉತ್ಕ್ರಾಂತಿಗೈದರು. ತಮ್ಮ ನಡೆ–ನುಡಿಗಳಿಂದ ಕಂಡುಂಡ ಅನುಭವವನ್ನೇ ವಚನಗಳ ರೂಪದಲ್ಲಿ ನುಡಿದರು. ಅವರ ಜ್ಯೋತಿರ್ಲಿಂಗ ಸ್ವರೂಪಗಳಾದ–ಅನುಭಾವದ ಭಾವಗೀತೆಗಳೇ ಅನುಭಾವ ಸಾಹಿತ್ಯವೆಂದು ಹೆಸರಾಯಿತು. ಕನ್ನಡವಲ್ಲಿ ಆಧ್ಯಾತ್ಮ–ಅನುಭಾವ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಅಷ್ಟೇಅಲ್ಲ ; ಜಾಗತಿಕ ಅನುಭಾವ ಸಾಹಿತ್ಯಕ್ಕೆ ಇದು ವಿಶಿಷ್ಟವಾದ ಕಾಣಿಕೆಯನ್ನು ನೀಡಿತು. ಶಿವಭಕ್ತರ ಸಮೂಹವನ್ನು ಶರಣರೆಂದು ಸ್ಥೂಲವಾಗಿ ಕರೆಯುತ್ತಾರೆ. ಆದರೆ ಶರಣನು ಯಾರು? ಎನ್ನುವ ಪ್ರಶ್ನೆಗೆ ಸಿದ್ಧಾಂತ ಶಿಖಾಮಣಿ ಅನ್ವರ್ಥವಾಗಿ ಉತ್ತರ ನೀಡುತ್ತದೆ.

> 'ಅಂಗಲಿಂಗೀ ಜ್ಞಾನರೂಪಃ ಸತೀಜ್ಞೇಯಃ ಶಿವಃ ಪತಿಃ।
> ಯತ್ಸೌಖ್ಯಂ ತತ್ಸಮಾವೇಶೀ ತದ್ವಾನ್ ಶರಣನಾಮವಾನ್'[34]

ಶಿವಜ್ಞಾನವನ್ನು ಪಡೆದ ಸಾಧಕನು ತಾನು ಸತಿ–ಪರಮಾತ್ಮನು ಪತಿ ಎಂದು ತಿಳಿದು ಇಷ್ಟಲಿಂಗದ ಮೂಲಕ ಉಪಾಸನೆಯನ್ನು ಮಾಡುವವನೇ ಶರಣನೆಂದು ಸಿದ್ಧಾಂತ ಶಿಖಾಮಣಿ ಅಭಿಪ್ರಾಯಪಡುತ್ತದೆ. ಕರ್ನಾಟಕದ ವೀರಶೈವ ಶರಣರು ಈ ಭಾವ

30. ಸಿದ್ಧಾಂತ ಶಿಖಾಮಣಿ ಪ. ೫-ಶ್ಲೋ ೧೪.
31. History of Indian Philosophy [V.L.V.] 32. ಶಿವ ರಹಸ್ಯ. 33. ಶ್ರೀಕರ ಭಾಷ್ಯ.
34. ಸಿದ್ಧಾಂತ ಶಿಖಾಮಣಿ ಪ. 13 ಶ್ಲೋ 2

ವಲ್ಲಿ ಭಗವಂತನನ್ನು ಉಪಾಸನೆ ಮಾಡಿದವರು. ಅವರು ಪ್ರಧಾನತಃ ಅನುಭಾವಿಗಳು. ಶಿವನ ಅರಿವೇ ಅನುಭವ; ಶಿವನ ಅನ್ವೇಷಣೆಯೇ ಅನುಭಾವ ; ಶಿವಸಾಕ್ಷಾತ್ಕಾರ ಅಥವಾ ಲಿಂಗಾಂಗ ಸಾಮರಸ್ಯ ಪಡೆಯುವುದೇ ಅನುಭೂತಿ ಎಂದು ಕರೆಯುತ್ತಾರೆ.

'ಪರಮಾತ್ಮ–ಜೀವಾತ್ಮ ಇವುಗಳ ಸಂಬಂಧದಿಂದ ಉಂಟಾಗುವ ಅಮೃತ ತತ್ತ್ವ ಇದು. ಅನುಭಾವದ ಮೂಲಭೂತವಾದ ತಳಹದಿ. ದೇವನೊಡನೆ ಸಮರಸಗೊಂಡು ಅಮೃತತತ್ತ್ವವನ್ನು ಪಡೆಯಬೇಕೆಂದು ಜೀವನದ ನಿರಂತರ ಹಂಬಲವನ್ನು ಕೈಗೂಡಿಸಿಕೊಡುವ ಸಾಧನೆಯೇ ಅನುಭಾವ ಮಾರ್ಗ'35

'ಸತಿ ಪತಿ ಭಾವದ ಭಕ್ತಿ ಎಲ್ಲ ಕಾಲದೇಶಗಳ ಸಾಧಕರಲ್ಲಿಯೂ ಕಂಡುಬರುತ್ತದೆ. ಮಾನವನಲ್ಲಿ ಮೂಲಭೂತವಾಗಿರುವ ಲೈಂಗಿಕ ಪ್ರಚೋದನೆ ಇದರ ತಳಹದಿ. ಆದರೆ ಆ ಭಾವ ಇಲ್ಲಿ ಸ್ವಾರ್ಥರಹಿತವಾಗಿ-ದೈಹಿಕ ಭೋಗದಿಂದ ವಿಮುಕ್ತವಾಗಿ ಉದಾತ್ತವಾದುದರ ಕಡೆಗೆ ತಿರುಗಿದಾಗ ಮಧುರ ಭಕ್ತಿಯಾಗಿ ಪರಿಣಮಿಸುತ್ತದೆ.'36 ಮಧುರಭಾವದಲ್ಲಿ ಸಾಧಕನು (ಶಿವಶರಣನು) ತನ್ನನ್ನು ಸತಿ ಎಂದೂ, ಪರಮಾತ್ಮನನ್ನು ಪತಿ ಎಂದೂ ಪರಿಭಾವಿಸಿ ಉಪಾಸನೆಮಾಡುತ್ತಾನೆ. ಆಗ ಶಿವನೊಬ್ಬನೇ ಪತಿ. ಅವನಲ್ಲಿಯೇ ಅಚಲನಿಷ್ಠೆ. ಅನ್ಯದೈವಂಗಳ ವಿಚಾರ ಅವನಿಗೆ ಬೇಕಾಗಿಲ್ಲ. ಶರಣನ ನಿಷ್ಠೆ ಪತಿವ್ರತಾ ಸ್ತ್ರೀಯಳ ಪತಿಯ ನಿಷ್ಠೆಯಂತಿರುತ್ತದೆ ಎನ್ನುವ ವಿಚಾರವನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಭಗವತ್ಪಾದ ರೇಣುಕರು ಸುಂದರವಾಗಿ–ದೃಷ್ಟಾಂತಪೂರ್ವಕ ನಿರೂಪಣೆ ಕೊಡುತ್ತಾರೆ.

ಸತೀವ ರಮಣೇಯಸ್ತು ಶಿವೇಶಕ್ತಿಂ ವಿಭಾವಯನ್ ।
ತದನ್ಯವಿಮುಖಃ ಸೋಽಯಂ ಜ್ಞಾತಃ ಶರಣನಾಮವಾನ್॥37

ಇಸ್ಲಾಂನ ಸೂಫೀ ಸಿದ್ಧಾಂತ ಬೌದ್ಧರ-ಸಹಜ ಸಿದ್ಧಾಂತ, ವೀರಶೈವರ ಶರಣಪತಿ ಲಿಂಗಪತಿ ಸಿದ್ಧಾಂತ ಮಾರ್ಗಗಳು ಸಾಮಾನ್ಯವಾಗಿ ಜಗತ್ತಿನ ಎಲ್ಲ ಅನುಭಾವಿಗಳಲ್ಲೂ ಕಂಡುಬರುತ್ತವೆ. ನಿರ್ಗುಣ ಸಾಧಕನೊಬ್ಬನು 'All of us are wives of the one lord and above us for him' ಹೀಗೆಂದು ಹೇಳುವ ಮಾತು ವೀರಶೈವರ ಶರಣಸತಿ–ಲಿಂಗಪತಿ ಭಾವವನ್ನೇ ಸರಳವಾಗಿ ಸಮರ್ಥಿಸುತ್ತದೆ. ಶರಣರಲ್ಲಿ ವಿವಿಧ ಮನೋಧರ್ಮದ ಸಾಧಕರಿದ್ದರು. ಬಸವಣ್ಣನವರ ಭಕ್ತಿಯ, ಪ್ರಭುದೇವರ ವೈರಾಗ್ಯದ, ಚನ್ನಬಸವಣ್ಣನ ಜ್ಞಾನದ, ಸಿದ್ಧರಾಮನ ಕರ್ಮಯೋಗದ, ಅಕ್ಕಮಹಾದೇವಿಯ ಮಧುರಭಾವದ, ಘಟ್ಟಿವಾಳಯ್ಯನ ಗಟ್ಟಿಗೊಂಡ ಭಾವನಿಷ್ಠೆಯ ಹೀಗೆ ವಿವಿಧ ಮನೋಧರ್ಮೀಯರಿದ್ದರೂ ಅವರ ಸಾಧನಾ ಪಥದ ನಿಲುವು-ಶರಣಸತಿ ಲಿಂಗಪತಿಯದಾಗಿತ್ತು. ಶರಣನು ಹಿಂದೆ ತಿಳಿಸಿದ ಷಟ್‌ಸ್ಥಲಕ್ಕೆ ಹಿನ್ನೆಲೆಯಾದ ಶ್ರದ್ಧಾ–ನೈಷ್ಠಿಕ–ಅವಧಾನ–ಅನುಭಾವ–ಆನಂದ–ಸಮರಸವೆಂಬ ಆರುವಿಧ ಭಕ್ತಿಭಾವಗಳ ಕ್ರಮವಿಕಾಸದಿಂದ ಮುಂದುವರಿದು ಲಿಂಗಾಂಗ ಸಾಮರಸ್ಯದ ನೆಲೆಗೆ ಏರುತ್ತಾನೆ.

ವೀರಶೈವ ಮತ್ತು ಸೂಫಿ ಉಭಯ ಅನುಭಾವ ಪಂಥಗಳ ಪ್ರವಾಹಗಳನ್ನು ಗುರುತಿಸಿದಾಗ, ಅವುಗಳು ಹರಿಯುವ ಮಾರ್ಗ ಅಲ್ಪ–ಸ್ವಲ್ಪ ಬೇರೆ ಕಂಡರೂ, ಅವುಗಳ ಗುರಿ–ಗಮ್ಯಸ್ಥಾನ ಒಂದೇ ಎಂದು ಗೊತ್ತಾಗುತ್ತದೆ. ಸೂಫಿ ಮತ್ತು ಶರಣರ ಅನುಭಾವ ಪಂಥಗಳು ಉದಿಸಿದ ನೆಲೆ-ಹಿನ್ನೆಲೆ, ಕಾಲ-ಸನ್ನಿವೇಶ ದೇಶ–ಭಾಷೆ, ಪರಿಸರ-ಪ್ರಜ್ಞೆಗಳು ಬೇರೆ ಕಂಡರೂ ಅವುಗಳ ಅಂತರಂಗದ ನಿಲುವು ಲಕ್ಷ್ಯ ಒಂದೇ ಆಗಿದೆ.

**'ತತ್ತ್ವ ಸಮನ್ವಯ'**

ಸೂಫಿಯ ಸಂತರಾಗಲೀ ವೀರಶೈವ ಶರಣರಾಗಲೀ ಮುಖ್ಯವಾಗಿ ಅನುಭಾವಿಗಳು. ಅವರು ತಮ್ಮ ಸಾಧನೆಗೆ ಬಳಸಿಕೊಂಡ ಪಥ ಅನುಭವ ಪಥ; ಕೊನೆಗೆ ಅವರೆಲ್ಲ ಪಡೆದುದು ದಿವ್ಯಾನುಭೂತಿ ಸತ್ಯ ಸಾಕ್ಷಾತ್ಕಾರ. ಅದನ್ನೇ ಸೂಫಿಗಳು 'ಪ್ರಿಯತಮೆ ದೈವ' ಎಂದರು; ಲಿಂಗ ಪತಿ ಎಂದು ಶರಣರು ಕರೆದರು, ಈ ಉಭಯ ಅನುಭಾವಿಗಳ ಸಾಧನಾಪಥದಲ್ಲಿ ಅನೇಕ ಸಮನ್ವಯ ಅಂಶಗಳನ್ನು ಗುರುತಿಸಬಹುದಾಗಿದೆ : ಶರಣರು ದೈವವನ್ನು 'ಪತಿ' ರೂಪದಲ್ಲೂ ಸೂಫಿಗಳು 'ಸತಿ' ರೂಪದಲ್ಲೂ ಆರಾಧಿಸಿದರು. ಇಬ್ಬರೂ ಮಧುರ ಭಾವದ ಪರಮ ಭಕ್ತರು. ಸೂಫಿಗಳು ತಮ್ಮ ಸಾಧನೆಯ ಹಾದಿಯಲ್ಲಿ ಶ್ರಮಿಸುವ ನಾಲ್ಕು ಅವಸ್ಥೆಗಳು ಶರೀಅತ್ ತರೀಕತ್ ಮಾರೀಫತ್ ಹಕೀಕತ್. ಈ ನಾಲ್ಕು ಸ್ಥಲಗಳು ಶರಣರ ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯವೆಂಬ ಆರು ಸ್ಥಲಗಳಿಗೆ ಸ್ಥೂಲವಾಗಿ ಸರಿಹೋಲುತ್ತವೆ. ಭಕ್ತ ಸ್ಥಲದ ಸಾಧನಾವಸ್ಥೆಯೇ ಸೂಫಿಗಳ ಶರೀಅತ್ ಅವಸ್ಥೆ, ಮಹೇಶಸ್ಥಲವೇ–ತರೀಕತ್, ಪ್ರಸಾದಿ-ಪ್ರಾಣಲಿಂಗಿ ಸ್ಥಲಗಳಸಾಧನೆಯೂ ತರೀಕತ್ ಅವಸ್ಥೆಯೇ. ಶರಣಸ್ಥಲವೇ ಮಾರೀಫತ್ ಐಕ್ಯ ಸ್ಥಲವೇ ಹಕೀಕತ್ ಅವಸ್ಥೆ ಎಂದು ಹೇಳಬಹುದಾಗಿದೆ. ಇವುಗಳನ್ನೇ ಹಿಂದೂ ಧರ್ಮದಲ್ಲಿ ಕರ್ಮ ಕಾಂಡ, ಜ್ಞಾನ ಕಾಂಡ, ಸಿದ್ಧಾವಸ್ಥೆ ಎಂದೂ ಕರೆಯುವ ವಾಡಿಕೆ ಇದೆ. ಸೂಫಿಗಳಲ್ಲಿ ಮೇಲ್ಕಂಡ ಚತುರ್ವಿಧ ಅವಸ್ಥೆಗಳಲ್ಲಿ ಮನೋವಿಕಾಸದ ಹಂತಗಳನ್ನು ಸೂಕ್ಷ್ಮವಾಗಿ ಗುರುತಿಸುವ 'ಸಾತಸೌ ಉತರೆ ಪಾರ್' (ಏಳುನೂರು) ಸ್ಥಲಗಳೂ ಇವೆ. ಈ ಸ್ಥಲಗಳು ವೀರಶೈವ ಧರ್ಮದ ಅಂಗಸ್ಥಲ (೪೪) ಲಿಂಗಸ್ಥಲ (೫೭)ಗಳಿಗೆ ಹೋಲಿಸಬಹುದೆಂದು ತೋರುತ್ತದೆ. ಆದರೂ ವೀರ

35. ಶರಣರ ಅನುಭಾವ ಸಾಹಿತ್ಯ. 36. ಶರಣರ ಅನುಭಾವ ಸಾಹಿತ್ಯ 37. ಸಿದ್ಧಾಂತ ಶಿಖಾಮಣಿ ಪ.13 ಶ್ಲೋ 5

ಶೈವದ ಅಂಗಸ್ಥಲ–ಲಿಂಗಸ್ಥಲಗಳ ಹಂಚಿಕೆ, ಅಲ್ಲಿನ ಸೂಕ್ಷ್ಮಭಾವಗಳ ವಿಕಾಸ, ಪ್ರಾಕೃತದಿಂದ ಅಪ್ರಾಕೃತಕ್ಕೇರುವ ಆಧ್ಯಾತ್ಮಿಕ ಸಾಧನೆಯ ಪ್ರಕ್ರಿಯೆಗಳು ವೈಜ್ಞಾನಿಕವಾಗಿವೆ ; ಕ್ರಮಬದ್ಧವಾಗಿವೆ ; ಶಾಸ್ತ್ರೀಯವಾಗಿವೆ.

ಸೂಫಿಗಳು ಆಚರಿಸುವ ನಾಲ್ಕು ಆಚಾರಗಳು (ಕ್ರಿಯಾರೂಪದಲ್ಲೂ)–(ಜ್ಞಾನರೂಪದಲ್ಲೂ) ನಮಾಜ್–ಜಕಾತ್–ರೋಜಾ, ಹಜ್. ಇವನ್ನು ವೀರಶೈವರ ಅಷ್ಟಾವರಣಗಳಾದ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ ವಿಭೂತಿ, ರುದ್ರಾಕ್ಷಿ, ಮಂತ್ರಗಳಿಗೆ ಸ್ಥೂಲವಾಗಿ ಅನ್ವಯಿಸಿಕೊಂಡು ಸೂಫಿಗಳ 'ಸಾತ್‌ಹಲ್'ಗಳನ್ನು (ಸಮಯಾಚಾರಗಳು)ಶರಣರ ಪಂಚಾಚಾರ ತತ್ವಗಳಿಗೆ ಸ್ಥೂಲವಾಗಿ ಅನ್ವಯಿಸಬಹುದೆಂದು ತೋರುತ್ತದೆ. ಸೂಫಿಗಳ ಹಾಗೂ ಶರಣರ ಸಾಧನೆಯಲ್ಲಿ ಪುರೋಹಿತನ ಅಗತ್ಯವಿರಲಿಲ್ಲ. ಭಗವಂತನೊಂದಿಗೆ ಅವರ ಸಂಬಂಧ ನೇರವಾಗಿತ್ತು. ಶರಣರು ಆತ್ಮನನ್ನು ಸ್ತ್ರೀ ರೂಪದಲ್ಲೂ ಪರಮಾತ್ಮನನ್ನು ಪುರುಷ ರೂಪದಲ್ಲೂ ಕಂಡರೆ ಸೂಫಿಗಳು ವ್ಯತಿರಿಕ್ತವಾಗಿ ಆತ್ಮನನ್ನು ಪುರುಷ ರೂಪದಲ್ಲೂ ಪರಮಾತ್ಮನನ್ನು ಸ್ತ್ರೀ ರೂಪದಲ್ಲೂ ಕಾಣುತ್ತಾರೆ. ಶರಣರೂ-ಸೂಫಿಗಳೂ ಗೃಹಸ್ಥರೇ. ಸ್ತ್ರೀ ಪುರುಷರಿಬ್ಬರೂ ಸಾಧಕರು. ಸೂಫಿಗಳೂ ಶರಣರೂ ನಡೆ ನುಡಿಯಲ್ಲಿ ಒಂದಾಗಿ ಬಾಳಿದವರು. ಅವರ ಜೀವನ ಸ್ಫಟಿಕದಂತೆ ನಿರ್ಮಲವಾಗಿತ್ತು. 'ಬದುಕು' ತೋರಿಕೆಯಾಗಿರದೆ ಪ್ರಾಮಾಣಿಕವಾಗಿತ್ತು. ಸೂಫಿಗಳ ಅನುಭಾವ ಸಾಹಿತ್ಯ ಹೃದ್ಯವಾದ ಗದ್ಯದಲ್ಲಿ ಫಾರಸಿ ಮತ್ತು ಅರಬ್ಬಿ ಭಾಷೆಗಳಲ್ಲಿ ಮೂಡಿ ಬಂದರೆ ಶರಣರದು ಗದ್ಯ–ಪದ್ಯಗಳ ನಡುವಣ 'ವಚನ' ರೂಪದಲ್ಲಿ ಕನ್ನಡದಲ್ಲಿ ಮೈದಳೆಯಿತು. ಇಬ್ಬರೂ ಅನುಭಾವಿಗಳಿಂದ ಆಯಾ ಭಾಷೆಗಳು 'ದೇವವಾಣಿ'ಯಾಗಿ 'ಜನವಾಣಿ'ಯಾಗಿ ಮೆರೆದವು.

ಜೀವ ದೇವ ಪ್ರಪಂಚದ ಬಗೆಗೆ ಇಬ್ಬರ ನಿಲುವು ಒಂದೇ ಆಗಿದೆ. ಸೂಫಿಗಳು 'ಮಾಯೆ'ಯನ್ನು ಸತ್ಯವಾದ ಪರವಸ್ತುವಿನ ವ್ಯಕ್ತ ರೂಪವೆಂದು ತಿಳಿದಿದ್ದರು. ಅದು ಸಾಧಕನಿಗೆ ಅಡ್ಡಿಯಲ್ಲ ; ಪರೀಕ್ಷೆಯ ಒರೆಗಲ್ಲು ಎಂದು ಅವರ ಭಾವನೆಯಾಗಿತ್ತು. ಶರಣರು 'ಮನದ ಮುಂದಿನ ಆಶೆಯೇ ಮಾಯೆ : ಸಾಧಕನು ಆಶೆಯ ಪಾಶ ಹರಿದರೆ ಮಾಯೆಯೇ ಇಲ್ಲವೆಂದು ಅವರ ದೃಢವಾದ ನಿಲುವು. ಶರಣರ ಸೂಫಿಗಳ ತತ್ವ ಸಿದ್ಧಾಂತ ದರ್ಶನಗಳ ಅಡಿಗಲ್ಲು ಪ್ರೇಮ ಅಥವಾ ಭಕ್ತಿ. ಅವರ ಸಾಧನೆಯ ಹಾದಿ ಭಕ್ತಿ ಪಥ. ಅವರ ಧ್ಯೇಯ ಆತ್ಮ ಪರಿಶುದ್ಧಿ ಹಾಗೂ ಪ್ರಿಯ ವಸ್ತುವಾದ ಭಗವಂತನೊಡನೆ ಐಕ್ಯ. ಸೂಫಿಗಳು ಶರಣರು ಜ್ಞಾನ ಕ್ರಿಯಾ ಮಾರ್ಗಾವಲಂಬಿಗಳು. 'ಗುರು'ವಿನಲ್ಲಿ ಇಬ್ಬರಿಗೂ ಅತೀವ ಶ್ರದ್ಧೆ. ಜನ್ಮಾಂತರ ಕರ್ಮತನದಲ್ಲಿ ಇಬ್ಬರಿಗೂ ಶ್ರದ್ಧೆ ಕಡಿಮೆ. ಇನ್ನು ಪವಾಡಗಳ ಸುಳಿವು ಪ್ರಾಮಾಣಿಕ ಬದುಕಿನಲ್ಲಿ ಹೇಗೆ ಸಾಧ್ಯ ?

ಹೀಗೆ ಉಭಯ ಸಾಧಕರ ತತ್ವ ವಿಚಾರಗಳಲ್ಲಿ ಅನೇಕ ಸಮನ್ವಯ ಅಂಶಗಳನ್ನು ಸಹೃದಯರು ಗುರುತಿಸಬಹುದಾಗಿದೆ. ಕೆಲವು ವಿಚಾರಗಳಲ್ಲಿ ಸೂಫಿಗಳಿಗೂ–ಶರಣರಿಗೂ ಅಂತರವೂ ಇದೆ. ಶರಣರಸಾಧನಾಪಥ ಧಾರ್ಮಿಕ–ಸಾಮಾಜಿಕ–ಆರ್ಥಿಕ–ರಂಗದಲ್ಲಿ ವ್ಯಾಪಕವಾದ ಕಾರ್ಯಕ್ಷೇತ್ರವನ್ನು ಒಳಗೊಂಡಿತ್ತು, ಶರಣರ ಕಾಯಕತತ್ತ್ವವಿಚಾರ ಅರ್ಥಶಾಸ್ತ್ರಕ್ಕೆ ಬಹುದೊಡ್ಡ ಕೊಡುಗೆ. ಅಂತೆಯೇ ದಾಸೋಹ (ವಿತರಣೆಪದ್ಧತಿ) ತತ್ತ್ವ. ಸೂಫಿಗಳ ಕಾರ್ಯಕ್ಷೇತ್ರ ಸೀಮಿತವಾಗಿದ್ದು ಕೇವಲ ಸಾಧನೆ-ಭಜನೆಗಳಲ್ಲಿ ಅದು ಸಾಗಿತ್ತು. ಕಾಯಕನಿಷ್ಠೆ ಶರಣರಲ್ಲಿ ಕಂಡುಬರುವಂತೆ ಸೂಫಿಗಳಲ್ಲಿ ಅದರ ಸುಳಿವೂ ಇಲ್ಲ.

ಶರಣರು ಕಾಯಕ–ಜ್ಞಾನ–ಆರಾಧನೆಗಳನ್ನು ಜೊತೆ–ಜೊತೆಯಲ್ಲಿಯೇ ಸಾಧಿಸಿದರು. ಸೂಫಿಗಳು ಜ್ಞಾನ–ಆರಾಧನೆಯನ್ನು ಮಾತ್ರ ಸಾಧಿಸಿದರು. ಶರಣರಿಗೆ ಕಾಯಕವೇ ಕೈಲಾಸವಾಗಿತ್ತು. ಸೂಫಿಗಳಿಗೆ 'ಅಲ್ಲಾ'ನ ಸಾನ್ನಿಧ್ಯವೇ ಕೈಲಾಸವಾಗಿತ್ತು. ಶರಣರು ಸ್ವಾವಲಂಬಿಗಳು. ತಾವು ದುಡಿದದ್ದನ್ನೇ ಉಂಡರು. ಇತರರಿಗೂ ಉಣಿಸಿದರು; ಹೀಗಾಗಿ ಶರಣರ ಬದುಕು ಚನ್ನಾಗಿತ್ತು. ಲೋಕದಲ್ಲಿ ಸಂಚರಿಸುವ ಬಾಹ್ಯಪ್ರಾಣವೇ ಹಣವೆನ್ನುತ್ತಾರೆ ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ. ಶರಣರು ಮಾತ್ರ ದುಡ್ಡು ಸ್ಥಾವರ; ದುಡಿಮೆ ಜಂಗಮವೆಂದರು. ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕಿಲ್ಲವೆನ್ನುವುದು ಅವರ ದೃಢವಾದ ನಿಲುವು. ಸೂಫಿಗಳು ಆರ್ಥಿಕವಾಗಿ ಪರಾವಲಂಬಿಗಳಾಗಿದ್ದರು. ಹೀಗಾಗಿ ಅವರು ಭಿಕ್ಷುಕರಾಗಿದ್ದರು. 'ಸೂಫಿಗಳಲ್ಲಿ ಕೆಲವರು ದೇವರಲ್ಲಿ ಅತಿಯಾಗಿ ನಂಬಿಕೆ ಇಟ್ಟು ದುಡಿಯದೆ ಕೊನೆಗೆ ಭಿಕ್ಷಕ್ಕೂ ಹೋಗದೆ ಆಹಾರ ತನ್ನಷ್ಟಕ್ಕೆ ತಾನೇ ಬರುತ್ತದೆ ಎಂದು ಸುಮ್ಮನೆ ಕುಳಿತಿರುತ್ತಿದ್ದರು. ಈ ಭಾವನೆ ಬರುಬರುತ್ತಾ ನಿರುದ್ಯೋಗಕ್ಕೂ ಸೋಮಾರಿತನಕ್ಕೂ ಇಳಿದು ಕೆಟ್ಟಿತು' ಶರಣರು ಅನುಭವ ಮಂಟಪದಲ್ಲಿ ವಿಚಾರಮಂಥನ ಮಾಡಿ ನಿರ್ಣಯಕ್ಕೆ ಬರುತ್ತಿದ್ದರು. ಅವರು -ಧಾರ್ಮಿಕ-ಸಾಮಾಜಿಕ-ರಾಜಕೀಯ-ಆರ್ಥಿಕ ವಿಷಯಗಳನ್ನು ಕುರಿತು ಮುಕ್ತಮನಸ್ಸಿನಿಂದ ಚರ್ಚಿಸುತ್ತಿದ್ದರು. ಶರಣ–ಶರಣೆಯರಿಬ್ಬರೂ ಇವರಲ್ಲಿ ಪಾಲುಗೊಂಡಿದ್ದರು. ಸೂಫಿಗಳ 'ಧರ್ಮಪ್ರಸಂಗ' ನಡೆಯುತ್ತಿದ್ದರೂ ಅನುಭವ ಮಂಟಪದ ವ್ಯವಸ್ಥೆ, ಮುಕ್ತಮನಸ್ಸಿನ ಚರ್ಚೆ ಅಲ್ಲಿ ಇರಲಿಲ್ಲ. ಸೂಫಿಗಳಲ್ಲಿ ಬದುಕು ರೋಸಿಹೋಗಿ ವಿರಕ್ತರಾಗಿ ಏಕಾಂತವಾಸಿಗಳಾಗಿದ್ದರು. ಅಂಥವರಲ್ಲಿ ಹಬೀಬ್‌ಅಜಮಿ, ಇಬ್ರಾಹಿಮ್,ಅಧಮ್ ಇವರು ಕೆಲವರು. ಶರಣರು ಬದುಕನ್ನು ಪ್ರೀತಿಸುತ್ತಾ ಸಾಮೂಹಿಕವಾಗಿ ಲೋಕಾಂತದಲ್ಲಿದ್ದು ಏಕಾಂತ ಸಾಧಿಸಿ ಸಾಧನೆಗೈದರು. ಶರಣರು ಅಲ್ಲಮನನ್ನು ಗುರುವೆಂದು ಭಾವಿಸಿದ್ದರೆ ಸೂಫಿಗಳು 'ಅಲಿ'ಯನ್ನು ಗುರುವೆಂದು ಭಾವಿಸುತ್ತಾರೆ. ಸೂಫಿ ತತ್ತ್ವಗಳಿಗೆ

ಮಾರುಹೋಗಿ ಅನೇಕಜನ ಅರಬ್–ಇರಾನ್–ಚೀನಾ–ಸಿರಿಯಾ–ಇಜಿಪ್ತಿನಿಂದ ಬಂದರು. ಸೂಫಿಧರ್ಮ ಅಂತರಾಷ್ಟ್ರೀಯ ರಂಗದಲ್ಲಿ ಪ್ರಚಾರವಾಯಿತು. ಶರಣ ತತ್ತ್ವಗಳಿಗೆ ಮಾರುಹೋಗಿ ಭಾರತದ ಗುಜರಾತು–ಆಂಧ್ರ–ಕಾಶ್ಮೀರ–ತಮಿಳುನಾಡುಗಳಿಂದ ಜನರು ಬಂದು ಶರಣರಾದರು. ಆದರೆ ಮಧ್ಯಯುಗದಿಂದ ಶರಣರ ತತ್ತ್ವ ಭಾರತದ ಗಡಿಯನ್ನು ದಾಟಲಿಲ್ಲ; ಅಷ್ಟೇ ಅಲ್ಲ ಕರ್ನಾಕರ್ನಾಟಕದ ಗಡಿಯನ್ನೂ ಅದು ದಾಟಲಿಲ್ಲವೆಂಬುದು ಸತ್ಯಸಂಗತಿ. ಕಾರಣ; ಭಾಷೆಯ ತೊಡಕು. ಇತರ ಮತ–ಪಂಥಗಳ–ಅನುಯಾಯಿಗಳ ಭಾವನೆಯು ಕೆಡುಕೂ ಮುಖ್ಯ ಕಾರಣವೆಂದು ತೋರುತ್ತದೆ. ಅಷ್ಟೇ ಅಲ್ಲ. ವೀರಶೈವರಲ್ಲೇ ಭಾವೈಕ್ಯತೆಯ ಒಡಕೂ ಕೂಡ ಮುಖ್ಯಕಾರಣವೆಂದು ತೋರುತ್ತದೆ. ಮುಸ್ಲಿಂ ರಾಷ್ಟ್ರಗಳಲ್ಲಿ ಅನೇಕ ಮಠಗಳಿದ್ದವು. ಸೂಫಿಗಳು ಮೊದಲು ಅಲ್ಲಿದ್ದು ಶಿಕ್ಷಣ ಪಡೆಯುತ್ತಿದ್ದರು. ಶರಣರಿಗೆ ಮನೆಗಳೇ ಮಠಗಳಾಗಿದ್ದವು. ಲೋಕವೇ ಪಾಠಶಾಲೆ. ಅಲ್ಲಿ ಅನುಭವವೇ ಪಾಠವಾಗಿತ್ತು. ಬಸವಣ್ಣನವರ ಮಾರ್ಗದರ್ಶನದಲ್ಲಿ ಅವರ ಶಿವಾನುಭವ ಶಿಕ್ಷಣ ಸಾಗಿತ್ತು. ಹೀಗೆ ಸೂಫಿಗಳಲ್ಲಿ ಶರಣರಲ್ಲಿ ಅನೇಕ ಸಾಮ್ಯ–ಅಂತರಗಳು ಕಂಡುಬಂದರೂ ಈ ಎಲ್ಲ ಅನುಭಾವಿಗಳ ಉದ್ದೇಶ ಲೋಕಕಲ್ಯಾಣ. ಸಕಲ ಜೀವಿಗಳಿಗೂ ಲೇಸನ್ನೇ ಬಯಸುವದಾಗಿತ್ತು. ಆ ಬಯಕೆಯಲ್ಲಿ ಆತ್ಮಕಲ್ಯಾಣವೂ ಅಡಗಿತ್ತು. ಸೂಫಿಗಳನ್ನು ಶರಣರನ್ನು ಅವರ ತತ್ತ್ವ ವಿಚಾರ ನಿಲುವುಗಳನ್ನು ಅರಿಯಲು ಪರಿಚಯಕ್ಕೆ ಸಹಾಯಕವಾಗಲು ಈ ಲೇಖನ ಒಂದು ತೋರ್ ಬೆರಳುಮಾತ್ರ.

## ಶೈವಧರ್ಮದ ಹಿನ್ನೆಲೆ

**—ವಿದ್ಯಾಲಂಕಾರ ಪ್ರೊ॥ ಎಸ್. ಕೆ. ರಾಮಚಂದ್ರರಾವ್**

ನಮ್ಮ ನಾಡಿನಲ್ಲಿ ಶೈವಧರ್ಮ ಎಷ್ಟು ಹಳೆಯದು? ನಾಡಿನ ಇತಿಹಾಸ ಎಷ್ಟು ಹಿಂದಕ್ಕೆ ಸರಿಯಬಲ್ಲದೋ ಅಷ್ಟೂ ಹಿಂದಕ್ಕೆ ಈ ಧರ್ಮ ಸಾಗುವುದೆಂದು ಇತಿಹಾಸ ಬಲ್ಲವರು ಹೇಳುತ್ತಾರೆ, ನಾಡಿನ ಇತಿಹಾಸದ ಅರುಣೋದಯವನ್ನು ಐದಾರು ಸಾವಿರ ವರ್ಷಗಳಷ್ಟು ಹಿಂದೆ ಸೈಂಧವ ಸಂಸ್ಕೃತಿಯಲ್ಲಿ ಗುರುತಿಸುವುದು ವಾಡಿಕೆಯಷ್ಟೆ. ಆ ಸಂಸ್ಕೃತಿಯ ಉಳಿಕೆಗಳಲ್ಲೇ ಈ ಧರ್ಮದ ಕುರುಹುಗಳನ್ನು ಕಾಣಬಹುದೆನ್ನುತ್ತಾರೆ ತಜ್ಞರು. ಅಲ್ಲಿಂದ ಮುಂದೆ ಋಗ್ವೇದದಲ್ಲಿ, ಬ್ರಾಹ್ಮಣಗಳಲ್ಲಿ, ಶ್ವೇತಾಶ್ವತರ ಉಪನಿಷತ್ತಿನಲ್ಲಿ, ಮಹಾಭಾರತದಲ್ಲಿ, ಪುರಾಣಗಳಲ್ಲಿ, ಆಗಮಗಳಲ್ಲಿ ಇದು ಬೆಳೆದುಬಂದ ದಾರಿಯನ್ನು ಗುರುತಿಸುತ್ತಾರೆ. ನಡುಯುಗದಲ್ಲಿ ನಡೆದ ಧರ್ಮಕ್ರಾಂತಿಯನ್ನೂ ಪ್ರಸ್ತಾಪಿಸಿ ಕಾಶ್ಮೀರ, ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕಗಳಲ್ಲಿ ಶೈವಧರ್ಮ ಹರಡಿದುದನ್ನೂ ಹೇಳುತ್ತಾರೆ.

ಹೀಗೆ ಶೈವಧರ್ಮದ ಉಗಮವನ್ನೂ ವಿಕಾಸವನ್ನೂ ವಿವರಿಸುವಾಗ, ಒಂದು ವಿವರವನ್ನು ಮರೆಯಬಾರದು. ಊರಿಗೊಂದು ಹೆಸರು, ವ್ಯಕ್ತಿಗೊಂದು ಹೆಸರು, ಬಳಸುವ ಪದಾರ್ಥಕ್ಕೊಂದು ಹೆಸರು, ಸರಿಯೇ. ವ್ಯವಹಾರಕ್ಕೆ ಹೆಸರು ನೆರವಾಗುತ್ತದೆ; ಒಂದನ್ನು ಇನ್ನೊಂದರಿಂದ ರೂಪ, ರಾಶಿ, ಗುಣಗಳಲ್ಲಿ ಬೇರ್ಪಡಿಸಲು ಅನುಕೂಲವಾಗುತ್ತದೆ ; ಹಲವಾರು ಬೇರೆಬೇರೆ ವಿವರಗಳನ್ನು ಒಂದು ನೆಲೆಯಲ್ಲಿ ಸೇರಿಸಲು ಸಾಧ್ಯವಾಗುತ್ತದೆ. ಆದರೆ ಧರ್ಮವೆನ್ನುವುದು ಪದಾರ್ಥವಲ್ಲ, ಪ್ರಾಣಿಯಲ್ಲ. ಅದಕ್ಕೊಂದು ನಿರ್ದಿಷ್ಟವಾದ ಭೌತಿಕವಾದ ಸ್ವರೂಪವಿರದು. ಧರ್ಮವೆನ್ನುವುದು ಭಾವನೆಗಳ ಸಮುದಾಯ. ಕಲ್ಪನೆಗಳ ಕಟ್ಟು, ಆಚಾರಗಳ ಹಂದರ. ಇದೇನು ಉಂಡೆಯಾಗಿ, ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿ ಉಳಿಯುವುದಿಲ್ಲ. ಇಂಥ ಧರ್ಮಕ್ಕೆ ಹೆಸರೊಂದನ್ನು ಇರಿಸುವುದೇನೋ ವ್ಯವಹಾರದ ದೃಷ್ಟಿಯಿಂದ ಅಗತ್ಯವೇ, ಅನಿವಾರ್ಯವೇ. ಆದರೆ ಕರೆಯುವ ಹೆಸರಿಗೂ ಕರೆಯಿಸಿಕೊಳ್ಳುವ ವಿವರಕ್ಕೂ ನಿಯತವಾದ ನಂಟೇನು ಇಲ್ಲದಿರುವುದು ಇಲ್ಲಿ ಎದ್ದುಕಾಣುತ್ತದೆ. ಧರ್ಮದ ಆಳ, ಎತ್ತರ, ಅಗಲಗಳನ್ನೆಲ್ಲ ಹೆಸರು ಒಳಗೊಳ್ಳಲಾರದು. ಹೆಸರನ್ನು ಹಿಡಿದು ಧರ್ಮದ ಜಾಡನ್ನು ಅರಿತುಕೊಳ್ಳುವುದಾಗದು. ಧರ್ಮದನೆಲೆಯೂ ಮುಖಗಳೂ ಮಾರ್ಪಟ್ಟಾಗಲೂ ಹೆಸರು ಹಾಗೆಯೇ ಉಳಿದುಕೊಳ್ಳುವುದು ಗೊಂದಲಕ್ಕೆ ಎಡೆಮಾಡಿಕೊಡುತ್ತದೆ.

ಶೈವಧರ್ಮವೆನ್ನುವುದು ಹೆಸರು. ಈ ಮಾತಿನ ಮೂಲಾರ್ಥ 'ಶಿವನನ್ನು ಕುರಿತದ್ದು' 'ಶಿವನಿಗೆ ಸಂಬಂಧಿಸಿದುದು' (ಶಿವ+ಅಣ್, ಶಿವಸ್ಯೇದಂ). ಶಿವನೆಂಬ ದೇವತೆಯ ಪಾರಮ್ಯವನ್ನು ಒಪ್ಪಿಕೊಂಡು, ಶಿವನನ್ನು ಒಲಿಸಿಕೊಳ್ಳುವ ಹಂಬಲವಿದ್ದು, ಶಿವಗತಿಯೇ ಬದುಕಿನ ಲಕ್ಷ್ಯವೆಂದು ನಂಬಿಕೊಂಡವರು ಶೈವರು. ಆದರೆ ಎಲ್ಲ ಕಾಲಕ್ಕೂ ಇವರಿಗೆ ಶೈವರೆಂಬ ಹೆಸರೇ ಇದ್ದಿತೆನ್ನಲಾಗದು. ಋಗ್ವೇದದಲ್ಲಿ ಸುದಾಸರೊಂದಿಗೆ ಭರತರೊಂದಿಗೆ ಹಗರಣ ಮಾಡಿದ 'ಶಿವಾಸ' ರಿದ್ದರು; 'ವಿಷಾಣಿ'ಗಳಾದ ಇವರು ಶೈವರೇ. ಪತಂಜಲಿಯ ಕಾಲಕ್ಕೆ ಇವರು 'ಶಿವಭಾಗವತ'ರೆನಿಸಿಕೊಂಡರು. ಸಿದ್ಧಾಂತ ಶಿಖಾಮಣಿಯು 'ಶಿವಾಶ್ರಿತ'ರೆಂದು ಇವರನ್ನು ಕರೆದಿದೆ. ಕ್ರಿಸ್ತಪೂರ್ವ ಒಂದೆರಡು ಶತಮಾನಗಳಲ್ಲಿ 'ಶಿವರಕ್ಷಿತ'ರಿದ್ದ ಉಲ್ಲೇಖ ತಕ್ಷಶಿಲೆಯ ಖರೋಷ್ಠಿ–ಬ್ರಾಹ್ಮೀ, ಶಾಸನದಿಂದ ತಿಳಿದುಬರುತ್ತದೆ. ಕ್ರಿಸ್ತಾಬ್ದ ಮೊದಲಾಗುವಾಗ 'ಅತ್ಯಂತ ಮಹೇಶ್ವರ'ರಿದ್ದರು (ಅತ್ಯಂತಸ್ವಾಮಿಮಹಾಭೈರವ ಭಕ್ತರು); ವಾಕಾಟಕರ ಶಾಸನಗಳು ಇವರನ್ನು ಪ್ರಸ್ತಾಪಿಸುತ್ತವೆ. ಮುಂದೆ ಮೌಖರಿ ಅರಸರ ಕಾಲದಲ್ಲಿ 'ಪರಮಮಹೇಶ್ವರ'

ರಿದ್ದರು ; 'ಪಶುಪತಿಭಕ್ತ'ರಿದ್ದರು. ಗುಪ್ತರ ಕಾಲದಿಂದ ಮುಂದೆ ಈ ಧರ್ಮದಲ್ಲಿ ಹಲವಾರು ಕವಲುಗಳೊಡೆದುವು. ನಾರದೀಯ ಪುರಾಣವು ಪಾಶುಪತ, ಮಹಾವ್ರತಧರ, ಸಿದ್ಧಾಂತಮಾರ್ಗಿ, ಕಾಪಾಲಿಕರೆಂಬ ಶಾಖೆಗಳನ್ನು ಉಲ್ಲೇಖಿಸುತ್ತದೆ. ವಾಮನ ಪುರಾಣವು ಆದಿಶೈವ, ಪಾಶುಪತ, ಕಾಲವದನ, ಕಪಾಲಿ ಎಂಬ ನಾಲ್ಕು ಶೈವ ವಿಭಾಗಗಳನ್ನು ಪಟ್ಟಿಮಾಡಿದೆ. ಬಾದರಾಯಣಸೂತ್ರಗಳಿಗೆ ಶಂಕರಾಚಾರ್ಯರು ಸಿದ್ಧಪಡಿಸಿದ ಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದ ವಾಚಸ್ಪತಿ-ಮಿಶ್ರನು ಮಾಹೇಶ್ವರರಲ್ಲಿ ಶೈವ, ಪಾಶುಪತ, ಕಾರುಣಿಕ-ಸಿದ್ಧಾಂತಿ, ಕಾಪಾಲಿಕ ಎನ್ನುವ ನಾಲ್ಕು ಪಂಗಡಗಳಿದ್ದುವೆಂದು ತಿಳಿಸಿದ್ದಾನೆ. ರಾಮಾನುಜಾಚಾರ್ಯರು ಶ್ರೀಭಾಷ್ಯದಲ್ಲಿ ಕಪಾಲಿ, ಕಾಲಾಮುಖ, ಪಾಶುಪತ, ಶೈವಗಳೆಂಬ ಪ್ರಭೇದವನ್ನು ಸೂಚಿಸಿದ್ದಾರೆ.

ಶೈವಧರ್ಮದ ಇತಿಹಾಸದಲ್ಲಿ ಈ ಶಾಖೆಗಳನ್ನೆಲ್ಲ ಪರಿಶೀಲಿಸಬೇಕಾಗುತ್ತದೆ; ಪಾಶುಪತಧರ್ಮದ ದರ್ಶನಭಾಗವನ್ನು ಪರೀಕ್ಷೆ ಮಾಡಬೇಕಾಗುತ್ತದೆ. ಸಿದ್ಧಾಂತಮಾರ್ಗವು ಕಾಶ್ಮೀರದಲ್ಲಿ, ಕರ್ಣಾಟಕದಲ್ಲಿ, ತಮಿಳುನಾಡಿನಲ್ಲಿ, ಆಂಧ್ರಪ್ರದೇಶದಲ್ಲಿ ಬೆಳೆದುಬಂದ ಬಗೆಯನ್ನು ವಿಶ್ಲೇಷಣ ಮಾಡಬೇಕಾಗುತ್ತದೆ. ನಡುಯುಗದಲ್ಲಿ ನಡೆದ ಆಂದೋಳನದಿಂದ ಹಳೆಯ ಶೈವಧರ್ಮ ಹೊಸದಾಗಿ ಮುಪ್ಪುರಿಗೊಂಡುದನ್ನು ವಿವರಿಸಬೇಕಾಗುತ್ತದೆ. ಐದಾರು ಸಾವಿರ ವರ್ಷಗಳು ಹೀಗೆ ಉಳಿದು, ಬೆಳೆದು, ಹರಡಿಕೊಂಡುಬಂದ ಧರ್ಮವನ್ನು ಸ್ಥೂಲವಾಗಿ ಶೈವವೆಂದು ಗುರುತಿಸಿ, ಅದರ ಧೋರಣೆಯನ್ನು ಅರಿತುಕೊಳ್ಳುವ ಪ್ರಯತ್ನಗಳು ನಡೆದಿವೆ. ಆದರೆ ಶೈವವೆಂದು ಸ್ಥೂಲವಾಗಿ ನಿರ್ದೇಶನಗೊಂಡಿರುವ ಧರ್ಮದ ಬುನಾದಿ ಯಾವುದು, ಅದರ ಮೊದಲ ಚೌಕಟ್ಟು ಏನಿದ್ದಿತು ಎನ್ನುವುದರ ಕಡೆ ಅಷ್ಟಾಗಿ ಗಮನ ಹರಿದಿಲ್ಲ.

ವಾಯುವೀಯ ಸಂಹಿತೆಯು (ಶಿವಪುರಾಣ) ಶಿವ-ಜ್ಞಾನವನ್ನು ಎತ್ತಿಹಿಡಿದು ಭಕ್ತಿಮಾರ್ಗವನ್ನು ಸೂಚಿಸಿತಷ್ಟೇ. ಅದು—**'ಶಿವೇ ಭಕ್ತಿರ್ನ ಸಂದೇಹಸ್ತಯಾ ಯುಕ್ತೋ ವಿಮುಚ್ಯತೇ'** ಎಂದು ಹೇಳಿ 'ಪ್ರಸಾದೋ ಭಕ್ತಿಸಂಭವಃ' ಎನ್ನುವ ಭಾಗವತ ತತ್ತ್ವವನ್ನು ನಿರೂಪಿಸಿತು. ಆಗಮಶೈವದ ಆಕರ ಇದೇ. ಋಗ್ವೇದದಲ್ಲಿ ಕಾಣಿಸಿಕೊಂಡ ರುದ್ರ ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ (ಶತರುದ್ರೀಯ) 'ಶಿವತನು'ವೆಂದಾಗಿ, ಶತಪಥಬ್ರಾಹ್ಮಣದಲ್ಲಿಯೂ ಕೌಷೀತಕೀಬ್ರಾಹ್ಮಣದಲ್ಲಿಯೂ ಎಂಟು ಹೆಸರುಗಳನ್ನು ಪಡೆದು (ರುದ್ರ, ಶರ್ವ, ಉಗ್ರ, ಅಶನಿ ಎಂಬ ರುದ್ರಪರವಾದ ಹೆಸರುಗಳು; ಭವ, ಪಶುಪತಿ, ಮಹಾದೇವ, ಈಶಾನ ಎಂಬ ಶಿವ ಪರವಾದ ಹೆಸರುಗಳು). ಅಥರ್ವವೇದದಲ್ಲಿಯೂ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ 'ಏಕದೇವತೆ'ಯಾಗಿ ('ಏಕೋ ಹಿ ರುದ್ರೋನ ದ್ವಿತೀಯಾಯ') ನಿಂತವನನ್ನು ಭಕ್ತಿಯಿಂದ ಕಂಡು ಅವನ ಕರುಣೆಯನ್ನು ಪಡೆದುಕೊಳ್ಳುವುದೇ ಶೈವಧರ್ಮದ ಸಿದ್ಧಾಂತಮಾರ್ಗವಾಯಿತು. **'ದ್ವೇ ತನೂ ತಸ್ಯ ದೇವಸ್ಯ ಬ್ರಾಹ್ಮಣಾ ವೇದಜ್ಞಾ ವಿದುಃ-ಘೋರಂ ಅನ್ಯಾಂ' ; 'ಶಿವಾಂ ಅನ್ಯಾಂತೇ ತನೂ ಬಹುಧಾ ಪುನಃ'**. ಹೀಗೆಲ್ಲ ರುದ್ರ-ಶಿವರಿಗೆ ಭೇದವನ್ನು ಮೊದಲಿಂದ ಕಾಣಿಸುತ್ತ ಬಂದಿದ್ದಾರೆ. ರುದ್ರನಿಂದಲೇ ಸಾವು, ಆತಂಕ, ರೋಗ-ರುಜಿನಗಳು ಒದಗುವುವು, ರುದ್ರನೇ ಅವನ್ನು ಹೋಗಲಾಡಿಸುವವನು ಎನ್ನುವ ಒಕ್ಕಣೆ ಋಗ್ವೇದದಲ್ಲಿಯೇ ಕಾಣಬರುತ್ತದೆ. 'ಶಿವಾ ರುದ್ರಸ್ಯ ಭೇಷಜೀ' (ಪಾತಂಜಲ ಮಹಾಭಾಷ್ಯ) ಎನ್ನುವಾಗ ರುದ್ರನಿಂದ ಕೆಡುಕು, ಶಿವನಿಂದ ಒಳಿತು ಎನ್ನುವ ಧ್ವನಿಯಿದೆ. ಇದನ್ನು ವಿದ್ವಾಂಸರು ಗಮನಿಸಿದ್ದರೂ ಇದರ ಮೂಲನೆಲೆಯನ್ನು ಕಂಡುಕೊಳ್ಳುವ ಗೋಜಿಗೆ ಹೋಗಿಲ್ಲ. ರುದ್ರ-ಶಿವ ಕಲ್ಪನೆಗಳು ಬೆರೆತುಕೊಂಡಾಗಲೇ ಶೈವಧರ್ಮ ಮೈದಳೆಯಿತೋ ಎನ್ನುವ ಸಮಸ್ಯೆಯನ್ನು ಪರಿಹರಿಸಲೆಣಿಸಿಲ್ಲ. ಉಗ್ರ-ಸೌಮ್ಯ ಎರಡೂ ಕಳೆಗಳು ಕಲೆತಾಗ 'ವೀರಶೈವ'ವೆಂದಾಯಿತೋ ಎನ್ನುವ ವಿಚಾರವಾಗಿ ಗಮನ ಹರಿಸಿಲ್ಲ.

**'ದ್ವೇ ತನೂ ತಸ್ಯ ದೇವಸ್ಯ'** ಎನ್ನುವ ಕಲ್ಪನೆ ತುಂಬ ಪ್ರಾಚೀನವಾದುದು. ಈ ಮಾತು ಮೂಡುವುದಕ್ಕಿಂತಲೂ ಹಿಂದಿನ ಭಾವನೆ ಅದು. ಘೋರವಾದುದೊಂದು, ಸೌಮ್ಯವಾದುದಿನ್ನೊಂದು. ಪತಂಜಲಿಯ ಕಾಲಕ್ಕೆ ಆಯುಃಶೂಲಿಕರಾದ ಶಿವಭಾಗವತರು 'ರಭಸ' ಕರ್ಮಗಳಿಂದ ಶಿವಗತಿಯನ್ನು ಪಡೆಯಲೆತ್ನಿಸುತ್ತಿದ್ದರೆಂದು ತಿಳಿದುಬರುತ್ತದೆ. ಋಗ್ವೇದದ **'ಕೇಶೀ ಸೂಕ್ತ'** (ಹತ್ತನೆಯ ಮಂಡಲದ ೧೩೬ನೆಯ ಸೂಕ್ತ) ರುದ್ರನೊಂದಿಗೆ ವಿಷವನ್ನು ಕುಡಿಯುವ ವಾತರಶನರಾದ ಮುನಿಗಳು 'ಉನ್ಮದಿತ'ರಾಗಿರುವುದನ್ನು ಸ್ವಾರಸ್ಯವಾಗಿ ಚಿತ್ರಿಸುತ್ತದೆ. ಕೈಯಲ್ಲಿ ಶೂಲವನ್ನೋ, ಕೊಡಲಿಯನ್ನೋ, ಕಟ್ಟಿಗೆಯನ್ನೋ ಹಿಡಿದ ಎರಡು ಕೈಗಳ ವೀರ-ಶಿವನ ಚಿತ್ರಣ ಇಂಡೋ-ಪಾರ್ಥಿಯನ್‌ದೊರೆ ಗೊಂಡೊಫೊರಿಸ್, ಕುಷಾಣ ರಾಜರಾದ ವೇಮ-ಕಾಡ್‌ಫಿಸಿಸ್, ಕನಿಷ್ಕ, ಹುವಿಷ್ಕ, ಇಮ್ಮಡಿ ವಾಸುದೇವ ಇವರ ನಾಣ್ಯಗಳ ಮೇಲೆ ಮತ್ತೆ ಮತ್ತೆ ಕಾಣಸಿಗುತ್ತದೆ. ಸಾಮಾನ್ಯರಾದ ಶಿವ-ಭಕ್ತರಲ್ಲಿಯೂ ವೀರಾವೇಶದ ಸುಳಿವಿದ್ದುದು 'ವಿದ್ವನ್ಮೋದತರಂಗಿಣೀ'ಯಂಥ ಅರ್ವಾಚೀನ ಗ್ರಂಥಗಳಲ್ಲಿಯೂ ತಿಳಿದುಬರುತ್ತದೆ. ಬರುತ್ತಿರುವ ಶೈವವನ್ನು ನೋಡಿ (ಅಯಾಂತಂ ಶೈವಮಾಲೋಕ್ಯ)–

ಶ್ರೀಮಾನಸಾವೇತಿ ಜಟಾಲಮೌಲಿ ವ್ಯಾಘ್ರತ್ವಗಾಲಂಬಿತ ಮಧ್ಯಭಾಗಃ ।
ವಿಭೂತಿಸಂಭೂಷಿತ ಭಾಸ್ವದಾಗೋ ರುದ್ರಾಕ್ಷಮಾಲಾಕಲಿತೋರ್ಧ್ವದೇಹಃ॥

ಎನ್ನುವ ವರ್ಣನೆ ಈ ಗ್ರಂಥದ ಎರಡನೆಯ ತರಂಗದಲ್ಲಿ ಬರುತ್ತದೆ. ಘೋರಸ್ವಭಾವದ ರುದ್ರನಿಗೆ ಮನುಷ್ಯಾಕಾರದ ಮೂರ್ತಿ ಪ್ರತೀಕವನ್ನು ಮಾಡಿ ಆಯುಧಗಳಿಂದಲೋ, ಜೊತೆಗಿರುವ ಬಸವದಿಂದಲೋ ಅದರ ಸ್ವರೂಪವನ್ನು ನಿರ್ದೇಶಿಸುವ ವಾಡಿಕೆ ಕ್ರಿಸ್ತಯುಗದ ಮುಂಚೆಯೇ ಕಾಣಿಸಿಕೊಳ್ಳುತ್ತದೆ. ಗುಡಿಮಲ್ಲದ ಸುಪ್ರಸಿದ್ಧ ಶಿವವಿಗ್ರಹವನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಅಪಸ್ಮಾರಪುರುಷನನ್ನು ಮೆಟ್ಟಿನಿಂತಿರುವ ಶಿವ ಒಂದು ಕೈಯಲ್ಲಿ ಕೊಡಲಿಯನ್ನೂ ಇನ್ನೊಂದರಲ್ಲಿ ಮೃಗವೊಂದನ್ನೂ ಹಿಡಿದು ವೀರನಂತೆಯೇ ನಿಂತಿರುವ ಶಿಲ್ಪ ಇದು. ಶಿವನ ಇನ್ನೊಂದು ಮುಖ ಸೌಮ್ಯವಷ್ಟೆ; ಇದೇ ಲಿಂಗವಾಗಿ ಮೂಡಿಕೊಂಡು ಪೂಜೆಗೆ ಅನುವಾಯಿತು. ಸೌರಸಂಹಿತೆಯು ವಿವರಿಸುವಂತೆ ಲಿಂಗವು ಸೃಜನಾತ್ಮಕ ಶಕ್ತಿಯೆಂದು ವಿವರಿಸಿದೆ. ಅವ್ಯಕ್ತನಾದ ಜಗದ್ವ್ಯಾಪಿಯಾದ ಶಕ್ತಿಯನ್ನು ಲಿಂಗವು ಪ್ರತಿನಿಧಿಸುತ್ತದೆ. ಲಿಂಗಪುರಾಣವು **'ಲಿಂಗಮೂರ್ತಿಃ ಶಿವೋಜ್ಯೋತಿಃ'** ಎಂದು ಸ್ಪಷ್ಟವಾಗಿಯೇ ಹೇಳುತ್ತದೆ (೨,೬೬,೭) ಸಕಲ ಅಥವಾ ವ್ಯಕ್ತವಾದುದು ರೌದ್ರವೆಂದು ನಿಷ್ಕಲ ಅಥವಾ ಅವ್ಯಕ್ತವಾದುದು ಸದಾಶಿವವೆಂದೂ ಲಿಂಗಪ್ರತಿಮಾಲಕ್ಷಣ ಸೂಚಿಸುತ್ತದೆ. ಲಿಂಗಪೂಜೆಗೂ ಮೆಸೆಪೊಟೇಮಿಯ, ಈಜಿಪ್ಟ್, ಗ್ರೀಸ್, ರೋಮ್ ಮೊದಲಾದೆಡೆ ಬಳಕೆಯಲ್ಲಿದ್ದ ಲೈಂಗಿಕ-ಕಾಮುಕ ಪ್ರವೃತ್ತಿಗಳ ಪೂಜೆಗೂ ಏನೇನೂ ಸಂಬಂಧವಿರದು. ಈ ವಿಚಾರವಾಗಿ ಸಾಕಷ್ಟು ವಾದ-ವಿವಾದಗಳು ಈಗಾಗಲೇ ನಡೆದಿವೆ. ಲಿಂಗಪೂಜೆಯು ಶಿಶ್ನತೃಪ್ತಿಯಲ್ಲವೆಂದು ದೃಢವಾಗಿದೆ. ಇದನ್ನು ಮತ್ತೆ ಇಲ್ಲಿ ಪ್ರಸ್ತಾಪಿಸುವ ಅಗತ್ಯವಿಲ್ಲ. ಶಿವನ ಸೌಮ್ಯಮುಖ ಲಿಂಗ ಎಂದಷ್ಟು ಹೇಳಿದರೆ ಸಾಕು.

ಶಿವ-ಶಕ್ತಿಗಳೆರಡೂ ಕೂಡಿಕೊಂಡು ಶಕ್ತಿಯ ಭಾಗಕ್ಕಿಂತ ಶಿವನ ಭಾಗ, ಎಂದರೆ ರುದ್ರನಿಗಿಂತ ಶಿವ, ಹೆಚ್ಚಾದರೆ ಅದು ಲಿಂಗವಾಯಿತು. ಲಿಂಗದ ರಚನೆಯಲ್ಲಿ ಶಕ್ತಿಯನ್ನು ಅಳವಡಿಸಿರುವುದು, ಶಿವಭಾಗವು ಮೇಲೆದ್ದು ನಿಂತಂತೆ ಕಾಣಿಸುವುದು ಈ ತಾತ್ಪರ್ಯದಲ್ಲಿಯೇ. ಲಿಂಗಪುರಾಣವು **'ಲಿಂಗವೇದೀ ಮಹಾದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ'**ಎಂದಿರುವುದನ್ನು ಗಮನಿಸಬೇಕು. ಶಿವನನ್ನು ಪ್ರಕಾಶ (ಬ್ರಹ್ಮ) ಎಂದೂ ಶಕ್ತಿಯನ್ನು ವಿಮರ್ಶಾ (ಮಾಯಾ) ಎಂದೂ ಶೈವತಂತ್ರಗಳು ವಿವರಿಸುತ್ತವೆಯಷ್ಟೆ. ಶಕ್ತಿಯ ಬಿಂಬವು ಲಿಂಗವನ್ನು ಕೈಯಲ್ಲಿಯೋ ತಲೆಯ ಮೇಲೋ ಧರಿಸಿರುವಂತೆ ಶಿಲ್ಪಗಳಿವೆ. ಚಂಡೀಮಹಾತ್ಮೆಯ ಒಕ್ಕಣೆಯಂತೆ ಮಹಾಲಕ್ಷ್ಮಿಯ ಮೂರ್ತಿಲಕ್ಷಣ–

'ಮಾತುಲಿಂಗಂ ಗದಾಂ ಖೇಟಂ ಪಾನಪಾತ್ರಂ ಚ ಬಿಭ್ರತೀ ।
ನಾಗಂ ಲಿಂಗಂ ಚ ಯೋನಿಂ ಚ ಬಿಭ್ರತೀ ನೃಪ ಮೂರ್ಧನಿ॥'

ಇಲ್ಲೆಲ್ಲ ಸೂಚಿತವಾಗುವ ವಿವರ ಶಕ್ತಿಯಲ್ಲಿಯೇ ಶಿವ ಇರುವನಾದರೂ ಶಕ್ತಿಗಿಂತ ಶಿವನ ಆಧ್ಯಾತ್ಮಿಕ ಮೇಲ್ಮೆ. ಭಗವದ್ಗೀತೆಯು 'ರುದ್ರಾಣಾಂ ಶಂಕರಶ್ಚಾಸ್ಮಿ' ಎನ್ನುವಾಗಲೂ ಇದೇ ಧ್ವನಿಯಿದೆ. ಊರ್ಧ್ವಲಿಂಗವೆಂಬುದು ಈ ಮೇಲ್ಮೆಯನ್ನು ಸಾಂಕೇತಿಕವಾಗಿ ಕಾಣಿಸುವ ಕುರುಹಷ್ಟೆ. ಮಹಾಭಾರತದಲ್ಲಿ ರುದ್ರನ ಹೆಚ್ಚಳವನ್ನು ಮರೆತು ಶಿವನ ಆಧಿಕ್ಯವನ್ನು ಎತ್ತಿ ಹೇಳುವ ಪ್ರಸಂಗವೊಂದು ಬರುತ್ತದೆ (ಶಾಂತಿ ಪರ್ವದಲ್ಲಿ). ನೆರೆದ ದೇವತೆಗಳ, ಋಷಿಗಳ ಸಭೆಯಲ್ಲಿ ದಧೀಚಿಯು ಶಿವನ ಮೇಲ್ಮೆಯನ್ನು ಸಾರುತ್ತಾನೆ. ಆಗ ದಕ್ಷನು–

'ಸಂತಿ ನೋ ಬಹವೋ ರುದ್ರಾಃ ಶೂಲಹಸ್ತಾಃ ಕಪರ್ದಿನಃ।
ಏಕಾದಶಸ್ಥಾನಗತಾ ನಾಹಂ ವೇದ್ಮಿ ಮಹೇಶ್ವರಂ॥'

ಎನ್ನುತ್ತಾನೆ. ಶೂಲವನ್ನು ಕೈಯಲ್ಲಿ ಹಿಡಿದು, ಜಡೆಯನ್ನು ಎತ್ತಿಕಟ್ಟಿ ಆಡ್ಡಾಡುವ ರುದ್ರರು ಅನೇಕ ಮಂದಿ ಅವನಿಗೆ ಪರಿಚಿತರು; ಆದರೆ ಸೌಮ್ಯನಾದ ಶಿವನನ್ನು ದಕ್ಷ ಅರಿತಿರಲಿಲ್ಲ. ಆಗಿನ್ನೂ ಅವನ ಹಿರಿಮೆ ಮೊಗ್ಗೊಡೆಯುತ್ತಿದ್ದಿತು.

ಶಿವನನ್ನು ಅವ್ಯಕ್ತವೆಂದು ಶಕ್ತಿಯನ್ನು ವ್ಯಕ್ತವೆಂದೂ ಭಾವಿಸುವುದು ನಾಥಸಂಪ್ರದಾಯದಲ್ಲಿಯೂ, ಶೈವಸಿದ್ಧಾಂತದಲ್ಲಿಯೂ, ಬರುವ ವಿವರ. ಶಿವಶಕ್ತಿಯರು ಕೂಡಿರುವ ಲಿಂಗ ವ್ಯಕ್ತಾವ್ಯಕ್ತವಾದುದು. ವ್ಯಕ್ತವಾದ ಶಕ್ತಿಯನ್ನೇ ಅಧಿಕರಿಸಿ ನಿರೂಪಿಸುವುದಾದರೆ ಸ್ತ್ರೀಯಂತೆ ಕಾಣಿಸುವುದು ವಾಡಿಕೆ. ಸೈಂಧವಸಂಸ್ಕೃತಿಯ ಅವಶೇಷಗಳಲ್ಲಿ ಮಾತೃದೇವತೆಯರ ಶಿಲ್ಪಚಿತ್ರಗಳಿವೆ. ಸೈಂಧವಸಂಸ್ಕೃತಿಯು ಬಹುಮಟ್ಟಿಗೆ ನಾಗರಸಂಸ್ಕೃತಿ ಅದಕ್ಕೂ ಮುಂಚೆ ಗ್ರಾಮೀಣಸಂಸ್ಕೃತಿಯೊಂದು ಅಲ್ಲೆಲ್ಲ ಹರಡಿದ್ದುದು ಬಲೂಚಿಸ್ಥಾನದ ಕುಲ್ಲಿ ಮತ್ತು ಜ್ಹೋಬ್‌ಕಣಿವೆಗಳ ಅವಶೇಷಗಳಿಂದ ತಿಳಿದುಬರುತ್ತದೆ. ಕುಲ್ಲಿಯಲ್ಲಿನ ಮಣ್ಮಯ ಪ್ರತಿಮೆಗಳು ಶಕ್ತಿಯ ಸೌಮ್ಯರೂಪವನ್ನೂ ಜ್ಹೋಬ್ ಪ್ರತಿಮೆಗಳು ಉಗ್ರರೂಪವನ್ನೂ ತಳೆದಿರುವುದು ಸ್ವಾರಸ್ಯವಾಗಿದೆ. ಮುಂದೆ ಶಕ್ತಿಯ ಕಲ್ಪನೆಯಲ್ಲಿ ಗೌರೀ-ಕಾಳೀ ಎಂಬ ಎರಡು ರೂಪಗಳು ಮೈದಳೆಯಲು ಕುಲ್ಲಿ ಮತ್ತು ಜ್ಹೋಬ್ ಪ್ರತಿಮೆಗಳೇ ಕಾರಣವಾದುವೆನ್ನಬಹುದು. ರುದ್ರ–ಶಿವರ ಸ್ವಭಾವದಲ್ಲಿ ಭೇದವಿದ್ದಂತೆಯೇ ಇಲ್ಲಿಯೂ ಒದಗಿತು.

ಅಥರ್ವವೇದದಲ್ಲಿ ಬರುವ ವ್ರಾತ್ಯಕಾಂಡವು (೧೫.೫) ವ್ರಾತ್ಯರೆಂಬ ಜನರನ್ನು ಕುರಿತಿದ್ದು ವ್ರಾತ್ಯರು ಸೈಂಧವ ಸಂಸ್ಕೃತಿಯ ಸಮಯದಲ್ಲೇ ಇದ್ದವರೆಂದು ಒಂದು ಊಹೆಯಿದೆ (ದೇವದತ್ತ ರಾಮಕೃಷ್ಣ ಭಂಡಾರಕರರು). ಅವರು ಯೋಗಿಗಳ

ಪೂರ್ವಜರೆಂದೂ ಹೇಳುತ್ತಾರೆ (ಜೆ.ಡಬ್ಲ್ಯು.ಹಾವುರ್). ವ್ರತಗೆಟ್ಟವರು ವ್ರಾತ್ಯರಾದರೆಂದು ಕೆಲವರ (ಹರಿಪ್ರಸಾದ ಶಾಸ್ತ್ರಿ) ವಾದವಾದರೂ, ಸಂಸ್ಕಾರಹೀನರು ವ್ರಾತ್ಯರೆಂದು ಆನಂದಗಿರಿಯ ಒಕ್ಕಣೆಯಾದರೂ ('ಸಂಸ್ಕಾರಹೀನೋ ವ್ರಾತ್ಯ ಇತಿ') ಅವರು ಸಂಘಜೀವಿಗಳೆಂದೂ ಮಾತು, ಮಂತ್ರ, ತಂತ್ರಗಳಲ್ಲಿ ಚತುರರೆಂದೂ ತಿಳಿದುಬರುತ್ತದೆ. ತಾಂಡ್ಯ ಮಹಾಬ್ರಾಹ್ಮಣದಲ್ಲಿ ಇವರನ್ನು ಹೀನ,ನಿಂದಿತಗಳೆಂಬ ಪಂಗಡಗಳಲ್ಲದೆ ಗಿರಾಗಿರ (ವಿಷವನ್ನುಣ್ಣುವವರು,ಎಂದರೆ ಉಗ್ರವಾದ ಬಾಳನ್ನು ನಡೆಸುವವರು) ಮತ್ತು ಸಮನೀಚಮೇಢ್ರ (ಎಂದರೆ ಇಂದ್ರಿಯನಿಗ್ರಹದಿಂದ ಯೋಗಿಗಳಾದವರು) ಎಂಬ ವಿಭಾಗಗಳಲ್ಲಿಯೂ ಕಾಣಿಸುತ್ತದೆ. ಇವರ ಬಾಳುವೆ ಗುಂಪಿನಲ್ಲೇ ಇರುತ್ತಿದ್ದು, ಉಗ್ರವಾಗಿರುತ್ತಿದ್ದರೆಂದು ಪತಂಜಲಿ ಸೂಚಿಸಿದ್ದಾನೆ. (**'ಉತ್ಸೇಧಜೀವಿನಃ ಸಂಘಾ ವ್ರಾತಾಃ...ವ್ರಾತಕರ್ಮಣಾ ಜೀವತೇತಿ ವ್ರತಿನಃ'**). ಇವರ ಬಗ್ಗೆ ಶಿಷ್ಟರೆಂದುಕೊಂಡವರ ಟೀಕೆ ಏನೇ ಇರಲಿ, ಇವರು ಪ್ರಭಾವ ಶಾಲಿಗಳಾಗಿದ್ದವರೆನ್ನುವುದರಲ್ಲಿ ಸಂಶಯವಿಲ್ಲ. ಶಿವನನ್ನು ಏಕವ್ರಾತ್ಯನೆಂದು ಕರೆದು ಸ್ಕಂಭಕ್ಕೂ ಲಿಂಗಕ್ಕೂ ತಾದಾತ್ಮ್ಯವನ್ನು ಕಲ್ಪಿಸಿರುವುದನ್ನು ಋಗ್ವೇದದ ಮಂತ್ರಗಳಲ್ಲಿಯೇ ಕಾಣುತ್ತೇವೆ. ಅಥರ್ವವೇದವು **'ಸ್ಕಂಭೋ ದಾಧಾರ ದ್ಯಾವಾಪೃಥಿವೀ'** ಎನ್ನುವಲ್ಲಿ ಏಕವ್ರಾತ್ಯನಾದ ಶಿವನ ಅಗ್ಗಳಿಕೆಯೇ ಇರುವುದು.

ಸೈಂಧವಸಂಸ್ಕೃತಿಯ ಅವಶೇಷಗಳಲ್ಲಿ ಮೊಹೆಂಜೊದಾರೋವಿನಲ್ಲಿ ದೊರೆತ 'ಪಶುಪತಿ–ಶಿವ'ನೆನ್ನುವ ದೇವತೆಯ ಮುದ್ರಿಕೆ ಪ್ರಸಿದ್ಧವಾಗಿದೆ. ಇವನು ತ್ರಿಮುಖ ಮಹಾದೇವನೆಂದೂ ಶಿವನ ಪೂರ್ವರೂಪವೆಂದೂ ಕೆಲವರು (ಆರ್.ಎನ್. ದಾಂಡೇಕರರು ಇತ್ಯಾದಿ) ಪರಿಗಣಿಸಿದರೆ, ಋಗ್ವೇದದಲ್ಲಿ (೧೦,೮,೯) ಬರುವ ತ್ವಾಷ್ಟ್ರ ವಿಶ್ವರೂಪನೆಂದೂ (ಎಸ್. ಶ್ರೀಕಂಠ ಶಾಸ್ತ್ರಿಗಳು) ಅಗ್ನಿಯೆಂದೂ (ಬಿ.ಎ. ಸಾಲೆತ್ತೂರರು), ಕುವಿಜಸ್ ಎಂಬ ಉಗ್ರದೇವತೆಯೆಂದೂ (ಹ್ರೋಜ್ನಿ), ಆನ್ ಎಂಬ ಗಂಡುದೈವವೆಂದೂ (ಹೆರಾಸರು) ಮಹಿಷಾಸುರ–ದುರ್ಗೆಯೆಂದೂ ಬಗೆಬಗೆಯಾಗಿ ನಿರ್ದೇಶಿಸಿದ್ದಾರೆ. ಮೂರುಮುಖಗಳೇನೋ ಈ ದೇವತೆಗೆ ಇದ್ದಂತಿದೆ; ತಲೆಯ ಮೇಲೆ ಇಕ್ಕೋಡಿನಂಥ ಆಭರಣವಿದೆ (ಇದೇನು ಶೂಲದ ಮೂಲರೂಪವೋ ಕಿರಾತನ ಸಂಕೇತವೋ, ಜಟಾ ಶಿಖಂಡವೋ, ಅಥವಾ ಎಮ್ಮೆಯ ಕೋಡುಗಳೋ ಸ್ಪಷ್ಟವಾಗುವುದಿಲ್ಲ; ವಿಷಾಣಿಗಳೆಂಬ ನಿರ್ದೇಶನ ಶಿವಾಸ–ಜನರಿಗಿದ್ದುದಕ್ಕೆ ಋಗ್ವೇದದಲ್ಲೇನೋ ಪ್ರಸ್ತಾಪವಿದೆ: ವಿಷಾಣಿಗಳೆಂದರೆ ಕೋಡನ್ನು ಕಟ್ಟಿಕೊಂಡವರು) ಮೂರ್ತಿ ಬೆತ್ತಲೆಯಿರುವಂತಿದೆ; ಕೈಕಾಲುಗಳು ಯೋಗಮುದ್ರೆಯಲ್ಲಿವೆ. ಎದೆಯ ಮೇಲೆ ತ್ರಿಕೋಣಾಕಾರದ ಕವಚವಿದೆ. ಈ ಮೂರ್ತಿಯ ಸುತ್ತ ಪಶುಗಳು (ಆನೆ, ಹುಲಿ, ಎಮ್ಮೆ, ಖಡ್ಗಮೃಗ, ಆಸನದ ಕೆಳಗೆ ಜಿಂಕೆಗಳು) ಇರುವುದರಿಂದ ಇದನ್ನು 'ಪಶುಪತಿ'ಯೆಂದರು. ಮೂರ್ತಿಯ ನಿರ್ದೇಶನ ಏನಾದರೂ ಇರಲಿ, ಮೂರ್ತಿಯು ಕುಳಿತಿರುವ ಆಸನ ಸ್ವಾರಸ್ಯವಾದ ವಿವರ. ವ್ರಾತ್ಯರಿಗೆ ವಿಶಿಷ್ಟವಾದ ಆಸಂದಿಯೆಂಬ ಆಸನವೆಂದು ಆರ್. ಎನ್. ದಾಂಡೇಕರರು ಅಭಿಪ್ರಾಯಪಡುತ್ತಾರೆ. ಇದು ಏಕವ್ರಾತ್ಯನ ಪ್ರಾಚೀನ ಚಿತ್ರಣವೇ? ಮೂರ್ತಿಯಲ್ಲಿ ಕಾಣುತ್ತದೆಯೆನ್ನುವ ಬ್ರಹಚ್ಛೇಪವು ಊರ್ಧ್ವಲಿಂಗವನ್ನು ಹೇಳುವುದೋ, ವ್ರಾತ್ಯರಲ್ಲಿ ಒಂದು ಪಂಗಡವಾದ ಸಮನೀಚಮೇಢ್ರರನ್ನು ಸೂಚಿಸುವುದೋ ? ಇದೇ ಮುದ್ರಿಕೆಯಲ್ಲಿ ಆರೇಳು ಅಕ್ಷರಗಳ ಬರಹವಿದೆ. ಇದನ್ನು ಓದಲಾಗುವವರೆಗೆ ಚಿತ್ರಣದ ನಿರ್ದೇಶನ ಸಂದಿಗ್ಧವಾಗಿಯೇ ಉಳಿಯುತ್ತದೆ. ಆದರೆ ಪತಂಜಲಿಯು **ಉತ್ಸೇಧ ಜೀವಿ**'ಗಳೆಂದು ಬಣ್ಣಿಸಬಲ್ಲ ಜನರು ಸೈಂಧವಸಂಸ್ಕೃತಿಯ ಹಲವು ಮುದ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ.

ಶಕ್ತಿಯನ್ನು ಶಿವನಿಂದ ಬೇರ್ಪಡಿಸಿ ಚಿತ್ರಿಸಿಕೊಳ್ಳುವ ಅಗತ್ಯವೊದಗಿದಾಗ ವೃಷಭವು ಶಕ್ತಿಯನ್ನು ಸೂಚಿಸುವ ಸಾಧನವಾಯಿತು. ಸೈಂಧವಸಂಸ್ಕೃತಿಯಲ್ಲೂ, ಅದನ್ನೂ ಮುಂಚಿನ ಕುಲ್ಲಿ, ಜ್ಹೋಬ್, ಮುರ್ಖನ್, ರೂಪರ್ ಮೊದಲಾದೆಡೆ ಕಾಣುವ ಸಂಸ್ಕೃತಿಯಲ್ಲೂ ಬಸವನ ಚಿತ್ರಣ ಮುದ್ರಿಕೆಗಳ ಮೇಲೆ ಮತ್ತೆ ಮತ್ತೆ ಬರುತ್ತದೆ. ಕುಲ್ಲಿಯ ಅವಶೇಷಗಳಲ್ಲಿ ಮಣ್ಣಿನ ಮಡಕೆಗಳ ಮೇಲೆ ಬಸವನ ಚಿತ್ರಗಳನ್ನು ಬಣ್ಣಗಳಲ್ಲಿ ಬಿಡಿಸಿರುವುದಿದೆ; ಸುಟ್ಟ ಮಣ್ಣಿನ ಮೂರ್ತಿಗಳೂ ಇವೆ. ಎರಡರಲ್ಲೂ ನೈಜ ಚಿತ್ರಣಕ್ಕಿಂತ ಸಾಂಕೇತಿಕವಾದ ಕಳೆಯೇ ಹೆಚ್ಚಾಗಿದೆಯೆಂದು ಗಮನಿಸಬಹುದು. ಸೈಂಧವಸಂಸ್ಕೃತಿಯ ಮುದ್ರಿಕೆಗಳಲ್ಲಿ ಕಾಣುವ ಬಸವಗಳು ವಾಸ್ತವಿಕತೆಯ ಛಾಯೆಯನ್ನು ಹೆಚ್ಚಾಗಿ ತಳೆದಿವೆಯೆನ್ನಿ. ಆದರೆ ಕುಲ್ಲಿಯ ಬಸವಗಳಲ್ಲಿ ಡುಬ್ಬ ಎದ್ದುಕಾಣುತ್ತದೆ. ಸೈಂಧವ ಬಸವಗಳಲ್ಲಿಯೂ ಡುಬ್ಬ ಇರುವುದಾದರೂ,ಡುಬ್ಬ ಇರದ ಬಸವಗಳೂ ಇವೆ. ಬಸವ ಶಕ್ತಿಯ ಸಂಕೇತವೆನ್ನುವುದು ಪ್ರಪಂಚದ ಎಲ್ಲ ಪ್ರಾಚೀನ ಜನರಲ್ಲಿಯೂ ಪ್ರಚಲಿತವಾಗಿರುವ ಕಲ್ಪನೆಯೇ : ಇಂದಿಗೂ ಅದೇ ಭಾವನೆಯಿರುವುದನ್ನೂ ಗಮನಿಸಬಹುದು. ಬಸವ ಗಂಡಾದರೂ ಅದು ಪ್ರತಿನಿಧಿಸುವುದು ಶಕ್ತಿಯನ್ನು, ಸ್ತ್ರೀತತ್ತ್ವವನ್ನು, ಪ್ರಕೃತಿಯನ್ನು. ಅದರ ಡುಬ್ಬ ಶಿವನ ಮೂಲಾಕೃತಿಯೇ ? ಶಕ್ತಿಯಲ್ಲಿ ಶಿವನನ್ನು ಕಾಣಿಸುವ ಪ್ರಯಾಸ ಇಲ್ಲಿ ಕಾಣಸಿಗುವುದೆ ?

ವೃಷಭದ ಹಿರಿಮೆ ವೈದಿಕ ಸಾಹಿತ್ಯದಲ್ಲೇನೋ ಬೇಕಾದಷ್ಟು ದೊರೆಯುತ್ತದೆ. ಇಂದ್ರನನ್ನೂ ಹಲವಾರು ಇತರ ದೇವತೆಗಳನ್ನೂ ವೃಷಭರೆಂದು ಕರೆದಿರುವುದುಂಟು. ರುದ್ರನನ್ನೂ ವೃಷಭನೆಂದೇ ಕರೆದಿರುವುದಿದೆ (ಋಗ್ವೇದ ೨.೩೩.೭). ತಾಂಡ್ಯಮಹಾಬ್ರಾಹ್ಮಣದಲ್ಲಿ (೬,೯,೭) ರುದ್ರನು ಮಹಾದೇವನಾಗಿ ಗೋವುಗಳನ್ನು ಕೊಲ್ಲುವನೆಂದು ಹೇಳಿರುವುದು ಸ್ವಾರಸ್ಯವಾಗಿದೆ. ಅವನು ಆಕಾಶದಲ್ಲಿ ಕೆಂಬಣ್ಣದ ವರಾಹನಾಗಿಯೂ ಕಾಣಿಸಿಕೊಳ್ಳುವನಂತೆ (ಋಗ್ವೇದ ೧,೧೧೪,೫). ಹೀಗೆ ವರಾಹ–

ವೃಷಭನನ್ನು ವರ್ಣನೆ ರುದ್ರನ ಬಲವನ್ನೂ, ಪರಾಕ್ರಮವನ್ನೂ, ಘೋರಕರ್ಮವನ್ನೂ ಎತ್ತಿಹೇಳುತ್ತದೆ. ರುದ್ರ-ಶಿವರ ದ್ವೈಭಾವನೆ ಬಳಕೆಯಲ್ಲಿದ್ದಾಗ ರುದ್ರನನ್ನು ಬಸವನೆಂದು ಕಾಣಿಸಿ, ಶಿವನನ್ನು ಮನುಷ್ಯಾಕೃತಿಯಲ್ಲಿ ಕಾಣಿಸುತ್ತಿದ್ದರೆಂದು ತೋರುತ್ತದೆ. ಸೈಂಧವಸಂಸ್ಕೃತಿಯ ಮುದ್ರಿಕೆಗಳಲ್ಲಿ ಇದನ್ನು ಕಾಣಬಹುದು; ವೈದಿಕಸಾಹಿತ್ಯದಲ್ಲಿ ಇದರ ಸಮರ್ಥನೆ ದೊರೆಯುತ್ತದೆ. ಕ್ರಿಸ್ತಾಬ್ದ ಹಿಂದೆ ಮುಂದೆ ನಾಣ್ಯಗಳಲ್ಲಿ ಶಿವನೊಂದಿಗೆ ಬಸವನನ್ನು ಚಿತ್ರಿಸಿರುವುದನ್ನು ಕಾಣಬಹುದು. ಕುಷಾಣರಾಜ ವೇಮ–ಕಾಡ್‌ಫಿಸಸ್‌ನ ಒಂದು ಬಂಗಾರದ ನಾಣ್ಯದ ಮೇಲೆ ಎರಡುಕೈಗಳ ಶಿವನ ಪಕ್ಕದಲ್ಲಿ ಬಸವವಿದೆ, 'ಮಹೇಶ್ವರ'ನೆಂಬ ಬರಹವೂ ಇದೆ. ಕುಷಾಣರ ನಾಣ್ಯಗಳಲ್ಲಿ ಬಸವನ ಚಿತ್ರಣ ವಿಶೇಷವಾಗಿದೆ. ಮಿಹಿರಕುಲನ ಒಂದು ನಾಣ್ಯ (ಕ್ರಿಸ್ತಾಬ್ದ ೫೧೫ರ ಸುಮಾರಿನದು) 'ಜಯತು ವೃಷಃ' ಎಂಬ ಬರಹವನ್ನೂ ಕಾಣಿಸುತ್ತದೆ. ಯವನರು ಶೈವಧರ್ಮವನ್ನು ಪರಿಗ್ರಹಿಸಿದಾಗ ಬಸವನ ಲಾಂಛನ ಅವರಿಗೆ ಪ್ರಿಯವಾಯಿತೆಂದು ತೋರುತ್ತದೆ. ಗಂಧಾರದಲ್ಲಿ ದೊರೆತ ಇಂಡೋ–ಸಿಥಿಯನ್ ದೊರೆಯೊಬ್ಬನ ನಾಣ್ಯದ ಮೇಲೆ ಒಂದು ಕಡೆ ಬಸವನ ಚಿತ್ರವಿದ್ದು ಗ್ರೀಕ್ ಲಿಪಿಯಲ್ಲಿ 'ತವುರೊಸ್' ಎಂದೂ ಖರೋಷ್ಠಿಯಲ್ಲಿ 'ಉಷಭ' ಎಂದೂ ಬರಹಗಳಿವೆ; ಇನ್ನೊಂದು ಕಡೆ ಹೆಣ್ಣು ದೇವತೆಯೊಬ್ಬಳ ಚಿತ್ರಣವಿದ್ದು ಖರೋಷ್ಠಿಯಲ್ಲಿ 'ಪಬಲವತಿ ದೇವತಾ' (ಎಂದರೆ ಪುಷ್ಕಲಾವತಿ ನಗರದ ದೇವತೆ, ಗಂಧಾರದೇಶದ ರಾಜಧಾನಿಯಾಗಿದ್ದುದು ಪುಷ್ಕಲಾವತಿ) ಎಂಬ ಲೇಖವಿದೆ.

ಬಸವನು ರುದ್ರರೂಪಿಯಾಗಿ, ಮಾನುಷಮೂರ್ತಿಯು ಶಿವರೂಪಿಯಾದರೆ ಇಲ್ಲಿ ಶಿವನನ್ನು ಸ್ತ್ರೀಯೆಂದು ಕಾಣಿಸಿರಬಹುದೆ ? ಶೂಲವನ್ನು ಹಿಡಿದು ನಿಂತ ಗಂಡಸು ಶಿವನನ್ನು ಪ್ರತಿನಿಧಿಸುವಂತೆ ಕುಷಾಣನಾಣ್ಯಗಳಲ್ಲಿ ಕಂಡುಬಂದಾಗ ಶಿವನು ಸೌಮ್ಯನೇ. ಕುಷಾಣ ಮತ್ತು ಯವನ ಶಿಲ್ಪಿಗಳು ಶಿವನನ್ನು ಹೆಂಗಸು–ಗಂಡಸು (ಅರ್ಧನಾರೀಶ್ವರ)ಎಂದು ಚಿತ್ರಿಸುತ್ತಿದ್ದುದನ್ನು ಡಾ॥ ಆನಂದಕುಮಾರಸ್ವಾಮಿಯವರು ಪ್ರಸ್ತಾಪಿಸಿದ್ದಾರೆ. ಮೌಖರಿವಂಶದ ಅರಸರ ಕಾಲಕ್ಕೆ ಅರ್ಧನಾರೀಶ್ವರನ (ಅರ್ಧಗೌರೀಶ್ವರ ಅಥವಾ ಅರ್ಧಯುವತೀಶ್ವರ) ಪ್ರತಿಮೆಗಳು ಬಳಕೆಗೆ ಬಂದುವು. 'ದ್ವೇ ತನೂ' ಎನ್ನುವ ಹಳೆಯ ನಿರೂಪಣೆಗೆ ಮೂರ್ತಿಶಿಲ್ಪದಲ್ಲಿ 'ದೇಹಾರ್ಧಘಟನೆ'ಯನ್ನು ಮಾಡಿದುದನ್ನು ಪುಷ್ಪದಂತನು (ಗುಪ್ತಅರಸರ ಕಾಲದಲ್ಲಿ) ತನ್ನ 'ಮಹಿಮ್ನಸ್ತವ'ದಲ್ಲಿ ಸೂಚಿಸುತ್ತಾನೆ. ಅರ್ಧನಾರೀಶ್ವರನ ಪ್ರತಿಮಾಲಕ್ಷಣವು ಬಲಭಾಗದಲ್ಲಿ ಉಗ್ರವಾದ ನೋಟವೂ ಎಡಭಾಗದಲ್ಲಿ ಸೌಮ್ಯವಾದ ನೋಟವೂ ಇರಬೇಕೆನ್ನುತ್ತದೆ (**'ದಕ್ಷಿಣೇ ರೌದ್ರದೃಷ್ಟಿಃ ಸ್ಯಾತ್ ವಾಮಪಾರ್ಶ್ವೇ ತು ಶೀತಲಂ'**). ಎಂದರೆ ಅರ್ಧನಾರೀಶ್ವರಮೂರ್ತಿಯು ರುದ್ರ–ಶಿವರ ವ್ಯಕ್ತಸಂಘಟನೆಯೆಂದಾಯಿತು. ಇವೆರಡರ ಅವ್ಯಕ್ತಸಂಘಟನೆಯೇ ಲಿಂಗ. ವಾಯವೀಸಂಹಿತೆಯಲ್ಲಿ **'ಲಿಂಗಂ ತು ಶಿವಯೋರ್ದೇಹಃ'** ಎನ್ನುವ ಮಾತು ಬರುತ್ತದೆ. ಶಿವ–ಶಿವೆಯರಿಬ್ಬರ ದೇಹವೂ ಕೂಡಿ ಲಿಂಗವಾಯಿತೆಂದು ಧ್ವನಿ. ಲಿಂಗದಲ್ಲಿ ಶಿವಭಾಗವೇ ವಿಶಿಷ್ಟವಾದುದಾದರೂ, ಅದರಲ್ಲಿನ ಶಿವಾ–ಭಾಗ ಅಥವಾ ಸೌಮ್ಯಭಾಗವನ್ನು (ಎಂದರೆ ಸ್ತ್ರೀಭಾಗವನ್ನು) ಪೂಜಿಸುವವರು ಶೈವರೆನಿಸಿದರು ಎಂದು 'ಆಚಾರಭೇದತಂತ್ರ' ಹೇಳುತ್ತದೆ :–

'ಅಷ್ಟಾಂಗಯೋಗ ಸಂಯುಕ್ತೋ ಯಜೇದ್ದೇವೀಂ ವಿಧಾನತಃ ।
ಯಾವದ್ ಧ್ಯಾನಂ ಸಮಾಧಿಸ್ಥ ತಾವತ್ ಶೈವಃ ಪ್ರಚಕ್ಷತೇ' ॥

ಇದು ಶಕ್ತಿವಿಶಿಷ್ಟವಾದ ಶಿವನ ಕಲ್ಪನೆ. ಶ್ರೀಕಂಠಭಾಷ್ಯದಲ್ಲಿ **'ವಿಚಿತ್ರಾನಂತಶಕ್ತಿಶಬಲಮಾಯಾಪರಮಶಕ್ತಿವಿಶಿಷ್ಟಃ ಪರಮೇಶ್ವರಃ'** ಎನ್ನುವ ನಿರೂಪಣೆಯಿದೆಯಷ್ಟೆ. ಶಿವನ ಕಲ್ಪನೆಯಲ್ಲಿ ಶಕ್ತಿಯೂ ಎಡೆಬಿಡದೆ ಸೇರಿಬರುವುದು ತುಂಬ ಹಿಂದಿನ ಸಂಪ್ರದಾಯ. ಶಿವನಿಗೆ ಆದಿಶಕ್ತಿ, ಪರಾಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿಗಳೆಂಬ ಐದು ಶಕ್ತಿಗಳನ್ನು ಹೇಳಿ ಅದಕ್ಕನುಗುಣವಾಗಿ ಹಲವು ಪಂಚ ಪ್ರಕ್ರಿಯೆಗಳನ್ನು ಅಳವಡಿಸಿದ್ದಾರೆ.

ಕ್ರಿಸ್ತಪೂರ್ವ ಮೊದಲ ಶತಕದ ಸುಮಾರಿಗೇ ಭಾಗವತಸಂಪ್ರದಾಯದಲ್ಲಿ ಪಂಚವೀರರ ಎಣಿಕೆಯಿದ್ದಿತು. ಮಥುರೆಯ ಬಳಿ ಮೋರಾ ಬಾವಿಯಲ್ಲಿ ದೊರೆತ ಮಹಾಕ್ಷತ್ರಪ ರಾಜೂವಲನ ಶಾಸನವು 'ಭಗವತಾಂ ವೃಷ್ಣೀನಾಂ ಪಂಚವೀರಾಣಾಂ ಪ್ರತಿಮಾಃ' ಎಂದು ಉಲ್ಲೇಖಿಸುತ್ತದೆ. ಈ ಪಂಚವೀರರು, ಈ ಶಾಸನವನ್ನು ಪತ್ತೆಮಾಡಿ ಪ್ರಕಟಿಸಿದ ಲ್ಯೂಡೆರ್ಸ್ ಮತ್ತು ಅಸ್‌ಪಾಫ್ ಇವರ ಪ್ರಕಾರ, ಬಲದೇವ, ಅಕ್ರೂರ, ಅನಾಧೃಷ್ಟಿ, ಸಾರಣ ಮತ್ತು ವಿದೂರಥ ಎಂಬುವರು. ಆದರೆ ವಾಯುಪುರಾಣದ 'ಪಂಚೈತೇ ವಂಶವೀರಾಃ' ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ, ಅನಿರುದ್ಧ ಈ ಐವರಿಗೂ ಮೇಲೆ ಹೇಳಿದ ಐದು ಶಕ್ತಿಗಳಿಗೂ ಸಂಬಂಧವಿಲ್ಲದೆ ಇಲ್ಲ. ಭಾಗವತಧರ್ಮದಲ್ಲಿ ಶೈವ,ವೈಷ್ಣವ ಎನ್ನುವ ಚೌಕಟ್ಟು ಗೌಣವಾದ ವಿವರ; ಎರಡಕ್ಕೂ ಮೂಲವಾದ, ಸಮನಾದ ಕಲ್ಪನೆಯ, ಕ್ರಿಯೆಗಳ ಸಮಷ್ಟಿವ್ಯಾಪಾರವನ್ನು ನಾವು ಗಮನಿಸಬೇಕು. ಪಂಚಶಕ್ತಿ, ಪಂಚವೀರ, ಪಂಚವ್ಯೂಹ, ಪಂಚಮುಖ, ಪಂಚಾಗ್ನಿ ಎಂಬುವೆಲ್ಲ ಭಾಗವತಧರ್ಮದ ವಿವರಗಳೇ. ಶಕ್ತಿಯನ್ನು (ಪ್ರಕೃತಿಯನ್ನು) ಮಾಯೆಯೆಂದೂ, ಶಕ್ತಿಯನ್ನುಳ್ಳ ತತ್ತ್ವವನ್ನು ವಿಷ್ಣುವೆಂದೋ ಮಹೇಶ್ವರನೆಂದೋ ನಿರ್ದೇಶಿಸುವುದನ್ನು ಭಗವದ್ಗೀತೆಯಲ್ಲಿಯೂ ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಕಾಣುತ್ತೇವೆ. ವಿಷ್ಣುಪರವಾದ ಭಾಗವತಧರ್ಮಕ್ಕೆ ಭಗವದ್ಗೀತೆ ಆಧಾರವಾದರೆ

ಉಗಮಸ್ಥಾನವಾದರೆ, ಶಿವಪರವಾದ ಭಾಗವತಧರ್ಮಕ್ಕೆ ಶ್ವೇತಾಶ್ವತರೋಪನಿಷತ್ತು ಆಧಾರ, ಆಕರ. ಶಕ್ತಿವಿಶಿಷ್ಟವಾದ ತತ್ತ್ವವನ್ನು ನಿರೂಪಿಸುವುದೇ ಭಾಗವತಧರ್ಮದ ತಿರುಳೆನ್ನಬಹುದು.

ಶೈವಧರ್ಮದ ಹಿನ್ನೆಲೆಯನ್ನು ಹುಡುಕಾಡುತ್ತ ಕೆಲವು ಪಂಡಿತರು ಆರ್ಯ, ದ್ರಾವಿಡ ಎನ್ನುವ ವಿಭಾಗವನ್ನು ಕಲ್ಪಿಸಿಕೊಂಡು, ಶಿವನ ಹೆಗ್ಗಳಿಕೆಯನ್ನು ಅರಿತುಕೊಂಡ ಸೈಂಧವಸಂಸ್ಕೃತಿಯು ದ್ರಾವಿಡರದ್ದು, ಅದಕ್ಕಿಂತ ಬೇರೆಯಾದ ವೈದಿಕ ಸಂಸ್ಕೃತಿ ಆರ್ಯರದ್ದು ಎಂದು ಹೇಳುತ್ತಾರೆ. ಈ ಕಲ್ಪನೆಗೆ ಬುಡವಿಲ್ಲವೆಂದು ಈಗ ಸಿದ್ಧವಾಗಿದೆ. ದ್ರಾವಿಡವೆಂದಾಗಲೀ ಆರ್ಯವೆಂದಾಗಲೀ ಪರಿಶುದ್ಧವಾದ ಜನಾಂಗ ಯಾವ ಕಾಲದಲ್ಲಿಯೂ ಇರಲಿಲ್ಲ : ನಮ್ಮ ನಾಡಿನ ಇತಿಹಾಸದ ಮೊದಲಹಂತಗಳಿಂದಲೂ, ಪ್ರಾಗಿತಿಹಾಸಕಾಲದಿಂದಲೂ ಇಲ್ಲಿದ್ದವರೆಲ್ಲ ಸಂಮಿಶ್ರ ಜನರೇ. ಮೇಲಾಗಿ ಆರ್ಯ, ದ್ರಾವಿಡ ಎನ್ನುವ ಮಾತುಗಳು ಜಾತಿಸೂಚಕವೂ ಅಲ್ಲ, ಸಂಸ್ಕೃತಿ ಸೂಚಕವೂ ಅಲ್ಲ, ನಮ್ಮ ಸಂಸ್ಕೃತಿ ಮೊದಲಿಂದಲೂ ಸಂಮಿಶ್ರ ಸಂಸ್ಕೃತಿಯೇ. ಸೈಂಧವ ಸಂಸ್ಕೃತಿಗೂ ವೈದಿಕಸಂಸ್ಕೃತಿಗೂ ವಿರೋಧವಿದ್ದಿತೆಂದು ಬಗೆಯುವುದೂ ತಪ್ಪೇ. ಎರಡೂ ಪರಸ್ಪರ ಪೂರಕವಾದುವು, ಕಾಲಕ್ರಮದಲ್ಲಿ ಕಾರಣಾಂತರಗಳಿಂದ ಬಂದೊದಗಿದ ಭೇದಗಳನ್ನೂ ವಿರೋಧಾಭಾಸಗಳನ್ನೂ ಈ ಪ್ರಾಚೀನಸ್ತರದಲ್ಲಿ ಕಾಣಲೆಣಿಸುವುದು ಸರಿಯಲ್ಲ. ಹಿನ್ನೆಲೆಯನ್ನು ಅರಸುವಾಗ, ಇತಿಹಾಸವನ್ನು ಗುರುತಿಸುವಾಗ ಕೆಲವು ಎದ್ದುಕಾಣುವ ವಿವರಗಳನ್ನು ಪರಿಶೀಲಿಸಬೇಕಾಗುತ್ತದೆ. ಶೈವಧರ್ಮದ ಹಿನ್ನೆಲೆಯಲ್ಲಿ ಹರಡಿಕೊಂಡಿರುವ ಇಂಥ ಕೆಲವು ವಿವರಗಳನ್ನು ಇಲ್ಲಿ ತೋರಿಸಲಾಗಿದೆ.

**ಕೆಲವು ಮುಖ್ಯವಾದ ಆಕರಗ್ರಂಥಗಳು**

(ಮೂಲ ಸಂಸ್ಕೃತ ಗ್ರಂಥಗಳನ್ನು, ಶಾಸನಗಳನ್ನು ಬಿಟ್ಟು)

1. D. R. Bhandarkar : **Vaishnavism, Saivism and Minor Religion,** Poona, 1928.
2. Radhakrishna Choudhary : **Vratyas in Ancient India,** 1964.
3. R. N. Dandekar : **Some Aspects of the History of Hinduism,** Poona, 1967.
4. Gopinath Kaviraj : **Aspects of Indian Thought**, Burdwan, 1966.
5. G. P. Guha : **Seals and Statuettes of Kulli and Zhob,** New Delhi, 1967.
6. Pranabananda Jash : **History of Saivism,** Roy & Chaudhary, Calcutta, 1974.
7. E. I. H. Mackay : **Further Excavations at Mohenjo Daro,** Vol I.
8. Sir I. Marshall : **Mohenjo Daro and Indus Valley Civilization,** Vol I.
9. Sankarananda : **Is Siva-linga a Phallus,** 1957.
10. K. N. Sastri : **New Light on Indus Valley Civilization,** 2 Volumes.
11. Jadunath Sinha : **Schools of Saivism,** Calcutta, 1970.

# ತಮಿಳುನಾಡಿನ ಶೈವ ಪರಂಪರೆ

**ಡಾ॥ ಕೆ. ಕುಶಾಲಪ್ಪಗೌಡ, ಮದ್ರಾಸು**

ವೇದಗಳಲ್ಲಿ ರುದ್ರನೆಂಬ, ಪಶುಪತಿಯೆಂಬ ಅಂಕಿತಗಳಿಂದ ಕೂಡಿ, ಒಂದು ರೀತಿಯಿಂದ ಜನಸಾಮಾನ್ಯದ ನಡವಳಿಕೆಗೆ ಹಾಗೂ ಬುದ್ಧಿ ವಲಯಕ್ಕೆ ಒಳಗಾಗುವ ಪರಿಕಲ್ಪನೆಯಾದ ದೇವತೆಯೇ ಕಾಲಕ್ರಮದಲ್ಲಿ ಶಿವನಾಮಾಂಕಿತನಾದನೆಂಬ ಹೇಳಿಕೆ ಎಲ್ಲರಿಗೂ ತಿಳಿದಿರುವುದೇ ಆಗಿದೆ. ಉತ್ತರ ಭಾರತದಲ್ಲಿ ಜನರಿಗೆ ಯಾಗ, ಹೋಮಗಳಲ್ಲಿ ಪ್ರಾಣಿವಧೆ ಹಾಗೂ ಮಾಂಸಭಕ್ಷಣದ ಆಚಾರಗಳನ್ನು ಖಂಡಿಸುವ ಮನೋವೃತ್ತಿ ಬೆಳೆದಿತ್ತೆಂದು ಕಾಣುತ್ತದೆ. ಆಸ್ತಿಕತೆಯೂ, ಅರ್ಥಪೌಲ್ಯವೂ ಇಲ್ಲವಾಗಿ ಕೇವಲ ಬಾಹ್ಯಾಚಾರಗಳಿಗೆ ಪ್ರಾಶಸ್ತ್ಯ ಬಂದಾಗ, ಅದು ಮಿತಿಮೀರಿದಾಗ, ಅದಕ್ಕೆ ಪ್ರತಿಕ್ರಿಯೆ ತಲೆದೋರುತ್ತದೆ. ಜೈನ–ಬೌದ್ಧ ಧರ್ಮಗಳು ಇಂತಹ ಪ್ರತಿಕ್ರಿಯೆ ಸಿಡಿದೆದ್ದ ಪರಿಣಾಮಗಳು ಎಂದು ಹೇಳಬಹುದು. ಆದರೆ ವೇದಾಗಮಗಳ ಬಗ್ಗೆ ಇಷ್ಟು ಕ್ರಾಂತಿ ಕಾರಕವಾಗದೆ ಇದ್ದರೂ ಅದಕ್ಕೆ ಅನ್ವಯಿಸಿ, ತನ್ನ ಸ್ವತಂತ್ರವಾದ ವೈಚಾರಿಕತೆಯ ಹಿನ್ನೆಲೆಯಿಂದ ಬಹುಜನರಿಗೆ ಸ್ವೀಕಾರಾರ್ಹವೆಂದು ಬೆಳೆದುಬಂದುದು ಶಿವ ಪರಿಕಲ್ಪನೆ ಹಾಗೂ ಶೈವಪಂಥ.

ದಕ್ಷಿಣ ಭಾರತಕ್ಕೆ ಇದು ಉತ್ತರ ಭಾರತದಿಂದ ಬಂದುದೇ ಇಲ್ಲ. ದ್ರಾವಿಡರೆಂಬ ಜನಾಂಗದವರ ಪಂಥವಾಗಿ ಮೊದಲಿದ್ದು, ಅನಂತರ ಆರ್ಯರ ಧಾರ್ಮಿಕ ವಲಯದೊಳಕ್ಕೆ ಸಮಾವೇಶಗೊಂಡಿತೇ ಎಂಬ ಚರ್ಚೆ ಬೆಳೆದಿದೆ. ತಮಿಳಿನ ಧರ್ಮ ಮತ್ತು ಜೀವನ ತತ್ತ್ವವಾಗಿರುವ ಇದು ಅದರ ಅತ್ಯಂತ ಪ್ರಾಚೀನ ಕಾಲದಿಂದ ಹಿಡಿದು ಇಂದಿನ ತನಕ ನಡೆದು ಬಂದಿದೆಯೆನ್ನಬಹುದು. ಆದರೆ ಅದರ ಮೂಲ ಎಲ್ಲಿಂದ, ಯಾವಾಗ ಎಂಬ ಬಗ್ಗೆ ಈಗ ಸರಿಯಾದ ತಿಳಿವಳಿಕೆ ನಮಗಾಗುವಂತಿಲ್ಲವಾಗಿದೆ.

ತಮಿಳು ಪಂಡಿತರ ಪ್ರಕಾರ ಸೂರ್ಯನ ಆರಾಧನೆಗೂ ಶಿವನಿಗೂ ಸಂಬಂಧವಿದೆ. ಅಂದರೆ ಮಾನವನ ಚರಿತ್ರೆಯಲ್ಲಿಯೇ ಮೊತ್ತಮೊದಲು ಎಲ್ಲ ಜನಾಂಗದವರಲ್ಲಿಯೂ ಇದು ಬಳಕೆಯಲ್ಲಿತ್ತು. 'ಶಿವನ್' ಎಂದು ಸೂರ್ಯನನ್ನು ನಿರ್ದೇಶಿಸುವ ಪದ 'ಶಿವಪ್ಪು' ಎಂಬ ಕೆಂಪು ಬಣ್ಣಕ್ಕಿರುವ ಪದಕ್ಕೆ ಸಂವಾದಿಯಾಗಿ, ಕಾಲಕ್ರಮದಲ್ಲಿ ಅದಕ್ಕೆ. ಕೆಂಪಾದ, ಮಂಗಳಕರವಾದ ಎಂಬಿತ್ಯಾದಿ ಅರ್ಥ ಬಂದಿತೆಂದೂ ಅದೇ ಶಿವನಿಗೆ ಅನ್ವರ್ಥವಾಯ್ತೆಂದೂ ಹೇಳುವವರಿದ್ದಾರೆ[1]. ಇನ್ನೊಂದು ಮತದಂತೆ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕುರಿತು ಹೇಳುವ ನಾಲ್ಕು ವೇದಗಳು, ಹಿಮಾಲಯ ತಲೆಯೆತ್ತುವುದಕ್ಕಿಂತ ಮೊದಲೇ ತಮಿಳಿನ ಋಷಿಗಳಿಗೆ ನೆಲೆವೀಡಾಗಿದ್ದ ಮಹೇಂದ್ರಪರ್ವತದೆಡೆಯಲ್ಲಿ ಪ್ರಚಲಿತವಾಗಿದ್ದುವು. ಆ ಸ್ಥಳವೀಗ ಕಡಲಿನೊಳಗೆ ಮುಳುಗಿ ಹೋಗಿದೆ. ಅವುಗಳನ್ನು ಕುರಿತು ಪ್ರಾಚೀನ ತಮಿಳು ಬರಹಗಳಲ್ಲಿ ಉಲ್ಲೇಖಗಳಿವೆ. ಇವು ಆರ್ಯನ್ ವೇದಗಳಿಗಿಂತಲೂ ಪ್ರಾಚೀನ; ಅವುಗಳಿಂದ ಇವನ್ನು ಪ್ರತ್ಯೇಕಿಸುವುದಕ್ಕೆ ಇವನು 'ಪಾಂಡ್ಯನ್ ನಾನ್ ಮರೈ' (ನಾನ್ = ನಾಲ್ಕು, ಮರೈ = ವೇದ) ಎಂದು ಕರೆಯಲಾಗುತ್ತಿತ್ತೆಂದೂ ಅವುಗಳು ಶಿವನ ಅಧಿದೈವತ್ವವನ್ನು ಎತ್ತಿ ಸಾರುತ್ತವೆಯೆಂದೂ ಇನ್ನೊಂದು ವಾದ[2]. ಆಗಮಸಿದ್ಧಾಂತ ಪ್ರಕಾರ, ಆಗಮಗಳನ್ನಾಧರಿಸಿದ ೨೮ ಆಗಮಗಳೂ, ೧೦೮ ಉಪಾಗಮಗಳೂ, ಎಲ್ಲ ರೀತಿಯ ಶೈವಮತಗಳಿಗೂ ಮೂಲ. ಹೀಗೆ ಶೈವಮತದ ಉಗಮಕ್ಕೆ ದಕ್ಷಿಣಭಾರತ, ಅದರಲ್ಲೂ ತಮಿಳುನಾಡೇ ತವರುಮನೆಯೆಂದು ಮತವಿದೆ. 'ಶಿವ' ಎಂಬ ಪದ 'ಕೆಂಪು' ಎಂಬುದನ್ನಾಧರಿಸಿದೆ ಎಂಬ ವಾದ ಪೂರ್ವನಿರ್ಧಾರ ಮಾಡಿ, ಎಳೆದುತಂದ ವಾದವೆಂದು ಕಾಣುತ್ತದೆ ಹೊರತು ಶಾಸ್ತ್ರೀಯವಲ್ಲವೆಂದು ಹೇಳಬೇಕು. ಚತುರ್ವಿಧ ಪುರುಷಾರ್ಥಗಳಿಗೆ ಅನ್ವಯಿಸಿದಂತೆ ಬೇರೆಯೇ ನಾಲ್ಕು ವೇದಗಳಿದ್ದುವು, ಅವು ಕಡಲಿನ ಪಾಲಾದುವು, ಅದೂ ಹಿಮಾಲಯ ಪರ್ವತ ತಲೆಯೆತ್ತುವ ಮೊದಲೇ ಎಂಬ ಮಾತೂ ಗೊಂದಲಕ್ಕೆಡೆ ಮಾಡುತ್ತದೆ. ಕಾರಣ ಹಿಮಾಲಯ ಪರ್ವತ ತಲೆಯೆತ್ತುವುದಕ್ಕೆ ಮೊದಲು ಭೂಮಿಯ ಮೇಲೆ ಮಾನವ ಕುಲವೇ ರೂಪುಗೊಂಡಿದ್ದಿಲ್ಲವೆಂದು ಪಂಡಿತರು ಹೇಳುತ್ತಾರೆ–ಎಂಬುವರಿಂದ ಈ ಮಾತಿನಲ್ಲಿ ಬರುವ ಪ್ರಾಚೀನತೆಯನ್ನು ಒಪ್ಪುವುದು ಕಷ್ಟ. ಒಂದು ವೇಳೆ ಆರ್ಯನ್ ವೇದಗಳಿಗಿಂತಲೂ ಪ್ರಾಚೀನತರವಾದ ವೇದಿನ ಪರಂಪರೆಯೊಂದಿದ್ದಿರಬಹುದಾದರೂ, ಅದು ನಶಿಸಿ ಹೋಗಲು ಯಾವುದೋ ಕಾರಣವಿರಬೇಕು. ಅದನ್ನೇ ಸಾಂಕೇತಿಕವಾಗಿ ಕಡಲು ನುಂಗಿತೆಂದು ತಮಿಳಿನ ಕೆಲವು ಸಾಹಿತ್ಯಕೃತಿಗಳು ಉಲ್ಲೇಖಿಸಿವೆಯೋ ಏನೋ ಎಂದು ಸಂಶಯ ಮಾತ್ರ ಪಡಬಹುದು ಹೊರತು, ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ಈಗಿನಂತೆ ಪ್ರಸಾರವಿಲ್ಲದೆ, ಜನರು ಸೀಮಿತವಾದ ಒಂದೆಡೆಯಲ್ಲಿಯೇ ನೆಲೆಯಾಗಿದ್ದು ಕೆಲವು ಪ್ರಾಕೃತಿಕ ಅನಾಹುತಗಳೊದಗಿದಾಗ ಸರ್ವನಾಶವಾಗುವುದು ಅಸಾಧ್ಯವೇನಲ್ಲ. ಸಿಂಧೂಸಂಸ್ಕೃತಿಯ ನಾಶವೂ ಇಂತಹ ಪ್ರಾಕೃತಿಕ ಅನಾಹುತದ ಕಾರಣವಾಗಿರಬೇಕೆಂದಾಗ ತಮಿಳಿನಲ್ಲಿ ಪ್ರಚಲಿತವಾಗಿರುವ ವೇದಿನ ಹೇಳಿಕೆಯಲ್ಲಿ ಸ್ವಲ್ಪವಾದರೂ ಸತ್ಯಾಂಶವಿರಬಹುದಾದರೂ,

---

1. ಪರಂಜ್ಯೋತಿ : ದ್ವಿ. ಮು. ೧೯೫೪-೧೨.
2. ಪರಂಜ್ಯೋತಿ : ದ್ವಿ. ಮು. ೧೯೫೪-೧೨.

ಯಾವ ತರದ ಅವಶೇಷಗಳಾಗಲೀ, ಕುರುಹಾಗಲೀ ಸಿಗುವ ಸಾಧ್ಯತೆಯಿಲ್ಲದಿರುವುದರಿಂದ ಈ ವಾದ ಕೇವಲ ಊಹನೆಯ ನೆಲೆಯಲ್ಲಿಯೇ ನಿಲ್ಲಬೇಕಾಗುತ್ತದೆ. ಒಟ್ಟಿನಲ್ಲಿ ತಮಿಳುನಾಡಿನಲ್ಲಿ ಶೈವಮತವು ತುಂಬ ಪ್ರಾಚೀನವಾದುದೆಂದು ಒಪ್ಪಬಹುದು.

ಕೆಲವು ತಮಿಳು ಪಂಡಿತರು ವೇದಮೂಲದಿಂದಲೇ ತಮಿಳುನಾಡಿನ ಶೈವಮತ ರೂಪು ತಳೆದಿದೆಯೆಂದೂ ಹೇಳುವವರಿದ್ದಾರೆ. ವೇದಗಳಲ್ಲಿ ಹೇಳಲಾದ ರುದ್ರ ಬಹುಗುಣಗಳುಳ್ಳವನಾದುದರಿಂದ ಅನೇಕರ ಅಭಿಮಾನದೇವತೆಯಾಗಿದ್ದ. ಮತ್ತೆ ಅವನೇ ಎಲ್ಲರಿಗಿಂತ ಮಿಗಿಲೆಂದೂ ಜನರು ಭಾವಿಸಿದರು. ದುಷ್ಟನಿಗ್ರಹ, ಶಿಷ್ಟಪ್ರತಿಪಾಲನ ಮಾತ್ರವಲ್ಲ, ಪ್ರಪಂಚದ ಸಕಲ ಜೀವರಾಶಿಗಳಿಗೂ ಅವನೇ ರಕ್ಷಕನಾದುದರಿಂದ ಅವನಿಗೆ ಪಶುಪತಿಯೆಂಬ ನಾಮಧೇಯವೂ ಅನ್ವರ್ಥವಾಯ್ತು. ಹೀಗಿರುವುದರಿಂದ ಶಿವಭಕ್ತರಿಗೆ, ವೇದಗಳ ಅನುಸಾರಿಗಳು ಯಜ್ಞಗಳಲ್ಲಿ ಪಶುಬಲಿ ಕೊಡುವುದು, ಮಾಂಸಾಹಾರ ಮಾಡುವುದು ಅಸಹ್ಯವಾಗಿ, ಶೈವಪಂಥವೇ ಬೇರಾಗಿ ಕವಲೊಡೆಯಿತು[3]. ಅಂದರೆ ಭಾರತದ ಎಲ್ಲ ಶೈವಪಂಥಗಳ ಮೂಲ ವೇದದಲ್ಲಿಯೇ ಅಡಕವಾಗಿದೆಯೆಂದಾಯ್ತು. ಕೆ. ಎ. ನೀಲಕಂಠಶಾಸ್ತ್ರಿಯವರು ಶೈವಪಂಥ ವೈದಿಕ ಮತ್ತು ಅವೈದಿಕ ಮೂಲಗಳಿಂದ ಹರಿದುಬಂದಿದೆ. ಆದರೆ ಅದರ ಮೂಲಸ್ವರೂಪ ಅಸ್ಪಷ್ಟವಾಗಿದೆ ಎಂದು ಹೇಳುತ್ತಾರೆ. ವಿದೇಶೀ ವಿದ್ವಾಂಸರೂ ಶೈವಮತಕ್ಕೆ ಅತ್ಯಂತ ಪ್ರಾಚೀನತೆಯನ್ನೂ, ಅವೈದಿಕ ಮೂಲಗಳನ್ನೂ ಹೇಳುತ್ತಾರೆ[4]. ಸುರೇಂದ್ರನಾಥಗುಪ್ತ ಎಂಬ ಪ್ರಸಿದ್ಧ ತತ್ತ್ವಜ್ಞಾನಿ, 'ಕೆಲವರು ದಕ್ಷಿಣ ಭಾರತದಲ್ಲಿ ಶೈವಧರ್ಮವು ಚರಿತ್ರಪೂರ್ವಯುಗಗಳಿಂದಲೇ ಇತ್ತೆಂದು ಹೇಳುತ್ತಾರೆ. ಆದರೆ, ಅಂತಹ ಇದ್ದಿರಬಹುದಾದ ಧರ್ಮದ ಲಕ್ಷಣಗಳೇನೆಂದು ಯಾವ ಆಧಾರವೂ ನನಗೆ ಸಿಕ್ಕಿಲ್ಲ. ಆರ್ಯರಿಗಿಂತ ಪ್ರಾಚೀನವಾದ ಆ ದ್ರಾವಿಡ ಧರ್ಮವೆಂಬುದು ಈಗ ನಾವು ತಿಳಿದಿರುವಂತಹ ಶೈವಧರ್ಮಕ್ಕೆ ಹೊಂದುವುದಿಲ್ಲ. ಆರ್ಯರಿಗಿಂತ ಪ್ರಾಚೀನವಾಗಿದ್ದ ದ್ರಾವಿಡಜನರಲ್ಲಿ ಕ್ರಮಬದ್ಧವಾದ ಯಾವುದಾದರೂ ಧರ್ಮವಾಗಲೀ ತತ್ತ್ವವಾಗಲೀ ಇದ್ದು ಅದು ಅವರಂತೆಯೇ ಇದ್ದ ಆದಿಜನಾಂಗದವರ ಆಚರಣೆಗಿಂತ ಭಿನ್ನವಾಗಿತ್ತೆಂದು ಹೇಳುವುದು ಅಸಾಧ್ಯ' ಎಂದು ಹೇಳುತ್ತಾರೆ[5].

ತಮಿಳಿನ **'ಸಂಗಂ'** ಸಾಹಿತ್ಯವರ್ಗಕ್ಕೆ ಸೇರಿದ **'ತೊಲ್‌ಕಾಪ್ಪಿಯಂ'** ಎಂಬ ವ್ಯಾಕರಣ ಗ್ರಂಥದಿಂದ ತಿಳಿದುಬರುವಂತೆ ಆ ಕಾಲದಲ್ಲಿ ತಮಿಳರು ಮಾಯೋನ್ (=ಕೃಷ್ಣ), ಶ್ರೇಯೋನ್ (=ಕೆಂಪಗಿರುವ ದೇವರು, ಸುಬ್ರಹ್ಮಣ್ಯ) ಮತ್ತು ವೇಂದನ್ (=ಇಂದ್ರ ಮತ್ತು ವರುಣ) ನನ್ನು ಪೂಜಿಸುತ್ತಿದ್ದರು. ವನಪ್ರದೇಶ ನೀಲವರ್ಣನಾದ ಕೃಷ್ಣನಿಗೆ, ಪರ್ವತಪ್ರದೇಶ ಸುಬ್ರಹ್ಮಣ್ಯನಿಗೆ, ನದೀಪ್ರದೇಶ ಇಂದ್ರನಿಗೆ, ಮತ್ತು ಮರಳು ತುಂಬಿದ ಸಮುದ್ರದ ಕಿನಾರೆ ವರುಣನಿಗೆ ಪ್ರಿಯವಾದ ಪ್ರದೇಶಗಳಾಗಿದ್ದುವೆಂದು ಭೂಭಾಗವನ್ನು ಕ್ರಮವಾಗಿ ಮುಲ್ಲೈ, ಕುರಿಂಜಿ, ಮರುದಂ ಮತ್ತು ನೈದಲ್ ಎಂದು ವಿಂಗಡಿಸಿದ್ದಾರೆ. ತೊಲ್‌ಕಾಪ್ಪಿಯಂ ರಚನೆಯಾಗುವ ಹೊತ್ತಿಗೆ ಇಂದ್ರ ಮತ್ತು ವರುಣರು ತಮಿಳರಿಗೆ ಪ್ರಿಯವಾದ ದೇವರಾಗಿದ್ದರು. ಶಿಲಪ್ಪದಿಗಾರಂ ಎಂಬ ತಮಿಳುಕಾವ್ಯದಲ್ಲಿ 'ಇಂದ್ರ ವಿಳಾ' (ಇಂದ್ರನ ಹಬ್ಬ) ನಡೆಯುವ ಪ್ರಸಂಗ ಬರುತ್ತದೆ. ವೇದಕಾಲದಲ್ಲಿ ಇಂದ್ರ, ವರುಣ ಮತ್ತು ಸೋಮರಿಗಾಗಿ ಯಜ್ಞಯಾಗಾದಿಗಳು ನಡೆಯುತ್ತಿದ್ದುವು. ಹೀಗಿರುವುದರಿಂದ ಈ ಕಾಲಕ್ಕಾಗಲೇ ಆರ್ಯಮತವು ದಕ್ಷಿಣದಲ್ಲಿ ಪ್ರಚಾರವಾಗಿತ್ತೆಂದು ತಿಳಿಯುತ್ತದೆ. ವೇದಗಳಲ್ಲಿ ಸುಬ್ರಹ್ಮಣ್ಯನ ಪ್ರಸ್ತಾಪವಿಲ್ಲ. ಮಹಾಕಾವ್ಯಗಳ ಕಾಲಕ್ಕೆ ಸುಬ್ರಹ್ಮಣ್ಯ, ರುದ್ರ ಇಲ್ಲವೇ ಅಗ್ನಿಯ ಮಗನಾಗಿರುವ ಕಲ್ಪನೆ ಬರುತ್ತದೆ. ಇವೆಲ್ಲವುಗಳ ಪ್ರಭಾವದಿಂದ ತಮಿಳರೂ ತಮ್ಮ ದೇವರಾದ ಮುರುಗನ್ ಮತ್ತು ಸುಬ್ರಹ್ಮಣ್ಯನನ್ನು ಸಮಾವೇಶಗೊಳಿಸಿ, ಆತನನ್ನು ಇಂದ್ರ, ವರುಣರಿಗೆ ಸಮಾನನೆಂದು ಪರಿಗಣಿಸಿದರು, ಎಂದು ನಾರಾಯಣ ಅಯ್ಯರ್ ಹೇಳುತ್ತಾರೆ[6]. ತಮಿಳುನಾಡಿನಲ್ಲಿ ಸುಬ್ರಹ್ಮಣ್ಯ ಬ್ರಹ್ಮಚಾರಿಯಲ್ಲ. ವಳ್ಳಿ ಮತ್ತು ದೈವಾನೆಯರೆಂಬ ಇಬ್ಬರು ಪತ್ನಿಯರನ್ನು ಅವನು ಪಡೆದಿದ್ದಾನೆ. ಆದರೆ ಇತರೆಡೆಗಳಲ್ಲಿ ಅವನು ಕುಮಾರ. ಬ್ರಹ್ಮಚಾರಿ ಎಂಬ ಕಲ್ಪನೆಯಿದೆ.

ಶಿವನಿಗೆ ಉತ್ತರದಲ್ಲಿ ಪ್ರಾಧಾನ್ಯ ಬಂದುದರ ಪ್ರತಿಯಾಗಿ, ವಿಷ್ಣುವಿಗೂ ಪ್ರಾಧಾನ್ಯವಿತ್ತ ತಂಡವೊಂದು ಅಸ್ತಿತ್ವಕ್ಕೆ ಬಂದಿತು. ಅಲ್ಲದೆ ಬೌದ್ಧ ಮತ್ತು ಜೈನ ಮತಗಳೂ ರೂಪುಗೊಂಡು ಬೇರೆಯಾಗಿ ಬೆಳೆದುವು. ಇವರ ಪ್ರತಿಫಲನ ದಕ್ಷಿಣದಲ್ಲಿ, ಅದರಲ್ಲೂ ತಮಿಳುನಾಡಿನಲ್ಲಿ ಕಂಡುಬರುತ್ತದೆಂಬುದಕ್ಕೆ ಶಿಲಪ್ಪದಿಗಾರಂ, ಮಣಿಮೇಗಲೈ ಎಂಬ ತಮಿಳಿನ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಆಧಾರ ದೊರೆಯುತ್ತದೆ. ಶಿಲಪ್ಪದಿಗಾರಂನ ಕಾಲದಲ್ಲಿ ಸರ್ವಧರ್ಮಗಳೊಳಗೆ ಸಾಮರಸ್ಯವಿದ್ದುದ್ದು, ಕ್ರಮವಾಗಿ ಸ್ಪರ್ಧೆ–ಪೈಪೋಟಿಗಳಿಗೆ ದಾರಿಯಾದಂತೆ ಕಾಣುತ್ತದೆ. ಮುಂದೆ ಈ ಮೇಲಾಟದಲ್ಲಿ ಶೈವಪಂಥದವರದೇ ಮೇಲುಗೈಯಾದಂತೆ ತೋರುತ್ತದೆ. ಬೌದ್ಧರು ಮತ್ತು ಜೈನರು ದೇವಗಳನ್ನು ಅಲ್ಲಗಳೆಯುವವರೆಂದು ಅವರ ಮೇಲೆ ತಮಿಳುನಾಡಿನ ಶೈವಪಂಥದ ಆಕ್ರೋಶವಿದ್ದಂತೆ ಕಾಣುತ್ತದೆ[7].

---

3. ನಾರಾಯಣ್ ಅಯ್ಯರ್, ದ್ವಿ. ಮು. ೧೯೭೪–೭೦. 4. ಪರಂಜ್ಯೋತಿ, ೧೯೩೪–೧೪. 5. ದಾಸಗುಪ್ತ, ೧೯೭೫–೧೫೫,
6. ಅದೇ ೧೧೨. 7. ಅದೇ ೧೪೨.

ವೇದಗಳನ್ನು ಅಲ್ಲಗಳೆಯದೆ ಶೈವಪಂಥವು ತಮಿಳುನಾಡಿನಲ್ಲಿ ಬೆಳೆದುಬಂದಿದೆ. ವರ್ಣಭೇದವಿಲ್ಲದೆ ಸಾರ್ವತ್ರಿಕವಾದುದು ಇವರ ವೈಶಿಷ್ಟ್ಯ. **'ತಿರುತ್ತೊಂಡರ್ ತೂಗೈ'** ಎಂಬುದರಲ್ಲಿ ೬೩ ಪುರಾತನರ ಚರಿತ್ರೆ ಸಂಕ್ಷೇಪರೂಪದಲ್ಲಿ ಬಂದುದು ಪೆರಿಯಪುರಾಣಂನಲ್ಲಿ ವಿವರಣಾತ್ಮಕವಾಗಿ ಬಂದಿದೆ. ಈ ಪುರಾತನರ ಕತೆಗಳು, ಕರ್ನಾಟಕದಲ್ಲೂ ಪ್ರಚಾರದಲ್ಲಿವೆಯೆಂಬುದೂ ಕನ್ನಡದ ಪ್ರಸಿದ್ಧ ಕವಿಗಳು ಇವರ ಬಗ್ಗೆ ಅನೇಕ ಕಾವ್ಯರಚನೆ ಮಾಡಿದ್ದಾರೆಂಬುದೂ ಸರ್ವವಿದಿತ. ಜೈನ ಸಂಪ್ರದಾಯದಲ್ಲೂ, ತ್ರಿಷಷ್ಟಿ ಶಲಾಕಾಪುರುಷರೆಂಬ ವಿಚಾರ ಬರುತ್ತದೆಂಬುದನ್ನು ಗಮನಿಸಬೇಕು. ಈ ೬೩ ನಾಯನಾರರಲ್ಲಿ ಹಲವರು ವೆಳ್ಳಾಳರು (ಒಕ್ಕಲಿಗ ವರ್ಗದವರು) ಕೆಲವರು ಬ್ರಾಹ್ಮಣರು, ಇನ್ನು ಕೆಲವರು ನಿಮ್ನವರ್ಗಕ್ಕೆ ಸೇರಿದವರೆಂದು ಗೊತ್ತಾಗುವುದಲ್ಲದೆ ಶಿವಭಕ್ತರಾದವರಿಗೆ ಜಾತಿಭೇದವಿರಲಿಲ್ಲವೆಂದೂ ಸ್ಪಷ್ಟವಾಗುತ್ತದೆ. ಆದಿಶೈವಬ್ರಾಹ್ಮಣನಾದ ಸುಂದರಮೂರ್ತಿ ಚೇರಮಾನ್ ಪೆರುಮಾಳನ ಜತೆ ಸಹಭೋಜನಮಾಡಿದ ಉದಾಹರಣೆಯಿದೆ. ಕಣ್ಣಪ್ಪ ಬೇಡರವನು. ನಂದ ಹೊಲೆಯ. ಇವರೂ ಸಹ ಇತರ ಬ್ರಾಹ್ಮಣ ನಾಯನಾರರಷ್ಟೇ ಪೂಜಾರ್ಹರಾಗಿದ್ದರೆಂಬುದು ಇದಕ್ಕೆ ನಿದರ್ಶನ[8].

ಪೆರಿಯಪುರಾಣಂ ಚಿತ್ರಿಸುವ ಭಕ್ತರ ಚರಿತ್ರೆಯಲ್ಲಿ ಮುಖ್ಯವಾಗಿ ಮನಸ್ಸಿಗೆ ನಾಟುವಂತಾಗುವುದು ಅವರ ಭಕ್ತಿಯ ಪರಾಕಾಷ್ಠೆ. ಈ ಪುರಾಣದ ಕಥೆಗಳಲ್ಲಿ ಆಗಮ ವಿಧಿವಿಧಾನಗಳ ರೀತಿಯಲ್ಲಿ ಮಾಡುವ ಬಾಹ್ಯಪೂಜೆಗೆ ಅಷ್ಟು ಮಹತ್ವವಿಲ್ಲ. ಶಿವನಿಗಾಗಿ, ಪ್ರತಿಗ್ರಾಮದಲ್ಲೂ ಎಂಬಂತೆ ಮಹತ್ತರವಾದ ದೇವಾಲಯಗಳು ಚೇರ–ಚೋಳ–ಪಾಂಡ್ಯ ರಾಜರುಗಳಿಂದ ನಿರ್ಮಿತವಾಗಿವೆ. **'ದೇವಾಲಯವಿಲ್ಲದಿರುವ ಊರಲ್ಲಿ ಒಕ್ಕಲಿರಬೇಡ'** (ಕೋಯಿಲಿಲ್ಲಾವೂರಿಲ್ ಕುಡಿಯಿರುಕ್ಕವೇಂಡಾಂ) ಎಂಬ ಮಾತು ಚಿಕ್ಕಮಕ್ಕಳಿಗೆ ಕಲಿಸುವ ಪಾಠದಲ್ಲಿ ಸತತವೂ, ಈಗಲೂ ಕೇಳಿ ಬರುತ್ತಿರುವ ನೀತಿಯ ನಲ್ನುಡಿ. ಈ ಸಾಂಸ್ಕೃತಿಕ ಸಂಘಟಕ ಸಂಸ್ಥೆಗಳಾದ ದೇವಾಲಯಗಳಲ್ಲಿ ಪೂಜಾವಿಧಿಗಳು ಸಂಪ್ರದಾಯ ರೀತಿಯಲ್ಲಿ ಈಗ ನಡೆಯುತ್ತವೆ. ದೇವಾಲಯಗಳಿದ್ದಲ್ಲಿ ಹಿಂದೆಯೂ ಹೀಗೆಯೇ ನಡೆಯುತ್ತಿದ್ದಿರಬೇಕು. ಆದರೆ ಬಾಹ್ಯಾಚಾರಗಳಿಗಿಂತ ಆಂತರಿಕ ಭಕ್ತಿ ಶ್ರೇಷ್ಠವೆಂದು ಕೆಲವು ವಿಚಾರವಾದಿಗಳಿಗೆ ಹೊಳೆದಿರಬೇಕು. ಅದಕ್ಕಾಗಿಯೇ ಆಂತರಿಕಭಕ್ತಿಯ ಹಿರಿಮೆಯನ್ನು ಎತ್ತಿಹಿಡಿಯುವ ಕಥೆಗಳು ರಚಿತವಾಗಿರಬೇಕೆಂದು ತೋರುತ್ತದೆ. ಬೇಡರಕಣ್ಣಪ್ಪನ ಕಥೆ ಇದಕ್ಕೊಂದು ಒಳ್ಳೆಯ ಉದಾಹರಣೆಯಾಗುತ್ತದೆ.

ನಾಗನೆಂಬ ಬೇಡರ ಅರಸನಿಗೆ ಮಗನಾದ ತಿಣ್ಣನ್, ಪ್ರಾಯಭರಿತನಾಗಿ ನಾಗನ ಅನಂತರ ಬೇಡರ ರಾಜನಾಗುತ್ತಾನೆ. ಅವನು ಶೈವಾಗಮ, ಪುರಾಣ, ಭಕ್ತಿ–ಒಂದನ್ನೂ ಅರಿತವನಲ್ಲ. ಬೇಟೆಯಾಡುವುದು, ಕೊಲ್ಲುವುದು–ಇದೇ ಅವನ ಕುಲಧರ್ಮ. ಆದರೆ, ಒಮ್ಮೆ ಬೇಟೆಯಾಡುತ್ತ ಬಂದಾಗ ಹಂದಿಯೊಂದನ್ನು ಅಟ್ಟಿಸಿಕೊಂಡು ನಾಣನ್ ಮತ್ತು ಕಾಡನ್ ಎಂಬ ಜತೆಗಾರರೊಡನೆ ಹೋಗಿ, ಶಿವನ ದೇವಾಲಯವಿದ್ದ ಬೆಟ್ಟದ ಬುಡಕ್ಕೆ ಬಂದಾಗ ಪರಿವರ್ತಿತನಾಗುತ್ತಾನೆ. ಬೆಟ್ಟದ ಮೇಲೇರಿ, ದೇವರ ವಿಗ್ರಹದೆದುರು ಬಂದಾಗ ಪರವಶನಾದಂಥವನಾಗಿ, ದೇವರಲ್ಲಿ ಅತ್ಯಂತ ಮೋಹಗೊಂಡವನಾಗುತ್ತಾನೆ. ಹಿಂದೆ ಬಂದು ತಾನು ಹೊಡೆದ ಹಂದಿಯ ಬೇಯಿಸಿದ ಮಾಂಸದ ಯಾವ ಭಾಗ ಒಳ್ಳೆಯದೆಂದು ರುಚಿನೋಡಿ, ಅದನ್ನು ತೇಗದ ಎಲೆಯಲ್ಲಿ ಕಟ್ಟಿಕೊಂಡು, ಕಾಡುಹೂಗಳನ್ನು ತನ್ನ ತಲೆಜುಟ್ಟಿನಲ್ಲಿ ಸಿಕ್ಕಿಸಿಕೊಂಡು, ಬಾಯಲ್ಲಿ ನೀರು ತುಂಬಿಕೊಂಡು ಬಿಲ್ಲು ಬಾಣಗಳೊಡನೆ ಬೆಟ್ಟವನ್ನು ಮತ್ತೆ ಹತ್ತಿ, ಬಾಯ ನೀರಿನಿಂದ ಶಿವನಿಗೆ ಅಭಿಷೇಕ ಮಾಡಿ, ಹೂವಿಟ್ಟು ಸಿಂಗರಿಸಿ, ಮಾಂಸವನ್ನು ಅರ್ಪಿಸುತ್ತಾನೆ. ಮರುದಿನ ಅರ್ಚಕ ಬಂದು ಈ ಅವಾಂತರವನ್ನು ನೋಡಿ, ಹೇಸಿ, ಶುದ್ಧೀಕರಣ ಕ್ರಿಯೆಗಳನ್ನು ಮಾಡಿ, ಆಗಮೋಕ್ತಪೂಜೆ ನಡೆಸಿ ಹೋಗುತ್ತಾನೆ. ನಾಲ್ಕೈದು ದಿನ ಇದೇ ತರವಾಗುತ್ತಾ ಅರ್ಚಕನು ಶಿವನಿಗೆ ಪ್ರಾರ್ಥಿಸಿ ಈ ಹೊಲೆಗೆಲಸವನ್ನು ನಿಲ್ಲಿಸಬೇಕೆಂದು ಬೇಡುತ್ತಾನೆ. ಅಂದು ಅರ್ಚಕನಿಗೆ ಶಿವ ಕನಸಿನಲ್ಲಿ ಕಂಡು ತಿಣ್ಣನ್‌ನ ಭಕ್ತಿಯ ಭರವನ್ನು ವಿವರಿಸುತ್ತಾನೆ. ಮರುದಿನ ಅರ್ಚಕನು ಕಾದು ನಿಂತಿದ್ದಾಗ ತಿಣ್ಣನ್ ಬಂದು ಯಥಾಪ್ರಕಾರ ಪೂಜೆಮಾಡುತ್ತಾ ಶಿವನ ಕಣ್ಣಲ್ಲಿ ರಕ್ತ ಬರುವುದನ್ನು ಕಂಡು ತನ್ನ ಒಂದು ಕಣ್ಣನ್ನು ತೆಗೆದು ಶಿವನ ವಿಗ್ರಹಕ್ಕಿಟ್ಟುದು, ಅಮೇಲೆ ಎರಡನೆಯ ಕಣ್ಣನ್ನು ಕೂಡ ತೆಗೆದುಕೊಡಬೇಕಾದ ಸಂದರ್ಭ ಬಂದಾಗ ಶಿವನು ಅವನನ್ನು ತಡೆದು, ಅವನಿಗೆ ಸಾಯುಜ್ಯವನ್ನು ಕರುಣಿಸಿದುದು–ಎಲ್ಲ ಪ್ರಸಿದ್ಧವಾದ ಕತೆಯಾಗಿದೆ. ಈ ಕಥೆಯಲ್ಲಿ ಕಣ್ಣಪ್ಪನ ನಿರ್ಮಲ ಭಕ್ತಿಯ ಗಾಢತೆ ಅರಿವಾಗುತ್ತದೆ. ಎಂತಹ ಅತಿ ಮೇಲ್ಮಟ್ಟದ ಭಕ್ತನಾದರೂ ಭಗವಂತನಲ್ಲಿ ತನ್ನ ಭವಬಂಧನ, ಬೇನೆ ಬೇಸರಗಳನ್ನು ಬಿಡಿಸೆಂದು ಬೇಡುವ ಪ್ರಾರ್ಥನೆ ಇರುತ್ತದೆ. ಅಂತಹ ಸ್ವಾರ್ಥದ ಲವಲೇಶವೂ ಕಣ್ಣಪ್ಪನಲ್ಲಿಲ್ಲ. ನಿಷ್ಕಾಮಭಕ್ತಿ ಅವನದಾದುದರಿಂದಲೇ, ಅವನ ಕ್ರಿಯಾವಿಧಾನವನ್ನು ನೋಡುವ ಸಂಪ್ರದಾಯಸ್ಥರಿಗೆ ಅದು ಜಿಗುಪ್ಸಾಜನಕವಾಗಿ ಕಂಡರೂ, ಶಿವನಿಗೆ ಅದು ಪ್ರಿಯವಾಯಿತೆನ್ನಬಹುದು. ಇಂತಹ ಪವಾಡಗಳು ಒಂದಲ್ಲ ಒಂದು ರೀತಿಯಿಂದ ಶಿವಭಕ್ತರ ಕಥೆಗಳಲ್ಲೆಲ್ಲ ಬರುತ್ತವೆ. ಬಹುಶಃ ಕಾಲಕ್ರಮದಲ್ಲಿ ಸಾಮಾನ್ಯ ಭಕ್ತರ ರಂಜನೆಗೆ, ಹೆಚ್ಚಿನವು ಕವಿಕಲ್ಪಿತ ರೂಪಗಳಾಗಿರಬೇಕೆಂದು ತೋರುತ್ತದೆ.

---

8. ನಾರಾಯಣ ಅಯ್ಯರ್, ೧೯೭೪-೧೨೩.

ಪೆರಿಯಪುರಾಣಂನಲ್ಲಿ ಬರುವ ಕಥೆಗಳಲ್ಲಿ ಶಿವನು ಯೋಗಿಗಳ ರೂಪದಲ್ಲಿ ಬಂದು ಭಕ್ತರನ್ನು ಪರೀಕ್ಷಿಸುವ ಅನೇಕ ಸಂದರ್ಭಗಳಿರುತ್ತವೆ. ಈ ಭಕ್ತರು ತಮ್ಮ ಸರ್ವಸ್ವವನ್ನೂ ಇಂತಹ ಸಂನ್ಯಾಸಿಗಳಿಗೆ ನಿವೇದಿಸುವ ಸನ್ನಿವೇಶಗಳು ಬರುತ್ತವೆ. ಇಯರ್‌ಪಗೈ ನಾಯನಾರ್ ಶಿವಯೋಗಿಯಾಗಿ ಬಂದ ಶಿವನಿಗೆ ಅವನು ಅಪೇಕ್ಷಿಸಿದ ತನ್ನ ಹೆಂಡತಿಯನ್ನೇ ಕೊಡುತ್ತಾನೆ. ಅಮರ ನೀತಿ ನಾಯನಾರ್ ಶಿವ ಕಪಟವೇಶದಲ್ಲಿ ಬ್ರಹ್ಮಚಾರಿಯಾಗಿ ಬಂದು ಕೊಟ್ಟ ಅವನ ಕೌಪೀನವನ್ನು ಕಳೆದುಕೊಂಡು, ಅದರ ಬದಲಿಗೆ ಅದರ ಭಾರಕ್ಕೆ ಸರಿಯಾದ ಇತರ ವಸ್ತುಗಳನ್ನು ಕೊಡಲು ಒಪ್ಪಿ, ಯಾವುದೂ ಅದಕ್ಕೆ ಸರಿತೂಗಲು ಆಗ ದಿರುವಾಗ ತಾನು ತನ್ನ ಹೆಂಡತಿ, ಮಕ್ಕಳು ಎಲ್ಲವನ್ನೂ ತೂಗಿ ಶಿವನಿಗೆ ಕೊಡಲು ಸಿದ್ಧನಾಗಿ, ಕುಟುಂಬ ಸಮೇತ ಸಾಯುಜ್ಯ ಪಡೆಯುತ್ತಾನೆ.ಪನಾದಿನಾಥನ್ ಎಂಬವನು ತನ್ನಿಂದ ಸೋತಹೋದ ವೈರಿ ತಿರುಗಿ ಬಂದು ಶಿರಸ್ತ್ರಾಣದಲ್ಲಿ ಕಾಣದಂತೆ ವಿಭೂತಿ ಧರಿಸಿ ಬಂದು ಹೋರಾಡಿದಾಗ ವಿಭೂತಿಯನ್ನು ಕಂಡ ಪನಾದಿನಾಥನ್ ಕೈಯೆತ್ತದೆ, ವೈರಿಯೇ ತನ್ನನ್ನು ಇರಿಯಲು ಅವಕಾಶ ಕೊಡುತ್ತಾನೆ; ಸತ್ತು ಶಿವನನ್ನು ಸೇರುತ್ತಾನೆ. ಇದರಿಂದ ಇಂತಹ ಮುಗ್ಧಭಕ್ತರು ಸರ್ವಸ್ವವನ್ನೂ ಶಿವನಿಗೆ ಅರ್ಪಿಸುತ್ತಿದ್ದವ ರಿದ್ದರೂ, ಅವನ ಹೆಸರಿನಲ್ಲಿ ವಂಚಿಸುವ, ಶಿವಭಕ್ತಿಯನ್ನು ದುರುಪಯೋಗಪಡಿಸಿಕೊಳ್ಳುವ ತಮ್ಮ ಸ್ವಾರ್ಥ ಸಾಧಿಸುವ ಮೋಸ ಗಾರರೂ ಅನೇಕರಿದ್ದರು ಎಂದು ತಿಳಿಯುತ್ತದೆ.

ಅರಿವಾಟ್ಟಾಯ ನಾಯನಾರ್, ಒಕ್ಕಲಿಗ (ವೆಳ್ಳಾಳ) ಕುಲದವನು. ಬಹಳ ಬಡತನ ಬಂದರೂ, ಶಿವನಿಗೆ ಅನ್ನ ಮತ್ತು ಹರಿವೆಯ ಪಲ್ಯಮಾಡಿ ನಿತ್ಯವೂ ಅರ್ಪಿಸುತ್ತಿದ್ದನು. ಒಂದು ದಿನ ಇದನ್ನು ತರುತ್ತಿರುವಾಗ ಎಡವಿ ಬಿದ್ದುಬಿಟ್ಟನು. ಆಗ ತನ್ನ ಕುತ್ತಿಗೆಯನ್ನೇ ಕೊಯ್ದುಕೊಳ್ಳುತ್ತಿರುವಲ್ಲಿ ಶಿವನು ಪ್ರತ್ಯಕ್ಷನಾಗುತ್ತಾನೆ. ಚಂಡೇಶ್ವರ ನಾಯನಾರನ ಕಥೆಯಲ್ಲಿ ಬ್ರಾಹ್ಮಣ ಹುಡುಗನಾಗಿದ್ದ ಅವನು ಕಾಡಿನಲ್ಲಿ ನದೀತೀರದಲ್ಲಿ ತಾನು ಕಾಯುತ್ತಿರುವ ಗೋವುಗಳ ಹಾಲಿನಿಂದ ಶಿವನಿಗೆ ಅಭಿಷೇಕ ಮಾಡು ತ್ತಿದ್ದಾಗ ಅಡ್ಡಬಂದ ತನ್ನ ತಂದೆಯನ್ನು ಹತ್ತಿರದ ಕೋಲಿನಿಂದ ಹೊಡೆದಾಗ ಅದು ಕೊಡಲಿಯಾಗಿ ಅವನನ್ನು ಕೊಲ್ಲುತ್ತದೆ. ಈಗ ಶಿವ ಪ್ರತ್ಯಕ್ಷನಾಗಿ ತಂದೆ ಮತ್ತು ಮಗನಿಗೆ ಮುಕ್ತಿಯನ್ನು ಕೊಡುತ್ತಾನೆ. ಕಲಿಕ್ಕಂಬ ನಾಯನಾರ ಎಂಬವನು ವೈಶ್ಯ. ಮನೆಗೆ ಬಂದ ಶಿವಭಕ್ತರನ್ನು ಆದರದಿಂದ ಪೂಜಿಸುತ್ತಿದ್ದನು. ಅವನ ಹೆಂಡತಿಯೂ ಅವನ ಕಾರ್ಯದಲ್ಲಿ ಸಹಭಾಗಿಯಾಗು ತ್ತಿದ್ದಳು. ಒಂದು ದಿನ ಹಿಂದೆ ಅವನ ಸೇವಕನಾಗಿದ್ದವನೇ ಶಿವಭಕ್ತನಾಗಿ ಬಂದಾಗ ಪದ್ಧತಿಯಂತೆ ಅವನ ಪಾದಗಳನ್ನು ತೊಳೆ ದಾಗ ತನ್ನ ಹೆಂಡತಿ ಸಹಕರಿಸಲಿಲ್ಲವೆಂದು ಅವಳ ಕೈಗಳನ್ನೇ ಕಡಿದುಬಿಟ್ಟಂತಹ ಕಥೆ.

ಇದರಿಂದ ತಮ್ಮ ನಂಬಿಕೆ ಮತ್ತು ಆಚಾರಗಳಿಗೆ ಅಡ್ಡಿಯಾದಾಗ ಈ ಭಕ್ತರು ಹಿಂಸೆಗೂ ಹಿಂಜರಿಯುತ್ತಿರಲಿಲ್ಲವೆಂದು ತಿಳಿಯುತ್ತದೆ. ತನ್ನವರು–ಪರರು ಎಂಬ ಭೇದವಿಲ್ಲದ ರೀತಿ ವರ್ತಿಸುವ ಈ ಭಕ್ತ ಸಮುದಾಯದ ಆಧ್ಯಾತ್ಮಿಕ ಭಕ್ತಿಯ ಪರಾ ಕಾಷ್ಠೆಯನ್ನು ತೋರಿದರೂ ಪೆರಿಯಪುರಾಣಂನಲ್ಲಿ ಹೇಳಿರುವ ಕಥೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಇವರಿಗೆ ಇತರರ ಧರ್ಮ ಮತ್ತು ನಂಬಿಕೆಗಳ ಮೇಲೆ ತೀರ ಅಸಹನೆಯಿದ್ದಂತೆ ಕಾಣುತ್ತದೆ. ಆ ಕಾರಣವಾಗಿಯೇ ಶ್ರೀವೈಷ್ಣವ ಮತಾಚಾರ್ಯ ರಾಮಾ ನುಜಂ, ತಮ್ಮ ಹುಟ್ಟೂರನ್ನು ತೊರೆದು ಕರ್ನಾಟಕದಲ್ಲಿ ತಮ್ಮ ಧಾರ್ಮಿಕ ಕಾರ್ಯಕ್ಷೇತ್ರವನ್ನು ಮಾಡಿಕೊಂಡರು. ಹೀಗೆಂದ ಮಾತ್ರಕ್ಕೆ ಸರ್ವಸಮನ್ವಯ ದೃಷ್ಟಿಯೇ ಇರಲಿಲ್ಲವೆಂದರ್ಥವಲ್ಲ. ಅಲ್ಲಲ್ಲಿ ಆಗಾಗ ಇಂತಹ ಸಮಾನದೃಷ್ಟಿಯೂ ವ್ಯಕ್ತವಾಗಿರುವ ಸಂಭವವುಂಟೆಂದು ಪ್ರಸಿದ್ಧಕ್ಷೇತ್ರವಾದ ಚಿದಂಬರಂನಲ್ಲಿ ನಟರಾಜನಿಗೆ ಹೇಗೋ ಹಾಗೆಯೇ ಗೋವಿಂದರಾಜನಿಗೂ ಪ್ರಧಾನ ಸ್ಥಳವನ್ನು ಕಲ್ಪಿಸಲಾಗಿದೆ. ಒಂದೇ ವೇದಿಕೆಯಿಂದ ಎರಡುಮತದ ದೇವರನ್ನೂ ನೋಡುವ ಸುಂದರ ಏರ್ಪಾಡಿದೆ.

ಶೈವಧರ್ಮಕ್ಕೆ ಸಂಬಂಧಿಸಿ, ಸ್ತೋತ್ರರೂಪದಲ್ಲಿ ಹಿಂದಣ ಸಂತರಾದ ತಿರುಜ್ಞಾನ ಸಂಬಂಧರ್, ತಿರುನಾವುಕ್ಕರಸು, ಸುಂದರಮೂರ್ತಿ, ನಂಬಿಯಾಂಡಾರ್‌ನಂಬಿ, ಮಾಣಿಕ್ಕವಾಚಗರ್, ಮುಂತಾದವರು ಹಾಡಿದ ರಚನೆಗಳನ್ನು '**ತಿರುಮುರೈ**' ಎಂದು ಕರೆಯಲಾಗುತ್ತದೆ. ಶೇಕ್ಕಿಳಾರ್ ಬರೆದ '**ಪೆರಿಯ ಪುರಾಣಂ**' ಇಂತಹ ಒಟ್ಟು ಹನ್ನೆರಡು ತಿರುಮುರೆಗಳಲ್ಲಿ ಕೊನೆಯದು. '**ತಿರು ತ್ತೊಂಡರ್ ತೊಗೈ**'ಯಲ್ಲಿ ಸಂಕ್ಷೇಪವಾಗಿ ಹೇಳಿದುದನ್ನು ಇಲ್ಲಿ ವಿಸ್ತಾರವಾಗಿ, ಕಾವ್ಯಮಯವಾಗಿ ಹೇಳಿದೆ.

ಕುಲೋತ್ತುಂಗನೆಂದು ಹೆಸರಾದ ಅನಪಾಯನೆಂಬ ಚೋಳರಾಜನು (ಕ್ರಿ.ಶ. ೧೧೩೩–೧೧೫೦) ತಮಿಳಿನಲ್ಲಿ ಪ್ರಸಿದ್ಧ ವಾದ ಜೀವಕಚಿಂತಾಮಣಿಯೆಂಬ ಜೈನಕಾವ್ಯದಲ್ಲಿ ಆಸಕ್ತನಾಗಿದ್ದನು. ಅವನ ಮಂತ್ರಿಯಾಗಿದ್ದ 'ಶೇಕ್ಕಿಳಾರ್ ಶಿವಭಕ್ತ ಅರ ಸನ ಜೈನಧರ್ಮಾಸಕ್ತಿಯನ್ನು ಹೋಗಲಾಡಿಸಿ ಅವನಿಗೆ ಶಿವಭಕ್ತಿಯನ್ನುಂಟುಮಾಡಲು ಶಿವಭಕ್ತರಾದ ಮಹಾಪುರುಷರ ಚರಿತ್ರೆ ಯನ್ನು ಹೇಳುವ ಪೆರಿಯಪುರಾಣವನ್ನು ಬರೆದನೆಂಬುದಾಗಿ ತಿಳಿಯುತ್ತದೆ. ಮತಗಳ ದೃಷ್ಟಿಯಿಂದ ನೋಡಿದರೆ, ಆಗಲೂ ತಮಿಳುನಾಡಿನಲ್ಲಿ ಜೈನಧರ್ಮ ತಕ್ಕಮಟ್ಟಿಗೆ ಬೇರೂರಿಕೊಂಡಿರಬೇಕೆಂದು ಕಾಣುತ್ತದೆ. ರಾಜನೂ ಅವರ ಕಾವ್ಯಗಳನ್ನು ಆಸಕ್ತಿ ಯಿಂದ ಓದುತ್ತಿದ್ದನೆಂದ ಮೇಲೆ ಸಹಜವಾಗಿ ಕಾವ್ಯಮಾಧ್ಯಮದಲ್ಲಿ ಆ ಧರ್ಮ ಇತರರಿಗೂ ಪ್ರಿಯವಾಗಿದ್ದುದಾಗಿರಬಹುದು. ಇನ್ನೊಂದು ದೃಷ್ಟಿಯಿಂದ ನೋಡಿದರೆ, ಜೀವಕಚಿಂತಾಮಣಿ ಜೀವಕನ ಪ್ರಣಯ ವೃತ್ತಾಂತಗಳನ್ನು ರಮ್ಯವಾಗಿ ಚಿತ್ರಿಸುವ

ಕಾವ್ಯ. ಹೀಗೆ ಪ್ರಾಪಂಚಿಕ ಸುಖಕ್ಕೆ ಜನರು ಮಾರುಹೋಗಿ ಪಾರಮಾರ್ಥಿಕ ಜೀವನವನ್ನು ಮರೆಯಬಾರದು, ಎಂಬುದನ್ನು ತೋರಿಸಲು ಶೇಕ್ಕಿಳಾರ್‌ನಂತಹ ಜ್ಞಾನಿಗಳು ಇಂತಹ ಕಾವ್ಯರಚನೆಯ ಕಾರ್ಯಕ್ಕಿಳಿದರೋ ಎಂದು ಸಂಶಯ ಬರುತ್ತದೆ. ಅದೇನೇ ಇರಲಿ. ಶೇಕ್ಕಿಳಾರ್‌ನ ಕಾರ್ಯ ಸಫಲತೆಯನ್ನು ಪಡೆಯಿತು. ಅಲ್ಲದೆ ತಮಿಳುನಾಡಿನ ಎಲ್ಲ ರಾಜರೂ ಶೈವಧರ್ಮೀಯರೇ ಆಗಿದ್ದುದರಿಂದ ಶೈವಮತವೇ ರಾಜಧರ್ಮವಾಗಿ ಅದಕ್ಕೆ ಮನ್ನಣೆ ಮತ್ತು ಹಿರಿಯ ಸ್ಥಾನಗಳು ದೊರೆತುವು. ಅಧ್ಯಾತ್ಮಿಕ ವಿಚಾರವನ್ನು ಕಾವ್ಯಬಂಧದಲ್ಲಿ ಸುಂದರ ಉಪಮೆಗಳು, ವರ್ಣನೆಗಳು ಮತ್ತು ಗೇಯತೆಯಿಂದ ಕೂಡಿ ಹೃದ್ಯವಾಗುವಂತೆ ಹೇಳಿದುದರಿಂದ ಪುರಾಣವೆಂದು ಕರೆಸಿಕೊಂಡರೂ, ಕಾವ್ಯವಾಗಿ ರಂಜಿಸುವ ಗುಣ ಇದಕ್ಕಿದ್ದುದರಿಂದಲೇ ಅನೇಕ ಜನರಿಗೆ ಪ್ರಿಯವಾಯ್ತು. ಹೀಗೆ ರಾಜಬೆಂಬಲದೊಡನೆ ಸಾಹಿತ್ಯದ ಶಕ್ತಿಯೂ ಶೈವಧರ್ಮಕ್ಕೆ ತಮಿಳುನಾಡಿನಲ್ಲಿ ಪ್ರಾಪ್ತವಾಗಿ, ಕಿಚ್ಚು ಮತ್ತು ಗಾಳಿಗಳು ಸೇರಿದಂತೆ ಆಗಿ, ಬೌದ್ಧ, ಜೈನಧರ್ಮಗಳು ತಮಿಳುನಾಡಿನಿಂದ ಕಣ್ಮರೆಯಾದುವು.

ಹೀಗೆ ಸ್ತೋತ್ರ ಮತ್ತು ಮಹಾಪುರುಷರಾದ ಭಕ್ತರ ಚರಿತ್ರೆ ಮುಂತಾದುವುಗಳಿಂದ ಸಾಮಾನ್ಯ ಜನರಿಗೂ ಪ್ರಿಯವಾಗಿ ಬೆಳೆದ ಶೈವ ಪರಂಪರೆಯ ಇನ್ನೊಂದು ಮಜಲು ಬೌದ್ಧಿಕ ನೆಲೆಗೆ ಮಾತ್ರ ವೇದ್ಯವಾಗುವಂತಹ ತತ್ತ್ವಗಳಿಂದ ಕೂಡಿದ ಶೈವ ಸಿದ್ಧಾಂತಗಳ ರಚನೆ. ವೇದ–ಆಗಮಗಳ ಹಿನ್ನೆಲೆಯಲ್ಲಿ ಆರಂಭಿಸಿ, ಭಕ್ತಿಯ ಸರ್ವಸಮರ್ಪಣ ಭಾವದ ತೀವ್ರತೆಯಲ್ಲಿ ಬೆಳೆದು, ಕೊನೆಯಲ್ಲಿ ತಾತ್ವಿಕನೆಲೆಯಲ್ಲಿ ತಮಿಳುನಾಡಿನ ಶೈವ ಪರಂಪರೆ ಪ್ರವರ್ಧಮಾನವಾಗಿದೆ.

ಇಂದು ಧರ್ಮಜಾಗೃತಿಗಿಂತ ಜನಜಾಗೃತಿಯೇ ಹೆಚ್ಚಾಗಿರುವುದು ಬಹುಶಃ ಪ್ರಪಂಚದ ಎಲ್ಲೆಡೆಗಳಲ್ಲಿ ಕಂಡು ಬರುತ್ತಿರುವ ಅಂಶ. ತಮಿಳುನಾಡೂ ಅದಕ್ಕೆ ಹೊರತಲ್ಲ. ಶೈವಪಂಥದವರು ಆದಿಯಲ್ಲಿ ಜಾತಿಯ ಬಗ್ಗೆ ಉದಾರ ನಿಲುವನ್ನು ತಾಳಿದ್ದರೆಂಬ ಕೆಲವು ಉದಾಹರಣೆಗಳು ಹಿಂದಿನ ಪುರಾಣಗಳಲ್ಲಿ ದೊರೆತರೂ ಕಾಲಕ್ರಮದಲ್ಲಿ ಜಾತಿಯ ಅಂತರ ಹೆಚ್ಚಾದುದನ್ನೂ ಕಾಣಬಹುದು. ಇದು ವಿಷಮಸ್ಥಿತಿಗೇರಿದ ಕಾಲದಲ್ಲಿ ಸಮಾಜಸುಧಾರಕರಾದ, 'ಪೆರಿಯಾರ್', 'ತಂದೈ ಪೆರಿಯಾರ್' ಎಂದು ಜನಸಾಮಾನ್ಯರು ಪ್ರೀತಿಯಿಂದ ಕರೆಯುತ್ತಿರುವ ರಾಮಸ್ವಾಮಿನಾಯಕರು ಜನ್ಮ ತಳೆದು, ಮೂರ್ತಿಪೂಜೆ ಮತ್ತು ಅಂಧಶ್ರದ್ಧೆಗಳನ್ನು ಖಂಡಿಸಿದರು. ಹೀಗೆ ಒಂದು ಕಡೆಗೆ ಆಸ್ತಿಕತೆಗೆ ಪ್ರಬಲ ವಿರೋಧಿಗಳಾದ ಸಮೂಹ, ಮತ್ತೊಂದೆಡೆಗೆ ಅಷ್ಟೇ ಭಕ್ತಿ, ನಿಷ್ಠೆಗಳಲ್ಲಿ ನಿರತರಾದ ಪಂಗಡ ಎರಡನ್ನೂ ತಮಿಳುನಾಡಿನಲ್ಲಿ ಕಾಣಬಹುದು. ಕಲ್ಪನೆಯ ದೇವರುಗಳಿಗೆ ಅಪಮಾನಮಾಡುವ ಮೆರವಣಿಗೆ ನಡೆದಂತಹ ಸಂದರ್ಭಗಳೂ ಇಲ್ಲದಿಲ್ಲ. ಅಲ್ಲದೆ ವಿವಿಧ ಕ್ಷೇತ್ರಗಳಲ್ಲಿ ನಡೆಯುವ ಜಾತ್ರೆಗಳಿಗೆ ಕಿಕ್ಕಿರಿದು ನೆರೆಯುವ ಭಕ್ತ ಸಮೂಹವೂ ಇಲ್ಲದಿಲ್ಲ. ಪ್ರತಿದೇವಾಲಯದಲ್ಲೂ ಜನರು ನೆರೆದು, ಭಕ್ತಿಯಿಂದ ಮೈಮರೆತು ಶಿವನನ್ನು ಹಾಗೂ ಮುರುಗ (ಷಣ್ಮುಖ)ನನ್ನು ಸ್ತುತಿಸುವ ದೃಶ್ಯವನ್ನು ಇಂದಿಗೂ ಕಾಣಬಹುದು. ಮೇಲುವರ್ಗದ ಜನರು ಈ ಪೂಜೆ, ಆಚಾರಗಳಿಗೆ ಹೆಚ್ಚಿನ ಮಹತ್ವಕೊಟ್ಟಿದ್ದಾರೆ. ಅದು ಸುಸಂಸ್ಕೃತರ ಲಕ್ಷಣವೆಂದು ಭಾವಿಸಿದ್ದಾರೆ. ವಾಣಿಜ್ಯ ವ್ಯವಹಾರಗಳಲ್ಲಿ ಆಗರ್ಭ ಶ್ರೀಮಂತರಾದ ವರ್ಗದವರು ದೇವಾಲಯಗಳ ಜೀರ್ಣೋದ್ಧಾರ, ಪೂಜೆ, ಅರ್ಚನೆಗಳ ಏರ್ಪಾಡು ಮುಂತಾದುವುಗಳಿಗಾಗಿ ಹೇರಳ ಹಣ ಖರ್ಚುಮಾಡುವುದರಲ್ಲಿ ಕೆಲವೇಳೆ ಪರಸ್ಪರ ಸ್ಪರ್ಧಿಸಿರುವರೋ ಎಂದೂ ಕಾಣುತ್ತದೆ. ನಾಡಿನ ಪ್ರಮುಖ ಸ್ಥಳಗಳಲ್ಲಿ ಸ್ಥಾಪಿತವಾಗಿರುವ ಶೈವಮಠಗಳು ಧರ್ಮಕಾರ್ಯ ಮತ್ತು ಸಮಾಜ ಕಲ್ಯಾಣ ಕಾರ್ಯಗಳಲ್ಲಿ ಮಗ್ನವಾಗಿವೆ.

**ಉಲ್ಲೇಖಿತ ಗ್ರಂಥಗಳು :**


1. Narayana Ayyar, C.V. **Origin and Early History of Saivismin South India**. University of Madras. (2nd Edition) 1974
2. Paranjoti V. **Saiva Siddhanta** (2nd Edition), Luzag & Co. Ltd. London, 1954.
3. Surendranath Dasgupta. **A History of Indian Philosophy,** Vol.5. (First Indian Edition) 1975 The Southern School of Saivism. Motilal Banarasi Das, Delhi.

# ಕಾಶ್ಮೀರೀಯ ಶೈವದರ್ಶನ

**ವೇದಾಂತಾಚಾರ್ಯ ಶ್ರೀ. ನಿ. ಪ್ರ. ಶಿವಕುಮಾರ ಸ್ವಾಮಿಗಳು, ಸರ್ಪಭೂಷಣಮಠ**

ಕಾಶ್ಮೀರೀಯ ಶೈವದರ್ಶನಕ್ಕೆ 'ಪ್ರತ್ಯಭಿಜ್ಞಾದರ್ಶನ'ವೆಂಬ ಇನ್ನೊಂದು ಹೆಸರು ಪ್ರಸಿದ್ಧವಾಗಿದೆ. ಈ ಹೆಸರು ನವೀನವಾಗಿ ಬಂದಿರುವದೆಂದು ಭಾವಿಸಬಾರದು. ಇದೊಂದು ಭಾರತವರ್ಷದ ವಿಚಾರಸಾಮ್ರಾಜ್ಯದ ಅತಿ ಪ್ರಾಚೀನ ಹಾಗೂ ದುರ್ಲಭವಾದ ಸಂಪದವಾಗಿರುವದು ಕಾಲವೈಚಿತ್ರ್ಯ ಗತಿಯಿಂದ ಇಂದು ಇದು ಅಪರಿಚಿತ ವಸ್ತುವಾದಂತೆ ಕಾಣಬರುತ್ತದೆ. ಆದರೂ ಭಾರತೀಯ ಸಾಧನಾ ಕ್ಷೇತ್ರದಲ್ಲಿ ಸರ್ವತ್ರ ಕೆಲಕಾಲದವರೆಗಾದರೂ ಇದು ತನ್ನ ಪ್ರಭಾವ ಬೀರಿತ್ತೆಂಬ ವಿಷಯವನ್ನು ಒಪ್ಪಲೇಬೇಕಾಗುವದು. ನಮ್ಮ ಸಂಸ್ಕೃತಿಯ ವಿಶಿಷ್ಟ ಸ್ರೋತವನ್ನು ಐತಿಹಾಸಿಕ ದೃಷ್ಟಿಯಿಂದ ಸೂಕ್ಷ್ಮವಾಗಿ ವಿಚಾರ ಮಾಡುವ ಪಂಡಿತರಿಗೆ ಈ ಪ್ರತ್ಯಭಿಜ್ಞಾದರ್ಶನದ ಮಹತ್ವ ಸಹಜವಾಗಿಯೇ ತಿಳಿಯುವದು.

ನಿಗಮ ಮತ್ತು ಆಗಮಗಳಲ್ಲಿಯೇ ಭಾರತದ ಸನಾತನ ಸಾಧನದ ಬೀಜ ಇರುವದೆಂಬುದು ಸತ್ಯವಾದ ಸಂಗತಿ. ಶ್ರೀಮದ್ಭಾಗವತವು ನಿಗಮಕಲ್ಪತರುವಿನ ಗಲಿತಫಲವಾಗಿರುವಂತೆ ಆಗಮಕಲ್ಪತರುವಿನ ಗಲಿತ ಫಲವೂ ಆಗಿದೆ. ಅದರಂತೆ ಪ್ರತ್ಯಭಿಜ್ಞಾದರ್ಶನವೂ ಆಗಮದ-ಶೈವಾಗಮದ ಸಾರಭೂತ ರಸಸ್ವರೂಪವಾಗಿದೆ. ಗೌಡೀಯ ವೈಷ್ಣವರು ಶ್ರೀಮದ್ಭಾಗವತವನ್ನವಲಂಬಿಸಿ ಅಚಿಂತ್ಯ ಭೇದಾಭೇದವೆಂಬ ಅಪೂರ್ವವಾದ ದಾರ್ಶನಿಕ ಸಿದ್ಧಾಂತವನ್ನು ಪ್ರತಿಪಾದಿಸಿರುವಂತೆ ಕಾಶ್ಮೀರೀಯ ಶೈವಾಚಾರ್ಯರು, ಸ್ವಚ್ಛಂದ, ಮಾಲಿನೀ ವಿಜಯ ಮೊದಲಾದ ಆಗಮ ಮತ್ತು ತೈತ್ತಿರೀಯ ಸಂಹಿತಾ ಮುಂತಾದ ನಿಗಮಸಮುದ್ರವನ್ನು ಮಂಥನಮಾಡಿ **'ಈಶ್ವರಾದ್ವಯವಾದ'** ವೆಂಬ ಜಾಜ್ವಲ್ಯಮಾನ ರತ್ನಮಾಲೆಯನ್ನು ಆವಿಷ್ಕಾರಮಾಡಿದ್ದಾರೆ. ಇವೆರಡೂ ಭಾರತೀಯ ಸಾಧನಾ ಕ್ಷೇತ್ರದ ಗೌರವಸ್ತಂಭಗಳಾಗಿವೆ.

ಕಾಶ್ಮೀರೀಯ ಶೈವದರ್ಶನಕ್ಕೆ **'ಪ್ರತ್ಯಭಿಜ್ಞಾ'** ಎಂಬ ಹೆಸರು ಬಂದಿರುವದು ಬಹಳ ಪ್ರಾಚೀನವಾಗಿ ಕಂಡುಬರುವದಿಲ್ಲ. ಪರಂತು ಮಾಧವಾಚಾರ್ಯರು ಸರ್ವದರ್ಶನ ಸಂಗ್ರಹದಲ್ಲಿ ಈ ಹೆಸರನ್ನು ಪ್ರಯೋಗಿಸಿದ್ದಾರೆ. ಆದುದರಿಂದ ಅವರ ಕಾಲದಲ್ಲಿ ಈ ಹೆಸರು ಪ್ರಸಿದ್ಧವಾಗಿರಬಹುದೆಂದು ತೋರುತ್ತದೆ. ಪ್ರತ್ಯಭಿಜ್ಞಾ ಹೃದಯ, ಈಶ್ವರ ಪ್ರತ್ಯಭಿಜ್ಞಾ ವಿಮರ್ಶನೀ ಮೊದಲಾದ ಪ್ರಾಚೀನ ಗ್ರಂಥಗಳ ನಾಮಕರಣ ಪ್ರಸಂಗದಲ್ಲಿ ಈ ಶಬ್ದದ ವ್ಯವಹಾರವನ್ನೂ ಮಾಡಿದ್ದಾರೆ. ಆದರೆ ಇದು ನ್ಯಾಯ ವೈಶೇಷಿಕ ಮುಂತಾದವುಗಳಿಗೆ ಸಮಾನರಾದ ದಾರ್ಶನಿಕ ಸಿದ್ಧಾಂತ ವಿಶೇಷ ವಾಚಕವಾಗಿರುವದಿಲ್ಲ.

ಕಾಶ್ಮೀರೀಯ ಶೈವಾಗಮವು **ಸ್ಪಂದಶಾಸ್ತ್ರ** ಮತ್ತು **ಪ್ರತ್ಯಭಿಜ್ಞಾಶಾಸ್ತ್ರ** ಹೀಗೆ ಎರಡು ಭಾಗಗಳಲ್ಲಿ ವಿಭಕ್ತವಾಗಿರುವದು ಮತ್ತು ಸ್ಪಂದಶಾಸ್ತ್ರದ ಪ್ರಚಾರಕರು ವಸುಗುಪ್ತ ಮತ್ತು ಪ್ರತ್ಯಭಿಜ್ಞಾಶಾಸ್ತ್ರದ ಪ್ರವರ್ತಕರು ಸೋಮಾನಂದರಾಗಿದ್ದಾರೆಂದು ಸರ್. ಭಂಡಾರಕರ್ ಅವರು ಹೇಳಿದ್ದಾರೆ. ಪರಂತು ಅವರ ಈ ವರ್ಗೀಕರಣ ಐತಿಹಾಸಿಕ ದೃಷ್ಟಿಯಿಂದ ಕೆಲವು ಅಂಶದಲ್ಲಿ ಸತ್ಯವಾದರೂ ಸೂಕ್ಷ್ಮವಾಗಿ ವಿಚಾರ ಮಾಡಿದರೆ ಈ ವರ್ಗೀಕರಣ ಭ್ರಾಂತಿಮೂಲಕವಾದುದೆಂದು ಕಂಡು ಬರುವದು. ಏಕೆಂದರೆ ಸ್ಪಂದ ಹಾಗು ಪ್ರತ್ಯಭಿಜ್ಞಾಶಾಸ್ತ್ರದ ಪ್ರತಿಪಾದಕ ಗ್ರಂಥಗಳಲ್ಲಿ ಅವಾಂತರ ವಿಷಯಗಳನ್ನು ಕುರಿತು ಸ್ವಲ್ಪ ಮತಭೇದದ ಆಭಾಸ ಕಂಡು ಬಂದರೂ ಎರಡೂ ಶಾಸ್ತ್ರಗಳ ಮೂಲ ಸಿದ್ಧಾಂತ ಹಾಗು ಆಲೋಚನಾ ಪ್ರಣಾಳಿಕೆ ಇವುಗಳಲ್ಲಿ ಸ್ವಲ್ಪಾದರೂ ಭೇದ ಕಂಡು ಬರುವದಿಲ್ಲ. 'ಪ್ರತ್ಯಭಿಜ್ಞಾ' ಎಂಬ ಈ ಶಬ್ದದಿಂದ ಸ್ಪಂದ ಹಾಗು ಪ್ರತ್ಯಭಿಜ್ಞಾ ಈ ಎರಡೂ ಮತಗಳ ನಿರ್ದೇಶವಾಗುವದು. ಪ್ರಾಚೀನ ಸಾಹಿತ್ಯದಲ್ಲಿ ಈ ಪ್ರತ್ಯಭಿಜ್ಞಗೆ ತ್ರಿಕದರ್ಶನ, ಮಾಹೇಶ್ವರ ದರ್ಶನ ಮುಂತಾದ ಹೆಸರುಗಳು ವಿಶೇಷವಾಗಿ ಪ್ರಚಲಿತವಾಗಿದ್ದವೆಂಬುದನ್ನು ಗಮನಿಸಬಹುದಾಗಿದೆ.

**ಪ್ರತ್ಯಭಿಜ್ಞಾ ಸಮ್ಮತವಾದ ಅದ್ವೈತವಾದ :**— ಆಗಮ ಮತ್ತು ಉಪನಿಷತ್‌ಗಳಲ್ಲಿ ದ್ವೈತ, ಅದ್ವೈತ, ದ್ವೈತಾದ್ವೈತ ಮೊದಲಾದ ಎಲ್ಲ ರೀತಿಯ ದಾರ್ಶನಿಕವಾದದ ಮೂಲಸೂತ್ರಗಳು ಕಂಡುಬರುತ್ತವೆ. ಆದರೂ ಅಧಿಕಾರ ಭೇದ ಹಾಗು ರುಚಿಯ ವೈಚಿತ್ರ್ಯದ ಮೂಲಕ ಕೆಲವು ಪ್ರಸ್ಥಾನಗಳು ಯಾವದಾದರೊಂದು ವಿಶೇಷ ಸಿದ್ಧಾಂತದ ಪ್ರಧಾನತ್ವವನ್ನು ಸ್ವೀಕರಿಸಿ ಪ್ರವರ್ತಿತವಾಗಿವೆ. ಶಂಕರ, ರಾಮಾನುಜ, ಮಾಧ್ವ ಮೊದಲಾದ ಆಚಾರ್ಯರು ಉಪನಿಷತ್ ಹಾಗೂ ಗೀತೆಯ ಮೇಲೆ ರಚಿಸಿರುವ ಭಾಷ್ಯಗಳ ಬಗೆಗೆ ತುಲನಾತ್ಮಕವಾಗಿ ವಿಚಾರ ಮಾಡಿದರೆ ಈ ವಿಷಯ ಚೆನ್ನಾಗಿ ತಿಳಿದು ಬರುವದು. ಎಲ್ಲ ದೇಶಗಳ ಆಧ್ಯಾತ್ಮಶಾಸ್ತ್ರದ ಇತಿಹಾಸದಲ್ಲಿ ಈ ವಿಷಯವಾಗಿ ಹೇರಳ ದೃಷ್ಟಾಂತಗಳು ದೊರೆಯುತ್ತವೆ. ಅದೇ ರೀತಿ ಕಾಶ್ಮೀರೀಯ ಶೈವಾಚಾರ್ಯರು ಆಗಮದ ವ್ಯಾಖ್ಯಾನ ಮಾಡುವಾಗ ಅದ್ವೈತವಾದವನ್ನೇ ಸ್ವೀಕಾರ ಮಾಡಿದ್ದಾರೆ. ಮತ್ತು ಅವರ ವಾದದ ಮಹತ್ವವನ್ನು ತೋರಿಸಲು ಒಂದು ಅಭಿನವ ದರ್ಶನಶಾಸ್ತ್ರವನ್ನು ನಿರ್ಮಾಣ ಮಾಡಿದ್ದಾರೆ. ಭಾರತೀಯ ದರ್ಶನಶಾಸ್ತ್ರದ ಇತಿಹಾಸ

ದಲ್ಲಿ ಈ ಅದ್ವೈತ ಸಿದ್ಧಾಂತವು 'ಈಶ್ವರಾದ್ವಯವಾದ' ವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆಚಾರ್ಯ ಅಭಿನವ ಗುಪ್ತರು ಈ ಸಿದ್ಧಾಂತದ ಸರ್ವಶ್ರೇಷ್ಠ ವ್ಯಾಖ್ಯಾನಕಾರರಾಗಿದ್ದಾರೆ.

**ನಿಗಮ ಮತ್ತು ಆಗಮ :** ವೇದ ಹಾಗೂ ತಂತ್ರಗಳಲ್ಲಿ ಅದ್ವೈತವಾದ ಮತ್ತು ದ್ವೈತವಾದ ಎರಡೂ ಇದ್ದವು. ವೈದಿಕ ಸಿದ್ಧಾಂತದ ಮೂಲಸ್ಥಾನ ಮುಖ್ಯವಾಗಿ ಉಪನಿಷತ್ ಮತ್ತು ತದವಲಂಬೀ ದಾರ್ಶನಿಕ ಸೂತ್ರಗ್ರಂಥಗಳು ಹಾಗೂ ವಿಶೇಷವಾಗಿ ಬ್ರಹ್ಮಸೂತ್ರವಾಗಿವೆ. ಪ್ರಾಚೀನವಾದ ಆಗಮರಾಶಿ ಮತ್ತು ಶಿವಸೂತ್ರ, ಪರಶುರಾಮ ಕಲ್ಪಸೂತ್ರ ಮೊದಲಾದ ಸೂತ್ರಮಾಲೆಯು ತಾಂತ್ರಿಕಸಿದ್ಧಾಂತದ ಆಕರಗ್ರಂಥಗಳಾಗಿವೆ. ಶೈವ, ವೈಷ್ಣವ, ಶಾಕ್ತ ಮೊದಲಾದ ಭೇದದಿಂದ ಆಗಮವು ನಾನಾ ಪ್ರಕಾರ ಉಳ್ಳದುದಾಗಿದೆ. ಪಾಂಚರಾತ್ರ ಮತ್ತು ಭಾಗವತಮತವು ವೈಷ್ಣವಾಗಮದ ಮೂಲಕವಾದುದಾಗಿದೆ. ಪ್ರತ್ಯಭಿಜ್ಞಾ ಮತ್ತು ಸ್ಪಂದಶಾಸ್ತ್ರ ಅರ್ಥಾತ್ ಕಾಶ್ಮೀರೀಯ ತ್ರಿಕದರ್ಶನ, ದಕ್ಷಿಣ ದೇಶದ ಸಿದ್ಧಾಂತ ಶಾಸ್ತ್ರ ಮತ್ತು ವ್ಯಾಕರಣ ಮೊದಲಾದವುಗಳು ಶೈವಾಗಮದಿಂದ ಉದ್ಭೂತಗಳಾಗಿವೆ.

**ಈಶ್ವರಾದ್ವಯವಾದ :** ಗೌಡವಾದ ಮತ್ತು ಶಂಕರಾಚಾರ್ಯರಿಂದ ಪ್ರಚಾರ ಮಾಡಲ್ಪಟ್ಟ ಅದ್ವೈತವಾದ ಮತ್ತು ಅಭಿನವಗುಪ್ತ ಮೊದಲಾದವರಿಂದ ವ್ಯಾಖ್ಯಾನ ಮಾಡಲ್ಪಟ್ಟ ಪರಮೇಶ್ವರಾದ್ವಯವಾದ, ಅವೆರಡೂ ಒಂದೇ ಪ್ರಕಾರದವುಗಳಲ್ಲ. ಬ್ರಹ್ಮವಾದವು ಮಾಯೆಯನ್ನು ಸದ-ಸದ್ ವಿಲಕ್ಷಣ ಮತ್ತು ಅನಿರ್ವಚನೀಯವೆಂದು ಹೇಳುತ್ತದೆ. ಆದರೆ ಶೈವಾಚಾರ್ಯರು ಇದರಿಂದ ದ್ವೈತಭಾವದ ನಿವೃತ್ತಿಯಾಗುವದಿಲ್ಲವೆಂದು ಹೇಳುತ್ತಾರೆ. ಈಶ್ವರಾದ್ವಯವಾದದಲ್ಲಿ ಅಜ್ಞಾನವಿದೆ; ಮಾಯೆಯೂ ಇದೆ. ಅವುಗಳ ಪ್ರವೃತ್ತಿ ಆಕಸ್ಮಿಕವಾಗಿರದೆ, ಆತ್ಮನ ಸ್ವಾತಂತ್ರ್ಯ ಮೂಲಕ ಅಥವಾ ಸ್ವೇಚ್ಛೆಯಿಂದ ಪರಿಗ್ರಹೀತವಾದುದಾಗಿದೆ. ನಟನು ತನ್ನ ಇಚ್ಛೆಯಿಂದ ಹೇಗೆ ನಾನಾ ಪ್ರಕಾರದ ಅಭಿನಯ ಮಾಡುವನೊ ಅದರಂತೆ ಆತ್ಮನು ತನ್ನ ಇಚ್ಛಾಮಾತ್ರದಿಂದ ನಾನಾ ಪ್ರಕಾರದ ಭೂಮಿಕೆಯನ್ನು ಗ್ರಹಣ ಮಾಡುತ್ತಾನೆ. ಅವನು ಸ್ವತಂತ್ರನಾದುದರಿಂದ ತನ್ನ ಸ್ವರೂಪವನ್ನು ಮರೆಮಾಡಿಕೊಳ್ಳುವ ಹಾಗು ಪ್ರಕಟಮಾಡಿಕೊಳ್ಳುವದರಲ್ಲಿ ಸಮರ್ಥನಾಗಿದ್ದಾನೆ. ಆದರೆ, ತನ್ನ ಸ್ವರೂಪವನ್ನು ಆಚ್ಛಾದನ ಮಾಡಿಕೊಂಡಾಗಲೂ ತನ್ನ ಸ್ವರೂಪಕ್ಕೆ ಭಂಗ ಬರುವದಿಲ್ಲ. ಶಾಂಕರವೇದಾಂತದ ಪ್ರಕಾರ ಆತ್ಮನು ವಿಶ್ವೋತ್ತೀರ್ಣ, ಸಚ್ಚಿದಾನಂದ, ಏಕ, ಸತ್ಯ, ನಿರ್ಮಲ, ನಿರಹಂಕಾರ, ಅನಾದಿ, ಅನಂತ, ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣ, ಭಾವಾಭಾವವಿಹೀನ ಸ್ವಪ್ರಕಾಶ ಮತ್ತು ನಿತ್ಯಮುಕ್ತನಾಗಿದ್ದಾನೆ. ಆದರೆ ಅವನಲ್ಲಿ ಕರ್ತೃತ್ವವಿಲ್ಲ. ಪರಂತು ಆಗಮ ಸಮ್ಮತವಾದ ಅದ್ವೈತ ಮತದಲ್ಲಿ ವಿಮರ್ಶಾಶಕ್ತಿಯೇ ಆತ್ಮನ ಸ್ವಭಾವವಾಗಿರುವದು. ಅವನಿಗೆ ಜ್ಞಾನ-ಕ್ರಿಯೆಗಳೆರಡೂ ಒಂದೇ ಆಗಿವೆ. ಅವನು ಯಾವಾಗಲೂ ಪಂಚಕೃತ್ಯಕಾರಿಯಾಗಿದ್ದಾನೆ.

ತ್ರಿಕದರ್ಶನವು ಸಂಪೂರ್ಣವಾಗಿ ಅದ್ವೈತವಾದಿಯಾಗಿದೆ. ಆ ಅದ್ವೈತದ ಮುಂದೆ ಶಾಂಕರಾದ್ವೈತ (ಬ್ರಹ್ಮಾದ್ವೈತ) ಸಿದ್ಧಾಂತವು ಮ್ಲಾನವಾದಂತೆ ಕಾಣುತ್ತದೆ. ಮತ್ತು ದ್ವೈತದಿಂದ ಭೀತ ಹಾಗು ತ್ರಸ್ತವಾದಂತೆ ಭಾಸವಾಗುತ್ತದೆ. ಈ ಕಾರಣದಿಂದ ಆ ಮತದಲ್ಲಿ ಅದ್ವೈತವು ದ್ವೈತಕ್ಕಿಂತ ವಿಲಕ್ಷಣವಾಗಿದೆ. ಆದುದರಿಂದಲೇ ಅದು ಅಸತ್ಕಲ್ಪವಾಗಿದೆ. ವಿಚಾರಮಾಡಿದಲ್ಲಿ ಅದು ದ್ವೈತಕೋಟಿಯಲ್ಲಿ ಬರುವದು. ಆಗಮಮತದಲ್ಲಿ ಅದ್ವೈತ ಶಬ್ದದ ಅರ್ಥ ಎರಡರ ನಿತ್ಯಸಾಮರಸ್ಯವೆಂದಾಗುವದು, ಶಂಕರರು ಬ್ರಹ್ಮನಿಗೆ ಸತ್ಯ ಮತ್ತು ಮಾಯೆಗೆ ಅನಿರ್ವಚನೀಯವೆಂದು ಹೇಳುತ್ತಾರೆ. ಆದುದರಿಂದಲೇ ವಾಕ್ಯ (ಶಬ್ದ) ದಿಂದ ಅದ್ವೈತಭಾವದ ಉತ್ಕರ್ಷವನ್ನು ತೋರಿಸುವದಕ್ಕೆ ಎಷ್ಟೇ ಪ್ರಯತ್ನಪಟ್ಟಿದ್ದರೂ ಅದು ಪೂರ್ಣಭಾವದ ಪ್ರಕಾಶನಕ್ಕೆ ಅಷ್ಟೇ ಬಾಧೆಯನ್ನುಂಟುಮಾಡಿದೆ. ಅವರು ಮಾಯೆಯನ್ನು ಸತ್ಯವೆಂದು ತಿಳಿಯಲು ಸಾಧ್ಯವಿರುವದಿಲ್ಲ. ಆದುದರಿಂದಲೇ ಅವರ ಅದ್ವೈತ ಭಾವವು ವ್ಯಾವೃತ್ತಿ ಮೂಲಕ (Exclusive) ಸಂನ್ಯಾಸ ಮೂಲಕ (Based on renunciation or elimination) ಆಗಿರುವುದು. ಮಾಯೆ, ಬ್ರಹ್ಮಶಕ್ತಿ ಅದು ಬ್ರಹ್ಮಾಶ್ರಿತವಾಗಿರುವದು. ಆದರೆ ಬ್ರಹ್ಮ ಸತ್ಯವಾಗಿರುವದು. ವಿಚಾರದೃಷ್ಟಿಯಿಂದ ಮಾಯೆ ಸದಸದ್ ವಿಲಕ್ಷಣವಾಗಿದೆ. ಮಾಯೆಯನ್ನೂ ಸ್ವೀಕಾರಮಾಡಿ, ಅದನ್ನೂ ಬ್ರಹ್ಮಮಯೀ, ನಿತ್ಯ ಮತ್ತು ಸತ್ಯಸ್ವರೂಪಿಣೀ ಎಂದು ತಿಳಿಯುವವರಿಂದ, ಬ್ರಹ್ಮ ಹಾಗು ಮಾಯೆಯ ಏಕರಸತ್ವ ಉಂಟಾಗುತ್ತದೆ. ಈ ಏಕರಸತ್ವವು ಮಾಯೆಯನ್ನು ತ್ಯಾಗ ಮಾಡುವದಾಗಲಿ ಅಥವಾ ತುಚ್ಛವೆಂದು ತಿಳಿಯುವದಾಗಲೀ ಆಗಿರದೆ, ಅದು ತನ್ನ ಶಕ್ತಿ ಎಂದೇ ತಿಳಿಯಲ್ಪಡುತ್ತದೆ. ಮೇಘದಿಂದ ದೃಷ್ಟಿಶಕ್ತಿಯನ್ನೂ, ಆಚ್ಛಾದಿಸಿದ ನಂತರ, ಮೇಘವು ಸೂರ್ಯನನ್ನು ಆಚ್ಛಾದಿಸಿದೆ ಎಂದು ನಾವು ಹೇಳುತ್ತೇವೆ. ಆದರೆ ಆ ಮೇಘವು ಸೂರ್ಯನಿಂದಲೇ ಉತ್ಪನ್ನವಾಗಿಲ್ಲವೇ ? ಅದು ಸೂರ್ಯನ ಮಹಿಮೆಯೇ ಅಲ್ಲವೇ ? ಸೂರ್ಯನೇ ಮೇಘವೂ ಆಗಿರುವದು. ಏಕೆಂದರೆ ಮೇಘ ಸೂರ್ಯನ ಶಕ್ತಿಯೇ ಆಗಿರುವದು. ಅದರಂತೆ ಮಾಯಾ ಮೇಘವೂ ಬ್ರಹ್ಮನಿಂದಲೇ ಹುಟ್ಟುತ್ತದೆ. ಮತ್ತು ಅವನ ಆಶ್ರಯದಲ್ಲಿಯೇ ಆತ್ಮಪ್ರಕಾಶವನ್ನೂ ಮಾಡುತ್ತದೆ, ಅಲ್ಲಿಯೇ ವಿಶ್ರಾಂತಿಯನ್ನೂ ಹೊಂದುತ್ತದೆ. ಮಾಯೇ ಬ್ರಹ್ಮವೂ ಆಗಿದೆ. ಬ್ರಹ್ಮನು ತಾನೇ ತನ್ನನ್ನು ಅರ್ಥಾತ್ ತನ್ನ ಶಕ್ತಿಯಾದ ಮಾಯೆಯಿಂದ ಆಚ್ಛಾದಿಸಿಕೊಳ್ಳುತ್ತಾನೆ. ಹೀಗೆ ಆಚ್ಛಾದಿತನಾದರೂ ಪೂರ್ಣವಾಗಿ ಆಚ್ಛಾದಿತ

ನಾಗಿರುವದಿಲ್ಲ. ಏಕೆಂದರೆ ಅವನು ಅನಾವೃತ ಸ್ವರೂಪನಾಗಿದ್ದಾನೆ. ಆದುದರಿಂದ ಆತ್ಮನು ತನ್ನನ್ನು ತಾನೇ ಮರೆಮಾಡಿಕೊಳ್ಳುತ್ತಾನೆ ಮತ್ತು ಅವನೇ ತನ್ನನ್ನು ತಾನೇ ಪ್ರಕಟಿಸಿಕೊಳ್ಳುತ್ತಾನೆ. ಇವೆರಡೂ ಒಂದೇ ಪದಾರ್ಥಗಳಾಗಿವೆ (ಬ್ರಹ್ಮ ಮತ್ತು ಮಾಯೆ ಎರಡೂ ಒಂದೇ ವಸ್ತುವಾಗಿವೆ). ಬ್ರಹ್ಮ ಸತ್ಯ, ಮಾಯೆ ಮಿಥ್ಯವೆಂದು ಹೇಳುವದರಿಂದ ದ್ವೈತಾಭಾಸವು ಬಂದೇಬರುತ್ತದೆ. ಯಾವ ಅವಸ್ಥೆಯಲ್ಲಿ ಮಾಯೆ ಮಿಥ್ಯವಾಗಿದೆಯೋ ಆ ಅವಸ್ಥೆಯಲ್ಲಿ ಬ್ರಹ್ಮನೂ ಮಿಥ್ಯಾರೂಪನೇ ಆಗಿರುವನು. ಏಕೆಂದರೆ ಮಾಯೆಯನ್ನೂ ಮಿಥ್ಯವೆಂದು ತಿಳಿದಾಗಲೇ ಮಾಯೆಯ ಅಸ್ತಿತ್ವವನ್ನು ಸ್ವೀಕಾರ ಮಾಡುವದು ಅಪರಿಹಾರ್ಯವಾಗುವದು. ಮತ್ತು ಮಾಯೆಯನ್ನೂ ಸ್ವೀಕಾರ ಮಾಡುವದರಿಂದಲೇ ಆ ಅವಸ್ಥೆಯಲ್ಲಿ ಉಂಟಾಗುವ ಬ್ರಹ್ಮಜ್ಞಾನವೂ ಮಾಯಾಕಲ್ಪಿತ ವಸ್ತುವಾಗುತ್ತದೆಂಬ ಮಾತನ್ನು ವೇದಾಂತಿಯೂ ಒಂದಿಲ್ಲೊಂದು ರೀತಿಯಿಂದ ಸ್ವೀಕಾರ ಮಾಡಲೇ ಬೇಕಾಗುತ್ತದೆ. ಶಿವಾದ್ವೈತಮತದಲ್ಲಿ ಮಾಯೆಯನ್ನು ಸತ್ಯವೆಂದು ಸ್ವೀಕಾರಮಾಡುವದರಿಂದ ಬ್ರಹ್ಮನೂ ಸತ್ಯನಾಗುವನು. ಮಾಯೆಯ ವೈಚಿತ್ರ್ಯಾನುಸಾರವಾಗಿ ಈ ಬ್ರಹ್ಮಬೋಧವೂ ಸಹ ವಿಚಿತ್ರವೇ ಆಗುವದು. ಮತ್ತು ಆ ಬೋಧವೆಲ್ಲವೂ ಸತ್ಯವೇ ಆಗುತ್ತದೆ. ಆ ಸಮಯದಲ್ಲಿ ಜಗತ್ತಿನ ಸಮಸ್ತ ಪದಾರ್ಥವೂ ಬ್ರಹ್ಮಸ್ವರೂಪವಾಗಿ ಕಾಣುತ್ತವೆ. ಎಲ್ಲವೂ ಸತ್ಯವಾಗಿ, ಎಲ್ಲವೂ ವಿಸ್ಮಯವಾಗಿ, ಎಲ್ಲವೂ ಆನಂದಮಯವಾಗಿರುತ್ತದೆಂಬ ತತ್ತ್ವವು ಉಪಲಬ್ಧವಾಗುವದು. 'ಸರ್ವ ಖಲ್ವಿದಂ ಬ್ರಹ್ಮ' ಎಂಬ ಉಪನಿಷದ್ ವಾಕ್ಯವೂ ಆ ಸಮಯದಲ್ಲಿ ಸಾರ್ಥಕವಾಗುತ್ತದೆ. ಮಾಯೆ ಅಥವಾ ಅದರಿಂದ ಉತ್ಪನ್ನವಾದ ಜಗತ್ತನ್ನು ತ್ಯಾಗಮಾಡದೆ ಅದನ್ನು ಸಾಕ್ಷಾತ್ ಬ್ರಹ್ಮಶಕ್ತಿ ಹಾಗು ಅದರ ವಿಕಾಸವಾಗಿರುವವೆಂದು ತಿಳಿಯುವದರಲ್ಲಿ ಜೀವನದ ಸಾರ್ಥಕತ್ವ ಇರುವದು. ಶಕ್ತಿಯು ಸತ್ಯವಾದುದಾಗಿದೆ. ಜೀವ ಹಾಗು ಜಗತ್ತು ಸಹ ಸತ್ಯವೇ ಆಗಿವೆ, ಮಿಥ್ಯವಲ್ಲ. ಆದುದರಿಂದ ಸಾಮಾನ್ಯವಾಗಿ ಎಲ್ಲವೂ ಶಿವಮಯವಾಗಿದೆ. ಈ ವೈಚಿತ್ರ್ಯವು ಒಂದೇ ವಸ್ತುವಿನ ವಿಲಾಸವಾಗಿದೆ. ಭೇದವು ಅಭೇದದ ಆತ್ಮಪ್ರಕಾಶವಾಗಿರುವದು, ಶಕ್ತಿರೂಪಕಿರಣರಾಶಿಯು ಶಿವರೂಪ ಸೂರ್ಯನ ಸ್ಫುರಣ ಮಾತ್ರವಾಗಿರುವದಲ್ಲದೆ ಮತ್ತೇನೂ ಅಲ್ಲ. ಶಂಕರಾಚಾರ್ಯರ 'ತಮಃಪ್ರಕಾಶವದ್ವಿರುದ್ಧ ಸ್ವಭಾವಯೋಃ' ಈ ಪದದ ಯಥಾರ್ಥತ್ತ್ವವನ್ನು ಸ್ವೀಕಾರಮಾಡಿದರೂ ಪ್ರಕಾಶದಿಂದಲೇ ಘರ್ಷಣದ ಮೂಲಕ ಅಂಧಕಾರವು ಆವಿರ್ಭವಿಸುತ್ತದೆ ಮತ್ತು ಅಂಧಕಾರವೇ ಘರ್ಷಣದಿಂದ ಪ್ರಕಾಶರೂಪದಲ್ಲಿ ಪರಿಣತವಾಗುತ್ತದೆಂದು ಹೇಳಬಹುದು. ಇವೆರಡೂ ನಿತ್ಯ ಸಂಯುಕ್ತಗಳಾಗಿವೆ. ಸ್ವರೂಪದಲ್ಲಿ ಸಮರಸಭಾವಾಪನ್ನಗಳಾಗಿವೆ. ಇದೇ ಆಗಮಶಾಸ್ತ್ರದ ಸಿದ್ಧಾಂತವಾಗಿರುವದು. ಪುರುಷನಿಂದ ಪ್ರಕೃತಿ ಅಥವಾ ಪ್ರಕೃತಿಯಿಂದ ಪುರುಷನು ಅತ್ಯಂತ ಭಿನ್ನವಾಗಿರುವದಿಲ್ಲ; ಆಗುವದು ಸಾಧ್ಯವೂ ಇಲ್ಲ.ಆ ರೀತಿ ಭಿನ್ನವೆಂದು ಹೇಳುವವರು ಕೇವಲ ವಿಚಾರ (Logical abstraction)ದಿಂದ ತತ್ತ್ವದ ವಿಶ್ಲೇಷಣವನ್ನು ಮಾತ್ರ ಮಾಡುತ್ತಾರೆ. ಸಾಮಾನ್ಯವಾಗಿ ಸಾಂಖ್ಯರ ಪ್ರಕೃತಿ–ಪುರುಷ ವಿವೇಕದ ಅರ್ಥವೂ ಸಹ (ಅವುಗಳ) ಪೃಥಃಕ್ಕರಣವೆಂದೇನೂ ಅಲ್ಲ. ಸಾಂಖ್ಯಕಾರಿಕಾ ಮತ್ತು ಯೋಗಭಾಷ್ಯಗಳಲ್ಲಿ ಇದಕ್ಕೆ ಸ್ಪಷ್ಟವಾಗಿ ಪ್ರಮಾಣ ದೊರೆಯುತ್ತದೆ. ಸ್ಪಂದಶಾಸ್ತ್ರಕಾರರು ಹೇಳುವದೇನೆಂದರೆ, ಜೀವನ್ಮುಕ್ತನು ಸಮಸ್ತ ಜಗತ್ತನ್ನೇ ತನ್ನ ಕ್ರೀಡೆ ಅರ್ಥಾತ್ ಆತ್ಮಶಕ್ತಿಯ ವಿಲಾಸರೂಪದಲ್ಲಿ ನೋಡುತ್ತಾನೆ. ಅವನ ಯೋಗಾವಸ್ಥೆಯು ಎಂದೂ ಭಗ್ನವಾಗುವದಿಲ್ಲ. ಭೇದ ಮತ್ತು ಅಭೇದ, ವ್ಯುತ್ಥಾನ ಮತ್ತು ನಿರೋಧ ಇವೆರಡರಲ್ಲೂ ಸಮದರ್ಶನವಾದರೆ ಬೇರೆ ಯಾವ ಸಂಶಯವೂ ಉಳಿಯುವದಿಲ್ಲ. ಏಕೆಂದರೆ ಎರಡೂ ಒಂದೇ ವಸ್ತುವಿನ ಎರಡು ಪ್ರಕಾರ ಭೇದಗಳಾಗಿವೆ. ಇದನ್ನೇ ಶಿವ–ಶಕ್ತಿಯ ಸಾಮರಸ್ಯ ಅಥವಾ ಚಿದಾನಂದ ಪ್ರಾಪ್ತಿ ಎಂದು ಹೇಳುತ್ತಾರೆ. ಇದೇ ಈಶ್ವರಾದ್ವಯವಾದದ ವೈಶಿಷ್ಟ್ಯವಾಗಿದೆ.

**ಪ್ರತ್ಯಭಿಜ್ಞಾದರ್ಶನದಲ್ಲಿ ಜ್ಞಾನ ಮತ್ತು ಭಕ್ತಿಯ ಸಾಮರಸ್ಯ**

ಈ ಅದ್ವಯವಾದದಲ್ಲಿ ಮತ್ತೊಂದು ವೈಶಿಷ್ಟ್ಯವೇನೆಂದರೆ, ಇದು ಕೇವಲ ಶುಷ್ಕವಾದ ಜ್ಞಾನಮಾರ್ಗವೂ ಅಲ್ಲ ಮತ್ತು ಜ್ಞಾನಹೀನ ಭಕ್ತಿಮಾರ್ಗವೂ ಅಲ್ಲ. ಇದರಲ್ಲಿ ಜ್ಞಾನ-ಭಕ್ತಿಗಳೆರಡರ ಸಾಮರಸ್ಯವಿದೆ. ಶಂಕರಾಚಾರ್ಯರಿಂದ ಪ್ರವರ್ತಿತವಾದ ಅದ್ವೈತವಾದದ ಚರಮಾವಸ್ಥೆಯಲ್ಲಿ ಭಕ್ತಿಗೆ ಸ್ಥಾನವೇ ಇರುವದಿಲ್ಲ. ಅವರ ಮತದಲ್ಲಿ ಭಕ್ತಿ ದ್ವೈತಮೂಲಕವಾದುದಾಗಿದೆ. ಆದುದರಿಂದಲೇ ಅದ್ವೈತಾವಸ್ಥೆಯಲ್ಲಿ ಜ್ಞಾನಾವಿರ್ಭಾವಸಮಯದಲ್ಲಿ ಅದರ ಅಸ್ತಿತ್ವ ಇರುವದಿಲ್ಲ. ಮತ್ತು ಇದು ಸಾಧನಾರೂಪ ಅಜ್ಞಾನಮೂಲಕವಾದ ಭಕ್ತಿ ಆಗಿರುವದೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಪರಂತು ಅದ್ವೈತ ರೂಪಭಕ್ತಿ ಪದಾರ್ಥವು ಇರುವದೆಂಬುದನ್ನು ಶಾಸ್ತ್ರ ಹಾಗೂ ಮಹಾತ್ಮರ ಅನುಭವದಿಂದ ತಿಳಿಯಬಹುದಾಗಿದೆ. ಈ ಅದ್ವೈತ ಭಕ್ತಿಯು ನಿತ್ಯವಾದುದು. ಸಾಮಾನ್ಯವಾಗಿ ನಾವು ಯಾವುದನ್ನು ಮೋಕ್ಷವೆಂದು ಕರೆಯುವೆವೋ ವಸ್ತುತಃ ಅದೇ ಈ ನಿತ್ಯ ಸಿದ್ಧಜ್ಞಾನ-ಭಕ್ತಿಯ ಆವರಣಭಂಗ ಜನಿತ ಸಮುನ್ಮೇಷ ಮಾತ್ರವಾಗಿದೆ. ಇದನ್ನೇ ತ್ರಿಕದರ್ಶನದಲ್ಲಿ ಚಿದಾನಂದ ಲಾಭ ಅಥವಾ ಪೂರ್ಣಾರೂಪವೆಂದು ಹೇಳಲಾಗಿದೆ. ಚಿದಂಶವು ಜ್ಞಾನಭಾವ ಮತ್ತು ಆನಂದಾಂಶವು ಭಕ್ತಿ ಆಗಿರುವದು. ಪರಮತತ್ತ್ವವು ಮಾತ್ರ ಸ್ವಾತಂತ್ರ್ಯಮಯವಾಗಿದೆ. ಸ್ವಾತಂತ್ರ್ಯವೇ ಪೂರ್ಣಶಕ್ತಿ ಆಗಿರುವದು. ಆದುದರಿಂದಲೇ ಈ ಮತದಲ್ಲಿ ಚರಮಾವಸ್ಥೆಯಲ್ಲಿಯೂ ಸಹ ಸಾಮರಸ್ಯವಾಗಿರುವದೆಂದು ತಿಳಿಯಲ್ಪಡುತ್ತದೆ. ಶಕ್ತಿಯ ಅಭಾವ ಅಥವಾ ಅದರ ಅವಾಸ್ತವತ್ವದ ಕಲ್ಪನೆಯನ್ನೂ ಈ

ಮಾತವಲ್ಲ. ಯಾವಾಗಲೂ ಮಾಡಿರುವದಿಲ್ಲ. ವಸ್ತುತಃ ಶಿವ ಹಾಗೂ ಶಕ್ತಿ ಎರಡೂ ಅಭಿನ್ನವಾದವುಗಳಾಗಿವೆ. ಎರಡರಲ್ಲಿಯೂ ಯಾವ ಭೇದವೂ ಇರುವದಿಲ್ಲ. ಭೇದ ಆಗುವದೂ ಇಲ್ಲ. ಆದರೆ ವಿಶ್ವಸೃಷ್ಟಿಯಿಂದ ಸೃಷ್ಟಿ ಮತ್ತು ಸಂಹಾರ, ಅಥವಾ ಉನ್ಮೇಷ-ನಿಮೇಷಗಳ ಕಡೆಗೆ ಗಮನ ಹರಿಸಿದಾಗ ಶಕ್ತಿಪ್ರಧಾನ ಅಥವಾ ಶಿವಪ್ರಧಾನತ್ವದಿಂದ ಕೇವಲ ಒಂದೇ ಪರಮತತ್ತ್ವವು ನಿರ್ದೇಶಿಸಲ್ಪಡುತ್ತದೆ. ಪರಂತು ಶಕ್ತಿಪ್ರಧಾನ ಅವಸ್ಥೆಯಲ್ಲಿಯೂ ಶಿವಭಾವ ಇದ್ದೇ ಇರುತ್ತದೆ. ಏಕೆಂದರೆ ಪ್ರಕಾಶಮಯವಾದ ಶಿವಭಾವದಲ್ಲಿಯೇ ವಿಮರ್ಶಾತ್ಮಕ ಶಕ್ತಿಯ ವಿಕಾಸ ಸ್ವರೂಪವು ವಿಶ್ವದಲ್ಲಿ ಪ್ರತಿಬಿಂಬಿತವಾಗುತ್ತದೆ. ಮತ್ತು ಶಿವಪ್ರಧಾನ ಅವಸ್ಥೆಯಲ್ಲಿಯೂ ಶಕ್ತಿಭಾವ ಇದ್ದೇ ಇರುತ್ತದೆ. ಆ ಸಮಯದಲ್ಲಿ ವಿಶ್ವಕ್ಕೆ ಬೀಜಸ್ವರೂಪವಾದ ಶಕ್ತಿಯು ಪ್ರಕಾಶದೊಳಗೆ ವಿಲೀನವಾಗಿರುತ್ತದೆ. ಈ ಶಿವ-ಶಕ್ತಿ ಎರಡರ ಸಾಮರಸ್ಯ ಅವಸ್ಥೆಗೆ ಅಂದರೆ ಎಲ್ಲಿ ಶಿವ-ಶಕ್ತಿಗಳು ಸಾಮ್ಯವನ್ನೂ ಹೊಂದಿವೆಯೋ ಅದಕ್ಕೆ ಶಿವ ಅಥವಾ ಶಕ್ತಿಯೆಂದು ಹೇಳಲಿಕ್ಕಾಗುವದಿಲ್ಲ. ಅರ್ಥಾತ್ ಆ ಸಮಯದಲ್ಲಿ ಎರಡೂ ಭಾವಗಳು ಏಕಾಕಾರವಾಗಿರುತ್ತವೆ. ಇದೇ ಪರಮಾಭಾವ ಪ್ರಾಪ್ತಿಯಾಗಿರುವದು. ನಮ್ಮ ದರ್ಶನದಲ್ಲಿ ಇದು ಸರ್ವಭಾವಪ್ರತಿಷ್ಠೆ ಎಂದು ವರ್ಣಿಸಲ್ಪಟ್ಟಿದೆ. ಇಲ್ಲಿ ಚಿದಂಶವಾದ ಶಿವಭಾವ ಮತ್ತು ಆನಂದಾಂಶವಾದ ಶಕ್ತಿಭಾವವು ಪರಸ್ಪರವಾಗಿ ಕೂಡಿಕೊಂಡಿವೆ. ಆದುದರಿಂದಲೇ ಇದು ಜ್ಞಾನ ಭಕ್ತಿಯ ಸಾಮಂಜಸ್ಯ ಅವಸ್ಥೆಯಾಗಿರುವದು. ಈ ಮೊದಲು ಹೇಳಿದ ಶಿವ–ಶಕ್ತಿ ಹಾಗೂ ಈ ಸಾಮರಸ್ಯ–ಇವೆರಡೂ ನಿತ್ಯವಾಗಿವೆ: ಕೇವಲ ಒಂದೇ ವಸ್ತುವಿನ ಎರಡು ರೂಪಗಳಾಗಿವೆಂಬುದನ್ನು ಸ್ಮರಣದಲ್ಲಿಡಬೇಕು.

ಶಂಕರಾಚಾರ್ಯರಿಂದ ರಚಿತವಾದುದೆಂದು ಹೇಳಲಾಗುವ 'ಷಟ್ಪದಿಸ್ತೋತ್ರ'ದಲ್ಲಿ **'ಸತ್ಯಪಿ ಭೇದಾಪಗಮೇ ನಾಥ ಸಾಮುದ್ರೋಹಿತಾರಂಗಃ, ಕ್ವಚನ ಸಮುದ್ರೋ ತರಂಗಃ'** ಎಂದು ಹೇಳಲಾಗಿದೆ. ಒಂದುವೇಳೆ ಈ ಶ್ಲೋಕ ನಿಜವಾಗಿಯೂ ಶಂಕರಾಚಾರ್ಯರದೇ ಆಗಿದ್ದ ಪಕ್ಷದಲ್ಲಿ ಅವರು ಅದ್ವೈತಭಕ್ತಿಯ ಪ್ರಚಾರ ಮಾಡುತ್ತಿದ್ದರೆಂದು ಹೇಳಬೇಕಾಗುತ್ತದೆ. ಅವರ ಭಕ್ತಿಯ ಮುಖ್ಯಲಕ್ಷಣ 'ನಾನು ನಿನ್ನವನೇ ಆಗಿರುವೆನು' ಎಂದು ಹೇಳುವದಾಗಿದೆ ಎಂದು ಹೇಳಬಹುದು. ಈ ಅಭೇದಾವಸ್ಥೆಯಲ್ಲಿಯೂ 'ನಾನು ನಿನ್ನವ'ನೆಂಬ ಭಾವ ಇರಬಹುದಾಗಿದೆ. ಇದು ದಾಸ್ಯಾತ್ಮಕ ಭಾವವೆಂಬುದನ್ನು ಬೇರೆ ಹೇಳಬೇಕಾದುದಿಲ್ಲ. ಜ್ಞಾನದಿಂದ ನಾನು ನೀನೆಂಬ ವಾಸ್ತವಿಕ ಭೇದ ನಷ್ಟವಾದರೂ ಪರಾಭಕ್ತಿಯ ಪ್ರಭಾವದಿಂದ ಆ ಅದ್ವೈತ (ಭಕ್ತಿ) ಸಮುದ್ರದಲ್ಲಿಯೂ ಕಲ್ಪಿತಭಾವದ ದ್ವೈತತರಂಗ ಹುಟ್ಟುತ್ತದೆ. ವಾಸ್ತವಿಕವಾಗಿ ಈ ದ್ವೈತವು ದ್ವೈತವಲ್ಲವಾದುದರಿಂದ ಈ ಅವಸ್ಥೆಯ ಭಕ್ತಿಗೆ ಅದ್ವೈತಭಕ್ತಿ ಎಂದು ಹೇಳುವದು ಅಸಂಗತವಾಗಲಾರದು. ಬೋಧಸಾರ (೨೦೦–೨೦೧)ದಲ್ಲಿ ನರಹರಿಯು **'ದ್ವೈತಂ ಮೋಹಾಯ ಬೋಧಾತ್ ಪ್ರಾಕ್ ಪ್ರಾಪ್ತೇ ಬೋಧೇ ಮನೀಷಯಾ। ಭಕ್ತ್ಯರ್ಥಂ ಕಲ್ಪಿತಂ ದ್ವೈತಮದ್ವೈತಾದಪಿ ಸುಂದರಂ । ಜಾತೇ ಸಮರಸಾನಂದೇ ದ್ವೈತಮಪ್ಯಮೃತೋಪಮಂ । ಮಿತ್ರಯೋರಿವ ದಂಪತ್ಯೋರ್ಜೀವಾತ್ಮ ಪರಮಾತ್ಮನೋಃ॥** ಎಂದು ಹೇಳಿದ್ದಾನೆ.

ನಾರಾಯಣತೀರ್ಥರು ತನ್ನ ಭಕ್ತಿಚಂದ್ರಿಕಾ ಎಂಬ ಶಾಂಡಿಲ್ಯಸೂತ್ರ ಭಾಷ್ಯದಲ್ಲಿ ವಿಸ್ತಾರವಾಗಿ ಈ ಭಕ್ತಿಯನ್ನು ಕುರಿತು ವ್ಯಾಖ್ಯಾನ ಮಾಡಿರುವರು. ಮತ್ತು ಬೇರೆ ಅನೇಕ ಸ್ಥಳಗಳಲ್ಲಿಯೂ ಈ ಭಕ್ತಿಯ ಪ್ರಸಂಗ ದೊರೆಯುತ್ತದೆ. ತ್ರಿಪುರಾರಹಸ್ಯ ಜ್ಞಾನಖಂಡ ೨೦ನೇ ಅಧ್ಯಾಯ ೩೨-೩೪ನೇ ಶ್ಲೋಕಗಳಲ್ಲಿ ಹೀಗೆ ಹೇಳಿದೆ–'ಪ್ರಕಾಶಸಾರ ಪರಮ ತತ್ತ್ವವನ್ನೂ ಅಪರೋಕ್ಷವಾಗಿ ಆತ್ಮಾಭಿನ್ನ ಭಾವದಲ್ಲಿ ಸಾಕ್ಷಾತ್ಕಾರ ಮಾಡಿಕೊಂಡರೂ ಕೆಲವು ಪರಮಭಕ್ತರು ಪ್ರೇಮಪೂರ್ವಕವಾಗಿ ಅವನ ಸೇವೆ ಮಾಡುತ್ತಾರೆ. ಸೇವೆ ಮಾಡುವದಕ್ಕೆ ಸೇವ–ಸೇವಕ ಭಾವವಿರುವದು ಆವಶ್ಯಕವಾಗಿರುವದು. ಅದ್ವಯಾವಸ್ಥೆಯಲ್ಲಿ ಈ ಭಾವವಿರುವದು ಸಾಧ್ಯವಾಗುವದಿಲ್ಲ. ಆದುದರಿಂದಲೇ ಭೇದ ಭಾವವನ್ನವಲಂಬಿಸಿಕೊಂಡು ಸೇವೆ ಮಾಡಬೇಕಾಗುತ್ತದೆಂದು ಅದ್ವಯವಾದಿಗಳು ಹೇಳುತ್ತಾರೆ. ಇದು ನಿಶ್ಚಯವಾಗಿ ಆಹಾರ್ಯ ಭೇದವಾಗಿರುವದಲ್ಲದೆ ವಾಸ್ತವಿಕ ಭೇದವಲ್ಲ. ಪರಮತತ್ತ್ವವು ಸಾಮ್ಯಸ್ವರೂಪದಲ್ಲಿದ್ದಾಗ ಭೇದ ಇರುವದೇ ಇಲ್ಲ. ಅದು ಎಲ್ಲ ಅವಸ್ಥೆಗಳ ಸಂಧಿಸ್ಥಲವಾಗಿರುವದು.

ಇದರಿಂದ ತಿಳಿದು ಬರುವದೇನೆಂದರೆ ಜ್ಞಾನಪ್ರಾಪ್ತಿಯ ಅನಂತರವೂ ಭಕ್ತಿಯು ಇರಬಹುದಾಗಿದೆ. ಇದು ಕೈತವಹೀನವಾಗಿರುವದರಿಂದ ಸುಭಕ್ತಿಯೆಂದೆನಿಸುವದು. ಅಜ್ಞಾನ ಮೂಲಕ ದ್ವೈತ ಅಥವಾ ಸಾಧನ ಭಕ್ತಿಯಂತೆ ಸ್ವಾರ್ಥಾನುಸಂಧಾನಿಕವಾದುದಲ್ಲ. ಜ್ಞಾನಪ್ರಾಪ್ತಿಯಾದನಂತರ ಎಲ್ಲರಿಗೂ ಈ ಅದ್ವೈತ ಭಕ್ತಿ ಉಂಟಾಗುವದೆಂದು ಹೇಳಲಿಕ್ಕಾಗುವದಿಲ್ಲ. ಯಾರ ಹೃದಯವು ಸ್ವಾಭಾವಿಕವಾಗಿಯೇ ಭಕ್ತಿಪ್ರವಣವಾಗಿರುವದೋ, ಅವರಿಗೆ ಮಾತ್ರ ಅದ್ವೈತಭಕ್ತಿ ಲಭಿಸುವದು. ಜ್ಞಾನಾರ್ಥಿಗೆ ಮಾತ್ರ ಲಭಿಸಲಾರದು. ಅದ್ವೈತಭಕ್ತಿಯು ಉದಿತವಾಗಲಿ ಆಗದಿರಲಿ ಅಂತ್ಯದಲ್ಲಿ ಮಾತ್ರ ಜ್ಞಾನಭಕ್ತಿಗಳೆರಡೂ ಏಕಾಕಾರವಾಗಿಯೇ ಆಗುತ್ತವೆ. ಯಾವುದಕ್ಕೆ ಪೂರ್ಣಾಹಂತಾ ಅಥವಾ ಸ್ವಾತ್ಮಚಮತ್ಕಾರವೆಂದು ಹೇಳುತ್ತಾರೆಯೋ ಅದೇ ಜ್ಞಾನದ ಸೀಮೆ ಮತ್ತು ಅದೇ ಪ್ರೇಮದ ಪರಾಕಾಷ್ಠವಾಗಿರುವದು. ಆದುದರಿಂದಲೇ ಇದು ಸಮನ್ವಯ ಭೂಮಿಯಾಗಿರುವದು, ಇಲ್ಲಿಂದಲೇ ಎರಡೂ ಸ್ರೋತಗಳು ಪ್ರವಹಿಸುತ್ತವೆ.

ತ್ರಿಕದರ್ಶನದಲ್ಲಿ ದಾಸ್ಯಾತ್ಮಕ ಭಕ್ತಿಯೇ ಸ್ವೀಕೃತವಾಗಿದೆ. ಅಲ್ಲಿ ಭಗವಂತನು ಪ್ರಭು, ಪಿತ ಅಥವಾ ಗುರು ಆಗಿದ್ದಾನೆ. ಭಕ್ತನು ದಾಸ, ಪುತ್ರ ಅಥವಾ ಶಿಷ್ಯನಾಗಿದ್ದಾನೆ. ಕೇವಲ ತ್ರಿಕದರ್ಶನದಲ್ಲಿ ಮಾತ್ರ ಈ ಸಿದ್ಧಾಂತ ಸ್ವೀಕೃತವಾಗಿರುವದಿಲ್ಲ. ಎಲ್ಲ ಶೈವಾಗಮಗಳಲ್ಲಿ ಮತ್ತು ವೀರಶೈವಾದಿ ಮತಗಳಲ್ಲಿಯೂ ಈ ಸಿದ್ಧಾಂತವನ್ನೇ ಸ್ವೀಕಾರ ಮಾಡಿರುವದು ಕಂಡುಬರುತ್ತದೆ. ಶಾಕ್ತಾಗಮದಲ್ಲಿಯೂ ಮೂಲತಃ ಈ ವಿಷಯದಲ್ಲಿ ಯಾವ ಭೇದವೂ ಕಂಡುಬರುವದಿಲ್ಲ. ಆದರೆ ಅವರು ಪಿತೃಭಾವ ಸ್ಥಾನದಲ್ಲಿ ಮಾತೃಭಾವದ ಕಲ್ಪನೆ ಮಾಡುತ್ತಾರೆಂಬುದೊಂದೇ ಅವರಲ್ಲಿಯ ವಿಶೇಷತೆ. ಈ ಭಾವತ್ರಯದಲ್ಲಿ ದಾಸ್ಯಭಾವವೇ ಮೂಲಭೂತವಾಗಿದೆ. ಭಕ್ತಿಯ ಮೂಲಭೂತ ತತ್ತ್ವವೂ ದಾಸ್ಯಭಾವಾಶ್ರಿತವಾಗಿರುವದೆಂಬುದನ್ನೂ ಸ್ವೀಕಾರ ಮಾಡಲೇಬೇಕಾಗುತ್ತದೆ. ಶಾಂತಭಕ್ತಿಯು ಒಂದು ಸ್ಫುರಣಾವಸ್ಥೆ ಮಾತ್ರವಾಗಿರುವದು. ಅದು ಸ್ವಲ್ಪ ವಿಕಾಸವನ್ನು ಹೊಂದುತ್ತಲೇ ಅದರ ಮೇಲೆ ದಾಸ್ಯಭಾವದ ಬಣ್ಣ ಬರುತ್ತದೆ. ಈ ಭಾವದಲ್ಲಿಯೇ ಅದ್ವೈತದಿಂದ ದ್ವೈತತರಂಗ ಏಳುತ್ತದೆ. ಪುನಃ ಎಷ್ಟು ವಿಕಾಸವಾದರೂ ಈ ಬಣ್ಣ ಬದಲಾಗುವದಿಲ್ಲ. ಗೌಡೀಯ ವೈಷ್ಣವ ಮೊದಲಾದ ಸಂಪ್ರದಾಯದಲ್ಲಿಯೂ ಸಖ್ಯ, ವಾತ್ಸಲ್ಯ ಮತ್ತು ಮಾಧುರ್ಯಭಾವವು ಸ್ವೀಕೃತವಾಗಿದೆ. ಆದರೂ ಇವೆಲ್ಲ ಭಾವಗಳ ಮೂಲದ ದಾಸ್ಯಭಾವ ಅನುಸ್ಯೂತವಾಗಿದೆಯೆಂಬುದು ಸತ್ಯವಾದ ಸಂಗತಿ. ಭೂತಸೃಷ್ಟಿಯಲ್ಲಿ ಹೇಗೆ ವೇದಾಂತದ ಅನುಸಾರವಾಗಿ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಮುಂತಾದ ಕ್ರಮದಿಂದ ಪೃಥ್ವಿಯ ಆವಿರ್ಭಾವವಾಗುತ್ತದೊ ಅದರಂತೆ ರಸವಿಕಾಸದಲ್ಲಿಯೂ, ಶಾಂತದಿಂದ ದಾಸ್ಯ, ದಾಸ್ಯದಿಂದ ಸಖ್ಯ, ಮುಂತಾದ ಕ್ರಮದಿಂದ ಉತ್ತರೋತ್ತರ ರಸಸೃಷ್ಟಿಯಾಗುವದು. ವಾಯುವಿನ ಉತ್ಪತ್ತಿ ಆದನಂತರ ಅದರಲ್ಲಿ ಶಬ್ದಗುಣದ ಪ್ರಾಪ್ತಿ ಆಗಿಯೇ ಆಗುತ್ತದೆ. ಅದರ ನಂತರವೂ ತನ್ನ ಗುಣವಾದ ಸ್ಪರ್ಶವೂ ಸಹ ವಿಕಾಸ ಹೊಂದುತ್ತದೆ. ಈ ಕ್ರಮದಿಂದ ಒಂದೊಂದು ಗುಣ ಹೆಚ್ಚಾಗುತ್ತ ಮೊದಲಿನ ಗುಣಗಳು ಕ್ರಮಶಃ ಅನುವೃತ್ತವಾಗುತ್ತ ಹೋಗುತ್ತವೆ. ಆದುದರಿಂದಲೇ ಪೃಥ್ವಿಯಲ್ಲಿ ಪಂಚಭೂತಗಳ ಗುಣಗಳಿವೆ. ಇವುಗಳಲ್ಲಿ ಶಬ್ದಾದಿ ನಾಲ್ಕು ಗುಣಗಳು ಪೃಥ್ವಿಯ ಸಮಾಗತ ಸಾಮಾನ್ಯ ಗುಣಗಳಾಗಿಯೂ, ಗಂಧ ಅದರ ವಿಶೇಷ ಗುಣವಾಗಿ ಇರುತ್ತದೆ. ಅದರಂತೆ ಭಾವ ವಿಕಾಸಕ್ರಮದಲ್ಲಿಯೂ ಆಗುವದೆಂದು ತಿಳಿಯಬೇಕು. ಶಾಂತಭಾವದ ವಿಶೇಷ ಗುಣ ನಿಷ್ಠೆ, ಆ ನಿಷ್ಠೆಯು ದಾಸ್ಯಭಾವದಲ್ಲಿ ಅನುವೃತ್ತವಾಗುತ್ತದೆ ಮತ್ತು ತನ್ನ ವಿಶೇಷ ಗುಣವಾದ ಸೇವೆಯೂ ವಿಕಾಸವಾಗುತ್ತದೆ. ಸಖ್ಯದಲ್ಲಿ ಶಾಂತ ಹಾಗೂ ದಾಸ್ಯ ಎರಡೂ ಗುಣಗಳು ಅನುವೃತ್ತವಾಗುತ್ತವೆ. ಮತ್ತು ತನ್ನ ವಿಶೇಷ ಗುಣವಾದ ಅಸಂಕೋಚದ ವಿಕಾಸವೂ ಆಗುತ್ತದೆ. ಅದರಂತೆ ಮಾಧುರ್ಯಭಾವದಲ್ಲಿ ಎಲ್ಲ ರಸಗಳ ಗುಣಗಳೂ ಅರ್ಥಾತ್ ನಿಷ್ಠೆ, ಸೇವೆ, ಅಸಂಕೋಚ ಮತ್ತು ಲಾಲನೆ ಇರುವವು. ಇವುಗಳ ಅತಿರಿಕ್ತ ಅದರ ವಿಶೇಷ ಗುಣವಾದ ಆತ್ಮಸಮರ್ಪಣವೂ ಸಹ ಸ್ಫೂರ್ತವಾಗುತ್ತದೆ.

ತ್ರಿಕದರ್ಶನ ದಾಸ್ಯಾತ್ಮಕ ಭಕ್ತಿಯನ್ನೂ ಸ್ವೀಕಾರ ಮಾಡಿಕೊಂಡು ಭಕ್ತಿಯ ಮೂಲತತ್ತ್ವವನ್ನೇ ಮಾನಿಸುತ್ತದೆ. ಕೇವಲ ಮೂಲತತ್ತ್ವವನ್ನು ಮಾತ್ರ ಸ್ವೀಕಾರ ಮಾಡುತ್ತದಂತೇನೂ ಅಲ್ಲ. ಪರಮಭಕ್ತಿಯ ಅಂತಿಮ ಫಲವಾದ ಮಾಧುರ್ಯ ಪ್ರೇಮವನ್ನು ಸಹ ಆಭಾಸರೂಪದಲ್ಲಿ ಸ್ವೀಕಾರ ಮಾಡುತ್ತದೆ. ಆದರೆ ಈ ಭಕ್ತಿ ಅಜ್ಞಾನ ಮೂಲಕ ದ್ವೈತಭಾವದಿಂದ ಉತ್ಪನ್ನವಾದುದಲ್ಲವೆಂಬುದನ್ನೂ ಸ್ಮರಣದಲ್ಲಿಡಬೇಕು. ಇದು ಪರಿಸ್ಫುಟಿತವಾದ ಅದ್ವೈತಾವಸ್ಥೆ. ಮತ್ತು ಒಂದು ರೀತಿಯಿಂದ ಪ್ರಸ್ಫುಟಿತ ದ್ವೈತಾವಸ್ಥೆಯೂ ಆಗಿದೆ. ಪರಂತು ಇದೊಂದು ಅಲೌಕಿಕವಾದ ದ್ವೈತವಿರುವುದು. ಇದೊಂದು ವಿಶೇಷತ್ವ. ಆದುದರಿಂದಲೇ ಇಲ್ಲಿ ಒಂದೇ ಸಾರಿ ಜ್ಞಾನ, ಭಕ್ತಿ, ಚಿತ್ತ ಹಾಗೂ ಆನಂದದ ಸಮಾವೇಶ ಕಂಡುಬರುವದು. ಇದಕ್ಕೇನೇ ಶಿವ-ಶಕ್ತಿ ಸಾಮರಸ್ಯವೆಂಬ ಹೆಸರಿದೆ. ಈ ರಸತತ್ತ್ವವೇ ಐಕ್ಯ ಮತ್ತು ವೈಚಿತ್ರ್ಯದ ಪೂರ್ಣಸಾಮರಸ್ಯವಾಗಿದೆ. ಈ ರಸವು ಬ್ರಹ್ಮಾನಂದಕ್ಕಿಂತ ವಿಲಕ್ಷಣ ಹಾಗೂ ವಿಶಿಷ್ಟವಾಗಿದೆ. ಬ್ರಹ್ಮಾನಂದದಲ್ಲಿ ಆಸ್ವಾದನವಿಲ್ಲ, ಅಹಂಭಾವವಿಲ್ಲ ಮತ್ತು ತ್ರಿಪುಟಿಯೂ ಇಲ್ಲ. ಆದರೆ ರಸದಲ್ಲಿ ಎಲ್ಲವೂ ಇವೆ. ಅದು ಪೂರ್ಣಾಹಂತಾದ ಚಮತ್ಕಾರದ ರಸಬೋಧೆ. ಅಭೇದದಲ್ಲಿಯೂ ಸಹ ಅಲೌಕಿಕ ಭೇದವಿದೆ. ಇಲ್ಲವಾದರೆ (ರಸ) ಆಸ್ವಾದನವಾಗುವದಿಲ್ಲ. ಅಭಿನವಗುಪ್ತಾಚಾರ್ಯರು ಪ್ರತ್ಯಭಿಜ್ಞಾಶಾಸ್ತ್ರಕ್ಕನುಸಾರವಾಗಿ ನಾಟ್ಯಶಾಸ್ತ್ರಕ್ಕೆ ವ್ಯಾಖ್ಯಾನ ಮಾಡಿದ್ದಾರೆ. ಅದರಲ್ಲಿ ರಸಸ್ವರೂಪ ಪರಿಷ್ಕೃತವಾಗಿದೆ.

ಈ ರಸ ಕೇವಲ ಶಾಂತರಸವಾಗಿದೆಯೋ ಅಥವಾ ದಾಸ್ಯವೂ ಇರುವದೋ ಎಂಬ ಪ್ರಶ್ನೆಗೆ, ಈ ಮೊದಲು ಹೇಳಿರುವ ವಿಷಯದಿಂದ ಉತ್ತರ ದೊರೆಯಬಹುದು. ಭಕ್ತಿಯ ಮೂಲದಲ್ಲಿ ದಾಸ್ಯಭಾವ ಇದ್ದೇ ಇರುತ್ತದೆ. ಶಾಂತಭಾವವು ಭಕ್ತಿಯ ಬೀಜವೆಂದು ಹೇಳಲ್ಪಟ್ಟಿದೆ. ಆದರೆ ಅದು ಪರಿಷ್ಕೃತ ಭಕ್ತಿಯಲ್ಲ. ದಾಸ್ಯಬೋಧೆ ಆಗದೆ, ಅನಂತವಸ್ತುವಿನೊಡನೆ ತನ್ನನ್ನು ಅಭಿನ್ನನೆಂದು ತಿಳಿದರೂ ಭಕ್ತಿರಾಜ್ಯ ಆರಂಭವಾಗುವದಿಲ್ಲ. ಆದುದರಿಂದ ಶಾಂತಭಾವವು ಭಕ್ತಿಯ ಸೂತ್ರ ಪಾತಮಾಡುತ್ತದೆ. ಆದರೆ ಈ ಅನಂತ ವಸ್ತು ತನ್ನ ಆತ್ಮನಿಗಿಂತ ಭಿನ್ನವಾದ ವಸ್ತುವೇನೂ ಅಲ್ಲ. ಆದುದರಿಂದಲೇ ಬ್ರಹ್ಮಭಾವದಿಂದ ಶಾಂತರಸ ಮತ್ತು ತದನಂತರ ದಾಸ್ಯಾತ್ಮಕದ ಭಾವ ಆವಿರ್ಭವಿಸುತ್ತದೆ. ಆದೇ ಬ್ರಹ್ಮಭಾವವು ಶಾಂತ ಅಥವಾ ದಾಸ್ಯಾದಿಯಲ್ಲಿ, ಅನುವೃತ್ತವಾಗಿರುತ್ತದೆ. ಆದರೆ ಅದರ ಮೇಲೆ ಶುದ್ಧವಾದ ಅಪ್ರಾಕೃತ ಸತ್ಯದ ತರಂಗ ಕ್ರೀಡಿಸುತ್ತದೆ.

ಅಂಧಕಾರವು ದುರ್ಬಲವಾಗಿರುವದು. ಆಲೋಕ ಪ್ರಕಾಶದ ವಕ್ಷಸ್ಥಲದ ಮೇಲೆ ಆಲೋಕದ ತರಂಗಗಳೇ ಕ್ರೀಡಿಸುತ್ತಿರುತ್ತವೆ. ಈ ತರಂಗವೇ ಉಲ್ಲಾಸ ಅಥವಾ ರಸವಾಗಿರುವದು. ಇದರ ವೈಚಿತ್ರ್ಯವೇ ಲೀಲೆಯ ವಿಸ್ತಾರ. ಈ ಲೀಲೆ ಯಾವಾಗಲೂ ಶುದ್ಧ ಸ್ವರೂಪದಲ್ಲಿ ಸದಾ ಇರುತ್ತದೆ. ಆದುದರಿಂದ ವೈಷ್ಣವರಂತೆ ಶೈವರೂ ನಿತ್ಯಲೀಲೆಯನ್ನು ಸ್ವೀಕಾರ ಮಾಡುತ್ತಾರೆ. ಇದೇ ಕಾರಣದಿಂದಲೇ ಕ್ಷೇಮರಾಜನು ತನ್ನ ಸ್ತವಚಿಂತಾಮಣಿ ಟೀಕೆಯಲ್ಲಿ (ಪು. ೬೦-೬೧) ಶಿವನಿಗೆ '**ಕೈಲಾಸಾದಿಷು ನಿತ್ಯವರ್ತಮಾನ ಪ್ರಮೋದ ನಿರ್ಭರ ಕ್ರೀಡಾಮಯಂ ಲೋಕೋತ್ತರ ಪ್ರಭಾವಂ ವಿಸ್ತರಯತೇ**' ಎಂದು ಹೇಳಿದ್ದಾನೆ. ಆದರೆ ಕೆಲವರು ವಿಶೇಷವಾಗಿ ಆಲಂಕಾರಿಕರು ಭಕ್ತಿಯನ್ನು ರಸಸ್ವರೂಪವೆಂದು ತಿಳಿಯುವದಿಲ್ಲ. ಕಾವ್ಯಪ್ರಕಾಶಕಾರನಾದ ಮಮ್ಮಟ, ರಸಗಂಗಾಧರ ಕರ್ತೃ ಪಂಡಿತ ರಾಜ, ಜಗನ್ನಾಥ ಮೊದಲಾದ ಆಲಂಕಾರಿಕರು ಭಕ್ತಿಯನ್ನು ಭಾವಕೋಟಿಯಲ್ಲಿಯೇ ಸೇರಿಸಿದ್ದಾರೆ. ಪರಂತು ಇದರಿಂದ ಯಾವ ವಿರೋಧವೂ ಬರುವದಿಲ್ಲ. 'ಸಾಹಿತ್ಯಸಾರ'ದ ಕರ್ತೃ ಅಚ್ಯುತರಾಯನು ಗೀತೆಯ '**ಅದ್ವೇಷ್ಟಾ ಸರ್ವಭೂತಾನಾಂ**' ಎಂಬಲ್ಲಿಂದ '**ಯೋಮದ್ಭಕ್ತಃ ಸಮೇಪ್ರಿಯಃ**' ಇಲ್ಲಿಯವರೆಗೆ ವಿಚಾರ ಮಾಡಿದರೆ ಮುಖ್ಯ ಭಕ್ತಿಯು ಜೀವನ್ಮುಕ್ತಿಯ ನಾಮಾಂತರವಾಗಿದೆಂಬುದನ್ನು ತಿಳಿಯಬಹುದಾಗಿದೆಯೆಂದು ಹೇಳಿದ್ದಾನೆ. ವಿದ್ಯಾರಣ್ಯಸ್ವಾಮಿಯೂ ಇದೇ ಮಾತನ್ನು ಹೇಳಿದ್ದಾನೆ–'**ಜೀವನ್ಮುಕ್ತಃ ಸ್ಥಿತಃಪ್ರಜ್ಞೋ ವಿಷ್ಣುಭಕ್ತಶ್ಚ ಕಥ್ಯತೇ**'. ಇದರಿಂದ ಭಕ್ತಿಯು ಸ್ವಲ್ಪಮಟ್ಟಿಗೆ ಶಾಂತರಸಾಂತರ್ಗತವೇ ಆಗುತ್ತದೆ. ಆದುದರಿಂದಲೇ ಆಲಂಕಾರಿಕರು ಭಕ್ತಿಯನ್ನು ಸ್ವತಂತ್ರ ರಸವನ್ನಾಗಿ ಒಪ್ಪಲು ಅನುಮತಿಸುವದಿಲ್ಲ. ಅರ್ಥಾತ್ ಮುಖ್ಯ ಭಕ್ತಿಯನ್ನೂ ರಸವೆಂದು ತಿಳಿಯಲು ಆಲಂಕಾರಿಕರ ಅಸಮ್ಮತಿ ಇಲ್ಲ. ಆದರೆ ಅವರು ಶಾಂತರಸವನ್ನು ಬೇರೆ ಎಂದು ತಿಳಿಯಲು ಬೇರೆ ಕಾರಣವನ್ನು ಗುರುತಿಸಲಾರರು. ಇನ್ನೊಂದು ಕಡೆ ಭಕ್ತ ಸಮೂಹವು ಹೇಳುವದು ಸತ್ಯವಾಗಿದೆ. ಅವರು ಹೇಳುವುದೇನೆಂದರೆ–ಅದ್ವೈತವು ಆತ್ಮತತ್ತ್ವ ವಿಷಯಕ ವೃತ್ತಿ ವಿಶೇಷವಾಗಿರುವದು. ಆದುದರಿಂದ ಅದನ್ನು ರಸವಲ್ಲವೆಂದು ಹೇಳಲಿಕ್ಕಾಗುವದಿಲ್ಲ. ಸಾಹಿತ್ಯಸಾರದ ಟೀಕಾಕಾರನು ಭಕ್ತಿಯು ಮುಖ್ಯ ಮತ್ತು ಗೌಣ ಅಥವಾ ಪರಾ–ಅಪರಾ ಭೇದದಿಂದ ಎರಡು ಪ್ರಕಾರವಾಗಿರುವದೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಅಲಂಕಾರಶಾಸ್ತ್ರದಲ್ಲಿ ಮುಖ್ಯಭಕ್ತಿಯು ಶಾಂತರಸಾಂತರ್ಗತ ಮತ್ತು ಗೌಣಭಕ್ತಿಭಾವ ಮಾತ್ರವಾಗಿದೆ. ಭಕ್ತಿಶಾಸ್ತ್ರದಲ್ಲಿ ಶಾಂತರಸವೇ ಭಕ್ತಿವಿಶೇಷ ಮತ್ತು ಮುಖ್ಯ ಭಕ್ತಿರಸಸ್ವರೂಪವಾಗಿದೆ.

ಶಾಂಡಿಲ್ಯ ಮತ್ತು ನಾರದರು ತಮ್ಮ ಭಕ್ತಿಸೂತ್ರಗಳಲ್ಲಿ, ಮಧುಸೂದನ ಸರಸ್ವತಿಯು ಭಕ್ತಿರಸಾಯನದಲ್ಲಿ ಮತ್ತು ಶ್ರೀರೂಪ ಗೋಸ್ವಾಮಿಯು ಭಕ್ತಿಸಾರಾಮೃತ ಸಿಂಧುವಿನಲ್ಲಿ ಭಕ್ತಿಯನ್ನು ರಸಸ್ವರೂಪವನ್ನಾಗಿ ಪ್ರತಿಪಾದಿಸಿದ್ದಾರೆ. ಆದರೆ ಇಲ್ಲಿ ಅವೆಲ್ಲವುಗಳ ಆಲೋಚನೆಯ ಉದ್ದೇಶವಿಲ್ಲ. ಮುಖ್ಯವಾಗಿ ಪ್ರತ್ಯಭಿಜ್ಞಾದರ್ಶನದ ಆಚಾರ್ಯರು ಭಕ್ತಿಯನ್ನೂ ರಸಸ್ವರೂಪದಲ್ಲಿ ಸ್ವೀಕಾರ ಮಾಡಿ ಆಧ್ಯಾತ್ಮರಾಜ್ಯದ ಒಂದು ಗಂಭೀರ ತತ್ತ್ವವನ್ನೂ ಪ್ರಕಟಿಸಿದ್ದಾರೆಂದು ಹೇಳಿದರೆ ಸಾಕಾಗಬಹುದು. ಉತ್ಪಲಾಚಾರ್ಯರು ತಮ್ಮ ಶಿವಸ್ತೋತ್ರಾವಳಿಯ ಪ್ರಥಮಸ್ತೋತ್ರದಲ್ಲಿ '**ಜಯಂತಿ ಮುಕ್ತಿ ಪೀಯೂಷರಸಾಸವವರೋನ್ಮದಾಃ। ಅದ್ವಿತೀಯಾ ಅಪಿ ಸದಾತ್ವ ದ್ವಿತೀಯಾ ಅಪಿ ಪ್ರಭೋ**' ಎಂದು ಹೇಳಿದ್ದಾರೆ. ಈ ಅವಸ್ಥೆಯಲ್ಲಿ ಎರಡನೆಯದು ಇಲ್ಲದಿದ್ದರೂ ಎರಡನೆಯದು ಇರುತ್ತದೆಂಬುದೇ ಪರಾಭಕ್ತಿಯ ವೈಶಿಷ್ಟ್ಯವಾಗಿದೆ. ಆದುದರಿಂದ ನದೀಯಾದ ಗೌರಾಂಗ ಪ್ರಭು ಅಚಿಂತ್ಯಭೇದಾಭೇದ ತತ್ತ್ವದ ಪ್ರಚಾರಮಾಡಿದ್ದಾನೆ. ದ್ವೈತವನ್ನೂ ಸ್ವೀಕಾರಮಾಡುವದರಿಂದ ಮಿಥ್ಯವನ್ನೂ ಸ್ವೀಕರಿಸಿದಂತಾಗುವದೆಂದು ತಿಳಿಯುವವರು ಕೇವಲ ಸತ್ಯದ ಒಂದು ಭಾಗವನ್ನು ಕಂಡಿದ್ದಾರೆ. ಅಜ್ಞಾನ ನಷ್ಟವಾದ ನಂತರವೂ. ಐಕ್ಯಸ್ಫುರಣವಾದರೂ, ಆ ಐಕ್ಯದ ಮಡಲಿನಲ್ಲಿ ದ್ವೈತವೂ ಇರುತ್ತದೆ. ಅವೆರಡೂ ಒಂದೇ ವಸ್ತುವಿನ ಶುದ್ಧಭಾವದಲ್ಲಿ ಆತ್ಮಪ್ರಸರಣವಾಗಿದೆ. ಯಾವದು ವಿಶ್ವಾತೀತವಾಗಿರುವದೋ ಅದೇ ವಿಶ್ವಾತ್ಮಕವೂ ಆಗಿದೆ. ಮತ್ತು ಎರಡೂ ಸಮಕಾಲದಲ್ಲಿಯೇ ಇರುತ್ತವೆ. ಆದುದರಿಂದ ಜ್ಞಾನ, ಭಕ್ತಿಗಳು ಸಮರಸವಾದಲ್ಲಿ, ವಿಶ್ವಾತೀತ ಮತ್ತು ವಿಶ್ವಾತ್ಮಕ ಸಮಭಾವದಲ್ಲಿಯೇ ಪ್ರಕಾಶಮಾನಗಳಾಗಿವೆ. ಇಲ್ಲಿಯೇ ದ್ವೈತಾದ್ವೈತಗಳ ಸಾಮಂಜಸ್ಯವಾಗುತ್ತದೆ. ಇದೇ ಈಶ್ವರಾದ್ವಯವಾದದ ವೈಶಿಷ್ಟ್ಯವಾಗಿದೆ.

**ತ್ರಿಪುರಾ ಮತ್ತು ಪ್ರತ್ಯಭಿಜ್ಞಾ ಮತಗಳ ಪಾರಸ್ಪರಿಕ ಸಂಬಂಧ :** ಪ್ರತ್ಯಭಿಜ್ಞಾಶಾಸ್ತ್ರದೊಡನೆ ತ್ರಿಪುರ ಮತ್ತು ಸ್ಪಂದ ಮತದ ಘನಿಷ್ಠ ಸಂಬಂಧವಿರುವದೆಂಬ ಮಾತನ್ನು ಈ ಪೂರ್ವ ಹೇಳಲಾಗಿದೆ. ಆಗಮವು ಯಾವ ಒಂದರ ಆಕರ ಗ್ರಂಥವಾಗಿರುವದೊ ಅದೇ ಇನ್ನೊಂದರ ಆಕರವೂ ಆಗಿರುವದು. ಉಪಾಸನೆಯ ಭೇದವನ್ನು ಕಾಯ್ದುಕೊಳ್ಳುವದಕ್ಕಾಗಿಯೇ ಬೇರೆ ಬೇರೆ ಪ್ರಸ್ಥಾನಗಳು ರಚಿಸಲ್ಪಟ್ಟಿವೆ. ಆದರೆ ಅವು ಒಂದೇ ಮೂಲದ ಮೇಲೆ ಸ್ಥಾಪಿತವಾಗಿದೆ. ಪದ್ಧತಿಗಳ ಭೇದವನ್ನು ಬಿಟ್ಟು ತಾತ್ವಿಕ ದೃಷ್ಟಿಯಿಂದ ಎರಡರ ಫಲಗಳಲ್ಲಿ ಯಾವ ಭೇದವೂ ಕಂಡುಬರುವದಿಲ್ಲ. ಆದುದರಿಂದಲೇ ಪ್ರಾಚೀನ ಆಚಾರ್ಯರು ತ್ರಿಪುರಾ ಸಿದ್ಧಾಂತದ ವಿಷಯವಾಗಿ ಬರೆಯುವಾಗ ಶಿವಸೂತ್ರ 'ಪ್ರತ್ಯಭಿಜ್ಞಾ ಹೃದಯ'. 'ಈಶ್ವರಪ್ರತ್ಯಭಿಜ್ಞಾವಿಮರ್ಶನೀ', 'ತಂತ್ರಾಲೋಕ' ಮೊದಲಾದ ಸುಪ್ರಸಿದ್ಧ ಶೈವಗ್ರಂಥಗಳಿಂದ ಪ್ರಮಾಣಗಳ ಸಂಗ್ರಹ ಮಾಡಿರುವದು ನಮಗೆ ತಿಳಿದು ಬರುವದು. ಇದೇ ರೀತಿ ಉತ್ಪಲದೇವ, ಕ್ಷೇಮರಾಜ, ಅಭಿನವಗುಪ್ತ, ಮಹೇಶ್ವರಾನಂದ ಮುಂತಾದ ಶೈವಾಚಾರ್ಯರು ಪ್ರಯೋಜನಾನುಸಾರವಾಗಿ 'ಯೋಗಿನೀ ಹೃದಯ, ಕಾಮಕಲಾವಿಲಾಸ, ತ್ರಿಪುರಸುಂದರೀ–ಮಂದಿರ' ಮೊದಲಾದ ಗ್ರಂಥಗಳ ಪ್ರಾಮಾಣ್ಯವನ್ನು

ಸ್ವೀಕಾರ ಮಾಡಿದ್ದಾರೆ. ಸಾಂಖ್ಯ ಮತ್ತು ಯೋಗದಲ್ಲಿ ನಿಕಟವಾದ ಸಂಬಂಧ ಇರುವಂತೆ, ತ್ರಿಕ ಮತ್ತು ತ್ರಿಪುರಾ ಮತಗಳಲ್ಲಿಯೂ ನಿಕಟವಾದ ಸಂಬಂಧ ಇರುವದು. ಪರಶುರಾಮ ಕಲ್ಪಸೂತ್ರ, ಬಿಂದುಸೂತ್ರ, ತಂತ್ರರಾಜ, ತ್ರಿಪುರಾರಹಸ್ಯ, ನಿತ್ಯಹೃದಯ, ನಾಮಕೇಶ್ವರ ತಂತ್ರ, ಪರಮಾನಂದ ತಂತ್ರ, ಸೌಭಾಗ್ಯರತ್ನಾಕರ, ಮೊದಲಾದವುಗಳು ತ್ರಿಪುರಾಮತದ ಸರ್ವಶ್ರೇಷ್ಠ ಗ್ರಂಥಗಳಾಗಿವೆ. ಭಾಸ್ಕರರಾಯ, ಕವಿರಾಮೇಶ್ವರ ಲಕ್ಷ್ಮೀಧರ, ಉಮಾನಂದನಾಥ, ಅಮೃತಾನಂದ ಪ್ರಭೃತಿಗಳು ಈ ಮತದ ಉತ್ಕೃಷ್ಟ ವ್ಯಾಖ್ಯಾನಕಾರರಾಗಿದ್ದಾರೆ. ಈ ರೀತಿಯಾಗಿ ಪರ್ಯಾಲೋಚನೆ ಮಾಡುವದರಿಂದ ಪ್ರತ್ಯಭಿಜ್ಞಾ ದರ್ಶನದೊಡನೆ, ತ್ರಿಪುರಾ ಸಿದ್ಧಾಂತದ ದಾರ್ಶನಿಕ ಅಂಶದ ಅರ್ಥಾತ್ ಜ್ಞಾನಕಾಂಡದ ಅಂತಹ ಯಾವ ಭೇದವೂ ಕಂಡುಬರುವದಿಲ್ಲವೆಂಬುದು ತಿಳಿದು ಬರುವದು. ಆದರೆ ಒಂದು ಮಾತು ಸ್ಮರಣದಲ್ಲಿಡುವದೇನಂದರೆ, ಈ ಎರಡೂ ಮತಗಳಲ್ಲಿ ೩೬ ತತ್ವಗಳು ಸ್ವೀಕರಿಸಲ್ಪಟ್ಟಿವೆ. ಇವುಗಳಿಗಿಂತ ಅತೀತವಾದುದೆಲ್ಲ ತತ್ವಾತೀತವೆಂದು ಹೇಳಲ್ಪಡುವದು. ಸಂಸಾರ ೩೬ ತತ್ವಗಳ ಸಮಷ್ಟಿರೂಪವಾಗಿದೆ. ತತ್ವಾತೀತದಿಂದಲೇ ತತ್ವಗಳ ಉತ್ಪತ್ತಿ ಆಗುತ್ತದೆ. ಆದುದರಿಂದ ಮೂಲದಲ್ಲಿ ಎರಡೂ ಒಂದೇ ಆಗಿದೆ. ಈ ಕಾರಣದಿಂದ ಆ ಪರಮವಸ್ತು ಒಂದೇ ಕಾಲದಲ್ಲಿ ತತ್ವಾತೀತ ಅರ್ಥಾತ್ ವಿಶ್ವೋತ್ತೀರ್ಣ ಹಾಗು ಸರ್ವಜ್ಞತ್ವಗಳುಳ್ಳದುದಾಗಿದೆ. ಆದುದರಿಂದ ವಿಶ್ವಾತ್ಮಕವೂ ಆಗಿರುವದು. ಈ ಜಗತ್ತಿನಲ್ಲಿ ೩೫ ಮತ್ತು ೩೬ ಸಂಖ್ಯೆಯ ತತ್ವಗಳಿವೆ. ಅವುಗಳ ಪಾರಿಭಾಷಿಕ ಹೆಸರು ಶಕ್ತಿ ಮತ್ತು ಶಿವ ಎಂದಿದೆ. ಅದು ನಿತ್ಯವೂ ಆಗಿದೆ. ಅದರ ಆವಿರ್ಭಾವ ತಿರೋಭಾವವೂ ಆಗುವದಿಲ್ಲ. ಅದು ಸದಾ ಉದಿತವೇ ಆಗಿರುವದು. ಆದುದರಿಂದ ವಾಸ್ತವಿಕವಾಗಿ ಪೃಥ್ವಿಯಿಂದ ಮೊದಲುಗೊಂಡು ಸದಾಶಿವ ತತ್ವದವರೆಗೂ ೩೪ ತತ್ವಗಳೇ ವಿಶ್ವವೆಂದು ಹೇಳಲು ಯೋಗ್ಯವಾಗಿರುವದು. ಪ್ರಯುಕ್ತ ಸೃಷ್ಟಿ ಶಬ್ದದಿಂದ ಸದಾಶಿವಮೊದಲಾದ ತತ್ವಮಾಲೆಯ, ಕ್ರಮವಾದ ಆವಿರ್ಭಾವವೆಂದು ತಿಳಿಯಬೇಕು. ಈ ಆವಿರ್ಭಾವದ ಬೀಜ ಶಕ್ತಿ. '**ಆ ಶಕ್ತಿಯ ಕ್ರಮವಿಕಾಸವೇ ಸೃಷ್ಟಿ**'. ಆ ಶಕ್ತಿಯೊಡನೆ ಶಿವ ಸದಾ ಕೂಡಿಕೊಂಡಿರುತ್ತಾನೆ. ಶಕ್ತಿ ಅಂತರ್ಮುಖಿನಾದಾಗ ಶಿವ ಮತ್ತು ಶಿವನೇ ಬಹಿರ್ಮುಖಿನಾದಾಗ ಶಕ್ತಿ ಇರುತ್ತದೆ. ಅಂತರ್ಮುಖಿ-ಬಹಿರ್ಮುಖಿಭಾವಗಳು ಸನಾತನಗಳಾಗಿವೆ. ಏಕೆಂದರೆ, ಪರಮೇಶ್ವರನು ಯಾವಾಗಲೂ ಪಂಚಕೃತ್ಯಕಾರಿಯಾಗಿದ್ದಾನೆ. ಶಿವತತ್ವದಲ್ಲಿ ಶಕ್ತಿಭಾವ ಗೌಣ ಮತ್ತು ಶಿವಭಾವ ಪ್ರಧಾನವಾಗಿರುವದು. ಶಕ್ತಿತತ್ವದಲ್ಲಿ ಶಿವಭಾವ ಗೌಣ ಮತ್ತು ಶಕ್ತಿಭಾವ ಪ್ರಧಾನವಾಗಿರುವದು. ಆದರೆ, ಎಲ್ಲಿ ಶಿವ-ಶಕ್ತಿಗಳು ಏಕರಸವಾಗಿವೆಯೋ ಅಲ್ಲಿ ಶಿವ ಪ್ರಾಧಾನ್ಯವೂ ಇರುವದಿಲ್ಲ. ಶಕ್ತಿಯ ಪ್ರಾಧಾನ್ಯತ್ವವೂ ಇರುವದಿಲ್ಲ.ಅದೇ ತತ್ವಾತೀತ ಅವಸ್ಥೆಯಾಗಿರುವದು. ಕೆಲವರು ಇದಕ್ಕೆ ೩೭ ನೆಯ ತತ್ವವೆಂದು ಹೇಳುತ್ತಾರೆ. ಇನ್ನು ಕೆಲವರು ಇದರ ಬಗೆಗೆ ಏನೂ ಹೇಳಲಿಕ್ಕೂ ಆಗುವದಿಲ್ಲ ಮತ್ತು ವಿಚಾರ ಮಾಡಲಿಕ್ಕೂ ಆಗುವದಿಲ್ಲವೆಂದು ಹೇಳುತ್ತಾರೆ. ಇದೇ, ಶೈವರಿಗೆ ಪರಮ ಶಿವ, ವೈಷ್ಣವರಿಗೆ ಶ್ರೀ ಭಗವಾನ್, ಶಾಕ್ತರಿಗೆ ಪರಾಶಕ್ತಿ ಆಗಿರುವದು. ಆದರೆ ಇವೆಲ್ಲ ಹೆಸರು ಕೇವಲ ನಾಮ ಮಾತ್ರಗಳಾಗಿವೆಂಬುದನ್ನು ಸ್ಮರಣದಲ್ಲಿಡಬೇಕು. ವ್ಯವಹಾರದ ಸೌಕರ್ಯಕ್ಕೆ ಕಲ್ಪಿತವಾದುದು.

**ಆಗಮ ಮತ್ತು ಸೂಫೀಮತ :** ತ್ರಿಪುರಾಮತದೊಡನೆ ಪ್ರತ್ಯಭಿಜ್ಞಾಮತದ ಅಭೇದವನ್ನು ತೋರಿಸಿದ್ದಾಯಿತು. ಇವೆರಡೂ ಮತಗಳೊಡನೆ ಗೌಡೀಯ ವೈಷ್ಣವ ಸಂಪ್ರದಾಯದ ಸಿದ್ಧಾಂತದ ಐತಿಹಾಸಿಕ ಸಂಬಂಧ ಕಂಡುಬರುವದು. ಮಾತ್ರವಲ್ಲ 'ಸೂಫೀ' ಮತದೊಡನೆ ತ್ರಿಪುರಾದಿ ಸಿದ್ಧಾಂತಗಳ ಘನಿಷ್ಠ ಸಂಬಂಧವೂ ಇರುವದು. ಇಲ್ಲಿಯವರೆಗೂ ಈ ವಿಷಯದ ಕಡೆಗೆ ಯಾರ ಗಮನವೂ ಹರಿದಿರುವದಿಲ್ಲ. ಆದುದರಿಂದ ಈ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿ ಈ ಲೇಖನದ ಉಪಸಂಹಾರ ಮಾಡಲಾಗುವದು.

ಕೇಮರ್, ಡೋಜಿ, ಸಾಜಿ ಮೊದಲಾದ ಆಚಾರ್ಯರು, ಸೂಫೀ ಸಿದ್ಧಾಂತವಾದಿಗಳು ವೇದಾಂತದರ್ಶನಕ್ಕೆ ಅತ್ಯಂತ ಋಣಿಗಳಾಗಿರುವರೆಂದು ಹೇಳುತ್ತಾರೆ. ಜರ್ಮನ್ ದೇಶದ ಪ್ರಸಿದ್ಧ ಕವಿ ಗಯಟೆಯ ಅಭಿಪ್ರಾಯವೂ ಇದೇ ಆಗಿದೆ. ಅವನ West ostlicher Divan', ಎಂಬ ಗ್ರಂಥದಲ್ಲಿ ಈ ವಿಷಯವಾಗಿ ಪ್ರಮಾಣ ದೊರೆಯುತ್ತದೆ. ಇನ್ನೊಂದು ಪಕ್ಷದಲ್ಲಿ ನಿಕಲ್ಸನ್, ಗಿಬ್ ಮೊದಲಾದವರು 'ನವಪ್ಲೆಟೋನಿಕ್' (Neo-Platonic) ಮತದೊಡನೆ ಸೂಫಿಮತದ ಅಧಿಕ ಸಾದೃಶ್ಯವದೆ. ಇವೆರಡು ಮತಗಳಲ್ಲಿ ಯಾವದು ಗ್ರಾಹ್ಯ ಯಾವುದು ಅಗ್ರಾಹ್ಯ ಅಥವಾ ಎರಡೂ ಅಗ್ರಾಹ್ಯವೇ ಇತ್ಯಾದಿ ವಿವೇಚನೆ ಇಲ್ಲಿ ಆವಶ್ಯಕವಾಗಿರುವದಿಲ್ಲ. ಕೇವಲ ಸೂಫೀಮತದ ಸಿದ್ಧಾಂತ ಹಾಗೂ ಆಚಾರದೊಡನೆ ಪ್ರತ್ಯಭಿಜ್ಞಾ, ತ್ರಿಪುರಾ,ಗೌಡೀಯ ವೈಷ್ಣವ ಮತಗಳ ಸಾದೃಶ್ಯವನ್ನು ತೋರಿಸಬೇಕಾಗಿದೆ.

ಸೂಫೀಮತದ ದರ್ಶನಗಳಲ್ಲಿ ಸ್ಥೂಲವಾಗಿ ಮೂರು ಸಿದ್ಧಾಂತಗಳ ಪರಿಚಯ ದೊರೆಯುತ್ತದೆ. ಒಂದನೆಯದು ಪರಮ ತತ್ವ ಚಿನ್ಮಯೀ ಇಚ್ಛಾಶಕ್ತಿ ಸ್ವರೂಪವಾಗಿದೆ. ಜಗತ್ತು ಅದರದೇ ಪರಿಚ್ಛಿನ್ನ ವಿಕಾಸವಾಗಿದೆ. ಈ ಸಿದ್ಧಾಂತದ ಸಮರ್ಥಕರು ಹೇಳುವದೇನಂದರೆ–ಪರಮಾತ್ಮನನ್ನು ಹೊಂದಲಿಕ್ಕೆ ಧರ್ಮವೇ ಪ್ರಧಾನವಾಗಿರುವದು. ಮತ್ತೆ ಕೆಲವರು ಇದೊಂದೇ

ಉಪಾಯವಲ್ಲದೆ ಜ್ಞಾನವಲ್ಲವೆಂದು ಹೇಳುತ್ತಾರೆ. ಕರ್ಮದಿಂದ ನಿಷ್ಠೆ, ಸದಾಚಾರ ಮತ್ತು ಅನುಭವದ ಸಂಪರ್ಕದಿಂದ ಉದ್ಧಾರ ವಾಗಲಿಕ್ಕೆ ಭಗವಂತನ ಸಂಸರ್ಗದ ಆಕಾಂಕ್ಷೆ ಆಗುವದೆಂದು ತಿಳಿಯಬೇಕು.

ಎರಡನೆಯದು–ಪರಮಾರ್ಥತತ್ತ್ವ ಒಂದೇ ಇದೆ. ಅದು ನಿತ್ಯಸೌಂದರ್ಯ ಉಳ್ಳದ್ದಾಗಿ ವಿಶ್ವ ದರ್ಪಣದಲ್ಲಿ ಯಾವಾಗಲೂ ತನ್ನ ಮುಖವನ್ನು-ಆತ್ಮಸ್ವರೂಪವನ್ನು-ನೋಡುತ್ತದೆ. ಆದುದರಿಂದ ಜಗತ್ ಪ್ರತಿಬಿಂಬ ಮಾತ್ರವಾಗಿದೆಯೇ ವಿನಾ ಪರಿಣಾಮವಲ್ಲ. ಸೌಂದರ್ಯದ ಆತ್ಮಪ್ರಕಾರವೇ ಸೃಷ್ಟಿಗೆ ಕಾರಣವಾಗಿದೆಂಬುದನ್ನು, ಮೀರಸೈಯದ್ ಶರೀಫನು ಸ್ಪಷ್ಟವಾಗಿ ಹೇಳಿದ್ದಾನೆ. ಸೂಫೀಕವಿಗಳಲ್ಲಿ ಈ ರೀತಿಯ ಒಂದು ಹದೀಶ ಪ್ರಚಲಿತವಾಗಿದೆ.[1] ಒಂದು ಅನುಶ್ರುತಿ ಹೀಗಿದೆ : ದಾಯುದನು ಒಂದು ಕಾಲದಲ್ಲಿ ಭಗವಂತನನ್ನು ಕುರಿತು ಜೀವಸೃಷ್ಟಿಯ ಉದ್ದೇಶವನ್ನು ಕುರಿತು, ಪ್ರಶ್ನೆ ಮಾಡಿದಾಗ ಭಗವಂತನು ಈ ರೀತಿ ಉತ್ತರಿಸಿದನು: 'I was a hidden treaser. Therefore was I fain to be known, and so I created creation in order that I should be known.' ಅರ್ಥಾತ್ ಗೋಪನ ಸ್ಥಿತಿಯಲ್ಲಿ ಇರಲು ಆಗದುದರಿಂದ ಭಗವಂತನು ಆತ್ಮಪ್ರಕಾಶನಕ್ಕಾಗಿ ಸೃಷ್ಟಿಯನ್ನು ಮಾಡಿದನು. ಪರಂತು ವಿರೋಧವಿಲ್ಲದೆ ಆತ್ಮ ಪ್ರಕಾಶವಾಗುವದಿಲ್ಲ. ಭಗವಂತನು ಅಖಂಡ ಸತ್ಯ, ಸೌಂದರ್ಯ ಮತ್ತು ಮಂಗಲಸ್ವರೂಪನಾಗಿದ್ದಾನೆ ; ಭಾವಮಯನೂ ಅಹುದು. ಅವನು ತನ್ನ ಸ್ವಾತಂತ್ರ್ಯ ಬಲದಿಂದ ಒಂದು ವಿರಾಟ ಅಭಾವ, ಒಂದು ಮಹಾಶೂನ್ಯದ ಆವಿರ್ಭಾವ ಮಾಡಿದ್ದಾನೆ. ಈ ಭಾವರೂಪ ದರ್ಪಣದಲ್ಲಿ ಭಾವಮಯದ ಪ್ರತಿಬಿಂಬ ಬಿದ್ದಿದೆ. ಈ ಅಭಾವ-ಪ್ರತಿಬಿಂಬದ ಭಾವವೇ ವಿಶ್ವವಾಗಿದೆ. ಆದುದರಿಂದಲೇ ಜಗತ್ ಅಭಾವಾತ್ಮಕ ಹಾಗೂ ಪರಿವರ್ತನಶೀಲವಾಗಿದೆ. ಇದರಲ್ಲಿ ಭಾವ ಅಭಾವಗಳೆರಡೂ ಕಾಣಬರುತ್ತವೆ. ಮನುಷ್ಯನು ಈ ವಿಶ್ವಾತ್ಮಕ ಪ್ರತಿಬಿಂಬದ ಚಕ್ಷುಸ್ವರೂಪನಾಗಿದ್ದಾನೆ. ಪ್ರತಿಬಿಂಬಸ್ಥವಾದ ನೇತ್ರದ ಬೊಂಬೆಯಲ್ಲಿ ಯಾವ ರೀತಿ ದೃಷ್ಟಾ (ಬಿಂಬ)ನ ಪೂರ್ಣ ಪ್ರತಿಚ್ಛವಿ ಕಾಣುವದೋ, ಅದೇ ರೀತಿ ಈ ಅನಂತ ವಿಶ್ವದಲ್ಲಿ ಕೇವಲ ಮನುಷ್ಯನಲ್ಲಿ ಮಾತ್ರ ಭಗವಂತನ ಪೂರ್ಣ ಪ್ರತಿಚ್ಛವಿ ಇರುವದು. ಮನುಷ್ಯನು ಸಹ ವಿಶ್ವದ ಅಂಶವೇ ಆಗಿದ್ದಾನೆ. ಆದುದರಿಂದ ಮನುಷ್ಯನಲ್ಲಿಯೂ ಒಮ್ಮೆಲೇ ಭಾವ-ಅಭಾವ ಇವೆರಡರ ಸಮಾವೇಶವೂ ಒಂದೇ ಕಾಲದಲ್ಲಿ ಇರುತ್ತದೆ. ಈ ಅಭಾವಾಂಶವನ್ನು ದೂರ ಮಾಡಲಿಕ್ಕೆ, ನಾವು ಅಹಂಭಾವವನ್ನು ದೂರಮಾಡಬೇಕು. ಈ ಅಹಂಭಾವವೇ ಸಮಸ್ತ ಅನರ್ಥದ ಮೂಲಕಾರಣವಾಗಿದೆ. ಸೂಫೀಗಳು ಹೇಳುವದೇನಂದರೆ, ಕೇವಲ ಪರಮಾತ್ಮನೊಬ್ಬನೇ ಸತ್ಯವಸ್ತುವಾಗಿ ಇನ್ನುಳಿದ ಸಮಸ್ತ ವಸ್ತುಗಳು ಮಿಥ್ಯವಾಗಿರುವವೆಂದ ಬಳಿಕ, ನಾವು ಅಭಿಮಾನ (ಅಹಂಕಾರ) ಪಡುವ ವಾಸ್ತವಿಕ ಕಾರಣವೇ ಇಲ್ಲ. ಈ ಅಭಿಮಾನ ದೂರಾಗಲು ಒಂದೇ ಒಂದು ಕಾರಣವೆಂದರೆ, ಪ್ರೇಮ. ಒಂದು ಸಾರೆ ಹೃದಯದಲ್ಲಿ ಭಗವಂತನ ಬಗೆಗೆ ಪ್ರೇಮ ಉತ್ಪನ್ನವಾದರೆ,ಎಲ್ಲ ಅಭಿಮಾನವೂ ಕರಗಿಹೋಗುವದು. ಎಲ್ಲ ಅಹಂಭಾವ ನಷ್ಟವಾಗುವದು. ನಿಮಿಷ ಮಾತ್ರದಲ್ಲಿ ಮಾಯಾರಾಜ್ಯವು ಕರಗಿಹೋಗುವದು. ಚಿತ್ತವು ಅದ್ವೈತ ಪ್ರೇಮಸ್ವರೂಪದಲ್ಲಿ ಪೂರ್ಣಸೌಂದರ್ಯದಲ್ಲಿ ವಿಶ್ರಾಂತಿ ಹೊಂದುತ್ತದೆ. ಈ ಸೌಂದರ್ಯ ಹಾಗೂ ಪ್ರೇಮಗಳು ಅನಂತ ಮತ್ತು ಮುಕ್ತವಾಗಿವೆ. ಇದರಲ್ಲಿ ಆದಿಯೂ ಇಲ್ಲ ಅಂತವೂ ಇಲ್ಲ; ಉಚ್ಚ-ನೀಚ, ದಕ್ಷಿಣ-ವಾಮ ಮೊದಲಾದ ಭೇದವಿಲ್ಲ. ಇಲ್ಲಿ ಶಕ್ತಿ ಹಾಗೂ ಶಕ್ತಿಮಾನ್ ಅಭಿನ್ನವಾಗಿವೆ. (ನಸಫೀಕೃತ ಮಕಸದೀಅಕಸಾ. ನೋಡಿ) ನಸಫೀ ಹೇಳುವದೇನಂದರೆ ಜೀವನು ಪೂರ್ಣತ್ವದ ಅಂಶವೇ ಆಗಿದ್ದಾನೆ. ಆದರೆ ಭ್ರಮಮೂಲಕ ಅವನು ತನ್ನ ಪೃಥಕ್ ಸತ್ಯತ್ವವನ್ನು ಕಲ್ಪಿಸಿಕೊಂಡು ಕಷ್ಟ ಪಡುತ್ತಾನೆ. ಜನ್ಮತಃ ಅವನು ಪೂರ್ಣತ್ವದ ಮಡಿಲಲ್ಲಿಯೇ ಇರುವನು. ಆದರೂ ಮಿಥ್ಯವಾದ ವಿರಹಚಿಂತೆಯಲ್ಲಿ ತೊಳಲಾಡುತ್ತಿದ್ದಾನೆ. ವಿರಹಬೋಧ ಮತ್ತು ಭೇದದ ಬೋಧ ಇವೆರಡೂ ಅಜ್ಞಾನ ಜನಿತವಾಗಿದೆ ; ವಾಸ್ತವಿಕ ಭೇದವು ಆಭಾಸ ಮಾತ್ರವಾಗಿದೆ; ವಾಸ್ತವಿಕವಲ್ಲ.

ಉಮರ ಖೈಯಾಮ್, ಇಬ್ರಿತೈಮಿಯಾ, ವಾಹಿದ, ಮಾಮೂದ ಮೊದಲಾದವರು ಅದ್ವೈತವಾದದ ವಿರೋಧಿಗಳಾಗಿದ್ದವರು. ಮಾಮೂದನು ಒಂದು ಸಂಪ್ರದಾಯವನ್ನು ಪ್ರಾರಂಭಿಸಿದ್ದ. ಮಹಾಕವಿ ಹಾಫೀಜನು ಆ ಸಂಪ್ರದಾಯದವನಾಗಿದ್ದನು. ಈ ಜನರು ವಿಶ್ವವನ್ನು ನಿತ್ಯ ಸಿದ್ಧ ಅಣು ಸಮಷ್ಟಿ ಎಂದು ತಿಳಿಯುತ್ತಿದ್ದರು. ಆದರೆ ಇವರ ಮತದಂತೆ ಅಣು ಜಡ

---

1. ಮಹಮ್ಮದರಿಂದ ಪ್ರಕಟವಾದ ದೇವವಾಣಿಗೆ ಇಸ್ಲಾಂ ಧರ್ಮಗ್ರಂಥಗಳಲ್ಲಿ 'ಹದೀಶ' ಎಂದು ಹೇಳಲಾಗಿದೆ. ಈ ವಾಣಿಯನ್ನು ಉಚ್ಚರಿಸಿದವನು ಸಾಕ್ಷಾತ್ ಭಗವಂತನೇ ಆಗಿರುವನು. ಮಹಮ್ಮದನು ಕೇವಲ ಆಧಾರ ಮಾತ್ರ. ಅರ್ಥಾತ್ ಮಹಮ್ಮದನ ಕಂಠವನ್ನು ಅವಲಂಬಿಸಿ; ಅವಿಶಿಷ್ಟನಾಗಿ, ಸ್ವತಃ ಭಗವಂತನೇ ಈ ರೀತಿಯ ವಾಣಿಯವಕ್ತಾ ಆಗಬಹುದು. ಅಲ್ಲಿ ಇವಕ್ಕೆ 'ಹದೀಶ-ಖುದ್‌ಸಿ' ಎಂದು ಹೇಳಲಾಗಿದೆ. ಒಮ್ಮೊಮ್ಮೆ ಈ ವಾಣಿಯ ಯಥಾರ್ಥವಕ್ತಾ ಹಾಗೂ ಯಥಾ ಸ್ವಯಂ ಮಹಮ್ಮದನೇ ಆಗಿದ್ದಾನೆ. ಈ ರೀತಿಯ ಹದೀಶಕ್ಕೆ 'ಹದೀಶ-ಏ-ಶರೀಫ' ಎಂದು ಹೇಳುತ್ತಾರೆ,

ವಾಗಿರದೆ ಚೈತನ್ಯಮಯವಾಗಿದೆ. ಪರಂತು ಚೈತನ್ಯದ ವಿಕಾಸದಲ್ಲಿ ತಾರತಮ್ಯವಿರುವುದು. ಇನ್ನು ಮೂರನೆಯದು: ಪರಮಾರ್ಥವಸ್ತು, ವಿಜ್ಞಾನ ಅಥವಾ ಜ್ಯೋತಿ ಸ್ವರೂಪವಾಗಿದೆ. ಅದು ಒಂದೇ ಹಾಗು ಅಭಿನ್ನವಾಗಿದೆ. ಆದರೆ ಅದರಲ್ಲಿ ವೈಚಿತ್ರ್ಯ–ಸಂಪಾದಕ, ಭೇದ–ಪ್ರತಿನಿಧಿಭಾವದ ಸತ್ತಾ ಇರುವದು. ಜ್ಯೋತಿ ಭಾವಸ್ವರೂಪವಾಗಿದೆ. ತಮಸ್ ಅಭಾವಸ್ವರೂಪವಾಗಿದೆ. ಇದನ್ನು ಪ್ರಕಾಶಗೊಳಿಸುವದೆ ಜ್ಯೋತಿಯ ಸ್ವಭಾವವಾಗಿರುವದು. ಜ್ಯೋತಿಯು ಎಲ್ಲ ಕ್ರಿಯೆಗಳ ಮೂಲವಾಗಿದೆ. ಸ್ಥಾನ ಪರಿಚ್ಯುತಿಯು ಸ್ಥೂಲ ಕ್ರಿಯೆಯಾಗಿದೆ. ಪ್ರಕೃತ ಕ್ರಿಯೆಯು ಸ್ಪಂದಾತ್ಮಕವಾಗಿದೆ. ಈ ಸ್ಪಂದನ ಬಲದಿಂದ ಅನಂತ ರಶ್ಮಿಮಾಲೆಯು ಕೇಂದ್ರದಿಂದ ಹೊರಟು ನಾಲ್ಕು ಕಡೆ ಹರಡುತ್ತವೆ. ರಶ್ಮಿಯಿಂದ ಪುನಃ ರಶ್ಮಿ ಉದಯವಾಗುತ್ತದೆ. ಆದರೆ, ಕ್ರಮೇಣ ರಶ್ಮಿ ಕ್ಷೀಣವಾಗುತ್ತ ಹೋಗುತ್ತದೆ. ಈ ಕ್ಷೀಣಾವಸ್ಥೆಯಲ್ಲಿ ಬಿದ್ದಿರುವ ರಶ್ಮಿಯಿಂದ ಹೊಸ ರಶ್ಮಿಯು ಉದಯವಾಗಲಾರದು. ಈ ರಶ್ಮಿಗಳೇ ದೇವತೆಗಳು. ಈ ದೇವತೆಗಳ ಮಧ್ಯದಿಂದಲೇ ಸಮಸ್ತ ಜಗತ್ತು ಮೂಲ ಜ್ಯೋತಿಯಿಂದ ಪ್ರಕಾಶ ಮತ್ತು ಅಮೃತ (ಚಿದಾನಂದ)ವನ್ನು ಹೊಂದುತ್ತದೆ. ಈ ಮೊದಲು ಹೇಳಿದ ತಮಸ್ ಅಂಧಕಾರ ಅಪ್ರಕಾಶವು ಪ್ರಕಾಶದ್ದೇ ಮತ್ತೊಂದು ದಿಶೆ (ರೂಪ) ಮಾತ್ರವಾಗಿದೆ. ಸಾಂಖ್ಯಶಾಸ್ತ್ರ ಮತ್ತು ಅರಿಷವಲರು ಮಾಡಿರುವ ಇದರ ಸ್ವಾತಂತ್ರ್ಯದ ಕಲ್ಪನೆಯಂತೆ ಈ ಜನರು ಮಾಡುವದಿಲ್ಲ. ಇನ್ನು ಈ ವಿಷಯವಾಗಿ ಹೆಚ್ಚು ಬರೆಯುವ ಅಗತ್ಯವಿಲ್ಲ. ಇಲ್ಲಿಯವರೆಗೂ ಹೇಳಿದ ವಿಷಯದಿಂದ ನಮ್ಮ ವಕ್ತವ್ಯ ಸ್ಪಷ್ಟವಾಗುವದು. ಮೇಲೆ ವರ್ಣಿಸಿದ ಮೂರು ಸಿದ್ಧಾಂತಗಳ ಸ್ವರೂಪ ಆಗಮಶಾಸ್ತ್ರದಲ್ಲಿ ವಿಸ್ತಾರಪೂರ್ವಕವಾಗಿ ವರ್ಣಿತವಾಗಿದೆ. ಈ ಮೂರು ಮಾರ್ಗಗಳೇ ಅಲ್ಲಿ ಆಣವೋಪಾಯ, ಶಾಂಭವೋಪಾಯ ಮತ್ತು ಶಾಕ್ತೋಪಾಯವೆಂಬ ಹೆಸರು ಪಡೆದಿವೆ. ಅವುಗಳೊಡನೆ ಕೆಲವು ಅಂಶದಲ್ಲಿ ಸಾದೃಶ್ಯ ಕಂಡು ಬರುವದು. ಎರಡನೆಯ ಸಿದ್ಧಾಂತವೂ ಭಾರತ ವರ್ಷದಲ್ಲಿ ಬಹುದಿನಗಳಿಂದಲೂ ಪರಿಚಿತವಾಗಿದೆ. ಈ ಮತಾನುಸಾರ ಭಗವಂತನು ಸೌಂದರ್ಯ ಸ್ವರೂಪ, ಚಿರಸುಂದರ, ಆನಂದರೂಪ ಮತ್ತು ಆನಂದಮಯನಾಗಿದ್ದಾನೆ. ಸೂಫೀ ಜನರು ಭಗವಂತನ ಪರಾಕಾಷ್ಠತೆಯನ್ನು ನರರೂಪದಲ್ಲಿ ನೋಡಲು ಸಮರ್ಥರಾಗಿದ್ದಾರೆ. ಸೂಫೀ ಕವಿಗಳ ಕಾವ್ಯ ಗ್ರಂಥಮಾಲೆಯ ಅಧ್ಯಯನ ಮಾಡಿದವರಿಗೆ, ಸೂಫೀ ಜನರು ಸುಂದರ ನರಮೂರ್ತಿಯ ಉಪಾಸನಾ ಮತ್ತು ಧ್ಯಾನ ಹಾಗು ಸೇವೆ ಮಾಡುವದೇ ಪರಮಾನಂದಹೊಂದುವ ಸಾಧನವೆಂದು ತಿಳಿಯುತ್ತಾರೆಂಬುದು ಗೋಚರವಾಗುತ್ತದೆ.ಅವರು ಇನ್ನೂ ಹೇಳುವದೇನಂದರೆ, ಉಪಾಸನೆಯ ಮೂರ್ತಿ ಕಿಶೋರಾವಸ್ಥೆಯುಳ್ಳದುದಾದರೆ ರಸಸ್ಫೂರ್ತಿಗೆ ಸಹಾಯಕವಾಗುತ್ತದೆ. ಇನ್ನೂ ಕೆಲವರು, ಉಪಾಸನೆಗೆ ಪುರುಷಮೂರ್ತಿ ಶ್ರೇಷ್ಠವೆಂದು ಹೇಳಿದರೆ ಕೆಲವರು ರಮಣೀಯ ಮೂರ್ತಿ ಶ್ರೇಷ್ಠವೆಂದು ಹೇಳುತ್ತಾರೆ. ಪರಂತು ಸೂಫಿ ಜನರು ಹೇಳುವದೇನಂದರೆ, ಆ ವಸ್ತುವಿನಲ್ಲಿ ಪ್ರಕೃತಿ ಮತ್ತು ಪುರುಷ ಭೇದವಿಲ್ಲ. ಅದು ಅಭೇದ ತತ್ತ್ವವಾಗಿದೆ. ಇಷ್ಟೇ ಏಕೆ? ಅವರ 'ಗಜಲ್' 'ರುಬಾಯಿಯಾತ್' 'ಮಸನವೀ' ಮೊದಲಾದವುಗಳಲ್ಲಿ ದೊರೆಯುವ ವರ್ಣನೆಯಿಂದ ಕಿಶೋರಾವಸ್ಥೆಯ ಪುರುಷ ಅಥವಾ ಕಿಶೋರಾವಸ್ಥೆಯ ಸ್ತ್ರೀಯೋ ಎಂಬುದನ್ನು ನಿರ್ಣಯಿಸುವದಾಗುವದಿಲ್ಲ. ಟೀಕಾಕಾರರೂ ಸಹ ರುಚಿಯ ವೈಚಿತ್ರ್ಯದ ಮೂಲಕ ಕೆಲವರು ಪುರುಷ ಭಾವದಲ್ಲಿ ವ್ಯಾಖ್ಯಾನ ಮಾಡಿದರೆ ಕೆಲವರು ರಮಣೀ ಭಾವದಲ್ಲಿ ವ್ಯಾಖ್ಯಾನ ಮಾಡಿರುವರು. ಈ ಭೇದ ಬಾಹ್ಯಸಾಧನಾದಲ್ಲಿಯೂ ಗೋಚರವಾಗುತ್ತದೆ. ಮೂಲವಸ್ತು ಪುರುಷನೂ ಅಲ್ಲ, ಪ್ರಕೃತಿಯೂ ಅಲ್ಲ. ಅದು ಎರಡರ ಅಭೇದಾತ್ಮಕ ಸಾಮರಸ್ಯವೆಂಬುದರಲ್ಲಿ ಸಂದೇಹವಿಲ್ಲ. ಜಗತ್ತಿನಲ್ಲಿರುವ ಸೌಂದರ್ಯವೆಲ್ಲ ಅಪೂರ್ಣ ಮತ್ತು ಅಪೂರ್ಣ ಸೌಂದರ್ಯದ ಕಣ(ಅಣು)ವಿಕಾಸ ಮಾತ್ರವಾಗಿದೆ. ಅವರದೇ ಛಾಯಾಮಾತ್ರವಾಗಿದೆ. ಆ ಪೂರ್ಣ ಸೌಂದರ್ಯ ತಾನೊಂದೆ ಇರಲಾರದೆ, ಕಾಲದ ಮೇಲೆ ಮಹಾಕಾಲದ ಮೇಲೆ ಪ್ರಸ್ಫುಟಿತವಾಗಿದೆ. ಆ ವಸ್ತುವೇ ಜಗದ್ರೂಪದಲ್ಲಿ ಖಂಡ ಸೌಂದರ್ಯಮಯವಾಗಿ ವಿಕಸಿತವಾದಂತೆ ಕಾಣುತ್ತದೆಂದು ಹೇಳುತ್ತಾರೆ. ಆಗಮಶಾಸ್ತ್ರಕಾರರೂ ಇದನ್ನೇ ಹೇಳುವದಿಲ್ಲವೇ? ನಟನಾನಂದನಾಥ ಚಿದ್ವಲ್ಲಿ ಅಥವಾ ಕಾಮಕಲಾ ಟೀಕೆಯಲ್ಲಿ 'ಒಬ್ಬ ಅತಿ ಸುಂದರ ರಾಜನು ತನ್ನ ಮುಂದಿನ ದರ್ಪಣದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ, ಆ ಪ್ರತಿಬಿಂಬವನ್ನೇ ತಾನೆಂದೂ ತಿಳಿಯುತ್ತಾನೆ. ಪರಮೇಶ್ವರನೂ ಅದೇ ರೀತಿ ತನ್ನ ಆತ್ಮಶಕ್ತಿಯನ್ನು ನೋಡಿ ನಾನು ಪೂರ್ಣನಾಗಿದ್ದೇನೆಂದು ಆತ್ಮಸ್ವರೂಪವನ್ನು ಗುರುತಿಸುತ್ತಾನೆ. ಇದೇ ಪೂರ್ಣ ಹಂತವಾಗಿದೆ. ಇದೇ ರೀತಿ ಪರಮಶಿವನ ಸ್ವಾಂಗದಿಂದ ಪರಾಶಕ್ತಿಯ ಸ್ವಾಂತಸ್ಥ ಪ್ರಪಂಚವು ಅದರಿಂದಲೇ ಹೊರಡುತ್ತದೆ. ಇದಕ್ಕೆನೇ ವಿಶ್ವವೆಂಬ ಹೆಸರು.

ಈ ಪೂರ್ಣ ವಸ್ತುವಿಗೆ ತ್ರಿಪುರಾ ಮತದಲ್ಲಿ 'ಸುಂದರೀ ಅಥವಾ ತ್ರಿಪುರಸುಂದರೀ' ಎಂದು ಕರೆಯುತ್ತಾರೆ. ಈ ಸುಂದರಿಯ ಉಪಾಸಕರು ಚಂದ್ರನ ರೂಪದಲ್ಲಿ ಇದರ ಉಪಾಸನೆ ಮಾಡುತ್ತಾರೆ. ಚಂದ್ರನಿಗೆ ಹದಿನಾರು ಕಲೆಗಳಿವೆ. ಎಲ್ಲವೂ ನಿತ್ಯವಾಗಿ ಕೂಡಿಕೊಂಡಿರುವದರಿಂದ ಇವುಗಳನ್ನು ನಿತ್ಯ ಷೋಡಶಿಕಾ ಎಂಬ ಹೆಸರಿನಿಂದ ಕರೆಯುತ್ತಾರೆ. ಪರಂತು ಮೊದಲಿನ ಹದಿನೈದು ಕಲೆಗಳು ಉದಯ–ಅಸ್ತ ಮತ್ತು ಹ್ರಾಸ–ವೃದ್ಧಿಯನ್ನು ಹೊಂದುತ್ತವೆ. ಹದಿನಾರನೆಯದು ಮಾತ್ರ ಹ್ರಾಸ–ವೃದ್ಧಿಯನ್ನು ಹೊಂದುವದಿಲ್ಲ. ಅದು 'ಅಮೃತಾ' ಎಂಬ ಚಂದ್ರಕಲೆ ಅದೆ. ವೈಯಾಕರಣಿಗಳು ಇದನ್ನೇ 'ಪಶ್ಯಂತೀ', ವಾಣಿ

ಯೆಂದು ಕರೆಯುತ್ತಾರೆ. ದರ್ಶನಶಾಸ್ತ್ರದಲ್ಲಿ ಇದಕ್ಕೆ ಪಾರಿಭಾಷಿಕ ಹೆಸರು 'ಆತ್ಮಾ'. ಮಂತ್ರಶಾಸ್ತ್ರದಲ್ಲಿ ಇದಕ್ಕೆ ಮಂತ್ರ ಅಥವಾ ದೇವತಾ ಸ್ವರೂಪವೆಂದು ಹೇಳಲಾಗಿದೆ. ನಾವು ಯಾವುದಕ್ಕೆ ಪೂರ್ಣಚಂದ್ರನೆಂದು ಕರೆಯುವೆವೋ, ವಾಸ್ತವಿಕವಾಗಿ ಅದು ಪೂರ್ಣ ಚಂದ್ರನಲ್ಲ, ಯಾಕೆಂದರೆ ಅದು ಉದಯ ಮತ್ತು ಕ್ಷಯವನ್ನು ಹೊಂದುತ್ತದೆ. ಪೂರ್ಣವಾದುದರಲ್ಲಿ ನ್ಯೂನಾಧಿಕ ಭಾವ ಇರಲಾರದು. ಈ ರೀತಿಯ ಪೂರ್ಣತ್ವ ೧೬ನೆಯ ಕಲೆಯಲ್ಲಿದೆ. ಅದೇ ನಿತ್ಯೋದಿತ. ಅಮೃತ ಸ್ವರೂಪ ಮತ್ತು ಅಖಂಡ ವಾಗಿದೆ. ಅದೇ ಮಹಾತ್ರಿಪುರಸುಂದರೀ. ಲಲಿತಾ ಆಗಿದೆ; ಸೌಂದರ್ಯ ಮತ್ತು ಆನಂದದ ಪರಮಧಾಮವಾಗಿದೆ; ಇದು ಪರಾಕಲಾ ಚಿದೇಕರಸಾ–ಶ್ರೀವಿದ್ಯೆಯಾಗಿದೆ. ಮೊದಲಿನ ಹದಿನೈದು ಕಲೆಗಳು ಕಾಲಚಕ್ರದೊಡನೆ ಸಂಬಂಧಿಸಿವೆ ಅವೇ ಸೂರ್ಯ ಮತ್ತು ಚಂದ್ರರ ವ್ಯವಧಾನ ಮತ್ತು ಸಂಯೋಗವಾದ ಕಾರಣ ಪ್ರತಿಪದ ಆದಿ ತಿಥಿರೂಪಗಳಾಗಿವೆ. ಇವು (೧೫–ಕಲೆ) ನಿತ್ಯವಾಗಿದ್ದರೂ ಇವುಗಳ ಆವಿರ್ಭಾವ ತಿರೋಭಾವ ಹೊಂದುತ್ತವೆ. ಆದರೆ ೧೬ನೇ ಕಲೆ ನಿತ್ಯ ಜ್ಯೋತನಾಮಯ, ಸಹಸ್ರದಲಕಮಲಸ್ಥ ನಿತ್ಯಕಲಾಯುಕ್ತ ಶ್ರೀ ಚಕ್ರಾತ್ಮಕ ಚಂದ್ರಬಿಂಬವದೆ. ಆದುದರಿಂದಲೇ ಸುಭಗೋದಯದಲ್ಲಿ–'ಷೋಡಸೀತು ಕಲಾಜ್ಞೇಯಾ ಸಚ್ಚಿದಾನಂದ ರೂಪಿಣೀ' ಎಂದಿದೆ. ಆದಕಾರಣ ಉಪಾಸಕನ ಹತ್ತಿರ ಸುಂದರೀ, ನಿತ್ಯ ಷೋಡಶವರ್ಷೀಯಾ ಇರುವಳು. ಗೌಡೀಯ ಸಂಪ್ರದಾಯದಲ್ಲಿಯೂ ಇದೇ ರೀತಿ ಹೇಳಲಾಗಿದೆ. ಇನ್ನೊಂದು ರಹಸ್ಯದ ಮಾತೆಂದರೆ ಉಪಾಸನೆಯ ಪದ್ಧತಿಗನುಸಾರವಾಗಿ ಸ್ತ್ರೀದೇವತೆಯ ಎಡಗೈಯಲ್ಲಿ ಮತ್ತು ಪುರುಷ ದೇವತೆಯ ಬಲಗೈಯಲ್ಲಿ ಜಪ ಸಮರ್ಪಣೆ ಮಾಡುವದು ಸಾಧಾರಣ ನಿಯಮವಾಗಿದೆ. ಆದರೆ ಲಲಿತೆಯ ಬಲಗೈಯಲ್ಲಿಯೇ ಜಪ ಫಲಕೊಡುವ ವ್ಯವಸ್ಥೆ ಇರುವದು. ಇನ್ನೊಂದು ಪಕ್ಷ ದಲ್ಲಿ ಶ್ರೀಕೃಷ್ಣನ ರಮಣೀಯ ಮೂರ್ತಿಯನ್ನು ಗ್ರಹಿಸಿರುವದು ಮತ್ತು ಮೋಹಿನೀ ಮೂರ್ತಿಯಲ್ಲಿ ಪ್ರಕಟವಾಗುವದು ಪ್ರಸಿದ್ಧವಾಗಿದೆ. ತ್ರಿಪುರಾ ಹಾಗೂ ಗೌಡೀಯ ಮತದ ಆಚಾರಗಳೊಡನೆ ಸೂಫೀ ಮತದ ಸಾದೃಶ್ಯವನ್ನೂ ಅನೇಕ ವಿಷಯ ಗಳಲ್ಲಿ ನೋಡಬಹುದಾಗಿದೆ. ಪ್ರತ್ಯಭಿಜ್ಞಾ ಮತಾವಲಂಬೀ ಕಾಶ್ಮೀರೀಯ ಶೈವಾಚಾರ್ಯರೂ ಇದೇ ಭಾವದಲ್ಲಿ ಪರಮಶಿವನ ಧ್ಯಾನ ಮಾಡುತ್ತಾರೆ. ಅನಂತರ ಮೂರನೆಯ ಸಿದ್ಧಾಂತ ಅಥವಾ 'ಇಶರಾನ್' ಮತವೂ ಆಗಮದಲ್ಲಿ ಕಂಡುಬರುವದು. ಈ ಮೂಲ ಜ್ಯೋತಿಯೇ ಚಿದಾತ್ಮ ಚಂದ್ರಬಿಂಬ (ಅಥವಾ ವೈದಿಕಮತ ವಿಶೇಷದಲ್ಲಿ ಸೂರ್ಯಬಿಂಬ) ಇದೆ. ಎಲ್ಲ ದೇವತೆಗಳೂ ಆದರ ರಶ್ಮಿಗಳೇ ಆಗಿದ್ದಾರೆ. ಅವುಗಳನ್ನು ಮಾತೃಕಾ, ವರ್ಣ, ಕಲಾ, ಶಕ್ತಿ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಮಾಲೆಯು ಅರ್ಥಾತ್ ವರ್ಣಮಾಲೆ ಅಥವಾ ಮಾತೃಕಾ ಚಕ್ರದ ಬಹಿರ್ವಿಕಾಸವೇ ಸೃಷ್ಟಿ ಮತ್ತು ಅಂತಃಸಂಕೋಚವೇ ಪ್ರಲಯ ವಾಗಿದೆ.

ಅಧ್ಯಾಪಕ ಗಿಬ್ಸನು ಭಾರತೀಯ ಅದ್ವೈತ ಪ್ರಸ್ಥಾನದಲ್ಲಿ ರಸ ಮತ್ತು ಪ್ರೇಮತತ್ತ್ವದ ಸಂಧಾನವನ್ನು ಕಾಣದೇ ಸೂಫೀಮತದ ಐತಿಹಾಸಿಕ ಸಂಬಂಧದ ಆವಿಷ್ಕಾರಮಾಡುವ ಸಮಯದಲ್ಲಿ ನವಪ್ಲೇಟೋನಿಕ್ ಮತವನ್ನು ಆಶ್ರಯಿಸಿದ್ದಾನೆ. ಆದರೆ ಭಾರತ ವರ್ಷದ ಆಗಮಮೂಲಕ ಸಿದ್ಧಾಂತ ಹಾಗೂ ಆಚಾರಗಳ ಅನ್ವೇಷಣೆ ಮಾಡಿದಲ್ಲಿ ಸೂಫೀಮತದ ಸಂಪ್ರದಾಯ ದೊಡನೆ ಭಾರತವರ್ಷದ ಸಂಬಂಧ ಇರುವಷ್ಟು ಅಲೇಕ್‌ಜಾಂಡ್ರಿಯಾದಲ್ಲಿ ಇರುವದಿಲ್ಲ.

ಇಲ್ಲಿ ಅತಿ ಸಂಕ್ಷೇಪವಾಗಿ ಪ್ರತ್ಯಭಿಜ್ಞಾ ಮತದ ಸಾಧಾರಣ ಪರಿಚಯ ಕೊಡಲಾಗಿದೆ. ಪ್ರತ್ಯಭಿಜ್ಞಾ ಶಾಸ್ತ್ರದ ಗ್ರಂಥಾ ವಲೀ ಹಾಗೂ ಕಾಶ್ಮೀರ ಮತ್ತು ದಕ್ಷಿಣಾಪಥದಲ್ಲಿ ಇದರ ಪ್ರಚಾರದ ಇತಿಹಾಸವನ್ನು ಇಲ್ಲಿ ಕೊಟ್ಟಿರುವದಿಲ್ಲ. ಪಾಠಕರು ಭಾರ ತೀಯ ದರ್ಶನದ ವಿಸ್ತೃತ ಅಧ್ಯಯನದ ಪುನರುದ್ಧಾರವನ್ನು ಕುರಿತು ಪ್ರಾಚೀನ ಗೌರವದ ಸ್ಮೃತಿಯಲ್ಲಿ ಆನಂದ ಪಡೆಯುವ ರೆಂದು ಆಶಿಸುತ್ತೇವೆ.*

---

* ಮಹಾಮಹೋಪಾಧ್ಯಾಯ ಪಂ॥ ಗೋಪೀನಾಥ್ ಕವಿರಾಜ ಅವರ ಲೇಖನದ ಸಾರಸಂಗ್ರಹವನ್ನು ಇಲ್ಲಿ ಕೊಡಲಾಗಿದೆ. ವಿಸ್ತೃತ ಅಧ್ಯಯನ ಮಾಡುವ ಅಪೇಕ್ಷೆ ಉಳ್ಳವರು ಅವರ 'ಭಾರತೀಯ ಸಂಸ್ಕೃತಿ ಔರ್ ಸಾಧನಾ' ಎಂಬ ಗ್ರಂಥವನ್ನು ಅವಲೋಕಿಸಬಹುದು.

# ಶೈವ ಮತ್ತು ವೀರಶೈವ—ಒಂದು ತಾತ್ವಿಕ ವಿಶ್ಲೇಷಣೆ

—ಡಾ॥ ಎ. ಎಲ್. ಶಿವರುದ್ರಪ್ಪ.

ವೈವಿಧ್ಯತೆಯ ನಡುವೆ ಏಕತೆಯನ್ನು ಕಾಪಾಡಿಕೊಂಡು ಬರುವುದು ಹಿಂದೂಧರ್ಮದ ಒಂದು ವೈಶಿಷ್ಟ್ಯ ಎಂದು ಹೇಳುವುದುಂಟು. ಕ್ರೈಸ್ತ ಮತ್ತು ಇಸ್ಲಾಂಧರ್ಮಗಳಂತೆ, ಹಿಂದೂಧರ್ಮೀಯರೆಲ್ಲರೂ ಸಮಾನವಾಗಿ ಒಪ್ಪಿ ಆಚರಿಸುವ ಸಿದ್ಧಾಂತಗಳನ್ನು ಹುಡುಕಿ ಹೇಳುವುದು ಬಹು ಕಷ್ಟ. ಅವರು ಆರಾಧಿಸುವ ದೇವರು, ಆಚರಿಸುವ ಧಾರ್ಮಿಕ ವಿಧಿಗಳು, ಹಬ್ಬ ಹರಿದಿನಗಳು, ಆರಾಧನಕ್ರಮ ಇವುಗಳ ವಿಚಾರದಲ್ಲಿ ಹಿಂದೂಧರ್ಮೀಯರಲ್ಲಿ ಏಕತೆ ಇಲ್ಲ. ಇಷ್ಟಾದರೂ ಅನಾದಿ ಕಾಲದಿಂದ ಅದು ಸನಾತನ ಧರ್ಮವೆನಿಸಿ ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಂಡು ಬರುತ್ತಿರುವುದು ಒಂದು ರೀತಿಯ ಆಶ್ಚರ್ಯದ ಸಂಗತಿ. ಇದರ ಇತಿಹಾಸವನ್ನು ನೋಡಿದಾಗ, ಇದು ಇಸ್ಲಾಂ ಮತ್ತು ಕ್ರೈಸ್ತಧರ್ಮಗಳೊಂದಿಗೆ ಸಹಿಷ್ಣುತೆಯಿಂದ ಸಹಬಾಳ್ವೆ ನಡೆಸಿರುವುದು ಕಂಡು ಬರುತ್ತದಾದರೂ, ಭಾರತದಲ್ಲಿಯೇ ಜನಿಸಿ ವಿಶ್ವಮಾನ್ಯತೆಯನ್ನು ಗಳಿಸಿದಂತಹ ಬೌದ್ಧಧರ್ಮದ ವಿಚಾರದಲ್ಲಿ ಇದು ಅಷ್ಟೊಂದು ಸಹಿಷ್ಣುತೆಯನ್ನು ತೋರಿದಂತೆ ಕಾಣುವುದಿಲ್ಲ. ವೈದಿಕ ಧರ್ಮದಲ್ಲಿ ಮನ್ನಣೆ ಗಳಿಸಿದ, ವರ್ಣಧರ್ಮ, ವೈದಿಕ ಕರ್ಮಗಳ ಸಾಂಪ್ರದಾಯಿಕ ಆಚರಣೆಯಿಂದ ಬೇಸತ್ತು ಹಿಂದೂಧರ್ಮದ ಸುಧಾರಣೆಯಲ್ಲಿ ತೊಡಗಿದ ಬೌದ್ಧಧರ್ಮ ತನ್ನದೇ ಆದ ರೀತಿಯಲ್ಲಿ ಸ್ವತಂತ್ರವಾದ ಸಿದ್ಧಾಂತಗಳನ್ನು ಸ್ಥಾಪಿಸಲು ಶಕ್ತವಾಯಿತು. ಇದರಿಂದ ಅಸಹನೆಗೊಂಡ ಹಿಂದೂ ಧರ್ಮ, ಕ್ರಿ.ಶ. ೮ನೇ ಶತಮಾನದ ವೇಳೆಗೆ ಬೌದ್ಧಧರ್ಮವನ್ನು ಹಿಂದೂದೇಶದಿಂದಲೇ ಹೊರದೂಡಿತು. ಬೌದ್ಧಧರ್ಮದ ಅನುಯಾಯಿಗಳಾಗಿದ್ದವರು ಮತ್ತೊಮ್ಮೆ ಹಿಂದೂಧರ್ಮದಲ್ಲಿಯೇ ಲೀನವಾದರು.

ಹಿಂದೂಧರ್ಮ ಜೀವಂತವಾಗಿರುವುದು ಬಹುಮಟ್ಟಿಗೆ ವೈಷ್ಣವ ಮತ್ತು ಶೈವಧರ್ಮದ ರೂಪದಲ್ಲಿ. ಹಿಂದೂಧರ್ಮದ ಅನುಯಾಯಿಗಳನ್ನು ಶಿವೋಪಾಸಕರು ಇಲ್ಲವೆ, ವಿಷ್ಣುವಿನ ಉಪಾಸಕರು ಎಂದು ವ್ಯಾಪಕವಾಗಿ ಗುರುತಿಸಬಹುದು. ಶೈವ, ವೈಷ್ಣವರೇ ಅಲ್ಲದೆ, ಶಾಕ್ತ. ಗಾಣಾಪತ್ಯ ಮತ್ತು ಸೌರ ಎಂಬ ಪ್ರಭೇದಗಳು ಕೆಲಕಾಲ ಹಿಂದೂಧರ್ಮದಲ್ಲಿ ಕಂಡದ್ದುಂಟು, ಆದರೆ, ಕಾಲಾನುಗತಿಯಲ್ಲಿ ಅವು ಶೈವ ಮತ್ತು ವೈಷ್ಣವಧರ್ಮದಲ್ಲಿ ಲೀನಗೊಂಡು ಕೊನೆಗೆ ಈ ಎರಡು ಶಾಖೆಗಳು ಮಾತ್ರವೇ ಉಳಿದುಬಂದಿವೆ. ಶಿವನ ಅರ್ಧಾಂಗಿಯಾದ ಶಕ್ತಿ ಅಥವಾ ದುರ್ಗಿಯ ಉಪಾಸಕರಾದ ಶಾಕ್ತರು ಶೈವಧರ್ಮಕ್ಕೆ ಸಮೀಪವೆನಿಸಿ ಅದರಲ್ಲಿ ಒಂದಾದರು. ಅಂತೆಯೇ ಶಿವನ ಮಗನಾದ ಗಣಪತಿಯನ್ನು ಆರಾಧಿಸಿದ ಗಾಣಾಪತ್ಯರು ಶೈವಧರ್ಮದಲ್ಲಿ ಸೇರಿ ಹೋದರು. ವಿಷ್ಣುವಿನ ಪ್ರತಿರೂಪವೆನಿಸಿದ ಸೂರ್ಯನನ್ನು ಆರಾಧಿಸುತ್ತಿದ್ದ ಸೌರರು ವೈಷ್ಣವ ಧರ್ಮದಲ್ಲಿ ಐಕ್ಯಗೊಂಡರು. ಹೀಗಾಗಿ, ಕೊನೆಗೆ ಈ ಎರಡೂ ಧರ್ಮಗಳು ಹಿಂದೂಧರ್ಮದ ಅಂಗವಾಗಿ ಉಳಿದುಬಂದಿವೆ.

**'ಏಕಂ ಸತ್ ವಿಪ್ರಾ ಬಹುಧಾ ವದಂತಿ'** ಎಂಬ ಆರ್ಯೋಕ್ತಿ ಇದ್ದರೂ ವೈಷ್ಣವ ಮತ್ತು ಶೈವ ಸಂಪ್ರದಾಯದ ಹಿಂದೂ ಮತಾವಲಂಬಿಗಳು ತಮ್ಮ ಆರಾಧ್ಯದೈವವಾದ ವಿಷ್ಣು ಅಥವಾ ಶಿವನ ಹಿರಿಮೆಯನ್ನು ಪ್ರತಿಪಾದಿಸಲು ಅನೇಕ ಧಾರ್ಮಿಕ ಗ್ರಂಥಗಳು ಪುರಾಣ ಮತ್ತು ಪುಣ್ಯಕಥೆಗಳನ್ನು ಬರೆದು ಧಾರ್ಮಿಕ ಸಾಹಿತ್ಯದ ಹೆಚ್ಚಳಕ್ಕೆ ಕಾರಣರಾದರು. ಇದರಿಂದ ಒಳ್ಳಿತು ಮತ್ತು ಕೆಟ್ಟದ್ದು ಎರಡೂ ಆಯಿತು. ಶಿವ, ವಿಷ್ಣು ಈ ಎರಡು ದೈವಗಳ ಪಂದ್ಯಾಟ ಇನ್ನು ಸಾಕೆನಿಸಿ ಕೊನೆಗೆ ಈ ಎರಡು ದೈವಗಳ ನಡುವಿನ ಭಿನ್ನತೆಯನ್ನು ಮರೆಯಲು 'ಹರಿಹರ' ಎಂಬ ಏಕದೈವದ ಕಲ್ಪನೆ ಮೂಡಿಬಂದಿತು. ಇದಿಷ್ಟು ಹಿಂದೂಧರ್ಮದ ದೈವೀಪ್ರಜ್ಞೆಯ ವಿಕಾಸದ ಸ್ಥೂಲ ಪರಿಚಯ.

ಅಂದಮೇಲೆ, ಶಿವನನ್ನು ಪರತತ್ತ್ವವೆಂದು ಆರಾಧಿಸುವ ಶೈವಪರಂಪರೆ, ಹಿಂದೂಧರ್ಮದ ಒಂದು ಪ್ರಮುಖವಾದ ಅಂಗ ಎಂದಂತಾಯಿತು. ಶಿವನಿಗೆ ಪಶುಪತಿ ಎಂಬ ಮತ್ತೊಂದು ಹೆಸರುಂಟು. ಜಗತ್ತಿನ ಜೀವಜಂತುಗಳನ್ನೆಲ್ಲಾ ಸಾಂಕೇತಿಕವಾಗಿ ಪಶು ಎಂದು ಕರೆದು, ಅವುಗಳಿಗೆಲ್ಲಾ ಒಡೆಯನಾದ ಪರಶಿವನನ್ನು ಪತಿ ಎಂದು ಹೆಸರಿಸಲಾಗಿದೆ. ಆ ಕಾರಣದಿಂದ ಶಿವನು ಪಶುಪತಿಯಾದ. ಪಶುಪತಿಯ ಈ ಕಲ್ಪನೆ ವೇದಪೂರ್ವದ ಸಿಂಧೂಸಂಸ್ಕೃತಿಯಲ್ಲಿಯೂ ಕಂಡುಬರುತ್ತದೆ. ವೇದದಲ್ಲಿ ಕಂಡ ರುದ್ರನ ಉಪಾಸನೆ, ಮುಂದೆ ಶ್ವೇತಾಶ್ವತರ ಉಪನಿಷತ್ತಿನಲ್ಲಿ ಶಿವೋಪಾಸನೆಯ ರೂಪ ತಳೆಯುತ್ತದೆ. ಹೀಗಾಗಿ, ವೈದಿಕ ಯುಗದ ಪೂರ್ವದಲ್ಲಿ ಪಶುಪತಿಯನ್ನಾರಾಧಿಸಿದ ಶೈವಧರ್ಮ ಕಂಡುಬಂದರೆ, ವೇದೋಪನಿಷತ್ತುಗಳಲ್ಲಿ ರುದ್ರ ಹಾಗೂ ಶಿವರ ಕಲ್ಪನೆಯ ಶೈವಧರ್ಮ ಕಂಡುಬರುತ್ತದೆ. ಮುಂದೆ ಈ ಎರಡು ಶೈವಪಂಥಗಳೂ ಜೊತೆಗೂಡಿ ಶೈವಧರ್ಮ ಎಂಬ ಏಕೈಕ ನಾಮದಿಂದ ಬೆಳೆದು ಬಂದಿವೆ. ಅಷ್ಟಾದರೂ ಅವುಗಳ ನಡುವಿನ ಪ್ರಭೇದ ಪೂರ್ಣವಾಗಿ ಅಳಿಸಿದಂತೆ ಕಾಣುವುದಿಲ್ಲ.

ಶೈವಧರ್ಮವನ್ನು ಕುರಿತು ಬರೆದ ಪಂಡಿತರೆಲ್ಲರೂ ಸಾಮಾನ್ಯವಾಗಿ ಗುರುತಿಸುವ ಎರಡು ಶಾಖೆಗಳೆಂದರೆ ಪಾಶುಪತ ಶೈವ ಮತ್ತು ಆಗಮಿಕ ಶೈವ. ಸಿಂಧೂಸಂಸ್ಕೃತಿಯಲ್ಲಿ ಕಂಡ ಶೈವಧರ್ಮವು ಪುನರುಜ್ಜೀವನಗೊಂಡು ವೈದಿಕ ಅಥವಾ ಆಗಮಿಕ

ಶೈವದ ಪ್ರಭಾವಕ್ಕೆ ಹೆಚ್ಚಾಗಿ ಸಿಕ್ಕದೆ ಸ್ವತಂತ್ರವಾಗಿ ಬೆಳೆದು ಪಾಶುಪತ ಶೈವವೆಂದೆನಿಸಿತು. ಮತ್ತೊಂದು ಶೈವ ಪರಂಪರೆ ವೇದೋಪನಿಷತ್ತುಗಳಿಂದ ಕುಡಿಯೊಡೆದು ಆಗಮಗಳನ್ನಾಧರಿಸಿ ಬೆಳೆದು ಆಗಮಿಕ ಶೈವ ಎಂದೆನಿಸಿತು. ಕಾಪಾಲಿಕ, ಕಾಳಾಮುಖ, ನಾಥಪಂಥ, ಲಾಕುಲ, ಗೋರಖನಾಥ ಪಂಥ, ರಸೇಶ್ವರವಾದ ಮುಂತಾದ ಶೈವ ಶಾಖೆಗಳಲ್ಲಿ ಪಾಶುಪತ ಮತ ತತ್ವಗಳು ಆಚರಣೆಯಲ್ಲಿದ್ದು ಕಾಲಾನುಕ್ರಮದಲ್ಲಿ ಅವು ಶಿಥಿಲಗೊಂಡು ಹೋದದ್ದು ನಮಗೆ ತಿಳಿಯುತ್ತದೆ. ಆಗಮಿಕ ಶೈವವು ಕಾಶ್ಮೀರ ಶೈವ, ತಮಿಳುಶೈವ ಮತ್ತು ವೀರಶೈವ ಎಂದೆಲ್ಲಾ ಪ್ರಭೇದಗೊಂಡು ಬೆಳೆದು ಬಂದಿತು. ಈ ರೀತಿ ಆ ಪಾಶುಪತ ಮತ್ತು ಆಗಮಿಕ ಶೈವಶಾಖೆಗಳು ಕೆಲವು ಕಾಲ ಜೊತೆಜೊತೆಯಾಗಿಯೇ ಬದುಕಿದ್ದುದರಿಂದ ಅವುಗಳಿಗೆ ಪರಸ್ಪರ ಪ್ರಭಾವವಾಗಿರಲಾರದೆಂದು ಹೇಳುವುದು ಕಷ್ಟ.

ಪಾಶುಪತ ಧರ್ಮದ ವಿವಿಧ ಶಾಖೆಗಳಾದ ಕಾಪಾಲಿಕ, ರಸೇಶ್ವರ, ಗೋರಖನಾಥ ಪಂಥಗಳಲ್ಲಿ ಕಂಡ ವಾಮಾಚಾರಗಳು ಮಂತ್ರ ತಂತ್ರಗಳ ಆಚರಣೆಗಳು ಬುಡಕಟ್ಟು ಜನಾಂಗದಲ್ಲಿ ಕಾಣುವ (Tribal Religion) ಧಾರ್ಮಿಕ ಆಚರಣೆಗಳನ್ನು ಬಹುಮಟ್ಟಿಗೆ ಹೋಲುತ್ತವೆ. ಧರ್ಮದ ಉಗಮ ಮತ್ತು ವಿಕಾಸವನ್ನು ಕುರಿತು ವೈಜ್ಞಾನಿಕವಾಗಿ ಚಿಂತಿಸಿರುವ ಪಾಶ್ಚಾತ್ಯ ದಾರ್ಶನಿಕರ, ಸಮಾಜಶಾಸ್ತ್ರಜ್ಞರ ಮತ್ತು ಮಾನವಶಾಸ್ತ್ರಜ್ಞರ ಪ್ರಕಾರ ಜಗತ್ತಿನ ಯಾವ ಧರ್ಮವೂ ಇದ್ದಕ್ಕಿದಂತೆ ಸ್ವರ್ಗದಿಂದ ಇಳಿದುಬಂದಿಲ್ಲ; ಎಲ್ಲ ಧರ್ಮಗಳೂ ಮೂಲತಃ ಬುಡಕಟ್ಟು ಜನಾಂಗದ ಧರ್ಮದ ರೂಪದಲ್ಲಿ (Tribal Religion) ಆರಂಭವಾಗಿ, ಆನಂತರ ಸಂಪ್ರದಾಯಬದ್ಧವಾದ ಕರ್ಮಾಚರಣೆಗಳ ರೂಪವನ್ನು ತಳೆದು (National Religion) ಕೊನೆಯಲ್ಲಿ ನೀತಿ ಮತ್ತು ಜ್ಞಾನಪ್ರಧಾನವಾದ ವಿಶ್ವಧರ್ಮ(Universal Religion)ವಾಗಿ ಮೂಡಿಬರುತ್ತದೆ. ಉಪನಿಷತ್ತಿನ ಇಲ್ಲವೆ ಕ್ರೈಸ್ತ,ಮಹಮದ್ ಅಥವಾ ಬುದ್ಧನಂತಹ ವಿಶ್ವಧರ್ಮ ಬೋಧಕರ ಧಾರ್ಮಿಕ ಸಿದ್ಧಾಂತಗಳು ರೂಪಗೊಳ್ಳುವ ಮುನ್ನ, ದೀರ್ಘಕಾಲದ ಧಾರ್ಮಿಕ ವಿಕಾಸ ಹಂತಹಂತವಾಗಿ ನಡೆದು ಬಂದಿರುತ್ತದೆ. ಈ ಮಾತು ಶೈವಧರ್ಮದ ವಿಕಾಸಕ್ಕೂ ಸಲ್ಲುವಂತಹುದು.

ಪಾಶುಪತ ಧರ್ಮದಲ್ಲಿ ಕಂಡ ವಾಮಾಚಾರಗಳು ಶೈವಧರ್ಮದ ವಿಕಾಸದ ಮೊದಲ ಹಂತದ ಪ್ರತೀಕಗಳಷ್ಟೆ. (Tribal religions character) ಆ ನಂತರ ಬಂದ ಆಗಮಿಕ ಶೈವದ ಪ್ರಮುಖ ಶಾಖೆಯೆನಿಸಿದ ತಮಿಳು ಶೈವಮತದಲ್ಲಿ ದೇಗುಲಗಳ ರಚನೆ, ವಿಗ್ರಹಾರಾಧನೆ, ನಾದವೇದಗಳ ನಿವೇದನೆ, ಇವುಗಳಿಗೆ ಮಹತ್ವ ಹೆಚ್ಚು. ಇದು ಧಾರ್ಮಿಕ ವಿಕಾಸದ ಎರಡನೆ ಹಂತ (National Religion). ಇದಾದನಂತರ ಬಂದ ವೀರಶೈವಧರ್ಮ ಹೆಚ್ಚು ಜ್ಞಾನಪ್ರಧಾನವಾಗಿದ್ದು ನೀತಿಯೇ ಧರ್ಮದ ಜೀವಾಳ ಎಂಬ ಸಿದ್ಧಾಂತವನ್ನು ವ್ಯಾಪಕವಾಗಿ ಪ್ರಚುರಪಡಿಸಿತು. ಇದನ್ನು ಧಾರ್ಮಿಕ ವಿಕಾಸದ ಮೂರನೆಯ ಹಂತ ಎಂದು ಕರೆಯಬಹುದು. (Universal Religion).

ಷಟ್ಸ್ಥಲ ಪ್ರಧಾನವಾದ ವೀರಶೈವಧರ್ಮ ಉಳಿದೆಲ್ಲ ಶೈವಧರ್ಮಗಳಿಗಿಂತಲೂ ಮೇಲಾಗಿದ್ದು ಅವುಗಳಿಗಿಂತಲೂ ಹೆಚ್ಚು ವಿಕಾಸಗೊಂಡದ್ದು ಎಂಬುದನ್ನು ಸೂಚಿಸುವ ಚನ್ನಬಸವಣ್ಣನ ವಚನ ಒಂದು ಈ ರೀತಿ ಇದೆ :

> 'ಶೈವ ಸೈವೆರಗಾದ, ಪಾಶುಪತಿ ಪಥವನರಿಯ, ಕಾಳಾಮುಖಿ ಕಂಗೆಟ್ಟ, ಮಹಾವ್ರತಿ ಮದವೇರಿದ,
> ಸನ್ಯಾಸಿ ಪಾಷಂಡಿಯಾದ, ಕೌಲಿ ಮರುಳಾಗಿ ಹೋದ, ಈ ಆರು ಭಕ್ತಿಸ್ಥಲಕ್ಕೆ ಸಲ್ಲವು ಕೇಳಿರಣ್ಣಾ...'

ಈ ಮೊದಲು ಸೂಚಿಸಿರುವ ಪಾಶುಪತಿ, ಕಾಳಾಮುಖಿ, ಮಹಾವ್ರತಿ, ಸಂನ್ಯಾಸಿ, ಕೌಲ ಮತ್ತು ಶೈವ ಇವರೆಲ್ಲರೂ ಒಂದಲ್ಲ ಒಂದು ಕಾರಣಕ್ಕಾಗಿ ಧರ್ಮದ ಉದ್ದೇಶಸಾಧನೆಯಲ್ಲಿ ಸೋತವರೇ. ಅವರೆಲ್ಲಾ ಮಾರ್ಗ ತಪ್ಪಿದವರು. ಏಕೆಂದರೆ ಅವರಿಗೆ ಧಾರ್ಮಿಕ ಬದುಕಿನ ನಿಜವಾದ ಉದ್ದೇಶ ಮತ್ತು ಸ್ವರೂಪದ ಅರಿವೇ ಇಲ್ಲ. ಆದ್ದರಿಂದ ಅವರಲ್ಲಿ ಯಾರೂ ಭಕ್ತಿಸ್ಥಲಕ್ಕೆ ಅರ್ಹರೆನಿಸುವುದಿಲ್ಲ. ಭಕ್ತಿ ಸ್ಥಲ, ಷಟ್ಸ್ಥಲದ ಮೊದಲನೇ ಮಜಲು. ಅದರೊಂದಿಗೆ ವೀರಶೈವಸಾಧಕನ ಧಾರ್ಮಿಕ ಬದುಕು ಮೊದಲಾಗುತ್ತದೆ. ಶೈವಮತೋಪಾಸಕರೆನಿಸಿದ ಇವರಾರೂ ವೀರಶೈವಕ್ಕೆ ಸಲ್ಲರು.

ಭಕ್ತಿಸ್ಥಲಕ್ಕೆ ಸಲ್ಲಬೇಕಾದರೆ, ಸಾಧಕನಿಗೆ ಭಗವಂತನ ವಿಚಾರದಲ್ಲಿ ಸರಿಯಾದ ಪ್ರಜ್ಞೆ ಮತ್ತು ಭಾವನೆ ಮೂಡಬೇಕು. ಆ ಭಾವನೆಗೆ ತಕ್ಕಂತೆ ಬದುಕು ಹಸನಾಗಬೇಕು. ಭಗವಂತನ ವಿಚಾರದಲ್ಲಿ ಸರಿಯಾದ ಪ್ರಜ್ಞೆ ಇಲ್ಲದ ಕಾರಣ ಕಾಪಾಲಿಕ, ರಸೇಶ್ವರ ಮತ್ತು ನಾಥಪಂಥದ ಶೈವರು ಶಿವನ ಸೌಮ್ಯರೂಪವನ್ನು ಮರೆತು ಅವನನ್ನು ಕಪಾಲಹಸ್ತ, ರುಂಡಮಾಲಿ ಎಂದೆಲ್ಲ ಕಲ್ಪಿಸಿಕೊಂಡು ಅವನನ್ನು ಒಲಿಸಲು ಮಾಂಸಮದ್ಯ ಸೇವನೆ, ನಿವೇದನೆಯೇ ಮುಂತಾದ ಬೀಭತ್ಸಕ್ರಿಯೆಗಳಿಂದೊಡಗೂಡಿದ ತಾಮಸಪ್ರಧಾನವಾದ ವಾಮಮಾರ್ಗದಲ್ಲಿ ನಡೆದರು. ಇಂತಹ ವಾಮಾಚಾರಿಗಳು ಭಕ್ತಿಸ್ಥಲಕ್ಕೆ ಎಂತು ಸಲ್ಲುವರು ?

ಅಂತೆಯೇ, ಜಗದ್ವ್ಯಾಪಿಯೂ, ಸರ್ವಾಂತರ್ಯಾಮಿಯೂ ಆದ ಪರಶಿವನನ್ನು ಸಾಕಾರಗೊಳಿಸಿ, ದೇಗುಲದಲ್ಲಿ ಸ್ಥಾಪಿಸಿ, ಮುಗಿಲೆತ್ತರದ ಗೋಪುರವನ್ನು ನಿರ್ಮಿಸಿ ದೇವರಿಂದ ದೂರ ನಿಂತು ಅರ್ಚಕನೊಬ್ಬನಿಂದ ಅರ್ಚಿಸುವ ಮಂದಭಕ್ತ ವೀರಶೈವದ ಭಕ್ತಿಸ್ಥಲಕ್ಕೆ ಬಹುದೂರ. ವೀರಶೈವಧರ್ಮದ ಭಕ್ತಿ ಶೈವಧರ್ಮದ ಭಕ್ತಿಗಿಂತ ಭಿನ್ನವಾದದ್ದು. ಷಟ್ಸ್ಥಲಭಕ್ತಿ,

ಜ್ಞಾನಯುಕ್ತವಾದದ್ದು. ತನ್ನ ಅಂತರಂಗದಲ್ಲಿರುವ ಪರಶಿವನನ್ನು ಅರ್ಚಿಸಲು ದೇಗುಲಕ್ಕೆ ಹೋಗುವ ಅವಶ್ಯಕತೆ ಇಲ್ಲ. ಅಂತರ್‌ಮುಖಿಯಾಗಿ ತನ್ನಲ್ಲಿರುವ ಶಿವತತ್ತ್ವವನ್ನು ಕುರಿತುಮಾಡುವ ಉಪಾಸನೆ ಭಕ್ತಿಯೂ ಅಹುದು, ಧ್ಯಾನವೂ ಅಹುದು. ಈ ಉಪಾಸನೆಗೆ ಸಹಕಾರಿಯಾಗಲೆಂದು ತನ್ನ ಹೃದಯದಲ್ಲಡಗಿರುವ ಆ ಶಿವತತ್ವವನ್ನು ಅಥವಾ ಚಿತ್ಕಳೆಯನ್ನು ಸಾಕಾರಗೊಳಿಸಿ ಲಿಂಗರೂಪದಲ್ಲಿ ಅಂಗದ ಮೇಲೆ ಧರಿಸಿದವನು ಲಿಂಗಧಾರಿ. ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗುವವ ಇವನಲ್ಲ. ಬೆಟ್ಟದ ದೇಗುಲದಲ್ಲಿ ಮಾತ್ರ ಶಿವನನ್ನು ಕಾಣುವ ಶೈವರು ಚನ್ನಬಸವಣ್ಣನ ದೃಷ್ಟಿಯಲ್ಲಿ ವೀರಶೈವದ ಭಕ್ತಸ್ಥಲಕ್ಕೆ ಬಲುದೂರ.

ಕ್ರಿಯಾರಹಿತವಾದ ಭಕ್ತಿಗೆ ವೀರಶೈವಧರ್ಮದಲ್ಲಿ ಯಾವ ರೀತಿಯ ಮನ್ನಣೆಯೂ ಇಲ್ಲ. ಭಕ್ತಿ, ಎಂದರೆ ಭಗವಂತನ ನಾಮಸ್ಮರಣೆ, ಅರ್ಚನೆ, ಭಜನೆ ಇವುಗಳಿಂದ ಮಾತ್ರ ಭಗವಂತನ ಸಾಕ್ಷಾತ್ಕಾರ ಸಾಧ್ಯ ಎಂಬ ಕ್ರಮ ವೀರಶೈವಧರ್ಮಕ್ಕೆ ಸಮ್ಮತ ವೆನಿಸಲಿಲ್ಲ. ಇವರ ಪ್ರಕಾರ ಕರ್ಮ ಎಂದರೆ ಯಜ್ಞಯಾಗಾದಿಗಳ ರೂಪದಲ್ಲಿ ನಡೆಯುವ ವೈದಿಕ ಕ್ರಿಯೆ ಅಲ್ಲ. ಕರ್ಮ ಎಂದರೆ ಶರೀರವನ್ನು ದಂಡಿಸಿ ಮಾಡುವ ಕಾಯಕ. ಕಾಯಕದಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ಲಾಭಗಳೆರಡೂ ಉಂಟು. ಕಾಯಕ ದಿಂದ ಆರ್ಥಿಕ ಸ್ವಾವಲಂಬನೆ ಸಾಧ್ಯವಾಗುತ್ತದೆ. ಅಂತೆಯೇ ಸಾಮಾಜಿಕ ಸಮಾನತೆಗೆ ಇದು ಒಂದು ಸುಲಭಸಾಧನ. ಶ್ರದ್ಧೆ ಯಿಂದ ಮಾಡುವ ಕಾಯಕ, ಭಕ್ತಿಯಿಂದ ಮಾಡಿದ ಪೂಜೆಗಿಂತಲೂ ಶ್ರೇಷ್ಠವಾದದ್ದು. ಭಗವಂತನಿಂದ ನಡೆಯುವ ಸೃಷ್ಟಿ ಕಾರ್ಯವೆಲ್ಲವೂ ಭಗವಂತನ ಕಾಯಕದ ಫಲ. ಭಗವದ್ಗೀತೆಯಲ್ಲಿ ಹೇಳಿದಂತೆ ಪರಮಾತ್ಮನು ಸದಾ ಕಾರ್ಯನಿರತನಾಗಿರುತ್ತಾನೆ. ಹಾಗಿಲ್ಲವಾದರೆ ನಿಯತಿಕ್ಷೇತ್ರವಾದ ಈ ವಿಶ್ವ ನಿಷ್ಕ್ರಿಯೆಗೊಳ್ಳುತ್ತದೆ. ಆದ್ದರಿಂದ ಬುದ್ಧಿಜೀವಿಯಾದ ಮಾನವನು ತನ್ನ ಕಾಯಕದಿಂದ ಭಗವಂತನೊಂದಿಗೆ ಸಹಕರಿಸಿ ಬಾಳಬೇಕು. ಮಾನವ ತನ್ನ ಕ್ರತುಶಕ್ತಿಯಿಂದ ಭಗವಂತನ ಕ್ರಿಯಾಶೀಲತೆಯನ್ನು ಆರಾಧಿಸಲು ಕಲಿಯಬೇಕು. ವೀರಶೈವಧರ್ಮದ ಪ್ರಕಾರ ಅದೇ ನಿಜವಾದ ಪೂಜೆ. ಧರ್ಮದ ಹೆಸರಿನಲ್ಲಿ ಕಾಯಕವನ್ನು ಅಗೌರ ವಿಸಬಾರದೆಂಬ ದಿವ್ಯಸಂದೇಶವನ್ನು ವೀರಶೈವಧರ್ಮ ಜಗತ್ತಿಗೆ ಸಾರಿತು. ಭಕ್ತಿಗೆ ಅತಿ ಮಹತ್ವವನ್ನು ಕೊಟ್ಟ ತಮಿಳು ಶೈವಧರ್ಮ ವೈದಿಕ ಧರ್ಮದ ಹಾದಿಯನ್ನೇ ತುಳಿದು, ಕಾಯಕದ ಮಹತ್ವವನ್ನು ಗುರುತಿಸಲು ಅಶಕ್ತವಾಯಿತು.

ಕಾಶ್ಮೀರ ಮತ್ತು ತಮಿಳು ಶೈವಗಳೆರಡೂ ಮೂಲತಃ ವೈದಿಕ ಪರಂಪರೆಗೆ ಬಹು ಸಮೀಪವಾಗಿ ಬೆಳೆದುಬಂದಂತೆ ಕಾಣುತ್ತದೆ. ವಿಭಿಜ್ಞೆ ಮತ್ತು ಪ್ರತ್ಯಭಿಜ್ಞೆಯ ಮೂಲ ಸಿದ್ಧಾಂತವನ್ನವಲಂಬಿಸಿ ನಿಂತಿರುವ ಕಾಶ್ಮೀರ ಶೈವ ಧರ್ಮವು ಬಹು ಪಾಲು ಶಂಕರರ ಅದ್ವೈತಕ್ಕೆ ಸಮೀಪವಾಗಿದೆ. ಅಂತೆಯೇ ಜೀವ ಮತ್ತು ಜಗತ್ತು ಪರಶಿವನಿಂದ ಭಿನ್ನವೆಂದು ನಂಬಿದ ತಮಿಳು ಶೈವವು ರಾಮಾನುಜರ ವಿಶಿಷ್ಟಾದ್ವೈತ ಧರ್ಮಕ್ಕೆ ಬಹುಮಟ್ಟಿಗೆ ಹೊಂದಿಕೊಂಡಂತಿದೆ. ಆದ್ದರಿಂದ ಶೈವಧರ್ಮದ ಈ ಎರಡು ಶಾಖೆಗಳು, ವೀರಶೈವಧರ್ಮಕ್ಕಿಂತ ಹೆಚ್ಚಾಗಿ, ವೈದಿಕಧರ್ಮದೊಂದಿಗೆ ಹೆಚ್ಚು ಸಾಮೀಪ್ಯ ಹೊಂದಿರುವುದನ್ನು ನಾವು ಗುರುತಿಸಬೇಕು.

ಶಕ್ತಿ ವಿಶಿಷ್ಟಾದ್ವೈತ ಎಂದು ಕರೆಯಲಾದ ವೀರಶೈವ ಧರ್ಮವು ಜೀವ ಮತ್ತು ಜಗತ್ತನ್ನು ಶಿವನ ಶಕ್ತಿಸ್ವರೂಪ ವೆಂದೇ ಗುರುತಿಸಿತು. ಈಶ್ವರ ಸ್ವರೂಪನಾದ ಪರಶಿವನು, ತನ್ನೆಲ್ಲ ಐಶ್ವರ್ಯದ ಅವಿಷ್ಕಾರದಿಂದಾಗಿ ಈ ವಿಶ್ವವನ್ನು ತನ್ನಿಂದಲೇ ಮೂಡಿಸಲು ಶಕ್ತನಾದನು. ಆದ್ದರಿಂದ ಜೀವ ಮತ್ತು ಜಗತ್ತು ಪರಶಿವನಿಂದ ಭಿನ್ನವಲ್ಲವಾದ್ದರಿಂದ ಈ ಜಗತ್ತು ಮಾಯೆ ಎಂದಾಗಲಿ ಅವಿದ್ಯೆ ಎಂದಾಗಲಿ ಕರೆಯಲು ಈ ಧರ್ಮ ಸಿದ್ಧವಿಲ್ಲ. ಆದ್ದರಿಂದ ವೀರಶೈವ ಧರ್ಮದ ಪ್ರಕಾರ ವಿಶ್ವದ ವಿಕಾಸ ಮತ್ತು ಸಂಕೀರ್ಣಕ್ಕೆ ಕಾಶ್ಮೀರ ಶೈವದಂತೆ ಮರೆವು ಮತ್ತು ಅರಿವು ಕಾರಣವಾಗುವುದಿಲ್ಲ. ಮಲತ್ರಯಗಳ ಸಹಾಯದಿಂದ ವಿಶ್ವದ ಉತ್ಪತ್ತಿ ಮತ್ತು ಲಯವನ್ನು ವಿವರಿಸಲಾಗಿದೆ. ಮಾಯಾಮಲ ಎಂಬ ಮಾತು ಇಲ್ಲಿ ಬರುವುದಾದರೂ ಅದು ಅದ್ವೈತದ ಮಾಯೆಗೆ ಯಾವ ರೀತಿಯಿಂದಲೂ ಹೊಂದುವುದಿಲ್ಲ.

ತಮಿಳು ಶೈವಧರ್ಮದ ಪ್ರಕಾರ ವಿಶ್ವದ ಸೃಷ್ಟಿಗೆ ಪರಶಿವನೇ ಕಾರಣನಾದರೂ ಸಹ ಈ ವಿಶ್ವವು ಕೊನೆಯಲ್ಲಿ ಪರ ಶಿವನಲ್ಲಿ ಐಕ್ಯಗೊಳ್ಳುವಂತಿಲ್ಲ. ಜೀವಿ, ಶಿವನೊಂದಿಗೆ ಸಮಾನಧರ್ಮಗಳನ್ನು ಪಡೆದಿದ್ದರೂ ಸಹ ಕೊನೆಯಲ್ಲಿ ಅದು ಶಿವೈಕ್ಯ ಗೊಳ್ಳಲಾರದು. ಶಿವ ಮತ್ತು ಜೀವಿಗಳ ನಡುವೆ ಕೇವಲ ಸಮಾನತೆ ಮಾತ್ರವೇ ಇಲ್ಲ. ಆದ್ದರಿಂದಲೇ ಜೀವಿಯು ತನ್ನ ಮುಕ್ತ ಸ್ಥಿತಿಯಲ್ಲಿ ಪರಶಿವನ ಸಾಯುಜ್ಯವನ್ನು ಅನುಭವಿಸುತ್ತಾನೆಯೇ ಹೊರತು ಶಿವನೊಂದಿಗೆ ಐಕ್ಯಗೊಳ್ಳುವುದಿಲ್ಲ, ಹೀಗಾಗಿ ತಮಿಳು ಶೈವರು ರಾಮಾನುಜ ಸಿದ್ಧಾಂತದಂತೆಯೇ ಭಕ್ತಿಯ ಔನ್ನತ್ಯವನ್ನು ಎತ್ತಿ ಹಿಡಿದರು. ವೀರಶೈವಸಿದ್ಧಾಂತ ಭಕ್ತಿಯ ಮಹತ್ವ ವನ್ನು ಗುರುತಿಸಿದ್ದರೂ ಸಹ ಇದು ಜ್ಞಾನ ಮತ್ತು ಕಾಯಕ ಧರ್ಮದೊಂದಿಗೆ ಜೊತೆಗೂಡಿ ಇರುವಂತಹುದು, ಅಲ್ಲದೆ ವೀರ ಶೈವ ಧರ್ಮದಲ್ಲಿ ನೈತಿಕ ಬದುಕಿಗೆ ಎಲ್ಲಿಲ್ಲದ ಮಹತ್ವ ಉಂಟು. ಮರ್ತ್ಯಲೋಕವನ್ನು ಕರ್ತಾರನ ಕಮ್ಮಟವೆಂದು ಗುರುತಿಸಿದ ವೀರಶೈವಧರ್ಮವು ಪರಲೋಕ ಸಾಧನೆಗಾಗಿ ಇಹಲೋಕವನ್ನು ನಿರಾಕರಿಸಲಿಲ್ಲ. ಪರಶಿವನ ಆವಾಸಸ್ಥಾನವಾದ ಈ ಜಗತ್ತನ್ನು ಗೌರವಿಸಿ, ಈ ವಿಶ್ವದ ಸಕಲ ಜೀವರಿಗೂ ಲೇಸನ್ನೇ ಬಯಸುತ್ತಾ ಭೂಮಿಯನ್ನು ಸ್ವರ್ಗವನ್ನಾಗಿ ಮಾರ್ಪಡಿಸಬೇಕೆಂಬುದೇ ಈ ಧರ್ಮದ ಮೂಲತತ್ತ್ವ.

ಒಟ್ಟಿನಲ್ಲಿ, ಶೈವಸಿದ್ಧಾಂತದ ವಿಕಾಸದಲ್ಲಿ ಧರ್ಮದ ಸಾಮಾನ್ಯ ಬೆಳವಣಿಗೆ ಮತ್ತು ವಿಕಾಸದಲ್ಲಿ ಕಾಣಬರುವ ಎಲ್ಲ ಲಕ್ಷಣಗಳೂ ಕಂಡು ಬರುವುದು ಒಂದು ವಿಶೇಷ ಸಂಗತಿ. ಪಾಶುಪತ ಶೈವ ಮತ್ತು ಅದರ ವಿವಿಧ ಶಾಖೆಗಳು ಶೈವಧರ್ಮದ ಉಗಮಾವಸ್ಥೆಯನ್ನು ಸೂಚಿಸುವುದಾದರೆ, ತಮಿಳು ಮತ್ತು ಕಾಶ್ಮೀರ ಶೈವಗಳ ವೈದಿಕ ಪರಂಪರೆಗೆ ಬಹು ಸಮೀಪವಿದ್ದು, ಶೈವ ಧರ್ಮದ ಮುಂದಿನ ಬೆಳವಣಿಗೆಯ ಸ್ವರೂಪವನ್ನು ಸೂಚಿಸುತ್ತವೆ. ಆಮೇಲೆ ಬಂದ ವೀರಶೈವ ಧರ್ಮ ವೈದಿಕ ಪರಂಪರೆಯನ್ನು ಅತಿಕ್ರಮಿಸಿ ಬೆಳೆದು, ಅನುಭವ ಮತ್ತು ಅನುಭಾವಗಳ (Reason and Mysticism) ರಸಘಟ್ಟವನ್ನು ಮುಟ್ಟಿ, ಸಾಮಾಜಿಕ ಸಮಾನತೆ ಮತ್ತು ನೈತಿಕ ಪಾವಿತ್ರ್ಯ ಧರ್ಮದ ಜೀವಾಳ ಎಂದು ಬೋಧಿಸಿತು. ಇವರಲ್ಲಿ ಕಂಡ ಕೆಲವು ವೈಶಿಷ್ಟ್ಯಗಳಿಂದಾಗಿ ಇದು ಪಾಶುಪತ ಶೈವ ಶಾಖೆಗಳಿಂದ ಮಾತ್ರವೇ ಅಲ್ಲದೆ ಉಳಿದ ವೈದಿಕ ಶೈವ ಶಾಖೆಗಳಿಂದಲೂ ಭಿನ್ನವೆನಿಸಿತು.

# ವೀರಶೈವ ಮಠಗಳ ಪರಂಪರೆ

—ಡಾ॥ ಹೆಚ್. ಎಂ. ಸದಾಶಿವಯ್ಯ

**ವೀರಶೈವ ಧರ್ಮದ ಉನ್ನತ ಕೊಡುಗೆ :**

ಆದಿಯಿಂದಲೂ ಧರ್ಮ ಮಾನವ ಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಧಾರ್ಮಿಕ ಭಾವನೆಗಳಲ್ಲಿ, ಧರ್ಮದ ಸ್ವರೂಪ ಮತ್ತು ಆಚರಣೆಗಳಲ್ಲಿ ಅನೇಕ ವ್ಯತ್ಯಾಸಗಳು ಕಾಣಬರುತ್ತವೆ. ಎಮಿಲಿ ಡರ್ಕೀಂ ಎಂಬ ಸುಪ್ರಸಿದ್ಧ ಫ್ರೆಂಚ್ ಸಮಾಜಶಾಸ್ತ್ರಜ್ಞನು, ಧರ್ಮದ ವಿಚಾರದಲ್ಲಿ ಆಳವಾಗಿ ಸಂಶೋಧಿಸಿ, ವಿವಿಧ ಸಮಾಜಗಳಲ್ಲಿ ವಿವಿಧ ಕಾಲಗಳಲ್ಲಿ ರೂಢಿಯಲ್ಲಿದ್ದ ಧಾರ್ಮಿಕ ನಂಬಿಕೆಗಳನ್ನು ಮತ್ತು ಕ್ರಿಯಾವಿಧಿಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿ 'ವಾಸ್ತವಿಕವಾಗಿ ಯಾವ ಧರ್ಮವೂ ಸುಳ್ಳಲ್ಲ' ಎಂದು ಹೇಳಿರುವ ವಾಕ್ಯದ ಅರ್ಥ ಗಮನಾರ್ಹವಾದುದು. ಮಾನವ ಜೀವನದಲ್ಲಿ ಉದ್ಭವಿಸುವ ಸಮಸ್ಯೆಗಳಿಗೆ, ಮಾನವ ಜೀವನದ ಸಂದರ್ಭಗಳನ್ನು ಪರಿಶೀಲಿಸಿ, ಅವುಗಳಿಗೆ ಆ ಕಾಲದ ಧರ್ಮವು ಪರಿಹಾರಗಳನ್ನು ಸೂಚಿಸುತ್ತದೆ. ವಿವಿಧ ಧರ್ಮಗಳಲ್ಲಿನ ಮೂಲಭೂತ ತತ್ತ್ವಗಳಲ್ಲಿ ಹೆಚ್ಚಿನ ವ್ಯತ್ಯಾಸಗಳು ಕಾಣಬರುವುದಿಲ್ಲವಾದರೂ ಅವುಗಳ ಆಚರಣೆಯಲ್ಲಿ ಅನೇಕ ವ್ಯತ್ಯಾಸಗಳು ಕಾಣಬರುತ್ತವೆ. ಒಂದು ಧರ್ಮದಲ್ಲಿ, ಯಾವಾಗ ಅದರ ತತ್ತ್ವಕ್ಕೆ ಹೆಚ್ಚಾದ ಗಮನ ಕೊಡದೆ, ಅದರ ಕ್ರಿಯಾವಿಧಿಗಳಿಗೆ ವಿಶೇಷ ಗಮನವನ್ನು ಕೊಟ್ಟಾಗ, ಧರ್ಮದ ತಿರುಳನ್ನು ಮರೆತು, ಅದರ ಕರಟಕ್ಕೆ ಹೆಚ್ಚು ಪ್ರಾಮುಖ್ಯವನ್ನು ಕೊಡುವ ಪ್ರವೃತ್ತಿ ಅನೇಕ ಚಾರಿತ್ರಿಕ ವಿಶ್ವಧರ್ಮಗಳಲ್ಲಿ ಕಾಣಬರುತ್ತದೆ. (ಸಾಧಾರಣವಾಗಿ ಹಿಂದೂ, ಬೌದ್ಧ, ಜೈನ, ಇಸ್ಲಾಂ, ಪಾರಸಿ, ಕ್ರೈಸ್ತಧರ್ಮಗಳನ್ನು ಧಾರ್ಮಿಕ ಲೇಖಕರು ವಿಶ್ವಧರ್ಮಗಳೆಂದು ಪರಿಗಣಿಸಿರುವರು). ವೀರಶೈವ ಧರ್ಮವು ಹಿಂದೂಧರ್ಮದ ಅವಿಭಾಜ್ಯ ಅಂಗವೆಂಬುದನ್ನು ನಾವು ಮರೆಯಬಾರದು. ಸಮಕಾಲೀನ ಹಿಂದೂಧರ್ಮದ ಆಚರಣೆ ಮತ್ತು ಕ್ರಿಯಾವಿಧಿಗಳಿಗಿದ್ದ ಅತಿ ಹೆಚ್ಚಿನ ಪ್ರಾಮುಖ್ಯವನ್ನು ಖಂಡಿಸಿ, ಧರ್ಮದ ಸತ್ವಕ್ಕೆ ಆದ್ಯ ಗಮನವನ್ನು ಕೊಟ್ಟು, ಅದರ ತತ್ತ್ವಗಳನ್ನು ದಿನವಹಿ ಜೀವನಕ್ಕೆ ಅಳವಡಿಸಿಕೊಳ್ಳುವ ಬಗೆಯನ್ನು ತಿಳಿಯಪಡಿಸಿರುವುದು ವೀರಶೈವ ಧರ್ಮದ ಉನ್ನತ ಕೊಡುಗೆ. ಸಮಕಾಲಿನ ಹಿಂದೂಧರ್ಮದಲ್ಲಿ ಪ್ರಚಾರದಲ್ಲಿದ್ದ ಯಜ್ಞಯಾಗಾದಿಗಳನ್ನು ಮತ್ತು ಜಾತಿಪದ್ಧತಿಯನ್ನು ಖಂಡಿಸಿ, ಸ್ತ್ರೀಯರಿಗಿದ್ದ ಧಾರ್ಮಿಕ ಪಾರತಂತ್ರ್ಯವನ್ನು ನಿವಾರಿಸಿ, ಅವರಿಗೆ ಸಾಮಾಜಿಕ ಜೀವನದಲ್ಲಿ ಸಮಾನವಾದ ಹಕ್ಕು–ಬಾಧ್ಯತೆಗಳನ್ನು ಒದಗಿಸಿದ ಕೀರ್ತಿಯು ವೀರಶೈವ ಧರ್ಮಕ್ಕೆ ಸಲ್ಲುತ್ತದೆ.

**ಭಾರತ ಮಠಗಳ ಪರಂಪರೆ :**

ಧರ್ಮ ಮತ್ತು ಮಠಗಳಿಗೆ ಇರುವ ನಿಕಟ ಸಂಬಂಧವು ಅವುಗಳ ಮೂಲ ಶಬ್ದಗಳನ್ನು ಪರಿಶೀಲಿಸಿದರೆ ವ್ಯಕ್ತಪಡುತ್ತದೆ. ಧರ್ಮ ಎಂಬ ಪದಕ್ಕೆ ಆಂಗ್ಲಭಾಷೆಯಲ್ಲಿ 'ರಿಲಿಜನ್' ಎಂಬ ಪದವಿದೆ. ಈ ಪದದ ಮೂಲಶಬ್ದವನ್ನು ಪರಿಶೀಲಿಸಿದರೆ, ನಮಗೆ ಧರ್ಮದ ತಿರುಳು ಗೊತ್ತಾಗುತ್ತದೆ. 'ರಿಲಿಜನ್' ಎಂಬ ಆಂಗ್ಲಪದವು ಲ್ಯಾಟಿನ್ ಭಾಷೆಯ 'ರೆಲಿಗಾರೆ' ಎಂಬ ಪದದಿಂದ ಬಂದುದು. ಈ ಪದದ ಅರ್ಥ ಪರಸ್ಪರ ಬಂಧಿಸುವುದು ಅಥವಾ ಸೇರಿಸಿಕಟ್ಟುವುದು. ಧರ್ಮದ ಪ್ರಭಾವದಿಂದ ಹೀಗೆ ಸೇರಿಕೊಂಡವರು ತಮ್ಮ ಜೀವನದ ಸುಖ ಸಂತೋಷ ಮತ್ತು ದುಃಖಗಳಲ್ಲಿ ಪರಸ್ಪರ ಭಾಗಿಗಳಾಗುತ್ತಾರೆ. ಆದುದರಿಂದಲೇ ವಿವಿಧ ನೀತಿ ನಿಯಮಗಳು ಧರ್ಮದ ಅವಿಭಾಜ್ಯ ಅಂಗಗಳೆಂದು ಎಲ್ಲಾ ಧರ್ಮಗಳೂ ಒಪ್ಪಿವೆ. ವೀರಶೈವಧರ್ಮದಲ್ಲಿ ಸಾಮಾಜಿಕ ಜೀವನಕ್ಕೆ ಅಗತ್ಯವಾದ ನೀತಿನಿಯಮಗಳ ಬೋಧನೆಯುಳ್ಳದೆ. ನಿತ್ಯಜೀವನದಲ್ಲಿ ಅವುಗಳ ಪರಿಪಾಲನೆಯ ಅಗತ್ಯವನ್ನೂ ತಿಳಿಸಿ, ಅದರ ಮೇಲ್ವಿಚಾರಣೆಗೆ 'ಕಾಯಕದ ಸ್ವಾಮಿ' ಎಂಬ ಒಂದು ಸಂಸ್ಥೆಯನ್ನು ರೂಪಿಸಿದ ಅದ್ವಿತೀಯ, ಅಮೂಲ್ಯಕೀರ್ತಿಯು ವೀರಶೈವಧರ್ಮಕ್ಕೆ ಸೇರಿದೆ ಎಂದರೆ, ಅದು ಉತ್ಪ್ರೇಕ್ಷೆಯಲ್ಲ. ಆದುದರಿಂದ ವೀರಶೈವ ಸಮಾಜದಲ್ಲಿ ಮಠಗಳ ಪಾತ್ರವು ಅದ್ವಿತೀಯವಾಗಿದೆ. ಇಂಗ್ಲೀಷ್ ಭಾಷೆಯಲ್ಲಿ ಮಠಕ್ಕೆ 'ಮಾನೆಸ್ಟ್ರಿ' ಎಂಬ ಪದವಿದೆ. ಈ ಪದವು ಗ್ರೀಕಿನ uovos ಎಂಬ ಶಬ್ದ

ದಿಂದ ಬಂದ ಲಾಟಿನ್ ಭಾಷೆ ಮೊನೇಚಸ್ (monachus) ಎಂಬ ಪದವಾಯಿತು. ಇದರಿಂದ ಮೊನೇಕ ಮತ್ತು ಮೋನಾಕಿಟಿಸ್ ಎಂಬ ಶಬ್ದಗಳು ಬಂದಿವೆ. ಈ ಶಬ್ದಗಳು ಏಕಾಂತತೆ ಅಥವಾ ಮುಕ್ತತೆ ಎಂಬ ಅರ್ಥವನ್ನು ಕೊಡುತ್ತವೆ. ಇದರಿಂದ ಒಂಟಿಜೀವನವೆಂಬ ಭಾವನೆ ಬರುವುದು ಸಹಜ. 'ಇದು ಮರಳುಕಾಡಿನ ಒಂಟಿ ಜೀವನವಲ್ಲ. ಸಂನ್ಯಾಸಿಗಳು ಪ್ರಾಪಂಚಿಕ ವ್ಯವಹಾರಗಳಿಂದ ದೂರವಾಗಿ, ಅವರುಗಳು ಒಟ್ಟಿಗೆ ಗುಂಪಿನಲ್ಲಿ ಜೀವಿಸುವುದು. ಸಂನ್ಯಾಸಿಗಳ ಮಠದ ವಾಸವು ವೈರಾಗ್ಯ ಮತ್ತು ತಪಶ್ಚರ್ಯೆಗಳೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿ ಬೆಳೆದುಬಂದಿದೆ. ಡಾ॥ ಜೇಮ್ಸ್ ಹಾರಿಸನ್‌ರವರು ತಿಳಿಸಿರುವಂತೆ ವಿರಕ್ತ ಅಥವಾ ತಪಸ್ವಿ ಎಂಬ ಪದದ ಗ್ರೀಕ್‌ಮೂಲದ ಅರ್ಥ ಸದ್ಗುಣಗಳಲ್ಲಿ ಶಿಕ್ಷಣ ಪಡೆದವನು. 'ತಪಸ್ವಿ' ಎಂದರೆ ಶರೀರವನ್ನು ಹಿಂಸಿಸುವುದರಲ್ಲಿ ತರಪೇತಾದವನಲ್ಲ. ಆತನು ಸದ್ಗುಣಗಳಲ್ಲಿ ಶಿಕ್ಷಿತನಾದವನು. ಆ ಶಿಕ್ಷಣದ ಗುರಿ, ಎರಡು ಒಳ್ಳೆಯವುಗಳಲ್ಲಿ ಕಿರಿದಾದುದನ್ನು ಬಿಟ್ಟು ಹಿರಿದಾದ ಒಳ್ಳೆಯದನ್ನು ಆರಿಸಿಕೊಳ್ಳುವ ಶಕ್ತಿ.' ಪೌರಸ್ತ್ಯ ಮತ್ತು ಪಾಶ್ಚಾತ್ಯ ದೇಶಗಳೆರಡರಲ್ಲೂ ಅನೇಕ ವಿರಕ್ತರು ಶರೀರವನ್ನು ಅಲಕ್ಷಿಸಿ ಹಿಂಸಿಸುವುದರಿಂದ ಧಾರ್ಮಿಕ ಗುರಿಯ ಸಾಧನೆಗೆ ಸಹಾಯಕವಾಗುವುದೆಂದು ನಂಬಿರುವರು. ಆದುದರಿಂದ ಅವರುಗಳು ತಮ್ಮ ಶರೀರವು ಕಷ್ಟಗಳನ್ನು ಅನುಭವಿಸಲು ಅನುಕೂಲವಾಗುವಂತೆ ತರಪೇತಿಯನ್ನು ಕೊಡುತ್ತಿದ್ದರು. ಇದು ವಿವಿಧ ಧರ್ಮಗಳ ಸಂನ್ಯಾಸಿಗಳು ಅನುಸರಿಸುತ್ತಿದ್ದ ನಡೆವಳಿಕೆ. ಗೇಡನ್‌ರವರು ತಿಳಿಸಿರುವಂತೆ ಸಂನ್ಯಾಸಿಗಳು ಕಬ್ಬಿಣದ ಮೊಳೆಗಳ ಮೇಲೆ ನಿಂತು ಧ್ಯಾನಮಾಡುವುದು, ಒಂದು ಕಾಲಿನ ಮೇಲೆ ನಿಂತು ಧ್ಯಾನಮಾಡುವುದು, ಎರಡು ಕೈಗಳನ್ನು ಮೇಲಕ್ಕೆ ಎತ್ತಿಹಿಡಿದು, ಅವುಗಳು ಬತ್ತಿಹೋಗಿ ಕೆಳಗೆ ತರಲಾಗದಂತೆ ಆಗುವವರೆಗೂ ಧ್ಯಾನಮಾಡುತ್ತಿರುವುದು ಮೊದಲಾದ ಅಭ್ಯಾಸಗಳು ತೀರಾ ಸಾಧಾರಣವಾದ ವಿಷಯಗಳು. ಪಾಶ್ಚಾತ್ಯ ಸಂನ್ಯಾಸಿಗಳಲ್ಲಿ ಹಲವರು ನಾಲ್ಕು ಕಡೆಯೂ ಸಂಪೂರ್ಣವಾಗಿ ಮುಚ್ಚಿದ ಗೋಡೆಗಳಿರುವ, ಒಂದು ಸಣ್ಣ ಕೊಠಡಿಯಲ್ಲಿ ವಾಸಿಸುತ್ತಾ, ಕೇವಲ ಒಂದು ಸಣ್ಣ ಕಿಟಕಿಯ ಮೂಲಕ, ಹೊರಗಿನವರು ಕೊಟ್ಟದ್ದನ್ನು ಸ್ವೀಕರಿಸುತ್ತಾ ತಮ್ಮ ಜೀವನವನ್ನು ಧ್ಯಾನದಲ್ಲಿ ಕಳೆದರೆ, ಮತ್ತೆ ಕೆಲವರು ತಮ್ಮ ದೇಹವನ್ನು ಭಾರವಾದ ಸರಪಣಿಗಳಿಂದ ಬಂಧಿಸಿಕೊಂಡಿರುತ್ತಿದ್ದರು. ಹೀಗೆ ವಿರಕ್ತತೆಗೂ ದೇಹದಂಡನೆಗೂ ಸಂಬಂಧವನ್ನು ಕಲ್ಪಿಸಿಕೊಂಡು ಜೀವಿಸುತ್ತಿದ್ದ ಸಂನ್ಯಾಸಿಗಳಿದ್ದರು.

ವೀರಶೈವ ಮಠಗಳ ಪಾರಂಪರ್ಯದ ಮಹತ್ವವನ್ನು ನಿರೂಪಿಸುವುದಕ್ಕೆ ಮೊದಲು, ಹಿಂದೂಧರ್ಮದಲ್ಲಿ ಇರುವ ಮಠಗಳ ಪಾರಂಪರ್ಯವನ್ನು ವಿವೇಚಿಸಿದ ಕೆರ್ನನ ಒಂದು ಮಹತ್ವಪೂರ್ಣ ಹೇಳಿಕೆಯನ್ನು ಗಮನಿಸುವುದು ಮುಖ್ಯ. 'ಅನೇಕ ದೇಶಗಳಲ್ಲಿ, ವಿವಿಧ ಕಾಲಗಳಲ್ಲಿ ಸಮಾಜದ ಸ್ಥಿತಿಗತಿಗಳನ್ನು ನೋಡಿ, ಅವುಗಳು ನಿರೀಕ್ಷಿತ ಉದಾತ್ತಭಾವನೆಗಳನ್ನು ಪ್ರತಿಬಿಂಬಿಸದೇ ಇರುವುದರಿಂದ ಅತೃಪ್ತರಾಗಿ ಜನಜಂಗುಳಿಯ, ದಿನವಹಿ ಲೌಕಿಕ ಜೀವನದ ಗೊಂದಲ ಕಷ್ಟಕಾರ್ಪಣ್ಯಗಳು, ಕ್ಷಣಿಕ ಸಂತೋಷಗಳು, ಪ್ರಪಂಚದಲ್ಲಿ ಎಡಬಿಡದೆ ಕಾಣಬರುವ ದುಷ್ಟ ನಡವಳಿಕೆಯಿಂದ ದೂರವಾಗಿದ್ದು ಮನಶ್ಶಾಂತಿಯನ್ನು ಪಡೆಯಲು ಉದಾತ್ತಜೀವಿಗಳು ಅಪೇಕ್ಷಿಸಿರುವರು. ಈ ರೀತಿಯ ಏಕಾಂತತೆಯ ಉದ್ದೇಶಸಾಧನೆಗೆ ಭಾರತದಲ್ಲಿ ಕಾಣಬರುವ ಅನುಕೂಲಗಳು ಇನ್ನಾವ ದೇಶದಲ್ಲಿಯೂ ಇಲ್ಲ. ವಾಯುಗುಣ, ಸಂಸ್ಥೆಗಳು, ತಪಸ್ಸಿನ ಮನೋಭಾವ ಇವುಗಳೆಲ್ಲವೂ ಮುಕ್ತಿಯನ್ನು ಪಡೆಯಲು ಬೇಕಾಗುವ ಪರಿಸರವನ್ನು ಒದಗಿಸುತ್ತವೆ. ಜೀವನದ ಅತ್ಯುನ್ನತ ಗುರಿಯನ್ನು ಸಾಧಿಸಲು ಅಗತ್ಯವೆಂಬ ಭಾವನೆಯನ್ನು ಹೊಂದಿ ಪ್ರಾಪಂಚಿಕ ಜೀವನವನ್ನು ತ್ಯಜಿಸಿ, ಶಾಂತವಾದ ಶ್ರದ್ಧಾಭಕ್ತಿಗಳನ್ನು ಪ್ರೇರೇಪಿಸುವ ತಪಸ್ಸಿನಲ್ಲಿ ನಿರತರಾಗಿ, ಸ್ವಲ್ಪ ಮಟ್ಟಿಗೆ ದೇಹದಂಡನೆಯಲ್ಲಿ ತೊಡಗುತ್ತಿದ್ದುದು ಕಾಣಬರುತ್ತದೆ.'

ವೀರಶೈವ ಮಠಗಳ ಪಾರಂಪರ್ಯವನ್ನು ಅರಿಯಲು, ಭಾರತದಲ್ಲಿದ್ದ ವಿವಿಧ ಮಠಗಳ ವ್ಯವಸ್ಥೆಯನ್ನು ಸ್ಥೂಲವಾಗಿ ನಿರೂಪಿಸುವುದು ಅಗತ್ಯ. ಇದರಿಂದ ವೀರಶೈವ ಮಠಗಳ ವ್ಯವಸ್ಥೆಯು ಹಿಂದಿನಿಂದ ಯಾವುದನ್ನು ಅನುಸರಿಸಿ, ಬದಲಾದ ಸನ್ನಿವೇಶಗಳಿಗೆ ಅಳವಡಿಸಿಕೊಂಡು, ತನ್ನದೇ ಆದ ವ್ಯಕ್ತಿತ್ವವನ್ನು ಉಳಿಸಿಕೊಂಡು ಬಂದಿರುವ ಬಗೆಯನ್ನು ಅರಿಯಲು ಸಾಧ್ಯವಾಗುತ್ತದೆ. ಈ ಉದ್ದೇಶದಿಂದ ಭಾರತದ ಮಠಗಳ ಪಾರಂಪರ್ಯವನ್ನು ವಿಶಾಲವಾಗಿ ಮೂರು ವಿಭಾಗಗಳಾಗಿ ವಿಂಗಡಿಸಬಹುದು, (ಅ) ಬೌದ್ಧಮಠದ ಹಿಂದಿನ ಹಿಂದೂಮಠಗಳ ವ್ಯವಸ್ಥೆ, (ಆ) ಬೌದ್ಧಮಠಗಳ ವ್ಯವಸ್ಥೆ,(ಇ) ಬೌದ್ಧ ಮಠದ ತರುವಾಯದ ಹಿಂದೂಮಠಗಳ ವ್ಯವಸ್ಥೆ.

ಪುರಾತನ ಭಾರತದ ಸಂನ್ಯಾಸಿಗಳು ಕೆಲವರು ನೈಷ್ಠಿಕ ಬ್ರಹ್ಮಚಾರಿಗಳು. ಇವರು ಸಣ್ಣ ವಯಸ್ಸಿನಲ್ಲಿ ಸಂನ್ಯಾಸವನ್ನು ಸ್ವೀಕರಿಸಿ, ವಿದ್ಯಾರ್ಜನೆಗೆ ಹೆಚ್ಚು ಗಮನ ಕೊಟ್ಟು ತಪಸ್ಸಿನಲ್ಲಿ ನಿರತರಾಗಿರುತ್ತಿದ್ದರು. ಎರಡನೆಯ ಬಗೆಯ ಸಂನ್ಯಾಸಿಗಳು. ಹಿಂದೂ ಆಶ್ರಮ ವ್ಯವಸ್ಥೆಯಲ್ಲಿ ಕೊನೆಯ ಹಂತದಲ್ಲಿದ್ದವರು. ಋಗ್ವೇದದಲ್ಲಿ 'ಮುನಿ' ಎಂಬ ಪದವು ಕಾಣಬರುತ್ತದೆ. ಮುನಿ ಎಂಬ ಪದದ ಮೂಲಶಬ್ದವು 'ಮನನ,' ಇದರ ಅರ್ಥ ಚಿಂತನ,ಧ್ಯಾನ. ಮುನಿಯು ಅತ್ಯುನ್ನತ ಆಧ್ಯಾತ್ಮಿಕ ಸ್ಥಿತಿಯನ್ನು ಗಳಿಸಿದ ವ್ಯಕ್ತಿ. 'ಯತಿ' ಎಂಬ ಇನ್ನೊಂದು ಶಬ್ದವು ಋಗ್ವೇದದಲ್ಲಿ ಉಪಯೋಗಿಸಲ್ಪಟ್ಟಿದೆ. ಇದರ ಅರ್ಥವು 'ಸಂಯಮ' ಎಂದು. ಪ್ರಾಜ್ಞರ ಅಭಿಪ್ರಾಯದಲ್ಲಿ ಈ ಎರಡು ಶಬ್ದಗಳನ್ನೂ ಆಶ್ರಮ ವ್ಯವಸ್ಥೆಯ ಕೊನೆಯ ಹಂತದಲ್ಲಿರುವ ವ್ಯಕ್ತಿಗಳಿಗೆ

ಅನ್ವಯಿಸಲಾಗಿದೆ. ಮುನಿ ಮತ್ತು ಯತಿಗಳು ಪುರಾತನ ಕಾಲದಲ್ಲಿ ನೆಲೆ ಇಲ್ಲದೆ ಅಲೆದಾಡುವ ಸಂನ್ಯಾಸಿಗಳಾಗಿದ್ದರು. ಒಟ್ಟಿನಲ್ಲಿ 'ಗೇಡನ್ನ'ನು ತಿಳಿರುವಂತೆ ಆ ಕಾಲದ ಹಿಂದೂ ಸಂನ್ಯಾಸಿಗಳು ವಿರಕ್ತರು, ನಿಸ್ಸಂಗಿಗಳು. ಅವರು ವಿಚಾರಗಳನ್ನು ತಿಳಿಯಲು ಅಪೇಕ್ಷಿಸಿ ಬಂದವರಿಗೆ ಬೋಧಿಸುತ್ತಿದ್ದರು. ಆಗಿನ ಕಾಲದ ವಿದ್ಯಾಸಂಸ್ಥೆಗಳು ಗುರುಕುಲವೆಂಬ ಹೆಸರಿನಿಂದ ಪ್ರಸಿದ್ಧವಾಗಿದ್ದವು. ಅಲ್ಲಿನ ಗುರುಗಳು ಗೃಹಸ್ಥ ಅಥವಾ ವಾನಪ್ರಸ್ಥಾಶ್ರಮಕ್ಕೆ ಸೇರಿದವರಾಗಿದ್ದರು.

**ಬೌದ್ಧ ಮಠಗಳು :** ಬೌದ್ಧಧರ್ಮದಲ್ಲಿ ಮಠಗಳಿಗೆ ಅತ್ಯುನ್ನತವಾದ ಸ್ಥಾನವನ್ನು ನೀಡಲಾಗಿದೆ. ಬೌದ್ಧಸಂನ್ಯಾಸಿಯನ್ನು ಪರಿವ್ರಾಜಕನೆಂದು ಕರೆಯಲಾಗಿದೆ. ಬೌದ್ಧಸಂನ್ಯಾಸಿಗಳ ವ್ಯವಸ್ಥೆಯನ್ನು 'ಸಂಘ'ವೆಂದು ಕರೆಯಲಾಗಿದೆ. ಬೌದ್ಧಸಂಘವನ್ನು ಒಬ್ಬ ಮನುಷ್ಯನು ತನ್ನ ಕೈಯಲ್ಲಿ ಕಮಲವನ್ನು ಹಿಡಿದುಕೊಂಡು, ಸ್ವಚ್ಛತೆಯ ಚಿಹ್ನೆಯಾಗಿರುವಂತೆ ಚಿತ್ರಿಸಲಾಗಿದೆ. ಬೌದ್ಧಮಠಗಳನ್ನು ವಿಹಾರಗಳೆಂದು ಕರೆಯಲಾಗಿದೆ. ಭಿಕ್ಷುವು ಸಂಚಾರಿ. ಅವನಿಗೆ ಗೊತ್ತಾದ ಒಂದು ನೆಲೆಯಿಲ್ಲ. ಆತನು ಭಕ್ತರ ಔದಾರ್ಯದ ಮೇಲೆ ತನ್ನ ಜೀವನವನ್ನು ಸಾಗಿಸುತ್ತಾನೆ. ಆಹಾರ, ಉಡುಪು, ವಾಸಸ್ಥಾನಗಳಲ್ಲಿ ಸರಳತೆಗೆ ಹೆಚ್ಚು ಮಾನ್ಯತೆಯನ್ನು ಕೊಡಲಾಗಿದೆ. ಬ್ರಹ್ಮಚರ್ಯ, ಜಿತೇಂದ್ರಿಯತ್ವ ಮತ್ತು ಬಡತನಗಳಿಗೆ ಶ್ಲಾಘನೀಯ ಸ್ಥಾನವನ್ನು ಕೊಡಲಾಗಿದೆ. 'ಪಕ್ಷಿಯು ಹಾರುವಾಗ ಕೇವಲ ತನ್ನ ರೆಕ್ಕೆಗಳನ್ನು ಮಾತ್ರ ತೆಗೆದುಕೊಂಡು ಹೋಗುವಂತೆ ಭಿಕ್ಷುವು ತಾನು ತೊಟ್ಟಿರುವ ಉಡಿಗೆ, ತನ್ನ ಶರೀರದಲ್ಲಿರುವ ಆಹಾರ ಇವುಗಳನ್ನು ತಾನು ಹೋದಲ್ಲಿಗೆ ತೆಗೆದುಕೆಂಡು ಹೋಗುತ್ತಾನೆ, ಇವುಗಳೇ ಅವನ ಸ್ವತ್ತು'. ಶಾರೀರಿಕ ಸ್ವಚ್ಛತೆ ಮತ್ತು ಸರಳ ಉಡುಪಿಗೆ ಮಾನ್ಯತೆಯನ್ನು ಕೊಟ್ಟಿತು. ಜ್ಞಾನದೀವಿಗೆಯು ಉತ್ತಮವಾದ ಬೆಳಕನ್ನು ಕೊಡಬೇಕಾದರೆ, ಅದನ್ನು ಸ್ವಚ್ಛವಾಗಿರಿಸುವುದು ಅಗತ್ಯ. ಬಡತನದ ಆಣತಿಯು ಕೇವಲ ವ್ಯಕ್ತಿಗೆ ಮಾತ್ರ ಸೀಮಿತವಾದ ಆಣತಿಯೆ ಹೊರತು ಸಂಘಕ್ಕಲ್ಲ. ಬೌದ್ಧವಿಹಾರಗಳಿಗೆ ಅನೇಕ ಜಹಗೀರಿಗಳಿದ್ದವು. ಧಾರ್ಮಿಕ ವಿಚಾರಗಳಲ್ಲಿ ಸೂಕ್ತವಾದ ತಿಳುವಳಿಕೆಯನ್ನು ಕೊಡುವುದು ಬೌದ್ಧಮಠಗಳ ಪ್ರಮುಖ ಕಾರ್ಯವಾಗಿದ್ದಿತು. ಕಾಲಕ್ರಮದಲ್ಲಿ ಬೌದ್ಧವಿಹಾರಗಳು ಶೈಕ್ಷಣಿಕ ಸಂಸ್ಥೆಗಳಾಗಿ ಪರಿವರ್ತನೆಗೊಂಡುವು. ಇದುಬೌದ್ಧ ಮತದ ಅಮೂಲ್ಯ ಕೊಡುಗೆ. ಹೀಗೆ ಶೈಕ್ಷಣಿಕ ಸಂಸ್ಥೆಗಳಾಗಿ ಪರಿವರ್ತಿಸಲ್ಪಟ್ಟ ವಿಹಾರಗಳಲ್ಲಿ ನಲಂದ, ವಲ್ಲಭಿ, ವಿಕ್ರಯಶೀಲ, ಜಗ್ಗದ್ದಲ ಇವುಗಳು ಪ್ರಸಿದ್ಧವಾದವು.

ಬೌದ್ಧಮಠಗಳ ವ್ಯವಸ್ಥೆಯ ಪರಿಶೀಲನೆಯಲ್ಲಿ ಒಂದು ವಿಚಾರವನ್ನು ಗಮನಿಸುವುದು ಸೂಕ್ತ ವಿಹಾರಗಳು ಲೌಕಿಕರ ಔದಾರ್ಯದ ಆಧಾರದ ಮೇಲೆ ಆಶ್ರಯವನ್ನು ಪಡೆದಿದ್ದರೂ, ಲೌಕಿಕ ಜೀವನದ ಉತ್ತಮ ವ್ಯವಸ್ಥೆಗೆ ಗಮನ ಕೊಡಲಿಲ್ಲ. ಇದಕ್ಕೆ ಕಾರಣ ಲೌಕಿಕ ಜೀವನವು ಅಪವಿತ್ರವೆಂಬ ಭಾವನೆಯನ್ನು ಹೊಂದಿದುದು. ಅವರು ನಿಜವಾದ ಸ್ವಾತಂತ್ರ್ಯ ಲಭಿಸುವುದು ಮನೆಯನ್ನು ತೊರೆದಾಗಲೇ ಎಂಬ ಭಾವನೆಯನ್ನು ಬೆಳಸಿಕೊಂಡು ಬಂದಿದ್ದರು. ಎ. ಎಸ್. ಗೇಡನ್ನನು 'ಭಕ್ತರ ಲೌಕಿಕ ಜೀವನದ ಕಡೆ ಅಲಕ್ಷ್ಯವನ್ನು ತೋರಿದುದು ಭಾರತದಲ್ಲಿ ಬೌದ್ಧಮತದ ಕ್ಷೀಣತೆಗೆ ಪ್ರಮುಖ ಕಾರಣಗಳಲ್ಲೊಂದೆಂದು' ತಿಳಿಸಿರುವನು. ವೀರಶೈವ ಧರ್ಮವು ಬೌದ್ಧಮತದ ಜ್ಞಾನಪ್ರಸಾರ ಪರಂಪರೆಯನ್ನು ರಕ್ಷಿಸಿಕೊಂಡು ವಿಸ್ತರಿಸಿದರೂ, ಅದು ಬೌದ್ಧಧರ್ಮದ ಲೌಕಿಕ ಪಾರಮಾರ್ಥಿಕ ಸಂಬಂಧಗಳನ್ನು ಅನುಸರಿಸದೆ ತನ್ನ ವಿಶಿಷ್ಟತೆಯನ್ನು ಉಳಿಸಿಕೊಂಡಿದೆ.

**ಬೌದ್ಧ ಮತದ ತರುವಾಯದ ಹಿಂದೂಮಠಗಳು :** ಕ್ರಿ.ಶ. ಎಂಟನೆಯ ಶತಮಾನದವರೆಗೆ ಭಾರತದಲ್ಲಿ ಪಾಶುಪತರು, ಕಾಪಾಲಿಕರು, ಕಾಳಾಮುಖರು ಮತ್ತು ಜೈನಬೌದ್ಧಸಂನ್ಯಾಸಿಗಳಿದ್ದರು. ಕಾಪಾಲಿಕರು ಮತ್ತು ಪಾಶುಪತರು ಶೈವ ದೇವಾಲಯಗಳಲ್ಲಿ ವಾಸಿಸುತ್ತಿದ್ದರು. ಇವರಲ್ಲದೆ ಏಕಾಂಗಿಗಳಾಗಿ ವಾಸಿಸುತ್ತಿದ್ದ ವಿರಕ್ತರೂ ಇದ್ದರು. ಈ ಕಾಲದಲ್ಲಿ ಅತ್ಯುನ್ನತ ವಿರಕ್ತ ಸಂನ್ಯಾಸಿಯೊಬ್ಬರು ಭಾರತದ ದಿಗಂತದಲ್ಲಿ ಉದಯಿಸಿದರು. ಅವರೇ ಶಂಕರಾಚಾರ್ಯರು ಅವರು ನೈಷ್ಠಿಕ ಬ್ರಹ್ಮಚಾರಿಗಳು. ಅವರು ಭಾರತದಲ್ಲೆಲ್ಲಾ ಸಂಚರಿಸಿ,ಅನೇಕ ತತ್ತ್ವವಾದಗಳಲ್ಲಿ ಮತ್ತು ಗೋಷ್ಠಿಗಳಲ್ಲಿ ಭಾಗವಹಿಸಿದ್ದರು. ಅಲ್ಲದೆ ಅನೇಕ ಉದ್ಗ್ರಂಥಗಳನ್ನು ಬರೆದರು. ಭಾರತದ ಸುಪ್ರಸಿದ್ಧ ಸಮಾಜಶಾಸ್ತ್ರಜ್ಞರಾದ ಡಾ॥ ಘುರಿಯೇರ ಮಾತಿನಲ್ಲಿ 'ಈ ಅಪೂರ್ವ ಕರುಣ ಪ್ರಜ್ಞಾಶಾಲಿಯ ಕಾರ್ಯಕ್ಷೇತ್ರ ಬರವಣಿಗೆ, ತಾತ್ವಿಕ ವಿವೇಚನೆ, ಗೋಷ್ಠಿಗಳು, ಸಂಚಾರ ಮತ್ತು ಮಠಗಳ ವ್ಯವಸ್ಥೆ ಇವುಗಳಿಂದೊಡಗೂಡಿತ್ತು'. ಶಂಕರಾಚಾರ್ಯರು ಮಠಗಳ ಅಗತ್ಯವನ್ನು ಅರಿತು ಭಾರತದ ವಿವಿಧ ದಿಕ್ಕುಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಪಶ್ಚಿಮದಲ್ಲಿ ದ್ವಾರಕ, ಪೂರ್ವದಲ್ಲಿ ಪುರಿ, ಉತ್ತರದಲ್ಲಿ ಬದರಿ, ದಕ್ಷಿಣದಲ್ಲಿ ಶೃಂಗೇರಿ ಮೊದಲಾದ ಸ್ಥಳಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಇದರ ಉದ್ದೇಶ ಎರಡು. ಮೊದಲನೆಯದಾಗಿ ಹಿಂದೂಧರ್ಮದ ಹೆಸರಿನಲ್ಲಿದ್ದ ಅನೇಕ ಕೀಳಾದ ಪದ್ಧತಿಗಳ ಮೂಲೋತ್ಪಾಟನೆ. ಎರಡನೆಯದಾಗಿ ಹಿಂದೂ ಧರ್ಮದ ತತ್ತ್ವಗಳ ಪ್ರಚಾರ. ಕಾಲಕ್ರಮೇಣ ವಿವಿಧ ಸ್ಥಳಗಳಲ್ಲಿ ಶಂಕರರು ಮಠಗಳನ್ನು ಸ್ಥಾಪಿಸಿದರು. ಅತಿಥಿಅಭ್ಯಾಗತರ ಸತ್ಕಾರವೂ ಸಹ ಈ ಮಠಗಳ ಕಾರ್ಯಕ್ಷೇತ್ರದಲ್ಲಿ ಸೇರಿದವು.

**ವೀರಶೈವ ಮಠಗಳು :** ವೀರಶೈವ ಮಠಗಳ ನಿರೂಪಣೆಯು ಪ್ರಮುಖವಾಗಿ ಸಾಮಾಜಿಕ ದೃಷ್ಟಿಯಿಂದ ಕೂಡಿದ ಸಮಗ್ರ ನಿರೂಪಣೆ. ಆದುದರಿಂದ ವೀರಶೈವ ಮಠಗಳ ಉಗಮವನ್ನು ಪ್ರಾಸಂಗಿಕವಾಗಿ ತಿಳಿಸಿ, ಹಲವು ಪ್ರಮುಖ ಶಾಸನಗಳ

ಆಧಾರವನ್ನು ಕೊಡಲಾಗಿದೆ. ಮಠಗಳ ಕಾರ್ಯಕ್ಷೇತ್ರದ ನಿರೂಪಣೆಗೆ ಅನುಕೂಲವಾಗುವಂತೆ ವೀರಶೈವ ಧರ್ಮದಲ್ಲಿ ಕಾಣ ಬರುವ ವಿಶಿಷ್ಟ ಲಕ್ಷಣಗಳನ್ನು ಸ್ಥೂಲವಾಗಿ ತಿಳಿಯುವುದು ಸೂಕ್ತ.

ಇಹಪರಗಳ ಪ್ರತ್ಯೇಕತೆಯು ಹಿಂದಿನ ಎಲ್ಲಾ ಧರ್ಮಗಳಲ್ಲಿಯೂ ಹೆಚ್ಚಾಗಿ ಪ್ರಸ್ತಾಪಿಸಲ್ಪಟ್ಟು, ಪರಜೀವನಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡುತ್ತಿದ್ದರು. ಲೌಕಿಕ ಜೀವನ ಅನಿವಾರ್ಯ. ಆದರೆ ವ್ಯಕ್ತಿಯ ಗುರಿ ಜೀವನ್ಮುಕ್ತಿ. ಆದುದರಿಂದ ಲೌಕಿಕ ಜೀವನಕ್ಕೆ ಅಲ್ಲಿ ಪ್ರಾಮುಖ್ಯತೆಯು ಸಲ್ಲಲಿಲ್ಲ. ಆದರೆ ವೀರಶೈವ ಧರ್ಮದಲ್ಲಿ ಇಹಪರ ವ್ಯತ್ಯಾಸಗಳ ಗೊಂದಲವಿಲ್ಲ. ಇದರ ಗುರಿ ಇಹಪರ ಸಮನ್ವಯ ಸಾಧನೆಯೇ ಆಯಿತು. ಜೀವನೋತ್ಕರ್ಷವೇ ಧರ್ಮದ ಗುರಿಯೆಂದು ವಚನಕಾರರು ಭಾವಿಸಿದರು. ಆದುದರಿಂದ ಲೌಕಿಕ ಜೀವನವು ಒಂದು ಶ್ರೇಯೋವಕಾಶ. ಲೌಕಿಕ ಜೀವನವು ಆಧ್ಯಾತ್ಮಿಕ ಜೀವನದಿಂದ ಪ್ರತ್ಯೇಕವಾದುದಲ್ಲ. ಇಹಲೋಕದ ಕರ್ತಾರನ ಕಮ್ಮಟದಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂದು ಬಸವಣ್ಣನವರು ತಿಳಿಸಿದರು. ಇದು ಅಪೂರ್ವ ನಿಲುವು. ಜೀವನವು ಅವ್ಯಾಹತವಾದುದು. ಅದನ್ನು ಸಂಪದಯುಕ್ತವನ್ನಾಗಿ ಮಾಡಬೇಕೆಂಬುದು ಅವರ ಆಣತಿ.

ಎರಡನೆಯ ವಿಶಿಷ್ಟ ಲಕ್ಷಣವು, ಮನುಷ್ಯನ ಶರೀರವನ್ನು ಆರೋಗ್ಯಕರವಾಗಿ ಇಡುವ ಅಗತ್ಯವನ್ನು ಸ್ಪಷ್ಟವಾಗಿ ತಿಳಿಸಿದುದು. ದೇಹದಂಡನೆಯು ಆತ್ಮಸಾಕ್ಷಾತ್ಕಾರಕ್ಕೆ ದಾರಿಯಲ್ಲ. 'ಹುತ್ತವ ಬಡಿದರೆ ಹಾವು ಸಾಯಬಲ್ಲುದೆ ಅಯ್ಯ?' ಎಂದು ಹೇಳಿ, ದೇಹದ ಒಳಗಿರುವ ಮನಸ್ಸಿನ ಮೇಲೆ ಹತೋಟಿಯನ್ನು ಸ್ಥಾಪಿಸುವ ಅಗತ್ಯವನ್ನು ತಿಳಿಸಿದರು. ಮನಸ್ಸಿನಲ್ಲಿ ಮೂಡಿ ಬಂದಿರುವ ಸ್ವಾರ್ಥಗಳನ್ನು ನಿಯಂತ್ರಿಸಿ ಕಳೆಯುವುದೇ ನಿಜವಾದ ತಪಸ್ಸು, ಗುರುವೂ ದೇಹದಂಡನೆಮಾಡಿ ತನ್ನ ಆಹಾರವನ್ನು ಗಳಿಸಬೇಕೆಂದು ವಚನಕಾರರ ನಿಷ್ಠುರವಾದ ಆಣತಿ. ಕಾಯಕವು ಪ್ರತಿಯೊಬ್ಬ ವೀರಶೈವನಿಗೂ ಅಗತ್ಯ. 'ಕಾಯಕ' ಎಂಬ ಪದವು 'ಕಾಯ' ಎಂಬ ಪದದಿಂದ ಬಂದುದು. ಕಾಯ ಎಂದರೆ ಶರೀರ. ಮನುಷ್ಯನು ಸ್ವಶ್ರಮದಿಂದ ತನ್ನ ಜೀವನವನ್ನು ಸಾಗಿಸಬೇಕು. ವಚನಕಾರರು ಕರ್ಮ ಎಂಬ ಪದವನ್ನು ವಿಶಾಲವಾದ ಅರ್ಥದಲ್ಲಿ ಉಪಯೋಗಿಸದೆ. ಒಂದು ವಿಶಿಷ್ಟ ಅರ್ಥದಲ್ಲಿ ಉಪಯೋಗಿಸಿದರು. 'ಇಲ್ಲಿ ಕರ್ಮ ಎಂದರೆ, ತನ್ನ ಮತ್ತು ಸಮಾಜದ ಧಾರಣೆ ಹಾಗೂ ವಿಕಾಸಕ್ಕೆ, ಸ್ವಶಕ್ತಿ ಹಾಗೂ ಪರಿಸ್ಥಿತಿ ಇವುಗಳಿಗೆ ಅನುಗುಣವಾಗಿ ಪ್ರತಿಯೊಬ್ಬನೂ ಮಾಡತಕ್ಕ ಕರ್ತವ್ಯ'. ಕರ್ಮವು ಮನುಷ್ಯನ ಕ್ರಿಯಾಶಕ್ತಿ, ನಿರ್ಮಲ ನಿರ್ಣಯಾಶಕ್ತಿ ಮತ್ತು ಉತ್ಸಾಹಯುತವಾಗಿ ಕಾರ್ಯದಲ್ಲಿ ತೊಡಗುವುದು ಇವುಗಳನ್ನು ಅವಲಂಬಿಸಿದೆ. ಸಾಮಾಜವಲ್ಲಿ ಯಾರೂ ಯಾರಿಗೂ ಭಾರವಾಗಿರಬಾರದೆಂಬುದೆ ವಚನಕಾರರ ಆಶಯ. ಸಂಪಾದನೆಯು ಶುದ್ಧವಾಗಿದ್ದು ಅದು ಸದ್ವಿನಿಯೋಗವಾದಾಗಲೇ ಅದು ಕಾಯಕ. ನುಲಿಯಚಂದಯ್ಯನ ಪ್ರಕಾರ ಗುರುವು ಸಹ ಜೀವನ್ಮುಕ್ತನಾಗಬೇಕಾದರೆ ಪವಿತ್ರಕಾಯಕವು ಅಗತ್ಯ. ವಿದ್ಯಾಪ್ರಸಾರ, ಅತಿಥಿಅಭ್ಯಾಗತರ ಸತ್ಕಾರಗಳನ್ನು ನೆರವೇರಿಸಬೇಕಾದರೆ, ಭಕ್ತರಲ್ಲಿಗೆ ಭಿಕ್ಷೆಗೆ ಹೋಗುವುದು ಅನಿವಾರ್ಯವಾಯಿತು. ತನ್ನ ಕರ್ತವ್ಯ ನಿರ್ವಹಣೆಯನ್ನು ಪೂರೈಸಲು ಭಿಕ್ಷೆಗೆ ಹೋಗಬೇಕಾಯಿತು. ಆತನು ಭಿಕ್ಷೆಯಿಂದ ತನ್ನ ಹೊಟ್ಟೆ ತುಂಬಿಸಿಕೊಳ್ಳುವುದಿಲ್ಲ; ಆತನ ಭಿಕ್ಷೆಯು ಇತರರ ಮೇಲ್ಮೆಗೋಸ್ಕರ; ಆಗ ಆತನ ಭಿಕ್ಷೆಯು ಕಾಯಕವಾಗುತ್ತದೆ. ಇದರಿಂದ ಕಾಯಕಕ್ಕೂ ಶರೀರ ಸ್ವಚ್ಛತೆಗೂ ಇರುವ ಸಂಬಂಧವು ವ್ಯಕ್ತವಾಗುತ್ತದೆ. ಶ್ರೀ ಎಸ್. ಎಸ್. ಬಸವನಾಳ ಮತ್ತು ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಹೇಳಿರುವಂತೆ 'ಮನುಷ್ಯ ಶರೀರವನ್ನು ದೇಗುಲವೆಂದು ಪರಿಗಣಿಸಿ, ಅದನ್ನು ಯಥೋಚಿತವಾಗಿಡಬೇಕೆಂಬ ಬಸವಣ್ಣನವರ ಮಾತು, ಅಂದಿನ ಅರ್ಥಹೀನ ಪ್ರಾಯಶ್ಚಿತ್ತ ರೂಪವಾದ ಕರ್ಮಗಳ ಬೆಂಗಾಡಿನಲ್ಲಿ ಆಹ್ಲಾದಕರವಾದ ವಸಂತದ ಗಾಳಿಯಂತಿದೆ.'

ವೀರಶೈವ ಮಠಗಳ ಉಗಮದ ವಿಚಾರವಾಗಿ ಎರಡು ಅಭಿಪ್ರಾಯಗಳಿವೆ. ಮೊದಲನೆಯದು ಸಾಂಪ್ರದಾಯಿಕವಾದ ನಂಬಿಕೆಗೆ ಸಂಬಂಧಿಸಿದುದು. ಐದು ಮಠಗಳನ್ನು ವೀರಶೈವಧರ್ಮದ ಪ್ರಚಾರದ ಸಲುವಾಗಿ ಐದುಮಂದಿ ಆಚಾರ್ಯರು ಸ್ಥಾಪಿಸಿದರು. ವೀರಶೈವ ಧರ್ಮವು ಪುರಾತನವಾದುದರಿಂದ ಆ ಮಠಗಳು ಪುರಾತನ ಕಾಲದಲ್ಲಿ ಸ್ಥಾಪಿತವಾದವು. ಈ ಐದು ಮಠಗಳು ಭಾರತದ ವಿವಿಧ ಭಾಗಗಳಲ್ಲಿ ಸ್ಥಾಪಿತವಾದವು. ಹಿಮಾಲಯ ಪರ್ವತಪ್ರದೇಶದಲ್ಲಿ ಕೇದಾರ, ಉತ್ತರದಲ್ಲಿ ಕಾಶಿ, ಪೂರ್ವದಲ್ಲಿ ಶ್ರೀಶೈಲ, ಪಶ್ಚಿಮದಲ್ಲಿ ರಂಭಾಪುರಿ, ದಕ್ಷಿಣದಲ್ಲಿ ಉಜ್ಜಯಿನಿ. ಹೀಗೆ ಸ್ಥಾಪಿಸಲ್ಪಟ್ಟ ಐದು ಮಠಗಳೂ ನಿರಂತರವಾಗಿ ವೀರಶೈವಧರ್ಮದ ಪ್ರಚಾರದಲ್ಲಿ ತೊಡಗಿದ್ದವು. ಸಾಂಪ್ರದಾಯಿಕ ನಂಬಿಕೆಯ ಪ್ರಕಾರ ಈ ಐದು ಮಠಗಳನ್ನು ಕ್ರಮವಾಗಿ ರೇವಣಸಿದ್ಧ, ವಿಶ್ವಾರಾಧ್ಯ, ಏಕೋರಾಮ, ಪಂಡಿತಾರಾಧ್ಯ ಮತ್ತು ಮರುಳಸಿದ್ಧರು ಸ್ಥಾಪಿಸಿದರೆಂದು ಹೇಳಲಾಗಿದೆ. ಕಲ್ಯಾಣದಲ್ಲಿ ಶೂನ್ಯಸಿಂಹಾಸನವು ೧೧೫೭ರಲ್ಲಿ ಸ್ಥಾಪಿತವಾದುದು ಐತಿಹಾಸಿಕ ವಿಷಯ. ಗೂಳೂರು ಸಿದ್ಧವೀರಣಾಚಾರ್ಯನ (೧೪೭೦) 'ಪ್ರಭುದೇವರ ಶೂನ್ಯ ಸಂಪಾದನೆ'ಯಲ್ಲಿ ಅನುಭವಮಂಟಪದಲ್ಲಿ ಚರ್ಚಿಸಲ್ಪಟ್ಟ ಧಾರ್ಮಿಕ ವಿಷಯಗಳ ವಿಶ್ಲೇಷಣೆಯು ಸ್ವಾರಸ್ಯಪೂರ್ಣವಾಗಿ ವರ್ಣಿತವಾಗಿದೆ. ಅಲ್ಲಮಪ್ರಭುವು ಕಲ್ಯಾಣದ ಶೂನ್ಯಸಿಂಹಾಸನವನ್ನು ಅಲಂಕರಿಸಿದ ಪ್ರಥಮ ವಿರಕ್ತಗುರು. ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ಜರುಗುತ್ತಿದ್ದ ಧಾರ್ಮಿಕಗೋಷ್ಠಿಯನ್ನು ಡಾ॥ ಕೆ. ಆರ್. ಶ್ರೀನಿವಾಸ

ಅಯ್ಯಂಗಾರ್ಯರು 'ಧಾರ್ಮಿಕ ಅನುಭಾವದ, ಸಂಶೋಧನಾತ್ಮಕ ಪ್ರೌಢಪಾಂಡಿತ್ಯದಿಂದೊಡಗೂಡಿದ ಸಂಸ್ಥೆ' ಎಂದು ವರ್ಣಿಸಿರುವುದು ಸೂಕ್ತವಾಗಿದೆ.

ವೀರಶೈವಧರ್ಮವು ಶೈವಧರ್ಮದ ಒಂದು ಶಾಖೆ ಎಂಬುದನ್ನು ನೆನಪಿನಲ್ಲಿಡುವುದಾದರೆ, ವೀರಶೈವ ಮಠಗಳಿಗೂ, ಉಳಿದ ಶೈವಮಠಗಳಿಗೂ ಇರುವ ನಿಕಟ ಸಂಬಂಧವು ಅರ್ಥವಾಗುತ್ತದೆ. ಪಾಶುಪತ ಪಂಥವು ಮಹಾಭಾರತದ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಶೈವಶಾಖೆ. ಲಕುಲೀಶ ಮತ್ತು ಕಾಳಾಮುಖರ ಮಠಗಳ ಹೆಸರುಗಳು ಹಲವು ಶಾಸನಗಳಲ್ಲಿ ಬಂದಿವೆ. ಅವುಗಳಿದ್ದ ಸ್ಥಳಗಳಲ್ಲಿ ಇಂದು ವೀರಶೈವ ಮಠಗಳಿವೆ. ಇದರಿಂದ ಹಲವು ವೀರಶೈವ ಮಠಗಳ ಮೂಲವು ಶೈವಶಾಖಾಮಠಗಳೆಂಬುದು ಸ್ಪಷ್ಟವಾಗುತ್ತದೆ. ಬಸವಣ್ಣನವರ ಹಿಂದಿನ ಕಾಲದಿಂದಲೂ ಕರ್ನಾಟಕದಲ್ಲಿ ಪಾಶುಪತರ ಮತ್ತು ಕಾಳಾಮುಖರ ಮಠಗಳಿದ್ದುದು, ಶಾಸನಗಳಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿ ಲಾಕುಲೀಶರ ಪ್ರಭಾವವು ಕ್ರಿ.ಶ. ೭ನೆಯ ಶತಮಾನದಲ್ಲಿ ಪ್ರಾರಂಭವಾಗಿ ೧೧ ರಿಂದ ೧೩ನೆಯ ಶತಮಾನಗಳವರೆಗೆ ಹೆಚ್ಚಾಯಿತು. ಬಳ್ಳಿಗಾವೆಯು ಲಕುಲೀಶ ಮತ್ತು ಕಾಳಾಮುಖ ಮಠಗಳ ಕೇಂದ್ರವಾಗಿತ್ತು. ಶಿಕಾರಿಪುರ ತಾಲ್ಲೋಕಿನ ಬಳ್ಳಿಗಾವೆ ಶಾಸನದಿಂದ ಕಾಳಾಮುಖರು ಕಾಶ್ಮೀರದೊಂದಿಗೆ ಸಂಬಂಧವನ್ನು ಹೊಂದಿದ್ದುದು ಸ್ಪಷ್ಟಪಡುತ್ತದೆ. ಬಳ್ಳಿಗಾವೆ ಮಠದ ಅಧ್ಯಕ್ಷ ಸಂನ್ಯಾಸಿಯು ತಾನು ಕಾಶ್ಮೀರದೇವನ ಶಾಖೆಗೆ ಸೇರಿದವನೆಂದು ಹೇಳಿಕೊಂಡಿದ್ದಾನೆ. ೯೯ ಮತ್ತು ೧೦೦ನೆಯ ಶಾಸನಗಳು ಕಾಳಾಮುಖರ ಮಠಗಳ ವಿಷಯವಾಗಿ ತಿಳಿಸಿವೆ. ಇವುಗಳ ಕಾಲ, ಕ್ರಮವಾಗಿ ಕ್ರಿ.ಶ. ೧೧೧೩ ಮತ್ತು ೧೧೯೯. ೧೩೬ನೆಯ ಬಳ್ಳಿಗಾವೆಯ ಶಾಸನದಲ್ಲಿ, ಲಕುಲೇಶ್ವರ ಪಂಡಿತನು ಮೀಮಾಂಸಕಾರರನ್ನು, ಬೌದ್ಧರನ್ನು, ಲೋಕಾಯತರನ್ನು ಮತ್ತು ಜೈನರನ್ನು ಚರ್ಚೆಗಳಲ್ಲಿ ಸೋಲಿಸಿದನೆಂದು ತಿಳಿಸಲಾಗಿದೆ. ಕ್ರಿ.ಶ. ಹದಿನೈದನೆಯ ಶತಮಾನದ ನಂತರ ಲಕುಲೀಶ ಮತ್ತು ಕಾಳಾಮುಖರ ಹೆಸರುಗಳು ಕೇಳಬರುತ್ತಿರಲಿಲ್ಲ. ಕಪಟರಾಳ ಕೃಷ್ಣರಾಯರು 'ಕರ್ನಾಟಕ ಲಾಕುಲಶೈವರ ಇತಿಹಾಸ' ಎಂಬ ಪುಸ್ತಕದಲ್ಲಿ 'ಬಹುಮಟ್ಟಿಗೆ ಹಿಂದೆ ಲಕುಲೀಶರ ಮಠಗಳಿದ್ದ ಕಡೆಗಳಲ್ಲಿ ವೀರಶೈವರ ಮಠಗಳಿರುತ್ತವೆ' ಎಂದು ತಿಳಿಸಿರುವರು. ಅವರ ಲಾಕುಲೀಶರು ವೀರಶೈವಧರ್ಮಕ್ಕೆ ಜಂಗಮರಾಗಿ ಸೇರಿರಬಹುದೆಂಬುದಾಗಿ ಊಹಿಸುತ್ತಾರೆ. ೧೦೦ನೆಯ ಶಾಸನದಲ್ಲಿ ಪ್ರಸ್ತಾಪಿಸಿರುವ ಕೇದಾರಮಠವು ಕಾಳಾಮುಖ ಮಠ. ಈ ಶಾಸನದ ಪ್ರಕಾರ ಚಾಲುಕ್ಯ ಚಕ್ರವರ್ತಿ ಸೋಮೇಶ್ವರ ಭೂಲೋಕಮಲ್ಲನು, ವಿದ್ಯಾಪ್ರಸಾರದಲ್ಲಿ ಮತ್ತು ಬಡವರಿಗೆ ಆಹಾರವನ್ನು ಒದಗಿಸುವುದರಲ್ಲಿ ಬಹಳ ವರ್ಷಗಳಿಂದಲೂ ಪ್ರಸಿದ್ಧವಾಗಿರುವ ಆ ಮಠಕ್ಕೆ ದತ್ತಿಯನ್ನು ಕೊಟ್ಟಿರುವುದಾಗಿ ಹೇಳಲಾಗಿದೆ.

ಶಾಸನಗಳನ್ನು ಅವಲೋಕಿಸಿದರೆ ವೀರಶೈವ ಮಠಗಳ ಪಾರಂಪರ್ಯವು ಶೈವಮಠಗಳಿಂದ ಹರಿದುಬಂದ ವಿದ್ಯಾಕೇಂದ್ರಗಳಾಗಿರುವುದು ತಿಳಿದುಬರುತ್ತದೆ. ವೀರಶೈವ ಮಠಗಳಲ್ಲಿ ಪ್ರಮುಖವಾಗಿ ಎರಡು ವಿಧಗಳಿವೆ. ಗುರುಸ್ಥಲ ಅಥವಾ ಪಟ್ಟದ ಮಠ ಮತ್ತು ವಿರಕ್ತಮಠ. ಇದಲ್ಲದೆ ಶರಣಸ್ಥಳದ ಮಠಗಳೆಂದು ಮೂರನೆಯ ಬಗೆಯೊಂದನ್ನು ಹಲವರು ಸೇರಿಸಿರುವರು. ಗುರುಸ್ಥಲದವರು ಕಾಶಿ, ಕೇದಾರ, ಶ್ರೀಶೈಲ, ಉಜ್ಜಯಿನಿ ಮತ್ತು ರಂಭಾಪುರಿ ಎಂಬ ಐದು ಪೀಠಗಳನ್ನು ಪಂಚಪೀಠಗಳೆಂದು ಕರೆಯುತ್ತಾರೆ. ವಿರಕ್ತಮಠದವರು, ಕಲ್ಯಾಣದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ಬಸವಣ್ಣನವರು ಸ್ಥಾಪಿಸಿದ ಶೂನ್ಯಪೀಠವನ್ನು ತಮ್ಮ ಮೂಲಪೀಠವಾಗಿ ಪರಿಗಣಿಸುತ್ತಾರೆ. ಶರಣಸ್ಥಳ ಮಠಗಳು ಅತಿವಿರಳ. ವೀರಶೈವ ಧರ್ಮದ ಪ್ರಕಾರ ಲೌಕಿಕ ಜೀವನ ಮತ್ತು ಆಧ್ಯಾತ್ಮಿಕ ಜೀವನ ಒಂದು ಪೂರ್ಣಜೀವನದ ಎರಡು ಭಾಗಗಳು. ಆದುದರಿಂದ ಮಾನವ ಜೀವನದ ಪ್ರಮುಖ ಭಾಗಗಳೆರಡಕ್ಕೂ ಪ್ರಾಮುಖ್ಯತೆಯನ್ನು ಕೊಡುವುದು ಅಗತ್ಯವಾಯಿತು. ಇದರ ಸಾರ್ಥಕತೆಗೋಸುಗ, ವಿರಕ್ತಮಠಗಳ ಕಾರ್ಯವು ಪ್ರಮುಖವಾಗಿ ವೀರಶೈವ ತತ್ತ್ವಪ್ರತಿಪಾದನೆ ಮತ್ತು ಪ್ರಸಾರಕ್ಕೆ ಮೀಸಲಾಗಿತ್ತು. ಹಾಗೆಯೇ ಪಟ್ಟದ ಮಠವು ವೀರಶೈವ ಭಕ್ತರು ತಮ್ಮ ಜೀವನವನ್ನು ಧರ್ಮದ ತತ್ತ್ವಗಳಿಗೆ ಅನುಸಾರವಾಗಿ ರೂಪಿಸಿಕೊಂಡಿರುವರೋ ಇಲ್ಲವೋ ಎಂಬುದನ್ನು ಪರಿಶೀಲಿಸಿ ಸೂಕ್ತವಾದ ಸಲಹೆಗಳನ್ನು ಕೊಡುವ ಕಾರ್ಯಕ್ಷೇತ್ರಕ್ಕೆ ಮೀಸಲಾಗಿದ್ದಿತು. ಇವರಲ್ಲಿ ಇದು ಹೆಚ್ಚು ಅದು ಕಡಿಮೆ ಎಂಬ ಭಾವನೆಗೆ ಅವಕಾಶವಿಲ್ಲ. ಕಾಲಕ್ರಮೇಣ ವಿರಕ್ತ ಮಠಗಳು ಲೌಕಿಕ ಜೀವನದ ಸಮಸ್ಯೆಗಳ ಪರಿಹಾರದಲ್ಲಿ ಆಸಕ್ತಿ ವಹಿಸಿದವು. ಹಾಗೆಯೇ ಗುರುಸ್ಥಲದ ಮಠಗಳೂ ಸಹ, ವೀರಶೈವ ಧರ್ಮಪ್ರಸಾರದಲ್ಲಿ ಹೆಚ್ಚಿನ ಗಮನವನ್ನು ಕೊಟ್ಟವು. ಎರಡು ವಿವಿಧ ಮಠಗಳು ವ್ಯತ್ಯಾಸಗಳು ಕಡಿಮೆಯಾಗುತ್ತಾ ಬಂದು, ಇಂದು ಎಲ್ಲಾ ಮಠಗಳೂ ವಿದ್ಯಾಪ್ರಸಾರದಲ್ಲಿ ಹೆಚ್ಚಿನ ಸ್ಪರ್ಧೆಯಲ್ಲಿ ನಿರತರಾಗಿರುತ್ತವೆ.

ವೀರಶೈವಧರ್ಮದಲ್ಲಿ ಮಠಾಧಿಪತಿಗಳಿಗೆ ಅಪೂರ್ವ ಸ್ಥಾನವಿದೆ. ಆದುದರಿಂದ ಮಠಾಧಿಪತಿಗಳನ್ನು ಆರಿಸುವ ವಿಚಾರದಲ್ಲಿ ಎಚ್ಚರಿಕೆಯಿಂದ ಇದ್ದು, ಮಠಾಧ್ಯಕ್ಷರಾಗುವವರಿಗೆ ಇರಬೇಕಾದ ಅಗತ್ಯಗುಣಗಳನ್ನು ಕ್ರಿಯಾಸಾರದಲ್ಲಿ ಹೇಳಲಾಗಿದೆ. ಇದು ತಾತ್ವಿಕ ಹಿನ್ನೆಲೆಯಾದರೆ, ಅವರ ವಿದ್ಯಾಸಕ್ತಿ, ಜನಬಳಕೆ, ಪ್ರಾಜ್ಞತೆ ಮೊದಲಾದುವುಗಳನ್ನು ಒರೆಗೆ ಹಚ್ಚುವ ಉದ್ದೇಶದಿಂದ ವೀರಶೈವ ಮಠಗಳಲ್ಲಿ 'ಮರಿದೇವರು' ಎಂಬ ಸಂಸ್ಥೆಯು ಸಾಂಪ್ರದಾಯಿಕವಾಗಿ ನಡೆದುಬಂದಿದೆ. ಇದಲ್ಲದೆ ಉನ್ನತ ಬೃಹತ್ ಮಠಗಳಿಗೆ ಪಟ್ಟಾಧಿಕಾರಿಯನ್ನು ತರುವಾಗ ವಿದ್ಯಾಪಾರಂಗತೆಗೆ ಹೆಚ್ಚು ಗಮನಕೊಟ್ಟು ಕಾಲದೇಶಗಳಿಗೆ

ಅನುಗುಣವಾಗಿ ಅವರ ವಿದ್ಯಾರ್ಹತೆಗೆ ಗಮನ ಕೊಡಲಾಗುತ್ತದೆ. ವೀರಶೈವ ಮಠಾಧಿಪತಿಗಳಗಲ್ಲಿ ಅನೇಕರು ಪ್ರೌಢ ಗ್ರಂಥ ಬರೆದಿರುವರು. ಅವರಲ್ಲಿ ಪ್ರಮುಖರಾದರವರ ಹೆಸರುಗಳನ್ನು, ಅವರ ಕಾಲವನ್ನು ಕೊಡಲಾಗಿದೆ. ನಲ್ಲೂರು ಮಠದ ಉರಿ ಲಿಂಗದೇವ (೧೧೬೦)* ಆತನ ಶಿಷ್ಯನಾದ ಉರಿಲಿಂಗ ಪೆದ್ದಿಯೂ ಸಂಸ್ಕೃತದಲ್ಲಿ ಉನ್ನತ ಪಾಂಡಿತ್ಯವನ್ನು ಗಳಿಸಿದ್ದನು. ಅವನು ಅನೇಕ ವಚನಗಳನ್ನು ಬರೆದಿರುವನು. ಮಹಲಿಂಗ ದೇವ (೧೪೨೦), ಕುಮಾರ ಬಂಕನಾಥ (೧೪೨೦) ಮತ್ತು ಚಾಮರಸ (೧೪೨೦) ಇವರುಗಳು ವಿರಕ್ತರು. ಕಲ್ಲುಮಠದ ಪ್ರಭುದೇವ (೧೪೨೦), ತೋಂಟದ ಸಿದ್ಧಲಿಂಗಯತಿ (೧೪೬೦), ಮುರಿಗೇಯ ಶಾಂತವೀರ (೧೫೩೦), ಕುಮಾರ ಚೆನ್ನಬಸವ (೧೫೫೦), ನಂದೀಪುರ ಮಠದ ವಿರಕ್ತ ತೋಂಟದಾರ್ಯ, ಹದಿನೇಳನೆಯ ಶತಮಾನದಲ್ಲಿ ಸುಪ್ರಸಿದ್ಧನಾಗಿದ್ದ ಕವಿ ಷಡಕ್ಷರದೇವ ಇವರುಗಳು ಮಠಾಧಿಪತಿಗಳಾಗಿದ್ದರು. ಆಧುನಿಕ ಮಠಾಧ್ಯಕ್ಷರು ಗ್ರಂಥರಚನೆಯಲ್ಲಿ ಪ್ರಸಿದ್ಧ ರಾದವರು ನಿಡುಮಾಮಿಡಿ ಶ್ರೀಗಳಾದ ಜ.ಚ.ನಿ, ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು ಮತ್ತು ಬಿಜಾಪುರದ ಶಂಭು ಲಿಂಗ ಶಿವಾಚಾರ್ಯರು.*

ಸಂಸ್ಕೃತ ಅಧ್ಯಯನಕ್ಕೆ ಅನುಕೂಲತೆಗಳನ್ನು ಕಲ್ಪಿಸುವುದು ವೀರಶೈವ ಮಠಗಳ ಪ್ರಮುಖ ಶೈಕ್ಷಣಿಕ ಕಾರ್ಯವಾಗಿತ್ತು. ಸಿದ್ಧಗಂಗಾ ಕ್ಷೇತ್ರದ ಅಧ್ಯಕ್ಷರಾಗಿದ್ದ ಉದ್ದಾನಶಿವಯೋಗಿಗಳು ೧೯೧೭ರಲ್ಲಿ ಸಂಸ್ಕೃತ ವೇದ ಪಾಠಶಾಲೆಯೊಂದನ್ನು ಪ್ರಾರಂಭಿಸಿದರು. ಹಿಂದೂ ಧಾರ್ಮಿಕ ಪಾರಂಪರ್ಯದ ಧರ್ಮಗ್ರಂಥಗಳು ವಿಶೇಷವಾಗಿ ಸಂಸ್ಕೃತದಲ್ಲಿ ಇರುವುದರಿಂದ, ಸಂಸ್ಕೃತಜ್ಞಾನವು ಅಗತ್ಯವೆಂದು ಭಾವಿಸಿ, ವಿದ್ಯಾರ್ಥಿಗಳಿಗೆ ಉತ್ತೇಜನ ಕೊಟ್ಟರು. ಆ ವೇದಪಾಠಶಾಲೆಯಲ್ಲಿ ವಿವಿಧ ಜಾತಿಯ ವಿದ್ಯಾರ್ಥಿಗಳಿದ್ದರು. ಒಂದು ಉಚಿತ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. ಇಲ್ಲಿಯೂ ಸಹ ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೂ ವಸತಿ ಮತ್ತು ಭೋಜನ ಇವುಗಳ ಅನುಕೂಲತೆಗಳನ್ನು ಕಲ್ಪಿಸಲಾಗಿತ್ತು. ೧೯೩೮ ರಲ್ಲಿ ಈ ಪಾಠಶಾಲೆಯನ್ನು ಸಂಸ್ಕೃತದ ಕಾಲೇಜ್ ಎಂದು ಮೈಸೂರು ಸರ್ಕಾರವು ಅಂಗೀಕರಿಸಿತು. ಇಂದಿಗೂ ಸಹ ಅನೇಕ ವೀರಶೈವ ಮಠಗಳು ಸಂಸ್ಕೃತ ವಿದ್ಯಾಭ್ಯಾಸದ ಕೇಂದ್ರವಾಗಿವೆ. ಕಾಲಕ್ರಮೇಣ ಆಧುನಿಕ ಸಮಾಜಕ್ಕೆ, ಲೌಕಿಕ ಜೀವನಕ್ಕೆ ಅಗತ್ಯವಾದ ಪರಿಶ್ರಮ ದೊರೆಯಬೇಕಾದರೆ ವಿದ್ಯಾಪ್ರಸಾರವು ವಿರಲವಾದ ತಳಹದಿಯ ಮೇಲಿರಬೇಕೆಂಬ ಭಾವನೆಯಿಂದ, ಅನೇಕ ಉಚಿತ ವಿದ್ಯಾರ್ಥಿನಿಲಯಗಳು ಸ್ಥಾಪಿತವಾದವು. ಅಲ್ಲಿನ ವಿದ್ಯಾರ್ಥಿಗಳು ಎಲ್ಲಾ ಬಗೆಯ ಶೈಕ್ಷಣಿಕ ವಿಭಾಗಗಳಲ್ಲಿ ಓದುತ್ತಿದ್ದಾರೆ. ಕಲೆ ಮತ್ತು ವಿಜ್ಞಾನಗಳಿಗೆ ಮಾತ್ರ ಸೀಮಿತವಾಗದೆ ವಿವಿಧ ಬಗೆಯ ತಂತ್ರಜ್ಞಾನವನ್ನು ಇಂದು ಸಿದ್ಧಗಂಗಾ ಮತ್ತು ಸುತ್ತೂರು ಮಠಗಳು ಎಂಜಿನಿಯರಿಂಗ್ ಶಿಕ್ಷಣ ಕೊಡುವ ಕಾಲೇಜುಗಳನ್ನು ಸ್ಥಾಪಿಸಿರುತ್ತವೆ. ಸ್ವಾಮಿಗಳಾಗುವವರಿಗೆ, 'ಮರಿದೇವರು'ಗಳಿಗೆ ಆದಷ್ಟು ವೈವಿಧ್ಯವುಳ್ಳ ಶಿಕ್ಷಣವನ್ನು ಕೊಡಿಸುವ ಉದ್ದೇಶದಿಂದ, ಸ್ವಾಮಿಗಳಾಗುವವರನ್ನು ವಿದೇಶಗಳಿಗೆ ಕಳುಹಿಸಿರುವುದೂ ಉಂಟು. ಇವುಗಳ ಗುರಿ ಒಂದೇ. ಜ್ಞಾನದ ವೈಶಾಲ್ಯ. ವೈವಿಧ್ಯತೆ ಮತ್ತು ಆಳವು ಹೆಚ್ಚಿದಷ್ಟು, ಆಧುನಿಕ ಜೀವನದ ಸಂಕೀರ್ಣತೆಯನ್ನು ಅರಿತು ಅದರಲ್ಲಿ ಸಾಮರಸ್ಯವನ್ನು ಸ್ಥಾಪಿಸಲು ಅನುಕೂಲವಾಗುತ್ತದೆ ಎಂಬುದು. ಇದು ಅಗತ್ಯವೂ ಅಹುದು ಮತ್ತು ಅನಿವಾರ್ಯವೂ ಅಹುದು. ಏಕೆಂದರೆ ಈ ಜ್ಞಾನವು 'ಇಲ್ಲಿ ಸಲ್ಲಬೇಕಾದವರಿಗೆ' ಅಗತ್ಯ.

---

* ಉರಿಲಿಂಗದೇವನು ಮಹಾರಾಷ್ಟ್ರದಲ್ಲಿರುವ ಗೋದಾವರಿತೀರದ 'ಕಂದಾರ' ಎಂಬ ಊರಿನವನೆಂದು ಅನೇಕ ಉಲ್ಲೇಖಗಳಿವೆ. (ಸಂ)

* ಈ ಪಟ್ಟಿಯಲ್ಲಿ ಅರಮನೆ ಪಂಚಗವಿ ಮಠಾಧ್ಯಕ್ಷರಾಗಿದ್ದ ಶ್ರೀ ನಿ.ಪ್ರ. ಗೌರೀಶಂಕರ ಸ್ವಾಮಿಗಳು ಸೇರಬೇಕಾದವರು. (ಸಂ)

## ಆಧಾರ ಗ್ರಂಥಗಳು

Amarakosha of Amarasimha with the Commentary of Vyakha Sudha of Ramaswami, (Nirnaya Sangha Press, Bombay, 1915).

A. S. Bagi : Selected Sayings of Basava.

R. G. Bhandarker : Vaisnavism, Saivism and minor religious systems.

S. S. Basavanal & Dr. K. R. Srinivasa Iyengar : Musings of Basava (1940).

G. S. Ghurye : Indian Sadhus (1953) Bombay.

M. Hardekar (Editor) : Social Structure of Virasaiva Saints (1940).

E. O. James : The Nature and Function of Priesthood (London 1955).

Dr. S. C. Nandimath : A Handbook of Virasaivism (Dharwar 1942).

Dr. Olden Berg : Buddha, His life, His Doctrine, and His Order (London 1882).

Radhakumara Mukergi : Ancient Indian Education (1947).

J. M. Yinger : Religion Society and Individual (1957).

**Encylopedia-Journals**

A. S. Gaden : 'Monasticism' Encylopedia of Religion and Ethics. Vol. VIII.
T. C. Hall : 'Asceticism' Introduction —,,—Vol. II.
Dr. J. Havison : Asceticism (Buddhlist) —,,—Vol. I.
Dr. Durga Bhagavati : Origin of Indian Monasticism, Journal of University of Bombay (1939).

**ಕನ್ನಡ ಗ್ರಂಥಗಳು**

ಎಸ್. ಎಸ್. ಬಸವನಾಳ : ಬಸವಣ್ಣನವರ ಷಟ್‌ಸ್ಥಲ ವಚನಗಳು (1954) ಧಾರವಾಡ.
ಎಸ್. ಎಸ್. ಬಸವನಾಳ : ವೀರಶೈವ ತತ್ತ್ವಪ್ರಕಾಶ (1941) ಧಾರವಾಡ.
ಪಿ. ಜಿ. ಹಳಕಟ್ಟಿ : ವಚನಶಾಸ್ತ್ರ ಸಾರ ಸಂಪುಟ I & II (1931-1938).
ಡಾ॥ ಸಾಲಕೊರೆ ಮತ್ತು ದೇಸಾಯಿ ಪಾಂಡರಂಗರಾವ್ : ಕನ್ನಡನಾಡಿನ ಚರಿತೆ.
ಡಾ॥ ಎಲ್. ಬಸವರಾಜು (ಸಂಪಾದಕರು) : ಪ್ರಭುದೇವರ ಶೂನ್ಯಸಂಪಾದನೆ (1969).

# ವೀರಶೈವ ಧರ್ಮದ ಪ್ರಾಚೀನತೆ

—ಡಾ॥ ಎಚ್. ಪಿ. ಮಲ್ಲೇದೇವರು

ವೀರಶೈವ ಧರ್ಮ ಯಾವಾಗ ಉಗಮ ಹೊಂದಿತು ? ಇದರ ಸಂಸ್ಥಾಪಕರಾರು ? ಎಂಬ ಬಗೆಗೆ ವಾದ–ವಿವಾದಗಳಿವೆ. ಇದು ಅತ್ಯಂತ ಜಟಿಲ ಹಾಗೂ ಗಹನವಾದ ವಿಷಯ. ವಿಶ್ವವಿಭೂತಿ ಬಸವಣ್ಣನವರೇ ವೀರಶೈವ ಧರ್ಮವನ್ನು ಸಂಸ್ಥಾಪಿಸಿದರು ಎಂಬ ಅಭಿಪ್ರಾಯವನ್ನು ಕೆಲವು ವಿದ್ವಾಂಸರೂ, ರೇಣುಕಾದಿ ಪಂಚಾಚಾರ್ಯರೇ ಈ ಧರ್ಮ ಸಂಸ್ಥಾಪಕರೆಂದು ಕೆಲವು ವಿದ್ವಾಂಸರೂ, ಇವರುಗಳಿಗಿಂತ ವೀರಶೈವಧರ್ಮ ಮೊದಲಿದ್ದಿತೆಂದೂ, ಅದು ಸನಾತನವೆಂದೂ ಕೆಲವರು ಪ್ರತಿಪಾದಿಸಿರುವರು.

ವೀರಶೈವದ ಪ್ರಾಚೀನತೆಯನ್ನು ನಿರ್ಧರಿಸಬೇಕಾದರೆ ಸಂಸ್ಕೃತ, ಕನ್ನಡ, ತೆಲುಗು, ತಮಿಳು, ಈ ಭಾಷೆಗಳ ಸಾಹಿತ್ಯ ಇತಿಹಾಸ, ಶಾಸನಗಳನ್ನು ಅಭ್ಯಸಿಸಿ ಖಚಿತ ಆಧಾರಗಳಿಂದ ನಿರ್ಧರಿಸ ಬೇಕಾಗುತ್ತದೆ.

ಹನ್ನೆರಡನೆಯ ಶತಮಾನದಲ್ಲಿ ವಿಶ್ವದಲ್ಲೇ ಅಭೂತಪೂರ್ವವಾದ ಸಾಮಾಜಿಕ, ಧಾರ್ಮಿಕ, ಸಾಹಿತ್ಯಕ ಕ್ರಾಂತಿ, ಕರ್ನಾಟಕದಲ್ಲಿ ನಡೆಯಿತು. ಇದಕ್ಕೆ ನೇತಾರರು ಬಸವಾದಿ ಶರಣರು. ವಿಚಾರಪರಿಪ್ಲುತವಾದ, ಅನುಭಾವಗಮ್ಯವಾದ, ಸ್ಫಟಿಕದ ಶಲಾಕೆಯಂತಿರುವ, ಮಾಣಿಕ್ಯದ ದೀಪ್ತಿಯಂತಿರುವ, ಲಿಂಗ ಮೆಚ್ಚಿ ಅಹುದಹುದೆನ್ನುವ ಶರಣರ ನುಡಿಗಳು ಮಾನವ ಕೋಟಿಯ ಸರ್ವಾಂಗೀಣ ಪ್ರಗತಿಗೆ ತಾರಕಮಂತ್ರಗಳಾಗಿವೆ.

ಬಸವಣ್ಣನವರ ವಚನಗಳನ್ನು ಅಭ್ಯಸಿಸಿದಾಗ ಅವರ ವಚನಗಳಲ್ಲಿ ವೀರಶೈವಧರ್ಮ ಪ್ರಾಚೀನತೆಯ ಬಗೆಗೆ ಬೆಳಕನ್ನು ಚೆಲ್ಲುವ ಕೆಲವು ನುಡಿಗಳನ್ನು ಕಾಣಬಹುದು. 'ಆದ್ಯರ ವಚನ ಪರುಷ ಕಂಡಯ್ಯ...................' ಈ ವಚನದಲ್ಲುಕ್ತವಾದ 'ಆದ್ಯರು' ಎಂಬ ಪದ ಗಮನಾರ್ಹವಾದುದು. ದಾಸಿಮಾರ್ಯರು, ಏಕಾಂತದ ರಾಮಯ್ಯ ಮೊದಲಾದ ಶರಣರು ಬಸವಣ್ಣನವರಿಗಿಂತಲೂ ಪೂರ್ವದಲ್ಲಿದ್ದರೆಂದು ತಿಳಿದುಬರುವುದು. ದೇವರ ದಾಸಿಮಾರ್ಯರು ಚಾಲುಕ್ಯರಾಜನಾದ ಇಮ್ಮಡಿ ಜಯಸಿಂಹನ ( ಸುಮಾರು ಕ್ರಿ.ಶ. ೧೦೧೭–೧೦೪೨) ಧರ್ಮಪತ್ನಿಯಾದ ಸುಗ್ಗಲಾದೇವಿಗೆ ಲಿಂಗದೀಕ್ಷೆಯನ್ನು ಅನುಗ್ರಹಿಸಿದುದು ಬಸವಪುರಾಣಾದಿ ಗ್ರಂಥಗಳಲ್ಲಿ ಉಕ್ತವಾಗಿದೆ. ಇವರ ಸಮಕಾಲೀನರಾದ ಶಂಕರ ದಾಸಿಮಾರ್ಯರು ವಚನಗಳನ್ನು ರಚಿಸಿದ್ದರು ಪ್ರಾಯಶಃ ಇವರುಗಳನ್ನು ಗಮನದಲ್ಲಿಟ್ಟುಕೊಂಡೇ 'ಆದ್ಯರ ವಚನ' ಎಂಬುದಾಗಿ ವಿಶ್ವವಿಭೂತಿ ಬಸವಣ್ಣನವರು ಹೇಳಿರಬಹುದು.

> ''ಕರಿಯನಿತ್ತಡೆ ಒಲ್ಲೆ ; ಸಿರಿಯನಿತ್ತಡೆ ಒಲ್ಲೆ ; ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ;
> ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ''

ಎಂಬ ದಾಸಿಮಾರ್ಯರ ನುಡಿಯಿಂದ ಅವರಿಗಿಂತಲೂ ಪೂರ್ವದಲ್ಲಿದ್ದ ಅಥವಾ ಅವರ ಸಮಕಾಲೀನರಾದ ಶರಣರು ವಚನಗಳನ್ನು ರಚಿಸಿದ್ದರೆಂಬುದು ಸುವ್ಯಕ್ತವಾಗುವುದು.

ಬಸವಣ್ಣನವರು ಪ್ರಾಯಶಃ ಎಂಟನೇ ವರ್ಷದವರಿದ್ದಾಗ ಅವರ ತಾಯಿ ತಂದೆಗಳು ಉಪನಯನ ಸಂಸ್ಕಾರವನ್ನು ಮಾಡಲೆತ್ನಿಸಿದಾಗ ಅದನ್ನು ನಿರಾಕರಿಸಿ ಲಿಂಗದೀಕ್ಷಾಪೇಕ್ಷೆಗಳಾಗಿ ಮನೆಯನ್ನೇ ಪರಿತ್ಯಜಿಸಿ ಹೊರಡಬೇಕಾದರೆ ವೀರಶೈವ ಧರ್ಮದ ಪ್ರಮುಖ ಅಂಶವಾದ ಲಿಂಗಧಾರಣೆಯ ಮಹತಿ ಅವರಿಗಾಗಲೇ ವಿದಿತರಾಗಿರಬೇಕಲ್ಲವೆ ?

ತಮಿಳುನಾಡಿನಲ್ಲಿ ಆಗಿಹೋದ ಅರವತ್ತಮೂರು ಪುರಾತನರಲ್ಲಿ 'ತಿರುವಾಚಕಂ' ರಚಿಸಿದ ಮಾಣಿಕ್ಯವಾಚಕರು (ಸುಮಾರು ಕ್ರಿ.ಶ. ೯೦೦) ವೀರಶೈವರೆಂದು ಆರ್. ಎಸ್. ವೇದಾಚಲಂ ಬರೆದಿದ್ದಾರೆ. 'ತಿರುಕ್ಕುರುಳ್' ಗ್ರಂಥ ಬರೆದ ತಿರುವಳ್ಳುವರ್ ಕೂಡ ವೀರಶೈವರೆಂದು ವೇಡಿವೇಲು ಪಿಳ್ಳೆಯವರು ಅಭಿಪ್ರಾಯಪಟ್ಟಿದ್ದಾರೆ. ಈ ಎಲ್ಲ ಅಂಶಗಳನ್ನು ಗಮನಿಸಿದಾಗ ವೀರಶೈವ ಧರ್ಮವು ಬಸವಣ್ಣನವರ ಕಾಲಕ್ಕಾಗಲೇ ಅಸ್ತಿತ್ವದಲ್ಲಿದ್ದು ಅವರ ಘನವಾದ ಮನಸ್ಸನ್ನು ಸೂರೆಗೊಳ್ಳುವಷ್ಟು ಪ್ರಬಲವಾಗಿದ್ದಿತೆನ್ನಬಹುದು.

ವೀರಶೈವಧರ್ಮದ ವಿಶಿಷ್ಟ ಅಂಶಗಳಾದ ಲಿಂಗ[1], ಅಂಗ (ಪಿಂಡ, ಜೀವ)[2], ಜಗತ್ತು[3], ಅವಿಕೃತ ಪರಿಣಾಮವಾದ[4], ದೀಕ್ಷೆ[5], (ಅಷ್ಟ) ಆವರಣ[6], ಗುರು[7], ಲಿಂಗ[8], ಜಂಗಮ[9], ಪಾದೋದಕ[10], ಪ್ರಸಾದ[11], ವಿಭೂತಿ[12], ರುದ್ರಾಕ್ಷಿ[13], ಯಾತ್ರ[14], ಷಟ್‌ಸ್ಥಲ[15]ಗಳಾದ ಭಕ್ತ[16], ಮಹೇಶ[17], ಪ್ರಸಾದಿ[17], ಪ್ರಾಣಲಿಂಗ[18], ಶರಣ[19], ಐಕ್ಯ[20], ಅರವತ್ತುನಾಲ್ಕುಶೀಲಗಳು[21], ಪಂಚಾಚಾರಗಳು[22] -ಇತ್ಯಾದಿಗಳು ಆಗಮಗಳಲ್ಲಿ ಪ್ರತಿಪಾದಿತವಾಗಿರುವುದನ್ನು ಗಮನಿಸಬಹುದು.

---

1. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೬, ಶ್ಲೋಕ ೬, ಚಂದ್ರಜ್ಞಾನಾಗಮ,ಕ್ರಿಯಾಪಾದ, ಪಟಲ ೩.ಶ್ಲೋಕ ೯. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೬, ಶ್ಲೋಕ, ೫. ತಂತ್ರಸಂಗ್ರಹ, ಕ್ರಿಯಾಪಾದ, ಪಟಲ ೬, ಶ್ಲೋಕ ೪.
2. ವೀರಾಗಮ 'ಅನಾದಿ ವೀರಶೈವ ಸಾರ ಸಂಗ್ರಹದಲ್ಲಿ ಉದ್ಧೃತ' ಭಾಗ-೧, ಪ್ರಕರಣ ೯, ಶ್ಲೋಕ ೩೦. ಚಿಂತ್ಯಾಗಮ, ಹಸ್ತಪ್ರತಿ (Institute of Francias D' Indology), ಪಾಂಡಿಚೇರಿ, ಪುಟ ೪೪೭. ವಾತುಲಾಗಮ, ಹಸ್ತಪ್ರತಿ, (Oriental Research Institute), Mysore. ಪುಟ ೧೯.
3. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೧, ಶ್ಲೋಕ ೧೮-೧೯, ವಾತುಲ ಶುದ್ಧಾಖ್ಯತಂತ್ರ ತತ್ತ್ವಭೇದ ಪಟಲ. ವಾತುಲತಂತ್ರ; ಹಸ್ತಪ್ರತಿ D. 5477 (Government Manuscript Laibrary). Madras. ಪುಟ ೩. ಮಾತಂಗಪಾರಮೇಶ್ವರಾಗಮ, ವಿದ್ಯಾಪಾದ, ಮಾಯಾ ಪಟಲ, ಶ್ಲೋಕ ೧೨೦. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೬, ಶ್ಲೋಕ ೫, ಚಿಂತ್ಯಾಗಮ, ಹಸ್ತಪ್ರತಿ (Institute of Francias D' Indology), ಪಾಂಡಿಚೇರಿ, ಪುಟ ೪೩೪. ಪಾರಮೇಶ್ವರಾಗಮ, ಭಾಗ-೨, ಪಟಲ ೧೭, ಶ್ಲೋಕ ೨೦-೩೩.
4. ಪಾರಮೇಶ್ವರಾಗಮ, ಭಾಗ-೨, ಶ್ಲೋಕ ೪೦. ಸೂಕ್ಷ್ಮಾಗಮ, ಕ್ರಿಯಾಪಾದ, ಶ್ಲೋಕ ೨೧-೨೨.
5. ಕಾರಣಾಗಮ, ಕ್ರಿಯಾಪಾದ, ಪಟಲ-೧, ಶ್ಲೋಕ ೧೨. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೩, ಶ್ಲೋಕ ೪೬. ಮಕುಟಾಗಮ, ಕ್ರಿಯಾಪಾದ, ಪಟಲ ೧, ಶ್ಲೋಕ ೧೪.
6. ಇಮಾನಿ ಶಿವಭಕ್ತಾನಾಂ ಭವದೋಷತತೇಃ ಸದಾ । ನಿವಾರಣೈಕ ಕಾರ್ಯಾಣಿ ಖ್ಯಾತನ್ಯಾವರಣಾಖ್ಯಯಾ ॥ ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೩, ಶ್ಲೋಕ ೨.
7. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೩, ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೫, ಶ್ಲೋಕ ೦೦-೧೧.
8. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೩, ಶ್ಲೋಕ ೪೯. ಕಾರಣಾಗಮ, ಕ್ರಿಯಾಪಾದ, ಪಟಲ ೧, ಶ್ಲೋಕ ೧೨೨-೧೨೫. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೬, ಶ್ಲೋಕ ೭, ವಾತುಲಾಗಮ, ಹಸ್ತಪ್ರತಿ, ತತ್ತ್ವಭೇದ ಪಟಲ, ಶ್ಲೋಕ ೧೯, ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೩, ಶ್ಲೋಕ ೪೫-೪೮. ಕಾರಣಾಗಮ, ಕ್ರಿಯಾಪಾದ, ಪಟಲ ೮, ಶ್ಲೋಕ ೬೭-೬೮.
9. 'ವೀರಾಗಮ' ಅನಾದಿ ವೀರಶೈವಸಾರ ಸಂಗ್ರಹದಲ್ಲಿ ಉದ್ಧೃತವಾದುದು ಭಾಗ ೨, ಅಧ್ಯಾಯ ೧೬, ಶ್ಲೋಕ ೨, ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೪, ಶ್ಲೋಕ ೩೩-೩೬. ಏಕಮೂರ್ತಿಯೋರ್ಭಾಗಾ ॥ ಗುರುಲಿಂಗಂ ತು ಜಂಗಮಃ. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೫, ಶ್ಲೋಕ ೧೫.
10. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೫, ಶ್ಲೋಕ ೪-೧೬.
11. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೮, ಶ್ಲೋಕ ೨೩-೨೫. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೫, ಶ್ಲೋಕ ೨೪. 'ವಾತುಲಾಗಮ' ಅನಾದಿ ವೀರಶೈವ ಸಾರಸಂಗ್ರಹದಲ್ಲುಕ್ತವಾದುದು ಭಾಗ ೨, ಅಧ್ಯಾಯ ೨೪, ಶ್ಲೋಕ ೧೮.
12. ಪಾರಮೇಶ್ವರಾಗಮ, ಭಾಗ-೨. ಪಟಲ ೧೭. ಶ್ಲೋಕ ೬೦. ವಾತುಲ ಶುದ್ಧಾಖ್ಯತಂತ್ರ, ಮದ್ರಾಸ್ ಸರ್ಕಾರದ ಗ್ರಂಥಭಂಡಾರದ ಹಸ್ತಪ್ರತಿ ಸಂಖ್ಯೆ ೫೪೭೭, ಪುಟ ೫೩, ಚಂದ್ರಜ್ಞಾನಾಗಮ, ಕ್ರಿಯಾಪಾದ. ಪಟಲ ೬, ಶ್ಲೋಕ ೬೯.
13. ವಾತುಲ ಶುದ್ಧಾಖ್ಯತಂತ್ರ, ಹಸ್ತಪ್ರತಿ, ಮದ್ರಾಸ್ ಹಸ್ತಪ್ರತಿ ಗ್ರಂಥಭಂಡಾರ, D. ೫೪೭೭, ಪುಟ ೫೪. ಚಂದ್ರಜ್ಞಾನಾಗಮ, ಕ್ರಿಯಾಪಾದ, ಪಟಲ ೬, ಶ್ಲೋಕ ೫. ೪-೫
14. ಮೃಗೇಂದ್ರಾಗಮ, ಕ್ರಿಯಾಪಾದ, ಪಟಲ, ೧, ಪುಟ ೨; ಚಂದ್ರಜ್ಞಾನಾಗಮ,ಕ್ರಿಯಾಪಾದ, ಪಟಲ ೮, ಶ್ಲೋಕ ೫, ಸೂಕ್ಷ್ಮಾಗಮ ಕ್ರಿಯಾಪಾದ. ಪಟಲ ೩. ಶ್ಲೋಕ ೨-೬.
15. ಚಂದ್ರಜ್ಞಾನಾಗಮ, ಕ್ರಿಯಾಪಾದ ೧, ಪಟಲ ೨, ಶ್ಲೋಕ ೫೧.
16. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೮, ಶ್ಲೋಕ ೩೩.
17. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೮, ಶ್ಲೋಕ ೩೪,
18. ಕಾರಣಾಗಮ, ಕ್ರಿಯಾಪಾದ, ಪಟಲ ೧, ಶ್ಲೋಕ ೧೦೫.
19. ಕಾರಣಾಗಮ, ಕ್ರಿಯಾಪಾದ, ಪಟಲ ೧, ಶೋಕ ೧೦೭.
20. ಸೂಕ್ಷ್ಮಾಗಮ, ಕ್ರಿಯಾಪಾದ, ಪಟಲ ೮, ಶ್ಲೋಕ ೩೫
21. ಚಂದ್ರ ಜ್ಞಾನಾಗಮ ಕ್ರಿಯಾಪಾದ, ಪಟಲ ೧,ಶ್ಲೋಕ ೧೨೨-೧೨೩.
22. ಚಂದ್ರಜ್ಞಾನಾಗಮ, ಕ್ರಿಯಾಪದ, ಪಟಲ ೯, ಶ್ಲೋಕ ೪-೫

ಇಂತಹ ಆಗಮಗಳ ಕಾಲವನ್ನು ಸರಿಯಾಗಿ ನಿರ್ಧರಿಸಿದರೆ ವೀರಶೈವಧರ್ಮ ಎಷ್ಟು ಪ್ರಾಚೀನವೆಂಬುದನ್ನು ಅರಿಯಲು ಸಹಾಯಕವಾಗುವುದು. ಬಸವಭೂಪಾಲನು 'ಶಿವತತ್ತ್ವರತ್ನಾಕರ[23]' ದಲ್ಲಿಯೂ ಸಂಪಾದನೆ ಸಿದ್ಧವೀರಣಾರ್ಯನು 'ಅನಾದಿ ವೀರಶೈವಸಾರಸಂಗ್ರಹ[24]'ದಲ್ಲಿಯೂ ನಿಷ್ಠೂರ ನಂಜಣಾರ್ಯನು 'ವೇದಾಂತಸಾರ ವೀರಶೈವ ಚಿಂತಾಮಣಿ[25]'ಯಲ್ಲಿಯೂ, ಮರಿತೋಂಟದಾರ್ಯನು 'ವೀರಶೈವಾನಂದ ಚಂದ್ರಿಕೆ[26]'ಯಲ್ಲಿಯೂ, ಗುರುದೇವನು 'ವೀರಶೈವಾಚಾರ ಪ್ರದೀಪಿಕೆ[27]'ಯಲ್ಲಿಯೂ, ನೀಲಕಂಠ ಶಿವಾಚಾರ್ಯನು 'ಕ್ರಿಯಾಸಾರ[28]'ದಲ್ಲಿಯೂ, ನೀಲಕಂಠ ನಾಗನಾಥಾಚಾರ್ಯನು 'ವೀರಮಾಹೇಶ್ವರಾಚಾರಸಂಗ್ರಹ[29]' ದಲ್ಲಿಯೂ. ಶ್ರೀಪತಿಪಂಡಿತನು 'ಶ್ರೀಕರಭಾಷ್ಯ[30]'ದಲ್ಲಿಯೂ, ಶ್ರೀಕಂಠಸೂರಿಯು 'ರತ್ನತ್ರಯ[31]'ದಲ್ಲಿಯೂ, ಅರುಳ್‌ನಂದಿಯು 'ಶಿವಜ್ಞಾನಸಿದ್ಧಿಯಾರ್[32]' ದಲ್ಲಿಯೂ ತಿರುಮೂಲರ್ ಎಂಬ ಪ್ರಾಚೀನ ತಮಿಳು ಸಂತನು 'ತಿರುಮಂದಿರಂ[33]' ಗ್ರಂಥದಲ್ಲಿಯೂ ಆಗಮಗಳನ್ನುಲ್ಲೇಖಿಸಿರುವುದು ಕಂಡುಬರುವುದು. ಇದಲ್ಲದೆ ಆಗಮಗಳ ಕರ್ತೃ 'ಅರಿವರ್' (ಸತ್ಯದರ್ಶಿಗಳ್) ಎಂದು ನಚ್ಚಿನಾರ್ಕಿನಿಯಕರೆಂಬ ತಮಿಳು ಭಾಷ್ಯಕಾರರು ಹೇಳಿರುವರು. 'ಅರಿವರ್' ಅವರ ಉಲ್ಲೇಖವು 'ತೊಲ್ಕಾಪ್ಪಿಯಂ' ಎಂಬ ಪ್ರಾಚೀನ ತಮಿಳು ವ್ಯಾಕರಣಗ್ರಂಥದಲ್ಲಿ ಕಂಡುಬರುವುದು. ಈ ಗ್ರಂಥದ ಕಾಲ ಸುಮಾರು ಕ್ರಿ.ಪೂ. ೧ನೆಯ ಶತಮಾನ. ಈ ಎಲ್ಲ ಸಾಹಿತ್ಯಿಕ ಆಧಾರಗಳಿಂದ ಶೈವಾಗಮಗಳು ಕ್ರಿ.ಪೂ. ೧ನೆಯ ಶತಮಾನಕ್ಕೆ ಮುನ್ನವೇ ರಚಿತವಾಗಿದ್ದುವೆಂದು ಹೇಳಬಹುದು.

ಭಕ್ತಿನಿಧಿ ಬಸವಣ್ಣನವರು[34]. ಜ್ಞಾನನಿಧಿ ಬಸವಣ್ಣನವರು[35] ಮತ್ತು ವೈರಾಗ್ಯನಿಧಿ ಅಲ್ಲಮಪ್ರಭು[36] ಇವರ ವಚನಗಳಲ್ಲಿಯೂ ಆಗಮಗಳ ಬಗೆಗೆ ಉಲ್ಲೇಖ ಕಂಡುಬರುವುದು.

ನೇಪಾಳದ ದರ್ಬಾರ್ ಹಸ್ತಪ್ರತಿ ಗ್ರಂಥಭಂಡಾರದಲ್ಲಿ ಸಂಗ್ರಹಿಸಲ್ಪಟ್ಟಿರುವ 'ಕಿರಣಾಗಮ[37]' ಹಸ್ತಪ್ರತಿಯು ಕ್ರಿ.ಶ. ೮೯೯ರಲ್ಲಿ ಮೂಲಗ್ರಂಥದಿಂದ ನಕಲುಮಾಡಿಕೊಳ್ಳಲಾಯಿತೆಂದು ಉಲ್ಲೇಖವಿದೆ. ಆಚಾರ್ಯಶಂಕರರು 'ಸೌಂದರ್ಯಲಹರಿ[38]'ಯಲ್ಲಿ ೬೪ ತಂತ್ರಗಳನ್ನು ಉಲ್ಲೇಖಿಸಿದ್ದಾರೆ. ವೈಷ್ಣವಾಗಮಗಳಲ್ಲಿ ಶೈವಾಗಮಗಳ ಬಗೆಗೆ ಉಲ್ಲೇಖವಿದ್ದು, ಶೈವಾಗಮಗಳಲ್ಲೆಲ್ಲೂ ವೈಷ್ಣವಾಗಮಗಳ ಬಗೆಗೆ ಉಲ್ಲೇಖ ಕಂಡುಬರದಿರುವುದರಿಂದ ವೈಷ್ಣವಾಗಮಗಳ ಕಾಲ ಸುಮಾರು ಕ್ರಿ. ಶ. ೮ನೆಯ ಶತಮಾನವೆಂದು ಸದ್ಯಕ್ಕೆ ಡಾ॥ ಎಫ್.ಓ. ಶ್ರೇಡರ್[39] ಅವರು ನಿರ್ಧರಿಸಿರುವುದರಿಂದ ಶೈವಾಗಮಗಳು ಅವುಗಳಿಗಿಂತ ಪ್ರಾಚೀನವೆನ್ನಬಹುದು. ಸ್ಕಾಂದಪುರಾಣ, ಶಿವಪುರಾಣಗಳ ಕಾಲವನ್ನು ಇನ್ನು ಖಚಿತವಾಗಿ ನಿರ್ಧರಿಸಿಲ್ಲವಾದುದರಿಂದ ಪ್ರಸ್ತುತ ವಿಷಯಕ್ಕೆ ಹೆಚ್ಚು ಸಹಾಯಕವಾಗಲಾರದು.

ಕಾಂಚೀಪುರದ ಕೈಲಾಸನಾಥದೇವಾಲಯದಲ್ಲಿರುವ ಪಲ್ಲವ ಶಾಸನ[40]ದಿಂದ ಪಲ್ಲವರಾಜನಾದ ರಾಜಸಿಂಹನು 'ಆಗಮಾನುಸಾರಿ'ಯೆಂದೂ, ಮಸ್ತಕದಲ್ಲಿ ಶಿವಲಿಂಗ ಧರಿಸಿದ್ದನೆಂದೂ ತಿಳಿದುಬರುವುದು. ಅಮರಾವತಿಯ ಶಾಸನ[41]ದಿಂದ ಪಲ್ಲವರ ಮೂಲಪುರುಷನಾದ ದ್ರೋಣಾಚಾರ್ಯನು'ಸಮಸ್ತಾಗಮ ಪಾರದೃಶ್ಯ'ನಾಗಿದ್ದನೆಂದೂ ಗೊತ್ತಾಗುವುದು. ರಾಜಸಿಂಹನು ಚಾಲುಕ್ಯದೊರೆ ಒಂದನೆಯ ಪುಲಿಕೇಶಿಯ ಸಮಕಾಲೀನನಾಗಿದ್ದುದರಿಂದ ಅವನ ಕಾಲ ಸುಮಾರು ಕ್ರಿ.ಶ. ೭ನೆಯ ಶತಮಾನ

23. ಶಿವತತ್ತ್ವರತ್ನಾಕರ, ಕಲ್ಲೋಲ ೧, ತರಂಗ ೧, ಶ್ಲೋಕ ೫೮.
24. ಅನಾದಿವೀರಶೈವ ಸಾರಸಂಗ್ರಹ, ಭಾಗ ೧, ಪುಟ ೧೨-೧೫,
25. ವೇದಾಂತಸಾರ ವೀರಶೈವ ಚಿಂತಾಮಣಿ, ಉತ್ತರಕಾಂಡ, ಶ್ಲೋಕ ೨.
26. ವೀರಶೈವಾನಂದ ಚಂದ್ರಿಕೆ, ಪಾದಕಾಂಡ, ಪುಟ ೫೬
27. ವೀರಶೈವಾಚಾರ ಪ್ರದೀಪಿಕೆ, ಅಧ್ಯಾಯ ೨, ಶ್ಲೋಕ ೨೨-೨೫.
28. ಕ್ರಿಯಾಸಾರ, ಭಾಗ ೧, ಶ್ಲೋಕ ೧೩.
29. ವೀರಮಾಹೇಶ್ವರಾಚಾರ ಸಂಗ್ರಹ, ಭಾಗ-೩ ಅಧ್ಯಾಯ ೪೭
30. ಶ್ರೀಕರಭಾಷ್ಯ, ಭಾಗ-೨, ಅ ೧, ಪಾದ ೧-೧-೧, ಪುಟ ೮
31. ರತ್ನತ್ರಯ, ಪುಟ ೫, ಶ್ಲೋಕ ೧೦.
32. ಶಿವಜ್ಞಾನ ಸಿದ್ಧಿಯಾರ್, ಅ ೮-೨-೧೪.
33. ತಿರುಮಂದಿರಂ, ಅ ೭, ೨೭೯.
34. ಬಸವಣ್ಣನವರ ವಚನಗಳು ೮, ೮೪೮, ಪುಟ ೨೨೭.
35. ಷಟ್ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರ ವಚನಗಳು ೮, ೨೧೮. ಪು-೯೯.
36. ಅಲ್ಲಮನ ವಚನ ಚಂದ್ರಿಕೆ, ವಚನ ೭೫, ಪು. ೧೮.
37. A catalogue of palm leaf and selected paper manuscript belonging to the Durbar Library Vo.-1 PP 52, 130.
38. ಸೌಂದರ್ಯಲಹರೀ, ಶ್ಲೋಕ 31, ಪು·114.
39. Introduction to Pancaratra and Ahirbudhanya Samhita, P. 97. By Dr. F.O. Schrader.
40. South Indian Inscriptions by Dr. E, Hultzsh. Vol. 1. No. 18 to 25.
41. South Indian Inscriptions by Dr. E. Hultzsh. Vol. I. No. 32 p.26.

ವೆಂದು ಇತಿಹಾಸತಜ್ಞರಾದ ಡಾ॥ ಹುಲ್ಟ್ಜ್ (Dr. Hultz) ಮೊದಲಾದವರು ನಿರ್ಧರಿಸಿರುವುದರಿಂದ ಅದಕ್ಕೆ ಮುನ್ನವೇ ಶೈವಾಗಮಗಳು ಅಸ್ತಿತ್ವದಲ್ಲಿದ್ದುವೆಂದು ವ್ಯಕ್ತವಾಗುವುದು.

ಕುಮಾರಗುಪ್ತನ ಬಿಲ್ಸದ್‌ಕಲ್ಲಿನ ಸ್ತಂಭದ ಶಾಸನ[42]ದಿಂದ (ಕ್ರಿ. ಶ. ೪೧೬–೪೧೭) ದೇವಾಲಯಗಳು ಆಗಲೇ ಅಸ್ತಿತ್ವದಲ್ಲಿದ್ದುವೆಂದೂ, ಅವುಗಳಲ್ಲಿ ಆಗಮಗಳಲ್ಲುಕ್ತವಾದ ಪೂಜಾಪದ್ಧತಿಯು ಪ್ರಚಲಿತದಲ್ಲಿತ್ತೆಂಬುದೂ ಖಚಿತವಾಗಿ ತಿಳಿದು ಬರುವುದು. ಸುಮಾರು ಕ್ರಿ.ಶ. ೩–೪ನೆಯ ಶತಮಾನದಲ್ಲಿದ್ದ ಭಾರಶಿವ ಮತ್ತು ವಾಕಾಟಕರು ಶಿವಲಿಂಗಧಾರಿಗಳಾಗಿದ್ದರೆಂದೂ ಶಿಲಾಶಾಸನ[43]ಗಳಿಂದ ವ್ಯಕ್ತವಾಗುವುದು. ಕುಶಾನ, ತ್ರೈಕೂಟ, ಭವನಾಗ ಮೊದಲಾದ ಪ್ರಾಚೀನ ರಾಜಮನೆತನಗಳು ಶೈವಧರ್ಮದ ಪ್ರಸಾರಕ್ಕೂ ಅಭಿವೃದ್ಧಿಗೂ ಕಾರಣರಾಗಿದ್ದರು. ಅವರ ಕಾಲದಲ್ಲಿ ಶೈವಾಗಮಗಳು ಅಸ್ತಿತ್ವದಲ್ಲಿದ್ದವೆಂದು ಊಹಿಸಲವಕಾಶವಿದೆ ಎಂದು ಪೂಜ್ಯರಾದ ಲಿಂ. ಡಾ॥ ಎಸ್. ಸಿ. ನಂದೀಮಠರವರು ಆಧಾರಪೂರ್ವಕವಾಗಿ ಬರೆದಿರುವರು[44]. ಡಾ॥ ಎಲ್.ಡಿ. ಬಾರ್ನೆಟ್[45], ಡಾ॥ ರಮಣನ್[46], ಡಾ॥ ಶಾಮಾಶಾಸ್ತ್ರಿ[47]. ಡಾ॥ ಕೆ. ಸಿ. ಪಾಂಡೆ[48] ಮೊದಲಾದವರು ಕೆಲವೊಂದು ಆಧಾರಗಳನ್ನಿತ್ತು ಆಗಮಗಳು ಬಹಳ ಪುರಾತನವಾದವು ಎಂದು ಹೇಳಿರುವರು.

ಈ ಮೇಲ್ಕಂಡ ಎಲ್ಲಾ ಆಧಾರಗಳಿಂದ ಸದ್ಯಕ್ಕೆ ಶೈವಾಗಮಗಳು ಕ್ರಿ.ಪೂ. ಒಂದನೆಯ ಶತಮಾನಕ್ಕೆ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದುವೆಂದು ಹೇಳಬಹುದು. ಒಟ್ಟಿನಲ್ಲಿ ಆಗಮ ಸಂಪ್ರದಾಯ ಮತ್ತು ಆಗಮಧರ್ಮ ಪ್ರಾಚೀನವಾದುದಷ್ಟೇ ಅಲ್ಲದೆ ಅವು ವೈದಿಕ ಸಮಾಜದ ಮೇಲೂ ಅತ್ಯಂತ ಪ್ರಭಾವಬೀರಿ ವೈದಿಕಜನರ ಆಚಾರ-ವಿಚಾರಗಳನ್ನು ಬಹುಮಟ್ಟಿಗೆ ಮಾರ್ಪಡಿಸಲು ಕಾರಣವಾಗಿದೆಯೆಂದು ಹೇಳಬಹುದು.

ಆರ್ಯರು ಬೇರೆ ದೇಶಗಳಿಂದ ವಲಸೆ ಬಂದು ಭಾರತದಲ್ಲಿ ನೆಲಸಿದರೆಂಬುದು ಭಾಷಾವಿಜ್ಞಾನಿಗಳ ಮತ. ಭಾಷಾಶಾಸ್ತ್ರದ ಆಧಾರಗಳಿಂದ ನಿರ್ಧರಿಸಲ್ಪಟ್ಟ ಈ ಅಭಿಪ್ರಾಯವನ್ನು ಅಲ್ಲಗಳೆಯಲಾಗುವುದಿಲ್ಲ. ಹರಪ್ಪ ಮತ್ತು ಮೊಹೆಂಜೊದಾರೋಗಳಲ್ಲಿ ಲಭ್ಯವಾದ ಪ್ರಾಕ್ತನ ಅವಶೇಶಗಳನ್ನು ಪರೀಕ್ಷಿಸಿದ ಸರ್ ಜಾನ್ ಮಾರ್ಷೆಲ್[49] ಮೊದಲಾದ ವಿದ್ವಾಂಸರು, ಆರ್ಯರು ಭಾರತಕ್ಕೆ ವಲಸೆ ಬರುವ ಮುನ್ನವೇ ಸಿಂಧೂನದಿಯ ತೀರದಲ್ಲಿ ವಾಸವಾಗಿದ್ದ ಭಾರತೀಯರು ತಮ್ಮದೇ ಆದ ಉಜ್ವಲ ನಾಗರೀಕತೆ, ಸಂಸ್ಕೃತಿ, ಧರ್ಮವನ್ನು ಹೊಂದಿದ್ದರೆಂದೂ, ಈ ಧರ್ಮ ಶೈವಧರ್ಮವೆಂದು ನಿರ್ಧರಿಸಿರುವರು.

ಈ ಶೈವಧರ್ಮವು ಅನಾದಿಶೈವ, ಆದಿಶೈವ, ಮಹಾಶೈವ. ಅಮಶೈವ, ಅವಾಂತರಶೈವ. ಪ್ರವರಶೈವ, ಅಂತ್ಯಶೈವ ಈ ರೀತಿ ಏಳು ಪ್ರಭೇದಗಳನ್ನು ಹೊಂದಿದ್ದಿತ್ತೆಂದು ಸೂಕ್ಷ್ಮಾಗಮದಲ್ಲುಕ್ತವಾಗಿದೆ.[50] ಮೇಲಣ ಏಳು ಪ್ರಭೇದಗಳನ್ನು ನಾಲ್ಕು ಪ್ರಭೇದಗಳಾದ ನಂತರ ಉಕ್ತವಾಗಿರುವ ಅವಾಂತರಶೈವ, ಪ್ರವರಶೈವ ಮತ್ತು ಅಂತ್ಯಶೈವ ಇವುಗಳಿಗೆ ಬದಲಾಗಿ ಯೋಗಶೈವ, ಜ್ಞಾನಶೈವ, ವೀರಶೈವಗಳನ್ನು ಕೆಲವೆಡೆ ಹೇಳಿರುವುದು ಕಂಡುಬರುತ್ತದೆ.[51] ನಿಜಗುಣ ಶಿವಯೋಗಿಗಳು, ಮತ್ತಮಾ ಶೈವವೇ ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತವೆಂದು ಭೇದ ಹೊಂದಿದ್ದು ಮತ್ತೆ ಆ ಶೈವಂಗಳಲ್ಲಿ ಮುಖ್ಯವಾದ ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ ಮತ್ತು ವೀರಶೈವವೆಂದು ನಾಲ್ಕು ಪ್ರಭೇದಗಳನ್ನುಳ್ಳದ್ದಾಗಿದೆ ಎಂದು ವಿವೇಕ ಚಿಂತಾಮಣಿ[52]ಯಲ್ಲಿ ಹೇಳಿರುವರು.

ಈ ವೀರಶೈವ ಧರ್ಮದ ವಿಶಿಷ್ಟ ಅಂಶಗಳು ಆಗಮಗಳಲ್ಲಿ ಪ್ರತಿಪಾದಿತವಾಗಿರುವುದನ್ನು ಆಗಲೇ ಬರೆದಿದೆ.

ರೇಣುಕಾದಿ ಪಂಚಾಚಾರ್ಯರೇ ವೀರಶೈವ ಧರ್ಮವನ್ನು ಸಂಸ್ಥಾಪಿಸಿದರೆಂದು ಸಂಪ್ರದಾಯವಾದಿಗಳು ಹೇಳುವರು. ಈ ಅಭಿಪ್ರಾಯವನ್ನು ಸಮರ್ಥಿಸಲು ಪ್ರಬಲವೂ ಸಪ್ರಮಾಣವೂ ಆದ ಆಧಾರಗಳು ಇನ್ನೂ ಅವಶ್ಯವಾಗಿವೆ. ರೇಣುಕಾದಿ

---

42. Corpus Inscription Indicarum. Vol. III. pp41-43. Gupta I. No. 10. plate V.
43. Indian Antiquary, Vol. XII.
44. ವಿಭೂತಿ. ಸದಾಶಿವಮಹಾಸ್ವಾಮಿಗಳವರಿಗರ್ಪಿಸಿದ ಕೃತಿ, ಪು-೭೩೫.
45. ಸಿದ್ಧಾಂತ ದೀಪಿಕಾ. Vol. 10.No. 12. pp 473-474.
46. ಸಿದ್ಧಾಂತ ದೀಪಿಕಾ. Vol. 10. No. 4.
47. Journal of Asiatic Society, Bengal, Vol. IV. p. 628.
48. ಭಾಸ್ಕರಿ, Vol. III. Introduction, p.8.
49. Report on Mohenjodaro and Harappa Civilization by Sir. John Marshal.
50. ಸೂಕ್ಷ್ಮಾಗಮ. ಪ. ೭. ಶ್ಲೋಕ. ೮-೧೬.
51. Virasaiva Philosophy of the Saivagamas by Sri Siddharamappa Dundappa Pawate.
52. ವಿವೇಕ ಚಿಂತಾಮಣಿ. ಪು. ೭೭-೭೮.

ಆಚಾರ್ಯರಿಗಿಂತಲೂ ಹಿಂದೆ ವೀರಶೈವ ಧರ್ಮ ಇತ್ತು. ಸನಾತನವಾದ ಆ ಧರ್ಮವನ್ನು ರೇಣುಕರು ಮತ್ತೆ ಪ್ರತಿಪಾದಿಸಿ, ಪ್ರಸಾರ ಮಾಡಿದರೆಂಬುದಕ್ಕೆ ಆಧಾರಗಳಿವೆ.

ಮೇಲ್ಕಂಡ ಕಾರಣಗಳಿಂದ ಬುದ್ಧ, ಏಸುಕ್ರಿಸ್ತ, ಮಹಮದ್ ಪೈಗಂಬರರಂತೆ, ರೇಣುಕಾದಿ ಆಚಾರ್ಯರು ಅಥವಾ ಬಸವಣ್ಣನವರು ಈ ಧರ್ಮವನ್ನು ಸಂಸ್ಥಾಪಿಸಿದರೆನ್ನಲಾಗದು.

ರೇಣುಕಾದ್ಯಾಚಾರ್ಯರು ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ವೀರಶೈವಧರ್ಮದ ನ್ಯೂನತೆಗಳನ್ನು ನಿವಾರಿಸಿ ತಮ್ಮ ತಪಃಪ್ರಭಾವದಿಂದ ಜನರಲ್ಲಿ ಧರ್ಮಶ್ರದ್ಧೆಯನ್ನುಂಟುಮಾಡಿ ವೀರಶೈವಧರ್ಮವನ್ನು ಪ್ರಸಾರಮಾಡಿದರು.

ಹನ್ನೆರಡನೆಯ ಶತಮಾನದಲ್ಲಿ ಸಾಹಿತ್ಯಕ, ಸಾಮಾಜಿಕ, ಧಾರ್ಮಿಕ ಮಹಾಕ್ರಾಂತಿಯನ್ನೆಸಗಿ ಅಂಧಶ್ರದ್ಧೆ, ಶುಷ್ಕ ಸಂಪ್ರದಾಯ, ಅಸಮಾನತೆ ಇವುಗಳಿಂದ ಆವೃತವಾಗಿದ್ದ ವೀರಶೈವಧರ್ಮದ ಅವಗುಣಗಳನ್ನು ಪರಿಹರಿಸಿ, ಧರ್ಮಶ್ರದ್ಧೆ, ವೈಚಾರಿಕತೆ, ಸಮಾನತೆ, ಸದ್ಭಕ್ತಿ, ಸುಜ್ಞಾನ, ಸತ್ಯಶುದ್ಧಕಾಯಕ ಇವುಗಳ ಅಡಿಗಲ್ಲಮೇಲೆ ವೀರಶೈವ ಧರ್ಮವನ್ನು ನೆಲೆಗೊಳಿಸಿ ಅದು ವಿಶ್ವಧರ್ಮವಾಗುವಂತೆ ಮಾಡಿದವರು ಬಸವಾದಿ ಶರಣರೆಂಬುದನ್ನು ಮರೆಯಲಾಗದು.

ಒಟ್ಟಿನಲ್ಲಿ ವೀರಶೈವ ಪ್ರಾಚೀನತೆಯನ್ನು ಖಚಿತವಾಗಿ ಆಧಾರ ಪೂರ್ವಕವಾಗಿ ಹೇಳಬೇಕಾದರೆ ಸಮಗ್ರ ಶೈವಾಗಮಗಳು ಸಂಶೋಧನಾತ್ಮಕವಾಗಿ ಪ್ರಕಟವಾದಾಗ ಮಾತ್ರ ಸಾಧ್ಯವಾಗಬಹುದು. ಈಗ ಮೈಸೂರು ವಿಶ್ವವಿದ್ಯಾಲಯದಲ್ಲಿ ಶೈವಾಗಮಗಳ ಸಂಶೋಧನ, ಸಂಸ್ಕರಣ, ಪ್ರಕಟನ ಕಾರ್ಯ ಪ್ರಾರಂಭವಾಗಿದೆ. ಹೆಚ್ಚು ಶೈವಾಗಮಗಳು ಪ್ರಕಟವಾದಾಗ ಅತ್ಯಂತ ಜಟಿಲವಾದ ಈ ವಿಷಯದ ಮೇಲೆ ಬೆಳಕು ಬೀಳಬಹುದೆಂದು ನಿರೀಕ್ಷಿಸಬಹುದು.

## ವೀರಶೈವ ದರ್ಶನದಲ್ಲಿ ಶಿವ, ಶಕ್ತಿ ಮತ್ತು ಅವುಗಳಿಗಿರುವ ಸಂಬಂಧ

—ಡಾ. ಎಸ್. ಜಿ. ಮಹಾದೇವಪ್ಪ

ಭಾರತದ ಇತರ ಧರ್ಮಗಳಿಗಿರುವಂತೆ ವೀರಶೈವ ಧರ್ಮಕ್ಕೂ ತನ್ನದೇ ಆದ ಒಂದು ದಾರ್ಶನಿಕ ತಳಹದಿ ಇದೆ. ಈ ದರ್ಶನದಲ್ಲಿ ಶಿವ ಅಥವಾ ಪರಶಿವ ಪ್ರಧಾನತತ್ತ್ವ. ಅಷ್ಟೇ ಮುಖ್ಯವಾದ ಮತ್ತೊಂದು ತತ್ತ್ವವೆಂದರೆ ಶಕ್ತಿತತ್ತ್ವ. ಚಿದದ್ವೈತದಲ್ಲಿ ನಿರ್ಗುಣಬ್ರಹ್ಮನ ಕಲ್ಪನೆಯೇ ಮುಖ್ಯವಾಗಿದ್ದರೂ ಅವನನ್ನು ಕುರಿತ ಚರ್ಚೆಯು ಮಾಯಾವಾದವನ್ನು ಕೈಬಿಟ್ಟರೆ ಹೇಗೆ ಅಪೂರ್ಣವೂ ಅನರ್ಥಕಾರಿಯೂ ಆಗುತ್ತದೆಯೋ, ಹಾಗೆಯೇ ವೀರಶೈವದರ್ಶನದಲ್ಲಿ ಶಿವತತ್ತ್ವವೇ ಮುಖ್ಯವಾಗಿದ್ದರೂ, ಆ ತತ್ತ್ವವನ್ನು ಕುರಿತ ಚರ್ಚೆಯು ಶಕ್ತಿತತ್ತ್ವದ ಕಲ್ಪನೆಯನ್ನು ಒಳಗೊಳ್ಳದಿದ್ದರೆ ಅಪೂರ್ಣವೂ ನಿರರ್ಥಕವೂ ಆಗುತ್ತದೆ. ಶಿವತತ್ತ್ವ ಮತ್ತು ಶಕ್ತಿತತ್ತ್ವಗಳ ಸಂಬಂಧ ಕುರಿತು ಮಾತನಾಡುವ ಮೊದಲು ಆ ತತ್ತ್ವಗಳ ಕಲ್ಪನೆಯನ್ನು ಕುರಿತು ವಿವೇಚಿಸೋಣ.

### ೧. ಶಿವ ತತ್ತ್ವ

ಪ್ರಪಂಚದಲ್ಲಿರುವ ವೈವಿಧ್ಯಮಯ ವಸ್ತುಗಳು, ತಪ್ಪದೆ ಬರುವ ಋತುಗಳು, ಸುಖ–ದುಃಖಗಳು, ಇತ್ಯಾದಿಗಳಿಗೆ ಕಾರಣವೇನೆಂದು ಮನುಷ್ಯನು ಹಿಂದಿನಿಂದಲೂ ಕೇಳುತ್ತಲೇ ಬಂದಿದ್ದಾನೆ. ಈ ಪ್ರಶ್ನೆ ಆಸ್ತಿಕ ಪಂಥಗಳಿಗೆ ಹೇಗೋ ಹಾಗೆ ನಾಸ್ತಿಕ ಪಂಥಗಳಿಗೂ ಅನಿವಾರ್ಯ. ಈ ಪ್ರಶ್ನೆಗೆ ನಿರೀಶ್ವರವಾದಿಗಳಾದ ಸಾಂಖ್ಯರು ಹಾಗೂ ಚಾರ್ವಾಕರು ಕೊಟ್ಟಿರುವ ಉತ್ತರಗಳಿಗೆ ವೀರಶೈವರು ಕೊಟ್ಟಿರುವ ಉತ್ತರವು ವಿರುದ್ಧವಾಗಿದೆ. ಅಚೇತನವಾದ ನಾಲ್ಕು ಭೂತಗಳೇ ಆಕಸ್ಮಿಕವಾಗಿ ಚೈತನ್ಯವಾಗುತ್ತವೆ ಹಾಗೂ ಎಲ್ಲ ಘಟನೆಗಳೂ ಆಕಸ್ಮಿಕವಾಗಿಯೇ ಜರುಗುತ್ತವೆ ಎಂಬ ಚಾರ್ವಾಕರ ಉತ್ತರವೂ, ಪ್ರಕೃತಿ ಮತ್ತು ಪುರುಷರು ಈಶ್ವರನಂತಹ ಯಾವ ಹೊರಗಿನ ಚೈತನ್ಯವಸ್ತುವಿನ ಸಹಾಯವಿಲ್ಲದೆ ತಾನೇ ಜಗತ್ತಾಗಿ ಮಾರ್ಪಡುತ್ತವೆ ಎಂಬ ಸಾಂಖ್ಯರ ಉತ್ತರವೂ ತರ್ಕಸಮ್ಮತವಲ್ಲವೆಂದು ವೀರಶೈವರು ಅವನ್ನು ಒಪ್ಪುವುದಿಲ್ಲ. ಪ್ರತಿಯೊಂದು ಜಡವಸ್ತುವಿನ ಬದಲಾವಣೆಯ ಹಿಂದೆ ಒಂದು ಚೈತನ್ಯವಿರಬೇಕೆಂದೂ, ಜಗತ್ತಿನ ಅಸಂಖ್ಯಾತ ವಸ್ತುಗಳನ್ನು ನಿಯಂತ್ರಿಸುವ ಆ ಚೈತನ್ಯವು ಅಪರಿಮಿತವಾಗಿರಬೇಕೆಂದೂ ಅವರು ನಂಬುತ್ತಾರೆ.

ಇಂಥ ಅಪರಿಮಿತ ಚೈತನ್ಯವನ್ನು ವೀರಶೈವರು 'ಶಿವ,' 'ಪರಶಿವ,' 'ಲಿಂಗ,' 'ಚಿತ್ತು,' 'ಬಯಲು,' 'ಅರಿವು,' 'ಶೂನ್ಯ', 'ಸಚ್ಚಿದಾನಂದ' ಮುಂತಾಗಿ ಕರೆಯುತ್ತಾರೆ. ಈ ಹೆಸರುಗಳು ವೇದಾಂತದ 'ಬ್ರಹ್ಮ,' 'ಹರಿ', 'ನಾರಾಯಣ', 'ವಿಷ್ಣು' ಮುಂತಾದ ಹೆಸರುಗಳಿಗೆ ಪರ್ಯಾಯವಾಗಿದೆ. ಆದರೆ ವಚನಕಾರರು ಈ ದಾರ್ಶನಿಕ ಹೆಸರುಗಳನ್ನು ಕೆಲವೊಮ್ಮೆ ಕೈ

ಬಿಟ್ಟು ತಮ್ಮ ಇಷ್ಟದೈವದ ಹೆಸರುಗಳನ್ನು ಬಳಸುತ್ತಾರೆ. ಉದಾಹರಣೆಗೆ, ಬಸವಣ್ಣನವರ 'ಕೂಡಲಸಂಗಮದೇವ,' ಅಕ್ಕ ಮಹಾದೇವಿಯ 'ಚೆನ್ನಮಲ್ಲಿಕಾರ್ಜುನ,' ಪ್ರಭುದೇವರ 'ಗುಹೇಶ್ವರ,' ಇತ್ಯಾದಿ, ಇತ್ಯಾದಿ. ಈ ಹೆಸರುಗಳೆಲ್ಲಾ ಅಪರಿಮಿತ ಚೈತನ್ಯದ ಬೇರೆ ಬೇರೆ ಹೆಸರುಗಳೇ ವಿನಾ, ಬೇರೆ ಬೇರೆ ದೈವಗಳ ಹೆಸರಲ್ಲ.

ಈ ಶಿವತತ್ತ್ವದ ಸ್ವರೂಪವೆಂಥಹುದು ? ಈಗಾಗಲೇ ಹೇಳಿರುವಂತೆ, ಅದೊಂದು ಅಪರಿಮಿತ ಚೈತನ್ಯವೇ ವಿನಾ, ವ್ಯಕ್ತಿಯಲ್ಲ. ಪುರಾಣಗಳಲ್ಲಿ ಶಿವನನ್ನು ನಾಲ್ಕು ಕೈಗಳುಳ್ಳ, ನಂದಿಯ ಮೇಲೆ ಕುಳಿತಿರುವ, ಒಬ್ಬ ಗಂಡಸಿನಂತೆ ಚಿತ್ರಿಸಲಾಗಿದೆ. ಆದರೆ ಈ ರೀತಿಯ ಚಿತ್ರಗಳು ಅಮೂರ್ತ ವಿಷಯಗಳನ್ನು ಅರ್ಥಮಾಡಿಕೊಳ್ಳದವರಿಗೆ ಗ್ರಾಹ್ಯವಾಗುತ್ತವೆಯೇ ಹೊರತು, ದಾರ್ಶನಿಕ ಬುದ್ಧಿಗೆ ಅಲ್ಲ. ಅದಕ್ಕೆ ಅಂಬಿಗರ ಚೌಡಯ್ಯನಂತಹವರು ಶಿವನಿಗೆ 'ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗ ವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ......'ಎನ್ನುತ್ತಾರೆ. ಹಾವಿನಹಾಳ ಕಲ್ಲಯ್ಯನಂಥವರು ಶಿವನು 'ಹಸಿಯ ಕಪಾಲ ದಲ್ಲಿ ಉಂಬನೆಂಬರು; ಅದು ಹುಸಿಯೇ, ಭಕ್ತನ ಮುಖದಲ್ಲಿ ಉಂಬನಾಗಿ' ಎಂಬ ಸಮಾಧಾನ ಕೊಡುತ್ತಾರೆ.

ಇದು ಏನೇ ಇರಲಿ, ವಚನಕಾರರು ದಾರ್ಶನಿಕ ಭಾಷೆಯಲ್ಲಿ ಮಾತನಾಡುವಾಗ ಶಿವನನ್ನು 'ಅರಿವು', 'ಚಿತ್ತ', 'ಲಿಂಗ', 'ಸಚ್ಚಿದಾನಂದ' ಮುಂತಾಗಿಯೇ ಕರೆಯುತ್ತಾರೆ;'ಚಿದ್ಬ್ರಹ್ಮಾಂಡ', 'ಚಿದಾಕಾಶ', 'ಚಿದ್ಘನ'ಮುಂತಾಗಿ ಕರೆಯುವುದೂ ಉಂಟು. ಅನುಭಾವಿಗಳು ಈ ಚೇತನವನ್ನು ಬೆಳಕಿನ ರೂಪದಲ್ಲಿ ಕಾಣುವುದರಿಂದ'ಚಿತ್ಸೂರ್ಯ', 'ಬೆಳಗಿನ ಮೊತ್ತ', ತೇಜೋಮೂರ್ತಿ', 'ಶತಕೋಟಿ ಸೂರ್ಯರು ಅರಿಯದ ಬೆಳಗು'. ಆದರೆ ವೀರಶೈವರ ಸಚ್ಚಿದಾನಂದ ಅಥವಾ ಚಿದ್ಘನವು ಚಿದದ್ವೈತದ ನಿರ್ಗುಣ ಬ್ರಹ್ಮನಲ್ಲ. ವೀರಶೈವರು ಜಗತ್ತು ಮಿಥ್ಯೆಯಲ್ಲವೆಂದು ನಂಬುವುದರಿಂದ, ಆ ನಿಜವಾದ ಜಗತ್ತಿಗೆ ಒಂದು ಕಾರಣವಿರಲೇ ಬೇಕಾಗುತ್ತದೆ. ಆ ಕಾರಣವು ಚೈತನ್ಯವಾಗಿರುವುದರಿಂದ, ಅದು ನಿಷ್ಕ್ರಿಯವೂ ನಿರ್ಗುಣವೂ ಆಗಿರಲು ಸಾಧ್ಯವಿಲ್ಲ. ಅಂದರೆ, ಶಿವನಿಗೆ ಏನಿಲ್ಲವೆಂದರೂ ಜಗತ್ತನ್ನು ಸೃಷ್ಟಿಸುವ ಶಕ್ತಿಯಾದರೂ ಇರಬೇಕಾಗುತ್ತದೆ.

**೨. 'ಶಕ್ತಿ' ಪದದ ಅರ್ಥ**

'ಕುಂಬಾರನಿಗೆ ಮಡಕೆ ಮಾಡುವ ಶಕ್ತಿಯಿದೆ' ಮತ್ತು 'ಬೀಜಕ್ಕೆ ಮರವಾಗುವ ಶಕ್ತಿಯಿದೆ' ಎಂಬ ಎರಡು ವಾಕ್ಯ ಗಳನ್ನು ಗಮನಿಸಿದರೆ 'ಶಕ್ತಿ' ಪದವನ್ನು ಎರಡು ಭಿನ್ನ ಅರ್ಥಗಳಲ್ಲಿ ಬಳಸಲು ಸಾಧ್ಯವೆಂದಾಗುತ್ತದೆ. ಕುಂಬಾರನು ತನ್ನ ಬಲದ (ಶಕ್ತಿಯ) ದೆಸೆಯಿಂದಾಗಿ ಮಣ್ಣಿನ ಮುದ್ದೆಯನ್ನು ಮಡಕೆಯನ್ನಾಗಿ ಪರಿವರ್ತಿಸುತ್ತಾನೆ. ಆದರೆ ಬೀಜದಲ್ಲಿರುವ ಶಕ್ತಿಯು ತಾನೇ ಮರವಾಗುತ್ತದೆ. ಅಂದರೆ ಕುಂಬಾರನ ಬಲವು ಅವನ ಗುಣವೇ ವಿನಾ ಒಂದು ವಸ್ತುವಲ್ಲ. ಆದರೆ ಬೀಜದ ಶಕ್ತಿಯು ಒಂದು ವಸ್ತು, ಅಥವಾ ಬಲವು (ಶಕ್ತಿಯು). ಕುಂಬಾರನನ್ನು ಒಂದು ನಿಮಿತ್ತಕಾರಣವನ್ನಾಗಿ ಮಾಡಿದರೆ, ಬೀಜಶಕ್ತಿಯು ಬೀಜ ವನ್ನು ಉಪಾದಾನ ಕಾರಣವನ್ನಾಗಿ ಮಾಡುತ್ತದೆ. ಕುಂಬಾರನ ಬಲವು ಒಂದು ಗುಣವಾದುದರಿಂದ ಅದು ಮತ್ತೊಂದು ವಸ್ತು ವಾಗಿ ಪರಿವರ್ತಿತವಾಗಲಾರದು, ಅಥವಾ ಮತ್ತೊಂದು ವಸ್ತುವನ್ನು ಸೃಷ್ಟಿಸಲಾರದು. ಕುಂಬಾರನ ಬಲವು ತಾನೇ ಪರಿವರ್ತಿತ ವಾಗದೆ, ಮಣ್ಣನ್ನು ಮಡಕೆಯಾಗಿ ಪರಿವರ್ತಿಸುತ್ತದೆ. ಆದರೆ ಬೀಜಶಕ್ತಿಯು ಒಂದು ವಸ್ತುವಾದುದರಿಂದ, ಮತ್ತು ಆ ವಸ್ತು ವಿನಲ್ಲಿ ಮರವಾಗಲು ಬೇಕಾಗುವ ಅಂಶಗಳೆಲ್ಲವೂ ಅಡಕವಾಗಿರುವುದರಿಂದ, ಅದು ಮತ್ತೊಂದು ವಸ್ತು (ಮರ)ವಾಗಲು ಸಾಧ್ಯ ವಿದೆ. ಅಂದರೆ ಬಲವು ಪ್ರೇರೇಪಿಸಬಲ್ಲದು, ಶಕ್ತಿಯು ಸೃಷ್ಟಿಸಬಲ್ಲದು. ಶಕ್ತಿಯು ಸೃಷ್ಟಿಸದಿದ್ದರೆ, ಅಥವಾ ಜಡವಾಗಿದ್ದರೆ ಅದು ಶಕ್ತಿಯೇ ಅಲ್ಲ.

ಈ ಅರ್ಥದ ಹಿನ್ನೆಲೆಯಲ್ಲಿ ಶಿವತತ್ತ್ವವನ್ನು ಕುರಿತು ವಿವೇಚಿಸೋಣ. ಶೈವಸಿದ್ಧಾಂತ ಮತ್ತು ಮಾಧ್ವದರ್ಶನಗಳ ಪ್ರಕಾರ ಶಿವನು (ಅಥವಾ ಬ್ರಹ್ಮನು) ಪ್ರಪಂಚವನ್ನು ಸೃಷ್ಟಿಸಲು ಕೆಲವೊಂದು ಉಪಾದಾನಗಳನ್ನು ಅವಲಂಬಿಸುತ್ತಾನೆ. ಮಣ್ಣು, ಕೋಲು, ಚಕ್ರ ಮುಂತಾದ ವಸ್ತುಗಳಿಲ್ಲದಿದ್ದರೆ ಕುಂಬಾರನು ಹೇಗೆ ಮಡಕೆ ಮಾಡಲಾರನೋ, ಹಾಗೆಯೇ ಪ್ರಕೃತಿ, ಕಾಲ, ಜೀವ ಮುಂತಾದ ಉಪಾದಾನಗಳು ಇಲ್ಲದಿದ್ದರೆ, ಮಾಧ್ವರ ಬ್ರಹ್ಮ, ಶೈವಸಿದ್ಧಾಂತಿಗಳ ಶಿವ ಪ್ರಪಂಚವನ್ನು ಸೃಷ್ಟಿಸ ಲಾರರು. ಆದರೂ ಮಾಧ್ವರು ಮತ್ತು ಶೈವಸಿದ್ಧಾಂತಿಗಳು ತಮ್ಮ ಸೃಷ್ಟಿಕರ್ತನನ್ನು 'ಸರ್ವಶಕ್ತ'ನೆಂದೇ ಕರೆಯುತ್ತಾರೆ.

**೩. ವೀರಶೈವ ದರ್ಶನದಲ್ಲಿ 'ಶಕ್ತಿ' ಪದದ ಬಳಕೆ**

ಈಶ್ವರ ಕೃಷ್ಣನ ಸಾಂಖ್ಯದರ್ಶನದ ಪ್ರಕಾರ, ಪ್ರಕೃತಿಯು ಶಕ್ತಿಯ ಅಕ್ಷಯ ನಿಧಿ. ಬೀಜವು ಮರವಾಗಿ ಹೇಗೆ ಮಾರ್ಪಡುತ್ತದೆಯೋ ಹಾಗೆಯೇ ಅದು ಬುದ್ಧಿ, ಅಹಂಕಾರ, ಪಂಚಭೂತಗಳಾಗಿ ಮಾರ್ಪಡುತ್ತದೆ. ಅಲ್ಲದೆ ಇವೇ ತತ್ತ್ವಗಳು ಹಿಮ್ಮುಖವಾಗಿ ನಡೆದು ಪ್ರಕೃತಿಯ ಸಾಮ್ಯಾವಸ್ಥೆಯನ್ನು (ಪ್ರಲಯವನ್ನು) ತಲುಪುತ್ತವೆ. ಆದರೆ ಪ್ರಕೃತಿಯು ಪ್ರಲಯದಿಂದ ಸೃಷ್ಟಿಗೆ ಬದಲಾಗುವಾಗಲೇ ಆಗಲಿ, ಸೃಷ್ಟಿಯಿಂದ ಪ್ರಲಯಾವಸ್ಥೆಗೆ ಬದಲಾಗುವಾಗಲೇ ಆಗಲಿ, ಅಥವಾ ಸ್ಥಿತಿಯಲ್ಲಿರುವ ವಸ್ತುಗಳು ಭೌತಿಕವಾಗಿ ಅಥವಾ ರಾಸಾಯನಿಕವಾಗಿ ಬದಲಾಗುವಾಗಲೇ ಆಗಲಿ, ಅದು ನಿಮಿತ್ತಕಾರಣವನ್ನು ಅವಲಂಬಿಸು

ವುದಿಲ್ಲ. ಅದೇ ರೀತಿ ಚಾರ್ವಾಕರೂ, ಜೈನರೂ, ಸರ್ವಾಸ್ತಿವಾದಿಗಳೂ ಪ್ರಪಂಚದ ಅಸ್ತಿತ್ವಕ್ಕೆ ಹಾಗೂ ಬದಲಾವಣೆಗೆ ಲೌಕಿಕ ಶಕ್ತಿಗಳೇ ಕಾರಣವೆಂದೂ, ಯಾವ ಅಲೌಕಿಕ 'ಬಲ' ಬೇಕಿಲ್ಲವೆಂದೂ ನಂಬುತ್ತಾರೆ.

ಆದರೆ ಸೇಶ್ವರವಾದಿಗಳು (theists) 'ಶಕ್ತಿ' ಪದವನ್ನು ವಿವಿಧ ಅರ್ಥಗಳಲ್ಲಿ ಬಳಸುತ್ತಾರೆ. ಶೈವಸಿದ್ಧಾಂತಿಗಳ ಪ್ರಕಾರ ಸೃಷ್ಟಿಯ ಉಪಾದಾನ ಕಾರಣಗಳಲ್ಲೊಂದಾದ ಪ್ರಕೃತಿಯೂ ಒಂದು ಶಕ್ತಿ; ಶಿವನ ಆಜ್ಞೆಯ ಮೇರೆಗೆ ಸೃಷ್ಟಿ, ಸ್ಥಿತಿ ಮುಂತಾದ ಕಾರ್ಯಗಳನ್ನು ಮಾಡುವ ಇಚ್ಛಾಶಕ್ತಿ, ಜ್ಞಾನಶಕ್ತಿ ಮುಂತಾದ ಅಧಿದೇವತೆಗಳೂ ಶಕ್ತಿಗಳೇ; ಶಿವನಿಗೆ ಇರುವ ಬಲವೂ ಶಕ್ತಿಯೇ. ಮಾಧ್ವರ ವಿಷ್ಣುವಿಗೆ ಅಥವಾ ಶೈವಸಿದ್ಧಾಂತಿಗಳ ಶಿವನಿಗೆ ಶಕ್ತಿಯಿದೆ ಎಂದರೆ, ಪ್ರಲಯ ರೂಪದಲ್ಲಿರುವುದನ್ನು ಜಗತ್ತನ್ನಾಗಿ ಮಾಡುವ ಬಲವಿದೆ ಎಂದರ್ಥವೇ ವಿನಾ, ಅವನಲ್ಲಿರುವ ಶಕ್ತಿಯು (ಬಲವು) ಮಾರ್ಪಾಡಾಗುತ್ತದೆ ಎಂದರ್ಥವಲ್ಲ. ಪ್ರಕೃತಿಯು ಅವರ ಅಧೀನದಲ್ಲಿಯೇ ಇದ್ದರೂ, ಅದು ಅವರಲ್ಲಿ ಅಂತರ್ಗತವಾದ ಶಕ್ತಿಯಲ್ಲ-ಅವರ ಶಕ್ತಿಯಲ್ಲ. ಮರವಾಗುವ ಶಕ್ತಿಯು ಬೀಜದಲ್ಲಿ ಅಂತರ್ಗತವಾಗಿದೆ. ಆದರೆ ಆ ಬೀಜವು ನನ್ನ ಅಧೀನದಲ್ಲಿದೆ ಅಥವಾ ನನ್ನ ಜೇಬಿನಲ್ಲಿದೆ ಎಂದ ಮಾತ್ರಕ್ಕೆ ಆ ಬೀಜದ ಶಕ್ತಿ ನನ್ನಲ್ಲಿ ಅಂತರ್ಗತವಾಗಿದೆ, ಅಥವಾ ಅದು ನನ್ನ ಶಕ್ತಿ, ಎಂದರ್ಥವಲ್ಲ.

ಕಾಶ್ಮೀರಶೈವರೂ ವಿಶಿಷ್ಟಾದ್ವೈತಿಗಳೂ ವೀರಶೈವರೂ 'ಶಕ್ತಿ' ಪದವನ್ನು ಎರಡು ಅರ್ಥಗಳಲ್ಲಿಯೂ ಬಳಸುತ್ತಾರೆ. ವಿಶಿಷ್ಟಾದ್ವೈತದ ಪ್ರಕಾರ ಚಿತ್ತು ಮತ್ತು ಅಚಿತ್ತುಗಳ ಜಗತ್ತು ಬ್ರಹ್ಮನ ಶರೀರ ಮಾತ್ರವಲ್ಲ ಶಕ್ತಿಯೂ ಹೌದು. ಏಕೆಂದರೆ ಅದು ಬೀಜದಂತೆ ಒಂದು ಪರಿಣಾಮ ಉಂಟುಮಾಡಬಲ್ಲದು. ಆದರೆ ಅದರ ಪ್ರತಿ ಪರಿಣಾಮವೂ ಅಂತರ್ಯಾಮಿಯಾದ ಬ್ರಹ್ಮನಿಂದ ನಿಯಂತ್ರಿಸಲ್ಪಡುತ್ತದೆ. ಅದೇ ರೀತಿ, ಕಾಶ್ಮೀರಶೈವ ಮತ್ತು ವೀರಶೈವದರ್ಶನಗಳ ಪ್ರಕಾರ 'ಶಕ್ತಿ' ಪದವು ಜಡ ಮತ್ತು ಅಜಡ ಪ್ರಪಂಚವಾಗಿ ಮಾರ್ಪಡುವ ಜ್ಞಾನಶಕ್ತಿ, ಇಚ್ಛಾಶಕ್ತಿ ಮುಂತಾದ ಶಕ್ತಿಗಳಿಗೂ, ಈ ಶಕ್ತಿಗಳನ್ನು ಹೊಂದಿರುವ ಶಿವನ ಬಲಕ್ಕೂ ಅನ್ವಯಿಸುತ್ತದೆ.

ಶಕ್ತಿಯೆಂದರೆ ಬಲದಂತಹ ಒಂದು ಗುಣವಲ್ಲ, ಒಂದು ವಸ್ತುವಿನ ಜನನಕ್ಕೆ ಬೇಕಾಗುವ ಉಪಾದಾನ ಕಾರಣ ಎಂಬುದು ಮೇಲಿನ ಚರ್ಚೆಯಿಂದ ಸ್ಪಷ್ಟವಾಗುತ್ತದೆ. ವೀರಶೈವದರ್ಶನದಲ್ಲಿ ಶಕ್ತಿ ಪದವನ್ನು ಈ ವಿಶಿಷ್ಟ ಅರ್ಥದಲ್ಲಿಯೇ ಬಳಸಲಾಗಿದೆ ಎಂಬುದು ವಚನಗಳಿಂದ ವ್ಯಕ್ತವಾಗುತ್ತದೆ. ಉದಾಹರಣೆಗೆ ತೋಂಟದ ಸಿದ್ಧಲಿಂಗ ಶಿವಯೋಗಿಗಳ

> 'ಪರಶಿವನಿಂದ ಚಿಚ್ಛಕ್ತಿ; ಆ ಚಿಚ್ಛಕ್ತಿಯಿಂದ ಪರಾ, ಆದಿ,
> ಜ್ಞಾನ, ಕ್ರಿಯೆಯೆಂಬ ಪಂಚಕಲಾ ಶಕ್ತಿಯರುದಯವಾದರು ನೋಡಾ.
> ಆ ಕ್ರಿಯಾಶಕ್ತಿಯಿಂದ ನಿವೃತ್ತಿಕಲೆ; ಆ ನಿವೃತ್ತಿಕಲೆಯಿಂದ ಮಹಾಮಾಯೆ ಹುಟ್ಟಿತ್ತು ನೋಡಾ.
> ಆ ಮಹಾಮಾಯಾ ಶಕ್ತಿಯಿಂದ ಸಮಸ್ತ ಜಗತ್ತಿನ ಜನನ ನೋಡಾ' (ವ. ೬೫)

ಎಂಬ ವಚನವನ್ನು ಗಮನಿಸಿ.

ಶಕ್ತಿಯು 'ಒಳ್ಳೆಯತನ', 'ಮೃದುತ್ವ'ಗಳಂತೆ ಒಂದು ಅಮೂರ್ತ ಗುಣ(abstract quality)ವಾಗಿದ್ದರೆ, ಆದರಿಂದ ಜಗತ್ತನ್ನು–ಅಷ್ಟೇಕೆ, ಏನನ್ನೂ–ಸೃಷ್ಟಿಸಲು ಸಾಧ್ಯವಾಗುವುದಿಲ್ಲ. ಚಿತ್‌ಶಕ್ತಿಯು ಈ ಜಗತ್ತಿಗೆ ಕಾರಣವಾಗಿರುವುದನ್ನು (ಮೇಲಿನ ವಚನದಂತೆ) ನೋಡಿದರೆ, ಅದು ವಸ್ತುವೇ ವಿನಾ ಗುಣವಲ್ಲ ಎಂಬುದು ನಿರ್ವಿವಾದವಾಗುತ್ತದೆ.

ಈ ಪ್ರಸ್ತುತ ನಿಲುವು ಎರಡು ನಿಲುವುಗಳಿಗೆ ವಿರುದ್ಧವಾಗಿದೆ. (೧) ನಿಜಗುಣಶಿವಯೋಗಿಗಳು ಶಿವ–ಶಕ್ತಿ ಸಂಬಂಧವನ್ನು ವಿವರಿಸುವಾಗ ಶಿವನನ್ನು ಹೂವಿಗೂ ಶಕ್ತಿಯನ್ನು ಹೂವಿನಲ್ಲಿರುವ ವಾಸನೆಗೂ ಹೋಲಿಸುತ್ತಾರೆ. ಶಕ್ತಿಯು ವಾಸನೆಯಂಥ ಗುಣವಾದರೆ, ಪ್ರಪಂಚದಂಥ ವಸ್ತುವನ್ನು ಸೃಷ್ಟಿಸಲಾರದು ಎಂಬುದನ್ನು ಈಗಾಗಲೇ ತೋರಿಸಿಯಾಗಿದೆ. (ನಿಜಗುಣ ಶಿವಯೋಗಿಗಳ ಈ ಹೋಲಿಕೆಯು ಬೇರೆ ಅರ್ಥಗಳಲ್ಲಿ ಅರ್ಥಪೂರ್ಣವಾಗಿದೆ ಎಂಬುದನ್ನು ಮುಂದೆ ತೋರಿಸಲಾಗುವುದು). (೨) ದರ್ಶನಶಾಸ್ತ್ರವನ್ನು ಅಭ್ಯಾಸ ಮಾಡದವರು ಹಾಗೂ ಕೇವಲ ಧರ್ಮ(ಮತ)ವನ್ನು ಆಚರಿಸುವವರು ಶಕ್ತಿಯು ಈಶ್ವರನ ಹೆಂಡತಿಯೇ ವಿನಾ, ಉಪಾದಾನ ಕಾರಣದಂಥ ಒಂದು ನಿರ್ಜೀವ ವಸ್ತುವಲ್ಲ ಎಂದು ನಂಬುತ್ತಾರೆ. ಅದರ ಪ್ರಕಾರ ಪಾರ್ವತಿ, ಉಮೆ, ಮುಂತಾದ ಹೆಸರುಗಳು ಶಕ್ತಿಯೆಂಬ ಹೆಂಗಸಿನ ವಿವಿಧ ಹೆಸರುಗಳು. ಕೆಲವು ವಚನಕಾರರೂ ಸಹ 'ಶಕ್ತಿ' ಪದವನ್ನು ಸ್ತ್ರೀವಾಚಕವಾಗಿಯೇ ಬಳಸುತ್ತಾರೆ. ಉದಾಹರಣೆಗೆ 'ಸತ್ತುಚಿತ್ತಾನಂದ ನಿತ್ಯ ಪರಿಪೂರ್ಣವಪ್ಪ ಪರಶಿವನ ಚಿತ್ಪ್ರಾಣಶಕ್ತಿಯಿಂದ ಪರಮಜ್ಞಾನ ಶಕ್ತಿ ಉದಯಿಸಿದಳು ನೋಡಾ' (ವಚನ ೪೪), 'ನಿಃಕಲ ಶಿವನ ಮಧ್ಯದಲ್ಲಿ ಚಿಚ್ಛಕ್ತಿ ಉದಯಿಸಿದಳು......' (ವಚನ ೬೩) (ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು); 'ಲೀಲೆಯಾದೊಡೆ ಉಮಾಪತಿ, ಲೀಲೆ ತಪ್ಪಿದೊಡೆ ಸ್ವಯಂಭೂ' (ಅಲ್ಲಮ ಪ್ರಭುದೇವರ ವಚನಗಳು, ೧೪೫), ಇತ್ಯಾದಿ, ಇತ್ಯಾದಿ. ಆದರೆ ಶಕ್ತಿಯನ್ನು ಶಿವನ ಹೆಂಡತಿ ಎಂದು ಭಾವಿಸಿದರೆ ಆಕೆಗೆ ಜಗತ್ತನ್ನು ಸೃಷ್ಟಿಸುವ ಶಕ್ತಿಯನ್ನು ಆರೋಪಿಸಬೇಕಾಗುತ್ತದೆ. ಆಗ

ಶಕ್ತಿಗೆ ಶಕ್ತಿಯನ್ನು ಆರೋಪಿಸುವುದು ಅರ್ಥಹೀನವಾಗುವುದೂ ಅಲ್ಲದೆ, ಶಿವನು ಜಗತ್ತನ್ನು ಸೃಷ್ಟಿಸುತ್ತಾನೆ ಎಂದು ಹೇಳುವುದೂ ತಪ್ಪಾಗುತ್ತದೆ. ಆದ್ದರಿಂದ ಶಕ್ತಿಯನ್ನು ಶಿವನ ಹೆಂಡತಿ ಎಂದಾಗ ಆ ಭಾಷೆ ಪೌರಾಣಿಕವೇ ವಿನಾ ದಾರ್ಶನಿಕವಲ್ಲ.

ವೀರಶೈವ ದರ್ಶನದಲ್ಲಿ ಶಕ್ತಿಯಿಂದಾಗುವ ಉತ್ಪತ್ತಿಯನ್ನು ಬೀಜದಿಂದಾಗುವ ಮರದ ಉತ್ಪತ್ತಿಗೆ ಹೋಲಿಸಲಾಗುತ್ತದೆ. ಈ ಅರ್ಥದಲ್ಲಿ ಬೀಜಕ್ಕೆ ಮರವನ್ನು ಉತ್ಪತ್ತಿಮಾಡುವ ಶಕ್ತಿಯಿದೆ ಎಂದರೂ ಒಂದೇ, ಬೀಜವೆಂಬ ಶಕ್ತಿಯೇ ಮರವಾಗುತ್ತದೆ ಎಂದರೂ ಒಂದೇ. ಅದೇ ರೀತಿ ಶಕ್ತಿಗೆ ಪ್ರಪಂಚವನ್ನು ಉತ್ಪತ್ತಿಮಾಡುವ ಶಕ್ತಿ ಇದೆ ಎಂದರೂ ಒಂದೇ,ಶಕ್ತಿಯೇ ಪ್ರಪಂಚವಾಗಿ ಮಾರ್ಪಡುತ್ತದೆ ಎಂದರೂ ಒಂದೇ. ಒಂದು ವೇಳೆ ಶಕ್ತಿಯನ್ನು ಒಬ್ಬ ಹೆಂಗಸೆಂದು ಭಾವಿಸಿದರೆ ಹೀಗೆನ್ನಲು ಬರುವುದಿಲ್ಲ. ಹೆಂಗಸಿಗೆ ಮಗುವಿಗೆ ಜನನ ಕೊಡುವ ಶಕ್ತಿಯಿದೆ ಎನ್ನಬಹುದೇ ವಿನಾ, ಹೆಂಗಸು ಮಗುವಾಗಿ ಮಾರ್ಪಡುತ್ತಾಳೆ ಎನ್ನಲು ಬರುವುದಿಲ್ಲ. ಆದ್ದರಿಂದ, ಶಕ್ತಿಯು ಚಿದ್ವಸ್ತು ಹಾಗೂ ಅಚಿದ್ವಸ್ತುಗಳನ್ನು ಸೃಷ್ಟಿಸಲು ಬೇಕಾಗುವ ಒಂದು ಉಪಾದಾನ ಕಾರಣವೇ ವಿನಾ, ಒಬ್ಬ ಹೆಂಗಸಲ್ಲ. ಆದ್ದರಿಂದಲೇ ಬಹಳಷ್ಟು ವಚನಕಾರರು 'ಶಕ್ತಿ'ಯನ್ನು ನಪುಂಸಕಲಿಂಗವೆಂದೇ ಬಳಸುತ್ತಾರೆ. ಸ್ತ್ರೀವಾಚಕವಾಗಿ ಬಳಸಿದಾಗಲೂ ಅದು ಒಂದು ತತ್ತ್ವವನ್ನು ಸೂಚಿಸುತ್ತದೆ. ಕೇವಲ ಪುರುಷನು–ಸ್ತ್ರೀಯ ನೆರವಿಲ್ಲದೆಯೇ–ಹೇಗೆ ಮಗುವಿಗೆ ಜನನವನ್ನು ಕೊಡಲಾರನೋ, ಹಾಗೆಯೇ ಕೇವಲ ಶಿವನು–ಶಕ್ತಿಯ ನೆರವಿಲ್ಲದೆ–ಜಗತ್ತನ್ನು ನಿರ್ಮಿಸಲಾರ ಎಂಬುದೇ ಆ ತತ್ವ. ಚಿದದ್ವೈತದ ನಿರ್ಗುಣ ಬ್ರಹ್ಮನು ಸೃಷ್ಟಿಕರ್ತನಲ್ಲ ಎಂಬುದನ್ನು ನಾವಿಲ್ಲಿ ನೆನೆಯಬಹುದು.

**೪. ಶಿವ ಮತ್ತು ಶಕ್ತಿತತ್ವಗಳ ಸಂಬಂಧ**

ಸಾಂಖ್ಯ, ಚಾರ್ವಾಕ, ಸರ್ವಾಸ್ತಿವಾದಿ ಮತ್ತು ಜೈನದರ್ಶನಗಳು ವಿಶ್ವದ ಉತ್ಪತ್ತಿಗೆ ಶಕ್ತಿ ಆವಶ್ಯಕವೆಂದು ಗಣಿಸಿದರೂ, ಆ ಶಕ್ತಿಯನ್ನು ಮೀರಿದ ಮತ್ತು ಅದನ್ನು ನಿಯಂತ್ರಿಸುವ ಈಶ್ವರನು ಇಲ್ಲವೆಂದು ವಾದಿಸುತ್ತವೆ. ಈ ದರ್ಶನಗಳಲ್ಲಿ ಬರುವ ಅದೃಷ್ಟ ಅಥವಾ ಕರ್ಮವು ಅಚೇತನವಾದುದರಿಂದ, ಅದಕ್ಕೆ ನಿಮಿತ್ತ ಕಾರಣದ ಸ್ಥಾನವಿಲ್ಲ. ಆದ್ದರಿಂದ ಈ ದರ್ಶನಗಳಲ್ಲಿ ಶಕ್ತಿಯನ್ನು ಯಾವ ನಿಮಿತ್ತ ಕಾರಣದ ಜೊತೆಗೂ ಸಂಬಂಧಿಸುವ ಸಮಸ್ಯೆ ಏಳುವುದಿಲ್ಲ. ಅದೇ ರೀತಿ ಚಿದದ್ವೈತದಲ್ಲಿಯೂ ಆದರೆ ಬೇರೊಂದು ಕಾರಣಕ್ಕಾಗಿ ಅಂಥ ಸಮಸ್ಯೆಗೆ ಅವಕಾಶವಿಲ್ಲ. ಈ ಅದ್ವೈತದ ಪ್ರಕಾರ ವಿಶ್ವವು ಕೇವಲ ಭ್ರಮೆಯೇ ವಿನಾ, ಬ್ರಹ್ಮನ ಸೃಷ್ಟಿಯಲ್ಲಿ ಹಾವೆಂಬ ಭ್ರಮೆಗೆ ಹಗ್ಗವು ಹೇಗೆ ಆಧಾರವೋ ಹಾಗೆಯೇ ವಿಶ್ವವೆಂಬ ಭ್ರಮೆಗೆ ಬ್ರಹ್ಮನು ಆಧಾರ. ಅಂದರೆ ಶಕ್ತಿಯು ಭ್ರಮೆಯಾದ್ದರಿಂದ ಅದನ್ನು ಬ್ರಹ್ಮನಂಥ ಉಪಾದಾನ ಕಾರಣದೊಂದಿಗೆ ಸಂಬಂಧಿಸುವ ಪ್ರಶ್ನೆಯೇ ಏಳುವುದಿಲ್ಲ.

ಶೈವ ಸಿದ್ಧಾಂತಿಗಳೂ ಮಾಧ್ವರೂ ಶಕ್ತಿ ಮತ್ತು ಶಕ್ತ (ಶಿವ–ಬ್ರಹ್ಮ) ಎರಡಕ್ಕೂ ಮಾನ್ಯತೆ ನೀಡಿದರೂ ಅವುಗಳಿಗಿರುವ ಸಂಬಂಧವನ್ನು ಬಾಹ್ಯವೆಂದು ಪರಿಗಣಿಸುತ್ತಾರೆ. ಕುಂಬಾರ ಮತ್ತು ಮಣ್ಣುಗಳ ನಡುವಿನ ಸಂಬಂಧ ಬಾಹ್ಯ. ಅಂದರೆ, ಕುಂಬಾರ ಮಣ್ಣಿನ ಹೊರಗೂ, ಮಣ್ಣು ಕುಂಬಾರನ ಹೊರಗೂ ಇರುವುದಲ್ಲದೆ, ಯಾವ ಸಮಯದಲ್ಲೇ ಆಗಲಿ ಅವು ಒಂದನ್ನೊಂದು ಒಳಗೊಳ್ಳುವುದಿಲ್ಲ. ಅದೇ ರೀತಿ ಶೈವಸಿದ್ಧಾಂತಿಗಳ ಶಿವ ಅಥವಾ ಮಾಧ್ವರ ಬ್ರಹ್ಮ ಶಕ್ತಿ(ಪ್ರಕೃತಿ)ಯ 'ಹೊರಗೆ' ಇದ್ದುಕೊಂಡೇ ಅದನ್ನು ಮಾರ್ಪಾಡು ಮಾಡುತ್ತಾನೆ. ಪ್ರಪಂಚವು ಅವನ ಶರೀರವೂ ಅಲ್ಲ ಅಥವಾ ಅವನ ಯಾವುದೇ ಭಾಗ ಅಥವಾ ಅಂಶವೂ ಅಲ್ಲ. ಅವನು ಯಾವಾಗಲೂ ವಿಶ್ವಾತೀತ.

ವಿಶಿಷ್ಟಾದ್ವೈತಿಗಳು ಬ್ರಹ್ಮ ಮತ್ತು ಶಕ್ತಿಯರ ಸಂಬಂಧವನ್ನು ಆಂತರಿಕವೆಂದು ಪರಿಗಣಿಸುತ್ತಾರೆ. ಅವರು ಶಕ್ತಿಯು ಬ್ರಹ್ಮನ ಶರೀರವೆಂದೂ, ಬ್ರಹ್ಮನು ಆ ಶರೀರದಲ್ಲಿರುವ ಆತ್ಮ(ಶರೀರಿ)ಎಂದೂ ಭಾವಿಸುತ್ತಾರೆ. ನಮ್ಮ ಶರೀರದ ಪ್ರತಿಯೊಂದು ಭಾಗದ ಇರವು ಹಾಗೂ ಕಾರ್ಯ ಹೇಗೆ ಆತ್ಮವನ್ನು ಅವಲಂಬಿಸುತ್ತವೆಯೋ ಹಾಗೆಯೇ ಪ್ರಪಂಚದ ಪ್ರತಿ ಭಾಗದ ಇರವು ಹಾಗೂ ಕಾರ್ಯಗಳು ಬ್ರಹ್ಮವನ್ನೇ ಅವಲಂಬಿಸಿವೆ. ಅಲ್ಲದೆ ಶಕ್ತಿ ಮತ್ತು ಬ್ರಹ್ಮ, ದೇಹ ಮತ್ತು ಆತ್ಮಗಳಂತೆ ಅನ್ಯೋನ್ಯವಾಗಿವೆ.

ವೀರಶೈವರ ಪ್ರಕಾರ ಶಕ್ತಿ ಮತ್ತು ಶಿವತತ್ತ್ವಗಳ ಸಂಬಂಧ ವಿಶಿಷ್ಟಾದ್ವೈತದ ಬ್ರಹ್ಮ–ಶಕ್ತಿಗಳ ಸಂಬಂಧದಂತೆ ಕೇವಲ ಆಂತರಿಕವಷ್ಟೇ ಅಲ್ಲದೆ ಪ್ರತ್ಯೇಕಿಸಲಾರದಷ್ಟು ಗಾಢವೂ ಆಗಿದೆ. ವಿಶಿಷ್ಟಾದ್ವೈತಿಗಳೂ ಬ್ರಹ್ಮ ಮತ್ತು ಶಕ್ತಿಗಳ ಸಂಬಂಧವನ್ನು ಅಪೃಥಕ್ ಸಿದ್ಧಿ ಎಂದೇ ಕರೆದರೂ ಅದು ನಿಜವಾದ ಅವಿನಾಭಾವ ಸಂಬಂಧವಲ್ಲ. ಏಕೆಂದರೆ, ಬ್ರಹ್ಮನು ಜಗತ್ತನ್ನು ಯಾವ ರೀತಿಯಲ್ಲಿಯೂ ಅವಲಂಬಿಸುವುದಿಲ್ಲ. ಅಲ್ಲದೆ ಅದು ಅವನೊಡನೆ, ಅಥವಾ ಅವನು ಅದರೊಡನೆ ಪ್ರಲಯ ಕಾಲದಲ್ಲಿ ಬೆರೆಯುವುದಿಲ್ಲ. ಆದರೆ ವೀರಶೈವರು ಶಿವ–ಶಕ್ತಿಯರ ಸಂಬಂಧ ಯಾವಾಗಲೂ ಅವಿಭಾಜ್ಯ ಎಂದು ನಂಬುತ್ತಾರೆ.

ಶಿವ ಮತ್ತು ಶಕ್ತಿ ತತ್ತ್ವಗಳ ಸಂಬಂಧವನ್ನು ಸ್ಪಷ್ಟಪಡಿಸಲು ವಚನಕಾರರು ಅನೇಕ ರೀತಿಯ ಉಪಮೆಗಳನ್ನು ಬಳಸಿದ್ದಾರೆ. ಅವುಗಳಲ್ಲಿ ಕೆಲವು ಆ ಸಂಬಂಧವನ್ನು ಸ್ಪಷ್ಟಪಡಿಸಿದರೆ, ಮತ್ತೆ ಕೆಲವು ಸ್ಪಷ್ಟತೆಗೆ ಧಕ್ಕೆ ತರುತ್ತವೆ. ಕೆಲ ವಚನಕಾರರು

ಈ ಸಂಬಂಧವನ್ನು ಗಂಡ-ಹೆಂಡಿರ ಸಂಬಂಧಕ್ಕೆ ಹೋಲಿಸುತ್ತಾರೆ. ಈ ಹೋಲಿಕೆಯು ಒಂದೆ ತೋರಿಸಿದ ದೋಷಕ್ಕೊಳಗಾಗುವುದೂ ಅಲ್ಲದೆ ಮುಖ್ಯವಾದ ಮತ್ತೆ ಮೂರು ದೋಷಕ್ಕೊಳಗಾಗುತ್ತದೆ. (೧) ಶಕ್ತಿಯನ್ನು ಶಿವನ ಹೆಂಡತಿ ಎಂದು ಭಾವಿಸಿದರೆ, ಆಗ ಶಿವ ಮತ್ತು ಶಕ್ತಿ ಎಂಬ ಎರಡು ತತ್ತ್ವಗಳಿರ ಬೇಕಾಗುತ್ತದೆ. ಆಗ ವೀರಶೈವದರ್ಶನವನ್ನು ಒಂದು ರೀತಿಯ ಅದ್ವೈತ (ಶಕ್ತಿವಿಶಿಷ್ಟಾದ್ವೈತ) ಎಂದು ಕರೆಯುವುದು ಸಾಧ್ಯವಾಗದು. (೨) ಅಲ್ಲದೆ, ಒಂದು ವ್ಯಕ್ತಿಯನ್ನು ಮತ್ತೊಂದು ವ್ಯಕ್ತಿಯ ಗುಣ (ವಿಶೇಷಣ)ಎಂದು ಕರೆಯುವುದು ಅಸಾಧುವಾಗುತ್ತದೆ. (೩) ಗಂಡ--ಹೆಂಡಿರ ಸಂಬಂಧ ಎಷ್ಟೇ ಅನ್ಯೋನ್ಯವಾಗಿದ್ದರೂ ಅದು ಕಾಲದ ಯಾವುದೋ ಒಂದು ಭಾಗದಲ್ಲಿ ಪ್ರಾರಂಭವಾಗುತ್ತದೆ, ಹಾಗೂ ಮತ್ತಾವಾಗಲೋ ಕೊನೆಗೊಳ್ಳುತ್ತದೆ. ಆದ್ದರಿಂದ ಈ ಉಪಮೆ ಶಿವ–ಶಕ್ತಿಯರ ಸಂಬಂಧವು ಅವಿನಾಭಾವವೂ, ಅನಾದಿ-ಅನಂತವೂ ಆಗಿದೆಯೆಂದು ಸ್ಪಷ್ಟಪಡಿಸುವುದಿಲ್ಲ.

'ಸಿದ್ಧಾಂತ ಶಿಖಾಮಣಿ'ಯ ಕರ್ತೃವು ಶಿವ–ಶಕ್ತಿಗಳ ಸಂಬಂಧವನ್ನು ಕುಂಬಾರ–ಮಣ್ಣುಗಳ ಸಂಬಂಧಕ್ಕೆ ಹೋಲಿಸಿ, ಅದೇ ಪುಸ್ತಕದಲ್ಲಿ ಹಾವು–ಹಗ್ಗಗಳ ಸಂಬಂಧಕ್ಕೂ ಹೋಲಿಸುತ್ತಾನೆ (ನೋಡಿ, 'ಸಿದ್ಧಾಂತ ಶಿಖಾಮಣಿ' ಅಧ್ಯಾಯ IX, ಶ್ಲೋಕ ೫೦ : ಅಧ್ಯಾಯ X, ಶ್ಲೋಕ, ೬, ೭, ೮). ಆದರೆ ಇವೆರಡೂ ವೀರಶೈವೇತರ ಉಪಮೆಗಳು. ಅಂದರೆ, ವೀರಶೈವರು ಪ್ರಪಂಚವನ್ನು (ಶಕ್ತಿಯನ್ನು) ಶಿವನಷ್ಟೇ ಸತ್ಯವೆಂದು ಪರಿಗಣಿಸುವುದರಿಂದ, ಅದ್ವೈತಿಗಳು ಕೊಡುವ ಹಾವು–ಹಗ್ಗದ ಸಂಬಂಧದ ಹೋಲಿಕೆ ತೀರಾ ಅಸಂಬದ್ಧವಾಗುತ್ತದೆ. ಅದೇ ರೀತಿ, ವೀರಶೈವರ ಶಿವ ಮತ್ತು ಶಕ್ತಿಗಳ ಸಂಬಂಧವು ಅವಿನಾಭಾವವಾದುದರಿಂದ ಅದು ಕುಂಬಾರ–ಮಣ್ಣುಗಳ ಸಂಬಂಧಕ್ಕೆ ಹೋಲುವದಿಲ್ಲ. ಈ ಕಾರಣಕ್ಕಾಗಿ 'ಸಿದ್ಧಾಂತಶಿಖಾಮಣಿ'ಯ ಕರ್ತೃವಿಗೆ ವೀರಶೈವದರ್ಶನದ ಖಚಿತಜ್ಞಾನ ಇದ್ದಂತೆ ಕಾಣುವುದಿಲ್ಲ ಎಂದು ಹೇಳಬೇಕಾಗುತ್ತದೆ.

ಮತ್ತೆ ಕೆಲ ವಚನಕಾರರು ಶಿವ–ಶಕ್ತಿಗಳ ಸಂಬಂಧವನ್ನು ದ್ರವ್ಯ ಮತ್ತು ಅದರ ಗುಣಗಳ ಸಂಬಂಧಕ್ಕೆ ಹೋಲಿಸುತ್ತಾರೆ. ಗುಣವು ದ್ರವ್ಯದ ಹೊರತಾಗಿ ಇರಲು ಹೇಗೆ ಸಾಧ್ಯವಿಲ್ಲವೋ, ಹಾಗೆಯೇ ಶಕ್ತಿಯು ಶಿವನಿಲ್ಲದೆ ಇರಲು ಸಾಧ್ಯವಿಲ್ಲ ಎಂಬುದೇ ಇವರರ್ಥ. ಆದರೆ ಈ ಹೋಲಿಕೆ ಅಪೂರ್ಣವೂ ಅಪಾರ್ಥವುಳ್ಳದ್ದೂ ಆಗಿದೆ.

ದ್ರವ್ಯ–ಗುಣದ ಉಪಮೆಯನ್ನೂ ಗಂಡ–ಹೆಂಡತಿ ಉಪಮೆಯನ್ನೂ ಆಂಶಿಕವಾಗಿ ಉಪಯೋಗಿಸಿಕೊಂಡು ಹೀಗೆ ಹೇಳಬಹುದು. ಗುಣವು ದ್ರವ್ಯದೊಂದಿಗೆ (ಉದಾ : ವಾಸನೆ ಹೂವಿನೊಂದಿಗೆ) ಹೇಗೆ ಅವಿಭಾಜ್ಯ ಸಂಬಂಧವನ್ನು ಹೊಂದಿದೆಯೋ ಹಾಗೆಯೇ ಶಕ್ತಿಯು ಶಿವನೊಂದಿಗೆ ಅವಿಭಾಜ್ಯವಾಗಿ ಸಂಬಂಧಿಸಿದೆ; ಸ್ತ್ರೀಯು ಪುರುಷನ ಸಹಯೋಗವಿಲ್ಲದೆ ಹೇಗೆ ಸಂತಾನೋತ್ಪತ್ತಿ ಮಾಡಲಾರಳೋ ಹಾಗೆಯೇ ಶಕ್ತಿಯು ಶಿವನ ಸಹಯೋಗವಿಲ್ಲದೆ ವಿಶ್ವೋತ್ಪತ್ತಿಗೆ ಕಾರಣವಾಗಲಾರದು.

ಹೀಗೆ ಎರಡೂ ತತ್ತ್ವಗಳ ಅನಿವಾರ್ಯತೆಯನ್ನು ಗಮನಿಸಿದವರೇ ಸೃಷ್ಟಿಕರ್ತನನ್ನು ಅರ್ಧನಾರೀಶ್ವರನಂತೆ ಕಲ್ಪಿಸಿಕೊಂಡಿರಬೇಕು. ಅರ್ಧನಾರೀಶ್ವರ ಕಲ್ಪನೆಯು ವೀರಶೈವರ ವೈಶಿಷ್ಟ್ಯವೇನಲ್ಲ. ಈ ಕಲ್ಪನೆಯು ನಿಷ್ಕೃಷ್ಟವಾಗಿಯಲ್ಲದಿದ್ದರೂ ಸಾಕಷ್ಟು ಪರಿಣಾಮಕಾರಿಯಾಗಿ ವೀರಶೈವ ತತ್ತ್ವವನ್ನು–ಪರವಸ್ತುವು ಕೇವಲ ಚಿದ್ವಸ್ತುವೂ ಅಲ್ಲ, ಕೇವಲ ಭೌತವಸ್ತುವೂ ಅಲ್ಲ. ಇವೆರಡರ ಅವಿಭಾಜ್ಯ ಸಂಪುಟ ಎಂಬುದನ್ನು–ಸಾರುತ್ತದೆ.

ಇಂಥ ಒಂದು ತತ್ತ್ವವನ್ನು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಬೀಜ–ವೃಕ್ಷ, ಅಂಡ–ಪಕ್ಷಿ ಉಪಮೆಗಳು ಮತ್ತೂ ಸ್ಪಷ್ಟಪಡಿಸುತ್ತವೆ. ಬೀಜದಲ್ಲಿ ವೃಕ್ಷವು ಅಥವಾ ಪೊಟ್ಟೆಯಲ್ಲಿರುವ ಹಕ್ಕಿಯು ಹೇಗೆ ಅವ್ಯಕ್ತರೂಪದಲ್ಲಿರುತ್ತದೆಯೋ ಹಾಗೆ ವಿಶ್ವವು ಶಿವನ ಶಕ್ತಿಯಲ್ಲಿ ಅವ್ಯಕ್ತವಾಗಿ ಅಡಗಿರುತ್ತದೆ ಎಂಬುದೇ ಈ ಉಪಮೆಗಳ ಅರ್ಥ. ಜಗತ್ತನ್ನು ಸೃಷ್ಟಿಸಲು ಬೇಕಾಗುವ ಉಪಾದಾನ ಕಾರಣವು (ಶಕ್ತಿಯು) ಮೊದಲೇ ಶಿವನಲ್ಲಿತ್ತು, ಅವನ ಹೊರಗಿರಲಿಲ್ಲ ಎಂಬುದನ್ನು ಈ ವಚನಗಳು ಎಷ್ಟೊಂದು ಸಮರ್ಥವಾಗಿ ಪ್ರತಿಪಾದಿಸುತ್ತವೆ ಎಂಬುದನ್ನು ನೋಡಿ:

> ಆ ಲಿಂಗದ ಮಧ್ಯದಲ್ಲಿ ಬೀಜದಿಂದ ವೃಕ್ಷವು ಉದಯವಾಗುವ ಹಾಗೆ
> ಆ ಲಿಂಗವು ತನ್ನ ಇಚ್ಛಾಶಕ್ತಿಯ ಕೂಡಿಕೊಂಡು
> ಜಗದುತ್ಪತ್ತಿ ಸ್ಥಿತಿ ಲಯಂಗಳಿಗೆ ಕರ್ತುವಾಗಿ
> ... ... ... ... ... ... ... ... (ತೋಂಟದ ಸಿದ್ಧಲಿಂಗ ಶಿವಯೋಗಿಗಳ ವಚನಗಳು, ೬೭)
> ನಮ್ಮ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನು
> ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ
> ... ... ... ... ... ... ... (ಉರಿಲಿಂಗಪೆದ್ದಿಗಳ ವಚನಗಳು, ೨೫೫)

ವಿಶಿಷ್ಟಾದ್ವೈತವೂ ಬ್ರಹ್ಮ ಮತ್ತು ಶಕ್ತಿಗಳ ಸಂಬಂಧವನ್ನು ಅಪೃಥಕ್‌ಸಿದ್ಧಿಯೆಂದೇ ಪ್ರತಿಪಾದಿಸುವುದರಿಂದ ಅದಕ್ಕೂ ಶಕ್ತಿವಿಶಿಷ್ಟಾದ್ವೈತಕ್ಕೂ ವ್ಯತ್ಯಾಸವೇನಿಲ್ಲ ಎಂದು ಯಾರಾದರೂ ದೂಷಿಸಬಹುದು. ಆದರೆ ಈ ದೂಷಣೆ ಒಂದು ತಪ್ಪು

ಕಲ್ಪನೆಯನ್ನು ಅವಲಂಬಿಸಿದೆ. ವಿಶಿಷ್ಟಾದ್ವೈತದ ಪ್ರಕಾರ ಶಕ್ತಿಯು (ಪ್ರಪಂಚವು) ಬ್ರಹ್ಮನ ದೇಹವೇ ಆದರೂ, ಬ್ರಹ್ಮನು ಮಾತ್ರ ದೇಹವಿಲ್ಲದೆ ಇರಬಹುದು–ಆತ್ಮನು ಮುಕ್ತಸ್ಥಿತಿಯಲ್ಲಿ ದೇಹವಿಲ್ಲದೆ ಇರುವಂತೆ. ಅದರ ಪ್ರಕಾರ, ಬ್ರಹ್ಮನು ಪ್ರಲಯ ಕಾಲದಲ್ಲಿ ಜಗತ್ತಿನಿಂದ ದೂರವಿದ್ದು, ಸೃಷ್ಟಿಯ ಕಾಲದಲ್ಲಿ ಅದನ್ನು ಪ್ರವೇಶಿಸಿ, ಅದನ್ನು ಆಳುತ್ತಾನೆ. ಅದೇ ರೀತಿ ಮುಕ್ತಾತ್ಮನೂ ಸಹ ಬ್ರಹ್ಮನ ಹತ್ತಿರ ಬರಬಲ್ಲನೇ ವಿನಾ ಅವನಲ್ಲಿ ಐಕ್ಯವಾಗುವುದಿಲ್ಲ. ಆದರೆ ವೀರಶೈವರ ಪ್ರಕಾರ, ಶಕ್ತಿ ಮತ್ತು ಶಿವ ತತ್ತ್ವಗಳ ನಡುವೆ ಎಲ್ಲ ಕಾಲಗಳಲ್ಲಿಯೂ ಅನ್ಯೋನ್ಯ ಸಂಬಂಧವಿರುತ್ತದೆ. ಚಿತ್-ಶಕ್ತಿಯ ಒಂದಂಶವಾದ ಆತ್ಮನು ಮೋಕ್ಷ ಸ್ಥಿತಿಯಲ್ಲಿ ಶಿವನಲ್ಲಿ ಪೂರ್ಣವಾಗಿ ಬೆರೆಯುತ್ತಾನೆ. ಪ್ರಲಯ ಕಾಲದಲ್ಲಿ ಶಕ್ತಿಯು (ಚಿತ್ ಮತ್ತು ಉಳಿದ ಶಕ್ತಿಗಳು) ಶಿವನಲ್ಲಿ ಗುರುತಿಸಲಾರದಷ್ಟು ಅನ್ಯೋನ್ಯವಾಗಿ ಬೆರೆತಿರುತ್ತವೆ. ಈ ಕಾರಣಕ್ಕಾಗಿಯೇ ಶಿವನನ್ನು ಶಕ್ತಿವಿಶಿಷ್ಟನೆಂದು ಕರೆಯುವುದು. ಶಿವ ನಿಲ್ಲದ ಶಕ್ತಿಯು ಹೇಗೆ ಸಾಂಖ್ಯರ ಪ್ರಕೃತಿಯಾಗುತ್ತದೆಯೋ, ಹಾಗೆಯೇ ಶಕ್ತಿಯಿಲ್ಲದ ಶಿವನು ಚಿದದ್ವೈತದ ನಿರ್ಗುಣ, ನಿಷ್ಕ್ರಿಯ ಬ್ರಹ್ಮನಾಗುತ್ತಾನೆ. ಪ್ರಕೃತಿ ಶಿವನಿಲ್ಲದೆ ಸೃಷ್ಟಿಸಬಲ್ಲದು ಎಂದರೆ ಹೇಗೆ ಅಸ್ವೀಕಾರಾರ್ಹವಾಗುತ್ತದೆಯೋ ಹಾಗೆ ಬ್ರಹ್ಮನು ಶಕ್ತಿಯಿಲ್ಲದೆಯೂ (ನಿರ್ಗುಣವಾಗಿಯೂ) ಸೃಷ್ಟಿಸಬಲ್ಲ ಎಂದರೆ ಅಸ್ವೀಕಾರಾರ್ಹವಾಗುತ್ತದೆ. ಈ ಕಾರಣಕ್ಕಾಗಿಯೇ ವೀರಶೈವರು ಸೃಷ್ಟಿ ಮುಂತಾದ ಯಾವುದೇ ಕಾರ್ಯಕ್ಕೆ ಚೈತನ್ಯ (ಶಿವ) ಮತ್ತು ಶಕ್ತಿ ಎರಡೂ ಬೇಕು ಎಂದು ಹೇಳುವರಲ್ಲದೆ, ಆ ಎರಡು ತತ್ತ್ವಗಳು ಅವಿಭಾಜ್ಯವಾಗಿರಬೇಕೆಂದೂ ಹೇಳುತ್ತಾರೆ. ಆದರೂ ಇವುಗಳಲ್ಲಿ ಶಿವತತ್ತ್ವವೇ ಮೇಲು. ಏಕೆಂದರೆ ಶಕ್ತಿಯು ಚಲಿಸುವುದೂ ಸೃಷ್ಟಿಸುವುದೂ ಶಿವನ ಇಚ್ಛೆಯಿಂದಲೇ.

ಈ ಕಾರಣಕ್ಕಾಗಿ ಶಿವನೇ ಪರವಸ್ತು ಎಂದಾಗ, ಶಕ್ತಿಯ ಹೊರತಾದ ಶಿವ ಎಂದರ್ಥವಾಗದೆ, ಶಕ್ತಿಸಹಿತನಾದ–ಶಕ್ತಿವಿಶಿಷ್ಟನಾದ–ಶಿವ ಎಂದರ್ಥವಾಗುತ್ತದೆ. ಅದೇ ರೀತಿ ಶಕ್ತಿಯು ಸೃಷ್ಟಿಯ ಉಪಾದಾನ ಕಾರಣ ಎಂದಾಗ ಶಿವನ ಹೊರತಾದ ಶಕ್ತಿ ಎಂದರ್ಥವಾಗದೆ ಶಿವನಿಂದ ಕೂಡಿದ ಶಕ್ತಿ ಎಂದರ್ಥವಾಗುತ್ತದೆ. ಅಂದರೆ, ಶಿವ ಮತ್ತು ಶಕ್ತಿ ಒಂದೇ ವಸ್ತು, ಎರಡು ಮುಖ ಅಥವಾ ಅಂಶ ಎಂದಂತಾಯಿತು. ಆ ಪರವಸ್ತುವಿಗೆ ಈ ಎರಡು ಗುಣಗಳಿರುವುದರಿಂದಲೇ ಚಿದ್ವಸ್ತು ಹಾಗೂ ಅಚಿದ್ವಸ್ತುಗಳನ್ನು ಸೃಷ್ಟಿಸಲು ಅಥವಾ ತನ್ನಲ್ಲಿ ಬೆರೆಸಿಕೊಳ್ಳಲು ಸಾಧ್ಯ. ಈ ಅರ್ಥದಲ್ಲಿಯೇ ಶಿವನು 'ತನ್ನ' ಶಕ್ತಿಯಿಂದ–ತನ್ನಲ್ಲಿ ಅವಿಭಾಜ್ಯವಾಗಿ ಬೆರೆತ ಶಕ್ತಿಯಿಂದ–ಸೃಷ್ಟಿಸಬಲ್ಲ ಎಂದು ಅರ್ಥಪೂರ್ಣವಾಗಿ ಹೇಳಬಹುದು. ಆದರೆ ಶೈವಸಿದ್ಧಾಂತಿಗಳ ಶಿವನು ತನ್ನ ಶಕ್ತಿಯಿಂದ ಜಗತ್ತನ್ನು ಸೃಷ್ಟಿಸಲಾರ. ಏಕೆಂದರೆ ಶಕ್ತಿ, ಅವನ ಅಧೀನದಲ್ಲಿದೆಯೇ ವಿನಾ, ಅವನಲ್ಲಿಲ್ಲ ಅಥವಾ ಅದು ಅವನದಲ್ಲ.

## ಸೃಷ್ಟಿಯ ವಚನಗಳು

**—ಡಾ॥ ಎಚ್. ತಿಪ್ಪೇರುದ್ರಸ್ವಾಮಿ**

ಕುತೂಹಲಪೂರ್ಣವಾದ ಮಾನವನ ಮನಸ್ಸು ಒಂದಲ್ಲ ಒಂದು ಹಂತದಲ್ಲಿ ಈ ಸೃಷ್ಟಿಯ ರಹಸ್ಯವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗುತ್ತದೆ. ಅದು ಈ ಬಹಿರಂಗ ಸೃಷ್ಟಿಯ ಸ್ವರೂಪ ಮತ್ತು ಅದರಲ್ಲಿರುವ ವ್ಯವಸ್ಥಿತ ವಿವೇಚನೆಗಳ ಕಡೆ ತಿರುಗಿದಾಗ ವಿಜ್ಞಾನದ ವಲಯವನ್ನು ಪ್ರವೇಶಿಸುತ್ತದೆ. ಈ ಸೃಷ್ಟಿಗೆಲ್ಲಾ ಕಾರಣವಾಗಿರಬಹುದಾದ ಮೂಲ ಶಕ್ತಿಯ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು ಹವಣಿಸಿದಾಗ ಧಾರ್ಮಿಕ ವಲಯದತ್ತ ತಿರುಗುತ್ತದೆ. ಇವೆರಡೂ ಒಂದಕ್ಕೊಂದು ವಿರೋಧವಲ್ಲ; ಪರಸ್ಪರ ಪೂರಕವಾದುವುಗಳು. ಹಿಂದೂಧರ್ಮದಲ್ಲಿ ಬೆಳೆದು ಬಂದ ಕೆಲವು ಶಾಖೆಗಳನ್ನೂ, ಅವುಗಳ ತಾತ್ತ್ವಿಕ, ಧಾರ್ಮಿಕ ವಿವೇಚನೆಗಳನ್ನೂ ಗಮನಿಸಿದಾಗ ಈ ಮಾತು ಮನದಟ್ಟಾಗುತ್ತದೆ.

ಧರ್ಮದಲ್ಲಿ ತಾತ್ವಿಕಸಿದ್ಧಾಂತ, ಆಚರಣೆಯ ಮಾರ್ಗ-ಇವೆರಡೂ ಬಹಳ ಮುಖ್ಯವಾದ ಅಂಶಗಳು. ತಾತ್ವಿಕಸಿದ್ಧಾಂತದಲ್ಲಿ ಬಹಿರಂಗ ಅಂತರಂಗಗಳನ್ನು ಕುರಿತ ಬೌದ್ಧಿಕ ವಿವೇಚನೆ ಕಂಡುಬರುತ್ತದೆ. ಈ ಸೃಷ್ಟಿಯ ರಹಸ್ಯವೇನು ? ಇದಕ್ಕೆ ಕಾರಣ ಕರ್ತನಾರು ? ಆತನಿಂದ ಈ ಸೃಷ್ಟಿ ಮೂಡಿಬಂದದ್ದು ಹೇಗೆ ? ಜೀವಿಗಳ ಹುಟ್ಟು ಹೇಗೆ ? ಸೃಷ್ಟಿಕರ್ತನಿಗೂ ಜೀವಿಗಳಿಗೂ ಇರುವ ಸಂಬಂಧವೇನು ? ಇತ್ಯಾದಿ ವಿಷಯಗಳ ಜಿಜ್ಞಾಸೆ ಇಲ್ಲಿ ಬರುತ್ತದೆ. ಇದು ಧರ್ಮದ ಒಂದು ಮುಖ. ನಿಜವಾಗಿ ಈ ವಿವೇಚನೆ ಸಾರ್ಥಕವಾಗುವುದು, ತಾತ್ವಿಕ ಜಿಜ್ಞಾಸೆಯ ಆದರ್ಶವನ್ನು ಆಚರಣೆಯಿಂದ ಮುಟ್ಟಿ ಅನುಭವಪೂರ್ವಕವಾಗಿ ಅದನ್ನು ಕಂಡುಕೊಂಡಾಗ. ಇದು ಧರ್ಮದ ಆಚರಣೆಯ ಮಾರ್ಗ. ವೀರಶೈವಧರ್ಮ ಈ ಎರಡು ದೃಷ್ಟಿಗಳಿಂದಲೂ ಪರಿಪುಷ್ಟವಾಗಿ ಬೆಳೆದಿರುವುದಲ್ಲದೆ ಸರ್ವಧರ್ಮಗಳ ಸಮನ್ವಯರೂಪವಾಗಿ ಪರಿಣಮಿಸಿ ಬಹುಮಟ್ಟಿಗೆ ಪೂರ್ಣತೆಯ ಹಂತವನ್ನು ಮುಟ್ಟಿದೆ.

ಶರಣರು ತಮ್ಮ ಸಾಧನೆಯ ಮಾರ್ಗದಲ್ಲಿ ಅವಲಂಬಿಸಿದುದು ವೀರಶೈವರ ತಾತ್ವಿಕ ಹಿನ್ನೆಲೆಯನ್ನೇ. ಆದರೆ ಅದನ್ನು ತಾತ್ವಿಕಜಿಜ್ಞಾಸೆಯ ಮಟ್ಟದಲ್ಲಿ ನಿಲ್ಲಿಸದೆ ಅನುಭಾವದ ಆನಂದದತ್ತ ಮುನ್ನಡೆಸಿದರು. ಪ್ರಧಾನವಾಗಿ ಅವರದು ಅನುಭಾವ

ಮಾರ್ಗ. ಅದರ ಅವಲಂಬನೆಗೆ ಹಂದರವಾಗಿ ಪರಿಣಮಿಸಿತು ವೀರಶೈವಸಿದ್ಧಾಂತ. ಅದರಲ್ಲಿಯೂ ವೀರಶೈವರ ಷಟ್‌ಸ್ಥಲ ಮಾರ್ಗ ಅವರಿಗೆ ಹೆಚ್ಚಾಗಿ ಹಿಡಿಸಿತು. ಆಧ್ಯಾತ್ಮಿಕ ಯಾತ್ರಿಕರಾದ ಅನೇಕ ಶರಣರು ಆ ಮಾರ್ಗದಲ್ಲಿ ನಡೆದು ತೋರಿಸಿದರು. ಅದಕ್ಕೆ ಹಿನ್ನೆಲೆಯಾಗಿ ಸೃಷ್ಟಿ, ಸೃಷ್ಟಿಕರ್ತ, ಜೀವ, ಜಗತ್ತು-ಈ ಮೊದಲಾದುವುಗಳ ಸ್ವರೂಪವನ್ನು ಅವರು ವಿವೇಚನೆಗೆ ಜಿಜ್ಞಾಸೆಗೆ ಒಳಗುಪಡಿಸಿದರು.'ಶಕ್ತಿವಿಶಿಷ್ಟಾದ್ವೈತ' ಎಂದು ಅದನ್ನು ಕರೆಯದಿದ್ದರೂ ವೀರಶೈವ ತತ್ತ್ವಜ್ಞಾನದ ಹಿನ್ನೆಲೆಯಾದ 'ಶಕ್ತಿ' ಎಂಬುದರ ಕಲ್ಪನೆಯು ಬಲ ಅವರ ವಚನಗಳಲ್ಲಿರುವುದನ್ನು ಕಾಣಬಹುದು.

ಸೃಷ್ಟಿಗಿಂತ ಮೊದಲು ಶಿವ ನಿರಂಜನಸ್ವರೂಪನಾಗಿದ್ದ. ಸೃಷ್ಟಿಯನ್ನು ನಿರ್ಮಿಸಬೇಕೆಂಬ ನೆನಹು ಆತನಲ್ಲಿ ಸುಳಿಯಿತು. ಅದೇ 'ಶಕ್ತಿ' ಎನಿಸಿಕೊಂಡು ಈ ಸೃಷ್ಟಿಗೆ ಕಾರಣವಾಯಿತು. ಇದು ಒಟ್ಟಿನಲ್ಲಿ ಶರಣರು ವ್ಯಕ್ತಪಡಿಸಿದ 'ಶಕ್ತಿ' ಕಲ್ಪನೆಯ ಸಾರ:

> 'ಬಯಲು ಮೊಳಗಿ ಮಳೆ ಸೃಜಿಸಿ, ಆ ಬಯಲು ಮಳೆಯನೊಡಗೂಡಿ ದೃಷ್ಟವಪ್ಪ ಪಾರಿಗಲ್ಲಾಗಿ ತೋರಿದಂತೆ
> ನಿಮ್ಮ ನೆನಹೇ ನಿಮಗೆ ಶಕ್ತಿಯಾಯಿತಲ್ಲ; ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ
> ನಾಮಸೂಚನೆಯಾಯಿತ್ತಲ್ಲಾ, ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲ.'

ಎಂಬ ಹಾವಿನಹಾಳ ಕಲ್ಲಯ್ಯನ ಮಾತಿನಲ್ಲಿ ಈ ಅಂಶ ಸ್ಪಷ್ಟವಾಗಿ ಮೂಡಿದೆ. ಅಂತೆಯೇ :

> 'ಹೊದ್ದು ಹೊದ್ದೆಂಬುದು ಇಲ್ಲದ ದೇವಾನಿಮ್ಮಿಂದ ನೀವೇ ಶೂನ್ಯದಲ್ಲಿ ನಿಂದು ಸ್ವಯಂಭುವಾದಿರಲ್ಲಾ.
> ಬೀಜವೃಕ್ಷದಂತೆ ಸಾಕಾರ ನಿರಾಕಾರವು ನೀವೇಯಾದಿರಲ್ಲಾ ! ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ
> ಜಗವ ನಿರ್ಮಿಸಿದ ಸ್ವತಂತ್ರ ಸಿದ್ಧಲಿಂಗೇಶ್ವರಾ'

ಎಂಬ ವಚನದಲ್ಲಿಯೂ ಇದೇ ಭಾವ ವ್ಯಕ್ತಗೊಂಡಿರುವುದನ್ನು ಕಾಣಬಹುದು. ಹೀಗೆ ಸೃಷ್ಟಿಗೆ ಕಾರಣವಾದುದು ಶಿವನ ನೆನಹು ರೂಪವಾದ ಶಕ್ತಿ ಎಂಬುದನ್ನು ಶರಣರು ವ್ಯಕ್ತಪಡಿಸಿದ್ದಾರೆ. ಇಲ್ಲಿಂದ ಪ್ರಾರಂಭವಾಗಿ ಮುಂದೆ ಸೃಷ್ಟಿರಚನೆಯ ವಿವರಗಳನ್ನೂ ಉದ್ದೇಶಗಳನ್ನೂ ವಿವೇಚಿಸಿದ್ದಾರೆ.

ಈ ಮೂಲಭೂತವಾದ ಪ್ರಶ್ನೆಗಳಿಗೆ ಬೌದ್ಧಿಕವಾದ ಚರ್ಚೆ ಕೊನೆಯ ಉತ್ತರವನ್ನು ಕೊಡಲಾರದೆಂಬುದು ನಿಜ. ಆದ್ದರಿಂದಲೇ ಅನೇಕ ತಾತ್ತ್ವಿಕರು ಇವುಗಳ ಕಡೆ ಹೆಚ್ಚು ಗಮನ ಹರಿಸದೆ ಆಚರಣೆಯ ಮಾರ್ಗವನ್ನು ರೂಪಿಸುವುದರತ್ತ ಹೆಚ್ಚು ಒಲವನ್ನು ತೋರಿದ್ದಾರೆ. ಉದಾಹರಣೆಗೆ ಬುದ್ಧ ಈ ಪ್ರಶ್ನೆಗಳ ಚರ್ಚೆಗೇ ಹೋಗಲಿಲ್ಲ. ಆದರೆ ತಾತ್ತ್ವಿಕ ಸಿದ್ಧಾಂತ ಪೂರ್ಣಗೊಳ್ಳಬೇಕಾದರೆ ಮತ್ತು ಧರ್ಮವನ್ನು ಭದ್ರವಾದ ತಳಹದಿಯ ಮೇಲೆ ನಿಲ್ಲಿಸಬೇಕಾದರೆ ಒಂದು ಮಟ್ಟದವರೆಗಾದರೂ ಬೌದ್ಧಿಕ ಜಿಜ್ಞಾಸೆಯ ಹಿನ್ನೆಲೆ ಅಗತ್ಯವಾಗುತ್ತದೆ. ಜೈನರು ತಮ್ಮದೇ ಆದ ರೀತಿಯಲ್ಲಿ ಆ ಕೆಲಸವನ್ನು ಮಾಡಿದರು. ನಾರಕ, ತಿರ್ಯಕ್, ಮಾನುಷ, ದೇವಲೋಕಗಳಲ್ಲಿ ಜೀವ ಸಂಚರಿಸುವ ಭವಾವಳಿಗಳ ಕಥೆಯನ್ನು ಕಟ್ಟಿದರು ; ಕೊನೆಯಲ್ಲಿ ಅರ್ಹಂತನ ಜಿನನ ಕಲ್ಪನೆಯನ್ನು ಕಂಡುಕೊಂಡರು.

ಜೈನತತ್ತ್ವದ ಪ್ರಕಾರ ಈ ಸೃಷ್ಟಿ ಅನಾದಿಯಾದದ್ದು. ಇದಕ್ಕೆ ಸೃಷ್ಟಿಕರ್ತನೊಬ್ಬನಿಲ್ಲ. ಜೀವ ಅಜೀವಗಳ ಸಹ ಯೋಗವೇ ಈ ಲೋಕ. ಅವು ಅನಾದಿಕಾಲದಿಂದ ನಿರಂತರವಾಗಿ ಬಂದವುಗಳು. ಅವು ತಮ್ಮ ಸ್ವಭಾವಕ್ಕನುಸಾರವಾಗಿ ಪರಿವರ್ತನೆ ಹೊಂದುತ್ತವೆ. ಈ ಭೌತಿಕ ಜಗತ್ತನ್ನೆಲ್ಲಾ ಜೈನಧರ್ಮ ಪುದ್ಗಲಗಳಲ್ಲಿ ಸಮಾವೇಶಗೊಳಿಸಿದೆ. ಕ್ರಿಯಾಶೀಲವಾದ ಈ ಪುದ್ಗಲಗಳಿಂದಲೇ ಸೃಷ್ಟಿ ನಿರ್ಮಾಣ ; ಮತ್ತು ಈ ಪುದ್ಗಲ ಮಾಧ್ಯಮದಿಂದಲೇ ಚೇತನಾತ್ಮಕವಾದ ಆತ್ಮನಲ್ಲಿಯೂ ಸುಖ ದುಃಖಗಳ ಸಂಚಾರವಾಗುತ್ತದೆ. ಆತ್ಮ ಇವುಗಳಿಂದ ಬಿಡುಗಡೆಯನ್ನು ಪಡೆದಾಗ ಅರ್ಹಂತಪದವನ್ನು ಪಡೆಯುತ್ತದೆ–ಈ ಮೂಲಭೂತ ತತ್ತ್ವವನ್ನು ಜೈನದಾರ್ಶನಿಕರು ತುಂಬಾ ವಿವರವಾಗಿ ವಿಶ್ಲೇಷಿಸಿ ಭದ್ರವಾದ ತಳಪಾಯದ ಮೇಲೆ ಜೈನ ಸಿದ್ಧಾಂತವನ್ನು ಕಟ್ಟಿದ್ದಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತೆಂದರೆ ಪರಮಾತ್ಮನೊಬ್ಬನ ಕಲ್ಪನೆಯನ್ನೂ ಅವನಿಂದ ಈ ಲೋಕ ಸೃಷ್ಟಿಯಾಯಿತೆಂಬುದನ್ನು ಜೈನಧರ್ಮ ನಿರಾಕರಿಸಿ ಭೌತ ಮತ್ತು ಆತ್ಮ ತತ್ತ್ವಗಳೆರಡನ್ನೂ ಅನಾದಿಯನ್ನಾಗಿ ಮಾಡಿದುದು.

ಹಿಂದೂಧರ್ಮದಲ್ಲಿಯಂತೂ ಈ ತಾತ್ತ್ವಿಕ ವಿವೇಚನೆ ದೀರ್ಘವಾಗಿ ಮತ್ತು ಬಹುಮುಖವಾಗಿ ರೂಪುಗೊಂಡಿದೆ. ಷಡ್‌ದರ್ಶನಗಳಲ್ಲಿ, ಅದ್ವೈತ, ವಿಶಿಷ್ಟಾದ್ವೈತ, ದ್ವೈತಾದಿ ಭಾಷ್ಯಗಳಲ್ಲಿ ಆಗಮ ಪುರಾಣಗಳಲ್ಲಿ ಹಲವಾರು ದೃಷ್ಟಿಗಳಿಂದ ಈ ಸಮಸ್ಯೆಗಳು ಚರ್ಚಿತವಾಗಿವೆ. ಇವೆಲ್ಲಕ್ಕೂ ಮೂಲವಾಗಿ ಮತ್ತು ಹಿನ್ನೆಲೆಯಾಗಿ ಉಪನಿಷತ್ತುಗಳ ತಾತ್ತ್ವಿಕ ವಿವೇಚನೆಯಂತೂ ಉಜ್ವಲವಾಗಿ ಬೆಳೆದು ನಿಂತಿತ್ತು. ಶೈವಧರ್ಮ ಉಪನಿಷತ್ತುಗಳನ್ನು ಚೆನ್ನಾಗಿ ಅರಗಿಸಿಕೊಂಡಿದೆ ; ಆಗಮಗಳನ್ನು ಅವಲಂಬಿಸಿದೆ ; ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಶರಣರ ನೇರವಾದ ಅನುಭಾವದಿಂದ ಜೀವಂತಶಕ್ತಿಯನ್ನು ಪಡೆದು ರೂಪಿಸಿಕೊಂಡಿದೆ ತನ್ನ ತಾತ್ತ್ವಿಕ ಸಿದ್ಧಾಂತವನ್ನು.

ಈ ಸೃಷ್ಟಿ ನಿರ್ಮಾಣಕ್ಕೆ ಕಾರಣವಾದ ದೈವಶಕ್ತಿಯೊಂದಿರಬೇಕು ಎಂಬುದನ್ನು ಬಹುಶಃ ಎಲ್ಲ ತತ್ತ್ವ ಸಿದ್ಧಾಂತಗಳೂ ಒಪ್ಪಿವೆ. ಜೈನಸಿದ್ಧಾಂತ ದೈವತ್ವವನ್ನು ಒಪ್ಪಿದರೂ ಸೃಷ್ಟಿಗೆ ದೈವಶಕ್ತಿ ಕಾರಣ ಎಂಬುದನ್ನು ಒಪ್ಪುವುದಿಲ್ಲ. ಹಿಂದೆ ಹೇಳಿದಂತೆ ಇವೆರಡೂ ಅನಾದಿ ಎಂಬುದು ಅದರ ನಿರ್ಣಯ. ಸಾಂಖ್ಯತತ್ತ್ವವೂ ಇನ್ನೊಂದು ರೀತಿಯಲ್ಲಿ ಸೃಷ್ಟಿರಚನೆಯಲ್ಲಿ ಈಶ್ವರನ ಕರ್ತೃತ್ವವನ್ನು ನಿರಾಕರಿಸಿದೆ. ಇಂತಹ ಕೆಲವು ಸಿದ್ಧಾಂತಗಳನ್ನು ಬಿಟ್ಟರೆ ಬಹುಶಃ ಎಲ್ಲ ತತ್ತ್ವಸಿದ್ಧಾಂತಗಳೂ ಸೃಷ್ಟಿರಚನೆಯ ಹಿಂದೆ ದೈವಶಕ್ತಿಯ ಕೈವಾಡವನ್ನು ಒಪ್ಪಿಕೊಂಡಿವೆ. ಅವು ಹೇಳುವ ನಾಮರೂಪಾದಿ ವಿವರಗಳಲ್ಲಿ ವ್ಯತ್ಯಾಸ ಕಂಡುಬರಬಹುದು; ಸೃಷ್ಟಿರಚನೆಯ ವಿನ್ಯಾಸದಲ್ಲಿ ಉದ್ದೇಶದಲ್ಲಿ, ಸೃಷ್ಟಿಕರ್ತನ ಸ್ವರೂಪ ಕಲ್ಪನೆಯಲ್ಲಿ ಏಕತೆ ಇಲ್ಲದಿರಬಹುದು. ಆದರೆ ಅಂತಹ ಶಕ್ತಿಯೊಂದರ ಅಸ್ತಿತ್ವವನ್ನು ಬಹುಮಟ್ಟಿಗೆ ಎಲ್ಲ ಸಿದ್ಧಾಂತಗಳೂ ಒಪ್ಪಿಕೊಂಡಿವೆ. ನಮ್ಮ ಉಪನಿಷತ್ತುಗಳಂತೂ ಈ ಪ್ರಶ್ನೆಯನ್ನು ಬಹಳ ಸಮರ್ಥವಾದ ರೀತಿಯಲ್ಲಿ ಚರ್ಚಿಸಿವೆ; ಉತ್ತರವನ್ನು ಕಂಡುಕೊಂಡಿವೆ.

ಶರಣರ ದೈವತ್ವದ ಕಲ್ಪನೆಗೆ ಆ ವೇದಾಂತದರ್ಶನ ಹಿನ್ನೆಲೆಯಾಗಿತ್ತು. ಶೈವಸಿದ್ಧಾಂತದ ಬೆಳವಣಿಗೆಯ ಎಲ್ಲ ಹಂತಗಳನ್ನು ಅವರು ಗಮನಿಸದೇ ಇರಲಿಲ್ಲ. ಪಾಶುಪತ ಶೈವದಿಂದ ಹಿಡಿದು ಕಾಶ್ಮೀರಶೈವ, ತಮಿಳುಶೈವಗಳವರೆಗೆ ಬೆಳೆದು ಬಂದ ಶಿವನ ಸ್ವರೂಪವನ್ನು ಅವರು ಅರಿತರು. ಧ್ಯಾನಗೋಚರ ನೇತ್ರದಿಂದ ಶಿವತತ್ತ್ವವನ್ನು ಕಂಡರು. ಅನುಭವದಲ್ಲಿ ಅಳವಡಿಸಿಕೊಂಡು ಅದನ್ನು ಅಭಿವ್ಯಕ್ತಗೊಳಿಸಿದರು.

ಈ ಸೃಷ್ಟಿ ವ್ಯಕ್ತಗೊಂಡು ಅಸ್ತಿತ್ವಕ್ಕೆ ಬರುವುದಕ್ಕೆ ಮುನ್ನ ಸೃಷ್ಟಿಕರ್ತನ ಸ್ವರೂಪವೇನೆಂಬುದನ್ನು ಕಾಣಲು ಕೆಲವು ಶರಣರು ಹವಣಿಸಿದ್ದಾರೆ. 'ಈ ಸೃಷ್ಟಿರಚನೆಗೆ ಮುನ್ನ' ಎಂಬ ಮಾತು ಯಾವುದೇ ಒಂದು ನಿರ್ದಿಷ್ಟ ಕಾಲವನ್ನು ಹೇಳುವಂತಹುದಲ್ಲ. ಅನಾದಿಯಾದ ಈ ನಿರಂತರ ಕ್ರಿಯಾಪ್ರವಾಹದಲ್ಲಿ ನಿಂತು ಅದಕ್ಕೆ ಅತೀತವಾದುದನ್ನು ಕಲ್ಪಿಸಿಕೊಳ್ಳುವ ತಾತ್ವಿಕದೃಷ್ಟಿ ಅಲ್ಲಿ ಕಾಣುತ್ತದೆ. ಅಲ್ಲಮಪ್ರಭುವಿನ ಒಂದು ವಚನ ಆ ಚಿತ್ರವನ್ನು ಹೀಗೆ ಕೊಡುತ್ತದೆ:

> ''ಆದಿ ಅನಾದಿ ಇಲ್ಲದಂದು, ಹಮ್ಮುಬಿಮ್ಮುಗಳಿಲ್ಲದಂದು,
> ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು,
> ಸಚರಾಚರವೆಲ್ಲ ರಚನೆಗೆ ಬಾರದಂದು
> ಗುಹೇಶ್ವರನೊಬ್ಬನೇ ಇದ್ದೆಯಲ್ಲ, ಇಲ್ಲದಂತೆ ''

ಆತ 'ಇಲ್ಲದಂತೆ ಇದ್ದ' ಎಂಬ ಈ ಮಾತು ಅರ್ಥವತ್ತಾದುದು. ಇನ್ನೊಂದು ಕಡೆ ಅಲ್ಲಮನೇ ಹೀಗೆ ಹೇಳಿದ್ದಾನೆ. 'ಧರೆಯಾಕಾಶ ಮನೆಗಟ್ಟದಂದು, ಹರಿವನಿಲ ಅಗ್ನಿಜಲ ಮೊಳೆದೋರದಂದು, ಹುಟ್ಟಿದಳೆಮ್ಮವ್ವೆ; ಅದಕ್ಕೆ ಮುನ್ನ ಹುಟ್ಟದೆ ಬೆಳೆದ ನೆಮ್ಮಯ್ಯ, ಈ ಇಬ್ಬರ ಬಸಿರಲ್ಲಿ ಬಂದೆ ನಾನು'. ಈ ಸೃಷ್ಟಿಕರ್ತ ಹುಟ್ಟದೆ ಬೆಳೆದವನು, ಅವನಲ್ಲಿ ಹುಟ್ಟಿದಳು ಶಕ್ತಿ ಎಂದು ಶಿವ–ಶಕ್ತಿಯರ ಕಲ್ಪನೆಯನ್ನು ಕೊಟ್ಟಿದ್ದಾನೆ.

ಸೃಷ್ಟಿಕರ್ತನ ಸೃಷ್ಟಿಪೂರ್ವದ ಈ ನಿಲವನ್ನು ಶರಣರು ಅನೇಕ ಬಗೆಗಳಲ್ಲಿ ವ್ಯಕ್ತಪಡಿಸಿದ್ದಾರೆ. 'ನಿರಾಳ' 'ನಿಜದ ನಿರ್ವಯಲು' 'ಸರ್ವಶೂನ್ಯ ನಿರಾಲಂಬ' 'ನಿರವಯ ಶೂನ್ಯಲಿಂಗ ಮೂರ್ತಿ' 'ತಂದೆ ತಾಯಿಲ್ಲದೆ ಹುಟ್ಟಿ ಬೆಳೆದ ಕಂದ' ಈ ಮೊದಲಾದ ಮಾತುಗಳಿಂದ ನಿರ್ದೇಶಿತವಾಗಿರುವ ಈ ನಿರಂಜನತತ್ತ್ವದಿಂದ ಸಚರಾಚರ ಜಗತ್ತು ಹೇಗೆ ಸೃಷ್ಟಿಯಾಯಿತು ? ಇದಕ್ಕೆ ಶರಣರು ತಮ್ಮದೇ ಆದ ಉತ್ತರವನ್ನು ತಮ್ಮ ಸಿದ್ಧಾಂತದ ಹಿನ್ನೆಲೆಯಲ್ಲಿ ಕಂಡುಕೊಂಡಿದ್ದಾರೆ. ವಿವರಗಳಿಗೆ ಹೋಗದೆ ಆ ಸೃಷ್ಟಿಯ ವಚನಗಳನ್ನು ಸಂಗ್ರಹವಾಗಿ ವಿವೇಚಿಸುವುದು ಇಲ್ಲಿನ ಉದ್ದೇಶ.

ನಿಸ್ತರಂಗ ಚಿತ್‌ಸಮುದ್ರ ಸ್ವರೂಪನಾಗಿರುವ ಶಿವನಿಂದ ಈ ಸೃಷ್ಟಿ ರಚನೆಯಾದುದು ಏಕೆ ? ಮತ್ತು ಹೇಗೆ ? ಎಂಬ ಪ್ರಶ್ನೆಗಳಿಂದ ಪ್ರಾರಂಭಿಸಿ ಇದರ ಪರಿಶೀಲನೆಗೆ ತೊಡಗಿದ್ದಾರೆ. ಶರಣರು ಎಲ್ಲ ಧರ್ಮಗಳಂತೆಯೇ ಶೈವಧರ್ಮದ ವಿವಿಧ ಶಾಖೆಗಳೂ ತಮ್ಮದೇ ಆದ ರೀತಿಯಲ್ಲಿ ಈ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಂಡಿವೆ. ತಮಿಳುಶೈವಸಿದ್ಧಾಂತ ಹೇಳುವುದು : ಜೀವರುಗಳನ್ನು ಬಂಧದಿಂದ ಬಿಡುಗಡೆಗೊಳಿಸಿ, ಮುಕ್ತರನ್ನಾಗಿ ಮಾಡುವುದಕ್ಕಾಗಿಯೇ ಈ ಸೃಷ್ಟಿ ನಿರ್ಮಾಣವಾಗಿದೆ ಎಂಬುದಾಗಿ. ಇದರ ಪ್ರಕಾರ ಎಲ್ಲ ಜೀವರುಗಳೂ ಮೋಕ್ಷವನ್ನು ಪಡೆದ ನಂತರ ಸೃಷ್ಟಿಯ ಅಸ್ತಿತ್ವ ಇಲ್ಲದಂತಾಗುತ್ತದೆ ಎಂದು ಹೇಳಬೇಕಾಗುತ್ತದೆ. ಸಾಂಖ್ಯತತ್ತ್ವದಲ್ಲಿಯೂ ಇದೇ ಅಭಿಪ್ರಾಯ ಕಂಡು ಬರುತ್ತದೆ. 'ನಾಟಕದ ನಂತರ ರಂಗಸ್ಥಳದಿಂದ ನಟ ನಿರ್ಗಮಿಸುವಂತೆ ಸೃಷ್ಟಿಯ ಕೊನೆಯಲ್ಲಿ ಪ್ರಕೃತಿ ನಿರ್ಗಮಿಸುತ್ತದೆ' ಎಂದು ಸಾಂಖ್ಯಕಾರಿಕ ಹೇಳುವ ಮಾತಿನಲ್ಲಿ (ಕಾರಿಕ ೫೯) ಈ ಸೂಚನೆಯನ್ನು ಕಾಣಬಹುದು.

ಆದರೆ 'ತ್ರಿಕ' ಅಥವಾ ಕಾಶ್ಮೀರಶೈವಸಿದ್ಧಾಂತದ ದೃಷ್ಟಿ ಇದಕ್ಕಿಂತ ಭಿನ್ನವಾದದ್ದು ; ಮತ್ತು ವೀರಶೈವಕ್ಕೆ ಹೆಚ್ಚು ಹತ್ತಿರವಾದದ್ದು: ಶಿವ ತನ್ನ ಲೀಲೆಗಾಗಿ ಈ ಜಗತ್ತನ್ನು ಸೃಷ್ಟಿಸಿದ್ದಾನೆ ; ಇದನ್ನು ತನ್ನಲ್ಲಿಯೇ ಅಡಗಿಸಿಕೊಳ್ಳುತ್ತಾನೆ:

ಮತ್ತು ಹೊರಹೊಮ್ಮಿಸುತ್ತಾನೆ. ಈ ಕ್ರಿಯೆ ಅನಾದಿಯಾದದ್ದು, ಅನಂತವಾದದ್ದು. ಶಿವನ ನೆನಹು ರೂಪವಾದ ಶಕ್ತಿಯಿಂದ ನಡೆಯುವ ಒಂದು ಲೀಲೆ ಇದು–ಎಂಬುದು ಶರಣರ ಅಭಿಪ್ರಾಯದ ಸಾರ. ಇದನ್ನು ಕುರಿತ ಒಂದು ವಚನ ಹೀಗಿದೆ :

> 'ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತಲೋಕಗಳನ್ನು, ಚಂದ್ರ, ಸೂರ್ಯ, ನಕ್ಷತ್ರ, ಸಿಡಿಲು, ಮಿಂಚುಗಳನ್ನು, ಕಾಲಕರ್ಮ ಪ್ರಳಯಗಳನ್ನು, ಹೆಣ್ಣು-ಗಂಡು ಜಾತಿ ವಿಜಾತಿಗಳಾದ ನರ ಸುರ ತ್ರಿರ್ಯಗ್ಜಾತಿ ಸ್ಥಲ ಭೋಗ ಆಯುಷ್ಯ ನಿದ್ರೆ ಮೊದಲಾದ ಸಮಸ್ತ ಪ್ರಪಂಚಗಳನ್ನು, ಎಂಬತ್ತನಾಲ್ಕು ಲಕ್ಷ ಜೀವರಾಶಿಗಳನ್ನು ಹುಟ್ಟಿಸಿದ ತನ್ನ ವಿನೋದಕ್ಕೆ. ಯಂತ್ರವಾಹಕನು ಮಾಡಿದ ಕಟ್ಟಳೆಯನಾರಿಗೂ ತಿಳಿಯಬಾರದು ನೋಡಾ. ಸರ್ವಾತ್ಮರು ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರು ; ತಾ ಪಶುಪತಿಯಾದ ನಮ್ಮ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.'

ಅಂದರೆ ಈ ಭೌತಪ್ರಪಂಚ ಮತ್ತು ಚೈತನ್ಯಾತ್ಮಕರಾದ ಜೀವರುಗಳು ಈ ಎಲ್ಲವನ್ನೂ ಮಹಾಕರ್ತ ತನ್ನ ಶಕ್ತಿಯ ವಿನೋದಕ್ಕೆ ಸೃಷ್ಟಿಸಿದ್ದಾನೆ ಎಂಬುದು ಶರಣರ ದೃಷ್ಟಿ.

ಈ ಜಗತ್ತು ಶಿವನಿಂದ ಸೃಷ್ಟಿಯಾದದ್ದು ಮತ್ತು ಸತ್ಯವಾದದ್ದು ಎಂಬ ವೀರಶೈವಸಿದ್ಧಾಂತದ ಹಿನ್ನೆಲೆಗೆ ಈ ಮಾತುಗಳು ಅನುಗುಣವಾಗಿವೆ. ಇತರ ಕೆಲವು ಸಿದ್ಧಾಂತಗಳು ಹೇಳುವಂತೆ ಈ ಜಗತ್ತು ಮಿಥ್ಯೆ, ಕೇವಲ ಮಾಯೆ ಎಂಬುದನ್ನು ಇದು ಒಪ್ಪುವುದಿಲ್ಲ. ನಮಗೆ ತೋರುವ ರೂಪದಲ್ಲಿಯೇ ಇದು ಸತ್ಯವಲ್ಲದಿರಬಹುದು. ಆದರೆ ಮೊಲದ ಕೊಂಬಿನಂತೆ ಮಿಥ್ಯೆಯಲ್ಲ. ಶಿವನ ಶಕ್ತಿಯಿಂದ ಇದು ಹೊರಹೊಮ್ಮಿ ಬಹುರೂಪವಾಗಿ ಕಾಣಿಸಿಕೊಳ್ಳುತ್ತದೆ. 'ಮೃತ್ತಿಕೆ ಒಂದರಲ್ಲಿ ಆದ ಭಾಂಡದಂತೆ, ....ಉದಕ ಒಂದರಲ್ಲಿ ಆದ ವಾರಿಕಲ್ಲಂತೆ, ಬ್ರಹ್ಮದಿಂದಲಾದ ಜಗವು ಭಿನ್ನವೆಲ್ಲಿಯದು ?' ಎಂದು ಸಕಳೇಶಮಾದರಸ ಕೇಳುತ್ತಾನೆ. ಈ ಸೃಷ್ಟಿಯ ಬಹುರೂಪದ ಹಿಂದೆ ರೂಪಕ್ರಿಯಾತೀತವಾದ ಒಂದು ಸತ್ಯಶಕ್ತಿ ಇದೆ. ಅದರಿಂದ ಹೊರಹೊಮ್ಮಿದ ಈ ಸೃಷ್ಟಿಯೂ ಸತ್ಯವೆ.

> 'ಘನ ಗಂಭೀರ ಮಹಾವಾರಿಧಿಯಲ್ಲಿ ನೊರೆ ತೆರೆ ಬುದ್ಬುದ ಫೇನ ತರಂಗಗಳು ತೋರಿತ್ತಲ್ಲಾ ಎಂದಡೆ ಅವು ಬೇರಾಗಬಲ್ಲವೇ ? ಪರಶಿವನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಗಳಾದವಲ್ಲದೆ ಬೇರಾಗಬಲ್ಲವೇ ?'

ಎಂಬ ಚಂದಿಮರಸನ ಮಾತನ್ನೂ ಇಲ್ಲಿ ನೋಡಬಹುದು. ಮಹಾವಾರಿಧಿಯ ನೆರೆತೊರೆಗಳಂತೆ ಈ ವಿಶ್ವ. ನೆರೆತೊರೆಗಳು ಮಿಥ್ಯೆಯಲ್ಲ ; ಆದರೆ ಅವೇ ಸಮುದ್ರದ ಸರ್ವಸ್ವವೂ ಅಲ್ಲ. ಅವನ್ನು ಅವಲಂಬಿಸಿ ವಾರಿಧಿಯ ಸತ್ಯಸ್ವರೂಪವನ್ನು ಕಂಡುಕೊಳ್ಳಬೇಕಾಗುತ್ತದೆ.

ಹೀಗೆ ಈ ಸೃಷ್ಟಿ ಸತ್ಯ, ಇದು ಶಿವನ ಲೀಲೆಯಿಂದ ನಿರ್ಮಿತವಾದುದು ಎಂಬ ಮಾತನ್ನು ಶರಣರು ಹೇಳಿದುದಲ್ಲದೆ, ಈ ಸೃಷ್ಟಿ ನಿರ್ಮಾಣದ ಕ್ರಿಯೆ ಹೇಗೆಂಬುದನ್ನು ಅದರ ವಿವಿಧ ಹಂತಗಳಾವುವೆಂಬುದನ್ನೂ ವಿವೇಚಿಸಿದ್ದಾರೆ. ಅವುಗಳಿಗೆ ತಮ್ಮದೇ ಆದ ರೀತಿಯಲ್ಲಿ ಉತ್ತರವನ್ನು ಕಂಡುಕೊಳ್ಳಲು ಹವಣಿಸಿದ್ದಾರೆ. ವಿಚಾರವಂತ ಮನಸ್ಸು ಈ ಪ್ರಶ್ನೆಗಳನ್ನು ನಿರ್ಲಕ್ಷಿಸಿ ಮುನ್ನಡೆಯಲಾರದು. ಆದುದರಿಂದಲೇ ಇಂದಿನ ವಿಜ್ಞಾನವೂ ಈ ಪ್ರಶ್ನೆಗಳನ್ನು ಎತ್ತಿಕೊಳ್ಳದೆ ಬಿಟ್ಟಿಲ್ಲ.

ಈ ಭೌತಜಗತ್ತಿನ ಹುಟ್ಟು ಹೇಗೆ ? ಚಂದ್ರ ಸೂರ್ಯ ನಕ್ಷತ್ರ ನೀಹಾರಿಕೆಗಳ ವ್ಯವಸ್ಥೆಯ ಕ್ರಮವೇನು ? ಈ ವ್ಯವಸ್ಥೆಯನ್ನು ನಿಯಂತ್ರಿಸುವ ಶಕ್ತಿ ಯಾವುದು ? ಇತ್ಯಾದಿ ನೂರಾರು ಪ್ರಶ್ನೆಗಳನ್ನು ವಿಜ್ಞಾನಿ ಎದುರಿಸಬೇಕಾಗುತ್ತದೆ. ಇವುಗಳಿಗೆ ಒಂದು ಹಂತದವರೆಗೂ ಉತ್ತರವನ್ನು ಕಂಡುಕೊಳ್ಳುವ ಮಾರ್ಗದಲ್ಲಿ ನಡೆದಿದ್ದಾನೆ. ಸೌರವ್ಯೂಹರಚನೆಗೆ ಕಾರಣವಾದ ಜ್ಯೋತಿರ್ಗೋಳ, ಸೂರ್ಯನಿಂದ ಸಿಡಿದ ಬೆಂಕಿಯ ಗೋಳವೇ ಭೂಮಿ, ಅವರಿಂದ ಸಿಡಿದ ಒಂದು ಭಾಗ ಚಂದ್ರ, ಭೂಮಿ ಗಟ್ಟಿಗೊಂಡು ಇಂದಿನ ರೂಪವನ್ನು ಪಡೆದ ಬಗೆ, ಜೀವಜಾಲಗಳ ಉಗಮ ಮತ್ತು ವಿಕಾಸ–ಇತ್ಯಾದಿಗಳನ್ನು ಕಂಡುಕೊಳ್ಳುವುದರಲ್ಲಿ ವಿಜ್ಞಾನಿಯ ಬುದ್ಧಿ ಕೆಲಸ ಮಾಡಿರುವುದನ್ನು ಮೆಚ್ಚಲೇಬೇಕು. ಈ ಸೃಷ್ಟಿಗೆ ಕಾರಣವಾಗಿರಬಹುದಾದ ಕೆಲವು ಮೂಲವಸ್ತುಗಳನ್ನು ಆತ ಕಂಡುಹಿಡಿದಿದ್ದಾನೆ. ಅವುಗಳ ವಿಶಿಷ್ಟ ಗುಣಗಳನ್ನು ಗುರುತಿಸಿದ್ದಾನೆ, ಎಣಿಸಿದ್ದಾನೆ, ಗುಣಿಸಿದ್ದಾನೆ. ಇಷ್ಟಾದರೂ ಸೃಷ್ಟಿ ರಚನೆಯ ರಹಸ್ಯದ ಮಹಾವಾರಿಧಿಯಲ್ಲಿ ಆತ ಕಂಡಿರುವುದು ಕೇವಲ ಒಂದು ಅಣು ಎಂದು ಹೇಳಬಹುದಾದಷ್ಟನ್ನು ಮಾತ್ರ. ಬಹುಶಃ ಅದು ಬೌದ್ಧಿಕವಾಗಿ ನಿರ್ಣಯಿಸಲಾಗದ ರಹಸ್ಯವೆಂಬಂತೆ ತೋರುತ್ತದೆ. ಆದುದರಿಂದಲೇ ತಾತ್ವಿಕ ಮೀಮಾಂಸೆ ಜಿಜ್ಞಾಸೆಗಳೂ, ತಾರ್ಕಿಕವಾದ ಹಂತದಲ್ಲಿಯೇ ನಿಂತಾಗ, ಆ ರಹಸ್ಯವನ್ನು ಕಂಡುಕೊಳ್ಳಲಾರದೇ ಹೋಗಿವೆ. ಬುದ್ಧಿಯ ವಲಯವನ್ನು ದಾಟಿ ಅಂತರ್‌ದೃಷ್ಟಿಯ ಅನುಭವದ ವಲಯದಲ್ಲಿ ನಿಂತಾಗ ಮಾತ್ರ ಸಾಂಕೇತಿಕವಾದ ರೀತಿಯಲ್ಲಿ ಸೃಷ್ಟಿರಚನೆಯ ಕಾರಣವನ್ನೂ ಸ್ವರೂಪವನ್ನೂ ಕಂಡುಕೊಳ್ಳಬಹುದೆಂದು ತೋರುತ್ತದೆ. ಶರಣರು ಇದನ್ನು ಕಂಡಿರುವ ದೃಷ್ಟಿ ಈ ಬಗೆಯದು. ತಾರ್ಕಿಕ ಜಿಜ್ಞಾಸೆಗೆ ಮೀರಿದ ಒಂದು ವಿಶಿಷ್ಟ ಮನೋಧರ್ಮದ ಹಿನ್ನೆಲೆಯಲ್ಲಿ ನಿಂತು ನೋಡಿದಾಗ ಅವರು ವಿವರಿಸಿರುವ ಸೃಷ್ಟಿರಚನೆಯ ಕ್ರಮ ಅರ್ಥವತ್ತಾಗಿ ಕಾಣುತ್ತದೆ.

ಸೃಷ್ಟಿರಚನೆಯಲ್ಲಿ ಶರಣರು ಕೆಲವು ಹಂತಗಳನ್ನು ಮಾಡಿದ್ದಾರೆ. ಮೊದಲು ಶೂನ್ಯಲಿಂಗ, ಮಹಾಲಿಂಗ ಮತ್ತು ಸಾದಾಖ್ಯ–ಎಂಬ ಮೂರು ದೊಡ್ಡ ವಿಭಾಗಗಳು. ಇವುಗಳಲ್ಲಿ ಮತ್ತೆ ಉಪವಿಭಾಗಗಳು ಏರ್ಪಡುತ್ತದೆ. ಶೂನ್ಯಲಿಂಗದಲ್ಲಿ ಸರ್ವಶೂನ್ಯ ನಿರಾಲಂಬ, ಶೂನ್ಯಲಿಂಗ, ನಿಃಕಲಲಿಂಗ–ಎಂಬ ಮೂರು ಮೆಟ್ಟಲುಗಳು, ಪ್ರಣವಸ್ವರೂಪಿಯಾದ ಮಹಾಲಿಂಗ ಅದರ ಮುಂದಿನ ಹಂತ. ಇದರ ಮುಂದಿನ ಸ್ಥಿತಿ ಸಾದಾಖ್ಯ. ಇವುಗಳಲ್ಲಿ ಮಹಾಸಾದಾಖ್ಯ, ಶಿವಸಾದಾಖ್ಯ, ಅಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತುಸಾದಾಖ್ಯ, ಕರ್ಮಸಾದಾಖ್ಯ–ಎಂಬ ಬಗೆಗಳನ್ನು ಹೇಳಲಾಗಿದೆ. ಇವುಗಳ ವಿವರಗಳಲ್ಲಿ ಮತ್ತು ಇವುಗಳಿಂದ ಪಂಚಭೂತಾತ್ಮಕವಾದ ಜಗತ್ತು ವಿಕಾಸಗೊಳ್ಳುವ ಕ್ರಮನಿರೂಪಣೆಯಲ್ಲಿ ಅಲ್ಪಸ್ವಲ್ಪ ಭಿನ್ನತೆ ಕಂಡರೂ ಒಟ್ಟಿನಲ್ಲಿ ಶರಣರ ಅಭಿಪ್ರಾಯಗಳು ಏಕಸೂತ್ರಬದ್ಧವಾಗಿವೆ.

ಸೃಷ್ಟಿಯ ಮೊದಲ ಹಂತ ಶೂನ್ಯಲಿಂಗ. ಶರಣರ ಶೂನ್ಯದ ಕಲ್ಪನೆಯೇ ಒಂದು ರೀತಿಯಲ್ಲಿ ವಿಶಿಷ್ಟವಾದದ್ದು. ಶರಣರು ಕೆಲವು ಮಾತುಗಳಿಗೆ ತಮ್ಮ ಸಾಧನೆಯ ಹಿನ್ನೆಲೆಯಿಂದ ವಿಶಿಷ್ಟವಾದ ಅರ್ಥವನ್ನು ಕೊಟ್ಟರು. ಬಯಲು, ನಿರ್ವಯಲು, ಅರುಹು, ಕುರುಹು ಇತ್ಯಾದಿಗಳಂತೆ ಶೂನ್ಯ-ನಿಶ್ಶೂನ್ಯಗಳನ್ನೂ ಹೇಳಬಹುದು. 'ಶೂನ್ಯ' ಎಂಬ ಮಾತಿಗೆ ಅವರು ಕೊಟ್ಟ ಅರ್ಥಕಲ್ಪನೆ ಅತ್ಯಂತ ವ್ಯಾಪಕವಾದುದು. ಈ ತೋರಿಕೆಯ ಎಲ್ಲ ಸೃಷ್ಟಿಗೂ ಕಾರಣವಾದ, ಆದರೆ ಇದೆಲ್ಲಕ್ಕೂ ಅತೀತವಾದ, ಸೃಷ್ಟಿಕರ್ತನ ಸೃಷ್ಟಿಪೂರ್ವದ ಸಹಜಸ್ವರೂಪ ಅದು. ಇದರಲ್ಲಿಯೂ ಮೂರು ಹಂತಗಳನ್ನು ಮಾಡಿ ಶೂನ್ಯಲಿಂಗಕ್ಕಿಂತ ಪೂರ್ವದ ಸ್ಥಿತಿಯೊಂದನ್ನು ಕಲ್ಪಿಸಿ ಅದನ್ನು 'ಸರ್ವಶೂನ್ಯ ನಿರಾಲಂಬ' ಎಂದು ಕರೆದಿದ್ದಾರೆ. 'ಶೂನ್ಯಲಿಂಗ' ಎಂದಾಗಲೇ ಅದರಲ್ಲಿ ಸ್ವಲ್ಪಮಟ್ಟಿಗೆ ಸೃಷ್ಟಿಮುಖವಾದ ಸಾಕಾರಕ್ರಿಯೆ ಸೂಚಿತವಾಗುತ್ತದೆ. ಇದಕ್ಕಿಂತ ಹಿಂದಿನ ಸ್ಥಿತಿಯೊಂದಿದ್ದಿರಬೇಕೆಂಬುದು ಶರಣರ ಕಲ್ಪನೆ. ಅದನ್ನು ಅವರು 'ಸರ್ವಶೂನ್ಯ ನಿರಾಲಂಬ ಸ್ಥಿತಿ' ಎಂದು ಕರೆಯುತ್ತಾರೆ. ಅದರ ಸ್ವರೂಪವನ್ನು ಅನೇಕ ರೀತಿಯಲ್ಲಿ ವರ್ಣಿಸಿದ್ದಾರೆ :

> 'ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮರೆಂಬ ಅಷ್ಟತನು ಮೂರ್ತಿ ಸ್ವರೂಪಗೊಳ್ಳದಂದು, ನಾನು ನೀನೆಂಬ ಭ್ರಾಂತಿಸೂತಕ ಪುಟ್ಟದಂದು, ನಾಮರೂಪ ಕ್ರಿಯೆಗಳೇನೂ ಇಲ್ಲದಂದು, ಸರ್ವಶೂನ್ಯ ನಿರಾಲಂಬನಾಗಿರ್ದೆಯಲ್ಲಾ ನೀನು ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ':
>
> 'ಆದಿ ಮಧ್ಯಾವಸಾನವಿಲ್ಲದಂದು, ಆದಿ ಅನಾದಿ ನಾದ ಬಿಂದು ಕಳೆಗಳಿಲ್ಲದಂದು, ಸಾವಯವ ನಿರವಯವವಿಲ್ಲದಂದು, ತತ್ವ ಬ್ರಹ್ಮಾಂಡಾದಿ ಲೋಕಾದಿ ಲೋಕಂಗಳೇನೂ ಇಲ್ಲದಂದು, ನಿತ್ಯನಿರಂಜನ ಪರವಸ್ತು ನೀನೊಬ್ಬನೇ ಇದ್ದೆಯಲ್ಲಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ'.

ಎಂದು ಹೇಳುತ್ತಾನೆ ತೋಂಟದ ಸಿದ್ಧಲಿಂಗ. ಹೀಗೆ 'ಆದಿ ಅನಾದಿ ಇಲ್ಲದಂದು, ಶೂನ್ಯನಿಶ್ಶೂನ್ಯವಿಲ್ಲದಂದು, ಭೇದಾಭೇದಂಗಳೇನೂ ಇಲ್ಲದಂದು ನಿಮ್ಮ ನೀವರಿಯದೆ ಇರ್ದಿರಲ್ಲಾ' ಎಂಬಂತಹ ಸರ್ವಶೂನ್ಯ ನಿರಾಲಂಬ ಸ್ಥಿತಿ ಇದು.

ಇಲ್ಲಿಂದ ಮುಂದಿನ ಸ್ಥಿತಿಯೆಂದರೆ ಶೂನ್ಯಲಿಂಗ, ಕೇವಲ ನಿರಾಲಂಬ ಸ್ಥಿತಿಯಿಂದ ಶೂನ್ಯದ ಅವಲಂಬನೆಗೆ ಇಳಿದಿರುವ ಸ್ಥಿತಿ. ಇಲ್ಲಿಯೂ ಆದಿ ಅನಾದಿಗಳಿಲ್ಲ, ನಾದ ಬಿಂದುಗಳಿಲ್ಲ, ಶಿವಶಕ್ತಿಯಿಲ್ಲ, ಶಿವಶಕ್ತಿಗೆ ಕಾರಣವಾದ ಸತ್‌ಚಿತ್ತಾನಂದ ನಿತ್ಯಪರಿಪೂರ್ಣನೆಂಬ ನಿಃಕಳ ಶಿವತತ್ವವೂ ಇಲ್ಲ, ಜೀವಪರಮಾತ್ಮರೆಂಬುವರಿಲ್ಲ, ದೇಹಿದೇಹಂಗಳಿಲ್ಲ. ಆದರೆ ಶೂನ್ಯನಿರಾಲಂಬದಿಂದ ಇಳಿದು 'ಶೂನ್ಯವಾಗಿ ಇರ್ದ' ಈ ಸ್ಥಿತಿಯನ್ನು ತೋಂಟದ ಸಿದ್ಧಲಿಂಗ ಅರ್ಥವತ್ತಾಗಿ ಹೇಳುತ್ತಾನೆ. ಈ ಎರಡೂ ಸ್ಥಿತಿಗಳಿಗೂ ಇರುವ ಅಂತರ ಬಹಳ ಸೂಕ್ಷ್ಮವಾದದ್ದು; ಕೇವಲ ಧ್ಯಾನಗೋಚರವಾದಂತಹುದು.

> 'ಆದಿ ಅನಾದಿಗಳಿಲ್ಲದಂದು, ನಾದ ಬಿಂದು ಕಳೆ ಮೊಳೆದೋರದಂದು ದೇಹಿದೇಹಂಗಳು ಉತ್ಪತ್ಯವಾಗದಂದು, ಜೀವಾತ್ಮ ಪರಮಾತ್ಮರೆಂಬವರಿಲ್ಲದಂದು, ಸಕಲ ಚರಾಚರಂಗಳ ಸುಳುಹಿಲ್ಲದಂದು, ನೀನು ಶೂನ್ಯವಾಗಿ ಇರ್ದೆಯಯ್ಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ'

ಎಂದು ಮುಂತಾಗಿ ಆತ ಹೇಳುವ ಮಾತುಗಳನ್ನು ಗಮನಿಸಬಹುದು.

ಇಲ್ಲಿಂದ ಮುಂದಿನದು ನಿಃಕಲಲಿಂಗ. ಇಲ್ಲಿ ಆತ ಸಚ್ಚಿದಾನಂದ ಪರಬ್ರಹ್ಮ ಎಲ್ಲ ತತ್ವಗಳಿಗೂ ಆಶ್ರಯದಾತ; ಎಲ್ಲಕ್ಕೂ ಆದಿ, ಆಧಾರಭೂತ.

> 'ಅಂಗವಾರು, ಲಿಂಗವಾರು, ಶಕ್ತಿಯಾರು – ಇಂತಿವೆಲ್ಲವ ಗರ್ಭೀಕರಿಸಿಕೊಂಡು ಸಚ್ಚಿದಾನಂದ ನಿತ್ಯಪರಿಪೂರ್ಣ ನಿರಂಜನ ನೀನಾದ ಕಾರಣ ನಿನ್ನ ನಿಃಕಲ ಶಿವತತ್ವವೆಂದೆನು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ'.
>
> 'ಚಿತ್ತು ಬುದ್ಧಿ ಅಹಂಕಾರ ಹುಟ್ಟದಂದು, ಮನ ಜ್ಞಾನ ಭಾವಂಗಳುತ್ಪತ್ತಿ ಇಲ್ಲದಂದು, ಜ್ಞಾತೃ ಜ್ಞಾನ ಜ್ಞೇಯಂಗಳು ಇಲ್ಲದಂದು, ಜ್ಞಾನ ಸುಜ್ಞಾನ ಮಹಾಜ್ಞಾನವೆಂಬ ವೃತ್ತಿಜ್ಞಾನವಿಲ್ಲದಂದು ಅಖಂಡ ಪರಿಪೂರ್ಣದ್ವಯ ನಿಃಕಲ ನಿಜಜ್ಞಾನಮೂರ್ತಿ ನೀನೇ ಅಯ್ಯಾ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ'.

ಈ ಮುಂತಾದ ಮಾತುಗಳಲ್ಲಿ ಇದರ ಸ್ವರೂಪವನ್ನು ಕಾಣಬಹುದು. ಇದು ಸೃಷ್ಟಿ ಪೂರ್ವದ ಸ್ಥಿತಿಯೇ. ಆದರೆ ಸರ್ವಶೂನ್ಯ ನಿರಾಲಂಬದಲ್ಲಿ ಕಂಡು ಬರುವಂತೆ ಸೃಷ್ಟಿಗೆ ಬಹುದೂರದ ನಿಲವಲ್ಲ. ನಿರಾಲಂಬದಿಂದ ಶೂನ್ಯಲಿಂಗವಾಗಿ ಅಲ್ಲಿಂದ ನಿಃಕಲಲಿಂಗವಾಗಿ ಪರಿಣಮಿಸಿ ಸೃಷ್ಟಿಮುಖವಾದ ಪ್ರವೃತ್ತಿಮಾರ್ಗದಲ್ಲಿ ಹೆಜ್ಜೆ ಇಡುತ್ತಿರುವ ವಿಕಾಸ ಕ್ರಮವನ್ನು ಇಲ್ಲಿ ಕಂಡುಕೊಳ್ಳಬಹುದಾಗಿದೆ.

ಇದರ ಮುಂದಿನ ಪ್ರಮುಖವಾದ ಹೆಜ್ಜೆಯೇ ಮಹಾಲಿಂಗ. ನಿಃಕಲಲಿಂಗದಲ್ಲಿ ಶಕ್ತಿ ಸಂಚಾರವಾಗಿ ಅದು ಓಂಕಾರಕ್ಕೆ ಕಾರಣವಾಗುತ್ತದೆ. ಆ ಪ್ರಣವ ಸ್ವರೂಪಿಯಾದದ್ದು ಮಹಾಲಿಂಗ. ತೋಂಟದ ಸಿದ್ಧಲಿಂಗನ ಮಾತುಗಳಲ್ಲಿ ಇದನ್ನು ನೋಡಬಹುದಾದರೆ:

'ನಿಃಕಲ ಶಿವತತ್ವದಲ್ಲಿ ಜ್ಞಾನ ಚಿತ್ತು ಉದಯವಾಯಿತ್ತು. ಆ ಚಿತ್ತಿನಿಂದ ಅಕಾರ, ಉಕಾರ, ಮಕಾರಂಗಳೆಂಬ ಅಕ್ಷರತ್ರಯಂಗಳಾದವು. ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ—ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು, ಇಂತೀ ನಾಲ್ಕು ಒಂದಾದಲ್ಲಿ ಓಂಕಾರವೆಂಬ ಪ್ರಣಮ ಉತ್ಪತ್ತಿಯಾಯಿತ್ತು. ಆ ಓಂಕಾರವೆಂಬ ಪ್ರಣಮವೇ ಅಖಂಡ ಪರಿಪೂರ್ಣ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ'.

ಇಲ್ಲಿ ಮೊಟ್ಟಮೊದಲನೆಯ ಬಾರಿ ಲಿಂಗಕ್ಕೆ ಸಾಕಾರ ಸೂಚನೆ ಕಂಡುಬರುತ್ತದೆ. ಇದಕ್ಕೆ ಹಿಂದಿನದೆಲ್ಲವೂ ನಿರಾಕಾರ ನಿಲವು. ಮಹಾಲಿಂಗ ಮಾತ್ರ ಗೋಳಕಾರ ತೇಜೋಮೂರ್ತಿಯಾಗಿ ಪ್ರಕಾಶಿಸುತ್ತದೆ. 'ಪಂಚಶಕ್ತಿಯನು, ಪಂಚಸಾದಾಖ್ಯವನು, ಪಂಚಕಲೆಗಳನು, ಪಂಚಾಕ್ಷರಂಗಳನು, ಪಂಚಭೂತಾತ್ಮವನು, ತನ್ನಲ್ಲಿ ಗರ್ಭೀಕರಿಸಿಕೊಂಡು' ಮುಂದಿನ ಎಲ್ಲ ಸೃಷ್ಟಿಗೂ ಕಾರಣವಾಗುವ ಪೂರ್ವಸ್ಥಿತಿ ಇಲ್ಲಿ ಕಾಣುತ್ತದೆ. 'ತಾನು ಚಿದ್ಬ್ರಹ್ಮಾಂಡಾತ್ಮಕನಾಗಿ, ಚಿನ್ಮಯನಾಗಿ, ಚಿದ್ರೂಪನಾಗಿ, ಚಿತ್ಪ್ರಕಾಶನಾಗಿ, ಚಿದಾನಂದನಾಗಿ ಸುಖ ದುಃಖ ಭಯ ಮೋಹಂಗಳ ಹೊದ್ದದೆ ಸರ್ವವ್ಯಾಪಕನಾಗಿ ಸರ್ವಚೈತನ್ಯಮಯನಾಗಿರ್ಪ ಪರಂಜ್ಯೋತಿರ್ಲಿಂಗ'ವಾಗಿ ಪರಿಣಮಿಸುತ್ತದೆ ಮಹಾಲಿಂಗ. ನಿರಾಲಂಬ ಸ್ಥಿತಿಯಿಂದ ಮಹಾಲಿಂಗದವರೆಗಿನ ಈ ವಿಕಾಸವನ್ನು ಕೆಳಗಿನ ಮಾತುಗಳಲ್ಲಿ ಸಂಗ್ರಹಿಸಿರುವುದು ಕಂಡುಬರುತ್ತದೆ:

'ಅಷ್ಟತನುಯುಕ್ತವಾದ ಬ್ರಹ್ಮಾಂಡಾದಿ ಚರಾಚರ ಪ್ರಾಣಿಗಳು ತೋರುವ ತೋರಿಕೆ ಏನೇನೂ ಇಲ್ಲದಂದು ಸರ್ವಶೂನ್ಯ ನಿರಾಲಂಬ ಬ್ರಹ್ಮವು ತಾನೊಂದೇ ಒಪ್ಪುತ್ತಿರ್ದಿತ್ತು. ಅಂತಿರ್ದ ಪರಬ್ರಹ್ಮವು ತಾನೋದೇ ಘೃತಕಾಠಿಣ್ಯವನ್ಮೂರ್ತಿ ಸಚ್ಚಿದಾನಂದ ಲಕ್ಷಣವೆಂದು ಹೇಳುತ್ತಿಹುದಾದ ಕಾರಣ, ಒಂದಾನೊಂದು ತಿಳಿದುಪ್ಪವೇ ಗಟ್ಟಿಕೊಂಡು ಎರೆದುಪ್ಪವಾದ ಹಾಗೆ ನಿರಂಜನ ಬ್ರಹ್ಮವಾಯಿತ್ತು. ಆ ನಿರಂಜನ ಬ್ರಹ್ಮವು ನೆನೆದ ನೆನಹೇ ನಿರಂಜೋಂಕಾರ ಶಕ್ತಿ. ಆ ನಿರಂಜೋಂಕಾರ ಶಕ್ತಿಯ ನೆನಹು ಮಾತ್ರದಿಂದ ವಾಚ್ಯ ಪ್ರಣವ ಸ್ವರೂಪವಾದ ಶೂನ್ಯಲಿಂಗವು ಪುಟ್ಟಿತ್ತು. ಆ ಶೂನ್ಯಲಿಂಗಕ್ಕಂಗವಾಗಿರುವಂಥಾದ್ದೇ ಜ್ಞಾನಚಿತ್ತು. ಆ ಚಿತ್ತಿನ ಚಿನ್ನಾದವೇ ಬಕಾರ, ಚಿದ್ಬಿಂದುವೇ ಸಕಾರ, ಚಿತ್ಕಳೆಯೇ ವಕಾರ. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡಖಂಡ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು'.

ತಿಳಿದುಪ್ಪ ಎರೆದುಪ್ಪವಾದ ಹಾಗೆ, ಓಂಕಾರರೂಪಿಯಾಗಿ ಸಾಕಾರಗೊಂಡ ತೇಜೋಮೂರ್ತಿಯೇ ಮಹಾಲಿಂಗವಾಯಿತೆಂಬ ಈ ವರ್ಣನೆ ಮತ್ತು ಅದರಲ್ಲಿ ಬಕಾರ ಸಕಾರ ವಕಾರಗಳನ್ನು ಸಮಾವೇಶಗೊಳಿಸಿರುವುದೂ ಅರ್ಥವತ್ತಾಗಿದೆ.

ಸೃಷ್ಟಿರಚನೆಯಲ್ಲಿ 'ಓಂ'ಕಾರಕ್ಕೆ ಬಹಳ ಮಹತ್ವದ ಸ್ಥಾನವನ್ನು ಶರಣರು ಕೊಟ್ಟಿದ್ದಾರೆ. ಹಿಂದೂಧರ್ಮದ ಎಲ್ಲ ಶಾಖೆಗಳಲ್ಲಿಯೂ ಇದಕ್ಕೆ ಸ್ಥಾನವಿದೆ. ಸೃಷ್ಟಿಶಕ್ತಿಯನ್ನು ನಿರ್ದೇಶಿಸುವ ಅತ್ಯಂತ ಮಹತ್ವಪೂರ್ಣವೂ ವ್ಯಾಪಕವೂ ಆದ ಸಂಕೇತವಿದೆಂಬ ಭಾವನೆ ಏಕಪ್ರಕಾರವಾಗಿ ಬೆಳೆದುಬಂದಿದೆ. 'ಓಂ ಇತ್ಯೇತದಕ್ಷರಮಿದಂ ಸರ್ವಂ'–ಅಂದರೆ ಇದೆಲ್ಲವೂ ಓಂ ಎಂಬ ಅಕ್ಷರ ಎಂದು ಮಾಂಡೂಕ್ಯೋಪನಿಷತ್ತು ಘೋಷಿಸುತ್ತದೆ. ಅಕಾರ ಉಕಾರ ಮಕಾರಗಳ ಸಮುದಾಯ ಧ್ವನಿಯಿಂದ ಓಂಕಾರ ಆವಿರ್ಭವಿಸುತ್ತದೆ. ಜೀವಿಯ ಜಾಗೃತ್ ಸ್ವಪ್ನ ಸುಷುಪ್ತಿಗಳಿಗೂ ಮತ್ತು ಈ ಅವಸ್ಥೆಗಳಲ್ಲಿ ಆತ ಪಡೆಯುವ ವೈಶ್ವಾನರ ತೈಜಸ ಪ್ರಾಜ್ಞ ಸ್ಥಿತಿಗಳಿಗೂ ಕ್ರಮವಾಗಿ ಅಉಮಗಳು ಸಂಜ್ಞೆಗಳಾಗಿವೆ. ಈ ಮೂರೂ ಅವಸ್ಥೆಗಳಿಗೆ ಅತೀತವಾದ ತುರೀಯಾವಸ್ಥೆಯೊಂದುಂಟು. ಅದನ್ನು ಪ್ರತಿನಿಧಿಸುತ್ತದೆ ಈ ಮೂರೂ ಅಕ್ಷರಗಳ ಒಟ್ಟುರೂಪವಾದ ಓಂಕಾರ. ಇದು ಈ ಉಪನಿಷತ್ತಿನಲ್ಲಿ ಕಂಡುಬರುವ ಓಂಕಾರ ಸ್ವರೂಪದ ವಿವೇಚನೆಯ ಸಾರ. ಹಿಂದೂಧರ್ಮದ ಒಂದೊಂದು ಶಾಖೆಯಲ್ಲಿಯೂ ಇದರ ಮಹತ್ವ ಬಗೆಬಗೆಯಾಗಿ ಬೆಳೆಯುತ್ತಾ ಬಂದಿದೆ. ಹಿಂದೂಧರ್ಮದ ಸಮಾನ ಅಂಶಗಳಲ್ಲಿ ಇದೂ ಒಂದು ಬಹುಮುಖ್ಯವಾದ ಅಂಶವೆನ್ನಬಹುದು. ಶರಣರು ಇದನ್ನು ಬಹಳ ಅರ್ಥವತ್ತಾದ ರೀತಿಯಲ್ಲಿ ವಿವೇಚಿಸಿದ್ದಾರೆ, ಸೃಷ್ಟಿರಚನಾ ಕ್ರಮದಲ್ಲಿ ಅದನ್ನು ಅಳವಡಿಸಿಕೊಂಡಿದ್ದಾರೆ.

'ಓಂಕಾರವೆಂಬ ಪ್ರಣಮದಲ್ಲಿ ಅಕಾರ, ಉಕಾರ, ಮಕಾರ: ಈ ಮೂರು ಬೀಜಾಕ್ಷರ ; ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ ; ಮತ್ತು ಅಕಾರವೇ ರುದ್ರ, ಉಕಾರವೇ ಈಶ್ವರ, ಮಕಾರವೇ ಸದಾಶಿವ. ಇಂತೀ ಅಕಾರ, ಉಕಾರ,

ಮಕಾರಕ್ಕೆ ನಾದ ಬಿಂದು ಕಳೆಯೇ ಆಧಾರ. ಆ ಪ್ರಕೃತಿಗೆ ಪ್ರಾಣವೇ ಆಧಾರ. ಆ ಪ್ರಾಣಕ್ಕೆ ಲಿಂಗವೇ ಆಧಾರ. ಅ ಎಂದರೆ ಅನಾಹತ, ಉ ಎಂದಡೆ ನಾದ ಉಳಿಯಿತ್ತು. ಮ ಎಂದಲ್ಲಿ ಬಿಂದುಕೂಡಲು ಶಿವಶಕ್ತಿಯಾಗುತ್ತಾ ಇಂತಹ ಓಂಕಾರವಾಯಿತ್ತು.' ಈ ಮೊದಲಾದ ರೀತಿಯಲ್ಲಿ ಓಂಕಾರದ ವಿವರಣೆ ಮುಂದುವರಿಯುತ್ತದೆ. ಸಕಲ ವೇದ ಶಾಸ್ತ್ರ ಪುರಾಣ ಬ್ರಹ್ಮಾಂಡಾದಿಗಳೆಲ್ಲವೂ ನಾದಬ್ರಹ್ಮಸ್ವರೂಪಿಯಾದ ಪ್ರಣವದ ಪ್ರಭಾವ. ಮತ್ತು ಇಂತಹ ಪ್ರಣವಸ್ವರೂಪಿಯಾದದ್ದು ಮಹಾಲಿಂಗ–ಎಂದು ವರ್ಣಿಸುತ್ತಾರೆ ಶರಣರು.

ಈ ಮಹಾಲಿಂಗದಿಂದ ಸಾದಾಖ್ಯಗಳು, ಅಂದರೆ ಸತತ ಶಿವಭಾವನೆಯನ್ನುಳ್ಳ ಸದಾಶಿವತತ್ತ್ವಗಳ ಉತ್ಪತ್ತಿಯಾಗುತ್ತವೆ. ಆ ಸೃಷ್ಟಿಕ್ರಮವನ್ನು ಮುಂದಿನ ವಚನ ಹಂತಹಂತವಾಗಿ ಪರಿಚಯ ಮಾಡಿಕೊಡುತ್ತದೆ:

'ಆ ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರವಾದ ಮಹಾಲಿಂಗವು ತಾನೊಂದೇ ಕರ್ಮಸಾದಾಖ್ಯ, ಕರ್ತುಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯವೆಂಬೈದು ಸಾದಾಖ್ಯಲಿಂಗಸ್ವರೂಪವ ತಳೆಯಿತು'.

'ಕರ್ಮಸಾದಾಖ್ಯವೇ ಆಚಾರಲಿಂಗದ ಪ್ರಕಾಶ, ಕರ್ತುಸಾದಾಖ್ಯವೇ ಗುರುಲಿಂಗಪ್ರಕಾಶ, ಮೂರ್ತಿಸಾದಾಖ್ಯವೇ ಶಿವಲಿಂಗಪ್ರಕಾಶ, ಅಮೂರ್ತಿಸಾದಾಖ್ಯವೇ ಜಂಗಮಲಿಂಗಪ್ರಕಾಶ, ಶಿವಸಾದಾಖ್ಯವೇ ಪ್ರಸಾದಲಿಂಗ ಪ್ರಕಾಶಸ್ವರೂಪವ ತಳೆಯಿತು'.

'ಈ ಐದುಲಿಂಗದ ಬೆಳಕೇ ಪಂಚಮುಖವೆಂದೆನಿಸಿತು ಎಂಬಲ್ಲಿ, ಆಚಾರಲಿಂಗಪ್ರಕಾಶವೇ ಸದ್ಯೋಜಾತಮುಖ, ಗುರುಲಿಂಗಪ್ರಕಾಶವೇ ವಾಮದೇವಮುಖ, ಶಿವಲಿಂಗಪ್ರಕಾಶವೇ ಅಘೋರಮುಖ, ಜಂಗಮಲಿಂಗಪ್ರಕಾಶವೇ ತತ್ಪುರುಷಮುಖ, ಪ್ರಸಾದಲಿಂಗಪ್ರಕಾಶವೇ ಈಶಾನ್ಯಮುಖ-ಇವುಗಳ ಸ್ವರೂಪವನ್ನು ತಳೆಯಿತು'.

'ಆ ಪಂಚಮುಖದಿಂದಲೆ ಪಂಚಾಕ್ಷರಂಗಳ ಉತ್ಪತ್ತಿ ಎಂಬಲ್ಲಿ ಸದ್ಯೋಜಾತಮುಖದಿಂದ ನಕಾರಪ್ರಣಮವು, ವಾಮದೇವಮುಖದಿಂದ ಮಕಾರಪ್ರಣಮವು, ಅಘೋರಮುಖದಿಂದ ಶಿಕಾರಪ್ರಣಮವು, ತತ್ಪುರುಷಮುಖದಿಂದ ವಕಾರದ ಪ್ರಣಮವು, ಈಶಾನ್ಯಮುಖದಿಂದ ಯಕಾರಪ್ರಣಮವು ಹುಟ್ಟಿದುವು'.

'ಆ ಪಂಚಾಕ್ಷರಂಗಳಿಂದಲೆ ಪಂಚಕಲೆಗಳುತ್ಪತ್ತಿಯು ಎಂಬಲ್ಲಿ ನಕಾರಪ್ರಣಮದಿಂದ ನಿವೃತ್ತಿಕಲೆ, ಮಕಾರಪ್ರಣಮದಿಂದ ಪ್ರತಿಷ್ಠಾಕಲೆ, ಶಿಕಾರಪ್ರಣಮದಿಂದ ವಿದ್ಯಾಕಲೆ, ವಕಾರಪ್ರಣಮದಿಂದ ಶಾಂತಿಕಲೆ, ಯಕಾರಪ್ರಣಮದಿಂದ ಶಾಂತ್ಯತೀತಕಲೆ ಹುಟ್ಟಿದುವು'.

'ಆ ಪಂಚಕಲೆಗಳಿಂದಲೇ ಪಂಚಶಕ್ತಿಗಳುತ್ಪತ್ತಿ. ಅದು ಹೇಗೆ ? ನಿವೃತ್ತಿಕಲೆಯಿಂದ ಕ್ರಿಯಾಶಕ್ತಿ, ಪ್ರತಿಷ್ಠಾಕಲೆಯಿಂದ ಜ್ಞಾನಶಕ್ತಿ, ವಿದ್ಯಾಕಲೆಯಿಂದ ಇಚ್ಛಾಶಕ್ತಿ, ಶಾಂತಿಕಲೆಯಿಂದ ಆದಿಶಕ್ತಿ, ಶಾಂತ್ಯತೀತ ಕಲೆಯಿಂದ ಪರಾಶಕ್ತಿ ಹುಟ್ಟಿದುವು'.

'ಆ ಪಂಚಶಕ್ತಿಗಳಿಂದಲೆ ಪಂಚಕರಣಂಗಳುತ್ಪತ್ತಿಯು ಎಂಬಲ್ಲಿ, ಕ್ರಿಯಾಶಕ್ತಿಯಿಂದ ಚಿತ್ತ, ಜ್ಞಾನಶಕ್ತಿಯಿಂದ ಬುದ್ಧಿ, ಇಚ್ಛಾಶಕ್ತಿಯಿಂದ ಅಹಂಕಾರ, ಆದಿಶಕ್ತಿಯಿಂದ ಮನ, ಪರಾಶಕ್ತಿಯಿಂದ ಜ್ಞಾನವೆಂಬ ಕರಣಗಳು ಹುಟ್ಟಿದವು'.

'ಪಂಚಕರಣಂಗಳಿಂದಲೆ ಪಂಚತನ್ಮಾತ್ರೆಗಳ ಉತ್ಪತ್ತಿಯಾಯಿತು ಎಂಬಲ್ಲಿ, ಚಿತ್ತವೆಂಬ ಕರಣದಿಂದ ಗಂಧವಿಷಯವು, ಬುದ್ಧಿ ಎಂಬ ಕರಣದಿಂದ ರಸವಿಷಯವು, ಅಹಂಕಾರವೆಂಬ ಕರಣದಿಂದ ರೂಪವಿಷಯವು, ಮನವೆಂಬ ಕರಣದಿಂದ ಸ್ಪರ್ಶನವಿಷಯವು, ಜ್ಞಾನವೆಂಬ ಕರಣದಿಂದ ಶಬ್ದ ವಿಷಯವು ಹುಟ್ಟಿದುವು'.

'ಆ ಪಂಚತನ್ಮಾತ್ರೆಗಳಿಂದಲೇ ಪಂಚಭೂತಗಳುತ್ಪತ್ತಿಯು,ಗಂಧ ವಿಷಯದಿಂದ ಪೃಥ್ವಿಯು, ರಸವಿಷಯದಿಂದ ಅಪ್ಪು, ರೂಪ ವಿಷಯದಿಂದ ಅಗ್ನಿ, ಸ್ಪರ್ಶನ ವಿಷಯದಿಂದ ವಾಯು, ಶಬ್ದ ವಿಷಯದಿಂದ ಆಕಾಶವೆಂಬೈದು ತತ್ವಂಗಳು ಹುಟ್ಟಿದುವು, ಇಲ್ಲಿಗೆ ಪಂಚಸಾದಾಖ್ಯಮೂರ್ತಿಲಿಂಗಸ್ಥಲ.'

ಇತ್ಯಾದಿ ಮಾತುಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಸೃಷ್ಟಿರಚನೆಯ ಕ್ರಮವೆಲ್ಲಾ ಈ ಮಾತುಗಳಲ್ಲಿ ಬೀಜರೂಪವಾಗಿ ನಿರೂಪಿತವಾಗಿದೆ. ಸಾದಾಖ್ಯಗಳಿಂದ ಹಿಡಿದು ಪಂಚಭೂತಗಳವರೆಗೆ ಎಲ್ಲ ತತ್ತ್ವಗಳ ಉಗಮಕ್ರಮವನ್ನೂ ಇಲ್ಲಿ ಕಾಣಬಹುದು.

ಸೃಷ್ಟಿರಚನೆಯನ್ನು ಕುರಿತ ಇನ್ನೂ ವಿವರವಾದ ವಿವೇಚನೆ ಶರಣರ ವಚನಗಳಲ್ಲಿದೆ. ಪ್ರಣವಸ್ವರೂಪವಾದ ಮಹಾಲಿಂಗದಿಂದ ಷಟ್‌ಸ್ಥಲ ಬ್ರಹ್ಮಮೂರ್ತಿಗಳು ಷಡಧ್ವಗಳು, ಮತ್ತು ಅವುಗಳ ವರ್ತನೆಗಳು–ಈ ಮೊದಲಾದುವುಗಳ ವಿವರಣೆಗಳೆಲ್ಲಾ ಅಲ್ಲಿ ಬರುತ್ತವೆ. 'ಸೃಷ್ಟಿಯ ವಚನಗಳು' ಎಂಬುದಾಗಿಯೇ ಕೆಲವು ದೀರ್ಘವಾದ ವಚನಗಳುಂಟು. ಅಕ್ಕನ 'ಸೃಷ್ಟಿಯ ವಚನ', ಪ್ರಭುದೇವರ 'ಸೃಷ್ಟಿಯ ವಚನ'ಗಳನ್ನು ಇಲ್ಲಿ ಹೆಸರಿಸಬಹುದು. ಅತಿ ದೀರ್ಘವಾದ ಈ ವಚನಗಳು ಮೇಲೆ ಹೇಳಿದ ಸೃಷ್ಟಿಕ್ರಮವನ್ನು, ಅಂದರೆ ಶೂನ್ಯಲಿಂಗ, ನಿಃಕಲಲಿಂಗ, ಮಹಾಲಿಂಗ, ಸಾದಾಖ್ಯಗಳು, ಪಂಚಭೂತಾದಿಗಳು–ಇವುಗಳನ್ನೇ ಅಲ್ಪಸ್ವಲ್ಪ ಬದಲಾವಣೆಗಳೊಡನೆ ವಿವರಿಸುತ್ತವೆ. ಅಕ್ಕನ ಸೃಷ್ಟಿಯ ವಚನದಲ್ಲಿ ಬರುವ ಈ ಒಂದು ಭಾಗವನ್ನು ಇಲ್ಲಿ ಉದಾಹರಿಸಬಹುದು:

'......ಮೊದಲು ನಿರಾಕಾರವಾದ ನಿಃಕಲ ಬ್ರಹ್ಮವು, ಆ ನಿಃಕಲ ಬ್ರಹ್ಮದಿಂದ ಚಿತ್ತು, ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಹುಟ್ಟಿದವು. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲಚಿತ್ತೆಂಬ ಚತುರ್ವಿಧವು ಘಟ್ಟಿಗೊಂಡು ಅಖಂಡಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು. ಆ ಮಹಾಲಿಂಗವೇ ಪಂಚಸಾದಾಖ್ಯಮೂರ್ತಿಯೆಂದೆನಿಸಿತು. ಆ ಪಂಚಸಾದಾಖ್ಯವೇ ಪಂಚಲಿಂಗ ಪ್ರಕಾಶವೆಂದೆನಿಸಿತು. ಆ ಪಂಚಲಿಂಗ ಪ್ರಕಾಶವೇ ಪಂಚಮುಖವೆಂದೆನಿಸಿತು. ಆ ಪಂಚಮುಖದಿಂದಲೇ ಪಂಚಾಕ್ಷರಂಗಳುತ್ಪತ್ತಿ,

ಆ ಪಂಚಾಕ್ಷರಂಗಳಿಂದಲೆ ಪಂಚಕಲೆಗಳುತ್ಪತ್ತಿ, ಆ ಪಂಚಕಲೆಗಳಿಂದಲೆ ಪಂಚಶಕ್ತಿಗಳುತ್ಪತ್ತಿ, ಆ ಪಂಚಶಕ್ತಿಗಳಿಂದಲೇ ಪಂಚಕರಣಂಗಳುತ್ಪತ್ತಿ, ಆ ಪಂಚಕರಣಂಗಳಿಂದಲೇ ಪಂಚತನ್ಮಾತ್ರೆಗಳುತ್ಪತ್ತಿ, ಆ ಪಂಚತನ್ಮಾತ್ರೆಗಳಿಂದಲೇ ಪಂಚಭೂತಂಗಳುತ್ಪತ್ತಿ, ಆ ಪಂಚಭೂತಗಳೇ ಪಂಚಕರಣತ್ವವನೈದಿ ಒಂದೊಂದು ತತ್ವಂಗಳು ಐದು ಐದು ತತ್ವಂಗಳ ಸ್ವರೂಪವನು ತಾಳಿ ಇಪ್ಪತ್ತೈದು ತತ್ವಂಗಳಾಗಿ ಆ ಇಪ್ಪತ್ತೈದು ತತ್ವಾತ್ಮಕವಾದ ಶರೀರವು ತನಗೆ ಬಂದು ದೊರೆಕೊಂಡಿತಲಾ......'

ಎಂದು ಮುಂತಾಗಿ ಪಿಂಡಸ್ಥಲ, ಪಿಂಡಜ್ಞಾನಸ್ಥಲಾದಿಗಳನ್ನು ನಿರೂಪಿಸುತ್ತದೆ. ಬ್ರಹ್ಮಾಂಡದಿಂದ ಪಿಂಡಾಂಡದವರೆಗೂ ಬೆಳೆದು ಬಂದ ಸೃಷ್ಟಿಕ್ರಮದ ಸಂಕ್ಷಿಪ್ತ ನಿರೂಪಣೆ ಇಲ್ಲಿದೆ.

ತತ್ವತಃ ಬ್ರಹ್ಮಾಂಡ ಮತ್ತು ಪಿಂಡಾಂಡಗಳ ಸ್ವರೂಪ ಒಂದೇ ಎಂಬುದು ಶರಣರ ದೃಷ್ಟಿ. ವಿಶ್ವಾತ್ಮನ ಲೀಲಾಭೂಮಿಯಾಗಿ ಮೂಡಿಬಂದದ್ದು ಬ್ರಹ್ಮಾಂಡ; ಜೀವಾತ್ಮನ ಸಾಧನೆಗೆ ಲಭ್ಯವಾದದ್ದು ಈ ಪಿಂಡಾಂಡ. ಬ್ರಹ್ಮಾಂಡದಂತೆಯೇ ಪಿಂಡಾಂಡವೂ ಸೃಷ್ಟಿಕರ್ತನಿಂದಲೇ ನಿರ್ಮಿತವಾದದ್ದು. ಜೀವಾತ್ಮರುಗಳೂ ಈ ಮಾತಿಗೆ ಹೊರತಲ್ಲ. ಆತ್ಮವು ಮಹಾಲಿಂಗದಿಂದ ಆವಿರ್ಭವಿಸಿದ ಚೈತನ್ಯಾತ್ಮಕವಾದ ಒಂದು ಅಂಶವೆಂಬ ಮಾತನ್ನು ಶರಣರು ಸ್ಪಷ್ಟವಾಗಿ ಹೇಳಿದ್ದಾರೆ:

'ಏನೇನೂ ಇಲ್ಲದ ಮಹಾಘನಲಿಂಗವು ತನ್ನ ಲೀಲೆಯಿಂದ ತಾನೇ ಸ್ವಯಂಭುಲಿಂಗವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ. ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ. ಆತ್ಮನಿಂದಾದುದು ಆಕಾಶ. ಆಕಾಶದಿಂದಾದುದು ವಾಯು. ವಾಯುವಿನಿಂದಾದುದು ಅಪ್ಪು. ಅಪ್ಪುವಿನಿಂದಾದುದು ಪೃಥ್ವಿ. ಪೃಥ್ವಿಯಿಂದಾದುದು ಸಕಲ ಜೀವರೆಲ್ಲ. ಇವೆಲ್ಲ ನಿಮ್ಮ ನೆನಹು ಮಾತ್ರದಿಂದಾದುವು ಸಿಮ್ಮಲಿಗೆಯ ಚನ್ನರಾಮಾ.'

'ಪರಾಪರವಾಗಿಹ ಪರಬ್ರಹ್ಮ ಲೋಕಾದಿ ಲೋಕಂಗಳನು ಸೃಜಿಸಬೇಕೆಂಬ ನೆನಹು ಮಾತ್ರದಲ್ಲಿಯೇ ಆ ಪರಾಪರವಾಗಿಹ ಪರಬ್ರಹ್ಮದಲ್ಲಿ ಪರ ಉತ್ಪತ್ಯವಾಯಿತ್ತು. ಆ ಪರದಲ್ಲಿ ಶಿವನುತ್ಪತ್ಯವಾದನು. ಆ ಶಿವನಲ್ಲಿ ಶಕ್ತಿ ಉತ್ಪತ್ಯವಾದಳು. ಆ ಶಕ್ತಿಯಲ್ಲಿ ಬಿಂದು ಉತ್ಪತ್ಯವಾಯಿತ್ತು. ಆ ಬಿಂದುವಿನಲ್ಲಿ ನಾದ ಉತ್ಪತ್ಯವಾಯಿತ್ತು. ಆ ನಾದದಲ್ಲಿ ಸದಾಶಿವನು ಉತ್ಪತ್ಯವಾದನು. ಆ ಸದಾಶಿವನ ಗೋಪ್ಯವಕ್ತ್ರದಲ್ಲಿ ಆತ್ಮನು ಉತ್ಪತ್ಯವಾದನು, ಆ ಸದಾಶಿವನ ಈಶಾನ್ಯವಕ್ತ್ರದಲ್ಲಿ ಆಕಾಶ ಉತ್ಪತ್ಯವಾಯಿತು. ಆ ಸದಾಶಿವನ ತತ್ಪುರುಷವಕ್ತ್ರದಲ್ಲಿ ವಾಯು ಉತ್ಪತ್ಯವಾಯಿತು. ಆ ಸದಾಶಿವನ ಸದ್ಯೋಜಾತವಕ್ತ್ರದಲ್ಲಿ ಪೃಥ್ವಿ ಉತ್ಪತ್ಯವಾಯಿತ್ತು. ಆ ಪರಶಿವನ ಹೃದಯದಲ್ಲಿ ಚಂದ್ರನುತ್ಪತ್ಯವಾದನು. ಆ ಸದಾಶಿವನ ಚಕ್ಷುವಿನಲ್ಲಿ ಸೂರ್ಯನುತ್ಪತ್ಯವಾದನು.........'

ಇತ್ಯಾದಿಯಾಗಿ ಈ ವಚನ ಮುಂದುವರಿದು ರುದ್ರ ವಿಷ್ಣು ಬ್ರಹ್ಮ ಮತ್ತು ಆತನಿಂದ ಅಖಿಳ ಜೀವರುಗಳ ಉತ್ಪತ್ತಿಯವರೆಗೂ ಬೆಳೆಯುತ್ತದೆ. ಸೃಷ್ಟಿಕ್ರಮವನ್ನು ನಿರೂಪಿಸುವ ಈ ವಚನಗಳಲ್ಲಿ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು 'ಶಿವಶಕ್ತ್ಯಾತ್ಮಕದಿಂದಾದುದು ಆತ್ಮ' ಮತ್ತು 'ಆ ಸದಾಶಿವನ ಗೋಪ್ಯವಕ್ತ್ರದಲ್ಲಿ ಆತ್ಮನುತ್ಪತ್ಯವಾದನು'– ಎಂಬ ಮಾತುಗಳನ್ನು; ಶಿವನ ಅಷ್ಟತನುಗಳಲ್ಲಿ ಆತ್ಮವೂ ಒಂದಾಗಿದ್ದು ಶಿವನಿಂದಲೇ ಅದು ಹುಟ್ಟಿತು ಎಂಬುದನ್ನು; ಮತ್ತು ಅನಂತರ ಜೀವರುಗಳಾಗಿ ಪರಿಣಮಿಸಿತು ಎಂಬುದನ್ನು.

ತಮಿಳುಶೈವ ಸಿದ್ಧಾಂತದ ಅಭಿಪ್ರಾಯ ಇದರಿಂದ ಬೇರೆಯಾಗಿದೆ. ಅದು ಹೇಳುವುದು ಅನಾದಿಯಾದ ಶಿವನಂತೆ ಜೀವರುಗಳು ಮತ್ತು ಈ ಸೃಷ್ಟಿಯ ಮೂಲಸಾಮಗ್ರಿ (Matter) ಇವುಗಳೂ ಅನಾದಿಯಾದುವು ಎಂಬುದಾಗಿ. ಈ ವಿಚಾರದಲ್ಲಿ ಇದು ಸ್ವಲ್ಪಮಟ್ಟಿಗೆ ಜೈನಧರ್ಮಕ್ಕೆ ಸಂವಾದಿಯಾಗಿದೆ. ಮುಂದಿನ ವಿವರಗಳಲ್ಲಿ ಅದರಿಂದ ಭಿನ್ನವಾಗುತ್ತದೆ. ಜೀವರುಗಳನ್ನು ಬಂಧನದಿಂದ ಬಿಡುಗಡೆಗೊಳಿಸುವುದಕ್ಕಾಗಿ ಶಿವ ಈ ಸೃಷ್ಟಿಯನ್ನು ಮೂಲಸಾಮಗ್ರಿಯಿಂದ ಈ ರೂಪದಲ್ಲಿ ಸೃಷ್ಟಿಸುತ್ತಾನೆ; ಜೀವರುಗಳಿಗೆ ದೇಹವನ್ನು ಒದಗಿಸುತ್ತಾನೆ; ಆ ಮೂಲಕ ಅವುಗಳನ್ನು ಬಂಧನದಿಂದ ಬಿಡುಗಡೆಗೊಳಿಸುತ್ತಾನೆ; ಅವನ ಶಕ್ತಿ ಈ ಕಾರ್ಯದಲ್ಲಿ ಆತನಿಗೆ ಸಹಕಾರಿಯಾಗುತ್ತದೆ. ಮಡಕೆಯನ್ನು ಮಾಡುವುದರಲ್ಲಿ ಕುಂಬಾರ, ಆತನ ಚಕ್ರ, ಕೋಲು ಮೊದಲಾದುವು ಮತ್ತು ಮಣ್ಣು ಇರುವಂತೆ ಈ ಜಗತ್ತಿನ ನಿರ್ಮಾಣಕ್ಕೆ ಶಿವ ಮೂಲಕಾರಣ (First cause). ಅವನ ಶಕ್ತಿ ನಿಮಿತ್ತ ಕಾರಣ, ಮಾಯೆ ಉಪಾದಾನ ಕಾರಣ–ಎಂಬುದು ಶೈವ ಸಿದ್ಧಾಂತದ ಅಭಿಪ್ರಾಯ. ಈ ಜಗತ್ತು ಸತ್ಯವೆನ್ನುವ ಮಾತನ್ನು ವೀರಶೈವದಂತೆ ಶೈವಸಿದ್ಧಾಂತವೂ ಒಪ್ಪುತ್ತದೆ. ಆದರೆ ವೀರಶೈವ ಸಿದ್ಧಾಂತವು, ಅನಾದಿಯಾದ ಸರ್ವಶೂನ್ಯ ನಿರಾಲಂಬ ಶಿವನ ಲೀಲೆಯಿಂದ ಈ ಸೃಷ್ಟಿ ಮತ್ತು ಜೀವರುಗಳು ಉಂಟಾದುವೆಂದು ಹೇಳಿದರೆ, ತಮಿಳುಶೈವವು, ಇವುಗಳೂ ಸಹ ಶಿವನಂತೆಯೇ ಅನಾದಿಯಾದುವುಗಳೆಂದು ಅಭಿಪ್ರಾಯಪಡುತ್ತದೆ.

ಈ ಪ್ರಮುಖ ವ್ಯತ್ಯಾಸವನ್ನು ಬಿಟ್ಟರೆ ಉಳಿದ ಅನೇಕ ಅಂಶಗಳಲ್ಲಿ ಇವೆರಡಕ್ಕೂ ಸಾಮ್ಯ ಕಂಡುಬರುತ್ತದೆ. ಶಿವಶಕ್ತಿಯರ ಕಲ್ಪನೆಯಲ್ಲಿ, ಮತ್ತು ಸೃಷ್ಟಿ ನಿರ್ಮಾಣಕ್ಕೆ ಕಾರಣವಾದ ಮೂವತ್ತಾರು ತತ್ತ್ವಗಳ ನಿರೂಪಣೆಯಲ್ಲಿ ಇವು ಪರಸ್ಪರ ಹೋಲುತ್ತವೆ. ಈ ಸೃಷ್ಟಿಯಿಂದ ಕಾಶ್ಮೀರ ಶೈವಸಿದ್ಧಾಂತ, ತಮಿಳುಶೈವಕ್ಕಿಂತ ವೀರಶೈವಕ್ಕೆ ಹೆಚ್ಚು ಹತ್ತಿರವಾಗಿದೆ ಎನ್ನ

ಬಹುದು. ವಿವರಗಳಲ್ಲಿ ವ್ಯತ್ಯಾಸವಿದ್ದರೂ ಸೃಷ್ಟಿಯ ಉಗಮದ ಅಂಶದಲ್ಲಿ ವೀರಶೈವ ಕಾಶ್ಮೀರಶೈವಗಳು ಒಂದೇ ಅಭಿಪ್ರಾಯವನ್ನುಳ್ಳವಾಗಿದ್ದು ತಮಿಳುಶೈವ ಮಾತ್ರ ಇವುಗಳಿಂದ ಬೇರೆಯಾಗಿರುವುದು ಕಾಣುತ್ತದೆ. ಆದರೆ ಮುಂದೆ ಸೃಷ್ಟಿನಿರ್ಮಾಣದಲ್ಲಿ ಕಂಡುಬರುವ ಮೂವತ್ತಾರು ತತ್ತ್ವಗಳ ನಿರೂಪ ಮೊದಲಾದ ಅಂಶಗಳಲ್ಲಿ ಪರಸ್ಪರ ಹೋಲಿಕೆ ಗಾಢವಾಗಿದೆ.

ಸೃಷ್ಟಿ ವಿಕಾಸ ಕ್ರಮದಲ್ಲಿ ಈ ಶೈವಮಾರ್ಗಗಳು ಸಾಂಖ್ಯರ ಇಪ್ಪತ್ತೈದು ತತ್ವಗಳನ್ನು ಒಪ್ಪಿಕೊಂಡಿದ್ದರೂ, ಆ ತತ್ವ ವ್ಯವಸ್ಥೆಗಿಂತ ಇನ್ನೂ ಹಿಂದಿನ ಸ್ಥಿತಿಗೆ ಹೋಗಿ ಶಿವತತ್ವದಿಂದ ತಮ್ಮ ವಿವೇಚನೆಯನ್ನು ಪ್ರಾರಂಭಿಸುತ್ತವೆ. ಸಾಂಖ್ಯರಲ್ಲಿ ಪ್ರಕೃತಿಯೇ ಮೂಲತತ್ವ. ಪ್ರಕೃತಿಯಿಂದ ಚಿತ್ತ, ಬುದ್ಧಿ, ಅಹಂಕಾರಾದಿ ಇತರ ತತ್ವಗಳು ಬೆಳೆಯುತ್ತಾ ಹೋಗುತ್ತವೆ. ಶೈವ ಸಿದ್ಧಾಂತದಲ್ಲಿ ಸೃಷ್ಟಿ ಪ್ರಾರಂಭವಾಗುವುದು ಪ್ರಕೃತಿಯಿಂದಲ್ಲ, ಪರಶಿವನಿಂದ. ಪರಶಿವನಿಂದ ಆದಿಶಕ್ತಿ, ಅದರಿಂದ ಶುದ್ಧ ಮತ್ತು ಅಶುದ್ಧ ಮಾಯೆಗಳಾಗುತ್ತವೆ. ಮಾಯೆ ತನ್ನ ಮೂಲಸ್ಥಿತಿಯಲ್ಲಿ 'ಶುದ್ಧಮಾಯೆ' ಎಂಬುದಾಗಿಯೂ ಅನಂತರ ಸೃಷ್ಟಿ ಮುಖವಾಗಿ ಸೂಕ್ಷ್ಮಸ್ಥಿತಿಗೆ ಬಂದಾಗ ಅಶುದ್ಧಮಾಯೆ ಎಂಬುದಾಗಿಯೂ ಕರೆಯಿಸಿಕೊಳ್ಳುತ್ತದೆ. ಮುಂದೆ ಇದೇ ಸ್ಥೂಲವಾಗಿ ಪರಿಣಮಿಸಿದಾಗ ಪ್ರಕೃತಿ ಮಾಯೆಯಾಗುತ್ತದೆ ಎಂಬುದು ಶೈವಸಿದ್ಧಾಂತದ ದೃಷ್ಟಿ. ಶುದ್ಧಮಾಯೆಯಿಂದ ನಿರ್ಮಿತವಾದದ್ದು ಶುದ್ಧ ಪ್ರಪಂಚ; ಅಶುದ್ಧಮಾಯೆಯಿಂದ ನಿರ್ಮಿತವಾದದ್ದು ಈ ಸ್ಥೂಲ ಪ್ರಪಂಚ.

ಶುದ್ಧಮಾಯೆಯನ್ನು ಶಿವನೇ ನೇರವಾಗಿ ತನ್ನ ಶಕ್ತಿಯಿಂದ ನಿಯಂತ್ರಿಸಿ ಸೃಷ್ಟಿಗೆ ಕಾರಣನಾಗುತ್ತಾನೆ. ಆಗ ಅವನ ಶಕ್ತಿ ಇಚ್ಛಾ, ಜ್ಞಾನ, ಕ್ರಿಯಾ ಎಂದು ಮೂರು ಬಗೆಗಳಾಗಿ ಪರಿಣಮಿಸುತ್ತದೆ. ಶುದ್ಧ ಮಾಯೆಯ ಮೇಲೆ ಜ್ಞಾನಶಕ್ತಿಯ ಪ್ರಭಾವದಿಂದ 'ನಾದ' ಉಂಟಾಗುತ್ತದೆ. ಕ್ರಿಯಾಶಕ್ತಿಯ ಪ್ರಭಾವದಿಂದ 'ಬಿಂದು' ಉಂಟಾಗುತ್ತದೆ. ಜ್ಞಾನ ಕ್ರಿಯಾಶಕ್ತಿಗಳು ಸರಿಸಮ ಪ್ರಮಾಣದಲ್ಲಿ ಬಿಂದುವಿನ ಮೇಲೆ ಪ್ರಭಾವವನ್ನು ಬೀರಿ ಸಾದಾಖ್ಯತತ್ವಕ್ಕೆ ಕಾರಣವಾಗುತ್ತದೆ. ಸಾದಾಖ್ಯತತ್ವದ ಮೇಲೆ ಇವೆರಡೂ ಬೀರುವ ಪ್ರಭಾವದಿಂದ (ಇಲ್ಲಿ ಕ್ರಿಯಾಶಕ್ತಿಯ ಪ್ರಭಾವ ಹೆಚ್ಚು) ಮಾಹೇಶ್ವರೀತತ್ವ ಉಂಟಾಗುತ್ತದೆ. ಮಾಹೇಶ್ವರೀತತ್ವದ ಮೇಲೆ ಮತ್ತೆ ಇವೆರಡು ಶಕ್ತಿಗಳೂ ಕ್ರಿಯಾವರ್ತನ್ನುಂಟು ಮಾಡಿ (ಇಲ್ಲಿ ಜ್ಞಾನಶಕ್ತಿಯ ಪ್ರಭಾವ ಹೆಚ್ಚು) ಶುದ್ಧ ವಿದ್ಯಾತತ್ವಕ್ಕೆ ಕಾರಣವಾಗುತ್ತವೆ. ಇವಿಷ್ಟು ಶುದ್ಧಮಾಯೆಯಿಂದ ಸಂಭವಿಸುವ ಶಿವತತ್ವಗಳು. ಅದನ್ನು ಹೀಗೆ ತೋರಿಸಬಹುದು:




ಇನ್ನು ಅಶುದ್ಧ ಮಾಯೆಯ ಮೇಲೆ ಶಿವ ತಾನೇ ನೇರವಾಗಿ ಪ್ರಭಾವವನ್ನು ಬೀರುವುದಿಲ್ಲ. ಶುದ್ಧ ಮಾಯೆಯಿಂದ ನಿರ್ಮಿತವಾದ ತತ್ವಗಳು ಈ ಸೃಷ್ಟಿಕಾರ್ಯವನ್ನು ಮುಂದುವರಿಸುತ್ತವೆ. ಸದಾಶಿವ ತನ್ನ ಶಕ್ತಿಯಿಂದ ಅಶುದ್ಧಮಾಯೆಯ ಮೇಲೆ ಪ್ರಭಾವವನ್ನು ಬೀರಿ ಕಾಲ ನಿಯತಿ ಕಲಾತತ್ವಗಳನ್ನು ಮತ್ತು ಕೊನೆಯದರಿಂದ ವಿದ್ಯಾರಾಗಗಳನ್ನೂ ನಿರ್ಮಿಸುತ್ತಾನೆ. (ಕಾಲವು ಭೂತ ಭವಿಷ್ಯತ್ ವರ್ತಮಾನಗಳೆಂದು ಮೂರಾಗುತ್ತದೆ). ಅದರಿಂದ ಪುರುಷ ಪ್ರಕೃತಿಗಳು ಹುಟ್ಟುತ್ತವೆ. ಪ್ರಕೃತಿಯಿಂದ ಮುಂದೆ ಸಾಂಖ್ಯರ ತತ್ವವಿಭಾಗ ಕ್ರಮವೇ ಮುಂದುವರಿಯುತ್ತದೆ.

ಹೀಗೆ ಮೂವತ್ತಾರು ತತ್ತ್ವಗಳನ್ನು ಶೈವಸಿದ್ಧಾಂತ, ಸೃಷ್ಟಿಯಲ್ಲಿ ಕಂಡಿದೆ. ಇಲ್ಲಿ ಪ್ರಕೃತಿಯಿಂದ ಪ್ರಾರಂಭವಾಗುವ ೨೪ ತತ್ತ್ವಗಳು, ಇಲ್ಲವೇ ಸೇಶ್ವರಸಾಂಖ್ಯದಂತೆ ಪುರುಷನೂ ಸೇರಿದರೆ ೨೫ ತತ್ತ್ವಗಳು ಸಾಂಖ್ಯರ ಕ್ರಮವನ್ನೇ ಅವಲಂಬಿಸಿವೆ. ಅದಕ್ಕಿಂತ ಹಿಂದಿನ ೧೧ ತತ್ತ್ವಗಳಲ್ಲಿ ಮೊದಲ ಐದು, ಶುದ್ಧಮಾಯೆಯಿಂದ ನಿರ್ಮಿತವಾಗುವ ಶಿವತತ್ತ್ವಗಳು, ಅನಂತರದ ಆರುತತ್ತ್ವಗಳು ವಿದ್ಯಾತತ್ತ್ವಗಳು. ಸೃಷ್ಟಿರಚನೆಯಲ್ಲಿ ಅನುಕ್ರಮವಾಗಿ ಈ ತತ್ತ್ವಗಳು ವಿಕಾಸಗೊಂಡು ಬಹುರೂಪಿಯಾದ, ಈ ವಿಶ್ವಕ್ಕೆ ಕಾರಣವಾಗುತ್ತವೆ. ಅದನ್ನು ಹೀಗೆ ತೋರಿಸಬಹುದು :




ಶರಣರು ಸಹ ಮೂವತ್ತಾರು ತತ್ತ್ವಗಳನ್ನೇ ಅಂಗೀಕರಿಸಿದರೂ ಅವುಗಳ ಪರಿಗಣನೆಯ ಕ್ರಮ ಮತ್ತು ಕಲ್ಪನೆಗಳಲ್ಲಿ ವಿಶಿಷ್ಟತೆಯನ್ನು ತೋರಿದ್ದಾರೆ. ಉದಾಹರಣೆಗಾಗಿ ಈ ಮಾತುಗಳನ್ನು ನೋಡಬಹುದು:

> ‘ಆತ್ಮತತ್ವ ಇಪ್ಪತ್ತೈದು, ವಿದ್ಯಾತತ್ವ ಹತ್ತು, ಶಿವತತ್ವ ಒಂದು, ಅದೆಂತೆಂದೊಡೆ: ಭೂತಾದಿ ಪಂಚಕಂಗಳೈದು, ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ಶಬ್ದಾದಿ ವಿಷಯಂಗಳೈದು,ವಾಗಾದಿ ಕರ್ಮೇಂದ್ರಿಯಂಗಳೈದು,ಮನವಾದಿ ಪಂಚಕಂಗಳೈದು ಇಂತು ಆತ್ಮತತ್ವ ಇಪ್ಪತ್ತೈದು, ಕರ್ಮಸಾದಾಖ್ಯ, ಕರ್ತೃಸಾದಾಖ್ಯ ಮೂರ್ತಿಸಾದಾಖ್ಯ,ಅಮೂರ್ತಿಸಾದಾಖ್ಯ,ಶಿವಸಾದಾಖ್ಯ,ನಿವೃತ್ತಿ ಕಲೆ, ಪ್ರತಿಷ್ಠಾಕಲೆ, ವಿದ್ಯಾಕಲೆ, ಶಾಂತಿಕಲೆ, ಶಾಂತ್ಯತೀತಕಲೆ, ಇಂತು ವಿದ್ಯಾತತ್ವ ಹತ್ತು. ಶಿವತತ್ವ ಒಂದು. ಇಂತು ಮೂವತ್ತಾರು ತತ್ವಂಗಳೊಡನೆ ಶಿವತತ್ವವೇ ತತ್‌ಪದ, ಆತ್ಮತತ್ವವೇ ತ್ವಂಪದ, ವಿದ್ಯಾತತ್ವವೇ ಅಸಿಪದ. ಅಕಾರದಲ್ಲಿ ತತ್ಪದ ಐಕ್ಯವಾಯಿತ್ತು. ಉಕಾರದಲ್ಲಿ ತ್ವಂಪದ ಐಕ್ಯವಾಯಿತ್ತು. ಮಕಾರದಲ್ಲಿ ಅಸಿಪದ ಐಕ್ಯವಾಯಿತ್ತು. ಅಕಾರ ಉಕಾರ ಮಕಾರ ಏಕಾರ್ಥವಾಗಿ ಷಟ್‌ಸ್ಥಲ ಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗವಾಯಿತ್ತು. ಆ ಷಟ್‌ಸ್ಥಲ ಬ್ರಹ್ಮವೆಂಬ ಮಹಾಜ್ಯೋತಿರ್ಮಯ ಲಿಂಗದಲ್ಲಿ ತ್ವಂಪದ ಅಸಿಪದವೇ ನಿಕ್ಷೇಪಮಾಗಿಹುದು ನೋಡಾ ಅಪ್ರಮಾಣ ಕೂಡಲಸಂಗಮದೇವಾ’.

ಇಲ್ಲಿ ತತ್ವಗಳನ್ನು ಆತ್ಮತತ್ವ ವಿದ್ಯಾತತ್ವ ಶಿವತತ್ವಗಳೆಂದು ಮೂರು ಬಗೆಯಾಗಿ ವಿಂಗಡಿಸಲಾಗಿದೆ. ಆತ್ಮವು ಈ ಸೃಷ್ಟಿಯಲ್ಲಿ ಮೈದೋರಲು ಕಾರಣವಾದ ಈ ದೇಹಕ್ಕೆ ಸಂಬಂಧಿಸಿದುದು ಆತ್ಮತತ್ವ. ಪಂಚಭೂತಗಳು ಪಂಚಜ್ಞಾನೇಂದ್ರಿಯ ಕರ್ಮೇಂ

ದ್ರಿಯ ಮತ್ತು ತನ್ಮಾತ್ರೆಗಳು, ಮನ,ಬುದ್ಧಿ,ಚಿತ್ತ,ಅಹಂಕಾರ,ಜೀವ ಈ ಇಪ್ಪತ್ತೈದು ತತ್ವಗಳು ಇದಕ್ಕೆ ಸೇರಿದುವು. ಇವನ್ನು ಅಂಗತತ್ವಗಳೆಂದೂ ಕರೆಯಲಾಗಿದೆ. ಇನ್ನು ಪಂಚಸಾದಾಖ್ಯಗಳು ಪಂಚಕಲೆಗಳು. ಇವು ಹತ್ತು ವಿದ್ಯಾತತ್ವಗಳಾಗುತ್ತವೆ. ಇವೆಲ್ಲಕ್ಕೂ ಕಾರಣವಾದ ಶಿವತತ್ವವೂ ಸೇರಿ ಈ ಹನ್ನೊಂದನ್ನು ಲಿಂಗತತ್ವಗಳೆಂದು ಕರೆದಿದ್ದಾರೆ. ಈ ತತ್ವಗಳ ವಿವೇಚನೆಯಲ್ಲಿ ತತ್ ತ್ವಂ ಅಸಿ ಎಂಬುದನ್ನು ನಿಕ್ಷೇಪಗೊಳಿಸಿರುವ ಬಗೆಯೂ ಅರ್ಥವತ್ತಾಗಿದೆ. ಅಂಗತತ್ವವೇ ತ್ವಂ; ಅದು ಶಿವತತ್ವವಾದ ತತ್ ಸ್ವರೂಪವಾಗಿ ಪರಿಣಮಿಸುತ್ತದೆ, ಅಸಿ ಪದರೂಪದ ವಿದ್ಯಾತತ್ವಗಳ ಮೂಲಕ.

ಇದರಂತೆ ಮುಂದೆ ಅಂಗ, ಲಿಂಗಗಳು ಒಂದೇ ಆಗಿ ಪರಿಣಮಿಸಿದಾಗ ಈ ಮೂವತ್ತಾರು ತತ್ವಗಳು ಒಂದರಲ್ಲಿ ಒಂದು ಅಡಗುತ್ತಾ ಹೋಗುತ್ತವೆ. ಇದು ಸೃಷ್ಟಿಯ ನಿವೃತ್ತಿ ಮುಖ. ಆ ತತ್ವಗಳು ಅಡಗುವ ಕ್ರಮವನ್ನು ಹೀಗೆ ಹೇಳಲಾಗಿದೆ :

> 'ಇಂತೀ ಅಂಗತತ್ವ ಇಪ್ಪತ್ತೈದು, ಲಿಂಗತತ್ವ ಹನ್ನೊಂದು; ಅಂಗತತ್ವ ಲಿಂಗತತ್ವವೆಂಬ ಉಭಯ ಮೂವತ್ತಾರು. ಇಂತಿವರ ಸಾಮರಸ್ಯದ ಐಕ್ಯ ಎಂತುಟಯ್ಯ ಎಂದೊಡೆ; ನಿವೃತ್ತಿ ಶಕ್ತಿಯನೈದಿ ವಾಗಾದಿ ಕರ್ಮೇಂದ್ರಿಯಗಳೈದು ಕರ್ಮಸಾದಾಖ್ಯವನೊಡಗೂಡಿದಲ್ಲಿ ಪೃಥ್ವಿತತ್ವ ಬಯಲಾಯಿತ್ತು. ಪ್ರತಿಷ್ಠಾಶಕ್ತಿಯನೈದಿ ಶಬ್ದ ವಿಷಯಂಗಳೈದು ಕರ್ತುಸಾದಾಖ್ಯವನೊಡಗೂಡಿದಲ್ಲಿ ಅಪ್ಪುತತ್ವ ಬಯಲಾಯಿತ್ತು. ವಿದ್ಯಾಶಕ್ತಿಯನೈದಿ ಶ್ರೋತ್ರಾದಿ ಜ್ಞಾನೇಂದ್ರಿಯಗಳೈದು ಮೂರ್ತಿಸಾದಾಖ್ಯವನೊಡಗೂಡಿದಲ್ಲಿ ತೇಜತತ್ವ ಬಯಲಾಯಿತ್ತು. ಶಾಂತಿಶಕ್ತಿಯನೈದಿ ಪ್ರಾಣಾದಿವಾಯುಗಳೈದು ಅಮೂರ್ತಿಸಾದಾಖ್ಯವನೊಡಗೂಡಿದಲ್ಲಿ ವಾಯುತತ್ವ ಬಯಲಾಯಿತ್ತು. ಶಾಂತ್ಯಾತೀತ ಶಕ್ತಿಯನೈದಿ ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು ಶಿವ ಸಾದಾಖ್ಯವನೊಡಗೂಡಿದಲ್ಲಿ ಆಕಾಶತತ್ವ ಬಯಲಾಯಿತ್ತು. ಇಂತೀ ಪಂಚವಿಂಶತಿ ತತ್ವಂಗಳು ಲಿಂಗೈಕ್ಯವಾಗಲೊಡನೆ ಆ ಲಿಂಗತತ್ವ ಹನ್ನೊಂದು ತಾವು ಒಂದೊಂದನೊಡಗೂಡಿ ಏಕಾರ್ಥವಾದಲ್ಲಿ ಕುಳಸ್ಥಳವಡಗಿತು. ಇಂತೀ ಕುಳ ಸ್ಥಳವಡಗಲೊಡನೆ ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ವಾರಿಕಲ್ಲು ಕರಗಿ ನೀರಾದಂತೆ ತನ್ನ ಪರಮಾನಂದದಿಂದವೆ ಸರ್ವಶೂನ್ಯವಾಯಿತು......'

–ಹೀಗೆ ಮಹಾಲಿಂಗವು ಕರಗಿ ಮತ್ತೆ ನಿರಾಲಂಬ ಸ್ಥಿತಿಗೆ ಬರುತ್ತದೆ. ಸೃಷ್ಟಿಯನ್ನು ಪುನಃ ಕೈಕೊಂಡಾಗ ಶೂನ್ಯಲಿಂಗ ನಿಃಕಲಲಿಂಗ ಮಹಾಲಿಂಗಗಳ ಮೂಲಕ ಪ್ರವೃತ್ತಿಮುಖವಾಗಿ ಬಹುರೂಪಗಳನ್ನು ಧರಿಸುತ್ತದೆ. ಈ ವಿಕಸನ ಮತ್ತು ಆಕುಂಚನಗಳು ನಿರಂತರವಾಗಿ ನಡೆಯುವ ಕ್ರಿಯೆಗಳು.

ಸೃಷ್ಟಿವಚನಗಳ ಈ ರಚನಾಕ್ರಮದಲ್ಲಿ ಕಾಣುವ ಬಹುಮುಖ್ಯವಾದ ಅಂಶವೆಂದರೆ ಸರ್ವಶಕ್ತವಾದ ದೈವಶಕ್ತಿಯೊಂದರ ಕಲ್ಪನೆ. ಸೃಷ್ಟಿರಹಸ್ಯವನ್ನು ಹೇಳಲು ಬಹುಶಃ ಇದರ ಹೊರತಾಗಿ ಬೇರೆ ಮಾರ್ಗವಿಲ್ಲವೆಂಬಂತೆ ತೋರುತ್ತದೆ. ಬುದ್ಧಿ ತರ್ಕ ಸಂಶೋಧನೆಗಳಷ್ಟರಿಂದವೇ ಪೂರ್ಣವಾಗಿ ಇದರ ಸ್ವರೂಪವನ್ನು ತಿಳಿಯಲು ಅಸಾಧ್ಯವೆಂಬ ಸ್ಥಿತಿಗೆ ವಿಜ್ಞಾನವೂ ಬರುತ್ತಿದೆ. ಸೃಷ್ಟಿ ಹೇಗೆ ಆಗಿರಬಹುದೆಂಬುದನ್ನು ಕುರಿತ ವಿಜ್ಞಾನದ ವಿವರಣೆ ಹೇಗೆ? ಎಂಬುದನ್ನು ತಕ್ಕಮಟ್ಟಿಗೆ ವಿವರಿಸಲು ಪ್ರಯತ್ನಿಸಬಹುದೇ ಹೊರತು ಏಕೆ? ಎಂಬುದನ್ನು ಅದು ಹೇಳಲಾಗದು. ಸೂರ್ಯನಿಂದ ಭೂಮಿ ಸಿಡಿಯಿತು, ಭೂಮಿಯಿಂದ ಚಂದ್ರ ಸಿಡಿದ, ಇವೆಲ್ಲಾ ಮೊದಲು ಉರಿಯುವ ಗೋಳಗಳಾಗಿದ್ದುವು ಇತ್ಯಾದಿ ಮಾತುಗಳನ್ನು ಕೇಳಿದಾಗ ಏಕೆ ಹಾಗಾಯಿತು ? ಆ ಉರಿಯುವ ಗೋಳ ಹೇಗೆ ಬಂದಿತು ? ಏಕೆ ಬಂದಿತು ? ಎಂಬ ಪ್ರಶ್ನೆ ಎದುರಾದರೆ ಅದಕ್ಕೆ ವಿಜ್ಞಾನ ಏನು ಹೇಳಬಲ್ಲದು ? ಸರ್ವಶಕ್ತವಾದ ಶಕ್ತಿಯೊಂದರ ವಿನ್ಯಾಸ ಎಂಬ ಧಾರ್ಮಿಕ ಅಭಿಪ್ರಾಯವೇ ಬಹುಶಃ, ಅದಕ್ಕೆ ಏಕೈಕ ಉತ್ತರವೆಂದು ತೋರುತ್ತದೆ. ಕೆಲವು ಮೂಲಭೂತವಾದ ಪ್ರಶ್ನೆಗಳನ್ನು ತರ್ಕಸಮ್ಮತವಾಗಿ ವಿವರಿಸುವುದು ಸಾಧ್ಯವಿಲ್ಲ; ವಿಜ್ಞಾನಕ್ಕೂ ಸಾಧ್ಯವಿಲ್ಲ; ತತ್ವಜಿಜ್ಞಾಸೆಗೂ ಸಾಧ್ಯವಿಲ್ಲ. ಈ ಮಿತಿಯನ್ನು ಒಪ್ಪಿಕೊಂಡು ಇದರ ಚೌಕಟ್ಟಿನೊಳಗೆ ಈ ವಿವೇಚನೆ ನಡೆಯಬೇಕಾಗುತ್ತದೆ.

ಈ ದೃಷ್ಟಿಯಿಂದ ಸೃಷ್ಟಿಯ ವಚನಗಳನ್ನು ನೋಡಬೇಕು. ಶಿವತತ್ವವೊಂದೇ ಶಾಶ್ವತವಾದದ್ದು, ಸರ್ವಶಕ್ತವಾದದ್ದು ಎಂಬ ನಿರ್ಧಾರಕ್ಕೆ ಅವು ಬರುತ್ತವೆ. ಈ ಶಕ್ತಿಯಿಂದಲೇ ಜಗತ್ತುಗಳು ಹುಟ್ಟುತ್ತವೆ, ಜೀವಿಗಳು ಮೈದಾಳುತ್ತವೆ; ಮತ್ತೆ ಅಲ್ಲಿಯೇ ಅಡಗುತ್ತವೆ, ಸಮುದ್ರದಲ್ಲಿ ಹುಟ್ಟುವ ಅಲೆಗಳಂತೆ. ಅಲೆಗಳೇ ಸಮುದ್ರವಲ್ಲ. ಅಂತೆಯೇ ಸಮುದ್ರದಿಂದ ಅವು ಬೇರೆಯೂ ಅಲ್ಲ. ಈ ಸೃಷ್ಟಿಯ ಬಹುರೂಪಗಳೆಲ್ಲವೂ ಹಾಗೆ ತೋರಿಕೆಯವು; ಶಿವನಲ್ಲಿ ಒಂದಾಗಿ ಪರಿಣಮಿಸತಕ್ಕವು. ಶಿವತತ್ವವೊಂದೇ ಕೊನೆಯಲ್ಲಿ ಉಳಿಯುವುದು. ಈ ಅರ್ಥದಲ್ಲಿ ಇದು ಅದ್ವೈತ. ಆದರೆ ಆ ಅಲೆಗಳು ಆಯಾ ನಿಲವಿನಲ್ಲಿ ಸತ್ಯವಾದುವು, ಮಿಥ್ಯೆಯಲ್ಲ; ಸ್ವತಂತ್ರ ಅಸ್ತಿತ್ವವನ್ನುಳ್ಳಂತಹವು. ಈ ಅರ್ಥದಲ್ಲಿ ಇದು ದ್ವೈತ. ಹೀಗೆ ದ್ವೈತಾದ್ವೈತಗಳೆರಡೂ ಇಲ್ಲಿ ಸಮಂಜಸ ಸ್ಥಾನವನ್ನು ಪಡೆದು ಸಮನ್ವಯಗೊಂಡಿವೆ. ಹೀಗೆ ಈ ತಾತ್ವಿಕ ಹಿನ್ನೆಲೆಯಲ್ಲಿಯೇ ಸೃಷ್ಟಿವಚನಗಳು ರೂಪಿತವಾದುದರಿಂದ ಮುಂದೆ ಶರಣರು ಜೀವ-ಶಿವರ ಸಂಬಂಧದಲ್ಲಿ ಭೇದಾಭೇದವನ್ನು ಶಕ್ತಿ ವಿಶಿಷ್ಟವಾದ ಶಿವಾದ್ವೈತವನ್ನೂ ರೂಪಿಸಲು ಸಮರ್ಥರಾದರು. ಆ ತತ್ವಸೌಧಕ್ಕೆ ಭದ್ರವಾದ ತಳಹದಿಯಾಗಿ ನಿಂತಿವೆ ಈ ಸೃಷ್ಟಿವಚನಗಳು.

# ಲಿಂಗ ತತ್ತ್ವದ ಉಗಮ ಮತ್ತು ವಿಕಾಸ

## (ಲಿಂಗ–ಸ್ಥಾವರಲಿಂಗ–ಇಷ್ಟಲಿಂಗ)

—ವೇದವೇದಾಂತ ವಿದ್ಯಾ ವಾಚಸ್ಪತಿ ಟಿ. ರ್ಯ. ಮಲ್ಲಪ್ಪ

ಲಿಂಗತತ್ತ್ವವು ಉಗಮವಾಗಿ, ವಿಕಾಸವಾಗಿ ಪೂತು ಫಲಭರಿತವಾಗಿ ವೀರಶೈವ ಮಹಾವೃಕ್ಷವಾಗಿ ಕಂಗೊಳಿಸುವ ಮೊದಲು ಅದರ ಬೀಜವು ಮೊಳೆತು ಚಿಗುರಿ ಬೆಳೆಯಲು ಪ್ರಾರಂಭಿಸಿದುದು ಯಾವಾಗ ಯಾವ ಪುಣ್ಯಭೂಮಿಯಲ್ಲಿ? ಅದರ ರೆಂಬೆಗಳು ಬಲಿತು ಯಾವ ಬಿರುಗಾಳಿಯೊಡನೆ ಸೆಣಸಿ ಜಯಿಸಿ ಬಲಯುತವಾದವು? ಅವು ಯಾವ ಯಾವ ರಸಗಳನ್ನು ಹೀರಿ ಪ್ರಬುದ್ಧಮಾನಕ್ಕೆ ಬಂದು ಆಸೇತು ಹಿಮಾಚಲದವರೆಗೆ ಹರಡಿದ ರೆಂಬೆಗಳಿಂದ ವಿರಾಜಮಾನವಾದವು ? ಇತ್ಯಾದಿ ಪ್ರಶ್ನೆಗಳು ಅನೇಕ ವಿದ್ವಾಂಸರ ಮನಸ್ಸನ್ನು ಚಕಿತಗೊಳಿಸಿವೆ. ೧೯೬೧ ಇಸವಿಯ ಜೂನ್ ತಿಂಗಳ ವೀರಶೈವ ತ್ರೈಮಾಸಿಕದ ಸಂಪಾದಕೀಯ ಲೇಖನದಲ್ಲಿಯೇ ಹೀಗೆ ಪ್ರಶ್ನೆಗಳೆದ್ದಿವೆ.

> 'ವೀರಶೈವದ ಉಗಮ ಎಂದು ಮತ್ತು ಹೇಗೆ ಆಗಿದೆ ? ವೀರಶೈವ ಅಥವಾ ಲಿಂಗಾಯಿತ ಎಂಬ ಹೆಸರು ಎಂದಿನಿಂದ ಪ್ರಚಾರದಲ್ಲಿ ಬಂದಿತು ? ಅದಕ್ಕೆ ಮೊದಲು ಇದಕ್ಕೆ ಬೇರೆ ಯಾವುದಾವರು ಹೆಸರು ಇದ್ದಿತೆ? ಇದ್ದರೆ ಅದು ಯಾವುದು ? ವೀರಶೈವಪದದ ಉತ್ಪತ್ತಿ ಪ್ರಾಚೀನತೆ, ಬಸವಾದಿ ಪ್ರಮಥರ ಪೂರ್ವದಲ್ಲಿ ಇದರ ಸ್ವರೂಪ ಹೇಗಿದ್ದಿತು? ಶೈವಧರ್ಮದಲ್ಲಿರುವ ಅನೇಕ ಪಂಥಗಳಲ್ಲಿ ಇದೊಂದು ಸ್ವತಂತ್ರವಾದ ಪಂಥವೋ ಅಥವಾ ಯಾವುದಾದರು ಪಂಥಕ್ಕೆ ಸಂಬಂಧಿಸಿದುದೋ? ವೇದೋಪನಿಷತ್ತುಗಳಲ್ಲಿ ವೀರಶೈವಧರ್ಮದ ಅಂಶಗಳೇನಾದರೂ ದೊರೆಯುವುವೇ ? ಆಗಮಾದಿಗಳಲ್ಲಿ ವರ್ಣಿತವಾದ ವೀರಶೈವ ಧರ್ಮವಾವುದು ? ಶಿವಶರಣರ ವಚನಗಳಲ್ಲಿ ಶರಣರು ಆಧಾರವಾಗಿಟ್ಟುಕೊಂಡ ಸಂಸ್ಕೃತ ಶ್ಲೋಕಗಳಲ್ಲಿ ದೊರೆಯುವ ಸ್ವರೂಪ......ವೀರಶೈವರ ಇತಿಹಾಸ ಆಚಾರ ವಿಚಾರಗಳಿಗೆ ಸಂಬಂಧಪಟ್ಟ......ವಿಷಯಗಳನ್ನು ಚರ್ಚಿಸುವುದು ಅಗತ್ಯ'.

ಈ ವಿಷಯಗಳನ್ನೆಲ್ಲಾ ನನ್ನ 'ವೀರಶೈವದ ಉಗಮ ಮತ್ತು ಪ್ರಗತಿ' ಎಂಬ ಗ್ರಂಥದಲ್ಲಿ ವಿಚಾರ ಮಾಡಲಾಗಿದೆ. ಸ್ವಮತ ಪರಮತ ವಿದ್ವಾಂಸರೂ ಜಗದ್ಗುರುಗಳೂ ಅದನ್ನು ಮೆಚ್ಚಿಕೊಂಡಿದ್ದಾರೆ, ಶ್ರೀಶೈಲ ಜಗದ್ಗುರುಗಳೂ ಉಜ್ಜಯಿನೀ ಜಗದ್ಗುರುಗಳೂ ಈ ಗ್ರಂಥವನ್ನು ವೀರಶೈವ ಭಾಷ್ಯ ಅಥವಾ ಮಲ್ಲಣ ಭಾಷ್ಯವೆಂದು ಕರೆಯಬೇಕೆಂದಿದ್ದಾರೆ. 'ವೀರಶೈವ ಅಷ್ಟೇಕೆ ವಿಶ್ವಸಾಹಿತ್ಯ ಪ್ರಪಂಚದಲ್ಲಿ ತಮ್ಮ ಗ್ರಂಥವು ಅಜರಾಮರವಾಗಿ ಬಾಳಬಲ್ಲ ಕೃತಿಯಾಗಿದೆ.' ಎಂದೂ ಹರಸಿದ್ದಾರೆ. ನಿಡುಸೋಸಿ ಜಗದ್ಗುರು ಶಿವಲಿಂಗೇಶ್ವರ ಮಹಾಸ್ವಾಮಿಗಳು, ಹಿರಿಯವಿದ್ವಾಂಸರು ಅವರು 'ವೀರಶೈವಭಂಡಾರ' 'ವಿಶ್ವಕೋಶ' ಎಂದಿದ್ದಾರೆ. ಆದುದರಿಂದಲೇ ಇಲ್ಲಿ ಹೇಳುವ ವಿಷಯದ ವಿಸ್ತಾರ ರೂಪವನ್ನರಿಯಬೇಕೆನ್ನುವವರು ಆ ಗ್ರಂಥವನ್ನು ಓದಲೆಂದು ಇಷ್ಟನ್ನು ಹೇಳಬೇಕಾಯಿತು. ಹೆಚ್ಚಿಗೆ ವಿಷಯಗಳನ್ನು ನನ್ನ 'ವಚನೋಪನಿಷತ್' ಗ್ರಂಥದಿಂದ ತಿಳಿಯಬಹುದು. ಪೂರ್ವೋಕ್ತವಿಷಯದ ಸ್ಥೂಲ ದರ್ಶನವನಿಲ್ಲಿ ಮಾಡಲಾಗುವುದು.

**'ವೇದ ಪೂರ್ವಲಿಂಗಧಾರೀ ಧರ್ಮ'**

ವೇದಪೂರ್ವ ಸಿಂಧೂನದಿಯ ತೀರದ ಮೊಹೆಂಜೊದಾರೋ ಹರಪ್ಪ ಸಂಸ್ಕೃತಿಯ ಅವಶೇಷಗಳಿಂದ ತಿಳಿದು ಬರುವ ಅತ್ಯಂತ ಚಕಿತಗೊಳಿಸುವ ವಿಷಯವೇನೆಂದರೆ, ಪಶುಪಾಲನೆಗಾಗಿ ಹೊಸ ಹೊಸ ಹಸಿರು ಗಾವಲುಗಳನ್ನು ಹುಡುಕುತ್ತಾ ಭಾರತ ದೇಶಕ್ಕೆ ಆರ್ಯರು ಬಂದಾಗ ಸುಸಜ್ಜಿತವಾದ ಕಟ್ಟಡಗಳಿಂದಲೂ, ಒಳಚರಂಡಿಗಳೇ ಮೊದಲಾದ ಅನುಕೂಲಗಳಿಂದಲೂ ಕೂಡಿದ ವಿಶಾಲ ರಸ್ತೆಗಳಿಂದಲೂ ಸ್ನಾನಾದಿಗಳಿಗೆ ಅನುಕೂಲವಿರುವ ತಟಾಕಗಳಿಂದಲೂ ಕೂಡಿದ ನಗರಗಳಲ್ಲಿ ವಾಸಮಾಡುತ್ತಿದ್ದ ನಾಗರಿಕ ದ್ರಾವಿಡರು ಈಗಲೂ ಪ್ರಚಾರದಲ್ಲಿ ಆಸೇತು ಹಿಮಾಚಲದವರೆಗೂ ಹರಡಿರುವ ಶೈವ ಧರ್ಮಾನುಯಾಯಿಗಳಾಗಿದ್ದರು. ಅವರ ಶಕ್ತಿವಿಶಿಷ್ಟ ಶಿವನ ಆರಾಧನೆಯೂ ಅಂದಿನಿಂದ ಇಂದಿನವರೆಗೂ ಉಳಿದುಬಂದಿತೆಂಬುದನ್ನು ಆ ನಾಗರೀಕತೆಯ ಅನ್ವೇಷಕರಾದ ಸರ್‌ಜಾನ್ ಮಾರ್ಷಲ್ಲರು ಗಮನಿಸಿರುವರಲ್ಲದೆ ಆ ವಿಷಯದಲ್ಲಿ ಮಾನ್ಯ ಕೆ. ಎಂ. ಮುನ್ಷಿಯವರ ವಿದ್ವತ್ ಪೂರ್ಣ ಲೇಖನ ಭಾಗವಿದು ಸಂಗ್ರಾಹ್ಯವಾದುದಾಗಿದೆ.

At the dawn of history, the foundation of the world's civilization was laid on the banks of the Sindhu and the Narmada. When other peoples were just emerging from the Stone Age, we had the city state and trade organisation, the potter's wheel and the carver's knife, artistic metallurgy and requisite seal-cutting, baths and public tablets. We had the worship of the Mother and of Pasupathi, Lord Siva. With that little icon of Pasupathi, burried for six thousand years in the sands of the Indus Valley, begins the unbroken thread of our life, which at present is seen in its

luxuriance at Amarnath, in Kashmir and Rameshwara, at Cape Comorin, in the million temples where today Nandi kneels to his master, the God of Gods, Mahadeva. We passed on the torch of civilization to Sumer; the Sumer passed it on to Babylonia and Syria from thence it was passed on to the west.(Quarterly Journal of the Mythic Society, Culture and Heritage Number, 1956, Page 48).

ಸಿಂಧೂನದಿಯ ತೀರದಲ್ಲಿ ಐದಾರುಸಾವಿರ ವರ್ಷಗಳ ಹಿಂದೆ ಇದ್ದ ನಾಗರಿಕತೆಯ ಅವಶೇಷಗಳಿಂದ ತಿಳಿದುಬರುವ ಅತ್ಯಂತ ಆಶ್ಚರ್ಯಕರವಾದ ವಿಷಯವೇನೆಂದರೆ–ಪ್ರಪಂಚದ ಧರ್ಮಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದು ಶೈವಧರ್ಮ. ಅದು ಶಿಲಾಯುಗದ ಕಾಲದಲ್ಲಿಯೇ ಪ್ರಚಾರದಲ್ಲಿದ್ದಿತು. ವೀರಶೈವದ ಮುಖ್ಯಲಕ್ಷಣಗಳು ಆಗಲೇಇದ್ದುದು ಕಂಡುಬಂದಿದೆ. ಪಶುಪತಿ ಶಿವನನ್ನು ಲಿಂಗರೂಪದಲ್ಲಿ ಪೂಜಿಸಿ ಧರಿಸುವ ಪದ್ಧತಿಯು ಅವರಲ್ಲಿ ಇದ್ದಿತು. ಶಿವನ ಪೂಜೆಯೊಡನೆ ಶಕ್ತಿಯ ಪೂಜೆಯೂ ಸಾಮಾನ್ಯವಾಗಿ ಜನರ ಆಚರಣೆಯಲ್ಲಿ ಇದ್ದಿತು. ಶಿವಯೋಗವು ಪ್ರಚಾರದಲ್ಲಿದ್ದಿತು. ನಾಸಾಗ್ರದಲ್ಲಿ ದೃಷ್ಟಿಯನ್ನಿಟ್ಟಿರುವ ಪಶುಪತಿಯ ಮತ್ತು ಭಕ್ತರ ಮುದ್ರಿಕೆಗಳು ದೊರೆತಿವೆ. ಸರ್‌ಜಾನ್ ಮಾರ್ಷಲ್ಲರ ಈ ವಿಷಯದಲ್ಲಿನ ಅಭಿಪ್ರಾಯವು ಇತರ ವಿದ್ವಾಂಸರ ಅಭಿಪ್ರಾಯದಿಂದ ಖಚಿತಗೊಂಡಿದೆ. ಇಂದಿನ ವೀರಶೈವರಲ್ಲಿ ಪ್ರಚಾರದಲ್ಲಿರುವ ಮುಖ್ಯ ಆಚರಣೆಗಳು ಅಂದೇ ಪ್ರಚಾರದಲ್ಲಿದ್ದುದೆಂಬುದನ್ನು ನಂಬದ ಮೂಗು ಮುರಿಯುವವರ ಸಲುವಾಗಿ ಕೆಳಗಿನ ಆಧಾರಗಳನ್ನು ಕೊಡಬೇಕಾಗಿದೆ.

'Among the many revelations that Mohenjo Daro and Harappa have had in store for us, none perphaps is more remarkable than this discovery that Saivism has a history going back to the Chalcolithic age or perhaps even further still, and that, it thus takes place, as the most ancient living faith in the world'-Sir John Marshall's Report. 'Prehistoric Lingas in the Indus Valley Beluchistan-Indeed the only explanation applicable to them all is that they were sacred objects of some sort, the larger ones serving as aniconic agalmata for cult purposes, the smaller ones, as amulets, to be carried on the person just as miniature Lingas are commonly carried by Savites today (p-59). Yoga was already playing its part as a religious practice (Sir John Marshall's report page-77). Even the name of Siva is unknown in that (rig)veda as the name of a god...As for 'Yoga'......it is attested in Harappa civilization, not only by the Pasupati seal, just mentioned, but by a number of other minor antiquities as well (Development of Religion in South India by Sri K. A. Nilakanta Sastry. pages 18&19).

ಯೋಗೇಶ್ವರನಾದ ಶಿವನನ್ನು ಶಿವಯೋಗದಿಂದ ಒಲಿಸಿ ಮೋಕ್ಷ ಪಡೆಯುವುದು ದ್ರಾವಿಡರ ನಿಲುವಾದರೆ, ಋಗ್ವೇದದಲ್ಲಿ 'ಶಿವ' ಎಂಬ ಹೆಸರಿನ ಜೀವನೇ ಇಲ್ಲ. ಶಿವ ಎಂದರೆ ಮಂಗಳ ಎಂಬ ಅರ್ಥದಲ್ಲಿ ಆ ಪದದ ಪ್ರಯೋಗವು ಅದರಲ್ಲಿದೆ. ಅದರಂತೆ ಇಂದ್ರನು ಮಹಾದೇವನು; ಉಳಿದವರು ಅವನಿಗೆ ಸಹಾಯಕರು: ವಿಷ್ಣುವಿಗೆ ಉಪೇಂದ್ರ ಎಂದರೆ ಕಿರಿಯ ಇಂದ್ರ ಎಂಬ ಹೆಸರು ಬಂದಿದೆ. ಇಂದ್ರಾನುಜ ಎಂದರೂ ವಿಷ್ಣುವೇ. ಅಂದಿನ ಆರ್ಯರು ಇಂದ್ರಾದಿದೇವತೆಗಳನ್ನು ಯಜ್ಞಗಳಿಂದತೃಪ್ತಿಪಡಿಸುತ್ತಿದ್ದರು.

ಇಂದಿನಂತೆ ಗುಡಿಗಳಲ್ಲಿ ದೇವರುಗಳನ್ನು ಪೂಜಿಸುತ್ತಿರಲಿಲ್ಲ. ತಮ್ಮ ಮೇಲೆ ಯುದ್ಧ ಮಾಡಿ ತಮ್ಮನ್ನು ಅರಣ್ಯಗಳಿಗೆ ಓಡಿಸುತ್ತಿದ್ದ, ಆರ್ಯರ ಯಜ್ಞಗಳನ್ನು ದ್ರಾವಿಡರು ಧ್ವಂಸ ಮಾಡುತ್ತಿದ್ದುದರ ಮತ್ತು ಅವರ ಗೋವುಗಳನ್ನು ಅಪಹರಿಸುತ್ತಿದ್ದುದರ ಗುರುತಾಗಿ ದ್ರಾವಿಡರ ದೇವನಾದ ಶಿವನನ್ನು '**ಕ್ರತುಧ್ವಂಸಿ, ಯಜ್ಞಧ್ವಂಸಿ ಅರಣ್ಯಾನಾಂಪತಯೇ ನಮೋನಮಃ ಸ್ತೇನಾನಾಂ ಪತಯೇ ನಮೋ ನಮಃ**' ಎಂದು ಸ್ತುತಿಸುವುದು ಇಂದೂ ಉಳಿದುಬಂದಿದೆ. ಲಿಂಗಧಾರಿಗಳಾಗಿ ತಮ್ಮೊಡನೆ ಯುದ್ಧ ಮಾಡುತ್ತಿದ್ದ ದ್ರಾವಿಡರನ್ನು ಋಗ್ವೇದದಲ್ಲಿ '**ಶಿಶ್ನದೇವಾಃ**' ಎಂದು ಆರ್ಯರು ಹಿಯ್ಯಾಳಿಸಿರುವುದು ಕಂಡುಬರುತ್ತದೆ, ಆರ್ಯರ ಅನೇಕ ಯಜ್ಞಗಳು ಹಿಂಸಾತ್ಮಕವೂ ಅಶ್ಲೀಲಕರವೂ ಆಗಿದ್ದವು. ಅಶ್ವಮೇಧಯಾಗದಲ್ಲಿ 'ವಸೋರ್ಧಾರಾ' ಎಂದರೆ ಕೊಬ್ಬು ಮಾಂಸಗಳಿಂದ ಕೂಡಿದ ದ್ರವವನ್ನು ರಾಜನ ಮೇಲೆ ಸುರಿಯುತ್ತಿದ್ದರು. ಪುತ್ರಾರ್ಥಿಯಾಗಿ ಯಜ್ಞವಾದ ಅಶ್ವದೊಡನೆ ಪಟ್ಟದ ರಾಣಿಯು ಮಲಗಿದ್ದಾಗ ಉಳಿದ ರಾಣಿಯರು ಅಶ್ಲೀಲವಾಗಿ ಪುರೋಹಿತರೊಡನೆ ಹಾಸ್ಯವಾಡುತ್ತಿದ್ದರು.* ಇಂತಹವುಗಳಿಂದ ಬೇಸತ್ತ ಆರ್ಯರಲ್ಲಿಯೇ ಕೆಲವರು ಬಸವೇಶನಂತೆ ಯಜ್ಞವನ್ನು ಮಾಡಲು ಅಧಿಕಾರವನ್ನು ಕೊಡುವ ಯಜ್ಞೋಪವೀತವನ್ನು ತ್ಯಜಿಸಿದರು. ಆದುದರಿಂದಲೇ ಮನುವು '**ಸಾವಿತ್ರೀಪತಿತಾವ್ರಾತ್ಯಾ ಭವಂತ್ಯಾರ್ಯ ವಿಗರ್ಹಿತಾಃ**' ಎಂದು ಹೇಳಿದ್ದಾನೆ. ಇವರಲ್ಲಿ ಯಜ್ಞಧ್ವಂಸಕಾರ್ಯದಲ್ಲಿ ನಿಪುಣರಾದವರು ಅಸುರರೆನಿಸಿಕೊಂಡರು. ಋಗ್ವೇದದಲ್ಲಿ ಇಂದ್ರನನ್ನು 'ದಸ್ಯುಹಾ'

---

* Dr. C.L. Prabhakar : Article in L.Q. J.M.S. Vol. L. XII No-1-4

(ಋ ೧-೧೦೦-೧೨) ಎಂದು ಕರೆದಿರುವಂತೆ **'ಅಸುರಹಾ'** (ಋ-೭-೨೨-೪) ಎಂದು ಕರೆಯಲಾಗಿದೆ. ಈ ಅಸುರರಲ್ಲಿ ಲಿಂಗಧಾರಿ ಪದ್ಧತಿಯಿದ್ದುದಕ್ಕೆ ಆಧಾರವಿದೆ. ಪೌಲಸ್ತ್ಯಬ್ರಹ್ಮನ ವಂಶದವನಾದ ರಾವಣನು ಹೋದೆಡೆಗಳಿಗೆಲ್ಲಾ ಲಿಂಗವನ್ನು ಒಯ್ಯುತ್ತಿದ್ದನೆಂಬುದಕ್ಕೆ ಆಧಾರವಿದೆ. 'ಯತ್ರಯತ್ರ ಯಾತಿಸ್ಮ ರಾವಣೋ ರಾಕ್ಷಸೋತ್ತಮಃ। ಜಂಬೂನದ ಮಯಂ ಲಿಂಗಂ ತತ್ರ ತತ್ರಸ್ಮೀಯತೇ॥ ಎಂದು ರಾಮಾಯಣದಲ್ಲೇ ಹೇಳಿದೆ. ತ್ರಿಪುರ ದಹನ ಕಾಲದಲ್ಲಿ ತ್ರಿಪುರಾಸುರರನ್ನು ಅವರ ಕೊರಳಲ್ಲಿದ್ದ ಲಿಂಗವು ಪ್ರತ್ಯೇಕಿಸಲ್ಪಡುವವರೆಗೂ ಕೊಲ್ಲಲಾಗಲಿಲ್ಲ.

ಪುರತ್ರಯಾವಾಸ ದೈತೇಯ ಲಿಂಗಧಾರಕಾಃ ।
ಅಜಿತಾ ಶಂಭುನಾಪೂರ್ವಂ ಮುಕ್ತಲಿಂಗ ವಿದೂಷಿತಾಃ ॥

ಎಂದೂ, ಮಹಿಷಾಸುರನನ್ನು ದೇವಿಯು ಕೊಲ್ಲುವಾಗ ಅವನ ಕೊರಳಲ್ಲಿ ಲಿಂಗವಿದ್ದು ಅವನನ್ನು ಕೊಲ್ಲುವಾಗ ಅದು ಅವಳ ಕೈಗೆ ಅಂಟಿಕೊಂಡಿತೆಂದು ಹೇಳುವಾಗ **'ಲಿಂಗಂ ತಸ್ಯಗಳೇಸ್ಥಿತಂ'** ಎಂದೂ ಸ್ಕಾಂದ ಪುರಾಣದ ಮಹೇಶ್ವರ ಖಂಡದಲ್ಲಿ ಹೇಳಿದೆ. **'ಧಾರಯಂತಿ ತಥಾ ಲಿಂಗಂ ರಾಕ್ಷಸಾಃ ಕೇಚಿದುತ್ತಮಾಃ'** ಎಂದರೆ ರಾಕ್ಷಸರಲ್ಲಿ ಉತ್ತಮರಾದ ಕೆಲವರು ಲಿಂಗವನ್ನು ಧರಿಸುತ್ತಾರೆಂದು ಪದ್ಮ ಪುರಾಣದ ಪಾತಾಳಖಂಡದ ೧೩೪ ಶ್ಲೋಕದಲ್ಲಿ ಹೇಳಿದೆ. ಅರ್ನೆಸ್ಟ್ ಮ್ಯಾಕೆಯವರನ್ನು ಮಾರ್ಷಲ್ಲರು ಮೆಚ್ಚಿಕೊಂಡಿದ್ದಾರೆ. ಮ್ಯಾಕೆಯವರು ಅನ್ವೇಷಣದ ವಿಷಯವಾಗಿ ಹೇಳಿರುವುದನ್ನು ಡಿ.ಎಲ್. ನರಸಿಂಹಾಚಾರ್ಯರು ಪ್ರಬುದ್ಧ ಕರ್ನಾಟಕದ ಭಾವ ಸಂವತ್ಸರದ ಕಾಮನ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ಆ ಭಾಗವು ಅತ್ಯಂತ ಗಮನಾರ್ಹವಾಗಿದೆ–'ಎಂಟನೆಯ ಚಿತ್ರದಲ್ಲಿ ಪುರೋಹಿತನು ತನ್ನ ಎದೆಯಲ್ಲಿ ಧರಿಸುತ್ತಿದ್ದ ಒಂದು ಬಗೆಯ ಭಾರವಾದ ಪದಕವಿದೆ......ಇದರಲ್ಲಿ... ಪ್ರಾಣಿಯ ಎದುರುಗಡೆ ಯಾವುದೋ ಒಂದು ಬಗೆಯ ಪೂಜಾವಸ್ತುವಿದೆ...ಈ ಪದಕವನ್ನು ಬಹುಶಃ ಚಿನ್ನದ ಕರಡಿಗೆಯೋ ಅಥವಾ ಇನ್ನಾವುದೋ ಲೋಹದ ಭರಣಿಯಲ್ಲಿಯೋ ಇಡುತ್ತಿದ್ದಂತೆ ಕಾಣುತ್ತದೆ.' ಒಟ್ಟಿನಲ್ಲಿ 'ಲಿಂಗಧಾರೀ ಧರ್ಮದ ಮುಖ್ಯ ಆಚರಣೆಗಳು ವೇದಪೂರ್ವಕಾಲದಲ್ಲಿಯೇ ಸಾಕಾದಷ್ಟು ಬೆಳೆದು ಪ್ರಬಲವಾಗಿದ್ದು ತಮ್ಮನ್ನು ಬಾಹುಬಲದಿಂದ ಗೆದ್ದ ಆರ್ಯರ ಮೇಲೆ ಪ್ರಭಾವ ಬೀರಲು ಎರಡು ಧರ್ಮಗಳೂ ಹಾಲು ಜೇನು ಸೇರಿದಂತೆ ಸೇರಿ ಸುಸ್ವಾದವಾದ ಧರ್ಮವಾಯಿತು.

**ವೇದೋಪನಿಷತ್‌ಗೀತೆ ಆಗಮಾದಿಗಳ ಮೇಲೆ ಲಿಂಗಧಾರಿಗಳ ಪ್ರಭಾವ**

ಕಸ್ತೂರಿ ಮಾಸಿಕದಲ್ಲಿನ **'ಕ್ಷೇತ್ರರಾಜಕಾಶಿ–ಅಲ್ಲಿ ಭಾರತದ ಸಂಯುಕ್ತ ಸಂಸ್ಕೃತಿಯ ಬೀಜಾರೋಪವಾಯಿತು'** ಎಂಬ ಲೇಖನವು ಈ ವಿಷಯದಲ್ಲಿ ಸುಬೋಧಕವಾಗಿದೆ–

> 'ಗಂಗಾಕಣಿವೆಗೆ ಕಾಲಿಟ್ಟ ಆರ್ಯರಲ್ಲಿ ಕಾಶಿಗಳೇ ಮೊದಲಿಗರು. ಅದು ಭಾರತದೊಳಗಿನ ಭಾರತವೆಂದು ವಿದ್ವಾಂಸರಿಂದ ಕರೆಸಿಕೊಳ್ಳುತ್ತಿದ್ದಿತು. ಅಲ್ಲಿ ಪ್ರವೇಶಿಸಿದ ಕಾಶಿಗಳು ತಮಗಿಂತ ಪೂರ್ವದ ಭಾರತೀಯ ನಾಗರೀಕತೆಯ ಸಂಪರ್ಕ ಹೊಂದಿದಾಗ ವಿಜಿಗೀಷುಗಳಂತೆ ವರ್ತಿಸದೆ ಸಮಾನ ನಾಗರೀಕರಂತೆ ವರ್ತಿಸತೊಡಗಿದರು. ಗಂಗಾಕಣಿವೆಯ ಅನುಪಮದೇಶವನ್ನಾಳುತ್ತಿದ್ದ ವ್ರಾತ್ಯರಾಜನ್ಯರು ಜೀವನದಲ್ಲಿಯೂ, ವಿಚಾರದಲ್ಲಿಯೂ ಆರ್ಯರಿಗಿಂತ ಮಿಗಿಲಾಗಿದ್ದರು. ಅವರ ರಾಜ್ಯಭಾರ ಪದ್ಧತಿಯು ಬೌದ್ಧಿಕ ಹೆಚ್ಚಳಿಕ್ಕೆ ಸಾಕ್ಷ್ಯವಾಗಿದ್ದರೆ ಅವರ ತಾತ್ತ್ವಿಕ ಹಾಗೂ ಪೌರಾಣಿಕ ವಿಶ್ವಕಲ್ಪನೆಗಳು ಆರ್ಯಬ್ರಾಹ್ಮರಿಗೂ ಅವರಿಗೂ ಉಂಟಾದ ಸಾಮಾಜಿಕ ಮತ್ತು ರಾಜಕೀಯ ಸಂಪರ್ಕದಲ್ಲಿ ಪ್ರದರ್ಶಿತವಾಗಿತ್ತು, ಆರ್ಯಬ್ರಾಹ್ಮಣರು ವ್ರಾತ್ಯರಾಜನ್ಯರಿಂದ ಹಲವಾರು ವಿಷಯಗಳನ್ನು ಉತ್ಸಾಹದಿಂದ ಕಲಿತುಕೊಳ್ಳುವಂತಾಯಿತು'.

–ಎಂದು ನರೇಂದ್ರಘೋಷರು ಬರೆದಿದ್ದಾರೆ.

ಶಿವನ ಹೆಸರಿನವನಲ್ಲದ ಋಗ್ವೇದದಲ್ಲಿ ಅಪ್ರಮುಖನಾಗಿದ್ದ ರುದ್ರನು, ಯಜುರ್ವೇದ ಕಾಲದ ಹೊತ್ತಿಗೆ ಅದರಲ್ಲಿ **'ಏಕವೇವ ರುದ್ರೋನದ್ವಿತೀಯಾಯ ತಸ್ಥುಃ'** ಎಂಬಂತೆ ಅದ್ವಿತೀಯನಾಗಿ **'ಶಿವನಾಮಾಸಿ'** ಎಂಬಂತೆ ಶಿವನೆಂಬ ಹೆಸರುಳ್ಳವನಾಗಿ, ಉಳಿದ ದೈವಗಳೆಂಬ ಪಶುಗಳಿಗೆ ಪತಿಯಾಗಿ 'ಪಶುಪತಿ' ಎನಿಸಿಕೊಂಡುದು **'ರುದ್ರಃ ಪಶೂನಾಮಧಿಪತಿರಿತಿ ವಯಂ ಬ್ರಹ್ಮಾದಯಃ ಪಶವಃ'** ಎಂಬ ತ್ರಿಪುರದಹನ ಕಾಲದ ಹೇಳಿಕೆಯಿಂದ ಕಂಡುಬರುತ್ತದೆ. ಅಥರ್ವ ವೇದದ ಹೊತ್ತಿಗೆ ದ್ರಾವಿಡ ವ್ರಾತ್ಯಾಸುರರ ಪ್ರಭಾವವು ಹೆಚ್ಚಿ ಶಿವರುದ್ರನು **'ಏಕವ್ರಾತ್ಯ'**ನೆಂಬ ಹೆಸರಿನಿಂದ ಮಹಾದೇವನಾದನು. ವಿದ್ವಾಂಸರಾದ ವ್ರಾತ್ಯರು ಅತಿಥಿಯಾಗಿ ಬಂದರೆ, ರಾಜನಾದರೂ ಬಂದು ಅವರನ್ನು ಸತ್ಕರಿಸಬೇಕೆಂದು ಅಥರ್ವವೇದ (ಅಥರ್ವ XV 10-12)ದಲ್ಲಿ ಹೇಳಿದೆ. ಅಥರ್ವವೇದಕ್ಕೆ ಸೇರಿದ ಮುಂಡಕೋಪನಿಷತ್ತು **'ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾಃ'** ಎಂದು ಮೊದಲಾಗುವ ಮಂತ್ರದಲ್ಲಿ ಭವಸಾಗರವನ್ನು ದಾಟುವವರಿಗೆ ಒಡಕು ದೋಣಿಗಳಂತಿರುವ ಯಜ್ಞಗಳನ್ನು ನಂಬುವರು ಮೂಢರು, ಬಳ್ಳಿಗುರುಡರು ಇತ್ಯಾದಿಯಾಗಿ ನಿಂದಿಸಿದೆ. ಭಗವದ್ಗೀತೆಯಲ್ಲಿ ಅವರನ್ನು **'ವೇದ ವಾದರತಾಃ ಅವಿಪಶ್ಚಿತಾಃ ಕಾಮಾತ್ಮಾನಃ'** ಎಂದು ನಿಂದಿಸಿ **'ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ'** ಎಂದು ಬುದ್ಧಿ ಹೇಳಿದೆ. ಮುಂಡಕೋಪನಿಷತ್ತಿನಲ್ಲಿ **'ನ್ಯಾಯಮಾತ್ಮಲಭ್ಯಃ... ...ಅಲಿಂಗಾತ್'** ಎಂದರೆ ಲಿಂಗರಹಿತನಿಗೆ ಮೋಕ್ಷವಿಲ್ಲವೆಂದು ಹೇಳಿದೆ. **'ಜ್ಯೇಷ್ಠ ಪುತ್ರಾಯಪ್ರಾಹ'** ಎಂದು ಪ್ರಾರಂಭ

ವಾಗುವ ಈ ಉಪನಿಷತ್ತು 'ಮಹಾಶಾಲಃ' ಎಂದರೆ ಶಾಂಕರ ಭಾಷ್ಯದಂತೆಯೇ ಮಹಾಗೃಹಸ್ಥನಿಗೆ ಗೃಹಸ್ಥರಿಗಾಗಿ ಉಕ್ತವಾದ ಉಪನಿಷತ್ತು; **'ನೈತದಚೀರ್ಣ ವ್ರತೋಽಧೀತೇ'** ಎಂದರೆ ಅವ್ರತರು ಎಂದರೆ ಸಂನ್ಯಾಸಿಗಳು ಇದನ್ನು ಅಧ್ಯಯನ ಮಾಡಬಾರದೆಂದು ಹೇಳಿದೆ. **'ಬ್ರಹ್ಮ ವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ'** ಎಂದರೆ ಶಿರೋವ್ರತವನ್ನಾಚರಿಸುವವರಿಗೆ ಬ್ರಹ್ಮವಿದ್ಯೋಪದೇಶ ಮಾಡಬೇಕೆಂದು ಹೇಳಿದೆ. ಆದುದರಿಂದ ಶಿರೋವ್ರತವೆಂದರೆ ಲಿಂಗವನ್ನು ತಲೆಯಲ್ಲಿ ಧರಿಸುವವರಿಗೇ ಈ ಉಪನಿಷತ್ತು ಮೀಸಲಾದುದು: ಅಲಿಂಗಿಗಳಿಗಲ್ಲ. ಪಾಶುಪತವ್ರತಕ್ಕೇ ಶಿರೋವ್ರತವೆಂದು ಹೆಸರು. ಶಿರೋವ್ರತವೇ ಮುಂಡಕವ್ರತ. ಆದುದರಿಂದ ಈ ಉಪನಿಷತ್ತಿಗೆ ಮುಂಡಕವೆಂಬ ಹೆಸರಾಗಿದೆ. ಅಲಿಂಗಿ ಭಾಷ್ಯಕಾರರು ಲಿಂಗವೆಂದರೆ ಸಂನ್ಯಾಸವೆಂದು, ಅರ್ಥಮಾಡುವುದು ಗೃಹಸ್ಥರಿಗೆ ಈ ಉಪನಿಷತ್ತಿನಲ್ಲಿ ಸಾಧ್ಯವಿಲ್ಲ. ಎಲ್ಲಿಯೂ ಲಿಂಗವೆಂದರೆ ಸಂನ್ಯಾಸವೆಂದು ಹೇಳಿಲ್ಲ. ಆ ಪದವು ಆ ಅರ್ಥದಲ್ಲಿ ಎಲ್ಲಿಯೂ ಪ್ರಯೋಗವಾಗಿಲ್ಲ. ಪಶುಪತ ವ್ರತವು ಶಿರೋವ್ರತವೆಂಬ ಹೆಸರಿನಿಂದ ಶ್ರುತ್ಯುಕ್ತವಾಗಿದೆಯೆಂಬುದಕ್ಕೆ ಆಧಾರವಾಗಿ ಮುಂಡಕೋಪನಿಷತ್ತಿನಲ್ಲಿ ಶಿರೋವ್ರತವನ್ನಾಚರಿಸುವವರಿಗೇ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆನ್ನುವ ಪೂರ್ವೋಕ್ತ ಮಂತ್ರವನ್ನು ಸೂತಸಂಹಿತೆಯೂ (೨-೩೫) ವಿದ್ಯಾರಣ್ಯರದೆಂದು ನಂಬಲ್ಪಟ್ಟಿರುವ ಅದರ ತಾತ್ಪರ್ಯ ದೀಪಿಕೆಯೂ ಹೇಳುತ್ತದೆ. ಶಿರೋವ್ರತವೆಂದರೆ **'ಪೂಜಾಂ ಕೃತ್ವಾಥ ತಲ್ಲಿಂಗಂ ಶಿರಸಾ ಧಾರಯೇತ್ಸದಾ'** ಎಂದು ಹೇಳುವವಾಯವೀಯ ಸಂಹಿತೆಯಂತೆ ತಲೆಯಲ್ಲಿ ಲಿಂಗವನ್ನು ಧರಿಸುವ ವ್ರತ. ಶಂಕರ ವಿಜಯದಲ್ಲಿ ಶಂಕರಾಚಾರ್ಯರನ್ನು ಸಂಧಿಸಿದ ಆರು ಪಂಗಡದ ಶೈವರಲ್ಲಿ ಒಬ್ಬರನ್ನು **'ಶಿರಸಿ ಪಾಷಾಣ ಲಿಂಗಂಚ ಧಾರಿಣಃ ಜಂಗಮಾಃ'** ಎಂದು ಹೇಳಿದೆ. **'ತ್ರಿಪುಂಡ್ರ ಲಿಂಗಂತು ಸದೈವಧಾರಯೇತ್'** ಎಂದು ಸೂತಸಂಹಿತೆ ಹೇಳುತ್ತದೆ.

> 'ನಿವೇದಯಿಷ್ಯನ್ ಮದ್ ಜ್ಞಾನಂ ದದ್ಯದಾದೌ ಶಿರೋವ್ರತಂ । ಅತ್ಯಾಶ್ರಮಂ ಪಾಶುಪತಂ ಶಾಂಭವಂ ತಚ್ಛಿರೋವ್ರತಂ॥ ಇತೀದಂ ನಾಮಭಿಃಪುಣ್ಯೈಃ ನಿಗಮಾಂತೇಷು ಗೀಯತೇ । ತನುತ್ರಯ ಗತಾನಾದಿ ಮಲತ್ರಯಮಸೌ ಗುರುಃ ದೀಕ್ಷಾ ತ್ರಯೇಣ ನಿರ್ದಗ್ಧ್ವಾಲಿಂಗ ತ್ರಯ ಮುಪಾದಿಶೇತ್॥'

ಇತ್ಯಾದಿಯಾಗಿ ಕಾರಣೋತ್ತರ ತಂತ್ರದ ಕ್ರಿಯಾಪಾದದಲ್ಲಿ ಹೇಳಿರುವಂತೆ ಶಿರೋವ್ರತ, ಅತ್ಯಾಶ್ರಮ, ಪಾಶುಪತಾದಿ ಶಬ್ದಗಳಿಂದ ಉಕ್ತವಾದ ಲಿಂಗಧಾರೀ ಧರ್ಮವು ಆಗಮಗಳಲ್ಲಿ ಉಪದೇಶಿಸಲ್ಪಟ್ಟಿದೆ. ವೀರಶೈವ ಪದವು ಆಗಮಗಳಲ್ಲಿ ಕಂಡುಬಂದು ವೀರಪದದ ನಿಜವಾದ ಅರ್ಥವು ಉಕ್ತವಾಗಿದೆ. **'ಭಕ್ತ್ಯಾ ವೀರೋ ನ ವೈರೇಣ ನಬಲೇನಚ'** ಎಂದು ಪಾರಮೇಶ್ವರಾಗಮವು ಹೇಳಿರುವುದಕ್ಕೆ ಅನುಸಾರವಾಗಿ ವೀರಶೈವಧರ್ಮಶಿರೋಮಣಿಯಲ್ಲಿ **'ದೃಢ ಶಂಭುಭಕ್ತ್ಯಾವೀರಃ'** ಎಂದು ಹೇಳಿದೆ. ಚಂದ್ರ ಜ್ಞಾನಾಗಮದಲ್ಲಿ **'ಇಷ್ಟಲಿಂಗ ವಿಯೋಗೇವಾ ವ್ರತಾನಾಂ ವಾಪರಿಚ್ಯುತೌ। ತೃಣವತ್ ಪ್ರಾಣ ಸಂತ್ಯಾಗ ಇತಿ ವೀರವ್ರತಂ ಮತಂ'** ಎಂದು ಹೇಳಿರುವುದಾದರೂ ಬಸವೇಶ್ವರರಿಂದ ಸಂಸ್ಕರಿಸಲ್ಪಟ್ಟ ವೀರಶೈವದಂತೆ ಇಷ್ಟಲಿಂಗವು ಕಳೆದುಹೋದರೆ ಪ್ರಾಣಘಾತುಕವ ಮಾಡಿಕೊಳ್ಳಬಾರದು. ಗುರುವಿನಿಂದ ಬೇರೆಯ ಲಿಂಗವನ್ನು ಪಡೆಯಬೇಕು. ಸೂಕ್ಷ್ಮಾಗಮ ವಾತುಲಾಗಮ ಕಾಮಿಕಾಗಮಗಳಲ್ಲಿ ಲಿಂಗಧಾರಣವು ವಿಧಿಸಲ್ಪಟ್ಟಿದೆ. ವಿಪುಲ ಆಗಮಾಧಾರಗಳನ್ನೆಲ್ಲ ಕೊಡುವುದು ಅನವಶ್ಯ. ಆದರೆ ಶಿರೋವ್ರತರಿಗೇ ಮೀಸಲಾದ ಅಲಿಂಗಿಗಳಿಗೆ ಮೋಕ್ಷವಿಲ್ಲವೆನ್ನುವ ಮುಂಡಕ ಅತ್ಯಾಶ್ರಮಿಗಳಿಗೆ ಉಕ್ತವಾದ ಶ್ವೇತಾಶ್ವತರ ಮೊದಲಾದ ಕೆಲವು ಉಪನಿಷತ್ತುಗಳು ಶೈವಾಗಮಗಳಿಂದ ಪ್ರಭಾವಿತವಾದವೋ ಅಥವಾ ಆ ಆಗಮಗಳು ಪೂರ್ವೋಕ್ತ ಉಪನಿಷತ್ತುಗಳಿಂದ ಪ್ರಭಾವಿತವಾದವೋ ಎಂಬುದು ಇನ್ನೂ ವಿದ್ವಾಂಸರು ತೀರ್ಮಾನಿಸಬೇಕಾದ ವಿಷಯವಾಗಿದೆ. ಆದರೆ ಆರ್ಯರ ಮುಖ್ಯ ದೇವತೆಯಾದ ಇಂದ್ರನೂ ಅವನ ತೃಪ್ತಿಗಾಗಿ ಮಾಡುತ್ತಿದ್ದ ಯಜ್ಞಯಾಗಾದಿಗಳೂ ನಿರ್ನಾಮವಾಗಿ ದ್ರಾವಿಡರ ದೈವಗಳನ್ನು ವೇದಮಂತ್ರಗಳಿಂದ ಗುಡಿಗಳಲ್ಲಿ ಪೂಜಿಸುವಂತಾದುದು ದ್ರಾವಿಡರ ಸಂಸ್ಕೃತಿಯು ಆರ್ಯರ ಮೇಲೆ ಮಾಡಿದ ಪ್ರಭಾವವೆನ್ನಲು ಸಂದೇಹವಿಲ್ಲ. ಮಹಾಮಹೋಪಾಧ್ಯಾಯ ಅರ್ಥಶಾಸ್ತ್ರ ವಿಶಾರದ ಡಾ॥ ಆರ್, ರಾಮಾಶಾಸ್ತ್ರಿಗಳ, ಜಯಕರ್ನಾಟಕದ ಒಂಬತ್ತನೆಯ ಸಂಪುಟದಲ್ಲಿನ ಲೇಖನ ಭಾಗ ಇಲ್ಲಿ ಉಲ್ಲೇಖಾರ್ಹವಾಗಿದೆ.

> 'ವೈದಿಕ ಆರ್ಯರಪೂಜೆ ಮುಖ್ಯವಾಗಿ ಅಗ್ನಿಪೂಜೆಯು......ಅವರ ದೇವತೆಗಳು ಭೂಮ್ಯಂತರಿಕ್ಷಗಳಲ್ಲಿ ತೋರಿ ಅಡಗುವ ಅನೇಕ ದಿವ್ಯ ಶಕ್ತಿಗಳು......ಆರ್ಯರ ರುದ್ರನು ಈಗಿನ ತ್ರಿಶೂಲಧಾರಿಯಾದ ಶಿವನಲ್ಲ. ಅದ್ಭುತಶಕ್ತಿಯುಳ್ಳ ಪ್ರಚಂಡವಾಯುವು. ಆರ್ಯರ ವಿಷ್ಣುವು ಈಗಿನ ಶಂಖಚಕ್ರಧಾರಿಯಾದ ವಿಷ್ಣುವಲ್ಲ. ವಿಶ್ವಪೋಷಕನಾದ ಸೂರ್ಯನು......ತ್ರಿಕಾಲಗಳಲ್ಲಿ ಪಂಚಮಹಾಯಜ್ಞ ಬಲಿಹರಣಗಳನ್ನು ನೆರವೇರಿಸುವರು. ಈ ಎಲ್ಲಾ ವಿಧಿಗಳಲ್ಲಿ ಅವರು ತಕ್ಕದೇವರ ಭಾಗಗಳನ್ನು ಪಠಿಸುತ್ತಿದ್ದರು. ಆದರೆ ಈಗಿನ ಶೈವ ವೈಷ್ಣವರು ಪೂಜೆಯ ಕಾಲಕ್ಕೆ ಪಠಿಸುವ ಮಂತ್ರಗಳಿಗೂ ಪೂಜೆಗೂ ಸಂಬಂಧವೇ ತೋರದು. ಒಂದೇ ಉದಾಹರಣೆಯನ್ನು ಹೇಳಬೇಕಾದರೆ-ದೇವರಿಗೆ ಗಂಧ ಹಚ್ಚುವ ಕಾಲದಲ್ಲಿ 'ಗಂಧದ್ವಾರಾಂ' ಎಂಬ ಮಂತ್ರವನ್ನು ಅನ್ನುವ ಪರಿಪಾಠವಿದೆ. ಈ ಮಂತ್ರದಲ್ಲಿ 'ಗಂಧ'ವೆಂಬ ಶಬ್ದ ಮಾತ್ರ ಇರುತ್ತದೆ. ಆದರೆ ವಿಷ್ಣುವಿಗಾಗಲೀ ಶಿವನಿಗಾಗಲೀ ಹಚ್ಚುವ ಗಂಧಕ್ಕಾಗಲೀ ಏನೂ ಸಂಬಂಧವಿಲ್ಲ. ಪ್ರಾಚೀನ ಆರ್ಯರಿಗೆ ಗುಡಿಗೋಪುರಗಳ ಅವಶ್ಯಕತೆ ಇರಲಿಲ್ಲ; ದೀಪಧೂಪಗಳ ಆಡಂಬರವಿರಲಿಲ್ಲ. ಅವರ ಪೂಜೆ ಸರಳವಾದುದು. ವೇದಿಕೆಯಲ್ಲಿ

ಪ್ರಜ್ವಲಿಸುವ ಅಗ್ನಿಯೊಂದಿದ್ದರೆ ತೀರಿತು......ಅಧ್ಯಾಪಕ ವೃತ್ತಿಗಾಗಿ ಅನೇಕ ಬ್ರಾಹ್ಮಣರು ದಕ್ಷಿಣಕ್ಕೆ ಇಳಿದುಬಂದರು. ಶೈವವೈಷ್ಣವ ಪಂಥಗಳಲ್ಲಿ ಸೇರಿಕೊಂಡು ತನ್ಮಯರಾದರು. ಈ ತನ್ಮಯತೆಯು ಪರಾಕಾಷ್ಠೆಕ್ಕೇರಿಯಿತು. ಅವರು ತಮ್ಮ ಪೂರ್ವ ವೈದಿಕಾಚಾರವನ್ನು ಬಿಟ್ಟುಕೊಟ್ಟರು......ವೈದಿಕಯಜ್ಞಯಾಗಾದಿಗಳು ದುಸ್ಸಾಧ್ಯವೆಂದು ಮಾಯವಾದವು......ಕೇವಲ ಶೈವ-ವೈಷ್ಣವ ಪಂಥಗಳ ಆಗಾಮಾಚಾರಗಳನ್ನಷ್ಟೇ ಇಟ್ಟುಕೊಂಡರು'.

**ಲಿಂಗತತ್ತ್ವ ವಿಕಾಸದ ಮೇಲೆ ವೇದೋಪನಿಷತ್ ಗೀತಾದಿಗಳ ಪ್ರಭಾವ**

ಆರ್ಯದ್ರಾವಿಡ ಸಂಸ್ಕೃತಿಗಳು ಹಾಲುಜೇನು ಸೇರಿದಂತೆ ಒಂದಾಗಿ ಸುಸ್ವಾದವಾದವು ಎಂದು ಹೇಳಲಾಯಿತಷ್ಟೆ. ಆರ್ಯರಲ್ಲಿ ಸಾಮಾನ್ಯ ಜನರೂ ಅವರ ಪುರೋಹಿತರೂ ನೈಸರ್ಗಿಕ ಶಕ್ತಿಗಳನ್ನು ತೃಪ್ತಿಪಡಿಸುತ್ತಿರುವಲ್ಲಿ ಅವರ ಋಷಿಗಳು ವನದಲ್ಲಿ ವಾಸಮಾಡುತ್ತಾ ಆಧ್ಯಾತ್ಮಿಕ ಚಿಂತನೆಯ ತಪಸ್ಸನ್ನು ಮಾಡುತ್ತಿದ್ದರು. ಅವರು ಚಿಂತಿಸುತ್ತಿದ್ದುದು ಅಗಾಧ ವಿಷಯ. ಜಗತ್ತಿನ ಮೂಲವನ್ನೇ ಬೆದಕುತ್ತಿದ್ದರು. '**ಕಿಂಸ್ವಿದ್ ವನಂ**' '**ಕ ಉಸವೃಕ್ಷ ಆಸ**' (ಋ ೧೦-೮೧-೪) ಈ ಭುವನ ಭವನವನ್ನು ಕಟ್ಟಲು ಮರವೆಲ್ಲಿದ್ದಿತು. ಆ ಮರವಿದ್ದ ವನವೆಲ್ಲಿದ್ದಿತು! '**ಕಿಂ ಸ್ವಿದಾಸೀತ್ ಅಧಿಷ್ಠಾನಂ ಆರಂಭಣಂ ಕತಮತ್‌ಸ್ವಿತ್**' (೧೦-೮೧-೨) ಜಗತ್ತನ್ನು ಸೃಷ್ಟಿಸುವಾಗ ಸೃಷ್ಟಿಕರ್ತನು ಯಾವ ಆಧಾರದ ಮೇಲೆ ನಿಂತಿದ್ದನು. (**ಆರಂಭಣಂ ಉಪಾದಾನ ಕಾರಣಂ ಸಾಯಣಭಾಷ್ಯ**). ಸೃಷ್ಟಿಸಲು ಸಾಮಗ್ರಿ ಎಲ್ಲಿತ್ತು? '**ಅಯಜನಥಾಃ ತನ್ವಃ ಸ್ವಾಯಾಃ**' ಎಂದರೆ ತನ್ನ ತನುವೇ ಸೃಷ್ಟಿಗೆ ಸಾಮಗ್ರಿಯಾಗಿರಬೇಕೆನಿಸಿತು. **ಪ್ರಥಮಂದದ್ರಆಪಃ** (ಋ ೧೦-೮೨-೬) ಎಲ್ಲಕ್ಕೂ ಮೊದಲು ಇದ್ದುದು ನೀರೇ ಎಂದು ಭಾವಿಸಿದರು. ದ್ಯಾವಾಪೃಥಿವೀ ಮೊದಲಾದ ಕಲ್ಪನೆಗಳೂ ಆದವು. ವಿಪ್ರರು ತೃಪ್ತಿಪಡಿಸುತ್ತಿದ್ದ ದೇವತೆಗಳೂ ಎಷ್ಟೇ ಇರಲಿ, ಇವೆಲ್ಲಕ್ಕೂ ಆಧಾರವಾದ ಸತ್ತ್ವವೊಂದೇ; '**ದೇವನೊಬ್ಬ ನಾಮ ಹಲವು**' ಎಂಬಂತೆ. '**ಏಕಂ ಸತ್ ವಿಪ್ರಾಃ ಬಹುಧಾವದಂತಿ**' ಎಂದು ಋಗ್ವೇದದ ದಶಮ ಮಂಡಲದಲ್ಲಿಯೇ ಹೇಳಿದೆ. ಸತ್ ಎಂಬ ಪದದಲ್ಲಿ ಇರುವಿಕೆ ಎಂಬ ಅರ್ಥವಿದೆ. ಸೃಷ್ಟಿಯಾದ ಮೇಲೆ ಹೇಳುವ ಮಾತು ಆದುದರಿಂದ '**ಅಸತಃ ಸದಜಾಯತ**' (೧೦-೭೭-೨) ಎಂದರೆ ಅಸತ್ತಿನಿಂದ ಸತ್ತುಹುಟ್ಟಿತೆಂದು ಹೇಳಿದೆ. ಇವೆಲ್ಲಕ್ಕೂ ಕಲ್ಪನೆ ಋಗ್ವೇದೋಕ್ತ, ಪ್ರಜಾಪತಿ ಪರಮೇಷ್ಠಿ ಕಂಡ '**ನಾಸದೀಯ ಸೂಕ್ತ**'ದಲ್ಲಿದೆ. ಇದರ ವಿಷಯದಲ್ಲಿ ಲೋಕಮಾನ್ಯ ತಿಲಕರು ಗೀತಾರಹಸ್ಯದಲ್ಲಿ ಹೇಳಿದಂತೆ 'ಮೂಲಾಧಾರವಾದ ಮತ್ತು ಅಖಂಡವಾದ ದ್ರವ್ಯಕ್ಕೆ ಸತ್, ಅಸತ್, ಆಕಾಶ, ನೀರು, ಬೆಳಕು, ಕತ್ತಲೆ, ಅಮೃತ, ಮೃತ್ಯು-ಇವೇ ಮೊದಲಾದ ಯಾವ ಪರಸ್ಪರ ಸಾಪೇಕ್ಷವಾದ ಹೆಸರುಗಳನ್ನು ಕೊಡುವುದು ಯೋಗ್ಯವಲ್ಲ. ಇದ್ದದ್ದೆಲ್ಲ ಈ ಸರ್ವಪದಾರ್ಥಗಳಿಂದ ವಿಲಕ್ಷಣವಾಗಿದ್ದು ತನ್ನ ಅಪರಂಪಾರ ಶಕ್ತಿಯಿಂದ ಸ್ಫುರಿಸುತ್ತಿತ್ತು. ಅದರ ಜೊತೆಗೆ ಅದನ್ನು ಆಚ್ಛಾದಿಸುವುದಕ್ಕೆ ಬೇರೆ ಏನೂ ಇದ್ದಿಲ್ಲವೆಂದು ಸೂಕ್ತದ ಆರಂಭಕ್ಕೆ ಈ ಸೂಕ್ತದ ಋಷಿಯು ನಿರ್ಭಯವಾಗಿ ಹೇಳುತ್ತಾನೆ' '**ಆನೀದವಾತಂ ಸ್ವಧಯಾ**' ಎಂಬುದು ಚೈತನ್ಯದ ಸ್ಫುರಣೆಯನ್ನು ಹೇಳುತ್ತದೆ. ಆಗ ಅದ್ವೈತವಾಗಿದ್ದಿತು, ಮತ್ತೇತರಿಂದಲೂ ವಿಶಿಷ್ಟವಾಗಿರಲಿಲ್ಲವೆನ್ನಲು '**ತದೇಕಂ**' ಎಂಬ ಪದವು ಸಾಲದೇನೋ ಎಂದು '**ತಸ್ಮಾದ್ಧಾನ್ಯತ್‌ನಪರಃ**' ಎಂದರೆ ಅದು ಹೊರತು ಮತ್ತೇನೂ ಇರಲಿಲ್ಲವೆಂದು ಎರಡನೆಯ ಮಂತ್ರದಲ್ಲಿ ಹೇಳಿದೆ, '**ಸ್ವಧಾ ಮಾಯಾ, ತಯಾ ತದ್‌ಬ್ರಹ್ಮೈಕಮವಿಭಾಗಾಪನ್ನಮಾಸೀತ್**' ಎಂದು ಸಾಯಣಭಾಷ್ಯದಲ್ಲಿ ಹೇಳಿದಂತೆ ಶಿವನಿಂದ ಶಕ್ತಿಯು ಹೊರಹೊಮ್ಮದೇ ಇದ್ದ '**ಶಿವಾದ್ವೈತ ಸ್ಥಿತಿ**' ಇದ್ದಿತು. ಇದನ್ನೇ ನಾಸದೀಯ ಸೂಕ್ತದ ಮಾತುಗಳಿಂದಲೇ ಶ್ವೇತಾಶ್ವತರ ಶ್ರುತಿಯು '**ಯದಾತಮಃ ನದಿವಾ ನ ರಾತ್ರಿಃ ನ ಸತ್ ನ ಚಾಸತ್ ಶಿವ ಏವ ಕೇವಲಃ**' ಎಂದು ಕೇವಲ ಶಿವನೊಬ್ಬನೇ ಇದ್ದ 'ಶಿವಾದ್ವೈತ' ಸ್ಥಿತಿಯನ್ನು ಮೊದಲು ಹೇಳಿ, '**ತಸ್ಮಾತ್ ಪ್ರಸೃತಾ ಪುರಾಣೀ**' ಎಂದು ಆಮೇಲೆ ಹೇಳಿ, ಮುಂದೆ ಶಿವನು ಸೃಷ್ಟಿಗಾಗಿ ಹೊರಹೊಮ್ಮಿ ಶಕ್ತಿವಿಶಿಷ್ಟನಾಗುವುದನ್ನು ಹೇಳಿದೆ. ವಿಶಿಷ್ಟ ಪದದಲ್ಲಿ ದ್ವೈತಭಾವನೆಯಿದೆ. ನಾಸದೀಯ ಸೂಕ್ತದ ಮೂರನೆಯ ಮಂತ್ರದಲ್ಲಿ '**ತುಚ್ಛೇನಾಭ್ವಪಿಹಿತಂ**' ಎಂದು ಹೇಳಿ, ಬ್ರಹ್ಮದಿಂದ ಶಕ್ತಿ ಹೊರಹೊಮ್ಮಿ ಜಗತ್ತಾಗುವುದನ್ನು '**ತಪಸಸ್ತನ್ಮಹಿನಾ ಜಾಯತೈಕಂ**' ಎಂಬ ಪದಗಳಿಂದ ಹೇಳುತ್ತದೆ. ತಿಲಕರು 'ಪಂಚದಶಿಯೊಳಗೆ ತುಚ್ಛವೆಂಬ ಶಬ್ದವನ್ನು ಮಾಯೆಗೆ ಹಚ್ಚಿದ್ದಾರೆ....'ಆಭು' ಎಂದರೆ ಪೊಳ್ಳು ಎಂಬ ಅರ್ಥವಲ್ಲದೆ ಪರಬ್ರಹ್ಮವೆಂದಾಗುತ್ತದೆ' ಎಂದು ಅರ್ಥ ಮಾಡಿದ್ದಾರೆ. 'ಆಭು' ಎಂಬ ಪದವು 'void' ಎಂದು ಭಾಷಾಂತರಿಸಲ್ಪಟ್ಟಿದೆ. ಏಕಾದಶೇಂದ್ರಿಯಗಳಿಗೆ ನಿಲುಕದ ಪರಬ್ರಹ್ಮಕ್ಕೆ 'ಆಭು' ಎಂದಿರುವುದು. ವಚನಕಾರರ ಶೂನ್ಯ ನಿಶ್ಶೂನ್ಯ ಬಯಲು ನಿರ್ಬಯಲು ಎಂಬಂತಹ ಪದಗಳಿಗೆ ಮೂಲವಾಗಿದೆ: ಇತ್ತು! ಇರಲಿಲ್ಲ! ಎನ್ನಲಾಗದುದೇ ಜಗದಾದಿಯ ತತ್ತ್ವವೆನ್ನುವದಾದರೂ ಶರಣರ ನಿಲುವು. ನಾಸದೀಯ ಸೂಕ್ತವೂ ಅದನ್ನು ಅನುಸರಿಸುವ ಶ್ವೇತಾಶ್ವತರವೂ ಶರಣರ ನಿಲುವಿಗೆ ಹಿನ್ನಲೆ.

ಆದಿಯಾಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ-ನಿರಾಳವಿಲ್ಲದಂದು ಶೂನ್ಯ, ನಿಶ್ಶೂನ್ಯವಿಲ್ಲದಂದು ಚರಾಚರವೆಲ್ಲಾ ರಚನೆಗೆ ಬಾರದಂದು, ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ.ಧರೆಯಾಕಾಶವಿಲ್ಲದಂದು ತ್ರೈಮಂಡಲ ನೆಲೆಗೊಳ್ಳದಂದು, ಹೇಮನೇಮ ಜಪತಪವಿಲ್ಲದಂದು ನಿಮ್ಮನಾರು ಬಲ್ಲರು? ಪರಿಬ್ರಹ್ಮರಿಗೆ ಅಗೋಚರ ನಿರ್ಲೇಪ ನಿರಂಜನನಾಗಿ ವೇದಗಳು ನಿಮ್ಮನರಿಯವು! ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನರಿಯವು! ಗಗನಕುಸುಮದಿಂದತ್ತಲು ಗುಹೇಶ್ವರಾ ನಿಮ್ಮ ನಿಲುವು.

ಗಗನವೇ ನಿಲುಕಲಾಗದುದು ; ಗಗನ ಕುಸುಮ ಊಹಿಸಲಾಗದದು, ಎಂದ ಮೇಲೆ ಗಗನಕುಸುಮದ ಪರಿಮಳವು ಊಹೆಗೂ ಸಹ ನಿಲುಕುವುದುಂಟೇ ? ಪರಬ್ರಹ್ಮವು ಇದಕ್ಕಿಂತಲೂ ಅತ್ತಲೆಂದರೆ ಇಹದವುಗಳಂತೆ ನುಡಿಗೂ ಮನಕ್ಕೂ ಗ್ರಾಹ್ಯವಾಗದದು. ಆದುದರಿಂದ ಅದನ್ನು **'ಆಭು, ಶೂನ್ಯ, ಬಯಲು'** ಎಂದು ಕರೆದಿರುವುದು. ಇದನ್ನೇ ಮಾಂಡುಕ್ಯ ಉಪನಿಷತ್ತು **'ಶಾಂತಂ ಶಿವಂ ಅದ್ವೈತಂ'** ಎನ್ನುವುದು. ನಾಸದೀಯ ಸೂಕ್ತದ ಮಾತುಗಳಿಂದಲೇ ಇದನ್ನು ಹೇಳುವ ಶ್ವೇತಾಶ್ವತರವು **'ಶಿವ ಏವ ಕೇವಲಃ'** ಎಂದು ಹೇಳಿ **'ತದಕ್ಷರಂ ತತ್‌ಸವಿತುರ್ವರೇಣ್ಯಂ'** ಎಂದು ತನ್ನ ನಿಲುವನ್ನು ಸ್ಪಷ್ಟಮಾಡಿದೆ. ಇಂತಹ ವೇದೋಪನಿಷದಾಗಮಗಳಿಂದ ಪ್ರಭಾವಿತವಾಗದ ಹಿಂದೂ ದೇಶದಲ್ಲಿ ಹುಟ್ಟಿ ಬೆಳೆದ ಧರ್ಮವುಂಟೇ? ವೀರಶೈವ ಧರ್ಮವು ಇವೆಲ್ಲವುಗಳಿಂದ ಪ್ರಭಾವಿತವಾಗಿದ್ದರೂ ಅದೆಲ್ಲವನ್ನೂ ಜೀರ್ಣಿಸಿಕೊಂಡು ತನ್ನದನ್ನಾಗಿಯೇ ಮಾಡಿಕೊಂಡಿದೆ. ಬ್ರಹ್ಮವೆಂಬ ಪದವು ದೊಡ್ಡದು ಎಂಬ ಅರ್ಥದಲ್ಲಿ ಉಪನಿಷತ್ತುಗಳಲ್ಲಿ ಉಪಯೋಗವಾಗಿದ್ದರೂ ಜೀವನು ತನ್ನೆಡೆಗೆ ಗಮಿಸೆ ತನ್ನೊಳಗೆ ಲೀನವಾಗಿಸಿಕೊಳ್ಳುವುದರಿಂದ **'ಲಿಂಗ'** ಪದದಿಂದ ಅದನ್ನು ಕೆಲವರು **'ಅಂ'** ಎಂದರೆ ಬ್ರಹ್ಮದ ಕಡೆಗೆ **'ಗ'** ಎಂದರೆ ಗಮಿಸಿ ಅದರಲ್ಲಿ ಲೀನವಾಗುವುದರಿಂದ ಜೀವನನ್ನು **'ಅಂಗ'** ವೆಂದು ಕರೆಯುತ್ತಾರೆ. ಹೀಗೆ **'ಅಂಗಲಿಂಗ'** ಪದಗಳು ಸಾರ್ಥಕವಾಗಿವೆ. ವಚನೋಪನಿಷತ್ತಿನಲ್ಲಿನ ಶರಣರ ವಚನಗಳ ನಿಲುವಾದರೂ ಇದೆ ಎಂಬುದನ್ನು ಒಂದೆರಡು ವಚನಗಳಿಂದ ಉದಾಹರಿಸಬಹುದು.

> 'ಯತೋವಾಚೋನಿವರ್ತಂತೇ ಅಪ್ರಾಪ್ಯ ಮನಸಾಸಹ'-ಎಂದೆನಿಸುವ ಲಿಂಗವು ಅತ್ಯತಿಷ್ಠದ್‌ದಶಾಂಗುಲಂ-' ಎಂದೆನಿಸುವ ಲಿಂಗವು; ಚಕಿತಮಭಿದತ್ತೇ ಎಂದೆನಿಸುವ ಲಿಂಗವು; ಅಣೋರಣೀಯಾನ್ ಮಹತೋ ಮಹೀಯಾನ್- ಎಂದೆನಿಸುವ ಲಿಂಗವು ಅಯಮ್ಮೇಪಸ್ತ್ರೋ ಭಗವಾನ್ ; ಅಯಂ ಮೇ ಭಗವತ್ತರಃ॥ ಎಂದೆನಿಸುವ ಲಿಂಗವು.
>
> 'ಲಿಂಗವೆಂಬುದು ಪರಶಕ್ತಿಯುಕ್ತ; ಲಿಂಗವೆಂಬುದು ಪರಶಿವನ ನಿಜದೇಹ; ಲಿಂಗವೆಂಬುದು ಪರಶಿವನ ಘನ ತೇಜ: ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖ ; ಲಿಂಗವೆಂಬುದು ಪರಶಿವನ ಪರಮಜ್ಞಾನ ; ಲಿಂಗವೆಂಬುದು ಪರಶಿವನು ತಾನು ; ಲಿಂಗವೆಂಬುದು ಅಭೇದ್ಯಪಂಚ ಸಂಜ್ಞೆತಾನು ; ಲಿಂಗವೆಂಬುದು ಹರಿಬ್ರಹ್ಮರ ನಡುವೆನೆಗಳ್ದ ಜ್ಯೋತಿರ್ಮಯ ಶ್ರುತಿಃ॥ ಆಲಯಂ ಸರ್ವಭೂತಾನಾಂ ಲಯಾನಾಂ ಲಿಂಗಮುಚ್ಯತೇ' ಎಂದುದಾಗಿ ಇದು ಲಿಂಗಧರ್ಮ. ಉರಿಲಿಂಗಪೆದ್ದಿ ವಿಶ್ವೇಶ್ವರ ಲಿಂಗದೊಳಿಂತು ತಿಳಿಯ ಬಲ್ಲಾತನೇ ಬಲ್ಲವನು.'

ಹೀಗೆ ಲಿಂಗ ಸಂಜ್ಞೆಯಿಂದ ಉಕ್ತವಾಗಿರುವವನು ತ್ರಿಶೂಲ ಡಮರುಗ ಕಪಾಲಾದಿಗಳನ್ನು ಧರಿಸಿದವನೆ ಅಥವಾ ಬ್ರಹ್ಮ–ವಿಷ್ಣು ಈಶ್ವರ ಸದಾಶಿವ ಮೊದಲಾದ ಹೆಸರುಗಳುಳ್ಳವರೇ? ಇವರಲ್ಲಿ ಯಾರು? ಇವರಂತಹವರಲ್ಲಿ ಯಾರೂ ಅಲ್ಲ; ಹಾಗಾದರೆ ಅದಕ್ಕೆ ಹೆಸರಾವುದಾದರು ಇತ್ತೆ ?

> ಬ್ರಹ್ಮ-ವಿಷ್ಣು-ರುದ್ರ-ಈಶ್ವರ-ಸದಾಶಿವ-ಪರಮೇಶ್ವರ ಎಂಬ ಸಂದಣಿ ತಲೆದೋರದ ಮುನ್ನ ಬಯಲೇ ಸ್ವರೂಪವಾಗಿತ್ತು. ಆ ಸ್ವರೂಪಿನ ನಡೆಯನುಪಮಿಸಬಾರದು ; ನೋಡಬಾರದ ಬೆಳಗು ಕೂಡಬಾರದಮೂರ್ತಿ, ಅಖಂಡ ಅಪ್ರತಿಮ ಗುಹೇಶ್ವರ ಲಿಂಗದ ಬೆಳಗಿನ ಮೂಲವ ಲಿಂಗ ಸಂಗಿಗಳಲ್ಲದ ಅಂಗವಿಕಾರಿಗಳೆತ್ತ ಬಲ್ಲರು ?
>
> ಶೂನ್ಯಹೃದಯ ನಿಶ್ಶೂನ್ಯವಿಲ್ಲದಂದು, ಬ್ರಹ್ಮವಿಷ್ಣು ಮಹೇಶ್ವರರಿಲ್ಲದಂದು ಹದಿನಾಲ್ಕುಭುವನ ದಿಗ್ವಲಯವಿಲ್ಲದಂದು, ಕೂಡಲ ಚೆನ್ನಸಂಗಯ್ಯನೆಂಬ ಹೆಸರು ಮುನ್ನಿಲ್ಲದಂದು,
>
> ಅಸುರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ, ವೃಷಭವಾಹನನಲ್ಲ, ಋಷಿಗಳೊಡನಿದ್ದಾತನಲ್ಲ, ಎಸಗುವ ಕುರುಹಿಲ್ಲದಾತಂಗೆ ಹೆಸರಾವುದೂ ಇಲ್ಲವೆಂದನಂಬಿಗರ ಚೌಡಯ್ಯ

ಬಯಲೇ ಸ್ವರೂಪವಾಗಿದ್ದ ಅವ್ಯಕ್ತದಿಂದ ವ್ಯಕ್ತ ಜಗತ್ತು ಹೊರಹೊಮ್ಮಿ ಮತ್ತೇ ಬಯಲಾಗಿ ಪರಿಣಮಿಸುವುದು ವಿಚಿತ್ರವಾದ ವಿಷಯವೆಂದರೆ–ಚಿನ್ನದಿಂದಲಾದ ಹಲವು ಬಂಗಾರವಳಿದು ಕರಗಿದರೆ ಚಿನ್ನವೇ ಅದಂತೆ–ಆ ಮೊದಲು ಇದ್ದುದು, ಆಭರಣವಾಗಿರುವುದು ಅದು ಕರಗಿದ ಮೇಲೆ ಆಗುವುದೂ ಬಂಗಾರವೇ, ಉದಕದಿಂದಾದ ವಾರಿಕಲ್ಲು ಕರಗಿ ಮುನ್ನಿನ ಉದಕವೇ ಆದಂತೆ, ಮೊದಲು ಇದ್ದುದೂ, ವಾರಿಕಲ್ಲಾಗಿದ್ದುದೂ, ಅದು ಕರಗಿದ ಮೇಲೆ ಆದುದೂ ವಾರಿಯೇ, ಹಾಗೆಯೇ ಬಯಲೆನಿಪ ತತ್ತ್ವವೇ ವಿಶ್ವರೂಪದಲ್ಲಿರುವುದೂ ಕೊನೆಯಲ್ಲಿ ಮೊದಲಿನಂತಾಗುವುದೂ ಬಯಲು ಬಯಲೇ ;

> ಬಯಲು ಬಯಲನೆಬಿತ್ತಿ, ಬಯಲು ಬಯಲನೆ ಬೆಳೆದು ಬಯಲು ಬಯಲಾಗಿ ಬಯಲಾಯಿತ್ತಯ್ಯಾ; ಬಯಲ ಜೀವನ, ಬಯಲ ಭಾವನೆ, ಬಯಲು ಬಯಲಾದ ಗುಹೇಶ್ವರಾ ;

ವಾರಿಬಲಿದು ವಾರಿಕಲ್ಲಾದಂತೆ, ಶೂನ್ಯವೇ ಸ್ವಯಂಭುಲಿಂಗವಾಯಿತ್ತು; ಸ್ವಯಂಭುಲಿಂಗದಿಂದಾಯಿತ್ತುಮೂರ್ತಿ: ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ'–ಎಂದ ಮೇಲೆ ಈ ಸೃಷ್ಟಿ, ಸ್ಥಿತಿ, ಲಯಗಳಿಗೆ ತ್ರಿಮೂರ್ತಿಗಳ ಅವಶ್ಯವಾಯಿತು; ಅದು ಹೇಗಾಯಿತೆಂದರೆ. 'ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ; ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಸ್ಮರಣೆಯಿಂದ ಹುಟ್ಟಿದಾತ ವಿಷ್ಣು, ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಹೀಗೆ ತ್ರಿಮೂರ್ತಿಗಳು ಆದಿಯಾಗಿ ತೃಣಾಂಶವಾದ ಜಗತ್ತೆಲ್ಲವನ್ನೂ ತನ್ನಲ್ಲಿಯೇ ಸೃಜಿಸಿ ತಾನವರೊಳಗೆ ಪ್ರವೇಶಮಾಡಿ ಅನನ್ಯವಾಗಿರುವುದಕ್ಕೆ ಉಪನಿಷತ್ತಿನಲ್ಲಿ

ಕಾಮ ಅಥವಾ ಇಚ್ಛೆಯೆನ್ನುವರು, ವಚನೋಪನಿಷತ್ತಿನಲ್ಲಿ ಇದನ್ನು ಲೀಲೆಯೆನ್ನುವುದುಂಟು. **'ಸೋಽಕಾಮಯತ ಬಹುಸ್ಯಾಂ ಪ್ರಜಾಯಾಯೇತಿ...ತತ್ ಸೃಷ್ಟ್ವಾ ತದೇವಾನು ಪ್ರಾವಿಶತ್**' ಎನ್ನುವುದು ತೈತ್ತಿರೀಯೋಪನಿಷತ್. ವಚನೋಪನಿಷತ್ತಿನಂತೆಯೂ **'ಆತ್ಮನ ಆಕಾಶ: ಸಂಭೂತ: ಆಕಾಶಾದ್ ವಾಯು: ವಾಯೋರಗ್ನಿ: ಅಗ್ನೇರಾಪಃ, ಅದ್‌ಭ್ಯಃ ಪೃಥಿವೀ ಪೃಥಿವ್ಯಾ ಓಷಧಯಃ ಓಷಧಿಭ್ಯೋಽನ್ನಂ ಅನ್ನಾತ್ ಪುರುಷಃ**' ಎನ್ನುವ ಉಪನಿಷದಂತೆಯೇ ಏನೆಂದೆನಲಿಲ್ಲದ ಮಹಾಘನವು, ತನ್ನ ಲೀಲೆಯಿಂತಾನೆ ಸ್ವಯಂಭು ಲಿಂಗವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ, ಆ ಶಿವಶಕ್ತ್ಯಾತ್ಮಕದಿಂದಾಯಿತ್ತು ಆತ್ಮ: ಆತ್ಮನಿಂದಾದುದು ಆಕಾಶ; ಆಕಾಶದಿಂದಾಯಿತ್ತು ವಾಯು; ವಾಯುವಿನಿಂದಾಯಿತ್ತು ಅಗ್ನಿ; ಅಗ್ನಿಯಿಂದಾಯಿತ್ತು ಅಪ್ಪು; ಅಪ್ಪುವಿನಿಂದಾಯಿತ್ತು ಪೃಥ್ವಿ; ಪೃಥ್ವಿಯಿಂದಾಯಿತ್ತು ಜಗಜೀವನವೆಲ್ಲವೂ: ನಿಮ್ಮನೆನಹಿನಿಂದಾದವು ನಿಮ್ಮಾಲಿಗೆಯ ಚೆನ್ನರಾಮಾ' 'ಹೀಗೆ ಜಗದುದಯವಾದ ಮೇಲೆ'**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂಜಗತ್**'ಎಂಬಂತೆ' ಶಿವ ತನ್ನ ವಿನೋದಕ್ಕೆ ರಚಿಸಿದನು ಅನಂತ ವಿಶ್ವವನು; ರಚಿಸಿದವನು ವಿಶ್ವಕ್ಕೆ ಹೊರಗಾಗಿರ್ದನೆ? ಇಲ್ಲ; ವಿಶ್ವಮಯ ತಾನಾದನು. ವಿಶ್ವಮಯ ತಾನಾಗಿ ಎಲ್ಲಕ್ಕೂ ಚೈತನ್ಯದಾಯಕನಾದನು. ಇದರಲ್ಲಿ ಸಂಶಯಪಡುವವರಿಗೆ ಪ್ರಶ್ನೆಗಳನ್ನು ಕೇನೋಪನಿಷತ್ ಕೇಳಿ, ಅದಕ್ಕೆ ತಾನೇ ಉತ್ತರವನ್ನು ಹೀಗೆ ಕೊಡುವುದು: **ಕೇನೇಷಿತಂ ಪತತಿ ಪ್ರೇಷಿತಂ ಮನಃ ? ಕೇನಃ ಪ್ರಾಣಃ ಪ್ರಥಮಃ ಪ್ರೇತಿಯುಕ್ತಃ ? ಕೇನೇಷಿತಾಂ ವಾಚಮಿಮಾಂ ವದಂತಿ ? ಕ ಉ ದೇವೋ ಯುನಕ್ತಿ:?–ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋಯದ್ ವಾಚೋಹವಾಚಂ ಸ ಉ ಪ್ರಾಣಸ್ಯ ಪ್ರಾಣಃ!** ಇದರ ಕನ್ನಡ ಅನುವಾದವಿದು.

> ಯಾರಿಚ್ಛೆಯಿಂ ಮನವೆರುಗುವುದು ವಿಷಯುಗಳೊಳ್? । ಯಾರಿಂದಲೊಡ ಗೂಡಿ ಮೊದಲುಸಿರುಚಲಿಸುವುದು ?।
> ಯಾರಿಚ್ಛೆಯಿಂ ವಾಕ್ಕು ಮಾತುಗಳನಾಡುವುದು? । ಯಾರು ಕಣ್ಣುಕಿವಿಗಳಂ ನಿಯಮಿಸುವ ದೈವಮದು? ।
> ಅದು ಕಿವಿಯ ಒಳಕಿವಿಯು; ಅದು ಮನದ ಒಳಮನವು । ಅದು ವಾಕ್ಕಿನೊಳವಾಕ್ಕದು ಪ್ರಾಣದೊಳಪ್ರಾಣ॥

ಕಣ್ಣಿಗೆ ಕಣ್ಣು. ಕಿವಿಗೆ ಕಿವಿ, ಮನಕ್ಕೆಮನ ಪ್ರಾಣಕ್ಕೆ ಪ್ರಾಣವಾದ ಪರಮ ಚೈತನ್ಯವು ಕಣ್ಣು ಕಿವಿ, ಮನ, ಪ್ರಾಣಗಳೇ ಮೊದಲಾದವುಗಳಿಗೆ ಅವವುಗಳ ಕೆಲಸ ಮಾಡುವ ಚೈತನ್ಯವನ್ನು ಕೊಡುವುದಾದರೂ ಕಣ್ಣು ಕಿವಿ ಮೊದಲಾದವು ಕಣ್ಣುಕಿವಿ ಮೊದಲಾದವುಗಳ ಒಳಗೇ ಇದ್ದು ಚೈತನ್ಯವನ್ನದಕ್ಕೆ ಕೊಡುತ್ತಿದ್ದರೂ ಅವು ಅದನ್ನು ಅರಿಯವು.

> ಕಣ್ಣೊಳಗೆ ಕಣ್ಣಿರ್ದು ಕಾಣಲರಿಯರಯ್ಯಾ: ಕಿವಿಯೊಳಗೆ ಕಿವಿಯಿರ್ದು ಕೇಳಲರಿಯರಯ್ಯಾ; ಜಿಹ್ವೆಯೊಳಗೆ ಜಿಹ್ವೆಯಿದ್ದು ರುಚಿಸಲರಿಯರಯ್ಯಾ; ಘ್ರಾಣದೊಳಗೆ ಘ್ರಾಣವಿರ್ದು ಆಘ್ರಾಣಿಸಲರಿಯರಯ್ಯಾ;ತ್ವಕ್ಕಿನೊಳಗೆ ತ್ವಕ್ಕಿರ್ದು ಸ್ಪರ್ಶಿಸಲರಿಯರಯ್ಯಾ; ಪ್ರಾಣದೊಳಗೆ ಪ್ರಾಣವಿರ್ದು ಪ್ರಾಣದ ಪರಿಯನರಿಯರಯ್ಯಾ, ಕಾಯದೊಳಗೆ ಕಾಯವಿರ್ದುಬಿಡದು ಬೇರಾಗದು ಕೂಡಲಸಂಗಮದೇವಾ, ನೀವಿಕ್ಕಿದ ಅಣಕದ ತೊಡಕಿನ ಭೇದವ ಭೇದಿಸಬಾರದಯ್ಯಾ.

ವಿಶ್ವವೆಲ್ಲಕ್ಕೂ ಚೈತನ್ಯದಾಯಕವಾದ ಮೂಲ ಚೈತನ್ಯಕ್ಕೆ ವೀರಶೈವ ಪರಿಭಾಷಿಕೆಯಲ್ಲಿ ಭಾವಲಿಂಗವೆಂದು ಹೆಸರು! ಕಣ್ಣು ಕಿವಿ ಮೊದಲಾದ ಅಂಗಗಳಿಗೆ ಹರಿವ ಚೇತನಕ್ಕೆ ಪ್ರಾಣಲಿಂಗವೆಂದು ಹೆಸರು. ಭಾವಲಿಂಗವೆಂಬ ವಿದ್ಯುತ್ ಕೇಂದ್ರದಿಂದ ಹರಿದು ಬಂದು ನಾನಾ ಯಂತ್ರಗಳನ್ನು ಸಂಚಲನಗೊಳಿಸುವ ವಿದ್ಯುತ್ ಪ್ರವಾಹದ ಹಾಗೆ ಅಂಗಾಂಗಳಲ್ಲಿ ಹರಿದು ಚೇತನಗೊಳಿಸುವ ಚೈತನ್ಯ ಪ್ರವಾಹಕ್ಕೆ ಲಿಂಗವೆಂದು ಹೆಸರು. ಶಿವಚೈತನ್ಯವು ಶಿಷ್ಯನ ಶಿಖಾಗ್ರದಲ್ಲಿ ಕೇಂದ್ರೀಕರಿಸಿ ಕಾಲಾಗ್ನಿಯಂತೆ ಪ್ರಜ್ವಲಿಸುವ ಕಾಂತಿಯುಳ್ಳದ್ದಾಗಿ ಕೋಟಿ ಮಿಂಚುಗಳ ಪ್ರಭೆಯಿಂದ ಪ್ರಕಾಶಿಸುವುದು.

> 'ಜ್ವಲತ್ ಕಾಲಾನಲಾಭಾಭಾತಟಿತ್ಕೋಟಿ ಸಮಪ್ರಭಾ। ತಸ್ಯೋರ್ಧ್ವೇಂಚ ಶಿಖಾಸೂಕ್ಷ್ಮಾ ಚಿದ್ರೂಪಾ ಪರಮಾಕಲಾ ।
> ಏವಂ ಭೇದಕಲಾದೇಪಿ ಸದ್ಗುರೋಃ ಶಿಷ್ಯ ಮಸ್ತಕೇ । ಹಸ್ತಾಬ್ಜ ಮಥನಾದ್ ಗ್ರಾಹ್ಯತಸ್ಯ ಭಾವಕರೋದಿತಾ।
> ಹಸ್ತಮಸ್ತಕ ಸಂಯೋಗಾಚ್ಚಲಾದ್ ವೇಧೇತಿಗೀಯತೇ । ಗುರುಣೋದೀರಿತಾಕರ್ಣೇ ಯಾಸಾಮಂತ್ರೇತಿಕಥ್ಯತೇ ।
> ಶಿಷ್ಯಪಾಣಿತಲೇದತ್ತಾಯಾ ದೀಕ್ಷಾಸಾ ಕ್ರಿಯಾತ್ಮಿಕಾ।'

ಶಿವಪ್ರಣಿಧಾನ ಪೂರ್ವಕವಾಗಿ ಉಲ್ಮೀಲಿತ ದೃಷ್ಟಿಯಿಂದೆ ಗುರುವು ಶಿಷ್ಯನನ್ನು ನೀರೀಕ್ಷಿಸುತ್ತಾ ಹಸ್ತ ಮಸ್ತಕ ಸಂಯೋಗದಿಂದ ಶಿಖಾಗ್ರದಲ್ಲಿರುವ ಪರಶಿವನ ಚೈತನ್ಯವನ್ನು ಗ್ರಹಿಸಿ ಭಾವಲಿಂಗ ರೂಪದಲ್ಲಿ ಪ್ರತಿಷ್ಠಿಸಿ ಶಿಷ್ಯನ ಕಾರಣ ತನುವಿಗೆ ವೇಧಾದೀಕ್ಷೆಯಿಂದ ಸಂಬಂಧಿಸುವನು. ಹಾಗೆಯೇ ಮನು ದೀಕ್ಷೆಯಿಂದ ಎಂದರೆ ಮಂತ್ರೋಪದೇಶ ಪೂರ್ವಕವಾಗಿ ಪ್ರಾಣಲಿಂಗವನ್ನು ಸೂಕ್ಷ್ಮತನುವಿನಲ್ಲಿ ಪ್ರತಿಷ್ಠಿಸುವನು. ಹಾಗೆಯೇ ಇಷ್ಟಲಿಂಗದಲ್ಲಿ ಆ ಚೈತನ್ಯ ಕಳೆಯನ್ನು ಪ್ರತಿಷ್ಠಿಸಿ ಗುರುವು ಶಿಷ್ಯನ ಸ್ಥೂಲ ತನುವಿಗೆ ಸಂಬಂಧಿಸುವನು. ಇನ್ನು ಇಷ್ಟಲಿಂಗವು ಹೆಬ್ಬೆರಳಗಾತ್ರವಿರಬೇಕೆಂಬ ನಿಯಮವು ವೀರಶೈವರಲ್ಲಿರುವುದಕ್ಕೆ ಕಾರಣವೇನು ?ಎಂಬ ಪ್ರಶ್ನೆ ಏಳುವುದು. ಹೆಬ್ಬೆರಳ ಗಾತ್ರದ ಹೃದಯ ಗುಹಾಂತರಿಕ್ಷದಲ್ಲಿ ಅಂತರಾತ್ಮನಿರುವನಾಗಿ ಹೃದಯವೆಂಬ ಹೆಸರು ಬಂದಿದೆಯೆಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದೆ. (ಛಾಂ–೮–೩–೩) **'ಅಂಗುಷ್ಠಮಾತ್ರ ಪುರುಷೋ ಜ್ಯೋತಿರಿವಾಧೂಮಕಃ'** (ಕಠ ೨–೧–೧೩) ಅದು ಅಂಗುಷ್ಠ ಮಾತ್ರ ಹೊಗೆಯಿಲ್ಲದ ಪರಂಜ್ಯೋತಿ. ಶ್ವೇತಾಶ್ವತರೋಪನಿಷತ್ತಿನಂತೆಯೇ (ಶ್ವೇ ೩–೧೩)–

ಅಂಗುಷ್ಠಮಾತ್ರಃ ಪುರುಷೋಂತರಾತ್ಮಾ ಸದಾ ಜನಾನಾಂ ಹೃದಯೇ ।
ಸನ್ನಿವಿಷ್ಟಃ ಹೃದಾ ಮನೀಷಾಮನಸಾ ಭಿಕ್ಲ್ಟಪ್ತೋಯ ಏತದ್ ವಿದುರಮೃತಾಸ್ತೇ ಭವಂತಿ ॥

ಹೃದಯಾಕಾಶದಲ್ಲಿ ಸದಾ ಬೆಳಗುತ್ತಿರುವ ಪರಂಜ್ಯೋತಿಯು ಹೆಬ್ಬೆರಳಿನ ಪರಿಮಿತಿಯಲ್ಲಿರುವುದಷ್ಟೆ. ಅದಕ್ಕೆದರ್ಪಣ ದಂತಿರುವ ಇಷ್ಟಲಿಂಗವು ಅದೇ ಪ್ರಮಾಣದಲ್ಲೇ ಇರುವುದು ಶ್ವೇತಾಶ್ವತರದಲ್ಲಿನ **'ಹೃದಾಮನೀಷಾ ಮನಸಾಭಿಕ್ಲ್ಟಪ್ತಃ'** ಎನ್ನುವುದಕ್ಕೆ ಶ್ವೇತಾಶ್ವತರದಲ್ಲಿಯೇ ಅದರ ಅರ್ಥವು **'ತಸ್ಯಾಭಿಧ್ಯಾನಾತ್, ಯೋಜನಾತ್, ತತ್ತ್ವಭಾವಾತ್, ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ'** ಎಂದು ಹೇಳಿರುವುದರಿಂದ (ಶ್ವೇ ೧–೧೦) ಸ್ಪಷ್ಟವಾಗುತ್ತದೆ. ಧ್ಯಾನಯೋಗ ತತ್ತ್ವಭಾವನೆಗಳಿಂದ ಮೋಕ್ಷವಾಗುವುದೆಂದಿದರ ಅರ್ಥ. **'ಮನಸಾ'** ಎಂದು ಹೇಳಿರುವುದರಿಂದ ಮನಸ್ಸನ್ನು ಇಷ್ಟಲಿಂಗದಲ್ಲಿ ಏಕಾಗ್ರಗೊಳಿಸಿ ಧ್ಯಾನ ಮಾಡಬೇಕು. **'ಮನೀಷಾ'** ಎಂದು ಹೇಳಿರುವುದರಿಂದ ಬುದ್ಧಿಯನ್ನು ಯೋಗದಲ್ಲಿ ಸ್ಥಿರಗೊಳಿಸಿ ಪ್ರಾಣಲಿಂಗಾನುಸಂಧಾನ ಹೊಂದುವುದು. **'ತತ್ತ್ವಭಾವೋ ಯಥಾರ್ಥ ಸ್ವರೂಪ ಭಾವನಂ, ಸ ಏವಾಹ ಮಿತಿ ಭಾವನಂ ವಾ'** ಎಂಬ ಭಾಷ್ಯದಂತೆ ತತ್ತ್ವ ಭಾವನೆಯೆಂದರೆ ಯಥಾರ್ಥಭಾವನೆಯೇ. ಇದೇಅಹಂಗ್ರಹೋಪಾಸನೆ; ಹೃದಯವು ಭಾವನೆಯ ಸ್ಥಾನ. ಇದರಲ್ಲಿ ಭಕ್ತಿಯೋಗ ತತ್ತ್ವಭಾವನಾರೂಪಜ್ಞಾನ ಎಂದರೆ ನಾನೇ ನೀನು, ನೀನೇ ನಾನು ಎಂಬ ಅರಿವು ಮುಪ್ಪುರಿಗೊಂಡು ಮೋಕ್ಷಸಾಧನವಾಗುತ್ತದೆ. ಮೋಕ್ಷಮಾರ್ಗೋಪದೇಶಕ್ಕೆ ಗುರುವು ಅವಶ್ಯವೆಷ್ಟೋ ಮೋಕ್ಷಸಾಧನವಾಗಿ ಇಷ್ಟಲಿಂಗವೂ ಅಷ್ಟೇ ಅವಶ್ಯ. ತ್ರಿಶೂಲ ಡಮರುಗ ಶಂಖ ಚಕ್ರಾದಿಗಳಿಂದಲೂ ಆಭರಣಗಳಿಂದಲೂ ಕೂಡಿ ಅನೇಕರ ಮಧ್ಯೇ ಪುರೋಹಿತರು ಅರ್ಚಿಸುವ ಗುಡಿಗಳಲ್ಲಿನ ದೇವರುಗಳ ಮೇಲೆ ಮನಸ್ಸನ್ನು ಏಕೀಕರಿಸುವುದು ಕಷ್ಟ ಸಾಧ್ಯ. ತಾನೇ ಪೂಜಿಸುವ ನಿರಾಕಾರವಾದ ಇಷ್ಟಲಿಂಗದಲ್ಲಿ ತನಗೆ ಅನುಕೂಲವಾದ ಏಕಾಂತ ಸ್ಥಲದಲ್ಲಿ ಮನವನ್ನು ನಿಲ್ಲಿಸುವುದು ಸುಲಭ. ಇಷ್ಟಲಿಂಗಾನುಸಂಧಾನವು ಪ್ರಾಣಲಿಂಗ ಭಾವಲಿಂಗಾನುಸಂಧಾನುಗಳಿಗೆ ಸಾಧನ. ಪ್ರಾಣಲಿಂಗಕ್ಕೆ ಅನುಸಂಧಾನದೃಷ್ಟಿಯಿಂದ ದರ್ಪಣವಿದ್ದಂತೆ, ಇಷ್ಟಲಿಂಗವಿಲ್ಲದೆ ಪ್ರಾಣಲಿಂಗ ದರ್ಶನವಾಗದು. **'ಇಷ್ಟಲಿಂಗಮವಿಶ್ವಸ್ಯ ಪ್ರಾಣಲಿಂಗಂ ನ ಪಶ್ಯತಿ ದರ್ಪಣಪ್ರತಿಬಿಂಬನಾಂ ಯಥಾರೂಪಂ ತಥಾ ಭವೇತ್'** ಎಂಬ ಆಧಾರ ಉಂಟು. ಕನ್ನಡಿಯು ಮೊದಲು ಕಣ್ಣಿಗೆ ಕಾಣುವುದಾದರು ತದನಂತರ ನೋಡುವವನಿಗೆ ತಾನೇ ಕಾಣುವುದು. ಕನ್ನಡಿಯ ಅರಿವೇ ಇರದು 'ತನ್ನನ್ನೇ ನೋಳ್ಪಳೈಸೆ ಲೈಂಗಿಕ ನಿಯಮಾರ್ಚನಾ ಅನುಭವ ದರ್ಪಣದೋಳ್ ಶರಣಂ'. ಇದೇ ಶಿವಯೋಗದಲ್ಲಿ ಸ್ವಸ್ವರೂಪಾನುಸಂಧಾನ. **'ಶಿವಯೋಗವು ಎಷ್ಟು ಗಹನವಾದುದೋ ಅಷ್ಟೇ ಗೂಢವಾದುದು'** ಆದರೂ ಅದರ ಸ್ಥೂಲ ಪರಿಚಯವಾದರೂ ಆಗದೆ ಲಿಂಗತತ್ತ್ವವಿಕಾಸದ ಚಿತ್ರವು ಅಪೂರ್ಣವಾಗುವುದು. ಇಷ್ಟಲಿಂಗವನ್ನು ಅರ್ಚಿಸಿ ನಟ್ಟ ನೋಟದಿಂದ ಧ್ಯಾನಾಸಕ್ತನಾಗಿ 'ಹರಿವ ಮನ ವಾಯುವನೊಂದು ಹುರಿಯಮಾಡಿ, ಮನವ ಸ್ಥಿರಗೊಳಿಸಿ, ಸಗುಣ ಧ್ಯಾನದಲ್ಲಿ ಮನವಸವಿದು ನಿರ್ಗುಣದಲ್ಲಿನಿಂದು' ಪ್ರಾಣಲಿಂಗಾನುಸಂಧಾನಕ್ಕೆ ಅಣಿಯಾಗಬೇಕು. ಆಗ ನಿಜಗುಣ ಶಿವಯೋಗಿಗಳು ಹೇಳುವಂತೆ.

ಪ್ರಾಣಲಿಂಗವಿದನು ಗುರುವಿನಾಣತಿಯೊಳು ಕೇಳಿ ನೋಡಿ। ಮಾಣದೇಕ ಚಿತ್ತದಿಂದ ಜಾಪಿಸಪನೆ ಕೃತಾರ್ಥನು......ಮೂಲಲಿಂಗನಾಭ ಹೃದಯ ಕಂಠಕೂರ್ಚ ಗೋತ್ರ ಮೊತ್ತ । ಜಾಲದಂಬುಜಾಕ್ಷರಾದಿ ದೈವ ಮಂತ್ರಶಕ್ತಿಯ । ಮೇಳದೊಡನೆ ಕೆಂಪು ಮಿಂಚು ರನ್ನಚಿನ್ನ ಸೊಡರು ಚಂಚ । ಲಾಲ ತಾಗ್ನಿ ದೀಪ್ತಿರೂಪುದೋರ್ಪ ದಿವ್ಯಬಿಂದುವೆ॥

ಇದನ್ನರಿಯಲು ಯೋಗವಿಷಯವನ್ನು ಮನವರಿಕೆ ಮಾಡಿಕೊಳ್ಳಬೇಕು. ಮೂಲಾಧಾರ ಚಕ್ರದಿಂದ ಬ್ರಹ್ಮರಂಧ್ರದ ವರೆಗಿರುವ ಸುಷುಮ್ನನಾಡಿಯಲ್ಲಿ ಆರುಚಕ್ರಗಳಿವೆ. ಮೂಲಾಧಾರ ಚಕ್ರವು ಪಾಯುಮೇಢ್ರಗಳ ಮಧ್ಯದಲ್ಲಿದೆ. ಇದರಲ್ಲಿ ನಾಲ್ಕುದಳಗಳಿವೆ; ಪೃಥ್ವಿತತ್ತ್ವವೂ ಆಚಾರಲಿಂಗವೂ ಇದಕ್ಕೆ ಸಂಬಂಧಪಟ್ಟಿವೆ. ಸ್ವಾಧಿಷ್ಠಾನ ಚಕ್ರವು ಲಿಂಗ ಮೂಲದಲ್ಲಿರುವ ಆರುದಳದ ಪದ್ಮ. ಜಲತತ್ತ್ವವೂ ಗುರುಲಿಂಗವೂ ಇದಕ್ಕೆ ಸಂಬಂಧಪಟ್ಟಿವೆ. ನಾಭಿಮೂಲದಲ್ಲಿರುವ ಹತ್ತು ದಳಪದ್ಮದ ಮಣಿಪೂರ ಚಕ್ರಕ್ಕೆ ಅಗ್ನಿತತ್ತ್ವವೂ ಶಿವಲಿಂಗವೂ ಇದಕ್ಕೆ ಸಂಬಂಧಪಟ್ಟಿವೆ. ಹೃದಯ ದೇಶದಲ್ಲಿರುವ ಹನ್ನೆರಡು ದಳ ಪದ್ಮದ ಅನಾಹತ ಚಕ್ರಕ್ಕೆ ವಾಯುತತ್ತ್ವವೂ ಜಂಗಮ ಲಿಂಗವೂ ಸಂಬಂಧಪಟ್ಟಿವೆ. ತಾಲು ಮೂಲದಲ್ಲಿರುವ ಹದಿನಾರು ದಳದ ವಿಶುದ್ಧಿ ಚಕ್ರಕ್ಕೆ ಆಕಾಶ ತತ್ತ್ವವೂ ಪ್ರಸಾದಲಿಂಗವೂ ಸಂಬಂಧಪಟ್ಟಿವೆ. ಹುಬ್ಬುಗಳ ಮಧ್ಯೇ ಇರುವ ಎರಡು ದಳದ ಆಜ್ಞಾ ಚಕ್ರಕ್ಕೆ ಮನಸ್ಸತ್ತ್ವವೂ ಮಹಾಲಿಂಗವೂ ಸಂಬಂಧಪಟ್ಟಿವೆ. ಇವೆಲ್ಲಕ್ಕೂ ಬೇರೆ ಬೇರೆ ಶಕ್ತಿಗಳೂ ಮಂತ್ರಗಳೂ ಇವೆ. ಇದನ್ನೇ ನಿಜಗುಣಶಿವಯೋಗಿಗಳು 'ಮೂಲಲಿಂಗ...ಮಂತ್ರಶಕ್ತಿಯು' ಎಂದಿರುವುದು. ಈ ಆರು ಚಕ್ರಗಳನ್ನೂ ಜೀವನು ಮುಂದೆ ಹೇಳುವಂತೆ ಕುಂಡಲಿನೀ ಶಕ್ತಿಯೊಡನೆ ಏರಿದಾಗ ಚಿನ್ನರನ್ನ ಮೊದಲಾದ ವರ್ಣಗಳನ್ನು ಕಾಣುವುದನ್ನು ನಿಜಗುಣಶಿವಯೋಗಿಗಳು ಹೇಳಿದ್ದಾರೆ.

ಸೃಷ್ಟಿಕಾರಣಳಾದ ಪರಮ ಶಿವಶಕ್ತಿಯು ಬ್ರಹ್ಮಾಂಡವನ್ನೆಲ್ಲಾ ಆವರಿಸಿಕೊಂಡಿರುವಂತೆಯೇ, ಆ ದೇವಿಯು ಪಿಂಡಾಂಡ ದಲ್ಲಿ ಸರ್ಪಾಕಾರದ ಕುಂಡಲಿನೀ ರೂಪದಲ್ಲಿ ಇರುವಳು. ಮೂಲಾಧಾರದ ಚಕ್ರದ ಮಧ್ಯದಲ್ಲಿರುವ ಸ್ವಯಂಭುಲಿಂಗವನ್ನು ಮೂರೂವರೆ ಸುತ್ತು ಸುತ್ತಿಕೊಂಡು ತನ್ನ ಹೆಡೆಯಿಂದ ಸುಷುಮ್ನನಾಡಿಯರಂಧ್ರವನ್ನು ಮುಚ್ಚಿಕೊಂಡು ನಿದ್ರಿಸುತ್ತಿರುವಳು.

'ಹರಿವ ಮನ ವಾಯುವನೊಂದು ಹುರಿಯಮಾಡಿ ಮನವ ಸ್ಥಿರಗೊಳಿಸಿ'ದಾಗ ಮೂಲಾಧಾರದಲ್ಲಿರುವ ಕಂದರ್ಪ ವಾಯುವು ಕುಂಡಲಿನಿಯು ಸುತ್ತಲಿರುವ ಅಗ್ನಿಯನ್ನು ಪ್ರಜ್ವಲಗೊಳಿಸಲು, ಕುಂಡಲಿನಿಯು ಎಚ್ಚರಗೊಂಡು ಸುಷುಮ್ನನಾಡಿಯನ್ನು ಮುಚ್ಚಿಕೊಂಡಿರುವ ಹೆಡೆಯನ್ನು ಓಸರಿಸಿ ಜೀವಾತ್ಮನೊಡನೆ ಅದರೊಳಗೆ ಪ್ರವೇಶಿಸಿ, ಆಜ್ಞಾಚಕ್ರದವರೆಗೆ ಏರುತ್ತಿರುವಾಗ ಆಯಾ ಚಕ್ರಗಳಲ್ಲಿರುವ ತತ್ತ್ವಗಳು ಲಯವಾಗುವ ಕ್ರಮ ಹೇಗೆಂದರೆ–ಪೃಥ್ವೀತತ್ತ್ವವು ಜಲತತ್ತ್ವದಲ್ಲಿಯೂ, ಜಲವು ಅಗ್ನಿತತ್ತ್ವದಲ್ಲಿಯೂ, ಅಗ್ನಿಯು ವಾಯುತತ್ತ್ವದಲ್ಲಿಯೂ, ವಾಯುವು ಆಕಾಶತತ್ತ್ವದಲ್ಲಿಯೂ, ಆಕಾಶತತ್ತ್ವವು ಮನಸ್ತತ್ತ್ವದಲ್ಲಿಯೂ, ಮನವು ಕುಂಡಲಿನಿಯಲ್ಲಿಯೂ ಲಯಹೊಂದುವುವು. ಇವು ಹಿಂದೆ ಹೇಳಿದ ಆಧಾರದಂತೆ ಯಾವಯಾವ ತತ್ತ್ವದಲ್ಲಿ ಹೊರಹೊಮ್ಮಿದವೋ ಅದೇ ತತ್ತ್ವದಲ್ಲಿಯೇ ಲಯಹೊಂದುವುವೆಂಬುದು ಗಮನಾರ್ಹವಾಗಿದೆ. ಹೀಗೆ ಎಲ್ಲಾ ತತ್ತ್ವಗಳೂ ಲಯವಾದ ಮೇಲೆ ಕುಂಡಲಿನಿಯೊಡನೇರಿದ ಜೀವನು ಬ್ರಹ್ಮರಂಧ್ರದಲ್ಲಿರುವ ನಿಃಕಲಲಿಂಗದೊಡನೆ ಸೇರಿ ಅದರಲ್ಲಿರುವ ಅಮೃತ ಪಾನವನ್ನು ಮಾಡಿ ಸುಖಿಸುವನು. ಸರ್ಪಭೂಷಣಶಿವಯೋಗಿಗಳ ಕೈವಲ್ಯಕಲ್ಪವಲ್ಲರಿಯ ಯೋಗಮಾರ್ಗ ವರ್ಣನೆಯು ಈಗ ಮನವರಿಕೆಯಾಗುತ್ತದೆ.

> 'ಸಾರ ಸಾರಿಯನೊತ್ತಿ ಬಂಧಿಸಿ। ಹಿಮ್ಮೆಟ್ಟಿನಿಂದ। ಸಾರಸಾಪ್ತನ ಕೂಡ ಹೊಂದಿಸಿ। ಮುಂದಕ್ಕೆ ನಡೆದು ಮಾರುತಿ ಪ್ರಿಯನಲ್ಲಿ ಸಂಧಿಸಿ ।
> ಸೌಷುಮ್ನ ರಂಧ್ರದಿ ತೂರಿ। ಧರೆಗಡಿಯೂರಿ, ಸಲಿಲವ ಹಾರಿ । ದಹನನಿಗೇರಿ। ಮರುತನ ಮೀರಿ । ಗಗನದಿ ತೂರಿ । ಬ್ರಹ್ಮವ ಸೇರಿ ।
> ಅಮೃತವ ಹೀರಿ । ಸುಖಿಸುವ ಯೋಗಮಾರ್ಗ ನಿರ್ಯೋಗದೊಳಿಹ ಶಿವ । ಯೋಗಿಗೆ ನಮಿಸುವೆನು ॥

ಧರೆ, ಸಲಿಲ, ದಹನ, ಮರುತ, ಗಹನಗಳು ಅವುಗಳ ಬೀಜಗಳಿರುವ ಸ್ವಾಧಿಷ್ಠಾನಾದಿ ಚಕ್ರಗಳ ಸಂಕೇತಗಳಾಗಿವೆ. ಬ್ರಹ್ಮಾಂಡ ಸೃಷ್ಟಿಯಲ್ಲಿ ಹೀಗೆ ಇವು ಹಿಂದೆ ಹೇಳಿದಂತೆ ಸೃಷ್ಟಿಯಾಗುವವೋ ತದ್ವಿರುದ್ಧವಾದ ರೀತಿಯಲ್ಲಿ ಪಿಂಡಾಂಡದಲ್ಲಿರುವ ಚಕ್ರಗಳನ್ನು ಜೀವನು ಕುಂಡಲಿನಿಯೊಡನೆ ಏರುತ್ತಿರುವಾಗ ಅವುಗಳಲ್ಲಿರುವ ಪೃಥ್ವಿಯ ಬೀಜವು ಜಲದಲ್ಲಿಯೂ ಜಲದ್ದು ಅಗ್ನಿಯದರಲ್ಲಿಯೂ ಅಗ್ನಿಯದು ವಾಯುವಿನದರಲ್ಲಿಯೂ ವಾಯುವಿನದು ಆಕಾಶದಲ್ಲಿಯೂ ಲಯಿಸುವುದನ್ನೂ ಕೊನೆಗೆ ಜೀವಾತ್ಮನು ಬ್ರಹ್ಮವ ಸೇರಿ ಅಮೃತವ ಹೀರಿ ಸುಖಿಸುವ ಯೋಗಮಾರ್ಗವು ನಿರ್ಯೋಗದಲ್ಲಿ ಸಮಾಪ್ತಿಯಾಗುವುದನ್ನೂ ಹೇಳುತ್ತದೆ. ಯೋಗವು ಸವಿಕಲ್ಪ ಸಮಾಧಿ ; ಅದರಲ್ಲಿ ನಾನು ಶಿವನಾದೆನು ಎಂಬ ಅರಿವಿರುತ್ತದೆ, ನಿರ್ಯೋಗ ನಿರ್ವಿಕಲ್ಪ ಸಮಾಧಿ ; ಅದರಲ್ಲಿ ನಾನೆನ್ನುವುದೂ ಅಳಿದುಹೋಗುತ್ತದೆ. '**ಲಿಂಗವನರಿಸಿ, ಲಿಂಗವನರಿದು, ಲಿಂಗವ ಬೆರೆಸಿ, ಲಿಂಗವಾದ ಬಳಿಕ ಮತ್ತೆ ಜ್ಞಾತೃ ಜ್ಞಾನಜ್ಞೇಯವೆಂಬ ತ್ರಿವಿಧ ಭ್ರಾಂತಿಸೂತಕ ಹೋಯಿತ್ತು, ನಿಜವಾಯಿತ್ತು ಕಾಣಾ ಗುಹೇಶ್ವರಾ**'–ಎಂಬಂತಾಗುವುದು. ಯೋಗಮಾರ್ಗದಲ್ಲಿರುವ 'ಸಾರಸಾರಿ' ಎಂದರೆ ಚಂದ್ರ ; 'ಸಾರಸಾಪ್ತ'ನೆಂದರೆ ಸೂರ್ಯ; 'ಮಾರುತಪ್ರಿಯ'ನೆಂದರೆ ಅಗ್ನಿ: ಮೂಲಾಧಾರ ಸ್ವಾಧಿಷ್ಠಾನ ಚಕ್ರಗಳು ಅಗ್ನಿಮಂಡಲದಲ್ಲಿವೆ ; ಮಣಿಪೂರ ಅನಾಹತಗಳು ಸೂರ್ಯಮಂಡಲದಲ್ಲಿವೆ ; ವಿಶುದ್ಧಿ ಆಜ್ಞಾ ಚಕ್ರಗಳು ಚಂದ್ರಮಂಡಲದಲ್ಲಿವೆ. ಆರು ಚಕ್ರಗಳನ್ನು ಏರುವಾಗ ಈ ಮೂರು ಮಂಡಲಗಳನ್ನು ದಾಟುವುದನ್ನು ಹೇಳಿದೆ. ಹೀಗೆ ಶಿವಯೋಗದ ಪರಿಚಯದಿಂದ ಲಿಂಗತತ್ತ್ವವಿಕಾಸದ ಸ್ಥೂಲ ಪರಿಚಯವನ್ನು ಮುಗಿಸಿದಂತಾಯಿತು.

ಇನ್ನು ವೀರಶೈವರಿಗೆ ನಿಷೇಧವಾದುದೇನು ? ಎಂಬುದನ್ನು ತಿಳಿಸುವದುಳಿದಿದೆ. 'ಸರ್ವೇ ಜನಾಃ ಸುಖಿನೋ ಭವಂತು' ಎನ್ನುವುದು ಇವರಿಗೆ ಸಾಲದು. 'ಸಕಲ ಜೀವಾವಳಿಗೆ ಲೇಸನೇ ಬಯಸುವುದು' ಇವರ ನಿಲುವು. ಆದುದರಿಂದ ಇವರು ಹಿಂಸಾತ್ಮಕ ಯಜ್ಞ ವಿರೋಧಿಗಳು. ಅಲ್ಲದೆ ಸ್ತ್ರೀಪುರುಷ ತಾರತಮ್ಯ ಜಾತಿ ಜಾತಿತಾರತಮ್ಯ ಇವನ್ನು ತೊಡೆದುಹಾಕಿ ಕಾಯಕದಿಂದ ಸರ್ವರೂ ಜೀವನ ನಡೆಸಬೇಕೆಂಬುದು ಇವರ ಆದೇಶ. 'ದೇವನೊಬ್ಬ ನಾಮ ಹಲವು' ಎಂಬಲ್ಲಿನ '**ಏಕದೇವೋಪಾಸನೆ**' ನಂಬಿ ಕರೆದೊಡೆ ಓ ಎನ್ನನ್ನೇ ಶಿವನು ಎಂಬಲ್ಲಿನ '**ಭಕ್ತಿಪಾರವಶ್ಯತೆ**' ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರ ನೊಂದೇಯೆಂಬಲ್ಲಿನ '**ಸಮತಾಭಾವ**' ; ಕಾಯಕವೇ ಕೈಲಾಸವೆಂಬುದರಲ್ಲಿನ '**ಕರ್ಮಸು ಕೌಶಲಂ**' ; ದಯವಿಲ್ಲದ ಧರ್ಮವದೇವುದಯ್ಯಾ ಎಂಬುವರಲ್ಲಿನ '**ಅಹಿಂಸಾ ಪರಮೋಧರ್ಮಃ**' ನಿಲುವು ; ಎಲವೋ ಬ್ರಹ್ಮಹತ್ಯವ ಮಾಡಿದವನೆ ಒಮ್ಮೆ ಶರಣೆನ್ನೆಲವೋ ಒಮ್ಮೆ ಶರಣೆಂದೊಡೆ ಓಡುವುವು ಪಾಪಂಗಳು ! ಎನ್ನುವ '**ದೀನದಲಿತೋದ್ಧಾರದ ಆದೇಶ**' ; ಅಯ್ಯಾ ಎಂದೊಡೆ ಸ್ವರ್ಗ ಎಲವೋ ಎಂದೊಡೆ ನರಕ ಎಂಬಲ್ಲಿನ '**ನಿರಹಂಭಾವ**'; ಪರನಾರಿಯರ ತೋರೆಯಿಂ ಭೋ ಎಂಬಲ್ಲಿನ '**ಏಕಪತ್ನೀವ್ರತ**'; ಪರಧನಧಾಮಿಷವ ತೋರೆಯಿಂಭೋ ಎಂಬಲ್ಲಿನ '**ನಿಸ್ಪೃಹತೆ**' ; ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಇತ್ಯಾದಿ '**ಸದ್ ವರ್ತನೆಯ ನಿಯಮ**'–ಈ ದಶವಿಧಿಗಳು ವಿಶ್ವಧರ್ಮ ನಿರ್ಮಾಣಕ್ಕೆ ತಳಹದಿಗಳಾಗಿ ವೀರಶೈವ ಧರ್ಮದಲ್ಲಿ ಕಂಡುಬಂದು ಲಿಂಗತತ್ತ್ವವಿಕಾಸದ ಅತ್ಯುತ್ತಮ ಮಟ್ಟದ ನಿಲುವಾಗಿದೆ. ಹೀಗೆ ವಿಶ್ವಧರ್ಮವಾಗಲು ತಕ್ಕ ಧರ್ಮದ ರೆಂಬೆಗಳಿಂದ ಕೂಡಿ ಲಿಂಗತತ್ತ್ವ ವಿಕಾಸವು ವೀರಶೈವವೆಂಬ ಹೆಸರಿನ ಮಹಾವೃಕ್ಷವಾಗಿ ಹೂತು ಫಲಭರಿತವಾಗಿ ಬಸವಾದಿ ಪ್ರಮಥರ ಕಾಲದಲ್ಲಿ ಕಂಗೊಳಿಸಿತು.

Besides the form of Devi in Brahmanda, there is her subtle form called 'Kundalini' in the body,-pindanda'-(Page-16)...........The piercing of chakras is one of the most important subjects dealt

in the Tantras and is part of the practical 'Yoga' process of which they treat. Details of practice can only be learnt from a 'Guru', but generally it may be said that the particular is raised to the universal life, which as 'Chit' is realisable only in 'Sahasrara' in the following manner...Kamavayu, in 'Muladhara' is given a left revolution and the fire which is round 'Kundalini' is kindled. She who lay asleep around 'Syayambhu-linga'...on being roused will......move upwards united with 'Jeevatma,...As 'Kundalini' reaches Svadhistana-chakra...the 'Prithvi' or earth-chakra is desolved in 'Apas'......Devi reaches 'Agna-Chakra'...... The 'Veeja' of 'Akasa'—'Hung' is merged in 'Manas-Chakra and mind itself in 'Kundalini'. After this chakra is pierced 'Kundalini' of her own motion unites with 'Paramasiva'. The nector which flows from the union floods the 'Kshudra-brahmanda' or human body. It is then that the 'Sadhaka' forgetful of all this World is immersed in affable bilss. (Introduction to Tantra Shastra by Sir John Woodroff Pages 135to138.)

# ತತ್ತ್ವಗಳು

—ಶ್ರೀ ಶ್ರೀ ಸಿದ್ಧೇಶ್ವರಸ್ವಾಮಿಗಳು, ಜ್ಞಾನಯೋಗಾಶ್ರಮ, ವಿಜಾಪುರ

ತತ್ + ತ್ವ = ತತ್ತ್ವ: ಮೂಲವಸ್ತು. ಪ್ರಧಾನವಸ್ತು. ಸೃಷ್ಟಿಯ ವಿವಿಧ ಹಂತದ ನಿರ್ಮಿತಿಗಳು. ಸತ್ಯದ ವಿಭಿನ್ನ ಅಭಿವ್ಯಕ್ತಿಗಳು. ಅವುಗಳ ಬೃಹತ್ ಸಮೂಹವೇ ವಿಶ್ವ—ವ್ಯಷ್ಟಿ ಸಮಷ್ಟಿ ಎರಡೂ. ಅವು ಇವೆ ಎಂದೇ ವಿಶ್ವ ತೋರುತ್ತಿದೆ; ಅವು ಇಲ್ಲವಾದರೆ, ಅಡಗಿದರೆ ವಿಶ್ವವಾಯು! ನಾನು–ನೀವು–ಇದು ಯಾವುದೂ ಉಳಿಯದು. ವಿಶ್ವ ಬಹು ವಿಸ್ತೃತ; ಅದರ ಎಲ್ಲೆಗಳು ಮಾನವೀಯ ಬುದ್ಧಿಗೆ ನಿಲುಕದಷ್ಟು ವ್ಯಾಪಿಸಿವೆ. ಅದು ಸ್ಥಿರವಲ್ಲ, ಇದ್ದಂತೆ ಇರದು. ಅದರಲ್ಲಿ ಚಲನ ಇದೆ, ಪರಿಣಾಮ ಇದೆ; ಪ್ರತಿ ಕ್ಷಣ ಅಸಂಖ್ಯವಸ್ತುಗಳು, ವ್ಯಕ್ತಿಗಳು ಹುಟ್ಟುವವು, ಅಳಿಯುವವು. ಸೃಜನದ ವಿರಾಟ್ ನೃತ್ಯ ಸಾಗಿದೆ; ಕಾರ್ಯ ಸಾಗಿದೆ; ತಿಳಿಯುವ ಕ್ರಿಯೆಯೂ ಸೈ. ಇದೆಲ್ಲ ಆ ತತ್ತ್ವಗಳ ಲೀಲಾ–ವಿಲಾಸ. ಆ ತತ್ತ್ವಗಳ ಚೆಲ್ಲಾಟ; ರಚನಾ ವೈಭವ!

ವಿಶ್ವವನ್ನು ಅರಿಯಲೆಳೆಸಿದ ತತ್ತ್ವವಿಜ್ಞಾನಿಗಳಿಗೆ ಈ ತತ್ತ್ವಗಳ ಪರಿಜ್ಞಾನ ಅನಿವಾರ್ಯ, ಅತ್ಯವಶ್ಯ ಎನಿಸಿತು. ಅವುಗಳ ಆಳವಾದ ಮೀಮಾಂಸೆಗೆ ತೊಡಗಿದರು. ಜೀವನದುದ್ದಕ್ಕೂ ಪರಿಕ್ರಮಿಸಿದರು. ತಮ್ಮ ತಾವು ಮರೆತು ತತ್ತ್ವ-ಮಂಡಲದಲ್ಲಿ ವಿಹರಿಸಿದರು. ಅವರಿತ್ತ ವಿವರಣೆಗಳು ಭಿನ್ನ ಭಿನ್ನವಾಗಿವೆ. ಅವರವರಿಗೆ ಕಂಡಂತೆ ಬಣ್ಣಿಸಿದರು. ಬಣ್ಣನೆಯಲ್ಲಿ ವಿವಿಧತೆ ಇದೆಯಾದರೂ ಇವರ ದರ್ಶನದ ಒಳ ಬಗೆ ಒಂದೇ. ತತ್ತ್ವ-ದಾರ್ಶನಿಕರಲ್ಲಿ ವೀರಶೈವ ದಾರ್ಶನಿಕರಿಗೆ ಒಂದು ವಿಶಿಷ್ಟಸ್ಥಾನವಿದೆ. ಅವರ ಆಲೋಚನೆ ನಿಖರ, ಸುಂದರ. ಅವರ ವಿವರಣೆ ಸ್ಪಷ್ಟ, ಹಾಗೂ ನಿರ್ಮಲಮತಿಗೆ ಸಹಜ ಗಮ್ಯ.

ಈ ವೀರಶೈವ ದಾರ್ಶನಿಕರು ಯಾರು ಯಾರು ? ಹೇಳುವದು ಕಷ್ಟ. ನಾಮದಿಂದ ಗುರುತಿಸುವದಕ್ಕಿಂತ ಕೃತಿಗಳಿಂದ ಗುರುತಿಸುವದು ಸುಲಭ. ಆಗಮಗಳಿವೆ; ಹಲವು ಜನ ವಿಚಾರಶೀಲ ಅನುಭಾವೀವಚನಕಾರರಿದ್ದಾರೆ. ಅವರು ಮೂವತ್ತಾರು ತತ್ತ್ವಗಳನ್ನು ಗುರುತಿಸಿ ತಮ್ಮದೇ ಆದ ರೀತಿಯಲ್ಲಿ ಹೆಸರಿಸಿದ್ದಾರೆ, ವಿವರಿಸಿದ್ದಾರೆ. ಅವರೆಲ್ಲರು ರೇಖಿಸಿದ ತತ್ತ್ವಚಿತ್ರವನ್ನು ನಮ್ಮ ಸಾಮಾನ್ಯಸಾಧಕ ಮತಿಗೆ ಸರಿ ಎನಿಸುವಂತೆ ನೋಡುವದು ಹಿತ.

ತತ್ತ್ವಗಳು ಅನಾದಿ ಏನಲ್ಲ. ಅವು ತೋರಿಬಂದಿವೆ, ಸಾಗರದಲ್ಲಿಯ ತೆರೆಗಳಂತೆ! ಅವುಗಳ ಮುಂಚೆ ಏನಿತ್ತು ? ಬರಿ ಬಯಲು! ಕಾಲಗತಿ ಇರದ ಅಮೃತತ್ವ ! ದೇಶ ವ್ಯಾಪಿಸದ ನಿಸ್ಸೀಮ ಸತ್ಯ! ಅದು ಜಡ-ಅಜಡವಲ್ಲ; ದ್ವೈತ–ಅದ್ವೈತವಲ್ಲ; ನಿರಪೇಕ್ಷಿತ ಇರುವಿಕೆ! ನಮ್ಮ ಬುದ್ಧಿ ಸಾಪೇಕ್ಷಿತ ವಸ್ತುವನ್ನು ಚಿಂತಿಸಬಲ್ಲದು; ಶಬ್ದ ರೇಖಿಸಬಲ್ಲದು. ಬಯಲು ಅದರ ಕಕ್ಷೆಗೆ ಮೀರಿದೆ. ಆದ್ದರಿಂದ ಅದು ಅವರ್ಣನೀಯ. ಅಗಮ್ಯ. ಅತೀತ. ಅದರ ಅಸ್ಪಷ್ಟ ಹೊಳವು (ಮನಸ್ಸು ಮಹಾಮೌನವಾಗಿರುವಾಗ) ಆದೀತು! ಕೆಳಗಿನ ವಚನ ಸಾಕ್ಷಿ ನುಡಿಯುತ್ತಿದೆ ಈ ಮಾತಿಗೆ.

> 'ಅಳಿವನಲ್ಲ, ಉಳಿವನಲ್ಲ. ಪ್ರಳಯವೆಂಬುದ ಮುನ್ನರಿಯ. ಕಳಾಕುಳರಹಿತ. ಉಭಯಕುಳರಹಿತ. ಅರಿವ ಬಯಚಿಟ್ಟು
> ಮರೆವ ಗಮನಿಯಲ್ಲ. ಕೂಡಲ ಸಂಗಮದೇವನೆಂಬ ಮುಗ್ಧನ ಭಾವದ ಬಳಲಿಕೆಯಲ್ಲಿ ಗೆಲಬಹುದೆ ? ಹೇಳಾ'.

ಅರಿತು ಶಬ್ದಮುಗ್ಧನಾದ ಬಸವಣ್ಣನ ನುಡಿಯಿದು. ಭಾವದಲ್ಲಿ ನಿಸ್ಸೀಮ ಸತ್ಯವನು ಹಿಡಿದೆನೆನ್ನುವದು ಬಳಲಿಕೆ. ದೃಷ್ಟಿಯಾರೆ ಕಂಡೆನೆನ್ನುವದು ಭ್ರಮೆ. ಉಲಿದು ಬರೆಯುವೆ ಎನ್ನುವದು ಅಸಂಗತ. '...ಆದಿಶೂನ್ಯವೂ ಶೂನ್ಯ. ಮಧ್ಯಶೂನ್ಯವು ಶೂನ್ಯ, ಅಂತ್ಯಶೂನ್ಯವು ಶೂನ್ಯವಾದ ಬಳಿಕ ಅಲ್ಲಿಂದತ್ತ ನಿಂದ ನಿಲವನಾರು ಬಲ್ಲರು? ಹೇಳಾ...'! ಪರಮಾತ್ಮ, ಪರಶಿವ, ಪರಬ್ರಹ್ಮ ಮುಂತಾದವೆಲ್ಲ ಆ ಸತ್ಯದ ಔಪಚಾರಿಕ ನಾಮಗಳು. ನಾಮ ಕಳಚಲಿ; ಭಾವಿಸುವ ಭಾವ ನಿಲ್ಲಲಿ; ಉಳಿದುದೇನು? ಹೇಳಬಾರದ ಬಯಲು ಎನ್ನಿ.

ಇಂಥ ಬಯಲಿನಿಂದ ತತ್ತ್ವಮಯ ವಿಶ್ವ ಮೂಡಿಬರುವದು ಹೇಗೆ ತಾನೆ ಸಾಧ್ಯ ? ಗಣನೆಗೆ ಸಿಲುಕದ ಆ ಸತ್ಯವೆಲ್ಲಿ? ಸೀಮೆಗೊಂಡ ಈ ವಿಶ್ವವೆಲ್ಲಿ ? ಶೂನ್ಯಸಾಗರದಿಂದ ಸಂಖ್ಯಾತೆರೆಗಳೇಳುವದೆಂತು ? ಅಸಂಖ್ಯ ಭೂಮಂಡಲಗಳು, ನಕ್ಷತ್ರ ಪುಂಜಗಳು, ಜೀವಜಂತುಗಳು; ಹೀಗೆ ವಿಶ್ವದ ಅಂಗಗಳು ಕೋಟಿ ಕೋಟಿ. ಇವು ತಮ್ಮಷ್ಟಕ್ಕೆ ತಾವೇ ತೋರಿದವು ? ಏಕೊ, ಮತಿ ಕಲ್ಪಿಸದು, ಒಪ್ಪದು. ಹಾಗಾದರೆ ಆ ಬಯಲು ಹಾಗೂ ಈ ವೈವಿಧ್ಯಪೂರ್ಣ ವಿಶ್ವಗಳನ್ನು ಸರಿಹೊಂದಿಸುವದು ಹೇಗೆ ? ಕಾರಣ–ಕಾರ್ಯ ಸಂಬಂಧಸಾಧಿಸುವದು ಎಂತು? ಈ ಸಮಸ್ಯೆ ತತ್ತ್ವಶಾಸ್ತ್ರಿಗಳ ತಲೆತಿನ್ನುತ್ತಿದೆ. ಉತ್ತರ ಹೊಳೆಯದು. ಬಹುತರ, ಮಾನವನ ಭೌತಿಕಜ್ಞಾನದ ಹಿನ್ನೆಲೆಯಲ್ಲಿ ತಲೆದೋರಿದ ಈ ಪ್ರಶ್ನೆಗೆಯೇ ಅರ್ಥವಿಲ್ಲವೇನೊ ? ದೂರದರ್ಶಕ, ಸೂಕ್ಷ್ಮದರ್ಶಕ ಯಂತ್ರ ಬಳಸಿ ಆಕಾಶದ ಅರಿವ ಪಡೆಯಲಾದೀತೆ ? ಇಲ್ಲ. ಅದೇ ರೀತಿ ನಮ್ಮ ಮನಸ್ಸು; ಭೌತ ಹಾಗೂ ಭಾವವಿಶ್ವಗಳನ್ನು ಮಾತ್ರ ಅರಿವ ಸಾಧನವದು. ಅಭೌತ. ಭಾವಾತೀತ ಸತ್ಯದ ನಿಲವ ಗುರುತಿಸುವ, ಸೃಷ್ಟಿಯ ರಹಸ್ಯ ತಿಳಿವ ಸಾಮರ್ಥ್ಯ ಅದಕ್ಕಿಲ್ಲವೆಂದು ಹೇಳುವದೇ ಸಮಂಜಸ. ನಮ್ಮ ಜ್ಞಾನಕರಣ ಪರಿಮಿತ. ಅದಕ್ಕೆ ಅರ್ಥವಾಗುವ ತರ್ಕರಚನೆಯ ಮಧ್ಯೆ ಬಯಲ ವಿಶ್ವ–ಸೃಜನಗಳನಳವಡಿಸುವದು ಅಸಫಲ ಪ್ರಯಾಸ.

ತರ್ಕದ ಎಲ್ಲೆ ಮೀರಿ ಅನುಭಾವಕ್ಷೇತ್ರ ತುಳಿದವರು ನಮ್ಮ ದಾರ್ಶನಿಕರು, 'ತೇ ಧ್ಯಾನಯೋಗಾನುಗತಾಃ ಅಪಶ್ಯನ್' ಅವರು ಮನಸ್ಸನ್ನು ಅಡಗಿಸಿದರು; ಅಮನರಾದರು. ಅದೇ ಧ್ಯಾನಯೋಗ! ಆಗ ಸತ್ಯದ ಹೊಳಹು ಮಿಂಚಿತು. ಅದುವೇ ದಿವ್ಯದರ್ಶನ. ಅವರಿಗೆ ಕಂಡುದು ಆ ಬಯಲಲ್ಲಿ ನೆಲೆಸಿದ ದೇವಾತ್ಮ ಶಕ್ತಿ ! ಆ ಬಯಲು ಪರಶಿವವಾದರೆ ಶಕ್ತಿಯು ಪರಶಕ್ತಿ. ಅವೆರಡು ಒಂದೇ. ಎರಡಲ್ಲ ! ಅವಿನಾಭಾವ ಅವರಲ್ಲಿ. ಅವರಿಬ್ಬರು ಒಂದೇ ಅಲ್ಲ ; ಬೇರಲ್ಲ ! ಇದು ಅನುಭಾವಿಗಳ ಭಾಷೆ. ನಮ್ಮ ಸಾಮಾನ್ಯ ತಿಳಿವಿಗೆ ಅರ್ಥವಾಗದು, ಅಲ್ಲವೆ? ಪರಶಿವನು ಏನೆಂದೆನಲಿಲ್ಲದ ನಿಲವು ; ಪರಶಕ್ತಿಯು ಇಚ್ಛಾ ಜ್ಞಾನ ಕ್ರಿಯಾ ಸಹಿತ. ಅವನು ವಿಕರಿಸ, ಅವಳು ವಿಕರಿಸುವಳು. ಅವನು ಒಡೆಯ, ಅವಳು ಸಹಧರ್ಮಿಣಿ. ಇದು ರೂಪಕದ ಭಾಷೆ.

ಪರಶಕ್ತಿಯಲ್ಲಿ ಇರುವ ಜ್ಞಾನೇಚ್ಛಾಕ್ರಿಯಾ ಎಂಬ ಮೂರು ಅಂಗಗಳು ಸಮನ್ವಯ–ಸಾಂಗತ್ಯಗೊಂಡಿರುವಾಗ ಆ ಶಕ್ತಿಯು ಪರಶಿವಸ್ಥೆ; ಬ್ರಹ್ಮಸ್ಥೆ. ಆ ಅಂತರಿಕ–ಸಮತೆ ತಪ್ಪಿದ ಕ್ಷಣವೇ ಸೃಷ್ಟಿಯ ಆರಂಭ! ತತ್ತ್ವಗಳ ಉದಯ. ಆ ಪ್ರಥಮ ಸ್ಪಂದನೆಗೆ ಸಿದ್ಧಳಾದ ಶಕ್ತಿ ಹಾಗೂ ಪರಶಿವರ ಸಂಪುಟಕ್ಕೆ **ಲಿಂಗ** ಎನ್ನುತ್ತಾರೆ. ಅದು ಲಾಕ್ಷಣಿಕಪದ. ಸಾಪೇಕ್ಷಿಕ ಬ್ರಹ್ಮ ಎನ್ನಿ ಅದಕ್ಕೆ ವಿಶ್ವದ ಸೃಜನ ಸಂಬಂಧದಿಂದ ಆ ಶಬ್ದ ಬಂದಿವೆ. ಲಿಂಗದ ಮಹಾನ್ ಗರ್ಭದಿಂದ ಏನೆಲ್ಲ ತೋರಿಬಂತು, ಎಂದೇ ಇದಕ್ಕೆಲ್ಲ ಲಿಂಗಲೀಲಾವಿಲಾಸ ಎಂದು ಬಣ್ಣಿಸಿದ್ದಾರೆ ಅರಿತವರು.

ಲಿಂಗಮುಖದಿಂದ ಮೂಡಿಬಂದ ತತ್ತ್ವಗಳು ಎಷ್ಟು ? ಹಲವು. ವೀರಶೈವ ದಾರ್ಶನಿಕರು ಮೂವತ್ತಾರೆಂದು ಗಣಿಸಿದ್ದಾರೆ. ಅವುಗಳ ನಾಮಕರಣ ಹಾಗೂ ವಿವರಣೆಗಳಲ್ಲಿ ಅಲ್ಪ ಸ್ವಲ್ಪ ಭಿನ್ನತೆಯೂ ಕಂಡುಬರುತ್ತವೆ. ಆಗಮ, ವಚನಗಳಲ್ಲಿ ವಿವರಗಳ ಕಾಣಬಹುದು. ಸಿದ್ಧಾಂತಶಿಖಾಮಣಿ ಸಂಖ್ಯಾನಿರ್ದೇಶ ಮಾತ್ರ ಮಾಡಿದೆ. 'ಯಸ್ಯೋರ್ಮಿ ಬುದ್ಬುದಾಭಾಸಃ ಷಟ್ ತ್ರಿಶಂತಿ ತತ್ತ್ವಸಂಚಯಃ।' ಪರಶಿವನು ಸಾಗರ ; ಮೂವತ್ತಾರು ತತ್ತ್ವಗಳು ತೆರೆಗಳು ! ಗುರುಳೆಗಳು ! ಅತ್ಯಂತ ಮಾರ್ಮಿಕ ರೂಪಕ, ಗುರುಳೆ ಕ್ಷಣಿಕ. ಒಳಗೆಲ್ಲ ಬಯಲು. ಹಾಗೆ ತತ್ತ್ವಗಳೂ ಕ್ಷಣಿಕ, ಅವುಗಳ ಅಂತರದಲ್ಲಿರುವದು ಬರಿ ಬಯಲು, ಅವುಗಳ ಹೊರರೂಪು ಶಕ್ತಿಯದು.

ಪರಶಕ್ತಿ ಮೂಲ, ಜ್ಞಾನ ಇಚ್ಛಾ ಕ್ರಿಯಾಶಕ್ತಿಗಳ ಸಾಮ್ಯರೂಪ. ಆ ಸಾಮ್ಯತೆ ಅಸ್ಥಿರ, ಅದು ಸದಾ ಹಾಗೆಯೇ ಉಳಿಯದು. ಏಕೆ ? ನಮಗೆ ತಿಳಿಯದ ನಿಗೂಢವದು. ಒಂದು ಕ್ಷಣವು ಬರುತ್ತವೆ ! ಆಗ ಪರಶಕ್ತಿ ವಿಕಾಸಿಸಲು ಆರಂಭಿಸುತ್ತಾಳೆ; ಆ ವಿಕಾಸದ ಮೊದಲ ಹಂತದಲ್ಲಿ ಸಾತ್ವಿಕ ಅಂಶ (ಜ್ಞಾನಶಕ್ತಿ) ಪ್ರಬಲವಾಗುತ್ತದೆ; ರಜತಮ ಅಂಶಗಳು ಗೌಣವಾಗುತ್ತವೆ. ಇಂಥ ಸತ್ವಪ್ರಧಾನ ಶಕ್ತಿಗೆ **ಅಜಾ** ಎಂದು ಹೆಸರು. ವಿಕಾಸದ ಎರಡನೆಯ ಹಂತದಲ್ಲಿ ರಾಜಸಿಕ ಅಂಶ (ಇಚ್ಛಾಶಕ್ತಿ) ಪ್ರಬಲವಾಗುತ್ತದೆ. ಸತ್ವ ಹಾಗೂ ತಮಗಳು ಗೌಣವಾಗುತ್ತವೆ. ಇಂಥ ರಜೋ ಪ್ರಧಾನಶಕ್ತಿಗೆ **ಮಾಯಾ** ಎಂದು ಹೆಸರು. ವಿಕಾಸದ ತೃತಿಯ ಹಂತದಲ್ಲಿ ತಾಮಸಿಕ ಅಂಶ (ಕ್ರಿಯಾಶಕ್ತಿ) ಪ್ರಬಲವಾಗುತ್ತದೆ. ಸತ್ವ ರಜಗಳು ಗೌಣವಾಗುತ್ತವೆ. ಇಂಥ ತಮೋ ಪ್ರಧಾನಶಕ್ತಿಗೆ **ಪ್ರಕೃತಿ** ಎಂದು ಹೆಸರು.

ಪರಶಿವನು ಶಕ್ತಿಗೆ ಆಧಾರ ! ಚೈತನ್ಯ ಸ್ವರೂಪ ; ಶಕ್ತಿಯೊಂದಿಗೆ ಅವಿನಾಭಾವಿಯಾದುದರಿಂದ ಶಕ್ತಿಯ ವಿವಿಧ ವಿಕಾಸಗಳಲ್ಲಿ ಅವನೂ ಪಾಲುಗೊಳ್ಳುತ್ತಾನೆ. ಆಕೆಯ ಪರಿಣಾಮಗಳಲ್ಲಿ ಅವನೂ ಮೂಡಿ ನಿಲ್ಲುತ್ತಾನೆ. ಆಕೆಯಲ್ಲಿ ಪ್ರತಿಫಲಿಸುತ್ತಾನೆ. ಅಜೆಯ ಸಂಬಂಧದಿಂದ ಅವನಿಗೆ **ಅಜ** ನಾಮ. ಮಾಯೆಯ ಸಂಬಂಧದಿಂದ ಅವನಿಗೆ **ಮಹೇಶ್ವರ** ನಾಮ. ಪ್ರಕೃತಿಯ ಸಂಬಂಧದಿಂದ ಅವನಿಗೆ **ಪುರುಷ** ನಾಮ. ಅಜ ಹಾಗೂ ಅಜಾರ ಮಂಗಲ ಯುಗಲದಿಂದ ಶುದ್ಧ ತತ್ತ್ವಗಳ ಉದಯ, ಮಹೇಶ್ವರ ಹಾಗೂ ಮಾಯೆಯರ ಯುಗಲದಿಂದ ಮಿಶ್ರ ತತ್ತ್ವಗಳ ಉದಯ. ಪುರುಷ ಮತ್ತು ಪ್ರಕೃತಿಯರ ಸಂಪುಟದಿಂದ ಅಶುದ್ಧ ತತ್ತ್ವಗಳ ನಿರ್ಮಾಣ. ಶುದ್ಧ ತತ್ತ್ವಗಳಲ್ಲಿ ಪರಮಾತ್ಮನ ಸುಸ್ಪಷ್ಟ ಭಾನವಿದೆ. ಮಿಶ್ರ ತತ್ತ್ವಗಳಲ್ಲಿ ಸಾಪೇಕ್ಷಿಕ ಭಾನವಿದೆ.

ಅಶುದ್ಧ ತತ್ತ್ವಗಳಲ್ಲಿ ಭಾನವಿಲ್ಲ. ಎಂತಲೆ ಶುದ್ಧತತ್ತ್ವಗಳಿಗೆ ಆತ್ಮಪರವೆಂದು, ಮಿಶ್ರ ತತ್ತ್ವಗಳಿಗೆ ಆತ್ಮಾನಾತ್ಮಪರವೆಂದು ಅಶುದ್ಧ ತತ್ತ್ವಗಳಿಗೆ ಅನಾತ್ಮಪರವೆಂದು ಹೇಳುವದು ವಾಸ್ತವ.

**ಮೂವತ್ತಾರು :** ಸುಂದರ ಸಂಖ್ಯೆ. ತಾಂತ್ರಿಕ ಶಕ್ತಿಯಿದೆ ಎನ್ನುತ್ತಾರೆ ಈ ಸಂಖ್ಯೆಯಲ್ಲಿ. ಶಿವ–ಶಕ್ತಿಯರದು ಮೂರು ಯುಗಲ ; ಅದರ ವರ್ಗ–ವಿಕಾಸವೇ ಮೂವತ್ತಾರು. ಅಷ್ಟು ಸಂಖ್ಯೆ ತತ್ತ್ವಗಳದು. ಅದರ ಸಾಮಾನ್ಯ ವಿವರಣವನ್ನಿಲ್ಲಿ ಗಮನಿಸಬಹುದು.

**ಶುದ್ಧ ತತ್ತ್ವಗಳು :** ಇವು ಐದು. ಪರಶಿವನ ಲಕ್ಷಣಗಳು ಪಂಚ–ಸತ್ ಚಿತ್ ಆನಂದ ನಿತ್ಯ ಪೂರ್ಣ. ಅವು ಒಂದೊಂದಾಗಿ ಅಜಾಶಕ್ತಿಯಲ್ಲಿ ಪ್ರತಿಫಲಿಸುತ್ತವೆ; ವ್ಯಕ್ತವಾಗುತ್ತವೆ. ಪರಿಪೂರ್ಣ ಲಕ್ಷಣದ ಪ್ರತಿಫಲನೆಯು ಶಿವತತ್ತ್ವ. ನಿತ್ಯ ಲಕ್ಷಣದ ಪ್ರತಿಫಲನೆಯು ಶಕ್ತಿತತ್ತ್ವ. ಆನಂದ ಲಕ್ಷಣದ ಪ್ರತಿಫಲನೆಯು ಈಶ್ವರ ತತ್ತ್ವ. ಚಿತ್ ಲಕ್ಷಣದ ಪ್ರತಿಫಲನವು ಸದಾಶಿವ ತತ್ತ್ವ. ಕೊನೆಯದಾಗಿ ಸತ್ ಲಕ್ಷಣದ ಪ್ರತಿಫಲನವು ಶುದ್ಧವಿದ್ಯಾತತ್ತ್ವ.

**ಮಿಶ್ರ ತತ್ತ್ವಗಳು :** ಇವೂ ಐದು. ಪರಶಿವನ ಆ ಪಂಚಲಕ್ಷಣಗಳೇ ಮಾಯೆಯಲ್ಲಿ ಪ್ರತಿಫಲಿಸಿದಾಗ ಇವು ತೋರಿಬರುತ್ತವೆ. ಮಾಯೆ ಮೂಲಲಕ್ಷಣಗಳನ್ನು ಪರಿಮಿತಗೊಳಿಸುತ್ತದೆ. ಅಂದರೆ, ಪರಿಪೂರ್ಣ ಲಕ್ಷಣದ ಪ್ರತಿಫಲನೆಯು ಕಲಾತತ್ತ್ವ; ಇದು ಅಪೂರ್ಣದ ಕಲ್ಪನೆ. ನಿತ್ಯಲಕ್ಷಣದ ಪ್ರತಿಫಲನೆಯು ಕಾಲತತ್ತ್ವ; ಇದು ಅನಿತ್ಯದ ಕಲ್ಪನೆ. ಆನಂದ ಲಕ್ಷಣದ ಪ್ರತಿಫಲನೆಯು ರಾಗತತ್ತ್ವ; ಇದು ಅನಂದದ ಕಲ್ಪನೆ. ಚಿತ್‌ಲಕ್ಷಣದ ಪ್ರತಿಫಲನೆಯು ಅವಿದ್ಯಾತತ್ತ್ವ; ಭೇದಜ್ಞಾನದ ಕಲ್ಪನೆ. ಸತ್‌ಲಕ್ಷಣದ ಪ್ರತಿಫಲನೆಯು ನಿಯತಿತತ್ತ್ವ; ಪರಿಮಿತ ಅಸ್ತಿತ್ವದ ಕಲ್ಪನೆ.

**ಅಶುದ್ಧ ತತ್ತ್ವಗಳು :** ಇವು ಇಪ್ಪತ್ತೈದು. ಪರಶಿವನ ಅವೇ ಪಂಚಲಕ್ಷಣಗಳು ಪ್ರಕೃತಿಯಲ್ಲಿ ಪ್ರತಿಫಲಿಸಿದಾಗ ಐದೈದರ ಐದು ತತ್ತ್ವಗಳು ತೋರಿಬರುತ್ತವೆ. ಅಂದರೆ, ಪೂರ್ಣಲಕ್ಷಣದ ಪ್ರತಿಫಲನದಿಂದ ಶಬ್ದತನ್ಮಾತ್ರಾ, ಆಕಾಶಭೂತ, ಶ್ರೋತ್ರೇಂದ್ರಿಯ, ವಾಗಿಂದ್ರಿಯ ಹಾಗೂ ಜ್ಞಾತೃಭಾವಗಳ ನಿರ್ಮಾಣ. ನಿತ್ಯಲಕ್ಷಣದ ಪ್ರತಿಫಲನದಿಂದ ಸ್ಪರ್ಶತನ್ಮಾತ್ರಾ, ವಾಯುಭೂತ, ತ್ವಗಿಂದ್ರಿಯ, ಪ್ರಾಣೇಂದ್ರಿಯ ಹಾಗೂ ಮನಸ್ಸುಗಳ ನಿರ್ಮಾಣ. ಆನಂದ ಲಕ್ಷಣದ ಪ್ರತಿಫಲನದಿಂದ ರೂಪತನ್ಮಾತ್ರಾ, ಅಗ್ನಿಭೂತ, ನೇತ್ರೇಂದ್ರಿಯ, ಪದೇಂದ್ರಿಯ ಹಾಗೂ ಬುದ್ಧಿಗಳ ನಿರ್ಮಾಣ. ಚಿತ್‌ಲಕ್ಷಣದ ಪ್ರತಿಫಲನದಿಂದ ರಸತನ್ಮಾತ್ರಾ, ಜಲಭೂತ, ರಸನೇಂದ್ರಿಯ, ಉಪಸ್ಥೇಂದ್ರಿಯ ಹಾಗೂ ಚಿತ್ತುಗಳ ನಿರ್ಮಾಣ. ಸತ್‌ಲಕ್ಷಣದ ಪ್ರತಿಫಲನದಿಂದ ಗಂಧತನ್ಮಾತ್ರಾ, ಪೃಥ್ವಿಭೂತ, ಘ್ರಾಣೇಂದ್ರಿಯ, ಪಾಯ್ವಿಂದ್ರಿಯ ಹಾಗೂ ಅಹಂಕಾರಗಳ ನಿರ್ಮಾಣ.

ಅಶುದ್ಧ ತತ್ತ್ವಗಳು ಒಂದಕ್ಕೊಂದು ಸುಂದರವಾಗಿ ಹೊಂದಿನಿಂದರೆ ಅದೇ ದೇಹ (ಸ್ಥೂಲ–ಸೂಕ್ಷ್ಮ). ಕಣ್ಣಿಗೆ ಕಾಣುವದು ಸ್ಥೂಲದೇಹ; ಅದರೊಳಗಿರುವ ಅಂತಃಕರಣವು ಸೂಕ್ಷ್ಮದೇಹ. ಅದರಲ್ಲಿ ಪ್ರತಿಬಿಂಬಿಸಿದ ಚೈತನ್ಯವೇ ಜೀವಾತ್ಮ. ಅವನೇ ಮೂವತ್ತಾರನೆಯ ತತ್ತ್ವ. ವ್ಯಷ್ಟಿಕಾರ್ಯಪ್ರಪಂಚದ ಅಭಿಮಾನಿ, ಒಡೆಯ, ಕರ್ತೃತ್ವ ಭೋಕ್ತೃತ್ವ ಜ್ಞಾತೃತ್ವ– ಈ ಮೂರೂ ಅವನಲ್ಲಿ ಕೇಂದ್ರೀಕೃತವಾಗಿವೆ.

ಜೀವಾತ್ಮನು ಚೇತನಾಚೇತನಗಳ ಸಮ್ಮಿಶ್ರ ತತ್ತ್ವ. ಅವನ ಒಳರೂಪು ಚೇತನ: ಅವನ ಹೊರರೂಪು ಅಚೇತನ. ದೇಹ, ಇಂದ್ರಿಯ, ಕರಣಗಳು ಅಚೇತನ: ಪ್ರಕೃತಿಯ ಕೃತಿ. ಅವು ಕಾಲಮಿತ. ದೇಶಮಿತ. ವಸ್ತುಮಿತ. ಪರಿಣಾಮಶೀಲ. ಎಂತಲೇ ಅವು ನಶ್ವರ. ಅವುಗಳಲ್ಲಿ ಅಭಿಮಾನ ತಾಳಿದ ಜೀವಾತ್ಮನು ಅವುಗಳಲ್ಲಿ ಬಂಧಿತ. ಆ ಬಂಧನೆಯಿಂದ ಸುಖ, ದುಃಖ, ಭಯಗಳ ಅನುಭವ; ತನ್ನ ಮೂಲರೂಪದ ಮರೆವು! ಇದೇ ಪ್ರಪಂಚ, ಭವಿತನ! ಇಲ್ಲಿ ಅಜ್ಞಾನದ ಅಂಧಕಾರವಿದೆ; ಅಸ್ಮಿತೆಯ ಕಾವಿದೆ; ರಾಗದ ಲೇಪಿದೆ; ದ್ವೇಷದ ವಿಷವಿದೆ; ಅಭಿನಿವೇಶದ ಅಂಟಿದೆ, ಇವು ಕ್ಲೇಶ; ಕಟ್ಟು !

ಕಟ್ಟು ಹರಿಯಬೇಕು; ಬಂಧನ ನೀಗಬೇಕು; ಭಯ ಸಂಪೂರ್ಣ ಅಡಗಬೇಕು. ಅದು ಜೀವನದ ಚರಮ ಧ್ಯೇಯ; ಮುಕ್ತಿ; ಆತ್ಮ-ಪರಮಾತ್ಮ ಸಮಾಲೀನತೆ! ತತ್ತ್ವಗಳ ಪರಿಜ್ಞಾನವು ಜೀವಾತ್ಮನನ್ನು ಮುಕ್ತಗೊಳಿಸುವ ಸಮರ್ಥಸಾಧನ. ಜೀವಾತ್ಮನು ಮೊದಲು ವಿಷಯಗಳ ಮೋಹಪಂಕದಿಂದ ಹೊರಬರಬೇಕು. ತನ್ನಂತರಂಗದ ಮನ ಬುದ್ಧಿಗಳನ್ನು ಪರಿಶುದ್ಧಗೊಳಿಸಬೇಕು. ಅವುಗಳ ಸಹಾಯದಿಂದ ಪ್ರಕೃತಿ ಮಂಡಲ ದಾಟಿ ಮಾಯಾಮಂಡಲ ಪ್ರವೇಶಿಸಬೇಕು. ಅಲ್ಲಿ ಕಂಚುಕಗಳಿವೆ; ಭೇದವನ್ನು ಸಂಪುಷ್ಟಗೊಳಿಸುವ ಆವರಣಗಳವು. ಜೀವಪುರುಷ ಬೇರೆ, ಪರಮಾತ್ಮ ಬೇರೆ— ಈ ಭಾವ ನಿರ್ಮಿಸಿ ಜೀವಾತ್ಮನ ಪರಿಮಿತ ವ್ಯಕ್ತಿತ್ವವನ್ನು ಕಾಪಾಡುವ ಕವಚಗಳವು. ಜೀವಾತ್ಮನು ಆತ್ಮಚಿಂತನ, ತತ್ತ್ವವಿವೇಕ, ಗುರು ಅನುಗ್ರಹಗಳ ಸಹಾಯದಿಂದ ಆ ಕವಚಗಳನ್ನು ಕಳಚಿ, ಚೆಲ್ಲಿ ಪರಿಶುದ್ಧ ತತ್ತ್ವಮಂಡಲಕ್ಕೇರಬೇಕು. ಅಲ್ಲಿ ಸಚ್ಚಿದಾನಂದ ನಿತ್ಯಪರಿಪೂರ್ಣ ಶಿವೋಽಹಂ ಎಂಬ ಪವಿತ್ರ ದಿವ್ಯಪ್ರಜ್ಞೆ ಮೂಡುತ್ತದೆ! ಜೀವಭಾವ ಅಳಿಯುತ್ತದೆ. ಕೊನೆಗೆ, ನಿಧಾನವಾಗಿ ಆ ಶಿವೋಹಂ ಭಾವ ಕೂಡ ಅಡಗಿ ಮಹಾಬಯಲೊಂದೇ ಉಳಿಯುತ್ತದೆ. ಅಲ್ಲಿ ಪರಿಮಿತಿಗಳಿಲ್ಲ; ಬಂಧ–ಮುಕ್ತಿಗಳ ಭಾವಪ್ರಮೆಯಿಲ್ಲ; ಸುಖ ದುಃಖಗಳಿಲ್ಲ. ಬರೀ ಚೇತನ! ಅನಂತ ಅಸ್ತಿತ್ವ!! ಬಯಲು; ಬಯಲೇ ಬಯಲು! ತತ್ತ್ವಜ್ಞಾನದ ಪರಮ ಪ್ರಯೋಜನವಿದು.

# ಮೂವತ್ತಾರು ತತ್ತ್ವಗಳು ಮತ್ತು ಏಕೋತ್ತರ ಶತಸ್ಥಲ

**—ಡಾ॥ ವಿ. ಎಸ್. ಕಂಬಿ**

ಮೂವತ್ತಾರು ತತ್ತ್ವಗಳು ಎಂಬುವು ಶೈವಾಗಮುಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳಿಗೆ ಸಂಬಂಧಿಸಿರುವುದಾದರೂ ವಿಶಿಷ್ಟಾರ್ಥದಲ್ಲಿ ವೀರಶೈವ ಆಗಮುಗಳಲ್ಲಿ ಪ್ರತಿಪಾದಿತವೆಂಬುದು ಆಗಮದ ಉತ್ತರಭಾಗಕ್ಕೆ ವೀರಶೈವಾಗಮವೆಂದು ಅಥವಾ ಶುದ್ಧಾಖ್ಯತಂತ್ರವೆಂದು ಪ್ರಸಿದ್ಧ. ಆದುದರಿಂದ ಮೂವತ್ತಾರು ತತ್ತ್ವಗಳಿಗೆ ಆಗಮವು ಆಕರಸಾಹಿತ್ಯವಾಗಿದೆ. ಅದೇ ರೀತಿ ಎರಡನೆಯ ಪದವು ಏಕೋತ್ತರಶತಸ್ಥಲವೆಂಬುದೂ ವೀರಶೈವಾಗಮೋಕ್ತ ವಿಷಯ. ಇದೇ ಮೂವತ್ತಾರು ತತ್ತ್ವಗಳ ಉಲ್ಲೇಖವು ಸಂಖ್ಯಾವಾಚಕ ಅರ್ಥದಲ್ಲಿಯಾದರೂ ಉಳಿದ ಶೈವಶಾಸ್ತ್ರದಲ್ಲಿ ಲಭ್ಯವಿರುವಂತೆ ಲಭ್ಯವಿರುವದಿಲ್ಲವಾದ್ದರಿಂದ ಏಕೋತ್ತರ ಶತಸ್ಥಲವು ಕೇವಲ ವೀರಶೈವಕ್ಕೆ ಸೀಮಿತವಾದುದೆಂದು ಸೂಚಿಸಬೇಕಾಗುತ್ತದೆ. ಒಟ್ಟಿನಲ್ಲಿ ಎರಡೂ ತತ್ತ್ವಗಳು ವೀರಶೈವಾಗಮುಗಳಲ್ಲಿ ಬೋಧಿತವಾಗಿರುವುದರಿಂದ ಆಗಮುಗಳು ಆಕರಸಾಹಿತ್ಯವಾಗಿರಲು ಸಾಕು. ಆಗಮುಗಳು ಕಾಮಿಕಾದಿವಾತುಲಾಂತ ಒಟ್ಟು ಇಪ್ಪತ್ತೆಂಟು ಇರುವವು. ಇಂದು ಎಲ್ಲ ಆಗಮುಗಳೂ ಇಲ್ಲಿಯವರೆಗೆ ಲಭ್ಯವಿಲ್ಲ. ಲಭ್ಯವಿದ್ದ ಆಗಮುಗಳು ಪೂರ್ತಿಯಾಗಿ ದೊರೆತಿಲ್ಲವಾದ್ದರಿಂದ ಈ ಎರಡೂ ತತ್ತ್ವಗಳ ವಿಷಯವು ಯಾವ ಯಾವ ಆಗಮದಲ್ಲಿ ಎಂತು ಎಂತು ಪ್ರತಿಪಾದಿತವಾಗಿವೆ ಎಂಬುದನ್ನು ಅರಿತುಕೊಳ್ಳುವದು ಸಾಧ್ಯವಿಲ್ಲ. ಆಗಮುಗಳಿಂದ ಅನ್ಯವಾದ ಸಾಹಿತ್ಯವೆಂದರೆ ವಚನಸಾಹಿತ್ಯ. ವಚನಸಾಹಿತ್ಯದಲ್ಲಿ ನೂರೊಂದುಸ್ಥಲದ (ಏಕೋತ್ತರ ಶತಸ್ಥಲದ) ಉಲ್ಲೇಖವು ಕಂಡುಬರುತ್ತದೆ. ಇದರಿಂದ ಇದನ್ನು ಅಂದರೆ **ಏಕೋತ್ತರ ಶತಸ್ಥಲ** ಇಲ್ಲವೆ **ನೂರೊಂದುಸ್ಥಲ** ಎಂಬ ಪದವನ್ನು ಬಳಸಿದವರಿಗೆ ಇದರ ಅರ್ಥ ಗೊತ್ತಿರಲು ಸಾಕು. ಅದು ಅವರ ಕಾಲಕ್ಕೆ ಬಳಕೆಯಲ್ಲಿ ಇತ್ತೆನ್ನಲು ಯಾವ ಅಭ್ಯಂತರವೂ ಕಂಡುಬರಲಾರದು.

ಸಂಸ್ಕೃತ ಸಾಹಿತ್ಯದಲ್ಲಿ ಆಗಮುಗಳು, ಕನ್ನಡ ಸಾಹಿತ್ಯದಲ್ಲಿ ವಚನಗಳು ಮೂವತ್ತಾರು ತತ್ತ್ವಗಳ ಆಕರಸಾಹಿತ್ಯವಾಗಿ ನಮಗಿಂದು ಲಭ್ಯವಿದೆ. ಏಕೋತ್ತರ ಶತಸ್ಥಲಗಳನ್ನು ತಿಳಿಸುವ ಆಗಮ ಭಾಗಗಳು ಇನ್ನೂ ಲಭ್ಯವಾಗಿಲ್ಲ, ಏಕೋತ್ತರ ಶತಸ್ಥಲ ಪ್ರತಿಪಾದಿಸುವ ಎರಡು ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿವೆ. ಒಂದು **ಸಿದ್ಧಾಂತಶಿಖಾಮಣಿ**, ಇನ್ನೊಂದು **ಕೈವಲ್ಯಸಾರ.** ಮೊದಲನೆಯದು ರೇಣುಕಾಚಾರ್ಯರು ಮತ್ತು ಆಗಸ್ತ್ಯರ ನಡುವೆ ನಡೆದ ಸಂಭಾಷಣೆಯ ಫಲವಾಗಿದ್ದು ಅದರ ಕರ್ತೃಶಿವಯೋಗಿ ಶಿವಾಚಾರ್ಯರು. ಎರಡನೆಯದರ ಕರ್ತೃ ಮರಿತೋಂಟದಾರ್ಯರು. ಕನ್ನಡ ಭಾಷೆಯಲ್ಲಿರುವ ಈ ಗ್ರಂಥ ಏಕೋತ್ತರ ಶತಸ್ಥಲವೆಂಬ ಹೆಸರಿನಿಂದ ಪ್ರಸಿದ್ಧವಿದ್ದು ಅದರ ಕರ್ತೃ ಸಿದ್ಧಲಿಂಗ ಎಂದಿದೆ. **ಗಣಭಾಷಿತ ರತ್ನಮಾಲೆ**ಯೆಂಬುದು ಬೇರೊಂದು ಗ್ರಂಥವಿದ್ದು ಅದರಲ್ಲಿಯೂ ನೂರೊಂದು ಸ್ಥಲಗಳಿದ್ದು ಅದು ಕನ್ನಡ ಮತ್ತು ಸಂಸ್ಕೃತ ಗ್ರಂಥಗಳಾಧಾರದಿಂದ ರಚಿತವಾಗಿದೆ. ಇದರ ಕರ್ತೃಗಳು ಗುಬ್ಬಿಯ ಮಲ್ಲಣ್ಣ: ಮರಿತೋಂಟದಾರ್ಯರು ಸಿದ್ಧಾಂತಶಿಖಾಮಣಿಗೆ ಟೀಕೆ ಬರೆದಂತೆ ವಾತುಲಾಗಮಕ್ಕೆ ಇವರು ಟೀಕೆ ಬರೆದಿದ್ದಾರೆ. **ಗಣಭಾಷಿತ ರತ್ನಮಾಲೆ**ಯು ನೂರೊಂದು ಸ್ಥಲವನ್ನು ಪ್ರತಿಪಾದಿಸಿದ್ದರೂ ನಾವು ಅದನ್ನು ಖಚಿತಾರ್ಥದಲ್ಲಿ ತಾಂತ್ರಿಕಾರ್ಥದಲ್ಲಿ **ಏಕೋತ್ತರ ಶತಸ್ಥಲ** ಪ್ರತಿಪಾದಿಸುವ ಗ್ರಂಥವೆಂದು ಹೇಳಲಾಗದು. **ಸಿದ್ಧಾಂತಶಿಖಾಮಣಿ** ಎಂಬ **ಏಕೋತ್ತರ** ಶತಸ್ಥಲ ಗ್ರಂಥಕ್ಕೆ ಭಾಷ್ಯಗಳು ಇದ್ದು ಅವುಗಳನ್ನು ಮರಿತೋಂಟದಾರ್ಯಕೃತ ಮತ್ತು ಕರಿಬಸವಶಾಸ್ತ್ರಿಕೃತ ಎಂದು ಎರಡನ್ನೇ ಹೆಸರಿಸಬೇಕಾಗುತ್ತದೆ. ಕರಿಬಸವ ಶಾಸ್ತ್ರಿಗಳೇ ಹೇಳುವಂತೆ 'ತಾತ್ಪರ್ಯ ದೀಪಿಕೆ' ಎಂಬ ಹೆಸರಿನಿಂದ ವಿಸ್ತಾರವಾದ ಟಿಪ್ಪಣಿಯನ್ನು ಬರೆದುದು ಗೊತ್ತಾಗುತ್ತದೆ. ಇನ್ನು **ಜೀವನ ಸಿದ್ಧಾಂತ** ಎಂಬುದು ಡಾ. ಜಕನಿ ಅವರಿಂದ ರಚಿತವಾದ **ಸಿದ್ಧಾಂತ ಶಿಖಾಮಣಿ**ಯನ್ನು ಕುರಿತಿರುವ ಕೃತಿ. ಇದು ಹೊಸ ರೀತಿಯಲ್ಲಿಯ ವಿವರಣಾತ್ಮಕಕೃತಿ. ಡಾ.ಫ.ಗು. ಹಳಕಟ್ಟಿಯವರು ಸಂಪಾದಿಸಿದ **ಶಿವಾನುಭವ** ಎಂಬ ಮಾಸ ಪತ್ರಿಕೆಯಲ್ಲಿ ಪಟ್ಟೇದ ಎಂಬುವವರು ಇವುಗಳನ್ನು ವಿವರಿಸುತ್ತಿದ್ದರು. ಡಾ. ಹಳಕಟ್ಟಿಯವರ ವಚನಶಾಸ್ತ್ರಸಾರ ಭಾಗ ಎರಡನೆಯದು ವಚನಶಾಸ್ತ್ರದ ಸೈದ್ಧಾಂತಿಕ ವಿಚಾರ ತಿಳಿಸುವ ಮಹತ್ವದ ಗ್ರಂಥವು.

**ಸಂದರ್ಭ ಗ್ರಂಥಗಳು :** 'ಹ್ಯಾಂಡ್‌ಬುಕ್ ಆಫ್ ವೀರಶೈವಿಜಂ' ಡಾ. ನಂದಿಮಠರ ಗ್ರಂಥ : 'ಎಸ್ಸೆನ್ಸಿಯಲ್ಸ ಆಫ್ ವೀರ ಶೈವಿಜಂ ಡಾ. ಎಚ್. ಪಿ. ಮಲ್ಲೇದೇವರ ಗ್ರಂಥ ; 'ವೀರಶೈವ ಫಿಲಾಸಫಿ ಆಫ್ ದಿ ಶೈವಾಗಮಾಸ್' ಸಿದ್ದರಾಮಪ್ಪ ಪಾವಟೆಯವರ ಗ್ರಂಥ ; ಷಟಸ್ಥಲಜ್ಞಾನ ಸಾರಾಮೃತ ಮತ್ತು ಚೆನ್ನಬಸವಣ್ಣನವರ ವಚನಗಳು ಎಂಬ ಗ್ರಂಥಗಳೆರಡರ ಮುನ್ನುಡಿಗಳು ಡಾ. ಆರ್. ಸಿ. ಹಿರೇಮಠರು ಬರೆದುವು : ಎಸ್. ಎಸ್. ಬಸವನಾಳರು ಸಂಪಾದಿಸಿದ ವೀರಶೈವ ತತ್ತ್ವ ಪ್ರಕಾಶ ; ವಚನಶಾಸ್ತ್ರರಹಸ್ಯ ಡಾ. ಆರ್.ಆರ್. ದಿವಾಕರರ ಕೃತಿ ; ಲಿಂಗಧಾರಣ ಚಂದ್ರಿಕೆಗೆ ಪ್ರೊ. ಎಂ. ಆರ್. ಸಾಖರೆಯವರು ಬರೆದ ಆಂಗ್ಲಭಾಷಾ ಮುನ್ನುಡಿ : ವೀರಶೈವ ಧರ್ಮ ವಿವೇಚನೆ ಪಂ. ನಾಗಭೂಷಣ ಶಾಸ್ತ್ರಿಗಳ ಕೃತಿ ; ಡಾ. ವೈ. ನಾಗೇಶ ಶಾಸ್ತ್ರಿಗಳ ಅಪ್ಪಾವರಣ. ಷಟ್‌ಸ್ಥಲ ಮತ್ತು ಪಂಚಾಚಾರ ಹಾಗೂ ಶಿವಾನುಭವ ಸೂತ್ರಂ, ವಿಶೇಷಾರ್ಥ ಪ್ರಕಾಶಿಕೆ

ಗಳಿಗೆ ಬರೆದ ಭಾಷ್ಯಗಳು ; ತಿಪ್ಪೇರುದ್ರಸ್ವಾಮಿಯವರ 'ವಚನಗಳಲ್ಲಿ ವೀರಶೈವಧರ್ಮ' ಮತ್ತು 'ಶೂನ್ಯ ತತ್ತ್ವ ವಿಕಾಸ'; 'ವೀರಶೈವ ಮಿಸ್ಟಿಸಿಜಂ ಅಂಡ್ ಫಿಲಾಸಫಿ' ಶ್ರೀ ಕುಮಾರಸ್ವಾಮಿಗಳ ಕೃತಿ ; ಡಾ. ಎಂ. ಚಿದಾನಂದಮೂರ್ತಿಯವರ 'ಶೂನ್ಯ ಸಂಪಾದನೆಯನ್ನು ಕುರಿತು' ; ಡಾ. ಕಂಚಿಯವರ 'ಫಿಲಾಸಫಿ ಆಫ್ ದಿ ಶೂನ್ಯ ಸಂಪಾದನೆ' ವ್ಹಾಲ್ಯೂಮ್ I ಮತ್ತು ವೀರ ಶೈವ ದರ್ಶನ ಮೀಮಾಂಸೆ ಸಂ. ೧,೨ ಹಾಗೂ ೩; 'ಫಾರ್ಮ ಆಫ್ ಇಂಡಿಯನ್ ಫಿಲಾಸಫಿಕಲ್ ಲಿಟರೇಚರ್ ಅಂಡ್ ಅದರ್ ಪೇಪರ್ಸ್ ಗ್ರಂಥಗಳು ; ಡಾ. ಸಿದ್ಧಪ್ಪಾರಾಧ್ಯ ಟಿ. ಜಿ. ಅವರ ಶಕ್ತಿವಿಶಿಷ್ಟಾದ್ವೈತ : ಎಂ. ಆರ್. ಶ್ರೀ ಅವರ ವಚನಧರ್ಮ ಸಾರ ಮುಂತಾದವುಗಳು ಹಲವು ಆಧುನಿಕ ಪಂಡಿತರ ಸಂದರ್ಭ ಗ್ರಂಥಗಳು ವೀರಶೈವ ಸಿದ್ಧಾಂತವನ್ನು ಅರಿತುಕೊಳ್ಳಲು ತುಂಬಾ ಉಪಯುಕ್ತವಾದವುಗಳು.

**ಪ್ರತಿಪಾದನೆ**

**ಸಮಸ್ಯೆ :** ಮೂವತ್ತಾರು ತತ್ತ್ವಗಳು ಮತ್ತು ಏಕೋತ್ತರ ಶತಸ್ಥಲ ಎಂಬ ಲೇಖನದ ಹೆಸರೇ ಒಂದು ಸಮಸ್ಯೆ ಯಾಗಿರುತ್ತದೆ. ಮೂವತ್ತಾರು ತತ್ತ್ವಗಳು ಎಂದರೆ ಮಹಲಿಂಗಾದಿ ಪೃಥ್ವ್ಯಂತವಾದವುಗಳು ಎಂದು ಅರ್ಥ. ನೂರೊಂದು ಸ್ಥಲಗಳೆಂದರೆ ಪಿಂಡಾದಿಯಾಗಿ ಜ್ಞಾನಶೂನ್ಯ ಸ್ಥಲಾಂತ್ಯವಾದವುಗಳು ಎಂದು ಅರ್ಥ. ಮೊದಲಿನ ೩೬ ತತ್ತ್ವಗಳೇ ಬೇರೆ ನಂತ ರದ ೧೦೧ ಸ್ಥಲಗಳೇ ಬೇರೆ. ಮೊದಲಿನ ಪದ ಅಂದರೆ ೩೬ **ತತ್ತ್ವಗಳು** ಎಂಬುದು 'ತತ್ತ್ವ' ಎಂಬ ಪದದಿಂದಂತ್ಯವಾದರೆ ಎರಡನೆಯ ಪದ **೧೦೧ ಸ್ಥಲ** ಎಂಬುದು 'ಸ್ಥಲ' ಎಂಬ ಪದದಿಂದ ಅಂತ್ಯವಾಗಿದೆ. ಮೊದಲನೆಯ ಪದಾಂತ್ಯ ಪದವಾದ ತತ್ತ್ವ ಎರಡನೆಯ ಪದಾಂತ್ಯ ಪದವಾದ ಸ್ಥಲ ಇವುಗಳಿರುವ ಸಂಬಂಧವನ್ನು ಸೂಚಿಸುವವೇ ಎಂಬ ಸಮಸ್ಯೆಯನ್ನು ಹುಟ್ಟಿಸುವವು. ಒಂದುವೇಳೆ ಸಂಬಂಧ ತೋರಿಸಿದರೆ ಅದರ ಸ್ವರೂಪವೇನು ಎಂಬುದು ಬೇರೊಂದು ಸಮಸ್ಯೆ ತಲೆಯೆತ್ತುವುದು. ಈ ಸಮಸ್ಯೆ ಗಳನ್ನು ತತ್ತ್ವಗಳ ಪ್ರತಿಪಾದನೆ ಹಾಗೂ ಸ್ಥಲಗಳ ಪ್ರತಿಪಾದನೆಯನ್ನು ವಚನಶಾಸ್ತ್ರಕ್ಕನುಗುಣವಾಗಿ ವಿವರಿಸಿ ಹಾಗೂ ಈ ಎರಡೂ ಪದಗಳ ಯೋಗಾರ್ಥ ಇಲ್ಲವೆ ರೂಢಾರ್ಥಗಳು ಒದಗಿಸುವ ಅವಕಾಶದ ಮೂಲಕ ತೋರಿಸುವುದರಿಂದ ಬಿಡಿಸ ಬಹುದು.

**(ಅ) ಮೂವತ್ತಾರು ತತ್ತ್ವಗಳು**

ವಚನಕಾರರು ಉಪನಿಷತ್ ಋಷಿಗಳಂತೆ ಕ್ರಾಂತದರ್ಶಿಗಳು. ಅವರು ಪಡೆದ ಯೋಗಜ ಪ್ರತ್ಯಕ್ಷ ಮತ್ತು ಆತ್ಮಪ್ರತ್ಯ ಕ್ಷಗಳಿಂದ ವಿಶ್ವವನ್ನು ನೋಡಿದರು. ಅವರಿಗೆ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳಿಂದಲೂ ಉಂಟಾದ ಅನುಭವವಿತ್ತು. ವ್ಯವಹಾರ ಮತ್ತು ಪಾರಮಾರ್ಥಗಳು ಅಭಿನ್ನವಸ್ತು ವಿಕಾಸದ ಫಲಗಳೆಂದು ಅರಿತ ಅವರಲ್ಲಿ ಸ್ಥಾವರ ಜಂಗಮಗಳ, ಆಚಾರ ಅರಿವುಗಳ ತಾತ್ತ್ವಿಕಜ್ಞಾನವು ವೈಚಾರಿಕ ಹೊಸ ದೃಷ್ಟಿಕೋನವನ್ನು ಮೂಡಿಸಿತು. ಈ ತಾತ್ತ್ವಿಕ ದೃಷ್ಟಿಕೋನದಿಂದ ಪದಾ ರ್ಥದ ಅಥವಾ ಕರಣದ ಹಸಿಗೆಯನ್ನು ಮಾಡಿ ಲಿಂಗ ಸೃಷ್ಟಿ, ಅಂಗ ಸೃಷ್ಟಿಗಳನ್ನು ಕಂಡರು. ಲಿಂಗ ಮತ್ತು ಅಂಗಪದಗಳು ವಚನಕಾರರ ಶಕ್ತಿವಿಶಿಷ್ಟಾದ್ವೈತ ಅಥವಾ ಷಟ್‌ಸ್ಥಲ ಸಿದ್ಧಾಂತದ ವಿಶಿಷ್ಟ ಲಕ್ಷಣವನ್ನು ಸೂಚಿಸುವ, ಆ ಕ್ಲಿಷ್ಟ ತತ್ತ್ವಜ್ಞಾನ ವನ್ನು ಸುಲಭಗೊಳಿಸುವ ಹಾಗೂ ಭಾರತೀಯ ತತ್ತ್ವಜ್ಞಾನದ ನಕ್ಷೆಯಲ್ಲಿ ತಮ್ಮದೇ ಆದ ಸ್ಥಾನವನ್ನು ಕಲ್ಪಿಸುವ ಸಾಧನಗಳಾ ದವು. ಇದು ಅತ್ಯಂತ ಮಹತ್ವದ ಕಾರ್ಯವು. ಇಲ್ಲಿ ವ್ಯಕ್ತಗೊಳಿಸಿದ ವಿಚಾರಗಳು ಮೂವತ್ತಾರು ತತ್ತ್ವಗಳು ಹಾಗೂ ನೂರೊಂದು ಸ್ಥಲಗಳು ಹುಟ್ಟಿಸುವ ಅನೇಕ ಶಂಕೆಗಳಿಗೆ ಆ ತತ್ತ್ವ ಹಾಗೂ ಸ್ಥಲಗಳ ಸಂಬಂಧಸ್ಥಾಪನೆಗೆ ಉತ್ತಮ ಪರಿಹಾರ ಸಾಧನೆಗಳಾಗುತ್ತವೆ.

ಮೂವತ್ತಾರು ತತ್ತ್ವಗಳನ್ನು ಶಿವಶರಣರು ಹೇಳುವ ರೀತಿಯನ್ನು ಅನುಸರಿಸಿ ನೋಡಿದರೆ ಅವರು ಲಿಂಗಸೃಷ್ಟಿಯ ವಿಚಾರವನ್ನು ಪ್ರಾರಂಭಿಸುವರು. ಅಂಗಸೃಷ್ಟಿಯ ವಿಚಾರದಲ್ಲಿ ಆ ಕಾರ್ಯ ಕೊನೆಗೊಳ್ಳುವುದು. ಲಿಂಗ ಸೃಷ್ಟಿಯಲ್ಲಿ ಪಂಚ ಲಿಂಗಗಳು, ಪಂಚ ಅಂಗಗಳು (ಶಕ್ತಿಗಳು) ಇರುವುದನ್ನು ತಿಳಿಸುತ್ತಾರೆ. ಮೊದಲು ಪಂಚಲಿಂಗಗಳಾವುವೆಂಬುದನ್ನು ನೋಡೋಣ. ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ ಮತ್ತು ಆಚಾರಲಿಂಗ. ಇನ್ನು ಪಂಚಅಂಗಗಳಾವುವೆಂಬುದನ್ನು ನೋಡೋ ಣ. ಪರಾಶಕ್ತಿ, ಆದಿಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ. ಇವೆಲ್ಲವುಗಳು ಪರಬ್ರಹ್ಮ ಲಿಂಗದಲ್ಲಿ. ಹೀಗೆ ಒಟ್ಟಿಗೆ ಹತ್ತು ತತ್ತ್ವಗಳು ಇರುತ್ತವೆ. ಇದು ಶಿವಶರಣರ ಆತ್ಮಪ್ರತ್ಯಕ್ಷದ ವಿಷಯ. ಇನ್ನು ಅಂಗತತ್ತ್ವಗಳ ವಿಚಾರ: ಇದು ಯೋಗದ ಪ್ರತ್ಯಕ್ಷ ಹಾಗೂ ಪ್ರತ್ಯಕ್ಷದ ಕಕ್ಷೆಗೆ ಸೇರಿದ್ದು. ಇವುಗಳು ಅಂತಃಕರಣ ಪಂಚಕ, ವಾಯು ಪಂಚಕ, ಜ್ಞಾನೇಂದ್ರಿಯ ಪಂಚಕ, ವಿಷಯ ಪಂಚಕ. ಕರ್ಮೇಂದ್ರಿಯ ಪಂಚಕ ಇವುಗಳು ಅನುಕ್ರಮವಾಗಿ ಅಂಬರ, ಸಮೀರಣ, ಅಗ್ನಿ, ತೋಯ ಮತ್ತು ಭೂತತ್ತ್ವ ಗಳು. ಹೀಗೆ ಒಟ್ಟಿಗೆ ಇಪ್ಪತ್ತೈದು ತತ್ತ್ವಗಳು. ಲಿಂಗ ತತ್ತ್ವಗಳು ಹತ್ತು ಮತ್ತು ಅಂಗತತ್ತ್ವಗಳು ಇಪ್ಪತ್ತೈದು ಸೇರಿ ಒಟ್ಟಿಗೆ ಮೂವತ್ತೈದು ತತ್ತ್ವಗಳು. ಈ ಮೂವತ್ತೈದು ತತ್ತ್ವಗಳು ಬಸವಣ್ಣನವರು ತಿಳಿಸುವಂತೆ ಪರಮಾತ್ಮಲಿಂಗದಲ್ಲಿ.

ಆಗ ಈ ಪರಮಾತ್ಮ ಲಿಂಗಸೇರಿ ಮೂವತ್ತಾರು ತತ್ತ್ವಗಳು. ಈ ಇತ್ತೆರನಾದ ಸೃಷ್ಟಿಯ ಪರ್ಯಾಯ ಪದಗಳು ವಿದ್ಯಾಸೃಷ್ಟಿ, ಅವಿದ್ಯಾಸೃಷ್ಟಿ ; ಅಥವಾ ಪರಾಸೃಷ್ಟಿ, ಅಪರಾಸೃಷ್ಟಿ ; ಇಲ್ಲವೆ ಅಪ್ರಾಕೃತ ಸೃಷ್ಟಿ, ಪ್ರಾಕೃತ ಸೃಷ್ಟಿ ಎಂದು ಇರುತ್ತವೆ.

ಇಲ್ಲಿ ಒಂದೆರಡು ಮಾತುಗಳನ್ನು ಹೇಳಲೇಬೇಕು. ಈ ಮೂವತ್ತಾರು ತತ್ತ್ವಗಳಲ್ಲಿಯ ಮೊದಲಿನ ಹತ್ತು ತತ್ತ್ವಗಳ ಪರ್ಯಾಯ ಪದಗಳು ಆಗಮಗಳಲ್ಲಿ, ವಚನಗಳಲ್ಲಿ ಉಂಟು. ಅವುಗಳ ಮಿಶ್ರೀಕರಣವೂ ಉಂಟು. ಅವುಗಳನ್ನೆಲ್ಲ ಇಲ್ಲಿ ಕೊಟ್ಟು ಕ್ಲಿಷ್ಟಗೊಳಿಸದಿರಬೇಕೆಂಬುದು ಒಂದು. ಇನ್ನೊಂದು ಎಂದರೆ ವಚನಕಾರರ ಲಿಂಗಸೃಷ್ಟಿಯ ವಿಕಾಸದ ರೀತಿ ಹಾಗೂ ಪಾರಮೇಶ್ವರಾದಿ ಆಗಮಗಳಲ್ಲಿ ಬರುವ ಮೂವತ್ತಾರು ತತ್ತ್ವಗಳಲ್ಲಿಯ ವಿದ್ಯಾತತ್ತ್ವಗಳ ವಿಕಾಸದ ರೀತಿ ಇವುಗಳಲ್ಲಿ ಭೇದವಿರುವದು. ಅಲ್ಲಮಪ್ರಭುದೇವರ, ಬಸವಣ್ಣನವರ ವಚನಗಳಲ್ಲಿ ಮೇಲಿನ ಸೃಷ್ಟಿ ವಿಕಾಸಕ್ರಮಕ್ಕನುಗುಣವಾಗಿರುವ ಅಭಿಪ್ರಾಯಕ್ಕೆ ಸೀಮಿತಗೊಳಿಸಿಕೊಂಡುದು ಮತ್ತೊಂದು ವಿಚಾರ.

ವಿಕಾಸ ಕ್ರಮದ ವಿಚಾರವಾಗಿ ತಾತ್ತ್ವಿಕ ರೀತಿಯಲ್ಲಿ ಪರಾಮರ್ಶಿಸಿದಾಗ ಕಾರಣ, ಕಾರ್ಯಭಾವಗಳು ಮಾತ್ರೊಂದು ಗಮನಾರ್ಹವಾದುದು. ವಚನಕಾರರು ತಿಳಿಸುವ ಅಂಗಕರಣಗಳು ಲಿಂಗಕರಣಗಳಾವುವೆಂಬ ವಿಚಾರವು ಅಥವಾ, ಅಂಗನು ಲಿಂಗವಾಗುವನೆಂಬ ವಿಚಾರವು ಕಾರ್ಯಕಾರಣ ಸಿದ್ಧಾಂತದ ಉತ್ಕೃಷ್ಟತೆಯನ್ನು, ದೇವಲೋಕ ಮರ್ತ್ಯಲೋಕ ಬೇರಲ್ಲವೆಂಬ ವಾಸ್ತವ ವಿಚಾರ ಪ್ರತಿಪಾದನೆಯ ತಾತ್ತ್ವಿಕ ತಳಹದಿಯಾಗಿರುವುದನ್ನು ಮನಗಾಣಲು ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಈ ಕಾರಣ ಕಾರ್ಯ ಸಿದ್ಧಾಂತವು ಈ ಸಂದರ್ಭದಲ್ಲಿ ನಾನು ಉಲ್ಲೇಖಿಸಿಬಿಡುವೆನಷ್ಟೆ. ಇದರ ಪ್ರತಿಪಾದನೆ ಮತ್ತು ಮೌಲ್ಯಮಾಪನ ಹಾಗೂ ತುಲನೆಯನ್ನಿಲ್ಲಿ ಮಾಡುವದಿಲ್ಲ. ಈಗ ಮೂವತ್ತಾರು ತತ್ತ್ವಗಳ ವಿಚಾರವನ್ನು ವೀರಶೈವ ವಿದ್ವಾಂಸರು ಮಾಡಿದವರುಂಟು. ಅಧ್ಯಯನದ ಕಾಲಕ್ಕೆ ನನಗೆ ದೊರೆತ ಒಂದೆರಡು ಉದಾಹರಣೆಗಳನ್ನಿಲ್ಲಿ ಎತ್ತಿಕೊಂಡು ಪ್ರಾಜ್ಞರ ಮುಂದೆ ಇಟ್ಟು ವೀರಶೈವ ಸಿದ್ಧಾಂತ ಅಥವಾ ಷಟ್‌ಸ್ಥಲ ಸಿದ್ಧಾಂತದ ದೃಷ್ಟಿಯಲ್ಲಿ ಆ ಪ್ರತಿಪಾದನೆಯನ್ನು ನೋಡಬೇಕಾದುದು ಒಂದು ಅಂಶವು ಮಹತ್ವದ್ದು. ಯಾಕೆಂದರೆ ಅದು ಇನ್ನೂ ಹೆಚ್ಚು ಸ್ಪಷ್ಟತೆಯನ್ನು ಸಿದ್ಧಾಂತಗ್ರಹಣಕ್ಕೆ ಒದಗಿಸುವದು.

**ಬಿ) ಆಧುನಿಕ ವಿದ್ವಾಂಸರ ಅಭಿಪ್ರಾಯ ಪರಿಶೀಲನೆ :**

೧) ಡಾ.ಎಚ್.ಪಿ. ಮಲ್ಲೇದೇವರು Essentials of Virasaivism ಎಂಬ ಗ್ರಂಥದ ೪೭ನೆಯ ಪುಟದಲ್ಲಿ ಬರೆಯುತ್ತಾರೆ : Particularly, after the Purusatattva, the rest of the Tattvas are alsmost in accordance with the Sankhyatattvas.

೨) ಡಾ.ಆರ್.ಸಿ. ಹಿರೇಮಠ ಅವರು **ಷಟ್‌ಸ್ಥಲ ಜ್ಞಾನ ಸಾರಾಮೃತ** ಎಂಬ ಗ್ರಂಥದ ೧೬೦ನೆಯ ಪುಟದಲ್ಲಿ ಬರೆಯುತ್ತ :

'೨೫ ತತ್ತ್ವಗಳ ಜೊತೆಗೆ ೧೧ ತತ್ತ್ವಗಳನ್ನು ಅಂಗೀಕರಿಸಿ ವೀರಶೈವವು ೩೬ ತತ್ತ್ವಗಳನ್ನು ಒಪ್ಪಿದೆ.'

೩) ಪ್ರೊ. ಎಸ್. ಎಸ್. ಭೂಸನೂರಮಠ ಅವರು ಆಂಗ್ಲ ಭಾಷಾಂತರದಲ್ಲಿ ಟಿಪ್ಪಣಿ ಕೊಟ್ಟುದರಲ್ಲಿ ಬರೆದಿರುವುದು ಇಂತಿದೆ.:

ಡಾ. ಮಲ್ಲೇದೇವರು ತಿಳಿಸುವದೇನೆಂದರೆ ಪುರುಷ ತತ್ತ್ವದ ನಂತರದ ಉಳಿದ ತತ್ತ್ವಗಳು ಬಹುತೇಕ ಸಾಂಖ್ಯ ತತ್ತ್ವದಂತೆಯೆ ಇವೆ. ಇವರ ಪ್ರಕಾರ ಮೂವತ್ತಾರು ತತ್ತ್ವಗಳಲ್ಲಿಯ ಪುರುಷತತ್ತ್ವದಲ್ಲಿ ಹನ್ನೊಂದು ತತ್ತ್ವಗಳು ಇರುತ್ತವೆ. ಇನ್ನು ಉಳಿದ ತತ್ತ್ವಗಳೆಂದರೆ ಪ್ರಕೃತಿ ತತ್ತ್ವಗಳು. ಆದುದರಿಂದ ಪುರುಷತತ್ತ್ವದ ನಂತರದ ಉಳಿದ ತತ್ತ್ವಗಳು ಅಂದರೆ ಪ್ರಕೃತಿಯ ೨೫ ತತ್ತ್ವಗಳು. ಈ ಸಾಂಖ್ಯರ ೨೫ ಪ್ರಕೃತಿ ತತ್ತ್ವಗಳಂತೆ ವೀರಶೈವರ ೨೫ ತತ್ತ್ವಗಳಿರುತ್ತವೆ. ಎಂಬುದು ಅವರ ಪ್ರತಿಪಾದನೆ. ಡಾ. ಮಲ್ಲೇದೇವರು ಹೀಗೆ ಹೋಲಿಸುವಾಗ ಅವರ ಮನದಲ್ಲಿ **ಸಾಂಖ್ಯಕಾರಿಕ** ಗ್ರಂಥವು ಪ್ರತಿಪಾದಿಸುವ ಸಾಂಖ್ಯವೇ ಇರಬೇಕೆಂದೆನಿಸುತ್ತದೆಯೇ ವಿನಾ ಇನ್ನುಳಿದ ಸಾಂಖ್ಯ ಸಿದ್ಧಾಂತಗಳಿರುವದಿಲ್ಲ. ಏಕೆಂದರೆ ಅವುಗಳು ಭಿನ್ನಭಿನ್ನ ಸಂಖ್ಯೆಯ ತತ್ತ್ವಗಳನ್ನು ಪ್ರತಿಪಾದಿಸುತ್ತವೆ. ಒಂಭತ್ತು ತತ್ತ್ವಗಳನ್ನು ಒಪ್ಪುವ ಸಾಂಖ್ಯ ಒಂದಿದ್ದರೆ, ಹನ್ನೊಂದು ತತ್ತ್ವಗಳನ್ನೊಪ್ಪುವದು ಮತ್ತೊಂದಿದೆ. ಅದೇ ರೀತಿ ಐದು ತತ್ತ್ವಗಳನ್ನೊಪ್ಪುವುದು ಒಂದಿದ್ದರೆ ಇಪ್ಪತ್ತಾರು ತತ್ತ್ವಗಳನ್ನೊಪ್ಪುವದು ಬೇರೊಂದಿದೆ ; ಹಾಗೆಯೇ ಏಳು ತತ್ತ್ವಗಳನ್ನು, ಆರು ತತ್ತ್ವಗಳನ್ನು, ನಾಲ್ಕು ತತ್ತ್ವಗಳನ್ನು, ಹದಿನೇಳು ತತ್ತ್ವಗಳನ್ನು, ಹದಿನಾರು ಮತ್ತು ಹದಿಮೂರು ತತ್ತ್ವಗಳನ್ನು ಒಪ್ಪುವವು. ಈ ನಾನಾ ಬಗೆಯ ಸಾಂಖ್ಯರ ಚಿತ್ರಣವನ್ನು ಭಾಗವತ ಹನ್ನೊಂದನೆಯ ಅಧಿಕರಣ, ೨೨ನೆಯ ಪ್ರಕರಣದಲ್ಲಿ ನೋಡಬಹುದೆಂದು ಎಸ್. ಎಸ್. ದಾಸಗುಪ್ತ ಅವರು History of Indian Philosophy vol. IV. ರಲ್ಲಿ ತೋರಿಸುತ್ತಾರೆ. ಆದರೆ ಸಾಂಖ್ಯದರ್ಶನದಲ್ಲಿ ಬರುವ ತತ್ತ್ವಗಳು ಪ್ರಕೃತಿ ಜನ್ಯ ಎಂದು ಹೇಳುವುದೂ, ವೀರಶೈವ ಸಿದ್ಧಾಂತದಲ್ಲಿ ಬರುವ ಆಗಮೋಕ್ತ ೨೫ ತತ್ತ್ವಗಳು ಪ್ರಕೃತಿ ತತ್ತ್ವಗಳು ಎಂದು

ಹೇಳುವುದೂ ಒಂದೆಯೇ ? ಎಂಬ ಪ್ರಶ್ನೆಯು ವಿಚಾರಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ಡಾ. ಮಲ್ಲೇದೇವರು ಈ ವಿಷಯದ ಮರುಪರಿಶೀಲನೆ ಮಾಡಬಹುದೇನೊ ಎಂಬುದನ್ನು ಸೂಚಿಸುತ್ತೇನೆ. ಅದೇ ರೀತಿ ವೀರಶೈವ ಸಿದ್ಧಾಂತತಜ್ಞರ ಗಮನ ಸೆಳೆಯುತ್ತೇನೆ.

ಎರಡನೆಯವರು ಡಾ.ಆರ್.ಸಿ. ಹಿರೇಮಠರು '೨೫ ತತ್ತ್ವಗಳ ಜೊತೆಗೆ ೧೧ ತತ್ತ್ವಗಳನ್ನು ವೀರಶೈವವು ಅಂಗೀಕರಿಸಿದೆ ಎಂದು ಹೇಳಿ ವೀರಶೈವರಲ್ಲಿ ೩೬ ತತ್ತ್ವಗಳ ಗುಂಪನ್ನು ಮಾಡಿದರೆಂದಭಿಪ್ರಾಯಪಡುವರು. ಇಲ್ಲಿಯ ಹೇಳಿಕೆಯನ್ನು ನೋಡಿದರೆ ವೀರಶೈವರಲ್ಲಿ ಮೊದಲು ಕೇವಲ ೨೫ ತತ್ತ್ವಗಳಿದ್ದವು. ಆಮೇಲೆ ೧೧ ತತ್ತ್ವಗಳನ್ನು ಅಂಗೀಕರಿಸಲಾಯಿತು. ಎಂಬ ಅಭಿಪ್ರಾಯವು ಬರುವುದು. ಹೀಗೆ ಮೊದಲು ೨೫ ತತ್ತ್ವಗಳ ವೀರಶೈವ ಸಿದ್ಧಾಂತವಿತ್ತೆ ? ಎಂಬ ಪ್ರಶ್ನೆಯು ಹುಟ್ಟುವುದು. ಎರಡನೆಯದಾಗಿ ೧೧ ತತ್ತ್ವಗಳನ್ನು ಎಲ್ಲಿಂದ ಅಂಗೀಕರಿಸಿದರು? ಎಂಬ ಪ್ರಶ್ನೆಯೂ ಹುಟ್ಟುವುದು. ಮೂರನೆಯದಾಗಿ ಮೊದಲಿನ ೨೫ ತತ್ತ್ವಗಳಿಗೆ ನಂತರದಲ್ಲಿ ೧೧ ತತ್ತ್ವಗಳನ್ನು ಕೂಡಿಸಲು ಕಾರಣವೇನು ? ಎಂಬುದು ಬೇರೊಂದು ಪ್ರಶ್ನೆ ಹುಟ್ಟುವುದು. ಇದೂ ಅಲ್ಲದೆ ವೀರಶೈವವು ಎರಡು ಗುಂಪುಗಳನ್ನು ಸೇರಿಸಿದ ಸಿದ್ಧಾಂತವೆ ? ಎಂಬುವನ್ನು ಉತ್ತರಿಸಬೇಕಾಗುವುದು. ಅಥವಾ ೨೫ ತತ್ತ್ವಗಳ ಜೊತೆಗೆ ಎಂದಾಗ ಸಾಂಖ್ಯರ ಇಪ್ಪತ್ತೈದು ಎಂದು ಅಂದಹಾಗಾಗುವದು. ಯಾಕೆಂದರೆ ಸಾಂಖ್ಯದರ್ಶನದ ಮೂಲ ಕರ್ತೃ ಶೈವರ್ಷಿಯೇ ಆಗಿದ್ದ ಕಾರಣ ಶೈವದ ಒಂದು ಪ್ರಕಾರವಾದ ವೀರಶೈವವು ಆ ಶೈವದರ್ಶನದಲ್ಲಿದ್ದುದರ ಜೊತೆಗೆ ಎಂಬರ್ಥವಾಗುವದು ಸಾಧ್ಯವಿದೆ. ಹಾಗಿದ್ದಲ್ಲಿ ಈ ೨೫ ಪ್ರಕೃತಿ ತತ್ತ್ವಗಳು ಎಂದು ಹೇಳುವದೂ, ಶೈವಾಗಮ ಮತ್ತು ವಚನಗಳಲ್ಲಿ ಬರುವ ೨೫ ಪ್ರಕೃತಿ ತತ್ತ್ವಗಳು ಎಂದು ಹೇಳುವುದೂ ಒಂದೇಯೇ ? ಎಂಬ ಪ್ರಶ್ನೆಯನ್ನು ಉತ್ತರಿಸಬೇಕಾಗುವದು. ಇವೆಲ್ಲ ಪ್ರಶ್ನೆಗಳು ಡಾ. ಹಿರೇಮಠರ ಹೇಳಿಕೆಯಿಂದ ಉದ್ಭವಿಸುವವು. ಈ ಹೇಳಿಕೆಯನ್ನು ಮರುಪರಿಶೀಲಿಸಬೇಕಾಗುತ್ತದೆ. ಇದಕ್ಕೆ ಡಾ. ಹಿರೇಮಠರವರ ಲಕ್ಷ್ಯವನ್ನು ಸೆಳೆಯುತ್ತೇನೆ. ಪ್ರೊ. ಭೂಸನೂರಮಠ ಅವರು ಮೂರನೆಯವರು. ಅವರು ಲಿಂಗತತ್ತ್ವ ಮತ್ತು ಅಂಗತತ್ತ್ವಗಳನ್ನು ತಿಳಿದುಕೊಳ್ಳಲು ಸಾಂಖ್ಯರ ಪುರುಷ ಹಾಗೂ ಪ್ರಕೃತಿ ತತ್ತ್ವಗಳನ್ನು ತಿಳಿದುಕೊಳ್ಳಬೇಕೆಂದು ಹೇಳುವದು ವೀರಶೈವ ದರ್ಶನದ ಲಿಂಗತತ್ತ್ವ ಮತ್ತು ಅಂಗತತ್ತ್ವಗಳ ಲಕ್ಷಣ ಹಾಗೂ ಸಾಂಖ್ಯರ ಪುರುಷ ಮತ್ತು ಪ್ರಕೃತಿಯ ಲಕ್ಷಣಗಳು ಬೇರೆ ಬೇರೆ ಎಂಬ ಪ್ರಜ್ಞೆಯ ಕೊರತೆಯನ್ನು ಸ್ಪಷ್ಟಪಡಿಸುತ್ತದೆ.

**ಅಧ್ಯಯನದ ಅನುಕೂಲಕ್ಕಾಗಿ ೩೬ ತತ್ತ್ವಗಳ ಹಾಗೂ ಸಾಂಖ್ಯರ ತತ್ತ್ವಗಳ ಸಂಖ್ಯಾಪಟ್ಟಿ:**

**(ಅ) ಮಹಲಿಂಗೋದ್ಭವ ತತ್ತ್ವಗಳು :**

| | | | | | |
|---|---|---|---|---|---|
| ಲಿಂಗ ತತ್ತ್ವಗಳು (ಅಥವಾ ಪುರುಷ ತತ್ತ್ವಗಳು) ಹತ್ತು | ಪ್ರಸಾದಲಿಂಗ<br>ಪರಾಶಕ್ತಿ | ಜಂಗಮಲಿಂಗ<br>ಆದಿಶಕ್ತಿ | ಶಿವಲಿಂಗ<br>ಇಚ್ಛಾಶಕ್ತಿ | ಗುರುಲಿಂಗ<br>ಜ್ಞಾನಶಕ್ತಿ | ಆಚಾರಲಿಂಗ<br>ಕ್ರಿಯಾಶಕ್ತಿ |
| | ↓ | ↓ | ↓ | ↓ | ↓ |
| ಅಂಗ ತತ್ತ್ವಗಳು (ಅಥವಾ ಪ್ರಕೃತಿ ತತ್ತ್ವಗಳು) ಇಪ್ಪತ್ತೈದು | ಆಕಾಶ<br>ಜ್ಞಾನ<br>ಸಮಾನವಾಯು<br>ಶ್ರೋತ್ರೇಂದ್ರಿಯ<br>ಶಬ್ದ | ವಾಯು<br>ಮನಸ್ಸು<br>ಉದಾನವಾಯು<br>ತ್ವಗಿಂದ್ರಿಯ<br>ಸ್ಪರ್ಶ | ತೇಜ<br>ಅಹಂಕಾರ<br>ವ್ಯಾನವಾಯು<br>ನೇತ್ರೇಂದ್ರಿಯ<br>ರೂಪ | ಅಪ್ಪು<br>ಬುದ್ಧಿ<br>ಅಪಾನವಾಯು<br>ಜಿಹ್ವೇಂದ್ರಿಯ<br>ರಸ | ಪೃಥ್ವಿ<br>ಚಿತ್ತ<br>ಪ್ರಾಣವಾಯು<br>ಘ್ರಾಣೇಂದ್ರಿಯ<br>ಗಂಧ |

=ಒಟ್ಟು ೩೬ ತತ್ತ್ವಗಳು (ಮಹಾಲಿಂಗ ತತ್ತ್ವ ಸೇರಿ).

---

**(ಬ) ಸಾಂಖ್ಯರ ೨೫ ತತ್ತ್ವಗಳು :**

ಪುರುಷ + ೧ ಪ್ರಕೃತಿ
|
೨ ಮಹತ್
|
೩ ಅಹಂಕಾರ
|
೪ ಮನ — ೫ ಜ್ಞಾನೇಂದ್ರಿಯಗಳು — ೫ ಕರ್ಮೇಂದ್ರಿಯಗಳು — ೫ ತನ್ಮಾತ್ರಗಳು
|
೫ ಭೂತಗಳು

=ಒಟ್ಟು $24 + 1 = 25$.

ವಚನಶಾಸ್ತ್ರದಲ್ಲಿಯ ಮತ್ತು ಸಾಂಖ್ಯ ಶಾಸ್ತ್ರದಲ್ಲಿಯ ತತ್ತ್ವದ್ವಯಗಳ ಸಂಖ್ಯಾಪಟ್ಟಿಗಳು ಆಯಾ ತತ್ತ್ವಗಳ ಉತ್ಪತ್ತಿಯ ಕ್ರಮವನ್ನು ತಿಳಿಸುವದರಿಂದ ತಕ್ಷಣ ಅನೇಕ ತಾತ್ತ್ವಿಕ ಸಮಸ್ಯೆಗಳ ಪರಿಹಾರವಾಗುವದೆಂದು ಸ್ಪಷ್ಟವಿದೆ.

**೩೬ ತತ್ತ್ವ ಮತ್ತು ೧೦೧ ಸ್ಥಲಗಳ ಸಂಬಂಧ :**

ಅ) ಇಲ್ಲಿಯ ೩೬ ತತ್ತ್ವಗಳು ಇಲ್ಲಿಯ ೧೦೧ ಸ್ಥಲಗಳು ಎತ್ತನಿಂದೆತ್ತಣ ಸಂಬಂಧ ? ಎಂದು ಬಹಿರ್ನೋಟಕ್ಕೆ ಕಂಡುಬರುತ್ತದೆ. ಆದರೆ ನಿಜವಾಗಿ ಹಾಗೆ ಇರುವದಿಲ್ಲ. ತತ್ತ್ವ ಮತ್ತು **ಸ್ಥಲ** ಎರಡೂ ಶಬ್ದಗಳು ಏಕಾರ್ಥಬೋಧಕವಾದ ಕಾರಣ ಅವೆರಡರಲ್ಲಿ ಭಿನ್ನವಿರುವದಿಲ್ಲ. ಇನ್ನು ೩೬ ತತ್ತ್ವಗಳು ಬ್ರಹ್ಮಾಂಡ ಹಾಗೂ ೧೦೧ ಸ್ಥಲಗಳು ಪಿಂಡಾಂಡವಾದಕಾರಣ ಅವೆರಡರಲ್ಲಿ ವೀರಶೈವದರ್ಶನದ ಪ್ರಕಾರ ಅಥವಾ ನಿಗಮಾಗಮಗಳ ಪ್ರಕಾರ ಭೇದತ್ವ ಇಲ್ಲದ ಕಾರಣ ಅವೆರಡು ಒಂದೆ. ಈ ಒಂದುಗೂಡುವಿಕೆಗೆ ಸಂಖ್ಯೆಗಳಲ್ಲಿರುವ ಅಂತರವು ಅಡ್ಡಿಯನ್ನು ಮಾಡದು.

ಬ) ೩೬ ತತ್ತ್ವಗಳು ಬ್ರಹ್ಮಾಂಡದ ವಿಕಾಸವನ್ನು ಸೂಚಿಸುವವು. ೧೦೧ ಸ್ಥಲಗಳು ಪಿಂಡಾಂಡದ ವಿಕಾಸವನ್ನು ಸೂಚಿಸುವವು. ಬ್ರಹ್ಮಾಂಡದ ವಿಕಾಸಕ್ರಮದಲ್ಲಿ ಮೂಲಬ್ರಹ್ಮ(ಲಿಂಗ)ತತ್ತ್ವವು ಅನೇಕವಾಗತೊಡಗಿದಂತೆ ಸ್ಥೂಲತ್ವವನ್ನೈದಿದರೆ ಪಿಂಡಾಂಡದ ವಿಕಾಸಕ್ರಮದಲ್ಲಿ ಸ್ಥೂಲತ್ವವು ಸೂಕ್ಷ್ಮತ್ವವನ್ನೈದುವುದು. ಮೊದಲನೆಯ ವಿಕಾಸಕ್ರಮವನ್ನು ವಚನಶಾಸ್ತ್ರವು ಪ್ರವೃತ್ತಿಮಾರ್ಗವೆಂದೂ, ಎರಡನೆಯದನ್ನು ನಿವೃತ್ತಿಮಾರ್ಗವೆಂದೂ ಹೇಳುವುದು.

ಪ್ರವೃತ್ತಿಮಾರ್ಗವಾಗಿ ಉಂಟಾದ ೩೬ ತತ್ತ್ವಗಳು ಪದಾರ್ಥಗಳಾದರೆ ನಿವೃತ್ತಿಮಾರ್ಗವಾಗಿ ಉಂಟಾದ ೧೦೧ ತತ್ತ್ವಗಳು (ಸ್ಥಲಗಳು) ಪ್ರಸಾದಗಳು. ಪ್ರವೃತ್ತಿ ಪರವಾದ ಲಿಂಗಶಕ್ತಿಗೆ **ಕಲಾ** ಎಂದು ಹೆಸರಿದ್ದರೆ ನಿವೃತ್ತಿ ರೂಪವಾದ ಅಂಗಶಕ್ತಿಗೆ **ಭಕ್ತಿ** ಎಂದು ಹೆಸರಿರುತ್ತದೆ.

ಬ್ರಹ್ಮಾಂಡದಲ್ಲಿಯ ೩೬ನೆಯ ತತ್ತ್ವವು ಮಹಾಲಿಂಗವಾಗಿರುವುದು ಮೂಲಾಹಂಕಾರ ಅಥವಾ ಮಹದಹಂಕಾರ ಯುಕ್ತವಾಗಿದ್ದರೆ, ಪಿಂಡಾಂಡದಲ್ಲಿಯ ೧೦೧ನೆಯ **ತತ್ತ್ವವು ಜ್ಞಾನಶೂನ್ಯಯುಕ್ತವಾಗಿದೆ.** ಮಹಲಿಂಗದಲ್ಲಿಯ **ಮಹದಹಂಕಾರವು ಇಂದ್ರಿಯಾಭಿಮುಖತ್ವವನ್ನು ಸೂಚಿಸಿದರೆ** ಜ್ಞಾನಶೂನ್ಯತ್ವವು ಆತ್ಮಪ್ರತ್ಯಕ್ಷ ಪ್ರತಿಪಾದಿಸುತ್ತದೆ. ೩೬ ತತ್ತ್ವಗಳು ಪಿಂಡಾಂಡದಲ್ಲಿ ವ್ಯಕ್ತವಾದರೆ ಪಿಂಡಾಂಡವು ಪರಬ್ರಹ್ಮಾಭಿವ್ಯಕ್ತ್ಯಾತ್ಮಕವಾಗಿದೆ. ಆದುದರಿಂದ ಮೊದಲನೆಯದನ್ನು **ಅಧೋಸೃಷ್ಟಿಯೆಂದು** ಹೇಳಿದರೆ ಎರಡನೆಯದು **ಊರ್ಧ್ವಸೃಷ್ಟಿ.** ಬೆಳವಣಿಗೆಯ ದೃಷ್ಟಿಯಿಂದ ೧೦೧ ಸ್ಥಲ ಶಾಸ್ತ್ರವು ಮಹತ್ವದ ಅಂಶವಾಗಿದೆ.

ಕ) ನೂರೊಂದು ಸ್ಥಲವು ಊರ್ಧ್ವಾಭಿಗಮನ ಶಾಸ್ತ್ರವಾದ ಯೋಗಶಾಸ್ತ್ರದ ದೃಷ್ಟಿಯಿಂದ ನೋಡಿದಾಗ ಯೋಗ ತಂತ್ರದಲ್ಲಿ ಬರುವ ೧೦೧ ನಾಡಿಗಳಲ್ಲಿ ಉಪರಿಯಾದುದು ನೂರಾ ಒಂದನೆಯ ನಾಡಿಯು. ಅದೇ **ಸುಷುಮ್ನಾ** ನಾಡಿಯು. ಅದೇ ಬ್ರಹ್ಮನಾಡಿಯು. ಅದೇ ಸರ್ವೋಚ್ಚವಾದುದು. ಅದರಂತೆ ೧೦೧ ಸ್ಥಲಗಳಲ್ಲಿ ಸಿದ್ಧಿರೂಪವಾದ ಸ್ಥಲವು ಜ್ಞಾನಶೂನ್ಯ. ಅದು ನೂರಾ ಒಂದನೆಯ ಸ್ಥಲವು.

ನೂರೊಂದು ಎಂಬುದು ಹೀಗೆ ಅತ್ಯಂತ ಮಹತ್ವದ ತತ್ತ್ವಸೂಚಕ ಪದವಾಗಿದ್ದು, ಪಿಂಡಾಂಡದೊಡನೆ ಬ್ರಹ್ಮಾಂಡವು ಹೊಂದಿರುವ ಸಂಬಂಧವನ್ನೂ ಸೂಚಿಸುತ್ತದೆ. ಅದು ಪರಾತ್ಪರ ತತ್ತ್ವವಾದ ಕಾರಣ ಅದನ್ನು ತತ್ತ್ವಪ್ರತಿಪಾದನೆ ಹಾಗೂ ಆತತ್ತ್ವದ ಮಹತ್ವವನ್ನು ಎತ್ತಿತೋರಿಸಲು ನೂರೊಂದು ಸ್ಥಲ ಎಂಬ ಗ್ರಂಥದ ಹೆಸರಿನ ರೂಪದಲ್ಲಿಯೂ, ನೂರೊಂದಪ್ಪ ಎಂಬ ವ್ಯಕ್ತಿಯ ಹೆಸರಿನ ರೂಪದಲ್ಲಿಯೂ ವೀರಶೈವರು ಬಳಸುತ್ತಾರೆ. 'ಅಂಗುತ್ತಾರ ನಿಕಾಯ' ಎಂಬ ಬೌದ್ಧರ ಶಾಸ್ತ್ರದ ಹೆಸರೂ ಸಹ ಇಂಥದೇ ಇದೆ.

**ಏಕೋತ್ತರ ಶತಸ್ಥಲದ ಪ್ರತಿಪಾದನೆ :**

ಏಕೋತ್ತರ ಶತಸ್ಥಲಗಳನ್ನು ಅಂಗಸ್ಥಲಗಳು ಮತ್ತು ಲಿಂಗಸ್ಥಲಗಳು ಎಂದು ವರ್ಗೀಕರಿಸುತ್ತಾರೆ. ಮೊದಲು ಅಂಗ ಸ್ಥಲಗಳು, ನಂತರ ಲಿಂಗಸ್ಥಲಗಳು ಪ್ರತಿಪಾದಿತವಾಗಿವೆ. ಇದು ಗಮನಾರ್ಹ. ಯಾಕೆಂದರೆ ಅಂಗನಿಂದ ಪ್ರಾರಂಭವಾಗಿ ಲಿಂಗದಲ್ಲಿ ಪರಿವರ್ತನವಾಗುವುದನ್ನು ಸೂಚಿಸುವುದು. ಈ ಮೊದಲು ೩೬ ತತ್ತ್ವಗಳ ವರ್ಗೀಕರಣವನ್ನು ಇಲ್ಲಿ ಸ್ಮರಿಸಿಕೊಂಡು ನೋಡಿದರೆ, ಅಲ್ಲಿ ಮೊದಲ ಲಿಂಗತತ್ತ್ವಗಳು ಬರುವುದು ಇದಕ್ಕೆ ವ್ಯತಿರಿಕ್ತ ಕ್ರಮವನ್ನು ಸೂಚಿಸುತ್ತದೆ. ಇದು ಮಾರ್ಗದ್ಯೋತಕವಾಗಿರುವಂತೆ ತತ್ತ್ವಹಸಿಗೆಯ ಕ್ರಮದಲ್ಲಿರುವ ಭೇದವನ್ನೂ ತೋರಿಸುತ್ತದೆ, ವೀರಶೈವ ಅನುಭಾವಿ ದಾರ್ಶನಿಕರು (Mystic thinker) ಬ್ರಹ್ಮಾಂಡ ಪರೀಕ್ಷೆ, ಪರಿಶುದ್ಧಿ, ಪರಿಣಾಮಗಳಲ್ಲಿ ತೊಡಗದೆ ಪಿಂಡಾಂಡ ಹಸಿಗೆಯಲ್ಲಿ ತೊಡಗಿ ಪಿಂಡವು ಪರಬ್ರಹ್ಮವಾಗುವದನ್ನು ಸಿದ್ಧಿಮಾಡಿಕೊಂಡಿದ್ದಾರೆ, ಎಂಬುದಕ್ಕೆ ೧೦೧ ಸ್ಥಲಗಳು ಜೀವಂತಸಾಕ್ಷಿ. ಆತ್ಮನು ಪರಮಾತ್ಮನಾಗುವ ದಿವ್ಯಾನುಭಾವಕ್ಕೆ ಮೂವತ್ತಾರು ತತ್ತ್ವಗಳ ಮೂಲಭೂತವಾದ ಆಧ್ಯಾತ್ಮಿಕ (Metaphysical thinker) ಬುನಾದಿಯದೆ. ಇದು ಅವರು ಅನುಭಾವಿಗಳಾಗಿದ್ದಂತೆ ದಾರ್ಶನಿಕರೂ ಆಗಿದ್ದರೆಂಬುದನ್ನು ಸ್ಫುಟವಾಗಿ ವ್ಯಕ್ತಗೊಳಿಸುತ್ತದೆ.

೪೪ ಅಂಗಸ್ಥಲಗಳು, ೫೭ ಲಿಂಗಸ್ಥಲಗಳು ಅನುಕ್ರಮವಾಗಿ ಆಚಾರ ಹಾಗೂ ಅರಿವು ಸ್ಥಲಗಳಾಗಿರುತ್ತವೆ.

ಇಲ್ಲಿ ಒಂದು ವಿಚಾರವನ್ನು ಪ್ರಾಜ್ಞರಮುಂದೆ ಇಡಬಯಸುತ್ತೇನೆ. ಶಿವಶರಣರು ಈ ಅಂಗಹಸಿಗೆಯ ವಿಚಾರದಲ್ಲಿ ಒಂದು ಬದಲಾವಣೆಯನ್ನು ಮಾಡಿದಂತೆ ತೋರುತ್ತದೆ. ಅದೆಂದರೆ ಅಂಗಸ್ಥಲ ಹಾಗೂ ಲಿಂಗಸ್ಥಲಗಳ ಸಂಪಾದನೆಯು ಕ್ರಮೋಕ್ತವಾಗಿದ್ದುದನ್ನು ಸಮೋಕ್ತವಾಗಿ ಅನುಷ್ಠಾನವನ್ನು ಮಾಡಿರುವುದು. ಈ ನೂರೊಂದು ಸ್ಥಲಗಳು ಕ್ರಮೋಕ್ತ ಪದ್ಧತಿಯನ್ನು ಪ್ರತಿಪಾದಿಸುತ್ತವೆ. ಇದನ್ನು ಬಸವಣ್ಣನವರು ಅನುಷ್ಠಾನಮಾಡುತ್ತಿದ್ದರೆಂಬುದಕ್ಕೆ ಬಸವಣ್ಣನವರ, ಚೆನ್ನಬಸವಣ್ಣನವರ, ಮಹಾದೇವಿಯಕ್ಕಗಳ ವಚನಗಳು ಸಾಕ್ಷಿಯಾಗಿವೆ. ಈ ಪದ್ಧತಿಗಿಂತಲೂ ಸಮೋಕ್ತ ಸ್ಥಲಾನುಷ್ಠಾನವು ಹಿತಕರವೂ ಉಪ ತಾತ್ತ್ವಿಕ ವಿಚಾರಪೂರಿತವೂ ಎಂದು ಮನಗಂಡ ಚೆನ್ನಬಸವಣ್ಣನವರು ನೂರೊಂದು ಸ್ಥಲದ ಬದಲು ಮೂವತ್ತಾರುಸ್ಥಲ ಪದ್ಧತಿಯನ್ನು ಬೋಧಿಸಿರುವುದು ತಿಳಿಯುತ್ತದೆ. ಇದರ ತಾತ್ತ್ವಿಕ ಅಥವಾ ಸೈದ್ಧಾಂತಿಕ ತಳಹದಿಯು ೩೬ ತತ್ತ್ವಸಿದ್ಧಾಂತವೇ ಆಗಿರುತ್ತದೆ. ಈ ಹಸಿಗೆಯನ್ನನುಸರಿಸಿದುದರಿಂದ :

೧) ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ, ಭಕ್ತನ ಪ್ರಾಣಲಿಂಗಿ, ಭಕ್ತನ ಶರಣ ಮತ್ತು ಭಕ್ತನ ಐಕ್ಯ, ೨) ಮಹೇಶನ ಮಹೇಶ, ಮಹೇಶನ ಭಕ್ತ, ಮಹೇಶನ ಪ್ರಸಾದಿ, ಮಹೇಶನ ಪ್ರಾಣಲಿಂಗಿ, ಮಹೇಶನ ಶರಣ ಮತ್ತು ಮಹೇಶನ ಐಕ್ಯ. ೩) ಪ್ರಸಾದಿಯ ಪ್ರಸಾದಿ, ಪ್ರಸಾದಿಯ ಭಕ್ತ, ಪ್ರಸಾದಿಯ ಮಹೇಶ, ಪ್ರಸಾದಿಯ ಪ್ರಾಣಲಿಂಗಿ, ಪ್ರಸಾದಿಯ ಶರಣ ಮತ್ತು ಪ್ರಸಾದಿಯ ಐಕ್ಯ. ೪) ಪ್ರಾಣಲಿಂಗಿಯ ಪ್ರಾಣಲಿಂಗಿ, ಪ್ರಾಣಲಿಂಗಿಯ ಭಕ್ತ, ಪ್ರಾಣಲಿಂಗಿಯ ಮಹೇಶ, ಪ್ರಾಣಲಿಂಗಿಯ ಪ್ರಸಾದಿ, ಪ್ರಾಣಲಿಂಗಿಯ ಶರಣ ಮತ್ತು ಪ್ರಾಣಲಿಂಗಿಯ ಐಕ್ಯ. ೫) ಶರಣನ ಶರಣ, ಶರಣನ ಭಕ್ತ, ಶರಣನ ಮಹೇಶ, ಶರಣನ ಪ್ರಸಾದಿ, ಶರಣನ ಪ್ರಾಣಲಿಂಗಿ, ಮತ್ತು ಶರಣನ ಐಕ್ಯ. ೬) ಐಕ್ಯನ ಐಕ್ಯ, ಐಕ್ಯನ ಭಕ್ತ, ಐಕ್ಯನ ಮಹೇಶ, ಐಕ್ಯನ ಪ್ರಸಾದಿ, ಐಕ್ಯನ ಪ್ರಾಣಲಿಂಗಿ, ಐಕ್ಯನ ಶರಣ.

ಈ ರೀತಿಯ ಸ್ಥಲ ಸಂಬಂಧವು ಹೇಗೆ ಸಾಧ್ಯವಾಯಿತು ಶರಣರಿಗೆ ? ಎಂಬುದು ಸೈದ್ಧಾಂತಿಕ ಪ್ರಶ್ನೆಯಾಗಿದೆ. ಇದರ ಬಗ್ಗೆ ವಿಚಾರ, ವಿವರಣೆ ಅಗತ್ಯವಿದೆ.

ಹೀಗೆ ೩೬ ತತ್ತ್ವಗಳು ಏಕೋತ್ತರ ಶತಸ್ಥಲ ಮತ್ತು ೩೬ ಸ್ಥಲಪದ್ಧತಿಗಳ ಸೃಷ್ಟಿಗೆ ಕಾರಣವಾಗಿದೆ ; ಅವುಗಳ ಅನುಷ್ಠಾನಕ್ಕೆ ಅವಕಾಶವನ್ನು ಮಾಡಿಕೊಟ್ಟಿದೆ. ಇದೇ ಹಿನ್ನೆಲೆಯಲ್ಲಿ ಮತಜ್ಞಾನ, ಶ್ರುತಿಜ್ಞಾನ, ಕೇವಲಜ್ಞಾನ, ಅವಧಿಜ್ಞಾನ, ಜ್ಯೋತಿಜ್ಞಾನ, ಮಹಾಜ್ಯೋತಿಜ್ಞಾನ ಎಂಬ ಜ್ಞಾನಸಿದ್ಧಾಂತದ ವಿಚಾರವು ಅಡಗಿದೆ. ಈ ಎಲ್ಲ ಕಾರ್ಯವು ಹೊಸದಾಗಿ ಆಗಬೇಕಾಗಿದೆ. ವೀರಶೈವ ಸಾಹಿತಿಗಳು ಮಾಡಿದ ತಾತ್ತ್ವಿಕ ವಿವರಣೆಯಲ್ಲಿ ಈ ಬಗೆಯ ವಿಚಾರಣೆ ಕಂಡುಬಂದಿಲ್ಲ. ಈಗ ದಾರ್ಶನಿಕ ವಿದ್ಯಾರ್ಥಿಗಳು ವಿಶ್ವವಿದ್ಯಾಲಯಗಳಲ್ಲಿ ತರಬೇತುಗೊಳ್ಳುತ್ತಿದ್ದಾರೆ. ಅವರಿಗೆಲ್ಲ ದಿಗ್ಭ್ರಮೆಯನ್ನುಂಟುಮಾಡುವಂಥ ತಾತ್ತ್ವಿಕ ಪ್ರಶ್ನೆಗಳ ಆಗರವಾಗಿದೆ ವೀರಶೈವ ಸಾಹಿತ್ಯ. ಈ ಕಾರ್ಯಕ್ಕವರು ಕೈಹಾಕಿ ವೀರಶೈವ ಸಿದ್ಧಾಂತವನ್ನು ಆಧುನಿಕ ದೃಷ್ಟಿಯಿಂದ ಪುನರ್ನಿರ್ಮಿಸಬೇಕು.

**ಸಂದರ್ಭ ಗ್ರಂಥಗಳು :–**

೧) ವಚನ ಶಾಸ್ತ್ರಸಾರ : ಭಾಗ–೨,೩ ಮತ್ತು ೧. ಡಾ.ಫ.ಗು. ಹಳಕಟ್ಟಿ ವಿಜಾಪುರ, ೨) ಆಗಮ ಪರಿಜ್ಞಾನ : ಶಂಭುಲಿಂಗ ಶಿವಾಚಾರ್ಯ ವಿಜಾಪುರ ೧೯. ೩) ಸಿದ್ಧಾಂತಶಿಖಾಮಣಿ: ಎಸ್. ಆರ್. ಕರಿಬಸವಶಾಸ್ತ್ರಿ ಮೈಸೂರು ೧೯೧೪, ೪) ಚೆನ್ನಬಸವ ತೈಜಸ : ಸಿದ್ಧರಾಮಪ್ಪ ಪಾವಟೆ, ಹುಬ್ಬಳ್ಳಿ ೧೯೭೭, ೫) ವಚನಗಳಲ್ಲಿ ವೀರಶೈವ ಧರ್ಮ : ಡಾ. ತಿಪ್ಪೇರುದ್ರಸ್ವಾಮಿ ಹೆಚ್. ೬) ವಚನಶಾಸ್ತ್ರ ರಹಸ್ಯ : ಆರ್. ಆರ್. ದಿವಾಕರ ಧಾರವಾಡ ೧೯೭೭, ೭) ಜೀವನ ಸಿದ್ಧಾಂತ : ಡಾ. ಜಚನಿ. ೮) Essentials of Virasaivism : Dr. H. P. Malledevaru, ೯) Virasaiva Philosophy of the Saivagamas : Siddharamappa Pavate Hubli, ೧೦) ಷಟ್‌ಸ್ಥಲಜ್ಞಾನ ಸಾರಾಮೃತ : ಡಾ.ಆರ್.ಸಿ. ಹಿರೇಮಠ ಸಂ : ಮುರುಘಾಮಠ, ಧಾರವಾಡ ೧೯೬೪, ೧೧) Sunyasampadane : Vol. II. Karnatak University Dharwad-(1968).

# ಅಷ್ಟಾಂಗಯೋಗ-ಶಿವಯೋಗ

—ಶ್ರೀ ಕುಮಾರಸ್ವಾಮಿಗಳು-ನವಕಲ್ಯಾಣಮಠ, ಧಾರವಾಡ

ಪುರಾತನ ಸೈಂಧವ ಸಂಸ್ಕೃತಿಯನ್ನು ಚಿತ್ರಿಸುವಂತಹ ಮೊಹೆಂಜೋದಾರೋ, ಹರಪ್ಪಗಳ ಅಗೆತಗಳಲ್ಲಿ ದೊರೆತ ಅವಶೇಷಗಳಿಂದ ಯೋಗಕ್ಕೆ ಒಂದು ಪ್ರಾಚೀನ ಪರಂಪರೆಯುಂಟೆಂದು ಗೊತ್ತಾಗುತ್ತದೆ. ಅಲ್ಲಿಯ ಚಿತ್ರಲಿಪಿಗಳಲ್ಲಿ 'ಮೀನ್‌ಕಣ್' 'ಮುಂಕಣ್' 'ಬಿಡುಗಣ್' 'ಓರ್‌ಕಣ್'–ಈ ಪದಗಳು ದೊರೆಯುತ್ತವೆ. ಅವುಗಳಲ್ಲಿ ಮೀನ್‌ಕಣ್ ಪದವು ಬಹಳ ಮಹತ್ವದ್ದು, ಮೀನ್‌ಕಣ್ ಇದು ಅಚ್ಚಗನ್ನಡ ಪದ. ಇದರ ಸಂಸ್ಕೃತ ಅನುವಾದವೇ **'ಅನಿಮಿಷದೃಷ್ಟಿ'** ಅನಿಮಿಷದೃಷ್ಟಿ ಪ್ರಯೋಗದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ವಿಧಾನ ಆಗ ಪ್ರಚಾರದಲ್ಲಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ಇಂತಹ ಸಾಕ್ಷಾತ್ಕಾರವನ್ನು ಪಡೆದವರಿಗೆ ಮೀನರೆಂದು ಸಂಬೋಧಿಸುತ್ತಿದ್ದರು. ಇವರು ಗುಹೆಯಲ್ಲಿ ವಾಸಿಸಿ, ತಪಸ್ಸನ್ನಾಚರಿಸುತ್ತಿದ್ದರೆಂದು ತಿಳಿದುಬಂದಿದೆ. ಈ ಮೀನರೇ ಶಿವಯೋಗದ ಆದ್ಯಪ್ರವರ್ತಕರೆಂದು ಹೇಳಲಾಗುತ್ತಿದೆ. ಇಂದಿಗೆ ಐದು ಸಾವಿರ ವರ್ಷಗಳ ಹಿಂದೆ, ಶಿವಯೋಗವು ಆದಾವ ಸ್ವರೂಪದಲ್ಲಿತ್ತೆಂದು ಯಥಾರ್ಥವಾಗಿ ತಿಳಿದುಕೊಳ್ಳಲಿಕ್ಕೆ ಸಾಕಷ್ಟು ಸಾಧನಾಸಾಮಗ್ರಿಗಳು ನಮಗೆ ಉಪಲಬ್ಧವಿಲ್ಲ. ಆದರೆ ಇಷ್ಟು ಮಾತ್ರ ನಿಜ : ಶಿವಯೋಗದ ಮುಖ್ಯ ಲಕ್ಷಣವಾದ ಅನಿಮಿಷದೃಷ್ಟಿ ಅಥವಾ ಮೀನ್‌ಕಣ್ ಒಂದು ಯೋಗ ವಿಧಾನವಾಗಿ ಪ್ರಚಾರದಲ್ಲಿತ್ತು. ಅನಿಮಿಷದೃಷ್ಟಿಯೆಂದರೆ ಅರೆದೆರೆದದೃಷ್ಟಿ. ಕಣ್ಣು ಪೂರ್ಣಮುಚ್ಚಿಯೂ ಅಲ್ಲ: ತುಂಬಾ ತೆರೆದುದೂ ಅಲ್ಲ, ಅಂಥದೃಷ್ಟಿ. ಕಣ್ಣು ಪೂರ್ಣಮುಚ್ಚಿದರೆ, ಅಂತರ್ಲಕ್ಷ್ಯವಾಗುವುದು; ಕಣ್ಣು ತುಂಬಾತೆರೆದರೆ ಬಹಿರ್ಲಕ್ಷ್ಯವಾಗುವುದು. ಅನಿಮಿಷದೃಷ್ಟಿಯು ದೆಹಲಿ ದೀಪದಂತೆ ಮಧ್ಯಲಕ್ಷ್ಯವನ್ನಾಶ್ರಯಿಸಿದ್ದಾಗಿದೆ. ಇದನ್ನೇ ಪ್ರಭುದೇವರು ತಮ್ಮದೊಂದು ವಚನದಲ್ಲಿ **'ಒಳ ಹೊರಗೆಂಬುದನ್ನರಿಯದೆ ಅನಿಮಿಷನಾಗಿರ್ದನಾಶರಣನು'** ಎಂದು ಹೇಳಿದರು. ಈ ಅನಿಮಿಷದೃಷ್ಟಿಯೇ ಮುಂದೆ, ಶಾಂಭವೀಮುದ್ರೆಯಾಗಿ ಪರಿಣಮಿಸಿತು. **'ಕಾಣುತಿದೆ ಪರಬಿಂದು ಶಾಂಭವಿಯ ಕೋಣೆಯಲಿ** ಲಕ್ಷ್ಯವಿಟ್ಟಾಕ್ಷಣದಿ'– ಇನ್ನೊಂದು ಆಶ್ಚರ್ಯದ ಮಾತೆಂದರೆ, ಈ ಮಧ್ಯಲಕ್ಷ್ಯವೇ ಸವಾಜಜೀವನದಲ್ಲಿ ಮಧ್ಯಮಮಾರ್ಗದ ತತ್ತ್ವಜ್ಞಾನವಾಗಿ, ಕಂಗೊಳಿಸಿತು. ಅದು ಬುದ್ಧನಲ್ಲಿ ಸುಳಿದೆಗೆದು ಬೆಳೆಯಿತು.

ಮೊಹೆಂಜೋದಾರೋ, ಹರಪ್ಪಗಳ ಅಗೆತಗಳಲ್ಲಿ ಹಲವಾರು ವಿಚಿತ್ರ ಶಾಸನಗಳು ದೊರೆತಿವೆ. ಒಂದು ಶಾಸನದಲ್ಲಿ ಹೀಗೆ ಉಲ್ಲೇಖವಿದೆ: **'ಬಾನ್‌ತೇರ್ ಓರ್ ಮೀನ್‌ಕಣ್ ವೇಳ್'** ಒಬ್ಬ ಮೀನ್ ಕಣ್ಣಿನವನು ಬಾನನ್ನು ಅಥವಾ ಆಗಸವನ್ನು ಮುಟ್ಟಿ ಆನಂದವನ್ನು ಪಡೆಯುವನು. ಆಗಸವನ್ನು ಮುಟ್ಟಿ ಆನಂದವನ್ನು ಪಡೆಯುವುದೆಂದರೇನು ? ಅನಿಮಿಷದೃಷ್ಟಿಯನ್ನು ಪಡೆದ ಆಧ್ಯಾತ್ಮ ಯೋಗಿಗಳು ಯೋಗಬಲದಿಂದ ಬ್ರಹ್ಮರಂಧ್ರವನ್ನು ಸೇರಿ, ಸಹಸ್ರಾರದಲ್ಲಿ ನೆಲಸಿನಿಂದು, ಪರಮಾನಂದ ಪಯೋನಿಧಿಯೊಳೋಲಾಡುವರು. ಸಿಂಧುನದಿಯ ಕೊಳ್ಳದಲ್ಲಿ ದೊರೆತ ಅವಶೇಷಗಳಲ್ಲಿ ಆಸನಬದ್ಧರಾಗಿ, ನಿಟಿಲಭ್ರೂಮಧ್ಯ ದಿನಟ್ಟನೋಟವುಳ್ಳ ಯೋಗಿಗಳ ಪ್ರತಿಮೆಗಳು ಉಪಲಬ್ಧವಾಗಿವೆ, ಎಂಬುದನ್ನು ಗಮನಿಸಿದರೆ, ಯೋಗಿಗಳ ಬಗೆಗೆ ಅಥವಾ ಯೋಗದ ಬಗೆಗೆ ಆದರಭಾವವು ಆಗಿನ ಜನಸಾಮಾನ್ಯರಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಯೋಗಿಗಳು ಪಡೆದ ಈ ದಿವ್ಯದೃಷ್ಟಿಗೆ **'ಮೀನ್‌ಕಣ್'** ಎಂದು ಹೆಸರು.

ಮೀನದ ವಿಷಯವಾಗಿ ವಿವೇಚನೆ ಪ್ರಾಚೀನಕಾಲದಿಂದಲೂ ನಡೆದಿದೆ. ಭಾರತೀಯರು ಕಲ್ಪಿಸಿರುವ ದಶಾವತಾರಗಳಲ್ಲಿ ಮತ್ಸ್ಯಾವತಾರವೇ ಮೊದಲನೆಯದು. ಪುರಾಣದ ಈ ಕಲ್ಪನೆಯನ್ನು ಪ್ರಾಣಿಗಳ ಜೀವನದ ಇಲ್ಲವೆ ಮಾನವಬುದ್ಧಿಯ ವಿಕಾಸದಪರವಾಗಿ ವಿವರಿಸುವುದುಂಟು. ಡಾರ್ವಿನ್‌ನು ಮಂಗನಿಂದ ಮಾನವನು ಉಂಟಾದನೆಂದು ಹೇಳಿದರೆ, ಅಮೆರಿಕೆಯ ಡಾ॥ ಟಿನ್ಲೆ ಎಂಬುವನು ಈ ಸಿದ್ಧಾಂತವನ್ನು ಅಲ್ಲಗಳೆದು, ಮೀನಿನಿಂದ ಮಾನವನು ಉದಯಿಸಿದನೆಂದು ಪ್ರತಿಪಾದನೆ ಮಾಡಿದ್ದಾನೆ. ಮಾನವಾವತಾರದ ಕಲ್ಪನೆಗೆ ಮತ್ಸ್ಯಾವತಾರವೇ ಮೊದಲು ಎಂಬ ಪೌರಾಣಿಕ ಕಲ್ಪನೆಗೆ ಈ ಮಾತಿನಿಂದ ಪುಷ್ಟಿದೊರೆಯುತ್ತದೆ. ಪ್ರಾಣಿಶಾಸ್ತ್ರದ ವಿಚಾರವೇನೇ ಇರಲಿ. ಮೀನ್ ಪ್ರಂಪಚದ ಮಥಿತಾರ್ಥದಲ್ಲಿ ಯೋಗಿಗಳು ಬೇರೆಯೊಂದು ರೀತಿಯಿಂದ ಕಂಡು ಹಿಡಿದ್ದಾರೆ. ನೀರಿನಲ್ಲಿಯ ಮೀನವು, ತತ್ತಿಯನ್ನಿಟ್ಟು ಗಾಢವಾದ ಪ್ರೇಮದಿಂದ ಅದನ್ನು ನೋಡುವುದು. ಆಗ ಅದರಿಂದ ಮರಿಗಳು ಹೊರಬೀಳುವವು. ತಾಯಿಯ ಕಟ್ಟಕ್ಕರಿಂದ ಕಂಡಾಗ ತತ್ತಿಯೊಡೆದು ಮೀನಿನ ಮರಿಯು ಹೊರಗೆಬರುವುದೆಂಬ ಮಾತಿನಲ್ಲಿ ಪ್ರೇಮದೃಷ್ಟಿಯೇ ಜೀವನಾಧಾರವೆಂಬ ರಹಸ್ಯವಡಗಿದೆ. ಪ್ರಪಂಚಕ್ಕೆ ಒಲವೇ ಮೂಲವಲ್ಲ; ಒಲವೇ ಮೂಲವಾಗಿದೆ. ಒಲವು ಪ್ರಪಂಚದ ಜೀವಾಳ. ಈ ಒಲವಿನಲ್ಲಿ, ಈ ಪ್ರೇಮದಲ್ಲಿ ಜೀವನದ ಸಾಮರಸ್ಯವಿದೆ. ಈ ಒಲವಿಗೆ, ಈ ಕಡುನೇಹದ ನೋಟಕ್ಕೆ ಅನಿಮಿಷದೃಷ್ಟಿ ಅಥವಾ ಮೀನ್‌ಕಣ್ ಎಂದು ಹೆಸರು, ಮೀನದ ಈ ಉಪಮೆಯನ್ನೇ ಇದಿರಿಟ್ಟುಕೊಂಡು ಶ್ರೀ ಗುರು ನೋಟ ಮಾತ್ರದಿಂದ ಶಿಷ್ಯನಿಗೆ ಶಕ್ತಿಪಾತವನ್ನು ಮಾಡಬಲ್ಲನೆಂಬ ಪ್ರತೀತಿಯು ಯೋಗಶಾಸ್ತ್ರದಲ್ಲಿ ರೂಢವಾಗಿದೆ.

ಅಲ್ಲಮಪ್ರಭುದೇವರು ಅನಿಮಿಷಯೋಗದಿಂದ ಅದೆಂತಹ ಉನ್ನತವಾದ ಆಧ್ಯಾತ್ಮಿಕ ನಿಲವನ್ನು ಪಡೆದಿದ್ದರೆಂಬುದು ಶೂನ್ಯಸಂಪಾದನೆಯಲ್ಲಿ ಕಾಣುವ ಅನಿಮಿಷಯ್ಯನ ವರ್ಣನೆಯಿಂದ ದೃಗ್ಗೋಚರವಾಗುತ್ತದೆ.

'ಅಂತರಂಗದೊಳು ಗುರುಭಾವ ತಲೆದೋರುತಿರ್ಪ, ಅಲ್ಲಮಪ್ರಭುದೇವರು ತಮ್ಮ ಮೂಲಜ್ಞಾನದಿಂದ ಅನಿಮಿಷದೇವರ ಸಮಾಧಿಯನ್ನು ಕಂಡು ಒಳಪೊಕ್ಕುನೋಳ್ಪಾಗಳು ಒಂದು ದೀಪ್ತಿಬೆಳಗುತಿರೆ ಕಂಡು, ಸ್ವಸ್ಥಪದ್ಮಾಸನದಲ್ಲಿ ಕುಳ್ಳಿರ್ದು, ಕರಸ್ಥಳದೊಳು ಅಮೃತ ಲಿಂಗಮಂ ಪಿಡಿದು, ಆಲಿಂಗದೊಳು ಆಲಿಂಗನಮಾಗಿ, ಕರಣಂಗಳೆನ್ನ ನಿಃಕರಣವನ್ನೈದಿ, ಭಾವನಿರ್ಭಾವದೊಳ್‌ನಿಂದು, ನೋಟನಟ್ಟು, ದೃಷ್ಟಿನೈಷ್ಠಿಸಿ, ಎವೆಹಳಚದೆ, ಅರಿವುಕರಿಗೊಂಡು ತಾನೆಂಬುದು ತರಹರವಾಗಿ, ನೀನೆಂಬುದು ನಿಃಪತಿಯಾಗಿ, ಉಭಯಸಂದು ಅಡಗಿ ಸ್ವಯವಾಗಿ, ಮನೋಲಯಸ್ಥಾನದೊಳು, ಸರ್ವಚೈತನ್ಯವನ್ನೈದಿ, ತನುಪರಮಕಾಷ್ಠಿಯೊಳು ಪರವಶವಾಗಿ, ತನ್ನನಿಜಸಮಾಧಿಯೊಳು ಮೂರ್ತಿಗೊಂಡಿರ್ಪ ಆ ಸದ್ಗುರುವಂಕಂಡು'

ಈ ವಚನದಲ್ಲಿ ಮೀನ್ ಕಣ್ಣಿನ ನಿಲವು ವ್ಯಕ್ತವಾಗುವುದಲ್ಲದೆ, ವೀರಶೈವರು ಕರಸ್ಥಲದಿ ಲಿಂಗವ ಹಿಡಿದು ಸಂಪಾದಿಸಿದ ಶಿವಯೋಗದ ರಹಸ್ಯವು ವಿದಿತವಾಗುವುದು.

ಭಾರತೀಯ ತತ್ತ್ವಶಾಸ್ತ್ರದಲ್ಲಿ ಷಡ್‌ದರ್ಶನಗಳಿಗೆ ಒಂದು ಮಹತ್ವದ ಸ್ಥಾನವಿದೆ. ಆ ದರ್ಶನಗಳಲ್ಲಿ ಒಂದಾದ ಪಾತಂಜಲ ಯೋಗಸೂತ್ರವು ಅಷ್ಟಾಂಗಯೋಗವನ್ನು ಕುರಿತು ವಿವೇಚಿಸುತ್ತದೆ. ಆ ದರ್ಶನದಲ್ಲಿ ೧೯೫ ಸೂತ್ರಗಳಿವೆ. **ಸಮಾಧಿ ಪಾದ, ಸಾಧನಾಪಾದ, ವಿಭೂತಿಪಾದ** ಮತ್ತು **ಕೈವಲ್ಯಪಾದ**ವೆಂಬ ನಾಲ್ಕು ಪಾದಗಳಲ್ಲಿ ಈ ಸೂತ್ರವನ್ನು ವಿಭಾಗಿಸಲಾಗಿದೆ.

ಯೋಗವೆಂದರೆ ಚಿತ್ತವೃತ್ತಿ ನಿರೋಧವೆಂದು ವ್ಯಾಖ್ಯೆಮಾಡಲಾಗಿದೆ. ಪ್ರಮಾಣಾದಿ ವೃತ್ತಿಗಳಿಗೆ ವಶವರ್ತಿಯಾದ ಕಾರಣ ದೃಷ್ಟಾ ಅಥವಾ ಆತ್ಮನು ವೃತ್ತಿಸಾರೂಪ್ಯವನ್ನು ಹೊಂದುತ್ತಾನೆ. ಅದರಿಂದಾಗಿ ಅವನು ಬಂಧನಕ್ಕೊಳಗಾಗುತ್ತಾನೆ. ವೃತ್ತಿಗಳನ್ನು ನಿರೋಧಿಸುವುದರಿಂದ ವೃತ್ತಿಸಾರೂಪ್ಯದ ನಿರೋಧವೂ ಲಭಿಸುತ್ತದೆ. ಆಗ ಆತ್ಮನು ತನ್ನ ಸ್ವರೂಪಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಈ ಸ್ವರೂಪಸಾಕ್ಷಾತ್ಕಾರಕ್ಕೆ ಯೋಗವೆಂದು ಹೆಸರು. ಅಭ್ಯಾಸ ವೈರಾಗ್ಯಗಳು ವೃತ್ತಿಯನ್ನು ನಿರೋಧಿಸುವ ಉಪಾಯಗಳಾಗಿವೆ. ಅಭ್ಯಾಸಕಾಲದಲ್ಲಿ ಉತ್ತರೋತ್ತರ **ಶ್ರದ್ಧಾ, ವೀರ್ಯ ಸ್ಮೃತಿ,** ಹಾಗೂ **ಪ್ರಜ್ಞೆ** ಇವುಗಳ ಅಭಿವ್ಯಕ್ತಿಯುಂಟಾಗುತ್ತದೆ. ಉತ್ಕಟವಾದ ಇಚ್ಛೆಯುಳ್ಳ ಸಾಧಕನೇ ಯೋಗಾಭ್ಯಾಸದ ಅಧಿಕಾರಿಯಾಗಬಲ್ಲನು. ಅಭ್ಯಾಸ ವೈರಾಗ್ಯಗಳಿಂದ ವೃತ್ತಿಗಳ ನಿರೋಧವು ಲಭಿಸುವಂತೆ, ಈಶ್ವರ ಭಕ್ತಿಯಿಂದಲೂ, ಅದು ಲಭಿಸುತ್ತದೆ. ಪಂಚಕ್ಲೇಶಾದಿಗಳಿಲ್ಲದ ಪುರುಷವಿಶೇಷನು ಈಶ್ವರನು. ಅವನು ಎಲ್ಲದರ ಆಧಾರವಾಗಿದ್ದು ಕಾಲಾತೀತನಾಗಿದ್ದಾನೆ. ಓಂಕಾರವು ಇಂಥ ಈಶ್ವರವಾಚಕಶಬ್ದವಾಗಿದೆ. ಓಂಕಾರ ಅಥವಾ ಪ್ರಣವವನ್ನು ಭಾವಪೂರ್ಣವಾಗಿ ಜಪಿಸುವುದರಿಂದ ಈಶ್ವರ ಸಾಕ್ಷಾತ್ಕಾರವಾಗುತ್ತದೆ. ಸಾಧನಕಾಲದಲ್ಲಿ ರೋಗರುಜಿನಗಳು ಇನ್ನಿತರ ಅಡೆತಡೆಗಳು ಚಿತ್ತವನ್ನು ವಿಕ್ಷೇಪಗೊಳಿಸುತ್ತವೆ. ಈ ಅಡೆತಡೆಗಳ ನಿವಾರಣೆಗಾಗಿ. ಏಕತತ್ತ್ವದ ಅಭ್ಯಾಸದ ಆವಶ್ಯಕತೆಯಿದೆ. **ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ**–ಇತ್ಯಾದಿ ಭಾವನೆಗಳಿಂದ, ಪ್ರಾಣಾಯಾಮದಿಂದ, ಸತ್ಪುರುಷರ ಸ್ಮರಣದಿಂದ ಸ್ವಪ್ನ ಹಾಗೂ ನಿದ್ರೆಗಳ ಯಥಾರ್ಥವಾದ ಜ್ಞಾನದಿಂದ ಇವುಗಳಲ್ಲಿ ಯಾವುದೊಂದರ ಸಹಾಯದಿಂದಲಾದರೂ ಚಿತ್ತವು ಪ್ರಸನ್ನವಾಗುತ್ತದೆ. ಅಲ್ಲದೆ ಅಡತಡೆಗಳು ಮಾಯವಾಗುತ್ತವೆ. ಸಾಧನೆಯಕಾಲದಲ್ಲಿ ಉತ್ತರೋತ್ತರ ಪ್ರಗತಿಯಾಗುತ್ತ ಹೋದಂತೆ ಅಲೌಕಿಕ ವಿಷಯಗಳ ಜ್ಞಾನವಾಗುವುದು. ಆ ಅಲೌಕಿಕ ವಿಷಯಗಳಲ್ಲಿ ನೆಲೆನಿಲ್ಲದೆ ಸಾಧನವು ಮುಂದುವರಿಯುತ್ತ ಹೋದರೆ ಆತ್ಮಸಾಕ್ಷಾತ್ಕಾರವು ಸಂಭವಿಸುವುದು. ಅಲೌಕಿಕ ವಿಷಯಗಳ ಸಾಕ್ಷಾತ್ಕಾರವೇ ಸಬೀಜ ಅಥವಾ ಸಂಪ್ರಜ್ಞಾತ ಸಮಾಧಿಯೆಂದೂ, ಆತ್ಮಸಾಕ್ಷಾತ್ಕಾರವೇ ನಿರ್ಬೀಜ ಅಥವಾ ಅಸಂಪ್ರಜ್ಞಾತ ಸಮಾಧಿಯೆಂದೂ ಹೇಳಲ್ಪಡುವುದು.

ಪತಂಜಲಿಪ್ರಣೀತ ಯೋಗದರ್ಶನವು ಹಿರಣ್ಯ ಗರ್ಭನಿಂದ ಉಪದೇಶಿಸಲಾದ ಯೋಗಶಾಸ್ತ್ರವೆಂದು ಪರಿಗಣಿಸಲ್ಪಡುತ್ತದೆ. ಹಿರಣ್ಯಗರ್ಭನು ಪತಂಜಲಿಗಿಂತ ಪೂರ್ವದವನಾದರೂ, ಅದೆಷ್ಟು ಶತಮಾನಗಳಿಂದ ಪೂರ್ವದವನೆಂದು ನಿರ್ದಿಷ್ಟವಾಗಿ ಹೇಳಲು ಬರುವಂತಿಲ್ಲ. ಹಿರಣ್ಯಗರ್ಭನು ಯೋಗಸೂತ್ರಗಳನ್ನು ರಚಿಸಿದ್ದನೆಂದೂ, ಆ ಸೂತ್ರಗಳು ಇಂದು ನಮಗೆ ಉಪಲಬ್ಧವಿಲ್ಲದಿದ್ದರೂ, ಪತಂಜಲಿಯ ಕಾಲಕ್ಕೆ ಅವು ಉಪಲಬ್ಧವಿದ್ದವೆಂದೂ, ಪತಂಜಲಿಯು ಅವುಗಳನ್ನು ಆಧರಿಸಿಯೇ ತನ್ನ ಅಷ್ಟಾಂಗಯೋಗದರ್ಶನವನ್ನು ರಚಿಸಿದನೆಂದೂ ಪಂಡಿತರ ಅಭಿಪ್ರಾಯವಿದೆ. ತೈತ್ತಿರೀಯ ಉಪನಿಷತ್ತಿನಲ್ಲಿ ಪ್ರಾಚೀನ ಯೋಗದ ಉಲ್ಲೇಖವಿದೆ. ಈ ಪ್ರಾಚೀನ ಯೋಗವು ಹಿರಣ್ಯ ಗರ್ಭನ ಯೋಗವೆಂದೇ ನಿಷ್ಕರ್ಷೆಯಾದರೆ ಹಿರಣ್ಯ ಗರ್ಭನ ಯೋಗಕ್ಕೆ ಮೂರುಸಾವಿರ ವರ್ಷಗಳ ಪ್ರಾಚೀನತೆಯಿದ್ದ ಹಾಗಾಗುತ್ತದೆ.

**ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ**–ಇವೇ ಯೋಗದ ಅಷ್ಟಾಂಗಗಳು. ಇವುಗಳಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ–ಇವು ಬಾಹ್ಯವೆಂದೂ, ಧಾರಣ, ಧ್ಯಾನ,

ಸಮಾಧಿ–ಈ ಮೂರೂ ಅಭ್ಯಂತರವೆಂದೂ ವಿಭಾಗಿಸಲಾಗಿದೆ. ಅಭ್ಯಂತರ ಅಂಗಗಳಾದ ಧಾರಣ, ಧ್ಯಾನ, ಸಮಾಧಿಗಳನ್ನು ಶಿವ ಯೋಗವು ಆತ್ಮಸಾತ್ ಮಾಡಿಕೊಂಡಿದೆ. ಪತಂಜಲಿಗನುಸಾರವಾಗಿ ಧಾರಣೆ ಎಂದರೆ '**ದೇಶಬಂಧಶ್ಚಿತ್ತಸ್ಯಧಾರಣಾ**' ದೇಹದ ಯಾವುದಾದರೊಂದು ಭಾಗದಲ್ಲಿಯಾಗಲಿ (ಭ್ರೂಮಧ್ಯ, ನಾಸಿಕಾಗ್ರ, ಹೃದಯ–ಇತ್ಯಾದಿ), ಇಲ್ಲವೆ ದೇಹದಿಂದ ವ್ಯತಿರಿಕ್ತ ವಾದ ಯಾವುದಾದರೊಂದು ವಸ್ತುವಿನ ಮೇಲಾಗಲಿ ಲಕ್ಷ್ಯವನ್ನು ಕೇಂದ್ರೀಕರಿಸುವುದೇ ಧಾರಣೆಯೆನಿಸಿಕೊಳ್ಳುವುದು. ಆದರೆ ಶಿವಯೋಗದಲ್ಲಿ ಲಿಂಗವನ್ನು ಧರಿಸುವುದೇ ಧಾರಣೆ. ಹೀಗೆ ಧರಿಸಿದ ಲಿಂಗವನ್ನು ಕರಸ್ಥಲದಲ್ಲಿಟ್ಟು ನಿರ್ನಿಮಿಷ ದೃಷ್ಟಿ ಯಿಂದ ನಿರೀಕ್ಷಿಸುವುದೇ ಧ್ಯಾನ. ಈ ಅವಿರಳ ಧ್ಯಾನದಿಂದ ಇಂದ್ರಿಯಂಗಳಿಗಾವರಿಸಿ, ತಮಸ್ ಅಳಿದು ತೇಜಸ್ಸು ಬೆಳಗಲನು ವಾಗುವುದು. 'ಅರೆಮುಗಿದ ಕಣ್ಣುಗಳೆರಡರ ತಾರೆಗಳ ನಡುವೆ ತರಣಿ ಶಶಿ ಶಿಖಿಬಿಂಬ ಸೂಕ್ಷ್ಮರಂಧ್ರದೊಳು ಪೊರಪೊಣ್ಮಿಕೋಟಿ ಮಿಂಚುಗಳಂತೆ ಝಗ ಝಗಿಸಿ ಮೆರೆವ ಬಿಂದು ಪ್ರಭೆಯನೋಳ್ಪ ಸಂತಸದೆ' ಈ ಬಿಂದು ಪ್ರಭೆ ಅಥವಾ ಚಿತ್ಕಳೆಯಲ್ಲಿ ಮನವ ಳಿದು ಬೆಳಗಿದ ಉನ್ಮನಿಜ್ಯೋತಿಯಲ್ಲಿ ಒಡವೆರೆದು ಒಂದಾಗುವುದೇ ಸಮಾಧಿ. ಶಿವಯೋಗದಲ್ಲಿ ಧಾರಣಾ ಧ್ಯಾನ ಸಮಾಧಿಗಳ ಇಂಗಿತವು ಇಂತಿದೆ.

ಮಹತ್ ಇಲ್ಲದೆ ಬುದ್ಧಿಗೆ ಹಿರಣ್ಯಗರ್ಭವೆಂಬ ಹೆಸರಿದೆ. ಹಿರಣ್ಯಗರ್ಭನಿಂದ ಈ ಯೋಗವು ಆರಂಭವಾಯಿತೆಂದರೆ ಬುದ್ಧಿಯಿಂದ ಆರಂಭವಾಯಿತು ಎಂದ ಹಾಗೆ. ಹಿರಣ್ಯಗರ್ಭನ ಯೋಗವಿದ್ದಂತೆ ಅನಿಮಿಷಯೋಗವೂ ಒಂದಿದೆ. ಹಿರಣ್ಯಗರ್ಭನ ಯೋಗವು ಎಲ್ಲಿ ಮುಗಿಯುವದೋ ಅಲ್ಲಿಂದಲೇ ಅನಿಮಿಷಯೋಗವು ಆರಂಭವಾಗುವದು. ಚಿತಿಶಕ್ತಿಯಿಂದ ಹಿರಣ್ಯಗರ್ಭನ ಯೋಗವು ಕೊನೆಗಂಡರೆ ಅದೇ ಚಿತಿಶಕ್ತಿ ಇಲ್ಲವೆ ಚಿತ್‌ಶಕ್ತಿಯಿಂದ ಅನಿಮಿಷಯೋಗವು ಅಥವಾ ಶಿವಯೋಗವು ಪ್ರಾರಂಭವಾಗು ತ್ತದೆ.' **ಪುರುಷಾರ್ಥ ಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಾಃ ಕೈವಲ್ಯಂ, ಸ್ವಪ್ರತಿಷ್ಠಾ ವಾ ಚಿತಿ ಶಕ್ತಿರಿತಿ**'. ಜೀವನಿಗೆ ಭೋಗ ಮತ್ತು ಮೋಕ್ಷವನ್ನು ಒದಗಿಸಿಕೊಟ್ಟ ತ್ರಿಗುಣಗಳಿಗೆ ಮತ್ತೇನನ್ನೂ ಸಾಧಿಸಿಕೊಡುವ ಪ್ರಯೋಜನ ಉಳಿಯಲಿಲ್ಲವಾದ್ದರಿಂದ, ಆ ತ್ರಿಗುಣಗಳು ಪುರುಷಾರ್ಥದಿಂದ ಶೂನ್ಯವಾಗಿ ತಮ್ಮ ಉಪಾದಾನವಾದ ಪ್ರಧಾನದಲ್ಲಿ ಲೀನವಾಗುವವು. ಈ ವಿಲಯವೇ ಪ್ರತಿ ಪ್ರಸವವೆನಿಸುತ್ತದೆ. ತತ್ಪರಿಣಾಮವಾಗಿ ಚೇತನಪುರುಷನು ವೃತ್ತಿಗಳೊಡನೆ ಸಾರೂಪ್ಯವನ್ನು ಪಡೆಯದೆ ತನ್ನ ಸ್ವರೂಪ ದಲ್ಲಿ ಪ್ರತಿಷ್ಠಿತನಾಗುವನು. ಇದೇ ಕೈವಲ್ಯ.

ಹಿರಣ್ಯಗರ್ಭನ ಹಾಗೂ ಶಿವಯೋಗಿಗಳ ವಿವರಣೆಯನ್ನು ಅಲ್ಲಮಪ್ರಭುದೇವರು ತಮ್ಮದೊಂದು ವಚನದಲ್ಲಿ ಬಹಳ ಮಾರ್ಮಿಕವಾಗಿ ಮಾಡಿದ್ದಾರೆ.

**'ಅಳಿದುಕೂಡುವದು ಒಂದು ಯೋಗ, ಅಳಿಯದೆಕೂಡುವದು ಒಂದು ಯೋಗ; ಈ ಎರಡು ಯೋಗಗಳಿಗೆ ಅಳಿಯದೆಕೂಡುವ ಯೋಗವರಿವುದು ಗುಹೇಶ್ವರಾ'.**

ಅಳಿದುಕೂಡುವ ಯೋಗವಾಗಲಿ ಉಳಿದುಕೂಡುವ ಯೋಗವಾಗಲಿ ಎರಡೂ ವೃತ್ತಿಗಳೇ ಎಂದು ಹಗುರಾಗಿ ಮಾತ ನಾಡಬಹುದು. ಹಾಗಲ್ಲ, ಅವೆರಡೂ ವೃತ್ತಿಗಳಿಂದಲೂ ಅವುಗಳ ಅತ್ಯಂತಿಕ ಪರಿಣಾಮದಲ್ಲಿ ಮಹತ್ತರವಾದ ಭೇದವಿದೆ. ಅಳಿದು ಕೂಡುವದರಿಂದ ಪ್ರಗತಿಗೆ ಆಸ್ಪದವಿಲ್ಲ. ಉಳಿದುಕೂಡುವದರಿಂದ ಪ್ರಗತಿಗೆ ಸಾಕಷ್ಟು ಇಂಬಿದೆ. ಚಿತ್‌ಶಕ್ತಿಯಿಂದ ಆರಂಭ ವಾಗುವ ಅನಿಮಿಷಯೋಗವು ಅಥವಾ ಶಿವಯೋಗವು ದೇಹ, ಪ್ರಾಣ, ಮನ, ಬುದ್ಧಿಗಳನ್ನು ಅಲ್ಲಗಳೆಯದೆ ಅವೆಲ್ಲವುಗಳನ್ನು ಪರಿಶುದ್ಧಗೊಳಿಸುವದು. ಚಿತ್‌ಶಕ್ತಿಯ ಸೋಂಕಿನಿಂದ ಅದೆಲ್ಲ ಪಾರದರ್ಶಕವಾಗುವವು. ಹೀಗೆ ಪಾರದರ್ಶಕವಾದ ಅಂತಃ ಕರಣದಲ್ಲಿ ಆತ್ಮನ ಶಕ್ತಿಗಳೆಲ್ಲ ಪ್ರತಿಫಲಿಸುವವು. ಹಿರಣ್ಯಗರ್ಭನ ಯೋಗದಲ್ಲಿ ಪ್ರತಿಪ್ರಸವವಿದ್ದರೆ ಅನಿಮಿಷನ ಯೋಗದಲ್ಲಿ ಪ್ರತಿಫಲನವಿದೆ. ಈ ಅನಿಮಿಷ ಯೋಗವು, ಈ ಶಿವಯೋಗವು ಆಗಮಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಪ್ರತಿಪಾದಿಸಲ್ಪಟ್ಟಿದೆ. ಆದರೆ ಶ್ರೀ ಬಸವಾದಿ ಶರಣರು ಶಿವಯೋಗಕ್ಕೆ ಸುವ್ಯವಸ್ಥಿತ ಸ್ವರೂಪವನ್ನು ಕೊಡಲಿಕ್ಕೆ ಪ್ರಯತ್ನಪಟ್ಟರು. ಇಷ್ಟೇ ಅಲ್ಲ. ಅವರ ಕೈಯಲ್ಲಿ ಅದು ಒಂದು ಮೂರ್ತಸ್ವರೂಪವನ್ನು ತಳೆಯಿತು.

ಯೋಗ ಪರಂಪರೆಯಲ್ಲಿ ಹಲವಾರು ಯೋಗಗಳ ಉಲ್ಲೇಖವಿದ್ದರೂ ಹಠಯೋಗ ಮತ್ತು ರಾಜಯೋಗಗಳು ಮಹತ್ವದವುಗಳೆಂದು ಪರಿಗಣಿಸಲಾಗಿದೆ. ಹಠಯೋಗ ಪ್ರದೀಪಿಕೆಯು ಹಠಯೋಗದ ಸಕೀಲವನ್ನು ತಿಳಿಸಿದರೆ ಪಾತಂಜಲ ಯೋಗಸೂತ್ರವು ರಾಜಯೋಗದ ರಹಸ್ಯವನ್ನು ಬೋಧಿಸುತ್ತದೆ. ವೃತ್ತಿಗಿಂತ ಪ್ರಾಣವು ಅಧಿಕವೆಂದೂ ವೃತ್ತಿಯು ಪ್ರಾಣ ವನ್ನು ಹಿಂಬಾಲಿಸುವದೆಂದೂ ಹಠಯೋಗವು ಹೇಳಿದರೆ, ಪ್ರಾಣಕ್ಕಿಂತ ವೃತ್ತಿಯು ಅಧಿಕವೆಂದೂ ಪ್ರಾಣವು ವೃತ್ತಿಯನ್ನು ಹಿಂಬಾಲಿಸುವುದೆಂದೂ ರಾಜಯೋಗವು ತಿಳಿಸುವದು. ಪ್ರಾಣನಿರೋಧವು ಹಠಯೋಗದ ತಿರುಳಾದರೆ ವೃತ್ತಿನಿರೋಧವು ರಾಜಯೋಗದ ರಹಸ್ಯವಾಗಿದೆ. ಆದರೆ ಶಿವಯೋಗವು ಇವೆರಡಕ್ಕಿಂತಲೂ ಭಿನ್ನವಾಗಿದೆ. ಅದು ನೇರವಾಗಿ ಚಿತ್‌ಶಕ್ತಿ ಇಲ್ಲವೆ ಶುದ್ಧ ಸಂಕಲ್ಪದಿಂದ ಆರಂಭವಾಗುತ್ತದೆ. ಈ ಚಿತ್‌ಶಕ್ತಿಯು ಪ್ರಾಣ ಹಾಗೂ ವೃತ್ತಿಗಳಿಗಿಂತ ಭಿನ್ನವಾಗಿ, ಅವೆರಡಕ್ಕಿಂತ

ವಿಶೇಷವಾಗಿರುತ್ತದೆ. ಈ ಸೃಷ್ಟಿಯಾಗಲಿ, ಇದರಲ್ಲಿ ಕಂಡುಬರುವ ವಿವಿಧ ತತ್ತ್ವಗಳಾಗಲಿ ಚಿತ್‌ಶಕ್ತಿಯ ಆವಿರ್ಭಾವವೇಹೊರತು ಆಭಾಸವಲ್ಲ. ಕ್ರಮಿಕ ತರಗತಿಯಿಂದ ಈ ಸೃಷ್ಟಿಯಲ್ಲಿ ಏಳು ಮುಖ್ಯವಾದ ತತ್ತ್ವಗಳಿರುತ್ತವೆ. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಆತ್ಮ, ಪರಮಾತ್ಮ ಇವೇ ಆ ತತ್ತ್ವಗಳು, ಪೃಥ್ವಿಯಲ್ಲಿ ಧಾರಣಶಕ್ತಿ ಇದೆ, ಅಪ್ಪುವಿನಲ್ಲಿ ಆಪ್ಯಾಯನಶಕ್ತಿ ಇದೆ, ಅಗ್ನಿಯಲ್ಲಿ ಜ್ವಲನಶಕ್ತಿ ಇದೆ, ವಾಯುವಿನಲ್ಲಿ ಸಂಚಲನಶಕ್ತಿ ಇದೆ, ಆಕಾಶದಲ್ಲಿ ವ್ಯಾಪನಶಕ್ತಿ ಇದೆ, ಆತ್ಮನಲ್ಲಿ ಬುದ್ಧಿ ಶಕ್ತಿ ಇದೆ, ಪರಮಾತ್ಮನಲ್ಲಿ ಚಿಚ್ಛಕ್ತಿ ಇದೆ. ಶಿವಯೋಗವು ಈ ಚಿತ್‌ಶಕ್ತಿಯಿಂದ ಆರಂಭವಾಗಿ ಕ್ರಮೇಣವಾಗಿ ಎಲ್ಲದರ ಶಕ್ತಿಗಳನ್ನು ಉನ್ನತಗೊಳಿಸುತ್ತಾ ಸೃಷ್ಟಿಯ ಸೊಬಗನ್ನು ಸವಿಯಗಲಿಸುವದು. ಆಗ ಸೃಷ್ಟಿಯು ಬರಿಯ ಕಲೆಯಲ್ಲ ಚಿತ್‌ಕಳೆಯಾಗಿ ಕಂಗೊಳಿಸುವದು. ಇಂತಹ ಚಿತ್‌ಕಳೆಯನ್ನು ಅಂಗಕ್ಕೆ ಅಳವಡಿಸಿಕೊಳ್ಳುವ ವಿಧಾನವನ್ನು ತಿಳಿಸಿ ಹೇಳುವುದು ಶಿವಯೋಗ.

# ನವವಿಧಭಕ್ತಿ ಹಾಗೂ ಷಡ್ವಿಧಭಕ್ತಿ

—ಪಂ. ನಾಗಭೂಷಣಶಾಸ್ತ್ರಿ, ಧಾರವಾಡ

'ಭಕ್ತಿ' ಎಂಬುದೊಂದು ಶುದ್ಧರತ್ಯಾತ್ಮಕ ದೈವೀಮಹಾಶಕ್ತಿ. ಇಂತಹ ಭಕ್ತಿಯ ಆಶ್ರಯ ಪಡೆದವರೆಲ್ಲರೂ ಮಾಯಿಕ ಸಂಸಾರದ ಎಲ್ಲ ಪಾಪತಾಪಗಳ ಕರಾಲಕರದಿಂದ ಪಾರಾಗಿ ತಮ್ಮ ನೈಜಜೀವನದ ಚರಮ–ಪುರುಷಾರ್ಥವೆನಿಸಿದ ಲಿಂಗಾಂಗ ಸಾಮರಸ್ಯ ಸುಖರೂಪ ಮುಕ್ತಿಯನ್ನು ಸಾಧಿಸುವಲ್ಲಿ ಲವಲೇಶವಾದರೂ ಸಂದೇಹವಿರುವದಿಲ್ಲ. ಭಾರತೀಯ ಮನೀಷಿ ದಾರ್ಶನಿಕರೆಲ್ಲರೂ ತಮ್ಮ ತಮ್ಮ ಪ್ರಾತಿಭಚಕ್ಷುವಿಕಾಸದ ತಾರತಮ್ಯಕ್ಕನುಸರಿಸಿ ಸಿದ್ಧಾಂತಗಳನ್ನು ಹಾಗೂ ಸಾಧನಗಳನ್ನು ಪ್ರತಿಪಾದಿಸುವಲ್ಲಿ ವಿಭಿನ್ನವಿಚಾರಸರಣಿಯವರಾಗಿದ್ದರೂ ಭಕ್ತಿವಿಷಯವನ್ನೆತ್ತಿಕೊಂಡಾಗ ಮತಭೇದಕ್ಕೆಷ್ಟೂ ಅವಕಾಶವನ್ನೀಯದೆ ಏಕಾಭಿಪ್ರಾಯದವರಾಗಿರುವದು ಭಕ್ತಿಯ ಅಗ್ಗಳತೆಯ ಸೂಚಕವಲ್ಲದೆ ಮತ್ತೇನು ?

**ಭಕ್ತಿಯ ಹಿರಿಮೆಯ ಬಗೆಗೆ ಮಹಾನುಭಾವಿಗಳ ಸೂಕ್ತಿಗಳು**

೧) 'ಮುಕ್ತಿಸಾಧನಸಾಮಗ್ರ್ಯಾಂ ಭಕ್ತಿರೇವ ಗರೀಯಸೀ'. (ಮುಕ್ತಿ ಸಾಧಕೋಪಾಯಗಳಲ್ಲಿ ಭಕ್ತಿಯೇ ಹೆಚ್ಚಿನದು).
—ಶಂಕರಾಚಾರ್ಯರು

೨) 'ಸಾತು ಕರ್ಮಜ್ಞಾನ ಯೋಗೇಭ್ಯೋಽಪಿ ಅಧಿಕತರಾ'. (ಭಕ್ತಿಯು ಕರ್ಮ ಜ್ಞಾನ ಯೋಗಗಳಿಗಿಂತಲೂ ಅಧಿಕವಾದುದು).
—ನಾರದ ಭಕ್ತಿಸೂತ್ರ

೩) 'ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ'. (ನಾನು ಅನನ್ಯಭಕ್ತಿಯಿಂದಲೇ ವಶನಾಗಬಲ್ಲೆನು).
—ಭಗವದ್ಗೀತೆ

೪) 'ಭಕ್ತಿರ್ಮುನೀನಾಮಪಿ ದುರ್ಲಭಾ' (ಭಕ್ತಿಯು ಮುನಿಗಳಿಗೂ ಕೂಡ ದುರ್ಲಭವು). —ಉದ್ಧವ

ಈ ಮೇಲೆ ಹೇಳಿದ ಉಕ್ತಿಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರೆ ಭಕ್ತಿಯ ಘನತೆ ಎಷ್ಟೆಂಬುದರ ಕಲ್ಪನೆಯು ಸಹಜವಾಗಿಯೇ ಉದಿಸುವುದು.

**ಭಕ್ತಿಯ ಸ್ವರೂಪ**

೧) 'ಸಾ ತ್ವಸ್ಮಿನ್ ಪರಮಪ್ರೇಮರೂಪಾ ಅಮೃತಸ್ವರೂಪಾ'.(ಭಕ್ತಿಯು ಪರಮಪ್ರೇಮರೂಪವು ಹಾಗೂ ಅಮೃತಸ್ವರೂಪವು ಆಗಿರುವದು). (ನಾ.ಭ.ಸೂ)

೨) 'ಪೂಜಾದಿಷ್ವನುರಾಗಃ ಇತಿ ಪಾರಾಶರ್ಯಃ' (ಲಿಂಗಪೂಜಾದಿಗಳಲ್ಲಿರುವ ಅನುರಾಗವೇ 'ಭಕ್ತಿ' ಎಂದು ಪರಾಶರನ ಮಗ ವ್ಯಾಸನ ಮತ). (ನಾ.ಭ.ಸೂ)

೩) 'ಕಥಾದಿಷ್ವಿತಿ ಗರ್ಗಃ' (ಶಿವಕಥೆ ಹಾಗೂ ಶಿವಕೀರ್ತನಾದಿಗಳಲ್ಲಿರುವ ಪ್ರೀತಿಯೇ 'ಭಕ್ತಿ' ಎಂದು ಗರ್ಗ ಋಷಿಯ ಅಭಿಪ್ರಾಯ). (ನಾ.ಭ.ಸೂ)

೪) 'ಸಾ ಪರಾನುರಕ್ತಿರೀಶ್ವರೇ' (ಪರಮಾತ್ಮ ವಿಷಯಕವಾದ ಪರಮಾನುರಾಗವೇ 'ಭಕ್ತಿ' ಎಂದು ಶಾಂಡಿಲ್ಯ ಋಷಿಯ ಆಶಯ). (ಶಾಂ.ಭ.ಸೂ)

ಹೀಗೆ ಭಕ್ತಿಯ ಸ್ವರೂಪ ಲಕ್ಷಣವನ್ನು ವಿವಿಧವಾಗಿ ಹೇಳಿದಾಗಲೂ ಅದರ ನೈಜಸ್ವರೂಪದಲ್ಲಿ ಮಾತ್ರ ಯಾವ ವ್ಯತ್ಯಾಸವೂ ಇರುವದಿಲ್ಲವೆಂಬುದನ್ನು ಭಕ್ತಿಜಿಜ್ಞಾಸುಗಳು ಗಮನಿಸುವದವಶ್ಯ. ಮೋಕ್ಷೋಪದೇಶಕಶಾಸ್ತ್ರಗಳ ನಿಷ್ಕರ್ಷಾನುಸಾರ, ಸಂಸಾರ ಬಂಧನದಿಂದ ಬಿಡುಗಡೆ ಹೊಂದಿ ಆತ್ಯಂತಿಕಸುಖರೂಪವೆನಿಸಿದ ಮುಕ್ತಿಯನ್ನು ಸಾಧಿಸಬೇಕೆನ್ನುವವರು ಭಕ್ತಿ

ಯನ್ನೇ ಮುಖ್ಯವಾಗಿ ಆಶ್ರಯಿಸಬೇಕಾಗುವದೆಂಬ ಬಗೆಗೆ ಯಾರದೂ ಭಿನ್ನಾಭಿಪ್ರಾಯ ಕಂಡುಬಾರದು. ಯೋಗದರ್ಶನಕಾರ ಪತಂಜಲಿ ಋಷಿಗಳು ತಮ್ಮ 'ಯೋಗಸೂತ್ರ'ದಲ್ಲಿ—'**ಈಶ್ವರ ಪ್ರಣಿಧಾನಾತ್**' ಎಂಬ ಸೂತ್ರ ಮುಖಾಂತರ ಈಶ್ವರ ಭಕ್ತಿಯಿಂದಲೇ 'ಸಮಾಧಿ' ಸಿದ್ಧಿಸುವದೆಂದು ಅಭಿಪ್ರಾಯ ಪಟ್ಟಿರುವರು. ಸೂತ್ರಭಾಷ್ಯಕಾರ ವೇದವ್ಯಾಸ ಮುನಿಯು ಕೂಡ 'ಪ್ರಣಿಧಾನಾತ್–ಭಕ್ತಿವಿಶೇಷಾತ್' ಎಂದೇ ಅರ್ಥೈಸಿ ಸೂತ್ರಕಾರನ ಅಭಿಪ್ರಾಯವನ್ನೇ ಎತ್ತಿ ಹಿಡಿದಿರುವನು. ಗೀತೆಯಲ್ಲಿ ಶ್ರೀಕೃಷ್ಣನು-ತಪಸ್ವಿಗಳಿಗಿಂತ, ಜ್ಞಾನಿಗಳಿಗಿಂತ, ಅಗ್ನಿಹೋತ್ರಾದಿ ಕರ್ಮಿಗಳಿಗಿಂತ ಯೋಗಿಯೇ ಅಧಿಕನಾಗಿರುವನು.ನೀನೂ ಯೋಗಿಯಾಗು, ಎಂದು ಮೊದಲು ಹೇಳಿ ಆಮೇಲೆ ನಿಷ್ಕರ್ಷರೂಪದಲ್ಲಿ ಯೋಗಿಗಳಿಗಿಂತ ಭಕ್ತನೇ ಶ್ರೇಷ್ಠನಾಗಿರುವನೆಂದು ಬೋಧಿಸಿದ್ದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ರತ್ಯಾತ್ಮಕ ದೈವೀಶಕ್ತಿರೂಪವಾದ ಭಕ್ತಿಯು ವಿಶ್ವದ ಎಲ್ಲ ಜೀವಿಗಳಲ್ಲಿಯೂ ಪ್ರೇಮ ಸ್ನೇಹ ಮುಂತಾದ ರೂಪದಲ್ಲಿ ಸ್ವಾಭಾವಿಕವಾಗಿಯೇ ಇರುವದು. ಆದರೆ ಅದನ್ನು ಯೋಗ್ಯ ಪಥದಲ್ಲಿ ಹರಿಸುವ ಪ್ರಜ್ಞೆ ಮಾತ್ರ ವಿವೇಕ ಮನುಷ್ಯೇತರ ಯಾವ ಪ್ರಾಣಿಗಳಲ್ಲಿಯೂ ಇರುವದಿಲ್ಲ. ಜನ್ಮಾಂತರೀಯ ಪ್ರಾಕೃತ ಸಂಸ್ಕಾರಗಳ ಪ್ರಭಾವಕ್ಕೊಳಗಾದ ಬಹುಸಂಖ್ಯಾತ ಮಾನವರು ಕೂಡ ವಿಷಯದತ್ತಲೇ ತಮ್ಮ ಪ್ರೀತಿಯನ್ನು ಹರಿಸಿ, ಸುಖ ಪಡೆಯಲು ಪ್ರಯತ್ನಿಸುತ್ತಿರುವದುಂಟು. ಸುಖಕ್ಕಾಗಿ ವಿಷಯಗಳನ್ನು ಸಂಗ್ರಹ ಮಾಡಿದಷ್ಟೂ ಅವುಗಳ ಲಿಪ್ಸೆಯು ಹೆಚ್ಚುತ್ತಲೇ ಸಾಗುವದೆಂಬುದು ಸರ್ವಾನುಭವಸಿದ್ಧ. ತುಪ್ಪವನ್ನು ಎರಚಿದಷ್ಟೂ ಬೆಂಕಿಯು ಪ್ರಜ್ವಲಿಸುತ್ತ ನಡೆವಂತೆ ವಿಷಯ ಭೋಗದ ಹೆಚ್ಚಳವಾದಂತೆ ತಾಪ ಹೆಚ್ಚುತ್ತ ಸಾಗುವದೆಂದು ಅನುಭಾವಿಗಳು ಉದ್ಘೋಷಿಸಿ ವಿಷಯ ಪ್ರೇಮವನ್ನು ಶಿವಪ್ರೇಮರೂಪದಲ್ಲಿ ಪರಿವರ್ತಿಸುವಲ್ಲಿಯೇ ಮಾನವರ ಮಾನವತ್ವ ಸುರಕ್ಷಿತವಾಗಿರಬಲ್ಲುದೆಂದು ಎಚ್ಚರಕೊಟ್ಟಿರುವರು. ಈ ಬಗೆಗೆ ಪ್ರಹ್ಲಾದನು—

ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ ।
ತ್ವಾಮನುಸ್ಮರತಸ್ಸಾ ಮೇ ಹೃದಯಾನ್ಮಾಪಸರ್ಪತು ॥

ಹೇ ದೇವ, ಅವಿವೇಕಿಗಳು ವಿಷಯಗಳನ್ನು ಪ್ರೀತಿಸುವಂತೆ ನಾನು ನಿನ್ನನ್ನೇ ಪ್ರೀತಿಸುವದು; ಹೃದಯದಿಂದ ದೂರಾಗಕೂಡದು ಎಂದು ಪ್ರಾರ್ಥಿಸಿ ವಿವೇಕಿಮಾನವರ ಸತ್ಪ್ರವೃತ್ತಿಯನ್ನು ಎತ್ತಿತೋರಿಸಿದ್ದಾನೆ. ಭಗವಂತನು ತನ್ನ ಅಂತರಂಗಭಕ್ತನೆನಿಸಿದ ಉದ್ಧವನಿಗೆ—

ಯಥಾಗ್ನಿಃ ಸಮೃದ್ಧಾರ್ಚಿಃ ಕರೋತ್ಯೇಧಾಂಸಿ ಭಸ್ಮಸಾತ್ । ತಥಾ ಮದ್ವಿಷಯಾ ಭಕ್ತಿರುದ್ಧವೈನಾಂಸಿ ಕೃತ್ಸ್ನಶಃ ॥
ನ ಸಾಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಉದ್ಧವ। ನ ಸ್ವಾಧ್ಯಾಯಸ್ತಪಸ್ತ್ಯಾಗೋ ಯಥಾಭಕ್ತಿರ್ಮಮೋರ್ಜಿತಾ॥

—ಭಾಗವತ

—'ಹೇ ಉದ್ಧವ, ಪ್ರಜ್ವಲಿಸುವ ಬೆಂಕಿಯು ಕಟ್ಟಿಗೆಗಳನ್ನೆಲ್ಲ ಸುಟ್ಟು ಬೂದಿ ಮಾಡುವಂತೆ, ನನ್ನ ಭಕ್ತಿಯು ಸಮಸ್ತ ಪಾಪಗಳನ್ನು ನಾಶಮಾಡಿಬಿಡುವದು. ನನ್ನ ಪ್ರಾಪ್ತಿಗಾಗಿ ಭಕ್ತಿಯೇ ಬೇಕು. ಯೋಗ, ಸಾಂಖ್ಯ, ಧರ್ಮ, ಸ್ವಾಧ್ಯಾಯ, ತಪ, ತ್ಯಾಗ ಮೊದಲಾದ ಯಾವುವೂ ಭಕ್ತಿಗೆಸಮಾನವಾಗವು' ಎಂದುಹೇಳಿದ್ದು ಭಕ್ತಿಯ ನಿರತಿಶಯತ್ವವನ್ನು ಎತ್ತಿತೋರಿಸುವದಾಗಿದೆ.

ಪ್ರಾಜ್ಞರು ಭಕ್ತಿಗೆ ಹೆಚ್ಚು ಮಹತ್ವ ಕೊಟ್ಟಿರುವದಕ್ಕೆ ಇನ್ನೊಂದು ಮುಖ್ಯ ಕಾರಣವುಂಟು. ಭಕ್ತಿಯು ನಿಷ್ಕಾಮ ಕರ್ಮಜ್ಞಾನಯೋಗಗಳ ಸುಂದರ ಸಮನ್ವಯಾತ್ಮಕವಾದುದು. ಮತ್ತು ಒಂದು ವಿಶಿಷ್ಟ ಕಾರಣವೆಂದರೆ ಭಕ್ತಿ ಪಥದಲ್ಲಿ ನಡೆವವರಿಗೆ ಭಕ್ತೀತರೋಪಾಯಗಳನ್ನನುಸರಿಸುವರ ಮುಂದೆ ಥೈ ಎಂದು ಬಂದು ನಿಲ್ಲಬಹುದಾದ ವರ್ಣ, ಆಶ್ರಮ, ಅಧಿಕಾರ ಮುಂತಾದ ಜಟಿಲ ಸಮಸ್ಯೆಗಳ ಗದ್ದಲ ಸರ್ವಥಾ ಇರುವದಿಲ್ಲ. ಅಂತೆಯೇ '**ಭಕ್ತಿಯೋಗೋ ನಿರುಪದ್ರವಃ**' ಭಕ್ತಿಮಾರ್ಗವು ಯಾವ ಉಪದ್ರವವಿಲ್ಲದ್ದೆಂದು ಉದ್ಘೋಷಿಸಲಾಗಿದೆ. ದೇವರ್ಷಿನಾರದನು ಕೂಡ '**ನಾಸ್ತಿತೇಷು ಜಾತಿ ವಿದ್ಯಾರೂಪ ಕುಲ ಧನಾದಿ ಕ್ರಿಯಾಭೇದಃ**' ಭಕ್ತರಲ್ಲಿ ಜಾತಿ, ವಿದ್ಯಾ, ರೂಪ, ಕುಲ, ಧನ ಹಾಗೂ ಕ್ರಿಯಾ ಮುಂತಾದ ಯಾವ ಭೇದವನ್ನು ಗಣಿಸಲಾಗದೆಂದು ಸ್ಪಷ್ಟವಾಗಿಯೇ ಹೇಳಿರುವನು.

ಸಮೋಽಹಂ ಸರ್ವಭೂತೇಷು ನ ಮೇದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿತೇ ತೇಷು ಚಾಪ್ಯಹಂ ॥

(ಭ-ಗೀತೆ)

ನಾನು ಎಲ್ಲ ಪ್ರಾಣಿಗಳಲ್ಲಿಯೂ ಸಮಾನನಾಗಿರುವೆ. ನನಗೆ ಯಾವನು ಅಪ್ರಿಯನಾಗಲಿ ಪ್ರಿಯನಾಗಲಿ ಆಗಿರುವದಿಲ್ಲ. ನನ್ನ ಭಕ್ತಿಯಿಂದ ಆಶ್ರಯಿಸಿದವರಲ್ಲಿ ನಾನು ನನ್ನಲ್ಲಿ ಅವರು ಇರುವರು ಎಂದು ಭಕ್ತರ ಹಿರಿಮೆಯನ್ನು ಇನ್ನಷ್ಟು ಹೇಳಿದ್ದುಂಟು. ಇಲ್ಲಿ ಒಂದು ಪ್ರಶ್ನೆ ಉದ್ಭವಿಸುವ ಸಂಭವವುಂಟು ಶಿವನು ನಮ್ಮಲ್ಲಿ ನಿರಂತರ ವಾಸಮಾಡುವವನಾದರೂ ಅವನೇಕೆ ಗೋಚರಿಸುವದಿಲ್ಲ ? ಎಂಬುದದು. ಇಲ್ಲಿ ದರ್ಶನ ಪ್ರಕ್ರಿಯೆಯನ್ನು ಸ್ವಲ್ಪ ವಿಚಾರಿಸಿ ನೋಡಬೇಕಾಗುವದು. ಯಾವುದಾದರೊಂದು ಪದಾರ್ಥದ ಜ್ಞಾನವಾಗಬೇಕಾದರೂ ಇಂದ್ರಿಯಾರ್ಥಸನ್ನಿಕರ್ಷದ ಅವಶ್ಯಕತೆಯಿರುವದು ನಿಜ. ಇವೆರಡರ ಮಧ್ಯದಲ್ಲಿ ಮೂರ

ನೆಯದೊಂದಿರುವದು. ಅದನ್ನೇ ಅಧಿದೈವವೆಂದು ಹೇಳಲಾಗುವದು. ಉದಾಹರಣೆಗಾಗಿ ನೇತ್ರ ಹಾಗೂ ರೂಪ ಇವುಗಳ ಮಧ್ಯದಲ್ಲಿ ಪ್ರಕಾಶವಿರುವದು ಅವಶ್ಯ. ಇಲ್ಲಿ ನೇತ್ರ ಅಧ್ಯಾತ್ಮ, ರೂಪ ಅಧಿಭೂತ, ಪ್ರಕಾಶ ಅಧಿದೈವ. ಹೀಗೆಯೇ ನಾವು ಬುದ್ಧಿಯಿಂದ ಔಚಿತ್ಯ, ನ್ಯಾಯ ಅಥವಾ ಧರ್ಮದ ನಿಶ್ಚಯ ಮಾಡುವಾಗ ಬುದ್ಧಿಗೆ ಸಹಾಯ ಮಾಡುವ ಚೈತನ್ಯಪ್ರಕಾಶದ ಆವಶ್ಯಕತೆಯಿರುವದು. ಅಂತಹ ಚೈತನ್ಯರೂಪನೇ ಮಹಾದೇವನೆನಿಸುವನು. ಅವನೇ ಎಲ್ಲರಲ್ಲಿದ್ದುಕೊಂಡು ಬುದ್ಧಿಪ್ರೇರಕನೂ ಪ್ರಕಾಶಕನೂ ಆಗಿರುವನೆಂದು ಅನುಭವಿಗಳ ಮತ. ದೇವ-ಜೀವರಿಬ್ಬರೂ ಸದಾ ಕೂಡಿಕೊಂಡೇ ಇರುವರು. ಹೀಗಿದ್ದಾಗ ಜೀವನಿಗೆ ದೇವನ ದರ್ಶನವಾಗದಿರುವದಕ್ಕೆ ಮಲ, ವಿಕ್ಷೇಪ, ಆವರಣ ಎಂಬ ಮೂರು ದೋಷಗಳಿರುವವು ಎಂದು ವೇದಾಂತಿಗಳು ಹೇಳುವಂತೆ, ಭಕ್ತಿಸಿದ್ಧಾಂತದಲ್ಲಿ ಆವರಣ ದೋಷವನ್ನೇ ಹೇಳಲಾಗುವದಿಲ್ಲ. ಅಂಶೀ ಹಾಗೂ ಅಂಶ, ಸಿಂಧು ಹಾಗೂ ಬಿಂದು, ಜಲ ಹಾಗೂ ತರಂಗ ಇವುಗಳ ಮಧ್ಯದಲ್ಲಿ ಯಾವ ಆವರಣವೂ ಇಲ್ಲದಿರುವಂತೆ ದೇವ-ಜೀವರ ಮಧ್ಯದಲ್ಲಿಯೂ ಯಾವ ಆವರಣವೂ ಇರುವದಿಲ್ಲ. ಕೇವಲ ದೇವವಿಷಯಕವಾದ ಪ್ರೇಮದ ಕೊರತೆ ಅಥವಾ ದೇವವಿಮುಖತೆಯೇ ಅವನ ದರ್ಶನದಲ್ಲಿ ಬಾಧಕವಾಗಿರುವದು ಎಂದು ಭಕ್ತಿಯ ಆಚಾರ್ಯರು ಹೇಳುವರು. ವಿಚಾರಿಸಿ ನೋಡಿದರೆ ನರನು ಹರನಿಂದ ಎಂದೂ ಎಷ್ಟೂ ದೂರಾಗಿರನು. ಜಲ-ತರಂಗಗಳಲ್ಲಿರುವ ಸಂಬಂಧವೇ ಹರ-ನರರಲ್ಲಿರುವದು. ನರನೇ ಹರ, ಹರನೇ ನರ ಎಂಬುದೇ ದಿಟ. ಇದೇ ಅಭಿಪ್ರಾಯವನ್ನು ಒಬ್ಬ ಭಕ್ತ **'ಸಕಲಮಿದಮಹಂಚ ಮಹಾದೇವಃ'** ಈ ಸೃಷ್ಟಿ ಹಾಗೂ ನಾನು ಮಹಾದೇವನೇ ಆಗಿರುವೆ ಎಂದಿರುವನು. ಇಲ್ಲಿ ಒಂದು ಆಶ್ಚರ್ಯಸಂಗತಿಯೆಂದರೆ ದರ್ಶನಶಾಸ್ತ್ರಗಳ ಕಕ್ಷೆಯಲ್ಲಿ ಪರಸ್ಪರ ಮತಭೇದವನ್ನಿಟ್ಟುಕೊಂಡ ಅದ್ವೈತಿಶಂಕರ, ವಿಶಿಷ್ಟಾದ್ವೈತಿ ರಾಮಾನುಜ, ಶುದ್ಧಾದ್ವೈತಿ ವಲ್ಲಭ ಹಾಗೂ ಅಚಿಂತ್ಯ ದ್ವೈತಾದ್ವೈತಿ ಬಲದೇವ ವಿದ್ಯಾವಿಭೂಷಣ ಇವರೆಲ್ಲರೂ ಮೇಲಿನ ವಚನವನ್ನು ತಮ್ಮ ತಮ್ಮ ಮತದ ಪುಷ್ಟಿಗಾಗಿ ಎತ್ತಿಕೊಂಡಿರುವರು. **'ಸರ್ವಂ ಖಲ್ವಿದಂ ಬ್ರಹ್ಮ'** ಎಂಬ ಶ್ರುತಿವಾಕ್ಯಕ್ಕೆ ಸಮಾನವಾದದ್ದೆಂದೇ ಸ್ವೀಕರಿಸಿರುವರು. ಹೀಗಿರುವಾಗ ದೇವನ ಅದರ್ಶನ ಕಾರಣವೇನು ? ಎಂಬ ಪ್ರಶ್ನೆಗೆ ಚೈತನ್ಯಪ್ರಭುಗಳು ಹೇಳುವಂತೆ ಮಹಾದೇವನ ಬಗೆಗೆ ಅನುರಾಗ ಉದಯವಾಗದಿರುವದೇ ಎಂದು ಹೇಳಬೇಕು. ಇದರಿಂದ ಭಕ್ತಿಯೇ ಶಿವದರ್ಶನದ ಪರಮೋಪಾಯವೆಂದು ಹೇಳಿದಂತಾಯಿತು.

ದೇವ ಜೀವರಿಬ್ಬರೂ ಚೈತನ್ಯರೂಪಿಗಳೇ ಆಗಿರುವದರಿಂದ ಅವರೀರ್ವರ ಸಂಬಂಧ ವಾಸ್ತವಿಕವಾಗಿರುವದು. ಇಂತಹ ಸಂಬಂಧವನ್ನು ಮರೆತು ಅವಾಸ್ತವಿಕ ಜಡವಸ್ತುಗಳ ಸಂಬಂಧವನ್ನಿಟ್ಟುಕೊಂಡ ಜೀವನು ಸಂಸಾರಚಕ್ರದಲ್ಲಿ ಸಿಕ್ಕುಕೊಂಡು ಅನವರತ ಕಷ್ಟನಷ್ಟಗಳನ್ನನುಭವಿಸ ಹತ್ತುವನು. ಪುನಃ ಪುಣ್ಯವಶದಿಂದ ಅವಾಸ್ತವಿಕವಾದ ಜಡವಸ್ತುಗಳ ಸಂಬಂಧವನ್ನು ತಪ್ಪಿಸಿಕೊಂಡು ಚೈತನ್ಯರೂಪಿ ಮಹಾದೇವನ ಕೂಡ ವಾಸ್ತವಿಕ ಸಂಬಂಧವನ್ನು ಬೆಳೆಸಿಕೊಂಡರೆ ಸಿಂಧು ಬಿಂದುಗಳ ಯೋಗದಂತಾಗುವಲ್ಲಿ ಸಂದೇಹವಿಲ್ಲ. ಸಾಧಕರು ಕೈಕೊಳ್ಳುವ ತಪಸ್ಯಾದಿ ಸಾಧನಗಳ ಸಾರ್ಥಕತೆಯು ಜಡಸಂಬಂಧವನ್ನು ತಪ್ಪಿಸಿಕೊಳ್ಳುವ ಪ್ರಕ್ರಿಯೆಯೇ ಆಗಿರುವದೆಂಬುದನ್ನು ಸರ್ವಥಾ ಮರೆಯುವಂತಿಲ್ಲ. ಅಂತೆಯೇ ಬುದ್ಧಿ ಮನಗಳನ್ನು ಪರಮಾತ್ಮನಲ್ಲಿಡಲು ಎಚ್ಚರ ವಹಿಸಬೇಕಾಗುವದು. **'ಮಯಿ ಮನಃ ಆಧಸ್ವ ಮಯಿ ಏವ ಬುದ್ಧಿಂ ನಿವೇಶಯ'**–ನನ್ನಲ್ಲಿಯೇ ಮನಸ್ಸನ್ನಿಡು ನನ್ನಲ್ಲಿಯೇ ಬುದ್ಧಿಯನ್ನಿಡು ಎಂದು ಭಗವಂತನು ಹೇಳಿದ್ದು ಇದಕ್ಕಾಗಿಯೇ ! ಬುದ್ಧಿಯಲ್ಲಿ ಸಂಸಾರದ ಮಹತ್ವ ಮನದಲ್ಲಿ ಸಂಸಾರದ ಚಿಂತನ ಇರುವವರೆಗೆ ಬದ್ಧಸ್ಥಿತಿಯಿಂದ ದೂರಾಗುವಂತಿಲ್ಲ. ಜೀವನು ದೇವನಿಂದ ವಿಮುಖನಾಗುವ ಕಾರಣ ಮನ–ಬುದ್ಧಿಗಳನ್ನು ರಾಗ–ದ್ವೇಷಪೂರ್ವಕ ಸಂಸಾರದಲ್ಲಿ ತೊಡಗಿಸುವದೇ ಎಂಬುದು ಅವಿಸ್ಮರಣೀಯವು.

ಮಹಾನುಭಾವಿಗಳ ಅಭಿಪ್ರಾಯದ ಪ್ರಕಾರ ಈಶಾನುಗ್ರಹದ ಸುಪರಿಣಾಮವಾಗಿ ಪರಿಶುದ್ಧವಾದ ಹೃದಯದಲ್ಲಿ ಶಿವನ ಹ್ಲಾದಿನೀಶಕ್ತಿಯು ರತ್ಯಾತ್ಮಕ ಭಕ್ತಿಯ ರೂಪದಲ್ಲಿ ಅರಳಿ ನಿಂತುಕೊಳ್ಳುವದು. ಅದೇ ಮಹಾನುಭಾವದ ಜನನಿಯೆನಿಸುವದು. ಕಾರ್ಯ–ಕಾರಣಗಳಲ್ಲಿ ಅಭೇದವಿರುವದರಿಂದ ಭಕ್ತಿರತಿಯನ್ನೇ ಮಹಾನುಭಾವವೆಂದು ಹೇಳುವದುಂಟು.

ಹ್ಲಾದಿನೀ ಯಾ ಮಹಾಶಕ್ತಿಃ ಸರ್ವಶಕ್ತಿವರೀಯಸೀ ।
ತತ್ಸಾರಭಾವರೂಪೇಯಮಿತಿ ತಂತ್ರೇ ಪ್ರತಿಷ್ಠಿತಾ ॥

ಎಂಬ ಶಿವಾಗಮೋಕ್ತಿಯು ಮೇಲೆ ಹೇಳಿದ್ದನ್ನು ಪೂರ್ಣ ಸಮರ್ಥಿಸುವದು.

**ಚತುರ್ವಿಧ ರತಿ**

ಕೆಲವರು ಭಕ್ತ್ಯಾತ್ಮಕ ರತಿಯನ್ನು ನಾಲ್ಕು ವಿಧವಾಗಿ ಹೇಳುವರು.

**೧) ಶುದ್ಧರತಿ ೨) ಕಾಮಜರತಿ ೩) ಸಂಬಂಧರತಿ ೪) ಭಯಜರತಿ.** ೧) ಯಾವ ವೈಶೇಷಿಕಕಾಮನೆಗಳಿಗೂ ಹೃದಯದಲ್ಲಿ ಅವಕಾಶಕೊಡದೆ ಶಿವನ ಅನಂತ–ಪರಮಾನಂದದಾಯಕ ಗುಣವಿಶೇಷಗಳ ಆಕರ್ಷಣ ಪರವಶತೆಯಿಂದ ಉದಯಿಸುವದೇ ಶುದ್ಧರತಿ. ೨) ರಮಣೇಚ್ಛೆಯಿಂದ ಉದಯಿಸುವ ರತಿ 'ಕಾಮಜರತಿ'. ೩) ಸಂಬಂಧಭಾವನೆಯಿಂದ

ಉದಯಿಸುವ ರತಿ ಸಂಬಂಧರತಿ. ಅದು ವಾತ್ಸಲ್ಯರತಿ, ಸಖ್ಯರತಿ ಎಂದು ಎರಡುವಿಧ. ದೇವನನ್ನು ಪುತ್ರರೂಪದಲ್ಲಿ ಭಾವಿಸುವ ಭಕ್ತನಲ್ಲಿ ಪಾಲ್ಯ–ಪಾಲಕರೂಪ ವಾತ್ಸಲ್ಯರತಿಯು, ದೇವನನ್ನು ಮಿತ್ರರೂಪದಲ್ಲಿ ಭಾವಿಸುವ ಭಕ್ತನಲ್ಲಿ ಸಖ್ಯರತಿಯು ಜನಿಸುವದು. ೪) ಸೇವ್ಯನ ಸೇವೆಯಲ್ಲಿ ತೊಡಗಿದ ಸೇವಕನಿಗೆ ತನ್ನ ಸೇವೆಯಲ್ಲಿ ಎಲ್ಲಿ ತೃಪ್ತಿಯುಂಟಾಗುವದೋ ಎಂಬ ಶಂಕೆಯಿಂದ ಭಯವುಂಟಾಗುವಂತೆ ಶಿವನ ಸೇವೆಯಲ್ಲಿ ತೊಡಗಿದ ಭಕ್ತನಿಗೆ ಉಂಟಾಗುವದು ಭಯಜರತಿಯೆನಿಸುವದು.

ಶುದ್ಧ ರತಿಯಿಂದ ಶಾಂತರಸ, ಕಾಮಜರತಿಯಿಂದ ಶೃಂಗಾರರಸ, ಸಂಬಂಧರತಿಯಿಂದ ವಾತ್ಸಲ್ಯ ಹಾಗೂ ಸಖ್ಯರಸ, ಭಯಜರತಿಯಿಂದ ದಾಸ್ಯರಸ ಉದಯಿಸುವವು. ಈ ನಾಲ್ಕು ರಸಗಳು ಒಂದೆಡೆ ಕೂಡಿದಾಗಂತೂ ಅದೊಂದು ಪ್ರಪಾನಕರಸದಂತೆ ಅತ್ಯಂತ ವಿಲಕ್ಷಣವಾದ ಆನಂದವನ್ನುಂಟುಮಾಡುವದು. ಈ ಬಗ್ಗೆ —

ಏಕದಾ ಯದ್ಯಪಿ ವ್ಯಕ್ತಮಿದಂ ರತಿಚತುಷ್ಟಯಂ ।
ತದಾ ತು ಪಾನಕರಸನ್ಯಾಯೇನ ಪರಮೋರಸಃ ॥ —ಭಕ್ತಿರಸಾಯನ

ಇಂತಹ ರಸಾನುಭವದ ವರ್ಣನ ಮಾಡುವ ಶಕ್ತಿ ಶಬ್ದಗಳಿಗಿರುವದಿಲ್ಲ.

**ತ್ರಿವಿಧಾಭಕ್ತಿ**

ಭಕ್ತಿಯನ್ನು ೧) **ಸಕಾಮ** ೨) **ನಿಷ್ಕಾಮ** ೩) **ಸಹಜ**–ಎಂದು ಮೂರು ಪ್ರಕಾರ ಹೇಳುವದುಂಟು. ೧) ತಮಗಿಷ್ಟವೆನಿಸಿದ ಲೌಕಿಕ ಧನ, ಅಧಿಕಾರ, ಕೀರ್ತಿ ಮುಂತಾದವುಗಳನ್ನು ಸಾಧಿಸುವ ಭಕ್ತಿ, ಅದು ಶಿವನನ್ನು ಪ್ರೀತಿಸುವ, ಪೂಜಿಸುವ, ಸ್ತುತಿಸುವ ಮುಂತಾದವುಗಳ ರೂಪದಲ್ಲಿ ಅಭಿವ್ಯಕ್ತವಾಗುವದು. ಅಂತೆಯೇ ಅದು 'ಸಕಾಮಭಕ್ತಿ' ಎನಿಸುವದು. ೨) ಲೌಕಿಕ ಧನ, ಅಧಿಕಾರ, ಕೀರ್ತಿ ಮುಂತಾದವೆಲ್ಲ ನಶ್ವರವೆಂದು ಭಾವಿಸಿ ಅವಾವುಗಳನ್ನೂ ಕಾಮಿಸದೆ ಮಾಡುವ ಭಕ್ತಿ ನಿಷ್ಕಾಮವೆನಿಸುವದು. ೩) ಲೌಕಿಕ ಫಲಗಳು ಬೇಕೆಂದಾಗಲಿ. ಬೇಡೆಂದಾಗಲಿ ಭಾವಿಸದೆ ಮಾಡುವ ಭಕ್ತಿ ಸಹಜವೆನಿಸುವದು.

**ದ್ವಿವಿಧಾತ್ಮಿಕಾಭಕ್ತಿ**

ಭಕ್ತ್ಯಾಚಾರ್ಯರ ಅಭಿಪ್ರಾಯದ ಪ್ರಕಾರ ಭಕ್ತಿ ಎರಡು ವಿಧ: ೧) **ಅಪರಾಭಕ್ತಿ**, ೨) **ಪರಾಭಕ್ತಿ** ಎಂದು. ಅಪರಾಭಕ್ತಿ ದ್ವೈತಾತ್ಮಿಕಾ; ಪರಾಭಕ್ತಿ ಅದ್ವೈತಾತ್ಮಿಕಾ ಆಗಿರುವದು. ಉಪಾಸಕನಾದ ಜೀವನು ಉಪಾಸ್ಯನಾದ ದೇವನಿಗಿಂತ ಸದಾ ಭಿನ್ನನೆಂದು ತಿಳಿದುಮಾಡುವದು ದ್ವೈತಭಕ್ತಿ ಅಥವಾ ಅಪರಾಭಕ್ತಿಯೆನಿಸುವದು. ಉಪಾಸಕನಾದ ಜೀವನಿಗೂ ಉಪಾಸ್ಯನಾದ ದೇವನಿಗೂ ಆತ್ಯಂತಿಕ ಭೇದವಿರುವದಿಲ್ಲವೆಂದು ತಿಳಿದು ಮಾಡುವ ಭಕ್ತಿ ಅದ್ವೈತಭಕ್ತಿ ಅಥವಾ ಪರಾಭಕ್ತಿ ಎನಿಸುವದು. ದ್ವೈತಭಕ್ತನು ತನ್ನ ಉಪಾಸ್ಯಮೂರ್ತಿಯನ್ನು ಸದಾ ಏಕದೇಶದಲ್ಲಿಯೇ ಕಾಣುವನು. ಅದ್ವೈತಭಕ್ತನು ತನ್ನ ಉಪಾಸ್ಯಮೂರ್ತಿಯನ್ನು ಪ್ರಾರಂಭದಲ್ಲಿ ಏಕದೇಶವರ್ತಿಯನ್ನಾಗಿ ಕಂಡರೂ ಬರಬರುತ್ತಾ ಸರ್ವತ್ರ ಕಾಣತೊಡಗುವನಷ್ಟೇ ಅಲ್ಲ, ತನ್ನನ್ನೂ ಸಹ ಶಿವರೂಪದಲ್ಲಿಯೇ ಕಂಡು ಅನುಸಂಧಾನ ಮಾಡಹತ್ತುವನು. ಉಪನಿಷತ್ಕಾರರು ಹೇಳುವ ಅಹಂಗ್ರಹೋಪಾಸನೆಯೇ ಇವನದಾಗುವದು. ಇದರ ವಿವರಣೆ ಷಡ್ವಿಧಭಕ್ತಿಗಳ ನಿರೂಪಣೆಯಲ್ಲಿ ಬರುವದು.

**ನವವಿಧ ಭಕ್ತಿಗಳು**

ದ್ವೈತಾತ್ಮಿಕವಾದ ಅಪರಾಭಕ್ತಿಯು ಉಪಾಸಕನ ವೃತ್ತಿ ಪ್ರವೃತ್ತಿಗನುಸಾರ ಒಂಬತ್ತು ತೆರನಾಗುವದು.

ಶ್ರವಣಂ ಕೀರ್ತನಂ ಶಂಭೋಃ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥

೧) **ಶ್ರವಣ** ೨) **ಕೀರ್ತನ** ೩) **ಸ್ಮರಣ** ೪) **ಪಾದಸೇವನ** ೫) **ಅರ್ಚನ** ೬) **ವಂದನ** ೭) **ದಾಸ್ಯ** ೮) **ಸಖ್ಯ** ೯) **ಆತ್ಮನಿವೇದನ** ಇವೇ ಒಂಬತ್ತು ತೆರನಾದ ಭಕ್ತಿಗಳು. ೧) ಸಾಧಕನ ಮನಃಪ್ರವೃತ್ತಿಯು ದೇವಾಭಿಮುಖವಾದಾಗ ಅವನಿಗೆ ಶಿವಸಂಬಂಧವಾದ ಕಥೆಗಳನ್ನು ತತ್ತ್ವವನ್ನು ಕೇಳುವಲ್ಲಿ ಆಸಕ್ತಿಯುಂಟಾಗುವದು. ಅಂತಹ ಶ್ರವಣಪ್ರೀತಿಯೇ '**ಶ್ರವಣಭಕ್ತಿ**' ಎನಿಸುವದು. ೨) ಶಿವಕಥೆಗಳ ಹಾಗೂ ಶಿವತತ್ತ್ವಗಳ ಶ್ರವಣಾನಂತರ ಅವುಗಳ ಘನತೆಯನ್ನು ಪ್ರೇಮೋತ್ಸಾಹಪುರಸ್ಸರ ವೈಖರೀವಾಣಿಯಿಂದ ಹೊಗಳುವದೇ '**ಕೀರ್ತನಭಕ್ತಿ**' ಎನಿಸುವದು. ೩) ಶಿವಲೀಲೆ, ಶಿವತತ್ತ್ವಗಳನ್ನು ಕೇಳುವಲ್ಲಿ ಕೀರ್ತಿಸುವಲ್ಲಿ ಪ್ರೇಮಾದರಗಳು ಹೆಚ್ಚಿದಂತೆ ಶಿವನ ನೆನೆಹು ಮನದಲ್ಲಿ ಸದಾ ನೆಲೆಸುವಂತಾಗುವದು ಸ್ವಾಭಾವಿಕ. ಯಾವದಾದರೊಂದು ಇಷ್ಟವಸ್ತುವಿನ ನಿಯೋಗವಾದಾಗ ಅದು ಸ್ಮೃತಿರೂಪದಲ್ಲಿ ಮನದಲ್ಲುಳಿಯದಿರುವದು ಸಂತಾಪಕರವೆಂಬುದು ಸರ್ವಾನುಭವಸಿದ್ಧವೇ ! ಶಿವಭಕ್ತನು ತನ್ನ ಆರಾಧ್ಯಮೂರ್ತಿ ಮಹಾದೇವನನ್ನು ಮನದಲ್ಲಿಟ್ಟುಕೊಳ್ಳುವದೇ '**ಸ್ಮರಣಭಕ್ತಿ**' ಎನಿಸುವದು. ೪) ತನ್ನಿಷ್ಟದೇವನನ್ನು ಕೇವಲ ಮನದಲ್ಲಿ ಸ್ಮೃತಿರೂಪದಲ್ಲಿಟ್ಟುಕೊಳ್ಳುವಲ್ಲಷ್ಟೇ ಭಕ್ತನಿಗೆ ತೃಪ್ತಿಯಾಗದು. ಒಳಗೆ ನಿರಾಕಾರಸ್ಥಿತಿಯಲ್ಲಿದ್ದ ಮಹಾದೇವನನ್ನು ಸಾಕಾರಸ್ಥಿತಿಯಲ್ಲಿ ಮುಂದಿರಿಸಿಕೊಂಡು ಅವನ ಅಡಿಗಳ

ಸೇವೆಯಲ್ಲಿ ತೊಡಗುವದೇ '**ಪಾದಸೇವನಭಕ್ತಿ**' ಎನಿಸುವದು. ೫) ಅಂತರಂಗದ ಶಿವರತಿಲತೆಯು ಕುಡಿವರಿದು ಬೆಳೆಯುತ್ತ ಸಾಗಿದಂತೆ ಸಾಧಕನು ವಿವಿಧ ಕ್ರಿಯೆಗಳ ಮೂಲಕ ತನ್ನ ಆರಾಧ್ಯಮೂರ್ತಿಯೊಡನೆ ಸಂಬಂಧ ಬೆಳೆಸಿಕೊಳ್ಳುವನು. ಸಮಲಂಕೃತ ಪೀಠದಲ್ಲಿ ಆರಾಧ್ಯಮೂರ್ತಿಯನ್ನು ಕೂಡ್ರಿಸಿ ಅಷ್ಟವಿಧಾರ್ಚನೆ ಷೋಡಶೋಪಚಾರ ಪೂರ್ವಕ ಅರ್ಚಿಸಹತ್ತುವನು. ಅದೇ '**ಅರ್ಚನಭಕ್ತಿ**' ಎನಿಸುವದು. ೬) ಸಾಧಕನು ತನ್ನ ಆರಾಧ್ಯಮೂರ್ತಿಯ ಬಗೆಗೆ ಸರ್ವೋತ್ಕೃಷ್ಟ ಭಾವನೆಯನ್ನು ತಾಳಿದಾಗ ಅಲ್ಲಿ ಸ್ವಾಪಕರ್ಷ ಬೋಧಾನುಕೂಲ ವ್ಯಾಪಾರವು ನಡೆಯುವದು. ಅರ್ಥಾತ್ ನಾನು ಅಪಕೃಷ್ಟ ನೀನು ಉತ್ಕೃಷ್ಟ ಎಂಬ ಆಂತರಿಕ ಭಾವನೆಯನ್ನು ಬಹಿರಂಗದಲ್ಲಿ ಕ್ರಿಯಾರೂಪದಲ್ಲಿ ಅಭಿವ್ಯಕ್ತಗೊಳಿಸುವದೇ '**ವಂದನಭಕ್ತಿ**' ಎನಿಸುವದು. ೭) ಆರಾಧ್ಯ ಮೂರ್ತಿಯನ್ನು ತನ್ನ ಪ್ರಭುವೆಂದು ತಿಳಿದಾಗ ಆರಾಧಕನು ತಾನು ಅವನ ಕಿಂಕರನೆಂದು ತಿಳಿದು ವರ್ತಿಸಹತ್ತುವನು. ಅದೇ '**ದಾಸ್ಯಭಕ್ತಿ**' ಎನಿಸುವದು. ೮) ದೈವೀರತಿಯದು ಇನ್ನಿಷ್ಟು ಬೆಳೆದು ನಿಂತುಕೊಂಡಾಗ ಸಾಧಕನು ತನ್ನ ಆರಾಧ್ಯಮೂರ್ತಿ ಯೊಡನೆ ಮೈತ್ರೀಭಾವವನ್ನು ತಾಳಿ ವರ್ತಿಸಹತ್ತುವನು. ತನಗಿಂತ ಶ್ರೇಷ್ಠ ಅಥವಾ ಕನಿಷ್ಠ ಎಂಬ ದ್ವಂದ್ವಭಾವವನ್ನು ತೊರೆದು ತನ್ನ ಸಮಭಾವದಿಂದಿರುವದೇ ಮೈತ್ರೀಭಾವ. ಅದೇ '**ಸಖ್ಯಭಕ್ತಿ**' ಎನಿಸುವುದು. ೯) ದ್ವೈತಭಕ್ತಿಯೆನಿಸಿದ ಅಪರಾ ಭಕ್ತಿಯು ಬೆಳೆದು ಕೊನೆಯ ಹಂತಕ್ಕೆ ಬಂದು ಮುಟ್ಟಿದಾಗ ಸಾಧಕನು ತನಗೆ ಸಂಬಂಧಪಟ್ಟ ವಸ್ತುಗಳನ್ನೆಲ್ಲ ಆರಾಧ್ಯಮೂರ್ತಿಗೆ ಅರ್ಪಿಸುವದರ ಜೊತೆಗೆ ತನ್ನನ್ನೂ ಕೂಡ ಅರ್ಪಿಸುವ ಸ್ನೇಹಭಾವವನ್ನು ತಾಳುವನು. ಅದೇ '**ಆತ್ಮನಿವೇದನಭಕ್ತಿ**' ಎನಿಸುವದು.

ಈ ಒಂಬತ್ತು ತೆರನಾದ ಸವಿಶೇಷಭಕ್ತಿಗಳು ಸಾಧಕಭಕ್ತನ **ಇಹಾಮುತ್ರ ಕಾಮನೆಗಳನ್ನು** ಈಡೇರಿಸುವಲ್ಲಿ ಮಹತ್ವದ ಪಾತ್ರವಹಿಸುವದಲ್ಲದೆ ಕೊನೆಗೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗೂ ಸಾಯುಜ್ಯ ಎಂಬ ಚತುರ್ವಿಧಮುಕ್ತಿಯನ್ನು ಕೊಡುವಲ್ಲಿ ತಮ್ಮ ವೈಶಿಷ್ಟ್ಯವನ್ನು ತೋರಿಸುವವು. ದ್ವೈತಾತ್ಮಕ ಅಪರಾಭಕ್ತಿಯನ್ನನುಸರಿಸುವದರ ಪ್ರಯೋಜನವಿಷ್ಟೇ.

**ಪರಾಭಕ್ತಿಯ ಅಂಗಗಳು : ಷಡ್ವಿಧಭಕ್ತಿಗಳು**

ಶ್ರದ್ಧಾ, ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸ ಎಂಬಿವೇ ಷಡ್ವಿಧ ಭಕ್ತಿಗಳು.

ಪರಾಭಕ್ತಿಯು ಅಪರಾಭಕ್ತಿಯಂತೆ ಕೇವಲ ಪುರುಷಾರ್ಥಕವಾಗದೆ ಸ್ವಯಂ ಪುರುಷಾರ್ಥರೂಪವಾಗಿರುವದು. ಈ ಬಗ್ಗೆ ಮಹಾನುಭಾವಿಗಳಾದ ಮಗ್ಗೆಯ ಮಾಯಿದೇವಪ್ರಭುಗಳು '**ಪಂಚಮಃ ಪುರುಷಾರ್ಥೋಽಹಿ ಭಕ್ತಿಃ ಶೈವೀಸನಾತನೀ**' (ಶಿವಾನು ಭಾವಸೂತ್ರ) ಎಂದು ಉದ್ಘೋಷಿಸಿದ್ದು ಅವಿಸ್ಮರಣೀಯವು. ಇತರ ದಾರ್ಶನಿಕರು ಹೇಳುವ 'ಮೋಕ್ಷ' ಎಂಬುವದು ಬಂಧ ದುಃಖ ನಿವೃತ್ತಿ ಮಾತ್ರವಾಗಿರುವದಲ್ಲದೆ ಶಿವತತ್ತ್ವದೊಡನೆ ಒಂದಾಗಿ ಉಚ್ಚತಮವಾದ ಸಮರಸ ಸುಖರೂಪವಾಗಿರುವದಲ್ಲ. 'ರಸೋವೈಸಃ' ಎಂಬ ಉಪನಿಷದ್ವಾಕ್ಯಾನುಸಾರ ಶಿವನು ಪರಿಪೂರ್ಣ ರಸರೂಪನು. ಜೀವನೂ ಶಿವನ ಅಂಗವಾಗಿದ್ದ ಕಾರಣ ರಸರೂಪನೇ ಆಗಿರುವನೆಂಬುವಲ್ಲಿ ಸಂದೇಹವಿಲ್ಲ. ಆದರೆ ಶಿವನು ಅಪರಿಚ್ಛಿನ್ನ ರಸರೂಪನಾಗಿದ್ದರೆ ಜೀವನು ಪರಿಚ್ಛಿನ್ನ ರಸ ರೂಪನಾಗಿರುವನು. ಇಂಥ ಅವಸ್ಥೆಯಲ್ಲಿಯೇ ಜೀವನು ಜನನ–ಮರಣರೂಪ ಸಂಸಾರ ಬಂಧನಕ್ಕೊಳಗಾಗಿ ಅನಂತ ತೊಂದರೆ ಗಳ ಅನುಭವ ಪಡೆಯುವವನಾಗುವನು. ಹೀಗೆ ಕಾಲ ಗತಿಸುತ್ತಿರುವಾಗ ಜನ್ಮಜನ್ಮಾಂತರ ಪುಣ್ಯಪ್ರಭಾವಕ್ಕೊಳಗಾದ ಜೀವನು ಪ್ರತ್ಯಕ್ಷ ಶಿವನೆನಿಸಿದ ಗುರುವಿನ ಕಾರುಣ್ಯಕ್ಕೊಳಗಾಗಿ ಶಿವಸಂಸ್ಕಾರ ಪಡೆದ ನಂತರ ಅಂಗಸಂಜ್ಞಿತನಾಗಿ ವಿಷಮಾಭಿಮುಖ ಸ್ಥಿತಿ ಯಿಂದ ಲಿಂಗಾಭಿಮುಖ ಸ್ಥಿತಿಯನ್ನು ಹೊಂದಿ ತನ್ನಲ್ಲಿ ಸ್ವಾಭಾವಿಕವಾಗಿದ್ದ ಭಕ್ತಿಶಕ್ತಿಯನ್ನು ಅರಳಿಸಿಕೊಳ್ಳುತ್ತ ಮುಂದೆ ಸಾಗಿ ತಾನೂ ಕೊನೆಗೆ ಅಪರಿಚ್ಛಿನ್ನ ರಸರೂಪವೇ ಆಗುವನು. ಆಗ ಶಿವರಸ-ಜೀವರಸ ಇವೆರಡರಲ್ಲಿ ಯಾವ ಭೇದವೂ ಉಳಿಯದೆ ಎರಡೂ ಸಮರಸರೂಪವಾಗುವದೇ ಲಿಂಗಾಂಗ ಸಾಮರಸ್ಯವೆನಿಸುವದು. ಲಿಂಗ-ಅಂಗಗಳಲ್ಲಿ ನೀರು-ತೆರೆ, ಸುವರ್ಣ-ಆಭರಣ ಗಳಂತಿದ್ದ ಭಿನ್ನಾಭಿನ್ನಸ್ಥಿತಿಯು ಲುಪ್ತವಾಗಿ ಕೇವಲ ಅಭಿನ್ನಸ್ಥಿತಿಯುಳಿದುಬಿಡುವದು. ಅಗಲಿದ್ದು ಕೂಡುವದು. ಕೂಡಿ ಅಗಲ ದಿರುವದು ಸಮರಸದ ಸಲ್ಲಕ್ಷಣ.

ಇಂತಹ ಚರಮ–ಪರಮಸಿದ್ಧಿಯನ್ನು ಪಡೆಯುವುದಕ್ಕಾಗಿಯೇ ಸಾಧಕಾಂಗನು ಷಟ್‌ಸ್ಥಲ ಪಥದಲ್ಲಿ ನಡೆಯಬೇಕಾಗು ವದು. ಆಗ ಅವನು ಅನುಸರಿಸುವ ಭಕ್ತಿಯು ಲಿಂಗಗತ ಶಕ್ತಿಗಿಂತ ಶ್ರೇಷ್ಠವಾದುದು. ಲಿಂಗಗತ ಶಕ್ತಿ ಪ್ರವೃತ್ತಿಪರ, ಅಂಗಗತ ಭಕ್ತಿ ನಿವೃತ್ತಿಪರ. ಲಿಂಗಗತಶಕ್ತಿಯಿಂದ ಪ್ರಪಂಚದ ಸೃಷ್ಟಿ,ಅಂಗಗತ ಭಕ್ತಿಯಿಂದ ಪ್ರಪಂಚದ ವಿಲಯ. ಲಿಂಗಗತ ಶಕ್ತಿ ಅಧೋ ಮುಖಿ,ಅಂಗಗತಿ ಭಕ್ತಿ ಊರ್ಧ್ವಮುಖಿ. ಲಿಂಗಗತ ಶಕ್ತಿ ಮಾಯೆ, ಅಂಗಗತ ಭಕ್ತಿ ನಿರ್ಮಾಯೆ. ಹೀಗೆ ಶಕ್ತಿ–ಭಕ್ತಿಗಳಲ್ಲಿ ಭೇದ ವಿರುವದರಿಂದ ಶಕ್ತಿಗಿಂತ ಭಕ್ತಿಯೇ ಶ್ರೇಷ್ಠವಾಗಿರುವದೆಂದು ಅನುಭಾವಿಗಳು ಹೇಳಿರುವರು. ಈ ಬಗ್ಗೆ '**ಪ್ರವೃತ್ತಾ ಶಕ್ತಿರಾ ಖ್ಯಾತಾ ನಿವೃತ್ತಾ ಭಕ್ತಿರುಚ್ಯತೇ**' ಎಂಬ ಶಿವಾಗಮೋಕ್ತಿಯು ಇಲ್ಲಿ ಸ್ಮರಣಾರ್ಹವು. ಭಕ್ತಿಶಕ್ತಿಯ ವಿಕಾಸಕ್ರಮವು ಮುಂದೆ ವಿವ ರಿಸಿದಂತಿರುವದು.

೧) **ಶ್ರದ್ಧಾಭಕ್ತಿ :** ಮೊದಲು ಲಿಂಗದಲ್ಲಿ ಅವಿರಳಭಾವದಿಂದಿದ್ದ ಅಂಗನು ಲಿಂಗಗತ ಶಕ್ತಿ-ವಿಲಾಸದ ನಿಮಿತ್ತವಾಗಿ ಲಿಂಗದಿಂದಗಲಿ ಅಧೋಮುಖನಾಗಿಳಿದುಬಂದು ಮಲತ್ರಯದಿಂದ ಆವೃತ್ತನಾಗಿ ಜೀವನೆನಿಸುವನು. ಅನಂತ ಕಷ್ಟಗಳಿಗೆ ಗುರಿ

ಯಾಗುವನು. ಆಮೇಲೆ ಪ್ರತ್ಯಕ್ಷ ಶಿವರೂಪಿ ಗುರುವಿನ ದಯೆಯಿಂದ ಸುಸಂಸ್ಕೃತನಾಗಿ ಅಂಗ ಸಂಜ್ಞಿತನಾಗುವನು. ಆಗ ಅವನಲ್ಲಿದ್ದ ಭಕ್ತಿಶಕ್ತಿಯು ಶ್ರದ್ಧಾ ರೂಪದಲ್ಲಿ ಅಂಕುರಿಸುವದು. ಅದರ ಸುಪರಿಣಾಮವಾಗಿ ಮೊದಲು ವಿಷಯಾಭಿಮುಖವಾಗಿದ್ದ ಇಂದ್ರಿಯ ಪ್ರವೃತ್ತಿಗಳೆಲ್ಲವು ಲಿಂಗಾಭಿಮುಖಿಗಳಾಗುವವು. ಲಿಂಗೇತರ ಮತ್ತಾವ ವಿಷಯಗಳಲ್ಲಿಯೂ ಹರಿಯದಂತಹ ಸಾತ್ವಿಕ ಮನೋವೃತ್ತಿಯೇ 'ಶ್ರದ್ಧೆ'ಯೆನಿಸುವದು. ಅಂತಹ ಶ್ರದ್ಧಾವಂತನಾದವನೇ ಭಕ್ತನು. ಅವನು ಆಚಾರಾತ್ಮಕಲಿಂಗಮೋಹಿಯಾಗಿ ಉಪಾಸನೆ ಮಾಡಹತ್ತುವನು. ಆಚಾರಲಿಂಗೋಪಾಸನೆಯೆಂಬುದು ಮತ್ತೇನೂ ಅಲ್ಲ. ಅಂಗದಲ್ಲಿ ಲಿಂಗಕ್ರಿಯೆಗಳನ್ನು ಅಳವಡಿಸಿಕೊಳ್ಳುವ ಪ್ರಕ್ರಿಯಾರೂಪವೇ ಅದು. ಅದರಿಂದ ಜಡಕಾಯಗುಣಗಳೆಲ್ಲ ನಷ್ಟವಾಗಿ ಪರಿಶುದ್ಧತೆ ನೆಲೆಗೊಳ್ಳಲವಕಾಶ ದೊರೆಯುವುದು.

ಭಕ್ತನಾದರೆ ಬಾಳೆಯ ಹಣ್ಣಿನಂತಿರಬೇಕು. ಭಕ್ತನಾದರೆ ಬೆಲ್ಲದ ಕುಳ್ಳಿಯಂತಿರಬೇಕು.
ಭಕ್ತನಾದರೆ ಮಾವಿನ ಫಲದಂತಿರಬೇಕು. ಇಂತಪ್ಪಾತನೆ ಸದ್ಭಕ್ತ.
ಕಾಡಿನೊಳಗಾದ ಶಂಕರಪ್ರಿಯ ಚನ್ನಕದಂಬಲಿಂಗ ನಿರ್ಮಾಯ ಪ್ರಭುವೇ !

ಸದಾಚಾರದಲ್ಲಿ ನಡೆವವನ, ಶಿವನಲ್ಲಿ ಭಕ್ತಿಯಾಗಿಪ್ಪವನ, ಶಿವಲಾಂಛನ ಕಂಡಲ್ಲಿ ವಂದನೆ ಗೆಯ್ಯುತ್ತಿಪ್ಪವನ,
ಗುರುಲಿಂಗಜಂಗಮವ ಒಂದೇ ಭಾವದಲ್ಲಿ ಕಂಡು, ಭೃತ್ಯಾಚಾರಯುಕ್ತನಾಗಿರಬಲ್ಲರೆ ಭಕ್ತಸ್ಥಲವೆಂಬೆನಯ್ಯ,
ಮಹಾಲಿಂಗಗುರುಶಿವಸಿದ್ಧೇಶ್ವರಪ್ರಭುವೇ

ಮಹಾನುಭಾವಿಗಳ ಇವೆರಡು ವಚನಗಳು ಸದ್ಭಕ್ತನ ಸಲ್ಲಕ್ಷಣವನ್ನು ಎತ್ತಿ ತೋರಿಸುವವು. ಭಕ್ತಾಂಗನಲ್ಲಿ ಭಕ್ತಿಶಕ್ತಿಯು ಶ್ರದ್ಧಾರೂಪ ತಾಳುವುದು ಭಕ್ತಿ ವಿಕಾಸದ ಮೊದಲನೆಯ ಹಂತ.

೨) **ನಿಷ್ಠಾಭಕ್ತಿ :** ಶ್ರದ್ಧಾಭಕ್ತಿಯಲ್ಲಿ ಸ್ಥಿರತ್ವವುಂಟಾದಾಗ ಅದು ನಿಷ್ಠಾಭಕ್ತಿಯೆನಿಸುವದು. ಅಂತಹ ಭಕ್ತಿಸಂಪನ್ನನು 'ಮಹೇಶ'ನೆನಿಸುವನು. ಆಗ ಅವನು ತನ್ನ ಕರಣಗಳ ಮೇಲೆ ಪ್ರಭುತ್ವ ಸ್ಥಾಪಿಸಿ ಅವುಗಳ ಗುಣಗಳನ್ನೆಲ್ಲ ಇಲ್ಲದಂತೆ ಮಾಡುವನು. ಅದಕ್ಕಾಗಿ ಮಹೇಶನ ಕರಣಂಗಳಿಗೆ ಲಿಂಗೇತರ ವಿಷಯಗಳಲ್ಲಿ ಹರಿಯಲು ಎಷ್ಟೂ ಅವಕಾಶ ದೊರೆಯದಂತಾಗುವದು. ಆಗ ಅರಿವಿನ ಕಣ್ ತೆರೆಯುವಲ್ಲಿ ವಿಲಂಬವಾಗುವದಿಲ್ಲ. ಅರಿವೇ ಗುರುವೆನಿಸುವದರಿಂದ ಮಹೇಶನು ಗುರುಲಿಂಗಪೂಜಕನಾಗುವನು. ಇಲ್ಲಿ ಗುರುಲಿಂಗಪೂಜೆಯೆಂದರೆ ಆಚಾರಕ್ಕೆ ವಿಚಾರದ ಸಂಬಂಧ ಮಾಡುವ ಪ್ರಕ್ರಿಯೆಯದು. ಈ ಬಗ್ಗೆ ತೋಂಟದ ಸಿದ್ಧಲಿಂಗ ಶಿವಯೋಗಿಗಳು—

ಅನೃತ ಅನಾಚಾರ ಅನ್ಯಹಿಂಸೆ ಪರಧನ ಪರಸ್ತ್ರೀ ಪರನಿಂದೆ ಇವ ಬಿಟ್ಟು ಲಿಂಗನಿಷ್ಠೆಯಿಂದ ಶುದ್ಧಾತ್ಮನಾಗಿರಬಲ್ಲಡೆ
ಮಹೇಶಸ್ಥಲವೆಂಬೆನಯ್ಯಾ ಮಹಾಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ !
ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ದಯಾ, ಕ್ಷಮಾ, ಪೂಜಾ, ಜಪ, ಧ್ಯಾನ ಈ ಹತ್ತುಧರ್ಮಗಳು
ಮಹೇಶನಲ್ಲಿ ಪೂರ್ಣ ನೆಲೆಸುವವು. ನಿಷ್ಠಾಭಕ್ತಿಯ ಪರಿಪಕ್ವತೆಯ ಸುಪರಿಣಾಮವಿದು.

ಶ್ರದ್ಧಾಭಕ್ತಿಯು ನಿಷ್ಠೆಯ ರೂಪವನ್ನು ತಾಳುವದು ಭಕ್ತಿವಿಕಾಸದ ಎರಡನೆಯ ಹಂತ.

೩) **ಅವಧಾನ ಭಕ್ತಿ:** ನಿಷ್ಠಾಭಕ್ತಿಯ ವಿಕಾಸವೇ 'ಅವಧಾನಭಕ್ತಿ'ಯೆನಿಸುವದು. ಅಂತಹ ಭಕ್ತಿಸಂಪನ್ನನೇ ಪ್ರಸಾದಿ. ಅವನ ಮನಸ್ಸು ಸದಾ ಪ್ರಸನ್ನವಾಗಿರುವದು. ಅದರ ಸುಪರಿಣಾಮವಾಗಿಯೇ ಅವನು ಲಿಂಗಕ್ಕರ್ಪಿತವಾಗದ್ದನ್ನು ಅಂಗಕ್ಕೆ ಕೊಳ್ಳದಿರುವಲ್ಲಿ ಎಚ್ಚರ ತಾಳುವನು. ಅದೇ ಅವಧಾನವೆನಿಸುವದು. ಒಂದೇ ತತ್ತ್ವದ ಮೂರು ರೂಪಾದ ಗುರುಲಿಂಗ ಜಂಗಮರಿಗೆ ಅರ್ಪಿಸಿದ್ದನ್ನೇ ಶುದ್ಧ, ಸಿದ್ಧ, ಪ್ರಸಿದ್ಧಪ್ರಸಾದರೂಪದಲ್ಲಿ ಸೇವಿಸಿ ಸಂತೃಪ್ತನಾಗಿರುವದೇ ಪ್ರಸಾದಿಯ ಸಲ್ಲಕ್ಷಣ. ಪ್ರಸಾದಿಯು ಶಿವಲಿಂಗಪೂಜಕನಾಗಿರುವನು. ಅಂಥವನ ದೃಷ್ಟಿಯೆಲ್ಲ ಶಿವಮಯವೇ ಆಗಿದ್ದ ನಿಮಿತ್ತ ಸೃಷ್ಟಿಯೆಲ್ಲ ಅವನಿಗೆ ಶಿವರೂಪವೇ ಆಗುವದು. ಭಕ್ತಿಗೆ ಶಿವಪ್ರಸಾದ, ಶಿವಪ್ರಸಾದಕ್ಕೆ ಭಕ್ತಿ ಮೂಲವಾಗಿದ್ದುದರಿಂದ ಅವೆರಡರ ಸಂಬಂಧವನ್ನು ಬೀಜಾಂಕುರಗಳ ಸಂಬಂಧಕ್ಕೆ ಹೋಲಿಸಿ ಹೇಳುವದುಂಟು. ಅದಕ್ಕೆ ಬೀಜಾಂಕುರನ್ಯಾಯವೆಂದು ಹೇಳುವರು. ಷಟ್‌ಸ್ಥಲಜ್ಞಾನ ಚಕ್ರವರ್ತಿ ಚನ್ನಬಸವಣ್ಣನವರು—

ಲಿಂಗಪ್ರಸಾದ ಸೋಂಕಿನಿಂದ ಬಿಬ್ಬಿಬಾಚಯ್ಯ ಸ್ವಯಂಲಿಂಗವಾದ; ಲಿಂಗಪ್ರಸಾದ ಸೋಂಕಿನಿಂದ ವಿಷವನಮೃತವ ಮಾಡಿ ಮೆರೆದ ಬಸವಣ್ಣ;
ಇದು ಕಾರಣ ಕೂಡಲಚೆನ್ನಸಂಗಯ್ಯ, ನಿಮ್ಮ ಪ್ರಸಾದದ ಮಹಿಮೆ ದೇವಕ್ರಿಯೆಯ ಮೀರಿದುದ ನಾನೇನೆಂಬೆನಯ್ಯ !

ಪ್ರಾಕೃತಿಕ ಕರಣಗಳ ಮರೆಯಲ್ಲಿದ್ದ ಜ್ಯೋತಿರ್ಲಿಂಗವನ್ನು ಬಹಿಷ್ಕರಿಸಿ ಲಿಂಗಕರಣಗಳನ್ನೆಲ್ಲ ಅಂಗಕರಣಂಗಳ ರೂಪದಲ್ಲಿ ಪರಿವರ್ತನಗೊಳಿಸಿ ಅನವರತ ಲಿಂಗಪ್ರಸಾದವನ್ನೇ ಗ್ರಹಿಸುವದು **ಪ್ರಸಾದಿಯ ಸಲ್ಲಕ್ಷಣ.**

೪) **ಅನುಭವಭಕ್ತಿ :** ಅವಧಾನ ಭಕ್ತಿಯ ವಿಕಾಸವೇ 'ಅನುಭವಭಕ್ತಿ'ಯೆನಿಸುವದು. ಅಂತಹ ಭಕ್ತಿಯುತನೇ 'ಪ್ರಾಣಲಿಂಗಿ'ಯು. ಪ್ರಾಣ ಪ್ರಾಕೃತ ವಾಯುರೂಪದಲ್ಲಿ ದೇಹಭಾಗದಲ್ಲಿ ಹರಿದಾಡುತ್ತಿರುವಾಗ ಜೀವಭಾವವಿರುವದು. ಅಂತಹ

ಪ್ರಾಣವಾಯುವನ್ನು ಪ್ರಾಣಾಯಾಮ ಮುಖಾಂತರ ಜಯಿಸಿ ಅದರಲ್ಲಿ ಲಿಂಗಪ್ರತಿಷ್ಠೆ ಮಾಡಿಕೊಂಡವನು 'ಪ್ರಾಣಲಿಂಗಿ'ಯೆನಿಸುವನು. ಬರಬರುತ್ತ ಪ್ರಾಣಕ್ಕೂ ಲಿಂಗಕ್ಕೂ ಅಭಿನ್ನತೆಯುಂಟಾದಾಗ ಲಿಂಗಪ್ರಾಣಿಯೆನಿಸುವನು. ಇವನು ಜಂಗಮ ಲಿಂಗ ಪೂಜಕನಾಗುವನು. ಅವನ ಪೂಜೆಯೆಂಬುದು ಶಿವಜ್ಞಾನಭಾನುವಿನ ಮಹಾಪ್ರಕಾಶರೂಪ ಅನುಭವವನ್ನು ತನ್ನ ಒಳಹೊರಗೆಲ್ಲ ನೆಲೆಗೊಳಿಸುವ ಪ್ರಕ್ರಿಯಾರೂಪದ್ದು. ಜ್ಞಾನದ ಪರಿಪಕ್ವಸ್ಥಿತಿಯೆನಿಸಿದ ಅನುಭವವನ್ನು ಮೈಗೂಡಿಸಿಕೊಂಡವನನ್ನು ಕಾಲ-ಕರ್ಮಗಳು, ಮಾಯಾ-ಮೋಹಗಳು,ಭವಭಾವಗಳು ಸರ್ವಥಾ ಸ್ಪರ್ಶಿಸಲಾರವು. ತನುಗುಣಗಳನ್ನೆಲ್ಲ ಸದೆಬಡೆದು ಪರಮಾರ್ಥ ಗುಣಗಳನ್ನೆಲ್ಲ ಅರಳಿಸಿಕೊಂಡು ಆತ್ಯಂತಿಕ ಸುಖಾನುಭವವನ್ನು ಪಡೆದ ಭಾಗ್ಯವಂತನೇ ಪ್ರಾಣಲಿಂಗಿ.

ಪ್ರಾಣದ ಕಳೆ ಪ್ರಕೃತಿಯಲ್ಲಡಗಿ ಪ್ರಾಕೃತಿಕ ಕಳೆ ಪ್ರಾಣದಲ್ಲಡಗಿ
ಪ್ರಾಣಪ್ರಕೃತಿಗಳ ಕಳೆಯ ಲಿಂಗವೆಂದರಿದು ಅಂಗವಿಸಿ ಅನುಭವಿಸ ಬಲ್ಲವರ ಲೆಂಕನಾಗಿಪ್ಪೆನಯ್ಯ ರಾಮನಾಥ !

ಅನುಭವಭಕ್ತಿಯ ಘನತೆಯನ್ನೆತ್ತಿ ತೋರಿಸುವದೇ ದಾಸಿಮಾರ್ಯ ಶರಣರ ಮಹೋದ್ದೇಶ. ಅವಧಾನ ಭಕ್ತಿಯು ಅನುಭವ ರೂಪ ಧರಿಸುವದು ಭಕ್ತಿವಿಕಾಸದ ನಾಲ್ಕನೆಯ ಹಂತ.

**೫) ಆನಂದಭಕ್ತಿ :** ಪ್ರಾಣಲಿಂಗಿಸ್ಥಲದ ಅನುಭವ ಭಕ್ತಿಯು ವಿಕಾಸಹೊಂದಿ 'ಆನಂದಭಕ್ತಿ' ಎನಿಸುವದು. ಅಂತಹ ಭಕ್ತಿಯುಳ್ಳವನೇ ಶರಣನು. ಈ ಸ್ಥಲದಲ್ಲಿ ಅಂಗಲಿಂಗಗಳ ಸಂಬಂಧ ಸತಿ-ಪತಿಭಾವರೂಪದ್ದಾಗಿರುವದು. ಶರಣಾಂಗನು ಸತೀ ರೂಪದಲ್ಲಿ ಲಿಂಗಪತಿಯೊಡನೆ ಕೂಡಿಕೊಂಡು ಅನುಭವಿಸುವ ಆನಂದ ವಾಗತೀತವಾಗಿರುವದು. ಆಧ್ಯಾತ್ಮಿಕ ದಾಂಪತ್ಯ ಜೀವನ ದಲ್ಲಿ ಸಂಭವಿಸುವ ಆನಂದ ಅಲೌಕಿಕ ದಾಂಪತ್ಯದಲ್ಲಿ ಸಂಭವಿಸುವ ಆನಂದದಂತೆ ಕ್ಷಣಿಕವಾದುದಲ್ಲ. ಅಕ್ಷಯ ಅನಂತವಾಗಿರುವ ದದು. ಉಪನಿಷತ್ಕಾಲದ ಋಷಿಯೊಬ್ಬನು '**ಯಥಾಸ್ತ್ರೀಯಾ ಸಂಪರಿಷ್ವಕ್ತಃ ನ ಬಾಹ್ಯಂ ನಾಂತರಂ ವೇದ**' ಎಂಬ ಮಂತ್ರವಾಕ್ಯ ಖಂಡದಲ್ಲಿ ಲೌಕಿಕ ಸತಿಪತಿಗಳು ಪರಸ್ಪರಾನುರಾಗ ವಶದಿಂದ ಕೂಡಿ ಒಂದಾದಾಗ ಬಾಹ್ಯಾಭ್ಯಂತರದ ಪರವೆಯಿಲ್ಲದೆ ಆನಂದ ನಿರ್ಭರರಾಗುವಂತೆ ಶಿವಜೀವರ ಸಮ್ಯಕ್ ಯೋಗದಲ್ಲಿಯೂ ಇಂತಹ ನಿಬ್ಬೆರಗಿನ ಸ್ಥಿತಿಯುಂಟಾಗುವದೆಂದು ಹೇಳಿದ್ದುಂಟು. ಆದರೆ ಕಾಂತಾನಂದಕ್ಕೂ ಬ್ರಹ್ಮಾನಂದಕ್ಕೂ ಇರುವ ಅಂತರ ಆಕಾಶ-ಪಾತಾಳದಷ್ಟು. ಈ ಲೋಕದಲ್ಲಿ ಕಾಂತಾನಂದಕ್ಕಿಂತ ಹೆಚ್ಚಿನ ಆನಂದ ಮತ್ತೊಂದಿಲ್ಲದಿರುವದರಿಂದ ಅದನ್ನೇ ಬ್ರಹ್ಮಾನಂದಕ್ಕೆ ದೃಷ್ಟಾಂತವನ್ನಾಗಿಟ್ಟುಕೊಳ್ಳುವದು ಅನಿವಾರ್ಯ ವಾಯಿತು.

ಹಿಂದಿನ ಜನ್ಮಗಳಲ್ಲಿ ದಟ್ಟವಾಗಿ ಹರಡಿದ ಮರವೆಯ ಕಾರ್ಗತ್ತಲೆಯೆಲ್ಲ ಹರಿದು ಚದುರಿಹೋಗಿ ಸರ್ವತ್ರ ಮಹಾನು ಭಾವ ಮಹಾಪ್ರಕಾಶವು ಪಸರಿಸಿಕೊಂಡಿರುವಾಗ ಅಂಗಸತಿಗೆ ಲಿಂಗಪತಿಯ ವಿರಹದುಃಖದ ಕಲ್ಪನೆಯು ಕೂಡ ಬಹುದೂರ ಉಳಿದುಬಿಡುವದು. ಸರ್ವಾಂಗಲಿಂಗಿಯಾದ ಶರಣನ ಸ್ಥಿತಿಯೇ ಅಂತಹದು,

'ಹರಿವ ನದಿಗೆ ಮೈಯೆಲ್ಲ ಕಾಲು, ಉರಿವ ಅಗ್ನಿಗೆ ಮೈಯೆಲ್ಲ ನಾಲಗೆ.
ಬೀಸುವ ಗಾಳಿಗೆ ಮೈಯೆಲ್ಲ ಕೈ, ಗುಹೇಶ್ವರಾ ನಿಮ್ಮ ಶರಣಂಗೆ ಸರ್ವಾಂಗಲಿಂಗ,

ಎಂಬ ಪ್ರಭುದೇವರ ದಿವ್ಯವಾಣಿಯು ಇಲ್ಲಿ ಸ್ಮರಣಾರ್ಹವಾಗಿದೆ. ಶರಣ ಪೂಜಿಸುವ ಲಿಂಗ 'ಪ್ರಸಾದಲಿಂಗ' ಅಂತಹ ಲಿಂಗೋ ಪಾಸನೆಯಲ್ಲಿ ತೊಡಗಿದವನಿಗೆ ಮತ್ತಾವ ತಾಮಸ ಬಂದು ಮುಸುಗಿ ಅಪ್ರಸನ್ನತೆಗೆ ಅವಕಾಶ ಕೊಟ್ಟೀತು ! ಅನುಭವಭಕ್ತಿಯು ಆನಂದಭಕ್ತಿಯರೂಪ ಪಡೆದದ್ದು ಭಕ್ತಿವಿಕಾಸದ ಐದನೆಯ ಹಂತ.

**೬) ಸಮರಸಭಕ್ತಿ :** ಶರಣಸ್ಥಲದ ವಿಕಾಸವೇ 'ಸಮರಸಭಕ್ತಿ' ಎನಿಸುವದು. ಅಂತಹ ಭಕ್ತಿ ಸಮೇತನಾದವನೇ ಐಕ್ಯನು. ಶರಣಾಂಗನು ಆನಂದಾನುಭವಿಯಾಗಿದ್ದರೆ ಐಕ್ಯಾಂಗನು ಸ್ವಯಂ ಆನಂದರೂಪನೇ ಆಗುವನು. ಪರಿಮಿತ ರಸರೂಪ ನಾದ ಅಂಗನು ಅಪರಿಮಿತ ರಸರೂಪಿಲಿಂಗದ ಕಡೆಗೆ ಮುಖ ಹೊರಳಿಸಿ ನಿಂತುಕೊಳ್ಳಲು ಭಕ್ತಿಶಕ್ತಿಯ ಪ್ರೇರಣೆಯೇ ಮೂಲ. ಅದೇ ಭಕ್ತಿಯು ಮುಂದೆ ವಿಕಾಸವಾಗುತ್ತ ಸಾಗಿದಂತೆ ಶ್ರದ್ಧಾ, ನಿಷ್ಠಾ, ಅವಧಾನ ಅನುಭವ, ಆನಂದರೂಪವನ್ನು ತಾಳಿ ಕೊನೆಗೆ ಸಮರಸರೂಪವನ್ನು ಹೊಂದುವದು. ಭಕ್ತಿಯು ಹಂತ ಹಂತವಾಗಿ ವಿಕಾಸವಾಗುತ್ತ ನಡೆದಂತೆ ಅಂಗನು ಕೂಡ ಕ್ರಮ ವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಎಂಬ ಅಭಿಧಾನ ಪಡೆದು ಕೊನೆಗೆ ಐಕ್ಯನೆನಿಸುವನು.

ಅಂಗ-ಲಿಂಗಗಳೆರಡೂ ಸಜಾತೀಯವಾಗಿದ್ದ ನಿಮಿತ್ತ ಅವೆರಡರ ಕೂಟದಲ್ಲಿ ಯಾವ ಆತಂಕವೂ ಇರುವದಿಲ್ಲ. ಭಕ್ತಿ ಪ್ರಭಾವದಿಂದ ಪರಿಮಿತರಸನು ಅಪರಿಮಿತ ರಸನಾದಾಗ ಅಂಗಲಿಂಗಗಳೆರಡು ಸಮರಸವಾಗುವವು. ಆಗ ಬಿಂದು-ಸಿಂಧುವಿನಲ್ಲಿ ಬೆರೆತು ಒಂದಾದಂತೆ ಲಿಂಗ-ಅಂಗಸಾಮರಸ್ಯವು ಘಟಿಸಿಬಿಡುವದು. ಐಕ್ಯಾಂಗನು ಪೂಜಿಸುವದು ಮಹಾಲಿಂಗವನ್ನೇ ! ಅದು ದ್ವೈತ ಭಾವನೆಯನ್ನುಳಿದು ಅದ್ವೈತಭಾವನೆಯನ್ನು ಮೈಗೂಡಿಸಿಕೊಳ್ಳುವ ಪ್ರಕ್ರಿಯಾರೂಪವೇ ಆಗಿರುವದು. ಪರಿಪೂರ್ಣ ಭಕ್ತನೇ ಐಕ್ಯನೆನಿಸುವನು. ಮುಕ್ತನಿಗಿಂತ ಭಕ್ತನೇ ಶ್ರೇಷ್ಠನೆಂದು ಅನುಭಾವಿಗಳು ಹೇಳುವಲ್ಲಿ ಬಹಳ ರಹಸ್ಯವುಂಟು. ಜೀವನ

ಚರಮ–ಪರಮ ಧ್ಯೇಯ ಮುಕ್ತನಾಗುವದಲ್ಲ ಭಕ್ತನಾಗುವದು. 'ಏನಾದರೂ ಆಗಬಹುದು ಭಕ್ತನಾಗುವದು ಕಠಿಣ' ಎಂದು ಸೋಮನಾರಾಧ್ಯರು ಹೇಳಿದ್ದು ಅತ್ಯಂತ ವಿಚಾರಾರ್ಹವಾಗಿದೆ. ಮುಕ್ತನಿಗೆ ಮೋಕ್ಷವಷ್ಟೇ ಸಾಧ್ಯವಾಗಿದ್ದರೆ ಭಕ್ತನಿಗೆ ಭೋಗ ಮೋಕ್ಷಗಳೆರಡೂ ಸಿದ್ಧಿಸುವವು. ಈ ಬಗ್ಗೆ ಮಹಾನುಭಾವಿ ಮಗ್ಗೆಯ ಮಾಯಿದೇವಪ್ರಭುಗಳು 'ಬಯಸದೆ ಭೋಗಮೋಕ್ಷ ಪರರಪ್ಪುದು ಚಿತ್ರವಲಾ' ಎಂದು ಉದ್ಘೋಷಿಸಿದ್ದಾರೆ. ಭಕ್ತಿಯು ತ್ಯಾಗ-ಯೋಗಗಳ, ಜ್ಞಾನ-ಕರ್ಮಗಳ ಸುಂದರ ಸಮನ್ವಯಾತ್ಮಕವಾಗಿರುವದು. ಅಂತೆಯೇ ಭಕ್ತನಾದವನು ವ್ಯವಹಾರ–ಪರಮಾರ್ಥಗಳಲ್ಲಿ ಯಾವ ಭೇದವನ್ನೆಣಿಸದೆ ಅವೆರಡರ ಸಮನ್ವಯಾತ್ಮಕವಾಗಿಯೇ ತನ್ನ ಜೀವನವನ್ನು ರೂಪಿಸಿಕೊಳ್ಳುವನು. **'ಮುಕ್ತ್ಯಾನಂದ ಭಕ್ತ್ಯಾನಂದ ಸಮುದ್ರದ ಒಂದು ಕಣ'** ಎಂದು ಒಬ್ಬ ಅನುಭವಿ ಹೇಳಿದ್ದನ್ನು ಸ್ಮರಿಸಿಕೊಳ್ಳಬಹುದಾಗಿದೆ.

ಕೆಲವರು ಭಕ್ತಿಯು ಯಾವಾಗಲೂ ದ್ವೈತಾತ್ಮಕವಾಗಿರುವದರಿಂದ ಅದ್ವೈತ ಸಿದ್ಧಿ ಹೇಗಾಗಬಲ್ಲದು? ಎಂದು ಆಕ್ಷೇಪವೆತ್ತುವದುಂಟು. ಅವರಿಗಾಗಿ–

> ದ್ವೈತಂ ಮೋಹಾಯ ಬೋಧಾತ್ ಪ್ರಾಕ್ ಜ್ಞಾತೇ ತತ್ತ್ವೇಮನೀಷಯಾ ।
> ಭಕ್ತ್ಯರ್ಥಂ ಸ್ವೀಕೃತಂ ದ್ವೈತಂ ಅದ್ವೈತಾದಪಿ ಸುಂದರಂ ॥

ತತ್ತ್ವಜ್ಞಾನಕ್ಕಿಂತ ಪೂರ್ವದಲ್ಲಿದ್ದ ದ್ವೈತಭಾವನೆಯು ಮೋಹಕವಾಗಿರುವದು. ತತ್ತ್ವವನ್ನು ಸರಿಯಾಗಿ ತಿಳಿದನಂತರ ಭಕ್ತಿಗಾಗಿ ಸ್ವೀಕೃತವಾದ ದ್ವೈತ ಅದ್ವೈತಕ್ಕಿಂತಲೂ ಸುಂದರವಾಗುವದು ಎಂದು ಉತ್ತರಕೊಡಲಾಗಿದೆ. ಇವನ್ನೆಲ್ಲ ಸರಿಯಾಗಿ ನಿರೀಕ್ಷಿಸಿ ಪರೀಕ್ಷಿಸಿ ನೋಡಿದಾಗ ಭಕ್ತಿಯ ಹಿರಿಮೆ ಗರಿಮೆಗಳ ಬಗೆಗೆ ಯಾವ ಸಂಶಯವೂ ಉಳಿಯಲು ಸಾಧ್ಯವಿಲ್ಲ.

ಭಕ್ತಿಪ್ರಧಾನವಾಗಿದ್ದ ಷಟ್‌ಸ್ಥಲ ತತ್ತ್ವದರ್ಶನವು ಶಾರೀರಿಕಶಾಸ್ತ್ರ, ಮನಶ್ಶಾಸ್ತ್ರ, ಭೌತಿಕಶಾಸ್ತ್ರ, ಆಧ್ಯಾತ್ಮಿಕಶಾಸ್ತ್ರ, ಭಾವಶಾಸ್ತ್ರ ಹಾಗೂ ಭಾವಾತೀತಶಾಸ್ತ್ರ ಇವೆಲ್ಲವುಗಳ ಸಾರಸರ್ವಸ್ವವನ್ನೊಳಗೊಂಡದ್ದಾಗಿರುವದು. ಮತ್ತು ವೇದಪ್ರತಿಪಾದ್ಯವಾದ ಕರ್ಮಕಾಂಡ, ಉಪಾಸನಾಕಾಂಡ, ಜ್ಞಾನಕಾಂಡಗಳ ಸುಂದರ ಸಮನ್ವಯವಂತೂ ಷಟ್‌ಸ್ಥಲ ತತ್ತ್ವದರ್ಶನದ ಸೌಂದರ್ಯವನ್ನು ಇನ್ನಿಷ್ಟು ಹೆಚ್ಚಿಸಿರುವದು.

ಅದ್ವಯವಾದದ ವೈಶಿಷ್ಟ್ಯ ಶುಷ್ಕಜ್ಞಾನವಲ್ಲಾಗಲಿ, ಜ್ಞಾನವಿಹೀನ ಭಕ್ತಿಯಲ್ಲಾಗಲಿ ಇರವದಿಲ್ಲ. ಶಾಂಕರ ಅದ್ವೈತದ ಚರಮಾವಸ್ಥೆಯಲ್ಲಿ ಭಕ್ತಿಗೆ ಸ್ಥಾನವಿರುವದಿಲ್ಲ. ಶಂಕರನ ಮತದಲ್ಲಿ ಭಕ್ತಿದ್ವೈತಮೂಲವಾಗಿರುವದು. ಅದಕ್ಕಾಗಿ ಜ್ಞಾನೋದಯವಾದ ನಂತರ ಅದರ ಸ್ಥಿತಿ ಇರುವದಿಲ್ಲ. ಏಕೆಂದರೆ ಈ ಭಕ್ತಿಯು ಸಾಧನ ಮೂಲಕವಾಗಿರುವದು. ಆದರೆ ಅದ್ವೈತಭಕ್ತಿಯೆಂಬುದು ನಿತ್ಯಸಿದ್ಧವಾಗಿರುವದು. ಇದನ್ನೇ 'ಪರಾಭಕ್ತಿ' ಎಂದು ಅನುಭಾವಿಗಳು ಕರೆದಿರುವರು. ಅಪರಾಭಕ್ತಿಯ ಕೊನೆಯ ಪರಿಣಾಮ ಸಾಯುಜ್ಯ. ಪರಾಭಕ್ತಿಯ ಕೊನೆಯ ಪರಿಣಾಮ 'ಸಾಮರಸ್ಯ' ಇದನ್ನೇ ಶರಣರು ಅನುಸರಿಸಿದ್ದು.

# ದೀಕ್ಷೆ

**—ಸೂರ್ಯಸಿಂಹಾಸನಾಧೀಶ್ವರ ಡಾ॥ ಶ್ರೀ. ಜ. ಚ. ನಿ.**

ಇದು ಸಾಮಾನ್ಯವೂ ಅಹುದು. ವಿಶೇಷವೂ ಅಹುದು, ದಕ್ಷತೆಯಿಂದ ಸತ್ಕಾರ್ಯ ನಿರ್ವಹಣೆಗೆ ಸನ್ನದ್ಧರಾಗಿ ಕಂಕಣ ಬದ್ಧರಾಗಿ ಇರುವಿಕೆಗೆ ಸಾಮಾನ್ಯವಾಗಿ ದೀಕ್ಷೆ ಎಂದು ಹೇಳಲಾಗುತ್ತದೆ. ಶ್ರದ್ಧೆಯಿಂದ ಇರುವಿಕೆಗೂ ನಿಯಮವನ್ನು ಪಾಲಿಸುವಿಕೆಗೂ ನೋಂಪಿಯನ್ನು ಹಿಡಿಯುವಿಕೆಗೂ ಸಾಮಾನ್ಯವಾಗಿ ದೀಕ್ಷೆಯೆಂದು ನಿರ್ದೇಶಿಸಲಾಗುತ್ತದೆ. ಯಜ್ಞಯಾಗಾದಿ ಧಾರ್ಮಿಕ ವಿಧಿಗಳನ್ನು ನಡೆಯಿಸುವ ಪುರೋಹಿತರಿಗೆ ದೀಕ್ಷಿತರೆಂದು ಹೇಳುವುದುಂಟು. ಯಜ್ಞ ಕೊನೆಗೊಳ್ಳುವಿಕೆಗೆ, ಅವಭೃಥಸ್ನಾನಕ್ಕೆ 'ದೀಕ್ಷಾಂತ' ಎಂದು ಹೆಸರು. ದೈವಿಕ ಮಾರ್ಗದರ್ಶಕನು 'ದೀಕ್ಷಕ'ನೆನಿಸುತ್ತಾನೆ. ಸಮಾಜ, ಸಂಸ್ಕೃತಿ, ಸಾಹಿತ್ಯ, ರಾಷ್ಟ್ರ, ವಿಶ್ವಗಳ ಪ್ರಗತಿಗೆ ನಡುಕಟ್ಟಿನಿಲ್ಲುವಿಕೆಯು 'ದೀಕ್ಷೆ' ಎಂದೆನಿಸುತ್ತದೆ. ಎಲ್ಲ ಬಗೆಯ ಲೇಸಿಗಾಗಿ ತ್ರಿಕರಣ ಶುದ್ಧಿಯಿಂದ ಹೆಣಗುವಿಕೆ ಸೇವೆಸಲ್ಲಿಸುವಿಕೆ ದೀಕ್ಷೆ !

ವಿಶೇಷಾರ್ಥದಲ್ಲಿ ದೀಕ್ಷೆಯೆಂದರೆ ಒಂದು ಆಗಮಿಕ ವಿಧಿ, ಧಾರ್ಮಿಕ ಸಂಸ್ಕಾರ, ಅನುಗ್ರಹ, ಗುರುಕಾರುಣ್ಯ ಎಂದರ್ಥಗಳಿವೆ. ಅಯ್ಯತನಕ್ಕೂ ದೀಕ್ಷಾವಿಧಿ ಎಂದು ಹೇಳಲಾಗುತ್ತದೆ. ಅಯ್ಯತನವೆಂದರೆ ಮಾಹೇಶ್ವರ ಸಂಸ್ಕಾರ; ಜಂಗಮತ್ವ ವಿಧಾನ. ದೀಕ್ಷಾವಿಧಾನಕ್ಕೆ ಉಪನಯನವೆಂದು ಮತ್ತೊಂದು ಹೆಸರು. ಭವಿತನದಿಂದ ಭಕ್ತತ್ವಕ್ಕೆ ಬರಿಸುವ ಒಂದು ಸಂಸ್ಕಾರ. ದೈಹಿಕ ದೋಷಗಳನ್ನು ಕಳೆದು ಶುದ್ಧವಿಸಿ ಅಂಗವನ್ನಾಗಿಸುವ ಕ್ರಿಯೆ. ಜೀವಭಾವವನ್ನು ತೊಲಗಿಸಿ ಲಿಂಗವನ್ನಾಗಿಸುವ ವಿಧಾನ. ಪ್ರಾಕೃತತೆಯಿಂದ ಅಪ್ರಾಕೃತತೆಗೆ ರೂಪಾಂತರಿಸುವ ಪ್ರಕ್ರಿಯೆ. ಮಾಂಸಪಿಂಡವನ್ನು ಮಾರ್ಪಡಿಸಿ ಮಂತ್ರಪಿಂಡವನ್ನಾಗಿಸುವ ಮಾಂತ್ರಿಕ ಕ್ರಿಯೆ. ಪ್ರಾಣವಿಕಾರವನ್ನಳಿಸಿ ಪ್ರಣವಾಕಾರವನ್ನಾಗಿಸುವ ಪ್ರವಿಧಿ. ಭಾವವನ್ನು ಶುದ್ಧವಿಸಿ, ಭ್ರಾಂತಿಯನ್ನು ಬಿಡಿಸಿ, ಭಾವೋ

ತ್ಕಟತೆಯನ್ನುಂಟು ಮಾಡಿ ಭಾವುಕರನ್ನಾಗಿಸುವ ಭೂಮಕ್ರಿಯೆ. ದೃಷ್ಟಿಗೆ ದೂರದರ್ಶಿತ್ವವನ್ನು ತರುವ ದೀಪ್ತಸಂಸ್ಕಾರ. ತ್ರಿವಿಧಾಂಗಗಳನ್ನು ಪರಿಷ್ಕರಿಸಿ ಅಂತಶ್ಚೇತನವನ್ನು ಆವಿಷ್ಕರಿಸುವ ಅಭಿಜಾತವ್ರತ; ಅನನ್ಯ ಪ್ರತೀತಿ ಶಿವಾತ್ಮವಿದ್ಯಾಗುರುದೇವನ ಚಿತ್ಕಳಾ ಕಾರುಣ್ಯ.

'ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ ।
ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ॥' —ಸಿದ್ಧಾಂತಶಿಖಾಮಣಿ

'ದೀಯತೇ ಜ್ಞಾನಸಂಬಂಧಃ ಕ್ಷೀಯತೇ ಚ ಮಲತ್ರಯಂ ।
ದೀಯತೇ ಕ್ಷೀಯತೇ ಯಸ್ಮಾತ್ ಸಾ ದೀಕ್ಷೇತಿ ನಿಗದ್ಯತೇ॥' —ಶಿವಾನುಭಾವ ಸೂತ್ರ

ಇದು ಎಲ್ಲ ಸಂಸ್ಕಾರ ವೃಕ್ಷದ ಬೀಜದಂತಿರುವ 'ದೀಕ್ಷಾ' ಪದದ ನಿರ್ವಚನ; ಮತ್ತು ನಿರುಕ್ತಿ. ವ್ಯುತ್ಪತ್ತಿಯೊಡನೆ ಸೂಕ್ತಾರ್ಥ ವ್ಯುತ್ಪನ್ನವಾಗಿದೆ; ಸಮರ್ಥಿತವಾಗಿದೆ. ಉದ್ದೇಶದ ಉದಾತ್ತತೆಯನ್ನು ಉದ್ದೀಪನಗೊಳಿಸುವ ವಿಶ್ಲೇಷಣೆ !

'ದಾ' ಮತ್ತು 'ಕ್ಷೀ' ಧಾತುಗಳೆರಡು ಸೇರಿ 'ದೀಕ್ಷಾ' ಪದವಾಗಿದೆ. ಇವಕ್ಕೆ ಪರಿವಿಡಿದು ಕೊಡು, ನಾಶಮಾಡು ಎಂದರ್ಥಗಳು. ಇವು ಕ್ರಿಯಾಶ್ರಿತ ಧಾತುಗಳು. ಇವುಗಳಿಗೆ ಕರ್ಮಕರ್ತೃಗಳ ಸಾಪೇಕ್ಷತೆಯಿದೆ. ಅಂತೆಯೇ 'ದೀ' ಎಂಬುದು ಜ್ಞಾನದಾತೃತ್ವವನ್ನು, 'ಕ್ಷೀ' ಎಂಬುದು ಅಜ್ಞಾನ ಅಕ್ರಿಯಗಳೆಂಬ ಪಾಶಬಂಧನ ತ್ಯಾಜ್ಯತ್ವವನ್ನು ಬೋಧಿಸುತ್ತವೆ. ಭವಪಾಶ ಬಂಧನ ಬಿಡದೆ ಶಿವಜ್ಞಾನ ಸಮನಿಸದು. ಕಾರ್ಮಿಕ, ಮಾಯಿಕ, ಆಣವಿಕ ಮಲತ್ರಯಗಳ ಭವಪಾಶ. ಇವು ತನುತ್ರಯದಲ್ಲಿದ್ದು ಆತ್ಮತ್ರಯರನ್ನು ಬಂಧಿಸಿವೆ. ಶಿವತ್ವವನ್ನು ಕಳೆದು ಅಶಿವತ್ವವನ್ನುಂಟು ಮಾಡಿವೆ. ವಿಶ್ವಾತ್ಮನು ಜಡವಾದ ಸಂಕುಚಿತ ಕರ್ಮದಲ್ಲಿ, ತೈಜಸಾತ್ಮನು ಮೂಢ ಸಂಪ್ರದಾಯದಲ್ಲಿ ಸಲ್ಲದ ಅಜ್ಞಾನದಲ್ಲಿ, ಪ್ರಾಜ್ಞಾತ್ಮನು ಅಲ್ಪಭಾವದಲ್ಲಿ ಅನನುಭವದಲ್ಲಿ ಬಿದ್ದು ಬಂಧಿತರಾಗಿದ್ದಾರೆ. ಸತ್ಕ್ರಿಯೆ–ಸಮ್ಯಗ್‌ಜ್ಞಾನ–ಮಹಾಭಾವಗಳನ್ನಿತ್ತು ಮಲತ್ರಯ ಬಂಧನದಿಂದ ಆತ್ಮತ್ರಯರನ್ನು ಬಿಡಿಸುವುದೆ ದೀಕ್ಷೆ. ಈ ದೀಕ್ಷೆ ಶ್ರೀಗುರುವಿನಿಂದಲ್ಲದೆ ಸಂಪ್ರಾಪ್ತವಾಗದು. ಶ್ರೀಗುರು ಶಿಷ್ಯನ ಶಿರದರಮನೆಯಲ್ಲಿರುವ ಚಿತ್ಕಳೆಯನ್ನೆ ತನ್ನ ಯೋಗಬಲದಿಂದ ಅವತರಣಗೊಳಿಸಿ ಕ್ರಿಯೆ ಜ್ಞಾನಾನುಭವಗಳನ್ನಾಗಿಸಿ ಕರ–ಉರ–ಶಿರಗಳಲ್ಲಿ ಕರುಣಿಸುತ್ತಾನೆ. ಇದರಿಂದ ಈ ದೀಕ್ಷೆಗೆ 'ಗುರುಕಾರುಣ್ಯ' ಎಂದು ಹೆಸರು. ಶ್ರೀಗುರು ಶಿಷ್ಯನ ದೇಹಾತ್ಮಗಳನ್ನು ಸಂಸ್ಕರಿಸುವುದರಿಂದ 'ಸಂಸ್ಕಾರ' ಎನಿಸಿದೆ.

'ದೀಕ್ಷೆ' ಅದೊಂದು ಸತ್‌ಸಂಸ್ಕಾರ; ಸ್ವಸತ್ವದ (ಚಿತ್ತಿನ) ಆವಿಷ್ಕಾರ; ಜೀವನಕೆ ಪರಿಣಾಮಕಾರಿಯಾದ ಪರಿವರ್ತನ ಕಾರಣ. ಸತ್ಯದ ಸಾಕ್ಷಾತ್ಕಾರಕ್ಕೆ ಸಾಧನ. ಅಸತ್ಯದಿಂದ ಸತ್ಯಕ್ಕೆ, ಅನಿತ್ಯದಿಂದ ನಿತ್ಯಕ್ಕೆ, ತಪಸ್ಸಿನಿಂದ ತೇಜಸ್ಸಿಗೆ. ಅಪೂರ್ಣದಿಂದ ಪೂರ್ಣತ್ವಕ್ಕೆ ಕರೆದೊಯ್ಯುವ ಸಹಾಯಸಂಪತ್ತು; ನೆರೆಕಾಪಿಡುವ ಅಭಯಸಂಪತ್ತು. ಪರಮಾತ್ಮ ಪ್ರಭಾವ ಮುದ್ರೆಯನ್ನೊತ್ತುವ ಮಹತ್ತು. ಲೋಹಕ್ಕೆ ವಿದ್ಯುತ್ ಸಂಸ್ಕಾರವಾದಂತೆ ಅದರ ಮಹತ್ತು; ಪರುಷ ಸೋಕಿದಂತೆ ಅದರ ಸ್ಪರ್ಶ ಪ್ರಭಾವ.

**ದೀಕ್ಷಾ ಪ್ರಭೇದಗಳು**

ದೀಕ್ಷೆಯು ನಿರಧಿಕರಣ, ಸಾಧಿಕರಣ ಎಂದು ಇಬ್ಬಗೆ ! ಅಂದರೆ ನಿರಾಧಾರ, ಸಾಧಾರ ಎಂದರ್ಥ. ನಿರಧಿಕರಣ ದೀಕ್ಷೆಗೆ ಯಾವ ವಿಷಯಾಧಾರವಿರದು. ಅದಕ್ಕೆ ಮೇಲಾದ ದೀಕ್ಷಾಸಂಸ್ಕಾರವಿರದು. ಅದಕ್ಕೊಂದು ಕಟ್ಟು ಕಟ್ಟಳೆಯಿಲ್ಲ; ಅದು ಒಬ್ಬರಿಂದ ಬರುವುದಲ್ಲ; ಅದಕ್ಕೆ ಕಾಯಕರಣೇಂದ್ರಿಯಾದಿಗಳ ಉಪಕರಣವಿರದು. ಅದು ಕಾರ್ಯವಲ್ಲ. ಅದು ಅಧಿಕರಣರಹಿತವಾಗಿ ಅಂತರಾತ್ಮನ ಅಂತಃಸ್ಫೂರ್ತಿಯಿಂದುಂಟಾಗುವ ಸ್ವಯಸಂಸ್ಕಾರ; ಅದ್ವಯಸಂಸ್ಕಾರ.

ಸಾಧಿಕರಣ ದೀಕ್ಷೆಯು ಸಬೀಜ, ನಿರ್ಬೀಜ, ಚಿನ್ಮಯ-ಎಂದು ಮೂರು ಬಗೆಯಾಗಿದೆ. ಇವುಗಳಲ್ಲಿ ಸಬೀಜ ದೀಕ್ಷೆಯು ಲೋಕಧರ್ಮಿಣಿ, ಶಿವಧರ್ಮಿಣಿ ಎಂದು ಎರಡು ಬಗೆಯಾಗಿದೆ. ನಿರ್ಬೀಜ ದೀಕ್ಷೆಯು ಸದ್ಯೋನಿರ್ವಾಣ, ಅಸದ್ಯೋನಿರ್ವಾಣ ಎಂದು ಇತ್ತೆರನಾಗಿದೆ. ಸದ್ಯೋನಿರ್ವಾಣ ದೀಕ್ಷೆಯಲ್ಲಿ ಕರ್ಮತ್ರಯ ನಾಶವಾದೊಡನೆ ದೇಹತ್ಯಾಗವಾಗಿ, ವಿದೇಹ ಮುಕ್ತಿಯುಂಟಾಗುತ್ತದೆ. ಅಸದ್ಯೋನಿರ್ವಾಣ ದೀಕ್ಷೆಯಲ್ಲಿ ಸಂಚಿತಾಗಾಮಿ ಕರ್ಮಗಳು ಕಳೆದು, ಪ್ರಾರಬ್ಧವು ಪರಿಪಕ್ವವಾಗಿ, ಶಿವಯೋಗ ಸಾಧನೆಯು ಆ ಜನ್ಮವಾಗಿ ಸಾಗಿಬರುತ್ತದೆ. ಈ ದೀಕ್ಷೆಯೆ ಪ್ರಾಯೋಗಿಕವಾದುದು. ಇದು ಮೂರು ಬಗೆಯಾಗಿರುವುದೆಂದು ಶ್ರೀ ಜಗದ್ಗುರು ರೇಣುಕಶಿವಾಚಾರ್ಯರು ಮುಂದಿನ ಮಂತ್ರಶ್ಲೋಕದಲ್ಲಿ ನಿರೂಪಿಸಿದ್ದಾರೆ.

'ಸಾ ದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮ ವಿಶಾರದೈಃ ।
ವೇಧಾರೂಪಾ ಮಂತ್ರರೂಪಾ ಕ್ರಿಯಾರೂಪಾ ಚ ತಾಪಸ॥' —ಸಿ. ಶಿಖಾಮಣಿ.

ವೇಧಾ, ಮಂತ್ರ, ಕ್ರಿಯಾ ಎಂದು ದೀಕ್ಷೆ ತ್ರಿವಿಧ. ವೇಧಾದೀಕ್ಷೆಯಿಂದ ಕಾರಣತನು, ಮಂತ್ರದೀಕ್ಷೆಯಿಂದ ಸೂಕ್ಷ್ಮತನು, ಕ್ರಿಯಾದೀಕ್ಷೆಯಿಂದ ಸ್ಥೂಲತನು ಶುದ್ಧವಾಗುತ್ತವೆ. ಪರಿವಿಡಿದು ಆಣವೀಯಮಲ, ಮಾಯೀಯಮಲ, ಕಾರ್ಮಿಕ ಮಲಗಳನ್ನು ಕಳೆದುಕೊಂಡು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗಗಳಿಂದ ಕಂಗೊಳಿಸುತ್ತವೆ.

**ವೇಧಾದೀಕ್ಷೆ**

ಗುರುದೇವನ ದೃಷ್ಟಿಯೋಗ ಮತ್ತು ಹಸ್ತಮಸ್ತಕ ಸಂಯೋಗಗಳಿಂದ ಶಿಷ್ಯನಲ್ಲಿ ಶಿವತ್ವ ಸಮಾವೇಶವಾಗುವುದೆ ವೇಧಾದೀಕ್ಷೆ!. ಶಿಷ್ಯನ ಯೋಗಾಂಗದಲ್ಲಿ ಚಿತ್ಕಳೆಯು ಭಾವಚೇತನ(ಲಿಂಗ)ವಾಗಿ ಅಭಿವ್ಯಕ್ತಿಯಾಗುತ್ತದೆ. ಭಾವಲಿಂಗಾಭಿವ್ಯಕ್ತಿಯೆ ವೇಧಾದೀಕ್ಷೆ. ಇದು ಏಳು ಬಗೆಯಾಗಿದೆ: ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸಾ, ಲಿಂಗನಿಷ್ಠಾ, ಮನೋಲಯ, ಸದ್ಯೋಮುಕ್ತಿ–ಎಂಬಿವು ವೇಧಾದೀಕ್ಷೆಯ ಉಪಾಂಗದೀಕ್ಷೆಗಳು.

ಲಿಂಗವೊಂದರಲ್ಲಿ ಭಾವ ಕರಿಗೊಳ್ಳುವುದೆ ಏಕಾಗ್ರಚಿತ್ತೋಪದೇಶ. ಕರಿಗೊಂಡ ಚಿತ್ತ ಲಿಂಗನಿಯಮದಲ್ಲಿ ಸ್ಥಿರವಿಶ್ವಾಸವುಳ್ಳದಾಗಿ ಗಟ್ಟಿಗೊಂಡಲ್ಲಿ ದೃಢವ್ರತದೀಕ್ಷೆಯೆನಿಸುತ್ತದೆ. ಪಂಚಜ್ಞಾನೇಂದ್ರಿಯ ಸೆಳೆತಕ್ಕೆ ಸಿಕ್ಕದೆ ವಿಷಯ ವ್ಯಾಮೋಹಕ್ಕೆಳಸದೆ ನನ್ನದೆಂಬ ಮಮಕಾರಕ್ಕೀಡಾಗದೆ ಹೊರಕ್ಕೆ ಹರಿದಾಡದಂತೆ ಮಾಡಿ, ಅಂತರಾತ್ಮಧ್ವನಿ, ಅಂತರಾತ್ಮಸ್ಪರ್ಶ, ಸ್ವರೂಪ, ರಸ, ವಾಸನೆಗಳಲ್ಲಿ ಪರವಶಗಳಾಗುವಂತೆ ಮಾಡುವುದೆ ಪಂಚೇಂದ್ರಿಯ ವಿರಹಿತದೀಕ್ಷೆ. ಹಿಂಸೆಗಳಲ್ಲಿ ಮಾನಸಿಕ ಹಿಂಸೆ ಅತ್ಯಂತ ಸೂಕ್ಷ್ಮವಾದುದು. ಪರರಿಗೆ ಕೇಡುಬಯಸುವ ಹಿಂಸೆಯೂ ಘಟಿಸಬಾರದೆಂದು ಗುರುವಿನ ಬೋಧೆ. ಅದನ್ನು ಅನುಸರಿಸುವುದೆ ಅಹಿಂಸಾದೀಕ್ಷೆ. ಅಂತಿರುವಲ್ಲಿ ವಾಚಿಕಹಿಂಸೆ ಕಾಯಕಹಿಂಸೆಗಳಿಗೆ ಅವಕಾಶವೇ ಇಲ್ಲ. ಲಿಂಗಾನುಭವದಲ್ಲಿ ಅತ್ಯಂತ ಶ್ರದ್ಧೆಯನ್ನಿಡುವುದೆ ಲಿಂಗನಿಷ್ಠೆ. ಇದಿಲ್ಲದೆ ಲಿಂಗಾನುಭವ ಅಳವಡದು, ಲಿಂಗಾನಂದ ಲಿಂಗಸಮರಸಗಳು ಸಂಗಡಿಸವು. ಲಿಂಗನಿಷ್ಠೆ ಸಂಗಡಿಸಿದರೆ ಮನೋಲಯವುಂಟಾಗುತ್ತದೆ. ಮನದ ವಿಕಾರ, ಮನದ ಸಂಕಲ್ಪ ವಿಕಲ್ಪ, ಮನದ ಚಾಂಚಲ್ಯಗಳು ತೊಲಗಿ, ಮನೋನಿಗ್ರಹವುಂಟಾಗಿ ಮನವು ಲಿಂಗದಲ್ಲಿ ತಲ್ಲೀನವಾಗಿರುವಿಕೆಯೆ ಮನೋಲಯ ದೀಕ್ಷೆ. ಇದುಂಟಾದಲ್ಲಿ ಕೊನೆಯದಾದ ಸದ್ಯೋಮುಕ್ತಿ ಸಮನಿಸುತ್ತದೆ. ಅದುವೆ ಜೀವನ್ಮುಕ್ತಿ. ಆತ್ಮನಿಗೆ ಕಾಯಕರಣೇಂದ್ರಿಯಗಳಿಂದ ಬಿಡುಗಡೆಯಾಗುವುದೆ ಸದ್ಯೋಮುಕ್ತಿ.

**ಮಂತ್ರದೀಕ್ಷೆ**

ಎರಡನೆಯದು ಮಂತ್ರದೀಕ್ಷೆ. ಶ್ರೀ ಗುರುವಿನಿಂದಾಗುವ ಮಂತ್ರೋಪದೇಶವೆ ಮಂತ್ರದೀಕ್ಷೆ. ಇದು ಭೋಗಾಂಗಕ್ಕೆ ಸಂಬಂಧಿಸಿದುದು. ಮಂತ್ರಬೋಧೆಯಿಂದ ಶಿಷ್ಯನಿಗೆ ಜ್ಞಾನೋದಯವಾಗುತ್ತದೆ. ಪ್ರಾಣ ಪ್ರಣವರೂಪಾಗಿ ಪ್ರಾಣಲಿಂಗವಾಗುತ್ತದೆ. ಭಾವಲಿಂಗ ಅನುಭವಾತ್ಮಕವಾದರೆ ಪ್ರಾಣ(ಜ್ಞಾನ)ಲಿಂಗ ಜ್ಞಾನಾತ್ಮಕವಾಗಿರುತ್ತದೆ. ಇದರಿಂದ ಅಜ್ಞಾನಾತ್ಮಕ ಮಾಯೀಯಮಲ ನಿವೃತ್ತಿಯಾಗುತ್ತದೆ. ಮನನಕ್ಕೆ ಯೋಗ್ಯವಾದುದು ಮಂತ್ರ. ಆ ಮಂತ್ರ ಚೇತನ ಪ್ರಾಣಲಿಂಗ. ಮಂತ್ರ ಮನನದಿಂದ ಮನದ ಸಂಯಮನವುಂಟಾಗಿ ಮಹಾನಾದಾನುಸಂಧಾನವೊದಗುತ್ತದೆ. ಮಂತ್ರ ಸ್ಪಂದನದಿಂದ ಸ್ಪರ್ಶದಿಂದ ಮಾಂಸಮಯ ಪಿಂಡ ಮಂತ್ರಮಯ ಪಿಂಡವಾಗುತ್ತದೆ. ಋಷಿ, ಛಂದಸ್ಸು, ದೇವತೆ, ಬೀಜ, ಶಕ್ತಿ, ಸ್ವರ, ವರ್ಣ, ಪಲ್ಲವಾದಿಗಳಿಂದ ಮಂತ್ರ ಕೂಡಿರುತ್ತದೆ. ಇವನ್ನೆಲ್ಲ ಶ್ರೀ ಗುರು ಶಿಷ್ಯನಿಗೆ ತಿಳಿಸುತ್ತಾನೆ. ಇದರಿಂದಾಗಿ ಶ್ರೀ ಗುರು ಶಿಕ್ಷಾಗುರುವೆಂದೆನಿಸುತ್ತಾನೆ. ತೈಜಸಾತ್ಮನಿಗೆ ಮಂತ್ರ ಶಿಕ್ಷಣವನ್ನು ದಯಪಾಲಿಸುತ್ತಾನೆ. ಅದುವೆ ಮಂತ್ರದೀಕ್ಷೆ. ಇದು ಏಳು ಉಪದೀಕ್ಷೆಗಳಿಂದ ಕೂಡಿದೆ : ಸಮಯ, ನಿಸ್ಸಂಸಾರ, ನಿರ್ವಾಣ, ತತ್ತ್ವ, ಅಧ್ಯಾತ್ಮ, ಅನುಗ್ರಹ, ಸತ್ಯಶುದ್ಧ–ಎಂಬಿವು.

ಸಮಯೋಚಿತವನರಿದು ಸಮಯಾಚಾರನಿರತವಾಗಿರಬೇಕು. ಮಂತ್ರಬೋಧೆಗೆ, ಮಂತ್ರ ಜಪಕ್ಕೆ. ಪಠನಕ್ಕೆ, ತಕ್ಕ ಸಮಯಬೇಕು. ಸಮಯ ಶಬ್ದಕ್ಕೆ ಕಾಲ, ಸಂಪ್ರದಾಯ, ಸಂದರ್ಭ, ಸಿದ್ಧಾಂತ, ಆಚಾರ, ಮತ–ಮುಂತಾಗಿ ಅನೇಕ ಅರ್ಥಗಳಿವೆ. ಈ ಎಲ್ಲ ಅರ್ಥಗಳೂ ಸಮಯ ದೀಕ್ಷೆಗೆ ಸಂಬಂಧಿಸಿದವುಗಳು. ಮಂತ್ರ ಬೋಧೆಗೆ ಸಕಾಲವಿರುವಂತೆ ಸಂದರ್ಭವಿರುವಂತೆ ಮಂತ್ರದ್ದೆ ಆದ ಸಂಪ್ರದಾಯ–ಸಿದ್ಧಾಂತಗಳಿವೆ ; ಆಚಾರ ಅಭಿಪ್ರಾಯಗಳಿವೆ. ಇವನ್ನೆಲ್ಲ ಬೋಧಿಸುವುದೇ ಸಮಯ ದೀಕ್ಷೆ. ಪ್ರಾಣಲಿಂಗಕ್ಕೆ ಸಮಯಾಚಾರ ಅಗತ್ಯ. 'ಗುರುವಿನಲ್ಲಿ ಸದಾಚಾರ, ಲಿಂಗದಲ್ಲಿ ಶಿವಾಚಾರ, ಜಂಗಮದಲ್ಲಿ ಸಮಯಾಚಾರ ಇಲ್ಲದಿದ್ದರೆ, ನಮ್ಮ ಕೂಡಲ ಚನ್ನ ಸಂಗಮದೇವ ಮೆಚ್ಚ ಕಾಣಿರೋ !' ಎಂದು ಚಿನ್ಮಯ ಮೂರ್ತಿ ಚನ್ನಬಸವಣ್ಣ ವಿರೂಪಿಸಿದ್ದಾನೆ. 'ಸಮಯೋಚಿತವನರಿಯದೆ ಉದರವ ಹೊರೆವವರ ನರಕದಲ್ಲಿಕ್ಕದೆ ಮಾಣ್ಬನೆ ಕೂಡಲ ಸಂಗಮದೇವ ?' ಎಂದು ಭಕ್ತಿಬಳ್ಳಿದ ಬಸವಣ್ಣ ಚಿತ್ತರಿಸಿದ್ದಾನೆ. ಸಮಯೋಚಿತದಲ್ಲಿ ಲಿಂಗಾರ್ಚನೆ, ಸಮಯೋಚಿತದಲ್ಲಿ ಮಂತ್ರಾನುಷ್ಠಾನ, ಸಮಯೋಚಿತದಲ್ಲಿ ಗುರು ಜಂಗಮಸೇವೆ ಸಲ್ಲಬೇಕೆಂದು ಶ್ರೀ ಗುರು ಬೋಧಿಸುತ್ತಾನೆ, ಜೊತೆಗೆ ಮಂತ್ರಸಿದ್ಧಾಂತ, ಮಂತ್ರಸಂಪ್ರದಾಯ, ಮಂತ್ರಸಂದರ್ಭಗಳನ್ನು ಬೋಧಿಸುತ್ತಾನೆ. ಇದಿಷ್ಟು ಸಾಧನಾವಸ್ಥೆಗೆ ಸಂಬಂಧಿಸಿದುದು. ಮಂತ್ರಸಿದ್ಧಿಯಾದ ಬಳಿಕ ಕಾಲ ಕಟ್ಟಳೆಯಿಲ್ಲ, ಇರದು. ಸಂಸಾರ ಆಧಿಭೌತಿಕ, ಅಧ್ಯಾತ್ಮಿಕ ಎಂದು ಎರಡು ಬಗೆ. ಮನೆ-ಹೊಲ, ಧನ-ಕನಕ, ಮಡದಿ-ಮಕ್ಕಳು, ಬಂಧು-ಬಳಗ, ಊರು-ನಾಡು, ದೇಶ-ವಿಶ್ವ ಇವು ಹೊರಗಿನ ಸಂಸಾರ ; ತನು-ಕರಣ, ಮನ-ಹರಣ, ಬುದ್ಧಿ-ಭಾವ ಇವುಗಳಿಗೆ ಸಂಬಂಧಿಸಿದ ಹುಟ್ಟು-ಸಾವು, ಹಸಿವು-ನೀರಡಿಕೆ, ಶೋಕ-ಮೋಹಗಳು ಒಳಗಿನ ಸಂಸಾರ. ತಾನು ಈ ಉಭಯ ಸಂಸಾರದೊಳಗಿದ್ದರೂ ತನ್ನೊಳಗೆ ಈ ಸಂಸಾರಗಳಿರಬಾರದು. ಸಂಸಾರ ಸಾಗರದಲ್ಲಿ ತೇಲಬೇಕಲ್ಲದೆ ತಳಕ್ಕೆ ಮುಳುಗಬಾರದು. ತಾನು ಬೆಂಡಾಗಬೇಕಲ್ಲದೆ ಕಲ್ಲು ಗುಂಡಾಗಬಾರದು ಎಂದು ಹೇಳುವುದೆ ನಿಸ್ಸಸಾರ ಸಂಸ್ಕಾರ. 'ನಿ' ಉಪಸರ್ಗ 'ವಾ' ಧಾತುವಿನಿಂದ

ನಿರ್ವಾಣ ಶಬ್ದೋತ್ಪತ್ತಿ. 'ವಾ' ಧಾತುವಿಗೆ ಗತಿಯೆಂದು ಗಂಧವೆಂದು ಅರ್ಥ. ದ್ವಂದ್ವದ ಗತಿಯನ್ನು, ವಿಷಯ ವಾಸನೆಯನ್ನು ನಿವಾರಿಸುವುದೇ ನಿರ್ವಾಣ. ಮೈಮೇಲೆ ಉಡಿಗೆ ಇಲ್ಲದಿರುವುದು 'ನಿರ್ವಾಣ' ಎಂದು ರೂಢಿಯಲ್ಲಿದೆ. ಉಡಿಗೆಯ ಮುಸುಗನ್ನು ತೆಗೆದುಹಾಕಬಹುದು. ಆದರೆ ವಿಷಯದ ಮುಸುಗನ್ನು ಮಲಗಳ ಮುಸುಗನ್ನು ತೆಗೆದುಹಾಕುವುದು ತೀರ ದುಸ್ತರ. ವಿಷಯದ ಮುಸುಕಿಗೆ ಮಾಯಾಮಲ ವಾಸನೆಯೇ ಮೂಲಕಾರಣ. ಆ ಮಾಯಾಮಲದ ಮುಸುಗನ್ನು ತೆಗೆದುಹಾಕುವುದೆ ನಿರ್ವಾಣ ಸಂಸ್ಕಾರ. ಬರೀ ಬಟ್ಟೆಬರಿಗಳನ್ನು ಹೊದಿಯದಂತಿರುವುದೆ ನಿರ್ವಾಣ ಲಕ್ಷಣವಲ್ಲ. ಹುಟ್ಟಿ ಬರುವಾಗ ಹೊದ್ದು ತಂದ ಮಾಂಸ ಮೊದಲಾದ ಸಪ್ತಧಾತುಗಳ ಗುಣಕರ್ಮಗಳನ್ನು ಕಳಚಿ, ಮಂತ್ರದೀಕ್ಷೆಯಿಂದ ಅವನ್ನು ಮಂತ್ರಮಯವಾಗಿಸುವುದೆ ನಿಜವಾದ ನಿರ್ವಾಣದೀಕ್ಷೆ. ಇದರಿಂದ ಮರಣಭಯ ತೊಲಗಿ ಕೈವಲ್ಯಭಾವ ಕೂಡಿ ಬರುತ್ತದೆ. ಅದುವೆ ತಾನಾಗುವ ನಿಜಾಚರಣದೊಳಿರುವುದೇ ತತ್ತ್ವಸಂಸ್ಕಾರ. ತತ್‌ದಿಂದ ತ್ವ-ದ ವರೆಗೆ ಇರುವ ಅಂದರೆ ಒಂದು ನೂರೊಂದಾಗಿರುವ ಎಲ್ಲ ವಸ್ತುಗಳ ವಿವೇಕವನ್ನುಂಟು ಮಾಡಿಕೊಡುವುದೆ ತತ್ತ್ವಬೋಧೆ ಮತ್ತು ಮೂವತ್ತಾರು ತತ್ತ್ವ ಪ್ರಜ್ಞೆಯನ್ನುಂಟು ಮಾಡಿಕೊಡುವಿಕೆಯೂ ತತ್ತ್ವ ದೀಕ್ಷೆಯ ಕರ್ತವ್ಯವಾಗಿದೆ.

ಈ ತತ್ತ್ವ ಸಂಸ್ಕಾರದಿಂದ ಬಾಳಿನಲ್ಲಿ ಒಂದು ಹೊಚ್ಚ ಹೊಸ ಬೆಳಕು ಬರುತ್ತದೆ. ವಿಶ್ವವಿಶಾಲ ವಿಚಾರ ವಿಶದವಾಗುತ್ತದೆ. ಅಂತರ್ಬಾಹ್ಯಸ್ತರಗಳ ಪರಿಚಯವಾಗುತ್ತದೆ. ಬದುಕಿನ ಬಗೆ ಬಿತ್ತರವಾಗುತ್ತದೆ. ವಿಜ್ಞಾನ ಸುಜ್ಞಾನಗಳು ವಿವರ್ಧಿಸುತ್ತವೆ. ಜೀವ-ಜಗತ್ತು-ಈಶ್ವರ ಈ ತತ್ತ್ವತ್ರಯಗಳ ಸಮನ್ವಯ ಭಾವ ಉದಯವಾಗುತ್ತದೆ. ಸಮಾಧಾನಭಾವ ಸಮಭಾವ ಸಮನಿಸುತ್ತವೆ. ಈ ಸಮನ್ವಯ ಸಮಭಾವಗಳಿಲ್ಲದ ವಿಷಮಭಾವ ಸತ್ಯಸಾಧನೆಗೆ ಸಾಧಕವಲ್ಲ. ಪೂರ್ಣತ್ವ ಪ್ರಾಪ್ತಿಗೆ ಪ್ರೇರಕವಲ್ಲ; ಪೂರಕವಲ್ಲ. ತತ್ತ್ವೋಪದೇಶದಲ್ಲಿ ಸರ್ವ ಸಮದರ್ಶನ ದೃಷ್ಟಿಯಿದೆ. ಶಿವತತ್ತ್ವವನ್ನು ಬಿಟ್ಟು ಜಗತ್ತಿಲ್ಲ, ಜಗತ್ತನ್ನು ಬಿಟ್ಟು ಜೀವತತ್ತ್ವವಿಲ್ಲ. ಶಿವಶಕ್ತಿ ತತ್ತ್ವವನ್ನುಳಿದು ಉಳಿದ ಇಳಿ ತತ್ತ್ವಗಳಿಲ್ಲ. ಮೂರರಲ್ಲಿ ಆರು ಮತ್ತು ಮೂವತ್ತಾರು ಅಡಗಿವೆ. ಒಮ್ಮೆ ವಿಕಾಸವಾಗಿ, ಇನ್ನೊಮ್ಮೆ ಸಂಕೋಚವಾಗಿ ಇರುತ್ತವೆ-ಬೀಜಾಂಕುರ ನ್ಯಾಯದಂತೆ !

ನೂರೊಂದು ಸ್ಥಲರೂಪ ವಸ್ತುಗಳಲ್ಲಿ ಏಕಸೂತ್ರತೆಯಿದೆ. ಮೊದಲೊಂದು, ಕೊನೆಗೊಂದು, ನಡುವೆ ಅನೇಕವನ್ನು ಏಕವನ್ನಾಗಿಸಿಗೊಂಡು ಏಕತ್ವಭಾವವನ್ನೂ ತನ್ನೊಳಡಗಿಸಿಕೊಂಡು ಶೂನ್ಯರೂಪಾಗಿ ಪೂರ್ಣವಾಗಿದೆ. ಇದಲ್ಲ, ಅದು ಸಲ್ಲ ಎಂಬ ಸೊಲ್ಲು ಸರಿಯಲ್ಲ. ತತ್ತ್ವ (ಸತ್ಯ)ವಲ್ಲದ ವಸ್ತುವಿಲ್ಲ. ದೃಶ್ಯಾದೃಶ್ಯಗಳು ತಾತ್ತ್ವಿಕಗಳು ಮೂಡಿ ಬರುತ್ತದೆ; ಮೂಡಿ ಬಂದಲ್ಲಿಯೆ ಕೂಡಿ ಬೆರೆಯುತ್ತದೆ, ಕಾಣದಿರುತ್ತದೆ. ಈ ಪರಿಶುದ್ಧ ತತ್ತ್ವಭಾವನೆಯಿಂದ ಋತಜೀವನ ಸಿದ್ಧವಾಗುತ್ತದೆ; ತತ್ತ್ವ ಸಿದ್ಧಿಯಾಗುತ್ತದೆ; ಸರ್ವಸಮತ್ವ ದರ್ಶನವುಂಟಾಗುತ್ತದೆ; ಪೂರ್ಣತ್ವ ಪ್ರಜ್ಞೆಯುಂಟಾಗುತ್ತದೆ. ತತ್ತ್ವಗಳ ವಿಚಾರದಲ್ಲಿ ಹಳೆ ಹೊಸ ಎಂಬ ಮಾತಲ್ಲದೆ ಹುಟ್ಟು ಸಾವೆಂಬ ಮಾತಿಲ್ಲ, ಪೃಥಿವ್ಯಾದಿಗಳಿಗೂ ತತ್ತ್ವದ ಮುದ್ರೆಯನ್ನೊತ್ತಿದುದು ಸತ್ಯವೆಂದು ಸಾಧಿಸಿದುದು ಸಣ್ಣ ಸಿದ್ಧಿಯಲ್ಲ : ಸಣ್ಣ ಸಿದ್ಧಾಂತವಲ್ಲ. ಈ ಸಂಶೋಧನ ದೀಕ್ಷೆ ಸಣ್ಣದಲ್ಲ.

ಈ ಬಗೆಯ ತತ್ತ್ವದೀಕ್ಷೆಯಿಂದ ವ್ಯಕ್ತಿಯ ಅಂತರಂಗ ವಿಕಾಸವಾಗುತ್ತದೆ; ಬಹಿರಂಗದಲ್ಲಿ ಆ ವಿಕಾಸವೆ ಪ್ರಕಾಶವಾಗುತ್ತದೆ. ಶ್ರೀ ಗುರುವಿನಿಂದ ಈ ತತ್ತ್ವಸಂಸ್ಕಾರವನ್ನು ಪಡೆಯುವ ಮುಹೂರ್ತವೆ ಶಿಷ್ಯನಿಗೆ ಸುಮುಹೂರ್ತ. ಈ ಸಂಸ್ಕಾರದಲ್ಲಿ ಶ್ರೀ ಗುರು ತನ್ನ ದಾರ್ಶನಿಕಾನುಭೂತಿಯನ್ನೆಲ್ಲ ಸಿದ್ಧಾಂತ ಪಥದಲ್ಲಿ ತನಗೆ ಸಾಧ್ಯವಿದ್ದಷ್ಟನ್ನೂ ವಿವರಿಸಿ ತಿಳಿಸುತ್ತಾನೆ. ಶಿಷ್ಯನನ್ನು ಪೂರ್ಣಖಂಡ ವಿಭಾವಾನುಭಾವಗಳತ್ತ ಕರೆದೊಯ್ಯುತ್ತಾನೆ. ದಿವ್ಯರಸಾನಂದದ ನಾಂದಿಯನ್ನು ಹಾಡುತ್ತಾನೆ-ಮಹಾಕವಿಯಾಗಿ! ಶಿಷ್ಯನೆಂಬ ಸಚ್ಚಿದಾನಂದ ನಿತ್ಯ ಪೂರ್ಣಖಂಡ ಜೀವಂತ ಮಹಂತಕಾವ್ಯವೊಂದನು ರೂಪಿಸುವನು ತನ್ನ ತಾತ್ತ್ವಿಕ ಉಪಜ್ಞತೆಯಿಂದ ! ಇದರಿಂದಾಗಿ ಶ್ರೀ ಗುರುವಾದವನು ಸರ್ವತತ್ತ್ವಜ್ಞನಾಗಿರಬೇಕು; ಸರ್ವತತ್ತ್ವಶ್ರೀಮಂತನಾಗಿರಬೇಕು.

ಮೂವತ್ತಾರು ತತ್ತ್ವಗಳನ್ನು ನೂರೊಂದು ನೆಲೆಗಳನ್ನು ಮಂತ್ರಮುಖದಲ್ಲಿ ವಿಶ್ಲೇಷಿಸಿ ತೋರಿಸಿ ಮರಳಿ ಮಂತ್ರಮುಖದಲ್ಲಿ ಏಕೀಕರಿಸಿ, ಷಡಕ್ಷರವನ್ನು ಏಕಾಕ್ಷರವನ್ನಾಗಿಸಿ ನಿರಕ್ಷರವನ್ನಾಗಿಸಿ, ಅಂದರೆ ಶೂನ್ಯವನ್ನಾಗಿಸಿ ನಿರ್ದೇಶಿಸುವುದೆ ತತ್ತ್ವ ದೀಕ್ಷೆ! ತತ್ತ್ವಾನೇಕತೆ ವಿಕಾಸದ ಕುರುಹು. ಪ್ರತಿ ತತ್ತ್ವವೂ ತಾತ್ತ್ವಿಕ ಸತ್ಯವೆಂದು ಗುರುಮುಖದಿಂದರಿವುದು ಅನುಭವಕ್ಕೆ ಅಳವಡಿಸಿಕೊಳ್ಳುವುದು ಮಾನವ ವಿವೇಕ ವಿಕಾಸದ ಕುರುಹು; ಮಾನವೀಯ ವಾಸ್ತವ ಜೀವನದ ಸುಳುಹು. ಏಕವಿಲ್ಲದೆ ಅನೇಕವಾಗದು, ಅನೇಕ ಏಕವಾಗದಿರದು, ಏಕವು ಪೂರ್ಣವಾಗದಿರದು. ಇದು ತತ್ತ್ವದ ಗೂಢ. ಇದು ಆದಿಕವಿಯ ಕಾವ್ಯ. ಈ ಕಾವ್ಯಾರ್ಥವನ್ನು ಬಿಚ್ಚಿ ಬಿತ್ತರಿಸುವಾತನೆ ಸಚ್ಚಿತ್ಕಾವ್ಯಕಲಾಗುರು. ಬಿತ್ತರಿಸಿದುದನ್ನು ಮನದಲ್ಲಿ ಅಚ್ಚೊತ್ತಿಕೊಳ್ಳುವಾತನೆ ಸ್ವಾಧ್ಯಾಯನಿರತ ಸಹೃದಯ ಸಚ್ಛಿಷ್ಯ. ಆತನಿಗೆ ತಾತ್ತ್ವಿಕವಾಗಿ ವಿಚಾರಸ್ವಾತಂತ್ರ್ಯವುಂಟಾಗುತ್ತದೆ. ಆಚಾರಸ್ವಾತಂತ್ರ್ಯವುಂಟಾಗುತ್ತದೆ, ಸ್ವಯರಸಾನುಭೂತಿಯುಂಟಾಗುತ್ತದೆ. ವಿಶ್ವ ವಿರಾಡ್‌ಸ್ವರೂಪ ದರ್ಶನವಾಗುತ್ತದೆ. ವಿಶ್ವಚಿಂತನ, ವಿಶ್ವ ಕಲ್ಯಾಣ ಆತನ ಆತ್ಮೀಯ ಮಣಿಹವಾಗುತ್ತದೆ.

ಅಯ್ದನೆಯದು ಅಧ್ಯಾತ್ಮದೀಕ್ಷೆ: ಅಧಿಗತ ಆತ್ಮಾ ಅಧ್ಯಾತ್ಮ; ಅಂದರೆ ತನು ಕರಣಗಳೊಳಗೆ ಅಳವಟ್ಟ ಆತ್ಮ ವಿಚಾರವನ್ನು ಮಾಡುವಿಕೆಯೆ ಅಧ್ಯಾತ್ಮ ಅಥವಾ ಆತ್ಮನನ್ನು ಅಧಿಕರಿಸಿರುವ ಕಾಯಕರಣಗಳ ಹಸುಗೆ–ಬೆಸುಗೆಗಳ ಮನವರಿಕೆಯೆ ಅಧ್ಯಾತ್ಮ. ಶ್ರೀ ಗುರುದೇವನಿಂದ ಅಂಗ-ಲಿಂಗಗಳೆರಡರ ಸಂಸ್ಕಾರವನ್ನು ಪಡೆವುದೂ ಅಧ್ಯಾತ್ಮದೀಕ್ಷೆಯೆನಿಸುತ್ತದೆ. ಅಂತೆಯೆ ಅಂಗ ಅಧ್ಯಾತ್ಮ, ಲಿಂಗ ಅಧ್ಯಾತ್ಮ ಎಂದು ಎರಡು ಬಗೆ. ಇವೆರಡರ ಸಾಮರಸ್ಯಕ್ಕೆ ಕಾರಣವಾದುದು ಮಂತ್ರದೀಕ್ಷೆ. ತನ್ನೊಳ ಗಿರುವ ಆರು ಬಗೆಯ ಲಿಂಗಗಳನ್ನು, ತಾನು ಆರಂಗವಾಗಿ, ಷಡಕ್ಷರ ಮಂತ್ರ ಸಂಬಂಧದಿಂದ ಆರಾಧಿಸಿ ಅವಿರಳವಾಗುವುದನ್ನು ಶಿವಾತ್ಮ ವಿದ್ಯಾಗುರುದೇವನಿಂದ ಅರಿವುದೆ ಅಧ್ಯಾತ್ಮ ಸಂಸ್ಕಾರ.

ಹಿಂದೆ ಹೇಳಿದ ತತ್ತ್ವದೀಕ್ಷೆ ಸಮಷ್ಟಿಯದಾದರೆ, ಅಧ್ಯಾತ್ಮದೀಕ್ಷೆ ವ್ಯಷ್ಟಿಯದು. ವ್ಯಷ್ಟಿಜೀವನವು ತೀರ ಹತ್ತಿರ ದ್ದಾದರೂ ತಿಳಿದಿರುವವರು ತೀರ ವಿರಳ. ವ್ಯಷ್ಟಿ(ಅಧ್ಯಾತ್ಮ)ತತ್ತ್ವವು ಆಳತೆಯಲ್ಲಿ ಚಿಕ್ಕದಾಗಿ ಕಂಡರೂ ಆಳದಲ್ಲಿ ಚಿಕ್ಕ ದಲ್ಲ. ಭೂಜವಡಗಿದ ಬೀಜದಂತೆ, ಬ್ರಹ್ಮಾಂಡವೆ ಸೂಕ್ಷ್ಮಗೊಂಡಾಗಿದೆ ಪಿಂಡಾಂಡ. ಈ ಪಿಂಡಾಂಡದಲ್ಲಿ ಪರಮಾತ್ಮನು ನೂರಾರು ಬಗೆಯಾಗಿ ಸೇವ್ಯ–ಸೇವಕ ಅಥವಾ ಪೂಜ್ಯ–ಪೂಜಕ ಸಂಬಂಧವನ್ನು ಪಡೆದಿದ್ದಾನೆ.

ಪರಮಾತ್ಮನು 'ಅ'ಕಾರ ಬೀಜಾಕ್ಷರ ಪ್ರಣವಮೂರ್ತಿರೂಪ ಇಷ್ಟಲಿಂಗ. ಆತ್ಮನು ತ್ಯಾಗಾಂಗನಾಗಿ ಜಾಗ್ರದವಸ್ಥೆ ಯಲ್ಲಿ ಅದೇ ಅಕಾರ ಮಂತ್ರದಿಂದ ಇಷ್ಟಲಿಂಗೋಪಾಸನೆಯನ್ನು ಮಾಡುತ್ತಾನೆ. ಪರಮಾತ್ಮನು 'ಉ'ಕಾರ ಬೀಜಾಕ್ಷರ ಪ್ರಣವ ಮೂರ್ತಿರೂಪ ಪ್ರಾಣಲಿಂಗ; ಆತ್ಮನು ಭೋಗಾಂಗವಾಗಿ, ಸ್ವಪ್ನಾವಸ್ಥೆಯಲ್ಲಿ ಅದೇ'ಉ'ಕಾರ ಮಂತ್ರದಿಂದ ಪ್ರಾಣಲಿಂಗವನ್ನಾ ರಾಧಿಸುತ್ತಾನೆ. ಪರಮಾತ್ಮನು 'ಮ'ಕಾರ ಬೀಜಾಕ್ಷರ ಪ್ರಣವಮೂರ್ತಿರೂಪ ಭಾವಲಿಂಗ; ಆತ್ಮನು ಯೋಗಾಂಗನಾಗಿ ಸುಷುಪ್ತಿ ಯಲ್ಲಿ ಅದೇ 'ಮ'ಕಾರ ಮಂತ್ರದಿಂದ ಭಾವಲಿಂಗವನ್ನು ಉಪಾಸಿಸುತ್ತಾನೆ. ಇವರೆ ಆರಾರಾಗಿ ಜ್ಞಾನೇಂದ್ರಿಯ ಮನಗಳಲ್ಲಿಯೂ ಆಧಾರಾದಿ ಷಟ್‌ಚಕ್ರಗಳಲ್ಲಿಯೂ ನೇತ್ರಗತ ಷಡಂಗಗಳಲ್ಲಿಯೂ ಷಡಕ್ಷರಮಂತ್ರಮೂರ್ತಿಗಳಾಗಿ, ಅದೇ ಷಡಕ್ಷರಮಂತ್ರದಿಂದ ಭಕ್ತಾದಿ ಷಡಂಗರಿಂದ ಆರಾಧಿತರಾಗುತ್ತಾರೆ. ಆಚಾರಾದಿ ಷಡ್ಲಿಂಗಗಳೇ ನಕಾರಾದಿ ಷಡಕ್ಷರಮಂತ್ರಮೂರ್ತಿಗಳು. ನಾಸಿಕಾದಿ ಸ್ಥೂಲಷಡಂಗಗಳಲ್ಲಿ ಆಧಾರಾದಿ ಸೂಕ್ಷ್ಮಷಡಂಗಗಳಲ್ಲಿ ಕ್ರಮವಾಗಿದ್ದು ಲಿಂಗಾಂಗರು ಪೂಜ್ಯ-ಪೂಜಕರಾಗಿರುತ್ತಾರೆ. ಇನ್ನು ನೇತ್ರ ವೊಂದರಲ್ಲಿಯೆ ಷಟ್‌ಚಕ್ರಗಳಿದ್ದು ಷಡಂಗ–ಲಿಂಗರು ಷಣ್ಮಂತ್ರಾಕ್ಷರಗಳಿಂದ ಉಪಾಸಕೋಪಾಸ್ಯರಾಗುವ ರೀತಿಯಿದು :

ಕಣ್ಣಿನ ಪೀತವರ್ಣವೆ ಆಧಾರ; ಅದರಲ್ಲಿರುವ ನಕಾರವೆ ಆಚಾರಲಿಂಗ; ಆ ಪೀತವರ್ಣದ ಗಂಧವೆ ಭಕ್ತಾಂಗ. ಕಣ್ಣಿನ ಶ್ವೇತವರ್ಣವೆ ಸ್ವಾಧಿಷ್ಠಾನ; ಅದರೊಳಗಿನ ಮಕಾರಾಕೃತಿಯೆ ಗುರುಲಿಂಗ; ಶ್ವೇತವರ್ಣದ ರುಚಿಯೆ ಮಾಹೇಶ್ವರಾಂಗ. ಕಣ್ಣಿನ ಕಾಟಿಯೆ ಮಣಿಪೂರಕ; ಅದರೊಳಗಿನ ಶಿಕಾರಾಕೃತಿಯೆ ಶಿವಲಿಂಗ; ಕಾಟವರ್ಣದ ರೂಪವೆ ಪ್ರಸಾದ್ಯಂಗ. ಆ ಕಪ್ಪಿನೊಳಗಿನ ಒಗರುಗೆಂಪು ಬಣ್ಣವೆ ಅನಾಹತ; ಅದರ ವಾಕಾರಾಕೃತಿಯೆ ಜಂಗಮಲಿಂಗ; ಆ ರಕ್ತದ ಸ್ಪರ್ಶವೆ ಪ್ರಾಣಲಿಂಗ್ಯಂಗ. ಕಣ್ಣಿನೊಳಗಿನ ಉದ್ದಿನ ಬೇಳೆಯ ಪ್ರಮಾಣದ ಮಧ್ಯವೆ ವಿಶುದ್ಧಿ; ಅದರ ಯಕಾರಾಕೃತಿಯೆ ಪ್ರಸಾದಲಿಂಗ. ಮಧ್ಯಬಿಂದುವಿನ ನಾದವೆ ಶರಣಾಂಗ. ಕಣ್ಣಿನ ನೀಲವರ್ಣವೆ ಆಜ್ಞಾಚಕ್ರ; ಅದರ ಓಂಕಾರಾಕೃತಿಯೆ ಮಹಾಲಿಂಗ; ಆ ನೀಲವರ್ಣದೊಳಗಿನ ತೃಪ್ತಿಯೆ ಐಕ್ಯಾಂಗ. ಇದೆಲ್ಲವನ್ನು ತಿಳಿಸುವುದೆ ಅಧ್ಯಾತ್ಮದೀಕ್ಷೆಯೆನಿಸುತ್ತದೆ.

ಆರನೆಯದು ಅನುಗ್ರಹದೀಕ್ಷೆ : ಕ್ಷೇಮದಾನ, ಅಕ್ಷೇಮನಿವಾರಣ ಪ್ರವೃತ್ತಿಗೆ ಅನುಗ್ರಹವೆಂದು ಅರ್ಥವಿಸುತ್ತಾರೆ. ಆದರೆ ಇಲ್ಲಿ ಇದಕ್ಕೂ ಹೆಚ್ಚಿನ ಆತ್ಮೀಯ ಆಂತರಿಕ ಅರ್ಥವಿದೆ. ಗುರು ಬೇರಿದ್ದು ಅನುಗ್ರಹಿಸದೆ ಬೆರೆದೇಕವಾಗಿ ಅನುಗ್ರಹಿಸ ಬಲ್ಲ, ಅಂಗ ಬೇರಾಗಿದ್ದರೂ ಆತ್ಮ ಬೇರಾಗುವುದಿಲ್ಲ–ಅನುಗ್ರಹದಲ್ಲಿ! 'ಅನು'ಪದ ಸಾದೃಶ್ಯಾರ್ಥದಲ್ಲಿ, ಸಹಾರ್ಥಗಳಲ್ಲಿ ಉಪ ಯುಕ್ತವಾಗಿದೆ. ಗುರು ಶಿಷ್ಯನನ್ನು ತನಗೆ ಸಾದೃಶ್ಯವಾಗಿ ತನ್ನೊಡನೆ ಗ್ರಹಣ ಮಾಡಿಕೊಳ್ಳುವಿಕೆಯೆ ಅನುಗ್ರಹ. ಕ್ರಿಯಾ ಜ್ಞಾನಗಳಲ್ಲಿ ಪ್ರಸಾದ ಭೋಗದಲ್ಲಿ ಸಮಸಮತ್ವಪ್ರಾಪ್ತಿಯನ್ನು ಶ್ರೀಗುರು ಶಿಷ್ಯನಿಗೆ ಸಮನಿಸುತ್ತಾನೆ. ತಾಯ್ಮಕ್ಕಳಂತೆ ಬಹಿರಂಗ ಬೇರಾಗಿದ್ದರೂ ಅಂತರಂಗ ಒಂದಾಗಿರುತ್ತದೆ.

ಎಚ್ಚರಾಗದೆ ಕನಸು ಸರಿಯದು; ಕನಸು ಸರಿಯದೆ ಏಕಾಗ್ರತೆಯೊದಗದು. ಅಂದರೆ ಸಂಪೂರ್ಣ ಸುಷುಪ್ತಿಯೊದಗದು; ಅಸಂಪ್ರಜ್ಞಾತ ಸಮಾಧಿಯೊದಗದು. ಅಂತೆಯೆ ಅಂತೇವಾಸಿಗೆ ಅಧ್ಯಾತ್ಮಪ್ರಜ್ಞೆ ಅಳವಡದೆ ಅನುಗ್ರಹವೊದಗದು; ಅನುಗ್ರಹ ವೊದಗದೆ ಅಪ್ರಸನ್ನತೆ ತೊಲಗದು. ಶ್ರೀ ಗುರುದೇವನ ಅಂತಃಕರಣ ಪ್ರಸಾದ ಪ್ರಧಾನವೆ ಅನುಗ್ರಹ. ಅದನ್ನು ಗ್ರಹಿಸುವ ಹೃದಯಪರಿಪಕ್ವತೆ ಶಿಷ್ಯನಿಗಿರಬೇಕು. ಶಿಷ್ಯ ಮತ್ತು ಶ್ರೀಗುರು ಇವರಿಬ್ಬರ ಅಂತಃಕರಣಗಳ ಅನ್ಯೋನ್ಯ ಆಕರ್ಷಣ ಶಕ್ತಿಯೆ ಅನುಗ್ರಹ. ಶ್ರೀಗುರು ಶಿಷ್ಯನ ಅಂತಃಕರಣದಲ್ಲಿ ಅಚ್ಚಬಗೆಗಳನ್ನು ಪ್ರತಿಬಿಂಬಿಸುವುದೆ ಅನುಗ್ರಹ. ಸತ್ಕಾರ್ಯ–ಸುಜ್ಞಾನಗಳ ಪ್ರೇರಕಶಕ್ತಿಯೆ ಅನುಗ್ರಹ. ಮನ, ಪಂಚಜ್ಞಾನೇಂದ್ರಿಯ, ಸ್ಥೂಲ ಸೂಕ್ಷ್ಮ ಕಾರಣಗಳೆಂಬ ನವಾಂಗಗತ ಗ್ರಹಗಳ ನಿಗ್ರಹ ವನ್ನು ನಿವಾರಿಸಿ ನವಲಿಂಗಗಳ ಕರುಣಿಸುವುದೆ ಅನುಗ್ರಹ. ಹೃದಯದಲ್ಲಿ ಹೃದ್ಯತೆಯನ್ನು, ಭಾವದಲ್ಲಿ ಭವ್ಯತೆಯನ್ನು ಬೆರಸಿ ಬೆಳಗಿಸುವುದೆ ಅನುಗ್ರಹ. ಅನುಕಂಪ, ಅನುಷಂಗ, ಅನುನಯ, ಅನುಭಾವಗಳನ್ನು ಅಂಗವಿಸಿ ಅಳವಡಿಸುವುದು ಅನುಗ್ರಹ.

ಸರ್ವ ಕ್ರಿಯಾಸಾಮರಸ್ಯವನ್ನು ಕರುಣಿಸುವುದೆ ಅನುಗ್ರಹ. ಅಭಯದ ಹಸ್ತ ಬರುವವರೆವಿಗೂ ಭವಭಯ ತಪ್ಪಿದ್ದಲ್ಲ. ಇದನ್ನು ತಪ್ಪಿಸಿ ಅಭಯ ಹಸ್ತಪ್ರದಾನವನ್ನು ಕೃಪಾಗುರು ಕರುಣಿಸುವುದೆ ಅನುಗ್ರಹ ದೀಕ್ಷೆ. ಅಲ್ಲದೆ ಶ್ರೀಗುರು ತನ್ನ ಮಂತ್ರ ಪ್ರಭಾವದಿಂದ ಸರ್ವ ತತ್ತ್ವ ಸಕೀಲಗಳನ್ನು ಶಿಷ್ಯನ ಸರ್ವಾಂಗದಲ್ಲಿ ನೆಲೆಗೊಳಿಸುವುದೂ ಅನುಗ್ರಹವೆ! ಅಂಗದ ಪ್ರಕೃತಿ ಗುಣವಳಿದು, ಲಿಂಗಗುಣಗಳು ಬೆಳೆದು, ಪ್ರಗತಿಪಥದಲ್ಲಿ ಮುನ್ನಡೆವಂತೆ ಮಾಡುವುದೆ ಅನುಗ್ರಹ ಸಂಸ್ಕಾರಸಾರ. ಈ ಅನುಗ್ರಹದಿಂದ ಅಕಳಂಕನಾದ ಅಂತೇವಾಸಿಯ ಪ್ರಕೃತಿಲೋಹವು ಶ್ರೀ ಗುರುವಿನ ಅನುಗ್ರಹ ರೂಪರಸವೇಧದಿಂದ ಅಂದರೆ ಪರುಷ ಸ್ಪರ್ಶದಿಂದ ಚಿನ್ನವಾಗಿ ಚಿತ್ಕಳೆಯಿಂದ ತಳತಳಿಸುತ್ತದೆ.

ಮಂತ್ರಸಂಸ್ಕಾರದಲ್ಲಿ ಏಳನೆಯದೆ ಸತ್ಯಶುದ್ಧ ದೀಕ್ಷೆ. ಅನುಗ್ರಹದ ಫಲ ಸತ್ಯ ಶುದ್ಧತೆಗಳು. ಸತ್ಯವಾಗಬೇಕು ಶಿಷ್ಯನ ವಾಣಿ, ಶುದ್ಧವಾಗಬೇಕು ಮನ. ಆಗುತ್ತವೆ. ಮಂತ್ರ ಸಂಸ್ಕಾರಕ್ಕೆ ಮಾತು–ಮನಗಳೆರಡು ಮುಖ್ಯ. ಮಾತಿನಲ್ಲಿ ದಿಟ, ಮನದಲ್ಲಿ ನಿಚ್ಚಟ ಅಳವಡದೆ ಮಂತ್ರಸಂಸ್ಕಾರ ಪರಿಣಾಮವುಂಟಾಗದು, ಪರಿಪೂರ್ಣವಾಗದು, ಮಂತ್ರವನುಚ್ಚರಿಸುವ ವಾಣಿ ಸತ್ಯನಿರತವಾಗದೆ ವಿಧಿಯಿಲ್ಲ. ಮಂತ್ರಮನನ ಮಾಡುವ ಮನ ಶುದ್ಧವಾಗದೆ ಗತ್ಯಂತರವಿಲ್ಲ. ಅಷ್ಟೇ ಅಲ್ಲ, ಪ್ರತ್ಯಂಗದಲ್ಲಿಯೂ ಪಾವಿತ್ರತೆಯನ್ನು ತಂದುಕೊಳ್ಳಲು ಸಾಧನವಾಗುತ್ತದೆ ಸತ್ಯಶುದ್ಧ ದೀಕ್ಷೆ!

ಸತ್ಯಸಾಧಕನು ತನ್ನ ಪ್ರತ್ಯಂಗದಲ್ಲಿ ಇರುವ ಅಸತ್ಯತೆಯನ್ನು ಅಶುದ್ಧತೆಯನ್ನು ಅಲ್ಲಗಳೆಯಬೇಕು. ಸತ್ಯಾತ್ಮನಾಗಬೇಕು. ಶುದ್ಧಾತ್ಮನಾಗಬೇಕು. ತನ್ನ ಚೈತನ್ಯದಲ್ಲಿರುವ ಜೀವಭಾವವನ್ನು ತೊರೆದು ಶಿವಭಾವವನ್ನುಂಟುಮಾಡಿಕೊಳ್ಳಬೇಕು. ಅಲ್ಪಜ್ಞ, ಅಲ್ಪಕರ್ತೃ, ಅಲ್ಪಭೋಕ್ತೃ, ಅಲ್ಪಜೀವಿ ಎಂಬ ಅಸತ್ಯ ಭಾವವನ್ನು ನಿವಾರಿಸಬೇಕು. ತ್ರಿಮಲರಹಿತನಾಗಿ ತೇಜೋವಂತನಾಗಿ ತತ್ತ್ವರೂಪನಾಗಿರುವುದೆ ಸತ್ಯಶುದ್ಧ ಸಂಸ್ಕಾರ! ಭೋಗಾಂಗಾವಚ್ಛಿನ್ನ ಶುದ್ಧಾತ್ಮಗೋಚರ!

ಈ ಏಳು ಉಪಸಂಸ್ಕಾರಗಳಿಂದ ಮಂತ್ರದೀಕ್ಷೆಯು ಮುಗಿಯುತ್ತದೆ. ಇದನ್ನು ಕೈಗೊಳ್ಳುವ ಶಿಷ್ಯನ ಭೋಗಾಂಗವು ಪ್ರಸಾದಿ ಪ್ರಾಣಲಿಂಗಿ ಸ್ಥಲಗಳೆರಡರ ಆಚರಣೆಯಲ್ಲಿರುತ್ತದೆ. ಶಿವಲಿಂಗ–ಜಂಗಮಲಿಂಗಗಳೆರಡರ ಅರ್ಚನಾರ್ಪಣಾನುಭವಗಳಲ್ಲಿರುತ್ತದೆ.

ಮಂತ್ರಮೂರ್ತಿಯಾದ ಮಹಾಗುರುವು ಕರುಣಿಸಿದ ಮಂತ್ರದೀಕ್ಷೆಯ ಈ ಪರಿವಿಡಿಯನ್ನು ಏರಿ ನಿಂತ ಶಿಷ್ಯನಿಗೆ ಅಂತರಾತ್ಮ ಜೀವನವು ಸಿದ್ಧವಾಗುತ್ತದೆ. ಅಂತರಂಗವು ಅಂತರಾತ್ಮನ ಸತ್ವದಿಂದ ಮಂತ್ರನಾದದಿಂದ ಜ್ಞಾನದಿಂದ ಕೂಡಿಕೊಳ್ಳದಿದ್ದರೆ ಜೀವನವು ನಿಸ್ಸತ್ವವಾಗುತ್ತದೆ; ನಿಶೆಯಿಂದ ಕೂಡಿರುತ್ತದೆ. ನಿವೃತ್ತಿ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಆಗ ಮಾನವತೆಯಿಂದ ಕೆಳಕ್ಕೆ ಇಳಿಯಬೇಕಾಗುತ್ತದೆ.

ಮಾನವನು ಮಾನಸಿಕ ಘನತೆಯನ್ನು ಗಳಿಸಬೇಕಾದರೆ ಮಂತ್ರಪ್ರಾಣಗಳ ನೆರವು ಅನಿವಾರ್ಯ. ಮನನಾತ್ಮಕವಾದ ಮಂತ್ರದ ಪೌರೋಹಿತ್ಯವು, ಮನನೀಯವಾದ ಪ್ರಾಣಲಿಂಗದ ಆಧಿಪತ್ಯವು ಅಂತರಂಗಕ್ಕೆ ಅತ್ಯವಸರ. ಪ್ರಾಕೃತಿಕವಾದ ಪ್ರಾಣದ ಬೆಂಬಲದಿಂದ ಮನವು ಮನವಾದರೆ, ಪಾರಮಾರ್ಥಿಕವಾದ ಪ್ರಾಣಲಿಂಗದ ಬೆಂಬಲದಿಂದ ಮನವು ಘನಮನವಾಗುತ್ತದೆ. ಹಾಗಾಗಲು ಸತ್ಯಸಾಧನ ಮಂತ್ರಸಂಪತ್ತು; ಪ್ರಾಣವನ್ನು ಪ್ರಾಣಲಿಂಗವನ್ನಾಗಿಸಲು ಸರ್ವಸಮರ್ಥ ಶ್ರೀಗುರು. ಆ ಪರಂಜ್ಯೋತಿಯ ಸಕಲ–ನಿಷ್ಕಲಕಳೆಯನ್ನು ತಂದು ಪ್ರಾಣದಲ್ಲಿರಿಸಿ ಪ್ರಣವನಾದವನ್ನು ಬೆರೆಸಿ ಪ್ರಾಣಲಿಂಗವನ್ನಾಗಿಸುತ್ತಾನೆ ಶ್ರೀಗುರು ತನ್ನ ಅಣಿಯರದ ಮಂತ್ರೋಪದೇಶದಿಂದ! ಪ್ರಾಣಚೇತನವನ್ನು ಪ್ರಕಾಶಗೊಳಿಸುತ್ತಾನೆ. ಶುದ್ಧ ಚಿತ್ಪ್ರಕಾಶಾತ್ಮನನ್ನಾಗಿಸುತ್ತಾನೆ; ಚಿನ್ಮಾದಾತ್ಮನನ್ನಾಗಿಸುತ್ತಾನೆ. ಬಿಂಬರೂಪ ಆ ಭಾವಪ್ರಕಾಶವನ್ನು ನಿರಾಕಾರಸ್ವರೂಪದಿಂದ ಪ್ರಾಣದಲ್ಲಿ ಕಿರಣರೂಪದಲ್ಲಿ ಸಾಕಾರ–ನಿರಾಕಾರ ಸ್ವರೂಪಕ್ಕೆ ತರುತ್ತಾನೆ. ಆದ್ದರಿಂದ ಇದು ಶುದ್ಧಾತ್ಮಗೋಚರವಾಗುತ್ತದೆ; ಜ್ಞಾನಾತ್ಮಗಮ್ಯವಾಗುತ್ತದೆ. ಮಹಾಮಂತ್ರದ ಮೂಲಕ ಆ ಪರಶಿವಲಿಂಗವು ಅಂತರಂಗದಲ್ಲಿ ಅಭಿವ್ಯಕ್ತವಾಗುತ್ತದೆ. ಅಂತಃಕರಣಗಳನ್ನು ಅರಳಿಸುತ್ತದೆ. ಹೃದಯಾರವಿಂದದಲ್ಲಿ ತುಂಬಿಯಾಗಿ ಪ್ರತ್ಯಕ್ಷವಾಗುತ್ತದೆ. ಪ್ರತ್ಯಕ್ಷ ಪ್ರಮಾಣವು ಶಿವಾದ್ವೈತ ತತ್ತ್ವದಲ್ಲಿ ಸ್ಥೂಲ–ಸೂಕ್ಷ್ಮ–ಕಾರಣವೆಂದು ಮೂಬಗೆಯಾಗಿದೆ. ಕಣ್ಣಿನ ಕ್ರಿಯೆಗೆ ಗೋಚರವಾಗುವುದು ಸ್ಥೂಲಪ್ರತ್ಯಕ್ಷ, ಮನದರಿಕೆಗೆ ಗೋಚರಿಸುವುದು ಸೂಕ್ಷ್ಮಪ್ರತ್ಯಕ್ಷ, ಅನುಭವಕ್ಕೆ ಅಳವಡುವುದು ಕಾರಣಪ್ರತ್ಯಕ್ಷ. ಇದೀಗ ಮಂತ್ರದೀಕ್ಷಾಜನ್ಯ ಮನದರಿಕೆಗೆ ಪ್ರಾಣಲಿಂಗವು ಗೋಚರಿಸಿದೆ. ಇದುವೆ ಚಿತ್ಕಳೆಯ ಸೂಕ್ಷ್ಮಪ್ರತ್ಯಕ್ಷ. ಇದು ಕಣ್ಣಿನ ಸ್ಥೂಲ ಪ್ರತ್ಯಕ್ಷಕ್ಕೆ ಬರಬೇಕಾದರೆ ಕ್ರಿಯಾದೀಕ್ಷೆ ಸ್ಥೂಲವಾದ ತ್ಯಾಗಾಂಗಕ್ಕೆ ಅಗತ್ಯ.

**ಕ್ರಿಯಾದೀಕ್ಷೆ :**

ಇನ್ನು ತ್ಯಾಗಾಂಗಕ್ಕೆ ವಿಧಿಸಬೇಕಾದ ಕ್ರಿಯಾದೀಕ್ಷೆಯ ಕ್ರಮವನ್ನು ಇಂತು ನಿರೂಪಿಸಲಾಗಿದೆ :

> 'ಕುಂಡಮಂಡಲಿಕೋಪೇತಾ ಕ್ರಿಯಾದೀಕ್ಷಾ ಕ್ರಿಯೋತ್ತರಾ। ಶುಭಮಾಸೇ ಶುಭತಿಥೌ ಶುಭಕುಲೇ ಶುಭೇಽಹನಿ ॥
> ವಿಭೂತಿಂ ಶಿವಭಕ್ತೇಭ್ಯೋ ದತ್ವಾ ತಾಂಬೂಲಪೂರ್ವಕಂ। ಯಥಾವಿಧಿ ಯಥಾಯೋಗಂ ಶಿಷ್ಯಮಾನೀಯ ದೇಶಿಕಃ ॥
> ಸ್ನಾತಂ ಶುಕ್ಲಾಂಬರಧರಂ ದಂತಧಾವನಪೂರ್ವಕಂ॥......'
>
> —ಸಿದ್ಧಾಂತ ಶಿಖಾಮಣಿ

ಶುಭಮಾಸದ ಶುಭತಿಥಿಯಲ್ಲಿ, ಶುಭದಿನದ ಶುಭಸಮಯದಲ್ಲಿ ಬಾಳೆಗಂಬಗಳ ನಿಲ್ಲಿಸಿ, ಮಾಂದಳಿರ ತೋರಣ ಕಟ್ಟಿ, ಮಂಟಪ ರಚನೆಯ ಮಾಡಿ, ಆ ಚಪ್ಪರದ ಚೌಕಟ್ಟಿಗೆ ಒಳಪಟ್ಟ ನೆಲಗಟ್ಟನ್ನು ಸಾರಣೆ ಕಾರಣೆಗಳಿಂದ ಶುಚಿಗೊಳಿಸಿ, ರಂಗವಲ್ಲಿಯನಿಟ್ಟು, ಬಾಳೆ ಎಲೆಯ ಹಾಸಿ, ಅಕ್ಕಿಯ ಹರಹಿ, ಅದರ ಮೇಲೆ ಪಂಚಕೋನಾಕೃತಿಯ ಬರೆದು, ಪ್ರಣವಪಂಚಾಕ್ಷರಗಳನ್ನು ಆ ಆ ಕೋಣ ಗಳಲ್ಲಿ ತುಂಬಿ ಪಂಚಕಲಶಗಳನ್ನು ಸ್ಥಾಪಿಸುವುದು, ತೆಂಗಿನಕಾಯಿ ವಸ್ತ್ರ ಪತ್ರ ಪುಷ್ಪ ವಿಭೂತಿಗಳಿಂದ ಅಲಂಕರಿಸುವುದು. ಹಸಿ ನೂಲಿನ ಸೂತ್ರಬಂಧನ, ಶುದ್ಧೋದಕ, ದಕ್ಷಿಣಧಾರಣ, ಫಲತಾಂಬೂಲ ನಿವೇದನ, ಧೂಪದೀಪ ನಿರಾಜನ ಮುಂತಾದವುಗಳಿಂದ ವಿಧ್ಯುಕ್ತವಾಗಿ ಪೂಜಿಸುವುದು. ಗಣಪತಿಪೂಜಾ, ಧ್ಯಾನ, ಸ್ವಸ್ತಿವಾಚನ, ಪುಣ್ಯಾಹ, ನಾಂದೀ ಸಮಾರಾಧನ, ಅಂಕುರಾರ್ಪಣ. ಮಂಟಪದೇವತಾ ಪ್ರತಿಷ್ಠೆಗಳನ್ನು ನೆರವೇರಿಸಿ, ಶಿವಭಕ್ತರಿಗೆ ವೀರಮಾಹೇಶ್ವರರಿಗೆ ವಿಭೂತಿ ತಾಂಬೂಲಗಳನ್ನು ಆಹ್ವಾನ ಚಿಹ್ನೆ ಗಾಗಿ ಕೊಡುವುದು. ವಸನ, ದಂತಧಾವನಾದಿಗಳನ್ನು ತೀರಿಸಿ, ಮಿಂದು ಬಿಳಿಮಡಿಯುಟ್ಟು, ಕೈಯಲ್ಲಿ ಕಾಯಿಹಣ್ಣು ವಿಭೂತಿ ವೀಳೆಯ ಕಾಣಿಕೆಯುಳ್ಳ ತಟ್ಟೆಯನ್ನು ಹಿಡಿದ ವಟುವನ್ನು ಮಂಟಪಕ್ಕೆ ಶ್ರೀ ಗುರುವು ಬರಮಾಡಿಕೊಳ್ಳಬೇಕು. ವಟು ಶ್ರೀಗುರು ದೇವನಿಗೆ ಸಾಷ್ಟಾಂಗ ನಮಸ್ಕಾರವನ್ನೆಸಗಬೇಕು. ಶ್ರೀಗುರು ನಮಸ್ಕರಿಸಿದ ಶಿಷ್ಯನನ್ನು ಎಬ್ಬಿಸಿ ಮಂಟಪದ ಸ್ವಸ್ತಿಕಮಂಡಲದಲ್ಲಿ ಮೂಡಣಕೆ ಮುಖವಾಗಿ ಕುಳ್ಳಿರಿಸಬೇಕು. ಬಲಗೈಗೆ ಕಂಕಣಕಟ್ಟಿ, ಶಿವಧ್ಯಾನಮಾಡಿಸಿ, ಬಳಿಕ ಆಜ್ಞಾ, ಉಪಮಾ, ಸ್ವಸ್ತಿಕಾ ರೋಹಣ, ಕಲಶಾಭಿಷೇಕ, ವಿಭೂತಿಪಟ್ಟ, ಆಯತ್ತ, ಸ್ವಾಯತ್ತ ಎಂಬೀ ಏಳುಬಗೆಯಾದ ಕ್ರಿಯಾದೀಕ್ಷೆಯನ್ನು ಕ್ರಮವಿಡಿದು ಕರುಣಿಸಬೇಕು.

೧) ಗುರುದೇವನ ಆಜ್ಞೆಯೂ ಒಂದು ದೀಕ್ಷೆ; ಆದಿದೀಕ್ಷೆ. ಸತ್‌ಶಾಸನ ಸಂಸ್ಕಾರ. ಗುರುದೇವನ ಅಪ್ಪಣೆಯ ಮೀರಬಾರದೆಂದು ಧರ್ಮಶಾಸನವಿದೆ. ಶಿಷ್ಯನಿಗೆ ತನ್ನ ಶ್ರೀಗುರುವಿನ ಆಜ್ಞೆಯೆ ಶಿವಾಜ್ಞೆ; ಸುವ್ರತ, ಉದ್ಧರಿಸುವ ಉದ್ಬೋಧನ. ಆದರಿಂದ ಭಾವೋದ್ದೀಪನ; ದೃಕ್ಕ್ರಿಯಾನುಭಾವಗಳ ಸಂವಹನ. ಆಜ್ಞೆಯೆಂದರೆ ಶಿಷ್ಯನು ಸುಶ್ರೂಷುವಾಗಲು ಬೇಕಾದ ಕೃತಿನಿರ್ದೇಶ, ನೀತಿನಿರ್ದೇಶ, ಶುದ್ಧಸತ್ವಗುಣಗಳ ಆದೇಶ. ಗುರುದೇವನ ಆಜ್ಞಾದೀಕ್ಷೆಯ ವೈಖರಿವಾಣಿ ಶಿಷ್ಯನ ಹೃದಯ ಭೂಮಿಯಲ್ಲಿ ಗುಣಜ್ಞಾನ ನೀತಿ ನಡತೆ ಸದ್ಭಾವನೆಗಳೆಂಬ ಮಳೆಯ ಸುರಿಸುವ ಮೋಡ. ಈ ವರ್ಷಣವಿಲ್ಲದೆ ಕ್ರಿಯೆ ಜ್ಞಾನಾನು ಭವಗಳ ಹುಲುಸಾದ ಬೆಳೆ ಬಾರದು; ಲಿಂಗಫಲಗಳಾಗವು. ಲಿಂಗದೇವನ ದರ್ಶನ ಅರ್ಚನ ಸ್ಪರ್ಶನಾದಿಗಳು ಸಂಭವಿಸವು. ಶ್ರೀಗುರು ವಚನೋಪದೇಶ ವರ್ಷಣಕರ್ತನು; ಶಿಷ್ಯನ ಹೃದಯಕ್ಕೆ ಸ್ಫೂರ್ತಿಯನ್ನು ಜಾಗ್ರುತಿಯನ್ನು ಒದಗಿಸುವಾತನು. ಇದರಿಂದಾಗಿ ಗುರುವೆ ಶಿಷ್ಯನ ಅಂಗಸೃಷ್ಟಿಯ ಬ್ರಹ್ಮ–ವಾಕ್ಪತಿ! ಶಿಷ್ಯನ ಸುಸ್ಥಿತಿಗೆ ಶ್ರೀಪತಿ ! ಶಿಷ್ಯನ ದುರ್ಗುಣ ದುರಾಚಾರ ಸಂಹಾರಕ್ಕೆ ಶಕ್ತಿಪತಿ ! ಶಬ್ದಬ್ರಹ್ಮನಾದ ಶ್ರೀಗುರುವಿನ ಆಜ್ಞಾದೀಕ್ಷೆಯಿದು : ಓ ಶಿಷ್ಯ ಶಿಶುವೆ, ನಿನ್ನನ್ನು ಹೆತ್ತ (ಕರುಣಿಸಿದ) ಶ್ರೀಗುರು ವನ್ನು ಎಂದಿಗೂ ಮರೆಯದಿರು, ಶ್ರೀಗುರುವಚನವನ್ನು ಮೀರದಿರು; ಗುರುವಾಜ್ಞೆಗಿಂತ ಹಿರಿದಾದ ಅಮೃತವಿಲ್ಲ; ಧರೆಯಲ್ಲಿ ನರಜನ್ಮಕ್ಕಿಂತ ಮಿಗಿಲಾದ ಮತ್ತೊಂದು ಜನ್ಮವಿಲ್ಲ; ಹರಜನ್ಮ ಇದಕ್ಕಿಂತ ಇಮ್ಮಿಗಿಲು. ಕರಣವಿಜಯಕ್ಕಿಂತ ಕಲಿತನವಿಲ್ಲ. ಪರ ಶಿವಲಿಂಗ ಪೂಜೆಗಿಂತ ಬೇರೆ ಪಾವನಪೂಜೆಯಿಲ್ಲ. ಪ್ರಪಂಚ ಪರಮಾರ್ಥಗಳೆರಡನ್ನು ಕೂಡಿ ನಡೆಯಿಸುವುದಕ್ಕಿಂತ ಬೇರೆ ಜಾಣ್ಮೆ ಯಿಲ್ಲ. ಅಭಕ್ಷಭಕ್ಷಣ ಮಾಡದಿರು, ಅಪೇಯಪಾನ ಬಿಟ್ಟುಬಿಡು: ಸಾತ್ವಿಕಾಹಾರವನ್ನೆಸೇವಿಸು. ಶಾಖಾಹಾರವನ್ನೆ ಭುಂಜಿಸು. ಅತಿಯಾಗಿ ಉಣಬೇಡ; ಅನೇಕ ವೇಳೆ ತಿನ ಬೇಡ. ಓಗರ ಸೇವಿಸುವಾಗ ಅಲ್ಲಸಲ್ಲದುದನ್ನು ನೆನೆಯದಿರು. ಅವಾಚ್ಯವಾಕ್ಕುಗಳ ನುಡಿಯದರು. ಲಿಂಗಕ್ಕೆ ನಿವೇದಿಸದಿರಬೇಡ. ಹುಟ್ಟು ಮುಪ್ಪು ಸಾವುಗಳಿಗೆ ಅಳುಕದಿರು. ನಷ್ಟಕಷ್ಟಗಳಿಗೆ ಅಂಜಿ ಆಲೋಚಿಸ ದಿರು. ಅವಾಸ್ತವವಾದ ಅವಮಾನವನ್ನು ಮನಕ್ಕೆ ತಾರದಿರು. ಅನ್ಯಾಯಕ್ಕೆ ಅನಾಚಾರಕ್ಕೆ ದುಡುಕದಿರು. ದೀನದುಃಖಿತರಲ್ಲಿ ದಯೆಯುಳ್ಳವನಾಗು. ಕುಟಿಲ ಕುಹಕಗಳಿಂದ ದೂರಾಗು. ದಿಟವನಾಡು. ದಿಟದಲ್ಲಿ ನಡೆ. ಮಂಗಳರೂಪಗಳ ನೋಡು. ಮಂಗಳ ಶಬ್ದಗಳ ಕೇಳು. ಮಂಗಳಪದ್ಯಗಳ ಹಾಡು. ಮಂಗಳಸ್ಥಳಗಳಿಗೆ ಹೋಗು. ಮಂಗಳಮಯರಿಗೆ ಬಾಗು. ಕಾರ್ಪಣ್ಯಕ್ಕೆ ಒಳಗಾಗ ಬೇಡ. ದಾಕ್ಷಿಣ್ಯಕ್ಕೆ ಮನಸೋಲಬೇಡ. ಸತ್ಪಾತ್ರದಲ್ಲಿ ದಾನಮಾಡು. ಬಿಕ್ಕೆ ಬೇಡಬೇಡ. ಕಾಯದ ಕತ್ತಲೆಯ ಕಳೆ. ಮನದ ಮಲವ ತೊಳೆ. ಮದಮತ್ಸರಗಳ ತೊರೆ. ಕಾಯಕನಿರತನಾಗಿ ಭಾಗ್ಯದ ಹುಲುಸು ಬೆಳೆಯ ಬೆಳೆ. ಲೋಕಸೇವಾಸಕ್ತಿಯ ತಳೆ. ನಿಜಕೀರ್ತಿಕಾಂತಿಗಳಿಂದ ಹೊಳೆ, ಇತ್ಯಾದಿಯಾಗಿ ಶ್ರೀಗುರು ಶಿಷ್ಯನಿಗೆ ಉಪಕರಿಸಿ ಉಪದೇಶಿಸುವುದೆ ಆಜ್ಞಾದೀಕ್ಷೆ. ಸದ್ಗುರುವಿನ ಈ ಹಾರ್ದಿಕವಾಣಿಯೆ ಶಿಷ್ಯನ ಸಾಂಸ್ಕಾರಿಕ ರಕ್ಷಾಕವಚ; ಉಜ್ಜೀವನ ಪೀಠಿಕೆ; ಸನ್ಮಾರ್ಗ ಪ್ರದೀಪ; ಸತ್ವವನ್ನು ತತ್ತ್ವವನ್ನು ತುಂಬುವ ಅಂತರ್ವಾಣಿ.

೨) ಉಪಮಾದೀಕ್ಷೆ : 'ಉಪಮೀಯತ ಇತಿ ಉಪಮಾ' ಉಪಮೆಯೆಂದರೆ ಹೋಲಿಕೆ. ಉಪಮಾದೀಕ್ಷೆಯೆಂದರೆ ಉತ್ತಮದ ದೃಷ್ಟಾಂತವನಿತ್ತು ಹೇಳುವಿಕೆ; ಉದಾತ್ತರನ್ನು ಉದಹರಿಸಿ ಉಪದೇಶಿಸುವಿಕೆ. ಎತ್ತರವಾಗಿ ಎಲ್ಲರಿಗೆ ಆದರ್ಶವಾಗಿ ಬಾಳಿದವರನ್ನು ಎಣಿಸಿ, ಅವರಂತೆ ಬಾಳಿ ಬದುಕೆಂದು ಹೋಲಿಸಿ ಹೇಳುವಿಕೆ. ಓ ಶಿಷ್ಯಶಿಶು, ಇದೋ ಹೋಲಿಸಿ ಹೇಳುವುದನ್ನು ಆಲಿಸು, ಆಲಿಸಿದಂತೆ ಪಾಲಿಸು. ಪೂರ್ವದಲ್ಲಿ ಜ್ಞಾನತರುವಾದ ಜಗದ್ಗುರು ಪಂಡಿತಾಚಾರ್ಯರಿದ್ದರು. ಅವರೆ ವೀರಶೈವಧರ್ಮ

ಸಂಸ್ಥಾಪಕರು. ಅವರು ಪ್ರಪಂಚವನುಳಿದು ಪ್ರಪಂಚವ ಬೆಳಗಿದರು. ಭಾಷ್ಯವ ಬರೆದು ಭುವನವ ಬದುಕಿಸಿದರು. ಆಚಾರ್ಯ ಪದವಿಗೇರಿ ಆರಾಧ್ಯರಾಗಿ ಅಂದಿಂದಿಗೂ ಅಖಂಡವಾಗಿ ಬೆಳಗಿ ಬೆಳಗುತ್ತಿದ್ದಾರೆ. ಅನೇಕರನ್ನು ಕರುಣಿಸಿ ಕಾಪಿಟ್ಟರು. ಅವರಂತೆ ಆಚರಿಸಿ ಆಚಾರ್ಯಪದವಿಗೇರು. ಇಲ್ಲವಾದರೆ ಭಕ್ತಿಭಾಂಡಾರಿ ಬಸವಣ್ಣನವರಂತೆ ಬಾಳು. ಅವರು ಸಂಸಾರವ ಹೊದ್ದಿಯೂ ಹೊದ್ದದಂತಿದ್ದರು. ಮೂಢಸಂಪ್ರದಾಯಬದ್ಧರಲ್ಲ, ಪ್ರಗತಿಶೀಲರು. ಅಧಿಕಾರಿಯಾಗಿದ್ದರೂ ಅಹಂಕಾರಿಯಾಗಿರಲಿಲ್ಲ; ಆಚಾರಹೀನರಾಗಿರಲಿಲ್ಲ. ಅರ್ಥಗಳಿಸಿದರೂ ಸ್ವಾರ್ಥಕ್ಕೆ ಬಳಸುತ್ತಿರಲಿಲ್ಲ. ಸಾಮಾಜಿಕ ಸೇವೆಯಲ್ಲಿ ಸಾಂಸ್ಕೃತಿಕ ಕಾರ್ಯಗಳಲ್ಲಿ ನಿರತರಾಗಿರುತ್ತಿದ್ದರು. ಲೋಕಸೇವೆಯಲ್ಲಿದ್ದರೂ ಶಿವಪೂಜೆಯ ಬಿಟ್ಟಿರಲಿಲ್ಲ, ಶಿವಾನುಭಾವಗೋಷ್ಠಿಯ ಹಿಂಗಿರಲಿಲ್ಲ. ವಚನ ರಚನೆಯನ್ನು ಮುಂದುವರಿಸಿ ನುಡಿಯೊಳಗಿನವನ್ನು ಆದರ್ಶವಾಗಿ ನಡೆಯಿಸಿದರು. ತ್ರಿವಿಧದಾಸೋಹವ ನಡೆಸಿ ಧರ್ಮವ ಬಿತ್ತರಿಸಿದರು. ನೀತಿ ಬಿತ್ತುಗಳ ಬಿತ್ತಿದರು. ಜಾತಿವಾದವ ತೊಡೆದರು. ಸ್ತ್ರೀಯರಿಗೆ ಆಧ್ಯಾತ್ಮದಲ್ಲಿ ಪುರುಷ ಸಮಾನತೆಯ ತಂದು ಕೊಟ್ಟರು. ಎಲ್ಲ ಬಗೆಯ ಕಾಯಕಗಳಿಗೆ ಮಹತ್ವವನ್ನಿತ್ತರು. ಮರಣಕ್ಕೆ ಹೆದರದೆ ಮುನ್ನಡೆದರು. 'ಮರಣವೆ ಮಹಾನವಮಿ' ಎಂದರು. ಎಲ್ಲರನ್ನು ತನ್ನವರೆಂದು ಭಾವಿಸಿದರು. ಎಲ್ಲ ಜೀವಿಗಳಿಗೆ ಲೇಸನೆ ಬಯಸಿದರು. ಎಲ್ಲರಿಂದಲೂ ತಾವು ಲೇಸೆನಿಸಿಕೊಂಡರು. ಅವರಂತೆ ಆಚರಿಸಲು ಅಭ್ಯಾಸವ ಮಾಡು.

ಸಂಸ್ಕಾರ ಪಡೆವ ಶಿಷ್ಯರು ಮಹಿಳೆಯರಾದರೆ ಅವರಿಗೆ ಮಾಡುವ ಉಪಮಾದೀಕ್ಷೆಯಿದು: ದುಗ್ಗಳೆಯಂತೆ ದಾಸೋಹದಲ್ಲಿ ದೇಹದುಡಿಮೆಯಲ್ಲಿ ನಿರತರಾಗಿರಿ, ಧರ್ಮಚಾರಿಣಿಯರಾಗಿರಿ. ಪತಿಯ ಮಾತನ್ನು ಮೀರದಂತಿರಿ. ಸಂಸಾರ ವ್ಯಾಮೋಹದಲ್ಲಿ ಬಿದ್ದು ಸಣ್ಣಾಗದಿರಿ; ಮಣ್ಣು ಮಸಿಯಾಗದಿರಿ. ಮಹಾರಾಣಿ ಸುಗ್ಗಳೆಯಂತೆ ಶಿಷ್ಯೆಯರಾಗಿರಿ; ಶಿವಶರಣೆಯರಾಗಿರಿ; ಸೇವೆ ಸಲ್ಲಿಸಿರಿ. ಧರ್ಮಪ್ರಚಾರ ನಿರತರಾಗಿರಿ. ಶಿವಲಿಂಗಪೂಜಾಪರಾಯಣೆಯರಾಗಿರಿ. ಗುರುದೇವಿ ಶಾಂಭವಿಯಂತೆ ಸತ್ವಸಂಪನ್ನೆಯರಾಗಿರಿ; ಶಿವಯೋಗ ಶಕ್ತಿವಂತರಾಗಿರಿ. ರುದ್ರಕನ್ನಿಕೆ ಮಹಾದೇವಿಯಕ್ಕನಂತೆ ಬಾಳಿ ಬೆಳಗಿರಿ; ಮಲ್ಲಿಕಾರ್ಜುನನಲ್ಲಿ ಮನ ಮೀಸಲಿರಿಸಿ ಪೂಜಿಸಿದಂತೆ ಲಿಂಗಪೂಜೆಯ ಮಾಡಿರಿ. ನಿಮ್ಮ ನಿಮ್ಮ ತ್ರಿಕೂಟವೆಂಬ ಶ್ರೀಗಿರಿಯಲ್ಲಿರುವ ಮಹಾಲಿಂಗವೆಂಬ ಮಲ್ಲಿಕಾರ್ಜುನನಲ್ಲಿ ಬೆರೆದೇಕವಾಗಿರಿ. ಅಲ್ಲಮಪ್ರಭುವಿನ ಅನುಗ್ರಹಕ್ಕೆ ಪಾತ್ರಳಾದಂತೆ ನಿಮ್ಮ ಗುರುಪ್ರಭುವಿನ ಅನುಗ್ರಹಕ್ಕೆ ಪಾತ್ರರಾಗಿರಿ. ಲಕ್ಕಮ್ಮ ನೀಲಮ್ಮ ಗಂಗಮ್ಮಗಳಂತೆ ಬಾಳದೇರನ್ನು ಸರಾಗವಾಗಿ ಎಳೆಯಿರಿ. ಸಂಸಾರದಲ್ಲಿದ್ದರೂ ಸತ್ಕಾಯಕವನ್ನು ಶಿವಲಿಂಗಪೂಜೆಯನ್ನು ಶಿವದಾಸೋಹವನ್ನು ಬಿಡಬಾರದು. ವಚನರಚನೆಯ ಮಾಡಿರಿ. ಸತ್ಯಪಂಥವ ಸಾಧಿಸುವುದರಲ್ಲಿ, ಸ್ವಾತ್ಮಶಕ್ತಿ ಭಕ್ತಿಗಳ ಸಂಪಾದಿಸುವುದರಲ್ಲಿ ಸ್ಥೈರ್ಯವಿರಬೇಕು. ಪುರಾತನರ ಪಾವನಮಾರ್ಗದಂತೆ ಪ್ರವರ್ತಿಸಬೇಕು–ಎಂದು ಹೋಲಿಸಿ ಹೇಳುವುದೆ ಉಪಮಾ ಉಪದೇಶ. ಉಪದಂತಿಯಿಲ್ಲದ ಉತ್ತಮ ಉಪಪತ್ತಿ. ಆಜ್ಞಾದೀಕ್ಷೆಗೆ ಈ ಉಪಮಾದೀಕ್ಷೆ ಉಪಕಾರಕ, ಪ್ರೇರಕ. ಅನುಕರಣಾಸಕ್ತಿ ಮಾನವಹೃದಯಲ್ಲಿ ಮನೆ ಮಾಡಿದೆ. ಅದಕ್ಕೆ ಯಾವುದರ ಆಲಂಬನ ಕೊಟ್ಟರೆ ಅದನ್ನು ಅಂಗೀಕರಿಸುತ್ತದೆ. ಅದರಿಂದಾಗಿ ಹಿಂದಿನ ವಂದ್ಯರ, ಜಾಗತಿಕ ಜೀವನ ಜ್ಯೋತಿಗಳ ಉಜ್ಜೀವನದ ಉದಾಹರಣೆಯನ್ನು ಉದ್ಧರಿಸಿ ತೋರುವ ಈ ಉಪಯುಕ್ತ ಉಪಮಾ ಉಪದೇಶವನ್ನು ಶ್ರೀಗುರು ಶಿಷ್ಯರಿಗೆ ದೀಕ್ಷಾಸಂಸ್ಕಾರ ಸಮಯದಲ್ಲಿ ಕರುಣಿಸುತ್ತಾನೆ.

ಶ್ರೀಗುರು ತನ್ನ ಶಿಷ್ಯರನ್ನು ಯಾವ ಮಾರ್ಗದಲ್ಲಿ ಕರೆದೊಯ್ಯಬೇಕೋ ಆ ಮಾರ್ಗದಲ್ಲಿ ಹಿಂದೆ ಆದರ್ಶವಾಗಿ ನಡೆದು ಹೋದವರ ನಿರ್ದೇಶನವನ್ನು ಕೊಡುವುದರಲ್ಲಿ ಔಚಿತ್ಯವಿದೆ; ದೋಹದವಾಗುವ ಶಕ್ತಿಯೂ ಇದೆ. ಶಿವಾಚಾರ್ಯರ ಶಿವಶರಣರ ನಡೆನುಡಿಗಳ ಸಾಕ್ಷಿಯನ್ನು ಶಿಷ್ಯನ ಮನಮುಟ್ಟುವಂತೆ ಬೋಧಿಸುವುದೆ ಉಪಮಾಸಂಸ್ಕಾರವಾಗಿದೆ.

೩) ಸ್ವಸ್ತಿಕಾರೋಹಣದೀಕ್ಷೆ : 'ಸ್ವಸತಿ ಸ್ವಸ್ಯತಿ ವಾ ಸ್ವಸ್ತಿ', 'ಸ್ವಸ್ತಿಕ್ಷೇಮಂ ಕಾಯತಿ ಕರೋತಿ ವಾ ಸ್ವಸ್ತಿಕಃ' ಈ ಎರಡು ವಿಗ್ರಹಗಳಿಂದ ಸ್ವಸ್ತಿಕ ಪದದ ಅರ್ಥ ಮನದಟ್ಟಾಗುತ್ತದೆ.

ಸ್ವಸ್ಥಿಯನ್ನು ಬಯಸಿ ಬಂದ ಓ ಶಿಷ್ಯನೆ, ಕೇಳು: ಕುಳಿತುಕೊಳ್ಳುವುದೂ ಒಂದು ಕಲೆ; ಒಂದು ಸಂಸ್ಕಾರ. ಸಿಕ್ಕ ಹಾಗೆ ಕುಳಿತುಕೊಳ್ಳಬಾರದು. ಕುಳಿತರೆ ಶರೀರಾರೋಗ್ಯಕ್ಕೆ ಹಾನಿಯಲ್ಲದೆ ಸೌಜನ್ಯಕ್ಕೂ ಹಾನಿ; ಗೌರವತೆಗೂ ಹಾನಿ. ಕುಳಿತುಕೊಳ್ಳಲು ಎಷ್ಟೋ ಆಸನಗಳಿವೆ. ಆದರೆ ಅವೆಲ್ಲ ಅಂಗಕ್ಕೆ ಆಯಾಸವನ್ನು ಅತಿಬೇಗ ಅಳವಡಿಸುತ್ತವೆ. ಅವುಗಳಲ್ಲೆಲ್ಲಾ ಸ್ವಸ್ಥಿಕಾಸನವೆ ಶರೀರಕ್ಕೆ ಸ್ವಸ್ಥಿ. ಕಾರಣ ನೀನು ಈಗ ಸ್ವಸ್ಥಿಕಾಸನಾರೂಢನಾಗು. ಆಸನ ಎರಡುಂಟು. ನೀನು ಹಾಕುವ ಸ್ವಸ್ಥಿಕಾಸನಕ್ಕೆ ನೆಲದ ಸ್ವಸ್ಥಿಕ ಸಂಸ್ಕಾರದ ನೆರವಿರಬೇಕು. ಎಲ್ಲ ನೆಲವೂ ಒಂದೇ ಎಂದು ಸಿಕ್ಕಲ್ಲಿ ಕುಳಿತುಕೊಳ್ಳಬಾರದು. ನೆಲಕ್ಕೆ ಪೂರ್ವಾಶ್ರಯ ದೋಷವುಂಟು ; ಇದನ್ನು ಕಳೆವ ಸಂಸ್ಕಾರ ಸ್ಥಲಕ್ಕೂ ಆಗಬೇಕು. ಅದುದೆ ಸ್ವಸ್ತಿಕ ; ಪಾವನಕಾರಕ.

ಗೋಮಯ ಮತ್ತು ಶುದ್ಧೋದಕಗಳಿಂದ ಸಾರಿಸಿದ, ರಂಗವಲ್ಲಿಯ ರಚಿಸಿದ, ದರ್ಭಾಸನ ಕಂಬಲಾಸನಗಳಿಂದ ಸಜ್ಜುಗೊಳಿಸಿದ ಪಾವನಗದ್ದುಗೆಗೆ ಸ್ವಸ್ತಿಕವೆಂದು ಹೆಸರು. ಆ ಸ್ವಸ್ತಿಕ ಸ್ಥಲದಲ್ಲಿ ಶಿಷ್ಯನನ್ನು ಶಾರೀರಿಕ ಸ್ವಸ್ತಿಕಾಸನದೊಡನೆ ಕುಳ್ಳಿರಿಸುವುದೆ ಬಾಹ್ಯಸ್ವಸ್ತಿಕಾರೋಹಣ ಸಂಸ್ಕಾರ! ಇನ್ನು ಚಿತ್ತಚಪಲತೆಗಳನ್ನು ಪರಿಹರಿಸಿ ಶಿಷ್ಯನನ್ನು ಸ್ವಸ್ಥಚಿತ್ತನನ್ನಾಗಿಸುವುದೆ ಆಂತರಿಕಸ್ವಸ್ತಿಕಾರೋಹಣ ಸಂಸ್ಕಾರ. ಆತ್ಮನೆನಹಿನೊಳಗೆ ನಿಶ್ಚಿಂತನಾಗಿರುವುದೆ ಈ ದೀಕ್ಷೆಯ ಉದ್ದೇಶ. ಹೀಗೆ ಸ್ವಸ್ಥಚಿತ್ತ

ವೆಂಬ ಪೀಠದಲ್ಲಿ ಲಿಂಗಶಿರುವನ್ನು ಶ್ರೀಗುರು ಆರೋಪಣ ಮಾಡಿಸುವುದೂ ಇದರ ಮೂಲೋದ್ದೇಶವಾಗಿದೆ. ಇದರಿಂದ ಶಾರೀರಕ ಮತ್ತು ಮಾನಸಿಕ ಸ್ವಸ್ಥಿ ಜೀವನಕ್ಕೆ ಒಂದು ದಿವ್ಯ ಶಕ್ತಿ ; ಮುಂದಿನ ಸಂಸ್ಕಾರ ಪರಿಣಾಮಕ್ಕೆ ಒಂದು ಸಹಾಯ ಸಂಪತ್ತಿ.

೪) **ಕಲಶಾಭಿಷೇಕ ದೀಕ್ಷೆ :**

'ಪಂಚಬ್ರಹ್ಮಮಯೈಸ್ತತ್ರ ಸ್ಥಾಪಿತೈಃ ಕಲಶೋದಕೈಃ ।
ಆಚಾರ್ಯಃ ಸಮಮ್ಯುತ್ಯಿಗ್ಭಿಸ್ತ್ರಿವಾರಮಪೇಚಯೇತ್ ॥'

—ಸಿದ್ಧಾಂತ ಶಿಖಾಮಣಿ.

ಪೂರ್ವ ಜನನ ದೋಷವ ಕಳೆದು ಪುನರ್ಜಾತನ ಮಾಡಲು ಈ ಸಂಸ್ಕಾರವನ್ನು ಶ್ರೀಗುರು ಶಿಷ್ಯನಿಗೆ ಕರುಣಿಸುವನು. ಋತ್ವಿಕ್‌ರಿಂದ ಪೂಜೆಗೊಂಡ ಪಂಚಕಲಶಗಳು ಪಂಚಬ್ರಹ್ಮಮಯಗಳು. ಪಂಚಾಚಾರ್ಯರೆ ಪ್ರತ್ಯಕ್ಷ ಪಂಚಬ್ರಹ್ಮರು. ಇವರು ತಮ್ಮ ತಮ್ಮ ಅಂತಶ್ಶಕ್ತಿಗಳನ್ನು ಭಸ್ಮ–ಮಂತ್ರ–ಸ್ಪರ್ಶ–ಭಾವಗಳಿಂದ ಆ ಕಲಶೋದಕಗಳಲ್ಲಿ ಇರಿಸಿರುತ್ತಾರೆ. ಅಂತಹ ಪವಿತ್ರೋದಕಗಳನ್ನು ಒಂದು ಪಾತ್ರೆಗೆ ತೆಗೆದುಕೊಂಡು ಅದರಲ್ಲಿ ದೀಕ್ಷಾಧಿಕಾರಿಯಾದ ಶ್ರೀಗುರು ಚರಣೋದಕವನ್ನು ಮಿಶ್ರಮಾಡಿ, ಶಿಷ್ಯನ ಮಸ್ತಕದ ಮೇಲೆ ಅಂಗಾಂಗಗಳ ಮೇಲೆ ಋತ್ವಿಕ್‌ರೊಡನೆ ಮೂರು ಸಲ ಸಂಪ್ರೋಕ್ಷಿಸಲಾಗುವುದು. ತ್ರಿವಿಧ ಸಂಪ್ರೋಕ್ಷಣವು ತ್ರಿವಿಧ ತನುಗತ ತ್ರಿವಿಧಮಲ ನಿವಾರಣವನ್ನು ನಿರ್ದೇಶಿಸುತ್ತದೆ.

ಶ್ರೀಗುರುದೇವನ ಕರಕಮಲವೆ ಒಂದು ಪಂಚಕಲಶ. ಅದರೊಳಗಿರುವ ಮಕರಂದವೆ ಗುರುಕರುಣಾರೂಪ ಜಲ. ಅದು ಹಸ್ತೋದಕವೂ ಅಹುದು. ಅದನ್ನು ಶಿಷ್ಯನ ಮಸ್ತಕದ ಮೇಲೆ ಅಭಿಷೇಕಿಸುವುದೆ ಆತ್ಮಿಕದ ಕಲಶಾಭಿಷೇಕ. ಇದರ ಸಂಕೇತವೆ ಬಾಹ್ಯಕಲಶಾಭಿಷೇಕ. ಗುರು ತನ್ನ ಕರುಣಾಜಲಪೂರಿತ ಕರಕಂಜವನ್ನು ಶಿಷ್ಯನ ಮಸ್ತಕದ ಮೇಲಿರಿಸಿ ಮೈದಡವಿ ಪೂರ್ವಜನ್ಮ ಕಲ್ಮಷವ ಕಳೆದು ಪುನರ್ಜಾತನ ಮಾಡುವುದೆ ಕಲಶಾಭಿಷೇಕ ಸಂಸ್ಕಾರ.

ಕಲಸ, ಕಲಶ ಎಂದು ಎರಡು ಬಗೆಯಾಗಿ ಪ್ರಯೋಗವಿದೆ. ಎರಡೂ ಸಾಧುವಾಗಿವೆ. 'ಕೇನ-ಜಲೇನ ಲಸತಿ–ಮೋದತಿ ಮೋದಯತಿ ವಾ ಕಲಸಃ' ಕಲಸೋದಕದಿಂದ ಮುದವುಂಟಾಗುತ್ತದೆ. 'ಕಲಂ–ಪಾತ್ರಂ ಪಾತ್ರತಾಂ ವಾ ಶ್ಯತಿ ಶವತಿ ವಾ ಕಲಶಃ' ಕಲಶಾಭಿಷೇಕದಿಂದ ಪಾತ್ರತ್ವ ಪ್ರಾಪ್ತಿಸುತ್ತದೆ. ಇದರಿಂದಾಗಿ ಎರಡೂ ಸೂಕ್ತ ಪ್ರಯೋಗಗಳಾಗಿವೆ.

ಉದಕದಲ್ಲಿ ನಿಸರ್ಗವಾಗಿ ತಂಪು ಗುಣವಿದೆ. ಪ್ರಕೃತಿಗೆ ಮಾತ್ರ ತಂಪನ್ನುಂಟು ಮಾಡುತ್ತದೆ. ಅದೆ ಸಂಸ್ಕಾರವನ್ನು ಪಡೆದ ಕಲಶೋದಕವು ಅಂತರಂಗಕ್ಕೂ ಆತ್ಮಕ್ಕೂ ಸ್ವಸ್ಥಿಯನ್ನು ಸಂಪಾದಿಸಿಕೊಡುತ್ತದೆ. ದೇಹಭಾವವು ದೂರಾಗಿ ಲಿಂಗಭಾವವು ಅಂಗವಿಸುತ್ತದೆ; ಅಂತರ್ಮಲವನ್ನು ಕಳೆಯುತ್ತದೆ.

೫) **ವಿಭೂತಿಪಟ್ಟ ದೀಕ್ಷೆ :** ಭೂತಿ ಸಾಮಾನ್ಯ; ವಿಭೂತಿ ಅಸಾಮಾನ್ಯ. ಭೂತಿ ಭೌತಿಕ, ವಿಭೂತಿ ಅಭೌತಿಕ. ಅಸಾಧಾರಣ ಶಕ್ತಿಸಂಪನ್ನ; ಅಪ್ರತಿಮ ಪ್ರತಿಭಾನ್ವಿತ; ಸರ್ವೋತಮ ಸಾಂಸ್ಕಾರಿಕ; ಸರ್ವಾಗತ್ಯ; ಸರ್ವಾದರ್ಶ. 'ವಿಭೂತಿ' ಶಬ್ದಕ್ಕೆ ಭಸ್ಮ, ಐಶ್ವರ್ಯ, ಅಣಿಮಾದ್ಯಷ್ಟಭೂತಿ, ಅದ್ವಿತೀಯ ಪ್ರಭಾವವುಳ್ಳ ವ್ಯಕ್ತಿ–ಎಂದು ಅರ್ಥಗಳಿವೆ. ಇವುಗಳಲ್ಲಿ ಭಸ್ಮ ಅಥವಾ ಭಸಿತ ಎಂಬುದೆ ಪ್ರಥಮಾರ್ಥವಾಗಿದೆ; ಪ್ರಸ್ತುತವಾಗಿದೆ. ಶ್ರೀಗುರುವಿನ ಅಮೃತಹಸ್ತದಿಂದ ವಿಭೂತಿಧಾರಣದೀಕ್ಷೆಯನ್ನು ಪಡೆದರೆ ಐಶ್ವರ್ಯಾದಿಗಳು ಮೈಗೂಡುತ್ತವೆ; ಕೈಗೂಡುತ್ತವೆ. ರೋಗರುಜಿನಗಳು ಬಾರದಿರುತ್ತವೆ. ಕರ್ಮ ನಿರ್ಮಲವಾಗುತ್ತದೆ. ಮಹಾಪುರುಷತ್ವ ಸಂಪ್ರಾಪ್ತವಾಗುತ್ತದೆ. ಅಂದರೆ ಅತಿಮಾನುಷಶಕ್ತಿ ಅಳವಡುತ್ತದೆ. ಲೋಕಕಲ್ಯಾಣಗುಣವೈಭವ-ಗೌರವಗಳು ಲಭಿಸುತ್ತವೆ. ಮಿಗಿಲಾಗಿ ಭಕ್ತಿಭಾವ ವಿಭಾವಗಳುಂಟಾಗುತ್ತವೆ. ವಿಭೂತಿಗೆ ಐಶ್ವರ್ಯವೆಂತಲೂ ಹೇಳಲಾಗುತ್ತದೆ.

ಐಶ್ವರ್ಯ ಇಬ್ಬಗೆ! ಈಶ್ವರ ಭಾವವುಂಟಾಗುವುದೊಂದು; ಇಹದ ಸಿರಿಯುಂಟಾಗುವುದಿನ್ನೊಂದು. ಮೊದಲಿನದು ಅಚ್ಚಳಿಯದ ಮಹಾಸಂಪತ್ತು; ಎರಡನೆಯದು ಅಳಿವ ಅಣುಸಂಪತ್ತು, ಲಘುಸಂಪತ್ತು. ಒಂದರಿಂದ ಶ್ರೇಯ; ಇನ್ನೊಂದರಿಂದ ಜೀವನಾಭ್ಯುದಯ. ಇದರಿಂದಾಗಿ ಅಣಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ–ಐಶ್ವರ್ಯಗಳಿಗಿಂತ ಮಹಿಮಾ, ಗರಿಮಾ, ಈಶಿತ್ವ, ವಶಿತ್ವಗಳು ಉತ್ತಮ ಐಶ್ವರ್ಯಗಳೆನಿಸಿವೆ. ಇವೆಲ್ಲವೂ ವಿಭೂತಿಪಟ್ಟದೀಕ್ಷೆಯಿಂದ ವಶವಾಗುತ್ತವೆ.

'ಪಟ್ಟ' ಪದಕ್ಕೆ ರೇಖೆ (ಗೆರೆ), ಗದ್ದುಗೆ, ಅಧಿಕಾರಸ್ಥಾನ, ಅರಸುತನ, ಮಠಾಧಿಪತ್ಯ, ತಲೆಪಟ್ಟಿ ಮುಂತಾದ ಅರ್ಥಗಳಿವೆ. 'ಪಟಗತೌ' ಗತ್ಯರ್ಥಕ ಪಟ ಧಾತುವಿಗೆ ಬಾಹುಲಕ ನಿಯಮದಿಂದ'ತ್' ಪ್ರತ್ಯಯ ಬಂದು 'ಪಟ್ಟ' ಪದವಾಗಿದೆ. 'ಪಟತಿ ಪಟ್ಟತೇ ವಾ ಪಟ್ಟಃ' ವಿಭೂತಿ ಪಟ್ಟವೆಂದರೆ ವಿಭೂತಿಯ ತ್ರಿರೇಖೆಗಳ ಧಾರಣವೆಂದರ್ಥ. ಇದರಿಂದ ದುರಿತಗಳೆಲ್ಲ ದೂರಾಗುತ್ತವೆ; ಶಿವಕಳೆ ಸಮನಿಸುತ್ತದೆ. ಹೊರಗಿನಿಂದ ಬರುವ ಅಂಟುರೋಗಗಳು ಅಂಟಿಕೊಳ್ಳವು. ಶೀತಬಾಧೆಯಾಗದು. ಸಂಚಿತಾದಿ ಕರ್ಮತ್ರಯಗಳು ಸುಟ್ಟುಹೋಗುತ್ತವೆ.

ಹಣೆ, ತಲೆ, ಕಿವಿಗಳೆರಡು, ಹೆಗಲುಗಳೆರಡು, ಕೊರಳು, ಎದೆ, ಹೊಕ್ಕುಳ, ಬೆನ್ನು, ತೋಳುಗಳೆರಡು, ಮುಂಗೈಗಳೆರಡು, ಹಿಂಗೊರಳು–ಈ ಹದಿನೆಯ್ದು ಸ್ಥಾನಗಳಲ್ಲಿ ವಿದ್ಯುಕ್ತವಾಗಿ, ಮಂತ್ರಧ್ಯಾನಪೂರ್ವಕವಾಗಿ ವಿಭೂತಿಕಣಗಳು ಸೂಸದಂತೆ ಮೂರು ಬೆರಳುಗಳಿಂದ ಧರಿಸಬೇಕು. ಪಾದೋದಕದಿಂದ ಪರಿಶುದ್ಧವಾದುದನ್ನೇ ಧರಿಸಬೇಕು; ಪರಿಭಾವದಿಂದ ಧರಿಸಬೇಕು.

ಹಣೆ, ಹೃದಯ, ಹೆಗಲುಗಳೆರಡು, ಮೊಳಕಾಲುಗಳೆರಡು–ಈ ಆರುಸ್ಥಾನಗಳಲ್ಲಿ ಷಡಕ್ಷರ ಮಂತ್ರದ ಬಿಡಿ ಬಿಡಿ ಬೀಜಾಕ್ಷರ (ಪ್ರಣವ)ಗಳನ್ನು ವಿಭೂತಿಯಿಂದ ಸಂಬಂಧಿಸಬೇಕು. ಪಶ್ಚಿಮ ಮತ್ತು ಶಿಖಾಚಕ್ರಗಳಲ್ಲಿ ಮತ್ತು ಮುಖದಲ್ಲಿ ಓಂಕಾರವನ್ನು ಲಿಖಿಸಬೇಕು.

ಗುರುವರನೆ ಮಹಾವಿಭೂತಿ ಪುರುಷನು; ಪರಶಿವಸ್ವರೂಪನು. ಆತನ ಆ ಬಲಹಸ್ತದ ಪಂಚಾಂಗುಲಿಗಳೆ ಪಂಚಗೋವುಗಳು, ಅವುಗಳ ಉಗುರು ಸಂದುಗಳಿಂದ ಹೊರಹೊಮ್ಮಿ ಬರುವ ಚಿತ್ಕಳೆಯೆ ಅಯ್ದು ವಿಭೂತಿಗಳು (ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷ). ಪಾದೋದಕದಿಂದ ಕೂಡಿದ ಭಸ್ಮೋದಕದಲ್ಲಿ ತನ್ನ ಪಂಚಾಂಗುಲಿಗಳನ್ನು ಅದ್ದಿ ಅಭಿಮಂತ್ರಿಸಿ, ಶಿಷ್ಯನ ಸರ್ವಾಂಗಕ್ಕೆ ಸ್ನಾನ–ಧೂಳನಗಳನ್ನು ದಯಪಾಲಿಸುತ್ತಾನೆ. ಬಳಿಕ ಧಾರಣವನ್ನು (ಪಟ್ಟದೀಕ್ಷೆಯನ್ನು) ಕರುಣಿಸುತ್ತಾನೆ. ಶಿಷ್ಯನ ಮಸ್ತಕವೆ ಲಿಂಗದ ಗೋಳಕವೆಂದು ಭಾವಿಸಿ ಕ್ರಿಯಾಭಸಿತವನ್ನು ಹಣೆಯಲ್ಲಿ ಶಿಖಾಗ್ರದಲ್ಲಿ ಪಶ್ಚಿಮಚಕ್ರದಲ್ಲಿ ತ್ರಿಪುಂಡ್ರವಾಗಿ ಧರಿಸಿ ತ್ರಿವಿಧಕರ್ಮಗಳನ್ನು ಕಳೆಯುತ್ತಾನೆ–ಶ್ರೀಗುರು. ಇದೆ ಅನಾದಿ ಪರಶಿವಲಿಖಿತವೆಂದು, ಪರಶಿವ ಧರ್ಮಶಾಸನವೆಂದು, ಪರತರ ಪರಂಜ್ಯೋತಿಯೆಂದು, ಪರಮುಕ್ತಿ ಸಂಪತ್ತಿಯೆಂದು ಪರಿಪರಿಯಾಗಿ ಪ್ರಬೋಧಿಸುತ್ತಾನೆ. ವಿಶ್ವನಾಥನ ವಿಭೂತಿತ್ವಪಟ್ಟವನ್ನು ಅನುಗ್ರಹಿಸುತ್ತಾನೆ. ಬಳಿಕ ಶುದ್ಧಗೊಳಿಸಿದ ರುದ್ರಾಕ್ಷಧಾರಣವನ್ನು ಮಾಡುತ್ತಾನೆ. ಹಿಂದೆ ಹೇಳಿದಂತೆ ಮಂತ್ರೋಪದೇಶ–ಷಡಂಗನ್ಯಾಸಾದಿಗಳನ್ನು ಬೋಧಿಸುತ್ತಾನೆ.

**೬) ಆಯತ್ತ ದೀಕ್ಷೆ:**

ವಿಭೂತಿಪಟ್ಟದೀಕ್ಷೆಯಿಂದ ಕರ್ಮದ ಕತ್ತಲೆ ಕಳೆದ ಬಳಿಕ ಕಳೆ ಮೂಡಿ ಬರುವುದು ಸ್ವಾಭಾವಿಕ. ಆ ಕಳೆಯನ್ನೆ ಲಿಂಗವೆಂದು ನಿರೂಪಿಸಲಾಗಿದೆ. ಆ ಚಿತ್ಕಳೆಯನ್ನು ಸದ್ರೂಪಕ್ಕೆ ತರುವುದೆ, ತಂದು ಶಿಷ್ಯನ ಕರಸ್ಥಲಕ್ಕೆ ಕರುಣಿಸುವುದೆ ಆಯತ್ತದೀಕ್ಷೆ.

> 'ಚತುರ್ವೇದಿಯಾದರೇನು ? ಲಿಂಗವಿಲ್ಲದವನೆ ಹೊಲೆಯ ! ಶ್ವಪಚನಾದರೇನು ? ಲಿಂಗವಿದ್ದವನೆ ವಾರಣಾಸಿ ;
> ಆತನ ನುಡಿಗಡಣವೆ ಲೇಸು ; ಆತ ಜಗಕ್ಕೆ ಪಾವನ ; ಆತನ ಪ್ರಸಾದವೆಸಗೆ ಅಮೃತ ಸೇವನೆ !
> 'ನ ಮೇ ಪ್ರಿಯಶ್ಚತುರ್ವೇದಿ, ಮದ್ಭಕ್ತಃ ಶ್ವಪಚೋಽಪಿ ವಾ । ತಸ್ಮಾದೇವ ತತೋ ಗ್ರಾಹ್ಯಂ, ಸ ಚ ಪೂಜ್ಯೋ ಯಥಾಹ್ಯಹಂ॥'
> ಎಂದುದಾಗಿ ಕೂಡಲಸಂಗಮದೇವನಸರಿತು ಪೂಜಿಸಿದಾತ ಷಡುದರುಶನಕ್ಕಧಿಕ, ಜಗಕ್ಕೆ ಪಾವನ ನೋಡಾ !' —ಬಸವಣ್ಣ.

ಆಚಾರ ಅಳವಡಬೇಕಾದರೆ ಆಯತಲಿಂಗ ಅಗತ್ಯ. ಕ್ರಿಯಾಚಾರವಿಲ್ಲದೆ ಕಾಯಶುದ್ಧಿಯಾಗದು ; ತ್ಯಾಗಾಂಗವೆನಿಸದು.

> 'ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರಕಂ । ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ॥' —ಸಿದ್ಧಾಂತ ಶಿಖಾಮಣಿ.

ಇದರಿಂದಾಗಿ ಶ್ರೀಗುರು ಶಿಷ್ಯನ ಶಿರದರಮನೆಯಲ್ಲಿರುವ ಚಿದ್ರೂಪ ಪರಮಕಳೆಯನ್ನು ಆಯತ್ತದೀಕ್ಷಾ ವಿಧಾನದಿಂದ ಕೆಳಗಿನಂತೆ ತನ್ನ ಶಿವಯೋಗ ಬಲದಿಂದ ಅವತರಣಗೊಳಿಸಿ ಸದ್ರೂಪವನ್ನಾಗಿಸುತ್ತಾನೆ. ಆಗಿಸುವ ಬಗೆಯಿದು :

ಶ್ರೀಗುರು ಶಿಷ್ಯನ ಮಸ್ತಕದಲ್ಲಿ ಮಂತ್ರೋದಕ ಭಸ್ಮೋದಕಗಳಿಂದ ಅಯ್ದು ಕೋಣಾಕೃತಿಯ ಬರೆದು ಅದರಲ್ಲಿ ಅಯ್ದಕ್ಕರಗಳನ್ನು ಸಂಪುಟಗೂಳಿಸಿ, ನಡುವೆ ಓಂಕಾರ ಸಂಬಂಧಿಸಿ, ಅರ್ಚಿಸಿ ಹಸ್ತವನ್ನು ಸ್ಪರ್ಶಿಸಿ, ಶಿಷ್ಯನ ಕಣ್ಣಲ್ಲಿ ಕಣ್ಣನ್ನು, ಮನದಲ್ಲಿ ಮನವನ್ನು, ಭಾವದಲ್ಲಿ ಭಾವವನ್ನು ಬೆರೆಸಲು, ಶಿಷ್ಯನ ಸುಷುಮ್ನೆಯೊಳಗೆ ಉನ್ಮನವು ಉದ್ದೀಪಿತವಾಗುತ್ತದೆ. ಚಿನ್ಮಯ ಕಳೆಯು ಸಾಕ್ಷಾತ್ತಾಗಿ ಸ್ಫುರಿಸುತ್ತದೆ. ಅದನ್ನು ಆಚಾರ್ಯನು ಅಂಕುಶಮುದ್ರೆಯಿಂದ ಆಕರ್ಷಿಸಿ, ಭ್ರೂಮಧ್ಯಕ್ಕೆ ತಂದು, ಅಲ್ಲಿ ಪ್ರಕಾಶರೂಪಾಗಿ ಭಾವಿಸಿ ನಿಷ್ಕಲಭಾವಲಿಂಗವನ್ನಾಗಿಸುವನು. ಅಲ್ಲಿಂದ ಹೃದಯಕ್ಕೆ ತಂದು ಅಲ್ಲಿ ಕಿರಣರೂಪಾಗಿ ಸಕಲನಿಷ್ಕಲವಾಗಿ ನಿಯೋಜಿಸಿ ಪ್ರಾಣಲಿಂಗವನ್ನಾಗಿಸುವನು. ಅಲ್ಲಿಂದ ಶಿಷ್ಯನ ಕರಸ್ಥಲದಲ್ಲಿರುವ ಪೀಠಿಕೆಯಲ್ಲಿ ಪ್ರದೀಪರೂಪಾಗಿ ಸಕಲವಾಗಿ ಕ್ರಿಯಾತ್ಮಕವಾಗಿ ಇಷ್ಟಲಿಂಗವನ್ನಾಗಿಸುವನು. 'ಏತತ್ ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿ ಮಂತ್ರಂ ಪವಿತ್ರಂ' ಎಂಬ ಶ್ರುತಿಮಾತನು ಸಾರ್ಥಕಪಡಿಸುವನು. ಅದೃಷ್ಟವಸ್ತುವನ್ನು ದೃಷ್ಟವಸ್ತುವನ್ನಾಗಿಸುವನು. ದೃಷ್ಟಯೋಗಕ್ಕೆ ತಂದು ಕ್ರಿಯಾತ್ಮಕವನ್ನಾಗಿಸುವನು. ಕ್ರಿಯಾಯೋಗ ನಿರ್ವಹಣೆಗೆ ತಕ್ಕುದನ್ನಾಗಿಸುವನು. 'ಆತ್ಮಾ ವಾ ಅರೆ ದ್ರಷ್ಟವ್ಯಃ' ಎಂಬಂತೆ ಆತ್ಮದ್ರಷ್ಟೃತ್ವಭಾಗ್ಯವನ್ನುಂಟುಮಾಡುವನು. ಮಾಡಿ ಈ ರೀತಿ ಶಿಷ್ಯನಿಗೆ ಬೋಧಿಸುವನು :

> 'ಪ್ರಾಣವದ್ಧಾರಣೀಯಂ ತತ್ ಪ್ರಾಣಲಿಂಗಮಿದಂ ತವ । ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ॥'

ಓ ಶಿಷ್ಯನೆ, ಇದುವೆ ನಿನಗೆ ಪರಮಪ್ರೇಮಾಸ್ಪದವಾದ ಪ್ರಾಣಲಿಂಗ. ನಿನ್ನ ಪ್ರಾಣರೂಪ ಚೈತನ್ಯದಂತೆ ಬಿಡದೆ ಧರಿಸು. ಎಂದಿಗೂ ಎಲ್ಲಿಯೂ ಎಷ್ಟೂ ಅಂಗದಿಂದ ಅಗಲದಿರು. ಅಗಮ್ಯ ಗಮ್ಯವಾಗಿದೆ. ಆ ಮಹದ್ವಸ್ತು ಅಣುರೂಪಾಗಿ ಅಂಗೈಗೆ ಅಂಗವಿಸಿದೆ; ಸಂಗಡಿಸಿದೆ. ಇದು ಜಡವಲ್ಲ. ಸ್ಥಾವರಲಿಂಗದಂತಹದಲ್ಲ. ಸ್ಥಾವರಲಿಂಗಪೂಜೆಯು ನಿನಗೆ ಸಲ್ಲದು. ಕಲಾರೂಪಾಗಿ ನಿನ್ನ ಕೈಗೆ ಬಂದಿದೆ. ಉಸಿರಿರುವವರೆವಿಗೂ ಅಗಲದಿರು. ಇದು ನಿನಗೆ ಇಷ್ಟವಾದ ಲಿಂಗ; ಇಷ್ಟವಾದುದನ್ನೆಲ್ಲ ಕೊಡುವ ಲಿಂಗ. ಇದಕ್ಕೆ ಕ್ರಿಯಾಲಿಂಗವೆಂದು ಮತ್ತೊಂದು ಹೆಸರು. ಇದುವೆ ನಿನ್ನ ಕ್ರಿಯಾಶಕ್ತಿಗೆ ಚೈತನ್ಯ. ಇದನ್ನು ನಿತ್ಯ ಪೂಜಿಸಿ, ಇದರ ಮೇಲೆ ಶುದ್ಧೋದಕವನ್ನಾಗಲಿ, ಪಾದೋದಕವನ್ನಾಗಲಿ ಎರೆದು ತೆಗೆದುಕೊಂಡರೆ ರೋಗ–ಭವರೋಗಗಳು ಬಯಲಾಗುತ್ತವೆ.

ಇದರಲ್ಲಿ ಮಣಿ, ಮಂತ್ರ, ಔಷಧಿಗಳಿವೆ. ಇವುಗಳಿಂದ ನಿನ್ನಂಗಕ್ಕೆ ಉತ್ತಮ ಚಿಕಿತ್ಸೆ ದೊರೆಯುತ್ತದೆ. ಅಷ್ಟಬಂಧ ಅಂದರೆ ಕಂತೆ ಸಾಮಾನ್ಯವಲ್ಲ. ಅದರಲ್ಲಿ ವೈಜ್ಞಾನಿಕತೆಯಿದೆ. ರೋಗನಿವಾರಣೆಗೆ ಬೇಕಾದ ಶಕ್ತಿಯಿದೆ, ಔಷಧಿಯಾಗಿದೆ. ಪೀಠಿಕೆಯೆ ಮಣಿ; ಗುರುದೇವನಿರಿಸಿದ ಮಂತ್ರವೂ ಇದೆ. ಎಲ್ಲಕ್ಕೂ ಮಿಗಿಲಾಗಿ ಇವುಗಳ ಸಂಕೀರ್ಣದಲ್ಲಿ ಎನ್ನ ಚಿತ್ಕಳೆಯೂ ಇದೆ. ಈ ಚಿತ್ಕಳೆ ಸದ್ರೂಪವಾಗಿ ಭವನಿವಾರಕವಾಗಿದೆ. ಎಡದ ಅಂಗೈಯಲ್ಲಿರಿಸಿ ಅರ್ಚಿಸುವುದರಿಂದ ಹೃದಯಶಕ್ತಿ ಹೆಚ್ಚುತ್ತದೆ, ಇಂತಹ ಸದ್ರೂಪ ಕ್ರಿಯಾಲಿಂಗವು ನಿನಗಿಷ್ಟವಾಗಿ ನಿನ್ನ ಅಂಗೈಗೆ ತ್ಯಾಗಾಂಗಕ್ಕೆ ಅಂಗವಿಸಿದೆ. ಕರಸ್ಥಲದ ಕುರುಹಾಕಿ, ಕಣ್ಣೋಟದ ಕಳೆಯಾಗಿ,ಕಾಯದ ಕ್ರಿಯೆಯಾಗಿ ಪ್ರತ್ಯಕ್ಷಪ್ರಮಾಣಕ್ಕೆತಂದಿದೆ.

೭) ಸ್ವಾಯತ್ತದೀಕ್ಷೆ : ಕ್ರಿಯಾಪ್ರಧಾನವಾದುದು ಇಷ್ಟಲಿಂಗ; ಜ್ಞಾನಪ್ರಧಾನವಾದುದು ಪ್ರಾಣಲಿಂಗ. ಧಾರಣನಿಷ್ಠ ಇಷ್ಟಲಿಂಗ: ಧ್ಯಾನನಿಷ್ಠ ಪ್ರಾಣಲಿಂಗ. ಪ್ರಾಣಚೇತನವಿಲ್ಲದೆ ಕಾಯಚೇತನವಿರದು. ಕಾರಣ ಪ್ರಾಣಚೇತನವಾದ ಪ್ರಾಣಲಿಂಗ ಧಾರಣ ಅಗತ್ಯ. ಅದಾಗಬೇಕಾದರೆ ಸ್ವಾಯತ್ತದೀಕ್ಷೆ ಅಗತ್ಯ.

> 'ಲಿಂಗಧಾರಣಮಾಖ್ಯಾತಂ ದ್ವಿಧಾ ಸರ್ವಾರ್ಥ ಸಾಧಕಂ । ಬಾಹ್ಯಮಾಭ್ಯಂತರಂ ಚೇತಿ ಮುನಿಭಿರ್ಮೋಕ್ಷಕಾಂಕ್ಷಿಭಿಃ ॥
> ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವಕಾರಣಂ । ಯತ್ತಸ್ಯಧಾರಣಂ ಚಿತ್ತೇ ತದಾಂತರಮುದಾಹೃತಂ' ॥
>
> —ಸಿದ್ಧಾಂತ ಶಿಖಾಮಣಿ.

'ಭೋಗ ಮೋಕ್ಷಗಳನ್ನೀವ ಲಿಂಗಧಾರಣವು ಹೊರಒಳಗೆಂದು ಇರ್ತೆರನಾಗಿದೆ. ಇದನ್ನು ಹೇಳಿದವರು ಮೋಕ್ಷಾಪೇಕ್ಷಿಗಳಾದ ಮುನಿಜನರು. ಸರ್ವಕಾರಣವಾದ ಶಿವಸ್ವರೂಪವಾದ ಚಿದ್ರೂಪವಾದ ಪರಮಕಳೆಯೆ ಪ್ರಾಣಲಿಂಗ. ಚಿತ್ತದಲ್ಲಿ ಅದನ್ನು ಧ್ಯಾನರೂಪದಲ್ಲಿ ಧರಿಸುವುದೆ ಅಂತರ್ಲಿಂಗಧಾರಣ. ಅದುವೆ ಸ್ವಾಯತ್ತಲಿಂಗ. ಅದನ್ನು ಶ್ರೀಗುರುದೇವನು ತನ್ನ ಶಿವಯೋಗ ಬಲದಿಂದ ಹಿಂದೆ ಹೇಳಿದಂತೆ ಶಿಷ್ಯನ ಅಂತರಂಗದಲ್ಲಿ ಮಂತ್ರಮಯವಾಗಿಸಿ ಇರಿಸುತ್ತಾನೆ. ಅದು ಮಂತ್ರಾತ್ಮಕವಾಗಿದೆ. ಇಷ್ಟಲಿಂಗಾರ್ಚನದಿಂದ ಜಾಗ್ರದವಸ್ಥೆ ಪರಿಶುದ್ಧವಾದರೆ, ಪ್ರಾಣಲಿಂಗಾನುಸಂಧಾನದಿಂದ ಸ್ವಪ್ನಾವಸ್ಥೆ ಶುದ್ಧಿಗೊಳ್ಳುತ್ತದೆ. ಮತ್ತು ಅಜ್ಞಾನ ನಿವೃತ್ತಿಯಾಗುತ್ತದೆ. ಇಷ್ಟಲಿಂಗವೆಂಬ ದೀಪದ ಕಿರಣವೆ ಪ್ರಾಣಲಿಂಗ. ಇವೆರಡಕ್ಕೂ ಭೇದವಿಲ್ಲ. ಪ್ರಾಣಲಿಂಗದ ಪ್ರಜ್ಞೆ ಪರಿಣಮಿಸಿದರೆ ಅಂತಃಕರಣಗಳು ಅದರ ಕಿರಣಗಳಾಗಿ ಕಳೆಯೇರುತ್ತವೆ. 'ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ. ಇಷ್ಟಲಿಂಗವಿಡಿದು ಪ್ರಾಣಲಿಂಗ ಸ್ವಾಯತ. ಪ್ರಾಣಲಿಂಗ ಉದಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು. ಈ ಭೇದವ ಭೇದಿಸಬಲ್ಲಡೆ ಕೂಡಲಚನ್ನಸಂಗಯ್ಯನಲ್ಲಿ ಲಿಂಗೈಕ್ಯವು' ಎಂದು ಚನ್ನಬಸವಣ್ಣ ನಿರೂಪಿಸಿದ್ದಾನೆ; ಇಷ್ಟ–ಪ್ರಾಣಗಳ ಸನ್ನಿಹಿತ ಸಂಬಂಧವನ್ನು ಸೂಚಿಸಿದ್ದಾನೆ.

ಆ ಚಿದ್ರೂಪಚೈತನ್ಯ ವ್ಯಕ್ತಿಕಾರಣ ಮಾತ್ರವಲ್ಲ; ವಿಶ್ವಕಾರಣವೂ ಆಗಿದೆ. ಅದರ ಆ ಪ್ರಭಾವವ್ಯಾಪ್ತಿ ಸಣ್ಣದಲ್ಲ; ವಿಶ್ವವಿಶಾಲವಾದುದು. 'ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಂ। ನಿರಸ್ತ ವಿಶ್ವಕಾಲುಷ್ಯಂ ನಿಷ್ಕಳಂ ನಿರ್ವಿಕಲ್ಪಕಂ॥' ಎಂದು ಶ್ರೀ ಜಗದ್ಗುರು ರೇಣುಕಶಿವಾಚಾರ್ಯರು ನಿರೂಪಿಸಿದ್ದಾರೆ. ಇದಲ್ಲದೆ,

> 'ತದೇವ ಸರ್ವಭೂತಾನಾಮಂತಸ್ತ್ರಿಸ್ಥಾನಗೋಚರಂ । ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಂ ।
> ಜ್ಯೋತಿರ್ಲಿಂಗಂ ಸದಾ ಭಾತಿ ಯದ್ ಬ್ರಹ್ಮೇತ್ಯಾಹುರಾಗಮಾಃ।...'
>
> —ಸಿದ್ಧಾಂತ ಶಿಖಾಮಣಿ.

'ಆ ಸರ್ವವ್ಯಾಪಿಯಾದ ಪರವಸ್ತು ಸರ್ವರ ಸರ್ವಜೀವಿಗಳ ಮೂಲಾಧಾರ, ಹೃದಯ, ಭ್ರೂಮಧ್ಯ–ಈ ಮೂರು ನೆಲೆಗಳಲ್ಲಿ ನೆಲಸಿರುತ್ತದೆ. ಜ್ಯೋತಿರ್ಲಿಂಗವಾಗಿ ಬಿಡುವಿಲ್ಲದೆ ಬೆಳಗುತ್ತಿದೆ. ಆ ಲಿಂಗವನ್ನೆ 'ಬ್ರಹ್ಮ' ಎಂದು ಆಗಮಿಕರು ಹೇಳುವರು.'

ಮೂಲಾಧಾರಕ್ಕೆ ಪೂರ್ವಹೃದಯವೆಂದು, ಹೃದಯಕ್ಕೆ ಮಧ್ಯಹೃದಯವೆಂದು, ಭ್ರೂಮಧ್ಯಕ್ಕೆ ಊರ್ಧ್ವಹೃದಯವೆಂದು ಹೇಳಲಾಗುತ್ತದೆ. ಮೂಲಾಧಾರದಲ್ಲಿ ಕ್ರಿಯಾರೂಪಾಗಿ, ಹೃದಯದಲ್ಲಿ ಜ್ಞಾನರೂಪಾಗಿ, ಭ್ರೂಮಧ್ಯದಲ್ಲಿ ಅನುಭವರೂಪಾಗಿ ಪರಶಿವಲಿಂಗವಿರುವಂತೆ ಮಾಡುವುದೆ ಶ್ರೀಗುರುವಿನ ಶಿವದೀಕ್ಷಾಧ್ಯೇಯವಾಗಿದೆ. ಇವು ಕ್ರಮವಾಗಿ ಸತ್‌ಚಿತ್‌ಆನಂದರೂಪವಾಗಿದ್ದು ಗುರುಸಂಸ್ಕಾರದಿಂದ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳೆಂದು ಹೇಳಿಸಿಕೊಳ್ಳುತ್ತವೆ. ಆಧಾರದ ಕ್ರಿಯಾಲಿಂಗರೂಪ ಚೈತನ್ಯವು ಕರ್ಮೇಂದ್ರಿಯಗಳಿಗೆ, ಹೃದಯದ ಜ್ಞಾನಲಿಂಗರೂಪ ಚೈತನ್ಯವು ಜ್ಞಾನೇಂದ್ರಿಯಗಳಿಗೆ, ಭ್ರೂಮಧ್ಯದ ಭಾವಲಿಂಗರೂಪ ಚೈತನ್ಯವು ಅಂತಃಕರಣ (ಭೋಗೇಂದ್ರಿಯ)ಗಳಿಗೆ ಪ್ರೇರಕವಸ್ತುಗಳಾಗಿವೆ. ಆಧಾರ ಚೈತನ್ಯವನ್ನು ಶ್ರೀ ಗುರುದೇವನು ತನ್ನ ದೀಕ್ಷೆಗಳಿಂದ ಕಣ್ಣಿಗೆ ತಂದು ಕರಸ್ಥಲದಲ್ಲಿ, ಹೃದಯ ಚೈತನ್ಯವನ್ನು ಪ್ರಾಣಕ್ಕೆ ತಂದು ಪ್ರಾಣದಲ್ಲಿ, ಭ್ರೂಮಧ್ಯ ಚೈತನ್ಯವನ್ನು ಭಾವಕ್ಕೆ ತಂದು ಭಾವದಲ್ಲಿ ಪ್ರತಿಷ್ಠಿಸುತ್ತಾನೆ. ಉಪಾಸನೆಗಾಗಿ ಒಂದನ್ನೆ ಮೂರನ್ನಾಗಿಸಿದ್ದಾನೆ. ಆದರೂ ಅವು ಅಪರಿಚ್ಛಿನ್ನಗಳು. ಅವು ಹಾಲು, ಹಾಲಿನ ಬಿಳುಪು, ಹಾಲಿನ ಮಧುರ ಇರುವಂತಿವೆ ಮತ್ತು ದೀಪ, ದೀಪದ ಕಿರಣ, ದೀಪದ ಪ್ರಕಾಶ ಇರುವಂತಿವೆ.

ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಂ। ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ ಬ್ರಹ್ಮ ಶಾಶ್ವತಂ॥
ತಸ್ಮಲ್ಲಿಂಗಮಿತಿ ಖ್ಯಾತಂ ಸತ್ಯಾನಂದ ಚಿದಾತ್ಮಕಂ। ಬೃಹತ್ವಾದ್ ಬೃಂಹಣತ್ವಾಚ್ಚ ಬ್ರಹ್ಮ ಶಬ್ದಾಭಿಧೇಯಕಂ॥

—ಸಿದ್ಧಾಂತ ಶಿಖಾಮಣಿ.

'ಈ ಚರಾಚರ ಜಗತ್ತು ಯಾವುದರಲ್ಲಿ ಸೃಷ್ಟಿ ಸ್ಥಿತಿ ಲಯಗಳನ್ನು ಪುನಪ್ಪುನ ಹೊಂದುವುದೋ ಅದುವೆ ಲಿಂಗ; ಅದುವೆ ಬ್ರಹ್ಮ; ಅದುವೆ ಶಾಶ್ವತವಾಗಿರುತ್ತದೆ: ಸಚ್ಚಿದಾನಂದಾತ್ಮಕವಾಗಿದೆ. ಅದರಿಂದ 'ಲಿಂಗ'ವೆಂದೆ ಹೆಸರಾಂತಿದೆ. ಲಿಂಗವೆಂದರೂ ಬ್ರಹ್ಮವೆಂದರೂ ಬೇರಲ್ಲ. ತಾನು ಬೃಹತ್ತಾಗಿ ಬಿತ್ತರವಾಗಿದ್ದು ವಿಶ್ವವನ್ನು ವೃದ್ಧಿಸುವುದಾಗಿ 'ಬ್ರಹ್ಮ'ವೆನಿಸಿದೆ. ಅಭಿನ್ನ ನಿಮಿತ್ತೋಪಾದಾನ ಕಾರಣವಾಗಿದೆ. ಆ ಮಹಾಚೈತನ್ಯವನ್ನು ಅಂತರಂಗದಲ್ಲಿ ಧರಿಸುವುದೆ ದೀಕ್ಷೆಯ ಧ್ಯೇಯ.

'ಆಧಾರೇ ಹೃದಯೇ ವಾಪಿ ಭ್ರೂಮಧ್ಯೇವಾ ನಿರಂತರಂ। ಜ್ಯೋತಿರ್ಲಿಂಗಾನುಸಂಧಾನಮಾಂತರಂ ಲಿಂಗಧಾರಣಂ॥
ಆಧಾರೇ ಕನಕಪ್ರಖ್ಯಂ, ಹೃದಯೇ ವಿದ್ರುಮಪ್ರಭಂ, ಭ್ರೂಮಧ್ಯೇ ಸ್ಫಟಿಕಚ್ಛಾಯಂ ಲಿಂಗಂ ಯೋಗೀವಿಭಾವಯೇತ್'॥

ಎಂದು ಶ್ರೀ ಶಿವಯೋಗಿ ಶಿವಾಚಾರ್ಯರು ಲಿಂಗದ ನೆಲೆಕಳೆಗಳನ್ನು, ಅನುಸಂಧಾನವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಆ ಜ್ಯೋತಿರ್ಲಿಂಗಧಾರಿಯೆ ದಿಟವಾಗಿ 'ಯೋಗಿ' ಎನಿಸುತ್ತಾನೆ. ಆ ಯೋಗ ಶ್ರೀ ಗುರುವಿನ ದೀಕ್ಷೆಯಿಂದ ಬರುತ್ತದೆ. ಗುರುವಿನ ದೀಕ್ಷೆಯಿಂದ ಆ ಲಿಂಗಯೋಗವನ್ನು ಪಡೆದು ಅದನ್ನು ವಿಭಾವಿಸಬೇಕು. ಅಂದರೆ ನಿಶ್ಚಿತಜ್ಞಾನದಿಂದ ವಿಶಿಷ್ಟಭಾವವುಳ್ಳವ ನಾಗಬೇಕು. ಆಗ ಆ ಪರಾಭಕ್ತಿಭಾವದ ಸೋತ್ಪಾದನವಾಗುತ್ತದೆ. ಅದುವೆ ದಿವ್ಯರಸ. ಅದರಿಂದಲೆ ಅಚ್ಚಳಿಯದಾನಂದ. ಆ ಶಾಶ್ವತಾನಂದದಿಂದ ನಿತ್ಯಪೂರ್ಣಾಖಂಡತ್ವ ಪ್ರಾಪ್ತಿ! ಪುನರಾವೃತ್ತಿರಾಹಿತ್ಯತ್ವ ಪ್ರಾಪ್ತಿ!!

'ಹಿರಣ್ಮಯೇ ಪರೇಕೋಶೇ ವಿರಜಂ ಬ್ರಹ್ಮನಿಷ್ಕಲಂ। ತಚ್ಛುಭ್ರಂ ಜ್ಯೋತಿಷ್ಯಾಂ ಜ್ಯೋತಿಃ ತದ್ಯದಾತ್ಮವಿದೋ ವಿದುಃ॥' ಎಂದು ಮುಂಡಕಶ್ರುತಿ ಸಾರಿದೆಯಲ್ಲದೆ ಅದು ಸಾರಭೂತವಾಗಿ ದೀಕ್ಷಾಧ್ಯೇಯವನ್ನಿಂತು ಬಿಚ್ಚಳಿಸಿದೆ:

'ಯಃ ಸರ್ವಜ್ಞಃ ಸರ್ವವಿದ್ ಯಸ್ಯೈಷ ಮಹಿಮಾಭುವಿ। ದಿವ್ಯೇ ಬ್ರಹ್ಮಪುರೇಹ್ಯೇಷ ವ್ಯೋಮ್ನಿ ಆತ್ಮಾ ಪ್ರತಿಷ್ಠಿತಃ॥
ಮನೋಮಯಃ ಪ್ರಾಣ ಶರೀರನೇತಾ ಪ್ರತಿಷ್ಠಿತೋಽನ್ನೇ ಹೃದಯಂ ಸಂನಿಧಾಯ।
ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ ಆನಂದರೂಪಮಮೃತಂ ಯದ್ವಿಭಾತಿ॥
ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ। ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್‌ದೃಷ್ಟೇ ಪರಾವರೇ॥

ಒಟ್ಟಿನಲ್ಲಿ ತ್ರಿವಿಧದೀಕ್ಷೆಗಳ ತಾತ್ತ್ವಿಕ ಫಲಶ್ರುತಿಯಿದು:

'ಲಿಂಗಂತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ
ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರ್ಯತೇ ತನೌ।
ಪ್ರಾಣಲಿಂಗಮಿದಂ ಸೂಕ್ಷ್ಮಂ ಯದಂತರ್ಭಾವನಾಮಯಂ
ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ।
ಭಾವನಾತೀತಮವ್ಯಕ್ತಂ ಪರಬ್ರಹ್ಮ ಶಿವಾಭಿದಂ॥'

'ಲಿಂಗಂ ಶೈವಮಿದಂ ಸಾಕ್ಷಾಚ್ಛಿವಶಕ್ತ್ಯುಭಯಾತ್ಮಕಂ। ಧ್ಯಾತವ್ಯಮರ್ಚನೀಯಂ ಚ ಭುಕ್ತಿ ಮುಕ್ತಿಫಲೇಚ್ಛುನಾ।
ಅತೋ ಯಜೇತ್ಸದಾ ಲಿಂಗಂ ಸರ್ವಕಾರಣ ಕಾರಣಂ। ತಸ್ಮಾತ್ಸರ್ವ ಪ್ರಯತ್ನೇನ ಶಾಂಕರಂ ಲಿಂಗಮುತ್ತಮಂ।
ಅಂತರ್ವಿಭಾವಯೇದ್ವಿದ್ವಾನಶೇಷಕ್ಲೇಶ ಮುಕ್ತಯೇ। ಭಾವ ಪ್ರಾಣೇಷ್ಟಲಿಂಗಾನಿ ಪೂಜಯೇದೇಕಭಾವತಃ।
ಪೃಥಗ್ಭಾವಂ ನ ಕುರ್ವೀತ ಪ್ರಾಣಲಿಂಗ ಪರೋ ಯತಃ'॥ —ಸೂಕ್ಷ್ಮಾಗಮ

'ಆ ಮಹಾನಾದ ಕಳೆಯೆ ಲಿಂಗಕ್ಕಾಶ್ರಯವಾಗಿ, ಲಿಂಗದ ಕಳೆಯೆ ಹೃದಯಕ್ಕಾಶ್ರಯವಾಗಿ,
ಹೃದಯದ ಕಳೆಯೆ ಜ್ಞಾನಕ್ಕಾಶ್ರಯವಾಗಿ, ಜ್ಞಾನದ ಕಳೆಯೆ ನಿತ್ಯಕ್ಕಾಶ್ರಯವಾಗಿ,
ನಿತ್ಯ ನಿರವಯ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ-ಇಲ್ಲ' —ಗಟ್ಟಿವಾಳಯ್ಯ

'ಅಂಗಕಳೆ ಲಿಂಗದಲಿ, ಲಿಂಗಕಳೆ ಅಂಗದಲಿ ಅಂಗಲಿಂಗವೆಂಬುಭಯವಳಿದು;
ಮಂಗಳ ಮಹಾಬೆಳಗಿನಾ ಬೆಳಗಿನೊಳಗೆ ಕಂಗಳೇ ಪ್ರಾಣವಾಗಿರುತಿದ್ದೆನು॥' —ಪ್ರಭುದೇವನ ಮಂತ್ರಗೋಪ್ಯ

ದೀಕ್ಷೆಯಿಂದ ಪ್ರಾಕೃತಿಕಭಾವವಡಗಿ ಪರಮಭಾವೋದಯವಾಗುವುದು. ಭವದ ಕತ್ತಲೆ ಹರಿದು ಶಿವದ ಬೆಳಕು ಬಿತ್ತರಗೊಳ್ಳುವುದು. ಸ್ವಾರ್ಥವಳಿದು ವಿಶಾಲಭಾವವುಂಟಾಗುವುದು. ಅಕ್ರಿಯೆ ಅಜ್ಞಾನ ಅನನುಭವಗಳು ತೊಲಗುವವು. ಭಾವೈಕ್ಯವುಂಟಾಗಿ ವಿಶ್ವಾತ್ಮಭಾವವೊದಗುವುದು. ಇಂದ್ರಿಯ ಭಾವ, ಸಂಶಯ ಭಾವ, ಭ್ರಾಂತಿ ಭಾವಗಳಿರವು. ಭೂ ತತ್ವದಿಂದ ವಿಭೂತಿತ್ವಕ್ಕೇರುವ ಭಾಗ್ಯವುಂಟಾಗುವುದು. ಬ್ರಹ್ಮಾಂಡವೆ ಬ್ರಹ್ಮರೂಪವೆಂದು ಭಾವಿಸಿ, ವಿಶ್ವಕಲ್ಯಾಣ ಕ್ರಿಯಾ ನಿರತತೆಯುಂಟಾಗುವುದು.

ಇದುವೆ ದಿಟವಾದ ದೀಕ್ಷೆ. ಈ ಮಹಾಮಣಿಹಕ್ಕೆ ಒಳಗಾದಾತನೆ ದಿಟವಾಗಿ ದೀಕ್ಷಿತ; ವಿಶುದ್ಧ ವಿಶಾಲ ಮನೋಭಾವದಿಂದ ಸಂಸ್ಕರಿತ ನಿರವಧಿಕ ನಿಯಮಕ್ಕೆ ಒಳಗಾಗುವಿಕೆ! ಕೆಟ್ಟು ಹೋಗಿರುವ, ಹೋಗಲಿರುವ ಬದುಕನ್ನು ಸರಿ ಮಾಡುವುದೆ ದೀಕ್ಷೆ!! ಮಾನವೀಯತೆ ಮಾಸದಂತಿರಿಸುವುದೇ ದೀಕ್ಷೆ!!!

## ಅರುವತ್ತುನಾಲ್ಕು ಶೀಲಗಳು

**—ಗೌ. ಮ. ಉಮಾಪತಿ ಶಾಸ್ತ್ರಿ**

**ಶೀಲಪದ ನಿರ್ವಚನ :**

ಸಂಸ್ಕೃತದಲ್ಲಿ 'ಶೀಲ್' ಉಭಯಪದಿ ಧಾತು. ಆಚರಿಸು[1], ಉಟ್ಟುಕೊಳ್ಳು ಅಥವಾ ಆವರಿಸಿಕೊಳ್ಳು (ಹೊದೆ) ಅರ್ಥದಲ್ಲಿಯೂ ಈ ಧಾತುವಿನ ಕ್ರಿಯಾಪ್ರಯೋಗವಿದೆ. ಅಷ್ಟಾಧ್ಯಾಯಿ ವ್ಯಾಕರಣಸೂತ್ರಕಾರ ಪಾಣಿನಿಯು 'ಶೀಲ' ಪದವನ್ನು ಸ್ವಭಾವ ಸಹಜ ಆಚರಣೆಯ ಅರ್ಥದಲ್ಲಿ ಹೇಳಿದ್ದಾನೆ[2]. 'ಗುರೋರಂತೇವಾಸಿ' ವಿದ್ಯಾರ್ಥಿಯ ಪರ್ಯಾಯ ಛಾತ್ರಪದದ ವ್ಯುತ್ಪತ್ತಿಯು ಈ ಅರ್ಥದಲ್ಲಿ ವಿಶಿಷ್ಟವಾಗಿದೆ. ಗುರುಗಳ ದೋಷಗಳನ್ನು ಮುಚ್ಚಿಡುವುದೇ ಛತ್ರ, ಅದರ ಶೀಲವಿರುವವನೇ ಛಾತ್ರನೆನಿಸುತ್ತಾನೆ. ಗುರುವಿನ ಅತ್ಯಂತ ನಿಕಟವರ್ತಿಯಾದ ವಿದ್ಯಾರ್ಥಿಯಲ್ಲಿ ಈ ಪರ್ಯಾಯ ಅನ್ವರ್ಥಕವಾಗಿದೆ.

'ನಾಮಲಿಂಗಾನುಶಾಸನ'ಕಾರ ಅಮರಸಿಂಹನು ಶುದ್ಧವಾದ–ಶುಚಿಯಾದ ಚರಿತ ಆಚರಣೆಯೇ ಶೀಲವೆಂದು[3] ಹೇಳುತ್ತಾನೆ. ಶೀಲ ಪದವು ಸದ್ವೃತ್ತ ಸ್ವಭಾವಗಳೆಂಬ ಉಭಯಾರ್ಥಗಳಲ್ಲಿ[4] ಪ್ರಯುಕ್ತವಾಗಿದೆ. ಹಲಾಯುಧನು ಶೀಲ, ಚರಿತ, ಚರಿತ್ರ ಮತ್ತು ಚಾರಿತ್ರ್ಯ ಪದಗಳನ್ನು ಸಮಾನಾರ್ಥವಾಚಿಯೆಂದು[5] ಹೇಳಿರುವನು.

ಆಚಾರವೆಂದರೆ ಸದಾಚಾರ–ಸತ್‌ಕ್ರಿಯೆ. ಅದನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡರೆ ಸಮ್ಯಜ್ಞಾನ ತಾನಾಗಿಯೇ ಸಮನಿಸುವುದು. ನಿಜವನ್ನು ಕಾಣಲು ಆಚಾರ ಮೊದಲ ಮೆಟ್ಟಲು ಎಂಬುದು ಶರಣರ ಅನುಭವ[6]. ವೀರಶೈವದಲ್ಲಿ ಕ್ರಿಯೆ–ಜ್ಞಾನಗಳ ಶುದ್ಧಿಯು ಭಾವದ ಪರಿಶುದ್ಧಿಯಲ್ಲಿ ಪರಿಣಾಮಗೊಳ್ಳುತ್ತದೆ. ಆಗಲೇ ಅವುಗಳಿಗೆ ಇಷ್ಟ–ಪ್ರಾಣ–ಭಾವಲಿಂಗಗಳ ಸಮವಾಯ ಸಹಜವೆನಿಸುತ್ತದೆ. ಆಚಾರದ ಶುದ್ಧಿಯಿಂದ ಜ್ಞಾನದ ಬೆಳಗು, ಅದರಿಂದ ಭಾವದ ಪರಿಣಾಮ, ಅದರಿಂದ ಧ್ಯಾನದ ಏಕಾಗ್ರತೆ, ಅದರಿಂದ ಮನಃಪ್ರಸನ್ನತೆ ರೂಪ ಪ್ರಸಾದ ಸಿದ್ಧಿ. ಅದಿಲ್ಲದೆ ದುಃಖರೂಪ ಭವದ ವಿಮೋಚನೆ–ವಿಮುಕ್ತಿ ಸಾಧ್ಯವಾಗದು[7].

ಶಿವಶರಣರ ವಾಙ್ಮಯಕೋಶದಲ್ಲಿ ಆಚಾರವೇ ಶೀಲವೆನಿಸಿದೆ. ಅವರ ದೃಷ್ಟಿಯಲ್ಲಿ ಕೊಲ್ಲದಿಪ್ಪುದೇ ಸದಾಚಾರ, ಅದುವೇ ಶೀಲವೆನಿಸಿದೆ. 'ವೀರಶೈವರು ಆಚಾರಗಳಿಗೆ ಬಹಳ ಮಹತ್ವ ಕೊಟ್ಟಿದ್ದಾರೆ. ಅವು ಷಟ್‌ಸ್ಥಲ ಶಾಸ್ತ್ರಗಳಿಗನುಸಾರವಾಗಿ ಅನೇಕ ವಿಧವಾಗಿ ವಿಂಗಡಿಸಲ್ಪಟ್ಟಿವೆ....ಆಚಾರದ ಮೂಲಕ ಮನುಷ್ಯನಲ್ಲಿಯ ದುರ್ಗುಣಗಳೂ ದೋಷಗಳೂ ದೂರಾಗುತ್ತವೆ' ಎಂದು 'ವಚನಪಿತಾಮಹ' ಡಾ.ಫ.ಗು. ಹಳಕಟ್ಟಿ ಅವರು ವಚನಶಾಸ್ತ್ರದ ವೀರಶೈವಾಚಾರದ ವಿವೇಚನೆಗೆ ಮುನ್ನುಡಿದಿದ್ದಾರೆ[8]. ಲಿಂಗಾವಧಾನದಿಂದ ಕ್ಷುತ್–ಪಿಪಾಸೆ–ಶೋಕ–ಮೋಹ–ಜರೆ–ಮರಣಗಳೆಂಬ ಷಡೂರ್ಮಿಗಳ ಮಾಯಿಕ ಭಾವವನ್ನು ಕಳೆದು, ಅವು ಶಿವಭಾವವನ್ನು ತಳೆಯುವಂತೆ ಮಾಡುವ ಉದಾತ್ತೀಕರಣದ ಸಾಧನೆ ಭಕ್ತನದು. ಭಕ್ತನ ಆಚಾರಾಂಗದಲ್ಲಿ ಮರಣವು ಮಹಾನವಮಿಯಾಗಿ ಪರಿಣಮಿಸುತ್ತದೆ. ಅನ್ನಮಯಾದಿ ಔಪನಿಷದಿತ ಪಂಚಕೋಶಗಳ ಪ್ರಕೃತಿಗುಣ (ಜಡತೆ) ಕಳೆದು, ಅವುಗಳಿಗೆ ಲಿಂಗಗುಣ (ಚೈತನ್ಯ) ಅಳವಡಿಸುವ ಬಗೆ ಸುಶೀಲ ಶರಣನದು[9].

---

1. ಶೀಲಯಂತಿ ಮುನಯಃ ಸುಶೀಲತಾಂ (ಕಿರಾರ್ಜುನೀಯಂ. ೧೩ : ೪೩) ; ಶೀಲಯ ನೀಲ ನಿಚೋಲಂ (ಗೀತ ಗೋವಿಂದ) :- P.S.E.D.
2. 'ಶೀಲಂ ಸ್ವಭಾವೇ' ೧೬೧೧ (೪-೪-೬೧)-'ಛತ್ರಾದಿಭ್ಯೋ ಣಃ': ೧೬೧೨ (೪-೪-೬೨): ಗುರೋರ್ದೋಷಾಣಾಮಾವರಣಂ ಛತ್ರಂ, ತಚ್ಛೀಲಮಸ್ಯ ಛಾತ್ರಃ—ಸಿದ್ಧಾಂತ ಕೌಮುದೀ (ಬಾಲ ಮನೋರಮಾ ಟೀಕೆ): ಠಗಧಿಕಾರ ಪ್ರಕರಣ.
3. 'ಶುಚೌ ತು ಚರಿತೇ ಶೀಲಂ': ಶುಚೌ-ಶುದ್ಧೇ, ಚರಿತೇ-ಆಚರಣೇ ಶೀಲಂ; ಮಾಹೇಶ್ವರ ಟೀಕೆ; ಅ. ಕೋ. (ಪ್ರಥಮ ಕಾಂಡ, ನಾಟ್ಯ ವರ್ಗ, ಶ್ಲೋಕ ೨೬)
4. 'ಶೀಲಂ ಸ್ವಭಾವೇ ಸದ್‌ವೃತ್ತೇ': ಸ್ವಭಾವೇ-ಪ್ರಕೃತೌ, ಸದ್ವೃತ್ತೇ–ಸಚ್ಚರಿತೇ ಶೀಲಂ: ಮಾ. ಟೀಕೆ; ಅದೇ, (ತೃ. ಕಾಂಡ, ನಾನಾರ್ಥ ವರ್ಗ, ಶ್ಲೋಕ ೨೦೦)
5. 'ಚರಿತ್ರಂ ಚರಿತಂ ಶೀಲಂ ಚಾರಿತ್ರ್ಯಂ ಚ ಸಮಂ ಸ್ಮೃತಂ'–ಹ. ಕೋ. (ದ್ವಿ. ಕಾಂ. ಶ್ಲೋಕ ೩೯೬)
6. ವ.ಶಾ.ಸಾ. ಭಾಗ ೩: ಆಚಾರ ಭೇದಗಳು, ವಚನ ೨, ಪುಟ ೬೧
7. ಅದೇ, ವ. ೩, ಪು. ೬೨
8. ಅದೇ, ಪುಟ ೬೧.
9. ಅದೇ, ವ. ೬, ಪು. ೬೨-೬೩.

ಸ್ವಭಾವಾರ್ಥಪರ 'ಶೀಲ' ಪದವು ಮಾನವನ ಮಾನಸಿಕ–ಆಂತರಿಕ ಚಿತ್ತವೃತ್ತಿಯ ಸಂಕೇತ. 'ಸದ್‌ವೃತ್ತಿ'ಯು ಬಾಹ್ಯಾಚರಣೆಯ ಸೂಚಕ. ವೀರಶೈವ ವಾಙ್ಮಯ ಶೀಲಪದವನ್ನು ಇವೆರಡೂ ಅರ್ಥಗಳಲ್ಲಿ ಬಳಸಿಕೊಂಡಿದೆ. ಆಚಾರ–ವಿಚಾರಗಳೆನಿಸಿದ ಸದ್ವೃತ್ತ–ಸತ್‌ಸ್ವಭಾವಗಳು ವೀರಶೈವಾಚಾರದಲ್ಲಿ ಸಮಸಮುಚ್ಚಯವಾಗಿವೆ. ಬಸವಕ್ರಾಂತಿಯ ಪೂರ್ವದ ಶಿವಾಗಮ ಪದ್ಧತಿಯಲ್ಲಿ ಶೀಲವು ಪಂಚಾಚಾರವಾಗಿ ಕಟ್ಟುನಿಟ್ಟಿನ ಚರ್ಯೆಯೆನಿಸಿದೆ. ಆಗಮೋಕ್ತ ಆಚಾರಲಿಂಗಸ್ಥಲ ಸದಾಚಾರ, ನಿಯತಾಚಾರ, ಗಣಾಚಾರವೆಂದು ಮೂರುವಿಧ. ಸದಾಚಾರದಿಂದ ನಡೆದು ಸಜ್ಜನ ಶಿವಭಕ್ತನು ತಾನು ಸಂತುಷ್ಟನಾಗಿರುವುದಲ್ಲದೆ ಸಾಮಾಜಿಕರಿಗೂ ಸಂತೋಷವನ್ನುಂಟು ಮಾಡುವನು. ನಿಯತಾಚಾರದಲ್ಲಿ ನಡೆಯುವ ಭಕ್ತನು ತನ್ನ ಆಚಾರವನ್ನೆಂದಿಗೂ ಬಿಡನು. 'ಆಚಾರದಲ್ಲಿ ವ್ಯತ್ಯಯವಾದರೆ ಪ್ರಾಣವನ್ನಾದರೂ ಬಿಡುವನು' ಎಂಬ ಛಲವಂತನು. ಗಣಾಚಾರನಿಷ್ಠನು ಗುರು–ಲಿಂಗ–ಜಂಗಮರ ನಿಂದೆಯನ್ನು ಎಂದಿಗೂ ಕೇಳನು. 'ನಿಂದೆ ಮಾಡುವವರನ್ನು ದಂಡಿಸದೆ ಬಿಡೆನು' ಎಂದು ಪ್ರತಿಜ್ಞೆ ಮಾಡುವನು[10].

ಷಟ್‌ಸ್ಥಲಮಾರ್ಗದ ಭಕ್ತಸ್ಥಲ ಆಚಾರಮಯ. ಭಕ್ತನು ಆಚಾರನಿಷ್ಠನು. ಶೀಲವಂತನು. 'ಪಂಚಾಚಾರಗಳೇ' ಅವನಿಗೆ ಪ್ರಾಣ. ಚಿಕ್ಕದಂಡನಾಯಕ[11] ಚನ್ನಬಸವಣ್ಣನವರು ಅಕ್ಕಮಹಾದೇವಿಯರಿಗೆ ಪಂಚಾಚಾರದ ವಿಸ್ತಾರವನ್ನು ಕರುಣಿಸಿದ ಬಗೆ ಮನನೀಯವಾಗಿದೆ. ಸದ್‌ಭಕ್ತಿ–ಜ್ಞಾನ–ವೈರಾಗ್ಯಮಯ ಷಟ್‌ಸ್ಥಲಮಾರ್ಗದ ನಿಜಾಚರಣೆ ೧) ಲಿಂಗಾಚಾರ, ೨) ಸದಾಚಾರ, ೩) ಶಿವಾಚಾರ, ೪) ಗಣಾಚಾರ, ೫) ಭೃತ್ಯಾಚಾರ ಎಂಬ ಐದು ಆಚಾರಗಳನ್ನು ಸಮನಿಸಿದೆ[12].

**ಪಂಚಾಚಾರಗಳಲ್ಲಿಯ ಶೀಲ :**

(೧) ಲಿಂಗಾಚಾರ : ಶಿವಲಿಂಗ(ಇಷ್ಟ)ವನಲ್ಲದೆ ಅನ್ಯವನರಿಯದಿರುವುದು; (೨) ಸದಾಚಾರ : ಸತ್ಯ ಶುದ್ಧ ಕಾಯಕದಿಂದ ತಂದ ಪದಾರ್ಥವ ಗುರು–ಲಿಂಗ–ಜಂಗಮಕ್ಕೆ ಮಾಡಿ ನೀಡಿ ನಿತ್ಯಸುಖಿಯಾಗಿರುವುದು; (೩) ಶಿವಾಚಾರ : ಶಿವಭಕ್ತರಲ್ಲಿ ಪೂರ್ವದ ಜಾತಿ-ವರ್ಣ-ಆಶ್ರಮಗಳನರಸದೆ ಅವರ ಶೇಷಪ್ರಸಾದ ಕೊಂಬುದು; (೪) ಗಣಾಚಾರ : ಶಿವಾಚಾರದ ನಿಂದೆಯ ಕೇಳದಿರುವುದು; (೫) ಭೃತ್ಯಾಚಾರ : ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲವೆಂಬ ಕೈಂಕರ್ಯದಿಂದ ವರ್ತಿಸುವುದು. ಇವುಗಳಲ್ಲಿ ಗಣಾಚಾರವು ಬಹಳ ಕಟ್ಟುನಿಟ್ಟಿನ ವೀರತನದ ನಡತೆ. ಈ ಆಗಮೋಕ್ತ ಕಠೋರ ಶೀಲ ಬಸವಣ್ಣನವರ ಯುಗದಲ್ಲಿಯೂ ಆಚರಣೆಯಲ್ಲಿತ್ತು. ಮಡಿವಳ ಮಾಚಯ್ಯಗಳ ವೀರವೃತ್ತಿ ಬಸವಪುರಾಣೋಕ್ತವಾಗಿದೆ. ವೀರಶೈವಾಚಾರದ ಪ್ರತಿ ನಡತೆಯಲ್ಲಿ ವಿವಿಧ ಶೀಲಗಳು ಸಮನ್ವಯಗೊಂಡಿವೆ. ಕೆಲವೆಡೆ ಅವು ಅತಿವ್ಯಾಪ್ತವಾಗಿರುವುದೂ ಉಂಟು.

ಪಂಚಾಚಾರಗಳಲ್ಲಿ ಗಣಾಚಾರ ಬಹು ವಿಶಿಷ್ಟವಾದ ನಡತೆ. ಅಲ್ಲಿ ವೀರಶೈವ ನಿಷ್ಠೆಯ ಪರಾಕಾಷ್ಠೆ ಎದ್ದು ಕಾಣುತ್ತದೆ. ಶಿವಾಗಮಗಳು ಗಣಾಚಾರದಲ್ಲಿ ೬೪ ಶೀಲಗಳನ್ನು ಹೇಳುತ್ತವೆ. ಈ ಶೀಲಗಳಲ್ಲಿ ಎಲ್ಲ ವೀರಶೈವಾಚಾರಗಳೂ ಕ್ರೋಢೀಕೃತವಾದಂತಿದೆ. ಜ್ಞಾನೇಂದ್ರಿಯ, ಕರ್ಮೇಂದ್ರಿಯ ಮತ್ತು ಅಂತಃಕರಣಗಳಿಂದ ನಡೆಯುವ ಕ್ರಿಯೆಗಳೆಲ್ಲವೂ ಶಿವಮಯವಾಗಿರಬೇಕೆಂಬುದೇ ಗಣಾಚಾರದ ಶೀಲದ ಪರಮೋದ್ದೇಶ್ಯ. ಈ ಶೀಲದ ಅರುವತ್ತುನಾಲ್ಕು ಬಗೆಗಳು ವಾಚಿಕ-ಕಾಯಿಕ-ಮಾನಸಿಕ ಪರಿಶುದ್ಧತೆಗೆ ಸಂಬಂಧಿಸಿವೆ.

ಅರುವತ್ತುನಾಲ್ಕು ಶೀಲಗಳ ಸಂಕ್ಷಿಪ್ತ ಪರಿಚಯವಿಲ್ಲಿ ಪ್ರಸ್ತುತ. ಅವುಗಳ ಸಮಗ್ರ ವಿವೇಚನೆಗೆ ಕೊಂಡಗುಳಿ ಕೇಶಿರಾಜನ (ಸು. ೧೧೬೦) ಶೀಲ ಮಹತ್ವದ ಕಂದ, ವಿರಕ್ತತೋಂಟದಾರ್ಯನ (ಸು. ೧೫೬೦) ಸೋಮೇಶ್ವರ ಪುರಾಣ ಮೊದಲಾದ ವಾಙ್ಮಯವನ್ನು ಅವಲೋಕಿಸಬಹುದಾಗಿದೆ.

ಕೊಂಡಗುಳಿ ಕೇಶಿರಾಜನು 'ಶೀಲ ಮಹತ್ವದ ಕಂದ'ದಲ್ಲಿ ೬೪ ಶೀಲಗಳ ಸಕ್ರಮ ವಿವರಣೆ ಕೊಡುವ ಮೊದಲು ಸದಾಚಾರದಲ್ಲಿ ನಿಷ್ಠೆಗೊಂಡ ವೀರಶೈವವನ್ನು ನಿಜ ಮಹೇಶ್ವರನೆಂದು[13] ನೆನೆದಿರುವನು :

---

10. ಸ್ಥಲಮಾಚಾರಲಿಂಗಸ್ಯ ತ್ರಿವಿಧಂ ಶ್ರೂಯತಾಂ ಕ್ರಮಾತ್ । ಸದಾಚಾರಸ್ತು ನಿಯತೋ ಗಣಾಚಾರಸ್ತಥಾ ಪರಃ ॥೧೧॥
ಸಜ್ಜನಃ ಶಿವಭಕ್ತಶ್ಚ ಯೇನ ಮಾರ್ಗೇಣ ಸರ್ವದಾ । ತುಷ್ಟಸ್ತೋಷಯತೇ ದೇವಿ ಸದಾಚಾರಃ ಸ ವೈ ಸ್ಮೃತಃ ॥೧೨॥
ಯಸ್ತು ಸ್ವಕೃತಮಾಚಾರಂ ನ ತ್ಯಜೇಚ್ಚ ತದತ್ಯಯೇ । ತ್ಯಜಾಮ್ಯಸೂನಿತಿ ಸ ವೈ ನಿಯತಾಚಾರ ಈರಿತಃ ॥೧೩॥
ಗುರುಲಿಂಗಾದಿ ವಿಷಯಂ ನ ಶ್ರಾವ್ಯಂ ದೂಷಣಂ ಯದಿ । ಶ್ರುತಂ ತಾನ್ ಶಿಕ್ಷಯಾಮಿತಿ ಗಣಾಚಾರಃ ಸ ಹಿ ಸ್ಮೃತಃ ॥೧೪॥
—ತ. ಸಂ. (ಸೂಕ್ಷ್ಮತನ್ತ್ರ, ಪಟಲ-ಅಷ್ಟಮ)
11. ದಂಡವೆಂದರೆ ಧರ್ಮಶಾಸನ ; ಧಾರ್ಮಿಕ ಆಚರಣೆಯಲ್ಲಿ ಮಾರ್ಗದರ್ಶಿಯಾದವನೇ ದಂಡನಾಯಕ ; ಇಲ್ಲಿ 'ದಂಡನಾಯಕ' ಪದಕ್ಕೆ 'ಸೇನಾಪತಿ' ಎಂಬರ್ಥ ಸಲ್ಲದು.
12. ವ.ಶಾ.ಸಾ. (ಪಂಚಾಚಾರ, ಸಪ್ತಾಚಾರಗಳು, ವ. ೧೪, ಪು. ೭೧) ಭಾ. ೩, ಪೂರ್ವಾರ್ಧ
13. ಶೀಲ ಮಹತ್ವದ ಕಂದ, ಪುಟ ೫೯-೭೧

ಪರಧನವಂ ಪರವಧುವಂ। ಪರದೈವಂಗಳನು ತೊಱೆದು ಲಿಂಗದ ನಿಜವೊಂ॥
ದಿರವಾಗಿಯನ್ಯವಱಿಯದೆ। ಇರಬಲ್ಲ ಮಹಾತ್ಮನೀಗಲವನೆ ಮಹೇಶಂ ॥ ೩ ॥

* * *

ಎಡೆದೆಱಪಿಲ್ಲದೆ ತ್ರಿವಿಧಕೆ। ಕಡೆಯಿಲ್ಲದೆ ಮೋಹಿಯಾಗಿ ನಡೆವ ಸದರ್ಥಂ॥
ಕಡುನಿಷ್ಠೆ ಗಟ್ಟಿಗೊಂಡುಂ। ನಡೆವಾತನೆ ಭಕ್ತ ನಿಷ್ಠೆಯೊಳಗೆ ಮಹೇಶಂ ॥ ೫ ॥
ವೀರವ್ರತ ನಿಷ್ಠೆಯುಪಾ। ಚಾರಂ ತನುಗುಣಗಳಿಂದ್ರಿಯಳಿದಿಹ ಶೀಲಂ॥
ಧೀರಂ ಸಜ್ಜನ ಸತ್ಯಾ। ಚಾರಂ ಸನ್ಮಾರ್ಗಸಹಜನಹನು ಮಹೇಶಂ ॥ ೬ ॥

* * *

ಪರಸತಿಯು ಕಾಣುತಾಗಂ। ವರಜನನಿಯು ಪುತ್ರಿ ತನ್ನವೊಡಹುಟ್ಟಿದಳೆಂ॥
ದಿರುವಂ ಮನದಾರನವರ! ಪರಿಭಾವಿಸಿ ನೋಡನಾವತೆಱದಿ ಮಹೇಶಂ ॥೧೮॥

ಪರರ ಧನವೆಂಬುದನವಂ। ಪರಿಕಿಸನದ ನೋಡನದಱ ದೆಸೆಗೆ ಹಾರಂ॥
ಪರಿಭವ ಪರವಶಕೆ ಬಾರಂ। ಪರಧನವಂ ತೆಗೆವರವರ ನೆಱೆಯ ಮಹೇಶಂ ॥೧೯॥

ದಂಡನಾಯಕ ಕೊಂಡಗುಳಿ ಕೇಶಿರಾಜನ ದೃಷ್ಟಿಯಲ್ಲಿ ಪರಮಾತ್ಮನಲ್ಲಿ ಭಕ್ತಿಯಿಟ್ಟು ಕೀಳುದೈವಗಳನ್ನು ನಂಬಿದಿರುವುದು, ಸತ್ಯ ಸನ್ಮಾರ್ಗದಲ್ಲಿ ನಡೆವುದು, ಪರಧನ, ಪರಸ್ತ್ರೀವ್ಯಾಮೋಹ ಹೊಂದದಿರುವುದು, ಪರರನ್ನು ವಂಚಿಸದಿರುವುದು (ಬಡವರ ಶೋಷಣೆ ಮಾಡದಿರುವುದು) ಇವೇ ವೀರಶೈವ ಶೀಲಾಚಾರದ ನಿಜ ನೇಮಗಳಾಗಿವೆ.

ಶೀಲಾಚರಣೆಯಲ್ಲಿ ನಡೆದ ವಿಮಲಚರಿತ್ರ, ಶಿವಕವಿ ಶರಣರಲ್ಲಿ ಪಾಲ್ಕುರಿಕೆಯ ಸೋಮನಾಥನು ಅಗ್ರಗಣ್ಯನೆಂದು ವಿರೂಪಾಕ್ಷ ಪಂಡಿತನು ನುತಿಸಿರುವನು14:

ವಿಮಲಚರಿತಂ ಪಾಲ್ಕುರಿಕೆಯ ಸೋಮೇಶ್ವರಂ
ಕ್ರಮದಿಂದಲರವತ್ತುನಾಲ್ಕು ಶೀಲವ ನಡೆಸಿ
ಸುಮನದಿಂದಾಕಳಿಕೆ ಬಂದಲ್ಲಿ ಶಿವಸಮಾಧಿಯಲಿ ನಿಜಮುಕ್ತನಹನು

ವಿರಕ್ತ ತೋಂಟದಾರ್ಯ ಕವಿಯು ತನಗೆ ಷಟ್‌ಸ್ಥಲಮಾರ್ಗವನ್ನು ಬೋಧಿಸಿದ ಪರಮಗುರು ಗೂಳೂರು ಸಿದ್ಧವೀರಾರ್ಯನ ಅಪ್ಪಣೆಯಂತೆ 'ಗುರುಕುಲತಿಲಕ' ಪಾಲ್ಕುರಿಕೆ ಸೋಮಾರಾಧ್ಯನ ಚರಿತೆಯನ್ನು ಕಾವ್ಯಮಯವಾಗಿ ಬರೆದಿರುವನು. ಸೋಮಾರಾಧ್ಯರ ಚೌಷಷ್ಟಿಶೀಲಗಳ ಚರಿತವಿಲ್ಲಿ ಸೂತ್ರಾತ್ಮಕವಾಗಿ ಕ್ರಮವಿಡಿದು ಮೂಡಿ ನಿಂದಿದೆ. ಈ ಕಾವ್ಯವನ್ನು ಮೊದಲ ಬಾರಿಗೆ ಪರಿಷ್ಕರಿಸಿ ಪ್ರಕಟಿಸಿದ ಶ್ರೀ ಎನ್. ಆರ್. ಕರಿಬಸವಶಾಸ್ತ್ರಿಗಳು ಪೀಠಿಕೆಯಲ್ಲಿ–

'ಶ್ರೀ ಪಾಲ್ಕುರಿಕೆ ಸೋಮಾರಾಧ್ಯರು ವೀರಶೈವಜಗತ್ತಿಗೆ ಅಪಾರವಾದ ಉಪಕಾರವನ್ನು ಮಾಡಿರುವರು. ಆಗಮೋಕ್ತವಾಗಿದ್ದ ೬೪ ವೀರಶೈವ ಶೀಲಗಳನ್ನು ನಿಶಿತವಾದ ನಿಷ್ಠೆಯಿಂದ ಸಾಂಗವಾಗಿ ಆಚರಿಸಿ ತೋರಿಸಿದವರು ಇವರೇ'

ಎಂದು ಉದ್ಗರಿಸಿರುವುದು ಯಥಾರ್ಥವಾಗಿದೆ.

ವಿರಕ್ತ ತೋಂಟದಾರ್ಯನು ಈ ಪಾಲ್ಕುರಿಕೆ ಸೋಮೇಶ್ವರ ಪುರಾಣ ಕಾವ್ಯದಲ್ಲಿ-15

ಈ ತೆರದೆ ಸಕಲಶಾಸ್ತ್ರಂಗಳಂ ತಿಳಿದವರೊ
ಳೋತು ತತ್ವಪ್ರಚಯಂಗಳನು ವಿವರಿಸಿಯುಸ್ತಿ
ಭಾತಿಪ್ರಿಯಂಗಳೊಬ್ಬುಳಿಯಾದ ಘನತರ ಬ್ರಹ್ಮಮಂ ಕಂಡು ಮತ್ತೆ॥
ಸಾತಿಶಯವೆನಿಪ ಚೌಷಷ್ಟಿಶೀಲಂಗಳಂ
ಖ್ಯಾತಿ ಮಿಗಲಾಚರಿಸುತಿರ್ದನಾ ಮನ್ಮಥಾರಾತಿ
ಯಣುಗಂ ನಾಡೆ ತಚ್ಛೀಲ ಭೇದಂಗಳೆಂತೆನಲ್ ಪೇಳ್ವೆನೊಸೆದು

ಎಂದು ಕಾವ್ಯನಾಯಕ ಸೋಮಾರಾಧ್ಯನನ್ನು ನುತಿಸಿ ಅವನ ಶೀಲಾಚರಣೆಯನ್ನು ಕ್ರಮವಿಡಿದು ಹೇಳಿದ್ದಾನೆ.

**ಪಾಲ್ಕುರಿಕೆ ಸೋಮನಾಥಾರಾಧ್ಯರು ಆಚರಿಸಿದ ಶೀಲಗಳು :**

ಒಂದನೆಯದು : ಶಿವಲಿಂಗಾಂಗ ಸಂಬಂಧಿಯಾಗಿ ಪರದೈವಗಳನ್ನು ನಂಬದಿರುವುದು;

ಎರಡನೆಯದು : ಅಸತ್ಯ, ಅಸ್ಥಿರವಾಕ್ಯ, ವಂಚನೆ, ಪಂಕ್ತಿಭೇದ, ಉದಾಸೀನತೆ, ನಿರ್ದಯತೆ ಷಡ್ವಿಧ ಬಿನುಗು (ನಿಕೃಷ್ಟಾಚರಣೆ) ಮತ್ತು ಭವಿಮಿಶ್ರವೆಂಬ ಲೌಕಿಕಮಾರ್ಗ ಬಿಟ್ಟಿರುವುದು ;

14. ಚ.ಬ.ಪು. ಸಂಧಿ ೬೨, ಪದ್ಯ ೫೯ 15. ಪಾ.ಸೋ.ಪು. ಸಂಧಿ ೨, ಪದ್ಯ ೫೨

ಮೂರನೆಯದು : ಶುನಕ. ಸೂಕರ, ಕುಕ್ಕುಟಗಳನ್ನು ತನ್ನ ಸೀಮೆಯಲ್ಲಿ ಹೊಗಿಸದಿರುವುದು16 ;

ನಾಲ್ಕನೆಯದು : ಪಂಚಸೂತಕ ಬಿಡುವುದು (ಜಾತಿ, ಜನನ, ಪ್ರೇತ. ರಜಸ್ಸು, ಉಚ್ಛಿಷ್ಟ) ;

ಐದನೆಯದು : ಶುಭ ವಾರ, ತಿಥಿ, ಲಗ್ನವೆಂಬ ಕರ್ಮಕಾಂಡವ ಬಿಡುವುದು ;

ಆರನೆಯದು : ಸೋಮವಾರ, ವ್ಯತೀಪಾತ17, ಸಂಕ್ರಾಂತಿ, ಶಿವರಾತ್ರಿ, ರಾಮಪರ್ವಗಳಲ್ಲಿ ಏಕಭುಕ್ತೋಪವಾಸಗಳನ್ನು ಆಚರಿಸದಿರುವುದು18 ;

ಏಳನೆಯದು : ತೀರ್ಥಕ್ಷೇತ್ರಗಳಲ್ಲಿ ಸ್ಥಾವರಲಿಂಗಪೂಜೆ ಮಾಡದಿರುವುದು ;

ಎಂಟನೆಯದು: ಭವಿಪಾಕವನ್ನು ಬಿಟ್ಟು, ಭಾಂಡದ ಕಂಠಕ್ಕೆ ಪಾವುಡವ ಭವಿಗಳು ನೋಡದಂತೆ ಕಟ್ಟಿ ಮುಚ್ಚುವುದು ;

ಒಂಬತ್ತನೆಯದು : ಶಿವಮಂತ್ರದಿಂದ ಜಲಶುದ್ಧಿ ಮಾಡುವುದು ;

ಹತ್ತನೆಯದು : ತನ್ನ ಧರ್ಮಪತ್ನಿಗೆ ಗುರೂಪದೇಶಕ್ರಮದಿಂದ ತನ್ನ ಶೀಲವ ಸಮನಿಸುವುದು ;

ಹನ್ನೊಂದನೆಯದು : ಭವಿಗಳೊಡನೆ ಕೊಡು-ಕೊಳ್ಳುವ ವ್ಯವಹಾರ ಮಾಡದೆ ಅವರೊಡನೆ ಬಾಂಧವ್ಯ-ಮಿತ್ರತ್ವ ಬೆಳೆಸದಿರುವುದು ;

ಹನ್ನೆರಡನೆಯದು: ಗುರು-ಜಂಗಮರಲ್ಲಿ ಗುಣವನರಸದೆ ಅವರನ್ನು ಪ್ರತ್ಯಕ್ಷ ಶಿವನೆಂದು ವಿಶ್ವಾಸದಿಂದ ಪೂಜಿಸುವುದು;

ಹದಿಮೂರನೆಯದು : ಜಂಗಮದ ಪಾದೋದಕದಿಂದ ತನ್ನ ಕರದೊಳಗಿರುವ ಇಷ್ಟಲಿಂಗಕ್ಕೆ ಎರೆದು ಅದರ ಶೇಷವ ಸೇವಿಸುವುದು ;

ಹದಿನಾಲ್ಕನೆಯದು : ಗರ್ಭಿಣಿಪತ್ನಿಯ ಗರ್ಭಕ್ಕೆ ಎಂಟನೆಯ ತಿಂಗಳಲ್ಲಿ ಗುರು-ಜಂಗಮರ ಹಸ್ತದಿಂದ ವಿಭೂತಿ ಪಟ್ಟಗಟ್ಟುವುದು ;

ಹದಿನೈದನೆಯದು : ಶಿವಭಕ್ತರಲ್ಲಿ ಜಾತಿಸೂತಕವನಾಚರಿಸದಿರುವುದು ;

ಹದಿನಾರನೆಯದು : ಶಿವಶರಣರಲ್ಲಿ ಗುಣಾವಗುಣಗಳನ್ನು, ಅವರ ಕುರೂಪ-ಸುರೂಪ, ಜ್ಞಾನಾಜ್ಞಾನಗಳನ್ನು ಬಗೆಯದಿರುವುದು;

ಹದಿನೇಳನೆಯದು : ಕರ್ಪೂರ, ಕಸ್ತೂರಿ, ಕುಂಕುಮ, ದವನಗಳ ಅನುಲೇಪನ ಬಿಡುವುದು19 ;

ಹದಿನೆಂಟನೆಯದು : ಎಮ್ಮೆಯ ಹಾಲನ್ನು ಸೇವಿಸದಿರುವುದು20;

ಹತ್ತೊಂಬತ್ತನೆಯದು: ಭವಿಗಳಿಗಾಗಿ ಕೆಲಸವನ್ನು ಮಾಡದೆ21 ಅಂಬಷ್ಠ ಭಕ್ತನ ಹಸ್ತದಿಂದ ಸೇವೆಯ ಕೊಳ್ಳುವುದು;

ಇಪ್ಪತ್ತನೆಯದು : ಉಪ್ಪನ್ನು22 ಬಳಸದಿರುವುದು;

ಇಪ್ಪತ್ತೊಂದನೆಯದು : ಹಿಂಸಾಮಯ ತೊಗಲಿನ ಕಿವಿಯ, ಕರುಳು ನರ ಜಿಗಿದ ಬಿಲ್ಲಿನಿಂದ ಹತ್ತಿಯನ್ನು ಹಿಂಜಿಸದೆ, ಕೊಂಬಿನ ಲಾಳಿಯ ಮಗ್ಗದಿಂದ ನೂಲನ್ನು ನೇಯ್ಸದೆ ಲಿಂಗವಂತರಿಂದಲೇ ಬಟ್ಟೆಗಳನ್ನು ಶುಚಿಯಾಗಿ ನೇಯ್ಸಿಕೊಳ್ಳುವುದು23;

---

16. ಶುನಕಂ ಶೂಕರ ಕುಕ್ಕುಟ। ಮನೆಗಂ ಮಾರ್ಜಾಲ ಮೂಷಕಂಗಳನೇನಂ
ಇನಿಸವಂ ಸುಳಿಯಲ್ಕೀಯದೆ। ಅನುನಯದಿಂದಿರೆ ಮೂವತ್ತೆರಡನೆಯದುದುಂ —ಶೀ. ಮ. ಕಂ. ಪ. ೫೪
17. ಸೋಮವಾರದಂದು ಬರುವ ಪೌರ್ಣಿಮೆ
18. ಶಿವರಾತ್ರಿ ಶಂಕುರಾಂತಿಯು। ಶಿವವಾರಂ ಏಕಭುಕ್ತ್ಯುಪವಾಸಗಳಂ
ಶಿವಪಥಗಳಲ್ಲವೆಂದವ। ತವೆ ಬಿಟ್ಟರೆ ಮೂವತ್ತಾರನೆ ಶೀಲವದುಂ —ಅದೇ, ಪ. ೫೮
19. ಕಸ್ತೂರಿ ಕರ್ಪೂರ ಪುಣುಗುಂ। ವಿಸ್ತರಿಪ ಜವಾದಿ ಕುಂಕುಮನುಲೇಪನಂಗಳಂ
ವ್ಯಸ್ತವೆಂದವನು ಬಿಡಲುಂ। ಸುಸ್ಥಿರವದು ಶೀಲವೈವತ್ತ ಮೂಜಿನಿಕುಂ —ಶೀ ಮ. ಕಂ. ಪ. ೭೫
20. ಧೇನುಕ್ಷೀರವದಲ್ಲದೆ । ತಾನಾಗದು ಶಿವಗನ್ಯಂ ಮಿಕ್ಕವಿವೆಂದುಂ ।
ಹೀನತರ ಮಹಿಷಿಯಿಂದಂ । ಹಾನಿಯುಂಗಳಾಗೆ ನವಮದೆನಿಪ್ಪುದುಂ ॥ —ಶೀ. ಮ. ಕಂ. ಪ. ೩೨
21. 'ಅಂಬಷ್ಠೋ ವೈಶ್ಯಾದ್ವಿಜನ್ಮನೋಃ' ಅ.ಕೋ. (ದ್ವಿ. ಕಾಂ. ಶೂದ್ರವರ್ಗ, ೭೦೫) ಬ್ರಾಹ್ಮಣನಿಂದ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಸಂಕರ ಸಂತಾನ; ಇವರೆಲ್ಲ ಸಾಮಾನ್ಯವಾಗಿ ವೈದ್ಯವೃತ್ತಿಯಲ್ಲಿದ್ದವರು.
22. ಕವಿ ಇಲ್ಲಿ ಲವಣವೆಂದು ಪ್ರಯೋಗಿಸಿರುವುದು ಸಾಧುವೆನಿಸದು. ಉಪ್ಪು ಸಮುದ್ರದ ಕಲುಷಿತ ನೀರಿನಿಂದ ಭವಿಗಳು ತಯಾರಿಸಿದ್ದು. ಅದರಿಂದ ಅದು ತ್ಯಾಜ್ಯ. ಆದರೆ ಲವಣ ಖಣಿಯ ಕಲ್ಲು, ಅದರಲ್ಲಿ ಅಶುದ್ಧಿ ಬಾರದು.
23. ನರ ತೊಗಲು ಮುಟ್ಟದಂದದಿ । ಹರಭಕ್ತರೆ ನೂತ ನೂಲ ಭಕ್ತರ ಕೈಯಿಂ ॥
ವರವಸ್ತ್ರ ವಸನವಾಗಲು । ಹರನೊಲಿವಂ ಶೀಲ ತಾನೆ ಹದಿನೈದೆನಿಕುಂ ॥ —ಶೀ. ಮ. ಕಂ. ಪ. ೩೭

ಇಪ್ಪತ್ತೆರಡನೆಯದು : ಕಪ್ಪು ಜನರು (ಭವಿಗಳು)ನೇಯ್ದ ಕಂಬಳಿಗಳನ್ನು ಬಳಸದಿರುವುದು;
ಇಪ್ಪತ್ತುಮೂರನೆಯದು : ಬಟ್ಟೆಗಳನ್ನು ಚಿಲುಮೆಯ ನಿರ್ಮಲನೀರಿನಿಂದಲೇ ತೊಳೆಯುವುದು;
ಇಪ್ಪತ್ತುನಾಲ್ಕನೆಯದು : ತೊದಲು (ಆಡಿದ ಮಾತಿಗೆ ತಪ್ಪುವುದು, ಅಸತ್ಯ ನುಡಿ) ಇಲ್ಲದಿರುವುದು;
ಇಪ್ಪತ್ತೈದನೆಯದು : ಗುರು–ಲಿಂಗ–ಜಂಗಮಕ್ಕೆ ವಂಚನೆಯಿಲ್ಲದೆ ತನು-ಮನ-ಧನವನರ್ಪಿಸುವುದು;
ಇಪ್ಪತ್ತಾರನೆಯದು : ಶಿವಭಕ್ತನೇ ಕುಲಜ, ಶಿವಷಡಕ್ಷರಿಯೇ ಮಹಾಮಂತ್ರ ಎಂಬುದನ್ನು ಪ್ರತ್ಯಕ್ಷ-ಅನುಮಾನ-ಶಬ್ದ ಪ್ರಮಾಣಗಳಿಂದ ದೃಢೀಕರಿಸುವುದು;
ಇಪ್ಪತ್ತೇಳನೆಯದು : ತನ್ನ ಗೃಹಕ್ಕೆ ಲಿಂಗಮುದ್ರಾಂಕಿತವ ಮಾಡುವುದು; ಭವಿಗೆ ಕೈಯ ಮುಗಿಯದಿರುವುದು;
ಇಪ್ಪತ್ತೆಂಟನೆಯದು : ಶಿವಭಕ್ತರಾದ ಕುಂಬಾರರ ಕೈಯಿಂದ ಮಡಕೆಗಳ ಮಾಡಿಸುವುದು;
ಇಪ್ಪತ್ತೊಂಬತ್ತನೆಯದು : ಮನೆಯ ಗೋ–ಕರುಗಳಿಗೆ ಲಿಂಗಮುದ್ರೆಯ ಹಾಕುವುದು;
ಮೂವತ್ತನೆಯದು : ಪಾತ್ರೆಗಳ ಕಂಠಕ್ಕೆ, ಗೃಹೋಪಕರಣಗಳಿಗೆ ಲಿಂಗಮುದ್ರಾಂಕಿತವ ಮಾಡುವುದು;
ಮೂವತ್ತೊಂದನೆಯದು : ತನ್ನ ಮನೆಯ ಹಸು–ಕರು–ಹೋರಿಗಳಿಗೆ ಶಿವಲಿಂಗಧಾರಿ ಭಕ್ತರಿಂದಲೇ ಹುಲ್ಲು ತರಿಸಿ ಹಾಕಿ, ಲಿಂಗಮುದ್ರಾಂಕಿತ ಚಿಲುಮೆಯ ನೀರನ್ನೇ ಕುಡಿಸುವುದು;
ಮೂವತ್ತೆರಡನೆಯದು : ಹಾಲು ಕರೆವ ಹಸುಗಳ ಮೇಲೆ ಲಿಂಗಮುದ್ರಾಂಕಿತ ಬೀಜದ ಹೋರಿಯನ್ನೇ ಹಾರಿಸುವುದು. ಗೋಮಯದಿಂದಲೇ ಮನೆಯನ್ನು ಸಾರಿಸುವುದು;
ಮೂವತ್ತುಮೂರನೆಯದು[24] : ಶಿವಭಕ್ತ ರಾಜರ ಕೈಯಿಂದ ಹೂದೋಟಕ್ಕೆ ಭೂಮಿಯ ಕೊಂಡು, ಆ ಭೂಮಿಯ ನಾಲ್ಕು ದಿಕ್ಕಿಗೆ ಲಿಂಗಮುದ್ರೆ ಕಲ್ಲು ನಿಲ್ಲಿಸುವುದು;
ಮೂವತ್ತುನಾಲ್ಕನೆಯದು : ಭವಿಗಳ ದೃಷ್ಟಿ ಹೂವಿನ ತೋಟದ ಮೇಲೆ ಬೀಳದಂತೆ ಎತ್ತರದ ಬೇಲಿ ಇಲ್ಲವೆ ಪೌಳಿ (ಪ್ರಾಕಾರ)ವನ್ನು ಕಟ್ಟಿಸಿ ಮರೆ ಮಾಡುವುದು;
ಮೂವತ್ತೈದನೆಯದು: ಲಿಂಗಮುದ್ರೆಯ ಬಸವನ ತೊಗಲಮಿಣಿಯನ್ನು ನೇಗಿಲಿಗೆ ಕಟ್ಟದೆ ಆರಂಭವ ಮಾಡುವುದು;
ಮೂವತ್ತಾರನೆಯದು : ಭವಿಗಳ ನುಡಿಯನ್ನು ಕೇಳದೆ, ಲಿಂಗಬಾಹಿರರ ನೋಡದಿರುವುದು;
ಮೂವತ್ತೇಳನೆಯದು : ಭವಿಯ ಹತ್ತಿರ ಸುಳಿಯದೆ, ಅವನು ಬೆಳೆದ ಧಾನ್ಯಾದಿಗಳನ್ನು ಉಪಯೋಗಿಸದಿರುವುದು;
ಮೂವತ್ತೆಂಟನೆಯದು : ರೋಗ–ರುಜಿನಗಳನ್ನು ವಾಸಿಮಾಡಿಕೊಳ್ಳಲು ನಾರು-ಬೇರು-ಮಣಿ-ಮಂತ್ರಗಳನ್ನು ಒಲ್ಲದಿರುವುದು[25];
ಮೂವತ್ತೊಂಬತ್ತನೆಯದು : ಲಿಂಗವ ಬಯಸಿ ಬೇಡದಿರುವುದು ;
ನಾಲ್ವತ್ತನೆಯದು : ಮಾಟತ್ರಯಗಳ ವಿವರವರಿದು ಮಾಡುವುದು ;
ನಾಲ್ವತ್ತೊಂದನೆಯದು : ಡಾಂಭಿಕತನದಿಂದ ಶಿವಾರ್ಚನೆ ಮಾಡದಿರುವುದು ; ಆಶೆ–ಆಮಿಷಕ್ಕೊಳಗಾಗಿ ಶಿವದೀಕ್ಷೆ ಮಾಡದಿರುವುದು ;
ನಾಲ್ವತ್ತೆರಡನೆಯದು [26] : ಶಿವಪರವಲ್ಲದನ್ಯ ಶಬ್ದವ ಕೇಳದಿರುವುದು ;
ನಾಲ್ವತ್ತುಮೂರನೆಯದು : ನವರತ್ನಗಳ ತೊಡಿಗೆಯನ್ನು ಧರಿಸದಿರುವುದು ;
ನಾಲ್ವತ್ತುನಾಲ್ಕನೆಯದು : ಜಂಗಮನಿಗೆ ಮಡದಿಯೊಬ್ಬಳ ವಿವಾಹ ಮಾಡಿಕೊಟ್ಟು, ಸಾಕಷ್ಟು ಧನ ಕನಕ ವಸ್ತುಗಳ ದಾನವಿತ್ತು, ಸುಖಭೋಗದ ವಸ್ತುವ ಮೊದಲು ಅವನಿಗರ್ಪಿಸಿ ಆಮೇಲೆ ತಾನು ಭೋಗಿಸುವುದು [27];

---

24. ಭಕ್ತನ ಗ್ರಾಮದಲಿದ್ದುಂ। ಭಕ್ತನ ಹಸ್ತದಲಿ ಭೂಮಿಯಂ ಗ್ರಹಿಸೂದುಂ॥
ಮತ್ತದಕೆ ಲಿಂಗಮುದ್ರೆಯ। ವ್ಯಕ್ತಿಕದಿಂ ಸಲ್ಲಿಯಿರಲು ಇಪ್ಪತ್ತದು ತಾಂ
—ಶೀ. ಮ. ಕಂ. ಪ.೪೨
25. ತನುವಿಂಗೆ ವ್ಯಾಧಿಯಾದರೆ । ಅನುಕರಿಸದೆ ನಾರು ಬೇರು ಮಣಿ ಮಂತ್ರಗಳಂ
ಮನಸಿನಲಿ ನೆನೆಯದಿರಲದು। ಅನುಪಮ ಮೂವತ್ತುಮೂರನೆಯ ಶೀಲವದು
—ಶೀ. ಮ. ಕಂ. ಪ. ೫೫
26. ಕಾಶಿಯಲ್ಲಿ ಶಿವಗಣನೊಬ್ಬ ಅನ್ಯಶಬ್ದವ ಕೇಳಬಾರದೆಂದು ಕಿವಿಗಳಿಗೆ ಗಂಟೆಗಳನ್ನು ಕಟ್ಟಿಕೊಂಡಿದ್ದನಂತೆ. ಅವನು ಘಂಟಾಕರ್ಣ ಅಥವಾ ಕರ್ಣಘಂಟನೆಂದೇ ಪ್ರಸಿದ್ಧನಾದನು. ಕಾಶಿಯಲ್ಲಿ ಇಂದಿಗೂ ಅವನ ಹೆಸರಿನ ಸ್ಮಾರಕವಾಗಿ ಶಿವಾಲಯ ಮತ್ತು ಜಲಾಶಯಗಳೂ ಪವಿತ್ರವೆನಿಸಿವೆ.
—ಕಾ.ಇ. ಪು. ೧೮೦ ಮತ್ತು ೪೦೨
27. ಜಂಗಮನಿಷ್ಠೆಯ ಈ ಶೀಲ ಸಮಯಾಚಾರವೆನಿಸುತ್ತದೆ.

ನಾಲ್ವತ್ತೈದನೆಯದು : ತನುವಿಗೆ ಕ್ರಿಯಾಚಾರವೇ ಆಶ್ರಯ, ಮನಕ್ಕೆ ಸುಜ್ಞಾನವೇ ಆಶ್ರಯ, ಆಚಾರವೆಂಬುದೇ ಗುರು, ಅರಿವೇ ಜಂಗಮಸ್ವರೂಪವೆಂದು ಭಾವಿಸಿ ಆಚರಿಸುವುದು ;

ನಾಲ್ವತ್ತಾರನೆಯದು : ಮುಂಜಾವು ಮತ್ತು ಸಂಜೆ ಸೂರ್ಯ–ಚಂದ್ರರ ದರ್ಶನ ಪಡೆಯುವ ಮುಂಚೆ ಶಿವಶರಣರ ಮುಖದರ್ಶನ ಮಾಡುವುದು 28 ;

ನಾಲ್ವತ್ತೇಳನೆಯದು : ತಾನು ಸೀಮೋಲ್ಲಂಘನೆ ಮಾಡಿ ಸ್ವಚ್ಛಂದವಾಗಿ ದೇಶಸಂಚಾರ ಮಾಡುವುದು ;

ನಾಲ್ವತ್ತೆಂಟನೆಯದು : ಹಿರಿಯ ಬಂಡೆಯ ಮೇಲೆ ಮನೆ ಕಟ್ಟಿ, ಹೊರಗೆ ಹೋಗುವಾಗ ಒಳಗೆ ಎತ್ತುಗಳನ್ನು ಕಟ್ಟಿ ಹೋಗುವುದು ;

ನಾಲ್ವತ್ತೊಂಬತ್ತನೆಯದು : ಲೋಕಧರ್ಮವನ್ನು ಚೆನ್ನಾಗಿ ವಿಚಾರಿಸಿ, ಅಂಥ ಲೋಕಾಚಾರಗಳನ್ನು ಅನುಸರಿಸದೆ, 'ತಾನು ಶಿವನ ಅಧೀನ, ಎಲ್ಲವನ್ನೂ ಶಿವನೇ ಮಾಡಿಸುವಾತ' ಎಂದು ದೃಢವಾಗಿ ನಂಬಿ ನಿಶ್ಚಿಂತನಾಗಿರುವುದು ;

ಐವತ್ತನೆಯದು : (ಪ್ರಾಣವೇ ಲಿಂಗವಾದ ತಾನು) ದಶವಾಯುಗಳ29 ಸೆಳೆತಕ್ಕೆ ಸಿಕ್ಕದಿರುವುದು;

ಐವತ್ತೊಂದನೆಯದು : ಕಾಮಾದಿ ಷಡ್‌ವರ್ಗಗಳ ಸುಳುಹನ್ನೇ ಇಲ್ಲದಂತೆ ಮಾಡುವುದು;

ಐವತ್ತೆರಡನೆಯದು : ಕಾಲಕಲ್ಪಿತಗಳನ್ನು ಒಪ್ಪದೆ ಬಿಡುವುದು30;

ಐವತ್ತುಮೂರನೆಯದು : ಎಚ್ಚರ–ಕನಸು–ನಿದ್ದೆಯಲ್ಲಿಯೂ ಲಿಂಗದ ನೆನಹಲ್ಲದೆ ಅನ್ಯವನರಿಯದಿರುವುದು31;

ಐವತ್ತುನಾಲ್ಕನೆಯದು : 'ಯತ್ರಜೀವಃ ತತ್ರಶಿವಃ' ಎನ್ನದೆ 'ಶರಣರಿದ್ದಲ್ಲಿಯೇ ಶಿವನಿರುವ' ಎಂಬ ವಚನದ ಅರ್ಥವ ಜನರಿಗೆ ಸಾಕ್ಷಾತು ತಿಳಿಹೇಳಿ ಅವರನ್ನು ಒಡಂಬಡಿಸುವುದು32;

ಐವತ್ತೈದನೆಯದು : ದಶವಿಧ ಪಾದೋದಕ,33 ಏಕಾದಶ ಪ್ರಸಾದಗಳ34 ತತ್ತ್ವಗಳನರಿದು ಆಚರಿಸುವುದು ;

ಐವತ್ತಾರನೆಯದು : ಸಕಲೇಂದ್ರಿಯಗಳನು ಲಿಂಗಮುಖವಾಗಿಸಿ, ಸಕಲಸುಖಭೋಗ ಪರಿಣಾಮವನು ಲಿಂಗಮುಖವಾಗಿ ಅನುಭವಿಸುವುದು ;

---

28. ಕೇಶಿರಾಜನು ಈ ಶೀಲದ ಬಗೆಯನ್ನು ಮನೋಜ್ಞವಾಗಿ ಹೇಳಿರುವನು :
    ಉದಯಾಸ್ತ ಮಾನಗಳನುಂ । ಮುದದಿಂದಲು ಚಂದ್ರಸೂರ್ಯ ಬೆಳಗೆಲ್ಲವನುಂ ॥
    ಮದನಹರ ಬೆಳಗಿನಲ್ಲಿರ । ಲದು ತಾ............ —ಶೀ. ಮ. ಕಂ. ಪ. ೭೦

29. ಪ್ರಾಣ, ಅಪಾನ, ವ್ಯಾನ, ಸಮಾನ, ಉದಾನ ಮತ್ತು ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ.

30. ಕಾಲಕಲ್ಪಿತಗಳಳಿದುಂ । ಮೇಲೆನಿಸುವ ಪುಣ್ಯಪಾಪವೆಂಬುವ ಹಳಿದುಂ ॥
    ಆಲಂಬವಿಲ್ಲದೆಂದುಂ । ಮೇಲೆನೆ ನಾಲ್ವತ್ತನಾಲ್ಕನೆಯದದು ಸಂದುಂ ॥ —ಶೀ. ಮ. ಕಂ. ಪ. ೬೬

31. ಜಾಗರ ಸ್ವಪ್ನ ಸುಷುಪ್ತಿಯ । ಲೇಗಂ ಶಿವಲಿಂಗವಲ್ಲದನ್ಯವನರಿಯದೆ ॥
    ಮೇಗನ್ಯ ನೆನಹದಿಲ್ಲನು । ರಾಗದಿ ನಾಲ್ವತ್ತೇಳನೆಯ ಶೀಲವದುಂ ॥ —ಶೀ. ಮ. ಕಂ. ಪ. ೬೯

32. ಎಲ್ಲರಲಿಯಿಪ್ಪ ಶಿವನೆನ । ಲಿಲ್ಲವು ಸದ್ಭಕ್ತರೊಳಗೆ ಇಹನೆಂದೆನಲುಂ ॥
    ಎಲ್ಲ ಶಾಸ್ತ್ರಗಳಲಱುಹಿಸ । ಬಲ್ಲುದೆ ಅಯಿವತ್ತಐದನೆಯ ಶೀಲಂ ॥ —ಶೀ. ಮ. ಕಂ. ಪ. ೭೭

    ಈ ಶೀಲದಲ್ಲಿ ವೀರಶೈವ ಮತತತ್ತ್ವಪ್ರಚಾರದ ದೃಷ್ಟಿ ಅಡಕವಾಗಿದೆ. ಚನ್ನಬಸವಣ್ಣನವರು ಹೇಳಿರುವ ೫೦ ತೆರದ ಆಚಾರಗಳಲ್ಲಿ ಇದು ೪೯ನೆಯದು-'ತನ್ನ ನಿಜ ವಿಚಾರವಂ ತಾ ಮರೆಯದೆ ಷಟ್‌ಸ್ಥಲವವರಿಗೆ ಅರುಹಿ ತನ್ನಂತೆ ಮಾಡುವುದು' : ಡಾ॥ ಹಳಕಟ್ಟಿ ಅವರು ಇಲ್ಲಿ 'ಷಟ್‌ಸ್ಥಲವ ಅವರಿಗೆ' ಎಂದು ಹೇಳಿರುವ ಪಾಠ ಸಮರ್ಪಕವೆನಿಸಿದೆ. ಆದರೆ ಡಾ॥ ಆರ್. ಸಿ. ಹಿರೇಮಠ ಅವರು 'ಷಟ್‌ಸ್ಥಲದವರಿಗೆ' ಎಂದು ತಿದ್ದಿ ಹೇಳಿರುವ ಪಾಠ ಸಂದರ್ಭೋಚಿತವೆನಿಸದು; ಷಟ್‌ಸ್ಥಲದವರೆಂದರೆ ಷಟ್‌ಸ್ಥಲಾಚರಣೆಯಲ್ಲಿದ್ದವರು, ಅವರಿಗೆ ತಿಳಿಹೇಳುವ ಪ್ರಸಂಗವೇ ಇಲ್ಲ. —ವ.ಶಾ.ಸಾ. ಭಾಗ-3, ಪೂರ್ವಾರ್ಧ; ಚ. ಬ. ವ. -ಭ. ಸ್ಥ. ವ. ೧೧೨

33. ೧) ಪಾದೋದಕ, ೨) ಲಿಂಗೋದಕ, ೩) ಮಜ್ಜನೋದಕ, ೪) ಸ್ಪರ್ಶನೋದಕ, ೫) ಅವಧಾನೋದಕ, ೬) ಆಪ್ಯಾಯನೋದಕ, ೭) ಹಸ್ತೋದಕ, ೮) ಪರಿಣಾಮೋದಕ, ೯) ನಿರ್ನಾಮೋದಕ, ೧೦) ಸತ್ಯೋದಕ.
    —ವ. ಶಾ. ಸಾ. ಭಾ–೩. ಉತ್ತರಾರ್ಧ, ಪು. ೧೩

34. ೧) ಗುರುಪ್ರಸಾದ, ೨) ಲಿಂಗಪ್ರಸಾದ, ೩) ಜಂಗಮಪ್ರಸಾದ, ೪) ಪ್ರಸಾದಿಯ ಪ್ರಸಾದ, ೫) ಸಮಯಪ್ರಸಾದ, ೬) ಭೋಜ್ಯಪ್ರಸಾದ, ೭) ಆಪ್ಯಾಯನಪ್ರಸಾದ, ೮) ಭಕ್ಷ್ಯಪ್ರಸಾದ, ೯) ಚೋಷ್ಯಪ್ರಸಾದ, ೧೦) ಲೇಹ್ಯಪ್ರಸಾದ, ೧೧) ತೃಪ್ತಿಪ್ರಸಾದ.
    —ಅದೇ, ಪು. ೫೮

ಐವತ್ತೇಳನೆಯದು : ತಾನು ನಿರಂತರ ಷಟ್‌ಸ್ಥಲಮಾರ್ಗಸಂಪನ್ನನೆನಿಸಿ[35] ಸಾವಧಾನದಿಂದ ಆಚರಿಸುವುದು ;

ಐವತ್ತೆಂಟನೆಯದು : ಬಯಸಿಬಂದುದು ಅಂಗಭೋಗ, ಬಯಸದೇ ಸುಲಭವಾಗಿ ತಾನಾಗಿ ಬಂದುದು ಲಿಂಗಭೋಗವೆಂದು ಅರಿದು ಅನುಭವಿಸುವುದು ;

ಐವತ್ತೊಂಬತ್ತನೆಯದು : ಮೂವತ್ತಾರು ವಿಧದ ಅರ್ಪಣವನರಿದು ಆಚರಿಸುವುದು ;
(ಈ ಶೀಲದ ಮಿಶ್ರಾರ್ಪಣ ವೀರಶೈವಾಚರಣೆಯಲ್ಲಿ ವಿಶಿಷ್ಟವಾಗಿದೆ[36]).

ಅರವತ್ತನೆಯದು : ಶೈವರಂತೆ ಸ್ಥಾವರಪೂಜೆಯನ್ನು ಆಹ್ವಾನ-ವಿಸರ್ಜನರೂಪದಲ್ಲಿ ಮಾಡದೆ ಅಂಗವೇ ಲಿಂಗವೆಂದು ತಿಳಿದು ಸದಾ ಲಿಂಗಾನುಭಾವಿಯಾಗಿರುವುದು ;

ಅರವತ್ತೊಂದನೆಯದು : ಹಠಯೋಗದ ಅಷ್ಟಮಹಾಸಿದ್ಧಿಗಳ[37] ಜರಿದು, ವೇದಾಂತ ಸಿದ್ಧಾಂತಗಳ ಬಿಟ್ಟು, ಇದಿರಿಟ್ಟು ದ್ವೈತಭಾವದಿಂದ ಪೂಜಿಸದೆ, ಅಂತರ್ಬಾಹ್ಯಗಳ ಮರೆದು, ಶಿವನೇ ತಾನಾಗಿ ಶಿವಲಿಂಗ ಸನ್ನಿಹಿತನಾಗಿ ಪೂಜಿಸುವುದು ;

ಅರವತ್ತೆರಡನೆಯದು : ಶಿವಕೃತ್ಯವಲ್ಲದೆ ಮನದಲ್ಲಿ ಮತ್ತೇನನೂ ನೆನೆಯದಿರುವುದು ;

ಅರವತ್ತುಮೂರನೆಯದು : ತನುವಿಡಿದು ತನುಗುಣವಿಲ್ಲದ ಪ್ರಾಣವಿಡಿದು, ಪ್ರಾಣದ ಗುಣವಿಲ್ಲದೆ ಮನದ ಸಂಕಲ್ಪ ವಿಕಲ್ಪವ ಕಳೆದು, ಅಂಗವೇ ಲಿಂಗವಾಗಿ ಮತ್ತೆ ಲಿಂಗವೇ ಅಂಗವಾಗಿ, ಮಹಾಘನ ಲಿಂಗವೇ ಪ್ರಾಣವಾಗಿ, ಪ್ರಾಣವೇ ಮಹಾಘನ ಲಿಂಗವಾಗಿರುವುದು ;

ಅರುವತ್ತುನಾಲ್ಕನೆಯದು : ಜಗವೆಲ್ಲವೂ ಶಿವಮಯವೆಂದು ತಿಳಿದು, ಜಗ ಮಿಥ್ಯವೆಂಬ ವೇದಾಂತ ವಾಕ್ಯವ ಜರಿದು ಶೀಲವೇ ಮಹಾಜ್ಞಾನವಾಗಿ, ಆ ಜ್ಞಾನವೇ ಶೀಲವಾಗಿ, ಭೇದಾಭೇದಗಳನಳಿದು ಅಭಿನ್ನಭಾವದ (ಐಕ್ಯದ) ಪರಮಾನಂದ ರೂಪನಾಗಿರುವುದು.

ಹೀಗೆ ಅರುವತ್ತುನಾಲ್ಕುಶೀಲಗಳನ್ನು ಆಚರಿಸಿ ಮೆರೆದ ಸೋಮನಾಥಾರಾಧ್ಯರ ಮೇಲ್ಮೆಯನ್ನು ಕವಿ ಸಂಧಿಯ ಕೊನೆಯಲ್ಲಿ ಮತ್ತೆ ನೆನೆಯುತ್ತಾನೆ :

ಸಾತಿಶಯವೆನಿಸಿ ರಂಜಿಸುವ ನಿರ್ಮಳ ಸುವಿ
ಖ್ಯಾತಮೆನಿಪರುವತ್ತುನಾಲ್ಕುಶೀಲದೊಳು ಬಿಡ
ದೋತು ನಿಜದಿಂದಾಚರಿಸುತೆ ಗುರುಕುಲಲಲಾಮಂ ಶುದ್ಧಸಚ್ಚರಿತ್ರಂ
ನೀತಿವಂತಂ ಸಕಲಸದ್ಭಕ್ತಜನಪಾರಿ
ಜಾತನೆನಿಸುವ ಪಾಲ್ಕುರಿಕೆಯ ಸೋಮಾರಾಧ್ಯ
ನೋತು ಪರಮಾನಂದಯುತನಾಗಿ ಪರಿಶೋಭಿಸುತಿರ್ದನತಿಪೆಂಪಿನಿಂ [38]

ವಚನಸಾಹಿತ್ಯದಲ್ಲಿ ಈ ಶೀಲಗಳು ಆಚಾರ, ವ್ರತ, ಕಲೆಗಳೆಂದು ಪಸುಗೆಗೊಂಡಿವೆ. ಚನ್ನಬಸವಣ್ಣನವರ ವಚನದಲ್ಲಿ ೫೦ ತೆರದ ಆಚಾರಗಳು[39], ಅಕ್ಕಮಹಾದೇವಿಯರ ವಚನದಲ್ಲಿ ಬಸವಣ್ಣನವರ ೫೨ ವಿಧದ ಇರವು ನಿರೂಪಿತವಾಗಿವೆ. ಇವೆಲ್ಲ ೬೪ ಶೀಲಗಳಲ್ಲಿ ಅಂತರ್ಭಾವಗೊಂಡಿವೆ.

ಶೀಲವು ವೀರಶೈವ ಸನ್ಮಾರ್ಗದಲ್ಲಿ ಲೌಕಿಕ ಹಾಗೂ ಪಾರಮಾರ್ಥಿಕವಾಗಿ ವಿಕಾಸಗೊಂಡು ಶರಣನ ಅಭ್ಯುದಯ, ನಿಶ್ರೇಯಗಳಿಗೆ ಮೂಲವೆನಿಸಿದೆ. ಶೀಲ ವೀರಶೈವಸಂಸ್ಕೃತಿಯ ಜೀವಾಳ. ಅದರಲ್ಲಿ ಧರ್ಮ, ಸಾಮಾಜಿಕತೆ, ಅಧ್ಯಾತ್ಮದ ನಡೆ-ನುಡಿಗಳು ಸಮಾವೇಶಗೊಂಡಿವೆ.

---

35. ಷಟ್‌ಸ್ಥಲಾಚರಣಸಂಪನ್ನರನ್ನು ಶರಣರು ಕೆಳಗಿನಂತೆ ಪರಿಗಣಿಸಿರುವರು:-೧) ಭಕ್ತಸ್ಥಲಸಂಪನ್ನ ಬಸವಣ್ಣ, ೨) ಮಹೇಶ್ವರಸ್ಥಲಸಂಪನ್ನ ಮಡಿವಾಳ ಮಾಚಯ್ಯ, ೩) ಪ್ರಸಾದಿಸ್ಥಲಸಂಪನ್ನ ಮರುಳಶಂಕರದೇವ, ೪) ಪ್ರಾಣಲಿಂಗಿಸ್ಥಲಸಂಪನ್ನ ಸಿದ್ಧರಾಮ, ೫) ಶರಣಸ್ಥಲಸಂಪನ್ನ ಚನ್ನಬಸವಣ್ಣ, ೬) ಐಕ್ಯಸ್ಥಲಸಂಪನ್ನ ಅಜಗಣ್ಣ. —ವ.ಶಾ.ಸಾ. ಭಾ, ೩, ಪೂರ್ವಾರ್ಧದಲ್ಲಿಯ ಚೆನ್ನಬಸವಣ್ಣನವರ ಅಂಕಿತದಲ್ಲಿರುವ ಈ ವಚನ ಪ್ರಕ್ಷಿಪ್ತವಾಗಿದೆ. ಚನ್ನಬಸವಣ್ಣನವರು ತಾವೇ 'ಶರಣಸ್ಥಲಕ್ಕೆ ಕಾರಣವಾದ ಚನ್ನಬಸವರಾಜೇಂದ್ರಂಗೆ' ಎಂದು ಆತ್ಮಪ್ರಶಂಸೆ ಮಾಡಿಕೊಂಡವರಲ್ಲ. ಸಂಪಾದನೆಯ ಯುಗದಲ್ಲಿ ಇಂಥ ಅನೇಕ ಪ್ರಕ್ಷಿಪ್ತ ವಚನಗಳ ರಚನೆಯಾಗಿದೆ. ಈ ಪ್ರಕ್ಷಿಪ್ತಗಳು ಸುಂದರ ಹಾಗೂ ತಾತ್ವಿಕವಾಗಿದ್ದರೂ ಮೂಲವಚನಕಾರನಿಗೆ ಅವರು ಎಂತಹ ದ್ರೋಹ ಬಗೆದರೆಂಬ ಅರಿವಿಲ್ಲದಿರುವುದು ಸೋಜಿಗ

36. ಭಕ್ತಾದಿ ಷಟ್‌ಸ್ಥಲರೂಪ ಅಂಗಗಳಲ್ಲಿ ಆಯಾ ಹಸ್ತ, ಶಕ್ತಿ, ಲಿಂಗ, ಮುಖ, ಪದಾರ್ಥ, ಭಕ್ತಿಗಳ ಸಂಬಂಧದಿಂದ ೩೬ ವಿಧ ಅರ್ಪಣಾವಧಾನ ಸಿದ್ಧಿಸುತ್ತದೆ.
—ವ.ಶಾ.ಸಾ. ಭಾ-೩, ಉತ್ತರಾರ್ಧ, ಪು. ೪೦-೪೧

37. ಅಣಿಮ, ಮಹಿಮೆ, ಗರಿಮೆ, ಲಘಿಮೆ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ.

38. ಪಾ.ಸೋ.ಪು. ಸಂಧಿ ೨. ಪದ್ಯ ೮೦

39. ವ.ಶಾ.ಸಾ. ಭಾ-೩, ಪೂರ್ವಾರ್ಧ, ಪು. ೬೩

**ಶೀಲದಲ್ಲಿ ನೈತಿಕದೃಷ್ಟಿ**

ಪರರ ಹೆಣ್ಣಿಗೆ ಕಣ್ಣಿಡದಿರುವುದು, ಪರದ್ರವ್ಯವನಪಹರಿಸದಿರುವುದು, ಸುಳ್ಳು ಹೇಳದಿರುವುದು, ಕೊಟ್ಟ ಮಾತಿಗೆ ತಪ್ಪದಿರುವುದು, ವಿಶ್ವಾಸಘಾತ ಮತ್ತು ಪ್ರಾಣಿಹಿಂಸೆಯ ಮಾಡದಿರುವುದು, ಸಕಲ ಜೀವಿಗಳಿಗೆ ಮತ್ತು ಸರ್ವರಿಗೆ ಹಿತವ ಮಾಡುವುದು–ಇವೆಲ್ಲವನ್ನು 'ಬಸವಭಾಷೆ'ಯಾಗಿ ಸೋಮನಾಥನು ಬಸವಚರಿತೆಯಲ್ಲಿ ಮನೋಜ್ಞವಾಗಿ ವರ್ಣಿಸಿದ್ದಾನೆ. ಸತ್ಯ ನಿಷ್ಠೆ ಮತ್ತು ಅಹಿಂಸೆಯ ಶೀಲಾಚರಣೆ ವೀರಶೈವವನ್ನು ವಿಶ್ವಧರ್ಮದ ಎತ್ತರಕ್ಕೆ ಒಯ್ಯುತ್ತವೆ.

ಶಿವಶರಣರ ವಿಚಾರಗಳಲ್ಲಿ ವಿಶ್ವಧರ್ಮದ ಹೆಗ್ಗುರುತುಗಳನ್ನು ಕಾಣುತ್ತೇವೆ[40A]. ಶರಣರು ನಾನಾತ್ವದಲ್ಲಿ ಏಕತ್ವವನ್ನು ಕಂಡ ಸಮದರ್ಶಿಗಳು. ಪ್ರತಿ ಜೀವಿಯಲ್ಲಿಯೂ ಪರಮಾತ್ಮನ ಸ್ವರೂಪವನ್ನು ಕಂಡ ಅವರು ದಯೆಯೇ ಪರಮ ಧರ್ಮವೆಂದು ಬಗೆದವರು. ತ್ರಿಕರಣಪೂರ್ವಕವಾದ ಅಹಿಂಸೆಯ ಶೀಲಾಚರಣೆ ವೀರಶೈವದಲ್ಲಿ ಹಾಸು–ಹೊಕ್ಕಾಗಿದೆ. ಶರಣರು ಯಾವುದೇ ಪ್ರಾಣಿಯ ಚರ್ಮವನ್ನು ಎಂದೂ ಮುಟ್ಟರು. ಚಮ್ಮಾವುಗೆಯನ್ನೂ ಮೆಟ್ಟಬಾರದೆಂಬ ಕಟ್ಟು-ನಿಟ್ಟು ಅವರದು. ಈ ಶೀಲದಲ್ಲಿ ಅಹಿಂಸೆ ಮತ್ತು ನಿರ್ಮಲತೆಯ ತತ್ತ್ವಗಳು ಅಡಕವಾಗಿವೆ. ಮಹಾತ್ಮ ಗಾಂಧೀಜಿಯವರು ಸತ್ತ ಪ್ರಾಣಿಗಳ ಚರ್ಮದ ವಸ್ತುಗಳನ್ನೇ ಬಳಸಬೇಕೆಂದು ಖಾದಿ ಉದ್ಯೋಗದಲ್ಲಿ ವಿಧಿಸಿದುದನ್ನು ನಾವಿಲ್ಲಿ ಗಮನಿಸಬೇಕು.

ಪ್ರತಿ ವನಸ್ಪತಿಯಲ್ಲಿಯೂ ಜೀವವನ್ನು ದಸರಯ್ಯನಂತಹ [40B] ಕರುಣಾಳು ಶರಣನು ಗುರುತಿಸಿ ಅವನ್ನು ನೋಯಿಸದಂತೆ ವರ್ತಿಸಿದ ಶೀಲದಲ್ಲಿ ಅಹಿಂಸೆಯ ವ್ರತದ ಪರಾಕಾಷ್ಠೆಯನ್ನು ಕಾಣುತ್ತೇವೆ.

ನೈತಿಕ ನೆಲಗಟ್ಟಿನ ಮೇಲೆ ರೂಪಿತವಾಗಿರುವ ವೀರಶೈವ 'ಪಂಚಾಚಾರಗಳು' ವ್ಯಕ್ತಿ ಮಾತ್ರವಲ್ಲದೆ ಸಮಾಜ ಮತ್ತು ದೇಶಕ್ಕೂ ಕೂಡ ಅನ್ವಯಿಸುತ್ತವೆ. ಈ ಐದು ಗುಣಗಳಿಂದ ಸಮಾಜ ಬಲಪಡುತ್ತದೆ ಮತ್ತು ದೇಶವು ಉನ್ನತಸ್ಥಿತಿಯನ್ನು ಹೊಂದುತ್ತದೆ.

ಮಾನವನು ನೈತಿಕಾಚರಣೆಯಲ್ಲಿ ನಡೆದು ತ್ರಿಕರಣಶುದ್ಧನಾಗಿ ವ್ಯಕ್ತಿಗತ ಉನ್ನತಿಯ ತುತ್ತತುದಿಯನ್ನು ಮುಟ್ಟುವ ಮೆಟ್ಟಲುಗಳೇ ಷಟ್‌ಸ್ಥಲ ಶೀಲಗಳು. ವ್ಯಕ್ತಿ-ಗತ ಸಂಸ್ಕಾರದ ಈ ರೀತಿ ಸಾಮೂಹಿಕ ಉತ್ಕ್ರಾಂತಿಗೆ ದಾರಿಮಾಡಿಕೊಡುತ್ತದೆ' ಎಂದು ಡಾ॥ ಹಳಕಟ್ಟಿ ಅವರು ಹೇಳಿರುವ ಮಾತನ್ನು ಬಸವಣ್ಣನವರ ಈ ವಚನ ಪುಷ್ಟೀಕರಿಸುತ್ತದೆ :

> ಭಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ; ಯುಕ್ತನೆನಿಸುವೆನಯ್ಯಾ ಮೆಲ್ಲಮೆಲ್ಲನೆ;
> ಸಾರಿ ಶರಣನೆನಿಸುವೆನಯ್ಯಾ ಮೆಲ್ಲಮೆಲ್ಲನೆ ! ಎಡಹುಗುಳಿಗಳ ದಾಂಟಿ ಬರಬರ ಲಿಂಗೈಕ್ಯನೆನಿಸುವೆನಯ್ಯಾ
> ಕೂಡಲಸಂಗಮದೇವಾ, ನಿಮ್ಮಿಂದಧಿಕನೆನಿಸುವೆನಯ್ಯಾ !

ಮಾನವನನ್ನು ಸುಸಂಸ್ಕೃತನನ್ನಾಗಿ ಮಾಡುವ ಶಕ್ತಿ ಈ ಶೀಲಾಚರಣೆಯಲ್ಲಿದೆ. ಮಾನವ ದೇವನಾಗುವುದು ಬೇಡ, ಅವನು ವಿವೇಕದಿಂದ, ಮಾನವೀಯತೆಯಿಂದ ವರ್ತಿಸಿದರೆ ಸಾಕು. ಜಾಗತಿಕ ಜೀವನದಲ್ಲಿ ಸುಖ–ಶಾಂತಿ ತಾನಾಗಿಯೇ ನೆಲಸುತ್ತವೆ. ಇಂತಹ 'ಉತ್ಕ್ರಾಂತಿಯ ತತ್ತ್ವಗಳನ್ನೊಳಗೊಂಡ ವೀರಶೈವ ವಿಶ್ವಧರ್ಮವಾಗಲು ಅರ್ಹತೆ ಪಡೆದಿದೆ' ಎಂದು 'ವಚನ ಪಿತಾಮಹ'ರು ಅಭಿಮಾನ ಪಡುತ್ತಾರೆ.

ಇಪ್ಪತ್ತನೆಯ ಶತಮಾನದಲ್ಲಿ ಈ ಶೀಲವನ್ನು ಅಥಣಿಯ ಪೂಜ್ಯ ಶ್ರೀ ಮುರುಘೇಂದ್ರ ಶಿವಯೋಗಿಗಳು ಆಚರಿಸಿ ಮಹಾತ್ಮರೆನಿಸಿದರು.

**ಸಾಮಾಜಿಕತೆ**

ಮಾನವ ಸಮಾಜಜೀವಿ. ವ್ಯಕ್ತಿ--ವ್ಯಕ್ತಿಗಳು ಕೂಡಿ ಸಮಾಜವನ್ನು ನಿರ್ಮಿಸುತ್ತಾರೆ. ಸಚ್ಚರಿತ್ರ ವ್ಯಷ್ಟಿಗಳಿಂದಲೇ ಉತ್ತಮ ಸಮಷ್ಟಿಯ ಸೃಷ್ಟಿಯಾಗುವುದು. ಸಮಾನತೆ, ಪರಸ್ಪರ ಸದ್ಭಾವ ಸಹಕಾರ, ವ್ಯಕ್ತಿಸ್ವಾತಂತ್ರ್ಯ ಸುಂದರ ಸಮೃದ್ಧ ಸಮಾಜದ ಬೆಳವಣಿಗೆಗೆ ಮೂಲಘಟಕವೆನಿಸಿವೆ. ವೀರಶೈವಸಮಾಜದಲ್ಲಿ ಸ್ತ್ರೀ–ಪುರುಷರಲ್ಲಿ ಅಸಮಾನತೆಯಿಲ್ಲ. ಪುರುಷನಂತೆಯೇ ಸ್ತ್ರೀಯೂ ಸಮಾನಶೀಲಳಾಗಿ ಪತಿಯೊಡನೆ ನೆರಳಿನಂತೆ ವ್ಯವಹರಿಸುವಳು. ಆಕೆ ಅಶುಚಿಯಲ್ಲ, ಅಬಲೆಯಲ್ಲ; ರುದ್ರಕನ್ನಿಕೆಯಂತೆ ಪವಿತ್ರಳು, ಧೀರಳು. ಶೀಲಮಯ ಸಾಮಾಜಿಕ ಜೀವನದಲ್ಲಿ ಕುಲದಿಂದ ಯಾರೂ ಶ್ರೇಷ್ಠ–ಕನಿಷ್ಠರಲ್ಲ.

---

40A. ಅ. ಗ. ಚ. ಪುಟ-೩೨

40B. ರಾಮಗೊಂಡೆಯ ದಸರಯ್ಯನೆಂಬ ಶರಣ 'ತನ್ನ ನಡೆನುಡಿಯಲ್ಲಿ ಸಚರಾಚರ ಪ್ರಾಣಿಗಳಿಗೆಲ್ಲ ಹಿತವಾಗಲಿ ಎಂದು ಆಶೀರ್ವದಿಸುತ್ತಾ ಸಂಚರಿಸುವನು. ಅವನು ಪ್ರಾಣಿಗಳಿಗೆ ಎಷ್ಟು ಮಾತ್ರವೂ ಹಿಂಸೆ ಮಾಡುತ್ತಿರಲಿಲ್ಲ. ಅವನು ಪ್ರಾಣಿಗಳಲ್ಲಿ ಮಾತ್ರವಲ್ಲ, ವೃಕ್ಷಾದಿಗಳಲ್ಲಿ ಸಹ ಅತ್ಯಂತ ಪ್ರೀತಿಯನ್ನು ವಹಿಸಿ ಗಿಡಗಳ ಟೊಂಗೆಗಳನ್ನು ಹೆಚ್ಚಾಗಿ ಬಗ್ಗಿಸನು, ಪುಷ್ಪಗಳನ್ನು ಎಂದೂ ಹರಿಯನು. ಅವನು ತೋಟಕ್ಕೆ ಹೋದಾಗ ಕೆಳಗೆ ಬಿದ್ದ ಎಲೆಹೂಗಳಿಂದ ಲಿಂಗಾರ್ಚನೆ ಮಾಡುವನು ಈ ಅವನ ಅಹಿಂಸಾವೃತ್ತಿಯಿಂದ ಅವನಲ್ಲಿ ಒಂದು ಅಗಾಧ ಶಕ್ತಿಯು ಉಂಟಾಗಿ ಚರಾಚರ ಪ್ರಾಣಿಗಳ ಸಾವುನೋವುಗಳನ್ನು ಕುಂದುಕೊರತೆಗಳನ್ನು ತಿಳಿಯುವಷ್ಟು ಅಂತಜ್ಞಾನವನ್ನು ಹೊಂದಿದನು'.

—ಅ. ಗ. ಚ. ಪು. ೧೩೫

ಸತ್ಯ ಶುದ್ಧ ಕಾಯಕದ ಶೀಲವಂತರೆಲ್ಲರೂ ಸರಿಸಮಾನರು. ಸಮಾನಶೀಲರೊಡನೆ ಸಹವಾಸ, ಸಹಭೋಜನ ಮೊದಲಾದ ವ್ಯವಹಾರ ಐಕ್ಯಭಾವನೆಯಿಂದ ನಡೆಯುತ್ತದೆ. 'ಅವನಾರವನೆನ್ನದೆ ಇವ ನನ್ನವ'ನೆಂಬ ಮಾನವೀಯ ಆತ್ಮೀಯತೆ ಪ್ರತಿಯೊಬ್ಬ ಶೀಲವಂತ ಶರಣನಲ್ಲಿ ಮನೆಮಾಡಿಕೊಂಡಿರುತ್ತದೆ. ಈ ಸಮಾನತೆ-ಸಮದರ್ಶಿತ್ವ ವೀರಶೈವನಲ್ಲಿಯ ವಿಶ್ವಬಂಧುತ್ವವನ್ನು ಎತ್ತಿ ತೋರುತ್ತದೆ. 'ವಿಶ್ವಬಂಧುತ್ವವಿದ್ದಲ್ಲಿ ಜಾತಿಭೇದ ಉಳಿಯಲಾರದು'[41]. ಜಾತಿಭೇದ ಸಾಮಾಜಿಕ ಐಕ್ಯತೆಯ ವಿಶ್ವಬಾಂಧವ್ಯದ ಪರಮ ಶತ್ರು. ಅದನ್ನು ಬೇರು ಸಹಿತ ಕಿತ್ತುಹಾಕಲು ಶೀಲವಂತ ಶರಣರು ತಮ್ಮ ಪ್ರಾಣವನ್ನೇ ಪಣಕಟ್ಟಿ ಹೋರಾಡಿದವರು. (ಈ ಐಕ್ಯಭಾವವಿಲ್ಲದೆ ಇಂದು ವೀರಶೈವ-ಲಿಂಗಾಯತ ಜನಾಂಗ ದುರ್ಬಲವಾಗಿರುವುದು ಶೋಚನೀಯ.)

ನೈತಿಕ ಮತ್ತು ಸಾಮಾಜಿಕ ದೃಷ್ಟಿಯ ಈ ವೀರಶೈವ ಶೀಲಗಳು ವಿಶ್ವಧರ್ಮದ ತತ್ತ್ವಗಳಾಗಿವೆ. ಉಳಿದ ಕೆಲವು ಮತೀಯ ತತ್ತ್ವಗಳನ್ನು ನಾವಿಂದು ದೇಶ-ಕಾಲ-ಪರಿಸ್ಥಿತಿಗಳಿಗನುಸರಿಸಿ ಆಚರಿಸುವುದು ಅಸಾಧ್ಯವೆನಿಸಿದೆ. ಆದರೆ ಜಾತ್ಯತೀತ (secular) ಭಾವನೆಯ ಸಚ್ಚಾರಿತ್ರ್ಯ-ಜೀವಾನುಕಂಪ-ಸಮಾನತೆಯ ಶೀಲಗಳು ಸಾರ್ವಜನೀನ ಹಾಗೂ ಸಾರ್ವಕಾಲಿಕವಾಗಿವೆ.

**ಗಣಾಚಾರದ ವೀರವೃತ್ತಿ**

ವೀರಶೈವ ಶಿವಜೀವೈಕ್ಯಬೋಧಿನಿವಿದ್ಯೆಯಲ್ಲಿ ಪಾರಮಾರ್ಥಿಕವಾಗಿ ರಮಿಸಿರುವುದರ ಜೊತೆಗೆ ಲೌಕಿಕವಾಗಿ ನಿರ್ಭಯನಾಗಿದ್ದು ಸಮಾಜದಲ್ಲಿ ನಡೆಯುವ ಅಸತ್ಯ ಅನ್ಯಾಯವನ್ನು ವಿರೋಧಿಸಲೇ ಬೇಕಾಗುತ್ತದೆ. ಈ ನೆಲದ ಮೇಲೆ ಬಲವಂತನೇ ಜೀವಿಸಬಲ್ಲ. ದುರ್ಬಲ ಜೀವಿಸಿರಲಾರ. 'ಕೆಲವೊಂದು ಸಮಾಜವು ಏಳಿಗೆ ಹೊಂದಬೇಕಾದರೆ, ಅದು ಬಹಳ ಮೆತ್ತಗಾಗಿದ್ದರೆ ಅಥವಾ ವಿನಮ್ರವಾಗಿದ್ದರೆ ಪ್ರಯೋಜನವಿಲ್ಲ. ಇದರ ದುರುಪಯೋಗವನ್ನು ದುಷ್ಟರು ಮಾಡಿಕೊಳ್ಳುವರು. ದುರ್ಬಲರನ್ನು ರಕ್ಷಿಸುವುದಕ್ಕಿಂತಲೂ ಅವರನ್ನು ಘಾತಮಾಡುವ ಪ್ರವೃತ್ತಿಯು ಸಮಾಜದಲ್ಲಿ ಹೆಚ್ಚು. ಸೌಮ್ಯಸಮಾಜ ಇದ್ದದ್ದಾದರೆ ದುಷ್ಟರು ಅದರ ದುರುಪಯೋಗಮಾಡಿಕೊಳ್ಳುವರು ಮತ್ತು ಇಂಥ ಸಮಾಜದ ಅಪಹಾಸ್ಯ ಮತ್ತು ನಿಂದೆಗಳನ್ನು ಮಾಡುವರು. ದುಷ್ಟನಿಗ್ರಹ ಮತ್ತು ಶಿಷ್ಟಪರಿಪಾಲನೆ ಈ ಗುಣಗಳು ಗಣಾಚಾರದಲ್ಲಿ ಸಮಾವೇಶಗೊಂಡಿವೆ'[42].

ವೀರಶೈವ ಹಳೆಯ ಅರ್ಥಹೀನ ಪರಂಪರೆಗಳನ್ನು ಮುರಿದು, ಮಾನವತಾ ವಿರೋಧಿ ಕರಾಳಶಾಸನಗಳನ್ನು ಶತಶತಮಾನಗಳಿಂದ ಪ್ರತಿಭಟಿಸಿ ಜೀವಂತವಾಗಿರುವ ಜನಾಂಗ. ಈ ಕ್ರಾಂತಿ ನಿರ್ಭಯತೆ-ವೀರತನವಿಲ್ಲದೆ ನಡೆಯದು. ಗಣಾಚಾರದಲ್ಲಿ ಈ ವೀರಭಾವದ ಕೆಚ್ಚು ತುಂಬಿದೆ. ಕೆಟ್ಟುದನ್ನು ನೋಡಿ ಸುಮ್ಮನಿರುವುದು ಅಹಿಂಸೆಯಲ್ಲ. ಅದು ಹೇಡಿತನ, ಕ್ಲೈಬ್ಯ, ನಿರ್ವೀರ್ಯತೆ. ಸತ್ಯವನ್ನು ರಕ್ಷಿಸಲು ಪ್ರಸಂಗದಲ್ಲಿ ಸಾಮಾಜಿಕರು ವೀರತನದಿಂದ ಹೋರಾಡಲೇ ಬೇಕಾಗುತ್ತದೆ. ವಿರೋಧಿಯನ್ನು ಕೊಲ್ಲುವ ಕಾಲವಿದಲ್ಲ. ಸಾಮಾಜಿಕ ಕ್ಷತಿಯನ್ನು ತಡೆಗಟ್ಟಲು ರಾಷ್ಟ್ರೀಯ ಪ್ರಜಾಸತ್ತಾತ್ಮಕ ವಿಧಾನಗಳಿಂದ ಹೋರಾಡುವುದು ಅಪರಾಧವೆನಿಸದು. ಸ್ವಾಭಿಮಾನವಿಲ್ಲದ ಸಮಾಜವೆಂದೂ ಜೀವಂತವಾಗಿರದು. (ಅಂಥ ದುರ್ಧರಪ್ರಸಂಗ ಅಭಿಮಾನಶೂನ್ಯರಾದ ನಮಗಿಂದು ಒದಗಿ ಬಂದಿದೆ.)

**ಶೀಲದಲ್ಲಿ ಡಾಂಭಿಕತೆ ಸಲ್ಲದು**

ವೀರಶೈವ ಶೀಲಾಚರಣೆಯಲ್ಲಿ ಡಾಂಭಿಕತೆಗೆ ಅವಕಾಶವಿಲ್ಲ. ಶೀಲದಲ್ಲಿ ಬಾಹ್ಯಶುದ್ಧಿಗಿಂತ ಆಂತರಿಕ ಪಾವಿತ್ರ್ಯಕ್ಕೆ ಹೆಚ್ಚಿನ ಮಹತ್ವವಿದೆ. ಶೀಲದ ಹೊಲಬನರಿಯದವರು ಲಿಂಗಬಾಹಿರರನ್ನು ಭವಿಯೆಂದು ಕರೆದು ಭ್ರಮಿತರಾಗುವರು. ಭವಿತನವಿರುವುದು ಹೊರಗಲ್ಲ, ಒಳಗೆ. ಕಾಮವೆಂಬ ಪಾಪಿ, ಮದವೆಂಬ ದ್ರೋಹಿ, ಮತ್ಸರವೆಂಬ ಹೊಲೆಯ, ಕ್ರೋಧವೆಂಬ ಕೈಸೂನೆಗಾರ ಇವೆಲ್ಲ ನಿಜವಾದ ಭವಿಗಳು. ಅವುಗಳನ್ನು ಮನದಲ್ಲಿಟ್ಟುಕೊಂಡು, ಹೊರಗೆ ಚಿಲುಮೆಯ ತಿಳಿನೀರಿನಲ್ಲಿ ಮಿಂದರೆ ಕೊಳೆ ಹೋಗದು[43].

> ಪುಷ್ಪ ಅಗ್ಗವಣಿ ಓಗರ ಅಡಿಗಡಿಗೆ ಮಿಾಸಲಾಗಿರಬೇಕೆಂಬುದು ಶೀಲವೆ
> ಪಂಚೇಂದ್ರಿಯ ಸಪ್ತಧಾತು ಅರಿಷಡ್ವರ್ಗಗಳನತಿಗಳೆಯದನ್ನಕ್ಕರ ॥[44]

'ಕಾಮಾದಿ ಆರು ಭವಿಗಳನ್ನು ತಮ್ಮ ಎದೆಯೊಳಗಿಂಬಿಟ್ಟುಕೊಂಡು, ಅಂಗದ ಮೇಲೆ ಅವರಿಗೆ ಲಿಂಗ ಉಂಟೋ ಇಲ್ಲವೊ'ಎಂಬುವವರು ಜಗಭಂಡರೆಂದು ಚನ್ನಬಸವಣ್ಣನವರು ಕಟುವಾಗಿ ಹೇಳಿರುವರು. ಆಂತರಿಕಶುದ್ಧಿ ಇಲ್ಲದೆ ಸುಮ್ಮನೆ ತೋರಿಕೆಗೆ,

> ಜಲವನೆ ಹೊಕ್ಕು ಕನ್ನವನಿಕ್ಕಿ ಅಗ್ಗವಣಿಯ ತಂದು ಮಜ್ಜನಕ್ಕೆ ನೀಡುವ
> ಹಗಲುಗಳ್ಳರ ಮೆಚ್ಚುವನೇ ನಮ್ಮ ಕೂಡಲ ಚನ್ನಸಂಗಮದೇವಾ ?[45]

ಎಂದು ಮಹಾಜ್ಞಾನಿ ಚನ್ನಬಸವಣ್ಣನವರು ಶೀಲದಣ್ಣಗಳನ್ನು ಮೂದಲಿಸಿ ನುಡಿದಿರುವರು.

---

41. ಅ.ಗ.ಚ. ಪು. ೩೪
42. ಅ.ಗ.ಚ. ಪು. ೩೦
43. ಚ.ಬ.ವ. ಮಾಹೇಶ್ವರಸ್ಥಲ, ವ.೪೯೬
44. ಅದೇ, ಪ್ರಸಾದಿ ಸ್ಥಲ : ಆಚಾರಲಿಂಗ ಸ್ಥಲ, ವ. ೫೫೪
45. ಚ.ಬ.ವ. ಪ್ರಸಾದಿಸ್ಥಲ, ಆಚಾರಲಿಂಗಸ್ಥಲ, ವ.೫೫೨

ಧರ್ಮಪ್ರಸಾರದ ಹೆಸರಿನಲ್ಲಿ ಸಿಕ್ಕವರಿಗೆ ಲಿಂಗವನ್ನು ದಕ್ಷಿಣೆಯ ಆಶೆಯಿಂದ ಕಟ್ಟುವ ಗುರುವರ್ಗವನ್ನೂ ಶರಣರು ಖಂಡಿಸದೆ ಬಿಟ್ಟಿಲ್ಲ.

**ಶೀಲದಲ್ಲಿ ಜ್ಯೋತಿಷ್ಯವಿಲ್ಲ**

ಮನುಷ್ಯನಿಗೆ ಜೀವನದಲ್ಲಿ ಸುಖ-ದುಃಖಗಳು, ಮಾನಾಪಮಾನಗಳು ಬರುವುದು ತಪ್ಪಿದ್ದಲ್ಲ. ಅಂಥ ಕಾಲದಲ್ಲಿ ಶೀಲವಂತ ಲಿಂಗಭಕ್ತರು ಎದೆಗುಂದದೆ ಬಂದ ಸುಖ-ದುಃಖಗಳನ್ನು ಲಿಂಗಯ್ಯನಿಗೆ ನಿವೇದಿಸಿ ಸಮಾಧಾನದಿಂದ ವರ್ತಿಸುವರು46. ಇಂತಹ ಸ್ಥಿತಪ್ರಜ್ಞ ಸ್ಥಿತಿಯನ್ನು ಜ್ಯೋತಿಷ್ಯದ ಮುಹೂರ್ತಗಳನ್ನು ನಂಬದ ಶರಣರಲ್ಲಿ ಮಾತ್ರ ಕಾಣುತ್ತೇವೆ.

**ಶೀಲದಲ್ಲಿ ಶಿವಯೋಗ**

ಶಿವಶರಣರ ಶೀಲವೊಂದು ಸಹಜಯೋಗ-ಶಿವಯೋಗ. ಅಲ್ಲಿ ಕಾಯವನ್ನು ದಂಡಿಸುವ, ಇಂದ್ರಿಯಗಳನ್ನು ಖಂಡಿಸುವ ಕಠೋರ ಆಚರಣೆ ಇಲ್ಲ. ಹಠಯೋಗ ಭೌತಿಕ ಅಂಗಸಾಧನೆಯಿಂದ ಸಿದ್ಧಿಗಳನ್ನು ಪಡೆಯುವ ಡೊಂಬರಾಟ. ಆದರೆ ಶಿವಯೋಗದ ಶೀಲ 'ಅಂತರಂಗವನ್ನು ಉಕ್ಕಿಸುತ್ತದೆ, ಅದರ ಕ್ರಿಯೆಗಳಲ್ಲಿ ಸೌಂದರ್ಯ ಸ್ವಾರಸ್ಯವು ತುಂಬಿ ತುಳುಕುತ್ತದೆ'46. ಶಿವಯೋಗದಲ್ಲಿ ಪಾತಂಜಲದರ್ಶನ ಹೇಳುವಂತೆ ಚಿತ್ತವೃತ್ತಿಗಳ ಅಸಹಜ ನಿರೋಧವಲ್ಲ, ಅವುಗಳನ್ನು ಸಹಜವಾಗಿ ಸದ್ವಿಷಯದತ್ತ ಹೊರಳಿಸುವ ಶೀಲದ ಅನುಸಂಧಾನವಿದೆ.

**ಶೀಲದಲ್ಲಿ ಅಧ್ಯಾತ್ಮ**

ಜಗತ್ತು, ಜೀವ, ಪರಮಾತ್ಮ ಈ ಮೂರರ ಪರಸ್ಪರ ಸಂಬಂಧವನ್ನು ತಾತ್ತ್ವಿಕವಾಗಿ ವಿವೇಚಿಸುವುದೇ ಅಧ್ಯಾತ್ಮ ದರ್ಶನ (Philosophy). ಮಾನಸಶಾಸ್ತ್ರ (Psychology), ಸಮಾಜಶಾಸ್ತ್ರ (Sociology), ನೀತಿಶಾಸ್ತ್ರ (Ethics) ಮತ್ತು ಲಲಿತಕಲಾತ್ಮಕ ಸೌಂದರ್ಯವಿಜ್ಞಾನ (Aesthetics)—ಇವೆಲ್ಲ ದರ್ಶನಕ್ಕೆ ಸಹಕಾರಿಯಾಗಿ ವಿಕಾಸಗೊಂಡಿವೆ47. ಇವೆಲ್ಲ ಮಾನವನ ಜೀವನದಲ್ಲಿ ಪರಸ್ಪರ ಪೂರಕವಾಗಿ ಬಗೆಗೊಂಡು ಸಂಸ್ಕೃತಿಯನ್ನು ರೂಪಿಸಿವೆ.

ತತ್ತ್ವಶಾಸ್ತ್ರ ಜಗತ್ತಿನ ಅಸ್ತಿತ್ವ ಮತ್ತು ಅದರೊಡನೆ ಮಾನವನ ಸಂಬಂಧವನ್ನು ತರ್ಕಬದ್ಧವಾಗಿ ವಿವೇಚಿಸುತ್ತದೆ. ೩೬ ತತ್ತ್ವಗಳನ್ನೊಳಗೊಂಡ ವೀರಶೈವದರ್ಶನದಲ್ಲಿ ಈ ದೃಶ್ಯಜಗತ್ತು ಸತ್ಯ ಸುಂದರ; ಅದು ಮಿಥ್ಯವಲ್ಲ. ಜೀವನು ಚೈತನ್ಯ ರೂಪ. ಅವನು ಜಗದಲ್ಲಿ ಬಾಳಿರುವುದಕ್ಕೂ ಒಂದು ಅರ್ಥವಿದೆ, ಪ್ರಯೋಜನವಿದೆ. ಜೀವನು ಜಗದ ದುಃಖವನ್ನು ದಾಟಿ, ಪರಮಾತ್ಮನೊಡನೆ ಕೂಡಿ ಪರಮಾನಂದವನ್ನು ಪಡೆಯುವ, ಸಂಕುಲವಾದ ಸಮಾಜದಲ್ಲಿ ಸಮಾಧಾನಿಯಾಗಿ ಬಾಳುವ ಬಗೆ ಶಿವಯೋಗ ದರ್ಶನದ ಶೀಲದಲ್ಲಿ ಪರಿಣಾಮಗೊಂಡಿದೆ.

ವೀರಶೈವಸಾಧಕನು ಪೂಜಿಸುವ ಇಷ್ಟಶಿವಲಿಂಗ ಶಿಲೆಯಲ್ಲ. ಅದು ಏಕೋದೇವ ವಿಶ್ವಾತ್ಮನ ಕುರುಹು. ಶಿವಲಿಂಗದ ಗೋಳಕದಲ್ಲಿ ವಿಶ್ವಾತ್ಮನ ನಿರಾಕಾರ ಸಾಕಾರಗೊಂಡು ಚುಳುಕಾಗಿದೆ : ದೃಷ್ಟಿಗೆ ಬೆಳಕಾಗಿದೆ. ಲಿಂಗಧಾರಿ ಸದಾಶುಚಿ. ಅವನಿಗೆ ಸೂತಕದ ಮೈಲಿಗೆಯ ಭಯವಿಲ್ಲ. ಅಂಗ-ಲಿಂಗ ಸಂಯೋಗದ ಸಾಮರಸ್ಯಕ್ಕೆ ಷಟ್‌ಸ್ಥಲಾಚರಣೆ ಸಾಧನವಾಗಿದೆ. ಕಾಯ-ಮನಗಳು ಬಹಿರಂತರವಾಗಿ ನಿರ್ಮಳವಾದಾಗಲೇ ಸಾಮರಸ್ಯದ ಪರಮಾನಂದ ಅನುಭವಕ್ಕೆ ಬರುವುದು. ಮಾನಸಿಕವಾಗಿ ಸುಶಾಂತನಾಗಿರಲು ವೀರಶೈವ ಸಾಧಕನಿಗೆ ಷಡುಸ್ಥಲಶೀಲ ಸಹಕಾರಿ.

ನಿತ್ಯವೂ ಕಾಯಕಗಳಲ್ಲಿ ನಿರತನಾಗಿರುವ ಸಾಮಾನ್ಯವೀರಶೈವನು ದಿನಕ್ಕೆ ಒಮ್ಮೆ ಸ್ನಾನಮಾಡಿ ಇಷ್ಟಲಿಂಗವನ್ನು ಪೂಜಿಸಿ, ಧ್ಯಾನಿಸಿ ಶಾಂತಿಯನ್ನು ಮನೋಸ್ಥೈರ್ಯವನ್ನು ಸಾಧಿಸಬಲ್ಲ. ನಿರಾಭಾರಿ ವಿಶೇಷ ವೀರಶೈವನು ತ್ರಿಕಾಲ ಪೂಜೆ ಮಾಡಿ, ಅಷ್ಟಾವರಣನಿಷ್ಠನಾಗಿ ಸ್ವಾಂತಃಸತ್ತ್ವ ಸಂಪಾದಿಸಿ ಸಮಾಜಸೇವೆಗೆ ಸಿದ್ಧನಾಗಬಲ್ಲ.

**ಶೀಲಾಚರಣೆಗೆ ಭಕ್ತಿಯೇ ಮೂಲ**

ಭಕ್ತಿ-ಜ್ಞಾನ-ವೈರಾಗ್ಯಗಳು ವೀರಶೈವದರ್ಶನದಲ್ಲಿ ಮುಪ್ಪುರಿಗೊಂಡಿವೆ. ವೈರಾಗ್ಯವಿಲ್ಲ, ಸಂನ್ಯಾಸವಲ್ಲ, ಜೀವನದ ಕಷ್ಟವನ್ನು ಕಂಡು ವಿಮುಖನಾಗುವ ನಿವೃತ್ತಿಯಲ್ಲ. ಅಲ್ಲಿದ್ದೇ ಜಯಿಸುವ ವೀರವೃತ್ತಿ. ವೀರಶೈವ ಉಂಡು ಉಪವಾಸಿಯಾಗಿರುವುದಕ್ಕೆ ಅವನು ಲಿಂಗಾರ್ಪಣಭಾವದಿಂದ ಸಕಲಸುಖವನ್ನು ಭೋಗಿಸುವ ಅನಾಸಕ್ತಿಯೋಗವೇ ಕಾರಣ. ಅಂತಹ ಅನಾಸಕ್ತಿ ಸರ್ವಾರ್ಪಣದ ಭಕ್ತಿಯಿಂದ ಮಾತ್ರ ಸಾಧ್ಯ. ಭಕ್ತಿಯ ಶೀಲ ಶಿವಪಥದ ನವಕ್ರಾಂತಿ.

ವೀರಶೈವ ಶರಣರು ಮಾಡಿದ ಕ್ರಾಂತಿ ಶೀಲಾಚರಣೆಯದು. ಹಿಂದಿನಿಂದ ಶತಶತಮಾನಗಳಿಂದ ಬಂದು ಮುಗ್ಧ ಜನರ ಶೋಷಣೆ ಮಾಡಿದ ವಾಮಾಚಾರದ ಹೇಯ ಮತ-ಪಂಥಗಳನ್ನು ದಿಟ್ಟತನದಿಂದ ಖಂಡಿಸಿ, ಸೌಮ್ಯರೂಪದ ಶಿವನೆಂಬ ಏಕೋದೇವನ ಉಪಾಸನೆಯನ್ನು ಸಾಮಾನ್ಯ ಮಾನವನೂ ಭಕ್ತಿಯಿಂದ ಮಾಡಿ ಮುಕ್ತಿಯನ್ನು ಪಡೆಯುವ ಸರ್ವ ಸುಲಭೋಪಾಯ

46. ಅ.ಗ.ಚ. ಪು.೫೦ 47. D. ph. pp. 340-343

ವನ್ನು ತೋರಿದ ಲೋಕೋಪಕಾರಿ ಮಹಾಂತರವರು. ವಚನಧರ್ಮದ ಮರ್ಮವನರಿತ 'ಎಂ. ಆರ್. ಶ್ರೀ'ಯವರು ವಚನ ಧರ್ಮದ ಉದಯದ ಬಗೆಗೆ ಹೇಳಿರುವುದನ್ನು ಸ್ಮರಣೆಗೆ ತಂದುಕೊಳ್ಳುವಾ[48]–

'ತತ್ತ್ವಜ್ಞಾನವೂ ತತ್ತ್ವಸಿದ್ಧಿಯೂ ಹಿಂದಕ್ಕೆ ಬಿದ್ದು ಆಚರಣೆಗಳಿಂದ ದುರಾಚಾರಗಳು ಪ್ರಬಲಿಸುತ್ತಿದ್ದಾಗ ಆ ಮತಗಳನ್ನು ಖಂಡಿಸಬೇಕಾದುದು ಕರ್ತವ್ಯ ; ವೈದಿಕಮತದ ಪ್ರಾಬಲ್ಯದಿಂದ ವರ್ಣ ವ್ಯತ್ಯಾಸಗಳು ಪಾಶುಪತದಲ್ಲಿ ಸೇರಿಕೊಂಡು ಹಿಂದಿನ ಆಶಯ ಗಳಿಗೆ ಭಂಗವನ್ನು ತರುತ್ತಿದ್ದಾಗ, ಆ ಪ್ರಯತ್ನಗಳನ್ನು ಮುರಿದು ಪರಿಶುದ್ಧಗೊಳಿಸುವುದು ಧರ್ಮ ; ಪರಮಾತ್ಮನ ಸೌಮ್ಯರೂಪದ ಉಪಾಸನೆಯನ್ನು ಬಿಟ್ಟು, ಆತನ ಕರುಣೆ ಅನುಗ್ರಹಗಳನ್ನು ಮರೆತು, ಅಡ್ಡದಾರಿಯಲ್ಲಿ ಕೊಂಡೊಯ್ಯುವ ಪಂಥಗಳನ್ನು ಅವು ಯಾವ ಹೆಸರಿನವಾಗಿದ್ದರೂ ಅವುಗಳನ್ನು ಖಂಡಿಸುವುದು ಮಹದುಪಕಾರ. ಆದುದರಿಂದ ವಚನಕಾರರು ಈ ಪಂಥಗಳ ಮೇಲೆ ದಾಳಿಯೆತ್ತಿ ಅವು ಗಳನ್ನು ನಿರ್ಮೂಲಗೊಳಿಸಿದರು. ಆ ಮತಗಳು ಆಸ್ತಿಕಮತಗಳೇ ಆಗಿದ್ದುದರಿಂದ ವಾದಮಾಡಿ ದೇವರಿದ್ದಾನೆಂದು ಹೊಸದಾಗಿ ಸ್ಥಾಪಿಸ ಬೇಕಾಗಿರಲಿಲ್ಲ. ಪರವಸ್ತುವಿನ ಸ್ವರೂಪವನ್ನು ತಿಳಿಸಬೇಕಾಗಿತ್ತು; ಬೀಭತ್ಸ ಕರ್ಮಗಳಿಂದ ಪರಮಾತ್ಮನು ಒಲಿಯುವುದಿಲ್ಲವೆಂದು ಹೇಳ ಬೇಕಾಗಿತ್ತು; ಆತನ ಅನುಗ್ರಹ ಸಂಪಾದನೆಗೆ ನಿಶ್ಚಲವಾದ ನಿಷ್ಕಲ್ಮಷವಾದ ಭಕ್ತಿ ಅತ್ಯಾವಶ್ಯಕವೆಂದು ತೋರಿಸಬೇಕಾಗಿತ್ತು; ಆತ್ಮ ಜ್ಞಾನದಿಂದ ಮುಕ್ತಿಯಾಗಬೇಕೆಂದು ಮನದಟ್ಟು ಮಾಡಿಸಬೇಕಾಗಿತ್ತು. ಆದುದರಿಂದ ಮೊದಲಿನ ವಚನಕಾರರು ಹೆಚ್ಚಾಗಿ ಸಿದ್ಧಾಂತದ ಗೋಜಿಗೆ ಹೋಗಲಿಲ್ಲ. ಸತ್ಕ್ರಿಯಾಚರಣೆ, ಅಂತರಂಗಶುದ್ಧಿ, ಶುದ್ಧಚಾರಿತ್ರ-ಇವುಗಳನ್ನೇ ಒತ್ತಿ ಒತ್ತಿ ಹೇಳಿ ಆಚಾರವೇ ಲಿಂಗ ವೆಂದು ತಳಹದಿಯನ್ನು ಭದ್ರಪಡಿಸಿದರು ; ಸ್ವಂತ ಆಚರಣೆಯಿಂದಲೂ ಪುರಾತನರ ಉದಾಹರಣೆಯಿಂದಲೂ ಭಕ್ತಿಯ ಹುಚ್ಚು ಹಿಡಿಸಿ ದರು, ಜ್ಞಾನಜ್ಯೋತಿಯನ್ನು ಬೆಳಗಿದರು.'

ವೀರಶೈವ ಶೀಲಾಚರಣೆಯಲ್ಲಿ ಭಕ್ತಿಗೆ ಪ್ರಾಮುಖ್ಯತೆ. ಐಕ್ಯದ ಪರಿಣಾಮವನ್ನು ಪಡೆಯಲು ಭಕ್ತಿ ಮೊದಲ ಸೋಪಾನ. ಷಟ್‌ಸ್ಥಲಾಚರಣೆಯೆಲ್ಲ ಭಕ್ತಿಮಯ. ವೀರಶೈವನಿಗೆ ಭಕ್ತಿಯ ಶೀಲವೇ ಭಂಡಾರ, ಅದುವೇ ಸರ್ವಸ್ವ. ಕೊಂಡ ಗುಳಿಯ ಕೇಶಿರಾಜನು ಹಾಡಿರುವುದನ್ನು ಕೇಳಬೇಕು :

ಭಕ್ತರಿಗೆ ಮೂಲಧನ ಶಿವ। ಭಕ್ತಿಯೆ ಭಕ್ತಂಗೆ ಕುಲವುಂ ಭಕ್ತಿಯೆ ಬಲವುಂ॥
ಭಕ್ತಿಯೆ ನೆಲಮುಂ ಭಕ್ತಿಯೆ ಚಲಮುಂ। ಭಕ್ತಿಯೆ ಭಂಡಾರ ಭಕ್ತಗೆ ಸಿರಿ ತಾನುಂ॥

ವೀರಶೈವತತ್ತ್ವಗಳಿಗೆ ಭಾಷ್ಯ ಬರೆದ ಆಚಾರ್ಯರೂ ಭಾಕ್ತಿಕ ಶೀಲಕ್ಕಿಂತ ಹೆಚ್ಚಿನ ಧರ್ಮ ಬೇರೆ ಇಲ್ಲವೆನ್ನುತ್ತಾರೆ :

ಅಕ್ಷಯಃ ಪರಮೋ ಧರ್ಮೋ ಭಕ್ತಿಲೇಶೇನ ಜಾಯತೆ।
ನಾಸ್ತಿ ತಸ್ಮಾತ್ ಪರೋ ಧರ್ಮಃ ಇತ್ಯಾಹುರ್ವೇದವಾದಿನಃ॥[49]

ಭಕ್ತಿಭಾವದ ಕ್ಷಣಮಾತ್ರ–ಅಣುಮಾತ್ರ ಪಾಪಾತ್ಮನ ಮನದ ಮೈಲಿಗೆಯನ್ನು ಕಳೆದು ಅವನನ್ನು ಪರಿಪೂತನನ್ನಾಗಿ ಮಾಡುತ್ತದೆ. ಅವನು ಒಮ್ಮೆ 'ಶಿವ ಶರಣು' ಎಂದರೆ ಸಾಕು. ಆರಕ್ಷರದ ಶಿವನಾಮವೇ ಮಂತ್ರ, ಮುಕ್ಕಣ್ಣನೇ ಪರಮದೈವ ವೆಂದು ನಂಬಿದ ಶೀಲವಂತ ಜೀವನ್ಮುಕ್ತ[50].

**ಶೀಲವಂತರ ಪರಂಪರೆ**

ಅರವತ್ತುನಾಲ್ಕು ಶೀಲಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಲೋಕಹಿತೈಷಿಗಳಾದವರ ಪರಂಪರೆಯಲ್ಲಿ ಪ್ರಮಥ ಗಣಂಗಳು, ೬೩ ಪುರಾತನರು, ನೂತನ ಗಣಂಗಳು, ನೂರೊಂದು ವಿರಕ್ತರು ಪರಿಗಣಿತರಾಗಿರುವರು. ಲಕ್ಕಣ್ಣ ದಂಡೇಶನು ಸ್ಮರಿಸಿದ ಕೆಲವು ನೂತನ ಗಣಂಗಳು ಶೀಲವಂತರೆಂದೇ ಪ್ರಸಿದ್ಧರಾಗಿರುವರು. ಹಾಲವಾಗಿಲ ಅಜ್ಜಪ್ಪ[51], ಕಿತ್ತನೆ ಲ್ಲಿಯ ತಿಮ್ಮಣ್ಣ[52], ಹುಳಿಯಂಗೆರೆಯ ಮಲ್ಲಯ್ಯ[53] ಇಂಥ ಶೀಲವಂತ ಶರಣರು ಶಿವಗಂಗೆಯ ಸಮೀಪದ ಗುಮ್ಮಳಾಪುರ ಎರಡ ನೆಯ ಕಲ್ಯಾಣವೆಂದು ಹೆಸರು ಪಡೆದುದು ಐತಿಹಾಸಿಕವಾಗಿದೆ. ವಿಜಯನಗರ[54] ತುರುಕರ ದಾಳಿಗೀಡಾದ ಮೇಲೆ ಅಲ್ಲಿಯ ಶರಣಸಂಕುಳವೆಲ್ಲ ದಕ್ಷಿಣಕಾಶಿಯೆನಿಸಿದ ಶಿವಗಂಗೆಯ ಹತ್ತಿರ ನೆಲಸಿದಂತೆ ಉಲ್ಲೇಖವಿದೆ. ಅಷ್ಟಾವರಣನಿಷ್ಠರಾದ ಗುಮ್ಮಣ-ಪೆಮ್ಮಣಯ್ಯಗಳು ಗುಮ್ಮಳಾಪುರವನ್ನು ಕೈಲಾಸಕ್ಕೆ ಮಿಗಿಲೆನಿಸಿ ಸಂಸ್ಥಾಪಿಸಿದರಂತೆ. ಅಲ್ಲಿ ೬೪ ಶೀಲಗಳನ್ನು ಆಚರಿಸಿದವರ ಮಾಹಾತ್ಮ್ಯ ಪುರಾಣೋಕ್ತವಾಗಿದೆ[55].

ಶಿವ ಶೀಲವಂತರ ಈ ಪರಂಪರೆಯನ್ನು ಇಪ್ಪತ್ತನೆಯ ಶತಮಾನದಲ್ಲಿಯೂ ಅಕ್ಷುಣ್ಣವಾಗಿಸಿದ ಅನೇಕ ಶಿವಯೋಗಿ ಗಳು, ಶಿವಶರಣರು ಲೋಕಪೂಜ್ಯರಾಗಿದ್ದಾರೆ. ಸೊಲ್ಲಾಪುರದ ಶ್ರೀ ವೀರೇಶ ಶಿವಶರಣರು, ಅಥಣಿಯ ಶ್ರೀ ಮುರುಘೇಂದ್ರ

---

48. ವ.ಧ.ಸಾ. (೧. ವಚನ ಧರ್ಮದ ಉದಯ, ಪು. ೪)
49. ಅಮೃತೇಶ್ವರ ಭಾಷ್ಯ (ವೀರಶೈವಾನಂದಿನಿ, ಸಂಪುಟ ೧. ಸಂಚಿಕೆ ೨, ನವಂಬರ ೧೯೦೬) 50. ಶೀ. ಮ. ಕಂ. ಪ. ೧೦೧
51. ಶಿ.ತ.ಚಿಂ. ಸಂಧಿ ೩೮, ಪ. ೧೧೭ 52. ಅದೇ, ಸಂ. ೩೮, ಪ. ೫೮ 53. ಅದೇ, ಸಂ. ೩೮, ಪ. ೫೭
54. 'ಚೆನ್ನಬಸವ ಪುರಾಣ'ದ ಕಾಲಜ್ಞಾನ ಸಂಧಿಯಲ್ಲಿ 'ಕಲ್ಯಾಣವಳಿಯಲಾ ಪ್ರಜೆಗಳಂ ತುರುಕ ರಾಕ್ಷಸರಾಗ ಸುಲಿವ' ಎಂಬ ಸನ್ನಿವೇಶ ವಿಜಯ ನಗರ ರಕ್ಕಸತಂಗಡಗಿಯ ಯುದ್ಧದ ನಂತರ ಹಾಳಾದುದನ್ನೇ ಸೂಚಿಸುತ್ತದೆ.
55. ಚ.ಬ.ಪು. ಸಂಧಿ ೬೨, ಪ. ೪೭

ಶಿವಯೋಗಿಗಳು, ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳು, ಹಾಲಕೆರೆಯ ಶ್ರೀ ಅನ್ನದಾನಿ ಮಹಾಸ್ವಾಮಿಗಳು, ಗಿರಿಯಾಪುರದ ಶ್ರೀ ಷ.ಬ್ರ. ಸದಾಶಿವ ಶಿವಾಚಾರ್ಯಸ್ವಾಮಿಗಳು, ಸಜ್ಜಲಗುಡ್ಡದ (ಜಿ. ವಿಜಾಪುರ) ಶರಣಮ್ಮ ತಾಯಿ, ಈ ಮಾಲಿಕೆಯಲ್ಲಿ ಸಂಸ್ಮರಣೀಯರು.

ಇಂದು ಈ ಶೀಲವಂತರ ಪರಂಪರೆಯನ್ನು ಆದರ್ಶಮಯವಾಗಿ ವಿನೂತನವಾಗಿ ಆಚರಣೆಯಲ್ಲಿ ತಂದಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾದ ತ್ರಿವಿಧ ದಾಸೋಹಮೂರ್ತಿ ಶ್ರೀ ನಿ. ಪ್ರ. ಶಿವಕುಮಾರ ಮಹಾಸ್ವಾಮಿಗಳವರು ನಮಗೆ ಪರಮ ಪೂಜ್ಯರಾಗಿರುವರು. ಶ್ರೀಗಳವರು ಶ್ರೀಕ್ಷೇತ್ರದ ಮಹಾದಾಸೋಹದಲ್ಲಿ ಲಿಂಗವಂತ-ಲಿಂಗಬಾಹಿರವೆಂಬ ಭಿನ್ನಭಾವವಿಲ್ಲದೆ ನಿತ್ಯವೂ ಸಾವಿರಾರು ಕನ್ನಡಿಗ ಬಡಮಕ್ಕಳಿಗೆ ಪ್ರಸಾದ ನೀಡುವುದಲ್ಲದೆ, ಉತ್ತಮ ಸಂಸ್ಕಾರ ಕೊಟ್ಟು ಅವರನ್ನು ವಿದ್ಯಾವಂತರನ್ನಾಗಿ ಮಾಡುತ್ತಿರುವರು. ಶ್ರೀಗಳವರ ಈ ವಿದ್ಯಾಪ್ರಸಾರ ಶೀಲದಲ್ಲಿ ಮಾನವೀಯ ಅನುಕಂಪದ ಪರಮಾದರ್ಶ ಅನುಕರಣೀಯವಾಗಿದೆ. ಗುಣವಂತರು, ವಿದ್ಯಾವಂತರು ಯಾರೇ ಇರಲಿ, ಅವರನ್ನು ಶ್ರೀಗಳವರು ಸಮಾದರಿಸುತ್ತಾರೆ. ಅವರಿಂದ ನಮ್ಮ ಸಮಾಜದ ಮಕ್ಕಳಿಗೆ ಸಂಸ್ಕೃತ ಮತ್ತು ತಾಂತ್ರಿಕ-ವೈಜ್ಞಾನಿಕ ವಿದ್ಯೆಯನ್ನು ಕೊಡಿಸಿ, ಅವರನ್ನು ಸ್ವಾವಲಂಬಿ ಹಾಗು ಕಾಯಕವಂತರನ್ನಾಗಿ ಮಾಡುತ್ತಾರೆ. ಲೋಕಹಿತಕ್ಕಾಗಿ ಅನೇಕ ವಿದ್ಯಾಮಂದಿರಗಳನ್ನು ನಿರ್ಮಿಸಿ ಅವನ್ನು ವ್ಯವಸ್ಥಿತಗೊಳಿಸಿದ ಶ್ರೀಗಳವರ ಕರ್ತೃತ್ವಶಕ್ತಿ ಅದ್ಭುತ ಪವಾಡವೆನಿಸಿದೆ. ವಿಶ್ವ ವಿಷಯಗಳ ಪರಿಜ್ಞಾನ ಪಡೆದ ಶ್ರೀಗಳವರ ಪ್ರತಿಭೆ ಅನ್ಯಾದೃಶ. ಇಂದು ಇಡಿಯ ಕನ್ನಡಕುಲವೇ ಶ್ರೀಕ್ಷೇತ್ರ ಸಿದ್ಧಗಂಗೆಯ ಶ್ರೀಗಳವರನ್ನು ಗೌರವಿಸುತ್ತಿರುವುದು ನಮಗೊಂದು ಹೆಮ್ಮೆಯ ಮಾತು.

## ಸಂದರ್ಭ ಸಾಹಿತ್ಯ


೧) ಅ.ಕೋ. : ಅಮರಕೋಶ : (ಅಮರಸಿಂಹನ ನಾಮಲಿಂಗಾನುಶಾಸನ) : ಸಂಪಾದನ : ಲೂಯಿ ರೈಸ್ : ಪರಿಷ್ಕೃತ ಸಂಸ್ಕರಣ : ಎನ್. ಬಾಲಸುಬ್ರಹ್ಮಣ್ಯ ; ಪ್ರಸಾರಾಂಗ, ಮೈ.ವಿ. ನಿಲಯ, ಮೈಸೂರು, ೧೯೭೦.

೨) ಅ.ಗ.ಚ. : ೭೭೦ ಅಮರಗಣಾಧೀಶ್ವರರ ಚರಿತ್ರೆಗಳು ; ಫ.ಗು. ಹಳಕಟ್ಟಿ, ವಿಜಾಪುರ, ೧೯೫೪.

೩) ಕಾ.ಇ. : ಕಾಶೀ ಕಾ ಇತಿಹಾಸ (ಹಿಂದಿ) : ಡಾ. ಮೋತೀಚಂದ, ಡಾಯರೆಕ್ಟರ್, ಪ್ರಿನ್ಸ್ ಆಫ್ ವೆಲ್ಸ್ ಮ್ಯೂಜಿಯಂ, ಹಿಂದೀ ಗ್ರಂಥರತ್ನಾಕರ, ಪ್ರಾ.ಲಿ., ಹೀರಾಬಾಗ, ಮುಂಬಯಿ-೪, ೧೯೬೨.

೪) ಶೀ.ಮ.ಕಂ. : ಶೀಲಮಹತ್ವದ ಕಂದ: ಕೊಂಡಗುಳಿ ಕೇಶಿರಾಜನ ಕೃತಿಗಳು: ಸಂ.ಡಾ.ಎಂ.ಎಂ. ಕಲಬುರ್ಗಿ, ಶ್ರೀ ಜ.ಗಂ. ಧರ್ಮಪ್ರಸಾರಕ ಮಂಡಲ, ಮೂರುಸಾವಿರ ಮಠ, ಹುಬ್ಬಳ್ಳಿ, ೧೯೭೮.

೫) ಚ.ಬ.ಪು. : ಚೆನ್ನಬಸವಪುರಾಣ (ವಿರೂಪಾಕ್ಷಪಂಡಿತ ಕೃತ): ಸಂ: ಶಿ.ಶಿ. ಬಸವನಾಳ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯಶಾಖೆ, ಧಾರವಾಡ, ೧೯೫೪.

೬) ಚ.ಬ.ವ. : ಚನ್ನಬಸವಣ್ಣನವರ ವಚನಗಳು: ಸಂ.ಡಾ.ಆರ್.ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೫.

೭) ಪಾ.ಸೋ.ಪು. : ಪಾಲ್ಕುರಿಕೆ ಸೋಮೇಶ್ವರ ಪುರಾಣವು (ತೋಂಟದ ಸಿದ್ಧಲಿಂಗ ಶಿವಯೋಗಿ ವಿರಚಿತ) : ಪರಿಷ್ಕರ್ತರು: ಎನ್.ಆರ್. ಕರಿಬಸವಶಾಸ್ತ್ರಿ, ವೀರಶೈವ ಗ್ರಂಥ ಪ್ರಕಾಶಿಕಾ ಗ್ರಂಥಾವಳಿ, ನಂ. ೮, ಮೈಸೂರು, ೧೯೧೨.

೮) ವ.ಧ.ಸಾ. : ವಚನಧರ್ಮಸಾರ : ಎಂ.ಆರ್. ಶ್ರೀನಿವಾಸಮೂರ್ತಿ, ಮೈ.ವಿ.ನಿಲಯ, ಮೈಸೂರು, ೧೯೪೬.

೯) ವ.ಶಾ.ಸಾ. : ವಚನಶಾಸ್ತ್ರಸಾರ (ಭಾಗ-೩, ಪೂರ್ವಾರ್ಧ-ವೀರಶೈವಾಚಾರಗಳು) ಸಂ. ಫ.ಗು. ಹಳಕಟ್ಟಿ, ಶಿವಾನುಭವ ಗ್ರಂಥಮಾಲೆ-೫೧ ; ವಿಜಾಪುರ, ೧೯೫೯.

೧೦) ವ.ಶಾ.ಸಾ. : ವಚನಶಾಸ್ತ್ರಸಾರ (ಭಾ. ೩. ಉತ್ತರಾರ್ಧ) ಸಂ. ಫ.ಗು. ಹಳಕಟ್ಟಿ, ಶಿ.ಗ್ರಂ.ಮಾ-೫೨. ೧೯೫೩.

೧೧) ಶಿ.ತ.ಚಿಂ. : ಶಿವತತ್ವಚಿಂತಾಮಣಿ (ಲಕ್ಕಣ್ಣದಂಡೇಶ ವಿರಚಿತ) : ಸಂ : ಎಚ್. ದೇವೀರಪ್ಪ ಮತ್ತು ಎಸ್. ಬಸಪ್ಪ, ಪ್ರಾಚ್ಯವಿದ್ಯಾಸಂಶೋಧನಾಲಯ, ಮೈ.ವಿ.ನಿಲಯ, ಮೈಸೂರು, ೧೯೬೦.

೧೨) ತ.ಸ. : ತನಸಂಗ್ರಹ : ಶ್ರೀ ಜಗದ್ಗುರು ಮೂರುಸಾವಿರ ಮಠ, ಹುಬ್ಬಳ್ಳಿ, ೧೯೧೪.

೧೩) ಹ.ಕೋ. : ಹಲಾಯುಧ ಕೋಶ (ಅಭಿಧಾನರತ್ನಮಾಲಾ): ಸಂ. ಜಯಶಂಕರ ಜೋಶಿ, ಸರಸ್ವತೀಭವನ, ವಾರಾಣಾಸಿ, ಶಾ.ಶಕ ೧೮೭೯.

೧೪) **D.Ph.:** A Dictionary of Philosophy: Edited by M. Rosenthal and P. Yudin; Progress Publishers, Moscow, 1967.

೧೫) **P.S.E.D.:** The Practical Sanskrit English Dictionary by Vaman Shivaram Apte, third Ed. 1924.

# ಕಾಯಕದ ಅರ್ಥಪ್ರಪಂಚ

—ಡಾ. ಸಿದ್ಧಯ್ಯ ಪುರಾಣಿಕ

'ಕಾಯಕ'ಶಬ್ದವು ಅರ್ಥಶಾಸ್ತ್ರದ, ಲೋಕನೀತಿಯ, ಸಾಮಾಜಿಕ ನ್ಯಾಯದ, ಆತ್ಮಾನುಶಾಸನದ, ವೃತ್ತಿಯ ಉದಾತ್ತೀಕರಣದ, ಸಮತಾಸ್ಥಾಪನೆಯ, ಲೌಕಿಕ ಪಾರಲೌಕಿಕಗಳ ಸಮನ್ವಯದ, ಸಹಜೀವನದ ಒಂದು ಅದ್ಭುತ ಅರ್ಥಪ್ರಪಂಚವನ್ನೇ ಒಳಗೊಂಡಿದೆಯಾಗಿ ಅದರ ಅರ್ಥ ಇಷ್ಟೇ ಎಂದು ನಿರ್ದಿಷ್ಟವಾಗಿ ಹೇಳಲಾಗದು. ತೋಡಿದಷ್ಟೂ ಸೆಲೆ ಚಿಮ್ಮುವ, ನೀರು ಹೊಮ್ಮುವ ಜಲಮೂಲದಂತೆ ಬರೆದಷ್ಟೂ ಬರೆಯ ಹಚ್ಚುವ ಶಬ್ದವಿದು. ಅದರ ಈ ಅಸೀಮವಾದ ಅರ್ಥಪ್ರಪಂಚದಲ್ಲಿ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದಂತೆ ಮಾತ್ರ ಇಲ್ಲಿ ವಿಷಯಮಂಥನ ಉದ್ದೇಶಿತ.

ಇಂದು ಕ್ಷಿಪ್ರಗತಿಯಲ್ಲಿ ಕರಗುತ್ತ ನಡೆದಿರುವ ಆಹಾರ, ಶಕ್ತಿ ಇತ್ಯಾದಿ ಜಾಗತಿಕ ಸಂಪನ್ಮೂಲಗಳ ಬಗ್ಗೆ ಕಳವಳ ಹೆಚ್ಚುತ್ತಲಿದೆ ಎಲ್ಲೆಲ್ಲೂ. ಇದು 'ಸಣ್ಣದೇ ಸುಂದರ'ವೆಂಬ ವಾದಕ್ಕೂ ಜನ್ಮವಿತ್ತಿದೆ. ಬೆಳವಣಿಗೆಯ ಪರಿಕಲ್ಪನೆಯೇ ಬುಡಮೇಲಾಗುತ್ತ ನಡೆದಿದೆ. ಕೇವಲ GNPಯ ಹೆಚ್ಚಳ ಇಲ್ಲವೆ ತಲಾ ವರಮಾನದ ಹೆಚ್ಚುಗೆ ಇವುಗಳಿಂದ ತೃಪ್ತವಾಗುವಂತಿಲ್ಲ ಬದಲಾಗುತ್ತಿರುವ ಬೆಳವಣಿಗೆಯ ಪರಿಕಲ್ಪನೆ. ದಟ್ಟದಾರಿದ್ರ್ಯದ ನಿರ್ಮೂಲನ, ಎಲ್ಲ ದುಡಿಯುವ ಶಕ್ತಿಯುಳ್ಳ ಸ್ತ್ರೀಪುರುಷರಿಗೆ ಸೂಕ್ತ ಸಂಬಳದೊಂದಿಗೆ ಉದ್ಯೋಗಾವಕಾಶ ಪ್ರದಾನ, ಸ್ವದತ್ತವೃತ್ತಿಯಲ್ಲಿರುವವರಿಗೆ ಕನಿಷ್ಠ ವೇತನ ಹಾಗೂ ಸಹ್ಯಜೀವನಗಳ ನಿರ್ಮಾಣ–ಇವೇ ಹೊಸ ಬೆಳವಣಿಗೆಯ ಗುರಿಗಳಾಗುತ್ತ ನಡೆದಿವೆ.

ಈ ಎರಡೂ ಅಂಶಗಳ ಸಂಯುಕ್ತ ವಿಶ್ಲೇಷಣೆ ಕೆಳಗಣ ನಿರ್ಣಾಯಕಾಂಶಗಳನ್ನು ನಮ್ಮ ಮುಂದಿರಿಸುತ್ತದೆ :

೧) ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮುಂಬರುವ ಕಾಲುಶತಮಾನದಲ್ಲಿ ತಲೆದೋರಲಿರುವ, ಮೂವರಲ್ಲಿ ಇಬ್ಬರಂತಿರುವ ಉದ್ಯೋಗಾನ್ವೇಷಿಗಳಿಗೆ ಕೃಷಿವಲಯದ ಹೊರಗೆ ಕೆಲಸ ನೀಡಬಲ್ಲ ಏಕೈಕ ಉಪಾಯವೆಂದರೆ ಸಣ್ಣ ಬಂಡವಾಳ ಬಯಸುವ ಸಣ್ಣ ಉದ್ಯಮಗಳಿಗೆ ಪ್ರೋತ್ಸಾಹ ನೀಡುವುದೇ ಆಗಿದೆ. ಯಾಕೆಂದರೆ ಭಾರತದಲ್ಲಿ ಸಣ್ಣಕೈಗಾರಿಕೆಗಳಿಗೆ ದೊಡ್ಡ ಕೈಗಾರಿಕೆಗಳಿಗೆ ಬೇಕಾಗುವ ಬಂಡವಾಳದಲ್ಲಿ ಶೇಕಡಾ ಆರರಷ್ಟು ಸಾಕು! ದೊಡ್ಡ ಉದ್ಯಮಗಳಲ್ಲಿ ಒಬ್ಬನಿಗೆ ಉದ್ಯೋಗ ಹುಟ್ಟಿಸಬೇಕಾದರೆ ಒಂದುಸಾವಿರ ಪೌಂಡುಗಳಷ್ಟು (ಇದು ೧೯೬೭ರ ಅಂದಾಜು ; ಈಗ ಇನ್ನೂ ಹೆಚ್ಚು ಬೇಕು) ಬಂಡವಾಳ ತೊಡಗಿಸಬೇಕಾಗುವುದೆಂದೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಒಬ್ಬನಿಗೆ ೭೦ ಪೌಂಡುಗಳಿಗಿಂತ ಹೆಚ್ಚು ಹಣ ತೊಡಗಿಸಬೇಕಾದ ಉದ್ಯಮಗಳು ಅನುಪಯುಕ್ತವೆಂದೂ E.F. Schumacher ತನ್ನ ಬಹು ಚರ್ಚಿತ ಕೃತಿ Industrialisation ದಲ್ಲಿ ಹೇಳಿದ್ದಾನೆ.

೨) ಎಷ್ಟೇ ಸಣ್ಣ ದೊಡ್ಡ ಉದ್ಯಮಗಳನ್ನು ಪ್ರಾರಂಭಿಸಿದರೂ ಸ್ವದತ್ತವೃತ್ತಿಗಳ ವಿಶಾಲವಲಯದ (self-employment sector) ವಿಪುಲ ಸಾಧ್ಯತೆಗಳನ್ನು ಬಳಸಿಕೊಳ್ಳದೆ ಹೋದರೆ, ಅದರಲ್ಲೂ ಸೇವಾಧಾರಿತ ವೃತ್ತಿಗಳ ಅಪಾರ ಸಾಧ್ಯತೆಗಳನ್ನು ಅಳವಡಿಸಿಕೊಳ್ಳದೆ ಹೋದರೆ ದುಡಿಯಬಲ್ಲ ಎಲ್ಲ ಗಂಡು ಹೆಣ್ಣುಗಳಿಗೆ ಕೆಲಸ ಕೊಡುವುದು ಸಾಧ್ಯವಾಗುವುದಿಲ್ಲ. ಉತ್ಪತ್ತಿ ಆಧಾರಿತ ವೃತ್ತಿಗಳಿಂದಲೇ ನಿರುದ್ಯೋಗ ವಿಮುಕ್ತಿ ಅಸಂಭವ.

ಎಲ್ಲರಿಗೆ ಉದ್ಯೋಗ ಹಾಗೂ ದಾರಿದ್ರ್ಯನಿವಾರಣೆಯ ಈ ಗುರಿಯನ್ನು ಗಾಂಧೀಜಿಯವರು ಗ್ರಾಮೋದ್ಯೋಗಗಳ ಪುನರುಜ್ಜೀವನದ ಮೂಲಕ ಮುಟ್ಟಲೆಳಸಿದರು; ಬಸವಣ್ಣನವರು ಕಾಯಕ–ಕೇಂದ್ರಿತ ಕಾಯಕಸಮಾಜವನ್ನು* ಸ್ಥಾಪಿಸುವುದರ ಮುಖಾಂತರ ಈ ಗುರಿ ಸಾಧಿಸಬಯಸಿದರು. ಈ ದೇಶದ ಅರೆ ನಿರುದ್ಯೋಗ, ಪೂರ್ಣ ನಿರುದ್ಯೋಗ ಹಾಗೂ ಭೀಕರ ಬಡತನಗಳ ದ್ವಿಸಮಸ್ಯೆಗಳ ಬಗ್ಗೆ ಬಸವಣ್ಣನವರ ಹಾಗೂ ಬಾಪೂಜಿಯವರ ನಿಲವು ಹಾಗೂ ಧೋರಣೆಗಳಲ್ಲಿ ಆಶ್ಚರ್ಯಕರವಾದ ಸಾಮ್ಯಗಳಿವೆ. ಕೆಲವು ವ್ಯತ್ಯಾಸಗಳೂ ಇವೆ. ಇವೆಲ್ಲವುಗಳನ್ನು ಯಾವ ಅಭಿನಿವೇಶನಗಳಿಗೂ ಒಳಗಾಗದೆ ವಿಶ್ಲೇಷಿಸುವುದು ಅತ್ಯಗತ್ಯವಾದುದೆಂದು ಬೇರೆ ಹೇಳಬೇಕಾಗಿಲ್ಲ. ಇದು ಈ ಪರಿಮಿತ ಪ್ರತಿಪಾದನೆಯ ವ್ಯಾಪ್ತಿಯಲ್ಲಿ ಅಳವಡಿಸಲಾಗದ ವಿಷಯ.

---

* ಸಹಕಾರಸಮಾಜದ ಸ್ಥಾಪನೆಯೇ ನಮ್ಮ ಗುರಿಯೆಂದೊಮ್ಮೆ, ಸಮಾಜವಾದೀ ಸ್ವರೂಪದ ಸಮಾಜದ ಸ್ಥಾಪನೆಯೇ ನಮ್ಮ ಗುರಿಯೆಂದೊಮ್ಮೆ, ಸಮಾನತೆಯ ಸಮಾಜದ ಸ್ಥಾಪನೆಯೇ ನಮ್ಮ ಗುರಿಯೆಂದೊಮ್ಮೆ ನಾನಾ ವಿಧವಾಗಿ ನಮ್ಮ ಗುರಿಯ ನಿರೂಪಣೆ ನಮ್ಮ ಧುರೀಣರಿಂದ ಆಗಿದೆ. ಇವೆಲ್ಲವುಗಳಿಗಿಂತ 'ಕಾಯಕ ಸಮಾಜ'ದ ಸ್ಥಾಪನೆಯೇ ನಮ್ಮ ಗುರಿಯೆಂದು ಸಾರುವುದು ಅತ್ಯಂತ ಅರ್ಥಪೂರ್ಣವಾದೀತು. —ಲೇಖಕ

ಆದರೂ, ಉದಾಹರಣೆಗಾಗಿ ಒಂದು ಅಂಶವನ್ನು ವಿವರಿಸಬಹುದು. ಗಾಂಧೀಜಿಯವರು ಮಿಗುತಾಯಗಳ (surpluses) ಸಮಸ್ಯೆಯನ್ನು ಮಿಗುತಾಯಗಳೇ ಇಲ್ಲದಂತೆ ಮಾಡುವುದರ ಮೂಲಕ ಪರಿಹರಿಸ ಬಯಸಿದರು. ಆದರೆ ಬಸವಣ್ಣನವರು ಮಿಗುತಾಯಗಳನ್ನು ಸಮಾಜದ ಸ್ಥಳೀಯ ಘಟಕಕ್ಕೆ ದಾಸೋಹಾರ್ಥವಾಗಿ ಅರ್ಪಿಸುವುದರ ಮೂಲಕ–ಮಾರ್ಕ್ಸನಂತೆ ಸ್ಟೇಟಿಗೆ ಸಲ್ಲಿಸುವುದರ ಮೂಲಕ ಅಲ್ಲ–ಈ ಸಮಸ್ಯೆಗೆ ಪರಿಹಾರ ಹುಡುಕಿದರು. ಎಲ್ಲ ವಿಚಾರವಾದಿಗಳಿಗೆ, ಸಿದ್ಧಾಂತಿಗಳಿಗೆ ಇಲ್ಲಿ ಒಂದು ಹೊಸ ಹೊನ್ನಿನ ಗಣಿಯಿದೆ. ಇಷ್ಟವಿದ್ದವರು ಇದನ್ನು ಆಳವಾಗಿ ಪರಿಶೋಧಿಸಲಿ ! ಇಂದು ಜಗತ್ತಿನ ಎಲ್ಲೆಡೆಗಳಲ್ಲಿ ಉಳ್ಳವರ ಇಲ್ಲದವರ ನಡುವಣ ಕಂದಕವನ್ನು ಇಲ್ಲಗೊಳಿಸಬಲ್ಲ, ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳಲ್ಲಿ ಸಮತೋಲನವನ್ನು ಸಾಧಿಸಬಲ್ಲ, ಶ್ರೀಮಂತ ಸಮಾಜ ಹಾಗೂ ಬಡ ಸಮಾಜಗಳ ನಡುವಣ ಅಸಮತೆಗಳನ್ನು ಹೋಗಲಾಡಿಸಬಲ್ಲ, ತಂತ್ರಜ್ಞಾನ ಹಾಗೂ ಬರಿಹೊಟ್ಟೆಗಳೆರಡರ ಬೇಡಿಕೆಗಳನ್ನೂ ಪೂರೈಸಬಲ್ಲ ನೂತನ ಆರ್ಥಿಕಾಭಿವೃದ್ಧಿ ವಿಧಾನವೊಂದನ್ನು ಕಂಡುಕೊಳ್ಳುವ ಮಹಾಮಣಿಹದಲ್ಲಿ ತೊಡಗಿದ್ದಾರೆ ಧೀಮಂತರೆಲ್ಲ. ಅವರು ಕಾಯಕದ ಅರ್ಥಪ್ರಪಂಚದತ್ತಲೂ ಕಣ್ಣು ಹೊರಳಿಸುವುದು ಕ್ಷೇಮಕಾರಿ.

ಬಸವಣ್ಣನವರ ಹೆಚ್ಚುಗೆ ಹಿರಿಮೆಗರಿಮೆಗಳಿರುವುದೇ ಇಲ್ಲಿ. ಇನ್ನಾವ ಪ್ರವಾದಿಯ ಗಮನವನ್ನೂ ಸೆಳೆಯದ ಸಮಾಜದ ಆರ್ಥಿಕಅಸ್ತಿವಾರದತ್ತ ಗಮನ ಹರಿಸಿದವರಲ್ಲಿ ಅವರು ಮೊದಲಿಗರು, ಮೂಲಿಗರು. ಸಮಾಜದ ಆರ್ಥಿಕ ತಳಹದಿ ಭದ್ರವಾಗಿರದಿದ್ದರೆ, ಸರ್ವಸುಖಸಾಧಕವಾಗಿರದಿದ್ದರೆ, ಸಮಕಾಲೀನ ಸವಾಲುಗಳನ್ನು ಎದುರಿಸಿ ನಿಲ್ಲಬಲ್ಲುದಾಗಿರದಿದ್ದರೆ ಎಂಥ ಆದರ್ಶಸಾಮಾಜಿಕವ್ಯವಸ್ಥೆಯೂ ಬಹುಕಾಲ ಬಾಳಲಾರದೆಂಬುದು ಬಸವಣ್ಣರವರ ಅಚಲನಿಲುವಾಗಿದ್ದಿತು. ಅವರ ಳಿಖಿಲನೆಯ ವಚನ ಸಾರಿ ಹೇಳುತ್ತಿದೆ : 'ಆವ ನೇಮವಾದರೂ ಹೇಮವಿಲ್ಲದಂಗೈಸಬಹುದೆ?'

ಸಂಪತ್ತು ಸ್ವಭಾವತಃ ಕೆಡುಕೇನಲ್ಲ. ಸಮಾಜದ ಸ್ನಾಯುಗಳಲ್ಲಿ ರಕ್ತವಾಗಿ ಸಂಚರಿಸಿ ಅದರ ಸ್ವಾಸ್ಥ್ಯರಕ್ಷಣೆ ಮಾಡುವ ಅದು ಕೆಡುಕು ಹೇಗಾದೀತು ? ಸಮಾಜದ ಸಮಗ್ರ ದೇಹದಲ್ಲೆಲ್ಲ ಸಂಪತ್ತಿನ ಶೋಣಿತ ಸದಾ ಸಂಚರಿಸುತ್ತಲಿದ್ದರೇ ಸಮಸ್ತ ಶರೀರಕ್ಕೆ ಆರೋಗ್ಯ. ಅದರ ಯಾವುದೇ ಒಂದು ಭಾಗದಲ್ಲಿ ರುಧಿರಸಂಚಾರ ನಿಂತುಹೋದರೂ ಆ ಭಾಗ ಅಸ್ವಸ್ಥವಾಗುತ್ತದೆ. ಬರಬರುತ್ತ ಸಮಾಜದ ಸಮಗ್ರ ಶರೀರವೇ ಅಸ್ವಸ್ಥವಾಗುವಂತೆ, ದುರ್ಬಲವಾಗುವಂತೆ ಮಾಡುತ್ತದೆ.

ಈ ಬಹಳ ಬಳಕೆಯಾಗಿರುವ ದೃಷ್ಟಾಂತವನ್ನು ಇನ್ನಷ್ಟು ಹಿಗ್ಗಿಸ ಹೋಗದೆ ಇಷ್ಟನ್ನು ಮಾತ್ರ ಖಚಿತವಾಗಿ ಹೇಳಬಹುದು : ಯಾವುದೇ ಸಾಮಾಜಿಕ ವ್ಯವಸ್ಥೆಯಿರಲಿ, ಸಂಪತ್ತಿನ ಉತ್ಪಾದನ–ವಿತರಣೆ ವ್ಯವಸ್ಥೆಯೇ ಆಗಿರಲಿ–ಅದು ಕೆಲವರ ಕೈಯಲ್ಲಿ ಸಂಪತ್ತಿನ ಕೇಂದ್ರೀಕರಣಕ್ಕೆ ನೆರವಾಗಿ ಬಹುಜನರನ್ನು ಬಡತನದಲ್ಲಿ ಇರಿಸುವುದಕ್ಕೆ ಕಾರಣವಾದರೆ ಅದು ಮುಂದುವರಿಯುವುದೇ ಬೇಡ ; ಮುಂದುವರಿದರೆ ಕೇಡು. ಶೋಷಣೆಯ ಸಾಧನವಾದಾಗಲೇ ಸಂಪತ್ತು ವಿಪತ್ತಾಗುವುದು : ಒಳಿತನ್ನು ಸಾಧಿಸಬಲ್ಲ ಅದೇ ಕೆಡುಕಾಗಿಬಿಡುವುದು. ಅದು ಶೋಷಣೆಯ ಅಸ್ತ್ರವಾಗಬಾರದು ; ಉತ್ತಮೀಕರಣದ, ಜನಕಲ್ಯಾಣದ, ಸರ್ವರ ಸುಖದ ಸಾಧನವಾಗಬೇಕು.

ಇದನ್ನರಿತೇ ಬಸವಣ್ಣನವರು ಘೋಷಿಸಿದರು : 'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ ! ಕೂಡಲಸಂಗನ ಶರಣರಿಗಲ್ಲದೆ ಮಾಡುವ ಅರ್ಥವು ವ್ಯರ್ಥ ಕಂಡಯ್ಯ !' (ವಚನ ೨೨೩) ನಾವೇ ಸಂಪತ್ತನ್ನು ಸತ್ಕಾರ್ಯಕ್ಕೋ ದುಷ್ಕಾರ್ಯಕ್ಕೋ ಉಪಯೋಗಿಸುವವರು. ಆದುದರಿಂದ ನಾವೇ ಬಿತ್ತಿದಂತೆ ಬೆಳೆದುಕೊಳ್ಳುವವರು. ಸಮಾನವಿಭಾಗವಿಲ್ಲದಿದ್ದರೆ ಹೋಗಲಿ. ನ್ಯಾಯ–ನೀತಿ ಸಮ್ಮತವಾಗುವ ರೀತಿಯಲ್ಲಿ ಸಂಪತ್ತಿನ ವಿತರಣೆಯ ಬೀಜವನ್ನು ಬಿತ್ತದಿದ್ದರೆ ನಾವೆಂತು ಸರ್ವೋದಯದ ಬೆಳೆಯನ್ನು ಬೆಳೆದುಕೊಳ್ಳಬಲ್ಲೆವು ? ಹಾಗೂ, ಎಲ್ಲರೂ ತಂತಮ್ಮ ಶಕ್ತ್ಯಾನುಸಾರ ಒಂದಿಲ್ಲೊಂದು ರೀತಿಯಲ್ಲಿ ಸಂಪತ್ತಿನ ಉತ್ಪಾದನೆಯಲ್ಲಿ ತೊಡಗದಿದ್ದರೆ ಎಲ್ಲರಿಗೂ ನ್ಯಾಯಸಮ್ಮತ ರೀತಿಯಲ್ಲಿ ಹಂಚಲು ಸಂಪತ್ತು ಎಲ್ಲಿಂದ ಬರುವುದು ?

ಶರೀರಶ್ರಮದ ಮೂಲಕ ಸಂಪತ್ತಿನ ಉತ್ಪಾದನೆಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸದ ಯಾರಿಗೂ ಬಸವಣ್ಣನವರ ಕಾಯಕಸಮಾಜದಲ್ಲಿ ಸ್ಥಾನವಿಲ್ಲ. ಅಂತೆಯೇ, ಸಮಾಜದ ದುರ್ಬಲವರ್ಗಗಳ ಹಿತಕ್ಕಾಗಿ ತಮ್ಮ ಮಿಗುತಾಯಗಳನ್ನು ಸ್ವಸಂತೋಷದಿಂದ ಅರ್ಪಿಸದವರಿಗೂ ಸ್ಥಾನವಿಲ್ಲ. ಅನ್ಯರ ದುಡಿಮೆಯ ಮೇಲೆ ಬದುಕಿರುವವನಂತೂ ಬಹಿಷ್ಕೃತ ಈ ಸಮಾಜದಿಂದ. ಇಂತು ಬಸವಣ್ಣನವರ ಕಾಯಕಸಮಾಜವು ಅನುತ್ಪಾದಕತೆಯ ವಿರುದ್ಧ, ಸಂಪತ್ತಿನ ಕೇಂದ್ರೀಕರಣಗೈದು ಅದನ್ನು ಶೋಷಣೆಯ ಶಸ್ತ್ರವನ್ನಾಗಿ ಬಳಸುವುದರ ವಿರುದ್ಧ, ಪರೋಪಜೀವಿತ್ವದ ವಿರುದ್ಧ ಸಮರವನ್ನೇ ಸಾರಿದೆ. ಇನ್ನೂ ಮುಂದೆ ಸಾಗಿ ಅದು ಎಲ್ಲರಿಗೂ ಒಂದಿಲ್ಲೊಂದು ಪವಿತ್ರಕಾಯಕ ಒದಗಿಸುತ್ತದೆ : ಬಡತನದ ಬೇರುಗಳನ್ನೇ ಕತ್ತರಿಸುತ್ತದೆ. ದುರಾಶೆಗೆ ಸಿಕ್ಕಿ ಸಮಾಜಘಾತಕವಾಗುವ ಸಂಪತ್ತನ್ನು ಶೋಷಣೆಗೆ ತುತ್ತಾಗಿ ತತ್ತರಿಸುವವರಿಗಾಗಿ ಉಳಿಸಿ ಉಪಯೋಗಿಸುತ್ತದೆ.

ಗಾಂಧೀಜಿಯವರು ಹೇಳಿಲ್ಲವೆ: 'There is enough in this world for every body's need, not for his greed !'

'ದಾನ', 'ಸಹಾಯ' ಮುಂತಾದ ಔದಾರ್ಯದ ವಿಕೃತರೂಪಗಳು ಕೊಟ್ಟವರಿಗೂ ಪಡೆದವರಿಗೂ ಕೂಡಿಯೇ ಕೆಡುಕು ಮಾಡಿವೆ. ಅವು ಸ್ವಾವಲಂಬನೆಯ ಮೂಲಕ್ಕೇ ಕುಠಾರವಾಗಿ ಪಡೆದವರಲ್ಲಿ ಪರಾವಲಂಬನೆಯನ್ನೂ ಪರಾಭೂತ ಮನೋಭಾವವನ್ನೂ ಹುಟ್ಟಿಸುತ್ತವೆ. ಅವು ಸಮಾಜಕ್ಕೆ ತಾವೇನನ್ನೂ ನೀಡದೆ ಸಮಾಜದ ಸಂಪತ್ತಿನಲ್ಲಿ ಪಾಲು ಪಡೆಯುವ ಅನುತ್ಪಾದಕ ಜೀವಿಗಳ ಅನಿಷ್ಟವರ್ಗವೊಂದನ್ನು ಹುಟ್ಟಿಸುತ್ತವೆ. ಇದೇ ಸ್ಥಿತಿಯಲ್ಲಿ ಅವರು ಮುಂದುವರಿದರೆ ಅವರು ದ್ವಿತೀಯ ಶ್ರೇಣಿಯ ನಾಗರಿಕರಾಗಿ ನಾಚಿಕೆಯಿಲ್ಲದೆ ಬದುಕಬೇಕಾಗುತ್ತದೆ.

ಆದುದರಿಂದ ಬಸವಣ್ಣನವರು ಸಮಾಜದ ಎಲ್ಲ ಅನಿಷ್ಟಗಳ ನಿವಾರಣೆಗೆ ಕಾಯಕವೊಂದೇ ತರಣೋಪಾಯವೆಂದು ಸಾರಿದರು. ಗುರುವಾಗಲಿ, ಜಂಗಮವಾಗಲಿ ಕಾಯಕಕ್ಕಾಗಿ ಲಿಂಗಪೂಜೆಯನ್ನಾದರೂ ತೊರೆಯಬೇಕೆಂದು ಕಟ್ಟಳೆ ವಿಧಿಸಿದರು. ಬಸವಣ್ಣನವರ ಕಾಯಕಸೂತ್ರದ ಪ್ರಕಾರ ಅದು ತನು ಮನ ಬಳಲಿಸಿ ಮಾಡುವುದಾಗಿರಬೇಕು ; ಹಿಂಸೆ, ಸುಲಿಗೆ, ಸಂಗ್ರಹ ಬುದ್ಧಿ, ದುರಾಶೆ, ದುರ್ಮದಗಳಿಂದ ದೂರವಾದುದಿರಬೇಕು ; ಕಾಯಕದಿಂದ ಬಂದುದು ಸ್ವಂತದ ನ್ಯಾಯವಾದ ಅಗತ್ಯಗಳನ್ನು ಪೂರೈಸಿ ಮಿಕ್ಕಿದರೆ ಆ ಮಿಕ್ಕಿದುದನ್ನು ದಾಸೋಹಕ್ಕಾಗಿ ಸಮಾಜದ ಸ್ಥಳೀಯ ಘಟಕಕ್ಕೆ ನೀಡಬೇಕು.

ಇಂಥ ಕಾಯಕಯೋಗಿಗಳಿಂದ ಕೂಡಿದ ಸಮಾಜದಲ್ಲಿ ಹಸಿವೆಯಾಗಲಿ, ಶೋಷಣೆಯಾಗಲಿ, ಭೇದಭಾವವಾಗಲಿ ಇರಲಾರವೆಂದು ಬೇರೆ ಹೇಳುವುದೇ ಬೇಡ. ಎಲ್ಲ ಕಾಯಕಗಳೂ ಸಮಾನ, ಪವಿತ್ರವಾದುವುಗಳೆಂದು ಪರಿಗಣಿತವಾಗಿದ್ದುದಾಗಿ ಕಾಯಕಗಳ ಆಧಾರದ ಮೇಲೆ ಮೇಲು-ಕೀಳುಗಳನ್ನು ಕಲ್ಪಿಸುವುದು ಗಗನಕುಸುಮ ಪರಿಮಳದಿಂದತ್ತತ್ತವಾಯಿತು. ಒಂದು ಕಡೆಯಿಂದ ಜಾತಿಪದ್ಧತಿಯ ಮೇಲೆ, ಇನ್ನೊಂದು ಕಡೆಯಿಂದ ವೃತ್ತಿಮೂಲ ಶ್ರೇಷ್ಠ–ಕನಿಷ್ಠತೆಗಳ ಕಲ್ಪನೆಯ ಮೇಲೆ ಏಕಕಾಲಕ್ಕೆ ದಾಳಿ ಮಾಡಿ ಬಸವಣ್ಣನವರು ಹುಟ್ಟಿನಿಂದ ಬಂದ, ವೃತ್ತಿಯಿಂದ ಬಂದ ಅಸಮಾನತೆಗಳ ಹುಟ್ಟನ್ನೇ ಅಡಗಿಸಿ ಬಿಟ್ಟರು! ನಿಷ್ಠೆಯಿಂದ ಕಾಯಕ ಮಾಡಿದರೆ ಅದೇ ಈ ಲೋಕದಲ್ಲಿಯೇ, ಈ ಜನ್ಮದಲ್ಲಿಯೇ ಕೈಲಾಸವಾಗುವುದೆಂದು ತೋರಿಸಿಕೊಟ್ಟರು. ಇನ್ನೂ ಮುಂದೆ ಹೋಗಿ 'ಕಾಯಕದ ಸವಿ ಕೈಲಾಸದೊಳಗುಂಟೆ?' ಎಂದು ಸಂಗಮನಾಥನನ್ನೇ ಕೇಳಿಬಿಟ್ಟರು–ಹರಿಹರನು ಹೇಳಿರುವಂತೆ.

ವ್ಯಕ್ತಿಗೆ ಉದ್ಧಾರ, ಸಮಷ್ಟಿಯ ಸಂಕುಲಿತ ಅಭಿವೃದ್ಧಿಗೆ ಆಧಾರ–ಎರಡನ್ನೂ ನೀಡುವ ಕಾಯಕ ನಿಜವಾಗಿಯೂ ನಾಡಿಗರ ನಿತ್ಯಜೀವನದ ಸುವರ್ಣಸೂತ್ರವಾಗಿ ಈ ದೇಶದಲ್ಲಿ ಕಾಯಕಸಮಾಜದ ಸ್ಥಾಪನೆಯಾಗಬೇಕು. 'Mass production' ಅಲ್ಲ. 'Production by masses' ಸರ್ವರ ಕಲ್ಯಾಣದ ಹೆದ್ದಾರಿಯೆಂದು ಹೇಳಿದ್ದಾರೆ ಗಾಂಧೀಜಿಯವರು. ಕಾಯಕವೂ 'Production by masses, not mass production'. ಜೊತೆಗೆ ಸತ್ಯಶುದ್ಧವಾದುದು ; ಪವಿತ್ರವಾದುದು. ಅಸಂಗ್ರಹ, ಅಪರಿಗ್ರಹಗಳನ್ನು ಒಳವಡಿಸಿಕೊಂಡು ಎಲ್ಲರಿಗೂ ಸಮಬಾಳು, ಎಲ್ಲರಿಗೂ ಸಮಪಾಲು ಸಿಕ್ಕುವಂತೆ ಮಾಡುವ ಶಕ್ತಿಯುಳ್ಳುದು. ಆದುದರಿಂದ ಇದು ಎಲ್ಲರೂ ಕಣ್ದೆರೆದು ನೋಡಬೇಕಾದ ಅರ್ಥಪ್ರಪಂಚ. ಇಲ್ಲದಿದ್ದರೆ ಅನರ್ಥಕಾದಿದೆ ಪ್ರಪಂಚಕ್ಕೆ. ಎರಹರ್ಡ್ ಎಪ್ಲರ್ ಅವರ ಈ ಎಚ್ಚರಿಕೆ ೧೯೭೦ರಲ್ಲಿಯೇ ಪ್ರಕಟವಾಗಿದೆ: 'There are many vicious circles in the third world—are the 1970s likely to add another: desperation leading to voilence, voilence disrupting and destroying development and this producing even more desperation?' (Not much time for the Third world by Erhard Eppler-Federal German Minister for economic co-operation).

ನಿರುದ್ಯೋಗ, ತಜ್ಜನ್ಯ ದಾರಿದ್ರ್ಯ, ತತ್ಫಲವಾದ ಸಂಕಷ್ಟ ಸಂಕ್ಲೇಶಗಳು ಹೆಚ್ಚಿ ನಮ್ಮ ಕಣ್ಣೆದುರಿಗೇ ಈ ದೇಶದಲ್ಲಿ ಹತಾಶೆ ಹೆಚ್ಚಿ, ಹತಾಶೆ ಹಿಂಸೆಗೆ ತಿರುಗಿ, ಹಿಂಸೆ ಇರುವಷ್ಟು ಬೆಳವಣಿಗೆಯ ಸಾಧ್ಯತೆಗಳನ್ನೂ ವಿಧ್ವಂಸಗೊಳಿಸುತ್ತ ಭವಿತವ್ಯ ಭೀಕರತರವಾಗುವಂತೆ ಮಾಡುತ್ತಿರುವುದನ್ನು ನೋಡುತ್ತಿದ್ದೇವೆ. ಇದು ನಿಲ್ಲಬೇಕಾದರೆ ಬಡತನ ತೊಲಗಬೇಕು ; ಬಡತನ ತೊಲಗಬೇಕಾದರೆ ದುಡಿಯಬಲ್ಲ ಎಲ್ಲರಿಗೆ ಕೆಲಸ ಸಿಕ್ಕಬೇಕು. ಇದು ಕಾಯಕಸಮಾಜದಲ್ಲಿಯೇ ಸಾಧ್ಯ.



# ಅನುಭಾವ

—ಪ್ರೊ. ಸ. ಸ. ಮಾಳವಾಡ

ಸಂಸ್ಕೃತ 'ಅನುಭೂ' ಶಬ್ದಕ್ಕೆ ಅರಿಯುವುದು, ರುಚಿ ನೋಡುವುದು, ಗ್ರಹಿಸುವುದು–ಎಂಬ ಅರ್ಥಗಳಿವೆ. 'ಅನುಭೂ' ಶಬ್ದದಿಂದ 'ಅನುಭವ' ಮತ್ತು 'ಅನುಭಾವ'ಎಂಬ ಪದಗಳು ಬಂದಿವೆ.

'ಅನು' ಎಂದರೆ ಅನುಸಾರಿಯಾದುದು, ನಂತರದ್ದು ಇನ್ನೊಂದಕ್ಕೆ ಸಾದೃಶವಾದುದು. 'ಭವ' ಎಂದರೆ ಆಗುವಿಕೆ, ಇರುವಿಕೆ, ಹುಟ್ಟುವಿಕೆ, ಬಾಹ್ಯವಸ್ತು ಸಂಪರ್ಕಕ್ಕೆ ಅನುಸಾರಿಯಾಗಿ ನಮ್ಮಲ್ಲಿ ಉಂಟಾಗುವ ಅರಿವನ್ನು, ಗ್ರಹಿಕೆಯನ್ನು 'ಅನುಭಾವ' ಎಂದು ಹೇಳಲಾಗುತ್ತಿದೆ. ಆಂಗ್ಲಭಾಷೆಯ Experience ಪದಕ್ಕೆ ಇದು ಸಂವಾದಿಯಾದುದು. ಇನ್ನು 'ಅನುಭಾವ'ದ ವಿಷಯ.

'ಭಾವ' ಪದವು ಇರುವಿಕೆಯ ಸ್ಥಿತಿ, ಆಗುವಿಕೆಯ ಅವಸ್ಥೆ ಮತ್ತು ಭಾವನೆ ಎಂಬ ಅರ್ಥಗಳನ್ನು ಕೊಡುತ್ತಿದೆ. ಅದಕ್ಕೆ 'ಅನು' ಸೇರಿದಾಗ ಆಗುವಿಕೆಯ ಅವಸ್ಥೆಗೆ ಅನುಗುಣವಾದುದು ಎಂಬುದು 'ಅನುಭಾವ'ದ ಪದಾರ್ಥವಾಗುತ್ತಿದೆ.

'ಅನುಭಾವ' ಪದವನ್ನು ಅಲಂಕಾರಶಾಸ್ತ್ರದಲ್ಲಿ ಒಂದು ಬಗೆಯ ಅರ್ಥದಲ್ಲಿ ಬಳಸಲಾಗುತ್ತಿದೆ, ಅಲ್ಲಿ ಅದು ಪಾರಿಭಾಷಿಕ ಪದ. ತನ್ನೊಳಗಿನ ಭಾವವನ್ನು ಸಂಜ್ಞೆ, ತನುವಿಕಾರಗಳಿಂದ ವ್ಯಕ್ತಪಡಿಸುವುದನ್ನು 'ಅನುಭಾವ'ವೆಂದು ಅಲ್ಲಿ ಹೇಳಲಾಗಿದೆ. ಮುಖದ ಮೇಲೆ ಇಲ್ಲವೆ ಅಂಗಾಂಗಗಳ ಗತಿಯಿಂದ ಹೃದಯದ ಭಾವನೆಯನ್ನು ಹೊರಹೊಮ್ಮಿಸಿ ತೋರಿಸುವ ರೀತಿಯದು. ನೃತ್ಯ, ಅಭಿನಯ ಮುಂತಾದ ಕಲೆಗಳ ಸಂಬಂಧದಲ್ಲಿ 'ಹಾವ-ಭಾವ' ಎಂಬ ಪದವನ್ನು ಜನಸಾಮಾನ್ಯವಾಗಿ ಬಳಸುತ್ತಾರೆ. ಆಗ ಅದರ ಅರ್ಥವೂ ಸ್ಪಷ್ಟವಾಗಿರುತ್ತದೆ. ಆದರೆ ಅಲಂಕಾರಶಾಸ್ತ್ರದಲ್ಲಿ ರೂಢವಾಗಿರುವ ಈ ಅರ್ಥವು ಈಗ ನಮಗೆ ಪ್ರಸ್ತುತವಲ್ಲ. ನಾವು ಪರಿಶೀಲಿಸಬೇಕಾದುದು ಬೇರೊಂದು ಅರ್ಥವಾಗಿದೆ. ಅದು ಶಿವಶರಣರು ವಚನಗಳಲ್ಲಿ ಬಳಸಿದ 'ಅನುಭಾವ' ಪದದ ವಿಶೇಷ ಅರ್ಥವಾಗಿದೆ. 'ಶಿವಾನುಭವ'ದ ಉತ್ತರಾರ್ಧ ಪದವದು. ಈ ವಿಶೇಷ ಅರ್ಥದ ಪದಕ್ಕೆ ಸಂವಾದಿಯಾಗುವ ಆಂಗ್ಲಪದವು ಮಿಸ್ಟಿಸಿಜಮ್(Mysticism).

ಮಿಸ್ಟಿಸಿಜಮ್ ಬಗೆಗೆ ಆಂಗ್ಲಭಾಷೆಯಲ್ಲಿ ವಿಪುಲ ಬರೆಹ ಲಭ್ಯವಿದೆ. ಅಲ್ಲಿ ಆ ಪದವನ್ನು ವಿವಿಧ ಅರ್ಥಗಳಲ್ಲಿ ಬಳಸಿದ್ದರೂ ನಾವು ಗಮನಿಸಬೇಕಾದುದು 'ಅನುಭಾವ' ಪದಕ್ಕೆ ಸಂವಾದಿಯಾಗುವ ಅರ್ಥವನ್ನು ಮಾತ್ರ.

'ಅನುಭಾವ'ವನ್ನು ಕುರಿತು ಕನ್ನಡದಲ್ಲಿ ಬಂದ ಬರೆಹ ಅಲ್ಪಪ್ರಮಾಣದ್ದಾಗಿದೆ. 'ಶಿವಾನುಭಾವ' ಪದವು ಹೆಚ್ಚಾಗಿ ಬಳಕೆಯಾಗಿರುವುದೇನೋ ನಿಜ. ಆದರೆ 'ಅನುಭಾವ' ಪದದ ನಿಕೃಷ್ಟವಾದ ಅರ್ಥವನ್ನು ವಿವೇಚಿಸಿದ್ದು ಕಡಿಮೆ. ಡಾ॥ ತಿಪ್ಪೇರುದ್ರಸ್ವಾಮಿ ಅವರ ಮಹಾಪ್ರಬಂಧದ ಗ್ರಂಥರೂಪವಾಗಿರುವ 'ಶರಣರ ಅನುಭಾವ ಸಾಹಿತ್ಯ'ದಲ್ಲಿ ಈ ಬಗೆಗೆ ಒಂದು ಅಧ್ಯಾಯವಿದೆ. ಅಲ್ಲಿಯ ವಿವೇಚನೆಯು ನನಗೆ ಒಪ್ಪಿಗೆಯಾದುದಾಗಿದೆ. ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ವೀರಶೈವರ ಅನುಭಾವವನ್ನು ಆಂಗ್ಲಭಾಷೆಯಲ್ಲಿ ವಿವೇಚಿಸಿದ್ದಾರೆ.

'ಅನುಭಾವ'ದ ವಿಶೇಷ ಅರ್ಥಕ್ಕಾಗಿ ನಾವು 'ಅನುಭೂ' ಪದವನ್ನೇ ಮೂಲವಾಗಿಟ್ಟುಕೊಳ್ಳಬೇಕು. ಆ ಪದದಿಂದ ಬಂದ ಅನುಭವವನ್ನು ಇಂದ್ರಿಯಗ್ರಾಹ್ಯವಾದುದು ಎಂದು ಭಾವಿಸಬೇಕು. ಅಂದರೆ ಮನಸ್ಸು ಗ್ರಹಿಸಿದ್ದು, ಬುದ್ಧಿಗಮ್ಯವಾದುದು. ಮಿಸ್ಟಿಸಿಜಮ್ ಎಂಬ ಆಂಗ್ಲಪದದ ವಿವಿಧಾರ್ಥಗಳಲ್ಲಿ ಆ ಅರ್ಥವು ಸೇರ್ಪಡೆಯಾಗಿದೆ. ಆದರೆ 'ಅನುಭಾವ' ಪದವನ್ನು ಬಳಸಿದಾಗ ನಾವು ಬುದ್ಧಿಗಮ್ಯವಾದುದರ ಆಚೆಗೆ ಸಾಗಬೇಕಾದ ಅವಶ್ಯಕತೆಯಿದೆ.

ಇಂದ್ರಿಯಗಳ ಮೂಲಕ ವಸ್ತುವಿನ ಪ್ರತ್ಯಕ್ಷ ಸಂಪರ್ಕದಿಂದ ಪಡೆದುದು ಅನುಭವ. ಅಂತರಂಗಕ್ಕೆ ಹೊಳೆದ ಅನುಭವದ ಸ್ಥಿತಿಯು ನೆಲೆಗೊಂಡು ನಿಲ್ಲುವ ಅವಸ್ಥೆಯು 'ಅನುಭಾವ'. ಶಿವನೊಂದಿಗೆ ನಡೆದ ಅನುಸಂಧಾನದ ಮೂಲಕ ಹೊಳೆದ ಅನುಭವವು ನೆಲೆಯಾಗಿ ಉಳಿಯುವುದು 'ಶಿವಾನುಭಾವ'. ಶಿವಾನುಭಾವ ಪದದ ಅರ್ಥವು ಈ ಬಗೆಯದಾದುದು. ಅದನ್ನು ಇತರರೊಂದಿಗೆ ವಿನಿಮಯಮಾಡಿಕೊಳ್ಳುವುದನ್ನು ಶಿವಶರಣರು 'ಶಿವಾನುಭಾವಗೋಷ್ಠಿ' ಎಂದು ಕರೆದಿದ್ದಾರೆ. ಈಗ 'ಶಿವಾನುಭಾವಗೋಷ್ಠಿ' ಎಂಬ ಹೆಸರಿನಲ್ಲಿ ನಡೆಯುವ ಉಪನ್ಯಾಸ, ವಾಗ್ವಾದ, ಸ್ವೀಕರಿಸಲಾಗುವ ಗೊತ್ತುವಳಿಗಳ ವಿಷಯ ಬೇರೆ. ಏಕಾಗ್ರತೆ, ಧ್ಯಾನ, ಇಷ್ಟಲಿಂಗೋಪಾಸನೆಗಳ ಮೂಲಕ ಅಂತರಂಗಕ್ಕೆ ಹೊಳೆದುದನ್ನು ಶಿವಶರಣರು 'ಅನುಭಾವ' ಎಂದು ಕರೆದಿದ್ದಾರೆ. ಅಂತಹ ಅನುಭಾವವುಳ್ಳವ **ಅನುಭಾವಿ.**

ಸಂಸ್ಕೃತ ಕೋಶದಲ್ಲಿ 'ಅನುಭಾವ' ಪದಕ್ಕೆ ಘನತೆ, ಕಾಂತಿ ಎಂಬ ಅರ್ಥಗಳು ಇವೆ. ವ್ಯಕ್ತಿತ್ವದ ಘನತೆಯಿಂದ ತಲೆದೋರುವ ಶಕ್ತಿ, ಪ್ರಕಾಶ ಪ್ರಭಾವಗಳೂ ಇದರಲ್ಲಿ ಸೇರ್ಪಡೆಯಾಗುತ್ತಿವೆ. ಮಾನವನಿಗೆ ಈ ಬಗೆಯ ಶಕ್ತಿ, ಪ್ರಕಾಶ ಪ್ರಭಾವಗಳು ಲಭ್ಯವಾಗುವದು ಪರಮಾತ್ಮನ ಅನುಸಂಧಾನದಿಂದ ಮಾತ್ರ. ಇಂತಹ ಘನತೆ, ಕಾಂತಿಗಳಿಂದ ಕೂಡಿದವ ಅನುಭಾವಿ.

ಮಾನವಕಲ್ಯಾಣದ ದಿಸೆಯಲ್ಲಿ ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಶಿವಶರಣರ ಕ್ರಾಂತಿಯು ನಡೆಯಿತು. ಆ ಕ್ರಾಂತಿಯ ನಂತರ ಮಹಾರಾಷ್ಟ್ರದಲ್ಲಿ 'ಮಹಾನುಭಾವಿ' ಎಂಬ ಪಂಥ ತಲೆದೋರಿತು. ಶಿವಶರಣರ ವಿಚಾರಧಾರೆಯ ಪ್ರಭಾವವು ಅಲ್ಲಿ ಸ್ಪಷ್ಟವಿದೆ. ಆ 'ಮಹಾನುಭಾವಿ' ಪದವು ಶಿವಶರಣರು ಬಳಸಿದ ಪದಕ್ಕೆ ಸಂವಾದಿಯಾದುದು, ಅಂದರೆ ಪರಮಾತ್ಮನ ಸಂಪರ್ಕದ ಮೂಲಕ ವಿಶೇಷ ಬಗೆಯ ಶಕ್ತಿ, ಪ್ರಕಾಶ ಪ್ರಭಾವವುಳ್ಳವ. ಮಹಾರಾಷ್ಟ್ರದಲ್ಲಿ ತಲೆದೋರಿದ ಪಂಥದ 'ಮಹಾನುಭಾವಿ' ಪದಕ್ಕೂ ಇದೇ ಅರ್ಥ ಸಂಬಂಧವಿದೆ.

ಅನುಭಾವಿಯು ಸದಾ ತೃಪ್ತನೂ, ಆನಂದಮಯನೂ ಆಗಿರುತ್ತಾನೆ. ಲೌಕಿಕ ಶಕ್ತಿ, ವೈಭವ ಗಳಿಸಿದವರಿಗೆ 'ಅನುಭಾವಿ'ಯ ತೃಪ್ತಿ, ಆನಂದಗಳು ಸಾಧ್ಯವಾಗುವುದಿಲ್ಲ. ತಾನು ಇನ್ನೂ ಹೆಚ್ಚು ಶಕ್ತಿ ವೈಭವಗಳನ್ನೂ ಗಳಿಸುವ ಆತುರ, ಈಗಾಗಲೆ ಗಳಿಸಿದುದನ್ನು ಉಳಿಸಿಕೊಳ್ಳುವ ಕಾತರಗಳಿಗೆ ಲೌಕಿಕ ವ್ಯಕ್ತಿ ಒಳಗಾಗಿ ಗಾಸಿಗೊಳ್ಳುತ್ತಾನೆ. ಪರಮಾತ್ಮನ ಸಂಕಲ್ಪದಂತೆ ಬಾಳುವ ಮತ್ತು ದೈವೀಕೃಪೆಯನ್ನೇ ಅವಲಂಬಿಸುವ ಅನುಭಾವಿ ಯಾವ ಆತುರ ಕಾತರಗಳಿಗೂ ಒಳಗಾಗುವುದಿಲ್ಲ.

ಹೀಗೆ ಪರಮಾತ್ಮನ ಅನುಸಂಧಾನದಿಂದಾಗಿ ಹೊಳೆದ ಅನುಭವವು ನೆಲೆಯಾಗಿ ನಿಲ್ಲುವುದು ; ಹಾಗೆ ನೆಲೆಗೊಂಡದ್ದು ಬಾಹ್ಯ ವ್ಯವಹಾರದಲ್ಲಿ ತೃಪ್ತಿಯಾಗಿ ಆನಂದವಾಗಿ ಹೊರಹೊಮ್ಮಿ ತೋರುವುದು 'ಅನುಭಾವ'ದ ಲಕ್ಷಣವಾಗಿದೆ. ಅನುಭಾವವು ಆಂತರಿಕ ನಿಲವು ಮಾತ್ರವಲ್ಲ, ಹೊರಗಿನ ಆಚರಣೆಯಲ್ಲಿ ತೃಪ್ತಿ, ಆನಂದಗಳು ಮೂಡಿಬರುವ ಅವಸ್ಥೆಯದು. ಆಂತರಿಕ ನಿಲವು ಹೊರಗೂ ಕಂಡುಬರಬೇಕು. ಕಾರ್ಯಸಾಧನೆಗಾಗಿ ಅಂತಹ ಮುಖವಾಡ ಧರಿಸುವವರೂ ಇರಬಹುದು ಆದರೆ ಒಳ–ಹೊರಗು ಒಂದಾದ ನಿಲವು ಅನುಭಾವಿಯದು. ಆಂತರಿಕವಾಗಿ ಪರಮಾತ್ಮನ ನೆಲೆಯನ್ನು ಕಂಡುಕೊಂಡು ಅದನ್ನು ಹೊರಗಿನ ವ್ಯವಹಾರದಲ್ಲಿ ಅನುಭಾವಿ ಪ್ರಕಟಿಸುತ್ತಾನೆ. ಶರಣರು 'ಅನುಭಾವ'ವನ್ನು 'ಅಂತರಂಗದ ರತ್ನ' ವೆಂದು ಕರೆದಿದ್ದಾರೆ. ಆ ರತ್ನದ ಪ್ರಭೆಯು ಶಿವಶರಣರ ಬಾಹ್ಯದ ಬಾಳಿನಲ್ಲಿ ಬಗೆ ಬಗೆಯಾಗಿ ಹೊರಹೊಮ್ಮಿ ಬಂದುದನ್ನು ನಾವು ಶಿವಶರಣರ ಚರಿತ್ರೆಯಲ್ಲಿ ಕಾಣುತ್ತೇವೆ. ಈ ದೃಷ್ಟಿಯಿಂದ ಶರಣರ ಬಾಹ್ಯಜೀವನದ ಘಟನೆಗಳು ಲೌಕಿಕ ಮಾನವರಿಗೆ ಅದ್ಭುತವಾಗಿ ತೋರುತ್ತಿವೆ. ಶರಣರ ಲೌಕಿಕ ಬಾಳಿನಲ್ಲಿ ಅಲೌಕಿಕಶಕ್ತಿ ಹೊರಹೊಮ್ಮಿ ಬಂದುದು ನಮ್ಮ ಅಚ್ಚರಿಗೆ ಕಾರಣವಾಗುತ್ತಿದೆ. ಆದರೆ ಅವರ ಜೀವನಪಥವು ನಮಗೆ ಉದ್ಬೋಧಕವೆನಿಸುತ್ತಿದೆ.

ಭಕ್ತರ ಪರೀಕ್ಷೆಗೆಂದು ಕೃತಕವೇಷದಿಂದ ಬಂದ ಶಿವನನ್ನೇ ಸೋಲಿಸಿದ ಸನ್ನಿವೇಶಗಳು ಶರಣರ ಚರಿತ್ರೆಯಲ್ಲಿ ಬರುತ್ತಿವೆ. ಶರಣರು ಲೌಕಿಕವಾದ ಯಾವ ಆಶೆ–ಆಕಾಂಕ್ಷೆಗಳಿಗೆ ಒಳಗಾಗಿರಲಿಲ್ಲ. ಅಂತೆಯೇ ಅವರು ಕೃತಕವೇಷದ ಶಿವನನ್ನು ಸೋಲಿಸಲು ಸಮರ್ಥರಾದರು. ಭಕ್ತನ ಶಿವನಿಷ್ಠೆಯನ್ನು ಪರೀಕ್ಷಿಸಲೆಂದೇ ಬಂದ ಶಿವನು ತನ್ನ ಸೋಲಿನಲ್ಲಿಯೇ ಸಂತಸಪಟ್ಟ. ಮಹಾಕವಿ ಹರಿಹರದೇವ ಇಂತಹ ಚಿತ್ರಗಳನ್ನು ಹೃದಯಂಗಮವಾಗಿ ಮೂಡಿಸಿದ್ದಾನೆ.

ಅಂಗವು ಲಿಂಗದೊಂದಿಗೆ ಸಮರಸಗೊಳ್ಳುವ ದಿಸೆಯಲ್ಲಿ ಸಾಗಿದ ಬಾಳು ಶಿವಶರಣರದಾಗಿತ್ತು. ಅಂತೆಯೇ ಅಂಗದ ಗುಣಗಳನ್ನು ನಿಯಂತ್ರಿಸಿ ಲಿಂಗದ ಗುಣಗಳನ್ನು ರೂಢಿಸಿಕೊಳ್ಳುವ ಅನುಭಾವದ ಪಥವನ್ನು ನಾವು ಶರಣರ ಬಾಳಿನಲ್ಲಿ ಕಾಣುತ್ತೇವೆ. ಕರಣಗಳ ಇಚ್ಛೆಯನ್ನು ಹಿಂದೆ ಸರಿಸಿ ಹರನ ಕೃಪೆಗಾಗಿ ಹಾರೈಸಿದವರು ಶಿವಶರಣರು.

ಷಟ್ಸ್ಥಲ ಕ್ರಮದಲ್ಲಿ ಅನುಭಾವ ಪಥವು ಅಂತರ್ಗತವಾಗಿದೆ. ಮೂರನೆಯದಾದ ಪ್ರಸಾದಿಸ್ಥಲಕ್ಕೆ ಅವಧಾನ ಭಕ್ತಿಯನ್ನು ಹೇಳಲಾಗಿದೆ. ಅಂದರೆ ಲಿಂಗದತ್ತ ಮಾತ್ರ ಲಕ್ಷ್ಯ ಹರಿಯಿಸುವುದು ಆ ಸ್ಥಲದಿಂದ ಆರಂಭವಾಗುತ್ತಿದೆ. ಇದಕ್ಕೆ ಆವಶ್ಯಕವಾಗಿರುವ ಪೂರ್ವಸಿದ್ಧತೆಯು ಮೊದಲಿನ ಎರಡು ಸ್ಥಲಗಳಲ್ಲಿ ನಡೆಯುತ್ತಿದೆ.

ನಾಲ್ಕನೆಯದಾದ ಪ್ರಾಣಲಿಂಗಿ ಸ್ಥಲವು ಅಂತರಾತ್ಮನು ಜಾಗೃತಗೊಂಡ ನಿಲವನ್ನು ಸ್ಪಷ್ಟಪಡಿಸುತ್ತಿದೆ. ಅಲ್ಲಿ ಶಿವಶರಣನು ಲಿಂಗದ ಎಚ್ಚರದಲ್ಲಿಯೇ ಬಾಳನ್ನು ಸಾಗಿಸುವಂತಾಗುತ್ತಿದೆ. ಈ ಸ್ಥಲಕ್ಕೆ ಅನುಭಾವಭಕ್ತಿಯನ್ನು ಹೇಳಲಾಗಿದೆ. ಶಿವನ ಉಪಸ್ಥಿತಿ (Presence)ಯ ಅನುಭವವನ್ನು ಭಕ್ತ ಈಗ ಪಡೆಯುವಂತಾಗುತ್ತಿದೆ. ಅದು ನಿರಂತರವಾಗಿ ಉಳಿಯುವಂತೆ, ದೃಢಗೊಳ್ಳುವಂತೆ ಭಕ್ತ ಇನ್ನೂ ಮುಂದೆ ಸಾಗಬೇಕು. ಮುಂದಿನ ಎರಡು ಸ್ಥಲಗಳಲ್ಲಿ ಹಾಗೆ ನಡೆಯುತ್ತಿದೆ. ನಾಲ್ಕನೆಯ ಸ್ಥಲದಲ್ಲಿ ಅನುಭಾವ ಪಥವು ಆರಂಭವಾಗುತ್ತಿದೆ. ಮುಂದಿನ ಎರಡು ಸ್ಥಲಗಳಲ್ಲಿ ಅದು ಉತ್ತರೋತ್ತರವಾಗಿ ವರ್ಧಿಸುತ್ತಿದೆ.

ಶರಣಸ್ಥಲದ್ದು ಆನಂದ ಭಕ್ತಿ. ಎಲ್ಲೆಲ್ಲಿಯೂ, ಬಾಳಿನ ಎಲ್ಲ ಘಟನೆಗಳಲ್ಲಿಯೂ ಶಿವನ ಉಪಸ್ಥಿತಿಯನ್ನು ಗುರುತಿಸುವ ಶರಣನು ಆನಂದವನ್ನೇ ಅನುಭವಿಸುತ್ತಾನೆ. ಬಾಳಿನ ದ್ವಂದ್ವ, ವಿರೋಧ, ವಿಷಮತೆಗಳ ಸೀಮೆಯನ್ನು ದಾಟಿದ ಶರಣನಿಗೆ ಎಲ್ಲೆಲ್ಲಿಯೂ ಯಾವಾಗಲೂ ಆನಂದವೇ ಆನಂದ. ಆರನೆಯದಾದ ಐಕ್ಯಸ್ಥಲದ್ದು ಸಮರಸ ಭಕ್ತಿ. ಅಂಗವು ಪೂರ್ತಿಯಾಗಿ ಲಿಂಗದೊಂದಿಗೆ ಸಮರಸ ಪಡೆವ ಅನುಭವವದು. ಐಕ್ಯಸ್ಥಲದ ವಚನಗಳು ಈ ಸಮರಸವನ್ನು ಹೃದಯಂಗಮವಾಗಿ ನಿರೂಪಿಸುತ್ತಿವೆ. ಆ ಅಲೌಕಿಕ ಅನುಭಾವವನ್ನು ಲೌಕಿಕ ಭಾಷೆಯಲ್ಲಿ ವಚನಗಳು ನಿರೂಪಿಸುವುದು ವಚನಸಾಹಿತ್ಯದ ಘನತೆಯಾಗಿದೆ.

ಪರಶಿವನಿಂದ ತಾನು ಪ್ರತ್ಯೇಕ ಎಂಬ ಮರವೆಗೆ, ಅಜ್ಞಾನಕ್ಕೆ, ಮಾಯೆಗೆ ಒಳಗಾದ ಜೀವಿಯು ಬಾಳಿನಲ್ಲಿ ದುಃಖಕ್ಕೀಡಾಗುತ್ತಾನೆ. ಪರಶಿವನೊಂದಿಗೆ ಏಕತೆಯನ್ನು ಅನುಭವಿಸುವ ಅನುಭಾವಿ ಅಖಂಡ ಆನಂದ ಪಡೆಯುತ್ತಾನೆ. ಅನುಭಾವವು ಅಖಂಡ ಆನಂದದ ನೆಲೆಯಾಗಿದೆ. ಅಂತೆಯೆ ಅದರ ಬೆಲೆಯು ಅದ್ವಿತೀಯವೆನಿಸಿದೆ.

ಮೊದಲಿನ ಮೂರು ಸ್ಥಲಗಳಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ ಕೋಶಗಳನ್ನು ದಾಟಿದ ಶಿವಶರಣ ನಾಲ್ಕನೆಯ ಸ್ಥಲದಲ್ಲಿ ವಿಜ್ಞಾನಮಯ ಕೋಶವನ್ನು ತಲುಪುತ್ತಾನೆ. ಐದನೆಯದಾದ ಶರಣಸ್ಥಲದಲ್ಲಿ ಆನಂದಮಯ ಕೋಶವನ್ನು ಪ್ರವೇಶಿಸುತ್ತಾನೆ. ಆರನೆಯದಾದ ಐಕ್ಯಸ್ಥಲದಲ್ಲಿ ಪರಶಿವನೊಂದಿಗೆ ಸಮರಸ ಪಡೆಯುತ್ತಾನೆ.

ಹೀಗೆ ಕ್ರಮಶಃ ಅನುಭಾವವು ವರ್ಧಿಸುವ ಬಗೆಯನ್ನು ಷಟ್ಸ್ಥಲಮಾರ್ಗದಲ್ಲಿ ನಿರೂಪಿಸಲಾಗಿದೆ. ಅಂತೆಯೆ ಅಕ್ಕಮಹಾದೇವಿ 'ಅನುಭಾವ ಕಲಿತೆನು ಶಿವನೊಡನೆ' ಎಂದಿದ್ದಾಳೆ. ಚೆನ್ನಮಲ್ಲಿಕಾರ್ಜುನ ರೂಪದ ಪರಶಿವನ ಸಾಕ್ಷಾತ್ಕಾರ ಪಡೆಯುವ ಹಂಬಲವು ಆಕೆಗೆ ಬಾಲ್ಯದಲ್ಲಿಯೇ ತಲೆದೋರಿತು. ಕಲ್ಯಾಣಕ್ಕೆ ಬಂದಳು. ಅನುಭವಮಂಟಪ ಪ್ರವೇಶಿಸಿ ಅಲ್ಲಿಯ ಹಿರಿಯ ಶರಣರ ಒಡನಾಟದಲ್ಲಿ ಆಕೆ ಅನುಭಾವವನ್ನು ರೂಢಿಸಿಕೊಂಡಳು.

ವಚನಸಾಹಿತ್ಯದಲ್ಲಿ ಬಂದಿರುವ ನುಡಿಗಳಿಂದ ಅನುಭಾವ, ಅನುಭಾವಿಗಳನ್ನು ಕುರಿತ ಕಲ್ಪನೆಯು ನಮಗೆ ಸ್ಪಷ್ಟವಾಗುತ್ತಿದೆ.

'ಸರ್ವಾಂಗ ಲಿಂಗ'ವಾಗಿ ಆ ಪ್ರಜ್ಞೆಯಲ್ಲಿ ಉಳಿಯುವುದು ಅನುಭಾವ. 'ಆತ್ಮ ಸಂಗವಾದವರ್ಗೆ ಬಹಿರ್ಭಾವವಿರುವುದಿಲ್ಲ'. ನಮ್ಮಲ್ಲಿ ಬಹಿರ್ಭಾವವಿರುವಾಗ ನಮ್ಮ ಇಂದ್ರಿಯಗಳು ಲೌಕಿಕ ವಿಷಯಗಳತ್ತ ಹರಿಯುತ್ತಿವೆ, ಪರಶಿವನತ್ತ ಅಲ್ಲ. ಆತ್ಮಸಂಗವನ್ನು ಬೆಳೆಯಿಸಿಕೊಂಡಾಗ ಬಹಿರ್ಭಾವವು ಅಳಿಯಬಲ್ಲುದು. ಮನವು 'ಲಿಂಗಾಲಯ'ವಾಗುವ ಅವಸ್ಥೆ ಅನುಭಾವಿಯದು. ಪ್ರಭುದೇವ ಅನುಭಾವಿಗಳನ್ನು ಕುರಿತು 'ಮನವು ಮಹಾಲಿಂಗದಲ್ಲಿ ಪರಿಣಾಮಿಗಳು' ಎಂದಿದ್ದಾನೆ. ಈ ಮೊದಲು ಹೇಳಿದಂತೆ ಅನುಭಾವವು ಶರಣ, ಐಕ್ಯಸ್ಥಲಗಳಿಗೆ ಸಂಬಂಧಿಸಿದೆ. ಆ ಪೂರ್ವದ ಸ್ಥಲಗಳು ಅನುಭಾವವನ್ನು 'ಕಲಿಯುವ' ಹಂತಗಳಾಗಿವೆ. 'ಲಿಂಗಾಂಗ ಸಮರಸ ಸುಖದಲ್ಲಿ ಮನವು ವೇದ್ಯ'ವಾದಾಗ ಅನುಭಾವವು ನೆಲೆಗೊಂಡು ನಿಲ್ಲುತ್ತಿದೆ.

ಅನುಭಾವವು

ಅರಿವಿನೊಳಗೆ ಅರಿದುದಲ್ಲ
ಮರೆಹಿನೊಳಗೆ ಮರೆದುದಲ್ಲ
ಎಂತಿರ್ದೊಡೆ ಅಂತೆ ಬ್ರಹ್ಮ

ಆಗುವ ಅವಸ್ಥೆಯದು.

ಅದನ್ನು ಇದನ್ನು ಅರಿಯಲು ಹಾತೊರೆಯುವುದು ಮಾನವನ ಸ್ವಭಾವವಾಗಿದೆ. ಆದರೆ ಅರಿವಿನ ಗುರಿಯೇನು ? ಲೌಕಿಕವಾದ ಅರಿವು ಎಷ್ಟೇ ಬೆಳೆದರೂ ಅದು ಮಾನವನಿಗೆ ತೃಪ್ತಿಯನ್ನು ತಂದಿಲ್ಲವಲ್ಲ ! ಅಂತೆಯೆ ಶರಣರು ಹೇಳಿದರು 'ಅರಿವಿನ ಆಪ್ಯಾಯನಕ್ಕೆ ಅನುಭಾವವೇ ತೃಪ್ತಿ' ಎಂದು. ಬರಿಯ ಅರಿವಲ್ಲ ಆದರೆ ಅನುಭಾವವು ಮಾತ್ರ ಮಾನವನಿಗೆ ತೃಪ್ತಿಯನ್ನು ತರಬಲ್ಲುದು. ಆದುದರಿಂದ ಶರಣರು 'ಬಯಲನೊಳಕೊಂಡ ಬ್ರಹ್ಮಾಂಡದೊಳಗಿರ್ಪ ಸ್ವಾನುಭಾವಿಗಳ ಅನುಭಾವ ತೋರಿ ಬದುಕಿಸಾ' ಎಂದು ಕೇಳಿಕೊಂಡರು. ಮನ ಮನ ಲೀಯವಾಗಿ ಘನ ಘನ ಒಂದಾಗುವ ದಿಸೆಯಲ್ಲಿ ಸಾಧನೆ ಕೈಕೊಂಡರು. ಸುತ್ತಣ ಜನಕ್ಕೆ ಅದು ಸುಲಭವಾಗುವಂತೆ ಬೋಧಿಸಿದರು.

ಆಲಿ ನುಂಗಿದ ಪರಿಮಳದಂತೆ
ಬಯಲು ನುಂಗಿದ ಬ್ರಹ್ಮಾಂಡದಂತೆ
ಪುಷ್ಪ ನುಂಗಿದ ಪರಿಮಳದಂತೆ—

—ಇಪ್ಪ ನಿಲವು ಅನುಭಾವಿಗಳದು.

ಅನುಭಾವವೆಂಬುದು ಆತ್ಮವಿದ್ಯೆ
ಅನುಭಾವವೆಂಬುದು ತಾನಾರೆಂಬುದ ತೋರುವುದು
ಅನುಭಾವವೆಂಬುದು ನಿಜನಿವಾಸದಲ್ಲಿ ಇರಿಸುವುದು.

—ತನ್ನ 'ನಿಜನಿವಾಸ'ವನ್ನು ಬಿಟ್ಟು ಹೊರಗೆ ಓಡಾಡಿ ದಣಿಯುವ ಮಾನವನನ್ನು ಆತನ ನಿಜನಿವಾಸದಲ್ಲಿ ಇರಿಸಬಲ್ಲ ಅನುಭಾವವು ಆತ್ಮವಿದ್ಯೆ. ಅಂಗ-ಲಿಂಗದ ಹೊಲಬನ್ನು ತಿಳಿಸಿಕೊಡುವ ನಿಜವಾದ 'ವಿದ್ಯೆ'ಯದು. ಅದನ್ನು ಸಾಧಿಸುವ ಬಗೆಯನ್ನು ಶರಣರು ಬೋಧಿಸಿದ್ದಾರೆ. 'ತನುವಿನಲ್ಲಿ ಆಸೆ ಮುನ್ನಿಲ್ಲದಂತೆ' ಆದಾಗ, 'ನೆನೆವ ಮನವನ್ನು ಅತಿಗಳೆ'ದಾಗ ಮಾತ್ರ ನಾವು 'ಭಿನ್ನವಿಲ್ಲದ ನಿಜ'ದಲ್ಲಿ ನಿಲ್ಲಲು, 'ಘನಮನ'ದ ಅವಸ್ಥೆಯನ್ನು ಪಡೆಯಲು ಸಮರ್ಥರಾಗುತ್ತೇವೆ.

'ಅತ್ತಲಿತ್ತ ಹರಿವ ಮನದ ಶಿರ' ಇಲ್ಲದಂತಾದಾಗ ನಮಗೆ 'ಬಚ್ಚ ಬರಿಯ ಬಯಲು' ತೋರುವುದು. ಅಂತೆಯೇ ಎತ್ತೆತ್ತಲೋ ಮನವನ್ನು ಹರಿಯಿಸುವ 'ಸಂತೆಯ ಸುದ್ದಿ' ಅನುಭಾವವಾಗಲಾರದು—ಹೀಗೆಂದು ಶರಣರು ಸ್ಪಷ್ಟಪಡಿಸಿದ್ದಾರೆ. ಆದರೂ ನಾವು ಅನುಭಾವದ ಹೆಸರಿನಲ್ಲಿ 'ಸಂತೆ' ನಡೆಯಿಸುವುದನ್ನು ಬಿಟ್ಟಿಲ್ಲ. ಶರಣರ ಬೋಧೆಯನ್ನು ಸರಿಯಾಗಿ ನಾವು ಗಮನಿಸಿಲ್ಲವೆಂಬುದೇ ಇದರ ಕಾರಣವಾಗಿದೆ.

ಪರಶಿವನೊಂದಿಗೆ ಉಂಟಾದ ಸಂಸ್ಪರ್ಶವು ಕೆಲವರಿಗೆ ಒಮ್ಮೊಮ್ಮೆ ಮಿಂಚಿನಂತೆ ಹೊಳೆಯಬಹುದು. ಆದರೆ ಹಾಗೆ ಹೊಳೆದುದು ನಿರಂತರವಾಗಿ ಉಳಿಯುವಂತಾದಾಗ ಅದು 'ಅನುಭಾವ'ವಾಗುವುದು. 'ಮಿಸ್ಟಿಸಿಜಮ್'ದ ಬಗೆಗೆ ವಿವೇಚಿಸಿದ ಕೆಲವು ಪಾಶ್ಚಾತ್ಯಲೇಖಕರು ದೈವೀಸಂಪರ್ಕವು ನಿರಂತರವಾಗಿ ಉಳಿಯುವುದಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸಂತರ ಬಾಳಿನಲ್ಲಿಯ ಪರವಶತೆಯ ಕೆಲವು ಕ್ಷಣಗಳನ್ನು, ಅಲೌಕಿಕ ಅವಸ್ಥೆಯ ಕೆಲವು ಸಂದರ್ಭಗಳನ್ನು ಮಾತ್ರ ಪರಿಶೀಲಿಸಿದ್ದು ಈ ಅಭಿಪ್ರಾಯಕ್ಕೆ ಕಾರಣವಾಗಿರಬಹುದು. ಧಾರ್ಮಿಕ ಅನುಭವಗಳ ವೈವಿಧ್ಯವನ್ನು ವಿವೇಚಿಸಿದ ಉಯಿಲಮ್ ಜೋನ್ಸ್ ಅವರು ಅನುಭಾವಿಗಳ ಅವಸ್ಥೆಯು ಸಾಮಾನ್ಯ ಮಾನವೀಯ ಪ್ರಜ್ಞೆಗೆ ಅತೀಂದ್ರಿಯದ ಹೊಸ ಕ್ಷಿತಿಜವನ್ನು ತರುತ್ತಿದೆಯೆಂಬ ನಿರ್ಣಯವನ್ನು ತಲುಪಿದ್ದಾರೆ. ಮಿಸ್ಟಿಸಿಜಮ್ ಮೂಲಕ ಸಂತರ ಮನಸ್ಸಿಗೆ ಹೊಸ ಬೆಳಕಿಂಡಿಯೊಂದು ಲಭ್ಯವಾಗುತ್ತಿದೆಯೆಂದು ಅವರು ಹೇಳಿದ್ದಾರೆ. ಅಂತಹ ಬೆಳಕಿಂಡಿಯಿಂದ ಬೇರೊಂದು ಆಂತರಿಕವಾದ, ವ್ಯಾಪಕವಾದ ಜಗತ್ತು ಗೋಚರವಾಗುತ್ತಿದೆ ಯೆಂಬುದು ಅವರ ಅಭಿಪ್ರಾಯವಾಗಿದೆ. ಇದಕ್ಕಿಂತ ಹೆಚ್ಚಿಗೆ ಹೇಳುವುದು ಸಾಧ್ಯವಿಲ್ಲವಾಗಿ ಅನುಭಾವಿಗಳ ಬಗೆಗೆ ಇಷ್ಟರಿಂದಲೆ ಸಮಾಧಾನಪಟ್ಟುಕೊಳ್ಳಬೇಕೆಂಬ ನಿಲುವು ಜೋನ್ಸ್ ಅವರದಾಗಿದೆ, ಅಂದರೆ ಮಿಂಚಿನಂತೆ ಒಮ್ಮೊಮ್ಮೆ ಹೊಳೆಯುವ ಪರಾತ್ಪರ ಸಂಸ್ಪರ್ಶದ ಅನುಭವವು ಸತತವಾಗಿ ಉಳಿಯುವುದಿಲ್ಲವೆಂಬ ಅಭಿಪ್ರಾಯವಲ್ಲಿದೆ.

ಡಾ॥ ಆರ್.ಡಿ. ರಾನಡೆಯವರು ಕರ್ನಾಟಕದ ಅನುಭಾವಿಗಳ ಬಗೆಗೆ ವಿವೇಚಿಸುವ ಪೂರ್ವದ ಅವಧಿಯಲ್ಲಿ ಭಾರತದ ಇನ್ನಿತರ ಪ್ರಾಂತಗಳ ಅನುಭಾವಿಗಳ ಬಗೆಗೆ ಗ್ರಂಥ ರಚಿಸಿದ್ದರು. ಆಗ ಅವರು ೧) ದೈವೀ ಅನುಭಾವದ ಪ್ರವಾಹವು ಸತತ ವಾಗಿ ಹರಿಯುವುದಿಲ್ಲ. ೨) ದೈವೀ ಅನುಭಾವದ ಸಂದರ್ಭಗಳಲ್ಲಿ ಐಹಿಕ ಜೀವನವು ಸ್ಥಗಿತಗೊಳ್ಳುತ್ತಿದೆ. ೩) ದೈವೀ ಅನು ಭಾವವು ಸಾಮೂಹಿಕವಾಗಿ ರೂಢವಾಗುವುದಿಲ್ಲ—ಎಂಬ ನಿರ್ಣಯಗಳನ್ನು ಮಂಡಿಸಿದ್ದರು.

ಆದರೆ ಶಿವಶರಣರ ಅನುಭಾವದ ಬಗೆಯು ಮೇಲ್ಕಂಡ ನಿರ್ಣಯಗಳಿಗೆ ಭಿನ್ನವಾದುದಾಗಿದೆ.

ಎತ್ತರದ ಹಂತ ತಲುಪಿದ ಶಿವಶರಣರಲ್ಲಿ ಅನುಭಾವದ ಸಾತತ್ಯ ಕಂಡುಬಂದಿದೆ. ಅನುಭಾವದ ಸಂದರ್ಭದಲ್ಲಿ ಅವರ ಐಹಿಕಬಾಳು ಸ್ಥಗಿತಗೊಂಡಿಲ್ಲ. ಶಿವಾನುಭಾವವನ್ನು ಸಾಮೂಹಿಕವಾಗಿ ರೂಢಿಸುವ ದಿಸೆಯ ಸಾಧನೆಯು ಕಲ್ಯಾಣದ ಶಿವಾನುಭವಮಂಟಪದಲ್ಲಿ ನಡೆಯಿತು. ಆದುದರಿಂದ ಮೇಲ್ಕಂಡ ಅಭಿಪ್ರಾಯಗಳಿಗೆ ವ್ಯತಿರಿಕ್ತವಾಗಿ ಶಿವಶರಣರ ಅನುಭಾವವು ಮುಂದೆ ಸಾಗಿದ ಉದಾಹರಣೆಯಾಗಿದೆ.

ಶಿವಾನುಭಾವಿಯ ಬಗೆಗೆ ಮಗ್ಗೆಯ ಮಾಯಿದೇವ ಹೇಳಿದ್ದು ಹೀಗೆ :

> ನುಡಿವ ಎಡೆಯಲ್ಲಿ, ನೋಡುವ ಎಡೆಯಲ್ಲಿ, ವಸ್ತುವಂ ಪಿಡಿವ ಎಡೆಯಲ್ಲಿ,
> ಭೋಗಿಪ ಎಡೆಯಲ್ಲಿ, ದೇಹಮಂ ಬಿಡುವ ಎಡೆಯಲ್ಲಿ ಲಿಂಗಕಳೆ ಲಿಂಗಗುಣಂ ಘನಯೋಗಂ ಆದ ಮಹಾತ್ಮನ್.

ಐಹಿಕಜೀವನದ ಸಾಮಾನ್ಯ ವ್ಯವಹಾರಗಳಲ್ಲಿ ಲಿಂಗಕಳೆ ಲಿಂಗಗುಣಗಳನ್ನು ರೂಢಿಸಿಕೊಂಡು ಸತತವಾಗಿ ಘನಲಿಂಗ ಯೋಗದಲ್ಲಿರುವನು ಶಿವಾನುಭಾವಿ. ಮಗ್ಗೆಯ ಮಾಯಿದೇವನ ಈ ಹೇಳಿಕೆಯು ಕೇವಲ ಕವಿ ಕಲ್ಪನೆಯಲ್ಲ. ಆಧುನಿಕ ಕಾಲದ ಲ್ಲಿಯೂ ಹೀಗೆ ಬಾಳಿದವರ ವಿರಳ ಉದಾಹರಣೆಗಳು ದೊರೆಯುತ್ತಿವೆ. ಸಾಮಾನ್ಯ ನಿಯಮಕ್ಕೆ ಅಪವಾದದಂತಿದ್ದ ಮಠಾಧೀಶ ಶ್ರೀ ಮೃತ್ಯುಂಜಯ ಸ್ವಾಮಿಗಳು, ಸಂಸಾರಿ ಮಧುರಚೆನ್ನರು ಹಾಗೆ ಬಾಳಿದ್ದನ್ನು ನಾವು ಕಣ್ಣೆದುರು ಕಂಡಿದ್ದೇವೆ.

ಪ್ರಭುದೇವನ ನುಡಿಗಳನ್ನು ಬಳಸಿಕೊಂಡು ಹೇಳುವದಾದರೆ ಶಿವಾನುಭಾವದಲ್ಲಿ ಮನವೇ ಲಿಂಗವಾಗುತ್ತದೆ. ಭಾವವೇ ಐಕ್ಯವಾಗುತ್ತದೆ. ಆದುದರಿಂದ ಇಲ್ಲಿ ಅನುಭಾವವು ಆಗಾಗ ತೆರೆಯುವ ಬೆಳಕಿಂಡಿ ಮಾತ್ರವಲ್ಲ ಅದು ಸತತವೂ ಹರಿದು ಬರುವ ಪ್ರವಾಹವಾಗಿದೆ.

> 'ನಿಚ್ಚಕ್ಕೆ ಮನವನಂದಂದಿಗೆ ಅತ್ತಿತ್ತ ಹರಿಯಲೀಯದೆ ಚಿತ್ತದಲ್ಲಿ ಧರಿಸ ಬಲ್ಲಡೆ
> ಬಚ್ಚ ಬರಿಯ ಬೆಳಗು ಗುಹೇಶ್ವರಲಿಂಗ ನೋಡಾ'

ಬಚ್ಚಬರಿಯ ಬೆಳಗನ್ನು ಚಿತ್ತದಲ್ಲಿ ನಿರಂತರವೂ ಧರಿಸುವ ಗುಹೇಶ್ವರಲಿಂಗ ಯೋಗದ ಸಾಧನೆಯನ್ನು ಸಾಮೂಹಿಕ ವಾಗಿ ರೂಢಿಸಿಕೊಳ್ಳಲು ಶರಣರು ಶಿವಾನುಭಾವಮಂಟಪದಲ್ಲಿ ಸೇರುತ್ತಿದ್ದರು. ಅದು ಶಿವಾನುಭಾವದ ವಿಶಿಷ್ಟತೆಯಾಗಿದೆ.

ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ, ವಿಷಯದಲ್ಲಿ ಉದಾ ಸೀನ, ಭಾವದಲ್ಲಿ ದಿಗಂಬರ, ಜ್ಞಾನದಲ್ಲಿ ಪರಮಾನಂದ ಇವು ನೆಲೆಗೊಳ್ಳುವ ದಿಸೆಯಲ್ಲಿ ಶರಣರು ಸಾಗಿದ್ದರು. ಶರಣ, ಐಕ್ಯ

ಸ್ಥಲಕ್ಕೆ ಏರಿದ ಶರಣರು ಅವುಗಳನ್ನು ಪಡೆಯುವ ನೆಲೆಯನ್ನು ತಲುಪಿದ್ದರು. ಆ ನೆಲೆಯೆಂದರೆ ಮೂಲ ಪರಶಿವನ ಚೈತನ್ಯವೇ ಆಗಿದೆ. ಚಿನ್ನದಿಂದ ಹಲವಾರು ಬಗೆಯ ಆಭರಣಗಳು ರೂಪಗೊಳ್ಳುತ್ತಿವೆ. ಆದರೆ ಆ ಆಭರಣಗಳನ್ನು ಕರಗಿಸಿದಾಗ ಹಲವು ಆಕೃತಿಗಳು ಅಳಿದು ಚಿನ್ನವೇ ಉಳಿಯುತ್ತಿದೆ.

ಸ್ವಸ್ಥಾನ ಸುಸ್ಥಿರ ಸುಮನ ಮಂಟಪದೊಳಗೆ
ನಿತ್ಯ ನಿರಂಜನ ಪ್ರಭೆಯ ಬೆಳಗು
ಶಿವಯೋಗದನುಭಾವ ಏಕಾರ್ಥವಾಗಿ, ಗುಹೇಶ್ವರಾ
ನಿಮ್ಮ ಶರಣನು ಅನುಪಮಸುಖಿಯಾಗಿರ್ದನು

ಶರಣರ ಅನುಭಾವವು ನಿತ್ಯ ನಿರಂಜನ ಪ್ರಭೆಯ ಬೆಳಗಿನೊಂದಿಗೆ ಏಕಾರ್ಥವಾಗುವದೇ ಆಗಿತ್ತು. ಅದನ್ನು ಸಾಧಿಸುವ ದಿಸೆಯಲ್ಲಿ ಸಾಗಿದ ಶರಣರು ಬೇರೆ ಬೇರೆ ಹಂತದಲ್ಲಿದ್ದರು, ನಿಜ. ಆದರೆ ಪ್ರಭುದೇವನಂತಹರು ಕೊನೆಯ ನಿಲುಗಡೆಯನ್ನು ತಲುಪಿದ್ದರು.

ಧರ್ಮಗಳಲ್ಲಿ ಎರಡು ಬಗೆ. ಒಂದು ಸಾಂಘಿಕ (Institutional). ಅದು ಬಾಹ್ಯ ವ್ರತಾಚಾರಗಳತ್ತ ಗಮನ ಕೊಡುತ್ತಿದೆ. ಆ ವ್ರತಾಚಾರಗಳನ್ನು ಆಧರಿಸಿದ ಲೌಕಿಕ ಸಂಘಟನೆಯು ನಡೆಯುತ್ತಿದೆ. ಸಂಘಟನೆಗಾಗಿ ಜನರ ಸಂಖ್ಯೆಯ ವಿಪುಲತೆಯು ಮಹತ್ವದ್ದಾಗುತ್ತಿದೆ. ತನ್ಮೂಲಕ ಲೌಕಿಕ ವೈಭವ, ಶಕ್ತಿ, ಪ್ರತಿಷ್ಠೆಗಳತ್ತ ಗಮನ ಹರಿಯುತ್ತಿದೆ. ಬಹುಪಾಲಿನ ಧರ್ಮ ಸಂಸ್ಥೆಗಳು ಈ ದಿಸೆಯಲ್ಲಿ ಸಾಗುತ್ತಿವೆ. ಆಗ ವ್ರತಾಚಾರಗಳನ್ನು ಒಪ್ಪಿಕೊಳ್ಳುವ ಇಲ್ಲವೆ ಸ್ವೀಕರಿಸಿದಂತೆ ನಟನೆ ಮಾಡುವ ಭಕ್ತ ಜನ ಸಮೂಹದ ಆತ್ಮಶುದ್ಧಿಯನ್ನು ಕಡೆಗಣಿಸಲಾಗುತ್ತಿದೆ. ಅಂತೆಯೇ ಧರ್ಮದ ಮೂಲ ಉದ್ದೇಶ ಹಿಂದೆ ಸರಿಯುತ್ತಿದೆ. ಧಾರ್ಮಿಕ ಸಾಂಪ್ರದಾಯಗಳು, ಸಂಸ್ಥೆಗಳು, ವ್ರತಾಚಾರಗಳು ಮಾನವತೆಯನ್ನು ಮೇಲಕ್ಕೆ ಎತ್ತುವಲ್ಲಿ ವಿಫಲವಾಗಿವೆಯೆಂದು ಶ್ರೀ ಅರವಿಂದರು ಪ್ರಬಲವಾಗಿ ಪ್ರತಿಪಾದಿಸಿದ್ದಾರೆ. ಆ ದಿಸೆಯಲ್ಲಿ ಆವಶ್ಯಕವಾಗಿರುವ ಆತ್ಮಶುದ್ಧಿಯನ್ನು ಸಾಂಘಿಕ ಧರ್ಮಗಳು ಕಡೆಗಣಿಸಿರುವುದೇ ಅದಕ್ಕೆ ಕಾರಣವೆಂದು ಅವರು ಸ್ಪಷ್ಟವಾಗಿ ಹೇಳಿದ್ದಾರೆ.

ಧರ್ಮದ ಇನ್ನೊಂದು ಬಗೆ ಅನುಭಾವದ್ದು. ಅದು ಆಂತರಿಕ ಚೇತನವನ್ನು ಎಚ್ಚರಿಸುವ, ಆತ್ಮಶುದ್ಧಿಯನ್ನು ಸಾಧಿಸುವ ದೃಷ್ಟಿಯಿಂದ ಸಾಗಿ ಇಹದ ಬಾಳಿನಲ್ಲಿ ದೈವೀಪ್ರಕಾಶವನ್ನು ರೂಢಿಸಿಕೊಳ್ಳುವ ದಿಸೆಯಲ್ಲಿ ಸಾಗುತ್ತಿದೆ. ಎಲ್ಲದರಲ್ಲಿ, ಎಲ್ಲ ಕ್ಷಣಗಳಲ್ಲಿ ದೈವೀಸಾನ್ನಿಧ್ಯವನ್ನು ಕಂಡುಕೊಳ್ಳುವದು ಆ ಪಥದ ಉದ್ದೇಶವಾಗಿದೆ. ಆ ಉದ್ದೇಶವು ಐಹಿಕಬಾಳನ್ನು ಸ್ಥಗಿತಗೊಳಿಸುವಂತಹ ಸಂಪ್ರದಾಯಗಳೂ ಬೆಳೆದು ಬಂದಿವೆ. ಆದರೆ ಐಹಿಕಬಾಳನ್ನೇ ದೈವೀಜೀವನವನ್ನಾಗಿ ಪರಿವರ್ತಿಸುವ ಪಥವು ಶ್ರೇಷ್ಠವಾದದು. ಮಾನವೀಯ ಎಲ್ಲ ಶಕ್ತಿಗಳ ಸಂವರ್ಧನೆ ಮತ್ತು ಪರಮಾತ್ಮನಿಗಾಗಿ ಅವುಗಳ ಸಮರ್ಪಣೆ, ತನ್ಮೂಲಕ ಸತತವೂ ಪರಮಾತ್ಮನ ಅನುಸಂಧಾನದಲ್ಲಿ ತೊಡಗುವದು ಈ ಪಥದ ಲಕ್ಷಣವಾಗಿದೆ.

ಧಾರ್ಮಿಕ ಪಂಥಗಳಲ್ಲಿ ಮಾತ್ರವಲ್ಲ, ಕಾವ್ಯಸೃಷ್ಟಿಯಲ್ಲಿಯೂ ಅನುಭಾವದ ನಿಲವನ್ನು ಕಾಣಬಹುದಾಗಿದೆ. ಆಂಗ್ಲ ಕವಿ ವರ್ಡ್ಸ್‌ವರ್ಥನ ಕವನಗಳಲ್ಲಿ ಇದನ್ನು ಗುರುತಿಸಲಾಗಿದೆ. ಕವಿಯ ಸೌಂದರ್ಯಾನುಭವದ ಸೀಮೆಯ ಆಚೆಗಿನ ದೈವೀ ಅನುಭವದ ಹಂತವದು. ಮಾನವೀಯ ಬಾಳಿನ ಸಾಮಾನ್ಯ ಹಂತವು ಪ್ರಾಣಾನುಭವದ್ದು, ಕವಿಯದು ಸೌಂದರ್ಯಾನುಭವದ್ದು. ಕವಿಯು ಇದರ ಮುಂದೆ ಸಾಗಿ ಶಿವಾನುಭವದ ಹಂತಕ್ಕೂ ಏರಬಲ್ಲ. ಹಾಗೆ ಏರುವದು ಆವಶ್ಯಕವೆಂದು ಶ್ರೀ ಅರವಿಂದರು ಹೇಳಿದ್ದಾರೆ. ಕವಿಯ ಸ್ಫೂರ್ತಿಯು ಮಾನಸಿಕ ಸ್ತರದ್ದು ಮಾತ್ರ ಆಗಿರಬೇಕಾಗಿಲ್ಲವೆಂಬುದು ಅವರ ಅಭಿಪ್ರಾಯವಾಗಿದೆ. ಅದು ಅಧಿಮಾನಸದ್ದಾಗಿರಬೇಕೆಂದು ಅರವಿಂದರ ನಿಲುಮೆ. ಈ ಬಗೆಗೆ ಅವರ ನುಡಿಗಳು ಹೀಗಿವೆ :

ಲೌಕಿಕಮಟ್ಟದ ಸೌಂದರ್ಯಬೋಧೆಯು ಸಾಮಾನ್ಯವಾಗಿ ಪ್ರಾಣಶಕ್ತಿಯ ಭಾವಗಳಿಗೆ ಸಂವಾದಿಯಾಗಿದೆ. ಅರ್ಥಾತ್ ಈ ಸೌಂದರ್ಯಬೋಧೆಯು ಮಾನಸಿಕ ಸ್ತರದ್ದಾಗಿದೆ. ಅಧಿಮಾನಸ (over mind)ದ ತಿರುಳು ಆಧ್ಯಾತ್ಮಿಕ ಶಕ್ತಿಯದಾಗಿದೆ. ಅದರಲ್ಲಿ ಮನಸ್ಸು ತನ್ನ ವಾಡಿಕೆಯ ಸ್ತರದಿಂದ ಮೇಲಕ್ಕೆ ಏರುತ್ತಿದೆ. ವಿಶ್ವಂಭರ ಚೇತನದ ಆಧಾರ ಪಡೆಯುತ್ತಿದೆ. ಅದು ಲೌಕಿಕ ಸೌಂದರ್ಯವನ್ನು ಸ್ವೀಕರಿಸಿ ಅದರ ಉದಾತ್ತೀಕರಣಗೈಯುತ್ತಿದೆ. ಆಗ ವಾಸ್ತವ ಸಂಗತಿಗಳ ಇಲ್ಲವೆ ಆಲೋಚನೆಗಳ ಸೀಮೆಯ ಸತ್ಯದ ಆಚೆಗಿರುವ ಪರಮಾತ್ಮಸಂಸ್ಪರ್ಶದ ಋತಚಿತ್ ಮೂಡಿ ಬರುತ್ತಿದೆ. ಭವಿಷ್ಯದ ಕವಿತೆಯು ಈ ಋತಚಿತ್ತನ್ನು ಅಭಿವ್ಯಕ್ತಗೊಳಿಸಬೇಕು—ಇದು ಅರವಿಂದರ ವಿವೇಚನೆ.

ಕವಿಯ ಆತ್ಮವು ವಾಚಕನ ಆತ್ಮವನ್ನು ಎಚ್ಚರಿಸುವಂತಾದಾಗ ಅಂತಹ ಕವಿತೆಯು ಘನವಾಗುವದು. ಆಸೆಗೆ (ರಾಗಕ್ಕೆ) ಬಲಿಯಾದ ಆದಮ್ ಸ್ವರ್ಗವನ್ನು ಕಳೆದುಕೊಂಡ. ಪ್ರೇಮ ಮತ್ತು ಏಕತೆ (ಯೋಗ)ಗಳ ಮೂಲಕ ಅವನಿಗೆ ಮತ್ತೆ ಸ್ವರ್ಗ

ಪ್ರಾಪ್ತಿಯಾಯಿತು. ಇದು ಮಿಲ್ಟನ್‌ಕವಿಯ Paradise Lost· Paradise Regained ಈ ಮಹಾಕಾವ್ಯದ ತಿರುಳಾಗಿದೆ.

ಮಠಾಧಿಪತಿಯ ಆತ್ಮವು ಭಕ್ತನ ಆತ್ಮವನ್ನು ಎಚ್ಚರಿಸಬೇಕು. ಹೀಗೆ ನಡೆಯದಿದ್ದಾಗ ಧಾರ್ಮಿಕ ಸಂಸ್ಥೆಯು ವಿಫಲವಾಗುವದು.

ಧಾರ್ಮಿಕ ಇಲ್ಲವೆ ನೈತಿಕಜೀವನವು ನಮ್ಮನ್ನು ಅನುಭಾವದತ್ತ ಕರೆದೊಯ್ಯುವಂತಿರಬೇಕು, ಆಗ ಮಾತ್ರ ಅದು ಸಫಲವೆನಿಸುತ್ತದೆ. ಶರಣಧರ್ಮ, ವಚನಸಾಹಿತ್ಯಗಳು ಈ ದೃಷ್ಟಿಯಿಂದ ಸಾರ್ಥಕವಾಗಿವೆ.

'ನಿಕಟವಾಗಿರು' ಎಂಬ ಅರ್ಥಕೊಡುವ ಮೂಲ ಗ್ರೀಕ್ ಧಾತುವಿನಿಂದ 'ಮಿಸ್ಟಿಸಿಜಮ್' ಪದ ಬಂದಿದೆ. ಆ ಪದಕ್ಕೆ 'ರಹಸ್ಯಜ್ಞಾನ' 'ಪವಿತ್ರಜ್ಞಾನ' ಎಂಬ ಅರ್ಥಗಳೂ ರೂಢವಾಗಿವೆ. ಪರಮಾತ್ಮನೊಂದಿಗೆ ನಿಕಟವಾಗಿರು ಎಂಬ ಅರ್ಥದಲ್ಲಿ ಮಿಸ್ಟಿಸಿಜಮ್ ಪದವನ್ನು ಬಳಸಲಾಗುತ್ತದೆ. ನಿಕಟವಾಗಿರಬೇಕಾದ ವಸ್ತುವು ನಮ್ಮಿಂದ ಹೊರಗೆ ಇರಬಾರದು. ಮಿಸ್ಟಿಸಿಜಮ್, ಇಲ್ಲವೆ ಅನುಭಾವವೆಂದಾಗ ಪರಮಾತ್ಮನು ಹೊರಗಿನ ಒಂದು ವಸ್ತುವಾಗಿ ಉಳಿಯದೆ ಅಂತರಿಕ ಅನುಭವವಾಗಬೇಕು. ಅಂತಹ ಅನುಭವ ಸದಾ ನೆಲೆಯಾಗಿ ಉಳಿಯಬೇಕು. ಪರಮಾತ್ಮನೊಂದಿಗೆ ನೇರವಾದ ಪ್ರತ್ಯಕ್ಷವಾದ ಸಂಪರ್ಕ ಪಡೆಯುವದು ಅನುಭಾವ. ಪರಮಾತ್ಮನನ್ನು ಹೊರಗೆ ಅರಸಬಾರದೆಂಬುವದು ಮಹಾತ್ಮ ಕಬೀರನ ವಾಣಿಯೂ ಆಗಿದೆ:-

'ನಾನು (ಪರಮಾತ್ಮ) ಮಂದಿರ ಮಸೀದಿಗಳಲ್ಲಿ ಇಲ್ಲ. ಕಾಬಾ, ಕೈಲಾಸಗಳಲ್ಲಿ ಇಲ್ಲ. ಧಾರ್ಮಿಕವ್ರತಾಚಾರಗಳಲ್ಲಿಯೂ ಇಲ್ಲ. ಕಸ್ತೂರಿಮೃಗದಲ್ಲಿಯೇ ಕಸ್ತೂರಿಯಿದೆ. ಅದನ್ನು ಹೊರಗೆ ಹುಡುಕಬೇಕಾಗಿಲ್ಲ. ಹೂವಿನ ಸುವಾಸನೆಗಾಗಿ ಹೊರಗೆ ಅಲೆಯಬೇಕಾಗಿಲ್ಲ. ಸಹಸ್ರಾರ ಪದ್ಮವು ನಿನ್ನ ಹೃದಯದೊಳಗೇ ಇದೆ.'

ಬಾಉಲ್ ಪದಗಳಲ್ಲಿ, ಮಹಾರಾಷ್ಟ್ರದ ಸಂತರ ಅಭಂಗಗಳಲ್ಲಿ, ತಮಿಳುನಾಡಿನ ತೇವಾರಪದಗಳಲ್ಲಿ ಕರ್ನಾಟಕದ ದಾಸರ ಹಾಡು, ಶರಣರ ವಚನಗಳಲ್ಲಿ ಈ ಬಗೆಯ ವಾಣಿಯು ಮೂಡಿ ಬಂದಿರುವುದನ್ನು ನಾವು ಕಾಣುತ್ತೇವೆ.

ಬಾಹ್ಯವಸ್ತು, ಸಂಗತಿಗಳತ್ತ ಹರಿಯುವ ಮನವು ಅಂತರಂಗದಲ್ಲಿಯೇ ತನ್ನ ಕೇಂದ್ರವನ್ನು ಕಂಡುಕೊಳ್ಳಬೇಕು. ಹೀಗಾಗುವುದಕ್ಕೆ ಆಸೆ, ಅಹಂಕಾರ, ಅಂಜಿಕೆ, ಭಿನ್ನತಾಭಾವಗಳು ಅಳಿಯಬೇಕಾದುದು ಆವಶ್ಯಕ. ಆಂತರಿಕ ಕೇಂದ್ರದತ್ತ ಹೊರಳಿ ಅಲ್ಲಿ ಪರಮಾತ್ಮನ ಅನುಭವ ಪಡೆಯುವುದು ಸುತ್ತಲೂ ಪರಮಾತ್ಮನ ಸಾನ್ನಿಧ್ಯವನ್ನು ಕಂಡುಕೊಳ್ಳುವುದು ಅನುಭಾವ.

ಡಾ॥ ಆರ್. ಡಿ. ರಾನಡೆ ಅವರ 'ಕನ್ನಡಸಂತರ ಪರಮಾರ್ಥ ಪಥ' ಎಂಬ ಗ್ರಂಥದಲ್ಲಿ ಅನುಭಾವದ ಕೆಲವು ಸಾಮಾನ್ಯ ಲಕ್ಷಣಗಳ ನಿರೂಪಣೆಯಿದೆ. ಅದನ್ನು ಹೀಗೆ ಸಂಗ್ರಹಿಸಬಹುದು :

೧) ಅನುಭಾವವೆಂದರೆ ಪರಮಾತ್ಮನ ಸಾಕ್ಷಾತ್ಕಾರದ ದರ್ಶನ.

೨) ಅದಕ್ಕಾಗಿ ಅತೀಂದ್ರಿಯ ಅನುಭಾವವನ್ನು ಪಡೆಯಬಲ್ಲ ಪ್ರತಿಭಾಶಕ್ತಿ ಬೇಕು.

೩) ಅದು ಬುದ್ಧಿ, ಭಾವನೆ, ಸಂಕಲ್ಪಶಕ್ತಿಗಳನ್ನು ಮೀರಿದ ಶಕ್ತಿಯಾಗಿದೆ.

೪) ಅಂತಃಸ್ಫುರಣದ ಪ್ರಕ್ರಿಯೆ, ಪ್ರತಿಭೆ ಮತ್ತು ಅತೀಂದ್ರಿಯ ಇವುಗಳು ಅಲ್ಲಿ ಸೇರ್ಪಡೆಯಾಗಿವೆ.

ಮೇಲ್ಕಂಡ-ಗ್ರಂಥದಲ್ಲಿ ಡಾ॥ ರಾನಡೆಯವರು ಅನುಭಾವದ ಸಾತತ್ಯವನ್ನು ಸ್ವೀಕರಿಸಿದ್ದಾರೆ. ಅನುಭಾವದ ಮನೋವೈಜ್ಞಾನಿಕ ಲಕ್ಷಣಗಳನ್ನಲ್ಲದೆ ಅವರು ಪರತತ್ವಶಾಸ್ತ್ರೀಯ (Metaphysical) ಲಕ್ಷಣಗಳನ್ನೂ ಉಲ್ಲೇಖಿಸಿದ್ದಾರೆ. ಸಾರ್ವತ್ರಿಕವಾದುದು ಅನಿವಾರ್ಯವಾದುದು ಸಪ್ರಮಾಣವಾಗುತ್ತಿದೆ. ಈ ದೃಷ್ಟಿಯಿಂದ ಅನುಭಾವವು ಸಪ್ರಮಾಣವಾದುದೆಂದು ಅವರು ಹೇಳಿದ್ದಾರೆ. ಏಕೆಂದರೆ ಪ್ರಪಂಚದ ಸಂತರ ಅನುಭಾವಗಳಲ್ಲಿ ಸಾದೃಶ್ಯವಿದೆಯೆಂದು ಅವರು ತೋರಿಸಿಕೊಟ್ಟಿದ್ದಾರೆ. ಈ ಗ್ರಂಥದ ಕೊನೆಯ ಭಾಗದಲ್ಲಿ ಅನುಭಾವದ ಪರಿಣಾಮಗಳನ್ನು ವಿವೇಚಿಸುವಾಗ 'ಇದೇ ಅನುಭಾವ ಮಂಟಪವು' ಎಂಬ ಪದವನ್ನು ಉದಾಹರಿಸಿದ್ದಾರೆ :

ಇದೆ ಅನುಭಾವ ಮಂಟಪವು
ಇದು ಘನತರ ಮೋಕ್ಷದುನ್ನನಿಯ ಸಾಧನವು

* *

ಇದೆ ಕರಸ್ಥಲ-ಇಷ್ಟ ಪ್ರಣವು
ಇದೆ ಷಟ್ಸ್ಥಲ ಬ್ರಹ್ಮಘೋಷ

* *

ಪರಮಾತ್ಮನುಭಾವ ಮಂಟಪ ವಿಸ್ತರಿಸಿ
ಉರುವ ಕನ್ನಡಿಯ ಶೃಂಗರಿಸಿ

* *

ಮೃಡನು ಒಲಿದು ಅನುಭಾವದುಜ್ವಲಿಗೆ
ಪೊಡವಿಯೊಳು ಶರಣ ಸಂತತಿಗೆ

* *

ಪಟ್ಸ್ಥಲದೊಳು ತುಂಬಿ ತುಳುಕಿತು

—ಇವು ಆ ಪದದ ಕೆಲವು ನುಡಿಗಳು.

ಇಲ್ಲಿ 'ಅನುಭಾವ ಮಂಟಪವು ವಿಸ್ತರಿಸಿ, ಕನ್ನಡಿ ಶೃಂಗರಿಸುವುದು ದೃಶ್ಯಾತ್ಮಕ (Visual) ; 'ಬ್ರಹ್ಮಘೋಷ'ವು ಶ್ರವಣಾತ್ಮಕ ; 'ತುಂಬಿ ತುಳುಕುವುದು' ಭಾವಾತ್ಮಕ. ಹೀಗೆ ಅನುಭಾವದಲ್ಲಿ ದೃಶ್ಯ, ಶ್ರವಣ, ಭಾವ-ಈ ಮೂರು ವಿಧಗಳು ಸೇರ್ಪಡೆಯಾಗುತ್ತಿವೆ. 'ಶರಣ ಸಂತತಿಗೆ' ಎಂಬಲ್ಲಿ ಅನುಭಾವವು ಸಾಮೂಹಿಕವಾಗಿ ರೂಢವಾಗುವ ಬಗೆಯೂ ಸೂಚಿತವಾಗಿದೆ.

ಈಗ ಅನುಭಾವವನ್ನು ಕುರಿತ ವಚನಸಾಹಿತ್ಯದಲ್ಲಿಯ ಕೆಲವೊಂದು ನಿರೂಪಣೆಯೊಂದಿಗೆ ಈ ಲೇಖನವನ್ನು ಕೊನೆಗೊಳಿಸುತ್ತೇನೆ.

ಪ್ರಕೃತಿಬದ್ಧವಾದ ಜಗತ್ತಿಗೆ ಸೀಮಿತನಾಗದೆ ಮಾನವನು ತನ್ನ ನಿಜವನ್ನು ಅರಿತುಕೊಂಡು ಲಿಂಗಾನುಭವದ ಮೂಲಕ ಪರಶಿವನಲ್ಲಿ ತನ್ಮಯತೆ ಪಡೆಯಬೇಕು. ತಾನು ಪಡೆಯುವ ಜ್ಞಾನವು ತನಗೆ ತೃಪ್ತಿಯನ್ನು ತರುವಂತಾಗಬೇಕು. ಅನುಭಾವವು ಅಂತಹ ತೃಪ್ತಿಯನ್ನು ಒದಗಿಸಬಲ್ಲುದು.

ತನ್ನೊಳಗೆ, ಸುತ್ತಣ ಜಗತ್ತಿನಲ್ಲಿ ಪರಶಿವನನ್ನು ಕಾಣಬೇಕು. ಹಾಗೆ ಕಾಣುವಲ್ಲಿ ತನ್ಮಯತೆ ಪಡೆಯುವುದು ಅನುಭಾವ. ಬಹುಜನರ ಇಲ್ಲವೆ ಶಾಸ್ತ್ರಗಳ ಹೇಳಿಕೆಯು ಪ್ರಮಾಣವಲ್ಲ. ತನ್ನ ನಿಜದ ಅರಿವಿನಿಂದ ಹೊಳೆದುದು ಪ್ರಮಾಣ. ಅದು ತನ್ನ ಹೃದಯಸ್ಥ ಲಿಂಗದ ಬೆಳಕಿನಿಂದ ಹೊಳೆಯುವುದು.

ಅನುಭಾವವು ಶಿಶು ಕಂಡ ಕನಸಿನಂತೆ ಅದು ಅನಿರ್ವಚನೀಯ. ಆದರೆ ಅದನ್ನು ಸಾಂಕೇತಿಕವಾಗಿ ನಿರೂಪಿಸಬಹುದು. ಪ್ರಶಾಂತ, ಗಂಭೀರ ಪರಿಸರದಲ್ಲಿ ಅನುಭಾವವು ಸಾಧ್ಯವಾಗುತ್ತಿದೆ; ಸಂತೆಯ ಗಲಭೆಯಲ್ಲಿಯಲ್ಲ.

ಮರ ಮರ ಮಥನಿಸಿ ಕಿಚ್ಚು. ಆತ್ಮ ಆತ್ಮ ಮಥನಿಸಿ ಅನುಭಾವ. ಅದು ತನುವಿನ ಗುಣಗಳನ್ನು ಸುಟ್ಟುಹಾಕುವುದು, ಆಗ ಜೀವಭಾವವಳಿದು ದೇಹಭಾವ ಮೂಡಿಬರುವುದು. ಪರಶಿವನೊಂದಿಗೆ ಭಿನ್ನವಿಲ್ಲದೆ ಒಂದುಗೂಡುವ ಅನುಭವದ ಸತತವಾದ ನಿಲವೇ ಅನುಭಾವ.

ಬಯಲನೊಳಗೊಂಡು ಬದುಕುವ ಅನುಭಾವಿಯ ಬದುಕು ಸಾರ್ಥಕವಾದುದು. ಅನುಭಾವಿಯ ಆನಂದಾತಿಶಯವನ್ನು ಚೆನ್ನಬಸವಣ್ಣನವರ ಶರಣಸ್ಥಲದ ಒಂದು ವಚನ ಬಣ್ಣಿಸಿದುದು ಹೀಗೆ :

ಕಂಗಳ ನೋಟ, ಹೃದಯದ ಜ್ಞಾನ ; ಮನದೊಳಗೆ ಮಾತನಾಡುತಿರ್ದೆನಯ್ಯಾ !
ಜೇನಮಳೆಗಳು ಕರೆದವು ; ಅಮೃತದ ಕಳೆಗಳು ಸುರಿದವು. ಕೂಡಲಚೆನ್ನಸಂಗನೆಂಬ ರಸಸಾಗರದೊಳಗೋಲಾಡುತಿರ್ದೆನಯ್ಯಾ !

ವಚನಸಾಹಿತ್ಯದಲ್ಲಿ ನಿರೂಪಿತವಾದ ಅನುಭಾವಿಯ ನಿಲುಗಡೆ ಹೀಗಿದೆ :

ಸ್ವಸ್ಥಾನ ಸುಸ್ಥಿರದ ಸುಮನ ಮಂಟಪದೊಳಗೆ
ನಿತ್ಯ ನಿರಂಜನ ಪ್ರಭೆಯ ಬೆಳಗು
ಶಿವಯೋಗದನುಭಾವ—ಆ ನಿಲುಗಡೆಯಲ್ಲಿ ಶರಣನು
ನಿಶ್ಚಿಂತ, ನಿಜೈಕ್ಯ, ನಿಜಸುಖ, ನಿರಾಳ.

# ಕರಣಹಸುಗೆ ಮತ್ತು ಮಿಶ್ರಾರ್ಪಣ

—ವಸಂತ ಕುಷ್ಟಗಿ

ವಚನಧರ್ಮಕ್ಕೆ ಒಂದು ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟವರಲ್ಲಿ ಅಲ್ಲಮಪ್ರಭು, ಬಸವಣ್ಣ, ಚೆನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ ಈ ಐವರು ವಚನಧರ್ಮಸಾರದ ಪಂಚ ಮಹಾಶಕ್ತಿಗಳು. ಅವರ ಸತತ ಅನುಷ್ಠಾನದ ಪ್ರತಿಫಲದಿಂದ ಹನ್ನೆರಡನೆಯ ಶತಮಾನದ ಕನ್ನಡಸಮಾಜವು ಒಂದು ವ್ಯವಸ್ಥಿತ ಸಮಾಜವಾಯಿತು. ಅದು ಕುರುಡುನಂಬಿಕೆಗಳನ್ನು ಅದಷ್ಟು ಒನೆದು, ಮಾನವಕುಲಕ್ಕೆ ದೇವನೊಬ್ಬನೆ. ಧರ್ಮವು ಒಂದೆ ಎಂಬುವದನ್ನು ಆಗಿನ ಜನರ ವಿಶ್ವಾಸದಲ್ಲಿ ಮೂಡಿಸಿತು. ಅದರ ಪರಿಣಾಮವಾಗಿ ಮೇಲು–ಕೀಳು. ಹೆಣ್ಣು–ಗಂಡು, ಬಡವ–ಬಲ್ಲಿದ ಎಂಬ ಭೇದಗಳು ಅಳಿಯ ತೊಡಗಿದವು, ಆ ಸಮಾಜದ ಆದರ್ಶಗಳು ಜಗತ್ತಿನ ಕಣ್ಣುಗಳನ್ನೇ ತೆರೆಸಿದವು. ಇದು ವಚನಧರ್ಮವು ಸಾಧಿಸಿದ ಮಹತ್ತರ ಅಮೂಲ್ಯವಾದ ಸಾಧನೆ.

ವಚನಧರ್ಮವೆಂದರೆ ಮತ್ತೆ ಬೇರೆ ಯಾವುದಾದರೂ ಹೊಸದಾದ ಧರ್ಮವಲ್ಲ. ಭರತಖಂಡದಲ್ಲಿರುವ ವೀರಶೈವ ಧರ್ಮವೇ ಅದು. ಆ ಧರ್ಮದ ರೀತಿನೀತಿಗಳನ್ನು, ತತ್ವಶಾಸ್ತ್ರಗಳನ್ನು ಕನ್ನಡದ ಮುಖಾಂತರ ವಚನಧರ್ಮದ ಋಷಿಗಳು ಸ್ವಂತ ಅನುಭವಗಳ ದೃಷ್ಟಾಂತಗಳ ಆಧಾರಗಳೊಡನೆ ಹೇಳಿರುವದೇ ವಚನಧರ್ಮ. ನಮ್ಮ ಚಾರಿತ್ರ್ಯವೇ ವಚನವಾಗಿ ಬಂದು ನಿಲ್ಲುವ ಧರ್ಮವೇ ವಚನಧರ್ಮವಾಗಿ ಅವ್ಯಾಹತವಾಗಿ ಸಾಗುವ ಬದುಕಿಗೆ ಬೆಳಕಿನ ಕೊಡುಗೆಯಾಗಿ ಇಂದಿನವರೆಗೂ ನಡೆದು ಬಂದಿರುವದೇ ಅದು. ಈ ವಚನಧರ್ಮವು ಸಾರುವ ಷಟ್‌ಸ್ಥಲಸಿದ್ಧಾಂತವನ್ನು ಅತ್ಯಂತ ಶುದ್ಧವಾದ ಶಾಸ್ತ್ರದೃಷ್ಟಿಯಿಂದ ಹೇಳಿದವರಲ್ಲಿ ಚೆನ್ನಬಸವಣ್ಣನನ್ನು ಮೀರಿಸುವವರು ಈವರೆಗೆ ಯಾರೂ ಹುಟ್ಟಿಲ್ಲ.

ಚೆನ್ನಬಸವಣ್ಣನು ಬಸವಣ್ಣನ ಸೋದರಳಿಯ, ಮಹಾಜ್ಞಾನಿ, ಷಟ್‌ಸ್ಥಲ ಚಕ್ರವರ್ತಿ. ಅನುಭವಮಂಟಪದ ಅಧ್ಯಕ್ಷ ವೈರಾಗ್ಯನಿಧಿ ಅಲ್ಲಮಪ್ರಭು ಚೆನ್ನಬಸವಣ್ಣನನ್ನು ಕುರಿತು 'ಬಯಲ ಬಣ್ಣಕ್ಕೆ ತಂದು ನೆಳಲ ಶೃಂಗಾರವ ಮಾಡಿದನು ಗುಹೇಶ್ವರನ ಶರಣ ಚೆನ್ನಬಸವಣ್ಣ' ಎಂದು ನುಡಿದುದಲ್ಲದೆ,

> ಕಿರಿಯರಾದರೇನು ಹಿರಿಯರಾದರೇನು ಅಱಿವಿಂಗೆ ಹಿಱಿದು ಕಿಱಿದುಂಟೆ ?
> ಆದಿ ಅನಾದಿಯಿಲ್ಲದಂದು ಅಜಾಂಡ ಬ್ರಹ್ಮಾಂಡಕೋಟಿಗಳು ಉದಯವಾಗದಂದು
> ಗುಹೇಶ್ವರಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿಯೆಂದು ಕಾಣಬಂದಿತ್ತು ಕಾಣಾ ಚೆನ್ನಬಸವಣ್ಣಾ
> ಲೋಕ ಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ
> ಗುಹೇಶ್ವರ ಶರಣ ಚೆನ್ನಬಸವಣ್ಣನ ಘನವನು
> ಬಸವಣ್ಣನ ಕೃಪೆಯಿಂದಲಾನಱಿದು ನಮೋ ನಮೋ ಎನುತಿರ್ದೆನು

ಎಂದು ಅಭಿಮಾನದಿಂದ ಕೊಂಡಾಡಿದ್ದಾನೆ. ಭಕ್ತಿಭಂಡಾರಿ ಬಸವಣ್ಣನು,

> 'ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯ
> ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯ
> ಇದರ ಸಂಗಸುಖದನುಭವವನು ಕೂಡಲಸಂಗಮದೇವ ತಾನೇ ಬಲ್ಲ.
> ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬಳಸಿನ ರಾಶಿಯ ನೋಡಾ
> ಸುಗಂಧ ಬಂಧ ಬಂಧುರದಂತೆ ಹುಟ್ಟುತ್ತಿದೆ ಪರಿಮಳ
> ಆದಿ ಅನಾದಿ ಇಲ್ಲದೆ ಮುನ್ನ ತನ್ನಂದವೇ ತಾನಾಗಿರ್ದ ಕಾರಣ
> ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು ಲಿಂಗಸ್ವಯವಾಗಿ
> ಎನಗೆ ಗತಿಪಥವ ತೋರಿಸಬೇಕೆಂದು ಆಗಾದನು—
> ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನು,
> ನಿಮ್ಮ ಚಮ್ಮಾವುಗೆಯ ಹೊತ್ತುಕೊಂಡು
> ಕುಣಿದಾಡುವೆ ಕಾಣಾ ಚೆನ್ನಬಸವಣ್ಣಾ'

ಎಂದು ತನ್ನ ಹೃದಯದಲ್ಲಿ ಹಿರಿದಾದ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾನೆ. ಕರ್ಮಯೋಗಿ ಸಿದ್ಧರಾಮನು,

'ಕ್ರಿಯೆ ಅದು ಚೆನ್ನಬಸವಣ್ಣನ ಎಡಪಾದ
ಜ್ಞಾನವದು ಚೆನ್ನಬಸವಣ್ಣನ ಬಲಪಾದ
ನಾನು ಅವರ ಚಿಮ್ಮಾವುಗೆ
ನೀನು ಅವರ ಮನೆಯ ದಾಸನು ನೋಡಯ್ಯ ಕಪಿಲಸಿದ್ಧಮಲ್ಲಿಕಾರ್ಜುನಾ.
ಚೆನ್ನಬಸವಣ್ಣ ತೋಱಿದ ಹಾದಿ ಸಫಲವಾಯಿತ್ತಾಗಿ
ನಾನು ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು.
ಹೋದ ಜೀವಕ್ಕೆ ತನ್ನ ಕರುಣವೆಂಬ ಮರುಜೇವಣಿಯಿಂ
ಎತ್ತಿದನು ಚೆನ್ನಬಸವಣ್ಣ'

ಎಂದು ಆತನ ಬಗ್ಗೆ ತನಗಿರುವ ಗೌರವವನ್ನು ತನ್ನ ಮನದ ಗೌರೀಶಂಕರದಲ್ಲಿರಿಸಿಕೊಂಡು ಮೆಚ್ಚಿ ನುಡಿದಿದ್ದಾನೆ. ಶರಣಸತಿ ಲಿಂಗಪತಿ ಭಕ್ತಿಯ ಶಿರೋಮಣಿ ಮಹದೇವಿಯಕ್ಕ,

'ಮಾಟ ಕೂಟವಾಯಿತ್ತಯ್ಯ ಬಸವಣ್ಣಂಗೆ
ನೋಟ ಕೂಟವಾಯಿತ್ತಯ್ಯ ಅಲ್ಲಮಪ್ರಭುದೇವಂಗೆ
ಭಾವಕೂಟವಾಯಿತ್ತಯ್ಯ ಅಜಗಣ್ಣಂಗೆ
ಸ್ನೇಹಕೂಟವಾಯಿತ್ತಯ್ಯ ಸೊಡ್ಡಳ ಬಾಚರಸಣ್ಣಂಗೆ
ಇವರೆಲ್ಲರ ಕೂಟವಾಯಿತ್ತಯ್ಯ ಚೆನ್ನಬಸವಣ್ಣಂಗೆ'
'ಚೆನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ನಾಸ್ತಿಯಾಯಿತ್ತು'
'ಸಮ್ಯಜ್ಞಾನಿ ಚೆನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು
ಎನ್ನ ಭವ ನಾಸ್ತಿಯಾಯಿತ್ತಯ್ಯಾ ಶ್ರೀಪ್ರಭುವೆ'

ಎಂದು ತನಗೆ ಚೆನ್ನಬಸವಣ್ಣನಿಂದ ಆದ ಉಪಕಾರವನ್ನು ತೆರೆದ ಮನಸ್ಸಿನಿಂದ ಒಪ್ಪಿಕೊಂಡು ಹಾಡಿದ್ದಾಳೆ. ಮಡಿವಾಳಮಾಚಿತಂದೆಯು,

'ಮಾಯೆಕ್ಕೆ ಹೊರಗಾದ ನಿರ್ಮಾಯ ತಾನೆಂಬ ನುಡಿಗೆ ನಾಚಿ
ನೀನೆಂಬ ನುಡಿಗೆ ಹೇಸಿ ತಾನು ತಾನಾದ ಘನಮಹಿಮ ;
ಕಾಯದಲ್ಲಿ ಕುರುಹಿಲ್ಲ, ಭಾವದಲ್ಲಿ ಭ್ರಮೆಯಿಲ್ಲ
ಜ್ಞಾನ ತಾನೆಂಬ ಭೇದವಿಲ್ಲ.
ಸಾವಯನಲ್ಲ, ನಿರವಯನಲ್ಲ ನಿಮ್ಮ ಶರಣ ಚೆನ್ನಬಸವಣ್ಣನು

ಎಂದು ಚೆನ್ನಬಸವಣ್ಣನ ವ್ಯಕ್ತಿತ್ವದ ಸ್ಪಷ್ಟಕಲ್ಪನೆಯನ್ನು ನಮಗೆ ನೀಡಿದ್ದಾನೆ. ಮರುಳ ಶಂಕರದೇವನು,

'ಷಟ್‌ಸ್ಥಲ ಚಕ್ರವರ್ತಿಯಯ್ಯ ಚೆನ್ನಬಸವಣ್ಣನು
ಎನ್ನ ನಿರ್ಮಳಾತ್ಮನ ಚೇತನನಯ್ಯ
ಷಟ್‌ಸ್ಥಲಬ್ರಹ್ಮಿ ಚೆನ್ನಬಸವಣ್ಣನು'

ಎಂದು ನಿರ್ಮಲಚಿತ್ತದಿಂದ ಹೊಗಳಿದ್ದಾರೆ. ಹೀಗೆ 'ಷಟ್‌ಸ್ಥಲ ಚಕ್ರವರ್ತಿ' ಎಂದು ಎನ್ನಿಸಿಕೊಂಡ ಚೆನ್ನಬಸವಣ್ಣನು ಭಾರತೀಯ ದಾರ್ಶನಿಕರ ಇತಿಹಾಸದಲ್ಲಿ ಹೊಸಬೆಳಕನ್ನು ಚೀರಿದ ಕಣ್ಣು. ಈತನು ನಿರೂಪಿಸಿದ ಷಟ್‌ಸ್ಥಲಸಿದ್ಧಾಂತವು ವೇದಗಳಲ್ಲಿ ಮೊಳಕೆಯೊಡೆದು, ಪುರಾಣಗಳಲ್ಲಿ ಚಿಗುರಿ, ಆಗಮಗಳಲ್ಲಿ ಹೂವಾಗಿ ವಚನಗಳಲ್ಲಿ ಮಾಗಿದ ಹಣ್ಣಾಗಿ ಎಲ್ಲರಿಗೂ ಬೇಕಾಗಿರುವ ವಸ್ತುವಾಗಿ ಬೆಲೆ ಪಡೆದಿದೆ. ಅದನ್ನು ಕಲ್ಯಾಣದ ಅನುಭವಮಂಟಪದಲ್ಲಿ ಎಲ್ಲರೂ ಒಪ್ಪಿಕೊಳ್ಳುವ ರೀತಿಯಲ್ಲಿ ನಿರೂಪಿಸಿ ಈ ಸಿದ್ಧಾಂತಕ್ಕೊಂದು ವಿಶಿಷ್ಟಸ್ಥಾನವನ್ನು ಜಗತ್ತಿನ ತತ್ತ್ವಶಾಸ್ತ್ರದಲ್ಲಿ ಒದಗಿಸಿಕೊಟ್ಟಿದ್ದಾನೆ. ಅಂತೆಯೇ ಈತನಿಗೆ 'ಷಟ್‌ಸ್ಥಲ ಚಕ್ರವರ್ತಿ' ಎಂಬ ಬಿರುದು ಅಕ್ಷರಶಃ ಒಪ್ಪುತ್ತದೆ.

ಚೆನ್ನಬಸವಣ್ಣನಿಗೆ, ವೀರಶೈವರಲ್ಲಿ ವಿಶಿಷ್ಟವಾದ ತನ್ನದೇ ಆದ ಸ್ಥಾನವೊಂದಿರಲಿಕ್ಕೆ ಬಲವಾದ ಕಾರಣವಿದೆ. ಅದೇನೆಂದರೆ ಆತನು ತನ್ನ ವಚನಗಳಲ್ಲಿ 'ವೀರಶೈವ' ಎಂಬ ಪದವನ್ನು, ಈವರೆಗೆ ತಿಳಿದಮಟ್ಟಿಗೆ, ಮೊತ್ತಮೊದಲು ಬಳಸಿದವನೇ ಅವನು. ಈ ಮೊದಲು 'ವೀರಶೈವ' ಪದವನ್ನು ವಚನಗಳಲ್ಲಾಗಲೀ, ಶಾಸನಗಳಲ್ಲಾಗಲೀ ಬಳಸಿದುದು ನಮಗಿನ್ನೂ ಕಂಡುಬಂದಿಲ್ಲ. ಅಷ್ಟೇ ಅಲ್ಲ, ಬಸವಣ್ಣ ನಿರೂಪಿಸಿದ ಧರ್ಮದ ಪ್ರಸಾರಕ್ಕೆ ಬೇಕಾಗುವ ಆವಶ್ಯಕ ಗ್ರಂಥಗಳನ್ನು ಚೆನ್ನಬಸವಣ್ಣನು ಬರೆದು ಉಪಕಾರ ಮಾಡಿರುವುದು ಕೂಡ ಮೇಲಿನ ಮಾತಿಗೆ ಪೋಷಣೆ ನೀಡುವುದೆಂಬುದನ್ನು ನಾವು ಇಲ್ಲಿ ಗಮನಿಸಬೇಕು. ಆತನು ವಚನಗಳ ಜೊತೆಗೆ, 'ಕರಣಹಸುಗೆ', 'ಮಿಶ್ರಾರ್ಪಣ', 'ಮಂತ್ರಗೋಪ್ಯ', 'ಕಾಲಜ್ಞಾನ', 'ಅನುಭಾವಗೀತೆಗಳು' ಮೊದಲಾದ ಕೃತಿಗಳನ್ನು ರಚನೆ ಮಾಡಿರುವುದನ್ನು ಇದೇ ಸಂದರ್ಭದಲ್ಲಿ ನೆನೆಯುವುದು ಔಚಿತ್ಯಪೂರ್ಣವಾದುದು. ಈ ಎಲ್ಲ

ಗ್ರಂಥಗಳು ವೈಜ್ಞಾನಿಕವಾಗಿಯೇ ರಚನೆಯಾಗಿವೆಯೆಂದು ಹೇಳಿದರೂ ತಪ್ಪಾಗುವುದಿಲ್ಲ. ಈ ಎಲ್ಲ ಗ್ರಂಥಗಳಲ್ಲಿ, 'ಕರಣಹಸುಗೆ' ಮತ್ತು 'ಮಿಶ್ರಾರ್ಪಣ' ಗ್ರಂಥಗಳು ಪ್ರಮುಖವಾದುವು. ಸೃಷ್ಟಿಶಾಸ್ತ್ರ ಮತ್ತು ಮನಶ್ಶಾಸ್ತ್ರಗಳ ಅಂತರಾಳವೆಲ್ಲ ಈ ಗ್ರಂಥಗಳಲ್ಲಿ ಮಿಡಿಯುತ್ತಿರುವುದೇ ಆ ಗ್ರಂಥಗಳಿಗೆ ಅಪೌರ್ವವಾದ ಮಹತಿಯನ್ನು ತಂದುಕೊಟ್ಟಿದೆ.

'ಕರಣಹಸುಗೆ'ಯು ಸೃಷ್ಟಿಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯಗಳನ್ನು ವಿವರಿಸುವ ಚಿಕ್ಕ ಗ್ರಂಥ. ವೀರಶೈವಧರ್ಮವು ನೀಡುವ ಪ್ರಣವದ ಸೃಷ್ಟಿಕಲ್ಪನೆಯ ಸ್ಪಷ್ಟಚಿತ್ರವನ್ನು ನಿರೂಪಿಸುವ ಮಹತ್ತ್ವದ ಗ್ರಂಥ. ಗ್ರಂಥಾರಂಭದಲ್ಲಿ ಪ್ರಣವದ ಉತ್ಪತ್ತ್ಯವನ್ನು ಹೇಳುವಾಗ 'ಅ'ಕಾರ'ಉ'ಕಾರ'ಮ'ಕಾರಗಳೆಂಬ ಮೂರು ಬೀಜಾಕ್ಷರಗಳ ಮಾತು ಬರುತ್ತದೆ. ಅಕಾರ ನಾದ, ಉಕಾರ ಬಿಂದು, ಮಕಾರ ಕಳೆ. ಅವೇ ಅನುಕ್ರಮವಾಗಿ ರುದ್ರ, ಈಶ್ವರ ಮತ್ತು ಸದಾಶಿವ. ಈ ಅಕಾರ ಉಕಾರ ಮಕಾರಗಳಿಗೆ ನಾದ ಬಿಂದು ಕಳೆಗಳು ಆಧಾರವಾದರೆ, ಪ್ರಕೃತಿಯು ನಾದ ಬಿಂದು ಕಳೆಗಳಿಗೆ ಆಧಾರ. ಪ್ರಕೃತಿಗೆ ಪ್ರಾಣವೇ ಆಧಾರ. ಆ ಪ್ರಾಣಕ್ಕೆ ಲಿಂಗ ಆಧಾರ. ಇಲ್ಲಿ ಅ ಎಂದರೆ ಅನಾಹತ, ಉ ಎಂದರೆ ನಾದವಿಳಿಯುವುದು, ಮ ಎಂದಾಗ ಬಿಂದು ಬಂದು ಸೇರಿ ಶಿವಶಕ್ತಿಯಾಗಿ ಓಂಕಾರವಾಗುವುದೆಂದು ಅರ್ಥ. ಇದನ್ನು ಚೆನ್ನಬಸವಣ್ಣನ ಮಾತಿನಲ್ಲಿ,

'ಅಕಾರ ಪ್ರಣವವೇ ಚಿನ್ನಾದ ಸ್ವರೂಪವಾಗಿರ್ಪುದು...
ಯಥಾದೀರ್ಘಘಂಟಾ ನಿನಾದವತ್...
ಓಂ ಓಂ ಓಂ ಎಂದು ಸುನಾದ ಘೋಷವುಳ್ಳದ್ದೇ ಅಕಾರ
ಪ್ರಣವ ; ಉಕಾರ ಪ್ರಣವವೇ ಚಿದ್ಬಿಂದು...
ಯಥಾಸುವರ್ಣ ತೈಲಧಾರವತ್ ಅಂತಪ್ಪುದೊಂದು
ಚಿದ್ಬಿಂದು ಪ್ರಕಾಶವನ್ನುಳ್ಳದ್ದೇ ಉಕಾರ ಪ್ರಣವ ;
ಮಕಾರ ಪ್ರಣವವೇ ಚಿತ್ಕಳಾಸ್ವರೂಪವಾಗಿರುತ್ತಿಹುದು...
ಯಥಾ ಅರುಣ ಪ್ರಕಾಶವತ್ ಮಧ್ಯಾಹ್ನ
ಕಾಲದ ಚಿಂಡ ಸೂರ್ಯಕೋಟಿಗಳ ಪ್ರಕಾಶವನ್ನು ಕೀಳ್ಪಡಿಸಿ
ಬೆಳಗಲ್ಪಟ್ಟ ಮಹಾಪ್ರಕಾಶವನ್ನುಳ್ಳದ್ದೇ ಮಕಾರ ಪ್ರಣವ'

ಎಂದು ಓದಿ ಮನನ ಮಾಡಿಕೊಂಡು ಸೊಗಸಿನಲ್ಲಿ ಆನಂದ ಪಡೆಯಬೇಕು.

ಈ ಮಾತುಗಳನ್ನು ವೀರಶೈವ ತತ್ತ್ವಪ್ರಕಾಶಿಕೆಯು,

'ಜನ್ಯವಾಗುವಂತಹ ಸಮಸ್ತತೆಯು ಇಂಬಾದ ನಾದ ಉದಯಿಸುವದಕ್ಕೆ ನಿರವಯದಲ್ಲಿ ಒಂದೂ ಸಾಧನವಿಲ್ಲದೆ ತನ್ನಿಂದ ತಾನೇ ಉಂಟಾದ ಲೀಲೆಯೊಂದುಂಟು...ಅದರಲ್ಲಿ ತೋರಿದ ಲೀಲೆಯೇ ನೆನಹು; ಅದೇ ಅದುರು. ಅದುರಿದ ಮಾತ್ರದಿಂದ ಅತಿಸೂಕ್ಷ್ಮನಾದ ಘೋಷವುಂಟಾಗುವುದು'

–ಎಂದು ವಿವರಿಸಿದೆ. ಈ ಎಲ್ಲ ಮಾತುಗಳನ್ನು ಮನದಂದಾಗಲೆ ನಮ್ಮ ಕಣ್ಣೆದುರು ಮಾಂಡೂಕ್ಯೋಪನಿಷತ್ತಿನಲ್ಲಿ ಹೇಳಿದ,

'ಓಂ ಮಿತ್ಯೇತದಕ್ಷರಮಿದಂ ಸರ್ವಂ' 'ಸರ್ವಂಹ್ಯೇತದ್ ಬ್ರಹ್ಮ' 'ಪ್ರಪಂಚೋ ಪರಮಃ ಶಿವಃ ಅದ್ವೈತಃ ಏವಂ ಓಂಕಾರಃ'
'ಓಂಕಾರೋಧಿಮಾತ್ರಂ ಪಾದಾ ಮಾತ್ರಾ ಅಕಾರ ಉಕಾರ ಮಕಾರ ಇತಿ'

ಎಂಬ ಮಾತುಗಳು ಪಳಂಚನೆ ಮಿಂಚುತ್ತವೆ. ಅದರಂತೆ ದಾಸಸಾಹಿತ್ಯದಲ್ಲಿಯೂ ಪ್ರಣವಮಂತ್ರದ ವಿಚಾರವು ಅಲ್ಲಲ್ಲಿ ಬರುತ್ತದೆ. 'ತಂತ್ರಸಾರ' ಎಂಬ ಕೃತಿಯಲ್ಲಿ ಕಮಲಾಸನನು ಬಂದು ಲಕ್ಷ್ಮೀಲೋಲನಿಗೆ, 'ಆವ ದೇವೋತ್ತಮನು ಆವಾವ ಗುಣಗಳಿಹ। ವಾವಾವ ಶಬ್ದ ವಾಚ್ಯಾವ ರೀತಿ । ಈ ವಿಚಾರವನು' ಪೇಳೆನಲು ಸರ್ವೋತ್ತಮನು,

ಎನಗನಂತಾನಂತ ಮಂಗಳ ಗುಣ
ಪ್ರಣವ ವಾಚ್ಯನು ನಾನು ಅಷ್ಟವರ್ಣೋಪೇತ
ಪ್ರಣವದ ವಿಚಾರವನು ಪೇಳ್ವೆ ನಿನಗೆ ॥೪॥
ಸಾದರದಿ ಕೇಳು ಅಕಾರ ಉಕಾರ ಮಕಾರ
ನಾದ ಬಿಂದು ಘೋಷ ಶಾಂತತಿಶಾಂತರು
ಈ ದಿವ್ಯ ವರ್ಣದಲಿ ವಿಶ್ವತೈಜಸ ಪ್ರಾಜ್ಞ
ಮೋದಮಯ ತುರ್ಯಾತ್ಮ ಅಂತರಾತ್ಮ ॥೫॥
ಪರಮಾತ್ಮ ಜ್ಞಾನಾತ್ಮನೆಂಬಷ್ಟರೂಪದಿಂ
ದಿರುತಿಹೆನು ವೇದಾದಿಯಲಿ ಸರ್ವದಾ
ಪರಮಋಷಿಗಳು ಈ ಮಹಾಮಂತ್ರ ಜಪಮಾಡಿ ಮ
ತ್ಪರವನೈದುವರು ಸತ್ವರದಿಂದಲಿ ॥೬॥

ಎಂದು ವಿವರಿಸಿದ ೨೭ ನುಡಿಗಳ ಉಲ್ಲೇಖವನ್ನು ನಾವಿಲ್ಲಿ ನೆನೆಯುವುದು ಒಳ್ಳೆಯದು. ಇಲ್ಲಿಬರುವ ನಾಮಗಳು ಬೇರೆ ಎನ್ನಿಸಿದರೂ ಕ್ರಮ ಬೇರೆ ಎನಿಸಿದರೂ ನಿರೂಪಿತವಾಗಿರುವ ತತ್ತ್ವದ ಅಂತಃಕರುಣೆಯು ಒಂದೇ ಆಗಿರುವುದೆಂಬುದನ್ನು ಮರೆಯಕೂಡದು.

ಈ ವಿವರಗಳನ್ನೆಲ್ಲ ಮನಗಂಡಾಗ ಪರಶಿವಶಕ್ತಿಯಿಂದ ಜಗತ್ತು ನಿರ್ಮಾಣವಾಗಿ ಅದರಲ್ಲಿಯೇ ಬದುಕಿ ಅದರಲ್ಲಿಯೇ ಲಯವಾಗುವುದೆಂಬುದನ್ನೇ ವೀರಶೈವ ತತ್ತ್ವಗಳು ನಿರೂಪಿಸುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಈ ಕ್ರಮವನ್ನೇ ಶಾಸ್ತ್ರೀಯವಾದ ಸೂತ್ರಗಳಿಂದ ಅಚ್ಚುಕಟ್ಟಾಗಿ ನಿರೂಪಿಸುವುದೇ 'ಕರಣಹಸುಗೆ'ಯ ಕಾರ್ಯವ್ಯಾಪ್ತಿ.

'ಕರಣಹಸುಗೆ'ಯಲ್ಲಿ ಅ, ಉ, ಮಕಾರಗಳಲ್ಲಿ ಶಿವಶಕ್ತಿಯರಿರುವ ಓಂಕಾರ ನಿರ್ಮಾಣದ ತತ್ತ್ವವನ್ನು ನಿರೂಪಿಸಿ, ವೀರಶೈವಧರ್ಮಶಾಸ್ತ್ರಕ್ಕೆ ಶಾಸ್ತ್ರೀಯಸ್ವರೂಪವನ್ನು ತಂದುಕೊಟ್ಟ ಚೆನ್ನಬಸವಣ್ಣನು ನಿಜವಾಗಿಯೂ ಪ್ರತಿಭಾವಂತನು. ಆತನ ಪ್ರಕಾರ, 'ನಿಷ್ಕಲ ಬ್ರಹ್ಮವು ಸಕಲ ನಿಷ್ಕಲವಾಗಿ, ಸಕಲವಾಗಿ ಮುಂದೆ ಮೂವತ್ತಾರುತತ್ತ್ವಗಳು ಕಾರಣವಾದುವು'. ಹೀಗೆ 'ಆ ಪ್ರವೃತ್ತಿಮಾರ್ಗದಲ್ಲಿ ದೇಹ ಸಂಬಂಧವಾಗುವುದು, ನಿವೃತ್ತಿಮಾರ್ಗದಲ್ಲಿ ಹೇಗೆ ಅದರಿಂದ ಬಿಡುಗಡೆಯಾಗುವುದು' ಮೊದಲಾದುವೆಲ್ಲ ಆತನಿಂದ ನಿರ್ಧರಿಸಲಾಗಿವೆ. ವೇದಾಂತದಲ್ಲಿ ಸಾಮಾನ್ಯವಾಗಿ ಅನುಸರಿಸುವ ಸಾಂಖ್ಯಸಿದ್ಧಾಂತದಂತೆ ತನ್ಮಾತ್ರೆಗಳಿಂದ ಮಹಾಭೂತಗಳೇ ಕಡೆಯ ತತ್ತ್ವಗಳು. ಕರಣಹಸುಗೆಯ ಪ್ರಕಾರ ಮಹಾಭೂತಗಳೇ ಮೊದಲನೆಯವು. ಸಾಂಖ್ಯಸಿದ್ಧಾಂತದಂತೆ ತತ್ತ್ವಗಳೊಳಗೆ ಗಣಿಸಲಾಗದ ಪ್ರಾಣವಾಯುಗಳು ಕರಣಹಸುಗೆಯಲ್ಲಿ ತತ್ತ್ವಗಳಾಗಿವೆ. ಈ ಗ್ರಂಥ ವಿವರಣೆಗೆ, ಇದರಲ್ಲಿರುವ ಸಿದ್ಧಾಂತ ವಿವರಣೆಗೆ ವಿಜಯ ಭೈರವೀ ಆಗಮವೇ ಆಧಾರ.

ಕರಣಹಸುಗೆಯಲ್ಲಿ ಮೊದಲು ಪ್ರಣವದುತ್ಪತ್ತ್ಯವನ್ನು ಹೇಳಿ ಅನಂತರ ಕ್ರಮವಾಗಿ ಪಂಚಭೂತಗಳ ಉತ್ಪತ್ತ್ಯ, ಜಗದುತ್ಪತ್ತ್ಯ, ಪಿಂಡಸಂಗ್ರಹ, ಪಂಚಮಹಾಭೂತಗಳ ಪಂಚೀಕೃತಿ, ಬುದ್ಧೀಂದ್ರಿಯಗಳು, ಕರ್ಮೇಂದ್ರಿಯಗಳು, ದಶವಾಯುಗಳು, ಕರಣಚತುಷ್ಟಯ, ಆತ್ಮ, ಪಂಚವಿಂಶತಿ ತತ್ತ್ವಗಳು, ದಶನಾಡಿಗಳು, ಅಷ್ಟಾತ್ಮಗಳು, ಅಷ್ಟತನುಗಳು, ಅಂತರಂಗದ ಅಷ್ಟಮದಗಳು, ಬಹಿರಂಗದಷ್ಟಮದಗಳು, ಅಷ್ಟಮೂರ್ತಿಮದಗಳು, ಸಪ್ತಧಾತುಗಳುತ್ಪತ್ತ್ಯ ವರ್ಣಾಂಶಿಕದ ಭೇದ, ತನುಚೇಷ್ಟೆಗಳು, ಸಪ್ತವ್ಯಸನಗಳು, ಷಡೂರ್ಮಿಗಳು, ಅರಿಷಡ್ವರ್ಗಗಳು, ಷಡ್ಭ್ರಮೆಗಳು, ಷಡ್ಭಾವವಿಕಾರಗಳು, ಪಂಚಕೋಶಗಳು, ಪಂಚಕ್ಲೇಶಗಳು, ಅಂಗಚತುಷ್ಟಯಗಳು, ಗುಣತ್ರಯ, ಅಹಂಕಾರತ್ರಯಗಳು, ಇಹಲೋಕ ತಾಪತ್ರಯಗಳು, ಸ್ವರ್ಗಲೋಕದ ತಾಪತ್ರಯಗಳು, ತನುತ್ರಯಗಳು, ಜೀವತ್ರಯಗಳು, ಆತ್ಮತ್ರಯಗಳು, ಅವಸ್ಥಾತ್ರಯಗಳು, ತ್ರಿದೋಷಗಳು, ಸದ್ಭಾವತ್ರಯಗಳು, ದುರ್ಭಾವತ್ರಯಗಳು, ಮನತ್ರಯಗಳು, ತ್ರಿಕರಣಗಳು ಮತ್ತು ಪಂಚಾಗ್ನಿಗಳು ಮೊದಲಾದ ವಿಷಯಗಳ ಬಗ್ಗೆ ತಿಳಿವಳಿಕೆಯು ನಿರೂಪಿತವಾಗಿದೆ.

ಈಗ ಸೂಕ್ಷ್ಮವಾಗಿ ಸೃಷ್ಟಿಯ ಕಲ್ಪನೆಯನ್ನು ಕರಣಹಸುಗೆಯ ಮುಖಾಂತರ ಮಾಡಿಕೊಳ್ಳುವುದು ಸಮಯೋಚಿತವೆನಿಸುತ್ತದೆ. ಓಂಕಾರದ ಉತ್ಪತ್ತ್ಯದ ನಂತರ ಸದ್ಯೋಜಾತಮುಖ, ಅಘೋರಮುಖ, ತತ್ಪುರುಷಮುಖ, ಈಶಾನಮುಖಗಳಲ್ಲಿ ಅನುಕ್ರಮವಾಗಿ ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶಗಳು ಹುಟ್ಟಿದುವು. ಇವುಗಳಿಗೆ ಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರು ಅಧಿದೇವತೆಗಳು. ಪೃಥ್ವಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳಾದರೆ, ಅಪ್ಪುವಿಗೆ ಶಬ್ದ, ಸ್ಪರ್ಶ,ರೂಪ, ರಸಗಳೆಂಬ ನಾಲ್ಕುಗುಣಗಳಾದರೆ, ಅಗ್ನಿಗೆ ಶಬ್ದ, ಸ್ಪರ್ಶ, ರೂಪುಗಳೆಂಬ ಮೂರು ಗುಣಗಳಾದರೆ, ವಾಯುವಿಗೆ ಶಬ್ದ, ಸ್ಪರ್ಶಗಳೆಂಬ ಎರಡು ಗುಣಗಳಾದರೆ ಆಕಾಶಕ್ಕೆ ಒಂದೇ ಗುಣ. ಅದರಂತೆ ಪೃಥ್ವಿಯ ಧರ್ಮ ಕಠಿಣತ್ವ, ಅಪ್ಪುವಿನ ಧರ್ಮ ದ್ರವಿಸುವುದು, ಅಗ್ನಿಯ ಧರ್ಮ ಉಷ್ಣಿಸುವುದು, ವಾಯುವಿನದು ಚರಿಸುವುದು, ಆಕಾಶದ್ದು ಬಯಲಾಗುವ ಧರ್ಮ. ಹಾಗೆಯೇ ಅನುಕ್ರಮವಾಗಿ ಧಾರುಣತ್ವ, ಪಿಂಡೀಕರಣ, ಪಚಿಸುವುದು, ವಾಹಕತ್ವ, ಸುಳಿಯುವುದಕ್ಕೆ ತೆರಹಗುಡುವುದು ಕರ್ಮಗಳು. ಅದರಂತೆ ಪೀತವರ್ಣ, ಶ್ವೇತವರ್ಣ, ರಕ್ತವರ್ಣ, ಹರಿತವರ್ಣ ಮತ್ತು ಕೃಷ್ಣವರ್ಣಗಳು ಅನುಕ್ರಮವಾಗಿ ಪಂಚಮಹಾಭೂತಗಳ ತದಂಗಗಳು.

ಪಂಚಭೂತಗಳುತ್ಪತ್ತಿಯ ನಂತರ ಬ್ರಹ್ಮಾಂಡದ ನಿರ್ಮಾಣ. ಬ್ರಹ್ಮಾಂಡವೆಂದರೆ ಅದರಲ್ಲಿ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮರೆಂಬ ಶಿವನ ಅಷ್ಟತನುಗಳಿವೆ. ಚತುರ್ದಶ ಭುವನಗಳು, ಸಪ್ತಸಮುದ್ರಗಳು ಸಪ್ತದ್ವೀಪಗಳು, ಸಪ್ತಕುಲಪರ್ವತಗಳು, ಸಪ್ತಗ್ರಹರಾಶಿ ತಾರಾಪಥಗಳೂ ಸಮಾವೇಶಗೊಂಡಿವೆ. ಇದು ಸ್ಥೂಲ ಬ್ರಹ್ಮಾಂಡದ ಕಲ್ಪನೆ.

ಸ್ಥೂಲ ಬ್ರಹ್ಮಾಂಡದಲ್ಲಿಯ ಗುಣಗಳು ಸೂಕ್ಷ್ಮರೂಪದಿಂದ ಪಿಂಡದಲ್ಲಿ ಸಂಗ್ರಹವಾಗಿ ತೋರತೊಡಗುವವು. ಈ ಗುಣಗಳು ಒಟ್ಟು ಎಪ್ಪತ್ತೈದು ಇರುತ್ತವೆ. ಅವುಗಳಲ್ಲಿ ಇಪ್ಪತ್ತೈದು ಪೃಥ್ವಿಯ ಗುಣಗಳು, ಅಪ್ಪುವಿನ ಇಪ್ಪತ್ತು ಗುಣಗಳು, ಅಗ್ನಿಯ ಹದಿನೈದು ಗುಣಗಳು, ವಾಯುವಿನ ಹತ್ತುಗುಣಗಳು, ಆಕಾಶದ ಐದುಗುಣಗಳು ಸಮಾವೇಶಗೊಂಡಿರುವವು. ಈ ವಿಭೇದಗುಣಗಳ ಕೂಡುವಿಕೆಯೇ ಪಿಂಡಸಂಗ್ರಹ. ಮುಂದೆ ಪಂಚಮಹಾಭೂತಗಳ ಪಂಚೀಕೃತಿಗಳು ಮತ್ತು ಬುದ್ಧೀಂದ್ರಿಯ

ಗಳಾದ ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ ಮೊದಲಾದವುಗಳ ವಿವರಗಳನ್ನು ಕಾಣುತ್ತೇವೆ. ಅದರಂತೆ ವಾಕ್, ಪಾಣಿ, ಪಾದ, ವಾಯು, ಗುಹ್ಯ ಮೊದಲಾದ ಐದು ಕರ್ಮೇಂದ್ರಿಗಳ ವಿವರಗಳನ್ನು ನೋಡುತ್ತೇವೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ ಮೊದಲಾದ ದಶವಾಯುಗಳ ಪರಿಚಯವನ್ನು ನೀಡುತ್ತ ಮನ, ಅಹಂಕಾರ, ಬುದ್ಧಿ, ಚಿತ್ತಗಳೆಂಬ ಕರಣಚತುಷ್ಟಯಗಳ ಗುಣಧರ್ಮ ಸ್ವರೂಪಗಳ ತಿಳಿವಳಿಕೆಯೂ ಕರುಣಹಸುಗೆಯಲ್ಲಿ ಮೂಡಿ ಬಂದಿದೆ.

ಬ್ರಹ್ಮಾಂಡದ ಈ ಪರಿಸರದಲ್ಲಿ ಆತ್ಮನು ಆ ದೇಹಿ. ದೇಹವು ಭೂತಪಂಚಕ, ವಾಯುಪಂಚಕ, ಇಂದ್ರಿಯದಶಕ, ಕರಣಚತುಷ್ಟಯಗಳೆಂಬ ಇಪ್ಪತ್ನಾಲ್ಕು ತತ್ವಗಳಿಂದ ನಿರ್ಮಾಣವಾಗುತ್ತದೆ. ಇಂತಹ ಸರ್ವದೇಹಗಳಲ್ಲಿಯೂ ಆತ್ಮನು ಚೈತನ್ಯಸ್ವರೂಪನಾಗಿ ತೊಳಗಿ ಬೆಳಗುತ್ತಿರುತ್ತಾನೆ. ಇದಕ್ಕೆ ಅಲ್ಲಿ ಜ್ಞಾನೇಂದ್ರಿಯವೇ ಚಿತ್‌ಸ್ವರೂಪ ಮತ್ತು ಅದಿದೇವತೆ ಪರಶಿವನಿರುವುದೇ ಮೂಲಕಾರಣವೆಂಬುವದನ್ನು ಮರೆಯಕೂಡದು. ಇಂತಹ ಶರೀರದಲ್ಲಿ ಆತ್ಮನೂ ಸೇರಿ ಪಂಚವಿಂಶತಿ ತತ್ವಗಳಿವೆ. ಪರಾಶಕ್ತಿಸ್ವರೂಪದ ಮನಸ್ಸು ಮೊದಲಾದ ಐದು ಕರಣಗಳು, ಆದಿಶಕ್ತಿಸ್ವರೂಪದ ಪ್ರಾಣ ಮೊದಲಾದ ಐದು ವಾಯುಗಳು, ಇಚ್ಛಾಶಕ್ತಿಸ್ವರೂಪದ ಭೂಮಿ ಮೊದಲಾದ ಐದು ಭೂತಗಳು, ಜ್ಞಾನಶಕ್ತಿಸ್ವರೂಪದ ಶ್ರೋತ್ರ ಮೊದಲಾದ ಐದು ಜ್ಞಾನೇಂದ್ರಿಯಗಳು, ಕ್ರಿಯಾಶಕ್ತಿಸ್ವರೂಪದ ವಾಗಾದಿ ಕರ್ಮೇಂದ್ರಿಯಗಳು–ಹೀಗೆ ಅವುಗಳ ಲೆಕ್ಕ. ಇವುಗಳ ಜೊತೆಯಲ್ಲಿ ಇಡಾಚಂದ್ರನಾಳ, ಪಿಂಗಳಾಸೂರ್ಯನಾಳ, ಸುಷುಮ್ನಾ ಮಧ್ಯನಾಳ, ಗಾಂಧಾರಿ ಬಲದ ನೇತ್ರ, ಹಸ್ತಿಜಿಹ್ವಾ ಎಡದ ನೇತ್ರ, ಪೂಷಬಲದ ಕರ್ಣ, ಪಯಸ್ವಿನೀ ಎಡದ ಕರ್ಣ, ಅಲಂಬು ಮೇಢ್ರನಾಳ, ಶಂಖಿನೀ ನಾಭಿನಾಳಗಳೆಂಬ ದಶನಾಡಿಗಳೂ ಜೀವಾತ್ಮ, ಅಂತರಾತ್ಮ, ಪರಮಾತ್ಮ, ನಿರ್ಮಲಾತ್ಮ, ಶುದ್ಧಾತ್ಮ, ಜ್ಞಾನಾತ್ಮ, ಮಹಾತ್ಮ ಮತ್ತು ಭೂತಾತ್ಮಗಳೆಂಬ ಅಷ್ಟಾತ್ಮಗಳೂ, ಸ್ಥೂಲತನು, ಸೂಕ್ಷ್ಮತನು, ಕಾರಣತನು, ನಿರ್ಮಲತನು, ಆನಂದತನು, ಚಿನ್ಮಯತನು, ಚಿದ್ರೂಪತನು ಮತ್ತು ಶುದ್ಧತನುಗಳೆಂಬ ಅಷ್ಟತನುಗಳ ವಿವರಗಳಿವೆ.

ಮದಗಳ ವಿಷಯವನ್ನು ಪ್ರಸ್ತಾಪಿಸುತ್ತ ಸಂಸ್ಥಿತ, ತೃಣೀಕೃತವರ್ತಿನಿ, ಕ್ರೋಧಿನಿ, ಮೋಹಿನಿ, ಅತಿಚಾರಿಣಿ, ಗಂಧಚಾರಿಣಿ ಮತ್ತು ವಾಸಿನಿಗಳೆಂಬ ಅಂತರಂಗದ ಅಷ್ಟಮದಗಳನ್ನು ಕುಲ, ಛಲ, ಧನ, ರೂಪು, ಯೌವನ, ವಿದ್ಯೆ, ರಾಜ್ಯ, ತಪಗಳೆಂಬ ಬಹಿರಂಗದಷ್ಟಮದಗಳನ್ನು ಪೃಥ್ವಿ, ಸಲಿಲ, ಪಾವಕ, ಪವನ, ಅಂಬರ, ರವಿ, ಶಶಿ, ಆತ್ಮಗಳೆಂಬ ಅಷ್ಟಮೂರ್ತಿಮದ ಸ್ವರೂಪಗಳನ್ನು ಕರಣಹಸುಗೆ ಚಿತ್ರಿಸುತ್ತದೆ. ಅನಂತರ ಅದು ರಸ, ರುಧಿರ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜೆ, ಶುಕ್ಲಗಳೆಂಬ ಸಪ್ತಧಾತುಗಳ ವಿವರವನ್ನು ನೀಡಿ ಅಲ್ಲಿರುವ ವರ್ಣಾಂಶಿಕದ ಭೇದ ಮತ್ತು ತನುಚೇಷ್ಟೆಗಳನ್ನು ತಿಳಿಸುತ್ತದೆ. ತನುವ್ಯಸನ, ಮನವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನ ಮೊದಲಾದ ಸಪ್ತವ್ಯಸನಗಳ ವಿವರಗಳನ್ನು ನೀಡುತ್ತದೆ. ಮುಂದೆ ಪ್ರಾಣದ ಧರ್ಮವಾದ ಕ್ಷುತ್‌ಪಿಪಾಸೆಗಳನ್ನು ಮನದ ಧರ್ಮವಾದ ಶೋಕಮೋಹಗಳನ್ನು ದೇಹದ ಧರ್ಮವಾದ ಜರಾಮರಣಗಳನ್ನು ಷಡೂರ್ಮಿಗಳೆಂದು ಸ್ಪಷ್ಟಪಡಿಸಿ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಅರಿಷಡ್ವರ್ಗಗಳೆಂದೂ, ಜಾತಿ, ವರ್ಣ, ಕುಲ, ಗೋತ್ರ, ನಾಮಗಳೆಂಬ ಷಡ್ಭ್ರಮೆಗಳೆಂದೂ, ಅಸ್ತಿ, ಜಾಯತೇ, ವಿಪರೀಣಮತೆ, ವಿವರ್ಧತೆ, ಅಪಕ್ಷೀಯತೆ, ವಿನಶ್ಯತಿಗಳೆಂಬ ಷಡ್ಭಾವವಿಕಾರಗಳನ್ನು ನಿರೂಪಿಸುತ್ತದೆ.

ಆತ್ಮನಿಂದ ಕೂಡಿದ ದೇಹದಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳಿರುತ್ತವೆ. ಅವುಗಳ ಜೊತೆಗೆ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ ಮತ್ತು ಅಭಿನಿವೇಶಗಳೆಂಬ ಪಂಚಕ್ಲೇಶಗಳು ಸರ್ವಜೀವರುಗಳಲ್ಲಿ ಬೆಳೆದು ಒಳಗೆ ಹುದುಗಿಕೊಂಡಿರುತ್ತವೆ. ಮತ್ತೆ ದೇಹದಲ್ಲಿ ಅಂಗ ಪ್ರತ್ಯಂಗ ಸಾಂಗಾಂಗ ಉಪಾಂಗಗಳೆಂಬ ಅಂಗಚತುಷ್ಟಯಗಳು, ಸತ್ವ ರಜ ತಮಗಳೆಂಬ ಗುಣಗಳು, ರಾಜಸ ತಾಮಸ ಸಾತ್ವಿಕಗಳೆಂಬ ಅಹಂಕಾರಗಳು, ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕಗಳೆಂಬ ತಾಪತ್ರಯಗಳು, ಕ್ಷಯ ಅತಿಶಯ ಸಹಸಾಪತಗಳೆಂಬ ಸ್ವರ್ಗಲೋಕದ ತಾಪತ್ರಯಗಳು ನೆಲೆಗೊಂಡಿರುತ್ತವೆ.

ಪ್ರತಿಯೊಬ್ಬ ದೇಹಿಗೂ ಪೃಥ್ವಿಅಪ್ಪುಗಳಿಂದೊಡಗೂಡಿದ ಸ್ಥೂಲತನು, ಅಗ್ನಿವಾಯುಗಳಿಂದ ಕೂಡಿದ ಸೂಕ್ಷ್ಮತನು, ಆಕಾಶ ಹಮ್ಮುಗಳಿಂದ ಕೂಡಿದ ಕಾರಣತನುಗಳೆಂಬ ತನುತ್ರಯಗಳಿರುತ್ತವೆಯೆಂದೂ, ಜೀವತ್ರಯಗಳು ಮತ್ತು ಆತ್ಮತ್ರಯಗಳು ಅಲ್ಲಿ ಒಳಗೊಂಡಿರುತ್ತವೆಯೆಂದೂ ಕರಣಹಸುಗೆ ವಿವರಗಳನ್ನು ನೀಡುತ್ತದೆ.

ಆತ್ಮತ್ರಯಗಳಲ್ಲಿ ಜೀವಾತ್ಮ, ಅಂತರಾತ್ಮ ಮತ್ತು ಪರಮಾತ್ಮಗಳೆಂಬ ಭೇದಗಳು. ಸರ್ವವ್ಯಾಪ್ತಿಯಾಗಿರುವ ಜೀವವನ್ನು ಒಳಗೊಂಡ ಆತ್ಮನು ಜೀವಾತ್ಮನೆಂದೂ, ಸಂಸಾರದಲ್ಲಿ ಇದ್ದು ಇಲ್ಲದಂತೆ ನೀರಿನಲ್ಲಿಯ ಕಮಲಪತ್ರದಂತೆ ಇರುವ ಜೀವವನ್ನು ಹೊಂದಿದ ಆತ್ಮನು ಅಂತರಾತ್ಮನೆಂದೂ, ಸಂಸಾರವನ್ನು ಬಿಟ್ಟು ನಿಷ್ಕಲನಾಗಿರುವ ಜೀವವನ್ನು ಹೊಂದಿದ ಆತ್ಮನು ಪರಮಾತ್ಮನೆಂದೂ ಅವುಗಳ ವಿವರಗಳನ್ನು ಬಹು ಸ್ಪಷ್ಟವಾಗಿ ಕರಣಹಸುಗೆ ನೀಡುತ್ತದೆ. ಅದು ಮುಂದುವರೆದು ಜಾಗ್ರ ಸ್ವಪ್ನ

ಸುಷುಪ್ತಿಗಳೆಂಬ ಅವಸ್ಥಾತ್ರಯಗಳನ್ನೂ, ವಾತ ಪಿತ್ಥ ಕಫಗಳೆಂಬ ತ್ರಿದೋಷಗಳನ್ನು, ಪ್ರಕಾಶನ ಪ್ರವರ್ತನ ಮೋಹನಗಳೆಂಬ ಸದ್ಭಾವತ್ರಯಗಳನ್ನು. ಜ್ಞಾನವಿಕೃತಿಭಾವ ವರ್ತನ ವಿಕೃತಿಭಾವ ಮೋಹನವಿಕೃತಿಭಾವಗಳೆಂಬ ದುರ್ಭಾವತ್ರಯಗಳನ್ನು ತಿಳಿಸುತ್ತದೆ.

ಸದ್ಭಾವತ್ರಯ ಮತ್ತು ದುರ್ಭಾವತ್ರಯಗಳ ಬಗೆಗೆ ಇನ್ನಷ್ಟು ವಿವರಗಳನ್ನು ನೀಡುವದು ಒಳಿತು. ಏಕೆಂದರೆ ಸಾಧಕನು ಅವುಗಳನ್ನು ಸೂಕ್ಷ್ಮವಾಗಿ ತಿಳಿದುಕೊಂಡಿದ್ದರೆ ಅವನು ಬೇಗನೆ ಮುಕ್ತಿಯನ್ನು ಪಡೆಯಲು ಸಾಧ್ಯವಾಗುತ್ತದೆ ; ಎಚ್ಚರದಿಂದ ತನ್ನ ಹೆಜ್ಜೆಗಳನ್ನು ಇಟ್ಟು ಮುಂದೆ ನಡೆದು ಗುರಿಮುಟ್ಟಲು ಸುಲಭವಾಗುತ್ತದೆ.

ಸದ್ಭಾವತ್ರಯದಲ್ಲಿ ಬರುವ ಪ್ರಕಾಶವೆಂದರೆ ಮರೆವು ಇಲ್ಲದೆ ಸದಾ ಬೆಳಗುವ ಸುಜ್ಞಾನವೇ ಪ್ರಕಾಶ ; ಪ್ರವರ್ತನ ವೆಂದರೆ ಸತ್ಯಸದಾಚಾರ ಸನ್ಮಾರ್ಗ ಸದ್ವರ್ತಗಳ ನಡೆಯೇ ಪ್ರವರ್ತನ ; ಮೋಹನವೆಂದರೆ ಪರಮಾತ್ಮನಲ್ಲಿ ನಿಷ್ಕಾಮದಿಂದ ಮೋಹವಿಟ್ಟು ನಡೆಯುವುದೇ ಮೋಹನ. ದುರ್ಭಾವತ್ರಯದಲ್ಲಿ ಬರುವ ಜ್ಞಾನವಿಕೃತಿಭಾವವೆಂದರೆ ಅರುಹಿನಿಂದ ಅಹಂ ಜಡಭಾವವು ನಿರ್ಮಾಣವಾಗಿ ಜೀವ ಅಹಂಕಾರವನ್ನು ಪಡೆದು ಜ್ಞಾನವಿಕೃತಿಯನ್ನು ಪಡೆಯುವುದೇ ಜ್ಞಾನವಿಕೃತಿಭಾವ; ವರ್ತನ ವಿಕೃತಿಯೆಂದರೆ ಜಡಾಜಡ ಮಿಶ್ರಣದಿಂದ ದೇಹಾದಿ ನಾನಾ ರೀತಿಗಳಲ್ಲಿ ಅಂಡಲೆದು ವ್ಯವಹರಿಸುವ ಕ್ರಮ ವರ್ತನವಿಕೃತಿಭಾವ; ಮೋಹನವಿಕೃತಿಯೆಂದರೆ ಜಡಭಾವದಿಂದ ಒಮ್ಮೆಯೂ ಅಹಂಭಾವವನ್ನು ಬಿಡದೆ ನಿಜವನ್ನು ಮರೆತಿರುವ ಕ್ರಮ ಮೋಹನ ವಿಕೃತಿಭಾವ. ಈ ವಿಷಯಗಳ ಬಗೆಗೆ ನಿರ್ದಿಷ್ಟವಾಗಿ ತಿಳಿವಳಿಕೆಯನ್ನು ನೀಡಿದ ಕರಣಹಸುಗೆಯು ಮನ ಮನನ ಮನನೀಯ ಗಳೆಂಬ ಮನತ್ರಯಗಳನ್ನೂ, ಮಾನಸ ವಾಚಿಕ ಕಾಯಕಗಳೆಂಬ ತ್ರಿಕರಣಗಳನ್ನೂ, ಉದರಾಗ್ನಿ ಮಂದಾಗ್ನಿ ಕಾಮಾಗ್ನಿ ಶೋಕಾಗ್ನಿ ವಡಾಗ್ನಿಗಳೆಂಬ ಪಂಚಾಗ್ನಿಗಳ ವಿವರಗಳನ್ನೂ ನೀಡುತ್ತದೆ.

'ಕರಣ ಹಸುಗೆ'ಯಲ್ಲಿ ಈವರೆಗೆ ವಿವರಿಸಿರುವ ಎಲ್ಲ ತತ್ತ್ವಗಳು ಎಲ್ಲ ದೇಹಿಗಳಲ್ಲಿಯೂ ಸಮಾನವಾಗಿರುತ್ತವೆ. ಇವುಗಳ ಪರಿಜ್ಞಾನ ಆತ್ಮಸ್ವರೂಪಜ್ಞಾನದ ಹಂಬಲವಿರುವವರಿಗೆಲ್ಲ ಅತ್ಯವಶ್ಯವಾಗಿ ಬೇಕು. ಇವುಗಳ ಸ್ಪಷ್ಟಕಲ್ಪನೆಯಿಂದಲೇ ಸಾಧಕನು ಕೊನೆಯ ಸ್ಥಲವನ್ನು ಮುಟ್ಟಲು ಸುಲಭವಾಗುತ್ತದೆ. ಸಾಧಕನೊಬ್ಬನಿಗೇ ಅಲ್ಲ ಪ್ರತಿಯೊಬ್ಬನಿಗೂ ತನ್ನ ದೇಹದ ರಚನೆ, ಮನಸ್ಸಿನ ವ್ಯಾಪಾರ, ಇಂದ್ರಿಯಗಳ ಚಟುವಟಿಕೆ, ಸಪ್ತವ್ಯಸನಗಳು, ಷಡೂರ್ಮಿಗಳು ಎಲ್ಲದರ ಸ್ಪಷ್ಟಕಲ್ಪನೆ ಬೇಕು. ಏಕೆಂದರೆ ನಿರವಯಸ್ಥಲವಲ್ಲಿ ನಿಜವನೈದಿಪ್ಪನಾಗಬೇಕೆಂಬ ಹಂಬಲ ಎಲ್ಲರಿಗೂ ಬೇಕಲ್ಲವೆ? ಅಂತೆಯೇ 'ಕರಣ ಹಸುಗೆ'ಯನ್ನು ಎಲ್ಲರೂ ಓದಿ ಅಂಗದ ಉತ್ಪತ್ತಿ, ಪ್ರವೃತ್ತಿಮಾರ್ಗದಲ್ಲಿ ದೇಹೋಪಾಧಿಗಳು ಬಂದು ಸೇರುವ ಕ್ರಮ, ನಿವೃತ್ತಿಮಾರ್ಗದಿಂದ ಅವುಗಳಿಂದ ಬಿಡುಗಡೆ ಹೊಂದುವ ಕ್ರಮಗಳನ್ನು ಅರಿತುಕೊಂಡರೆ ಯಾವ ತೊಂದರೆಗಳು ಬರುವುದಿಲ್ಲ. ಅದೂ ಅಲ್ಲದೆ ಷಟ್‌ಸ್ಥಲ ಮಾರ್ಗದಿಂದ ಮುಕ್ತಿಸಾಧಿಸುವವನಿಗೆ ಈ ಗ್ರಂಥವು ಪೂರ್ವಸಿದ್ಧತೆಯನ್ನು ಒದಗಿಸುತ್ತದೆ. ಅಷ್ಟೇ ಅಲ್ಲ, ತಾನು ಯಾರು? ಎಂಬ ಪ್ರಶ್ನೆಗೆ ಉತ್ತರವನ್ನು ನೀಡುವ ಕನ್ನಡಿ ಚೆನ್ನಬಸವಣ್ಣನ ಈ 'ಕರಣಹಸುಗೆ'. ಇದರ ಸೂಕ್ಷ್ಮಅಧ್ಯಯನದಿಂದ ಪರತತ್ತ್ವವಿಚಾರದ ಗುಹ್ಯಾತ್ ಗುಹ್ಯತರ ವಿಷಯಗಳೂ ಸ್ಪಷ್ಟವಾಗುತ್ತವೆ. ಗುರುಕಾರುಣ್ಯವ ಪಡೆದ ಲಿಂಗಾಂಗಸಂಬಂಧಿ ಗಳಾದ ಶರಣಜನರಲ್ಲಿ ಆ ಕರಣಗಳೆಲ್ಲವೂ ಮಂತ್ರತತ್ತ್ವರೂಪವಾಗಿ ಲಿಂಗಾರ್ಪಿತಕ್ಕೆ ಮೀಸಲಾದ ಪದಾರ್ಥಗಳಾಗಿಬಿಡುತ್ತವೆ.

'ಮಿಶ್ರಾರ್ಪಣ' ವೆಂಬ ಚೆನ್ನಬಸವಣ್ಣನ ಮತ್ತೊಂದು ಗ್ರಂಥವು 'ಕರಣಹಸುಗೆ' ಯನ್ನು ತಿಳಿದುಕೊಂಡ ಶರಣನಿಗೆ ಸಾಧನೆಯನ್ನು ನೀಡುತ್ತದೆ. ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ ಮತ್ತು ಪರಿಪೂರ್ಣಾರ್ಪಣಗಳನ್ನು ಶಾಸ್ತ್ರೀಯವಾಗಿ ತಿಳಿಸಿಕೊಡುತ್ತದೆ. ಅನುಷ್ಠಾನಮಾರ್ಗವನ್ನು ಗುರುಕಾರುಣ್ಯ ಪಡೆದ ಶರಣನಿಗೆ ಸುಲಭವಾಗಿ ತೋರಿಸಿ, ಅಲ್ಲಿ ಆತ ನಿರಾಯಾಸ ವಾಗಿ ನಡೆದುಕೊಂಡು ಹೋಗುವಂತೆ ಮಾಡಿ, ನಿರವಯಸ್ಥಲದಲ್ಲಿ ನಿಜವನೈದಿಪ್ಪಾತನು ಅಭೇದ್ಯಭೇಧಕನು, ಅಸಾಧ್ಯಸಾಧ ಕನು, ಚಿನ್ಮಯ ಚಿದ್ರೂಪ ಚಿದಾನಂದವಾಗುವಂತೆ ಮಾಡುತ್ತದೆ. ಇದೇ ಮಿಶ್ರಾರ್ಪಣದ ಕಾರ್ಯವ್ಯಾಪ್ತಿ.

'ಮಿಶ್ರಾರ್ಪಣ'ವನ್ನು ಅಭ್ಯಾಸಕ್ಕೆ ಕೈಗೆತ್ತಿಕೊಂಡಾಗ ಮೊದಲು,

> 'ಷಟ್‌ಸ್ಥಲ ಬ್ರಹ್ಮವನೊಡಗೂಡಿಹೆನೆಂದಡದಾರಿಗೆ ನಿಲುಕುವುದಯ್ಯಾ,
> ಅರ್ಪಿತ ಅನರ್ಪಿತವೆಂದು ಒಪ್ಪಕ್ಕೆ ನುಡಿಯಬಹುದಲ್ಲದೆ ?
> ಅರ್ಪಣದೊಳಗಣ ಅರ್ಪಣದ ಭೇದವನರಿದು ಸೊಪ್ಪಡಗಿದ
> ನಿಷ್ಪತ್ತಿ ನಿಜಲಿಂಗೈಕ್ಯದಿರವು ಅದೆಂತಯ್ಯಾ ಎಂದಡೆ'

ಎಂಬ ಸಾಮಾನ್ಯರಿಗೆ ಕಾಡುವ ಪ್ರಶ್ನೆಯನ್ನೆ ಕೈಗೆತ್ತಿಕೊಂಡು ಮುಂದೆ ಅದಕ್ಕೆ ನಿಜದ ಉತ್ತರವನ್ನು ಶಾಸ್ತ್ರೀಯವಾಗಿ ನೀಡುವ ಪ್ರಯತ್ನವನ್ನು ಆ ಗ್ರಂಥವು ಸಾರ್ಥಕಮಾಡಿಕೊಂಡಿದೆ.

ಗುರುಕಾರುಣ್ಯ ಪಡೆದ ಶರಣನಿಗೆ ಮೊತ್ತಮೊದಲಿಗೆ ಕಾಯಾರ್ಪಣದ ಜ್ಞಾನಬೇಕೆಂದು, ಅದರ ರಹಸ್ಯವನ್ನು ತಿಳಿಸ ಲಾಗಿದೆ. ಅಂತೆಯೇ ಕಾಯದ ಕೈ ಮುಟ್ಟಿ ಕ್ರಿಯಾರ್ಪಣ ಮಾಡುವಾಗ ಆತನು ಭೋಜ್ಯವನ್ನು ಆಚಾರಲಿಂಗದಲ್ಲಿ, ಪಾನೀಯ

ವನ್ನು ಗುರುಲಿಂಗದಲ್ಲಿ, ಭಕ್ಷ್ಯವನ್ನು ಶಿವಲಿಂಗದಲ್ಲಿ, ಚೋಹ್ಯವನ್ನು ಜಂಗಮಲಿಂಗದಲ್ಲಿ, ಲೇಹ್ಯವನ್ನು ಪ್ರಸಾದಲಿಂಗದಲ್ಲಿ ಎಂದು ಅರಿವ ಶಕ್ತಿಯನ್ನು ಪಡೆದುಕೊಳ್ಳುವುದಲ್ಲದೆ, ಅವುಗಳಲ್ಲಿಯ ಒಟ್ಟು ಅರಿವು ಮಹಾಲಿಂಗದಲ್ಲಿ ಎಂಬುದನ್ನು ಅರಿತರೆ ಅದೇ ಷಡ್ವಿಧ ಕಾಯಾರ್ಪಣ. ಅನಂತರ ಕರಣಾರ್ಪಣದ ಮೆಟ್ಟಲು.

ಕರಣಾರ್ಪಣದ ರಹಸ್ಯವನ್ನು ಹೀಗೆ ಸಂಗ್ರಹಿಸಬಹುದು :

'ನಾಸಿಕದಲ್ಲಿ ಆಚಾರಲಿಂಗ, ಜಿಹ್ವೆಯಲ್ಲಿ ಗುರುಲಿಂಗ
ನೇತ್ರದಲ್ಲಿ ಶಿವಲಿಂಗ, ತ್ವಕ್ಕಿನಲ್ಲಿ ಜಂಗಮಲಿಂಗ
ಶ್ರೋತ್ರದಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗ'

ಎಂಬ ಷಡ್ವಿಧ ಲಿಂಗಾರ್ಪಣದ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳ ಅರಿವು ಅನುಕ್ರಮವಾಗಿ ಗಂಧ, ರಸ, ರೂಪು, ಸ್ಪರ್ಶನ, ಶಬ್ದ ಮತ್ತು ಸರ್ವೇಂದ್ರಿಯಗಳಲ್ಲಿ ಎಂಬುದನ್ನು ತಿಳಿದುಕೊಳ್ಳಬೇಕು. ಅಲ್ಲದೆ ಈ ಷಡ್ವಿಧಲಿಂಗಕ್ಕೆ ಇರುವ ಮಿಶ್ರಾರ್ಪಣದ ಛತ್ತೀಸತತ್ತ್ವಗಳ ಭೇದದ ಕುರುಹನ್ನು ತಿಳಿದುಕೊಂಡಿರಬೇಕು. ಅದಕ್ಕಾಗಿ ಅವುಗಳ ವಿವರ ಇಲ್ಲಿ ಅವಶ್ಯ.

ಆಚಾರಲಿಂಗ ಮಿಶ್ರಾರ್ಪಣವೆಂದರೆ :

'ಬೇರು ಗೆಣಸು ಮೊದಲಾದ ಗಂಧವನಱಿವುದು ಆಚಾರಲಿಂಗದಲ್ಲಿ ;
ಮರ, ತಿಗುಡು, ಹಗಿನ ಮೊದಲಾದ ಗಂಧವನಱಿವುದು ಗುರುಲಿಂಗದಲ್ಲಿ ;
ಚಿಗುರು ಮೊದಲಾದ ಪತ್ರಿಯ ಗಂಧವನಱಿವುದು ಶಿವಲಿಂಗದಲ್ಲಿ ;
ಮೊಗ್ಗೆ ಮೊದಲಾದ ಪುಷ್ಪದ ಗಂಧವನಱಿವುದು ಜಂಗಮಲಿಂಗದಲ್ಲಿ ;
ಕಾಯಿ ಹಣ್ಣು ಮೊದಲಾದ ಫಲದ ಗಂಧವನಱಿವುದು ಪ್ರಸಾದಲಿಂಗದಲ್ಲಿ ;
ಇವೆಲ್ಲಱಲ್ಲಿಯ ಗಂಧವಱಿವುದು ಮಹಾಲಿಂಗದಲ್ಲಿ '

ಗುರುಲಿಂಗ ಮಿಶ್ರಾರ್ಪಣವೆಂದರೆ : ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳಲ್ಲಿ ಅನುಕ್ರಮವಾಗಿ ಮಧುರತೆ, ಒಗರು, ಕಾರ, ಆಮ್ಲ. ಕಹಿ ಮೊದಲಾದ ರುಚಿಗಳನ್ನು, ಈ ಎಲ್ಲ ಐದರ ರುಚಿಗಳನ್ನು ಮಹಾಲಿಂಗದಲ್ಲಿಯೂ ಲವಣವನ್ನು ಬೆರೆಸಿಯೇ ಅರ್ಪಿಸುವ ಕ್ರಮ.

ಶಿವಲಿಂಗ ಮಿಶ್ರಾರ್ಪಣವೆಂದರೆ : ಆಚಾರ, ಗುರು, ಶಿವ, ಜಂಗಮ, ಪ್ರಸಾದಲಿಂಗಗಳಲ್ಲಿ ಅನುಕ್ರಮವಾಗಿ ಪೀತ, ಶ್ವೇತ, ಹರಿತ, ಮಾಂಜಿಷ್ಟ, ಕಪೋತ ಮೊದಲಾದ ವರ್ಣಗಳ ರೂಪಗಳನ್ನೂ, ಈ ಎಲ್ಲ ಐದು ವರ್ಣಗಳ ರೂಪಗಳನ್ನು ಮಹಾಲಿಂಗದಲ್ಲಿ ಅರಿತು ಅರ್ಪಿಸುವ ಕ್ರಮ.

ಜಂಗಮಲಿಂಗ ಮಿಶ್ರಾರ್ಪಣವೆಂದರೆ: ಆಚಾರ, ಗುರು, ಶಿವ, ಜಂಗಮಲಿಂಗಗಳಲ್ಲಿ ಅನುಕ್ರಮವಾಗಿ ಕಠಿಣ, ಮೃದು, ಉಷ್ಣ, ಶೈತ್ಯಗಳ ಸ್ಪರ್ಶಗಳನ್ನು ಅರಿತು ಪ್ರಸಾದಲಿಂಗದಲ್ಲಿ ಮಿಶ್ರವಾದ ಸ್ಪರ್ಶವನ್ನು ಅರಿಯುವುದು. ಈ ಎಲ್ಲ ಐದರಲ್ಲಿಯ ಸ್ಪರ್ಶವನ್ನು ಮಹಾಲಿಂಗದಲ್ಲಿ ಅರಿತು ಅರ್ಪಿಸುವ ಕ್ರಮ.

ಪ್ರಸಾದಲಿಂಗ ಮಿಶ್ರಾರ್ಪಣವೆಂದರೆ :

'ತಾಳ ಕೌಸಾಳವಿಡಿದು ಹುಟ್ಟಿದ ಶಬ್ದವನಱಿವುದು ಆಚಾರಲಿಂಗದಲ್ಲಿ ;
ತಂತಿವಿಡಿದು ಹುಟ್ಟಿದ ಶಬ್ದವನಱಿವುದು ಗುರುಲಿಂಗದಲ್ಲಿ ;
ಕುಡುಹುವಿಡಿದು ಹುಟ್ಟಿದ ಶಬ್ದವನಱಿವುದು ಶಿವಲಿಂಗದಲ್ಲಿ ;
ಕೊಳಲು ವಾಸುಗಿ ನಾಗಸರ ಶಂಖದೊಳಗಾಗಿ ಹುಟ್ಟಿದ ಶಬ್ದವನಱಿವುದು ಜಂಗಮಲಿಂಗದಲ್ಲಿ ;
ವಚನಗೀತದೊಳಗಾಗಿ ಹುಟ್ಟಿದ ಶಬ್ದವನಱಿವುದು ಪ್ರಸಾದಲಿಂಗದಲ್ಲಿ ;
ಇವೆಲ್ಲಱಲ್ಲಿಯ ಹುಟ್ಟಿದ ಶಬ್ದವನಱಿವುದು ಮಹಾಲಿಂಗದಲ್ಲಿ'

ಮಹಾಲಿಂಗ ಮಿಶ್ರಾರ್ಪಣವೆಂದರೆ : ಆಚಾರ, ಗುರು, ಶಿವ, ಜಂಗಮ, ಪ್ರಸಾದಲಿಂಗಗಳಲ್ಲಿ ಅನುಕ್ರಮವಾಗಿ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳ ತೃಪ್ತಿಯನ್ನು ಅರಿತು ಈ ಎಲ್ಲ ಐದು ಬಗೆಯ ತೃಪ್ತಿಗಳನ್ನು ಮಹಾಲಿಂಗದಲ್ಲಿ ಅರಿಯುವ ಕ್ರಮ.

ಹೀಗೆ ಮೇಲೆ ವಿವರಿಸಿದ ಛತ್ತೀಸತತ್ತ್ವಗಳಲ್ಲಿ ಷಡ್ವಿಧ ಆಚಾರಲಿಂಗ ಮಿಶ್ರಾರ್ಪಣ, ಗುರುಲಿಂಗ ಮಿಶ್ರಾರ್ಪಣ, ಶಿವಲಿಂಗ ಮಿಶ್ರಾರ್ಪಣ, ಜಂಗಮಲಿಂಗ ಮಿಶ್ರಾರ್ಪಣ, ಪ್ರಸಾದಲಿಂಗ ಮಿಶ್ರಾರ್ಪಣ ಮತ್ತು ಮಹಾಲಿಂಗ ಮಿಶ್ರಾರ್ಪಣಗಳೆಂಬ ಪ್ರತಿಯೊಂದರ ಆರಾರು ವಿಷಯಗಳು ಸೇರುತ್ತವೆ. ಇವು ಕರಣಾರ್ಪಣವಾದಾಗ ಅಲ್ಲಿಯೇ ಭಾವಾರ್ಪಣದ ಮೆಟ್ಟಲು. ಮಿಶ್ರದೊಳಗಿನ ಮಿಶ್ರವಾಗಿರುವ ಭಾವಾರ್ಪಣವು ಯಾವುದೆಂದರೆ :

ಆವುದಾನೊಂದನು ಇಂದ್ರಿಯಂಗಳು ಸೋಂಕುವ ಕಾಲ-ವೇಳೆ ಆಚಾರಲಿಂಗದಲ್ಲಿ;
ಸೋಂಕಿದುದನಱಿವ ಕಾಲ-ವೇಳೆ ಗುರುಲಿಂಗದಲ್ಲಿ;
ಅಱಿದು ನಿಶ್ಚೈಸುವ ಕಾಲ-ವೇಳೆ ಶಿವಲಿಂಗದಲ್ಲಿ;
ನಿಶ್ಚೈಸಿ ಸುಖಿಸುವ ಕಾಲ-ವೇಳೆ ಜಂಗಮಲಿಂಗದಲ್ಲಿ;
ಸುಖಿಸಿ ಪರಿಣಮಿಸುವ ಕಾಲ-ವೇಳೆ ಪ್ರಸಾದಲಿಂಗದಲ್ಲಿ;
ಪರಿಣಮಿಸಿ ತೃಪ್ತಿಯನೆಯ್ದುವ ಕಾಲ-ವೇಳೆ ಮಹಾಲಿಂಗದಲ್ಲಿ.

ಈ ಸ್ಥಿತಿಯೇ ಭಾವಾರ್ಪಣ. ಮುಂದಿನ ಮೆಟ್ಟಲು ಪರಿಪೂರ್ಣಾರ್ಪಣ.

ಪರಿಪೂರ್ಣಾರ್ಪಣವೆಂದರೆ, 'ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣದೊಳಗೆ ಷಡ್ವಿಧಲಿಂಗ ಮಿಶ್ರಾರ್ಪಣ ಪಸರಿಸಿ, ಆ ಷಡ್ವಿಧ ಮಿಶ್ರಾರ್ಪಣದೊಳಗೆ ಛತ್ತೀಸಲಿಂಗ ಮಿಶ್ರಾರ್ಪಣ ಪಸರಿಸಿ, ಆ ಛತ್ತೀಸಲಿಂಗ ಮಿಶ್ರಾರ್ಪಣದೊಳಗೆ ಷೋಡಶೋತ್ತರ ದ್ವಿಶತಲಿಂಗ ಮಿಶ್ರಾರ್ಪಣ ಪಸರಿಸಿ, ಪಿಂಡಾಂಡದಲ್ಲಿ ಪರಿಪೂರ್ಣವಾಗಿ ಸನ್ನಿಹಿತವಾಗಿರ್ಪುದು'. ಈ ಸರ್ವೋಚ್ಚ ಸ್ಥಿತಿಯನ್ನು ಮುಟ್ಟಲು ಎಲ್ಲರಿಗೂ ಸಾಧ್ಯವೆ ? ಎಂಬ ಪ್ರಶ್ನೆ ಈ ಎಲ್ಲ ವಿಷಯಗಳನ್ನು ತಿಳಿದುಕೊಂಡು ಮೆಲುಕು ಹಾಕಿದಾಗ ತತ್‌ಕ್ಷಣ ಸುಳಿಯುತ್ತದೆ. ಆದರೆ ಈ ಸ್ಥಿತಿಯು ಎಲ್ಲರಿಗೂ ಸಾಧ್ಯವಾಗಬೇಕಾದರೆ ಎಲ್ಲರೂ ಯಾವ ಕ್ರಮವನ್ನು ಅನುಸರಿಸಬೇಕೆಂಬುದಕ್ಕೆ 'ಮಿಶ್ರಾರ್ಪಣ'ದಲ್ಲಿ ಉತ್ತರವಿದೆ. ಆ ಉತ್ತರವನ್ನು ಸಂಗ್ರಹಿಸಿದರೆ, ನಮ್ಮ ಪ್ರಶ್ನೆಗೆ ಉತ್ತರವು ಬಹು ಸುಲಭ.

ಸಾಧನಾಜೀವಿಯಾದ ಜೀವಿಯು ಪರಿಪೂರ್ಣಾರ್ಪಣ ಸ್ಥಿತಿಯನ್ನು ಪಡೆಯಬೇಕಾದರೆ ಕುಚಿತ್ತ, ಕುಬುದ್ಧಿ, ಅಹಂಕಾರ, ವ್ಯಾಕುಲ, ಅಜ್ಞಾನ, ದುರ್ಭಾವಗಳನ್ನು ಅಳಿದು ಹಾಕಿ ಅವುಗಳ ಸ್ಥಳದಲ್ಲಿ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವಗಳನ್ನು ನೆಲೆಗೊಳಿಸಿಕೊಂಡು ಅನುಕ್ರಮವಾಗಿ ಆಚಾರ, ಗುರು, ಶಿವ, ಜಂಗಮ, ಪ್ರಸಾದ, ಮಹಾಲಿಂಗಗಳನ್ನು ಸಾಧ್ಯಮಾಡಿಕೊಳ್ಳಬೇಕು. ಈ ಸ್ಥಿತಿಯು ಸಾಧ್ಯವಾಗದೆ, ಷಡ್ವಿಧಾರ್ಪಣವ ಮಿಶ್ರಣದೊಳಗಣ ಮಿಶ್ರಾರ್ಪಣದ ಛಾಯೆ ಕಾಣಿಸ ಲಾರದು. ಅದನ್ನು ಸಾಧ್ಯಮಾಡಿಕೊಳ್ಳಬೇಕಾದರೆ 'ಏಕಮೇವ ಪರಂ ಬ್ರಹ್ಮ' ಎಂಬ ತತ್ತ್ವದ ಒಳಗನ್ನು ಪೂರ್ಣ ಅರ್ಥಮಾಡಿ ಕೊಂಡು ಷಟ್‌ಸ್ಥಲಸಿದ್ಧಾಂತವನ್ನು ಅನುಷ್ಠಾನಕ್ಕೆ ತಂದರೆ ಸಾಕು. ಆ ಜೀವಿಯು 'ಮಿಶ್ರಾರ್ಪಣ'ದ ಒರೆಗೆ ಪೂರ್ಣಮೌಲ್ಯವನ್ನು ಹೊಂದಿದ ಪರಿಪೂರ್ಣ. ಅದರ ಸಾಧನಾಕ್ರಮದ ಪರಿಚಯ ಸಂಕ್ಷಿಪ್ತದಲ್ಲಿ ಇಂತಿದೆ :

ಸಾಧನಾಜೀವಿಯು ಕ್ರಿಯಾಶಕ್ತಿಯ ಮಥನದಿಂದ ಪ್ರಾಣವಾಯುವನ್ನೂ, ಜ್ಞಾನಶಕ್ತಿಯ ಮಥನದಿಂದ ಅಪಾನವಾಯು ವನ್ನೂ, ಇಚ್ಛಾಶಕ್ತಿಯ ಮಥನದಿಂದ ವ್ಯಾನವಾಯುವನ್ನೂ, ಆದಿಶಕ್ತಿಯ ಮಥನದಿಂದ ಉದಾನವಾಯುವನ್ನೂ, ಪರಾಶಕ್ತಿಯ ಮಥನದಿಂದ ಸಮಾನವಾಯುವನ್ನು ನಿಲ್ಲಿಸಿಕೊಂಡು ಅನುಕ್ರಮವಾಗಿ ನಾಲ್ಕಕ್ಷರದ ಬ್ರಹ್ಮನ ನಕಾರ, ಷಡಕ್ಷರದ ವಿಷ್ಣುವಿನ ಮಕಾರ, ದಶಾಕ್ಷರದ ರುದ್ರನ ಶಿಕಾರ, ದ್ವಾದಶಾಕ್ಷರದ ಈಶ್ವರನ ವಾಕಾರ, ಷೋಡಶಾಕ್ಷರದ ಸದಾಶಿವನ ಯಕಾರಗಳೆಂಬ ಬೀಜಾಕ್ಷರಗಳ ಪರಿಜ್ಞಾನವನ್ನು ಮಾಡಿಕೊಳ್ಳಬೇಕು. ಈ ಜ್ಞಾನದ ಬೆಳಕಿನಲ್ಲಿ ಆನಂದಭಕ್ತಿಯನ್ನು ಅರಿತುಕೊಳ್ಳಬೇಕು. ಅದು ಆಕಾಶದ ಭ್ರಮೆಯನ್ನು ಪರಿಣಾಮದಿಂದ ತಿಳಿಸುತ್ತದೆ. ಅದರಿಂದ ಜೀವಿಗೆ ಕರ್ಮನಾಸ್ತಿ. ಶರಣಸ್ಥಲದ ಬಲದಿಂದ ಸುಜ್ಞಾನ ಪ್ರಾಪ್ತಿ. ಆ ಮೂಲಕ ಚಿಚ್ಛಕ್ತಿಯ ಮಥನದಿಂದ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬ ಪಂಚವಾಯು ಗಳು ನೆಲೆಯಾಗಿ ನಿಂತು ಓಂಕಾರವೆಂಬ ಬೀಜಾಕ್ಷರದ ನೆಲೆಯನ್ನು ತೋರಿಸುತ್ತವೆ. ಆಗ ಆತ್ಮನ ಪ್ರಕಾಶ, ಸಮರಸ ಭಕ್ತಿಯ ಸತ್ವ ದಲ್ಲಿ ಹೊಡೆದೇಳುತ್ತದೆ. ಕೂಡಲೇ ಸದ್ಭಾವದ ನೆಲೆಯು ಐಕ್ಯಸ್ಥಲವನ್ನು ಹೊಂದಿಬಿಡುತ್ತದೆ. ಹೀಗೆ ಷಡ್ವಿಧಶಕ್ತಿಯ ಮಥನ ದಿಂದ ದಶವಾಯುಗಳು ನೆಲೆಗೊಂಡು, ಅಂತರ್‌ಮುಖ ಛತ್ತೀಸವಿಚಾರವಿಡಿದು ಕಾಣಿಸಿದ ಷಡ್ವಿಧಭಕ್ತಿಯಿಂದ, ಒಳಹೊರಗೆ ತೆರಹಿಲ್ಲದೆ, ಷಡ್ವಿಧಸ್ಥಲದ ಬೆಳಗನ್ನು ಬೀರುತ್ತ ತೋರುತ್ತ ಮೀರುತ್ತ ಗುರುಲಿಂಗಜಂಗಮವೆಂಬ ಮೂರುಸ್ಥಲಗಳಲ್ಲಿ ನಾದ ಬಿಂದು ಕಳೆಗಳನ್ನು ಗುರುತಿಸುತ್ತದೆ. ಆ ಮುಖಾಂತರ ನಿರ್ದೇಶನ ದೊರೆತು ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಮೊದಲಾದ ತ್ರಿಸ್ಥಲಕ್ಕೆ ಸಂಬಂಧಪಟ್ಟ ಭೇದಗಳನ್ನರಿತು, ಅಲ್ಲಿರುವ ಲಿಂಗಾಂಗದ ನಿರ್ಣಯವನ್ನು ಮುಟ್ಟಿ ನೋಡುತ್ತ,

'ಇಂತೀ ಮೂಱು ಸ್ಥಲದ ಬೆಳಗನು ಭಕ್ತಜಂಗಮವೆಂಬ ಉಭಯಸ್ಥಲದಲ್ಲಿ ಕಾಣಿಸಿ,
ಶಿವಭಕ್ತಿಯಲ್ಲಿ ತಿಳಿದು, ಕಾಯ ಪ್ರಾಣದಲ್ಲಿ ಸಂಬಂಧಿಸಿ,
ಭಕ್ತ ಮಹೇಶ್ವರ ಪ್ರಸಾದಿ ಎಂಬ ತ್ರಯಾಂಗಸ್ಥಲವು ಭಕ್ತನಲ್ಲಿಯೆ ಸುಳಿದು,
ಪ್ರಾಣಲಿಂಗಿ ಶರಣ ಐಕ್ಯವೆಂಬ ತ್ರಯಾಂಗಸ್ಥಲವು ಜಂಗಮದಲ್ಲಿಯೆ ಸುಳಿದು,
ಸಾಕಾರ ಮೂಱು ಸ್ಥಲವು ಕ್ರಿಯಾಚರಣೆಯಲ್ಲಿ ಸವೆದು,
ನಿರಾಕಾರ ಮೂಱು ಸ್ಥಲವು ಜ್ಞಾನಾಚರಣೆಯಲ್ಲಿ ಸವೆದು,

ಮಾರ್ಗಕ್ರೀಯ ಮೀಱಿದ ಕ್ರೀಯೆಂದೆನಿಸಿ,
ಕಱುಹಿನ ಸ್ಥಲವ ರೂಪುಮಾಡಿ, ಅಱುಹಿನ ಸ್ಥಲವ ನಿರೂಪು ಮಾಡಿ
ರೂಪುರುಚಿಯಂತೆ ಉಭಯಸ್ಥಲದಲ್ಲಿ ನಿಂದು,
ಉಭಯಸ್ಥಲವ ನೆಲೆಮಾಡಿ ತೋಱಿತ್ತು.
ಉಭಯಸ್ಥಲವಳಿದುಳಿದು ಏಕಮೇವ ಪರಂ ಬ್ರಹ್ಮ ಎಂಬಲ್ಲಿ ಜೀವಿಯು ಗತಿಪಡೆಯಿತಃ.

ಸೂತ್ರರೂಪದ ಈ 'ಏಕಮೇವ ಪರಂ ಬ್ರಹ್ಮ' ಎಂಬುದಕ್ಕೆ ಮಿಶ್ರಾರ್ಪಣದ ಕೊನೆಯ ಭಾಗದಲ್ಲಿ ಸೂತ್ರರೂಪದ ಬಹುಸುಂದರವಾದ ವೃತ್ತಿಯನ್ನು ನೀಡಿ ಅತಿಜಟಿಲವಾದ ಸೃಷ್ಟಿಸ್ಥಿತಿಲಯತತ್ತ್ವಗಳನ್ನು ಚಿದಾನಂದಗೊಳಿಸಲಾಗಿದೆ. ಅದನ್ನು ಕಂಡಾಗ ಚೆನ್ನಬಸವಣ್ಣನ ಅಧ್ಯಾತ್ಮದ ಪ್ರಕಾಶ, ಅನುಭವದ ಬೆಳಗು, ಕಾವ್ಯದ ಕಾಂತಿ, ಅರುಹಿನ ಕುರುಹು, ಪಾದರಸದಂತಹ ಪ್ರತಿಭೆಗಳಿಗೆ ಎಂತಹನೂ ಸುಜೀವಿಯಾಗಿ ನಮೋ ನಮೋ ಎನ್ನಬೇಕಾಗುತ್ತದೆ. ಆತನು ನೀಡಿದ ಆ ನಿರೂಪಣೆಯ ಸೊಗಸು,

'ಉಭಯ ಸ್ಥಲವಳಿದುಳಿದು ಏಕಮೇವ ಪರಂ ಬ್ರಹ್ಮ ಎಂಬಲ್ಲಿ
ತನ್ನ ಪಶ್ಚಿಮ ಪದದ ನಿಜದ ಬೆಳಗಿನ ಪ್ರಭೆಯಲ್ಲಿ
ಒಂದೆರಡಾದುದಂ ಕಂಡು, ಎರಡು ಮೂಱಾದುದಂ ಕಂಡು,
ಮೂಱಾಱಾದುದಂ ಕಂಡು, ಆಱು ಮೂವತ್ತಾಱಾದುದಂ ಕಂಡು,
ಆ ಮೂವತ್ತಾಱು ಇನ್ನೂಱ ಹದಿನಾಱಾದುದಂ ಕಂಡು,
ಆ ಇನ್ನೂಱ ಹದಿನಾಱಱ ಮಿಶ್ರಪಿಂಡಾಂಡದಲ್ಲಿ
ಪರಿಪೂರ್ಣವಾಗಿ ಬೆಳಗಿ ತೋಱಿತ್ತೆಂಬುದಂ ಕಂಡು,
ಕಡೆಸೂಸಿ ಅಱಿವರಳ್ದು ಬೆಱಗು ನಿಬ್ಬೆಱಗಾಗಿ,
ಆ ಪಿಂಡಾಂಡದಲ್ಲಿ ತೋಱುವ ಪರಿಪೂರ್ಣಪ್ರಭೆಯನು
ಆ ಇನ್ನೂಱ ಹದಿನಾಱಱಲ್ಲಿ ಭೇದಿಸಿ,
ಆ ಇನ್ನೂಱಹದಿನಾಱಱ ಪ್ರಭೆಯನು ಮೂವತ್ತಾಱಱಲ್ಲಿ ಅಱಿದು,
ಆ ಮೂವತ್ತಾಱಱ ಬೆಳಗನು ಆಱುಸ್ಥಲದಲ್ಲಿ ಅಱಿದು,
ಆ ಆಱುಸ್ಥಲದನ್ವಯವನು ಮೂಱುಸ್ಥಲದಲ್ಲಿ ಅಱಿದು,
ಮೂಱುಸ್ಥಲಮೂಲವನು ಉಭಯಸ್ಥಲದಲ್ಲಿ ಅಱಿದು,
ಆ ಉಭಯಸ್ಥಲದ ಉಪಮೆಯನು ಉಪಮಾತೀತದಲ್ಲಿ ಅಱಿದು,
ಉಪಮೆ ಅನುಪಮೆಯೆಂಬ ಅಱಿವಱಿತು ಮಱಿವು ನಷ್ಟವಾಗಿ,
ವಾಚಾತೀತಂ ಮನೋತೀತಂ ಭಾವಾತೀತಮಗೋಚರಃ ।
ಸರ್ವಶೂನ್ಯಂ ನಿರಾಕಾರಂ ನಿತ್ಯತ್ವಂ ಪರಮಂ ಪದಂ ॥ ಎಂಬುದಾಗಿ
ಆದಿಶೂನ್ಯಂ ಮಧ್ಯಶೂನ್ಯಮಂತ್ಯಶೂನ್ಯಂ ನಿರಾಮಯಂ ।
ಸರ್ವಶೂನ್ಯಂ ನಿರಾಲಂಬಂ ನಿಶ್ಶಬ್ದಂ ಬ್ರಹ್ಮ ಉಚ್ಯತೆ ॥
ಎಂಬ ನುಡಿಗೆಡೆಗುಡದೆ ನಿರವಯಸ್ಥಲದಲ್ಲಿ ನಿಜವನೈದಿಪ್ಪಾತನೀಗ
ಅಭೇದ್ಯಭೇದಕ ಅಸಾಧ್ಯಸಾಧಕ ಚಿನ್ಮಯ ಚಿದ್ರೂಪ ಚಿದಾನಂದ'

ಎಂಬ ಆತನ ಮಾತುಗಳಲ್ಲಿ ತುಂಬಿ ಸೂಸಿದೆ. ಅದನ್ನು ನಾವೆಲ್ಲ ಮತ್ತೆ ಮತ್ತೆ ಓದಿ ಮನನಮಾಡಿಕೊಂಡು ಚಿದಾನಂದತ್ವವನ್ನು ಪಡೆಯುವ ಸೌಭಾಗ್ಯವಂತರಾಗಬೇಕು, ಪರಿಪೂರ್ಣರಾಗಬೇಕು.

'ಕರಣಹಸುಗೆ' ಮತ್ತು 'ಮಿಶ್ರಾರ್ಪಣ'ಗಳ ಸಂಕ್ಷಿಪ್ತ ಪರಿಚಯ ಮಾಡಿಕೊಂಡ ಮೇಲೆ ಈ ಎರಡು ಗ್ರಂಥಗಳು ಚಿಕ್ಕವಾಗಿದ್ದರೂ ವೀರಶೈವಧರ್ಮದ ಮೂಲತತ್ತ್ವಗಳೇ ಇವುಗಳಲ್ಲಿ ಅಡಕವಾಗಿರುವುದನ್ನು ಕಾಣಬಹುದು. ಒಂದು ಗ್ರಂಥ ಮತ್ತೊಂದಕ್ಕೆ ಪೂರಕ. ಈ ಎರಡೂ ಗ್ರಂಥಗಳ ಅಧ್ಯಯನದಿಂದಲೇ ವೀರಶೈವಧರ್ಮದ ಶಾಸ್ತ್ರೀಯ ಅಧ್ಯಯನ ಸಾಧ್ಯ. ಆ ಮೂಲಕವಾಗಿಯೇ, ಶಿವಾಗಮಗಳಲ್ಲಿ ಕ್ರಮಸಮುಚ್ಚಯ ರೂಪದಲ್ಲಿ ವಿವರಿಸಿದ ಷಟ್‌ಸ್ಥಲಸಿದ್ಧಾಂತವನ್ನು ಸಮುಚ್ಚಯ ರೂಪದಲ್ಲಿ ಅನುಗೊಂಡು ಕಾಣುವ ಅನುಪಮವಾದ ಆರ್ಷದೃಷ್ಟಿಯು ಲಭ್ಯ. ಆ ಮೂಲಕ ವಿಶ್ವದ ಮೂಲಕಾರಣದ ಸಂಪೂರ್ಣ ಜ್ಞಾನ. ಹೀಗೆ ಈ ಎರಡೂ ಗ್ರಂಥಗಳು ವೀರಶೈವಧರ್ಮಜ್ಞಾನದ ರತ್ನದೀಪಗಳು.

**ಗ್ರಂಥಸೂಚಿ :**

೧. ವಚನಧರ್ಮಸಾರ—ಎಂ.ಆರ್. ಶ್ರೀನಿವಾಸಮೂರ್ತಿ.
೨. ಕನ್ನಡಸಾಹಿತ್ಯಚರಿತ್ರೆ—ರಂ. ಶ್ರೀ. ಮುಗಳಿ.

೩. ಷಟ್‌ಸ್ಥಲಚಕ್ರವರ್ತಿ ಚೆನ್ನಬಸವಣ್ಣನವರ ವಚನಗಳು—ಸಂ. ಪಂಡಿತ ನಾಗಭೂಷಣ ಶಾಸ್ತ್ರಿಗಳು.
೪. ಹರಿದಾಸಕೀರ್ತನ ತರಂಗಿಣಿ, ಭಾಗ ೩—ಸಂ. ಸುಬೋಧ ಯಂ. ರಾಮರಾವ್.
೫. ಷಟ್‌ಸ್ಥಲಚಕ್ರವರ್ತಿ ಚೆನ್ನಬಸವಣ್ಣನವರ ವಚನಗಳು.—ಸಂ. ಡಾ॥ ಆರ್. ಸಿ. ಹಿರೇಮಠ.
೬. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ—ಸಂಪುಟ ೩, ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟನೆ.

# ಮಂತ್ರಗೋಪ್ಯ

—ವ್ಹಿ. ಆರ್. ಕೊಪ್ಪಳ

ವೀರಶೈವಧರ್ಮಸಾಹಿತ್ಯಗಳ ಐತಿಹ್ಯವು ವಿಶಿಷ್ಟವಾದ ಒಂದು ನವೀನತೆಯಿಂದ ಮೆರುಗನ್ನು ಪಡೆದಿದೆ. 'ಪಿಂಡ ಬ್ರಹ್ಮಾಂಡಯೋರೈಕ್ಯಂ' ಎಂಬ ಸೂತ್ರದ ಹಿನ್ನೆಲೆಯಲ್ಲಿ ವೀರಶೈವದ ದಿನದಿನದ ಆಚರಣೆ ಮತ್ತು ಅದನ್ನು ಬಳಸಿಕೊಂಡು ಬಂದಿರುವ ವಿಚಾರಧಾರೆ ಇವುಗಳ ಮಧುರವಾದ ಸಮರಸವನ್ನು ಆ ಐತಿಹ್ಯದಲ್ಲಿ ಕಾಣಬಹುದಾಗಿದೆ. ಪರಶಿವ–ಶಕ್ತಿ–ಶರಣ–ಸೃಷ್ಟಿ ಈ ನಾಲ್ಕರ ಬಗೆಗೆ ಆಳವಾಗಿ ಅವ್ಯಾಹತವಾಗಿ ವಿಚಾರಿಸಿ ಮಂಡಿಸಿರುವ ವೀರಶೈವ ಸಿದ್ಧಾಂತಗಳು, ಅದರಲ್ಲಿಯೂ ಅನುಭಾವಸಾಹಿತ್ಯದಲ್ಲಿ ಮೂಡಿಬಂದಿರುವ ಅಣಿಮುತ್ತುಗಳಂತಿರುವ ಮಾತುಗಳು ನಿತ್ಯನೂತನವಾಗಿವೆ. ಈ ವಿಷಯಕವಾದ ವೀರಶೈವರ ಗ್ರಂಥವ್ಯಾಪ್ತಿಯು ವೈವಿಧ್ಯದಿಂದ ಮಾತ್ರವಲ್ಲ, ವಿಸ್ತಾರದಿಂದಲೂ ಗಮನಾರ್ಹ. ಅವರು ರಚಿಸಿದ ಗ್ರಂಥಗಳನ್ನು, ವಿಶೇಷವಾಗಿ ಸಾಹಿತ್ಯದಲ್ಲಿ ಯುಗಗಳ ನಿರ್ಮಾಣಕ್ಕೆ ಕಾರಣವಾಗುವಂತೆ ಕಾಲಕಾಲಕ್ಕೆ ರಚಿಸುತ್ತ ಬಂದ ಗ್ರಂಥಗಳನ್ನು ಅವಲೋಕಿಸುವದಾದರೆ ಇವುಗಳಲ್ಲಿ ಒಂದು ವಿಧವಾದ ವಿಂಗಡಿಕೆಯನ್ನು ಗುರುತಿಸಬಹುದಾಗಿದೆ.

ಇವುಗಳಲ್ಲಿ ಆಧ್ಯಾತ್ಮಿಕ ಔನ್ನತ್ಯವನ್ನು ಪಡೆಯಲೆಳಸುವ ಸಾಧಕರಿಗೆ 'ಮಂತ್ರಗೋಪ್ಯ' ಎಂಬ ಹೆಸರಿನಿಂದ ರಚಿತವಾದ ಕೃತಿಗಳು ಒಳ್ಳೆ ಸಹಾಯಕವಾಗುತ್ತವೆ. ನೂರೊಂದು ವಿರಕ್ತರ ಕಾಲದಿಂದೀಚೆಗೆ 'ಕರಣಹಸುಗೆ', 'ಮಿಶ್ರಾರ್ಪಣ' ಎಂಬ ಗ್ರಂಥಗಳ ಜೊತೆಗೆ 'ಮಂತ್ರಗೋಪ್ಯ'ವನ್ನು ವಿಶೇಷವಾಗಿ ಮನನಮಾಡಿಕೊಳ್ಳುತ್ತಿದ್ದರೆಂಬುವದು ಗಮನಿಸತಕ್ಕ ಸಂಗತಿ. ಇಂತಹ ಅನುಭಾವಾತ್ಮಕ ಗ್ರಂಥಗಳ ಅಭ್ಯಾಸಮಾಡಿ ಸರಿಯಾದ ವರ್ತನೆಯನ್ನಿಟ್ಟುಕೊಳ್ಳಬೇಕೆಂಬ ಉದ್ದೇಶದಿಂದ ಸುತ್ತೂರು ವೀರಸಿಂಹಾಸನ ಮಠದ ಶ್ರೀ ಘನಲಿಂಗದೇವನು 'ಮಂತ್ರಗೋಪ್ಯವನೋದುವಣ್ಣಗಳ ಕುಟಿಲವೆಣ್ಣುಗಳ ಕುಮಂತ್ರಕ್ಕೆ ಸಿಕ್ಕಿಸಿ ಕಾಡಿಸಿತ್ತು ಮಾಯೆ' ಎಂದು ಎಚ್ಚರಿಸಿದ್ದಾನೆ[1]. ಶಿವಯೋಗದ ಗೂಢವನ್ನು ತಿಳಿಯಪಡಿಸುವ ಈ ಮಂತ್ರಗೋಪ್ಯ ಕೃತಿಗಳು ಹೆಚ್ಚಾಗಿ ಇರುವದಿಲ್ಲ. ಆದರೂ ಇದ್ದ ಅವಕ್ಕೆ ಬಹಳ ಎತ್ತರವಾದ ಸ್ಥಾನವಿದೆ. ಈಗ ಉಪಲಬ್ಧವಿರುವ ಮಂತ್ರಗೋಪ್ಯಗಳಲ್ಲಿ ೧. ಅಲ್ಲಮಪ್ರಭುದೇವರ ಮಂತ್ರಗೋಪ್ಯ, ೨. ಚನ್ನಬಸವಣ್ಣನ ಹಿರಿಯ ಮಂತ್ರಗೋಪ್ಯ ಮತ್ತು ಅವನ ಪದಮಂತ್ರಗೋಪ್ಯ, ೩. ಹಡಪದಪ್ಪಣ್ಣಗಳ ಮಂತ್ರಗೋಪ್ಯ, ೪. ಹಡಪದಪ್ಪಣ್ಣಗಳ ಪುಣ್ಯಸ್ತ್ರೀ ಲಿಂಗಮ್ಮನ ಮಂತ್ರಗೋಪ್ಯ, ೫. ಕೇವಲ ವಚನಗಳಿದ್ದ ನಿರಾಳ ಮಂತ್ರಗೋಪ್ಯ ಇವು ಉಪಲಬ್ಧವಾಗಿವೆ.

ಭಕ್ತಿಭಾಂಡಾರಿ ಬಸವಣ್ಣನು ಒಂದು ಮಂತ್ರಗೋಪ್ಯವನ್ನು ಬರೆದಿದ್ದಾನೆ. 'ಇದು ಹಾಡಿನ ರೂಪವಾಗಿದೆ, ಇದರಲ್ಲಿ ವೀರಶೈವ ಸಿದ್ಧಾಂತವು ಸಂಗ್ರಹವಾಗಿ ಹೇಳಿದೆ' ಎಂದು ಕೀರ್ತಿಶೇಷ ಆರ್. ನರಸಿಂಹಾಚಾರ್ಯರು ತಿಳಿಸುತ್ತಾರೆ[2]. ಆದರೆ ಇದು ಅಚ್ಚಾಗಿರುವದಿಲ್ಲ. ತಾಳೆಗರಿಯ ಪ್ರತಿಗಳಲ್ಲಾಗಲಿ ಇಲ್ಲವೆ ಇತರ ಕೈಬರಹದ ಪ್ರತಿಗಳಲ್ಲಾಗಲಿ ಇದು ಇರುವಂತೆ ತೋರುವದಿಲ್ಲ. ಕವಿಚರಿತೆಕಾರರಿಗೆ ಯಾವುದಾದರೂ ಒಂದು ಆಧಾರವಿದ್ದಿರಬೇಕು. ಇದು ಇನ್ನೂ ಸಂಶೋಧಿಸಲ್ಪಡಬೇಕಾದ ಸಂಗತಿಯಾಗಿದೆ.

ಸಮ್ಯಗ್ಜ್ಞಾನಿ ಚೆನ್ನಬಸವಣ್ಣನು 'ಮಂತ್ರಗೋಪ್ಯ' ಮತ್ತು 'ಪದಮಂತ್ರಗೋಪ್ಯ' ಎಂಬ ಹೆಸರಿನ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಇವೆರಡೂ ಕೃತಿಗಳಿಗೆ ಕನ್ನಡವ್ಯಾಖ್ಯಾನಗಳಿವೆ. ಮಂತ್ರಗೋಪ್ಯಕ್ಕೆ 'ಹಿರಿಯ (ಸ್ಥಲ)ಮಂತ್ರಗೋಪ್ಯ' ಎಂದೂ ಹೆಸರಿಸಿದೆ. ಪಾಠಾಂತರ ಟೀಕೆಗಳಿಂದೊಡಗೂಡಿದ ಇದನ್ನು ಪಂಡಿತ ಚಂದ್ರಶೇಖರಶಾಸ್ತ್ರಿ, ಚಿತ್ರದಹಳ್ಳಿ ಎಂಬವರು ಅಚ್ಚುಗೊಳಿಸಿ ಧಾರವಾಡದಲ್ಲಿ ಪ್ರಸಿದ್ಧಗೊಳಿಸಿದರು. ಪದ್ಯರೂಪವಾದ ಇದರಲ್ಲಿ ೨೭ ಹಾಡುಗಳೂ ಪ್ರಾರಂಭದಲ್ಲಿ 'ನೋಡಲಿಲ್ಲ ನುಡಿಯಲಿಲ್ಲ ಕೂಡಲಿಲ್ಲ ಅಪ್ರತಿಮಂಗೊಡಲುಬಲ್ಲ' ಎಂಬ ಪದ್ಯಾರ್ಧದ ಒಂದು ಪಲ್ಲವಿಯೂ ಇರುತ್ತವೆ. ಇದರಲ್ಲಿಯ

1. ಘನಲಿಂಗದೇವರ ವಚನ (ಶರಣ ಸಾಹಿತ್ಯಮಾಲೆ-೬೩), (ಶಿವಾನುಭವ ಗ್ರಂಥಮಾಲೆ ವ-೫) ವ.ಶಾ. ಸಾರ, ಭಾಗ ೧ (ಪೂರ್ವಾರ್ಧ) ವ.೧೧, ಪುಟ ೨೫೬.
2. ಕ. ಚ. ಭಾಗ ೧, ಪುಟ ೧೭೭
3. ಕ. ಚ. ಭಾಗ ೧, ಪುಟ ೧೭೮

ಪದ್ಯಗಳನ್ನು 'ಸೂತ್ರ' ಎಂದು ಕರೆಯಲಾಗಿದೆ. ಷಟ್ಸ್ಥಲದ ಮುಖಾಂತರ ಲಿಂಗಾಂಗಸಾಮರಸ್ಯವನ್ನು ಬೋಧಿಸುವ ಈ ಕೃತಿಯಲ್ಲಿ ಶುದ್ಧ ಶಿವಯೋಗದ ತಿಳಿಯಾದ ವಿವರಣೆಯಿರುತ್ತದೆ.

> ಎರಡು ವಿಧದ ಭಕ್ತಿಜ್ಞಾನ ತೂರ್ಯಾತೀತವಾದಲ್ಲಿ ಕುರುಹುಗೆಟ್ಟ ನಿರ್ವಾಣಲಿಂಗವು ಮೂಲವು।
> ಉನ್ಮನಿಯ ಸ್ಥಾನದಲ್ಲಿ ಉಲುಹು ಮಂತ್ರಗೋಪ್ಯವಾಗಿ ಪರಮಲಿಂಗದ ಬೆಳಗುದೋರಲಾರು ಮೂಲವು॥4

ಎಂಬ ಪದ್ಯದಲ್ಲಿ ಮಂತ್ರಗೋಪ್ಯವೇಂದರೇನು. ಶಿವಯೋಗದಲ್ಲಿ ಅದರ ಸ್ಥಾನವಾವುದು ಎಂಬುದನ್ನು ಸೂಚ್ಯವಾಗಿ ತಿಳಿಸಲಾಗಿದೆ. ಪರವಸ್ತುವು ಪ್ರಕಾಶರೂಪವಾಗಿದೆ. ಅದನ್ನು ಭಕ್ತಿಜ್ಞಾನಗಳ ಮೂಲಕ ಕಾಣಲು ಶಕ್ಯವಿದೆ. ವೈರಾಗ್ಯದ ಆಧಾರದಲ್ಲಿ ಆಳವಡಿಸಿಕೊಳ್ಳದ ಈ ಭಕ್ತಿಜ್ಞಾನಗಳು ತೂರ್ಯಾವಸ್ಥೆಗೆ ನಿಲುಕಿಸಿ ಪರವಸ್ತುವಿನ ಸಾಕ್ಷಾತ್ಕಾರವನ್ನು ಮಾಡಿಕೊಡಲಾರವು. ಅದಕ್ಕಾಗಿ ಭಕ್ತಿ-ಜ್ಞಾನ-ವೈರಾಗ್ಯದ ಆಚರಣೆಗೆ ಒಂದು ಅತ್ಯುಚ್ಚ ಸ್ಥಾನವನ್ನು ನೀಡಲಾಗಿದೆ. ಇಂತಹ ಪರವಸ್ತುವನ್ನು ತನ್ನಿಂದ ಅನ್ಯವಾಗಿ ಹುಡುಕುವಂತಿಲ್ಲ, ತನ್ನಲ್ಲಿಯೆ ಅದನ್ನು ಗುರುತಿಸಬೇಕು. ಸಂಕಲ್ಪ ವಿಕಲ್ಪದ ಮನವು ಸಂಯಮದಲ್ಲಿ ಮಾರ್ಪಟ್ಟು ಉನ್ಮನವಾಗಿ ತೋರಿದಾಗ ಅಲ್ಲಿ ಶಬ್ದ ಮುಗ್ಧಸ್ಥಿತಿಯೊದಗುತ್ತದೆ. ಮನ-ಮಾರುತಗಳ ಸ್ತಿಮಿತಕ್ಕೆ ಬಂದಾಗ ಉಲುಹಿಗೆ ಆಸ್ಪದವೆಲ್ಲಿದೆ ? ಇಂತಹ ಅವಸ್ಥೆಯಲ್ಲಿ ಮಂತ್ರಮಯ ಮೂರ್ತಿಯು ಅಂತರಂಗದಲ್ಲಿ ಪ್ರಕಾಶರೂಪವಾಗಿ ಹೊಳೆಹೊಳೆಯುವದು. ಇದು ಇಲ್ಲಿ ಸೂಚಿತವಾಗಿರುವ ಮಂತ್ರಗೋಪ್ಯದ ರಹಸ್ಯ.

'ಪದಮಂತ್ರಗೋಪ್ಯ'ವೂ ಪದ್ಯಗಳ ರೂಪವಾಗಿದೆ. 'ಸಿದ್ಧರಾಮಸಾಹಿತ್ಯ ಸಂಗ್ರಹ'ದಲ್ಲಿ ಉತ್ತಂಗಿ ಶ್ರೀ ಚನ್ನಪ್ಪನವರು ಇದನ್ನು ಟೀಕೆಯೊಂದಿಗೆ ಪ್ರಕಟಿಸಿದ್ದಾರೆ, ಶಿವಾನುಭವ ಮಾಸಪತ್ರಿಕೆಯಲ್ಲಿಯೂ ಮೂಲಗ್ರಂಥವನ್ನು ಅಚ್ಚುಗೊಳಿಸಲಾಗಿದೆ5. ಗ್ರಂಥದ ಪ್ರಾರಂಭದಲ್ಲಿ 'ಶ್ರೀ ಗುರು ಚನ್ನಬಸವೇಶ್ವರ(ದೇವರು)ಸ್ವಾಮಿಗಳು ನಿರೂಪಿಸಿದ ವಸ್ತುನಿರ್ದೇಶ ಪದಮಂತ್ರಗೋಪ್ಯ' ಎಂಬ ಅವತರಣಿಕೆ ಇದೆ. ಶಿವಯೋಗಿ ಸಿದ್ಧರಾಮನಿಗೆ 'ಶಿವಯೋಗ ಸುಮಾರ್ಗಲಕ್ಷಣ'ವನ್ನು ಬೋಧಿಸಿದ ವಿಷಯ ಇದರಲ್ಲಿದೆ6. ಎರಡನೆಯ ಚೆನ್ನಬಸವನು (ಸು. ೧೫೦೦) ಈ ಗ್ರಂಥದ ಬಗೆಗೆ ತಿಳಿಸುತ್ತ ಕವಿಚರಿತೆಕಾರರು ಇದೇ ಗ್ರಂಥಕ್ಕೆ ಬೇರೊಂದು ಟೀಕೆಯಿರುವುದನ್ನು ನಿರವಿಸಿದ್ದಾರೆ. ಈ ಟೀಕಿನ 'ಸಮಾಪ್ತ ಮುದ್ರೆ'ಯಲ್ಲಿ ಪರಮ ಶಿವಯೋಗಿರಾಜ ಸಿದ್ಧರಾಮೇಶ್ವರನ ನೆವದಿಂದ ಈ ಗ್ರಂಥವು ಹುಟ್ಟಿತೆಂದೂ, 'ಸ್ವಾನುಭವಪ್ರಸಿದ್ಧವಾದ ಪರಮಾಮೃತ ವಾಕ್ಯಗಳಿಂದ ಪದವಿಟ್ಟು ನಿರೂಪಿಸಿದ ಮಂತ್ರಗೋಪ್ಯ'ವೆಂಬ ಶಿವಶಾಸ್ತ್ರದಲ್ಲಿ ಸಂಪೂರ್ಣವಾಗಿಪ್ಪ ಶಿವಾನುಭಾವಾರ್ಥಂಗಳನು ಕಾಣಬಹುದೆಂದೂ ತಿಳಿಸಲಾಗಿದೆ7. ಶಿವಾನುಭವದಲ್ಲಿ ಪ್ರಕಟವಾದ ಈ 'ಸಮಾಪ್ತಮುದ್ರೆ'ಯಲ್ಲಿ ಬಹಳ ವ್ಯತ್ಯಾಸವಿರುತ್ತದೆ. ಬಹುತರವಾಗಿ ಇದು ಎರಡನೆಯ ಚನ್ನಬಸವನು ಬರೆದ ಕೊನೆಯ ಮಾತಾಗಿರಬಹುದು. '...ಶರಣಗಣಂಗಳು ಅರಿದಾನಂದಿಸಿ ನಿತ್ಯಸುಖಿಗಳಾಗಲಿ ಎಂದು ಬೋಧಿಸಿದಂಥ ಪದಮಂತ್ರಗೋಪ್ಯದಿಂದ ಸ್ತೋತ್ರವ ಮಾಡಿದ ಮಹಾಪ್ರಸಾದವ ...ಶರಣಗಣಂಗಳು ಶ್ರೋತ್ರಮುಖದಿಂದ ಕೇಳಿ, ಮನೋಮುಖದಲ್ಲಿ ಹಾರೈಸಿ, ಹೃದಯಮುಖದಿಂದ ತೃಪ್ತಿಯನೈದಿ, ನಿಷ್ಕಳಂಕಲಿಂಗದಲ್ಲಿ ಅಂಕುರಿಸಿ, ಶೂನ್ಯಲಿಂಗದಲ್ಲಿ ಪರಿಣಾಮಿಸಿ, ನಿರಂಜನಲಿಂಗದಲ್ಲಿ ಮತ್ತೆ ಎಂದಿನಂತೆ ಬಯಲಾದರು ನೋಡಾ ಸಂಗನಬಸವಣ್ಣನ ಮಹಾಪ್ರಸಾದ ಗುಹೇಶ್ವರ ಲಿಂಗದ ಬೆಳಗಿನೊಳಗೆ ಸಿದ್ಧರಾಮಣ್ಣ8. ಇಲ್ಲಿ 'ಲಿಂಗೈಕ್ಯ' ಪದದ ನಿರ್ವಚನವನ್ನು ಕಾಣಬಹುದಾಗಿದೆ.

'ಪದಮಂತ್ರಗೋಪ್ಯ'ದಲ್ಲಿ ೩೫ ಪದ್ಯಗಳಿರುತ್ತವೆ. ಇದರಲ್ಲಿ ೧. ಶಿವಯೋಗ ಸ್ಥಾಪನಾಸ್ಥಲ ೨. ಪ್ರಾಣಲಿಂಗ ಪೂಜಾವಿಧಾನ ಸ್ಥಲ ೪. ಪರತತ್ವಲಿಂಗಪ್ರಕಾಶಸ್ಥಲ ೫. ಶಿವಾದ್ವೈತಶರಣಸ್ಥಲ ೬. ಮಹಾಲಿಂಗೈಕ್ಯಸ್ಥಲ ೭. ಜ್ಞಾನ ಶೂನ್ಯಸ್ಥಲ-ಎಂಬ ಏಳು ಸ್ಥಲಗಳಿರುತ್ತವೆ. ಒಂದೊಂದು ಸ್ಥಲದಲ್ಲಿ ೫ ಪದ್ಯಗಳೂ ಪ್ರಾರಂಭದ ಪದ್ಯಾರ್ಥದ ಒಂದೊಂದು ಪಲ್ಲವಿಯೂ ಇರುತ್ತವೆ.

> ಮೊದಲನೆಯ ಸ್ಥಲದಲ್ಲಿ ಪರವಸ್ತುವಿಗೆ ಆಕಾರ ನಿರಾಕಾರ ಎಂಬ ಎರಡು ಸ್ವರೂಪಗಳುಂಟೆಂಬುದನ್ನು ತಿಳಿಸಿ ಆಕಾರವಿಡಿದು ಅರ್ಚನೆ ಪೂಜನೆ ಮಾಡಿ ಏಕೋಭಾವದ ನಿಷ್ಠೆಯಿಂದಿರಲು ಆಕಾರವು ನಿರಾಕಾರದಲ್ಲಿ ನಿಲುಕದೆಯನ್ನು ಪಡೆಯುವನು. ಪರವಸ್ತುವಿನಿಂದ ತಾನು ಭಿನ್ನವಲ್ಲ ಎಂಬ 'ಅಹಂಗ್ರಹೋಪಾಸನೆ'ಯಿಂದ ಸಾಧಕನು ಅನುಸಂಧಾನಗೆಯ್ಯುತ್ತಿರುವಾಗ ಉಂಟಾಗುವ ನಾದ-ಬಿಂದು-ಕಳೆಗಳ ಅನುಭವ ಶಿವಕಳೆಯಲ್ಲಿ ಕೀಲಿಸಲು ನಾದ-ಬಿಂದು-ಕಲಾತೀತವಾದ ಅವಸ್ಥೆ ಯುನ್ನಾತನು ಪಡೆವನು. ಇಂತಹ ಸಾಧನೆಯ ಕ್ರಮದಲ್ಲಿ ಆಧಾರದಿಂದ ಪಶ್ಚಿಮದವರೆಗಿನ ನವಚಕ್ರಗಳಲ್ಲಿಯ ಅನುಭವಪ್ರಕಾಶವು ಬೆಳಗಿ 'ಘನತೆ ಘನವಾದ ಏಕೋದೇವನ ದ್ವಿತೀಯ ಎಂಬುದು ಪ್ರತ್ಯಕ್ಷವಾಗುವುದು' ಎಂಬ ಶಿವಯೋಗದ ಸಾರವನ್ನು ನಿರೂಪಿಸಲಾಗಿದೆ.

ನವ ಚಕ್ರಗಳೆ ಒಂಬತ್ತು ಕಮಲಗಳು ; ಅಲ್ಲಿ ನಿಂತು ಕಾಣುವ ಅನುಭವವು ಅರಳಿ ಆಳವಾಗುತ್ತ ಸಾಗಿದಂತೆ ಅದರ ಕುರುಹನ್ನು ಬಗೆ ಬಗೆಯಾಗಿ ಕಾಣಬಹುದು ; ಸುತ್ತೆಲ್ಲ ಪುಷ್ಪದ ಪರಿಮಳವು ವ್ಯಾಪಿಸಿ ಪ್ರಕಾಶದ ಸ್ವರೂಪವನ್ನು ತೋರ್ಪಡಿಸುವದು ; ಪ್ರಾಣಲಿಂಗದ ರಹಸ್ಯವು ಅವಗತವಾಗುವುದರ ಮುನ್ಸೂಚನೆ ಇದು ಎಂಬ ವಿವರ ಎರಡನೆಯ ಸ್ಥಲದಲ್ಲಿದೆ.

4. ಚೆ. ಬ. ಮಂತ್ರಗೋಪ್ಯ, ಪದ್ಯ ೮. 5. ಶಿವಾನುಭವ ಸಂಪುಟ ೧೪, ಸಂಚಿಕೆ ೧-೨ 6. ಕ. ಚ. ಭಾಗ ೧, ಪುಟ ೧೭೯
7. ಕ. ಚ. ಭಾಗ ೧, ಪುಟ ೧೬೩-೪, ಸಿ. ಸಾ. ಸಂಗ್ರಹ, ಪುಟ ೨೩೦-೧. 8. ಶಿವಾನುಭವ, ಸಂಪುಟ ೧೪, ಪುಟ ೯೧.

ಮೂರನೆಯ ಸ್ಥಲದಲ್ಲಿ ಅಂತರಂಗದಲ್ಲಿ ಸಾಗುವ ನವಲಿಂಗಪೂಜೆಯ ವೈಭವವನ್ನು ತಿಳಿಸಲಾಗಿದೆ.

ನಾಲ್ಕನೆಯ ಸ್ಥಲದಲ್ಲಿ ಅಂಗ–ಲಿಂಗ ಸಮರಸದ ಸೊಬಗು ಸಮೀಚೀನವಾದ ದೃಷ್ಟಾಂತಗಳಿಂದ ವರ್ಣಿತವಾಗಿದೆ. ಅಗ್ನಿಯು ಅಪ್ಪುವನ್ನು ನುಂಗುವದು ಸಹಜ. ಆದರೆ ಅಪ್ಪುವೇ ಅಗ್ನಿಯನ್ನು ನುಂಗಿರುವದೆಂದು ಹೇಳುವ ಮಾತು ಸೋಜಿಗ ವಾಗಿದೆ. ಇಂತಹ ಬೆಡಗಿನ ನುಡಿಗಳ ಸತ್ಯ ಅನುಭವಜ್ಞಾನಿಗೆ ಮಾತ್ರ ನಿಲುಕುವುದು. 'ಅಪ್ಪುತತ್ವವು ವಡಬಾಗ್ನಿಯನೊಳ ಕೊಂಡಿಪ್ಪಂತೆ ಮಹದಾನಂದ ಜಲಮಯವಪ್ಪ ಮಹಾಜ್ಞಾನಾಗ್ನಿ ಸ್ವರೂಪವಾದ ಲಿಂಗೈಕ್ಯವನೊಳಕೊಂಡಿಹುದು' ಎಂಬೀ ಮೊದಲಾದ ವಿವರಣೆಯಲ್ಲಿ ಈ ಬೆಡಗನ್ನು ಬಿಡಿಸಲಾಗಿದೆ.

ಐದನೆಯ ಸ್ಥಲದಲ್ಲಿ ಹಿಂದಿನ ಸ್ಥಲದ ದೃಷ್ಟಾಂತಗಳ ರೀತಿಯಲ್ಲಿಯೆ ಲಿಂಗೈಕ್ಯನ ನಿಲವನ್ನು ನಿರೂಪಿಸಲಾಗಿದೆ. ಶಿವ ಯೋಗದ ಪರಾಕಾಷ್ಠೆಯನ್ನಿಲ್ಲಿ ಕಾಣಬಹುದು. ಲಿಂಗೈಕ್ಯದ ಅವಿರಳವಾದ ಅವಸ್ಥೆಯಲ್ಲಿ ಅನುಭಾವಿಯು ಕಾಣುವ ಅನುಪಮ ಹಾಗೂ ನಾನಾ ಬಗೆಯ ದೃಶ್ಯಗಳನ್ನು ಆರನೆಯ ಸ್ಥಲದಲ್ಲಿ ಕಾಣಬಹುದಾಗಿದೆ. ಚರ್ಮಚಕ್ಷುವಿಗೆ ವಸ್ತುಗಳ ನಿಲವು ಸ್ಫುಟವಾಗಿ ತೋರುವ ತೆರದಿ ಜ್ಞಾನನೇತ್ರಕ್ಕೆ ಯಾವ ಯಾವ ವಸ್ತುಗಳ ಸ್ವರೂಪವು ಹೇಗೆ ಹೇಗೆ ಭಾಸವಾಗುವದೆಂಬ ಮನೋಹರವಾದ ವಿವರಣೆಯನ್ನು ಈ ಸ್ಥಲವು ನಿರೂಪಿಸುತ್ತದೆ. ಇಂತಹ ಅವಸ್ಥೆಯಲ್ಲಿ ಗೋಚರಿಸುವ ಅನುಭವದ ದೃಶ್ಯಗಳನ್ನು ನಿಃಸಂದಿಗ್ಧ ವಾದ ವಾಣಿಯ ವೈಖರಿಯನ್ನು ವಿವರಿಸುತ್ತಾನೆ ಲಿಂಗೈಕ್ಯನು :

> ಮೇರುವಿನ ಊರೊಳಗೆ ಆರೈದು ನೋಡಲ್ಕೆ ಭೇರಿನಾದದ ಪ್ರಭೆಯು ಬೆಳಗುದೋರೆ ।
> ಊರಳಿದು ಉಲುಹಡಗಿ ಭೇರಿನಾದದ ನಿಲವು ಆರು ಭೇದಿಸಿ ಕಾಣಲರಿದು ನೋಡಾ ॥[9]

ಬ್ರಹ್ಮರಂಧ್ರದಲ್ಲಿ ಪರಂಜ್ಯೋತಿಯ ಅನುಸಂಧಾನಗೆಯ್ಯುತ್ತಿರುವಾಗ ಅನುಭವಗೋಚರವಾಗುವ ಶರಧಿನಾದದಿಂದ ಭ್ರಮರ ನಾದದವರೆಗಿನ ದಶನಾದಗಳ ಉಲಿವು ಬಗೆಬಗೆಯ ಪ್ರಕಾಶಪುಂಜಗಳ ಬಿಂದುಸಾಕ್ಷಾತ್ಕಾರ ಮತ್ತು ನಾದಬಿಂದು ಶ್ರವಣದರ್ಶನ ಗಳಿಂದೊದಗುವ ಅವಿರಳವಾದ ಅಪಾರವಾದ ಆನಂದದ ಕಳಾಸ್ವರೂಪವು ಅಲ್ಲಿ ವಿಶ್ರಾಂತಿಯನ್ನು ಪಡೆಯುವದು. ಆಗ ಪರಾ ಪಶ್ಯಂತಿ ಮಧ್ಯಮಾ ವೈಖರಿ ಎಂಬ ಶಬ್ದಜಾಲಗಳು ನಾದಬ್ರಹ್ಮದ ನೆನಹಿನಲ್ಲಿ ನಿಶ್ಚಲವಾಗುವವು ; ಎಂದರೆ ಸಹಸ್ರಾರದ ಶತ ಕಮಲಕುಹರದೊಳಗಿನ ಚಿದಾಕಾಶ ಮಂಡಲದೊಳಗೆ ಶಬ್ದಮುಗ್ಧವಾದ ಬ್ರಹ್ಮಸಾಕ್ಷಾತ್ಕಾರದಲ್ಲಿ ಎಲ್ಲವೂ ಪರಿಣಮಿಸುವದು. ಅಲ್ಲಿ ಆತ್ಮಚೈತನ್ಯ ನಿಃಶಬ್ದಬ್ರಹ್ಮ ಇವರಲ್ಲಿ ಬಿಚ್ಚಿ ಬೇರಾಗದ ನಿಲವಿನಲ್ಲಿ ಸಾಮರಸ್ಯದ ಇನಿದಾದ ಸೌಂದರ್ಯ ಮಾಧುರ್ಯ ಗಳು ಒಡಮೂಡುವವು ಮತ್ತು ನಿರ್ವಯಲ ಸ್ಥಲದ ನಿಲವಿಗೆ ನಾಂದಿಯಾಗಿ ಅದು ಕಂಗೊಳಿಸುವುದು.

ಕೊನೆಯದಾದ ಜ್ಞಾನಶೂನ್ಯ ಸ್ಥಲದಲ್ಲಿ ನಿರೂಪಿತವಾದ ನಿರ್ವಯಲ ನಿಲವು ಮಾತು ಮನಂಗಳಿಗೆ ಅಗೋಚರವಾಗಿದೆ. 'ಉಲುಹಡಗಿ ಉನ್ಮನಿಯ ಸ್ಥಾನದೊಳಗೆ ನೆನಹಳಿದು ಮನವಳಿದು ತಾನು ತಾನಾದ'[10] ನಿಲವದು. ಮೇಘದೊಳು (ಸುಷುಮ್ನಾ ನಾಳದಲ್ಲಿ) ಬಲಿದ ಬಾಗಿಲ ಬೀಗವನ್ನು (ಪಶ್ಚಿಮದ್ವಾರ) ತೆಗೆದು ಪ್ರವೇಶಿಸುವುದರಿಂದ 'ಆಗುಹೋಗೆ'ಂಬುದು ಹರಿದುಹೋದ ಅನುಭವವೇದ್ಯವಾಗುವದು ; ಜಗದ ಆಗುಹೋಗುಗಳನ್ನು ನಿಯಂತ್ರಿಸಿ ರೂಪಿಸಬಲ್ಲ ಸತ್ವಸಿದ್ಧಿಯೊದಗುವದು, ಈ ನಿಲವಿನಲ್ಲಿ ನಿಂತ ಸಿದ್ಧಪುರುಷನಿಗೆ—

> ಸೊಡರಿಲ್ಲದ ಬೆಳಗು ಕುಡಿವರಿದ ಪ್ರಭೆಯೊಳಗೆ ಪಿಡಿದ ಕರ್ಪುರದುರಿಯು ಮರೆದೊರಗಿತು ॥
> ಗಡಣವಿಲ್ಲದ ಪ್ರಭೆಯ ಕುಡಿಯ ಬೆಳಗಿನ ನಡುವೆ ಹಿಡಿ ಹಿಡಿಯೆ ಬಯಲಾದ ಕೂಡಲಚೆನ್ನಸಂಗಯ್ಯನು ॥[11]

ಇರುವನೆಂಬ ಪರಿಶುದ್ಧವಾದ ಪ್ರಜ್ಞಾನ ಘನಸ್ಥಿತಿಯೊದಗುವದು. ಜ್ಯೋತಿಯೊಡನೆ ಬೆರೆದು ಕರ್ಪುರ ಮರಳಿ ಸಾಕಾರದ ಹಿಡಿ ತಕ್ಕೆ ತಿರುಗದಷ್ಟೆ ! ಹಾಗೆ ಆ ಜ್ಯೋತಿಯೊಡನೆ ತಾನು ಬಯಲಾದಂತೆ ಆ ನಿರ್ವಯಲ ಸ್ಥಿತಿಯು.

'ಪದಮಂತ್ರಗೋಪ್ಯ'ವು ಶಿವಯೋಗದ ಅತಿ ಉಚ್ಛ್ರಾಯದ ಸಂಸಿದ್ಧಿಯನ್ನು ವಿವರಿಸುವ ಗ್ರಂಥ. ಆದಿಯಿಂದ ಅಂತ್ಯದವರೆಗೆ ಯೋಗದ ಶಬ್ದಸಂಪತ್ತಿಯಲ್ಲಿ ಅದು 'ಸಿಪ್ಪೆ ಹಣ್ಣನೆ ನುಂಗಿ ಇಪ್ಪಂತೆ' ಇರುವ ಶಿವಯೋಗದ ಔನ್ನತ್ಯವನ್ನು ವ್ಯಕ್ತಗೊಳಿಸುತ್ತದೆ. 'ಅಕಾರ ಓಂಕಾರ ಸಾಕಾರ ಸನ್ಮತಂ ಏಕಾಕ್ಷರ ಪೂಜೆ ಗೋಪ್ಯಗೋಪ್ಯಂ', 'ಏಕಾಂತವಾಸದೊಳಗೇಕೀ ತೆರನ ಪೂಜೆ ಓಂಕಾರಮಂತ್ರದ ಗೋಪ್ಯಗೋಪ್ಯಂ'[13] 'ಗುರು ಗೋಪ್ಯವ ನುಂಗಿದ ತೆರನು'[14] ಎಂಬ ಮಾತುಗಳಲ್ಲಿ ಗೋಪ್ಯ, ಮಂತ್ರವೆಂದರೇನೆಂಬುದನ್ನು ಸೂಚ್ಯವಾಗಿ ತಿಳಿಸಲಾಗಿದೆ. ಈ ಕೃತಿಗೆ ಬರೆದಿರುವ ವಿವರಣೆ ಭಾವಾರ್ಥಗಳ ವ್ಯಾಖ್ಯಾನದಿಂದಾಗಿ ಮಂತ್ರಗೋಪ್ಯದ ಇಂಗಿತಾರ್ಥವು ಸ್ಫುಟಗೊಂಡು ಮೂಲಕರ್ತೃವಿನ ಮತ್ತು ವ್ಯಾಖ್ಯಾನಕಾರರ ಶಿವಯೋಗದಬಗೆಗಿನ ಆಳ ವಾದ ಅನುಭವವು ವಿದಿತವಾಗದಿರದು. ಶಿವಯೋಗಿಯಾದ ಸಿದ್ಧರಾಮೇಶ್ವರನಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಶಿವಯೋಗದ

---

9. ಚೆ.ಬ. ಪದಮಂತ್ರಗೋಪ್ಯ, ಪದ್ಯ ೨೭ 10. ಅದೇ, ಪದ್ಯ ೩೧ 11. ಅದೇ, ಪದ್ಯ ೩೫
12. ಅದೇ, ಪದ್ಯ ೬. 13. ಅದೇ, ಪದ್ಯ ೧೪. 14. ಅದೇ, ಪದ್ಯ ೨೪.

ಪರಿಪಿಡಿಯಲ್ಲಿಯೆ ಮಂತ್ರಗೋಪ್ಯದ ಬೋಧೆ ನಡೆಯಬೇಕಾದುದು ಅಗತ್ಯವಾಗಿದೆ, ಯೋಗ್ಯವಾಗಿದೆ. ಈ ಪದಮಂತ್ರಗೋಪ್ಯದಲ್ಲಿ ತಿಳಿಯಪಡಿಸಿರುವ ಅನುಭವದ ವಾಣಿಯು ಇದನ್ನು ತುಂಬಾ ಸಾಧಿಸಿದೆಯೆಂದು ಧಾರಾಳವಾಗಿ ಹೇಳಬಹುದು.

ಅಲ್ಲಮಪ್ರಭುದೇವನು ಪರ್ಯಟನ ಕಾಲಕ್ಕೆ ಸೊನ್ನಲಿಗೆಗೆ ಬಂದು ಸಿದ್ಧರಾಮೇಶ್ವರನನ್ನು ಸಂಧಿಸಿದನಷ್ಟೆ. ಅಗ ಆತನು ಸಿದ್ಧರಾಮೇಶ್ವರನು ಸಾಧಿಸಿದ್ದ ರಾಜಯೋಗಕ್ಕಿಂತ ಶಿವಯೋಗವು ಶ್ರೇಷ್ಠವೆಂದೂ, ಅನಿಮಿಷಯ್ಯನಿಂದ ಪಡೆದುಕೊಂಡಿದ್ದ ಕರಸ್ಥಲದ ಅನುಸಂಧಾನದಿಂದ ತಾನು ಸಂಪಾದಿಸಿಕೊಂಡಿದ್ದ ಶಿವಯೋಗದ ಘನತೆ ಗಂಭೀರತೆ ಪ್ರಭಾವಾದಿಗಳನ್ನು ಕುರಿತು ಆಗಲೇ ಆ ಸಿದ್ಧರಾಮೇಶ್ವರನಿಗೆ ಪ್ರತ್ಯಕ್ಷಮಾಡಿಕೊಟ್ಟನೆಂದೂ ರಾಜಯೋಗದ ನಿಲವು ಅದರಿಂದ ನಿಲುಕುವ ಸಿದ್ಧಿ ಇವಕ್ಕಿಂತ ಶಿವಯೋಗ ಸಾಧನೆಯಿಂದ ಹೊಂದುವ ಶಾಂತಿ ಸಮರಸಗಳು ಮಹೋನ್ನತವಾದವುಗಳೆಂಬುದನ್ನು ಆಗ ತಾನೆ ಮನಗಾಣಿಸಿ ಕೊಟ್ಟನೆಂದೂ ಪ್ರಸಿದ್ಧ. ಇಷ್ಟಲಿಂಗದ ವ್ಯಾಪಕವಾದ ಅನುಭವದ ವೈಭವವನ್ನು ಬಸವಣ್ಣನ ದಾಸೋಹದ ನಡೆನುಡಿಗಳಿಂದ ಅರುಹಿಸಿಕೊಡಲು, ಅಜ್ಞರಾದ ಗುಡ್ಡರುಗಳಿಗಾಗಿ ಸಲ್ಲಿಸುತ್ತಿದ್ದ ಸೇವೆಗಿಂತ ಅರಿತ ಶರಣರಿಗಾಗಿ ಬಸವಣ್ಣನು ಕೈಕೊಂಡಿದ್ದ ಕೈಂಕರ್ಯದ ಹೃದಯವು ಅನುಭವದ ಹೊಂದಾಣಿಕೆಯಲ್ಲಿ ಅತ್ಯಗತ್ಯವಾದುದೆಂಬುದನ್ನು ಪ್ರತ್ಯಕ್ಷಗೊಳಿಸಲು, ಹಾಗೆಯೇ ಶಿವಯೋಗದ ಸುಲಭವಾದ ಸಾಧನೆಯಲ್ಲಿ ಷಟ್‌ಸ್ಥಲದ ಘನವಾದ ಪಾತ್ರವನ್ನು ಚೆನ್ನಬಸವಣ್ಣನಿಂದ ತಿಳುಪಿಸಿಕೊಟ್ಟು, ಆ ಮಹಾಸಾಧನೆಯಲ್ಲಿ ಆತನಿಗಾಗಿ ಮೀಸಲಾಗಿದ್ದ ಸ್ಥಾನವೊಂದರ–ಪ್ರಾಣಲಿಂಗಸ್ಥಲವೊಂದರ ಅರಿವನ್ನು ಮಾಡಿಸಿಕೊಡಲು, ಅಲ್ಲದೆ ನವೀನವೆನಿಸಿದ ಪ್ರಯೋಗದ–ಮಣಿಹದ ಈಡೇರುವಿಕೆಯಲ್ಲಿ ಆತನ ಪಾಲುಗಾರಿಕೆಯ ಫಲವನ್ನು ಜನರಿಗೆ ಕಾಣಿಸಿಕೊಡಲು ಪ್ರಭುದೇವರು ಆ ಸಿದ್ಧರಾಮೇಶ್ವರನನ್ನು ಕಲ್ಯಾಣದ ಬಾಗಿಲವರೆಗೆ ತಂದು ನಿಲ್ಲಿಸಿರಬೇಕು. ಯೋಗಮಾರ್ಗದ ವಿವಿಧ ಅಂಗಗಳನ್ನು ಆಚರಿಸಿ, ಕೊನೆಗೆ ಅನಿಮಿಷಯ್ಯನ ಅಂಗೈಯ ಲಿಂಗದ ಅನುಸಂಧಾನದಿಂದ ತಾನು ಅಂಗವಿಸಿಕೊಂಡಿದ್ದ ಶಿವಯೋಗ ರಹಸ್ಯವನ್ನು ಸಿದ್ಧರಾಮೇಶ್ವರನಿಗೆ ತಿಳಿಸಿಕೊಟ್ಟ ಪ್ರಥಮಗುರುವು ಅಲ್ಲಮಪ್ರಭುದೇವರು. ಯೋಗಸಿದ್ಧನಿಗೆ ಮನವರಿಕೆಯಾಗುವ ತೆರದಲ್ಲಿ ಬೋಧ ಮಾಡಬಲ್ಲ ಸಾಮರ್ಥ್ಯವುಳ್ಳ ಶಿವಯೋಗಸಿದ್ಧನಲ್ಲವೆ ಅವನು ? ಸಿದ್ಧರಾಮೇಶ್ವರನಿಗೆ ಉಪದೇಶ ರೂಪವಾಗಿ ಪ್ರಭುದೇವರು ರಚಿಸಿದ 'ಪರಮಯೋಗ' ಮಂತ್ರಗೋಪ್ಯ ಎಂಬ ಗ್ರಂಥವು ಇದನ್ನು ಸ್ಪಷ್ಟಗೊಳಿಸುತ್ತದೆ.

'ಪಂಚಾಕ್ಷರವೆ ಪರಮಯೋಗ' ಎಂಬುದು ಚೆನ್ನಬಸವಣ್ಣನ ಅಭಿಮತ[15]. ಶ್ರೇಷ್ಠವಾದ ಯೋಗ–ಶಿವಯೋಗದಾಚರಣೆಯಲ್ಲಿ ಗೌಪ್ಯವಾಗಿ ಅನುಸಂಧಾನಿಸಬೇಕಾದ ಸಾಧನೆಯ ಫಲವಾಗಿಯೂ ಈ 'ಪರಮಯೋಗ' ಪದದ ಅರ್ಥವ್ಯಾಪ್ತಿಯಿದೆ ಎಂಬುದನ್ನು ಗಮನಿಸಬೇಕು. 'ಪರಮಯೋಗ' ಮಂತ್ರಗೋಪ್ಯದಲ್ಲಿ ೨೭ ಪದ್ಯಗಳಿರುತ್ತವೆ. ಪ್ರಾರಂಭದಲ್ಲಿ 'ರಾಮ ಕೇಳಾಜ್ಞಾನ । ಸೋಮ ಕೇಳನುಭಾವ ಸಿದ್ಧ । ರಾಮ ಕೇಳಾನಂದನಿಂದ ನಿಜವ' ಎಂಬ ಅರ್ಧ ಪದ್ಯದ ಒಂದು ಪಲ್ಲವಿಯಿರುತ್ತದೆ. ಈ 'ಮಂತ್ರಗೋಪ್ಯ'ಕ್ಕೆ ಎರಡು ವ್ಯಾಖ್ಯಾನಗಳಿವೆ. ಒಂದು ವಿದ್ಯಾನಗರಿಯ ಕಲ್ಲುಮಠದ ಪ್ರಭುದೇವರು ಬರೆದದ್ದು. ಇನ್ನೊಂದನ್ನು ಬರೆದವರ ಹೆಸರು ತಿಳಿದುಬಂದಿಲ್ಲ. 'ಸದ್ಧರ್ಮದೀಪಿಕೆ'ಯ ಸಂಪಾದಕರಾದ ಶ್ರೀ ಚೆನ್ನಮಲ್ಲಿಕಾರ್ಜುನ ಅವರು ತಾತ್ಪರ್ಯ ಮತ್ತು ಇವೆರಡೂ ವ್ಯಾಖ್ಯಾನಗಳೊಡನೆ ಈ ಗ್ರಂಥವನ್ನು ಅಚ್ಚುಗೊಳಿಸಿ ಪ್ರಕಟಿಸಿದ್ದಾರೆ. 'ಸಿದ್ಧರಾಮ ಸಾಹಿತ್ಯ ಸಂಗ್ರಹ'ದಲ್ಲಿ ಕಲ್ಲುಮಠದ ಪ್ರಭುದೇವರ ವ್ಯಾಖ್ಯಾನದೊಡನೆ ಇದನ್ನು ಸಮಾವೇಶಗೊಳಿಸಲಾಗಿದೆ. ಕಲ್ಲುಮಠದ ಪ್ರಭುದೇವರು 'ಶಿವಜ್ಞಾನಸಾಧನ ಶಾಸನ'ವೆಂದು ಹೆಸರಿಸಲಾದ ತನ್ನ ಪೀಠಿಕಾ ಸೂತ್ರದಲ್ಲಿ ಅಲ್ಲಮಪ್ರಭುದೇವರ ಮತ್ತು ಈ ಮಂತ್ರಗೋಪ್ಯದ ಬಗೆಗೆ ತಿಳಿಸುತ್ತ 'ಯಮ ನಿಯಮ ಆಸನ ಪ್ರಾಣಯಾಮ ಪ್ರತ್ಯಾಹಾರ ಈ ಐದು ಕರ್ಮಯೋಗಂಗಳು; ಧ್ಯಾನ ಧಾರಣ ಸಮಾಧಿ ಈ ಮೂರು ಯೋಗಗಳು ತಮ್ಮ ಲಕ್ಷ್ಯದಲ್ಲಿ ಕೂಡುವ ಯೋಗಗಳು. ಇವುಗಳಲ್ಲಿ ಐದು ಪೂರ್ವಯೋಗಂಗಳ ಬಿಟ್ಟು ಉತ್ತರವಾದ ಧ್ಯಾನ ಧಾರಣ ಸಮಾಧಿಯೋಗಂಗಳು ಷಟ್‌ಸ್ಥಲ ಲಿಂಗಾಂಗಯೋಗಿಗಳಿಗೂ ಉಂಟು. ಅದೆಂತೆಂದೊಡೆ ಅಷ್ಟಾಂಗಯೋಗಿಗಳ ಲಕ್ಷ್ಯಾನುಸಂಧಾನದ ಪರಿಯಲ್ಲ; ಷಟ್‌ಸ್ಥಲ ಜ್ಞಾನಿಗಳ ಧ್ಯಾನ-ಧಾರಣ-ಸಮಾಧಿಗಳ ಪರಿಯೆ ಬೇರೆ' ಎಂದು ಹೇಳಿ[16], ಶಿವಯೋಗ ಪರವಾಗಿ ಧ್ಯಾನಧಾರಣ ಸಮಾಧಿಗಳ ಅರ್ಥವನ್ನು ಕಂಡು, ಪದ್ಯಗಳನ್ನು ಅಂತು ವಿಂಗಡಿಸಿರುವನು. ಲಿಂಗಾಂಗ ಪರವಾಗಿ ಯೋಗದ ಉತ್ತರಭಾಗವನ್ನು ವಿವರಿಸುತ್ತ ಆತನು 'ಗುರುಕರುಣದಿಂದ ಸಮ್ಯಕ್‌ಜ್ಞಾನವಂ ಪಡೆದು ಧ್ಯಾನಿಸುವುದೇ **ಧ್ಯಾನಯೋಗ.** ಆ ಸಮ್ಯಕ್‌ಜ್ಞಾನದಿಂದ ಷಟ್ಸ್ಥಲಲಿಂಗಾಂಗಸಂಯೋಗಾನುಭವಿಯಾಗಿ ಆ ಲಿಂಗಸುಖವನನುಭವಿಪ್ಪುದೇ **ಧಾರಣಯೋಗ.** ಇಂತು ಲಿಂಗಾಂಗಸಂಗದಿಂದ ಲಿಂಗಸ್ವರೂಪವಾಗಿ ಲಿಂಗಸುಖವನರಿದನುಭವಿಸುತ್ತಿರ್ಪ ಅರಿವಡಗಿ ನಿಂದುದು **ಸಮಾಧಿಯೋಗ**'[17] ಎಂದು ತಿಳಿಸಿ, ಕೊನೆಯಲ್ಲಿ ಈ ಮಂತ್ರಗೋಪ್ಯದ ರಹಸ್ಯವನ್ನು ವಿವರಿಸುವ ಉದ್ದೇಶವನ್ನು ಸ್ಪಷ್ಟಗೊಳಿಸಿರುವನು. ಮತ್ತು ತನಗೂ ಅನಾದಿ ಅಲ್ಲಮಪ್ರಭುವಿಗೂ ಅಭೇದವನ್ನು ಸೂಚಿಸುತ್ತ ತನ್ನ ಪೀಠಿಕಾಸೂತ್ರದ ಸಮಾಪ್ತಿಗೊಳಿಸಿರುವನು. 'ಅಂದು ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಉಪದೇಶಿಸಿದ ಷಟ್ಸ್ಥಲ ಮಂತ್ರಗೋಪ್ಯವು

---

15. ಚೆ.ಬ. ವಚನ ೩, ಪುಟ ೨೭
16. 'ಪರಮಯೋಗ' ಮಂತ್ರಗೋಪ್ಯ ಪೀಠಿಕೆ ; ಸಿ.ಸಾ. ಸಂಗ್ರಹ, ಪುಟ ೧೧೫
17. ಅದೇ, ಪುಟ ೬, ಸಿ. ಸಾ. ಸಂಗ್ರಹ, ಪುಟ ೧೧೫. ತುಲನೆಗಾಗಿ ಸಟೀಕ ಶಿವಯೋಗ ಪ್ರದೀಪಿಕೆ ನೋಡಿರಿ.

ಇಂದು ಪರಿಯಂತರ ಗೋಪ್ಯಮಾಗಿರ್ದಾ ಮಂತ್ರಗೋಪ್ಯಾರ್ಥಮಂ ಶಿವಶರಣರೆಲ್ಲರಿಗೆ ಗೋಪ್ಯಮಾಗಿರಬಾರದೆಂದು ಅಂದಿನ ಚಿತ್‌ಪ್ರಭುಗುರು ತಾನೆ ಇಂದಿನ ಕಲ್ಲುಮಠದ ಪ್ರಭುವಿನಂಗದಲ್ಲಿ ಒಡೆದು ಮೂಡಿ ಥಳಥಳಿಸಿ ಚಿತ್ಪ್ರಭಾಕಳೆಯಿಂ ಬೆಳಗುತಿರ್ದು ತನ್ನಂದಿನ ಮಂತ್ರಗೋಪ್ಯದ ಇಪ್ಪತ್ತೇಳು ಪದಂಗಳಿಗೆ ಅರ್ಥಮಂ ತಾನೆ ಅರ್ಥಯಿಸಿದನ್ನೆಲ್ಲಾ ಶಿವಗಣಂಗಳರಿವಂತೆ'18.

ಈ ಮಂತ್ರಗೋಪ್ಯದ ಪ್ರತಿಯೊಂದು ಪದ್ಯವು ಯೋಗದ ಪಾರಿಭಾಷಿಕ ಪದಗಳಿಂದ ವಿಭೂಷಿತವಾಗಿದೆ. ಯೋಗದ ಪರಿಭಾಷೆ ಮತ್ತು ವೀರಶೈವಸಿದ್ಧಾಂತ ಇವುಗಳ ಬೆಳಕಿನಲ್ಲಿ ಈ ಪದ್ಯಗಳಲ್ಲಿ ನಿಗೂಢವಾದ ಅನುಭವವು ಸ್ಫುಟವಾಗಿ ವ್ಯಕ್ತಗೊಳ್ಳುವದು. ಕಲ್ಲುಮಠದ ಪ್ರಭುದೇವನ ವ್ಯಾಖ್ಯಾನವು ವೀರಶೈವಸಿದ್ಧಾಂತದ ಹಿನ್ನೆಲೆಯಲ್ಲಿ ರೂಪುಗೊಂಡಿದ್ದರೆ, ಇದರ ಇನ್ನೊಂದು ವ್ಯಾಖ್ಯಾನವು ಯೋಗದ ಹಿನ್ನೆಲೆಯಲ್ಲಿ ಶಿವಯೋಗ ರಹಸ್ಯವನ್ನು ಸ್ಪಷ್ಟಗೊಳಿಸುವದು.

> ಹಾಳ ಮೇಲಣ ಮಣಿಯ ಕಾಣಲಾರಳವಲ್ಲ ಪೌಳಿ ಪೌಳಿಯ ಕೋಣೆ ಕೋಣೆಯೊಳಗೆ।
> ಮೇಲುಗಿರಿ ಶಿಖರ ಪಶ್ಚಿಮ ದ್ವಾರವನು ಪೊಗಲು ಕಾಣಬಾರದ ಕದಳಿಯುಂಟು ನೋಡಾ ॥
> ಖೇಚರತ್ವದ ನೆಲೆಯ (ನಿಲವ) ಭೂಚರರು ಬಲ್ಲರೆ ವಾಚಾಳಕರ ಮಾತಿಗಿದು ಸಲ್ಲದು।
> ಆಚಾರದನುಭಾವ ಭಕ್ತಿ ನೆಲೆಗೊಂಡಂಗೆ ಸೂಚಿಸುವುದಾ ಮಹಾಪರಮಪದವು ॥
> ಬ್ರಹ್ಮರಂಧ್ರದ ಕೊನೆಯ ವರ್ಮಾದಿ ವರ್ಮನು ನಿರ್ಮಲನು ನಿರ್ದೇಹಿ ತಾಂ ಬಲ್ಲನು।
> ವರ್ಮವರಿದಾ ನಿತ್ಯ ನಿರ್ಮಳಂಗಲ್ಲದೆ ಕರ್ಮಿ ಭೂಭಾರಿಗಳಿಗಿದು ಸಲ್ಲದು ॥19

ಶಿವಯೋಗಸಾರ ಹುದುಗಿದೆ ಈ ಮೂರು ಪದ್ಯಗಳಲ್ಲಿ. ಶಿವಯೋಗಿಯು ತನ್ನ ಅಂತರಂಗದಲ್ಲಿ ಕಾಣುವ ಅನುಸಂಧಾನದ ನಿಲವು ಮನೋಹರವಾಗಿ ಒಡಮೂಡಿದೆ ಇಲ್ಲಿ. ಅಲ್ಲಮಪ್ರಭುವು ಉಪದೇಶಿಸಿದ ಈ ಶಿವಯೋಗದ ಅನುಸಂಧಾನ ಮತ್ತು ಚೆನ್ನಬಸವಣ್ಣನು ಬೋಧಿಸಿದ ಷಟ್ಸ್ಥಲಾತ್ಮಕ ಲಿಂಗಾಂಗಯೋಗದ ಅನುಸಂಧಾನ ಇವುಗಳಿಂದ ಪ್ರಭಾವಿತನಾದ ಸಿದ್ಧರಾಮಯೋಗಿಯು ಈಗ ಸಂಪೂರ್ಣ ಶಿವಯೋಗಿಯಾಗಿ ಮಾರ್ಪಟ್ಟು ಶಿವಯೋಗದ ತನ್ನ ಅನುಭವವನ್ನೂ ನಿರೂಪಿಸಿರಲು ಸಾಕು. ಆತನೂ ಒಂದು ಮಂತ್ರಗೋಪ್ಯವನ್ನು ಬರೆದಿರುವನೆಂದು ಹೇಳುತ್ತಾರಷ್ಟೆ. ಕವಿಚರಿತೆಯಲ್ಲಿ ಈ ಗ್ರಂಥದ ಉಲ್ಲೇಖ ಮಾತ್ರವಿದೆ. ವಿವರವಾದ ಯಾವ ಮಾತುಗಳೂ ಅಲ್ಲಿರುವದಿಲ್ಲ20. ಸಿದ್ಧರಾಮೇಶ್ವರ ಕೃತಿಗಳ ಬಗೆಗೆ ಅಭ್ಯಾಸಮಾಡಿದ ವಿಮರ್ಶಕರು ಈ ಗ್ರಂಥದ ಅಸ್ತಿತ್ವವನ್ನು ಮಾತ್ರ ತಿಳಿಸಿದ್ದಾರೆ. ಶ್ರೀ ಚನ್ನಪ್ಪನವರು ಉತ್ತಂಗಿ ಅವರು 'ಮಂತ್ರಗೋಪ್ಯದ ಉಪದೇಶವನ್ನು ಹೊಂದಿದ ಸಿದ್ಧರಾಮನು ಪ್ರತಿಯಾಗಿ ತಾನೊಂದು ಮಂತ್ರಗೋಪ್ಯವನ್ನು ಬರೆದಿರಲಿಕ್ಕಿಲ್ಲ. ಈ ಗ್ರಂಥವು ದೊರೆಯದೆ ಇರುವುದರಿಂದ ಕವಿಚರಿತೆಕಾರರು ಯಾವ ಆಧಾರದ ಮೇಲೆ ಇದನ್ನು ಹೇಳುವರೋ ತಿಳಿಯದು. ಹೀಗಾಗಿ ಪ್ರಭುದೇವರ ಮಂತ್ರಗೋಪ್ಯವನ್ನೆ ಸಿದ್ಧರಾಮನ ಮಂತ್ರಗೋಪ್ಯವೆಂದು ತಿಳಿಯುವ ಸಂಭವವಿರುವದರಿಂದ, ಸಧ್ಯಕ್ಕೆ, ಅಂದರೆ ಅದು ದೊರೆಯುವವರೆಗೆ, ಪ್ರಭುದೇವರ ಮಂತ್ರಗೋಪ್ಯವೇ ಸಿದ್ಧರಾಮನದೆಂದು ಗ್ರಹಿಸಬಹುದಾಗಿದೆ' ಎಂದು ತಿಳಿಸಿದ್ದಾರೆ21.

'ಮಂತ್ರಗೋಪ್ಯ' ಎಂದು ಈ ಕೃತಿಗಳಿಗಿರುವ ಹೆಸರು ಅಧ್ಯಾತ್ಮದೃಷ್ಟಿಯಿಂದ ಔಚಿತ್ಯಪೂರ್ಣವಾಗಿದೆ. ಪದ್ಯರೂಪವಾಗಿ ಸಾಮಾನ್ಯವಾಗಿ ಪ್ರತಿಯೊಂದರಲ್ಲಿ ೨೭ ಪದ್ಯಗಳಿರುವ ಈ ಮಂತ್ರಗೋಪ್ಯಗಳಲ್ಲಿ ಬಂದಿರುವ ಅನುಭವಯುತವಾದ ಈ ವಿಚಾರಗಳು ಶಿವಶರಣರಲ್ಲಿ ಕಂಡುಬರುತ್ತಿವೆಯಾದರೂ ವಚನಗಳ ಸಾರವನ್ನೇ ಸಂಗ್ರಹಿಸಿ ಸೂತ್ರರೂಪವಾಗಿ ರಚಿಸಿ ನೆನಪಿನಲ್ಲಿರಿಸಿಕೊಳ್ಳಲೂ, ರಾಗತಾಲಬದ್ಧವಾಗಿ ಅವನ್ನು ಪಠಿಸುತ್ತ ಮನನಮಾಡಿಕೊಳ್ಳಲೂ ಅನುಕೂಲವಾಗುವಂತೆ ಯೋಚಿಸಿ ಕೊಟ್ಟಿರುವದು ಈ ಮಂತ್ರಗೋಪ್ಯಗಳ ಒಂದು ವೈಶಿಷ್ಟ್ಯ ಮತ್ತು ಇವುಗಳಲ್ಲಿಯೂ ಒಂದು ಸ್ಥಲಕಟ್ಟಿನ ಸಂಯೋಜನೆ ಇರುತ್ತದೆ ಎಂಬುದೂ ಸ್ಪಷ್ಟ. ಅಂತಃಕರಣದಲ್ಲಿ ತಿರುತಿರುಗಿಮಾಡುವ ಸ್ವರೂಪಚಿಂತನವನ್ನು ಕಾಪಾಡುವದೂ ಪರವಸ್ತುವಿನ ನಿಲವನ್ನು ತಿಳಿಸಿಕೊಡುವದೂ, ಸರ್ವಕ್ಕೆಲ್ಲ ಆಧಾರಭೂತವಾಗಿರುವದು ಯಾವುದಿದೆಯೊ ಅದು ಮಂತ್ರವೆನಿಸುವದು. ಸ್ವಸ್ವರೂಪ ಚಿಂತನೆಯೂ ಪರವಸ್ತುವಿನ ಜ್ಞಾನವೂ ಮಂತ್ರವನ್ನು ಬೀದಿಗೆ ನಿಂತುಕೂಗಿದರೆ ಆಗುವದಿಲ್ಲ. ತನ್ನೊಳಗೆ ಅದನ್ನು ಗೌಪ್ಯವಾಗಿ ಧ್ಯಾನಿಸಿದರೆ ಆಗುತ್ತದೆ. ಈ ದೆಸೆಯಿಂದಲೆ ಮಾತು ಮೌನವಾದಾಗ ಮಂತ್ರವೆನಿಸುವದು ಎಂದು ಹೇಳುವದುಂಟು.

ಮಂತ್ರಕ್ಕೆ ಮೂಲವಾದದು ನಾದ. ನಾದವು ಪ್ರಾಣ–ಮನ–ಭಾವಗಳನ್ನು ಬಳಸಿಕೊಂಡು ರೂಪುಗೊಳ್ಳುತ್ತದೆ. ಶಿವ–ಶಕ್ತಿಮಯವಾದ ಮಂತ್ರವು ಅವ್ಯಕ್ತವಾದ ನಾದದೊಡನೆ ಮೂಲಾಧಾರದಿಂದ ಉಗಮಗೊಳ್ಳುತ್ತದೆ. ಹೀಗೆ ಉಗಮುಗೊಂಡ ಅದು ಭಾವ ಮನ ಪ್ರಾಣಗಳನ್ನೆಲ್ಲ ವ್ಯಾಪಿಸಿಕೊಂಡು ಸ್ಪಂದನದಿಂದ ಶಬ್ದದ ಸ್ಥೂಲರೂಪಕ್ಕೆ ತಿರುಗುತ್ತದೆ. ಶಬ್ದವು ನಾದದ ತೀರಾ ಸ್ಥೂಲವಾದ ರೂಪವಾಗಿದೆ. ಆಧಾರದಿಂದ ನಾಭಿಯ ಮುಖಾಂತರವಾಗಿ ಮೇಲೆ ಮೇಲೆ ಏರುವ ನಾದವು ಹೃದಯಸ್ಥಾನಕ್ಕೆ ಹೃದಯದಿಂದ ಕಂಠಸ್ಥಾನಕ್ಕೆ ಕಂಠದ ಮಾರ್ಗವಾಗಿ ಮುಖಕ್ಕೆ ಮುಟ್ಟಿದಾಗ ಶಬ್ದವಾಗಿ ಪರಿಣಮಿಸುವದು.

18. ಅದೇ, ಪುಟ ೭, ಸಿ. ಸಾ. ಸಂಗ್ರಹ, ಪುಟ ೧೧೬,-೧೭ 19. 'ಪರಮಯೋಗ' ಮಂತ್ರಗೋಪ್ಯ, ಪದ್ಯ ೨೪-೨೬.
20. ಕ. ಚ. ಭಾಗ ೧. ಪುಟ ೧೮೩. 21. ಸಿ. ಸಾ. ಸಂಗ್ರಹ, ಪ್ರಸ್ತಾವನೆ, ಪುಟ ೯೪.

ಪ್ರಾಣವ್ಯಾಪಾರದ ಗತಿಗನುಸರಿಸಿ ಉಂಟಾಗುವ ಸ್ಪಂದನದಿಂದ ಗುರುತಿಸಲಾದ 'ಹಂಸ' ಮಂತ್ರದಿಂದ ಅಧ್ಯಾತ್ಮದಲ್ಲಿ ಒಂದು ಮಂತ್ರಶಾಸ್ತ್ರವೆ ಏರ್ಪಟ್ಟಿದೆ. ಉಸಿರಿನ ಏಡೆಯಾಟಕ್ಕೆ ಅನುಸಾರವಾಗಿ ಮನವೂ ಸಹ ಏನಾದರೊಂದನ್ನು ಚಿಂತಿಸುತ್ತಿರುತ್ತದೆ. ಮನಸ್ಸಿನ ಈ ಕಾರ್ಯವು ಅಕ್ರಮವಾಗಿರದೆ, ಕ್ರಮವಾದ ಮತ್ತು ತಾಲಬದ್ಧವಾದ ರೀತಿಯಲ್ಲಿ ಸಾಗುವದಾದರೆ ಅದರಲ್ಲಿ ಒಂದು ಅದ್ಭುತವಾದ ಸಾಮರ್ಥ್ಯವು ಮೂಡಿಕೊಳ್ಳುತ್ತದೆ. ಹರಿಯುವ ನೀರಿಗೆ ಅಣೆಕಟ್ಟನ್ನು ಕಟ್ಟಿ ವಿದ್ಯುತ್‌ಶಕ್ತಿಯನ್ನು ನಿರ್ಮಿಸಿಕೊಳ್ಳುವಂತೆ ಈ ಮನಸ್ಸಿನ ಸಾಮರ್ಥ್ಯವನ್ನು ಕಂಡುಕೊಳ್ಳಬೇಕು. ಮನಸ್ಸಿಗೆ ಆಗುವ ಅನಿಸಿಕೆಗಳು, ಅದರ ಮೇಲಾಗುವ ಪ್ರಭಾವದ ಮುದ್ರೆಗಳು ಅವು ಇಂದಿನ ಜೀವನಕ್ಕೆ ಸಂಬಂಧಪಟ್ಟವುಗಳಿರಲಿ, ಇಲ್ಲವೆ ಹಿಂದಿನ ಜನ್ಮಗಳಿಗೆ ಸಂಬಂಧಿಸಿದವುಗಳಿರಲಿ, ಯಾವ ಉಗ್ರಾಣದಲ್ಲಿ ಕೂಡಿ ಬಿದ್ದು ಅಲ್ಲಿಯೆ ಉಳಿದು ಬಿಡುವವೊ ಅದಕ್ಕೆ ಭಾವ ಎಂದು ಹೇಳಲಾಗುತ್ತದೆ. ಮನಸ್ಸಿನ ಹಂಬಲ ಹರಿದಾಟಗಳಿಗೆ, ಚಿಂತನೆ ಭ್ರಾಂತಿಗಳಿಗೆ ಒಟ್ಟಾರೆ ಅದರಲ್ಲಿ ಮೂಡುವ ವಿಚಾರವೀಚಿಗಳಿಗೆಲ್ಲ ಈ ಭಾವವು ಮೂಲ ಮಾತೃಸ್ಥಾನವಾಗಿರುತ್ತದೆ. ಸಾಧನೆಯಿಂದ ಈ ಭಾವವೂ ಪರಿಶುದ್ಧವಾಗಬೇಕು. ಅಶುದ್ಧ ಇಂದ್ರಿಯ ಮನಗಳಿಂದ ಒದಗುವ ಮಾಲಿನ್ಯವನ್ನು ಕಂಡುಕೊಳ್ಳುವದು ಸಾಧ್ಯವಾಗಲಿಕ್ಕಿಲ್ಲ. ಆದರೆ ಭಾವದಲ್ಲಿ ಸುಪ್ತವಾಗಿರುವ ಮಲಿನ ಸಂಸ್ಕಾರಗಳನ್ನು ಕಂಡುಕೊಂಡು ಅದನ್ನು ಪರಿಶುದ್ಧಗೊಳಿಸುವದು ಒಂದು ಮಹಾಸಾಧನೆ ಎಂದು ಹೇಳಬಹುದು!

ಉಸಿರಿನ ಏಡೆಯಾಟವೂ ಅಥವಾ ಶ್ವಾಸಗತಿಯೂ, ಇಂದ್ರಿಯಗಳ ಚಾಂಚಲ್ಯವೂ ಮನಸ್ಸಿನ ಸಂಕಲ್ಪವಿಕಲ್ಪವೂ ಭಾವದ ಬಯಕೆಯೂ ಏಕಕಾಲಕ್ಕೆ ಯಾವ ಒಂದು ಸಾಧನೆಯಿಂದ ನಿಗ್ರಹಿಸಲ್ಪಟ್ಟು ಶುದ್ಧ ಸಂಸ್ಕಾರವುಳ್ಳವುಗಳಾಗುವವೊ ಅದನ್ನು ನಿರೂಪಿಸುವದು ಮಂತ್ರಗೋಪ್ಯದ ಉದ್ದೇಶವಾಗಿದೆ. ಶಿವಶರಣನು ಅರ್ಥಾತ್ ಸಾಧಕನು ಕರ–ಮನ–ಭಾವಗಳ ಏಕಕಾಲದ ಪರಿಶುದ್ಧಿಗಾಗಿ ಇರಿಸಿಕೊಂಡ ಲಿಂಗದಲ್ಲಿ ದೃಷ್ಟಿಯು ಸ್ಥಿರೀಕರಣ ಹೊಂದುತ್ತ ನಡೆದಂತೆ ಶ್ವಾಸಗತಿಯು ತಾಲಬದ್ಧವಾಗುವದು. ಶ್ವಾಸಗತಿಗೆ ಅನುಗುಣವಾಗಿ ಅನವರತವೂ ಮಂತ್ರೋಚ್ಚಾರವೂ ಎಚ್ಚರಗುಂದದಂತೆ ನಡೆಯುವುದರಿಂದ, ಅಂದರೆ ಶ್ವಾಸದ ಆರೋಹಣ ಅವರೋಹಣ ಕ್ರಮದಲ್ಲಿ ಮಂತ್ರವನ್ನು ಸ್ಥಾಪ್ಯನ ಮಾಡಿಕೊಳ್ಳುವುದರಿಂದ ಮನವು ಅಧೋಗತಿಯಿಂದ ಊರ್ಧ್ವಗತಿಯುಳ್ಳದೂ, ಚಾಂಚಲ್ಯವನ್ನು ಕಳೆದುಕೊಂಡು ಸ್ಥಿರವೂ, ಅಶಾಂತತೆಯನ್ನು ನೀಗಿಕೊಂಡು ಪ್ರಶಾಂತವೂ ಆಗಿ ಜ್ಞಾನೋದಯಕ್ಕೆ ಅವಕಾಶವನ್ನು ಮಾಡಿಕೊಡುವದು. ಇದರಿಂದಾಗಿ ಮನವು ಘನಮನವೆನಿಸಿಕೊಳ್ಳುವದು. ಘನಮನವು ಸಾಧಿಸಿದಾಗಲೆ ಜ್ಞಾನೋದಯಕ್ಕೆ ಮೊದಲಾಗುವದು. ಘನಮನವು ಅಥವಾ ಉನ್ಮನವು ಸಾಧಿಸಿತಾದರೆ ಭಾವಶುದ್ಧಿಗಾಗಿ ಪ್ರತ್ಯೇಕವಾಗಿ ಪ್ರಯತ್ನ ಮಾಡುವುದಿರುವದಿಲ್ಲ.

ಉನ್ಮನದ ಸಾಧಕನು ಅಂತರ್‌ಬಾಹ್ಯ ಇಂದ್ರಿಯಗಳಲ್ಲಿ ಲಿಂಗಭಾವನೆಯನ್ನು ತುಂಬಿ ಅಲ್ಲಲ್ಲಿ ಮಂತ್ರದ ನೆನಹನ್ನು ದೃಢಗೊಳಿಸುತ್ತಾನೆ. ವೀರಶೈವದ ಷಟ್ಸ್ಥಲಭಕ್ತಿಯ ಅನುಭವದಿಂದ ಆಧಾರದ ಆಜ್ಞೆಯವರೆಗಿನ ಶಕ್ತಿಯ ಕೇಂದ್ರಗಳಲ್ಲಿ ಹುದುಗಿದ ಅಸಾಮಾನ್ಯವಾದ ಶಕ್ತಿಯನ್ನೆ ಜಾಗ್ರತಗೊಳಿಸಿಕೊಂಡು, ಸಾಧಕನು ಸಹಸ್ರಾರ, ಶಿಖಾ ಮತ್ತು ಪಶ್ಚಿಮ ಎಂಬ ಕೇಂದ್ರಗಳಲ್ಲಿ ನಿಗೂಢವಾದ ಸಾಮರ್ಥ್ಯದತ್ತ ಗಮನವಿರಿಸಿಕೊಳ್ಳುವನು. ಅದನ್ನು ಅಂಗವಿಸಿಕೊಳ್ಳಲು ಆ ಸಾಧಕನು ನಿರವಯಸ್ಥಲದ ಕೇವಲ ಜ್ಞಾನಾವಸ್ಥೆಯ ಮೆಟ್ಟಲಿನಲ್ಲಿ ಸಾಧನಗೆಯ್ಯುವನು. ಈ ನಿರವಯದ ಸಾಧನೆಯು ಸುಲಭವಾಗಲೆಂದು ಪರಂಜ್ಯೋತಿ ಸ್ವರೂಪವಾದ ಲಿಂಗಭಾವನೆ ಬೆರೆಸಿ ಉನ್ಮನಿಯ ಉನ್ನತವಾದ ನಿಲವನ್ನು ಕಾಣುವನಾತ. ಅಲ್ಲಿ ಯಾವ ವಿಧವಾದ ಉಲುಹಿಗೂ ಅವಕಾಶವಿಲ್ಲದೆ, ನಾನು ನೀನು ಎಂಬುವದಕ್ಕೆ ತೆರಹಿಲ್ಲದೆ ಕೇವಲ ತಾನೇ ತಾನಾದ ಅವಸ್ಥೆ ಬೆಳಗುವದು. ಒಳಹೊರಗು ಸುತ್ತೆಲ್ಲ ಸ್ವಯಂಪ್ರಭೆಯೆ ತೋರುವದು–ಆ ಸಿದ್ಧನಿಗೆ ಸಾಧನೆಯ ಅಂತಿಮ ಅವಸ್ಥೆಯಲ್ಲಿ.

ಮಂತ್ರಗೋಪ್ಯವ ಸಾಧಿಸುವಲ್ಲಿ ಸಾಧಕನಿಗೆ ಲಿಂಗಾನುಭವ ಮತ್ತು ಲಿಂಗೈಕ್ಯ ಈ ಎರಡೂ ಅವಸ್ಥೆಗಳು ಬಹಳ ಪ್ರಾಮುಖ್ಯವಾಗಿರುತ್ತವೆ, ಮಹತ್ವವುಳ್ಳವುಗಳೂ ಆಗಿರುತ್ತವೆ. ಇವುಗಳಲ್ಲಿ ಮೊದಲನೆಯದು ಷಟ್ಸ್ಥಲದ ಆಚರಣೆಯಲ್ಲಿ ಉತ್ತರೋತ್ತರವಾಗಿ ಬೆಳೆಯುವ ಭಕ್ತಿಯ ಅನುಭವದಲ್ಲಿ, ಇನ್ನೊಂದು ನಿರವಯ ಸ್ಥಲದ ನಿಲವಿನಲ್ಲಿ ಅವ್ಯಾಹತವಾಗಿ ಬೆಳೆಯುವ ಜ್ಞಾನಾನುಭೂತಿಯಲ್ಲಿ. ಅನಂದದ ಪರಮಪ್ರಕಾಶದಲ್ಲಿ ಕಾಣಿಸಿಕೊಳ್ಳುತ್ತದೆ. ಸನ್ನಿವೇಶದ ಸಮಗ್ರತೆ, ಸಾಧಕನ ಪಾತ್ರತೆ, ಸಾಧನೆಯ ತೀಕ್ಷ್ಣತೆ ಇವನ್ನು ಅವಲಂಬಿಸಿ ಲಿಂಗಾನುಭವ ಲಿಂಗೈಕ್ಯ ಅವಸ್ಥೆಗಳಲ್ಲಿ ತರಗತಿಗಳನ್ನು ಗುರುತಿಸಬಹುದು. ಈ ಕಾರಣದಿಂದಾಗಿ ಷಟ್ಸ್ಥಲದ ವಿವರಣೆಯಾಗಲಿ, ಲಿಂಗೈಕ್ಯ ಇಲ್ಲವೆ ನಿರವಯದ ವರ್ಣನೆಯಾಗಲಿ ಒಬ್ಬರದು ಇನ್ನೊಬ್ಬರದಕ್ಕಿಂತ ಭಿನ್ನವಾಗಿರಬಹುದು. ಆದರೂ ಅಲ್ಲಿ ಒಂದು ವಿಧವಾದ ಸಮನ್ವಯವನ್ನು, ಒಂದು ವಿಧವಾದ ಸುಸಂಬದ್ಧತೆಯನ್ನು ಗುರುತಿಸಬಹುದು. ಇವೆಲ್ಲ ಪರಿಪೂರ್ಣವಾದ ಅವಸ್ಥೆ ಆ ನಿಲುವುಗಳನ್ನು ಅಂಶಮಾತ್ರವಾದರೂ ತಿಳಿಸುತ್ತಿವೆ. ಗೌಪ್ಯವಾದ ಮಂತ್ರಮಯವಾದ ಇಂತಹ ಅನುಭವವು ಅಡಗಿರುವದು ಮಂತ್ರಗೋಪ್ಯಗಳಲ್ಲಿ. ಇಂತಹ ಅನುಭವವು ತೆರೆದು ತೋರುವದು ಮಂತ್ರಗೋಪ್ಯದ ಸಾಧಕನಿಗೆ. ಈ ದೆಸೆಯಿಂದ ಈ ಗ್ರಂಥಗಳನ್ನು ಮಂತ್ರಗೋಪ್ಯವೆಂದು ಕರೆದಿರುವದು ತುಂಬಾ ಉಚಿತವಾಗಿದೆ.

# ಲಿಂಗಾಂಗ ಸಾಮರಸ್ಯ

—ಶ್ರೀ ನಿ. ಪ್ರ. ಮಹಾಂತಸ್ವಾಮಿಗಳು, ಚಿತ್ತರಗಿ

ಭಾರತೀಯ ಯೋಗಯಾತ್ರೆಯಲ್ಲಿ 'ಶಿವಯೋಗ'ವು ಯೋಗಪರಿಷ್ಕಾರಯುಗದ ಪಕ್ವಫಲವೆಂದೂ, ಯೋಗ ಸಮನ್ವಯ (Synthesis of Yoga)ದ ಒಂದು ಆದರ್ಶಪ್ರಯೋಗವೆಂದೂ ಆಧುನಿಕರಿಂದ ಪರಿಗಣಿತವಾಗಿದೆ. ಕ್ರಿಯಾ ಶೂನ್ಯ ಜ್ಞಾನಮಾರ್ಗವನ್ನು ಇಲ್ಲವೆ ಜ್ಞಾನಶೂನ್ಯ ಕ್ರಿಯಾಮಾರ್ಗವನ್ನು ವಿವೇಚಿಸಿ, ಅವುಗಳ ದೋಷಬಾಹುಳ್ಯತೆಯನ್ನು ಪರಿಗಣಿಸಿ, ಕ್ರಿಯಾ–ಜ್ಞಾನ ಸಾಮರಸ್ಯದ ನಾಂದಿಯನ್ನು ಹಾಡಿದುದು ಶಿವಯೋಗ. ಅಂತೆಯೇ ಶಿವಯೋಗ ಸಂಸಾರಕ್ಕೆ ಹಿತವಾಗಿ, ಸಂನ್ಯಾಸಕ್ಕೆ ಮಿತವಾಗಿ ಹದತಪ್ಪದ ಮದ್ದಳೆ ಬಾರಿಸಿದೆ. ಶಿವಯೋಗವು ಒಂದು ಪ್ರಸನ್ನ ಪರಿಪೂರ್ಣ ಜೀವನಕಲೆ. ಶಿಲೆಯಲ್ಲಿ ಕಲೆಯನ್ನು ಅರಳಿಸುವ ರಸಪ್ರಸಂಗ. ಇದು ದಾಂಪತ್ಯದ ಚಲುವಿನಿಂದ ಒಡೆದುಹೋಗಿಲ್ಲ,ಸಂನ್ಯಾಸದ ಶುಷ್ಕತೆಯಿಂದ ಸೀಳಿ ನಿಂದಿಲ್ಲ. ಶೃತಿಮಾಡಿದ ವೀಣೆ ರಾಗಯೋಗಿಯ ಬೆರಳು ಮಿಂಟಿದಾಗ ಮಧುರ ಝೇಂಕಾರ ಮಾಡಿದಂತೆ ಶಿವಯೋಗಿಯ ನಿಲವು. ಇಂತಹ ಶಿವಯೋಗವನ್ನು ಆತ್ಮೀಕರಿಸಿಕೊಂಡವನೇ ಶರಣ. ಈ ಶಿವಯೋಗದ ಯೋಗಮಾಧ್ಯಮವೇ ಇಷ್ಟಲಿಂಗ. ಶಿವಯೋಗದ ಎರಡು ಅವಿಚ್ಛಿನ್ನ ಅವಯವಗಳೇ ಲಿಂಗ–ಅಂಗ. ಈ ಶಿವಯೋಗದ ಫಲವೇ ಸಹಜಕೈವಲ್ಯ.

ಶಿವತತ್ತ್ವದೊಂದಿಗೆ ಸಹಯೋಗವೇ ಶಿವಯೋಗ. ಇದೇ ಲಿಂಗಾಂಗಸಾಮರಸ್ಯ. 'ಶಿವಯೋಗ' 'ಲಿಂಗಾಂಗ ಸಾಮರಸ್ಯ' ಎರಡೂ ಸಮಾನಾರ್ಥಕ ಪದಗಳು. 'ಲಿಂಗ'ನೊಂದಿಗೆ 'ಅಂಗ'ನು ಒಡವೆರೆದು ಬೇರಿಲ್ಲದಿಪ್ಪ ಬೆಡಗೇ 'ಲಿಂಗಾಂಗ ಸಾಮರಸ್ಯ'.

ಪ್ರಕೃತಿಯ ವರ್ಣವೈವಿಧ್ಯದಲ್ಲಿ ಒಲವು-ವೈರಗಳ ಸಾಮ್ರಾಜ್ಯದಲ್ಲಿ ಸಾಮಾನ್ಯವಾಗಿ ನಮ್ಮ ದೃಷ್ಟಿ ಬಹಿರ್ಮುಖವಾದ ಪ್ರಜ್ಞೆಯನ್ನು ಅಂತರ್ಮುಖಿಗೊಳಿಸುವದೇ ಯೋಗವಿಜ್ಞಾನ. ಆದರೆ ಇದು ಸಾಧುವಾದರೂ ಸುಲಭಸಾಧ್ಯವಲ್ಲ. ಯಾಕೆಂದರೆ ನಮ್ಮ ಸರ್ವತೋಮುಖ ಪ್ರವೃತ್ತಿಗಳು ಬಹಿಃಪ್ರಪಂಚದಲ್ಲಿ ಲೋಲಾಡುತ್ತಿರುವಾಗ ಈ ಆಭಾಸವೇ ನೈಜವೆಂದೂ ಈ ಹೊರ ನೋಟವೇ ಸತ್ಯಶಾಶ್ವತವೆಂದೂ ನಮ್ಮ ಮನಸ್ಸು ಒಪ್ಪಿಕೊಂಡುಬಿಟ್ಟಿರುತ್ತದೆ. ಈ ರೂಢಿಮೂಲವಾದ ಪ್ರವಾಹವನ್ನು ವಿರುದ್ಧ ದಿಕ್ಕಿನಿಂದ ಈಜುವದೇ ಮಾನವನ ಯೋಗಕಾರ್ಯ. ತೋರಿಕೆಗೆ ಇದು ವಿರುದ್ಧವೂ ಅಸಾಧ್ಯವೂ ಅನಿಸಿದರೂ ವಾಸ್ತವ ಸತ್ಯ ದಲ್ಲಿ ನಾವು 'ನಮ್ಮತನ' ದ ಸಾಕ್ಷಾತ್ಕಾರದತ್ತಲೇ ಸಾಗಿರುತ್ತೇವೆ. ಇದುವೇ ಭಾರತೀಯ ಯೋಗಮೀಮಾಂಸೆ.

ಆದರೆ, ಶಿವಯೋಗಕ್ಕೆ ಬಂದಾಗ ಈ ಚಿಂತನದಲ್ಲಿ ಹಲವು ಪರಿಷ್ಕಾರಗಳು ಆಗಿರುವದನ್ನು ನಾವು ಗಮನಿಸಬಹುದು. ಇಲ್ಲಿ ಯಾವುದೂ ಸುಳ್ಳಲ್ಲ, ಯಾವುದೂ ಅಸತ್ಯವಲ್ಲ. ಹಾಗಾದರೆ ಮಾಯೆಯೆಂದರೇನು? ನಮ್ಮ ತಿಳಿವಳಿಕೆಯ ತಪ್ಪುಗ್ರಹಿಕೆಯೇ ಮಾಯೆ, ಅದೇ ತಿಳುಹು ಸತ್ಯದರ್ಶಿಯಾಗಿರುವದೇ ಸುಜ್ಞಾನ. ಪ್ರಕೃತಿಯ ಕಾರ್ಯದಲ್ಲಿ ವಿಲೋಮ – ಅನುಲೋಮ ಕಾರ್ಯಗಳೆರಡೂ ಸತ್ಯವೇ. ಆದ್ದರಿಂದ ಶಿವಯೋಗಿಗೆ ಈ ಜಗತ್ತು ಸುಳ್ಳಾಗಿ ತೋರುವದಿಲ್ಲ, ಪ್ರಸಾದವಾಗಿ ಕಾಣುತ್ತದೆ. ಈ ಶರೀರ ಕೊಳಚೆಯ ಆಗರವಲ್ಲ, ಇದೂ ಪ್ರಸಾದಶರೀರವೇ. ಶುದ್ಧಕಾಯಕದಿಂದ ಲಿಂಗಾರ್ಪಿತವಾಗಿ ಬಂದುದೆಲ್ಲವೂ ಪ್ರಸಾದವೇ. ಆದ್ದರಿಂದ ಇಲ್ಲಿ ಮಾಯೆಯ ಹೋರಾಟದ ತೀಕ್ಷ್ಣತೆ ತಗ್ಗುತ್ತದೆ. ಪ್ರಸಾದಾನುಭೂತಿಯಿಂದ ಆತ್ಮಾನುಭೂತಿ ಸುಲಭಸಾಧ್ಯವಾಗುತ್ತದೆ. ನಮ್ಮ ದೃಷ್ಟಿಯಂತೆಯೇ ಸೃಷ್ಟಿ. ಗಗನದ ಮೋಡಗಳು ಒಬ್ಬನಿಗೆ ಶಿಲಾಬಾಲಕೆಯರ ನೃತ್ತಮತ್ತ ವಿಟ ಚೇಷ್ಟೆಗಳಾಗಿ ತೋರಬಹುದು; ಹರಿಹರಕವಿಗೆ ಕೈಲಾಸದ ಶಿವಗಣಂಗಳು ಶಿವಭಜನೆ ಮಾಡುತ್ತಿರುವಂತೆ ಗೋಚರಿಸಬಹುದು. ಹಾಗೆಯೇ ಜಗತ್ತು ಅದ್ವೈತಿಗೆ ಮಾಯೆಯೆಂದೂ, ಮಿಥ್ಯೆ ಎಂದೂ, ಸುಳ್ಳೆಂದೂ ತೋರಿದರೆ, ಶರಣನಿಗೆ ಇದು ಕರ್ಮೋದ್ಯೋಗ ಭೂಮಿಯೆಂದೂ ಪ್ರಸಾದಭೂಮಿಯೆಂದೂ ಕಾಣಿಸಿಕೊಳ್ಳುತ್ತದೆ. ಶರಣನು ಇದ್ದ ಜಗತ್ತನ್ನು ಎದುರುಹಾಕಿಕೊಂಡು ಕಷ್ಟ ಪಡುವವನಲ್ಲ, ಇದ್ದುದನ್ನೇ ಮಾರ್ಪಡಿಸಿ ಆಧ್ಯಾತ್ಮಿಕಸ್ನೇಹದಿಂದ ಬಾಳುವವನು. ಆದ್ದರಿಂದ ಅದ್ವೈತಿಗೆ ಜೀವನವು ಸುಳ್ಳೆಂದೂ ಶುಷ್ಕವೆಂದೂ ತೋರಿದರೆ, ಅದೇ ಜೀವನ ಶಿವಾನುಭಾವಿಗೆ ಸತ್ಯವೆಂದೂ ಹರನ ಕರುಣೆಯೆಂದೂ ಅನಿಸುತ್ತದೆ. ಉಭಯ ಸಿದ್ಧಾಂತದ ಗುರಿಯೊಂದಾದರೂ ಸಾಧನೆಯ ಕ್ರಮದಲ್ಲಿ ಎಷ್ಟೊಂದು ಅಂತರ ?

ವೀರಶೈವ ಅನುಭಾವಿಗಳು ಪರವಸ್ತು ಇಲ್ಲವೆ ಪರಬ್ರಹ್ಮಸ್ಥಿತಿಯನ್ನು 'ಶಿವ' 'ಸ್ಥಲ' 'ಲಿಂಗ' ಎಂದೂ ಮೊದಲಾಗಿ ಕರೆದಿದ್ದಾರೆ. ಆ ಶಿವನು ಸ್ವಯಂಜ್ಯೋತಿ ಪ್ರಭಾವಪೂರ್ಣವಾದ ಸಾರ್ವಕಾಲಿಕ ಜ್ಞಾನಸ್ವರೂಪನೂ ನಿರಂಜನನೂ ಅದ್ವಯನೂ ಸರ್ವಶಕ್ತನೂ ಆಗಿದ್ದಾನೆ. ಆತನು ಉಮಾಸ್ವರೂಪಿಣಿಯಾದ ಶಕ್ತಿಯೊಂದಿಗೆ ಅವಿನಾಭಾವ ಸಂಬಂಧದಿಂದ ಒಡಗೂಡಿದ್ದಾನೆ. ಶಿವನು ಸ್ಥಾವರಸ್ವರೂಪಿ, ಅವಳು ಜಂಗಮ ಸ್ವರೂಪಿಣಿ. ಆ ಶಕ್ತಿಇಲ್ಲದೇ ಶಿವನಿಗೆ ಶಕ್ತಿಯೂ ಇಲ್ಲ, ಜೀವನಕಾರ್ಯವೂ ಇಲ್ಲ. ಶಿವನಲ್ಲಿರುವ 'ಶಿವತ್ವ'ವನ್ನು ನಿರಾಕಾರದಿಂದ ಸಾಕಾರಕ್ಕೆ ಪ್ರಕಟಪಡಿಸುವವಳೇ ಶಕ್ತಿ. ಶಿವನೊಂದಿಗೆ ಶಕ್ತಿಯ ಸಂಗಮವು

ಶಶಿಯೊಳಗಣ ತಣ್ಪಿನಂತೆ, ಬೀಜದೊಳಗಣ ವೃಕ್ಷದಂತೆ, ಶಿಲೆಯೊಳಗಣ ಪಾವಕನಂತೆ, ಸನೆಯೊಳಗಣ ಪರಿಮಳದಂತೆ, ಕಾರಮೇಘದೊಳಗಣ ಮಿಂಚಿನಂತೆ, ಉದಕದೊಳಗಣ ಪ್ರತಿಬಿಂಬದಂತೆ, ನೀರೊಳಗಿನ ಕಿಚ್ಚಿನಂತೆ, ಫಲರಸದೊಳಗಣ ನವರುಚಿಯಂತೆ, ಮರೀಚಿಯೊಳಗಣ ಬಿಸಿಲಿನಂತೆ, ಉಸಿರೊಳಗಣ ಚೈತನ್ಯದಂತೆ, ಆಲಿಯೊಳಗಣ ತೇಜದಂತೆ, ಚಿನ್ನದೊಳಗಣ ಬಣ್ಣದಂತೆ, ಕನ್ಯೆಯೊಳಗಣ ಸ್ನೇಹದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಹಸುಳೆಯೊಳಗಣ ಸ್ವಪ್ನದಂತೆ ಅವಿನಾಭಾವ ಸಂಬಂಧದಿಂದ ಇದೆ. ಶರಣರ ಪಿಂಡಸ್ಥಲದ ವಚನಗಳಲ್ಲಿ ಈ ವಚನಗಳ ಅಗ್ಗಳಿಕೆಯನ್ನು ಅನುಭಾವಿಸಿ ತಿಳಿದುಕೊಳ್ಳಬಹುದು. ಶರಣರ ನುಡಿಗಳು ಸಾಹಿತ್ಯದ ಶಿಖರಗಳಿಂದ ಅನುಭಾವದ ಶಿಖರಗಳಿಗೆ ನಮ್ಮನ್ನು ಕೊಂಡೊಯ್ಯುವ ವಿದ್ಯುನ್ನೌಕೆಗಳಾಗಿವೆ.

ಶಿವನು ಸದ್ರೂಪನಾದರೆ ಶಕ್ತಿಯು ಚಿದ್ರೂಪಿಣಿ. ಅಂತೆಯೇ ಕವಿಗಳ ವರ್ಣನೆಯಲ್ಲಿ ಅವರು ಪತಿ–ಪತ್ನಿಯರು. ಅವರದು ವಿಶ್ವಾನಂದ ಪರಿಪೂರ್ಣ ದಾಂಪತ್ಯ. ಲಿಂಗವು ಈ ಶಿವ–ಶಕ್ತಿಯರ ಸಂಗಮದ ಸಂಕೇತ. ಲಿಂಗವು ಶಿವಶಕ್ತಿಯರ ಸದ್ರೂಪ ಚಿದ್ರೂಪಗಳನ್ನು ಒಂದುಗೂಡಿಸುವ ಕುರುಹೆಂದು ಸೂಕ್ಷ್ಮಾಗಮವು ಹೇಳುತ್ತದೆ–'ಲಿಂಗಂ ಶೈವಮಿದಂ ಸಾಕ್ಷಾತ್ ಶಿವಭಕ್ತ್ಯುಭಯಾತ್ಮಕಮ್'. ಸರ್ವವೂ ಲಿಂಗದಲ್ಲಿಯೇ ಉದಯಿಸಿ, ಲಿಂಗದಲ್ಲಿ ಬೆಳೆದು, ಲಿಂಗದಲ್ಲಿ ಲೀನದಾಗುವದೆಂದು ಮಗ್ಗೆಯ ಮಾಯಿದೇವ 'ಶಿವಾನುಭವಸೂತ್ರ'ದಲ್ಲಿ ಸಾರಿದ್ದಾನೆ :—

'ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ ।
ತದೇತತ್ ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ' (ಶಿವಾನುಭವಸೂತ್ರ, ೩–೩)

ಆದ್ದರಿಂದ ಲಿಂಗವು ಸಮಗ್ರ ಸೃಷ್ಟಿಯ ಉತ್ಪತ್ತಿ–ಸ್ಥಿತಿ–ಲಯಗಳನ್ನು ಗರ್ಭೀಕರಿಸುತ್ತದೆ ; ಮಾತ್ರವಲ್ಲ, ಶಿವ–ಶಕ್ತಿಯರನ್ನೂ ಒಳಗೊಂಡಿದೆ. ಶಿವ–ಶಕ್ತಿಯರ ನಡುವಿನ ಸಂದಿಲ್ಲದ ಸಮಗ್ರತೆಯನ್ನು 'ಲಿಂಗ' ಪದವು ಸಾರುತ್ತದೆ. ವಿಶ್ವದ ಅಳಿಮೆ, ಉಳಿಮೆಗೆ ಕಾರಣಕರ್ತನಾದ ಪರಶಿವನೇ ಲಿಂಗ, ಲಿಂಗವೇ ಪರಶಿವ. ಅವನಲ್ಲಿಯೇ ಸಮಗ್ರ ಸೃಷ್ಟಿಯೆಲ್ಲ ತೋರಿ ಅಡಗುತ್ತದೆ. ಸಾಕಾರ–ನಿರಾಕಾರಗಳು ಅದರ ಸಹಜ ಲಕ್ಷಣ. ಸತ್–ಚಿತ್–ಆನಂದಗಳೇ ಅವಯವ. ಈ ಲಿಂಗಕ್ಕೆ 'ಸ್ಥಲ'ವೆಂದೂ ವೀರಶೈವ ದರ್ಶನಕಾರರು ಪರ್ಯಾಯವಾಗಿ ಹೆಸರಿಸಿದ್ದಾರೆ. ಈ ಸ್ಥಲವನ್ನು ಸಾಧಿಸುವ ಕ್ರಮವೇ ಶರಣರ ಸ್ಥಲಕಟ್ಟಿನ ಸೊಬಗು. ಇದರ ದರ್ಶನಾತ್ಮಕ ವಿಂಗಡಣೆಯೇ ಷಟ್‌ಸ್ಥಲ ಸಂಯೋಜನೆ.

'ಲೀಲೆಯಾದೊಡೆ ಉಮಾಪತಿ, ಲೀಲೆ ನಿಂದೊಡೆ ಸ್ವಯಂಭು' ವೆಂದು ಶರಣರು ವಿಶ್ವಾತ್ಮನ ಭಾಷ್ಯ ಬರೆದಿದ್ದಾರೆ. ಆತ ತನ್ನ ವಿನೋದವನ್ನು ತಾನು ಎದುರಿಟ್ಟು ವಿನೋದಿಸಲೆಂದು ತನ್ನೊಳಗೆ ತಾನು ತೋರ್ಪಡಿಸಿಕೊಂಡ. ನಿರಾಕಾರದ ಆನಂದವನ್ನು ಸಾಕಾರದ ಚೆಲುವಿನಲ್ಲಿ ನೋಡಿಕೊಂಡ. ಪ್ರಪಂಚವೆಂಬ ಕನ್ನಡಿಯಲ್ಲಿ ತನ್ನ ಮೊಗವನ್ನೇ ತಾನು ನೋಡಿಕೊಂಡ. ಸಕಲ ಚರಾಚರವೆಲ್ಲವೂ ಅವನ ನೆನಹುಮಾತ್ರದಿಂದ ಉತ್ಪನ್ನವಾಯಿತು. ಆದ್ದರಿಂದ ಈ ಪ್ರಪಂಚ ಶಿವನೊಲ್ಲದ ಕಾಳಸಂತೆಯಲ್ಲ ; ಇದು ಶಿವನೊಲವಿನ ಲೀಲಾವಿಲಾಸ. ಈ ಲಿಂಗಲೀಲಾವಿಲಾಸಕ್ಕೆಂದು ಲಿಂಗನು ಅಂಗವಾಗಿ ಆಚರಿಸಿದ. ಆದ್ದರಿಂದ ಅಂಗರೂಪಾತ್ಮಕವಾದ ಈ ಜೀವನು ಮೂಲಸ್ಥಿತಿಯಲ್ಲಿ ಲಿಂಗರೂಪಾತ್ಮಕನೇ ಆಗಿರುವದರಿಂದ ಪ್ರಪಂಚವು ಶಿವಪ್ರಪಂಚ, ಜೀವನವೇ ಶಿವಪೂಜೆ, ಬಾಳೊಂದು ಸುಕ್ಷೇತ್ರ, ದೇಹವೇ ದೇವಾಲಯ !

ಆದ್ದರಿಂದ ಶರಣರು ಜಾತಿ-ಲಿಂಗ-ವಯ–ವರ್ಣ-ಆಶ್ರಮಾತೀತವಾದ, ಮೇಲು-ಕೀಳಿಲ್ಲದ, ತಾರತಮ್ಯವಿಲ್ಲದ ಶಿವಾನುಭವಸಿದ್ಧಾಂತವನ್ನು ಸಾರಿದ್ದಾರೆ. 'ಲಿಂಗಾಂಗ ಸಾಮರಸ್ಯ'ದಲ್ಲಿ ಸ್ತ್ರೀ ಶೂದ್ರಳೆಂದೂ, ಶೂದ್ರನು ವೇದಬಾಹಿರನೆಂದೂ, ವೇದಗಳು ವಿಪ್ರರಿಗೆ ಮಾತ್ರ ಮೀಸಲೆಂದೂ ಜಾತೀಯವಾದದ ಹುಯಿಲೆಬ್ಬಿಸಿ ಅಧ್ಯಾತ್ಮವನ್ನು ಹೊಲೆಗಲಸಲಿಲ್ಲ. ಮುಕ್ತಿಸ್ವಾತಂತ್ರ್ಯವೇ ಲಿಂಗಾಂಗಸಾಮರಸ್ಯದ ಸಂದೇಶ. ಶರಣರು ಬಾಳನ್ನು ಸತ್ಯವೆಂದು ಸ್ವೀಕರಿಸಿದರೂ ಅದರ ಅಪೂರ್ಣತೆಯನ್ನೂ ಅಭಿಮಾನವನ್ನೂ ತೊರೆದು ಪರಿಪೂರ್ಣತೆಯತ್ತ ಸಾಗಿಹೋದರು. ಅಪೂರ್ಣತೆಯಿಂದ ಪರಿಪೂರ್ಣತೆಯತ್ತ ಸಾಗುವದೇ ಲಿಂಗಾಂಗ ಸಾಮರಸ್ಯ. ಅರಿವಿನ ಸಂಪೂರ್ಣವಾದ ವಿಕಾಸಕ್ಕಾಗಿ ಹಾರೈಸುವ ಶುದ್ಧಜೀವನೇ 'ಅಂಗ'ನು. ಆ ಅಂಗನು ಪರಶಿವಾತ್ಮಕನಾದ 'ಲಿಂಗ'ವನ್ನು ತನ್ನಲ್ಲಿ ಕಾಣಬಯಸುವನು. ಹೀಗೆ 'ತನ್ನಲ್ಲಿ ತನ್ನತನವನ್ನು ಪರಿಪೂರ್ಣವಾಗಿ ಕಾಣುವ' ಮಾರ್ಗವೇ ಷಟ್‌ಸ್ಥಲ ಮಾರ್ಗ. ಷಟ್‌ಸ್ಥಲವು ಒಂದು ಸುವ್ಯವಸ್ಥಿತವಾದ ಯೋಗಮೀಮಾಂಸೆ. ಸಾಧನೆಯ ಹಂತ ಹಂತಗಳನ್ನು ವೈಜ್ಞಾನಿಕವಾಗಿ ದಿಗ್ದರ್ಶಿಸುವ ಅರುಹಿನ ನಕಾಶೆ. ಲಿಂಗ–ಅಂಗಗಳ ಸಮರಸವೇ ಷಟ್‌ಸ್ಥಲಮಾರ್ಗ. ಇದನ್ನು ಸಾರುವ ಸಿದ್ಧಾಂತಕ್ಕೆ 'ಶಕ್ತಿವಿಶಿಷ್ಟಾದ್ವೈತ'ವೆಂದು ಹೆಸರು. ಸಿದ್ಧಾಂತಶಿಖಾಮಣಿ, ಅನುಭವಸೂತ್ರ, ಕ್ರಿಯಾಸಾರ, ಶಿವಾದ್ವೈತಮಂಜರಿ, ಕೈವಲ್ಯಸಾರ, ವೀರಶೈವಾನಂದ ಚಂದ್ರಿಕೆ ಮುಂತಾದ ಗ್ರಂಥಗಳು ಈ ಸಿದ್ಧಾಂತವನ್ನೇ ಸಾರುತ್ತವೆ. ಪುರುಷನು ಪರಬ್ರಹ್ಮನಾಗುವ, ಅಂಗನು ಲಿಂಗನಾಗುವ, ಜೀವನು ಶಿವನಾಗುವ, ಮಾನವನು ದೇವನಾಗುವ ಸಿದ್ಧಾಂತವನ್ನು ಪ್ರತಿಪಾದಿಸುವದೇ 'ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ'.

ಶಕ್ತಿ–ಭಕ್ತಿಗಳ ಬೆಸುಗೆಯೇ ಶಿವಯೋಗವೆಂದು ಆಗಮಕಾರರು ಹೇಳುತ್ತಾರೆ. ಅದನ್ನೇ ಸೃಷ್ಟಿ–ದೃಷ್ಟಿಗಳ ಸಂಗಮವೆಂತಲೂ, ಇರುಹು–ಕುರುಹುಗಳ ಹೊಂದಿಕೆಯೆಂತಲೂ ನವೀನರು ವರ್ಣಿಸುತ್ತಾರೆ. ವಚನಕಾರರು ಇನ್ನೂ ಮುಂದೆಹೋಗಿ ಶಕ್ತಿಗಿಂತಲೂ ಭಕ್ತಿಯೇ ಮುಖ್ಯವೆಂದು ಹೇಳುತ್ತಾರೆ. ಶಕ್ತಿ–ಭಕ್ತಿಗಳಲ್ಲಿ ಅನುಲೋಮ–ವಿಲೋಮ ಕ್ರಮವಿದೆ. ಅಂದರೆ ಶಕ್ತಿಯು ಪ್ರವೃತ್ತಿಪರವಾದರೆ, ಭಕ್ತಿಯು ನಿವೃತ್ತಿಪರವಾಗಿದೆ. ನಾಮರೂಪಗುಣಾತಿಶಯದಿಂದ ಮೆರೆವ ಪ್ರಪಂಚದ ಸೃಷ್ಟಿಯೇ ಶಕ್ತಿಯ ಕಾರ್ಯವಾದರೆ, ಅದರ ಲಯವೇ ಭಕ್ತಿಯ ಕಾರ್ಯ. ಶಕ್ತಿಯು ಪರಿಪೂರ್ಣತೆಯಿಂದ ಅಪೂರ್ಣತೆಯತ್ತ ಸಾಗಿದರೆ, ಭಕ್ತಿಯು ಅಪೂರ್ಣತೆಯಿಂದ ಪರಿಪೂರ್ಣತೆಯತ್ತ ಗಮಿಸುತ್ತದೆ. ಶೂನ್ಯವನ್ನು ಸಾಕಾರವಾಗಿ, ಬಯಲನ್ನು ದೃಗ್ಗೋಚರವಾಗಿ, ಅವ್ಯಕ್ತವನ್ನು ವ್ಯಕ್ತವಾಗಿ ಮಾಡುವದೇ ಶಕ್ತಿ. ಸಾಕಾರವನ್ನು ಶೂನ್ಯವಾಗಿ, ಗೋಚರವನ್ನು ಅಗೋಚರವಾಗಿ, ವ್ಯಕ್ತವನ್ನು ಅವ್ಯಕ್ತವಾಗಿ ಮಾಡುವದೇ ಭಕ್ತಿ. ಪ್ರಪಂಚವನ್ನು ಬೆಳೆಸುವ ಪ್ರವೃತ್ತಿಮಾರ್ಗವೇ ಶಕ್ತಿ. ಪ್ರಪಂಚವನ್ನು ಅಳಿಸುವ ನಿವೃತ್ತಿಮಾರ್ಗವೇ ಭಕ್ತಿ. ಶಿವತತ್ತ್ವದಿಂದ ಲೋಕತತ್ತ್ವದತ್ತ ಶಕ್ತಿಯು ಅಧೋಮುಖಿಯಾಗಿ ಪ್ರವಹಿಸಿದರೆ, ಲೌಕಿಕದಿಂದ ಪಾರಲೌಕಿಕದತ್ತ, ಪ್ರಪಂಚದಿಂದ ಶೂನ್ಯದತ್ತ, ಸಾಕಾರದಿಂದ ನಿರಾಕಾರದತ್ತ ಭಕ್ತಿಯು ಊರ್ಧ್ವಮುಖಿಯಾಗಿ ಚಲಿಸುತ್ತದೆ. ಆದ್ದರಿಂದ ಶಕ್ತಿ ಅಧೋಮುಖಿ; ಭಕ್ತಿ ಊರ್ಧ್ವಮುಖಿ. ಶಕ್ತಿಯು ಸಮಾಯೆ; ಭಕ್ತಿಯು ನಿರ್ಮಾಯೆ. ಹೀಗೆ ಅನುಲೋಮ–ವಿಲೋಮ ಕ್ರಮಗಳಿಂದ ಶಕ್ತಿ–ಭಕ್ತಿಗಳು ವಿರುದ್ಧಮುಖಿಯಾಗಿವೆ. ಶಕ್ತಿಯ ಹೆಗ್ಗುರಿ ಪ್ರಪಂಚದ ವರ್ಣವೈವಿಧ್ಯವಾದರೆ ಭಕ್ತಿಯ ಹೆಗ್ಗುರಿ ಲಿಂಗಾಂಗಸಾಮರಸ್ಯ. ಆದ್ದರಿಂದ 'ಲಿಂಗಾಂಗಸಾಮರಸ್ಯ'ವು ಜಗದುತ್ಪತ್ತಿಕಾರ್ಯದಲ್ಲಿ ವಿಲೋಮಮಾರ್ಗಾವಲಂಬಿಯಾದ ಮುಕ್ತಿಯ ಯಾತ್ರೆ. ಶಕ್ತಿಯು ನಮ್ಮನ್ನು ಪ್ರವೃತ್ತಿಯತ್ತ ಒಯ್ದರೆ ಭಕ್ತಿಯು ನಮ್ಮನ್ನು ನಿವೃತ್ತಿಯತ್ತ ಎತ್ತುತ್ತದೆ. ಈ ನಿವೃತ್ತಿಯೇ ಲಿಂಗಾಂಗಸಾಮರಸ್ಯ, ಶಿವ-ಜೀವರ ಐಕ್ಯ, ಜೀವಾತ್ಮ ಸಮ್ಮಿಲನ. ಶಕ್ತಿ–ಭಕ್ತಿಗಳ ಈ ದ್ವಂದ್ವವೇ ಪುರುಷ–ಪ್ರಕೃತಿಯ ಹೋರಾಟ. ಇದನ್ನು ಬಸವಣ್ಣನವರ ವಚನಗಳಲ್ಲಿ ಸ್ಪಷ್ಟವಾಗಿ ಗಮನಿಸಬಹುದು :

> ಜಂಬೂದ್ವೀಪ ನವಖಂಡಪೃಥ್ವಿಯೊಳಗೆ ಕೇಳಿರಯ್ಯಾ
> ಎರಡಾಳಿನ ಭಾಷೆಯ. ಕೊಲುವೆನೆಂಬ ಭಾಷೆ ದೇವನದು ; ಗೆಲುವೆನೆಂಬ ಭಾಷೆ ಭಕ್ತನದು !
> ಸತ್ಯವೆಂಬ ಕೂರಲಗನೆ ತಳೆದುಕೊಂಡು ಸದ್‌ಭಕ್ತರು ಗೆದ್ದರು ಕಾಣಾ ಕೂಡಲಸಂಗನ ಶರಣರು !
> ಜೋಳವಾಳಿಯಾನಲ್ಲ, ವೇಳೆವಾಳಿಯವ ನಾನಯ್ಯಾ ; ಹಾಳುಗೆಟ್ಟೋಡುವ ಆಳು ನಾನಲ್ಲಯ್ಯಾ ;
> ಕೇಳು ಕೂಡಲಸಂಗಮದೇವಾ, ಮರಣವೇ ಮಹಾನವಮಿ.

ಹೀಗೆ ಬಸವಣ್ಣನವರಿಗೆ ಈ ಅಧ್ಯಾತ್ಮಯಾತ್ರೆಯ ಹೋರಾಟದಲ್ಲಿ ಮರಣವೇ ಮಹಾನವಮಿ. ಶಕ್ತಿಯ ಪ್ರವೃತ್ತಿಗೆ ಅವರು ಅಂಜರು. ನಿವೃತ್ತಿಯ ಸಂಕೇತವಾದ ಭಕ್ತಿಯ ಕೂರಲಗು ಹಿಡಿದು ಹೋರಾಡುವ ಬಯಕೆಯೇ ಬಸವಣ್ಣನವರದು. ಈ ಹೋರಾಟ ನಡೆದಾಗ 'ಮರಣ' ಬಂದರೆ ಅದು ಮೃತ್ಯುರೂಪವಾದ ಮರಣವಲ್ಲ ; ಅದು ನಿವೃತ್ತಿರೂಪವಾದ 'ಲಿಂಗೈಕ್ಯ' ಪದವಿ. ಆದ್ದರಿಂದ ಶರಣನಿಗೆ ಮರಣ ಅನಿಷ್ಟವಲ್ಲ, ಅದೇ ಮಹಾನವಮಿ. ಆದ್ದರಿಂದ ಬಸವಣ್ಣನವರು ಸಾರಿಸಾರಿ ಹೇಳುತ್ತಾರೆ :—

> ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು ; ಜೀವನೋಪಾಯಕ್ಕಂಜಿ 'ಈಯಯ್ಯಾ' ಎನ್ನೆನು ;
> 'ಯದ್ ಭಾವಂ ತದ್ ಭವತಿ'—ಉರಿ ಬರಲಿ, ಸಿರಿ ಬರಲಿ, 'ಬೇಕು ಬೇಡೆ'ನ್ನೆನಯ್ಯಾ :
> ಆನು ನಿಮ್ಮ ಹಾರೆನು, ಮಾನವರ ಬೇಡೆನು ; ಆಣೆ, ನಿಮ್ಮಾಣೆ, ಕೂಡಲಸಂಗಮದೇವಾ.

ಹೀಗೆ 'ಲಿಂಗಾಂಗಸಾಮರಸ್ಯ'ವು ಬೊಂಬೆಯಾಟದಂತೆ ಸರಸ ಸುಲಭವಾದುದಲ್ಲ. ಶಕ್ತಿಯ ಪ್ರವೃತ್ತಿಯೊಂದಿಗೆ ನಿಖರವಾದ ಹೋರಾಟವೇ ಸಂಭವಿಸುತ್ತದೆ. ಈ ಹೋರಾಟದ ನೋವೂ ಶರಣನಿಗೆ ಸಂತಸವನ್ನೀಯುತ್ತದೆ. ಯಾತನೆಯ ಉರಿಯೂ ಆನಂದ ನೀಡುತ್ತದೆ.

ಆಗಮೋಕ್ತ ಶೈವಧರ್ಮದ ಸಪ್ತಶೈವಗಳಲ್ಲಿ ವೀರಶೈವವು ಒಂದು ಪ್ರಭೇದವಾಗಿದೆ. ಅನೇಕ ಶಿವಾಗಮಗಳಲ್ಲಿ ವೀರಶೈವಪದವೂ, ಗುರು–ಲಿಂಗ–ಜಂಗಮ ಮುಂತಾದ ಪಾರಿಭಾಷಿಕ ಪದಗಳೂ ಸುಸಂಗತವಾಗಿ ಬಂದಿವೆ. ಇದೆಲ್ಲಾ ಶೈವಮೂಲದೊಂದಿಗೆ ವೀರಶೈವದ ಲಿಂಗತತ್ತ್ವದ ಬೆಳವಣಿಗೆಯ ಸೂಚನೆಯಾಗಿದೆ. ಆಗಮಪೂರ್ವಕಾಲೀನ ಶೈವಸಿದ್ಧಾಂತದಲ್ಲಿ ಸ್ಥಾವರ ಪೂಜೆಯೇ ಗಮನಾರ್ಹವಾಗಿತ್ತು. ಆಗಮಾರ್ಯರಾದ ಮುನಿಪೋತ್ತುಂಗವರು ಬ್ರಹ್ಮಾಂಡಮಯವಾದ ಲಿಂಗವನ್ನು ಸ್ಥಾವರವಾಗಿ ಅನುಸಂಧಾನಗೊಳಿಸಿ ಅರ್ಚನೆಗೆ ದಾರಿಮಾಡಿಕೊಟ್ಟರು. ಗುಡಿ–ದೇವಾಲಯಗಳನ್ನು ಕಟ್ಟಿದರು. ಸ್ಥಾವರದಲ್ಲಿ ವಿಶ್ವಶಕ್ತಿಯ ಆಹ್ವಾನ ವಿಸರ್ಜನೆಗಳು ಪ್ರಾರಂಭವಾದವು. ನಂತರ, ಆಗಮಕಾಲೀನ ಶೈವೋತ್ಕ್ರಾಂತಿಯ ಕಾಲದಲ್ಲಿಯೇ ಅಂಗಳದ ಮೇಲಿನ ಲಿಂಗ, ಅಂಗದ ಮೇಲೂ ಬಂತು. ಪೂಜೆಯ ಸೌಲಭ್ಯಕ್ಕಾಗಿ ಗುಡಿಲಿಂಗ ಎದೆಲಿಂಗವಾಯಿತು, ಅಷ್ಟೇ ; ಆದರೆ ಇಷ್ಟಲಿಂಗವಾಗಲಿಲ್ಲ ! ರಟ್ಟೆ–ಶಿರಸ್ಸು–ಎದೆ–ಟೊಂಕ (ರಕ್ಷೆ, ಕರ, ಶಿರ, ಉರ, ಕಂಠ, ಅಮಳೋಕ್ಯ ಎಂಬ ಆರು ಸ್ಥಳಗಳು) ಮೊದ

ಲಾದ ಕಡೆಗಳಲ್ಲೂ ಈ ಲಿಂಗಧಾರಣೆ ಇದ್ದುದರಿಂದ, ಸಾಮಾಜಿಕ ಪ್ರಜ್ಞೆಯಲ್ಲಿ ಇನ್ನೂ ಶೈಥಿಲ್ಯವಿತ್ತೆಂದೂ, ಏಕಸೂತ್ರತೆ ಪ್ರಾಪ್ತವಾಗಿರಲಿಲ್ಲವೆಂದೂ ಇದರ ಅರ್ಥ. ಆಗಮೋತ್ತರಕಾಲೀನ ಉತ್ಕ್ರಾಂತಿ ದಿಶೆಯಲ್ಲಿ ಕೆಲವು ಮಹರ್ಷಿಗಳು ಸ್ಥಾವರ ಲಿಂಗಕ್ಕೂ, ಎದೆಯ ಲಿಂಗಕ್ಕೂ ತಾತ್ವಿಕಭೇದ ಕಲ್ಪಿಸತೊಡಗಿದರು. ವಿಶ್ವದ ಲಿಂಗವನ್ನು ಅಂಗೈಗೆ ತರುವದಕ್ಕಿಂತ, ನಮ್ಮಲ್ಲಿಯೇ ಹೃದ್ಗತವಾದ ಲಿಂಗವನ್ನೇ ನಮ್ಮೆದುರಿಗೆ ತಂದರು ; ನಮ್ಮೆದೆಗೆ ಕಟ್ಟಿದರು. ಕಾಣಲಾರದ ನೆಲ್ಲಿಕಾಯಿಗಾಗಿ, ಏರಲಾರದ ಬೆಟ್ಟ ಏರುವುದಕ್ಕಿಂತ ಅಂತರಂಗದ ರಸಪಾಕವನ್ನೆ ಕರತಲಕ್ಕೆ ಸುರಿದರು. ಎಷ್ಟು ಸರಳ ! ಎಷ್ಟು ಸುಂದರ !! ಹೀಗಾಗಿ ನಮ್ಮಲ್ಲಿರುವ ಶಿವಸ್ಥಿತಿಯನ್ನೇ ನಾವು ಲಿಂಗದ ಮಾಧ್ಯಮದಲ್ಲಿ ಪೂಜಿಸುವ ವೈಜ್ಞಾನಿಕ ವಿಧಾನ ಆರಂಭವಾಯಿತು. ಇದಕ್ಕೆ ಸ್ವಯಮೋಪಾಸನೆ ಎಂತಲೂ ಕೆಲವರು ಕರೆಯುತ್ತಾರೆ. ನಾವು ನಮ್ಮಲ್ಲಿ ನಮ್ಮತನವನ್ನು ಗುರುವಿನ ಸಹಾಯದಿಂದ ಜಾಗ್ರತಗೊಳಿಸಿಕೊಂಡು, ಆ ನಮ್ಮತನದ ಕುರುಹಿನಲ್ಲಿಯೇ ನಮ್ಮ ದೃಷ್ಟಿ, ಅರುಹು, ಅರ್ಚನೆಗಳನ್ನು ಕ್ರೋಢೀಕರಣಗೊಳಿಸುವದು ಇಷ್ಟಲಿಂಗಪೂಜೆ. ನಮ್ಮ ಸತ್ಯತ್ವದ ಪ್ರತಿನಿಧಿ ಇಷ್ಟಲಿಂಗ, ಅದರ ಪ್ರತಿಕ್ರಿಯೆ ನಾವು. ಇದೇ 'ಲಿಂಗಾಂಗಸಾಮರಸ್ಯ'ದ ಸುಲಭ ಸೋಪಾನ. ಅಂಗನು ಮೂಲದಲ್ಲಿ ಲಿಂಗನೇ ಸರಿ. ಆದರೆ 'ಲಿಂಗ'ನು ತನ್ನ ಸ್ವವಿನೋದಕ್ಕಾಗಿ ಅಂಗ–ಲಿಂಗವೆಂದು ಎರಡಾದನು. ಈಗ ಈ ಷಟ್ಸ್ಥಲಮಾರ್ಗವು ಮರಳಿ ಈ ಅಂಗ–ಲಿಂಗರ ಸಾಮರಸ್ಯವನ್ನು ಸಾರಿತು. ಇದೇ 'ಲಿಂಗಾಂಗಸಾಮರಸ್ಯ'ದ ಶರಣಸಂದೇಶ.

ಸ್ಥಲವೆಂದರೆ ಶಿವನು. ಆತನೇ ಲಿಂಗ–ಅಂಗವೆಂಬ ಉಭಯವಾಗಿ ತೋರಿದೆ. ಇದು ಆತನ ಸ್ವಲೀಲಾನಂದ ರತಿ. ಅಂಗನೆಂದರೆ ಶುದ್ಧನಾದ ಜೀವನು. ಬದ್ಧನಾದ ಜೀವನಿಗೆ ಅಂಗನೆನ್ನಲಾಗದು. ಕಾರಣಬದ್ಧ ಜೀವನಿಗೆ ಮುಕ್ತಿಯ ಮಾರ್ಗದ ಒಲವು ವೈಭವವೇ ಇಲ್ಲ. ಆತನು ಹರಿಯುತ್ತಿರುವ ಜೀವನದಿಯಲ್ಲಿ ಒಂದು ಬೆಂಡಿನ ಪೆಂಡಿ ಮಾತ್ರ. ಆದರೆ ಜ್ಞಾನೋದಯಗೊಂಡ ಬದ್ಧ ಜೀವನು ಶುದ್ಧಜೀವನಾಗಿ ಪಲ್ಲಟಗೊಳ್ಳುತ್ತಾನೆ. ಈತನಿಗೆ ಮುಕ್ತಿಯ ಮಾರ್ಗದಲ್ಲಿ ಅಸಾಧಾರಣ ಒಲವುಂಟು. ಆದ್ದರಿಂದಲೇ ಈತ ಅಂಗ. ಹೀಗೆ 'ಅಂಗ'ವಾಗಲೂ ಅರ್ಹತೆ ಬೇಕು. ಆದ್ದರಿಂದ ಅರಿಷಡ್ವರ್ಗವನ್ನೂ, ಸಪ್ತವ್ಯಸನಗಳನ್ನೂ, ಅಷ್ಟಮದಗಳನ್ನೂ, ಮಲತ್ರಯಗಳನ್ನೂ ದೂರೀಕರಿಸಿ ಮುಕ್ತಿಯ ಮಾರ್ಗದಲ್ಲಿ ನಡೆದವನೇ 'ಅಂಗ'ನು. ಈತನಿಗೆ 'ಶುದ್ಧಜೀವ'ನೆಂದೂ 'ತ್ಯಾಗಾಂಗ'ನೆಂದೂ 'ಪಿಂಡ'ನೆಂದೂ ಪರ್ಯಾಯನಾಮಗಳಿವೆ. ಆದ್ದರಿಂದ ನೂರೊಂದು ಸ್ಥಲಕಟ್ಟಿನಲ್ಲಿ ಬರುವ ಪಿಂಡಸ್ಥಲವು ಅಂಗಸ್ಥಲದ ಆಚರಣೆಯೇ ಆಗಿದೆ.

'ಸಕೀಲ'ಗಳು ಈ ಲಿಂಗ–ಅಂಗಗಳನ್ನು ಕೊಂಡಿಗೊಳಿಸಿ, ಸಮರಸಗೊಳಿಸಲು ಮೂಡಿಬಂದವು. ಇವಕ್ಕೆ 'ಲಿಂಗಸಕೀಲ'ಗಳೆಂತಲೂ ಕರೆಯುತ್ತಾರೆ. ಇವುಗಳಲ್ಲಿ ಷಡ್ವಿಧ ಸಕೀಲ, ಅಷ್ಟವಿಧ ಸಕೀಲ, ೩೬ ವಿಧ ಸಕೀಲ, ೨೧೬ ವಿಧ ಸಕೀಲ ಹಾಗೂ ೧೦೮ ವಿಧ ಸಕೀಲಗಳೆಂದು ಅನೇಕರು ತಮ್ಮ ತಮ್ಮ ಅನುಕೂಲತೆಗೆ ತಕ್ಕಂತೆ ಅಳವಡಿಸಿಕೊಂಡಿದ್ದಾರೆ. ಈ ಸಕೀಲ ಶಾಸ್ತ್ರವೇ ನಮ್ಮ ಷಟ್‌ಸ್ಥಲದ ಪ್ರಧಾನ ಅಡಿಗಲ್ಲು. ಇದು ಸಮಗ್ರವಾದ ಹಾಗೂ ಬಹಳ ವ್ಯಾಪಕವಾದ ವಿವೇಚನೆಯಾಗಿರುವದರಿಂದ ಇಲ್ಲಿ ಅದರ ವ್ಯಾಪ್ತಿಗೆ ಅವಕಾಶವಿಲ್ಲ. ಆದರೆ ನಮ್ಮ ಮೂರು ಶರೀರಗಳಿಗೆ ಮೂರು ಲಿಂಗಗಳ ಸಂಬಂಧವನ್ನಾದರೂ ಅರಿಯಬೇಕಾಗುತ್ತದೆ. ಸ್ಥೂಲತನುವಿನಲ್ಲಿ ಸದುವಿನಯ ಸದಾಚಾರಗಳು ನೆಲೆಗೊಂಡಿದ್ದರೆ ಅಲ್ಲಿ ಇಷ್ಟಲಿಂಗ ಸಂಬಂಧವಿದೆಯೆಂದು ತಿಳಿಯಬೇಕು. ಮನದಲ್ಲಿ ಶಿವಧ್ಯಾನ, ಶಿವಚಿಂತನೆ, ಸದ್ವಿಚಾರಗಳು ನೆಲೆ ನಿಂತಾಗ ಅಲ್ಲಿ ಸೂಕ್ಷ್ಮಶರೀರದಲ್ಲಿ ಪ್ರಾಣಲಿಂಗದ ಸಂಬಂಧ ಗಟ್ಟಿಗೊಂಡಿರುತ್ತದೆ. ಭಾವದಲ್ಲಿ ಸದಾ ಶಿವಭಾವ ಆನಂದ ತುಂಬಿಕೊಂಡಿದ್ದರೆ ಕಾರಣತನುವಿನಲ್ಲಿ ಭಾವಲಿಂಗ ಸಂಬಂಧವಾಗಿರುತ್ತದೆ. ಹೀಗೆ ನಮ್ಮ ಸ್ಥೂಲ–ಸೂಕ್ಷ್ಮ–ಕಾರಣ ತನುವಿನಲ್ಲಿ ಇಷ್ಟ–ಪ್ರಾಣ–ಭಾವಲಿಂಗಗಳ ಸಂಬಂಧ ನೇರ್ಪಡುತ್ತದೆ. ಎರಡಂಗ ಭಕ್ತನಾಗಿ ಒಂದಂಗ ಭವಿಯಾಗಲು ಶರಣಸಿದ್ಧಾಂತ ಒಪ್ಪುವದಿಲ್ಲ. ಆದ್ದರಿಂದ ಸೂಕ್ಷ್ಮ ಹಾಗೂ ಕಾರಣ ಶರೀರಗಳಿಗೆ ಲಿಂಗ ಸಂಬಂಧವಿರುವಂತೆ ಸ್ಥೂಲಶರೀರಕ್ಕೂ ಲಿಂಗ ಸಂಬಂಧ ಅತ್ಯಗತ್ಯ. ಹೀಗೆ ಪರಶಿವನೇ ಸ್ಥಲ ಅಥವಾ ಪರಬ್ರಹ್ಮ ಇಲ್ಲವೆ ಪರವಸ್ತು. ಆ ಮಹಾಸ್ಥಲನೇ ಲಿಂಗ–ಅಂಗ ಎಂದು ಎರಡಾಗುತ್ತಾನೆ. ಮುಂದೆ ಲಿಂಗವೇ ಇಷ್ಟ-ಪ್ರಾಣ-ಭಾವವೆಂದು ತ್ರಿವಿಧವಾಗುತ್ತದೆ. ಅಂಗನೇ ಯೋಗಾಂಗ-ಭೋಗಾಂಗ-ತ್ಯಾಗಾಂಗವಾಗುತ್ತಾನೆ.

ಹೀಗೆ 'ಮಹಾಸ್ಥಲ'ರೂಪಿಯಾದ ಪರಶಿವನು ತನ್ನ ಲೀಲಾವಿನೋದಕ್ಕಾಗಿ ಲಿಂಗಾಂಗವಾಗಿಯೂ, ಷಡ್ಲಿಂಗವಾಗಿಯೂ, ಷಟ್‌ಸ್ಥಲವಾಗಿಯೂ ಹಬ್ಬುಗೆಗೊಂಡನು. ಇದು ಸ್ಥೂಲವಾದ ವಿಕಾಸಕ್ರಮ. ಈ ಲಿಂಗನಿಗೆ ಸರ್ವಾಂಗ ಸಮರ್ಪಣೆಯೇ 'ಅಂಗ'ನ ಅರ್ಪಣೆ. ಅಷ್ಟವಿಧ ಸಕೀಲದಲ್ಲಿ ಆರು ಲಿಂಗಗಳಿಗೆ ಆರು ಪದಾರ್ಥಗಳನ್ನರ್ಪಿಸುವ ಕ್ರಮವು ನಮ್ಮಲ್ಲಿ ಪ್ರಸಿದ್ಧವಾಗಿದೆ. ಉದಾಹರಣೆಗೆಂದು ನೋಡಬೇಕೆಂದರೆ–'ಆಧಾರ ಚಕ್ರದ ನಾಲ್ಕೆಸಳ ಕಮಲ ಮಧ್ಯದಲ್ಲಿ ನಿಂತು, ಕ್ರಿಯಾಶಕ್ತಿಯಿಂದ ಕೂಡಿದ ಆಚಾರಲಿಂಗಕ್ಕೆ, ನಾಸಿಕ ಮುಖದಲ್ಲಿ, ಸುಚಿತ್ತಹಸ್ತದಿಂದ ಚಂದನಾದಿ ಸುಗಂಧ ಪದಾರ್ಥವನ್ನು ಸಮರ್ಪಿಸಿ, ಆ ಗಂಧ ಪ್ರಸಾದವನ್ನು ಅನುಭವಿಸುವನು'. ಇದೇ ರೀತಿ ಮಹೇಶನು ಗುರುಲಿಂಗಕ್ಕೆ ರಸವನ್ನು, ಪ್ರಸಾದಿಯು ಶಿವಲಿಂಗಕ್ಕೆ ರೂಪವನ್ನು, ಪ್ರಾಣಲಿಂಗಿಯು ಜಂಗಮಲಿಂಗಕ್ಕೆ ಸ್ಪರ್ಶವನ್ನು, ಶರಣನು ಪ್ರಸಾದಲಿಂಗಕ್ಕೆ ಶಬ್ದವನ್ನು ಹಾಗೂ

ಐಕ್ಯನು ಮಹಾಲಿಂಗಕ್ಕೆ ಪರಿಣಾಮವನ್ನು ಅರ್ಪಿಸುವ ವಿಧಾನ ರೂಪಿತವಾಗಿದೆ. ಈ ಸರ್ವಾರ್ಪಣೆಯ ಅರ್ಥ ಈ ಸಮಗ್ರ ಇರುವಿಕೆಯ ಭೋಗವನ್ನೇ ಪ್ರಸಾದವಾಗಿ ಪಲ್ಲಟಿಸುವದು. ವೀರಶೈವನಿಗೆ ಭೋಗವು ತ್ಯಾಜ್ಯವಲ್ಲ. ಆದರೆ ಆ ಭೋಗವು ಲಿಂಗಾರ್ಪಿತವಾಗಿ ಪ್ರಸಾದವಾಗಿ ಬಂದಿರಬೇಕು. ಅದ್ದರಿಂದ ಶರಣನು ಭೋಗಿಯಲ್ಲ ; ಆದರೆ ಲಿಂಗಭೋಗೋಪಭೋಗಿ ! ಎಷ್ಟು ಸೊಗಸಿನ ಸಿದ್ಧಾಂತವಿದು !!

# ಶಿವಯೋಗ

—ಡಾ॥ ನಿಜಲಿಂಗಮ್ಮ ಕೊಪ್ಪಳ

ಭಾರತೀಯ ತತ್ತ್ವಶಾಸ್ತ್ರದ ಇತಿಹಾಸದಲ್ಲಿ ಅತ್ಯಂತ ಉಜ್ವಲವೂ ಊರ್ಜಿತವೂ ಆದ ಯೋಗಶಾಸ್ತ್ರದ ಪರಂಪರೆಯೊಂದು ಪುರಾತನ ಕಾಲದಿಂದ ಬೆಳೆದುಬಂದಿದೆ. ಭಾರತದಲ್ಲಿ ಹುಟ್ಟಿ ಬೆಳೆದ ಎಲ್ಲ ದರ್ಶನಗಳು ತತ್ತ್ವಸಾಕ್ಷಾತ್ಕಾರಕ್ಕಾಗಿ ತಮ್ಮದೇ ಆದ ಸಾಧನಮಾರ್ಗವನ್ನು ಅವಲಂಬಿಸಿವೆ. ಯೋಗದರ್ಶನದ ಬಗೆಗೆ ಇಂದಿಗೂ ಕಂಡುಬರುವ ಲೋಕಪ್ರಿಯತೆ ಹಾಗೂ ಹಿರಿಮೆ ಗರಿಮೆಗಳು ಈ ದರ್ಶನದ ಸಿದ್ಧಾಂತ–ಸಾಧನೆ–ಸಿದ್ಧಿಗಳ ಮೌಲ್ಯದ ಬಗೆಗೆ ಕೂಲಂಕಷವಾಗಿ ವಿವೇಚಿಸಿದಷ್ಟು ಹೆಚ್ಚುತ್ತವೆ.

ಮಹರ್ಷಿ ಪತಂಜಲಿ 'ಯೋಗದರ್ಶನ'ದ ಮೂಲಪುರುಷನೆಂಬುದು ಸುಪ್ರಸಿದ್ಧ. ಆದರೆ ಪತಂಜಲಿಗಿಂತಲೂ ಪೂರ್ವದಲ್ಲಿಯೆ ಯೋಗಸಾಧನೆಯ ರೂಪರೇಷೆಗಳು ಮೂಡಿದ್ದು ಕಂಡುಬರುತ್ತವೆ. ಪರಂಪರಾಗತ ತಿಳಿವಳಿಕೆಯಂತೆ ಯೋಗದರ್ಶನದ ಆದ್ಯಪ್ರವರ್ತಕ ಹಿರಣ್ಯಗರ್ಭನೆಂದು ಪ್ರತೀತಿ[1]. ಈ ದಿಸೆಯಲ್ಲಿ ಪತಂಜಲಿ ಶಾಸ್ತ್ರೀಯವಾಗಿ ನಿಯೋಜಿಸಿದ ತನ್ನ ಯೋಗದರ್ಶನವನ್ನು 'ಯೋಗಾನುಶಾಸನ'ವೆಂದು ಕರೆದುದು ಔಚಿತ್ಯಪೂರ್ಣವಾಗಿದೆ. ಹಿರಣ್ಯಗರ್ಭ, ಪತಂಜಲಿ ಮೊದಲಾದ ಋಷಿಗಳು ಶಿವೋಪಾಸಕರು. ಹೀಗೆ ಪ್ರಾಚೀನಯುಗದಲ್ಲಿ ಯೋಗಶಾಸ್ತ್ರವು ಶೈವಧರ್ಮದ ಪರಿಸರದಲ್ಲಿ ರೂಪುಗೊಂಡು ಮಹಾವೃಕ್ಷವಾಗಿ ಬೆಳೆದು ನಿಂತಿದೆ. ಶೈವಾಗಮೋಪನಿಷತ್ತುಗಳಲ್ಲಿ ಮತ್ತು ಶಾಕ್ತ ಪಾಂಚರಾತ್ರಾಗಮಗಳಲ್ಲಿ ಸಹಿತ ಯೋಗದ ಅಮೌಲ್ಯವಾದ ತತ್ತ್ವಗಳ ವಿವೇಚನೆ ಉಕ್ತವಾಗಿದೆ. ಭಗವದ್ಗೀತೆಯೂ ಯೋಗಪದಕ್ಕೆ ವ್ಯಾಪಕವಾದ ಅರ್ಥವನ್ನು ಕಲ್ಪಿಸಿ ಕರ್ಮ–ಜ್ಞಾನ–ಭಕ್ತಿಯೋಗಗಳ ತ್ರಿವೇಣೀ ಸಂಗಮವನ್ನು ಚಿತ್ರಿಸಿದೆ. ಈ ಸಾಹಿತ್ಯಕ್ಷೇತ್ರಕ್ಕಿಂತಲೂ ಪೂರ್ವದಲ್ಲಿಯೆ, ಪ್ರಾಗೈತಿಹಾಸಿಕ ಭಾರತೀಯ ಸಂಸ್ಕೃತಿಗೆ ತವರಾದ ಮೊಹೆಂಜೋದಾರೋ ಹರಪ್ಪಾಗಳ ಅಗೆತಗಳಲ್ಲಿ ಶೈವದರ್ಶನದ ಮೂಲರೇಖೆಗಳು ಕಂಡುಬರುತ್ತವೆ. ಇವುಗಳಲ್ಲಿ ಬಗೆ ಬಗೆಯ ಆಕಾರದ ಲಿಂಗಗಳೂ[2], ಪದ್ಮಾಸನದಲ್ಲಿ ಶಿವನಂತೆ ಧ್ಯಾನಮಗ್ನನಾದ ಮಹಾಯೋಗಿಯ ಮೂರ್ತಿಗಳೂ[3] ದೊರೆತಿವೆ.

ಶೈವಧರ್ಮದ ಆಧಾರಗ್ರಂಥಗಳಾದ ಶಿವಾಗಮಗಳ ನಾಲ್ಕು ಪಾದಗಳಲ್ಲಿ ಯೋಗಪಾದವೂ ಬರುತ್ತದೆ. ಅಲ್ಲಿ ಸಾಧಕನ ಆತ್ಯಂತಿಕ ಸ್ಥಿತಿ ಪ್ರತಿಪಾದಿತವಾಗಿದೆ. ಅಲ್ಲದೆ ಜ್ಞಾನ ಹಾಗೂ ಯೋಗಗಳ ಪರಸ್ಪರ ಸಂಬಂಧವನ್ನೂ ಯೋಗದ ಮಹತ್ತ್ವವನ್ನೂ ನಿರೂಪಿಸಿದೆ. ಯೋಗದ ಬಗೆಗೆ ಶಾಸ್ತ್ರೀಯ ಪ್ರಜ್ಞೆ ಬೆಳೆದು ಅದೊಂದು ಪ್ರತ್ಯೇಕ ದರ್ಶನವೆಂದು ಪರಿಗಣಿತವಾದ ಮೇಲೆ ಮಂತ್ರಯೋಗ, ಹಠಯೋಗ, ಲಯಯೋಗ, ರಾಜಯೋಗ ಎಂಬ ಸೂಕ್ಷ್ಮಪ್ರಭೇದಗಳು ತಲೆದೋರಿದವು. ಶಿವಾಗಮ, ಶಿವಸಂಹಿತೆ ಮೊದಲಾದ ಶೈವಪರ ಗ್ರಂಥಗಳಲ್ಲಿ[4] ಕಂಡುಬರುವ ಯೋಗದ ವಿವರಣೆಯಿಂದ ಹಾಗೂ 'ಶಿವಯೋಗ' ಎಂಬ ಪದದ ಧಾರಾಳವಾದ ಬಳಕೆಯಿಂದ, ಶಿವಯೋಗವೆಂಬ ಇನ್ನೊಂದು ಯೋಗವಿತ್ತೆಂದೂ ವಿದಿತವಾಗುತ್ತದೆ. ಈ ಯೋಗವನ್ನೊಳಗೊಂಡು ಐದು ಬಗೆಯ ಯೋಗಗಳೆಂದು ಪರಿಗಣಿಸಲಾಯಿತು[5].

---

1. ಹಿರಣ್ಯಗರ್ಭೋ ಯೋಗಸ್ಯ ವಕ್ತಾ ನಾನ್ಯಃ ಪುರಾತನಃ — ಯಾಜ್ಞವಲ್ಕ್ಯಸ್ಮೃತಿ
2. Marshall : Mohenjo-daro and Indus Civilization, P. 59
3. Illustrated by Marshall in Pl, XII, 17. P. 52.
4. ಪಾರಮೇಶ್ವರ ತಂತ್ರವು ಅನಾದಿಶೈವ, ಆದಿಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ, ವೀರಶೈವ–ಎಂಬ ಸಪ್ತವಿಧ ಶೈವಪ್ರಭೇದಗಳನ್ನು ನಿರೂಪಿಸುತ್ತದೆ. ಪಾರಮೇಶ್ವರ ತಂತ್ರ—I, ೧೩–೧೫.
   ವೀರಶೈವ ಮತಸ್ಥಸ್ಯ ಜ್ಞಾನಂ ಯೋಗೋ ಹಿ ಸಾಧನಮ್ ॥ ವೀರಶೈವ ಮತವನ್ನನುಸರಿಸುವವನಿಗೆ ಜ್ಞಾನ ಮತ್ತು ಯೋಗಗಳೇ ಸಾಧನ. ಅಂದರೆ ಜ್ಞಾನಯುಕ್ತವಾದ ಯೋಗವೆ ಅಥವಾ ಶಿವಯೋಗವೆ ಸಾಧನವೆಂಬುದನ್ನು ತೋರಿಸುತ್ತದೆ. ಪಾರಮೇಶ್ವರ ತಂತ್ರ VII. ೩೬, ೩೭
5. ಪಾರಮೇಶ್ವರ ತಂತ್ರ X, ೫೫-೫೬.

ಕೆಲವು ಆಗಮಗಳಲ್ಲಿ ಯೋಗಶೈವನ ಲಕ್ಷಣಗಳನ್ನು ವಿವರಿಸುತ್ತ, ಅವನು ಭಕ್ತಿ, ವೈರಾಗ್ಯ, ಅಭ್ಯಾಸ, ಧ್ಯಾನ, ಏಕಾಂತವಾಸ, ಭಿಕ್ಷಾಟನ, ಲಿಂಗಪೂಜೆ, ಸ್ಮರಣ–ಎಂಬ ಅಷ್ಟಾಂಗಗಳನ್ನು ಅನುಸರಿಸಬೇಕೆಂದು ಬೋಧಿಸಲಾಗಿದೆ. ಈ ಅಷ್ಟಾಂಗ ಪ್ರಧಾನವಾದ ಶಿವಯೋಗವು ಶಿವನೊಡನೆ ಕೂಡಿಕೊಂಡಿರುವ ನಿಲವನ್ನು ತಿಳಿಸುತ್ತದೆ. ಶಿವಲಾಂಛನಧಾರಿಗಳಾಗಿ ಲಿಂಗಾರ್ಚನೆಯಲ್ಲಿ ನಿರತರಾದವರಿಗೆಲ್ಲ ಶಿವಯೋಗಿಗಳೆಂದೂ ದಾಂಪತ್ಯಜೀವನವನ್ನು ಪಾಲಿಸುತ್ತಿದ್ದ ಶಿವಯೋಗಿಯ ಪತ್ನಿಗೆ ಶಿವಯೋಗಿನಿ ಎಂದೂ ಸಂಬೋಧಿಸಲಾಗುತ್ತಿತ್ತು[6]. ಐಹಿಕ ಹಾಗೂ ಆಮುಷ್ಮಿಕ ಫಲಪ್ರದವಾದ ಶಿವಸಾಕ್ಷಾತ್ಕಾರವನ್ನು ಪಡೆಯುವದೇ ಆಗಮ ಕಾಲದ ಶಿವಯೋಗಿಗಳ ಧ್ಯೇಯವಾಗಿತ್ತು. ಜ್ಞಾನ ಹಾಗೂ ಯೋಗದ ಸಿದ್ಧಿಗಾಗಿ ಅಂತರಂಗ ಬಹಿರಂಗ ಶುದ್ಧಿಯನ್ನು ಸಂಪಾದಿಸಲು ತಪ, ಕರ್ಮ, ಜಪ, ಧ್ಯಾನ, ಜ್ಞಾನವೆಂಬ ಪಂಚವಿಧ ಸಾಧನೆಯಲ್ಲಿ ಅವರು ನಿರತರಾಗುತ್ತಿದ್ದರು[7] ಹಾಗೂ ಷಟ್‌ಸ್ಥಲ ಸಿದ್ಧಾಂತದ ಸಾಧನೆ ಸಿದ್ಧಿಗಳಲ್ಲಿ ಗಮನವಿರಿಸುತ್ತಿದ್ದರು. ಅವರು ಪೂಜಿಸುವ ಲಿಂಗವೇ ಇಷ್ಟಲಿಂಗವಾಯಿತು; ಅದು ಪ್ರಾಣದಷ್ಟು ಪ್ರಿಯವಾದುದರಿಂದ ಪ್ರಾಣಲಿಂಗವಾಯಿತು. ಇಂಥ ಶಿವಯೋಗಿಗಳ ಆಚರಣೆ, ಜ್ಞಾನ, ಸಾಧನೆ, ಆಧ್ಯಾತ್ಮದ ನಿಲವನ್ನು ಕಂಡು ಅವರಿಗೆ ಅವಧೂತ, ಸಂನ್ಯಾಸಿ, ಯೋಗಿ, ಪಾಶುಪತ, ಶಿವ, ಲಿಂಗಿ, ವೀರ, ವೀರಶೈವ, ಯತಿ ಎಂದು ಕರೆವ ಸಂಪ್ರದಾಯಗಳು ನಾಡಿನಲ್ಲಿ ರೂಢವಾಗಿದ್ದವು[8].

ಕನ್ನಡನಾಡಿನಲ್ಲಿ ಇದ್ದಂತೆ ತಮಿಳುನಾಡಿನಲ್ಲಿಯೂ ಅನೇಕ ಶಿವಯೋಗಿಗಳಿದ್ದರೆಂಬುದು ಅಲ್ಲಿ ಪ್ರಚಲಿತವಾಗಿದ್ದ ಶೈವ ಸಿದ್ಧಾಂತ ಪರಂಪರೆಯ ಐತಿಹ್ಯದಿಂದ ಗೊತ್ತಾಗುತ್ತದೆ. ಅಧ್ಯಾತ್ಮಪರವಾದ ಉದ್ಗ್ರಂಥಗಳಲ್ಲಿ ಅಂದು ತಿಳಿವಳಿಕೆಯಲ್ಲಿದ್ದ ಶಿವಯೋಗದ ಸ್ವರೂಪವು ವಿದಿತವಾಗುತ್ತದೆ. ಆ ನಾಡಿನ 'ತಿರುಮುಲರ್' (ಕ್ರಿ.ಶ. ೫ನೆಯ ಶತಮಾನ) ಎಂಬ ಅನುಭಾವಿಯು ಉನ್ನತ ನಿಲವಿನ ಶಿವಯೋಗಿ ಎಂದು ಪ್ರಖ್ಯಾತನಾಗಿ, 'ತಿರುಮಂತಿರಮ್' ಎಂಬ ತಂತ್ರಗ್ರಂಥವನ್ನು ರಚಿಸಿದನು[9]. ಈ ಗ್ರಂಥದ ಮೂರನೆಯ ಭಾಗವು ಪತಂಜಲಮಹರ್ಷಿ ನಿರೂಪಿಸಿದ ಅಷ್ಟಾಂಗಯೋಗಕ್ಕಿಂತ ಭಿನ್ನ ಹಾಗೂ ವಿಶಿಷ್ಟವಾದ ಯೋಗಮಾರ್ಗವನ್ನು ವಿವರಿಸುತ್ತದೆ. ಅದು ಶಿವಯೋಗವೆಂದು ಪ್ರಚುರವಾಗಿದೆ. ತಿರುಜ್ಞಾನ ಸಂಬಂಧರ್ ಎಂಬ ಇನ್ನೊಬ್ಬ ತಮಿಳುನಾಡಿನ ಅನುಭಾವಿಯು ಬಾಲ್ಯದಿಂದಲೇ ಸಿದ್ಧಶಿವಯೋಗಿಯಾಗಿದ್ದನಂತೆ[10].

ಸಾಹಿತ್ಯಕ್ಷೇತ್ರದಲ್ಲಿ ಮೊಟ್ಟಮೊದಲಿನದಾದ ವೈದಿಕಸಾಹಿತ್ಯದಲ್ಲಿ 'ಯೋಗ' ಎಂಬ ಶಬ್ದದ ಪ್ರಯೋಗವು ಕಂಡುಬರುತ್ತದೆ. ಅಲ್ಲಿ ಈ ಶಬ್ದವು 'ಕೂಡು' 'ಕೂಡುವಿಕೆ' 'ಇಷ್ಟ ವಸ್ತುವಿನ ಪ್ರಾಪ್ತಿ' 'ಒಂದುಗೂಡಿಸು'–ಎಂಬ ಅರ್ಥವನ್ನು ಕೊಡುತ್ತದೆ.[11] ಆದರೆ ಯೋಗಶಾಸ್ತ್ರಕ್ಕೆ ಮೀಸಲಾದ ಗ್ರಂಥಗಳಲ್ಲಿ ಕಂಡುಬರುವ 'ಯೋಗ' ಪದದ ಅರ್ಥ ವೇದಗಳಲ್ಲಿಲ್ಲ. ಋಗ್ವೇದದ ಒಂದು ಸೂಕ್ತವು ಮಾತ್ರ ಏಳು ಜನ ಮುನಿಗಳ ಲಕ್ಷಣಗಳನ್ನು ವರ್ಣಿಸುತ್ತದೆ ಅಷ್ಟೆ! ಅಥರ್ವಣ ವೇದದ ಯಾವ ಭಾಗದಲ್ಲಿಯೂ ಯೋಗವೆಂಬ ಶಬ್ದದ ನೇರವಾದ ಉಪಯೋಗ ಕಂಡುಬರುವದಿಲ್ಲ. ಆದರೂ ಅಲ್ಲಿ ತ್ಯಾಗಿಯ ತಪಸ್ಸಿನಿಂದ ಅಣಿಮಾದಿ ಸಿದ್ಧಿಗಳು (Supernatural powers)[12] ಪ್ರಾಪ್ತವಾಗುತ್ತವೆ ಎಂದು ಹೇಳಲಾಗಿದೆ. ವೇದ ಸಾಹಿತ್ಯದ ಕೊನೆಗೆ ಬರುವ ಶತಪಥ ಬ್ರಾಹ್ಮಣದಲ್ಲಿ[13] ಮತ್ತು ಅರಣ್ಯಕೋಪನಿಷತ್ತುಗಳಲ್ಲಿ ಯೋಗ ಪದದ ಸ್ಪಷ್ಟ ಉಲ್ಲೇಖವಿದೆ. ಶಿವಾಗಮಗಳಲ್ಲಿ ಅನೇಕ ಸಲ ಈ ಪದ ಕಾಣಿಸಿಕೊಂಡಿದೆ.

ಯೋಗಶಾಸ್ತ್ರದ ದೃಷ್ಟಿಯಲ್ಲಿ 'ಯೋಗ' ಎಂಬ ಪದ 'ಯುಜ್–ಸಮಾಧೌ' ಎಂಬ ಧಾತುವಿನಿಂದ ನಿಷ್ಪನ್ನವಾಗಿದ್ದು, ಅದು ಎರಡು ವಸ್ತುಗಳ ಸಂಯೋಗ, ಕೂಡುವಿಕೆಯನ್ನು ಸೂಚಿಸುತ್ತದೆ. ಯೋಗ ಶಬ್ದದ ನಿಷ್ಪತ್ತಿಯೇ ಸೂಚಿಸುವಂತೆ ಎಲ್ಲ ಯೋಗಗಳ ಆತ್ಯಂತಿಕ ಗುರಿ ಒಂದೇ ತೆರನಾಗಿದೆ. ಆಂತರಿಕ ಅನುಸಂಧಾನ ಕ್ರಮದಲ್ಲಿ ತೋರುವ ಕೆಲವು ವ್ಯತ್ಯಾಸಗಳಿಂದ ಯೋಗ ಮಾರ್ಗದಲ್ಲಿ ಪ್ರಭೇದಗಳನ್ನು ಕಲ್ಪಿಸಲಾಗಿದೆ. ಏಕಾಕ್ಷರ, ದ್ವ್ಯಕ್ಷರ, ಪಂಚಾಕ್ಷರ. ಷಡಕ್ಷರ ಮೊದಲಾದ ಮಂತ್ರಗಳನ್ನು ಪಠಿಸುತ್ತ ವೈಖರೀವಾಣಿ, ಪರಾವಾಣಿಗಳನ್ನು ಸಮನ್ವಯಗೊಳಿಸಿ ಪರಾವಾಕ್ ಸಿದ್ಧಿಯನ್ನು ಮಂತ್ರಯೋಗಿಗಳು ಸಾಧಿಸುವರು. ನಾದ ಬಿಂದುಗಳನ್ನು ಒಂದುಗೂಡಿಸಿ ಮನ–ಮಾರುತಗಳ ಉಲುಹನ್ನು ಅಡಗಿಸಿ ನಾದಾತೀತ ಸ್ಥಿತಿಯನ್ನು ಲಯಯೋಗಿಗಳು ಪಡೆವರು. ಅಷ್ಟಾಂಗಯೋಗ ಮಾರ್ಗದಿಂದ ಹಾಗೂ ಮುದ್ರಾಕರಣಗಳ ಸತತಾಭ್ಯಾಸದಿಂದ ಪ್ರಾಣಾಪಾನಗಳನ್ನು ತಮ್ಮ ಅಂಕಿತಕ್ಕೆ

---

6. ಪಾರಮೇಶ್ವರ ತಂತ್ರ, IV-೭.
7. ಪಾರಮೇಶ್ವರ ತಂತ್ರ XII, ೧೩, ೧೪.
8. ಪಾರಮೇಶ್ವರ ತಂತ್ರ X, ೬೬-೬೭
9. Dr. V. V. Ramana Sastri: Introduction to Tirumantiram, P. 5-8.
10. V. Paranjoti: 'Saiva Siddhanta' P. 28-30.
11. ಋಗ್ವೇದ I. ೫-೩, I. ೩೪-೯, III. ೨೭-೧೧, IV. ೨೪-೪, VII. ೬೭-೮, X. ೧೧೪-೯.
12. ಅಥರ್ವಣ ವೇದ II, ೭.
13. ಶತಪಥ ಬ್ರಾಹ್ಮಣ XIV. ೭-೧-೧೧.

ತಂದು ಪ್ರಾಣಶಕ್ತಿಯ ಅನರ್ಘ್ಯ ಚೈತನ್ಯಸ್ವರೂಪವನ್ನು ಹಠಯೋಗಿಗಳು ಅನುಭವಿಸುವರು. ಇಡಾ--ಪಿಂಗಳಾ ನಾಡಿಗಳನ್ನು ಅಥವಾ ಚಂದ್ರ ಸೂರ್ಯರನ್ನು ಒಂದುಗೂಡಿಸಿ ಸುಷುಮ್ನಾನಾಳವನ್ನು ಜಾಗೃತಗೊಳಿಸಿ ದೃಷ್ಟಿಸಿದ್ಧಿ ಪಡೆದು ಕೊನೆಯಲ್ಲಿ ಪರಮನಿರ್ವಾಣಪದವನ್ನು ರಾಜಯೋಗಿಗಳು ಸಂಪಾದಿಸುವರು. ಜೀವ–ಪರಮರ, ಅಂದರೆ ಅಂಗ–ಲಿಂಗರ ಅವಿನಾಭಾವ ಸಾಮರಸ್ಯವನ್ನು ಶಿವಯೋಗಿಗಳು ಹೊಂದುವರು. ಈ ವಿವಿಧ ಮಾರ್ಗಗಳನ್ನು ಅನುಸರಿಸಿದ ಯೋಗಿಗಳಿಗೆಲ್ಲ ಶಿವನೇ ಆರಾಧ್ಯವಸ್ತು.

ಶಿವಾಗಮಗಳಲ್ಲಿ ವರ್ಣಿಸಲಾದ ಅಷ್ಟಾಂಗದ ಕಲ್ಪನೆ, ಷಟ್‌ಸ್ಥಲ ಸಿದ್ಧಾಂತ ಹಾಗೂ ಗುರು–ಲಿಂಗ–ಜಂಗಮ–ಶಿವಯೋಗ ಮೊದಲಾದ ಪದಪ್ರಯೋಗಗಳನ್ನು ಬಳಸಿಕೊಂಡು ೧೨ನೆಯ ಶತಮಾನದ ಶಿವಶರಣರು ತಮ್ಮದೇ ಆದ ನವೀನ ಆಧ್ಯಾತ್ಮಪಥವನ್ನು ನಿರ್ಮಿಸಿಕೊಂಡರು. ಎಲ್ಲ ಆಗಮಪದಗಳಲ್ಲಿ ಅವರು ಅನುಭಾವಾತ್ಮಕವಾದ, ವ್ಯಾಪಕವಾದ ಅರ್ಥವೈಭವವನ್ನೂ, ಹೊಸ ರೀತಿಯ ಆಧ್ಯಾತ್ಮ ಸಂಪತ್ತಿಯ ಮೆರುಗನ್ನೂ ಕಂಡರು. ಆಗಮಕಾರರ ಅಷ್ಟಾಂಗಮಾರ್ಗವನ್ನು ಷಟ್‌ಸ್ಥಲದಲ್ಲಿ ಬಳಸಿಕೊಂಡರು. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳನ್ನು ಅಷ್ಟಾಂಗದ ಪೂರ್ವಭಾಗವೆಂದೂ, ಧ್ಯಾನ–ಧಾರಣ–ಸಮಾಧಿಗಳನ್ನು ಉತ್ತರ ಭಾಗವೆಂದೂ ಪರಿಗಣಿಸಿ, ಉತ್ತರ ಭಾಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟರು. ಹೀಗೆ ಶಿವಶರಣರಿಗೆ ಷಟ್‌ಸ್ಥಲಸಿದ್ಧಾಂತವು ಸಾಧನಾಪಥವಾದರೆ, ಶಿವಯೋಗ ಇಲ್ಲವೆ ಲಿಂಗಾಂಗಸಾಮರಸ್ಯ ಪರಮಸಿದ್ಧಿಯಾಯಿತು. ಶಿವಶರಣನು ಪಡೆದ ಲಿಂಗಾಂಗಸಾಮರಸ್ಯ, ಆಗಮ ಪರಂಪರೆಯ ಶಿವಯೋಗಿಯು ಪಡೆವ ಸಾಮರಸ್ಯ ತೀರಭಿನ್ನವಾಗಿದೆ. ಪ್ರತಿಯೊಂದು ಆಗಮದ ನಾಲ್ಕುಪಾದಗಳನ್ನು ಅವಲೋಕಿಸಿದರೆ ಅಲ್ಲಿಯ ವೀರಶೈವ ಪ್ರಭೇದ ಶೈವಮಹಾವೃಕ್ಷದ ಕೊಂಬೆಯಾಗಿ ೧೨ನೆಯ ಶತಮಾನದಲ್ಲಿ ಚಿಗುರೊಡೆದಿದೆ ಎಂದು ಅರಿಯಬಹುದು[14].

ಶಿವಶರಣನು ಪ್ರತಿನಿತ್ಯ ಆಚರಿಸಬೇಕಾದ ಭಕ್ತಿಯುತವಾದ ಪೂಜೆಯೆ ಶಿವಯೋಗವಾಗಿ ಮಾರ್ಪಡುತ್ತದೆ. ಶಿವಪೂಜೆಯು ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗಗಳನ್ನು ಸಹಜವಾಗಿ ಗರ್ಭೀಕರಿಸಿಕೊಂಡು ಶಿವಯೋಗವಾಗುತ್ತದೆ; ಲೌಕಿಕ-ಪಾರಮಾರ್ಥಿಕ ಜೀವನಗಳ ನಡುವಿನ ಸೇತುವೆಯಾಗುತ್ತದೆ. ಶರಣನು ಮಾಡುವ ನಿತ್ಯ ಲಿಂಗಾರ್ಚನೆ ಕ್ರಿಯಾ-ಭಕ್ತಿ-ಜ್ಞಾನಗಳಿಂದ ಕೂಡಿಕೊಂಡಿರುವುದರಿಂದ ಶಿವಯೋಗದ ಬಗೆಗೆ ಚೆನ್ನಬಸವಣ್ಣನು ಹೀಗೆ ಹೇಳುತ್ತಾನೆ:

> 'ಮಂತ್ರಯೋಗ, ಹಠಯೋಗ, ಲಯಯೋಗ, ಜ್ಞಾನಯೋಗ
> ಇಂತೀ ಎಲ್ಲಾ ಯೋಗವನರಿದು ಮರೆದು
> ಭಕ್ತಿಯೋಗದ ಮೇಲೆ ನಿಂದು;
> ರಾಜಯೋಗದ ಮೇಲೆ ನಡೆವ ನುಡಿವ ಕಾಣಿರೊ !'[15]

ಇಲ್ಲಿ 'ರಾಜಯೋಗದ ಮೇಲೆ' ಎಂದಡೆ ಶಿವಯೋಗ. ಶಿವಯೋಗ ಸಾಧಕನು ಎಲ್ಲ ಯೋಗಗಳನ್ನರಿದು ಮತ್ತೆ ಮರೆದು ಭಕ್ತಿಯನ್ನಾಶ್ರಯಿಸಿ ರಾಜಯೋಗದ ನಂತರ ಮೆರೆವ ಶಿವಯೋಗವನ್ನು ಹೊಂದಬೇಕೆಂಬ ಧ್ವನಿ ಈ ವಚನದಲ್ಲಿದೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿ ಸುಪ್ತವಾಗಿರುವ, ಭಕ್ತಿಗೆ ಮೂಲವಾಗಿರುವ ಭಾವನಾಶಕ್ತಿ, ಕ್ರಿಯೆಗೆ ಮೂಲವಾಗಿರುವ ಕ್ರಿಯಾಶಕ್ತಿ, ಜ್ಞಾನಕ್ಕೆ ಮೂಲವಾಗಿರುವ ಜ್ಞಾನಶಕ್ತಿಗಳನ್ನು ಜಾಗ್ರತಗೊಳಿಸಿ ಈ ಎಲ್ಲ ಶಕ್ತಿಗಳ ಸಮತೂಕದ ವಿಕಾಸಕ್ಕೆ, ಈ ಎಲ್ಲ ಯೋಗಗಳ ಸಮನ್ವಯದ ವಿಲಾಸಕ್ಕೆ ಶಿವಯೋಗದಲ್ಲಿ ಅವಕಾಶವಿದೆ. ಷಟ್‌ಸ್ಥಲಾನುಸಂಧಾನದಿಂದ ಕ್ರಿಯಾಶುದ್ಧಿ, ಜ್ಞಾನಶುದ್ಧಿ, ಭಾವಶುದ್ಧಿಗಳುಂಟಾಗಿ ಸಮ್ಯಕ್‌ಜ್ಞಾನವು ಅಳವಟ್ಟು ನಿರ್ಮಲಸಮಾಧಿಯನ್ನು ಸಾಧಿಸುವುದೇ ಶಿವಯೋಗದ ಆತ್ಯಂತಿಕ ಗುರಿ.

ಪರಶಿವನ ಲೀಲೆಯಿಂದ ಆತ್ಮನಿಗೆ ತನು ಸಂಬಂಧವಾದೊಡನೆ ಪ್ರಾಣ ಸಂಚಾರವೂ ಅಲ್ಲಿ ಕಾಣಿಸಿಕೊಳ್ಳುತ್ತದೆ. ಆತ್ಮ ಪ್ರಾಣಗಳೊಡನೆ ತಾದಾತ್ಮ್ಯ ಸಂಭವಿಸಿ ಮನವೆಂಬ ಘಟಕ ಉದಿಸಿ ಬರುತ್ತದೆ. ಆತ್ಮ ಪರಮಾತ್ಮರ ಸಾಮರಸ್ಯವನ್ನು ಸಂಪಾದಿಸಲು ಪರಶಿವನಿಂದ ಹೊರಹೊಮ್ಮಿದ ಈ ಸೃಷ್ಟಿಯೂ ಅವಶ್ಯ ; ಆತ್ಮನನ್ನು ಸುತ್ತಿಕೊಂಡ ದೇಹವೂ ಅವಶ್ಯ[16]. ಪ್ರಾಕೃತಿಕ ದೇಹ ಸ್ವರೂಪ ಅಲ್ಲಿ ಸಂಚರಿಸುವ ಪ್ರಾಣ, ಅಲ್ಲಿ ಗೋಚರಿಸುವ ಮನ—ಇವುಗಳ ಅಸ್ವಸ್ಥಸ್ಥಿತಿ ಜೀವ-ಪರಮರ ಸಾಮರಸ್ಯ ಸುಖಕ್ಕೆ ಆತಂಕವನ್ನೊಡ್ಡುತ್ತದೆ ಎಂಬುದು ಶಿವಯೋಗಿಗಳ ಅನುಭವ. ಮನಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. ಆದರೆ ಪ್ರಾಣ ಮಾತ್ರ ತನುವಿಗೆ ಮುಖ್ಯ ಆಧಾರ. ಅಂತೆಯೆ ಸಾಧನಾಕ್ರಮದಲ್ಲಿ ಪ್ರಾಣಕ್ಕೆ ಮಹತ್ವದ ಪಾತ್ರವಿದೆ. ಮಾನವನ ಪ್ರಾಣವು ಅನೇಕ ಕಾರಣಗಳಿಂದ ತಾಳ–ಲಯ ಬದ್ಧವಾಗಿರುವದಿಲ್ಲ. ಇದರಿಂದ ಮನವೂ ದೋಷಯುಕ್ತವಾಗಿ ಜೀವಾತ್ಮನಲ್ಲಿ ಬಗೆಬಗೆಯ ಬಯಕೆಗಳು, ವಾಸನೆಗಳು ಸಂಸ್ಕಾರರೂಪವಾಗಿ ಮೂಡಿಬರುತ್ತವೆ. ಅವು ಅರಿಷಡ್ವರ್ಗ, ಸಪ್ತವ್ಯಸನ, ಅಷ್ಟಮದ ಇತ್ಯಾದಿ

---

14. ಪರಮಯೋಗ ಮಂತ್ರಗೋಪ್ಯ-ಪೀಠಿಕೆ ಸಿ.ಸಾ. ಸಂಗ್ರಹ, ಪುಟ ೧೧೫
15. ಚೆನ್ನಬಸವಣ್ಣನವರ ವಚನಗಳು-೧೪೫೬ (ಕ.ವಿ.ವಿ. ಪ್ರಕಟನೆ)
16. ಬಸವಣ್ಣನವರ ವಚನಗಳು-೭೭೪ (ಕ.ವಿ.ವಿ. ಪ್ರಕಟನೆ)

ಅಮಂಗಳಗುಣಗಳ ಜಾಲದಿಂದ ಮಾನವನನ್ನು ಬಂಧಿಸುತ್ತವೆ. ಅದರಿಂದ ಸ್ವಸ್ವರೂಪ ವಿಸ್ಮೃತಿಯೂ ಸಂಭವಿಸುತ್ತದೆ. ಜೀವನಿಗೆ ಒಮ್ಮೆ ಸಮ್ಯಕ್‌ಜ್ಞಾನ ಜಾಗ್ರತವಾಯಿತೆಂದರೆ ತನ್ನಲ್ಲಿ ಸುಪ್ತವಾಗಿರುವ ಶುದ್ಧ ಶಿವತತ್ವವನ್ನು ಜಾಗ್ರತಗೊಳಿಸಿ ಕೊಂಡು, ಸಾಕ್ಷಾತ್ಕಾರ ಪಡೆದು ಪರಮಾತ್ಮತತ್ವದಲ್ಲಿ ಬೆರೆತು ಬೇರಿಲ್ಲದಂತೆ ಇರಬೇಕೆಂಬ ಇಚ್ಛೆ ತಲೆದೋರುವದು. ಈ ಜ್ಞಾನಾಗ್ನಿ ಹೊತ್ತಿ ಉರಿಯುತ್ತಿರಲು ಎಂದೆಂದಿಗೂ ಅವಿದ್ಯೆ ಮುಸಕಬಾರದೆಂದು ಮತ್ತು ನಿರಂತರ ಸಾಮರಸ್ಯ ಸುಖ ಸಾಧ್ಯ ವಾಗಬೇಕೆಂದು ಜೀವಾತ್ಮನು ಶಿಷ್ಯಭಾವದಿಂದ ಅರುವಿನ ಮಹಾಂತನಾದ ಶ್ರೀಗುರುವಿನ ಕಾರುಣ್ಯಕ್ಕೆ ಹಂಬಲಿಸುತ್ತಾನೆ :–

'ಆವಾವ ಭಾವದಲ್ಲಿ ನಿಮ್ಮನಲ್ಲದೆ ನಾನಱಿಯದಿದ್ದೆನಯ್ಯಾ ದೇವಾ, ದೇವಾ ಕಾಯಯ್ಯಾ, ಕಾಯಯ್ಯಾ,
ಕರುಣಿ, ಕರುಣಿ ಕೃಪಾವಲ್ಲಭ ಗುರುವೆ ಕಪಿಲಸಿದ್ಧ ಮಲ್ಲಿನಾಥಯ್ಯ'[17]

ಶಿವಯೋಗ ಸಾಧನೆಯಲ್ಲಿ ಸದ್ಗುರುವಿನ ಸ್ಥಾನ ಗುರುತರವಾದುದು.. ಶ್ರೀಗುರು ತನ್ನ ಶಿವಯೋಗ ಸಾಮರ್ಥ್ಯದಿಂದ ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿರಿಸಿ ಸಹಸ್ರದಳ ಕಮಲದಲ್ಲಿ ಅವ್ಯಕ್ತವಾಗಿ ಅವಿತುಕೊಂಡಿರುವ ಚಿತ್ಕಳೆಯನ್ನು ಜಾಗ್ರತ ಗೊಳಿಸುತ್ತಾನೆ. ಆ ಶಿವಕಳೆಯನ್ನು ಭಾವಕ್ಕೆ ಭಾವಲಿಂಗವಾಗಿ, ಭಾವದಿಂದ ಮನಕ್ಕೆ ಪ್ರಾಣಲಿಂಗವಾಗಿ, ಮನದಿಂದ ದೃಷ್ಟಿಗೆ ಇಷ್ಟಲಿಂಗವಾಗಿ ಅವತರಿಸಿ ಶಿಷ್ಯನ ಕರಸ್ಥಲದಲ್ಲಿ ಇರಿಸುತ್ತಾನೆ[18]. ಮಂತ್ರದೀಕ್ಷೆಯಿಂದ ಲಿಂಗರಹಸ್ಯವನ್ನು ಶಿಷ್ಯನ ಕರ್ಣದಲ್ಲಿ ಅರುಹುತ್ತಾನೆ. ಶಿವಯೋಗದ ಸಕೀಲವನ್ನು ತಿಳಿಸಿ ಈ ಯೋಗದ ಹೊಲಬು 'ಶಕ್ತಿಸಂಪುಟ'ವಾಗಿಪ್ಪುದೆಂದು ನಿರೂಪಿಸುತ್ತಾನೆ. ಇಂತು ಭಾವಸಂಸ್ಕಾರ ಹೊಂದಿದ ಸಾಧಕನಿಗೆ ಅರುಹಿನ ಕುರುಹಾಗಿ ಇಷ್ಟಲಿಂಗ ದೊರಕುತ್ತದೆ. ಆಗ ಆತನು ಲಿಂಗಾನುಸಂಧಾ ನಕ್ಕೆ ಯೋಗ್ಯನಾಗುತ್ತಾನೆ.

ವೀರಶೈವ ಶಿವಯೋಗಿಗಳ ಲಿಂಗಾಂಗಸಾಮರಸ್ಯ ಸಂಬಂಧವನ್ನು ಕುರಿತು ಶಿವಯೋಗ ಪ್ರದೀಪಿಕೆ ಐದು ಬಗೆಯಾಗಿ ತಿಳಿಸುತ್ತದೆ :–

ಜ್ಞಾನಂ ಶಿವಮಯಂ ಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ ।
ಶೈವಂ ಮಂತ್ರಂ ಶಿವಾರ್ಚೇತಿ ಶಿವಯೋಗೋ ಹಿ ಪಂಚಧಾ ॥

ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವಮಂತ್ರ—ಎಂಬ ನಾಲ್ಕು ಬಗೆಯ ಅನುಸಂಧಾನವನ್ನು ಕೂಡಿಕೊಂಡಿರುವ ಇಷ್ಟಲಿಂಗ ಪೂಜೆಯ ಮುಖ್ಯ ಸಾಧನ-ಗುರಿ. ಶಿವಯೋಗ ಇಲ್ಲವೆ ಲಿಂಗಾನುಸಂಧಾನವು ಜ್ಞಾನ, ಭಕ್ತಿ, ಧ್ಯಾನ, ಜಪಗಳನ್ನು ಗರ್ಭೀಕರಿಸಿ ಕೊಂಡು ನಿರಂತರವಾಗಿ ಅವ್ಯಾಹತವಾಗಿ ಸಾಗುತ್ತದೆ[19]. ಶಿವಯೋಗಾನುಸಂಧಾನ ಇಷ್ಟಲಿಂಗದ ಮೇಲಿರಿಸಿದ ಅನಿಮಿಷ ದೃಷ್ಟಿ ಯಿಂದಲೆ ಆರಂಭವಾಗುತ್ತದೆ. ಇಷ್ಟಲಿಂಗಪೂಜೆ ಅನುಸಂಧಾನಗಳಿಗೆ ನಿರ್ನಿಮೇಷ ನೋಟವೇ ಮೂಲಸೂತ್ರ. ಎದೆ, ಕುತ್ತಿಗೆ, ತಲೆ–ಇವುಗಳನ್ನು ನೇರವಾಗಿರಿಸಿ ಆಸನಾರೂಢನಾಗಿರಬೇಕು. ದೃಷ್ಟಿಸ್ಥಿರತೆಯಿಂದ ಪ್ರಾಣವಾಯುವಿನ ಸಂಚಾರವು ನಿಧಾನವಾಗಿ ಸುಸ್ಥಿರಗೊಳ್ಳುವದು : ಚಂಚಲಮನವೂ ನಿಶ್ಚಲಗೊಳ್ಳುವದು. ನಿಸ್ತರಂಗ ಸಮುದ್ರದ ಆಳದಂತೆ ಮನವು ಸ್ತಬ್ಧಗೊಳ್ಳಲು, ಕರ ಸ್ಥಲದ ಲಿಂಗವು ಮನೋವೇದ್ಯವಾಗಿ, ಪ್ರಾಣಲಿಂಗ ಭಾವಲಿಂಗಗಳಾಗಿ, ಸಾಧಕನಲ್ಲಿ ಆತ್ಮಶಕ್ತಿಯು ಜಾಗೃತವಾಗುವುದು. ಅದ ರಿಂದ ಕರ್ಮ ನಾಶವಾಗಿ, ಜನನ–ಮರಣಗಳ ಬಲೆ ಕಳಚಿಹೋಗಿ, ಮಾಯೆ ಮೋಹಗಳು ಹೇಳ ಹೆಸರಿಲ್ಲದೆ ತೊಲಗುವವು. ಪ್ರಪಂಚ ವಾಸನೆಗಳು ಸುಟ್ಟುಹೋಗುವವು. ಕವಿ ಚಾಮರಸನು ಇಂಥ ಶಿವಯೋಗ ಸಾಧನೆಯ ನೆಲೆ ಕಲೆಗಳನ್ನು ಕುರಿತು ಹೀಗೆ ಹೇಳುತ್ತಾನೆ :—

ಆಲಿ ನಿಂದಡೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದೊಡೆ ಬಿಂದು ನಿಂದಿಹುದು ।
ಲೀಲೆಯಿಂದಾ ಬಿಂದು ನಿಂದೊಡೆ
ಕಾಲ ಕರ್ಮವ ಗೆದ್ದು ಮಾಯೆಯು
ಹೇಳ ಹೆಸರಿಲ್ಲೆನಿಸಬಹುದೆ ಬಸವ ಕೇಳೆಂದ ॥[20]

ಅಂಗಯ್ಯ ನೋಟದೊಳು ಕಂಗಳು ನಟ್ಟು ತನು–ಮನ–ಭಾವಗಳೆಲ್ಲ ಲಿಂಗದ ದಿವ್ಯಪ್ರಭೆಯಿಂದ ಬೆಳಗುವ ಶರಣನ ನಿಲವನ್ನು, ಶಿವಯೋಗದ ಕಲೆಯನ್ನು ಸಿದ್ಧರಾಮ ಶಿವಯೋಗಿ ಹೀಗೆ ಕೊಂಡಾಡಿದ್ದಾನೆ :–

---

17. ಶ್ರೀ ಸಿದ್ಧರಾಮೇಶ್ವರ ವಚನ–೧೪೬
18. ಚನ್ನಬಸವಣ್ಣನವರ ವಚನಗಳು—೬೫, ೧೧೭೬, ೧೪೬೬; ಬಸವಣ್ಣನವರ ವಚನಗಳು—೮೧೪.
19. ಚನ್ನಬಸವಣ್ಣನವರ ವಚನಗಳು-೨೧೮(ಕ.ವಿ.ವಿ. ಪ್ರಕಟನೆ). 20. ಪ್ರಭುಲಿಂಗಲೀಲೆ XVIII.

ಅಂಗೈಯ್ಯ ನೋಟದೊಳು ಕಂಗಳು ನಟ್ಟು, ಕಂಗಳ ತೇಜ ಲಿಂಗದಲ್ಲಡಿತು,
ಲಿಂಗದ ಪ್ರಭೆಯೊಳಗೆ ಅಂಗವೆಲ್ಲ ಲೀಯವಾಗಿ, ಸಂಗ-ನಿಸ್ಸಂಗವೆಂಬ ದಂದುಗ ಹಱಿದು,
ಹಿಂದು ಮುಂದೆಂಬ ಭಾವವಳಿದು ನಿಂದ, ನಿಜದ ನಿರಾಳದಲ್ಲಿ ಪ್ರಾಣ ಸಮರತಿಯಾಗಿಪ್ಪ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ......21

ಭಕ್ತಿ–ಕ್ರಿಯಾ–ಜ್ಞಾನಗಳ ಸಂಗಮದಿಂದ ಶಿವಯೋಗಿಯು ಸಾಮರಸ್ಯದ ಸುಖವನ್ನು ಪಡೆಯುತ್ತಾನೆ. ತಾನೇ ಭಕ್ತ, ತಾನೇ ಲಿಂಗ, ತಾನೇ ಜಂಗಮವಾಗಿ, ತಾನೇ ಪೂಜ್ಯ, ತಾನೇ ಪೂಜಕನಾಗಿ ಮೆರೆಯುತ್ತಾನೆ. ಅಂತಃಪ್ರಕಾಶದ ಚಿದ್ಬೆಳಗಿನಿಂದ ಅಂಗಕರಣಂಗಳೆಲ್ಲ ಪಾರದರ್ಶಕವಾಗುತ್ತವೆ. ಶಿವಪ್ರಭೆ ತುಂಬಾ ತುಂಬಿ ಲಿಂಗಕಿರಣಗಳಾಗಿ ಹೊರಹೊಮ್ಮುತ್ತವೆ. ಶಿವಯೋಗಿಗೆ ಇಷ್ಟಲಿಂಗಪೂಜೆ ಅಷ್ಟೈಶ್ವರ್ಯವನ್ನು, ಪ್ರಾಣಲಿಂಗಪೂಜೆ ಅಖಂಡ ಚಿದೈಶ್ವರ್ಯವನ್ನು, ಭಾವಲಿಂಗಪೂಜೆ ನಿಜಾನಂದವಸ್ತು ಸ್ವರೂಪವನ್ನೂ ಒದಗಿಸುತ್ತದೆ21A. ಷಟ್‌ಚಕ್ರಗಳ ಅನುಸಂಧಾನದಿಂದ ಒದಗಬಹುದಾದ ಸಿದ್ಧಿಗಳು ಶಿವಯೋಗಿಗೆ ಮಂಗಲ ಗುಣಗಳ ಸಂಪಾದನೆಯಿಂದ ಲಭ್ಯವಾಗುತ್ತವೆ. ಕಾರಣ ಶಿವಯೋಗಿಯು ಆದಿಯಾದ ಪರಮಾತ್ಮತತ್ತ್ವವನ್ನು ಆಧಾರವೆಂದು ತಿಳಿವುದೇ ಆಧಾರಚಕ್ರ; ಆ ಪರಮಾತ್ಮತತ್ತ್ವವನ್ನು ಸದಾಕಾಲ ಕೂಡಿಕೊಂಡಿಪ್ಪುದೇ ಸ್ವಾಧಿಷ್ಠಾನ ಚಕ್ರ ; ಶುದ್ಧಜ್ಞಾನವೆಂಬ ಮಣಿಯ ಬೆಳಗಿನಲ್ಲಿಪ್ಪುದೆ ಮಣಿಪೂರಕಚಕ್ರ ; ಆಸೆಯಿಲ್ಲದುದೆ ಅನಾಹತಚಕ್ರ; ಅಲ್ಲ–ಅಹುದೆಂಬುದನು ಅತಿಗಳೆದ ಇರುವಿಕೆಯೆ ವಿಶುದ್ಧಿಚಕ್ರ ; ಸರ್ವಜೀವಂಗಳಲ್ಲಿ ದಯಾಮಯನಾಗಿರುವುದೇ ಆಜ್ಞಾಚಕ್ರ; ಈ ಎಲ್ಲ ದೈವೀಗುಣಪೂರ್ಣವಾಗಿಪ್ಪುದೇ ಶಿವಯೋಗ22.

ಶಿವಯೋಗಿಯ ಅರ್ಚನೆಗಾಗಿ ಶಿವಲಿಂಗವು ವಿಕಸಿತಗೊಂಡು ಆತ್ಮಶಕ್ತಿಯ ಕೇಂದ್ರಗಳೆನ್ನಿಸುವ ವಿವಿಧ ಚಕ್ರಗಳಲ್ಲಿ ಗೋಚರಿಸುತ್ತದೆ. ಯೋಗಸಾಧಕರೆಲ್ಲರೂ ಸಾಮಾನ್ಯವಾಗಿ ಷಟ್‌ಚಕ್ರಗಳನ್ನು ಗುರುತಿಸುತ್ತಾರೆ23. ತದನಂತರ ಬ್ರಹ್ಮರಂಧ್ರವೆನಿಸುವ ಸಹಸ್ರಾರಚಕ್ರವು ಶಿವನಿಂದೊಡಗೂಡಿದ ಶಕ್ತಿಗೆ ಆವಾಸಸ್ಥಾನವೆನ್ನಿಸಿದೆ. ವೀರಶೈವ ಶಿವಯೋಗಿಗಳು ನವಚಕ್ರಗಳನ್ನು ಗುರುತಿಸಿದ್ದಾರೆ. ಸಾಧನೆಯಲ್ಲಿ ಪಟುತ್ವ–ಉಗ್ರತೆಗಳು ಹೆಚ್ಚಾದಂತೆ ಅರಿವಿನ ಸೂಕ್ಷ್ಮಾತಿಸೂಕ್ಷ್ಮ ಕೇಂದ್ರಸ್ಥಾನಗಳನ್ನು ಗುರುತಿಸಲು ಅವಕಾಶವಿದೆ. ಸರ್ಪಭೂಷಣ ಶಿವಯೋಗಿಯ ಅನುಭವದಂತೆ ಪರವಸ್ತುವು ನವಚಕ್ರಗಳಲ್ಲಿ ಲಿಂಗಸ್ವರೂಪದಿಂದ ಕಂಗೊಳಿಸುತ್ತದೆ. ಸಾಧಕನನ್ನು ಅಂತಃಶಕ್ತಿಸಂಪನ್ನಗೊಳಿಸುತ್ತದೆ. ಮುಂದೆ ಪಶ್ಚಿಮಚಕ್ರದಲ್ಲಿ ಶಿವಯೋಗಿಯು ಉರಿ ಕರ್ಪುರ ಸಂಯೋಗದಂತೆ ಪರವಸ್ತುವಿನಲ್ಲಿ ಬೆರೆಯುವಂತಾಗುತ್ತದೆ24. ಶಿವಶರಣರ ವಚನಗಳಲ್ಲಿ ಅಣುಚಕ್ರ, ಅಣುಲಿಂಗ ಎಂಬ ಪದಗಳ ಬಳಕೆಯನ್ನು ಕಾಣುತ್ತೇವೆ. ಸಂಗನಬಸವೇಶ್ವರ ಎಂಬ ವಚನಕಾರನು ನವಚಕ್ರಗಳಲ್ಲಿ ಸ್ಥಾಪಿತವಾದ ನವಲಿಂಗಗಳ ಪೂಜಾ ಕ್ರಮವನ್ನು ವಿವರಿಸುತ್ತ ಕೊನೆಯಲ್ಲಿ ಅಣುಲಿಂಗದ ಬಗೆಗೆ ಹೀಗೆ ತಿಳಿಸುತ್ತಾನೆ :– 'ಅಣುಚಕ್ರವೆಂಬ ಪರಮ ಕೈಲಾಸ ಚಿದಾಕಾಶ ಮಂಡಲದ ವರ ಚೌಕಮಂಟಪದ ನವರತ್ನ ಖಚಿತ ಶೂನ್ಯಸಿಂಹಾಸನ ಪೀಠದಲ್ಲಿ ಮೂರ್ತಿಗೊಂಡಿರ್ಪ ಪರಾತ್ಪರ ನಿಜ ಜಂಗಮ ಪರಾತ್ಪರ ಸ್ವರೂಪ, ಸರ್ವಚೈತನ್ಯಾಧಾರ ಸ್ವರೂಪವಾದ ಅಣುಲಿಂಗ'. ಇದರಿಂದ ಸಹಸ್ರಾರ, ಶಿಖಾ ಪಶ್ಚಿಮ ಚಕ್ರಗಳಲ್ಲಿ ಪಡೆದ ಅನುಭಾವಕ್ಕೆ ಆಧಾರವಾದ ಬಚ್ಚಬರಿಯ ಬಯಲು ಅಣುಚಕ್ರವೆಂಬ ಸಂಕೇತವನ್ನು ಪಡೆದಂತಿದೆ. ಈ ಅರಿವಿನ ಕೇಂದ್ರ ಅನುಭಾವಗಮ್ಯ ಮಾತ್ರ. ನಿರಾಳಮಂತ್ರಗೋಪ್ಯವೆಂಬ ಅಪ್ರಕಟಿತ ವಚನದ ಕಟ್ಟಿನಲ್ಲಿ ಅಣುಚಕ್ರದ ಉಲ್ಲೇಖ ಹೀಗಿದೆ:–

'ಅಜ್ಞೆಯಚಕ್ರದಲ್ಲಿ ಪರಶಿವಜ್ಯೋತಿ, ಶಿಖಾಚಕ್ರದಲ್ಲಿ ಸ್ವಯಜ್ಞಾನ ಜ್ಯೋತಿ, ಪಶ್ಚಿಮಚಕ್ರದಲ್ಲಿ ನಿರಂಜನ ಜ್ಯೋತಿ, ಅಣುಚಕ್ರದಲ್ಲಿ ಪರಬ್ರಹ್ಮಜ್ಯೋತಿ ಇಂತು ದಶಚಕ್ರಂಗಳನರಿತು ನಿಶ್ಚಿಂತ ನಿರಾಕುಳನಾಗಿರ್ದ ನೋಡಾ, ಝೇಂಕಾರ ನಿಜಲಿಂಗ ಪ್ರಭುವೆ.'

ಷಣ್ಮುಖಸ್ವಾಮಿಯು ತನ್ನ (ಅಖಂಡೇಶ್ವರ ವಚನಗಳು) ಒಂದು ವಚನದಲ್ಲಿ ಚಕ್ರಗಳ ಆವಿರ್ಭಾವವನ್ನು ತಿಳಿಸುತ್ತ ಅಣುಚಕ್ರವೇ ಎಲ್ಲ ಚಕ್ರಗಳಿಗೆ ತಾಯಿ ಎಂಬರ್ಥದಲ್ಲಿ ಹೇಳಿದ್ದಾನೆ:–

ಬಚ್ಚಬರಿಯ ಬಯಲೊಳಗೊಂದು
ಅಚ್ಚ ಅಂಕುರ ಹುಟ್ಟಿ ಅಣುಚಕ್ರವೆನಿಸಿತ್ತು25.
ಆ ಅಣುಚಕ್ರದಿಂದಾಯಿತು ಪಶ್ಚಿಮಚಕ್ರ.

---

21. ಶ್ರೀ ಸಿದ್ಧರಾಮೇಶ್ವರ ವಚನಗಳು—೧೦೧೨.
21A. ಸ್ವತಂತ್ರ ಸಿದ್ಧಲಿಂಗೇಶ್ವರ ವಚನಗಳು-೨೯೩ ; ಚನ್ನಬಸವಣ್ಣನವರ ವಚನಗಳು—೧೦೮೭.
22. ಶ್ರೀ ಸಿದ್ಧರಾಮೇಶ್ವರ ವಚನಗಳು-೧೦೪೬, ಇದೇ ಬಗೆಯ ಇನ್ನೆರಡು ವಚನಗಳು-೧೨೯೩, ೧೨೯೪.
23. ಅಪ್ಪಣ್ಣನ ಮಂತ್ರಗೋಪ್ಯ, ಪದ್ಯ ೨-೭.
24. ಸರ್ಪಭೂಷಣ ಶಿವಯೋಗಿ-'ಕೈವಲ್ಯ ಕಲ್ಪವಲ್ಲರಿ' ಪುಟ ೮೨ (ಯೋಗ ಪ್ರತಿಪಾದನ ಸ್ಥಲ)
25. ಅಖಂಡೇಶ್ವರ ವಚನಗಳು ೧೧೧.

ಆ ಪಶ್ಚಿಮಚಕ್ರದಿಂದಾಯಿತು ಶಿಖಾಚಕ್ರ.
ಆ ಶಿಖಾಚಕ್ರದಿಂದಾಯಿತು ಬ್ರಹ್ಮಚಕ್ರ
ಆ ಬ್ರಹ್ಮಚಕ್ರದಿಂದಾಯಿತು ಆಜ್ಞಾಚಕ್ರ......

ಹೀಗೆ ಎಲ್ಲ ಚಕ್ರಗಳ ಅವರೋಹಣ ಕ್ರಮವನ್ನು ತಿಳಿಸಿ, ನಂತರ ಚಕ್ರಗಳ ಆರೋಹಣ ಕ್ರಮವನ್ನು ತಿಳಿಸುತ್ತ ಕೊನೆಗೆ ಪಶ್ಚಿಮ ಚಕ್ರ ಅಣುಚಕ್ರದಲ್ಲಡಗಿ. ಆ ಅಣುಚಕ್ರ ನಿರವಯದಲ್ಲಿ ಲಯವಾಗುವದೆಂದೂ ಶಬ್ದ ಮುಗ್ಧ ಸ್ಥಿತಿ ಅಲ್ಲಿ ಉಂಟೆಂದೂ ನಿರ್ದೇಶಿಸುತ್ತಾನೆ.

ಇಂತು ಅತೀಂದ್ರಿಯ ಬಲ ಹಾಗೂ ದಿವ್ಯದೃಷ್ಟಿಯನ್ನು ಸಂಪಾದಿಸಿಕೊಂಡಿದ್ದ ಶಿವಶರಣರು ಹಾಗೂ ತದನಂತರದ ಶಿವಯೋಗಿಗಳು ತಮ್ಮ ಷಟ್‌ಸ್ಥಲಾನುಸಂಧಾನದಲ್ಲಿ ಪ್ರಾಣಲಿಂಗಿ ಸ್ಥಲದಲ್ಲಿ ನಿಂತು ಪರಮಶಿವಯೋಗಿಗಳಾಗಿ ದಿವ್ಯಾನುಭವದ ವಚನಗಳನ್ನು ಹಾಡಿಕೊಂಡಿದ್ದಾರೆ. ಅವರು ಅನುಭವಿಸಿದ ದಿವ್ಯಾನುಭವಗಳು ಅಂತರಂಗದ ಸ್ಫುರಣಾತ್ಮಕ ಜ್ಞಾನದ ಅಮೃತ ಬಿಂದುಗಳು. ಶಿವಯೋಗಿಗಳು ತಮ್ಮ ದೇಹವನ್ನು ನಿರ್ದೇಹಿಯಾದ ಪರವಸ್ತುವಿಗೆ ಅರ್ಪಿಸಿ ನಿರ್ದೇಹಿಗಳಾದರು ; ಲಿಂಗಕ್ಕರ್ಪಿತವಾದ ಅವರ ಮನ ಲಿಂಗವಾಗಿ ಮನಲೀಯವಾಯಿತು; ಭಾವ ತೃಪ್ತಿಗರ್ಪಿತವಾಗಿ ಭಾವ ಬಯಲಾಯಿತು. ಹೀಗೆ ದೇಹ, ಮನ, ಭಾವಗಳಳಿದು ಪರಿಶುದ್ಧವಾದ ಅವರ ತನುತ್ರಯಗಳು ದೇವನ ಉಪಕರಣವಾದವು, ಶಿವಮಯವಾದವು. ಇದರಿಂದಾಗಿ ಶರಣರು ಚಿದಾಕಾಶದಲ್ಲಿ ಉದಿಸಿದ ಚಿತ್‌ಸೂರ್ಯನನ್ನು ಕಂಡರು[26], ಜ್ಞಾನಚಕ್ಷುವಿನಿಂದ ಪರಮಾರ್ಥ ಸಂಕೇತಗಳೆನ್ನಿಸುವ ವಿವಿಧ ಬಣ್ಣಗಳನ್ನು, ರೂಪು ವೈಚಿತ್ರ್ಯಗಳನ್ನು ಕಂಡರು[27], ಶಿವಯೋಗಿಗಳ ಅಂತರಂಗದ ಸದ್ವಾಸನೆ ಬಹಿರಂಗದಲ್ಲೂ ಸುಗಂಧವಾಗಿ ಗೋಚರಿಸಿತು. ನೆತ್ತಿಯೊಳಗಣ ಸುಧೆ ಪ್ರವಾಹವಾಗಿ ಹರಿದಿದೆ ; ದೈವೀ ಆನಂದ ಉಕ್ಕಿದೆ[28]. ಸಹಸ್ರಾರದಲ್ಲಿ ಶತಕೋಟಿ ಸೂರ್ಯರ ಪ್ರಭೆ ಬೆಳಗಿದೆ[29].

ಶಿವಯೋಗಿಯ ಪರಮೋಚ್ಚ ನಿಲವು–ಲಕ್ಷಣಗಳ ಬಗೆಗೆ ಸಿದ್ಧರಾಮ ಶಿವಯೋಗಿಯು ಸುವರ್ಣಭೂಮಿಕೆಯನ್ನಿತ್ತಿದ್ದಾನೆ. ಆಕಾಶದಂತೆ ನಿರಾಕಾರವೆನಿಸುವ ಪರಮಾತ್ಮತತ್ತ್ವವನ್ನು ತನ್ನ ಭಾವಘನತೆಯಿಂದ ಸಾಕಾರವಾಗಿ ಮಾಡಬಲ್ಲಾತನೆ ಯೋಗಿ, ಸಾಕಾರವನ್ನು ನಿರಾಕಾರವಾಗಿ ಪರಿವರ್ತಿಸ ಬಲ್ಲಾತನೇ ಯೋಗಿ. ನಿರಾಕಾರದಲ್ಲಿಯೂ ಬಯಲಿದೆ, ಸಾಕಾರದಲ್ಲಿಯೂ ಬಯಲಿದೆ. ಈ ಎರಡೂ ಬಯಲುಗಳನ್ನು ಸಮರಸಗೊಳಿಸಿ, ಪಾರಲೌಕಿಕ ಸ್ಥಿತಿಯಲ್ಲಿ ಉಳಿಯಬಲ್ಲಡೆ ಆತ ಶಿವಯೋಗಿ ಎಂದು ಶಿವಯೋಗಿಯ ಉಚ್ಚಸ್ಥಿತಿಯನ್ನು ಶರಣರು ತಿಳಿಸುತ್ತಾರೆ[30]. ಈ ಬಗೆಯ ಆತ್ಮನ ನಿಲವು ೧೨ನೆಯ ಶತಮಾನದ ಅಲ್ಲಮ ಪ್ರಭುವಿಗೆ ಸಾಧ್ಯವಾಗಿತ್ತು. ಅವನು ಬಯಲುಗ, ಬಯಲಶರೀರಿ, ವ್ಯೋಮಮೂರುತಿಯಾಗಿದ್ದನೆಂದು ಆತನ ಸಮಕಾಲೀನ ಶರಣರು ಹಾಗೂ ನಂತರದ ಚಾಮರಸಾದಿ ಕವಿಗಳು ಉಲ್ಲೇಖಿಸಿದ್ದಾರೆ.

---

26. ಶ್ರೀ ಸಿದ್ಧರಾಮೇಶ್ವರ (ಸಂಕೀರ್ಣ ತ್ರಿವಿಧಿ) ೮೨.
27. ಶ್ರೀ ಸಿದ್ಧರಾಮೇಶ್ವರ ವಚನಗಳು-೧೧೦೨, ೧೧೦೩ ; ಅಕ್ಕಮಹಾದೇವಿ ತ್ರಿವಿಧಿ.
28. ಅಕ್ಕಮಹಾದೇವಿ (ಯೋಗಾಂಗ ತ್ರಿವಿಧಿ) ಪದ್ಯ ೧೮.
29. ಶ್ರೀ ಸಿದ್ಧರಾಮೇಶ್ವರ ವಚನಗಳು-೧೦೭೪.
30. ಶ್ರೀ ಸಿದ್ಧರಾಮೇಶ್ವರ ವಚನಗಳು-೧೦೪೦.



# ಸಾಹಿತ್ಯಶ್ರೀ

**ಒಳಗಡೆಯಲ್ಲಿ :**

# ವೀರಶೈವ ಸಾಹಿತ್ಯದ ಉಗಮ

**—ಡಾ॥ ಎಂ. ಚಿದಾನಂದ ಮೂರ್ತಿ**

## ೧

ಯಾವುದೇ ವಿಷಯದ ಉಗಮದ ಪ್ರಶ್ನೆ ಕುತೂಹಲಕಾರಿಯಾಗಿರುವಂತೆ ಜಟಿಲವೂ ಆಗಿರುತ್ತದೆ. ವಿದ್ಯಾವಂತ ವರ್ಗಗಳಲ್ಲಿ ಉಗಮದ ವಿಷಯವನ್ನು ತಿಳಿಯಲು ಬಹಳ ಕುತೂಹಲವಿರುತ್ತದೆ. ಇದು ವ್ಯರ್ಥವಾದ ಬಯಕೆ ಎಂದು ಹೇಳಲು ಸಾಧ್ಯವಿಲ್ಲದಿದ್ದರೂ ಅಂತಹ ಬಯಕೆಗಳು ಈಡೇರುವ ಅವಕಾಶಗಳು ಬಹಳ ಕಡಮೆಯಾಗಿದ್ದರಿಂದ ವ್ಯರ್ಥವೆನ್ನುವ ಮಾತಿನ ಬಳಕೆ ಅಂತಹ ತಪ್ಪು ಎಂದು ಅನ್ನಿಸುವುದಿಲ್ಲ. ವೀರಶೈವಧರ್ಮದ ಹುಟ್ಟಿಗೆ ಕಾರಣರು ಯಾರು ಎನ್ನುವ ಪ್ರಶ್ನೆಯನ್ನು ಎಲ್ಲರೂ ಕೇಳುತ್ತಾರೆ ; ಕೆಲವರು ಉತ್ತರಿಸಿದ್ದಾರೆ ; ಉತ್ತರಿಸಿದವರಿಗೇ ತಮ್ಮ ಉತ್ತರದ ಬಗ್ಗೆ ಗಟ್ಟಿ ನಂಬಿಕೆಯೂ ಇಲ್ಲ. ಪ್ರಶ್ನೆ ಕೇಳುವವರೂ ಯಾವುದೋ ಉತ್ತರವನ್ನು ತಾವಾಗಲೇ ಮನಸ್ಸಿನಲ್ಲಿಟ್ಟುಕೊಂಡು ತಮಗೆ ಬೇಕಾದ ಉತ್ತರವನ್ನು ನಿರೀಕ್ಷಿಸಿ ಪ್ರಶ್ನೆ ಹಾಕುತ್ತಾರೆ. ಇಂತಹ ಕಡೆಗಳಲ್ಲಿ, ಅದರಲ್ಲೂ ಧಾರ್ಮಿಕ ವಿಷಯಗಳಲ್ಲಿ ಕೆಲವರಿಗಾದರೂ ಅಸಮಾಧಾನವಾಗದಂತೆ ಚರ್ಚಿಸುವುದು, ಸಮಸ್ಯೆಗಳನ್ನು ಮುಂದಿಟ್ಟು ವಿಶ್ಲೇಷಿಸುವುದು ಅಸಾಧ್ಯವೆನ್ನುವಂತಹ ವಾತಾವರಣ ನಮ್ಮಲ್ಲಿ ಮೂಡಿದೆ. ಧರ್ಮದ ಸ್ವರೂಪವನ್ನು ಬಲ್ಲವರು ಈ ಬಗ್ಗೆ ವಿಸ್ಮಯ ಪಡಬೇಕಾದುದು ಏನೂ ಇಲ್ಲ ಅಥವಾ ಅಧೀರರಾಗಬೇಕಾದುದೂ ಇಲ್ಲ.

ನನಗೇ ಬಿಟ್ಟರೆ ಈ ಸಂಪ್ರಬಂಧದ (ಪೇಪರ್) ಶೀರ್ಷಿಕೆಯನ್ನು 'ವೀರಶೈವ ಸಾಹಿತ್ಯದ ಆರಂಭದ ಹೆಜ್ಜೆಗಳು' ಎಂದು ಮಾರ್ಪಡಿಸಿಯೇನು*. ವೀರಶೈವ ಸಾಹಿತ್ಯ ಹೇಗೆ ಹುಟ್ಟಿತು ಎಂಬುದನ್ನು, ಅಂತಹ ಸಮಸ್ಯೆಗಳಂತೆಯೇ ಸಮರ್ಪಕವಾಗಿ ಪರಿಹರಿಸುವುದು ಸದ್ಯಕ್ಕೆ (ಅಥವಾ ಎಂದಿಗೂ) ಅಸಾಧ್ಯ. (ವಚನ ಸಾಹಿತ್ಯದ ಸಮಸ್ಯೆಯೂ ಬಹುಶಃ ಅಂತಹುದೇ). ಇಂತಹ ಪರಿಸ್ಥಿತಿಯಲ್ಲಿ ವೀರಶೈವ (ಅಥವಾ/ಮತ್ತು ವಚನ) ಸಾಹಿತ್ಯದ ಪ್ರಾರಂಭದ ಘಟ್ಟದ ಸ್ವರೂಪವನ್ನು ತಿಳಿಯಲು ಸಾಮಗ್ರಿ ದೊರೆಯುವಂತಿದ್ದರೆ ಆ ಸಾಮಗ್ರಿಯ ವಿಶ್ಲೇಷಣೆ ಹೆಚ್ಚು ಫಲಕಾರಿಯಾಗಿರುತ್ತದೆ. ಈ ಸಂಪ್ರಬಂಧ ಮುಖ್ಯವಾಗಿ ಅಂತಹ ವಿಶ್ಲೇಷಣೆಯನ್ನು ಲಕ್ಷ್ಯದಲ್ಲಿಟ್ಟುಕೊಂಡಿದೆಯೆಂದೂ ಕಡ್ಡಿ ಮುರಿದು ಎರಡು ತುಂಡು ಮಾಡಿದಂತೆ ಸ್ಪಷ್ಟ ಉತ್ತರವನ್ನು ಕೊಡುವ ಉದ್ದೇಶ ಅದಕ್ಕಿಲ್ಲವೆಂದೂ ಹೇಳುವುದು ಅಗತ್ಯವಾಗಿದ್ದರೂ, ಅದೇ ಧ್ವನಿಯಲ್ಲಿ ಇನ್ನೊಂದು ಮಾತನ್ನೂ ಹೇಳಬೇಕಾಗಿದೆ– ಈ ಸಂಪ್ರಬಂಧ ಸದ್ಯದ ನನ್ನ ನಿಲುವನ್ನು ಮಾತ್ರ ಸ್ಪಷ್ಟೋಕ್ತಿಗಳಲ್ಲಿ ಪ್ರತಿಪಾದಿಸುತ್ತದೆ. (ವಿಷಯ ಅಸ್ಪಷ್ಟವಾಗಿದ್ದರೂ ಆ ಬಗ್ಗೆ ಸ್ಪಷ್ಟ ನಿಲುವನ್ನು ತಾಳುವುದೇನೂ ಅಸಹಜವಲ್ಲ ತಾನೇ?) ಮತ್ತು ಮುಂದೆ ನಾನು ಹೇಳುವ ವಿಷಯಗಳಿಗಿಂತ ಹೆಚ್ಚಿನ ಜ್ಞಾನ ಸದ್ಯಕ್ಕೆ ಪ್ರಾಪ್ತವಾಗಿಲ್ಲವೆಂದು ಹೇಳಿದರೆ ಅದನ್ನು ಓದುಗರು ಎಟುಕದ ಗ್ರಹಿಕೆ, top cliam ಎಂದು ಭಾವಿಸಿಯಾರೆಂಬ ಅಳುಕು ನನಗಿಲ್ಲ.

## ೨

ಈ ಹಿಂದೆ ಕೊನೆಯ ಪಕ್ಷ ಎರಡು ಕಡೆ ವಚನ ಸಾಹಿತ್ಯದ ಆರಂಭವನ್ನು ಕುರಿತಂತೆ ಆಡಿರುವ ಮಾತುಗಳ ಸಾರಾಂಶವನ್ನು ಕೊಡುತ್ತೇನೆ[1]. ನಮಗೆ ದೊರೆತಿರುವ ಆಧಾರಗಳ ಸಹಾಯದಿಂದ ಹೇಳುವುದಾದರೆ **ಜೇಡರದಾಸಿಮಯ್ಯನೇ** ಮೊದಲ ವಚನಕಾರ. ಇವನು ಸು. ಕ್ರಿ.ಶ. ೧೦೪೧ ರಲ್ಲಿದ್ದ **ದೇವರ** ದಾಸಿಮಯ್ಯನಿಗಿಂತ ಭಿನ್ನ. ದೇವರದಾಸಿಮಯ್ಯ ಶಿವಭಕ್ತನಾದರೂ ಅವನು ವಚನಗಳನ್ನು ಬರೆದಂತೆ ತೋರುವದಿಲ್ಲ. ಆದರೆ ಅವನಾದ ಬಳಿಕ ನೂರು ವರ್ಷಗಳ ಅಂತರದಲ್ಲಿ, ಎಂದರೆ ಸು. ಕ್ರಿ.ಶ. ೧೧೪೦ ರಲ್ಲಿದ್ದ ಜೇಡರ ದಾಸಿಮಯ್ಯನೇ 'ರಾಮನಾಥ' ಅಂಕಿತ ಪಡೆದಿರುವ ವಚನಗಳ ಕರ್ತೃ. ಇವನು ಬಸವಣ್ಣನಿಗಿಂತ ಹಿಂದಿನವನು ಮತ್ತು ಅವನ ಹಿರಿಯ ಸಮಕಾಲೀನ. ಜೇಡರ ದಾಸಿಮಯ್ಯ ಸ್ಮರಿಸಿರುವ ಡೋಹರ ಕಕ್ಕಯ್ಯ. ಮಾದಾರ ಚನ್ನಯ್ಯರು ಅವನಿಗಿಂತ ಹಿರಿಯರೆಂಬುದು ಸ್ಪಷ್ಟವೇ ಆಗಿದೆ. ಆದರೆ ಆ ಇಬ್ಬರು ವಚನಕಾರರ ವಚನಗಳು ಬಸವಣ್ಣನ ಕಾಲದ ಪ್ರಭಾವ ವಲಯಕ್ಕೆ ಅವರು ಒಳಗಾದ ಬಳಿಕ ರಚಿತವಾಗಿವೆಯೆಂದು ಸ್ಪಷ್ಟವಾಗಿರುವದರಿಂದ, ವಯಸ್ಸಿನಲ್ಲಿ

---

* ಈ ದೀರ್ಘ ಸಂಪ್ರಬಂಧದ ಸಾರಾಂಶವನ್ನು ತಿಳಿಯಬಯಸುವವರು ಭಾಗ-೫ ನೋಡಿದರೆ ಸಾಕು. ನನ್ನ ನಿಲುವನ್ನು ವಿಮರ್ಶಾತ್ಮಕವಾಗಿ ತಿಳಿದುಕೊಳ್ಳಬಯಸುವವರು ಇಡೀ ಬರಹವನ್ನು ಓದುವ ತಾಳ್ಮೆಯನ್ನು ತಳೆಯಬೇಕು. ಟೀಕಿಸ ಬಯಸುವವರಂತೂ ಮತ್ತೊಮ್ಮೆ ಓದುವ ಮನಸ್ಸು ಮಾಡಬೇಕು.

೧. ವಿವರಗಳಿಗೆ, ನೋಡಿ—೧. ವಚನಸಾಹಿತ್ಯ (ಬೆಂಗಳೂರು ವಿಶ್ವವಿದ್ಯಾಲಯ. ೧೯೭೫) ಮೊದಲ ಎರಡು ಅಧ್ಯಾಯಗಳು.
೨. 'ಬಸವಪೂರ್ವಯುಗದ ವಚನಕಾರರು' (ಬಸವ ಜರ್ನಲ್, ೨. ೨. ಆಗಸ್ಟ್ ೧೯೭೭)

ಅವರು ಜೇಡರ ದಾಸಿ, ಬಸವರಿಗಿಂತ ಹಿರಿಯರಾಗಿದ್ದರೂ ವಚನಕಾರರಾಗಿ ಬಸವನ ಸಮಕಾಲೀನರಾಗುತ್ತಾರೆ. ಶಂಕರ ದಾಸಿಮಯ್ಯ, ಜೇಡರ ದಾಸಿಮಯ್ಯನ ಹೆಂಡತಿ ದುಗ್ಗಳೆ, ಸಕಲೇಶಮಾದರಸ ಇವರೆಲ್ಲ ಒಂದು ಕಾಲದವರು ಮತ್ತು ಇವರ ವಚನಗಳೂ ಬಸವಣ್ಣನ ವಚನ ರಚನೆಯ ಕಾಲದಲ್ಲಿ ಹುಟ್ಟಿರುವುದಾಗಿ ತೋರುತ್ತದೆ ; ಎಂದರೆ ವಚನಕಾರರಾಗಿ ಅವರೂ ಬಸವನ ಸಮಕಾಲೀನರೇ ಆಗುತ್ತಾರೆ. ಜೇಡರ ದಾಸಿಮಯ್ಯ ಕೊಂಡಗುಳಿ ಕೇಶಿರಾಜನ ಹೆಸರನ್ನು ಹೇಳದಿದ್ದರೂ ಅವನಿಗೇ ಅನ್ವಯಿಸುವ ಕತೆಯೊಂದನ್ನು ಸೂಚಿಸುವದರಿಂದ (ತೊರೆಯಲ್ಲಿ ಬಿದ್ದು ಹೋದ ಇಷ್ಟಲಿಂಗ ಕೈಗೆ ಬಂದದ್ದು) ಕೊಂಡಗುಳಿ ಕೇಶಿರಾಜ ಅವನಿಗಿಂತ ಹಿಂದಿನವನೆಂಬುದು ಸ್ಪಷ್ಟವಾಗಿದೆ. ನಮ್ಮ ಅದೃಷ್ಟಕ್ಕೆ ಕೇಶಿರಾಜನ ಕ್ರಿ. ಶ. ೧೧೦೭ ಮತ್ತು ೧೧೩೨ ರ ಎರಡು ಶಾಸನಗಳು ಅವನ ಸ್ವಂತ ಊರಾದ ಕೊಂಡುಗುಳಿಯಲ್ಲೇ ದೊರಕಿವೆ ಮತ್ತು ಅವನ ಕೃತಿಗಳೂ ದೊರೆತು ಅಚ್ಚಾಗಿವೆ (ಅವು ವಚನಗಳಲ್ಲ, ಕಂದ ವೃತ್ತಗಳು). ಈಗ ದೊರಕಿರುವ ಕೃತಿಕಾರರ ಕಾಲಾನುಕ್ರಮಣಿಕೆ ಹೀಗಿದೆ:-

**ಕೊಂಡಗುಳಿ ಕೇಶಿರಾಜ** — ಕ್ರಿ. ಶ. ೧೧೦೭, ೧೧೩೨

**ತೆಲುಗು ಜೊಮ್ಮಣ್ಣ** — ಕ್ರಿ. ಶ. ೧೧೦೦ — ಕೇಶಿರಾಜನ ಸಮಕಾಲೀನ ವ್ಯಕ್ತಿ. 'ತೆಲುಗೇಶ್ವರ' ಎಂಬ ಅಂಕಿತದ ವಚನಗಳು ಇವನವೇ ಎಂದು ಖಚಿತವಾಗಿ ಹೇಳುವಂತಿಲ್ಲ[2].

**ಕೆಂಭಾವಿ ಭೋಗಣ್ಣ** -- ಸು. ೧೧೨೦. ಜೇಡರ ದಾಸಿಮಯ್ಯ ಹೆಸರಿಸುತ್ತಾನೆ. 'ಭೋಗೇಶ್ವರ' ಅಂಕಿತದ ವಚನಗಳು ಇವನವೇ ಎಂದು ಹೇಳಲು ಆಧಾರಗಳಿಲ್ಲ.

**ಜೇಡರ ದಾಸಿಮಯ್ಯ** — ಸು. ಕ್ರಿ. ಶ. ೧೧೪೦

**ಡೋಹರ ಕಕ್ಕಯ್ಯ ಮತ್ತು ಮಾದಾರ ಚನ್ನಯ್ಯ** — ಸು. ೧೧೨೦. ಜೇಡರದಾಸಿಗಿಂತ ಹಿರಿಯರು, ಆದರೆ ವಚನರಚನೆ ಬಸವಾದಿಗಳಿಂದ ಪ್ರಚೋದಿತರಾಗಿ.

**ದುಗ್ಗಳೆ, ಶಂಕರದಾಸಿಮಯ್ಯ, ಡಕ್ಕೆಯ ಮಾರಯ್ಯ, ಸಕಲೇಶ ಮಾದರಸ** — ಸು. ೧೧೪೦. ನಾಲ್ವರೂ ವಚನಕಾರರು, ಆದರೆ ನಾಲ್ವರೂ ವಚನಕಾರರಾಗಿ ಬಸವನ ಕಾಲದವರು.

ಸಕಲೇಶ ಮಾದರಸ—ಸು. ೧೧೪೦. ಬಸವನ ಹಿರಿಯ ಸಮಕಾಲೀನ ; ಇವನ ವಚನಗಳ ತುಂಬ ಬಸವಣ್ಣನ ದಟ್ಟ ಪ್ರಭಾವವಿದೆ.

ಬಸವಣ್ಣ—ಸು. ೧೧೬೦

ಬಸವಣ್ಣನಿಗಿಂತ ಹಿಂದಿನ ಕೃತಿಕಾರರಲ್ಲಿ ವಚನಕಾರ ಎಂದು ಖಚಿತವಾಗಿ ನಿರ್ದೇಶಿಸಬಲ್ಲ ವ್ಯಕ್ತಿಯೆಂದರೆ ಜೇಡರ ದಾಸಿಮಯ್ಯ. 'ಅವನ (ಜೇಡರ ದಾಸಿಮಯ್ಯನ) ವಚನಗಳ ತಾಜಾತನ, ಸಂಕ್ಷಿಪ್ತತೆ, ಸಹಜತೆ, ಪರಿಣಾಮಕಾರಿ ಗುಣ, ಒಂದು ಬಗೆಯ ದೇಶೀಯತೆ. ಅವುಗಳಲ್ಲಿ ಅರ್ಧಕ್ಕಿಂತ ಹೆಚ್ಚಿನ ವಚನಗಳಲ್ಲಿ ಕಂಡುಬರುವ ತ್ರಿಪದಿ ಛಂದಸ್ಸಿನ ಬಂಧ, ಭಾಷೆಯ ಸರಳತೆ, ಅವನು ಬಳಸುವ ಪ್ರತಿಮೆಗಳ ಹೊಸತನ-ಇವೆಲ್ಲ ಅವನು ವಚನ ಪರಂಪರೆಯ ಆದಿಪ್ರವರ್ತಕನೆಂಬ ಮಾತು ಒಂದು ವೇಳೆ ಸುಳ್ಳಾದರೂ ಆ ಪರಂಪರೆಯ ಆದಿಕಾಲಕ್ಕೆ ಸೇರಿದವನೆಂಬುದನ್ನು ಖಚಿತಪಡಿಸುತ್ತದೆ. ಸದ್ಯಕ್ಕೇನೋ ಅವನೇ ಕನ್ನಡಕ್ಕೆ ವಚನ ಪ್ರಕಾರವನ್ನು ತಂದವನು ಎಂಬುದು ನನ್ನ ನಿಲುವಾಗಿದೆ'[3].

ಕೊಂಡಗುಳಿ ಕೇಶಿರಾಜ, ಶಾಂತಲಿಂಗದೇಶಿಕನ ಪ್ರಕಾರ, ಕಂದ, ವೃತ್ತಗಳನ್ನಲ್ಲದೆ ರಗಳೆ, ತ್ರಿವಿಧಿ, ದಂಡಕ, ಅಷ್ಟಕ, ಗದ್ಯ, **ವಚನ**ಗಳನ್ನೂ ಬರೆದಿದ್ದಾನೆ. ಹರಿಹರನ ಪ್ರಕಾರ ಅವನು ದಿನವೂ ಎಂಟು 'ಪದ್ಯ'ಗಳನ್ನು ಹೇಳುತ್ತಿದ್ದಂತೆ ವರ್ಣಿಸಿದ್ದಾನೆ. ಶಾಂತಲಿಂಗದೇಶಿಕನ ಮಾತು ನಿಜವಾದರೆ ಅವನೇ ನಮಗೆ ತಿಳಿದ ಮಟ್ಟಿಗೆ ಮೊದಲ ವಚನಕಾರನಾಗುತ್ತಾನೆ. ಆದರೆ ಈಗ ದೊರಕಿರುವ ಅವನ ಐದು ಕೃತಿಗಳು ವೃತ್ತ, ಕಂದಗಳಿಂದ ಕೂಡಿವೆ ಮತ್ತು ಅವುಗಳಲ್ಲಿ ಬಹುಪಾಲು ಶಿವಸ್ತೋತ್ರರೂಪವಾಗಿರುವುದು ಹರಿಹರನ ಹೇಳಿಕೆ ಸರಿಯೆಂಬುದನ್ನು ದೃಢಪಡಿಸುತ್ತದೆ. ವಚನಗಳನ್ನೂ ಬರೆದು ವೃತ್ತಕಂದಗಳನ್ನೂ ಬರೆದ ವೀರಶೈವ ಕವಿ ಯಾರೂ ನಮ್ಮ ಕಣ್ಣಿಗೆ ಬಿದ್ದಿಲ್ಲವಾದ ಕಾರಣ ಅವನು ವಚನಗಳನ್ನು ಬರೆದಿರುವ ಸಾಧ್ಯತೆಗಳು ತೀರ ಕಡಮೆ. ಹರಹರ ಕವಿ ಬರೆದಿರುವ 'ಕೇಶಿರಾಜ ದಣಾಯಕರ ರಗಳೆ'ಯಲ್ಲಿ ಕೊನೆಯ ಪಕ್ಷ ಮೂರು ಕಡೆ ಕೇಶಿರಾಜನ ಕೃತಿಭಾಗಗಳನ್ನು ತನ್ನ ಕೃತಿಯೊಳಕ್ಕೆ ಸೇರಿಸಿಕೊಂಡು ಹೆಣೆದಿದ್ದಾನೆ. (ಬಸವ, ಅಕ್ಕಮಹಾದೇವಿಯರ ವಚನಗಳನ್ನು 'ಗೀತ'ಗಳೆಂದು ಕರೆದು ತನ್ನ ಕೃತಿಗಳೊಳಗೆ ಹೆಣೆದಿರುವುದು ಸುಪ್ರಸಿದ್ಧವಾಗಿದೆ.) ಅವನ ಕೃತಿಭಾಗಗಳನ್ನು 'ಪದ್ಯ'ವೆಂದೇ ಸ್ಪಷ್ಟವಾಗಿ ಕರೆದಿದ್ದಾನೆ– 'ತೆಲುಗು ಜೊಮ್ಮಯ್ಯನ ರಗಳೆ'ಯಲ್ಲಿ

---

2. 'ತೆಲುಗೇಶ್ವರ' ಅಂಕಿತದ ವಚನವೊಂದರಲ್ಲಿ ಬರುವ 'ವೀರನಾದರೆ ವೈರಿಗಳು ಮೆಚ್ಚಬೇಕು' ಎಂಬ ವಾಕ್ಯ ಬಸವಣ್ಣನಲ್ಲಿ ಹಾಗೆಯೇ ಬಂದಿದೆ. ವಚನ ಜೊಮ್ಮಣ್ಣನದಾದರೆ ಬಸವ ಅವನಿಂದ ತೆಗೆದುಕೊಂಡಿರಲು ಸಾಧ್ಯ. ಅವನದಲ್ಲವಾದರೆ, ಆ ಅಂಕಿತದ ಬೇರೊಬ್ಬ ವಚನಕಾರ ಬಸವನಿಂದ **ಈ** ವಾಕ್ಯವನ್ನು ತೆಗೆದುಕೊಂಡಿದ್ದಾನೆಂದು ಹೇಳಬೇಕಾಗುತ್ತದೆ.
3. ಎಂ. ಚಿದಾನಂದಮೂರ್ತಿ : 'ಬಸವ ಪೂರ್ವ ಯುಗದ ವಚನಕಾರರು' (ಬಸವ ಜರ್ನಲ್, ೨.೨. ಪು. ೨೧)

ಅಸಮಾಕ್ಷ ನೀನೊಲಿಯೆ ಪಾಪವೇ ಪುಣ್ಯವದು
ಒಸೆದು ನೀನೊಲಿದಂಗನೀತಿಯೇ ನೀತಿಯದು
ದುಷ್ಕಾರ್ಯವೇ ಕಾರ್ಯವಕ್ರಮವೆ ಕ್ರಮವು ಅದು
ದುಷ್ಕುಲಂ ಸತ್ಕುಲವಧರ್ಮವೇ ಧರ್ಮವದು
ಎಂದು ಪದ್ಯವನೋದಿ ಹಾರೈಸಿ ಹಿಗ್ಗುತಿರೆ 4.

ಇಲ್ಲಿಯ 'ಪದ್ಯ' ವಚನವಲ್ಲ, ಪದ್ಯವೇ ; ಮತ್ತು ಕೇಶಿರಾಜನ ಉಪಲಬ್ಧ ಕೃತಿಗಳೂ ಪದ್ಯಗಳೇ ಆಗಿವೆ. ಕೇಶಿರಾಜ ವಚನಗಳನ್ನು ಬರೆದಿರುವನೆಂಬುದಕ್ಕೆ ಬೇರೆ ಆಧಾರಗಳು ದೊರೆಯುವವರೆಗೆ ಶಾಂತಲಿಂಗದೇಶಿಕನ ನುಡಿ ಒಂದು ಪ್ರಶಂಸೆಯ ಅತ್ಯುಕ್ತಿ ಎಂದು ಮಾತ್ರ ತೆಗೆದುಕೊಳ್ಳಬೇಕು. (ಅವನ ಮಾತನ್ನು ಅಕ್ಷರಶಃ ತೆಗೆದುಕೊಂಡರೆ, ರಗಳೆಯನ್ನು ಮೊದಲು ಬಳಸಿದ ವೀರಶೈವ ಕವಿಯೂ ಅವನಾಗುತ್ತಾನೆ. ಆದರೆ ರಗಳೆಯ ಮೊದಲ ಪ್ರವರ್ತಕ ಹರಿಹರ ಕವಿ).

ಕೇಶಿರಾಜ ಸದ್ಯದ ನಮ್ಮ ಅರಿವಿಗೆ ಬಂದ ಮೊದಲ ವೀರಶೈವ ಕವಿ ಎಂಬಲ್ಲಿ ಅನುಮಾನವಿಲ್ಲ. ಅವನ ಐದು ಕೃತಿಗಳು ಲಭ್ಯವಾಗಿವೆ5.

**೧. ಮಂತ್ರ ಮಹತ್ವದ ಕಂದ** (ಇದಕ್ಕೆ 'ಷಡಕ್ಷರಿಯ ಕಂದ' ಎಂಬುವದು ಪರ್ಯಾಯನಾಮ. 'ಓಂ ನಮಃ ಶಿವಾಯ' ಎಂಬ ಷಡಕ್ಷರಿಮಂತ್ರದ ಮಹಿಮೆಯ ನಿರೂಪಣೆ ಇದರ ಉದ್ದೇಶ). ಪ್ರತಿ ಪದ್ಯವೂ 'ಓಂ ನಮಃ ಶಿವಾಯೆಂಬ ಪದಂ' ಎಂಬ ಪದಗಳೊಡನೆ ಮುಕ್ತಾಯವಾಗುತ್ತದೆ. ಒಟ್ಟು ೧೧೦ ಕಂದಗಳಿವೆ ಇಲ್ಲಿ.

**೨. ಲಿಂಗಸ್ತೋತ್ರದ ಕಂದ** ೧ : ಇದಕ್ಕೆ 'ಶಿವಪ್ರಾರ್ಥನಾಶತಕ' ವೆಂಬ ಇನ್ನೊಂದು ಹೆಸರಿರುವಂತಿದೆ6. ಕಂದಗಳ ಸಂಖ್ಯೆ ೧೦೦.

**೩. ಲಿಂಗಸ್ತೋತ್ರದ ಕಂದ** ೨ : ಹಿಂದಿನ ಗ್ರಂಥದ ೪೦ ಪದ್ಯಗಳು ಇಲ್ಲಿವೆ. ಹಸ್ತಪ್ರತಿ ಬಹಳ ನಷ್ಟವಾಗಿರುವುದರಿಂದ ಇಲ್ಲಿಯ ಅನೇಕ ಪದ್ಯಗಳ ಪಾಠ ಅನಿರ್ದಿಷ್ಟವಾಗಿದೆ.

**೪. ಶೀಲಮಹತ್ವದ ಕಂದ :** ೧೧೧ ಕಂದಗಳ ಈ ಕೃತಿಗೆ ಹೆಸರು ಕೊಟ್ಟವರು ಸಂಪಾದಕರು ಮತ್ತು ಹೆಸರು ಸಮರ್ಥನೀಯ. ಕೇಶಿರಾಜನ 'ವೀರಶೈವ' ವನ್ನು ತಿಳಿಯುವವರಿಗೆ ಒಂದು ಮುಖ್ಯ ಆಕರ.

**೫. ನವರತ್ನಮಾಲೆ :** ಸ್ತೋತ್ರರೂಪವಾಗಿರುವ ಒಂಬತ್ತು ಪದ್ಯಗಳ ಈ ಗುಚ್ಛದ ಪ್ರತಿ ಪದ್ಯವೂ 'ಕಂಡೆರ್ದೆದಣಿದು ಕುಳಿರ್ಕೊಳ್ಡಿತೆನ್ನಂತರಂಗಂ' ಎಂಬ ವಾಕ್ಯದೊಡನೆ ಮುಕ್ತಾಯವಾಗುತ್ತದೆ.

ಈ ಚಿಕ್ಕ ಕೃತಿಗಳ ಕರ್ತೃ6 ಕೇಶಿರಾಜನ ಊರು ಕೊಂಡಗುಳಿ (ಬಿಜಾಪುರ ಜಿಲ್ಲೆ, ಸಿಂದಗಿ ತಾಲೂಕು) ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಒಂದು ಅಗ್ರಹಾರವಾಗಿದ್ದಿತು. ಆ ಊರಿನ ನಿಂಬಣಯ್ಯ ಕಲ್ಯಾಣಚಾಲುಕ್ಯರಲ್ಲಿ ಉನ್ನತ ಪದವಿಯ ಅಧಿಕಾರಿಯಾಗಿದ್ದನು. ಆ ಪ್ರಭಾವಶಾಲಿಯ ಮಗನೇ ಕೇಶಿರಾಜ. ಇವನೂ ತಂದೆಯಂತೆಯೇ ಆರನೆಯ ವಿಕ್ರಮಾದಿತ್ಯನಲ್ಲಿ

---

4. ಹರಿಹರನ ಕೃತಿಗಳು (ಸಂ.ಫ.ಗು. ಹಳಕಟ್ಟಿ. ಸಮಾಜ ಪುಸ್ತಕಾಲಯ, ಧಾರವಾಡ, ೧೯೬೮. ಪು. ೩೪೩): ತೆಲುಗು ಜೊಮ್ಮಯ್ಯ ಕೇಶಿರಾಜನನ್ನು ಮನೆಗೆ ಕರೆದಾಗ ಅಸಹ್ಯಪಟ್ಟುಕೊಂಡಿದ್ದ ಕೇಶಿರಾಜ ಹೋಗಲಿಲ್ಲ. ಪರಿಣಾಮವಾಗಿ ಅವನ ಲಿಂಗ ದೇವಾಲಯದಲ್ಲಿ ನೆಲಕ್ಕೆ ಅಂಟಿಕೊಂಡಿತು. ಆಗ ಕೇಶಿರಾಜ ಪಶ್ಚಾತ್ತಾಪಪಡುತ್ತ 'ಭಕ್ತರೊಳ್ ಛಲವೇಕೆ ಭಕ್ತರೊಳ್ ಬಲುಹೇಕೆ ! ಭಕ್ತರೊಳ್ ದೂರದಭಿಮಾನದಾಸೆಗಳೇಕೆ' ಎಂದು ಹೇಳಿದಂತೆ ಹರಿಹರನ ಮಾತುಗಳಿವೆ. ಈ ಮಾತುಗಳಲ್ಲಿ ಕೇಶಿರಾಜನ ಯಾವುದೋ ಪದ್ಯ ಹುದುಗಿದ್ದರೆ ಆಶ್ಚರ್ಯವಿಲ್ಲ.

5. ಕೊಂಡಗುಳಿ ಕೇಶಿರಾಜನ ಕೃತಿಗಳು (ಸಂ. ಎಂ. ಎಂ. ಕಲಬುರ್ಗಿ, ಮೂರುಸಾವಿರ ಮಠ, ಹುಬ್ಬಳ್ಳಿ, ೧೯೭೮) ಕೇಶಿರಾಜನ ಕೃತಿಗಳನ್ನು ಉಲ್ಲೇಖಿಸುವುದು ಈ ಪುಸ್ತಕದಿಂದಲೇ. ಕೇಶಿರಾಜನ ಕೃತಿಗಳನ್ನು ಒಂದೆಡೆ ತಂದಿರುವುದು ಬಹು ಸ್ತುತ್ಯಾರ್ಹ. ಆದರೆ ಅವುಗಳನ್ನು ಸಂಪಾದನೆ ಮಾಡುವಲ್ಲಿ ಇನ್ನೂ ಹೆಚ್ಚಿನ ಎಚ್ಚರವಹಿಸಬೇಕಿತ್ತು. ಜೆ, ಟಿಗಳ ಬಳಕೆಯಲ್ಲಿ ಬಹಳ ತಪ್ಪುಗಳಾಗಿವೆ. ಹಸ್ತಪ್ರತಿಗಳ ಕೊರತೆಯಿದ್ದರೂ ಕೆಲವೆಡೆ ಇರುವ ಸಾಮಗ್ರಿಯಿಂದಲೇ ಪಾಠವನ್ನು ಸರಿಯಾಗಿ ಪುನಾ ರಚಿಸಬಹುದು. ಉದಾಹರಣೆಗೆ, 'ತೃಷೆಯಿಂ ಮಿಗಂ ಬಯಲ್ದೊರೆಯಿಸಕಕೆ ಪರಿವಂತೆ ಪರಿವ ಮನದಾಹಿಷಮಂ' ಎಂಬಲ್ಲಿ (ಪು. ೧೧) 'ಬಯಲ್ದೊರೆ'ಯ ಪ್ರತಿಮೆ ಇದೆ. ಅದರೆ ಪಾಠಾಂತರ 'ತೃಷೆಮುಸಗಿ ಮುಸುಕೆ ಮೃಗ ಬಿಸಲೆಸಕದ ಜಲವೆತ್ತು ಹರಿವ' ಎಂದಿದೆ. ಇದರ ಸಹಾಯದಿಂದ ಮೂಲಪಾಠವನ್ನು 'ತೃಷೆ ಮುಸಗಿ ಮುಸುಕೆ ಮೃಗ ಬಿಸಲೆಸಕದ ಜಲವೆತ್ತ ಪಜಿವ ಮನದಾಹಿಷಮಂ' ಎಂದು ಖಚಿತವಾಗಿ ತಿದ್ದಬಹುದು. ಕೆಲವೊಮ್ಮೆ ಸುಲಭವಾಗಿ ಊಹೆಯ ಮೇಲೆ ಪರಿಷ್ಕರಿಸಬಹುದು. ಭಕ್ತನ ಕೈಯಲ್ಲಿ ತೃಣಮುಂ ಭಕ್ತನ ಕೈಯಿಂದಲುದಕ ತಣಿಯನದಕಂ' ಎಂಬಲ್ಲಿ 'ತಂ ಗಿಂತ' 'ಕಂ' ಎಂಬ ಊಹೆ ಸಾಧು. ಕಣಿ ಎಂದರೆ ದನ ಕಟ್ಟುವ ಹಗ್ಗ. (ನೋಡಿ ಪು. ೬೪).

6. ಇದು ಲಿಂಗಮಹತ್ವದ ಗ್ರಂಥವಲ್ಲ. ಕಲ್ಬುರ್ಗಿಯವರು ಇದನ್ನು 'ಲಿಂಗಮಹತ್ವದ ಕಂದ'ವೆನ್ನುವುದು ಅನುಚಿತ (ಅದೇ, ಪು. XVIII)

(ಇವನೇ ಹರಿಹರ ಕಾವ್ಯಗಳ ಪೆರ್ಮಾಡಿರಾಯ[7]) 'ದಂಡನಾಯಕ'ನಾಗಿದ್ದ[8]. ಕೇಶಿರಾಜನ ಎರಡು ಶಾಸನಗಳು ಕೊಂಡಗುಳಿಯಲ್ಲಿವೆ. ಕ್ರಿ. ಶ. ೧೧೦೭ ರ ಶಾಸನದಲ್ಲಿ ಅವನು ಕೊಂಡಗುಳಿಯಲ್ಲಿ 'ಮಾಡಿಸಿದ' ( = ಕಟ್ಟಿಸಿದ ಅಥವಾ ಜೀರ್ಣೋದ್ಧಾರ ಮಾಡಿಸಿದ ?. ಸೋಮೇಶ್ವರ ದೇವಾಲಯಕ್ಕೆ[9] ತನ್ನ ಅಂಶಕ್ಕೆ ಬಂದ ಭೂಮಿಯಲ್ಲಿ ಕೆಲವು ಭಾಗವನ್ನು ಬಿಟ್ಟುಕೊಡುತ್ತಾನೆ. ಕ್ರಿ. ಶ. ೧೧೩೨ ರ ಶಾಸನದಲ್ಲಿ ಅವನೂ ಗಣಪತಿ ದಂಡನಾಯಕನೂ ಸೇರಿಕೊಂಡು ವಿದ್ಯಾದಾನ ನಿಮಿತ್ತವಾಗಿ ದತ್ತಿಗಳನ್ನು ಕೊಡುತ್ತಾರೆ[10]. ಕ್ರಿ. ಶ. ೧೧೦೭ರ ಶಾಸನದಲ್ಲಿ ಕೇಶಿರಾಜನ ಬಿರುದಾವಳಿಗಳೂ ಉಕ್ತವಾಗಿವೆ. ('ಸುಕವಿಶುಕ ಚೂತ, ವಚಶ್ರೀವಧೂಕಾಂತ, ಸಾಹಿತ್ಯಸರೋರುಹ ಮಧುಬ್ರತ, ಸತ್ಯ ಸತ್ಯಬ್ರತ, ಹರಚರಣರಜೋರಂಜಿತೋತ್ತಮಾಂಗ, ಅಯ್ಯನಸಿಂಗ, ಮಹಾಪ್ರಧಾನ, ಇತ್ಯಾದಿ) ಕ್ರಿ.ಶ. ೧೧೩೨ರ ಶಾಸನದಲ್ಲಿ ಬರಿಯ 'ಶ್ರೀಮತ್ ಕೇಶಿಮಯ ದಂಡನಾಯಕರು' ಎಂದಿದೆ. ಕ್ರಿ. ಶ. ೧೧೨೬ರಲ್ಲಿ ವಿಕ್ರಮಾದಿತ್ಯ VI ನ ಆಳಿಕೆ ಕೊನೆಗೊಂಡಿತು ಮತ್ತು ಅವನಿಗೂ ಕೇಶಿರಾಜನಿಗೂ ಮನಸ್ತಾಪ ಬಂದು ಆ ಬಿರುದುಗಳನ್ನು ೧೧೨೬ಕ್ಕೆ ಮೊದಲು ರಾಜ ಕಿತ್ತುಕೊಂಡಿದ್ದರಿಂದ ೧೧೩೨ರ ಶಾಸನದಲ್ಲಿ ಅವು ಬಂದಿಲ್ಲವೆಂಬ ದುರ್ಬಲ ಊಹೆಯನ್ನು ಡಾ. ಕಲಬುರ್ಗಿಯವರು ಮಾಡಿದ್ದಾರೆ. ಆದರೆ ಆ ಶಾಸನದಲ್ಲಿ ಇಬ್ಬರು ದಂಡನಾಯಕರು ಬಿಟ್ಟುಕೊಟ್ಟ ದಾನದ ವಿಷಯವಿರುವುದರಿಂದ, ಕೇಶಿರಾಜ ದಂಡನಾಯಕನ ವಿಶೇಷಣಗಳನ್ನು ಕೈಬಿಡಲಾಗಿದೆ ಎಂಬುದೇ ಹೆಚ್ಚು ತಾರ್ಕಿಕವಾಗಿದೆ. (ಹೇಳಿದ್ದರೆ ಇಬ್ಬರಿಗೂ ವಿಶೇಷಣಗಳನ್ನು ಹೇಳಬೇಕಾಗುತ್ತಿತ್ತು).

ಹರಿಹರ ಹೇಳುವ ಮನಸ್ತಾಪದ ವಿಷಯ ಇಲ್ಲಿ ಮುಖ್ಯ. ಏಕೆಂದರೆ, ವೀರಶೈವ ಸಾಹಿತ್ಯದ ಮೊದಲ ಕವಿಯೇ ರಾಜಪ್ರಭುತ್ವದ ಜೊತೆ ಸೆಣಸಿದವನೆಂಬುದು ಹೆಚ್ಚು ಅರ್ಥಪೂರ್ಣವಾಗುತ್ತದೆ. ಅವನು ಒಮ್ಮೆ ಶಿವಗೋಷ್ಠಿಯಲ್ಲಿರುವಾಗ, ರಾಜ ಹೇಳಿ ಕಳುಹಿಸುತ್ತಾನೆ. ಆಗ ಅವನು ಸಿಡಿಮಿಡಿಗೊಂಡು ಹೀಗೆ ಉದ್ಗಾರ ತೆಗೆದ:-

ಸಿರಿಯ ಸಂಗಂ ಶರಣ ಸಂಗಕ್ಕೆ ಪಗೆಯಾಯ್ತು  
ನರನೋಲಗಾಪರಾಧವು ಮರುಳು ಮಾಡಿತ್ತು  
ಅಯ್ಯಯ್ಯ ಸೋಮನಾಥಯ್ಯ ನೀ ಕರುಣಿಪುದು  
ಅಯ್ಯಲಾ ಶರಣಸದ್ಗೋಷ್ಠಿಯಂ ಕರುಣಿಪುದು  
ದೇವ ಕಲ್ಯಾಣದಧಿದೈವ ತ್ರಿಪುರಾಂತಕಾ  
ದೇವ ಮನ್ಮಥದರ್ಪ ಮದನದುರಿತಾಂತಕಾ  
ಸಿರಿ ಹಾರಿಹೋಗೆ ನಿಮಗರ್ಚನೆಯ ಮಾಡುವೆಂ  
ಶರಣತತಿ ಪುರಜನಂ ಮೆಚ್ಚೆ ಕೊಂಡಾಡುವೆಂ

ಈ ರಗಳೆಯ ಭಾಗದಲ್ಲಿ ಕೇಶಿರಾಜನ ಯಾವುದೋ ಪದ್ಯ ಹುದುಗಿದೆಯೆಂಬಲ್ಲಿ ಸಂದೇಹವಿಲ್ಲ. ಇಲ್ಲಿ ನಾವು ಗಮನಿಸಬೇಕಾದ್ದು ಶರಣನಿಗೆ ರಾಜನಿಗಿಂತ ಶಿವ, ಶಿವಭಕ್ತರ ಗೋಷ್ಠಿ ಮುಖ್ಯವಾಗಿರುವುದು. ಮನಸ್ಸಿಲ್ಲದ ಮನಸ್ಸಿನಿಂದ ಆಸ್ಥಾನಕ್ಕೆ ಹೋದ. ಅಲ್ಲಿ ರಾಜನಿಗೆ ನಮಸ್ಕರಿಸುತ್ತಿಲ್ಲ, ಕೈ ಮುಗಿದಾಗ ವಾಸ್ತವವಾಗಿ ತನ್ನ ಬೆರಳಲ್ಲಿನ ಗುರುಪಾದಗಳ ಚಿಹ್ನೆಯಿರುವ ಉಂಗುರಕ್ಕೆ ನಮಸ್ಕರಿಸುತ್ತಾನೆ ಎಂಬ ಕಾರಣಕ್ಕಾಗಿ ರಾಜನಿಗೆ ಕೋಪ ಬರುತ್ತದೆ. ಆ ಕ್ಷಣ ತನ್ನ ಪದವಿಗೆ ರಾಜೀನಾಮೆ ಕೊಟ್ಟು, ತನ್ನ ಅಧಿ

---

7, ಈ ಹೆಸರು ಅವನಿಗೆ ಏಕೆ ಬಂತೆಂಬುದು ವಿಚಾರಣೀಯ.

8. ಹರಿಹರ ತನ್ನ ಕೃತಿಯಲ್ಲಿ ಕೇಶಿರಾಜನಿಗೆ ಅಧಿಕಾರ ಪ್ರಾಪ್ತಿಯಾದುದರ ಬಗ್ಗೆ ಹೀಗೆ ಹೇಳುತ್ತಾನೆ. ಒಮ್ಮೆ ಪೆರ್ಮಾಡಿರಾಯ ತನ್ನ ಆಸ್ಥಾನಕ್ಕೆ ಬಂದಿದ್ದ ಬ್ರಾಹ್ಮಣರನ್ನು ಕುರಿತು ತನ್ನಲ್ಲಿ ಮಂತ್ರಿಯಾಗಬಲ್ಲ ಯೋಗ್ಯಜನರ ಬಗ್ಗೆ ಪ್ರಶ್ನಿಸಿದಾಗ, ಕೊಂಡಗುಳಿಯ ಮಹಾಜನರು (=ಬ್ರಾಹ್ಮಣರು) ಉತ್ಸಾಹದಿಂದ ತಮ್ಮ ಊರಲ್ಲಿ ಒಬ್ಬ ಸಜ್ಜನರೂ ಭಾವಜ್ಞರೂ ಇದ್ದಾರೆಂದೂ ಅವರ 'ಶೀಲ' ಧರೆಗೆ ವಿಚಿತ್ರವೆಂದೂ ಹೇಳುತ್ತಾರೆ. ಆ ಮೂಲಕ, ವೀರಶೈವ 'ಶೀಲ'ಗಳನ್ನು ಆಚರಿಸುತ್ತಿದ್ದ ಉನ್ನತಭಕ್ತರೆಂದು ಅವರ ಸೂಚಿಸಿದಾಗ, ಪೆರ್ಮಾಡಿ ಮೆಚ್ಚಿ, ಕೇಶಿರಾಜನಿಗೆ ಹೇಳಿ ಕಳುಹಿಸಿ ಮಂತ್ರಿಪದವಿ ಕೊಡುತ್ತಾನೆ. ಅವನ ತಂದೆಯೇ ಒಬ್ಬ ದಂಡನಾಯಕನಾಗಿರುವಾಗ, ಅಗ್ರಹಾರದ ಸೂಚನೆಗಳನ್ನು ತೆಗೆದುಕೊಂಡು ರಾಜ ಅವನಿಗೆ ಮಂತ್ರಿ ಪದವಿ ಕೊಡಬೇಕಾಗಿಲ್ಲ. ಹರಿಹರನ ನಿರೂಪಣೆ ಸಂಪೂರ್ಣ ಕಲ್ಪಿತವೆಂಬುವುದರಲ್ಲಿ ಅನುಮಾನವಿಲ್ಲ.

9. ಹರಿಹರನ ಪ್ರಕಾರ ವಿರುಪಾಕ್ಷದೇವರು ಎಂಬ ಅದೇ ಕೊಂಡಗುಳಿ ಊರಿನ 'ಸದ್ಭಕ್ತರು' 'ಕೇಶಿರಾಜನ ಗುರು ; ಮತ್ತು ಅವನ ಅದಿದೈವ ಸೋಮೇಶ್ವರ ('ಪ್ರಾಣನಾಥಂ ತನಗೆ ಸೋಮನಾಥಂ ನೋಡ'). ಕೇಶಿರಾಜ ತನ್ನ ಕೃತಿಗಳಲ್ಲಿ 'ಸೋಮನಾಥ'ನನ್ನು ಮತ್ತೆ ಮತ್ತೆ ಸ್ಮರಿಸಿದ್ದಾನೆ. (ಉದಾ : ಕೃಪೆಯಿಂ ಜೀಯ ಸೋಮನಾಥ ರಕ್ಷಿಪುದೆನ್ನಂ' — ಲಿಂಗಸ್ತೋತ್ರದ ಕಂದ, ಪದ್ಯ ೨).

10. ಈ ಶಾಸನದಲ್ಲಿ 'ಕೇಶವ ದೇವರ' ಹೆಸರು ಬರುತ್ತದೆ. ಕಲಬುರ್ಗಿಯವರು ಅದನ್ನು ಗಮನದಲ್ಲಿಟ್ಟುಕೊಂಡು, ಆ ದೇವರ ಹೆಸರನ್ನು ಕೇಶಿರಾಜನಿಗೆ ಅವನ ತಂದೆತಾಯಂದಿರು ಇಟ್ಟಿರಬೇಕು. ಅಥವಾ ಅವನೇ ದೇವಾಲಯ ಕಟ್ಟಿಸಿ ತನ್ನ ಹೆಸರನ್ನು ದೇವಾಲಯಕ್ಕೆ ಇಟ್ಟಿರಬೇಕು, ಎಂದು ಊಹಿಸುತ್ತಾರೆ (ಕೊಂ. ಕೇ. ಕೃ. ಪ್ರಸ್ತಾವನೆ, ಪು.) ಈ ಎರಡೂ ಊಹೆಗಳು ಸಾಧ್ಯ. ದೇವರ ಹೆಸರು ಕೇಶವೇಶ್ವರ ಎಂದಿದ್ದರೆ ಕೇಶಿರಾಜ ಕಟ್ಟಿಸಿದನೆಂಬ ಊಹೆ ಸಾಧ್ಯವಾಗುತ್ತಿತ್ತು. ಆ ಕಾರಣ, ಆ ದೇವಾಲಯ ಮೊದಲಿಂದ ಆ ಊರಲ್ಲಿತ್ತು ಎಂಬ ಊಹೆಯೇ ಸರಿ. ಆ ದೇವರ ಹೆಸರನ್ನು ಕೇಶಿರಾಜನಿಗೆ ಇಟ್ಟಿರಬಹುದು.

ಕಾರ ಸೂಚಕ ಚಿಹ್ನೆಗಳನ್ನು ಕಳಚಿಹಾಕಿ, ದಿವ್ಯವಸ್ತ್ರವನ್ನು ಕಳಚಿ 'ಕೇಶಾಂಬರ'ವನ್ನುಟ್ಟು ರಾಜಧಾನಿಯನ್ನು ತ್ಯಜಿಸುತ್ತಾನೆ[11]. ಅವನ ಹೆಂಡತಿ ಗಂಗಾಂಬಿಕೆಯೂ ಸರಳವಸ್ತ್ರಗಳನುಟ್ಟು ಹಿಂಬಾಲಿಸುತ್ತಾಳೆ. ಹಾಗೆ ಹೊರ ಬಂದವನನ್ನು ಕಲ್ಯಾಣಕ್ಕೆ ಸಮೀಪದಲ್ಲಿದ್ದ ಶಿವಪುರದ (ಇದು ಈಗಲೂ ಇದೆ) ಮೇದರ ಕೇರಿಯ 'ವಂಶವರ್ಧನ'ಎಂಬ ಹೆಸರಿನ ಬುಟ್ಟಿ ಹೆಣೆಯುವವನು ಸ್ವಾಗತಿಸುತ್ತಾನೆ. ಪ್ರಭುತ್ವವನ್ನು ಧಿಕ್ಕರಿಸಿ ನಿಂತ ವೀರಶೈವಧರ್ಮಕ್ಕೆ ಸಮಾಜದ ಕೆಳವರ್ಗದ ಜನ ಬೆಂಬಲವಾಗಿ ನಿಂತುದಕ್ಕೆ ಇದು ಸಂಕೇತವಾಗಿದೆ. ಕನ್ನಡ ಸಾಹಿತ್ಯ ಆಸ್ಥಾನವನ್ನು ಬಿಟ್ಟು ಸಮಾಜದ ಕಡೆ ಹೊರಳಿದ್ದಕ್ಕೂ ಇದು ಸಂಕೇತವಾಗಿ ನಿಲ್ಲುತ್ತದೆ. ಆ ಮೇದರವನ ನಿಜವಾದ ಹೆಸರೇನೇ ಇರಲಿ. (ವಂಶ=ಬಿದಿರು) ಆಸ್ಥಾನವನ್ನು ಬಿಟ್ಟು ಹೊರಬಂದ ಶರಣಧರ್ಮದ ಮೊದಲ ಪೋಷಕನಾಗಿ ನಿಂತ ವಂಶವರ್ಧನನ ಹೆಸರು ವೀರಶೈವಧರ್ಮ, ಸಾಹಿತ್ಯಗಳಲ್ಲಿ ಉಲ್ಲೇಖನೀಯವಾಗಿದೆ. ಕೇಶಿರಾಜನ ದಿಟ್ಟತೆಗಿಂತ ರಾಜನನ್ನು ಧಿಕ್ಕರಿಸಿ ಬಂದ ವ್ಯಕ್ತಿಯೊಬ್ಬನಿಗೆ ಬೆಂಬಲ ಕೊಡಲು ಸಿದ್ಧನಾದ ಮೇದರವನ ದಿಟ್ಟತೆ ಇನ್ನೂ ದೊಡ್ಡದು. ಮುಂದೆ ವೀರಶೈವಧರ್ಮ ಹಿಡಿದ ಹಾದಿಯನ್ನು ಈ ಘಟನೆಗಳು ಎಷ್ಟು ಸ್ಪಷ್ಟವಾಗಿ ಧ್ವನಿಸುತ್ತವೆ! ವಂಶವರ್ಧನನನ್ನು ಹರಿಹರ 'ಮಹಾಮಾಹೇಶ್ವರ' ಎಂದು ಕರೆದಿದ್ದಾನೆ. ಅದೇ ಕವಿ ಬಸವರಾಜದೇವರ ರಗಳೆಯಲ್ಲಿ ಅಸ್ಪೃಶ್ಯರಾಗಿದ್ದ ಶಿವಭಕ್ತರನ್ನು 'ಹಿರಿಯಮಾಹೇಶ್ವರ'ರೆಂದು ಕರೆದಿದ್ದಾನೆ. ಕೆಂಭಾವಿ ಭೋಗಣ್ಣಗಳ ರಗಳೆಯೂ (ಹರಿಹರನ ರಗಳೆಗಳು, ಪು.೨೭೪) 'ಹಿರಿಯ ಭಕ್ತ' ಎಂದು ಅಸ್ಪೃಶ್ಯನನ್ನು ಕರೆದಿದೆ. ಮೇಲುಜಾತಿಯ ಶಿವಭಕ್ತರು ಬರಿಯ 'ಮಾಹೇಶ್ವರ'ರಾದರೆ, ಕೆಳಜಾತಿಯ ಶಿವಭಕ್ತರು 'ಹಿರಿಯ ಮಾಹೇಶ್ವರರು' ! ದಲಿತ ಜನಕ್ಕೆ ಅಂದಿನ ವೀರಶೈವಧರ್ಮ ಕೊಟ್ಟ ಸ್ಥಾನ ಇದು.

ಪೆರ್ಮಾಡಿಯನ್ನು ತಿರಸ್ಕರಿಸಿ ಬಂದ ಕೇಶಿರಾಜನ ಕೃತಿಗಳಲ್ಲಿ ಆ ಸ್ವತಂತ್ರಧೋರಣೆ ಎದ್ದುಕಾಣುತ್ತದೆ. ತನ್ನ 'ಲಿಂಗಸ್ತೋತ್ರದ ಕಂದ'ದಲ್ಲಿ (ಪದ್ಯ ೧೧) 'ಶಿವನೆ ಎನಗಾಳ್ದನೆಂಬಂ...ಆವನ್...ಅವನೆ ಮಾನವರತ್ನಂ...' ಎಂದೂ 'ಶೀಲ ಮಹತ್ವದ ಕಂದ'ದಲ್ಲಿ (ಪದ್ಯ ೨೧) 'ಭವಿವಂದನೆ...ಭವಿಸೇವೆಯ ಮಾಡದಿಪ್ಪಾತನೇ ಶೀಲಯುತಂ' ಎಂದಿರುವ ಮಾತುಗಳನ್ನು ಗಮನಿಸಿ. ನಾಲಗೆಯನ್ನು ಶಿವನಿಗೆ ಕೊಡುವದು ಸಲವತ್ತೈದನೆಯ ಶೀಲ. (ಸುರಂಗ ಕವಿ ತನ್ನ ನಾಲಗೆಯನ್ನು ಶಿವನಿಗೆ ಮಾರಿದೆನೆಂದು ಹೇಳಿಕೊಂಡಿದ್ದಾನೆ. ತ್ರಿಷಷ್ಟಿಪುರಾತನ ಚಾರಿತ್ರ, ೧–೨೯. ಹರಿಹರನದೂ ಇದೇ ಧೋರಣೆ). ಹರಿಹರ ಹೇಳುವ ಕತೆಯಾಗಲಿ, ಕೇಶಿರಾಜನ ಮಾತುಗಳೇ ಆಗಲಿ, ಅವನ ನಡತೆಯೇ ಆಗಲಿ–ಅಂದಿನ 'ಶೈವವ್ರತ'ದ, ಅರ್ಥಾತ್ 'ವೀರಭಕ್ತಿ' ಪ್ರಚುರವಾಗಿದ್ದ ವೀರಶೈವಧರ್ಮದ ದೃಷ್ಟಿಧೋರಣೆಗಳ್ನು ಸ್ಪಷ್ಟಪಡಿಸುತ್ತವೆ.

ಕೇಶಿರಾಜನ ವಂಶವರ್ಧನನ ಮನೆಯಲ್ಲಿ ಏಳು ದಿನ ಊಟ ನಿದ್ದೆಗಳಿಲ್ಲದೆ, 'ಶಿವಮರುಳ್ಗೊಂಡು' ಶರಣರ ಜೊತೆ ಪುರಾತನ ಗೀತಗಳನ್ನು ಹಾಡುತ್ತ ಶಿವನ ಮಾತಾಡುತ್ತ ಕಾಲ ಕಳೆದ. (ಈ ಶರಣಸಂಗವೇ ಅನುಭವಗೋಷ್ಠಿ ಮತ್ತು ಅನುಭವ ಗೋಷ್ಠಿ ಬಸವಣ್ಣನ ಕಾಲದಲ್ಲಿ ಹುಟ್ಟಿಕೊಂಡಿತು ಎಂಬ ಜನಪ್ರಿಯ ನಂಬಿಕೆ ಆಧಾರವಿಲ್ಲದ್ದು.) ಅವನ ಹೆಂಡತಿ ಗಂಗಾದೇವಿ ಬಂದು ಗಂಡನನ್ನು ಎಚ್ಚರಿಸಿದಳು. ಆಗ, ಎಚ್ಚತ್ತ ಕೇಶಿರಾಜ

> 'ಸಿರಿಯಂ ಹಾರಿಸಿ ಭವಿಗಳಂ ಮೀರಿಸಿ ಸತ್ಯಶರಣರಂ ತೋರಿಸಿ ಸುಗಸುಖಲತೆಯಂ ಬೇರೂರಿಸಿ ಕರುಣಿಸಿದ ಕಂತುಮದಹರ ಸೌರಾಷ್ಟ್ರದೊಡೆಯ ಸೋಮೇಶತಂದೆ ಸೋಮನಾಥಾ ಸೊಡ್ಡಳ ಪ್ರಭುವೇ...

ಎಂದು 'ಸವಿನುಡಿ' ಯಿಂದ ಬಣ್ಣಿಸಿದ. ಈ ಗದ್ಯದ ವಾಕ್ಯಗಳಲ್ಲಿ ಕೇಶಿರಾಜನ ಯಾವುದೋ ಅನುಪಲಬ್ಧ ಪದ್ಯವನ್ನು ಹರಿಹರ ಹುದುಗಿಸಿದ್ದಾನೆಂಬಲ್ಲಿ ಸಂದೇಹವಿಲ್ಲ. ಮನುಷ್ಯರನ್ನು ಹೊಗಳದೆ ದೈವವನ್ನು ಮಾತ್ರ ಸ್ತೋತ್ರಮಾಡುವ ಪರಂಪರೆಗೆ ಕೇಶಿರಾಜ ಆದ್ಯನಾಗಿದ್ದಾನೆ. 'ಪೊಡವಿಯೊಳನ್ಯರ ಪೊಗಳ್ವಾ ನುಡಿಗಳು ಕಲಿತೊಡಲ ಹೊರೆವ ಕರ್ಮಾತುರ' ಮನೋಭಾವವನ್ನು ಒಂದು ಪದ್ಯದಲ್ಲಿ (ಮಂತ್ರಮಹತ್ವದ ಕಂದ, ಪದ್ಯ ೭) ಖಂಡಿಸಿರುವುದನ್ನು ಗಮನಿಸಬಹುದು. ರಾಜನನ್ನು ಹೊಗಳುತ್ತಿದ್ದ ತನ್ನ ಕಾಲದ ಕವಿಗಳನ್ನೂ ಇಲ್ಲಿ ಕವಿ ಟೀಕಿಸುತ್ತಿದ್ದಾನೆ.

ಪೆರ್ಮಾಡಿರಾಯನ ಕೇಳಿಕೆಯಂತೆ ಮತ್ತೆ ಮಂತ್ರಿಪದವಿ ಸ್ವೀಕರಿಸಿದ ಕೇಶಿರಾಜ ದಂಡನಾಯಕನ ಮುಂದೆ ತೆಲುಗು ಜೊಮ್ಮಣ್ಣನೆಂಬ ಬೇಟೆಗಾರ, ಮಾಂಸಾಹಾರಿ ಶಿವಭಕ್ತನ ಮನೆಗೆ ಹೋಗುತ್ತಾನೆ. ಮೇಲುವರ್ಗದ ಕೇಶಿರಾಜ ಸಸ್ಯಾಹಾರಿ;

---

11. ಶ್ರೀ ಎಚ್. ದೇವೀರಪ್ಪನವರು 'ಕೇಶಾಂಬರ' ಕ್ಕೆ ಇಲ್ಲಿ 'ಗೋಂಗಡಿ ಬಟ್ಟೆ' ಎಂದರ್ಥ ಮಾಡಿರುವುದು ಸರಿಯಾಗಿದೆ. (ಉಡುತಡಿಯ ಮಹಾದೇವಿಯರ ರಗಳೆ, ಶಿವಕುಮಾರ ಪ್ರಕಾಶನ, ಬೆಂಗಳೂರು. ಪೀಠಿಕೆ XXXVI) ಮುಂದೆ ಕೇಶಿರಾಜ ಮೇದರ ಜಾತಿಯ ವಂಶವರ್ಧನನ ಮನೆಗೆ ಹೋದಾಗ, ಅವನು 'ಕೇಶಾಂಬರಮಂ ಬಿಡಿಸಿ ಧವಲದುಕೂಲ' ವನ್ನು ಉಡಿಸಿದನೆಂಬಲ್ಲಂತೂ ಕೇಶಾಂಬರವು ಒಂದು ಬಗೆಯ ಬಟ್ಟೆ ಎಂಬುದು ಸ್ಪಷ್ಟ. ಕುರಿಯಂತಹ ಯಾವುದಾದರೂ ಪ್ರಾಣಿಯ ಕೂದಲಿನಿಂದ ಮಾಡಿದ್ದು ಕೇಶಾಂಬರ. ಅಕ್ಕಮಹಾದೇವಿ 'ಕೇಶಾಂಬರೆ' ಯಾಗಿ ಹೋದಳು ಎಂಬ ಮಾತಿಗೆ 'ನಗ್ನಳಾಗಿ' ಎಂದು ಅರ್ಥೈಸುವದಕ್ಕಿಂತ, 'ಒರಟು ಬಟ್ಟೆ ಧರಿಸಿ' ಎಂದರ್ಥೈಸುವುದು ಉಚಿತ ಎಂಬ ದೇವೀರಪ್ಪನವರ ವಾದ ಸಮರ್ಪಕವಾಗಿದೆ.

ಜೊಮ್ಮಣ್ಣ ಮಾಂಸಹಾರಿ. ಆದರೆ ಶಿವ ಜೊಮ್ಮಣ್ಣನನ್ನು ಎತ್ತಿ ಹಿಡಿದ ಎಂದು ಕವಿ ನಿರೂಪಿಸುತ್ತಾನೆ. ಮುಂದೆ, ಕೇಶಿರಾಜ ತನ್ನ ಊರಿಗೆ ಬರುತ್ತಿರುವಾಗ ಬೆಟ್ಟ ಗಟ್ಟಗಳನ್ನು ದಾಟಿ, ತೊರೆ ಬನಗಳನ್ನು ನೋಡುತ್ತ ಬರುತ್ತಿರುವಾಗ ದಾರಿಯಲ್ಲಿ, ನದಿ ದಡದ ಮಾವಿನ ಮರದ ನೆಳಲಲ್ಲಿ ಕುಳಿತು ಪೂಜೆಗೆ ತೊಡಗುತ್ತಾನೆ. ಇದು ಹರಿಹರನ ಕತೆಯಾದರೆ, ಪ್ರಕೃತಿಪ್ರೇಮಿಯಾದ ಕೇಶಿರಾಜನ ಬೆಟ್ಟ, ಕಾಡುಗಳಲ್ಲಿ ಏಕಾಂತವಾಗಿ ಶಿವಪೂಜೆಯಲ್ಲಿ ತಲ್ಲೀನನಾಗುವ ಬಯಕೆಯನ್ನು ತನ್ನ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾನೆ. (ಲಿಂಗಸ್ತೋತ್ರದ ಕಂದದಲ್ಲಿ)

ಬೆಟ್ಟದ ಘಟ್ಟದ ಗುಹೆಯೊಳ
ಗಟ್ಟಡವಿಯೊಳೆಯ್ದೆ ಶಿವನಗದ ಗಹ್ವರದೊ
ಳ್ಕಟ್ಟೇಕಾಂತದೆ ದುರಿತಘ
ರಟ್ಟನನನುಭವಿಪ ಸುಖಮೆಂದಾದಪುದೋ (೪೬)

ಆನುಂ ನೀನುಂ ಬೆಟ್ಟುಂ
ಕಾನನಮುಂ ತೀರ್ಥಜಲಮುಮಲ್ಲದೆ ಪೆಱತೊಂ
ದೇನುಮಣಮಿಲ್ಲದೆಡೆಯೊಳು
ಧ್ಯಾನಿಸುವುದಪೇಕ್ಷೆಯೆನಗೆ ಗಿರಿಜಾರಮಣಾ (೪೭)

ಅರಣ್ಯದೊಳಗೆ ರಭಸದೆ
ಘೋರನೆ ಪರಿತಪ್ಪ ನದಿಯ ತಟದೊಳ್ಕುಳ್ಳಿ
ರ್ದಾರೊಡನೆಡ ಬಲನಿಲ್ಲದು
ಮಾರಮಣನ ಚರಣಸಂಗವೆಂದಾಪುದೋ (೯೯)

ಅಂದಿನ ಸಾಹಿತ್ಯದ ನಾಯಕನಾದ ರಾಜನು ಕೇಶಿರಾಜನಲ್ಲಿ ಶಿವ ಆಗುತ್ತಾನೆ; ರಾಜಾಸ್ಥಾನದ ಜಾಗದಲ್ಲಿ ಶಿವನ ಆಸ್ಥಾನವಾದ ಪ್ರಕೃತಿ ನಿಲ್ಲುತ್ತದೆ. ರಾಜಾಸ್ಥಾನದಿಂದ ಬಿಡುಗಡೆ ಹೊಂದಿದ, ಪ್ರಕೃತಿಯ ಚೆಲುವಿನ ಮಧ್ಯೆ ಭಕ್ತಿಯ ಅನುಸಂಧಾನದ ಮೊತ್ತ ಮೊದಲ ಮುಕ್ತಕಾವ್ಯ ಕೇಶಿರಾಜನಲ್ಲಿದೆ.

ನದಿಯ ದಂಡೆಯ ಮೇಲೆ, ವೇದಿಕೆಯಲ್ಲಿ ಅಲಂಕೃತವಾಗಿದ್ದ ಲಿಂಗವನ್ನು ಒಂದು ಹಕ್ಕಿ ಕೊಂಡೊಯ್ದು ನದಿಯೊಳಗೆ ಬೀಳಿಸುತ್ತದೆ. ಲಿಂಗ ಕಳೆದುಹೋದರೆ ಭಕ್ತ ಪ್ರಾಣವನ್ನು ಕಳೆದುಕೊಳ್ಳಬೇಕೆಂಬುದು ಕೇಶಿರಾಜನು ಒಪ್ಪಿದ್ದ ಧಾರ್ಮಿಕ ಪರಂಪರೆಯಲ್ಲಿತ್ತು. ಅದರಂತೆ ಅವನು ಆತ್ಮಹತ್ಯೆಗೆ ಸನ್ನದ್ಧನಾದಾಗ ಜನ ತಡೆದು ನಿಲ್ಲಿಸಿ, ಲಿಂಗ ದೊರಕದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳಬಹುದೆಂದು ಸೂಚಿಸುತ್ತಾರೆ. ಅದಕ್ಕೆ ಒಪ್ಪಿದ ಕೇಶಿರಾಜ ಹರಿಗೋಲನ್ನು ಹತ್ತಿ ನದಿಯ ಮಧ್ಯಕ್ಕೆ ಹೊರಟಾಗ ಕೆಳಗಿನ ಮಾತುಗಳನ್ನು ಆಡಿದಂತೆ ಹರಿಹರ ವರ್ಣಿಸುತ್ತಾನೆ:

ಎನ್ನ ಸತಿಯಲ್ಲದನ್ಯಕ್ಕೆಳಸಿ ನಿಂದೊಡಂ
ನಿನ್ನವರ್ಗಲ್ಲದನ್ಯರ್ಗಿನಿತನಿತ್ತೊಡಂ
ನುಡಿವಲ್ಲಿ ನಿತ್ಯವಲ್ಲದೆ ಬೇರೆ ನುಡಿದೊಡಂ
ನಡೆವಲ್ಲಿ ನಾ ದುರಾಚಾರದಿಂ ನಡೆದೊಡಂ
ಮನಸಿನೊಳ್ನೀನಲ್ಲದನ್ಯವಂ ನೆನೆದೊಡಂ
ಕನಸಿನೊಳ್ ನೀನಲ್ಲದನ್ಯವಂ ಕಂಡೊಡಂ
ಇದು ದಿವ್ಯಂ............

ಎಂದು ಹೇಳುತ್ತ ಆ 'ಶಿವವ್ರತಿ' ದೋಣಿ ಹತ್ತಿದನಂತೆ (ಹೋಲಿಸಿ, ಕೇಶಿರಾಜನ ಮಾತು : 'ಇದು ಸಾಕ್ಷಾತ್ ಶೈವವ್ರತವು... ಮಂತ್ರಮಹತ್ವದ ಕಂದ, ಪದ್ಯ ೯೬). ಮತ್ತೆ ಈ ರಗಳೆಯ ಸಾಲುಗಳಲ್ಲಿ ಕೇಶಿರಾಜನ ಯಾವುದೋ ಪದ್ಯ ಹುದುಗಿರಬಹುದು. ಇಲ್ಲಿ ನಾವು ಗಮನಿಸಬೇಕಾದುದೆಂದರೆ, ಕಾವ್ಯ ಅನುಭವದಿಂದ ಮೂಡಿಬಂದಿದೆ. ಕಾವ್ಯ ಯಾರೋ ಹೇಳಿ ಮಾಡಿಸಿದ್ದಲ್ಲ, ಅಥವಾ ಮನೆಯಲ್ಲಿ ಚಿಂತಿಸಿ ಕಲ್ಪಿಸಿ ಯೋಚಿಸಿ ಬರೆದದ್ದಲ್ಲ. ವಚನಕಾರರ ಕೃತಿಗಳಂತೆಯೇ ಕೇಶಿರಾಜನಲ್ಲೂ ಕವಿತೆ ಅನುಭವದ ವಿಸ್ತರಣೆಯಾಗಿ (extension) ಮೂಡಿಬಂದಿದೆ.

ಇಷ್ಟಲಿಂಗ ಕಳೆದರೆ ಶರಣ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ತತ್ತ್ವವನ್ನು ಮುಂದಿನ ಬಹುತೇಕ ಎಲ್ಲ ವಚನಕಾರರು ಖಂಡಿಸಿದರು. ಹಾಗೆ ಆತ್ಮಹತ್ಯೆ ಮಾಡಿಕೊಂಡು ಮಡಿದ ಶರಣನೊಬ್ಬನನ್ನು ಕಂಡು ನಡುಗಿದುದಾಗಿ ಸಿದ್ಧರಾಮ ಹೇಳಿದ್ದಾನೆ. ಅದೇನೇ ಇರಲಿ, ಶಿವನಿಷ್ಠೆಯನ್ನು ಅದರ ಮಿತಿಗೆ ಒಯ್ದ ಧರ್ಮವನ್ನು 'ವೀರ-ಶೈವ' ಎಂದು ಕರೆದಿರುವಲ್ಲಿ ಆಶ್ಚರ್ಯವೇನೂ ಕಾಣದು. ದೇಹಕ್ಕೆ ಕಾಯಿಲೆಯಾದರೆ ನಾರು, ಬೇರು, ಮಣಿ, ಮಂತ್ರಗಳನ್ನು ಅವಲಂಬನ ಬಾರದೆಂದೂ ಪಾದೋದಕವೇ

ನಿಷಧಿಯಾಗಬೇಕೆಂದೂ ಒಂದು ಶೀಲ ಹೇಳುತ್ತದೆ. ಅದಕ್ಕನುಗುಣವಾಗಿ, ಕೇಶಿರಾಜ 'ತನುವಿಗೆ ತಾನೌಷಧಂಗಳೆಂಬಿವನೊಲ್ಲೆಂ' ಎಂದು ತನ್ನ ಪ್ರತಿಜ್ಞೆಯನ್ನು ಹೇಳುತ್ತಾನೆ (ಮಂತ್ರಮಹತ್ವದ ಕಂದ, ಪದ್ಯ ೧೦೮). ಕೇಶಿರಾಜ, ಆ ದೃಷ್ಟಿಯಿಂದ, ನಿಜವಾದ 'ವೀರ'ಶೈವನಾಗಿ ಬದುಕಿದ.

ಕೇಶಿರಾಜನ ಜೀವನಚರಿತ್ರೆಯನ್ನು ಹೇಳುವಾಗ ಮುಖ್ಯವಾಗಿ ಹರಿಹರನನ್ನು ಆಧಾರವಾಗಿಟ್ಟುಕೊಂಡು, ಅಲ್ಲಲ್ಲಿ ಕೇಶಿರಾಜನ ಮಾತುಗಳನ್ನೂ ಉದ್ಧರಿಸಿರುವುದರ ಉದ್ದೇಶಗಳಲ್ಲಿ ಇದೂ ಒಂದು : ಕೇಶಿರಾಜನ ಬದುಕಿನ ವಿವಿಧ ಮುಖಗಳನ್ನು ಅವನ ಕೃತಿಗಳು ಅಲ್ಲಲ್ಲಿ ನಿನದಿಸುತ್ತವೆ : ಅವನ ಕೃತಿಗಳು ಆತ್ಮಚರಿತ್ರಾತ್ಮಕವಾಗಿವೆ. ಅಂತರಂಗವನ್ನು ಬಿಚ್ಚಿತೋರುವ ವಚನ ಸಾಹಿತ್ಯದ ಸ್ವರೂಪ ಅವನಲ್ಲಿ ಆಗಲೇ ಹೇಗೆ ಕಾಣಿಸಿಕೊಂಡಿದೆಯೆಂಬುದು ಇದರಿಂದ ಗೊತ್ತಾಗುತ್ತದೆ.

> ಆನು ಕವಿಯಾನು ನಮಗುಣಿ
> ಯಾನು ಮಹಾದಾನಿ ಸಕಲವಿದ್ಯಾ ಜಾಣಂ
> ಆನೆಂಬುದಳಿದು......

ಎಂಬಂತಹ ಪದ್ಯಗಳಲ್ಲಿ (ಮಂತ್ರ ಮಹತ್ವದ ಕಂದ, ಪದ್ಯ ೪೩) ವ್ಯಕ್ತಿಯ ಆತ್ಮಶೋಧನೆ ಕಾಣುತ್ತದೆ. ವಚನಗಳನ್ನು ಅವು ನೆನಪಿಗೆ ತರುತ್ತವೆ, ಪ್ರಕಾರದ (form) ದೃಷ್ಟಿಯಿಂದಲ್ಲ, ವಸ್ತುವಿನ(content) ದೃಷ್ಟಿಯಿಂದ, ಧೋರಣೆಯ (attitude) ದೃಷ್ಟಿಯಿಂದ.

## ೩

ಅವನ ಕೃತಿಗಳಲ್ಲಿ ವ್ಯಕ್ತವಾಗಿರುವ ಅವನ ಧರ್ಮದ ವಿಷಯವನ್ನು ಪ್ರಸ್ತಾಪಿಸೋಣ. (ಸಾಹಿತ್ಯದ ಚರಿತ್ರೆಯ ವಿಷಯಕ್ಕೆ ಇದು ಸಂಪೂರ್ಣ ಪ್ರಸ್ತುತ). ಅವನ ಕಾಲದ ವೀರಶೈವಧರ್ಮದ ಬಗ್ಗೆ ಮಾತನಾಡುವದು ಅಷ್ಟು ಸುಲಭವಲ್ಲ. ಅವನ ತಂದೆ ನಿಂಬಣಯ್ಯ ಕ್ರಿ. ಶ. ೧೦೭೫ರಲ್ಲಿ ಬಲ್ಲವರಸ ಎಂಬುವನಿಂದ ಕಾಳಾಮುಖ ಸಂನ್ಯಾಸಿ ಪರುಷಪಂಡಿತದೇವರಿಗೆ ದತ್ತಿ ಕೊಡಿಸಿರುವ ವಿಷಯ ಶಾಸನವೊಂದರಲ್ಲಿದೆ[12]. ಅವನೂ ಕೇಶಿರಾಜನೂ ಅಗ್ರಹಾರಗಳಿಗೆ ದತ್ತಿ ಕೊಟ್ಟಿದ್ದಾರೆ. ಕೇಶಿರಾಜನ ಕೃತಿಗಳಲ್ಲಿ ಹೆಸರು ಹೇಳಿ ಯಾವುದೇ ಮತವನ್ನೂ ಖಂಡಿಸಿಲ್ಲವೆಂಬುದನ್ನು ಗಮನಿಸಬೇಕು. 'ಶೀಲ'ಗಳನ್ನು ಹೇಳುವಾಗ 'ಭವಿ' ಉಲ್ಲೇಖಮಾಡಿ, ಭವಿಗಳ ಜೊತೆ ಸಂಪರ್ಕ, ಸಂಬಂಧ, ಭವಿವಂದನೆ, ಭವಿಪ್ರಶಂಸೆಗಳನ್ನು ನಿಷೇಧಿಸಿದ್ದಾನೆ[13]. ಇಲ್ಲಿ 'ಭವಿ' ಯೆಂದರೆ ಭಿನ್ನಧರ್ಮೀಯರು ಎಂದೇ ಅರ್ಥ. ಅವನಲ್ಲಿ 'ವೀರಶೈವ'[14], ಲಿಂಗಾಯತ[15], ಎಂಬ ಮಾತುಗಳು ಬಂದಿವೆ. ಅಂಗದ ಮೇಲೆ ಲಿಂಗವನ್ನಾಗಲಿ, ಲಿಂಗದ ಮುದ್ರೆಯನ್ನಾಗಲಿ ಧರಿಸುವುದು ಲಿಂಗಾಯತ ಎಂಬ ಶೀಲ. (ಹಾಗೇ ಧರಿಸುವವನೇ 'ಲಿಂಗಾಯತ' ಎಂಬ ಅರ್ಥವೂ ಸ್ಪಷ್ಟ. ಕೇಶಿರಾಜನ ಈ ಶೀಲದ ವಿವರಣೆ 'ಲಿಂಗಾಯತ' ಹೆಸರನ್ನು ಸಮರ್ಪಕವಾಗಿ ವಿವರಿಸುತ್ತದೆ). 'ವೀರಶೈವ'ದಲ್ಲಿನ ಶಬ್ದದಲ್ಲಿ 'ವೀರ'ವು ಒಂದು ಮನೋಭಾವವನ್ನು ಹೇಳುತ್ತದೆ. ಸಾಧಕನನ್ನು ಶಿವನ ಹತ್ತಿರಕ್ಕೆ ನಡೆಸುವ ಆಚರಣೆಯೇ ಶೀಲ; ಶಿವಮಾರ್ಗಾಚಾರವಲ್ಲದ್ದೇ ದುಶ್ಶೀಲ ('ಶಿವಸನ್ನಿಹಿತದು ಶೀಲಂ, ಶಿವಮಾರ್ಗಾಚಾರವಲ್ಲದುದು ದುಶ್ಶೀಲಂ...'). 'ಶೀಲ'ಕ್ಕೆ 'ಶಿವಶೀಲ' ಎಂಬುದು ಪರ್ಯಾಯ ನಾಮ. ('ಶಿವಮಯ ಅಥವಾ ಮಂಗಳ ಮಯವಾದ ಶೀಲ' ಎಂದಾದರೂ ಅರ್ಥೈಸಬಹುದು. ಅಥವಾ 'ಶಿವನತ್ತ ಕೊಂಡೊಯ್ಯುವ ಶೀಲ' ಎಂದಾದರೂ ಅರ್ಥೈಸಬಹುದು). ಸತ್ಯ, ಕ್ಷಮೆ, ಶಾಂತಿ, ಸಾಮಾನ್ಯರ ಬಗ್ಗೆ ಅನುಗ್ರಹ (ಕರುಣೆ), ಅರಿವು, ಸತ್ಪಾತ್ರಗಳನ್ನು ತಿಳಿವುದು–ಇವು ಆರೂ 'ಶೀಲಕ್ಕೆ' ಪರ್ಯಾಯ ಶಬ್ದಗಳು[16]. ಶೀಲಗಳು ಅರವತ್ತನಾಲ್ಕು: ತನಗೂ ತನ್ನ ಮನೆಯರೆಲ್ಲರಿಗೂ ಲಿಂಗಧಾರಣೆ; ಅಷ್ಟೇ ಅಲ್ಲ, ಪ್ರಾಣಿಗಳಿಗೂ ಲಿಂಗಮುದ್ರೆ ಹಾಕುವದು; ಜಂಗಮರ ಪಾದತೀರ್ಥದಿಂದ ಲಿಂಗಕ್ಕೆ ಮಜ್ಜನ[17]; ಗುರುಲಿಂಗಜಂಗಮವನ್ನು

---

12. SII. IX-i. No. 116, 1075 A. D.
13. ಭವಿಪಾಕಂ ಭವಿಭಾಂಡಂ । ಭವಿಲಿಂಗಂ ಭವಿಯ ಭೂಮಿ ಭವಿವಂದನೆಯುಂ । ಭವಿಸೋಟಂ ಭವಿಮಾಟಂ । ಭವಿಸೇವೆಯ ಮಾಡದಿಪ್ಪನೇ ಶೀಲಯುತಂ ॥ (ಶೀಲಮಹತ್ವದ ಕಂದ, ಪದ್ಯ ೨೧. ಹಾಗೆಯೇ ೪೫, ೪೬ ನೇ ಪದ್ಯಗಳನ್ನೂ ನೋಡಿ).
14. 'ವರ ವೀರಶೈವ ಸಿದ್ಧವ ಪರಿಯಾಯಗಳಿಂದಲಱಿದು' (ಶೀಲಮಹತ್ವದ ಕಂದ, ಪದ್ಯ ೧)
15. ಅಂಗದಲ್ಲಿ ಲಕ್ಷಣಾನ್ವಿತ । ಲಿಂಗದ ಮುದ್ರೆಯನು ವತ್ಸಗಂ ಧೇನುವಿಗಂ । ಅಂಗೀಕರಿಪುದು ಶೀಲವು ।ಲಿಂಗಾಯುತವಂತದೀಗ ಹನ್ನೊಂದನೆಯದು ॥ (ಶೀಲಮಹತ್ವದ ಕಂದ, ಪದ್ಯ ೩೩)
16. ಶೀಲಮಹತ್ವದ ಕಂದ, ಪದ್ಯ ೯೧.
17. ಈ ಪದ್ಧತಿ ಈಗಲೂ ಉಳಿದುಕೊಂಡು ಬಂದಿದೆ. ಮನೆಯಲ್ಲಿ ಗುರುವಿನ ಪಾದಗಳನ್ನು ತೊಳೆದ ನೀರಿನಿಂದ ಭಕ್ತರು ತಮ್ಮ ಇಷ್ಟಲಿಂಗಕ್ಕೆ ಅಭಿಷೇಕ ಮಾಡುತ್ತಾರೆ.

ಒಂದೇ ಎಂದು ಕಾಣುವುದು; ಶಿವಭಕ್ತರೇ ಗೋಗಳಿಗೆ ಹುಲ್ಲು ಹಾಕಬೇಕು; ಬಾವಿಗೆ ಬೇಲಿ ಹಾಕಿ ಮರೆಮಾಡಿ ಲಿಂಗಮುದ್ರೆ ಮಾಡಿಸಿ ಅಲ್ಲಿಂದಲೇ ನೀರು ತರಬೇಕು; ನೀರು ತರುವಾಗ ಭವಿಗಳ ದೃಷ್ಟಿಬೀಳದಂತೆ ವಸ್ತ್ರದಿಂದ ಮುಚ್ಚಿರಬೇಕು; ಕಾಯಿಲೆಯಾದರೆ ಔಷಧಿ ತೆಗೆದುಕೊಳ್ಳಕೂಡದು (ಪಾದೋದಕವೇ ಔಷಧ); ಗುರುಲಿಂಗಜಂಗಮ ಒಂದೇ; ಭಕ್ತರಲ್ಲಿ ಕುಲಭೇದವಿಲ್ಲ. ಶಿವಭಕ್ತನೇ ಕುಲವಂತ; ಭವಿಗಳ ಸಂಪರ್ಕ ವರ್ಜ್ಯ; ಭವಿಗಳ ನುಡಿ ಕೇಳಕೂಡದು, ಭವಿಗಳ ಕಾವ್ಯ ಓದಬಾರದು; ತೀರ್ಥಕ್ಷೇತ್ರಗಳಿಗೆ ಹೋಗಬಾರದು; ಜಾತಿ, ಜನನ ಪ್ರೇತದ ಹೊಲೆ ಇಲ್ಲ; ವಾರ ತಿಥಿ ತಾರಾಬಲ ಚಂದ್ರಬಲಗಳನ್ನು ನೋಡಬಾರದು; ಸಮಶೀಲದ ಜಂಗಮರ ಜೊತೆ ಉಣ್ಣುತ್ತಿರುವಾಗ, ಜಂಗಮ ಮಡಿದರೆ ತಾನೂ ಅವರ ಜೊತೆ ಮಡಿಯುವುದು[18]. ಇವು ಶೀಲಗಳಲ್ಲಿ ಕೆಲವು. ಇವುಗಳನ್ನು ನಿಷ್ಠೆಯಿಂದ ಆಚರಿಸುವುದೇ 'ಶೀಲವ್ರತ'; ಇದರ ಇನ್ನೊಂದು ಹೆಸರು 'ವೀರವ್ರತ'[19]. ಶಿವನನ್ನು ಕೇಂದ್ರವಾಗಿಟ್ಟುಕೊಂಡಿದ್ದ ಆ ಶೈವಕ್ಕೆ 'ವೀರ–' ಎಂಬ ಪೂರ್ವಪದ ಸೇರಿದ್ದುದರಲ್ಲಿ ಆಶ್ಚರ್ಯವಿಲ್ಲ. ಆದರೂ, ಧರ್ಮಕ್ಕೆ ಯಾವುದೇ ಹೆಸರಿರಲಿ–ಅದು ವೀರಶೈವವೇ ಆಗಿರಬಹುದು–ಧರ್ಮದ ಅನುಯಾಯಿಗಳನ್ನು ಮಾತ್ರ 'ಮಹೇಶ'ರೆಂದು ಕರೆಯುತ್ತಿದ್ದರು (ನೋಡಿ : ಶೀಲಮಹತ್ವದ ಕಂದ, ಪದ್ಯ ೧೮–೧೯). ಹಣೆ ಮೈತುಂಬ ವಿಭೂತಿ; ಶಿವಸ್ಮರಣೆ ಬಾಯಲ್ಲಿ, ಕೊರಳಲ್ಲಿ ಲಿಂಗ, ರುದ್ರಾಕ್ಷಿ – ಇದು ಆ ಕಾಲದ ವೀರಶೈವ ಭಕ್ತನೊಬ್ಬನ ಸಾಮಾನ್ಯಚಿತ್ರ. (ಅದೇ, ಪದ್ಯ ೮). ಬಸವಣ್ಣನಂತೆ[20], ಕೇಶಿರಾಜನೂ ಭಕ್ತನದು 'ಶಿವಕುಲ' ಎಂದೂ, ಶಿವಭಕ್ತರೇ ತನಗೆ ತಾಯಿತಂದೆಗಳೆಂದೂ ಹೇಳಿಕೊಂಡಿದ್ದಾನೆ ('ಶಿವಭಕ್ತರೆ ತನಗೆ ತಂದೆತಾಯಿಗಳೆಂದುಂ'– ಶೀಲಮಹತ್ವದ ಕಂದ, ಪದ್ಯ ೫೧).ಭಕ್ತರ 'ಮನೆಮಗ' ತಾನಾಗಬೇಕೆಂಬ ಬಯಕೆಯನ್ನು ಅವನು ವ್ಯಕ್ತಪಡಿಸಿದ್ದಾನೆ (ಅದೇ, ಪದ್ಯ ೫೨). ಬಸವಣ್ಣನವರಲ್ಲಿಯೂ 'ಮನೆಯ ಮಗ' ಎಂಬ ಮಾತಿದೆ. ಇದು ಸಂಸ್ಕೃತದ 'ಕುಲಪುತ್ರ'ಎಂಬ ಮಾತಿನ ಸಮಾನಾರ್ಥಕವಾಗಿದ್ದು, ಕನ್ನಡ ಶಾಸನಗಳಲ್ಲಿ 'ವೇಳೆವಾಳಿ' ಎಂಬರ್ಥದಲ್ಲಿ ಬಳಕೆಯಾಗಿದೆ[21]. ವೇಳೆವಾಳಿಯು ಭಕ್ತಿಯ ಪರಾಕಾಷ್ಠತೆಯನ್ನು ಹೇಳುತ್ತದೆ. ವಿಕ್ರಮಾದಿತ್ಯ VI ನ ಕಾಲದ ಅಧಿಕಾರಿಗಳಾಗಿದ್ದ ಶಿವಭಕ್ತರು ರಾಜನಿಗೆ 'ಜೋಳವಾಳಿ'ಗಳು ಮಾತ್ರರಾಗಿದ್ದಾರೆಂದೂ–ಎಂದರೆ, ಹುದ್ದೆಯ ದೃಷ್ಟಿಯಿಂದ ಮಾತ್ರ ರಾಜನಿಗೆ ನಿಷ್ಠೆ ತೋರುತ್ತಿದ್ದರು–ಅವರು ಹಣಕ್ಕಾಗಿ ಮಾತ್ರ ರಾಜನನ್ನು ಅವಲಂಬಿಸಿದ್ದರೆಂದೂ. ಶಿವನಿಗೆ ಮಾತ್ರ 'ವೇಳೆವಾಳಿ'ಗಳಾಗಿದ್ದರೆಂದೂ ಹರಿಹರ ವರ್ಣಿಸಿರುವುದನ್ನು ಗಮನಿಸಬೇಕು. ಅವರ ಅಂತರಂಗದ ನಿಷ್ಠೆ ಶಿವನಿಗೆ, ಶಿವಭಕ್ತರಿಗೆ, ಶಿವನಿಗಾಗಿ, ಶಿವಭಕ್ತರಿಗಾಗಿ ಅವರು ವೇಳೆವಾಳಿಗಳಂತೆ ಪ್ರಾಣ ತ್ಯಜಿಸಲೂ ಸಿದ್ಧರಾಗಿದ್ದರು. ರಾಜ ಸತ್ತರೆ ವೇಳೆವಾಳಿ ಪ್ರಾಣ ತ್ಯಜಿಸುತ್ತಿದ್ದ. ಕೇಶಿರಾಜ ಶಿವನಿಗೆ ವೇಳೆವಾಳಿಯಂತೆ ನಡೆದುಕೊಳ್ಳಲೂ ಸಿದ್ಧನಾಗಿದ್ದ. ಕೇಶಿರಾಜ ತನ್ನ ಇಷ್ಟಲಿಂಗ ಕಳೆದು ಹೋದಾಗ ಪ್ರಾಣತ್ಯಾಗಕ್ಕೆ ಸಿದ್ಧನಾದ. 'ವೀರಶೈವ'ದ 'ವೀರ' ಮಾತಿಗೆ ಏನು ನಿಜವಾದ ಅರ್ಥವೆಂಬುದನ್ನು ಮೇಲಿನ ಎಲ್ಲ ವಿವರಣೆ ಸ್ಪಷ್ಟಪಡಿಸುತ್ತದೆ. ಆ ಧರ್ಮದ ರಕ್ತದಲ್ಲಿಯೇ ನಂಬಿಕೆ, ಆಚರಣೆ, ಮಾತು, ನಡವಳಿಕೆ ಎಲ್ಲವರಲ್ಲೂ ಶಿವಪರವಾದ ಕ್ಷಾತ್ರ (militancy) ಇದೆ. 'ಮಹಾನುಭಾವ', 'ಶಿವಾನುಭಾವ' ಎಂಬ ಮಾತುಗಳು ಕೇಶಿರಾಜನಲ್ಲೂ ಬರುತ್ತವೆ. (ಲಿಂಗ ಸ್ತೋತ್ರದ ಕಂದ, ಪದ್ಯ ೩೩; ಶೀಲಮಹತ್ವದ ಕಂದ, ಪದ್ಯ ೪೭). ಮುಂದಿನವರಂತೆ ಇವನೂ 'ಕಾಯಕ'ದ ವಿವರಣೆ ಕೊಟ್ಟಿದ್ದಾನೆ[22]. ವ್ಯಕ್ತಿ ಯಾವುದೇ ವೃತ್ತಿಯನ್ನು ಮಾಡುತ್ತಿದ್ದರೂ ಅದನ್ನು 'ದೇವನ ಮುಖಕೆ' ಸಮರ್ಪಿಸಬೇಕು ಎಂಬ ಕಾಯಕದ ವಿವರಣೆ ಸರಿಯಾಗಿದೆ. 'ಜಂಗಮ' 'ನಿರ್ವಾಣ' 'ಭವಿ' ಎಂಬ ಪದಗಳೂ ಬಂದಿವೆ. ಜಂಗಮರನ್ನು ಶಿವನೆಂದು ಕಂಡಮೇಲೆ ಅವರಲ್ಲಿ ಅವಗುಣವನ್ನು ಹುಡುಕಬಾರದು ಎಂಬುದು ಅವನ ಕಾಲದಲ್ಲಿ ಜಂಗಮರಿಗಿದ್ದ ಪ್ರಾಶಸ್ತ್ಯಕ್ಕೆ ಸೂಚನೆ. ಭವಿವಂದನೆ, ಭವಿಪಾಕ ಇತ್ಯಾದಿಗಳನ್ನು ನಿಷೇಧಿಸಿದ್ದರೂ, 'ಭವಿ' ಮಾತಿನ ಅನ್ಯಧರ್ಮೀಯ ಎಂಬ ಅರ್ಥದ ಜೊತೆ. 'ಮನಸ್ಸಿನ ದೌರ್ಬಲ್ಯ' ಎಂಬ ಅರ್ಥವನ್ನು ಅವನು ಕೊಟ್ಟಿದ್ದಾನೆ. ('ಭವಿ ಮುಟ್ಟಲಾಗದೆಂಬಂ, ಭವಿಯಲ್ಲವೆ ತನಗೆ ಹೊನ್ನು ಹೆಣ್ಣು ಮಣ್ಣುಂ')[23]. ಭವಿಗಳ ಕೈಯಲ್ಲಿ ಮುಟ್ಟಿಸಿಕೊಳ್ಳಬಾರದೆಂಬುದನ್ನು ಅವನು ಒಪ್ಪುವುದಿಲ್ಲ. ಸತಿ–ಪತಿಭಾವದ ಸಾಧನೆಯ ಸೂಚನೆ ಒಂದು ಕಡೆ ಬಂದಿದೆ[24].

---

18 ಶೀಲಮಹತ್ವದ ಕಂದ, ಪದ್ಯ ೬೩.

19. ಅದೇ, ಪದ್ಯ. ೬. ಕುಂಬಾರ ಜಾತಿಯ ಬಮ್ಮಣ ಎಂಬಾತ ಸ್ನಾನ ಬಿಟ್ಟು, ಅನ್ನ ಬಿಟ್ಟು ಕುಂಭೇಶ್ವರ ದೇವಾಲಯವನ್ನು ಮಾಡಿಸಿದ್ದನ್ನು ಒಂದು ಶಾಸನ 'ವೀರವ್ರತ'ವೆಂದು ಕರೆಯುತ್ತದೆ. (Ep. Carn. XI. HK. 68, 1126 A. D.).

20. ಬಸವಣ್ಣ ತಾನು ಕಕ್ಕಯ್ಯ, ಚನ್ನಯ್ಯರ ಮನೆಗಳ ದಾಸದಾಸಿಯರಿಗೆ ಹುಟ್ಟಿದವನು ಎಂದು ಹೇಳಿಕೊಂಡಿರುವದನ್ನು ಗಮನಿಸಿ.

21. ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಮೈಸೂರು ವಿಶ್ವವಿದ್ಯಾನಿಲಯ, ೧೯೬೬), ಪು. ೨೦೬-೭.

22. ಆವ ಕೆಲಸಗಳ ಮಾಡಲು । ದೇವನ ಮುಖಕದನು ಸವೆಸಲದು ಕರ ಲೇಸುಂ । ಆವ ಸೇವೆಗಳ ಮಾಡಲು । ದೇವನದೆಂದೆಂಬನಾವನದು ಕಾಯಕವುಂ ॥ (ಶೀಲಮಹತ್ವದ ಕಂದ, ಪದ್ಯ ೯೮).

23. ಶೀಲ ಮಹತ್ವದ ಕಂದ, ಪದ್ಯ ೧೬.

24. ಲಿಂಗ ಸ್ತೋತ್ರದ ಕಂದ, ಪದ್ಯ ೮೦,— 'ಓಪನ ರತಿಯೊಳ್ನಲವಿಂ । ಚಾಪಳೆ ನಲಿನಲಿದು ಸುಖವನನುಭವಿಸುವವೋಲ್ ।
ಪಾಪಹರನಂಗಸಂಗದೊ । ಳಾಪೊಟ್ಟುಂ ಸುಖದ ಸೊಗಸದೆಂದಾದಪುದೋ ॥

ಕೇಶಿರಾಜನ ಧರ್ಮ ಮುಖ್ಯವಾಗಿ ಭಕ್ತಿಪ್ರಧಾನವಾದುದು. ಅಲ್ಲಿ ಶಾಸ್ತ್ರಜ್ಞಾನಕ್ಕಿಂತ ಭಕ್ತಿ, ಅನುಭವಗಳಿಗೆ ಮೇಲುಗೈ ಮಾತ್ರವಲ್ಲ, ಅವೇ ಪ್ರಥಮ. ಪಂಚಾಕ್ಷರಿ ಅಥವಾ ಷಡಕ್ಷರ ಮಂತ್ರವೊಂದೇ ಎಲ್ಲ ವೇದಾಂತ, ಶಾಸ್ತ್ರ, ಪುರಾಣ, ಆಗಮ, ತಂತ್ರ ಮಂತ್ರಗಳ ಸಾರವೆಂಬ ನಂಬಿಕೆಯಿದೆ. ಭಕ್ತಿಯೇ ಭಕ್ತನಿಗೆ ಮೂಲಧನ, ಕುಲ, ಬಲ, ಭಂಡಾರ, ಎಲ್ಲ. 'ಭಕ್ತಿರತಿ'ಯ ಸುಖದ ಮುಂದೆ ಎರಡನೆಯ ಸುಖ ಇಲ್ಲ. ಭಕ್ತಿಯೇ ಮೋಕ್ಷ ಮತ್ತು ಅದಕ್ಕದೇ ಗಮ್ಯ. ಭಕ್ತಿಯ ಮುಖ್ಯ ಲಕ್ಷಣವೆಂದರೆ ಅದು ಜಾತಿಗಳನ್ನು ಲಕ್ಷಕ್ಕೆ ತೆಗೆದುಕೊಳ್ಳುವುದಿಲ್ಲ. ಆದ್ದರಿಂದಲೇ ಕೇಶಿರಾಜ ಮಂತ್ರಿಯಾಗಿದ್ದರೂ, ಮೇದರ ಮನೆಗೆ ಬೇಟೆಗಾರನ ಮನೆಗೆ ಹೋಗಲು ಯಾವುದೇ ಅಡ್ಡಿಯೂ ಇರಲಿಲ್ಲ. 'ನರರೊಳಗೆ ಭಕ್ತರಧಿಕರ್, ಸುರರೊಳಗೆ ಪ್ರಮಥರಧಿಕರ್' ದೇವತೆಗಳಲ್ಲಿ ಶಿವನೇ ಶ್ರೇಷ್ಠ ('ಮೂಱುಂ ಕಣ್ಣ ಭವನಿಂದೆ ಪೆಗ್ಗಳಂ ದೈವಂ ಬೇಱಿಲ್ಲ')[25] ಕೇಶಿರಾಜ ದೇವಾಲಯ ಪೂಜೆಯನ್ನು ನಿರಾಕರಿಸಿದಂತೆ ಕಾಣುವುದಿಲ್ಲವಾದರೂ ಏಕಾಂತದಲ್ಲಿ ಇಷ್ಟಲಿಂಗಪೂಜೆಯನ್ನು ಮಾಡುತ್ತ 'ನಿರ್ವಾಣದ ಪರಮಸುಖ'ವನ್ನು ಪಡೆಯುವ ಕಡೆ ಅವನ ಒಲವಿದೆ[25]. ಲಿಂಗವನ್ನು ಕೊರಳಿಗೆ ಕಟ್ಟಿಕೊಳ್ಳುವ ಪದ್ಧತಿ ಕೇಶಿರಾಜನ ಕಾಲಕ್ಕಾಗಲೇ ರೂಪುಗೊಂಡಿದ್ದರೂ ('ಉರಸಜ್ಜೆಯ ಲಿಂಗವನ್...')[26], ಆ ಲಿಂಗವನ್ನು ಕರಸ್ಥಲದ ಮೇಲಿಟ್ಟು ಪೂಜಿಸುವ ಪದ್ಧತಿಯೂ ಇತ್ತು, ವೇದಿಕೆಯ ಮೇಲೆ ಇಟ್ಟು ಪೂಜಿಸುವ ಪದ್ಧತಿಯೂ ಇತ್ತು.

ಮೇಲಿನವು ಗಟ್ಟಿ ಸಂಗತಿಗಳು, ಎಂದರೆ ಸಾಕ್ಷ್ಯಾಧಾರಗಳ ಬೆಂಬಲ ಪಡೆದಿರುವ ಹೇಳಿಕೆಗಳು. ಆದರೆ ಈ ಮುಂದಿನ ಪ್ಯಾರಾದಲ್ಲಿ ಕೆಲವು ಸಾಧ್ಯ ಊಹೆಗಳನ್ನು ಮುಂದಿಡುತ್ತೇನೆ. ಕ್ರಿ.ಶ. ೧೨ನೇ ಶತಮಾನಕ್ಕೆ ಮುನ್ನ ವೀರಶೈವ ಎಂದು ಖಚಿತವಾಗಿ ಹೇಳಬಹುದಾದ ಯಾವುದೇ ಶಾಸನವೂ ದೊರೆತಿಲ್ಲವಾದ ಕಾರಣ, ಆ ಧರ್ಮ ಆ ಕಾಲಕ್ಕೆ ಸಾಮಾಜಿಕವಾದ ಗಣ್ಯಸ್ಥಾನವನ್ನು ಪಡೆದಿರಲಿಲ್ಲವೆಂದು ಹೇಳಬಹುದು. ಶಾಸನೋಕ್ತವಲ್ಲವಾದ ಕಾರಣ ಅಂತಹುದೊಂದು ಇರಲಿಲ್ಲವೆನ್ನುವುದು ಅವೈಜ್ಞಾನಿಕವಾಗುತ್ತದೆ. ಪಂಚಾಚಾರ್ಯರನ್ನು ಒಪ್ಪುವ ಇಂದಿನ 'ಶೀಲವಂತ'ರ ಆಚರಣೆಗಳಿಗೆ ಅಡಿಗಲ್ಲಾದ ಅರವತ್ತನಾಲ್ಕು ಶೀಲಗಳನ್ನು ಹೇಳುವ ಕೇಶಿರಾಜ, ಪಂಚಾಚಾರ್ಯರಲ್ಲಿ ಯಾರನ್ನೂ ಅಪ್ಪಿತಪ್ಪಿಯಾದರೂ ಸ್ಮರಿಸಿಲ್ಲವಾದ ಕಾರಣ ಮತ್ತು ರೇವಣಸಿದ್ಧ ಅಥವಾ ರೇಣುಕ, ಬಸವಣ್ಣನ ಹಿರಿಯ ಸಮಕಾಲೀನನೆಂಬುದು ಕತೆ (ಸಿದ್ಧರಾಮಚಾರಿತ್ರದ ಕತೆ), ಶಾಸನಗಳಿಂದ (ಸಿರಿವಾಳ ಶಾಸನ) ಸಿದ್ಧವಾಗುವುದರಿಂದ ಪಂಚಾಚಾರ್ಯರಿಂದ ಮತಸ್ಥಾಪನೆಯಾಯ್ತು ಎಂಬುದು ಈಚೆಗೆ ಯಾವುದೋ ಘಟ್ಟದಲ್ಲಿ ಕಲ್ಪಿತವಾದುದೆಂಬಲ್ಲಿ ಅನುಮಾನವಿಲ್ಲ. ಅವರಲ್ಲಿ ಎಲ್ಲರಿಗೂ ಐತಿಹಾಸಿಕತೆಯನ್ನು ಹೇಳುವುದು ಸದ್ಯಕ್ಕೆ ಕಷ್ಟವಾಗಿದೆ. ಬಸವನಿಗಿಂತ ಹಿಂದಿನ ಕರ್ನಾಟಕದ ಎಲ್ಲ ಶಿವಭಕ್ತರೂ, ಶಂಕರದಾಸಿಮಯ್ಯನನ್ನು ಬಿಟ್ಟರೆ ಬ್ರಾಹ್ಮಣೇತರರು. ಉದಾಹರಣೆಗೆ. ಕೇಶಿರಾಜ, ತೆಲುಗು ಜೊಮ್ಮಯ್ಯ, ಬಾಹೂರು ಜೊಮ್ಮಯ್ಯ, ವಂಶವರ್ಧನ, ಜೇಡರ ದಾಸಿಮಯ್ಯ (ಸು. ೧೧೪೦), ದೇವರದಾಸಿಮಯ್ಯ (ಸು. ೧೦೪೦), ಕೆಂಭಾವಿ ಭೋಗಣ್ಣ, ಕಕ್ಕಯ್ಯ, ಚನ್ನಯ್ಯ ಇತ್ಯಾದಿ. ಶಂಕರ ದಾಸಿಮಯ್ಯನೂ ಬ್ರಾಹ್ಮಣ್ಯವನ್ನು ಬಿಟ್ಟು ಇತ್ತ ಬಂದವನು. ಕರ್ನಾಟಕದಲ್ಲಿ, ಎಂದಿನಿಂದಲೋ ನಮಗೆ ತಿಳಿಯದು, ಶೂದ್ರ ಮತ್ತು ಪಂಚಮ ವರ್ಗದವರಲ್ಲಿ, ಜನಪ್ರಿಯವಾಗಿದ್ದ ಒಂದು ಶಿವಧರ್ಮದ ಪರಂಪರೆ ರಾಜ, ಆಸ್ಥಾನ, ಪಂಡಿತವರ್ಗ, ಬ್ರಾಹ್ಮಣವರ್ಗ, ಮಠ ಇವುಗಳ ಹೆಚ್ಚಿನ ಬೆಂಬಲವಿಲ್ಲದೆ ಹರಿದುಕೊಂಡು ಬಂದಿತ್ತೆಂದು ತೋರುತ್ತದೆ. ಆ ಧರ್ಮಕ್ಕೆ ನೈಷ್ಠಿಕ ಭಕ್ತಿಯೊಂದೇ ಬೆಂಬಲ ; ವೇದ, ಆಗಮ ಅಲ್ಲ. ಶಿವನ ಹೆಸರು ಹೇಳುವ ಎಲ್ಲವೂ ಅದಕ್ಕೆ ಮಾನ್ಯ. ಶಿವನ ಕೀರ್ತನೆ ಮಾಡುವ ಎಲ್ಲರೂ ಅದಕ್ಕೆ ಮಾನ್ಯ. ಅವರ ಭಕ್ತಿಯ ಮಾಧ್ಯಮ ಕನ್ನಡ (ಅವರಲ್ಲಿ ಪುರೋಹಿತವರ್ಗದ ಜಂಗಮರು ಅಲ್ಪಸ್ವಲ್ಪ ಸಂಸ್ಕೃತ ಕಲಿಯುತ್ತಿದ್ದಿರಬಹುದು.) ಮೇಲು ವರ್ಗ ದೂರ ಇಟ್ಟಷ್ಟು ಆ ಕೆಳವರ್ಗದವರ ಶಿವಭಕ್ತಿ ದೃಢವಾಯ್ತು, ಕಠಿಣವೂ ಆಯ್ತು. ಶೂದ್ರ ಸಹಜವಾದ ಒರಟುತನ, ಅಕೃತಕ ನಿಷ್ಠೆ, ಅದರ ಲಕ್ಷಣಗಳಲ್ಲೊಂದು. ಅವರ ಶಿವನಿಷ್ಠೆ, ವರ್ಣವಿಭೇದವಿಲ್ಲದೆ ಶಿವಭಕ್ತರನ್ನೆಲ್ಲ, ಅವರು ಮೇಲುವರ್ಗದವರು, ಅಸ್ಪೃಶ್ಯರೆನ್ನದೆ ಸಮಾನವಾಗಿ ಕಾಣುತ್ತಿದ್ದುದು, ರಾಜರಂತಹ ಲೌಕಿಕರನ್ನು ಅಲಕ್ಷ್ಯದಿಂದ ಕಾಣುತ್ತಿದ್ದುದು ಇವು ಆಡಳಿತವರ್ಗ ಮತ್ತು ಮೇಲುಧರ್ಮದವರ ಜೊತೆ ಈ ಶಿವಧರ್ಮಾನುಯಾಯಿಗಳು ಘರ್ಷಿಸಬೇಕಾಗುವಂತಹ ಸಂದರ್ಭಗಳನ್ನು ಹುಟ್ಟಿಸುತ್ತಿದ್ದುವು. ಬುದ್ಧಿಗಿಂತ ಆವೇಶ, ಶಾಸ್ತ್ರಕ್ಕಿಂತ ಅನುಭವ, ನಿಯಮಕ್ಕಿಂತ ಸ್ವಾತಂತ್ರ್ಯ, ಬರಹಕ್ಕಿಂತ ಮೌಖಿಕ ಪರಂಪರೆಯ ಹಾಡು, ಕಥಾಸಾಹಿತ್ಯ ಅವರಲ್ಲಿ ಮೇಲುಗೈಯಾಗಿದ್ದುವು. ಸಮಾಜದ ಶ್ರಮಜೀವಿಗಳಲ್ಲಿ ಪ್ರಚಲಿತವಾಗಿದ್ದ ಈ ನಂಬಿಕೆಯನ್ನು (Faith) 'ಮತ' ಎಂಬ ದೊಡ್ಡ ಹೆಸರಿನಿಂದ ಕರೆಯುವುದೂ ಕಷ್ಟವಾಗುತ್ತದೆ ('ಮತ' ಎಂದ ಕ್ಷಣ ಒಂದು ವ್ಯವಸ್ಥಿತ

---

25. ಲಿಂಗ ಸ್ತೋತ್ರದ ಕಂದ, ಪದ್ಯ ೫೯

26. ಲಿಂಗ ಸ್ತೋತ್ರದ ಕಂದ ೨, ಪದ್ಯ ೫೦.

ಸರ್ವದ್ವಂದ್ವಂ ಮಱೆದಾ । ನೊರ್ವನೆ ಏಕಾಂತದಲ್ಲಿ ಶಿವನನುಭವದೊಳ್ ।
ನಿರ್ವಂದದಿಂದಮಿರ್ಪಾ । ನಿರ್ವಾಣದ ಪರಮಸುಖಮುದೆಂದಾದಪುದೋ ॥

ನಡತೆ, ಸಾಂಘಿಕ ಪ್ರಯತ್ನ ಸೂಚಿತವಾಗುತ್ತದೆ.) ಲಿಂಗವನ್ನು ಅವರು ಧರಿಸುತ್ತಿದ್ದುದೂ ಎದೆ, ಹಣೆ, ತಲೆ, ಕಂಕಳು, ಬಾಯ ಒಳಭಾಗ ಇತ್ಯಾದಿ ಜಾಗಗಳಲ್ಲಿ. ಪೆಟ್ಟಿಗೆಗಳಲ್ಲಿ ಇಟ್ಟು ಕೊಂಡೊಯ್ಯುತ್ತಿದ್ದವರೂ ಉಂಟು. ಭಕ್ತಿಗೆ ಮಹತ್ವವಿದ್ದು ಅಶಾಸ್ತ್ರೀಯವಾಗಿ ಶಿವನನ್ನು ಪೂಜಿಸುವುದೇ ಶಾಸ್ತ್ರ, ಅಕ್ರಮವೇ ಅವರಲ್ಲಿ ಕ್ರಮ. ಬ್ರಾಹ್ಮಣರ ಹಿಡಿತದಲ್ಲಿದ್ದ ದೇವಾಲಯದ ಲಿಂಗಪೂಜೆ ಅವರಲ್ಲಿ ಹಲವರಿಗೆ ಅಲಭ್ಯವಾಗಿದ್ದುದರಿಂದ, ಅವರು ಆ ಲಿಂಗದ ಸಂಕ್ಷಿಪ್ತಾಕೃತಿಯನ್ನು ಮಾಡಿಕೊಂಡು ಕೊರಳಲ್ಲಿ ಕಟ್ಟಿಕೊಳ್ಳುತ್ತಿದ್ದರು, ಅಥವಾ ಗುರುವರ್ಗದವರಿಂದ ತೆಗೆದುಕೊಂಡು ಧರಿಸುತ್ತಿದ್ದರು. 'ಗುರು'ಗಳೂ ಅವರಲ್ಲೇ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಂಚರಿಸುತ್ತಿದ್ದ 'ಜಂಗಮ'ರೂ ವಿದ್ಯಾವಂತರಾಗಿದ್ದಿರಬಹುದು. ಇವರ ಮೂಲಕವಾಗಿ ದಶವಿಧ ಪಾದೋದಕ, ಅರವತ್ತನಾಲ್ಕು ಶೀಲ ಇತ್ಯಾದಿ ವ್ಯವಸ್ಥಿತ ಕಲ್ಪನೆಗಳು ಮತದ ಒಂದು ಭಾಗವಾಗಿ ಬಂದಿದ್ದಿರಬಹುದು. ಮೇಲೆ ನಾನು ಕೊಟ್ಟಿರುವ ಚಿತ್ರದ ಎಲ್ಲ ವಿವರಗಳನ್ನು ಸಮರ್ಥಿಸುವುದು ಸಾಧ್ಯವಿಲ್ಲವಾದರೂ, ಒಟ್ಟಾರೆ ಕೇಶಿರಾಜನದು ಮೂಲತಃ ಜನಸಾಮಾನ್ಯರಲ್ಲಿ ಆಚರಣೆಯಲ್ಲಿದ್ದ ಒರಟು, ಆದರೆ ನಿಜವಾದ ಮತಧರ್ಮವಾಗಿತ್ತೆಂದು ಹೇಳುವುದರಲ್ಲಿ ತಪ್ಪೇನೂ ಕಾಣುವುದಿಲ್ಲ.

ಕೇಶಿರಾಜನು ಹೇಳುವ ಶೀಲಗಳನ್ನು ನೋಡಿದರೆ ಈ ಮತವೂ ಕೆಲವು ತೀವ್ರ ವಿಧಿ ನಿಷೇಧಗಳನ್ನು ಹಾಕಿಕೊಂಡಿತ್ತು. ಯಾವುದೇ ಕಾಲದ ಯಾವುದೇ ಕೆಳವರ್ಗದ ಸಮಾಜದ ನಡವಳಿಕೆಯನ್ನು ವಿಶ್ಲೇಷಿಸಿದಾಗ ಎಲ್ಲ ಕಾಲಕ್ಕೂ ಅಲ್ಲಿ 'ತೀವ್ರ'ಗಳೇ (extremes) ಎದ್ದು ಕಾಣುವುದು. ತೀವ್ರಪ್ರೀತಿ, ತೀವ್ರದ್ವೇಷ, ತೀವ್ರಸ್ವಾತಂತ್ರ್ಯ, ತೀವ್ರಬಂಧನ, ತೀವ್ರದುಡಿಮೆ, ತೀವ್ರ ಸೋಮಾರಿತನ ಇವುಗಳನ್ನು ನಾವು ಗಮನಿಸಬಹುದು. ಹಾಗೆಯೇ, ಕೇಶಿರಾಜನ ಕಾಲದ ಶಿವಧರ್ಮ ಇಂತಹ ತೀವ್ರತೆಗಳಿಂದ ಕೂಡಿತ್ತು. ಎಲ್ಲ ಪರಂಪರೆಯನ್ನೂ ಧಿಕ್ಕರಿಸಿ, ಭಕ್ತಿಯೊಂದನ್ನೇ ಪ್ರಾಧಾನವಾಗಿ ಮಾಡಿಕೊಂಡ ಅಲ್ಲೂ ತೀವ್ರವಾದ ನಿಯಮಗಳನ್ನು ಕಾಣುತ್ತೇವೆ. ಶಾಸ್ತ್ರವಿರೋಧಿಧೋರಣೆ ಮತ್ತು ಕಠಿಣನಿಯಮ ಪರಿಪಾಲನೆ ಇವೆರಡೂ ವಿರೋಧಗಳು ಅಲ್ಲಿ ಕಾಣಿಸಿದರೆ ಅದನ್ನು ವಿವರಿಸಲು ಸಾಧ್ಯ. ಮೇಲಿನ ಮಾತುಗಳ ಹಿನ್ನೆಲೆಯಲ್ಲಿ ಕೇಶಿರಾಜನು ಹೇಳುವ 'ಶೀಲ'ಗಳು ಅಂತಹ ವಿರೋಧಗಳನ್ನು ಎತ್ತಿ ತೋರುತ್ತಿವೆ. ಆ ಶೀಲಗಳು ಆ ಕೆಳವರ್ಗದವರಲ್ಲಿಯೇ ಎಲ್ಲೋ ಕೆಲವರು ರೂಢಿಯಲ್ಲಿಟ್ಟುಕೊಂಡಿರಬಹುದು. ಆ ಶೀಲಗಳನ್ನು ಮುಂದಿನವರು ಕೆಲವರು ಹಾಗೇ ಉಳಿಸಿಕೊಂಡರು; ಚೆನ್ನಬಸವಣ್ಣ 'ಆಚಾರ' ಎಂಬ ಹೆಸರಿನಲ್ಲಿ ಅವುಗಳಲ್ಲಿ ಕೆಲವನ್ನು ಮಾತ್ರ ಉಳಿಸಿಕೊಂಡ; ಬಸವಣ್ಣನ 'ಭಾಷೆ' (ಅಥವಾ 'ಪ್ರತಿಜ್ಞೆ')ಗಳಲ್ಲಿ ಶೀಲಗಳ ಪ್ರಭಾವ ಇದೆ. ('ಶೀಲ', 'ಆಚಾರ', 'ಭಾಷೆ'ಗಳ ತೌಲನಿಕ ವಿಶ್ಲೇಷಣೆ ನಮ್ಮನ್ನು ಬೇರೆ ಕಡೆ ಕೊಂಡೊಯ್ಯುತ್ತದೆ.) ಇಲ್ಲಿ ಹೇಳಬೇಕೆಂದಿರುವ ಸಂಗತಿಯೆಂದರೆ, ಕೇಶಿರಾಜನ ಕಾಲದ ಜನಪ್ರಿಯ ಮತವನ್ನೇ ಮುಂದೆ ಬಸವ ಮುಂತಾದವರು ಆಶ್ರಯಿಸಿದ್ದು ಅಥವಾ ಎತ್ತಿ ಹಿಡಿದದ್ದು. ಬಸವನ ಕಾಲದಲ್ಲಿ ಸಾಮಾನ್ಯ ವರ್ಗದ ನೂರಾರು ವಚನಕಾರರು ಕಾಣಿಸಿಕೊಳ್ಳಲು ಜನಪ್ರಿಯ ಮಟ್ಟದ ಮತ ಕಾರಣವಾಗಿದೆ.

ಕೇಶಿರಾಜನ ಕಾಲದ ಮತ ಮುಖ್ಯವಾಗಿ, ಕಲ್ಬುರ್ಗಿಯವರು ಸರಿಯಾಗಿ ಹೇಳುವಂತೆ, 'ವೈಯಕ್ತಿಕ ಸಾಧನೆ'ಯನ್ನು ಪ್ರತಿಪಾದಿಸುತ್ತದೆ[27]. ವಚನಕಾರರ ಮತ ವ್ಯಕ್ತಿಯಿಂದ ಸಮೂಹದ ಕಡೆ ತಿರುಗಿದೆ, ವೈಯಕ್ತಿಕ ಸಾಧನೆಯಷ್ಟೇ ಸಾಮಾಜಿಕ ಸಂಸ್ಕರಣದ ಕಡೆ ಗಮನ ಕೊಟ್ಟಿದೆ. ಆದರೂ ವಚನಕಾರರ ಸಾಮಾಜಿಕ ಕಾರ್ಯದ ಮೂಲಪ್ರಚೋದನೆ, ಬೇರುಗಳು ಕೇಶಿರಾಜನ ಕಾಲದಲ್ಲಿ ನೆಲೆನಿಂತಿವೆ ಎಂಬುದನ್ನು ಯಾರು ಬೇಕಾದರೂ ಗುರುತಿಸಬಹುದು.

೪

ಮುಖ್ಯವಾಗಿ ಶಿವಭಕ್ತನಾದ ಕೇಶಿರಾಜ ಸಾಹಿತ್ಯರಚನೆಗೆ ಕೈಹಾಕಿದ್ದು ತನ್ನ ಅಂತರಂಗದ ಒತ್ತಡದ ಫಲವಾಗಿ. ಅವನು ಆರನೆಯ ವಿಕ್ರಮಾದಿತ್ಯನಂತಹ ಶಕ್ತ ಚಕ್ರವರ್ತಿಯ ಮಂತ್ರಿಯಾಗಿದ್ದರೂ ತನ್ನ ಕೃತಿಗಳಲ್ಲಿ ಅವನ ಹೆಸರನ್ನು ಉಲ್ಲೇಖ ಕೂಡ ಮಾಡುವುದಿಲ್ಲ. ಮನುಷ್ಯರನ್ನು ಸ್ತೋತ್ರ ಮಾಡದಿರುವ 'ಶೀಲ'ವನ್ನು ಅವನು ಕಟ್ಟುನಿಟ್ಟಾಗಿಯೇ ಪರಿಪಾಲಿಸಿದ್ದಾನೆ. ಅವನ ಕೃತಿಗಳ ಕೇಂದ್ರವಸ್ತು ಶಿವ, ಭಕ್ತಿ ಅಥವಾ ಇನ್ನೂ ಸರಿಯಾಗಿ ಹೇಳಬೇಕಾದರೆ ಅವನ ಅನುಭವ. ಆಯಾ ಸಂದರ್ಭ ಮನಸ್ಸಿನ ಮೇಲೆ ಮಾಡಿದ ಆಳವಾದ ಮತ್ತು ತೀವ್ರವಾದ ಅನುಭವ ಅವನಿಂದ ಪದ್ಯಗಳನ್ನು ಹೊರಡಿಸಿದ ರೀತಿಯನ್ನು ಹರಿಹರ ಚಿತ್ರಿಸಿದ್ದಾನೆ. ವಚನಕಾರರನ್ನು ಕುರಿತು ಹರಿಹರ ಹೇಳಿದ, 'ಅಂದಂದಿನುಚಿತಕ್ಕೆ ಗೀತಮಂ ಪಾಡುತಂ' ಎಂಬ ಮಾತನ್ನು ಕೇಶಿರಾಜನಿಗೂ ಅನ್ವಯಿಸಬಹುದು. ವಚನಗಳಂತೆಯೇ ಅವನ ಕೃತಿಗಳೂ ಬಹುಪಾಲು ಮುಕ್ತಕಗಳೇ. ವಚನದಂತಹ ಸಾಹಿತ್ಯಪ್ರಕಾರ

---

27. ಕೊಂಡಗುಳಿ ಕೇಶಿರಾಜನ ಕೃತಿಗಳು, ಪ್ರಸ್ತಾವನೆ, ಪು. VIII.

ಹುಟ್ಟುವುದಕ್ಕೆ ಇದು ಹಿನ್ನೆಲೆಯನ್ನು ಒದಗಿಸುತ್ತದೆ. ಕೇಶಿರಾಜನೇನೋ 'ಭವಿ ಹೇಳಿದ ಕಬ್ಬಮೇಳ್ವ ಕಿವಿಯುಂ ತಾಳದೆ'[28] ಎಂದು ಹೇಳಿದ್ದರೂ ಅವನು ಪಂಪ, ರನ್ನ, ನಾಗವರ್ಮ, ದುರ್ಗಸಿಂಹರನ್ನು ಓದಿಲ್ಲ ಎಂದು ಹೇಳುವುದಕ್ಕಾಗದು. ಜೈನ, ಬ್ರಾಹ್ಮಣ ಕವಿಗಳ ಕಾವ್ಯಗಳನ್ನು ಓದಿ ಹಳಗನ್ನಡವನ್ನೂ ಕಂದ ವೃತ್ತಗಳ ಧಾಟಿಯನ್ನೂ ತನ್ನ ಕೈವಶ ಮಾಡಿಕೊಂಡಿರಬೇಕು.

(ಅವನಿಗೆ ಜೈನಧರ್ಮದ ಪರಿಚಯವೂ ಚನ್ನಾಗಿ ಇದ್ದಿರಬೇಕು*). ಭವಿಗಳ ಕಾವ್ಯಗಳನ್ನು ಓದಬಾರದು ಎಂಬ ಅವನ ಮಾತೇ ಒಂದು ರೀತಿ ಅವನಿಗಿಂತ ಹಿಂದೆ ಶಿವಪರವಾದ ಸಾಹಿತ್ಯವಿತ್ತು ಎಂದು ಹೇಳಬಹುದೆಂದು ಯಾರಾದರೂ ವಾದಿಸಲು ಅವಕಾಶವಿದೆ. ಏಕೆಂದರೆ, ಅವನು ಹೇಗೂ ತನಗಿಂತ ಹಿಂದಿನ ಚಂಪೂಕವಿಗಳ ಕಾವ್ಯಗಳನ್ನು ಓದಿಯೇ ತಾನೆ ತನ್ನ ಶೈಲಿಯನ್ನು ರೂಢಿಸಿಕೊಂಡಿರಬೇಕು? ಆದರೆ, ಅವನು ತನಗಿಂತ ಹಿಂದಿನ ಯಾವುದೇ ಶರಣ ಕವಿಯ ಹೆಸರನ್ನೂ ಹೇಳಿಲ್ಲ. ಆದರೆ ಅದಕ್ಕಿಂತ ಮುಖ್ಯವಾಗಿ ಗಮನಿಸಬೇಕಾದ್ದು–ವಚನಕಾರರಾಗಲಿ ಹರಿಹರನಾಗಲಿ ಕಾಲದ ದೃಷ್ಟಿಯಿಂದ ಅವನಿಗಿಂತ ಪ್ರಾಚೀನ ಎಂದು ಹೇಳಬಹುದಾದ ಯಾವುದೇ ಕೃತಿಕಾರನ ಹೆಸರನ್ನೂ ಹೇಳಿಲ್ಲ. ಅವನಿಗಿಂತ ಹಿಂದಿದ್ದಿರಬಹುದಾದ ಯಾವನೇ ಶರಣಕವಿಯ ಹೆಸರನ್ನೂ ನಾವು ಹೇಳುವ ಸ್ಥಿತಿಯಲ್ಲಿಲ್ಲವಾದ್ದರಿಂದ, ಸದ್ಯಕ್ಕೆ ಅವನೇ ಮೊದಲ ಶರಣಕವಿ ಎಂದು ಹೇಳಬೇಕಾಗಿದೆ. 'ಪಂಚಾಕ್ಷರಿ'ಯೇ ಅವನಿಗೆ ಛಂದಸ್ಸಾಗಿತ್ತೆಂದೂ 'ಶಿವವಾಕ್ಯ'ವೇ ಅವನಿಗೆ 'ಶಬ್ದಶುದ್ಧಿ'ಯೂ 'ವ್ಯಾಕರಣ'ವೂ ಆಗಿತ್ತೆಂಬ ಹರಿಹರನ ಮಾತು[29] ಬಹಳ ಧ್ವನಿಪೂರ್ಣವಾಗಿದೆ. ಕೇಶಿರಾಜ ತನ್ನ ಕೃತಿಯನ್ನು ಹಳಗನ್ನಡದ ಕಂದವೃತ್ತಗಳಲ್ಲಿ ಬರೆದಿದ್ದರೂ ಭಾಷೆ ಮತ್ತು ಛಂದಸ್ಸುಗಳ ನಿಯಮಗಳನ್ನು ಅವನು ಉಲ್ಲಂಘಿಸಿದ್ದಾನೆ. ಅವನ ಹಳಗನ್ನಡದ ಮಧ್ಯೆ ನಡುಗನ್ನಡ ನುಸುಳಿ ಕಾಣಿಸಿಕೊಂಡಿದೆ. 'ಇಟ್ಟೆಡೆಯೊಳು', 'ಘಟ್ಟನೆಯೊಳು' (ಮಂತ್ರಮಹತ್ವದ ಕಂದ, ಪದ್ಯ ೨೩), 'ಪರದೈವಂಗಳನು' ಎಂಬ ನಡುಗನ್ನಡ ಸಹಜ ಸ್ವರಾಂತ ಶಬ್ದಗಳೂ, 'ವಾಗುಮನ' (<ವಾಙ್ಮನ), 'ತೆಱಪಿಲದೆ' (<ತೆಱಪಿಲ್ಲದೆ) ಎಂಬಂತಹ 'ಅಶುದ್ಧ' ಪ್ರಯೋಗಗಳೂ ಅಲ್ಲಿವೆ. ಕಂದಪದ್ಯದ ಎರಡನೆಯ ನಾಲ್ಕನೆಯ ಪಾದಗಳ ಕೊನೆಯ ಗಣಗಳು ಗುರ್ವಂತವಾಗಿರಬೇಕು. ಆದರೆ–∪∪ಅಥವಾ∪∪∪∪ ಇಂತಹ ಲಘು ಅಂತ್ಯದಲ್ಲಿರುವ ಗಣಗಳೂ ಕೇಶಿರಾಜನಲ್ಲಿ ಕಾಣಿಸಿಕೊಂಡಿವೆ. ಉದಾಹರಣೆಗೆ,

∪∪∪∪
ಲಿಂಗಾಯತವಂತದೀಗ ಹನ್ನೊಂ। ದನೆಯದು ॥

ಎಂಬ 'ಶೀಲಮಹತ್ವದ ಕಂದ'ದ ಪದ್ಯದ (೩೩) ಕೊನೆಯ ಸಾಲನ್ನು ನೋಡಬಹುದು. ಭಾಷೆ ಮತ್ತು ಛಂದಸ್ಸುಗಳ ನಿಯಮ ಪರಿಪಾಲನೆಯಲ್ಲಿ ಕವಿಗಿರುವ ಔದಾಸೀನ್ಯ ಕವಿಯ ಪಾಂಡಿತ್ಯದ ಅಭಾವದ ಚಿಹ್ನೆಯಲ್ಲ, ಅದು ಕವಿ ಗಮನದಲ್ಲಿಟ್ಟುಕೊಂಡಿರುವ ಓದುಗರು ವಿದ್ವಾಂಸರಲ್ಲವೆಂಬುದನ್ನು ಸೂಚಿಸುತ್ತದೆ. ಮತ್ತು ಇದು ವಚನಕಾರರ ಧೋರಣೆಗೆ ಬಹಳ ಸಮೀಪವಾದುದೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

'ಶೀಲಮಹತ್ವದ ಕಂದ'ದಲ್ಲಿ ವಿಷಯ ನಿರೂಪಣೆ ಮುಖ್ಯ; 'ಮಂತ್ರಮಹತ್ವದ ಕಂದ'ದಲ್ಲಿ ಷಡಕ್ಷರ ಮಂತ್ರದ ಮಹಿಮೆಯ ಘೋಷಣೆ ಮುಖ್ಯ–ಇಲ್ಲಿ ಕವಿಯ ಸ್ವಾನುಭವದ ಅಭಿವ್ಯಕ್ತಿಗೆ ಅವಕಾಶ ಕಡಮೆಯಿದ್ದರೂ ಕವಿಪ್ರತಿಭೆ ಅಲ್ಲಲ್ಲಿ ಅಭಿವ್ಯಕ್ತಗೊಂಡಿದೆ. ಆದರೆ, ಕವಿಯಾಗಿ ಕೇಶಿರಾಜ ತನ್ನನ್ನು ತಾನು ಪೂರ್ಣವಾಗಿ ವ್ಯಕ್ತಮಾಡಿಕೊಂಡಿರುವುದು 'ಲಿಂಗಸ್ತೋತ್ರದ ಕಂದ'ದಲ್ಲಿ. ಅವನ ಭಕ್ತಿ ಅಲ್ಲಿ ಹುಚ್ಚುಹೊಳೆಯಾಗಿ ಹರಿದಿದೆ. ಅವನ ಪದ್ಯಗಳು ಅವನ ಉತ್ಕಟಭಾವನೆಗಳಿಂದ ತುಂಬಿ ತುಳುಕಿವೆ. ಪುಲಕದಿಂದ ತನ್ನ ದೇಹ ನಾಟಿ ಮಾಡಿದ ಹೊಲದಂತಾಗಿ, ಕಣ್ಣು ಆನಂದಬಾಷ್ಪ ತುಂಬಿ ಚಿಲುಮೆಯಾಗಿ ಎಂದು ಕರಗು

28. ಶೀಲಮಹತ್ವದ ಕಂದ, ಪದ್ಯ ೬೮, ಭವಿಗಳ ಕಾವ್ಯಗಳನ್ನು ಓದದಿರುವುದು ಶೀಲಗಳಲ್ಲಿ ಒಂದು.

* ನೋಡಿ–ಶೀಲಮಹತ್ವದ ಕಂದ, ಪದ್ಯ ೮೩.

ಮತಿ ಶ್ರುತಿ ಮನ ಪರಿಯಾಯಂ । ಅತಿಜ್ಯೋತಿಯು ಕೇವಲಂಗಳೈದು ಜ್ಞಾನಂ ।
ಅತಿಶಯದಿ ತೋಱಲಾಗಂ । ಹಿತವಹ ಅಱುವತ್ತೊಂದನೆಯ ಶೀಲಂ...

ಈ ಪದ್ಯದಲ್ಲಿ ಹೇಳಿರುವ ಐದೂ ಜೈನಪರಿಭಾಷೆಯ ಪದಗಳು ಮತಿ, ಶ್ರುತಿ, ಮನ, ಪರ್ಯಾಯ, ಅವಧಿ (=ಅತಿ ಜ್ಯೋತಿ), ಕೇವಲ ಇವೈದೂ ಜೈನಧರ್ಮದ ಪ್ರಕಾರ ಜ್ಞಾನದ ಬೇರೆಬೇರೆ ಬಗೆಗಳು. ಜೈನರಲ್ಲಿ 'ಅವಧಿಜ್ಞಾನ' ಎಂದರೆ 'ಸ್ಥೂಲ ಇಂದ್ರಿಯಗಳಿಗೆ ಅಗೋಚರವಾದ ಪದಾರ್ಥಗಳ ಬಗ್ಗೆ ಅಸಾಧಾರಣವಾದ ಅನುಭೂತಿಯಿಂದ ಉಂಟಾಗುವ ಜ್ಞಾನ' (ಮಿರ್ಜಿ ಅಣ್ಣಾರಾಯ: ಜೈನ ಧರ್ಮ. ಸೇಡಬಾಳ, ೧೯೫೨, ಪು. ೪೯೮). ಇದಕ್ಕೆ 'ಅತಿಜ್ಯೋತಿ'ಯೆಂಬ ನಾಮಾಂತರವಿದ್ದುದು ಆಶ್ಚರ್ಯವಲ್ಲ (ಮತ್ತು ಈ ಶಬ್ದ ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನಿಘಂಟು'ವಿನಲ್ಲಿ ಬಿಟ್ಟುಹೋಗಿದೆ). ಜೈನರಲ್ಲಿ ಬಳಕೆಯಲ್ಲಿದ್ದ ಐದೂ ಜ್ಞಾನಗಳ ಕಲ್ಪನೆಯನ್ನು ಕೇಶಿರಾಜನ ಧರ್ಮ ಒಪ್ಪಿಕೊಂಡಿದೆ. ('ತೋಱಲಾಗಂ' ಎಂಬುದನ್ನು ತೋಱಲ್+ಆಗಂ ಎಂದೇ ಬಿಡಿಸಬೇಕು. 'ಆಗಂ'= ಆವಾಗ. 'ತೋಱಲಾಗಂ' ಎಂಬುದನ್ನು ನಿಷೇಧದಲ್ಲಿ ತೆಗೆದುಕೊಳ್ಳಲು ಅವಕಾಶವಿಲ್ಲ).

29. ಹರಿಹರನ ರಗಳೆಗಳು (ಸಂ.ಫ.ಗು.ಹಳಕಟ್ಟಿ), ಪು.೨೯೬.

ತ್ತೇನೆಯೋ ಎಂಬ ಅವನ ಕನಸು ನಮ್ಮ ಕಣ್ಣಮುಂದೆ ಕಟ್ಟುತ್ತದೆ[30]. ಶಿವಭಕ್ತರ ಪಾದಕಮಲಕ್ಕೂ ತನ್ನ ಮನಸ್ಸೆಂಬ ಅರಳಿದ ಕಮಲಕ್ಕೂ ಜೋಡುತಾವರೆಗಳಿಗಿರುವಂತೆ ಒಂದೇ ನಾಳ ಎಂದು ಲಭಿಸುತ್ತದೆಯೋ ಎಂಬ ಕಲ್ಪನೆ ಮನೋಹರವಾಗಿದೆ[31].

ಅಗೆಹೊಯ್ದು ತೆಱದೆ ಪುಳಕಂ । ನೆಗೆಯಲು ಸರ್ವಾಂಗದಿಂದೆ ಕಣ್ಣುಂ ಮನಮುಂ ।
ಬಗರಗೆಯಂದದಿನೊಸರ । ಲ್ಕಗಜೇಶನ ಕಂಡು ಕರಗುತೆಂದಿರ್ದಪೆನೋ ॥
ಎನ್ನ ವಶವಲ್ಲ ಮನವಿದು । ನಿನ್ನ ಪದಂಗಳ ನೆನೆಯಲ್ ಈಯದು ತಾನಿದು ।
ನಿನ್ನ ವಶವೆಂಬುದಱಿತೆಂ । ನಿನ್ನಂ ನೆನೆವಂತೆ ಪೇಳ್ಮನಕ್ಕಾಣತಿಯಾ ।
ಒತ್ತಂಬದಿಂದೆ ಮನಮಂ । ಪತ್ತಿಸಲೆನಗಱಿದು ಮನ್ಮನೋಲತೆಯದು ತಾ
ನೆತ್ತೆತ್ತ ನಿಮಿರ್ದು ಪರ್ಬಿದೊ । ಡತ್ತತ್ತಂ ನಿಂದು ನೀನಡರ್ಪಾಗಭವಾ ॥ 32

ಈ ಪದ್ಯಗಳು ನೇರವಾಗಿ ಕವಿಯ ಪ್ರಾಮಾಣಿಕ ಅನುಭವವನ್ನು ಓದುಗರಿಗೆ ಮುಟ್ಟಿಸುತ್ತವೆ. ಇಲ್ಲಿಯ ಪದಪ್ರಯೋಗದಲ್ಲಿ ಆಡಂಬರ ಅಬ್ಬರಗಳಿಲ್ಲ, ಬೆರಗು ಬಿನ್ನಾಣಗಳಿಲ್ಲ. ಇಲ್ಲಿಯ ಸರಳತೆ ಅವನ ಭಕ್ತಿಹೃದಯಕ್ಕೆ ಗವಾಕ್ಷವಾಗುತ್ತದೆ. ನನ್ನ ಮನಸ್ಸು ಹೋದತ್ತ ನೀನೇ ಅಲ್ಲಿಗೆ ಹೋಗಿ ಊರೆಗೋಲಾಗು ಎಂದು, ನೀನೇ ನನ್ನ ಮನಸ್ಸಿಗೆ ಬುದ್ಧಿವಾದ ಹೇಳಿ ನಿನ್ನನ್ನು ನೆನೆವಂತೆ ಮಾಡಿಕೋ ಎಂದು ದೇವರನ್ನೇ ಕೇಳುವುದರಲ್ಲಿ ಹೊಸತನವಿದೆ. ತನ್ನ ಶುಭ್ರಮನಸ್ಸಿನಲ್ಲಿ ಮೂಡಿನಿಂತ ಭಗವಂತನನ್ನು 'ತಿಳಿನೀರೊಳಗಣ ತಿಂಗಳ ಬಿಂಬ'ಕ್ಕೆ ಹೋಲಿಸಿರುವಲ್ಲಿ[33] ಕವಿಯ ಉಪಮಾಸಾಮರ್ಥ್ಯ ಮಾತ್ರವಲ್ಲದೆ, ಅವನೊಬ್ಬ ಶ್ರೇಷ್ಠ ಅನುಭಾವಿ ಎಂಬುದನ್ನೂ ತಿಳಿಸುತ್ತದೆ. ಹೂವಿಗೆ ಎರಗುವ ದುಂಬಿ, ಬಾಯಾರಿ ಬಿಸಿಲುಗುದುರೆಯನ್ನು ಅನುಸರಿಸಿ ಹೊರಟ ಮೃಗಗಳು ಇವು ಕವಿಲೋಕಕ್ಕೆ ಪರಿಚಿತ ಪ್ರತಿಮೆಗಳಾಗಿದ್ದರೂ ಅವುಗಳ ಬಳಕೆಯಲ್ಲಿ ಕೇಶಿರಾಜ ತನ್ನತನವನ್ನು ಮೆರೆದಿದ್ದಾನೆ. ಭಕ್ತನಾಗಿ ಅವನು ನಡೆಸಿದ ಸಾಧನೆ, ಅವನ ಒಳಹೋರಾಟ, ನಗು, ಅಳು, ಆಸೆ, ನಿರಾಸೆ ಇವೆಲ್ಲವೂ ಕಾವ್ಯಮಯವಾದ ಅಭಿವ್ಯಕ್ತಿಯನ್ನು ಪಡೆದಿವೆ.

ನಿಮ್ಮಡಿಗೆಱಗುಗೆ ತಲೆ ಶಿವ । ನಿಮ್ಮಂ ಪೂಜಿಸುಗೆ ಎನ್ನ ನಿಜಕರಯುಗಳಂ ।
ನಿಮ್ಮ ಪಾಡುಗೆ...ಗಿ[34] ನಿಮ್ಮಂ ಬಲಗೊಳ್ಗೆ ಕಾಲ್ಗಳೀಳುಂ ಭವದೊಳ್ ॥

ಇಂತಹ ರಚನೆಗಳು ಒಂದು ಶತಮಾನದ ನಂತರ ಬಂದ ಹರಿಹರನಿಗೆ ಸ್ಫೂರ್ತಿಯನ್ನು ಕೊಟ್ಟಿದ್ದರೆ ಆಶ್ಚರ್ಯವಿಲ್ಲ. ಶಿವನನ್ನು ಹರ್ಷದಲ್ಲಿದ್ದಾಗ 'ದೇವ' ಎನ್ನುತ್ತೇನೆ ; ಸರಸದಲ್ಲಿದ್ದಾಗ 'ದೇವುಗ' ಎನ್ನುತ್ತೇನೆ : ಇದು ನನ್ನ ತಪ್ಪಲ್ಲ–ಪರವಶತೆಯ ಫಲ ಇದು. ದಾಸಿಯನ್ನು ರಾಜ ಕರಸಿದರೆ ಅವಳು ಮಂಚ ಏರುತ್ತಾಳೆ. ಆಗ ರಾಜ ಎಂಬ ಶಿಷ್ಟಾಚಾರದ ಮಾತು ಬರುವುದಿಲ್ಲ, ಸರಸದಲ್ಲಿ ಅಶಿಷ್ಟದ ಮಾತಾಡುತ್ತಾಳೆ. ಇದು ಅವಳ ತಪ್ಪಲ್ಲ'[35]. ಈ ಅರ್ಥ ಬರುವ ಕೇಶಿರಾಜನ ಪದ್ಯಗಳು ಅವನ ಭಕ್ತಿಯ ಆಧಿಕ್ಯದ ಕುರುಹುಗಳಾಗಿವೆ. ದೈವದೊಡನೆ ಏಕಾಂತದಲ್ಲಿ ಅವನು ನಡೆಸಿದ ಅನುಸಂಧಾನವನ್ನು ಅವು ಹೇಳುತ್ತವೆ.

ಅನುಭವ ಸಮೃದ್ಧಿ, ಪ್ರಾಮಾಣಿಕ ಅಭಿವ್ಯಕ್ತಿ, ನಿರ್ಮಲಚಾರಿತ್ರ್ಯಗಳಿಂದಾಗಿ ಈ ಕವಿ ಬಸವ ಮೊದಲಾದ ವಚನಕಾರರ ಮೇಲೆ, ಹರಿಹರನಂತಹ ಕವಿಗಳ ಮೇಲೆ ಪ್ರಭಾವವನ್ನು ಬೀರಿದ ಕೆಲವು ಉದಾಹರಣೆಗಳು :

1) ಕರಿಯಂಕುಶಕಂಜುಗುಮಾ । ಗಿರಿಯಂಜುಗು ಕುಲಿಶಕ್ಕೆ ತಮಂಧಂ ಪಱಿಗುಂ ।
ಖರಕಿರಣಕ್ಕೆಮಗಂ । ಪರಿವೊಡೆ ಪಾಪೋಂ ನಮಃ ಶಿವಾಯೆಂಬ ಪದಂ ॥ (ಕೇಶಿರಾಜ-ಮಂತ್ರಮಹತ್ವದ ಕಂದ, ೯೪)

ಕರಿಯಂಜುವುದಂಕುಶಕ್ಕಯ್ಯಾ;
ಗಿರಿಯಂಜುವುದಂಕುಶಕ್ಕಯ್ಯಾ;
ತಮಂಧವಂಜುವುದು ಬೇಗೆಗಯ್ಯಾ;
ಪಂಚಮಹಾಪಾತಕವಂಜುವುದು ಕೂಡಲಸಂಗನ ನಾಮಕ್ಕಯ್ಯಾ ॥ (ಬಸವಣ್ಣ)

2) ನೆರದಿರ್ದ ಮುಗಿಲ ಮಂಜಿನ । ತೆರಳಿಕೆ ಕುಡಿಮಿಂಚು ಗಾಳಿಗೊಡ್ಡಿದ ಸೊಡರೀ ।
ಸರೀರವಿದ ನೆಚ್ಚಿ ಕೆಡದಿರು । ಹರಜಪಮೆಮಗೋಂ ನಮಃ ಶಿವಾಯೆಂಬ ಪದಂ ॥ (ಮಂತ್ರಮಹತ್ವದ ಕಂದ, ಪದ್ಯ ೭೬)

ಸಂಸಾರವೆಂಬುದೊಂದು ಗಾಳಿಯ ಸೊಡರು
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯ !
ಇದ ನೆಚ್ಚಿ ಕೆಡಬೇಡ-ಸಿರಿಯೆಂಬುದ
ಮಱೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ ॥ (ಬಸವಣ್ಣ)

---

30. ಲಿಂಗ ಸ್ತೋತ್ರದ ಕಂದ, ಪದ್ಯ ೩೫.
31. ಅದೇ, ಪದ್ಯ ೫೦.
32. ಅದೇ, ಪದ್ಯ ೭೯–೮೦.
33. ಅದೇ, ಪದ್ಯ ೬೪.
34. ಈ ಸಾಲನ್ನು 'ನಿಮ್ಮಂ ಪಾಡುಗೆ ನಾಲುಗೆ' ಎಂದು ಸುಲಭವಾಗಿ ಪುನಾರಚಿಸಬಹುದು.
35. ಲಿಂಗಸ್ತೋತ್ರದ ಕಂದ, ಪದ್ಯ ೯೧–೨.

3) ಮೊಗದ ತೆರೆ ನೆಗೆದು ಸೆರೆಗಳ್ । ಬಿಗಿದು ಶಿರಂ ನಡುಗಿ ಪಿಡಿವ ನಡೆವಾ ಕೈಕಾಲ್ ।
ವಿಗೆಯುಡುಗದೆ ಜವ್ವನಮುಂ । ಜಗುಳದೆ ನೆನೆಯೋಂ ನಮಃ ಶಿವಾಯೆಂಬ ಪದಂ ॥ (ಕೇಶಿರಾಜ)

ನೆರೆ ಕೆನ್ನೆಗೆ ತೆರೆ ಗಲ್ಲಕೆ ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ
ಕಾಲ ಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ ಮೃತ್ಯು ಮುಟ್ಟದ ಮುನ್ನ
ಪೂಜಿಸು ನಮ್ಮ ಕೂಡಲಸಂಗಮದೇವನ ॥ (ಬಸವಣ್ಣ)

4) ಬಾರದ ಭವಂಗಳಲಿ ಬಂದು (ಕೇಶಿರಾಜ)
ಬಾರದ ಭವಂಗಳಲ್ಲಿ ಬರಿಸುವನಲ್ಲದೆ (ಬಸವಣ್ಣ)

5) ಎನ್ನ ಮನವೆಂಬ ಶುಕನಂ । ನಿನ್ನಗ್ಗದ ಭಕ್ತಿವನಿತೆ ಪಿಡಿದೊಯ್ದು ಶಿವಾ
ಯೆನ್ನೆಂದೋದಿಸಿ...... (ಕೇಶಿರಾಜ)
ನರವಿಂಧ್ಯದೊಳಗೆನ್ನ ಹುಲುಗಿಣಿಯ ಮಾಡಿ ಸಲಹುತ್ತ
ಶಿವ ಶಿವಾ ಎಂದೋದಿಸಯ್ಯ (ಬಸವಣ್ಣ)

6) ನಂಬು ಎರಡಿಲ್ಲದೀಶನ । ನಂಬಿದೊಡಮರೇಂದ್ರ ವಿಷ್ಣುವ್ರಜರ ಪದಂಗಳ್ । (ಕೇಶಿರಾಜ)
ನೆಱೆನಂಬೋ ನೆಱೆ ನಂಬೋ ಧರಧುರವಿಲ್ಲದೆ ಸಾಮವೇದಿಗಳಂತೆ......
ನಂಬಿದೆಯಾದೊಡೆ ತನ್ನನೀವ (ಬಸವಣ್ಣ)

7) ಸೆಜ್ಜೆಯನೆ ತೆಗೆದು ನೋಡಲ್ಕೆ...ಜಜ್ಜನೆ ಜರಿವುತ್ತೆ...... (ಕೇಶಿರಾಜ)
ಜಜ್ಜನೆ ಜರಿದೆನು ಜಜ್ಜನೆ ಜರಿದೆನು ಜಜ್ಜನೆ ಜರಿದೆನು ನೋಡಯ್ಯಾ (ಬಸವಣ್ಣ)

ಕಮಲದಲ್ಲಿ ರಮಿಸುವ ದುಂಬಿ, ಕರಗುವ ಆಲಿಕಲ್ಲು, ಗರಹೊಡೆಯುವುದು, ಹಾವಿನ ವಿಷ ಇತ್ಯಾದಿ ಪ್ರತಿಮೆಗಳು ಬಸವಣ್ಣನಲ್ಲೂ ಬಂದಿವೆ.

ಮೇಲಿನ ಉದಾಹರಣೆಗಳು ಬಸವನ ಮೇಲೆ ಕೇಶಿರಾಜ ಬೀರಿರುವ ದಟ್ಟಪ್ರಭಾವಕ್ಕೆ ಸ್ಪಷ್ಟ ಉದಾಹರಣೆಗಳು, ಮೊದಲ ಉದಾಹರಣೆಯಲ್ಲಿ ಕೇಶಿರಾಜ ಸೂರ್ಯನ ಪ್ರತಿಮೆ ತಂದಿದ್ದರೆ, ಬಸವಣ್ಣ ಬೇಗೆಯ ಉದಾಹರಣೆ ತಂದಿದ್ದಾನೆ. ಉಳಿದಂತೆ ಕೇಶಿರಾಜನ ಮಾತುಗಳು ಹಾಗೇ ಬಂದಿವೆ. ಇಷ್ಟು ಪ್ರಭಾವಿತನಾಗಿದ್ದರೂ, ತನಗಿಂತ ಹಿಂದಿನ ಜೇಡರ ದಾಸಿ, ಕಕ್ಕಯ್ಯ, ಚನ್ನಯ್ಯರನ್ನು ಸ್ಮರಿಸುವ ಬಸವಣ್ಣ ಕೇಶಿರಾಜನನ್ನು ಹೆಸರೆತ್ತಿ ಸ್ಮರಿಸದಿರುವುದು ಆಶ್ಚರ್ಯವಾಗಿದೆ*. ಕೇಶಿರಾಜನ 'ಕಾಮಿಸಿತು ಕಾಯಭೋಗಂ, ಕಾಮಿಸದದು ಲಿಂಗಭೋಗಂ' ಎನ್ನುವ ಮಾತು ಚನ್ನಬಸವಣ್ಣನಲ್ಲಿ 'ಬಯಸಿ ಬಂದುದು ಅಂಗ ಭೋಗ, ಬಯಸದೆ ಬಂದುದು ಲಿಂಗಭೋಗ'[36] ಎಂಬ ಮಾತಾಗುತ್ತದೆ.

ಕೇಶಿರಾಜನ ಪದ್ಯಗಳಿಗೆ ಹರಿಹರ ಮನಸೋತಿದ್ದಾನೆ ಮತ್ತು ಅವನಿಂದ ಪ್ರಭಾವಿತನಾಗಿದ್ದಾನೆಂಬುದಕ್ಕೆ ಒಂದೇ ಉದಾಹರಣೆ ಸಾಕು :

* ಕೇಶಿರಾಜನಿಗೂ ಬಸವಣ್ಣನಿಗೂ ಇರುವ ಸಾಮ್ಯ ಗಮನಾರ್ಹ. ಇಬ್ಬರೂ ಅಗ್ರಹಾರಕ್ಕೆ ಸೇರಿದವರು. ಒಬ್ಬ ಶಿವಭಕ್ತ, ಇನ್ನೊಬ್ಬ ಬ್ರಾಹ್ಮಣನ ಮಗ. ಇಬ್ಬರೂ ಹಿರಿಯ ಅಧಿಕಾರದಲ್ಲಿದ್ದವರು-ಒಬ್ಬ ಕಲ್ಯಾಣ ಚಾಲುಕ್ಯರಲ್ಲಿ, ಇನ್ನೊಬ್ಬ ಕಲ್ಯಾಣ ಚಾಲುಕ್ಯ ರಾಜ್ಯವನ್ನು ಅಪಹರಿಸಿ ಪಟ್ಟಕ್ಕೆ ಬಂದ ಬಿಜ್ಜಳನಲ್ಲಿ. ಇಬ್ಬರೂ ಒಂದೇ ರಾಜಧಾನಿಯಲ್ಲಿ (ಕಲ್ಯಾಣದಲ್ಲಿ) ಸುಮಾರು ೩೦ ವರ್ಷಗಳ ಅಂತರದಲ್ಲಿ ಆಡಳಿತದಲ್ಲಿ ಭಾಗಿಗಳು. ಇಬ್ಬರೂ ತಮ್ಮ ದೊರೆಗಳ ಕೋಪಕ್ಕೆ ಪಾತ್ರರು. ಇಬ್ಬರೂ ಕೆಳವರ್ಗದವರ ಜೊತೆ ನಿಕಟಸಂಪರ್ಕವನ್ನು ಹೊಂದಿದ್ದ ಭಕ್ತರು, ಭಾವುಕರು, ಸಾಹಿತಿಗಳು. ಆಕಸ್ಮಿಕವೆನ್ನಿಸಬಹುದು : ಇಬ್ಬರ ಹೆಂಡತಿಯರ ಹೆಸರೂ ಗಂಗಾದೇವಿ. ಕೇಶಿರಾಜ ವಾಸ್ತವವಾಗಿ ರಾಜನಿಗೆ ನಮಸ್ಕರಿಸುವುದಿಲ್ಲ, ಕೈಲಿರುವ ಮುದ್ರೆಯುಂಗುರಕ್ಕೆ ನಮಸ್ಕರಿಸುತ್ತಾನೆ ಎಂಬ ಆರೋಪಕ್ಕೆ ಗುರಿಯಾದ; ಬಸವಣ್ಣನ ಮೇಲೂ ಅದೇ ಸ್ವರೂಪದ ಆರೋಪ ಬಂತೆಂದು ಕತೆಗಳಿವೆ.

36. ಚನ್ನಬಸವಣ್ಣನವರ ವಚನಗಳು (ಸಂ. ಆರ್.ಸಿ. ಹಿರೇಮಠ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೬೫, ವಚನ ೫೪೫. ಈ ಸಾಮ್ಯವನ್ನು ಡಾ॥ ಕಲ್ಬುರ್ಗಿಯವರ ಪ್ರಸ್ತಾವನೆಯಿಂದ ತೆಗೆದುಕೊಂಡಿದ್ದೇನೆ. ಕೇಶಿರಾಜನ ಮಾತು ಅರುವತ್ತನೆಯ ಶೀಲವನ್ನು ಹೇಳುತ್ತದೆ. ಹೊಸಮನೆ ಆರಾಧ್ಯರು ಸಂಕಲಿಸಿದ ಶೀಲಗಳಲ್ಲಿ ಅರುವತ್ತನೆಯ ಶೀಲ ಹೇಳುವಾಗ 'ಬಯಸಿ ಬಂದದ್ದು ಅಂಗಭೋಗ, ಬಯಸದೆ ಬಂದದ್ದು ಲಿಂಗಭೋಗವೆಂದು ಅನುಭವಿಸುವುದು ಅರುವತ್ತನೆಯ ಶೀಲ' ಎಂದಿದೆ. ಇಲ್ಲಿ ಚನ್ನಬಸವಣ್ಣನ ಮಾತುಗಳ ಬಳಕೆ ಇದೆ. ಹೊಸಮನೆ ಆರಾಧ್ಯರ ಸಂಕಲನದ ಹಸ್ತಪ್ರತಿ ಕಡೆ ಗಮನ ಸೆಳೆದವರು ಶ್ರೀ ಎಸ್. ಶಿವಣ್ಣನವರು.

ಆಸತ್ತೆ ಮಗನೆಯಕ್ಕಟ । ಬೇಸತ್ತೈ ಶಿಶುವೆಯೆಂದು ಕೃಪೆಯಿಂದೆನ್ನಂ ।
ಈಸಾ ನೀನಾರಯ್ಯದ । ಬೇಸಱು ಘನವೆಂತು ಬರ್ದುಕುವೆಂ ಬೆಸಸಭವಾ ॥

ಎಂಬ ಪದ್ಯವನ್ನು (ಲಿಂಗಸ್ತೋತ್ರದ ಕಂದ, ಪದ್ಯ ೮೫) ಹರಿಹರನ 'ರಕ್ಷಾಶತಕ'ದ

ಕರೆವಲ್ಲಿಂ ಮುನ್ನ ವೋವೋ ಮಗನೆ ಬಂದೆಂ ದಿಟಂ ಬಂದೆನೆಂದಾ
ದರದಿಂದಂ ನೀನೆ ಬಂದೆನ್ನವಯವನನಿತಂ ಮುಟ್ಟಿ ನೊಂದಾ ಬಳಲ್ದಾ
ಕರೆದಾ ಕಂದಾ ಎನುತ್ತಂ ಕೃಪೆ ಮಿಗೆ ನಲವಿಂ ನೋಡಿ ಕೊಂಡಾಡುತೆನ್ನೀ
ಶಿರದೊಳ್ ಕೈಯಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ।

ಎಂಬ ಪದ್ಯದಲ್ಲಿ ಸುಲಭವಾಗಿ ಗುರುತಿರಬಹುದು. ಹರಿಹರನಿಗೆ ಕೇಶಿರಾಜನ ಸಾಹಿತ್ಯದ ಪರಿಚಯ ಪೂರ್ಣವಾಗಿತ್ತೆಂಬುದನ್ನು ಆಗಲೇ ನೋಡಿದ್ದೇವೆ. ಲಿಂಗಸ್ತೋತ್ರದ ಕಂದ (ಭಾಗ ೨) ದಲ್ಲಿ ಎರಡು ಪದ್ಯಗಳ ತುಂಬ (೯೭,೯೮) ಬಂದಿರುವ ಹೂಗಳ ಪಟ್ಟಿ ಹರಿಹರನಿಗೆ 'ಪುಷ್ಪರಗಳೆ'ಯನ್ನು ಬರೆಯಲು ಪ್ರಚೋದನೆ ಕೊಟ್ಟಿರಬಹುದು.

೫

ಮೇಲಿನ, ಸ್ವಲ್ಪ ವಿಸ್ತಾರವೆನ್ನಿಸುವ ಆದರೆ ಅಗತ್ಯವಾದ ಚರ್ಚೆಯ ಸಾರಾಂಶದ ಹಿನ್ನೆಲೆಯಲ್ಲಿ ವೀರಶೈವಸಾಹಿತ್ಯದ ಆರಂಭವನ್ನು, ಆ ಆರಂಭದ ಹಿನ್ನೆಲೆಯಲ್ಲಿ ವಚನಸಾಹಿತ್ಯದ ಆರಂಭವನ್ನು ನೋಡಬಹುದು. ಪರಸ್ಪರ ಸಂಬಂಧವಿಲ್ಲವೆಂಬಂತೆ ಕಾಣುವ ಬಿಡಿಸಂಗತಿಗಳು ತರ್ಕಬದ್ಧವಾಗಿ ಹೊಂದಿಕೊಳ್ಳುತ್ತವೆಯೆಂಬುದು ಗಮನಿಸಬೇಕಾದ ಸಂಗತಿ. ಕೇಶಿರಾಜನ ಬದುಕು, ಕೃತಿಗಳ ವಿಶ್ಲೇಷಣೆ ವೀರಶೈವಸಾಹಿತ್ಯ, ವಚನಸಾಹಿತ್ಯಗಳ ಆರಂಭವನ್ನು ತಿಳಿದುಕೊಳ್ಳುವಲ್ಲಿ ಸಹಾಯಮಾಡುತ್ತದೆಯಾದ್ದರಿಂದ ಆ ವಿಷಯಗಳ ಚರ್ಚೆಗೆ ಈ ಸಂಪ್ರಬಂಧದಲ್ಲಿ ಪ್ರಾಮುಖ್ಯ ದೊರೆತಿರುವುದು ಅಪ್ರಸ್ತುತವಲ್ಲ.

೧. ವಚನಗಳು ವೀರಶೈವ ಸಾಹಿತ್ಯದ ಆರಂಭವಲ್ಲ. ಮೊದಲ ವೀರಶೈವ ಕವಿ ಕೇಶಿರಾಜ. ಅವನು ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಕಂದ, ವೃತ್ತಗಳನ್ನೇ ಬರೆದ.

೨. ಛಂದಸ್ಸಿನಲ್ಲಿ ಮಾತ್ರ ಅವನು ಪರಂಪರೆಯ ಪರಿಪಾಲಕನಾದನೇ ಹೊರತು, ವಸ್ತುವಿನ ದೃಷ್ಟಿಯಿಂದ ಅವನು ಹೊಸಮಾರ್ಗವನ್ನು ತುಳಿದು ಒಂದು ಹೊಸ ಪರಂಪರೆಗೆ ಕಾರಣನಾದ. ಕಥೆಗಳನ್ನು ಬರೆಯದೆ, ಲೌಕಿಕಾಭಿವೃದ್ಧಿಗೆ ಮನುಷ್ಯರನ್ನು ಹೊಗಳದೆ, ತನ್ನ ಅಂತರಂಗದ ಅನುಭವಗಳಿಗೆ ಅಭಿವ್ಯಕ್ತಿ ನೀಡಿದ.

೩. ಆ ದೃಷ್ಟಿಯಿಂದ ಅವನು ವಚನಸಾಹಿತ್ಯದ ಹರಿಕಾರನಾಗಿದ್ದಾನೆ. ಅವನ ಕೃತಿಗಳೂ ವಚನಗಳಂತೆ ಭಾವಗೀತಾತ್ಮಕ ಮುಕ್ತಕಗಳು. ಅವನ 'ಶೀಲಮಹತ್ವದ ಕಂದ' ಮಾತ್ರ ಶೀಲಗಳ ನಿರೂಪಣೆಗಾಗಿ ಮೀಸಲಾಗಿರುವ ಕೃತಿಯಾಗಿರುವುದರಿಂದ ಅದೊಂದು ಅಪವಾದವಾಗುತ್ತದೆ.

೪. ಇಡೀ ಕನ್ನಡ ಸಾಹಿತ್ಯದಲ್ಲಿ ಮೊತ್ತಮೊದಲ ಭಕ್ತಿಸಾಹಿತ್ಯಕೃತಿಗಳನ್ನು ಬರೆದವನು ಕೇಶಿರಾಜ. ಮುಂದಿನ ವೀರಶೈವ ಸ್ತೋತ್ರ ಸಾಹಿತ್ಯಕ್ಕೆ ಇವನು ಆದ್ಯನಾಗಿದ್ದಾನೆ.

೫. ಸಮಕಾಲೀನ ಭಾಷೆಯನ್ನು ಅವನು ಬಳಸಲಿಲ್ಲವೆಂಬುದು ನಿಜವಾದರೂ ತನ್ನ ಕೃತಿಯಲ್ಲಿ ಹಳಗನ್ನಡದ ಮಧ್ಯೆ ತನ್ನ ಕಾಲದ ಭಾಷೆಯನ್ನು ತರಲು ಅವನು ಸಂಕೋಚಪಟ್ಟಿಲ್ಲ. ಭಾಷಾಶುದ್ಧಿ, ಛಂದೋಶುದ್ಧಿಗಳು ಭಕ್ತಿಯ ಮುಂದೆ ಅವನಿಗೆ ಅಪ್ರಮುಖವಾಗಿ ಕಂಡಿವೆ. ಇವನ ಹಳಗನ್ನಡವು, ನಡುಗನ್ನಡದಷ್ಟೇ ಸರಳವಾಗಿದೆ. ಮನಸ್ಸುಮಾಡಿದರೆ ಕ್ಲಿಷ್ಟವಾಗಿ ಕೃತಕವಾಗಿ ಬರೆಯಬಲ್ಲನೆಂಬುದಕ್ಕೆ ಅವನ 'ನವರತ್ನಮಾಲೆ'ಯ ಒಂಬತ್ತು ವೃತ್ತಗಳು ಸಾಕ್ಷಿಯಾಗಿವೆ.

೬. ಚಂಪೂಕಾವ್ಯಗಳ ಸವೆದುಹೋದ ಶಬ್ದಚಿತ್ರಗಳನ್ನು ಹೆಚ್ಚು ಬಳಸದೇ ಇದ್ದರೂ ಅವನ ಕಂದಪದ್ಯಗಳು ರಮ್ಯವಾಗಿವೆ, ಸಾಹಿತ್ಯಕ ಗುಣವನ್ನು ಪಡೆದುಕೊಂಡಿವೆ. ಅವುಗಳಲ್ಲಿ ಯಾವುದೋ ಹೊಸತನವಿದೆ. ಮಳೆ ಬಿದ್ದು ಬಿಸಿಲು ಮತ್ತು ಧೂಳು ಅಡಗಿ ಹಸಿರು ಹೊಮ್ಮಿ ನೆಲ ತೋರುವ ಬೆಡಗು ಅವನ ಭಕ್ತಿಪ್ರಪಂಚದಲ್ಲಿ ತೋರುತ್ತದೆ.

೭. ವಚನಕಾರರು ಅವನ ಸಾಹಿತ್ಯದಿಂದ ಹೇಗೋ ಅವನ ಬದುಕಿನಿಂದಲೂ ಪ್ರೇರಣೆ ಪಡೆದಿದ್ದಾರೆ. ಅವನ ಸಾಹಿತ್ಯ ಭಕ್ತಿಪ್ರಧಾನ ನಿಜ. ಸಾಮಾಜಿಕ ಪ್ರತಿಭಟನೆ ಅವನ ಕೃತಿಗಳಲ್ಲಿ ಕಾಣಿಸಿಲ್ಲ. ಆದರೆ ಅವನ ಬದುಕಿನಲ್ಲಿ ಪ್ರತಿಭಟನೆ ಇದೆ. ಅವನೂ ಸೇರಿದಂತೆ ಅವನ ಸಮಕಾಲೀನರಾಗಿದ್ದ ತೆಲುಗು ಜೊಮ್ಮಯ್ಯ, ಬಾಹೂರು ಬೊಮ್ಮಯ್ಯಗಳು ಒಂದಲ್ಲ ಒಂದು ರೀತಿ ವಿಕ್ರಮಾದಿತ್ಯನನ್ನು ತಮ್ಮ ಆದರ್ಶಪ್ರಿಯತೆಯಿಂದಾಗಿ ಎದುರು ಹಾಕಿಕೊಂಡರು ; ರಾಜನನ್ನು ಲೆಕ್ಕಿಸದೆ ಬಾಳಿದರು. ಕೆಂಭಾವಿ ಭೋಗಣ್ಣನೂ ಚಂದಿಮರಸನನ್ನು (ಇವನನ್ನು ಇತಿಹಾಸದಲ್ಲಿ ಗುರುತಿಸಲಾಗಿಲ್ಲ) ತಿರಸ್ಕರಿಸಿ ನಿಂತ. ಇವರೆಲ್ಲ ಶೂದ್ರ, ಅಸ್ಪೃಶ್ಯರ ಜೊತೆ ಸಮರಸವಾಗಿ ಬಾಳಿದರು. ಮತ್ತು ಅದರಿಂದಾಗಿ ಮೇಲುವರ್ಗದವರ ಕೋಪಕ್ಕೂ ಪಾತ್ರರಾದರು.

ಆ 'ವೀರ'ಶೈವರ ಪ್ರತಿಭಟನೆ, ಸಾಹಸಗಳು ಬಸವ ಮೊದಲಾದವರಿಗೆ ಧೈರ್ಯ, ಪ್ರೋತ್ಸಾಹವನ್ನು ತುಂಬಿದುವು. ಒಂದು ರೀತಿಯಲ್ಲಿ ವಚನಕಾರರ ಆಂದೋಲನದ ಬೇರುಗಳು ಕೇಶಿರಾಜನ ಕಾಲದಲ್ಲಿ ಹುದುಗಿವೆ. ಕೇಶಿರಾಜನ ಕಾಲದ ಧರ್ಮದ ಬಹುತೇಕ ಎಲ್ಲ ಅಂಶಗಳನ್ನು ಒಪ್ಪಿಕೊಂಡರು; ಕೆಲವನ್ನು ಸ್ಪಷ್ಟವಾಗಿ ತಿರಸ್ಕರಿಸಿದರು. ದೇವಸ್ಥಾನದ ಪೂಜೆ, ಶೀಲಗಳಿಗೆ ಸಂದಿದ್ದ ಅತಿ ಮಹತ್ವ. (ಚೆನ್ನಬಸವಣ್ಣ ಶೀಲಗಳಿಗೆ ಬಲವಾಗಿ ಅಂಟಿಕೊಂಡು ಅದನ್ನೇ ಆದರ್ಶವನ್ನಾಗಿ ಮಾಡಿಕೊಂಡವರನ್ನು ಟೀಕಿಸಿದ್ದಾನೆ), ಇಷ್ಟಲಿಂಗ ಕಳೆದುಹೋದರೆ ಪ್ರಾಣತ್ಯಾಗಮಾಡುವದು, ಇಷ್ಟಲಿಂಗವನ್ನು ದೇವಾಲಯದ ಲಿಂಗದಂತೆ ಬೇರೆಯವರ ಕೈಯಿಂದ ಪೂಜೆ ಮಾಡಿಸುವುದು ಇಂಥವನ್ನು ವಚನಕಾರರು ಖಂಡಿಸಿದ್ದಾರೆ.

೮. ಸಾಮಾಜಿಕ ಅನ್ಯಾಯಗಳ ಬಗ್ಗೆ ಕೇಶಿರಾಜನ ಕಾಲದಲ್ಲಿ ವೈಯಕ್ತಿಕ ಮಟ್ಟದಲ್ಲಿ ವ್ಯಕ್ತವಾಗುತ್ತಿದ್ದ ಪ್ರತಿಭಟನೆಯನ್ನು ಸಾಮೂಹಿಕಗೊಳಿಸಿದ್ದು ವಚನಕಾರರ ಮುಖ್ಯ ಸಾಧನೆ.

೯. ಬಸವಣ್ಣ ವೀರಶೈವಧರ್ಮವನ್ನು ಸ್ಥಾಪಿಸಿದನೆನ್ನುವ ಕೆಲವರ ನಂಬಿಕೆ ಶುದ್ಧಾಂಗವಾಗಿ ತಪ್ಪು ಎಂಬುವದನ್ನು ಕೇಶಿರಾಜನ ಕೃತಿಗಳು ಸಾಧಿಸಿ ತೋರಿವೆ.

೧೦. ಜನಸಾಮಾನ್ಯರ ಮಟ್ಟದಲ್ಲಿ ಪ್ರಚಲಿತವಾಗಿದ್ದ ಧರ್ಮವನ್ನು ಬಸವಣ್ಣ ಕೆಲವು ಪ್ರಮುಖ ಬದಲಾವಣೆಗಳೊಡನೆ ಎತ್ತಿ ಹಿಡಿದಾಗ, ಆ ಧರ್ಮದಲ್ಲೇ ಅಂತರ್ನಿಹಿತವಾಗಿದ್ದ ಕ್ರಾಂತಿಕಾರೀ ಭಾವನೆಗಳಿಗೆ ಚಾಲನೆ ದೊರೆಯಿತು. ಕಿಡಿಗಳು ಇದ್ದುವು ; ಮೇಲೆ ಮುಸುಕಿದ್ದ ಬೂದಿ ಹಾರಿಸುವ ಕೆಲಸವನ್ನು ಬಸವ ಮೊದಲಾದವರು ಮಾಡಿದರು. ಅವರ ಕಾಲದಲ್ಲಿ ಬಹುಸಂಖ್ಯೆಯ ವಚನಕಾರರು ವಚನಕಾರ್ತಿಯರು ಹೊಸದಾಗಿ ಶಿಕ್ಷಣ ಪಡೆದು ಕೃತಿರಚನೆಗೆ ಕೈಹಾಕಲಿಲ್ಲ. ಅವರಿಗೆ ಸೂಕ್ತ ಮಾರ್ಗದರ್ಶನ ಸಿಕ್ಕಿತು : ಧೈರ್ಯದ ಮಾತುಗಳು ಕೃತಿಗಳು ಒಂದು ಹುಮ್ಮಸ್ಸನ್ನು ತಂದು ಕೊಟ್ಟುವು. ಅವರಿಗೆ ನಾಲಗೆ ತಂದುಕೊಡುವಂತಹ ಭೂಮಿಕೆ ಸಿದ್ಧವಾಗಿತ್ತು. ಬಸವಣ್ಣ ಒಂದು ಮಾಧ್ಯಮವಾದ. ಬಸವನ ಮುಖ್ಯ ಕಾರ್ಯ ತನ್ನ ಕಾಲದ ಶಕ್ತಿಗಳನ್ನು ವ್ಯವಸ್ಥೆಗೊಳಿಸಿದ್ದು. ಬಸವನನ್ನು ಹೊಗಳುವ ನೆವದಲ್ಲಿ ಆ ಕಾಲದ ಎಲ್ಲರ ಎಲ್ಲ ಸಾಧನೆ ಸಿದ್ಧಿಗಳನ್ನು ಅವನೊಬ್ಬನಿಗೇ ಆರೋಪಿಸುವುದು ಇತಿಹಾಸಕ್ಕೆ ನಾವು ಮಾಡುವ ಅಪಚಾರ. ಬಸವಣ್ಣ ಮಾಡಿದ್ದು ದೊಡ್ಡ ಕೆಲಸ, ನಿಜ. ಆದರೆ ಆ ಕೆಲಸದ ಸ್ವರೂಪ ಇತಿಮಿತಿಗಳೇನೆಂಬುವರ ಕಲ್ಪನೆ ನಮಗಿಲ್ಲದಿದ್ದರೆ ತಪ್ಪಾಗುತ್ತದೆ. ಯಾವನೇ ವ್ಯಕ್ತಿಗೆ ಸಲ್ಲುವ ಪ್ರಶಂಸೆ ಅತಿಯೂ ಆಗಬಾರದು, ಕಡಮೆಯೂ ಆಗಬಾರದು ತಾನೇ ?

೧೧. ಕೇಶಿರಾಜನಿಗೆ ತನ್ನ ಆದರ್ಶಗಳನ್ನು ರೂಪಿಸಿಕೊಳ್ಳಲು ಸಹಾಯಕರಾದ ಅವನಿಗಿಂತ ಹಿಂದಿನ ವ್ಯಕ್ತಿಗಳು, ಸಾಹಿತ್ಯ ಇದ್ದಿರಬೇಕು. ಆದರೆ ಅದು ಕನ್ನಡದಲ್ಲಿತ್ತು ಎಂದು ಹೇಳಲು ನಮಗೆ ಆಧಾರಗಳಿಲ್ಲ, ಮೌಖಿಕ ಪರಂಪರೆಯ ಭಕ್ತಿವಾಙ್ಮಯವಿದ್ದಿರಬೇಕು. ಆ ಕಾರಣ ಸದ್ಯಕ್ಕೆ ವೀರಶೈವದ ಧರ್ಮ, ಸಾಹಿತ್ಯಗಳ–ಇತಿಹಾಸವನ್ನು ಅವನಿಂದಲೇ ಆರಂಭಿಸಬೇಕಾಗಿದೆ. ಧರ್ಮದ ಇತಿಹಾಸವನ್ನು ಸು. ೧೦೪೦ರವರೆಗೆ ಕೊಂಡೊಯ್ಯಬಹುದು, ದೇವರ ದಾಸಿಮಯ್ಯನ ವಿಷಯ ಗೊತ್ತಿರುವುದರಿಂದ. ಆದರೆ ಕೇಶಿರಾಜನಿಗಿಂತ ಹಿಂದಿನ ಸಾಹಿತ್ಯವೆಂದರೆ 'ಭವಿ ಸಾಹಿತ್ಯ'ವೇ. ನಮಗೆ ಹೆಚ್ಚಿನ ಸಾಮಗ್ರಿ ದೊರೆತಂತೆ ಇತಿಹಾಸದ ಚಿತ್ರಣ ಮಾರ್ಪಾಟಾಗಬಹುದು. ಮಾರ್ಪಾಟು ಮಾಡಿಕೊಳ್ಳಲು ತೆರೆದ ಮನಸ್ಸಿರಬೇಕು, ಅಷ್ಟೇ.

೧೨. ಯಾವುದೇ ಹೊಸವ್ಯವಸ್ಥೆ ಹಳೆಯವ್ಯವಸ್ಥೆಯ ಮುಂದುವರಿಕೆಯಾಗಿರುತ್ತದೆ ಅಥವಾ ಪರಿಷ್ಕೃತ ರೂಪದ್ದಾಗಿರುತ್ತದೆ; ಒಂದು ಬೆಳವಣಿಗೆಯಾಗಿರುತ್ತದೆ. ಬಸವಣ್ಣನ ಧರ್ಮ ಕೇಶಿರಾಜನ ಧರ್ಮದ ಮುಂದುವರಿದ ಪರಿಷ್ಕೃತ ರೂಪವೆಂಬುದನ್ನು ಸುಲಭವಾಗಿ ತೋರಿಸಬಹುದು. ಕೇಶಿರಾಜನ ಧರ್ಮದಲ್ಲಿ ಸ್ಥಾವರಲಿಂಗಪೂಜೆ ಮಾಡುವುದು ಒಂದು ತಪ್ಪೆಂದು ಪರಿಗಣಿತವಾಗಿರದಿದ್ದರೂ ಇಷ್ಟಲಿಂಗಕ್ಕೆ ಅಲ್ಲಿ ಮಹತ್ವವುಂಟು; ಇಷ್ಟಲಿಂಗವನ್ನು ಪೆಟ್ಟಿಗೆಯಲ್ಲಿ ಕೊಂಡೊಯ್ಯಬಹುದು ಅಥವಾ ದೇಹದ ಮೇಲೆ ಕಟ್ಟಿಕೊಳ್ಳಬಹುದು ; ಇಷ್ಟಲಿಂಗವನ್ನು ವೇದಿಕೆಮೇಲೆ ಇಟ್ಟು ಪೂಜೆಮಾಡಬಹುದು ಅಥವಾ ಅಂಗೈಮೇಲೆ ಇಟ್ಟುಕೊಂಡು ಪೂಜೆ ಮಾಡಬಹುದು–ಇದು ಕೇಶಿರಾಜನ ಧರ್ಮದ ಲಕ್ಷಣಗಳಲ್ಲೊಂದು. ಕೇಶಿರಾಜನ ಕಾಲಕ್ಕಾಗಲೇ ಸ್ಥಾವರಲಿಂಗ ಪೂಜೆಗೆ ಪ್ರಾಶಸ್ತ್ಯ ಕಡಮೆಯಾಗಿದ್ದು ಬಸವಣ್ಣನ ಕಾಲದಲ್ಲಿ ಆ ಪ್ರಾಶಸ್ತ್ಯವೂ ಹೋಯ್ತು: ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಬೇಕು ; ತಾನೇ ಇಷ್ಟಲಿಂಗಪೂಜೆ ಮಾಡಿಕೊಳ್ಳಬೇಕು–ಇದು ಬಸವನ ಧರ್ಮದ ಲಕ್ಷಣಗಳಲ್ಲೊಂದು. ಎಂದರೆ, ಬಸವಣ್ಣನ ಧರ್ಮ ಕೇಶಿರಾಜನ ಧರ್ಮದ ಮುಂದುವರಿದ ಪರಿಷ್ಕೃತ ರೂಪ. ಧರ್ಮದಂತೆಯೇ ಸಾಹಿತ್ಯವೂ ಒಂದು ಸಂಸ್ಥೆ ತಾನೇ ? ಇಲ್ಲಿಯೂ ಕಂದ, ವೃತ್ತಗಳ ಸ್ತೋತ್ರಸಾಹಿತ್ಯವು ವಚನಗಳಾಗಿ ಮಾರ್ಪಾಟು ಹೊಂದಿದ ಬಗೆಯನ್ನು ತೋರಿಸಬಹುದು. ಸಾಹಿತ್ಯದಲ್ಲಿ ಭಕ್ತಿಗೆ ಎರಡು ಕಡೆಯೂ ಅವಕಾಶವಿದೆ ; ಅನುಭವಕ್ಕೆ ಪ್ರಾಶಸ್ತ್ಯವಿದೆ; ಶಿವನಿಷ್ಠೆ ಎರಡು ಕಡೆಗೂ ಸಮಾನ. ಆದರೆ ಒಂದರ ರೂಪ ಇನ್ನೂ ಹಳೆಯ ಛಂದೋನಿಯಮಗಳಿಗೆ ಬದ್ಧ ; ಇನ್ನೊಂದು ಅದನ್ನು ಮೀರಿದ ಸ್ವಚ್ಛಂದ ಸ್ವರೂಪದ್ದು, ಮುಕ್ತಛಂದಸ್ಸಿನದು. ಒಂದರಲ್ಲಿ ಭಕ್ತಿಗೇ ಕೇಂದ್ರ ಸ್ಥಾನ ; ಇನ್ನೊಂದರಲ್ಲಿ ಅದರ ಜೊತೆಗೆ ಸಾಮಾಜಿಕ ಕಳಕಳಿಯೂ ಸೇರಿದೆ. ವಚನ ಸಾಹಿತ್ಯದ ಪ್ರಕಾರ (form) ಎಲ್ಲಿಂದ ಬಂತು, ಅದಕ್ಕೆ ಕಾರಣರು ಯಾರು ಎಂಬುದು ಇನ್ನೂ

ವಿವಾದಾಸ್ಪದ ವಿಷಯವಾಗಿದೆ. ವಚನ ಪ್ರಕಾರ ರೂಪುಗೊಂಡಿರಬಹುದಾದ ಬಗೆಯನ್ನು ಕುರಿತಂತೆ ಈಚಿನ ನನ್ನ ಅನಿಸಿಕೆಗಳನ್ನು ಈಗಾಗಲೇ ವ್ಯಕ್ತಪಡಿಸಿದ್ದೇನೆ[37].

೧೩. ಜೇಡರದಾಸಿಮಯ್ಯನೇ ನಮಗೆ ತಿಳಿದಮಟ್ಟಿಗೆ ಮೊದಲ ವಚನಕಾರ (ಇನ್ನು ಕೆಲವರು–ಉದಾಹರಣೆಗೆ ಚನ್ನಯ್ಯ, ಕಕ್ಕಯ್ಯ ಇತ್ಯಾದಿ ಜನರು ಹಿರಿಯರಾದರೂ ವಚನಕಾರರಾಗಿ ಅವರು ಬಸವನ ಸಮಕಾಲೀನರು. ಇದನ್ನು ಹಿಂದೆ ಸ್ಪಷ್ಟಪಡಿಸಿದ್ದೇನೆ). ವಚನಗಳನ್ನು ಬರೆಯಲು ಯತ್ನಿಸಿ, ಪ್ರಯೋಗಗಳನ್ನು ಮಾಡಿ ಆ ಪ್ರಕಾರಕ್ಕೆ ಒಂದು ರೂಪುಗೊಟ್ಟವನು ಜೇಡರದಾಸಿಮಯ್ಯನೇ ಆಗಿರಬಹುದು. ಮುಂದೆ ಬಂದ ದಾಸಿಮಯ್ಯನ ಕಿರಿಯ ಸಮಕಾಲೀನ ಬಸವಣ್ಣನಿಂದ ವಚನ ಸಾಹಿತ್ಯಕ್ಕೆ ಮಾನ್ಯತೆ ಬಂದಿತು ; ಅವನು ವಚನಸಾಹಿತ್ಯ ಪರಂಪರೆಯ ಶ್ರೇಷ್ಠಪ್ರತಿನಿಧಿ ಎಂಬಲ್ಲಿ ಭಿನ್ನಾಭಿಪ್ರಾಯವಿಲ್ಲ. ವಚನಗಳು ತಮ್ಮ ಸಮಕಾಲೀನ ಕನ್ನಡ ಸಾಹಿತ್ಯದ ಸಂಪರ್ಕವನ್ನು ಹೊಂದಿ ಅಲ್ಲಿಂದ ಮೂಡಿ ಬಂದ ಬಗೆಯನ್ನು ಕ್ರಮಬದ್ಧವಾಗಿ ಹೀಗೆ ಚಿತ್ರಿಸಬಹುದು:-

ಕನ್ನಡ ಸಾಹಿತ್ಯ ಕ್ರಿ. ಶ. ೧೦೦೦ ವರೆಗೆ : ವೃತ್ತ, ಕಂದ, ಗದ್ಯ, ಕಥನಶೈಲಿ; ವಸ್ತು-ಪೌರಾಣಿಕ : ಮಾನವಸ್ತುತಿ ಕಾವ್ಯದಲ್ಲಿ ನಿಷಿದ್ಧವೇನಲ್ಲ.

ಕೇಶಿರಾಜ ೧೧೨೮-೩೦ : ವೃತ್ತ, ಕಂದ; ಕಥನ ಇಲ್ಲ; ಮುಕ್ತಕಗಳಂತಹ ರಚನೆಗಳು ಅವನವು ; ದೈವಸ್ತುತಿಗೆ, ಸ್ವಕೀಯ ಅನುಭವಗಳಿಗೆ ಮಾತ್ರ ಕೃತಿಯಲ್ಲಿ ಸ್ಥಾನ; ನೀತಿಬೋಧೆ ಇದೆ; ಅಷ್ಟರ ಮಟ್ಟಿಗೆ ಸಾಹಿತ್ಯ ಸಮಾಜ ಪರ; ಮಾನವಸ್ತುತಿ ನಿಷಿದ್ಧ.

ಜೇಡರ ದಾಸಿಮಯ್ಯ ೧೧೩೦-೪೦ : ವಚನ (ಈ ರೂಪದ ಉಗಮದ ಬಗ್ಗೆ ಸಂದೇಹ); ದೈವಸ್ತುತಿ, ಸ್ವಕೀಯ ಅನುಭವಗಳಿಗೆ ಪ್ರಾಶಸ್ತ್ಯ ; ನೀತಿಬೋಧೆ ಇದೆ; ಸಾಮಾಜಿಕ ವಿಮರ್ಶೆ ಇದೆ. ವಚನ ಪ್ರಕಾರ ಇನ್ನೆಲ್ಲ ವಿಶಿಷ್ಟತೆಯೊಡನೆ ಇವನಲ್ಲಿ ಕಾಣಿಸಿಕೊಂಡಿದೆ. ಮುಕ್ತಕಗಳಂತಹ ಕಂದವೃತ್ತಗಳು ವಚನಗಳನ್ನು ಬರೆಯಲು ಪ್ರೇರಣೆ ಕೊಟ್ಟಿರಬಹುದು.

ಬಸವಣ್ಣ ೧೧೬೦ : ವಚನ ಪ್ರಕಾರ ತನ್ನ ಪರಿಪೂರ್ಣಸ್ಥಿತಿ ಮುಟ್ಟಲು ಕಾರಣಕರ್ತ; ಇವನನ್ನು ಕೇಂದ್ರವಾಗಿ ಉಳ್ಳ ಸಾಮಾಜಿಕ ಚಳುವಳಿಯಿಂದಾಗಿ ನೂರಾರು ವಚನಕಾರರು ಕಾಣಿಸಿಕೊಂಡರು (ಇವನ ಪಾತ್ರವೇನು ಎಂಬುದನ್ನು ಹಿಂದೆ ಆಗಲೇ ಸ್ಪಷ್ಟಗೊಳಿಸಿದೆ). ಸಮಾಜವಿಮರ್ಶೆ, ಸಮಾಜ ಸುಧಾರಣೆಯ ಧ್ವನಿ ಇವನಲ್ಲಿ ಒಡೆದು ಕೇಳಿಸುತ್ತದೆ.

ಹರಿಹರ, ರಾಘವಾಂಕ ೧೨೩೦ : ವಚನಗಳನ್ನು ಬರೆಯದಿದ್ದರೂ ಕಾವ್ಯವು ವಸ್ತು, ಪ್ರಕಾರಗಳಲ್ಲಿ ಹೊಸತನವನ್ನು ತೋರಲು ವಚನಕಾರರು ಪರೋಕ್ಷವಾಗಿ ಕಾರಣರು.

ಕೇಶಿರಾಜನ ಕಂದವೃತ್ತಗಳ ಬಾಹ್ಯರೂಪವನ್ನೂ ತಿರಸ್ಕರಿಸಿ ಮುಂದಿನ ವಚನಕಾರರು ಸಾಹಿತ್ಯದ ಎಲ್ಲ ಸಂಕೋಲೆಗಳನ್ನು ಮುರಿಯಲು ಧೈರ್ಯಮಾಡಿದ್ದು ಅವರ ಜೀವಂತಿಕೆಗೆ. ಆತ್ಮವಿಶ್ವಾಸಕ್ಕೆ, ಜಡಸಂಪ್ರದಾಯಗಳ ಬಗ್ಗೆ ಇದ್ದ ತಿರಸ್ಕಾರಕ್ಕೆ, ಸಾಮಾನ್ಯಜನತೆಯ ಬಗ್ಗೆ ಇದ್ದ ಅನುಕಂಪಕ್ಕೆ ಸಾಕ್ಷಿ.

ಈ ಸಂಪ್ರಬಂಧದಲ್ಲಿ ಮಾತು ಹೆಚ್ಚಾದವು. ನಾನು ಬೇಕೆಂದೇ, ಸಂಪ್ರಬಂಧ ಜಾಳಾದೀತು ಎಂಬ ಭಯವಿದ್ದರೂ, ಅನೇಕ ವಿಷಯಗಳನ್ನು ಎರಡು ಮೂರು ಬಾರಿ ಪ್ರಸ್ತಾಪ ಮಾಡಿದ್ದೇನೆ. ಏಕೆಂದರೆ ಓದುಗರು ನನ್ನ ಇಂಗಿತವನ್ನು ಮತ್ತು ತರ್ಕವನ್ನು ಗ್ರಹಿಸದೆ ತಪ್ಪು ತಿಳಿದಾರು ಎಂಬ ಭಯ ನನ್ನದು. ನನ್ನ ಅಭಿಪ್ರಾಯಗಳು ತಪ್ಪಾಗಿದ್ದರೆ ಭಯವಿಲ್ಲ. ಆದರೆ ಅವನ್ನು ತಪ್ಪಾಗಿ ಗ್ರಹಿಸುವರೆಂಬ ಭಯ ನನ್ನನ್ನು ಹೀಗೆ ಅಗತ್ಯಕ್ಕಿಂತ ಹೆಚ್ಚಿನ ವಿವರಣೆಗಳನ್ನು ಕೊಡುವಂತೆ ಮಾಡಿದೆ ; ಸಂಪ್ರಬಂಧ ಪೂರ್ಣದಕ್ಕೆ ಹೊಂದದ ಈ ಕೊನೆಯ ಪ್ಯಾರಾವನ್ನು ಬರೆಯುವಂತೆ ಮಾಡಿದೆ. ಒಂದೆರಡು ಊಹೆಗಳು ಹೆಚ್ಚಾದುವು ಎಂದು ಓದುಗರಿಗೆ ಅನ್ನಿಸಿದಾಕ್ಷಣ ಇಡೀ ವಾದವನ್ನು ತಿರಸ್ಕರಿಸುವ ಅಪಚಾರವನ್ನು ಮಾಡದಿರಲಿ. ಏಕೆಂದರೆ, ಈ ಸಂಪ್ರಬಂಧದಲ್ಲಿ ಕೆಲವು ಮೂಲಭೂತ ಸಂಗತಿಗಳನ್ನು ಪ್ರಸ್ತಾಪಿಸಿದ್ದೇನೆ. ಮತ್ತು ಇಲ್ಲಿ ಒಂದೆರಡು ಊಹೆಯ ಮಾತುಗಳಿದ್ದರೂ ಕೆಲವು ಚಿಂತನೀಯ ಗಟ್ಟಿ ಹೊಸ ಸಂಗತಿಗಳೂ ಇವೆಯೆಂದು ಒತ್ತಿಹೇಳಲು ಇಷ್ಟಪಡುತ್ತೇನೆ.

---

37. ಎಂ. ಚಿದಾನಂದಮೂರ್ತಿ : ವಚನಸಾಹಿತ್ಯ (ಬೆಂಗಳೂರು ವಿಶ್ವವಿದ್ಯಾಲಯ, ೧೯೭೫), ಪು. ೭-೯.

# ಬಸವಪೂರ್ವಯುಗದ ವಚನಕಾರರು

—ಡಾ॥ ಪಿ. ವಿ. ನಾರಾಯಣ

ವಚನಸಾಹಿತ್ಯವು ಕನ್ನಡದಲ್ಲಿ ಎಂತಹ ಮಹತ್ವದ ಸ್ಥಾನವನ್ನು ಪಡೆದಿದೆಯೆಂದು ಹೇಳಬೇಕಾಗಿಲ್ಲ. ಅದರ ವೈಶಿಷ್ಟ್ಯಗಳನ್ನು ತೋರಿಸಲು ಸಾಕಷ್ಟು ಬರಹಗಳು ಬಂದಿವೆ. ಸಾಹಿತ್ಯವಾಗಿ, ಸಾಮಾಜಿಕ ವಿಪ್ಲವದ ಅಭಿವ್ಯಕ್ತಿಮಾಧ್ಯಮವಾಗಿ, ಸುಧಾರಿತ ಮತವೊಂದರ ಪ್ರಸಾರಮಾಧ್ಯಮವಾಗಿ ವಚನಗಳು ಹೇಗೆ ಕಾರ್ಯ ನಿರ್ವಹಿಸಿವೆಯೆಂಬ ವಿವರಣೆಯೂ ಆಗಿದೆ. ವೀರಶೈವ ಮತದ ತಾತ್ವಿಕ ವಿಶ್ಲೇಷಣೆಗೆ ಪೂರಕವಾಗಿ ಈ ಸಾಹಿತ್ಯದ ವಿಶ್ಲೇಷಣೆಯ ಕಾರ್ಯವೂ ನಡೆದಿದೆ. ಇಷ್ಟೊಂದು ಮುಖ್ಯವಾದ ಪ್ರಾಚೀನತೆ ಹಾಗೂ ಮೂಲಗಳ ಬಗ್ಗೆ ಜಿಜ್ಞಾಸೆಯಿನ್ನೂ ನಡೆದೇ ಇದೆ. ವಚನಗಳು ತೀರ ಪೂರ್ವದ್ದು ಎಂದು ಕೆಲವರು ಭಾವಿಸುತ್ತಾರೆ. 'ಈ 'ಆದ್ಯರ ವಚನ ಸಾಹಿತ್ಯ'ವು ಕ್ರಿ. ಶ. ೯-೧೦ ಶತಮಾನದಷ್ಟು ಹಿಂದಿನದು. ಈಗ ನಮಗೆ ಉಪಲಬ್ಧವಿರುವ ಎಷ್ಟೋ ವಚನಗಳು ಪಂಪನ ಸಾಹಿತ್ಯಕ್ಕಿಂತ ಪ್ರಾಚೀನವೆಂದಾಗ ಯಾರಾದರೂ ಹುಸಿನಗುವನ್ನು ನಕ್ಕರೆ ಅವರಿಗೆ ನವನವೋನ್ಮೇಷಿತ ಸತ್ಯ ವಿಚಾರಗಳನ್ನು ಸ್ವಾಗತಿಸುವ ಪ್ರಗತಿಪರ ದೃಷ್ಟಿಯಿಲ್ಲವೆನ್ನಬೇಕಾಗುತ್ತದೆ'[1] ಎಂಬಂಥ ಆವೇಶದ ಮಾತುಗಳನ್ನಾಡುವಷ್ಟರ ಮಟ್ಟಿಗೆ ಇದರ ಪ್ರಾಚೀನತೆಯ ಬಗ್ಗೆ ವಿವಾದವಿದೆ. ಆದರೆ ಈ ವಿಚಾರದಲ್ಲಿ ಆವೇಶ ಸಲ್ಲದು; ಹೇಗಾದರೂ ಮಾಡಿ ಇದು ತೀರ ಹಳೆಯದು ಎಂದು ಸಾಧಿಸಬೇಕೆಂಬ ಹಟವೂ ಸಲ್ಲದು. ವಸ್ತುನಿಷ್ಠವಾಗಿ ತೀರ್ಮಾನಿಸಬೇಕಾದ ವಿಷಯವಿದು. ವಚನಗಳು ಬಹಳ ಪ್ರಾಚೀನವಲ್ಲವೆಂದು ಸಾಬೀತಾದರೆ ಅದರ ಯೋಗ್ಯತೆಯೇನೂ ಕಡಿಮೆಯಾಗದು.

ವಚನಗಳ ಪ್ರಾಚೀನತೆಯ ಬಗ್ಗೆ ವಿವಾದವುಂಟಾಗಲು ಕಾರಣವೆಂದರೆ ಕೆಲವು ವಚನಕಾರರು ಹಿಂದಿನ ವಚನಗಳ ಬಗ್ಗೆ ಸೂಚನೆಯಿತ್ತಿದ್ದಾರೆಂಬ ಭಾವನೆ. ಜೇಡರದಾಸಿಮಯ್ಯನು ಹೇಳುವ 'ಸೂಳ್ನುಡಿ' 'ಮೃಡಭಕ್ತರ ನುಡಿಗಡಣ' ಇತ್ಯಾದಿ ಮಾತುಗಳು, ಬಸವಣ್ಣನು ಉಪಯೋಗಿಸುವ 'ಆದ್ಯರ ವಚನ'–ಇವುಗಳು ಇವರಿಗಿಂತ ಹಿಂದಿದ್ದ ಶಿವಶರಣರ 'ವಚನ'ಗಳನ್ನೇ ಸೂಚಿಸುತ್ತವೆಂದು ಕೆಲವರು ನಂಬುತ್ತಾರೆ. ಆದರೆ 'ಸೂಳ್ನುಡಿ' 'ಮೃಡಭಕ್ತರ ನುಡಿಗಡಣ'ವೆಂಬ ಮಾತುಗಳು ತಮಗಿಂತ ಹಿಂದಿದ್ದ ಶಿವಭಕ್ತರ ಮಾತುಗಳನ್ನು—ಅವು ಉಪದೇಶರೂಪದಲ್ಲಿರಬಹುದು, ಹಾಡುಗಳ ರೂಪದಲ್ಲಿರಬಹುದು–ಸೂಚಿಸುವ ಸಾಧ್ಯತೆಗಳು ಹೆಚ್ಚಾಗಿವೆಯೆನ್ನಿಸುತ್ತದೆಯೇ ವಿನಾ ವಚನಗಳನ್ನು ಸೂಚಿಸುವಂತೆ ಕಾಣದು. ಬಸವಣ್ಣನು ಹೇಳುವ 'ಆದ್ಯರ ವಚನ' ಎಂಬುದರಲ್ಲಿ 'ವಚನ' ಎಂಬ ಮಾತು ನಾವೀಗ ಗುರುತಿಸುವ 'ವಚನ'ಗಳನ್ನು ಸೂಚಿಸುತ್ತದೆಯೆಂಬುದನ್ನು ನಿಖರವಾಗಿ ಹೇಳಲು ಬರುವಂತಿಲ್ಲ. ಆದ್ಯರು ಎಂಬ ಮಾತನ್ನು ಆತ ಹಿಂದಿನ ಹಿರಿಯರು 'ಪುರಾತನರು' ಎಂಬರ್ಥದಲ್ಲಿ ಬಳಸಿರಬಹುದು; ಜೊತೆಗೆ ತನಗೆ ಪೂಜ್ಯರಾದ ಸಮಕಾಲೀನ ಶಿವಶರಣರನ್ನು ಸೂಚಿಸುವ ಸಂಭವವಿಲ್ಲದಿಲ್ಲ. ಈ ಮಾತುಗಳಷ್ಟನ್ನೇ ಆಧಾರವಾಗಿರಿಸಿಕೊಂಡು ಜೇಡರದಾಸಿಮಯ್ಯನಿಗಿಂತ ಹಿಂದೆಯೇ 'ವಚನ' ಸಾಹಿತ್ಯವು ಉದಿಸಿತೆಂದು ಹೇಳಲು ಸಾಧ್ಯವಾಗುವದಿಲ್ಲ.

ವಚನಗಳು ಉದ್ದಿಷ್ಟ ರಚನೆಗಳಲ್ಲ; ಎಂದರೆ ಅವುಗಳು ಹೊರಹೊಮ್ಮಲು ಸಾಹಿತ್ಯಕವಾದ ಉದ್ದೇಶ ಹಿನ್ನೆಲೆಗಿರಲಿಲ್ಲ. ಅವುಗಳು ಚಳುವಳಿಯೊಂದರ ಆನುಷಂಗಿಕ ಅವತಾರ. ಬಸವಣ್ಣನಿಗಿಂತ ಹಿಂದೆಯೇ ಈ ಚಳವಳಿಯ ಬೀಜಗಳು ಪ್ರಸಾರಗೊಂಡಿದ್ದವೆನ್ನಲು ಆಧಾರಗಳಿವೆ. ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಆಗ ಪ್ರಚಲಿತವಿದ್ದ ಧಾರ್ಮಿಕಾಚರಣೆಗಳು–ನಂಬಿಕೆಗಳು ಸೂಕ್ಷ್ಮಹೃದಯಿಗಳಾಗಿದ್ದವರ ಮನಸ್ಸನ್ನು ಕಲಕಿ, ಸಾತ್ವಿಕ ಭಕ್ತಿಪ್ರಾಧಾನವಾದ ಮತವೊಂದನ್ನು ಪ್ರಸಾರಮಾಡಲು ಪ್ರಚೋದನೆಯಿತ್ತವು. ಈ ಪೂರ್ವಕಾರ್ಯವೇ ಬಸವಣ್ಣ ಮುಂತಾದವರು ವ್ಯವಸ್ಥಿತವಾಗಿ ಹೊಸ ಆಂದೋಲನವನ್ನು ಸಂಘಟಿಸಲು ಕಾರಣವಾಯಿತೆಂಬುದನ್ನು ನಾವು ಗುರುತಿಸಬಹುದು[2]. ಆದ್ದರಿಂದ ವಚನಗಳು ಈ ಚಳುವಳಿಯ ಪ್ರಸಾರ ಸಾಧನವಾಗಿ ಮೂಡಿಬರಲು ಈ ಪೂರ್ವಕಾರ್ಯದ ಕಾಲದಲ್ಲಿಯೇ ವಾತಾವರಣವು ಹದಗೊಂಡಿರಬೇಕು. ಹೀಗಾಗಿ ಈ ವಚನಗಳು ತುಂಬ ಹಿಂದೆ ಉಗಮಿಸಿದವೆಂದು ಹೇಳಲಾರೆವು. ಹಾಗಾದರೆ ಮೊದಲು ವಚನರಚನೆ ಮಾಡಿದ ಮಹನೀಯರಾರು ಎಂಬ ಪ್ರಶ್ನೆಯೇಳುತ್ತದೆ.

ಜೇಡರದಾಸಿಮಯ್ಯನೇ ಈವರೆಗೆ ನಮ್ಮ ಆದ್ಯ ವಚನಕಾರ. ಆತನು ತನ್ನ ವಚನಗಳಲ್ಲಿ ಕೆಲವು ಶರಣರ ಹೆಸರುಗಳನ್ನು ಹೇಳುತ್ತಾನೆ–ಓಹಿಲ, ಉದ್ಭಟ, ಮಾದರ ಚೆನ್ನಯ್ಯ, ಕೊಂಡಗುಳಿ ಕೇಶಿರಾಜ, ಡೋಹರ ಕಕ್ಕಯ್ಯ, ಕೆಂಭಾವಿ ಭೋಗಯ್ಯ–ಇವರುಗಳನ್ನು ಕೊಂಡಾಡುತ್ತಾನೆ. ಜೇಡರದಾಸಿಮಯ್ಯ-ದೇವರದಾಸಿಮಯ್ಯ ಈ ಎರಡು ಹೆಸರುಗಳುಳ್ಳ ವ್ಯಕ್ತಿಗಳನ್ನು ಒಬ್ಬನೇ

1. ಎಲ್. ಬಸವರಾಜು (ಸಂ) : ಅಲ್ಲಮನ ವಚನ ಚಂದ್ರಿಕೆ (೧೯೬೦) ಪೀಠಿಕೆ : ಪು. ೧೧
2. ಎಂ. ಚಿದಾನಂದಮೂರ್ತಿ : ವಚನ ಸಾಹಿತ್ಯ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಂ. ೫) : ಪು. ೨೨-೩೩ (೧೯೭೫)

ಎಂದು ಇತ್ತೀಚಿನವರೆಗೂ ಭಾವಿಸಲಾಗಿತ್ತು. ದೇವರ ದಾಸಿಮಯ್ಯನೆಂಬುವನು ಚಾಲುಕ್ಯವಂಶದ ಇಮ್ಮಡಿ ಜಯಸಿಂಹ ಅಥವಾ ಜಗದೇಕಮಲ್ಲನ ಕಾಲದಲ್ಲಿ, ಎಂದರೆ ಕ್ರಿ.ಶ. ೧೦೪೦ರಲ್ಲಿದ್ದನೆಂಬುದು ಅನೇಕ ಕಡೆಗಳಲ್ಲಿ ಉಲ್ಲೇಖಿತವಾದ ಅಂಶ. ಆದರೆ ಜೇಡರ ದಾಸಿಮಯ್ಯನು ಹೆಸರಿಸುವ ಕೊಂಡಗುಳಿ ಕೇಶಿರಾಜನಿಗೆ ಸಂಬಂಧಿಸಿದ ಕ್ರಿ.ಶ. ೧೧೦೭ ಹಾಗೂ ಕ್ರಿ.ಶ. ೧೧೩೨ ರ ಎರಡು ಶಾಸನಗಳು ಕೊಂಡಗುಳಿಯಲ್ಲಿಯೇ ಸಿಕ್ಕಿವೆ[3]. ಅಲ್ಲದೆ ಡೋಹರ ಕಕ್ಕಯ್ಯ (ದಾಸಿಮಯ್ಯ ಇವನನ್ನೂ ಸ್ಮರಿಸುತ್ತಾನೆ) ಬಸವಣ್ಣನಿಗೆ ಹಿರಿಯ ಸಮಕಾಲೀನ. ಇವನ ಪ್ರಸಾದದಿಂದ ಚನ್ನಬಸವಣ್ಣನ ಜನನವಾಯಿತೆಂದು ವೀರಶೈವಪುರಾಣಗಳು ಹೇಳುತ್ತವೆ. ಜೇಡರದಾಸಿಮಯ್ಯನ ಸಮಕಾಲೀನನಾದ ಶಂಕರದಾಸಿಮಯ್ಯನು ಎರಡು ವಚನಗಳಲ್ಲಿ ಅಲ್ಲಮ ಹಾಗೂ ಬಸವಣ್ಣನ ಹೆಸರುಗಳನ್ನು ಗೌರವಪೂರ್ವಕವಾಗಿ ಹೇಳಿದ್ದಾನೆ. ಹಾಗಾಗಿ ದಾಸಿಮಯ್ಯನ ಕಾಲ ಸುಮಾರು ಬಸವಾದಿಗಳ ಕಾಲವೇ ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ.

ಈ ಗೊಂದಲಕ್ಕೆ ಕಾರಣವೇನೆಂದರೆ ದೇವರದಾಸಿಮಯ್ಯ ಹಾಗೂ ಜೇಡರದಾಸಿಮಯ್ಯರು ಅಭಿನ್ನರೆಂದು ಭಾವಿಸಿದ್ದು. ಶಿವಮೂರ್ತಿಶಾಸ್ತ್ರಿಗಳು, ಎಚ್. ದೇವೀರಪ್ಪನವರು ಹಾಗೂ ಎಂ. ಚಿದಾನಂದಮೂರ್ತಿಯವರು ಈ ವಿಚಾರದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳು ಸಾಧುವಾದುವು. ಅವೆಂದರೆ ದೇವರದಾಸಿಮಯ್ಯ ವಚನಕಾರನಲ್ಲ, ಆತ ಈ ಇಬ್ಬರಲ್ಲಿ ಹೆಚ್ಚು ಪ್ರಾಚೀನನಾದವನು; ಜೇಡರದಾಸಿಮಯ್ಯನೇ ವಚನಕಾರ, ಮುಂದಿನ ವಚನಕಾರರಿಂದ ಸ್ತುತಿಸಲ್ಪಟ್ಟವನು ಎಂಬಿವು. ಈ ಅಭಿಪ್ರಾಯಸಮರ್ಥನೆಗೆ ಅವರು ಹೇಳಿರುವ ಕಾರಣಗಳಿವು : ದಾಸಿಮಯ್ಯನಿಗೆ ಸಂಬಂಧಿಸಿದ ಎಲ್ಲ ಶಾಸನಗಳಲ್ಲೂ ಜೇಡರ ಅಥವಾ ಜಾಡರ ಎಂಬ ವಿಶೇಷಣವಿದೆ; ಬಸವಣ್ಣ ಮತ್ತು ಈಚಿನವರೆಲ್ಲ ಅವನನ್ನು ಜೇಡರ ದಾಸಿಮಯ್ಯನೆಂದೇ ಕರೆದಿದ್ದಾರೆ; ಈತನ ವಚನಗಳು ದೊರಕುವ ಎಲ್ಲ ಕಟ್ಟುಗಳಲ್ಲೂ 'ಜೇಡರ' ವಿಶೇಷಣವಿದೆಯೇ ವಿನಾ 'ದೇವರ' ಎಂದಿಲ್ಲ, ಇತ್ಯಾದಿ. ನಾನಾ ಕಾರಣಗಳಿಂದಾಗಿ ಈ ಗೊಂದಲ ಪ್ರಾರಂಭವಾಯಿತೆಂದು ಹೇಳಬಹುದು.

ಪಾಲ್ಕುರಿಕೆ ಸೋಮನಾಥನೂ ಈ ಗೊಂದಲಕ್ಕೆ ಈಡಾದ ಮೊದಲ ಕವಿ. ಪೊಟ್ಟಲಕೆರೆಯವನಾದ, ಚಾಲುಕ್ಯ ಇಮ್ಮಡಿ ಜಯಸಿಂಹನ ಹೆಂಡತಿ ಸುಗ್ಗಲದೇವಿಯ ಗುರುವಾದ ದಾಸಿಮಯ್ಯನನ್ನು 'ದೇಡರ ದಾಸಿಮಯ್ಯ'ನೆಂದು ನೇಯ್ಗೆಕಾಯಕದವನಾದ, ಶಂಕರದಾಸಿಮಯ್ಯನಿಂದ ಅಹಂಕಾರಮರ್ದನಕ್ಕೊಳಗಾದವನನ್ನು 'ದೇಡರ ದಾಸಿಮಯ್ಯ'ನೆಂದು ಈತ ತನ್ನ ತೆಲುಗು 'ಬಸವ ಪುರಾಣ'ದಲ್ಲಿ ಹೇಳುತ್ತಾನೆ[4]. ಇದಕ್ಕೆ ಕಾರಣ ಈತ ಕರ್ನಾಟಕದಿಂದ ದೂರವಿದ್ದುದು. ಇಲ್ಲಿ ನಡೆದ ವಿಪ್ಲವದ ವಿಚಾರವನ್ನು, ಶಿವಶರಣರ ಕತೆಗಳೆಲ್ಲವನ್ನೂ ಪಾಲ್ಕುರಿಕೆ ಸೋಮನಾಥನು ಬೇರೆಯವರಿಂದ ಕೇಳಿ ತನ್ನ ಕಾವ್ಯವನ್ನು ರಚನೆ ಮಾಡಿದುದರಿಂದಾಗಿ ಈ ಗೊಂದಲವುಂಟಾಗಿರಬೇಕು. ಆದರೆ ಈತನನ್ನೇ ಅನುಸರಿಸಿ ಕನ್ನಡ ಬಸವಪುರಾಣವನ್ನು ಬರೆದ ಭೀಮಕವಿಯು ಈ ಗೊಂದಲಕ್ಕೆ ಪೂರ್ತಿ ಒಳಗಾಗಿಲ್ಲ. ತನ್ನ ಕಾವ್ಯದ ಮೂಲದಲ್ಲಿ ಆಗಿರುವ ಈ ಗೊಂದಲವನ್ನು ಗಮನಿಸಿ, ತನಗೆ ಗೊತ್ತಿದ್ದ ಕಾರಣದಿಂದಾಗಿ ಇದನ್ನು ನಿವಾರಿಸಿಕೊಂಡಿದ್ದಾನೆ. ಶಂಕರದಾಸಿಮಯ್ಯನ ಸಮಕಾಲೀನನನ್ನು 'ಜೇಡರ ದಾಸಿಮಯ್ಯ'ನೆಂದೂ[5], ಪೊಟ್ಟಲುಕೆರೆಯಲ್ಲಿದ್ದು, ಸುಗ್ಗಲೆಗೆ ಗುರುವಾಗಿದ್ದವನನ್ನು 'ದೇವರದಾಸಿಮಯ್ಯ'ನೆಂದೂ[6] ಹೇಳುತ್ತಾನೆ. ಆದರೆ ಅವನಿಗೂ ಕೊಂಚ ಅನುಮಾನವಿದ್ದಿರಬಹುದು. ಏಕೆಂದರೆ ದೇವರದಾಸಿಮಯ್ಯನ ಕತೆ ಹೇಳುವಾಗ ಒಮ್ಮೆ ಅವನನ್ನು 'ಜೇಡರ ದಾಸಿಮಯ್ಯ'ನೆಂದು ಕರೆದಿದ್ದಾನೆ[7]. (ಈ ಪದ್ಯದಲ್ಲಿ ಜೇಡರ ಎಂಬುದಕ್ಕೆ ಪಾಠಾಂತರಗಳನ್ನು ಸೂಚಿಸಿಲ್ಲ.) ದೇವರ ದಾಸಿಮಯ್ಯನ ಆರಾಧ್ಯದೈವವು 'ರಾಮನಾಥ' ಎಂಬುದರಲ್ಲೂ ಗೊಂದಲವಾದಂತಿದೆ : ಇವನು ಸೋಮನಾಥನನ್ನೇ ಅನುಸರಿಸಿದ್ದಾನೆ. ಈ ವಿಷಯದಲ್ಲಿ ಪಾಲ್ಕುರಿಕೆ ಸೋಮನಾಥನ ದ್ವಿಪದ ಕಾವ್ಯವನ್ನು ಚಂಪೂಕಾವ್ಯವಾಗಿ ಮಾರ್ಪಡಿಸಿದ ತೆಲುಗು ಕವಿಯಾದ ಪಿಡುಪರ್ತಿ ಸೋಮನಾಥಕವಿಯೆಂಬುವವನು ಇಬ್ಬರು ದಾಸಿಮಯ್ಯಗಳನ್ನೂ 'ದೇವರ' ಎಂಬ ವಿಶೇಷಣದಿಂದಲೇ ಕರೆದಿದ್ದಾನೆ. ಹೀಗಾಗಿ ಗೊಂದಲವು ಸೋಮನಾಥನಿಂದ ಪ್ರಾರಂಭವಾಗಿ ಮುಂದಿನವರಿಗೆಲ್ಲ ಹರಡಿದಂತಿದೆ. ಆದರೆ ಇವರಿಬ್ಬರೂ ಭಿನ್ನರೆಂದು ನಾವು ಭಾವಿಸುವುದರಿಂದ ಕಾಲದ ವಿಷಯದಲ್ಲಾಗಲೀ, ಇವರ ಬಗ್ಗೆ ಪ್ರಚಲಿತವಿರುವ ಕತೆಗಳ ಬಗ್ಗೆಯಾಗಲೀ ಈ ತೊಡಕು ಉದ್ಭವಿಸುವುದಿಲ್ಲ.

ಈಗ, ಜೇಡರದಾಸಿಮಯ್ಯನೇ ವಚನಕಾರನೆಂದು ಒಪ್ಪಿ ನಮ್ಮ ವಾದವನ್ನು ಮುಂದುವರಿಸೋಣ. ಈತನು, ಆಗಲೇ ಸೂಚಿಸಿರುವಂತೆ, ಬಸವಾದಿಗಳನ್ನು ಹೆಸರಿಸುವ ಶಂಕರದಾಸಿಮಯ್ಯನ ಸಮಕಾಲೀನನಾದ್ದರಿಂದ, ಕ್ರಿ.ಶ. ೧೧೬೦ರಲ್ಲೂ ಇದ್ದವನು. ಡೋಹರಕಕ್ಕಯ್ಯ, ಸಕಲೇಶಮಾದರಸರಂತೆ ಈತನೂ ಬಸವಣ್ಣನ ಹಿರಿಯ ಸಮಕಾಲೀನನಾಗಿದ್ದ. ಈತನಿಗಿಂತ

---

3. ಎಂ. ಎಂ. ಕಲಬುರ್ಗಿ (ಸಂ) : ಶಾಸನಗಳಲ್ಲಿ ಶಿವಶರಣರು : ಪು. ೪೨-೩
4. ಬಂಡಾರು ತಮ್ಮಯ್ಯ (ಸಂ) : ಬಸವಪುರಾಣಮು (೧೨೬೬) : ಪು. ೨೫೮, ೨೬೬, ೪೨೬, ೪೩೪, ೪೫೯ ಇ.
5. ಆರ್. ಸಿ. ಹಿರೇಮಠ (ಸಂ) : ಬಸವಪುರಾಣ (೧೯೭೧) : ಪು. ೩೩೧, ೩೪೦ ಇ.
6. ಅದೇ, ಪು. ೭೬೮ 7. ಅದೇ, ಪು. ೭೭೭

ಪೂರ್ವದಲ್ಲಿ ಯಾರಾದರೂ ವಚನಕಾರರಿದ್ದರೇ ಎಂಬುದನ್ನು ಪರಿಶೀಲಿಸಬೇಕಾದರೆ, ಈತನು ಸ್ಮರಿಸಿರುವ ಶಿವಶರಣರುಗಳಲ್ಲಿ ಯಾರಾದರೂ ವಚನಗಳನ್ನು ಬರೆದಿದ್ದಾರೆಯೇ ಎಂಬುದನ್ನು ನೋಡಬೇಕಾಗುತ್ತದೆ. ವಚನಕಾರನಾದ ಜೇಡರದಾಸಿಮಯ್ಯನು ಓಹಿಲ, ಉದ್ಭಟ, ಕೆಂಭಾವಿ ಭೋಗಯ್ಯ, ಮಾದಾರ ಚನ್ನಯ್ಯ, ಕೊಂಡಗುಳಿ ಕೇಶಿರಾಜ ಮತ್ತು ಡೋಹರ ಕಕ್ಕಯ್ಯರನ್ನು ಸ್ಮರಿಸುತ್ತಾನೆ ಎಂಬುದನ್ನಾಗಲೇ ಗಮನಿಸಿದ್ದೇವೆ. ಇವರಲ್ಲಿ ಓಹಿಲ, ಉದ್ಭಟರು ವಚನಕಾರರಲ್ಲ, ಅಷ್ಟೇ ಅಲ್ಲ, ಕನ್ನಡಿಗರೇ ಅಲ್ಲ. ಕೆಂಭಾವಿ ಭೋಗಯ್ಯನು ವಚನಕಾರನೇ ? ಕೆಂಭಾವಿ ಭೋಗಯ್ಯನ ಮೇಲೆ ರಗಳೆಯೊಂದನ್ನು ಬರೆದಿರುವ ಹರಿಹರನು ತನ್ನ ಕೃತಿಯಲ್ಲಿ. ಅವನಿಂದ ಆಡಿಸಿರುವ ಮಾತುಗಳ ಮೂಲಕ, ಅವನ ವಚನಗಳನ್ನೇ ಉಲ್ಲೇಖಿಸಿರಬಹುದೇ ಎಂದು ಅನುಮಾನಿಸುವ ಡಾ॥ ಎಲ್. ಬಸವರಾಜು ಅವರು 'ನಿಜಗುರುಭೋಗ ಸಂಗ' ಎಂಬ ಅಂಕಿತದ ವಚನಕಾರನು ಈ ಭೋಗಯ್ಯನೇ ಇರಬಹುದು ಎಂದು ಒಮ್ಮೆ ತೀರ್ಮಾನಿಸಿದರೆ[8], ಆ ನಂತರ 'ಹರಿಹರನು ಇವನ ಮೇಲೆ ಬರೆದಿರುವ ರಗಳೆಯ ಆಧಾರದಿಂದ ಕೆಂಭಾವಿ ಭೋಗಣ್ಣನ ಆರಾಧ್ಯದೈವವು 'ಭೋಗನಾಥ' ಎಂದು ತಿಳಿದುಬರುವಷ್ಟರಿಂದಲೇ, ಭೋಗಣ್ಣನೆಂಬುವನ ಹೆಸರಿನಲ್ಲಿ 'ನಿಜಗುರು ಭೋಗ ಸಂಗ' ಎಂಬ ಅಂಕಿತದೊಡನೆ ಸಿಕ್ಕುವ ವಚನಗಳು ಈ ಕೆಂಭಾವಿ ಭೋಗಣ್ಣನವೆಂದೇ ನಿರ್ಧರಿಸಲು ಸಾಧ್ಯವಿಲ್ಲ'[9] ಎಂದು ಹೇಳುತ್ತಾರೆ. ಅಷ್ಟೇ ಅಲ್ಲ, 'ಬೆಡಗಿನ ವಚನಗಳು' ಎಂಬ ಗ್ರಂಥದಲ್ಲಿ ಒಬ್ಬ ಭೋಗಣ್ಣನದೆಂದು ಉಲ್ಲಿಖಿತವಾಗಿರುವ ವಚನವೊಂದರಲ್ಲಿ ಅಲ್ಲಮ, ಅಜಗಣ್ಣ, ಚೆನ್ನಬಸವರಾಜರ ಪ್ರಸ್ತಾಪವಿರುವುದರಿಂದ, ಈ ಭೋಗಣ್ಣನು ಜೇಡರದಾಸಿಮಯ್ಯನು ಸ್ಮರಿಸಿರುವ ಕೆಂಭಾವಿ ಭೋಗಣ್ಣನಾಗದೆ, ಮತ್ತಾವನೋ ಒಬ್ಬ ಭೋಗಣ್ಣನಿರಬೇಕು'[10] ಎಂಬ ತೀರ್ಮಾನಕ್ಕೆ ಬರುತ್ತಾರೆ. ಇದು ಸರಿ.

ಮಾದಾರ ಚೆನ್ನಯ್ಯನ ವಿಚಾರಕ್ಕೆ ಬರೋಣ. ಜೇಡರದಾಸಿಮಯ್ಯನು ಸ್ತುತಿಸಿರುವ ಮಾದಾರ ಚೆನ್ನಯ್ಯನೂ, ಹರಿಹರನು ತನ್ನ ರಗಳೆಗೆ ವಸ್ತುವಾಗಿರಿಸಿಕೊಂಡ ಮಾದಾರ ಚೆನ್ನಯ್ಯನೂ, 'ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅಜಿ ನಿಜಾತ್ಮ ರಾಮರಾಮನ' ಎಂಬ ಅಂಕಿತದ ವಚನಗಳನ್ನು ಬರೆದ ಮಾದಾರ ಚನ್ನಯ್ಯನೂ ಒಬ್ಬನೇ ಎಂದು ಡಾ॥ ಎಲ್. ಬಸವರಾಜು ಹೇಳುತ್ತಾರೆ[11]. ಇನ್ನೂ ಹಲವರು ಈ ಅಭಿಪ್ರಾಯವನ್ನೇ ಅನುಮೋದಿಸುತ್ತಾರೆ[12]. ಇದನ್ನೀಗ ಪರಿಶೀಲಿಸಬೇಕಾಗಿದೆ. ದಾಸಿಮಯ್ಯನು ಎರಡು ಕಡೆ–ಎಂದರೆ 'ನಂಬಿದ ಚೆನ್ನನ ಅಂಬಲಿಯನುಂಡ' 'ಕೀಳು ಡೋಹರಕಕ್ಕ ಕೀಳು ಮಾದರ ಚೆನ್ನ' ಎಂಬ ವಚನಗಳಲ್ಲಿ ನೇರವಾಗಿ ಚೆನ್ನಯ್ಯನನ್ನು ನೆನೆಸಿಕೊಂಡಿದ್ದಾನೆ. ಬಸವಣ್ಣ ಹಲವಾರು ಕಡೆಗಳಲ್ಲಿ ಈತನನ್ನು ಸ್ಮರಿಸಿದ್ದಾನೆ. 'ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ' 'ಮಹಾದಾನಿ ಕೂಡಲಸಂಗಯ್ಯನೊಲಿದು ಮಾದಾರ ಚೆನ್ನಯ್ಯನ ಮನೆಯಲುಂಡ' 'ಚೆನ್ನನೊಡನುಂಡ ಶಿವನು, ಆಹಾ, ಅಯ್ಯ, ಚೆನ್ನ ಚೋಳನ ಮನೆಯ ಕಂಪಣಿಗನಯ್ಯಾ' 'ಸವಿನೋಡಿ ಅಂಬಲಿ ರುಚಿಯಾಯಿತೆಂದು ಕೂಡಲಸಂಗಮದೇವರಿಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ' ಇತ್ಯಾದಿ ಮಾತುಗಳಲ್ಲಿ ತಾನು ಹೇಳುತ್ತಿರುವ ಚೆನ್ನಯ್ಯ ಕರಿಕಾಲ ಚೋಳನ ಕಂಪಣಿಗನಾದ ಚೆನ್ನಯ್ಯನೇ ಎಂಬುದನ್ನು ಬಸವಣ್ಣ ಸ್ಪಷ್ಟಪಡಿಸಿದ್ದಾನೆ. ಬಸವಣ್ಣ ಹಾಗೂ ಹರಿಹರರು ಹೇಳುವಂತೆ ಚೆನ್ನಯ್ಯ ಕಂಪಣಿಗ. ಮೂರು ಮಂದಿಯಾದರೂ ಕರಿಕಾಲ ಚೋಳರಿದ್ದರು; ಅವರಲ್ಲಿ ಈ ಚೆನ್ನಯ್ಯ ಯಾರ ಬಳಿಯಲ್ಲಿದ್ದ ಎಂಬುದನ್ನು ಖಂಡಿತವಾಗಿ ಹೇಳಲು ಸಾಧ್ಯವಿಲ್ಲ. ಆದರೆ 'ಕಯ್ಯುಳಿಗತ್ತಿ ಅಡಿಗೂಂಟಕ್ಕೆಡೆಯಾಗಬೇಡ ಅಜಿ ನಿಜಾತ್ಮರಾಮರಾಮನ' ಅಂಕಿತದ ವಚನಕಾರನು ಪ್ರಾಯಶಃ ಬೇರೆಯೇ ವ್ಯಕ್ತಿ. ಈ ವಚನಕಾರನ ಕಾಯಕ ಪಾದರಕ್ಷೆಯ ತಯಾರಿಕೆ. ಅವನ ವಚನವೊಂದು ಹೀಗಿದೆ :

> 'ಸ್ಥೂಲ ಸೂಕ್ಷ್ಮಕಾರಣವೆಂಬ ಮೂಱು ಕಂಬವ ನೆಟ್ಟು ಆಗುಭೇಗೆಯೆಂಬ ದಡಿಗೋಲಿನಲ್ಲಿ
> ಆಗಡದ ಎಮ್ಮೆಯ ಚರ್ಮವ ತೆಗೆದು, ಉಭಯ ನಾಮವೆಂಬ ನಾರಿಯಲ್ಲಿ ತಿತ್ತಿಯನೊಪ್ಪವ ಮಾಡಿ,
> ಭಾವವೆಂಬ ತಿಗಾಡಿನಲ್ಲಿ ಸರ್ವಸಾರವೆಂಬ ಖಾರದ ನೀರ ಹೊಯಿದು, ಅಟ್ಟೆಯ ದುರ್ಗಣ ಕೆಟ್ಟಾ ಮೆಟ್ಟಡಿಯವರಿಗೆ ಮುಟ್ಟಿಸ ಬಂದೆ.
> ಮೆಟ್ಟಡಿಯ ತಪ್ಪಲ ಕಾಯದೆ ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ
> ಕೈಉಳಿಕತ್ತಿ ಅಡೆಗುಂಟಕ್ಕಡಿಯಾಗಬೇಡ. ಅಜಿ ನಿಜಾತ್ಮ ರಾಮರಾಮನ'[13].

---

8. ಎಲ್. ಬಸವರಾಜು (ಸಂ) : ಅಲ್ಲಮನ ವಚನ ಚಂದ್ರಿಕೆ (ಪೀಠಿಕೆ) : ಪು. ೩
9. ಎಲ್. ಬಸವರಾಜು (ಸಂ) : ಶಿವದಾಸ ಗೀತಾಂಜಲಿ (೧೯೬೩) ಪೀಠಿಕೆ : ಪು. ೪೩ 10. ಅಲ್ಲೇ.
11. ಎಲ್. ಬಸವರಾಜು (ಸಂ) : ಅಲ್ಲಮನ ವಚನ ಚಂದ್ರಿಕೆ (ಪೀಠಿಕೆ) : ಪು. ೪
12. ನೋಡಿ: ಎಂ. ಚಿದಾನಂದಮೂರ್ತಿ : ವಚನ ಸಾಹಿತ್ಯ (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಸಂ. ೫). ಪು. ೧೧
ಎಚ್. ದೇವೀರಪ್ಪ, ಆರ್. ರಾಜಪ್ಪ (ಸಂ) ಜೇಡರ ದಾಸಿಮಯ್ಯನ ವಚನಗಳು (೧೯೭೪) ಪ್ರಸ್ತಾವನೆ : ಪು. XXV ೯.
13. ಎಂ. ಎಸ್. ಸುಂಕಾಪುರ (ಸಂ) : ಸಕಲ ಪುರಾತನರ ವಚನಗಳು (ಸಂ.೩) : ಪು. ೨೪೫

ಈ ವಚನದಲ್ಲಿ ಕೃತಿಕಾರನು ತನ್ನ ಕಾಯಕವನ್ನು ವಿವರಿಸಿದ್ದಾನೆ. ತಮಿಳುನಾಡಿನಲ್ಲಿದ್ದ, ಕಂಪಣದ ಕಾಯಕದವನಾದ ಚೆನ್ನಯ್ಯನು ಕಲ್ಯಾಣಕ್ಕೆ ಬಂದು ಪಾದರಕ್ಷಾ ತಯಾರಿಕೆಯ ಕಾಯಕವನ್ನವಲಂಬಿಸಲು ಕಾರಣವೇನಿರಬಹುದು? ಹೀಗೆ ಆಗಿದೆ ಯೆನ್ನಲು ಆಧಾರಗಳಾವುವೂ ಇಲ್ಲ. ಮಾದಾರ ಚೆನ್ನಯ್ಯನ ಹಲವಾರು ವಚನಗಳು ಬಸವಣ್ಣನ ವಚನಗಳಲ್ಲಿ ಕೆಲವನ್ನು ಹೋಲುತ್ತವೆ. ಯಾರು ಯಾರಿಂದ ಪ್ರಭಾವಿತರಾಗಿದ್ದಾರೆಂದು ಹೇಳುವುದು ಕಷ್ಟವೆಂದು ಎಂ. ಚಿದಾನಂದಮೂರ್ತಿಯವರು ಹೇಳಿದ್ದರೂ[14], ವಚನಗಳ ಆಂತರಿಕ ಸೌಂದರ್ಯವನ್ನು ದೃಷ್ಟಿಯಲ್ಲಿರಿಸಿಕೊಂಡು ಹೇಳುವುದಾದರೆ ಬಸವಣ್ಣನಿಂದಲೇ ಮಾದಾರ ಚೆನ್ನಯ್ಯನು ಪ್ರಭಾವಿತನಾಗಿದ್ದಾನೆಂಬುದು ನಮ್ಮ ಅಭಿಪ್ರಾಯ. ಚೆನ್ನಯ್ಯನ ಎಲ್ಲ ವಚನಗಳನ್ನು ಗಮನಿಸಿದರೆ ಆತನಿಂದ ಬಸವಣ್ಣನು ಸ್ವೀಕರಿಸಬಹುದಾದ ಅಂಶಗಳಾವುವೂ ಇಲ್ಲ ಎಂಬುದು ಸ್ವತಃಸಿದ್ಧವಾಗುತ್ತದೆ. ಹೀಗಾಗಿ ವಚನಕಾರ ನಾದ ಮಾದಾರ ಚೆನ್ನಯ್ಯನಿಗೂ, ಜೇಡರ ದಾಸಿಮಯ್ಯ ಹಾಗೂ ಬಸವಣ್ಣ ಸ್ತುತಿಸುವ ಮಾದಾರ ಚೆನ್ನಯ್ಯನಿಗೂ ಸಂಬಂಧ ವಿಲ್ಲ. ಎಂದರೆ ದಾಸಿಮಯ್ಯ ಹೇಳುವ ಚೆನ್ನಯ್ಯ ಅವನಿಗಿಂತ ಸಾಕಷ್ಟು ಹಿಂದಿನವನು, ಪುರಾತನರಲ್ಲೊಬ್ಬ; ಆತ ವಚನಕಾರ ನಲ್ಲ. ಇನ್ನು ಡೋಹರ ಕಕ್ಕಯ್ಯ ಬಸವಣ್ಣನ ಸಮಕಾಲೀನ ; ಕಿರಿಯ ಸಮಕಾಲೀನ, ಪ್ರಾಯಶಃ.

ಇನ್ನು ಉಳಿದಿರುವವನೆಂದರೆ ಕೊಂಡಗುಳಿ ಕೇಶಿರಾಜ. ಈತನೂ ದಾಸಿಮಯ್ಯನ ಸಮಕಾಲೀನನೇ, ಈಗಾಗಲೇ ಅನೇಕರು ಗಮನಿಸಿರುವಂತೆ 'ನೆಱನಂಬಿ ಕರೆದರೆ ನರಿ ಕುದುರೆಯಾಗಿ ಹರಿಯದೇ ಜಗವೆಲ್ಲಾ ಅಱಯಲು ; ತೊಱೆಯೊಳಗೆ ಬಿದ್ದಲಿಂಗ ಕರೆದರೆ ಬಂದುದು ಕರಸ್ಥಲಕ್ಕೆ' ಎಂಬ ವಚನಭಾಗದ ಎರಡನೆಯ ವಾಕ್ಯದಲ್ಲಿ ದಾಸಿಮಯ್ಯನು ಕೊಂಡಗುಳಿ ಕೇಶಿ ರಾಜನ ಬಗೆಗಿನ ಕತೆಯೊಂದನ್ನು ಸೂಚಿಸುತ್ತಿದ್ದಾನೆ[15]. ಕೇಶಿರಾಜನ ಶಾಸನಗಳು ಹನ್ನೆರಡನೆಯ ಶತಮಾನದ ಆದಿಭಾಗದವು ಎಂಬುದನ್ನು ಆಗಲೇ ಗಮನಿಸಿದ್ದೇವೆ. ಹೀಗಾಗಿ ಕೇಶಿರಾಜನು ದಾಸಿಮಯ್ಯನ ಹಿರಿಯ ಸಮಕಾಲೀನ ಈತನೂ ವಚನಕಾರ ನೆಂಬುವದಕ್ಕೆ ಆಧಾರಗಳಿಲ್ಲ. ಹರಿಹರನ ಪ್ರಕಾರ 'ಇವನು ಶಿವಗೋಷ್ಠಿ'ಗಳಲ್ಲಿ ಭಾಗವಹಿಸುತ್ತಿದ್ದನೆಂದು, ಅಲ್ಲಿ 'ಪುರಾತನರ ಗೀತೆ'ಗಳನ್ನು ಹಾಡುತ್ತಿದ್ದನೆಂದೂ ವರ್ಣನೆಯಿದೆ. ಅವನಿಗಿಂತ ಪ್ರಾಚೀನವಾದ 'ಗೀತ'ಗಳ ವಸ್ತು ಶಿವ, ಶಿವಭಕ್ತಿ ಎಂಬುದಂತೂ ಸ್ಪಷ್ಟ. ಆದರೆ ಅವುಗಳ ಸ್ವರೂಪವೇನೋ ತಿಳಿಯದು. ಅವನ ಕೃತಿಗಳೇನೊ ಹರಿಹರ ಹೇಳುವಂತೆ ಪದ್ಯಗಳು–ವೃತ್ತಗಳು (ಬಹುಶಃ ಅಕ್ಷರ ವೃತ್ತಗಳು). ಅವನ ದೊರಕಿರುವ ಕೃತಿಗಳನ್ನು ನೋಡಿದರೂ ಅವನು ಸಂಪ್ರದಾಯನಿಷ್ಠನಾದ, ಇತರ ಕವಿ ಗಳಂತೆ ವೃತ್ತ-ಕಂದಗಳನ್ನು ಬರೆಯುತ್ತಿದ್ದ ಶಿವಭಕ್ತಕವಿಯೆಂಬುದು ತಿಳಿಯುತ್ತದೆ[16]. ಇವನ ಉಪಲಬ್ಧ ಕೃತಿಗಳೆಂದರೆ 'ಷಡಕ್ಷರ ಮಂತ್ರ ಮಹಿಮೆ' ಅಥವಾ 'ಷಡಕ್ಷರ ಕಂದ' ಮತ್ತು 'ಲಿಂಗಸ್ತೋತ್ರದ ಕಂದ'. ಹೀಗಾಗಿ ಈತ ಮೊದಲ ವೀರಶೈವ ಕವಿಯೇ ಹೊರತು ವಚನಕಾರನಲ್ಲ. ತೀರ್ಮಾನವೆಂದರೆ, ಜೇಡರ ದಾಸಿಮಯ್ಯನಿಗಿಂತ ಹಿಂದೆ, ಈಗ ನಮಗೆ ತಿಳಿದಮಟ್ಟಿಗೆ, ಯಾರೂ ವಚನಕಾರರಿರಲಿಲ್ಲ. ಅವನೇ ನಮ್ಮ 'ಆದ್ಯ ವಚನಕಾರ'.

ಇಂತಹ ವಚನಗಳು ಯಾವ ಮೂಲದಿಂದ ಉದಿಸಿದವು ; ಅವಕ್ಕೆ ಪ್ರೇರಣೆಯೆಲ್ಲಿಂದ ಒದಗಿತು ಎಂಬ ಬಗ್ಗೆ ಒಂದೆ ರಡು ಮಾತುಗಳನ್ನೀಗ ಹೇಳುವುದು ಸೂಕ್ತವೆನಿಸುತ್ತದೆ. ವಚನ ಸಾಹಿತ್ಯದ ಉಗಮದ ಬಗ್ಗೆ ಕೆಲವು ವಾದಗಳಿವೆ. ಮೊದಲನೆ ಯದಾಗಿ ಡಿ.ಎಲ್.ಎನ್. ಅವರದು. ವಚನಕಾರರಿಗೆ ಆರಾಧ್ಯರಾದ ತಮಿಳುನಾಡಿನ ನಾಯನಾರ್‌ಗಳು (ಪುರಾತನರು) ರಚಿಸಿದ 'ತೇವಾರ'ಗಳು ವಚನಗಳಿಗೆ ಮಾದರಿಯಾಗಿದ್ದಿರಬೇಕು ಎಂಬುದು ಇವರ ವಾದ[17]. ಡಾ॥ ಎಲ್. ಬಸವರಾಜು ಅವರು ಮೊದಲು ವಾದವೊಂದನ್ನು ಮುಂದಿಟ್ಟು, ಅನಂತರ ಅದನ್ನು ತಿದ್ದಿಕೊಂಡು ಬೇರೊಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ವಚನ ಗಳು ಗದ್ಯಕ್ಕೆ ಸಮೀಪವಾದ್ದರಿಂದ ಪದ್ಯಗಳಾದ ತೇವಾರಗಳು ಪ್ರೇರಣೆಯೊದಗಿಸಿರಲಾರವು, 'ಛಂದೋಗಂಧಿ'ಯಾದ ಸ್ತೋತ್ರ ಗದ್ಯ ವಚನಗಳ ಮೂಲವೆಂದು ಮುಂಚೆ ಹೇಳಿ,[18] ವಚನ ಸಾಹಿತ್ಯಕ್ಕೆ ಪ್ರೇರಕವಾದುದು ವೇದ–ಉಪನಿಷತ್–ಬ್ರಾಹ್ಮಣಗಳ ಗದ್ಯಭಾಗ ಎಂಬ ವಾದವನ್ನು ಆಮೇಲೆ ಮಂಡಿಸಿದರು. ಇದಕ್ಕೆ ಅವರು ಕೊಡುವ ಕಾರಣವೆಂದರೆ, ಉಪನಿಷದ್ವಾಕ್ಯಗಳಲ್ಲಿ ವಚನಗಳಲ್ಲಿ ಸಮಾನವಾಗಿ ಬರುವ ಅಂತಃಪ್ರಾಸ, ಉಕ್ತಿಸಾಮ್ಯ, ಉಲ್ಲೇಖಗಳು, ಸಂವಾದಶೈಲಿ. ಇವುಗಳು[19]. ಏತನ್ಮಧ್ಯೆ ಎಂ. ಚಿದಾನಂದಮೂರ್ತಿಯವರು ವಚನಗಳ ಮೂಲವನ್ನು ಕನ್ನಡದಲ್ಲೇ ಹುಡುಕಹೊರಟು, ಸಾಕಷ್ಟು ಸಂಖ್ಯೆಯ ಜೇಡರ ದಾಸಿಮಯ್ಯನ ವಚನಗಳ ಮೊದಲೆರಡು ಸಾಲುಗಳು ತ್ರಿಪದಿಯ ಮೊದಲೆರಡು ಸಾಲುಗಳ ರಚನೆಯಂತಿರುವುದರಿಂದ ವಚನ

14. ಎಂ. ಚಿದಾನಂದಮೂರ್ತಿ : ವಚನ ಸಾಹಿತ್ಯ : ಪು. ೧೧-೧೩
15. ಎಚ್. ದೇವೀರಪ್ಪ, ಆರ್. ರಾಚಪ್ಪ : ಜೇಡರ ದಾಸಿಮಯ್ಯನ ವಚನಗಳು (ಪ್ರಸ್ತಾವನೆ) : ಪು. XXVI-VII
16. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ : ಪು. ೧೬.
17. ಡಿ.ಎಲ್. ನರಸಿಂಹಾಚಾರ್ : 'ಕೆಲವರು ವಚನಕಾರರು' (ಪೀಠಿಕೆಗಳು, ಲೇಖನಗಳು) ಪು. ೪೪೨
18. ಎಲ್. ಬಸವರಾಜು : ಅಲ್ಲಮನ ವಚನ ಚಂದ್ರಿಕೆ (ಪೀಠಿಕೆ) : ಪು. ೧೨-೧೩
19. ಎಲ್. ಬಸವರಾಜು : ಅಲ್ಲಮನ ವಚನಗಳು (೧೯೬೯) (ಪೀಠಿಕೆ) : ಪು. ೧೯-೨೭

ಗಳಿಗೆ ತ್ರಿಪದಿಯೇ ಮೂಲವೆಂದು ಹೇಳಿದರು[20]. ಆದರೆ ಆ ಬಗ್ಗೆ ಅವರಿಗೇ ಖಚಿತತೆಯಿಲ್ಲ. ಇತ್ತೀಚೆಗೆ ಅವರು ಹೇಳಿರುವಂತೆ 'ತ್ರಿಪದೀ ಮೂಲದ ನನ್ನ ವಾದವನ್ನು ನಾನು ಪೂರ್ತಿ ಕೈಬಿಡಲು ಸಿದ್ಧನಿಲ್ಲ. ಸಮರ್ಥಿಸಿಕೊಳ್ಳಲೂ ಸಿದ್ಧನಿಲ್ಲ'[21].

ಮೇಲಿನ ವಾದಗಳು ಎಷ್ಟರಮಟ್ಟಿಗೆ ಸಮಂಜಸವೆಂದು ನಾವೀಗ ವಿಚಾರಿಸೋಣ. ಡಿ.ಎಲ್.ಎನ್. ಅವರ ಅಭಿಪ್ರಾಯದ ಬಗ್ಗೆ, ಅಂಕಿತದ ಪದ್ಧತಿಯೊಂದನ್ನು ಬಿಟ್ಟರೆ ತೇವಾರಗಳಿಗೂ ವಚನಗಳಿಗೂ ಯಾವ ಸಾಮ್ಯವೂ ಇಲ್ಲ. ತೇವಾರಗಳು ಛಂದೋಬದ್ಧ ರಚನೆಗಳು, ಹಾಡುವುದಕ್ಕಾಗೇ ಬರೆದವು. ವಚನಗಳನ್ನು ಹಾಡುತ್ತಿದ್ದ ಪದ್ಧತಿಯಿದ್ದರೂ ಅವುಗಳ ರಚನೆ ಆ ದೃಷ್ಟಿಯಿಂದ ಆದವಲ್ಲ. ಇನ್ನು ಉಪನಿಷತ್ತು ಹಾಗೂ ಬ್ರಾಹ್ಮಣಗಳ ಗದ್ಯವೇ ವಚನಗಳಿಗೆ ಪ್ರೇರಣೆಯಾಯಿತೆಂಬ ಬಸವರಾಜು ಅವರ ಅಭಿಪ್ರಾಯ. ಅತ್ಯಂತ ಪ್ರಾಚೀನ ವಚನಕಾರನಾದ ಜೇಡರದಾಸಿಮಯ್ಯನಲ್ಲಿ ತಾವು ಹೇಳುವ ಅಂಶಗಳಿಷ್ಟಿವೆಯೆಂಬುದನ್ನು ಅವರು ಪರಿಶೀಲಿಸಬೇಕಾಗಿತ್ತು. ಆದರೆ ಬಸವರಾಜು ಅವರು ಮುಂದಿನ ವಚನಗಳನ್ನೂ ನಿದರ್ಶನಗಳನ್ನಾಗಿ ಕೊಡುತ್ತಾರೆ. ಅವರು ತೋರಿಸಿರುವ ಸಾಮ್ಯಾಂಶಗಳಾವುವು? ಉಕ್ತಿವೈಚಿತ್ರ್ಯ, ಅಂತಃಪ್ರಾಸ, ವಿಚಾರ ರೀತಿ–ಇಂತಹವು. ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಈ ಅಂಶಗಳನ್ನು ನಾವು ಗುರುತಿಸಬಹುದು. ವಚನಕಾರರಲ್ಲಿ ಉಪನಿಷತ್ತಿನ ವಿಚಾರಧಾರೆಯಿದೆಯೆಂದಾಕ್ಷಣ ಆ ಗದ್ಯದ ರಚನಾವಿಧಾನವೇ ಅವರ ಬರವಣಿಗೆಗೂ ಮೂಲವೆಂದು ಹೇಗೆ ಹೇಳುವುದು ? ವಚನಕಾರರಲ್ಲಿ ಹಲವರಿಗೆ ಆಳವಾದ ಸಂಸ್ಕೃತಜ್ಞಾನವಿದ್ದುದು ನಿಜ. ಆದರೆ ಹೆಂಡದ ಮಾರಯ್ಯನಿಗೆ ಸಂಸ್ಕೃತಾಭ್ಯಾಸವಾಗಿತ್ತೆಂದು ಹೇಳಲು ನಮಗೆ ಆಧಾರವಿಲ್ಲ. ಬಸವರಾಜು ಅವರು ಉಪನಿಷತ್ತಿನ ಗದ್ಯದ ಸಂವಾದಶೈಲಿ ವಚನಗಳಲ್ಲಿವೆಯೆಂದು ತೋರಿಸಲು ಉಲ್ಲೇಖಿಸುವ ವಚನ ಹೆಂಡದ ಮಾರಯ್ಯನದು. ಇದು ಕೇವಲ ಆಕಸ್ಮಿಕ ಸಾಮ್ಯವೇಕಾಗಬಾರದು ? ಹೀಗಾಗಿ ವಚನಗಳ ರೂಪಾಂಶವು ಉಪನಿಷದ್ ಗದ್ಯದ ಅನುಕರಣೆಯೆಂಬ ಅವರ ವಾದವನ್ನು ಒಪ್ಪುವುದು ಸಾಧ್ಯವಿಲ್ಲ.

ಇನ್ನು ಎಂ. ಚಿದಾನಂದಮೂರ್ತಿಯವರ ವಾದ. ಅವರೇನೋ ತಮ್ಮ ವಾದ ಮಂಡನೆಗೆ ಅತ್ಯಂತ ಪ್ರಾಚೀನ (ಮೊಟ್ಟಮೊದಲನೆಯ) ವಚನಕಾರನಾದ ಜೇಡರದಾಸಿಮಯ್ಯನ ಕೃತಿಗಳನ್ನು ಪರಿಗಣಿಸುತ್ತಾರೆ. ಇದು ಸರಿಯಾದುದು. ಆದರೆ ಅವರ ತೀರ್ಮಾನವನ್ನು ಮಾತ್ರ ಒಪ್ಪಲಾಗುವುದಿಲ್ಲ. ದಾಸಿಮಯ್ಯನ ಹಲವಾರು ವಚನಗಳ ಪ್ರಾರಂಭವು ತ್ರಿಪದಿಯನ್ನು ಹೋಲುತ್ತವೆ, ನಿಜ. ಕೆಲವು ವಚನಗಳನ್ನು ಸ್ವಲ್ಪ ಮಾರ್ಪಾಟು ಮಾಡಿದರೆ ತ್ರಿಪದಿಗಳನ್ನಾಗೇ ಮಾಡಿಬಿಡಬಹುದೆಂದು ಬಸವರಾಜು ತೋರಿಸಿದ್ದಾರೆ[22]. (ಆದರೆ ದಾಸಿಮಯ್ಯನು ತ್ರಿಪದಿಗಳನ್ನೂ ಬರೆದನೆಂಬ ಅವರ ವಾದವನ್ನು ಒಪ್ಪಲು ಸಾಧ್ಯವಿಲ್ಲ.) ಆದರೆ ಈ ತ್ರಿಪದಿ ಸಾಮ್ಯವು ಮೂರ್ತಿಯವರಿಗೂ ತೀರ ಗಾಢವೆಂದು ಅನ್ನಿಸುವುದಿಲ್ಲ. 'ಅವನ (ಜೇಡರ ದಾಸಿಮಯ್ಯನ) ವಚನಗಳು ಪದ್ಯಗಳಂತೂ ಅಲ್ಲ, ಪದ್ಯಗಳಂತೆ ಕಂಡುಬರುವ ವಚನಗಳು ಸರಿಯಾಗಿ ಗಣವಿಭಾಗವಾಗುವುದಿಲ್ಲ. ಕೆಲವು ವಚನಗಳು ಹದಿನೆಂಟು ಇಪ್ಪತ್ತು ಸಾಲುಗಳಷ್ಟು ದೀರ್ಘವಾಗಿದ್ದರೆ ಇನ್ನು ಕೆಲವು ಒಂದೂವರೆ ಸಾಲಿನಷ್ಟು ಚಿಕ್ಕ ವಚನಗಳು. ಆದ್ದರಿಂದ ಇವು ನಿಜವಾಗಿಯೂ ವಚನಗಳೇ'[23] ಎನ್ನುತ್ತಾರೆ. ದಾಸಿಮಯ್ಯನ ವಚನಗಳಲ್ಲಿ ಮಾತ್ರವಲ್ಲ, ಇತರರಲ್ಲಿಯೂ ಹಲವಾರು ಕಡೆಗಳಲ್ಲಿ ಮೊದಲ ಸಾಲು ಅಥವಾ ಸಾಲುಗಳು ಲಯಬದ್ಧವಾಗಿದ್ದು, ಪ್ರಾಸಮಯವಾಗಿ ಗಾದೆಗಳಂತೆ ಸೂತ್ರಾತ್ಮಕವಾಗಿರುತ್ತವೆ[24]. ಆದ್ದರಿಂದ ವಚನಗಳ ಮೂಲಕ್ಕೆ ಈ ಅಂಶವೊಂದೇ ಕಾರಣವಾಗಲಾರದು. ವಚನವೆಂಬ ಮಾತೇ ಅದು ಪದ್ಯದಿಂದ ಹೊರತಾದದ್ದನ್ನು ಸೂಚಿಸುತ್ತದೆ; ಆದ್ದರಿಂದ ಪದ್ಯವಾದ ತ್ರಿಪದಿ ಅದಕ್ಕೆ ಮೂಲವಾಗಲಾರದು.

20. ಎಂ. ಚಿದಾನಂದಮೂರ್ತಿ : 'ವಚನಸಾಹಿತ್ಯದ ಉಗಮ' (ಸಂಶೋಧನ ತರಂಗ, ೧೯೬೬) ಪು. ೧೬-೩೧
21. ಎಂ. ಚಿದಾನಂದಮೂರ್ತಿ : 'ಬಸವ ಪೂರ್ವಯುಗದ ವಚನಕಾರರು' (ಬಸವ ಜರ್ನಲ್. ೨. ೨) : ಪು. ೨೭
22. ಎಲ್. ಬಸವರಾಜು : ಅಲ್ಲಮನ ವಚನಗಳು (ಪೀಠಿಕೆ) : ಪು. ೧೦-೧೧
23. ಎಂ. ಚಿದಾನಂದಮೂರ್ತಿ : 'ವಚನಸಾಹಿತ್ಯದ ಉಗಮ' (ಸಂಶೋಧನ ತರಂಗ) ಪು. ೨೩.
24. ನಿದರ್ಶನಕ್ಕಾಗಿ ನೋಡಿ : 'ನೆಲದ ಮರೆಯ ನಿಧಾನದಂತೆ' 'ನೆಲದ ಜೊಂಬೆಯ ಮಾಡಿ ಜಲದ ಬಣ್ಣವನುಡಿಸಿ' 'ಪಾತಾಳದಿಂದತ್ತ ಮಾತ ಬಲ್ಲವರಿಲ್ಲ' 'ಮಾಡಿದ ಓಗರ ಮಾಡಿದಂತೆ ಇದ್ದಿತ್ತು' 'ಹಸಿವಡಗಿಬಹುದೆ ನಸುಗುನ್ನಿ ತುರಿಕೆಯು' 'ಕಾಮನ ಸುಟ್ಟು ಹೋಮವನುರುಹಿ', ಎಂಬಿತ್ಯಾದಿ ಅಲ್ಲಮನ ವಚನಗಳು ; 'ಮಾನವಿಲ್ಲದ ಭೋಜನವದು ಶ್ವಾನನ ಮಾಂಸವಯ್ಯಾ' 'ಅಂಜನಗಾಜಿನ ಕೈ ಸಂಜುಗೊಂಡಿದೆ ಅಯ್ಯಾ' 'ಹಣ್ಣಳಿದ ಬಳಿಕ ಮಣ್ಣಿನ ಹಂಗೇಕಯ್ಯ' 'ನೀರು ನೀರನೆ ಕಡೆದು ನೀರೊಳಗೆ ಉತ್ಪತ್ತ್ಯ' ಮೊದಲಾದ ಸಿದ್ಧರಾಮನ ವಚನಗಳು ; 'ತಾಳಮರದ ಕೆಳಗೆ ಒಂದು ಹಾಲ ಹರವಿಯಿದ್ದಡೆ' 'ಸಂತವಿದ್ದ ಮನೆಗೆ ಕೊಂತವ ತಂದಂತೆ' 'ಅಶನ ಕುಂದದು, ವ್ಯಸನ ಮಾಣದು' 'ಮುನ್ನ ಮಾಡಿದ ಪಾಪ ಬೆನ್ನ ಬಿಡದನ್ನಕ್ಕ' 'ಬೆಳೆಯ ಭೂಮಿಯಲೊಂದು ಪ್ರಳಯದ ಕಸಹುಟ್ಟಿ' 'ನಾನೊಂದ ನೆನೆದಡೆ ತಾನೊಂದ ನೆನೆವುದು' 'ಒಲೆ ಹತ್ತಿ ಉರಿವಡೆ ನಿಲಬಹುದಲ್ಲದೆ' 'ಎಚ್ಚಡೆ ನೆಲೆಯದು ಮುಚ್ಚಿಡಡೆ ಬಾಡದು' ಇತ್ಯಾದಿ ಬಸವಣ್ಣನ ವಚನಗಳು ; 'ತನುವನುವಾಯಿತ್ತು ಮನವನುವಾಯಿತ್ತು' 'ಕಡೆಗೆ ಮಾಡುವ ಭಕ್ತಿ ದೃಢವಿಲ್ಲದಾಳುತನ' 'ಅಂಗೈಯೊಳಗಣ ಲಿಂಗವ ಪೂಜಿಸುತ್ತ' 'ಅರಸಿ ತೊಳಲಿದರಿಲ್ಲ, ಹರಸಿ ಬಳಲಿದರಿಲ್ಲ' ಇತ್ಯಾದಿ ಅಕ್ಕನ ವಚನಗಳು. ಇವು ಕೆಲವು ಮಾತ್ರ. ಇಂತಹ ನೂರಾರು ಉದಾಹರಣೆಗಳನ್ನು ನೀಡಬಹುದು.

ಇನ್ನು ನಮ್ಮ ಪ್ರಶ್ನೆಯೆಂದರೆ : ವಚನಗಳಿಗೆ 'ಇದೇ' ಎಂದು ಬೆರಳಿಟ್ಟು ತೋರಿಸಬಹುದಾದ ಮೂಲವೊಂದಿದೆಯೇ ಎಂಬುದು. ಬುದ್ಧನ 'ಧರ್ಮಪದ'ವಾಗಲೀ, 'ಬೈಬಲ್'ನ ಹಲವಾರು ಮಾತುಗಳಾಗಲಿ ಪದ್ಯಗಂಧಿಯಾಗಿದೆಯೆಂದು ಅವುಗಳಿಗೆ ಮೂಲವೊಂದನ್ನು ಹುಡುಕ ಹೋಗಬೇಕೆ ? ಹಾಗೆ ನೋಡಿದರೆ ಈ ರಚನೆಗಳೊಂದಿಗೆ ವಚನಗಳಲ್ಲಿ ಕೆಲವನ್ನು ಹೋಲಿಸಬಹುದು[25]. ಆದ್ದರಿಂದ ವಚನಕಾರರು ಇವುಗಳಿಂದ ಸ್ಫೂರ್ತಿಪಡೆದರೆಂದು ಹೇಳಲಾದೀತೇ? ಆದ್ದರಿಂದ ವಚನಸಾಹಿತ್ಯ ಬೇರೆಯ ಭಾಷೆಯಿಂದಲೋ ಅಥವಾ ಕನ್ನಡದ ಇತರ ಸಾಹಿತ್ಯ ಪ್ರಕಾರವೊಂದರಿಂದಲೋ ಛಂದೋ ಪ್ರಕಾರದಿಂದಲೋ ಪ್ರೇರಣೆಯನ್ನು ಪಡೆಯಿತೆಂದು ಹುಡುಕುತ್ತ ಹೊರಡುವುದಾಗಲೀ, ಹಾಗೇ ನೇರವಾದ ಪ್ರೇರಣೆಯೊಂದಿರಲೇ ಬೇಕೆಂದಾಗಲೀ ನಿರ್ಧರಿಸುವುದೇ ಸರಿಯಾದ ಮಾರ್ಗವಲ್ಲ. ವಚನಕಾರರಲ್ಲಿ ಕೆಲವರಿಗೆ ಸಂಸ್ಕೃತ ಗೊತ್ತಿತ್ತು. ಹಳಗನ್ನಡ ಕಾವ್ಯಗಳ ಪರಿಚಯ ಇದ್ದಿರಬೇಕು. ಒಬ್ಬರಿಬ್ಬರಿಗೆ ಇತರ ಸಾಹಿತ್ಯಗಳ ಪರಿಚಯವೂ ಇತ್ತೇನೊ ! ಆದ್ಯ ವಚನಕಾರ ಜೇಡರದಾಸಿಮಯ್ಯನಲ್ಲಿ ಕಾಣುವುದು ಅಚ್ಚಗನ್ನಡತನವನ್ನು. ಅವನಲ್ಲಿ ಸಂಸ್ಕೃತಪದಗಳಾಗಲೀ, ಉಲ್ಲೇಖಗಳಾಗಲೀ ಬಹು ಕಡಿಮೆ. ಅವನು ಆಡುತ್ತಿದ್ದ ಮಾತಿನ ರೀತಿಯೇ ಈಗ ನಾವು ವಚನ ಎನ್ನುವದು. ನಡಿಗೆಯ ರೀತಿ ಹೇಗೆ ಸಹಜವೋ ಮಾತಿನ ರೀತಿಯೂ ಸಹಜ, ವೈಶಿಷ್ಟ್ಯಪೂರ್ಣ. ಆತನಿಗಿಂತ ಹಿಂದೆ ಬಂದ ಅನೇಕ ಧಾರ್ಮಿಕ ನಾಯಕರ ಹಾಗೆ ಆತನೂ ತನಗೆ ತೋಚಿದ್ದನ್ನು ಕಳಕಳಿಯಿಂದ ಹೇಳಿದ ; ಆದರೆ ಅವನು, ಬೇರೆಲ್ಲರಿಗಿಂತ ಹೆಚ್ಚು ಕವಿಹೃದಯದವನಾದ್ದರಿಂದ ಅವನ ವಚನ (ಗದ್ಯ) ಕಾವ್ಯವಾಯಿತು. ಅವನು ತ್ರಿಪದಿಯನ್ನು ಕೇಳಿದ್ದ. ಇತರ ಛಂದೋಬದ್ಧಕಾವ್ಯಗಳನ್ನು ಓದಿದ್ದ; ಸಂಸ್ಕೃತ ಕೃತಿಗಳ ಪರಿಚಯವೂ ಇತ್ತು. ತಿಂದ ಆಹಾರ ರಕ್ತವಾದಂತೆ, ಅವನ ಈ 'ವ್ಯುತ್ಪತ್ತಿ' ಅವನಲ್ಲಿ ಸೇರಿಹೋಗಿತ್ತು ; ತುಂಬ ಪರೋಕ್ಷವಾಗಿ ಅವನ ಉಕ್ತಿಕ್ರಮದ ಮೇಲೆ ಪರಿಣಾಮ ಬೀರಿರಬಹುದು. ಆದರೆ ನಮ್ಮ ದೇಹದ ಯಾವ ಭಾಗದಲ್ಲಿನ ರಕ್ತ-ಮಾಂಸಗಳು ನಾವು ತಿಂದ ಯಾವ ದಿನದ ಯಾವ ಆಹಾರದಿಂದ ಮೂಡಿದುದೆಂದು ಹೇಳುವದು ಹೇಗೆ ಅಸಾಧ್ಯವೋ, ಹಾಗೆಯೇ ಅವನ ವಚನಗಳ ನೇರವಾದ ಮೂಲವನ್ನು ಹೇಳುವುದು ಅಸಾಧ್ಯ. ಆದ್ದರಿಂದ ನಮ್ಮ ದೃಷ್ಟಿಯಲ್ಲಿ ವಚನಸಾಹಿತ್ಯಕ್ಕೆ ಇಂತಹ ಮೂಲವೆಂಬುದೇ ಇಲ್ಲ ; ಅದು ಒಂದು ಉದ್ಭವ ಮೂರ್ತಿ. ಆಕಾರ ತನ್ನಷ್ಟಕ್ಕೇ ಪಡೆದುಕೊಂಡು ಬಂದದ್ದು; ಅದರ ಹುಟ್ಟು ಹೂವಿನ ರೀತಿ—ಬಣ್ಣ, ಆಕಾರ, ಪರಿಮಳದಿಂದ ಕೂಡಿಯೇ ಉದಿಸಿದಂತೆ. ಇದರ ಹಿನ್ನೆಲೆಗೆ ಇಡೀ ವಾತಾವರಣವೇ ಇದೆ. ಆದರೆ ಇದೇ ಬೀಜದಿಂದ ಬಂದ ಸಸಿಯೆಂದು ಹೇಳಲು ಮಾತ್ರ ಸಾಧ್ಯವಿಲ್ಲ. ಹೀಗಾಗಿ ಎಂ. ಆರ್. ಶ್ರೀ. ಹೇಳುವಂತೆ 'ವಚನ ಸಾಹಿತ್ಯವು ಎರವಲು ತಂದದ್ದಲ್ಲ, ಅದು ಕನ್ನಡದ ಸ್ವಾರ್ಜಿತ ಸ್ವತ್ತು'[26].

## ಬಸವಣ್ಣನ ಕಾಲದ ವಚನಸಾಹಿತ್ಯ

—ಡಾ॥ ಬಿ. ಸಿ. ಜವಳಿ

ಕನ್ನಡನಾಡಿನಲ್ಲಿ ಬಸವೇಶ್ವರಾದಿ ಶಿವಶರಣರು ಹುಟ್ಟದಿದ್ದರೆ ಜನತೆಗೆ ನಿಲುಕದ ಸಾಹಿತ್ಯವು ಇನ್ನೂ ಎಷ್ಟು ವರುಷ ಮುಂದುವರಿಯುತ್ತಿತ್ತೋ; ಹಳಗನ್ನಡ ಬಳಕೆಯ ಕಾಲವು ಎಲ್ಲಿಯವರೆಗೆ ಸಾಗುತ್ತಿತ್ತೋ ಹೇಳುವುದು ಕಠಿಣ. ವಚನ ಸಾಹಿತ್ಯದಿಂದ ಕನ್ನಡ ಸಾಹಿತ್ಯದ ಕೃತಕತೆ ಕಣ್ಮರೆಯಾಗಿ ಬದಲಾಗಿದ್ದ ನಡುಗನ್ನಡದ ಪರಿಚಯ ನಮಗಾಯಿತು. ಸಮಾಜ ಸುಧಾರಣೆಯಂತೆ ವಾಙ್ಮಯ ಸುಧಾರಕರೂ ಆದರು ಬಸವಾದಿ ಶಿವಶರಣರು. ವಾಸ್ತವಾದಿ ಸಾಹಿತಿಗಳ ಅಗ್ರಪಂಕ್ತಿಗೆ ಸೇರುವವರಾದರು. ಬಸವಣ್ಣನವರ ಹೆಸರು ಎತ್ತಿಕೊಂಡಾಗ ಇತರರ ಹೆಸರೂ ಜೊತೆಗೇ ಸೇರಿ ನಾವೆಲ್ಲ 'ಬಸವಾದಿ ಪ್ರಮಥರು', 'ಬಸವಾದಿ ಶಿವ ಶರಣರು' ಎಂದು ಮಾತ್ರ ಮಾತನಾಡುವುದಲ್ಲದೇ ಬಸವೇಶ್ವರಾದಿ ಶಿವಶರಣರ ವಿಚಾರಗಳನ್ನು ಅರಿವುದಕ್ಕೆ ಪೂರಕವಾಗಿ, ಕನ್ನಡನಾಡಿನ ವೀರಶೈವಧರ್ಮದ ಬೇರುಗಳು ತಮಿಳು ಸಾಹಿತ್ಯದಲ್ಲಿಯೂ ಇತರ ಶಿವಭಕ್ತರ ಸಾಹಿತ್ಯದಲ್ಲಿಯೂ ಅಡಗಿರುವುದರಿಂದ ಬಸವೇಶ್ವರ ಚರಿತ್ರೆ ವಿವರಿಸುವಾಗ ತಮಿಳುನಾಡಿನ ಮತ್ತು ಇತರ ದೇಶದ ಶರಣರ ಕಥೆಗಳನ್ನು ಕವಿಗಳು ಬರೆದುದಕ್ಕೆ ಹರಿಹರನ ರಗಳೆಗಳು, ಪಾಲ್ಕುರಿಕೆ ಸೋಮನಾಥಕವಿಯ ಬಸವಪುರಾಣ, ಪಂಡಿತಾರಾಧ್ಯ ಚರಿತೆ, ವೀರಶೈವಾಮೃತ ಮಹಾ ಪುರಾಣ, ಮೊದಲಾದ ಕೃತಿಗಳೇ ಸಾಕ್ಷಿ. ಬಸವಣ್ಣನ ಚರಿತ್ರೆ–ವಚನ ಸಾಹಿತ್ಯ–ವೀರಶೈವ ಧರ್ಮದ ಇತಿಹಾಸಗಳ ವಿಷಯವನ್ನು ಚರ್ಚಿಸುವಾಗ ನಮ್ಮೆದುರು ಹಲವು ಸಮಸ್ಯೆಗಳು ಮುಂದೆ ಬಂದು ನಿಲ್ಲುತ್ತವೆ. ಅವಕ್ಕೆ ಸಂಬಂಧಿಸಿ ಕೆಲವು ಮಾತುಗಳನ್ನು ಚರ್ಚಿಸುವದು ಈ ಲೇಖನದ ಉದ್ದೇಶ.

---

25. ನೋಡಿ : ಟಿ. ವಿ. ನಾರಾಯಣ : 'ಕನ್ನಡ ಸಾಹಿತ್ಯದಲ್ಲಿ ವಚನಸ್ವರೂಪದ ವೈಶಿಷ್ಟ್ಯ ಮತ್ತು ಜಾಗತಿಕ ಸಾಹಿತ್ಯಕ್ಕೆ ಅದರ ಕೊಡುಗೆ' (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೩) : ಪು. ೨೨೧-೨೨೫
26. ಎಂ. ಆರ್. ಶ್ರೀನಿವಾಸಮೂರ್ತಿ : ವಚನ ಧರ್ಮಸಾರ (೧೯೫೬) : ಪು. ೧೦

ಮೊದಲನೆಯದಾಗಿ ಹನ್ನೆರಡನೆಯ ಶತಮಾನದಲ್ಲಿ 'ವಚನವಾಙ್ಮಯ'ವೆಂಬ ಹೊಸಸಾಹಿತ್ಯ ರೂಪಕ್ಕೆ ಮತ್ತು ವೀರಶೈವದ ಬೆಳವಣಿಗೆಗೆ ಕಾರಣ ಪುರುಷರಾರೆಂಬುದು. ಈ ವಿಷಯದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳು ತಲೆದೋರಿವೆ. ಈ ಭಿನ್ನಾಭಿಪ್ರಾಯ ಹಿಂದೆ ಇದ್ದುವೇ ? ಎಷ್ಟು ಹಿಂದೆ ಇದ್ದುವು ? ಈ ಪ್ರಶ್ನೆಗಳಿಗೆ ಉತ್ತರಗಳನ್ನು ಹಿಂದೆ ಕೆದಕಿ ನೋಡಿದರೆ ಹರಿಹರ-ರಾಘವಾಂಕ-ಪಾಲ್ಕುರಿಕೆ ಸೋಮನಾಥರ ಕಾಲದಲ್ಲಿ ಎಂದರೆ ಕನ್ನಡನಾಡು, ಆಂಧ್ರಪ್ರದೇಶಗಳಲ್ಲಿರಲಿಲ್ಲವೆಂಬುದು ಸುಸ್ಪಷ್ಟ. ಭೀಮಕವಿಯ ಕಾಲಕ್ಕೂ ಇದ್ದಿರಲಿಲ್ಲ. ಭೀಮಕವಿಯೂ ವೀರಶೈವ ಕವಿಗಳಲ್ಲಿ ಶ್ರೇಷ್ಠಕವಿ ಪರಂಪರೆಗೆ ಸೇರಿದವನು. ಹರಿಹರ-ಪಾಲ್ಕುರಿಕೆ ಸೋಮನಾಥ-ಭೀಮಕವಿ ಈ ಪ್ರತಿಭಾವಂತ ಕವಿತ್ರಯರೂ ಬರೆದುದು ಬಸವೇಶ್ವರನನ್ನೇ ಕುರಿತು ಪ್ರಾಮುಖ್ಯವಾಗಿತ್ತು. ಇತರ ಶರಣರು ಅವನ ಕಾರ್ಯಕ್ಕೆ ಪೂರಕವೆಂಬ ಭಾವನೆ ಅವರಲ್ಲಿದೆ. ಭಕ್ತಿಪಂಥದ ಚಳುವಳಿಗೆ ನಾಯಕನೆಂದು 'ಭಕ್ತಿಭಂಡಾರಿ' ಎಂದು ಕರೆದರು ; ಶಿವಧರ್ಮಪ್ರಸಾರಕವೆಂದು 'ದ್ವಿತೀಯಶಂಭು' 'ಕಲಿಯುಗದ ಮುಕ್ಕಣ್ಣ' 'ಶೈವಸಾಮ್ರಾಜ್ಯ ಪೂಜಕ' ಎಂದು ಕರೆದರು. ಅವರು ಬಸವಣ್ಣನ ಕಾಲದ, ಬಸವಪೂರ್ವದ ಹಿರಿಯ ಶರಣರ ಬಗ್ಗೆಯೂ ಎಡೆಮಾಡಿಕೊಂಡು ವಿವರಿಸಿದ್ದಾರೆ. ಆದರೆ ಅವರ ಸ್ಥಾನ ಗೌಣವಾಗಿಯೇ ಇರುವುದನ್ನು ನಾವಲ್ಲಿ ಕಾಣುತ್ತೇವೆ. ಉದಾಹರಣೆಗೆ ಬಸವನಿಗಿಂತ ಹಿರಿಯ ಶರಣರಾದ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ, ಸಕಳೇಶಮಾದರಸ ಮತ್ತು ಅಲ್ಲಮಪ್ರಭು ಮೊದಲಾದವರು ಬಸವನ ಇತರ ಸಮಕಾಲೀನರಾದ ಕಿರಿಯ ಶರಣರ ಬಗೆಗೂ ವಿವರಿಸಿದ್ದಾರೆ. ಅವರೆಂದರೆ ಚೆನ್ನಬಸವಣ್ಣ, ಸಿದ್ಧರಾಮ, ಮಹಾದೇವಿಯಕ್ಕ, ಆದಯ್ಯ ಮೊದಲಾದ ಶಿವಶರಣರು, ಇನ್ನುಳಿದ ಬಸವಣ್ಣನ ಕಾಲದ ಹಿರಿಯ ಶರಣರೆಂದರೆ ಮಾದಾರಚೆನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದವರು. ಇವರುಗಳಲ್ಲಿ 'ವಚನ ಸಾಹಿತ್ಯ'ದಂತಹ ಹೊಸದೊಂದು ಸಾಹಿತ್ಯ ರೂಪವನ್ನು ಮೊತ್ತಮೊದಲು ಬಳಸಿದವರಾರಿರಬೇಕು? ಈ ಪ್ರಶ್ನೆಗೆ ಕಾಲನಿರ್ಣಯಮಾಡಿ ಉತ್ತರ ಹೇಳುವ ಚರ್ಚೆಗಳು ಅವ್ಯಾಹತವಾಗಿ ನಡೆದೇ ಇವೆ. ಯಾವುದೇ ಒಂದು ವರ್ಷ ಗೊತ್ತುಮಾಡಿದರೆ ಸಮಸ್ಯೆ ಬಗೆಹರಿದಂತಾಗಲಿಲ್ಲ. ಈ ಚರ್ಚೆಯನ್ನು ಬಗೆಹರಿಸುವಲ್ಲಿ ಚಾರಿತ್ರಿಕ ಸಾಮಗ್ರಿಯ ದೊಡ್ಡ ಅಭಾವವೊಂದಿದ್ದರೆ ವಚನಗಳು ಇಂದು ಪ್ರಕಟವಾಗಿರುವೆಲ್ಲ ಆಯಾಯ ಮೂಲ ಶರಣನವೇ ಎಂಬ ಇನ್ನೊಂದು ಸಂದೇಹವಿದ್ದು, ಅನೇಕ ವಚನಗಳು ಪ್ರಕ್ಷಿಪ್ತವಿರುವಂತೆ ಭಾಸವಾಗುವುದರಿಂದ ಅವುಗಳ ಪ್ರಾಮಾಣ್ಯವನ್ನೂ ಪ್ರಶ್ನಿಸಬೇಕಾಗುತ್ತದೆ. ವಚನಸಾಹಿತ್ಯಾಭ್ಯಾಸಿಗಳಿಗೆ ಈ ವಿಷಯಗಳ ಬಗೆಗೆ ಖಚಿತವಾದ ಇತ್ಯರ್ಥವಾಗ ಬೇಕು. ಈ ವಿಷಯವನ್ನು ನಾನು ಚಿಕ್ಕವನಿರುವಾಗ ಲಿಂಗೈಕ್ಯ ಪ್ರೊ. ಶಿ. ಶಿ. ಬಸವನಾಳ ಅವರಿಂದಲೂ ತದನಂತರ ಅವರ ನೇರ ಶಿಷ್ಯತ್ವ ವಹಿಸಿ ವಚನವಾಙ್ಮಯದ ಬಗೆಗೆ ಸಾಕಷ್ಟು ಅಭ್ಯಾಸ ಮಾಡಿದ್ದ ಲಿಂಗೈಕ್ಯ ವೀರಭದ್ರಪ್ಪ ಮಲ್ಲಾಬಾದಿಯವರಿಂದಲೂ ಕೆಲವು ಮಾತುಗಳನ್ನು ಕೇಳಿದ್ದೇನೆ. ಈ ಮಾತುಗಳು ವಚನಗಳ ಪ್ರಾಮಾಣ್ಯವನ್ನು ಕಂಡುಹಿಡಿಯುವಲ್ಲಿ ಸಹಾಯವಾಗಬಹುದೆಂಬ ಕಾರಣದಿಂದ ಅವುಗಳನ್ನಿಲ್ಲಿ ವಿವರಿಸುತ್ತೇನೆ. ಬಸವನಾಳರು ಈ ರೀತಿ ಸಂದೇಹಪಟ್ಟುಕೊಂಡೇ ಬಸವಣ್ಣನವರ ವಚನಗಳ ಎರಡು ಆವೃತ್ತಿಗಳನ್ನು ಪ್ರಕಟಪಡಿಸಿದರು. 'ಬಸವಣ್ಣನವರ ಷಟ್ಸ್ಥಲದ ವಚನಗಳು' ಎಂದು ಒಂದು ಆವೃತ್ತಿ : ಇನ್ನೊಂದು ಆವೃತ್ತಿಯೆಂದರೆ 'ಬಸವಣ್ಣನವರ ಷಟ್‌ಸ್ಥಳದ ವಚನಗಳು' ಗ್ರಂಥಾಲಯ ಸಂಸ್ಕರಣ. ಇದು ಬಸವನಾಳರು ತೀರಿಕೊಂಡ ಮೇಲೆ ಕ್ರಿ. ಶ. ೧೯೬೨ ರಲ್ಲಿ ಪ್ರಕಟವಾಯಿತು. ಮೊದಲನೆಯದು ಕ್ರಿ. ಶ. ೧೯೫೧ ರಲ್ಲಿ ಪ್ರಕಟವಾಯಿತು. ಗ್ರಂಥಾಲಯ ಸಂಸ್ಕರಣದಲ್ಲಿ ಬೇರೆ ಬೇರೆ ಕಡೆಗಳಿಂದ ಆಯ್ದ ೪೦೦ ವಚನಗಳನ್ನು ಅನುಬಂಧದಲ್ಲಿ 'ಹೆಚ್ಚಿನ ವಚನಗಳು' ಎಂಬ ಶೀರ್ಷಿಕೆಯಲ್ಲಿ ಮುದ್ರಿಸಲಾಗಿದೆ. ಆ ಹೆಚ್ಚಿನ ವಚನಗಳನ್ನು ಅವರು ಮೂಲವಚನಗಳಿಗೆ ಸೇರಿಸಲೂ ಇಲ್ಲ; ಬಸವಣ್ಣನವರ ವಚನಗಳಲ್ಲವೆಂದು ಘೋಷಿಸಲೂ ಇಲ್ಲ. ಕೆಲವಾದರೂ ಅವರಿಗೆ ಸಂದೇಹವನ್ನುಂಟುಮಾಡಿದಂತೆ ಗೋಚರಿಸುತ್ತದೆ. ವಚನಸಾಹಿತ್ಯದ ಬಗೆಗೆ ಮತ್ತು ಮೌಲ್ಯಗಳ ಬಗೆಗೆ ವಿಚಾರಿಸುವಾಗ ಮತ್ತು ರಚಿತವಾದ ನಿಜವಾದ ವಚನವಾವುದೆಂದು ನಿರ್ಣಯಿಸುವಾಗ ವಚನಸಾಹಿತ್ಯದ ಸರ್ವಸಮ್ಮತವಾದ ಮೌಲಿಕ ಮಾತುಗಳಾವುವು? ಧ್ಯೇಯ, ಧೋರಣೆಗಳಾವುವು? ಧಾರ್ಮಿಕ ತತ್ವ, ಸಾಮಾಜಿಕ, ರಾಜಕೀಯ ನೀತಿಗಳಾವುವು? ಆಚರಣೆಯ ನೀತಿಗಳಾವುವು ಎಂಬೀಮೂಲತತ್ವಗಳ ಬಗೆಗೆ ಖಚಿತ ವಿಚಾರಗಳು ಚರ್ಚಿತವಾಗಬೇಕು. ಈ ಮೂಲಭೂತ ವಿಚಾರಗಳ ಹೊರತಾದ ವಚನಗಳನ್ನು ಕೃತಕವೆಂದೂ ಇತ್ತೀಚಿನವರಾರೋ ನಿರ್ಮಿಸಿದರೆಂದೂ ಹೇಳಬೇಕಾಗುತ್ತದೆ. ಇಲ್ಲದಿದ್ದರೆ ಅನೇಕ ಅಸಹ್ಯ, ಅನುಚಿತ ಮಾತುಗಳು ವಚನಗಳೆಂದು ಸೇರಿ ಆ ಸಾಹಿತ್ಯದ ಮೂಲಸ್ವರೂಪವನ್ನೇ ಕೆಡಿಸುವ ಸಂಭವವುಂಟು. ವಚನಗಳ ಖಚಿತತೆ ಕಂಡುಹಿಡಿಯುವಲ್ಲಿ ಕೆಳಗಿನ ಕೆಲವು ಅಂಶಗಳನ್ನು ಸೂಚಿಸಬಹುದು :–

೧. ವಚನಕಾರರು ಮೂಲತಃ ಕನ್ನಡಪ್ರಿಯರು : ಅವರು ಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ವಚನಗಳನ್ನು ಬರೆದರು. ಅವರು ಸಂಸ್ಕೃತದ್ವೇಷಿಗಳಾಗಿರಲಿಲ್ಲ. ಬಸವಣ್ಣನವರ ವಚನಗಳೇ ಈ ಮಾತಿಗೆ ಸಾಕ್ಷಿ. ಆದುದರಿಂದ ಅಲ್ಲಿ ಕನ್ನಡದ ಮನೆಮಾತುಗಳನ್ನು ಕಾಣುತ್ತೇವೆ ; ಕಡಿಮೆ ಸಂಸ್ಕೃತ ಪದ ಹಾಗೂ ಶ್ಲೋಕಗಳನ್ನು ಕಾಣುತ್ತೇವೆ.

೨. ವಚನಗಳು ರಚನೆಯಲ್ಲಿ ಕಿರಿಯವಾಗಿರುತ್ತವೆ. ಇದಕ್ಕೆ 'ಸೂಳ್ನುಡಿ'ಗಳೆಂದೂ, ಅನುಭಾವದ ಉಕ್ತಿಗಳೆಂದೂ ಕರೆದಿದ್ದಾರೆ. ಜೇಡರ ದಾಸಿಮಯ್ಯನ ವಚನಗಳೇ ಇದಕ್ಕೆ ಸಾಕ್ಷಿ. ಬಹಳಷ್ಟು ಜನ ವಚನಕಾರರು ಅನುಭಾವಿಗಳಾಗಿದ್ದರೇ ವಿನಾ ಪಂಡಿತರಾಗಿರಲಿಲ್ಲ.

೩. ಏಕದೇವ ನಂಬಿಗೆ, ಅಂತರಂಗಶುದ್ಧಿ, ಸಂಪ್ರದಾಯಖಂಡನೆ, ಸರಳ ನಡೆ–ನುಡಿ, ಕಾಯಕನಿಷ್ಠೆ–ಮೊದಲಾದವುಗಳ ಕಡೆಗೆ ಗಮನವಿರುತ್ತದೆ.

೪. ಜಾತಿ, ವರ್ಣ, ಕುಲ, ಗೋತ್ರ–ಮೊದಲಾದ ಪಾರಂಪರಿಕ ವಿಚಾರಗಳನ್ನು ಅಲ್ಲಗಳೆದು ಪ್ರಗತಿ, ಸರ್ವರಹಿತ, ಶಿವಭಕ್ತಿ, ಸದಾಚಾರಗಳಿಗೆ ಗಮನವಿರುತ್ತದೆ.

೫. ವೇದ, ಶಾಸ್ತ್ರ, ಪುರಾಣ ಮೊದಲಾದ ಪ್ರಮಾಣಗಳನ್ನೇ ಅವಲಂಬಿಸದೆ ಶರಣನ (ಜ್ಞಾನಿಯ) ನಡೆ, ನುಡಿಗಳ ಪ್ರಾಮಾಣ್ಯವನ್ನು ಹೆಚ್ಚು ಮಹತ್ವದಿಂದ ಸ್ವೀಕರಿಸುತ್ತವೆ.

೬. ಗೃಹಸ್ಥಧರ್ಮಕ್ಕೆ ಮಹತ್ವವಿತ್ತು ಆಶ್ರಮಧರ್ಮಕ್ಕೆ ಕಟ್ಟುನಿಟ್ಟಾದ ನಿಯಮ ಪಾಲಿಸುವುದಿಲ್ಲ. ಹೀಗೆಯೇ ಇನ್ನೂ ಕೆಲವು ಮಾತುಗಳನ್ನು ಹೇಳಬಹುದು. ವಚನ ಸಾಹಿತ್ಯವು ನಶಿಸಿಹೋಗಬಾರದೆಂದು ವಚನಗಳನ್ನು ಸಂಗ್ರಹಿಸಿಕೊಟ್ಟವರಿಗೆ ಇಕ್ಕೇರಿ, ಕೆಳದಿಯ ರಾಜರು ಒಂದು ವಚನ ಹೊಸದನ್ನು ಸಂಗ್ರಹಿಸಿಕೊಟ್ಟರೆ ಒಂದು ಚಿನ್ನದ ನಾಣ್ಯ ಕೊಡುತ್ತಿದ್ದರೆಂದು ಲಿಂಗೈಕ್ಯ ಶ್ರೀ ಮಲ್ಲಾಬಾದಿಯವರು ನನಗೆ ಹಲವು ಪ್ರಸಂಗದಲ್ಲಿ ಹೇಳಿದ್ದು ನೆನಪಿದೆ. ಈ ಚಿನ್ನದ ನಾಣ್ಯದ ಆಸೆಯಿಂದ ಅನೇಕರು ವಚನಗಳನ್ನು ತಾವೇ ಮೂಲ ಶರಣನ ಅಂಕಿತದಲ್ಲಿ ರಚಿಸಿಕೊಟ್ಟಿದ್ದಾರೆಂದೂ ಕೃತಕ ವಚನಗಳು ಆ ಕಾಲದಲ್ಲಿ ಹೆಚ್ಚು ರಚನೆಯಾದವೆಂದೂ ಹೇಳುತ್ತಿದ್ದರು. ಕೆಳದಿಯ ಅರಸರು ನಮ್ಮ ಧರ್ಮದ ವಿರಕ್ತಮಠಗಳನ್ನು ಕಟ್ಟಿಸುವುದರಲ್ಲಿ, ದುರಸ್ತಿ ಮಾಡುವುದರಲ್ಲಿ ಬಹಳೇ ಪರಿಶ್ರಮ ವಹಿಸಿದ್ದರೆಂಬ ಮಾತನ್ನೂ ಹೇಳುತ್ತಿದ್ದರು.* ಒಂದು ಕಾಲಕ್ಕೆ ಅತಿ ವರ್ಣಾಶ್ರಮಿಗಳೆಂದು ತಿಳಿಯಲ್ಪಡುತ್ತಿದ್ದ ವೀರಶೈವರೂ ಜಾತಿ, ವರ್ಣ, ಕುಲ, ಗೋತ್ರಗಳನ್ನು ನಿರ್ಮಾಣಮಾಡಿಕೊಳ್ಳಲು ತೊಡಗಿದುದರಿಂದ ಅವನ್ನು ಸಮರ್ಥಿಸುವಂತೆ ವಚನಗಳನ್ನು ಕಾಲಕಾಲಕ್ಕೆ ಸೇರಿಸಿದಂತೆ ಕಂಡುಬರುತ್ತದೆ. ಇಂತಹವೇ ಕಾರಣಗಳಿಂದಾಗಿ ಅಲ್ಲದೆ ಮತ್ತೆ ಕೆಲಕೆಲವು 'ಸಂಪ್ರದಾಯ'ಗಳಿಂದಾಗಿ ಕಾಲಮಾನದಲ್ಲಿ ಬಸವಣ್ಣನವರ ಹಿರಿಮೆ ಕಡಿಮೆಮಾಡುವುದರಲ್ಲಿ ಅನೇಕರು ತೊಡಗಿ ಕೃತಿಗಳನ್ನು ರಚಿಸಿದಂತೆ ಕಂಡುಬರುತ್ತಿದೆ.

ಹನ್ನೆರಡನೆಯ ಶತಮಾನದ 'ವಚನವಾಙ್ಮಯ'ದ ಆವಿರ್ಭಾವಕ್ಕೆ ಮತ್ತು ಅವುಗಳ ರಭಸದ ಪ್ರಚಾರಕ್ಕೆ ಬಸವಣ್ಣನವರೇ ಮೂಲ ಪುರಸ್ಕರ್ತರೆಂಬುದಕ್ಕೆ ಕೆಲವು ಮುಖ್ಯ ಕಾರಣಗಳನ್ನು ನಿವೇದಿಸುತ್ತೇನೆ :

೧. ಅಂದಿನ ಶರಣರಲ್ಲಿ ಬಸವಣ್ಣನಷ್ಟು ಬಹುಮುಖ ಪ್ರತಿಭೆ, ವ್ಯಕ್ತಿತ್ವ, ಸಾಮಾಜಿಕ–ಗೌರವ ಬೇರೆಯವರಿಗೆ ಇದ್ದಿತೆಂದೆನಿಸುವುದಿಲ್ಲ. ಅವನು ವಿದ್ವಾಂಸನಾಗಿ, ಪಂಡಿತಮಾನ್ಯ ಅಗ್ರಹಾರಕ್ಕೊಡೆಯರ ಮನೆತನದವನಾಗಿದ್ದರೂ ಬಹಳ ಸರಳವಾಗಿ ಜನರಿಗೆ ತಿಳಿಸಬಲ್ಲವನಾಗಿದ್ದನು.

೨. ಬಸವಣ್ಣನು ಉತ್ತಮವಾದ ವಿಪ್ರಕುಲದವನಾಗಿದ್ದೂ ಅಂತ್ಯಜರ ಬಗೆಗೆ ಅತ್ಯಂತ ಆದರ ತಾಳಿದವನಾದುದರಿಂದ ಜನಪ್ರಿಯವಾಗುವುದು ಸಾಧ್ಯವಾಯ್ತು.

೩. ಬಸವಣ್ಣನು ಬಿಜ್ಜಳನಲ್ಲಿ ಹಲವು ಹುದ್ದೆಗಳನ್ನು ಹೊಂದಿ ಅಧಿಕಾರಿಯಾಗಿದ್ದರೂ ಅಧಿಕಾರವಿಲ್ಲದ ಸಾಮಾನ್ಯರ ಹಿತಚಿಂತನೆ ಮಾಡಿದುದರಿಂದ ಅವರಿಗೆ ದೈವಪುರುಷನಾದನು.

೪. ಸಂಸಾರಿಯಾಗಿ–ಇಬ್ಬರು ಪತ್ನಿಯರನ್ನು ಹೊಂದಿದ್ದರೂ ಸಂಸಾರಕ್ಕೆ ಅಂಟದ ವೈರಾಗಿಯಾಗಿದ್ದನು.

೫. ಕೀರ್ತಿ ವಾರ್ತೆ ಹಣ ಅಧಿಕಾರ ಪ್ರತಿಷ್ಠೆಗಳಿಗಾಗಿ ದುಡಿಯದೆ ಲೋಕಹಿತಕ್ಕಾಗಿ ಈಶ್ವರ ಭಾವನೆಯಿಂದ ಮತ್ತು ಕರ್ತವ್ಯಭಾವನೆಯಿಂದ 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಭಾವನೆಯಿಂದ ದುಡಿದುದರಿಂದ ಅವನ ಕಿಂಕರತ್ವ, ಸೇವಾಭಾವನೆಗಳು ಜನರಲ್ಲಿ ಭಕ್ತಿಯನ್ನುಂಟುಮಾಡಿದುವು.

೬. ವಚನಸಾಹಿತ್ಯ ಪ್ರಸಾರಕ್ಕೆ ವೀರಶೈವ ಧರ್ಮದ ಮೌಲ್ಯಗಳಿಗೆ ಅವನೇ 'ಅನುಭವ ಮಂಟಪ' ಎಂಬ ಸಂಸ್ಥೆಯನ್ನು ಸ್ಥಾಪನೆ ಮಾಡಿದುದರಿಂದ ಅದರ ಶ್ರೇಯಸ್ಸಿಗೆ ಅವನೇ ಕಾರಣಪುರುಷನಾದನು ಈ ಮೇಲಿನ ಮತ್ತು ಇಂತಹವೇ ಕಾರಣಗಳಿಂದಾಗಿ ಬಸವಣ್ಣನೇ ವಚನಸಾಹಿತ್ಯಕ್ಕೆ ಮೂಲಪುರುಷ–ಇನ್ನೊಬ್ಬರು ಅಂದಿನ ಕಾಲದಲ್ಲಿ ಇಂತಹ ಕ್ರಾಂತಿಕಾರಕ ವಿಚಾರಗಳನ್ನು ಜನರಲ್ಲಿ ಬಿತ್ತುವ ನಾಯಕರಾಗಲು ಸಾಧ್ಯವಿರಲಿಲ್ಲ. ಅನುಭಾವಿಗಳಾಗಿ, ಸಾಹಿತ್ಯಸಾಮ್ರಾಟರಾಗಿ, ಧರ್ಮಸಂಸ್ಥಾಪನಾಚಾರ್ಯರಾಗಿ ಜೀವನದ ಅನುಭವಾಮೃತವನ್ನು ವಚನಗಳಲ್ಲಿ ನೀಡಿದ್ದಾರೆ. ಅವರು ಕನ್ನಡಿಗರ ಕಾಮಧೇನು,

* ಈ ಮಾತುಗಳನ್ನು ಬೇರೆ ಆಧಾರಗಳಿಂದ ಖಚಿತಪಡಿಸಿಕೊಳ್ಳಬೇಕು.

'ಉಂಬಾಗಳಿಲ್ಲೆಂಬ, ಉಡುವಾಗಳಿಲ್ಲೆಂಬ, ಬಂಧುಗಳು ಬಂದಾಗಳಿಲ್ಲೆಂಬ, ಲಿಂಗಕ್ಕೆ ಇಲ್ಲೆಂಬ, ಜಂಗಮಕ್ಕೆ ಇಲ್ಲೆಂಬ ಬಂದ ಪುರಾತನರಿಗೆ ಇಲ್ಲೆಂಬ, ಸಾವಾಗ, ದೇಹವನು ದೇಗುಲಕೆ ಒಯ್ಯೆಂಬ ದೇವರಿಗೆ ಹಣಬಿಟ್ಟು ಹೇಳುವ' ಜನರ ಕೃಪಣತನವೆಲ್ಲಿ ? ಬಂದ ಹಣವನ್ನೆಲ್ಲ ಶಿವಕಾರ್ಯಕ್ಕೆ ವಿನಿಯೋಗಮಾಡುವ 'ಮಹಾದಾನಿ' ಬಸವಣ್ಣನೆಲ್ಲಿ ? ಸರ್ವರೂ ಉಪದೇಶಮಾಡುವ ಬಂಟರಾದರೆ, ಸರ್ವರೂ ಸಾಕ್ಷಾತ್ ಸಂಗಮನಾಥನ ಸ್ವರೂಪಿಗಳೇ ಆದುದರಿಂದ ಬಸವಣ್ಣ ಯಾರಿಗೂ ಉಪದೇಶ ಮಾಡುವವನಲ್ಲ. ಶಿವಾಚಾರಿಯಾದವಗೆ ದಿನ, ವಾರ, ನಕ್ಷತ್ರಗಳು ಮುಖ್ಯವಲ್ಲವೆಂದ ಬಸವಣ್ಣನಿಗೆ ಪಂಚಾಂಗ ಮಹತ್ವದ್ದಾಗಲಿಲ್ಲ. 'ಎಮ್ಮವರು ಬೆಸಗೊಂಬುದೇ ಶುಭಲಗ್ನ'ವಾಯಿತು. ಚೌಷಷ್ಠಿ ವಿದ್ಯೆ ಕಲಿತು, ಅಹಂಕಾರಿಯಾಗಿ, ಹೊಟ್ಟೆಹೊರೆದುಕೊಳ್ಳುವ ಅಹಂಕಾರಿಗಿಂತಲೂ ವಿನಯಶಾಲಿಯಾದ ಶಿವಭಕ್ತನಾಗಿರುವುದು ಲೇಸೆಂದವನು ಬಸವಣ್ಣ. ಗುಡಿಗುಂಡಾರ, ತೀರ್ಥಕ್ಷೇತ್ರಗಳ ದರ್ಶನಕ್ಕಿಂತ ಶರಣನದರ್ಶನ ಮಹತ್ವದ್ದೆಂದವನು ಬಸವಣ್ಣ ; ಆದುದರಿಂದ ತಾನು ಒಂದೆಡೆಯಲ್ಲಿಯೆ ನೆಲಸಿ (ಕಲ್ಯಾಣದಲ್ಲಿ) ಶಿವಭಕ್ತಿಯ ಪ್ರಸಾರಕಾರ್ಯ ಕೈಕೊಂಡನು. ಶ್ವಾನಜ್ಞಾನ, ಗಜಜ್ಞಾನ, ಕುಕ್ಕುಟಜ್ಞಾನ–ಇವೆಲ್ಲ ಶಿವಜ್ಞಾನದ ಮುಂದೆ ನಿಲ್ಲಬಹುದೇ ? 'ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲೆಂ'ದ ಧೀರ ಬಸವಣ್ಣ. ಆಚಾರ, ಮೃದುವಚನ, ಸತ್ಯ, ಧರ್ಮ, ಶುದ್ಧಿ–ಇವು ಜನರಲ್ಲಿ ಬಸವಣ್ಣನು ಅಪೇಕ್ಷಿಸಿದ ಮೌಲ್ಯ. ಬಸವಣ್ಣನು ಕಲಿಯುಗದಲ್ಲಿ ಮಾತ್ರವಲ್ಲ ಯುಗಯುಗಗಳಲ್ಲಿಯೂ ಜನಿಸಿ ಶಿವಧರ್ಮವನ್ನು ಉದ್ಧರಿಸಿದನೆಂದು ಪಾಲ್ಕುರಿಕೆ ಸೋಮನಾಥ, ತದನಂತರ ಭೀಮಕವಿ, ಶಿವಗಣಪ್ರಸಾದಿ ಮಹದೇವಯ್ಯನವರ ಶೂನ್ಯಸಂಪಾದನೆಗಳಲ್ಲಿ ಉಕ್ತವಾಗಿದೆ. ಶಿವಭಕ್ತಿಯು ಸರ್ವವಿದ್ಯೆಗಳ ತಾಣ, ಸರ್ವವಿದ್ಯೆಗಳಿಗೆ ಮೂಲ ; ಶಿವಜ್ಞಾನವಿಲ್ಲದ ವಿದ್ಯೆ ವಿದ್ಯೆಯೇ ಅಲ್ಲ ; ಆ ಕಾರಣದಿಂದ ಲೌಕಿಕಜ್ಞಾನವಿಲ್ಲದ, ಬರಿ ಶಿವಜ್ಞಾನವಿಡಿದಿದ್ದ ಬೇಡರಕಣ್ಣಪ್ಪದೇವನು ಬಸವಣ್ಣನವರಿಗೆ ಅತ್ಯಂತ ಪೂಜ್ಯನು ; ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ ಇವರು ಕೀಳಲ್ಲ. ಇದುವೇ ಜ್ಞಾನ. 'ಓದದೇ ಗಿಳಿ'? ಎಂದಿದ್ದಾರೆ ಬಸವಣ್ಣನವರು. ನಮ್ಮ ಓದು ಗಿಳಿಯೋದು. 'ಓದಿದ ಓದು ಕೂಚಿಭಟ್ಟನ' ಓದಿನಂತಾಗಬಾರದು ಎಂದಿದ್ದಾನೆ ಸಿದ್ಧರಾಮ ಶಿವಯೋಗಿ. ಭಕ್ತಿಯಿಂದೊಡಗೂಡದ ಓದು, ನಾದ, ವೇದ, ಶಾಸ್ತ್ರ, ಕಲೆಗಳೆಲ್ಲ ವ್ಯರ್ಥ ಎಂಬುದು ಬಸವಣ್ಣನವರ ಕಾಲದ ಶರಣರ ವಾದ. ಈ ತತ್ವಗಳನ್ನು ಒಪ್ಪಿ, 'ಅನುಭಾವ'ವೊಂದನ್ನು ಮುಕ್ತಿಮಾರ್ಗಕ್ಕೆ ಒಪ್ಪಿರುವುದರಿಂದಲೇ ಜಾತಿಜಾತಿಗಳಲ್ಲಿಯ ಭೇದಗಳನ್ನು ತೊಡೆದುಹಾಕಲು ಬಸವಾದಿ ಶಿವಶರಣರಿಗೆ ಸಾಧ್ಯವಾಯ್ತು.

**ಅನುಭಾವ–ಸಮಾಜ ಕ್ರಾಂತಿ :** ಬಸವಣ್ಣ ಮತ್ತು ಇತರ ಶಿವಶರಣರು ಮೂಲತಃ ಸಮಾಜಸುಧಾರಕರಾಗಿ ಅಂತಹ ಶರಣರ ಗುಂಪೊಂದನ್ನು ರಚಿಸಿಕೊಂಡರೋ ಇಲ್ಲವೆ ಅನುಭಾವಿಗಳ ಕೂಟವನ್ನು ನಿರ್ಮಿಸಿದರೋ ಎಂಬುದನ್ನು ನಾವು ವಿಚಾರಿಸಬೇಕು. ಸಿದ್ಧರಾಮನು ಸೊಲ್ಲಾಪುರದಲ್ಲಿ ಸಮಾಜಸುಧಾರಣೆ ಕಾರ್ಯ ನಡೆಸಿಯೇ ಇದ್ದನು. ಸಕಳೇಶ ಮಾದರಸರು ಅನುಭಾವಿಯಾಗಿ ಕಾಲ ಕಳೆಯಲು ಶ್ರೀಗಿರಿಗೆ ಹೋದರು. ಆದರೆ ಅಲ್ಲಿ ಶಿವಯೋಗಿ ಮಲ್ಲರಸರು ಬಸವಣ್ಣನ ಬಳಿಗೆ ಸಕಳೇಶ ಮಾದರಸರನ್ನು ಕಳಿಸಿದರು. ಅನುಭಾವಿಗಳಲ್ಲಿ ಪ್ರಥಮ ಪ್ರಾಶಸ್ತ್ಯ ಆತ್ಮಶುದ್ಧಿ : ತನ್ನ ತಾನರಿಯುವುದು. ಆತ್ಮಶುದ್ಧಿಗಾಗಿಯೇ, ಅನುಭಾವದ ಚರ್ಚೆಗಾಗಿಯೇ ಹರಶರಣರೆಲ್ಲ ಬಸವಣ್ಣನಿದ್ದೆಡೆ ಸೇರಿದರು, ಬೇರೆಯವರ ಬಳಿ ಅಲ್ಲ. ಲೋಕದ ಡೊಂಕಿಗಿಂತಲೂ ಸ್ವಂತ ಡೊಂಕು ತಿದ್ದಿಕೊಳ್ಳುವುದು ಬಹು ಮುಖ್ಯ. ಆದುದರಿಂದ 'ಅನುಭಾವ ಮಾರ್ಗ' ಅನೇಕ ಸಮಸ್ಯೆಗಳ ಪರಿಹಾರಕ್ಕೆ ಸುಲಭ ಮಾರ್ಗವಾಯ್ತು. 'ಶ್ವಪಚೋಪಿಯಾದರೇನು ಶಿವಭಕ್ತನೇ ಕುಲಜ' ಎಂಬ ಬಸವಣ್ಣನವರ ಮಾತೇ ಇದಕ್ಕೆ ಉದಾಹರಣೆ. 'ಹೊಲೆಯೊಳಗೆ ಹುಟ್ಟಿ ಕುಲವನರಸುವ ಎಲವೋ ಮಾತಂಗಿಯ ಮಗ ನೀನು ; ಸತ್ತುದನೆಳೆವನೆತ್ತಣ ಹೊಲೆಯ ? ಹೊತ್ತು ತಂದು ನೀವು ಕೊಲುವಿರಿ ; ವೇದವೆಂಬುದು ನಿಮಗೆ ತಿಳಿಯದು'–ಎಂಬ ಮಾತೂ ಅರ್ಥ ಪೂರ್ಣ. ಸತ್ಯದ ಮಾರ್ಗವನ್ನೇ ಮರೆತು, ಅಹಂಕಾರ ಅಷ್ಟಮದಗಳ ಮಧ್ಯದಲ್ಲಿ ತೊಳಲಾಡುವ ಜನತೆ ಬಸವಣ್ಣನವರ 'ಆನೆಯನೇರಿಕೊಂಡು ಹೋದಿರೇ ನೀವು ; ಕುದುರೆಯನೇರಿಕೊಂಡು ಹೋದಿರೇ ನೀವು ; ಅಣ್ಣಾ, ಸತ್ಯದ ನಿಲವನರಿಯದೆ ಹೋದಿರಲ್ಲಾ'–ಎಂಬ ಮಾತನ್ನು ಮೆಲುಕು ಹಾಕಬೇಕು. ಬಸವಣ್ಣನವರ ಸಮಕಾಲೀನರ ವಿಚಾರಗಳಲ್ಲಿ ಮೂಲಭೂತ ವಿಚಾರಗಳಾದ : ಕುಲಜಾತಿ, ವರ್ಣಗೋತ್ರ, ಸೂತಕ–ಪಾತಕ, ದೇವಾಲಯ ತ್ಯಾಗ, ದೀನದಲಿತರ, ಸ್ತ್ರೀಯ ಆದರ, ವೇಶ್ಯಾವೃತ್ತಿ ತ್ಯಾಗ, ಕಾಯಕ ಮಹತ್ವ, ಋಜು ನಡೆನುಡಿ ಇತ್ಯಾದಿಗಳಲ್ಲಿ ಪ್ರಮುಖ ವಚನಕಾರರಲ್ಲಿ ಭೇದವಿದೆಯೆಂದೆನಿಸುವುದಿಲ್ಲ. ಧರ್ಮದ ಉದಾತ್ತ ತತ್ವಜ್ಞಾನವನ್ನು ಉಪದೇಶಿಸುವುದು ಎಷ್ಟು ಮುಖ್ಯವೋ ಅಷ್ಟೇ ಪರಸ್ಪರರಲ್ಲಿ ಪ್ರೀತಿ ವಿಶ್ವಾಸಗಳನ್ನು ಹೆಚ್ಚಿಸುವುದು. ಇನ್ನೊಬ್ಬರಿಗೆ ಮಾದರಿಯಾಗಬಲ್ಲ ಆಚರಣೆಗಳನ್ನು ನಡೆದು ತೋರಿಸುವುದು. ಅನುಭವ ಮಂಟಪದ ವ್ಯಕ್ತಿಗಳೆಲ್ಲ ಬಸವನ ಸಮಕಾಲೀನರೇ. ಅವರೆಲ್ಲ ಸಮಾಜಕ್ಕೆ ಒಂದೊಂದು ಗುಣಕ್ಕೆ ಮಾದರಿಯಾಗಿದ್ದರು. ಸೇವಾಭಾವನೆಗೆ ಬಸವಣ್ಣ, ಕಾಯಕಕ್ಕೆ ಮೋಳಿಗೆಯ ಮಾರಯ್ಯ, ವಿನಯಕ್ಕೆ ಮರುಳಶಂಕರದೇವ, ವೀರ ಗಣಾಚಾರಕ್ಕೆ ಮಡಿವಾಳ ಮಾಚಿದೇವಯ್ಯ, ಐಕ್ಯಸ್ಥಲಕ್ಕೆ ಅಜಗಣ್ಣ, ವೈರಾಗ್ಯಕ್ಕೆ ಪ್ರಭುದೇವ-ಮಹಾದೇವಿಯಕ್ಕ, ಇತ್ಯಾದಿಯೆನ್ನಬಹುದು. 'ಖ್ಯಾತಿಗಾಗಿ ನಿಜತತ್ವಂಗಳನೋದಿದಡೇನು, ಕೇಳಿದಡೇನು ? ಅದಕ್ಕೆ ತಕ್ಕ ಅರಿವು, ಆಚಾರ, ನಡೆನುಡಿಯಲ್ಲಿ ನಿರ್ಣಯವಿಲ್ಲದಿರ್ದಡೆ ಕುಂಭೀಪಾತಕ, ನಾಯಕನರಕ ತಪ್ಪದು'

ಎಂದಿದ್ದಾನೆ ಚೆನ್ನಬಸವಣ್ಣ. ಹಲವು ದೈವ ನಿರಾಕರಣೆ, ಭಂಡಭಕ್ತ-ಜಂಗಮರ ವೇಷಧಾರಿಗಳ ಖಂಡನೆ ಎಲ್ಲರಲ್ಲಿಯೂ ಇದೆ. ಹಲವು ದೈವದ ಎಂಜಲು ತಿನ್ನುವ ವಿಧಾನವನ್ನು ಬಸವನ ಸಮಕಾಲೀನ ವಚನಕಾರರು ಖಂಡಿಸಿದ್ದಾರೆ. ಹೇಳುವ ವ್ಯಕ್ತಿಯ ಪ್ರತಿಭೆಗಳಿಗನುಗುಣವಾಗಿ ವಚನಗಳ ಶೈಲಿ ಕೆಲವರಲ್ಲಿ ಕಾವ್ಯಮಯವಾಗಿಯೂ ಸರಳವಾಗಿಯೂ ಇದ್ದರೆ ಇನ್ನು ಕೆಲವರಲ್ಲಿ ಅದು ಗಂಭೀರವೂ ಕ್ಲಿಷ್ಟವೂ ಆಗುತ್ತದೆ. ವಚನಗಳೆಂದರೆ ಬಸವಣ್ಣನವರ ವಚನಗಳು-ಎನ್ನುವ ಮಟ್ಟಿಗೆ ಅವು ಸರಳ, ಸುಂದರ, ಅರ್ಥಪೂರ್ಣ ಕಾವ್ಯಮಯವಾಗಿವೆ. ಸಿದ್ಧರಾಮ, ಚೆನ್ನಬಸವ ಇವರಲ್ಲಿ ನಿರೂಪಣಾತ್ಮಕ, ಶಾಸ್ತ್ರಬದ್ಧ ಶೈಲಿ ಗೋಚರಿಸಿದರೆ ಅಲ್ಲಮನ ವಚನಗಳಲ್ಲಿ ಕೆಲವೊಮ್ಮೆ ಕಾವ್ಯಮಯತೆ ಮತ್ತೆ ಕೆಲವೊಂದು ಬಾರಿ ಬೆಡಗಿನ ಗಹನ (ಕ್ಲಿಷ್ಟ)ತೆ ಮತ್ತೆ ಕೆಲವೊಂದು ಬಾರಿ ಸರಳತೆ ಗೋಚರಿಸುತ್ತದೆ. ಮಹಾದೇವಿಯಕ್ಕನಲ್ಲಿ ಹೆಣ್ಣು ಮಗಳ ನಯವಿನಯದ ಮಾತಿನ ರೀತಿಯೊಡನೆ ಉಗ್ರ ವೈರಾಗ್ಯದ-ಯೋಗದ ಕ್ಲಿಷ್ಟತೆಯೂ ಕಂಡು ಬರುತ್ತದೆ.

**ದುರ್ಮಾರ್ಗ ಖಂಡನೆ :** ಶಿವಶರಣರು ಯಾರಲ್ಲಿಯೇ ಆಗಲಿ ಅವಿವೇಕ, ಅನಾಚಾರ, ದುರ್ಮಾರ್ಗ, ಅನೀತಿಗಳು ಕಂಡು ಬಂದರೆ ಖಂಡಿಸದೇ ಬಿಟ್ಟಿಲ್ಲ. ಈ ಖಂಡನೆ ಕೆಲವು ಮಟ್ಟಿಗೆ ಬಸವಣ್ಣನವರಲ್ಲಿ ಮೃದುವಾಗಿದ್ದರೆ ಇತರರಲ್ಲಿ ಕಟುವಾಗಿರುತ್ತದೆ. ಈ ಕಾರಣದಿಂದಲೇ ಚೆನ್ನಬಸವಣ್ಣನನ್ನು 'ಜ್ಞಾನಿ' 'ಷಡುಸ್ಥಲವನುದ್ಧರಿಸಿದವ' ಎಂದು ಕರೆಯುತ್ತಿದ್ದಂತೆ ಗೋಚರಿಸುತ್ತದೆ. ಮೊದಮೊದಲು ಗುರುಗಳಲ್ಲಿ ಜಂಗಮರಲ್ಲಿಯೂ ತರತಮಭೇದ ಕಾಣುತ್ತಿದ್ದಂತೆ ತಿಳಿದು ಬರುತ್ತದೆ. ಗುರುಶಿಷ್ಯರಲ್ಲಿ ಭೇದ, ಜಂಗಮದಲ್ಲಿ ಜಾತಿ ಇದ್ದುದನ್ನು ಚೆನ್ನಬಸವಣ್ಣನು ಖಂಡಿಸಿದ್ದಾನೆ. 'ಜಾತಿವಿಡಿದು ಜಂಗಮವ ಮಾಡಬೇಕೆಂಬ ಪಾತಕರು ನೀವು ಕೇಳಿರೋ' ಎಂಬ ಮತ್ತು 'ದುರ್ಮಾರ್ಗದಲ್ಲಿ ಆಚರಿಸುವಾತನಲ್ಲಿ ತ್ರಿಣೇತ್ರವಿದ್ದಡೆಯೂ ತೀರ್ಥಪ್ರಸಾದ, ಉಪದೇಶವ ಕೊಳಲಾಗದು' 'ಕ್ರಿಯಾಚಾರವಲ್ಲದ ಗುರುಜಂಗಮಗಳಿಂದ ದೀಕ್ಷೆ ಉಪದೇಶ ಕೈಕೊಳ್ಳಲಾಗದು' 'ಕಾಯಕ್ಲೇಶದಿಂದ ತನುಮನ ಬಳಲಿಸಿ, ಗುರುಲಿಂಗಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡುವ ಸದ್ಭಕ್ತನ ತೋಱಯ್ಯ' ಎಂದು ಆಡಿದ್ದಾನೆ ಚೆನ್ನಬಸವಣ್ಣ. 'ಅಳಿಮನದವಂಗೆ ಶಿವದೀಕ್ಷೆಯ ಕೊಡಲಾಗದು' ಎಂದಿದ್ದಾನೆ ಬಸವಣ್ಣ. ಶಿವನನರಿವುದು ಸಾಲೋಕ್ಯ, ಸಾರೂಪ್ಯ, ಸಾಯುಜ್ಯ, ಸಾಮಿಪ್ಯಗಳಿಂದ ಹೆಚ್ಚಿನದೆಂದು ಚೆನ್ನಬಸಣ್ಣ ತಿಳಿಸಿದರೆ ಕಿಂಕರರ ಸೇವೆ ಬ್ರಹ್ಮಪದವಿ ವಿಷ್ಣುಪದವಿ ರುದ್ರಪದವಿಗಳಿಗಿಂತ ಶ್ರೇಷ್ಠವೆಂದು ಬಸವಣ್ಣ. ಜನಸೇವೆಯಲ್ಲಿ ತೃಪ್ತಿ ಮತ್ತು ಭಗವಂತನನ್ನು ಕಾಣಬೇಕೆಂಬುದು ಅವನ ಗುರಿ. ಧರ್ಮಾರ್ಥ ಕಾಮ ಮೋಕ್ಷಕ್ಕಿಂತ ತನ್ನಾತ್ಮ ವಿಕಾಸ ಪಡೆವುದು ಅನುಭಾವಿಯ ಹಂಬಲ. ಇದೇ ಭಕ್ತಿಯ-ಭಕ್ತನ ಬಯಕೆ. 'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು' ಎಂದ ಬಸವಣ್ಣನ ಮಾತಿಗೆ ಚೆನ್ನಬಸವಣ್ಣನು 'ಕೈಲಾಸವೆಂಬುದೊಂದು ಪೃಥ್ವಿಯ ಮೇಲಿನ ಪೊರಡಿ ; ಅದಕ್ಕೆ ಲಯವುಂಟು' ಎಂದಿದ್ದಾನೆ. ಲಯವಾಗದ ಬದುಕಿನ ಆಸೆ ಅವರದು. 'ಮಾತ ಕಲಿತು ಮಂಡೆ ಬೋಳಿಸಿಕೊಂಡು, ವೇಷಲಾಂಛನಧಾರಿಯಾಗಿ, ಉದರಪೋಷಕರಾದರಲ್ಲದೆ ಶಿವಾಗಮದ, ಸುವಿಚಾರದ ಹೊಲಬನರಿಯರು' 'ಅನ್ಯರ ಬೋಧಿಸಿ ಉದರವ ಹೊರೆವ ವೇಷಡಂಭಕರ ಮೆಚ್ಚರು'. ಹನ್ನೆರಡನೆಯ ಶತಮಾನದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಬಹುಸಂಖ್ಯೆಯಲ್ಲಿ ಭಕ್ತರಾದರೂ ತಮ್ಮ ಪೂರ್ವದ ಆಚಾರ ವಿಚಾರಗಳನ್ನು ಬಿಡುತ್ತಿದ್ದಿಲ್ಲ. ಅದನ್ನು ಖಂಡಿಸಿದ್ದಾರೆ. ಒಂದು ಮನೆಯೊಳಗೆ ಸತಿಗೊಂದು ಲಿಂಗ–ಸುತಗೊಂದು ಲಿಂಗ ಇರುವ ಪರಿಪಾಠವನ್ನು ಅಲ್ಲಗಳೆದರು. 'ಭಕ್ತಿಪಕ್ಷ'ವೆಂಬ ಹೆಸರಿನಲ್ಲಿ ಶರಣಸಮಾಜವೊಂದನ್ನು ರೂಪಿಸಿದರು. ಗುರುಲಿಂಗಜಂಗಮಗಳು ತನುಮನ ಪ್ರಾಣ ಶುದ್ಧಿಗೆ ಸಾಧನಗಳೆಂದರು. ಕುಲಹೀನಂಗೆ ದೀಕ್ಷೆಕೊಡುವುದು, ಅವನ ಮನೆಯಲ್ಲಿ ಊಟ ಮಾಡದೇ ಅಕ್ಕಿ ತುಪ್ಪವ ಒಯ್ವುದು ಶಿವದ್ರೋಹವೆಂದು ಸಾರಿದರು. ಶಿವದೀಕ್ಷೆ, ಶಿವಸಂಸ್ಕಾರ ಭಾವವುಳ್ಳವರಿಗೆ ಸಲ್ಲಬೇಕೆಂದರು. ಹೀನನಿಗೆ ಕೊಟ್ಟ ದೀಕ್ಷೆ' 'ಕುಂಬಳಕಾಯಿಗೆ ಕೊಟ್ಟ ಕಟ್ಟು' 'ಸೆಗಣಿಯ ಬೆನಕಂಗೆ ಸಂಪಿಗೆಯ ಅರಳಲ್ಲಿ ಮಾಡಿದ ಪೂಜೆ' 'ನಿರ್ಮಳದೇಹದೊಳು ಹೊಕ್ಕ ಛಲ'ಇದ್ದಂತೆ.

**ವೈರಾಗ್ಯ ಭಾವ :** ಶಿವಶರಣರ ಬದುಕಿನ ಒಟ್ಟಂದವು 'ಬಂದುದನಲ್ಲಗಳೆಯದೆ ಬಾರದುದ ಬಯಸದೆ' ಇದ್ದು ಇಲ್ಲದ ರೀತಿಯಲ್ಲಿ ಬದುಕುವುದು. ಭೋಗವನ್ನು ಕಡೆಗಣಿಸಿ ವಿರಕ್ತಿಯನ್ನು ಕೊಂಡವರಲ್ಲ; ಹಾಗೆಂದು ವಿರತಿಯನ್ನು ಬಯಸದೆ ಭೋಗದಲ್ಲಿ ಬಿದ್ದು ತೊಳಲಿದವರಲ್ಲ. ಯೋಗ ಯೋಗವೆಂದು ಕಾಯವನತಿಗಳೆದವರಲ್ಲ, ಕಾಯಕಗಳಲ್ಲಿ ಕೈಲಾಸವನ್ನು ಕಂಡು ಕಾಯಕವನ್ನೇ ಪೂಜೆಯನ್ನಾಗಿಸಿಕೊಂಡವರು. ಎಂದ ಮೇಲೆ ಧರ್ಮಸಾಧನೆಗೆ ಶರೀರವೇ ಮೊದಲನೆಯ ಸಾಧನೆಯೆಂದಂತಾಯಿತು. ಶರೀರದ ಸುಖವನ್ನು ಅಲ್ಲಗಳೆವುದು ಸಮ್ಮತವಲ್ಲ. ಸ್ವಾರ್ಥ ತ್ಯಾಗಮಾಡಿ ಸರ್ವಕ್ಷೇಮದ ಚಿಂತನೆ ಬೆಳೆಯಿಸಿದರು. ಐಹಿಕದೊಡನೆ ಆಧ್ಯಾತ್ಮಶಕ್ತಿ ಬೆಳೆಯಬೇಕೆಂದು ಜನರ ಮನಸ್ಸನ್ನು ಅತ್ತ ಹದಗೊಳಿಸಿದರು. ಬಾಹ್ಯಪ್ರಪಂಚವನ್ನು ನೋಡುವಲ್ಲಿ ಕಣ್ಣು, ಕಿವಿ, ನಾಲಿಗೆ, ಮೂಗು, ತೊಗಲುಗಳು ಕಣ್ಣಾಗಿರುವಂತೆ ಅಂತಃಪ್ರಪಂಚ ನೋಡಲು ನಮ್ಮ ಅರಿವೇ ಕಣ್ಣು. ದೇವರು ಶರೀರವನ್ನು ಕೊಟ್ಟುದು ಉಪಯೋಗಕ್ಕಾಗಿಯೇ ವಿನಾ ತ್ಯಜಿಸುವುದಿಲ್ಲ. ಅದನ್ನು ಪ್ರಸಾದ ರೂಪದಿಂದ ಸ್ವೀಕರಿಸಬೇಕೆಂದು 'ಪ್ರಸಾದ ಕಾಯವ ಕೆಡಿಸಲಾಗದು', 'ಇಂದ್ರಿಯ ನಿಗ್ರಹ ಮಾಡಿದರೆ ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು' ಎಂದು ಬಸವಣ್ಣನವರು ನುಡಿದಿದ್ದರೆ, 'ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ'

ಎಂದು ಮಹಾದೇವಿಯಕ್ಕನು ತಿಳಿಸಿದ ಮೇಲೆ ಶರೀರವನ್ನು ಹೀನವೆಂದು ಕಡೆಗಣಿಸುವ ಮಾತೆಲ್ಲಿಯದು ? 'ಕಾಮನ ಸುಟ್ಟು ಹೋಮವನುರುಹಿ, ತ್ರಿಪುರಸಂಹಾರದ ಕೀಲ ಬಲ್ಲಡೆ ಯೋಗಿಯಾದಡೇನು, ಭೋಗಿಯಾದಡೇನು? ಶೈವನಾದಡೇನು, ಸಂನ್ಯಾಸಿಯಾದಡೇನು?' 'ಹೊನ್ನು ಹೆಣ್ಣು ಮಣ್ಣು ಮಾಯೆಯಲ್ಲ; ಮನದ ಮುಂದಣ ಆಸೆ ಮಾಯೆ' 'ಮರನೊಳಗಣ ಪತ್ರ ಫಲಂಗಳು ಮರಕಾಲ ವಶದಲ್ಲಿ ತೋಱುವಂತೆ ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಭಾವದಿಚ್ಛೆಗೆ ತೋಱುವವು' 'ಪಂಚೇಂದ್ರಿಯ ಸಪ್ತಧಾತುವಸತಿಗಳಿದಲ್ಲಿ ಘನವೇನೋ ? ಕಾಮಕ್ರೋಧಲೋಭಮೋಹಮದಮತ್ಸರ ವಿಷಯವಸತಿಗಳಿದಲ್ಲಿ ಫಲವೇನೊ ? ಇವೆಲ್ಲವ ಕೊಂದ ಪಾಪ ನಿಮ್ಮ ತಾಗುವುದು ಗುಹೇಶ್ವರಾ' ಎಂಬ ಅಲ್ಲಮನ ಮಾತುಗಳನ್ನೇ ಅರಿತರೆ ಅಲ್ಲಮನನ್ನು ಮದುವೆಯಾಗದ ಪರಮ ವೈರಾಗ್ಯಮೂರ್ತಿಯೆಂದು ಸಾಧಿಸುವುದು ಅರ್ಥವಿಲ್ಲದ ಮಾತು. ಈ ಮೂಲ ಧ್ಯೇಯವನ್ನೇ ಬದಿಗೆ ಸರಿಸಿ ವೈರಾಗ್ಯವೊಂದನ್ನು ಪ್ರತ್ಯೇಕ ಮಾಡಿ ವಿರಕ್ತಪಂಥದವರು ಕೃತಿ ರಚಿಸದವರೆಗೆ ಗೃಹಸ್ಥಧರ್ಮಕ್ಕೆ ಇದ್ದ ಗೌರವ ಕಡಿಮೆ ಇರಲಿಲ್ಲ. ಇದೊಂದೇ ಕಾರಣದಿಂದ ಹರಿಹರ ಕವಿಯು ಪ್ರಭುದೇವ, ಮಹಾದೇವಿಯಕ್ಕನ ಬಗೆಗೆ ನಮ್ಮಲ್ಲಿ ಮೂಗು ಮುರಿವ ವಿದ್ವಾಂಸರೂ ಇದ್ದಾರೆ. 'ಸಂಸಾರದ ಮಚ್ಚು ಬಿಡದನ್ನಕ್ಕ ಶಿವಪಥವಳವಡದು' 'ನಿಚ್ಚಕ್ಕೆ ನಿಚ್ಚಕ್ಕೆ ಅರ್ಚನೆ ಪೂಜನೆಯ ಮಾಡಿಸಿ ಭೋಗವ ಮಾಡುವವರ ಕಂಡು ನಾನು ಬೆರಗಾದೆನಯ್ಯ' ಎಂಬ ಅಲ್ಲಮನ ಮಾತುಗಳನ್ನು ನಾವು ಗಮನಿಸಬೇಕು. ಅಲ್ಲದೆ ಅಕ್ಕನವರ ಈ ಮಾತುಗಳನ್ನೂ ಗಮನಿಸಬೇಕು : 'ಮಧ್ಯಾಹ್ನದಿಂದ ಮೇಲೆ ಹಿರಿಯರಿಲ್ಲ ; ಅಸ್ತಮಾನದಿಂದ ಮೇಲೆ ಜಿತೇಂದ್ರಿಯರಿಲ್ಲ; ವಿಧಿಯ ಮೀರುವ ಅಮರರು ಇಲ್ಲ'-ಇವನ್ನು ಗೆಲ್ಲುವುದೇ ಭಕ್ತನ ಆಸೆ. ಲಿಂಗದ ವಿರಹದಲ್ಲಿ ಬೆಂದವರನ್ನು ಕಾಮಕ್ರೋಧಾದಿಗಳು ಸುಡಲಾರವೆಂಬುದು ಶರಣರ ಮತ. 'ದೇಹ ನಾನಲ್ಲ, ಜೀವನಾನಲ್ಲ; ಶಿವನು ನಾನು; ಕರ್ತೃತ್ವ, ಭೋಕ್ತೃತ್ವಕ್ಕೆ ಒಳಗಾಗಿ ಭವಕ್ಕೆ ಬೀಳದೆ 'ಶಿವೋದಾತಾ, ಶಿವೋಭೋಕ್ತಾ' ಎಂಬ ಭಾವದಿಂದ ಬದುಕು ನಡೆಯಿಸಬೇಕು ಎಂದಿದ್ದಾನೆ ಶಿವಯೋಗಿ ಸಿದ್ಧರಾಮ. ಇವನು ಜಾರನಾದ ಸೌಂದರನಂಬಿ, ಸೂಳೆ ಪದ್ಮಲದೇವಿ, ಇವರು ಜಾರರಾಗಿ ಜನನ ಬವಣೆಯಿಂದ ಜಾರಿದರೆಂದು ಸಿದ್ಧರಾಮನು ಕೊಟ್ಟ ದೃಷ್ಟಾಂತಗಳು ಮನನೀಯವಾಗಿವೆ. ರಾಘವಾಂಕ ಕವಿಯ ಸಿದ್ಧರಾಮಚಾರಿತ್ರದಲ್ಲಿ ಅಲ್ಲಮ–ಸಿದ್ಧರಾಮರ ನಡುವೆ ಸಂಭಾಷಣೆ ನಡೆದಾಗ ಅಲ್ಲಮನು ಹೀಗೆ ನುಡಿಯುತ್ತಾನೆ: 'ಲೋಹದ ಸಂಗದಿಂದ ಕಿಚ್ಚಿಗೆ ಬಡಿತ ಬೀಳುತ್ತದೆ : ಆದರಂತೆಯೇ ದೇಹಸಂಗದಿಂದ ಆತ್ಮ ಆಯಾಸ ಹೊಂದುತ್ತದೆ ; ನಿಮ್ಮ ಕೆಲಸ ನೆರೆಮನೆಯವರಿಗೆ ಅತ್ತೆ(ಚ್ಚ)ಹಾಗೆ'. ಉತ್ತರವಾಗಿ ಸಿದ್ಧರಾಮನು ಹೀಗೆ ನುಡಿಯುತ್ತಾನೆ : 'ಲಾಭವನ್ನು ಇತರರಲ್ಲಿ ಹಂಚಿಕೊಳ್ಳಬಾರದೇ? ತಾನೊಬ್ಬನೇ ಭೋಗಿಸಬೇಕೆ ? ಗಾಳಿಯನ್ನು ಹುಡಿ ಹಿಡಿಯುತ್ತದೆಯೇ ? ಆಲಿ ಅಂಜನವನೊಳಕೊಂಡಿರ್ಪುದೇ ? ಪೊಡವಿಯೊಳು ಶಿವಯೋಗಿ ಸುಳಿದಡಂ ನೀರನಡುವಿಡಿದ ಕಂಜದ ತೆಱದಿ ಭಕ್ತಿಯುಕ್ತನು ಮೃಡಮೂರ್ತಿಗಗ್ರನು' ಎಂದು ಉತ್ತರಿಸಿದ ಮಾತು ಸರಿಯಾದ ಧೋರಣೆಯವೆನಿಸುತ್ತದೆ. ಹೀಗೆಂದ ಮಾತ್ರಕ್ಕೆ ಶರಣರು ಬ್ರಹ್ಮಚರ್ಯವನ್ನು ಒಪ್ಪಲಿಲ್ಲವೆಂದಲ್ಲ. ನಮಗೆ ತಿಳಿದಮಟ್ಟಿಗೆ ಪ್ರಮುಖ ಐವರು ವಚನಕಾರರಲ್ಲಿ–ಎಂದರೆ ಬಸವಣ್ಣ, ಅಲ್ಲಮ, ಚೆನ್ನಬಸವಣ್ಣ, ಸಿದ್ಧರಾಮ ಮತ್ತು ಮಹಾದೇವಿಯಕ್ಕ ಇವರಲ್ಲಿ ಬ್ರಹ್ಮಚಾರಿಗಳಾಗಿ ಇದ್ದವರು ಚೆನ್ನಬಸವಣ್ಣ ಮತ್ತು ಸಿದ್ಧರಾಮ. ಇವರ ಬಗೆಗೆ ಯಾವ ಚರಿತ್ರಕಾರನೂ, ಕವಿಯೂ ಮದುವೆಯಾದುದರ ಇಲ್ಲವೆ ಸ್ತ್ರೀಸಂಗವನ್ನು ಹೇಳಿಲ್ಲ. ಅನುಭವ ಮಂಟಪದಲ್ಲಿ ಯಾರೂ (ಮದುವೆಯನ್ನು ಸ್ತ್ರೀಯರಿಗೆ ಕಡ್ಡಾಯವಾಗಿ ಕೇಳಿದಂತೆ ?) ಪುರುಷರಿಗೆ ಮದುವೆ ಕಡ್ಡಾಯವೆಂದಿಲ್ಲ. ಅವರವರ ವೈಯಕ್ತಿಕ ಮನೋಧರ್ಮಕ್ಕನುಗುಣವಾಗಿ ನಡೆವ ಸ್ವಾತಂತ್ರ್ಯ ಶರಣರಿಗೆ ಇದ್ದೇ ಇತ್ತು. ಆದರೆ ಇದನ್ನೊಂದು ಸಂಪ್ರದಾಯವನ್ನಾಗಿ ಸಮಕಾಲೀನ ವಚನಕಾರರ ಕಾಲಕ್ಕೇ ಸ್ವೀಕರಿಸಿದ್ದರೆಂದು ಹೇಳುವುದು ಕಠಿಣವಾಗುತ್ತದೆ. ಅನೇಕ ಶರಣರು ಗೃಹಸ್ಥರಾಗಿದ್ದು ನಿರ್ಲಿಪ್ತರಾಗಿ ಆಸೆ ಆಮಿಷಗಳಿಗೆ ಬಲಿ ಬೀಳದೆ, ಲೋಕದ ವ್ಯವಹಾರವನ್ನೂ ಬದಿಗಿರಿಸದೆ ಸಾಗಿಸಿಕೊಂಡು ಹೋದುದು ಶಿವಶರಣರ ಅಪೂರ್ವಸಾಧನೆಯೆಂದೇ ಬಸವಣ್ಣನವರನ್ನು ಅಲ್ಲಮನು, 'ಸತಿಯ ಕಂಡು ವ್ರತಿಯಾದ ಬಸವಣ್ಣ ; ವ್ರತಿಯಾಗಿ ಬ್ರಹ್ಮಚಾರಿಯಾದ; ಬ್ರಹ್ಮಚಾರಿಯಾಗಿ ಭವಗೆಟ್ಟ ; ಗೊಹೇಶ್ವರ, ನಿಮ್ಮಲ್ಲಿ ಬ್ರಹ್ಮಚಾರಿಯಾದವ ಬಸವಣ್ಣನೊಬ್ಬನೇ' ಎಂದು ಪ್ರಶಂಸಿಸಿದುದನ್ನು ಮರೆಯುವಂತಿಲ್ಲ. ಶರಣರು ಮಾನವರ ಇಷ್ಟಾನಿಷ್ಟ, ಸಹಜಾಸಹಜ ವಿಷಯಗಳ ವಿವೇಚನೆಯನ್ನು ಸರಿಯಾಗಿಯೇ ಮಾಡಿದ್ದಾರೆ. ಆಚಾರ ನಿಷ್ಠೆ ವ್ಯಕ್ತಿಯ ಔನ್ನತ್ಯದ ಮಾಪಕವಾಗಿದೆ. ಅವರಿಗೆ ತಾತ್ವಿಕಚರ್ಚೆಗಿಂತ ನಡೆ ಮಹತ್ವದ್ದು. 'ನುಡಿಯಬಹುದು ಅದ್ವೈತವನೊಂದು ಕೋಟಿ ವೇಳೆ ; ಒಮ್ಮೆ ನಡೆಯಬಹುದೇ ನಿರ್ಧಾರವಾಗಿ ಸದ್ಭಕ್ತಿ ಸದಾಚಾರವ ?' ಎಂದು ಕೇಳಿದ ಸಿದ್ಧರಾಮೇಶ್ವರರ ವಾಣಿ ಶರಣರ ನಡತೆಯ ಸೂತ್ರವನ್ನು ಹೇಳುತ್ತದೆ. ಅಲ್ಲದೆ ' ಒಬ್ಬರ ಮನವ ನೋಯಿಸಿ, ಒಬ್ಬರ ಮನೆಯ ಘಾತವಮಾಡಿ ಗಂಗೆಯ ಮುಳುಗಿದಡೇನಯ್ಯಾ' ಎಂಬ ಅವನ ಸಾಮಾಜಿಕ ನಡತೆಯ ಸೂತ್ರವೂ ಮನನ ಮಾಡುವಂತಹದು. ಒಟ್ಟಿನಲ್ಲಿ ಅಂದಿನ ಸಮಕಾಲೀನ ಶರಣರಲ್ಲಿ ಭಕ್ತಿ ಬಸವಣ್ಣಂಗೆ, ಜ್ಞಾನ ಚೆನ್ನಬಸವಣ್ಣಂಗೆ, ವೈರಾಗ್ಯ ಅಲ್ಲಮಪ್ರಭುಗೆ ಅಳವಟ್ಟಿತ್ತೆಂಬುದು ಹುಸಿಯಲ್ಲವಾದರೂ ಚಾರಿತ್ರಿಕ ವಿವರಗಳನ್ನು ಇಂದಿನ ಕೆಲವರಂತೆ ಮರೆಮಾಚುವುದಾಗಿರಲಿಲ್ಲವೆಂಬುದು ಸುಸ್ಪಷ್ಟ.

# ಶೂನ್ಯಸಂಪಾದನೆಗಳು

—ಎಸ್. ಎಸ್. ಭೂಸರಡ್ಡಿ

ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ದೇದಿಪ್ಯಮಾನವಾಗಿ ಬೆಳಗುವ ಕೃತಿ ಶೂನ್ಯಸಂಪಾದನೆ. 'ಆಕಾಶದಲ್ಲಿ ಅದ್ಭುತಗಳಿರುವಂತೆ ನೆಲದ ಮೇಲೆಯೂ ಅದ್ಭುತಗಳಿವೆ ; ಸಾಹಿತ್ಯ ಕ್ಷೇತ್ರದಲ್ಲಿಯೂ ಇವೆ. ಶೂನ್ಯಸಂಪಾದನೆ ಅಂತಹ ಅದ್ಭುತಗಳಲ್ಲಿ ಒಂದು. ವಿಶ್ವಮಾನವನ ಹೃದಯಕ್ಕೆ ನಿಜಾನುಭೂತಿಯ ಬೆಳಗನ್ನು, ಆನಂದವನ್ನು ನೀಡಬಲ್ಲ ದಿವ್ಯ ಕೃತಿರತ್ನಗಳಲ್ಲಿ ಅದು ಒಂದು[1]. ವಾಚನವಾರಿಧಿಯ ಮಥನದಿಂದ ಹುಟ್ಟಿದ ಅಮರಕೃತಿ. ವೀರಶೈವ ವಿಶ್ವಕ್ಕೆ ನೀಡಿದ ಅಪೂರ್ವಕಾಣಿಕೆ. ಜಾಗತಿಕ ಆಧ್ಯಾತ್ಮಿಕ ವಾಙ್ಮಯದಲ್ಲಿ ಶೂನ್ಯಸಂಪಾದನೆ ಮೇರುಸದೃಶ ಕೃತಿ. ಇದು ಪ್ಲೇಟೋನ ಸಂವಾದಗಳಿಗೆ ಸರಿಸಮಾನವಾಗಿದೆಯೆಂಬ ಮಾತು ಈಗ ನಿರ್ವಿವಾದವಾಗಿದೆ. ಬಸವಾದಿ ಪ್ರಮಥರು ಹನ್ನೆರಡನೆಯ ಶತಮಾನದಲ್ಲಿ ಅದ್ಭುತವಾದ ಕ್ರಾಂತಿಯನ್ನೆಸಗಿದರು. ಸಾವಿರಾರು ವರ್ಷಗಳಿಂದ ನಡೆದು ಬಂದ ವರ್ಣಾಶ್ರಮ ಧರ್ಮದ ಸೆಳೆವಿಗೆ ಸಿಲುಕಿ ಸಮಾಜವು ತತ್ತರಿಸುತ್ತಿರುವ ಸಮಯದಲ್ಲಿ ಶಿವಶರಣರು ಅದನ್ನು ಸಂಪೂರ್ಣವಾಗಿ ತ್ಯಜಿಸಿ ಸಮತಾತತ್ತ್ವದ ಮೇಲೆ ಸಮಾಜವನ್ನು ನಿರ್ಮಿಸಲು ಪ್ರಯತ್ನಿಸಿದರು. ಕರ್ಮಕಾಂಡ ಅರ್ಥಹೀನವಾದುದೆಂದು ಮನಗಂಡ ಶರಣರು ಸಹಜ ಸದ್ಭಕ್ತಿಗೆ ಮಾರುಹೋದರು. ಅಂದಿನ ವಚನಸಾಹಿತ್ಯವನ್ನು, ನಿರೀಕ್ಷಿಸಿದರೆ–ಕರ್ಮಹೋಗಿ ಕ್ರಿಯೆಯಾದುದು, ಧರ್ಮ ದಯೆಯ ಸ್ವರೂಪವಾದುದು, ಕಾಯಕವು ಸಮಾಜದ ನಾಡಿಯಾದುದು, ಉಚ್ಚನೀಚಭಾವವಳಿದು ಹೋದುದು, ಹೆಣ್ಣು–ಗಂಡೆಂಬ ಭೇದವಿಲ್ಲಾದುದು ಕಂಡುಬರುತ್ತದೆ. ಅನುಭವಮಂಟಪದಲ್ಲಿ ವಿವಿಧ ಜಾತಿ, ಪಂಥ–ಪಂಗಡಗಳಿಂದ ಬಂದ ಶರಣರು ಅಂಗದಮೇಲೆ ಲಿಂಗಧಾರಣಮಾಡಿ ಸಮಾನಸ್ಕಂದರಾಗಿ ಕುಳಿತು, ವಿಚಾರ ವಿಮರ್ಶೆ ಮಾಡಿದರು. ವಿಚಾರಸ್ವಾತಂತ್ರ್ಯ, ಆಚಾರಸ್ವಾತಂತ್ರ್ಯ. ಧಾರ್ಮಿಕಸ್ವಾತಂತ್ರ್ಯ, ಪ್ರಸಾದಭಾವನೆ ಮೊದಲಾದ ಹೊಸ ವಿಚಾರಗಳು ತಲೆಯೆತ್ತಿದವು. ಈ ಹೊಸಮೌಲ್ಯಗಳನ್ನೊಳಗೊಂಡುದರಿಂದ ವಚನಸಾಹಿತ್ಯ ಜಾಗತಿಕಸಾಹಿತ್ಯದಲ್ಲಿ ಉನ್ನತ ಸ್ಥಾನ ಪಡೆದಿದೆ. ಇಂಥ ವಚನವಾಙ್ಮಯದ ಸಾರವನ್ನೊಳಗೊಂಡ ಶೂನ್ಯಸಂಪಾದನೆ ಅತ್ಯಂತ ಮಹತ್ವವಾದುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ[2]. ಅನುಭವಮಂಟಪದಲ್ಲಿ ನಡೆಯುತ್ತಿದ್ದ ಸಂವಾದಗಳ ಸಂಕಲನ ಶೂನ್ಯಸಂಪಾದನೆ. ವಚನ ಸಾಹಿತ್ಯದ ಸಾರವು ಇಲ್ಲಿ ಕೆನೆಗಟ್ಟಿ ನಿಂತಿದೆ. ಅನುಭಾವವೆಂಬ ಅಂತರಂಗದ ರತ್ನಗಳನ್ನು ಅನುಗೊಳಿಸಿದ ರತ್ನ ಭಾಂಡಾರವಿದು. ಶೂನ್ಯಸಂಪಾದನೆ-ಅನುಭವ ಸಾಹಿತ್ಯಕ್ಕೆ ಬರೆದ ಆರಕ್ಷರಗಳ ಟಿಪ್ಪಣಿ ; ನಿಗಮಾಗಮ ಕಲ್ಪವೃಕ್ಷದ ಒಂದು ಗಲಿತವಾದ ಅಮೃತಫಲ ಎಂಬುದಾಗಿಯೂ ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥದಲ್ಲಿ ಅನುಭವಮಂಟಪದ ಕಾರ್ಯಕ್ರಮಗಳೆಲ್ಲವನ್ನೂ ವಿಶದವಾಗಿ ವಿವರಿಸಲಾಗಿದೆ. ಅಲ್ಲಿ ನಡೆಯುತ್ತಿದ್ದ ಅತಿಗಹನವಾದ ವಿಷಯಗಳ ಪರಸ್ಪರ ಸಂಭಾಷಣೆಗಳು ಅತಿ ಹೃದಯಂಗಮವಾಗಿ ಚಿತ್ರಿತವಾಗಿವೆ. ಚಾಮರಸನು ಶರಣ ಸಾಹಿತ್ಯಮಧುವನ್ನು ವಚನಗಳ ಹುಟ್ಟಿನಿಂದ ಸೋಸಿತೆಗೆದು ತನ್ನ ಷಟ್ಪದಿಗಳ ಗಿಂಡಿಯಲ್ಲಿ ತುಂಬಿಕೊಟ್ಟ. ಆಮೇಲೆ ಶಿವಗಣಪ್ರಸಾದಿ ಮುಂತಾದವರು ಚಾಮರಸನ ಆ ತಂತ್ರವನ್ನು ಉಳಿಸಿಕೊಂಡು ಶೈಲಿಯನ್ನು ಮಾರ್ಪಡಿಸಿ ನೇರವಾಗಿ ವಚನ ಮುಕ್ತಾಫಲಗಳನ್ನೇ ತಮ್ಮ ಚಿನ್ನದಂತಹ ಮಾತುಗಳ ಕೊಂಡಿಯಿಂದ ಕೂಡಿಸಿಕೊಟ್ಟರು. ಆದುದರಿಂದ ಇದು ಗ್ರಂಥಗಳ ಗ್ರಂಥರಾಜ ; ಕಾವ್ಯಕ್ಕೆ ಕಾವ್ಯ ; ಶಾಸ್ತ್ರಕ್ಕೆ ಶಾಸ್ತ್ರವಾಗಿದೆ.

'ಶೂನ್ಯಸಂಪಾದನೆ'–ಇದು ಎರಡು ಪದಗಳಿಂದ ಕೂಡಿದೆ. 'ಶೂನ್ಯ' ಎನ್ನುವುದು ಯಾವುದೇ ವಸ್ತುವಿನ ಅಭಾವವನ್ನು, ಏನೂ ಇಲ್ಲದಿರುವಿಕೆಯನ್ನು ಸೂಚಿಸುತ್ತದೆ. 'ಸಂಪಾದನೆ' ಎನ್ನುವದು ವಸ್ತುವಿನ ಗಳಿಕೆ ಅಥವಾ ಪಡೆಯುವಿಕೆಯನ್ನು ಹೇಳುತ್ತದೆ. ಮೇಲ್ನೋಟಕ್ಕೆ ವಿರೋಧವಾಗಿ ತೋರುವ 'ಶೂನ್ಯಸಂಪಾದನೆ' ಎನ್ನುವ ಸಮಾಸವು ಅನುಭಾವದೃಷ್ಟಿಯಿಂದ ಒಂದು ಸುಸಂಬದ್ಧ ಉಕ್ತಿ. ಶೂನ್ಯಶಬ್ದವು ಅಭಾವವಾಚಕವಾಗಿರದೆ; ಪರಿಪೂರ್ಣಭಾವವಾಚಕವಾಗಿದೆ. ಅದಕ್ಕಾಗಿ ಬೌದ್ಧ ಧರ್ಮದ ಅಂತರ್ಗತವಾದ ಮಾಧ್ಯಮಿಕರು ಹೇಳುವ ಶೂನ್ಯದ ಅರ್ಥ ಇಲ್ಲಿರುವುದಿಲ್ಲ. ಉಪನಿಷತ್ತಿನಲ್ಲಿ ವಿಶ್ವದ ಮೂಲತತ್ತ್ವವನ್ನು ಪ್ರತಿಪಾದಿಸುವ ಒಂದು ವಚನ ಹೀಗಿದೆ : 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂದು; ಮತ್ತೊಂದು 'ಅಸದೇವೇದಮಗ್ರ ಆಸೀತ್' ಇಲ್ಲಿ ಅಪಾತ ಶ್ರವಣ ಮಾತ್ರದಿಂದ ಸತ್‌ಅಸತ್‌ಗಳಲ್ಲಿ ವಿರೋಧವು ಕಂಡುಬರುತ್ತದೆ. ಅದೇ ವಿಚಾರಾಂತ್ಯದಲ್ಲಿ 'ಸತ್' ತ್ರಿಕಾಲಾಬಾಧಿತ ತತ್ತ್ವವೆಂದೇ ಅರ್ಥ. ಅಂಥ ತತ್ತ್ವವೇ 'ಅಸತ್' ಶಬ್ದದಿಂದ ವ್ಯವವೃತವಾಗಿರುವುದು ನಾಮರೂಪುಗಳಿಂದ ಅವ್ಯಾಕೃತವಾದುದೆಂದು ಹೇಳುವಲ್ಲಿ ಈ ಶಬ್ದದ ಬಳಿಕೆಯಾಗಿದೆ. ವಿಶ್ವದ ಮೂಲತತ್ತ್ವವೇ ಇಲ್ಲಿ ಶೂನ್ಯಶಬ್ದದಿಂದ ಪ್ರತಿಪಾದಿತವಾಗಿದೆ. ಅಂಥ ತತ್ತ್ವದ ಸಂಪಾದನೆ ಅಂದರೆ ಸ್ವಾಯತ್ತೀಕರಣ ಮಾಡುವುದು; ಆ ತತ್ತ್ವದೊಡನೆ ಒಂದಾಗು

1. ಶೂನ್ಯಸಂಪಾದನೆ—ಸಂ : ಎಸ್.ಎಸ್. ಭೂಸನೂರಮಠ, ಪುಟ ೧ ಪ್ರಕಾಶಕರ ಮಾತು ೨.
2. ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ—ಡಾ॥ ಆರ್.ಸಿ. ಹಿರೇಮಠ––ಮುನ್ನುಡಿ

ವುದು. ವಿಶ್ವದ ಮೂಲರೂಪ ಸಚ್ಚಿತ್ ಆನಂದಾತ್ಮಕವಾದುದು. ಆದುದರಿಂದಲೇ ಈ ಕೃತಿಯಸ್ಥಾನ ಮಹತ್ವಪೂರ್ಣವಾಗಿದೆ. ಇದು ಕೇವಲ ಸ್ವಾಭಿಮಾನದ್ಯೋತಕವಲ್ಲ; ಅದರ ನೈಜಸ್ಥಿತಿಯ ದ್ಯೋತಕ. ಎಷ್ಟೋ ಜನರು ಸಾಹಿತ್ಯವನ್ನು ಕೇವಲ ಮನ ರಂಜನೆಯ ಸಾಧನವೆಂದು ಭಾವಿಸಿದ್ದಾರೆ. ಆದರೆ ನಿಜವಾದ ಸಾಹಿತ್ಯವು ಮನರಂಜನೆಯೊಡನೆ ಮನಃಪರಿವರ್ತನ ಮಾಡುವು ದಾಗಿದೆ. ಸಾಹಿತ್ಯ ಶಬ್ದದ ಯೌಗಿಕಾರ್ಥವನ್ನು ಸರಿಯಾಗಿ ತಿಳಿದುಕೊಂಡವರು ಈ ಬಗೆಗೆ ಎಳ್ಳಷ್ಟೂ ಸಂದೇಹ ತಾಳಲಾರರು. ಇಲ್ಲಿ ಇನ್ನೊಂದು ವಿಶೇಷವೆಂದರೆ ಕಾಂತಾಸಮ್ಮಿತವೆನಿಸಿದ ಸಾಹಿತ್ಯ ಲಕ್ಷಣದ, ಪ್ರಭುಸಮ್ಮಿತವೆನಿಸಿದ ಶಾಸ್ತ್ರದ ಸಮನ್ವಯ ವನ್ನೂ ಕಾಣಬಹುದು. ಈ ದೃಷ್ಟಿಯಿಂದಲೂ ಈ ಬೃಹತ್ಕೃತಿ ಪರಿಶೀಲನಾರ್ಹವಾಗಿದೆ. ಇದರಲ್ಲಿ ಸಾಹಿತ್ಯದ ಸೌಂದರ್ಯ, ಶಾಸ್ತ್ರದ ಗಾಂಭೀರ್ಯ, ಗಾನದ ಮಾಧುರ್ಯಗಳ ತ್ರಿವೇಣೀಸಂಗಮದ ಪಾವಿತ್ರ್ಯತೆಯನ್ನು ಕಾಣಬಹುದು. ತತ್ತ್ವವನ್ನು ತತ್ತ್ವರೂಪದಲ್ಲಿಯೇ ಪ್ರತಿಪಾದಿಸುವದಕ್ಕಿಂತ ಅದನ್ನು ಮೈಗೂಡಿಸಿಕೊಂಡವರ ಸಚ್ಚರಿತ್ರೆಯ ಮೂಲಕ ಪ್ರತಿಪಾದಿಸುವುದು ದೊಡ್ಡ ಕಲೆ. ಅಂಥ ಕಲೆಯ ಮಹತ್ಸಾಧನೆಯನ್ನು ಶೂನ್ಯಸಂಪಾದನೆ ಗ್ರಂಥದಲ್ಲಿ ಸಾಹಿತ್ಯಕಲಾ ಸಮೀಕ್ಷಕರು ಚೆನ್ನಾಗಿ ನಿರೀಕ್ಷಿಸ ಬಹುದು[3].

ಈಗ ನಮಗೆ ನಾಲ್ಕು ಶೂನ್ಯಸಂಪಾದನೆಗಳು ಸಿಕ್ಕಿವೆ. ಶೂನ್ಯಸಂಪಾದನೆಗಳು ಐದು ಇರಬಹುದೆಂಬ ವಿಚಾರವನ್ನು ಪ್ರಥಮವಾಗಿ ಎತ್ತಿತೋರಿಸಿದವರು ದಿ. ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿಗಳು[4]. ಅವರ ಸೂಚನೆಯಂತೆ ಕೆಂಚ ವೀರಣ್ಣೊಡೆಯರ ಹಲಗೆಯದೇವರ ಶೂನ್ಯಸಂಪಾದನೆಗಳು ಬೇರೆ ಬೇರೆಯಲ್ಲವೆಂಬ ಮಾತು ಇತ್ತೀಚಿನ ಸಂಶೋಧನೆಯಿಂದ ಕಂಡು ಬಂದಿದೆ. ಇವುಗಳನ್ನು ಕಾಲಾನುಕ್ರಮದಲ್ಲಿ ಹೀಗೆ ಹೆಸರಿಸಬಹುದು :--

೧) ಶಿವಗಣ ಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆ (೧೪೨೦)

೨) ಹಲಗೆಯಾರ್ಯರ ಶೂನ್ಯಸಂಪಾದನೆ (೧೪೯೫)

೩) ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ (೧೫೧೦)

೪) ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ (೧೫೧೦)

ಇವುಗಳಲ್ಲಿ ೧, ೩, ೪ ಸಂಪಾದನೆಗಳು ಅಚ್ಚಾಗಿವೆ. ಹಲಗೆಯಾರ್ಯನದು ಇನ್ನೂ ಅಚ್ಚಾಗಬೇಕಾಗಿದೆ. ವಚನಗಳ ಸಂಖ್ಯೆಯ ದೃಷ್ಟಿಯಿಂದ ಆಯಾ ಪರಿಮಿತಿ ಹೀಗಿವೆ:—

| | | | | | |
|---|---|---|---|---|---|
| ಶಿವಗಣ ಪ್ರಸಾದಿ | — | ೧೦೧೨ | ಗುಮ್ಮಳಾಪುರ | — | ೧೪೩೯ |
| ಹಲಗೆಯ ದೇವ | — | ೧೫೯೯ | ಗೂಳೂರು | — | ೧೫೪೩ |

ವಚನಗಳ ಸಂಖ್ಯೆ ಹಲಗೆಯ ದೇವನಲ್ಲಿ ಮೇಲೇರಿ ಮುಂದೆ ಕೆಳಗಿಳಿದು ಮತ್ತೆ ಮೇಲೇರಿದೆ. ಪ್ರಸಂಗಗಳ ದೃಷ್ಟಿಯಿಂದ ಹೇಳು ವದಾದರೆ ಹಿಂದಿನದನ್ನು ಬಿಡದೆ ಹೊಸ ಹೊಸವನ್ನು ಸೇರಿಸಿಕೊಂಡು ಶೂನ್ಯಸಂಪಾದನೆ ಬೆಳವಣಿಗೆ ಪಡೆಯುತ್ತ ಹೋಗಿದೆ.

ಶರಣ ವಚನಗಳನ್ನು ಜೋಡಿಸಿ 'ಕಥಾಸಾಂಗತ್ಯ'ವಾಗಿ ಮೊತ್ತಮೊದಲು ಶೂನ್ಯಸಂಪಾದನೆಯನ್ನು ರಚಿಸಿದವರು ಶಿವಗಣಪ್ರಸಾದಿ ಮಹಾದೇವಯ್ಯಗಳು. ಇವರ ಗ್ರಂಥದಲ್ಲಿ ಸಿದ್ಧರಾಮಯ್ಯದೇವರ ದೀಕ್ಷಾಕ್ರಮವಿಲ್ಲದಿರಲು ಆ ಕ್ರಮ ವನ್ನು ಶರಣರ ವಚನಗಳ ಆಧಾರವಾಗಿಟ್ಟುಕೊಂಡು ತಮ್ಮ ಗ್ರಂಥದಲ್ಲಿ ಸೇರಿಸಿ, ಶೂನ್ಯಸಂಪಾದನೆಗೆ ಮತ್ತೊಂದು ಸ್ವರೂಪ ತಂದು ಕೊಟ್ಟವರು ಗುಮ್ಮಳಾಪುರದ ಸಿದ್ಧಲಿಂಗದೇವರು. ಈ ಸಿದ್ಧಲಿಂಗದೇವರ ಜಾಡುಹಿಡಿದೇ ಗೂಳೂರು ಸಿದ್ಧ ವೀರ ಣ್ಣೊಡೆಯರು ತಮ್ಮದೇ ಆದ ಮತ್ತೊಂದು ಪ್ರಕಾರದಲ್ಲಿ ಅದೇ ಪ್ರಭುದೇವರ 'ಶೂನ್ಯಸಂಪಾದನೆ'ಯನ್ನು ಸಂಯೋಜಿಸಿ ರಚಿಸಿದರು. ಅವೆಲ್ಲದರ ನಿಲುವಿಗೆ ಮತ್ತು ಚೆಲುವಿಗೆ ಶಿವಗಣಪ್ರಸಾದಿಯ ಶೂನ್ಯಸಂಪಾದನೆಯೇ ಬೆನ್ನೆಲಬು ಮತ್ತು ಮೈಕಟ್ಟು. ಈ ಶೂನ್ಯಸಂಪಾದನೆಗಳೆಲ್ಲ ಚಾಮರಸನಾದ ಮೇಲೆ ರಚಿತವಾಗಿ ಕಾಲದೃಷ್ಟಿಯಿಂದ ಕೊನೆಯದಾದರೂ ಶರಣ ವಚನ ಗೀತಾಮೃತಕ್ಕೆ ಸಹಸ್ರಾರ ಚಕ್ರತೀರ್ಥದಂತಿವೆ. ಮೇಲಣ ನಾಲ್ವರಿಂದ ಹೆಚ್ಚು ಕಡಿಮೆ ಒಂದು ಶತಮಾನದ ಅವಧಿಯಲ್ಲಿ ನಾಲ್ಕು ಶೂನ್ಯಸಂಪಾದನೆಗಳು ರೂಪುಗೊಂಡವು. ಇವುಗಳನ್ನೆಲ್ಲ ಪರಿಶೀಲಿಸಿದಾಗ ಈ ನಾಲ್ಕು ಖಚಿತ ಮಾತುಗಳು ವ್ಯಕ್ತ ವಾಗುತ್ತವೆ :—

೧. ಈ ಗ್ರಂಥದ ಹೆಸರು : ಪ್ರಭುದೇವರ ಶೂನ್ಯಸಂಪಾದನೆ.

೨. ಈ ಗ್ರಂಥದ ನಾಯಕರು : ಅಲ್ಲಮಪ್ರಭುದೇವರು.

೩. ಈ ಪ್ರಭುದೇವರು ಮೊದಲು ತಾವು 'ಶೂನ್ಯ'ವನ್ನು ಸಂಪಾದಿಸಿಕೊಂಡು ಬಸವಣ್ಣ, ಚೆನ್ನಬಸವಣ್ಣ,

3. ನೋಡಿ : ಪ್ರಬುದ್ಧ ಕರ್ನಾಟಕ, ಸಂಪುಟ-೧೪.

4. ನೋಡಿ : ಶಿವದಾಸ ಗೀತಾಂಜಲಿ ಪು. ೫೪

5. ನೋಡಿ : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ. ನಾಲ್ಕನೆಯ ಸಂಪುಟ, ಪು. ೩೨೦, ಬೆಂಗಳೂರು ವಿಶ್ವವಿದ್ಯಾಲಯ.

ಸಿದ್ಧರಾಮಯ್ಯ, ಗೋರಕ್ಷ, ಮುಕ್ತಾಯಕ್ಕ, ಮಹಾದೇವಿಯಕ್ಕ ಮುಂತಾದ ಶರಣರಿಗೆ 'ಬಯಲ'ನ್ನು ಗಳಿಸಿಕೊಟ್ಟುದೇ ಗ್ರಂಥದ ಮುಖ್ಯ ವಿಷಯ.

೪. ಶೂನ್ಯವೆಂದರೆ 'ಅಸತ್ತು' 'ಸೊನ್ನೆ' 'ಇಲ್ಲದ್ದು' ಎಂದರ್ಥವಲ್ಲ. ವೀರಶೈವ ಸ್ಥಳಕಟ್ಟಿನಲ್ಲಿ ಬರುವ 'ಸರ್ವ ಶೂನ್ಯನಿರಾಲಂಬಸ್ಥಲ' 'ಜ್ಞಾನಶೂನ್ಯಸ್ಥಳ' 'ಶೂನ್ಯಲಿಂಗಸ್ಥಲ' ಎಂದು ಮುಂತಾಗಿರುವ ಪದಗಳಿಗಿಂತಲೂ ವೀರಶೈವರ ಅಥವಾ ಶರಣರ ಪರಮಗಮ್ಯವಾದ ಪರವಸ್ತು ಏನೂ ಅಲ್ಲದ ಬಟ್ಟಬಯಲಾದರೂ, ಎಲ್ಲವನ್ನೂ ಒಳಗೊಂಡು, ಎಲ್ಲಕ್ಕೂ ಉಗಮಸ್ಥಾನವಾಗಿರುವ ಅನಿರ್ವಚನೀಯವಾದ ನಿಷ್ಕಲಲಿಂಗ.

ಗುರುಗಳಿಗೆ ಗುರುವಾಗಿ, ಜ್ಞಾನಿಗಳಲ್ಲಿ ಜ್ಞಾನಿಯಾಗಿ, ಮುಕ್ತರಲ್ಲಿ ವಿರಕ್ತರಲ್ಲಿ ಪ್ರಥಮನಾಗಿ, ಯಾವ ಅಹಂಕಾರವನ್ನೂ ಇಟ್ಟುಕೊಳ್ಳದೆ, ಸರ್ವಸಮತಾ ಭಾವದಿಂದ ಎಲ್ಲರಲ್ಲೂ ನಡೆದುಕೊಂಡು ತನ್ನದೆ ಆದ ಪ್ರೇಮ ಔದಾರ್ಯ ಕರುಣೆಗಳಿಂದ ಜನಕ್ಕೆ ಅನುಗ್ರಹ ಮಾಡಿದ ಹಿರಿಮೆ ಅಲ್ಲಮಪ್ರಭುವಿನದಾಗಿದೆ. ಈ ಮಹೋನ್ನತ ಕೃತಿಯ ಬಗೆಗೆ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಮಾತುಗಳಿಂದಲೇ ತಿಳಿಯಬಹುದು :

> 'ಇದು ಪರಮಗುರು ಪರಮ ವೀರಶೈವ ಸಿದ್ಧಾಂತ ತತ್ತ್ವಜ್ಞಾನ, ಇದು ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ ವೇದಾಂತ ಶಿರೋಮಣಿ
> ಇದು ಸಮಸ್ತ ಶಾಸ್ತ್ರಮುಖ್ಯಮುಖದರ್ಪಣ, ಇದು ಮಹಾಜ್ಞಾನ ಪ್ರವರ್ಧ ಪರಮಾನುಭವ ಸಂಬೋಧೆ.
> ಇದು ಸರ್ವಾಚಾರ ಸಂಪನ್ನ ಸಮಾರೂಢ ಸಂಗ್ರಹ, ಇದು ಪರಮಯೋಗ ಸಾಧ್ಯ ಸನ್ನಿದಾನ.
> ಇದು ಸತ್ತು ಚಿತ್ತು ಆನಂದ ನಿತ್ಯ ಪರಿಪೂರ್ಣ ರಸಾಮೃತ ಪ್ರಸನ್ನಪ್ರಸಾದ, ಇದು ಅಜ್ಞಾನತಿಮಿರಾಂಜನ ತಂತ್ರಮಪ್ಪ ಪ್ರಭುದೇವರ
> ಶೂನ್ಯಸಂಪಾದನೆ[6]'

ಶೂನ್ಯಸಂಪಾದನೆಯ ಬೆಳವಣಿಗೆಯ ಇತಿಹಾಸದ ವಿಹಂಗಮನೋಟವನ್ನು ಈ ಮುಂದಿನ ವಿವರಣೆಯಿಂದ ತಿಳಿಯಬಹುದು.

**ಪ್ರಭುಲಿಂಗ ಲೀಲೆ ಮತ್ತು ಶೂನ್ಯಸಂಪಾದನೆಗಳ ಅಂಶ ವಿವರ***

| | ಅಂಶಗಳು | ಚಾಮರಸ | ಶಿ. ಮಹಾದೇವಯ್ಯ | ಹಲಗೆ ಯಾರ್ಯ | ಗುಮ್ಮಳಾಪುರದ ಸಿದ್ಧಲಿಂಗ | ಗೂಳೂರು ಸಿದ್ಧವೀರ |
|---|---|---|---|---|---|---|
| ೧) | ಅಲ್ಲಮನ ಅವತಾರ | ಜಗದ್ಧಿತಾರ್ಥ ಅವತರಿಸಿದ | ಶಾಪಗ್ರಸ್ತನಾಗಿ ಅವತರಿಸಿದ | ಜಗದ್ಧಿತಾರ್ಥ ಅವತರಿಸಿದ | ಜಗದ್ಧಿತಾರ್ಥ ಅವತರಿಸಿದ | ಜಗದ್ಧಿತಾರ್ಥ ಅವತರಿಸಿದ |
| ೨) | ಮಾಯಾ ವಿಡಂಬನೆ | — | — | — | — | — |
| ೩) | ಗೊಗ್ಗಯ್ಯನಿಗೆ ಬೋಧಿಸಿದ್ದು | — | × | × | × | —(೪) ಅಧಿಕ |
| ೪) | ಅನಿಮಿಷನಿಂದ ಅನುಗ್ರಹೀತನಾದದ್ದು | ಅನಿಮಿಷ ಪ್ರಸಂಗ | — | — | — | — |
| ೫) | ಮುಕ್ತಾಯಕ್ಕನ ಪ್ರಸಂಗ | — | — | — | — | — |
| ೬) | ಸಿದ್ಧರಾಮ ಮತ್ತು ವೀರಶೈವ ದೀಕ್ಷೆ | ಸಿದ್ಧರಾಮ ಪ್ರಸಂಗ | ವೀರಶೈವ ದೀಕ್ಷೆಯಿಲ್ಲ | ವೀರಶೈವ ದೀಕ್ಷಾಪ್ರಸಂಗ ವಿಸ್ತಾರ | ವೀರಶೈವ ದೀಕ್ಷೆ ಆಗುವುದು | ವೀರಶೈವ ದೀಕ್ಷೆ ಆಗುವುದು |
| ೭) | ಮರುಳು ಶಂಕರನ ಮಹಿಮಾಖ್ಯಾನ | — | — | — | — | — |
| ೮) | ಪ್ರಭು ಬಸವನಿಗೆ ಬೋಧಿಸಿದ್ದು | — | — | — | — | — |
| ೯) | ಪ್ರಭು ಚೆನ್ನಬಸವನಿಗೆ ಬೋಧಿಸಿದ್ದು | — | — | — | — | — |
| ೧೦) | ಪ್ರಭು ಮಡಿವಾಳನಿಗೆ ಬೋಧಿಸಿದ್ದು | — | — | — | — | — |
| ೧೧) | ಆಯ್ದಕ್ಕಿ ಮಾರಯ್ಯನ ಪ್ರಸಂಗ | × | × | × | —(೨)ಅಧಿಕ | — |
| ೧೨) | ಮೋಳಿಗೆಯ್ಯನ ಪ್ರಸಂಗ | × | × | × | × | —(೫)ಅಧಿಕ |
| ೧೩) | ನುಲಿಯ ಚೆಂದಯ್ಯನ ಪ್ರಸಂಗ | × | × | —(೧)ಅಧಿಕ | — | — |
| ೧೪) | ಘಟ್ಟಿವಾಳಯ್ಯನ ಪ್ರಸಂಗ | × | × | × | × | —(೬)ಅಧಿಕ |
| ೧೫) | ಮಹಾದೇವಿಯಕ್ಕನ ಪ್ರಸಂಗ | — | — | — | — | — |

6. ಶೂನ್ಯಸಂಪಾದನೆ—ಡಾ॥ ಆರ್. ಸಿ. ಹಿರೇಮಠ—ಪುಟ ೩೯೬

* ಹೆಚ್ಚಿನ ವಿವರಣೆಗಾಗಿ ಶಿವದಾನ ಗೀತಾಂಜಲಿ : ಸಂ. ಎಲ್. ಬಸವರಾಜು ಪುಟ ೫೪ರಲ್ಲಿ ನೋಡಿ

| | | | | | |
|---|---|---|---|---|---|
| ೧೬) ಪ್ರಭು ದೇಶಾಂತರ ಹೋಗಿ ಕಲ್ಯಾಣಕ್ಕೆ ಬಂದದ್ದು | — | — | — | — | — |
| ೧೭) ಪ್ರಭು ಶೂನ್ಯಸಿಂಹಾಸನಕ್ಕೇರಿದ್ದು | — | — | — | — | — |
| ೧೮) ಪ್ರಭುದೇವರ ಆರೋಹಣೆ | — | — | — | — | — |
| ೧೯) ಶರಣರ ಅವಸಾನ ಪರಾಮರಿಕೆ | × | — | — | — | — |
| ೨೦) ಗೋರಕ್ಷನ ಸಂಪಾದನೆ | — | × | × | —(೩)ಅಧಿಕ | — |
| ೨೧) ಎಲ್ಲ ಶರಣರ ಐಕ್ಯ | × | — | — | — | — |

ಶೂನ್ಯಸಂಪಾದನೆಗಳ ವ್ಯತ್ಯಾಸಗಳನ್ನು ತೋರಿಸುವ ಅನುಬಂಧದಿಂದ ವಿವಿಧ ಸಂಪಾದನಾಕಾರರು ಸೇರಿಸುತ್ತ ಹೋಗಿರುವ ವಿಷಯ ಸ್ಪಷ್ಟವಾಗುತ್ತದೆ. ಶೂನ್ಯಸಂಪಾದನೆಯ ಪ್ರಥಮೋಪದೇಶ ಶೂನ್ಯಸಂಪಾದನೆಯ ಸಾರಸರ್ವಸ್ವವಾಗಿದೆ; ಆಧ್ಯಾತ್ಮ ಜೀವನದ ರಹಸ್ಯದ ಕೀಲಿಕೈ, ಅಲ್ಲಮನ ಮೇರುಸದೃಶ ವ್ಯಕ್ತಿತ್ವವನ್ನೂ ಮತ್ತು ಆ ಉತ್ತರಕ್ಕೆ ಏರಿ ನಿಂತಿರುವ ಸಾಧನೆಯ ಒಟ್ಟು ನೋಟವನ್ನೂ ಕಾಣಬಹುದು. ಇಲ್ಲಿ ಸೇರಿರುವ ಗೊಗ್ಗಯ್ಯನ ಸನ್ನಿವೇಶ ಅರ್ಥಪೂರ್ಣವಾಗಿದೆ. 'ತನುವತೋಟವ ಮಾಡಿ, ಮನವ ಗುದ್ದಲಿ ಮಾಡಿ ಅಗೆದು ಕಳೆದೆನಯ್ಯ' ಎಂಬ ಪ್ರಭುವಾಣಿ ಗೊಗ್ಗಯ್ಯನಿಗೆ ಅಂತರಂಗದ ದರ್ಶನಕ್ಕೆ ಕೈಮಾಡಿ ತೋರಿಸಿದೆ. ಜ್ಞಾನಪ್ರಿಯಾ ಸಮುಸಮುಚ್ಚಯ ವಿಧಾನವನ್ನು ಇಲ್ಲಿ ಮಾರ್ಮಿಕವಾಗಿ ನಿರೂಪಿಸಲಾಗಿದೆ.

ಮುಕ್ತಾಯಕ್ಕ ಗುಪ್ತಭಕ್ತ ಅಜಗಣ್ಣನ ತಂಗಿ. ಆಕೆ ನಿಜವನ್ನೈದಿದ ಅಜಗಣ್ಣನ ವಿಯೋಗವನ್ನು ಸಹಿಸಲಾರದೆ ಪ್ರಳಾಪಿಸುತ್ತಿದ್ದಾಳೆ. ಅಜಗಣ್ಣನ ಗುಪ್ತಯೋಗ ಅರಿಯದೇ ಹೋದ ದುಃಖ ಅವಳದು. ಈ ಅತೃಪ್ತಿಯಿಂದ ದುಃಖಿಸುತ್ತಿದ್ದಾಳೆ. '**ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು ಕಂಗಳ ಮುತ್ತ ಪವಣಿಸುವಾಕೆ ನೀನಾರು ಹೇಳಾ?**' ಎಂಬ ಪ್ರಭುದೇವನ ಪ್ರಶ್ನೆಗೆ ಮುಕ್ತಾಯಕ್ಕ ಕೊಡುವ ಉತ್ತರವಿದು :

'**ತಲೆಯುಳಿದು ನೆಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯ ಬೆನ್ನಬಳಿಯವಳಾನಯ್ಯ**'. ಇಲ್ಲಿ ಅಜಗಣ್ಣನ ವ್ಯಕ್ತಿತ್ವ ಸುಂದರವಾಗಿ ಅರಳಿದೆ. ಹೀಗೆ ಪ್ರಾರಂಭವಾದ ಈ ಸನ್ನಿವೇಶ ಮಾರ್ಮಿಕವಾಗಿದೆ, ಮನೋಜ್ಞವಾಗಿದೆ. ಇದೊಂದು ಭಾರತೀಯ ಅಧ್ಯಾತ್ಮಿಕ ಸಾಹಿತ್ಯದಲ್ಲಿಯೇ ಒಂದು ಚಿರಸ್ಮರಣೀಯ ಸನ್ನಿವೇಶ. ಉಪನಿಷತ್ತಿನ ಪ್ರಸಂಗಗಳಂತೆ ಇದು ಒಂದು ಅನುಭವದ ಪ್ರಸಂಗ. ಅಲ್ಲಿನ ಗಾರ್ಗಿ, ಮೈತ್ರೇಯಿಯವರ ಸಮುಗದ್ದುಗೆಯ ಸನ್ಮಾನ ಮುಕ್ತಾಯಿಗೆ ಸಲ್ಲಬೇಕು. ಪ್ರಭುದೇವರ ಸನ್ನಿಧಾನದಿಂದ ಪಡೆದ ಅನುಭವದ ಫಲವನ್ನು ಈ ವಚನ ಸಾರುತ್ತದೆ. ಈ ಮುಕ್ತಾಫಲ ನಿಜಮುಕ್ತಿಯ ಮಹಾಮಾರ್ಗ ತೋರಿಸುವಂತಿದೆ.

> ಘನಮಹಿಮ ಶರಣರಸಂಗದಿಂದ ಘನಕ್ಕೆ ಘನ ವೇದ್ಯವಾದ ಬಳಿಕ ಅಱಿಯಲಿಲ್ಲ, ಮಱಿಯಲಿಲ್ಲ,
> ಕೂಡಲಿಲ್ಲ, ಅಗಲಲಿಲ್ಲ. ಮನ ಮೇರೆವಪ್ಪಿ ನಿರಪಯಲಾದ ಸುಖವ ಶೂನ್ಯ ನಿಶ್ಶೂನ್ಯವೆಂದು ನುಡಿಯಲುಂಟೇ ?
> ಶಬ್ದ ಮುಗ್ಧವಾಗಿ ಎನ್ನ ಅಜಗಣ್ಣ ತಂದೆಯು ಬೆರಸಿದ ಬಳಿಕ ಉರಿಯುಂಡಕರ್ಪೂರದಂತಾದೆನಯ್ಯ !

ಶಿವಯೋಗಮಾರ್ಗದಲ್ಲಿ ಏಕೈಕನಿಷ್ಠೆಯಿಂದ ನಡೆದ ಮುಕ್ತಾಯಕ್ಕನ ಗಂಭೀರ ವ್ಯಕ್ತಿತ್ವದರ್ಶನ ಈ ಭಾಗದಲ್ಲಿ ಕಾಣಬೇಕಾದರೆ ಈ ಸಂಪಾದನೆ ದಾರಿದೀಪವಾಗಿದೆ. ಮೂಲಕೃತಿಯಿಂದಲೇ ಈ ಸನ್ನಿವೇಶದ ಸ್ವಾರಸ್ಯವನ್ನು ಅರಿಯಬೇಕು.

ಸಿದ್ಧರಾಮ ಶರಣಸಮುದಾಯದಲ್ಲಿಯೇ ಎದ್ದು ಕಾಣುವ ಮಹಾಯೋಗಿ. 'ಸಾಕಾರನಿಷ್ಠೆ ಭೂತಂಗಳೊಳಗನುಕಂಪೆ' ಯೇ ಆತನ ಬಾಳಿನ ಸೂತ್ರ. ಸೊನ್ನಲಿಗೆಯನ್ನು ಕಾರ್ಯಕ್ಷೇತ್ರವನ್ನಾಗಿಮಾಡಿಕೊಂಡು ಕೆರೆ, ಅರವಟ್ಟಿಗೆ ಗುಡಿಗೋಪುರಗಳನ್ನು ಕಟ್ಟಿಸುತ್ತಾ ಕರ್ಮಯೋಗದ ಆದರ್ಶ ಸಾಧಿಸಿದ್ದ. ಈ ಆದರ್ಶವೇನೂ ಸಾಮಾನ್ಯವಲ್ಲ. ದೇವಾಲಯ ನಿರ್ಮಾಣ, ಕೆರೆಯ ಕೆಲಸಗಳನ್ನು ವಿಡಂಬಿಸುತ್ತ ಬರುವ ಪ್ರಭುದೇವ ವಾಣಿಯಿದು :

> ದೇಹವೇ ದೇಗುಲವಾಗಿರಲು ಬೇಱೆ ಮತ್ತೆ ದೇವಾಲಯವೇಕಯ್ಯ ?
> ಪ್ರಾಣವೇ ಲಿಂಗವಾಗಿರಲು ಬೇಱೆ ಮತ್ತೆ ಲಿಂಗವೇಕಯ್ಯ ?
> ಹೇಳಲಿಲ್ಲ ಕೇಳಲಿಲ್ಲ ಗೊಹೇಶ್ವರಾ ನೀನು ಕಲ್ಲಾದರೆ ನಾನೇನಪ್ಪೆನಯ್ಯ'

ಎಂದು ಸಾರುತ್ತ ತಾನು ಕಟ್ಟಿದ ಕೆರೆಯನ್ನು ಈ ಸುಂದರ ವಚನದಿಂದ ಸ್ಫುಟಗೊಳಿಸುತ್ತಾನೆ :—

> ತನುವೆಂಬ ಏಱಿಗೆ ಮನವೆಂಬ ಕಟ್ಟೆ ; ಆಚಾರವೆಂಬ ಸೋಪಾನ ;
> ಪರಮಾನಂದವೆಂಬ ಜಲವ ತುಂಬಿ, ಕೆಱೆಯ ಕಟ್ಟಬಲ್ಲವರನಾರನೂ ಕಾಣೆ
> ನಾನು ಕಟ್ಟಿದ ಕೆಱೆ ಸ್ಥಿರವಾಯಿತ್ತು ಗೊಹೇಶ್ವರಾ ನಿಮ್ಮಾಣೆ.

ಈ ದೇಹವೇ ಒಂದು ಏರಿ; ಮನಸ್ಸೇ ಅದಕ್ಕೆ ಕಟ್ಟೆ, ಸದಾಚಾರಗಳೆಂಬ ಮೆಟ್ಟಲುಗಳು ತುಂಬಿರುವುದು ಪರಮಾನಂದ ವೆಂಬ ಜಲ. ವಿಶ್ವಸಂಸ್ಕೃತಿಯ ಸೂತ್ರಗಳಿವು.

ತಾನು ಕಟ್ಟುತ್ತಿರುವ ಕೆರೆಯ ಕಾರ್ಯದ ಬಗೆಗೆ ಲಘುವಾಗಿ ಮಾತನಾಡಿದ ಅಲ್ಲಮಪ್ರಭುದೇವನ ಮೇಲೆ ನೊಸಲ ಕಣ್ಣು ತೆರೆಯುತ್ತಾನೆ. ಅದು ಅಲ್ಲಮನ ಅಂಗಾಲಿನಲ್ಲಿ ಅಡಗುತ್ತದೆ. ಇಲ್ಲಿ ಬರುವ ವಚನಗಳು ಅರ್ಥಗರ್ಭಿತ. ರೋಮಾಂಚಕ, ಸನ್ನಿವೇಶ ಕಣ್ಣುಕಟ್ಟುವಂತೆ ರೂಪಿಸುವದಲ್ಲಿ ಶೂನ್ಯಸಂಪಾದನೆಕಾರರ ಜಾಣ್ಮೆ ಹೊಗಳಬೇಕಾದುದೇ ಆಗಿದೆ. ಈರ್ವರೂ ವ್ಯಕ್ತಿ ವೈಶಿಷ್ಟ್ಯಪೂರ್ಣರು. ಸಿದ್ಧಿಗಳು ಹೋರಾಟದಲ್ಲಿ ಪ್ರಭುವಿನ ಆಧಿಕ್ಯಕ್ಕೆ ಸಿದ್ಧರಾಮನು ಶರಣಾಗತನಾಗುತ್ತಾನೆ. ಹಣೆಗಣ್ಣಿನ ಸಿದ್ಧರಾಮನು ಕನ್ನಡಿಗನಾದ ಪ್ರಭುವಿಗೆ ಪರಬ್ರಹ್ಮವೆಂದು ಸಂಬೋಧೆ ಮಾಡುತ್ತಾನೆ. ಸಾಕ್ರೇಟೀಸನು ಅಥೆನ್ಸ ಮಹಾನಾಗರಿಕ ರನ್ನು ಪ್ರಶ್ನಿಸಿ, ಪ್ರಶ್ನಿಸಿ ಅವರ ಕೋಪಕ್ಕೆ ಗುರಿಯಾಗಿ ಹುತಾತ್ಮನಾಗುತ್ತಾನೆ. ಆದರೆ ಪ್ರಭು ಎಲ್ಲರನ್ನು ಆಹ್ವಾನಿಸಿ ಜಯಶೀಲ ನಾಗುತ್ತಾನೆ. ಇಲ್ಲಿ ದೊರೆಯುವದು ಜ್ಞಾನ, ಯೋಗ ಕ್ರೀಗಳ ಸರಿಯಾದ ಜ್ಞಾನಸಭೋಥೆ. ಸಿದ್ಧರಾಮನ ದೀಕ್ಷೆಯ ವಿವರ ಮೊದಲನೆಯ ಸಂಪಾದನೆಯಲ್ಲಿ ಇಲ್ಲದಿರುವದರಿಂದ ಉಳಿದವರು ವಿಶೇಷ ಗಮನವಿರಿಸಿ ಈ ಸನ್ನಿವೇಶ ಸೇರಿಸಿದ್ದಾರೆ. ದೀಕ್ಷೆಯ ಆವಶ್ಯಕತೆಯನ್ನು ಕುರಿತಾಗಿ ಬರುವ ಚೆನ್ನಬಸವಣ್ಣನ ವಚನ ಶ್ರೇಷ್ಠ ನಿದರ್ಶನ :

> 'ಆಕಾಶದಲಾಡುವ ಪಟಕ್ಕಾದರೂ ಮೂಲಸೂತ್ರವಿರಬೇಕು. ಕಲಿಯಾದಡೂ ಕಜ್ಜವಿಲ್ಲದೆಯಾಗದು.
> ಭೂಮಿ ಇಲ್ಲದೆ ಬಂಡಿ ನಡೆವುದೇ ? ಲಿಂಗಕ್ಕೆ ಲಿಂಗಸಂಗವಿಲ್ಲದೆ ನಿಸ್ಸಂಗವಾಗಬಾರದು.
> ಕೂಡಲ ಚೆನ್ನಸಂಗಮದೇವರಲ್ಲಿ ಸಂಗವಿಲ್ಲದೆ ನಿಸ್ಸಂಗಿಯೆಂದು ನುಡಿಯಬಹುದೇ ಪ್ರಭುವೇ ?'

ಅಷ್ಟಾಂಗಯೋಗಿಯನ್ನು ಶಿವಯೋಗಿಯನ್ನಾಗಿ ಮಾರ್ಪಡಿಸಿದ ಈ ಸನ್ನಿವೇಶ ಅಭೂತಪೂರ್ವವಾಗಿದೆ. ಚೆನ್ನಬಸವಣ್ಣನ ಕರುಣೆಯಿಂದ ಸಿದ್ಧರಾಮನು ಜನನ–ಮರಣಗಳನ್ನು ಕಳೆದುಕೊಂಡು ಕಪಿಲಸಿದ್ಧಮಲ್ಲಿಕಾರ್ಜುನನ ರೂಪವೇ ಆಗಿ ಪರಿಣಮಿಸು ತ್ತಾನೆ. ಈ ನಿಲುವಿಗೆ ಕಾರಣನಾದ ಪ್ರಭುದೇವರನ್ನು ಹೃದಯ ತುಂಬಿ ಹೊಗಳುತ್ತಾನೆ.

ಬಸವೇಶ–ಚೆನ್ನಬಸವೇಶಂಗೆ ಅನುಗ್ರಹ ಮಾಡಿದ ಸಂಪಾದನೆ ವೈಶಿಷ್ಟ್ಯಪೂರ್ಣವಾದುದು. ಅರ್ಥವತ್ತಾದ ಅವರ ವಚನಗಳನ್ನು ಅಳವಡಿಸಿಕೊಂಡು ಗುರು–ಶಿಷ್ಯರ ನಿಲವನ್ನು ಬಹು ಸುಂದರವಾಗಿ ತೋರಿಸಿಕೊಟ್ಟಿದೆ, ಶೂನ್ಯಸಂಪಾದನೆ. 'ಚನ್ನಬಸವಣ್ಣನ ಮಹಾಜ್ಞಾನವನ್ನು ಕಂಡು, ಚಿಕ್ಕ ವಯಸ್ಸಿನಲ್ಲಿದ್ದರೂ ಆತನನ್ನು ತನ್ನ ಗುರುವೆನ್ನುವ ಬಸವೇಶ್ವರ ಒಂದು ಕಡೆ, ಇನ್ನೊಂದು ಕಡೆ ಬಸವಣ್ಣನವರ ಹಿರಿಯತನದ ಔನ್ನತ್ಯಕ್ಕೆ ಮಾರುಹೋಗಿ ಆತನನ್ನು ತನ್ನ ಗುರುವನ್ನಾಗಿ ಪಡೆಯಲು ಹಂಬಲಿಸುವ ಚನ್ನಬಸವಣ್ಣನ ಆಧ್ಯಾತ್ಮಿಕ ಅಭೀಪ್ಸೆ ಮತ್ತು ಅದನ್ನು ಈಡೇರಿಸಿಕೊಳ್ಳುವ ಕುಶಲತೆ ಇವು ತುಂಬಾ ಮನೋಜ್ಞ ವಾಗಿ ಚಿತ್ರಿತವಾಗಿವೆ. ಒಂದು ಭಕ್ತಿ ಸಾಗರ : ಇನ್ನೊಂದು ಜ್ಞಾನ ಮೇರು[7]' ಇಲ್ಲಿ ಅಣುತ್ವ–ವಿಭುತ್ವ ಪಡೆಯುತ್ತದೆ. ಪ್ರಾಣ ಲಿಂಗತ್ತ್ವವನ್ನು ಪ್ರಸನ್ನಭಾವದಿಂದ ಚೆನ್ನಬಸವಣ್ಣ ಬಸವಣ್ಣನಿಗೆ ಸಂಬೋಧಿಸುತ್ತಾನೆ. ಬಸವಣ್ಣ ಪ್ರಾಣಲಿಂಗಾನುಭವವಾಗು ವದನ್ನು ನಿವೇದಿಸುತ್ತಾನೆ: 'ಹುಸಿ ಹುಂಡನಮಾಡಿ ಹೊಜಿಗನೆ ಪೂಜಿಸಿ, ವೃಥಾ ದಿನಂಗಳು ಸವೆದು ಹೋದವು. ಕೂಡಲ ಸಂಗಮದೇವರಲ್ಲಿ ಎನ್ನ ಪ್ರಾಣ ನಿಕ್ಷೇಪವಹ ಭೇದವ ತೋರಾ ಚನ್ನಬಸವಣ್ಣಾ'. ಪ್ರಾಣಲಿಂಗಾನುಭವವೇ ನದಿಯೊಳಗೆ ನದಿ ಬೆರೆದಂತೆ. ಇದನ್ನೇ ಪಾಶ್ಚಾತ್ಯ ಅನುಭಾವಿಗಳು ವಿಶ್ವಪ್ರಜ್ಞೆ ಎಂದು ಕರೆದಿರುವರು. ಅಲ್ಲಿ ಮಾತು ಮಂತ್ರ, ನೋಟ ಪರುಷ. ಮಾಟವೆಲ್ಲ ಕೂಟ[8]. ಇದರಲ್ಲಿಯೇ ಸುಜ್ಞಾನೋಪದೇಶ, ಸುಜ್ಞಾನಲಿಂಗ, ಮಾಂಸಪಿಂಡ, ಮಂತ್ರಪಿಂಡ, ಪಂಚಾಕ್ಷರ, ಷಡಕ್ಷರ, ಅನುಗ್ರಹ ಮುಂತಾದ ವಿಷಯಗಳ ಪ್ರಸ್ತಾಪವಿದೆ.

ಅಹಂಕಾರದ ಸಾವಿರಾರು ಮುಖಗಳನ್ನು ಸಾಧಕ ಸದಾ ಜಾಗೃತನಾಗಿದ್ದು ಗೆಲ್ಲಬೇಕು. ಒಂದನ್ನು ಗೆದ್ದರೆ ಇನ್ನೊಂದು ಮುಖದಿಂದ ಅದು ಹೆಡೆಯೆತ್ತಿ ಕಾಡುತ್ತದೆ. ಭಕ್ತಿಭಾಂಡಾರಿ ಬಸವಣ್ಣನವರಿಗೆ 'ನಾನು ಮಾಡುವೆನು, ನಾನು ನೀಡುವೆನು' ಎಂಬ ದಾಸೋಹ ರೂಪದಲ್ಲಿಯೇ ಕಾಡಿತ್ತೆಂದ ಮೇಲೆ ಅದನ್ನು ಗೆಲ್ಲುವುದು ಸುಲಭಸಾಧ್ಯ ಮಾತಲ್ಲ. ಬಸವಣ್ಣನವರ ಆ ಅಹಂಕಾರಕ್ಕೆ ಏಟನ್ನು ಕೊಟ್ಟು, ಸಂಪೂರ್ಣ ಶರಣಾಗತಿಯಲ್ಲದೆ, ಇನ್ನಾವುದರಿಂದಲೂ ಪ್ರಭುವನ್ನು ತೃಪ್ತಿಪಡಿಸುವುದು ಸಾಧ್ಯವಿಲ್ಲವೆಂಬ ಅಂಶ ಪ್ರಭು ಕಲ್ಯಾಣಕ್ಕೆ ಬಂದ ಸಂಪಾದನೆ ಎತ್ತಿ ತೋರಿಸುತ್ತದೆ. ಕ್ಷಣಕಾಲ 'ನಾನು' ಎಂಬ ಮುಸುಕು ಕವಿದಿದ್ದರೂ ಮರು ಕ್ಷಣದಲ್ಲಿಯೇ ಅದು ಹರಿದು ಮೋಡದ ತೆರೆ ಸರಿದ ಸೂರ್ಯಬಿಂಬದಂತೆ ಸ್ವಯಂಪ್ರಕಾಶವಾಗಿ ಕಂಗೊಳಿಸುತ್ತಾನೆ ಬಸವೇಶ್ವರ[9] ಬಸವಣ್ಣ ಭಕ್ತ, ಪ್ರಭು ಜಂಗಮ; ಬಸವ ಸ್ಥೂಲರೂಪ, ಪ್ರಭು ಕಾರಣರೂಪ; ಕಾಯವೇ ಬಸವಣ್ಣ, ಪ್ರಾಣವೇ ಪ್ರಭು. ಈ ಸಮುಚ್ಚಯ ಈ ಸಂದರ್ಭದಲ್ಲಿ ಔಚಿತ್ಯಪೂರ್ಣವಾಗಿ ಮೂಡಿದೆ. ಆಳವಾದ ತತ್ತ್ವಾಲೋಚನೆ ಅಡಗಿದೆ.

7. ಶೂನ್ಯಸಂಪಾದನೆ ; ವಿವರಣಾತ್ಮಕ ಪರಿಚಯ—ಡಾ॥ ತಿಪ್ಪೇರುದ್ರಸ್ವಾಮಿ, ಪುಟ ೨೨
8. ಶೂನ್ಯಸಂಪಾದನೆ—ಡಾ॥ ಎ.ಎಸ್. ಕಂಬಿ, ಪುಟ ೬೩–೭೭. ಕ.ವಿ.ವಿ. ಪ್ರಕಟನೆ
9. ಶೂನ್ಯ ಸಂಪಾದನೆ :—ವಿವರಣಾತ್ಮಕ ಪರಿಚಯ : ಪುಟ ೯೭

ಹಲಗೆಯದೇವ ಸಿದ್ಧರಾಮೇಶ್ವರನ ಗುರುಕರುಣವನ್ನು ಸೇರಿಸಿದುದರ ಜೊತೆಗೆ ಸುಲಿಯ ಚಂದಯ್ಯನ ಸನ್ನಿವೇಶವನ್ನು ಆಯ್ದುಕೊಂಡರು. ಅಂತೆಯೇ ಗುಮ್ಮಳಾಪುರದ ಸಿದ್ಧಲಿಂಗಯತಿಗಳು ಆಯ್ದಕ್ಕಿ ಮಾರಯ್ಯ, ಗೋರಕ್ಷಕರ ಪ್ರಸಂಗಗಳನ್ನೂ ಸೇರಿಸಿದರು. ಸಿದ್ಧವೀರಣ್ಣೊಡೆಯರು ಅವುಗಳನ್ನು ಸಂಪಾದನೆಗಳೆಂದು ಕರೆದು ಬೇರೆ ಬೇರೆ ಅಧ್ಯಾಯಗಳನ್ನಾಗಿ ವ್ಯವಸ್ಥಿತವಾಗಿ ಅಳವಡಿಸಿದರು. ಮರುಳಶಂಕರದೇವನ ಪ್ರಸಂಗವನ್ನು ಶಿವಗಣಪ್ರಸಾದಿಗಳಲ್ಲಿಲ್ಲದ ಕೆಲವು ವಚನಗಳನ್ನು ಗೂಳೂರಸಿದ್ಧವೀರಣ್ಣೊಡೆಯರು ಸೇರಿಸಿ ಇನ್ನೂ ಉಜ್ವಲಗೊಳಿಸಿದ್ದಾರೆ. ಇವರು ಭಾರತದ ಗಡಿಯಾಚೆಯಿಂದ ಬಂದವರು. ಮರುಳಶಂಕರದೇವ ಪ್ರಸಾದಮಹಿಮೆಯಿಂದ ಪ್ರಭಾವಿತನಾದವನು. ಕಲ್ಯಾಣವು ಪ್ರಸಾದಿಗಳ ಕೇಂದ್ರವೆಂದು ಬಂದವನು. ಯಾರಿಗೂ ಗೊತ್ತಾಗದಂತೆ ಲಿಂಗಪ್ರಸಾದ ಕುಳಿಯಲ್ಲಿ ನಿಜನಿವಾಸದಂಗಿಯಾಗಿ ಜೀವಿಸಿದ್ದನು. ಮಹಾಪ್ರಸಾದಿ ಆತ.

> ತುದಿಮೊದಲಿಲ್ಲದ ಘನವ ನೋಡಾ ! ಒಳಹೊರಗಿಲ್ಲದ ಅನುವ ನೋಡಾ !
> ಗುರುಲಿಂಗಜಂಗಮ ತಾನೆಯಾಗಿ, ಮತ್ತೆ ತಾನೆಂಬುದೇನೂ ಇಲ್ಲದೆ ಇಪ್ಪಪರಿಯ ನೋಡಾ !
> ತನ್ನ ತಾ ನಿರ್ದೇಶಮಂ ಮಾಡಿಕೊಂಡು ನಿಜವನೈದಿಪ್ಪ ಪರಿಯ ನೋಡಾ !
> ಕೂಡಲ ಚೆನ್ನಸಂಗಮದೇವರಲ್ಲಿ, ಪರಮಪ್ರಸಾದಿಯಾಗಿಪ್ಪ ಮರುಳು ಶಂಕರದೇವರ ನೋಡಾ ಪ್ರಭುವೇ.

ಆತನನ್ನು 'ತುದಿ ಮೊದಲಿಲ್ಲದ ಘನ' ಎಂದು ಕರೆದಿರುವುದು ಅರ್ಥವತ್ತಾಗಿದೆ. ಮರುಳುಶಂಕರದೇವನ ಮನೋಧರ್ಮವನ್ನು ಪ್ರತಿಬಿಂಬಿಸಿ ನಿಂತಿರುವ ಈ ವಚನವನ್ನು ಪರಿಶೀಲಿಸಬಹುದು.

'ಸಂಸಾರವೆಂಬ ಸಾಗರವ ದಾಂಟುವರೆ ಅಱುಹೆಂಬ ಹಱಿಗೋಲನಿಕ್ಕಿ, ಜ್ಞಾನವೆಂಬ ಅಂಬಿಗ ಈ ಹಱಿಗೋಲೊಳಗೆ ಕುಳ್ಳಿರ್ದು, ಸುಜ್ಞಾನವೆಂಬ ಸಟ್ಟುಗವ ಹಿಡಿದು, ಮಹಾಜ್ಞಾನವೆಂಬ ಘಾತಗಳೆಯಂ ಪಿಡಿದು, ನಾನೀ ಹೊಳೆಯಂ ಕಂಡು ಅಂಬಿಗನ ಕೇಳಿದರೆ ನಾ ನಿನ್ನ ಹಾಯಿಸಿ ಕೊಟ್ಟೇನೆಂದನು......' ಶೂನ್ಯಸಂಪಾದನೆಯಲ್ಲಿ ಮರುಳ ಶಂಕರದೇವ ಮಿಂಚಿನಂತೆ ಒಮ್ಮೆ ಮಾತ್ರ ಮಿಂಚಿ ಮಾಯವಾದರೂ, ಶರಣರ ಸಾಧನೆಗಳು ಮಾರ್ಗಕ್ಕೆ ಮೌನವಾದ ಮಹಾಸಾಕ್ಷಿಯಾಗಿದ್ದಾನೆ. ಈ ಅನುಭಾವ ಮಾರ್ಗ ನಿತ್ಯನೂತನವಾದ ಜ್ಯೋತಿಯಂತೆ ಬೆಳಗುತ್ತದೆ. ಇಂಥ ಭವ್ಯಮೂರ್ತಿಯ ದರ್ಶನವಿಲ್ಲಿದೆ.

ಮಡಿವಾಳ ಮಾಯಿದೇವ ಕಾಯಕನಿಷ್ಠೆಯಿಂದ ಮನಸ್ಸನು ಮಡಿಮಾಡುವ ಮಹತ್ತರ ಮಟ್ಟಕ್ಕೆ ಏರಿದವ. ಬಸವಣ್ಣನವರ ಕಾರ್ಯಕ್ಷೇತ್ರದಲ್ಲಿ ಪ್ರಮುಖಪಾತ್ರ ವಹಿಸಿದ ಧೀರೋದಾತ್ತ ವ್ಯಕ್ತಿ ಶಕ್ತಿ, ಮಾಚಿದೇವ ತನ್ನ ಅಂತರಂಗವನ್ನು ಪ್ರಭುವಿನ ಮುಂದಿಟ್ಟ ಪರಿಯದು :

> ಕಾಮದ ಕರಸ್ಥಲದಲ್ಲಿ ಗುರು ಸ್ವಾಯತವ ಮಾಡಿದೆನು. ಕ್ರೋಧದ ನಯನದಲ್ಲಿ ಜಂಗಮ ಸ್ವಾಯತವ ಮಾಡಿದೆನು.
> ಲೋಭವಿಲ್ಲದೆ ಪ್ರಸಾದವ ಗ್ರಹಿಸಿದೆನು. ಇಂತೀ ತ್ರಿವಿಧದಲ್ಲಿ ಶುದ್ಧನಾದೆನು ಕಾಣಾ ಕಲಿದೇವರದೇವಾ ನಿಮ್ಮಾಣೆ

ಮಡಿವಾಳ ಮಾಚಿದೇವರ ನಿಲವು ಇಲ್ಲಿ ಬಹುಸುಂದರವಾಗಿ ಬಂದಿದೆ. ಅಂತೆಯೇ ಬಸವಣ್ಣ ಆತನನ್ನು ಹೀಗೆ ಹೊಗಳಿರುವದು ಗಮನಾರ್ಹ:–

> ಎನ್ನಕಾಯವ ಶುದ್ಧವ ಮಾಡಿದಾತ ಮಡಿವಾಳ. ಎನ್ನ ಮನವ ನಿರ್ಮಲವ ಮಾಡಿದಾತ ಮಡಿವಾಳ.
> ಎನ್ನಂತರಂಗವ ಬೆಳಗಿದಾತ ಮಡಿವಾಳ. ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ
> ಕೂಡಲಸಂಗಮದೇವಾ, ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ'

ಪ್ರಭು ಕೂಡ ಸಮ್ಮತಿಸಿದ ಈ ವಚನ ಮಹತ್ವದ್ದಾಗಿದೆ:—

> 'ಆದಿಯ ಕಂಡೆ ; ಅನಾದಿಯ ಕಂಡೆ; ಘನವ ಕಂಡೆ; ಮನವ ಕಂಡೆ ;
> ಅನುವ ಕಂಡೆ; ಆಯತ ಸ್ವಾಯತ ಸನ್ನಿಹಿತವ ಕಂಡೆ. ಗೊಹೇಶ್ವರ ಲಿಂಗದಲ್ಲಿ ಬಸವಣ್ಣನ ಕೃಪೆಯಿಂದ
> ನಿನ್ನ ಕಂಡೆ ಕಾಣಾ ಮಡಿವಾಳಮಾಚಯ್ಯ'

ಹಾಗೆಯೇ ಆಯ್ದಕ್ಕಿ ಮಾರಯ್ಯ ಅನುಭವಮಂಟಪದಲ್ಲಿ ತನ್ನ ಕಾಯಕ, ದಾಸೋಹದ ಅನುಭಾವ ಸಂಪಾದಿಸುವಲ್ಲಿ, ಪ್ರಭುದೇವರ ಅನುಭಾವ ಗೋಷ್ಠಿಯಿಂದ ಪ್ರಭಾವಿತನಾಗಿ ಕಾಯಕವನ್ನು ಮರೆತು ಬಿಡುವಲ್ಲಿ, ಆತನ ಧರ್ಮಪತ್ನಿ ಲಕ್ಕಮ್ಮ ಅನುಭವ ಮಂಟಪಕ್ಕೇನೆ ಬಂದು ಬಿಡುತ್ತಾಳೆ. ಕಾಯಕವೇ ಕೈಲಾಸವೆಂಬ ಮಾತು ಈ ಸನ್ನಿವೇಶಗಳು ಸ್ಪಷ್ಟಪಡಿಸುತ್ತವೆ. ಅನುಭಾವದ ಆಕಾಶದಲ್ಲಿ ತನ್ನದೇ ಆದ ವ್ಯಕ್ತಿತ್ವದಿಂದ ಬೆಳಗುವ ನಕ್ಷತ್ರ ಅಕ್ಕಮಹಾದೇವಿ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ನಿತ್ಯಶೋಭಿಸುವ ಎದ್ದುಕಾಣುವ ಪ್ರಪ್ರಥಮ ಕವಯಿತ್ರಿ. ವಯಸ್ಸಿನಲ್ಲಿ ಕಿರಿಯಳು, ಅನುಭಾವದಲ್ಲಿ ಹಿರಿಯಳು. ಯೋಗಶಾಸ್ತ್ರ ನಿಪುಣೆಯಾದ ಅಕ್ಕ ಯೋಗಾಂಗತ್ರಿವಿಧಿಯೆಂಬ ಸ್ವತಂತ್ರ ಗ್ರಂಥ ರಚಿಸಿದ್ದಾಳೆ. ಪ್ರತಿಮೆಗಳನ್ನು ಬಳಸುವದರಲ್ಲಿ ಅಕ್ಕನದು ಪಳಗಿದ ಕೈ. ಭಕ್ತಿ, ಜ್ಞಾನ, ವೈರಾಗ್ಯಗಳ ತವನಿಧಿ. ಹೆಣ್ಣುಕುಲಕ್ಕೆ ಗೌರವ ತಂದುಕೊಟ್ಟ ಮಹಾಮಾತೆಯಾಗಿದ್ದಾಳೆ, ಮಹಾದೇವಿಯಕ್ಕ. ಅವಳನ್ನು ಕುರಿತು ಕೇಳುತ್ತಾನೆ ಪ್ರಭು :

ಉದಮದದ ಯೌವನವನೊಳಕೊಂಡ ಸತಿ ನೀನು ಇತ್ತಲೇಕೆ ಬಂದೆಯವ್ವಾ!
ಸತಿಯೆಂದರೆ ಮುನಿವರು ನಮ್ಮ ಶರಣರು. ನಿನ್ನ ಪತಿಯ ಕುಱುಹ ಹೇಳಿದರೆ ಕುಳ್ಳಿರು.
ಅಲ್ಲವಾದರೆ ತೊಲಗು ತಾಯೆ. ನಮ್ಮ ಗೋಹೇಶ್ವರನ ಶರಣರಲ್ಲಿ ಸಂಗ ಸುಖ ಸನ್ನಿಹಿತವ
ಬಯಸುವರೆ ನಿನ್ನ ಪತಿಯಾರೆಂಬುದ ಹೇಳಾ ಎಲೆ ಅವ್ವಾ.

ತಟ್ಟನೆ ಉತ್ತರಿಸುತ್ತಾಳೆ ಅಕ್ಕಮಹಾದೇವಿ; ತನ್ನ ನಿರ್ಧಾರವನ್ನು ತಿಳಿಸುತ್ತಾಳೆ :

ಗುರುವೇ ತೆತ್ತಿಗನಾದ. ಲಿಂಗವೇ ಮದವಳಿಗನಾದ ನಾನೆ ಮದುವಳಿಗೆಯಾದೆನು. ಈ ಭುವನವೆಲ್ಲಱಿಯಲು
ಅಸಂಖ್ಯಾತರೆನಗೆ ತಾಯಿತಂದೆಗಳು. ಕೊಟ್ಟರು ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ,
ಇದು ಕಾರಣ ಚೆನ್ನಮಲ್ಲಿಕಾರ್ಜುನನೆ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲಯ್ಯಾ ಪ್ರಭುವೆ

ಬಹು ಚಮತ್ಕಾರಿಕವಾಗಿ ಜಾಣ್ಮೆಯಿಂದ ವಾದಿಸಿ ಪ್ರಭುವಿನ ಮನಸ್ಸನ್ನು ಗೆಲ್ಲುತ್ತಾಳೆ. ಆಕೆಯ ಮನೋಧರ್ಮವನ್ನು ಸೂಚಿಸುವ ಈ ಸುಂದರ ವಚನ ಉಲ್ಲೇಖನೀಯ :

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದೊಳಗೆ.
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರೆಯನ್ನಿಕ್ಕಿದರು ನೋಡಾ
ಇಂತಪ್ಪ ತ್ರಿವಿಧಾಮೃತವನು ದಣಿಯಲೆಱೆದು ಸಲಹಿದಿರೆನ್ನ, ವಿವಾಹ ಮಾಡಿದಿರಿ
ಸಯವಪ್ಪ ಗಂಡಂಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ.
ಬಸವಣ್ಣ ಮೆಚ್ಚಲೊಗತನವ ಮಾಡುವೆ. ಚೆನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ತಲೆಗೆ ಹೂವ ತಹೆನಲ್ಲದೆ ಮುಲ್ಲ ತಾರೆನವಧರಿಸಿ ನಿಮ್ಮಡಿಗಳೆಲ್ಲರೂ ಮರಳಿ ಬಿಜಯಂಗೆಯ್ವುದು ಶರಣು ಶರಣಾರ್ಥಿ.

ಹೀಗೆ ಉರಿಯುಂಡ ಕರ್ಪೂರದಂತೆ ಐಕ್ಯವಾಗಿ ಸಮರಸದ ಪ್ರಭೆಯನ್ನು ಬೀರಿದ ಅಕ್ಕಮಹಾದೇವಿಯ ಸಂಪಾದನೆ ಬಹು ಅರ್ಥಪೂರ್ಣವಾಗಿದೆ. ಭಿನ್ನಪ್ರಕೃತಿಯ ಶರಣಶರಣೆಯರು ಅನುಸರಿಸಿದ ವಿಭಿನ್ನ ಮಾರ್ಗಗಳು ಮುಮುಕ್ಷುಗಳಿಗೆ ಅತ್ಯಂತ ರೋಚಕಗಳಾಗಿವೆ. ಪರಿಣಾಮಕಾರಿ ಪ್ರಭಾವ ಬೀರುತ್ತವೆ. ಆದುದರಿಂದಲೇ 'ಪ್ರಭುದೇವರ ಶೂನ್ಯಸಂಪಾದನೆ' ಒಂದು ಭಾಷೆಯಲ್ಲ, ಅದು ಒಂದು ಕಾಲಕ್ಕಲ್ಲ, ಒಂದು ಜಾತಿ ಕುಲಕ್ಕಲ್ಲ. ಅದೊಂದು ದಿವ್ಯದ ಸುದ್ದಿ, ಅದೊಂದು ಪರಿಪೂರ್ಣ ನಿತ್ಯದ ವಾರ್ತೆ, ಅದೊಂದು ಬಣ್ಣವಿಲ್ಲದ ಮಾನವ ಹೃದಯದ ಗಂಭೀರಮೌನದ ಸಂದೇಶ. ಜೀವನಕ್ಕೊಂದು ಶಾಶ್ವತಮೌಲ್ಯವನ್ನು ತೋರಿಸಿ ಕೊಡುವ ಕೃತಿರತ್ನ. ಅಲ್ಲಮಪ್ರಭುವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಹೊರಟ ಈ ಗ್ರಂಥದ ರಚನೆಯಲ್ಲಿಯೂ ಪೂರ್ವಯೋಜಿತವಾದ ಒಂದು ಸುಸಂಬದ್ಧತೆಯ ಸೂತ್ರ, ಒಂದು ನಿರ್ದಿಷ್ಟವಾದ ಉದ್ದೇಶ ಸಾಧನೆಯ ಬೆಳವಣಿಗೆ ಕಂಡುಬರುತ್ತದೆ. ಆದುದರಿಂದ ಇದು ಕೇವಲ ಸಂಕಲನ ಗ್ರಂಥವಾಗದೆ ಒಂದು ರೀತಿಯಲ್ಲಿ ನೂತನ ದೃಷ್ಟಿಯಾಗಿ ಪರಿಣಮಿಸಿದೆ.[10] ಶೂನ್ಯಸಂಪಾದನೆ ಎನ್ನುವ ಗ್ರಂಥ ಶೂನ್ಯವನ್ನು ಸಂಪಾದಿಸಿದವರ ಕಥೆಗಳ ಮಾಲಿಕೆಯೂ ಹೌದು. ಶೂನ್ಯಸಂಪಾದಿಸುವ ದಿಕ್ಕಿನತ್ತ ನಟ್ಟಿರುವ ಒಂದು ಕೈಮರವೂ ಹೌದು. ವಾಸ್ತವವಾಗಿ ನಡೆದಿರಬಹುದಾದ ಘಟನೆಗಳನ್ನು ನಾಟಕೀಯವಾಗಿ ಚಿತ್ರಿಸುವದು ಶೂನ್ಯಸಂಪಾದನೆಯ ಪ್ರಮುಖ ಗುರಿ. ಮುಕ್ತಕಗಳಂತಹ ವಚನಗಳನ್ನು ಆರಿಸಿಕೊಂಡು ಅವುಗಳನ್ನು ಒಂದು ಸಂದರ್ಭದಲ್ಲಿಟ್ಟು, ಉತ್ತರ ಪ್ರತ್ಯುತ್ತರವಾಗಿ ಜೋಡಿಸಿ, ಮಧ್ಯೇ ಮಧ್ಯೇ ಸಂಕಲನಕಾರ ವಿಷಯ ಸ್ಪಷ್ಟತೆಗಾಗಿ ತನ್ನ ಮಾತುಗಳನ್ನು ಸೇರಿಸಿ ನಾಟಕೀಯ ಸನ್ನಿವೇಶಗಳನ್ನು ರಚಿಸಿರುವುದು ಶೂನ್ಯಸಂಪಾದನೆಗೆ ಒಂದು ಸ್ವತಂತ್ರಸ್ಥಾನವನ್ನು ತಂದು ಕೊಟ್ಟಿದೆ. ಶೂನ್ಯಸಂಪಾದನೆ ಒಂದು ದೃಷ್ಟಿಯಿಂದ ಸ್ವತಂತ್ರ ಗ್ರಂಥ ಅಲ್ಲ; ಮತ್ತು ಇನ್ನೊಂದು ದೃಷ್ಟಿಯಿಂದ ಸ್ವತಂತ್ರ ಗ್ರಂಥ ಹೌದು[11]. 'ಶೂನ್ಯಸಂಪಾದನೆ'ಗಳು ಸ್ಥಲಕಟ್ಟು ಸಾಹಿತ್ಯದಲ್ಲಿ ಅನುಕ್ತವಾದ ಉಕ್ತವಾದ ವಿಷಯಗಳನ್ನು ಚರ್ಚೆಯ ರೂಪದಲ್ಲಿ ವಚನಗಳಿಂದ ಸುವ್ಯವಸ್ಥೆಗೊಳಿಸಿದ ಕೃತಿಗಳಾಗಿರುತ್ತವೆ. ಶಾಸ್ತ್ರಸಾಹಿತ್ಯದಲ್ಲಿ ಇದು ನವೀನ ಪ್ರಕಾರ ಶಾಸ್ತ್ರ ಸಾಹಿತ್ಯವಾಗಿರುತ್ತದೆ. ವೀರಶೈವಸಾಹಿತ್ಯಜ್ಞರು ಭಾರತೀಯ ಶಾಸ್ತ್ರ ಸಾಹಿತ್ಯ ಪ್ರಕಾರ ಭಾಂಡಾರಕ್ಕೆ ಸಲ್ಲಿಸಿದ ಒಂದು ಉತ್ತಮ ಕಾಣಿಕೆಯಾಗಿರುತ್ತದೆ; ದಾರ್ಶನಿಕ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನ ಪಡೆದಿದೆ[12].

ಶೂನ್ಯಸಂಪಾದನೆ ವಚನವಾಙ್ಮಯದ ತಿರುಳು, ಶಿವಾನುಭವದ ಹುರುಳು, ಸತ್ಕಥಾಸಂಗತಿಯಸಾರ. ಮುತ್ತಿನಹಾರದಂತಹ ಶೈಲಿ, ರತ್ನದ ದೀಪ್ತಿಯಂತಹ ರೀತಿ, ಸ್ಫಟಿಕದ ಶಲಾಕೆಯಂತಹ ಸರಣಿ. ಶಿವಶರಣರ ಪರಿಪಕ್ವ ಸಂಸ್ಕೃತಿಯ ಸಂಕೇತವಾಗಿ ಸೂರೆಗೊಂಡಿದೆ ಶೈಲಿ. ಬೆಡಗಿನ ಭಾಷೆಯಲ್ಲಿ ಭಾವ ಕಣ್ದೆರೆದು ಕಂಗೊಳಿಸಿದೆ; ಅನುಭಾವ ಮಡುಗಟ್ಟಿ ನಿಂತಿದೆ. ಅತ್ತ ಹಳಗನ್ನಡವೂ ಅಲ್ಲ; ಇತ್ತ ಹೊಸಗನ್ನಡವೂ ಅಲ್ಲ; ನಡುಗನ್ನಡ ನಲ್ನುಡಿಯ ಪಡಿಯಚ್ಚಾಗಿದೆ. ಸಿರಿಗನ್ನಡದ ಸೊಗಸಿದೆ.

---

10. ಶೂನ್ಯ ಸಂಪಾದನೆ : ವಿವರಣಾತ್ಮಕ ಪರಿಚಯ, ಪುಟ ೧೭೬ ಡಾ॥ ತಿಪ್ಪೇರುದ್ರಸ್ವಾಮಿ.
11. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ನಾಲ್ಕನೆಯ ಭಾಗ) ಬೆ.ವಿ.ವಿ. ಪುಟ ೩೧೭ ಡಾ॥ ಚಿದಾನಂದಮೂರ್ತಿ
12. ಕರ್ನಾಟಕ ಭಾರತಿ : ವೀರಶೈವ ಸಾಹಿತ್ಯ ಮತ್ತು ಶಾಸ್ತ್ರಸಾಹಿತ್ಯ—ಡಾ॥ ವ್ಹಿ. ಎಸ್. ಕಂಬಿ (೧೧–೧)

ತಿರುಳನ್ನು ಬಿಂಬಿಸುವ ರೂಪಿದೆ. ಉದಾತ್ತಭಾವ-ಉತ್ತಮಭಾಷೆಗಳ ಬೆಸುಗೆಯಿಂದ ಭಾವಪೂರ್ಣ ಸತ್ವದಿಂದ ಕೂಡಿದೆ. ಸ್ವಯಂ ಪೂರ್ಣ ತತ್ತ್ವನಿರೂಪಣೆಯಿದೆ. ಪ್ರಕರ್ಷ ಪ್ರಾಸಾದಿಕತೆಯಿದೆ[13]. ಶೂನ್ಯಸಂಪಾದನೆಕಾರರು ಮೂಲ ಆಕಾರಗಳಾದ ವಚನಗಳನ್ನು ಆರ್ದ್ರ ಹೃದಯದಿಂದ ಅಧ್ಯಯನ ಮಾಡಿ, ಅನೇಕ ಸನ್ನಿವೇಶಗಳನ್ನು ಕಲ್ಪಿಸಿ ವೀರಶೈವಧರ್ಮದ ಅತ್ಯಂತ ಮೂಲಭೂತವಾದ ಗಹನತತ್ತ್ವಗಳನ್ನು ವಿಚಾರಮಾಡಿದ್ದಾರೆ. ಈ ಕೃತಿಯನ್ನು ಎಚ್ಚರಿಕೆಯಿಂದ ಅಭ್ಯಾಸ ಮಾಡುವವರಿಗೆ ವೀರಶೈವ ಧರ್ಮದ ಪರಿಚಯವಾಗದಿದ್ದರೆ ಇನ್ನು ಯಾವ ಗ್ರಂಥದಿಂದ ಆಗುತ್ತದೆಯೋ ತಿಳಿಯದು.

## ವಚನ ಚಳುವಳಿ ಮತ್ತು ದಲಿತರು

—ಸಿದ್ಧಲಿಂಗಯ್ಯ

ವಚನ ಚಳುವಳಿಯ ಕುತೂಹಲದ ಕೇಂದ್ರ ಬಸವಣ್ಣನಾದರೂ ಇದರಲ್ಲಿ ಪಾಲುಗೊಂಡವರು ಬಗೆ ಬಗೆಯ ಜನ. ಅವರು ನೂರು ಊರುಗಳಿಂದ ನೂರು ದಾರಿಗಳಿಂದ ಬಂದು ಸೇರಿದರು. ಇವರ ಕಾಯಕದಲ್ಲಿ ವೈವಿಧ್ಯತೆ, ನಾನಾ ರೀತಿಯ ಸಾಮಾಜಿಕ ಹಿನ್ನೆಲೆಗಳು ಅಭಿವ್ಯಕ್ತಿಯಲ್ಲೂ ವೈವಿಧ್ಯತೆ ಬರಲು ಕಾರಣವಾಯಿತು. ವೃತ್ತಿಯಲ್ಲಿ ಮೇಲು ಕೀಳಿಲ್ಲದೆ ರಾಜನಿಂದ ಹಿಡಿದು ಚಮ್ಮಾರನವರೆಗೆ ವಚನಚಳುವಳಿಯಲ್ಲಿ ಜನ ಪಾಲುಗೊಂಡರು. ವರ್ಗ ವರ್ಣಗಳ ಪ್ರತಿಷ್ಠೆಯನ್ನು ವ್ಯಂಗ್ಯ ಮಾಡಿದ ಈ ಹೋರಾಟದಲ್ಲಿ ದಲಿತರದು ಲವಲವಿಕೆಯ ಪಾತ್ರ. ಊರ ಹೊರಗಿದ್ದ ಜನ ಬಸವಣ್ಣನ ಬಳಿಗೆ ಬಂದದ್ದು ವಿಚಾರ ಮಾಡಬೇಕಾದ ಅಂಶ.

ದಲಿತರು ಎಂದರೆ ಬಡವರು ಎಂಬ ಅರ್ಥ ನಿಘಂಟಿನಲ್ಲಿದೆ. ಆರ್ಥಿಕವಾಗಿ ಶೋಷಣೆಗೆ ಒಳಗಾದವರು ಎಂಬ ಇದರ ಅಭಿಪ್ರಾಯ, ಮಹಾರಾಷ್ಟ್ರದ ದಲಿತ ಪ್ಯಾಂಥರ್ ಚಳುವಳಿ ಈ ಪದದ ಅರ್ಥವಲಯಕ್ಕೆ ಸಾಮಾಜಿಕ ಶೋಷಣೆಯನ್ನು ಸೇರಿಸಿತು. ಆದ್ದರಿಂದ ಸಾಮಾಜಿಕ ಮತ್ತು ಆರ್ಥಿಕ ಶೋಷಣೆಗೆ ಒಳಗಾದ ಮನುಷ್ಯ ದಲಿತ ಎಂಬ ವಿವರಣೆ ಹೆಚ್ಚು ಬಳಕೆಯಲ್ಲಿದೆ. ಈ ಎರಡೂ ವಿವರಣೆಗಳು ಪರಸ್ಪರ ವಿರೋಧ ಎಂದು ಭಾವಿಸಲಾಗಿದೆ. ಈ ವಿವಾದಕ್ಕೆ ಹೇಳಿಕೊಳ್ಳುವಂಥ ಗಾಂಭೀರ್ಯ ಇಲ್ಲ. ಯಾಕೆಂದರೆ ಆರ್ಥಿಕವಾಗಿ ದುರ್ಬಲನಾದವನು ಸಾಮಾಜಿಕವಾಗಿ ಶೋಷಣೆಗೆ ಒಳಗಾಗುತ್ತಾನೆ. ಆರ್ಥಿಕವಾಗಿ ಪ್ರಬಲನಾದವನು ಸಾಮಾಜಿಕ ಶೋಷಣೆಯನ್ನು ಮಾಡುವ ಸಾಧ್ಯತೆಯನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಇದರ ಜೊತೆಗೆ ಸಾಮಾಜಿಕ ಶೋಷಣೆ, ಅಸ್ಪೃಶ್ಯತೆ ಮತ್ತು ಕೀಳರಿಮೆಗೆ ಸಂಬಂಧಪಟ್ಟದ್ದು. ತಾವು ಕೀಳುಜಾತಿಯವರೆಂದು ಕುಗ್ಗಿಹೋದ ಜನರ ದುರಂತ ಗಮನಾರ್ಹವಾದುದು. ಆರ್ಥಿಕ ದುರ್ಬಲತೆಯಿಂದ ಮತ್ತು ಹುಟ್ಟಿನ ಕಾರಣದಿಂದ ಉಂಟಾದ ಸಾಮಾಜಿಕ ಶೋಷಣೆ ಎರಡೂ ಮುಖ್ಯವಾಗುತ್ತವೆ. ದಲಿತ ಪದದ ಅರ್ಥ ವಿವರಣೆಯನ್ನು ಈ ದಿಕ್ಕಿನಲ್ಲೇ ಯೋಚಿಸುವುದು ಸೂಕ್ತವೆನಿಸುತ್ತದೆ. ಸಾಮಾಜಿಕ ವಿಚಾರಗಳು ಆರ್ಥಿಕ ವಿಚಾರಗಳಷ್ಟೇ ಮುಖ್ಯ. ಕಾರಣ, ಒಬ್ಬ ಬಡವನಿಗೆ ಶ್ರೀಮಂತನಾಗುವ ಅವಕಾಶಗಳಿದ್ದರೂ ಒಬ್ಬ ಹೊಲೆಯನಿಗೆ ಬ್ರಾಹ್ಮಣನಾಗುವ ಅವಕಾಶವಿಲ್ಲ. ಅಥವಾ ಅವನು ಇನ್ನೇನೇ ಆದರೂ ಹೊಲೆಯನಾಗಿದ್ದ ವಿಚಾರವನ್ನು ಮರೆಯುವಷ್ಟು, ಜನರ ನೆನಪಿನ ಶಕ್ತಿ ದುರ್ಬಲವಾಗುವುದಿಲ್ಲ.

ಅಸ್ಪೃಶ್ಯರಾದ ಜನ ಮತ್ತು ಕೀಳುಜಾತಿಯವರೆಂದು ಮಂಕಾದ ಜನ ವಚನಚಳುವಳಿಯಲ್ಲಿ ಸೇರಿ ಹೋರಾಟ ಮಾಡಿದರು. ಪಂಚಮರು ಶೂದ್ರರು ಮಾತ್ರವಲ್ಲ, ಮಹಿಳೆಯರೂ ಇಲ್ಲಿ ಕಂಡರು. ಈ ಮೂರು ವರ್ಗವನ್ನು ಭಾರತದ ಚರಿತ್ರೆಯಲ್ಲಿ ಅವಮಾನಗೊಳಿಸಲಾಗಿದೆ. ಈ ಮೂವರ ಮನಸ್ಸಿನ ಮೇಲೆ ನಮ್ಮ ಸಂಸ್ಕೃತಿ ನಡೆಸಿದ ಅತ್ಯಾಚಾರ ಪೈಶಾಚಿಕವಾದದ್ದು. ಆರಂಭದಲ್ಲಿ ಶೂದ್ರ, ಪಂಚಮ, ಮಹಿಳೆ ಈ ಜನ ದೇಶದ ಸಾಮಾಜಿಕ ಬದುಕಿನಲ್ಲಿ ಅಪಾತ್ರರಾಗಿ ಪರಿಣಮಿಸಿದ್ದರು. ಇವರ ಸ್ವರ ಯಾವಾಗಲೋ ಎಲ್ಲೋ ಒಂದು ಕಡೆ ಕೇಳಿ ಬಂದರೂ ಆರ್ಭಟವಾಗಲೇ ಇಲ್ಲ. ಆ ಕೂಗು ಕೇಳಿಸಿದ್ದು ಹನ್ನೆರಡನೇ ಶತಮಾನದಲ್ಲಿ.

ಬಸವಣ್ಣ ಒಬ್ಬನೇ ಕುಳಿತು ಲೆಕ್ಕಚಾರ ಹಾಕಿ ಹೋರಾಟವನ್ನು ಹುಟ್ಟು ಹಾಕಿ ಮುನ್ನಡೆಸಿದ ಎಂದರೆ ತಪ್ಪಾಗುತ್ತದೆ. ೧೨ ನೇ ಶತಮಾನದ ಆರ್ಥಿಕ ಮತ್ತು ಸಾಮಾಜಿಕ ಬಿಕ್ಕಟ್ಟಿನ ಪರಿಣಾಮವಾಗಿ ಈ ಚಳುವಳಿ ರೂಪು ತಳೆಯಿತು. ಈ ಎರಡು ಹೊಡೆತಗಳಿಂದ ಜನತೆಗೆ ಬಿಡುಗಡೆ ಬೇಕಾಗಿತ್ತು. ಈ ಶೋಷಣೆಯ ವಿರುದ್ಧ ಜನರನ್ನು ಜಾಗೃತಗೊಳಿಸುವ ಅಗತ್ಯ ತೀವ್ರವಾಗಿತ್ತು. ಶ್ರೀಮಂತರು, ಮೇಲುಜಾತಿಯವರು ಮತ್ತು ರಾಜನ ಭಯದಿಂದ ತತ್ತರಿಸಿ ಹೋಗಿದ್ದ ಜನಕ್ಕೆ ತಲೆಯೆತ್ತಿ ನಡೆಯುವ ವಾತಾವರಣ ಬೇಕಾಗಿತ್ತು. ಈ ಸಮುದಾಯದ ಆಶೋತ್ತರವೇ ವಚನಚಳುವಳಿಯಾಗಿ ಅಭಿವ್ಯಕ್ತಿಗೊಂಡಿದೆ. ವಚನಕಾರರು

13. ಸಂಪಾದನೆಯ ಸೊಂಪು—ಜ.ಚ.ನಿ. ಪು: ೧೮

ಶ್ರೀಮಂತರ ಸಂಪತ್ತಿನ ಅಹಂಕಾರಕ್ಕೆ ಸೊಪ್ಪುಹಾಕಲಿಲ್ಲ ; ಬದಲಾಗಿ ಅವರನ್ನು ಟೀಕಿಸಿದರು. ಜಾತಿಪದ್ಧತಿ ಅಸ್ಪೃಶ್ಯತೆಯನ್ನು ಪುರಸ್ಕರಿಸಲಿಲ್ಲ. ಅದನ್ನು ಭಗ್ನಗೊಳಿಸಿದರು. ರಾಜನ ವಿರುದ್ಧವಾಗಿ ಹೋರಾಡಿದರು. ಅಸ್ಪೃಶ್ಯತೆ ಮತ್ತು ಜಾತಿ ತನ್ನ ತೀವ್ರ ಸ್ಥಿತಿಯನ್ನು ಮುಟ್ಟಿದ್ದಾಗ ಇವರು ಅದರ ಬುಡಮುಟ್ಟಿ ಅಲ್ಲಾಡಿಸುವ ಯತ್ನವನ್ನು ಮಾಡಿದರು. ಅನೇಕ ಕಾರಣಗಳಿಂದ ದಲಿತರಾದವರನ್ನು ಸಂಘಟನೆ ಮಾಡಿ ಬಸವಣ್ಣ ಅವರನ್ನು ಪಟ್ಟಭದ್ರರ ವಿರುದ್ಧ ಹೋರಾಟಕ್ಕೆ ಸಿದ್ಧಗೊಳಿಸಿದ. ಇಲ್ಲಿ ಭಾಗವಹಿಸಿದ ಜನ, ಅವರು ಪ್ರತಿಷ್ಠಾಪನೆ ಮಾಡಿದ ಮೌಲ್ಯಗಳು, ಅವರು ಶತ್ರುಗಳೆಂದು ಪರಿಗಣಿಸಿದ ವ್ಯಕ್ತಿಗಳನ್ನು ಗಮನಿಸಿದರೆ ವಚನಚಳುವಳಿ ಮೊದಲ ದಲಿತಚಳುವಳಿ ಎಂಬ ಅರಿವಾಗುವದು. ದಲಿತರು ಕನ್ನಡನಾಡಿನ ಚರಿತ್ರೆಯಲ್ಲಿ ಮೊದಲು ಸೊಲ್ಲು ಎತ್ತಿದ್ದು ಆಗಲೇ. ಭಯವನ್ನು ತೊರೆದು ತಮಗೆ ಅನಿಸಿದ್ದನ್ನು ಅಂದರು. ತಮ್ಮನ್ನು ತುಳಿಯುತ್ತಿರುವ ಶಕ್ತಿಗಳನ್ನು ಗುರುತಿಸಿದರು ತಮ್ಮನ್ನು ಅವಮಾನ ಮಾಡಿದ ಶಾಸ್ತ್ರ ಪುರಾಣಗಳನ್ನು ಗೇಲಿಮಾಡಿ ಅವುಗಳ ಯಜಮಾನಿಕೆಯನ್ನು ನಿರಾಕರಿಸಿದರು. ಮಾರ್ಗದರ್ಶನ ಸೂತ್ರಗಳಲ್ಲಿ ಅವಿಶ್ವಾಸವನ್ನು ಪ್ರಕಟಿಸಿದ ವಚನಕಾರರಿಗೆ ತಮ್ಮ ಅಂತಸ್ಸಾಕ್ಷಿಯೇ ಗುರುವಾಯಿತು. ಅದರ ಪರಿಣಾಮ : ಒಬ್ಬೊಬ್ಬ ವಚನಕಾರನಿಗೂ ಒಂದೊಂದು ಇಷ್ಟದೈವಸೃಷ್ಟಿ ಆಗಬೇಕಾಯಿತು.

ಜಾತಿಪದ್ಧತಿಯ ಮೂಲವನ್ನು ವಸ್ತುನಿಷ್ಠವಾಗಿ ಗ್ರಹಿಸಿದ ವಚನಕಾರರು ಅದರ ಪೊಳ್ಳುತನವನ್ನು ಬಹಿರಂಗಗೊಳಿಸಿದರು. ಜಾತಿಯ ಮತ್ತು ವೃತ್ತಿ ಇವುಗಳ ಸಂಬಂಧವನ್ನು ಖಚಿತವಾಗಿ ಗುರುತಿಸಿದರು, 'ಕಾಸಿ ಕಮ್ಮಾರನಾದ ಬೀಸಿ ಮಡಿವಾಳನಾದ ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರುವನಾದ' ಈ ಮಾತುಗಳಲ್ಲಿ ಜಾತಿಪದ್ಧತಿಯನ್ನು ವಿಶ್ಲೇಷಿಸಿದ ಬಗೆ ಇದೆ ಆದ್ದರಿಂದ ಮೇಲುಜಾತಿ, ಕೀಳುಜಾತಿ ಎಂದು ಭಾವಿಸಿ, ಇದರಿಂದರೇ ಬೀಗುವುದಕ್ಕೆ ಯಾವ ಕಾರಣವೂ ಇಲ್ಲವೆಂದು ಹೇಳಿದರು. ಒಬ್ಬ ಮನುಷ್ಯ ಆಸ್ತಿಯ ಅಥವಾ ಮೇಲುಜಾತಿಯ ಕಾರಣದಿಂದ ತಾನು ದೊಡ್ಡಮನುಷ್ಯನಾಗುತ್ತೇನೆ ಎಂದು ಭ್ರಮಿಸುವುದನ್ನು ಪರಿಹರಿಸಲು ಅವರು ಪ್ರಯತ್ನಪಟ್ಟರು. ಶೋಷಣೆಯನ್ನು ಗುರುತಿಸ ಬೇಕಾದರೆ ಒಬ್ಬ ವ್ಯಕ್ತಿ ಒಂದು ಕೈ ಮಾಡಿ ತೋರಿಸಿದರೆ ಸಾಲದು. ಅದು ಸರಪಳಿ ಕ್ರಿಯೆ. ಅನೇಕ ಒಳ ಸಂಬಂಧಗಳನ್ನು ನೋಡಬೇಕು. ೧೨ನೇ ಶತಮಾನದಲ್ಲಿ ಕಲ್ಯಾಣದ ರಾಜ ಶೋಷಣೆಯ ಪ್ರತಿನಿಧಿ. ಆತನಿಗೆ ಬೆಂಬಲವಾಗಿ ನಿಂತ ವೈದಿಕಧರ್ಮ ಮತ್ತು ಜನರನ್ನು ಬಗ್ಗು ಬಡಿಯಲು ಸಾಧನವಾದ ಅಧಿಕಾರಶಾಹಿ ಕೂಡ ಶೋಷಣೆಯ ಸಂಕೇತಗಳೇ ಆಗಿವೆ. ವಚನಕಾರರ ಹೋರಾಟ ಇವೆಲ್ಲದರ ವಿರುದ್ಧವಾಗಿತ್ತು. ಆರ್ಥಿಕ ಅಸಮಾನತೆಯ ಜೀವಂತ ಸಂಕೇತವಾದ ರಾಜ ಮತ್ತು ಸಾಮಾಜಿಕ ಅಸಮಾನತೆ ಹೇಳುವ ವೈದಿಕಧರ್ಮ, ಇವರ ಮುಖ್ಯ ವೈರಿಗಳಾದವು. ಇದರಿಂದಲೇ ಈ ಹೋರಾಟ ಜನ ಪರವಾಗಲು ದಾರಿಯಾಯಿತು.

ದಲಿತರನ್ನು ದೇವಾಲಯಗಳಿಗೆ ಸೇರಿಸದೆ ಸವರ್ಣೀಯರು ಅವರನ್ನು ದೂರ ಇಟ್ಟರು. ದೇವಾಲಯ ಪ್ರವೇಶಕ್ಕಾಗಿ ಇಂದೂ ಕೂಡ ಚಳುವಳಿ ನಡೆಯುತ್ತವೆ. ವಚನಕಾಲದಲ್ಲೇ ಇದ್ದ ರಾಮಾನುಜಾಚಾರ್ಯರು ದಲಿತರಿಗೆ ವರ್ಷದಲ್ಲಿ ಎರಡುದಿನ ಮಾತ್ರ ದೇವಸ್ಥಾನ ಪ್ರವೇಶದ ವ್ಯವಸ್ಥೆ ಮಾಡಿದರು. ಇದು ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಗಲಿಲ್ಲ. ವಚನ ಚಳುವಳಿ ತಳೆದ ಧೋರಣೆಯಿಂದ ಈ ಸಮಸ್ಯೆ ನಿಜವಾದ ಪರಿಹಾರವನ್ನು ಕಂಡುಕೊಂಡಿತು. ಅದೆಂದರೆ : ದೇವಾಲಯಗಳನ್ನೇ ಬಹಿಷ್ಕರಿಸುವುದು. ದೇವಾಲಯ ಪ್ರವೇಶದಂಥ ಅನಾವಶ್ಯಕ ಕೆಲಸಗಳು ಇದರಿಂದ ತಪ್ಪಿದವು. ವೇದಗಳು ದಲಿತರನ್ನು ತಿರಸ್ಕರಿಸಿದರೆ ವಚನಕಾರರು ವೇದ ಶಾಸ್ತ್ರಗಳನ್ನೇ ಖಂಡಿಸಿದರು. ಆತ್ಮವಿಶ್ವಾಸವನ್ನು ಕಳೆದುಕೊಂಡಿದ್ದ ಜನರಲ್ಲಿ ಸ್ವಾಭಿಮಾನ ಹುಟ್ಟಲು ಇದು ಕಾರಣವಾಯಿತು.

ಧಾರ್ಮಿಕವಾದ ಆಚರಣೆಗಳು ಮತ್ತು ಆಲೋಚನೆಗಳನ್ನು ಕುರಿತಂತೆ ವಚನಕಾರರ ಹೋರಾಟ ವಿಶಿಷ್ಟವಾದದ್ದು. ಅವರು ಮೇಲುಸಂಸ್ಕೃತಿಯನ್ನು ಸ್ವೀಕರಿಸಲಿಲ್ಲ. ವೇದ, ಶಾಸ್ತ್ರ ಮತ್ತು ವೈದಿಕ ಆಚರಣೆಗಳು ಅವರಿಗೆ ಅಸಹನೀಯವಾದವು.

> 'ವೇದಗಳ ಹಿಂದೆ ಹರಿಯದಿರು ಹರಿಯದಿರು ಶಾಸ್ತ್ರಗಳ ಹಿಂದೆ ಸುಳಿಯದಿರು ಸುಳಿಯದಿರು
> ಪುರಾಣಗಳ ಹಿಂದೆ ಬಳಸದಿರು ಬಳಸದಿರು ಆಗಮುಗಳ ಹಿಂದೆ ತೊಳಲದಿರು ತೊಳಲದಿರು......'

–ಎಂದು ಹೇಳುವ ಆದಯ್ಯ ವೇದ, ಶಾಸ್ತ್ರ, ಪುರಾಣ, ಆಗಮುಗಳೆಲ್ಲ ಶಬ್ದಜಾಲಗಳು ಎಂಬ ನಿಲುವಿಗೆ ತಲುಪುತ್ತಾನೆ. ಅಲ್ಲಮ ನಿಗಂತೂ ವೇದ ಓದಿನ ಮಾತಾದರೆ ಶಾಸ್ತ್ರವೆಂಬುದು ಜವಾಬ್ದಾರಿಯಿಲ್ಲದ, ಆಧಾರವಿಲ್ಲದ ಮಾತು. ಅದೊಂದು 'ಸಂತೆಯ ಸುದ್ದಿ'. ದೇವರುಗಳ ಬಗ್ಗೆಯೂ ಇವರದು ಇದೇ ನಿಲುವು. ವಚನಕಾರರು ವೈದಿಕದೇವತೆಗಳನ್ನಂತೂ ಆಟ ಆಡಿಸಿಬಿಟ್ಟರು.

ಮೇಲು ಸಂಸ್ಕೃತಿಯ ವಿರೋಧಾಭಾಸಗಳ ಬಗ್ಗೆ ನಿರ್ದಾಕ್ಷಣ್ಯವಾಗಿ ಮಾತನಾಡಿದ ವಚನಕಾರರು ಜನಪದಸಂಸ್ಕೃತಿಯ ಅನೇಕ ವೈಚಿತ್ರ್ಯಗಳನ್ನು ಗೇಲಿಗೆ ಒಳಪಡಿಸಿದರು. ಕೆಳವರ್ಗದವರು ಆಚರಿಸುತ್ತಿದ್ದ ಧರ್ಮ ಅವರಲ್ಲಿ ಜಿಗುಪ್ಸೆ ಹುಟ್ಟಿಸಿತು. ಕೆಳವರ್ಗದ ಆಚರಣೆಗಳು ಹಿಂಸಾತ್ಮಕವಾಗಿದ್ದವು. ತಮಗೆ ತಾವೇ ಹಿಂಸೆ ಕೊಟ್ಟುಕೊಳ್ಳುವುದು ಅವರಿಗೆ ಹಬ್ಬ ಅನ್ನಿಸಿಕೊಳ್ಳು

ತ್ತಿತ್ತು. ತಮಗಿಂತಲೂ ವಿಚಿತ್ರವಾದ ದೇವಾನುದೇವತೆಗಳ ಆರಾಧನೆ ಇವರದಾಗಿತ್ತು. ಈ ಕ್ರೂರವಾದ ಆಚರಣೆಗಳಿಂದ ದಲಿತರನ್ನು ಬಿಡಿಸಲು ವಚನಕಾರರು ಹೆಣಗಾಡಿದರು. ಮೇಲುವರ್ಗ ಮತ್ತು ಕೆಳವರ್ಗದ ಸಂಸ್ಕೃತಿಯ ವಿರೋಧಗಳನ್ನು ಎತ್ತಿ ಹಿಡಿದು ಮಾನವೀಯ ಸಂಸ್ಕೃತಿಯ ಸೃಷ್ಟಿಗಾಗಿ ಅವರು ತವಕಪಟ್ಟರು.

ತುಳಿತಕ್ಕೆ ಒಳಪಟ್ಟ ದಲಿತರು ವಚನಚಳುವಳಿಯಲ್ಲಿ ತಮ್ಮ ಬಿಡುಗಡೆಯ ಭರವಸೆಯನ್ನು ಕಂಡರು. ಅನೇಕರು ತಮ್ಮ ಸಂಸ್ಕೃತಿಯ ಸಂಬಂಧಗಳನ್ನು ಕಳಚಿಕೊಂಡು ವಚನಸಂಸ್ಕೃತಿಗೆ ತಮ್ಮನ್ನು ಅರ್ಪಿಸಿಕೊಂಡರು. ಭಾರತದಲ್ಲಿ ನಡೆದ ಅವೈದಿಕ ಚಳುವಳಿಗಳಲ್ಲೆಲ್ಲಾ ದಲಿತರು ಮಹತ್ವದ ಪಾತ್ರವಹಿಸಿದ್ದು ಈ ಚಳುವಳಿಯಲ್ಲೇ. ಇಲ್ಲಿ ದಲಿತರು ನಿಜವಾಗಲೂ ಹೊಸ ಮನುಷ್ಯರಾದರು. ಆಧ್ಯಾತ್ಮ.ವಿದ್ವತ್ತು ಯಾವುದರಲ್ಲೂ ತಾವು ಕಡಿಮೆಯಿಲ್ಲ ಎಂಬುದನ್ನು ತೋರಿಸಿಕೊಳ್ಳಲುಶಕ್ತಿಮೀರಿ ಪ್ರಯತ್ನಿಸಿದರು. ಅಸ್ಪೃಶ್ಯವಾಗಿದ್ದ ಉರಿಲಿಂಗಪೆದ್ದಿಯ ವಿದ್ವತ್ತು ಎಂಥ ದಲಿತವಿರೋಧಿಯನ್ನು ಚಕಿತಗೊಳಿಸುತ್ತದೆ. ಡೋಹರ ಕಕ್ಕಯ್ಯ ಕನಿಷ್ಠಕುಲದಲ್ಲಿ ಹುಟ್ಟಿದ ತನ್ನ ಸೂತಕವನ್ನು ಕಳೆದ ಬಸವಣ್ಣನಿಗೆ ತುಂಬಿ ತುಳುಕುವ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾನೆ. ಶರಣ ಸಮಾಜದಲ್ಲಿ ಸಿಕ್ಕಿದ ಸಮಾನತೆ ದಲಿತರಲ್ಲಿ ನಿಜವಾಗಲೂ ಆಶ್ಚರ್ಯ, ಆನಂದಗಳನ್ನು ಉಂಟು ಮಾಡಿತು. ಅವರು ಇತರರಿಗಿಂತ ಹೆಚ್ಚು ಉತ್ಸಾಹದಿಂದ ಈ ಚಳುವಳಿಯಲ್ಲಿ ಭಾಗವಹಿಸಿದರು. ಇಷ್ಟಾದರೂ ದಲಿತ ವಚನಕಾರರು ಸಾಮಾಜಿಕ ಶೋಷಣೆಯನ್ನು ಕುರಿತು ತೀವ್ರವಾಗಿ ಹೇಳಲಿಲ್ಲ. ಮೇಲುಜಾತಿಯ ವಚನಕಾರರ ಮನಸ್ಸಿಗೆ ಇದರಿಂದ ನೋವಾಗಬಹುದೆಂದು ಅವರು ಭಾವಿಸಿರಬಹುದು. ಅದರ ಬದಲು ವೀರಶೈವ ತತ್ತ್ವದ ಬಗ್ಗೆ ಆಳವಾಗಿ ಚಿಂತಿಸ ತೊಡಗಿದರು. ಆಧ್ಯಾತ್ಮಿಕ ಜ್ಞಾನದ ಸ್ಪರ್ಧೆಯಲ್ಲಿ ನಾವು ಭಾಗವಹಿಸುತ್ತಿದ್ದೇವೆಂದು ತಿಳಿದು ಸಿದ್ಧತೆಯಲ್ಲಿ ತೊಡಗಿದರು. ಇದರಿಂದ ದಲಿತ ವಿಮೋಚನೆಯ ಬಗ್ಗೆ ಅವರ ಧೋರಣೆ ಬೆಳವಣಿಗೆ ಕಾಣಲಿಲ್ಲ. ಆದರೆ ಉಳಿದ ವಚನಕಾರರು ದಲಿತರಿಗಿಂತ ಈ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಂಡರು. ಅಸ್ಪೃಶ್ಯತೆಯನ್ನು ಬಸವಣ್ಣ ದಲಿತವಚನಕಾರರಿಗಿಂತ ಉಗ್ರವಾಗಿ ಪ್ರತಿಭಟಿಸಿದನು.

ಎಲ್ಲಾ ವಚನಕಾರರಂತೆ ದಲಿತ ವಚನಕಾರರೂ ತಮ್ಮ ಕಾಯಕದ ಪ್ರತಿಮೆಗಳ ಮೂಲಕ ಮಾತನಾಡಿದರು. ಚನ್ನಯ್ಯ ಮತ್ತು ಧೂಳಯ್ಯನವರು ಚಪ್ಪಲಿ ಹೊಲೆಯುವ ವೃತ್ತಿಯ ಅಂಕಿತವನ್ನೇ ಇಟ್ಟುಕೊಂಡು ವಚನ ರಚಿಸಿದರು. ತಮ್ಮ ಅಸ್ಪೃಶ್ಯ ಬದುಕಿನ ಯಾತನೆಯ ಬಗ್ಗೆ ಅವರು ಸಂಕೋಚವಿಲ್ಲದೆ ಹೇಳಿದರು. ಒಬ್ಬ ದಲಿತನಿಗೆ ಆತ್ಮವಿಶ್ವಾಸ ಮೂಡಿದಾಗ ಮಾತ್ರ ಹೀಗಾಗಲು ಸಾಧ್ಯ. ಸವರ್ಣೀಯ ವಚನಕಾರರು ದಲಿತರನ್ನು ನಡೆಸಿಕೊಂಡ ರೀತಿ ಉಳಿದ ಸವರ್ಣೀಯರಿಗೆ ಅನುಕರಣೀಯವಾಗಿದೆ. ಬಸವಣ್ಣನಂತೂ ದಲಿತರನ್ನು ತಂದೆ ಎನ್ನುವ ಹಂತಕ್ಕೆ ತಲುಪಿದ್ದನು. ದಲಿತರನ್ನು ಕುರಿತಂತೆ ಅವರು ಸಂಬಂಧ ವಾಚಕಗಳನ್ನು ಬಳಸಿದರು.

ದಲಿತರ ಸಾಮಾಜಿಕ ಶೋಷಣೆಯ ವಿರುದ್ಧ ಹೋರಾಟದಲ್ಲಿ ವಚನಚಳುವಳಿ ಪ್ರಮುಖವಾದದ್ದು. ಅಸ್ಪೃಶ್ಯ ಮತ್ತು ಸವರ್ಣೀಯ ಇಬ್ಬರೂ ಕೂಡ ಈ ಬಗ್ಗೆ ಗಂಭೀರವಾಗಿ ಯೋಚಿಸಿದರು. ೨೦ನೇ ಶತಮಾನದ ಮೋಹನದಾಸ ಕರಮಚಂದ ಗಾಂಧೀ ಕೂಡ ವರ್ಣಾಶ್ರಮ ಧರ್ಮ ಮತ್ತು ಜಾತಿಪದ್ಧತಿಯನ್ನು ವಿರೋಧಿಸುವ ಧೈರ್ಯ ಮಾಡಲಿಲ್ಲ. ಅವರು ಬುದ್ಧಿವಂತಿಕೆಯಿಂದ ಅಸ್ಪೃಶ್ಯತೆಯನ್ನು ಮಾತ್ರ ವಿರೋಧಿಸಿದರು. ಆದರೆ ವಚನಕಾರರು ಜಾತಿಪದ್ಧತಿ ಮತ್ತು ವರ್ಣಾಶ್ರಮ ಧರ್ಮ, ಅಸ್ಪೃಶ್ಯತೆಯನ್ನು ಒಟ್ಟಿಗೇ ವಿರೋಧಿಸುವ ಧೈರ್ಯವನ್ನು ಪ್ರಕಟಿಸಿದರು. ಯಾಕೆಂದರೆ ಅವರಿಗೆ ಯಾರ ಹಂಗೂ ಇರಲಿಲ್ಲ.

ಇಷ್ಟಾದರೂ ವಚನಚಳುವಳಿ ವಿಫಲಕ್ರಾಂತಿ. ಬಸವಣ್ಣನ ನಂತರ ಅವರ ಸಾಮಾಜಿಕ ಸುಧಾರಣೆಯ ಅಂಶ ಕುಗ್ಗುತ್ತಾ ಬಂತು. ಇದು ಚರಿತ್ರೆಯ ಮಿತಿ. ಇದರ ಮುಂದುವರಿದ ರೂಪ ಹೊಸ ವೈದಿಕತೆಯನ್ನು ಪಡೆಯಿತು. ಕ್ರಾಂತಿಯ ಕಾವು ಆರಿ ವ್ಯವಸ್ಥೆಯಲ್ಲಿ ಇದರ ಮಿಲನವಾದದ್ದು ಅತ್ಯಂತ ದುರಂತದ ಸಂಗತಿ. ದಲಿತರ ಪಾಲಿಗೆ ವೈದಿಕರೂ ವೀರಶೈವರೂ ಒಂದೇ ಆದರು. ವಚನಚಳುವಳಿ ಕನ್ನಡನಾಡಿನಲ್ಲಿ ಮಾನವೀಯ ಮೌಲ್ಯಗಳ ಸ್ಥಾಪನೆಗಾಗಿ ನಡೆದ ಮೊದಲ ಹೋರಾಟವಾದರೂ ಅದು ಬೆಳವಣಿಗೆ ಪಡೆಯಲಿಲ್ಲ. ಮೂರು ನಾಮಕ್ಕೆ ಬದಲು ವಿಭೂತಿ, ಜನಿವಾರಕ್ಕೆ ಬದಲು ಶಿವದಾರ, ಪುರೋಹಿತನ ಸ್ಥಾನದಲ್ಲಿ ಜಂಗಮ, ವೇದಶಾಸ್ತ್ರಗಳಿಗೆ ಪರ್ಯಾಯವಾಗಿ ಷಟ್ಸ್ಥಲ ಅಷ್ಟಾವರಣ ಪಂಚಾಚಾರ ಇವೇ ದೊಡ್ಡ ಬದಲಾವಣೆ ಎಂದು ಕೆಲವರು ಭ್ರಮಿಸಿಬಿಟ್ಟರು.

ದಲಿತ ವಿಮೋಚನೆಯ ಬಗ್ಗೆ ಚಿಂತಿಸುತ್ತಿರುವ ಈ ಸಂದರ್ಭದಲ್ಲಿ ವಚನ ಚಳುವಳಿಯ ಅಧ್ಯಯನ, ವಿಶ್ಲೇಷಣೆ ಅಗತ್ಯವಾಗಿ ಆಗಬೇಕಾಗಿದೆ. ಯಾಕೆಂದರೆ ಕೆಲವು ವಿಚಾರಗಳಲ್ಲಿ ಅವರು ನಮಗಿಂತ ಪ್ರಗತಿಪರವಾಗಿ ಆಲೋಚನೆ ಮಾಡಿದ್ದಾರೆ. ಕರ್ನಾಟಕದ ಕ್ರಾಂತಿಯ ಆರಂಭ ಅದಾಗಿರುವುದರಿಂದ ಈಗ ನಾವು ಅತ್ತಲೂ ನೋಡಬೇಕಾಗಿದೆ.

# ವಚನಸಾಹಿತ್ಯ-ಹರಿದಾಸಸಾಹಿತ್ಯ

—ಡಾ॥ ಜಿ. ವರದರಾಜರಾವ್

ಕನ್ನಡ ಪ್ರೌಢ ಸಾಹಿತ್ಯವನ್ನು ಸಮೃದ್ಧಿಗೊಳಿಸುವುದರಲ್ಲಿ ಜೈನ, ವೀರಶೈವ ಮತ್ತು ವೈದಿಕ ಧರ್ಮಗಳು ಆಯಾ ಕಾಲಕ್ಕೆ ತಕ್ಕಂತೆ ಪ್ರೇರಣೆಯನ್ನಿತ್ತಿದ್ದರೂ, ಸಂತಸಾಹಿತ್ಯ ಸೃಷ್ಟಿಯಲ್ಲಿ ಶಿವಶರಣರು ಮತ್ತು ಹರಿದಾಸರ ಪಾತ್ರ ಬಹಳ ವಿಶಿಷ್ಟವಾದುದು. ಇವರಲ್ಲಿ ಯಾರೊಬ್ಬರೂ ಕಾವ್ಯರಚನೆಗಾಗಿ ಲೇಖನಿಯನ್ನು ಹಿಡಿದವರಲ್ಲ. ಸರಸ್ವತಿಗಾಗಿ ನಾಲಿಗೆಯನ್ನು ಮಾರಿದವರಲ್ಲ. ಒಬ್ಬೊಬ್ಬರೂ ತಮ್ಮ ಹೃದಯವನ್ನೇ ತೆರೆದಿಟ್ಟು, ತಮ್ಮ ಅಂತರಂಗದ ತುಮುಲವನ್ನು ನಿರೂಪಿಸಿ, ತಾವು ನಂಬಿದ್ದ ದೈವವನ್ನೂ, ತಾವು ಕಂಡ ಸತ್ಯವನ್ನೂ ಸಾರ್ವತ್ರಿಕವಾಗಿ ಸಾರಿ ಹೇಳಿದ ಸಂತ ಮಹನೀಯರು. ಇವರ ರಚನೆಗಳು ಪ್ರಥಮತಃ ಸ್ವಾನುಭವದ ರಸಘಟ್ಟಿ : ಸಮಷ್ಟಿದೃಷ್ಟಿಯಿಂದ ಪರಿಶೀಲಿಸಿದಾಗ ಅವು ಕನ್ನಡ ಭಕ್ತಿ ಸಾಹಿತ್ಯದಲ್ಲಿ ಸರ್ವದಾ ಪ್ರಜ್ವಲಿಸುತ್ತಿರುವ ನಕ್ಷತ್ರ ಪುಂಜ. ಶಿವಶರಣರು ಹರಪಾರಮ್ಯವನ್ನು ಸಮರ್ಥಿಸಿದರೆ, ಹರಿದಾಸರು ಹರಿ ಪಾರಮ್ಯವನ್ನು ಸಮರ್ಥಿಸುವವರು. ಭರತಖಂಡದಲ್ಲಿ ಜೀವನದಿಗಳನ್ನು ಹೆಸರಿಸುವಲ್ಲಿ ಕೆಲವು ನದಿಗಳನ್ನು ಒಟ್ಟಿಗೆ ಹೇಳುವ ಸಂಪ್ರದಾಯವಿದೆ ಯಷ್ಟೆ. ಗಂಗಾ–ಯಮುನಾ, ಕೃಷ್ಣಾ–ಗೋದಾವರಿ, ಕಾವೇರಿ–ಕಪಿಲಾ ಎಂಬ ಮಹಾನದಿಗಳು ಒಟ್ಟೊಟ್ಟಿಗೆ ಹರಿದು ಆಯಾ ಎಡೆಗಳನ್ನು ಪವಿತ್ರ ಮಾಡಿರುವಂತೆ ಕನ್ನಡ ಸಂತ ಸಾಹಿತ್ಯವು ಶಿವಶರಣರ ವಚನಗಳು ಮತ್ತು ಹರಿದಾಸರ ಕೀರ್ತನೆಗಳ ಮೂಲಕ ಒಂದು ವಿಶಿಷ್ಟ ಪ್ರಕಾರವಾಗಿ ಪರಿಣಮಿಸಿದೆ. ಇವುಗಳನ್ನು ಪರಸ್ಪರವಾಗಿ ತುಲನೆ ಮಾಡಿ ನೋಡಿದಾಗ ಕೆಲವು ಅಂಶ ಗಳಲ್ಲಿ ಸಾದೃಶ್ಯಗಳು ಕಂಡು ಬಂದರೆ, ಹಲವು ರೀತಿಗಳಲ್ಲಿ ವೈಶಿಷ್ಟ್ಯಗಳೂ ಇಲ್ಲದಿಲ್ಲ. ಈ ಉಭಯ ಪಂಥಗಳ ಸಾಧನೆ, ಸಿದ್ಧಿ ಗಳನ್ನು ಪ್ರಕೃತದಲ್ಲಿ ಸಂಕ್ಷಿಪ್ತವಾಗಿ ಸಮಾಲೋಚಿಸಲಾಗುವುದು.

ಕಾಲದ ದೃಷ್ಟಿಯಿಂದ ಶಿವಶರಣರ ವಚನಗಳು ನಿರ್ಮಾಣ ಎಂಟು ನೂರು ವರ್ಷಗಳಷ್ಟು ಹಳೆಯದು. ಕನ್ನಡನಾಡಿನ ಧಾರ್ಮಿಕ ಪ್ರಪಂಚದಲ್ಲಿ ನೂತನ ಕ್ರಾಂತಿಯನ್ನು ಉಂಟುಮಾಡಿದ ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ಶಿವಶರಣರು ಜನಸಾಮಾನ್ಯರಲ್ಲಿ ತಮ್ಮ ಧರ್ಮವನ್ನು ಪ್ರಚಾರ ಮಾಡಲು ದಿನ ಬಳಕೆಯ ಕನ್ನಡ ನುಡಿಯನ್ನು ಬಳಸತೊಡಗಿದರು. ಗಹನವಾದ ಆಧ್ಯಾತ್ಮಿಕ ಸಂಗತಿಗಳನ್ನು ಎಲ್ಲರ ಹೃದಯಕ್ಕೂ ಮುಟ್ಟಿಸುವ ಸಲುವಾಗಿ ಹೃದಯಂಗಮ ವಾದ ಗದ್ಯ ಬಂಧವನ್ನು ತಮ್ಮ ಮಾಧ್ಯಮವನ್ನಾಗಿ ಮಾಡಿಕೊಂಡರು. ಹರಪಾರಮ್ಯವನ್ನು ಸಾರಿ ಹೇಳುವ ಪುರಾತನ ಸಂಗತಿ ಗಳನ್ನು ಹೊಸ ಎರಕದಲ್ಲಿ ಹೊಯ್ದರು. ವಿವಿಧ ವೃತ್ತಿಗಳಲ್ಲಿ ನಿರತರಾಗಿದ್ದ ಜನರು ಗುಂಪು ಗುಂಪಾಗಿ ಬಂದು ಈ ಮಹಾ ಕ್ರಾಂತಿಯಲ್ಲಿ ಪಾಲುಗೊಂಡಿದ್ದಲ್ಲದೆ, ತಮ್ಮ ತಮ್ಮ ಅನುಭವವನ್ನು ಮುಚ್ಚುಮರೆಯಿಲ್ಲದೆ ವಚನರೂಪದಲ್ಲಿ ಅಭಿವ್ಯಕ್ತ ಪಡಿಸಿ ದರು. ಸ್ವಾನುಭಾವ ಪೂರ್ಣವಾದ ಅವರ ಮಾತುಗಳು ಅಪರಂಜಿಯಾದವು ; ಆಣಿಮುತ್ತುಗಳಾದುವು. ಗದ್ಯ–ಪದ್ಯ ಲಯಗಳ ಮಧುರ ಬಾಂಧವ್ಯದೊಂದಿಗೆ ಈ ಕನ್ನಡ ನುಡಿಗಳು ಭಾವಗರ್ಭಿತವೂ ಅರ್ಥಗರ್ಭಿತವೂ ಆಗಿ ಕನ್ನಡಕ್ಕೆ ನೂತನ ಚೇತನ ವುಂಟಾಯಿತು. ದೇವರ ದಾಸಿಮಯ್ಯನ ಒಂದೊಂದು ವಚನವೂ ಪುಟ್ಟ ಪುಟ್ಟ ಸಾಮತಿಗಳ ಸರದಂತಿವೆ. ಪ್ರಭುದೇವರ ವಚನ ಗಳಲ್ಲಿ ತತ್ತ್ವ ಹೆಪ್ಪುಗಟ್ಟಿ ಬೆಡಗಿನ ವಚನಗಳಾಗಿರುವುದುಂಟು. ಬಸವಣ್ಣನವರ ವಚನಗಳು ಭಕ್ತಿಯ ಭಂಡಾರವೆನ್ನಿಸಿದರೆ, ಮಹಾದೇವಿಯಕ್ಕನ ವಚನಗಳು ವೈರಾಗ್ಯದ ಮುಕ್ತಾಫಲಗಳಂತಿವೆ. ಚೆನ್ನಬಸವಣ್ಣ, ಸಿದ್ಧರಾಮ ದೊದಲಾದವರ ವಚನಗಳು ಜ್ಞಾನದ ಖನಿಗಳಂತಿವೆ. ಮುಖ್ಯವಾಗಿ, ಈ ಸಹಸ್ರಾರು ವಚನಗಳ ಸೃಷ್ಟಿಗೆ ಅಂದಿನ ಧಾರ್ಮಿಕ ಪ್ರಪಂಚದಲ್ಲಿ ತಲೆದೋರಿದ ಕ್ರಾಂತಿಯೇ ಪ್ರಧಾನ ಪ್ರೇರಣೆ. ಆದ್ದರಿಂದ, ವಚನಕಾರರನ್ನು ಕ್ರಾಂತಿ ಪ್ರಿಯರು ಎಂದರೆ ತಪ್ಪಾಗಲಾರದು. ಲಿಂಗಭೇದ, ಜಾತಿಭೇದಗಳ ಅಂತರವಿಲ್ಲದೆ ಹೊರ ಹೊಮ್ಮುವ ಅವರ ಮಾತುಗಳಲ್ಲಿ ಹೊಸ ವಿಚಾರ, ಹೊಸ ಹುರುಪುಗಳು ತುಂಬಿ ತುಳುಕು ವುದು ಸಹಜ. ಈ ಶರಣರ ವಿಚಾರ ವಿನಿಮಯ ಮಾಡಿಕೊಳ್ಳುವ ಕೇಂದ್ರ ಅನುಭವ ಮಂಟಪವೆನ್ನಿಸಿತು. ಗುರು-ಲಿಂಗ-ಜಂಗಮ ಗಳ ಆರಾಧನೆ, ಸೇವನೆಗಳು ತ್ರಿವಿಧ ದಾಸೋಹಗಳಾದುವು. ಇಷ್ಟಲಿಂಗ, ಭಾವಲಿಂಗ, ಪ್ರಾಣಲಿಂಗಗಳ ಪೂಜೆಯು ಪ್ರತಿ ಯೊಬ್ಬರ ಕಟ್ಟಳೆಯಾಯಿತು. ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯಸ್ಥಲಗಳೆಂಬ ಷಟ್ಸ್ಥಲಗಳು ಶಿವಶರಣನ ಭಕ್ತಿ ವಿಕಾಸದ ವಿವಿಧ ಹಂತಗಳೆನ್ನಿಸಿದುವು. ವಿಧಿ ನಿಷೇಧಗಳಿಗೂ, ನಿಯಮ ನಿರ್ಬಂಧಗಳಿಗೂ, ವರ್ಣಾಶ್ರಮ ವ್ಯವ ಸ್ಥೆಗೂ, ಹೆಸರುವಾಸಿಯಾಗಿದ್ದ ವೈದಿಕ ಧರ್ಮದ ಆಚಾರವಿಚಾರಗಳು ಶರಣರ ಮನಸ್ಸಿಗೆ ಒಪ್ಪಿಗೆಯಾಗದೆ ಹೋದುವು. ಪುರಾ ತನ ಶೈವ ಸಂಪ್ರದಾಯದ ಸಂಸ್ಕೃತ ಗ್ರಂಥಗಳ ತಿರುಳನ್ನು ಗ್ರಹಿಸಿಕೊಂಡು, ವಿಶಾಲ ಮನೋಭೂಮಿಕೆಯಲ್ಲಿ ಧಾರ್ಮಿಕ ಜಾಗೃತಿಯನ್ನು ಉಂಟುಮಾಡಿದ ಶಿವಶರಣರ ಈ ವಚನಗಳು, ಕನ್ನಡ ನುಡಿಗೆ, ಕನ್ನಡ ನಾಡಿನ ಭಕ್ತಿ ಪಂಥಕ್ಕೆ ವಿಶಿಷ್ಟವಾದ ಕೊಡುಗೆಗಳಾದುವು. ವೀರಶೈವರ ಸಮಗ್ರ ವಚನ ಸಾಹಿತ್ಯವನ್ನು ಒಮ್ಮೆ ವೀಕ್ಷಿಸಿದರೆ ಅದರ ವ್ಯಾಪ್ತಿ, ವೈಶಿಷ್ಟ್ಯ, ವೈವಿಧ್ಯಗಳು ತಾವಾಗಿಯೇ ಮನವರಿಕೆಯಾಗುತ್ತವೆ.

ಮೇಲ್ಕಂಡ ವಚನಯುಗದ ಅನಂತರ ಸುಮಾರು ಮುನ್ನೂರು ವರ್ಷಗಳ ಬಳಿಕ ಮೊದಲಾಗಿರಬಹುದಾದ ಹರಿದಾಸ ಸಾಹಿತ್ಯದ ಸಾಧನೆ, ಸಿದ್ಧಿಗಳನ್ನು ಸಮೀಕ್ಷಿಸಿದರೆ ಅದರ ಹಿರಿಮೆಯ ಸ್ವರೂಪ ಸ್ವಲ್ಪ ಭಿನ್ನವಾಗಿ ಕಂಡುಬಂದರೆ ಆಶ್ಚರ್ಯವೇನಿಲ್ಲ. ಪ್ರಥಮತಃ ಹರಿದಾಸಸಾಹಿತ್ಯ ವೈದಿಕಧರ್ಮಪ್ರಧಾನವಾದುದು. ವೈದಿಕಧರ್ಮಪ್ರವರ್ತಕರಾದ ಶ್ರೀ ಶಂಕರಾಚಾರ್ಯ ಶ್ರೀ ರಾಮಾನುಜಾಚಾರ್ಯ ಮತ್ತು ಶ್ರೀ ಮಧ್ವಾಚಾರ್ಯರ ಅನುಯಾಯಿಗಳನ್ನು ಗಮನಿಸಿದರೆ, ಅವರಿಗೆ ಮೊದಲ ಒಲವು ಗೀರ್ವಾಣ ಭಾಷೆಯಾದ ಸಂಸ್ಕೃತದ ಕಡೆಗೆ, ಆ ಬಳಿಕ ಅವರವರ ಪ್ರಾದೇಶಿಕ ಭಾಷೆ. ಕನ್ನಡ ನಾಡಿನಮಟ್ಟಿಗೆ ನೋಡಿದಲ್ಲಿ, ಶ್ರೀ ಮಧ್ವಾಚಾರ್ಯರು ತುಳುಮನೆತನದಲ್ಲಿ ಹುಟ್ಟಿ ಬೆಳೆದವರಾದರೂ, ಪ್ರಾದೇಶಿಕ ಭಾಷೆಯಾದ ಕನ್ನಡದ ಪ್ರಭಾವಕ್ಕೆ ಹೊರತಾದವರಲ್ಲ. ಕನ್ನಡ ನಾಡಿಗೆ ಬಂದು ತಮ್ಮ ಪೀಠಗಳನ್ನು ಸ್ಥಾಪಿಸಿದ ಇತರ ಆಚಾರ್ಯರಲ್ಲಿ, ಶಂಕರಾಚಾರ್ಯರು ಶೃಂಗೇರಿಯಲ್ಲಿ ಶಾರದಾಂಬೆಯ ದೇವಾಲಯವನ್ನು ಕಟ್ಟಿಸಿ, ಈ ಮೂಲಕ ತಮ್ಮ ಮತದ ಪ್ರಚಾರವನ್ನು ಕೈಕೊಂಡರು. ಅವರ ಪ್ರಚಾರ ಮಾಧ್ಯಮಕ್ಕೆ ಸಂಸ್ಕೃತವೇ ಪ್ರಧಾನವಾಗಿ ಪರಿಣಮಿಸಿದ್ದರಿಂದ, ಕನ್ನಡದ ರಚನೆಗಳಿಗೆ ಇನ್ನೂ ಕಾಲ ಬಂದಿರಲಿಲ್ಲ. ಶ್ರೀ ರಾಮಾನುಜರ ಸಿದ್ಧಾಂತದಲ್ಲಿ ಪ್ರಪತ್ತಿಗೆ ಅಗ್ರಸ್ಥಾನ ದೊರೆತಿದ್ದುದಲ್ಲದೆ, ಆ ವೇಳೆಗಾಗಲೆ ತಮಿಳುನಾಡಿನಲ್ಲಿ ಹುಟ್ಟಿ ಬೆಳೆದ ಆಳ್ವಾರರುಗಳು ತಮಿಳಿನಲ್ಲಿ ವೈಷ್ಣವ ಭಕ್ತಿ ಪ್ರಧಾನವಾದ ಪ್ರಬಂಧಗಳನ್ನು ರಚಿಸಿದ್ದರು. ಆ ಮತವನ್ನು ಅನುಸರಿಸಿದ ಕನ್ನಡ ನಾಡಿನ ಅನುಯಾಯಿಗಳು ತಾವೂ ಸಹ ತಮಿಳನ್ನು ಮೆಚ್ಚಿಕೊಂಡರೇ ವಿನಾ, ಕನ್ನಡ ಬಲ್ಲವರಾದರೂ ಆಳ್ವಾರರ ಮೇಲು ಪಂಕ್ತಿಯನ್ನೇ ಅನುಸರಿಸಿ, ಕನ್ನಡದಲ್ಲಿ ಭಕ್ತಿ ಗೀತಗಳನ್ನು ರಚಿಸಿದ್ದಲ್ಲಿ ಕನ್ನಡ ಸಂತ ಸಾಹಿತ್ಯದ ಕಾಲ ಬಹು ಪ್ರಾಚೀನವಾಗಬಹುದಾಗಿತ್ತು. ಶಂಕರಾಚಾರ್ಯರ ಅದ್ವೈತ, ರಾಮಾನುಜಾಚಾರ್ಯರ ವಿಶಿಷ್ಟಾದ್ವೈತಗಳಿಗಿಂತಲೂ, ಮಧ್ವಾಚಾರ್ಯರ ದ್ವೈತದಲ್ಲಿ ಭಕ್ತಿಗೆ ವಿಶೇಷ ಮನ್ನಣೆ ದೊರೆಯಿತೆಂದು ಹೇಳಿದರೆ ತಪ್ಪೆನ್ನಿಸದು. ಮಧ್ವಾಚಾರ್ಯರ ದ್ವೈತ ಸಿದ್ಧಾಂತದ ಪ್ರಮೇಯಗಳನ್ನು ಸಂಗ್ರಹವಾಗಿ ಹೇಳುವಲ್ಲಿ 'ಮುಕ್ತಿರ್ನೈಜಾನ್ಯಸುಖಿನು ಭೂತಿಃ ಅಮಲಾ ಭಕ್ತಿಶ್ಚ ತತ್ಸಾಧನಂ' ಎಂಬ ಮಾತು ಇದನ್ನು ಪುಷ್ಟೀಕರಿಸುತ್ತದೆ. ಆದರೂ, ಶ್ರೀ ಮಧ್ವಾಚಾರ್ಯರು ದ್ವೈತಸಿದ್ಧಾಂತವನ್ನು ಸ್ಥಾಪಿಸುವ ಮಹಾತ್ಕಾರ್ಯದಲ್ಲಿ ನಿರತರಾಗಿರುವಾಗ ತಮ್ಮ ಮನೆಮಾತಾದ ತುಳುವಿನಲ್ಲಾಗಲಿ, ಪ್ರಾದೇಶಿಕ ಭಾಷೆಯಾದ ಕನ್ನಡದಲ್ಲಿಯಾಗಲಿ ರಚನೆಗಳನ್ನು ಮಾಡುವ ಅಗತ್ಯವಿತ್ತೋ ಇಲ್ಲವೋ ಹೇಳಬರುವಂತಿಲ್ಲ. ದ್ವೈತ ಸಿದ್ಧಾಂತವು ಬೇರೂರಿ, ಸಾವಿರಾರು ಅನುಯಾಯಿಗಳು ಅದನ್ನು ಸ್ವೀಕರಿಸಿದ ಕೆಲವು ಶತಮಾನಗಳ ಬಳಿಕ. ಹದಿನೈದನೆಯ ಶತಮಾನಕ್ಕೆ ಸೇರಿದ ಶ್ರೀಪಾದರಾಜರು ಈ ಕಾರ್ಯವನ್ನು ಕೈಕೊಂಡರು ಎನ್ನುವದಕ್ಕೆ, ಅವರು ರಚಿಸಿರುವ ನೂರಾರು ಕನ್ನಡ ರಚನೆಗಳು ಸಾಕ್ಷಿಯಾಗಿರುವುದಷ್ಟೇ ಅಲ್ಲದೆ, ಹರಿದಾಸ ಪ್ರಮುಖರನ್ನು ಸ್ತುತಿಸುವಲ್ಲಿ ಮೊತ್ತ ಮೊದಲಿನಲ್ಲಿಯೇ ಅವರ ಹೆಸರನ್ನು ಹೇಳುವುದೇ ಮತ್ತೊಂದು ಬಲವಾದ ಪ್ರಮಾಣ. (ನಮಃ ಶ್ರೀಪಾದರಾಜಾಯ ನಮಸ್ತೇವ್ಯಾಸಯೋಗಿನೇ, ನಮಃ ಪುರಂದರಾರ್ಯಾಯ, ವಿಜಯಾರ್ಯಾಯ ತೇ ನಮಃ) ಶ್ರೀಪಾದರಾಜರು ಪೂಜೆಯನ್ನು ಮಾಡುವ ಸಂದರ್ಭದಲ್ಲಿ, ಸಂಪ್ರದಾಯಾನುಸಾರವಾಗಿ ಪೂಜಾವಿಧಿಗಳನ್ನು ಮಾಡಿದ ಬಳಿಕ, ಕಾಲಿಗೆ ಗೆಜ್ಜೆಕಟ್ಟಿಕೊಂಡು, ತಂಬೂರಿ ಮೀಟುತ್ತ, ಚಿಟಿಕೆ ಹಾಕುತ್ತಾ, ಕನ್ನಡ ಕೀರ್ತನೆಗಳ ಮೂಲಕ ಸ್ವಾಮಿಯ ಗುಣಗಾನ ಮಾಡುವ ಒಂದು ಹೊಸಪದ್ಧತಿಗೆ ಪೀಠಿಕೆ ಹಾಕಿದರೆಂದು ಪ್ರತೀತಿ. (ಇಂದಿಗೂ ದೇವರಿಗೆ ಮಹಾಮಂಗಳಾರತಿ ಮಾಡುವ ಸಂದರ್ಭದಲ್ಲಿ ಕನ್ನಡ ದೇವರ ನಾಮವನ್ನು ಹಾಡುವ ಪದ್ಧತಿಗೆ ಇದೇ ಮೂಲವಿರಬಹುದೋ ಏನೋ ವಿಚಾರಾರ್ಹವಾದ ಸಂಗತಿ.) ಈ ತೆರನಾಗಿ ಮೊದಲಾದ ಕೀರ್ತನೆಯ ಚಿಲುಮೆ ಅವರ ಕಾಲದಲ್ಲಿಯೇ ಬಹುಬೇಗ ಹೆದ್ದೊರೆಯಾಗಿ ಹರಿಯಲಾರಂಭಿಸಿತು. ಶ್ರೀಪಾದರಾಜರು ಯತ್ಯಾಶ್ರಮವನ್ನು ಕೈಕೊಂಡ ತರುಣದಲ್ಲಿ, ತಮ್ಮ ಗುರುಗಳಿಂದ ಶ್ರೀ ಸ್ವರ್ಣವರ್ಣತೀರ್ಥರ ಬಳಿಯಲ್ಲಿ ಶ್ರೀರಂಗದಲ್ಲಿ ಅನೇಕ ವರ್ಷಗಳ ಕಾಲ ನೆಲೆಸಿದ್ದರು. ಆಗ ಅವರ ಮನಸ್ಸು ವಿಷ್ಣುಭಕ್ತಿ ಪ್ರಧಾನವಾದ ಆಳ್ವಾರರ ತಮಿಳು ಪ್ರಬಂಧಗಳನ್ನು ಕೇಳಿ, ಅವುಗಳ ಸ್ವಾರಸ್ಯಕ್ಕೆ ಮಾರುಹೋಗಿದ್ದಿರಬಹುದು. ಆ ತರುವಾಯ, ಕನ್ನಡನಾಡಿಗೆ ಬಂದು ಮುಳುಬಾಗಿಲಿನಲ್ಲಿ ಮಠ ಕಟ್ಟಿ ನೆಲಸಿದ ಬಳಿಕ, ಅತ್ಯಂತ ಗಹನವಾದ ಆಧ್ಯಾತ್ಮಿಕ ವಿಚಾರ ಸರ್ವಸ್ವವನ್ನು ಕನ್ನಡದಲ್ಲಿ ಯಶಸ್ವಿಯಾಗಿ ಪ್ರತಿಪಾದಿಸಿದ ಶಿವಶರಣರ ಸರಳವಚನಗಳನ್ನು ಪ್ರಾಸಂಗಿಕವಾಗಿ ಆಲಿಸಿ, ಅವರ ಮನಸ್ಸು ಮತ್ತಷ್ಟು ಪುಳಕಗೊಂಡಿರಬಹುದು. ಆದರೆ, ಶ್ರೀಪಾದರಾಜರು ಶ್ರೀಮದ್ಭಾಗವತೋಕ್ತವಾದ ಭಕ್ತಿಯ ತಳಹದಿಯ ಮೇಲೆ ತಮ್ಮ ಕೃತಿಗಳನ್ನು ಪೂಜಾಕಾರ್ಯ ಕಾಲದಲ್ಲಿ ಹೇಳಲು ರಚಿಸಿದ್ದರಿಂದ, ಅವು ಭಗವಂತನ ಗುಣಗಾನ ಮಾಡುವ ಕೀರ್ತನ ಸ್ವರೂಪವನ್ನು ತಾಳಿದುವು. ಕ್ರಮಕ್ರಮವಾಗಿ ಭಾಗವತದ ಸಾರವತ್ತಾದ ಭಾಗವನ್ನೆಲ್ಲ ಈ ನೂತನ ಮಾಧ್ಯಮದ ಮೂಲಕ ತಿಳಿಯಾದ ಕನ್ನಡದಲ್ಲಿ ಹುದುಗಿಟ್ಟು ಹೇಳಿದರು. ತಮ್ಮ ಭಕ್ತ್ಯಾವೇಶವನ್ನು ಹೃತ್ಪೂರ್ವಕವಾಗಿ ಅಭಿವ್ಯಕ್ತಪಡಿಸಿದರು. ಅನಂತರ, ಅವರ ಈ ಮಾರ್ಗವನ್ನು ಅನುಸರಿಸಿ ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು ಅನೇಕ ಕೃತಿಗಳನ್ನು ರಚಿಸಿ ಈ ಪದ್ಧತಿಗೆ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟರು. ಶ್ರೀ ವ್ಯಾಸರಾಯರು ಇನ್ನೂ ಒಂದು ಹೆಜ್ಜೆ ಮುಂದುವರಿದು ಈ ಕಾರ್ಯವು ವ್ಯವಸ್ಥಿತವಾಗಿ ನಡೆಯುವಂತೆ ಪುರಂದರದಾಸರಂತಹ ಭಗವದ್ಭಕ್ತರಿಗೆ ಅಂಕಿತವಿತ್ತು ಅನುಗ್ರಹಿಸಿದರು. ಕನಕದಾಸರಂತಹ ಅನ್ಯಮತೀಯರನ್ನೂ ತೆರೆದ

ಹೃದಯದಿಂದ ಬರಮಾಡಿಕೊಂಡರು. ಇದೇ ರೀತಿ ಇನ್ನೂ ಎಷ್ಟು ಜನರು ಅಂದು ಹರಿದಾಸದೀಕ್ಷೆಯನ್ನು ಕೈಕೊಂಡರೆಂಬ ವಿವರ ಇಂದು ದೊರೆಯುವುದಿಲ್ಲ. ('ದಾಸರೆಂದರೆ ಪುರಂದರದಾಸರಯ್ಯಾ' ಎಂಬ ವ್ಯಾಸರಾಯರ ಕೀರ್ತನೆಯಲ್ಲಿ ಬೂಟಾಟಿಕೆಯ ದಾಸರನ್ನು ಹಂಗಿಸಿರುವುದನ್ನು ಕಂಡರೆ, ಸಾಕಷ್ಟು ಕಪಟದಾಸರೂ ಸೃಷ್ಟಿಯಾದರೇನೋ ಎಂದು ಸಂದೇಹ ಬರುತ್ತದೆ.) ಕಾಲ ಕಳೆದಂತೆಲ್ಲ ಈ ಹರಿದಾಸ ವೃಂದಕ್ಕೆ ದಾಸಕೂಟವೆಂಬ ಹೆಸರು ಪಾರಿಭಾಷಿಕವಾಗಿಯೇ ಬಳಕೆಯಾಗತೊಡಗಿತು. ಕೆಲಕಾಲದ ಮಟ್ಟಿಗೆ ಗುಪ್ತಗಾಮಿನಿಯಾಗಿದ್ದ ಈ ದಾಸಕೂಟವನ್ನು ವಿಜಯದಾಸರು ಪುನರುಜ್ಜೀವನಗೊಳಿಸಿ, ಈ ವ್ಯವಸ್ಥೆ ಅವ್ಯಾಹತವಾಗಿ ಮುಂದುವರಿಯುವಂತೆ ಅನೇಕ ಶಿಷ್ಯರು, ಪ್ರಶಿಷ್ಯರನ್ನು ಈ ಮಹತ್ಕಾರ್ಯಕ್ಕೆ ನಿಯೋಜಿಸಿದರು. ಹದಿನೈದನೆಯ ಶತಮಾನದಲ್ಲಿ ಶ್ರೀಪಾದರಾಜರ ಪ್ರಯತ್ನದಿಂದ ಕಿರುತೊರೆಯಾಗಿ ಮೊದಲಾದ ಈ ಹರಿಭಕ್ತಿವಾಹಿನಿಯು ಶತಮಾನಗಳು ಮುಂದುವರಿದಂತೆಲ್ಲ ಹೆದ್ದೊರೆಯಾಗಿ ಪ್ರವಹಿಸಿ ಈವರೆಗೂ ಸಾಗಿ ಬಂದಿದೆ. ಕಳೆದ ಐದುನೂರುವರ್ಷಗಳಲ್ಲಿ ಹರಿದಾಸಸಾಹಿತ್ಯ ಸರ್ವತೋಮುಖವಾಗಿ ಬೆಳೆದಿದೆ. ಶ್ರೀಮದ್ಭಾಗವತದಲ್ಲಿ ಪ್ರತಿಪಾದಿತವಾಗಿರುವ ಶ್ರವಣ, ಕೀರ್ತನ, ಸ್ಮರಣ. ಪಾದಸೇವನ, ಅರ್ಚನ, ದಾಸ್ಯ, ಸಖ್ಯ, ಆತ್ಮನಿವೇದನಗಳೆಂಬ ನವವಿಧ ಭಕ್ತಿಮಾರ್ಗಗಳಲ್ಲಿ ಮುಂದುವರಿದು, ಸಂಗೀತದ ತಳಹದಿಯ ಮೇಲೆ ಕೀರ್ತನ, ಸುಳಾದಿ, ಉಗಾಭೋಗ ವೃತ್ತನಾಮ ಎಂಬ ವಿಶಿಷ್ಟ ಪ್ರಕಾರಗಳ ಮೂಲಕ ಕನ್ನಡನಾಡಿನ ಆದ್ಯಂತವೂ ಪ್ರಚಾರಕ್ಕೆ ಬಂದಿತು. ದ್ವೈತಸಿದ್ಧಾಂತವನ್ನು ಪ್ರಚಾರ ಮಾಡುವುದರೊಂದಿಗೆ, ವೈದಿಕ ಧರ್ಮಾನುಯಾಯಿಗಳ ಜೀವನಕ್ರಮವನ್ನೂ, ಸಾಮಾನ್ಯ ಜನರಲ್ಲಿ ಕಂಡುಬಂದ ಆಚಾರ ವಿಚಾರಗಳ ಲೋಪದೋಷಗಳನ್ನೂ, ಪರಿಚಯ ಮಾಡಿಕೊಟ್ಟವು. ಕೇವಲ ಹರಿನಾಮ ಸಂಕೀರ್ತನೆಯಾಗಿ ಮಾತ್ರವೇ ಉಳಿಯದೆ, ಶರಣರ ವಚನಗಳಲ್ಲಿ ಶಾಸ್ತ್ರವಿಚಾರಗಳು ಹುದುಗಿ ತೋರಿಬರುವಂತೆ, ದ್ವೈತಸಿದ್ಧಾಂತದ ಪ್ರಮುಖ ಪ್ರಮೇಯಗಳೆಲ್ಲ ವಿಶಿಷ್ಟ ಪ್ರಕಾರದಲ್ಲಿ ಕನ್ನಡ ಬಲ್ಲವರಿಗೂ ಹೃದ್ಯವಾಗಿ ವೇದ್ಯವಾಗುವಂತೆ ಅಡಕಗೊಂಡವು. ಈ ಹಿನ್ನೆಲೆಯನ್ನು ಪರಿಶೀಲಿಸಿದಲ್ಲಿ, ಹರಿದಾಸರು ಸಂಪ್ರದಾಯವಾದಿಗಳು ಎನ್ನುವುದು ಸುಸ್ಪಷ್ಟವಾಗುತ್ತದೆ. ಯತಿಶ್ರೇಷ್ಠರು ಈ ಸಂಪ್ರದಾಯದ ಮಾರ್ಗದರ್ಶಕರಾಗಿ, ವೈದಿಕಧರ್ಮದಲ್ಲಿ ಶ್ರದ್ಧೆ ನಶಿಸದಂತೆ ಜನರನ್ನು ಜಾಗೃತಗೊಳಿಸುವ ಕಾರ್ಯದಲ್ಲಿ ಹರಿದಾಸರಿಗೆ ಅಂಕಿತವಿತ್ತು ಅನುಗ್ರಹಿಸಿದರು. ಈ ಹರಿದಾಸರ ಶ್ರೇಣಿಯಲ್ಲಿ ಪುರಂದರದಾಸರು, ಕನಕದಾಸರು, ವೈಕುಂಠದಾಸರು, ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು, ಮೋಹನದಾಸರು, ಪ್ರಸನ್ನ ವೆಂಕಟದಾಸರು, ಪ್ರಾಣೇಶ್‌ದಾಸರು ಮೊದಲಾದ ಅಪರೋಕ್ಷಜ್ಞಾನಿಗಳು ಒಂದಲ್ಲ ಒಂದು ರೀತಿಯಲ್ಲಿ ಅಗ್ರಗಣ್ಯರೆನಿಸಿದರೆ, ಇನ್ನೂ ಹಲವಾರು ಮಂದಿ ಈ ವಿಶಿಷ್ಟ ಸಂಪ್ರದಾಯವು ವಿಚ್ಛಿನ್ನವಾಗದಂತೆ ಈವರೆಗೆ ನಡೆಸಿಕೊಂಡು ಬಂದಿರುತ್ತಾರೆ. ವೇದ, ಉಪನಿಷತ್ತು, ಪುರಾಣಗಳು, ರಾಮಾಯಣ, ಭಾರತ, ಭಾಗವತ ಮುಂತಾದ ಸಂಸ್ಕೃತ ಗ್ರಂಥಗಳ ಸಾರವನ್ನು ಒಳಗೊಂಡಿರುವ ಈ ಕನ್ನಡ ರಚನೆಗಳು ಆಯಾ ಸಂತರ ಸ್ವಾನುಭವದ ನುಡಿಗಳಿಂದ ಕೇಳುವವರಿಗೆ ಆತ್ಮೀಯವಾಗಿ ಪರಿಣಮಿಸಿವೆ. ಕ್ರಾಂತಿ ಮಾರ್ಗದ ಮೂಲಕ ಧರ್ಮದಲ್ಲಿ ನೂತನ ಜಾಗೃತಿಯನ್ನು ಉಂಟುಮಾಡಲು ಪಣತೊಟ್ಟ ಶಿವಶರಣರ ವಚನ ಸಾಹಿತ್ಯವು ಕನ್ನಡ ಸಂತ ಸಾಹಿತ್ಯದ ಒಂದು ಮುಖವೆನ್ನಿಸಿದರೆ, ಸಂಪ್ರದಾಯನಿಷ್ಠೆಯಲ್ಲಿಯೇ ಹೊಸ ದಾರಿಯನ್ನು ಸೃಷ್ಟಿಸಿಕೊಂಡು, ದಿನದಿನಕ್ಕೂ, ಕ್ಷಣಕ್ಷಣಕ್ಕೂ ಶಿಥಿಲವಾಗುತ್ತಿದ್ದ ವೈದಿಕ ಧರ್ಮದ ಮರ್ಮವನ್ನು ಸಾರಿ ಹೇಳಿದ ಹರಿದಾಸರ ಕೀರ್ತನಸಾಹಿತ್ಯವು ಕನ್ನಡ ಸಂತಸಾಹಿತ್ಯದ ಇನ್ನೊಂದು ಮುಖವೆನ್ನಿಸುತ್ತದೆ. ಒಬ್ಬರು ಅನುಭಾವಿಗಳೆನ್ನಿಸಿಕೊಂಡರೆ, ಇನ್ನೊಬ್ಬರು ಅಪರೋಕ್ಷ ಜ್ಞಾನಿಗಳೆನ್ನಿಸಿಕೊಳ್ಳುವರು. ಒಬ್ಬರು ಅನುಭವ ಮಂಟಪದ ಮೂಲಕ ತಮ್ಮ ತತ್ತ್ವಗಳನ್ನು ಸಾರಿ ಹೇಳಿದರೆ, ಇನ್ನೊಬ್ಬರು ದಾಸಕೂಟದ ಮೂಲಕ ತಮ್ಮ ಧರ್ಮದ ಮಹತ್ವವನ್ನು ಪ್ರಚಾರ ಮಾಡತೊಡಗಿದರು. ವೀರಶೈವರ ಷಟ್ಸ್ಥಲಮಾರ್ಗವು ಶಿವಶರಣನ ಆಧ್ಯಾತ್ಮಿಕ ಜೀವನವಿಕಾಸಕ್ಕೆ ಹೇಗೆ ವಿವಿಧ ಹಂತಗಳಾಗಿ ಪರಿಣಮಿಸಿದೆಯೋ, ಹರಿದಾಸರ ನವವಿಧ ಭಕ್ತಿಪ್ರತಿಪಾದನೆಯೂ ಸಹ ಬಹುಮಟ್ಟಿಗೆ ಹರಿದಾಸರ ಸಾಧನೆಯ ಸೋಪಾನಗಳಂತಿವೆಯೆಂದು ಭಾವಿಸಿದರೆ ತಪ್ಪಾಗಲಾರದು. ಈ ಉಭಯ ಪಂಥಗಳಲ್ಲಿಯೂ ಏಕದೇವೋಪಾಸನೆ, ಗುರುಭಕ್ತಿ, ಭಕ್ತನಿಷ್ಠೆ, ತ್ರಿಕರಣಶುದ್ಧಿ, ಸ್ವಾನುಭವಸಿದ್ಧಿ, ಸ್ವಧರ್ಮಪ್ರಚಾರ. ಲೋಕಸೇವೆ. ನಿತ್ಯ ಜೀವನಾನುಸಂಧಾನ ಮೊದಲಾದ ಹಲವು ಅಂಶಗಳು ಸಾರ್ವತ್ರಿಕವೆನ್ನಿಸಿದರೆ, ಆಯಾ ಪಂಥಗಳ ಪಾರಮಾರ್ಥಿಕ ದೃಷ್ಟಿ, ಸಾಧನ ಮಾಧ್ಯಮಗಳು ಅಲ್ಪಸ್ವಲ್ಪ ಭಿನ್ನವಾಗಿ ತೋರಿಬರುತ್ತವೆ. ಶಿವಶರಣರು ಮತ್ತು ಹರಿದಾಸರು ಕನ್ನಡ ನುಡಿಯನ್ನು ತಮ್ಮ ಮಹತ್ಕಾರ್ಯಕ್ಕಾಗಿ ಬಳಸುವುದರಲ್ಲಿಯೂ, ಪರೋಕ್ಷವಾಗಿ ಅದನ್ನು ಬೆಳೆಸುವುದರಲ್ಲಿಯೂ ಏಕಪ್ರಕಾರವಾಗಿ ಕೃತಕೃತ್ಯರಾಗಿರುವರೆಂಬುದನ್ನು ನಾವು ನೆನಪಿನಲ್ಲಿಡಬೇಕಾದ ಅಂಶ. ಈ ಕೆಲವು ಸಂಗತಿಗಳನ್ನು ಸೂಕ್ತ ನಿದರ್ಶನಗಳ ಮೂಲಕ ದಿಗ್ದರ್ಶನಾರ್ಥವಾಗಿ ಪ್ರಸ್ತಾಪಿಸಲಾಗಿದೆ.

ಪರವಸ್ತುವಿನ ವಿರಾಡ್ರೂಪವನ್ನು ವರ್ಣಿಸುವಲ್ಲಿ ಇಬ್ಬರ ವಾಣಿಯೂ ಒಂದೇ ! ಇಬ್ಬರ ಸರಣಿಯೂ ಒಂದೇ !

ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಪು ನೀನೇ ದೇವಾ, ವಿಶ್ವತೋಚಕ್ಷು ನೀನೇ ದೇವಾ, ವಿಶ್ವತೋಮುಖ ನೀನೇ ದೇವಾ, ವಿಶ್ವತೋಪಾದ ನೀನೇ ದೇವಾ, ಕೂಡಲ ಸಂಗಮ ದೇವಾ !

ಎಂದು ಬಸವಣ್ಣನವರ ವಾಣಿ ನುಡಿದರೆ, ಗೋಪಾಲದಾಸರ ದರ್ಶನ ಇಂತಿದೆ.

> ವಿಶ್ವತೋಮುಖ ನೀನೆ, ವಿಶ್ವತಃಚಕ್ಷು ನೀನೆ, ವಿಶ್ವತೋ ಬಾಹು ನೀನೆ, ವಿಶ್ವತೋ ಹಸ್ತ ನೀನೆ, ವಿಶ್ವತೋ ಶ್ರವಣ ನೀನೆ, ವಿಶ್ವಧಾರಕ ನೀನೆ, ವಿಶ್ವವ್ಯಾಪಕ ಸರ್ವ ವಿಶ್ವಮಯನು ನೀನೆ, ವಿಶ್ವನಾಮಕ ಹರಿ ಗೋಪಾಲ ವಿಠಲ ವಿಶ್ವಾಸಕೊಡು ನಿನ್ನ ವಿಶ್ವಚರಣದಲ್ಲಿ.

ಈ ಇಬ್ಬರ ಅನುಭವವಾಗಲಿ, ನಿರೂಪಣೆಯಾಗಲಿ ಹೊಚ್ಚ ಹೊಸತಾದುದೇನೂ ಅಲ್ಲ. ಈ ಮೊದಲು ನಮ್ಮ ದ್ರಷ್ಟಾರರು ಕಂಡುಕೊಂಡ ನಿತ್ಯ ಸತ್ಯವನ್ನೇ ಈ ಭಕ್ತವರೇಣ್ಯರು ತಮ್ಮ ಸ್ವಾನುಭವದ ಮೂಲಕ ಮತ್ತೊಮ್ಮೆ ಮನಗಂಡು ಅದರ ಸವಿಯನ್ನು ಕನ್ನಡ ಬಲ್ಲವರಿಗೂ ಸುಲಭವಾಗಿ ಅರಿವಾಗುವಂತೆ ಬಿಡಿಸಿ, ಬಿಡಿಸಿ ಹೇಳಿರುತ್ತಾರೆ. 'ಅಣೋರಣೀಯಾನ್ ಮಹತೋಮಹೀಯಾನ್' ಎಂಬ ಭಾರತೀಯರ ದಿವ್ಯದರ್ಶನವನ್ನು ವಚನಕಾರರಾಗಲಿ, ಹರಿದಾಸರಾಗಲಿ ಗಮನಿಸದೆ ಇರಲಿಲ್ಲ.

> ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತಾಗಿ, ಎಣಿಸಬಾರದ ಬಹುಳ ಬ್ರಹ್ಮಕ್ಕೆ ಏಣಿ ಯಾವುದು ಹೇಳಾ

ಎಂದು ವಚನಕಾರನು ವಿಸ್ಮಯ ಪರವಶನಾದರೆ, ಪುರಂದರದಾಸರು ಪರವಸ್ತುವಿನ ಈ ಮಾಹಾತ್ಮ್ಯವನ್ನು ಮತ್ತಷ್ಟು ಬಿಡಿಸಿ ಬಿಡಿಸಿ ಬಣ್ಣಿಸಿರುತ್ತಾರೆ.

> ಅಣುವಾಗಬಲ್ಲ ಮಹತ್ತಾಗಬಲ್ಲ, ಅಣು ಮಹತ್ತೆರಡೊಂದಾಗಬಲ್ಲ. ರೂಪನಾಗಬಲ್ಲ ಅರೂಪನಾಗಬಲ್ಲ, ರೂಪ ಅರೂಪ ಎರಡೊಂದಾಗಬಲ್ಲ. ಸಗುಣನಾಗಬಲ್ಲ, ನಿರ್ಗುಣನಾಗಬಲ್ಲ, ಸಗುಣ ನಿರ್ಗುಣ ಎರಡೊಂದಾಗಬಲ್ಲ. ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ,ವ್ಯಕ್ತ ಅವ್ಯಕ್ತ ಎರಡೊಂದಾಗಬಲ್ಲ, ಘಟಿತಾಘಟಿತಾಚಿಂತ್ಯಾದ್ಭುತ, ಸ್ವಗತ ಸ್ವರೂಪ ನಮ್ಮ ಪುರಂದರ ವಿಠಲ.

ಈ ರೀತಿ ಒಂದೇ ಭಾವನೆಯಿಂದ ತಮ್ಮ ಭಕ್ತಿ ಕೈಂಕರ್ಯವನ್ನು ನಿರ್ವಹಿಸುವ ಈ ಸಂತರು ತಮ್ಮ ತಮ್ಮ ಇಷ್ಟ ದೇವತೆಯ ಪ್ರಸ್ತಾಪ ಬಂದೊಡನೆಯೇ ಒಬ್ಬೊಬ್ಬರೂ ತಮ್ಮ ಅಧಿದೈವವೇ ಶ್ರೇಷ್ಠವೆಂದು ಕಂಠೋಕ್ತವಾಗಿ ಸಾರಿ ಹೇಳುವರು.

> ಶಿವನಲ್ಲದೆ ದೇವರಿಲ್ಲ ನೋಡಾ ಎನಗೆ, ಶಿವಮಂತ್ರವಲ್ಲದೆ ಬೇರೆ ಮಂತ್ರವಿಲ್ಲ ನೋಡಾ ಎನಗೆ.

ಎಂದು ಶಿವಶಿಶರಣನು ತನ್ನ ಅಚಲ ಭಕ್ತಿಯನ್ನು ಈಶ್ವರನಲ್ಲಿ ತೋರಿದರೆ,

> ಹರಿಯೇ ಸರ್ವೋತ್ತಮ, ಹರಿಯೇ ಪರದೇವತೆ, ಹರಿ ಸರ್ವವಿಶ್ವಮಯಂ ಜಗತು ॥ಪ॥ ಹರಿಯಲ್ಲದನ್ಯತ್ರ ದೈವಂಗಳಿಲ್ಲವೆಂದು ಉರಗನ ಹೆಡೆಯನ್ನು ಪಿಡಿದು ಹೇಳುವೆನಯ್ಯ ॥ಅಪ॥

ಎಂದು ಪುರಂದರದಾಸರು ಶಪಥತೊಟ್ಟು, ಸವಾಲು ಒಡ್ಡುವರು. ಈ ತೆರನಾದ ಏಕದೇವೋಪಾಸನೆ ಭಕ್ತನ ಅಚಲನಿಷ್ಠೆಗೆ ಅತ್ಯಗತ್ಯವಾದುದೇ ಸರಿ. ಆದರೆ, ಈ ನೆಪದಲ್ಲಿ ಅನ್ಯದೇವತೆಗಳ ಅವಹೇಳನ ಎಷ್ಟರಮಟ್ಟಿಗೆ ತರ್ಕಸಮ್ಮತವೋ ಹೇಳುವಂತಿಲ್ಲ. 'ದೇವನೊಬ್ಬ ನಾಮ ಹಲವು ಪರಮ ಪತಿವ್ರತೆಗೆ ಗಂಡನೊಬ್ಬ' ಸೈರಣೆ ಎಂಬಸ್ತುತ್ಯವಾದದ್ದು. 'ನಮ್ಮ ದೇವ ನಿಮ್ಮ ದೇವ ತಮ್ಮ ದೇವನೆನಬೇಡಿ ಬೊಮ್ಮನ ಪಡೆದ ದೇವನೊಬ್ಬನೆ ಕಾಣಿರೋ' ಎಂಬ ನಂಬಿಕೆಯೂ ಮೆಚ್ಚಬೇಕಾದದ್ದು. ಆದರೆ. ಎಷ್ಟೋ ಸಂದರ್ಭಗಳಲ್ಲಿ ನಮ್ಮ ಸಂತರು ಭಕ್ತ್ಯತಿರೇಕದಿಂದ ಅನ್ಯ ದೇವತೆಗಳನ್ನು ಅಲ್ಲಗಳೆಯಲು ಹಿಂತೆಗೆದವರಲ್ಲ. ಈ ಅಹಿತಾಂಶವನ್ನು ಬದಿಗಿಟ್ಟು ವಿಚಾರಿಸಿದ್ದೇ ಆದರೆ, ಈ ಏಕದೇವನಿಷ್ಠೆ ಬಲಿಷ್ಠವಾದಷ್ಟೂ ಭಕ್ತನು ವರಿಷ್ಠನಾಗುವನು. ಮಾಧ್ವ ಸಂಪ್ರದಾಯದಲ್ಲಾದರೋ ಹರಿ ಸರ್ವೋತ್ತಮತ್ವವನ್ನು ಬಗೆಬಗೆಯಾಗಿ ಸಾರಿ ಹೇಳಿದರೂ, ಉಳಿದ ದೇವಾನುದೇವತೆಗಳಿಗೆ ಮನ್ನಣೆ ಸಲ್ಲದೆ ಇಲ್ಲ. ಅವರ ತಾರತಮ್ಯವೆಂಬ ಪ್ರಮೇಯಾನುಸಾರವಾಗಿ, ಹರಿಸರ್ವೋತ್ತಮನೆನ್ನಿಸಿದರೆ, ಬ್ರಹ್ಮನು ಅವನ ಮಗನೆಂತಲೂ, ರುದ್ರನು ಮೊಮ್ಮಗನೆಂತಲೂ ನಿರ್ದೇಶಿಸಿರುವುದುಂಟು. ಈ ರುದ್ರನೇ ಕ್ರಿಯಾಚಾಲಕನಾದುದರಿಂದ ಸಂದರ್ಭವರಿತು ಅವನನ್ನು ಮುಕ್ತಕಂಠದಿಂದ ಕೊಂಡಾಡಿರುವ ಕೀರ್ತನೆಗಳು ಹಲವಾರಿವೆ. ಶ್ರೀ ವಾದಿರಾಜರು 'ಧವಳಗಂಗೆಯ ಗಂಗಾಧರ, ಮಹಾಲಿಂಗ, ಮಾಧವನ ತೋರಿಸಯ್ಯ ಗುರುಕುಲೋತ್ತುಂಗ' ಎಂದು ಹೊಗಳುವಲ್ಲಿ ತೋರಿಬರುವ ಹೃದಯವೈಶಾಲ್ಯ ಆದರ್ಶಪ್ರಾಯವಾದುದು ಎನ್ನಬಹುದು. 'ಅನ್ಯರನರಿಯೆನೊ ಗುರುವೆಂಬೆ ನಿನ್ನ ಇನ್ನಾದರೂ ಹರಿಯ ತೋರೋ ಮುಕ್ಕಣ್ಣ' ಎಂದು ಮುಕ್ತಾಯವಾಗುವ ಈ ಕೀರ್ತನೆ ಮೇಲೆ ಸೂಚಿಸಿದ ತಾರತಮ್ಯತತ್ತ್ವಕ್ಕೆ ಅನುಗುಣವಾಗಿ ರಚಿತವಾಗಿದೆ.

ಶಿವಶರಣನಾಗಲಿ, ಹರಿದಾಸನಾಗಲಿ ಆತ್ಮಕಲ್ಯಾಣವನ್ನು ಸಾಧಿಸಿಕೊಳ್ಳುವಲ್ಲಿ ಗುರುವಿನ ಅನುಗ್ರಹವಿಲ್ಲದೆ ಮುಂದುವರಿಯಲಾರ. ವೀರಶೈವರಲ್ಲಿ ಉಕ್ತವಾಗಿರುವ ಗುರು-ಲಿಂಗ-ಜಂಗಮರ ತ್ರಿವಿಧದಾಸೋಹ ತುಂಬ ಘನವಾದದ್ದು. ಗುರುವಿನ ಕರುಣವಾದರೆ ಲಿಂಗದ ಕೃಪೆ ತನಗೆ ತಾನಾಗಿಯೇ ಭಕ್ತನಿಗೆ ಲಭಿಸುವುದು. ಲಿಂಗ-ಜಂಗಮಗಳು ಬಿಂಬ-ಪ್ರತಿಬಿಂಬದಂತೆ ಅನ್ಯೋನ್ಯ ಆಶ್ರಯವುಳ್ಳವು. ಈ ಪರಸ್ಪರ ಸಂಬಂಧ ಪರಾಕಾಷ್ಠಸ್ಥಿತಿಯಲ್ಲಿ ಅಭೇದದ ನಿಲವನ್ನು ಮುಟ್ಟುತ್ತದೆ.

> ಗುರುವಿನ ಕರುಣದಿಂದ ಲಿಂಗಜಂಗಮವ ಕಂಡೆ. ಗುರುವಿನ ಕರುಣದಿಂದ ಪಾದೋದಕ ಪ್ರಸಾದವ ಕಂಡೆ. ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ, ಚೆನ್ನಮಲ್ಲಿಕಾರ್ಜುನಯ್ಯ, ನಾ ಹುಟ್ಟಲೊಡನೆ ವಿಭೂತಿಯ ಪಟ್ಟವ ಕಟ್ಟಿ, ಸದ್ಗುರು ಸ್ವಾಮಿ ಲಿಂಗ ಸ್ವಾಯತ ಮಾಡಿದನಾಗಿ ನಾ ಧನ್ಯಳಾದೆನು.

ಎಂಬ ಅಕ್ಕಮಹಾದೇವಿಯ ಮಾತುಗಳಲ್ಲಿ ಗುರುವಿನ ಕರುಣದ ಹಿರಿಮೆಯೇನು ಎಂಬುದು ವಿದಿತವಾಗುತ್ತದೆ. ಆಕೆಯ ಜೀವನದಲ್ಲಿ ಎದುರಿಸಬೇಕಾಗಿ ಬಂದ ಅಡ್ಡಿ ಅಡಚಣೆಗಳು ಒಂದೆರಡಲ್ಲ. ಅವುಗಳನ್ನೆಲ್ಲ ಆಕೆ ನಿರ್ವಹಿಸಿ ವೈರಾಗ್ಯ ಶಿರೋಮಣಿಯಾದಳು. ಆಕೆ ದಿಕ್ಕುಗೆಟ್ಟು ತೊಳಲುತ್ತಲಿರುವಾಗ ಬಸವಣ್ಣನವರ ಆಶ್ರಯ ದೊರೆಯಲು ಆಗ ಹಿಗ್ಗಿ 'ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ' ಎಂದು ಧೈರ್ಯ ತಾಳಿದಳು. ಇಂಥ ಸನ್ನಿವೇಶಗಳು ಎಲ್ಲ ಭಕ್ತರ ಜೀವನದಲ್ಲಿಯೂ ಅನಿವಾರ್ಯವಾದುವು.

ನವಕೋಟಿ ನಾರಾಯಣರಾಗಿದ್ದ ಶ್ರೀನಿವಾಸನಾಯಕರು ತಾವು ವಿರಕ್ತರಾದ ಬಳಿಕ, ಅವರಿಗೆ ಅಂಕಿತೋಪದೇಶ ಮಾಡುವ ಗುರುವಿಲ್ಲದೆ ತಮ್ಮ ಜೀವನ ಸಫಲವಾಗದು ಎನ್ನಿಸಿತು. ಆಗ ಅವರ ಪುರಾಕೃತಪುಣ್ಯವಿಶೇಷದಿಂದ ಶ್ರೀವ್ಯಾಸರಾಯರ ಸಂದರ್ಶನವಾಯಿತು. ಅವರು ಶ್ರೀನಿವಾಸನಾಯಕರಿಗೆ 'ಪುರಂದರ ವಿಠಲ' ಎಂಬ ಅಂಕಿತವನ್ನಿತ್ತು ಅನುಗ್ರಹಿಸಿದ ಬಳಿಕ, ಅವರ ಮನಸ್ಸಿನ ಹೊಯ್ದಾಟ ಹತೋಟಿಗೆ ಬಂದಿತು. ಕಣ್ಣುಗಳು ಹರ್ಷಾಶ್ರುಪೂರಿತವಾದುವು. ಆ ಸಂತೋಷವೇ ಉಕ್ಕಿ ಬಂದು ಸುಳಾದಿಯಾಗಿ ಹರಿಯಿತು.

> ವ್ಯಾಸರಾಯರ ಚರಣಕಮಲ ದರುಶನವೆನಗೆ, ಏಸು ಜನ್ಮದ ಸುಕೃತಫಲ ದೊರಕಿತೋ, ಎನ್ನ ಸಾಸಿರಕುಲಕೋಟಿ ಪಾವನವಾಯಿತು, ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ.

ಈ ನಿರರ್ಗಳವಾದ ಸುಳಾದಿಯಲ್ಲಿ ಶ್ರೀವ್ಯಾಸರಾಯರ ಸಮಗ್ರಜೀವನವೂ ನಿರೂಪಿತವಾಗಿದೆ. ಕಟ್ಟಕಡೆಯಲ್ಲಂತೂ, 'ಗುರು ವ್ಯಾಸರಾಯರ ಚರಣವೆನಗೆ ಗತಿ, ಪುರಂದರವಿಠಲನ ಅರಿತೆ ಇವರಿಂದ' ಎಂದು ತಮ್ಮ ತುಂಬಿದ ಕೃತಜ್ಞತೆಯನ್ನು ವ್ಯಕ್ತಪಡಿಸಿರುವರು. ವಿಜಯದಾಸರನ್ನು ನಿಂದಿಸಿ ಹೊಟ್ಟೆಯ ಬೇನೆಯಿಂದ ನರಳುತ್ತಿದ್ದ ಶ್ರೀನಿವಾಸಾಚಾರ್ಯರಿಗೆ, ಗೋಪಾಲದಾಸರಿಂದ ಹರಿದಾಸದೀಕ್ಷೆ ಲಭಿಸಿ, ಜಗನ್ನಾಥದಾಸರಾಗುವಲ್ಲಿಯೂ ಇಂತಹುದೇ ಒಂದು ಸನ್ನಿವೇಶ ತೋರಿಬರುತ್ತದೆ.' ಗೋಪಾಲದಾಸರಾಯ ನಿನ್ನಯ ಪಾದ ನಾ ಪೊಂದಿದೆನೊ ನಿಶ್ಚಯ, ಈ ಪೀಡಿಪ ತಾಪತ್ರಯಗಳ ನೋಡಿಸಿ ಕೈಪಿಡಿದೆನ್ನನು ನೀ ಪಾಲಿಸನುದಿನ' ಎಂದು ಮರೆಹೊಕ್ಕ ಆಚಾರ್ಯರಿಗೆ, ತಮ್ಮ ಆಯುಷ್ಯದ ಒಂದು ಪಾಲನ್ನೇ ಧಾರೆಯೆರೆದು ಆಶೀರ್ವದಿಸಲು 'ಅಪಮೃತ್ಯುವನು ತೊಡೆದೆ ಎನ್ನೊಳಗಿಪ್ಪ ಅಪರಾಧಗಳ ಮರೆದೆ' ಎಂದು ಆನಂದದಿಂದ ತಮ್ಮ ಧನ್ಯವಾದವನ್ನು ವ್ಯಕ್ತಪಡಿಸಿರುವರು. ಈ ಎಲ್ಲ ಭಾವವನ್ನೂ ಪುರಂದರದಾಸರು 'ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ' ಎಂಬ ಒಂದು ಪಲ್ಲವಿಯಲ್ಲಿ ಹುದುಗಿಸಿಟ್ಟು ಹೇಳಿರುವರು. ಬಸವಣ್ಣನವರಂತೂ 'ಶಿವಪಥವರಿವಡೆ ಗುರುಪಥವೇ ಮೊದಲು' ಎಂದು ಬಹಳ ಅಚ್ಚುಕಟ್ಟಾಗಿ ಗುರುವಿನ ಮೇಲ್ಮೆಯನ್ನು ತೋರಿಸಿಕೊಟ್ಟಿರುವರು.

ಶಿವಶರಣರಾಗಲಿ, ಹರಿದಾಸರಾಗಲಿ ಜೀವನದಲ್ಲಿ ಸಾಧಿಸಬೇಕೆನ್ನುವ ಧ್ಯೇಯವಾದರೂ ಏನು ? ಶಿವಶರಣನು ಲಿಂಗಾಂಗಗಳ ಸ್ವರೂಪವನ್ನು ತಿಳಿದು, ಆ ಲಿಂಗಾಂಗಗಳು ಅಭೇದ ಪದವನ್ನು ಪಡೆಯುವ ಐಕ್ಯ ಸ್ಥಿತಿಯನ್ನು ಸಾಧಿಸುವುದೇ ಪರಮ ಲಕ್ಷ್ಯ. ಹರಿದಾಸರು ಜೀವಾತ್ಮ ಪರಮಾತ್ಮಗಳ ಪರಿಜ್ಞಾನವನ್ನು ಗಳಿಸಿ, ಆ ಪರಮಾತ್ಮನ ಪಾದಾರವಿಂದಗಳಲ್ಲಿ ಮಧುಪನಂತೆ ಮೈಮರೆತಿರುವ ಸ್ಥಿತಿಯನ್ನು ಸಾಧಿಸುವುದೇ ಚರಮ ಗುರಿ. ಈ ಅರಿವೇ ಶರಣರ ಸಾಹಿತ್ಯದಲ್ಲಿ ಅನುಭಾವವೆಂದು ಹೆಸರನ್ನು ಪಡೆದಿದ್ದರೆ, ದಾಸಸಾಹಿತ್ಯದಲ್ಲಿ ಅಪರೋಕ್ಷಾನುಭೂತಿಯೆನ್ನಿಸುತ್ತದೆ. ಅನುಭಾವದ ಸ್ವರೂಪ ಅದ್ವೈತದಲ್ಲಿ ಕೊನೆಗೊಂಡರೆ, ಅಪರೋಕ್ಷಾನುಭವ ದ್ವೈತ ತತ್ತ್ವದಲ್ಲಿ ವಿರಮಿಸುತ್ತದೆ. ಈ ಅಂತ್ಯಲಕ್ಷ್ಯದ ಸ್ವರೂಪವು ಎಂತೆಯೇ ಇರಲಿ, ಈ ಸಿದ್ಧಿಯನ್ನು ಸಾಧಿಸುವಲ್ಲಿ ಉಭಯ ಪಂಥದವರೂ ಭಕ್ತಿಗೆ ಮಾನ್ಯತೆಯನ್ನು ಕೊಡುವರು. ಅವರವರ ಸ್ವಾನುಭವವೇ ಪರಮ ಪ್ರಮಾಣ. ಈ ಭಕ್ತಿ ಸಾಧನೆಯಲ್ಲಿ ಆಯಾ ಸಂತರು ಅನುಭವಿಸುವ ಹೊಯ್ದಾಟ ತೊಳಲಾಟಗಳನ್ನು ಹೋಲಿಸಿ ನೋಡಿದಾಗ ತೋರಿಬರುವ ಸಾದೃಶ್ಯಗಳು ಸೋಜಿಗವೆನ್ನಿಸುತ್ತವೆ. ನಿದರ್ಶನಾರ್ಥವಾಗಿ ಕೆಲವನ್ನು ಇಲ್ಲಿ ಸಮೀಕ್ಷಿಸಲಾಗಿದೆ.

ಮಾನವರಾದ ಈ ಭಕ್ತರಿಗೆ ಶರೀರಸಹಜವಾದ ಆಸೆ ಆತಂಕಗಳು, ನೋವು ಕಾವುಗಳು ಹೆಜ್ಜೆ ಹೆಜ್ಜೆಗೂ ಬಾಧಿಸುತ್ತವೆ. ಭಕ್ತಿ ಭಂಡಾರಿಗಳಾದ ಬಸವಣ್ಣನವರು ತೋಡಿಕೊಂಡಿರುವ ಈ ಆತ್ಮ ನಿವೇದನೆಯನ್ನು ನೋಡಿ.

ಚಂಚಲ ಮನಸ್ಸನ್ನು ಕಟ್ಟಿಹಾಕುವ ರೀತಿಯನ್ನು ಕಾಣಲಾರದೆ ಅವರು 'ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ! ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ! ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ! ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಇರಿಸು ಕೂಡಲಸಂಗಮದೇವಾ!' ಎಂದು ಮೊರೆಯಿಡುವರು.

ಭಕ್ತನ ಮೊರೆಗೆ ದೇವರು ಕಿವಿಗೊಡದಂತಿರಲು ಗಟ್ಟಿಯಾಗಿ ಕೂಗಿ ಕರೆಯುವರು. 'ಅಯ್ಯಾ ಅಯ್ಯಾ! ಎಂದು ಕರೆವುತ್ತಲಿದ್ದೇನೆ. ಅಯ್ಯಾ ಅಯ್ಯಾ! ಎಂದು ಒರಲುತ್ತಲಿದ್ದೇನೆ. ಓ ಎನ್ನಲಾಗದೆ ಅಯ್ಯ ! ಆವಾಗಲೂ ನಿಮ್ಮುವ ಕರೆವುತ್ತಿದ್ದೇನೆ. ಓ ಎನ್ನದೆ ಮೌನವೇ ಕೂಡಲ ಸಂಗಮ ದೇವಾ !' ಎಂದು ಗೋಗರೆಯುವರು.

ಜಯಕೆ ಕೈಗೂಡದೆ, ಆತಂಕಗಳು ಅಡ್ಡಗಟ್ಟಲು ಅವರು ಧೃತಿಗೆಡಲಿಲ್ಲ. ಭಗವಂತನ ಸ್ವಭಾವವನ್ನು ಗ್ರಹಿಸಿದವರಂತೆ ಸಮಾಧಾನ ಚಿತ್ತದಿಂದ ಸಹಿಸಿಕೊಳ್ಳಲು ಪ್ರಯತ್ನಿಸುವರು. 'ನೆಚ್ಚಿದೆನೆಂದರೆ, ಮೆಚ್ಚಿದೆನೆಂದರೆ, ಸಲೆ ಮಾರುಹೋದೆನೆಂದರೆ, ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು ಇವೆಲ್ಲಕ್ಕಂಜದಿದ್ದರೆ ಭಕ್ತಿ ಕಂಪಿತ ಕೂಡಲ ಸಂಗಮದೇವ' ಎಂದು ಅಂದುಕೊಳ್ಳುವರು. ಈ ಆಸೆ ಕುಸಿದಾಗ ಅವರ ಮನಸ್ಸು ಕಳವಳಿಸಿ ಕನಲುವುದು. 'ಅಕಟಕಟ! ಶಿವ ನಿನಗಿನಿತು ಕರುಣವಿಲ್ಲ. ಅಕಟಕಟ! ಶಿವ ನಿನಗಿನಿತು ಕೃಪೆಯಿಲ್ಲ. ಏಕೆ ಹುಟ್ಟಿಸಿದೆ ಇಹಲೋಕದುಃಖಿಯ, ಪರಲೋಕದೂರನ ? ಏಕೆ ಹುಟ್ಟಿಸಿದೆ ಕೂಡಲಸಂಗಮದೇವ ಕೇಳಯ್ಯ, ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೇ ? ಎಂದು ಪ್ರಶ್ನಿಸಿ, ಪರಿತಪಿಸುವರು.

ಭಕ್ತನು ಈ ಹತಾಶೆಯ ಹಂತವನ್ನು ಮುಟ್ಟಿದಾಗ ಭಗವಂತನು ಅವನಿಗೆ ಒಲಿದನೆಂದರೆ ಆಗ ಆಗುವ ಆನಂದ ಅಷ್ಟಿಷ್ಟಲ್ಲ. 'ನಂಬಿ ಕರೆವಡೆ, ಓ, ಎಂಬ ಶಿವನು ! ನಂಬದೆ ಕರೆವಡೆ 'ಓ' ಎಂಬನೇ ಶಿವನು.' ಎಂಬ ಬಸವಣ್ಣನವರ ಸಂತೃಪ್ತಿಯ ಸೊಲ್ಲೇ ಇದಕ್ಕೆ ಸಾಕ್ಷಿ. ಪ್ರತಿಯೊಬ್ಬ ಅನುಭಾವಿಯೂ ಹಾದುಬರಬೇಕಾದ ಬೆಂಕಿಯ ದಾರಿಯಿದು. ಹೆಣ್ಣುಮಗಳಾದ ಅಕ್ಕಮಹಾದೇವಿ ಪರಮಾತ್ಮನನ್ನು ಅರಸುತ್ತ ಹುಚ್ಚಿಯಂತೆ ಅಲೆದಲೆದು ಕಡೆಗೆ, ಆ ಪರಶಿವನ ಸಾಕ್ಷಾತ್ಕಾರವಾಗಲು ಆಕೆ ಆಡಿರುವ ಒಂದೊಂದು ನುಡಿಯೂ ಅನುಭವಪೂರ್ಣವಾದ ಮಾತಿನ ಮಾಣಿಕ್ಯವೇ ಸರಿ.

> ಹೊಳೆವ ಕೆಂಜಡೆಗಳ, ಮಣಿಮಕುಟದ, ಒಪ್ಪುವ ಸುಲಿಪಲ್ಲ, ನಗೆಮೊಗದ, ಕಂಗಳ ಕಾಂತಿಯಿಂ ಈರೇಳು ಭುವನವಂ ಬೆಳಗುವ, ದಿವ್ಯಸ್ವರೂಪನ ಕಂಡೆ ನಾನು. ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು. ಗಂಡಗಂಡರನೆಲ್ಲ ಹೆಂಡಹೆಂಡಿರಾಗಿ ಆಳುವ ಗರುವನ ಕಂಡೆ ನಾನು. ಜಗದಾದಿ ಶಕ್ತಿಯೊಳು ಬೆರಸಿ ಒಡನಾಡುವ ಪರಮಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು.

ಈ ಆನಂದದ ನೆಲೆಯನ್ನು ಆಕೆ ಕಂಡಿರಬೇಕಾದರೆ, ಇದಕ್ಕಿಂತ ಮಿಗಿಲಾದ ಸಿದ್ಧಿಯೇನಿದೆ ? ಶಿವಶರಣ–ಶರಣೆಯರ ಈ ಭಕ್ತ್ಯನುಸಂಧಾನ ನಮಗೆ ಎಂದೆಂದಿಗೂ ಮಾರ್ಗದರ್ಶನಕಾರಿಯಾದುದು.

ಹರಿದಾಸವರೇಣ್ಯರಾದ ಪುರಂದರದಾಸರ ಆಧ್ಯಾತ್ಮಿಕ ಜೀವನದಲ್ಲಿಯೂ ಇದೇ ರೀತಿ ವಿವಿಧ ಹಂತಗಳನ್ನು ಕಾಣಬಹುದು. ಈ ಒಂದೊಂದು ಸ್ಥಿತಿಯನ್ನು ಅವರು, ಇಂದಿನವರು ತಮ್ಮ ದಿನಚರಿಯಲ್ಲಿ ಬರೆದಿಡುವಂತೆ, ಕೀರ್ತನೆಗಳ ಮೂಲಕವೋ, ಉಗಾಭೋಗಗಳ ಮೂಲಕವೋ, ಸುಳಾದಿಗಳ ಮೂಲಕವೋ ಹಾಡಿ ಹಾಡಿ ತಮ್ಮ ಪಾಡನ್ನು ತೋಡಿಕೊಂಡಿರುತ್ತಾರೆ.

ಬಿಜ್ಜಳನ ಮಂತ್ರಿಯಾಗಿದ್ದ ಬಸವಣ್ಣನವರು ತೊಳಲಿ ಬಳಲಿದಂತೆ, ಹರಿದಾಸ ದೀಕ್ಷೆಯನ್ನು ಕೈಕೊಂಡ ಪುರಂದರದಾಸರೂ ತಮ್ಮ ಚಂಚಲ ಮನಸ್ಸಿನ ಪರಿಯನ್ನು ಪದೇ ಪದೇ ಪ್ರಸ್ತಾಪಿಸಿರುತ್ತಾರೆ.

> ಮನೆಯೆಂಬ ಆಸೆಯು ಎನ್ನ ಮುಂದುಗೆಡಿಸುತಿದೆ. ಮನೆವಾರುತೆಯು ಎನ್ನ ಭಂಗಪಡಿಸುತಿದೆ. ಸುತರಾಸೆಯು ಎನ್ನ ದೈನ್ಯಪಡಿಸುತಿದೆ. ಇನಿತಾಸೆಯುಳಿದು ಬುದ್ಧಿ ನಿನ್ನಲ್ಲಿ ನಿಲುವಂತೆ ಮಾಡೊ ಪುರಂದರವಿಠಲ.

ಈ ಆರ್ತನಾದದಲ್ಲಿ ಅವರ ಹೃದಯವೇದನೆಯೆಷ್ಟು ಆಡಕವಾಗಿದೆಯೆನ್ನುವುದನ್ನು ಅರ್ಥಮಾಡಿಕೊಳ್ಳಬಹುದು. ಎಡೆಬಿಡದೆ ಎದುರಾದ ಅಡಚಣೆಗಳಿಗೆ ಅಳುಕದೆ ಅವರು ಅವುಗಳನ್ನೆಲ್ಲ ಅಗ್ನಿಪರೀಕ್ಷೆಗಳೆಂದು ಭಾವಿಸಿದರು.

> ನಿನ್ನ ಭಕ್ತರೆನಿಸಿದ ಜನರು ಭಂಗಪಡಲಿಬೇಕು. ದಿನ ಪ್ರತಿದಿನ ಅನ್ನ ವಸ್ತ್ರ ಉದಕಗಳು ಕಾಣದೆ ಇರಬೇಕು. ಬೆನ್ಹತ್ತಿ ರೋಗಗಳು ಹತ್ತಿ ಇರಲಿಬೇಕು. ತನ್ನವರ ಕೈಯಿಂದ ಛೀ ಎನಿಸಿಕೊಳ್ಳಬೇಕು, ಪನ್ನಗಶಯನ ಪುರಂದರವಿಠಲ.

ಈ ತಾಳ್ಮೆಗೂ ಒಂದು ಮಿತಿಯುಂಟಷ್ಟೆ ! ಅದು ಮೀರಿದಾಗ 'ಆರು ಬದುಕಿದರು ಹರಿ ನಿನ್ನ ನಂಬಿ ?' ಎಂದು ನೊಂದುಕೊಂಡು ಕಿಡಿಕಿಡಿಯಾಗುವರು. ಭಕ್ತನನ್ನು ಒರೆಗಲ್ಲಿನ ಮೇಲಿಟ್ಟು ಪರೀಕ್ಷಿಸಿದ ಬಳಿಕ, ಭಗವಂತನು ತನ್ನ ದಾಸನಿಗೆ ಒಲಿಯಲು, ಆಗ ಮುನಿದ ಮನಸ್ಸು, ಪ್ರಸನ್ನವಾಗಿ 'ನಿನ್ನ ನಂಬಿ ಕೆಟ್ಟವರಿಲ್ಲ, ನಂಬದೆ ಕೆಟ್ಟರೆ ಕೆಡಲಿ' ಎಂದು ಹಿಗ್ಗಿ ಹೊಗಳುವುದಲ್ಲದೆ, 'ಬದುಕಿದೆನು ಬದುಕಿದೆನು ಭವ ಹಿಂಗಿತು, ಪದುಮನಾಭನ ಪಾದದರುಶನವಾಯಿತು' ಎಂದು ಸಂತುಷ್ಟವಾಗುವುದು. ಈ ಹತಾಶೆ–ಪ್ರತ್ಯಾಶೆಗಳ ಮಧ್ಯೆ ತೂಗುಯ್ಯಾಲೆಯಂತೆ ತೊಳಲಾಡುವ ಭಕ್ತನ ಅಂತರಂಗದ ದರ್ಶನ ಒಮ್ಮೊಮ್ಮೆ ಅಪೂರ್ವವೆನ್ನಿಸುತ್ತದೆ. ಈ ಅಪರೋಕ್ಷಾನುಭೂತಿಯನ್ನು ಅನುಭವಿಸಿದ ಒಬ್ಬೊಬ್ಬ ಹರಿದಾಸರೂ ತಮ್ಮ ಆನಂದವನ್ನು ವಿಧವಿಧವಾಗಿ ನಿರೂಪಿಸಿರುವರು. ಶ್ರೀ ವ್ಯಾಸರಾಯರು 'ರಂಗಯ್ಯ ಮನೆಗೆ ಬಂದರೆ ಗುಡಿಕಟ್ಟಿ ಕುಣಿವೆ ನಾನು' ಎಂದು ಮೈಮರೆತರೆ, ವಿಜಯದಾಸರು 'ಅಂತರಂಗದ ಕದವು ತೆರೆಯಿತಿಂದು' ಎಂದು ಸಾರಿ ಹೇಳಿ, ತಮ್ಮ ಹೃದಯ ಮಂದಿರದಲ್ಲಿಯೇ ಹರಿಯನ್ನು ಸಂದರ್ಶಿಸಿದ ವೈಭವವನ್ನು ಚಿತ್ರಿಸಿರುವರಲ್ಲದೆ, ಬೇರೊಂದು ರಚನೆಯಲ್ಲಿ 'ಆನಂದ ಆನಂದ ಪರಮಾನಂದ ಆನಂದಕಂದ ನೊಲಿದು ಎನ್ನಬೆದ್ದೆ ವೇದವೃಂದ' ಎಂಬುದಾಗಿ ಅನಿರ್ವಚನೀಯವಾದ ಅನುಭವವನ್ನು ನಿರೂಪಿಸಿರುವರು. ಶಿವಶರಣರು ತಮ್ಮ ಈ ದಿವ್ಯಾನುಭವವನ್ನು ಷಟ್ಸ್ಥಲದ ಮೂಲಕವಾಗಿ ಸಾಧಿಸಿದರೆ, ಹರಿದಾಸರು ನವವಿಧ ಭಕ್ತಿಮಾರ್ಗಗಳ ಮೂಲಕ ಕಂಡುಕೊಂಡಿರುವರು. ಭಕ್ತ–ಭಗವಂತರ ಬಾಂಧವ್ಯವನ್ನು ನಾನಾ ತೆರನಾಗಿ ವರ್ಣಿಸಿರುವ ರಚನೆಗಳು ವೈವಿಧ್ಯಪೂರ್ಣವಾಗಿವೆ.

ಮುಖ್ಯವಾಗಿ, ಸಂತನಾದವನು ಪರಮಾತ್ಮನನ್ನು ಒಡೆಯನೆಂದೋ, ಗೆಳೆಯನೆಂದೋ, ಎಳೆಯನೆಂದೋ, ಇನಿಯನೆಂದೋ ಭಾವಿಸಿ ಕೊಂಡಾಡಿರುವುದನ್ನು ಕಾಣಬಹುದು. ಉಭಯ ಪಂಥದವರೂ ಪರಮಾತ್ಮನನ್ನು ತಂದೆ, ತಾಯಿ, ಬಂಧು, ಬಳಗ ವೆಂದು ಹೇಳಿರುವ ಉದಾಹರಣೆಗಳು ಹಲವಾರಿವೆ. ಪುರಂದರದಾಸರಂತೂ 'ಮಾತಾಪಿತರು ನಿನಗಂದೆ ಮಾರಿದರು ಎನ್ನ, ನಾಥನೆ ನೀನೆನ್ನ ಸಲಹದಿದ್ದರೆ ದೇವ ಯಾತಕೆ ಭಕ್ತವತ್ಸಲನೆಂದೆನಿಸಿಕೊಂಡೆ' ಎಂದು ತಮ್ಮನ್ನು ತಾವೇ ಭಗವಂತನಿಗೆ ಒಪ್ಪಿಸಿ ಕೊಂಡಿರುವರು. ಸಂತರ ಈ ಭಕ್ತಿ ಸಾಧನೆ ನಿತ್ಯ ಜೀವಂತವಾದುದು. ಮನಸ್ಸಿನ ಮಾಲಿನ್ಯವನ್ನೆಲ್ಲ ಕ್ರಮಕ್ರಮವಾಗಿ ಕಳೆದು ಕೊಂಡು ದೈವಾಂಶವನ್ನು ಸಾಧಿಸುವುದರಲ್ಲಿ ಹೇಗೆ ಯಶಸ್ವಿಗಳಾದರೆಂಬ ಅವರ ಆತ್ಮವಿಕಾಸದ ಚರಿತ್ರೆ, ಅವರವರ ಅಂತರಂಗದ ವಾಣಿಯಲ್ಲಿಯೇ ಕೇಳಬರುವ ಈ ಸಂವಿಧಾನ ಆತ್ಮೀಯವೂ ಆದರ್ಶವೂ ಆದುದು.

ಸಮಾಜದಲ್ಲಿ ಈ ಸಂತರಿಗೆ ಸಂದಿರುವ ಸ್ಥಾನ ಬಹಳ ಹಿರಿದಾದುದು. ವೀರಶೈವರು ಜಂಗಮರಿಗೆ ತೋರುವ ಮರ್ಯಾದೆ ಮಹತ್ವಪೂರ್ಣವಾದುದು. ಅವರು ಲಿಂಗ ಜಂಗಮರಲ್ಲಿ ಭೇದವನ್ನು ಬಗೆಯುವವರಲ್ಲ. ಜಂಗಮವು ಲಿಂಗಕ್ಕಿಂತಲೂ ಮಿಗಿಲೆಂಬ ಕಲ್ಪನೆಯೂ ಪ್ರಾಸಂಗಿಕವಾಗಿ ಕೇಳಿಬರುತ್ತದೆ. ಸ್ವತಂತ್ರ ಸಿದ್ಧಲಿಂಗೇಶ್ವರರ ಈ ವಚನವನ್ನು ನೋಡಿ,

> 'ಶಿವಭಕ್ತರ ನಡೆ ಶುದ್ಧ, ನುಡಿ ಶುದ್ಧ, ಶಿವಭಕ್ತರ ನೋಟ ಶುದ್ಧ, ಮಾಟ ಶುದ್ಧ, ಶಿವಭಕ್ತರ ನೆನಹು ಶುದ್ಧ, ಅನುಭಾವ ಶುದ್ಧ, ಶಿವಭಕ್ತರ ಕಾಯ ಶುದ್ಧ. ಪ್ರಾಣ ಶುದ್ಧ, ಇದು ಕಾರಣ ಶಿವಭಕ್ತರನೇ ಶಿವನೆಂದು ನಂಬುವುದು, ನಂಬಿದವರು ಶಿವ ನಪ್ಪುದು ತಪ್ಪದು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

ಕರ್ಮಯೋಗಿಯಾದ ಸಿದ್ಧರಾಮನು ಶರಣರ ಬಗ್ಗೆ ಆಡಿರುವ ಮಾತೂ ಇಷ್ಟೇ ಘನವಾದುದು.

> ಕಲ್ಪವೃಕ್ಷ ಮರವೆನ್ನಬಹುದೇ ? ಕಾಮಧೇನು ಪಶುವೆನ್ನಬಹುದೇ ? ಪರುಷ ಪಾಷಾಣವೆನ್ನಬಹುದೇ ? ನಮ್ಮ ಕಪಿಲ ಸಿದ್ಧ ಮಲ್ಲಿಕಾರ್ಜುನನ ನುಂಗಿದವರೆಲ್ಲ ಮಾನವರೆನ್ನಬಹುದೇ ?

ಆದುದರಿಂದಲೇ ಬಸವಣ್ಣನವರು 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ಕೈಮುಗಿಯುವರು.

ಹರಿದಾಸರ ಬಗ್ಗೆಯೂ ಇದೇ ಕಲ್ಪನೆ ಕಂಡು ಬರುತ್ತದೆ. ದ್ವೈತಸಿದ್ಧಾಂತಕ್ಕೆ ಅನುಗುಣವಾಗಿ ಈಶ–ದಾಸರಲ್ಲಿ ಅಭೇದವನ್ನು ಕಾಣಲಾಗದಿದ್ದರೂ, ಹರಿದಾಸರ ಹಿರಿಮೆಯನ್ನು ನಾನಾಬಗೆಯಾಗಿ ಪ್ರತಿಪಾದಿಸಿರುವುದನ್ನು ಕಾಣಬಹುದು. ಪುರಂದರದಾಸರು ತಮ್ಮ ಒಂದು ಉಗಾಭೋಗದಲ್ಲಿ ಹೀಗೆ ಹೇಳಿರುವರು.

> ದರಿದ್ರರೆನ್ನಬಹುದೆ ಹರಿದಾಸರ ? ಸಿರಿವಂತರೆನ್ನಬಹುದೆ ಹರಿದ್ರೋಹಿಗಳ ? ಹರಿದಾಸರ ಮೇಲಿದ್ದ ಕರುಣವು ಸಿರಿದೇವಿ ಮೇಲಿ ಲ್ಲವೋ ? ಪುರಂದರ ವಿಠಲನ ಆಳುಗಳಿಗೆ ಎಲ್ಲಿಹುದೊ ಮಾನಾಭಿಮಾನ ಜಗದಿ ?

ಹರಿದಾಸರಿಗೆ ಇದಕ್ಕಿಂತ ಪ್ರಶಸ್ತಿ ಬೇಕೆ ? ಸಿದ್ಧರಾಮನ ಮೇಲ್ಕಂಡ ವಚನದ ಸರಣಿಯನ್ನೇ ಹೋಲುವ ಒಂದು ಕೀರ್ತನೆ ಇಂತಿದೆ.

> ನೋಡಿರೈ ಕಲ್ಪ ಭೂರುಹರ, ನಾಡೊಳಗಚ್ಯುತನದಾಸರು ನರರೆ ? ॥ಪ॥ ಕ್ಷೀರ ಕೂಡಿದ ಜಲವ ನೀರೆನ್ನಬಹುದೇ ? ನೀರೊಳು ದಿಸಿದ ಮುತ್ತು ನೀರಾಗೋದೆ ? ಅರಿದ ಭಾಂಡ ವ್ಯಾಪ್ತಿಕೆ ಕೂಡಲರಿವುದೆ ? ಶೌರಿಯ ಶರಣರ ನರರೆನ್ನಬಹುದೆ ?

ಕಟ್ಟಕಡೆಯದಾಗಿ 'ಪರಬ್ರಹ್ಮ ವಿಷ್ಣುವು ಚರಬ್ರಹ್ಮ ವೈಷ್ಣವ' ಎಂದು ಘಂಟಾಘೋಷವಾಗಿ ಸಾರಿ ಹೇಳುವರು.

ಹರಿ ಮಿಗಿಲೋ ಹರಿದಾಸರು ಮಿಗಿಲೋ ಎಂಬ ಪ್ರಶ್ನೆ ತಲೆದೋರಲು ಶ್ರೀ ವ್ಯಾಸರಾಯರು 'ನಿನ್ನಿಂದ ನಿನ್ನ ದಾಸರೆ ಮಿಗಿಲೆಲೋ ಕೃಷ್ಣ' ಎಂದು ಉದ್ಘೋಷಿಸಿ, ಹರಿಯು ತನ್ನ ಭಕ್ತರಾದ ಭೀಷ್ಮ, ಧರ್ಮರಾಯ, ಅರ್ಜುನ, ಬಲಿ ಮೊದ ಲಾದವರಿಗೆ ಮೆಚ್ಚಿ ಅವರೊಂದಿಗೆ ಸಲಿಗೆಯಿಂದ ವ್ಯವಹರಿಸಿದ ಒಂದೊಂದು ಸಂದರ್ಭವನ್ನು ವಿವರಿಸುವರು. ಮುಖ್ಯವಾಗಿ, ಹರಿಯು ಭಕ್ತ ವತ್ಸಲನೆಂಬ ಬಿರುದುಳ್ಳವನೆಂಬುದನ್ನು ಅರಿವು ಮಾಡಿಕೊಡುವುದೇ ಈ ಕೀರ್ತನೆಯ ತಿರುಳು. ಇದೇ ಅಭಿಪ್ರಾ ಯವನ್ನು ವಿಜಯದಾಸರು ಬೇರೊಂದು ರೀತಿಯಾಗಿ ನಿರೂಪಿಸಿರುವರು. 'ಭಕುತಜನ ಮುಂದೆ, ನೀನವರ ಹಿಂದೆ' ಎಂದು ಪೀಠಿಕೆ ಹಾಕಿ, 'ಹುಟ್ಟು ಮುಂದಲ್ಲದೆ ಹರಿಗೋಲು ಮುಂದೆ ?' 'ಆಳು ಮುಂದಲ್ಲದೆ ಅರಸು ತಾ ಮುಂದೆ ?' 'ವತ್ಸ ಮುಂದಲ್ಲದೆ, ಧೇನು ತಾ ಮುಂದೆ ?' ಎಂಬ ಪ್ರಶ್ನೆಗಳ ಮಾಲಿಕೆಯನ್ನೇ ಪೋಣಿಸಿ, ಪರಮಾತ್ಮನು ತನ್ನ ಭಕ್ತರಿಗೆ ಎಂದೆಂದಿಗೂ ಬೆಂಗಾವಲಾ ಗಿರುವೆನೆಂದು ಪ್ರತಿಪಾದಿಸುವರು. ಭೇದತತ್ತ್ವವನ್ನು ಬಿಟ್ಟುಕೊಡದೆ ಹರಿದಾಸರ ಮೇಲ್ಮೆಯನ್ನು ಸಮರ್ಥಿಸುವ ಕ್ರಮ ಮನ ಸೆಳೆಯುವಂತಿದೆ. ಹರಿದಾಸ ಸಾಹಿತ್ಯದಲ್ಲಿ ಹರಿನಾಮಕ್ಕೆ ಕೊಟ್ಟಿರುವ ಮಾನ್ಯತೆ ಇನ್ನೂ ಮಿಗಿಲೆನ್ನಿಸುತ್ತದೆ. 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ' ಎಂದು ಸವಾಲು ಹಾಕುವ ಪುರಂದರದಾಸರ ಮಾತೇ ಇದಕ್ಕೆ ಸಾಕ್ಷಿ. ಹರಿನಾಮದ ಉಚ್ಚಾರಣೆಯಿಂದ ತರಳ ಧ್ರುವ, ಬಾಲಕ ಪ್ರಹ್ಲಾದ, ಮಾನಿನಿ ದ್ರೌಪದಿ ಮೊದಲಾದವರು ಉದ್ಧಾರವಾದರ ಲ್ಲದೆ, ಪಾಪಪರವಶನಾಗಿದ್ದ ಅಜಾಮಿಳನೂ ತನ್ನ ಅಂತ್ಯ ಕಾಲದಲ್ಲಿ ಸದ್ಗತಿಯನ್ನು ಪಡೆಯಲು ಅರ್ಹನಾದನೆಂದ ಮೇಲೆ ಅವರ ಗರಿಮೆ ಹೇಳತೀರದು. ವಿಜಯದಾಸರ 'ಪಾಪವೆಂಬ ಗರಳದಲ್ಲಿ ಹಪತಾಪ ಪಡುತ್ತೇನೆ ಶ್ರೀಪತಿಯೆ ನಿನ್ನನಾಮ ಲೇಪಿಸೆನ್ನ

ನಾಲಿಗೆಗೆ' ಎಂದು ಮೊರೆಯಿಡುವರು. ಪುರಂದರದಾಸರು 'ನಿನ್ನ ನಾಮ ಭಂಡಾರ ಕದ್ದ ಕಳ್ಳನು ನಾನು' ಎಂದು ಹೆಮ್ಮೆ ಪಟ್ಟು ಕೊಂಡು, ಆ ಸಲುವಾಗಿ ತಮ್ಮನ್ನು ವೈಕುಂಠವೆಂಬ ದುರ್ಗದಲ್ಲಿ ಸೆರೆಯಿಟ್ಟು ಶಿಕ್ಷಿಸೆಂದು ಕೇಳಿಕೊಳ್ಳುವರು. ಹರಿನಾಮದ ಮಹಿಮೆ ಯನ್ನು ಕುರಿತ ಹರಿದಾಸರ ರಚನೆಗಳು ಅಸಂಖ್ಯಾತವಾಗಿವೆ. ಒಂದೊಂದು ಒಂದೊಂದು ರೀತಿಯಲ್ಲಿ ಹೃದಯಂಗಮವಾಗಿವೆ. ಬಸ ವಣ್ಣನವರು ಹೇಗೆ ಶಿವಭಕ್ತರಿಗಿಂತ ಹಿರಿಯರಿಲ್ಲವೆಂದು ಭಾವಿಸುವರೋ ಹಾಗೆಯೇ ಕನಕದಾಸರು 'ದಾಸದಾಸರ ಮನೆಯ ದಾಸಿಯರ ಮಗ ನಾನು' ಎಂಬುದಾಗಿ ಹರಿದಾಸರ ಸೇವೆಗೆ ಸೊಂಟಕಟ್ಟಿ ನಿಲ್ಲುವರು. 'ಎತ್ತಪ್ಪೆ ಶರಣಂಗೆ, ತೊತ್ತಪ್ಪೆ ಶರಣಂಗೆ, ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ, ಕರ್ತಾರ. ನಿನಗೆ ಕರವೆತ್ತಿ ಪೂಜೆವಡುವ ಭಕ್ತರ ಮನೆಯ ಹಿತ್ತಲ ಬೇಲಿಯಾಗಿಪ್ಪೆನೈ ರಾಮನಾಥಾ' ಎಂಬ ದೇವರ ದಾಸಿಮಯ್ಯನ ವಚನವಂತೂ ಶರಣರ ವಿನಯಕ್ಕೆ ಮಕುಟಪ್ರಾಯ ವಾಗಿದೆ.

ಆತ್ಮಶುದ್ಧಿ ಮತ್ತು ಆತ್ಮ ಸಾಕ್ಷಾತ್ಕಾರಗಳನ್ನು ಸಾಧಿಸಿ ಪುನೀತರಾದ ಭಕ್ತರು, ತಾವು ಉದ್ಧಾರರಾಗುವುದಲ್ಲದೆ, ಇತ ರರನ್ನೂ ಉದ್ಧರಿಸಲು ಕಂಕಣಬದ್ಧರಾಗುವರು. ತಮ್ಮ ತಮ್ಮ ಧರ್ಮಗಳ ಪ್ರಮೇಯಗಳನ್ನು ಸಾರುವುದರೊಂದಿಗೆ, ಸಮಸ್ತ ಮಾನವ ಸಮುದಾಯಕ್ಕೂ ಅನ್ವಯಿಸುವಂತೆ ಕೆಲವು ಹಿತೋಕ್ತಿಗಳನ್ನು ಹೇಳಿರುವುದು ವಿಶೇಷ ಗಮನಾರ್ಹವಾದುವು. ಆತ್ಮ ಜ್ಞಾನಿಗಳಾದ ಸಂತರ ಮಾತಿನಲ್ಲಿ ಯಾರಿಗಾದರೂ ವಿಶ್ವಾಸವುಂಟಾಗುವುದು ಸಹಜ. ಪ್ರಕೃತದಲ್ಲಿ ಶಿವಶರಣರು ಮತ್ತು ಹರಿ ದಾಸರು ಬೋಧಿಸಿರುವ ಇಂಥ ಸಾರ್ವತ್ರಿಕ ತತ್ತ್ವಗಳಲ್ಲಿ ಕೆಲವನ್ನು ಇಲ್ಲಿ ನಿರೂಪಿಸಲಾಗಿದೆ.

ಉಭಯ ಪಂಥದವರಿಗೂ ಧರ್ಮದ ವಿಶಾಲದೃಷ್ಟಿಯೇನೆಂಬುದು ಸುಸ್ಪಷ್ಟವಾಗಿದೆ. 'ದಯವೇ ಧರ್ಮದ ಮೂಲ ವಯ್ಯಾ' 'ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ' ಎಂದು ಬಸವಣ್ಣನವರು ಸೂತ್ರಪ್ರಾಯವಾಗಿ ಹೇಳಿರುವುದನ್ನೇ ಪುರಂದರದಾಸರು 'ಧರ್ಮವೇ ಜಯವೆಂಬ ದಿವ್ಯಮಂತ್ರ, ಮರ್ಮವನರಿತು ಮಾಡಲಿಬೇಕು ತಂತ್ರ' ಎಂದು ಪಲ್ಲವಿಯಲ್ಲಿ ಸೂಚಿಸಿ, ಕೇಡು ಬಗೆದವರ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕಿಂತ ಸ್ನೇಹ ಬೆಳೆಸುವುದು ಅಗತ್ಯ ಎಂಬ ತತ್ತ್ವವನ್ನು ನಿದರ್ಶನ ಗಳನ್ನಿತ್ತು ಸಮರ್ಥಿಸಿರುವರು. 'ವಿಷವನಿಕ್ಕಿದವಗೆ ಷಡ್ರಸವನುಣಿಸಲಿಬೇಕು' 'ಕೊಂದ ವೈರಿಯ ಮನೆಗೆ ನಡೆದು ಹೋಗಲಿಬೇಕು' 'ಮೋಸ ಮಾಡಿದವನ ಹೆಸರು ಮಗನಿಗಿಡಲಿಬೇಕು' ಎಂಬುದಾಗಿ, ಒಂದೊಂದು ಪಂಕ್ತಿಯಲ್ಲಿಯೂ ಮಾನವನ ಹೃದಯದ ವೈಶಾಲ್ಯ ಎಷ್ಟು ದೂರ ವ್ಯಾಪಿಸಬಲ್ಲುದು ಎನ್ನುವ ಆದರ್ಶವನ್ನು ಎತ್ತಿ ಹಿಡಿಯುವರು. ಈ ಆದೇಶವಾದರೂ ಹೊಚ್ಚ ಹೊಸ ತಾದುದೇನೂ ಅಲ್ಲ. 'ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮ ದರ್ಶನಃ' ಎಂಬ ಭಗವದ್ಗೀತೆಯ ಉಪದೇಶದ ಸಾರವೇ ಆಗಿದೆ. ಆದರೆ, ಸಂತರು ತಾವು ನುಡಿಯುವ ಒಂದೊಂದು ಮಾತಿ ನಲ್ಲಿಯೂ ಸ್ವಾನುಭವ ಪ್ರಾಮಾಣ್ಯವಿರುವುದರಿಂದ ಕನ್ನಡದ ಈ ನುಡಿಗಳ ಮೌಲ್ಯ ಇಮ್ಮಡಿಯೆನ್ನಿಸಿ ಹೆಮ್ಮೆ ಪಡುವಂತಹವು.

ಮಾನವನ ಏಳುಬೀಳುಗಳಿಗೆಲ್ಲ ಅವನು ಆಡುವ ಮಾತುಗಳೇ ಕಾರಣ. ಆದ್ದರಿಂದ, ತ್ರಿಕರಣಗಳಲ್ಲಿ ವಚನಕ್ಕೊಂದು ಅಗ್ರಸ್ಥಾನ ಸಲ್ಲುತ್ತದೆ. ಶಿವಶರಣರು ನಡೆ ನುಡಿಗಳಿಗೆ ನೀಡಿರುವ ಮನ್ನಣೆ ಮಹತ್ತ್ವಪೂರ್ಣವಾದುದು. 'ಸತ್ಯದಲ್ಲಿ ನಡೆವುದು ಶೀಲ. ಸತ್ಯದಲ್ಲಿ ನುಡಿವುದು ಶೀಲ. ಸಜ್ಜನ ಸದಾಚಾರದಲ್ಲಿ ವರ್ತಿಸಿ, ಸತ್ಯವನರಿವುದೇ ಶೀಲ ಕಾಣಿರೋ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ' ಎಂಬ ವಚನದ ಮೂಲಕ ಶೀಲದ ಇತ್ಯರ್ಥ ಸತ್ಯವನ್ನು ಅವಲಂಬಿಸಿದೆಯೆಂದು ತಿಳಿದುಬರುತ್ತದೆ. ಪುರಂದರದಾಸರೂ ಸಹ 'ಸತ್ಯವೆಂಬುದೇ ಸ್ನಾನ, ಉಪವಾಸ, ಜಪ, ನೇಮ, ಅಸತ್ಯದಲಿ ಮಾಡುವ ಕರ್ಮವ್ಯರ್ಥ' ಎಂದು ಸತ್ಯಕ್ಕೂ ಪ್ರತಿನಿತ್ಯದ ಆಚರಣೆಗೂ ಇರುವ ಸಂಬಂಧವನ್ನು ತೋರಿಸಿಕೊಡುವುದೇ ಅಲ್ಲದೆ, ವಚನಸಾಧನವಾದ ನಾಲಿಗೆಯನ್ನು ಕುರಿತು 'ಆಚಾರವಿಲ್ಲದ ನಾಲಿಗೆ, ನಿನ್ನ ನೀಚ ಬುದ್ಧಿಯ ಬಿಡು ನಾಲಿಗೆ,' ಎಂದು ಅದರ ದುಷ್ಟ ಸ್ವಭಾವವನ್ನು ಬಹಳ ಚೆನ್ನಾಗಿ ತಿಳಿಯ ಹೇಳಿರುತ್ತಾರೆ. ವೇದೋಪನಿಷತ್ತುಗಳ ಕಾಲದಿಂದಲೂ 'ಸತ್ಯಂ ವದ, ಧರ್ಮಂ ಚರ' ಎಂಬ ಆರ್ಷೇಯ ವಾಕ್ಯ ಕೇಳಿ ಬರುತ್ತಲೇ ಇದೆ. ಆ ಹಿತೋಕ್ತಿಗಳನ್ನೇ ತಮ್ಮ ನಡೆ–ನುಡಿಗಳಲ್ಲಿ ಆಚರಿಸಿ, ಸಂತರು ಪ್ರಾಸಂಗಿಕವಾಗಿ ಹೇಳಿರುವುದು ಆ ತತ್ತ್ವ ನಮಗೆ ಮತ್ತಷ್ಟು ಆಪ್ಯಾಯಮಾನವಾಗುವಂತಿದೆ.

'ಮನುಜ ಶರೀರವಿದೇನುಸುಖ' ಎಂಬುದಾಗಿ ಮಾನವನ ಶರೀರಾಭಿಮಾನವನ್ನು ಖಂಡಿಸುವ ನೆಪದಲ್ಲಿ ಅದರ ಕ್ಷಣಿಕತೆ ಯನ್ನು ಪುರಂದರದಾಸರು ತೋರಿಸಿಕೊಟ್ಟರೂ, 'ಮಾನವಜನ್ಮ ದೊಡ್ಡದು, ಇದಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ' ಎಂದು ಮರ್ತ್ಯಜನ್ಮವನ್ನು ಕೊಂಡಾಡಿರುವುದನ್ನೂ ನಾವು ಮರೆಯಬಾರದು. ವಿಜಯದಾಸರು ಈ ಸಾಧನ ಶರೀರವನ್ನು ಹೊಗಳಿ ಹಿಗ್ಗಿರುವ ಸರಣಿ ಹೀಗಿದೆ.

> ಈ ದೇಹದಿಂದಲಿ ಸಾಧನ ಸಂಪತ್ತು ಈ ದೇಹದಿಂದಲಿ ಸಾಧುಗಳ ಸೇವೆ. ಈ ದೇಹದಿಂದಲಿ ಭೇದಾರ್ಥದ ಜ್ಞಾನ. ಈ ದೇಹದಲ್ಲಿ ಪೂರ್ಣಬೋಧರ ಮತವಿಡಿದು ಸಾಧಿಸುವಂತೆ ನೀ ದಯವನು ಹರಿಹಿ ಉದೀರ್ಣ ವಿಜಯವಿಠಲ ಭಕ್ತ ಕೃಪಾಳು, ಈ ದೇಹ ನಿಮ್ಮನಾಮದಿ ನಾದೊ ನಾದೊ.

ಮಾನವನ ಆತ್ಮಕಲ್ಯಾಣಕ್ಕೆ ಈ ನರಜನ್ಮ ಹಾಗೂ ಈ ನರದೇಹಗಳು ತುಂಬ ಪ್ರಶಸ್ತವಾದುವೆಂಬ ತಿಳಿವು ಮಹೋನ್ನತವಾದದ್ದು. ಇದೇ ರೀತಿ ವಚನಕಾರರೂ ಕಾಯಕದ ಹಿರಿಮೆಯನ್ನು ತೋರಿಸಿಕೊಡುವರು.

> ಕಾಯದಿಂದ ಗುರುವಕಂಡೆ, ಕಾಯದಿಂದ ಲಿಂಗವಕಂಡೆ. ಕಾಯದಿಂದ ಜಂಗಮುವ ಕಂಡೆ. ಕಾಯದಿಂದ ಪ್ರಸಾದವ ಕಂಡೆ. ಕಾಯದಿಂದ ಸಕಲೇಶ್ವರ ದೇವರ ಪೂಜಿಸುವಲ್ಲಿ, ಉತ್ತರಸಾಧಕನಾದೆಯಲ್ಲಾ, ಎಲೆ ಕಾಯವೆ.

ಅವರ ದೃಷ್ಟಿ ಇಷ್ಟಕ್ಕೇ ನಿಲ್ಲದೆ, ದೇಹವನ್ನೇ ದೇವಾಲಯವೆಂದು ಪರಿಗಣಿಸಿರುವುದು ಇನ್ನೂ ಅತಿಸಯವಾಮುದು. 'ಕಾಲೇ ಕಂಬಗಳೆನ್ನ ದೇಹವೇ ದೇಗುಲವಾಯಿತ್ತಯ್ಯ' ಎಂದು ಪ್ರಭುದೇವರು ನುಡಿದರೆ 'ಉಳ್ಳವರು ಶಿವಾಲಯುವ ಮಾಡುವರು; ನಾನೇನ ಮಾಡುವೆ ? ಬಡವನಯ್ಯಾ! ಎನ್ನ ಕಾಲೇ ಕಂಬ, ದೇಹವೇ ದೇಗುಲ, ಸಿರ ಹೊನ್ನ ಕಳಶವಯ್ಯಾ' ಎಂದು ಬಸವಣ್ಣನವರು ಮತ್ತಷ್ಟು ಮನವೊಲಿಯುವಂತೆ ಚಿತ್ರಿಸಿರುವರು. ಜನ್ಮ ಸಾಫಲ್ಯವನ್ನು ಪಡೆಯಬಯಸುವವರು ಮುಪ್ಪು ಮುತ್ತಿಗೆ ಹಾಕುವ ಮುನ್ನವೇ ಅನುವಾಗಬೇಕೆಂದು ಉಭಯ ಪಂಥದವರೂ ಉಪದೇಶಿಸಿರುವರು. 'ದಾಳಿ ಬಾರದ ಮುನ್ನ ಧರ್ಮವ ಗಳಿಸಿಕೊಳ್ಳಿರೊ' ಎಂದು ಪುರಂದರದಾಸರು ಎಚ್ಚರಿಸಿದರೆ, ಬಸವಣ್ಣನವರು 'ನೆರೆ ಕೆನ್ನೆಗೆ, ತೆರೆಗಲ್ಲಕೆ, ಶರೀರ ಗೂಡುವೋಗದ ಮುನ್ನ, ಹಲ್ಲುಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಂಗದ ಮುನ್ನ, ಕಾಲ ಮೇಲೆ ಕೈಯನ್ನೂರಿ ಕೋಲ ಹಿಡಿಯದ ಮುನ್ನ ಮುಪ್ಪಿಂದೊಪ್ಪವಳಿಯರ ಮುನ್ನ, ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲ ಸಂಗಮದೇವನ' ಎಂದು ವೃದ್ಧಾಪ್ಯದ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವರು.

ಪರಿಶುದ್ಧವಾದ ಮನಸ್ಸು. ಪರಿಶುದ್ಧವಾದ ಭಕ್ತಿ, ಪರಿಶುದ್ಧವಾದ ನಡೆನುಡಿಗಳನ್ನು ಪ್ರತಿಪಾದಿಸುವ ಈ ಸಂತರಲ್ಲಿ ಯಾರೊಬ್ಬರಿಗೂ ಡಂಭಾಚಾರವನ್ನು ಕಂಡರೆ ಸಹಿಸುವುದಿಲ್ಲ. ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ ? ತೊತ್ತು ಬಲ್ಲಳೆ ಗುರು ಹಿರಿಯರುತ್ತಮರೆಂಬುದ? ಭಕ್ತಿಯರಿಯದ ವ್ಯರ್ಥಜೀವಿಗಳು ನಿಮ್ಮನೆತ್ತ ಬಲ್ಲರೈ ರಾಮನಾಥಾ?' ಎಂದು ದೇವರದಾಸಿಮಯ್ಯನು ದಿಟ್ಟತನದಿಂದ ಖಂಡಿಸಿದರೆ, 'ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶಭಕುತಿಯಿಲ್ಲ' ಎಂದು ಪುರಂದರದಾಸರು ಆಡಂಬರದ ಪೂಜೆಯನ್ನು ಕಟುವಾಗಿ ಧಿಕ್ಕರಿಸಿರುವರು.

ಹೊನ್ನು, ಹೆಣ್ಣು, ಮಣ್ಣುಗಳ ಆಸೆಗೆ ಸಿಕ್ಕಿ ದಾಸಿಯಾಗುವವರನ್ನು ಕಂಡು, ಇಬ್ಬರೂ ಒಂದೇ ರೀತಿಯಾಗಿ ಎಚ್ಚರಿಸಿದ್ದಾರೆ. 'ಹೊನ್ನು, ಹೆಣ್ಣು ಮಣ್ಣೆಂಬ ಸೊಕ್ಕನಿಕ್ಕಿಸಿ ಕೆಡಹಿದನಯ್ಯ ಜೀವರ ಮುಕ್ಕಣ್ಣ ಶಿವನು' ಎಂದುದಾಗಿ ಸ್ವತಂತ್ರ ಲಿಂಗೇಶ್ವರನು ಆಕ್ಷೇಪವೆತ್ತಿದ್ದರೆ, ಪ್ರಭುದೇವರು ಈ ಆಕರ್ಷಣೆಗಳ ಬೇರನ್ನೇ ಬಗಿದು, ಮತ್ತಷ್ಟು ಮನೋಜ್ಞವಾಗಿ 'ಹೊನ್ನು ಮಾಯೆಯೆಬರು, ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ. ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ' ಎಂದು ನಿರೂಪಿಸಿರುವರು. ಪುರಂದರ ದಾಸರು 'ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ, ನಾರಿಯೇ ಧಾರುಣಿಯೋ, ಬಲುಧನದಸಿರಿಯೋ?' ಎಂದು ಪ್ರಶ್ನಿಸಿ, ಒಬ್ಬೊಬ್ಬರಿಂದಲೂ ಆಗಬಹುದಾದ ಆಪತ್ತುಗಳನ್ನು ವಿವರಿಸಿರುವರು.

ಸಮಾಜದ ಲೋಪದೋಷಗಳನ್ನು, ಕುಂದು ಕೊರತೆಗಳನ್ನು ಈ ಉಭಯ ಪಂಥದವರೂ ಧಾರ್ಮಿಕ ದೃಷ್ಟಿಯಿಂದ ಅಳೆದು ನೋಡಿ ತಿಳಿಸಿರುವರು. ಅವುಗಳ ವಿವರ ಅನಗತ್ಯವೆಂದು ಇಲ್ಲಿ ಪ್ರಸ್ತಾವಿಸಿಲ್ಲ.

ಈವರೆಗೆ ಈ ಉಭಯ ಭಕ್ತಿ ಪಂಥದವರಲ್ಲಿ ಕಂಡುಬರುವ ಹೋಲಿಕೆಗಳನ್ನೇ ಪರಿಶೀಲಿಸಿದೆವಷ್ಟೆ. ಈಗ ಈ ಇಬ್ಬರ ವಿಚಾರಧಾರೆಗಳಲ್ಲಿ ತೋರಿಬರುವ ಕೆಲವು ವೈಶಿಷ್ಟ್ಯಗಳನ್ನು ಇಲ್ಲಿ ಹೇಳುವುದು ಯುಕ್ತವೆಂದು ತೋರುತ್ತದೆ. ತಾತ್ವಿಕವಾಗಿ ಶಿವಶರಣರು ಅದ್ವೈತವನ್ನು ಒಪ್ಪಿ ನಡೆದರೆ, ಹರಿದಾಸರು ದ್ವೈತ ಸಿದ್ಧಾಂತವನ್ನು ಅನುಸರಿಸುವವರು. ಈ ಮೊದಲು ವೈದಿಕ ಧರ್ಮವನ್ನು ಬೌದ್ಧ, ಜೈನ, ಮತೀಯರು ತಿರಸ್ಕರಿಸಿ ಹೊಸ ಹೊಸ ಸಿದ್ಧಾಂತಗಳನ್ನು ಪ್ರತಿಪಾದಿಸಿದರೂ ವೀರಶೈವರು ಅದರಲ್ಲಿ ಅಡಕವಾಗಿರುವ ಕರ್ಮಾನುಷ್ಠಾನಗಳು ಮತ್ತು ವರ್ಣಾಶ್ರಮಪದ್ಧತಿಗಳನ್ನು ವಿಶೇಷವಾಗಿ ಒಪ್ಪದೆ ನಿರ್ದಾಕ್ಷಿಣ್ಯವಾಗಿ ಖಂಡಿಸಿರುವುದನ್ನು ಕಾಣಬಹುದು. ಇದರಿಂದ ಶಿವಶರಣರ ವಚನಗಳಲ್ಲಿ ವೇದೋಕ್ತವಾದ ಕೆಲವು ಆಚರಣೆಗಳನ್ನು ಅಕ್ಷೇಪಿಸಿರುವಂತೆಯೇ ವೇದ, ಪುರಾಣ, ಮೊದಲಾದವುಗಳ ಬಗ್ಗೆಯೂ ಅಗ್ರಹವು ವ್ಯಕ್ತವಾಗುವುದು. 'ವೇದವೆಂಬುದು ಓದಿನ ಮಾತು. ಶಾಸ್ತ್ರವೆಂಬುದು ಸಂತೆಯ ಸುದ್ದಿ. ಪುರಾಣವೆಂಬುದು ಪುಂಡರ ಗೋಷ್ಠಿ. ತರ್ಕವೆಂಬುದು ತಗರ ಹೋರಟೆ. ಭಕ್ತಿಯೆಂಬುದು ತೋರುಂಬ ಲಾಭ. ಗುಹೇಶ್ವರನೆಂಬುದು ಮೀರಿದ ಘನವು' ಎಂಬ ಪ್ರಭುದೇವರ ವಚನವೊಂದನ್ನು ಇಲ್ಲಿ ನಿದರ್ಶನವನ್ನಾಗಿ ತೆಗೆದುಕೊಳ್ಳಬಹುದು. ಇಂಥವು ನೂರಾರು ಸಿಕ್ಕುತ್ತವೆ. ಹರಿದಾಸರಾದರೋ ವೈದಿಕ ಮತಾನುಯಾಯಿಗಳಾದುದರಿಂದ ಅವ

ರಿಗೆ ವೇದೋಪನಿಷತ್ತುಗಳು ಪರಮ ಪ್ರಮಾಣ. ಅನ್ಯಮತೀಯರಾದ ಕನಕದಾಸರೂ ಸಹ 'ಸಮಿಸುಡಿ ವೇದ ಪುರಾಣ ಶಾಸ್ತ್ರಂಗಳ ಕಿವಿಯಿಂದ ಕೇಳುವ ಕಥೆ ನಿನ್ನದು' ಎಂದು ಅವುಗಳಲ್ಲಿ ತಮಗಿರುವ ಅಚಲ ವಿಶ್ವಾಸವನ್ನು ವ್ಯಕ್ತಪಡಿಸಿರುವರು. ವರ್ಣಾಶ್ರಮಪದ್ಧತಿಯನ್ನು ಮೀರಿದ ಒಂದು ಪಂಥವನ್ನೇ ಪ್ರಾರಂಭಿಸಬೇಕೆಂಬ ಛಲದಿಂದ ವೀರಶೈವ ಧರ್ಮವು ಜನ್ಮ ತಾಳಿದುದರಿಂದ ಈ ಬಗ್ಗೆ ಶಿವಶರಣರು ಭಿನ್ನಾಭಿಪ್ರಾಯ ವ್ಯಕ್ತಪಡಿಸುವುದು ಸಹಜವೇ ಸರಿ. 'ಸೆಟ್ಟಿಯೆಂಬೆನೆ ಸಿರಿಯಾಳನ ? ಮಡಿವಾಳನೆಂಬೆನೆ ಮಾಚಯ್ಯನ, ಡೋಹಾರನೆಂಬೆನೆ ಕಕ್ಕಯ್ಯನ ? ಮಾದಾರನೆಂಬೆನೆ ಚನ್ನಯ್ಯನ ? ಅನು ಹಾರುವನೆಂದರೆ ಕೂಡಲ ಸಂಗಯ್ಯ ನಗುವನಯ್ಯಾ ?' ಎಂಬ ಬಸವಣ್ಣನವರು ವಚನದಲ್ಲಿ ಶಿವಭಕ್ತರ ಕುಲವನರಸುವುದು ತರವಲ್ಲವೆಂಬ ತತ್ವ ದೃಢವಾಗುತ್ತದೆ. ಅವರು 'ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು' ಎಂದು ಸಂಬಿದ್ದಂಥವರು. ಈ ರೀತಿ ಬೇರೆಬೇರೆ ಮತೀಯರು ವೀರಶೈವ ಧರ್ಮವನ್ನು ಒಪ್ಪಿ ಸ್ವೀಕರಿಸಿ ಅದರ ಅನುಯಾಯಿಗಳಾದರೂ, ಅವರು ತಮ್ಮ ತಮ್ಮ ಕಾಯಕಗಳನ್ನು ಮಾತ್ರ ಬಿಡುವಂತಿರಲಿಲ್ಲ ಎಂಬ ಅಂಶ ಗಮನಾರ್ಹವಾದದ್ದು ಈ ಸಲುವಾಗಿ ವೀರಶೈವ ಧರ್ಮದ ಬಹಳ ದೊಡ್ಡ ಕೊಡುಗೆಯೆಂದರೆ 'ಕಾಯಕವೇ ಕೈಲಾಸ' ಎಂಬ ಸದ್ಭಾವನೆ. ಸಂಪ್ರದಾಯ ನಿಷ್ಠರಾದ ಹರಿದಾಸರಲ್ಲಿ ಈ ಪ್ರಶ್ನೆ ಉದ್ಭವಿಸಿರಲಿಲ್ಲ. ಆದರೂ ಅಲ್ಲಿ ಕುಲದ ವಿಚಾರವಾಗಿ ಅಭಿಪ್ರಾಯಗಳು ಕೇಳಿಬಾರದೆ ಇಲ್ಲ ಕನಕದಾಸರು 'ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯೇನಾದರೂ ಬಲ್ಲಿರಾ ?' ಎಂದು ಸವಾಲು ಹಾಕಿ, ಆ ಬಗ್ಗೆ ಜನರಿಗೆ ತಿಳಿವನ್ನು ಹೇಳಿ 'ಹರಿಯೇ ಸರ್ವೋತ್ತಮ, ಹರಿಯೇ ಸರ್ವೇಶ್ವರ, ಹರಿಮಯವೆಲ್ಲವೆನುತ ತಿಳಿದು' ವರ್ತಿಸುವ ಹರಿಭಕ್ತನೇ ಕುಲಜನೆಂದು ಮುಂದಟ್ಟುಮಾಡಿಕೊಡುವರು. ಪುರಂದರದಾಸರು 'ಹೊಲೆಯ ಬಂದಾನೆಂದು ಒಳಗೆ ದೇವರ ಮಾಡ, ಗಣ ಗಣ ಗಂಟೆಯ ಬಾರಿಸುವರಯ್ಯಾ ತನುವಿನ ಕೋಪವು ಹೊಲೆಯಲ್ಲವೆ. ಪರಧನ, ಪರಸತಿ, ಹೊಲೆಯಲ್ಲವೆ? ಎಂದು ಈ ಅಂಶವನ್ನು, ದುರಾಚಾರ ದುರಹಂಕಾರಗಳನ್ನು ಖಂಡಿಸುವ ನೆಪದಲ್ಲಿ ಪ್ರಸ್ತಾಪಿಸಿರುವರು. ಸಂಪ್ರದಾಯದ ವಾತಾವರಣದಲ್ಲಿ ಈ ಬಗೆಯ ಮೊಳಗು ಕೇಳಿ ಬರುವುದೇ ಒಂದು ಆತಿಶಯ !

ಕನ್ನಡನಾಡು–ನುಡಿಗಳಲ್ಲಿ ಭಕ್ತಿಯುಗವನ್ನು ಮೊದಲುಮಾಡಿ, ಸಮಾಜ ಮತ್ತು ಸಾಹಿತ್ಯಗಳಿಗೆ ಹೊಸ ಸ್ವರೂಪವನ್ನು ತೋರಿಸಿಕೊಟ್ಟ ಶಿವಶರಣರ ಮಹತ್ಕಾರ್ಯ ಕ್ರಿ.ಶ. ಹನ್ನೆರಡನೆಯ ಶತಮಾನದಿಂದ ಮೊದಲ್ಗೊಂಡು, ಕ್ರಮಕ್ರಮವಾಗಿ ಕಡಮೆಯಾಗುವ ವೇಳೆಗೆ, ಕ್ರಿ.ಶ. ಹದಿನೈದನೆಯ ಶತಮಾನದಿಂದ ಹರಿಭಕ್ತರು ಈ ಭಕ್ತಿ ಸಾಹಿತ್ಯಪರಂಪರೆಯನ್ನು ಬೇರೊಂದು ಪ್ರಕಾರದಲ್ಲಿ ಮುಂದುವರಿಸಿಕೊಂಡು ಹೋದುದು ಮೆಚ್ಚುವಂತಹುದು. ಹೃದಯಾಂತರಾಳದಿಂದ ಹೊರಹೊಮ್ಮಿದ ಈ ಸಂತರ ಕನ್ನಡ ವಾಣಿ ಕನ್ನಡಸಾಹಿತ್ಯದ ಸ್ವರೂಪಕ್ಕೇ ಒಂದು ಹೊಸ ತಿರುವನ್ನು ಕೊಟ್ಟಿತು. ವಚನಸಾಹಿತ್ಯದ ಶಿವಭಕ್ತಿಯಿಂದ ಪ್ರೇರಿತರಾಗಿ ಹಲವಾರು ಶ್ರೇಷ್ಠ ವೀರಶೈವ ಕವಿಗಳ ಪರಂಪರೆಯೊಂದು ತೋರಿಬಂದಂತೆ, ಕೀರ್ತನಸಾಹಿತ್ಯದ ಸ್ಫೂರ್ತಿಯಿಂದ ಭಗವದ್ಭಕ್ತಿಯನ್ನೇ ಸಾರಿ ಹೇಳುವ ಉದ್ದಾಮ ವೈದಿಕ ಕವಿಗಳೂ ಉದಿಸಿಬಂದರು. ಶಿವಶರಣರ ಕ್ರಾಂತಿದೃಷ್ಟಿಯ ಫಲವಾಗಿ ವೇದಾದಿ ಗ್ರಂಥಗಳಲ್ಲಿ ಅಡಕವಾಗಿದ್ದ ಧಾರ್ಮಿಕ ವಿಚಾರಗಳು ಕನ್ನಡ ಭಕ್ತಿಸಾಹಿತ್ಯಕ್ಕೆ ಹೊರತಾಗಿದ್ದುವು, ಈ ಕೊರತೆಯನ್ನು ವೈಷ್ಣವದಾಸರು ತುಂಬಿಕೊಟ್ಟಿದ್ದು ಮಹದುಪಕಾರವೇ ಸರಿ, ಉಭಯ ಪಂಥಗಳಲ್ಲಿಯೂ ಮೊದ ಮೊದಲು ತೋರಿಬಂದ ಉಜ್ವಲತೆ, ಕಾಲ ಕಳೆದಂತೆಲ್ಲ ಚರ್ವಿತಚರ್ವಣವಾಗಿ ನೀರಸವಾದದ್ದನ್ನು ಅಲ್ಲಗಳೆಯುವಂತಿಲ್ಲ. ಆದರೆ ವಚನಕಾರರ ಪದ್ಯಗಂಧಿಯಾದ ಹೃದಯಂಗಮ ಗದ್ಯ, ಕೀರ್ತನಕಾರರ ಸಂಗೀತಮಾಧುರ್ಯಮಿಶ್ರಿತವಾದ ಕನ್ನಡದ ವಿವಿಧ ಕೃತಿ ಪ್ರಕಾರಗಳು ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯಾದುವು. ಹನ್ನೆರಡನೆಯ ಶತಮಾನದಿಂದ ಮೊದಲ್ಗೊಂಡು ಹದಿನೆಂಟನೆಯ ಶತಮಾನದವರೆಗೆ ವ್ಯಾಪಿಸಿರುವ ಈ ದೀರ್ಘಾವಧಿಯನ್ನು ಕನ್ನಡ ಸಂತಸಾಹಿತ್ಯ ಯುಗವೆಂದೇ ನಾವು ಪರಿಗಣಿಸಬಹುದು. ಜನಸಮುದಾಯದ ಆಧ್ಯಾತ್ಮಿಕ ಶ್ರೇಯಸ್ಸಿನ ಸಲುವಾಗಿ ಹೊರಹೊಮ್ಮಿದ ಈ ಉಭಯ ಪಂಥಗಳು ಪಂಡಿತರ ಮನ್ನಣೆಗೂ ಪಾತ್ರವಾದುವು. ಕನ್ನಡ ವಚನಗಳನ್ನು ಕನ್ನಡದ ಉಪನಿಷತ್ತುಗಳೆಂದು ಇಂದಿನ ವಿದ್ವಾಂಸರು ಕೊಂಡಾಡಿರುವಂತೆಯೇ, 'ಆದ್ಯರ ವಚನ ಪರುಷ ಕಂಡಯ್ಯ' ಎಂಬ ಮಾತನ್ನು ಅಂದೇ ವಚನಕಾರರು ಆಡಿರುತ್ತಾರೆ. ಪುರಂದರದಾಸರ ಕೃತಿಗಳನ್ನು ಶ್ರೀವ್ಯಾಸರಾಯರು 'ಪುರಂದರೋಪನಿಷತ್ತು' ಎಂದು ಗೌರವಿಸಿದಂತೆ, 'ಸುಧಾ ಓದಿ ಪದಾ ಹೇಳು' ಎಂಬ ನಾಣ್ಣುಡಿ ಹರಿದಾಸಸಾಹಿತ್ಯದ ಹಿರಿಮೆಗೆ ಬಹು ದೊಡ್ಡ ಸಾಕ್ಷಿ. ಹರಿ–ಹರ ಮೂರ್ತಿಕಲ್ಪನೆಯಲ್ಲಿ ಕಂಡು ಬರುವ ಅಪೂರ್ವವೂ, ಅತಿಶಯವೂ ಆದ ಸಾಮರಸ್ಯದಷ್ಟೇ, ಈ ಉಭಯ ಸಂತರ ಸಾಹಿತ್ಯದ ಸೃಷ್ಟಿಯಲ್ಲಿಯೂ ಮನಮೆಚ್ಚುವ ಸಾದೃಶ್ಯ ಸೌಂದರ್ಯವನ್ನು ಗಾಢವಾದ ಅಧ್ಯಯನದಿಂದ ಕಾಣಬಹುದು.

# ಔತ್ತರೇಯ ಸಂತರ ಮೇಲೆ ವೀರಶೈವ ಪ್ರಭಾವ

—ಮ. ಸು. ಕೃಷ್ಣಮೂರ್ತಿ

ಮಧ್ಯಯುಗದ ಧರ್ಮಸಾಧನೆಯ ಇತಿಹಾಸದಲ್ಲಿ ವೀರಶೈವಕ್ಕೆ ವಿಶಿಷ್ಟವಾದ ಸ್ಥಾನವಿದೆ. 'ಆಚಾರ ಪ್ರಭವೋ ಧರ್ಮಃ' ಎಂಬಂತೆ ಈ ಧರ್ಮ ಆಚಾರಪ್ರಧಾನವಾದುದು. ಸದಾಚಾರ ಹಾಗೂ ಸ್ವಾನುಭೂತಿ ಮಧ್ಯಯುಗದ ಭಕ್ತಿ ಆಂದೋಳನದ ಎರಡು ಕಣ್ಣುಗಳೆನ್ನಬಹುದು. ಹದಿನೈದನೆಯ ಶತಮಾನದಲ್ಲಿ ಜನಿಸಿದ ಸಂತ ಕಬೀರ ಉತ್ತರದ ಆದಿಸಂತನೆಂದು ಸಂತಮತಪ್ರವರ್ತನೆಂದು ವಿಖ್ಯಾತನಾಗಿದ್ದಾನೆ. ಆತನ ನಿರ್ದಿಗಂತ ವಿಚಾರಧಾರೆಬುದ್ಧಿ ಭಾವಗಳ ವಿದ್ಯುದಾಲಿಂಗನ, ಸತ್ಯ ನಿಷ್ಠುರತೆ ಮತ್ತು ಮಾನವತಾವಾದ ಆತನನ್ನು ವಿಶ್ವಸಂತನನ್ನಾಗಿ ಮಾಡಿವೆ. ಆತನ ಅಸ್ಖಲಿಕ ವಾಣಿ ಹಿಂದೀಸಾಹಿತ್ಯದ ತಮ ನಿಧಿಗಳಲ್ಲಿ ಒಂದಾಗಿದೆ. ಕಬೀರನ ತರುವಾಯ ಉತ್ತರ ಭಾರತದಲ್ಲಿ ದಾದೂಪಂಥ, ರೈದಾಸಿ ಸಂಪ್ರದಾಯ, ನಾನಕ್ ಪಂಥ್ (ಸಿಕ್ಖಧರ್ಮ), ಶಿವನಾರಾಯಣೀ ಪಂಥ ಮೊದಲಾದ ಹತ್ತಾರು ನಿರ್ಗುಣ ಪಂಥಗಳು ಹುಟ್ಟಿಕೊಂಡವು. ಅವೆಲ್ಲಕ್ಕೂ ಕಬೀರನೇ ಗಣಿ. ಮುಂದಿನ ಧರ್ಮ ಪಂಥಗಳಿಗೆ ಗಣಿಯಾಗಿರುವಂತೆ ತನ್ನ ಹಿಂದಿನ ಧರ್ಮಪಂಥಗಳಿಗೆ ಋಣಿಯೂ ಆಗಿದ್ದಾನೆ. ಭಕ್ತಿ ಪಂಥದ ಉಗಮವನ್ನು ಕುರಿತು ಹೇಳುತ್ತ ಕಬೀರ ತನ್ನ ಋಣವನ್ನು ಹೀಗೆ ಒಪ್ಪಿಕೊಂಡಿದ್ದಾನೆ:–

'ಭಕ್ತಿ ದ್ರಾವಿಡ ಊಪಜೀಲಾಯೇ ರಾಮಾನಂದ್ ಪರಗಟ ಕಿಯೋ ಕಬೀರನೇ ಸಾತದ್ವೀಪ ನವಖಂಡ್'

(ಭಕ್ತಿ ದ್ರಾವಿಡ ದೇಶದಲ್ಲಿ ಜನಿಸಿತು. ಅದನ್ನು ಉತ್ತರಕ್ಕೆ ರಾಮಾನಂದರು ತಂದರು. ಅದನ್ನು ಸಪ್ತದ್ವೀಪ, ನವಖಂಡಗಳಲ್ಲಿ ಕಬೀರ ಹರಡಿದ.) ಈ ರೀತಿ ಭಾರತದಲ್ಲೆಲ್ಲ ಹಬ್ಬಿದ ಭಕ್ತಿ ಆಂದೋಳನ ಜನಾಂದೋಳನವಾಗಿ ದೀನ ಹೀನ ಜನತೆಗೆ ತಾರಕ ಶಕ್ತಿಯಾಗಿ ವಿಜೃಂಭಿಸಿತು. ಈ ಭಕ್ತಿ ಆಂದೋಳನದ ಪ್ರಮುಖ ಸಿದ್ಧಾಂತಗಳನ್ನು ವಿದ್ವಾಂಸರು ಹೀಗೆ ಗುರುತಿಸಿದ್ದಾರೆ.

೧) ಪ್ರೇಮವೇ ಪರಮಪುರುಷಾರ್ಥ. ಮೋಕ್ಷವಲ್ಲ. 'ಪ್ರೇಮಾ ಪುಮರ್ಥೋ ಮಹಾನ್' ೨) ದೈಹೀ ಪ್ರೇಮ ಕೌಲಿನ್ಯಕ್ಕಿಂತ ದೊಡ್ಡದು. ೩) ಭಕ್ತ ದೇವರಿಗಿಂತ ದೊಡ್ಡವನು. ೪) ಭಕ್ತಿಯಿಲ್ಲದ ಶಾಸ್ತ್ರಜ್ಞಾನ, ಪಾಂಡಿತ್ಯವೆಲ್ಲ ವ್ಯರ್ಥ. ೫) ನಾಮ ರೂಪಕ್ಕಿಂತ ದೊಡ್ಡದು.

ಕಬೀರ ಬೆಳೆಸಿದ ಈ ಸಂತಮತದ ಕೆಲ ಅಂಶಗಳು ಮಹಾರಾಷ್ಟ್ರದ ಸಂತ ನಾಮದೇವನಲ್ಲೇ ಕಂಡುಬರುತ್ತವೆ. ಕಬೀರ ಜಯದೇವ ಮತ್ತು ನಾಮದೇವರನ್ನು ಆದರ್ಶ ಸಂತರೆಂದು ಭಕ್ತಿಯಿಂದ ಸ್ಮರಿಸಿದ್ದಾನೆ:

'ಗುರು ಪರಸಾದೀ ಜೈದೇವ ನಾಮಾ । ಭಗವತಿಕೇ ಪ್ರೇಮ ಇನ್ಹ ಹಿಜಾನಾ ।'[1]

ಅಷ್ಟೇ ಅಲ್ಲ 'ನಿರ್ಗುಣ ಭಕ್ತಿ'ಯ ಕಲ್ಪನೆಕೂಡ ಕಬೀರನಿಗೆ ಮರಾಠೀ ಸಂತರಿಂದ ದೊರೆಯಿತೆಂದು ಹಿಂದಿಯ ವಿದ್ವಾಂಸರಾದ ಡಾ. ವಿನಯಮೋಹನ ಶರ್ಮಾ ಅವರು ತಮ್ಮ 'ಹಿಂದಿಗೆ ಮರಾಠೀ ಸಂತರ ಕೊಡುಗೆ' (ಹಿಂದೀ ಕೋ ಮರಾಠೀ ಸಂತೋಂಕೀ ದೇನ್) ಎಂಬ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ. ತಮ್ಮ ಗ್ರಂಥದ ಪೀಠಿಕಾ ಪ್ರಕರಣದಲ್ಲಿ ಅವರು ಹೀಗೆ ಹೇಳಿದ್ದಾರೆ: ಉತ್ತರ ಭಾರತದ ಜ್ಞಾನಾಶ್ರಯೀ ಶಾಖೆಯ ಹಿಂದೀ ಸಂತರು ಯಾವ ನಿರ್ಗುಣ ಧಾರೆಯಿಂದ ಜನಮನವನ್ನು ತಣಿಸಿದರೋ ಅದರ ಮೂಲ ಸೆಲೆ ಮರಾಠೀ ಸಂತ ನಾಮದೇವನ ಹಿಂದೀ ಪದಗಳಲ್ಲಿ ಹುದುಗಿದೆ. ನಾಮದೇವನಿಗೂ ಹಿಂದೆ ಉತ್ತರಾಖಂಡ ಮತ್ತು ದಕ್ಷಿಣಾಪಥಗಳಲ್ಲಿ ಸಿದ್ಧರು (ಬೌದ್ಧಸಿದ್ಧರು) ಹಾಗೂ ನಾಥರು (ನವನಾಥರು) ನಿರ್ಗುಣ ಮತವನ್ನೇನೋ ಪ್ರಚಾರ ಮಾಡಿದ್ದರು. ಆದರೆ ಅದರಲ್ಲಿ ಹೃದಯವನ್ನು ಮುಗ್ಧಗೊಳಿಸುವ ರಾಗರಸವಿರಲಿಲ್ಲ. ಅದು ಕೇವಲ ಶುಷ್ಕಜ್ಞಾನವಾಗಿತ್ತು. ಮೊದಲು ವಿಠೋಬನ ಮೂರ್ತಿಯ ಉಪಾಸಕನಾಗಿದ್ದ ನಾಮದೇವ ಜ್ಞಾನೇಶ್ವರ ಮತ್ತು ಆತನ ತಂಗಿ ಮುಕ್ತಾಬಾಯಿಯ ಪ್ರೇರಣೆಯಿಂದ ನಾಥಪಂಥದ ವಿಸೋಬಾ ಖೇಚರನ ಶಿಷ್ಯನಾಗಿ 'ನಿರ್ಗುಣಪಂಥಿ'ಯಾದನು, ಆದರೆ ಆತನ ಹೃದಯದ ಮೇಲೆ ಅಂಕಿತವಾಗಿದ್ದ ವಿಟ್ಠಲನ ಪ್ರತಿಮೆ ಜ್ಞಾನದಿಂದ ಆವೃತ್ತವಾಗಲಿಲ್ಲ, ಅದರಲ್ಲಿ ಇಷ್ಟು ಮಾತ್ರ ಮಾರ್ಪಾಟಾಯಿತು: ಮೊದಲು ಚಂದ್ರಭಾಗಾ ನದಿಯ ದಂಡೆಯ ಮೇಲಿನ ಪಂಡರಪುರದ ದೇವಾಲಯದಲ್ಲಿ ಮಾತ್ರ ಕಾಣುತ್ತಿದ್ದ ವಿಟ್ಠಲ ಈಗ ಅವನಿಗೆ ಅತ್ತ, ಇತ್ತ, ಎತ್ತೆತ್ತಲೂ ಕಾಣತೊಡಗಿದ ಮತ್ತು ವಿಟ್ಠಲನಿಲ್ಲದೆ ಜಗತ್ತಿಲ್ಲ ಎನ್ನಿಸತೊಡಗಿತು......ಆತನ ಜ್ಞಾನಸಮನ್ವಿತ ರಾಗ ಭಾವನೆಯನ್ನು 'ನಿರ್ಗುಣ ಭಕ್ತಿ' ಎಂದು ಕರೆಯಬಹುದು. ಇದನ್ನು ಆತ ತನ್ನ ಹಿಂದೀಪದಗಳ ಮೂಲಕ ಉತ್ತರ ಭಾರತದಲ್ಲಿ ಸಂಚರಿಸಿ ತನ್ನ ತರುವಾಯ ಬಂದ ನಿರ್ಗುಣ ಸಂತರ ಮಾರ್ಗವನ್ನು ಪ್ರಶಸ್ತಗೊಳಿಸಿದ......ಭಕ್ತಿ ಮತ್ತು ಕೇವಲಾದ್ವೈತದಲ್ಲಿ ವಿರೋಧವಿಲ್ಲವೆಂಬುದನ್ನು ಮರಾಠೀ ಸಂತರು ತಮ್ಮ ವಾಣಿಯಿಂದ ಸಿದ್ಧಪಡಿಸಿದ್ದಾರೆ[1A]. ಜ್ಞಾನದೇವ, ನಾಮದೇವರ ಕಾಲ

---

1. ಕಬೀರ ಗ್ರಂಥಾವಳೀ ಪು. ೩೨೮

1A. ಹಿಂದೀಕೋ ಮರಾಠೀ ಸಂತೋಂಕೀದೇನ್ : ಡಾ। ವಿನಯಮೋಹನ ಶರ್ಮಾ, ಪೀಠಿಕೆ.

ನಲ್ಲಿ ಪಂಡರಪುರ ಕನ್ನಡದ ಗಂಡುಮೆಟ್ಟಾಗಿತ್ತು, ವಿಟ್ಠಲ ಕನ್ನಡಿಗರ ಅಧಿದೈವ 'ಕಾನಡೇ ವಿಟ್ಠಲ ಪಂಢರಿಯೇ' ಎಂದು ಮಹಾರಾಷ್ಟ್ರ ಸಂತರೇ ಸಾರಿ ಹೇಳಿದ್ದಾರೆ. ಹೀಗಿರುವಾಗ ೧೨ನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಆಗಿಹೋದ ಧಾರ್ಮಿಕ ಕ್ರಾಂತಿಯು ಹೇಗೆ ಈ ಮರಾಠೀ ಸಂತರಿಗೆ ತಟ್ಟಲಿಲ್ಲವೆಂದು ಹೇಗೆ ಹೇಳುವುದು ? ನಾಮದೇವ ಬಸವೇಶ್ವರನ ಹೆಸರು ಹೇಳದಿದ್ದರೂ ಆತನ ಮೇಲೆ ಬಸವಣ್ಣನವರ ಪ್ರಭಾವ ಸಾಕಷ್ಟು ಇದ್ದಿರಬೇಕು. ನಾಮದೇವನ ಪದವೊಂದು ಬಸವಣ್ಣನವರ ವಚನದ ಅನುವಾದದಂತಿದೆ :—

'ಆನೀಲೇ ಕುಂಭ ಭರಾಯಿಲೇ ಉದಕ ಠಾಕುರ ಕಲು ಇಸ್ನಾನ ಕರಲು
ಬಇಆಲೀಸ ಲಷ ಜೀಜಲಮಹಿ ಹೋತೇ, ಬೀಠಲು ಭೈಲಾ ಕಾಇ ಕರಲು ॥೧॥
ಜತ ಜಾಉ ತತ ಬೀಠಲು ಭೈಲಾ। ಮಹಾ ಅನಂದಕರೇ ಸದಕೇಲಾ ॥
ಆನೀಲೇ ಫೂಲ ಪರೋಈಲೇ ಮಾಲಾ, ಠಾಕುರಕೀ ಹಉ ಪೂಜಕರಲು
ಪಹಿಲೇ ಬಾಸುಲಈಹೈ ಭವರಹ, ಬೀಠಲು ಭೈಲಾ ಕಾಇ ಕರಲು ॥೨॥
ಆನೀಲೇ ದೂಧು ರೀಧಾಈಲೇ ಕ್ಷೀರಂ, ಠಾಕುರ ಕಉ ನೈವೇದ ಕರಲು
ಪಹಿಲೇ ದೂಧು ಬಿಟಾರಿಉ ಬಛರೈ, ಬೀಠಲು ಭೈಲಾಕಾಇ ಕರಲು ॥೩॥
ಈಭೈ ಬೀಠಲು ಊಭೈ ಬೀಠಲು, ಬೀಠಲಬಿನು ಸಂಸಾರ ನಹೀ ॥
ಥಾನ ಥನಂತರಿ ನಾಮಾ ಪ್ರಣವೈ, ಪೂರಿ ರಹಿಉ ತೂಂ ಸರಬಮಹೀ ॥೪॥[2]

(ಅಂಭ ತುಂಬಿಹುದು ಕುಂಭದಲಿ, ನಾನಭಿಷೇಕವ ಮಾಡಬಯಸುವೆ ಒಡೆಯನಿಗೆ, ನಲವತ್ತೆರಡು ಲಕ್ಷ ಜೀವಜಂತುಗಳಿಹವು ಜಲದಲಿ, ಎಂತುಗೈಯಲಿ ಅಭಿಷೇಕವ? ಎತ್ತ ನೋಡಿದರತ್ತ ಎಂಜಲು. ಹೂವ ಕೊಯ್ದು ಮಾಲೆ ಮಾಡಿ ಅರ್ಪಿಸಲೆಂದಡೆ ಹೂವೆಂಜಲು ತುಂಬಿಯ! ಏನ ಮಾಡಲಿ ವಿಟ್ಠಲ! ಹಾಲನರ್ಪಿಸುವ ದೇವಗೆಂದರೆ ಪಾಲೆಂಜಲು ಪೆಯ್ಯನ! ಏನ ಮಾಡಲಿ? ಇತ್ತ ವಿಠಲ, ಅತ್ತ ವಿಠಲ, ಎತ್ತೆತ್ತಲೂ ವಿಠಲ, ವಿಠಲನಿಲ್ಲದೆ ಜಗವಿಲ್ಲ. ನಾಮ ನಮಿಪ ಎಲ್ಲೆಡೆಯಿಹ ಒಡೆಯಗೆ)
ಈಗ ಬಸವಣ್ಣನವರ ವಚನವನ್ನು ನೋಡಿ:

'ಹಾಲೆಂಜಲು ಪೆಯ್ಯನ ; ಉದಕವೆಂಜಲು ಮತ್ಸ್ಯದ ; ಪುಷ್ಪವೆಂಜಲು ತುಂಬಿಯ,
ಎಂತು ಪೂಜಿಸುವೆನಯ್ಯ ಶಿವ ಶಿವಾ ಎಂತು ಪೂಜಿಸುವೆ? ಈ ಎಂಜಲವನತಿಗಳೆನಡೆ ಎನ್ನಳವಲ್ಲ.
ಬಂದುದಕೈಕೊ ಕೂಡಲ ಸಂಗಮದೇವಾ?[3]

ಶ್ರೀ ಬುದ್ಧಯ್ಯ ಪುರಾಣಿಕರು ತಮ್ಮ ಒಂದು ಲೇಖನದಲ್ಲಿ ಮಹಾರಾಷ್ಟ್ರ ಸಂತರಾದ ಜ್ಞಾನೇಶ್ವರ, ಏಕನಾಥ ಮೊದಲಾದವರ ಮೇಲೆ ಬಸವಣ್ಣನವರ ಪ್ರಭಾವವನ್ನು ಸಾಧಾರವಾಗಿ ತೋರಿಸಿದ್ದಾರೆ. ನಮ್ಮ ಅಭಿಪ್ರಾಯದಲ್ಲಿ ಜ್ಞಾನ, ಭಕ್ತಿಗಳ, ದ್ವೈತಾದ್ವೈತಗಳ ಸಮನ್ವಿತ ರೂಪವಾದ 'ನಿರ್ಗುಣ ಭಕ್ತಿ' ವೀರಶೈವರ ಕಲ್ಪನೆ. ಅದು ಕರ್ಣಾಟಕದಿಂದ ಮಹಾರಾಷ್ಟ್ರಕ್ಕೆ ಹೋಗಿ ಔತ್ತರೇಯ ಸಂತರ ವಿಚಾರಗಂಗೆಯಲ್ಲಿ ಬೆರೆತು ಈ ಹೆಸರನ್ನು ಪಡೆಯಿತು.

ಇದು ಪರೋಕ್ಷಮಾರ್ಗವಾದರೆ ಪ್ರತ್ಯಕ್ಷಮಾರ್ಗವೂ ಒಂದುಂಟು. ಕಬೀರ ಬಾಳಿಬೆಳಗಿದುದು ಕಾಶಿಯಲ್ಲಿ, ಆಗ ಆಗೇನು ಈಗಲೂ ಕಾಶಿ ಹಿಂದೂಗಳ ಮೋಕ್ಷಧಾಮ, ಜ್ಞಾನಪೀಠ. ತೀರ್ಥಕ್ಷೇತ್ರಗಳಲ್ಲಿ ನಂಬಿಕೆಯಿಲ್ಲದ ವೀರಶೈವರು ಜ್ಞಾನಾರ್ಜನೆಗಾಗಿ ಮತಪ್ರಚಾರಕ್ಕಾಗಿಯಾದರೂ ಅಲ್ಲಿಗೆ, ಹೋಗಿದ್ದಿರಬೇಕು.'ಕೆಳದಿ ನೃಪ ವಿಜಯ'ದ ಪ್ರಕಾರ ಬಸವ ಸಮಕಾಲೀನನಾದ ಶರಣಶೀಲವಂತಯ್ಯ ಕಾಶಿಗೆ ಹೋಗಿ ಅಲ್ಲಿಯ ರಾಜನಾದ ಜಯಸಿಂಹನನ್ನು ಪವಾಡದಿಂದ ಮೆಚ್ಚಿಸಿ ಅವನಿಂದ 'ಹರಿಕೇಶವಾನಂದಕಾನನ' ಎಂಬ ಭೂಮಿಯನ್ನು ಪಡೆದು ಅಲ್ಲಿ ಜಂಗಮವಾಡೀ ಮಠವನ್ನು ಸ್ಥಾಪಿಸಿದನಂತೆ. ಅದನ್ನು ದೊಡ್ಡ ಸಂಕಣ್ಣನಾಯಕ ಪುನುರುದ್ಧಾರ ಮಾಡಿದನಂತೆ. ಇದರಿಂದ ಆ ಮಠ ಕೊನೆಯ ಪಕ್ಷ ಬಸವಣ್ಣನವರಷ್ಟು ಪ್ರಾಚೀನ ಎಂಬುದು ಸ್ಪಷ್ಟ. (ಜಂಗಮವಾಡೀ ಮಠದವರ ಪ್ರಕಾರ ಅದರ ಪ್ರಾಚೀನತೆ ಆರನೆಯ ಶತಮಾನಕ್ಕೂ ಹಿಂದಕ್ಕೆ ಹೋಗುತ್ತದೆ.) ಕಬೀರನ ಹೊತ್ತಿಗಾಗಲೇ (೧೫ನೆಯ ಶತಮಾನ) ಜಂಗಮರು ಉತ್ತರಭಾರತವಲ್ಲೆಲ್ಲ ಹೊಕ್ಕು ಹರಿದಾಡಿದ್ದರು. ಪಂಜಾಬು, ಬಿಹಾರ್, ಮತ್ತು ರಾಜಸ್ಥಾನದವರೆಗೂ ಅವರು ಹೋಗಿದ್ದರು ಎಂದು ನಾವು ಅನ್ಯತ್ರ ಪ್ರತಿಪಾದಿಸಿದ್ದೇವೆ[4]. ಸ್ವತಃ ಕಬೀರನೇ ಜಂಗಮರನ್ನು ಅನೇಕ ಸಲ ಉಲ್ಲೇಖಿಸಿದ್ದಾನೆ. ರಾಮನಾಮವನ್ನು ಜಪಿಸುವರು ಭವಸಾಗರದಿಂದ ಪಾರಾಗುವವರು ಎಂದು ಹೇಳುತ್ತ ಜಂಗಮರು ರಾಮನಾಮ ಸ್ಮರಣೆ ಮಾಡುವುದಿಲ್ಲ ಎಂದು ಹೇಳಿ ಆತ ಅವರು ಅಹಿಂಸಾವಾದಿಗಳು ಎಂದೂ ಹೇಳುತ್ತಾನೆ :—

---

2. ಸಂತಕಾವ್ಯಸಂಗ್ರಹ. ಪ್ರ. ೧೪೫. ಸಂ. ಪರಶುರಾಮ ಚತುರ್ವೇದಿ. 3. ಬ. ಷ. ವ. ೮೮೫.
4. ಹಿಂದೀ ಸಾಹಿತ್ಯದಲ್ಲಿ 'ಜಂಗಮ'—ಮ.ಸು. ಕೃಷ್ಣಮೂರ್ತಿ; ಸಾಧನೆ ಸಂಪುಟ ೫, ಸಂಚಿಕೆ-೩, ಏಪ್ರಿಲ್-ಜೂನ್ ೧೯೭೬. ಬೆಂಗಳೂರು ವಿ.ವಿ.

'ಸಂತೋರಾಮನಾಮಜೋ ಪಾವೈಂ । ತೌ ವೇ ಬಹುರಿನ ಭವಜಲ ಆವೈಂ ॥
ಜಂಗಮ ತೋ ಸಿದ್ಧಿ ಹಿ ಕೋ ಧಾವೈಂ । ನಿಸಿಬಾಸರ ಶಿವಧ್ಯಾನ ಲಗಾವೈಂ ॥
ಶಿವ ಶಿವ ಕರತ ಗಯೇ ಶಿವದ್ವಾರಾ । ರಾಮುರಹೇ ಉನಹೂಂ ತೇ ನ್ಯಾರಾ ॥
ಜಂಗಮ ಜೀವ ಕಹಾಂ ನಹಿಂ ಮೂರೈಂ । ಪಢೈಂಗುನೈಂ ನಮ ನಾವೇ ಉಚಾರೈ ॥[5]

[ಸಂತರೇ ರಾಮನಾಮವನ್ನು ಪಡೆದವರು ಮತ್ತೆ ಭವ ಜಲಧಿಗೆ ಬಾರದು. ಜಂಗಮರಂತೂ ಸಿದ್ಧಿಗಾಗಿ ಧಾವಿಸುತ್ತಾರೆ. ಹಗಲಿರುಳೂ ಶಿವಧ್ಯಾನ ಮಾಡುತ್ತಾರೆ. ಶಿವಶಿವ ಎನ್ನುತ್ತ ಅವರ ಶಿವದ್ವಾರಕ್ಕೆ ಹೋದರು. ರಾಮ ಅವರಿಂದಲೂ ದೂರ. ಜಂಗಮರು ಜೀವವಧೆಯನ್ನು ಎಂದಿಗೂ ಮಾಡುವುದಿಲ್ಲ. ಓದುತ್ತಾರೆ. ಮನನಮಾಡುತ್ತಾರೆ. ಆದರೆ ನಾಮೋಚ್ಚಾರಣೆ (ರಾಮನಾಮ) ಮಾಡುವುದಿಲ್ಲ.]

ಕಬೀರ ಮತ್ತು ಬಸವೇಶ್ವರರ ವಾಣಿಯಲ್ಲಿ ಅದ್ಭುತವಾದ ಸಾಮ್ಯವಿದೆ. ವಿಚಾರಸಾಮ್ಯವೊಂದೇ ಅಲ್ಲ, ಅವರು ಬಳಸಿರುವ ಪ್ರತಿಮೆಗಳಲ್ಲೂ ಕೆಲವು ಕಡೆ ಒಬ್ಬರನ್ನು ನೋಡಿಕೊಂಡು ಒಬ್ಬರು ಹೇಳಿದರೋ ಎನ್ನುವಷ್ಟು ಸಾಮ್ಯವಿದೆ. ಒಂದೆರಡು ಉದಾಹರಣೆಗಳನ್ನು ನೋಡಬಹುದು :—

ಕಬೀರ :— 'ಭಗತಿ ದುಹೇಲೀ ರಾಮಕೀ ಜನ ಖಾಂಡೇಕೀಧಾರ್ । ಜೇಡೋಲೈ ತೋಕಟಿ ಪಡೈ, ನಹಿಂ ತೋ ಉತರೈ ಪಾರ್ ॥[6]

(ರಾಮನ ಭಕ್ತಿಯೆನ್ನುವುದು ಬಾಳಬಾಯಿಧಾರೆ. ಅತ್ತಿತ್ತ ಅಲುಗಿದಡೆ ಕತ್ತರಿಸಿಹೋಹುದು, ಇಲ್ಲವಾದಡೆ ದಾಂಟಬಹುದು.)

ಬಸವ :- 'ಶಿವಾಚಾರವೆಂಬುದೊಂದು ಬಾಳಬಾಯಧಾರೆ : ಲಿಂಗ ಮೆಚ್ಚಬೇಕು, ಜಂಗಮ ಮೆಚ್ಚಬೇಕು,
ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು ಬಿಚ್ಚಿ ಬೇರಾದರೆ ಮೆಚ್ಚುವನೆ ನಮ್ಮ ಕೂಡಲಸಂಗಮದೇವಾ ?'[7]

ಕಬೀರ :- 'ಮಾಂಗನ ಮರನ ಸಮಾನ ಹೈನುತ್ ಮಾಂಗೋ ಮಾರ್ ।[8]

(ಬೇಡುವುದೆಂದಡೆ ಸತ್ತಂತೆ, ಬೇಡದಿರು ಗೆಳೆಯ)

ಬಸವ :- ಓಡುವಾತ ಲೆಂಕನಲ್ಲ, ಬೇಡುವಾತ ಭಕ್ತನಲ್ಲ ಓಡಲಾಗದು ಲೆಂಕನು, ಬೇಡಲಾಗದು ಭಕ್ತನು.
ಓಡೆನಯ್ಯಾ, ಬೇಡೆನಯ್ಯಾ ಕೂಡಲಸಂಗಮದೇವಾ'[9]

ಕಬೀರ :- 'ಜಿಸ ಮರನೇತೈ ಜಗಡರೈ, ಸೋ ಮೇರೇ ಆನಂದ್ । ಕಬ್ ಮರಿಹುಂ, ಕಬ್‌ದೇಖಿಹುಂ ಪೂರನ ಪರಮಾನಂದ್'[10]

ಬಸವ :- 'ಜೋಳವಾಳಿಯಾನಲ್ಲ, ವೇಳೆವಾಳಿಯವ ನಾನಯ್ಯ, ಹಾಳುಗೆಟ್ಟೋಡುವ ಆಳು ನಾನಲ್ಲಯ್ಯ,
ಕೇಳು, ಕೂಡಲಸಂಗಮ ದೇವಾ, ಮರಣವೆ ಮಹಾನವಮಿ,'[11]

ಕಾಯವನ್ನು ವೀಣೆಗೆ ಹೋಲಿಸುವ ಬಸವಣ್ಣನವರ ಸುಂದರವಾದ ವಚನದ ಪ್ರತಿಮಾಸಂವಾದವನ್ನು ಕಬೀರವಾಣಿಯಲ್ಲೂ ಕಾಣಬಹುದು.

ಕಬೀರ :- 'ಸಬ್ ರಗ ತಂತ್ ರಬಾಬ್ ತನ, ವಿರಹ ಬಜಾವೈ ನಿತ್ತ್ ।
ಔರ್ ನಕೋಈ ಸುನಿ ಸಕೈ ಕೈಸಾಈ ಕೈ ಚಿತ್ತ್ ॥'[12]

(ನರವೆಲ್ಲ ತಂತಿ, ತನುವೆ ದಂಡಿಗೆ, ವಿರಹ ಮಿಡಿವುದು ನಿತ್ಯ। ಬೇರಾರಿಗೂ ಕೇಳಿಸದು ಅದು ಕೇಳುವನೊಡೆಯ ಇಲ್ಲವೆ ಚಿತ್ತ)

ಬಸವ :- ಎನ್ನ ಕಾಯವ ದಂಡಿಗೆಯ ಮಾಡಯ್ಯಾ ; ಎನ್ನ ಶಿರವ ಸೋರೆಯ ಮಾಡಯ್ಯ; ಎನ್ನ ನರವ ತಂತಿಯ ಮಾಡಯ್ಯ;
ಎನ್ನ ಬೆರಳ ಕಡ್ಡಿಯ ಮಾಡಯ್ಯ; ಬತ್ತೀಸರಾಗವ ಹಾಡಯ್ಯ; ಉರದಲೊತ್ತಿ ಬಾರಿಸು ಕೂಡಲಸಂಗಮ ದೇವಾ'[13]

ಯಾಂತ್ರಿಕವಾಗಿ ನಡೆಸುವ ಮಂತ್ರ ಪಠಣವನ್ನು ಬಸವಣ್ಣನವರು ಗಿಳಿಯೊಂದಿಗೆ ಹೋಲಿಸಿ ಖಂಡಿಸಿದ್ದಾರೆ :—

'ಗಿಳಿಯೋದಿ ಫಲವೇನು ! ಬೆಕ್ಕು ಬಹುದ ಹೇಳಲಱಿಯದು !
ಜಗವೆಲ್ಲ ಕಾಂಬ ಕಣ್ಣು ; ತನ್ನ ಕೊಂಬ ಕೊಯಿಲೆಯ ಕಾಣಲಱಿಯದು !
ಇದಿರ ಗುಣವ ಬಲ್ಲೆವೆಂಬರು ; ತಮ್ಮ ಗುಣವನಱಿಯರು ಕೂಡಲಸಂಗಮ ದೇವಾ'[14]

ಕಬೀರ :- 'ಚತುರಾಈ ಸೂವೈಪಢಿ, ಸೋಈ ಪಂಜರ ಮಾಹಿ। ಫಿರಿ ಪ್ರಬೋಧೈ ಆನಕೋ, ಅಪನಾ ಸಮಝೈನಾಹಿ'[15]

(ಪಂಜರದಲಿಹ ಗಿಳಿಯ ಓದು ನಿಜಕ್ಕೂ ಚಾತುರ್ಯಪೂರ್ಣ; ಆದರೆ ತನ್ನನ್ನೇ ಅರಿಯದ ಅದು ಬೇರಾರಿಗೆ ಬೋಧಿಸೀತು ?)

---

5. ಕಬೀರರ ವಚನಾವಲೀ—ಸಂ. ಹರಿಔಧ್ ಪು ೨೪೧.  6. ಕಬೀರ ಗ್ರಂಥಾವಲೀ. ಸಂ. ಶ್ಯಾಮಸುಂದರದಾಸ್ ಸೂರತನ ಕೌಅಂಗ್
7. ಬಷವ. ೭೮೫,  8. ಕ. ಗ್ರಂ.  9, ಬಷವ. ೪೪೧.  10. ಕ. ಗ್ರಂ. ಸೂರಾತನಕೌಅಂಗ್—೧೩,
11. ಬ, ಷ. ವ. ೬೯೮.  12. ಕ. ಗ್ರಂ. ವಿರಹಕೋ ಅಂಗ್.  13. ಬ. ಷ. ವ. ೪೯೮.  14. ಬ. ಷ. ವ. ೧೩೩.
15. ಕ. ಗ್ರಂ. ಪುಟ ೩೭.

ಬಸವ, ಕಬೀರ ಇಬ್ಬರೂ ದೇವರನ್ನು ಒಬ್ಬ ಸೆಟ್ಟಿಗೆ ಹೋಲಿಸಿದ್ದಾರೆ :–

ಬಸವ :- 'ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹಾದೇವ ಸೆಟ್ಟಿ;
ಒಮ್ಮನವಾದರೆ ಒಡನೆ ನುಡಿವನು ; ಇಮ್ಮನವಾದರೆ ನುಡಿಯನು.
ಕಾಣಿಯ ಸೋಲ, ಅರ್ದ್ಧಗಾಣಿಯ ಗೆಲ್ಲ ; ಜಾಣ ನೋಡವ್ವ, ನಮ್ಮ ಕೂಡಲಸಂಗಮದೇವ[16]'

ಕಬೀರ :- 'ಸಾಂಯೀ ಮೇರಾ ಬನಿಯಾ, ಸಹಜಕರೈ ಬ್ಯಾಪಾರ್ । ಬಿನ ಡಾಂಡಿ ಬಿನ ಪಲಡ್ಯೈ,ತೋಲೈ ಸಬ ಸಂಸಾರ್॥[17]

(ನನ್ನೊಡೆಯನೊಬ್ಬ ವಣಿಜ, ಸಹಜವಾಗಿ ಗೈವ ವ್ಯಾಪಾರ । ದಂಡೆಯಿಲ್ಲದೆ ತಟ್ಟೆಯಿಲ್ಲದೆ ತೂಗುವ ಜಗವ ಅಪಾರ ।)

ಬಹುದೇವೋಪಾಸನೆ ಒಂದು ವ್ಯಭಿಚಾರ ಎಂದು ಇಬ್ಬರೂ ಹೇಳಿ, ಸೂಳೆಗೆ ಹುಟ್ಟಿದ ಮಗನಂತೆ ಕಂಡವರನ್ನೆಲ್ಲ 'ಅಯ್ಯಾ' ಎನ್ನಲಾರೆ ಎನ್ನುತ್ತಾರೆ.

ಬಸವ :- 'ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ 'ಅಯ್ಯಾ' ಎನಲಾಱೆ.
ಚೆನ್ನಯ್ಯನೆಮ್ಮಯ್ಯನು ; ಚೆನ್ನಯ್ಯನ ಮಗ ನಾನು. ಕೂಡಲಸಂಗನ ಮಹಾಮನೆಯೊಳು
ಧರ್ಮಸಂತಾನ ಭಂಡಾರಿ ಬಸವಣ್ಣನು'[18] .

ಕಬೀರ :- 'ರಾಮಪಿಯಾರಾ ಛಾಂಡಿಕರಿಕರೈ ಆನಕಾಜಾಪ್ । ಬೇಸವಾಕೇರಾ ಪೂತಜ್ಯೂಂ, ಕಹೈ ಕೌನಸೂಂ ಬಾಪ್ ॥[19]

(ನಲ್ಲ ರಾಮನ ತೊರೆದು ಮಾಡಿದಡೆ ಅನ್ಯರ ಜಪವ ಸೂಳೆಗೆ ಹುಟ್ಟಿದ ಕೂಸಿನಂತೆ ಆರನು ಕರೆವೆನು 'ತಂದೆ' ಎಂದು.)

ಇಂಥ ಉದಾಹರಣೆಗಳು ಹಲವಾರು ಇವೆ. ಆದರೆ ಸ್ಥಾನಾಭಾವದಿಂದ ಇಷ್ಟಕ್ಕೇ ಕೈಮೊಟಕು ಮಾಡಲಾಗಿದೆ.

ಇಡೀ ಹಿಂದೀ ಸಂತ ಸಾಹಿತ್ಯದಲ್ಲಿ ಕಬೀರನನ್ನು ಬಿಟ್ಟು ಬೇರಾರೂ ಕಾಯಕದ ಮಹತ್ವವನ್ನು ಸಾರಿ ಹೇಳಿಲ್ಲ. ಔತ್ತರೇಯ ಸಂತರೆಲ್ಲ ಮಿಥ್ಯಾವಾದಿಗಳು, ಪಲಾಯನವಾದಿಗಳು. ಸಂತ ಮಲೂಕದಾಸನ (೧೫೭೪–೧೬೮೨) ಈ ದ್ವಿಪದಿ ಅವರ ಮೂಲಮಂತ್ರ :–

'ಅಜಗರ ಕರೈನ ಚಾಕರೀ, ಪಂಛೀ ಕರೈನ ಕಾಮ್ । ದಾಸ ಮಲ್ಲೂಕ ಕಹತೆ ಹೈ, ಸಬಕಾ ದಾತಾ ರಾಮ್॥'

(ಅಜಗರಕೆ ಇಲ್ಲ ಕೆಲಸ, ಪಕ್ಷಿಗೂ ದುಡಿಮೆ ಮಾಣ ॥ ದಾಸ ಮಲೂಕನೆಂಬ, ಎಲ್ಲರಿಗೂ ದಾತ ರಾಮ ಕಾಣ ।)

ಈ ಹಿನ್ನೆಲೆಯಲ್ಲಿ ಕಬೀರನ ಈ ದೋಹೆ (ದ್ವಿಪದಿ)ಯನ್ನು ನೋಡಬೇಕು :–

'ಕಬೀರ ಜೇ ಧಂಧೌ ತೌ ಧೂಲಿ, ಬಿನ ಧಂಧೈ ಧೂಲೈ ನಹಿ । ತೇ ನರ ಬಿನಸೇ ಮೂಲಿ, ಜಿನ ಧಂಧೇ ಮೈಂ ಧ್ಯಾಯಾ ನಹೀಂ॥'[20]

(ಕಬೀರನೆಂದ: ದುಡಿಮೆಯಿಂದಲೇ ಪಾಪಲೇಪವೆಲ್ಲ ತೊಳೆದು ಹೋದಾವು. ದುಡಿಮೆಯಿಲ್ಲದೆ ಅವು ತೊಳೆಯವು. ದುಡಿಮೆಗೆ ಗಮನ ಕೊಡದವರೆಲ್ಲ ಮೂಲಸಹಿತ ನಾಶವಾದಾರು.)

ಇದು ವೀರಶೈವಧರ್ಮದ ಚಂಡಡಿಂಡಿಮವಾದ 'ಕಾಯಕ' ಸಿದ್ಧಾಂತದ ಮೊಳಗಲ್ಲದೆ ಬೇರೇನು ?

ದಾದೂ ಸಂಪ್ರದಾಯದ ಸುಪ್ರಸಿದ್ಧ ಸಂತ ಸುಂದರದಾಸ (೧೫೯೬–೧೬೮೯) ಉತ್ತರಭಾರತದ ಸಂತರಲ್ಲೆಲ್ಲ ಅತ್ಯಂತ ದೊಡ್ಡ ಪಂಡಿತ. ಆತ ತನ್ನ ಪದವೊಂದರಲ್ಲಿ ವೀರಶೈವ ಪಾರಿಭಾಷಿಕ ಶಬ್ದಗಳನ್ನೆಲ್ಲ ಬಳಸಿದ್ದಾನೆ. ಅಷ್ಟೇ ಅಲ್ಲ ಆ ಪದ ನಮ್ಮ ಪ್ರಸಾದಿ ಭೋಗಣ್ಣನ ವಚನವೊಂದರ ಅನುವಾದದಂತೆ ತೋರುತ್ತದೆ.

'ದೇಹ ಕೋ ಸಂಜೋಗ ಪಾಯಿ ಜೀವ ಐಸೋ ನಾಮಭಯೋ । ಘಟಕೇ ಸಂಜೋಗ ಘಟಾಕಾಶ ಕಹಾಯೋ ಹೈ ॥
ಈಶ್ವರ ಸಕಲ ವಿರಾಟಮೇ ವಿರಾಜಮಾನ, ಮಠಕೇ ಸಂಯೋಗ ಮಠಾಕಾಶ ನಾಮ ಪಾಯೋ ಹೈ ।
ಮಠಾಕಾಶ ಮಾಹಿ ಸಬ್, ಘಟಮಠ ದೇಖಿಯತ, ಬಾಹಿರ ಭೀತರ ಏಕ ಗಗನ ಸಮಾಯೋ ಹೈ,
ತೈಸೇಹೀ ಸುಂದರ ಬ್ರಹ್ಮ, ಈಶ್ವರ ಅನೇಕ ಜೀವ ತ್ರಿವಿಧ ಉಪಾಧಿಭೇದ ಗ್ರಂಥ ಮೇಂ ಗಾಯೋ ಹೈ ॥'[21]

(ದೇಹದ ಸಂಯೋಗದಿಂದ ಜೀವಕ್ಕೆ ಈ ಹೆಸರು ಬಂದಿದೆ. ಘಟದ ಸಂಯೋಗದಿಂದ ಆಕಾಶ ಘಟಾಕಾಶವೆನ್ನಿಸಿಕೊಳ್ಳುವಂತೆ, ದೇವರು ಸಕಲ ವಿರಾಟ್ ವಿಶ್ವದಲ್ಲಿ ವಿರಾಜಿಸುತ್ತಿದ್ದಾನೆ. ಮಠದ ಸಂಯೋಗದಿಂದ ಆಕಾಶ ಮಠಾಕಾಶವೆನ್ನಿಸಿಕೊಳ್ಳುತ್ತದೆ. ಮಠಾಕಾಶದಲ್ಲೇ ಘಟ, ಮಠಗಳೆರಡೂ ಕಾಣುತ್ತವೆ. ಅಂತೆಯೇ ಸುಂದರದಾಸನೆನ್ನುತ್ತಾನೆ: ಬ್ರಹ್ಮವೊಂದೆ, ಜೀವ ಅನೇಕ ಇದು ತ್ರಿವಿಧ ಉಪಾದಿಭೇದದಿಂದಾಗಿದೆ ಎಂದು ವಿವಿಧ ಗ್ರಂಥಗಳಲ್ಲಿ ಹೇಳಿವೆ.)

ಈಗ ಪ್ರಸಾದಿ ಭೋಗಣ್ಣ (೧೧೬೦)ನ ವಚನವನ್ನು ನೋಡಿ :–

---

16. ಬಸವ. ೧೧೫. 17. ಕ. ಗ್ರಂ. ಪು ೩೭. 18. ಬಸವ ೩೪೬. 19. ಕ. ಗ್ರಂ. ಪು ೬
20. ಕ.ಗ್ರಂ. ಚಿತಾವನಿ ಕೌ ಅಂಗ ೨೧. 21. ಸುಂದರ ವಿಲಾಸ, ಪುಟ ೬.

'ಘಟಾಕಾಶ ಮಠಾಕಾಶದಲ್ಲಿ ತೋಱುವ ಬೆಳಗು ಘಟಮಠವೆಂಬ ಉಭಯವಿರುತ್ತಿರಲಿಕೆ ರೂಪಗೊಂಡಿತ್ತು ಬಯಲು, ಘಟವೆಂಬ ಭೇದಂಗಳಱಿಯಲಾಗಿ ಆಕಾಶತತ್ತ್ವದಲ್ಲಿ ನಿಶ್ಚಿಂತವನೈದಿ ಮಹದಾಕಾಶದಲ್ಲಿ ಲೀಯವಾದುದು ವ್ಯತಿರಿಕ್ತವೆಂಬುದು, ನಾದಶೂನ್ಯ ಐಕ್ಯನ ಅರ್ಪಿತಸ್ಥಲ ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನ'[22]

ಉತ್ತರ ಭಾರತದ ಸಂತ ಮತಗಳಲ್ಲಿ ಅತ್ಯಂತ ಪ್ರಮುಖ ಹಾಗೂ ಸಂಘಟಿತ ಮತವೆಂದರೆ ಸಿಕ್ಖ್ ಧರ್ಮ. ಸಿಕ್ಖ್ ಧರ್ಮದ ಪ್ರವರ್ತಕ ಗುರುನಾನಕನ ಮೇಲೂ ವೀರಶೈವ ಪ್ರಭಾವ ಕಂಡುಬರುತ್ತದೆ. ಒಂಬತ್ತನೆಯ ಗುರುವಾದ ಗುರು ತೇಗ ಬಹದ್ದೂರ್ (ಕ್ರಿ.ಶ. ೧೬೨೨-೧೬೭೫) ತನ್ನ ಒಂದು ಪದದಲ್ಲಿ 'ಜಂಗಮ'ರನ್ನು ಉಲ್ಲೇಖಿಸಿದ್ದಾನೆ :-

'ಪಾಪೀಹಿಯೇ ಮೈಂ ಕಾಮು ಬಸಾಇ। ಮನುಚಂಚಲು ಇಅ ತೇಗಹಿ ಓ ನಜಾಇ।
ಜೋಗೀ ಜಂಗಮು ಅರು ಸಂನಿಆಸಿ। ಸಭಹೀ ಪರಿಡಾರೀ ಇಹ ಫಾಂಸಿ॥
ಜಿಹಿಜಿಹಿ ಹರಿಕೋನಾಮು ಸಮ್ಹಾರಿ। ತೇ ಭವಸಾಗರೇ ಉತರೇಪಾರಿ।
ಜನನಾನಕ ಹರಿಕೇಸರನಾಇ। ದೀಜೈ ನಾಮು ರಹೈ ಗುವ ನಾ ಇ'॥[23]

(ಹೃದಯದಲ್ಲಿ ಕಾಮವನ್ನು ನೆಲೆಗೊಳಿಸಿ ಮನವನ್ನು ಚಂಚಲಗೊಳಿಸಿರುವವರು ಅಗ್ರಾಹ್ಯರು. ಜೋಗಿ, ಜಂಗಮ ಮತ್ತು ಸಂನ್ಯಾಸಿ ಇವರೆಲ್ಲರಿಗೂ ಇದು ನೇಣನ್ನು ಬಿಗಿದಿದೆ. ಆದರೆ ಹರಿನಾಮವನ್ನು ನಂಬಿದವರು ಭವಸಾಗರವನ್ನು ದಾಟಿದರು. ಭಕ್ತ ನಾನಕ ಹರಿಶರಣ ನಾಮವನ್ನು ನೆನೆದು ಗುಣಸ್ಮರಣೆ ಮಾಡಿದರು.)

ಇದರಿಂದ ದೂರದ ಪಂಜಾಬಿನಲ್ಲಿಯೂ ಕೂಡ ಜಂಗಮರು ಸಾಕಷ್ಟು ಮುಂಚೆಯೇ ಕಾಣಿಸಿಕೊಂಡಿದ್ದರೆಂಬುದು ಸ್ಪಷ್ಟ. ನಮ್ಮ ಅಭಿಪ್ರಾಯದಲ್ಲಿ ಗುರು ನಾನಕನಿಗೂ ಮುಂಚೆಯೇ ಜಂಗಮರು ಪಂಜಾಬಿನಲ್ಲಿ ಕಾಣಿಸಿಕೊಂಡು, ತಮ್ಮ ಮತ ಪ್ರಚಾರ ಮಾಡಲು ಪ್ರಯತ್ನಿಸಿರಬೇಕು. ಅವರ ಪ್ರಭಾವ ತೀರ ಚಿಕ್ಕಂದಿನಲ್ಲೇ ಗುರು ನಾನಕ (ಕ್ರಿ.ಶ. ೧೪೬೯-೧೫೩೮)ನ ಮೇಲೆ ಬಿದ್ದಿರಬೇಕು. ನಾನಕ್ ದೊಡ್ಡವನಾದ ಮೇಲೆ ದೇಶಾದ್ಯಂತ ಸಂಚರಿಸಿ ಅನೇಕ ಸಾಧು ಸಂತರೊಡನೆ ಸತ್ಸಂಗ ಮಾಡಿದನೆಂದೂ, ಆ ಸಂಚಾರದಲ್ಲಿ ದಕ್ಷಿಣ ಭಾರತ, ಹಾಗೂ ಶ್ರೀಲಂಕೆಗೂ ಹೋಗಿದ್ದನೆಂದು ಹೇಳಲಾಗುತ್ತದೆ. ದಕ್ಷಿಣ ಭಾರತ ಯಾತ್ರೆಯಲ್ಲಿ ಆತ ಉತ್ತರ ಕರ್ನಾಟಕ ಅದರಲ್ಲೂ ಬಸವಕಲ್ಯಾಣಕ್ಕೆ ಬಂದಿದ್ದನೆಂದೂ ಹೇಳಲಾಗುತ್ತದೆ. ಇವೇನಾದರೂ ಆಗಲಿ ಬಸವಣ್ಣನವರ ಜೀವನದ ಒಂದು ಘಟನೆಗೂ ಗುರುನಾನಕನ ಜೀವನದ ಒಂದು ಘಟನೆಗೂ ಅದ್ಭುತವಾದ ಸಾಮ್ಯವಿದೆ. ಬಸವಣ್ಣನವರು ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟಿದರೆ, ಗುರುನಾನಕ್ ಕೂಡ ತಮ್ಮ ಉಪನಯನದ ದಿನ ಯಜ್ಞೋಪವೀತಧಾರಣೆ ಮಾಡಲು ನಿರಾಕರಿಸುತ್ತಾರೆ. ಯಜ್ಞೋಪವೀತವಿಲ್ಲದ ವ್ಯಕ್ತಿ ಶೂದ್ರನಾಗುತ್ತಾನೆ ಎಂದು ಪುರೋಹಿತರು ಆತನಿಗೆ ಬುದ್ಧಿ ಹೇಳುತ್ತಾರೆ. ಆಗ ಆತ ಪುರೋಹಿತರಿಗೆ ಹೀಗೆ ಹೇಳುತ್ತಾನೆ :

'ನಾಂಯು ಮಾನಿಐ ಪತ ಉಪಜ ಇ ಸಾಲಾ ಹಿ ಸಚಿ ಸೂತ।
ದರಗೇ ಅಂದರ ಪಾಇಯೇ, ತಗ ನ ಟೂಟಸ ಪೂರಾ'[24]

ಅರ್ಥಾತ್ ನಾಮ ಸ್ಮರಣೆಯಿಂದ ಮಾತ್ರ ಮನುಷ್ಯ ಗೌರವ, ಪ್ರತಿಷ್ಠೆಗಳನ್ನು ಗಳಿಸುತ್ತಾನೆ. ನಿಜವಾದ ಭಕ್ತಿಯನ್ನೇ ಸೂತ್ರವನ್ನಾಗಿ ಧರಿಸಬೇಕು. ಜನಿವಾರದ ಭೌತಿಕ ಸೂತ್ರಗಳು ನಶ್ವರ. ಭಗವಂತನ ಮನೆಯಲ್ಲಿ ಭಕ್ತಿಯ ಸೂತ್ರವೇ ನಡೆಯುವುದು. ಉಳಿದ ಸೂತ್ರಗಳಲ್ಲ. ಓ ಪುತ್ರ ಅದರ ದಾರ ಎಂದಿಗೂ ಕೀಳದು.

ಈ ರೀತಿ ಭಕ್ತಿಯೇ ನಿಜವಾದ ಯಜ್ಞೋಪವಿತ ಅದಿದ್ದವನೇ ಶ್ರೇಷ್ಠ. ಅದನ್ನು ಯಾರು ಬೇಕಾದರೂ ಧರಿಸಬಹುದು. ಅದನ್ನುಳಿದು ಉಳಿದೆಲ್ಲ ಸೂತ್ರಗಳು ಕರ್ಮಲತೆಗಳೇ ಸರಿ, ಎಂದು ಹೇಳಿ ಬಸವಣ್ಣನವರಂತೆ ಗುರು ನಾನಕನೂ ಕೂಡ ವರ್ಣಾಶ್ರಮಧರ್ಮವನ್ನು ಹೀಗಳೆದ. ಈ ಘಟನೆಗೂ ಬಸವಣ್ಣನವರ ಯಜ್ಞೋಪವೀತ ನಿರಾಕರಣೆಗೂ ಕಾಕತಾಳೀಯ ಸಂಬಂಧವಿದೆಯೋ ಅಥವಾ ಗುರುನಾನಕ್ ಬಾಲ್ಯದಲ್ಲಿಯೇ ಬಸವಣ್ಣನವರ ಬಗೆಗೆ ಕೇಳಿದ್ದನೋ ಎಂಬುದರ ಬಗೆಗೆ ಇನ್ನೂ ಆಳವಾದ ಸಂಶೋಧನೆ ನಡೆಯಬೇಕಾಗಿದೆ.

ಉತ್ತರ ಭಾರತದ ಸಂತರೆಲ್ಲ ಸ್ತ್ರೀನಿಂದೆ ಮಾಡಿದ್ದಾರೆ. ಸಂತ ಸಾರ್ವಭೌಮನಾದ ಕಬೀರನೂ ಇದಕ್ಕೆ ಹೊರತಲ್ಲ. ಮಿಲ್ಟನ್ನನ ಈ ಧೋರಣೆಯನ್ನು ಕುರಿತು ಕಾರ್ಲೈಲ್ ಹೇಳಿದ 'He had a Turkish contempt for women' ಇದೇ ಮಾತನ್ನು ನಾವು ಕಬೀರ್ ಮೊದಲಾದ ಉತ್ತರೇಯ ಸಂತರ ಬಗೆಗೂ ಹೇಳಬಹುದು. ಆದರೆ ಬಸವಣ್ಣನವರ ಪ್ರಭಾವದಿಂದಲೋ ಏನೋ ಸಿಕ್ಖ್ ಧರ್ಮದಲ್ಲಿ ಹೆಣ್ಣಿಗೆ ಗಂಡಿಗೆ ಸಮಾನವಾದ ಸ್ಥಾನವಿದೆ. 'ಹೆಣ್ಣು' 'ಹೆಣ್ಣು' ಎಂದು ಹೀಗಳೆಯುವ ಕಣ್ಣು ಕಾಣದ ಗಾವಿಲರನ್ನು ಕುರಿತು ಗುರುನಾನಕ್ ಹೀಗೆ ಹೇಳಿದ್ದಾರೆ. ಹೆಣ್ಣಿನಿಂದಲೇ ಮನುಷ್ಯ ಹುಟ್ಟುವುದು, ಹೆಣ್ಣಿನ

22. ಕರ್ನಾಟಕ ಕವಿ ಚರಿತೆ, ಪರಿಶೋಧಿತ ಮುದ್ರಣ-ಪು ೨೧೧.
23. ಸಂತಸುಧಾಸಾರ—ಭಾಗ-೨ ಪು. ೪೯.
24. ಗುರುಗ್ರಂಥ ಸಾಹಿಬ್; ಆಸಾ ದೀವಾರ್-ಮಹಲಾ.

ಉದರಲ್ಲೇ ಪ್ರಾಣೀಯು ಶರೀರ ನಿರ್ಮಿತವಾಗುವುದು. ಹೆಣ್ಣಿನಿಂದಲೇ ಮದುವೆ, ಶಾಸ್ತ್ರ, ಸಂಬಂಧ. ಹೆಣ್ಣಿನಿಂದಲೇ ನಂಟು. ಹೆಣ್ಣಿನಿಂದಲೇ ಸೃಷ್ಟಿಕ್ರಮ ಮುಂದೆ ಸಾಗುವುದು. ಒಂದು ಹೆಣ್ಣು ಸತ್ತರೆ ಮತ್ತೊಂದು ಹೆಣ್ಣನ್ನು ಹುಡುಕುತ್ತಾರೆ, ಹೆಣ್ಣೆ ನಮ್ಮನ್ನು ಸಾಮಾಜಿಕ ಬಂಧನದಲ್ಲಿ ಬಿಗಿಯುವುದು. ಇಂತಹುದರಲ್ಲಿ ದೊಡ್ಡ ದೊಡ್ಡ ಮಹಾರಾಜರ ಹುಟ್ಟಿಗೂ ಕಾರಣಳಾದ ಹೆಣ್ಣನ್ನೇಕೆ ಹೀಗಳೆಯುವುದು? ಹೆಣ್ಣಿನಿಂದಲೇ ಹೆಣ್ಣು ಹುಟ್ಟುತ್ತದೆ; ಹೆಣ್ಣಿಲ್ಲದೆ ಯಾರು ಹುಟ್ಟಬಲ್ಲರು ? ಓ ನಾನಕ್, ಹೆಣ್ಣಿನಿಂದ ಹುಟ್ಟದವನೆಂದರೆ ಭಗವಂತನೊಬ್ಬನೇ'[25]

'ವೀರಶೈವ'ದ ಪ್ರಭಾವದಿಂದಲೋ ಏನೋ ಮತ್ತು ಇವರ ಜೊತೆಗೆ ಸಾಮಯಿಕ ಪರಿಸ್ಥಿತಿಗಳೂ ಸೇರಿಕೊಂಡಿರ ಬೇಕು. ಸಿಕ್ಖ್ ಧರ್ಮ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ಅನ್ಯಾಯ, ದೌರ್ಜನ್ಯ, ದಬ್ಬಾಳಿಕೆಯನ್ನು ವಿರೋಧಿಸುವ ಒಂದು ವೀರ ಧರ್ಮವಾಗಿ ಪರಿಣಮಿಸಿತು. ಅನ್ಯಾಯ ಅಸತ್ಯದ ವಿರುದ್ಧ ಹೋರಾಡುವುದರಲ್ಲಿ ಸಿಕ್ಖರು ತೋರಿಸುವ ನಿಷ್ಠೆ ಮಹೇಶ್ವರ ಸ್ಥಲದ ವೀರಶೈವರನ್ನು ನೆನಪಿಗೆ ತರುತ್ತದೆ. ವೀರಶೈವರಂತೆಯೇ ಸಿಕ್ಖರೂ ಪುರುಷಾರ್ಥಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ಸತ್ಸಂಗ ಮತ್ತು ಸಹಭೋಜನ (ಸಂಗತ್ ಮತ್ತು ಪಂಗತ್) ವ್ಯವಸ್ಥೆಯಿಂದ ಈ ಧರ್ಮದಲ್ಲಿ ಎಲ್ಲಿಲ್ಲದ ಸಂಘ ಟನೆ ಕಂಡು ಬರುತ್ತದೆ.

ಔತ್ತರೇಯ ಸಂತರ ಮೇಲೆ ಬಿದ್ದಿರುವ ವೀರಶೈವ ಪ್ರಭಾವವನ್ನು ಹೀಗೆ ಗುರುತಿಸಬಹುದು :

೧. ಕಾಯಕ ಸಿದ್ಧಾಂತ, ಭಿಕ್ಷಾಟನೆಯ ನಿಂದೆ ೨. ಸತ್ಸಂಗ ಮತ್ತು ಭಕ್ತಿ ಮುಕ್ತಿಗಿಂತ ಮಿಗಿಲು ಎಂಬ ಕಲ್ಪನೆ. ೩. ಪತಿವ್ರತಾಂಗನೆ ಭಕ್ತಿಯ ಆದರ್ಶ ೪. ಸಂತನೊಬ್ಬ ಯೋಧ ಎಂಬ ಕಲ್ಪನೆ ೫. ಜ್ಞಾನ, ಭಕ್ತಿಗಳ ಸಮನ್ವಿತರೂಪ ವಾದ ನಿರ್ಗುಣ ಭಕ್ತಿ ೬. ಪುನರ್ಜನ್ಮದಲ್ಲಿ ಅವಿಶ್ವಾಸ.

ಮುಕ್ತಿ ಸತ್ತಮೇಲೆ ದೊರೆಯುವುದಿಲ್ಲ, ಈ ಜನ್ಮದಲ್ಲಿಯೇ ಸ್ವಾನುಭೂತಿಯಿಂದ, ಸದಾಚಾರದಿಂದ, ಸತ್ಸಂಗದಿಂದ ಮುಕ್ತಿಯನ್ನು ಅನುಭವಿಸಬಹುದು ಎಂದು ಎಲ್ಲ ಔತ್ತರೇಯ ಸಂತರೂ ಸಾರಿದ್ದಾರೆ. ವೀರಶೈವ ಸಂತರ ವಚನಗಳನ್ನು ಔತ್ತರೇಯ ಸಂತರ ವಾಣಿಯೊಡನೆ ಹೋಲಿಸಿ ನೋಡಿದಾಗ ಈ ಅಂಶ ಸ್ಪಷ್ಟವಾದೀತು.

ಕಬೀರ : 'ಚಲನ ಚಲನ ಸಬಕೋಕಹತ ಹೈ, ನಾ ಜಾನೌ ವೈಕುಂಠ ಕಹಾಂ ಹೈ ।
ಜೋಜನ ಪರಿಮಿತಿ ಪರಮುನ ಜಾನ್ಯೈ, ಬಾತನಹಿ ವೈಕುಂಠ ಬಿಖಾನ್ಯೈ ॥
ಜಬಲಗ ಹೈ ವೈಕುಂಠ ಕೀ ಆಶಾ, ತಬಲಗ ನಹಿ ಹರಿಚರಣ ನಿವಾಸ,
ಕಹೇ ಸುನೇ ಕೈಸೇ ಪತಿಯಾಯೇ, ಜಬಲಗ ತಹಾಂ ಆಪ್ ನಹಿಂ ಜಾಇಯೇ ।
ಕಹೈ ಕಬೀರ ಯಹು ಕೀಜಿಯೇಕಾಹಿ, ಸಾಧಸಂಗತಿ ವೈಕುಂಠ ಹಿ ಆಹಿ ॥'[26]

('ಹೋಗಬೇಕು ಹೋಗಬೇಕು ಎಂದು ಎಲ್ಲರಿಗೂ ಹೇಳುವೆ ಆದರೆ ವೈಕುಂಠವೆಲ್ಲಿದೆಯೋ ಕಾಣೆ. ಅಲ್ಲಿಗೆ ಎಷ್ಟು ಯೋಜನ ದೂರ ? ಯಾರೂ ಕಾಣರು. ಬರಿಯ ಮಾತಿನಲ್ಲಿ ವೈಕುಂಠವನ್ನು ವರ್ಣಿಸಿದ್ದೂ ವರ್ಣಿಸಿದ್ದೇ. ವೈಕುಂಠದ ಆಶೆಯಿರುವ ತನಕ ಹರಿಚರಣ ನಿವಾಸವಿಲ್ಲ. ಹೇಳಿದರೆ ಕೇಳಿದರೆ ಯಾರು ನಂಬುವರು ? ನಾವು ಸ್ವತಃ ಹೋಗಿ ನೋಡದೆ ಬರಿಯ ಬಾಯಿಮಾತಿಂ ದೇನು ಪ್ರಯೋಜನ ? ಇವೆಲ್ಲ ಏಕೆ ? ಸಾಧುಸಂಗತಿಯೇ ವೈಕುಂಠ).

**ದಾದೂದಯಾಲ್** (೧೫೪೪-೧೬೦೩):

ನಿಕಟಿ ನಿರಂಜನ ಲಾಗೀ ರಹೇ, ತಬಹಮು ಜೀವತಮುಕ್ತ ಭಯೇ.
ಮರಿಕರಿ ಮುಕ್ತಿ ಜಹಾಂಲನಿ ಜಾಯಿ ತಹಾಂನ ಮೇರಾ ಮನ ಪತಿಯಾಯಿ
ಆಗೇ ಜನ್ಮ ಲಹೈಂ ಅವತಾರಾ, ತಹಾಂನ ಮಾನೇಮನ ಹಮಾರಾ॥ 27

(ನಿರಂಜನನ ಹತ್ತಿರವೇ ನಾವು ಸಂಲಗ್ನವಾಗಿದ್ದರೆ ಜೀವನ್ಮುಕ್ತರಾದಂತೆಯೇ. ಸತ್ತಮೇಲೆ ದೊರೆವ ಮೋಕ್ಷದಲಿ ಎನಗಿಲ್ಲ ನಂಬಿಕೆ. ಪುನರ್ಜನ್ಮವನ್ನೂ ನನ್ನ ಮನ ಒಪ್ಪದು.)

ಸುಂದರದಾಸ :- 'ಮುಕ್ತಿ ತೋ ದೋಟ್ಯೈ ಕೀ ನಿಶಾನೀ ಸೋಕಥಹು ನಹಿಂ ಔರ್ ಠಿಕಾನಾ. ಜಹಾಂ ಮುಕ್ತಿ ಠಹರಾ ನೀ ॥
ಕೋ ಕಹೈ ಮುಕ್ತಿ ವ್ಯೋಮಕ್ಯೈ ಉಪರ, ಕೋ ಪಾತಾಲಕೇ ಮಾಹಿ ।
ಕೋ ಕಹೈ ಮುಕ್ತಿರಹೇ ಪ್ರಿಥ್ವೀಪರ್, ಢೂಂಢೇ ತೋ ಕಹೂಂ ನಹಿಂ ॥೧॥
ವಚನ ವಿಚಾರ ನ ಕೀಯಾ ಕಿನಹೂಂ, ಸುನಿಸುನಿ ಉಠಿಧಾಯೇ
ಗೋದಂಡಾ ಜ್ಯೋಂ ಮಾರಗ ಚಾಲೇ, ಆಗೇ ಖೋಜ ಬಿಲಾಯೇ ॥೨॥

25. ನಾನಕವಾಣಿ ಆಸಾದೀವಾರ್ ಸಲೋಕ-೪೧
26. ಸಂತಕಾವ್ಯಸಂಗ್ರಹ: ಪರಶುರಾಮ ಚತುರ್ವೇದಿ ಪು-೧೪೨.
27. ಅದೇ ಪು. ೨೬೭.

ಜೀವತ ಕಷ್ಟ ಕರೈಬಹುತೇರೇ, ಮುಯೇ ಮುಕ್ತಿ ಕಹೈಂ ಜಾಈ ।
ಧೋಷೈಹೀ ಧೋಷೈ ಸಬ ಭೂಲೇ, ಆಗೇ ಊವಾಬಾಈ ॥೩॥
ನಿಜಸ್ವರೂಪ ಕೌಂ ಜಾನಿ ಅಖಂಡಿತಾ, ಜ್ಯೌಂ ಕಾತ್ಯೌಂಹೀ ರಹಿಯೇ ।
ಸುಂದರ್ ಕ ಭೂ ಗ್ರಹೈ ನಹಿಂ ತ್ಯಾಗೈ, ವಹೈ ಮುಕ್ತಿ ಪದ ಕಹಿಯೇ ॥೪॥[28]

(ಮುಕ್ತಿಯೆಂಬುದು ಮೋಸದ ಕುರುಹು. ಅದಕಾವ ಗೊತ್ತು ನೆಲೆಯನೂ ಕಾಣೆ. ಮುಕ್ತಿಯಿಹುದು ವ್ಯೋಮದ ಲೆಂಬರು ಕೆಲರು, ಪಾತಾಳದಲಿಹುದೆಂಬರು ಕೆಲರು, ಮತ್ತೆ ಕೆಲವರೆಂಬರು ಪೊಡವಿಯ ಮೇಲಿಹುದೆಂದು. ಅರಸಿದಡೆ ಕಾಂಬ ದೆಲ್ಲೂ, ವಿಚಾರ ಮಾಡಲಿಲ್ಲವಾರೂ, ಕೇಳಿ ಎದ್ದೋಡಿದರತ್ತ, ಗುಬ್ಬಿಯೊಲು ಹೋದರು ಹಾದಿಯಲಿ. ಮುಂದೆ ಕಾಣಲಿಲ್ಲ ಹಾದಿ. ಬದುಕಿದಾಗ ಸತ್ತು ಸುಣ್ಣವಾದಡೆ ಸತ್ತ ಬಳಿಕ ಮುಕ್ತಿ ದೊರೆಯುವುದೆಂತು ? ಮೋಸದಲೆ ಎಲ್ಲ ಹಾದಿ ತಪ್ಪಿದರು, ಮುಂದಿಮುದು ಬರಿಯ ಗಾಳಿ. ನಿಜಸ್ವರೂಪವನರಿತು ಅಖಂಡವ ತಿಳಿದು ಇದ್ದಂತೆ ಇರಿ. ಸುಂದರನೆಂಬ : ಪ್ರತಿಗ್ರಹವಿಲ್ಲ, ತ್ಯಾಗವಿಲ್ಲ ಅದುವೆ ಮುಕ್ತಿಕಣಾ.

**ಪಲ್ಟೂ** (೧೮ನೆಯ ಶತಮಾನ) :

'ಸಂತ ನ ಚಾಹೈ ಮುಕ್ತಿಕೋ ನಹಿಂ ಪದಾರಥ ಚಾರೀ । ನಹಿಂ ಪದಾರಥ ಚಾರ್ ಮುಕ್ತಿ ಸಂತನ ಕೀ ಚೇರೀ ॥
ಋದ್ಧಿಸಿದ್ಧಿ ಪರ್ ಥುಕೈಂ ಸ್ವರ್ಗ ಕೀ ಆಸನ ಹೇರೀ । ತೀರಥ ಕರಹಿಂ ನ ವರ್ತ ನಹೀಂ ಕಭು ಮನ ಮೇ ಇಚ್ಛಾ ॥
ಪುನ್ಯ ತೇಜ ಪರತಾಪ ಸಂತಕೋ ಲಗೈ ಅನಿಚ್ಛಾ । ನಾ ಚಾಹೈ ಬೈಕುಂಠ ನ ಆವಾಗವನ ನಿವಾರಾ ।
ಸಾತ ಸ್ವರ್ಗ ಅಪವರ್ಗ ತುಚ್ಛ ಸಮು ತಾಹಿ ಬಿಚಾರಾ । ಪಲ್ಟೂ ಚಾಹೈ ಹರಿ ಭಗತಿ ಐಸಾ ಮತಾ ಹಮಾರ್ ॥
ಸಂತ ನ ಚಾಹೈಂ ಮುಕ್ತಿಕೋ ನಹೀಂ ಪದಾರಥ ಚಾರ ॥'[29]

(ಸಂತನೊಲ್ಲ ಮುಕ್ತಿಯ, ಒಲ್ಲ ಪದಾರ್ಥ ಚತುರ್ಥವ, ಮುಕ್ತಿಯಹುದು ಸಂತನ ತೊತ್ತು. ಋದ್ಧಿ. ಸಿದ್ಧಿ ಗುಣವ, ಇಲ್ಲ ಸಗ್ಗ ದಾಸೆ. ತೀರ್ಥ ಯಾತ್ರೆ ಬೇಡ, ವ್ರತವು ಬೇಡ, ಇಲ್ಲದಿಂವ ಬಯಕೆ. ಪುಣ್ಯ, ತೇಜ, ಪ್ರತಾಪ ಸಂತನಾವೆಲ್ಲ ಬಯಸ ಬಯಸ ನವ ವೈಕುಂಠವ, ಬೇಡವವಗೆ ಆವಾಗಮನ ನಿರೋಧ. ಸಪ್ತಸ್ವರ್ಗ, ಅಪವರ್ಗ ತುಚ್ಛವವನ ವಿಚಾರದಲಿ. ಪಲ್ಟು ಬಯಸುವ ಹರಿಭಕ್ತಿಯೊಂದನೆ. ಸಂತನೊಲ್ಲ ಮುಕ್ತಿಯ, ಪದಾರ್ಥ ಚತುರ್ಥವ.)

ಬಸವ : 'ಬ್ರಹ್ಮ ಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯ ನೊಲ್ಲೆ ;
ಮತ್ತಾವ ಪದವಿಯನೊಲ್ಲೆನಯ್ಯ ! ಕೂಡಲ ಸಂಗಮದೇವಾ,
ನಿಮ್ಮ ಸದ್‌ಭಕ್ತರ ಪಾದವನಱಿದಿಪ್ಪ ಮಹಾಪದವಿಯನೆ ಕರುಣಿಸಯ್ಯ;[30]

ಪ್ರಭುದೇವ : 'ಸತ್ತ ಬಳಿಕ ಮುಕ್ತಿಯ ಪಡೆದಹೆನೆಂದು ಪೂಜಿಸ ಹೋದರೆ ಆ ದೇವರೇನು ಕೊಡುವರೋ?
ಸಾಯದೆ ನೋಯದೆ ಸ್ವತಂತ್ರನಾಗಿ ಸಂಧಿ ಭೇದವಿಲ್ಲದಿಪ್ಪ ಗುಹೇಶ್ವರ ನಿಮ್ಮ ಶರಣ ॥'[31]

ಸಿದ್ಧರಾಮ : 'ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರ ಕೇಳಿರಯ್ಯ
ಕೈಲಾಸವೆಂಬುದೊಂದು ಭೂಮಿಯಲ್ಲಿರುವ ಹಾಳು ಬೆಟ್ಟ, ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು.
ಅಲ್ಲಿರುವ ಚಂದ್ರಶೇಖರನು ಬಹು ಎಡ್ಡ. ಇದರಾಡಂಬರವೇಕಯ್ಯಾ ?
ಎಮ್ಮ ಪುರಾತನರಿಗೆ ಸದಾಚಾರದಿಂದ ವರ್ತಿಸಿ ಲಿಂಗಾಂಗ ಸಮರಸವತಿಗಳೆದು
ನಿಮ್ಮ ಪಾದಪದ್ಮದೊಳು ಬಯಲಾದ ಪದವಿಯೇ ಕೈಲಾಸವಯ್ಯಾ ಮಲ್ಲಿಕಾರ್ಜುನಯ್ಯ.'[32]

ಗಜೇಶ ಮಸಣವಯ್ಯ : 'ಪರಮಪದವಿಯ ನೀವೆಲ್ಲ ಕೊರಳಲ್ಲಿ ಕಟ್ಟಿಕೊಳ್ಳಿ, ಎನಗೆ ನಿಮ್ಮ ತೊತ್ತು ಸೇವೆಯೇ ಸಾಕು.
ಮಹಾಲಿಂಗ ಗಜೇಶ್ವರದೇವ, ಪರಮಪದವಿಯನು ನಿಮ್ಮ ಎದೆಯಲ್ಲಿ ಇರಿದುಕೊಳ್ಳಿ.'[33]

ಸೊಡ್ಡಳ ಬಾಚರಸ : 'ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ, ರುದ್ರಪದವಿಯನೊಲ್ಲೆ,
ಇಂದ್ರಪದವಿಯನೊಲ್ಲೆ, ಉಳಿದ ದೇವತೆಗಳ ಪದವಿಯನೊಲ್ಲೆ,
ಎಲ್ಲಕ್ಕೊಡೆಯನಾದ ಶಿವನ ಪ್ರಮಥಗಣಗಳ ತಿಪ್ಪೆಯಮೇಲಣ
ಹುಳುವಾಗಿ ಹುಟ್ಟುವ ಪದವಿಯ ಕರುಣಿಸು ಮಹಿಮಸೊಡ್ಡಳ.[34]

ಮಾಧುರ್ಯ ಭಾವದ ಭಕ್ತಿ ಭಾರತೀಯ ಸಾಹಿತ್ಯದಲ್ಲಿ ತುಂಬ ಹಳೆಯದು ಹಾಗೂ ಪ್ರಸಿದ್ಧವಾದುದು. 'ಯೋಷಾ ಜಾರಮಿವ ಪ್ರಿಯಮ್' ಎಂದು ಋಗ್ವೇದದಲ್ಲಿಯೇ ಹೇಳಿದೆ. ಈ ಹೇಳಿಕೆಯ ಕಾರಣದಿಂದಲೋ ಏನೋ ಭಕ್ತಿಯಲ್ಲಿ ಜಾರ

---

28. ಅದೇ ಪು ೩೮೭ 29. ಅದೇ ಪುಟ ೫೨೬ 30. ಬಸವ ೩೬೦
31. ಅಲ್ಲಮನ ವಚನ ಚಂದ್ರಿಕೆ ೧೧೦ 32. ವಚನ ಸಂಗ್ರಹ ಸಂ. ಭೂಸನೂರುಮಠ ಪು-೪೭
33. ಶರಣಚರಿತಾಮೃತ ಪು.೪೪೩, 34. ಅದೇ ಪು.೪೩೫.

ಭಾವಕ್ಕೆ ಎಲ್ಲಿಲ್ಲದ ಪ್ರಾಶಸ್ತ್ಯ ದೊರೆಯಿತು. ಅದರಲ್ಲೂ ವೈಷ್ಣವರಲ್ಲಿ ಜಾರಕೃಷ್ಣನ ಜಾರತ್ವಕ್ಕೆ ಕೋಡು ಮೂಡಿತು. ಧರ್ಮಧುರಂಧರರೆನ್ನಿಸಿಕೊಂಡ ವೈಷ್ಣವರು ಜಾರನಾರಿಯಾದ ರಾಧೆಯನ್ನು ಭಕ್ತಿಯ ಪರಮಚರಮ ಆದರ್ಶವೆಂದು ಪರಿಗಣಿಸಿದರು. ಆದರೆ ಸಮಾಜಭಂಜಕರು ಮೂರ್ತಿಭಜಂಕರು ಎನ್ನಿಸಿಕೊಂಡ ನಿರ್ಗುಣ ಸಂತರು ಪತಿವ್ರತಾಂಗನೆಯನ್ನು ಭಕ್ತಿಯ ಪರಮಾದರ್ಶವೆಂದು ಸ್ವೀಕರಿಸಿದುದು ಮಧ್ಯಯುಗೀನ ಭಕ್ತಿ ಸಾಧನೆಯ ಪರಮ ಚೋದ್ಯಗಳಲ್ಲಿ ಒಂದು. ಇದರ ಹಿನ್ನೆಲೆಯಲ್ಲಿದೆ ವೀರಶೈವರ 'ಶರಣಸತಿಲಿಂಗಪತಿ'ಭಾವ. ಹಿಂದೀ ಸಾಹಿತ್ಯದಲ್ಲಿ ಮೀರಾಬಾಯಿ. ಸೂರದಾಸ, ತುಳಸೀದಾಸ ಇವರಾರೂ ತಾವು ಪರಮಾತ್ಮನ ಪರಿಣೀತ ಪತ್ನಿಯೆಂದು ಹೇಳಿಕೊಂಡಿಲ್ಲ. ಆದರೆ 'ಶರಣಸತಿಲಿಂಗಪತಿ' ಭಾವದ ಪ್ರಭಾವದಿಂದಲೋ ಏನೋ ಸಂತ ಕಬೀರ ತಾನು 'ಶ್ರೀರಾಮನ ಕೈಹಿಡಿದ ಮಡದಿ' ಎಂದು ಹೇಳಿಕೊಂಡಿರುವುದಲ್ಲದೆ ತನ್ನ ಮದುವೆಯನ್ನೂ ಅಕರಾಸೆಯಿಂದ ವರ್ಣಿಸಿಕೊಂಡಿದ್ದಾನೆ.

ಬಸವಣ್ಣನವರು ತಾವು ಮುತ್ತೈದೆ, ನಿಟ್ಟೈದೆ ಎಂದು ಘಂಟಾಘೋಷವಾಗಿ ಹೇಳಿಕೊಂಡಿದ್ದಾರೆ :–

> 'ಜಗವೆಲ್ಲಾ ಅರಿಯಲು ಎನಗೊಬ್ಬ ಗಂಡನುಂಟು ; ಆನು ಮುತ್ತೈದೆ, ಆನು ನಿಟ್ಟೈದೆ.
> ಕೂಡಲಸಂಗಯ್ಯನಂತಪ್ಪ ಎನಗೊಬ್ಬ ಗಂಡನುಂಟು.'[35]

ಅಕ್ಕಮಹಾದೇವಿಯಂತೂ ತನ್ನ ಮದುವೆಯ ವೈಭವವನ್ನು ಹೇಳಿ ತಣಿಯಳು :–

> 'ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಹವಳದ ಚಪ್ಪರವನಿಕ್ಕಿ. ಮುತ್ತು ಮಾಣಿಕದ ಮೇಲುಕಟ್ಟು
> ಕಟ್ಟಿ ಮದುವೆಯ ಮಾಡಿದರು, ನಮ್ಮವರೆನ್ನ ಮದುವೆಯ ಮಾಡಿದರು.
> ಕನಕ ಕೈದಾರ ಸ್ಥಿರ ಸೇಸೆಯನಿಕ್ಕಿ, ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು'[36]

ಷಣ್ಮುಖಸ್ವಾಮಿಯೂ ಕೂಡ ತನ್ನ ವಿವಾಹ ಬಂಧನವನ್ನು ಇನ್ನಿಲ್ಲದಂತೆ ವರ್ಣಿಸಿದ್ದಾನೆ :–

> 'ಎಲೆ ಶಿವನೆ, ನೀನು ಎನ್ನ ಮೆಚ್ಚಿ ಕೈವಿಡಿದ ಕಾರಣ ಎಮ್ಮವರು ಸಕಲ ಗಣಂಗಳ ಸಾಕ್ಷಿಯ ಮಾಡಿ ನಿನಗೆ
> ಎನ್ನ ಮದುವೆಯ ಮಾಡಿಕೊಟ್ಟರು. ನೀನು ಎನ್ನನಗಲಿದರೆ ಗುರುದ್ರೋಹಿ, ಆನು ನಿನ್ನನಗಲಿದರೆ ಸಮಯಕ್ಕ ಹೊರಗು,
> ಅದೆಂತೆಂದೊಡೆ ಮುನ್ನ ಶ್ರೀಗುರುಸ್ವಾಮಿ ಎನ್ನ ಪ್ರಾಣದೊಳಗೆ ನಿನ್ನ ಪ್ರಾಣವ ಹುದುಗಿಸಿ ಎಂದೆಂದೂ ಅಗಲಬೇಡೆಂದು
> ನಿರೂಪಿಸಿದರು. ಆ ನಿರೂಪವನು ಮಹಾಪ್ರಸಾದವೆಂದು ಕೈಕೊಂಡಬಳಿಕ ನಾವಿಬ್ಬರು ಎಂದೆಂದಿಗೂ
> ಅಗಲದಿರಬೇಕಯ್ಯ ಅಖಂಡೇಶ್ವರ'[37]

ದೇವನಿಗೂ ಜೀವನಿಗೂ ನಡೆದ ಇಂಥ ವಿವಾಹದ ವರ್ಣನೆ ಹಿಂದಿಯ ವೈಷ್ಣವಸಾಹಿತ್ಯದಲ್ಲಿ ಹುಡುಕಿದರೂ ಸಿಗುವುದಿಲ್ಲ. ಆದರೆ, ಸಂತ ಕಬೀರ ಮಹಾದೇವಿಯಕ್ಕನಂತೆ ತನ್ನ ಮದುವೆಯನ್ನು ಸಂಭ್ರಮದಿಂದ ವರ್ಣಿಸಿದ್ದಾನೆ; 'ಹರಿ ನನ್ನನಲ್ಲ ನಾನು ಆತನ ಕೈ ಹಿಡಿದ ಮಡದಿ'(ಹರಿ ಮೋರ ಪಿಯಾ, ಮೈ ರಾಮಕೀ ಬಹುರಿಯಾ)ಎಂದು ಘೋಷಿಸಿದ್ದಾನೆ.

ಕಬೀರ :- 'ದುಲಹಿನ ಗಾವಹುಂ ಮಂಗಲಾಚಾರ್ । ಹಮ ಘರಿ ಆಯೇ ಹೋ ರಾಜಾರಾಮ ಭರ್ತಾರ್ ॥
ತನ ರತಿಕರಿ ಮೈಂ ಮನ ರತಕರಿಹುಂ ಪಂಚ ತತ್ತ್ವ ಬರಾತೀ ।
ರಾಮದೇವ ಮೋರೇಪಾಹುನೇ, ಆಯೇ ಹೈಂ ಮೈಂ ಜೋಬನ ಮೈ ಮಾತೀ ॥
ಸರೀರ ಸರೋವರ ಬೇದೀಕರಿಹುಂ, ಬ್ರಹ್ಮಾ ಬೇದ ಉಚಾರ್ । ರಾಮದೇವ ಸಂಗ ಭಾಂವರಿ ಲೈಹುಂ, ಧನಿಧನಿ ಭಾಗ ಹಮಾರ್ ॥
ಸುರ ತೇತಿಸೂಂ ಕೌತಿಗ್ ಆಯೇ, ಮುನಿಯರ್ ಸಹಸ ಅಠ್ಯಾಸೀ । ಕಹೈಂಕಬೀರ ಹಮಬ್ಯಾಹಿ ಚಲೇ ಪುರಿಷ ಏಕ ಅವಿನಾಶೀ॥[38]
ಐದೆಯರಿರ ಐದಿಬನ್ನಿ, ಹಾಡಿ ಸೋಬಾನೆ ಎಮ್ಮ ಮನೆಗೆ ಬಂದಿಹ ರಾಜಾರಾಮ ಗಂಡನಾಗಿ ತಾನೆ ।
ತನು ಮನದ ಅನುರಕ್ತೆ ನಾನು ಪಂಚತತ್ತ್ವಗಳೆ ದಿಬ್ಬಣಿಗರು । ರಾಮದೇವನೈತಂದಿಹ ಅತಿಥಿಯಾಗಿ ನಾನು ಮತ್ತಳಾಗಿಹೆ ಹರೆಯದಿ ।
ಶರೀರ ಸರೋವರವನೆ ಹೋಮ ವೇದಿಯ ಮಾಡಿ ವೇದೋಚ್ಚಾರ ಮಾಡುತಿಹ ಬೊಮ್ಮತಾನೆ ।।
ರಾಮದೇವನೊಡನೆ ಸುತ್ತಿಹೆ ಹೊಳಲು ಧನ್ಯವೆನ್ನ ಭಾಗ್ಯವಲ ।
ಮೂವತ್ತು ಮೂರು ಕೋಟಿ ಸುರರು ಬಂದರು ಅರವತ್ತೆಂಟು ಕೋಟಿ ಮುನಿವರರ ನೆರವಿ !
ಕಬೀರನೆಂದ ಮದುವೆಯಾದೆ ಸಾವಿಲ್ಲದ ನೋವಿಲ್ಲದ ಗಂಡನ ನಾನು ಕಾಣಾ

ಕಬೀರ ತಾನು ರಾಮನ ಸತಿ ಎಂದು ಹೇಳಿಕೊಂಡಿರುವುದೊಂದೇ ಅಲ್ಲ ;ಸತೀಧರ್ಮಕ್ಕೆ ಎಲ್ಲಿಲ್ಲದ ಗೌರವ ಸಲ್ಲಿಸಿದ್ದಾನೆ. ಆತನ ವಾಣಿಗಳಲ್ಲಿ 'ನಿಹಕರ್ಮಿಪತಿಬ್ರತಾಕೌ ಅಂಗ್' (ನಿಷ್ಕಾಮ ಪತಿವ್ರತೆಯ ಅಂಗ) ಎಂದು ಒಂದು ಅಧ್ಯಾಯವೇ ಇದೆ. ಆತನನ್ನು ಅನುಸರಿಸಿ ಉಳಿದೆಲ್ಲ ಸಂತರೂ ಹದಿಬದಿಗೆ ಹಣೆ ಚಾಚಿದ್ದಾರೆ. ಈ ರೀತಿ ಅವರೆಲ್ಲರ ವಾಣಿಯಲ್ಲೂ ಪತಿವ್ರತೆಯನ್ನು

---

35. ಬಸವ ೫೦೩ 36. ವಚನಸಾಹಿತ್ಯಸಂಗ್ರಹ ಪು ೪೩೪ 37. ಅದೇ ಪು ೪೩೫.
38. ಕಬೀರಗ್ರಂಥಾವಲೀ ಪದ–೧

ಕುರಿತು ಒಂದೊಂದು ಅಧ್ಯಾಯವಿದೆ. ಈ ಪತಿವ್ರತೆ ಏಕಾಂತ ಭಕ್ತನ ಪ್ರತೀಕ ಎಂದು ಬೇರೆ ಹೇಳಬೇಕಿಲ್ಲ. ಪತಿವ್ರತೆಯನ್ನು ಬಸವ ಕಬೀರರಿಬ್ಬರೂ ಒಕ್ಕೊರಲಿನಿಂದ ಸ್ತುತಿಸಿದ್ದಾರೆ :

ಬಸವ : 'ದೇವನೊಬ್ಬ, ನಾಮಹಲವು ; ಪರಮಪತಿವ್ರತೆಗೆ ಗಂಡನೊಬ್ಬ;
ಮತ್ತೊಂದಕ್ಕೆಱಗಿದರೆ ಕಿವಿ ಮೂಗು ಕೊಯ್ವನು !
ಹಲವು ದೈವದ ಎಂಜಲ ತಿಂಬವರನೇನೆಂಬೆ, ಕೂಡಲಸಂಗಮ ದೇವಾ'39

ಕಬೀರ : 'ಕಬೀರ ಪ್ರೀತಿ ಡೀ ತೌ ತುಝಸೋಂ ಬಹುಗುಣಿಯಾಲೇ ಕಂತ
ಜೇ ಹಸಿ ಬೋಲೌಂ ಸುನ್. ತೌ ಮೈಲಾ ರಂಗೌಂ ದಂತ್ ॥40

(ಓ ಕಾಂತ ಪ್ರೀತಿಯಿದ್ದರೆ ನಿನ್ನಲ್ಲಿ ಮಾತ್ರ, ಅನ್ನಿಗನೊಡನೆ ನಕ್ಕು ನುಡಿದೆನಾದಡೆ ಎನ್ನ ಹಲ್ಲಿಗೆ ಮಸಿ ಹಚ್ಚ!)

ದಾದೂದಯಾಲ್ : 'ಮನ ಚಿತ ಮನಸ ಪಲಕ ಮೈಂ ಸೈನ ದೂರಿನ ಹೋಇ ।
ನಿಹಕಾಮಿ ನಿರಖೈಸದಾ. ದಾದೂ ಜೀವನಿ ಸೋಇ ॥41

(ಮನದಲೇ ನೆಲೆಸಿಹಳವಳ ಪತಿ, ಎವೆಯಲೂ ಅವನೆ, ಚಣಕೂದೂರವಾಗನವನು ; ನಿಷ್ಕಾಮಿ ಹದಿಬದೆ ಇಂತು ನಿರಕಿಸುವಳ ಸಂತತ, ಇದುವೆ ಅವಳ ಜೀವನ)

'ಪತಿವ್ರತಾ ಗೃಹ ಆಪನ್ನೈ ಕರೈ ಖಸಮ ಕೀ ಸೇವ ।
ಜ್ಯೂಂ ರಾಖೈಂ ತ್ಯೂಂ ರಹೈ ಆಗ್ಯಾಕಾರೀ ಟೇವ ॥42

(ಹದಿಬದೆ ಮನೆಯಲಿ ಸೇವೆಗೈವಳು ಗಂಡಗೆ, ಇಟ್ಟಂತೆ ಇರುವಳು ವಿಧೇಯಳಾಗಿ)

ಸುಂದರದಾಸ : 'ಹೋಇ ಅನನ್ಯ ಭಜೈ ಭಜೈ ಭಗವಂತ ಹಿಂ ಔರ್‌ಕಛು ಉರಮೇ ನಹಿಂರಾಖೈ ।
ದೇವಿಯದೇವ ಜಹಾಂ ಲಗಹೈಂ ಡರಿಕೈ ತಿನಸೌಂ ಕಹುಂ ದೀನನ ಭಾಖೈ॥
ಯಾಗಹು ಯಜ್ಞಬ್ರತಾದಿ ಕ್ರಿಯಾ ತಿನಕೌಂ ನಹಿಂತೌ ಸುಪಿನ್ಯೆಂ ಅಭಿಲಾಖೈ॥
ಸುಂದರ ಅಮೃತಪಾನ ಕಿಯೌ ತಬ ತೌ ಕಹಿ ಕೌನ ಹಲಾಹಲಚಾಖೈ43

(ಅನನ್ಯಳಾಗಿ ಭಜಿಪಳು ಭಗವಂತನ, ಅನ್ಯವ ತಾರಳು ಮನಕೆ. ದೇವಿ ದೇವತೆಗಳೂ ಅಂಜುವರವಳಿಗೆ, ಯಾಗಯಜ್ಞ ವ್ರತ ಕ್ರಿಯೆಯ ಕನಸಲೂಕಾಣಳು, ಸುಂದರನೆಂಬ ಅಮೃತಪಾನದ ಬಳಿಕ ಹಾಲಾಹಲವೇಕೆ?)

'ಸುಂದರ ಔರ್‌ಕಛು ನಹಿಂ ಬಿನಾ ಭಗವಂತ ।
ತಾಸೂಂ ಪತಿಬ್ರತಾ ರಾಖಿಯೇ ತೇರೀ ಕಹೈ ಸಬ್ ಸಂತ॥

(ಸುಂದರನೆಂಬ, ಭಗವಂತನಿಲ್ಲದನ್ಯವೊಂದು ಇಲ್ಲ. ಹದಿಬದಿಯಂದದಿ ನಿಷ್ಠೆಯಿಂದಿರಿಯೆಂಬರೆಲ್ಲ ಸಂತರು)

ಚರಣದಾಸ:- 'ಸೋಈ ಸೋಹಾನಿನ ನಾರಿ ಪಿಯಾಮನ ಭಾವಈ। ಅಪನೇ ಘರಕೋ ಛೋಡಿನ ಪರಘರ ಜಾವಈ॥
ಅಪನೇ ಪಿಯಕಾ ಭೇದ ನ ಕಾಹೂ ದೀಜಿಯೇ । ತನ ಮನ ಸುರತಿ ಲಗಾಯಿಕೇ ಸೇವಾ ಕೀಜಿಯೇ ॥
ಪತಿ ಕೀ ಆಗ್ಯಾ ಚಾಲ್, ಪಾಲ್ ಪಿಯಕೋ ಕಹೋ । ಲಾಜ ಕಿಯೇ ಕುಲವಂತ ಜತನ ಹೀಂ ಸೂಂ ರಹೋ ॥
ಪಿಯಾ ಕೂಂ ಚಾಹೋ ರೂಪ ಸಿಂಗಾರ ಬನಾಇಯೇ । ಪತಿಬ್ರತಾ ಕುಲ ದೋಯಮೇ ಸೋಭಾ ಪಾಇಯೇ ॥
ನೌಧಾ ಬಸ್ತರ ಪಹರಿ ದಯಾರಂಗ ಲಾಲ್ ಹೈ । ಭೂಷನ ಬಸ್ತರ ಧಾರಿ ಬಿಚಿತ್ತರ ಬಾಲ್ ಹೈ ॥
ರಂಗಮಹಲ ನಿರದೋಷ ಹ್ವಾಂ ಝಿಲಮಿಲ ನೂರ ಹೈ । ನಿರಗುನ ಸೇಜ ಬಿಛಾಯ ಸಭೀ ಕರಿದೂರ ಭೈ ॥
ಮಂದಿರ ದೀಪಕ ಬಾಲ ಬಿನ ಬಾತೀ ಘೀವ ಕೀ । ಸುಘರ ಚತುರ ಗುನರಾಸಿ ಲಾಡಿಲೀ ಪೀವಕೀ ॥
ಕಹೈ ಗುರು ಸುಕದೇವ ಯೋಂಬಾಲಮ್ ಮೋಹಿಯೇ । ಚರನದಾಸ ಲೇ ಸೀಖ ಜೋ ಪ್ರೇಮ ಸಮೋಇಯೇ ॥44

(ತನ್ನ ಮನೆಯ ತೊರೆದು ಪರಗೃಹಕೆ ಹೋಗದ ಸೌಭಾಗ್ಯವತಿ ನಾರಿಯೇ ಗಂಡನ ಮನದನ್ನೆಯಾಗಬಲ್ಲಳು. ತನ್ನ ಪತಿಯ ಗುಟ್ಟ ಅನ್ಯರಿಗೊರಿಯದಿರಿ. ತನುಮನದಿಂದ ಪ್ರೀತಿಸಿ ಸೇವೆ ಗೈಯಿರಿ. ಗಂಡನಾಜ್ಞೆಯೊಳು ನಡೆಯಿರಿ ಚಣ ಚಣವು. ಲಜ್ಜೆ ಯಿಂದಿದ್ದು ರೂಪಶೃಂಗಾರದಿ ನಲ್ಲ ನೊಲಿಸಿರಿ. ಇಂಥ ಪತಿವ್ರತೆ ಎರಡು ಕುಲಕೂ ಬೆಳಕು. ನವವಿಧವಸ್ತ್ರಗಳ ತೊಟ್ಟು, ದಯೆ ಯೆಂಬ ಕೆಂಪು ಬಣ್ಣವ ಬಳಿದು, ವಸ್ತ್ರಭೂಷಣ ಮಂಡಿತಳಾಗಿ ಕೇಶ ಸಜ್ಜೆಯಿಂದ ಕೂಡಿಹಳು. ರಂಗ ಮಹಲಿನಲಿ ನಿರ್ದೋಷ ಬೆಳಕು ಬೆಳಗುತಿಹುದು. ನಿರ್ಗುಣ ಶಯೆ ಯ ಹಾಸಿ, ಎಲ್ಲವ ತೊರೆದು, ಬತ್ತಿ ಒಳಗೆ ತುಪ್ಪವಿಲ್ಲದ ದೀಪ ಹಚ್ಚಿ ಚತುರನಲ್ಲನ ರಮಿಸಿರಿ.)

---

39. ಬಸವ ೬೧೩  40. ಕಬೀರ ಗ್ರಂಥಾವಲೀ-ನಿಹಕ್ರಮೀ ಪತಿಬ್ರತಾ ಕೌಅಂಗ್-ಸಾಖಿ, ೧.
41. ಸಂತಸುಧಿಸಾರ-ಸಂ. ವಿಯೋಗೀಹರಿ. ಪು. ೪೨೦.  42. ಅದೇ ಭಾಗ ೨ ಪು. ೧೫೮.  43. ಅದೇ ಪು. ೬೨೪.
44. ಅದೇ ಪು. ೧೫೮.

ಪಲ್ಟೂ :- 'ಸೋಈ ಸತೀ ಸರಾಹಿಯೇ, ಜರ್ೈ ಪಿಯಾ ಕೇ ಸಾಥ್ ॥
ಜರ್ೈ ಪಿಯಾಕೇ ಸಾಥ್. ಸೋಇ ಹೈ ನಾರಿ ಸಯಾನೀ। ರಹೈ ಚರನ ಚಿತಲಾಯ, ಏಕಸೇ ಔರ್ ನ ಜಾನೀ ॥
ಜಗತ ಕರ್ೈ ಉಪಹಾಸ, ಪಿಯಾಕಾ ಸಂಗನ ಛೋಡೈ । ಪ್ರೇಮ ಕೀ ಸೇಜ್ ಬಿಛಾಯ ಮೇಹರ್ ಕೀ ಚಾದರ್ ಓಡೈ ॥
ಐಸೀ ರಹನೀರಹೈ ತಜೈಜೋ ಭೋಗ ವಿಲಾಸಾ । ಮಾರೈ ಭೂಖ ಪಿಯಾಸ್ ಯಾದ ಸಂಗ ಚಲತೀ ಸ್ವಾಸಾ ॥
ರೈನ ದಿವಸ ಬೇಹೋಸ್ ಪಿಯಾಕೇ ರಂಗಮೇ ರಾತೀ । ತನಕೀ ಸುಧಿ ಹೈ ನಾಹಿಂ ಪಿಯಾ ಸಂಗ ಬೋಲತ ಜಾತೀ ॥
ಪಲಟೂ ಗುರು ಪರಸಾದ ಸೇಕಿಯಾ ಪಿಯಾ ಕೋಹಾಥ್ । ಸೋಈ ಸತೀ ಸರಾಹಿಯೇ ಜರ್ೈ ಪಿಯಾಕೇ ಸಾಥ್ ॥45

(ತನ್ನ ಪತಿಯೊಡನೆ ಚಿತೆಯನೇರುವ ಸತಿಯ ಕೊಂಡಾಡಿ. ಅವಳೆ ಜಾಣೆನಾರಿ. ಪತಿಯ ಚರಣದಲಿ ದತ್ತ ಚಿತ್ತಳಾಗಿಹಳವಳು, ಅನ್ಯರ ನೆನೆಯದೆ. ಜಗವೆಲ್ಲ ಉಪಹಾಸಗೈದಡೂ ತೊರೆಯಳವಳು ಪತಿಯ ಸಂಗವ. ಒಲವಿನ ಹಾಸ ಹಾಸಿ, ಬೆಳಕಿನ ಹಚ್ಚಡ ಹೊದ್ದು ಇಂಥ ಬಾಳನಡೆಪಳವಳು ತೊರೆದು ಭೋಗ ವಿಲಾಸವ. ಪತಿಯೊಡನಿದ್ದು ಕ್ಷುತ್ಪಿಪಾಸೆಯ ತೊಡೆದು ಉಸಿರಾಡುತಿಹ ಳವಳು. ಹಗಲಿರುಳು ನಲ್ಲನೊಲುಮೆಯಲೇ ಮೈಮರೆತು ಮಾತನಾಡುತಿಹಳು ಆತಗೆ ಸೋತು ಓತು. ಪಲ್ಟೂಪೆಂದ: ಗುರುಕೃಪೆ ಯಿಂದ ಪತಿಯೊಡನೊಗೆತನವಾಯ್ತು.)

ಸಂತ ಇಲ್ಲವೆ ಭಕ್ತನೊಬ್ಬ ವೀರಯೋಧ ಎಂಬ ಕಲ್ಪನೆ ಔತ್ತರೇಯ ಸಂತರಲ್ಲಿ ಸರ್ವಸಾಧಾರಣ. 'ಆತ್ಮಾನಂ ರಥಿನಂ ವಿದ್ಧಿ' ಮೊದಲಾದ ಕಲ್ಪನೆಗಳು ಉಪನಿಷತ್ತಿನಲ್ಲೇ ಇದ್ದರೂ ಇದು ನಿರ್ಗುಣ ಸಂತರಲ್ಲಿ ಅವಶೇಷವಾಗಿರದೆ ಒಂದು ಜೀವಂತ ವಿಶೇಷವಾಗಿ ಉಳಿದಿದೆ. 'ವೀರಶೈವ' ಎಂಬ ಹೆಸರೇ ಅವರಿಗೆ ಪ್ರೇರಣೆ ನೀಡಿರಬೇಕು. ವೀರಶೈವ ಸಂತರಂತೂ ದೇವರೊಡ ನೆಯೂ ಹೋರಾಡಲು ಹಿಂದೆ ಮುಂದೆ ನೋಡುವುದಿಲ್ಲ. ಔತ್ತರೇಯ ಸಂತರೆಲ್ಲ ತಮ್ಮ ವಾಣಿಯಲ್ಲಿ 'ಸೂರಾತನಕೌ ಅಂಗ' ಎಂದು ಒಂದು ಅಧ್ಯಾಯವನ್ನೇ ಇದಕ್ಕಾಗಿ ಮೀಸಲಾಗಿಟ್ಟಿದ್ದಾರೆ. ಕಬೀರನಂತೂ ತನ್ನ ತಲೆಯನ್ನೇ ತರೆದು ವೀರನಾದ ಎಂದು ಸಂತ ದಾದೂ ಹೇಳಿದ್ದಾನೆ. ಈ ಕಲಿತನ ವೀರಶೈವ ಸಾಹಿತ್ಯದಲ್ಲಿ ಅದ್ವಿತೀಯವಾಗಿ ಮೂಡಿದೆ. ಆದ್ದರಿಂದ ಈ ಕಲ್ಪನೆ ಕೂಡ ಇಲ್ಲಿಂದಲೇ ಅಲ್ಲಿಗೆ ಹೋಗಿರಬೇಕು.

ಬಸವ :– ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ
'ಕೊಲುವೆನೆಂ'ಬ ಭಾಷೆ ದೇವನದು ; 'ಗೆಲುವೆನೆಂ'ಬ ಭಾಷೆ ಭಕ್ತನದು !
ಸತ್ಯವೆಂಬ ಕೂರಲಗನೆ ಕಳೆದುಕೊಂಡು ಸದ್ಭಕ್ತರು ಗೆದ್ದರು, ಕಾಣಾ, ಕೂಡಲಸಂಗಮದೇವಾ' 46

ಬಸವಣ್ಣನವರ ಮಾಹೇಶ್ವರನಿಷ್ಠೆ ಅನ್ಯಾದೃಶ :–

'ಎನಿಸೆನಿಸಂದೊಡೆ ನಾ ಧೃತಿಗೆಡೆನಯ್ಯಾ ; ಎಲುದೋಱಿದರೆ ನರಹಱಿದರೆ ಕರುಳು ಕುಪ್ಪಳಿಸಿದರೆ
ನಾ ಧೃತಿಗೆಡೆನಯ್ಯಾ, ಸಿರಹಱಿದು ಅಟ್ಟೆ ನೆಲಕ್ಕೆ ಬಿದ್ದರೆ ನಾಲಿಗೆ 'ಕೂಡಲಸಂಗಾ, ಶರಣೆ'ನ್ನುತ್ತಿದ್ದೀತಯ್ಯಾ'47

ಕಬೀರ :- 'ಭಗತಿ ದುಹೇಲೀ ರಾಮಕೀ ನಹಿಂ ಕಾಯಕ್ ಕಾ ಕಾಮ್ । ಸೀಸ ಉತಾರ್ೈ ಹಾಥಕರಿ, ಸೋಲೇಸೀ ಹರಿನಾಮ್॥'48

(ಭಕ್ತಿ ಕಠಿಣ ರಾಮನದು, ಹಂದೆಯ ಕಾರ್ಯವಲ್ಲವದು. ತಲೆಯ ತರೆದು ಕೈಯಲಿ ಹಿಡಿದಾತ ಹೇಳಬಲ್ಲ ಹರಿಯ ಹೆಸರ)

'ತೀರ ತುಪಕ ಸೇ ಜೋ ಲಡೈ, ಸೋ ತೋ ಸೂರ ನ ಹೋಇ ॥ ಮಾಯಾ ತಜಿ ಭಕ್ತಿ ಕರಇ, ಸೂರ ಕಹಾವೈ ಸೋಇ॥49

(ಅಂಬು ತುಪಾಕಿಯಿಂದ ಹೋರುವಾತನಲ್ಲ ಶೂರ ! ತೊರೆದು ಮಾಯೆಯ ಭಕ್ತಿ ಮಾಡುವಾತನೇ ಶೂರ !)

ದಾದೂದಯಾಲ್ :- 'ಸಿರ ಕೈ ಸಾಟೈ ಲೀಜಿಯೇ, ಸಾಹಿಬಜೀಕಾ ನಾಂವ। ಖೇಲೈ ಸೀಸ ಉತಾರಿಕರಿ, ದಾದೂ ಮೈಂ ಬಲಿ ಜಾಂವ॥'50

(ಸಿರವನಾದರೂ ತೆತ್ತಿ ಪ್ರಭುವ ಹೆಸರ ಹೇಳಿ. ತಲೆಯ ತರೆದು ಆಡುವಾತಗೆ ಹಣೆ ಜಾಚುವ ದಾದೂ.)

'ಪೀಛೈ ಕೌಂ ಪಗ ನಾಭರೈ, ಆಗೈಂ ಕೌಂ ಪಗ ಹೇಇ । ದಾದೂ ಯಹಮತ ಸೂರಕಾ, ಅಗಮಠೌರ ಕೌಲೇಇ॥'51

(ಅಡಿಯ ಹಿಂದಿಡಲಾಗದು, ಮುಂದಿಡು ಅಡಿಯ. ದಾದುವೆಂದ : ಅಗಮ ನೆಲೆಯ ಗೆಲ್ಲುವ ಕಲಿಯ ಮತವಿದು.)

ಸುಂದರದಾಸ :- 'ಸೀಸ ಉತಾರ್ೈ ಹಾಥಿಕರಿ, ಸಂಕಸ ಆನೈ ಕೋಇ । ಐಸೇ ಮಹಂಗೇ ಮೋಲಕಾ ಸುಂದರ ಹರಿರಸ ಹೋಇ ॥52

(ತಲೆಯ ತರೆದು ಕೈಯಲಿ ಪಿಡಿವಾತ ನಿಜದ ಕಲಿ. ಹರಿರಸ ಇಂತು ತುಟ್ಟಿಯೆಂದ ಸುಂದರ.)

ಮಾರವಾಡಡ ದರಿಯಾ ಸಾಹೇಬ :-

'ಸಾಧ ಸೂರಕಾ ಏಕ ಅಂಗ. ಮನ ನ ಭಾವಇ ಝೂಠ್ । ಸಾಧನ ಛಾಂಡಇ ರಾಮಕೋ, ರಾಮಮೇ ಫಿರೈನ ಪೂಠ್॥
ಸೂರ್‌ನ ಜಾನೈ ಕಾಯರಿ, ಸೂರನತನ ಸೇ ಹೇತ್ । ಪುರ್ಜಾ ಪುರ್ಜಾ ಹೋ ಪಡೈ, ತಹೂನ ಛಾಂಡೈ ಖೇತ್
ದರಿಯಾ ಸೋ ಸೂರಾ ನಹಿಂ, ಜಿನ ದೇಹಕರಿ ಚಕಚೂತ್ । ಮನಕೋ ಜೀತ ಖಡಾ ರಹೈ, ಮೈಂ ಬಲಿಹಾರೀ ಸೂರ್ ॥
ದರಿಯಾ ಸಾಂಚಾ ಸೂರಮಾ, ಅರಿದಲ ಘಾಲೈ ಚೂರ್ । ರಾಜ ಥಾಪಿಯಾ ರಾಮಕಾ, ನಗರ ಖಸಾ ಭರಪೂರ್'53

---

45. ಅದೇ ಪು. ೨೨೯.
46. ಬಸವ: ೬೭೭
47. ಅದೇ ೬೯೧
48. ಸಂತ ಸುಧಾಸಾರ್—ಭಾಗ ೧ ಪುಟ ೧೬೩
49. ಅದೇ ಪುಟ ೧೬೪
50. ಅದೇ ಪು ೪೯೧
51. ಅದೇ ಪು ೪೯೦
52. ಅದೇ ಪು ೬೪೬
53. ಅದೇ, ಭಾಗ೨-ಪು ೧೭೨

(ಸಾಧು ಮತ್ತು ಶೂರ ಇಬ್ಬರೂ ಒಂದೇ ಗುಂಪಿಗೆ ಸೇರಿದವರು. ಹುಸಿ ಅವರಿಗೆ ಹಿಡಿಸದು. ಸಾಧು ರಾಮನನ್ನು ತೊರೆಯ, ಶೂರ ಕಳವ ತೊರೆಯ; ಹಂದೆತನವನರಿಯ, ದೇಹ ಖಂಡ ತುಂಡಾದರೂ ಅವನು ಕಳವ ತೊರೆಯ. ತನ್ನ ದೇಹವ ತುಂಡರಿಸುವಾತ ಶೂರನಲ್ಲ. ಮನವಗೆದ್ದಾತಗೆ ಮಣಿವೆ ನಾನು. ದರಿಯನೆಂದ: ನಿಜದ ಶೂರ ಅರಿಯ ತರೆದು ರಾಮರಾಜ್ಯವ ಸ್ಥಾಪಿಸಿ ಊರ ನೆಲೆಗೊಳಿಪ.)

ಚರಣದಾಸ:- ಸತಗುರು ಮೇರಾ ಸೂರಮಾ, ಕರೈಶಬ್ದಕೀ ಚೋಟ್। ಮೋರೇಗೋಲಾ ಪ್ರೇಮಕಾ ಢಹೈಭ್ರಮ್ಕಾ ಕೋಟ್ ॥
ಸತಗುರು ಶಬ್ದೀತೇಗಹೈ, ಲಾಗತದೋಕರಿ ದೇಹಿ। ಪೀಠ ಫೇರಿ ಕಾಯರಭಜೈ, ಸೂರಾಸನಮುಖ ಲೇಹಿ॥
ಸತಗುರು ಶಬ್ದೀತೀರ ಹೈ, ತನಮನ ಕಿಯೋ ಛೇದ್ । ಬೇದರ್ದೀ ಸಮಝೈ ನಹಿಂ, ಬಿರಹೀ ಪಾವೈಭೇದ್॥
ಸತಗುರು ಸಬದೀ ಬಾನಹೈ, ಅಂಗ ಅಂಗ ಡಾರೈ ತೋಡ್ । ಪ್ರೇಮಖೇತ ಘಾಯಲ್‌ಗಿರೈ, ತಂಕಾಲಗೈನ ಜೋಡ್[54]॥

(ನನ್ನ ಸದ್ಗುರು ನಿಜವಾದ ಕಲಿ, ಶಬ್ದದ ಪೆಟ್ಟನೀವ. ಪ್ರೇಮದ ಗುಂಡು ತಾಗಿದರೆ ಸಾಕು, ಉರುಳುವುದು ಭ್ರಮೆಯ ಕೋಟೆ. ಸದ್ಗುರುವ ಶಬ್ದವೇ ಕತ್ತಿ. ತಾಗಿದೊಡೆ ಎರಡು ತುಂಡು ದೇಹ. ಬೆನ್ನ ತೋರಿ ಹಂದೆ ಓಡುವ, ಕಲಿ ಎದಿರುನಿಲ್ಲುವ. ಸದ್ಗುರುವ ಶಬ್ದವೇ ಬಾಣ. ತನುಮನವ ಛೇದಿಪುದು. ನೋವಿಲಿಯರಿಯ, ವಿರಹಿಬಲ್ಲ. ಸದ್ಗುರುವ ಶಬ್ದವೇ ಬಾಣ, ಅಂಗ ಅಂಗವನೆಲ್ಲ ಮುರಿವುದು; ಪ್ರೇಮ ಕಳದಲಿ ಬೀಳುವನವನು ಘಾಯಗೊಂಡು, ಅಲ್ಲಿಲ್ಲವವಗೆ ಸಮ, ಒಣಗದು ಘಾಯ).

ದಯಾಬಾಯಿ:- ಗುರು ಶಬ್ದನಕು ಗ್ರಹಣಕರಿ, ವಿಷಯಾನಕು ದೇಪೀಠ್ ಗೋವಿಂದರೂಪಿ, ಗದಾಗಹಿ, ಮಾರೋಕರ್ಮನ ದೀಠ್ ॥೧॥
ಸೂರಾವಹೀ ಸರಾಹಿಯೇ, ಬಿನಸರ ಲಡತ ಕಬಂದ್। ಲೋಕ ಲಾಜ್ ಕುಲಕಾನಕೂಂ, ತೋಡಿ ಹೋತ ನಿರ್ಬಂಧ್ ॥೨॥
ಸುನತಶಬ್ದ ನೀಸಾನಕುಂ, ಮನಮೇ ಉಠತ ಉಮಂಗ್ । ಜ್ಞಾನಸಗರ್ಜ ಹಥಿಯಾರ್ ಗಹಿ, ಕರತ ಜುದ್ಧ ಅರಿಸಂಗ್ ॥೩॥
ಸೂರಾಸನ್ಮುಖ ಸಮರಮೇ, ಘಾಯಲ್ ಹೋತ ನಿಸಂಕ್ । ಯೋಂ ಸಾಧು ಸಂಸಾರಮೇ ಜಗಕೇ ಸಹೈ ಕಲಂಕ್ ॥೪॥
ಕಾಯರ್‌ಕಾಂಪೈ ದೇಖಿಕರ್, ಸಾಧೂಕೋ ಸಂಗ್ರಾಮ್ । ಸೀಸ ಉತಾರಿ ಭೂಮಿ ಧರಿ, ತಬ್ ಪಾವೈ ನಿಜಧಾಮ್[55]॥೫॥

(ಗುರು ಶಬ್ದವನ್ನು ಹಿಡಿದು, ವಿಷಯಕ್ಕೆ ಬೆನ್ನು ತೋರಿ ಗೋವಿಂದನೆಂಬ ಗದೆವಿಡಿದು ಕರ್ಮವ ಹೊಡೆವ, ತಲೆಯಿಲ್ಲದೆ ಹೋರುವ ಕಬಂಧವ ಕೊಂಡಾಡಿ. ಲೋಕ ಲಜ್ಜೆ ಕುಲಗೌರವವನ್ನೂ ತೊರೆದು ನಿರ್ಬಂಧರಹರು. ಶಬ್ದದ ನಿಸ್ಸಾಳ ಸೂಳವನ್ನು ಕೇಳಿ ಮನದಲ್ಲಿ ಉತ್ಸಾಹ ಉಮ್ಮಳಿಸುತ್ತದೆ. ಜ್ಞಾನವೆಂಬ ಆಯುಧವನ್ನು ಕೈಯಲ್ಲಿ ಹಿಡಿದು ಯುದ್ಧ ಮಾಡುವರವರು ಅರಿಯೊಡನೆ. ಶೂರನನ್ನೆದುರಿಸಿ ರಣದಲ್ಲಿ ಅವರು ಘಾಯಗೊಳ್ಳುವವರು. ಈ ರೀತಿ ಸಾಧುಗಳು ಜಗತ್ತಿಗಾಗಿ ಯುದ್ಧ ಮಾಡುತ್ತಾರೆ. ಹೇಡಿ ನಡುಗತೊಡಗುತ್ತಾನೆ. ತಲೆಯ ತರೆದು ನೆಲಕ್ಕಿಡುವಾತನೇ ಪಡೆಯುವನೀಧಾಮವ).

ಪಲ್ಟೂ :- 'ಯಹ ತೋ ಘರ ಹೈ ಪ್ರೇಮಕಾ ಖಾಲಾಕಾ ಘರ ನಾಹಿಂ ॥
ಖಾಲಾಕಾ ಘರ ನಾಹಿ ಸೀಸ ಜಬ್ ಧರೈ ಉತಾರಿ । ಹಾಥ್ ಪಾಂವ್ ಕಟಿಜಾಯ್ ಕರೈನಸುಂತ ಕಠಾರೀ ॥
ಜ್ಯೋಂ ಜ್ಯೋಂ ಲಾಗೈ ಘಾವ್ ತೇಹುಂ ತೇಹುಂ ಕದಮ ಚಲಾವೈ । ಸೂರಾ ರನ ಪರ್ ಜಾಯ್ ಬಹುರಿ ನಾಜಿಯತಾ ಆವೈ ॥
ಪಲಟೂ ಐಸೇ ಘರಮ ಹೈ ಬಡೇಮುರದ ಜೇಜಾಹಿಂ । ಯಹ ತೋ ಘರ ಹೈ ಪ್ರೇಮಕಾ ಖಾಲಾಕಾ ಘರ ನಾಹಿಂ ॥'[56]

(ಇದು ಪ್ರೇಮದ ಮನೆ, ಚಿಕ್ಕಮ್ಮನ ಮನೆಯಲ್ಲ. ತಲೆಯ ತರೆದು ಹಿಡಿಯಬೇಕು. ಕೈಕಾಲು ಕಡಿದುರುಳಿದರೂ ನರಳ ಸಂತ. ಘಾಯವಾದಂತೆಲ್ಲ ಅವನು ಮುಂದೆ ಸಾಗುವ. ಶೂರ ಕಳಕ್ಕಿಳಿದರೆ ಮತ್ತೆ ಮರುಳ. ಪಲ್ಟೂ ಎಂದ: ಆ ಮನೆಯನ್ನು ಕಡುಗಲಿಗಳು ಮಾತ್ರ ಹೊಗಬಲ್ಲರು. ಇದು ಪ್ರೇಮದ ಮನೆ)

ತುಲಸೀಸಾಹಬ್ :- 'ಸೂರಾತನ ಮೇ ಸೀಸ ಕೋ ಧರೈ ಹಥೇಲಿ ಮಾಹಿಂ ।
ಸರಾಸತೀ ಜರಿಜಾಯ್ ಜೋ ಪಿಲ್ ಪೈಠೇ ಘರಮಾಹಿಂ ।।[57]

(ಶೂರ ಶಿರವ ತರೆದು ಕೈಯಲಿ ಹಿಡಿವ. ಚಿತೆಯನೇರಿ ಉರಿವಳೇ ಹೋಗುವಳು ಸಗ್ಗಕೆ.)

ವೀರಶೈವರಲ್ಲಿ ಪೂರ್ವ ಜನ್ಮದ ಉಲ್ಲೇಖವಿದೆ. ಪುನರ್ಜನ್ಮದ ಉಲ್ಲೇಖವಿಲ್ಲ. ಲಿಂಗಧಾರಣೆಯಾದ ಕೂಡಲೆ ಜೀವಿಯ ಕರ್ಮವೆಲ್ಲ ಸುಟ್ಟು ಅವನು ಮೋಕ್ಷಕ್ಕೆ ಹೋಗುತ್ತಾನೆ ಎಂಬ ಕಲ್ಪನೆ ಇದರ ಹಿನ್ನೆಲೆಯಲ್ಲಿರಬೇಕು. ಇದರ ಪ್ರಭಾವದಿಂದಲೋ ಏನೋ ಔತ್ತರೇಯ ಸಂತರಲ್ಲಿ ಯಾರೂ ಪುನರ್ಜನ್ಮವನ್ನು ಹೇಳುವುದಿಲ್ಲ. ಸದಾಚಾರ, ಸ್ವಾನುಭೂತಿ ಹಾಗೂ ಸತ್ಯನಿಷ್ಠೆಯಿಂದ ಈ ಧರಾಧಾಮವನ್ನೇ ಸ್ವರ್ಗವನ್ನಾಗಿ ಮಾಡುವ ಹಂಬಲವುಳ್ಳ ಅವರು ಇದ್ದಲ್ಲೇ ಮೋಕ್ಷವನ್ನು ಕಾಣುತ್ತಾರೆ.

ಈ ರೀತಿ ಔತ್ತರೇಯ ಸಂತರ ಚಿಂತನ ಗಂಗೆಯಲ್ಲಿ ಕನ್ನಡ ನಾಡಿನ ಕಾವೇರಿಯ ಜಲವೂ ಮಿಳಿತವಾಗಿದೆ. ಸಂಗಮೋತ್ಸುಕತೆ ಜೀವಂತ ನದಿಯ ಲಕ್ಷಣ. ಸಂಸ್ಕೃತಿಯೆಂಬುದೊಂದು ಕೂಡಲ ಸಂಗಮ ಈ ಸಂಗಮದಲ್ಲಿ ದೇವನನ್ನು ಕಂಡವರು ನಿಜಕ್ಕೂ ಧನ್ಯರು.

---

54. ಅದೇ ಪು. ೧೭೪. 55. ಅದೇ ಪು. ೨೦೧. 56. ಅದೇ ಪು. ೨೨೭ 57. ಅದೇ ಪು. ೨೯೦

# ವಚನಸಾಹಿತ್ಯವನ್ನು ಹೋಲುವ ಇತರ ಸಾಹಿತ್ಯಪ್ರಕಾರಗಳು

**(ಒಂದು ತೌಲನಿಕ ಅಧ್ಯಯನ)**

**—ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ**

## ೧

ಒಂದು ಕೃತಿಯನ್ನು ಮತ್ತೊಂದು ಕೃತಿಯೊಡನೆ ಹೋಲಿಸಲು ಪ್ರಯತ್ನಿಸುವುದು ಮಾನವ ಸಹಜವಾದ ಕುತೂಹಲ. ಈ ಕುತೂಹಲ ಗಂಭೀರವಾದ ಅಧ್ಯಯನದಲ್ಲಿ ಪರ್ಯವಸಾನವಾಗುವುದಾದರೆ ಇದರಿಂದ ತುಲನೆಗೆ ಒಳಗಾದ ಕೃತಿಗಳ ಮೌಲ್ಯ ಮತ್ತು ಅಪಮೌಲ್ಯಗಳನ್ನು ಅಥವಾ ಇತಿಮಿತಿಗಳನ್ನು ಚೆನ್ನಾಗಿ ಗುರುತಿಸಬಹುದು. ಏಕೆಂದರೆ ಈ ರೀತಿಯ ತುಲನಾತ್ಮಕ ಅಧ್ಯಯನದಿಂದ ಪರಿಶೀಲನೆಗೆ ಒಳಗಾದ ಕೃತಿ ಅಥವಾ ಕೃತಿಗಳ ಗುಣಾವಗುಣಗಳನ್ನು ವಿಶದವಾಗಿ ತಿಳಿಯಲು ಸಾಧ್ಯವಾಗುತ್ತದೆ.

'ಎರಡೆಂಬತ್ತುಕೋಟಿ' ಸಂಖ್ಯೆಗೆ ಮೀರಿದ ವಚನಸಾಹಿತ್ಯವನ್ನು ಮತ್ತಿತರ ಕೃತಿಗಳೊಡನೆ ಹೋಲಿಸುವ ಮೊದಲೇ ಎಚ್ಚರವಾಗಿ ಅದರ ವೈಶಿಷ್ಟ್ಯಗಳನ್ನು ಖಚಿತಪಡಿಸಿಕೊಳ್ಳಬೇಕಾಗುತ್ತದೆ. ಹಾಗೆ ನೋಡಿದರೆ ವಚನಸಾಹಿತ್ಯವು ಆರಂಭಕಾಲ ದಲ್ಲಿ ಸಾಕಷ್ಟು ಅವಜ್ಞೆಗೆ ಗುರಿಯಾಗಿದ್ದುದು ನಮ್ಮ ದುರ್ದೈವ, ಹೊಸಗನ್ನಡ ಸಾಹಿತ್ಯದ ಕಣ್ವ ಮುನಿಗಳೆಂದು ಗೌರವಿಸಲ್ಪಟ್ಟ ಶ್ರೀ ಬಿ.ಎಂ. ಶ್ರೀ ಅವರಾಗಲಿ, ಇಂಗ್ಲಿಷ್ ಗೀತೆಗಳಿಗೆ ಪ್ರಸ್ತಾವನೆ ಬರೆದ ಶ್ರೀ ತೀ.ನಂ. ಶ್ರೀ ಅವರಾಗಲಿ ಅಥವಾ ನವ್ಯ ಮಾರ್ಗ ಪ್ರಸ್ಥಾನಕಾರರೆನಿಸಿದ ಶ್ರೀ ಗೋಪಾಲಕೃಷ್ಣ ಅಡಿಗರಾಗಲಿ ತಮ್ಮ ಕಾವ್ಯ ಸಿದ್ಧಾಂತಗಳನ್ನು ರೂಪಿಸುವಾಗ ಇಲ್ಲವೆ ವಿವರಿಸುವಾಗ ಇಂಗ್ಲೀಷ್ ಸಾಹಿತ್ಯದ ಕಡೆಗೆ ಮುಖಮಾಡಿದಂತೆ ವಚನಸಾಹಿತ್ಯದ ಕಡೆಗೆ ಕಣ್ಣು ಹೊರಳಿಸದೆ ಇದ್ದುದು ಐತಿ ಹಾಸಿಕ ಸತ್ಯ; ಅಷ್ಟೇ ಅಲ್ಲ ವಚನವು ಸಾಹಿತ್ಯವೆ ಅಥವಾ ಶಾಸ್ತ್ರವೆ ಎಂಬ ದಿಗ್ಭ್ರಮೆಗೂ ಜನ ಒಳಗಾದದ್ದುಂಟು. ಅಲ್ಲದೆ ವಚನ ಗಳ ರೀತಿಯನ್ನು ನೋಡುತ್ತ ಇವು ಗದ್ಯವೆ ಅಥವಾ ಪದ್ಯವೆ ಎಂದು ತಮಗೆ ಪರಿಚಿತವಿದ್ದ ಸಾಹಿತ್ಯ ಪ್ರಕಾರಗಳ ಜೊತೆಗೆ ಸಮೀಕರಿಸಲು ಹೆಣಗಾಡಿದುದೂ ಉಂಟು.

## ೨

ಸ್ಥೂಲವಾಗಿ ವಚನಸಾಹಿತ್ಯದ ವೈಶಿಷ್ಟ್ಯಗಳನ್ನು ಹೀಗೆ ಸಂಗ್ರಹಿಸಬಹುದು:

೧. ತನ್ನ ಕಾಲದ ಬದುಕಿನೊಂದಿಗೆ ವಚನಸಾಹಿತ್ಯಕ್ಕಿದ್ದ ಸಾವಯವ ಸಂಬಂಧ.

೨. ವಚನಕಾರರ ಸಾಮೂಹಿಕ ಸೃಷ್ಟಿಯ ವೈಭವದ ಹಿನ್ನೆಲೆಗೆ ಮಿರುಗುವ ವೈಯಕ್ತಿಕ ಪ್ರತಿಭೆಗಳ ಸಾಧನೆಗಳು.

೩. ಪರಂಪರೆಯಾಗಿ ಹರಳುಗಟ್ಟಿದ್ದ ಭಾಷೆಯೊಂದಿಗೆ ಜನರ ನಾಲಿಗೆಗಳಲ್ಲಿ ಜೀವಂತವಾಗಿ ಸ್ಪಂದಿಸುತ್ತಿದ್ದ ಭಾಷಾ ಪ್ರವಾಹದೊಂದಿಗೆ ಅದು ಬೆಳೆಸಿದ ಸಂಬಂಧ.

೪. ಭಾಷೆ ಹಾಗೂ ಸಾಹಿತ್ಯಗಳ ಪರಂಪರೆಯ ನಿರ್ಮಾಣ ಹಾಗೂ ಸಾತತ್ಯಕ್ಕೆ ನೀಡಿದ ಕಾಣಿಕೆ.

೫. ಸಾಹಿತ್ಯಕವಾಗಿ ಹಾಗೂ ಆಧ್ಯಾತ್ಮಿಕವಾಗಿ ನಡೆಸಿದ ಪ್ರಯೋಗಗಳು ಮತ್ತು ಸಿದ್ಧಿಗಳು.

ಈ ಐದು ಅಂಶಗಳ ಜೊತೆಗೆ ಪ್ರಮುಖವಾದ ಇನ್ನೂ ಒಂದಂಶ ವಚನಸಾಹಿತ್ಯದ ಉಸಿರಾಗಿದೆ. ಅದೆಂದರೆ ಹನ್ನೆರ ಡನೆಯ ಶತಮಾನದ ಅನ್ವೇಷಕ ತಂಡವೊಂದರ ಮುಂದಿದ್ದ ಮಹಾಸಮಾಜ ನಿರ್ಮಾಣ ಸಂಕಲ್ಪ. ಈ ಅಂಶಗಳನ್ನು ಒಂದೊಂ ದಾಗಿ ಪರಿಶೀಲಿಸಿದರೆ, ಇತರ ಸಾಹಿತ್ಯ ಪ್ರಕಾರಗಳೊಡನೆ ವಚನಗಳನ್ನು ಹೋಲಿಸುವುದಕ್ಕೆ ಅಗತ್ಯವಾದ ವೇದಿಕೆ ನಿರ್ಮಾಣ ವಾದಂತೆ.

೧. ವಚನಸಾಹಿತ್ಯದಲ್ಲಿ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ ಹಾಗೂ ನೀಲಲೋಚನೆಯರ ವಚನಗಳನ್ನು ನೋಡುತ್ತ ಹೋದಂತೆ ಅವರ ವಚನಗಳು ಅವರ ಬದುಕಿಗೆ ಹಿಡಿದ ಕನ್ನಡಿಯಂತಿರುವ ಅಂಶ ವ್ಯಕ್ತವಾಗುತ್ತದೆ. ಅಷ್ಟೇ ಅಲ್ಲ, ಇನ್ನೂ ಆಳವಾಗಿ ನೋಡುತ್ತ ಹೋದಂತೆ ವಚನಸಾಹಿತ್ಯದ ಒಂದು ಅಪೂರ್ವವಾದ ಸತ್ವವೇ ಮೈದೋರತೊಡಗುತ್ತದೆ.

ವಚನಕಾರರ ಬದುಕು ಅವರ ವಚನಗಳಿಗಿಂತ ಭಿನ್ನವಾಗದೆ ಒಂದಕ್ಕೊಂದು ಪೂರಕವಾಗಿರುವಂತೆ ತೋರುತ್ತದೆ. ಅಷ್ಟೇ ಅಲ್ಲ, ಅವುಗಳನ್ನು ಆಳವಾಗಿ ಅಧ್ಯಯನ ಮಾಡುತ್ತ ಹೋದಂತೆ ವಚನಗಳಿಗೂ ವಚನಕಾರರಿಗೂ ಮತ್ತು ಅವರ ಕಾಲದ ಬದುಕಿಗೂ ಇರುವ ಅಪರೂಪವೆನ್ನಬಹುದಾದ ಸಾವಯವಸಂಬಂಧ ಅನುಭವಕ್ಕೆ ಬರುತ್ತದೆ. ಏಕೆಂದರೆ ಆತ್ಮನಿರೀ ಕ್ಷಣೆ, ಆತ್ಮವಿಕಾಸ ಹಾಗೂ ಜೀವನ ಮೌಲ್ಯಗಳ ಅನ್ವೇಷಣೆಗಳ ಕ್ರಿಯೆಯಲ್ಲಿ ಈ ವಚನಕಾರರೆಲ್ಲ ಸಾಮೂಹಿಕವಾಗಿ ಒಂದು ನೂತನ ಮಹಾ ಸಮಾಜದ ನಿರ್ಮಾಣ ಸಂಕಲ್ಪದಿಂದ ಉದ್ದೀಪಿತರಾಗಿ ಬೆಳೆದಿರುವುದು ಗೋಚರವಾಗುತ್ತದೆ. ಬಹುಶಃ ಇನ್ನಾವ ಕಾಲದಲ್ಲಿಯೂ ಬದುಕು ಮತ್ತು ಸಾಹಿತ್ಯಗಳು ಹೀಗೆ ಒಂದರಿಂದ ಒಂದು ಸತ್ವವನ್ನು ಹೀರಿಕೊಳ್ಳುತ್ತ ಪರಸ್ಪರ ಪೂರಕವಾಗಿ ಬೆಳೆದುಕೊಂಡು ಬಂದ ಸ್ಥಿತಿಯನ್ನು ನಾವು ಕಾಣಲಾರೆವು. ಅಕ್ಕನ ವೈಯಕ್ತಿಕ ಬದುಕು ಹಾಗೂ ವಚನಗಳು ಬಸವಣ್ಣನ ಹಾಗೂ ನೀಲಲೋಚನೆಯರ ಬದುಕು ಹಾಗೂ ವಚನಗಳು ಮೇಲೆ ಹೇಳಿದ ಮಾತಿಗೆ ಅತ್ಯುತ್ತಮ ನಿದರ್ಶನಗಳಾಗಿವೆ. ಅಷ್ಟೇ ಅಲ್ಲ

ಯಾವುದೇ ಕಾಲದ ಸಾಹಿತ್ಯಕ್ಕೆ ಬದುಕು ಕೇವಲ ಸ್ಫೂರ್ತಿಯಾಗಿ ನಿಂತಿದ್ದರೆ ಈ ಕಾಲದ ಬದುಕು ತಾನು ಜೀವ ದ್ರವ್ಯವಾಗಿ ತುಂಬಿಕೊಂಡು ನಿಂತಿದೆ. ತನ್ನ ಕಾಲದ ಬದುಕನ್ನು ಬೆಳೆಸಿ ಅದರೊಡನೆ ತಾನು ಬೆಳೆದು ಬಂದ ಸಾಹಿತ್ಯ ವಚನಸಾಹಿತ್ಯ. ಹೀಗಾಗಿಯೆ ಆ ಕಾಲದ ಬದುಕು–ಭಾಷೆ–ಸಾಹಿತ್ಯ, ಇವು ಮೂರೂ ಆ ಶತಮಾನದ ಸಂಕಲ್ಪ ಸಿದ್ಧ ವ್ಯಕ್ತಿಗಳ ಮೌಲ್ಯಗಳ ಅನ್ವೇಷಣೆಯ ಹಾಗೂ ಸಾಧನೆಯ ಅಂಶಗಳಾಗಿ ಹೋಗಿವೆ. ಆದ್ದರಿಂದಲೆ ಬದುಕಿನಿಂದ ಸಾಹಿತ್ಯ ಮತ್ತೆ ಸಾಹಿತ್ಯದಿಂದ ಬದುಕು ಹೀಗೆ ಒಂದರಿಂದೊಂದು ಸಮೃದ್ಧಗೊಂಡು ಬಂದ ಅದ್ಭುತ ಸ್ಥಿತಿಯನ್ನು ಬೇರೆ ಕಡೆಗಳಲ್ಲಿ ಕಾಣುವುದು ಸಾಧ್ಯವಿಲ್ಲ[1].

೨. ಇಡೀ ವಚನಸಾಹಿತ್ಯಸಮುದಾಯ ಸಾಮೂಹಿಕ ಸೃಷ್ಟಿಯ ಪರಿಣಾಮವೆಂಬಂತೆ ಕಾಂತಿಗೊಂಡಿದೆ. ಅದು ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿಯವರಂಥ ಕೆಲವರ ವೈಯಕ್ತಿಕ ಸಿದ್ಧಿಯಾಗಿದ್ದಂತೆ ಆ ಶತಮಾನದ ಸಿದ್ಧಿಯೂ ಆಗಿದೆ. ಭಾಷೆ, ಉಕ್ತಿವಿಧಾನ, ಅಂಕಿತದ ಬಳಕೆ, ಅನುಭವಗಳ ಸಾಮ್ಯ ಹಾಗೂ ಸಮಾನತೆ ಇವೆಲ್ಲಕ್ಕಿಂತ ಮುಖ್ಯವಾಗಿ ಜೀವನ ಮೌಲ್ಯಗಳಾದ ಕಾಯಕ, ಅರಿವು, ಬಯಲು, ಜಂಗಮ, ಸ್ಥಾವರ, ಶರಣ ಮರೆವುಗಳಂಥ ಕಾಣ್ಕೆಗಳನ್ನು ಕಂಡರಿಸಿ ಭಾಷೆಗೆ ಕಸುವನ್ನು ತುಂಬಿ ಸಾಧಿಸಿದ ಅಂಶಗಳ ಹಿನ್ನೆಲೆಯಲ್ಲಿ ವಚನಸಾಹಿತ್ಯ ಒಂದು ಸಮಷ್ಟಿಸಾಧನೆಯಾಗಿ ತೋರುತ್ತದೆ. ಇಂಥ ಸಮಷ್ಟಿ ಸಾಧನೆಯ ಹಿನ್ನೆಲೆಯಲ್ಲಿ ಬಸವ ಅಲ್ಲಮರಂಥ ವಚನಕಾರರ ವೈಯಕ್ತಿಕತೆ ನಿಚ್ಚಳವಾಗಿ ಹೊಳೆಯುವುದು ಇದರ ಒಂದು ವೈಚಿತ್ರ್ಯವೂ ಹೌದು ; ವೈಶಿಷ್ಟ್ಯವೂ ಹೌದು[2].

ಉದಾಹರಣೆಗೆ ಈ ಮೂರು ವಚನಗಳನ್ನು ನೋಡಿ :

> ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ. ನೊರೆವಾಲೊಳಗೆ
> ತುಪ್ಪವ ಕೆಂಪಿಲ್ಲದಂತಿರಿಸಿದೆ. ಶರೀರದೊಳಗಾತ್ಮನನಾರು
> ಕಾಣದಂತಿರಿಸಿದೆ. ನೀನು ಬೆರಸಿದ ಭೇದಕ್ಕೆ ಬೆರಗಾದೆನಯ್ಯಾ ರಾಮನಾಥಾ
>
> ನೆಲದ ಮರೆಯ ನಿಧಾನದಂತೆ ಮುಗಿಲಮರೆಯಲಡಗಿದ ಮಿಂಚಿನಂತೆ,
> ಬಯಲ ಮರೆಯಲಡಗಿದ ಮರೀಚಿಯಂತೆ, ಕಂಗಳ ಮರೆಯಲಡಗಿದ ಬೆಳಗಿನಂತೆ,–ಗೊಹೇಶ್ವರಾ, ನಿಮ್ಮ ನಿಲವು.
>
> ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು ; ಸಿಸಯೊಳಗಣ ರಸದ ರುಚಿಯಂತಿದ್ದಿತ್ತು ;
> ನನೆಯೊಳಗಣ ಪರಿಮಳದಂತಿದ್ದಿತ್ತು ; ಕೂಡಲಸಂಗಮದೇವಾ, ಕನ್ಯೆಯ ಸ್ನೇಹದಂತಿದ್ದಿತು.

ದೇವರದಾಸಿಮಯ್ಯ, ಅಲ್ಲಮ ಹಾಗೂ ಬಸವಣ್ಣ ಇವರು ಮೂವರೂ ಭಗವದನುಭವವನ್ನು ಅಭಿವ್ಯಕ್ತಿಸಿರುವ ರೀತಿಯಿದು. ವೈಯಕ್ತಿಯತೆಯು ತೀವ್ರವಾಗಿ ಮೂರೂ ವಚನಗಳ ರಚನೆಯಲ್ಲಿ ಅತ್ಯಂತ ಕಲಾತ್ಮಕವಾಗಿ ಪರಿಣಾಮಗೊಂಡಿರುವುದನ್ನು ನೋಡಬೇಕು.

೩. ವಚನಸಾಹಿತ್ಯದ ಮತ್ತೊಂದು ವೈಶಿಷ್ಟ್ಯ ಬದುಕು ಭಾಷೆಗಳೊಂದಿಗಿರುವ ಅದರ ಸಾವಯವ ಸಂಬಂಧ. ಜಾನಪದ ಸಾಹಿತ್ಯವನ್ನು ಬಿಟ್ಟರೆ ಬಹುಶಃ ಬೇರಾವ ಸಾಹಿತ್ಯವೂ ಬದುಕು ಮತ್ತು ಭಾಷೆಗಳೊಂದಿಗೆ ಇಷ್ಟೊಂದು ನಿಕಟಸಂಬಂಧವನ್ನಿಟ್ಟುಕೊಂಡಂತೆ ತೋರುವುದಿಲ್ಲ.

ಮಾದರ ಚನ್ನಯ್ಯನಿಂದ ಹಿಡಿದು ವೈರಾಗ್ಯನಿಧಿ ಅಲ್ಲಮನವರೆಗೆ ಬದುಕಿನಲ್ಲಿ ವಿವಿಧ ಕಾಯಕಗಳಲ್ಲಿ ಮಗ್ನರಾಗಿದ್ದ ವಚನಕಾರರು ತಮ್ಮ ಸುತ್ತಮುತ್ತ ಜನ ಆಡುತ್ತಿದ್ದ ಭಾಷೆಯ ವೈವಿಧ್ಯಸತ್ವಗಳಿಗೆ ಕಿವಿದೆರೆದವರಾಗಿದ್ದರು. ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯಗಳ ಒಳ್ಳೆಯ ಸಂಸ್ಕಾರವನ್ನೂ ಪಡೆದವರಾಗಿದ್ದು ತಮ್ಮ ಕಾಲದಲ್ಲಾಗಲೆ ಹರಳುಗಟ್ಟಿ ಜಡವಾಗಿದ್ದ ಭಾಷೆಯ ಪರಿಮಿತಿಗಳನ್ನು ಗುರುತಿಸಿಕೊಂಡಿದ್ದಿರಬೇಕು. ಅದರಿಂದಲೇ ಅವರು ನೇರವಾಗಿ ಜನರ ನಾಲಿಗೆಯಲ್ಲಿ ಸ್ಪಂದಿಸುತ್ತಿದ್ದ ಭಾಷಾನಿಧಿಗೆ ಕೈಯಿಕ್ಕಿದ್ದರು. ಹೀಗಾಗಿಯೇ ವಚನಗಳ ಭಾಷಾಸಿದ್ಧಿ ವಚನಕಾರರ ಭಾಷಾಸಿದ್ಧಿಯೇ ಅಲ್ಲದೆ ಕನ್ನಡದ ಭಾಷಾಸಿದ್ಧಿಯೂ ಆಯಿತು[3].

೪. ಅಷ್ಟಾದಶ ವರ್ಣನೆಗಳು ಮತ್ತು ಕವಿಸಮಯಗಳ ಸಂಕೋಲೆಗಳ ಬಂಧನದಿಂದ ಕವಿ ಪ್ರತಿಭೆಯನ್ನು ಮುಕ್ತಗೊಳಿಸಿ ಸಹಜಸುಂದರ ಸತ್ವಶಾಲಿ ಸಾಹಿತ್ಯಕ್ಕೆ ಅವಕಾಶ ಮಾಡಿಕೊಟ್ಟಿತು. ವೃತ್ತಕಂದ ತ್ರಿಪದಿ ಬಂಧಗಳಿಂದಲೂ ಕಾವ್ಯವನ್ನು ಮುಕ್ತಗೊಳಿಸಿ ಪದ್ಯದ ರೋಮಾಂಚಕತೆಯೂ ಗದ್ಯದ ಗಟ್ಟಿತನವೂ ಇರುವ 'ವಚನ' ಪ್ರಸ್ಥಾನವನ್ನು ಆರಂಭಿಸಿತು. ಗದ್ಯ

---

1. ಕ್ರಾಂತಿ ಕಾಲದ ಸಾಹಿತ್ಯ ಕ್ರಾಂತಿಗೆ ಕಾರಣವಾಗಿ ನಿಂತರೂ ಕ್ರಾಂತಿಯ ಅನಂತರ ಐತಿಹಾಸಿಕವಾಗಷ್ಟೇ ಮುಖ್ಯವಾಗುತ್ತದೆ. ಆದರೆ ಆ ಕಾಲದ ಬದುಕು, ವಚನಕಾರರ ಬದುಕು ಹಾಗೂ ವಚನಸಾಹಿತ್ಯಗಳು ಅತ್ಯಂತ ವಿಸ್ಮಯಕರವಾದ ರೀತಿಯಲ್ಲಿ ಪರಸ್ಪರ ಪೂರಕಾಂಶಗಳಾಗಿಬಿಟ್ಟಿವೆ. ಹೆಚ್ಚಿನ ವಿವರಗಳಿಗೆ ಹನ್ನೆರಡನೆಯ ಶತಮಾನ ಒಂದು ಅನ್ವೇಷಣೆ ಯುಗ-ಎಂಬ ಪ್ರೊ. ಹಿರೇಮಠರ ಸನ್ಮಾನ ಗ್ರಂಥದ ನನ್ನ ಲೇಖನ ನೋಡಿ.
2. ಪು. ೩೨೯. ವಚನಗಳ ಪ್ರಭಾವ ಹೊಸಗನ್ನಡ ಸಾಹಿತ್ಯದ ಮೇಲೆ-ಗವಿದೀಪ್ತಿ ಗ್ರಂಥದಲ್ಲಿ ಲೇ. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ.
3. ವಿವರಗಳಿಗೆ ಇದೇ ಲೇಖಕರ ವಚನಕಾರರ ಭಾಷಾಸಿದ್ಧಿ ಲೇಖನ—ಬಸವ ಪರುಷ ಪ್ರ. ಮೈಸೂರು ವಿಶ್ವವಿದ್ಯಾಲಯ—ನೋಡಿ.

ಪದ್ಯಗಳಿನ್ನುವ ಸಾಂಪ್ರದಾಯಿಕವಾದ ಕೃತಕ ವರ್ಗೀಕರಣ ವಿಧಾನವನ್ನೇ ದಿಗಿಲುಗೊಳಿಸುವ ಮಟ್ಟಕ್ಕೆ ಭಾಷೆಯ ಅಭಿವ್ಯಕ್ತಿ ಶಕ್ತಿಯನ್ನು ಹೆಚ್ಚಿಸಿತು. ಕೃತಕ ವ್ಯಾಕರಣ ನಿಯಮಗಳಿಂದಲೂ ಒಣಗಾಂಭೀರ್ಯದಿಂದಲೂ ಮುಕ್ತಗೊಂಡ ಭಾಷೆ ತನ್ನ ಬದುಕಿನ ಅನುಭವಗಳಿಗೆ ಸಮರ್ಥ ಅಭಿವ್ಯಕ್ತವಾಗಿ ನಿಂತು ಭಾಷೆಯ ಹಾಗೂ ಸಾಹಿತ್ಯದ ಸಮೃದ್ಧಿಗೆ ಕಾರಣವಾಯಿತು. ಚಂಪೂಶೈಲಿ ಅಷ್ಟಾದಶವರ್ಣನೆ ಕವಿಸಮಯಗಳಿಂದ ಕೃತಕತೆಯತ್ತ ಸರಿಯುತ್ತಿದ್ದ ಕನ್ನಡ ಸಾಹಿತ್ಯಕ್ಕೆ ಕಾಯಕಲ್ಪ ಮಾಡಿ ಜೀವದಾನ ಮಾಡಿ ವಚನಪ್ರಸ್ಥಾನವನ್ನೇ ಆರಂಭಿಸಿತು. ಇದರಿಂದ ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ಸಾತತ್ಯಕ್ಕೂ ಹಾಗೂ ಸತ್ಯಕ್ಕೂ ಜೀವದಾನವಾದಂತಾಯಿತು.

೫. ವಚನಸಾಹಿತ್ಯವು ಅಂದು ರೂಪುಗೊಳ್ಳತೊಡಗಿದ್ದ ಸಮಾಜದ ಅವಶ್ಯಕತೆಯಾಗಿತ್ತೆಂಬುದನ್ನು ಮರೆಯಲಾಗದು. ಆತ್ಮನಿರೀಕ್ಷಣೆ–ಶೋಧನೆ, ಆತ್ಮವಿಕಾಸ, ಸಾಮಾಜಿಕ ಮೌಲ್ಯಗಳ ಶೋಧನೆ–ನಿರೂಪಣೆ, ಲೋಕದ ಬದುಕನ್ನು ನಿರಾಕರಿಸದ ಆಧ್ಯಾತ್ಮಿಕ ಸಿದ್ಧಿ–ಇವುಗಳ ಒಟ್ಟು ಫಲವಾಗಿ ಮೂಡಿದ ಹೊಸ ಧರ್ಮವೊಂದರ ದ್ರಷ್ಟಾರನಾಗಿ ನಿಂತಿತು.

ಒಂದು ಮಾತಿನಲ್ಲಿ ಹೇಳುವುದಾದರೆ ವಚನಸಾಹಿತ್ಯ ಭಾಷೆ–ಬದುಕು–ಸಾಹಿತ್ಯ ಈ ಮೂರು ವಿಷಯಗಳಲ್ಲಿಯೂ ಅನ್ವೇಷಕವಾಗಿ ಹೊರಟು ಆ ಮೂರೂ ಅಂಶಗಳ ಮೂಲದ್ರವ್ಯಗಳಿಂದಲೂ ಪುಷ್ಟಿಗೊಂಡು ಭಾಷೆ-ಬದುಕು-ಸಾಹಿತ್ಯಗಳೆಲ್ಲದರ ಶಕ್ತಿ ಸತ್ವವೃದ್ಧಿಗಳನ್ನು ಮಾಡಿ ಕನ್ನಡಕ್ಕೊಂದು ಜೀವಂತ ಪರಂಪರೆಯನ್ನು ನಿರ್ಮಿಸಿತು. ಈ ದೃಷ್ಟಿಯಿಂದ ಈ ಸಾಹಿತ್ಯ ಸೃಷ್ಟಿಯ ಹಿಂದಿರುವ ಸಂಕಲ್ಪಶಕ್ತಿ ಮಾತ್ರ ಅದಮ್ಯವಾದುದು ಹಾಗೂ ಶಾಂಕರೀಯವಾದುದು. ಈ ಅದ್ಭುತ ಸಾಹಿತ್ಯ ರಾಶಿಯ ಒಂದು ಆಂಶಿಕ ಸಿದ್ಧಿಯಂತಿರುವ ಶೂನ್ಯಸಂಪಾದನೆಗಳನ್ನು ಕುರಿತು[4] ವಿದ್ವಾಂಸರು ಆಡಿರುವ ಮಾತುಗಳನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ.

ಹೀಗಾಗಿಯೇ ವಚನ ಸಾಹಿತ್ಯ ಪ್ರಮುಖ ಪ್ರಸ್ಥಾನಕಾರರಾದ ಹರಿಹರ ರಾಘವಾಂಕರಿಗೂ ಸ್ಫೂರ್ತಿಯ ನೆಲೆಯಾಗಿದೆ. ಹರಿಹರನಂತೂ ಚಂಪೂ ಶೈಲಿಯನ್ನು ಅಷ್ಟಾದಶವರ್ಣನೆಗಳ ತೊಡಕನ್ನೂ ದೂರ ಮಾಡಿಕೊಂಡು ಕಥನ ಸಹಜವಾಗಿ ಒಗ್ಗುವ ರಗಳೆಯ ಛಂದಸ್ಸನ್ನು ಬಳಸಿ ಪ್ರಸ್ಥಾನಕಾರನಾದನು. ಕಥಾನಕವನ್ನಾಯ್ದುಕೊಳ್ಳುವಲ್ಲಿ ಮತ್ತೇ ವಚನಗಳೇ ಆತನ ಪ್ರಧಾನ ಸ್ಫೂರ್ತಿಯಾಗಿ ಪುರಾತನರು ಹಾಗೂ ತನ್ನ ಕಾಲದ ಶರಣರನ್ನೇ ತನ್ನ ಕೃತಿಗಳ ನಾಯಕರನ್ನಾಗಿ ಮಾಡಿಕೊಂಡನು. ರಗಳೆ ದೀರ್ಘವಾದಾಗ ಅದನ್ನು ಸ್ಥಲಗಳಾಗಿ ವಿಂಗಡಿಸಿ ವೈವಿಧ್ಯಕ್ಕಾಗಿ ಗದ್ಯಕ್ಕೊಂದು ಸ್ಥಲಕೊಟ್ಟು ಗದ್ಯದ ಬೆಳವಣಿಗೆಗೆ ಕಾರಣನಾದನು. ಹಿರಿಯ ಸಮಕಾಲೀನ ಶರಣರನ್ನು ಕುರಿತ ರಗಳೆಗಳಲ್ಲಿ ಎಷ್ಟೋ ಕಡೆ ಆಯಾ ವಚನಕಾರರ ವಚನಗಳು ರಗಳೆಯ ಸಾಲು ಸಾಲುಗಳಾಗಿ ರೂಪುಗೊಂಡು ಮತ್ತೆ ಹಲವೆಡೆ ಮರುವುಟ್ಟು ಪಡೆದು ಮಿನುಗುವುದನ್ನು ನೋಡಬಹುದು.

ವಚನ ಸಾಹಿತ್ಯದ ಬಗ್ಗೆ ಈ ಸ್ಥೂಲ ಹಿನ್ನೆಲೆಯನ್ನು ಇಟ್ಟುಕೊಂಡು ಇದನ್ನು ಹೋಲುವ ಇತರ ಸಾಹಿತ್ಯ ಪ್ರಕಾರಗಳನ್ನು ಗುರುತಿಸಬಹುದು.

೩

ಹೀಗಾಗಿಯೇ 'ಕನ್ನಡ ಸಾಹಿತ್ಯದ ಒಂದು ವಿಶಿಷ್ಟವಾದ ಬಹು ಅಮೂಲ್ಯವಾದ ಭಾಗವೆಂದರೆ ವಚನಸಾಹಿತ್ಯ[5]'. ಈ ಬಗೆಯ ಸಾಹಿತ್ಯದಂತಹ ಉದಾಹರಣೆಗಳು ವಿರಳವಾಗಿ, ಕ್ವಚಿತ್ತಾಗಿ, ಬಿಡಿಬಿಡಿಯಾಗಿ ಒಂದೆರಡು ಇತರ ಭಾಷೆಗಳ ಸಾಹಿತ್ಯಗಳಲ್ಲಿ ಸಿಕ್ಕಬಹುದಾದರೂ, ವಚನಗಳು ಸಾಹಿತ್ಯದ ಒಂದು ಪ್ರಕಾರವಾಗಿ ನೇರ್ಪಟ್ಟುದು ಕನ್ನಡದಲ್ಲಿಯೆ ಎಂದು ನಿಸ್ಸಂದೇಹವಾಗಿ ಹೇಳಬಹುದು[6]. 'ಇಲ್ಲಿಯ ಚಿಂತನಾಲಹರಿಗಳು ಉಪನಿಷತ್ತು ತಿರುಕ್ಕುರಳ್‌ಗಳಂತವುಗಳಲ್ಲಿಯೂ ಇತರ ಕಾವ್ಯಗಳ ನಡುವೆ ಬಂದಿರಬಹುದಾದರೂ ವಚನಗಳಂತಹ ಮುಕ್ತಕಗಳನ್ನು ಕನ್‌ಫ್ಯೂಷಿಯಸ್, ಮಾರ್ಕಸ್ ಅರೀಲಿಯಸ್‌ರ ಚಿಂತನೆಗಳು, ಬೈಬಲ್, ಇಮಿಟೇಷನ್ ಆಫ್ ಕ್ರೈಸ್ಟ್ ಮುಂತಾದ ಕಡೆಗಳಲ್ಲಿ ಕ್ವಚಿತ್ತಾಗಿ ಕಾಣಬಹುದು[7].

ಆದ್ದರಿಂದಲೇ ವಚನ ಸಾಹಿತ್ಯವನ್ನು ಕೆಲವು ಅಂಶಗಳಲ್ಲಿ ಹೋಲುವ ಈ ಕೆಲವು ಕೃತಿಗಳ ತುಲನೆಮಾಡುವ ಪ್ರಯತ್ನ ಇಲ್ಲಿದೆ.

---

4. ಆಕಾಶದಲ್ಲಿ ಅದ್ಭುತಗಳಿರುವಂತೆ ನೆಲದ ಮೇಲೆಯೂ ಅದ್ಭುತಗಳಿವೆ; ಸಾಹಿತ್ಯ ಕ್ಷೇತ್ರದಲ್ಲಿಯೂ ಇವೆ. ಶೂನ್ಯಸಂಪಾದನೆ ಅಂತಹ ಅದ್ಭುತಗಳಲ್ಲಿ ಒಂದು. ಶೂನ್ಯಸಂಪಾದನೆ. ಪುಟ ೧

   It is a very extraordinary work. The dialogues in 'Sunya Sampadane' are planned very much on the lines of the platonic dialogues. P-6, 7 Pathway to God in Kannada literature-Ranade, R.D.

5. ಪ್ರಸ್ತಾವನೆ : ಎಸ್. ಎಸ್. ಬಸವನಾಳ ಬಸವಣ್ಣನವರ ಷಟ್‌ಸ್ಥಳದ ವಚನಗಳು. ಪುಟ-೧. 6. ಅದೇ ಪುಟ-೧.
7. ಪುಟ ೨೨೧. ಕನ್ನಡ ಸಾಹಿತ್ಯದಲ್ಲಿ ವಚನ ಸ್ವರೂಪದ ವೈಶಿಷ್ಟ್ಯ ಮತ್ತು ಜಾಗತಿಕ ಸಾಹಿತ್ಯಕ್ಕೆ ಅದರ ಕೊಡಗೆ-ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಭಾಗ-೩ ಬೆಂಗಳೂರು ವಿಶ್ವವಿದ್ಯಾಲಯ.

೩-೧

ಮೊದಲನೆಯದಾಗಿ Sayings of the Buddha ಕೃತಿಯೊಡನೆ ಹೋಲಿಸಬಹುದು.

ಬುದ್ಧ ಅಂದಿನ ಜನರ ಭಾಷೆಯಾದ ಪಾಳಿಯಲ್ಲಿ ತನ್ನ ಧರ್ಮವನ್ನು ಬೋಧಿಸಿದ ಅಂಶ ಮೊದಲನೆಯದಾಗಿ ವಚನ ಸಾಹಿತ್ಯವನ್ನು ಒಂದಂಶದಲ್ಲಿ ಹೋಲುತ್ತದೆ. ಆದರೆ ವಚನಕಾರರ ಭಾಷೆ ಕನ್ನಡ ಭಾಷೆಯ ಸಾಹಿತ್ಯ ಹಾಗೂ ಸತ್ವದ ಬೆಳವಣಿಗೆಗೆ ಕಾರಣವಾದಂತೆ ಪಾಳಿ ಭಾಷೆಯ ಬಳಕೆ ಭಾಷೆಯ ಸಾತತ್ಯ ಹಾಗೂ ಸತ್ವಕ್ಕೆ ಕಾರಣವಾಗದೆ ಹೋಗುತ್ತದೆ. ವಚನಕಾರರದು ಒಂದು ಸಾಮೂಹಿಕ ಸೃಷ್ಟಿಯಾಗಿತ್ತೆನ್ನುವ ಅಂಶ ಅಲ್ಲಿನ ಭಾಷೆಯ ಸಿದ್ಧಿಗಳಿಗೆ ಕಾರಣವಾದ ಹಿನ್ನೆಲೆಯನ್ನಷ್ಟೆ ಅರ್ಥ ಮಾಡಿಕೊಳ್ಳಲು ಅವಕಾಶ ನೀಡುತ್ತದೆ. ಈ ಭಾಷಾರೂಪವಾದ ಹಾಗೂ ಸಾಹಿತ್ಯ ಪರಂಪರೆಗೆ ಕಾರಣವಾಗಬಲ್ಲ ಅಂಶಗಳಿಲ್ಲದಿರುವುದನ್ನು ಗುರುತಿಸಿದರೂ ಈ ಕೆಲವು ರಚನೆಗಳನ್ನು ನೋಡಿದರೆ ವಚನಗಳ ಭಾವಗೀತ ಅಂಶ ತಟ್ಟನೆ ನೆನಪಾಗುತ್ತದೆ. ಜೊತೆಗೆ ಇಂಥ ಕಡೆ ಭಾಷೆ ಗದ್ಯ ಪದ್ಯಗಳ ತೊಡಕಿಲ್ಲದೆ ಸಶಕ್ತವಾಗುತ್ತದೆ.

The ear is on fire; sounds are on fire....the nose is on fire; odors are on fire....the tongue is on fire; tastes are on fire....the body is on fire; things tangible are on fire....the mind is on fire; ideas are on fire....mind concionsness is on fire; impressions received by the mind are on fire and whatever sensation, pleasant, unpleasant or indifferent, originates in dependence on impressions received by the mind, that is also on fire[8]. ಬುದ್ಧ ಹೇಳುವ ಕಥೆಗಳಲ್ಲಿ, ಧರ್ಮ ಸ್ವರೂಪದ ವಿವರಗಳಲ್ಲಿ ಕಂಡುಬರುವ ಲೋಕಾನುಭವ ಹಾಗೂ ಸಾಹಿತ್ಯಸಂಪತ್ತು ಅಮೂಲ್ಯವಾದುದು. ಮೇಲೆ ಉಲ್ಲೇಖಿಸಿರುವ ಉದಾಹರಣೆಯ ಭಾವಗೀತ ಗುಣ ಹಾಗೂ ಭಾಷೆಯ–ಗದ್ಯ ಪದ್ಯಗಳ ಕೃತಕ ಸೀಮೆಯನ್ನು ದಾಟಿದ-ಸ್ಥಿತಿ ವಚನಗಳ ರೀತಿಯ ಗುಣಗಳು. ಇದರ ಜೊತೆಗೆ ಬೌದ್ಧಧರ್ಮ ಸಾಹಿತ್ಯ ಇನ್ನೂ ಒಂದು ರೀತಿಯಲ್ಲಿ ವಚನ ಸಾಹಿತ್ಯವನ್ನು ಹೋಲುತ್ತದೆ. ಅದೆಂದರೆ ಜನ ಆಡುವ ಪಾಳಿ ಭಾಷೆಯನ್ನು ಅದು ಮಾಧ್ಯಮವಾಗಿ ಮಾಡಿಕೊಂಡಿದ್ದು. ದುರ್ದೈವವೆಂದರೆ ಪಾಳಿ ಭಾಷೆ ಈ ಸಾಹಿತ್ಯದ ಜೊತೆಗೆ ಬೆಳೆಯಲಾಗಲಿಲ್ಲ. ಏಕೆಂದರೆ ಬೌದ್ಧಸಾಹಿತ್ಯದಿಂದ ದೀಪ್ತನಾದ ಅಶ್ವಘೋಷ ಮತ್ತೆ ಸಂಸ್ಕೃತ ಮಹಾಕಾವ್ಯ ರಚಿಸಿದ. ಅಲ್ಲದೆ ಬೌದ್ಧಸಾಹಿತ್ಯವನ್ನು ಅನೇಕರು ಸಂಗ್ರಹಿಸಿ ಇಟ್ಟರು. ಆದರೆ ಅವರೆಲ್ಲ ಅನಾಮಿಕರೇ ಆಗಿದ್ದಾರೆ. ಅಲ್ಲದೆ ಬೌದ್ಧ ಸಾಹಿತ್ಯದಲ್ಲಿ ವಚನಗಳ ರೀತಿಯ ಅಭಿವ್ಯಕ್ತಿ ಹಾಗೂ ಭಾವಗೀತ ಗುಣಗಳು ಅಲ್ಲಲ್ಲಿ ಮಾತ್ರ ಕಾಣ ಸಿಗುತ್ತವೆ. ವಚನ ಸಾಹಿತ್ಯದ ಬಗೆಗಾದರೆ ಇಲ್ಲಿನ ಭಾಷಾಪರಂಪರೆ–ಸಾಹಿತ್ಯಪರಂಪರೆ ಕೂಡ ಆಗಿ ಬೆಳೆದಿದೆ. (ಪರಂಪರೆಯೊಂದು ಬೆಳೆಯಲಿಲ್ಲವೆಂಬ ಕಾರಣಕ್ಕಾಗಿಯೇ ಯಾವುದೇ ಸಾಹಿತ್ಯ ತನಗೆ ತಾನೆ ಕೀಳಾಗಬೇಕಾಗಿಲ್ಲ.) ವೈಯಕ್ತಿಕ ಪ್ರತಿಭೆಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಬೌದ್ಧ ಸಾಹಿತ್ಯದಲ್ಲಿ ತನ್ನ ಕಾಲದ ಬದುಕಿನೊಂದಿಗೆ ಅದಕ್ಕಿರುವ ಸಂಬಂಧ ಐತಿಹಾಸಿಕ ಮಾತ್ರ ಆದಂತೆ ತೋರುತ್ತದೆ.

೩-೨

ಈಗ ಬೈಬಲ್ಲಿನ ಈ ಎರಡು ಉದಾಹರಣೆಗಳನ್ನು ಗಮನಿಸಬಹುದು :-

1. In the begining God created the heaven and the earth.

2. And the earth was without form and void; and darkness was upon the face of the deep. And the spirit of God moved upon the face of waters.

3. And God said, let there be light; and there was light[9].

* * * *

1. In the begining was the Word and the Word was with God and the Word was God.

2. The same was in the begining with God.

---

8.. The fire sermon-The techings of the compassionate Buddha–E.A. Burtt. ಪುಟ ೯೭,

9. Genisis-The Holy Bible-British and Foreign Bible Society, London. P. 1

3. All things were made by him ; and without him was not anything made that was made.

4. In him was life ; and the life was the light of men[10].

ಭಾವಗೀತ ಗುಣದಲ್ಲಿ, ಗದ್ಯ ಪದ್ಯಗಳ ಕೃತಕತೆಯಿಂದ ಭಾಷೆಯನ್ನು ಅತ್ಯಂತ ಶಕ್ತಸ್ಥಿತಿಗೆ ಏರಿಸುವಲ್ಲಿ ಬೈಬಲ್ಲಿನ ರಚನೆಗಳು ವಚನಗಳನ್ನು ಹೋಲುತ್ತವೆ. ಬೈಬಲ್ಲಿನಲ್ಲಿಯೂ ಒಂದು ಧರ್ಮದ ಪರಂಪರೆಯನ್ನು ನಿರ್ಮಿಸುವ ಹಾಗೂ ಮೌಲ್ಯಗಳನ್ನು ಕಟ್ಟಿಕೊಡುವ ಯತ್ನವಿದೆ. ಅಲ್ಲಿನ Genesis ಭಾಗದ ಕಥೆ ಒಂದು ರೀತಿಯಲ್ಲಿ ಕಳೆದ ಇತಿಹಾಸದ ಪುನರ್ರಚನೆಯ ರೀತಿಯದಾಗಿದೆ. ಅಲ್ಲಿ ಧರ್ಮಕ್ಕೆ ವಿಶೇಷ ಪಾತ್ರವಿದೆ. ಅಲ್ಲದೆ ಇದು ಅನೇಕರ ಪ್ರತಿಭೆಯಿಂದ ಹರಳುಗಟ್ಟಿದ ಧರ್ಮಗ್ರಂಥವಾಗಿದ್ದರೂ ಸಾಹಿತ್ಯ ಗುಣಗಳಿಂದ ದೂರವಾಗಿಲ್ಲ. ವಚನಗಳಲ್ಲಿ ಮುಕ್ತಕ ರೀತಿಯಿದ್ದರೆ ಇಲ್ಲಿನದು ವಿಶೇಷತಃ ಕಥನ ರೀತಿ ಇಲ್ಲಿ ಮಾರ್ಕ್, ಮ್ಯಾಥ್ಯೂ, ಲ್ಯೂಕ್ ಮತ್ತು ಜಾನ್ ಅವರನ್ನು ಉಳಿದರೆ ಮಿಕ್ಕ ರಚನೆಗಳು ಅನಾಮಿಕ, ಮೇಲಿನ ನಾಲ್ವರ ರಚನೆಗಳೂ ಕಥನಾತ್ಮಕ ಭಾಷೆಯು ಹಾಗೂ ತನ್ನ ಕಾಲದ ಬದುಕಿನ ದೃಷ್ಟಿಯಿಂದ ನೋಡಿದರೆ ಬೈಬಲ್ಲಿನಲ್ಲಿ, ವಚನಗಳಲ್ಲಿ ಗುರುತಿಸುವಂಥ ವೈಶಿಷ್ಟ್ಯಗಳನ್ನು ಕಾಣುವುದು ಸದ್ಯಕ್ಕೆ ಕಷ್ಟವಾಗಿದ್ದು ಬೈಬಲ್ಲಿನ ಶೈಲಿ ವಚನದ ಮುಕ್ತಶೈಲಿಯನ್ನು ಹೋಲುತ್ತದೆ. ಅಷ್ಟೇಅಲ್ಲ, ಅನೇಕ ವೇಳೆ ಮುಕ್ತಕದ ರೀತಿಯ ವಚನಗಳ ರಚನೆಯ ಮಿಂಚು ಇಲ್ಲಿ ಕಾಣಸಿಗುತ್ತವೆ. ವಚನಗಳ ಧಾರ್ಮಿಕತೆಗೂ ಬೈಬಲ್ಲಿನ ಧಾರ್ಮಿಕತೆಗೂ ಬೇಕಾದಷ್ಟು ಭಿನ್ನತೆಯಿದೆ. ಅಲ್ಲೆಲ್ಲ ಅವರ ಧರ್ಮದ ಬೆಳವಣಿಗೆಯ ಚಿತ್ರಣದ ಯತ್ನವಿದ್ದರೆ ಇಲ್ಲಿ ಒಂದು ಹೊಸ ಧರ್ಮವನ್ನೇ ರೂಪಿಸುವ ಸಂಕಲ್ಪವಿದೆ.

೩-೩

Thomas a' Kempis ಅವರ Of the imitations of Christ ಗ್ರಂಥ ಒಟ್ಟಾರೆ ತಾತ್ವಿಕ ಗ್ರಂಥ. ಅಲ್ಲಿನ ಈ ಎರಡು ಉದಾಹರಣೆಗಳನ್ನು ಗಮನಿಸಿ :-

Vanity of vanities, and all is vanity, except to love God, and to serve Him only.

This is the highest wisdom, by contempt of the world to tend towards the kingdom of Heaven.

Vanity therefore it is to seek after perishing riches, and to trust in them.

It is also vanity to hunt after honours, and to climb to high degree.

It is vanity to follow the desires of the flesh, and to labour for that for which thou must afterwards suffer grievous punishment[11].

* * * *

Old inbred habits will make resistance, but by better habits they shall be entirely over come.

The flesh will murmur against thee ; but with fervency of spirit thou shalt bridle it.

The old serpent will instigate and trouble thee, but by prayer he shall be put to flight ; moreover also, by any useful employment then shalt greatly stop the way against him[12].

ಎರಡೂ ರಚನೆಗಳು ಭಾಷೆಯ ಬಳಕೆಯಲ್ಲಿ ಅತ್ಯಂತ ಭಾವಗೀತಾತ್ಮಕವಾದುವೂ ಅಷ್ಟೇ ಮುಖ್ಯವಾಗಿ ಗದ್ಯಪದ್ಯಗಳ ಕೃತಕ ಗಡಿಯನ್ನು ಮೀರಿದ ಶಕ್ತ ರೀತಿಯವೂ ಆಗಿವೆ. ಆದರೆ ಇಲ್ಲಿಯ ಬರವಣಿಗೆಯೆಲ್ಲ ಪ್ರಧಾನವಾಗಿ ಒಬ್ಬ ಭಕ್ತನದು. ಬರವಣಿಗೆಯುದ್ದಕ್ಕೂ ಭಕ್ತಿ ಮತ್ತು ಭಕ್ತಜೀವನಕ್ಕೆ ಅಗತ್ಯವಾದ ನಿಬಂಧನೆಗಳು ಇವುಗಳ ಆಲೋಚನೆಯಲ್ಲಿಯೇ ಈ ಕೃತಿ ತಲ್ಲಿನವಾಗಿದೆ. ಅಲ್ಲದೆ Thomas a' Kempisನ ಗುರಿಯಾದರೂ ಅದೇ ಆಗಿದೆ. ಹೀಗಾಗಿ ಈ ಕೃತಿಯೂ ವಚನ

10. St. John. P 1085 Ibid

11. Of the imitations of Chirst—Thomas a' Kempis. P. 2.

12. Ibid. P. 126.

ಸಾಹಿತ್ಯವನ್ನು ಕೇವಲ ಎರಡು ಮೂರು ಅಂಶಗಳಲ್ಲಿ ಸಾಹಿತ್ಯಕವಾಗಿ ಅಲ್ಲಲ್ಲಿ ಹೋಲುತ್ತದೆ ಅಷ್ಟೆ. ಸಾಹಿತ್ಯಕ್ಕಿಂತ ಭಕ್ತಿ ಹಾಗೂ ನೈತಿಕ ಜೀವನ ಇವುಗಳೇ ಈತನ ದೃಷ್ಟಿಗಳು. ಆದರೆ ಈ ದೃಷ್ಟಿಯಲ್ಲಿ ಆರ್ದ್ರತೆಯಿರುವುದರಿಂದ ಸಾಹಿತ್ಯದ ಕಂಪು ಅಲ್ಲಲ್ಲಿ ಹರಡಿದೆ.

### ೩-೪

ಚೀನದ ಮಹಾಜ್ಞಾನಿ Confucius ನ ಕೃತಿಯಿಂದ ಈ ಎರಡು ಉದಾಹರಣೆಗಳನ್ನು ಗಮನಿಸೋಣ.

Chap. XII. The master said, 'The accomplished scholar is not a utensil.'

Chap. XIII. Tsze-kung asked what constituted the superior man. The Master said, 'He acts before he speaks, and afterwards speaks according to his actions'.

Chap. XIV. The Master said, 'The superior man is catholic and no partizan. The mean man is partizan and not catholic.

Chap. XV. The Master said, 'learning without thought is labour lost; thought without learning is perilous'.

Chap. XVI. The master said, 'The study of strange doctrines is injurious indeed!'

Chap. XVII. The Master said, 'Yu, shall I teach you what knowledge is ? when you know a thing, to hold that you know it ; and when you do not know a thing, to allow that you do not know it;—this is knowledge'[13].

1. What heaven has conferred is THE NATURE ; an accordance with this nature is called THE PATH of duty; the regulation of this path is called INSTRUCTION.

2. The path may not be left for an instant. If it could be left, it could not be the path. On this account, the superior man does not wait till he sees things, to be cautious, nor till he hears things, to be apprehensive.

3. There is nothing more visible than what is secret, and nothing more manifest than what is minute. Therefore the superior man is watchful over himself, when he is alone.

4. While there are no stirrings of pleasure, anger, sorrow, or joy, the mind may be said to be in the state of EQUILLIBRIUM. When those feelings have been stirred, and they act in their due degree, there ensues what may be called the state of HARMONY. This EQUILLIBRIUM is the great root from which grow all the human actings in the world, and the HARMONY is the universal path which they all should pursue.

5. Let the states of Equillibrium and harmony exist in perfection, and a happy order will prevail throughout heaven and earth, and all things will be nourished and flourish[14].

ಇಡೀ ಕೃತಿ ಚೀನದ ಜ್ಞಾನಿಯ ಜ್ಞಾನದ ಉಗ್ರಾಣದಂತಿದೆ. ಮೇಲಿನ ಉದಾಹರಣೆಗಳಲ್ಲಿ ಪಕ್ವವಾದ ಅನುಭವ ಹೇಗೆ ಮೂಡಿಬಂದಿದೆಯೆಂಬುದನ್ನು ಗಮನಿಸಬಹುದು. ಈ ಕೃತಿ ವಿಶೇಷವಾಗಿ ಚೀನದ ಮಹಾಜ್ಞಾನಿ ಪಡೆದಿರುವ ವಿಸ್ತಾರ

13. P 150-151. Confucion Analects—James legge

14. P. 384-385-Ibid.

ವಾದ ಲೋಕಾನುಭವ, ಪಕ್ವವಾದ ಜೀವನ ದೃಷ್ಟಿ ಹಾಗೂ ತನ್ನ ಜನಾಂಗಕ್ಕೆ ಅಗತ್ಯವೆಂದು ಕಾಣಿಸಿದ ನೀತಿ ಸಂಹಿತೆ ಇಷ್ಟನ್ನು ಒಳಗೊಂಡಿದೆ, ಅಭಿವ್ಯಕ್ತಿಯ ಮೊನಚು ಹಾಗೂ ಅನುಭವದ ಪಕ್ವತೆ ಇವೆರಡೂ ಇಲ್ಲಿನ ವೈಶಿಷ್ಟ್ಯಗಳು. ಈ ಗ್ರಂಥ Confuciusನ ಶಿಷ್ಯರು ತಮ್ಮ ನೆನಪಿನಿಂದ ಸಂಗ್ರಹಿಸಿದ ನೀತಿ ಸಂಹಿತೆಯ ಗ್ರಂಥವಾಗಿದೆ. ಗ್ರಂಥದುದ್ದಕ್ಕೂ ಸಾಮಾಜಿಕವಾಗಿರುವ confucius ನ ಆಸಕ್ತಿ ಈ ಕೃತಿಗೆ ಸಾಹಿತ್ಯದ ಗುಣದ ಲೇಪವನ್ನು ಕೊಡುತ್ತದೆ.

೩-ಆ

ಇಲ್ಲಿಯವರೆಗೆ ವಿಶ್ವದ ಇತರ ಸಾಹಿತ್ಯ ಪ್ರಕಾರಗಳನ್ನು ಗಮನಿಸಿದರೆ ಇನ್ನು ಭಾರತೀಯವಾದ ತಮಿಳು ಮತ್ತು ಹಿಂದಿ ಸಾಹಿತ್ಯಗಳ ಮೂರು ಉದಾಹರಣೆಗಳನ್ನು ಗಮನಿಸಬಹುದು.

ತಮಿಳಿನ ನಮ್ಮಾಳ್ವಾರರ ಪಾಶುರಗಳು ಇವು ಎರಡು :

ಎನ್ ಶೆಯ್ಯುಮೂರವರ್ ಕವ್ವೈಲ ತೋಟೀ ಯಿನಿ ನಮ್ಮೈ ಎನ್ ಶೆಯ್ಯ ತಾಮರೈಕ್ಕಣ್ಣ ನೆನ್ನೈನಿಱೈಕ್ಕೊಂಡಾನ್
ಮುನ್‌ಶೆಯ್ಯ ಮಾಮೈಯಿಟಿಂದು ಮೇನಿ ಮೆಲಿವೆಯ್ದಿ ಎನ್ ಶೆಯ್ಯ ವಾಯುಂ ಕರುಂಗಣ್ಣುಮ್ ಪಯಪ್ಪೂರ್‌ನ್ದವೇ [15]
ನೀಯುಂ ಪಾಂಗಲ್ಲೈ ಕಾಣ್ ನೆಂಜಮೇ ನೀಳಿರವುಮ್ ಓಯುಂ ಪೊಟುದಿನಿ ಊಟಿಯಾಯ್ ನೀಂಡದಾಲ್
ಕಾಯುಂ ಕೆಡುಂ ಶಿಲೈ ಎನ್ ಕಾಕುತ್ತನ್ ವಾರಾನಾಲ್, ಮಾಯುಂ ವಪ್ಪೈಯಱಿಯೇನ್ ವಲ್ವಿನೈಯೇನ್ ಪೆಣ್ ಪಿಱನ್ದೇ [16]

ಈ ಮೇಲಿನ ಪದ್ಯಗಳಲ್ಲಿರುವ ಮಧುರಭಾವ ಮತ್ತೆ ಕಬೀರದಾಸ ಮತ್ತು ಮೀರಾಬಾಯಿಯರಲ್ಲೂ ಇದೆ. ತಮಿಳಿನ ಆಂಡಾಳರ ಕೃತಿಯಲ್ಲೂ ಇದೇ ಮಧುರಭಾವದ ಎಳೆಯನ್ನು ಕಾಣಬಹುದು. ಆಳ್ವಾರರ ಕೃತಿಗಳಲ್ಲಿ ಮಧುರಭಾವದ ಕಂಪು ಹರಡಿದೆ. ಮೀರಾ ಮತ್ತು ಆಂಡಾಳರ ಕೃತಿಗಳಲ್ಲಿ ಅಕ್ಕಮಹಾದೇವಿಯ ಬದುಕು ಮತ್ತು ವಚನಗಳ ರೀತಿಯ ಸಾಹಿತ್ಯವೇ ಕಾಣಿಸುತ್ತದೆ. ಮಹಾದೇವಿಯಕ್ಕನ ವಚನಗಳಲ್ಲಿ ಅವಳ ಬದುಕೇ ಮಧುರಭಾವವಾಗಿ ಅರಳಿರುವಂತೆಯೇ ಈ ಎಡೆಗಳಲ್ಲಿಯೂ ಮಧುರಭಾವ ಮಡುಗೊಂಡಿರುವುದನ್ನು ಕಾಣುತ್ತೇವೆ. ಆದರೆ ಭಕ್ತಿ ಮೀರೆ ಹಾಗೂ ಆಂಡಾಳರ ಕೃತಿಗಳಲ್ಲಿ ಮಧುರಭಾವ ಇದ್ದರೂ ಅಕ್ಕನ ವಚನಗಳಲ್ಲಿ ಸಾಹಿತ್ಯದ ವೈಶಿಷ್ಟ್ಯ ಹೆಚ್ಚಿದ್ದು ಆ ಇಬ್ಬರ ಕೃತಿಗಳಿಗಿಂತ ಭಿನ್ನವಾಗತ್ತದೆ. ಏಕೆಂದರೆ ಅಕ್ಕನ ಬದುಕು ವಚನಗಳಿಗಿಂತ ಭಿನ್ನವಾಗಿಲ್ಲ; ಅವಳ ಎಲ್ಲ ವಚನಗಳು ಕೂಡ ಅವಳ ಜೀವನಕ್ಕಿಂತ ಭಿನ್ನವಾಗಿದ್ದಂತೆ ತೋರುವುದಿಲ್ಲ. ಅಕ್ಕನ ಬದುಕು ಮತ್ತು ವಚನಗಳನ್ನು ಪ್ರತ್ಯೇಕಿಸಲಾಗದಂಥ ವಚನಾಭಿವ್ಯಕ್ತಿ ಅಲ್ಲಿ ಸಿದ್ಧಿಸಿದೆ.ವಚನ ಸಾಹಿತ್ಯದ ದೃಷ್ಟಿಯಿಂದ ನೋಡುವಾಗ ಕೂಡ ಇಲ್ಲಿನ ಸಾಧನೆ ಅಮೋಘ ಎನ್ನಿಸುತ್ತದೆ. ಇಲ್ಲಿ ಯಾವುದರಿಂದಯಾವುದು ಕಾಂತಿಗೊಂಡಿತು ಅಥವಾ ಪೂರ್ಣಗೊಂಡಿತು ಎಂದು ಹೇಳಲಾಗದ ಸ್ಥಿತಿಗೆ ವಚನಗಳು ಮುಟ್ಟುತ್ತವೆ. ಭಾಷೆಯಲ್ಲಿರುವ ನಾಟಕೀಯತೆ, ಜೀವನಗತಿ, ಅಭಿವ್ಯಕ್ತಿಯ ಬಿಗಿ ಹಾಗೂ ವೇಗ ಇವುಗಳಲ್ಲಿ ಅಕ್ಕನ ಬದುಕಿನ ಉಸಿರಾಟವನ್ನು ಕೇಳಬಹುದಾಗಿದೆ. ಆದ್ದರಿಂದಲೇ ವಚನಗಳಲ್ಲೆಲ್ಲ ಅಕ್ಕನ ವಚನವೇ ಶ್ರೇಷ್ಠವೆಂಬ ಉಕ್ತಿಹುಟ್ಟಿಕೊಂಡಿರಬೇಕು.[17]

೪

ವಚನ ಸಾಹಿತ್ಯವನ್ನು ಹೋಲುವ ಇತರ ಪ್ರಕಾರಗಳೊಳಗೆ ಕೆಲವು ಉದಾಹರಣೆಗಳನ್ನು ಗಮನಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಬಹುದು.

೧) ಜನರ ಭಾಷೆಯನ್ನು ಬಳಸುವ ವಿಷಯದಲ್ಲಿ ಬುದ್ಧ ಅಂದಿನ ಜನರ ಆಡುಭಾಷೆಯಾದ ಪಾಳಿಗೆ ಕೈಯಿಟ್ಟ, ಆದರೆ ಆ ಭಾಷೆ ಜೀವಂತ ಭಾಷಾವಾಹಿನಿಯಾಗಲಿಲ್ಲ-ವಚನಕಾರರ ಕಾಲದಲ್ಲಿ ಆದಂತೆ. ಜನರಿಗೆ ತನ್ನ ಅನುಭವವನ್ನು ಮುಟ್ಟಿಸುವ ಕಾಳಜಿಯನ್ನೇನೊ ಅಲ್ಲಿ ಕಾಣಬಹುದು. ವಚನ ಸಾಹಿತ್ಯಪರಂಪರೆಯೊಂದನ್ನು ನಿರ್ಮಾಣ ಮಾಡಿದಂತೆ (ಬುದ್ಧನ ಬದುಕೇ ಅಶ್ವಘೋಷನಂಥ ಕವಿಗೆ ಸ್ಫೂರ್ತಿಯಾದದ್ದು ನಿಜವಾದರೂ) ಆದರದೇ ಪರಂಪರೆ ಮುಂದುವರಿಯಲಿಲ್ಲ. ಸಾಹಿತ್ಯಕವಾಗಿ

15. ಪಂಚಮ ಶತಕ, ತೃತೀಯ ದಶಕ, ೨ ನೆಯ ಪಾಶುರ (ಊರವರ ನಿಂದೆ ಇನ್ನು ನಮ್ಮನ್ನು ಏನು ಮಾಡುತ್ತದೆ ಗೆಳತಿ ? ನನ್ನ ಕೆಂದಾವರೆ ಗಣ್ಣೊಡೆಯ ನನ್ನನ್ನು ಪೂರ್ತಿ ಅಪಹರಿಸಿಬಿಟ್ಟಿದ್ದಾನೆ. ಮೈಕಾಂತಿ ಗುಂದಿ, ಮೈ ಸೊರಗಿ, ಕೆಂಬಾಯೂ ಕರಿಗಣ್ಣೂ ಬಿಳಿಪೇರಿದುವು.)

16. ಪಂಚಮ ಶತಕ, ಚತುರ್ಥ ದಶಕ, ೩ ನೆಯ ಪಾಶುರ (ನೀನೂ ನನಗೆ ಅನುಕೂಲವಾಗಿಲ್ಲ, ಎಲೆ ಮನವೇ ! ನಿಟ್ಟಿರುಳೂ ಇನ್ನೂ ನೀಳವಾಗಿ ಕಲ್ಪವಾಗಿ ಬೆಳೆಯುತ್ತದೆ. ಕೂರ್ಬಿಲ್ಲ ನನ್ನ ಕಾಕುತ್ಸ್ಥನೂ ಬಾರ. ಬಾಳು ಮುಗಿವ ಪರಿಯರಿಯೆ ಪಾಪಿ ಹೆಣ್ಣಾಗಿ ಹುಟ್ಟಿ.) ಈ ಉದಾಹರಣೆಗಳು ಮತ್ತು ಅನುವಾದಗಳು ಆಂಡಾಳ್-ಮಹದೇವಿ-ಮೀರ- ಎಸ್. ವಿನೋದಾಬಾಯಿ ಅವರ ಕೃತಿಯಿಂದ.

17. ಆದ್ಯರ ಅಱುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ. ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯಾ.

ಬೌದ್ಧ ಸಾಹಿತ್ಯ ವಚನ ಸಾಹಿತ್ಯದಷ್ಟು ತನ್ನ ಕಾಲದ ಜೀವನದೊಂದಿಗೆ ಸಂಬಂಧ ಇಟ್ಟುಕೊಳ್ಳಲಾಗಲಿಲ್ಲ. ತನಗೆ ಸ್ಫೂರ್ತಿಯಾಗಿ ಮಾತ್ರ ತನ್ನ ಕಾಲದ ಬದುಕನ್ನು ಮಾತ್ರ ಬಳಸಿಕೊಂಡಿತು. ವಚನ ಕಾಲ ಭಾಷೆಯಲ್ಲಿ, ಬದುಕಿನಲ್ಲಿ, ಸಾಹಿತ್ಯದಲ್ಲಿ ಹಾಗೂ ಅಧ್ಯಾತ್ಮದಲ್ಲಿ ಹೊಸ ಮೌಲ್ಯಗಳನ್ನು ನಿರ್ಮಿಸಿತು. ಬೌದ್ಧಸಾಹಿತ್ಯದ ಒಂದು ಭಾಗದಲ್ಲಿ ವಚನಸಾಹಿತ್ಯದಲ್ಲಿ ಕಂಡುಬರುವ ಗದ್ಯಪದ್ಯಗಳನ್ನು ಮೀರಿದ ಸ್ಥಿತಿಯ ಅಭಿವ್ಯಕ್ತಿಯೂ ಅಲ್ಲದೆ ಭಾವಗೀತ ಗುಣವೂ ಹಲವಾರೆಡೆ ಬಂದಿದೆ.

ಬೈಬಲ್ಲು ಮಾತ್ರ ಈ ವಿಷಯದಲ್ಲಿ ಭಿನ್ನವಾಗಿದೆ. Genisis ಇಂದ ಆರಂಭವಾಗುವ ಬೈಬಲ್ ಗ್ರಂಥ ಇತಿಹಾಸ, ಧರ್ಮ, ಸಾಹಿತ್ಯ, ಆತ್ಮಗೀತೆಗಳು, ಹಾಡುಗಳು, ಭಾವಗೀತೆಗಳು ಮತ್ತು ಜೀವನ ಚರಿತ್ರೆ ಇವುಗಳ ಒಂದು ಸಂಕೀರ್ಣ ಕೃತಿಯಾಗಿದೆ. ಹಲವಾರು ತಲೆಮಾರುಗಳಲ್ಲಿ ಬೆಳೆದ ಈ ಕೃತಿಯ ಸಾಹಿತ್ಯಕಗುಣ ವಿವಿಧತೆಯಿಂದ ಕೂಡಿದ್ದರೂ ಅದರ ದೃಷ್ಟಿ ಕ್ರೈಸ್ತಮತೀಯರಿಗೊಂದು ಪರಂಪರೆಯನ್ನು ನಿರ್ಮಾಣ ಮಾಡುವುದೇ ಆಗಿದೆ. ಹಳೆಯ ಒಡಂಬಡಿಕೆ ಅನಾಮಿಕವಾಗಿದ್ದರೆ ಹೊಸ ಒಡಂಬಡಿಕೆ ನಾಲ್ವರು ಕ್ರೈಸ್ತ ಭಕ್ತರಿಂದ ರಚಿತವಾಗಿ ಕ್ರಿಸ್ತನ ಜೀವನದ ಭಿನ್ನರುಚಿಯ ಕಥೆಗಳಾಗಿವೆ. ಇಲ್ಲಿಯೂ ಭಾಷೆಯ ಅಭಿವ್ಯಕ್ತಿ ಅನೇಕ ವೇಳೆ ವಚನಗಳನ್ನು ಹೋಲುವ ಅಭಿವ್ಯಕ್ತಿಯೇ ಆಗಿದೆ. ಆದರೆ ವಚನಗಳು ತಮ್ಮ ಕಾಲದ ಹಿನ್ನೆಲೆಯಲ್ಲಿ ಜೀವನದ ಈ ಲೋಕ ಮತ್ತು ಆ ಲೋಕಗಳ ಮೌಲ್ಯಗಳನ್ನು ಹುಡುಕಿ ಹುಡುಕಿ ಕಂಡರಿಸುತ್ತವೆ; ತನ್ನ ಕಾಲದ ಬದುಕನ್ನು ಕಟ್ಟಿಕೊಳ್ಳುತ್ತ ತಾವೂ ರೂಪುಗೊಳ್ಳುತ್ತವೆ. ತನ್ನ ಕಾಲದ ಭಾಷೆಯೊಂದಿಗೆ ಪೂರ್ಣವಾಗಿ ಬೆರೆತು ಬೆಳೆದು ಭಾಷಾಪ್ರವಾಹವನ್ನು ಸಶಕ್ತವಾಗಿರಿಸಿ ಜೀವಂತ ವಾಹಿನಿಯಾಗುತ್ತವೆ. ಭಾಷೆಯ ಸಿದ್ಧಿಗಳ ದೃಷ್ಟಿಯಿಂದ, ಜೀವನದ ಮೌಲ್ಯಗಳ ದೃಷ್ಟಿಯಿಂದ ಹಾಗೆಯೇ ಸಾಹಿತ್ಯಕ ಸಾಧನೆಗಳಿಂದ ಅತ್ಯಂತ ಕಾಂತಿಪೂರ್ಣವಾಗುತ್ತವೆ. ಬೈಬಲ್‌ನಲ್ಲಿಯೂ ಭಾವಗೀತಗುಣದಿಂದ ಕೂಡಿದ ಅನೇಕ ಭಾಗಗಳಿವೆ ಆದರೆ ಬೈಬಲ್ ಪ್ರಧಾನವಾಗಿ ಒಂದು ಧರ್ಮದ ಪರಂಪರೆಯ ನಿರ್ಮಾಣದ ಕಡೆಗೇ ಕೈಯಿಡುತ್ತವೆ. ಹಲವಾರು ಪುಟ್ಟ ಪುಟ್ಟ ಪ್ರತಿಭೆಗಳು ಬೈಬಲ್ಲಿನ ತುಂಬ ಅಲ್ಲಲ್ಲೆ ಕೈಯಾಡಿಸಿವೆ;[18] ಆದರೆ ಅವುಗಳೆಲ್ಲ ಅಜ್ಞಾತ ಕವಿಕುಂಚಗಳು. ವಚನಸಾಹಿತ್ಯದಲ್ಲಿ ಹಾಗಾಗಿಲ್ಲ. ವಚನಸಾಹಿತ್ಯ ಅದರ ಭಾಷೆ, ಆಲೋಚನಾ ವಿಧಾನ, ಪದ. ಪದಬಂಧ. ಅಭಿವ್ಯಕ್ತಿ, ಶೈಲಿ ಹಾಗೂ ತಾತ್ವಿಕ ಪೂರಕತೆಗಳ ದೃಷ್ಟಿಯಿಂದ ಒಂದು ಮಹಾಸಮುದಾಯದ ಸೃಷ್ಟಿಯಾಗಿ ಪರ್ಯವಸಾನವಾಗಿದ್ದರೂ ವೈಯಕ್ತಿಕ ವಿಶಿಷ್ಟತೆಗಳು ಮಾಸಿಲ್ಲ; ಮಂಕಾಗಿಲ್ಲ: ಸ್ಪಷ್ಟವಾಗಿ ಗೋಚರಿಸುತ್ತಿವೆ.

ಕಂಪ್ಯೂಷಿಯನ್ ಮತ್ತು ಥಾಮಸ್–ಎ–ಕೆಂಪಿಸ್ ಅವರ ರಚನೆಗಳು ಮೇಲು ನೋಟದ ಕೆಲವು ಅಂಶಗಳಿಂದ ಲೋಕಾನುಭವ, ಅನುಭವದ ಪಕ್ವತೆ ಹಾಗೂ ಭಾಷಾಭಿವ್ಯಕ್ತಿ ಈ ದೃಷ್ಟಿಗಳಿಂದ ಮಾತ್ರ ವಚನಗಳ ಕೆಲವು ಗುಣಗಳನ್ನು ಹೋಲುತ್ತವೆ. ತಮಿಳಿನ ಆಳ್ವಾರರು ಮತ್ತು ಆಂಡಾಳರ ಬರೆಹಗಳಲ್ಲಿ ವಚನಸಾಹಿತ್ಯದ ಕರ್ತೃಗಳಲೊಬ್ಬಳಾದ ಅಕ್ಕನ ಬದುಕಿನ ಮಧುರಭಾವದ ಅಭಿವ್ಯಕ್ತಿಯನ್ನು ಹೋಲುವ ಅಭಿವ್ಯಕ್ತಿಯಿದೆ; ಅಷ್ಟೇ ಅಲ್ಲದೆ ಮೀರಾ ಮತ್ತು ಅಕ್ಕ ಇಬ್ಬರ ವೈವಾಹಿಕ ಜೀವನವೂ ಸಮಾನ ರೀತಿಯ ವಿರಳಿತಗಳಿಂದ ಕೂಡಿರುವುದನ್ನು ಕಾಣಬಹುದಾಗಿದೆ. ಆದರೆ ಮೀರಾಳ ರಚನೆಗಳಲ್ಲಿ ಗೇಯತೆಯ ಸಮೃದ್ಧಿಯಿದ್ದರೆ ಅಕ್ಕನ ವಚನಗಳು ಅವಳ ಬದುಕಿನ ಪಾರದರ್ಶಕ ಚಿತ್ರದಿಂದ ಚೈತನ್ಯಮಯವಾಗಿ ವಿಶಿಷ್ಟವಾಗಿವೆ.

ಒಟ್ಟಾರೆ ನೋಡಿದರೆ ನಮ್ಮ ಕುತೂಹಲಕ್ಕಾಗಿ ವಚನಸಾಹಿತ್ಯವನ್ನು ಹೋಲುವ ಇತರ ಪ್ರಕಾರಗಳನ್ನು ಇಲ್ಲಿ ಹೋಲಿಸಿನೋಡಲಾಗಿದೆ. ಇದರಿಂದ ವಚನಗಳಿಗೆ ಹೋಲಿಸಿರುವ ಇತರ ಕೃತಿಗಳಲ್ಲಿ[19] ಸಪ್ಪೆ ಅಥವಾ ನಿರರ್ಥಕ ಎಂಬ ಆತುರದ ತೀರ್ಮಾನಕ್ಕೆ ಯಾರೂ ಬರಬೇಕಾಗಿಲ್ಲ. ಒಂದೊಂದು ಸಾಹಿತ್ಯ ಹುಟ್ಟುವಾಗಲೂ ಅದಕ್ಕಿರುವ ಪ್ರೇರಣೆ, ಪರಂಪರೆಗಳು ಬೇರೆ ಬೇರೆಯಾಗಿರುತ್ತವೆ. ಹಾಗೆಯೇ ಈ ಪ್ರೇರಣೆಗಳಿಗೆ ಎದೆತೆರೆದುನಿಂತ ಪ್ರತಿಭೆಗಳ ಮಟ್ಟವೂ ಬೇರೆಯಾಗಿರುತ್ತದೆ. ಜೊತೆಗೆ ಆಯಾ ಕಾಲದ ಬದುಕಿನ ಸವಾಲುಗಳೂ ಬಗೆಬಗೆಯಾಗಿ ಇರುತ್ತವೆ.

ಆಶ್ಚರ್ಯದ ಮಾತೆಂದರೆ ಹನ್ನೆರಡನೆ ಶತಮಾನದಲ್ಲಿ, ಎದುರಾದ ಜೀವನ ಆ ಕಾಲದ ಜನಕ್ಕೆ ಒಂದು ಗಟ್ಟಿಯಾದ ಸವಾಲನ್ನೆಸೆಯಿತು. ಮರ್ತ್ಯವನ್ನು ಕರ್ತಾರನ ಕಮ್ಮಟವೆಂದು ಬಗೆದು ಗಟ್ಟಿಯಾಗಿ ಈ ನೆಲದಲ್ಲಿ ನಿಂತು ಬದುಕಬೇಕಾದ ಸವಾಲು ಅದು. ಆ ಸವಾಲು ಎದುರಾದಾಗ ಎದೆಗೊಟ್ಟವರು ಭಾಷೆ ಸಾಹಿತ್ಯಗಳ ಗಟ್ಟಿಯಾದ ಪರಂಪರೆಯನ್ನು ಪಡೆದಿದ್ದ ದೇವರ ದಾಸಿಮಯ್ಯ, ಅಲ್ಲಮ, ಬಸವ, ಅಕ್ಕ ಮೊದಲಾದವರು. ಹಾಗೆ ಅವರು ಸವಾಲನ್ನೆದುರಿಸುವಾಗ ತಮ್ಮ ತಮ್ಮ ಅಂತರಂಗವನ್ನವರು ನೋಡಿಕೊಂಡರು. ಹಾಗಾಗಿ ಅವರಿಗೆ ನಡೆ–ನುಡಿ ಬೇರೆ ಬೇರೆಯಾಗಲಿಲ್ಲ. ಇದರ ಜೊತೆಗೆ ಅವರಿಗಿದ್ದ ಜೀವನದ

---

18. Song of Soloman ಮತ್ತು Ecclesiastes, ಇಂಥ ಭಾಗಗಳನ್ನು ನೋಡಬಹುದು. P 716-720 ಮತ್ತು P 707-716.

19. ಇಲ್ಲಿ ಬಳಸಿಕೊಂಡಿರುವ ಉದಾಹರಣೆಗಳನ್ನು ಸಾಹಿತ್ಯಕ ಹಾಗೂ ಅದರೊಡನೆ ಬದುಕಿಗಿರುವ ಸಂಬಂಧಗಳ ದೃಷ್ಟಿಯಿಂದ ಆಯ್ಕೆ ಮಾಡಿದ್ದೇನಾದರೂ ಅವು ಪೂರ್ಣವಾಗಿ ಆಯಾ ಗ್ರಂಥಗಳನ್ನು ಪ್ರತಿನಿಧಿಸುತ್ತವೆಯೆಂದು ಹಟ ಹಿಡಿಯಲಾರೆ; ಏಕೆಂದರೆ ಬೈಬಲ್ ಮತ್ತು ಬುದ್ಧ ಉವಾಚದಂಥ ಗ್ರಂಥಗಳಿಂದ ಎರಡು ಉದಾಹರಣೆಗಳನ್ನು ಆರಿಸುವುದೆಂದರೆ ಈ ತೊಡಕು ಇದ್ದದ್ದೇ. ಈ ದಿಸೆಯಲ್ಲಿ ಬೈಬಲ್ ಮತ್ತು ಧರ್ಮಪದಗಳನ್ನು ಪ್ರತ್ಯೇಕವಾಗಿಯೇ ವಚನಸಾಹಿತ್ಯದೊಂದಿಗೆ ಅಭ್ಯಾಸ ಮಾಡುವ ಅಗತ್ಯವಿದೆ.

ಪ್ರೀತಿ, ಆದರ್ಶಗಳನ್ನು ಮರೆಮಾಡಲಿಲ್ಲ. ಗಟ್ಟಿಯಾಗಿ ಮಣ್ಣಿನಲ್ಲಿ ಕಾಲೂರಿದ ಜನ ಆಕಾಶಗಂಗೆಯಲ್ಲಿ ಮಜ್ಜನಮಾಡಿದರು. ಹೃದಯ ಕಮಲದಲ್ಲಿ ಶಿವಶಿವ ಎಂಬ ಮಂತ್ರ ಶಬ್ದಮೊಳಗಿತು. ಅಂಥ ಮಂತ್ರ ಮಾತಾಯಿತು. ಮಂತ್ರವನ್ನು ಮಾತಾಗಿಸುವಾಗ ಅವರಿಗಿದ್ದ ಅಕ್ಕರೆ ಅಸಾಧಾರಣವಾದುದು. ತಟ್ಟನೆ ತಾವು ಯಾರೊಡನೆ ಮಾತಾಡಬೇಕು ಎಂಬುದನ್ನು ಅವರು ಗುರುತಿಸಲು ಹೆಣಗಾಡಬೇಕಾಗಲಿಲ್ಲ. ಏಕೆಂದರೆ ಅವರು ಇದ್ದುದು ದಂತಗೋಪುರದಲ್ಲಿ ಅಲ್ಲ. ಮಡಿವಳ, ಮಾದರ, ಸೆಟ್ಟಿ, ಡೋಹರರ ಮಧ್ಯೆ. ಹಾಗಾಗಿಯೇ ನಿಂತನೆಲೆಯಲ್ಲಿ ಅನುಭವದ ಮಥನ ನಡೆಯಿತು. ನಿಂತ ನೆಲ ಅನುಭವ ಮಂಟಪ ಆಗಿ ಅಲ್ಲಿ ಬದುಕಿದ್ದುದು ಶೂನ್ಯಸಂಪಾದನೆಯ ಸಿರಿಯಾಯಿತು. ಮನೆಮನೆಯ ಬಾಗಿಲುತಟ್ಟಿ ದಯೆಯಿಲ್ಲದ ಧರ್ಮ ಯಾವುದಯ್ಯಾ ಎಂದು ಆತ್ಮೀಯವಾಗಿ ಪ್ರಶ್ನಿಸಿ ಹೊರಟ ಅವರ ಪ್ರೀತಿ ತಮ್ಮ ಸುತ್ತಲಿನವರನ್ನು ಕಂಡು ಎದೆತೆರೆದು ಮಾತಾಡುವಂತೆ ಮಾಡಿತು. ಹಾಗೆ ಮಾತಾಡಿದಾಗ ಹೃದಯದ ಮಾತು ಹೃದಯಕ್ಕೆ ಮುಟ್ಟುವಂತೆ ನೇರವಾಗಿ ಅಕೃತಕವಾಗಿ ಮಾತಾಡಿದರು; ಕೃತಕ ವ್ಯಾಕರಣ ನಿಯಮಗಳು, ಕೃತಕ ಛಂದೋರೂಪಗಳು, ಅನವಶ್ಯಶಾಸ್ತ್ರದ ತೊಡಕುಗಳು, ಅನಗತ್ಯವಾದ ಒಣಗಾಂಭೀರ್ಯ ಇವುಗಳನ್ನು ಬಿಟ್ಟು ಜನರ ನಾಲಗೆಯಲ್ಲಿ ಜೀವಂತವಾಗಿ ಸ್ಪಂದಿಸುತ್ತಿದ್ದ ಭಾಷೆಯ ಉಗ್ರಾಣಕ್ಕೆ ಕೈಯಿಕ್ಕಿದರು. ಮಾತು ಮಾಣಿಕ್ಯದೀಪ್ತಿಯಾಯಿತು.

ಬಹುಶಃ ಇನ್ನಾವ ಕಾಲದಲ್ಲೂ ಇರದಿದ್ದಷ್ಟು ಅದ್ಭುತ ಸಾವಯವ ಸಂಬಂಧ ಆ ಕಾಲದಲ್ಲಿತ್ತು, ಭಾಷೆ–ಬದುಕು ಮತ್ತು ಸಾಹಿತ್ಯಗಳಲ್ಲಿ. ಈ ಅರ್ಥದಲ್ಲಿ ನೋಡಿದರೆ ಅನ್ಯ ಕೃತಿಗಳ ಜೊತೆಗೆ ವಚನ ಸಾಹಿತ್ಯವನ್ನು ಹೋಲಿಸುತ್ತ ಹೋದಂತೆ ವಚನ ಸಾಹಿತ್ಯದ ಆಳ ಹರವು ಎತ್ತರಗಳು ಇನ್ನೂ ವಿಶದವಾಗುವಂತೆ ತೋರುತ್ತವೆ. ಏಕೆಂದರೆ ವಚನಗಳು ಸಾಹಿತ್ಯವಾಗಲೆಂಬ ಸಂಕಲ್ಪದಿಂದ ಹುಟ್ಟಿದವಲ್ಲ. ಒಂದು ಹೊಸ ಬದುಕಿನ ಹಾಗೂ ಅದರ ಸುಭದ್ರವಾದ ಮೌಲ್ಯಗಳ ಅನ್ವೇಷಣೆಯ ಸಂಕಲ್ಪದಿಂದ ಹುಟ್ಟಿದುವುಗಳು. ಹೀಗಾಗಿಯೇ ಅವರ ಬದುಕಿನ ಎಲ್ಲ ಅನುಭವ, ತಿಳುವಳಿಕೆಯ ಎಲ್ಲ ಸಾರ, ಪರಂಪರೆಯ ಸತ್ವ ಅಷ್ಟೇ ಅಲ್ಲದೆ ತಮ್ಮ ಕಾಲದ ಭಾಷೆಯ ಅನಂತ ಸಾಧ್ಯತೆಗಳ ಕಸುವು ಇವುಗಳೆಲ್ಲದರಿಂದ ಅತ್ಯದ್ಭುತ ಎನ್ನಿಸುವಷ್ಟು ಸಮೃದ್ಧಗೊಂಡುಬಿಟ್ಟಿವೆ ; ಆಳವಾದ ಅಧ್ಯಯನ ವಿಷಯವಾಗಿ ಸವಾಲಾಗಿವೆ.

## ಶಿಲ್ಪಗಳಲ್ಲಿ ಶಿವಶರಣರು

**—ಡಾ|| ಎಂ. ಎಂ. ಕಲಬುರ್ಗಿ**

ಶರಣರನ್ನು ಕಾವ್ಯಗಳಲ್ಲಿ, ತರುವಾಯ ಶಾಸನಗಳಲ್ಲಿ ಹುಡುಕುವ ಪ್ರಯತ್ನಗಳು ಈ ವರೆಗೆ ತೃಪ್ತಿಕರವಾಗಿ ನಡೆದಿದ್ದು, ಇನ್ನು ಮುಂದೆ ಶಿಲ್ಪಗಳಲ್ಲಿ ಶೋಧಿಸುವ ಕಾರ್ಯ ನಡೆಯಬೇಕಾಗಿದೆ. ಪವಾಡವನ್ನು ನಿರೂಪಿಸುವ ಕಾವ್ಯಗಳಿಗಿಂತ ಚರಿತ್ರೆಯನ್ನು ಹೇಳುವ ಶಾಸನಗಳು ಹೆಚ್ಚು ವಿಶ್ವಸನೀಯವಾಗಿವೆ. ಈ ಶಾಸನಗಳು ಶರಣರ ಶಬ್ದ ಚಿತ್ರವನ್ನು ಬಿಡಿಸಿದರೆ ಶಿಲ್ಪಗಳು ರೂಪ ಚಿತ್ರವನ್ನು ಕಂಡರಿಸಿವೆ.

ಶರಣರ ಬದುಕು–ಬರಹಗಳನ್ನು ಅರ್ಥ ಮಾಡಿಕೊಂಡವನ ಚಿತ್ತಭಿತ್ತಿಯ ಮೇಲೆ ಅವರ ಚಿತ್ರ ಮೂಡಿ ನಿಲ್ಲುವುದು ಸಹಜ. ಈ ಊಹಾತ್ಮಕ ಅಮೂರ್ತ ಚಿತ್ರವನ್ನು ಬಣ್ಣದ ಮಾಧ್ಯಮದಿಂದ ಮೂರ್ತ ಚಿತ್ರಗಳನ್ನಾಗಿ, ಶಿಲಾ ಮಾಧ್ಯಮದಿಂದ ಮೂರ್ತ ವಿಗ್ರಹಗಳನ್ನಾಗಿ ರೂಪಿಸಿ ಇತ್ತೀಚೆಗೆ ಪ್ರಕಟಿಸುತ್ತಲಿದ್ದಾರೆ. ಇಂಥ ಊಹಾತ್ಮಕ ಚಿತ್ರ--ವಿಗ್ರಹಗಳ ಸೃಷ್ಟಿ ಈ ನಾಡಿನಲ್ಲಿ ಇತಿಹಾಸದುದ್ದಕ್ಕೂ ನಡೆದು ಬಂದಂತಿದೆ. ಊಹೆಯೇ ಆಗಿದ್ದರೂ ಆ ಪ್ರಾಚೀನ ಚಿತ್ರ–ಶಿಲ್ಪಗಳು ಇಂದು ನಾವು ರೂಪಿಸುವ ಊಹಾತ್ಮಕ ಚಿತ್ರ-ಶಿಲ್ಪಗಳಿಗಿಂತ ಸತ್ಯಕ್ಕೆ ಹೆಚ್ಚು ಸಮೀಪ. ಶರಣರನ್ನು ಕಣ್ಮುಟ್ಟ ಕಂಡವರು ಹೇಳಿದ, ಹೇಳಿದವರು ಮತ್ತೆ ಹೇಳಿದ ಹಿನ್ನೆಲೆಯಲ್ಲಿ ಹುಟ್ಟಿದ ಇವುಗಳಲ್ಲಿ ಅಂಗ ವಿನ್ಯಾಸ, ಉಡುಪು ವಿಶೇಷಗಳು ಕೆಲಮಟ್ಟಿಗಾದರೂ ಮೂಲ ರೂಪದಲ್ಲಿ ಉಳಿದು ನಿಂತಿರುತ್ತವೆ. ಪ್ರಾಚೀನ ಚಿತ್ರ–ಶಿಲ್ಪಗಳು ಅರ್ವಾಚೀನದವುಗಳಿಗಿಂತ ಹೆಚ್ಚು ಪ್ರಾಮಾಣಿಕವೆಂದು ಇದರ ಅರ್ಥ. ಇಂಥ ಚಿತ್ರ ವಿಗ್ರಹಗಳು ನಮ್ಮ ನಾಡಿನ ಕೆಲವೆಡೆಗಳಲ್ಲಿ ಸಿಗುತ್ತಿದ್ದು ಬೇರೊಂದು ಅಭ್ಯಾಸದ ವಸ್ತುವಾದ ಚಿತ್ರಪ್ರಪಂಚವನ್ನು ಬಿಟ್ಟು ಇಲ್ಲಿ ಶಿಲ್ಪ ಪ್ರಪಂಚವನ್ನು ಮಾತ್ರ ಗಮನಿಸಬಹುದು.

ವೀರಶೈವಕ್ಕೆ ಮೂರ್ತಿ ಪೂಜೆ, ದೇವಾಲಯ ನಿರ್ಮಾಣ ಕಾರ್ಯಗಳು ವಿರೋಧವಾಗಿದ್ದರೂ ಆಮೇಲೆ ಬಂದ ಅನುಯಾಯಿಗಳು ಮತ್ತೆ ಹಿಂದೂ ಧರ್ಮದ ಪ್ರಭಾವಕ್ಕೆ ಒಳಗಾಗಿ ಮೂರ್ತಿಗಳನ್ನು ಕೆತ್ತಿಸಿದರು; ದೇವಾಲಯಗಳನ್ನು ಕಟ್ಟಿಸಿದರು. ಇದರ ಫಲವಾಗಿ ಹುಟ್ಟಿದ ಶರಣರ ವಿಗ್ರಹಗಳನ್ನು ಬಸವಪೂರ್ವಯುಗ, ಬಸವಯುಗ, ಬಸವೋತ್ತರಯುಗ ಎಂಬ ಘಟ್ಟಗಳನ್ನು ಕಲ್ಪಿಸಿ ವಿವೇಚಿಸಬಹುದು.

## ಬಸವಪೂರ್ವಯುಗ

ವೀರಶೈವದ ಇತಿಹಾಸದಲ್ಲಿ ಬಸವಪೂರ್ವಯುಗ ಮಂಜು ಮುಸುಕಿದ ಅರುಣೋದಯ ಸಮಯ. ವಿದ್ವಾಂಸರ ಸಂಶೋಧನ ಸೂರ್ಯನಿಂದ ಈ ಮಂಜು ಕರಗುತ್ತ ನಡೆದು ಶರಣರು ಒಬ್ಬೊಬ್ಬರಾಗಿ ಈಗ ಪ್ರಕಟಗೊಳ್ಳುತ್ತಲಿದ್ದಾರೆ. ಇವರಲ್ಲಿ ಅರುವತ್ತುಮೂವರು ಪುರಾತನರು. ಕುಂಬಾರ ಗುಂಡಯ್ಯ, ಜೇಡರ ದಾಸಿಮಯ್ಯಗಳು ಶಿಲ್ಪದಲ್ಲಿ ಹೀಗೆ ಗೋಚರಿಸುತ್ತಾರೆ.

ತಮಿಳುನಾಡಿನಲ್ಲಿ ಅರುವತ್ತುಮೂವರ ವಿಗ್ರಹಗಳು ಇಡಿಯಾಗಿ ಇಲ್ಲವೆ ಬಿಡಿಯಾಗಿ ಅನೇಕ ಕಡೆಗಳಲ್ಲಿ ಸಿಗುತ್ತವೆ. ಕರ್ನಾಟಕಕ್ಕೆ ಬಂದರೆ ನಂಜನಗೂಡಿನ ಶ್ರೀಕಂಠೇಶ್ವರ ದೇವಾಲಯ, ಬಳ್ಳಾರಿಯ ಮಲ್ಲಿಕಾರ್ಜುನ ದೇವಾಲಯ, ಚಾಮರಾಜನಗರದ ಚಾಮರಾಜೇಶ್ವರ ದೇವಾಲಯಗಳಲ್ಲಿ ಇಡಿಯಾಗಿ ಅರುವತ್ತುಮೂವರ ವಿಗ್ರಹಗಳು ಲಭಿಸುತ್ತವೆ[1]. ಇವುಗಳಲ್ಲಿ ಬಳ್ಳಾರಿಯ ವಿಗ್ರಹಗಳು ಕೊಂಚ ಪ್ರಾಚೀನ, ಮಿಕ್ಕವು ೧೭ನೆಯ ಶತಮಾನದವು. ಈ ವಿಗ್ರಹಗಳು ಹೆಸರಿನಲ್ಲಿ ರೂಪದಲ್ಲಿ ತುಂಬ ವ್ಯತ್ಯಾಸ ಕಂಡುಬರುತ್ತಿದ್ದು ವಿದ್ವಾಂಸರು ಇವುಗಳ ತುಲನಾತ್ಮಕ ಅಧ್ಯಯನ ನಡೆಸುವದು ಅವಶ್ಯವಿದೆ. ಬಳ್ಳಾರಿ ಜಿಲ್ಲೆಯ ಉಜ್ಜಿನಿ ಮಠದ ಗೋಪುರದಲ್ಲಿ ೬೩ರ ವಿಗ್ರಹ ಜೋಡಿಸಿರುವುದಾಗಿ ದೇವಪ್ಪ ಕವಿ ತನ್ನ ಮರುಳಸಿದ್ಧ ಚರಿತ್ರೆಯಲ್ಲಿ ಹೇಳಿರುವುದನ್ನು ಪರಿಶೀಲಿಸಬೇಕಾಗಿದೆ. ಈ ಅರವತ್ತುಮೂರರಲ್ಲಿಯ ಚಿರುತ್ತೊಂಡನ ಇನ್ನೊಂದು ಹೆಸರು ಸಿರಿಯಾಳ ಸೆಟ್ಟಿ. ಕಾರಿಕಾಲಮ್ಮೆಯ ಇನ್ನೊಂದು ಹೆಸರು ಅಮ್ಮವ್ವೆ ಅಥವಾ ಬಿಜ್ಜಮಹಾದೇವಿ. ಅಬ್ಬಲೂರು, ಹಿರಿಯೂರು, ಮರಡಿಪುರ, ಬೇಗೂರು ಶಾಸನಗಳಲ್ಲಿ ಹೆಸರಿನ ಮೂಲಕ ಕಾಣಿಸಿಕೊಂಡ ಸಿರಿಯಾಳನಿಗೆ ಸಂಬಂಧಪಟ್ಟಂತೆ ಅಬ್ಬಲೂರು ಸೋಮೇಶ್ವರ ದೇವಾಲಯದಲ್ಲಿ 'ಸಿರಿಯಾಳ ಸೆಟ್ಟಿ ಚಂಗಳವ್ವೆ ದೇವರಿಗೆ ಮಗನ ನಿಕ್ಕುವ ಠಾವು'–ಎಂದು ಬರೆದು ಕೆಳಗೆ ಈ ದೃಶ್ಯವನ್ನು ಕೆತ್ತಲಾಗಿದೆ[2]. ಮಗನನ್ನು ಬಗಲಲ್ಲಿ ಹೊತ್ತ ಚಂಗಳವ್ವೆ ಮತ್ತು ಕೈಮುಗಿದು ನಿಂತ ಸಿರಿಯಾಳಶೆಟ್ಟಿಯರು ಶಿವನಿಗೆ ಅಭಿಮುಖವಾಗಿ ನಿಂತ ಚಿತ್ರವಿದು. ಕಬ್ಬೂರ ಶಾಸನದಲ್ಲಿ 'ಕಾರಿಕಾಲಮ್ಮೆ' ಎಂಬ ಹೆಸರು ಬರುತ್ತಿದ್ದು ಇವಳು ಪುರಾತನರ ಸಮೂಹಕ್ಕೆ ಸೇರಿದ ಕಾರಿಕಾಲಮ್ಮೆಯಿಂದ ಬೇರೆಯಿರಬಹುದು[3]. ಆದರೆ ಪುರಾತನರಲ್ಲಿ ಒಬ್ಬಳಾದ ಕಾರಿಕಾಲಮ್ಮೆ(ಅಮ್ಮವ್ವೆ)ಯ ವಿಗ್ರಹ ಬಿಜ್ಜಾವರದಲ್ಲಿ ಇರುವುದಾಗಿ ಲಿಂ. ಬಿ. ಶಿವಮೂರ್ತಿ ಶಾಸ್ತ್ರಿಗಳು ಹೇಳುತ್ತಿದ್ದು[4] ಇದರ ಪರೀಕ್ಷೆ ಅಗತ್ಯವಾಗಿದೆ. ಕುಡತಿನಿ ಶಾಸನದಲ್ಲಿ 'ಮೀಂಟಿ ಕಣ್ಗಳಂ ಹರನ ಶಿಜಾಗ್ರಕೀಜಿಸಿ'–ಎಂಬ ಮಾತಿನ ಮೂಲಕ ಸೂಚಿಸಲ್ಪಟ್ಟ ಬೇಡರ ಕಣ್ಣಪ್ಪನ ಮತ್ತು ಚೋಳ ರಾಜನ ವಿಗ್ರಹಗಳು ಗೂಳೂರಿನಲ್ಲಿವೆ[4A].

ಅರುವತ್ತುಮೂವರನ್ನು ಬಿಟ್ಟರೆ ಬಸವಪೂರ್ವಯುಗದ ಇನ್ನೊಬ್ಬ ಶರಣ ಕುಂಬಾರಗುಂಡ. ಮರಡಿಪುರ ಶಾಸನದಲ್ಲಿ ಈತನ ಉಲ್ಲೇಖವಿದೆ[5]. ಅಬ್ಬಲೂರು ಸೋಮೇಶ್ವರ ದೇವಾಲಯದಲ್ಲಿ 'ಕುಂಬಾರ ಗುಂಡನ ಮುಂದೆ ಬಂದಾಡಿದ ನಮ್ಮ ಶಿವನು'–ಎಂಬ ಬರಹವಿದ್ದು, ಅದರ ಕೆಳಗೆ ಗಡಿಗೆ ನುಡಿಸುತ್ತ ಕುಳಿತ ಗುಂಡಯ್ಯನ ವಿಗ್ರಹವನ್ನು ಕೆತ್ತಲಾಗಿದೆ. ಕುಣಿಯುತ್ತಲಿರುವ ಶಿವನ ವಿಗ್ರಹ ಇಲ್ಲಿ ಕಂಡು ಬರುವುದಿಲ್ಲ. ಬಹುಶಃ ಕಳೆದು ಹೋಗಿರಬೇಕು.

ಬಸವಪೂರ್ವಯುಗದಲ್ಲಿ ಜೇಡರದಾಸಿಮಯ್ಯನೊಬ್ಬ ಸುಪ್ರಸಿದ್ಧ ಶರಣ. ಗೊಬ್ಬೂರು,ಚಿಕ್ಕಮೂದೇನೂರು,ಕಿರಿಯಿಂಡಿ, ಗೀಜಗನಹಳ್ಳಿ, ಬಿದರೆ, ಹಿರಿಯೂರು, ಮರಡಿಪುರ ಗ್ರಾಮದ ಶಾಸನಗಳಲ್ಲಿ ಕಂಡು ಬರುವ ಈತನ ಜೀವನದಲ್ಲಿ ನಡೆದ ವಸ್ತ್ರದಾನ ಘಟನೆಯ ಶಿಲ್ಪ ಅಬ್ಬಲೂರು ಸೋಮೇಶ್ವರ ದೇವಾಲಯದಲ್ಲಿ ಕಂಡು ಬರುತ್ತದೆ. 'ಜೇಡರದಾಸಿಮಯ್ಯಗಳು ದೇವರಿಗೆ ವಸ್ತ್ರವ ಕೊಡುವ ಠಾವು'–ಎಂಬ ಬರಹದ ಕೆಳಗೆ ದಾಸಿಮಯ್ಯ ವಸ್ತ್ರದ ಸುರುಳೆ ಬಿಚ್ಚಿ ಹಿಡಿದ, ಜಂಗಮ ಕೈಯೊಡ್ಡಿ ನಿಂತ ಚಿತ್ರವನ್ನು ಬಿಡಿಸಲಾಗಿದೆ[6]. ಕೊಲ್ಲಿಪಾಕಿಯಲ್ಲಿಯೂ ಜೇಡರದಾಸಿಮಯ್ಯನ ಶಿಲ್ಪವಿರುವುದಾಗಿ ಲಿಂ. ಶ್ರೀ ಚೆನ್ನಮಲ್ಲಿಕಾರ್ಜುನ ಅವರು ಹೇಳುತ್ತಿದ್ದು[7] ವಿದ್ವಾಂಸರು ಈ ದಿಸೆಯಲ್ಲಿ ಸಂಶೋಧನೆ ಕೈಕೊಳ್ಳಬೇಕಾಗಿದೆ.

## ಬಸವಯುಗ

ಬಸವಯುಗ ವೀರಶೈವ ಇತಿಹಾಸದ ಸುಗ್ಗಿಕಾಲ. ಈ ಯುಗದ ನಾಯಕವ್ಯಕ್ತಿಯಾದ ಬಸವಣ್ಣನವರನ್ನು ಕುರಿತು ಹಿರಿಯೂರು, ಅರ್ಜುನವಾಡ–೧. ಅರ್ಜುನವಾಡ–೨. ಚೌಡದಾನಪುರ–೧. ಚೌಡದಾನಪುರ–೨. ಕಲ್ಲೇದೇವರಪುರ, ಮರಡಿಪುರ, ಗುಡಿಹಾಳ ಕುಂಟೋಜಿ, ಆನಂದಪುರ, ಜೋಡಿದಾಸೇನಹಳ್ಳಿ, ಕಾನಕಾನಹಳ್ಳಿ–೧, ಕಾನಕಾನಹಳ್ಳಿ–೨. ಇಷ್ಟು ಶಾಸನಗಳು ಸಿಗುತ್ತವೆ[8]. ಇದಲ್ಲದೆ ಕರ್ನೂಲ ಜಿಲ್ಲೆಯ ನಂದಿಕೋಟೂರು ತಾಲೂಕಿನ ನಾಗಲೂಟಿ ಗ್ರಾಮದ ಶಾಸನ (ಕ್ರಿ.ಶ.

---

1. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು (೧೯೭೨) ಪುಟ ೧೪-೧೫. 2. ಅದೇ ಪುಟ ೧೭. 3. ಅದೇ ಪುಟ ೨೦.
4. ಬಿ. ಶಿವಮೂರ್ತಿಶಾಸ್ತ್ರಿ : ಕರ್ನಾಟಕ ಭಾರತಿ ೮-೨, ಪುಟ ೫೫-೬೪ 4A. ಶ್ರೀ ಜಜನಿ ಶ್ರೀಶೈಲ ಪೀಠದರ್ಶನಂ (೧೯೬೭) ಪು. ೧೮
5. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು (೧೯೭೮) ಪು. ೨೨. 6. ಅದೇ ಪು. ೩೫-೩೮.
7. ಶ್ರೀ ಚೆನ್ನಮಲ್ಲಿಕಾರ್ಜುನ : ಶ್ರೀ ರೇವಣಸಿದ್ಧರು ಪು. ೫೧೨.
8. ಎಂ.ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು (೧೯೭೮) ಪುಟ ೫೪,೭೫

೧೭೨೪)ವಲ್ಲಿ ಬರುವ 'ಶ್ರೀಶೈಲ ಸಿಧಾಪ್ಪುರಂ ಲಾಂಗಲೂಟಿ, ಪೀರಭದ್ರುಸಿದೇವ್ಪಳ ಪ್ರಾಕಾರಮುಂದು ತೂರ್ಪ್ಪನ ಗೋಪ್ಪುರ ಮುನ್ನ ಆ ಸಮೀಪಮುಂದು ಶಿಲಾಮಂಟಪಮುನ್ನ ಗಟ್ಟಿಂಚಿ ಕಾಶಿವಿಶ್ವೇಶ್ವರುನಿ ಕಲ್ಯಾಣ ಬಸವೇಶ್ವರುನಿ ಪ್ರತಿಷ್ಟಚೇಸಿ' ಎಂಬ ಉಲ್ಲೇಖ ಬರುತ್ತಿದೆ.[8] ಇದರಿಂದ ಬಸವಣ್ಣನವರ ವಿಗ್ರಹವೊಂದನ್ನು ಅಲ್ಲಿ ಪ್ರತಿಷ್ಠೆ ಮಾಡಿದುದರ ಸುಳಿಹು ಸಿಗುತ್ತಿದ್ದು ಆ ಗ್ರಾಮದಲ್ಲಿ ಸಂಶೋಧನೆ ನಡೆಯಬೇಕಾಗಿದೆ. ಉಜ್ಜಯಿನಿಯಲ್ಲಿಯ ವಿಗ್ರಹವೊಂದು ಬಸವಣ್ಣನವರದೆಂದು ಶ್ರೀ ಎಚ್. ದೇವಿರಪ್ಪ ಅವರು ಹೇಳುತ್ತಾರೆ.[9] ಈ ಅಭಿಪ್ರಾಯ ವಿದ್ವಾಂಸರ ಚರ್ಚೆಗೆ ಒಳಪಡಬೇಕಾಗಿದೆ.

ಬಸವಯುಗದ ಇನ್ನೊಬ್ಬ ಪ್ರಮುಖ ಶರಣ ಮಡಿವಾಳ ಮಾಚಿದೇವ. ಕಾನಕಾನ ಹಳ್ಳಿಯ ೨ ತಾಮ್ರ ಪಟಗಳಲ್ಲಿ ಉಲ್ಲೇಖಿತನಾಗಿದ್ದಾನೆ.[10] ಬಿಜ್ಜಳನ ಪಟ್ಟದಾನೆಯನ್ನು ತುಳಿದು ಹಾಕಿದ ವೀರ ಘಟನೆ ಇವನ ಜೀವನದ ಒಂದು ಉಜ್ವಲ ಪ್ರಸಂಗ. ಈ ಸನ್ನಿವೇಶವನ್ನೊಳಗೊಂಡ ವಿಗ್ರಹಗಳು ಅಮ್ಮಿನಭಾವಿ, ಮುಳಗುಂದ,[10] ಧಾರವಾಡ[11]ಗಳಲ್ಲಿ ಲಭಿಸಿವೆ. ಅಮ್ಮಿನ ಭಾವಿ ವಿಗ್ರಹದ ಕೆಳಗೆ 'ತಾರಣ ಸಂವತ್ಸರದ ವೈಶಾಖ ಸು. ೧೫ ಆಲು ಅಂಮೆಯನಭಾವಿಯ ಮಡಿವಾಳರು ವೀರ ಮಡಿವಾಳ ಮಾಚೀದೇ × × × ಯಗ ಪ್ರತಿಷ್ಠೆಯಂ ಮಾಡಿದರು ಮಂಗಳ × × ×' ಎಂಬ ಬರಹವಿದೆ. ಈ ಮೂರು ವಿಗ್ರಹಗಳು ಆನೆಯ ಸೊಂಡಿಲನ್ನು ಒಂದು ಕೈಯಿಂದ ಎತ್ತಿ ಹಿಡಿದು, ತುಳಿದು ಹಾಕುತ್ತಿರುವ ದೃಶ್ಯವನ್ನೊಳಗೊಂಡಿದ್ದು, ಮಡಿವಳಯ್ಯನ ಪಕ್ಕದಲ್ಲಿ ಬಹುಶಃ ಅವನ ಹೆಂಡತಿಯಾಗಿರಬಹುದಾದ ಒಬ್ಬ ಸ್ತ್ರೀಯ ಚಿತ್ರವನ್ನೂ ಬಿಡಿಸಲಾಗಿದೆ. ಅಮ್ಮಿನಭಾವಿ ವಿಗ್ರಹ ಕ್ರಿ.ಶ. ೧೨೮೪ ರಂದು ಹುಟ್ಟಿರುವುದರಿಂದ ಶರಣರು ಲಿಂಗೈಕ್ಯರಾದ ಒಂದು ಶತಮಾನದಲ್ಲಿಯೇ ದೇವರ ಮಟ್ಟಕ್ಕೇರಿ ಮೂರ್ತಿ ರೂಪದಲ್ಲಿ ಪೂಜೆಗೊಳ್ಳುತ್ತಲಿದ್ದರೆಂದು ವೇದ್ಯವಾಗುತ್ತದೆ.

ಉಡುತಡಿಯ ಜನರು ಹೇಳುತ್ತಿರುವಂತೆ ಅಲ್ಲಿನ ಒಂದು ಸ್ತ್ರೀ ವಿಗ್ರಹ ಮಹಾದೇವಿಯಕ್ಕನದು ಅಲ್ಲ. ಯಾವದೋ ಒಬ್ಬ ಸ್ತ್ರೀಯ ನೆನಪಿಗಾಗಿ ನಿಲ್ಲಿಸಿದ ಮಾಸ್ತಿಕಲ್ಲು. ಇದನ್ನು ಬಿಟ್ಟರೆ ಶ್ರೀಶೈಲದ ಕದಳೀವನದ ಸ್ತ್ರೀ ವಿಗ್ರಹ ಮಾಹಾದೇವಿ ಯಕ್ಕನದೆಂದು ಕೆಲವರು ಹೇಳುತ್ತಿರುವುದು ಆಧಾರಗಳನ್ನು ಬಯಸುತ್ತದೆ.[12]

ಏಕಾಂತ ರಾಮಯ್ಯ, ಶರಣಸಮೂಹದಲ್ಲಿ ರಕ್ತರಂಜಿತ ಘಟನೆಗೆ ಕಾರಣನಾದವ. ತಾಳಿಕೋಂಟಿ, ಭೋಗಾವೆ, ಮರ ಡಿಪುರ, ಬಂದಳಿಕೆ, ಕೆಂಪನಪುರ ಗ್ರಾಮದ ಶಾಸನಗಳಲ್ಲಿ[13] ಉಲ್ಲಿಖಿತನಾದ ಈತನು ಮೆರೆದ ವೀರ ಘಟನೆಯನ್ನು ಕುರಿತ ಸುದೀರ್ಘಶಾಸನವೊಂದು ಅಬ್ಬಲೂರಿನಲ್ಲಿ ದೊರೆಯುತ್ತದೆ.[13] ಇದಕ್ಕೆ ಹೆಚ್ಚಿನದಾಗಿ ಜಿನವಿಗ್ರಹವನ್ನೊಡೆದು ಶಿವಲಿಂಗವನ್ನು ಪ್ರತಿಷ್ಠಾಪಿಸಿದ ಘಟನೆಯ ಬೇರೆ ಬೇರೆ ಹಂತಗಳನ್ನೊಳಗೊಂಡ ಚಿತ್ರಗಳನ್ನು ಅಲ್ಲಿ ಕೆತ್ತಲಾಗಿದೆ. ಅವುಗಳಲ್ಲಿ ಈ ಮೂರು ಚಿತ್ರಗಳು ಮಹತ್ವಪೂರ್ಣವಾದುವು. ೧) ಸೋಮೇಶ್ವರ ದೇವಾಲಯದ ಒಳಗೋಡೆಯ ಮೇಲೆ ಬಲಕ್ಕೆ 'ಶ್ರೀಮದ್ ಏಕಾಂತ ರಾಮಯ್ಯಂಗೆ ಸಂಕಗೌಂಡನ ಓಲೆಯ ಕುಡುವ ಠಾವು'[13] ಎಂಬ ವಾಕ್ಯ ಬರೆದು ಕೆಳಗೆ ಸಂಬಂಧಿಸಿದ ಚಿತ್ರವನ್ನು ಬಿಡಿಸಲಾಗಿದೆ. ೨) ಸೋಮೇಶ್ವರ ದೇವಾಲಯದ ಒಳಗೊಡೆಯ ಮೇಲೆ ಎಡಕ್ಕೆ ' ಯೇ(ಏ)ಕಾಂತ ರಾಮಯ್ಯಂಗಳು ಜಿನನ ಒಡೆದು ಲಿಂಗ ಪ್ರತಿಷ್ಠೆಯಂ ಮಾಡಿದ ಠಾವು'[13] ಎಂಬ ವಾಕ್ಯವಿದ್ದು ಕೆಳಗೆ ಅದಕ್ಕೆ ಸಂಬಂಧಪಟ್ಟ ಚಿತ್ರವನ್ನು ಕೊರೆಯಲಾಗಿದೆ. ೩) ಸೋಮೇಶ್ವರ ದೇವಾಲಯದ ಹೊರಭಾಗದ ಮೇಲೆ 'ಶ್ರೀ ಬ್ರಹ್ಮೇಶ್ವರ ದೇವರಲ್ಲಿ ಏಕಾಂತದ ರಾಮಯ್ಯ ಬಸದಿಯ ಜಿನನೊಡ್ಡವಾಗಿ ತಲೆಯನರಿದು ಹಡೆದ ಠಾವು॥ ಸಂಕಗಾವುಂಡ ಬಸದಿಯನೊಡೆಯಲೀಯದೆ ಆಳು ಕುದುರೆಯನೊಡ್ಡಿರಲು ಏಕಾಂತದ ರಾಮಯ್ಯ ಕಾದಿಗೆಲ್ದು ಜಿನನನೊಡೆದು ಲಿಂಗಮಂ ಪ್ರತಿಷ್ಠೆ ಮಾಡಿದಂ॥[13] ಎಂಬ ವಾಕ್ಯವಿದೆ. ಕೆಳಗೆ ಸಂಬಂಧಪಟ್ಟ ದೃಶ್ಯಗಳು ಕೆತ್ತಲ್ಪಟ್ಟಿವೆ. ಬಹುಶಃ ಸ್ವತಃ ಏಕಾಂತರಾಮಯ್ಯನೇ ಕೆತ್ತಿಸಿದ ಇವು ಶರಣರನ್ನು ಕುರಿತ ಶಿಲ್ಪಗಳಲ್ಲಿಯೇ ತುಂಬ ಅಪೂರ್ವವೆನಿಸಿವೆ.

ಇನ್ನೂ ಇಬ್ಬರು ಶಿವಶರಣರಾದ ಭೈರವರಾಜ ಮತ್ತು ಆವಯ್ಯಗಳ ವಿಗ್ರಹ ಸಾಸಲದಲ್ಲಿ ಇರುವುದಾಗಿ ಶ್ರೀ ಶಿವ ಬಸವ ಸ್ವಾಮಿಗಳು[14] ಹೇಳುತ್ತಿದ್ದು ಇವರ ಪ್ರತ್ಯಕ್ಷ ಪರೀಕ್ಷೆ ಅವಶ್ಯವಿದೆ.

ಶರಣರ ವಿಗ್ರಹಗಳಿಗೆ ಸಂಬಂಧಪಟ್ಟಂತೆ ಬನವಾಸಿ, ಗಮನಾರ್ಹ ಕೇಂದ್ರವೆನಿಸಿದೆ. ಅಲ್ಲಿಯ ಮಧುಕೇಶ್ವರ ದೇವಾ

---

9. ಎಚ್. ದೇವೀರಪ್ಪ : ತರಳಬಾಳು ಪಟ್ಟಾಭಿಷೇಕ ಸ್ಮರಣ ಸಂಚಿಕೆ (೧೯೭೯) ವಿಶ್ವದರ್ಶನ. ಪು. ೨೧
10. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು (೧೯೭೮) ಪು. ೮೬-೮೮
11. ಧಾರವಾಡದಲ್ಲಿಯ ವಿಗ್ರಹ ಇನ್ನೂ ಪ್ರಕಟವಾಗಿಲ್ಲ. ಅಮ್ಮಿನಭಾವಿಯ ವಿಗ್ರಹ ಈಗ ಕರ್ನಾಟಕದ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿದೆ.
12. ಉಡುತಡಿಯ ಮಹಾದೇವಿಯಕ್ಕನವರ ಸಾಹಿತ್ಯ (೧೯೬೩) ಪು. ೮೦
13. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು (೧೯೭೮) ಪು. ೯೫-೧೦೦
14. ಶ್ರೀ ಶಿವಬಸವ ಸ್ವಾಮಿಗಳು : ಭೈರವೇಶ್ವರ ಕಾವ್ಯ (೧೯೫೪) ಪ್ರಸ್ತಾವನೆ. ಪು. ೨೭-೨೮

ಲಯದ ಶಿಲಾ ಮಂಟಪದ ಸುತ್ತ ಲಧೆ ಸೋಮಣ್ಣ, ಮೋಳಿಗೆ ಅಯ್ಯ, ನೂಲಿ ಚಂದಯ್ಯ, ಆಘಕಿ ಮಾರಯ್ಯ, ಇಕ್ಕದ ಮಾರಯ್ಯ, ಹಡಪದ ಅಪ್ಪಣ್ಣ, ಅಗ್ಗಣಿ ಹೊಂನಯ್ಯ ಎಂಬ ಹೆಸರಿನೊಂದಿಗೆ ಬಸವಯುಗದ ಶರಣರ ವಿಗ್ರಹಗಳು ಕಂಡು ಬರುತ್ತವೆ.[15] ಇವು ೧೭ನೆಯ ಶತಮಾನಕ್ಕೆ ಸಂಬಂಧಪಟ್ಟಿದ್ದು ಆಯಾ ಶರಣರ ಅಂಗವಿನ್ಯಾಸ, ವೇಷ-ಭೂಷಣ ಬಳಸುವ ವಸ್ತು ಸಾಮಗ್ರಿಗಳು ಅಭ್ಯಾಸ ಯೋಗ್ಯವೆನಿಸಿವೆ. ಇವುಗಳಲ್ಲಿ ಅಗ್ಗಣಿ ಹೊನ್ನಯ್ಯನ ಉಲ್ಲೇಖ ಕಲ್ಲಿದೇವರಪುರ ಮರಡಿಪುರ ಶಾಸನದಲ್ಲಿ ಕಂಡುಬರುತ್ತಿದ್ದು, ಅಬ್ಬಲೂರಿನಲ್ಲಿ ಈ ಹೆಸರಿನ ಒಂದು ಶಿವಲಿಂಗವೂ ಇದೆ. ಇವರನ್ನು ಬಿಟ್ಟರೆ ಬೇರೆ ಕೆಲವು ಶರಣರ ವಿಗ್ರಹಗಳು ಅಲ್ಲಲ್ಲಿ ಇರುವುದಾಗಿ ವದಂತಿಯಿದೆ. ಗೂಳೂರಿನ ಮಠದ ಮಂಟಪದಲ್ಲಿ ಬಿಡಿಸಲಾದ ಕೆಲವು ವಿಗ್ರಹಗಳು ಈ ಪೀಠದ ಜಗದ್ಗುರು ಪಂಡಿತಾಚಾರ್ಯ, ವಿರೂಪಾಕ್ಷ ದೇಶಿಕೇಂದ್ರ, ಚಂದ್ರಗುಂಡ ಶಿವಾಚಾರ್ಯ ಮೊದಲಾದವರವಾಗಿವೆ ಯೆಂದು ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರು ಒಂದು ಲೇಖನದಲ್ಲಿ ಹೇಳಿದ್ದಾರೆ.[15A] ಇಂಗಳೇಶ್ವರದಲ್ಲಿ ಇರುವ ಒಂದು ವಿಗ್ರಹ ರೇವಣ ಸಿದ್ಧೇಶ್ವರನದೆಂದು ಅಲ್ಲಿಯ ಜನರ ವದಂತಿ.

### ಬಸವೋತ್ತರಯುಗ

ಬಸವೋತ್ತರಯುಗದ ಶರಣರಲ್ಲಿ ಶಿಲ್ಪದಲ್ಲಿ ಪ್ರಧಾನವಾಗಿ ಕಂಡುಬರುವವರು ಗುಂಡ ಬ್ರಹ್ಮಯ್ಯಗಳು. ಓರಂಗಲ್ಲಿನ ಅರಸು ಕಾಕತಿಯ ಗಣಪತಿರಾಯನ ಮನೆಯಲ್ಲಿ ಕಳುವು ಮಾಡಿ ಮೊರೆಹೊಕ್ಕ ಕಳ್ಳನ ರೂಪದ ಶಿವನನ್ನು ಬೆನ್ನಿಗೆ ಹಾಕಿಕೊಂಡು ಶೂಲವನ್ನೇರಿದ ಶರಣರಿವರು. ಕರ್ನಾಟಕದಲ್ಲಿ ಗುಂಡ ಬ್ರಹ್ಮಯ್ಯಗಳ ದೇವಾಲಯ, ವಿಗ್ರಹ, ಉತ್ಸವಗಳು ಅಲ್ಲಲ್ಲಿ ಕಂಡು ಬರುತ್ತವೆ. ಗುಂಡೇನ ಹಳ್ಳಿಯಲ್ಲಿ ಗುಂಡ ಬ್ರಹ್ಮಯ್ಯಗಳ ದೇವಾಲಯ. ವಿಗ್ರಹ ಇದ್ದರೆ ಕೆಲವು ಗ್ರಾಮಗಳಲ್ಲಿ ಕೇವಲ ವಿಗ್ರಹ ಗಳು ಲಭಿಸುತ್ತಿವೆ. ಈವರೆಗೆ ಲಭಿಸಿದ ಏಳು ವಿಗ್ರಹಗಳನ್ನು ಶಿಲ್ಪದೃಷ್ಟಿಯಿಂದ ೧. ಹಾವೇರಿ,[15B] ಗುಂಡೇನಹಳ್ಳಿ, ಕುಸಕೂರು. ೨. ಚಿತ್ರದುರ್ಗ, ಬನವಾಸಿ, ನೀತಿಗೆರೆ. ೩. ಬಳ್ಳಾರಿ. ಎಂದು ವರ್ಗೀಕರಿಸಬಹುದು.[16] ಬನವಸೆಯದನ್ನುಳಿದು ಯಾವ ವಿಗ್ರಹಕ್ಕೂ ಬರವಣಿಗೆಯಿಲ್ಲ. ಜೋಡುವಿಗ್ರಹ, ಕೈಯಲ್ಲಿ ಇಷ್ಟಲಿಂಗ, ಶೂಲದ ಮೇಲೆ ಕುಳಿತಿರುವ ಇಲ್ಲವೆ ಶೂಲದ ಮಗ್ಗಲು ನಿಂತಿರುವ ಭಂಗಿ ಇವುಗಳ ಸ್ವರೂಪ. ಮೈಸೂರು ಪ್ರದೇಶದ ಬೂದಿಹಾಳು ಗ್ರಾಮದಲ್ಲಿಯೂ ಗುಂಡಬ್ರಹ್ಮಯ್ಯ ಗಳ ವಿಗ್ರಹವಿರುವುದಾಗಿ ತಿಳಿದು ಬರುತ್ತದೆ.[17] ಕುಮಾರರಾಮನ ಸಾಂಗತ್ಯದಲ್ಲಿ ಶೂಲದ ಹಬ್ಬದ ವರ್ಣನೆ ಮತ್ತು ಕುಮಾರ ರಾಮನು ಓರಂಗಲ್ಲಿನ ಗುಂಡಬ್ರಹ್ಮಯ್ಯ ದೇವಾಲಯಕ್ಕೆ ಭೇಟ್ಟಿಕೊಟ್ಟ ವಿಷಯಗಳು ಬರುತ್ತವೆ. ಅಲ್ಲಿಯ ದೇವಾಲಯ ಮತ್ತು ಮೂರ್ತಿಗಳನ್ನು ಶೋಧಿಸುವುದು ಅವಶ್ಯವಿದೆ.

ಬಸವೋತ್ತರ ಯುಗದ ಶರಣರಲ್ಲಿ ಒಬ್ಬನಾದ ಮೂರು ಜಾವಿದೇವನ ಹೆಸರು ಹಿರೇಮಗಲಗೇರಿ, ರಟ್ಟೆಹಳ್ಳಿ, ಲಕ್ಷ್ಮೇಶ್ವರ, ಕಲಕೇರಿ–೧. ಕಲಕೇರಿ–೨. ಇಷ್ಟು ಶಾಸನಗಳಲ್ಲಿ ಕಂಡು ಬರುತ್ತದೆ. ಅಂತರವಳ್ಳಿ ಗ್ರಾಮದಲ್ಲಿ ನಿಂತ ಭಂಗಿಯ ಈತನ ಒಂದು ವಿಗ್ರಹ ಜನರಿಂದ ಪೂಜೆಗೊಳ್ಳುತ್ತಲಿದೆ.[18]

ಹೋಳಿನ ಹಂಪಯ್ಯ ೧೬ನೆಯ ಶತಮಾನದ ಒಬ್ಬ ಶಿವಶರಣ. ಕವಲೆಯದುರ್ಗ, ಕೊಪ್ಪಳದ ಶಾಸನಗಳಲ್ಲಿ ಉಲ್ಲಖಿತ ನಾದ ಈತನ ಒಂದು ವಿಗ್ರಹ ಬನವಾಸಿ ಮಧುಕೇಶ್ವರ ದೇವಾಲಯದ ಶಿಲಾಮಂಟಪದಲ್ಲಿ ಕೆತ್ತಿದ ಶರಣರ ಸಾಲಿನಲ್ಲಿ ಕಂಡು ಬರುತ್ತದೆ[19].

ಈವರೆಗೆ ಶರಣರ ಇಷ್ಟು ವಿಗ್ರಹಗಳು ನಮ್ಮ ಗಮನಕ್ಕೆ ಬಂದಿದ್ದು ಇವುಗಳ ರಕ್ಷಣೆ ತೀವ್ರ ಕೈಕೊಳ್ಳಬೇಕಾದ ಕಾರ್ಯ. ಇದಲ್ಲದೆ ಪ್ರತಿಯೊಂದು ವಿಗ್ರಹವನ್ನು ಶಿಲ್ಪಶಾಸ್ತ್ರದ ಹಿನ್ನೆಲೆಯಲ್ಲಿ ಅಭ್ಯಸಿಸಿ ಅದರ ಶಿಲ್ಪವಿನ್ಯಾಸ, ಕಾಲ ಇತ್ಯಾದಿ ವೈಶಿಷ್ಟ್ಯ ಗಳನ್ನೂ ಅರಿತುಕೊಳ್ಳಬೇಕಾಗಿದೆ. ಇದಕ್ಕೆ ಹೆಚ್ಚಿನದಾಗಿ ಅವುಗಳ ಚಿತ್ರಬಿಡಿಸಿಕೊಂಡು, ಫೋಟೊ ತೆಗೆದುಕೊಂಡು ಪುಸ್ತಕ ರೂಪದಲ್ಲಿ ಪ್ರಕಟಿಸುವ, ಸಾಧ್ಯವಿದ್ದರೆ ಫಿಲ್ಮ ಮಾಡಿಸಿಕೊಂಡು ಅಲ್ಲಲ್ಲಿ ಪ್ರದರ್ಶಿಸುವ ಕೆಲಸವೂ ನಡೆಯಬೇಕಾಗಿದೆ. ಜೊತೆಗೆ ಶರಣರ ವಾಸಸ್ಥಳಗಳಲ್ಲಿ ವ್ಯಾಪಕವಾದ ಸಂಶೋಧನೆ ನಡೆಸಿ ಹೊಸ ಹೊಸ ವಿಗ್ರಹಗಳನ್ನು ಶೋಧಿಸುವ ಕಾರ್ಯವೂ ನಡೆಯ ಬೇಕಾಗಿದೆ.

---

15. ಎಂ. ಎಂ. ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು (೧೯೭೮) ಪುಟ ೧೦೩.
[ಸಾಸಲದಲ್ಲಿ ಅಗ್ಘವಣಿ ಹೊನ್ನವ್ವೆ (ಯ್ಯ?)ಯ ವಿಗ್ರಹವಿರುವುದಾಗಿ ಶ್ರೀ ಶಿವಬಸವ ಸ್ವಾಮಿಗಳು ಭೈರವೇಶ್ವರ ಕಾವ್ಯದ ಪ್ರಸ್ತಾಪನೆ (ಪುಟ ೨೭-೨೮)ಯಲ್ಲಿ ಹೇಳಿದ್ದಾರೆ]

15A. ಶ್ರೀ ಜಚನಿ : ಶ್ರೀಶೈಲ ಪೀಠದರ್ಶನಂ (೧೯೬೭) ಪುಟ ೧೩.

15B. ಈ ವಿಗ್ರಹ ಈಗ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿದೆ.

16. ಎಂ. ಎಂ. ಕಲಬುರ್ಗಿ. ಶಾಸನಗಳಲ್ಲಿ ಶಿವಶರಣರು (೧೯೭೮) ಪು. ೧೧೩-೧೧೪

17. ಈ ವಿಗ್ರಹ ಇನ್ನೂ ಪ್ರಕಟವಾಗಿಲ್ಲ.

18. ಎಂ. ಎಂ. ಕಲಬುರ್ಗಿ. ಶಾಸನಗಳಲ್ಲಿ ಶಿವಶರಣರು (೧೯೭೮) ೧೦೮-೧೧೨

19. ಎಂ. ಎಂ. ಕಲಬುರ್ಗಿ. ಶಾಸನಗಳಲ್ಲಿ ಶಿವಶರಣರು (೧೯೭೮) ಪು. ೧೬೨

# ಕೆಲವು ಶಿವಶರಣರ ವ್ಯಕ್ತಿಚಿತ್ರಗಳು

## ಕೊಂಡಗುಳಿಕೇಶಿರಾಜ

(ಇತ್ತೀಚಿನ ಸಂಶೋಧನಾಂಶಗಳು)

—ಡಾ॥ ವಿ. ಶಿವಾನಂದ

'ಕೇಶಿರಾಜ' ಹೆಸರಿನ ಹಲವಾರು ವ್ಯಕ್ತಿಗಳು ನಮಗೆ ಪ್ರಾಚೀನಶಾಸನ, ಕಾವ್ಯ, ಚರಿತ್ರೆಗಳಲ್ಲಿ ದೊರಕುವುದರಿಂದ ಆ ಹೆಸರುಗಳ ವೈಶಿಷ್ಟ್ಯವನ್ನು ಮೊದಲು ವಿವೇಚಿಸಿ, ತರುವಾಯ ಬಸವಪೂರ್ವಕಾಲೀನ ಶರಣನಾದ ಕೊಂಡಗುಳಿ ಕೇಶಿರಾಜನ ಬಗೆಗೆ ಇತ್ತೀಚೆಗೆ ದೊರಕಿರುವ ಕೆಲವೊಂದು ಹೊಸ ಆಧಾರಗಳ ಬೆಳಕಿನಲ್ಲಿ ಚರ್ಚಿಸುವುದು ಈ ಲೇಖನದ ಉದ್ದೇಶ.

'ಕೇಶಿರಾಜ' ಎಂಬ ಹೆಸರುಗಳನ್ನು (Proper nouns) ಮತದೃಷ್ಟಿಯಿಂದ ಒಟ್ಟಾರೆ ಮೂರುಗುಂಪು ಮಾಡಬಹುದು. ೧) ಜೈನ ೨) ಬ್ರಾಹ್ಮಣ ೩) ವೀರಶೈವ. ಇಲ್ಲಿ ಆಯಾಮತಗಳಿಗೆ ಸಾಮಾನ್ಯಸಂಬೋಧ್ಯವಾಗುವ ವ್ಯಕ್ತಿನಾಮ 'ಕೇಶಿ' ಅಥವಾ 'ಕೇಶವ'. ಈ ಪದಗಳಿಗೆ ಸೇರುವ ಮತ್ತು ಪರಪ್ರತ್ಯಯಗಳಲ್ಲೇ ನಮಗೆ ಭಿನ್ನಭಿನ್ನಮತೀಯ ನಾಮನಿರ್ದೇಶನದ ತುಣುಕುಗಳು ಒಡೆದುಕಾಣುವಂತಿವೆ. ಇಲ್ಲಿ ಅವನ್ನು ಸ್ಥೂಲವಾಗಿ ಹೀಗೆ ವಿಭಾಗಿಸಬಹುದು.

| | ಪ್ರಕೃತಿ + ಪ್ರತ್ಯಯ > | ವ್ಯಕ್ತಿನಾಮ | ಕಾಲ | ಆಕರ |
|---|---|---|---|---|
| ೧) **ಜೈನಹೆಸರುಗಳು :** | | | | |
| | ವ್ಯಕ್ತಿನಾಮ + ರಾಜ > | ಕೇಶವರಾಜ | ಕ್ರಿ.ಶ.೧೧೮೦ | ಕ.ಚ.ಭಾ.I ಪು.೩೦೭ |
| | " + ವರ್ಣಿ > | ಕೇಶವವರ್ಣಿ | ಕ್ರಿ.ಶ.೧೩೫೯ | ಕ.ಚ ಭಾ.I ಪು.೪೮೩. |
| | " + ಅಣ್ಣ > | ಕೇಶಿಮಣ್ಣ | ಕ್ರಿ.ಶ.೧೨೦೦ | ಕ.ಚ.ಭಾ.I ಪು.೩೭೪ |
| | " + (ಇಲ್ಲ) | ಕೇಶವ | ಕ್ರಿ.ಶ.೧೨೬೦ | ಶ.ಮ.ದ[1]. |
| ೨) **ಬ್ರಾಹ್ಮಣ ಹೆಸರುಗಳು :** | | | | |
| | ವ್ಯಕ್ತಿನಾಮ + ದೇವ > | ಕೇಶವದೇವ[2] | ಕ್ರಿ.ಶ.೧೧೮೯ | ಕ.ಚ.ಭಾ.I ಪು.೩೩೦ |
| | " + (ಇಲ್ಲ) > | ಕೇಶವ | ಕ್ರಿ ಶ ೧೧೫೬–೧೧೬೭ | ಶಿಕಾರಿಪುರಶಾ. ೧೧೯ |
| | " + ರಾಜ / ದಂಡಾಧೀಶ > | ಕೇಶವರಾಜ / ಕೇಶವದಂಡಾಧೀಶ | — | — |
| ೩) **ವೀರಶೈವ ಹೆಸರುಗಳು :** | | | | |
| | ವ್ಯಕ್ತಿನಾಮ + ರಾಜ > / ಚಮೂಪ > | ಕೇಶವರಾಜ / ಕೇಶವಚಮೂಪ | ಕ್ರಿ.ಶ.೧೧೬೫ | Ep. Ind V ಅಬ್ಬಲೂರು ನಂ.೨೪೫. |
| | " ರಾಜ — / ದಣ್ಣಾಯಕ — | ಕೇಶಿರಾಜ / ಕೇಶಿರಾಜದಣ್ಣಾಯಕ | ಕ್ರಿ.ಶ.೧೧೦೭ | Ec III-I ಮಂಡ್ಯ ನಂ.೧೮೩ ಮರಡೀಪುರ (೧೨೮೧) |
| | ವಿಶೇಷಣ + ವ್ಯಕ್ತಿನಾಮ + ರಾಜ > | ಅನಿಮಿಷಕೇಶಿರಾಜ | ಕ್ರಿ.ಶ.೧೧೬೦ | ಶಿ.ಕ.ರ.ಕೋ ಅನು-೨. |
| | " + " + " > | ಉತ್ತಮಾಂಗದ ಕೇಶಿರಾಜ | ೧೧೬೦ | —,,— |
| | " + " + " > | ಧೂರ್ಜಟಿ ಕೇಶಿರಾಜ | ೧೧೬೦ | —,,— |
| | ಸ್ಥಳನಾಮ + " + " > | ಬಾಗುಳಿಯ ಕೇಶಿರಾಜ | ೧೧೬೦ | —,.— |

–ಈ ಮೇಲಿನ ವೀರಶೈವ ಹೆಸರುಗಳ ಆಧಾರದ ಮೇಲಿಂದ ಪ್ರಸ್ತುತ ಕೊಂಡಗುಳಿ ಕೇಶಿರಾಜನಿಗೆ ಮಾತ್ರ ಅನ್ವಯವಾಗುವ ವೈಶಿಷ್ಟ್ಯಗಳನ್ನು ಹೀಗೆ ಸಮೀಕರಿಸಬಹುದು.

---

1. ಶಬ್ದಮಣಿದರ್ಪಣಕಾರನ ಹೆಸರು 'ಕೇಶಿರಾಜ' ಎಂದಿರುವುದಕ್ಕಿಂತ 'ಕೇಶವ' ಎಂದೇ ಇರುವುದಕ್ಕೆ ನಮಗೆ ಆಧಾರಗಳಿವೆ. 'ಕವಿಕೇಶವನೆಂ' (ಸೂತ್ರ ೩); 'ಕೇಶವಂಗಿದಿರುಂಟೆ?' (ಸಮಾಪ್ತಿವಾಕ್ಯ). 'ವಿದ್ಯಾವೇಶವಂ ಕೇಶವಂ' (ಆಖ್ಯಾತಪ್ರಕರಣಾಂತ ವೃತ್ತ). 'ಕೇಶವನ ಶಬ್ದಮಣಿದರ್ಪಣಮುಂ' ಸಮಾಪ್ತಿವಾಕ್ಯ). 'ಅದುದು ಕರ್ಣಾಟಧಾತು ಕವಿಕೇಶವನಿಂ' (ಧಾತು ಪ್ರಕರಣI). 'ಇವು ಕೇಶಿರಾಜ ವಿರಚಿತಂಗಳ್' ಮತ್ತು 'ಕೇಶಿರಾಜ ವಿರಚಿತಮಪ್ಪ' ಎಂಬೆರಡು ಪ್ರಯೋಗಗಳು ಪ್ರಕ್ಷಿಪ್ತವಾಗಿರಬೇಕು, ಎನ್ನಿಸುತ್ತದೆ.
2. ಕವಿಚರಿತ್ರೆಯಲ್ಲಿ 'ವಾಸುದೇವ' ಎಂಬ ಹೆಸರಿನೊಡನೆ 'ಕೇಶವದೇವ' ಹೆಸರೂ ಸೇರಿರುವುದರಿಂದ ಈ ಹೆಸರನ್ನು 'ಬ್ರಾಹ್ಮಣ' ಗುಂಪಿಗೆ ಸೇರಿಸಲಾಗಿದೆ.

**ಕೊಂಡಗುಳಿ ಕೇಶಿರಾಜ : ಹೆಸರಿನ ವೈಶಿಷ್ಟ್ಯ.**

| | | |
|---|---|---|
| ಸ್ಥಳವಾಚಿ + ವ್ಯಕ್ತಿನಾಮ + ರಾಜ | ಕೊಂಡಗುಳಿಯಕೇಶಿರಾಜ[3] | ...ಗ.ಸಾ.ನ. |
| ವ್ಯಕ್ತಿನಾಮ + ರಾಜ + ಡಣ್ಣಾಯಕ | ಕೇಶಿರಾಜದಣ್ಣಾಯಕ... | ...ಹ.ರ.ಮರಡೀಪುರಸಾಸನ. |
| ವ್ಯಕ್ತಿನಾಮ + ಅಯ್ಯ | ಕೇಶಿರಾಜಯ್ಯ... | ...ಭೈ. ಕಾ.ಕ.ಸೂ.ರ. |
| ವಿಶೇಷಣ + ವ್ಯಕ್ತಿನಾಮ | ಪುರಾತನಕೇಶಿರಾಜ... | ...ಜಗದಾರಾಧ್ಯನಾಗಿದೇವ ೧೧೮೭. |
| ವ್ಯಕ್ತಿನಾಮ + ರಾಜ + ವಿಶೇಷಣ | ಕೇಶವರಾಜಾದಿ ಅಸಂಖ್ಯಗಣ... | ...ಅ.ಶಾ. ಸೋ. ಆ. ಕರ್ನಾಟಕ ಹಿಸ್ಟರಿ |
| ದಣ್ಣಾಯಕ + ವ್ಯಕ್ತಿನಾಮ + ಅರಸ | ದಣ್ಣಾಯಕಕೇಶಿರಾಜರಸರು... | ...ಕೊಂಡಗುಳಿಶಾಸನ SII VolXX ನಂ.೬೯. |

—ಮೇಲೆ ನಿರ್ದೇಶಿತವಾದ ಹೆಸರುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ 'ಕೇಶಿ', 'ಕೇಶವ' ಎಂಬ ಸಾಮಾನ್ಯ ವ್ಯಕ್ತಿನಾಮಗಳ ಮುಂದೆ ಹಲವಾರು ಪ್ರತ್ಯಯಗಳು ಸೇರಿ. ಈ ಹೆಸರುಗಳನ್ನು ಮತದೃಷ್ಟಿಯಿಂದಲೂ ವಿಭಾಗಿಸಿರುವಂತೆ ತೋರುತ್ತದೆ. 'ಅಣ್ಣ' 'ವರ್ಣ'ಗಳು ಹೆಚ್ಚಾಗಿ ಜೈನಪರ ವ್ಯಕ್ತಿವಾಚಕಗಳಾಗಿಯೂ, 'ದೇವ' 'ಚಮೂಪ' 'ದಂಡಾಧೀಶ' ಎಂಬ ಅಭಿಧಾನಗಳು ಬ್ರಾಹ್ಮಣಪರ ವ್ಯಕ್ತಿ ಸೂಚಕಗಳಾಗಿಯೂ, 'ರಾಜ' 'ಅಯ್ಯ' 'ದಣ್ಣಾಯಕ' 'ಅರಸ' ಎಂಬಿವು ವೀರಶೈವವ್ಯಕ್ತಿ ವಿಶೇಷಾಭಿಧಾನಗಳಾಗಿಯೂ ಇಲ್ಲಿ ಸೇರಿರುವುದು ವೈಶಿಷ್ಟ್ಯಪೂರ್ಣವೆನ್ನಿಸುತ್ತದೆ. ಹೀಗೆ ಇವುಗಳನ್ನು ವಿವೇಚಿಸುವುದರಿಂದ ಬಹುಶಃ ಈವರೆಗೆ ವಿದ್ವಾಂಸರು ಕೊಂಡಗುಳಿ ಕೇಶಿರಾಜನ ಹೆಸರಿನಲ್ಲಿ ವ್ಯಕ್ತಮಾಡಿರುವ ಹಲವೊಂದು ಸಂದಿಗ್ಧ ವಿಚಾರಗಳಿಗೆ ಒಂದು ಪರಿಹಾರಮಾರ್ಗ ಸೂಚಿಸಬಹುದು, ಎನ್ನಿಸುತ್ತದೆ.

**ಕೊಂಡಗುಳಿ ಕೇಶಿರಾಜ ವ್ಯಕ್ತಿಯ ಶೋಧನೆ :**

ಹಲವು ಸಂಶೋಧಕರು ಕೇಶಿರಾಜನ ಬಗೆಗೆ ಒದಗಿಸಿರುವ ಆಧಾರಗಳಲ್ಲಿ ನಿಗದಿಷ್ಟವಾಗಿ ಕೊಂಡಗುಳಿ ಕೇಶಿರಾಜನೂ ಅಲ್ಲದೆ, ಕೆಲವು ಅನ್ಯ ಕೇಶಿರಾಜರೂ ಸಿಕ್ಕುಹಾಕಿಕೊಂಡಿದ್ದಾರೆ. ಕಾರಣ : ಇಲ್ಲಿ ಕೊಂಡಗುಳಿ ಕೇಶಿರಾಜ ಯಾರು ಹೌದು, ಯಾರು ಅಲ್ಲ ಎಂಬ ಬಗೆಗೆ ಕೆಳಗಿನ ಪಟ್ಟಿಯಲ್ಲಿ ಆಯಾ ಗುರುತುಗಳಿಂದ ಸೂಚಿಸಿದೆ :–

| ಸಂಶೋಧಕರು | ಆಕರ | ಸಂದರ್ಭ | ಅಲ್ಲ × | ಹೌದು √ |
|---|---|---|---|---|
| ಆರ್. ನರಸಿಂಹಾಚಾರ್ | ಕ. ಚ. ಭಾ. I. ಪು. ೧೪೯ | ಶಿಕಾರಿಪುರ ೧೧೯, ೧೨೩ ನಂ.ಗಳ ಶಾಸನಗಳಲ್ಲಿ ಕಾಣಿಸಿರುವ ಕೇಶವದೇವ | × | — |
| ,, | ,, ಪು. ೩೪೯ | ಶಿಕಾರಿಪುರಶಾಸನೋಕ್ತ ಕೇಶವರಾಜಾದಿ ಅಸಂಖ್ಯಗಣ | — | √ |
| ಬಿ. ಶಿವಮೂರ್ತಿಶಾಸ್ತ್ರಿ | ಷ. ಮ. ಮು.ಮುನ್ನುಡಿ ಪು. ೫. | i) ಶಿಕಾರಿಪುರಶಾಸನೋಕ್ತ ಕೇಶವರಾಜ ದಂಡಾಧೀಶ. | × | — |
| ,, | ,, | ii) ಉದ್ಧೃತಶಾಸನದ ಪಂಪಾಂಬಿಕೆಯ ಪತಿ ಕೇಶವದೇವ ಅರ್ಥಾತ್ ಕೊಂಡಗುಳಿಕೇಶಿರಾಜನ ಪಿತಾಮಹ... | × | — |
| | | iii) ಅಬ್ಬಲೂರು ಶಾಸನಾಂತ್ಯದ ಕೇಶವರಾಜ ಚಮೂಪ | × | — |
| ಡಾ. ಎಂ. ಎಂ. ಕಲಬುರ್ಗಿ<br>ಪ್ರಾ. ಶಿವಾನಂದ<br>ಡಾ. ಬಿ. ವ್ಹಿ. ಮಲ್ಲಾಪುರ<br>ಡಾ. ಸಿದ್ಧಯ್ಯಪುರಾಣಿಕ | ಶಾ. ಶಿ. (ಪು. ೪೩)<br>ಪ್ರ. ಕ. (೪೮-೪)<br>ಶ. ಸ. (ಪು.೩೪)<br>ಶ. ಚ.— | ಮರಡೀಪುರ ಶಾಸನಮಧ್ಯದ ಕೇಶವರಾಜ ದಣ್ಣಾಯಕ ಮತ್ತು ಅಬ್ಬಲೂರು ಶಾಸನಮಧ್ಯದ ಕೇಶವರಾಜ. | — | √ |
| ಡಾ. ವಿ. ಶಿವಾನಂದ | ಪ್ರ. ಕ. ೪೮-೪ | ಕ್ರಿ. ಶ. ೧೧೦೭ರ ಕೊಂಡಗುಳಿ ಶಾಸನೋಕ್ತ ದಣ್ಣಾಯಕ ಕೇಶಿರಾಜರಸರು. | — | √ |
| ಡಾ. ಎಂ. ಎಂ. ಕಲಬುರ್ಗಿ<br>ಡಾ.ಎಂ. ಚಿದಾನಂದಮೂರ್ತಿ | ಚಿ. (ಪು. ೬೨೨)<br>ವ. ಸಾ. (ಪು. ೩೩) | ಕೊಂಡಗುಳಿಯ ಮತ್ತೊಂದು ಶಾಸನ (ಕ್ರಿ.ಶ.೧೧೩೨)ದ, ಶ್ರೀಮತ್ ಕೇಶಿಮಯ್ಯ ದಂಡನಾಯಕ...... | × | |

**ಕೊಂಡಗುಳಿ ಶಾಸನದ ಶೋಧನೆ:**

ಕೇಶಿರಾಜನನ್ನು ಅಧಿಕೃತವಾಗಿ ಶಾಸನೋಕ್ತ ಶರಣರ ಮಾಲಿಕೆಯಲ್ಲಿ ದಾಖಲೆಯಾಗಿಸುವ ಒಂದು ಅಪೂರ್ವ ಶಿಲಾ

3. ಕೊಂಡಗುಳಿ ಸ್ಥಳನಾಮವನ್ನು ಹರಿಹರಕವಿ ಅಲಂಕಾರಿಕವಾಗಿ ವಿಶ್ಲೇಷಿಸಿದ ರೀತಿ ತುಂಬ ಮನೋಹರವಾಗಿದೆ. 'ಭಕ್ತಿಯನೊಳಗು ಮಾಡಿ ಕೊಂಡ + ಅಗುಳಿ = ಕೊಂಡಗುಳಿ'-ಎಂದು ಕವಿ ಅದರ ನಿಷ್ಪತ್ತಿಕೊಡುತ್ತಾನೆ. 'ಕೊಂಡ' ಎಂದರೆ ಗುಪ್ತ (> ಕುಂದ); ಅದರ ನಿಮ್ನಪ್ರದೇಶ ತಗ್ಗು = ಕುಳಿ, ಇದರಿಂದ 'ಕೊಂಡಗುಳಿ' ಹೆಸರು ಬಂದಂತೆ ತೋರುತ್ತದೆ. ಕೊಂಡ (ತ) ಕುಂದ, ಕೊಂಡೆ (ತೆ) ಗುಪ್ತ. ಕುಜ್ = ಕುಣಿ. ತಗ್ಗು. Deccened ತೋ, ಪು. ೪೫೦, ೪೮೩, ಕೊಂಡಗುಳಿ > ಕೊಂಡಗೂಳಿ (ಬ.ಪು. ೨೬-೧೯).

ಶಾಸನ ನಮಗೆ ಕೊಂಡಗುಳಿಯಲ್ಲೇ ದೊರಕಿರುವುದು ಸುಕೃತವೆಂದೇ ಹೇಳಬೇಕು[4]. ಕ್ರಿ.ಶ. ೧೧೦೭ ರಲ್ಲಿ ಕಲ್ಯಾಣದ ಚಾಲುಕ್ಯ ದೊರೆ ೬ನೆಯ ವಿಕ್ರಮಾದಿತ್ಯನಾಳಿಕೆಯ ಅವಧಿಯಲ್ಲಿ ಅವನ ಮಹಾಪ್ರಧಾನವಾದ ಕೇಶಿರಾಜ ತನ್ನ ಇಷ್ಟದೈವವಾದ 'ಸೋಮೇಶ್ವರಲಿಂಗ'ದ ಹೆಸರಿನಲ್ಲಿ ಕಟ್ಟಿಸಿದ ಶಿವಾಲಯಕ್ಕೆ ದತ್ತಿ ಬಿಟ್ಟ ವಿಷಯ ಈ ಶಾಸನದಲ್ಲಿ ಉಲ್ಲೇಖಗೊಂಡಿದೆ. ಅದರ ಮುಖ್ಯ ಪಾಠವನ್ನು ಕೆಳಗೆ ಕೊಟ್ಟಿದೆ[5].

## 2nd Fragment

೧. ......ಕೊಣ್ಡಗುಳಿಯಲು ನಿಂಬ
೨. ಗಳ ಮಗ ೫ ಸ್ವಸ್ತಿ ಸಮಧಿಗತ ಪಞ್ಚ
೩. ಮಹಾಶಬ್ದ ಮಹಾಸಾಮನ್ತಾಧಿಪತಿ [ಮ]—
೪. ಮಹಾಪ್ರಚಣ್ಡ ದಣ್ಡನಾಯಕಂ ದುಷ್ಟ ವಿದ್ವಿಷ್ಟ
೫. ವಿಧೇಯಕ ವಾಜಿಕುಳಾರ್ಣ್ನವ ಪಾರಿಜಾತ
೬. ಸುಕವಿಶುಕಚೂತ ಬನ್ಧುವನ ವಸನ್ತ ವಚಶ್ರೀವಧೂ
೭. ಕಾನ್ತ ಸಾಹಿತ್ಯಸರೋರುಹ ಮಧುಬ್ರತ ಸ
೮. ತ್ಯಬ್ರತ ಹರಚರಣ ರಜೋರಂಜಿತೋತ್ತಮಾಂಗನ
೯. ಯ್ಯನಸಿಂಗ ನಾಮಾದಿ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಪ್ರ
೧೦. ಧಾನಂ ಹೇರಿತಾಳ ಸನ್ಧಿವಿಗ್ರಹಿ ದಣ್ಣಾಯಕಕೇಶಿರಾ
೧೧. ಜರಸರು ಶ್ರೀಶ್ರೀಚಾಲುಕ್ಯವಿಕ್ರಮ ವರ್ಷದ ೩೩ ನೇ
೧೨. ಯ ಸರ್ವಜಿತು ಸಂವತ್ಸರದ ಮಾರ್ಗಶಿರದಮವಾಸ್ಯೆ
೧೩. ಸೋಮವಾರದಂದಿನ ಸೂರ್ಯಗ್ರಹಣ ಪರ್ವ ನಿಮಿತ್ತದಲು
೧೪. ತಾವು ಮಾಡಿಸಿದ ಶಿವಾಲಯದ ಮೂಲಸ್ಥಾನದ
೧೫. ಶ್ರೀ ಸೋಮೇಶ್ವರದೇವರ್ಗೆ (ಮುಂದೆ ದತ್ತಿ ಬಿಟ್ಟ ವಿವರವಿದೆ).

ಮೇಲಿನ ಈ ಶಾಸನವು ಹರಿಹರಕವಿ ಬರೆದ ಕೇಶಿರಾಜ ದಣ್ಣಾಯಕರ ರಗಳೆಯ ನಾಯಕ ವ್ಯಕ್ತಿಗೂ ಶಾಸನೋಲ್ಲಿಖಿತ ವ್ಯಕ್ತಿ ಕೇಶಿರಾಜ ದಣ್ಣಾಯಕರಸರಿಗೂ ವ್ಯಕ್ತಿತ್ವದಲ್ಲಿ ಹೆಚ್ಚಿನ ಸಾಮ್ಯತೆಗಳನ್ನು ಕಲ್ಪಿಸಿದೆ.

ಇವೆರಡರ ಪರಸ್ಪರ ಸಾಮ್ಯಾಂಶಗಳನ್ನಿಲ್ಲಿ ಹೇಳಿದೆ :–

| **ಶಾಸನೋಕ್ತ ಕೇಶಿರಾಜ** | **ಹರಿಹರ ಕವಿಯ ಕೇಶಿರಾಜ** |
|---|---|
| ೧) ಹೆಸರು : ಕೇಶಿರಾಜ ದಣ್ಣಾಯಕ | ಕೇಶಿರಾಜ ದಣ್ಣಾಯಕ. |
| ೨) ಸ್ಥಳ : ಕೊಣ್ಡಗುಳಿಯಲು | ಕೊಂಡಗುಳಿಯಂತೆಸೆದು |
| ೩) ಇಷ್ಟದೈವ : ಸೋಮೇಶ್ವರದೇವರ್ಗೆ | ಪ್ರಾಣನಾಥಂ ತನಗೆ ಸೋಮನಾಥಂ |
| ೪) ಆಳರಸ : ತ್ರಿಭುವನಮಲ್ಲದೇವ | ಪೆರ್ಮಾಡಿರಾಯ[6] |
| ೫) ಕವಿತ್ವ : ಕಾವ್ಯ ಸಾಹಿತ್ಯ ಸರೋರುಹ | ನಿಚ್ಚಲೆಂಟುಂ ಪದ್ಯಂ ಸೋಮನಾಥಂಗೆ |
| ೬) ಶಿವಭಕ್ತಿ : ಹರಚರಣರಜೋರಂಜಿತೋತ್ತಮಾಂಗಂ | ಶಂಕರಸ್ತೋತ್ರದೊಳೆ ಬಾಳುತಂ |

ಇಲ್ಲಿ ಶಾಸನದಲ್ಲಿ ಮಾತ್ರ ದೊರೆಯುವ ಕೇಶಿರಾಜನ ಕುಲ–ಗೋತ್ರ ಹಾಗೂ ತಂದೆಯ ವಿಷಯವನ್ನು ಸಹ ಹೇಳಬಹುದು.

| | |
|---|---|
| ೭) ಕುಲಗೋತ್ರ : ವಾಜಿಕುಳಾರ್ಣವ ಪಾರಿಜಾತ | × |
| ೮) ತಂದೆ : ನಿಂಬಣಯ್ಯ[7] | × |

---

4. 'ಕೊಂಡಗುಳಿ' ಹೆಸರಿನ ಎರಡು ಊರುಗಳಿವೆ. ೧) ಜಾಡ ಕೊಂಡಗುಳಿ ೨) ಡೋಣಿ ಕೊಂಡಗುಳಿ. ನಮಗೆ ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಡೋಣಿ ಕೊಂಡಗುಳಿಯಲ್ಲಿ ಶಾಸನ ದೊರಕಿರುವದಾದರೂ ಕೇಶಿರಾಜನ ನೆಲೆಯೂರು ಈಗಿನ ಕಲಬುರ್ಗಿ ಜಿಲ್ಲೆಯ ಜೇವರಗಿ ತಾಲೂಕಿನ ಜಾಡಕೊಂಡಗುಳಿಯಾಗಿದೆಯೆಂಬುದಕ್ಕೆ ಅಲ್ಲಿರುವ 'ಕೇಶಿರಾಜನ ಗುಡಿ' ಹಾಗೂ ಅವನ ಆರಾಧ್ಯದೈವವಾದ 'ಸೋಮೇಶ್ವರ ಗುಡಿ'ಗಳಿರುವದು ಅಂತಃಪ್ರಮಾಣವಾಗಿದೆ. ಬಹುಶಃ ಇವೆರಡೂ ಕೇಶಿರಾಜನ ಕಾಲದಲ್ಲಿ ಒಂದೇ ಹೆಸರಿನಲ್ಲಿದ್ದು 'ಡೋಣಿ' ಹೆಸರಿನ ಕೊಂಡಗುಳಿ ಈ ಮೂಲ ಕೊಂಡಗುಳಿಯ ಅಧೀನ ಪ್ರದೇಶವೆನ್ನಿಸಿರಬೇಕು.
5. S. I. I. Vol. XX, No 69.
6. ರಾವಸಾಹೇಬ ಫ.ಗು. ಹಳಕಟ್ಟಿಯವರು ಚಾಳುಕ್ಯವಿಕ್ರಮಾದಿತ್ಯನಿಗೆ 'ಪೆರ್ಮಾಡಿರಾಯ' ಎಂಬ ಹೆಸರಿರುವದನ್ನು ಉಲ್ಲೇಖಿಸಿಯೂ ತರ್ದವಾಡಿಯನ್ನಾಳುತ್ತಿದ್ದ ಬಿಜ್ಜಳನ ತಂದೆ ಪೆರ್ಮಾಡಿಗೆ ಈ ಪೆರ್ಮಾಡಿರಾಯ ಸಂಬಂಧಿಕನಿರಬಹುದೆಂದು ವಿಚಾರ ಮಾಡಿದ್ದಾರೆ. (ಶಿವಾನುಭವ. ೧೩-೩) ಬಿ. ಶಿವಮೂರ್ತಿಶಾಸ್ತ್ರಿಗಳು ಈ ಪೆರ್ಮಾಡಿಯನ್ನು ಕಳಚೂರಿ ಮನೆತನದ ಪೆರ್ಮಾಡಿಗೇ ಸಂಬಂಧ ಕಲ್ಪಿಸಿದ್ದಾರೆ. (ಮಂ.ಮ.ಕಂ. ಪ್ರ. ೨೯) ಆದರೆ ಈ ಉಭಯರ ವಿಚಾರಗಳು ಸಂದೇಹಗ್ರಸ್ತವಾದುವು. ನಿಚ್ಚಳವಾಗಿ ಕೇಶಿರಾಜ ದಣ್ಣಾಯಕನು ಚಾಳುಕ್ಯ ವಿಕ್ರಮಾದಿತ್ಯನ ಕಾಲದವನೇ ಆಗಿದ್ದು ವಿಕ್ರಮ ದೊರೆಗೆ 'ಪೆರ್ಮಾಡಿ' ಎಂಬ ಬಿರುದಿದ್ದ ಸಂಗತಿಗಳನ್ನು ಚರಿತ್ರೆಕಾರರು ನಿರ್ಣಯಿಸಿದ್ದಾರೆ. 'He assumed the names of Kalivikrama and Permadiraya also'. E. H. D. by R. G. Bhandarkar. P.148 ಇದಕ್ಕೆ ಶಾಸನಗಳಲ್ಲಿ ದೊರಕುವ ಆಧಾರಗಳು. Epi. Ind. 13. P. 70; E. car. VII, SK.; E. car. XI. Dg. 140. E. car. IX BN. 142; E. Car. VIII, Sa. 1909; E.P. Ind. 13-70. ಮುಂ.
7. ಡಾ॥ ಎಂ. ಎಂ. ಕಲಬುರ್ಗಿಯವರು ಇದೇ ಶಾಸನದ ಪೂರ್ವ ಭಾಗದಲ್ಲಿ 'ನಿಂಬಣಯ್ಯ'ಗಳ ಮಗ ಎಂಬ ತ್ರುಟಿತ ಭಾಗಗಳನ್ನು ಸೇರಿಸಿ ಕೇಶಿರಾಜನ ತಂದೆ 'ನಿಂಬಣಯ್ಯ' ಎಂದಿದ್ದಾರೆ. (ಶಾ. ಶಿ. ಪು. ೪೩)

ಈ ಮೇಲಿನ ಸಾಮ್ಯಾಂಶಗಳಿಂದಾಗಿ ಕೊಂಡಗುಳಿ ಕೇಶಿರಾಜನ ಚರಿತ್ರೆಗೆ ಕೊಂಡಗುಳಿ ಶಿಲಾಶಾಸನವೊಂದೇ ಈಗ ತಿಳಿದ ಮಟ್ಟಿಗೆ ನಮಗೆ ಅಧಿಕೃತ ನೆಲೆಯಾಗುತ್ತದೆ.

**ಕೊಂಡಗುಳಿಯ ಇನ್ನೊಂದು ಶಾಸನ ?**

ಮೇಲೆ ಉಲ್ಲೇಖಿಸಿದ ಶಾಸನದ ಮೇಲಿಂದ ಕೇಶಿರಾಜ ಚಾಳುಕ್ಯವಿಕ್ರಮಾದಿತ್ಯನ ಮಹಾಪ್ರಧಾನನೂ ಅಲ್ಲದೆ ಶಿವ ಶರಣನೂ ಆಗಿದ್ದನೆಂಬ ಸಂಗತಿಗಳು ಉಪಷ್ಟಂಭಕವಾಗಿ ತಿಳಿದುಬರುತ್ತಿದ್ದರೆ, ಕೊಂಡಗುಳಿಯಲ್ಲೇ ದೊರಕಿರುವ ಶಾಸನವೊಂದ ರಲ್ಲಿ ಮತ್ತೆ ಇದೇ ಕೇಶಿರಾಜ ಕಾಣಿಸಿರುವನೆಂದು ಯಾವ ಸಕಾರಣಗಳೂ ಇಲ್ಲದೆ ಡಾ॥ ಎಂ. ಎಂ. ಕಲಬುರ್ಗಿ ಸಂಭಾವಿಸಿದ್ದಾರೆ. ಕೇಶಿರಾಜನ ವ್ಯಕ್ತಿತ್ವಕ್ಕೆ ಅವನ ಕಾಲ, ಮತ ವಿಚಾರಗಳಿಗೆ ಯಾವೊಂದೂ ದಿಕ್ಕಿನಲ್ಲಿ ಸಂಬಂಧಿಸಿರದ ಈ ಶಾಸನವನ್ನು ಅಂತಃ ಪ್ರಮಾಣಗಳಿಲ್ಲದಿದ್ದರೂ ಡಾ॥ ಎಂ. ಎಂ. ಕಲಬುರ್ಗಿ ಅವರು ಹೇಳಿರುವರೆಂದು ಡಾ॥ ಚಿದಾನಂದಮೂರ್ತಿಗಳೂ ಒಡಂಬಡು ತ್ತಾರೆ[8]. ಇಲ್ಲಿ ಕೊಂಡಗುಳಿಯಲ್ಲಿ ದೊರಕಿರುವ ಇವೆರಡೂ ಶಾಸನಗಳ ಅವಾಂತರಗಳನ್ನು ಸೂಕ್ಷ್ಮವಾಗಿ ನಾವು ಅರಿಯಬಹುದು.

| **ಕೇಶಿರಾಜಶರಣನಿಗೆ ಸಂಬಂಧಿಸಿರುವ ಕ್ರಿ.ಶ. ೧೧೦೭ರ ಕೊಂಡಗುಳಿ ಶಾಸನ** | | **ಕೊಂಡಗುಳಿಯ ಇನ್ನೊಂದು ಶಾಸನ** |
|---|---|---|
| ಕಾಲ–ಕ್ರಿ.ಶ. ೧೧೦೭ | : | ಕಾಲ. ಕ್ರಿ.ಶ. ೧೧೩೨ |
| ಆಳಿಕೆ–೬ನೆಯ ವಿಕ್ರಮಾದಿತ್ಯ | : | ಭೂಲೋಕಮಲ್ಲ ೩ನೆಯ ಸೋಮೇಶ್ವರ |
| ಇಷ್ಟದೇವತೆ–ಸೋಮನಾಥ | : | ಕೇಶವ |
| ದತ್ತಿ–ಸೋಮೇಶ್ವರ ಶಿವಾಲಯಕ್ಕೆ | : | ಊರಿನ ಬ್ರಾಹ್ಮಣರಿಗೆ ಅಧ್ಯಾಪನ ನಿಮಿತ್ತ |
| ಅಧಿಕಾರ–ಮಹಾಪ್ರಧಾನ ದಣ್ಣಾಯಕ[9] | : | ದಂಡನಾಯಕ[9] |
| ಹೆಸರು–ಕೇಶಿರಾಜರಸರು | : | ಕೇಶಿಮಯ್ಯ |

ಡಾ॥ ಎಂ.ಎಂ. ಕಲಬುರ್ಗಿಯವರು ಕೊಂಡಗುಳಿಯ ಇನ್ನೊಂದು ಶಾಸನವನ್ನು ಕೇಶಿರಾಜನಿಗೆ ಸಂಬಂಧಿಸುತ್ತ ಹೀಗೆ ಹೇಳುತ್ತಾರೆ : 'ತಮ್ಮ ಹೆಸರಿನ ಲಿಂಗಪ್ರತಿಷ್ಠೆಯಿಂದ ತಮಗೆ ದೇವತ್ವ ಪ್ರಾಪ್ತವಾಗುವದೆಂಬ ನಂಬಿಕೆಯಿದ್ದುದರಿಂದ ಸ್ವತಃ ಕೇಶಿರಾಜನೇ ಒಂದು ದೇವಾಲಯ ಕಟ್ಟಿಸಿ ಕೊಂಡಗುಳಿಯ ಮಹಾಜನಗಳು ಕೇಶಿರಾಜನ ಸಮ್ಮುಖದಲ್ಲಿ ದತ್ತಿ ನೀಡಿರ ಬೇಕು' (ಟಿ...ಪು. ೬೨೬) ಕೇಶಿರಾಜನ ಶರಣಚಾರಿತ್ರ್ಯಕ್ಕಾಗಲಿ ಅವನ ಇಷ್ಟದೈವತ್ವದ ನಿಷ್ಠೆಗಾಗಲಿ ಈ ಸಂಶೋಧಕರ ವಿಚಾರ ಎಷ್ಟೂ ಶೋಭೆ ತರಲಾರದು. ಹರಿಹರನ ಪ್ರಕಾರ ಕೇಶಿರಾಜನ ಇಷ್ಟದೈವ ಸೋಮನಾಥಲಿಂಗವಾದುದರಿಂದ ಕ್ರಿ.ಶ. ೧೧೦೭ರ ಶಾಸನದಲ್ಲಿ ಸೋಮೇಶ್ವರ ಶಿವಾಲಯವನ್ನು ಕಟ್ಟಿಸಿದ ವ್ಯಕ್ತಿ ಶಿವಶರಣ ಕೇಶಿರಾಜನಾಗುತ್ತಾನೆ. ಆದರೆ ತನ್ನ ಹೆಸರಿನಲ್ಲಿ ದೇವಾಲಯ ಕಟ್ಟಿಸಿ ಮಹಾಜನಗಳಿಂದ ಅದಕ್ಕೆ ದತ್ತಿಕೊಡಿಸುವ ಈ ಕೇಶಿಮಯ್ಯ ಅವನಿಂದ ಭಿನ್ನವ್ಯಕ್ತಿಯಾಗುತ್ತಾನೆ. ಡಾ॥ ಕಲಬುರ್ಗಿಯವರು ಉಲ್ಲೇಖಿಸುವ ಈ ಕೇಶಿಮಯ್ಯ ದಂಡನಾಯಕ 'ಕೇಶವದೇವರ ಭಕ್ತ'. 'ಅಗ್ರಹಾರ'ವೆನ್ನಿಸಿದ್ದ ಕೊಂಡ ಗುಳಿಯಲ್ಲಿ ಬ್ರಾಹ್ಮಣರಿಗೆ ಅಧ್ಯಾಪನ ನಿಮಿತ್ತವಾಗಿ ದತ್ತಿ ಬಿಡುವದರಿಂದ ಈತ ಬ್ರಾಹ್ಮಣನಾಗಿರಲೂಬಹುದು. ಕಾಲದ ದೃಷ್ಟಿ ಯಿಂದಲೂ ಸಹ ಕೊಂಡಗುಳಿ ಕೇಶಿರಾಜ ಕ್ರಿ. ಶ. ೧೧೩೨ರಷ್ಟು ಮುಂದೆ ಸರಿಯಲಾರ. ವಚನಕಾರ ಜೇಡರದಾಸಿಮಯ್ಯನಿಗೆ ಪೂರ್ವಾಧಾರವಾಗಿ ನಿಲ್ಲುವ ಏಕೈಕ ಶಾಸನ ಈಗ ಉಪಲಬ್ಧವಿರುವ ಮಟ್ಟಿಗೆ ಗೊಬ್ಬೂರಿನದು[10]. ಇದರ ಕಾಲ ಕ್ರಿ.ಶ.೧೧೪೮. ಜೇಡರದಾಸಿಮಯ್ಯ 'ತೊರೆಯೊಳಗೆ ಬಿದ್ದ ಲಿಂಗ ಕರೆದರೆ ಬಂದುದು ಕರಸ್ಥಳಕ್ಕೆ'ಎಂದು ತನ್ನದೊಂದು ವಚನದಲ್ಲಿ ಕೊಂಡಗುಳಿ ಕೇಶಿರಾಜ ಮೆರೆದ ಪವಾಡವನ್ನು ಸೂಚ್ಯವಾಗಿ ಉಲ್ಲೇಖಿಸುವದರಿಂದ ಕೇಶಿರಾಜ ವಿಕ್ರಮಾದಿತ್ಯನ ಕಾಲದಲ್ಲೇ ಇಷ್ಟು ಪ್ರಸಿದ್ಧ ನಾಗಲು ಒಂದಿಷ್ಟು ಸಮಯ ಬೇಕಾಗುತ್ತದೆ. ಭೂಲೋಕಮಲ್ಲನ ಕಾಲದ ಈ ಕೇಶಿಮಯ್ಯನೇ ಅವನಾಗಿದ್ದರೆ ನಿಚ್ಚಳವಾಗಿ ಜೇಡರದಾಸಿಮಯ್ಯ ಅವನ ಹೆಸರನ್ನು ಹೇಳದೆ ಬಿಡುತ್ತಿರಲಿಲ್ಲ. ಮೇಲಾಗಿ ಜೇಡರದಾಸಿಮಯ್ಯನಿಗೆ ಈತ ಇಷ್ಟು ಸಮೀಪದವ ನಾದರೆ ದಾಸಿಮಯ್ಯನಂತೆ ಕೇಶಿರಾಜನೂ ವಚನ ರಚನೆಗೆ ಮೊದಲು ಮಾಡುತ್ತಿದ್ದ. ಈವರೆಗೆ ನಮಗೆ ಕೇಶಿರಾಜನ ಯಾವೊಂದೂ

---

8. ವ ಸಾ.ಪು. ೨೩

9. 'ಮಹಾಪ್ರಧಾನ' ಮತ್ತು 'ದಂಡನಾಯಕ' ಪದವಿಗಳು ಹೆಚ್ಚಾಗಿ ಒಬ್ಬನಿಗೇ ಅನ್ವಯಿಸುತ್ತವೆ' ಎಂದಿರುವ ಡಾ॥ ಬಿ.ವ್ಹಿ. ಮಲ್ಲಾಪುರ ಅವರ ವಿಚಾರ ಸರಿ ಎನ್ನಿಸದು. (ಶ.ಸ.ಪು. ೨೧). 'ಮಹಾಪ್ರಧಾನ'–The great Minister or chief Minister ದಂಡನಾಯಕ—A—Commander, Judge or Magistrate—Inscriptional Glossory of Andhra Pradesh, P. 135, 230 ಕೊಂಡಗುಳಿ ಕೇಶಿರಾಜ ಮಹಾಪ್ರಧಾನಸ್ಥಾನದಲ್ಲಿರುವುದರಿಂದ ದಂಡನಾಯಕಾಧಿಕಾರವನ್ನೂ ನಿರ್ವಹಿಸಲು ಸಾಧ್ಯ. ಆದರೆ ಕೇಶಿಮಯ್ಯ ಕೇವಲ ದಂಡನಾಯಕನಾದುದರಿಂದ ಮಹಾಪ್ರಧಾನ ಅಲ್ಲ. ಆದುದರಿಂದ ಇವರಿಬ್ಬರೂ ವ್ಯಕ್ತಿಗಳು ಬೇರೆ ಬೇರೆ ಎಂಬುದು ಸ್ಪಷ್ಟ.

10. ಕ್ರಿ.ಶ. ೧೦೪೦ ರಲ್ಲಿದ್ದ ವ್ಯಕ್ತಿ ದೇವರದಾಸಿಮಯ್ಯನೇ ಹೊರತು ಜೇಡರದಾಸಿಮಯ್ಯ ಅಲ್ಲ. ದೇವರದಾಸಿಮಯ್ಯ ವಚನಕಾರನಲ್ಲ. ವಚನ ಕಾರ ದಾಸಿಮಯ್ಯ ಈಗ ಜೇಡರದಾಸಿಮಯ್ಯ ಎಂಬುದು ನಿರ್ಣೀತವಾದ ವಿಷಯ.

ವಚನಗಳು ದೊರೆತಿಲ್ಲ. ಇವೆಲ್ಲ ಕಾರಣಗಳಿಂದ ಕೊಂಡಗುಳಿ ಕೇಶಿರಾಜನನ್ನು ಪ್ರಸ್ತಾಪಿಸುವ ಶಾಸನ ಕ್ರಿ.ಶ. ೧೧೦೭ರದು ಮಾತ್ರ ಎಂದಿಟ್ಟುಕೊಳ್ಳಬಹುದು.

**ಕೇಶಿರಾಜನ ನೂತನ ಕೃತಿಗಳು :**

ಕೊಂಡಗುಳಿ ಕೇಶಿರಾಜ, ಕವಿಚರಿತೆಕಾರರು ಹೇಳುಂತೆ 'ಇವನು ವಚನಗಳನ್ನು ಬರೆದಿರುವಂತೆ ತಿಳಿಯುತ್ತದೆ' ಎಂದಿದ್ದರೂ[11] ಇವನ ವಚನಗಳು ನಮಗೆ ದೊರಕುವದಿಲ್ಲ. ಪಾಲ್ಕುರಿಕೆ ಸೋಮನಾಥ ಕೇಶಿರಾಜನು ಪುರಾತನ ಗೀತಗಳನ್ನು ಹಾಡುತ್ತಿದ್ದನೆಂದು ಉಲ್ಲೇಖಿಸುವನು. ಹರಿಹರ ಕವಿ ಸಹ 'ನೀಡುವ ಪುರಾತನರ ಗೀತದೊಳ್ಕೊರಗುತಂ' ಎಂದಿದ್ದರೂ[12] ಈ ಪುರಾತನ ಗೀತೆ ವಚನವಾಗಿರದೆ, ತಮಿಳುನಾಡಿನ ಶೈವಶರಣರನ್ನು 'ಪುರಾತನ'ರೇ ಎಂಬುದರಿಂದ ಅವರ ಭಕ್ತಿ ಕಥನದ ಬಣ್ಣನೆಯೇ ಇಲ್ಲಿ 'ಪಾಡು' ಆಗಿರಲು ಸಾಧ್ಯ. ಡಾ॥ ಎಲ್. ಬಸವರಾಜು ಅವರು ಕೇಶಿರಾಜನು ವಚನ ಅಷ್ಟಕ ಸ್ತೋತ್ರ ರೂಪದ ಸಾಹಿತ್ಯವನ್ನು ಬೆಳಗಿದವರಲ್ಲಿ ಮೊದಲಿಗ ಎನ್ನುತ್ತಾರೆ.[13]

ಆದರೆ ಇದುವರೆಗೆ ದೊರೆತ ಮತ್ತು ಇತ್ತೀಚೆಗೆ ದೊರಕಿರುವ ಹಲವು ಕೃತಿಗಳನ್ನವಲೋಕಿಸಿದರೆ ಇವನ ಕೃತಿಗಳ ಸ್ವರೂಪವೇ ನಮಗೆ ಭಿನ್ನರೂಪದ್ದೆನಿಸುತ್ತದೆ. ಇಲ್ಲಿ ಇದುವರೆಗೆ ಲಭ್ಯವಾದ ಕೊಂಡಗುಳಿ ಕೇಶಿರಾಜನ ಕೃತಿಗಳ ನಾಮಪಟ್ಟಿಕೆ ಇಂತಿದೆ :—

**ಕೇಶಿರಾಜನ ಕೃತಿಗಳ ಸಂಶೋಧನ–ಸಂಪಾದನ–ಪ್ರಕಟನ ವಿವರ :**

| ನಂ. | ಕೃತಿಯ ಹೆಸರು | ಸಂಪಾದಕರು | ಪ್ರಕಟನ ವಿವರ | ಗ್ರಂಥಸ್ವರೂಪ |
|---|---|---|---|---|
| 1A. | ಷಡಕ್ಷರ ಕಂದ | ಬಿ. ಬಸವಾರಾಧ್ಯ | ಕ್ರಿ. ಶ. ೧೯೧೩ | ೧೧೦ ಕಂದಗಳು-ಶತಕ. |
| 1B. | ಮಂತ್ರಮಹತ್ವದ ಕಂದ. (ಮೇಲಿನ ಕೃತಿಯ ಪರ್ಯಾಯ ಹೆಸರು) | ಬಿ. ಶಿವಮೂರ್ತಿಶಾಸ್ತ್ರಿ | ೧೯೫೪, ಶರಣಸಾಹಿತ್ಯ ಗ್ರಂಥಮಾಲೆ, ಬೆಂಗಳೂರು. | ೧೧೦ ವ್ಯಾಖ್ಯಾನ ಸಮೇತ. |
| 2A. | ಲಿಂಗ ಮಹತ್ವದ ಕಂದ-೧ | ಡಾ॥ ಎಂ. ಎಂ. ಕಲಬುರ್ಗಿ | ೧೯೬೮, ಪ್ರಬುದ್ಧ ಕರ್ನಾಟಕ, ಮೈಸೂರು. | ೧೦೦ ಕಂದಗಳು-ಶತಕ. |
| 2B. | ಲಿಂಗ ಸ್ತೋತ್ರದ ಕಂದ-೨ | ,, ,, | ಚಿತ್ರಭೆ, ಹುಬ್ಬಳ್ಳಿ. | ೧೦೮ ಕಂದಗಳು-ಶತಕ. |
| 3. | ನವರತ್ನಮಾಲೆ | ಡಾ॥ ವೀರಣ್ಣರಾಜೂರ | ಕರ್ನಾಟಕ ಭಾರತಿ ೯-೯ (೧೯೭೭). | ೯ ಸ್ರಗ್ಧರಾವೃತ್ತಗಳು. |
| 4. | ಶೀಲಸಂಪಾದನ ಕಂದ | ಜಿ. ಎಂ. ಶಿವಲಿಂಗಯ್ಯ | ಸಾಧನ ೭–೨ ಬೆಂಗಳೂರು ವಿ. ವಿ. (೧೯೭೮). | ೧೦೧ ಕಂದಗಳು-ಶತಕ. |

**ನಿರ್ಣೀತ ಸಂಗತಿಗಳು :**

೧) ಕೇಶಿರಾಜನ ಜೀವನ–ಕಾಲ ವಿಚಾರದಲ್ಲಿ ದೀಪಸ್ತಂಭವಾಗಿ ನಿಂತಿರುವ ಶಿಲಾಶಾಸನ ಕ್ರಿ.ಶ. ೧೧೦೭ರ ಚಾಳುಕ್ಯ ವಿಕ್ರಮಾದಿತ್ಯನ ಕಾಲದ ಕೊಂಡಗುಳಿಯದು.

೨) ಕೇಶಿರಾಜ ಬಸವಪೂರ್ವಕಾಲೀನನಾದ ವೀರಶೈವ ಜನಾಂಗದ ಮೊದಲ ಮಹಾಮಂತ್ರಿ ಮತ್ತು ಶಿವಶರಣ.

೩) ಜೇಡರದಾಸಿಮಯ್ಯನಿಗಿಂತ ಪೂರ್ವದಲ್ಲೇ ವೀರಶೈವಸಾಹಿತ್ಯವನ್ನು ಸೃಷ್ಟಿಸಿದವರಲ್ಲಿ ಮೊದಲಿಗ.

೪) ವೀರಶೈವ ಕವಿಗಳಲ್ಲಿ, ಮುಖ್ಯವಾಗಿ ಶತಕ ಕವಿಗಳಲ್ಲಿ, ಮೊದಲಿಗ.

11. ಕ. ಚ. ಭಾ. I. ಪು. ೧೮೭ 12. ಕೇ. ದ. ರ. ಪರಿಚ್ಛೇದ. ೧

13. ಕೇಶಿರಾಜ ದಣ್ಣಾಯಕರ ರಗಳೆಯಲ್ಲಿ ಹರಿಹರ ಕವಿ ಕೇಶಿರಾಜ ಬರೆದಿರಬಹುದಾದ ಆರು ವಚನಗಳನ್ನೋ ಪದ್ಯಗಳನ್ನೋ ಉಲ್ಲೇಖಿಸಿದಂತಿದೆ. (ಅ. ವ. ಚಂ. ಪು. ೫) ಆದರೆ ಇವನ್ನು ಲೇಖಕರು ನಿರ್ಣಯ ಮಾಡಿ ಹೇಳಿಲ್ಲ. ನಿತ್ಯವೂ ೮ ಪದ್ಯಗಳನ್ನು ಬರೆದು ಸೋಮನಾಥನಿಗರ್ಪಿಸುವ ನೇಮವಿಟ್ಟುಕೊಂಡಿದ್ದ ಕೇಶಿರಾಜ ಅಷ್ಟಕ ರೂಪದ ಸಾಹಿತ್ಯವನ್ನು ನಿರ್ಮಿಸಿರಬೇಕು ಎಂದು ಡಾ॥ ಬಸವರಾಜು ಹೇಳಿದ್ದರೂ ಸಹ ನಮಗೆ ಈತನಕ ಕೇಶಿರಾಜ ಲಿಖಿತ ಅಷ್ಟಕ ದೊರೆತಿಲ್ಲ. ಅಲ್ಲದೆ ಹರಿಹರ ಕವಿ ಸಹ 'ಅಷ್ಟಕ'ವೆಂಬ ಪರಿಭಾಷೆಯನ್ನೂ ಅಲ್ಲಿ ಪ್ರಯೋಗಿಸಿಲ್ಲ. ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಶಾಂತಲಿಂಗ ದೇಶಿಕ (ಕ್ರಿ. ಶ. ೧೭ ನೆಯ ಶತಮಾನ) ಮಾತ್ರ ಕೇಶಿರಾಜ ಈ ಸಾಹಿತ್ಯ ಪ್ರಕಾರಗಳಿಗೆಲ್ಲ ಕರ್ತನಾಗಿದ್ದ ಎಂದಿದ್ದಾನೆ.

೫) ಸಂದಿಗ್ಧಪೂರ್ಣ ಕಾಲದ[14] (ಕ್ರಿ.ಶ. ೧೦೭೦) ನಾಗವರ್ಮಾಚಾರ್ಯನ 'ಚಂದ್ರಚೂಡಾಮಣಿ'ಶತಕ'ವನ್ನು ಬಿಟ್ಟರೆ ಕೊಂಡಗುಳಿ ಕೇಶಿರಾಜನು ರಚಿಸಿದ ಕಂದ ಶತಕಗಳೇ ಕನ್ನಡಕ್ಕೆ ಮೊದಲ ಕೊಡುಗೆಯಾಗುತ್ತವೆ[15].

೬) ಅಷ್ಟಕ ಅಥವ ಸ್ತೋತ್ರರೂಪದ ಭಾವಪ್ರಧಾನ ಸಾಹಿತ್ಯಕ್ಕೆ ಸೈಗೊಟ್ಟ ಶಿವಮಾರನ (ಕ್ರಿ.ಶ. ೮೦೦) ಗಜ ಶಾಸ್ತ್ರ ಹಾಗೂ ಮೌಕ್ತಿಕ ಕವಿಯ (ಕ್ರಿ.ಶ. ೧೧೧೨) ಚಂದ್ರನಾಥಾಷ್ಟಕವನ್ನು ಬಿಟ್ಟರೆ ಕೊಂಡಗುಳಿ ಕೇಶಿರಾಜನ 'ನವರತ್ನ ಮಾಲಿಕೆ' ಎಂಬ ಸ್ತೋತ್ರರೂಪದ ವಿನೂತನ ಕೃತಿ ಸಾಹಿತ್ಯಚರಿತ್ರೆಯಲ್ಲಿ ಅತ್ಯಂತ ಪ್ರಾಚೀನವೆನ್ನಿಸುತ್ತದೆ.

**ಅನುಬಂಧ :**

ಕೊಂಡಗುಳಿ ಕೇಶಿರಾಜನ ಎಲ್ಲ ಕೃತಿಗಳ ಒಂದೊಂದು ಪದ್ಯವನ್ನು ಅವನ ಶೈಲಿ, ವಸ್ತು ವಿಚಾರಗಳ ಅಧ್ಯಯನಕ್ಕೆ ಅನುಕೂಲವಾಗಬಹುದೆಂದು ಇಲ್ಲಿ ಅನುಬಂಧವಲ್ಲಿ ಕೊಟ್ಟಿದೆ.

**ಷಡಕ್ಷರ ಮಂತ್ರ ಮಹತ್ವದ ಕಂದ :**

ಆನು ಕವಿಯಾನು ಸಮಗುಣಿ। ಯಾನು ಮಹಾದಾನಿ ಸಕಲವಿದ್ಯಾನಿಪುಣಂ
ಆನೆಂಬುದಳಿದು ಪರವರ। ಜ್ಞಾನಾತ್ಮಕನೋಂ ಶಿವಃ ಶಿವಾಯೆಂಬ ಪದಂ—೮೩

**ಲಿಂಗಮಹತ್ವದ ಕಂದ :**

ಅಂಗೈಯೊಳಾಲಿಕಲ್ಲಂ। ಪಿಂಗದೆ ನಡೆ ನೋಡೆ ನೋಡೆ ಕರಗುವ ತೆಱದಿಂ
ಲಿಂಗವ ನೋಡಿ ಮತ್ತ। ವಾಂಗಂ ನೆಱೆಕರಗಿ ಕೊಱಗುತೆಂದಿರ್ದಪೆನೋ—೫೧

**ನವರತ್ನಮಾಲೆ :**

ತಿಲದೊಳ್ತೈಲಂ ಮಹೀಜ ಪ್ರಕರದೊಳನಲಂ ಕ್ಷೀರದೊಳ್ಸರ್ಪಿರ್ಭೂತಂ
ಗಳೊಳೆಲ್ಲಾ ಭೂತತಂತ್ರಗಳೊಳೆಸೆವ ಸಿತೋರ್ಪಾತನಂ ಸೂಕ್ಷ್ಮನಂ ನಿ
ರ್ಮಳನಂ ನಿರ್ಭೇದ್ಯನಂ ನಿಃಕಳನನು ಸಮನಸ್ಯನಂ ಭಕ್ತವಾಂಛೋ
ತ್ಪ್ರಳಕತ್ಸ್ವರ್ಗಿಜನಂ ಕಂಡೆರ್ದೆದಣಿದು ಕುಳಿರ್ಕೊಂಡಿತೆನ್ನಂತರಂಗಂ ॥—೯

**ಶೀಲ ಸಂಪಾದನ ಶತಕ :**

ಶಿವಕುಲವೆ ಭಕ್ತನೆಂದು। ಶಿವಭಕ್ತರೆ ತನಗೆ ತಂದೆತಾಯಿಗಳೆಂದು
ಶಿವಭಕ್ತಿಪಥವಿದೆಂದು। ಶಿವನಾಯತವಾಗೆಯಿಪ್ಪತ್ತೊಂಬತ್ತೆಂದುಂ ।

**ಸಂದರ್ಭ ಗ್ರಂಥಗಳು ಹಾಗೂ ಅವುಗಳ ಸಂಕ್ಷೇಪ ವಿವರಣೆ:**


೧. ಕ. ಚ. ಭಾಗ I. : ಕವಿಚರಿತೆ ಭಾಗ. I.-ಆರ್. ನರಸಿಂಹಾಚಾರ್.
೨. ಶ. ಮ. ದ. : ಶಬ್ದಮಣಿದರ್ಪಣ-ಕೇಶಿರಾಜ (ಡಿ. ಎಲ್. ಎನ್. ಸಂಪಾದಿತ)
೩. ಗ. ಸ. ನಾ. : ಗಣಸಹಸ್ರನಾಮ-ಪಾಲ್ಕುರಿಕೆ ಸೋಮನಾಥ.
೪. ಕೇ. ದ. ರ. : ಕೇಶಿರಾಜ ದಣ್ಣಾಯಕರ ರಗಳೆ -ಹರಿಹರ.
೫. ಷ. ಮಂ. ಮ. : ಷಡಕ್ಷರ ಮಂತ್ರ ಮಹಿಮೆ -ಸಂ. ಬಿ. ಶಿವಮೂರ್ತಿ ಶಾಸ್ತ್ರಿ.
೬. ಶಾ. ಶಿ. : ಶಾಸನಗಳಲ್ಲಿ ಶಿವಶರಣರು -ಡಾ॥ ಎಂ. ಎಂ. ಕಲಬುರ್ಗಿ.
೭. ಶಿ. ಚ. : ಶಿವಶರಣರ ಚರಿತ್ರೆಗಳು ರಾ॥ ಸಾ॥ ಫ. ಗು. ಹಳಕಟ್ಟಿ.
೮. ಚಿ. : ಚಿತ್ತಘೆ -ಪ್ರ. ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ.
೯. ಶ. ಸ. : ಶರಣಸರೋಜ -ಡಾ॥ ಬಿ. ವ್ಹಿ. ಮಲ್ಲಾಪುರ.
೧೦. ಪ್ರ. ಕ. : ಪ್ರಬುದ್ಧ ಕರ್ನಾಟಕ -ಮೈ. ವಿ. ವಿ. ಮೈಸೂರು
೧೧. ವ. ಸಾ. : ವಚನ ಸಾಹಿತ್ಯ -ಡಾ॥ ಎಂ. ಚಿದಾನಂದಮೂರ್ತಿ
೧೨. ಅ. ವ. ಚಂ. : ಅಲ್ಲಮನ ವಚನ ಚಂದ್ರಿಕೆ -ಸಂ. ಡಾ॥ ಎಲ್. ಬಸವರಾಜು
೧೩. ಪ್ರಾ. ಕ. ಸಾ. ರೂ. : ಪ್ರಾಚೀನ ಕನ್ನಡ ಸಾಹಿತ್ಯದ ರೂಪಗಳು -ಡಾ॥ ರಂ.ಶ್ರೀ. ಮುಗಳಿ


14. ಸಿ. ಮಹಾದೇವಪ್ಪನವರು ನಾಗವರ್ಮಾಚಾರ್ಯನ ಕಾಲ ಕೊಂಡಗುಳಿ ಕೇಶಿರಾಜನಿಗಿಂತ ಮೊದಲೇನೂ ಅಲ್ಲವೆನ್ನುತ್ತಾರೆ. ಶಂಕರ ಶತಕ, ಪೀಠಿಕೆ.

15. ಡಾ॥ ರಂ. ಶ್ರೀ. ಮುಗಳಿ ಅವರು ಕೊಂಡಗುಳಿ ಕೇಶೀರಾಜ ಷಡಕ್ಷರ ಮಾತ್ರಿತರ ಕಂದಗಳು ಶತಕಗಳೆಂದು ಕರೆದಿಲ್ಲ' ಎಂದಿದ್ದಾರೆ. (ಪ್ರಾ.ಕ. ಸಾ.ರೂ.ಪು. ೧೦೦೭. ಆದರೆ ಈ ವಿಚಾರ ಸಮಂಜಸವಾಗದು. ಮಕುಟ ಲಕ್ಷಣವಿದ್ದು, ಭಕ್ತಿ, ತತ್ತ್ವನೀತಿಗೆ ಸಂಬಂಧಿಸಿ ೯೦ ಕ್ಕಿಂತ ಕಡಮೆ ೧೩೮ ಕ್ಕಿಂತ ಹೆಚ್ಚಿನ ಪದ್ಯಗಳುಳ್ಳ (ಈಗ ದೊರೆತಿರುವ ಶತಕ ಪದ್ಯಗಳ ಸಂಖ್ಯಾಧಾರದ ಮೇಲೆ) ವೃತ್ತ, ಕಂದ, ಸಾಂಗತ್ಯ, ರಗಳೆ, ಷಟ್ಪದಿ ಮೊದಲಾದ ಛಂದೋಮಾಧ್ಯಮದಲ್ಲಿರುವ ಎಲ್ಲ ಕೃತಿಗಳನ್ನು ನಾವು ನಿಸ್ಸಂದಿಗ್ಧವಾಗಿ ಶತಕಗಳೆನ್ನಬಹುದು.

೧೪. ಶ. ಚ. : ಶರಣಚರಿತಾಮೃತ -ಡಾ॥ ಸಿದ್ಧಯ್ಯ ಪುರಾಣಿಕ

೧೫. ಭೈ. ಕಾ. ಕ. ಸೂ.ರ. : ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ -ಶಾಂತಲಿಂಗ ದೇಶಿಕ.

೧೬. ಅ. ಶಾ. : ಅಬ್ಬಲೂರು ಶಾಸನ.

೧೭. ಸಾ. : ಸಾಧನೆ -ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೮. ಕ. ಭಾ. : ಕರ್ನಾಟಕ ಭಾರತಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೯. ಶಿ. ಕ. ರ. ಕೋ. : ಶಿವಶರಣ ಕಥಾರತ್ನಕೋಶ - ತ. ಸು. ಶಾಮರಾಯ

೨೦. ಶಂ. ಶ. : ಶಂಕರ ಶತಕ -ಸಿ. ಮಹಾದೇದಪ್ಪ.

೨೧. ಕಿ. ಕೋ. : ಕಿಟೆಲ್ ಕೋಶ - ಪ್ರ. ಮದ್ರಾಸ ವಿಶ್ವವಿದ್ಯಾಲಯ, ಮದ್ರಾಸ.

೨೨. ಬ. ಪು. : ಬಸವ ಪುರಾಣ -ಮುರುಘಾಮಠ ಪ್ರಕಾಶನ, ಧಾರವಾಡ.

1. Ep. Ind. : Epigraphia India.
2. E. Car. : Epigraphia Carnatica
3. E. H. D. : Early History of Deccan -by R. G. Bhandarkar.
4. S. K. H. : Sources of Karnataka History -by S. Srikantha Shastri.
5. S. I. I. : South Indian Inscriptions -Ed. by Dr. G. S. Gai.
6. I. G. A : Inscriptional Glossory of Andhra Pradesh -Pub. by Andhra Sahitya Academy, Hyderabad

## ಜೇಡರದಾಸಿಮಯ್ಯ

—ಆರ್.ರಾಚಪ್ಪ

ವಚನ ಸಾಹಿತ್ಯ ಅಂತಸ್ಸತ್ವ ಹಾಗೂ ಬಾಹ್ಯರೂಪಗಳೆರಡರಲ್ಲಿಯೂ ವಿಶಿಷ್ಟತೆಯನ್ನು ಪಡೆದಿದೆ. ಇದಕ್ಕೆ ಸಂವಾದಿಯಾದ ಸಾಹಿತ್ಯ ಭಾರತೀಯ ಸಾಹಿತ್ಯದಲ್ಲಿಯ ಮತ್ತೊಂದು ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಜೀವನಪೂರ್ಣ ದೃಷ್ಟಿಯನ್ನು ಮನಗಂಡು ಮನುಷ್ಯನ ಸಕಲ ಶಕ್ತಿಗಳ ವಿಕಾಸಕ್ಕೆ ಸಹಾಯವಾಗುವ ಮಾರ್ಗವನ್ನು ನಿರ್ಮಿಸುವ ಘನ ಉದ್ದೇಶ ವಚನಕಾರರದಾಗಿದ್ದಿತು. ಬುದ್ಧ, ಚೈತನ್ಯ, ಕಬೀರ್, ಆಳ್ವಾರರು, ನಾಯನಾರರೇ ಮೊದಲಾದ ಸಾಧಕರು ಸಗುಣ–ನಿರ್ಗುಣ ಭಕ್ತಿ ಸಾಧನೆಯನ್ನು ಮಾಡಿದಂತೆ ವಚನಕಾರರು ತಮ್ಮದೇ ಆದ ನಿಲವನ್ನು ತಳೆದು ಮಾನವನ ಸರ್ವಮುಖ ವಿಕಾಸಕ್ಕೆ ಶ್ರಮಿಸಿದರು. ತಮ್ಮ ಕಾಲದವರೆಗೆ ಜನರಲ್ಲಿ ಬೇರೂರಿದ್ದ ಅಂಧಶ್ರದ್ಧೆ, ಗೊಡ್ಡುಸಂಪ್ರದಾಯಗಳನ್ನು 'ಕ್ರಾಂತಿ' ಎಂಬ ಸಾರಣೆಯಿಂದ ನಿವಾರಿಸಲು ಯತ್ನಿಸಿದರು.

'ಕ್ರಾಂತಿ' ಎಂದಾಗ 'ಶೋಷಣೆಯ ಮಾಧ್ಯಮಗಳನ್ನು ಒಡಿದು ನಾಶಗೊಳಿಸಿ ಅವುಗಳನ್ನು ನಂಬಿದವರನ್ನು ಪರಿವರ್ತಿಸುವುದು' ಎಂದು ಅರ್ಥೈಸುವುದು ಸರಿಯಾದ ಕ್ರಮ. ಇದು ಜೀವನದ ಎಲ್ಲ ರಂಗಗಳನ್ನು ಎಲ್ಲಾ ಹಂತಗಳಲ್ಲಿ ಪರಿಣಾಮಕಾರಿಯಾಗಿ ವ್ಯಾಪಿಸುತ್ತದೆ. ಕೊಳೆಯನ್ನು ನಿವಾರಿಸಿ ವಿಚಾರದ ಬೆಳೆ ಬೆಳೆಯಲು ಸಹಾಯವಾಗುತ್ತದೆ. ಕ್ರಾಂತಿಯ ಬಗೆಗೆ ವಿಲ್ ಡ್ಯೂರಂಟ್ 'It is precipitated result of accumalated wrongs'[1] ಎಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾನೆ. ಸಮಾಜದ ಪ್ರಗತಿಗೆ ಅಡ್ಡಿಯಾಗಬಹುದಾದ ತೊಡಕುಗಳು ಬೆಳೆದಂತೆಲ್ಲಾ ಅವುಗಳನ್ನು ನಿವಾರಿಸಲು ಈ ಕ್ರಾಂತಿ ಅವಶ್ಯಕ. ಈ ಅರ್ಥದಲ್ಲಿ ವಚನಕಾರರ ಸಾಧನೆಯನ್ನು 'ಕ್ರಾಂತಿ' ಎಂದು ಕರೆಯಲಾಗಿದೆ. ಕ್ರಾಂತಿ ಸಾಮೂಹಿಕ ಸಾಧನೆಯಾದರೂ ಅದನ್ನು ರೂಪಿಸಲು ಒಬ್ಬ ಸಮರ್ಥನಾಯಕ ಬೇಕಾಗುತ್ತಾನೆ. ವಚನಕಾರರ ಶರಣರ ಕ್ರಾಂತಿಯ ನೇತಾರನಾಗಿ ಬಸವಣ್ಣ ಜನಿಸಿಬಂದ.

ವಚನಕಾರರ ಕಾಲಕ್ಕೆ ಕರ್ನಾಟಕದಲ್ಲಿ ಕಾಪಾಲಿಕ ಪಂಥದಂತಹ ನಾಮಪಂಥಗಳು ಉಗ್ರಜೀವನ ಕ್ರಮವನ್ನು ಅನುಸರಿಸುತ್ತಾ ಸಮಾಜದಲ್ಲಿ ಗೊಂದಲವನ್ನುಂಟುಮಾಡಿದ್ದುವು. ಕ್ಷುದ್ರದೇವತೆಗಳ ಉಪಾಸನೆಯು ಪ್ರಮುಖವಾಗಿದ್ದು. ನಿಜವಾದ ದೇವರ ಕಲ್ಪನೆಯೇ ಇಲ್ಲವಾಗಿತ್ತು. ಜ್ಯೋತಿಷ್ಯ, ನೈಮಿತ್ತಿಕಗಳು, ಜನಜೀವನದಲ್ಲಿ ಅಂಧಶ್ರದ್ಧೆಗಳನ್ನುಂಟುಮಾಡಿದ್ದುವು. ಕರ್ಮ (ಕೆಲಸ)ದಲ್ಲಿ ಮೇಲು ಕೀಳು ಭಾವನೆಗಳು ಪ್ರಚಲಿತವಾಗಿ ಅದರ ಆಧಾರದ ಮೇಲೆ ಮನುಷ್ಯನ ಅಳತೆಯಾಗುತ್ತಿತ್ತು. ವರ್ಣವರ್ಗಗಳು ನಿಜವಾದ ಮಾನವೀಯತೆಯ ಭಾವನೆಗೆ ಬೆನ್ನೀರನ್ನೆರೆದಿದ್ದುವು. ಯಾವ ದೃಷ್ಟಿಯಿಂದ ನೋಡಿದರೂ ಜನ

1. Will Durant : 'The story of philosophy'

ಜೀವನ ಕ್ಷುದ್ರವಾಗಿತ್ತು. ಇಂತಹ ಅಸ್ತವ್ಯಸ್ತ, ಅನಿಶ್ಚಿತ ಕಾಲಕ್ಕೆ ಜನಜೀವನವನ್ನು ತಿದ್ದಿ ತೀಡಲು, ಸುಂದರಗೊಳಿಸಲು ಶರಣರು ಮೂಡಿಬಂದರು. ಬಸವಣ್ಣನ ನೇತೃತ್ವದಲ್ಲಿ 'ಸಕಲ ಜೀವಾವಳಿಗೆ ಲೇಸಬಯಸುವ' ಮಹಾಮಣಿಹವನ್ನು ಈ ಶರಣರು ಕೈಗೊಂಡರು. ಬಸವಾದಿಗಳಿಗೆ ಪೂರ್ವದಲ್ಲಿ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ, ಢಕ್ಕೆಯಮಾರಯ್ಯ, ಏಕಾಂತದ ರಾಮಯ್ಯ, ಮಾದಾರ ಚೆನ್ನಯ್ಯ, ಕೊಂಡಗುಳಿ ಕೇಶಿರಾಜ, ಇಳೆಹಾಳಬೊಮ್ಮಯ್ಯ, ತೆಲುಗುಜೊಮ್ಮಯ್ಯ, ಸಕಲೇಶಮಾದರಸ ಮೊದಲಾದವರು ಸಾರ್ವತ್ರಿಕ ಜ್ಞಾನಪ್ರಸಾರ, ಸ್ವತಂತ್ರ ವಿಚಾರ ಶಕ್ತಿಯನ್ನು ಸಾಮಾನ್ಯ ಜನತೆಯಲ್ಲಿ ಮೂಡಿಸುವ ಪ್ರಯತ್ನ ಮಾಡಿದರು. ಈ ನವಯುಗದ ಹರಿಕಾರನೆಂದು ಜೇಡರದಾಸಿಮಯ್ಯನನ್ನು ಗುರುತಿಸುವುದು ಸಮಂಜಸವಾದ ವಿಷಯ.

೨

ಶರಣ ಸಮುದಾಯದಲ್ಲಿ ದೇವರದಾಸಿಮಯ್ಯ,ಜೇಡರದಾಸಿಮಯ್ಯ, ಶಂಕರದಾಸಿಮಯ್ಯ, ವೀರಶಂಕರದಾಸಿಮಯ್ಯ, ಶಿವದಾಸಿಮಯ್ಯ, ಎಂದು ಐದು ಜನ ದಾಸಿಮಯ್ಯಗಳು ದೊರೆಯುತ್ತಾರೆ. ಇವರುಗಳಲ್ಲಿ ದೇವರದಾಸಿಮಯ್ಯ–ಜೇಡರದಾಸಿಮಯ್ಯ ಈ ಎರಡು ಹೆಸರುಗಳು ಒಬ್ಬನಿಗೇ ಅನ್ವಯವಾಗುತ್ತವೆ ಎಂಬುದು ಹಲವು ವಿದ್ವಾಂಸರ ಅಭಿಮತ[2]. ವಚನಪಿತಾಮಹ ಡಾ॥ ಫ.ಗು. ಹಳಕಟ್ಟಿಯವರು ತಮಗೆ ಸಿಕ್ಕಿದ ರಾಮನಾಥಾಂಕಿತವಿರುವ ವಚನಗಳನ್ನೆಲ್ಲಾ ಒತ್ತಟ್ಟಿಗಿಟ್ಟು 'ದೇವರದಾಸಿಮಯ್ಯನ ವಚನಗಳು' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದರು[3]. ಆದರೆ ಅವರು ಆ ಕಾಲಕ್ಕೆ ವಚನಕರ್ತೃ ದೇವರದಾಸಿಮಯ್ಯನೇ ? ಜೇಡರದಾಸಿಮಯ್ಯನೇ ? ಎಂದು ವಿಚಾರ ಮಾಡದೆ ಆ ಎರಡೂ ಹೆಸರುಗಳು ಒಬ್ಬನೇ ವ್ಯಕ್ತಿಗೆ ಅನ್ವಯಿಸುವಂತಹವು ಎಂಬ ಭಾವನೆಯನ್ನು ತಳೆದಿದ್ದಂತೆ ಕಂಡುಬರುತ್ತದೆ. 'ದೇವರದಾಸಿಮಾರ್ಯ ಪ್ರಶಸ್ತಿ' ಗ್ರಂಥದಲ್ಲಿನ ದೇವರದಾಸಿಮಯ್ಯನ ಕಾಲ ವಿಚಾರವನ್ನು ಮಾಡುತ್ತಾ ಶ್ರೀ ಎಂ. ಗೋವಿಂದಪೈ ಅವರು ದೇವರದಾಸಿಮಯ್ಯ–ಜೇಡರದಾಸಿಮಯ್ಯ ಎಂದು ಇಬ್ಬರು ವ್ಯಕ್ತಿಗಳಿರಬೇಕೆಂಬ ಅನುಮಾನವನ್ನು ವ್ಯಕ್ತಮಾಡಿದರೂ ಈ ಎರಡು ಹೆಸರುಗಳೂ ಒಬ್ಬನಿಗೆ ಅನ್ವಯವಾಗುತ್ತವೆ ಎಂಬ ಅಭಿಪ್ರಾಯವನ್ನೇ ತಳೆದಿದ್ದಾರೆ[4]. ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳು ದೇವರದಾಸಿಮಯ್ಯ–ಜೇಡರದಾಸಿಮಯ್ಯ ಎಂಬ ಇಬ್ಬರು ವ್ಯಕ್ತಿಗಳಿರಬೇಕೆಂಬ ಅನುಮಾನವನ್ನು ವ್ಯಕ್ತಮಾಡಿದ್ದಾರೆ[5]. ಈಗಲೂ ವಚನಕಾರ ಜೇಡರ ದಾಸಿಮಯ್ಯನನ್ನು ದೇವರದಾಸಿಮಯ್ಯನೆಂದೇ ಕೆಲವೊಂದು ವಿದ್ವಾಂಸರು ಭಾವಿಸಿದ್ದಾರೆ[6]. ಈ ಎರಡು ಹೆಸರುಗಳು ಇಬ್ಬರು ವ್ಯಕ್ತಿಗಳಿಗೆ ಅನ್ವಯವಾಗುತ್ತಿದ್ದುವೆಂದು ಆಧಾರಪೂರ್ವಕವಾಗಿ ನಾವು ಅನ್ಯತ್ರ ನಿರ್ಧರಿಸಿದ್ದೇವೆ[7]. ಈತನ ಬಗೆಗೆ ಇರುವ ಶಾಸನಗಳನ್ನು ಗಮನಿಸಿದರೆ ಈ ಅಂಶ ಮತ್ತೆ ಸ್ಪಷ್ಟವಾಗುತ್ತದೆ. ಈತನ ಬಗೆಗೆ ಹತ್ತು ಶಾಸನಗಳು ಈ ವರೆಗೆ ದೊರಕಿವೆ. ಅವು ಈ ರೀತಿ ಇವೆ:—

**ಗೊಬ್ಬೂರ ಶಾಸನ :** ಇವರ ಕಾಲ ಕ್ರಿ.ಶ. ೧೧೪೮. ಇವರಲ್ಲಿ 'ಪಿರಿಯ ಗೊಬ್ಬೂರಶೇಷಮಹಾಜನಂಗಳು ದಿವ್ಯ ಶ್ರೀ ಪಾದಪದ್ಮಾರಾಧಕರು ಶ್ರೀ ರಾಮೇಶ್ವರ ದೇವರ ಗಂಧವಾರಣಕ. ಜಾಡಕುಲ ತಿಲಕ ಜಾಡರದಾಸಿಮಯ್ಯ ಪ್ರಿಯಪುತ್ರರು ಮಪ್ಪ ಸಕಲ ಜಾಡಗೊತ್ತಳಿಗಳು.........' ಎಂದಿದೆ. ಇಲ್ಲಿ ಜೇಡರದಾಸಿಮಯ್ಯನ ಆರಾಧ್ಯದೇವತೆ ರಾಮನಾಥ ಎಂಬ ಉಲ್ಲೇಖವಿದೆ.

**ಬಿದಿರೆ ಶಾಸನ :** ಇದರ ಕಾಲ ಕ್ರಿ. ಶ. ೧೧೬೫. ಈ ಶಾಸನದಲ್ಲಿ ಮಹೇಶ್ವರ ಗಣಾವತಾರನೆಂದು ಪ್ರಸಿದ್ಧನಾದ ಬೆಳ್ಳಪನೆಂಬ ಶಿವಭಕ್ತನನ್ನು ವರ್ಣಿಸಲಾಗಿದೆ.

'ಬಡವರು ಚಿಂತಾಮಣಿಯಂ ಪಡೆದಂತಿರೆ ದಾಸಿೀಸನಕಯ್ಯಲು
ಪಡೆದಾ ತವನಿಧಿಯಂತಿರೆ ಪಡೆದಳು ತಾಂ ಚಾಂಕಣಸ್ವೆ ಬೆಳ್ಳಪಸುತನಂ'

ಎಂಬ ಈ ಪದ್ಯದಲ್ಲಿ ದಾಸಿಮಯ್ಯ ತವನಿಧಿಯನ್ನು ಪಡೆದ ವಿಷಯ ಜನಜನಿತವಾಗಿದ್ದಿತೆಂದು ಸ್ಪಷ್ಟವಾಗುತ್ತದೆ.

**ಚಿಕ್ಕಮುದೆನೂರುಶಾಸನ :** ಇದರ ಕಾಲ ಕ್ರಿ. ಶ. ೧೧೬೭. ಇಲ್ಲಿ 'ಪವಿತ್ರಗುಣಾನುರಾಗರಪ್ಪ ಶ್ರೀಮತ್ಸರ್ವಸಮಸ್ತದ ಗ್ರಹಾರಂ ದಕ್ಷಿಣ ವಾರಣಾಸಿ ಮುದೆನೂರ ದಾಸಯ್ಯ'ಗಳ ಎಂದಿದೆ. ಇದು ಚಿಕ್ಕಮುದೆನೂರ ಗೋಪಾಲಸ್ವಾಮಿ ದೇವಾಲಯದ

---

2. ಡಾ॥ ಎಲ್. ಬಸವರಾಜು, 'ದೇವರದಾಸಿಮಯ್ಯನ ವಚನಗಳು' ಗೀತಾ ಬುಕ್ ಹೌಸ್, ಮೈಸೂರು: ೧೯೭೦. ಸೀತಾರಾಮ ಜಾಗೀರ್‌ದಾರ್ 'ದೇವರದಾಸಿಮಯ್ಯನ ಕಾಲ ವಿಚಾರ' ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ ೫೫, ಸಂಚಿಕೆ ೧, ೧೯೭೪.
3. ಡಾ॥ ಫ. ಗು. ಹಳಕಟ್ಟಿ. 'ದೇವರದಾಸಿಮಯ್ಯನ ವಚನಗಳು'; ಸಮಾಜ ಪುಸ್ತಕಾಲಯ, ಧಾರವಾಡ, ೧೯೬೭.
4. 'ದೇವರದಾಸಿಮಾರ್ಯ ಪ್ರಶಸ್ತಿ' ನಿಡುಮಾಮಿಡಿ ಸಂಸ್ಥಾನ, ೧೯೫೩. ಪುಟ ೧೭೦-೧೯೮.
5. ಅದೇ, 'ದೇವರದಾಸಿಮಯ್ಯ' ಪುಟ ೨೬೦.
6. ಡಾ॥ ಎಚ್. ತಿಪ್ಪೆರುದ್ರಸ್ವಾಮಿ 'ವಚನ ಸಾಹಿತ್ಯ, ವೈಚಾರಿಕ ಅಧ್ಯಯನ' ಕೆ. ಅನಂತರಾಮು. 'ದೇವರದಾಸಿಮಯ್ಯ' ಎಂಬ ಪುಸ್ತಕಗಳನ್ನು ಗಮನಿಸಬೇಕು.
7. ಎಚ್. ದೇವಿರಪ್ಪ, ಆರ್. ರಾಜಪ್ಪ, 'ಜೇಡರದಾಸಿಮಯ್ಯನ ವಚನಗಳು' ತರಳಬಾಳು ಪ್ರಕಾಶನ, ಸಿರಿಗೆರೆ, ೧೯೭೪. ಮತ್ತು 'ಸ್ನೇಹ ಕಾರ್ತೀಕ' ತ. ಲಿಂ. ಸ್ಮಾರಕ ಗ್ರಂಥಮಾಲೆ ಕೃಷ್ಣಮೂರ್ತಿಪುರಂ. ಮೈಸೂರು-೪. ೧೯೭೭. ಪುಟ. ೫೮೨-೫೯೧.

ಕಾಣುವ ಮೇಳಿವೆ. ಆ ಕಾಲಕ್ಕೆ ಮುದೆನೂರು ದಕ್ಷಿಣ ವಾರಣಾಸಿ ಎಂದು ಪ್ರಸಿದ್ಧಿ ಪಡೆದಿದ್ದಿತೆಂದೂ, ಇಲ್ಲಿ ಬರುವ ದಾಸಯ್ಯ ಗಳು ಜೇಡರದಾಸಿಮಯ್ಯನೇ ಎಂಬ ಅಭಿಪ್ರಾಯಗಳಿವೆ.

**ಕಿರಿಯಿಂಡಿ ಶಾಸನ :** ಇದರ ಕಾಲ ಕ್ರಿ. ಶ. ೧೧೯೭. ಇದರಲ್ಲಿ–

> 'ದೋಡರದಾಸನ ಕುಲದೊಳ್। ನೋಡಿದರೆ ಸೋಮಯ್ಯನೊಗೆದನಾತನಸತಿ ತಾಂ
> ನೋಡ ಪ್ರತಿಬ್ರತೆ ಸದ್ಗುಣಿ। ರೂಢಿಯ ಪೊತ್ತಾಲ್ಪ್ವೆಯೆಂಬಳಬಳಾರತ್ನಂ' ಎಂದಿದೆ.

ಇಲ್ಲಿ ಬರುವ ಸೋಮಯ್ಯ ಜೇಡರದಾಸಿಮಯ್ಯ ವಂಶಜನೋ ಅಥವಾ ಆತನ ಶಿಷ್ಯಪರಂಪರೆಗೆ ಸೇರಿದವನೋ ಸ್ಪಷ್ಟವಾಗು ವುದಿಲ್ಲ. 'ದೋಡರದಾಸ' ಎಂಬುದು 'ಜೇಡರದಾಸ'ನೆಂಬುದು ವಿದ್ವಾಂಸರ ಅಭಿಮತ.

**ಅಬ್ಬಲೂರು ಶಾಸನ :** ಇದರ ಕಾಲ ಕ್ರಿ. ಶ.೧೨೦೦. ಇದರಲ್ಲಿ 'ಓಹಿಲ ದಾಸ ಚೆನ್ನ ಸಿರಿಯಾಳ ಹಳಾಯುಧ' ಎಂದು ಐದು ಶರಣರನ್ನು ಕುರಿತು ಹೇಳಲಾಗಿದೆ. ಇದೇ ಊರಿನ ಸೋಮೇಶ್ವರ ದೇವಾಲಯದ ಪೌಳಿಯ ಮೇಲೆ 'ಜೇಡರದಾಸಿಮಯ್ಯ ಗಳು ದೇವರಿಗೆ ವಸ್ತ್ರವ ಕುಡುವ ಠಾವು' ಎಂದು ಕೊರೆದಿರುವ ಚಿತ್ರಶಾಸನವಿದೆ. ಇದರ ಕಾಲವೂ ಕ್ರಿ. ಶ. ೧೨೦೦. ಇದನ್ನು ಅಬ್ಬಲೂರಿನ ಚಿತ್ರಶಾಸನ ಎಂದು ಕರೆಯಲಾಗಿದೆ.

**ಗೇಜಗನಹಳ್ಳಿಯ ಶಾಸನ:** ಇದರ ಕಾಲ ಕ್ರಿ. ಶ. ೧೨೦೧. 'ಗೇಜೆಯಹಳ್ಳಿಯ ಇಂತಿನಿಬರುಂ ಜೇಡರದಾಸಿಮಯ್ಯನ ಮಗ ಕಾಟಿಗೌಡನು ಗೇಜೆಹಳ್ಳಿಯ ಮುಜ್ಜೀಯಿಂಡಿಯ ಪೊಲವೇರಿಯ ಸೀಮೆಯಲ್ಲಿ ಕಟ್ಟಿಸಿದ ಕೆಜ್ಜೀಗೆ ಬಿಟ್ಟ ಗದ್ದೆ ಉಂಬಳಿ. ಖಂ. ೫' ಎಂದು ಹೇಳಲಾಗಿದೆ. ಇಲ್ಲಿ ಬಂದಿರುವ ಕಾಟಿಗೌಡನನ್ನು ಜೇಡರದಾಸಿಮಯ್ಯನ ಮಗ ಎಂದು ಹೇಳಲಾಗಿದೆ. ಇವನು ಶಿಷ್ಯಸಂಪ್ರದಾಯದ ವ್ಯಕ್ತಿ ಎಂದು ಹೇಳಬಹುದು. 'ಅರಸಿಕೆಜ್ಜೀಯ ಗೋಜೇಶ್ವರ ದೇವರಿಗೆ ಕಾಟಿಗೌಡನು ಬಿಟ್ಟ ಗದ್ದೆ ಕೊಳಗ ೧೦' ಎಂದು ಹೇಳಿರುವುದನ್ನು ಗಮನಿಸಿದರೆ ಒಂದು ಶತಮಾನಕಾಲಾವಧಿಯಲ್ಲಿ ಜೇಡರದಾಸಿಮಯ್ಯನ ಹೆಸರು ಅರಸೀಕೆರೆವರೆಗೆ ವ್ಯಾಪಿಸಿರುವುದು ಅತ್ಯಂತ ಗಮನಾರ್ಹವಾದುದು ಎನಿಸುತ್ತದೆ.

**ಪಿರಿಯೂರು ಶಾಸನ :** ಕಾಲ ಕ್ರಿ. ಶ. ೧೨೫೫. 'ಸಿಂಧುಬಲ್ಲಾಳನೀ ಧರೆ ಕೊಂಡಾಡುವ ದಾಸಿಮಯನೆನಿಸಿರ್ದೀ ಭಕ್ತ ಸಂದೋಹ' ಎಂದು ಸಿಂಧುಬಲ್ಲಾಳನೊಂದಿಗೆ ದಾಸಿಮಯನನ್ನು ಕೊಂಡಾಡಲಾಗಿದೆ.

**ಮುರಡಿಪುರ ಶಾಸನ:**-ಕಾಲ ಕ್ರಿ. ಶ. ೧೨೮೦. 'ಸಿರಿಯಾಳುವ ದಾಸದಸವಮ್ಮದಿಹಿಲ ಉದ್ಭಟನಂಬಿ' ಎಂದು ಹೇಳ ಲಾಗಿದೆ. ಇಲ್ಲಿ ಬರುವ ದಾಸ ಜೇಡರದಾಸಿಮಯ್ಯನೆಂಬುದು ವಿದ್ವಾಂಸರ ಅಭಿಮತ.

**ಬನವಾಸಿಯ ಚಿತ್ರಶಾಸನ :** ಇಲ್ಲಿನ ಮಧುಕೇಶ್ವರ ದೇವಾಲಯದ ಶಿವೋತ್ಸವ ನಾಗಲಿಂಗ ಶಿಲಾಮಂಟಪದ ಗಗ್ಗರಿ ಕಲ್ಲಿನಲ್ಲಿ ಕೊರೆದ ಶರಣರ ಶಿಲಾಮೂರ್ತಿಗಳಲ್ಲಿ 'ದಾಸಿಮಯ್ಯ' ಎಂಬ ಹೆಸರಿನ ಮೂರ್ತಿ ಇದೆ. ಹೀಗೆ ಹತ್ತು ಶಾಸನಗಳಲ್ಲಿ ಆತ ಹೊಂದಿದ್ದ ಶಿಷ್ಯಸಮುದಾಯದ ವಿಪುಲತೆ, ಆತನ ವ್ಯಕ್ತಿತ್ವಗಳನ್ನು ಹೇಳಲಾಗಿದೆ. ಈ ಹತ್ತು ಶಾಸನಗಳಲ್ಲಿ ಎಲ್ಲಿಯೂ ದೇವರದಾಸಿಮಯ್ಯ ಎಂದು ಹೇಳಿಲ್ಲ ಎಂಬುದು ಗಮನಾರ್ಹ.

೩

ಜೇಡರದಾಸಿಮಯ್ಯನ ಜನ್ಮಸ್ಥಳ ಈಗಿನ ಕಲ್ಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದೆನೂರು. ಇದು ರಾಮನಾಥ ಮೊದಲಾದ ದೇವಾಲಯಗಳಿಂದಲೂ, ರಾಮತೀರ್ಥ, ಲಕ್ಷ್ಮಣತೀರ್ಥ, ಹಾಲುತೀರ್ಥ, ಸಂಗಮತೀರ್ಥ, ಪಾಂಡುತೀರ್ಥ, ಮರಳುತೀರ್ಥ, ಸಕ್ಕರೆತೀರ್ಥಗಳೆಂಬ ಸಪ್ತ ತೀರ್ಥಗಳಿಂದ ಕೂಡಿ ದಕ್ಷಿಣವಾರಣಾಸಿ ಎಂದು ಪ್ರಸಿದ್ಧಿ ಪಡೆದಿದ್ದಿತು. ಈ ಊರಿನ ರಾಮಯ್ಯ–ಶಂಕರಿ[8] ಎಂಬ ದಂಪತಿಗಳಿಗೆ ದಾಸಿಮಯ್ಯ ಮಗನಾಗಿ ಜನಿಸಿದ. ಬಾಲ್ಯ ಕಳೆದು ತರುಣನಾದ ದಾಸಿಮಯ್ಯ ಕುಲ ಕಸುಬಾದ ನೆಯ್ಗೆಯ ಕಾಯಕವನ್ನು ನಡೆಸಲಾರಂಭಿಸಿದ. ತನ್ನ ಅಂತರಂಗದ ಹಸಿವನ್ನು ಹಿಂಗಿಸಿಕೊಳ್ಳಲು ಶ್ರೀಶೈಲಕ್ಕೆ ಹೋಗಿ ಚಂದ್ರಗುಂಡಶಿವಾಚಾರ್ಯರ ಬಳಿ ಶಿವದೀಕ್ಷೆ ಪಡೆದು ಶಿವಜ್ಞಾನಸಂಪನ್ನನಾದ. ತನ್ನ ಊರಿಗೆ ಹಿಂತಿರುಗಿ ಬರುವಾಗ ಹಾದಿ ಯಲ್ಲಿನ ಅನೇಕ ಜನರನ್ನೂ ಶಿವಜ್ಞಾನ ಬೆಳಕನ್ನಿತ್ತು ಉದ್ಧರಿಸಿದ. ಯೌವನಸ್ಥನಾದ ದಾಸಿಮಯ್ಯ 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಭಾವಿಸಿ ದುಗ್ಗಳೆಯನ್ನು ಮದುವೆಯಾದನು. ಇವರ ಸಂಸಾರ ಶಿವಸಾರವಾಯಿತು. ತಮ್ಮ ಕಾಯಕದಿಂದ, ಶಿವಾನುಭವದಿಂದ, ಪರಿಶುದ್ಧ ಜೀವನದಿಂದ ಜನರಲ್ಲಿದ್ದ ಅಜ್ಞಾನವನ್ನು ಕಳೆದು ಸುಜ್ಞಾನ ಮೂಡಿಸಿ, ಅವರಲ್ಲಿ ವಿಚಾರಕ್ರಾಂತಿಯ ಕಿಚ್ಚನ್ನು ಹಚ್ಚಿದರು.

ಒಂದುದಿವಸ ದಾಸಿಮಯ್ಯ ಶ್ರಮವಹಿಸಿ ದಿವ್ಯಾಂಬರವೊಂದನ್ನು ನೆಯ್ದ. ಆ ದಿವ್ಯಾಂಬರವನ್ನು ಸಂತೆಯಲ್ಲಿ ಯಾರೂ ಕೊಳ್ಳುವ ಸಾಹಸ ಮಾಡಲಿಲ್ಲ. ಹಿಂತಿರುಗಿ ಬರುವಾಗ ವೃದ್ಧಮಾಹೇಶ್ವರನೊಬ್ಬ ತುಂಬಾ ಚಳಿಯಾಗುವುದೆಂದೂ

8. ದೇವಾಂಗ ಪುರಾಣದಲ್ಲಿ ತಂದೆ ವೀರರುದ್ರನೆಂದು ಹೇಳಲಾಗಿದೆ. ತಾಯಿಯ ಹೆಸರನ್ನು ಹೇಳಿಲ್ಲ.

ಹೊದೆಯಲು ಏನಾದರು ಕೊಡಬೇಕೆಂದು ಕೇಳಿದನು. ದಾಸಿಮಯ್ಯ ಯಾರೂ ಕೊಳ್ಳದ ದಿವ್ಯಾಂಬರವನ್ನು ನೀಡಿದ. ಆ ಜಂಗಮ ದಿವ್ಯಾಂಬರವನ್ನು ಚಿಂದಿಮಾಡಿ ತಲೆ, ಕೈ ಕಾಲು, ಸೊಂಟಗಳಿಗೆ ಸುತ್ತಿಕೊಂಡ. ಇದನ್ನು ಕಂಡ ದಾಸಿಮಯ್ಯ ವಿಚಲಿತನಾಗಲಿಲ್ಲ. ಇವನ ದೃಢತೆಯನ್ನು ಮೆಚ್ಚಿದ ಶಿವ 'ತವನಿಧಿ'ಯನ್ನು ಇತ್ತು ಬಯಲಾದ.

ತವನಿಧಿಯಿಂದ ದಾಸಿಮಯ್ಯ ದಾಸೋಹ ನಡೆಸಿದ. ಅವನಲ್ಲಿ ಅಹಂಕಾರ ಮೂಡಲಾಗಿ ನವಿಲೆಯಿಂದ ಶಂಕರ ದಾಸಿಮಯ್ಯ ಬಂದು ಅದನ್ನು ನೀಗಿದ. ಅರಿವನ್ನು ಪಡೆದ ದಾಸಿಮಯ್ಯ ಪವಿತ್ರಜೀವನ ಸಾಗಿಸಿ, ಜನತೆಯಲ್ಲಿ ಸುವಿಚಾರ ವನ್ನು ಬಿತ್ತಿ, ಆಚಾರವನ್ನು ಕಲಿಸಿ, ಬದುಕನ್ನು ಹಸನುಗೈದು ಪುಣ್ಯಪುರುಷನಾದ.

ದಾಸಿಮಯ್ಯನ ಮೇಲೆ ಉಪನಿಷತ್‌ಕಾರರ ಪ್ರಭಾವವಿರುವುದು ಅವನ ವಚನಗಳಿಂದ ಸ್ಪಷ್ಟವಾಗುತ್ತದೆ. 'ಕಡೆಗೀಲಿಲ್ಲದ ಬಂಡಿ ಹೊಡೆಗೆಡೆವುದ ಮಾಬುದೆ' ಎಂಬ ವಚನದ ಮೇಲೆ ಕಠೋಪನಿಷತ್ತಿನ

'ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು । ಬುದ್ಧಿಂತು ಸಾರಥಿಂ ವಿದ್ಧಿ ಮನಃಪ್ರಗ್ರಹಮೇವಚ'

ಎಂಬ ಶ್ಲೋಕದ ಪ್ರಭಾವವಿರುವುದು ಸಹಜ ವೇದ್ಯ. ಇಲ್ಲಿ ಬರುವ ಸಾರಥಿ, ಪ್ರಗ್ರಹಗಳನ್ನು ದಾಸಿಮಯ್ಯ ಗಮನಿಸಿಲ್ಲ. ಆತನಿಗೆ ಬಂಡಿ, ಬಂಡಿಗೆ ಮುಖ್ಯವಾಗಿ ಬೇಕಾದ ಕಡೆಗೀಲಿನ ಕಡೆ ಗಮನವಿದೆ. ಮೃಡ ಶರಣರ ನುಡಿಗಡಣವನ್ನು ಕಡೆಗೀಲಿಗೆ ಹೋಲಿಸುವುದರ ಕಡೆಗೆ ಅವನ ಗಮನವೆಲ್ಲಾ ಕೇಂದ್ರೀಕೃತವಾಗಿದೆ. ಹಾಗೆಯೇ–

'ಸ್ವದೇಹ ಮಾರಣಿಂ ಕೃತ್ವಾಪ್ರಣವಂಚೋತ್ತರಾರಣಿಂ ಧ್ಯಾನ ನಿರ್ಮಥನಾಭ್ಯಾಸಾದ್ದೇವಂಪಶ್ಯೇನ್ ನಿಗೂಢವತ್'

ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ಬರುವ ಶ್ಲೋಕದ ಭಾವವನ್ನು ಗ್ರಹಿಸಿ 'ಅತ್ತ ಹೆಣ್ಣೋ ಗಂಡೊ' ಎಂದು ಜಿಜ್ಞಾಸೆ ಯನ್ನು ವ್ಯಕ್ತಗೊಳಿಸಿದ್ದಾನೆ. 'ಸೂತ್ರೇ ಮಣಿಗಣಾ ಇವ' ಎಂಬ ಗೀತಾ ವಾಕ್ಯದಿಂದ ಸ್ಫೂರ್ತಿಗೊಂಡು 'ಮಣಿಗಣ ಸೂತ್ರ ದಂತೆ ತ್ರಿಣಯನ ನೀನಿಪ್ಪೆಯಯ್ಯಾ' ಎಂಬ ವಚನವನ್ನು ರಚಿಸಿದ್ದಾನೆ. ಈ ರೀತಿ ಇವನ ಮೇಲೆ ಆಗಿರುವ ಪ್ರಭಾವವನ್ನು ಇನ್ನೂ ಸಂಶೋಧಿಸಬೇಕಾಗಿದೆ.

ಈತನ ವಚನಗಳ ಪ್ರಭಾವ ಇತ್ತೀಚಿನ ವಚನಕಾರರ ಮೇಲೆ ಆಗಿರುವುದು ಸಹಜ. ತನ್ನ ಹಿಂದಿನ ಹಿರಿಯ ಮಾಹೇಶ್ವರರನ್ನು ನೆನೆಯುವಾಗ ಬಸವಣ್ಣನವರು ದಾಸಿಮಯ್ಯನನ್ನು ಬಹಳವಾಗಿ ಹಾಡಿಹೊಗಳಿದ್ದಾರೆ.

'ಭಕ್ತಿ ಎಂತಹುದಯ್ಯಾ ? ದಾಸಯ್ಯ ಮಾಡಿದಂತಹುದಯ್ಯಾ' 'ದಾಸಯ್ಯ ಶಿವದಾನವನೆರೆಯ ನೋಡಯ್ಯ'

'ಭಕ್ತಿಯಿಲ್ಲದ ಬಡವನಾನಯ್ಯ.........ದಾಸಯ್ಯನ ಮನೆಯಲು ಬೇಡಿದೆ......... ಎನ್ನ ಪಾತ್ರೆ ತುಂಬಿತ್ತು.'

'ತನುಮನಧನಗಳಲ್ಲಿ ವಂಚನೆಯನರಿಯರಯ್ಯಾ ದಾಸಯ್ಯ ಸಿರಿಯಾಳನವರು'. 'ದಾಸಯ್ಯನಂತಿರೆ ಉಡಕೊಡಬಲ್ಲನೆ'

'ಅಯ್ಯಾ ಜೇಡರದಾಸಯ್ಯಂಗೊಲಿದಾತ ಮತ್ತೊಬ್ಬ ಆಯ್ಯನೇ ?' 'ದಾಸನವಸ್ತ್ರವ ಬೇಡುವ ಮುನ್ನ ತವನಿಧಿಯನಿತ್ತರೆ ನಿಮ್ಮ ದೇವರೆಂಬೆ'

ಎಂದು ಮನತುಂಬಿ ಹಾಡಿಹೊಗಳಿರುವಲ್ಲಿ ದಾಸಿಮಯ್ಯನ ವ್ಯಕ್ತಿತ್ವದ ಪರಿಚಯವೂ ನಮಗಾಗುತ್ತದೆ. ಸಿದ್ಧರಾಮೇಶ್ವರನು 'ಜೇಡರೆಲ್ಲರೂ ದಾಸಿಮಯ್ಯನಾಗಬಲ್ಲರೆ ?'[9] ಎಂದು ಹೇಳುವುದರ ಮೂಲಕ ಈತನ ಹಿರಿಮೆಯನ್ನು ಕೊಂಡಾಡಿದ್ದಾನೆ. ಅಂಬಿಗರ ಚೌಡಯ್ಯ ಒಂದು ವಚನದಲ್ಲಿ–

'ಜೇಡಂಗೆ ಬೇಡಂಗೆ ಡೋಹಾರಂಗೆ ಹೊಲೆಯಂಗೆ ಜೂಡಿಗೇಶ್ವರ ನೊಲಿದ ಪರಿಯ ನೋಡಾ ಅಯ್ಯಾ'[10]

ಎಂದು ದಾಸಿಮಯ್ಯನಿಗೆ ಶಿವನೊಲಿದ ಪರಿಯನ್ನು ಹಾಡಿಹೊಗಳಿದ್ದರೆ; ಇನ್ನೊಂದು ವಚನದಲ್ಲಿ 'ಕೆತ್ತಮುಚ್ಚುಳು ಜೇಡಗಚ್ಚರಿದೆಜೀವಾಗ ಇಕ್ಕಿದ ಜನ್ನಿವಾರ ಭಿನ್ನವಾದುವು[11] ಎಂದು ಜೇಡರದಾಸಿಮಯ್ಯ ಮೆರೆದ ಪವಾಡದ ವಿಷಯವನ್ನು ಹೇಳಿದ್ದಾನೆ.

ಇವನ ವಚನಗಳ ಭಾವನೆಗಳನ್ನು ಇತ್ತೀಚಿನ ವಚನಕಾರರು ಹೇಗೆ ಬಳಸಿಕೊಂಡಿದ್ದಾರೆಂದು ಗಮನಿಸೋಣ. ಬಸವಣ್ಣ ನವರು ಈತನ ಜೀವನಾದರ್ಶಗಳಿಗೆ ಮಾರುಹೋಗಿರುವುದನ್ನು ಹಿಂದೆಯೇ ಗಮನಿಸಿದ್ದೇವೆ. ಹಾಗಾಗಿ ಅವನ ಅಭಿಪ್ರಾಯ ಗಳನ್ನು ಒಪ್ಪಿ ತಮ್ಮ ವಚನಗಳಲ್ಲಿ ಅದೇ ಅಭಿಪ್ರಾಯಗಳನ್ನು ಪಡಿ ನುಡಿದಿದ್ದಾರೆ:

'ಸಾಗರದೊಳಗಣ ಕಿಚ್ಚಿನ ಸಾಕಾರದಂತೆ, ಸಸಿಯೊಳಗಣ ಫಲಪುಷ್ಪ ರುಚಿಯ ಪರಿಮಳದಂತೆ'[12]

ಎಂಬ ಅಭಿಪ್ರಾಯವನ್ನು

'ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು, ಸಸಿಯೊಳಗಣ ರಸದ ರುಚಿಯಂತಿದ್ದಿತ್ತು'[13]

ಎಂದು ಹೇಳಿದ್ದಾರೆ.

---

9. ಸಂ. ಡಾ|| ಆರ್. ಸಿ. ಹಿರೇಮಠ. ಶ್ರೀ ಸಿದ್ಧರಾಮೇಶ್ವರ ವಚನಗಳು ; ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ: ೧೫೫. ವ: ೫೨೨
10. ಸಂ. ಡಾ|| ಆರ್.ಸಿ. ಹಿರೇಮಠ 'ಸಕಲ ಪುರಾತನರ ವಚನಗಳು' ; ಪು : ೪೦೨ ವ : ೧೧೦ 11. ಅದೇ. ಪು : ೪೦೨ ; ವ : ೧೧೧.
12. ಸಂ. ಎಚ್. ದೇವೀರಪ್ಪ, ಆರ್. ರಾಜಪ್ಪ; 'ಜೇಡರದಾಸಿಮಯ್ಯನ ವಚನಗಳು' ತರಳಬಾಳು ಪ್ರಕಾಶನ. ಸಿರಿಗೆರೆ, ೧೯೭೨, ಪುಟ: ೩, ವ:೯
13. ಸಂ. ಡಾ|| ಆರ್.ಸಿ. ಹಿರೇಮಠ, ಬಸವಣ್ಣನವರ ವಚನಗಳು ; ಪುಟ : ೧, ವ : ೧

'ಸತಿಯರ ಸಂಗವನು ಅತಿಶಯದಗ್ರಾಸವನು ಪೃಥ್ವೀಗೀಶ್ವರನ ಪೂಜೆಯನು ಅಱಿವುಳ್ಳಡೆ ಬೇಱ ಕಯ್ಯಿಂದ ಮಾಡಿಸುವರೇ ರಾಮನಾಥ'[14]

ಎಂಬ ಅಭಿಪ್ರಾಯ ಬಸವಣ್ಣನವರಲ್ಲಿ—

'ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ?'[15]

ಎಂದು ಮೂಡಿಬಂದಿದೆ. 'ಗಂಡಸುಳ್ಳಮ್ಮನ ಗೌರಿ ಎಂದು ಕಾಣಬೇಕು' ಎಂದು ದಾಸಿಮಯ್ಯ ಹೇಳಿದ್ದರೆ 'ಪರವಧುವ ಮಹಾದೇವಿಯೆಂಬೆ' ಎಂದು ಬಸವಣ್ಣನವರು ಹೇಳಿದ್ದಾರೆ.

'ಅಪಗತಿಂಬರು ಕಣಕಪಡಿಗೆಯಿರಲ್ಕೆ ಸುರೆಯ ಕುಡಿವರು ಪಾಲಿರಲ್ಕೆ ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗೆ ಅಳುಪುವರು'[16]

ಎಂಬ ಆಚಾರದ ಬಗೆಗೆ ದಾಸಿಮಯ್ಯ ಹೇಳಿದರೆ ಈ ವಿಷಯವನ್ನು ಬಸವಣ್ಣನವರು :

'ಅಂಗದಿಚ್ಛೆಗೆ ಮದ್ಯಮಾಂಸತಿಂಬರು ಕಂಗಳಿಚ್ಛೆಗೆ ಪರವಧುವನೆನೆವರು'[17]

ಎಂದು ಹೇಳಿದ್ದಾರೆ.

'ಒಲ ವಸವಿಲ್ಲದ ಭಕ್ತಿ ಅವಲವಿಕೆಯಿಲ್ಲದ ಸತಿ ನಿಮ್ಮ ನಂಬಿ ನಂಬದವನ ಬಾಳುವೆ. ಪೊಲೆಯರನಾಯಿ ಮಲುಸರಯಿಂಪ ಕರಕಷ್ಟ'[18]

ಎಂದು ನಿಜವಲ್ಲದವನ ಭಕ್ತಿಯ ಬಗೆಗೆ ದಾಸಿಮಯ್ಯ ಟೀಕಿಸಿದ್ದರೆ ಇದನ್ನೇ ಬಸವಣ್ಣನವರು :

ಒಲವಿಲ್ಲದ ಪೂಜೆ ನೇಹವಿಲ್ಲದ ಮಾಟ ; ಆ ಪೂಜೆಯು ಆ ಮಾಟವು
ಚಿತ್ರದ ರೂಹು ಕಾಣಿರಣ್ಣ ; ಚಿತ್ರದ ಕಬ್ಬು ಕಾಣಿರಣ್ಣ
ಅಪ್ಪಿದರೆ ಸುಖವಿಲ್ಲ ಮೆಲಿದರೆ ಸವಿಯಿಲ್ಲ ; ಕೂಡಲ ಸಂಗಮದೇವ ನಿಜವಿಲ್ಲದವನ ಭಕ್ತಿ[19]

ಎಂದು ಹೇಳಿದ್ದಾರೆ. ಜೀವಾತ್ಮ–ಪರಮಾತ್ಮರ ಸಂಬಂಧವನ್ನು ಕುರಿತು ದಾಸಿಮಯ್ಯ :

ಎಣ್ಣೆ ಇದ್ದು ಎಳ್ಳು ನೆನೆಯದ ಭೇದವ ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ,
ಕಾಮವಿದ್ದು ಕನ್ನೆಯನುಭವಿಸದ ಭೇದವ, ಪರವಿದ್ದೂ ಪ್ರಾಣನ ಪ್ರಕೃತಿಯ ಹಱಿಯದ ಭೇದವ,
ನರರೆತ್ತ ಬಲ್ಲರೈ ರಾಮನಾಥ[20]

ಎಂದು ಹೇಳಿದ್ದರೆ–ಅಕ್ಕಮಹಾದೇವಿಯು ಈ ಅಭಿಪ್ರಾಯವನ್ನು–

'ನೆಲದ ಮಱಿಯ ನಿಧಾನದಂತೆ ಫಲದ ಮಱಿಯ ರುಚಿಯಂತೆ ಶಿಲೆಯ ಮಱಿಯ ಹೇಮದಂತೆ
ತಿಲದ ಮಱಿಯ ತೈಲದಂತೆ ಭಾವದ ಮಱಿಯ ಬ್ರಹ್ಮನಾಗಿಪ್ಪ ಚೆನ್ನಮಲ್ಲಿಕಾರ್ಜುನನ ನಿಲವನಾರೂ ಅಱಿಯಬಾರದು'[21]

ಎಂದು ಹೇಳಿದ್ದಾಳೆ.

'ಮೆಳೆಯ ಮೇಲಣಕಲ್ಲು ಜಗದೆಱಿಯನಾಗಬಲ್ಲುದೆ ಮೆಳೆ ಶಿವಭಕ್ತನಾಗಬಲ್ಲುದೆ
ತನು ಮನ ಧನವನಱಿಯದಿರ್ದಡೆ ಸದುಭಕ್ತರ ಪರೆ ರಾಮನಾಥ'[22]

ಎಂಬ ವಚನದ ಪ್ರಭಾವ ಅಲ್ಲಮಪ್ರಭುವಿನ ಮೇಲೆ ಆಗಿದೆ ಎಂಬುದಕ್ಕೆ ಆತನ ವಚನ–

'ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು ಹಸಿವು ಹೋಹುದೆ
ಅಂಗದ ಮೇಲೆ ಲಿಂಗ ಸ್ವಾಯತ್ತವಾದರೇನು ಶಿವಭಕ್ತನಾಗಬಲ್ಲನೆ ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೆ
ಆ ಮೆಳೆ ಭಕ್ತನೆ ? ಇಟ್ಟಾತ ಗುರುವೆ ಇಂತಪ್ಪವರ ಕಂಡು ನಾಚುವೆನಯ್ಯ ಗುಹೇಶ್ವರ'[23]

—ಸಾಕ್ಷಿಯಾಗಿದೆ.ಅಂಬಿಗರ ಚೌಡಯ್ಯ ಸರ್ವಜ್ಞ ಮೊದಲಾದ ವಚನಕಾರರು ಈತನ ವಚನರಚನಾತಂತ್ರಗಳಿಗೆ, ವಿಚಾರಧಾರೆಗೆ ಮಾರು ಹೋಗಿರುವುದು ಅವರ ವಚನಗಳನ್ನೂ ಗಮನಿಸಿದಾಗ ವ್ಯಕ್ತವಾಗುತ್ತದೆ.

೫

ಜೇಡರದಾಸಿಮಯ್ಯನ ಕಾಲದ ಬಗೆಗೆ ಅನೇಕ ಸಂಶೋಧಕರು, ವಿದ್ವಾಂಸರು ಚರ್ಚಿಸಿ ತಮ್ಮ ತಮ್ಮ ತೀರ್ಮಾನಗಳನ್ನು ನೀಡಿದ್ದಾರೆ. ಅವು ಈ ರೀತಿ ಇವೆ.

ಆರ್. ನರಸಿಂಹಾಚಾರ್ಯ—ಕ್ರಿ. ಶ. ೧೧೪೦[24]

ಡಾ॥ ಫ. ಗು. ಹಳಕಟ್ಟಿ—ಕ್ರಿ. ಶ. ೧೧೧೫–೧೧೪೨[25]

---

14. ಜೇಡರದಾಸಿಮಯ್ಯನ ವಚನಗಳು : ಪುಟ : ೨೮ ; ವ: ೧೧೮
15. ಬಸವಣ್ಣನವರ ವಚನಗಳು : ಪುಟ : ೭೯ ; ವ : ೧೫೩.
16. ಜೇ.ದಾ. ವಚನಗಳು ; ಪುಟ : ೧೬ ; ವ : ೬೭,
17. ಬಸವಣ್ಣನವರ ವಚನಗಳು ; ಪು : ೫೦ ; ವ : ೧೦೬
18. ಜೇ. ದಾ. ವಚನಗಳು, ಪುಟ: ೬೦ ವ: ೧೨೭
19. ಬ. ವಚನಗಳು, ಪುಟ: ೫೮ ವ: ೧೨೬
20. ಜೇ. ದಾ. ವಚನಗಳು. ಪುಟ: ೪ ವ: ೧೨
21. ಡಾ॥ ಎಲ್. ಬಸವರಾಜು, ಅಕ್ಕಮಹಾದೇವಿಯ ವಚನಗಳು, ವ: ೨
22. ಜೆ. ದಾ. ವಚನಗಳು, ಪುಟ: ೨೯; ವ: ೧೨೪
23. ಡಾ॥ ಎಲ್. ಬಸವರಾಜು, ಅಲ್ಲಮನ ವಚನ ಚಂದ್ರಿಕೆ, ಪು: ೧೨೩. ವ: ೫೫೮.
24. ಕರ್ನಾಟಕ ಕವಿಚರಿತ್ರೆ-೧. ಕ. ಸಾ. ಪ. ೧೯೬೧. ಪುಟ : ೨೦೪.
25. ಶಿವಶರಣರ ಚರಿತ್ರೆ-ಭಾಗ-೩; ೧೯೫೧; ಪುಟ : ೨೮.

ಡಾ॥ ರಂ. ಶ್ರೀ. ಮುಗಳಿ—ಕ್ರಿ. ಶ. ೧೧೧೫–೧೧೪೨[26]

ಎಂ. ಗೋವಿಂದಪೈ—ಕ್ರಿ. ಶ. ೯೮೦–೧೦೪೦[27]

ಡಾ॥ ಎಸ್. ಶ್ರೀಕಂಠಶಾಸ್ತ್ರಿ—ಕ್ರಿ. ಶ. ೧೧ನೆಯ ಶತಮಾನ[28]

ಡಾ॥ ಡಿ. ಎಲ್. ನರಸಿಂಹಾಚಾರ್—ಕ್ರಿ. ಶ. ೧೦೩೦[29]

ಡಾ॥ ಎಲ್. ಬಸವರಾಜು—ಕ್ರಿ. ಶ. ೧೧೧೫–೧೧೪೦[30]

ಎಚ್. ದೇವೀರಪ್ಪ, ಆರ್. ರಾಜಪ್ಪ—ಕ್ರಿ. ಶ. ೧೦೬೦—೧೧೫೦[31]

ಇತ್ತೀಚೆಗೆ ಶಾಂತರಸ ಅವರು ತಮ್ಮದೇ ಆದ ನಿಲುವು ತಳೆದಿದ್ದಾರೆ. ಅವರ ಅಭಿಪ್ರಾಯದಲ್ಲಿ ಈತ ಕ್ರಿ. ಶ. ೧೧೨೫ಕ್ಕಿಂತ ಈಚೆಯವನಲ್ಲ, ಮತ್ತು ಕ್ರಿ. ಶ. ೧೦೫೦ಕ್ಕಿಂತ ಆಚೆಯವನಲ್ಲ ಎಂಬುದೇ ಆಗಿದೆ[32].

ಬಸವಣ್ಣನವರು ಈತನನ್ನು ತಮ್ಮ ವಚನಗಳಲ್ಲಿ ಹಾಡಿಹೊಗಳಿದ್ದಾರೆ. ದಾಸಿಮಯ್ಯ ಬಸವಣ್ಣನವರನ್ನು ಕುರಿತು ಏನೂ ಹೇಳಿಲ್ಲ. ಆದುದರಿಂದ ಜೇಡರದಾಸಿಮಯ್ಯ ಬಸವಣ್ಣನವರಿಗಿಂತ ಪೂರ್ವದಲ್ಲಿದ್ದವನೆಂಬುದು ನಿರ್ವಿವಾದ. ಈತನು ಹೆಸರಿಸಿರುವ ಶರಣರಲ್ಲಿ ಡೋಹರ ಕಕ್ಕಯ್ಯ, ಮಾದರಚೆನ್ನಯ್ಯ ಪ್ರಮುಖರು. ಡೋಹರಕಕ್ಕಯ್ಯನ ಬಗೆಗೆ ಶಿವತತ್ತ್ವ ಚಿಂತಾಮಣಿಯಲ್ಲಿ 'ಧರೆಯೊಳುತ್ತಮ ಬೆಜ್ಜವಾಡಪುರದೊಳಗೊರ್ವ, ಪರಮಮಾಹೇಶ್ವರರು ಪಂಡಿತಾರಾಧ್ಯರಿರೆ ಕರೆದನವರಂ ಡೋಹರ ಕಕ್ಕಯ್ಯನೊಂದು ದಿನಭಕ್ತರುತ್ಸವ ಪರ್ವಕೆ'[33] ಎಂದು ಹೇಳಲಾಗಿದೆ. ಬೆಜ್ಜವಾಡದಲ್ಲಿದ್ದ ಪಂಡಿತಾರಾಧ್ಯರೆಂದರೆ ಶ್ರೀಪತಿ ಪಂಡಿತರೆಂಬ ಅವರು 'ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಅನಂತಪಾಲನು ಬೆಜ್ಜವಾಡದಲ್ಲಿ ಆಳುತ್ತಿದ್ದ ಕಾಲ (ಕ್ರಿ.ಶ. ೧೧೨೦)ದಲ್ಲಿ ಪವಾಡಗಳನ್ನು ತೋರಿಸಿದರೆಂದು ಪಲ್ಲಿಕೇತಸ ಶಾಸನದಿಂದ ತಿಳಿದುಬರುತ್ತದೆ[34]. ಹೀಗಾಗಿ ಕಕ್ಕಯ್ಯ ಕ್ರಿ. ಶ. ೧೧೨೦ರ ಸುಮಾರಿನಲ್ಲಿ ಜೀವಿಸಿದ್ದನೆಂದು ತಿಳಿಯಬಹುದು.

ಮಾದರ ಚೆನ್ನಯ್ಯ ಕರಿಕಾಲ ಚೋಳ ಎಂಬ ಬಿರುದುಳ್ಳ ಚೋಳರಾಜನ ಸಮಕಾಲೀನ. ಈ ಬಿರುದು ಕ್ರಿ. ಶ. ೧೦೬೨ ರಿಂದ ೧೦೭೦ ರವರೆಗೆ ಆಳಿದ ವೀರ ರಾಜೇಂದ್ರನಿಗೂ ಇದ್ದಿತು. ಶ್ರೀ ವೈಷ್ಣವಗಳಲ್ಲಿ ಹೇಳಿರುವಂತೆ ಒಂದನೆಯ ಕುಲೋತ್ತುಂಗನಿಗೂ ಆ ಬಿರುದಿದ್ದಿತು. ಆತನ ಕಾಲ ಕ್ರಿ. ಶ. ೧೦೭೦–೧೧೨೦. ಮಾದರ ಚೆನ್ನಯ್ಯ ೧೧೨೦ರ ಸುಮಾರಿನಲ್ಲಿ ಜೀವಿಸಿದ್ದು ಜೇಡರದಾಸಿಮಯ್ಯ ಅವನಿಗಿಂತ ಕಿರಿಯನಾಗಿದ್ದನೆಂದು ಭಾವಿಸಬಹುದು.

'ತೊಡೆಯೊಳಗೆ ಬಿದ್ದ ಲಿಂಗ ಕರೆದರೆ ಬಂದುದು ಕರಸ್ಥಲಕ್ಕೆ' ಎಂದು ಜೇಡರದಾಸಿಮಯ್ಯನು ಹೇಳುವ ಪವಾಡದ ಮಾತು ಕೊಂಡಗುಳಿ ಕೇಶಿರಾಜನಿಗೆ ಸಂಬಂಧಿಸಿದ್ದು. ಈ ಕೇಶಿರಾಜ ತ್ರಿಭುವನ ಮಲ್ಲನೆಂಬ ಬಿರುದುಗಳಿಸಿದ್ದ ಆರನೆಯ ವಿಕ್ರಮಾದಿತ್ಯ (ಪೆರ್ಮಾಡಿ)ನಲ್ಲಿ ದಂಡನಾಯಕನಾಗಿದ್ದನು. ಈತನು ತನ್ನ ಆರಾಧ್ಯಮೂರ್ತಿ ಸೋಮೇಶ್ವರನ ದೇವಾಲಯವನ್ನು ನಿರ್ಮಿಸಿ ಅದಕ್ಕೆ ದತ್ತಿ ಬಿಟ್ಟನೆಂದು ಹೇಳುವ ದೋಣಿ ಕೊಂಡಗುಳಿ ಶಾಸನದಿಂದ ತಿಳಿಯುತ್ತದೆ; ಅದರ ಕಾಲ ಕ್ರಿ.ಶ. ೧೧೦೭. ಆದುದರಿಂದ ಜೇಡರದಾಸಿಮಯ್ಯ ೧೧೦೭ಕ್ಕೆ ಮುಂಚೆ ಈ ವಚನವನ್ನು ಬರೆಯಲಿಲ್ಲವೆಂದು ಹೇಳಬಹುದು. ಹೀಗಾಗಿ ಜೇಡರದಾಸಿಮಯ್ಯ ಕ್ರಿ.ಶ. ೧೦೬೦ಕ್ಕಿಂತ ಹಿಂದಿನವನಲ್ಲ. ೧೧೬೦ಕ್ಕಿಂತ ಈಚೆಯವನಲ್ಲ. ಆದುದರಿಂದ ಈತನು ಕ್ರಿ.ಶ. ೧೦೬೦ ರಿಂದ ೧೧೫೦ರ ಕಾಲಾವಧಿಯಲ್ಲಿ ಜೀವಿಸಿದ್ದನೆಂಬ ನಮ್ಮ ಹಿಂದಿನ ಅಭಿಪ್ರಾಯವನ್ನೇ ಇಲ್ಲಿ ಎತ್ತಿಹಿಡಿಯಲಾಗಿದೆ.

೬

ಜೇಡರದಾಸಿಮಯ್ಯನ ವಚನಗಳ ಮೌಲ್ಯವನ್ನು ಆಧ್ಯಾತ್ಮಿಕ ಸಾಹಿತ್ಯಕ ಎಂದು ಎರಡು ದೃಷ್ಟಿಗಳಿಂದ ವಿಚಾರ ಮಾಡಬಹುದು.

ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದ ಈತನ ವಚನಗಳು ಪರಿಪಕ್ವವಾದ ಅಂತರಂಗದ ಅನುಭಾವವನ್ನೂ ಅತೀಂದ್ರಿಯ ಅನುಭವವನ್ನೂ ಬಹು ಸಮರ್ಥವಾಗಿ ಪಡಿಮೂಡಿಸುತ್ತವೆ. ಪರಮಾತ್ಮ ಸ್ವರೂಪ, ಸೃಷ್ಟಿಯ ಕ್ರಮ, ಜೀವಾತ್ಮ ಪರಮಾತ್ಮರಿಗಿರುವ ಸಮ್ಯಕ್ ಸಂಬಂಧ, ಮೋಕ್ಷ ಸ್ವರೂಪ, ಗುರುವಿನ ಲಕ್ಷಣ, ಭಕ್ತಾಭಿಮಾನ, ಸಮರ್ಪಣಭಾವ, ಧರ್ಮ, ನೀತಿ ಮೊದ

26. ಕನ್ನಡಸಾಹಿತ್ಯ ಚರಿತ್ರೆ–೧೯೭೦; ಪುಟ : ೪೦. 27. ದೇವರ ದಾಸಿಮಾರ್ಯ ಪ್ರಶಸ್ತಿ; ೧೯೫೩; ಪುಟ : ೧೯೧.

28. ಅದೇ ೧೯೫೩, ಪುಟ : ೨೬೦. 29. ಪೀಠಿಕೆಗಳು ಲೇಖನಗಳು; ಪುಟ : ೪೪೪-೪೫.

30. 'ದೇವರದಾಸಿಮಯ್ಯನ ವಚನಗಳು' ೧೯೭೨, ಪೀಠಿಕೆ; ಪುಟ : ೪೬. 31. 'ಜೇಡರದಾಸಿಮಯ್ಯನ ವಚನಗಳು' ೧೯೭೪. ಪ್ರಸ್ತಾವನೆ; ಪುಟ : XXiX.

32. ಸಮಗ್ರ ಕನ್ನಡಸಾಹಿತ್ಯ ಚರಿತ್ರೆ:ಭಾಗ-೩; ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು; ೧೯೭೬; ಪುಟ:೬೨.

33. ಎಚ್. ದೇವೀರಪ್ಪ, ಎಸ್. ಬಸಪ್ಪ-'ಶಿವತತ್ತ್ವಚಿಂತಾಮಣಿ' ಪುಟ : ೩೬೬; ಪದ್ಯ : ೧೨೭.

34. ಡಾ॥ ಎಸ್. ಶ್ರೀಕಂಠಶಾಸ್ತ್ರಿ;-ಭಾರತೀಯಸಂಸ್ಕೃತಿ; ಪುಟ : ೧೩೬.

ಲಾದ ವಿಚಾರಗಳ ನಿರೂಪಣೆ ಈತನ ವಚನಗಳಲ್ಲಿದೆ.

ಸೃಷ್ಟಿಯ ಕ್ರಮವನ್ನು ಕುರಿತು ಹೇಳುವಾಗಿನ ಮಾತಿನ ಚಮತ್ಕೃತಿ

'ಇಂತೆಂಬ ಭೂಮಿಯು ಇಂತೆಂಬ ಗಗನವ ಇಂತೆಂಬ ಸಪ್ತ ಸಾಗರವ'[35]

ಎಂಬಲ್ಲಿ ವ್ಯಕ್ತವಾಗುತ್ತವೆ. ಅಘಟಿತ ಘಟನಾ ಸಾಮರ್ಥ್ಯವುಳ್ಳ ಪರಮಾತ್ಮನಿಗೆ ಈ ಸೃಷ್ಟಿ ಬಹುಸುಲಭ, ಐಂದ್ರಜಾಲಿಕ ವಸ್ತುಗಳನ್ನು ನಿರ್ಮಿಸುವಂತೆ ಭೂಮಿ, ಗಗನ, ಸಪ್ತ ಸಾಗರಗಳನ್ನು ಸೃಷ್ಟಿ ಮಾಡಿದ ಮಹಾ ಐಂದ್ರಜಾಲಿಕ ಪರಮಾತ್ಮ ಎಂದು ಹೇಳಿದ್ದಾನೆ ಆತನ ಶಕ್ತಿಯ ಅನಂತತೆಯನ್ನು

'ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ ಅಂಬರಕ್ಕೆ ಗದಿಗೆ ಬೋದಿಗೆ ಇಲ್ಲದಂತಿರಿಸಿದೆ'[36]

ಎಂಬಲ್ಲಿ ನಿರೂಪಿಸಿದ್ದಾನೆ. ಸರ್ವಶಕ್ತನಾದ ಪರಮಾತ್ಮ ಸೃಷ್ಟಿಗೆ ಹೇಗೆ ಕಾರಣನೋ ಅದರ ಸ್ಥಿತಿಗೂ ಕಾರಣನೆಂಬಂಶ–

'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ಗಾಳಿ ನಿಮ್ಮ ದಾನ'[37]

'ಎತ್ತು ನಿಮ್ಮದಾನ, ಬಿತ್ತು ನಿಮ್ಮ ದಾನ, ಸುತ್ತಿ ಹರಿವ ಸಾಗರ ನಿಮ್ಮ ದಾನ'[38]

ಎಂಬ ವಚನಗಳಲ್ಲಿ ಮೂಡಿದೆ.

ಪರಮಾತ್ಮನ ಇರವನ್ನು ಕುರಿತು 'ಮಣಿಗಣ ಸೂತ್ರದಂತೆ ತ್ರಿಣಯನ ನೀನಿಪ್ಪೆಯಯ್ಯಾ'[39] ಎಂದು ಬಹು ಅರ್ಥಪೂರ್ಣವಾಗಿ ಹೇಳಿದ್ದಾನೆ. ಒಂದೊಂದು ಮಣಿಯೂ ಭಿನ್ನವಾಗಿರುವಂತೆ ಆತ್ಮಗಳು ಭಿನ್ನ. ಆದರೆ ಮಣಿಗಳನ್ನು ಸೇರಿಸುವ ಸೂತ್ರ ಒಂದೇ ಆಗಿರುವಂತೆ ಎಲ್ಲ ಆತ್ಮಗಳಲ್ಲಿರುವ ಪರಮಾತ್ಮ ಒಬ್ಬನೆ ಎಂಬಂಶ ಸ್ಪಷ್ಟ. ಇಲ್ಲಿಯ ಭಾವ ನೇರವಾಗಿ ಆತ್ಮಕ್ಕೆ ತಟ್ಟುವಂತಹುದು,

ಈ ಜೀವನ ದುರ್ಭರವಾದುದು ಎಂಬುದನ್ನು

'ಒಡಲು ಗೊಂಡವ ಹಸಿವ ಒಡಲು ಗೊಂಡವ ಹುಸಿವ
ಒಡಲು ಗೊಂಡವನೆಂದು ನೀನೆನ್ನ ಜಡಿದೊಮ್ಮೆ ನೋಡದಿರಾ
ನೀನೆನ್ನಂತೆ ಒಮ್ಮೆ ಒಡಲು ಗೊಂಡು ನೋಡಾ ರಾಮನಾಥ'[40]

ಎಂಬ ವಚನದಲ್ಲಿ ಹೇಳಿದ್ದಾನೆ. ಈ ಬಾಳನ್ನು ಬದುಕಲು, ಹಸಿವನ್ನು ಹಿಂಗಿಸಲು ಹುಸಿಯಾಡುವುದು ಅನಿವಾರ್ಯ. ಅದಕ್ಕಾಗಿ ದೈವ ಅವನನ್ನು ಹೀಯಾಳಿಸುವುದು ಸೂಕ್ತವಲ್ಲ. ಈ ಬದುಕನ್ನು ಸಾಗಿಸುವ ಕಷ್ಟ ಇಲ್ಲಿ ಜನ್ಮ ತಳೆದು ಬಂದರೆ ತಿಳಿಯುತ್ತದೆ. ನೀನೂ ಜನ್ಮ ತಳೆದು ಈ ಬದುಕಿನ ರುಚಿ ನೋಡು ಎಂದು ದೈವಕ್ಕೆ ಸವಾಲನ್ನು ಹಾಕುತ್ತಾನೆ.

ಭಕ್ತಿ-ಭಕ್ತನ ಸ್ವರೂಪವನ್ನು ಕುರಿತು ವಿಪುಲವಾಗಿ ವಿಚಾರ ಮಾಡಿದ್ದಾನೆ. ಭಕ್ತಿಗೆ ನಂಬಿಕೆ ಮೂಲ ಎಂಬಂಶ–

'ನೆಱೆ ನಂಬಿ ಕರೆದರೆ ನರಿ ಕುದುರೆಯಾಗಿ ಹರಿಯನೆ? ಜಗವೆಲ್ಲಾ ಅಱಿಯಲು
ತೊಱೆಯೊಳಗೆ ಬಿದ್ದ ಲಿಂಗ ಕರೆದರೆ ಬಂತು ಕರಸ್ಥಲಕ್ಕೆ'[41] 'ನಂಬಿದ ಚೆನ್ನನ ಅಂಬಲಿಯನುಂಡ
ಕೆಂಬಾವಿ ಭೋಗಯ್ಯನ ಹಿಂದಾಡಿ ಹೋದ ಕುಂಭದ ಗತಿಗೆ ಕುಕಿಲಿಱಿದು ಕುಣಿದ'[42]

ಎಂಬ ವಚನಗಳಲ್ಲಿ ಹೇಳಿದ್ದಾನೆ. ನಂಬದವರ ಹಂಬಲವನೊಲ್ಲ ಪರಮಾತ್ಮ ಎಂಬ ನಿಲವು ದಾಸಿಮಯ್ಯನದು. ಅಲ್ಲದೆ ಇಲ್ಲಿ ಭಗವಂತ ಭಕ್ತರಿಗೆ ಸುಲಭಸಾಧ್ಯನಲ್ಲ ಎಂಬಂಶವನ್ನೂ ಸ್ಪಷ್ಟಗೊಳಿಸಿದ್ದಾನೆ. ಭಕ್ತಿಯನ್ನು ಬಲ್ಲವರು ಹೇಗಿರುತ್ತಾರೆಂಬುದನ್ನು–

'ಭಕ್ತಿಯ ಬಲ್ಲವರು ನಚ್ಚಿ ಮೆಚ್ಚಿ ಮನವನೊಚ್ಚತಗೊಡುವರು ಭಕ್ತನಱಿಯದೆ ಬಲು ಪಾಪಿಜೀವಿಗಳು ಕಚ್ಚುವರು ಬೊಗಳುವರು'[43]

—ಎಂದು ಹೇಳಿದ್ದಾನೆ.

ಭಕ್ತಿಯನ್ನು ಶುದ್ಧ ಮನಸ್ಸಿನಿಂದ ಆಚರಿಸಬೇಕು. ಅವರಿವರಿಗಾಗಿ, ಊರಿಗಾಗಿ ಭಕ್ತಿಯನ್ನು ಮಾಡಬಾರದು. ಅಂತಹ ಭಕ್ತಿ 'ಊರಮಾಡುವನ ಭಕ್ತಿ ಹೂರದ ಹೊಲದಂತೆ.'[44] ಅದರಿಂದ ಯಾವ ಲಾಭವೂ ಇಲ್ಲ. ತಾನು ಮಾಡುವ ಪೂಜೆಯನ್ನು ತಾನೇ ಮಾಡಬೇಕು. ಅನ್ಯರಿಂದ ಮಾಡಿಸಬಾರದು. 'ಸತಿಯರಸಂಗವನು ಅತಿಶಯದಗ್ರಾಸವನು ಪೃಥ್ವಿಗೀಶ್ವರನ ಪೂಜೆಯನು–ಅಱಿವುಳ್ಳಡೆ ಹೆಱರ ಕಯ್ಯಿಂದ ಮಾಡಿಸುವರೇ ರಾಮನಾಥ'[45] ಎಂದು ಹೇಳುವಲ್ಲಿ ಭಕ್ತ–ಭಗವಂತರ ನಡುವೆ ಯಾವ ದಳ್ಳಾಳಿಯೂ ಬೇಡ: ಸ್ವ ಇಚ್ಛೆಯಿಂದ, ಭಕ್ತನಾದವನು ಭಗವಂತನ ಪೂಜೆ ಮಾಡಬೇಕೆಂದು ಕಟುವಾಗಿಯೇ ಹೇಳಿದ್ದಾನೆ. ಎಡರಡಸಿದಹೊತ್ತು

35. ಜೇಡರದಾಸಿಮಯ್ಯನ ವಚನಗಳು ; ಪುಟ ೧೫ ವ. ೬೦. 36. ಅದೇ ; ಪುಟ : ೧೬ ; ವ : ೬೪
37. ಅದೇ ; ಪುಟ : ೧೪ ; ವ : ೫೬ 38. ಅದೇ : ಪುಟ : ೧೪ ; ವ : ೫೮ 39. ಅದೇ ; ಪುಟ : ೧೭ ; ವ : ೭೨
40. ಅದೇ ; ಪುಟ : ೭ ; ವ : ೨೬ 41. ಅದೇ ; ಪುಟ : ೫ ; ವ - ೧೭ 42. ಅದೇ ; ಪುಟ : ೫; ವ : ೧೮
43. ಅದೇ ; ಪುಟ : ೧೩ ; ವ : ೫೦ 44. ಅದೇ : ಪುಟ : ೩೦ ; ವ : ೧೨೯ 45. ಅದೇ ; ಪುಟ : ೨೮ : ವ : ೧೧೮

ಮೃಡನನ್ನು ನೆನೆಯುವ, ಆ ವಿಪತ್ತು ಕಡೆಯಾಗಲು ಮೃಡನನ್ನು ಎಡಹಿಯೂ ಕಾಣದ ಮನೋಧರ್ಮವನ್ನು ತಿರಸ್ಕರಿಸಿದ್ದಾನೆ ದಾಸಿಮಯ್ಯ, ಡಂಬಾಚಾರ, ಹೀನಮನದಿಂದ ಮಾಡುವ ಭಕ್ತಿಯ ಬಗೆಗೆ ದಾಸಿಮಯ್ಯ—

> 'ಹಂದಿ ಶ್ರೀಗಂಧವ ಹೂಸಿದರೇನು ಗಂಧರಾಜನಾಗಬಲ್ಲುದೆ? ನವಿಲು ನಲಿಯಿತ್ತೆಂದು ಕಾಕೋಳಿ ಪುಚ್ಛವತೆಱಿಕೊಂಡಂತೆ ಕರ್ಮಿಗಳ ಭಕ್ತಿ.
> ಪೋಱಿ ವೇಷದ ವಿಭೂತಿ ರುದ್ರಾಕ್ಷಿಯ ಪೂಸಿದರೇನು ತೆಱನಱಿದು ಮಱೆವೆ ಕಳೆದು ಮಾತಿನಂತೆ ನೀತಿಯುಳ್ಳರೆ
> ಅವರ ಅಜಾತರೆಂಬೆ ರಾಮನಾಥಾ'46 'ವೇಷವನೂ ವೇಶಿಯನೂ ಸರಿಯೆಂಬೆ'47

ಎಂಬ ವಚನಗಳಲ್ಲಿ ಹೇಳಿದ್ದಾನೆ. ವೇಶ್ಯೆಯು ತನ್ನ ಲೌಕಿಕ ಜೀವನಕ್ಕಾಗಿ ಹೆಣಗುವಳು. ಭಕ್ತ ವೇಷವನ್ನು ಹೊತ್ತು ಲೌಕಿಕದಲ್ಲಿಯೇ ಇದ್ದು ಲೋಕವ ಹಾರುವುದಾದರೆ ಅವನು ಭಕ್ತನಲ್ಲ. ಅದು ಭಕ್ತಿಯೂ ಅಲ್ಲ ಎಂಬುದನ್ನು ಸ್ಪಷ್ಟಗೊಳಿಸಿದ್ದಾನೆ.

ಆಸೆ ಆಮಿಷಗಳಿಗೆ ಒಳಗಾಗಿ ಮಾಡುವ ಭಕ್ತಿ ಬೆಕ್ಕು ಸನ್ಯಾಸ ತೆಗೆದುಕೊಂಡಂತೆ ಎಂದು 'ಬಱುಸಟೆಗನ ಭಕ್ತಿ ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತೆ'48 ಎಂಬಲ್ಲಿ ಸೂಚಿಸಿದ್ದಾನೆ. ಇಲ್ಲಿ ಚಂಚಲಮನಸ್ಸಿನಿಂದ ಕೂಡಿದವರ ಭಕ್ತಿಯು ಎಂತಹುದು ಎಂಬುದನ್ನು ಸ್ಪಷ್ಟಗೊಳಿಸಿದ್ದಾನೆ. ಭಕ್ತವಿನಯಶೀಲನಾಗಿರಬೇಕು, ವಿವೇಕಯುತನಾಗಿರಬೇಕು, ಅಹಿಂಸಾಪ್ರಿಯನೂ ಆಗಿರಬೇಕು, ಜಾತಿಭೇದವನ್ನು ಹೊಂದಿರಬಾರದು, ಮೇಲು–ಕೀಳು ಎಂಬ ಭಾವನೆಯನ್ನು ತಳೆಯಬಾರದು ಎಂದು ತನ್ನ ವಚನಗಳಲ್ಲಿ ನಿರೂಪಿಸಿದ್ದಾನೆ.

ಸ್ತ್ರೀಗೆ ಸಮಾನಾಧಿಕಾರವನ್ನು ಕೊಡಬೇಕೆಂದೂ, ಅದು ಶಿವನಿಗೆ ಹಿತವಾದುದೆಂದೂ,

> 'ಸತಿಪತಿಗಳೊಂದಾದ ಭಕ್ತಿಹಿತವಾಗಿಪ್ಪುದು ಶಿವಂಗೆ ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು ವಿಷವಬೆರಸಿದಂತೆ ರಾಮನಾಥ'49

ಎಂಬ ವಚನದಲ್ಲಿ ಹೇಳಿದ್ದಾನೆ. ಸ್ತ್ರೀಯನ್ನು ಗೌರವದಿಂದ ಕಾಣಬೇಕು. ಪರಸ್ತ್ರೀಯನ್ನು ತಾಯಿ ಎಂದು ತಿಳಿಯಬೇಕೆಂಬುದನ್ನು–

> 'ಗಂಡನುಳ್ಳಮ್ಮನ ಗೌರಿ ಎಂದು ಕಂಡರೆ ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು
> ಗಂಡನುಳ್ಳಮ್ಮನ ಒಡವೆರೆದಾತ ನರಕದಲ್ಲಿ ದಿಂಡುಗೆಡೆದಿಪ್ಪನೈ ರಾಮನಾಥ50' ಪರವಧುವನೆರೆಯದೆ ಪರಧನವಹಾಱಕದೆ
> ಪರದೈವದಿಚ್ಚೆವಡೆಯದೆ ಗುರುಲಿಂಗ ಜಂಗಮಕೆ ವರದಾಸನಾದಾತನೆಧರೆಮೂಱಕ್ಕೆ ಗುರುವಾಗಿಪ್ಪನೈರಾಮನಾಥ'51

ಎಂದು ಹೇಳಿರುವುದಲ್ಲದೆ 'ಶಿವಭಕ್ತರು ನಿಜಕೈಲಾಸಕ್ಕೆ ಹೋದರೆ ಅವರ ಸತಿಯರನ್ನು ಪಾರ್ವತಿಯ ಸರಿಕಾಣಬೇಕೆಂದು ಹೇಳಿದ್ದಾನೆ.

ಜಾತ್ಯತೀತ ಮನೋಧರ್ಮ ಈತನ ವಚನಗಳಲ್ಲಿ ಸ್ಪಷ್ಟಗೊಂಡಿದೆ.

> 'ಮಡದಿ ಪ್ರಾಣಕ್ಕೆ ಮೊಲೆ ಮುಡಿಯಿದ್ದಿತ್ತೆ? ಒಡೆಯನ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ?
> ಕಡೆಯಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ'?52

ಎಂಬ ವಚನದಲ್ಲಿ ಜಾತಿ ಎಂಬುದು ಹುಟ್ಟಿನಲ್ಲಿಲ್ಲವೆಂದು ಸ್ಪಷ್ಟಗೊಳಿಸಿದ್ದಾನೆ.

ತನ್ನ ಕಾಲದ ಸಮಾಜವನ್ನು ಸ್ಪಷ್ಟವಾಗಿ ಪರಿಶೀಲಿಸಿ ಬಾಹ್ಯಾಡಂಬರಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾನೆ.

> 'ಕಂಚು-ಮುಟ್ಟು-ಕಲ್ಲು-ಗುಂಡುಗಳೆರೆವಣ್ಣಗಳು ನೀವು ಕೇಳಿರೆ! ಗಂಟೆಯನುಡಿಸಿ ಶಿವನನುಂಟು ಮಾಡಿಕೊಂಡಿಹೆನೆಂಬಿರಿ
> ಆ ಗಂಟೆಯ ಧ್ವನಿಗೆ ಒಂದು ಗೋಟಡಿಕೆಯು ಸೋಲ ಗುರುರಾಮನಾಥನು'53

ಮನದಲ್ಲಿ ನಿಶ್ಚಲತೆ ಇಲ್ಲದವರು, ವಿಷಯ ಸುಖಗಳಲ್ಲಿ ಲೋಲುಪರಾದವರು ತೋರಿಕೆಗಾಗಿ ಕಂಚು-ಕಲ್ಲು-ಗುಂಡುಗಳೇ ದೇವರುಗಳೆಂದು ಪೂಜಿಸಿ ಪುಣ್ಯಪಡೆದೆವೆಂದು ಬೀಗುವರು. ಇಂತಹವರನ್ನು ಖಂಡಿಸಿದ್ದಾನೆ ಮೇಲಿನ ವಚನದಲ್ಲಿ. ಕಪಟಿಗಳ ಭಕ್ತಿಯನ್ನು-

> 'ತೊಡೆಯಲ್ಲಿ ಮುದ್ರೆಯನೊತ್ತಿದಡೆನೋ: ಅದು ನಡೆಯಲ್ಲಿ ಶುಚಿಯಾಗಬಲ್ಲುದೆ?
> ಮಡಿಲಲ್ಲಿ ಲಿಂಗವಕಟ್ಟಿದಡೇನೋ ಲೋಕದ ಅಜ್ಞಾನಿತನ ಬಿಡುವುದೇ?
> ನಡೆ-ನುಡಿ-ಸತ್ಯ-ಸದಾಚಾರಿಗಳು ಎಡೆ ಎಡೆಗೊಬ್ಬರು ಕಾಣಾ ರಾಮನಾಥ'54

ಎಂದು ಹೀಗಳೆದಿದ್ದಾನೆ.

ಸಾಧಕನಾದ ದಾಸಿಮಯ್ಯ ತನ್ನ ಕಾಲದ ಜನಜೀವನವನ್ನು ಹಸನುಗೊಳಿಸಲು ಪ್ರಯತ್ನಿಸಿದ್ದಾನೆ. ಸಜ್ಜನರ ಸಂಗವ ಮಾಡದೆ ಕಳ್ಳಹಾದರಿಗರ ಸಂಗವ ಮಾಡಿದರೆ ಅದು 'ಹೊಳ್ಳಕುಟ್ಟಿ ಕೈ ಹೋಟೆಯಾದಂತೆ' ಎಂದು ತಿಳಿಸಿದರೆ, ಇನ್ನೊಂದೆಡೆ ಆದರದಿಂದ ಕಾಣುವರ ಮನೆಗೆ ಹೋಗಬೇಕೇ ಹೊರತು 'ಇತ್ತಬಾ' ಎನ್ನದವರ ಬಳಿ ಸುಳಿಯಬಾರದೆಂದು ತಿಳಿಸಿದ್ದಾನೆ. ಮದ್ಯ

46. ಅದೇ ; ಪುಟ : ೯ ; ವ : ೩೪.
47. ಅದೇ ; ಪುಟ : ೧೩ ; ವ : ೪೯
48. ಅದೇ ; ಪುಟ : ೧೩ ; ವ : ೫೩
49. ಅದೇ, ಪುಟ, ೧೪ ; ವ : ೫೫
50. ಅದೇ ; ಪುಟ : ೧೬ ವ. ೧೬.
51. ಅದೇ ; ಪುಟ : ೧೬ ; ವ : ೬೮
52. ಅದೇ ; ಪುಟ ೧, ವ. ೩.
53. ಅದೇ ಪರಿಶಿಷ್ಟ ; ಪುಟ. ೩೪, ವ. ೭
54. ಅದೇ ಪುಟ : ೨೬ ; ವ : ೧೦೯.

ಪಾನ, ಮಾಂಸಭಕ್ಷಣ, ಪರಸ್ತ್ರೀಸಂಗ, ವೇಶ್ಯೆಯಸಂಗಗಳನ್ನು ತೊರೆಯಬೇಕು. ಅಹಂಕಾರಿಯಾಗದೆ ದೇವರಿಗೆ ಬಾಗಿ ನಡೆಯ ಬೇಕು. ಹಾಗಲ್ಲದಿದ್ದರೆ 'ಕುಲಜನಾನೆಂದು ತಲೆವಾಗದಿದ್ದರೆ ಆ ತಲೆ ಶೂಲದ ತಲೆಯಯ್ಯಾ' ಎಂದು ಹೇಳಿದ್ದಾನೆ. ಅಮಾವಾಸ್ಯೆ, ಸಂಕ್ರಾಂತಿ. ಹೊತ್ತಾರೆ-ಮಟಮಧ್ಯಾಹ್ನ ಎಂದು ಮೀನಮೇಷ ಎಣಿಸದೆ ಹಿಡಿದ ಕಾರ್ಯವನ್ನು ಆಯಾಕಾಲಕ್ಕೆ ಶ್ರದ್ಧೆಯಿಂದ ಮಾಡಬೇಕು. ಹೆಣ್ಣುಕಂಡು ಹೆಚ್ಚಿ ಹೆಕ್ಕಳಬಡುವಂತೆ ಶಿವಲಿಂಗವನ್ನು ಕಣ್ಣಿಟ್ಟು ನೋಡಬೇಕು, ಎಂದು ಅಧಿಕಾರ ವಾಣಿಯಿಂದ, ಮೃದುವಾಗಿ, ಕೆಲವೊಮ್ಮೆ ಕಟುವಾಗಿ ಹೇಳಿ ಸಮಾಜವನ್ನು ತಿದ್ದಲೆಳಸಿದ್ದಾನೆ ದಾಸಿಮಯ್ಯ.

೭

ತಾತ್ವಿಕ ವಿಚಾರವನ್ನು ಸಮರ್ಥವಾಗಿ ನಿರೂಪಿಸುವ ಈತನ ವಚನಗಳಲ್ಲಿನ ಕಾವ್ಯಸೌಂದರ್ಯವೂ ಅಷ್ಟೇ ಸಮರ್ಥ ವಾಗಿದೆ. ಕನ್ನಡಸಾಹಿತ್ಯದಲ್ಲಿ ಜನಭಾಷೆಗೆ ಕಾವ್ಯಭಾಷೆಯ ಪಟ್ಟಕಟ್ಟಿ ಸಾಮಾನ್ಯ ಜನತೆಯೂ ಸಾಹಿತ್ಯಗಂಗೆಯಲ್ಲಿ ಮುಳುಗಿ ಪುನೀತರಾಗುವಂತೆ ಮಾಡಿದ ಕೀರ್ತಿ ಜೇಡರದಾಸಿಮಯ್ಯನದು. ಈತ ಹೇಳುವ ಮಾತುಗಳು ರಸವತ್ತಾದ ಕಾವ್ಯವಾಣಿಗಳಾಗಿವೆ. ಉಪಮೆಗಳು, ದೃಷ್ಟಾಂತಗಳು, ಗಾದೆ ಮಾತುಗಳು, ಆಡುನುಡಿಯ ಪದಸಮೂಹಗಳ ಬಳಕೆಯಿಂದ ಅವನ ಅಭಿವ್ಯಕ್ತಿಯಲ್ಲಿ ವಿಶೇಷವಾದ ಕಾಂತಿ ಕಂಡುಬರುತ್ತದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ವಿಪುಲವಾದ ಧಾರ್ಮಿಕ ಹಾಗೂ ಲೌಕಿಕ ಬದುಕಿನ ಚಿತ್ರವನ್ನು ಕೊಡುವಲ್ಲಿ ದಾಸಿಮಯ್ಯ ಸಮರ್ಥ. ಈತನ ವಚನಗಳ ಭಾಷೆ ಜೇನಿನಲ್ಲಿ ಅದ್ದಿ ತೆಗೆದ ರಸಬಾಳೆ ಹಣ್ಣಿನಂತೆ ಬಲುರುಚಿ. ಬಲು ಹಿತ. ತಮಿಳು ಸಾಹಿತ್ಯ ಪ್ರಪಂಚದಲ್ಲಿ 'ಕುರುಳ್' ಗ್ರಂಥಕರ್ತರಾದ ತಿರುವಳ್ಳುವರ್ ಅವರಿಗೆ ಯಾವ ಪೂಜ್ಯಸ್ಥಾನವಿದೆಯೋ ಅಂತಹುದೇ ಸ್ಥಾನ ಜೇಡರದಾಸಿಮಯ್ಯನಿಗೆ ಕನ್ನಡ ಸರಸ್ವತಿಯ ಆಸ್ಥಾನದಲ್ಲಿದೆ. ಕುರುಳ್ ಪದ್ಯಗಳು ಸೂತ್ರಗಳಂತೆ ಬಹು ಚಿಕ್ಕವೂ ಅಸಂದಿಗ್ಧವೂ, ಸುಸ್ಪಷ್ಟ ಅರ್ಥವುಳ್ಳವೂ ಆಗಿವೆ. ಅನುಭವ ಸಾಗರದಿಂದ ಮೂಡಿದ ಮಹೋಜ್ವಲ ರತ್ನಗಳಂತಿರುವ ದಾಸಿಮಯ್ಯನ ವಚನಗಳೂ ಚಿಕ್ಕವೂ, ಅಸಂದಿಗ್ಧ ಹಾಗೂ ಸುಸ್ಪಷ್ಟ ಅರ್ಥವುಳ್ಳವೂ ಆಗಿವೆ.

ದಾಸಿಮಯ್ಯ ಬಳಸಿರುವ ಉಪಮೆಗಳು ಹೆಚ್ಚು ಜನಜೀವನದಿಂದ ಆರಿಸಿಕೊಂಡಂತಹವು.

> 'ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ ಆ ತೃಣವನು ಆ ಕೆಂಡ ನುಂಗುವಂತೆ
> ಗುರುಚರಣದ ಮೇಲೆ ತನುವೆಂಬ ತೃಣವನಿರಿಸಿದರೆ ಆ ತನುವೆಲ್ಲಾ ಲಿಂಗಮಯ ಕಾಣಾ ರಾಮನಾಥ'[55]

ಇಲ್ಲಿ ಬರುವ ಕೆಂಡ–ತೃಣ ; ಗುರುಚರಣ–ದೇಹಗಳ ನಡುವಣ ಉಪಮೆ ಮನೋಜ್ಞವಾದುದು. ಹೀಗೆ ಅನೇಕ ಉಪಮೆಗಳನ್ನು ಗಮನಿಸಬಹುದು.

> ಘಟದೊಳಗೆ ತೋರುವ ಸೂರ್ಯನಂತೆ
> ಮಠದೊಳಗಣ ಬೆಕ್ಕು ಇಲಿಯ ಕಂಡು ಪುಡನೆಗೆದಂತೆ
> ಹೊಳ್ಳ ಕುಟ್ಟ ಕೈ ಹೋಟೆಯಾದಂತೆ
> ಪಾಶಕ್ಕೆ ಸಿಕ್ಕಿದ ಪಶುವಿನಂತೆ
> ಹೂವಿನೊಳಗಣ ಕಂಪ ಹೊರಸೂಸಿ ಸುಳಿವ ಅನಿಲನಂತೆ

ಇಲ್ಲಿ ಘಟವನ್ನು ಸೃಷ್ಟಿಗೂ–ಸೂರ್ಯನನ್ನು ಶಿವನಿಗೂ : ಬಜಾಸಟೆಗನನ್ನು ಮಠದ ಬೆಕ್ಕಿಗೂ ಇಲಿಯನ್ನು ಸಂಸಾರಕ್ಕೂ ಹೋಲಿ ಸಿರುವ ಉಪಮೆಗಳ ಸೊಗಸೇಸೊಗಸು.

ದೃಷ್ಟಾಂತಗಳನ್ನು ಬಳಸುವಾಗಲೂ ಜನತೆಯ ದಿನ ನಿತ್ಯದ ಬಳಕೆಯಲ್ಲಿನ ಭಾಷೆಯಿಂದ ಬಂದಂತಹವು.

> 'ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬದೆ? ಕಡೆಗೀಲು ಬಂಡಿಗಾಧಾರ
> ಇಡಿದರ್ಪಯೇ(ವೇ?)ಜಿದ್ದ ಒಡಲೆಂಬ ಬಂಡಿಗೆ ಮೃಡ ಭಕ್ತರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ'[56]

ಇಲ್ಲಿ ಬಂಡಿಯ ದೃಷ್ಟಾಂತ ಜೀವಂತವಾಗಿ ಮೂಡಿ ಬಂದಿರುವುದು ಸ್ಪಷ್ಟ. ಒಡಲು ಬಂಡಿ-ಇವೆರಡೂ ಚಲನ ಕ್ರಿಯೆಯಿಂದ ಕೂಡಿದವು. ಇವೆರಡರ ಚಕ್ರಗಳು ಸುಸೂತ್ರವಾಗಿ ಉರುಳಲು ಕಡೆಗೀಲು ಅವಶ್ಯಕ. ಬಂಡಿಯ ಚಕ್ರಕ್ಕೆ ಕಬ್ಬಿಣದ ಕಡೆಗೀಲಾದರೆ ದರ್ಪದಿಂದ ಕೂಡಿದ ದೇಹಕ್ಕೆ ಶಿವಶರಣರ ನುಡಿಗಡಣ ಕಡೆಗೀಲು. ಎಂತಹ ಸೊಗಸಾದ ದೃಷ್ಟಾಂತ. ಎಷ್ಟು ಉಚಿತ. ನರಕ ದಲ್ಲಿ ಬೀಳುವ ಮನುಷ್ಯನಿಗೆ ಶಿವಭಕ್ತಿ ಹಿಡಿಸುವುದಿಲ್ಲ ಎಂಬುದನ್ನು 'ಜ್ವರವಿಡಿದ ಬಾಯಿಗೆ ನೊರೆವಾಲು ಉರಿಸುವುದೆ?' ಎಂಬ ದೃಷ್ಟಾಂತದಿಂದ ತನು ನಮ್ಮ ಅಧೀನದಲ್ಲಿರುವಂತೆ ಮನವೂ ನಮ್ಮ ಅಧೀನದಲ್ಲಿರಬೇಕೆಂಬ ಅಂಶವನ್ನು 'ಕೆನೆಯಿಲ್ಲದ ಮೊಸರ ಕಡೆದರೆ ಅಲ್ಲಿ ಒಂದು ಹನಿ ತುಪ್ಪವಿಲ್ಲ' ಎಂಬ ದೃಷ್ಟಾಂತದಿಂದ, ವೈವಸಿಷ್ಠ್ಯಯಿಲ್ಲದ ಜನ ಹೆಣ್ಣು-ಹೊನ್ನು-ಮಣ್ಣುಗಳ ಆಸೆಯ ಸುಳಿಯಲ್ಲಿ ಸಿಕ್ಕು ನಿಜ ಭಕ್ತಿಯನ್ನು ಆಚರಿಸಲಾರರು ಎಂಬುದನ್ನು 'ಹೆಂಬೇಡಿಗೆ ಹಿಡಿಯಬಹುದೇ ಹೇಳಿಗೆಯೊಳಗಣಹಾವ'

---

55. ಅದೇ ; ಪುಟ : ೧೯ ; ವ : ೭೮.　　56. ಅದೇ ; ಪುಟ : ೨೧ ; ವ : ೮೫.

ಎಂಬ ದೃಷ್ಟಾಂತದಿಂದ, ಧನಮದದಿಂದ ಮಾಡಿದ ಭಕ್ತಿ 'ಸುನಕನ ಬಾಯ ಎಲುವ ಪ್ರತಿ ಸುನಕತಿಂದಂತೆ' ಎಂಬ ದೃಷ್ಟಾಂತದಿಂದ ಸ್ಪಷ್ಟಗೊಳಿಸುವನು. ಈ ದೃಷ್ಟಾಂತಗಳಲ್ಲಿ ಆಡು ನುಡಿಯ ಸೊಗಸಿರುವುದು ಗಮನಾರ್ಹವಾದುದು.

ಜನಸಾಮಾನ್ಯರಲ್ಲಿ ಬಳಕೆಯಲ್ಲಿದ್ದ ಗಾದೆ ಮಾತುಗಳನ್ನು ಸಂದರ್ಭಕ್ಕೆ ಹೊಂದುವಂತೆ ಸಮರ್ಥವಾಗಿ ಬಳಸಿದ್ದಾನೆ. 'ನವಿಲು ಕುಣಿಯಿತ್ತೆಂದರೆ ಕಾಕೋಳಿ ಪುಚ್ಚವ ತರಕೊಂಡಂತೆ' 'ಕತ್ತೆ ಬಲ್ಲುದೆ ಕಸ್ತೂರಿಯ ವಾಸನೆಯ' ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ' 'ಹುಣಿಸೆಯ ಹೂವೆಲ್ಲ ಕಾಯಾಗ ಬಲ್ಲುದೆ' ಇತ್ಯಾದಿ, ಜನತೆಯ ನಿತ್ಯ ಜೀವನದಲ್ಲಿ ಬಳಕೆಯಾಗುತ್ತಿದ್ದ ಗಾದೆ ಮಾತುಗಳನ್ನು ದಾಸಿಮಯ್ಯ ಗ್ರಹಿಸಿರುವುದನ್ನು ಸ್ಪಷ್ಟಗೊಳಿಸುತ್ತವೆ.

ಒಂದು ಮಾತನ್ನು ಹಲವು ಅರ್ಥಗಳಲ್ಲಿಯೂ, ಶ್ಲೇಷಾರ್ಥದಲ್ಲಿಯೂ ಸಮರ್ಥವಾಗಿ, ಸಮುಚಿತವಾಗಿಯೂ ಬಳಸುವಲ್ಲಿ ದಾಸಿಮಯ್ಯನ ನೈಪುಣ್ಯತೆ ವ್ಯಕ್ತವಾಗುತ್ತದೆ. 'ಮಣಿವೊಡೆ ಶಿವಭಕ್ತ ಮಣಿಯ ಕಟ್ಟಲೇಬೇಕು' ಎಂಬಲ್ಲಿನ 'ಮಣಿ' ಶಬ್ದ-ತಲೆಬಾಗು, ರುದ್ರಾಕ್ಷಿ, ಸೇವೆ, ರತ್ನ ಎಂಬೆಲ್ಲ ಅರ್ಥದಲ್ಲಿ ಬಳಕೆಯಾಗಿದೆ. 'ಬಯಲ ಬಣ್ಣವ ಮಾಡಿ' ಎಂಬ ವಚನದಲ್ಲಿ 'ಬಯಲು' ಪರಿಪೂರ್ಣ, ಶೂನ್ಯ ಎಂಬ ಅರ್ಥಗಳಲ್ಲಿಯೂ ಬಣ್ಣ-ವರ್ಣ ಎಂಬ ಸಾಮಾನ್ಯ ಅರ್ಥ ಹಾಗೂ ಸೃಷ್ಟಿ ಎಂಬ ವಿಶಿಷ್ಟ ಅರ್ಥದಲ್ಲಿಯೂ ಬಳಕೆಯಾಗಿದೆ.

ದಾಸಿಮಯ್ಯ ಪ್ರಾಸಪ್ರಿಯನಲ್ಲದಿದ್ದರೂ ಪ್ರಾಸಾನುಪ್ರಾಸಗಳು ವಚನ ರಚನೆಯ ಸಂದರ್ಭದಲ್ಲಿ ತಾವಾಗಿಯೇ ಮೂಡಿ ಅರ್ಥ ಪುಷ್ಟಿಯನ್ನೂ ಭಾವ ತೀವ್ರತೆಯನ್ನೂ ಹೆಚ್ಚಿಸುತ್ತವೆ. ಉದಾಹರಣೆಗೆ 'ಮಣಿಗಣ ಸೂತ್ರದಂತೆ ತ್ರಿಣಯನ ನೀನಿಪ್ಪೆಯಯ್ಯಾ' 'ನೆಟ್ಟನೆ ನಂಬಿಕರೆದರೆ ನರಿ ಕುದುರೆಯಾಗಿ ಹರಿಯವೆ' 'ನೀನೀಶ ನೀಯದೆ ಮಾನೀಸನೀವನೆ'-ಇತ್ಯಾದಿಗಳನ್ನು ಗಮನಿಸಬಹುದು.

ಈತನ ವಚನಗಳಲ್ಲಿ 'ದೇಸಿ'ಯ ಸೊಗಸು ಮೂಡಿರುವುದು, 'ಎಡರಡಸಿದಲ್ಲಿ ನಿಮ್ಮ ನೆನೆವರು' ; 'ಎಳ್ಳಿಲ್ಲದ ಗಾಣದಲ್ಲಿ ಎಣ್ಣೆಯುಂಟೆ' ; 'ಇಂತೆಂದ ಗಗನವ, ಇಂತೆಂದ ಭೂಮಿಯ' ; 'ಕಾತ ಕಳವೆ' : 'ಕಚ್ಚುವರು ಬೊಗಳುವರು' : 'ಅಂಬಲಿ ಅಳೆಯಾಗಿ ತುಂಬೆಯ ಮೇಲೋಗರವಾಗಿ' ; 'ಭಕ್ತನ ಮನೆಯ ಹಿತ್ತಿಲ ಬೇಲಿಯಾಗಿಪ್ಪೆ' ಇತ್ಯಾದಿಗಳಲ್ಲಿ ವ್ಯಕ್ತವಾಗಿದೆ. ಇವುಗಳನ್ನು ಓದಿದಾಗ ಕನ್ನಡ ನುಡಿ ಶಕ್ತಿಯುಳ್ಳದೂ, ಬನಿಯುಳ್ಳದ್ದೂ ಎಂದು ಸ್ಪಷ್ಟವಾಗುತ್ತದೆ. ದಾಸಿಮಯ್ಯನಾದ ಆತನ ಕುಲವಷ್ಟೇ ಅಲ್ಲ ಕನ್ನಡ ಭಾಷೆಯೂ ದೇಸಿವಡೆದು ಉದ್ಧಾರವಾಯಿತು ಎಂಬುದು ಆತ ಬಳಸಿರುವ ಮಾತುಗಳಿಂದ ಸ್ಪಷ್ಟವಾಗುತ್ತದೆ. ದಾಸಿಮಯ್ಯ ಮಾತಿನಮರ್ಮವರಿತು, ಹದ-ಹವಣರಿತು ಬಳಸುವಲ್ಲಿ ನಿಸ್ಸೀಮ, 'ಮೀಸಲು' 'ಸೂಳ್ನುಡಿ' 'ಹೊಡಗೆಡೆ' 'ಮಣಿ' 'ಬಯಲು' 'ಓಜೆ' 'ಬಣ್ಣ' 'ಸೂಡು' 'ಕಾಕೋಳಿ' 'ತೊಜೀಯ' 'ಈಸು' ಇತ್ಯಾದಿಗಳಿಗೆ ಉಸಿರಿತ್ತು ಮೆರೆಸಿದ್ದಾನೆ. 'ಇವನ ವಚನಗಳಲ್ಲಿ ಜೀವಕಳೆಯಿದೆ. ಈತ ಹೇಳಬೇಕಾದ ಮಾತುಗಳನ್ನು ಮನಮುಟ್ಟುವ ಹಾಗೆ ಹೇಳುತ್ತಾನೆ. ಆ ವಚನಗಳಲ್ಲಿ ತತ್ತ್ವಶುಷ್ಕವಾದ ನಿರೂಪಣೆಯಾಗಿಲ್ಲ. ಉದಾತ್ತವಾದ ಭಾವಗಳನ್ನು ಬಹು ಚಮತ್ಕಾರವಾಗಿ ಸುಲಭವಾದ ಮಾತುಗಳಲ್ಲಿ ಓದಿದೊಡನೆಯೇ ಮನಸ್ಸಿಗೆ ಹಿಡಿಯುವ ಹಾಗೆ ಒಂದೊಂದು ಅರ್ಥಗರ್ಭಿತವಾದ ಉಪಮಾನದಿಂದ ಒಂದೊಂದು ದೊಡ್ಡ ಚಿತ್ರವೇ ಕಣ್ಣೆದುರಿಗೆ ನಿಂತಹಾಗೆ ಬರೆಯುವುದರಲ್ಲಿ.........ಕುಶಲನು.' ಎಂಬ ಡಿ.ಎಲ್.ಎನ್. ಅವರ ಮಾತುಗಳು ಇಂದಿಗೂ ಎಂದೆಂದಿಗೂ ನಿಲ್ಲುವಂತಹವು.

ಈ ಲೇಖನವನ್ನು ಪೂರ್ಣಗೊಳಿಸುವ ಪೂರ್ವದಲ್ಲಿ ದಾಸಿಮಯ್ಯನ ಕಾಲದ ಸಮಾಜದ ರೂಪುರೇಷೆಗಳನ್ನು ಸ್ವಲ್ಪ ಮಟ್ಟಿಗೆ ಗಮನಿಸುವುದು ಸೂಕ್ತ. ದಾಸಿಮಯ್ಯನ ಕಾಲದಲ್ಲಿಯೂ ಸ್ತ್ರೀ-ಪುರುಷ, ಇದ್ದವ ಇಲ್ಲದವ, ಅಗ್ರಜ-ಅಂತ್ಯಜ ಎಂಬ ಧರ್ಮಘಾತಕ ಪ್ರವೃತ್ತಿಗಳು ಪ್ರಚಲಿತವಿದ್ದ ಅಂಶ ದಾಸಿಮಯ್ಯನ ವಚನಗಳಲ್ಲಿ ವ್ಯಕ್ತವಾಗಿದೆ. ದಾಸಿಮಯ್ಯನ ಕಾಲದಲ್ಲಿ ಈಗಿನಂತೆ ದೇವರಪೂಜೆಯನ್ನು ತಮ್ಮ ಹೆಸರಿನಲ್ಲಿ, ತಮಗಾಗಿ ಅನ್ಯರಿಂದ ಮಾಡಿಸುವ ರೂಢಿ ಇದ್ದಿತೆಂಬುದು 'ಸತಿಯರ ಸಂಗವನು......ಪೃಥ್ವಿಗೀಶ್ವರನ ಪೂಜೆಯನು ಅಜ್ವೃಳ್ಳರೆ ಹೆಜರ ಕೈಯಿಂದ ಮಾಡಿಸುವರೆ' ಎಂಬಲ್ಲಿ ಸ್ಪಷ್ಟವಾಗುತ್ತದೆ. ಲಿಂಗವನ್ನು ವಿಧಿಪೂರ್ವಕವಾಗಿ ಕೊಡದೆ ಸುಮ್ಮನೆ ಉಪದೇಶವೀಯುವುದನ್ನು ಗಮನಿಸಿದ ದಾಸಿಮಯ್ಯ ಅದನ್ನು ಖಂಡಿಸಲು-

> 'ಗುರುಲಿಂಗ ಒಂದೆಂಬರು ಗುರುಲಿಂಗ ಒಂದಾದಠಾವ ತಿಳಿದು ನೋಡಿರೆ। ಗುರುಕಾರುಣ್ಯವಾದ ಬಳಿಕ
> ಅಂಗದಮೇಲೆ ಲಿಂಗವಿರಬೇಕು;ಲಿಂಗವಿಲ್ಲದ ಗುರುಕಾರುಣ್ಯವು ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ ಕಾಣಾ ರಾಮನಾಥ'

ಎಂಬ ವಚನವನ್ನು ಹಾಡಿದ್ದಾನೆ. ಆಧ್ಯಾತ್ಮಿಕ ಪ್ರಗತಿಯ ಹಾದಿಯಲ್ಲಿ ಮೊದಲ ಮೆಟ್ಟಿಲು 'ನೀತಿ' ಎಂಬುದನ್ನು ಮನಗಂಡ ದಾಸಿಮಯ್ಯ ತನ್ನ ಕಾಲದಲ್ಲಿಯೂ ಭಕ್ತಿ ಮಾಡುವವರು, ಮಾಂಸ ತಿನ್ನುವ, ಮದ್ಯ ಕುಡಿವ, ವೇಸಿಯ ಎಂಜಲವೆಂಬ, ಅನೀತಿಯುತ ಬಾಳನ್ನು ಸಾಗಿಸುವ ಚಿತ್ರಕೊಟ್ಟು, ಅಂತಹ ವರ್ತನೆಯನ್ನು ತೀವ್ರವಾಗಿ ಖಂಡಿಸುವನು. ಕ್ಷೇತ್ರ ಯಾತ್ರೆ ಮಾಡುವ ಪರಿಪಾಠ ಆಗಲೂ ರೂಢಿಯಲ್ಲಿದ್ದುದನ್ನು ಗಮನಿಸಿ ಅದನ್ನು ಖಂಡಿಸಿದ್ದಾನೆ. ಭಕ್ತಿ ಪ್ರಪಂಚದಲ್ಲಿ ವರ್ಣಭೇದ, ವಯೋಭೇದ, ಬಡವ-ಬಲ್ಲಿದ ಎಂಬ ಭೇದವಿರಬಾರದೆಂದವನು ಮಾದಾರ ಚೆನ್ನಯ್ಯ. ಆದರೂ ಅವು ರೂಢಿಯಲ್ಲಿರುವುದನ್ನು ಗಮನಿಸಿ 'ಮಡ

ದಿಂದ ಪ್ರಾಣಕ್ಕೆ ಪೊಲೆ ಮುಡಿಯಿದ್ದಿತ್ತೆ' ಎಂಬ ವಚನವನ್ನು ಹಾಡಿ ಖಂಡಿಸಿದ್ದಾನೆ. ಜಂಗಮರಾದವರು ಶಿಷ್ಯರ ಮನೆಗೆ ಬಂದು ಅವರ ಮನೆಯಲ್ಲಿ 'ಬಿನ್ನಹ'ವನ್ನು ತೀರಿಸುವ, ಶಿಷ್ಯರನ್ನು ಹರಸುವ ಪದ್ಧತಿ ಆಗಲೂ ಇದ್ದಿತೆಂದು 'ನೆರೆವರೆ ಗಣಂಗಳು' ಎಂಬ ವಚನದಿಂದ ಸ್ಪಷ್ಟವಾಗುತ್ತದೆ. ಶಿಷ್ಯರಮನೆಗೆ ಬರುವಾಗ ತಮ್ಮ ಮನೆಯಿಂದಲೇ ಗಂಗಳ ತರುವ ಪದ್ಧತಿ ಇದ್ದುದನ್ನೂ ಸೂಚಿಸುತ್ತಾನೆ ದಾಸಿಮಯ್ಯ.

ದಾಸಿಮಯ್ಯ ತನ್ನ ಜೀವಿತಕಾಲದಲ್ಲಿಯೇ ಪೂಜೆ ಪ್ರಶಸ್ತಿ ಗೌರವಗಳನ್ನು ಪಡೆದು ಅನವರತವೂ ಜನತೆಯ ಹಿತವನ್ನೇ ಹಾರೈಸುತ್ತಾ ಜನಮನದ ಮೈಲಿಗೆಯನ್ನು ಕಳೆದು ಜೀವನ್ಮುಕ್ತನಾಗಿ ಬಾಳಿ, ಇಂದಿಗೂ ಕನ್ನಡ ಸಂಸ್ಕೃತಿಯ, ಸಾಹಿತ್ಯದ 'ಕಣ್ಣು' ಆಗಿ ಪರಿಶೋಭಿಸುತ್ತಿರುವನು.

## ಮಾದರ ಚೆನ್ನಯ್ಯ

**ಡಾ॥ ಎಸ್. ಜಿ. ಛಿವಾರಿ**

'ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡೆ ಚೆನ್ನ । ಪ್ರಮಥರೊಳಗೆ ಚೆನ್ನ, ಪುರಾತನರೊಳಗೆ ಚೆನ್ನ !
ಸವಿನೋಡಿ ಅಂಬಲಿಯ ರುಚಿಯಾಯಿತ್ತೆಂದು ಕೂಡಲ ಸಂಗಮ ದೇವಂಗೆ ಬೇಕೆಂದು ಕೈದೆಗೆದ ನಮ್ಮ ಚೆನ್ನ॥'[1]

ಕನ್ನಡ ನಾಡಿನಲ್ಲಿ ಆಗಿಹೋದ ಶಿವಶರಣರಲ್ಲಿ ಮಾದರ ಚೆನ್ನಯ್ಯನೂ ಒಬ್ಬ ಅಗ್ರಗಣ್ಯ ಶಿವಶರಣ. ಅವನ ಪಾರ ಮಾರ್ಥಿಕ ಜೀವನದ ಸಾಧನೆ ಸಿದ್ಧಿಗಳು ಅವನ ಸಮಕಾಲೀನ ಹಾಗೂ ಅನಂತರದ ಅನೇಕ ಶರಣರಿಗೆ ಆದರ್ಶಪ್ರಾಯ. ಅವನ ಗುಪ್ತಭಕ್ತಿಯ ಉತ್ಕಟತೆ, ಕಾಯಕ ನಿಷ್ಠೆ ಮತ್ತು ಲಿಂಗಭೋಗೋಪಭೋಗ ಜೀವನ ಪಾವನ ಹಾಗೂ ಅನುಕರಣೀಯ. ಚೆನ್ನ ಸಂಪಾದಿಸಿದ ಚೆನ್ನದಂತಹ ಜೀವನ ಮೌಲ್ಯಗಳಿಗೆ ಮಾರುಹೋದ ಬಸವಣ್ಣನವರು ಅವನಿಂದ ಭಕ್ತಿ ಭಿಕ್ಷೆಯನ್ನು ಬೇಡಿ ಪಡೆದು ಪುನೀತರಾದರು. ಭಕ್ತಿ ಭಂಡಾರಿಯಾಗಿ ಭುವಿಯಲ್ಲಿ ಬೆಳಗಿದರು.

'ಭಕ್ತಿಯಿಲ್ಲದ ಬಡವ ನಾನಯ್ಯಾ ; ಕಕ್ಕಯ್ಯನ ಮನೆಯಲು ಬೇಡಿದೆ ;
ಚೆನ್ನಯ್ಯನ ಮನೆಯಲೂ ಬೇಡಿದೆ; ದಾಸಯ್ಯನ ಮನೆಯಲೂ ಬೇಡಿದೆ
ಎಲ್ಲಾ ಪುರಾತರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ
ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ'[2]

ಈ ಎಲ್ಲ ಹಿರಿಯ ಶರಣರ ಪರುಷ ಸಂಪರ್ಕದಿಂದ ಬಸವಣ್ಣನವರ ಭಕ್ತಿ ಬಂಗಾರಕ್ಕೆ ಬಣ್ಣವೇರಿತು. ಕೃತಜ್ಞರಾದ ಬಸವಣ್ಣ ನವರು ಪುರಾತನ ಶರಣರಲ್ಲಿ ಮಾದರ ಚೆನ್ನಯ್ಯನಿಗೆ ಅತ್ಯಂತ ಋಣಿಯಾಗಿ ಅವನನ್ನು ತಮ್ಮ ಅನೇಕ ವಚನಗಳಲ್ಲಿ ಅನನ್ಯವಾಗಿ ಕೊಂಡಾಡಿದ್ದಾರೆ.

ಶಿವಶರಣರ ನಾಡಿನಲ್ಲಿ ಪ್ರಖ್ಯಾತನಾಗಿದ್ದ ಚೆನ್ನಯ್ಯ ಜನನದಿಂದ ಮಾದಿಗ. ಆದರೆ ತನ್ನ ಆಚಾರ ವಿಚಾರಗಳಿಂದ ಶಿವಾನುಭಾವಿ ಶರಣ. ಮೊದಮೊದಲು ಈ ಮಾದರ ಚೆನ್ನಯ್ಯ ತನ್ನ ಕುಲದ ಕಸುಬಾದ ಚರ್ಮವನ್ನು ಹದಗೊಳಿಸುವುದು, ಜೋಡು, ಮಿನಿ, ಮಟ್ಟೆ ಮೊದಲಾದ ಉಪಯುಕ್ತ ಚರ್ಮದ ವಸ್ತುಗಳನ್ನು ಮಾಡುವ ಕಾಯಕವನ್ನು ಅವಲಂಬಿಸಿದ್ದ. ಈ ಅಂಶ ಅವನ ವಚನಗಳಿಂದಲೆ ತಿಳಿದು ಬರುತ್ತದೆ. ಅವನು ಗುಪ್ತವಾಗಿ ಭಕ್ತಿಯನ್ನು ಆಚರಿಸುತ್ತ, ನೇಮನಿಷ್ಠೆಯ ಕಾಯಕವನ್ನು ನಡೆಸುತ್ತ, ತನ್ನ ಅಂತರಂಗ-ಬಹಿರಂಗಗಳನ್ನು ಶುದ್ಧೈಸಿಕೊಂಡು, ಲಿಂಗಾಂಗ ಸಾಮರಸ್ಯದ ನೆಲೆಯನ್ನು ನಿಲುಕಿ ಆತ್ಮ ಜ್ಞಾನಿಯಾಗಿದ್ದ.

'ಸ್ಥೂಲ ಸೂಕ್ಷ್ಮಕಾರಣವೆಂಬ ಮೂರು ಕಂಬವ ನೆಟ್ಟು, ಆಗುಫೇಣಿಯೆಂಬ ದಡಿಗೋಲಿನಲ್ಲಿ,
ಆಗಡದ ಎಮ್ಮೆಯ ಚರ್ಮವ ತೆಗೆದು, ಉಭಯನಾಮವೆಂಬ ನಾರಿನಲ್ಲಿ ತಿತ್ತಿಯನೊಪ್ಪವಮಾಡಿ,
ಭಾವವೆಂಬ ತಿಗುಡಿನಲ್ಲಿ, ಸರ್ವಸಾರವೆಂಬ ಬಾರದ ನೀರ ಹೊಯಿದು, ಅಟ್ಟೆಯ ದುರ್ಗುಣ ಕೆಟ್ಟು ಮೆಟ್ಟಡಿಯವರೆಗೆ ಮುಟ್ಟಿಸಬಂದೆ.
ಮೆಟ್ಟಡಿಯ ತಪ್ಪಲ ಕಾಯದೆ ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ.
ಕೈ, ಉಳಿ ಕತ್ತಿ ಅಡೆಗುಂಟಕ್ಕಡಿಯಾಗಬೇಡ ಅಜ್‌ ನಿಜಾತ್ಮ ರಾಮರಾಮನಾ॥'[3]

—ಈ ಬೆಡಗಿನ ವಚನದಲ್ಲಿ ಚೆನ್ನಯ್ಯ ತಾನು ಆಚರಿಸುವ ಕಾಯಕವನ್ನು ಅದರ ಪರಮಾರ್ಥ ಸ್ವರೂಪವನ್ನು ಸ್ವಾರಸ್ಯವಾಗಿ ವಿವರಿಸಿದ್ದಾನೆ. 'ಮಾನವನಲ್ಲಿ ಸ್ಥೂಲ ಸೂಕ್ಷ್ಮಕಾರಣಗಳೆಂಬ ತನುತ್ರಯಗಳಿದ್ದು ಅದೇ ಚರ್ಮವನ್ನು ಹದಗೊಳಿಸಲು ಮೂರು

1. 'ಬಸವಣ್ಣನವರ ಷಟ್‌ಸ್ಥಲ ವಚನಗಳು' –ಸಂ. ಫ. ಗು. ಹಳಕಟ್ಟಿ ಪು. ೨೧೨ ವ. ೭೯೪
2. ಅದೇ ಪು. ೯೧, ವ. ೩೪೯
3. 'ಸಕಲ ಪುರಾತರ ವಚನಗಳು' ಸಂ. ೩ ಮಾದರ ಚೆನ್ನಯ್ಯಗಳ ವಚನ. ೧ ಅದರ ವಿವರಣೆ ನೋಡಿ.

ಕಂಬಗಳು. ಈ ತೊಗಲು ಹದಗೊಳಿಸುವ ಕಾಯಕಕ್ಕೆ ಚರ್ಮ, ದಡಿಗೋಲು, ನಾರು, ತಿಗುಡಿ, ಬಾರಗಳು ಬೇಕಾಗುವಂತೆ ಈ ಮಾನವನ ದೇಹದಲ್ಲಿಯೆ ಅದನ್ನು ಶುದ್ಧಗೊಳಿಸುವ ಸನ್ನಾಹಗಳು ಇರುತ್ತವೆ. ಅವುಗಳನ್ನು ಅರಿತು ಆಚರಿಸಿ ಶುಚಿರ್ಭೂತನಾಗಿ ಶುದ್ಧಾಂಗನಾಗಬೇಕು. ಹದಗೊಳಿಸಿದ ಚರ್ಮದಿಂದ ಜೋಡುಗಳನ್ನು ಹೇಗೆ ಮಾಡುತ್ತಾರೊ ಹಾಗೆಯೆ ಮಾನವನು ತನ್ನ ಸದಾಚಾರದಿಂದ ಲಿಂಗಾಂಗ ಸಾಮರಸ್ಯದ ಮರ್ಮವನ್ನು ತಿಳಿದುಕೊಳ್ಳಬೇಕು.' ಆತ್ಮಜ್ಞಾನಿ ಚೆನ್ನಯ್ಯನ ವ್ಯಕ್ತಿತ್ವದ ಪ್ರಭಾವ ಬಸವಾದಿ ಪ್ರಮಥರ ಮೇಲೆ ಗಾಢವಾಗಿದ್ದಂತೆ ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ಅನಂತರದ ಶಿವಕವಿ ಹಂಪೆಯ ಹರಿಹರದೇವ ಈ ಮಾದರ ಚೆನ್ನಯ್ಯನ ಅಧ್ಯಾತ್ಮಜೀವನ ದರ್ಶನವನ್ನು ಸರ್ವರೂ ತಿಳಿದು ಬದುಕಬೇಕೆಂದು 'ಚೆನ್ನಯ್ಯಗಳ ರಗಳೆ'ಯನ್ನು ರಚಿಸಿ ತನ್ನ ಭಕ್ತಿಯ ಪುಷ್ಪಾಂಜಲಿಯನ್ನು ಅರ್ಪಿಸಿ ಕೃತಾರ್ಥನಾಗಿದ್ದಾನೆ. ಹಾಗೆಯೇ 'ಬಸವ ಪುರಾಣ'ದ ಭೀಮಕವಿ; 'ಚೆನ್ನಬಸವಪುರಾಣ'ದ ಕರ್ತೃ ವಿರೂಪಾಕ್ಷ ಪಂಡಿತ, 'ಸಾನಂದ ಚರಿತೆ'ಯನ್ನು ರಚಿಸಿದ ಕುಮಾರ ಪದ್ಮರಸ. 'ಶಿವತತ್ತ್ವ ಚಿಂತಾಮಣಿ'ಯನ್ನು ಬರೆದ ಲಕ್ಕಣ್ಣ ದಂಡೇಶ, 'ಪಾಲ್ಕುರಿಕೆ ಸೋಮೇಶ್ವರರ ಪುರಾಣ'ವನ್ನು ನೀಡಿದ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು, 'ಚೋರ ಬಸವ ಚರಿತ್ರ' ನಿರ್ಮಾತೃ ಶಂಕರ ಕವಿ ಮೊದಲಾದ ವೀರಶೈವ ಕವಿಗಳು ತಮ್ಮ ಕಾವ್ಯಗಳ ಪ್ರಾರಂಭದಲ್ಲಿ ಮಾದರ ಚೆನ್ನಯ್ಯನ ಮಹಿಮೆಯನ್ನು ಸ್ತುತಿಸಿ ಅವನಿಗೆ ಶರಣಾಗಿದ್ದಾರೆ. 'ನಡೆ ನುಡಿ ಸಿದ್ಧಾಂತವಾದ ಚೆನ್ನಯ್ಯನಿಗೆ ಕುಲಹೊಲೆಯ ಸೂತಕವಿಲ್ಲ. ಆಚಾರವೇ ಕುಲ ; ಅನಾಚಾರವೇ ಹೊಲೆ. ಈ ಉಭಯವ ತಿಳಿದು ಅರಿದ ಚೆನ್ನಯ್ಯ[4] ಚೊಕ್ಕ ಚಿನ್ನವಾಗಿದ್ದ. ಅವನ ಲಭ್ಯವಿರುವ ಕೆಲವೇ ವಚನಗಳಿಂದ ಅವನ ವ್ಯಕ್ತಿತ್ವದ ಸಿದ್ಧಿಯ ಕುರುಹುಗಳನ್ನು ಅರಿಯಬಹುದಾಗಿದೆ.

'ಗುರುಕಾರುಣ್ಯ ಪಡೆದು ಇಷ್ಟಲಿಂಗಧಾರಿಯಾದ ಮಾದರ ಚೆನ್ನಯ್ಯ ಲಿಂಗಾಭಿಮಾನಿಯೂ ಲಿಂಗಪ್ರಾಣಿಯೂ ಆಗಿದ್ದ. ಅವನು ತಮಿಳುನಾಡಿನ ಕಾಂಚೀಪಟ್ಟಣದಲ್ಲಿ ರಾಜ್ಯಭಾರ ಮಾಡುತ್ತಿದ್ದ ಶಿವಭಕ್ತಶ್ರೇಷ್ಠ ಕರಿಕಾಲಚೋಳ ರಾಜನ ಕುದುರೆಗಳ ಲಾಯಕ್ಕೆ ಕಾಡಿನ ಹುಲ್ಲನ್ನು ಕೊಯ್ದು ಒದಗಿಸುವ ಕಾಯಕವನ್ನು ಕೈಕೊಂಡಿದ್ದ. ಅವನು ಪ್ರಸಾದಿಸ್ಥಲವನೈದಿ ಸರ್ವವನ್ನು ಲಿಂಗಾರ್ಪಣ ಮಾಡಿ ಲಿಂಗಭೋಗೋಪಭೋಗಿಯಾಗಿ ಗುಪ್ತಭಕ್ತಿಯನ್ನು ಆಚರಿಸುತ್ತಿದ್ದ. ಅವನ ಮಿಗಿಲಾದ ಭಕ್ತಿಗೆ ಮೆಚ್ಚಿದ ಶಿವನು ಅವನೊಂದಿಗೆ ರುಚಿಯಾದ ತೆಳುಅಂಬಲಿಯನ್ನು ಸವಿದು ಅವನನ್ನು ತೃಪ್ತಿಪಡಿಸಿದ. ಅಲ್ಲದೆ ಚೆನ್ನಯ್ಯನ ಗುಪ್ತಭಕ್ತಿಯನ್ನೂ ಅದರ ಹಿರಿಮೆ–ಗರಿಮೆಯನ್ನೂ ಲೋಕದಲ್ಲಿ ಮೆರೆಯಬೇಕೆಂದು ಬಗೆದ.

ಶಿವಭಕ್ತ ಕರಿಕಾಲ ಚೋಳರಾಜನು ಮೃಷ್ಟಾನ್ನ ದಿವ್ಯಾನ್ನತತಿಗಳನ್ನು ಸಮೆಸಿ ಶಿವನಿಗೆ ಅರ್ಪಿಸಿದ. ಅನನ್ಯಭಕ್ತಿಯಿಂದ ದಿವ್ಯಾನ್ನವನ್ನು ಸೇವಿಸಲು ಶಿವನನ್ನು ಪ್ರಾರ್ಥಿಸಿದ. ಶಿವನು ಭುಂಜಿಸದೆ ಇರಲು ದಿಕ್ಕು ತೋಚದ ರಾಜನು ತನ್ನ ಪ್ರಾಣವನ್ನೇ ಅರ್ಪಿಸಲು ಅಣಿಯಾದ. ಆಗ ಶಿವನು ಸುಳುಹುದೋರಿ 'ಚೋಳ, ನಾನು ಚೆನ್ನನ ಮನೆಯಲ್ಲಿ ಅತ್ಯಾದರದಿಂದ ಸಲ್ಲಿಸಿದ ರುಚಿಯಾದ ಅಂಬಲಿಯನ್ನು ಸೇವಿಸಿ ತೃಪ್ತನಾಗಿದ್ದೇನೆ. ನಿನ್ನ ಈ ಪಕ್ವಾನ್ನಗಳಿಗಿಂತ ಚೆನ್ನನ ಅಂಬಲಿಯೆ ಲೇಸು' ಎಂದು ಹೇಳಿ ಅದೃಶ್ಯನಾದ. ಚೋಳರಾಜ ಚೆನ್ನನನ್ನು ಕಂಡು ಹಿಡಿದು ಶಿವನನ್ನು ಒಲಿಸಿಕೊಂಡ. ಅವನನ್ನು ಕೊಂಡಾಡಿದ. ಅವನಿಗೆ ನಮಿಸಿ ಭಕ್ತಿಯ ಬಗೆಯನ್ನು ತಿಳಿಸಲು ಪ್ರಾರ್ಥಿಸಿದ. ಹೀಗೆ ಚೆನ್ನಯ್ಯನ ಗುಪ್ತಭಕ್ತಿ ಬಯಲಾಗಲು ಇನ್ನು ತಾನಿರಬಾರದೆಂದು ಮಾದರ ಚೆನ್ನಯ್ಯ ಬಯಲಾದ.'* ಇದು ಹರಿಹರ ಕವಿಯು ಹೇಳಿದ ಚೆನ್ನಯ್ಯನ ಚರಿತ್ರೆ.

ಮಾದರ ಚೆನ್ನಯ್ಯ ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು, ತನ್ನ ಮನೆತನದ ಸಮಗಾರಿಕೆಯನ್ನೇ ತನ್ನ ಕಾಯಕವನ್ನು ಮಾಡಿಕೊಂಡು ತನ್ಮೂಲಕ ಪರಮಾರ್ಥಜ್ಞಾನವನ್ನು ಸಂಪಾದಿಸಿ ಶಿವಜ್ಞಾನಿಯಾಗಿದ್ದ. ಅವನ ಪೂರ್ವಜೀವನಚರಿತ್ರೆಗೆ ಹರಿಹರನ ಕಾವ್ಯದಲ್ಲಿ ಸ್ಥಾನವಿಲ್ಲ. ಆದರೂ ಈ ಅಂಶವು ವಾಸ್ತವವೆಂಬುದನ್ನು ನಿರ್ಧರಿಸಲು ಚೆನ್ನಯ್ಯನ ಸ್ವರಚಿತ ವಚನಗಳು ಹಾಗೂ ಬಸವಾದಿ ಶರಣರ ವಚನಗಳು ಸಾಕ್ಷಿಯಾಗಿವೆ. ಹಾಗೆಯೆ ಶಿವನು ಚೆನ್ನನ ಭಕ್ತಿಗೆ ಒಲಿದು ಸುಳುಹು–ದೋರಿ ಅವನೊಡನೆ ಉಂಡನೆಂಬ ಸಂಗತಿಯೂ ಹುಸಿಯಲ್ಲ.

> 'ಭಕ್ತರ ಸಮರ್ಥರು ; ಅಸಮರ್ಥರೆನಲುಂಟೆ ? ಚೆನ್ನನೆತ್ತ, ಚೋಳನೆತ್ತ ? ಚೆನ್ನನೊಡನುಂಡ ಶಿವ, ಆಹಾ! ಅಯ್ಯಾ
> ಚೆನ್ನ ಚೋಳನ ಮನೆಯ ಕಂಪಣಿಗನಯ್ಯಾ ! ಕೂಡಲ ಸಂಗಮದೇವ ಭಕ್ತಿಲಂಪಟನಯ್ಯಾ'[5]

ಇನ್ನು. ಕನ್ನಡ ನಾಡಿನ ಶಿವಾನುಭಾವಿ ಚೆನ್ನಯ್ಯ ತಮಿಳುನಾಡಿನ ಕಾಂಚೀಪಟ್ಟಣಕ್ಕೆ ಹೋಗಲು ಒದಗಿಬಂದ ಕಾರಣ ಪ್ರೇರಣೆಗಳಾವವು ಎಂಬ ಸಮಸ್ಯೆಗೆ ಸಮಾಧಾನಕರ ಉತ್ತರವೇನು ?

ಶಿವಶರಣರ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿ ಕನ್ನಡನಾಡಿನಲ್ಲಿ ಪ್ರಾರಂಭವಾಗುವ ಪೂರ್ವದಲ್ಲಿ ಜೈನಧರ್ಮ ಅತ್ಯಂತ ಪ್ರಭಾವಶಾಲಿಯಾಗಿದ್ದು ರಾಜಾಶ್ರಯವನ್ನು ಪಡೆದು ಉಚ್ಛ್ರಾಯ ಸ್ಥಿತಿಗೇರಿತ್ತು. 'ಜೀವ ದಯೆ ಜಿನಧರ್ಮ'ವೆಂದು

---

4. ಅದೇ, ವಚನ ೫, ಸಂ. ಡಾ॥ ಎಂ. ಎಸ್. ಸುಂಕಾಪುರ

* 'ಮಾದರ ಚೆನ್ನಯ್ಯಗಳು' (ಹರಿಹರನ ರಗಳೆ) ಸಂ. ಎಚ್. ದೇವಿರಪ್ಪ 'ಶರಣ ಚರಿತ ಮಾನಸ'

5. 'ಬಸವಣ್ಣನವರ ಷಟ್‌ಸ್ಥಲ ವಚನಗಳು' ಪು. ೧೮೩, ವ. ೬೮೨. ಅಲ್ಲದೆ ವ. ೨೩೨, ೪೩೨ ಮತ್ತು ೨೧೨ ನೋಡಿ.

ನಂಬಿದ ಜಿನಾನುಯಾಯಿಗಳಿಗೆ. ತ್ರಿಷಷ್ಠಿ ಶಲಾಕಾಪುರುಷರ ಭವ್ಯ ಭವಾವಳಿಯ ದಿವ್ಯ ಜೀವನ ಚರಿತ್ರೆಗಳು, ಆದರಣೀಯವಾಗಿ ಅನುಷ್ಠಾನಕ್ಕೆ ಅರ್ಹವಾಗಿದ್ದವು. ಹಾಗೆಯೆ, ಕನ್ನಡನಾಡಿನ ಶಿವಶರಣರಿಗೆ ತಮಿಳುನಾಡಿನಲ್ಲಿ ಆಗಿಹೋದ ಅರವತ್ಮೂರು(೬೩) ಶ್ರೇಷ್ಠ ಶಿವಭಕ್ತರ ಉತ್ಕಟ ಭಕ್ತಿಯ ಜೀವನ ಮೌಲ್ಯಗಳು ಆಕರ್ಷಣೀಯವಾಗಿ ಅನುಸರಿಲು ಅತ್ಯಂತ ಆತ್ಮೀಯವೆನಿಸಿದ್ದವು. ಈ ತಮಿಳು ಶಿವಭಕ್ತರ ಉಜ್ವಲ ಭಕ್ತಿಯ ತಾದಾತ್ಮ್ಯಭಾವ ಶಿವಶರಣರ ಭಕ್ತಿಜೀವನದ ಮೂಲ ಸೆಲೆಯಾಗಿತ್ತು. ಅಲ್ಲದೆ ತಮಿಳುನಾಡಿನಲ್ಲಿ ಕ್ರಿ. ಶ. ೧೦೭೦ ರಿಂದ ೧೧೨೦ ರವರೆಗೆ ರಾಜ್ಯಭಾರ ಮಾಡುತ್ತಿದ್ದ ಕರಿಕಾಲ ಚೋಳರಾಜನು ಪ್ರಖ್ಯಾತ ಶಿವ ಭಕ್ತನಾಗಿದ್ದನು. ಅವನಿಗೆ ರಾಜೇಂದ್ರ ಚೋಳ ಮತ್ತು ಕುಲೋತ್ತುಂಗ ಚೋಳನೆಂಬ ಹೆಸರುಗಳೂ ಇದ್ದಂತೆ ತಿಳಿದುಬರುತ್ತದೆ. ಈ ರಾಜೇಂದ್ರ ಚೋಳನಿಗೂ ಕಲ್ಯಾಣ ಪಟ್ಟಣದ ರಾಜನಾದ ಚಾಲುಕ್ಯ ವಿಕ್ರಮಾದಿತ್ಯನಿಗೂ ತುಮುಲ ಯುದ್ಧ ನಡೆದು ಕಡೆಗೆ ರಕ್ತಸಂಬಂಧವೇರ್ಪಟ್ಟಿತೆಂದು ಇತಿಹಾಸ ಹೇಳುತ್ತದೆ.[6] ಅನಂತರ ಎರಡೂ ರಾಜ್ಯಗಳ ನಡುವೆ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ನಿಕಟಬಾಂಧವ್ಯ ವೃದ್ಧಿಗೊಂಡು ಪರಸ್ಪರರಲ್ಲಿ ಸಾಂಸ್ಕೃತಿಕ ಸಂಪರ್ಕಕ್ಕೆ ಎಡೆಮಾಡಿಕೊಟ್ಟಿತ್ತು. ಆಗ ಕನ್ನಡ ನಾಡಿನ ಅನೇಕ ಶಿವಶರಣರು ತಮಿಳುನಾಡಿಗೆ ಆಗಾಗ ಹೋಗಿ ಅಲ್ಲಿಯ ಶೈವರಲ್ಲಿ ಶಿವಾನುಭಾವದ ಹೊಸ ಮಾರ್ಗವನ್ನು ಪಸರಿಸಲು ಪ್ರಯತ್ನಿಸಿದರು. ಮಾದರ ಚೆನ್ನಯ್ಯನೂ ಕಾಂಚೀ ಪಟ್ಟಣಕ್ಕೆ ಹೋಗಿ, ಅಲ್ಲಿ ಕೆಲವು ವರ್ಷ ವಾಸವಾಗಿ, ಶಿವಾನುಭಾವದ ಸ್ವಯಾಚರಣೆಯಿಂದ ಶಿವನನ್ನು ಸಾಕ್ಷಾತ್ಕರಿಸಿಕೊಂಡು ಶರಣ ಧರ್ಮದ ಹಿರಿಮೆಯನ್ನು ಅಲ್ಲಿಯ ಶೈವರಲ್ಲಿ ಬೆಳಗಿಸಿ ಬಯಲಾದ ನೆಂಬುದು ದಿಟವೆಂದು ತೋರುತ್ತದೆ. ಈ ವಿಚಾರವನ್ನು ಖಚಿತಪಡಿಸಲು ಶರಣರ ವಚನಗಳು' ಸಾಂಪ್ರದಾಯಿಕ ಐತಿಹ್ಯ ಮತ್ತು ಐತಿಹಾಸಿಕ ಸಂಗತಿಗಳು ಪ್ರಬಲ ಸಾಧನಗಳಾಗಿವೆ. ಆದ್ದರಿಂದ ಚೆನ್ನಯ್ಯ ಮತ್ತು ರಾಜೇಂದ್ರಚೋಳನ ಸಂಬಂಧ ಧಾರ್ಮಿಕ ವಷ್ಟೇ ಅಲ್ಲ ಅದು ಐತಿಹಾಸಿಕವೂ ಆಗಿದೆ. ಮಾದರ ಚೆನ್ನಯ್ಯ ಬಸವಣ್ಣನವರ ಹಿರಿಯ ಸಮಕಾಲೀನನಾಗಿದ್ದು ತನ್ನ ಉಜ್ವಲ ಧಾರ್ಮಿಕ ಜೀವನ ಸಿದ್ಧಿಯಾದ ತನ್ನ ಕುಲಕ್ಕೂ ಕನ್ನಡನಾಡಿಗೂ ಕೀರ್ತಿಯನ್ನು ತಂದಿದ್ದಾನೆ.

ವಿಶ್ವದ ಮಾನವರೆಲ್ಲರೂ ಸಮಾನರು ಅವರಲ್ಲಿ ವರ್ಗಭೇದವಿಲ್ಲ; ತರತಮ ಭಾವನೆಯೂ ಸಲ್ಲ. ಅವರು ಜೀವನ ನಿರ್ವಹಣೆಗಾಗಿ ಎಸಗುವ ಕಾರ್ಯಗಳ ಮೂಲಕ ಕುಲಗಳನ್ನು ಕಲ್ಪಿಸಲಾಯಿತು. ಅಲ್ಲದೆ ಈಗಿರುವ ಹೊಲೆಹದಿನೆಂಟು ಜಾತಿಗಳೆಂಬ ಕುಲಗಳು ನಿಜವಾಗಿಯೂ ಇಲ್ಲ. ಮಾನವರ ಗುಣಸ್ವಭಾವದ ಆಧಾರದಿಂದ ಮಾತ್ರ ಅವರಲ್ಲಿ ನೀಚ–ಶ್ರೇಷ್ಠರೆಂಬ ಎರಡು ಕುಲ ಗಳನ್ನು ಬೇಕಾದರೆ ಮಾಡಿಕೊಳ್ಳಬಹುದು. ಚೆನ್ನಯ್ಯನ ಈ ಅಭಿಮತವನ್ನು ಕೆಳಗಿನ ಅವನ ವಚನದಲ್ಲಿ ಕಾಣಬಹುದಾಗಿದೆ:

> 'ವೇದ ಶಾಸ್ತ್ರಕ್ಕೆ ಹಾರುವನಾಗಿ, ವೀರ ವಿತರಣಕ್ಕೆ ಕ್ಷತ್ರಿಯನಾಗಿ,
> ಸರ್ವವನಾರೈದು ನೋಡುವಲ್ಲಿ ವೈಶ್ಯನಾಗಿ ವ್ಯಾಪಾರದೊಳಗಾಗಿ, ಕೃಷಿಯ ಮಾಡುವುದಕ್ಕೆ ಶೂದ್ರನಾಗಿ,
> ಇಂತೀ ಜಾತಿಗೋತ್ರದೊಳಗಾದ ನೀಚ ಶ್ರೇಷ್ಠವೆಂಬ ಎರಡು ಕುಲವಲ್ಲದೆ ಹೊಲೆ ಹದಿನೆಂಡು ಜಾತಿಯೆಂಬ ಕುಲವಿಲ್ಲ.
> ಬ್ರಹ್ಮವನಱಿದಲ್ಲಿ ಬ್ರಾಹ್ಮಣ, ಸರ್ವ ಜೀವ ಹತಕರ್ಮಕ್ಕೊಳಗಾಗಿದ್ದಲ್ಲಿ ಸಮಗಾಱ.
> ಈ ಉಭಯವನಱಿದು ಮಱೆಯಲಿಲ್ಲ. ಕೈಯ್ಯುಳಿ ಕತ್ತಿ ಅಡೆಗುಂಟಕ್ಕಡಿಯಾಗಬೇಡ
> ಅಱಿ ನಿಜಾತ್ಮರಾಮರಾಮನಾ'[7]

ಅಲ್ಲದೆ ಆಗಿನ ಕಾಲದಲ್ಲಿ ಸಮಾಜದೊಳಗೆ ನಿರ್ಮಾಣಗೊಂಡ ವರ್ಣಾಶ್ರಮವ್ಯವಸ್ಥೆ ಹೀನಸ್ಥಿತಿಗಿಳಿದ ಪರಿಸ್ಥಿತಿಯನ್ನು ಚೆನ್ನಾಗಿ ಗುರುತಿಸಬಹುದಾಗಿದೆ.

ಮಾನವರು ಲೋಕದಲ್ಲಿ ಅನ್ಯರ ಶೋಷಣೆಯಿಂದ ಬದುಕದೆ ಉದರ ಪೋಷಣೆಗಾಗಿ ಸರ್ವರೂ ಯಾವುದಾದರೊಂದು ಕೆಲಸವನ್ನು ಮಾಡಬೇಕು. ತಾವು ಕೈಕೊಂಡ ಕಾರ್ಯದಲ್ಲಿ ಶ್ರದ್ಧೆಯಿಂದ ತನ್ಮಯರಾಗಿ ಪ್ರಾಮಾಣಿಕತೆಯಿಂದ ದುಡಿಯಬೇಕು. ಹೀಗೆ ತನುಮನ ಬಳಲಿಸಿ ಸಾಧಿಸಿದ ಸಂಪತ್ತನ್ನು ಮೊದಲು ಗುರುಲಿಂಗ-ಜಂಗಮಕ್ಕೆ ಅರ್ಪಿಸಿ ಪ್ರಸಾದ ರೂಪದಿಂದ ಸೇವಿಸಿ ಪವಿತ್ರರಾಗಬೇಕು. ಆಗ ಮಾತ್ರ ಕೈಕೊಂಡ ಕಾರ್ಯ 'ಕಾಯಕ' ಎನ್ನಿಸಿಕೊಳ್ಳಲು ಅರ್ಹವಾಗುತ್ತದೆ. ಹೀಗೆ ಕಾಯಕವನ್ನು ಎಸಗಿದ ನಮ್ಮ ಮಾದಾರ ಚೆನ್ನಯ್ಯನ ಮಹಿಮೆಯನ್ನು :

> 'ಹೊಲೆಯ ಹೊಲಬಿಗನಾದರೆ ಅವನ ಹೊರೆಯಲಿಪ್ಪುದು ಲೇಸು ಕಂಡಯ್ಯಾ
> ಹೊಲಬುಗೆಡದೆ ಲಿಂಗ ಶರಣೆನ್ನಿರಯ್ಯಾ. ಹೊಲಬುಗೆಡಬೇಡ ; ಶಿವಶರಣೆನ್ನಿರಯ್ಯಾ.
> ನಮ್ಮ ಕೂಡಲ ಸಂಗನ ಮಹಾಮನೆಯೊಳು ಮಾದಾರ ಚೆನ್ನಯ್ಯ ಹೊಲಬಿಗನಯ್ಯ.'[8]

---

6. ೧) 'ಅರವತ್ಮೂರು ಶಿವಶರಣರ ಚರಿತ್ರೆಗಳು' ಭಾಗ. ೨. ಸಂ. ಫ. ಗು. ಹಳಕಟ್ಟಿ ಪು. ೧೩೯-೧೪೦ ನೋಡಿ ಹಾಗೆಯೆ,
   ೨) History of the Shri Vaishnawas by T.A. Gopinathrao P.38. Published by Madras University.
7. 'ಮಾದಾರ ಚೆನ್ನಯ್ಯಗಳ ವಚನ' ಸಕಲ ಪುರಾತರ ವಚನಗಳು ಸಂಪುಟ ೩ ವ. ೨. ಸಂ. ಸುಂಕಾಪೂರ.
8. ಬಸವಣ್ಣನವರ ಷಟ್‌ಸ್ಥಲ ವಚನಗಳು ಸಂ. ಫ. ಗು. ಹಳಕಟ್ಟಿ. ಪು. ೩೬ ವ. ೧೩೫.

ಮಹಾ ಹೊಲಬಿಗನೆಂದು ಬಸವಣ್ಣನವರು ಹೊಗಳುತ್ತಾರೆ. ಮಾದರ ಚೆನ್ನಯ್ಯ ತನ್ನ ನಡೆನುಡಿಯಿಂದ ಸಮಕಾಲೀನ ಶರಣರ ಪ್ರೀತ್ಯಾದರಗಳಿಗೆ ಪಾತ್ರನಾಗಿ ತನ್ನ ಕುಲವನ್ನು ಉದ್ಧರಿಸಿದ ಸದ್ಭಕ್ತನಾಗಿ ಪ್ರಖ್ಯಾತಿಯನ್ನು ಪಡೆದಿದ್ದ. ಅವನನ್ನು 'ಕುಲಕ್ಕೆ ತಿಲಕ ನಮ್ಮ ಮಾದರ ಚೆನ್ನಯ್ಯ, ನಿಮ್ಮಿಂದಧಿಕ ಕೂಡಲ ಸಂಗಮದೇವಾ' ಎಂದು ಬಸವಣ್ಣನವರು ಮನವಾರೆ ಹೊಗಳಿದ್ದಾರೆ. ಶರಣ ಶ್ರೇಷ್ಠ ಚೆನ್ನಯ್ಯನ ಬಾಳು ಚೆನ್ನಾಯಿತ್ತು[9]. ಅದನ್ನು ಲೋಕಕ್ಕೆ ಗೋಚರಿಸುವಂತೆ ಮಾಡಿದವ ಹರಿಹರ. ಅವನೂ ಚೆನ್ನನನ್ನು ಆಶ್ರಯಿಸಿದ್ದಾನೆ.

ಚೆನ್ನನನಿಧಿ ಚೆನ್ನನಸುಧೆ । ಚೆನ್ನನ ಸಕಳಾಯು ಚೆನ್ನನಮೃತ ಸಮುದ್ರಂ ।
ಚೆನ್ನಂ ರಕ್ಷಿಸುಗೆನ್ನಂ । ಚೆನ್ನನಮತವೆಂದು ಹಂಪೆಯ ವಿರೂಪಾಕ್ಷಂ॥

## ವೀರಶೈವ ನಿರ್ಣಯ ಪರಮಾವತಾರ

—ಹೆಚ್. ದೇವೀರಪ್ಪ.

'ಒಂದು ವ್ಯಕ್ತಿಯ ಚರಿತ್ರೆ ಹೇಗಿರುತ್ತದೆಯೋ ಹಾಗೆಯೇ ಒಂದು ಮತದ ಚರಿತ್ರೆಯೂ ಇದ್ದೇ ಇರುತ್ತದೆ. ಒಂದು ವ್ಯಕ್ತಿಯು ಒಮ್ಮೆಲೇ ಪ್ರೌಢನೂ ಪಂಡಿತನೂ ಆಗಿ ಆಕಾಶದಿಂದ ಇಳಿದು ಬರುವುದಿಲ್ಲವಷ್ಟೆ. ಎಲ್ಲರಂತೆಯೇ ಹುಟ್ಟಿ, ಶಿಶುವಾಗಿಯೂ ಬಾಲಕನಾಗಿಯೂ ಬೆಳೆದು, ವಿದ್ಯಾರ್ಥಿಯಾಗಿ ಕಲಿತು, ಪ್ರೌಢನೂ ಪಂಡಿತನೂ ಆಗುತ್ತಾನಲ್ಲವೆ? ಹಾಗೆಯೇ ಮತಗಳು ಕೂಡ ಮಹಾಪುರುಷರ ವಿಚಾರಗಳಿಂದಲೇ ಉದಯವಾಗಿ ಕಾಲಕಾಲಕ್ಕೆ ಮಾರ್ಪಾಟುಗಳಾಗುತ್ತಲೇ ಇರುತ್ತವೆ. ಹಾಗೆ ಯಾರು ಅನೇಕ ಮಾರ್ಪಾಟುಗಳನ್ನು ಮಾಡಿ ಹೊಸ ರೀತಿಯಲ್ಲಿ ಜನಾಂಗದ ಮುಂದಿಡುತ್ತಾರೆಯೋ ಅವರಿಗೇನೇ ಮತಸ್ಥಾಪಕರೆಂದು ಹೇಳುತ್ತಾರೆ......ಅದೇ ಪ್ರಕಾರ ಬಸವಣ್ಣನವರು ತಮ್ಮ ಪೂರ್ವದಲ್ಲಿದ್ದ ಲಿಂಗಧಾರಣ ಪದ್ಧತಿ, ಭಕ್ತಿಮಾರ್ಗ, ವರ್ಣಾಶ್ರಮಧರ್ಮವಿರಹಿತ ಸಮಾಜರಚನೆ ಮೊದಲಾದುವುಗಳನ್ನೆಲ್ಲಾ ಏಕೀಕರಿಸಿ, ಜನಾಂಗದ ಶ್ರೇಯಸ್ಸಿಗೆ ಅನುಕೂಲವಾದ ರೀತಿಯಲ್ಲಿ ಮಾರ್ಪಡಿಸಿ ಈ ವೀರಶೈವ ಮತವೆಂಬ ಸುಂದರವಾದ ಮನೆಯನ್ನು ಕಟ್ಟಿದರು. ಅಂತೆಯೇ ಇವರಿಗೆ ವೀರಶೈವ ಮತಸ್ಥಾಪಕರೆಂದು ಹೇಳಿದುದು[1]'.

'ಬಸವ ಮಹಾನುಭಾವನಿಂದಲೇ ಈ ಮತವು ಸ್ಥಾಪನೆಯಾದುದರಿಂದ ಆಗಮ ಪುರಾಣಾದಿಗಳು ವೀರಶೈವರ ಪ್ರಮಾಣ ಗ್ರಂಥಗಳಾಗುವುದಿಲ್ಲ. ಅವುಗಳಲ್ಲಿ ವೀರಶೈವರಿಗೆ ಮಾನ್ಯವಾಗಿರುವ ಅನೇಕ ಆಚಾರ ವಿಚಾರಗಳಿರಬಹುದು. ಆದರೆ ಆ ಗ್ರಂಥಗಳಲ್ಲಿರತಕ್ಕುವುಗಳೆಲ್ಲಾ ವೀರಶೈವರಿಗೇನೂ ಮಾನ್ಯವಲ್ಲ[2]'. ಸುಮಾರು ಐವತ್ತೈದು ವರ್ಷಗಳ ಹಿಂದೆ ಲಿಂಗೈಕ್ಯ ಹರ್ಡೇಕರ್ ಮಂಜಪ್ಪನವರು ವ್ಯಕ್ತಪಡಿಸಿರುವ ಅಭಿಪ್ರಾಯಗಳಿವು.

ಆದರೆ ಘನತೆವೆತ್ತ ಸಂಶೋಧಕ ವಿದ್ವಾಂಸರಿಬ್ಬರು ಮಾತ್ರ ಶರಣ ಮಂಜಪ್ಪನವರ ಅಭಿಪ್ರಾಯವನ್ನು ಮನ್ನಿಸುವುದಿಲ್ಲ.

ಡಾ॥ ಎಸ್. ಸಿ. ನಂದಿಮಠರು, ತಾವು ಪಿ.ಎಚ್.ಡಿ. ಪದವಿಗೆಂದು ಸಿದ್ಧಪಡಿಸಿದ ಮಹಾಪ್ರಬಂಧದ ಸಾರವನ್ನೇ 'ವೀರಶೈವದ ಕೈಪಿಡಿ' (Handbook of Virasaivism) ಎಂದು ಹೆಸರಿಟ್ಟು ೧೯೪೨ರಲ್ಲಿ ಪ್ರಕಟಿಸಿದರು. ಆ ಗ್ರಂಥದಲ್ಲಿನ ಬೀಜ ಮಾತುಗಳಲ್ಲಿ ಕೆಲವನ್ನು ಮಾತ್ರ ನೋಡಿ–

(i) The darkness surrounding the early history of the sect has led almost all scholars (Dr. Bhandarkar excepted) to conclude that it was founded by Basava. However, this is far from the truth for none of the books on Virasaivism either in kannada or in Sanskrit ascribe the foundation of the seet to Basava-p. 3.

[ಈ ಮತ (ವೀರಶೈವ)ದ ಪೂರ್ವೇತಿಹಾಸದ ಸುತ್ತಲೂ ಕವಿದಿರುವ ಕತ್ತಲೆಯು, (ಡಾ॥ ಭಂಡಾರ್ಕರ್ ಅವರನ್ನು ಬಿಟ್ಟು) ಎಲ್ಲಾ ವಿದ್ವಾಂಸರೂ ಅದು ಬಸವಣ್ಣನವರಿಂದಲೇ ಸ್ಥಾಪಿತವಾಯಿತು ಎಂಬ ನಿರ್ಣಯಕ್ಕೆ ಬರುವಂತೆ ಮಾಡಿದೆ. ಇದು ಸತ್ಯ ದೂರವಾದ ಸಂಗತಿ, ಏಕೆಂದರೆ, ವೀರಶೈವದ ವಿಷಯವಾಗಿ ಕನ್ನಡದಲ್ಲಾಗಲಿ ಸಂಸ್ಕೃತದಲ್ಲಾಗಲಿ ಇರುವ ಯಾವ ಗ್ರಂಥವೂ ಬಸವಣ್ಣನವರು ಆ ಮತದ ಸಂಸ್ಥಾಪಕರೆಂದು ಹೇಳುವುದಿಲ್ಲ].

9. ಅದೇ. ವ. ೬೦೨ ಮತ್ತು ವ. ೭೩೧ ನೋಡಿ.

1. ಗ. ಸ. ಹಾಲಪ್ಪ (ಸಂ) : ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪನವರು: ಹರ್ಡೇಕರ ಮಂಜಪ್ಪ ಗ್ರಂಥಮಾಲೆ, ಧಾರವಾಡ, ೧೯೬೬, ಪು. ೪೯.

2. ಅದೇ. ಪು. ೪೯೧

(ii) Renukacharya is said to have taught Agasthya, the sage of panchavati, with whom Rama resided the doctrines of Shatsthala and 101 Sthalas as embodied in the Siddhanta Sikhamani–p: 14

(ಪಂಚವಟಿಯಲ್ಲಿ ಶ್ರೀರಾಮನ ಅತಿಥೇಯನಾಗಿದ್ದ ಅಗಸ್ತ್ಯನಿಗೆ ರೇಣುಕಾಚಾರ್ಯರು 'ಸಿದ್ಧಾಂತ ಶಿಖಾಮಣಿ'ಯಲ್ಲಿ ಉಕ್ತವಾದ ಷಟ್‌ಸ್ಥಲ ಹಾಗೂ ನೂರೊಂದು ಸ್ಥಲಗಳ ತತ್ತ್ವಗಳನ್ನು ಬೋಧಿಸಿದರು).

(iii) The Virasaivas trace their gotras to these (five) Acharyas···in short, these five Aradhyas are believed to be the first preachers of Virasaivism i.e. they are The founders of Virasaivism according to tradition. But, unfortunately, no authoritative historical information about them has been made available as yet –p, 18.

(ವೀರಶೈವರು ತಾವು ಪಂಚಾಚಾರ್ಯರ ಗೋತ್ರದವರೆಂದು ಹೇಳಿಕೊಳ್ಳುವರು...ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಐವರು ಆರಾಧ್ಯರೂ ವೀರಶೈವವನ್ನು ಮೊದಲು ಬೋಧಿಸಿದವರು ಎಂಬ ನಂಬಿಕೆಯುಂಟು. ಅವರೇ ವೀರಶೈವದ ಸಂಸ್ಥಾಪಕರೆಂಬ ಪಾರಂಪರ್ಯವಾದ ತಿಳುವಳಿಕೆ ಇದೆ. ಆದರೆ ದುರ್ದೈವದಿಂದ ಅವರ ಬಗೆಗೆ ಯಾವ ಪ್ರಮಾಣಿಕ ಐತಿಹಾಸಿಕ ಮಾಹಿತಿಯೂ ಈವರೆಗೆ ಲಭ್ಯವಾಗಿಲ್ಲ).

ಡಾ॥ ಆರ್.ಸಿ. ಹಿರೇಮಠರು ತಮ್ಮ ಒಂದು ಲೇಖನದಲ್ಲಿ[3], ಇಷ್ಟಲಿಂಗದ ಮತ್ತು ಶಿವಯೋಗದ ಗುಟ್ಟನ್ನು ಪ್ರಭುದೇವರು ಶರಣರಿಗೆ ಬೋಧಿಸಿದರೆಂದೂ, ಹೊಸ ಮತ ಒಂದನ್ನು ಸ್ಥಾಪಿಸಬೇಕೆಂಬ ಬಸವಣ್ಣನವರ ಹಂಬಲವು ಆಗ ಈಡೇರಿತೆಂದೂ ಹೇಳಿದ್ದಾರೆ. ಚೆನ್ನಬಸವಣ್ಣನವರು ಉಳುವೆಯ ಮಹಾ ಮನೆಯಲ್ಲಿ ಕುಳಿತು ವೀರಶೈವ ಸಿದ್ಧಾಂತವನ್ನು ತರ್ಕಬದ್ಧವಾಗಿ ರೂಪಿಸಿದರಂತೆ.

ಈ ಇಬ್ಬರು ಘನ ವಿದ್ವಾಂಸರೂ ತಮ್ಮ ತೀರ್ಮಾನಗಳಿಗೆ ಸರಿಯಾದ ಆಧಾರಗಳನ್ನು ಸೂಚಿಸಿಲ್ಲ[4]

ಬಸವಣ್ಣನ ಬಳಗದವರಾದ ಎಲ್ಲಾ ವಚನಕಾರರು ಅವರಿಂದ ಈಚೆಗೆ ಬಂದ ವಚನಕಾರರು, ಸಂತರು, ಕವಿಗಳು, ಮತ್ತು ವಚನ ಸಂಕಲನಕಾರರು ಅವರನ್ನು, ಲಿಂಗವಂತ ಧರ್ಮವನ್ನು ಸ್ಥಾಪಿಸಿದ ಆರಾಧ್ಯ ಗುರು ಎಂದೂ, ಪೂರ್ವಾಚಾರ್ಯ ಎಂದೂ, ಸಮಯಾಚಾರ್ಯ ಎಂದೂ ಅತ್ಯಂತ ಭಕ್ತ್ಯಭಿಮಾನಗಳಿಂದ ಸ್ತೋತ್ರ ಮಾಡಿದ್ದಾರೆ. ಕೆಲವರಿಗಂತೂ ಅವರು ಮಂತ್ರಪುರುಷ, ಮಂತ್ರದೇಹಿ.

ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಹಿಂದಿ, ಉರ್ದು, ಮರಾಠಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಬಸವಣ್ಣನವರ ಜೀವನಚರಿತ್ರೆಯನ್ನೋ, ವಚನಗಳನ್ನೋ, ಉಪದೇಶಸಾರವನ್ನೋ ಒಳಗೊಂಡ ಸ್ವತಂತ್ರ ಕೃತಿಗಳು ನೂರಕ್ಕೆ ಮಿಕ್ಕಿವೆ. ಅವರನ್ನು ಕುರಿತ ಅಷ್ಟಕ, ಶತಕ, ನಾಮಾವಳಿ, ಪವಾಡ ಕತೆಗಳು ನೂರಾರು. ಶರಣ ಎಸ್.ಆರ್. ಗುಂಜಾಳ ಅವರು 'ಬಸವ ಸಾಹಿತ್ಯ ದರ್ಪಣ'ದಲ್ಲಿ ಇಂತಹ ೪೧೫ ಸಣ್ಣ ದೊಡ್ಡ ಹೊತ್ತಿಗೆಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಅನುಷಂಗಿಕವಾಗಿ ಬಸವ ಬೋಧೆಯನ್ನೋ ಬಸವ ಪವಾಡ ಕಥೆಗಳನ್ನೋ ನಿರೂಪಿಸುವ ಕೃತಿಗಳನ್ನು ಇಲ್ಲಿ ಕೂಡಿಸಿಲ್ಲ; ಆಧುನಿಕ ಲೇಖಕರ ಬಿಡಿ ಲೇಖನಗಳನ್ನು ಸೇರಿಸಿಲ್ಲ. ಅಂತೂ ಬಸವ ಸಾಹಿತ್ಯದ ವಿಸ್ತಾರ ವೈವಿಧ್ಯ ವಿಪುಲತೆಗಳು ಅಸಮಾನವಾದುವು ಎಂಬುದು ನಿಸ್ಸಂದೇಹ.

ಶ್ರಾವಣ ಮಾಸದಲ್ಲಿ ಬಸವಣ್ಣನವರ ಜೀವನವೃತ್ತಾಂತವನ್ನು ಪವಾಡಗಳನ್ನು ಹೇಳುವ ಭೀಮ ಕವಿಯ ಬಸಪುರಾಣ, ಮಂಚಯ್ಯನ ಭಕ್ತಿರಸಸೋನೆ, ಚನ್ನಪ್ಪನ ಶರಣಲೀಲಾಮೃತ, ಶಂಕರಕವಿಯ ಚೋರಬಸವಚರಿತ್ರೆ–ಮುಂತಾದ ಕಾವ್ಯಗಳನ್ನು ಓದಿಸುವ ಮತ್ತು ಕೇಳಿಸುವ ಪರಿಪಾಟ ಇಂದಿಗೂ ಕನ್ನಡನಾಡಿನ ಮತ್ತು ಆಂಧ್ರದ ಸಹಸ್ರಾರು ಗ್ರಾಮಗಳಲ್ಲಿದೆ. ಹಿಂದಿನ ಕಾಲದಲ್ಲಿ ಬಸವ ಪುರಾಣವನ್ನು ಭಾವರಾಗರಸಭರಿತವಾಗಿ ಓದುವುದೂ ಅದನ್ನು ಅರ್ಥಯಿಸುವುದೂ ಅನೇಕ ವಿದ್ವಾಂಸರ ಕಾಯಕವಾಗಿದ್ದಿತು. ಉದಯಗಿರಿಯ ವರದಾನಿ ರಾಮಯ್ಯನೆಂಬ ಪುರಾಣಕಾರನು ಬಸವ ಪೌರಾಣದ ರಾಮಯ್ಯನೆಂದೇ ಪ್ರಸಿದ್ಧನಾಗಿರುವನು[5]. 'ಭಾವಚಿಂತಾರತ್ನ' 'ವೀರಶೈವಾಮೃತಮಹಾಪುರಾಣ'ಗಳ ಕರ್ತೃ ಗುಬ್ಬಿಯ ಮಲ್ಲಣಾರ್ಯನು

---

3. Shri Basaveswara Commemoration Volume, Government of Mysore, 1965, P. 26, 28
4. ಚೆನ್ನಬಸವಣ್ಣನವರಿಗೆ 'ಷಟ್‌ಸ್ಥಲ ಚಕ್ರವರ್ತಿ' ಎಂಬ ಬಿರುದಿದೆ ಎಂದ ಮಾತ್ರಕ್ಕೆ ಅವರು ಷಟ್‌ಸ್ಥಲ ಸಿದ್ಧಾಂತ ಸಂಸ್ಥಾಪಕರು ಎಂದು ತೀರ್ಮಾನಿಸಲಾಗುವುದಿಲ್ಲ. ಚೆನ್ನಬಸವಣ್ಣನವರು ಆ ಸಿದ್ಧಾಂತವನ್ನು ಮನಂಬುಗುವಂತೆ ಬೋಧಿಸುವುದರಲ್ಲಿ ಬಲ್ಲಿದರಾಗಿದ್ದರೆಂಬುದಕ್ಕೆ ಹಲವು ಆಧಾರಗಳಿವೆ.
5. ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ (ಸಂ॥ ಎಸ್. ಬಸಪ್ಪ), ಪ್ರಾಚ್ಯವಿದ್ಯಾಸಂಶೋಧನಾಲಯ ಮೈಸೂರು, ೧೯೬೦, ಸಂ. ೩೮ ಪ. ೪೧

ಬಸವ ಪುರಾಣದ ಅರ್ಥವನ್ನು ಬಿತ್ತರಿಸುವುದಲ್ಲಿ ಪ್ರಸಿದ್ಧನಾಗಿದ್ದುದರಿಂದ 'ಬಸವ ಪೌರಾಣದ ಮಲ್ಲಣಾರ್ಯ' ಎಂದೇ ಹೆಸರಾಗಿದ್ದನು[6].

ಲಿಂಗವಂತರಾದ ಹಸ್ತಪ್ರತಿಕಾರರಿಗಂತೂ ಬಸವಣ್ಣನವರ ವಿಷಯದಲ್ಲಿ ಎಣಿಕೆಗೆ ಮೀರಿದ ಪೂಜ್ಯಭಾವ. ಹಸ್ತ ಪ್ರತಿಯ ಆರಂಭದಲ್ಲಿಯೇ 'ಶ್ರೀ ಗುರುಬಸವಲಿಂಗಾಯನಮಃ' ಎಂಬ ಮಂತ್ರವನ್ನು ಬರೆದು ಅನಂತರ ಉದ್ದಿಷ್ಟ ಕೃತಿಯನ್ನು ಮಾಡಲು ತೊಡಗಿದ್ದಾರೆ. ಸಾವಿರಾರು ಹಸ್ತಪ್ರತಿಗಳಲ್ಲಿ ಇದಕ್ಕೆ ನಿದರ್ಶನಗಳಿವೆ. ಕೆಲವು ಹಸ್ತಪ್ರತಿಗಳಲ್ಲಿ ಈ ಮಂತ್ರಕ್ಕೆ ವ್ಯಾಖ್ಯಾನವೂ ಇದೆ.

ಹಳ್ಳಿಯ ಹೆಣ್ಣುಮಗಳ ದೃಷ್ಟಿಯಲ್ಲಿ ಬಸವಣ್ಣನವರು ನೆಲದ ಮೇಲೆ ನಡೆದಾಡುವ ಪರವಸ್ತು. ಆಕೆ ತನ್ನ ಗೆಳತಿ ಯೊಬ್ಬಳಿಗೆ:

'ಮಲ್ಲಿಗೆ ಇದ್ದಾಗ ಮುಳ್ಳೇಕೆ ಮುಡಿಯುತಿ। ಕಲ್ಯಾಣದಲ್ಲಿ ಬಸವಯ್ಯ। ಇದ್ದಾಗ ಕಲ್ಗೇಕೆ ಕಯ್ಯ ಮುಗಿಯುವೆ?'

ಎಂದು ಬುದ್ಧಿವಾದ ಹೇಳಿದ್ದಾಳೆ.

ಕ್ರಿ.ಶ. ೧೭೦೦ರ ಸುಮಾರಿನಲ್ಲಿ ಕೆಳದಿಯ ಬಸವ ಭೂಪಾಲನು ಸಂಸ್ಕೃತದಲ್ಲಿ 'ಶಿವತತ್ತ್ವರತ್ನಾಕರ' ಎಂಬ ವಿಶ್ವ ಕೋಶ ಸದೃಶವಾದ ಉದ್‌ಗ್ರಂಥವನ್ನು ರಚಿಸಿದ್ದಾನೆ. ಆತನು, ಬಸವಣ್ಣನವರನ್ನು ಕುರಿತು:

ಧರ್ಮಪ್ರವೃತ್ತಿಂ ಶಿಥಿಲಾಂ। ವಿಲೋಕ್ಯಚ ಸಮಂತತಃ। ಅವತಾರ್ಯ ದಯಾವಸ್ಯೋ। ಭಗವಾನ್ ಬಸವೇಶ್ವರಃ॥

ಧರ್ಮ ಸಂಸ್ಥಾಪಯಾಮಾಸ। ಸರ್ವಮೇವ ಧರಾತಲೇ। ವೀರಶೈವಮತಂ ಸ್ಥಾಪ್ಯ। ಪ್ರಕಾಶನಮುಕಾರಯತ್[7]॥

ಎಂದಿರುವನು; ಬಸವಣ್ಣನವರು ವೀರಶೈವ ಮತವನ್ನು ಸ್ಥಾಪಿಸಿ ಅದನ್ನು ಜಗತ್ತಿನಲ್ಲಿ ಹರಡಿದರು ಎಂದು ಈ ಶ್ಲೋಕಗಳ ಇಂಗಿತ.

ಹೀಗೆಯೇ ಪಟ್ಟಿಯನ್ನು ಬೆಳೆಸಿಕೊಂಡು ಹೋಗಬಹುದು. ೧೨ನೆಯ ಶತಮಾನದಿಂದ ಇಂದಿನವರೆಗೆ, ಸುಮಾರು ಎಂಟುನೂರು ವರ್ಷಗಳಷ್ಟು ಸುದೀರ್ಘಕಾಲ ನಿರಂತರವಾಗಿ, ಬಸವಣ್ಣನವರ ಆರಾಧನೆ, ಕೀರ್ತಿ, ಪ್ರಭಾವ, ಪ್ರತಿಷ್ಠೆಗಳು ಹೆಚ್ಚುತ್ತಲೇ ಬಂದಿವೆ. ಸಮಾಜದ ವಿವಿಧ ಸ್ತರಗಳಿಂದ ಬಂದ ಅನುಭಾವಿಗಳು, ಸಂತರು, ಕವಿಗಳು, ವಿದ್ವಾಂಸರು, ಪ್ರವಚನ ಕಾರರು, ಹಸ್ತಪ್ರತಿಕಾರರು, ಜನಸಾಮಾನ್ಯರು, ರಾಜಮಹಾರಾಜರುಗಳು ಬಸವಣ್ಣನವರಿಗೆ ತಮ್ಮ ಪೂಜೆ, ಗೌರವ, ಪ್ರಾರ್ಥನೆ ಗಳನ್ನು ಸಲ್ಲಿಸುತ್ತ ಬಂದಿರುವರು; ಅವರ ವಚನವೇದವನ್ನು ಪಾರಾಯಣ ಮಾಡುತ್ತಲಿರುವರು.

ಮಹಾನುಭಾವಿಗಳೂ ಕವಿಗಳೂ ಶರಣಧರ್ಮವನ್ನು ಬಹು ಸಮರ್ಥ ರೀತಿಯಲ್ಲಿ ಕನ್ನಡ, ಸಂಸ್ಕೃತ ಎರಡು ಭಾಷೆ ಗಳಲ್ಲಿಯೂ ಪ್ರತಿಪಾದಿಸಿದ ಮಗ್ಗೆಯ ಮಾಯಿದೇವರು ೬೦೦ ವರ್ಷಗಳ ಹಿಂದೆಯೇ ಈ ಬಗೆಗೆ, ತಮಗಿಂತ ಹಿಂದಿನವರು ಹೇಳಿದ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಈಚಿನವರು ಹೇಳಿರುವುದನ್ನು ಕೂಡ ಊಹಿಸಿ, ಸುಸ್ಪಷ್ಟವಾಗಿ, ಸಂದೇಹಕ್ಕೆ ಲೇಶವೂ ಅವಕಾಶವಾಗದಂತೆ:

ಜಯ ಬಸವೇಶ ಭಕ್ತಜನಭಾಗ್ಯ ಶುಭೋದಯ ವೀರಶೈವ ನಿ। ರ್ಣಯ ಪರಮಾವತಾರ ಶರಣಾಗತರಕ್ಷಕ ಚಿದ್ಘನಪ್ರಭಾ।

ಜಯ ಜಗದಾದಿ ದೇಶಿಕ ಪುರಾತನ ಪುಂಗವ ಶಾಂಭವೈಪ್ರರಾ। ಶ್ರಯ ಜಯಸೋಮನಾಥ ಜಯದೇವ ಜಯಾವಿರತಂ ಶಿವಧವಾ ॥೨॥

—ಎಂದು ಉದ್ಘೋಷಿಸಿದ್ದಾರೆ.

ಇದೇ ಸಂಗತಿಯನ್ನು ಶರಣ ಮಂಜಪ್ಪನವರಲ್ಲದೆ ಇನ್ನೂ ಅನೇಕ ಆಧುನಿಕ ಗ್ರಂಥಕರ್ತರು ಪ್ರಮಾಣಪೂರ್ವಕ ವಾಗಿಯೂ ತರ್ಕಬದ್ಧವಾಗಿಯೂ ಬಹು ಸಮರ್ಥರೀತಿಯಲ್ಲಿ ಪ್ರತಿಪಾದಿಸಿದ್ದಾರೆ[8].

ಹಾಗಾದರೆ, ಶ್ರೀ ಶಂಕರಾದಿ ಆಚಾರ್ಯವರ್ಯರು ಭಾಷ್ಯಗಳನ್ನು ರಚಿಸಿ ತಮ್ಮ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿ ದಂತೆ. ಬಸವಣ್ಣನವರು ರಚಿಸಿದ 'ಭಾಷ್ಯ' ಯಾವುದು ? ಕ್ರೈಸ್ತರಿಗೆ 'ಬೈಬಲ್'. ಮುಸಲ್ಮಾನರಿಗೆ 'ಖೊರಾನ್' ಪ್ರಮಾಣ ಗ್ರಂಥವಾಗಿರುವಂತೆ ಲಿಂಗವಂತರಿಗೆ ಯಾವುದು ಪ್ರಮಾಣಗ್ರಂಥ?

ಬಸವಣ್ಣನವರ 'ಷಟ್‌ಸ್ಥಲ'ವೇ ಲಿಂಗವಂತರಿಗೆ ಪ್ರಮಾಣಗ್ರಂಥ ಎಂಬುದನ್ನು ಈಗ 'ಋಜುವಾತು' ಮಾಡಿ ಕೊಡಲೇಬೇಕು.

6. ಆರ್. ನರಸಿಂಹಾಚಾರ್ : ಕರ್ನಾಟಕ ಕವಿಚರಿತೆ (ತಿದ್ದಿದ ಎರಡನೆಯ ಮುದ್ರಣ) ಕ.ಸಾ. ಪರಿಷತ್, ೧೯೬೩, ಪು. ೧೩೪
7. ಚಂದ್ರಶೇಖರಶಾಸ್ತ್ರಿ ಹಿರೇಮಠ : ಬಸವತತ್ತ್ವರತ್ನಾಕರ, ೧೯೬೧, ಪು. ೪ (ಉಲ್ಲೇಖಿತ)
8. ೧. Jeerige Basavalingappa : who is the founder of Virasaiva or Lingayat Religion ? 1900 (?)
   ೨. M.R. Sakhare : History and philosophy of lingayat religion. (II Edition), Karnatak University.
   ೩. ಎಂ. ಪಿ. ಪಾಟೀಲ : ಬಸವೇಶ್ವರರ ಚರಿತ್ರೆಯ ಮೇಲೆ ಹೊಸ ಬೆಳಕು, ಅಖಿಲಭಾರತ ವೀರಶೈವ ಸಂಘ ಬೆಳಗಾಂವಿ, ೧೯೬೬
   ೪. ಗುರುಲಿಂಗಪ್ಪ ಮಲ್ಲಪ್ಪ ಪಾಟೀಲ : ಬಸವಣ್ಣನವರು ಲಿಂಗವಂತ ಧರ್ಮ ಸಂಸ್ಥಾಪಕರು, ಜಿ.ಎಂ. ಪಾಟೀಲ ಧಾರವಾಡ, ೧೯೬೩.

ಇದಕ್ಕೆ ಮೊದಲು ಒಂದು ವಿಷಯ ನಿರ್ಧಾರವಾಗಬೇಕು : ಈಗ ನಾವು ಯಾವುದನ್ನು 'ಶ್ರೀ ಬಸವಣ್ಣನವರ ಷಟ್ಸ್ಥಲದ ವಚನಗಳು' 'ಶ್ರೀ ಬಸವೇಶ್ವರನ ವಚನಗಳು' 'ಬಸವರಾಜದೇವರ ಷಡುಸ್ಥಲದ ವಚನ' 'ಷಟ್ಸ್ಥಲದ ವಚನ', 'ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು' ಎಂದು ಮುಂತಾಗಿ ಕರೆಯುತ್ತೇವೆಯೋ ಅದರ ಸರಿಯಾದ ಹೆಸರು ಏನು? ಕೆಲವು ಹಸ್ತಪ್ರತಿಗಳಲ್ಲಿ ಇದಕ್ಕೆ 'ಷಟ್ಸ್ಥಲದ ವಚನ' ಎಂಬ ಹೆಸರಿದೆ ; ಮತ್ತೆ ಕೆಲವರಲ್ಲಿ 'ಷಡುಸ್ಥಲ' ಅಷ್ಟೇ ಇದೆ. ಕವಿಚರಿತೆಕಾರರು ಈ ವ್ಯತ್ಯಾಸಗಳನ್ನು ಗಮನಿಸಿಯೇ ಈ ಕೃತಿಗೆ 'ಷಟ್ಸ್ಥಲದ ವಚನ' ಎಂದು ಕರೆದರೋ ಏನೊ. ಬಸವಣ್ಣನವರೇ 'ಷಡುಸ್ಥಲ' ಎಂಬ ಮಾತನ್ನು ಅವರ ಒಂದು ವಚನದಲ್ಲಿ ಬಳಸಿದ್ದಾರೆ. ಆದುದರಿಂದ, ಹಸ್ತಪ್ರತಿ ಹುಟ್ಟಿದಾಗ ಅದಕ್ಕೆ 'ಷಟ್ಸ್ಥಲ' ಅಥವಾ 'ಷಟುಸ್ಥಲ' ಎಂಬ ಹೆಸರಿದ್ದಿರಬೇಕು. ವಚನಕರ್ತೃವಿನ ಹೆಸರೂ ಗೊತ್ತಾಗಲೆಂದು 'ಬಸವರಾಜದೇವರ ಷಡುಸ್ಥಲ', 'ಬಸವಣ್ಣನವರ ಷಟ್ಸ್ಥಲದ ವಚನಗಳು'—ಈ ಮುಂತಾದ ಹೆಸರುಗಳನ್ನು ಈಚಿನ ಸಂಕಲನಕಾರರೋ ಹಸ್ತಪ್ರತಿಕಾರರೋ ಚಲಾವಣೆಗೆ ತಂದಿರಬೇಕು. ಅಣ್ಣನವರನ್ನು ಪರಮಭಕ್ತಿಯಿಂದ ಕೊಂಡಾಡಿರುವ ತೋಂಟದ ಸಿದ್ಧಲಿಂಗಶಿವಯೋಗಿಗಳು ತಮ್ಮ ವಚನ ಸಂಕಲನಕ್ಕೆ 'ಷಟ್ಸ್ಥಲಜ್ಞಾನಸಾರಾಮೃತ' ಎಂದು ಕರೆದಿರುವುದು ನಮ್ಮ ನಿಲುವನ್ನು ಮತ್ತಷ್ಟು ಬಲಗೊಳಿಸುತ್ತದೆ, ಬಸವಣ್ಣನವರ 'ಷಟ್ಸ್ಥಲ'ದಲ್ಲಿರುವ ಅರಿವಿನ ಸಾರವೆಂಬ ಅಮೃತವನ್ನು ತಮ್ಮ ಸಂಕಲನವು ಒಳಗೊಂಡಿದೆ ಎಂಬುದು ಶ್ರೀ ಸಿದ್ಧಲಿಂಗೇಶ್ವರರ ಅಭಿಪ್ರಾಯ. ಇದನ್ನೇ ಮಗ್ಗೆಯ ಮಾಯಿದೇವರು 'ವೀರಶೈವ ನಿರ್ಣಯ' ಎಂದು ಕರೆದರು. 'ನಿರ್ಣಯ' 'ಸಿದ್ಧಾಂತ' ಎಂಬುವು ಸಮಾನಾರ್ಥಕ ಶಬ್ದಗಳೆಂದು ಬೇರೆ ಹೇಳಬೇಕಾಗಿಲ್ಲ.

ಇಲ್ಲಿ 'ಷಟ್ಸ್ಥಲಸಿದ್ಧಾಂತ'ವನ್ನು ತರ್ಕಬದ್ಧವಾಗಿ ನಿರೂಪಿಸುವ ಉದ್ದೇಶವಿಲ್ಲ. ಆ ದರ್ಶನದ, ಮತ್ತು ಅದನ್ನು ಸಾಧಿಸುವ ಮಾರ್ಗದ ಕೆಲವು ನೆಲೆಕಲೆಗಳನ್ನು ಆಗತ್ಯವಿದ್ದಷ್ಟು ಮಟ್ಟಿಗೆ, ಸ್ಥೂಲವಾಗಿ ವಿವೇಚಿಸಿದೆ. ಯಾವ ಪದವನ್ನೂ ಪಾರಿಭಾಷಿಕ ಅರ್ಥದಲ್ಲಿ ಬಳಸಿರುವುದಿಲ್ಲ.

ಮೇಲುನೋಟಕ್ಕೆ 'ಷಟ್ಸ್ಥಲ'ದಲ್ಲಿ ೫೦ ಸ್ಥಲಗಳಿರುವಂತೆ ತೋರುವುದು. ಅವುಗಳಲ್ಲಿ ಆದಿಯ ಎಂಟು ಸ್ಥಲಗಳ ೧೧೩ ವಚನಗಳು ಪೀಠಿಕಾರೂಪದಲ್ಲಿವೆ. ಉಳಿದ ೪೨ ಸ್ಥಲಗಳನ್ನು ಕೆಳಗೆ ಕಾಣಿಸಿರುವಂತೆ ವಿಂಗಡಿಸಬಹುದು.

| I ಭಕ್ತ | II ಮಾಹೇಶ್ವರ | III ಪ್ರಸಾದಿ | IV ಪ್ರಾಣಲಿಂಗಿ | V ಶರಣ | VI ಐಕ್ಯ |
|---|---|---|---|---|---|
| ಭಕ್ತನ ಜ್ಞಾನಿ ಸ್ಥಲ | ಮಾಹೇಶ್ವರನ ಜ್ಞಾನಿ ಸ್ಥಲ | ಪ್ರಸಾದಿಯ ಜ್ಞಾನಿ ಸ್ಥಲ | ಪ್ರಾಣಲಿಂಗಿಯ ಜ್ಞಾನಿ ಸ್ಥಲ | ಶರಣನ ಜ್ಞಾನಿ ಸ್ಥಲ | ಐಕ್ಯದ ಜ್ಞಾನಿ ಸ್ಥಲ |
| ಭಕ್ತನ ಭಕ್ತ ಸ್ಥಲ | ಮಾಹೇಶ್ವರನ ಮಾಹೇಶ್ವರ ಸ್ಥಲ | " ಪ್ರಸಾದಿ ಸ್ಥಲ | " ಪ್ರಾಣಲಿಂಗಿ ಸ್ಥಲ | " ಶರಣ ಸ್ಥಲ | " ಐಕ್ಯ ಸ್ಥಲ |
| ಭಕ್ತನ ಮಾಹೇಶ್ವರ ಸ್ಥಲ | " ಭಕ್ತ ಸ್ಥಲ | " ಭಕ್ತ ಸ್ಥಲ | " ಭಕ್ತ ಸ್ಥಲ | " ಭಕ್ತ ಸ್ಥಲ | " ಭಕ್ತ ಸ್ಥಲ |
| ಭಕ್ತನ ಪ್ರಸಾದಿ ಸ್ಥಲ | " ಪ್ರಸಾದಿ ಸ್ಥಲ | " ಮಾಹೇಶ್ವರ ಸ್ಥಲ | " ಮಾಹೇಶ್ವರ ಸ್ಥಲ | " ಮಾಹೇಶ್ವರ ಸ್ಥಲ | " ಮಾಹೇಶ್ವರ ಸ್ಥಲ |
| ಭಕ್ತನ ಪ್ರಾಣಲಿಂಗಿ ಸ್ಥಲ | " ಪ್ರಾಣಲಿಂಗಿ ಸ್ಥಲ | " ಪ್ರಾಣಲಿಂಗಿ ಸ್ಥಲ | " ಪ್ರಸಾದಿ ಸ್ಥಲ | " ಪ್ರಸಾದಿ ಸ್ಥಲ | " ಪ್ರಸಾದಿ ಸ್ಥಲ |
| ಭಕ್ತನ ಶರಣ ಸ್ಥಲ | " ಶರಣ ಸ್ಥಲ | " ಶರಣ ಸ್ಥಲ | " ಶರಣ ಸ್ಥಲ | " ಪ್ರಾಣಲಿಂಗಿ ಸ್ಥಲ | " ಪ್ರಾಣಲಿಂಗಿ ಸ್ಥಲ |
| ಭಕ್ತನ ಐಕ್ಯ ಸ್ಥಲ | " ಐಕ್ಯ ಸ್ಥಲ | " ಐಕ್ಯ ಸ್ಥಲ | " ಐಕ್ಯ ಸ್ಥಲ | " ಐಕ್ಯ ಸ್ಥಲ | " ಶರಣ ಸ್ಥಲ |

ಇಲ್ಲಿ, ಆರುಸ್ಥಲಗಳ ಆದಿಯಲ್ಲಿಯೂ ಭಕ್ತನ ಜ್ಞಾನಿಸ್ಥಲ ಮುಂತಾಗಿ ಆರು ಜ್ಞಾನಿಸ್ಥಲಗಳಿವೆ. ಅವುಗಳಲ್ಲಿ ಒಟ್ಟು ೩೫೯ ವಚನಗಳಿವೆ. ಉಳಿದ ಮೂವತ್ತಾರು ಅವಾಂತರಸ್ಥಲಗಳಲ್ಲಿ ಒಟ್ಟು ೪೮೭ ವಚನಗಳಿವೆ. ಮೊದಲನೆಯ ಗುಂಪಿನ ವಚನಗಳಿಗೂ ಮುಂದಿನ ಭಕ್ತಾದಿಸ್ಥಲಗಳ ವಚನಗಳಿಗೂ ಅವುಗಳ ರಚನಾ ವಿಧಾನದಲ್ಲಿ ವ್ಯತ್ಯಾಸಗಳಿವೆ. ಜ್ಞಾನಿಸ್ಥಲಗಳ ವಚನಗಳಲ್ಲಿ ಪ್ರಥಮ ಪುರುಷ (ನಾಮಪದ, ಸರ್ವನಾಮ, ಕ್ರಿಯಾಪದ) ಪ್ರಯೋಗಗಳೇ ಹೆಚ್ಚಾಗಿ ಕಂಡುಬರುತ್ತಿವೆ; ಉತ್ತಮಪುರುಷ ಪ್ರಯೋಗ ತೀರಾ ಕಡಿಮೆ. ಮುಂದಿನ ಆರಾರು ಸ್ಥಲಗಳ ವಚನಗಳಲ್ಲಿ ಉತ್ತಮಪುರುಷಪ್ರಯೋಗವೇ ವಿಶೇಷವಾಗಿ ಕಂಡುಬರುತ್ತದೆ. ಇದು ಬಸವಣ್ಣನವರೇ ಉದ್ದೇಶಪೂರ್ವಕವಾಗಿ ಮಾಡಿರುವ ಮಾಟ.

ಆರುಜ್ಞಾನಿಸ್ಥಲಗಳಲ್ಲಿ, ಸಾಧಕರಾದವರು ಅವರವರ ಸಂಸ್ಕಾರ ಅರಿವು ಆಚಾರ ಅಳವಿಗಳಿಗೆ ಹೊಂದಿಕೊಳ್ಳುವಂತಹ ಲಕ್ಷಣಗಳನ್ನೂ ವಿಧಿ ನಿಷೇಧಗಳನ್ನೂ ಅಣ್ಣನವರೇ ಗುರುಸ್ಥಾನದಲ್ಲಿ ನಿಂತು ಬೋಧಿಸಿದ್ದಾರೆ. ಮುಂದಿನ ಮೂವತ್ತಾರು (೬×೬) ಸ್ಥಲಗಳಲ್ಲಿ ತಮ್ಮ ಸಾಧನಾಕ್ಷೇತ್ರದಲ್ಲಿ ಕಂಡುಂಡ ಅನುಭವಗಳನ್ನೂ ಅನಿಸಿಕೆಗಳನ್ನೂ ಆಧಾರವಾಗಿಟ್ಟುಕೊಂಡು ವಚನಗಳನ್ನೂ ರಚಿಸಿ ತಮ್ಮ ಷಟ್‌ಸ್ಥಲ ಸಿದ್ಧಾಂತವು ಸ್ವಾನುಭಾವಮೂಲವಾದುದೆಂಬುದನ್ನು ತೋರಿಸಿಕೊಟ್ಟಿದ್ದಾರೆ. ನುಡಿದಂತೆ ನಡೆದಿದ್ದಾರೆ; ನಡೆದಂತೆ ನುಡಿದಿದ್ದಾರೆ.[9] 'ಷಟ್‌ಸ್ಥಲ'ವೆಂಬುದು ಲಕ್ಷಣ ಲಕ್ಷ್ಯಗಳೆರಡನ್ನೂ ಒಳಗೊಂಡು, ಒಂದು ಅತ್ಯುತ್ತಮ ದಾರ್ಶನಿಕ ಗ್ರಂಥವೆನ್ನಿಸಿದೆ.

ಭಕ್ತ್ಯಾದಿ ಆರುಸ್ಥಲಗಳು, ಮಾಹೇಶ್ವರಾದಿಯಾದ ಆರುಸ್ಥಲಗಳು, ಪ್ರಸಾದಿ ಮೊದಲಾದ ಆರುಸ್ಥಲಗಳು, ಪ್ರಾಣಲಿಂಗಿ ಮುಂತಾದ ಆರುಸ್ಥಲಗಳು, ಶರಣಾದಿ ಆರುಸ್ಥಲಗಳು, ಐಕ್ಯಸ್ಥಲದಿಂದ ತೊಡಗುವ ಆರುಸ್ಥಲಗಳು–ಹೀಗೆ ಒಟ್ಟು ಮೂವತ್ತಾರು ಸ್ಥಲಗಳಿದ್ದರೂ ಸಾಧಕನು ಅವನವನ ಸ್ವಭಾವ ಸಂಸ್ಕಾರ ಪ್ರವೃತ್ತಿಗಳಿಗೆ ತಕ್ಕಂತೆ ಭಕ್ತಸ್ಥಲದಿಂದಲೋ ಮಾಹೇಶ್ವರ ಸ್ಥಲದಿಂದಲೋ ಐಕ್ಯಸ್ಥಲದಿಂದಲೋ ತನ್ನ ಆಧ್ಯಾತ್ಮಿಕ ಯಾತ್ರೆಯನ್ನು ಆರಂಭಿಸಲೆಂಬುದು ಅಣ್ಣನವರ ಆಶಯವಾಗಿರಬಹುದು. ಅಂತೂ ಷಟ್‌ಚಕ್ರದಂತೆ, ಷಡಕ್ಷರದಂತೆ ಷಟ್‌ಸ್ಥಲಗಳು. ಆದರೆ ಈ ಆರುಸ್ಥಲಗಳೂ ಒಂದರೊಡನೊಂದು ಹೆಣೆದುಕೊಂಡಿರುತ್ತವೆ; ಒಂದೇ ಸ್ಥಲದ ಆರು ಮುಖಗಳು ಎಂದರೂ ಒಪ್ಪುವುದು. ಆದುದರಿಂದಲೇ ಅಣ್ಣನವರು:

> ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣನೈಕ್ಯನು ಮೆಲ್ಲಮೆಲ್ಲನೆ ಆದೆಹೆನೆಂಬನ್ನಬರ ನಾನೇನು ವಜ್ರದೇಹಿಯೆ ?
> ನಾನೇನು ಅಮೃತವ ಸೇವಿಸಿದೆನೆ ? ನಾನೇನು ಮರುಜೇವಣಿಯ ಕೊಂಡೆನೆ ? ನುಡಿದ ನುಡಿಯೊಳಗೆ ಷಡುಸ್ಥಲ ಬಂದು
> ಎನ್ನ ಮನವನಿಂಬುಗೊಳ್ಳದಿದ್ದಡೆ ಸುಡುವೆನೀ ತನುವ ! ಕೂಡಲಸಂಗಮದೇವಾ—ವ.೮೯೬

—ಎಂದಿರುವುದು.

ನುಡಿದ ಒಂದೊಂದು ನುಡಿಯೊಳಗೂ ಷಡುಸ್ಥಲವು ಧ್ವನಿಸುತ್ತಿರಬೇಕಂತೆ; ಆ ಷಡುಸ್ಥಲವು ಮನದ ತುಂಬ ತುಂಬಿಕೊಂಡಿರಬೇಕಂತೆ! ಇಷ್ಟೇ ಅಲ್ಲ, ಇನ್ನೂ ಮುಂದೆಹೋಗಿ, ಒಂದು ನುಡಿಯಲ್ಲಿ ಮಾತ್ರವಲ್ಲ, ಒಂದೊಂದು ಉಲಿಯಲ್ಲಿಯೂ ಷಡುಸ್ಥಲವು ತುಂಬಿತೊನೆಯುತ್ತಿರಬೇಕು ಎನ್ನುವರವರು.

> ಒಂದು ಮಾತೆನ್ನಬಹುದೆ ಶಬ್ದಸಾರಾಯವನು ? ಒಂದು ಮಾತೆನ್ನಬಹುದೆ ಶಬ್ದಸಂಬಂಧವನು ?
> ಕೂಡಲಸಂಗಮದೇವರು ನಂಬಿಗೆ 'ಓ' ಎಂದುದನೊಂದು ಮಾತೆನ್ನಬಹುದೆ ?—ವ. ೬೮೧

'ಮಾತೆಂಬುದು ಜ್ಯೋತಿರ್ಲಿಂಗ'ವಾಗುವುದು ಇಂತಹ ಸಂದರ್ಭಗಳಲ್ಲಿಯೇ.

ಇಲ್ಲಿಯೇ 'ಆಚಾರಲಿಂಗಸ್ಥಲ', 'ಗುರುಲಿಂಗಸ್ಥಲ' ಮುಂತಾದ ಆರು 'ಲಿಂಗಸ್ಥಲ'ಗಳ ವಿಚಾರವಾಗಿ ಒಂದೆರಡು ಮಾತು ಹೇಳಬೇಕು. 'ಉತ್ತರವಾತುಲ' ಮೊದಲಾಗಿ ಏಕೋತ್ತರ ಶತಸ್ಥಲ ಕಡೆಯಾಗಿ, ಬಸವಣ್ಣನವರಿಂದ ಈಚಿನ ಎಲ್ಲಾ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳಲ್ಲಿಯೂ–ಒಂದೇ ಸ್ಥಲ(ನಿಃಕಲಲಿಂಗ)ವು 'ಅಂಗಸ್ಥಲ' 'ಲಿಂಗಸ್ಥಲ' ಎಂದು ಎರಡಾಯಿತು; ಅಂಗಸ್ಥಲವು ಭಕ್ತಸ್ಥಲಾದಿ ಆರು ಸ್ಥಲಗಳಾಗಿ ಒಡೆಯಿತು; ಲಿಂಗಸ್ಥಲವು ಆಚಾರಲಿಂಗಸ್ಥಲ, ಗುರುಲಿಂಗಸ್ಥಲ ಮೊದಲಾಗಿ ಆರು ಲಿಂಗಸ್ಥಲಗಳಾಗಿ ಒಡೆಯಿತು; ಅವುಗಳಲ್ಲಿ ಮೊದಲನೆಯದು ಉಪಾಸಕ, ಮುಂದಿನದು ಉಪಾಸ್ಯ ಎಂದು ವಿವರಿಸಲಾಗಿದೆ,

9. ಡಾ॥ ಆರ್.ಸಿ. ಹಿರೇಮಠ ಎಂ.ಎ; ಪಿ.ಎಚ್.ಡಿ ಅವರು, 'ಮೊದಲನೆಯ ಕಾಂಡದ ವಚನಗಳನ್ನು ಪ್ರಾಚೀನ ಕಾಲದಲ್ಲಿಯೇ ಸ್ಥಲಕಟ್ಟಿಗನುಗುಣವಾಗಿ ಜೋಡಿಸಲಾಗಿರುವುದು ಸುಪ್ರಸಿದ್ಧ. ಅಲ್ಲಿ ಅಂಗಸ್ಥಲವನ್ನನುಸರಿಸಿ ಷಟ್‌ಸ್ಥಲಗಳಲ್ಲಿ ಪ್ರತಿಯೊಂದಕ್ಕೆ ಆರಾರು ಸ್ಥಲಗಳನ್ನು ಪರಿಕಲ್ಪಿಸಿ ಒಟ್ಟು ಮೂವತ್ತಾರು ಸ್ಥಲಗಳಲ್ಲಿ ಆ ವಚನಗಳನ್ನು ಸಂಯೋಜಿಸಲಾಗಿದೆ' ಎನ್ನುತ್ತಾರೆ. (ಕರ್ನಾಟಕ ವಿಶ್ವವಿದ್ಯಾನಿಲಯವು ಪ್ರಕಟಿಸಿರುವ 'ಭಕ್ತಿಭಂಡಾರಿ ಬಸವಣ್ಣನವರ ವಚನಗಳು' ಎಂಬ ಗ್ರಂಥದ ಪೀಠಿಕೆಯ ೩೮ನೆಯ ಪುಟವನ್ನು ನೋಡಿರಿ). ಮೊದಲನೆಯ ಕಾಂಡ ಎಂದರೆ ಲಿಂ॥ ಶಿ.ಶಿ. ಬಸವನಾಳರು ಸಂಪಾದಿಸಿ ಪ್ರಕಟಿಸಿರುವ 'ಬಸವಣ್ಣನವರ ಷಟ್‌ಸ್ಥಲದ ವಚನ'ಗಳು. ಅವರಲ್ಲಿ ೫೦ ಸ್ಥಲಗಳಿವೆ; ೩೬ ಅಲ್ಲ.

ಬಸವಣ್ಣನವರ ಷಟ್‌ಸ್ಥಲದಲ್ಲಿಯಾದರೋ, 'ಲಿಂಗಸ್ಥಲ'ದ ಮಾತೇ ಇಲ್ಲ ! 'ಲಿಂಗಸಿದ್ಧಿ'ಗಳ ಪ್ರಸ್ತಾಪ ಮಾತ್ರ ಅವರ ಒಂದೇ ಒಂದು ವಚನದಲ್ಲಿದೆ. ಅವರ ಪ್ರಕಾರ 'ಲಿಂಗ' ಎನ್ನುವುದು ಒಂದು ಪರಮಸಿದ್ಧಿ, ನಿಜ ಸಂಯುಕ್ತತೆ, ಪ್ರಜ್ಞಾ ಪರಂಜ್ಯೋತಿ. ಅಂತಹ ಪರಮಸಿದ್ಧಿಯನ್ನು ಪಡೆದವರಿಗೆ ಅಣ್ಣನವರು 'ಲಿಂಗೈಕ್ಯರು, 'ಲಿಂಗಸುಖಿಗಳು', 'ಲಿಂಗಗೂಡಾಗಿಪ್ಪವದು', 'ಲಿಂಗಾಭಿಮಾನಿಗಳು', 'ಮಹಾನುಭಾವರು' ಎಂದು ಕರೆದಿದ್ದಾರೆ ನೋಡಿ :

> ಆಚಾರಲಿಂಗವಿಡಿದು ಅನುಭಾವ ಲಿಂಗಸಿದ್ಧಿ ; ಅನುಭಾವಲಿಂಗವಿದು ಮಾರ್ಗಕ್ರಿಯಾ ಲಿಂಗಸಿದ್ಧಿ ;
> ಮಾರ್ಗಕ್ರಿಯಾ ಲಿಂಗವಿಡಿದು ಮೀಱಿದ ಕ್ರಿಯಾಲಿಂಗಸಿದ್ಧಿ ; ಮೀಱಿದ ಕ್ರಿಯಾಲಿಂಗವಿಡಿದು ಕ್ರಿಯಾನಿಷ್ಪತ್ತಿ ಲಿಂಗಸಿದ್ಧಿ ;
> ಇದು ಕಾರಣ ಕೂಡಲಸಂಗಮದೇವಾ, ಲಿಂಗವಿಡಿದು ಲಿಂಗಸಿದ್ಧಿ —ವ. ೮೭೭
> ಪರಮತತ್ತ್ವದ ನಿಜ ಸಂಯುಕ್ತರ, ಅನು ನೀನೆಂಬ ಶಬ್ದಸುಖಿಗಳ ತೋಱಾ ಎನಗೆ ; ಮಹಾನುಭಾವರ ತೋಱಾ ಎನಗೆ ;
> ಲಿಂಗೈಕ್ಯರ, ಲಿಂಗಸುಖಿಗಳ, ಲಿಂಗಗೂಡಾಗಿಪ್ಪವರ ಲಿಂಗಾಭಿಮಾನಿಗಳ ತೋಱಾ ಎನಗೆ ;
> ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲಸಂಗಮದೇವಾ—ವ. ೮೮೦

—ಹೀಗೆ ಭಕ್ತ ಮಾಹೇಶ್ವರಾದಿ ಆರುಸ್ಥಲಗಳ ಸಾಧಕರು ಕ್ರಮವಾಗಿ 'ಆಚಾರಲಿಂಗ' 'ಅನುಭಾವಲಿಂಗ', 'ಮಾರ್ಗಕ್ರಿಯಾ' ಲಿಂಗ, 'ಮೀರಿದ ಕ್ರಿಯಾಲಿಂಗ', 'ಕ್ರಿಯಾನಿಷ್ಪತ್ತಿಲಿಂಗ', ಲಿಂಗ ಎಂಬ ಆರು 'ಸಿದ್ಧಿ'ಗಳನ್ನು ಪಡೆಯುವರು.

ಇಷ್ಟು ಬಸವಣ್ಣನವರ 'ಷಟ್‌ಸ್ಥಲ'ದ ರಚನಾ ವಿಧಾನದ ಸ್ಥೂಲವಿವೇಚನೆ. ಇನ್ನು ಬಸವಣ್ಣನವರಿಗಿಂತ ಪೂರ್ವದಲ್ಲಿ 'ಷಟ್‌ಸ್ಥಲಸಿದ್ಧಾಂತ' ಎಂಬ ಒಂದು ಸಿದ್ಧಾಂತ ಇದ್ದಿತೇ ಎಂಬ ಪ್ರಶ್ನೆ.

ಪ್ರಪಂಚದ ಎಲ್ಲಾ ಧರ್ಮ ಸಂಸ್ಥಾಪಕರೂ ತಮಗಿಂತ ಹಿಂದಿನ ಮತ್ತು ತಮ್ಮ ಕಾಲದ ಮಹಾತ್ಮರ, ಮಹಾನುಭಾವಿಗಳ, ಮಹಾ ಆಚಾರ್ಯರ ಜೀವನಾನುಭವ, ಸಿದ್ಧಾಂತಗಳನ್ನು ಅಧ್ಯಯನ ಮಾಡಿ ಅರಿತು ಅರಗಿಸಿಕೊಂಡು ತಮ್ಮದನ್ನಾಗಿ ಮಾಡಿಕೊಂಡು ಅದರೊಂದಿಗೆ ತಮ್ಮ ದಿವ್ಯಾನುಭವವನ್ನು ಬೆರೆಸಿ ಮಥನಿಸಿ ತಮ್ಮದೇ ಆದ ನೂತನ ಸಿದ್ಧಾಂತವನ್ನು ಪ್ರತಿಪಾದಿಸಿರುವರು. ಬಸವಣ್ಣನವರೂ ಇದನ್ನೆ ಮಾಡಿರುವುದು. ಅವರು ವೇದಾಗಮಪುರಾಣಶಾಸ್ತ್ರಗಳಲ್ಲಿ ಬಹು ಬಲ್ಲಿದರಾಗಿದ್ದರು ; ಆದರೆ ಅವುಗಳಲ್ಲಿ ನಿರೂಪಿತವಾಗಿದ್ದ ಸಾರ್ವಕಾಲಿಕ ಮೌಲ್ಯಗಳನ್ನು ಮಾತ್ರ ಅಂಗೀಕರಿಸಿ ಸಲ್ಲದವುಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದರು. ಈಗಿನಂತೆ ಆಗಲೂ ಬೇರೆ ಬೇರೆ ಪಂಥಗಳಿಗೆ ಸೇರಿದ್ದ ಶೈವ ಗುರುಗಳಿದ್ದರು, ಶಿವಾನುಭಾವಿಗಳಿದ್ದರು, ಸಮಯಾಚಾರ್ಯರಿದ್ದರು. ಬಸವಣ್ಣನವರು ಪಡೆದ ಸಿದ್ಧಿಗೆ ಮೆಚ್ಚಿ, ಅವರ ಅತ್ಯುತ್ಕಟ ಭಕ್ತಿಗೆ ಮಾರು ಹೋಗಿ ಅವರನ್ನು ಆದ್ಯರೆಂದೂ ಪುರಾತನರೆಂದೂ ಕರೆದು ಗೌರವಿಸಿದರು. ಅವರಿಂದ ಸ್ಫೂರ್ತಿಯನ್ನು ಪಡೆದರು. ಆದರೆ ಅವರ ನೀತಿ ನಡತೆ, ಆಚಾರ ವಿಚಾರಗಳು ಇವರಿಗೆ ಸರಿದೋರಲಿಲ್ಲ, ಆದುದರಿಂದಲೇ,

> ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ! ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣಾ!
> ಸಿರಿಯಾಳನ ಮಗನ ಬೇಡಿದಂದಿಂದ ಭಯ ಕಾಣಿರಣ್ಣಾ! ದಾಸನ ವಸ್ತ್ರವ ಸೀಳಿದಂದಿಂದ ಭಯ ಕಾಣಿರಣ್ಣಾ!
> ಅಘಟಿತ ಘಟಿತರು ವಿಪರೀತ ಚರಿತರು ಕೂಡಲ ಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣಾ!

–ಎಂದು ಮೃದು ನುಡಿಗಳಿಂದಲೇ ಖಂಡಿಸಿದರು. ಲೋಕ ಒಪ್ಪುವ, ಸಮಾಜದ ಎಲ್ಲಾ ಸ್ತರಗಳಲ್ಲಿರುವ ಜನರೂ ತಮ್ಮ ಬಾಳುವೆಯಲ್ಲಿ ಬಹು ಸುಲಭವಾಗಿ ಅಳವಡಿಸಿಕೊಳ್ಳಬಹುದಾದ ಹೊಸ ಸಿದ್ಧಾಂತವೊಂದನ್ನು ಸ್ಥಾಪಿಸಿ ಪ್ರಚುರಗೊಳಿಸಿದರು. ಜೇನುತುಪ್ಪ ಯಾವ ಒಂದು ಗಿಡದ ಹೂವಿನ ಮಕರಂದವೂ ಅಲ್ಲ ; ಅದಕ್ಕೆ ಅದರದೇ ಆದ ಗುಣ ರೂಪ ರುಚಿಗಳುಂಟು.

ಆದರೆ, 'ಬಸವಣ್ಣನವರು ಲಿಂಗವಂತ ಧರ್ಮ ಸಂಸ್ಥಾಪಕರೇ' ಎಂಬ ವಿಷಯದಲ್ಲಿ, ಸುಮಾರು ಅರ್ಧ ಶತಕದ ಹಿಂದೆ ಅಪಸ್ವರಗಳೆದ್ದಂತೆ, 'ಅವರೇ ತಮ್ಮ ವಚನಗಳನ್ನು ಸ್ಥಲಾನುಗುಣವಾಗಿ ವಿಂಗಡಿಸಿದರೇ' ಎಂಬ ಬಗೆಗೆ, ಈಗ್ಗೆ ಸುಮಾರು ಹತ್ತು ವರ್ಷಗಳ ಹಿಂದಿನಿಂದ ಒಂದೆರಡು ಒಡಕು ದನಿಗಳು ಕೇಳಿಸುತ್ತಿವೆ. ಅವುಗಳಲ್ಲಿ ಒಂದು: 'ಷಟ್‌ಸ್ಥಲದ ವಚನಗಳು' ಎಂಬ ಹೆಸರಿಗೆ 'ಹಿಂದಿನ ವಚನಕಾರರು ಸೇರಿಸಿದ' ಎಂಬ ವಿಶೇಷಣವನ್ನು ಸೇರಿಸಿರುವುದು[10] ; ಮತ್ತೊಂದು, 'ಬಸವಣ್ಣನವರ ವಚನಗಳನ್ನು ಷಟ್‌ಸ್ಥಲಕ್ಕನುಗುಣವಾಗಿ ಸಂಗ್ರಹಿಸುವ ಕಾರ್ಯ ಪ್ರಾಚೀನ ಕಾಲದಲ್ಲಿಯೇ ನಡೆದು ಹೋಗಿದೆ[11] ಎಂಬ ಹೇಳಿಕೆ: ಇನ್ನೊಂದು, 'ಇದೇ ಕ್ರಮದಲ್ಲಿ ವಚನಗಳನ್ನು ಬಸವಣ್ಣನವರೇ ಅಳವಡಿಸಿದರೇ ಅಥವಾ ಇದು ಅನಂತರದ ವ್ಯವಸ್ಥೆಯೇ ಎಂಬುದು ಸಂದೇಹಾಸ್ಪದ' ಎಂದಿರುವುದು.[12]

10. ಡಾ॥ ಆರ್.ಸಿ. ಹಿರೇಮಠ, ಎಂ.ಎ ; ಪಿ.ಎಚ್.ಡಿ : ಭಕ್ತಿಭಂಡಾರಿ ಬಸವಣ್ಣನವರ ವಚನಗಳು ಪೀಠಿಕೆ, ಪು. ೩೮ 11. ಅದೇ
12. ಡಾ॥ ಎಚ್. ತಿಪ್ಪೇರುದ್ರಸ್ವಾಮಿ : ವಚನಗಳಲ್ಲಿ ವೀರಶೈವಧರ್ಮ (ಪ್ರ. ಡಿ.ವಿ.ಕೆ. ಮೂರ್ತಿ, ಮೈಸೂರು) ಪು. ೧೪೧.

ಈ ತೆರವಾದ ನಾಮಕರಣ, ಹೇಳಿಕೆ, ಸಂದೇಹಗಳಿಗೆ ಆಧಾರಗಳೇನೆಂಬುದನ್ನು ಆ ಒಡಕು ದನಿಗಳು ಹೇಳಿಯೇ ಇಲ್ಲ. ಇಂತಹ ಪ್ರವೃತ್ತಿಗಳಿರುವುದು ದುರದೃಷ್ಟಕರ.

ಹಿಂದಿನ ಶರಣ ಶರಣೆಯರ ವಚನಗಳನ್ನು ಈಚಿನವರು ಷಟ್‌ಸ್ಥಲಾನುಗಣವಾಗಿ ವಿಂಗಡಿಸುವುದಕ್ಕೆ ಹೋಗಿ, ಅದರಿಂದ ಬಸವಣ್ಣನವರ 'ಷಟ್‌ಸ್ಥಲ'ವು ಹೇಗೆ ವಿರೂಪಗೊಂಡಿದೆಯೆಂಬುದನ್ನು ಈಗ ನೋಡಿ.

ಪ್ರಭು ದೇವರ ವಚನಗಳ ಸಂಕಲನವು ಹಸ್ತಪ್ರತಿಗಳಲ್ಲಿ 'ಪ್ರಭು ದೇವರ ಟೀಕಿನ ವಚನಗಳು', 'ಪ್ರಭು ದೇವರ ಷಟ್‌ಸ್ಥಲ' ಎಂಬ ತಲೆ ಹೆಸರುಗಳಿಂದ ಕರೆಯಲ್ಪಟ್ಟಿದೆ. ವಚನಗಳಿಗೆ ಟೀಕೆಯನ್ನು ಬರೆದಿರುವ ಮಹಾಲಿಂಗ ದೇವರು 'ತಮ್ಮ ಪರಮ ಜ್ಞಾನಾನುಭಾವ ಪ್ರಸನ್ನ ಪ್ರಕಾಶದಿಂದ ಷಟ್‌ಸ್ಥಲವನು ಪ್ರಭುದೇವರ ವಚನಂಗಳಿಂದ ಸಂಕಲ್ಪಿಸಿ, ಸುಲಲಿತ ವಾಕ್ಯಾಮೃತವಾಗಿ ಆ ವಚನಂಗಳನು ಟೀಕಿಸಿ ಪರಮಾರ್ಥ ತತ್ತ್ವ ಬೋಧೆಯನು ನಿರೂಪಿಸಿ'ದರು—ಎಂದು ಆ ಗ್ರಂಥದ ಆರಂಭದಲ್ಲಿಯೇ ಸ್ಪಷ್ಟಪಡಿಸಿದೆ. ಈ ವಚನಗಳನ್ನು ಸ್ಥಲಾನುಗುಣವಾಗಿ ಪ್ರಭು ದೇವರು ಜೋಡಿಸಲಿಲ್ಲ.

ಪೀಠಿಕಾ ಸ್ವರೂಪದಲ್ಲಿರುವ ಪಿಂಡಸ್ಥಲ, ಪಿಂಡಜ್ಞಾನ ಸ್ಥಲ, ಮಾಯಾವಿಲಾಸ ವಿಡಂಬನ ಸ್ಥಲ, ಸಂಸಾರ ಹೇಯ ಸ್ಥಲ, ಗುರುಕರುಣ ಸ್ಥಲ ಎಂಬ ಐದು ಸ್ಥಲಗಳನ್ನು ಬಿಟ್ಟರೆ 'ಪ್ರಭು ದೇವರ ಟೀಕಿನ ವಚನ'ದಲ್ಲಿರುವುವು ಭಕ್ತಸ್ಥಲ, ಮಾಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗಿ ಸ್ಥಲ, ಶರಣ ಸ್ಥಲ, ಐಕ್ಯ ಸ್ಥಲ ಎಂಬ ಆರೇ ಆರು ಸ್ಥಲಗಳು. ಇದರಲ್ಲಿ ಬಸವಣ್ಣನವರು ಹೇಳಿದ 'ಜ್ಞಾನಿಸ್ಥಲ'ದ ಸುಳಿವೇ ಇಲ್ಲ; 'ಆಚಾರಲಿಂಗ ಸಿದ್ಧಿ' ಮೊದಲಾದ ಆರು 'ಲಿಂಗಸಿದ್ಧಿ'ಗಳ ಪ್ರಸ್ತಾಪವಿಲ್ಲ. ಇದರಿಂದ ಅಣ್ಣನವರ 'ಷಟ್‌ಸ್ಥಲ'ವು ಊನಗೊಂಡಿತೆಂದು ಬೇರೆ ಹೇಳಬೇಕಾಗಿಲ್ಲ.

ಅದೇ ಮಹಾಲಿಂಗ ದೇವರು ಮಾಡಿರುವ ಮತ್ತೊಂದು ಗ್ರಂಥವು 'ಏಕೋತ್ತರ ಶತ ಸ್ಥಲ' ಎಂಬುದು. ಗ್ರಂಥಾರಂಭದಲ್ಲಿಯೇ ಷಟ್‌ಸ್ಥಲದಲ್ಲಿ ಅಂಗಸ್ಥಲ ನಾಲ್ವತ್ತು ನಾಲ್ಕು, ಲಿಂಗಸ್ಥಲ ಐವತ್ತೇಳು; ಉಭಯಂ ಏಕೋತ್ತರ ಶತಸ್ಥಲಂಗಳಾದುವು ಎಂದು ಉಕ್ತವಾಗಿದೆ. ಇದರಿಂದ ಅಂಗಸ್ಥಲವೇ ಬೇರೆ, ಲಿಂಗಸ್ಥಲವೇ ಬೇರೆ ಎಂಬ ಭ್ರಾಂತಿ ಮೂಡುವಂತಾಯಿತು.

ಅಂಗಸ್ಥಲವನ್ನು ಭಕ್ತ ಮಾಹೇಶ್ವರಾದಿ ಆರು ಸ್ಥಲಗಳಾಗಿ ವಿಭಾಗಿಸಿ, ಅವುಗಳನ್ನು ಮತ್ತೆ ೪೪ ಅವಾಂತರ ಸ್ಥಲಗಳನ್ನಾಗಿ ಒಡೆದು ಆ ಒಂದೊಂದು ಉಪಸ್ಥಲಕ್ಕೂ ಹೊಂದಿಕೆಯಾಗುವ, ಬೇರೆ ಬೇರೆ ಶರಣರ ವಚನಗಳನ್ನೂ ಹಾಡುಗಳನ್ನೂ ಜೋಡಿಸಲಾಗಿದೆ. ಅಣ್ಣನವರು ಹೇಳಿರುವ 'ಜ್ಞಾನಿ ಸ್ಥಲ'ಕ್ಕೇ ಇಲ್ಲಿ ಎಡೆಯಿಲ್ಲ. ಲಿಂಗ ಸ್ಥಲವನ್ನು ಆಚಾರ ಲಿಂಗ ಸ್ಥಲ, ಗುರುಲಿಂಗ ಸ್ಥಲ, ಶಿವಲಿಂಗ ಸ್ಥಲ, ಜಂಗಮಲಿಂಗ ಸ್ಥಲ, ಪ್ರಸಾದಲಿಂಗ ಸ್ಥಲ, ಮಹಾಲಿಂಗ ಸ್ಥಲ ಎಂದು ವಿಂಗಡಿಸಿ, ಅವುಗಳನ್ನು ಮತ್ತೆ ೫೭ ಅವಾಂತರ ಸ್ಥಲಗಳನ್ನಾಗಿ ಒಡೆದು ಆ ಒಂದೊಂದು ಸ್ಥಲಕ್ಕೂ ಹೊಂದಿಕೊಳ್ಳುವ ಬೇರೆ ಬೇರೆ ವಚನಕಾರರ ವಚನಗಳನ್ನೂ ಹಾಡುಗಳನ್ನೂ ತುಂಬಲಾಗಿದೆ. ಇಲ್ಲಿಯೂ ಜ್ಞಾನಿಸ್ಥಲದ ಪ್ರಸ್ತಾಪವೇ ಇಲ್ಲ!

ಬಸವಣ್ಣನವರು ಆಚಾರಲಿಂಗಸ್ಥಲಾದಿಯಾದ ಆರುಲಿಂಗಸ್ಥಲಗಳನ್ನು ಹೇಳಿಯೇ ಇಲ್ಲ. 'ಆಚಾರಲಿಂಗವಿಡಿದು ಅನುಭಾವ ಲಿಂಗಸಿದ್ಧಿ' ಎಂದು ಆರಂಭವಾಗುವ ವಚನದಲ್ಲಿ ಆರು 'ಲಿಂಗಸಿದ್ಧಿ'ಗಳನ್ನು ಕುರಿತು ಮಾತ್ರ ಹೇಳಿರುವರು. ಮಹಾಲಿಂಗ ದೇವರು ಈ ಆರು 'ಲಿಂಗಸಿದ್ಧಿ'ಗಳನ್ನೇ ಮೊತ್ತಮೊದಲಿಗೆ ಆರು 'ಲಿಂಗಸ್ಥಲ'ಗಳನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ಇವರಿಗಿಂತ ಪೂರ್ವದ ವಚನ ಸಂಕಲನಗಳಲ್ಲಿ 'ಲಿಂಗಸ್ಥಲ'ಗಳ ಪ್ರಸ್ತಾಪವಿಲ್ಲ. ಈ ಮಾರ್ಪಾಟು ಬಸವಣ್ಣನವರ ಷಟ್ ಸ್ಥಲ ಸಿದ್ಧಾಂತದ ತಲೆಯಮೇಲೆ ಎಳೆದಿರುವ ಕಲ್ಲು ಚಪ್ಪಡಿ.

'ಏಕೋತ್ತರ ಶತಸ್ಥಲ'ದಲ್ಲಿರುವ ಇನ್ನೊಂದು ದೊಡ್ಡ ದೋಷವೆಂದರೆ, ಅಂಗಸ್ಥಲದ ಯಾವ ಅವಾಂತರ ಸ್ಥಲವು ಲಿಂಗಸ್ಥಲದ ಯಾವ ಉಪಸ್ಥಲಕ್ಕೆ ಸಂವಾದಿಯಾಗಿದೆ ಎಂಬುದು ಸುಸ್ಪಷ್ಟವಾಗಿ ಗೊತ್ತಾಗದಿರುವುದು. ಅಂಗಸ್ಥಲವನ್ನು ೪೪ ತುಕಡಿಗಳನ್ನಾಗಿಯೂ ಲಿಂಗಸ್ಥಲವನ್ನು ೫೭ ಪಾಳುಗಳನ್ನಾಗಿಯೂ ಸೀಳಿರುವುದಕ್ಕೆ ತರ್ಕದ ಬಲವಿಲ್ಲ, ಅನುಭಾವದ ಆಧಾರವಿಲ್ಲ. ಇದರ ಪರಿಣಾಮವಾಗಿ. ಆಯಾ ಸ್ಥಲದಲ್ಲಿ ತಂದಿಟ್ಟಿರುವ ಒಳ್ಳೊಳ್ಳೆಯ ವಚನ ರತ್ನಗಳು ಕೂಡ ತಮ್ಮ ಸಾಮರ್ಥ್ಯವನ್ನು ಕಳೆದುಕೊಂಡು ಪೇಲವವಾಗಿವೆ. ಅನೌಚಿತ್ಯವು ರಸಭಂಗಕ್ಕೆ ಕಾರಣ ಎಂದು ಒಬ್ಬ ಆಲಂಕಾರಿಕನು ಹೇಳಿದ್ದಾನೆ.

ಮಹಾಲಿಂಗದೇವರು ಮಾಡಿಕೊಂಡಿರುವ ಸ್ಥಲವ್ಯವಸ್ಥೆಯೂ ಸಂಸ್ಕೃತದಲ್ಲಿರುವ 'ಸಿದ್ಧಾಂತಶಿಖಾಮಣಿ'ಯ ಸ್ಥಲಾನು

ಕ್ರಮಣಿಕೆಯೂ ಒಂದನ್ನೊಂದು ಸಂಪೂರ್ಣವಾಗಿ ಹೋಲುತ್ತಿವೆ. ಮಹಾಲಿಂಗದೇವರು 'ಸಿದ್ಧಾಂತಶಿಖಾಮಣಿ'ಯನ್ನಾಗಲಿ, ಅದರ ಕರ್ತೃವೆಂದು ಹೇಳಲಾಗುತ್ತಿರುವ ಶಿವಯೋಗಿ ಶಿವಾಚಾರ್ಯರನ್ನಾಗಲಿ ನೆನೆದಿಲ್ಲ; ಬಸವರಾಜದೇವರು, ಚೆನ್ನಬಸವ ರಾಜರು, ಪ್ರಭುದೇವರು–ಇವರನ್ನು ಅನುಸರಿಸಿದ್ದೇನೆಂದು ಹೇಳಿದ್ದಾರೆ. 'ಸಿದ್ಧಾಂತ ಶಿಖಾಮಣಿ'ಯಲ್ಲಿ ಯಾವ ಒಬ್ಬ ವಚನ ಕಾರನನ್ನೂ ಸ್ಮರಿಸಿಲ್ಲ: ಗ್ರಂಥಕರ್ತನ ಹೆಸರನ್ನೂ ಹೇಳಿಲ್ಲ. 'ಶಿಖಾಮಣಿ'ಯು ಮಹಾಲಿಂಗದೇವರು 'ಏಕೋತ್ತರ ಶತಸ್ಥಲ' ವನ್ನು ಬರೆದ ಕೆಲವು ವರ್ಷಗಳ ತರುವಾಯ ಹುಟ್ಟಿದುದೆಂಬುದು ಇದರಿಂದ ಸಿದ್ಧವಾಗುತ್ತದೆ. ಮಹಾಲಿಂಗದೇವರ ಕಾಲ, ತೀರಾ ಹಿಂದೆ ಎಂದರೂ ಕ್ರಿ.ಶ. ೧೩೫೦. 'ಸಿದ್ಧಾಂತಶಿಖಾಮಣಿ'ಯು ಕ್ರಿ.ಶ. ೧೩೫೦, ೧೪೦೦ರ ಮಧ್ಯೆ ಹುಟ್ಟಿರಬೇಕು.

ಈಗ ಚೆನ್ನಬಸವಣ್ಣನವರ ವಚನಗಳನ್ನೂ ಅವುಗಳ ಜೋಡಣೆಯನ್ನೂ ಕುರಿತು: ಬಸವಣ್ಣ ಚೆನ್ನಬಸವಣ್ಣನವರು ಈ ಯುಗದ ಶ್ರೀರಾಮಕೃಷ್ಣಪರಮಹಂಸ, ಸ್ವಾಮಿ ವಿವೇಕಾನಂದರು ಇದ್ದ ಹಾಗೆ; ಒಡಲೆರಡು ಜೀವವೊಂದೆ. ಇದನ್ನು ಕಂಡೇ ಶಿವತತ್ತ್ವಚಿಂತಾಮಣಿ'ಕಾರನು

> ಸುರಭಿಯಿಂ ಸುಧೆ, ಅಮೃತದಿಂ ಸ್ವಾದು, ಪುಷ್ಪದಿಂ ಪರಿಮಳಂ, ಚಿಂತಾಸುರತ್ನದಿಂ ಕಾಂತಿ, ಸುರ
> ತರುವಿನಿಂದಂ ಸುಫಲ, ಇಂದುವಿಂ ಚಂದ್ರಿಕೆಗಳುದಿಸುವಂದದಿ ಬಸವನ ಪರಮಸುಜ್ಞಾನದಿಂ ಮೂರ್ತಿವೆತ್ತಿಳೆಯ ಶಿವ
> ಶರಣರಂತಃಕರಣ ಭವನಂಗಳೊಳಗೆ ವಿಸ್ಫುರಿಸುವ ಮಹಾಜ್ಯೋತಿ ಚೆನ್ನಬಸವೇಶ್ವರನ ಚರಣಾಂಬುಜಕ್ಕೆ ಶರಣು ೧—೭

—ಎಂದು ವರ್ಣಿಸಿದ್ದಾನೆ. ಚೆನ್ನಬಸವಣ್ಣನವರು ಷಟ್‌ಸ್ಥಲ ಸಿದ್ಧಾಂತ ಪ್ರತಿಪಾದನೆಯಲ್ಲಿ ತುಂಬ ನಿಷ್ಣಾತರಾಗಿದ್ದರು. ಅವರು ವಚನಗಳನ್ನು ಮಾಡಿರುವುದಂತೂ ಸರಿಯೆ. ಆದರೆ ಅವರು ತಮ್ಮ ವಚನಸಂಕಲನಕ್ಕೆ 'ಷಟ್‌ಸ್ಥಲ' ಎಂದು ಕರೆದಿಲ್ಲ. ಹಸ್ತಪ್ರತಿ ಗಳಲ್ಲಿರುವಂತೆ ಅದರ ಹೆಸರು 'ಚೆನ್ನಬಸವರಾಜದೇವರ ಅನುಭಾವಸ್ಥಲದ ವಚನಗಳು' ಅಥವಾ 'ಚೆನ್ನಬಸವಣ್ಣನವರ ಅನು ಭಾವಸ್ಥಲದ ವಚನಗಳು' ಎಂದು.

ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿರುವ ಚೆನ್ನಬಸವಣ್ಣನವರ ವಚನಗಳು' ಎಂಬ ಗ್ರಂಥದಲ್ಲಿ ೬೧ನೆಯ ದಾಗಿರುವ ವಚನವೇ ಚೆನ್ನಬಸವಣ್ಣನವರ ಅನುಭಾವಸ್ಥಲದ ವಚನಗಳ ಕಟ್ಟುಗಳಲ್ಲಿ ೧ನೆಯ ವಚನ. ಇದಕ್ಕಿಂತ ಮೊದಲು, ಅದೇ ಹಸ್ತಪ್ರತಿಗಳಲ್ಲಿ ಈ ಕೆಳಗಿನ ಬರವಣಿಗೆ ಇದೆ:

'ಚೆನ್ನಬಸವಣ್ಣನವರ ಅನುಭಾವಸ್ಥಲದ ವಚನಗಳ ಸ್ಥಲಕುಲಂಗಳು ಹೇಗೆಂದು ಶ್ರೀಗುರುರಾಯಂಗೆ ಶಿಷ್ಯ ಬಿನ್ನೈಸಿದ ವಚನ

> ಕಂದ॥ ಆಚರಣೆಯ ಸ್ಥಲವನಱಿ। ದಾಚರಿಸಲ್ ಬಾರದಾಗಿಯನುಭಾವಸ್ಥಲ
> ಸೂಚನೆಯನೆತ್ತಿ ಎನ್ನೊಳು। ಯೋಚಿಸು ಸದ್ಗುರುವೆ ಬಸವ ಸಂಗ ಸದಾಶಿವ॥

**ಶ್ರೀಗುರುನಿರೂಪ:**

> ಕಂದ॥ ಚೆನ್ನಬಸವಯ್ಯನನುಭಾ। ವೋನ್ನತ ಉಪದೇಶವಾಗಿ ನಿನ್ನ ಮನದ ತಮ।
> ವನ್ನಳಿಯಲ್ಕೆ ನಿರೂಪಿಸಿ। ದನ್ವಯದೊಳು ಕೇಳು ನಿನಗೆ ತಿಳಿಯಲ್‌ಪೇಳ್ವೆಂ।
> ಎಲ್ಲ ವಚನಂಗಳೊಳಗಾ। ಗುಳ್ಳ ಸ್ಥಲಕುಲದ ಸೂಕ್ಷ್ಮಸೂಕ್ಷ್ಮವ ತುಂಬಿ
> ಇಲ್ಲಿಯೆ ಅನುಭವಪೂರ್ಣಾ। ಗೆಲ್ಲವ ತೋಱುವೆನು ಕೇಳ್ದು ಅಱಿವುದು ಮುದದಿಂ

'..................ಅವಸ್ಥಲವನಂಗಗೊಂಡಿದ್ದಡೆಯೂ ಆ ಸ್ಥಲಕ್ಕೆ ತಕ್ಕರೂಪಾಗಿ ಷಡ್ವಿಧಲಿಂಗವ ಬೆರಸಿಪ್ಪ ಭೇದವನು ಆ ಚೆನ್ನಬಸವರಾಜದೇವರ ಅನುಭಾವಸ್ಥಲದ ವಚನದಲ್ಲಿಯೇ ಸ್ಥಲವಿಟ್ಟು ತೋಱುವೆನು ಚೆನ್ನಾಗಿ ಕೇಳುವುದು'.

ಚೆನ್ನಬಸವಣ್ಣನವರು ತಮ್ಮ ಅನುಭಾವಸ್ಥಲದ ವಚನಗಳನ್ನು ತಾವೇ ಸ್ಥಲಾನುಗುಣವಾಗಿ ವಿಂಗಡಿಸಲಿಲ್ಲ. ಬೇರೊಬ್ಬ ಸಂಕಲನಕಾರನು ವಿಂಗಡಿಸಿದ್ದಾನೆ ಎನ್ನುವುದಕ್ಕೆ ಮತ್ತೆ ಯಾವ ಆಧಾರಬೇಕು? ಈತನು ಈ ವಿಂಗಡಣೆಯ 'ಮಣಿಹ'ವನ್ನು ಮಾಡಲು ಏನೇನು 'ತಂತ್ರ'ವನ್ನು ಹೂಡಿರುವನೆಂಬುದನ್ನು ತಿಳಿಯಬೇಕಾದರೆ ಕೆಳಗೆ ಕಾಣಿಸಿರುವ ಕೋಷ್ಟಕವ ಕನ್ನಡಿಯೇ ಆಗಬೇಕು.

ಸಂಕಲನದಲ್ಲಿ ಒಟ್ಟು ೫೨ ಸ್ಥಲಗಳಿವೆ. ಅವುಗಳಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರು ಕಾರುಣ್ಯಸ್ಥಲ–ಇವು ನಾಲ್ಕೂ ಪೀಠಿಕಾವಿಭಾಗಕ್ಕೆ ಸೇರಿದುವು. ಅವುಗಳನ್ನು ಇಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

| | I ಭಕ್ತ ಸ್ಥಲ | II ಮಾಹೇಶ್ವರ ಸ್ಥಲ | III ಪ್ರಸಾದಿ ಸ್ಥಲ | IV ಪ್ರಾಣಲಿಂಗಿ ಸ್ಥಲ | V ಶರಣ ಸ್ಥಲ | VI ಐಕ್ಯ ಸ್ಥಲ |
|---|---|---|---|---|---|---|
| ೧ | ತಾಮಸ ನಿರಸನ ಸ್ಥಲ | ತಾಮಸ ನಿರಸನ ಸ್ಥಲ | ತಾಮಸ ನಿರಸನ ಸ್ಥಲ | ತಾಮಸ ನಿರಸನ ಸ್ಥಲ | ತಾಮಸ ನಿರಸನ ಸ್ಥಲ | ತಾಮಸ ನಿರಸನ ಸ್ಥಲ |
| ೨ | ಸ್ಥಲ ನಿರ್ದೇಶ | ಸ್ಥಲ ನಿರ್ದೇಶ | ಸ್ಥಲ ನಿರ್ದೇಶ | ಸ್ಥಲ ನಿರ್ದೇಶ | ಸ್ಥಲ ನಿರ್ದೇಶ | ಸ್ಥಲ ನಿರ್ದೇಶ |
| ೩ | ಆಚಾರಲಿಂಗ ಸ್ಥಲ | ಆಚಾರಲಿಂಗ ಸ್ಥಲ | ಆಚಾರಲಿಂಗ ಸ್ಥಲ | ಆಚಾರಲಿಂಗ ಸ್ಥಲ | ಆಚಾರಲಿಂಗ ಸ್ಥಲ | ಆಚಾರಲಿಂಗ ಸ್ಥಲ |
| ೪ | ಗುರುಲಿಂಗ ಸ್ಥಲ | ಗುರುಲಿಂಗ ಸ್ಥಲ | ಗುರುಲಿಂಗ ಸ್ಥಲ | ಗುರುಲಿಂಗ ಸ್ಥಲ | ಗುರುಲಿಂಗ ಸ್ಥಲ | ಗುರುಲಿಂಗ ಸ್ಥಲ |
| ೫ | ಶಿವಲಿಂಗ ಸ್ಥಲ | ಶಿವಲಿಂಗ ಸ್ಥಲ | ಶಿವಲಿಂಗ ಸ್ಥಲ | ಶಿವಲಿಂಗ ಸ್ಥಲ | ಶಿವಲಿಂಗ ಸ್ಥಲ | ಶಿವಲಿಂಗ ಸ್ಥಲ |
| ೬ | ಜಂಗಮಲಿಂಗ ಸ್ಥಲ | ಜಂಗಮಲಿಂಗ ಸ್ಥಲ | ಜಂಗಮಲಿಂಗ ಸ್ಥಲ | ಜಂಗಮಲಿಂಗ ಸ್ಥಲ | ಜಂಗಮಲಿಂಗ ಸ್ಥಲ | ಜಂಗಮಲಿಂಗ ಸ್ಥಲ |
| ೭ | ಪ್ರಸಾದಲಿಂಗ ಸ್ಥಲ | ಪ್ರಸಾದಲಿಂಗ ಸ್ಥಲ | ಪ್ರಸಾದಲಿಂಗ ಸ್ಥಲ | ಪ್ರಸಾದಲಿಂಗ ಸ್ಥಲ | ಪ್ರಸಾದಲಿಂಗ ಸ್ಥಲ | ಪ್ರಸಾದಲಿಂಗ ಸ್ಥಲ |
| ೮ | ಮಹಾಲಿಂಗ ಸ್ಥಲ | ಮಾಹಾಲಿಂಗ ಸ್ಥಲ | ಮಹಾಲಿಂಗ ಸ್ಥಲ | ಮಹಾಲಿಂಗ ಸ್ಥಲ | ಮಹಾಲಿಂಗ ಸ್ಥಲ | ಮಹಾಲಿಂಗ ಸ್ಥಲ |

ಸಂಕಲನಕಾರನು ಬಸವಣ್ಣನವರ 'ಷಟ್‌ಸ್ಥಲ'ವನ್ನು ಮಹಾಲಿಂಗ ದೇವರ 'ಏಕೋತ್ತರ ಶತಸ್ಥಲ'ವನ್ನು ನೋಡಿ ಕೊಂಡು ಮಾಡಿಕೊಂಡಿರುವ ಕಲಸುಮೇಲೋಗರ ಇದು.

ಬಸವಣ್ಣನವರು ಪೀಠಕಾ ವಿಭಾಗದಲ್ಲಿ ಹೇಳಿರುವ ಎಂಟು ಸ್ಥಲಗಳಲ್ಲಿ ಮೊದಲ ನಾಲ್ಕು ಸ್ಥಲ (ಪಿಂಡಸ್ಥಲ, ಪಿಂಡ ಜ್ಞಾನ, ಸಂಸಾರ ಹೇಯ, ಗುರುಕರುಣ)ಗಳನ್ನು ಮಾತ್ರ ಈತನು ತನ್ನ ಸಂಕಲನದ ಆರಂಭದಲ್ಲಿ ಸೇರಿಸಿಕೊಂಡಿದ್ದಾನೆ; ವಿಭೂತಿ ಪಂಚಾಕ್ಷರಿ, ಲಿಂಗಧಾರಣ ಸ್ಥಲಗಳನ್ನು ಕೈಬಿಟ್ಟಿದ್ದಾನೆ; 'ತಾಮಸ ನಿರಸನ ಸ್ಥಲ'ವನ್ನು ಭಕ್ತ ಮಾಹೇಶ್ವರಾದಿ ಆರು ಪ್ರಧಾನ ಸ್ಥಲಗಳ ಆದಿಯಲ್ಲಿ ಸೇರಿಸಿಕೊಂಡಿದ್ದಾನೆ. 'ಸ್ಥಲ ನಿರ್ದೇಶ' ಈತನದೇಣಿಗೆ ; ಅದನ್ನು ಕೂಡ ಆರು ಮುಖ್ಯ ಸ್ಥಲಗಳ ಅಡಿ ಯಲ್ಲಿ ತಾಮಸ ನಿರಸನ ಸ್ಥಲದ ಮುಂದೆ ಪವಣಿಸಿದ್ದಾನೆ. ಇವೆರಡೂ ಬಸವಣ್ಣನವರ ಜ್ಞಾನನಿಷ್ಠಕ್ಕೆ ಪ್ರತಿಯಾಗಿ ಬಂದಿರುತ್ತವೆ.

ಇನ್ನೊಂದು ತೊಡರು: ಬಸವಣ್ಣನವರು ಹೇಳಿರುವ 'ಭಕ್ತನ ಭಕ್ತಸ್ಥಲ' 'ಭಕ್ತನ ಮಾಹೇಶ್ವರಸ್ಥಲ' ಮುಂತಾದುವು ಗಳ ಸ್ಥಾನದಲ್ಲಿ, ಮಹಾಲಿಂಗದೇವರು ಹೇಳಿರುವ ಆಚಾರಲಿಂಗಸ್ಥಲಾದಿ ಆರು ಸ್ಥಲಗಳನ್ನು ಈ ಸಂಕಲಕಾರನು ಜೋಡಿಸಿದ್ದಾನೆ. ಮೇಲೆ ನಿರ್ದೇಶಿಸಿರುವ ಎರಡು ಸ್ಥಲ (ತಾಮಸ ನಿರಸನ, ಸ್ಥಲನಿರ್ದೇಶ)ಗಳೂ ಈ ಆರು ಸ್ಥಲಗಳೂ ಪ್ರತಿಯೊಂದು ಪ್ರಧಾನ ಸ್ಥಲದ ಅಡಿಯಲ್ಲಿಯೂ ಒಂದೇ ಕ್ರಮದಲ್ಲಿ ಬಂದಿವೆ. ಇವುಗಳ ಒಟ್ಟು ಸಂಖ್ಯೆ ೪೮.

ಆದರೆ ಬಸವಣ್ಣನವರ 'ಷಟ್‌ಸ್ಥಲ'ದಲ್ಲಿ, ಒಂದೊಂದು ಪ್ರಧಾನಸ್ಥಲದ ಅಡಿಯಲ್ಲಿ ಬರುವ ಸ್ಥಲವಿನ್ಯಾಸವೂ ಅದರದ್ದೇ ಆದ ವೈಶಿಷ್ಟ್ಯವನ್ನು ಪಡೆದಿದೆ. ಅವರ ಪ್ರಕಾರ 'ಭಕ್ತಸ್ಥಲ'ವು ಭಕ್ತನ ಭಕ್ತಸ್ಥಲದಿಂದಲೇ ಆರಂಭವಾಗಬೇಕು; 'ಮಾಹೇಶ್ವರಸ್ಥಲ'ವು 'ಮಾಹೇಶ್ವರನ ಮಾಹೇಶ್ವರಸ್ಥಲ'ದಿಂದಲೇ ಮೊದಲಾಗಬೇಕು; 'ಪ್ರಸಾದಿಸ್ಥಲ'ವು 'ಪ್ರಸಾದಿಯ ಪ್ರಸಾದಿಸ್ಥಲ'ದಿಂದಲೇ ತೊಡಗಬೇಕು. ಹೀಗೆಯೇ ಮುಂದಿನ ಪ್ರಾಣಲಿಂಗಿ ಶರಣ ಐಕ್ಯಸ್ಥಲಗಳಲ್ಲಿ ಬರುವ ಅವಾಂತರಸ್ಥಲಗಳ ಪರಿವಿಡಿ ಇದೆ.

ಸಂಕಲಕಾರನು ಈ ಕ್ರಮವನ್ನು ಅನುಸರಿಸಿದ್ದರೆ 'ಮಾಹೇಶ್ವರಸ್ಥಲ'ದ ಮೂರನೆಯ ಅವಾಂತರಸ್ಥಲವು ಗುರುಲಿಂಗಸ್ಥಲವಾಗಬೇಕಾಗಿದ್ದಿತು; 'ಪ್ರಸಾದಿಸ್ಥಲ'ದ ಮೂರನೆಯ ಉಪಸ್ಥಲವು 'ಶಿವಲಿಂಗಸ್ಥಲವಾಗಬಹುದಾಗಿದ್ದಿತು. ಹೀಗೆಯೇ ಮುಂದಿನ ಸ್ಥಲಗಳು ಆ ಆ ಸ್ಥಲ(ಲಿಂಗ)ದಿಂದಲೇ ಮೊದಲಾಗಬೇಕಾಗಿದ್ದಿತು.

ಚೆನ್ನಬಸವಣ್ಣನವರು ತಾವು ರಚಿಸಿದ ವಚನಗಳನ್ನು ತಾವೇ ಷಟ್‌ಸ್ಥಲಾನುಗುಣವಾಗಿ ಹಿಂಗಡಿಸಲಿಲ್ಲ ಎಂಬುದನ್ನು ತೋರಿಸಿ ಕೊಡುವುದಕ್ಕೂ ಬಸವಣ್ಣನವರ 'ಷಟ್‌ಸ್ಥಲ ಸಿದ್ಧಾಂತ'ವು ಕಾಲಕಾಲಕ್ಕೆ ಹೇಗೆ ಹೇಗೆ ಹದಗೆಡುತ್ತ, ಹಸಗೆಡುತ್ತ ಬಂದಿದೆಯೆಂಬುವನ್ನು ಉಂಟು ಮಾಡಿ ಕೊಡುವುದಕ್ಕೂ ಇಷ್ಟು ವಿವರಗಳನ್ನು ಕೊಡಬೇಕಾಯಿತು.

ಕೆಲವೇ ಮಾತುಗಳಲ್ಲಿ ಹೇಳುವುದಾದರೆ–ಅಲ್ಲಮಪ್ರಭುವಾಗಲಿ, ಚೆನ್ನಬಸವಣ್ಣನವರಾಗಲಿ 'ಷಟ್‌ಸ್ಥಲ ಸಿದ್ಧಾಂತ'ವನ್ನು ಸ್ಥಾಪಿಸಲಿಲ್ಲ. ಮಹಾಲಿಂಗದೇವರ 'ಏಕೋತ್ತರ ಶತಸ್ಥಲ'ವೂ ಶಿವಯೋಗಿ ಶಿವಾಚಾರ್ಯರದೆಂದು ಹೇಳುತ್ತಿರುವ 'ಸಿದ್ಧಾಂತಶಿಖಾಮಣಿ'ಯೂ 'ಷಟ್‌ಸ್ಥಲ'ದ ವಿಕೃತರೂಪಗಳು.

ಬಸವಣ್ಣನವರೇ ಷಟ್‌ಸ್ಥಲ ಸಿದ್ಧಾಂತವನ್ನು ಸ್ಥಾಪಿಸಿದವರು. ಅವರ 'ಷಟ್‌ಸ್ಥಲದ ವಚನಗಳು' ಲಿಂಗವಂತರಿಗೆ ಪರಮ ಪ್ರಮಾಣ ಗ್ರಂಥ. ಮತ್ತೆ ಯಾವ ಗ್ರಂಥವೂ ಲಿಂಗವಂತರಿಗೆ ಪ್ರಮಾಣ ಗ್ರಂಥವಲ್ಲ.

ನೂರಾರು ಜನ ಶರಣಶರಣೆಯರು–ಅಣ್ಣನವರಿಗಿಂತ ಹಿಂದಿನವರು. ಅವರ ಬಳಗಕ್ಕೇ ಸೇರಿದವರು, ಅವರಿಂದ ಈಚಿನವರು–ಬನಿಗನ್ನಡದಲ್ಲಿ ವಚನರಚನೆ ಮಾಡಿರುವುದೇನೋ ದಿಟ. ಅವರಲ್ಲಿ ಅನೇಕರು ತಮ್ಮ ಅನಿಸಿಕೆ, ಅನುಭವ, ಅನುಭಾವಗಳನ್ನು ಕಲಾಮಯ ಶೈಲಿಯಲ್ಲಿ ಬರೆದಿಟ್ಟಿರುವರು. ಆದರೆ ಅವರಲೊಬ್ಬರೂ 'ಷಟ್‌ಸ್ಥಲ'ವನ್ನು ಸಮಗ್ರವಾಗಿ ನಿರೂಪಿಸಿಲ್ಲ. ಹಾಗೆ ನಿರೂಪಿಸಬೇಕೆಂಬುದು ಅವರ ಉದ್ದೇಶವೂ ಆಗಿರಲಿಲ್ಲ.

ಬಸವಣ್ಣನವರೊಬ್ಬರೇ 'ಷಟ್‌ಸ್ಥಲ'ವನ್ನು ಅತ್ಯಂತ ಹೃದಯಂಗಮವಾದ ವಚನ ಶೈಲಿಯಲ್ಲಿ ಪ್ರತಿಪಾದಿಸಿರುವವರು, ಹೀಗೆ ಮಾಡಿ, ಇಡೀ ವಚನ ವಾಙ್ಮಯಕ್ಕೇ ಅಪೂರ್ವ ಶೋಭೆಯನ್ನೂ ಘನತೆ ಗಾಂಭೀರ್ಯಗಳನ್ನೂ ತಂದುಕೊಟ್ಟರು.

ಯಾವ ಭಾಷೆಯಲ್ಲಿ ವಿಜ್ಞಾನ ಗ್ರಂಥಗಳೂ ಸಿದ್ಧಾಂತ ಗ್ರಂಥಗಳೂ ವಿಶೇಷವಾಗಿರುತ್ತವೆಯೋ ಆ ಭಾಷೆಗೇ ಘನತೆ, ಗೌರವ, ಪಟ್ಟಮಂಚ, ಮಣಿಮಕುಟ. ಬಸವಣ್ಣನವರು ಬರುವವರೆಗೆ ಸಂಸ್ಕೃತ ತಮಿಳು–ಈ ಎರಡು ಭಾಷೆಗಳಿಗೆ ಮಾತ್ರ ಈ ಮರ್ಯಾದೆ ಸಲ್ಲುತ್ತಿದ್ದಿತು. ಬಸವಣ್ಣನವರು 'ಷಟ್‌ಸ್ಥಲ'ವನ್ನು ಕನ್ನಡದಲ್ಲಿ ರಚಿಸಿ ಅದರ ಹಿರಿಮೆಯನ್ನೂ ಸಿರಿವಂತಿಕೆಯನ್ನೂ ಹೆಚ್ಚಿಸಿ ಅದನ್ನು ಸಂಸ್ಕೃತ ತಮಿಳುಗಳ ಮಟ್ಟಕ್ಕೆ ಏರಿಸಿದವರು. ಇದೇನು ಸಾಮಾನ್ಯವಾದ ಸಾಧನೆಯೆ ?

## ಚೆನ್ನಬಸವಣ್ಣ

**—ಅನ್ನದಾನಯ್ಯ ಪುರಾಣಿಕ**

ಭಕ್ತಿ ಜ್ಞಾನ ವೈರಾಗ್ಯಗಳ ಸಾಕಾರ ಸ್ವರೂಪರಾದ ಬಸವ, ಚೆನ್ನಬಸವ, ಅಲ್ಲಮರ ಜೀವನ ಚರಿತ್ರೆಗಳು ವೀರಶೈವ ನೀತಿಧರ್ಮತತ್ತ್ವಗಳ ಸಾರಸಂಗ್ರಹವಾಗಿವೆ. ಆದರೆ ಈ ಮೂರು ಮಹಾನುಭಾವರ ಚರಿತ್ರೆಗಳ ಸುತ್ತ ಸೃಷ್ಟಿಯಾಗಿರುವ ಸಾಹಿತ್ಯದಲ್ಲಿ ಚಾರಿತ್ರಿಕಾಂಶಗಳಿಗಿಂತಲೂ ಪವಾಡಗಳೇ ಅಧಿಕವಾಗಿವೆ. ಮಾನವತ್ವದ ಸಹಜ ಸುಂದರ ವಿಕಾಸಕ್ಕಿಂತಲೂ ದೇವತ್ವದ ಹಿರಿಮೆ ಗರಿಮೆಗಳ ಹೆಗ್ಗಳಿಕೆಯೇ ಹೆಚ್ಚಾಗಿದೆ. ಈ ಸಾಹಿತ್ಯ ಸ್ರಷ್ಟಾರರ ದೃಷ್ಟಿಯಲ್ಲಿ ಇವರೆಲ್ಲರೂ ಅವತಾರ ಪುರುಷರು ; ಭುವಿಗಿಳಿದ ಗಣಾಧೀಶ್ವರರು ! ಅಘಟಿತ ಘಟನಾ ಸಮರ್ಥರು ! ಸಾಕ್ಷಾತ್ ಶಿವಸ್ವರೂಪಿಗಳು ! ಇವರಲ್ಲಿ ಚೆನ್ನಬಸವನ ಜೀವನಕ್ಕೆ ಸಂಬಂಧಿಸಿದ ಸಾಹಿತ್ಯ ಸಾಕಷ್ಟು ಸಿಕ್ಕಿಲ್ಲ. ಸಿಕ್ಕಿರುವ ಸಾಹಿತ್ಯವೂ ಸರ್ವಸಮ್ಮತದ್ದಾಗಿಲ್ಲ. ಪ್ರಸಾದ–ಪವಾಡಗಳ ಪ್ರಾಶಸ್ತ್ಯದಿಂದ ಕೂಡಿ ಅದು ತನ್ನ ಪ್ರಮಾಣಬದ್ಧತೆಯನ್ನು ಬಹುಮಟ್ಟಿಗೆ ಕಳೆದುಕೊಂಡಿದೆ. ಈಗ ದೊರೆತಿರುವಷ್ಟು ಸಾಹಿತ್ಯವನ್ನು ವೈಜ್ಞಾನಿಕ ಒರೆಗಲ್ಲಿಗೆ ಹಚ್ಚಿ, ತಿಕ್ಕಿ, ತೀಡಿ ಚೆನ್ನಬಸವಣ್ಣನ ಸರ್ವಾಂಗ ಸುಂದರವಾದ ಚಿತ್ರವನ್ನು ಚಿತ್ರಿಸಲು ಪ್ರಯತ್ನಿಸಬೇಕಾಗಿದೆ.

'ಮರ್ತ್ಯಲೋಕದಲ್ಲಿ ಶಿವಾಚಾರದ ಘನವು ಹೂಳಿಹೋಯಿತ್ತೆಂದು ಕರ್ತನು ತಾನೇ ಮಹಾಪ್ರಸಾದಿಯಾಗಿ ಚೆನ್ನಬಸವಣ್ಣನ ರೂಪದಲ್ಲಿ ಉದಯಿಸಿದ, ಅಂದು ಹುಟ್ಟಿದ ಕೂಸಿಗೆ ಅಂದೇ ಜವ್ವನವಾಯಿತು ; ಅವನು ಮುಟ್ಟದೆ ತಟ್ಟದೆ ಗುರುಕಾರುಣ್ಯವನ್ನು ಪಡೆದು ಯುಗಜಗವ ಮೀರಿದ ಶರಣನಾದ ; ತನಗೆ ಸದ್ಗತಿಯ ತೋರಲೆಂದು ಹಾಗಾದನೆಂದು'. ಭಕ್ತಿಭಂಡಾರಿ ಬಸವಣ್ಣ ಚೆನ್ನಬಸವಣ್ಣನನ್ನು ಮನದುಂಬ ಕೊಂಡಾಡಿದ್ದಾನೆ. ವೈರಾಗ್ಯ ಚಕ್ರವರ್ತಿ ಅಲ್ಲಮಪ್ರಭುದೇವರಾದರೋ 'ಆದಿ ಅನಾದಿ ಇಲ್ಲದಂದು, ಅಜಾಂಡ ಬ್ರಹ್ಮಾಂಡ ಕೋಟಿಗಳು ಉದಯವಾಗದಂದು, ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿ ಎಂಬುದು ಕಾಣಬಂದಿತ್ತು ಕಣಾ ಚೆನ್ನಬಸವಣ್ಣ' ಎಂದು ಹೃದಯದುಂಬಿ ಹೊಗಳಿದ್ದಾರೆ. ಶಿವಯೋಗಿ ಸಿದ್ಧ

ರಾಮನು 'ಷಡ್ವಿಧ ಸ್ಥಾಪನಾಚಾರ್ಯನಾಗಿ ವೀರಶೈವ ಪ್ರತಿಷ್ಠೆಯ ಮಾಡಲೋಸುಗ ಬಂದನಯ್ಯ ಚೆನ್ನಬಸವಣ್ಣ' ಎಂದು ಮುಕ್ತಕಂಠದಿಂದ ಪ್ರಶಂಸಿಸಿದ್ದಾನೆ. ಇನ್ನುಳಿದ ಶರಣ ಶರಣೆಯರು ಇವನನ್ನು 'ಸ್ವಯಂಭುಜ್ಞಾನಿ-ಷಟ್‌ಸ್ಥಲಸಾರ್ವಭೌಮ-ಮಹಾಪ್ರಸಾದಿ' ಎಂದು ಮುಂತಾಗಿ ಹೊಗಳಿದ್ದಾರೆ. ಶಿವಕವಿಗಳಿಗೆ ಇವನು ಸರ್ವಾಂಗಲಿಂಗಿ. ಸಂಸಾರ ನಿಸ್ಸಂಗಿ, ಷಡುಸ್ಥಲ ಧೀರ, ಮಹಾಪ್ರಸಾದಿ, ಅಯೋನಿಜ; ಅವನು ಷಣ್ಮುಖನ ಅವತಾರ! ಇಂತಹ ಮಹಾನುಭಾವನ ಚರಿತ್ರೆಯು ಪವಾಡಗಳ ಗಣಿಯಾಗಿರುವುದು ಸಹಜವೇ ಆಗಿದೆ.

ಚೆನ್ನಬಸವಣ್ಣನ ಜನನಿ ಅಕ್ಕನಾಗಮ್ಮ. ಇವನ ಸೋದರಮಾವ ಬಸವಣ್ಣ. ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಆದರೆ ಚೆನ್ನಬಸವಣ್ಣನ ಜನನ. ಅವನ ಜನಕ ಮತ್ತು ಜನ್ಮಸ್ಥಳದ ಬಗ್ಗೆ ಕವಿಗಳಲ್ಲಿ ಏಕಾಭಿಪ್ರಾಯವಿಲ್ಲ. ಹರಿಹರನು (ಕ್ರಿ.ಶ. ೧೨೦೦) ತನ್ನ ಲಿಂಗಾರ್ಜನೆಯ ರಗಳೆಯಲ್ಲಿ ಚೆನ್ನಬಸವಣ್ಣನನ್ನು ಭಕ್ತಿಯಿಂದ ಸ್ಮರಿಸಿದ್ದಾನೆ. ಈಗ ದೊರೆತಿರುವ ಅವನ ಇನ್ನುಳಿದ ರಗಳೆಗಳಲ್ಲಿ ಚೆನ್ನಬಸವನ ಪ್ರಸ್ತಾಪವೇ ಇಲ್ಲ. ಪ್ರಾಯಶಃ ಹರಿಹರನು ಚೆನ್ನಬಸವರಗಳೆಯನ್ನು ಬರೆದಿರಬಹುದು, ಅದಿನ್ನೂ ಸಿಕ್ಕಿಲ್ಲ. ಕಾರಣ ಹರಿಹರನ ಕೃತಿಗಳು ಚೆನ್ನಬಸವನ ಜೀವನ ಚರಿತ್ರೆಯ ಮೇಲೆ ಹೆಚ್ಚಿನ ಬೆಳಕನ್ನು ಬೀರುವುದಿಲ್ಲ. ಪಾಲ್ಕುರಿಕೆಯ ಸೋಮನಾಥ (ಕಿ.ಶ. ೧೨೦೦)ನು ತನ್ನ ತೆಲುಗು ಬಸವ ಪುರಾಣದಲ್ಲಿ ಚೆನ್ನಬಸವಣ್ಣನ ಜನನ, ಬಾಲ್ಯ. ವಿದ್ಯಾಭ್ಯಾಸಗಳ ಬಗ್ಗೆ ಏನನ್ನೂ ಹೇಳಿಲ್ಲ. ಬಸವಣ್ಣನೊಂದಿಗೆ ಶಿವಭಕ್ತಿಯ ಪ್ರಾಣಸ್ವರೂಪಳಾದ ನಾಗಲಾಂಬೆಯವರ ತನೂಭವನೂ, ಬಸವ ಕಾರುಣ್ಯಹಸ್ತಸಂಭೂತಪ್ರಶಸ್ತಿದೇಹನೂ ಆದ ಚೆನ್ನಬಸವಣ್ಣನು ಕಲ್ಯಾಣದಲ್ಲಿ ಇದ್ದನೆಂದು ಹೇಳಿ, ಅವನನ್ನು 'ಸರ್ವಾಂಗ ಲಿಂಗಿ ಮತ್ತು ಸಂಸಾರ ನಿಸ್ಸಂಗಿ' ಎಂದು ಕೊಂಡಾಡಿದ್ದಾನೆ. ಭೀಮಕವಿ (ಕ್ರಿ.ಶ. ೧೩೬೯)ಯ ಬಸವಪುರಾಣವು (ಶ್ರೀ ಮುರುಘ ಮಠದ ಪ್ರಕಟನೆ-೧೯೭೧) ತೆಲುಗು ಬಸವ ಪುರಾಣದ ಕನ್ನಡ ಅನುವಾದವಾಗಿದೆ. ಅಲ್ಲಿಯೂ ಈ ಬಗ್ಗೆ ಪ್ರಸ್ತಾಪವಿಲ್ಲ.

ಸುಮಾರು ಕ್ರಿ. ಶ. ೧೪೨೫ರವರೆಗೆ ಚೆನ್ನಬಸವನ ಜನನ, ಬಾಲ್ಯದ ಕಥೆಯು ನಿಗೂಢವಾಗಿಯೇ ಉಳಿದಂತೆ ತೋರುತ್ತದೆ. ಲಕ್ಕಣದಂಡೇಶ (ಕ್ರಿ. ಶ. ೧೪೨೮)ನು ತನ್ನ 'ಶಿವತತ್ವ ಚಿಂತಾಮಣಿ'ಯಲ್ಲಿ[1] ಚೆನ್ನಬಸವನು ಜಂಗಮ ಪ್ರಸಾದ ಫಲದಿಂದ ಕಲ್ಯಾಣದಲ್ಲಿ ಜನಿಸುತ್ತಾನೆ ಎಂದು ಹೇಳುತ್ತಾನೆ. ಚಾಮರಸನು (ಕ್ರಿ. ಶ. ೧೪೩೦) ತನ್ನ ಪ್ರಭುಲಿಂಗಲೀಲೆಯಲ್ಲಿ[2]. ಅಕ್ಕನಾಗಾಯಿಯು ಒಂದು ದಿನ ಬಸವನ ಒಕ್ಕುಮಿಕ್ಕ ಮಹಾಪ್ರಸಾದವನ್ನು ಮಿಗಿಲಾದ ಭಕ್ತಿಯಿಂದ ಸ್ವೀಕರಿಸಲು ಆ ಕ್ಷಣದೊಳಗೆ ಶಿವತತ್ತ್ವವೇ ರೂಪ ತಳೆದು ಚೆನ್ನಬಸವನು ಹುಟ್ಟುತ್ತಾನೆ ಎಂದು ಹೇಳುತ್ತಾನೆ. ಚೆನ್ನಬಸವಪುರಾಣದ ವಿರೂಪಾಕ್ಷ ಪಂಡಿತ (ಕ್ರಿ. ಶ. ೧೫೮೪)ನು ಚೆನ್ನಬಸವನು ಶಿವಪ್ರಸಾದದಿಂದ ಕಲ್ಯಾಣದಲ್ಲಿ ಉದಯಿಸಿದನೆಂದು ಅಭಿಪ್ರಾಯಪಡುತ್ತಾನೆ. ಶಿಶು ಚೆನ್ನಬಸವೇಶನಿಂದ ಬಿಜ್ಜಳನಿಗೆ ಉಪದೇಶ ಮಾಡಿಸಿ ಮಗುವಿನ ಪುಷ್ಪಕೋತ್ಸವನ್ನು ರಾಜವೈಭವದೊಂದಿಗೆ ನಡೆಸುತ್ತಾನೆ. ಇವರಲ್ಲದೆ, ಶೂನ್ಯಸಂಪಾದನೆಯ ಹಲಗೆದೇವರು (ಕ್ರಿ. ಶ. ೧೫೩೦) 'ಗುರುರಾಜ ಚಾರಿತ್ರ್ಯ'ದ ಸಿದ್ಧನಂಜೇಶ (ಕ್ರಿ. ಶ. ೧೬೭೨)[4], 'ಪ್ರೌಢದೇವರಾಯ ಕಾವ್ಯ'ದ ಅದೃಶ್ಯ ಕವಿ (ಕ್ರಿ. ಶ. ೧೬೫೦)[5], 'ಶರಣಲೀಲಾಮೃತ'ದ ಚೆನ್ನಪ್ಪ ಕವಿ[6] ಮೊದಲಾದವರು ಕಕ್ಕಯ್ಯನ ಪ್ರಸಾದದಿಂದ ಜನಿಸಿದನೆಂದು ತಮ್ಮ ಕಾವ್ಯಗಳಲ್ಲಿ ಹೇಳಿದ್ದಾರೆ.

ಮೇಲೆ ಉಲ್ಲೇಖಿಸಿದ ಎಲ್ಲಾ ಕವಿಗಳೂ ಚೆನ್ನಬಸವನು ಪ್ರಸಾದದಿಂದ ಕಲ್ಯಾಣದಲ್ಲಿ ಜನಿಸಿದ್ದಾನೆಂದು ಹೇಳುತ್ತಾರೆ. ಇವರಾರೂ ಇವನ ತಂದೆಯ ಹೆಸರನ್ನು ಹೇಳುವುದಿಲ್ಲ. ಇವರ ದೃಷ್ಟಿಯಲ್ಲಿ ಚೆನ್ನಬಸವನು ಅವತಾರ ಪುರುಷ; ಅವನ ಜನನ ಅಲೌಕಿಕವಾದುದು!

'ಪ್ರಸಾದ ಪವಾಡ' ಕಲ್ಪನೆಯ ಕಾತು ಕುಡಿಬಿಟ್ಟದ್ದು ಹದಿನೈದನೆಯ ಶತಮಾನದಲ್ಲಿ. ಹಿಂದಿನ ಕವಿಗಳಾದ ಹರಿಹರನಾಗಲೀ, ಪಾಲ್ಕುರಿಕೆಯ ಸೋಮನಾಥನಾಗಲೀ, ಭೀಮಕವಿಯಾಗಲೀ ಪ್ರಸಾದ ಪವಾಡದ ಪ್ರಸ್ತಾಪವನ್ನೇ ಮಾಡದಿರುವುದು ಇಲ್ಲಿ ಗಮನಾರ್ಹವಾಗಿದೆ. ಪ್ರಸಾದ ಪವಾಡ ಬಗೆಗೆ ಕವಿಗಳಲ್ಲಿ ಏಕಾಭಿಪ್ರಾಯವಿಲ್ಲ. ಕವಿಯಿಂದ ಕವಿಗೆ ಅದು ಮಾರ್ಪಾಡಾಗುತ್ತ ಹೋಗಿದೆ. ಇದಲ್ಲದೆ:

ಹೊಲೆಗಂಡಲ್ಲದೆ ಪಿಂಡದನೆಲೆಗೆ ಆಶ್ರಯವಿಲ್ಲ ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?[7]

ಎಂದು ಬಸವಣ್ಣನೇ ಕೇಳುತ್ತಾನೆ. ಇನ್ನೆಲ್ಲ ಶರಣ ಶರಣೆಯರೂ ಸಾಮಾನ್ಯರಂತೆ ಜನಿಸಿರುವಾಗ ಚೆನ್ನಬಸವನೋರ್ವನೆ ತದ್ವಿರುದ್ಧವಾಗಿ ಜನಿಸಿದನೆಂದು ಹೇಳುವುದು ಮತಪ್ರಕರ್ಷದೃಷ್ಟಿ ಎಂದು ಹೇಳದೆ ವಿಧಿಯಿಲ್ಲ. ಅಕ್ಕನಾಗಮ್ಮನು ತನ್ನೊಂದು ವಚನ

1. ಲಕ್ಕಣ ದಂಡೇಶ : ಶಿವತತ್ತ್ವ ಚಿಂತಾಮಣಿ ೩೧—೭೧.
2. ಚಾಮರಸ : ಪ್ರಭುಲಿಂಗಲೀಲೆ ೯—೨೩.
3. ವಿರೂಪಾಕ್ಷ ಪಂಡಿತ : ಚೆನ್ನಬಸವಪುರಾಣ ೪—೨೪.
4. ಸಿದ್ಧನಂಜೇಶ : ಗುರುರಾಜ ಚಾರಿತ್ರ ೮—೧೨.
5. ಅದೃಶ್ಯಕವಿ : ಪೌಢರಾಯನ ಕಾವ್ಯ ಸಂ. ೧೯,
6. ಚೆನ್ನಪ್ಪ ಕವಿ : ಶರಣಲೀಲಾಮೃತ ೧೩—೩೦೧
7. ಬಸವಣ್ಣನವರ ವಚನಗಳು : ೫೧೯.

ಪಙ್ತಿ: 'ಲಿಂಗದಿಂದುದಯವಾದಾತ ರೇವಣಸಿದ್ಧಯ್ಯ, ಭಸ್ಮದಿಂದುದಯವಾದಾತ ಸಿದ್ಧರಾಮಯ್ಯ, ಪಾದೋದಕದಿಂದೆ ಉದಯವಾದಳು ಅಕ್ಕಮಹಾದೇವಿ, ಮಂತ್ರದಿಂದ ಉದಯವಾದಾತ ನಿಮ್ಮ ಸೋದರಮಾವ ಬಸವಯ್ಯ, ಪ್ರಸಾದದಿಂದ ಉದಯವಾದಾತ ನೀನಲ್ಲವೇ ಚೆನ್ನಬಸವಯ್ಯ[8]! ಎಂದು ಹೇಳುತ್ತಾಳೆ. ಲಿಂಗದಿಂದ ರೇವಣಸಿದ್ಧ, ಭಸ್ಮದಿಂದ ಸಿದ್ಧರಾಮ, ಪಾದೋದಕದಿಂದ ಅಕ್ಕಮಹಾದೇವಿ, ಮಂತ್ರದಿಂದ ಬಸವಣ್ಣ ಜನಿಸಿದರೆಂದರೆ ಅವರೆಲ್ಲರೂ ಅಯೋನಿಜರೆ ? ಅವರೆಲ್ಲರಿಗೂ ಜನಕರಿದ್ದಿಲ್ಲವೆ ? ಕಾರಣ ಚೆನ್ನಬಸವನು ಅಯೋನಿಜ ಎಂದು ವಾದಿಸುವುದು ತರ್ಕವಿರೋಧವಾದ ಮಾತಾಗುತ್ತದೆ. ತಂದೆ ತಾಯ್ಗಳಿಗೆ ಬಹಳ ದಿನಗಳವರೆಗೆ ಮಕ್ಕಳಾಗದಿದ್ದರೆ ದೇವರನ್ನೋ, ತಪಸ್ವಿಗಳನ್ನೋ ಪೂಜಿಸಿ ವರವನ್ನೋ ಅಥವಾ ಪ್ರಸಾದವನ್ನೋ ಸಂಪಾದಿಸಿ ಮಕ್ಕಳನ್ನು ಪಡೆದುದಕ್ಕೆ ಬಸವಣ್ಣನ ಕಥೆಯೇ ಸಾಕ್ಷಿಯಾಗಿದೆ. ಹೀಗೆ ಅಕ್ಕನಾಗಮ್ಮನ ಮದುವೆಯಾಗಿ ಅವಳಿಗೆ ಬಹಳ ದಿನಗಳವರೆಗೆ ಮಕ್ಕಳಾಗದೆ ಹೋಗಿರಬಹುದು. ಆಗ ಜಂಗಮ ಪ್ರಸಾದ ಸೇವನೆಯಿಂದ ಗರ್ಭ ಧರಿಸಿ ಅವಳು ಚೆನ್ನಬಸವಣ್ಣನನ್ನು ಹೆತ್ತಿರಬಹುದು. ಮಹಾನ್ ಪುರುಷರ ಸುತ್ತಲೂ ಇಂಥ ಪವಾಡಗಳು ಹುಟ್ಟಿಕೊಳ್ಳುವುದು ಸಹಜವಾಗಿದೆ. ಕ್ರೈಸ್ತಕನ್ಯೆಯಾದ ಮೇರಿಯ ಮಗ ಮತ್ತು ಶಂಕರಾಚಾರ್ಯರು ಪ್ರಸಾದದಿಂದ ಜನಿಸಿದರು ಎಂದು ಹೇಳುತ್ತಾರೆ. ರಾಮ ಲಕ್ಷಣರೂ ಪ್ರಸಾದದ ಫಲವಾಗಿ ಜನಿಸಿದರೆಂಬ ಪ್ರತೀತಿ ಇದೆ.

ಹದಿನೈದನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಆಳಿದ ಚಕ್ರವರ್ತಿಯಾದ ಎರಡನೆಯ ಪ್ರೌಢದೇವರಾಯನ ಕಾಲದಲ್ಲಿ ವಚನಸಾಹಿತ್ಯಸಂಗ್ರಹ, ಸಂಶೋದನೆ ಮತ್ತು ವೀರಶೈವ ಧರ್ಮಪ್ರಸಾರ ಕಾರ್ಯಗಳು ವ್ಯವಸ್ಥಿತವಾಗಿಯೂ ಹಾಗೂ ವ್ಯಾಪಕವಾಗಿಯೂ ನಡೆದವು. ಶರಣರ ವಚನಗಳಲ್ಲಿ ಷಟ್‌ಸ್ಥಲಚಕ್ರವರ್ತಿ, ಮಹಾಜ್ಞಾನಿ, ಷಟ್‌ಸ್ಥಲಧೀರ ಮುಂತಾಗಿ ಹೊಗಳಿಸಿಕೊಳ್ಳಲ್ಪಟ್ಟ ಚೆನ್ನಬಸವನ ದೇದೀಪ್ಯಮಾನವಾದ ವ್ಯಕ್ತಿತ್ವಕ್ಕೆ ಮಾರುಹೋಗಿ, ಬೇರೆ ಸಾಹಿತ್ಯ ಸಾಮಗ್ರಿಗಳು ಸಿಕ್ಕದಿರುವಾಗ, ಪರಧರ್ಮೀಯರ ಮೇಲೆ ವೀರಶೈವ ಧರ್ಮದ ಮೇಲ್ಮೆಯನ್ನು ಸಾರಲು, ಜನಸಾಮಾನ್ಯರನ್ನು ಆಕರ್ಷಿಸಲು ಈ ಪ್ರಸಾದ–ಪವಾಡಗಳನ್ನು ಕವಿಗಳು ಸೃಷ್ಟಿಸಿರುವ ಸಂಭವವಿದೆ. ಪವಾಡಗಳಲ್ಲಿ ವಿವರಿತವಾದ ಘಟನೆಗಳ ಶರವೇಗವನ್ನು ನೋಡಿದಾಗ ಅವು ಅಸಂಭವನೀಯವೆಂದು ತೋರುತ್ತವೆ. ಈ ಎಲ್ಲಾ ಕಾರಣಗಳಿಗಾಗಿ, ಪ್ರಸಾದ–ಪವಾಡವು ಕವಿಗಳ ಕಲ್ಪನೆಯ ಕೈಗೂಸು ಎಂದು ಹೇಳದೆ ವಿಧಿಯಿಲ್ಲ. ಆಧುನಿಕ ವಿದ್ವಾಂಸರ ಅಭಿಪ್ರಾಯ ಕೂಡ ಇದುವೇ ಆಗಿದೆ.

ಇಷ್ಟೆಲ್ಲಾ ಹೇಳಿದ ಮೇಲೆ, ಚೆನ್ನಬಸವಣ್ಣನ ತಂದೆ ಯಾರು? ಅವನು ಎಲ್ಲಿಯವ? ಅವನು ಕಲ್ಯಾಣದಲ್ಲಿ ಇದ್ದನೆ ? ಒಂದು ವೇಳೆ ಇದ್ದಿದ್ದರೆ ಅವನ ಹೆಸರನ್ನು ಯಾವ ಶರಣನೂ ಹೇಳದಿರಲು ಕಾರಣವೇನು ? ಇತ್ಯಾದಿ ಪ್ರಶ್ನೆಗಳು ಸಹಜವಾಗಿಯೇ ಉದ್ಭವಿಸುತ್ತವೆ.

ಈ ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಲು ನಾವು ಸಿಂಗಿರಾಜ (ಕ್ರಿ. ಶ. ೧೫೦೦)ನನ್ನು ಆಶ್ರಯಿಸಬೇಕಾಗುತ್ತದೆ. ಸಿಂಗಿರಾಜನು ತನ್ನ ಕಾವ್ಯವಾದ ಸಿಂಗಿರಾಜ ಪುರಾಣದಲ್ಲಿ ಚೆನ್ನಬಸವಣ್ಣನ ತಂದೆಯ ಹೆಸರು ಶಿವದೇವ (ಶಿವಸ್ವಾಮಿ)ನೆಂದು ಹೇಳುತ್ತಾರೆ. ಇವನ ಕಾವ್ಯವು ಸಂಶೋಧಕರಿಗೆ ದಾರಿದೀಪವಾಗಿದೆ. 'ಸಿಂಗಿರಾಜ ಪುರಾಣ'ದ ಐದನೆಯ ಸಂಧಿಯಲ್ಲಿ ಉಕ್ತವಾದ ಪ್ರಸಂಗ ಇಂತಿದೆ[9]:

ಬಾಗೆವಾಡಿಯನ್ನು ಬಿಟ್ಟು ಬಂದ ಬಸವಣ್ಣನು ಕಪ್ಪಡಿ ಸಂಗಮ ಕ್ಷೇತ್ರದಲ್ಲಿ ನೆಲಸುತ್ತಾನೆ. ಅಲ್ಲಿಯ ಭಕ್ತರೆಲ್ಲರೂ ಸೇರಿ ಅವನಿಗೆ 'ಸಂಗಮೇಶ್ವರ ಶರಣಾದ್ಯಪಟ್ಟಂ'ಗಟ್ಟುತ್ತಾರೆ. ಶಿವಲಿಂಗ ಮುಖದಿಂದ ತಾನು ನಿರಪರಾಧಿ ಎಂದು ಹೇಳಿಸಿದ ಬಸವಣ್ಣನ ಮಹಿಮೆಯು ಸುತ್ತಲೂ ಪಸರಿಸುತ್ತದೆ. ಮಗನನ್ನು ನೋಡಿ ಅವನನ್ನು ಬಾಗೆವಾಡಿಗೆ ಕರೆದೊಯ್ಯಲು ಮಾದರಸ ಮಾದಲಾಂಬೆಯರು ಕಪ್ಪಡಿ ಸಂಗಮಕ್ಕೆ ಬರುತ್ತಾರೆ. ಬಸವಣ್ಣನನ್ನು ಮನೆಗೆ ಕರೆದೊಯ್ಯಲು ವಿಶ್ವಪ್ರಯತ್ನ ಮಾಡಿ ವಿಫಲರಾಗುತ್ತಾರೆ. ಪರುಷ ಮುಟ್ಟಿದ ಕಬ್ಬಿಣ ತಿರುಗಿ ಕಬ್ಬಿಣವಾಗಲಿಲ್ಲ! ಬಸವನು ತಂದೆತಾಯ್ಗಳನ್ನು ಸಂತೈಸಿ ಬುದ್ಧಿವಾದ ಹೇಳಿ ಬೀಳ್ಕೊಡುತ್ತಾನೆ. ಆಗ ಅವರು ಬಸವಣ್ಣನ ಸೇವೆಗೆ 'ಸಂಸಾರ ಭ್ರಾಂತಳಿಯದಳಿಯ ಶಿವದೇವ ಮಗಳ್ನಾಗಾಯನ್ನು' ಬಿಟ್ಟು ತಕ್ಕುದು ಕೊಟ್ಟು ಬಾಗೆವಾಡಿಗೆ ಮರಳುತ್ತಾರೆ. ಕವಿಯ ಅಭಿಪ್ರಾಯದಂತೆ ಶಿವದೇವನಿಗೆ ಆಗ ಇನ್ನು ಸಂಸಾರ ಭ್ರಾಂತಿ ಅಳಿದಿರಲಿಲ್ಲ. ಅವನು ತನ್ನ ಅತ್ತೆಮಾವಂದಿರ ಆಜ್ಞೆಯಂತೆ ಕಪ್ಪಡಿ ಸಂಗಮ ಕ್ಷೇತ್ರದಲ್ಲಿ ಬಸವನ ಸಹಾಯಕ್ಕಾಗಿ ಉಳಿಯುತ್ತಾನೆ. ಅವನ ಸತಿ ಅಕ್ಕನಾಗಮ್ಮನೂ ಅವನೊಂದಿಗೆ ಇರುತ್ತಾಳೆ. ಶಿವದೇವನ ತಂದೆತಾಯ್ಗಳ ವಿಚಾರವನ್ನಾಗಲಿ, ಅವನ ಊರು ಬಾಲ್ಯದ ವಿಷಯವನ್ನಾಗಲೀ ಸಿಂಗಿರಾಜನು ತನ್ನ ಕಾವ್ಯದಲ್ಲಿ ಪ್ರಾಸ್ತಾಪಿಸಿಲ್ಲ. ಕವಿಗೆ ಈ ವಿಷಯಗಳು ತಿಳಿದಿರಲಿಕ್ಕಿಲ್ಲ ಅಥವಾ ಇಂತಹ ವಿಷಯಗಳಿಗೆ ಕವಿಯು ಮಹತ್ವವನ್ನು ನೀಡಿರಲಿಕ್ಕಿಲ್ಲ.

---

8. ಬಸವಾದಿ ಗಣವಚನ ಮಂಜರಿ ಪು. ೧೪೧.
9. ಸಿಂಗಿರಾಜ : ಸಿಂಗಿರಾಜ ಪುರಾಣ, ಸಂಧಿ ೫, ಪದ್ಯಗಳು ೯೮—೧೧೭.

ನಾಗಾಯಿಯ ವಲ್ಲಭವನಾದ ಶಿವದೇವನು ಇಂಗಳೇಶ್ವರದವನೆಂಬ ಅಭಿಪ್ರಾಯ ಕೂಡ ಇದೆ. ತಮ್ಮ ಏಕಮಾತ್ರ ಪುತ್ರಿಯಾದ ಅಕ್ಕನಾಗಮ್ಮನನ್ನು ಮಾದರಸ ಮಾದಲಾಂಬೆಯರು ತಮ್ಮ ಸಮೀಪದ ಸಂಬಂಧಿಯೋರ್ವನಿಗೆ ಕೊಟ್ಟು ಮದುವೆ ಮಾಡಿರುವ ಸಂಭವವುಂಟು. ಮಾದಲಾಂಬೆ ಬಲದೇವನ ಸೋದರಿ ಎಂಬುದು ಸರ್ವಶ್ರುತ ಸಂಗತಿ. ಇಂಗಳೇಶ್ವರದ ಮಹಾಧೀಶರ ಮನೆತನಕ್ಕೆ ಸೇರಿದ ಬಲದೇವನು ತನ್ನ ಶೌರ್ಯ ಪರಾಕ್ರಮದಿಂದ ಉನ್ನತ ಸ್ಥಾನವನ್ನುಗಳಿಸಿ ಕೊನೆಯಲ್ಲಿ ಬಿಜ್ಜಳನ ಮಹಾಪ್ರಧಾನಿಯಾದ. ಅಕ್ಕನಾಗಮ್ಮನು ಇಂಗಳೇಶ್ವರದಲ್ಲಿ ಕೆಲವು ವರ್ಷಗಳವರೆಗೆ ಇದ್ದದ್ದು ಮತ್ತು ಆಕೆಯು ಅಲ್ಲಿ ಆಚಾರ್ಯ ರೇವಣಸಿದ್ಧರ ಪ್ರಭಾವಕ್ಕೆ ಒಳಗಾಗಿ ಶಿವಾನುಭವ ಮಾರ್ಗವನ್ನು ಹಿಡಿದದ್ದು ಕಂಡುಬರುತ್ತದೆ. ಇಂಗಳೇಶ್ವರದಲ್ಲಿ ಇಂದಿಗೂ ಪಕ್ಕ ಪಕ್ಕದಲ್ಲಿಯೇ ಇರುವ ರೇವಣಸಿದ್ಧರು ಹಾಗೂ ಅಕ್ಕನಾಗಮ್ಮನ ಗವಿಗಳು ಈ ಊಹೆಗೆ ಆಧಾರವನ್ನು ಒದಗಿಸುತ್ತವೆ. ಶಿವದೇವನು ಇಂಗಳೇಶ್ವರದವನು ಮತ್ತು ಅವನು ಮಾದಲಾಂಬೆಯ ಸಹೋದರನು ಆಗಿರಬಹುದೆಂದು ಊಹಿಸಲವಕಾಶವಿದೆ. ಇವರೀರ್ವರೂ ಕಪ್ಪಡಿಗೆ ಹೋಗಿ ಬಸವಣ್ಣನ ಪಾಲಕರಾಗಿ ಅಲ್ಲಿಯೇ ನೆಲಸಿದರು. ಶಿವದೇವನು ಕಪ್ಪಡಿ ಸಂಗಮದವನೆಂಬ ಅಭಿಪ್ರಾಯವೂ ಇದೆ. ಗಿರಿಸಿದ್ಧಾಪುರ ಶಾಸನದಲ್ಲಿ ಇನ್ನೋರ್ವ ಶಿವದೇವನ ಉಲ್ಲೇಖ ಬರುತ್ತದೆ[10]. ಇಲ್ಲಿ ಇವನನ್ನು ಗೋಪೆಯ ಶಿವದೇವನೆಂದು ಕರೆದಿದ್ದಾರೆ. ಸಕಲೇಶ ಮಾದರಸನ ಚರಿತ್ರೆಯಲ್ಲಿ[11] ಗೋಪೆಯ ಶಿವದೇವನ ಪ್ರಸ್ತಾಪವಿದೆ. ಇವನು ಬಸವಣ್ಣನ ಸಮಕಾಲೀನ. ಆದರೆ ಈ ಶಿವದೇವನು ಸಿಂಗಿರಾಜ ಪುರಾಣದ ಶಿವದೇವನಿಗಿಂತ ಭಿನ್ನನಾದ ವ್ಯಕ್ತಿ ಆಗಿರಬಹುದು. ಚೌಡದಾನಪುರದ ಹಲವು ಶಾಸನಗಳಲ್ಲಿ[12] ಉಲ್ಲೇಖಿತನಾದ ಶಿವದೇವನು ಹದಿಮೂರನೆಯ ಶತಮಾನದವನು.

ಸಿಂಗಿರಾಜ ಪುರಾಣದ ಪ್ರಕಾರ ಶಿವದೇವನು ಕಪ್ಪಡಿ ಕ್ಷೇತ್ರವನ್ನು ಬಿಟ್ಟು ಕಲ್ಯಾಣಕ್ಕೆ ಬಸವಣ್ಣನೊಂದಿಗೆ ಹೋದದ್ದು ವ್ಯಕ್ತವಾಗುತ್ತದೆ[13]. ಅಲ್ಲಿ ಅವನು ಮಹಾಮನೆಯ ವ್ಯವಸ್ಥಾಪಕನಾಗಿ ಹಣಕಾಸಿನ ವ್ಯವಹಾರ ನೋಡಿಕೊಂಡಂತೆ ತೋರುತ್ತದೆ. ಸಿಂಗಿರಾಜ ಪುರಾಣದ ೩೧ನೆಯ ಸಂಧಿಯ ೪೯ ಮತ್ತು ೫೦ನೆಯ ಪದ್ಯಗಳು ಈ ಮಾತಿಗೆ ಪುಷ್ಟಿಯನ್ನು ನೀಡುತ್ತವೆ. ಮುತ್ತಿಘಟ್ಟ ಪಾಳ್ಯದಿಂದ ರತ್ನಪದಕವನ್ನು ತಂದು ಕಲ್ಯಾಣದ ಸಮಸ್ತ ವ್ಯವಹಾರಿ ಸಿದ್ಧಿಗಶೆಟ್ಟಿಗೆ ಕೊಟ್ಟು ಅವನಿಂದ ಒಂದು ಲಕ್ಷ ಹೊನ್ನನ್ನು ಪಡೆದು ಮುತ್ತಿಘಟ್ಟ ಪಾಳ್ಯಕ್ಕೆ ಒಂದು ಬಸವಣ್ಣನ ಆದೇಶದಂತೆ ಅಲ್ಲಿ ದಾಸೋಹ ಕಾರ್ಯವನ್ನು ನಡೆಸುತ್ತಾನೆ. ಶಿವದೇವನು ಕಾಯಕಯೋಗಿ. ಅವನು ವಚನಗಳನ್ನು ರಚಿಸಿದಂತೆ ಕಂಡುಬರುವುದಿಲ್ಲ. ಪ್ರತಿನಿತ್ಯವೂ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ಪ್ರಸಾದ ಮತ್ತು ವಸತಿಯ ಏರ್ಪಾಡು ಮಾಡುವುದು ಸಾಮಾನ್ಯ ಕಾರ್ಯವೆ? ಇಂಥ ಮಹಾನ್ ಕಾರ್ಯದಲ್ಲಿ ನಿರತನಾದ ಶಿವಸ್ವಾಮಿಗೆ ವಚನ ರಚಿಸಲು ವ್ಯವಧಾನವೆಲ್ಲಿ? ಬಸವನು ಕೈಕೊಂಡ ಮಹಾನ್ ಕ್ರಾಂತಿಯಲ್ಲಿ ಶಿವಸ್ವಾಮಿಯು ನಿರ್ವಹಿಸಿದ ಪಾತ್ರವು ಗಣನೀಯವಾದುದು. ಅವನು ಎಲೆಯ ಮರೆಯ ಹೂವಿನಂತೆ ಪ್ರಸಿದ್ಧಿಗೆ ಬರದೆ ಹೋದರೂ ಅವನು ಜೇರಿದ ಶಿವಾನುಭವ ಸೌರಭವು ಶರಣ ಮಂದಾನಿಲಯದಲ್ಲಿ ಬೆರೆತುಕೊಂಡಿತ್ತೆಂದು ಹೇಳಬಹುದು.

ಚೆನ್ನಬಸವಣ್ಣನ ತಂದೆ ಶಿವದೇವನೆಂದು ಹೇಳಿದ ಮೇಲೆ ಚೆನ್ನಬಸವಣ್ಣ ಎಲ್ಲಿ ಜನಿಸಿದ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಕಪ್ಪಡಿಯಲ್ಲಿಯೋ? ಅಥವಾ ಕಲ್ಯಾಣವಲ್ಲಿಯೋ? ಪವಾಡವನ್ನು ನಂಬಿದ ಕವಿಗಳು ಅವನು ಕಲ್ಯಾಣದಲ್ಲಿ ಜನಿಸಿನೆಂದು ಹೇಳುತ್ತಾರೆ. ಚರಿತ್ರೆಯ ಪ್ರಕಾರ ಬಸವಣ್ಣನು ಕಲ್ಯಾಣದಲ್ಲಿ ಇದ್ದುದು ಕ್ರಿ.ಶ. ೧೧೫೫ ರಿಂದ ೧೧೬೭ರ ವರೆಗೆ ಅಂದರೆ ಹನ್ನೆರಡು ವರ್ಷಗಳು ಮಾತ್ರ ಅನುಭವ ಮಂಟಪವು ನಿರ್ಮಾಣಗೊಂಡದ್ದು ಕ್ರಿ. ಶ. ೧೧೫೬ರ ಸುಮಾರಿಗೆ. ಚೆನ್ನಬಸವ ಕಲ್ಯಾಣದಲ್ಲಿ ಜನಿಸಿದನೆಂಬ ವಾದವನ್ನು ಒಪ್ಪಿದರೆ ೧೨ ವರ್ಷಗಳ ಹುಡುಗನಾದ ಚೆನ್ನಬಸವಣ್ಣ ಆ ಅನುಭವ ಮಂಟಪದ ಉಪಾಧ್ಯಕ್ಷನು ಹೇಗಾದನು? ಹನ್ನೆರಡು ವರ್ಷಗಳಲ್ಲಿ ಇಷ್ಟೊಂದು ಮಹತ್ಕಾರ್ಯಗಳನ್ನು ಹೇಗೆ ಮಾಡಿದ? ಬಸವನ ನಂತರ ಬಿಜ್ಜಳನ ಮಹಾದಂಡ ನಾಯಕನು ಹೇಗಾದ? ಇದಲ್ಲದೆ ಕಾಲಜ್ಞಾನ ವಚನಗಳ ಪ್ರಕಾರ[14] ಚೆನ್ನಬಸವನು ನಂದನ ನಾಮ ಸಂವತ್ಸರದ ವೈಶಾಖ ಶುದ್ಧ ಪಾಡ್ಯ ಮಂಗಳವಾರ ಕೃತ್ತಿಕಾ ನಕ್ಷತ್ರದಲ್ಲಿ ಪ್ರಾತಃಕಾಲದಲ್ಲಿ ಜನಿಸಿದನೆಂದೂ ರಾಕ್ಷಸ ನಾಮ ಸಂವತ್ಸರದ ಕಾರ್ತಿಕ ಮಾಸದಲ್ಲಿ ಉಳುವಿಯಲ್ಲಿ ಲಿಂಗೈಕ್ಯನಾದನೆಂದೂ ತಿಳಿದುಬರುತ್ತದೆ. ನಂದನ ನಾಮ ಸಂವತ್ಸರದವರೆಗೆ ೨೪ ವರ್ಷಗಳಾಗುತ್ತವೆ. ಚೆನ್ನಬಸವನು ಉಳುವಿನಲ್ಲಿ ಕ್ರಿ. ಶ. ೧೧೬೮ರ ಫೆಬ್ರುವರಿಯಲ್ಲಿ ಲಿಂಗೈಕ್ಯನಾದನೆಂಬುದು ನಿರ್ವಿವಾದ ಸಂಗತಿಯಾಗಿದೆ. ಚೆನ್ನಬಸವೇಶ್ವರನ ರಥೋತ್ಸವವು ಪ್ರತಿವರ್ಷವೂ ಫೆಬ್ರುವರಿ ತಿಂಗಳಲ್ಲಿ ಜರಗುತ್ತದೆ. ಚೆನ್ನಬಸವನು ೨೪ ವರ್ಷಗಳು ಬದುಕಿದ್ದನೆಂಬುದನ್ನು ಅಲ್ಲಗಳೆಯಲು ಯಾವ ಆಧಾರವೂ ಇಲ್ಲ. ಈ ಲೆಕ್ಕದ ಪ್ರಕಾರ ಚೆನ್ನಬಸವನು ಕೂಡಲಸಂಗಮದಲ್ಲಿ ಕ್ರಿ.ಶ. ೧೧೪೪ರಲ್ಲಿ

10. ಬಸವೇಶ್ವರರ ಸಮಕಾಲೀನರು (ಬಸವ ಸಮಿತಿ ಪ್ರಕಟನೆ) ಪು ೭೪೩
11. ಅದೇ ('ಸಕಲೇಶ ಮಾದರಸ' ಪ್ರೊ. ಸಂಗಮನಾಥ ಜಿ. ಹಂಡಿ) ಪು. ೪೨೫.
12. 'ಶಾಸನಗಳಲ್ಲಿ ಶಿವಶರಣರು' ಡಾ॥ ಎಂ.ಎಂ. ಕಲಬುರ್ಗಿ ಪು. ೭೪೪.
13. ಸಿಂಗಿರಾಜ : ಸಿಂಗಿರಾಜಪುರಾಣ ಸಂಧಿ ೩೧ ಪದ್ಯ ೨೧—೪೯ ಮತ್ತು ೫೦.
14. ಕಾಲಜ್ಞಾನ ವಚನಗಳು ಪು. ೨೩ ಮತ್ತು ೩೩. ಸಂ—ಡಾ.ಫ.ಗು. ಹಳಕಟ್ಟಿಯವರು

ಜನಿಸಿದವನೆಂದು ನಿಸ್ಸಂದೇಹವಾಗಿ ಹೇಳಬಹುದು. ಅವನು ಬಸವನಿಗಿಂತ ೧೨ ವರ್ಷ ಚಿಕ್ಕವನು. ಅವನ ಬಾಲ್ಯದ ವಿದ್ಯಾಭ್ಯಾಸವೂ ಅಲ್ಲಿಯೇ ನಡೆಯಿತು. ಅವನು ಹತ್ತು ವರ್ಷದವನಿರುವಾಗ ಬಸವನೊಂದಿಗೆ ಮಂಗಳವಾಡಕ್ಕೆ ಹೋದನು. ಮುಂದೆ ಕ್ರಿ. ಶ. ೧೧೫೫ರ ಸುಮಾರಿಗೆ ಕಲ್ಯಾಣಕ್ಕೆ ಹೋಗಿ ಅಲ್ಲಿ ಕ್ರಿ. ಶ. ೧೧೬೮ರವರೆಗೆ ಅಂದರೆ ಕಲ್ಯಾಣದ ವಿಪ್ಲವದವರೆಗೆ ಇದ್ದನು. ಮುಂದೆ ರಾಯಮುರಾರಿಯ ಸೇನೆಯು ಶರಣರನ್ನು ಬೆನ್ನಟ್ಟಿ ಬರಲು ಶರಣರ ಮುಂದಾಳುತನವನ್ನು ವಹಿಸಿ ತನ್ನ ತಾಯಿಯಾದ ಅಕ್ಕ ನಾಗಮ್ಮ, ಮಡಿವಾಳ ಮಾಚಯ್ಯ, ಕಿನ್ನರಿ ಬೊಮ್ಮಯ್ಯ, ನುಲಿಯ ಚಂದಯ್ಯ ಮೊದಲಾದ ಶರಣರ ಸಹಾಯದಿಂದ ಅವರನ್ನು ರಕ್ಷಿಸುತ್ತ ಕೊನೆಗೆ ಕ್ರಿ. ಶ. ೧೧೬೯ರಲ್ಲಿ ಉಳುವಿಯಲ್ಲಿ ಲಿಂಗೈಕ್ಯನಾದನು. ಅವನ ಜೀವಮಾನಾವಧಿ ೨೪ ವರ್ಷಗಳು. ಇದಿಷ್ಟು ಇವನ ಸಂಕ್ಷಿಪ್ತ ಜೀವನ ಚರಿತ್ರೆ.

ಸಾಧನೆ–ಸಿದ್ಧಿ :–ಚೆನ್ನಬಸವಣ್ಣ ಮುಟ್ಟದೆ ತಟ್ಟದೆ ಗುರುಕಾರುಣ್ಯವನ್ನು ಪಡೆದ ಸ್ವಯಂಭುಜ್ಞಾನಿ, ಬಿತ್ತದೆ ಬೆಳೆಯದೆ ಹೆಪ್ಪುಳಿಸಿನ ರಾಸಿಯಾದವನು. ಅವನ ಬೆಳವಣಿಗೆ ಮಹಾಚೋದ್ಯ ! ಭಕ್ತಿಜ್ಞಾನ ವೈರಾಗ್ಯಗಳ ತ್ರಿವೇಣೀ ಸಂಗಮವಾಗಿತ್ತು ಕಪ್ಪಡಿ ಸಂಗಮಕ್ಷೇತ್ರ ! ಅಲ್ಲಿ ಸಹಜತೆ, ಶಾಂತಿ ನೆಲೆಸಿತ್ತು. ಚೆನ್ನಬಸವಣ್ಣನ ದೀಕ್ಷಾಗುರು ಮತ್ತು ಶಿಕ್ಷಾಗುರು ಬಸವಣ್ಣ ! ಈ ಮಾತನ್ನು ಚೆನ್ನಬಸವಣ್ಣ ತನ್ನ ವಚನಗಳಲ್ಲಿ ಒಪ್ಪಿಕೊಂಡಿದ್ದಾನೆ.

೧. ಕಾರುಣ್ಯದ ಶಿಶುವಾಗಿ ಒಡಲೊಳಗೆ ಇದ್ದಲ್ಲಿ ವಿಭೂತಿಪಟ್ಟವ ಕಟ್ಟಿ
ಹಸ್ತಮಸ್ತಕ ಸಂಯೋಗಮಾಡಿ, ಎನ್ನನುಳಿಹಿದವರಾರಯ್ಯ, ನೀವಲ್ಲವೇ ?[15]

೨. ಎನಗೆನ್ನ ಗುರು ಬಸವಣ್ಣ ತೋರಿದ ಘನವ ನಿಮಗೆ ಬಿನ್ನೈಸುವೆನು ಕೇಳಾ ಪ್ರಭುವೆ[16]

ಈ ವಚನಗಳು ಈ ಮಾತಿಗೆ ಸಾಕ್ಷಿಯಾಗಿವೆ. ಬಸವಣ್ಣನಿಂದ ವೇದ ವೇದಾಂತಗಳ ಸಾರಸಂಗ್ರಹವನ್ನು ಅರಿತ ಚೆನ್ನಬಸವಣ್ಣ ಶಾಸ್ತ್ರಪುರಾಣಗಳ ಅಂತರಂಗವನ್ನು ಪ್ರವೇಶಿಸಿದ. ಭಕ್ತಿಭಂಡಾರಿ ಬಸವಣ್ಣ, ಪರಮಪ್ರಸಾದಿ ಶಿವದೇವ, ಭಕ್ತಿಯ ತವರಾದ ಅಕ್ಕನಾಗಮ್ಮ, ಜ್ಞಾನವೈರಾಗ್ಯಗಳ ಮೇರು ಎನಿಸಿದ ಜಾತವೇದಮುನಿ ಇಂಥವರ ಸಂಗಸಹವಾಸದಿಂದ ಹತ್ತು ವರ್ಷಗಳಲ್ಲಿಯೇ ಅವನು ಮಹಾಜ್ಞಾನಿಯಾದ. ಕಲ್ಯಾಣಕ್ಕೆ ಬಂದಮೇಲೆ ಅವನ ಲೋಕಾನುಭವ ಬೆಳೆಯಿತು. ಅವನಲ್ಲಿ ಸಂಘಟನಾ ಸಾಮರ್ಥ್ಯ ಹೆಚ್ಚಿತು. ಪ್ರತಿದಿನವೂ ಬೇರೆ ಬೇರೆ ಪ್ರದೇಶಗಳಿಂದ ಬಸವಣ್ಣನ ಮಹಾ ಮನೆಗೆ ಬರುತ್ತಿದ್ದ ಅಸಂಖ್ಯಾತ ಶರಣ ಶರಣೆಯ ರಿಂದ ಆಯಾ ಭಾಗದ ಸಾಮಾಜಿಕ, ನೈತಿಕ, ಧಾರ್ಮಿಕ ಜೀವನದ ಪರಿಚಯವನ್ನು ಅವನು ಮಾಡಿಕೊಂಡ. ನಿತ್ಯಜೀವನವನ್ನು ನಟ್ಟನೋಟದಿಂದ ನೋಡಿದ. ಸಮಾಜದಲ್ಲಿ ತುಂಬಿಕೊಂಡಿದ್ದ ಅಂಧಸಂಪ್ರದಾಯಗಳು, ಅನೈತಿಕ ವ್ಯವಹಾರಗಳು, ಸುಲಿಗೆ ಶೋಷಣೆಗಳನ್ನು ಕಣ್ಣಾರೆ ಕಂಡ ಅವನಿಗೆ ಕರುಳು ಕತ್ತರಿಸಿದಷ್ಟು ವೇದನೆಯಾಯಿತು. ಮತತತ್ತ್ವಗಳು ವಾಗಾದ್ವೈತಿಗಳ ಆಟಿಕೆಗಳಾಗಿದ್ದುವು. ಶೈವಧರ್ಮ ಪ್ರಭೇದಗಳಲ್ಲಿ ಕರ್ಮಠ ತನವು, ಜೈನ ಬೌದ್ಧ ಧರ್ಮಗಳಲ್ಲಿ ಆಚಾರಶೈಥಿಲ್ಯವು, ವೈದಿಕ ಪಂಥಗಳಲ್ಲಿ ವರ್ಣಾಶ್ರಮದ ಪ್ರಾಬಲ್ಯವು ಅಧಿಕವಾಗಿ ಸಮಾಜ ಜೀವನವು ಮರುಣೋನ್ಮುಖವಾಗಿತ್ತು. ಜನಸಾಮಾನ್ಯರ ಬಾಳು ಪ್ರಾಣಿಯ ಬಾಳಾಗಿದ್ದಿತು. ಗುರುಕಾರುಣ್ಯವ ಪಡೆಯವೆ, ಸ್ವರ ಬಿಂದುಗಳ ತಡೆಯದೆ ಮನಸ್ಸಿಗೆ ಬಂದಂತೆ ಘನಲಿಂಗ ವಾರ್ತೆಯನ್ನು ಗಳುಹುತ್ತಿದ್ದರು. ಖ್ಯಾತಿಗಾಗಿ ತತ್ತ್ವಂಗಳನ್ನೋದಿ ಅವುಗಳನ್ನು ಅನ್ಯರಿಗೆ ಉಪದೇಶಿಸುತ್ತಿದ್ದ ವಾಗದ್ವೈತಿ ಗಳ ಉರುವಣಿಗೆ ಅಧಿಕವಾಗಿತ್ತು. ಕ್ರಿಯಾಹೀನ ಅಜ್ಞಾನಿಗಳ ಸಂಖ್ಯೆ ಹೆಚ್ಚಿತ್ತು. ಯಾರು ಬೇಕಾದರೂ ಲಿಂಗ ಧರಿಸಿ ಜಂಗಮ ರೆಂದು ಮರೆಯುತ್ತಿದ್ದರು. ಇವೆಲ್ಲವನ್ನೂ ಪ್ರತ್ಯಕ್ಷ ನೋಡಿದ ತರುಣ ಚೆನ್ನಬಸವಣ್ಣನು ಸಿಡಿದೆದ್ದ; ಸಮಾಜ ಜೀವನದಲ್ಲಿ ತುಂಬಿಕೊಂಡಿದ್ದ ಕೊಳೆಯನ್ನು ತೊಳೆಯಲು ಕಂಕಣಬದ್ಧನಾದ; ಧರ್ಮಶಾಸ್ತ್ರದಲ್ಲಿ ಹುಟ್ಟಿಕೊಂಡಿದ್ದ ಕಳೆಯನ್ನು ಕೀಳಲು ಸಿದ್ಧನಾದ. ಅಲ್ಲಿ ತಲೆದೋರಿದ್ದ ಶುಷ್ಕವಾದಪ್ರತಿವಾದಗಳು, ಅಂಧಾನುಸರಣೆ, ಅನೈತಿಕ ವ್ರತನಿಯಮಗಳು, ಕಠೋರ ಕರ್ಮಾಚರಣೆಗಳು ಕ್ಲಿಷ್ಟತೆ–ಸಂದಿಗ್ಧತೆಗಳನ್ನು ಹೋಗಲಾಡಿಸಿ ನಿತ್ಯಜೀವನದಲ್ಲಿ ಸತ್ಯ, ಆಚಾರ, ನೀತಿ–ನಿಷ್ಠೆ, ಸತ್ಕ್ರಿಯೆ, ಸದಾಚಾರಗಳನ್ನು ಬೆಳೆಸಿ ಆಧ್ಯಾತ್ಮಿಕ ಅಸ್ತಿವಾರದ ಮೇಲೆ, ಶುದ್ಧ–ಸಿದ್ಧ–ಸಮೃದ್ಧ ಸಮಾಜವನ್ನು ಸ್ಥಾಪಿಸಲು ಚೆನ್ನಬಸವ ಣ್ಣನು ಪ್ರತಿಜ್ಞೆಗೈದ. ಷಟ್‌ಸ್ಥಲ ಸಿದ್ಧಾಂತಕ್ಕೆ ಹೊಸ ಭಾಷ್ಯವನ್ನು ಹೊಸ ದೃಷ್ಟಿಯನ್ನು ನೀಡಲು ನಿರ್ಧರಿಸಿದ.

ಚೆನ್ನಬಸವಣ್ಣನು ಬಸವಣ್ಣನ ಶಿಷ್ಯನಾದರೂ ಪ್ರಭುಸಂಪ್ರದಾಯದವ. ಲೋಕೋದ್ಧಾರಕ್ಕಾಗಿ ಅವತರಿಸಿದ್ದ ಅಲ್ಲಮಪ್ರಭು ಭಕ್ತರಲ್ಲಿ ಮೂಡಿದ ಅಜ್ಞಾನವನ್ನು, ಅಹಂಕಾರವನ್ನು ನಿಷ್ಕರುಣೆಯಿಂದ ನಿಷ್ಠುರತೆಯಿಂತೆ ಖಂಡಿಸಿ ಅವರನ್ನು ಸನ್ಮಾರ್ಗಕ್ಕೆ ಹಚ್ಚಿದನು. ಶರಣರಾದ ಗೊಗ್ಗಯ್ಯ, ಸಿದ್ಧರಾಮ ಮೊದಲಾದವರನ್ನು ತಿದ್ದಿದರು. ಬಸವಣ್ಣನನ್ನು ಕೂಡಾ ಅವರು ಬಿಡಲಿಲ್ಲ. ಅವನ ಅಹಂಕಾರವನ್ನು ನಿರಸನಗೊಳಿಸಿದರು. ಒರೆದು ಅರೆದು ನೋಡುವ ಪ್ರಭುಪದ್ಧತಿಯು ಚೆನ್ನಬಸವಣ್ಣನಿಗೆ

15. ಚೆನ್ನಬಸವಣ್ಣನವರ ವಚನಗಳು-ಸಂ॥ ಡಾ. ಆರ್. ಸಿ. ಹಿರೇಮಠ ಪು. ೬೨೭

16. ಚೆನ್ನಬಸವ ಸಾಹಿತ್ಯ : ಸಂ. ಅನ್ನದಾನಯ್ಯ ಪುರಾಣಿಕ ಪು. ೧೭೨.

ಬಹಳವಾಗಿ ಹಿಡಿಸಿತು. ಅಂಗದ ಮೇಲೆ ಲಿಂಗವಿರುವವರೆಲ್ಲಾ ಸಂಗಮನಾಥನೆಂದು ಅವನು ಬಸವಣ್ಣನಂತೆ–ನಂಬಲಿಲ್ಲ. ಅದಕ್ಕೆ ತಕ್ಕ ಆಚಾರವಿಲ್ಲದವರಿಗೆ ಛೀಮಾರಿ ಹಾಕಿದ. 'ಹುಸಿಯುಳ್ಳವ ಭಕ್ತನಲ್ಲ, ವಿಷಯವುಳ್ಳವ ಮಹೇಶ್ವರನಲ್ಲ, ಆಶೆಯುಳ್ಳವ ಪ್ರಸಾದಿಯಲ್ಲ, ಜೀವಗುಣವುಳ್ಳವ ಪ್ರಾಣಲಿಂಗಿಯಲ್ಲ, ತನುಗುಣವುಳ್ಳವ ಶರಣನಲ್ಲ, ಜನನ ಮರಣವುಳ್ಳವ ಐಕ್ಯನಲ್ಲ' ಎಂದು ಘಂಟಾಘೋಷವಾಗಿ ಸಾರಿದ.

'ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಪುದೊ ! ಮೇಘ ಜಲವೆಲ್ಲ ಮುತ್ತಾದಡೆ ಸಪ್ತ ಸಾಗರಂಗಳಿಗೆ ಉದಕವಿನ್ನೆಲ್ಲಿಹುದೋ! ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ ? ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ!' ಎಂದು ಚೆನ್ನಬಸವನು ಹೇಳಿದ. ಷಟ್ಸ್ಥಲ ಸಾಧನೆ ಸಿದ್ಧಿಯು ಸುಲಭವಾದ ಕಾರ್ಯವೆ ? ಭಕ್ತಿ ಪಥ ಸುಲಭಲಭ್ಯವೆ ? ಭಕ್ತಿ ಎಂಬುದು ಕರಗಸದಂತೆ ಹೋಗುತ್ತ ಕೊಯ್ಯುತ್ತದೆ; ಬರುತ್ತಕೊಯ್ಯುತ್ತದೆ. ಎಲ್ಲಾ ಸ್ಥಲಗಳ ಲಕ್ಷಣವನ್ನು ಅವನು ವಿವರಿಸಿದ ಮತ್ತು ಅವುಗಳ ಪರಸ್ಪರ ಸಂಬಂಧವನ್ನು ನಿರ್ಧರಿಸಿದ. 'ಆವಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲವಡಗಿದೆ' ಎಂಬ ಸಮವಿಕಾಸದ ಷಟಸ್ಥಲ ಸಿದ್ಧಾಂತವನ್ನು ಅವನು ಪ್ರತಿಷ್ಠಾಪಿಸಿದನು. ವೀರಶೈವ ಧರ್ಮ ಸಂವಿಧಾನವನ್ನು ರೂಪಿಸಿದ ಚೆನ್ನಬಸವಣ್ಣನನ್ನು ಶರಣ ಸಂದೋಹವು 'ಷಟ್ಸ್ಥಲ ಸಾರ್ವಭೌಮ'ನೆಂದು ಗೌರವಿಸಿತು. ಬಸವಣ್ಣನು ವೀರಶೈವ ನಿರ್ಣಯ ಪರಮಾವತಾರಿಯಾದರೆ ಚೆನ್ನಬಸವಣ್ಣ ಷಟ್‌ಸ್ಥಲ ನಿರ್ಣಯ ಪರಮಾವತಾರಿ! ಇವರಿಬ್ಬರಿಗೂ ಚೈತನ್ಯಸ್ವರೂಪರು ಅಲ್ಲಮ ಪ್ರಭುದೇವರು !

ಶರಣರು ಜ್ಞಾನ–ಕ್ರಿಯೆಗಳಿಗೆ, ಆಚಾರಗಳಿಗೆ ಅಗ್ರಸ್ಥಾನವನ್ನು ನೀಡಿದರು. ಅಂತರಂಗದಲ್ಲಿ ಅರಿವು ಬಹಿರಂಗದಲ್ಲಿ 'ಕ್ರಿಯೆ' ಇದು ಶರಣರ ಲಕ್ಷಣವೆಂದು ಸಾರಿದರು. ಕ್ರಿಯಾಹೀನ ಜ್ಞಾನಿ ಅಜ್ಞಾನಿ. ಅವನು ವಾಗದ್ವೈತಿ, ವೇಷಧಾರಿ ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಗಳಿಸಿದ ಧನ ದಾಸೋಹಕ್ಕೆ ಸಲ್ಲದು, ಅದನ್ನು ಕೊಂಬುವಾತ ಜಂಗಮನಲ್ಲ, ಕೊಡುವಾತ ಭಕ್ತನಲ್ಲ. 'ಆಚಾರವೇ ಸ್ವರ್ಗ' ಎಂದನು ಬಸವಣ್ಣ. ಚೆನ್ನಬಸವಣ್ಣನಾದರೋ ಐವತ್ತು ಆಚಾರಗಳ ಸಂಹಿತೆಯನ್ನೇ ರಚಿಸಿದ. ಸಕಲ ಜೀವಿಗಳಿಗೆ ಹಿತಬಯಸುವುದೇ ಇಂಥ ಒಂದು ಆಚಾರ. ಚೆನ್ನಬಸವನು ರಚಿಸಿದ ಆಚಾರ ಸಂಹಿತೆ ಪ್ರಪಂಚಕ್ಕೇ ಮಾದರಿಯಾಗಿದೆ. ಅನುಕರಣ ಯೋಗ್ಯವಾಗಿದೆ. 'ಆಚಾರವೆಂಬುದು ಕೂರಲಗು. ತಪ್ಪಿ ಬಂದಡೆ ಪ್ರಾಣವ ತಗಲುವುದು. ಅದು ಕಾರಣ ಅರಿದರಿದು ಆಚಾರಿಸಬೇಕು. ಆಚಾರ ವಿಚಾರ ಉಭಯದ ವಿಚಾರ ನೋಡದೆ ಶಿವದೀಕ್ಷೆ ಮಾಡಲಾಗದು'. ಅರಿವು ಸಾಹಿತ್ಯ ಜಂಗಮ, ಜಂಗಮ ಸಾಹಿತ್ಯ ಪ್ರಸಾದ,ಪ್ರಸಾದ ಸಾಹಿತ್ಯ ಗಣತ್ವಕ ಷಟ್‌ಸ್ಥಲ ಸಾಧನೆ–ಶಿವಯೋಗ ಸಿದ್ಧಿ. ಷಟಸ್ಥಲ ಸಿದ್ಧಿಯನ್ನು ಸಾಧಿಸಿದ ಚೆನ್ನಬಸವಣ್ಣ ಮಹಾಶಿವಯೋಗಿ, ಕೂಡಲ ಚೆನ್ನಸಂಗಮನೆಂಬ ರಸಸಾಗರದೊಳಗೆ ಲೋಲಾಡುತ್ತಿದ್ದ ಈ ಶಿವಯೋಗ ಸಾಮ್ರಾಟ ಚೆನ್ನಬಸವಣ್ಣ.

ಸಮಾಜದ ಓರೆಕೋರೆಗಳನ್ನು ತಿದ್ದುವಾಗ ಚೆನ್ನಬಸವಣ್ಣ ಯಾರ ದಾಕ್ಷಿಣ್ಯಕ್ಕೂ ಒಳಗಾಗಲಿಲ್ಲ. ಅವನೋರ್ವ ಶ್ರೇಷ್ಠ ಸಮಾಜ ವೈದ್ಯ. 'ಗುರುಕಾರುಣ್ಯವ ಪಡೆಯದೆ ಸ್ವರ ಬಿಂದುಗಳ ತಡೆಯದೆ ಲಿಂಗವಾರ್ತೆಯನ್ನು ಮನಸ್ಸಿಗೆ ಬಂದಂತೆಗಳಹುತ್ತಿದ್ದ ಬಾಯಬ್ರಹ್ಮರನ್ನು ಬಲವಾಗಿ ಖಂಡಿಸಿದ. ಮಾತಿನ ಮಾತಿನ ಗೀತಾಂಗದಲ್ಲಿ ಸುಜಾಣನಾಗಬಹುದು. ಶ್ರೋತ್ರದ ಸೋಗಿನಲ್ಲಿ, ಪ್ರಾಜ್ಞೆ ಪ್ರವೀಣತೆಯಲ್ಲಿ ಜಾಣನಾಗಬಹುದು. ಅಂತರಂಗ ಬಹಿರಂಗವನರಿಯಬಹುದು. ಅದರೆ ಅವರು ಲಿಂಗಾನುಭಾವಿಗಳಾಗಲಾರರು. ಲಿಂಗಾನುಭವಿಗಲ್ಲದೆ ನಿರವಯವಿಲ್ಲ; ನಿತ್ಯ ಸುಖ ಸಾಧ್ಯವಾಗದು' ಎಂದು ಘೋಷಿಸಿದ. ಇರಿಯದೆ ಮೆರೆಯುವರನ್ನು ಅರಿಯದೆ ಉಲಿವವರನ್ನು ಗೇಲಿಮಾಡಿದ. ಹೊಲಬುಗೆಟ್ಟು ಹಲಬುತ್ತಿದ್ದ ಜನಜಂಗುಳಿಯನ್ನು ಸನ್ಮಾರ್ಗಕ್ಕೆ ಹಚ್ಚಿದ. ವೇಷಧಾರಿಗಳ ಉಪಟಳವನ್ನು ನಿರ್ಮೂಲನ ಮಾಡಲೆತ್ನಿಸಿದ. ಅವನು ನಿಷ್ಠುರಿಯಾದರೂ ನಿಷ್ಕರುಣಿಯಲ್ಲ. ಷಟ್‌ಸ್ಥಲ ಮಾರ್ಗದ ಕಷ್ಟಕಠೋರತೆಯನ್ನು ಅವನು ಬಲ್ಲ. ಸಮಾಜವನ್ನು ಸಂಘಟಿಸಿ, ಪರಧರ್ಮೀಯರ ಹಾವಳಿಯನ್ನು ಹೋಗಲಾಡಿಸಿ ಸ್ವಾತಂತ್ರ್ಯ, ಸೋದರತೆ, ಸಮಾನತೆಯ ಅಸ್ತಿಭಾರದ ಸುಂದರವಾದ ಶಾಶ್ವತವಾದ ಸಮಾಜವನ್ನು ರಚಿಸಲು ಅವನು ಶ್ರಮಿಸಿದ.

ಚೆನ್ನಬಸವಣ್ಣನು ಗುಣಪಕ್ಷಪಾತಿ! ಗುಣಪ್ರಾಧಾನ್ಯಪಂಥದವ. ಅವರು ಕಿರಿಯರಾಗಿರಲಿ, ಹಿರಿಯರಾಗಿರಲಿ, ಅವರಲ್ಲಿ ಅರಿವು ಆಚಾರಗಳು ಸಮನ್ವಯಗೊಂಡಿದ್ದರೆ ಅವರನ್ನು ಸನ್ಮಾನಿಸುತ್ತಿದ್ದ. ಅನುಭವ ಮಂಟಪವನ್ನು ಅಕ್ಕಮಹಾದೇವಿಯು ಪ್ರವೇಶಿಸಿದಾಗ ಅವಳನ್ನು ಪ್ರಭುದೇವರು ಅಗ್ನಿಪರೀಕ್ಷೆಗೆ ಗುರಿಪಡಸುತ್ತಾರೆ. ಅಕ್ಕನ ಅಂತಃಸತ್ವವನ್ನು, ಅವಳ ಆಧ್ಯಾತ್ಮಿಕ ಧೈರ್ಯಸ್ಥೈರ್ಯಗಳನ್ನು ಗುರುತಿಸಿದ ಚೆನ್ನಬಸವಣ್ಣನು ಅವಳ ಸಹಾಯಕ್ಕೆ ಬಂದು :

ಅಜಕೋಟಿ ಕಲ್ಪವರ್ಷದವರೆಲ್ಲರೂ ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೆ?
ನಡಮುರಿದು, ಗುಡುಗೂರಿ, ತಲೆನಡುಗಿ, ನೆರೆ ತೆರೆ ಹೆಚ್ಚಿ, ಮತಿಗೆಟ್ಟು, ಒಂದನಾಡ ಹೋಗಿ ಒಂಬತ್ತನಾಡುವ

ಅಜ್ಞಾನಿಗಳೆಲ್ಲರೂ ಹಿರಿಯರೆ? ಅನುವರಿದು ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು
ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು[17]

—ಎಂದು ಹೇಳುತ್ತಾನೆ.

ತಾವು ವಯೋವೃದ್ಧರೂ,ಪೀಠಾಧ್ಯಕ್ಷರೂ, ಗಣ್ಯರೂ, ತಮಗೇ ಅಗ್ರ ತಾಂಬೂಲ ಸಲ್ಲಬೇಕೆಂದೂ ಭ್ರಮಿಸಿದವರಿಗೆ ಇವನ ವಚನ ದಿಂದ ವಜ್ರಾಘಾತವಾಗಿ ಅವರ ಭ್ರಮೆ ನಿರಸನವಾಗಿರಬಹುದು. ಇಂಥವರು ಆಗಲೂ ಇದ್ದಿರಬಹುದು. ಈಗಂತೂ ಅಂಥವರ ಸಂಖ್ಯೆಯೇ ಅಧಿಕವಾಗಿದೆ. ಅಂಥವರ ಮದ ಮುರಿಯಲು, ಅಂಧಕಾರ ತೊಲಗಿಸಲು ಇದೊಂದೇ ವಚನ ಸಾಕು. ಚೆನ್ನಬಸವ ಣ್ಣನ ಈ ಮಿಂಚಿನ ಮಾತನ್ನು ಕೇಳಿದಾಗ ಶರಣ ಸಂದೋಹವು ಮೂಕ ವಿಸ್ಮಿತವಾಗಿರಬಹುದು. ಇಷ್ಟಕ್ಕೆ ನಿಲ್ಲದೆ ಅವನು

'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ
ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ,
ಅಜಗಣ್ಣನ ಐದು ವಚನಕ್ಕೆ ಚೆನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ'

ಎಂದು ಘೋಷಿಸುತ್ತಾನೆ. ಆಗ ಪ್ರಭುದೇವರು ಗುಹೇಶ್ವರ ಲಿಂಗದಲ್ಲಿ ಸ್ವಯಂಲಿಂಗವಾದ ಮಹಾದೇವಿಯಕ್ಕನ ನಿಲುವಿಗೆ ಶರ ಣೆನ್ನುತ್ತಾರೆ. ಶರಣ ಸಂದೋಹವೇ ಅಕ್ಕನನ್ನು ಅಂತಃಕರಣಪೂರ್ವಕವಾಗಿ ಸನ್ಮಾನಿಸುತ್ತದೆ. ಪರವಧುವನ್ನು ಮಹಾದೇವಿ ಎಂದ ಬಸವಣ್ಣ, ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧಮಲ್ಲಿಕಾರ್ಜುನ ಎಂದ ಸಿದ್ಧರಾಮಣ್ಣ. ಅನುಭವಮಂಟಪದಲ್ಲಿ ಅಸಹಾಯಕಳಾಗಿ ನಿಂತ ಅಕ್ಕನ ಪರವಾಗಿ ವಾದಿಸಿ ಅವಳಿಗೆ ಅಗ್ರಪಟ್ಟವನ್ನು ಕಟ್ಟಿದ ಚೆನ್ನಬಸವಣ್ಣನನ್ನು ಮಹಿಳಾ ಲೋಕವು ಎಂದಿಗೂ ಮರೆಯ ಲಾರದು, ಮರೆಯಲೂಬಾರದು. ಶಿವಯೋಗಿ ಸಿದ್ಧರಾಮನಿಗೆ ಲಿಂಗದೀಕ್ಷೆಯನ್ನು ಅನುಗ್ರಹಿಸಿದ ಚೆನ್ನಬಸವಣ್ಣ.

ಅನುಭವ ಮಂಟಪದ ನಿರ್ಮಾಣ ಆಧ್ಯಾತ್ಮಿಕ ಚರಿತ್ರೆಯಲ್ಲಿ ಅಭೂತಪೂರ್ವವಾದ ಘಟನೆ ; ಚಿರಸ್ಮರಣೀಯವಾದ ಸಂಗತಿ; ಅಧ್ಯಾತ್ಮ ಸಾಧನೆಯ ಸಾಧನಾರಂಗ ಅನುಭವಮಂಟಪ. ಅದರ ಅಧ್ಯಕ್ಷರು ಪ್ರಭುದೇವರಾದರೂ ಅದರ ಜೀವನಾಡಿ– ಸಂಚಾಲಕ ಚೆನ್ನಬಸವಣ್ಣ. ಅಲ್ಲಿ ಚೆನ್ನಬಸವಣ್ಣನ ಮತಕ್ಕೆ ಹೆಚ್ಚಿನ ಪ್ರಾಧಾನ್ಯತೆ.

ಬಸವಣ್ಣನು ಚೆನ್ನಬಸವಣ್ಣನ ಅಂತರಂಗವಾದರೆ, ಮಡಿವಾಳ ಮಾಚಯ್ಯ ಅವನ ಬಹಿರಂಗ: ಈ ಉಭಯ ಸಂಗವೇ ಪ್ರಭುದೇವರು. ಶರಣ ಸಂಕುಲದ ಅಪಾರವಾದ ಪ್ರೀತಿ ಗೌರವಗಳಿಗೆ ಪಾತ್ರನಾಗಿದ್ದ ಚೆನ್ನಬಸವಣ್ಣ. ಅವನನ್ನು ಪ್ರಮುಖ ಶರಣರೆಲ್ಲರೂ ಮುಕ್ತಕಂಠದಿಂದ ಕೊಂಡಾಡಿದ್ದಾರೆ. ಪ್ರಖ್ಯಾತ ಶಿವ ಕವಿಗಳೆಲ್ಲರೂ ಅವನನ್ನು ಮನದುಂಬಿ ಸ್ತುತಿಸಿದ್ದಾರೆ. ಅಕ್ಕನಾಗಮ್ಮ, ಹಡಪದ ಅಪ್ಪಣ್ಣ, ಲಿಂಗಮ್ಮ, ರೇಚಣ್ಣ, ಪ್ರಸಾದಿ ಭೋಗಣ್ಣ, ನುಲಿಯಚಂದಯ್ಯ, ಕೇತಯ್ಯ ಮತ್ತು ಅಮುಗಿ ದೇವಯ್ಯ ಮೊದಲಾದ ಶರಣ ಶರಣೆಯರು ಅವನ ಹೆಸರನ್ನು ಅಂಕಿತವನ್ನಾಗಿಟ್ಟುಕೊಂಡು ವಚನಗಳನ್ನು ರಚಿಸಿದ್ದಾರೆ.

ಸಾಹಿತ್ಯಲೋಕದಲ್ಲಿ, ಮುಖ್ಯವಾಗಿ ಆಧ್ಯಾತ್ಮಿಕ ಸಾಹಿತ್ಯಲೋಕದಲ್ಲಿ ಚೆನ್ನಬಸವಣ್ಣನಿಗೆ ಉನ್ನತಸ್ಥಾನವಿದೆ. ಅವನು ಷಟ್‌ಸ್ಥಲ ವಚನಗಳಲ್ಲದೆ ೧. ಕರಣ ಹಸಿಗೆ, ೨. ಮಿಶ್ರಾರ್ಪಣ, ೩. ಹಿರಿಯ ಮಂತ್ರಗೋಪ್ಯ, ೪. ಪದಮಂತ್ರಗೋಪ್ಯ ಮತ್ತು ೫. ಸಕೀಲದ ವಚನಗಳನ್ನು ರಚಿಸಿದ್ದಾನೆ. ಅಪ್ರಕಟಿತವಾಗಿದ್ದ ಅವನ ಎಲ್ಲ ಕೃತಿಗಳನ್ನು ನನ್ನ ಪೂಜ್ಯ ತಂದೆಯವರಾದ ಲಿಂ. ಕಲ್ಲಿನಾಥಶಾಸ್ತ್ರಿಗಳ ಸಹಾಯದಿಂದ ಸಂಗ್ರಹಿಸಿ ಸಂಪಾದಿಸಿ 'ಚೆನ್ನಬಸವ ಸಾಹಿತ್ಯ' ಎಂಬ ಹೆಸರಿನಿಂದ ಕರ್ನಾಟಕ ರಾಜ್ಯೋ ದಯದ ದಿನ ಅಂದರೆ ೧೯೫೬ನೆಯ ನವೆಂಬರ್ ಒಂದರಂದು ಪ್ರಪ್ರಥಮವಾಗಿ ಪ್ರಕಟಿಸಿದ ಪುಣ್ಯ ನನ್ನದಾಗಿದೆ. ಈಗ ಅವನ ಕೃತಿಗಳೆಲ್ಲವನ್ನೂ ಪರಿಷ್ಕರಿಸಿ ಕರ್ನಾಟಕ ವಿಶ್ವವಿದ್ಯಾಲಯದವರು ೧೯೬೫ರಲ್ಲಿ ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಚೆನ್ನಬಸವ ಣ್ಣನು ರಚಿಸಿದ ಸಾಹಿತ್ಯ ಆತ್ಮಸಾಹಿತ್ಯ. ಆತ್ಮಸಾಹಿತ್ಯ ಅಪೂರ್ವ; ಅದು ಅಂತರಂಗದ ಆತ್ಮತೀರ್ಥ. ಅದರ ದೀರ್ಘ ವಿಮ ರ್ಶೆಗೆ ಇಲ್ಲಿ ಕೈಹಾಕಿಲ್ಲ. ಚೆನ್ನಬಸವಣ್ಣ ದಾರ್ಶನಿಕ–ಕವಿ–ವಿಮರ್ಶಕ.

ಚೆನ್ನಬಸವಣ್ಣನ ವಚನಗಳಲ್ಲಿ ಲೋಕೋಕ್ತಿಗಳು ವಿಪುಲ ಸಂಖ್ಯೆಯಲ್ಲಿ ದೊರೆಯುತ್ತವೆ.

'ಅರಸನ ಭಕ್ತಿ ಅಹಂಕಾರದಲ್ಲಿ ಕೆಟ್ಟಿತ್ತು.' 'ಬಣಜಿಗನ ಭಕ್ತಿ ಬಳ್ಳದ ಮೊನೆಯಲ್ಲಿ ಹೋಯಿತ್ತು'
'ಶೀಲವಂತನ ಭಕ್ತಿ ಶಂಕೆಯಲ್ಲಿ ಹೋಯಿತ್ತು' 'ದಾಸಿಯ ಸಂಗ ಕಸನೀರು, ಹೊರಿಸಿತ್ತು,' 'ವೇಸಿಯ ಸಂಗ ಎಂಜಲ ತಿನಿಸಿತ್ತು'
'ಹುಸಿ ಹಣ್ಣಾಗಿ ತೊಟ್ಟು ಬಿಟ್ಟಿತ್ತು ಅರಸನಲ್ಲಿ, ಕಟಕಿ ವಿದ್ಯಾವಂತನಗೆ' 'ಅಟ್ಟುದದ ಅಡುವರೆ, ಸುಟ್ಟುದದ ಸುಡುವರೆ,'
'ಅರಿವೇ ಗುರು, ಅನುಭಾವವೇ ಲಿಂಗ.' 'ಕಬ್ಬಿಣಗಾಣ ಬಲ್ಲದೆ ಹಾಲಸವಿಯ.'
'ಜ್ಞಾನಿಗೆ ಕತ್ತಲೆಯಿಲ್ಲ, ಅಜಾತಂಗೆ ಹೊಲೆಯಿಲ್ಲ' 'ತಾಯ ಮಾರಿ ತೊತ್ತು ಕೊಂಬರೆ'
'ಪರುಷ ಪರ್ವತದಲ್ಲಿ ಕಬ್ಬುನವುಂಟೆ' 'ಆನೆಯನ್ನೇರಿದ ಮಾವುತನು ಚಕ್ರೇಶ್ವರನಾಗಬಲ್ಲನೆ?'
'ಮುತ್ತು ನೀರಿನಲ್ಲಿ ಹುಟ್ಟಿ ಮತ್ತೆ ನೀರಪ್ಪುದೆ?' 'ವ್ಯಾಕುಳವೆ ಭವ, ನಿರಾಕುಳವೆ ನಿರ್ಭವ.'

17. ಚೆನ್ನಬಸವಣ್ಣನವರ ವಚನಗಳು : ಸಂ. ಡಾ. ಆರ್.ಸಿ. ಹಿರೇಮಠ ಪು. ೧೫೪.

ಇಂತಹ ನೂರಾರು ಸೂಕ್ತಿಗಳಲ್ಲಿ ಕಾವ್ಯದ ಧ್ವನಿ, ನಿಜದ ನಿನಾದ, ಆಧ್ಯಾತ್ಮದ ಹೊಳಹು ಹಾಗೂ ಲೋಕಾನುಭವದ ಸುಧೆಯನ್ನು ಕಾಣಬಹುದು.

ವೀರಶೈವಧರ್ಮ-ಸಿದ್ಧಾಂತಗಳನ್ನು ಒಂದೇ ಸೂತ್ರದಲ್ಲಿ ಹೇಳುವ ಸಾಮರ್ಥ್ಯವನ್ನು ಚೆನ್ನಬಸವಣ್ಣ ಪಡೆದಿದ್ದ :

'ಒಡಲುಗೊಂಡು ಒಡಲುವಿಡಿಯದೆ ನಿಜದೊಡಲ ಬೆರಸಲವೊ''

'ನೋಡಲಿಲ್ಲ ನುಡಿಯಲಿಲ್ಲ ಕೂಡಲಿಲ್ಲ ಅಪ್ರತಿಮಂಗೊಡಲಿಲ್ಲ'

ಈ ಮೊದಲಾದ ಅಮೃತವಾಕ್ಯಗಳು ವೀರಶೈವ ಮಾರ್ಗದ ಚರಮಗುರಿಯನ್ನು ಅದರ ಮಹತಿಯನ್ನು ಸಾರಿ ಸಾರಿ ಹೇಳುತ್ತವೆ.

ಅವನಿಗೆ ವಿಶ್ವದ ದಾರ್ಶನಿಕ ಸಾಹಿತ್ಯದಲ್ಲಿ ಶಾಶ್ವತವಾದ ಶ್ರೇಷ್ಠಸ್ಥಾನವಿದೆ. ಅವನ ಮಾತೇ ಮಾತು, ರೀತಿಯೇ ರೀತಿ; ಅದಕ್ಕೆ ಪಡಿಯಿಲ್ಲ ಪಾಸಟಿಯಿಲ್ಲ.

ಕೂಡಲಸಂಗಮ ಕ್ಷೇತ್ರದಲ್ಲಿ ಉದಯಿಸಿ ಕಲ್ಯಾಣದಲ್ಲಿ ಪ್ರಕಾಶಿಸಿ ಉಳುವಿಯಲ್ಲಿ ಅಸ್ತನಾದ ಷಟ್‌ಸ್ಥಲ ಸೂರ್ಯ ಚೆನ್ನಬಸವಣ್ಣ. ಸಿದ್ಧರಾಮನ ಮಾತಿನಲ್ಲಿ ಚೆನ್ನಬಸವನ ಎಡಪಾದ ಕ್ರಿಯೆ, ಅವನ ಬಲಪಾದ ಜ್ಞಾನ. ಕಪಿಲಸಿದ್ಧಮಲ್ಲಿನಾಥ ಅವನ ಮನೆಯ ದಾಸ, ಸಿದ್ಧರಾಮ ಅವನ ಚೆಮ್ಮಾವುಗೆ, ಇದೆಂಥ ಅದ್ಭುತ ಸಾಧನೆ-ಸಿದ್ಧಿ! ಕಣ್ಣು ಕೋರೈಸುವಂತಹ ಪ್ರತಿಭೆ ಚೆನ್ನಬಸವಣ್ಣನದು. ಅವನ ಮಾತು ಜ್ಯೋತಿರ್ಲಿಂಗ; ಅವನು ಸರ್ವಾಂಗಲಿಂಗಿ, ಸಂಸಾರ ನಿಸ್ಸಂಗಿ, ಷಡುಸ್ಥಲ ಧೀರ, ಶುದ್ಧ-ಸಿದ್ಧ-ಸಮೃದ್ಧ ಸಮಾಜ ಸ್ಥಾಪಕ, ಷಟ್‌ಸ್ಥಲ ನಿರ್ಣಯ ಪರಮಾವತಾರಿ, ಅವಿರಳ ಜ್ಞಾನಿ. ವೀರಶೈವ ಧರ್ಮಾಕಾಶದಲ್ಲಿ ನಿತ್ಯವೂ ಬೆಳಗುತ್ತಿರುವ ಧ್ರುವತಾರೆ. ಅವನ ವ್ಯಕ್ತಿತ್ತ್ವವನ್ನು ಬಣ್ಣಿಸಲು ಬಯಲೇ ಬಾಯ್ದೆರೆಯಬೇಕಾಗುತ್ತದೆ.

## ಪ್ರಭುದೇವರು

—ಮಲೆಯೂರು ಗುರುಸ್ವಾಮಿ

ಶತಮಾನಗಳಿಂದ ಜಡ್ಡುಗಟ್ಟಿದ್ದ, ಪಾಚಿಗಟ್ಟಿದ್ದ, ಕನ್ನಡಿಗರ ಹಾಗೆಯೇ ಭಾರತೀಯ ಬಹುಮುಖ ಬದುಕಿಗೆ ಒಂದು ವಿಶಿಷ್ಟ ಚಾಲನೆಯನ್ನು ಕೊಟ್ಟವರು ಹನ್ನೆರಡನೆಯ ಶತಮಾನದ ವೀರಶೈವ ಶಿವಶರಣರು. ಲಿಂಗಭೇದ, ವರ್ಗಭೇದ, ಜಾತಿಭೇದಗಳಿಗೆ ಅತೀತರಾಗಿ ಭಕ್ತಿ, ಜ್ಞಾನಮೂಲ ಕಾಯಕದಲ್ಲಿ ನಿರತರಾಗಿ ವೀರಶೈವಧರ್ಮಧ್ವಜದ ಅಡಿಯಲ್ಲಿ ಆಶ್ರಯ ಪಡೆದು 'ಮಾನವ ಧರ್ಮ'ವನ್ನು ಎತ್ತಿಹಿಡಿದವರು ಶಿವಶರಣರು. ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಮೈಗೂಡಿಸಿಕೊಂಡು ಮೌಢ್ಯದ ಮುಪ್ಪಿನಿಂದ ಎಲ್ಲರನ್ನೂದೂರ ಮಾಡಿದ ಅಮೃತ ಪುತ್ರರು ಶಿವಶರಣರು.

ಇಂತಹ 'ನ ಭೂತೋ' ಆದ ಅದ್ವಿತೀಯ ಕ್ರಾಂತಿಗೆ ಬಸವಣ್ಣನವರು ಸೂತ್ರಧಾರಿಗಳು ಹಾಗೇಯೇ ಪಾತ್ರಧಾರಿಗಳೂ ಆಗಿದ್ದರು. ಇಂತಹ ಒಂದು ಸಾಮಾಜಿಕ ಕ್ರಾಂತಿಗೆ ಬಸವಣ್ಣ ಎಷ್ಟು ಕಾರಣನೋ ಹಾಗೆಯೇ ಬಸವಣ್ಣನ ಮಾನಸಿಕ ಉತ್ಕ್ರಾಂತಿಗೆ ಅಲ್ಲಮಪ್ರಭುವೂ ಅಷ್ಟೇ ಕಾರಣ. ಬಸವಣ್ಣ 'ಭಕ್ತಿಭಂಡಾರಿ'ಯಾದರೆ, ಪ್ರಭು 'ವೈರಾಗ್ಯನಿಧಿ'. ಬಸವಣ್ಣ ಉರಿವ ಬತ್ತಿಯಾದರೆ, ಅಲ್ಲಮ ತೈಲ ತುಂಬಿದ ಪ್ರಣತಿ. ಒಬ್ಬ ಸಮುದ್ರದಷ್ಟು ಆಳವಾದ ಮಾನವೀಯ ಅನುಕಂಪೆಯಿಂದ ಕೂಡಿದ್ದರೆ, ಮತ್ತೊಬ್ಬ ಸಾಮಾನ್ಯನ ಆಳವಿಗೆ ಮೀರಿದ ಜ್ಞಾನದ ಅಗ್ನಿಪರ್ವತದ ಉತ್ತುಂಗ ಶೃಂಗ. ಅಂದಿನ ವಿಶಿಷ್ಟವಾದ ಕ್ರಾಂತಿ, ಅತ್ಯಲ್ಪಕಾಲದಲ್ಲಿಯೇ ಅಖಂಡ ಕರ್ನಾಟಕದಲ್ಲಿ ಪ್ರಜ್ವಲಿಸ ಬೇಕಾದರೆ ಈ ಇರ್ವರು ಮಹಾನ್ ಚೇತನಗಳು ಪ್ರಮುಖ ಶಕ್ತಿಗಳು ; ಒಬ್ಬ ಗಾಳಿ ಮತ್ತೊಬ್ಬ ಬೆಂಕಿ.

ಬಸವಣ್ಣನಿಗೆ ಪ್ರೇರಕ ಶಕ್ತಿಯಾದ ಅಲ್ಲಮನ ಜೀವನದ ಬಗ್ಗೆ ಚರಿತ್ರೆ ನಮಗೆ ಸಾಕಷ್ಟು ಪುರಾವೆಗಳನ್ನು ಒದಗಿಸುವುದರಲ್ಲಿ ವಿಫಲವಾಗಿದೆ. ಹಾಗೆ ನೋಡಿದರೆ ಜಗತ್ತಿನ ಯಾವ ಚಿಂತಕನ ಲೌಕಿಕ ಬದುಕೂ ಇಂದು ಜಗತ್ತಿನ ಮುಂದೆ ತೆರೆದಿಟ್ಟ ಪುಸ್ತಕವಾಗಿಲ್ಲ. ನಮ್ಮ ಮೌಢ್ಯದ, ಕೆಲವೊಮ್ಮೆ ಮತೀಯ ದುರಭಿಮಾನದ ಶೈವಲ ಅವರ ಚರಿತ್ರೆಯ ತಿಳಿಗೊಳದ ತುಂಬೆಲ್ಲಾ ವ್ಯಾಪಿಸಿದೆ. ಆದರೂ ಅವರ ಚಿಂತನದ ದೀಪ್ತಕಿರಣಗಳು ನಮ್ಮ ಕ್ಷುದ್ರತೆಯ ಕರಾಳ ತೆರೆಯೊಳಗೆ ನುಸುಳಿ, ನಮ್ಮ ಕಣ್ಣುಗಳನ್ನು ಜ್ಞಾನದ ಬೆಳಕಿಗೆ ಒಗ್ಗಿಸಲು ಅನವರತವೂ ಬೆಳಗುತ್ತಲೇ ಇವೆ.

ಹರಿಹರ, ಚಾಮರಸ, ಎಳಂದೂರು ಹರೀಶ್ವರರು ಅಲ್ಲಮನನ್ನು ನಾಯಕನನ್ನಾಗಿ ಮಾಡಿಕೊಂಡು ತಮ್ಮ ಕೃತಿ ರಚನೆ ಮಾಡಿದ್ದರೂ 'ಪುರಾಣ ಪ್ರಜ್ಞೆ'ಯ ಇವರು ಸತ್ಯಶೋಧಕ ಅಲ್ಲಮನನ್ನು ಪ್ರಭು'ದೇವ'ರನ್ನಾಗಿ ಮಾಡಿ ದೂರದಿಂದಲೇ ನಮ್ಮಿಂದ ಕೈಮುಗಿಸುವುದರಲ್ಲೇ ಕೃತಾರ್ಥರಾಗಿದ್ದಾರೆ. ಆತನ ತಂದೆ-ತಾಯಿಗಳ ಬಗ್ಗೆಯಾಗಲೀ, ಆತನ ವೈರಾಗ್ಯಕ್ಕೆ ಕಾರಣವಾದ ಘಟನೆಯ ಬಗ್ಗೆಯಾಗಲೀ, ಮುಂದೆ ಆತ ಕೈಕೊಂಡ ದೇಶಪರ್ಯಟನದ ಬಗ್ಗೆಯಾಗಲೀ ಇವರಲ್ಲಿ ಏಕಕಂಠತೆ ಎಲ್ಲಿಯೂ ಕಂಡು ಬರುವುದಿಲ್ಲ. ಹಾಗೆ ನೋಡಿದರೆ ವೀರಶೈವ ಕವಿಗಳು ಅಲ್ಲಮನಿಗೆ ಅನ್ಯಾಯ ಮಾಡಿದಷ್ಟನ್ನು ಬೇರೆ ಯಾರೂ ಮಾಡಲಿಲ್ಲ ಎಂದು ಘೋಷಿಸಲು ಯಾರೂ ಹಿಂಜರಿಯಬೇಕಾಗಿಲ್ಲ.

ಅಲ್ಲಮನ ಬಾಲ್ಯದ ಬಗ್ಗೆಯಾಗಲೀ, ಯೌವನದ ಬಗ್ಗೆಯಾಗಲಿ ನಮಗೆ ಸಾಕಷ್ಟು ಪುರಾವೆಗಳು ಸಿಕ್ಕುವುದಿಲ್ಲ. ಆತ ನಮಗೆ ಪರಿಚಯವಾಗುವ ಮೊದಲೇ ಷಟ್ಸ್ಥಲಸ್ತರಗಳನ್ನು ಮೀರಿ ನಿಂತ ಮಹಾಮೇರುವಾಗಿರುತ್ತಾನೆ. ಯೌವನದ ಕಾಲದಲ್ಲಿ ಬಳ್ಳಿಗಾವೆಯಲ್ಲಿ ಇದ್ದಾಗ ಈ ಕೆಂಡದ ಗಿರಿಗೆ ಒಮ್ಮೆ ಅರಗಿನ ಬಾಣವನ್ನು ಇಸುತ್ತಾನೆ ಕಾಮ. ಕೆಲ ದಿನಗಳು ಕೊಂಚ ತತ್ತರಿಸಿದರೂ ಗುಹೇಶ್ವರನ ವಿರಹದ ಉರಿಯಲ್ಲಿ ಬೆಂದ ಈ ಬಯಲದೇಹಿ,ಕಾಮನನ್ನು 'ಮರುಳಾ' ಎಂದು ಹಿಯಾಳಿಸಿ ಮುಂದೆ ನಡೆಯುತ್ತಾ 'ಯೋ ವೈ ಭೂಮಾತತ್ಸುಖಂನಾಲ್ಪೇಸುಖಮಸ್ತಿ' ಎಂದು ಭೂಮಾನುಭವವನ್ನು ಅರಸುತ್ತಾ ಹರಿಯುತ್ತಾನೆ.

ನಟುವ ಜಾತಿಯ ಈ ಮಹಾಮೃದಂಗ ಪಟುವಿನ ನಿಡುಬಾಳಿನ ನಿಬಿಡ ವೈರಾಗ್ಯಕ್ಕೆ ಬಳ್ಳಿಗಾವೆಯ ಕಾಮಲತೆಯಾಗಲೀ, ಬನವಾಸಿಯ ಮಾಯಾದೇವಿಯಾಗಲೀ ಬರಿಯ ನೆಪಮಾತ್ರವಷ್ಟೆ. ಆತ ಮಾಯಾದೇವಿಯನ್ನು ಅಥವಾ ಕಾಮಲತೆಯನ್ನು ಮೋಹಿಸಿದ್ದನೇ. ಅಥವಾ ಮದುವೆಯಾಗಿ, ಮತ್ತನಾಗಿ ಬದುಕನ್ನು ಭೋಗಿಸಿದ್ದನೇ ಎನ್ನುವ ತರ್ಕಗಳು ಬರಿಯ ತರ್ಕಕ್ಕೆ ಮಾತ್ರ. ಇವರ ಜೊತೆಗೆ ಅಲ್ಲಮನು ಆಗರ್ಭಸಿದ್ಧಪುರುಷನೇ, ಅಥವಾ ಸಾಧನೆಯಿಂದ ಸಿದ್ಧಪುರುಷನಾದನೇ ಎನ್ನುವ ವಾದಗಳೂ ಆತನನ್ನು ಅರ್ಥಮಾಡಿಕೊಳ್ಳುವುದಕ್ಕೆ ಅನಿವಾರ್ಯವಾಗಲೀ, ಅಡಚಣೆಯಾಗಲೀ ಅಲ್ಲ. ಒಂದು ಪಕ್ಷ ಕೆಲಕಾಲ ಸಂಸಾರಿಯಾಗಿದ್ದನೆಂದು ಒಪ್ಪಿಕೊಂಡರೂ ಆತ ಸಾಮಾನ್ಯ ಸಂಸಾರಿಯಲ್ಲ! ಮೊಲೆಯ ಮೇಲಿದ್ದ ಯೋಗಿ ಆತ. 'ಉಂಡು ಉಪವಾಸಿ. ಬಳಸಿ ಬ್ರಹ್ಮಚಾರಿ'ಯಾತ. 'ಗುಹೇಶ್ವರನ ವಿರಹದ ಉರಿಯಲ್ಲಿ ಬೆಂದ ಸ್ವಚ್ಛ ಬಂಗಾರದ ಬಂಧ' ಆತ. ಘಟರೋಗಗಳಿಂದ ಮುಕ್ತರಾಗಲು ಸಾಮಾನ್ಯರು ಅನುಸರಿಸುವ ರಾಜಯೋಗ, ಹಠಯೋಗಗಳನ್ನು ತಾನೂ ಅನುಸರಿಸಿ, ಅನತಿ ಕಾಲದಲ್ಲಿಯೇ ಅವುಗಳು ಬಹಳ ಹಗುರವೆನಿಸಿ ಭವಭವಾಂತರ ಭೋಗರಾಗಗಳಿಂದ ದೂರನಾಗಲು ಹೊರಟ 'ಶಿವಯೋಗ ಭೋಗಿ' ಆತ.

ಅಲ್ಲಮನ ಬಾಳಿನಲ್ಲಿ ಅನಿಮಿಷಯ್ಯನ ದರ್ಶನವಾದದ್ದು ಒಂದು ಮಹತ್ತರವಾದ ಅಪ್ರಾರ್ಥಿತ ಘಟನೆ. ಬಳ್ಳಿಗಾವೆಯ ಮಗ್ಗುಲಿನ ಕಣಗಿಲೆಯ ತೋಟದ ತಳದ ಗುಪ್ತಗುಡಿಯೊಳಗೆ ಅನಿಮಿಷ್ಯನನ್ನು ಕಂಡದ್ದು ಅಲ್ಲಮನಿಗೆ 'ಮಣ್ಣ ಮರೆಯ ದೇಗುಲದೊಳಗೆ ಮಾಣಿಕ್ಯವ ಕಂಡಂತೆ ಆಯಿತು'. ಕಾಮಲತೆಯ ಕಾಯದ ಮೋಹದ ದ್ವಂದ್ವದಲ್ಲಿದ್ದ ಅಲ್ಲಮನ ಅಂಗೈಗೆ ಅನಿಮಿಷಯ್ಯನ' ಕಾಣಬಾರದ ಕಾಯ, ನೋಡಬಾರದ ತೇಜ, ಉಪಮಿಸಬಾರದ ನಿಲುವು. ಲಿಂಗ ಮುಖೇನ ಹರಿದು ಆತನನ್ನು 'ಮಾಯಾ ಕೋಳಾಹಳ'ನನ್ನಾಗಿಸಿತು.

'ಕಾಣಬಾರದ ಗುರು ಕಣ್ಗೆ ಗೋಚರವಾದರೆ, ಹೇಳಲಿಲ್ಲದ ಬಿನ್ನಪ ಮುಟ್ಟಲಿಲ್ಲದ ಹಸ್ತಮಸ್ತಕ ಸಂಯೋಗ, ಪೂಸಲಿಲ್ಲದ ವಿಭೂತಿಯ ಪಟ್ಟ, ಕೇಳಲಿಲ್ಲದ ಕರ್ಣಮಂತ್ರ, ತುಂಬಿ ತುಳುಕದ ಕಳಶಾಭಿಷೇಕ, ಆಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ, ಸಂಗವಿಲ್ಲದ ಸಂಬಂಧಸಯವ ನಾನು ಕೈಕೊಂಬಂತೆ ಮಾಡಾ ಗುಹೇಶ್ವರಾ' ಮೈಯೆಲ್ಲಾ ಬಾಯಾಗಿ ಉದ್ಗರಿಸಿದ ಅಲ್ಲಮ. ಹೀಗೆ ಗುರುವಿನಿಂದ ಗುರುತ್ವ ಪಡೆದ ಅಲ್ಲಮನ ಆತ್ಮಕ್ಕೆ ಮತ್ತಷ್ಟು ಗರಿಮೂಡಿತು. ಅಂಗವೆಲ್ಲಾ ನಷ್ಟವಾಗಿ ಲಿಂಗದಲ್ಲಿ ಲೀಯವಾಯಿತು. ನೆನಹು ಸತ್ತಿತು, ಭ್ರಾಂತು ಬೆಂದಿತು. ಮರ್ತ್ಯರ ಮಂದ ಬುದ್ಧಿಯ ವಾಕ್ ಮನಕ್ಕೆ ಅತೀತನಾದ ಈ ಅಮೃತ ಪುತ್ರ. ಇಂತಹ ಶಿವನ ಮದಕರಿ ನಡೆದುದೇ ಬಟೆಯಾಯಿತು; ನುಡಿದುನೇ ವೇದವಾಯಿತು, ನಿಂದುದೇ ಮಹಾಮನೆ; ಕುಳಿತ ಪೀಠವೇ ಶೂನ್ಯ ಸಿಂಹಾಸನವಾಯಿತು.

ಶಿವಯೋಗದನುಭಾವ ಮಧುವಿನಿಂದ ಮತ್ತನಾದ ಈ ಮದ್ದಲೆಯ ಸಿದ್ಧ ಸುಮಾರು ಹನ್ನೆರಡು ವರ್ಷಗಳ ಕಾಲ ಕನ್ಯಾಕುಮಾರಿಯಿಂದ ಕೇದಾರದ ತನಕ ಪರ್ಯಟನ ಮಾಡಿದ. ಹುಡಿಯಲ್ಲಿ ಹುಡಿಯಾಗುವವರೆಗೆ ಹುಡುಕುವುದನ್ನೇ ತನ್ನ ಯೋಗವನ್ನಾಗಿ ಮಾಡಿಕೊಂಡ. ಹುಡುಕುವ ಹುಚ್ಚು ಆತನನ್ನು, ಅನೇಕ ಪಂಡಿತರನ್ನು, ಶಾಸ್ತ್ರಿಗಳನ್ನು, ತರ್ಕ ಪಟುಗಳನ್ನು, ವೇದವೇದಾಂತಶಿಖಾಮಣಿಗಳನ್ನು ಸಂದರ್ಶಿಸುವಂತೆ ಮಾಡಿತು, ತರ್ಕಿಸುವಂತೆ ಮಾಡಿತು. ಉದ್ದಕ್ಕೂ ಕಂಡದ್ದು, ಯಾರನ್ನು? ದೇಶ ಗುರಿಯಾದವರು! ತಮಂಧ ಗುರಿಯಾದವರು! ಕಾಮ ಗುರಿಯಾದವರು!! ಆದರೆ ಗುಹೇಶ್ವರ ಗುರಿಯಾದವರಾರನೂ ಕಾಣಲಿಲ್ಲ. ಅವರದು ಬರಿಯ ಓದಿನ ವೇದ; ಸಂತೆಯ ವ್ಯವಹಾರದ ಶಾಸ್ತ್ರ; ಟಗರ ಹೋರಾಟದಂತಹ ತರ್ಕ ಎಲ್ಲವೂ ಪ್ರಭುವಿಗೆ ಹೇಸಿಗೆಯಾಯಿತು. ಹೊಟ್ಟೆಯ ಮೇಲೆ ಕಟ್ಟ್ಯೋಗರವ ಕಟ್ಟಿದಂತಹವರನ್ನು ಕಂಡು ಅಲ್ಲಮನಿಗೆ ಅಂತರಂಗದಹಸಿವು ಮತ್ತಷ್ಟು ಹೆಚ್ಚಾಯಿತು. ಹುಡುಕುತ್ತಾ ಹೊರಟ! ಜ್ಞಾನದ ಉರಿಯೊಡನೆ ನಡೆದ ಕರ್ಪೂರದ ಗಿರಿಯಾದ. ಅನಂತ ಸಾಧಕರ, ಸಿದ್ಧರ ಉಸಿರಿನ ಸ್ಪರ್ಶ ಈತನ ಸಹಜ ವೈರಾಗ್ಯದ ವಿಸ್ಫುಲಿಂಗಗಳನ್ನು ಮತ್ತಷ್ಟು ಉಜ್ವಲಗೊಳಿಸಿತು. ಕೊನೆಗೂ ಹುಡುಕಿದ ! ವೇದ ವೇದಾಂತದರ್ಶನಗಳು ದರ್ಶಿಸಲಾರದ, ಜಗದಗಲ ಮುಗಿಲಗಲ ವ್ಯಾಪಿಸಿರುವ ಚಿರಂತನ ಸತ್ಯವನ್ನು ಕಂಡುಕೊಂಡ.

ತನ್ನ ಹನ್ನೆರಡು ವರ್ಷಗಳ ದೀರ್ಘ ಪ್ರಯಾಣದ ದಾರಿಯಲ್ಲಿ, ದಾರಿತಪ್ಪಿದ್ದ ಅನೇಕ ಸಾಧಕರ ಮನದ ಕಾಳಿಕೆಯನ್ನು ಕಳೆದು ಅವರು ಸೇರಬೇಕಾದ 'ನಿಜದ ನೆಲೆ'ಯನ್ನು ನಿರ್ದೇಶಿಸಿದ. ಆತನಿಂದ ಉಪಕೃತರಾದವರು ಗೋರಕ್ಷ, ಮುಕ್ತಾಯಕ್ಕ, ಸಿದ್ಧರಾಮ ಇತ್ಯಾದಿ ಇತ್ಯಾದಿಗಳು.

ಹಠಯೋಗವನ್ನು ಸಾಧಿಸಿ ಪಾರ್ಥಿವ ದೇಹವೇ 'ಪರಮು' ಎಂದುಕೊಂಡು ಸಿಡಿಲಿಗೂ ಜಗ್ಗದಂತಹ ವಜ್ರಕಾಯವನ್ನು ದಕ್ಕಿಸಿಕೊಂಡು ಮಹಾ ಮೇರುಗಿರಿಯ ತುತ್ತತುದಿಯಲ್ಲಿ ಇದ್ದಂತಹ ಗೋರಕ್ಷನ ಮುಂದೆ:

ಕಾಯ ಬಲಿದಡೆ ಮಾಯೆ ಬಲಿವುದು, ಮಾಯೆ ಬಲಿದಡೆ ಛಾಯೆ ಬಲಿವುದು
ಕಾಯಮಾಯಾ ಛಾಯೆ ಬಲಿದಡೆ ಸಿದ್ಧತನವಲ್ಲ॥
ಕಾಯಮಾಯಾ ಛಾಯದಾಗಿನ । ದಾಯವನು ಕಳೆದುಳಿದನಾದೊಡೆ
ರಾಯನಾತನು ಸಿದ್ಧರಲಿ ಗೋರಕ್ಷ ಕೇಳೆಂದ॥ [ಪ್ರ.ಲಿಂ.ಲೀ ; ಗೋರಕ್ಷಗತಿ. ೩೭]

ಎಂದು ಹೇಳಿ ಕಾಯದ ಪಾರ್ಥಿವತೆಯನ್ನು ಗೋರಕ್ಷನಿಗೆ ಮನದಟ್ಟು ಮಾಡಿಕೊಡುತ್ತಾನೆ, ಬಯಲ ದೇಹಿಯಾದ ಈ ಕಾಷಾಯ ವಸನಧಾರಿ. ಅಲ್ಲಮನ ಶಿವಯೋಗದ ಕೆಂಡದಗಿರಿಯ ಮುಂದೆ ಅರಗಿನ ಕಂಬವಾಗುತ್ತಾನೆ ಹಠಯೋಗಿ ಗೋರಕ್ಷ.

ಅನಂತರ ಅಲ್ಲಮ ಸಂಧಿಸಿದ್ದು ಗುರುವೂ, ಸೋದರನೂ ಆದ ಅಜಗಣ್ಣನ ಅವಸಾನದಿಂದ ದಿಕ್ಕು ಕಾಣದೆ ಪ್ರಲಾಪಿಸುತ್ತಿದ್ದ ಮುಕ್ತಾಯಕ್ಕನನ್ನು. ಆಕೆಯ ದುಃಖ ಸಾಮಾನ್ಯಸೋದರಿಯ ಅಪಲಾಪವಾಗಿರಲಿಲ್ಲ. ಜ್ಞಾನದ ಸಂಪೂರ್ಣ ಸ್ವರೂಪವನ್ನು ಅರಿವ ಮೊದಲೇ ನಡುವೆಯೇ ಕೈಬಿಟ್ಟು ಕಾಣೆಯಾದ ಗುಪ್ತಯೋಗಿ ಗುರುವಿನ ವಿರಹದ ಉರಿಯಾಗಿತ್ತು ಆಕೆಯ ಕಣ್ಣೀರು. ಆಕೆಗೆ ಜ್ಞಾನೋದಯವನ್ನು ಉಂಟುಮಾಡಲು ಬೇಕೆಂತಲೇ ಬೆಡಗಿನ ಪ್ರಶ್ನೆ ಹಾಕುತ್ತಾನೆ ಪ್ರಭು. ಇವರಿಬ್ಬರ ನಡುವೆ ನಡೆದ ಈ ಸಂದರ್ಭದ ಸಂಭಾಷಣೆ, ಬರಿಯ ಶಬ್ದಾರ್ಥಗಳನ್ನು ಹೊತ್ತ ಮಾತುಗಳಲ್ಲ. ಅದು ಮಾತು ಮಾತು ಮಥಿಸಿಬಂದ ಜ್ಞಾನದ ನವನೀತ. ಮುಕ್ತಾಯಕ್ಕನೇನೂ ಸಾಮಾನ್ಯಳಲ್ಲ. ಪ್ರಶ್ನೋತ್ತರದ ಹಂತ ಹಂತದಲ್ಲೂ ಅಲ್ಲಮನನ್ನು ನಿರ್ಭೀತಿಯಿಂದ ಪ್ರಶ್ನಿಸುತ್ತಾಳೆ. ನಿರುದ್ವಿಗ್ನನಾಗಿಯೇ ಉತ್ತರಿಸುತ್ತಾನೆ ಪ್ರಭು. ತನ್ನ ಸಂದೇಹಗಳಿಗೆಲ್ಲಾ ಸಂಪೂರ್ಣ ಉತ್ತರ ಕಂಡುಕೊಂಡ ಮುಕ್ತಾಯಕ್ಕ ಅಲ್ಲಮನಲ್ಲಿಯೇ ತನ್ನ ಅಣ್ಣನನ್ನು ಕಂಡುಕೊಂಡು ಆತನ ವ್ಯಕ್ತಿತ್ವಕ್ಕೆ ತನ್ನನ್ನು ಅರ್ಪಿಸಿಕೊಳ್ಳುತ್ತಾಳೆ. ಇಲ್ಲಿನ ಅಲ್ಲಮ–ಮುಕ್ತಾಯಕ್ಕಗಳ ಆಧ್ಯಾತ್ಮ ಚರ್ಚೆ ಮೃಣ್ಮಯವಾದ ಮಿದುಳಿನ ತರ್ಕಕ್ಕೆ ದಕ್ಕುವಂತಹುದಲ್ಲ. ಬರಡು ಶಬ್ದಾರ್ಥಗಳ ಪಂಕದಲ್ಲಿ ಇಳಿದು ಕಾಲು ಬಡಿವ ಪಂಡಿತ ಮಂಡಲಿಗೆ ಈ ಮಾತುಗಳು ಮೂಗ ಮೂಗಿಯರ ಸಂಭಾಷಣೆಯಂತೆ ಬರಿಯ ಸಂಕೇತ ಭಾಷೆಯಷ್ಟೇ ಆಗುತ್ತವೆ.

ಅಲ್ಲಮನ ಅನುಭಾವದ ಪ್ರಖರತೆಯನ್ನು ದರ್ಶಿಸಬೇಕಾದರೆ ನಾವು ಸಾಕಷ್ಟು ಮಾನಸಿಕ ಸಿದ್ಧತೆಗಳೊಡನೆ ಸಿದ್ಧರಾಮನ ಪ್ರಸಂಗವನ್ನು ನೋಡಬೇಕು. 'ಸಾಕಾರನಿಷ್ಠೆ, ಭೂತಂಗಳೊಳನುಕಂಪೆ ತಾನೇ ಪರಬೊಮ್ಮ'ನೆಂಬ ಅಹಂಕಾರದಿಂದ ಸೊನ್ನಲಿಗೆಯಲ್ಲಿ ಶಿಷ್ಯರೊಡಗೂಡಿ ಒಂದು ಕೆರೆಯನ್ನು ನಿರ್ಮಿಸುತ್ತಿರುತ್ತಾನೆ ಸಿದ್ಧರಾಮ. ಬಸವಣ್ಣನವರ ಕಾಯಕತತ್ತ್ವಕ್ಕೆ ಬರೆದ 'ಸಜೀವಭಾಷ್ಯ' ಸಿದ್ಧರಾಮನ ಬದುಕು. ಸಿದ್ಧರಾಮನ ಕಾಯಕಕ್ಕೆ ಒಳಗೊಳಗೇ ಪ್ರಭು ತಲೆಯನೊಲೆದರೂ, ಕೊರತೆಯನ್ನೂ ಕಾಣದಿರಲಿಲ್ಲ ; ಆ ಕೊರತೆಯೇನೆಂದರೆ: ಸಿದ್ಧರಾಮನ ಜ್ಞಾನರಹಿತ ಕಾಯಕ ; ಕರ್ಮಕಾಂಡದ ಮತ್ತೊಂದು ರೂಪ. ಅಲ್ಲಮನಿಗೂ ಸಿದ್ಧರಾಮನಿಗೂ ರಾಘವಾಂಕನ ಪ್ರಕಾರ ಒಂದು ಯುದ್ಧವೇ ನಡೆದುಹೋಗುತ್ತದೆ.

'ತನುವೆಂಬ ಏರಿಗೆ ಮನವೆಂಬ ಕಟ್ಟೆ, ಆಚಾರವೆಂಬ ಸೋಪಾನ, ಪರಮಾನಂದವೆಂಬ ಜಲವ ತುಂಬಿ
ಕೆರೆಯ ಕಟ್ಟಬಲ್ಲವರನಾರನೂ ಕಾಣೆ, ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು'

ಎಂದು ಕಟ್ಟಬೇಕಾದ ನಿಜವಾದ ಕೆರೆಯ ಸ್ವರೂಪವನ್ನು ಸಿದ್ಧರಾಮನಿಗೆ ಅರುಹುತ್ತಾನೆ. ಈ ಮಾತುಗಳು ಅಲ್ಲಮನ ಸಾಧನೆಗೂ ಹಿಡಿದ ಕನ್ನಡಿಯಾಗಿವೆ. ಸಿದ್ಧರಾಮನ ಅಂತರಂಗ ಅನಾವರಣವಾಗುತ್ತದೆ. ಸಾಮಾನ್ಯನ ವಾಙ್ಮನಕ್ಕಗೋಚರವಾದ ಪ್ರಭುವಿನ ಸಿದ್ಧಿಯು ಶಬ್ದಾತೀತನಾದ ಸಿದ್ಧರಾಮನ ಹೃದಯದಲ್ಲಿ ಅನುರಣಿತವಾಗುತ್ತದೆ. ಸಿದ್ಧರಾಮ ನಿಜಕ್ಕೂ ಈಗ 'ಸಿದ್ಧ' ರಾಮನೇ ಆಗುತ್ತಾನೆ–ಹೆಸರಿಗೆ ತಕ್ಕಂತೆ.

ಪ್ರಭುವಿನ ಹೃದಯ ಮಾನವೀಯತೆಯಿಂದ ತುಂಬಿದ್ದರೂ ಮಾತು ಮಾತ್ರ ನೇರ. ನಿಷ್ಠುರ. ಆತನ ನಿಷ್ಠುರ ವಿಮರ್ಶೆ ಬಸವಣ್ಣನನ್ನೂ ಬಿಡಲಿಲ್ಲ. 'ಜಂಗಮ ಪ್ರಾಣಿ' ಎನಿಸಿಕೊಂಡೂ, ಜಂಗಮ ಮಹಾಮನೆಯ ಮುಂದೆ ಬಂದು ನಿಂತಾಗಲೂ ಲಿಂಗ ಪೂಜೆಯಲ್ಲಿಯೇ ನಿಷ್ಠೆಯನ್ನು ನಿಲ್ಲಿಸಿದ್ದ ಅಣ್ಣನ ನಿಲುವನ್ನೂ ತಿದ್ದುತ್ತಾನೆ ಪ್ರಭು. 'ಬಂದ ಬರವ ನೋಡದೆ, ನಿಂದ ನಿಲವ ನರಿಯದೆ, ಕೆಮ್ಮನೆ ಅಹಂಕಾರವ ಹೊತ್ತಿರ್ಪರ ಸಮ್ಮ ಗುಹೇಶ್ವರ ಲಿಂಗನೊಲ್ಲ ಕಾಣಾ' ಎಂದು ಘರ್ಜಿಸುತ್ತಾನೆ. ಜಂಗಮ ಪ್ರಾಣಿಗೆ ಪ್ರಾಣವೇ ಬಾಯಿಗೆ ಬರುತ್ತದೆ. ತನ್ನ ತಪ್ಪು ಅನಂತ ಎಂದು ಪ್ರಭುವಿನ ಕೃಪಾ ಪ್ರಸಾದಕ್ಕಾಗಿ ಅಂಗಲಾಚುತ್ತಾನೆ ಅಣ್ಣ. 'ಕೀರ್ತಿ ವಾರ್ತೆಗೆ ಮಾಡುವ ಭಕ್ತ ತಪ್ಪಿದರೆ ಅದ ಮನಕ್ಕೆ ತರಲಿಲ್ಲ; ಸಜ್ಜನ ಸದ್ಭಕ್ತನೆಡಹಿದರೆ ಅದ ಸೈರಿಸಬಾರದು ಕೇಳು' ಎಂದು ಪ್ರಭು, ಅಣ್ಣನವರನ್ನು ಸಾಂತ್ವನಗೊಳಿಸುತ್ತಾನೆ.

ಅನುಭವ ಮಂಟಪದ 'ಶೂನ್ಯಸಿಂಹಾಸನ'ದಲ್ಲಿ ಈತ ಉಸುರಿದ ಒಂದೊಂದು ಮಾತೂ 'ಜ್ಯೋತಿರ್ಲಿಂಗ'. 'ಆನೆಯ ಚೋಹವ ತೊಟ್ಟು ನಾಯಾಗಿ ಬೊಗಳು'ವುದಕ್ಕೆ ಸಿದ್ಧನಿರಲಿಲ್ಲ-ಈ ಸಿದ್ಧ. ಅಧರಕ್ಕೆ ಕಹಿಯಾದರೂ ಆರೋಗ್ಯಕ್ಕೆ ಅನಿವಾರ್ಯ

ವಾಗಿದ್ದುವು ಆತನ ನುಡಿಗಳು. ಆದ್ದರಿಂದಲೇ ಕೇಳುಗರಪಾಲಿಗೆ ಕೆಂಡದ ಮಳೆಯುಂತೆ, ಮಿಂಚಿನ ಗೊಂಚಲಂತೆ ಇಂದ್ರಿಯ ಪರಿಮಿತವಾದ ಜೀವಿಯನ್ನು ಬೆಕ್ಕಸಬೆರಗು ಪಡಿಸುತ್ತಿದ್ದುವು ಆತನ ಅನುಭಾವದ ಪ್ರಖರ ಮಾತುಗಳು. ವಿಚಾರ ರಹಿತ ಆಚಾರವನ್ನು ಅಲ್ಲಮ ಅಲ್ಲಗಳೆದನು. ಹಿಂದೂ ಧರ್ಮದ ಮೂಲ ಒರತೆಗಳಾದ ವೇದ, ಶಾಸ್ತ್ರ, ಆಗಮಗಳನ್ನು ಬುಡಮಟ್ಟ ಅಲ್ಲಾಡಿಸಿದ.

> ಅಜ್ಞಾನವೆಂಬ ತೊಟ್ಟಿಲೊಳಗೆ ಜ್ಞಾನವೆಂಬ ಶಿಶುವ ಮಲಗಿಸಿ
> ಸಕಲ ವೇದ ಶಾಸ್ತ್ರವೆಂಬ ನೇಣ ಕಟ್ಟಿ ಹಿಡಿದು-ತೂಗಿ-ಜೋಗುಳಪಾಡುತ್ತಿದಾಳೆ, ಭ್ರಾಂತಿಯೆಂಬ ತಾಯಿ !
> ತೊಟ್ಟಿಲು ಮುರಿದು ನೇಣು ಹರಿದು ಜೋಗುಳ ನಿಂದಲ್ಲದೆ ಗುಹೇಶ್ವರನೆಂಬ ಲಿಂಗವ ಕಾಣಬಾರದು।

ಪಂಡಿತ ವರ್ಗ ಯಾವುದನ್ನು ಪ್ರಶ್ನಾತೀತ ಎಂದು ಪಾಮರರ ಬಾಯಿ ಮುಚ್ಚಿಸಿದ್ದಿತೋ ಅದನ್ನು ನಿರ್ಭಯವಾಗಿ ಪ್ರಶ್ನಿಸಿದ. ಇವುಗಳೇ ಗಮ್ಯಸ್ಥಾನಗಳೆಂದು ತಮಂಧ ಗುರಿಯಾಗಿ ಹರಿಯುತ್ತಿದ್ದ ಜಗದ ಪರಿಯನ್ನು ಕಂಡು ಮಮ್ಮಲ ಮರುಗಿದ. ಒಳಗೆ ತೊಳೆಯಲರಿಯದೆ ಬರಿಯ ಕಂದಾಚಾರ, ಕರ್ಮಕಾಂಡಗಳಿಂದ ಕೇವಲ ಹೊರಗನ್ನೇ ತೊಳೆಯುತ್ತಿದ್ದವರನ್ನು ಕಂಡು ಕನಲಿ ಕೆಂಡವಾದ. ಕಾಯಗುಣ, ಪ್ರಾಣಗುಣ ಮುಂತಾದ ವಿಕಾರ ಗಡಣಗಳ ನಡುವೆಯೂ ಗಣ್ಯರೆನಿಸಿಕೊಂಡು ಸದಾ ಸದ್ಭಕ್ತರಂತೆ ವೇಷ ಧರಿಸುತ್ತಿದ್ದ ಡಂಭಕರನ್ನು 'ಛೀ' ಎಂದ. ಲಾಂಛನವಷ್ಟಕ್ಕೇ ಮಾರುಹೋಗಿ ಶರಣು ಎನ್ನುತ್ತಿದ್ದ ಬಸವಣ್ಣನ ಭಕ್ತಿಯ ಅತಿರೇಕವೇ ಇಂತಹವರಿಗೆ ಅನುಕೂಲಕರವಾದ ವಾತಾವರಣವನ್ನು ಕಲ್ಪಿಸಿತ್ತು. ಆದರೆ ಅಲ್ಲಮ ಕಂಡ ಕಂಡಲ್ಲಿ ಅಶನಕ್ಕೆ ನೆರೆಯುತ್ತಿದ್ದ, ವಸನಕ್ಕೆ ನೆರೆಯುತ್ತಿದ್ದ ನಾಮಮಾತ್ರ ಶರಣರನ್ನು ಎಂದೂ ಅಪ್ಪಿಕೊಂಡವನಲ್ಲ. ಹರಿವ ನದಿಗೆ ಹೇಗೆ ಮೈಯೆಲ್ಲಾ ಕಾಲೋ, ಉರಿವ ಕಿಚ್ಚಿಂಗೆ ಹೇಗೆ ಮೈಯೆಲ್ಲಾ ಬಾಯಿಯೋ, ಬೀಸುವ ಗಾಳಿಗೆ ಹೇಗೆ ಮೈಯೆಲ್ಲಾ ಕೈಯೋ ಹಾಗೆ ಸರ್ವಾಂಗ ಲಿಂಗವಾದವನೇ ಸಹಜ ಶರಣ ಎಂದು ಶರಣತ್ವದ ವ್ಯಾಖ್ಯೆ ಮಾಡಿದ.

ಚೆನ್ನಮಲ್ಲಿಕಾರ್ಜುನನ್ನು ಹುಡುಕುತ್ತಾ ಹೊರಟ ಹಾದಿಯಲ್ಲಿ ಅಕ್ಕ ಅನುಭವ ಮಂಟಪಕ್ಕೆ ಬರುತ್ತಾಳೆ. ಇಲ್ಲಿ ಅಲ್ಲಮನಿಗೂ, ಅಕ್ಕನಿಗೂ ಸಕಲ ಶರಣಗಣದ ಸಾಕ್ಷಿಯಲ್ಲಿ ನಡೆದ ಚರ್ಚೆ ಶೂನ್ಯಸಂಪಾದನೆಯಲ್ಲಿ ಒಂದು 'ದೀಪ್ತ ಕಾಂಡ'. ಅನುಭಾವದ ಉರಿಯ ಶಿಖರದಿಂದ ಇಳಿದು ಬಂದು ಚೆನ್ನಮಲ್ಲಿಕಾರ್ಜುನನ ವಿರಹದ ಉರಿಯಲ್ಲಿ ಬೇಯುತ್ತಿದ್ದ ಅಕ್ಕನನ್ನು ತನ್ನ ಮಾತಿನ ಶೀತಲ ಸ್ಪರ್ಶದಿಂದ ಅನುಭವ ಮಂಟಪಕ್ಕೆ ಆಹ್ವಾನಿಸುತ್ತಾನೆ ಅಲ್ಲಮ. ಇಲ್ಲಿನ ಪ್ರಭುವಿನ ಒಂದೊಂದು ಮಾತೂ ನಮ್ಮ ಬುದ್ಧಿಗೆ ದಿಗ್ಭ್ರಮೆಯನ್ನಾಗಿಸುತ್ತವೆ.

ಅನುಭವ ಮಂಟಪದಲ್ಲಿ ಅದ್ವಿತೀಯ ಸ್ಥಾನದಲ್ಲಿ ಇದ್ದುಕೊಂಡು ತನ್ನ ಅಧಿಕಾರವಾಣಿಯಿಂದ ಎಲ್ಲರ ವ್ಯಕ್ತಿತ್ವದ ಮೇಲೂ ತನ್ನ ಪ್ರಭಾವದ ಮುದ್ರೆ ಒತ್ತುವುದೇ ಅಲ್ಲಮನ ಕೆಲಸವಾಗಿರಲಿಲ್ಲ. ಅಲ್ಲಿ ಎಲ್ಲರಿಂದಲೂ ಪಡೆಯುವುದೂ ಆತನ ಅದಮ್ಯ ಆಸೆಯಾಗಿತ್ತು. 'ಬೆಳಗುವ ಜ್ಯೋತಿಯ ತಿರುಳಿನಂತೆ, ಹೊಳೆವ ಕಂಗಳ ಕಾಂತಿಯೊಳಹೊರಗೆನ್ನದೆ ಅಳವಟ್ಟ ಶಿವಯೋಗಿಯ ಕಂಡೆ ನೋಡಾ! ನಿಜ ಉಂಡ ನಿರ್ಮಳದ ಘನವ ಕಂಡು ಬೆರಗಾದೆನು ನಾನು!! ಗುಹೇಶ್ವರ ಲಿಂಗದಲ್ಲಿ ಚೆನ್ನಬಸವಣ್ಣನಿಂದಲಾನು ಬದುಕಿದೆನು'. ಬಸವಣ್ಣನಂತಹವನಿರಲಿ, ಅನುಭವ ಮಂಟಪದ ಕಿರಿಯ ಶರಣನಾದ ಚೆನ್ನಬಸವಣ್ಣನನ್ನೂ ಕುರಿತು ಪ್ರಭು ತುಂಬು ಹೃದಯದಿಂದ ನೆನೆದಿದ್ದಾನೆ. ಅಲ್ಲಮನ ವ್ಯಕ್ತಿತ್ವದ ಪೂರ್ಣತೆಗೆ ಇನ್ನೇನು ತಾನೇ ಬೇಕು?

ಅಲ್ಲಮಪ್ರಭುವಿನ ವಚನಗಳು ಸಾಮಾನ್ಯಅಭ್ಯಾಸಿಗೆ ನಿಲುಕದ ನಾರೀಕೇಳ ಎನ್ನುವುದೂ ಸರ್ವೇಸಾಮಾನ್ಯ ಹೇಳಿಕೆ. ಆತನ ವಚನಗಳು ದೂರದಲ್ಲಿ ನಿಂತು ನೋಡುವವರಿಗೆ ಅಬ್ಬರಿಸುವ ಸಮುದ್ರದಂತೆ ಬುದ್ಧಿಗೆ ಭಯವನ್ನು ಉಂಟುಮಾಡಿದರೂ ಒಳಕ್ಕೆ ಆಳಕ್ಕೆ ಇಳಿದು ಶೋಧಿಸಿದರೆ ಅನಂತವಾದ ಮುತ್ತು ರತ್ನಗಳ ರಾಶಿ ರಾಶಿ ಕಂಡುಬರುತ್ತವೆ ಅಲ್ಲಿ. ಶಬ್ದಸಾಸಿವೆಯಲ್ಲಿ ಅಮೂರ್ತವಾದ ಅನುಭಾವದ ಸಾಗರವನ್ನು ಸೆರೆಹಿಡಿದಿದ್ದಾನೆ ಆತ. ಶಬ್ದಗಳಿಗೆ ಶತಕೋಟಿ ಸೂರ್ಯನ ಪ್ರಕಾಶವನ್ನು ಕೊಟ್ಟವನು ಆತ. ಆದ್ದರಿಂದಲೇ ಆತನ ಮಾತುಗಳು ಜೀವಚೈತನ್ಯವನ್ನು ಉದ್ದೀಪಿಸುವ ಜ್ಯೋತಿರ್ಲಿಂಗಗಳು. ಆದರೂ ಆತನ ಅನಂತಜ್ಞಾನದ 'ಚುಳುಕು' ಮಾತ್ರವಷ್ಟೇ ಆತನ ವಚನಗಳು. ಏಕೆಂದರೆ ಕೆಂಡದ ಗಿರಿಯನ್ನು ನುಂಗಿದ ಆ ಹಂಸದ ಚಿಂತನ ಮಂಥನಗಳನ್ನು ಹೊರಲಾರದು, ಹೇರಲಾರದು ನಮ್ಮ ಭಾಷೆ. ಆದ್ದರಿಂದಲೇ ಆತನ ವಚನಗಳ ಮೂಲಕ ನಮ್ಮ ಅನುಭವಕ್ಕೆ ಅಲ್ಲಮ ದಕ್ಕಿದ ಎನ್ನುವಷ್ಟರಲ್ಲಿಯೇ ಯಾವುದೋ ಅಸ್ಪಷ್ಟತೆಯಲ್ಲಿ, ಸೂಕ್ಷ್ಮಭಾವದಲ್ಲಿ, ನಮಗೆ ದಕ್ಕದೆ ದೂರಹೋಗಿಬಿಡುತ್ತಾನೆ. ನಮ್ಮಲ್ಲಿ ಇರಬೇಕಾದಷ್ಟು ಅರಿವು ಇಲ್ಲದಿರುವುದರಿಂದಲೇ ಅಲ್ಲಮನ 'ಎಲ್ಲವೂ' ನಮಗೆ ಅರ್ಥವಾಗದೆ ಆತನ ವ್ಯಕ್ತಿತ್ವಸಾಗರದ ಅಂಚಿನಲ್ಲಿಯೇ ನಿಂತು ಬರಿಯ ನೊರೆ ತೆರೆಗಳ ವಿಲಾಸಗಳಿಂದಲೇ ತೃಪ್ತಿಪಡುತ್ತೇವೆ ನಾವು.

ಒಟ್ಟಿನಲ್ಲಿ ಸಿದ್ಧರಾಮನ ಕರ್ಮಯೋಗ. ಚೆನ್ನಬಸವಣ್ಣನ ಜ್ಞಾನಯೋಗ, ಅಕ್ಕ ಅಣ್ಣರ ಭಕ್ತಿಯೋಗಗಳನ್ನೆಲ್ಲಾ ಒಳಗೊಂಡು ಅವಕ್ಕೆ ಅತೀತನಾಗಿ ಬೆಳೆದ ಅಲ್ಲಮ ಹೇಗೆ ಎಲ್ಲ ಕಾಲಕ್ಕೂ 'ಪ್ರಭು'ವಾದ ಎನ್ನುವುದನ್ನು ನಾವು ಇನ್ನೂ ಅರ್ಥಮಾಡಿಕೊಳ್ಳಬೇಕಾಗಿದೆ ಎಂದು ಹೇಳದೆ ಬೇರೆ ಗತ್ಯಂತರವಿಲ್ಲ.

# ಮಡಿವಾಳ ಮಾಚಿದೇವ

—ಬಿ. ವಿ. ವೀರಭದ್ರಪ್ಪ

ಬಸವಣ್ಣನ ಸಮಕಾಲೀನನಾದ ಮಡಿವಾಳ ಮಾಚಿದೇವನನ್ನು ಕುರಿತು ವೀರಶೈವಸಾಹಿತ್ಯದಲ್ಲಿ ವಿಪುಲವಾದ ಉಲ್ಲೇಖಗಳು ದೊರೆಯುತ್ತವೆ. ಪ್ರಮುಖ ವಚನಕಾರರೆಲ್ಲರೂ ಮಾಚಿದೇವನ ಒಂದಲ್ಲ ಒಂದು ಗುಣವನ್ನು ಸ್ಮರಿಸದೆ ಬಿಟ್ಟಿಲ್ಲ. ಆದರೆ ವಚನಕಾರರಾರಿಗೂ ಮಾಚಿದೇವ ಕಲ್ಯಾಣಕ್ಕೆ ಬರುವ ಮುನ್ನ ಎಲ್ಲಿ ಮತ್ತು ಹೇಗೆ ಜೀವನ ಮಾಡಿದ ಎಂಬ ಬಗ್ಗೆ ಏನೂ ತಿಳಿದಂತಿಲ್ಲ.

ಪಾಲ್ಕುರಿಕೆ ಸೋಮನಾಥ, ಭೀಮಕವಿ, ಸಿಂಗಿರಾಜ, ನಂಜುಂಡಕವಿ, ವಿರೂಪಾಕ್ಷ ಪಂಡಿತ, ಷಡಕ್ಷರದೇವ ಮತ್ತು ಗುಬ್ಬಿ ಮಲ್ಲಣಾರ್ಯ ಮುಂತಾದ ವೀರಶೈವ ಕವಿಗಳು ಮಾಚಿದೇವರ ಗುಣಪ್ರಶಂಸೆ ಮಾಡಿದ್ದಾರೆ. ಆತನನ್ನು ಕುರಿತು 'ಮಡಿವಾಳಯ್ಯನ ಚರಿತ್ರೆ', 'ಮಡಿವಾಳಯ್ಯನ ತಾರಾವಳಿ', 'ಮಡಿವಾಳಯ್ಯನ ಸಾಂಗತ್ಯ', 'ಮಾಚಿದೇವ ಮನೋವಿಲಾಸ', 'ಮಡಿವಾಳಯ್ಯನ ಸ್ತೋತ್ರ', 'ಮಡಿವಾಳಯ್ಯನ ತ್ರಿವಿಧಿ' ಮುಂತಾದ ಗ್ರಂಥಗಳು ರಚಿತವಾಗಿವೆ. ಇತ್ತೀಚೆಗೆ, ೧೯೫೫ರಲ್ಲಿ ಮಾ. ನಂ. ನಂಜಪ್ಪ ಅವರು 'ಮಾಚಿದೇವ ಚರಿತಾಮೃತ' ಎಂಬ ಗ್ರಂಥವನ್ನು ರಚಿಸಿದ್ದಾರೆ.

ಫ.ಗು. ಹಳಕಟ್ಟಿಯವರು ೧೯೩೯ರಲ್ಲಿ 'ಮಡಿವಾಳಮಾಚಿದೇವನ ವಚನಗಳು' ಎಂಬ ೧೦೦ ವಚನಗಳ ಒಂದು ಸಂಗ್ರಹವನ್ನು ಸಂಪಾದಿಸಿ ಪ್ರಕಟಿಸಿದರು. ೧೯೭೩ರಲ್ಲಿ 'ಮಡಿವಾಳಯ್ಯನ ವಚನಗಳು' ಎಂಬ ಹೆಸರಿನಲ್ಲಿ ದಾವಣಗೆರೆಯ ಶ್ರೀ ಎಸ್. ಉಮಾಪತಿಯವರು ೩೪೫ ವಚನಗಳ ಒಂದು ಸಂಕಲನವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ.

ನಂಜುಂಡ ಕವಿಯು ಮಡಿವಾಳಯ್ಯನ ಚರಿತ್ರೆಯಲ್ಲಿ ಮಾಚಿದೇವನ ಜನನವನ್ನು ಕುರಿತು ಈ ಕೆಳಗಿನ ಅತಿಮಾನುಷ ಕಥೆ ಉಲ್ಲೇಖವಾಗಿದೆ :

ಕೈಲಾಸದಲ್ಲಿ ಪರಶಿವನು ಒಡ್ಡೋಲಗದಲ್ಲಿದ್ದಾನೆ. ದಕ್ಷಯಾಗಧ್ವಂಸಕ್ಕಾಗಿ ತೆರಳಿದ್ದ ವೀರಭದ್ರನು, ಜಯಭೇರಿಗಳು ಮೊಳಗುತ್ತಿರಲು, ವಿಜಯಿಯಾಗಿ ಶಿವನ ಒಡ್ಡೋಲಗಕ್ಕೆ ಆಗಮಿಸುತ್ತಾನೆ. ವಿಜಯದ ಸೊಕ್ಕಿನಿಂದ ಮೈಮರೆತು ಬರುತ್ತಿದ್ದ ವೀರಭದ್ರನ ಮೈಮೇಲಣ ಉತ್ತರೀಯದ ಸೆರಗು ಶಿವನ ಸಭೆಯಲ್ಲಿ ಕುಳಿತಿದ್ದ ಶಿವಶರಣರ ಮೇಲ್ಬಾಯ್ದು ಸರಿಯಿತು. ಪುತ್ರನ ವಿಜಯದಿಂದ ಶಿವನಿಗೆ ಸಂತೋಷವಾದರೂ, ಅವನ ಸೊಕ್ಕಿನಿಂದ ಶರಣರಿಗಾದ ಅವಿನಯದ ಅಪರಾಧಕ್ಕಾಗಿ ಕೋಪಗೊಳ್ಳುತ್ತಾನೆ. ವೀರಭದ್ರನನ್ನು ಕುರಿತು 'ನೀನು ಕೂಡಲೇ ಭೂಮಿಯಲ್ಲಿ ಜನ್ಮತಾಳು,ಭಕ್ತರಿಗಾದ ಅವಿನಯಕ್ಕೆ ಇದೇ ತಕ್ಕ ಪ್ರಾಯಶ್ಚಿತ್ತ' ಎಂದು ಆಜ್ಞೆಮಾಡುತ್ತಾನೆ. ಖಿನ್ನನಾದ ವೀರಭದ್ರನು 'ನಿಮ್ಮ ಶಾಪದ ಭಯವಿನ್ನೇಸು ದಿನವೀಗ' ಎನ್ನುತೀಶ್ವರನ ಕೇಳಿದರೆ, 'ಚಿನ್ಮಯ ಶರಣರ ವಸ್ತ್ರವ ತೊಳೆಯಲು ಇನ್ನು ಹಿಂಗುವುದು ನಿಮದೋಷ' ಎಂದು ಉತ್ತರ ದೊರೆಯುತ್ತದೆ.

ಈ ಕಥೆಯು ಉಳಿದ ಶಿವಶರಣರ ಜನನದ ಕಥೆಗಳು ವೀರಶೈವ ಕಾವ್ಯಗಳಲ್ಲಿ ಚಿತ್ರಿತವಾಗಿರುವ ರೀತಿಯನ್ನೇ ಹೋಲುತ್ತದೆ. ಬಸವ ಪುರಾಣ ಮತ್ತು ಸಿಂಗಿರಾಜ ಪುರಾಣಗಳಲ್ಲಿ ಉಲ್ಲೇಖವಾದ ಮಾಚಿದೇವನ ಕಥೆಯನ್ನು ಈ ಕೆಳಗಿನಂತೆ ಸಂಗ್ರಹಿಸಬಹುದು:

ಬಿಜಾಪುರ ಜಿಲ್ಲೆಯ ಹಿಪ್ಪರಗಿ ಗ್ರಾಮದಲ್ಲಿ ಅಯೋನಿಜನಾಗಿ ಅವತರಿಸಿದ ಮಾಚಿದೇವನು ಮಡಿವಾಳ ಕಾಯಕವನ್ನು ಕೈಗೊಂಡು ಸುಜನ ಸಂಗಿಯಾಗಿರುತ್ತಾನೆ. ಬಸವಣ್ಣನ ಭಕ್ತಿ ಈತನನ್ನು ಕಲ್ಯಾಣಕ್ಕೆ ಕೈಬೀಸಿ ಕರೆಯುತ್ತದೆ. ತನ್ನ ಕಾಯಕಕ್ಕೆ ತಕ್ಕ ಅವಕಾಶ ದೊರೆಯಿತೆಂದೂ, ತನ್ನ ಜೀವನ ಸಾರ್ಥಕವಾಗುವುದೆಂದೂ ಬಗೆದು ಕಲ್ಯಾಣಕ್ಕೆ ಪ್ರಯಾಣ ಮಾಡುತ್ತಾನೆ. ಭಕ್ತರ ಮಾಸಿದ ಬಟ್ಟೆಗಳನ್ನು ಮೂಟೆಗಟ್ಟಿ, ಸೂರ್ಯೋದಯಕ್ಕೆ ಮುನ್ನವೆ ಹೊಳೆಗೆ ಹೋಗಿ ತನ್ನ ಹರುಷ ಪ್ರವಾಹದಲ್ಲಿ ತೊಳೆಯುತ್ತಾನೆ. ಆತ್ಮದುಬ್ಬೆಯಲ್ಲಿ ಸ್ತುತ್ಯಷ್ಟಮದ ಸಮಿಧೆಯನ್ನಿರಿಸಿ, ಜ್ಞಾನಾಗ್ನಿಯ ಪ್ರಭಾವದಿಂದ ಗಂಗೆಯೊಳು ಹರುಷದಿಂದ ತೊಳೆದು ಶಿವರಸದ ಗಂಜಿಯನಿಕ್ಕುತ್ತಾನೆ. ಘಳಿಗೆಯನ್ನು ಮಾಡಿ ಭಕ್ತರ ವಸ್ತ್ರಗಳನ್ನು ರಜತಾದ್ರಿಯಂತೆ ಹೊತ್ತು ತರುತ್ತಾನೆ. ಎಡಗೈಯಲ್ಲಿ ಘಂಟೆಯನ್ನು ಬಲಗೈಯಲ್ಲಿ ಖಡ್ಗವನ್ನು ಹಿಡಿದು 'ಸಂಧಿಸಿದಿರಾದೊಡೆ ಇರಿದು ಕೆಡಹುವೆನು, ಜಡಭವಿಗಳಿರಾ ತೊಲಗಿ ಭೋ' ಎಂದು ಅಡಿಗಡಿಗೆ ಸಾರುತ್ತಾ ಭಕ್ತರ ಮನೆಗೆ ಹೋಗಿ ಮಡಿ ವಸ್ತ್ರಗಳನ್ನು ಸಮರ್ಪಿಸುತ್ತಾನೆ. ಇದು ಅವನ ದಿನಚರಿ.

ಹೀಗಿರಲು ಒಂದು ದಿನ ಒಬ್ಬ ವಿಪ್ರನು ಮಡಿವಾಳ ಮಾಚಯ್ಯನವಾರಿಗೆ ಅಡ್ಡ ಬರಲು ಆ ವಿಪ್ರನನ್ನು ಮಾಚಯ್ಯನು ಖಡ್ಗದಿಂದ ಇರಿದು ಗಗನಕ್ಕೆ ಚಿಮ್ಮುತ್ತಾನೆ. ಆಗ ಊರವರೆಲ್ಲ ನೆರೆದು ದೊರೆ ಬಿಜ್ಜಳನ ಬಳಿಗೆ ಹೋಗಿ ವಸ್ತ್ರಗಳ ಹೊರೆಯನ್ನು ಸೋಕಿದವನನ್ನು ಇರಿಯುತ್ತೇನೆಂದು ಮಾರ್ಮಲೆತು ನಡೆಯುವ ಮತ್ತು ಒಬ್ಬ ಬ್ರಾಹ್ಮಣನನ್ನು ಇರಿದು ಕೊಂದ ಅಗಸನ ವಿರುದ್ಧ ದೂರು ಹೇಳುತ್ತಾರೆ.

ಆಗ ಬಿಜ್ಜಳನು ಬಸವೇಶ್ವರನನ್ನು ದುರದುರನೆ ನೋಡಿ ಮಡಿವಾಳನನ್ನು ಬಂಧಿಸಿ ತರಲು ರಾಜಭಟರಿಗೆ ಅಪ್ಪಣೆ ಮಾಡುತ್ತಾನೆ. ರಾಜಭಟರು ಮಡಿವಾಳನೊಡನೆ ಹೋರಾಡಿ ಧೂಳೀಪಟವಾಗಲು ಮದಿಸಿದ ಆನೆಯೊಂದನ್ನು ಅವನ ಮೇಲೆ ದಾಳಿ ಬಿಡುತ್ತಾನೆ. ಆ ಆನೆಯು ಮಾಚಯ್ಯನ ಆಕ್ರೋಶಕ್ಕೆ ಬಲಿಯಾಗುತ್ತದೆ. ಬಟ್ಟೆಯನ್ನು ಒಗೆಯುವಂತೆ ಅದನ್ನು ಅವನು ಅಪ್ಪಳಿಸುತ್ತಾನೆ. ಆ ವೇಳೆಗೆ ಬಿಜ್ಜಳ ರಾಜನಿಗೆ ಮಾಚಯ್ಯನು ಸಾಮಾನ್ಯ ಅಗಸನಿರಲಾರನೆಂದು ಅರಿವಾಗುತ್ತದೆ. ಬಸವೇಶ್ವರನ ಕ್ಷಮೆ ಕೇಳುತ್ತಾನೆ. ಬಸವನ ಅಣತಿಯಂತೆ ಮಾಚಯ್ಯನು ರಾಜಭಟರು ಮತ್ತು ಆನೆಯನ್ನೂ, ತನ್ನ ಖಡ್ಗಕ್ಕೆ ಆಹುತಿಯಾದ ಬ್ರಾಹ್ಮಣನನ್ನೂ ಬದುಕಿಸುತ್ತಾನೆ.

ಡಾ|| ಬಿ. ಎಸ್. ಗದ್ದಗಿಮಠ ಅವರು ಸಂಗ್ರಹಿಸಿರುವ 'ಕನ್ನಡ ಜಾನಪದ ಗೀತೆಗಳು' ಎಂಬ ಸಂಗ್ರಹದಲ್ಲಿ ಮಾಚಿದೇವನಿಗೆ ಸಂಬಂಧಿಸಿದ ಒಂದು ಹಂತಿಯ ಹಾಡು ಇದೆ. ಅದರಲ್ಲಿ ಮಾಚಯ್ಯನಿಗೆ ವಿವಾಹವಾಗಿದ್ದು ಒಬ್ಬಳು ಹೆಂಡತಿ ಇದ್ದ ಸಂಗತಿ ಉಲ್ಲೇಖವಾಗಿದೆ. ಆ ಭಾಗ ಈ ಕೆಳಗಿನಂತಿದೆ :

ಭವಿಗಳು ಅಡ್ಡ ಬಂದು ಶರಣರ ಮಡಿಯ ಗಂಟನ್ನು ಸೋಂಕಬಾರದೆಂಬ ವೀರವ್ರತವನ್ನು ಮಾಚಯ್ಯ ಪಾಲಿಸುತ್ತಿರುತ್ತಾನೆ. ಒಂದು ದಿನ ಹಲವು ಕಿಡಿಗೇಡಿಗಳು ಅಡ್ಡ ಬಂದು ಆತನ ಆಕ್ರೋಶಕ್ಕೆ ಪಾತ್ರರಾಗಿ ಅಸುನೀಗುತ್ತಾರೆ. ಚಾಡಿಕೋರರು ಅರಸನ ಒಡ್ಡೋಲಗಕ್ಕೆ ಬಂದು ಮಾಚಿ ದೇವನು ಅರಮನೆಯ ಬಟ್ಟೆಗಳನ್ನು ಒಗೆಯುವುದಿಲ್ಲ ಎನ್ನುತ್ತಾನೆ. ಶರಣರ ಬಟ್ಟೆಗಳನ್ನು ಮಾತ್ರ ಒಗೆಯುವನಂತೆ ಎಂದು ಚಾಡಿ ಹೇಳುತ್ತಾರೆ. ಕೆರಳಿದ ರಾಜನು ಮಾಚಯ್ಯನನ್ನು ಹಿಡಿದುತರಲು ರಾಜಭಟರನ್ನೂ, ಆನೆಯನ್ನೂ ಕಳಿಸುತ್ತಾನೆ. ಆದರೆ ಮಾಚಯ್ಯ ಅವರನ್ನೆಲ್ಲ ತುಂಡರಿಸಿ ತನ್ನ ವೀರವ್ರತವನ್ನೂ ಪಾಲಿಸುತ್ತಾನೆ. ಈ ವಾರ್ತೆಯನ್ನು ಕೇಳಿದ ರಾಜನು ಆತನಿಗೆ ಬಟ್ಟೆ ಒಗೆಯಲು ಎಲ್ಲೂ ನೀರು ಸಿಗದಂತೆ ಮಾಡಲು ಎಲ್ಲಾ ಕೆರೆ, ಕಾಲುವೆ, ನದೀ ತೀರಗಳಲ್ಲಿ ಕಾವಲಿರಿಸುತ್ತಾನೆ. ಶರಣರ ಬಟ್ಟೆ ಒಗೆಯಲು ಎಲ್ಲೂ ನೀರು ಸಿಗದಿರಲು ವಿಷಾದಗೊಂಡ ಮಾಚಯ್ಯ ಹೆಂಡತಿಯ ಬಳಿಗೆ ಬಂದು 'ಹೊತ್ತು ಮುಣುಗುತ ಬಂತು ಕತ್ತಲೆಯು ಜಗಕೆಲ್ಲ ಸತ್ಯ ನಂದಿಂದು ಹುಸಿಯಾಯ್ತು, ಕಾಯಕದ ಬುತ್ತಿ ತೀರಿತ್ತೈ ಈ ದಿನಕೆ' ಎಂದು ನಿಟ್ಟುಸಿರಿಡುತ್ತಾನೆ. ಆಗ ಆತನ ಮಡದಿ ಆತನಿಗೆ ಧೈರ್ಯ ನೀಡಿ ಸಾಂತ್ವನಗೊಳಿಸುತ್ತಾಳೆ:

ಮಾಚಯ್ಯನಾ ಮಡದಿ ಸೂಚನೆಯ ನೀಯುತಲಿ। ಯೋಚನೆಯು ಬೇಡ ಪತಿದೇವ। ನೀನೆನ್ನ। ನಾಚದಲೆ ಹಿಂಡ ಎದೆರಗುತ ||
ಊರ ಮುಂದಿನ ಸರವು ಯಾರ ಸುಳಿವೇ ಇಲ್ಲ। ನೀರು ಸಿಗದಿನ್ನು ಪತಿದೇವ । ಎದೆರಗುತ। ನೀರಲರಿವೆಗಳ ತೊಳೆದ್ಹಾಕು ||
ಹಡದಿ ಹಾಸಿದ ಮಾಚ ಮಡದಿ ಎದೆ ತಾಕೊಯ್ದು। ಒಡನೆ ಬಲು ಚಿಮ್ಮಿ ಬಿಸಿರಗುತ । ಹೊಳೆಯಾಗಿ। ಮಡುಗಟ್ಟಿ ನೀರ ಕೆರೆಯಾತು||
ನೀರ ಕಾಣುತ ಮಾಚ ತೀರಿಸಿದ ಕಾಯಕವ । ಆರಿಸರಿವೆಗಳ ಮಡಿಮಾಡಿ । ಕೂಗಿದನು।ಬಾರೆ ಸಂಗಡತಿ ತಡವಾತು ||
ಮಡಿವಾಳ ಮಾಚಯ್ಯ ಧುಡಉಳ್ಳ ಶಿವಭಕ್ತ। ಮಡದಿಯನು ಕೊಂದು ರಗುತವಲಿ । ತಾತೊಳೆದ। ಒಡೆಯನೊಪ್ಪಿರವ ಭಕುತಿಯಲಿ ||
ಪತಿಯ ಕಾಯಕಸೇರಿ ಮತಿವಂತಿ ಎದೆಗೊಟ್ಟು। ಗತಿಯ ಹೊಂದಿದಳು ಸಗ್ಗದಲಿ । ಸಿವಗಣವು। ಅತಿನುತಿಸಿ ಮಾನ ಸಲ್ಲಿಸಿತು ||
ಮುತ್ತೈದಿ ನಿನ ಮರಣ ಎತ್ತಹೋದರು ಪೂಜೆ। ಕತ್ತೂರಿನಾತವಿದ್ದಂತೆ । ಜಗದೊಳಗೆ। ಉತ್ತಮರ ಮನಕೆ ಕಾಯಕವು ||

ಮಾಚಯ್ಯ ಪರವಾದಿಗಳೊಡನೆ ಯುದ್ಧಮಾಡುತ್ತಾ ಉಳವಿಯ ಕಡೆಗೆ ಸಾಗಿದ ಸಂಗತಿಯನ್ನು ಈ ಹಂತಿಯ ಹಾಡು ತಿಳಿಸುತ್ತದೆ. ಮಾಚಿದೇವನಿಗೆ ವಿವಾಹವಾಗಿದ್ದ ಸಂಗತಿ ಈ ಹಂತಿಯ ಹಾಡನ್ನು ಬಿಟ್ಟರೆ ಬೇರೆ ಯಾವ ಆಕರದಿಂದಲೂ ದೊರೆಯುವುದಿಲ್ಲವೆಂಬುದು ಗಮನಾರ್ಹವಾಗಿದೆ.

ಮಾಚಯ್ಯನ ಜೀವನದ ಬಗ್ಗೆ ಬೇರೆ ಬೇರೆ ಆಕರಗಳಿಂದ ಈ ಅಂಶಗಳು ಸ್ಪಷ್ಟವಾಗುತ್ತವೆ. ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಹಿಪ್ಪರಿಗೆಯಲ್ಲಿ ಅವನು ಜನಿಸಿ ತನ್ನ ವಂಶ ಪಾರಂಪರ್ಯವಾದ ಮಡಿವಾಳ ಕಾಯಕವನ್ನು ಕೈಗೊಂಡು ಜೀವಿಸುತ್ತಿದ್ದ. ಹಿಪ್ಪರಿಗೆಯ ಕಲ್ಲಿನಾಥೇಶ್ವರ ಅವನ ವಂಶದ ಮನೆದೇವರಾಗಿರಬೇಕು. ಅವನ ವಚನಗಳಲ್ಲಿ ಕಂಡುಬರುವ 'ಕಲಿದೇವರ ದೇವಾ' ಎಂಬ ಅಂಕಿತವು ಕಲ್ಲಿನಾಥನನ್ನು ಕುರಿತದ್ದೇ ಆಗಿರಬೇಕು. ಕಲ್ಲಿನಾಥದೇವಾಲಯದ ಸ್ಥಾನಪತಿಗಳಾದ ಕಲಿದೇವರೇ ಅವನ ವಿದ್ಯಾಗುರುಗಳು ಆಗಿದ್ದಂತೆ ಕಾಣುತ್ತದೆ. ಗುರುವಿನ ಆದೇಶದಂತೆಯೇ ಮಾಚಯ್ಯ ಕಲ್ಯಾಣಕ್ಕೆ ಪ್ರಯಾಣಮಾಡಿ ಅಲ್ಲಿ ಭಕ್ತರ ವಸ್ತ್ರಗಳನ್ನು ಮಡಿಮಾಡುವ ಕಾಯಕವನ್ನು ಮುಂದುವರಿಸಿದಂತೆ ಕಾಣುತ್ತದೆ. ಅವನ ವೀರನಿಷ್ಠೆ ಅಪೂರ್ವವಾದುದು. ಶರಣರ ಮಡಿಯ ಗಂಟನ್ನು ಹೊತ್ತು ಹೊರಟಾಗ ಒಂದು ಕೈಯಲ್ಲಿ ವೀರಘಂಟೆ ಇನ್ನೊಂದು ಕೈಯಲ್ಲಿ ಜಳಪಿಸುವ ಕರವಾಳ ವಿರುತ್ತಿತ್ತು. ವೀರಗಾಸೆಯನ್ನು ಹಾಕಿ, ಭಸ್ಮ ರುದ್ರಾಕ್ಷಿಮಾಲೆಯಿಂದ ಭೂಷಿತನಾಗಿ ಬೀದಿಯಲ್ಲಿ ಹೊರಟಾಗ ಜನರು ಅವನನ್ನು ಸಾಕ್ಷಾತ್ ವೀರಭದ್ರನ ಅವತಾರವೆಂದು ಭಾವಿಸಿದ್ದರೆ ಆಶ್ಚರ್ಯವಿಲ್ಲ. ಇದರಿಂದ ಅವನನ್ನು ವೀರಘಂಟೆಯ ಮಾಚಿದೇವ ಎಂದೂ ಕರೆಯುತ್ತಿದ್ದರು.

ಮಾಚಯ್ಯನನ್ನು ಕುರಿತು ಅನೇಕ ಶರಣರು ತಮ್ಮ ಮುಕ್ತ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಅವರ ವಚನಗಳಲ್ಲಿ ಅವನನ್ನು ಅಮರನನ್ನಾಗಿ ಮಾಡಿದ್ದಾರೆ. ಈ ಮುಂದಿನ ವಚನಗಳನ್ನು ಈ ದೃಷ್ಟಿಯಿಂದ ನೋಡಬಹುದು.

೧. .........ಎನ್ನರುಹಿನ ಕರಸ್ಥಲದಲ್ಲಿ ಮಡಿವಾಳಯ್ಯನ ಕಂಡೆನು. ಒಳಹೊರಗೆಂಬ ಭೇದವನರಿಯದೆ ಇದ್ದೆನು ಕೂಡಲಸಂಗಮದೇವಯ್ಯ.

೨. ಎನ್ನ ಕಾಯವ ಶುದ್ಧಮಾಡಿದಾತ ಮಡಿವಾಳ, ಎನ್ನ ಮನವ ನಿರ್ಮಲ ಮಾಡಿದಾತ ಮಡಿವಾಳ, ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ, ಕೂಡಲಸಂಗಮದೇವ ಎನ್ನ ನಿಮಗೆ ಯೋಗ್ಯವ ಮಾಡಿದಾತ ಮಡಿವಾಳ.

೩. ಆದಿಯಕಂಡೆ, ಅನಾದಿಯಕಂಡೆ, ಘನವಕಂಡೆ, ಮನವಕಂಡೆ, ಅನುವಕಂಡೆ, ಆಯತ ಸ್ವಾಯತ ಸನ್ನಿಹಿತವ ಕಂಡೆ ಗೊಗೇಶ್ವರ ಲಿಂಗವಲ್ಲಿ ಬಸವಣ್ಣನ ಕೃಪೆಯಿಂದ ನಿನ್ನ ಕಂಡೆನು ಕಾಣಾ ಮಡಿವಾಳ ಮಾಚಯ್ಯ.

೪. ಆನಿಕಲ್ಲ ಪುತ್ಥಳಿ ವಾರಿಧಿಯನಪ್ಪಿಕೊಂಡಂತಾಯಿತು. ಅಗ್ನಿಯ ಪುರುಷನ ಮುಸುಕ ತೆಗೆದು ಕರ್ಪೂರದ ಪುತ್ಥಳಿಯಂತಾಯಿತು. ಕತ್ತಲೆಯೊಳಗೆ ರವಿಯ ಬೆಳಗು ಹೊಕ್ಕಂತಾಯಿತು. ಗೊಗೇಶ್ವರನ ಶರಣ ಮಡಿವಾಳ ಮಾಚಿ ತಂದೆಯ ಕೃಪೆಯಿಂದ ಬಸವಣ್ಣ ನಿನ್ನ ಕಂಡೆನು ; ನಿನ್ನನೂ ಮಡಿವಾಳನನೂ ನಾನಿಂದೆ ಕಂಡೆನಯ್ಯಾ.

೫. ಆ ಸ್ವಯಂ ಜ್ಯೋತಿಯ ನಿಜ ನಿವಾಸದಲ್ಲಿ ನಿಶ್ಚಿಂತನಾಗಿದ್ದು ಮಡಿವಾಳನ ಕೃಪೆಯಿಂದ ನಾನೂ ಬದುಕಿದೆನು ಕಾಣಾ ಗೊಗೇಶ್ವರ.

೬. ಬಸವಣ್ಣನ ಭಕ್ತಿ, ಚೆನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ ಇಂತಿವರ ಕರುಣ ಪ್ರಸಾದ ಎನಗಾಯಿತು ಚೆನ್ನಮಲ್ಲಿಕಾರ್ಜುನ.

೭. ಬಸವಣ್ಣನೇ ಗುರು ಮಡಿವಾಳಯ್ಯನೇ ತಂದೆ...ಇನ್ನು ಶುದ್ಧಳಾದೆನು ಕಾಣಾ ಚೆನ್ನಮಲ್ಲಿಕಾರ್ಜುನಯ್ಯ.

೮. ಅಘಟಿತ ಘಟಿತವೆಂಬ ಮಹಾ ಘನವ ಸಾಧಿಸುವರೆ ಮಡಿವಾಳನ ಕೃಪೆಯಿಲ್ಲದನ್ನಕ್ಕರ ಎಂತರಿಯ ಬಪ್ಪುದು ನಿಜಲಿಂಗೈಕ್ಯವನು. ಎನ್ನ ಆ ರೂಢಿಯ ಅರಿವಿಂಗೆ ನೀನೆ ಶೃಂಗಾರ. ಕೂಡಲ ಚೆನ್ನ ಸಂಗಮದೇವರಲ್ಲಿ ಮಡಿವಾಳನ ಕೈಯುಲ್ಲಿ ಸ್ವಾಯತವಾದೆನು ಕಾಣಾ ಪ್ರಭುವೆ.

೯. ಹೊಟ್ಟೆಯಲ್ಲಿ ಎನ್ನ ತೆಗೆದ, ಬೆನ್ನಿನಲ್ಲಿ ಬಸವರಾಜನ ತೆಗೆದ, ಬ್ರಹ್ಮರಂಧ್ರದಲ್ಲಿ ಅಲ್ಲಮನ ತೆಗೆದ; ಸಂಗನೋ ಮಡಿವಾಳನೋ? ಮಡಿವಾಳನೋ ಸಂಗನೋ? ಕೂಡಲ ಚೆನ್ನಸಂಗನಲ್ಲಿ ಮಡಿವಾಳ ಸ್ವಾಯತ ನಮ್ಮ ಬಸವಣ್ಣಂಗೆ.

ಮೇಲಿನ ವಚನಗಳು ಬಸವಣ್ಣ, ಪ್ರಭುದೇವರು, ಚೆನ್ನಬಸವಣ್ಣ ಮತ್ತು ಅಕ್ಕಮಹಾದೇವಿಯರು ಮಾಚಯ್ಯನನ್ನು ಎಂತಹ ಗೌರವಭಾವದಿಂದ ಕಂಡರೆಂಬುದಕ್ಕೆ ಸಾಕ್ಷಿಗಳಾಗಿವೆ.

ಮಡಿವಾಳ ಮಾಚಿದೇವನೂ ತನ್ನ ವಚನಗಳಲ್ಲಿ ಬಸವಾದಿ ಶರಣರನ್ನು ಮನಸಾರೆ ಸ್ಮರಿಸಿದ್ದಾನೆ. ಶ್ರೀ ಎಸ್. ಉಮಾಪತಿ ಅವರು ಸಂಗ್ರಹಿಸಿರುವ ೩೪೫ ವಚನಗಳನ್ನು ಸಂಖ್ಯಾನುಸಾರವಾಗಿ ಪರೀಶಿಲಿಸಿದಾಗ ಅವುಗಳಲ್ಲಿ ೯೮ಕ್ಕೂ ಹೆಚ್ಚಿನ ವಚನಗಳಲ್ಲಿ ಬಸವಣ್ಣನವರ, ೩೧ರಲ್ಲಿ ಸಿದ್ಧರಾಮನ, ೨೧ರಲ್ಲಿ ಚೆನ್ನಬಸವಣ್ಣನ, ೨೦ರಲ್ಲಿ ಪ್ರಭುದೇವರ, ೨ರಲ್ಲಿ ಅಕ್ಕಮಹಾದೇವಿಯ ಉಲ್ಲೇಖವಿರುವುದು ಕಂಡುಬರುತ್ತದೆ.

ಮಾಚಯ್ಯನ ವಚನಗಳು ಶ್ರೇಷ್ಠತೆಯಲ್ಲಿ ಪ್ರಭುದೇವರು, ಬಸವಣ್ಣ, ಅಕ್ಕಮಹಾದೇವಿ ಮುಂತಾದವರ ವಚನಗಳ ಮಟ್ಟಕ್ಕೆ ಮುಟ್ಟದೇ ಹೋದರೂ ಸಂಕ್ಷಿಪ್ತತೆ, ನೇರನಿರೂಪಣೆ, ಸದಾಚಾರ, ಭಕ್ತಿ ಮತ್ತು ವಿರಕ್ತಿಗಳ ದೃಷ್ಟಿಯಿಂದ ಮಹತ್ವದ ವಚನಗಳಾಗಿವೆ. ಉದಾಹರಣೆಗಾಗಿ ಕೆಳಗಿನ ಕೆಲವನ್ನು ನೋಡಬಹುದು.

'ಸಿಂಹದ ಮುಂದೆ (ಮೃಗದ) ಜಿಗಿದಾಟವೆ? ಪ್ರಳಯಾಗ್ನಿಯ ಮುಂದೆ ಪತಂಗದಾಟವೆ? ಸೂರ್ಯನ ಮುಂದೆ ಕೀಟದಾಟವೆ? ನಿಮ್ಮ ಮುಂದೆ ಎನ್ನಾಟವೆ?'

'ಕಾಯಕದಲ್ಲಿ ನಿಂದಶರಣಂಗೆ ಸೇವೆಯವರ ತಪ್ಪು ಹಿಡಿದಿಹೆನೆಂದರೆ ಕಾಯಿಕವೆಂತು ನಡೆಯುವುದಯ್ಯಾ? ಅವಗುಣಕ್ಕೆ ಮುನಿಯಬೇಕಲ್ಲದೆ ಲಾಂಛನಕ್ಕೆ ಮುನಿಯಬಹುದೆ? ಮುಗ್ಗಿದ ತುರಗದ ಕಾಲ ಕತ್ತರಿಸಿದವರುಂಟೆ? ಕಚ್ಚುವ ತಿಗಣೆಗಾಗಿ ಮನೆಯ ಸುಟ್ಟವರುಂಟೆ?

'ಉಡಿಯ ಲಿಂಗವ ಬಿಟ್ಟು ಗುಡಿಯ ಲಿಂಗಕ್ಕೆ ಶರಣೆಂಬ ಗುಡಿಹಿಗಳನೇನೆಂಬೆನಯ್ಯಾ'

'ಮಡಿಯ ಹೇರಿದ ಕತ್ತೆ ಉಡಲೆತ್ತ ಬಲ್ಲದು. ಉಡುವಾತ ಬಲ್ಲನಲ್ಲದೆ ; ಕವಿಯ ಮಾತ ಕವಿ ಬಲ್ಲನು ಮಡಿವಾಳ' ಮಡಿವಾಳ ಎಂದು ನುಡಿಯುವುದು ಜಗವೆಲ್ಲ...ಮಡಿಯಿತು ಕಣಾ ಈರೇಳು ಭುವನವೆಲ್ಲವು ಮಡಿವಾಳ ಮಾಚಯ್ಯನ ಕೈಯಲ್ಲಿ. ಮುಂದೆ ಮಡಿದಾತ ಪ್ರಭುದೇವರು ; ಹಿಂದೆ ಮಡಿದಾತ ಬಸವಣ್ಣನು ಇವರಿಬ್ಬರ ಕರುಣದ ಕಂದನು ನಾನು'

ಗಾದೆಗಳು, ನಾಣ್ಣುಡಿಗಳಂತೆ ಕಾಣುವ ಅನೇಕ ನುಡಿಗಟ್ಟುಗಳು ಮಡಿವಾಳ ಮಾಚಯ್ಯನ ವಚನಗಳಿಗೆ ಕಾವ್ಯದ ಮೆರಗನ್ನು ನೀಡಿವೆ. ಉದಾಹರಣೆಗೆ ಮುಂದಿನ ಸಾಲುಗಳನ್ನು ಗಮನಿಸಬಹುದು.

'ಘಟದೊಳಗೆ ತೋರುವ ಸೂರ್ಯನಂತೆ'
'ಅರಸನ ಕಂಡು ಪುರುಷನ ಮರೆತಂತೆ'
'ನಿಚ್ಚಲೋದುವ ಗಿಣಿ ಬಲ್ಲುದೆ ತನಗೆ ಬಹ ಬೆಕ್ಕಿನ ಬಾಧೆಯ'
'ಹೇಳಿದ ಬೋಧೆ ವಿಧವೆಯ ಯೌವನದಂತಾಗಬಾರದು'
'ಘೂಕ ರಾತ್ರಿಯೆಂದಡೆ ಲೋಕ ದೀಪವ ಹೊತ್ತಿಸುವುದೆ?'

## ಶಿವಶರಣರಲ್ಲಿ 'ಮಾರಯ್ಯ'ಗಳು

—ಶಾಂತರಸ

೧

ಶಿವಶರಣರು ಗೈದ ಕ್ರಾಂತಿಯಲ್ಲಿ ನಮಗೆ ನಿಲುಕದ ಎಷ್ಟೋ ಹೊಸ ಕ್ಷಿತಿಜಗಳು ಹುದುಗಿವೆ; ಇವುಗಳನ್ನು ತೆರೆದಿಡಲು ನಾವಿಂದು ಶಿವಶರಣರನ್ನು ಅನೇಕ ಹೊಸ ನಿಟ್ಟಿನಿಂದ ಅಭ್ಯಾಸಮಾಡಬೇಕಾಗಿದೆ. ಅವರ ಹೆಸರುಗಳು ಮತ್ತು ಅವರ ಅಂಕಿತಗಳ ಅಭ್ಯಾಸದಿಂದ ಅವರ ಕ್ರಾಂತಿಯ ಜೀವಜೀವಾಳವನ್ನೂ, ಅದು ಸರ್ವರನ್ನು ಮುಟ್ಟಿದ ಬಗೆಯನ್ನೂ ಅರಿಯಬಹುದು.

ಶರಣರ ಕ್ರಾಂತಿ ಸಮಾಜದ ಸರ್ವಸ್ತರದವರನ್ನು ಮುಟ್ಟಿ ಎಚ್ಚರಿಸಿತು. ಬಹುಶಃ ಭಾರತದ ಯಾವ ಕ್ರಾಂತಿಯೂ ಹೀಗೆ ಸಮಾಜದ ಸರ್ವಸ್ತರದವರನ್ನು ಮುಟ್ಟಿ ಎಚ್ಚರಿಸಿದ್ದು ಕಂಡುಬರುವುದಿಲ್ಲ. ಶರಣರ ಹೆಸರುಗಳನ್ನು ತೆಗೆದುಕೊಂಡರೆ ಸಾಕು—ಅವರು ಯಾವ ಯಾವ ಸ್ತರದಿಂದ, ಯಾವ ಯಾವ ನಿಟ್ಟಿನಿಂದ, ಯಾವ ಯಾವ ವರ್ಗ ವರ್ಣಗಳಿಂದ ಬಂದವರೆಂಬುದು ಮನವಟ್ಟಾಗುತ್ತದೆ. ಅತ್ಯಂತ ಶ್ರೇಷ್ಠಜಾತಿ ಎಂದು ಹೇಳಿಕೊಳ್ಳುತ್ತಿದ್ದ ಬ್ರಾಹ್ಮಣರಿಂದ ಹಿಡಿದು ಅತ್ಯಂತ ಕೀಳುಜಾತಿಯವರೆಂದು ಬಗೆಯಲಾಗುತ್ತಿದ್ದ ಅಂತ್ಯಜನವರೆಗೂ ಈ ಕ್ರಾಂತಿಯಲ್ಲಿ ಭಾಗವಹಿಸಿದವರ ಹೆಸರುಗಳು ದೊರಕುತ್ತವೆ. ಮತ್ತು ಅವರ ಪೂರ್ವಾಶ್ರಮವೂ ತಿಳಿದುಬರುತ್ತದೆ. ಎಲ್ಲೋ ಕೆಲವರನ್ನು ಬಿಟ್ಟರೆ ಉಳಿದವರೆಲ್ಲ ತಮ್ಮ ಮುನ್ನಿನ ಕಾಯಕವಿಟ್ಟುಕೊಂಡೇ ಶರಣಧರ್ಮದಲ್ಲಿ ಸೇರಿದರು. ಇದರಿಂದ ಮಹೋಪಕಾರವಾಯಿತು. ಆ ವೃತ್ತಿಗಳೆಲ್ಲ—ಅವು ಏನೇ ಇರಲಿ, ಎಂಥವೇ ಇರಲಿ—ಪವಿತ್ರವೆನಿಸಿದುವು. ಕೀಳೆಂದು ಬಗೆಯಲಾಗುತ್ತಿದ್ದ ವೃತ್ತಿಗಳೆಲ್ಲ ಕಾಯಕದ ಮಟ್ಟಕ್ಕೇರಿ ಲಿಂಗಾಂಗಸಾಮರಸ್ಯ ಪಡೆಯಲು ಸಾಧನವೆನಿಸಿದುವು. ಮತ್ತು ಸಮಾಜದ ಆರ್ಥಿಕ ನೆಲೆಗಟ್ಟನ್ನು ಭದ್ರಗೊಳಿಸಿದುವು.

ಇನ್ನೊಂದು ಬಹುಮುಖ್ಯ ಸಂಗತಿಯೆಂದರೆ ಶರಣಧರ್ಮಕ್ಕೆ ಬರುವಾಗ ಜನರು ತಮ್ಮ ಹೆಸರುಗಳನ್ನು ಬದಲಾಯಿಸಿಕೊಳ್ಳದಿರುವುದು. ಇದಕ್ಕೆ ಮೋಳಿಗೆಯ ಮಾರಯ್ಯನೊಬ್ಬ ಅಪವಾದವಾಗಿದ್ದಾನೆ. ಅವರೆಲ್ಲ ಮುನ್ನಿನ ತಮ್ಮ ಹೆಸರುಗಳನ್ನು ಹಾಗೆಯೇ ಉಳಿಸಿಕೊಂಡುದು, ಅವರ ಕ್ರಾಂತಿ ಸರ್ವರನ್ನೂ ಮುಟ್ಟಿ, ಸರ್ವಸಮತಾಭಾವದ ಒಂದು ಸುಂದರ ಸುಭದ್ರಸಮಾಜ ರಚನೆಗೊಂಡುದರ ಅಭ್ಯಾಸಕ್ಕೆ ಅನುಕೂಲವಾಗಿ ಪರಿಣಮಿಸಿದೆ.

ಹಾಗೆ ನೋಡಿದರೆ, ಈ ಕ್ರಾಂತಿಯಲ್ಲಿ ದೊಡ್ಡ ಜಾತಿಯವರೆಂದು ಹೇಳಿಕೊಳ್ಳುತ್ತಿದ್ದವರ ಸಂಖ್ಯೆ ತೀರ ಕಡಮೆಯಿದೆ; ಬೆರಳ ಮೇಲೆ ಎಣಿಸುವಷ್ಟಿದೆ. ಶೂನ್ಯ ಸಿಂಹಾಸನಕ್ಕೆ ಅಧಿಪತಿಯಾದ ಅಲ್ಲಮಪ್ರಭು ನಟ್ಟುವರ ಜಾತಿಗೆ ಸೇರಿದವನು. ಶರಣರಲ್ಲಿ ಅತ್ಯಂತ ಶ್ರೇಷ್ಠರೆನಿಸಿಕೊಳ್ಳುವವರಾದ ಚೆನ್ನಯ್ಯ ಮತ್ತು ಕಕ್ಕಯ್ಯ ಮಾದಿಗ ಮತ್ತು ಡೋಹರ ಜಾತಿಗೆ ಸೇರಿದವರು. ಶರಣಧರ್ಮಕ್ಕೆ ಸೇರಿ ಇವರೆಲ್ಲ ತಮ್ಮ ಪೂರ್ವದ ಜಾತಿಗಳನ್ನು ಅಳಿಸಿಕೊಂಡರು. ಸ್ವಾರಸ್ಯದ ಸಂಗತಿಯೆಂದರೆ ಇವರ ಹೆಸರಿಗೆ ಅಂಟಿಕೊಂಡ ಮಡಿವಾಳ, ಡೋಹರ, ಮಾದರ, ಹಡಪದ, ಬಹುರೂಪಿ, ಮೇದಾರ. ಅನಾಮಿಕ, ತಳವಾರ, ಹೆಂಡದ ಮುಂತಾದುವು ಅವರ ಕಾಯಕಗಳನ್ನು ಸಾರುವುವಲ್ಲದೆ ಅವರ ಘನತೆಗೆ ಕಳಶವಿಟ್ಟಿವೆ. ಡೋಹರ ಕಕ್ಕಯ್ಯ. ಮಾದಾರಚೆನ್ನಯ್ಯ. ಬಹುರೂಪಿ ಚೌಡಯ್ಯ. ಹಡಪದ ಅಪ್ಪಣ್ಣ ಎಂಬುದರಿಂದ ನಮಗೆ ಅವರ ಪೂರ್ವದ ಜಾತಿಯ ವಾಸನೆ ಬಡಿಯುವುದಿಲ್ಲ ; ಬದಲಾಗಿ ಅವರಲ್ಲಿ ಪೂಜ್ಯಭಾವನೆ ಉಂಟಾಗುತ್ತದೆ. ಇದು ಶರಣರ ಕ್ರಾಂತಿಯು ನಮಗಿತ್ತ ಮಧುರಫಲ.

ಶಿವಶರಣರ ಹೆಸರುಗಳನ್ನು ನೋಡಿದರೆ, ಅಂದಿನ ಇಡಿಯ ಭಾರತೀಯ ಸಮಾಜ ಈ ಕ್ರಾಂತಿಯಲ್ಲಿ ಭಾಗವಹಿಸಿತ್ತೆಂದು ತಿಳಿದುಬರುವುದು. ನನ್ನಯ್ಯ, ಮರುಳು ಶಂಕರದೇವ, ಮಹಾದೇವ ಭೂಪಾಲ, ಬೊಂತಾದೇವಿ, ಮಲ್ಲಿಕಾರ್ಜುನ ಪಂಡಿತಾರಾಧ್ಯ, ಶ್ರೀಪತಿಪಂಡಿತ ಮುಂತಾದವರನ್ನು ನೆನೆದರೆ ಈ ಕ್ರಾಂತಿಯಲ್ಲಿ ಭಾರತದ ಬೇರೆ ಬೇರೆ ಭಾಗಗಳವರೂ ಭಾಗವಹಿಸಿದ್ದು ಕಂಡುಬರುತ್ತದೆ. ಒಂದು ದೃಷ್ಟಿಯಿಂದ ಶರಣರ ಹೆಸರುಗಳ ಅಧ್ಯಯನ ಅಂದಿನ ಭಾರತೀಯ ಸಮಾಜದ ಅಧ್ಯಯನವೇ ಆಗುವುದು. ಈ ನಿಟ್ಟಿನ ಅಧ್ಯಯನ, ಅಭ್ಯಾಸ, ಸಂಶೋಧನೆ ಇಂದು ನಡೆಯಬೇಕಾದುದು ಅವಶ್ಯವಿದೆ.

೨

ಸಾವಿರ ಸಂಖ್ಯೆಯ ಶರಣರ ಹೆಸರುಗಳಲ್ಲಿ ಕೆಲವು ಹೆಸರು ಹೆಚ್ಚು ಬಳಕೆಯಲ್ಲಿದ್ದಂತೆ ಕಂಡುಬರುತ್ತವೆ ; ಹೆಚ್ಚು ಜನ ಈ ಹೆಸರುಳ್ಳವರಾಗಿದ್ದಾರೆ. ಮಾರಯ್ಯ, ಬೊಮ್ಮಯ್ಯ, ಚಿಕ್ಕಯ್ಯ–ಈ ಹೆಸರುಗಳು ಅತ್ಯಂತ ಜನಪ್ರಿಯ ಹೆಸರುಗಳಾಗಿರಬಹುದು. ಈ ಹೆಸರಿನವರ ಸಾಮಾಜಿಕ ಅಧ್ಯಯನ ಹಲವು ಹತ್ತು ಹೊಸ ಸಂಗತಿಗಳನ್ನು ಬಯಲಿಗಿಡಬಹುದು. ಬೊಮ್ಮಯ್ಯ ಎಂಬುದು ಹೆಚ್ಚು ಜೈನರಲ್ಲಿ ಪ್ರಚಾರವಿರುವ ಹೆಸರು ; ಜೈನರು ಶರಣಧರ್ಮಕ್ಕೆ ಪರಿವರ್ತನೆಗೊಂಡ ಇತಿಹಾಸವನ್ನು ಈ ಹೆಸರುಗಳು ಬಿಚ್ಚಿಡಬಹುದು. ಢಕ್ಕೆಯ ಬೊಮ್ಮಯ್ಯ, ಕನ್ನದ ಬ್ರಹ್ಮಯ್ಯ–ಮುಂತಾದವರ ಹೆಸರುಗಳು ಅನ್ಯಜಾತಿಯವರೂ (ಜೈನರನ್ನುಳಿದು), ಅದರಲ್ಲಿ ಕೀಳೆಂದು ಭಾವಿಸಲಾಗುತ್ತಿದ್ದ ಜಾತಿಯವರೂ ಈ ಹೆಸರನ್ನು ಇಟ್ಟುಕೊಳ್ಳುತ್ತಿದ್ದರೆಂದು ತಿಳಿಸುತ್ತವೆ. ಹತ್ತಿಪ್ಪತ್ತು ಜನ ಬೊಮ್ಮಯ್ಯರುಗಳಲ್ಲಿ ಸಕಲ ಕಾಯಕದವರೂ ದೊರಕುತ್ತಾರೆ.

ಬೊಮ್ಮಯ್ಯನಂತೆ 'ಮಾರಯ್ಯ' ಎಂಬ ಹೆಸರೂ ಆ ಕಾಲಕ್ಕೆ ಬಹಳ ಪ್ರಚಾರದಲ್ಲಿತ್ತು. ೨೫ ಜನ ಶಿವಶರಣರು ಈ ಹೆಸರಿನವರಿದ್ದಾರೆ. ಇವರಲ್ಲಿ ೧೧ ಜನ ವಚನಕಾರರಿದ್ದಾರೆ. ವಿವಿಧ ವೃತ್ತಿಯವರಾದ ಇವರ ಹೆಸರು ಆ ಕಾಲಕ್ಕೆ ಬಹಳ ಜನಪ್ರಿಯವಾಗಿರಬೇಕು ; ಇಲ್ಲದಿದ್ದರೆ ಇಷ್ಟೊಂದು ಜನ ಆ ಹೆಸರನ್ನು ಏಕೆ ಇಟ್ಟುಕೊಳ್ಳುತ್ತಿದ್ದರು ? ಶರಣರಲ್ಲಿ ಇವರ ಹೆಸರಿನವರೇ ಹೆಚ್ಚು ಜನರಿದ್ದಾರೆ. ಇವರ ಸಮಗ್ರ ಅಧ್ಯಯನ ಒಂದು ಮಹತ್ವದ ಸಾಮಾಜಿಕ ಅಧ್ಯಯನವಾಗುವುದರಲ್ಲಿ ಸಂದೇಹವಿಲ್ಲ. ಆದರೆ ನನ್ನ ಈ ಬರವಣಿಗೆ ಆ ನಿಟ್ಟಿಗೆ ಒಂದು ತೋರುಬೆರಳು, ಅಷ್ಟೇ.

'ಮಾರಯ್ಯ' ಎಂಬ ಹೆಸರು ಹೇಗೆ ಬಂದಿವೆ? ಯಾವ ದೇವತೆಯ ಹೆಸರನ್ನು ಇದು ಸೂಚಿಸುತ್ತದೆ? ನಮ್ಮ ಪೂರ್ವಿಕರು (ಅಂತೆಯೇ ನಾವು) ಬಹುಮಟ್ಟಿಗೆ ತಮ್ಮ ಮಕ್ಕಳಿಗೆ ಹೆಸರಿಡುವಾಗ ತಮಗೆ ಇಷ್ಟವಾದ ದೇವತೆಗಳ ಹೆಸರುಗಳನ್ನೇ ಇಡುತ್ತ ಬಂದಿದ್ದಾರೆ. ವೃತ್ತಿಯಿಂದ, ಗುಣದಿಂದ, ಅನ್ವರ್ಥದಿಂದ ಬಂದ ಹೆಸರುಗಳೂ ಉಂಟು : ಆದರೆ ನಮ್ಮ ಹೆಸರುಗಳಲ್ಲಿ ಹೆಚ್ಚಿನವು ದೇವತೆಗಳ ಹೆಸರುಗಳೇ ಆಗಿವೆ. ಕೆಳವರ್ಗದ ಹೆಸರುಗಳೆಲ್ಲ ಆಯಾ ವರ್ಗದ–ಅವರು ನಂಬಿ ಪೂಜಿಸುವ ದೇವತೆಗಳ ಹೆಸರುಗಳೇ ಆಗಿರುತ್ತವೆ ; ಇವರಲ್ಲಿ ಗುಣದಿಂದ ಅನ್ವರ್ಥದಿಂದ ಬಂದ ಹೆಸರುಗಳು ಕಡಿಮೆ.

ಮಾರಯ್ಯ, ಮಾರಣ್ಣ, ಮಾರಗೌಡ, ಮಾರಭಕ್ತ, ಮಾರರೂಪ, ಮಾರ, ಮಾರೇಶ್ವರ, ಮಾರಿತಂದೆ–ಹೀಗೆ ಈ ಹೆಸರು ಬಳಕೆಯಲ್ಲಿತ್ತು. ೨೫ ಜನ ಶರಣರಲ್ಲಿ ಒಬ್ಬಳು ಶರಣೆಯಿದ್ದಾಳೆ ; ಅವಳ ಹೆಸರು ಹುಣಜಿಯ ಮಾರವ್ವೆ.

ಮಾರಯ್ಯ ಎಂಬುದು ಮನ್ಮಥನಿಂದ ಬಂದುದೋ? ಅಥವಾ ಮಾರಿದೇವತೆಯಿಂದ ಬಂದುದೋ? ಈಗಿನ ಹಿಂದೂ ಸಮಾಜದಲ್ಲಿ ಅನೇಕರು ಮಾರಣ್ಣ, ಮಾರೆಪ್ಪ, ಮಾರೆಮ್ಮ ಎಂದು ಹೆಸರಿಡುತ್ತಾರೆ. ಆದರೆ ಇವರೆಲ್ಲ ಮಾರಿದೇವತೆಯನ್ನು ಪೂಜಿಸುವವರೇ ಆಗಿದ್ದಾರೆ. ಮಾರಿದೇವತೆಯನ್ನು ಪೂಜಿಸದ ಮೇಲುವರ್ಗದವರಲ್ಲಿ ಈ ಹೆಸರು ಬಳಕೆಯಲ್ಲಿಲ್ಲ, ಇಲ್ಲವೇ ಇಲ್ಲ. ಈಗಿನ ಸಮಾಜದ ಅಧ್ಯಯನ ನಡೆಸಿದರೆ ಈ ಹೆಸರಿನವರೆಲ್ಲ ಮಾರಿದೇವತೆಯ ಭಕ್ತರೇ, ಮತ್ತು ಆ ದೇವತೆಯ ಹೆಸರೇ ನಮಗೆ ನಮ್ಮ ಮಕ್ಕಳಿಗೆ ಇಟ್ಟಿರುವುದು ಖಚಿತವಾಗುತ್ತದೆ.

ಆದರೆ ಶರಣರ ಆ ಹೆಸರು ಮಾರಿದೇವತೆಯಿಂದ ಬಂದುದಲ್ಲವೆಂದು ಹೇಳಲು ಆಧಾರಗಳಿವೆ. ಶರಣರ ಅಂಕಿತಗಳಲ್ಲಿ ಮಾರೇಶ್ವರಾ (ಮಾರೇಶ್ವರೊಡಯ), ಮದನವೈರಿಮಾರೇಶ್ವರಾ (ಕನ್ನದ ಮಾರಿತಂದೆ), ಮನಸಿಜವೈರಿ ಮಾರೇಶ್ವರಾ, ಆತುರ ವೈರಿಮಾರೇಶ್ವರಾ (ನಗೆಯ ಮಾರಿತಂದೆ) ಮುಂತಾದ ಹೆಸರುಗಳು ಮನ್ಮಥನಿಗೆ ಸಂಬಂಧಪಟ್ಟುವೆಂದು ಖಚಿತಗೊಳಿಸುತ್ತವೆ. ಮಾರ + ಈಶ್ವರಾ = ಮಾರೇಶ್ವರಾ ಎಂದಾಗುತ್ತದೆ. ಇಲ್ಲಿಯ ಪದ ಖಂಡಿತವಾಗಿ ಕಾಮನ ಹೆಸರೇ ಅಲ್ಲದೆ ಮದನವೈರಿ, ಮನಸಿಜವೈರಿ ಈ ಹೆಸರುಗಳು ಇವನ ವೈರಿಯಾದ ಶಿವನಿಗೆ ಸಂಬಂಧಿಸಿದುವು.

ಆದರೆ ಇಲ್ಲಿ ಇನ್ನೊಂದು ಸಂಶಯಕ್ಕೆ ದಾರಿಯಿದೆ. ಈ ಮಾರಯ್ಯಗಳಿಗೆ 'ಮಾರಿತಂದೆ' ಎಂದೂ ಕರೆಯಲಾಗಿದೆ, ಬಸವಣ್ಣನವರು ತಮ್ಮ ಒಂದು ವಚನದಲ್ಲಿ 'ಮಾರಿತಂದೆಗಳಂತೆ ಎನಗೇಕಹುದಯ್ಯಾ ?'[1] ಎಂದಿದ್ದಾರೆ. ಈ ಮಾತು ಮೋಳಿಗೆ ಮಾರಯ್ಯನನ್ನು ಕುರಿತು ಹೇಳಿದ್ದು. ಬಸವಪುರಾಣದಲ್ಲಿ[2] ಮೋಳಿಗೆ ಮಾರಯ್ಯನಿಗೆ 'ಮಾರಿದೇವ' ಎಂದಿದೆ. ಕೆಲವು ವಚನಗಳ ಕಟ್ಟುಗಳಲ್ಲಿ ಕಂಬದ ಮಾರಿ ತಂದೆ, ಕನ್ನದ ಮಾರಿತಂದೆ, ಮನಸಂದ ಮಾರಿತಂದೆ, ಆಜುವಿನ ಮಾರಿತಂದೆ, ನಗೆಯ ಮಾರಿತಂದೆ ಎಂದು ದೊರಕುತ್ತದೆ. ಈ ಹೆಸರು ಸಂದೇಹಕ್ಕೆ ಎಡೆಗೊಡುತ್ತದೆ. ಮಾರ ಎಂಬುದು ಮೂಲವಾದರೆ 'ಮಾರತಂದೆ' ಎಂದೇ ಆಗಬೇಕು–ಮಾರಗೌಡ, ಮಾರಭಕ್ತ ಆದಂತೆ ; ಅದು ಮಾರಿತಂದೆ ಆಗುವುದು ಸಾಧ್ಯವಿಲ್ಲ. ಹಾಗಾದರೆ ಮಾರಿತಂದೆ ಎಂಬುದು

1. ಶಿ. ಶಿ. ಬಸವನಾಳ (ಸಂ) ಬಸವಣ್ಣನವರ ಷಟ್‌ಸ್ಥಲದ ವಚನಗಳು ಪುಟ ೮೫ ವಚನ ೩೨೪

2. ಡಾ॥ ಆರ್. ಸಿ. ಹಿರೇಮಠ (ಸಂ) ಬಸವಪುರಾಣ, ಸಂಧಿ ೨೯ ; ಪದ್ಯ ೨೭

ಹೇಗೆ ಬಂತು ? ಇದನ್ನು ಬಳಸಿದವರು ಈ ಹೆಸರು ಮಾರಿದೇವತೆಯಿಂದ ಬಂದುದಿರಬೇಕೆಂದು ತಿಳಿದಿದ್ದರೋ? ಬಸವಣ್ಣನವರು ತಮ್ಮ ಇನ್ನೊಂದು ವಚನದಲ್ಲಿ ತಂಗಟೂರು ಮಾರಯ್ಯ ಎಂದು ಬಳಸುತ್ತಾರೆ. ಬಸವ ಪುರಾಣದಲ್ಲಿ ಒಂದುಕಡೆ ಮೋಳಿಗೆ ಮಾರಯ್ಯನಿಗೆ ಮಾರಿತಂದೆ ಎಂದ ಕವಿ ಹಲವು ಕಡೆಗಳಲ್ಲಿ ಮಾರವಿಭು, ಮಾರದೇವ, ಮಾರಯ್ಯ ಎಂದಿದ್ದಾನೆ. ಭೈರವೇಶ್ವರ ಕಥಾಮಣಿಸೂತ್ರರತ್ನಾಕರದ ಕವಿ ನಗೆಮಾರಿತಂದೆಗೆ ನಗೆಯ ಮಾರಯ್ಯ ಎನ್ನುತ್ತಾನೆ. ಹಾಗಾದರೆ ಮಾರಿತಂದೆಯ ಪ್ರಯೋಗ ಯಾವ ಅರ್ಥದಲ್ಲಿ ಬಂದಿದೆ ? ಮಾರಿತಂದೆ ಎನ್ನುವಲ್ಲಿ 'ಮಾರಿ' ಎಂಬ ಪದ ಖಂಡಿತವಾಗಿ ಮಾರಿದೇವತೆಯನ್ನೇ ಸೂಚಿಸುತ್ತದೆ. ತಂದೆ ಎಂಬ ಪದ ಪ್ರಯೋಗವಾದಾಗ ಮಾತ್ರ ಮಾರಿ ಎಂಬ ಪದ ಬರುತ್ತದೆ. ಉಳಿದೆಡೆಗಳಲ್ಲಿ ಮಾರ ಎಂಬ ಪದ ಪ್ರಯೋಗವೇ ಇದೆ. ಕ್ವಚಿತ್ತಾಗಿ ಮಾರಿದೇವ ಎಂಬ ಪ್ರಯೋಗವೂ ಇದೆ.

ಮಾರಿ ಎಂಬ ಪದಕ್ಕಿಂತ ಹೆಚ್ಚಾಗಿ ಮಾರ ಎಂಬ ಪದವೇ ಬಳಕೆಯಲ್ಲಿದೆ. ಆದುದರಿಂದ ಈ ಹೆಸರು ಕಾಮನ ಹೆಸರಿನಿಂದ ಬಂದುದು ಎನ್ನದೆ ಗತ್ಯಂತರವಿಲ್ಲ. ಅಲ್ಲಲ್ಲಿ ಪ್ರಯೋಗವಾಗಿರುವ ಈ ಮಾರಿತಂದೆ, ಮಾರಿದೇವ–ಇವುಗಳಿಗೆ ಏನರ್ಥ ? ಇವುಗಳ ಸಮರ್ಥನೆ ಹೇಗೆ? ಎಂಬ ಪ್ರಶ್ನೆಗಳು ಏಳುತ್ತವೆ. ಮಾರತಂದೆ, ಮಾರದೇವ ಎಂಬುದಕ್ಕಿಂತ ಉಚ್ಚಾರಕ್ಕೆ ಮಾರಿತಂದೆ, ಮಾರಿದೇವ ಎಂಬ ಹೆಸರುಗಳು ಸುಲಭ; ಜನತೆ ಹೀಗೆ ಉಚ್ಚಾರದಲ್ಲಿ ಸುಲಭದಾರಿ ಹುಡುಕಿಕೊಳ್ಳುವುದು ಅಪರೂಪವೇನಲ್ಲ. ನಾಲಗೆ ಇದ್ದುದು ನಾಲಿಗೆ, ಕಡಮೆ ಇದ್ದುದು ಕಡಿಮೆ ಆದುದು ಸರ್ವರಿಗೂ ಗೊತ್ತಿದ್ದುದೇ. ಬರಬರುತ್ತ ಜನರ ಬಳಕೆಯನ್ನೇ ವ್ಯಾಕರಣ ಒಪ್ಪಿಕೊಳ್ಳುತ್ತದೆ.

ಕಿಟೆಲ್‌ರವರು ತಮ್ಮ ಕೋಶದಲ್ಲಿ ಈ ರೀತಿ ಕೊಟ್ಟಿದ್ದಾರೆ :

**ಮಾರ** = ಮಾರೆ...see ನಿಡು—,ಮೋಳಿಗೆ,...ಮಾರಪ್ರಭು...ಮಾರಯ್ಯ—ಅಯ್ಯ...see ಅಕ್ಕಿ, ಎಳೆಯದಂಗುಳಿಯ, ಮೋಳಿಗೆಯ...ಮಾರವಿಭು,

ಇದು ಸರಿ ಆದರೆ **ಮಾರಿ** ಎಂಬ ಕಡೆ ಕಿಟೆಲ್ಲರು ಹೀಗೆ ಕೊಟ್ಟಿದ್ದಾರೆ.

**ಮಾರಿ**...........ಮಾರಿದೇವರು. (B.P 30, 31 ; 36, 58 ;) see ಮೋಳಿಗೆ......

ಮಾರಯ್ಯ, ಮಾರವಿಭು ಪ್ರಯೋಗಗಳು ಸರಿ ಆದರೆ 'ಮಾರಿ'ಯಿಂದ ಮಾರಿದೇವ, ಮೋಳಿಗೆಯ ಮಾರಿದೇವ, ಆದುದೆಂದು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಈ ಹೆಸರಿನ ಹಿಂದಿದ್ದ ಇತಿಹಾಸ, ಪರಂಪರೆ ಅರಿಯದೆ ಕಿಟೆಲ್ಲರು ಆ ಪ್ರಯೋಗಗಳನ್ನು ಕೊಟ್ಟಿದ್ದಾರೆ ಎಂದು ಹೇಳಬಹುದು. ಉಚ್ಚಾರದ ಸೌಲಭ್ಯಕ್ಕಾಗಿಯೇ ಜನ ಮಾರದೇವ, ಮಾರತಂದೆ ಆಗುವುದನ್ನು ಮಾರಿದೇವ, ಮಾರಿತಂದೆ ಎಂದು ಮಾಡಿಕೊಂಡಿದ್ದಾರೆ ಎಂಬುದೇ ಸಮಂಜಸ.

ಬಸವಣ್ಣನವರು ತಮ್ಮ ಇನ್ನೊಂದು ವಚನದಲ್ಲಿ 'ಮಾರಯ್ಯ' ಎಂದು ಬಳಸುತ್ತಾರೆ.

'...ಕುಮಾರಿ ಕೊಡಗೂಸೆಂಬವರ ಹಿಡಿದು ತಿಂಬ, ತಿರಿದುಂಬ ಮಾರಯ್ಯ, ಬೀರಯ್ಯ,
ಕೇಚರಗಾಮಿ, ಅಂತರ ಬೆಂತರ ಕಾಳಯ್ಯ ಮಾಳಯ್ಯ ಕೇತಯ್ಯಗಳೆಂಬ......'[3]

ಇಲ್ಲಿಯ ಮಾರಯ್ಯ ಖಂಡಿತವಾಗಿ ಮಾರಿದೇವತೆಯ ಹೆಸರಿನವನೇ. ಈ ಹೆಸರಿನ ಜೊತೆಗೆ ಬರುವ ಹೆಸರುಗಳೆಲ್ಲ ಕ್ಷುಲ್ಲಕ ದೇವತೆಗಳವೇ. ಆದರೆ ತಂಗಟೂರು ಮಾರಯ್ಯ ಮತ್ತು ಮಾರಿತಂದೆ (ಮೋಳಿಗೆ) ಈ ಹೆಸರುಗಳು ಮಾರಿದೇವತೆಯಿಂದ ಬಂದುವಲ್ಲ ; ಅವು ಮನ್ಮಥನ ಹೆಸರಿನಿಂದಲೇ ಬಂದುವಾಗಿವೆ.

ಈ ಹೆಸರಿನ ಮೂಲ ಮಾರ ; ಅದು ಕಾಮನ ಹೆಸರೇ. ಉಚ್ಚಾರ ಸೌಲಭ್ಯಕ್ಕಾಗಿ ಮಾರಿತಂದೆಯಾಗಿದೆ. ಅಱುವಿನ ಮಾರಿತಂದೆ ತನ್ನ ವಚನಗಳಲ್ಲಿ ತನ್ನ ಹೆಸರನ್ನು 'ಮಾರ' ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ :

'...ಅಱುವಿಂಗೆ ಶರಣು ಮಱವಿಂಗೆ ಮಥನ ಮಾಡಿದಲ್ಲದೆ ಇರೆ, ಇದು ನೀವು ಕೊಟ್ಟ ಅಱುವಿನ ಮಾರನ ಇರವು'[4]

'...ಸದಾಶಿವಮೂರ್ತಿಲಿಂಗ ನೊಂದಡೂ ನೋಯಲಿ ಅಱುವಿನ ಮಾರನ ಲಿಂಗ ಹಿಂಗದ ಭಾವ'[5]

'...ನಿಮ್ಮಯ ನಿರ್ಮಲ ಎನ್ನಯ ಮಲದೇಹವ ತೊಳೆಯಬೇಕೆಂಬುದಕ್ಕೆ
ಅಱುವಿನ ಮಾರನ ಬಿನ್ನಹ, ಸದಾಶಿವಮೂರ್ತಿಲಿಂಗಕ್ಕೆ ತೆಱಹಿಲ್ಲದ ಭಾವ'[6]

ಆಯ್ದಕ್ಕಿ ಮಾರಯ್ಯನ ಹೆಂಡತಿ ಲಕ್ಕಮ್ಮ ತನ್ನ ವಚನಗಳಲ್ಲಿ ಗಂಡನ ಹೆಸರನ್ನು ಬಳಸಿದಾಗ 'ಮಾರಯ್ಯ' ಎಂದೇ ಅನ್ನುತ್ತಾಳೆ.

---

3. ಶಿ.ಶಿ. ಬಸವಣ್ಣನವರ ಷಟ್‌ಸ್ಥಲದ ವಚನಗಳು ಪುಟ ೧೪೬, ವಚನ ೫೫೭
4. ಡಾ॥ ಆರ್.ಸಿ. ಹಿರೇಮಠ (ಸಂ) : ಸಕಲ ಪುರಾತನರ ವಚನಗಳು ಸಂಪುಟ ೧ ಪುಟ-೧೭೩ ವಚನ ೬೬೬
5. ಅದೇ... ,, ೧೭೪ ,, ೬೬೮
6. ಅದೇ... ,; ೧೭೪ ,, ೬೬೯

'...ಕೈದುವ ಕೊಡುವರಲ್ಲದೆ ಕಲಿತನವ ಕೊಡುವರುಂಟೆ ಮಾರಯ್ಯ'?[7]

'ಸಸಿಗೆ ನೀರೆಜಿದಡೆ ಎಳಕುವುದಲ್ಲದೆ ನಷ್ಟಮೂಲಕ್ಕೆ ಹೊತ್ತು ನೀರ ಹೊಯಿದಡೆ ಎಳಕುವುದೇ ಮಾರಯ್ಯ ?'[8]

'...ಬೇಙೊಂದು ತಾವುಂಟೆ ಮಾರಯ್ಯ?'[9]

ಲಕ್ಕಮ್ಮನ ಅಂಕಿತ 'ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ' ಎಂದಿದೆ.

ಶೂನ್ಯಸಂಪಾದನೆಕಾರ ಮಾರಯ್ಯ ಮತ್ತು ಮಾರಿತಂದೆ ಎರಡೂ ಹೆಸರುಗಳನ್ನು ಬಳಸುತ್ತಾನೆ.

ಮಾರನ ಇನ್ನೊಂದು ಹೆಸರಾದ 'ಕಾಮ' ಎಂಬ ಹೆಸರಿನ ಕೆಲ ಶರಣರು ದೊರಕುತ್ತಾರೆ:

೧. ಕಾಮಯ್ಯ (ಸತ್ಯ ಹೇಳುವ ವ್ರತ)
೨. ಎಲೆಗಾರ ಕಾಮಣ್ಣ — ವಚನಕಾರ — ಆತುರೇಶ್ವರ ಲಿಂಗ (ಅಂಕಿತ)
೩. ಜಗಳಗಂಟ ಕಾಮಣ್ಣ — " — ಕಾಮೇಶ್ವರ "
೪. ತಳವಾರ ಕಾಮಿದೇವ — " — ಕಾಮಹರಪ್ರಿಯ "
೫. ಕಾಲಕಣ್ಣಿಯ ಕಾಮಮ್ಮ — " — ನಿಜಲಿಂಗ "
೬. ಕಾಮಲದೇವ — (ಶಿವನಿಗೆ ಕನ್ನಡಿ ತೋರುವ ವ್ರತ)
೭. ಕಾಮಲಾಯಿ — (ವಾರನಾರಿ)

ಈ ಹೆಸರುಗಳನ್ನು ನೋಡುವುದರಿಂದ ಆ ಕಾಲದಲ್ಲಿ ಕಾಮನಿಗೆ ಸಂಬಂಧಿಸಿದಂತೆ ಹೆಸರುಗಳನ್ನಿಟ್ಟುಕೊಳ್ಳುವ ರೂಢಿ ಇತ್ತೆಂದು ಸ್ಪಷ್ಟವಾಗುತ್ತದೆ[10]. 'ಆತುರೇಶ್ವರ ಲಿಂಗ', 'ಕಾಮೇಶ್ವರ', 'ಕಾಮಹರ ಪ್ರಿಯ' ಈ ಅಂಕಿತಗಳೂ ಕಾಮನಿಗೆ ಸಂಬಂಧಿಸಿದಂತೆ ಆಗಿವೆ.

ಕಾಮಣ್ಣ–ಕಾಮಯ್ಯ ಇದರಂತೆ ಮದನ, ಮದನಮೋಹನ ಎಂಬ ಹೆಸರುಗಳು ಈಗಲೂ ಬಳಕೆಯಲ್ಲಿವೆ: ಆದರೆ ಮಾರಯ್ಯ ಎಂಬ ಹೆಸರು ಬಳಕೆಯಲ್ಲಿದ್ದುದು ಕಂಡುಬರುವುದಿಲ್ಲ. ಕಾಮಣ್ಣ ಎಂಬ ಹೆಸರಿಗಿಂತಲೂ ಆ ಕಾಲದಲ್ಲಿ ಮಾರಯ್ಯ ಎಂಬ ಹೆಸರು ಹೆಚ್ಚು ಪ್ರಿಯವಾಗಿ ಬಳಕೆಯಲ್ಲಿರಲು ಏನು ಕಾರಣವೋ ತಿಳಿಯದು. ಕಾಮಣ್ಣ ಎಂಬುದು ಎಷ್ಟು ಸರ್ವಸಾಮಾನ್ಯವಾಗಿ ಕಾಣುವುದೋ ಅಷ್ಟೇ ವಿಶಿಷ್ಟವಾದುದಾಗಿದೆ, ಮಾರಯ್ಯ ಎಂಬ ಹೆಸರು. ಕಡಮೆ ಕುಲದವರಲ್ಲಿಯೇ ಕಾಮಣ್ಣ ಎಂಬ ಹೆಸರು ಬಳಕೆಯಲ್ಲಿದ್ದುದು ಕಂಡುಬರುತ್ತದೆ. ಆದರೆ ಮದನ ಎಂಬ ಹೆಸರು ದೊಡ್ಡ ಕುಲದಲ್ಲಿ ಅದೂ ಒಂದು ವಿಶಿಷ್ಟ ಜಾತಿಯಲ್ಲಿಯೇ ಬಳಕೆಯಲ್ಲಿದೆ.

ಮಾರಯ್ಯ ಎಂಬ ಹೆಸರು ಕೂಡ ಕಡಮೆ ಜಾತಿಯವರಲ್ಲಿಯೇ ಬಳಕೆಯಲ್ಲಿದ್ದಂತೆ ಕಾಣುತ್ತದೆ. ಇವರಲ್ಲಿ ಈ ಹೆಸರು ಬಳಕೆಯಲ್ಲಿರಲು ಕಾರಣವೇನು? ಈ ಹೆಸರಿನ ಬಳಕೆಗೆ ಯಾವುದೋ ಹಿಂದೆ ಇದ್ದ ಸಂಪ್ರದಾಯವೊಂದು ಕಾರಣವಾಗಿರಬೇಕು. ತಮಿಳುನಾಡಿನಲ್ಲಿ ಈ ಹೆಸರಿನ ಕೆಲವು ಶೈವಭಕ್ತರು ಆಗಿಹೋಗಿದ್ದಾರೆ: ಇಳೆಯಾಂಡಗುಡಿಮಾರ, ನಡುಮಾರರಾಜ, ನಿಡುಗುಡಿಯ ಮಾರ, ನಿಡುಮಾರ, ಮಾರಭಕ್ತ, ಮಾರಭೂಪ. ಶೈವಭಕ್ತರಾದ ಇವರ ಹೆಸರನ್ನು ಕರ್ನಾಟಕದ ಶಿವೋಪಾಸಕರು ಇಟ್ಟುಕೊಂಡಂತೆ ಕಾಣುತ್ತದೆ. ಶೈವಭಕ್ತರಾದವರು ಕಾಮನ ಈ ಹೆಸರನ್ನು ಏಕೆ ಇಟ್ಟುಕೊಳ್ಳಬೇಕು? ಇದು ವಿವರಿಸಲು ಗಡುಚಾದ ವಿಷಯ. ಇದರ ಬಗ್ಗೆ ಹೆಚ್ಚು ಸಂಶೋಧನೆ ನಡೆಯಬೇಕು. ತಮಿಳಿನ ಶಿವಭಕ್ತ 'ಮಾರ'ರ ಮೂಲವನ್ನು ಕೆದಕಿದರೆ ಈ ನಿಟ್ಟಿನಲ್ಲೊಂದು ಸಂಶೋಧನೆಗೆ ಮಾರ್ಗ ದೊರಕೀತು.

೩

ಶರಣರ ತರುವಾಯ ಬಂದ ಜನಾಂಗ ಶರಣರ ಹೆಸರುಗಳನ್ನು ಇಟ್ಟುಕೊಳ್ಳುವ ರೂಢಿ ತಂದಿತು. ಆದರೆ ಕೇವಲ ಕೆಲವೇ ಜನರ ಹೆಸರುಗಳು ಬಳಕೆಯಲ್ಲಿ ಬಂದುವು. ಅತ್ಯಂತ ಪ್ರಸಿದ್ಧರಾದ ಬಸವ, ಅಲ್ಲಮ, ಚೆನ್ನಬಸವ, ಸಿದ್ಧರಾಮ, ಗಂಗಾಂಬೆ, ನೀಲಾಂಬೆ, ಅಕ್ಕಮಹಾದೇವಿ ಮುಂತಾದವರ ಹೆಸರುಗಳು ಹೆಚ್ಚು ಬಳಕೆಗೆ ಬಂದುವು. ಮರ್ಮವದ ಸಂಗತಿ ಎಂದರೆ ಶರಣಧರ್ಮದ ಈ ಜನ ಆಗಿನ ಕಾಲದ ಶರಣರ ಎಲ್ಲ ಹೆಸರುಗಳನ್ನು ಬಳಕೆಗೆ ತರಲಿಲ್ಲ. ಕಡಮೆ ಕುಲದವರಾಗಿ ಶರಣ ಧರ್ಮಕ್ಕೆ

---

7. ಡಾ॥ ಆರ್.ಸಿ. ಹಿರೇಮಠ (ಸಂ) : ಶಿವಶರಣೆಯರ ವಚನಗಳು ಪುಟ-೩೩೩ ವಚನ ೮೫
8. ಅದೇ... ,, ,, ,, ೮೬
9. ಅದೇ... ಪುಟ ೩೩೪ ವಚನ ೮೮
10. ೧೬ನೆಯ ಶತಮಾನದಲ್ಲಿ ಮಹಾರಾಷ್ಟ್ರದ ಬೀಡ ಜಿಲ್ಲೆಯ ಕಪಿಲಧಾರಾ ಕ್ಷೇತ್ರದಲ್ಲಿ 'ಮನ್ಮಥ ಸ್ವಾಮಿ' ಎಂಬ ಶರಣರಿದ್ದರು. ಈ ಶರಣರ ನೆನಪಿಗಾಗಿ ಆ ಭಾಗದ ಜನಗಳು ಇಂದಿಗೂ ಮನ್ಮಥ ಎಂದು ಹೆಸರಿಟ್ಟುಕೊಳ್ಳುತ್ತಾರೆ.

ಬಂದವರ ಹೆಸರುಗಳನ್ನು ಮುಂಬಂದ ಈ ಜನಾಂಗ ಇಟ್ಟುಕೊಳ್ಳಲೇ ಇಲ್ಲ. ಅತ್ಯಂತ ಪ್ರಸಿದ್ಧರಾದ ಮಡಿವಾಳ ಮಾಚಯ್ಯ, ಕಲ್ಯಾಣ ಕ್ರಾಂತಿಗೆ ಮೂಲಬೀಜವಾದ ಮಾದರ ಹರಳಯ್ಯ, ಶರಣಧರ್ಮಕ್ಕೆ ಕಳೆಕೊಟ್ಟ ಮೇದಾರ ಕೇತಯ್ಯ, ಡೋಹರ ಕಕ್ಕಯ್ಯ, ಏಲೇಶ್ವರದ ಕೇತಯ್ಯ, ಬಾಹೂರ ಬ್ರಹ್ಮಯ್ಯ, ಮಾದಾರ ಧೂಳಯ್ಯ, ಜನಪದ ಕಲೆಗಳನ್ನು ಉಳಿಸಿ ಬೆಳಿಸಿ, ಶರಣ ಧರ್ಮ ಪ್ರಚಾರಗೈದ ಢಕ್ಕೆಯ ಬೊಮ್ಮಯ್ಯ. ಘಟ್ಟಿವಾಳಯ್ಯ, ಕಲಕೇತ ಬೊಮ್ಮಯ್ಯ, ಬಹುರೂಪಿ ಚೌಡಯ್ಯ, ಕಂಕರಿ ಕಕ್ಕಯ್ಯ ಮೊದಲಾದವರ ಹೆಸರುಗಳು ಬಳಕೆಗೆ ಬರಲಿಲ್ಲ. ಇದಕ್ಕೆ ಮುಂಬಂದವರಿಗೆ ಅಂಟಿಕೊಂಡ ಜಾತಿವಾಸನೆಯೇ ಕಾರಣ ವಾಗಿರಬೇಕು. ಶರಣರ ತತ್ತ್ವಗಳ ಆಚರಣೆ ಮರೆತು ಅವರು ಮತ್ತೆ ಜಾತಿವಾದಿಗಳಾದರೆಂದು ತೋರುತ್ತದೆ. ಆದುದರಿಂದ ಇವರಲ್ಲಿ ಅನೇಕ ಜಾತಿ ಉಪಜಾತಿಗಳು ಸೃಷ್ಟಿಯಾದುವು. ಆದುದರಿಂದ ಇನ್ನಿತರ ಶರಣರ ಹೆಸರುಗಳು ಮರೆಯಾದಂತೆ ಮಾರಯ್ಯ ಎಂಬ ಹೆಸರೂ ಮರೆಯಾಯಿತು. ಕಲ್ಯಾಣದ ಶರಣರ ತರುವಾಯ ಈ ಹೆಸರು ಎಲ್ಲಿಯೂ ಬಳಕೆಯಾದಂತೆ ಕಂಡು ಬರುವುದಿಲ್ಲ.

ಶರಣರ ಹೆಸರುಗಳಾದ ಚಂದಯ್ಯ. ಅಪ್ಪಣ್ಣ, ಮಂಚಣ್ಣ (ಮಂಚಯ್ಯ), ಭೋಗಣ್ಣ, ಆದಯ್ಯ (ಆದಣ್ಣ), ಕಲ್ಲಯ್ಯ, ಬಾಚಯ್ಯ, ಲಕ್ಕಪ್ಪ, ಗುಂಡಯ್ಯ ಮುಂತಾದುವು ಈಗಲೂ ಬಳಕೆಯಲ್ಲಿವೆ. ಆದರೆ ಅವು ಹೆಚ್ಚಾಗಿ ಲಿಂಗಾಯತರಲ್ಲ ದವರಲ್ಲಿ ಬಳಕೆಯಲ್ಲಿವೆ. ಇವುಗಳಂತೆ ಮಾರಯ್ಯ ಎಂಬ ಹೆಸರು ಒಂದು ಕಡೆಯಾದರೂ ಬಳಕೆಯಲ್ಲಿದ್ದುದು ಕಂಡುಬರುವುದಿಲ್ಲ.

ಲಿಂಗಾಯತೇತರಲ್ಲಿ ಈಗ ಬಳಕೆಯಲ್ಲಿರುವ ಮಾರಪ್ಪ, ಮಾರೆಮ್ಮ ಹೆಸರುಗಳು ಈ ಮೊದಲೇ ನಾನು ಹೇಳಿದಂತೆ ಅವು 'ಮಾರ' ಎಂಬ ಹೆಸರಿನಿಂದ ಬಂದುವಲ್ಲ ; 'ಮಾರಿ' ಎಂಬ ಹೆಸರಿನಿಂದ ಬಂದುವು. ತಪ್ಪಿಯಾದರೂ ಲಿಂಗಾಯತರು ಈ ಹೆಸರನ್ನಿಡುವುದಿಲ್ಲ ; ಹಿಂದೆಯೂ ಇದು ಇವರಲ್ಲಿ ಬಳಕೆಯಲ್ಲಿರಲಿಲ್ಲ ; ಈಗಲೂ ಇಲ್ಲ.

೪

ಶರಣರಲ್ಲಿ ತಮ್ಮ ಪೂರ್ವಾಶ್ರಮದ ಹೆಸರುಗಳನ್ನು ಬದಲಿಮಾಡಿಕೊಂಡವರು ಕ್ವಚಿತ. ಗುಣಕರ್ಮಗಳಿಂದ ಕೆಲವರ ಹೆಸರು, ಪ್ರಸಂಗಕ್ಕೆ ತಕ್ಕಂತೆ ಇನ್ನು ಕೆಲವರ ಹೆಸರು ಬದಲಾಗಿವೆ. ಒಡಿಸ್ಸಾ ದೇಶದ ಮಾತಂಗನೆಂಬ ಬೇಡ ಚೋರವೃತ್ತಿಯನ್ನು ತೊರೆದು ಶರಣ ಜೀವಿಯಾದಾಗ ಆತನ ಗುರು ಸುಜ್ಞಾನಿದೇವ ಆತನನ್ನು 'ನನ್ನಯ್ಯ' ಎಂದು ಪ್ರೀತಿಯಿಂದ ಕರೆದ. ಅಲ್ಲಿಂದ ಮಾತಂಗ ಹೋಗಿ ನನ್ನಯ್ಯ ಎಂಬ ಹೆಸರೇ ಆತನಿಗೆ ಖಾಯಮಾಗಿ ಉಳಿಯಿತು. ಕಾಶ್ಮೀರ ದೇಶದ ಮಾಂಡವ್ಯಪುರದ ರಾಜ ಮಹಾದೇವನ ತಂಗಿ ನಿಜದೇವಿ. ಆಕೆ ಶರಣಧರ್ಮಕ್ಕೆ ಒಲಿದು ಕಲ್ಯಾಣಕ್ಕೆ ದಿಗಂಬರೆಯಾಗಿ ಹೊರಟಳು. ದಾರಿಯಲ್ಲಿ ಅವಳ ಭಕ್ತಿಗೆ ಮೆಚ್ಚಿ ಶಿವ ಅವಳಿಗೆ ಬೊಂತೆ (ಕೌದಿ)ಯೊಂದನ್ನು ಕೊಟ್ಟ ; ಅವಳು ಅದನ್ನು ಹೊದೆದುಕೊಂಡಳು. ಆದಕ್ಕಾಗಿ ಅವಳಿಗೆ ಬೊಂತಾದೇವಿ ಎಂದು ಹೆಸರಾಯಿತು. ಅಫಘಾನಿಸ್ತಾನದಿಂದ ಕಲ್ಯಾಣಕ್ಕೆ ಬಂದ ಮರುಳುಶಂಕರದೇವ. ಆತನ ಹೆಸರಿನ ಹಿಂದೆ ಅಂಟಿಕೊಂಡ ವಿಶೇಷಣ 'ಮರುಳು' ಅಚ್ಚಗನ್ನಡ ಶಬ್ದ. ಕಲ್ಯಾಣಕ್ಕೆ ಬಂದ ಬಳಿಕ ಆತನ ಮುಗ್ಧತನವನ್ನು ಕಂಡು 'ಮರುಳು' ಎಂಬುದು ಆತನಿಗೆ ವಿಶೇಷಣವಾಗಿ ಬಂದಿರಬೇಕು.

ಇವರೆಲ್ಲರ ಹೆಸರಿನ ಬದಲಾವಣೆ ಸಹಜ ಎನಿಸುತ್ತದೆ. ಆದರೆ ಕಾಶ್ಮೀರದೇಶದ ಮಾಂಡವ್ಯಪುರದ ಅರಸ (ನಿಜ ದೇವಿಯ ಅಣ್ಣ) ಮಹಾದೇವ ಭೂಪಾಲ ಮತ್ತು ಆತನ ರಾಣಿ ಗಂಗಾಂಬೆಯರು ಕಲ್ಯಾಣಕ್ಕೆ ಬಂದು ತಮ್ಮ ಹೆಸರುಗಳನ್ನು ಬದಲಿಮಾಡಿಕೊಂಡುದು ಆಶ್ಚರ್ಯಕ್ಕೆ ಕಾರಣವಾಗುತ್ತದೆ. ಬಹುಶಃ ಇವರಂತೆ ಯಾವ ಶರಣನೂ ಬೇಕೆಂದೇ ತನ್ನ ಪೂರ್ವಾಶ್ರಮದ ಹೆಸರನ್ನು ಬಿಟ್ಟು ಬೇರೆ ಹೆಸರನ್ನು ಇಟ್ಟುಕೊಂಡಿಲ್ಲ. ಬಹುಶಃ ಈ ರಾಜದಂಪತಿಗಳಿಗೆ ತಮ್ಮ ಮುನ್ನಿನ ಹೆಸರಿನೊಂದಿಗೆ ಆ ಅರಸೊತ್ತಿಗೆಯ ಹಮ್ಮು, ಬಿಮ್ಮು, ವಾಸನೆ ಉಳಿದಾವೆಂದು ಅವುಗಳನ್ನು ಕಳಚಿಕೊಂಡಿರಬೇಕು. ಹೊಸ ಹೆಸರನ್ನು ಇಟ್ಟುಕೊಳ್ಳುವಾಗ ಅವರು ಯಾವ ನೇಮವನ್ನು ಪಾಲಿಸಿದರೋ ? ಯಾರ ಸಲಹೆಯನ್ನು ಪಡೆದರೋ ? ಅಥವಾ ತಾವೇ ಇಟ್ಟು ಕೊಂಡರೋ ? ಗಂಗಾಂಬೆ ಹೋಗಿ ಮಹಾದೇವಿ ಆದುದು ಆಶ್ಚರ್ಯವೇನಲ್ಲ. ಆದರೆ ಮಹಾದೇವ ಭೂಪಾಲ ಹೋಗಿ (ಮೋಳಿಗೆ) ಮಾರಯ್ಯ ಆಗುವುದರಲ್ಲಿ ಆಶ್ಚರ್ಯವಿದೆ.

ಮಹಾದೇವ ಭೂಪಾಲ ಕಟ್ಟಿಗೆ ಕಡಿದು ಹೊರೆಕಟ್ಟಿ ಮಾರುವ ಕಾಯಕ ಕೈಕೊಂಡುದರಿಂದ ಆತನಿಗೆ 'ಮೋಳಿಗೆಯ' ಎಂಬ ಅನ್ವರ್ಥನಾಮ ಬಂದುದು ಸರಿ. ಆದರೆ ಆತ ಮಾರಯ್ಯ ಎಂಬ ಹೆಸರನ್ನೇ ಏಕೆ ಆಯ್ದುಕೊಂಡ ? ಈ ವಿಷಯ ಜಿಜ್ಞಾಸೆಗೆ ತಕ್ಕುದಾಗಿದೆ.

ಆ ಕಾಲಕ್ಕೆ ಮಾರಯ್ಯ ಎಂಬ ಹೆಸರು ಜನರಲ್ಲಿ ಹೆಚ್ಚು ಬಳಕೆಯಲ್ಲಿರಬೇಕು ; ಜನತೆ ಆ ಹೆಸರನ್ನು ಪ್ರೀತಿಯಿಂದ ಇಟ್ಟುಕೊಳ್ಳುತ್ತಿರಬೇಕು. ಅಲ್ಲದೆ ಸಮಾಜದಲ್ಲಿ ಕೃಷಿಕೃತ್ಯ ಮುಂತಾದ ಕಾಯಕಮಾಡುವ ಜನ ಅದನ್ನು ಇಟ್ಟುಕೊಳ್ಳುತ್ತಿದ್ದಿ

ರಬೇಕು. ಆಢ್ಯರು, ಶ್ರೀಮಂತರು, ದೊಡ್ಡ ಜಾತಿಯವರು ಆ ಹೆಸರನ್ನು ಪ್ರೀತಿಸಿ ಇಟ್ಟುಕೊಳ್ಳುತ್ತಿದ್ದಿರಲಿಕ್ಕಿಲ್ಲ. ಈ ದೃಷ್ಟಿಯಿಂದ ನೋಡಿದರೆ ಮಹಾದೇವಭೂಪಾಲ ಈ ಹೆಸರಿಟ್ಟುಕೊಂಡುದು ಸರಿ ಎನಿಸುತ್ತದೆ. ಸಾಮಾನ್ಯ ಜನರ ಹೆಸರಾಯಿತು; ಮೈಬೆವರು ಸುರಿಸಿ ದುಡಿವವರ ಹೆಸರಾಯಿತು ; ಅಲ್ಲದೆ ಆಢ್ಯತೆಯ ಸೋಂಕೂ ಇಲ್ಲದ ಹೆಸರಾಯಿತು. ಸತ್ಯಶುದ್ಧ ಕಾಯಕ ಮಾಡಿ, ಸಾಮಾನ್ಯನಾಗಿ ಬದುಕಿ. ಆಢ್ಯತೆಯಿಂದ ದೂರಿರಲು ಇಚ್ಛಿಸಿದ ಮಹಾದೇವ ಭೂಪಾಲನಿಗೆ 'ಮಾರಯ್ಯ' ಹೆಸರು ಸರಿಕಂಡುದು ಉಚಿತವೇ ಆಗಿದೆ.

೫

ಶರಣರಲ್ಲಿ ನಮಗೆ ಕಂಡು ಬರುವ ಮಾರಯ್ಯಗಳು ಇವರು : ಇವರಲ್ಲಿ ೧೧ ಜನ ವಚನಕಾರರಿದ್ದಾರೆ :

| | ಹೆಸರು | ಕಾಯಕ | ಕಾಲ | ಅಂಕಿತ |
|---|---|---|---|---|
| ೧. | ಅರಿವಾಳ ಮಾರಯ್ಯ — | ಯೋಧ | — | — |
| ೨. | ಅಜುವಿನ ಮಾರಿತಂದೆ — | — | ಕ್ರಿ.ಶ. ೧೧೬೦— | ಸದಾಶಿವಮೂರ್ತಿಲಿಂಗ |
| ೩. | ಆಯ್ದಕ್ಕಿ ಮಾರಯ್ಯ — | ಅಕ್ಕಿ ಆಯುವುದು | ಕ್ರಿ.ಶ. ೧೧೬೦— | ಅಮರೇಶ್ವರಲಿಂಗ |
| ೪. | ಇಕ್ಕದ ಮಾರಯ್ಯ — | ದಾನಮಾಡೆನೆಂಬವ್ರತ | — | — |
| ೫. | ಕನ್ನದ ಮಾರಿತಂದೆ — | ಕನ್ನ ? | ಕ್ರಿ.ಶ. ೧೧೬೦— | ಮದನವೈರಿಮಾರೇಶ್ವರಾ |
| ೬. | ಕಂಬದ ಮಾರಿತಂದೆ — | ಮೀನುಗಾರ | ಕ್ರಿ.ಶ. ೧೧೬೦— | ಕದಂಬಲಿಂಗ |
| ೭. | ಕೂಗಿನ ಮಾರಿತಂದೆ — | ಕೂಗು ಹಾಕುವುದು | ಕ್ರಿ.ಶ. ೧೧೬೦— | ಮಹಾಮಹಿಮ ಮಾರೇಶ್ವರಾ |
| ೮. | ಕೋಡಗದ ಮಾರಣ್ಣ — | ಕೋತಿಕುಣಿಸುವುದು | ಕ್ರಿ.ಶ. ೧೦೦೦— | — |
| ೯. | ಗೊನೆಯ ಮಾರಯ್ಯ — | — | — | — |
| ೧೦. | ಚಂಡೇಶ ಮಾರಯ್ಯ — | — | — | — |
| ೧೧. | ಜಟ್ಟಿ ಮಾರಯ್ಯ — | ಜಟ್ಟಿ | — | — |
| ೧೨. | ತಂಗಟೂರು ಮಾರಯ್ಯ– | ಪಡಿಹಾರಿ | ಕ್ರಿ.ಶ. ೧೧೬೦— | — |
| ೧೩. | ತಂಡೇಶ ಮಾರಯ್ಯ — | — | ಕ್ರಿ.ಶ. ೧೧೬೦— | — |
| ೧೪. | ನಗೆಯ ಮಾರಿತಂದೆ — | ನಗಿಸುವ ಕಾಯಕ | ಕ್ರಿ.ಶ. ೧೧೬೦— | ಆತುರವೈರಿ ಮಾರೇಶ್ವರಾ |
| ೧೫. | ಮನಸಂದ ಮಾರಿತಂದೆ— | — | ಕ್ರಿ.ಶ. ೧೧೬೦— | ಮನಸಂದಿತ್ತು ಮಾರೇಶ್ವರಾ |
| ೧೬. | ಮಸಣದ ಮಾರಯ್ಯ — | ದುರುಗಮುರುಗಿ | — | — |
| ೧೭. | ಮಾರಗೌಡ — | ಬೇಸಾಯ | — | — |
| ೧೮. | ಮಾರೇಶ್ವರೊಡೆಯ — | — | ಕ್ರಿ.ಶ. ೧೧೬೦— | ಮಾರೇಶ್ವರಾ |
| ೧೯. | ಮೋಳಿಗೆ ಮಾರಯ್ಯ — | ಮೋಳಿಗೆ ಕಾಯಕ | ಕ್ರಿ.ಶ. ೧೧೬೦— | ನಿಃಕಳಂಕ ಮಲ್ಲಿಕಾರ್ಜುನಾ |
| ೨೦. | ವೆರಲದ ಮಾರಯ್ಯ — | — | — | — |
| ೨೧. | ಸಗರದ ಮಾರಯ್ಯ — | — | — | — |
| ೨೨. | ಸತ್ತಿಗೆಯ ಮಾರಿತಂದೆ— | ಕೊಡೆ ಹಿಡಿವ ಕಾಯಕ | ಕ್ರಿ.ಶ. ೧೧೬೦— | ಐಘಂಟೇಶ್ವರಲಿಂಗ |
| ೨೩. | ಹಾದರದ ಕಾಯಕ ಮಾರಯ್ಯ — | — | — | — |
| ೨೪. | ಹುಣಜಿಯ ಮಾರವ್ವೆ— | — | — | — |
| ೨೫. | ಹೆಂಡದ ಮಾರಯ್ಯ — | ಹೆಂಡ ಮಾರುವುದು | ಕ್ರಿ.ಶ. ೧೧೬೦ | ಧರ್ಮೇಶ್ವರಲಿಂಗ |

ಇಪ್ಪತ್ತೈದು ಜನ ಮಾರಯ್ಯಗಳಲ್ಲಿ ವಿವಿಧ ಕಾಯಕದವರಿದ್ದಾರೆ. ಮಹಾದೇವ ಭೂಪಾಲನನ್ನು ಬಿಟ್ಟರೆ ಯಾರೂ ದೊಡ್ಡ ಜಾತಿಯಿಂದ ಬಂದವರಿಲ್ಲ; ಎಲ್ಲರೂ ಸಾಮಾನ್ಯರೇ. ಯೋಧ, ಕನ್ನಹಾಕುವವ, ಮೀನುಗಾರ, ಅಕ್ಕಿ ಆಯುವವ, ಕೂಗು ಹಾಕುವವ, ಕೋತಿ ಕುಣಿಸುವವ, ಜಟ್ಟಿ, ಪಡಿಹಾರಿ, ನಗೆಯಕಾಯಕ, ದುರಗಮುರುಗಿ, ಒಕ್ಕಲಿಗ. ಕಟ್ಟಿಗೆಕಾಯಕದವ, ಸತ್ತಿಗೆ ಕಾಯಕದವ, ಹೆಂಡಮಾರುವವ ಇವರೆಲ್ಲ ತಮ್ಮ ಕಾಯಕಗಳನ್ನು ಲಿಂಗಾಂಗ ಸಾಮರಸ್ಯದ ಮಟ್ಟಕ್ಕೆ ಏರಿಸಿದವರು, ಸಾಮಾನ್ಯ ಕಾಯಕದವರೆನಿಸಿಕೊಂಡರೂ ಇವರು ಸಾಧನೆ ಸಿದ್ಧಿಗಳಲ್ಲಿ ಬಸವ, ಅಲ್ಲಮರಿಗಿಂತ ಕಡಿಮೆಯವರಲ್ಲ.

ಕೆಲವರ ಕಾಯಕಗಳು ಗೊತ್ತಾಗುವುದಿಲ್ಲ. ಆದರೆ ಅವರು ಕಾಯಕವಿಲ್ಲದವರೆಂದು ಅರ್ಥವಿಲ್ಲ. ಅವರ ಕಾಯಕಗಳ ಬಗ್ಗೆ ಎಲ್ಲಿಯೂ ಉಕ್ತವಾಗಿಲ್ಲ, ಅಷ್ಟೇ. ಕೆಲವರ ಕಾಯಕಗಳು ವಿಶಿಷ್ಟವಾಗಿವೆ : ಅಕ್ಕಿ ಆಯುವುದು. ಕೂಗು ಹಾಕುವದು, ಕನ್ನ ಕೊರೆಯುವುದು. ಕೆಲವರ ಕಾಲ ಗೊತ್ತಾಗುವುದಿಲ್ಲ. ವಚನಕಾರ ಮಾರಯ್ಯಗಳೆಲ್ಲ ಬಸವಣ್ಣನವರ ಸಮಕಾಲೀನರೇ. ಕೋಡಗದ ಮಾರಣ್ಣ ಒಬ್ಬ ಬಸವ ಪೂರ್ವದವನು. ಅವನು ಕೋಡಗುಳಿ ಕೇಶಿರಾಜನ (ಕ್ರಿ. ಶ. ೧೧೦೦) ಸಮಕಾಲೀನನು. ಕೆಲವರ ಚರಿತ್ರೆ ತೀರ ಮೋಟುಕಾಗಿ ದೊರಕುತ್ತದೆ: ಕೆಲವರ ಕೇವಲ ಹೆಸರುಗಳು ದೊರಕುತ್ತದೆ. ಅರಿವಾಳ ಮಾರಯ್ಯ ಕಾಳಗದಲ್ಲಿ ಅರಿಯದೆ ಜಂಗಮನೊಬ್ಬನನ್ನು ಕೊಂದ: ಆ ದುಃಖದಿಂದ ಶಿರವನ್ನು ಅರಿದುಕೊಳ್ಳಲು ಶಿವ ಮೆಚ್ಚಿ ಕೈಲಾಸ ಪದವಿಯಿತ್ತ. ಇಕ್ಕದ ಮಾರಯ್ಯನ ಹೆಂಡತಿ ಲೋಭಿ. ಆಕೆಯೊಡನೆ ತಾನೂ ದಾನ ಮಾಡೆನೆಂಬ ವ್ರತತೊಟ್ಟ. ಶಿವನು ಅವನನ್ನು ಪರೀಕ್ಷಿಸಿದ, ಅದರಲ್ಲಿ ಇಕ್ಕದ ಮಾರಯ್ಯ ಗೆದ್ದ. ಶಿವನು ಅವನಿಗೆ ಕೈಲಾಸ ಪದವಿಯನ್ನು ಕರುಣಿಸಿದ. ಕೋಡಗದ ಮಾರಣ್ಣ ಕೋತಿ ಕುಣಿಸುವ ಕಾಯಕ ಮಾಡುತ್ತಿದ್ದ. ಈ ಕಾಯಕವನ್ನು ಕೇಶಿರಾಜ ದಣ್ಣಾಯಕ ಆಕ್ಷೇಪಿಸಿದ. ಮಾರಣ್ಣ ಲಿಂಗವನ್ನೇ ಕುಣಿಸಿದ. ಕೇಶಿರಾಜ ಇದೂ ಸರಿಯಲ್ಲವೆಂದು ಆಕ್ಷೇಪಿಸಿದ. ಆಗ ಮಾರಣ್ಣ ಪ್ರಾಣವನ್ನು ಬಿಟ್ಟ. ಶಿವ ಪ್ರತ್ಯಕ್ಷನಾಗಿ ಅವನಿಗೆ ನಿತ್ಯ ಪದವಿಯನ್ನಿತ್ತ. ಈತನ ಚರಿತ್ರ ಢಕ್ಕೆಯ ಬೊಮ್ಮಣನನ್ನು ನೆನಪಿಗೆ ತರುತ್ತದೆ. ಚಂಡೇಶ ಮಾರಯ್ಯ ಶಿವನನ್ನು ಕರೆದು ತನ್ನ ರಾಜನಿಗೆ ತೋರಿಸಿದ.

ತಂಗಳೂರು ಮಾರಯ್ಯ ಬಸವಣ್ಣನ ಮನೆಯಲ್ಲಿ ಪಡಿಹಾರಿಯಾಗಿದ್ದ. ಒಮ್ಮೆ ಈತನ ಹೆಂಡತಿಯ ಲಿಂಗಗಳು ಪಲ್ಲಟವಾದವು. ಆದುದರಿಂದ ಪ್ರಾಣ ಲಿಂಗಿಗಳಾದ ಅವರು ಅಸು ನೀಗಿದರು. ಸತ್ಯಣ್ಣನೆಂಬ ಭಕ್ತ ಅವರ ಲಿಂಗಗಳನ್ನು ಅವರವರಿಗೆ ಧರಿಸಲು ಅವರಿಗೆ ಪ್ರಾಣ ಬಂದವು. ಬಸವಣ್ಣನವರು ಈತನನ್ನು ಬಹುಭಕ್ತಿಯಿಂದ ನೆನೆಯುತ್ತಾರೆ.

> 'ಕಾಯದ ಗಡಣ ಕೆಲಬರಿಗುಂಟು, ಜೀವದ ಗಡಣ ಕೆಲಬರಿಗುಂಟು,
> ಭಾವದ ಗಡಣ ಕೆಲಬರಿಗುಂಟು, ವಚನದ ಗಡಣ ಕೆಲಬರಿಗುಂಟು,
> ಪ್ರಾಣಲಿಂಗದ ಗಡಣ ಆರಿಗೂ ಇಲ್ಲ, ಕೂಡಲಸಂಗನ ಶರಣರಲ್ಲಿ ತಂಗಟೂರು ಮಾರಯ್ಯಂಗಲ್ಲದೆ'[11]

ತಂಡೇಶ ಮಾರಯ್ಯ ಮಲಗಿದಾಗ ಆತನ ಲಿಂಗವನ್ನು ಬಿಜ್ಜಳನು ತರಿಸಿದನು, ಆದ್ದರಿಂದ ಆತನ ಪ್ರಾಣ ಹೋಯಿತು. ಬಸವಣ್ಣ ಆತನಿಗ ಲಿಂಗ ಧರಿಸಲು ಮತ್ತೆ ಪ್ರಾಣ ಬಂದಿತು. ಮಸಣದ ಮಾರಯ್ಯ ದುರಗಮುರಗಿ (ಬುರುಬುರು ಸುಂಕಲಮ್ಮ) ಕಾಯಕದವ. ಪುಟ್ಟಿಯಲ್ಲಿ ಮಾರಿಯನ್ನು ಹೊತ್ತು, ಓಣಿಗಳಲ್ಲಿ ಅದನ್ನು ಕುಣಿಸಿ ಶಿವಾನುಭವ ಮಾಡುತ್ತಿದ್ದ. ಢಕ್ಕೆಯ ಬೊಮ್ಮಯ್ಯನಂತೆ ಈತನ ಚರಿತ್ರೆ ಇದೆ. ಢಕ್ಕೆಯ ಬೊಮ್ಮಯ್ಯನಿಗೆ ಮಾರಯ್ಯನೆಂದೂ ಕೆಲವು ಕಡೆ ಕರೆಯಲಾಗಿದೆ. ಅದೇ ಮಾರಯ್ಯನನ್ನು ಮಸಣದ ಮಾರಯ್ಯನೆಂದು ಶಿವತತ್ತ್ವ ಚಿಂತಾಮಣಿ ಕರ್ತೃ ಭಾವಿಸಿರುವನೋ ಏನೋ ? ಮಸಣದ ಮಾರಯ್ಯನ ಚರಿತ್ರೆ ಶಿವತತ್ತ್ವ ಚಿಂತಾಮಣಿಯಲ್ಲಷ್ಟೇ ಕಂಡುಬರುತ್ತದೆ,ಬೇರೆ ಕಡೆ ಇಲ್ಲ. ಆದರೆ ಇತನಿಗೆ ಶಂಕರ ದಾಸಿಮಯ್ಯನ ಸಂಬಂಧ ಇರಲಿಲ್ಲ. ಢಕ್ಕೆಯ ಮಾರಯ್ಯ ಶಂಕರ ದಾಸಿಮಯ್ಯನ ಅಹಂಕಾರ ಕಳೆಯುತ್ತಾನೆ.

ಮಾರಗೌಡ ಒಕ್ಕಲಿಗ. ಒಮ್ಮೆ ಈತ ನೆಲ್ಲು ರಾಶಿ ಮಾಡುತ್ತಿರುವಾಗ ಶಿವನು ಜಂಗಮ ರೂಪದಿಂದ ಬಂದು ಅವನಿಗೆ ಕಬ್ಬಿಣವನ್ನು ಬಂಗಾರವನ್ನಾಗಿ ಮಾಡುವ ಪರುಷವನ್ನು ಕೊಡಹೋದನು. ಮಾರಗೌಡ ತನ್ನ ಮನ ಪರುಷದಿಂದ ನೆಲ್ಲು ರಾಶಿಯನ್ನೆಲ್ಲ ಹೊನ್ನ ರಾಶಿಯನ್ನಾಗಿ ಮಾಡಿ ಜಂಗಮನಿಗೆ ನೀಡಹೋದನು. ಇದರಿಂದ ಶಿವನು ನಾಚಿ ಮರೆಯಾದನು. ಸಗರದ ಮಾರಯ್ಯ ಪರವಾದಿಗಳನ್ನು ವಾದದಲ್ಲಿ ಸೋಲಿಸಿದ. ಇದರಿಂದ ಕುಪಿತರಾದ ಪರವಾದಿಗಳು ಆತನ ಮೇಲೆ ಬಿದ್ದರು. ಆಗ ಸಗರದ ಮಾರಯ್ಯ ಅವರನ್ನೆಲ್ಲ ಮಣ್ಣು ಮುಕ್ಕಿಸಿದ. ಹುಣಜೆಯ ಮಾರೆವ್ವ ಮಹಾಭಕ್ತೆ. ಶಿವನು ರಾಜನೊಡನೆ ಬಂದು ಈಕೆಗೆ ಲಿಂಗವನ್ನು ತೋರಿಸಿದನು. ಗೊನೆಯ ಮಾರಯ್ಯ, ಜಟ್ಟಿ ಮಾರಯ್ಯ, ಪೆರಲದ ಮಾರಯ್ಯ, ಹಾದರ ಕಾಯಕದ ಮಾರಯ್ಯ ಮುಂತಾದವರ ಚರಿತ್ರೆ ದೊರಕಿಲ್ಲ ; ಕೇವಲ ಅವರ ಹೆಸರುಗಳು ಮಾತ್ರ ದೊರಕುತ್ತವೆ.

ಈ ಶರಣರ ನಿಜವಾದ ಚರಿತ್ರೆ ದೊರಕದೆ ಒಂದು ರೀತಿಯ ಅನ್ಯಾಯವೇ ಆಗಿದೆ ; ಅವರ ಚರಿತ್ರೆಗಳನ್ನು ನಮ್ಮ ಕವಿಗಳು ಪವಾಡಗಳಿಂದ ತುಂಬಿಬಿಟ್ಟಿದ್ದಾರೆ. ಇಷ್ಟು ಮಾತ್ರ ನಿಜ: ಇವರೆಲ್ಲ ಶರಣಧರ್ಮದ ಬೆಳವಿಗೆಗೆ ತಮ್ಮ ಜೀವನ ಮೀಸಲಿಟ್ಟವರು ; ನಾಡಿಗೆ ಒಂದು ಹೊಸ ಹುಟ್ಟನ್ನು ತಂದುಕೊಡಲು ಹೋರಾಡಿದವರು ; ಸಮಯ ಬಂದಾಗ ಆತ್ಮಾರ್ಪಣೆ ಮಾಡಿದವರು.

೬

ವಚನಕಾರ ಮಾರಯ್ಯಗಳು ಹನ್ನೊಂದು ಜನರಿದ್ದಾರೆ. ಈ ಸಂಖ್ಯೆ ಕಡಿಮೆಯೇನೂ ಅಲ್ಲ. ಇವರಲ್ಲಿ ಹಲವರ ಚರಿತ್ರೆ ದೊರಕುವುದಿಲ್ಲ. ಆದರೆ ಪ್ರತ್ಯಕ್ಷ ಅವರ ವಚನಗಳಿರುವುದರಿಂದ ಶರಣರ ಕ್ರಾಂತಿಗೆ ಅವರ ಹೋರಾಟದ ಕಾಣಿಕೆ ಏನು

11. ಶಿ.ಶಿ. ಬಸವನಾಳ : ಬಸವಣ್ಣನವರ ಷಟ್‌ಸ್ಥಲದ ವಚನಗಳು, ಪುಟ ೨೧೬, ವಚನ ೮೦೭.

ಎಂಬುದು ಖಚಿತವಾಗಿ ತಿಳಿಯ ಬರುತ್ತದೆ. ಇವರು ಕ್ರಾಂತಿಗೆ ಬಲ ನೀಡಿದವರಲ್ಲದೆ ಕನ್ನಡಸಾಹಿತ್ಯಕ್ಕೆ ವಚನದಂಥ ಅಪೂರ್ವ ರಚನೆಯನ್ನೂ ನೀಡಿದರು. ವಚನಕಾರ ಮಾರಯ್ಯಗಳಲ್ಲಿ ಕೆಲವರ ಕಾಯಕ ತಿಳಿದುಬರುವುದಿಲ್ಲ. ಇನ್ನಿತರ ವಚನಕಾರರಂತೆ ಅವರ ವಚನಗಳಿಂದಲೂ ಕಾಯಕವಾಗಲಿ ಚರಿತ್ರೆಯಾಗಲಿ ಗೊತ್ತಾಗುವುದಿಲ್ಲ. ಆದರೆ ಅವರು ಕಾಯಕವಂತರಾಗಿರಲೇಬೇಕು. ಅಱುವಿನ ಮಾರಿತಂದೆ ಬಸವಣ್ಣನವರ ಸಮಕಾಲೀನ. ಕವಿಚರಿತೆಕಾರರು ಈತನ ಕಾಲ ೧೧೬೦ ಎಂದು ಹೇಳುತ್ತಾರೆ. ಈತನೊಬ್ಬ ಶ್ರೇಷ್ಠ ಅನುಭಾವಿ, ಉತ್ತಮ ವಚನಕಾರ. ಈತನ ೩೦೧ ವಚನಗಳು ದೊರಕಿವೆ. ಈತನ ಅಂಕಿತ ಸದಾಶಿವಮೂರ್ತಿಲಿಂಗ. ಈತ ತನ್ನ ವಚನಗಳಲ್ಲಿ ತನ್ನ ಹೆಸರು ಹೇಳಿಕೊಂಡಿರುವುದನ್ನು ಹಿಂದೆಯೇ ನೋಡಿದ್ದೇವೆ.ಈ ಶರಣನ ವಚನಗಳಲ್ಲಿ ವೀರಶೈವ ಎಂಬ ಶಬ್ದ ಬಳಕೆಯಾಗಿದೆ. ೧೨ನೆಯ ಶತಮಾನದ ಬಸವ ಸಮಕಾಲೀನರ ವಚನಗಳಲ್ಲಿ ಈ ಶಬ್ದದ ಬಳಕೆ ಹೆಚ್ಚು ಕಂಡುಬರುವುದಿಲ್ಲ.

'ಅಂಗಲಿಂಗ ಆತ್ಮನಲ್ಲಿ ನಿಂದು ಸಂಯೋಗವ ಮಾಡಬೇಕು. ಮಾಡಿದಲ್ಲಿ ಕೂಡಿದ ಕಾರಣ
ವೀರಶೈವವೆಂಬ ಹೆಸರಾಯಿತ್ತು, ಸದಾಶಿವಮೂರ್ತಿಲಿಂಗವನಱಿತಲ್ಲಿ'[12]
'ಸ್ಥಾವರಲಿಂಗ ಶುದ್ಧ ಶೈವಮಾರ್ಗ, ಶೈವಲಿಂಗಪೂಜೆ ಸಿಂಹಾಸನ, ಪೂರ್ವಶೈವಲಿಂಗಪೂಜೆ ಸಂಕಲ್ಪ ನಿರಾವರಣ
ವೀರಶೈವ ಲಿಂಗಪೂಜೆ ಅಂಗದ ಮೇಲೆ ಹಿಂಗದೆ ಧರಿಸಿಹುದು, ಇವೆಲ್ಲವು ಸರಿ ; ಶೈವಪೂಜೆ ಅದೆಂತೆಂದಡೆ :
ಇಷ್ಟಲಿಂಗ ಜೀವನ ಅಂಗ ಉಭಯಕೂಡಿ ಲೀಯವಾಗಿದ್ದುದು,
ಶೈವಭೇದಂಗಳಿಗೆ ಹೊಱಗು, ಸದಾಶಿವಮೂರ್ತಿಲಿಂಗಕ್ಕೆ ಒಳಗು'[13]

ಮೇಲಿನ ಎರಡು ವಚನಗಳಲ್ಲಿ ಶೈವ,ವೀರಶೈವದ ಸ್ಪಷ್ಟ ಕಲ್ಪನೆ ಮೂಡಿ ನಿಂತಿದೆ. ಭಕ್ತಿಹೀನನಿಗೆ ಯಾವ ಕಾಲಕ್ಕೂ ತತ್ತ್ವ ಅಳವಡುವುದಿಲ್ಲ. ಭಕ್ತಿಯುಳ್ಳವ ತಿಳಿದು ನಡೆಯುವಾಗ ಗುರುಲಿಂಗ ಜಂಗಮದ ಗುಣವನ್ನು ತಿಳಿಯಬೇಕು. ವಸ್ತು ಶುದ್ಧವಾಗಿಲ್ಲದಿದ್ದರೆ ಪೂಜಿಸುವ ಭಕ್ತನ ಚಿತ್ತ ಶುದ್ಧವಾಗುವುದಿಲ್ಲ ಎಂಬ ಈತನ ವಚನ ಮನನೀಯವಾಗಿದೆ.

'ಭಕ್ತಿಹೀನ ಭಕ್ತಿಯ ಮಾಡುವಲ್ಲಿ ಗುರುಲಿಂಗ ಜಂಗಮದ ಇರವ ಸಂಪಾದಿಸಲಿಲ್ಲ.
ಭಕ್ತಿಯುಳ್ಳವ ಅಱಿತು ಭಕ್ತಿಯ ಮಾಡುವಲ್ಲಿ ಗುರುವಿನಲ್ಲಿ ಗುಣವನಱಿಸಬೇಕು,
ಲಿಂಗದಲ್ಲಿ ಲಕ್ಷಣವನಱಿಸಬೇಕು, ಜಂಗಮದಲ್ಲಿ ವಿರಕ್ತಿಯನಱಿಸಬೇಕು, ಅದೆಂತೆಂದಡೆ :
ಈ ತ್ರಿವಿಧವು ತನ್ನಯ ಪ್ರಾಣವಾದ ಕಾರಣ, ಪರುಷ ಶುದ್ಧವಾಗಿಯಲ್ಲದೆ ಲೋಹದ ಕುಲವ ಕೆಡಿಸದು ;
ತಾ ಹಿಡಿದು ಆರಾಧಿಸುವ ವಸ್ತು ಶುದ್ಧವಾಗಿದೆಯಲ್ಲದೆ ಪೂಜಿಸುವ ಭಕ್ತನ ಚಿತ್ತ ಶುದ್ಧವಿಲ್ಲ;
ಸದಾ ಶಿವಮೂರ್ತಿಲಿಂಗ ಶುದ್ಧವಾಗಿಯಲ್ಲದೆ ಎನ್ನಂಗ ಶುದ್ಧವಿಲ್ಲ'[14]

ಅರಿದವನ ಸಹವಾಸ ಹಿತ; ಅಜ್ಞಾನಿಯ ಸಂಗ ಸಲ್ಲದು ; ಬರಿಯ ಮಾತಿನಿಂದ ಲಾಭವಿಲ್ಲ ಎಂಬ ಅರ್ಥದ ಈತನ ವಚನ ಬಹು ಅರ್ಥಪೂರ್ಣವಾಗಿದೆ.

'ಕಲ್ಲು ಕಲ್ಲು ತಾಕಿದಲ್ಲಿ ಕಿಚ್ಚಿನ ಕಿಡಿಯಲ್ಲದೆ, ಹೆಂಟೆ ಶಿಲೆ ಹೋರಿದಲ್ಲಿ ಉಂಟೆ ?
ಅಱಿದವನಲ್ಲಿ ಒಡಗೂಡುವ ಸುಖವಲ್ಲದೆ,
ಬಱಿಯನಲ್ಲಿ, ಅಱಿವು ಹೀನನಲ್ಲಿ. ಅಱಿವಿನ ಕುಱುಹ ಮಱೆದಾಡುವನಲ್ಲಿ,
ಸುರೆಯ ಮಡಕೆಯ ಪೂಜಿಸಿ ಕುಡಿವವನಂತಾಗಬೇಡ; ಬಱಿಯ ವಾಚಾ ಸಿದ್ಧಿಯಲ್ಲಿ ಅಱಿದಹನೆಂದು
ಅವ ಕೊಟ್ಟಱಿವಿನ ಕುಱುಹ ಮಱೆಯಬೇಡ, ಆ ಮಱೆಯಲ್ಲಿ ಬೆಳಗು ತೋರುತ್ತದೆ,
ಸದಾಶಿವಮೂರ್ತಿ ಲಿಂಗದಲ್ಲಿ.'[15]

ಕಲ್ಲು ಕಲ್ಲು ಹಾಯ್ದರೆ ಕಿಡಿ, ಅದರಂತೆ ಅರಿವುಳ್ಳವ ಇನ್ನೊಬ್ಬ ಅರಿವುಳ್ಳವನೊಡನೆ ತತ್ತ್ವಸಂಭಾಷಣೆಗೈದರೆ ಅನುಭಾವದ ಕಿಡಿ ಹೊರಡುವುದು. ಹೆಂಟೆ ಶಿಲೆಯಂತೆ ಜ್ಞಾನಿ ಅಜ್ಞಾನಿಯೊಡನೆ ಸಂಭಾಷಿಸಿದರೆ ಕಿಡಿಯೆಲ್ಲಿ ? ಹೆಂಟೆ ಒಡೆದು ಪುಡಿಯಾಗುತ್ತದೆ; ಬಹು ಅರ್ಥಗೌರವವುಳ್ಳ ಉದಾಹರಣೆ. ಇದರಂತೆ ಸುರೆಯ ಮಡಿಕೆಯ ಪೂಜಿಸಿ ಕುಡಿದವನಂತಾಗಬೇಡ ಎಂಬ ಉದಾಹರಣೆಯೂ ಅರ್ಥಪೂರ್ಣವಾಗಿದೆ. 'ಬ್ರಹ್ಮವನಱಿತಲ್ಲಿ ಮತ್ತೆ ಸುಮ್ಮನೆ ಇರಬೇಕು' ಎಂಬ ಈತನ ಮಾತು ಸೊಗಸಾಗಿದೆ; ಅದು ಹೇಳಬಾರದು, ಹೇಳಲಿಕ್ಕೆ ಹೋದರೆ ಯದ್ವಾತದ್ವಾ ಆದೀತು. ಅನುಭಾವ ಕೂಸ ಕಂಡ ಕನಸು, ಮೂಕ ಮೆದ್ದ ಬೆಲ್ಲ ಅಲ್ಲವೆ ? ಆತ್ಮಕ್ಕೆ ದರ್ಶಿಸಿದ್ದು ನಾಲಗೆಗೆ ನಿಲುಕದು. ವಚನಕಾರರಲ್ಲಿ ಲೋಕೋತ್ತರರಾದ ಇಬ್ಬರು ದಂಪತಿಗಳಿದ್ದಾರೆ. ಮೋಳಿಗೆ ಮಾರಯ್ಯ ದಂಪತಿಗಳು ಮತ್ತು ಆಯ್ದಕ್ಕಿ ಮಾರಯ್ಯ ದಂಪತಿಗಳು. ಅವರಿಬ್ಬರೂ ಕಾಯಕಪ್ರಿಯರು. ಈ ದಂಪತಿ

12. ಡಾ॥ ಆರ್. ಸಿ. ಹಿರೇಮಠ (ಸಂ) : ಸಕಲ ಪುರಾತನರ ವಚನಗಳು—೧ ಪುಟ. ೧೧೭ ವಚನ ೪೪೫
13. ,, ,, ಪುಟ. ೧೧೭ ವಚನ ೪೪೬
14. ಅದೇ ಪುಟ ೧೭೫, ವಚನ ೬೭೩
15. ಅದೇ ಪುಟ ೧೦೨, ವಚನ ೪೧೪

ಗಳು ಲೋಕ ಬೆಳಗುವಂಥ ಕಾಯಕತತ್ತ್ವ ನೀಡಿದ್ದಲ್ಲದೆ, ಅನುಭಾವವೂ ಕಾಯಕವೂ ಬೇರಲ್ಲವೆಂದು ನಡೆದು ತೋರಿಸಿದರು. ಇಬ್ಬರು ಮಾರಯ್ಯನವರು ತಮ್ಮ ಹೆಂಡಿರಿಂದ ಲಿಂಗಾಂಗ ಸಾಮರಸ್ಯದ ರಹಸ್ಯವನ್ನು ಅರಿತುಕೊಂಡರು.

ಆಯ್ದಕ್ಕಿ ಮಾರಯ್ಯ ಬಸವಣ್ಣನವರ ಸಮಕಾಲೀನ. ಈತನ ಕಾಯಕ ಬಹು ವಿಶಿಷ್ಟವಾದುದು, ಅದರಲ್ಲಿ ರಾಷ್ಟ್ರದ ಸಂಪತ್ತು ಹಾಳಾಗಬಾರದೆಂಬ ಕಳಕಳಿಯಿದೆ. ಹೆಸರೇ ಹೇಳುವಂತೆ ಆತ ಅಕ್ಕಿ ಆಯುವಾತ. ಬಸವಣ್ಣನವರ ಮನೆಯೊಂದರಲ್ಲಿಯೇ ಚೆಲ್ಲಿದ ಅಕ್ಕಿಯನ್ನು ಆತ ಆಯ್ದುಕೊಂಡು ಬರುತ್ತಿದ್ದನೆಂಬುದು ಶುದ್ಧ ಅಸಂಗತ. ಭಕ್ತರು ಕುಟ್ಟುವಾಗ, ಬೀಸುವಾಗ, ವ್ಯಾಪಾರ ಮಾಡುವಾಗ ಚೆಲ್ಲಿದ ಕಾಳುಗಳನ್ನು ಆತ ಆರಿಸಿ ತರುತ್ತಿದ್ದ. ಹೀಗಿದ್ದರೇನೇ ಆತನ ಕಾಯಕಕ್ಕೆ ಮಹತ್ವ. ಕೇವಲ ಬಸವಣ್ಣನವರ ಮನೆಯೊಂದರಲ್ಲಿಯೇ ಚೆಲ್ಲಿದ ಅಕ್ಕಿಯನ್ನಷ್ಟೇ ಆಯ್ದು ತರುತ್ತಿದ್ದನೆಂಬುದರಲ್ಲಿ ಅರ್ಥವಿಲ್ಲ. ಈತನಿಗಾಗಿ ನಿತ್ಯ ಅಲ್ಲಿ ಅಕ್ಕಿಯನ್ನು ಚೆಲ್ಲುತ್ತಿದ್ದರೇ ? ಚೆಲ್ಲಿದ ಅಕ್ಕಿಯನ್ನು ಆಯ್ದರೆ ಅನೇಕ ಕುಟುಂಬಗಳು ಬದುಕಬಹುದೆಂದು ಮಾರಯ್ಯ ತೋರಿಸಿದ. ವ್ಯವಹರಿಸುವಾಗ ಹಾಗೆ ಚೆಲ್ಲುವುದು ಸಹಜ. ಚೆಲ್ಲಿ ಹೋದುದನ್ನು ಹಾಗೆಯೇ ಬಿಡಬಾರದು, ಆಯ್ದುಕೊಳ್ಳಬೇಕು. ದೇಶದ ಆ ಸಂಪತ್ತು, ಹಾಳಾಗಬಾರದು ಎಂಬುದು ಮಾರಯ್ಯನ ತತ್ತ್ವ. ಈತನ ಅಂಕಿತ ಅಮರೇಶ್ವರ ಲಿಂಗ. ಮಾರಯ್ಯ ಕಾಯಕದ ಬಗ್ಗೆ ಹೇಳಿದ ವಚನ ಸರ್ವಕಾಲಕ್ಕೂ ಅನುಕರಣೀಯವಾಗಿದೆ :

> 'ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮಱೆಯಬೇಕು,
> ಲಿಂಗಪೂಜೆಯಾದರೂ ಮಱೆಯಬೇಕು, ಜಂಗಮ ಮುಂದಿದ್ದದರೂ ಹಂಗು ಹಱಿಯಬೇಕು.
> ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು'[16]

ಈ ಮಾತಿಗೆ ಪ್ರಭುದೇವರು ಏನೇ ಆಕ್ಷೇಪಣೆ ಎತ್ತಲಿ, ಕಾಯಕ ನಿಷ್ಠೆಯುಳ್ಳವರಿಗೆ ಈ ವಚನ ದಾರಿದೀಪವಾಗಿದೆ.

ಕನ್ನದ ಮಾರಿತಂದೆಗಳ ಕಾಲ ಕ್ರಿ. ಶ. ೧೧೬೦ ಎಂದು ಕವಿ ಚರಿತೆಕಾರರು ಹೇಳುತ್ತಾರೆ. ಈ ವಚನಕಾರರ ಬಗ್ಗೆ ಏನೂ ಚರಿತ್ರೆ ತಿಳಿದು ಬಂದಿಲ್ಲ. ಈತನ ಮೂರು ವಚನಗಳು ದೊರಕಿವೆ. ಆ ಮೂರು ವಚನಗಳಲ್ಲಿ ಕನ್ನಡ ರೂಪಕ ಬಳಸುತ್ತಾನೆ ಹಾಗಾದರೆ ಈತ ಕನ್ನ ಕೊರೆಯುತ್ತಿದ್ದನೇ ? ಅದುವೇ ಆತನ ಕಾಯಕವೇ ? ಕನ್ನ ಕೊರೆಯುವುದು ಕಾಯಕವಾಗಬಲ್ಲುದೇ ? ಆತನ ಸಂಪೂರ್ಣ ಚರಿತ್ರೆ ದೊರಕುವವರೆಗೆ ಈ ಪ್ರಶ್ನೆಗಳಿಗೆ ಉತ್ತರ ಸಿಕ್ಕುವುದಿಲ್ಲ. ಕನ್ನದ ಮಾರಿತಂದೆ ತನ್ನ ಮೂರು ವಚನಗಳಲ್ಲಿ ಅಂಕಿತ ತುಸು ಭಿನ್ನಗೊಳಿಸಿ ಹೇಳುತ್ತಾನೆ. ಅರ್ಥ ಒಂದೇ; ಆದರೆ ಸಂದರ್ಭಕ್ಕೆ ತಕ್ಕಂತೆ ವೈಶಿಷ್ಟ್ಯ ಅಲ್ಲಿ ಉಂಟಾಗುತ್ತದೆ. 'ಮದನಂಗದೂರ ಮಾರೇಶ್ವರಾ' 'ಮಾರನವೈರಿ ಮಾರೇಶ್ವರಾ' 'ಮದನವೈರಿ ಮಾರೇಶ್ವರಾ' ಇವೇ ಆ ಅಂಕಿತಗಳು. ಎರಡು ವಚನಗಳು ಬೆಡಗಿನ ರೂಪದಲ್ಲಿವೆ. ವಚನ ಗೂಢ ಅರ್ಥದಿಂದ ಕೂಡಿವೆ.

> 'ಕತ್ತಲೆಯಲ್ಲಿ ಕನ್ನವನಿಕ್ಕಿದಡೆ ಎನಗೆ ಕತ್ತಿಯ ಕೊಟ್ಟ ಕರ್ತೃವಿಂಗೆ ಭಂಗ
> ಅವರು ಮಱೆದಿರ್ದಲ್ಲಿ ಮನೆಯ ಹೊಕ್ಕಡೆ ಎನ್ನ ಚೋರತನದ ಅಱಿಕೆಗೆ ಭಂಗ
> ಮಱೆದಿರ್ದವರ ಎಬ್ಬಿಸಿ ಅವರಿಗೆ ಅವರೊಡವೆಯ ತೋಱು ಎನ್ನೊಡವೆಯ ತಂದೆ ಮದನ ವೈರಿ ಮಾರೇಶ್ವರಾ'[17]

ಕಂಭದ ಮಾರಿತಂದೆ ಕ್ರಿ. ಶ. ೧೫೦೦ ರಲ್ಲಿ ಇದ್ದಿರಬೇಕೆಂದು ಕವಿ ಚರಿತೆಕಾರರು ಅಭಿಪ್ರಾಯ ಪಡುತ್ತಾರೆ. ಆದರೆ ಈತ ಬಸವಣ್ಣನವರ ಸಮಕಾಲಿನನೆಂದೇ ನಮ್ಮ ಅಭಿಪ್ರಾಯ. ಬಸವ, ಚೆನ್ನಬಸವ, ಪ್ರಭುದೇವರ ಹೆಸರುಗಳು ಈತನ ವಚನದಲ್ಲಿ ಬರುತ್ತವೆ. ಈತನ ಚರಿತ್ರೆ ತಿಳಿದುಬಂದಿಲ್ಲ. ಈತನ ವಚನಗಳಿಂದ ಈತ ಮೀನುಗಾರನೆಂದು ತಿಳಿಯುತ್ತದೆ. ಈತನ ಹದಿನೈದು ವಚನಗಳು ಉಪಲಬ್ಧವಿವೆ. 'ಕದಂಬಲಿಂಗ' ಈತನ ಅಂಕಿತ. ತನ್ನ ಕಾಯಕವನ್ನು ಕಂಭದ ಮಾರಯ್ಯ ಈ ವಚನದಲ್ಲಿ ರೂಪಕ ಮಾಡಿದ್ದಾನೆ. ಇದೊಂದು ಬೆಡಗಿನ ವಚನ:

> ವೇದ ಕಲ್ಲಿಯಾಗಿ, ಶಾಸ್ತ್ರ ಮಣಿಯಾಗಿ, ಪುರಾಣ ತೊಡಕಿನ ಬಂಧದ ನೂಲಾಗಿ,
> ಶಾಸ್ತ್ರ ಪಸರದಲ್ಲಿ ಆಯತವ ಮಾಡಿ ಗುರುವೆಂಬ ತಡಿಯಮೆಟ್ಟಿ, ನಾಭಿಮಧ್ಯವೆಂಬ ಜಲವಹೊಕ್ಕು,
> ಮಹಾಸ್ಥಳಕುಳ ವಿವರಂಗಳೆಂಬ ಮಡುವಿಗೆ ಇಡಲಾಗಿ ಅಡಗಿದ ಮತ್ಸ್ಯವೆದ್ದಿತ್ತು.
> ಬಲೆಯ ಮೊಲಬು ಕಂಡು ಅದು ಸ್ಥೂಲಕ್ಕೆ ಸೂಕ್ಷ್ಮವಾಗಿ, ಸೂಕ್ಷ್ಮಕ್ಕೆ ಸ್ಥೂಲವಾಗಿ ಆ ಕಲ್ಲಿಯ ದ್ವಾರದಲ್ಲಿ
> ಅಲ್ಲಿಯೆ ನುಸುಳುತ್ತ, ಕಲ್ಲಿಗೆ ಹೊಱಗಾಗುತ್ತ ಮತ್ತಾಕಲ್ಲಿಗೆ ಒಳಗಾಗುತ್ತ ಮತ್ತಾಸ್ಥಳಕುಳಂಗಳಲ್ಲಿ ಕೂಡುತ್ತ
> ಸ್ಥಲಂಗಳನರಿದು ಹೊಱಗಾಗುತ್ತ ಭಾವಜ್ಞನಾಗಿ ಭಾವ ವಿರಹಿತನಾದೆಯಲ್ಲಾ
> ಮಾವನ ಮಗಳಿಗೆ ಅಣ್ಣನಾದೆಯಲ್ಲಾ ಚೆನ್ನ ಕದಂಬಲಿಂಗಾ'[18]

ಏಸು ಜನುಮಂಗಳಲ್ಲಿ ಹುಟ್ಟಿಬಂದರೂ. ಏನು ಮಾಡಿದರೂ ಯಾವುದು ಅಲ್ಲ, ಯಾವುದು ಹೌದು ಎಂಬುದನ್ನು

---

16. ಸಂ. ಶಿ. ಭೂಸನೂರಮಠ (ಸಂ) : ಶೂನ್ಯ ಸಂಪಾದನೆ ಪುಟ ೨೫೯
17. ಡಾ॥ ಎಂ. ಎಸ್. ಸುಂಕಾಪುರ (ಸಂ): ಸಕಲ ಪುರಾತನರ ವಚನಗಳು ಸಂಪುಟ ೩ ಪುಟ ೬೦ ವಚನ ೧೨೩
18. ಅದೇ ಪುಟ ೫೨ ವಚನ ೧೦೬

ತಿಳಿಯಬೇಕು. ಮತ್ತು ತತ್ಕಾಲದ ನೀತಿಯನ್ನರಿಯಬೇಕು–ಎಂಬುದು ಕೆಳಗಿನ ವಚನದಲ್ಲಿ ಸುಂದರವಾಗಿ ನಿರೂಪಿತವಾಗಿದೆ :

'ನಾನಾ ಜನ್ಮಂಗಳಲ್ಲಿಯೂ ಬಂದಡೆ, ನಾನಾಯುಕ್ತಿಯಲ್ಲಿ ನುಡಿದಡೆ,
ನಾನಾ ಲಕ್ಷಣಂಗಳಲ್ಲಿ ಶ್ರುತ ದೃಷ್ಟ ಅನುಮಾನಂಗಳ ಲಕ್ಷಿಸಿ ನುಡಿದಲ್ಲಿ ಏನನಹುದು, ಏನನಲ್ಲಾಯೆಂಬ ಠಾವನಱಿಯಬೇಕು.
ಮಾತಬಲ್ಲೆನೆಂದು ನುಡಿಯದೆ, ನೀತಿವಂತನೆಂದು ಸುಮ್ಮನಿರದೆ, ಆ ತತ್ಕಾಲದ ನೀತಿಯನಱಿದು
ಸಾತ್ವಿಕ ಲಕ್ಷಣದಲ್ಲಿಪ್ಪಾತನ ಲಕ್ಷಣವೇ ನಿರೀಕ್ಷಣ ಕದಂಬಲಿಂಗಾ'[19]

ಕೂಗಿನ ಮಾರಿತಂದೆ ಬಸವಣ್ಣನವರ ಸಮಕಾಲೀನನು, ಕೂಗು ಹಾಕುವುದು ಈತನ ಕಾಯಕವೆಂದು ಕಾಣುತ್ತದೆ. ಶರಣರು ಕ್ರಾಂತಿಯ ತರುವಾಯ ಕಲ್ಯಾಣ ಬಿಟ್ಟುಹೋದರು ; ಆಗ ಬಿಜ್ಜಳನ ಸೈನ್ಯ ಅವರ ಬೆನ್ನಟ್ಟಿತು. ಆ ಸೈನ್ಯ ಸಮೀಪ ಬಂದ ತಕ್ಷಣವೇ ಮಾರಯ್ಯ ಕೂಗು ಹಾಕಿ ಶರಣರನ್ನು ಯುದ್ಧಕ್ಕೆ ಅಣಿಮಾಡುತ್ತಿದ್ದ. ತಾನೂ ಶರಣ ಸೈನ್ಯದಲ್ಲಿದ್ದು ಹಂಗು ದೊರೆದು ಕಾದಿದ. ಶರಣರು ಕಲ್ಯಾಣದಲ್ಲಿದ್ದಾಗ ಆತ ಎಂಥ ಕಾಯಕ ಮಾಡುತ್ತಿದ್ದನೆಂಬುದು ತಿಳಿಯದು. ಆತನ ಹನ್ನೊಂದು ವಚನಗಳು ದೊರಕಿವೆ. 'ಮಹಾಮಹಿಮ ಮಾರೇಶ್ವರಾ' ಎಂಬುದು ಆತನ ಅಂಕಿತ. ಆದರೆ ಆತ ಅಂಕಿತದ ಹಿಂದೆ ವಚನಗಳಲ್ಲಿ ಕೂಗಿನ ಕುಲವಿಲ್ಲ, ಕೂಗಿನ ಕುಲಕ್ಕೆ ಹೊಱಗಾಯಿತು, ಕೂಗಿನ ದನಿಗೆ ಹೊಱಗು, ಕೂಗಿಂದತ್ತ ನಮೋ, ಕೂಗಿನ ಕುಲಕ್ಕೆ ಹೊಱಗಲ್ಲ–ಎಂದು ಹೇಳುತ್ತಾನೆ. ಒಂದು ವಚನದಲ್ಲಿ ಮಾತ್ರ ಕೂಗಿನ ಹೊಱಗು ಮುಂತಾಗಿ ಯಾವುದೂ ಇಲ್ಲ. ಅದು ಆತನ ವಚನ ಹೌದೋ ಅಲ್ಲವೋ ? ಕೂಗಿನ ಕುಲ, ಕೂಗಿನ ದನಿ ಮುಂತಾದುವುಗಳಿಗೆ ಅನಿತ್ಯವಾದ ದೇಹ, ಸಂಸಾರ, ವಿಷಯ ಸುಖ ಎಂದು ಅರ್ಥಮಾಡಬಹುದಾಗಿದೆ.

'ನಾರಿಯೂ ಮರನೂ ಕೂಡಿ ಬಾಗಲಿಕ್ಕಾಗಿ ಶರಚರಿಸುವುದಕ್ಕೆಡೆಯಾಯಿತ್ತು'[20]

ಎಂದು ಆತ ಕೊಡುವ ಉದಾಹರಣೆಯಿಂದ ಆತ ಯೋಧನಿದ್ದನೆಂದು ಊಹಿಸಬಹುದು.

ನಿಜ ತತ್ತ್ವವನರಿದವನ, ಮತ್ತು ಅರಿಯದವನ ವಿಚಾರ ರಚನೆ ಎಂತಹುದು ಎಂಬುದನ್ನು ಹೃದಯಂಗಮ ಉದಾಹರಣೆಗಳಿಂದ ಕೆಳಗಿನ ವಚನದಲ್ಲಿ ತಿಳಿಸುತ್ತಾನೆ :

'ಅಪ್ಪುವಿನ ಶಿಲೆಯ ಉಳಿಯ ಮೊನೆಯಲ್ಲಿ ಚಿತ್ರಿಸಬಹುದೆ ?
ಅರಗಿನ ಘಟವ ಉರಿಯ ಮೊನೆಯಲ್ಲಿ ಅಕ್ಷರವ ಬರೆಯಬಹುದೆ?
ಮೃತ್ತಿಕೆಯ ಹಱುಗೋಲನೇರಿ ನದಿಯ ತಪ್ಪಲಿಗೆ ಹೋಗಬಹುದೆ?
ನಿಜ ನಿಶ್ಚಯವನಱಿಯದವನ ವಾಚಾರಚನೆ ಇಪ್ಪಲ್ಲದಿಲ್ಲ.
ನಿಜ ತತ್ತ್ವವನಱಿದವನ ವಾಚಾರಚನೆಯ ಕುಱುಹೆಂತುಟೆಂದಡೆ :
ಶಿಲೆಯೊಳಗಣ ಸುರಭಿಯಂತೆ ; ಪ್ರಳಯದೊಳಗಾಗದ ನಿಜನಿವಾಸದಂತೆ,
ಆಯದ ಛಾಯದಂತೆ, ಸುಛಾಯದ ಸುಖದಂತೆ,
ಇಂತೀ ಭಾವರಹಿತವಾದ ಭಾವಜ್ಞನ ತೆಱ, ಕೂಗಿಂಗೆ ಹೊಱಗು ಮಹಾ ಮಹಿಮ ಮಾರೇಶ್ವರಾ'[21]

ನಗೆಯಮಾರಿತಂದೆ ಬಸವಣ್ಣನವರ ಸಮಕಾಲೀನ. ಆತನ ಕಾಯಕ ನಗಿಸುವುದು. ಬೇರೆ ಬೇರೆ ಕಾಯಕಗಳು ಆತನಿಗೆ ಸರಿಬರದೆ ಹೋಗಿ ನಗೆಯ ಕಾಯಕ ಕೈಕೊಂಡನಂತೆ ; ಕೆಳಗಿನ ವಚನ ಇದನ್ನು ಹೇಳುತ್ತದೆ :

'ಭಕ್ತನಾಗಿ ಹುಟ್ಟಿದ್ದು ಮತ್ತೊಬ್ಬರಲ್ಲಿ ಬೇಡುವುದೆ ಕಷ್ಟ; ಹೊತ್ತು ಹೋರಿ ಭೂಮಿಯ ಅಗೆವಲ್ಲಿ
ಮೊತ್ತದ ಜೀವಂಗಳು ಸತ್ತುದ ದೃಷ್ಟವ ಕಂಡಲ್ಲಿಯೆ, ಮಾಡುವ ಮಾಟ ನಷ್ಟ.
ಇದನಱಿತು ವಿರಕ್ತನಾಗಿ ಹೋದಲ್ಲಿ, ಮತ್ತೊಬ್ಬರ ಅಪ್ಪ ಅಣ್ಣ ಎಂದು ಚಿತ್ತವ ಕಲಕುವುದು ಕಷ್ಟ.
ಈ ಹೊತ್ತ ದೇಹಕ್ಕೆ ನಗೆಯ ಚಿತ್ತದ ಕಾಯಕ, ಇದನೊಪ್ಪುಗೊ ಆತುರವೈರಿ ಮಾರೇಶ್ವರಾ'[22]

ಶಿವನು ಈತನನ್ನು ಪರೀಕ್ಷೆ ಮಾಡಿದ ಕಥೆ ಬಹು ಸೊಗಸಾಗಿದೆ: ಒಂದು ಹೊಳೆ ತುಂಬಿ ಹರಿಯುತ್ತಿತ್ತು. ಯಾವುದೋ ಊರಿಗೆ ಕಾಯಕಕ್ಕೆ ಹೋಗಿದ್ದ ಮಾರಯ್ಯ ಆ ಹೊಳೆಯನ್ನು ಹೇಗೆ ದಾಟಬೇಕೆಂದು ಯೋಚಿಸುತ್ತಿರಲು ಅಲ್ಲಿಗೆ ಶಿವ ವೃದ್ಧ ಜಂಗಮನಾಗಿ ಮುದಿ ಎತ್ತು ಮತ್ತು ಗಿರಿಜೆಯೊಡನೆ ಬಂದ. 'ನೀನು ಎಲ್ಲಿಗೆ ಹೋಗುವೆ?' ಎಂದು ಮಾರಯ್ಯನನ್ನು ಶಿವ ಕೇಳಿದ. 'ಹಾದರವಳ್ಳಿಯಲಿರ್ದು, ಕಣ್ಣೂರ ನೋಡಿ, ಕನ್ನೆವಳ್ಳಿಗೆ ಕಾಯಕಕ್ಕೆ ಹೋಗುತ್ತಿಹೆ' ಎಂದ ಮಾರಯ್ಯ. 'ಹಾಗಾದರೆ ಹೊಳೆ ಹೇಗೆ ದಾಟುವೆ?' ಎಂದು ಕೇಳಿದ ಶಿವ. 'ನೀನು, ನಿನ್ನ ಹೆಣ್ಣು, ನಿನ್ನ ಹೆಂಡತಿ ಹೇಗೆ ದಾಟುವಿರಿ?' ಎಂದು ಶಿವನನ್ನು ಕೇಳಿದ ಮಾರಯ್ಯ. 'ನಾನು ಎತ್ತಿನ ಮೇಲೆ ಕೂಡ್ರುವೆ, ನನ್ನ ಹೆಂಡತಿ ನನ್ನ ಹೆಗಲ ಮೇಲೆ ಕೂಡ್ರುವಳು, ಹೀಗೆ

19. ಅದೇ ಪುಟ ೫೫ ವಚನ ೧೧೨ 20. ಅದೇ ಪುಟ ೬೦ ವಚನ ೧೭೪ 21. ಅದೇ ಪುಟ ೬೧ ವಚನ ೧೭೫
22. ಡಾ॥ ಎಂ.ಎಸ್. ಸುಂಕಾಪುರ (ಸಂ) ಸಕಲ ಪುರಾತನರ ವಚನಗಳು ಸಂಪುಟ-೨ ಪುಟ ೪೧೪ ವಚನ ೧೧೮೪

ದಾಟುವೆವು ಸುಲಭವಾಗಿ' ಎಂದ ಶಿವ. ಅದಕ್ಕೆ ಮಾರಯ್ಯ 'ಹಾಗಾದರೆ ನಾನು ನಿನ್ನ ಹೆಂಡತಿಯ ಹೆಗಲ ಮೇಲೆ ಕುಳಿತು ದಾಟುವೆ' ಎಂದ. ಆ ಮಾತು ಕೇಳಿ ಶಿವನಕ್ಕ. ಕೂಡಲೇ ಮಾರಯ್ಯ ಕಾಯಕ ಕೇಳಿದ.

ಇಲ್ಲಿ ಶಿವ ಏಕೆ ನಕ್ಕ ? ಮಾರಯ್ಯ ಹಾಗೇಕೆ ಹೇಳಿದ ? ನಿನ್ನ ಸತಿಯ ಹೆಗಲ ಮೇಲೆ ಕುಳಿತು ದಾಟುವೆನೆಂಬುದು ಉದ್ಧಟತನದ ಮಾತಲ್ಲವೆ ? ಇದರಲ್ಲಿ ಸೂಕ್ಷ್ಮವಿದೆ. ಎತ್ತಿನ ಮೇಲೆಯೇ ಶಿವ ಮತ್ತು ಪಾರ್ವತಿ ಇಬ್ಬರೂ ಕುಳಿತುಕೊಳ್ಳಬಹುದು. ಹೀಗಿರಲು ಶಿವನ ಹೆಗಲ ಮೇಲೆ ಪಾರ್ವತಿ ಕೂಡ್ರುವ ಅವಸರವೇನಿದೆ ? ಶಿವ ಚೇಷ್ಟೆ ಮಾಡಿದ. ಅದನ್ನರಿತ ಮಾರಯ್ಯ ತಾನೂ ಚೇಷ್ಟೆಮಾಡಿ, 'ನಿನ್ನ ಹೆಂಡತಿಯ ಹೆಗಲಮೇಲೆ ಕುಳಿತು ಬರುವೆ' ಎಂದ. ಈ ಮೊದಲೇ ಆತ ನಿನ್ನ ಹೆಣ್ಣು, ನಿನ್ನ ಹೆಂಡತಿ, ನೀನು ಹೇಗೆ ದಾಟುವಿರಿ ಎಂದು ಕೇಳುವಾಗ ಕುಚೇಷ್ಟೆ ಮಾಡಿದ್ದ. ಇಲ್ಲಿ ಹೆಣ್ಣು ಎಂದರೆ ತಲೆಯಲ್ಲಿರುವ ಗಂಗೆ. ಶಿವ ವೇಷ ಮರೆಯಿಸಿಕೊಂಡರೂ ನಿಜವಾದ ಭಕ್ತ ಆತನನ್ನು ನಿಜರೂಪದಲ್ಲಿ ಕಾಣಬಹುದು.

ನಗೆಯ ಮಾರಿತಂದೆಗಳ ವಚನಗಳು ನೂರು ಉಪಲಬ್ಧವಿವೆ. ಆತನ ಅಂಕಿತ 'ಆತುರವೈರಿ ಮಾರೇಶ್ವರಾ'. ಆದರೆ 'ಆತುರವೈರಿಗೆ' ಬದಲಾಗಿ ಕೆಲವು ವಚನಗಳಲ್ಲಿ, 'ಮನಸಿಜವೈರಿ ಮಾರೇಶ್ವರಾ', 'ಮಾರಮಥನ ಮಾರೇಶ್ವರಾ,' 'ಸಾರಥಿಯ ಪತಿಯೊಡೆಯ ಸುತವೈರಿ ಮಾರೇಶ್ವರಾ'–ಎಂದು ಬಳಸುತ್ತಾನೆ. ಇದರಿಂದ ಆತುರವೈರಿ ಎಂದರೆ ಶಿವನೆಂದೇ ಅರ್ಥವಾಗುತ್ತದೆಂದು ಊಹಿಸಬಹುದು. ಆತುರ ಎಂದರೆ ಕಾಮು ಎಂದೇ ಅರ್ಥಯಿಸಬೇಕಾಗುತ್ತದೆ.

ನಗೆಯಮಾರಿತಂದೆಯ ವಚನಗಳ ಭಾಷೆ ತೀರ ಸಾದಾ; ಆಡುಮಾತಿಗೆ ಹತ್ತಿರವಾದುದು ; ಅಷ್ಟೇ ಪ್ರಖರ ವಿಚಾರಗಳು. ಖಂಡಿತವಾದಿ ಈತ. ಮಾರಯ್ಯ ಅಶ್ಲೀಲವೆನಿಸುವ ಪದಗಳನ್ನು ಉಪಯೋಗಿಸುತ್ತಾನೆ.

'ಅವಳನವನೇರಿ ಕಳಚಿತ್ತು ಬಿಂದು' 'ಇವರೆಲ್ಲರ ಕಂಡು ನಾನವಳಿಗೆ ಹೋಗಲಾಗಿ'
'ಮಾತಿಂಗೆ ಮಾತು ಸರಿ, ತೂತಿಂಗೆ ತೂತು ಸರಿ' 'ಮಾಡುವರ ಮಾಟಕ್ಕಂಜಿ, ತೂತ ಬಿಟ್ಟಡೆ'
'ಅವಳವಳ ಸಂದಿಯೊಳಗೆ ಅಡಗಿದ ಈ ಭವದ ಅಂದವ ಹೇಳಾ'
'ಹೆಣ್ಣಿನ ಮೇಲಿನ ಮೋಹ ಯೋನಿ ಕಂಡಾಗ ದಣಿಯಿತ್ತು'। 'ಅಣ್ಣನ ಹೆಂಡಿರ ತಮ್ಮ ಹಾಕಿಕೊಂಡು ಕೊಡದಿರಲಾಗಿ'

ಈ ಮಾತುಗಳು ಸಂದರ್ಭಕ್ಕೆ ತಕ್ಕಂತೆ ಉಪಯೋಗವಾಗಿ, ಅಶ್ಲೀಲ ಮರೆಯಿಸಿ ಅರ್ಥಗೌರವವನ್ನು ಹೆಚ್ಚಿಸುತ್ತವೆ. 'ಮಾತು' ಎಂಬ ಶಬ್ದವನ್ನು ಸಂಸಾರ, ಹುಟ್ಟು, ಮೋಹವ್ಯಾಮೋಹ, ಕಾಮ ಮುಂತಾದ ಅರ್ಥಗಳಲ್ಲಿ ಈತ ತನ್ನ ವಚನಗಳಲ್ಲಿ ೨೦ ಸಲ ಬಳಸಿದ್ದಾನೆ.

'ಕಿಂಚಿತ್ತು ತೂತಿಗಾಗಿ ಆತನ ಬಿಡದಿರು' 'ತೂತ ತಜಿ, ಸಂದೇಹದ ಭವವನಜಿ' 'ಅವರಿಗೆ ಅದು, ನನಗಿದು ತೂತಿನ ಹಾದಿಯೆ'.

ನಗೆಮಾರಿ ತಂದೆಯ ಉಳಿದ ವಚನಗಳನ್ನು ನೆನಪಿಡದಿದ್ದರೂ ಅಡ್ಡಿಯಿಲ್ಲ, ಒಂದು ವಚನವಂತು ಮರೆಯಲು ಸಾಧ್ಯವಿಲ್ಲ. ಸಂಸ್ಕೃತ ಭಾಷೆ ಮತ್ತು ಪುರೋಹಿತ ವರ್ಗದವರನ್ನು ಕುರಿತು ಆಡಿದ ಆ ವಚನ ಆ ಕಾಲದ ಜನಜೀವನಕ್ಕೆ ಕನ್ನಡಿ ಹಿಡಿದಿದೆ. ಸಾಮಾನ್ಯರನ್ನು ದೊಡ್ಡ ಜಾತಿಯವರು ಹೇಗೆ ಶೋಷಣೆಗೆ ಒಳಗು ಮಾಡುತ್ತಿದ್ದರೆಂಬುದು ಇದರಿಂದ ತಿಳಿಯುತ್ತದೆ.

'ಕಲ್ಲಿಯ ಹಾಕಿ ನೆಲ್ಲವ ತುಳಿದು ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ, ವಾಗದ್ವೈತವ ಕಲಿತು,
ಸಂಸ್ಕೃತದ ಮಾತಿನ ಪಸರವ ಮುಂದೆ ಇಕ್ಕಿಕೊಂಡು, ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವನಂತೆ,
ಅದೇತರ ನುಡಿ ? ಮಾತಿನ ಮಜಿ ಆತುರವೈರಿ ಮಾರೇಶ್ವರಾ'[23]

ಅಗಲವಾಗಿ ನೆಲ್ಲನ್ನು ಹರವಿ ಅದರ ಮೇಲೆ ಬಲೆಯನ್ನು ಹಾಸಿ ಗುಬ್ಬಿಗಳನ್ನು ಹಿಡಿಯುತ್ತಾರೆ, ಕಳ್ಳರು. ಇವರಂತೆ ಪುರೋಹಿತರು ಕಳ್ಳರು. ಅವರ ಬಲೆ ಎಂತಹುದು ? ಈ ಜನ ಮಾತಿನ ಅದ್ವೈತದಿಂದ ಸಂಸ್ಕೃತ ಭಾಷೆಯನ್ನು ಉಪಯೋಗಿಸಿ, ಮಂತ್ರ ಹೇಳಿ ಮುಗ್ಧ ಜನರನ್ನು ಮೋಸಗೊಳಿಸುತ್ತಾರೆ. ಅವರನ್ನು ಶೋಷಣೆಗೀಡು ಮಾಡುತ್ತಾರೆ. ಇದೇ ಅವರ ಬಲೆ. ವಾಗದ್ವೈತ, ಸಂಸ್ಕೃತ, ಮಂತ್ರಗಳನ್ನು ಗುಬ್ಬಿ ಬಲೆಗೆ ಹೋಲಿಸಿದ್ದು ಮತ್ತು ಪುರೋಹಿತರನ್ನು ಕಳ್ಳರಿಗೆ ಹೋಲಿಸಿದ್ದು ಅತ್ಯಂತ ಅರ್ಥಪೂರ್ಣವಾದುದು. ಸಾಹಿತ್ಯ ಲೋಕದಲ್ಲಿ ಈ ಹೋಲಿಕೆ ಹೊಸದು. ಬೇರೆ ಕಡೆಗೆ ಕಂಡುಬರದು. ನಗೆಮಾರಿ ತಂದೆಗಿರುವ ಸಾಮಾಜಿಕ ಕಳಕಳಿ, ಸಾಮಾನ್ಯರ ಬಗೆಗಿದ್ದ ಅನುಕಂಪ, ದೊಡ್ಡ ಜಾತಿಯವರ ಬಗೆಗಿದ್ದ ರೋಷ ಇಲ್ಲಿ ಎದ್ದು ಕಾಣುತ್ತದೆ. ಇನ್ನೊಂದು ವಚನದಲ್ಲಿ ಇದೇ ಭಾವವಿದೆ. ಆದರೆ ಅದರ ನಿರೂಪಣೆ ಬೇರೊಂದು ರೀತಿಯದಾಗಿದೆ.

'ಸಮತೆ ಸಮಾಧಾನ ಹೇಳುವ ಪುಸ್ತಕ ಎತ್ತಿನ ಮೇಲೆ, ಹೊಯಿವ ದೊಣ್ಣೆ ಕೈಯಲ್ಲಿ, ಲೇಸಾಯಿತ್ತು ಈತನಿರವು.
ಮಾತಿನಲ್ಲಿ ಆಗಮ, ಮನದಲ್ಲಿ ತೂತಿನ ಕುಡುಕೆಯು ಆಸೆ, ಇದು ನೀತಿಯಲ್ಲ, ಆತುರವೈರಿ ಮಾರೇಶ್ವರಾ'[24]

ಮೂರು ನಾಲ್ಕೇ ಸಾದಾ ಮಾತುಗಳಲ್ಲಿ ಗಹನವಾದ ಆಧ್ಯಾತ್ಮ ವಿಚಾರವನ್ನು ಮನಮುಟ್ಟುವಂತೆ ಹೇಳುವ ಕಲೆಯೂ ಮಾರಯ್ಯನಿಗೆ ಗೊತ್ತಿದೆ.

23. ಅದೇ ಪುಟ ೪೨೯ ವಚನ ೧೩೪೪ 24. ಅದೇ ಪುಟ ೪೨೩ ವಚನ ೧೩೨೦

'ಕಂಗಳ ಮುಂದಳ ಕಾಮುವ ಕೊಂದು, ಮನದ ಮುಂದಳ ಆಸೆಯು ತಿಂದು, ಆತನನಱಿ, ಆತುರವೈರಿ ಮಾರೇಶ್ವರಾ'[25]

ಮನಸಂದ ಮಾರಿತಂದೆಗಳ ಕಾಲ ಕ್ರಿ.ಶ. ೧೧೬೦ ಎಂದು ಕವಿಚರಿತೆಕಾರರು ಹೇಳುತ್ತಾರೆ. ಈತನ ಚರಿತ್ರೆ ದೊರಕಿಲ್ಲ. ಈವನ ವಚನಗಳು ೧೦೦. 'ಮನಸಂದಿತ್ತು ಮಾರೇಶ್ವರಾ' ಎಂಬುದು ಈತನ ಅಂಕಿತ. ಅನುಭಾವದ ದೃಷ್ಟಿಯಿಂದ ಈತನ ವಚನಗಳು ಮೇಲ್ಮಟ್ಟದವಾಗಿವೆ. ಹೇಳುವ ಮಾತು ನೇರ, ಆಡಂಬರವಿಲ್ಲ. ಚಿಕ್ಕ ಮಾತು, ಚಿಕ್ಕ ವಚನಗಳು, ಕೊಡುವ ಉದಾಹರಣೆ ಉಪಮಾನಗಳು ಜೀವಂತವಾದುವು. '...ಅವನ ವಚನಗಳು ಗಾತ್ರದಲ್ಲಿ ಚಿಕ್ಕವಾದರೂ ಅವುಗಳ ಸರಳತೆ ಅಭಿವ್ಯಕ್ತಿಗೆ ಒಂದು ಹಿರಿತನವನ್ನು ತಂದುಕೊಟ್ಟಿವೆ...'[26] ಎನ್ನುತ್ತಾರೆ ಡಾ॥ ಎಂ. ಚಿದಾನಂದಮೂರ್ತಿಯವರು.

ಅಂಗಲಿಂಗಗಳ, ಇಷ್ಟಪ್ರಾಣಗಳ ಒಂದಾಗುವಿಕೆಯ ಬಗ್ಗೆ ಸುಂದರ ಉಪಮಾನದಿಂದ ಮನಸಂದ ಮಾರಿತಂದೆ ಈ ವಚನದಲ್ಲಿ ಹೇಳಿದ್ದಾನೆ:

'ಅಂಗಕ್ಕೆ ಕುಱುಹೆಂಬುದು ಲಿಂಗ, ಆತ್ಮಂಗೆ ಅಱಿವೆಂಬುದೊಂದು ಲಿಂಗ,
ಪರುಷ ಲೋಹದಂತೆ ಕೂಡುವನ್ನಬರ ಉಭಯನಾಮರೂಪವಾಯಿತ್ತು, ಕೂಡಿದ ಮತ್ತೆ ಪರುಷವೆಂಬ ನಾಮವಿಲ್ಲ,
ಲೋಹವೆಂಬ ಕುಱುಹಿಲ್ಲ.ಹೇಮವೆಂಬ ನಾಮವಾಯಿತ್ತು-ಇಷ್ಟಪ್ರಾಣ ಹಾಗಾದಲ್ಲಿ ಮನಸಂದಿತ್ತು ಮಾರೇಶ್ವರಾ'[27]

ಲಿಂಗವನ್ನು ಹಾವಿಗೆ, ಅಗ್ನಿಗೆ ಹೋಲಿಸಿ ಹೇಳುವ ಈ ವಚನವೂ ಅಂಗ ಲಿಂಗಗಳ ಕೂಟದ ಭೇದವನ್ನು ಮನೋಜ್ಞವಾಗಿ ಹೇಳುತ್ತದೆ :

'ಹರಿವ ಹಾವು, ಉರಿವ ಕಿಚ್ಚಿಂದಡೆ ಮುಟ್ಟುವವರಿಗೆ ಭೀತಿಯಲ್ಲವೆ ?
ಅಱಿದು ಹಿಡಿದಡೆ ಉರಗ ಹೊರಳಿಗೆ ಸರಿ. ಸ್ತಂಭಕ್ಕೆ ಅಗ್ನಿ ಚಂದನದ ಮಡು. ಲಿಂಗವ ಹಿಡಿಯ ಬಲ್ಲಡೆ ಅಂಗ ನಿರಂಗದ ಕೂಟ,
ಉಭಯದ ಸಂಗವನಱಿದಲ್ಲಿ ಮನಸಂದಿತ್ತು ಮಾರೇಶ್ವರಾ'[28]

ಕಾಯಕದ ಬಗ್ಗೆ ಮನಸಂದ ಮಾರಿತಂದೆ ಲೋಕಕ್ಕೆ ಒಂದು ಮಹಾ ಸಂದೇಶವನ್ನು ಕೊಟ್ಟಿದ್ದಾನೆ. ಕಾಯಕವಿಲ್ಲದ ಜೀವನ ಸಲ್ಲ. ಕಾಯಕವಿಲ್ಲದಿದ್ದರೆ ಅರಿವೇ ಇಲ್ಲ. ದುಡಿಯದೆ, ಕೊಡುವವರ ಮನೆಗೆ ಮತ್ತೆ ಮತ್ತೆ ಹೋಗಿ ಬೇಡುವುದು ಚಂದವಲ್ಲ.

'ಕಾಯವಿಡಿದಿಹನ್ನಬರ ಶಿವಭಕ್ತಂಗೆ ಕಾಯಕವೆ ಕೈಲಾಸ. ಕಾಯಕವಿಲ್ಲದವನ ಅಱಿವು ವಾಯುವಾಯಿತ್ತು.
ಅಡುಗೂಲಿಯ ಮನೆಯಂತೆ ಗಡಿಗೆಯ ಗಂಜಿಯಾಸೆ ಬೇಡ. ಕೊಡುವರೆಂದೊಬ್ಬರ ಮನೆಗೆ ಅಡಿಗಡಿಗೆ ಹೋಗಬೇಡ.
ಇಂತಿವರಡಿಯ ಕಾಬುದಕ್ಕೆ ಮೊದಲೆ ಅಡಗಿದೆಯಲ್ಲಾ, ಮನಸಂದಿತ್ತು ಮಾರೇಶ್ವರಾ'[29]

ಮಾರೇಶ್ವರೊಡೆಯರ ಕಾಲ ಕ್ರಿ.ಶ. ೧೧೬೦ ಎಂದು ಕವಿಚರಿತೆಕಾರರು ಹೇಳುತ್ತಾರೆ. ಈತನ ಚರಿತ್ರೆ ತಿಳಿದುಬಂದಿಲ್ಲ. ಈತನ ಅಂಕಿತ 'ಮಾರೇಶ್ವರಾ' ಈತನವು ಕೇವಲ ಮೂರು ವಚನಗಳು ದೊರಕಿವೆ. ಅವುಗಳಲ್ಲಿಯೂ ಏನೂ ವಿಶೇಷವಿಲ್ಲ, ಮೂರೂ ಒಂದು ರೀತಿಯ ಬೆಡಗಿನ ವಚನಗಳೇ, ಇಲ್ಲಿ ಒಂದು ವಚನ ಉದಾಹರಿಸಿದೆ :

'ಸತ್ಯದ ಹಿರಿಯರ ಕತ್ತಲೆ ಕಟ್ಟಿ ಹುತ್ತವನೇಱುತ್ತಲೈದಾರೆಯಲ್ಲಾ. ಅಲ್ಲದ ಜೇಳಿನ ಚೆಲ್ಲಕ್ಕೆ ಹೋಗಿ ಇವರೆಲ್ಲರೂ
ನಾಣುಗೆಟ್ಟರಲ್ಲಾ. ಇವರೆಲ್ಲರ ಕಾರ್ಯ ಇಲ್ಲಿಯೇ ಉಳಿಯಿತ್ತು. ಬಲ್ಲವರಾರೋ ಮಾರೇಶ್ವರಾ'[30]

ಮೋಳಿಗೆಯ ಮಾರಯ್ಯ ಬಸವ ಸಮಕಾಲೀನ ಶರಣರಲ್ಲಿ ಮಹಾಪುರುಷ. ಅರಸೊತ್ತಿಗೆಯನ್ನು ಬಿಟ್ಟುಬಂದು ಬಡತನವನ್ನು ಅಪ್ಪಿಕೊಂಡ ಮಹಿಮ. ನಿತ್ಯ ಕಾಡಿಗೆ ಹೋಗಿ ಕಟ್ಟಿಗೆ ಕಡಿದು ಹೊರೆಕಟ್ಟಿ ಮಾರಿ ಜೀವಿಸಿದ ಆತನ ಜೀವನ ದಿವ್ಯ ಜೀವನ; ಆ ಜೀವನ ಶರಣಧರ್ಮದ ಸಾರವಾಗಿದೆ. ಬಸವಣ್ಣನಂಥವರನ್ನೆ ಮೊದಲಿಸಿ ಯಾರ ಹಂಗಿನಲ್ಲಿಯೂ ಬಾಳದ ಹಿರಿಯ ಜೀವ ಅದು. ಕಾಯಕವನ್ನೇ, ಅನುಭಾವವಾಗಿಸಿ ಜೀವಿಸಿದ ಶ್ರೇಷ್ಠ ಶರಣ.

ಮೋಳಿಗೆ ಮಾರಯ್ಯನ ವಚನಗಳು ೮೯. 'ನಿಃಕಳಂಕ ಮಲ್ಲಿಕಾರ್ಜುನಾ' ಎಂಬುದು ಆತನ ಅಂಕಿತ. 'ಅವನ ಅಂಕಿತದಂತೆ ಅವನ ಸ್ವಭಾವ, ಅವನ ಸ್ವಭಾವದಂತೆ ಅವನ ವಚನಗಳು...ವಚನಗಳಲ್ಲಿ ಭಾಷೆಯ ಅಬ್ಬರವಿಲ್ಲ, ಭಾವದ ಜಟಿಲತೆಯಿಲ್ಲ. ಒಂದು ಬಗೆಯ ಮೃದುತ್ವಗುಣ ಅವನ ವಚನಗಳಲ್ಲಿ ಸರ್ವವ್ಯಾಪಿಯಾಗಿದೆ'[31]
ಇನ್ನೊಬ್ಬರ ಹಂಗಿಗೆ ಅಡಿಯಾಳಾದರೆ ಹಿರಿಯತನ ಉಳಿಯುವುದಿಲ್ಲವೆಂಬುದು ಈ ವಚನದಲ್ಲಿ ಸೊಗಸಾಗಿ ಮೂಡಿದೆ:

---

25. ಅದೇ ಪುಟ ೪೧೭ ವಚನ ೧೧೯೬ 26. ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ : ವಚನಸಾಹಿತ್ಯ–ಪುಟ ೧೨೪
27. ಡಾ॥ ಆರ್. ಸಿ. ಹಿರೇಮಠ (ಸಂ) : ಸಕಲ ಪುರಾತನರ ವಚನಗಳು—೧ ಪುಟ ೩೬೨ ವಚನ ೧೩೪೩
28. ಅದೇ.........ಪುಟ ೩೨೫ ವಚನ ೧೪೦೨ 29. ಅದೇ ಪುಟ ೩೬೪ ವಚನ ೧೩೫೪
30. ಡಾ॥ ಎಂ.ಎಸ್. ಸುಂಕಾಪುರ (ಸಂ) ; ಸಕಲ ಪುರಾತನರ ವಚನಗಳು ಸಂಪುಟ ಮೂರು ಪುಟ ೨೫೧ ವಚನ ೪೫೦
31. ಡಾ॥ ಎಂ. ಚಿದಾನಂದಮೂರ್ತಿ : ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ : ವಚನ ಸಾಹಿತ್ಯ ಪುಟ ೧೦೪-೧೦೫

'ವೇದವ ಕಲಿತು, ಶಾಸ್ತ್ರವನೋದಿ, ನಾನಾ ಪುರಾಣಂಗಳಲ್ಲಿ ಪರಿಣತೆಯಾದೆವೆಂದು
ಶ್ರುತಿ ಸ್ಮೃತಿಗಳಲ್ಲಿ ಪರತತ್ತ್ವವ ನೋಡಿ ಕಂಡಿಹೆವೆಂದು ಹೇಳುತ್ತಿರ್ಪ
ಹಿರಿಯರೆಲ್ಲರೂ, ಇಕ್ಕುವ ದಾತಾರನ ಬಾಗಿಲು ಕಾಯ್ದು, ಚಿಕ್ಕಮಕ್ಕಳಾದರು.
ದೃಷ್ಟವ ಬೋಧಿಸುವ ಹಿರಿಯರೆಲ್ಲರೂ ಕೆಟ್ಟರಲ್ಲಾ ! ಉತ್ತರದ ಬಲೆಗೆ ಸಿಕ್ಕದ ಮೂಷಕನಂತೆ ;
ಇರ್ಪದೃಷ್ಟವ ಕಂಡು ಮತ್ತೆ ಹಿರಿಯರೆಂದು ಹೋಟುತ್ತಿರ್ಪ ಮಿಟ್ಟಿಯ ಭಂಡರು ನೋಡಾ, ನಿಃಕಳಂಕ ಮಲ್ಲಿಕಾರ್ಜುನಾ'[32]

ಒಡೆಯ ಆಳು ಎಂಬ ಭೇದ ಒಳ್ಳೆಯದಲ್ಲ ಎಂದು ಹೇಳುವ ಈ ವಚನ ಮಾರಯ್ಯ ದೊರೆ ಇದ್ದುದು ನಿಶ್ಚಯ ಎಂಬುದನ್ನು ಸಾರುವಂತಿದೆ :

'ಆಳಿನಪಮಾನ ಆಳ್ದಂಗೆಂದಲ್ಲಿ, ಆಳ್ದನ ಅಪಮಾನ ಆಳಿಗೆ ಬಂದಲ್ಲಿ, ಉಭಯದ ನೋವು ಒಂದೆಂದು ತಿಳಿದಲ್ಲಿ,
ಕರ್ತನ ಭೃತ್ಯ ನುಡಿದನೆಂದು ಹೊತ್ತು ಹೋರಲೇತಕ್ಕೆ? ತನ್ನ ಮನೆ ಬೇವಲ್ಲಿ ಕೆಡಹಿ ಕಿತ್ತಡೆ ಕೇಡೆ ?
ನಾನೊಡೆಯ ಇವನಡಿಗನೆಂದು ಪಡಿಪುಚ್ಚವ ಮಾಡುವನ್ನಕ್ಕ ಅದು ತುಡುಗುಣಿಯ ಸವಿತ.
ಆ ನೊಡೆಯನಲ್ಲ ನಾನಡಿಗನಲ್ಲ ನಿಃಕಳಂಕ ಮಲ್ಲಿಕಾರ್ಜುನಾ'[33]

ಕೆಲವು ಉದಾಹರಣೆ, ಉಪಮಾನಗಳು ಆತ ಮಹಾಯೋಧನಿದ್ದನೆಂದೂ ದೊರೆಯಿದ್ದನೆಂದೂ ತಿಳಿಸುತ್ತವೆ.

'ಹಿಡಿತೆಯ ಹಿಡಿದು ಇಱಿಯಬೇಕಲ್ಲದೆ ಮೊನೆಯ ಹಿಡಿದು ಇಱಿವವರುಂಟೆ' ?
'ರಣಕ್ಕೆ ಅಲಗೇಱಿದಲ್ಲಿ ಹಲುಬಿದಡೆ ಬಿಡುವರೆ? 'ಬಲುಗಯ್ಯನೊಡನೆ ಹಗೆವಡೆದು ಕೊಲೆಗಂಜಲೇಕೆ ?
'ಹೆಣನ ಕಂಡಂಜುವಂಗೆ ರಣದ ಸುದ್ದಿಯೇಕೆ' ? 'ಆಳಾಗಿದ್ದು ಅರಸನಾಗಬಹುದಲ್ಲದೆ ಅರಸಾಗಿದ್ದು ಆಳಾಗಬಾರದು.'
'ರಾಜರಲ್ಲಿ ಹೊಕ್ಕು ಮತ್ತೆ ಅವರ ಆಗುಚೀಗೆಯ ಹೇಳಬೇಕು.' 'ಇಱು ಎಂಬುದಕ್ಕೆ ಮುನ್ನವೆ ಒಡಲು ಹಱಿಯಿತ್ತೆ' ?

ಮೋಳಿಗೆಯ ಮಾರಯ್ಯನೂ ತನ್ನ ವಚನದಲ್ಲಿ ವೀರಶೈವ ಶಬ್ದವನ್ನು ಬಳಸಿದ್ದಾನೆ; ಸತ್ತಿಗೆ ಕಾಯಕದ ಮಾರಿ ತಂದೆಯು ಕ್ರಿ. ಶ. ೧೫೦೦ ರಲ್ಲಿ ಇದ್ದನೆಂದು ಕವಿಚರಿತೆಗಾರರು ಹೇಳುತ್ತಾರೆ. ಆದರೆ ಆತನ ವಚನದಲ್ಲಿ ಬರುವ, 'ಎನ್ನಂಗದ ಸತ್ತಿಗೆಯ ಕಾಯಕ ಬಸವಣ್ಣಂಗೆ ನೆಳಲು ಹಿಂಗಿದಾಗವೇ ಕಾಯಕ ನಿಂದುದೆಂಬ ಭಾಷೆ...' ಎಂಬ ಮಾತಿನಿಂದ ಆತ ಬಸವಣ್ಣನವರ ಸಮಕಾಲೀನನೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಅಲ್ಲದೆ ಈತ ಬಸವಣ್ಣನಿಗೆ ಸತ್ತಿಗೆ ಹಿಡಿಯುತ್ತಿದ್ದನೆಂದು ಗುರುರಾಜ ಚಾರಿತ್ರದಲ್ಲಿ ಹೇಳಿದೆ.[34]

ಸತ್ತಿಗೆ ಕಾಯಕದ ಮಾರಿತಂದೆಯ ೧೦ ವಚನಗಳು ದೊರಕಿವೆ, ಈತನ ಅಂಕಿತ ಐಘಂಟೇಶ್ವರಲಿಂಗ. ತನ್ನ ಕಾಯಕವನ್ನು ಈ ಕೆಳಗಿನ ವಚನದಲ್ಲಿ ರೂಪಕ ಮಾಡಿದ್ದಾನೆ.

'ತತ್ತ್ವದ ಕಾವು, ನಿಜ ನಿಶ್ಚಯದ ಬಿದಿರು, ಭಕ್ತಿ ಜ್ಞಾನ ವೈರಾಗ್ಯ ಇಂತೀ ತ್ರಿವಿಧ ಮುಪ್ಪುರಿಗೂಡಿದ ನೂಲಿನಲ್ಲಿ
ಕಟ್ಟುಗಳ ಕಟ್ಟಿ ಅಹಂಕಾರ ಗರ್ವದ ನಿರುತವ ಬಿಡಿಸಿ ಭಕ್ತಿ ಸತ್ಯಕ್ಕೆ ತಲೆವಾಗುವಂತೆ ಭಾಗ ಒಪ್ಪವ ಮಾಡಿ
ಕರ್ಕಶ ಮಿಥ್ಯವೆಂಬ ಸಿಗುರೆದ್ದರೆ ಕೆತ್ತಿ ಹಾಕಿ, ಛತ್ರಕ್ಕೆ ಹೆಚ್ಚು ಕುಂದಿಲ್ಲದ ವರ್ತುಳಾಕಾರಕ್ಕೆ
ಚಿತ್ತ ವಸ್ತುವಿನಲ್ಲಿ ತೊಲಗದಂತೆ ಸಚ್ಚಿದವಾಗಿ ಅಷ್ಟಾವಧಾನಂಗಳೆಂಬ ಕಪ್ಪಡವ ಕವಿಸಿ
ಚತುಷ್ಟಯಂಗಳೆಂಬ ಸೆಱಗು ತಪ್ಪದೆ ಕತ್ತರಿಸಿ ಚಿತ್ತ ಹೆರೆಹಿಂಗದ ಲೆಕ್ಕಣಿಕೆಯಲ್ಲಿ ಚಿತ್ರವ ಬರೆದು
ಅಧಮ ಊರ್ಧ್ವವೆಂಬುದಕ್ಕೆ ಬಲುತೆಕ್ಕೆಯನಿಕ್ಕಿ ಸರ್ವವರ್ಮಂಗಳೆಂಬ ಬೆಣೆಗೀಲನಿಕ್ಕಿ
ಹಿಡಿವುತ್ತಿದ್ದೆ ಛತ್ರವ ನೆಳಲಿಲ್ಲದಂತೆ, ಐಘಂಟೇಶ್ವರ ಲಿಂಗಕ್ಕೆ ಬಿಸಿಲು ಮಳೆ ಗಾಳಿಗೆ ಹೊಱಗಾಗಬೇಕೆಂದು'[35]

ಹೆಂಡದ ಮಾರಯ್ಯ ಬಸವಣ್ಣನವರ ಸಮಕಾಲೀನ. ಹೆಸರೇ ಹೇಳುವಂತೆ ಆತನ ಕಾಯಕ ಹೆಂಡ ಮಾರುವುದು. ಆದರೆ ಆತನ ಕಾಯಕದ ರೀತಿಯೇ ಬೇರೆ. ಹೆಂಡ ಕುಡಿಯಲು ಬಂದವರಿಗೆ ಹೆಂಡ ಕುಡಿಸುತ್ತ ಶರಣರ ತತ್ತ್ವಗಳನ್ನು ಹೇಳುತ್ತಿದ್ದ. ಹೆಂಡ ಕುಡಿಯುವುದರಿಂದ ಆಗುವ ಅನಾಹುತಗಳನ್ನು ಬಿತ್ತರಿಸುತ್ತಿದ್ದ. ಹೆಂಡ ಕುಡಿಯಲು ಬಂದವರು ಅವನ ಉಪದೇಶಕ್ಕೆ ಬಂದು ಹೆಂಡ ಕುಡಿಯುವುದನ್ನು ತೊರೆದರು.

ಹೆಂಡದ ಮಾರಯ್ಯನ ೧೨ ವಚನಗಳು ದೊರಕಿವೆ. ಧರ್ಮೇಶ್ವರಲಿಂಗ ಎಂಬುದು ಅವನ ಅಂಕಿತ. ವಚನಗಳು ಸಹಜ ಸುಂದರವಾಗಿವೆ. ತನ್ನ ಕಾಯಕವನ್ನು ರೂಪಕಮಾಡಿ ಹೇಳುವ ವಚನಗಳು ಅತ್ಯಂತ ಸೊಗಸಾಗಿವೆ; ಈ ರೂಪಕಗಳಲ್ಲಿ ಹೊಸತನವೂ ಇದೆ:

'ನಾ ಮಾರಬಂದ ಸುಧೆಯ ಕೊಂಬವರಾರೂ ಇಲ್ಲ. ಹೊರಗಣ ಭಾಜನಕ್ಕೆ ಒಳಗಣ ಇಂದ್ರಿಯಕ್ಕೆ,
ಉಂಡುದಣಿದು ಕಂಡುದಣಿದು ಸಂದೇಹಬಿಟ್ಟು ದಣಿದು, ಕಂಡುದಕಾಣದೆ, ಸಂದೇಹದಲ್ಲಿ ಮರೆಯದೆ,
ಆನಂದವೆಂಬುದ ಆ ಲಿಂಗನವಂ ಮಾಡಿ ಆ ಕಂಗಳಂ ಮುಚ್ಚಿ ಮತ್ತೆಮಾಕಂಗಳಂ ತೆರೆದು ನೋಡಲಾಗಿ
ಧರ್ಮೇಶ್ವರಲಿಂಗವು ಕಾಣಬಂದಿತ್ತು'[36]

---

32. ಡಾ॥ ಆರ್.ಸಿ. ಹಿರೇಮಠ (ಸಂ) ಸಕಲ ಪುರಾತನರ ವಚನಗಳು—೧ ಪುಟ ೬೧೧ ವಚನ ೨೧೩೪
33. ಅದೇ—ಪುಟ ೪೯೯ ವಚನ ೧೮೧೭
34. ಸಿದ್ಧನಂಜೇಶ : ಗುರುರಾಜ ಚಾರಿತ್ರ ಸಂಧಿ ೭ ಪದ್ಯ ೧೬
35. ಡಾ॥ ಎಂ. ಎಸ್. ಸುಂಕಾಪುರ (ಸಂ) : ಸಕಲ ಪುರಾತನರ ವಚನಗಳು ಸಂಪುಟ-೩ ಪುಟ ೩೦೮ ವಚನ ೫೫೧
36. ಅದೇ ಪುಟ ೩೪೩ ವಚನ ೬೪೩

'ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆಹುಟ್ಟಿತ್ತು. ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇರಿತ್ತು. ಈ ಉನ್ಮತ್ತದಲ್ಲಿ ಮಗ್ನರಾದವರೆಲ್ಲರು ಅರುಹಿರಿಯರೆಂತಪ್ಪರೋ ? ಭಕ್ತಿವಿರಕ್ತಿಯೆಂಬುದು ಇತ್ತಲೆ ಉಳಿಯಿತ್ತು, ಧರ್ಮೇಶ್ವರಲಿಂಗದತ್ತ ಮುಟ್ಟದಡಂತಿಲ್ಲ'[37]

೭

ಕೊನೆಯದಾಗಿ ಒಂದು ಮಾತು ಹೇಳದೆ ಇರುವುದಕ್ಕೆ ಆಗಲಾರದ್ದಾಗಿದೆ. ಈ ಮಾತು ಇಂದು ಜಿಜ್ಞಾಸೆಗೆ ಒಳಗಾಗಬೇಕು. ಅದರಿಂದ ಸತ್ಯ ಹೊರಬೀಳುವುದು; ನಿಜವಾದ ಇತಿಹಾಸ ಬೆಳಕಿಗೆ ಬರುವುದು. ಆ ಮಾತೆಂದರೆ : ಕಳ್ಳರು, ಮೀನುಗಾರರು, ಹೆಂಡಮಾರುವವರು, ಅಕ್ಕಿ ಆಯುವವರು, ಛತ್ರಿ ಹಿಡಿವವರು, ಕೂಗು ಹಾಕುವವರು. ಕೋತಿಯಾಡಿಸುವವರು, ದುರಗಮುರುಗಿಯವರು, ಒಕ್ಕಲಿಗರು–ಎಂದರೆ ತೀರ ಸಾಮಾನ್ಯ ಕಾಯಕದವರು, ತೀರ ಎಂದರೆ ತೀರ ಸಾಮಾನ್ಯರು ಅನುಭಾವವನ್ನು ಅಳವಡಿಸಿಕೊಂಡು ವಚನ ಬರೆಯುವ ಹಂತಕ್ಕೆ ಮುಟ್ಟಿದ್ದು ಹೇಗೆ ? ಆಗ ಶಿಕ್ಷಣ ಕೇವಲ ದೊಡ್ಡ ಜಾತಿಯವರಿಗಷ್ಟೇ ಮೀಸಲಾಗಿತ್ತು. ವೇದ ಕೇಳಿದರೆ ಅಂಥವರ ಕಿವಿಯಲ್ಲಿ ಕಾದಸೀಸ ಸುರಿಯುವ ಕಾಲ ಅದು. ಹಾಗಿದ್ದಾಗ ಇವರಿಗೆ ಶಿಕ್ಷಣ ಕೊಟ್ಟವರು ಯಾರು ? ಅನುಭಾವದ ಹಾದಿತೋರಿಸಿದವರು ಯಾರು ? ಶರಣರು ಎನ್ನಬಹುದು. ಆದರೆ ಈ ಶರಣರೆಂದರೆ ಎಲ್ಲ ಅವರೆ ಅಲ್ಲ! ಇವರನ್ನು ಬಿಟ್ಟು ಶರಣರು ಮತ್ತೆ ಯಾರು? ಸಾವಿರ ಸಾವಿರ ಸಂಖ್ಯೆಯ ಜನರಿಗೆ ಶಿಕ್ಷಣ ಕೊಡುವ, ಅನುಭಾವದ ವಿದ್ಯೆಯನ್ನು ತಿಳಿಸುವ ಕಾರ್ಯಕ್ರಮ ಯಾರು ಹೇಗೆ ಹಾಕಿಕೊಂಡಿದ್ದರು ? ಸ್ವಲ್ಪ ಕಾಲದಲ್ಲಿಯೇ ಲಕ್ಷ ಸಂಖ್ಯೆಯ ಶರಣರು ಒಂದು ಧ್ಯೇಯಕ್ಕೆ ತಮ್ಮನ್ನು ಅರ್ಪಿಸಿಕೊಂಡು ಒಂದು ಮಹಾಕ್ರಾಂತಿ ಮಾಡಿದರಲ್ಲಾ! ಅದು ಹುಟ್ಟಿ ಬಂದುದು ಹೇಗೆ? ಸರ್ವರನ್ನು ಮುಟ್ಟಿದ್ದು ಹೇಗೆ ? ಎಲ್ಲಕ್ಕಿಂತ ಹೆಚ್ಚಾಗಿ ಅಜ್ಞಾನಿಗಳು, ಅವಿದ್ಯಾವಂತರು, ನಿಕೃಷ್ಟರನ್ನು ಎಚ್ಚರಿಸಿ ಅವರನ್ನು ಶರಣ ಮಟ್ಟಕ್ಕೆ ಏರಿಸಿದ್ದು ಹೇಗೆ? ಇದರ ಸಮಗ್ರ ಇತಿಹಾಸ ಬಯಲಿಗೆ ಬರಬೇಕು. ಆಗ ಶರಣರ ಕ್ರಾಂತಿ ಇನ್ನಷ್ಟು ಉಜ್ವಲವಾಗಿ ಕಂಡುಬರುವುದು. ಮತ್ತು ಲೋಕದಲ್ಲಿ ಅದನ್ನು ಸಾರಿದಾಗ ಅದಕ್ಕೆ ಬೆಲೆ ಇನ್ನೂ ಹೆಚ್ಚಾಗಿ, ಜನ ತಂತಾನೆ ಅದರ ಅನುಷ್ಠಾನಕ್ಕೆ ತೊಡಗಲು ಸಾಧ್ಯವಾದೀತು.

**ಸಹಾಯಕ ಸಾಹಿತ್ಯ**

**ಪ್ರಾಚೀನ ಗ್ರಂಥಗಳು**

ಗುರುರಾಜ ಚಾರಿತ್ರ : (ಸಂ. ಸಂ. ಶಿ. ಭೂಸನೂರುಮಠ)
ಚೆನ್ನಬಸವ ಪುರಾಣ : —
ಪ್ರಭುದೇವರ ಶೂನ್ಯಸಂಪಾದನೆ : (ಸಂ. ಸಂ. ಶಿ. ಭೂಸನೂರಮಠ)
ಪ್ರೌಢದೇವರಾಯನ ಕಾವ್ಯ : (ಸಂ. ಸಂ. ಶಿ. ಭೂಸನೂರಮಠ)
ಬಸವಣ್ಣನವರ ಷಟ್‌ಸ್ಥಲದ ವಚನಗಳು : (ಸಂ. ಶಿ. ಶಿ. ಬಸವನಾಳ)
ಬಸವ ಪುರಾಣ : (ಸಂ. ಡಾ॥ ಆರ್.ಸಿ. ಹಿರೇಮಠ)
ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಭಾಗ ೧ ಮತ್ತು ೨ : (ಸಂ. ಡಾ॥ ಆರ್.ಸಿ. ಹಿರೇಮಠ ಮತ್ತು ಡಾ॥ ಎಂ.ಎಸ್. ಸುಂಕಾಪುರ)
ಸಕಲ ಪುರಾತನರ ವಚನಗಳು ಸಂಪುಟ-೧ : (ಡಾ॥ ಆರ್.ಸಿ. ಹಿರೇಮಠ)
ಸಕಲ ಪುರಾತನರ ವಚನಗಳು ಸಂಪುಟ ೧ ಮತ್ತು ೨ : (ಡಾ॥ ಎಂ.ಎಸ್. ಸುಂಕಾಪುರ)
ಶಿವತತ್ತ್ವ ಚಿಂತಾಮಣಿ : (ಸಂ. ವಿದ್ವಾನ್ ಎಸ್. ಬಸಪ್ಪ)
ಶಿವದಾಸ ಗೀತಾಂಜಲಿ : (ಸಂ. ಡಾ॥ ಎಲ್. ಬಸವರಾಜು)
ಶಿವಶರಣೆಯರ ವಚನಗಳು : (ಸಂ. ಡಾ॥ ಆರ್.ಸಿ. ಹಿರೇಮಠ)

**ಆಧುನಿಕ ಗ್ರಂಥಗಳು**

ಗುಂಜಾಳ ಎಸ್. ಆರ್ : ಬಸವಣ್ಣನವರ ವಚನಪದಪ್ರಯೋಗಕೋಶ
ಚಿದಾನಂದಮೂರ್ತಿ : ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ, ವಚನಸಾಹಿತ್ಯ
ನರಸಿಂಹಾಚಾರ್ ಆರ್, : ಕರ್ನಾಟಕ ಕವಿಚರಿತೆ ಭಾಗ ೧,೨;೩
ಶಾಮರಾಯ ತ.ಸು. : ಶಿವಶರಣ ಕಥಾರತ್ನಕೋಶ
ಸಿದ್ಧಯ್ಯ ಪುರಾಣಿಕ : ಶರಣ ಚರಿತಾಮೃತ
ಹಳಕಟ್ಟಿ ಫ.ಗು : ಶಿವಶರಣ ಚರಿತ್ರೆಗಳು ಭಾಗ ೧,೨,೩
,, ಶಿವಶರಣೆಯರ ಚರಿತ್ರೆಗಳು
,, ಅಮರಗಣಾಧೀಶ್ವರರ ಚರಿತ್ರೆಗಳು

37. ಅದೇ ಪುಟ ೩೪೪ ವಚನ ೬೪೬.

# ಆಯ್ದಕ್ಕಿ ಮಾರಯ್ಯ

—ಡಾ॥ ಗುರುಲಿಂಗ ಕಾಪಸೆ

ಕರ್ನಾಟಕ ಇತಿಹಾಸದಲ್ಲಿ ಮತ್ತು ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನ ಒಂದು ಅನುಪಮವಾದ ಹಾಗೂ ಅವಿಸ್ಮರಣೀಯವಾದ ಯುಗ. ಸಾಮಾಜಿಕ ಹಾಗೂ ಸಾಹಿತ್ಯ ಜೀವನಕ್ಕೆ ಹೊಸ ತಿರುವು, ಹೊಸ ಮೆರಗು ಬಂದದ್ದು ಈ ಯುಗದಲ್ಲಿ. ಬಸವಣ್ಣ ಈ ಯುಗದ ಮಹಾಪುರುಷ. ಅವನು ತಾನೊಬ್ಬನೇ ಮಹಾಪುರುಷನಾಗಿ ಬೆಳೆಯದೆ, ಒಂದು ಜನ ಸಮುದಾಯವನ್ನೇ ಆ ಹಂತಕ್ಕೆ ಬೆಳೆಸಿಕೊಂಡೊಯ್ದನು. ಅವನಿಗೆ ವೈರಾಗ್ಯಮೂರ್ತಿ ಅಲ್ಲಮಪ್ರಭು ಮಾರ್ಗದರ್ಶನ ಮಾಡಿರ ಬಹುದು. ಚೆನ್ನಬಸವಣ್ಣ ಮೊದಲಾದವರು ಆತನು ಕೈಕೊಂಡ ಕಾರ್ಯದಲ್ಲಿ ಅಮಿತೋತ್ಸಾಹದಿಂದ ಸಹಭಾಗಿಗಳಾಗಿ ನಿಂತಿರ ಬಹುದು. ಆದರೇನು ? ಅವರೆಲ್ಲರಿಗೆ ಸಹಜ ವಿನಯದಿಂದ, ಸರಳವಾದ ಆಚರಣೆಯಿಂದ, ಎಲ್ಲಕ್ಕೂ ಮಿಗಿಲಾಗಿ ಅನನ್ಯವಾದ ಆತ್ಮೀಯತೆಯಿಂದ ತನ್ನ ಅಂತರಂಗದಲ್ಲಿ ಇಂಬುಗೊಟ್ಟು, ಅನುಭವಮಂಟಪವನ್ನು ಸ್ಥಾಪಿಸಿ, ಸಾಮೂಹಿಕವಾದ ಅನುಭಾವದ ಚರ್ಚೆಗೆ, ತಮ್ಮ ತಮ್ಮ ಸಾಧನೆಗಳಲ್ಲಿಯ ಸಂದೇಹಗಳ ನಿವಾರಣೆಗೆ ಅನುವು ಮಾಡಿಕೊಟ್ಟ ಶ್ರೇಯಸ್ಸು ಬಸವಣ್ಣನಿಗೇ ಸಲ್ಲು ತ್ತದೆ. ಅನುಭವಮಂಟಪ ಒಂದು ಜ್ಞಾನಸತ್ರ. ಬಹುಶಃ ಅಂಥ ಜ್ಞಾನಸತ್ರ ಅಷ್ಟು ಕ್ರಮಬದ್ಧವಾಗಿ, ಸುವ್ಯವಸ್ಥಿತವಾಗಿ ಕರ್ನಾಟಕ ಇತಿಹಾಸದಲ್ಲಿ ಮತ್ತೆಲ್ಲಿಯೂ ನಡೆದಂತಿಲ್ಲ. ಈ ಅಪೂರ್ವವೂ ಅದ್ವಿತೀಯವೂ ಆದ ಅನುಭವಮಂಟಪ ಹಲವಾರು ಶರಣರನ್ನು, ವಚನಕಾರರನ್ನು ಬೆಳಕಿಗೆ ತಂದಿತು. ಅಂಥ ಶರಣರಲ್ಲಿ, ವಚನಕಾರರಲ್ಲಿ ಆಯ್ದಕ್ಕಿ ಮಾರಯ್ಯನೂ ಒಬ್ಬ. ಆತ ನೊಂದಿಗೆ ಆತನ ಪತ್ನಿ ಶರಣೆ ಲಕ್ಕಮ್ಮನೂ ಗಮನಾರ್ಹ ವ್ಯಕ್ತಿಯಾಗಿ ಕಾಣಿಸಿಕೊಂಡಿದ್ದುದು ಒಂದು ವಿಶೇಷ. ಇವರಂತಹ ಶರಣದಂಪತಿಗಳ ಇನ್ನೂ ಕೆಲವು ಜೋಡಿಗಳೂ ಇವೆ; ಅದು ಬೇರೆ ವಿಷಯ.

ಆಯ್ದಕ್ಕಿ ಮಾರಯ್ಯ ಬಸವಣ್ಣನವರ ಕಾಲದಲ್ಲಿದ್ದನೆಂಬುದು ನಿರ್ವಿವಾದ. ಹಾಗಿದ್ದೂ ಆತನ ಚರಿತ್ರೆಗೆ ಸಂಬಂಧಿಸಿದ ವಿವರಗಳು ನಮಗೆ ಅನುಪಲಬ್ಧ. ಶರಣರು ತಮ್ಮ ವೈಯಕ್ತಿಕ ಚರಿತ್ರೆಗೆ ಗಮನಕೊಟ್ಟವರಲ್ಲ. ನಮ್ಮ ಅನೇಕ ಕವಿಗಳೂ ಹಾಗೆಯೇ. ಭಾರತೀಯ ಪರಂಪರೆಯಲ್ಲಿಯೇ ಐತಿಹಾಸಿಕ ಸಂಗತಿಗಳಿಗೆ ಕೊಡಬೇಕಾದಷ್ಟು ಮಹತ್ವವನ್ನು ಕೊಡದಿರುವುದು ಒಂದು ಕೊರತೆಯಾಗಿಯೇ ಕಂಡುಬರುತ್ತದೆ. ಶರಣರ, ಅನುಭಾವಿಗಳ ಚರಿತ್ರೆಗಳು ನಮ್ಮಲ್ಲಿ ಪುರಾಣಗಳಾಗಿವೆ. ಅರಸರ, ಚಕ್ರವರ್ತಿಗಳ ಇತಿಹಾಸವು ಸ್ತುತಿಪಾಠಕರ, ಕವಿಗಳ ಕೈಯಲ್ಲಿ ಸಿಕ್ಕು ಕಲ್ಪನಾರಮ್ಯ ಚಿತ್ರಗಳಾಗಿವೆ. ಹೀಗಾಗಿ ನಮಗೆ ವಾಸ್ತವ ಚರಿತ್ರೆಯನ್ನು ಗುರುತಿಸುವುದು ಕಷ್ಟದ ಮಾತಾಗಿದೆ. ತಮ್ಮ ಹುಟ್ಟು, ಬೆಳವಣಿಗೆ ಮುಂತಾದವುಗಳ ಬಗ್ಗೆ ದಿವ್ಯನಿರ್ಲಕ್ಷ್ಯದಿಂದಿದ್ದ ವಚನಕಾರರ ಚರಿತ್ರೆ ನಮಗೆ ಅಸ್ಪಷ್ಟವಾಗಿ ತಿಳಿದಿರುವುದು ತೀರ ಸ್ವಾಭಾವಿಕವಾಗಿದೆ. ಅಲ್ಲಮ ಪ್ರಭು, ಅಕ್ಕಮಹಾದೇವಿ, ಬಸವಣ್ಣ, ಚೆನ್ನಬಸವಣ್ಣ ಇಂಥ ಮಹಾನುಭಾವರ ತಂದೆ–ತಾಯಿ, ಊರು, ಜನ್ಮಗಳ ಬಗ್ಗೆ ಖಚಿತ ವಾಗಿ ಹೇಳುವುದು ಇಂದಿಗೂ ಕಷ್ಟಕರವಾಗಿಯೇ ಇದೆ. ಅಲ್ಲಿ ಇಲ್ಲಿ ಸಿಕ್ಕುವ ಸುಳಿವುಗಳಿಂದ ಅವರ ಚರಿತ್ರೆಯನ್ನು ಚಿತ್ರಿಸಿ ಕೊಳ್ಳುವ ಪ್ರಯತ್ನಗಳು ಆಗೀಗ ನಡೆಯುತ್ತಲಿವೆ.

ಆಯ್ದಕ್ಕಿ ಮಾರಯ್ಯನ ಬಗ್ಗೆ ನಮಗೆ ಸಿಗುವ ಸುಳಿವುಗಳು ಬಹಳ ಕಡಿಮೆ. 'ಶೂನ್ಯಸಂಪಾದನೆ'ಯನ್ನುಳಿದು ಬೇರೆಡೆ ಗಳಲ್ಲಿ ಆತನ ಬಗ್ಗೆ ಯಾವ ವಿವರಣೆಯೂ ದೊರೆಯುವುದಿಲ್ಲ. ಹಲವು ಶರಣರನ್ನು ಕುರಿತು ಬರೆದ ಹರಿಹರನು ಮಾರಯ್ಯ ನನ್ನು ಕುರಿತು ಒಂದು ರಗಳೆ ಬರೆದಿದ್ದುದು ಕಂಡುಬರುವುದಿಲ್ಲ. ಗೂಳೂರು ಸಿದ್ಧವೀರಣ್ಣೊಡೆಯರು ಸಂಪಾದಿಸಿದ 'ಶೂನ್ಯಸಂಪಾ ದನೆ' ಮತ್ತು ಗುಮ್ಮಳಾಪುರ ಸಿದ್ಧಲಿಂಗದೇವರು ಸಂಪಾದಿಸಿದ 'ಶೂನ್ಯಸಂಪಾದನೆ'ಗಳಲ್ಲಿ ಮಾತ್ರ ಆಯ್ದಕ್ಕಿ ಮಾರಯ್ಯ ದಂಪತಿ ಗಳು ಒಟ್ಟಿಗೆ ಕಾಣಿಸಿಕೊಳ್ಳುತ್ತಾರೆ. ಕಾಯಕನಿಷ್ಠ ಮತ್ತು ತತ್ತ್ವನಿಷ್ಠ ಈ ದಂಪತಿಗಳು ಆ ಕಾಲದ ಶರಣರಲ್ಲಿ ಮಹತ್ವದ ವ್ಯಕ್ತಿಗಳಾಗಿರುವುದು ಇಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಜೊತೆಗೆ ಅವರು ವಚನಕಾರರಾಗಿದ್ದುದೂ ತಿಳಿದುಬರುತ್ತದೆ.

ಕವಿಚರಿತ್ರೆಕಾರರು ಆಯ್ದಕ್ಕಿ ಮಾರಯ್ಯನನ್ನು ವೀರಶೈವ ಕವಿಯೆಂದು ಗುರುತಿಸಿ ಆತನು ವಚನಗಳನ್ನು ಬರೆದಿರುವು ದನ್ನು ಉಲ್ಲೇಖಿಸಿದ್ದಾರೆ. ಆತನ ಕಾಲ ಸು. ೧೧೬೦ ಎಂದೂ ಆತನು ಬರೆದ ವಚನಗಳ ಸಂಖ್ಯೆ ೫೮ ಎಂದೂ ಅವರು ಅಭಿ ಪ್ರಾಯಪಟ್ಟಿದ್ದಾರೆ. ಆತನ ಕಾಲ ಸು. ೧೧೬೦ ಎಂಬುದು ಈಗ ಪ್ರಶ್ನಾತೀತವಾದುದು. ಆದರೆ ವಚನಗಳ ಸಂಖ್ಯೆ ೫೮ ಎಂದಿ ರುವುದು ಇನ್ನೂ ಖಚಿತಪಡಬೇಕಾದ ವಿಷಯ. ಶೂನ್ಯಸಂಪಾದನೆಯಲ್ಲಿ ಆತನ ವಚನಗಳು ಬಹಳಿಲ್ಲ. ಗೂಳೂರು ಅವರ ಸಂಪಾ ದನೆಯಲ್ಲಿ ೨೨ ವಚನಗಳಿದ್ದರೆ, ಗುಮ್ಮಳಾಪುರ ಅವರ ಸಂಪಾದನೆಯಲ್ಲಿ ೧೫ ವಚನಗಳಿವೆ. ಇವುಗಳ ಹೊರತಾಗಿ ಆತನು ವಚನಗಳನ್ನು ಬರೆದಿರುವ ಸಾಧ್ಯತೆಯಿಲ್ಲದಿಲ್ಲ. ಅವನ್ನೆಲ್ಲ ಸಂಶೋಧಿಸಿ ಒಟ್ಟು ಸಂಖ್ಯೆಯನ್ನು ಗುರುತಿಸಬೇಕಾದ ಕಾರ್ಯ ಇನ್ನು ಆಗಬೇಕಾಗಿದೆ. ಆತನ ಒಟ್ಟು ವಚನಗಳು ಸಿಕ್ಕಾಗ ಆತನ ವ್ಯಕ್ತಿತ್ವದ ಇನ್ನೂ ಹೆಚ್ಚಿನ ವಿಶೇಷತೆಗಳು ತಿಳಿಯಬಹುದಾಗಿದೆ. ಸದ್ಯದ ಮಟ್ಟಿಗೆ 'ಶೂನ್ಯಸಂಪಾದನೆ'ಯ ವಚನಗಳೇ ಆತನ ವ್ಯಕ್ತಿತ್ವವನ್ನು ತಿಳಿಸುವ ಸಾಮಗ್ರಿ.

ಆಯ್ದಕ್ಕಿ ಮಾರಯ್ಯಗಳ ವಚನಗಳ ಅಂಕಿತ 'ಅಮರೇಶ್ವರಲಿಂಗ' ಎಂಬುದು. ಅದು ಒಂದು ಪಾಠಾಂತರದಂತೆ 'ಅಮಲೇಶ್ವರಲಿಂಗ'ವೂ ಆಹುದು. ಅಮರೇಶ್ವರಲಿಂಗವೆಂಬುದೇ ಹೆಚ್ಚು ಬಳಕೆಯಲ್ಲಿರುವ ಅಂಕಿತ. ರಾಯಚೂರ ಜಿಲ್ಲೆಯ ಲಿಂಗಸೂಗೂರ ಹತ್ತಿರದ ಅಮರೇಶ್ವರ ಎಂಬಲ್ಲಿ ಅಮರೇಶ್ವರ ದೇವಾಲಯವಿದೆ. ಈ ಅಮರೇಶ್ವರವೇ ಆಯ್ದಕ್ಕಿ ಮಾರಯ್ಯನ ಆರಾಧ್ಯ ದೈವ. ಮಾರಯ್ಯನು ರಾಯಚೂರ ಜಿಲ್ಲೆಯ ಅಮರೇಶ್ವರದವನೆಂಬುದು ಈಗ ಖಚಿತವಾಗಿರುವ ಮಾತು. ಅಲ್ಲಿ ಆತನು ತನ್ನ ಜೀವನದ ಪೂರ್ವಾರ್ಧದ ಕೆಲವು ವರ್ಷ ಕಳೆದು, ಬಸವಣ್ಣನವರ ಖ್ಯಾತಿಯನ್ನು ತಿಳಿದ ಮೇಲೆ ಕಲ್ಯಾಣಕ್ಕೆ ಬಂದು, ಅಲ್ಲಿಯ ಶರಣ ಸಂದೋಹದಲ್ಲಿ ಬೆರೆತು, ತನ್ನ ಬದುಕನ್ನು ಸಾರ್ಥಕಪಡಿಸಿಕೊಂಡಂತೆ ತಿಳಿದುಬರುತ್ತದೆ. ಇದಕ್ಕೂ ಹೆಚ್ಚಿನ ಜೀವನಚರಿತ್ರೆಯ ಸಂಗತಿಗಳು ದೊರೆತಿಲ್ಲ. ಆತನ ಉಪಲಬ್ಧ ವಚನಗಳು ಆತನ ತಾತ್ತ್ವಿಕ ನಿಲುವನ್ನು ಸ್ಪಷ್ಟವಾಗಿ ತೋರಿಸಿಕೊಡುತ್ತವೆ.

ಮಾರಯ್ಯ ಮೂಲತಃ ಕಾಯಕನಿಷ್ಠ ಶರಣ. ಕಾಯಕವು ಗುರುದರ್ಶನ, ಲಿಂಗಪೂಜೆ, ಜಂಗಮ ದಾಸೋಹಕ್ಕಿಂತ ಮಿಗಿಲಾದದ್ದೆಂದು ಆತನು ಕಂಡುಕೊಂಡ ಒಂದು ಅನುಭವಸತ್ಯ, ಅನುಭವಮಂಟಪದಲ್ಲಿ ಆತನು ತನ್ನ ಕಾಯಕದ ಮೇಲ್ಮೆಯನ್ನು ಎತ್ತಿತೋರಿಸುವುದರೊಂದಿಗೇ ಚರ್ಚೆಯನ್ನು ಪ್ರಾರಂಭಿಸುವನು :

> ಕಾಯಕದಲ್ಲಿ ನಿರತನಾದರೆ ಗುರುದರುಶನವಾದಡೂ ಮಱೆಯಬೇಕು,
> ಲಿಂಗಪೂಜೆಯಾದಡೂ ಮಱೆಯಬೇಕು, ಜಂಗಮ ಮುಂದಿದ್ದಡೂ ಹಂಗು ಹಱಿಯಬೇಕು.
> ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು,

ಕಾಯಕಕ್ಕೆ ಶರಣರು ಮಹತ್ವದ ಸ್ಥಾನವನ್ನು ಕೊಟ್ಟಿದ್ದರೆಂಬುದು ನಿಜ. ಆದರೆ ಗುರು, ಲಿಂಗ, ಜಂಗಮಗಳನ್ನು ಮರೆಯುವಷ್ಟು ಅದಕ್ಕೆ ಹಿರಿಯಸ್ಥಾನವನ್ನು ಕೊಟ್ಟವನು ಆಯ್ದಕ್ಕಿ ಮಾರಯ್ಯನೆಂಬುದು ಒಂದು ಗಮನಾರ್ಹವಾದ ವಿಷಯ. 'ಕಾಯಕವೇ ಕೈಲಾಸ'ಎಂಬ ಅವನ ಸೂಕ್ತಿ ಅತ್ಯಂತ ಅರ್ಥಪೂರ್ಣವಾದುದು. ಗುರುಸೇವೆಯಿಂದ ಹಾಗೂ ಆತನ ಕೃಪೆಯಿಂದ, ಲಿಂಗಪೂಜೆಯಿಂದ ಹಾಗೂ ಅದರ ಅನುಗ್ರಹದಿಂದ, ಜಂಗಮದಾಸೋಹದಿಂದ ಹಾಗೂ ಜಂಗಮಕಾರುಣ್ಯದಿಂದ ಪಡೆಯಬೇಕಾದದ್ದೂ ಕೈಲಾಸವೇ. ಈ ಕೈಲಾಸವನ್ನು ಬೇರೆ ಶಬ್ದಗಳಲ್ಲಿ ಜೀವನ ಸಿದ್ಧಿ ಅಥವಾ ಮುಕ್ತಿಯೆಂದು ಹೇಳಬಹುದು. ಈ ಸಿದ್ಧಿ ಕಾಯಕದಿಂದಲೇ ಫಲಿಸುವುದೆಂಬ ಆತನ ಅಭಿಪ್ರಾಯ ಒಂದು ನೂತನ ಕಾಣ್ಕೆ. ಈ ಅಭಿಪ್ರಾಯ ಅಂದು ಅನುಭವಮಂಟಪದಲ್ಲಿ ಹೊಸ ಬೆಳಕನ್ನೇ ಬೀರಿರಬೇಕು,

ಕಾಯಕ ಹಾಗೂ ಅದರ ಫಲಶ್ರುತಿಯ ವಿಷಯವಾಗಿಯೂ ಮಾರಯ್ಯನು ತಳೆದ ನಿಲುವು ಖಚಿತವಾಗಿಯೇ ಇದೆ. ಅವನ ದೃಷ್ಟಿಯಲ್ಲಿ 'ಹಾಗದ ಕಾಯಕ ಮಾಡಿಕೊಂಡು ಹಣವಡ್ಡವ ತಾ' ಎಂಬುದು ಸತ್ಯಕಾಯಕವಲ್ಲ. 'ಕಾಯಕಕ್ಕೆ ಕಡಿಮೆಯಾಗಿ ತಾರೆಂಬುದು ಚಿತ್ತಶುದ್ಧ ಕಾಯಕ.' ಇದು ನಿಜವಾಗಿ ಭಕ್ತರು ಮಾಡುವ ಕಾಯಕ. ದುಡಿಯುವುದು ಅದಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವುದು ಸಾಮಾನ್ಯ ಲೌಕಿಕದ ರೀತಿ. ಈ ಲೌಕಿಕವನ್ನೇ ಮಾರ್ಕ್ಸನಂಥ ಸೌಮ್ಯವಾದಿಗಳು ಎತ್ತಿಹಿಡಿದರು ; ಮತ್ತು ಅದಕ್ಕೆ ಸಾಮಾಜಿಕ ಮಹತ್ವವನ್ನು ತಂದುಕೊಟ್ಟರು. ಆದರೆ ಶರಣರು ಸಾಮಾಜಿಕ ಮಹತ್ವವನ್ನೂ ಕೊಟ್ಟು, ಆಧ್ಯಾತ್ಮಿಕ ಉದಾತ್ತವಾದ ಇನ್ನೊಂದು ಮುಖವೂ ಅದಕ್ಕಿರುವುದನ್ನು ತೋರಿಸಿಕೊಟ್ಟರು. ಅಂತೆಯೇ ಅವರದು ಬರಿಯ ಸಮಾಜವಾದವಲ್ಲ,ಆಧ್ಯಾತ್ಮಿಕ ಬುನಾದಿಯುಳ್ಳ ಸಮಾಜವಾದ. ಈ ಸಮಾಜವಾದದಲ್ಲಿ ಶ್ರಮಗೌರವವನ್ನು ಒಪ್ಪಿಕೊಂಡ, ದಿವ್ಯಶಕ್ತಿಯೊಂದರಲ್ಲಿ ಶ್ರದ್ಧೆ, ನಿಷ್ಠೆಗಳನ್ನು ಇರಿಸಿಕೊಂಡ ವಿಶೇಷ ಲಕ್ಷಣಗಳನ್ನು ಕಾಣಬಹುದು.

ಕಾಯಕ ಮರೆತ ನಿಯಮವ್ರತಗಳನ್ನು ಆಯ್ದಕ್ಕಿ ಮಾರಯ್ಯನಂಥವರು ಸ್ವೀಕರಿಸಿದವರಲ್ಲ, ಅಂತೆಯೇ ಅವರು ಅಂಥ ನಿಯಮಗಳನ್ನು ಹೊತ್ತವರನ್ನು ಟೀಕಿಸಿದುದುಂಟು.

> ನೇಮವ ಮಾಡಿಕೊಂಡು, ಭಕ್ತರ ಭವನಂಗಳ ಹೊಕ್ಕು
> ಕಾಯಕ ಸತ್ತು, ಹಣ ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೆ ಸದ್ಭಕ್ತಂಗೆ ? ಆ ಗುಣ ಅಮರೇಶ್ವರ ಲಿಂಗಕ್ಕೆ ದೂರ.

ಇದು ಅವರ ಸ್ಪಷ್ಟ ಅಭಿಪ್ರಾಯ. ಕಾಯಕ ವಿಚಾರವನ್ನು ಮಾರಯ್ಯನು ಮಂಡಿಸುತ್ತ :

> ಗುರುಲಿಂಗ ಜಂಗಮದಲ್ಲಿ ಬೆರಸಿ ದಾಸೋಹವ ಮಾಡುವಲ್ಲಿ ಹೊನ್ನು ಹೆಣ್ಣು ಮಣ್ಣು ಇವೇ ಮೂಲ ಮೊದಲು.
> ಮಾಟ ಸ್ವಸ್ಥವಾದಲ್ಲಿ ಮೂಱ ಮಱೆಯಬೇಕು ಅಮರೇಶ್ವರಲಿಂಗವನಱಿವುದಕ್ಕೆ.

ಮಾಟ ಸ್ವಸ್ಥವಾದಲ್ಲಿ ಹೊನ್ನು ಹೆಣ್ಣು ಮಣ್ಣು–ಇವು ಮೂರನ್ನು ಮರೆಯಬೇಕೆನ್ನುವ ತನ್ಮಯತೆಯಲ್ಲಿ ಒಂದು ವಿಶೇಷ ಅರ್ಥ ಹುದುಗಿರುವುದನ್ನು ಕಾಣಬಹುದು. ಇದು ಲೌಕಿಕವನ್ನು, ಇಂದ್ರಿಯಗಳ ವ್ಯಾಮೋಹವನ್ನು ಜಯಿಸಿರಬೇಕೆಂಬುದನ್ನು ಪರ್ಯಾಯವಾಗಿ ಸೂಚಿಸದಿರದು. ಇಂಥ ಒಂದು ಉದಾತ್ತವಾದ ಕಾಯಕವೇ ಗುರುಲಿಂಗಜಂಗಮದ ಹಂಗನ್ನು ಮೀರಿ ನಿಲ್ಲುವಂತ

ಹುದು. ಹಾಗಿದ್ದರೂ ಇದು ಶರಣರ ಶಿವಾದ್ವೈತ ಸಿದ್ಧಿಯ ಹಂತವಲ್ಲ. ಅಂತೆಯೇ ಅಲ್ಲಮಪ್ರಭುಗಳು ಈ ಕಡೆಗೆ ಮಾರಯ್ಯನ ಲಕ್ಷ್ಯವನ್ನು ಎಳೆಯುತ್ತಾರೆ:

> ಮಾಡುವ ಮಾಟದಿಂದವೆ ಬೇಱೊಂದನಱಿಯಬೇಕು ಅಱಿವಿಂಗೆ ನೆಮ್ಮುಗೆ ಒಡಮೂಡಬೇಕು
> ಅಱಿವಿಂಗೆ ನೆಮ್ಮುಗೆ ಒಡಗೂಡಿದ ಬಳಿಕ ಬಯಲ ಭ್ರಮೆಯ ಕಳೆದು ನಮ್ಮ ಗುಹೇಶ್ವರ ಲಿಂಗದಲ್ಲಿ ನಿಜಪದವನೈದುವುದು ಮಾರಯ್ಯ

ಇದು ಅಲ್ಲಮಪ್ರಭುದೇವರ ತಾತ್ವಿಕ ಉಪದೇಶ. ಈ ಉಪದೇಶ ಮಾರಯ್ಯನನ್ನು ಅಂತರ್ಮುಖಿಯನ್ನಾಗಿ ಮಾಡುತ್ತದೆ, ತತ್ತ್ವ ಚಿಂತನೆಗೆ ತೊಡಗಿಸುತ್ತದೆ. ಆತನು ತಾನು ನಿಂತ ನಿಲುವಿನಿಂದ ಮೇಲೆದ್ದು ಬರುವುದರ ಕಡೆಗೆ ದೃಷ್ಟಿಯನ್ನು ಹೊರಳಿಸುತ್ತಾನೆ.

ಮಾಟದಿಂದ ಅಱಿವಿಗೆ, ಅಱಿವಿನಿಂದ ನೆಮ್ಮುಗೆಗೆ ಸಾಗುವ ಚಿಂತನೆಯಲ್ಲಿ ತನ್ನನ್ನು ತಾನು ಮರೆತಾಗ, ಮತ್ತೆ ಅತನನ್ನು ಕಾಯಕದಲ್ಲಿ ತೊಡಗಿಸುವ ಕಾರ್ಯವನ್ನು ಮಾಡುವವಳು ಆತನ ಪತ್ನಿ ಲಕ್ಕಮ್ಮ. ಲಕ್ಕಮ್ಮನು ಕಾಯಕನಿಷ್ಠೆಯಲ್ಲಿ ಮಾರಯ್ಯನಿಗಿಂತ ಒಂದು ತೂಕ ಹೆಚ್ಚಿನ ವ್ಯಕ್ತಿತ್ವವುಳ್ಳ ಶರಣೆಯೆಂಬುದು ಆಕೆಯ ವಚನಗಳಿಂದ ಗೊತ್ತಾಗುತ್ತದೆ. 'ಭಾವ ಶುದ್ಧವಾಗಿ, ಅಂಗವಱಿತ ಅಱಿವೆಯ ಅಂಗದಲ್ಲಿ, ಬಯಕೆಯಱಿತ ಕೈಯಲ್ಲಿ' ಕಾಯಕ ನಿರ್ವಹಿಸಬೇಕೆನ್ನುವ ಆಕೆಯ ಸಲಹೆಯಲ್ಲಿಯೇ ಆಕೆಯ ಮನೋಧರ್ಮ ಎಂತಹುದೆಂಬುದು ವೇದ್ಯವಾಗುತ್ತದೆ. ಇದಕ್ಕೂ ಹೆಚ್ಚಾಗಿ ಮಾರಯ್ಯನು ಬಸವಣ್ಣನವರ ಅಂಗಳಕ್ಕೆ ಹೋಗಿ, ಅಲ್ಲಿ ವೆಗ್ಗಳವಾಗಿ ಚೆಲ್ಲಿದ್ದ ಅಕ್ಕಿಯನ್ನು ಕಂಡು, ಹಿಂದು ಮುಂದಿನ ಆಲೋಚನೆಯಿಲ್ಲದೆ, ಅನಾಯಾಸವಾಗಿ ದಿನಕ್ಕಿಂತ ಹೆಚ್ಚು ಸಿಕ್ಕ ಅಕ್ಕಿಯನ್ನು ಆಯ್ದುಕೊಂಡು ಬಂದಾಗ ಲಕ್ಕಮ್ಮನು ತೋರಿಸುವ ಪ್ರತಿಕ್ರಿಯೆಯಲ್ಲಿ ಆಕೆಯ ವ್ಯಕ್ತಿತ್ವದ ಮಹತ್ವ ನಮ್ಮ ಗಮನಕ್ಕೆ ಬರುತ್ತದೆ :

> ಸಂದಣಿಗೊಂಡು ಮನಹರುಷದಿಂದ ಬಸವಣ್ಣನ ಅಂಗಳಕ್ಕೆ ಹೋಗಿ ತಿಪ್ಪೆಯ ತಪ್ಪಲಲ್ಲಿ ಬಿದ್ದಿದ್ದ ತಂಡುಲವ ಕಟ್ಟಿಕೊಂಡು
> ಎಯ್ದಾಗಿ ತಂದ ಆಸೆ ಎಯ್ದಾಗಿ ಬಂದಿತಲ್ಲಾ ! ಎಂದಿನಂದವೆ ಸಾಕು.
> ಮತ್ತೆ ಕೊಂಡುಹೋಗಿ ಅಲ್ಲಿಯೇ ಸುರಿ ಮಾರಯ್ಯಪ್ರಿಯ ಅಮರೇಶ್ವರಲಿಂಗ ಕೊಟ್ಟ ಕಾಯಕವೆ ಸಾಕು ಮಾರಯ್ಯಾ.

ಎಂದು ಲಕ್ಕಮ್ಮ ಸತ್‌ಕಾಯಕದ ಪರಿಯನ್ನು ತಿಳಿಸಿಕೊಡುವಳಲ್ಲದೆ,

> ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗೆ ಉಂಟೆ ಅಯ್ಯಾ ? ರೋಷ ಎಂಬುದು ಯಮದೂತರಿಗಲ್ಲದೆ ಅಜಾತರಿಗೆ ಉಂಟೆ ಅಯ್ಯಾ?
> ಈಸಕ್ಕಿಯಾಸೆ ನಿಮಗೇಕೆ ? ಈಶ್ವರನೊಪ್ಪ ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ದೂರ ಮಾರಯ್ಯಾ !

ಇದು ಇನ್ನಷ್ಟು ಖಂಡಿತವಾದ ಮಾತು. ಆಸೆಯೆಂಬುದು ಅರಸರಿಗೆ ಅಂದರೆ ಲೌಕಿಕದ ಆಶೆ, ಆಮಿಷ ಉಳ್ಳವರಿಗೆ ಮಾತ್ರ ಸಂಬಂಧಿಸಿದ್ದು. ಅದು ಶಿವಭಕ್ತರಿಗೆ ಅಂದರೆ ಲೌಕಿಕ ಆಶೆ–ಆಮಿಷಗಳನ್ನು ಜಯಿಸಿ ನಿಂತವರಿಗೆ ಸಂಬಂಧಿಸಿದುದಲ್ಲ. ಈ ಅಭಿಪ್ರಾಯವನ್ನು ಮುಂದುವರಿಸಿದ ಆಕೆ ಘನ ಶಿವಭಕ್ತರಿಗೆ ಬಡತನವಿಲ್ಲ ಎಂಬುದನ್ನು ಹಲವು ವಿಧದಲ್ಲಿ ಸ್ಪಷ್ಟಪಡಿಸಿದ್ದಾಳೆ. ಅಷ್ಟಲ್ಲದೆ ಒಮ್ಮನದಲ್ಲಿ ಭಕ್ತರು ಮಾಡುವ ಕಾಯಕವೇ ಮಿಗಿಲಾದದ್ದು ಎಂದೂ ಸಾರಿದ್ದಾಳೆ:

> ಭಕ್ತರು ಕಾಯಕವೆಂದು ದಾಯಗಾಱಿಕೆಯಲ್ಲಿ ತಂದು ದಾಸೋಹವ ಮಾಡಬಹುದೆ ?
> ಒಮ್ಮನವ ತಂದು, ಒಮ್ಮನದಲ್ಲಿಯೇ ಮಾಡಿ, ಇಮ್ಮನವಾಗದ ಮುನ್ನವೆ ಮಾರಯ್ಯ ಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲಬೇಕು ಮಾರಯ್ಯಾ!
> ಒಮ್ಮನವ ಮೀಱಿ ಇಮ್ಮನದಲ್ಲಿ ತಂದಿರಿ; ಇದು ನಿಮ್ಮ ಮನವೋ ಬಸವಣ್ಣನ ಅನುಮಾನದ ಚಿತ್ತವೋ ?
> ಈ ಮಾತು ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲದ ಬೋನ ; ಅಲ್ಲಿಯೇ ಸುರಿದು ಬನ್ನಿ ಮಾರಯ್ಯಾ !

ಈ ವಚನಗಳ ಆಶಯ ಅನನ್ಯವಾದುದು. ಲೌಕಿಕ, ಪಾರಮಾರ್ಥಿಕಗಳಲ್ಲಿಯ ಕಾಯಕದ ವ್ಯತ್ಯಾಸವನ್ನು ಇಲ್ಲಿ ಗುರುತಿಸಬಹುದು. ನೇರವಾದ ಆದರೂ ಅರ್ಥಪೂರ್ಣವಾದ ಇಲ್ಲಿಯ ವಿವೇಚನೆ ವಿಶೇಷ ಚಿಂತನೆಗೆ ದಾರಿಮಾಡಿಕೊಡುವಂತಹುದು. ಶರಣರು ಸುಲಭದಲ್ಲಿ ಹೆಚ್ಚಿನ ಧನದನ್ನು ಸಂಪಾದಿಸುವ ಧೋರಣೆಯುಳ್ಳವರಲ್ಲ. ಅವರದು ಅಸಂಗ್ರಹ ಪ್ರವೃತ್ತಿ. ಅವರ ಅಸಂಗ್ರಹ ಪ್ರವೃತ್ತಿಗೆ ಲಕ್ಕಮ್ಮನ ಈ ವಚನಗಳು ಜೀವಂತ ನಿದರ್ಶನಗಳು.

ಮಾರಯ್ಯ ತನ್ನ ಪತ್ನಿಯ ಈ ಮಾತುಗಳನ್ನು ಕೇಳಿ, ತನ್ನನ್ನು ತಾನು ತಿಳಿದುಕೊಳ್ಳುವನು. ಅಷ್ಟಲ್ಲದೆ 'ಎನಗೆ ಅಱಿವು ಕಱಿಗೊಂಬ ಅಱಿವೆಲ್ಲಿ ಅಮರೇಶ್ವರಲಿಂಗದಲ್ಲಿ ಹೇಳಾ' ಎಂದು ಬಿನ್ನವಿಸಿಕೊಳ್ಳುವನು. ಈ ಸಂದರ್ಭದಲ್ಲಿ ಮಾರಯ್ಯ ಮುಗ್ಧನಾಗಿ, ಭಾವುಕನಾಗಿ ಕಾಣಿಸಿಕೊಳ್ಳುವಂತೆ ತನ್ನ ಪರಿಮಿತಿಯನ್ನು ಅರಿತವನಾಗಿಯೂ ಕಂಡುಬರುವುದು–ಸಾಮಾನ್ಯವಾದ ಮಾತಾಗಿಲ್ಲ. ಬಹುಜನರಿಗೆ ತಮ್ಮ ಪರಿಮಿತಿಯೇ ತಿಳಿದಿರುವುದಿಲ್ಲ. ಅಂತರ್ಮುಖಿದೃಷ್ಟಿಯುಳ್ಳವರಿಗೆ ಮಾತ್ರ ಅದನ್ನು ಅರಿತುಕೊಳ್ಳುವುದು ಸಾಧ್ಯ. ಮಾರಯ್ಯನು ಅಂಥ ಅಂತರ್ಮುಖಿದೃಷ್ಟಿಯುಳ್ಳವನೆಂದು ಬೇರೆ ಹೇಳಬೇಕಾದ ಅವಶ್ಯಕತೆಯಿಲ್ಲ.

ಲಕ್ಕಮ್ಮ ಗುರುವಿನ ಸ್ಥಾನದಲ್ಲಿ ನಿಂತು ತನ್ನ ಪತಿಗೆ ಉಪದೇಶಿಸುವುದೂ ಒಂದು ವಿಶೇಷವಾಗಿದೆ. ಆಕೆ 'ಅಹಂಕಾರ ಅಳಿದು ತ್ರಿವಿಧ ದಾಸೋಹದಲ್ಲಿ ಮಹಾಘನಲಿಂಗೈಕ್ಯ'ವನ್ನು ಪಡೆದುಕೊಳ್ಳುವ ಪರಿಯನ್ನು ತಿಳಿಸಿಕೊಡುತ್ತಾಳೆ. ಹಲವಾರು

ದೃಷ್ಟಾಂತಗಳಿಂದ ಲಕ್ಕಮ್ಮನು ಮಾರಯ್ಯನಿಗೆ ಉಪದೇಶಿಸಿದ ಮೇಲೆ ತ್ರಿವಿಧ ದಾಸೋಹವೇ ಸಚ್ಚಿದಾನಂದ ಬ್ರಹ್ಮವೆಂದು ಆತನು ಅರಿಯುವಂತಾಗುತ್ತದೆ :

> ಗುರುಪೂಜೆಯ ಮಾಡುವಲ್ಲಿ ಗುರುಪೂಜೆಯಲ್ಲಿಯೇ ಮುಕ್ತರು ; ಲಿಂಗಪೂಜೆಯ ಮಾಡುವಲ್ಲಿ ಲಿಂಗಪೂಜೆಯಲ್ಲಿಯೇ ಮುಕ್ತರು ;
> ಜಂಗಮಪೂಜೆಯ ಮಾಡುವಲ್ಲಿ ಜಂಗಮಪೂಜೆಯಲ್ಲಿಯೇ ಮುಕ್ತರು ; ಈ ಮೂಱೊಂದಾಗಲಲ್ಲಿ ಬೇರೊಂದಂಗವಿಲ್ಲ.
> ಆಗ ಚೇಗೆ ಮೂಱಱಲ್ಲಿಯೆ ಅಡಗಿದ ; ಮತ್ತೆ ಅಮರೇಶ್ವರಲಿಂಗವ ಪೂಜಿಸಲಿಲ್ಲ.

ಕಾಯಕದಲ್ಲಿ ಕೈಲಾಸ ಗುರುತಿಸಿಕೊಂಡ ಮಾರಯ್ಯ ಗುರು–ಲಿಂಗ–ಜಂಗಮಪೂಜೆಯಲ್ಲಿ ಮುಕ್ತಿಯಿರುವುದನ್ನೂ ಅರಿತುಕೊಂಡ. ಒಂದು ದೃಷ್ಟಿಯಿಂದ ಇದು ಮೊದಲಿನ ನಿಲುವಿಗೆ ವ್ಯತಿರಿಕ್ತವಾದುದೆಂದೆನಿಸಬಹುದು. ಆದರೆ ವೀರಶೈವ ಧರ್ಮದಲ್ಲಿ ಇದು ವ್ಯತಿರಿಕ್ತವಾಗದೆ ಅದರ ಮುಂದಿನ ಇನ್ನೊಂದು ಹೆಜ್ಜೆ ಎನಿಸುವುದು. ಇಲ್ಲಿಯ ಪೂಜೆ ಹಾಗು ಮುಕ್ತಿಗಳು ಕಾಯಕರಹಿತವಾದವಲ್ಲ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ.

ಕಾಯಕವನ್ನು ಆಗಲೇ ನಿತ್ತರಿಸಿದ ಮಾರಯ್ಯ ಈಗ ಜಂಗಮದಾಸೋಹ ಕಾರ್ಯವನ್ನು ಪೂರೈಸಬೇಕು. ಲಕ್ಕಮ್ಮನ ಸೂಚನೆಯಂತೆ ಅದಕ್ಕೆ ಮಾರಯ್ಯ ಸಿದ್ಧನಾಗುತ್ತಾನೆ. ಬಸವಣ್ಣ, ಪ್ರಭುದೇವರು ಮೊದಲಾದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮದೇವರುಗಳಿಗೆ ಬಿನ್ನಹವೀಯಲು ತೆರಳುತ್ತಾನೆ :

> ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು, ಸಕಲಸಂಪದ ಪ್ರಮಥರು ಮುಂತಾಗಿ
> ಅಮರೇಶ್ವರಲಿಂಗದ ಆಶ್ರಯದಲ್ಲಿ ಪ್ರಸಾದವ ಕೊಂಬುದಕ್ಕೆ ಬಾರಾ ಸಂಗನಬಸವಣ್ಣಾ

ಎಂದು ಬಸವಾದಿ ಪ್ರಮಥರನ್ನು ಆಮಂತ್ರಿಸುತ್ತಾನೆ. ಇಲ್ಲಿ ಸತ್ಯವೆಂಬ ತಟ್ಟೆ, ಚಿತ್ತಶುದ್ಧವೆಂಬ ವಿಭೂತಿ ಪದಗಳಿಗಿರುವ ತಾತ್ತ್ವಿಕ ಅರ್ಥವನ್ನು ಗಮನಿಸಬೇಕು. ತಾತ್ತ್ವಿಕ ಅರ್ಥವನ್ನು ಪ್ರತಿಯೊಂದು ಸಾಧನ ಹಾಗೂ ಕ್ರಿಯೆಗಳು ಪಡೆಯುವುದರಿಂದ ಜಂಗಮದಾಸೋಹವು ಒಂದು ವಿಶೇಷವಾದ ಪ್ರತಿಮೆಯಾಗಿ ಆಧ್ಯಾತ್ಮಿಕ ಮೆರಗನ್ನು ಪಡೆಯುತ್ತದೆ.

ಬಸವಣ್ಣನವರು ಹಾಗು ಅವರ ಪರಿವಾರದವರು ಮಾರಯ್ಯನಲ್ಲಿಗೆ ಬಂದು, ಪ್ರಸಾದ ಸ್ವೀಕರಿಸಿ ಪಡೆಯುವ ತೃಪ್ತಿಯು ತೀರ ಲೌಕಿಕವಾದುದೇನೂ ಆಗಿಲ್ಲ. ಅಲ್ಲಮಪ್ರಭುದೇವರು ಈ ಸಂದರ್ಭದಲ್ಲಿ ಹೇಳಿದ ಮಾತು ಆ ಪ್ರಸಾದದ ಮಹತ್ವವನ್ನು ಎತ್ತಿತೋರಿಸುತ್ತದೆ :

> ಆರಾರ ನೇಮಕ್ಕೆ ಸಂದಿತ್ತು, ಇಚ್ಛಾಭೋಜನಕ್ಕೆ ಕೃತ್ಯವಾಯಿತ್ತು. ಮನಘನದೊದಗ ಕಂಡೆಯಾ ಸಂಗನಬಸವಣ್ಣಾ ?
> ಗುಹೇಶ್ವರಲಿಂಗಕ್ಕೆ ಆಶ್ಚರ್ಯವಾಯಿತ್ತು.

ಇದು ಮನಘನದೊದಗು, ಗುಹೇಶ್ವರಲಿಂಗವೂ ಅಚ್ಚರಿಪಡುವಂತಹ ದಿವ್ಯಕಾರ್ಯ. ಇಂಥ ಕಾರ್ಯವನ್ನು ನಿರ್ವಹಿಸುವವರು ತೋರಿಕೆಯಲ್ಲಿ ಸಾಮಾನ್ಯರಾಗಿರಬಹುದು. ಆದರೆ ಅಂತರಂಗದ ಬೆಳವಣಿಗೆಯಲ್ಲಿ ಅವರು ಅಸಾಮಾನ್ಯರು, ಅನುಪಮರು. ಬಸವಣ್ಣ ಅವರನ್ನು ಸ್ತುತಿಸಿದ್ದು ಹೀಗೆ :

> ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು; ಧನ ನೋಡಾ ಬಡವರು; ಘನಮನ ಸಂಪನ್ನರು;
> ಕೂಡಲಸಂಗನ ಶರಣರು ಕರುಳಿಲ್ಲದ ಕಲಿಗಳು; ಆರಿಗೆ ಉಪಮಿಸಬಹುದು ?

ಈ ಸ್ತುತಿ ಅನೇಕ ಶರಣರಿಗೆ ಅನ್ವಯಿಸುವಂತಹುದಾದರೂ ಮಾರಯ್ಯ, ಲಕ್ಕಮ್ಮರ ಮಟ್ಟಿಗೆ ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತೆಯೇ ಇದೆ. ಈ ದಂಪತಿಗಳ ಸಾಮರಸ್ಯವನ್ನು ಕುರಿತು ಅಲ್ಲಮಪ್ರಭುಗಳು ನುಡಿದುದನ್ನು ಇಲ್ಲಿ ಗಮನಿಸದಿರಲಿಕ್ಕಾಗದು:

> ಉಭಯದೃಷ್ಟಿ ಇನದೃಷ್ಟಿಯಲ್ಲಿ ಕಾಣಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ
> ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಸಂಗನಬಸವಣ್ಣಾ.

ಹೀಗೆ ಉಭಯದೃಷ್ಟಿ ಏಕವಾಗಿರುವ ಮಾರಯ್ಯದಂಪತಿಗಳು ಕಾಯಕನಿಷ್ಠೆ, ಜಂಗಮದಾಸೋಹದಿಂದ, ಸರ್ವಸಮರ್ಪಣಭಾವದಿಂದ, ಅಮರೇಶ್ವರಲಿಂಗದ ಅರವಿನಿಂದ ಜೀವನಸಿದ್ಧಿಯನ್ನು ಪಡೆಯುತ್ತಾರೆ. ಅವರು ಮಾಡಿದ ಸಾಧನೆ ಅವಿಸ್ಮರಣೀಯವೂ ಅಹುದು, ಅನುಕರಣೀಯವೂ ಅಹುದು.



# ಹರಳಯ್ಯ - ಮಧುವಯ್ಯ

—ಸಿ.ಯು. ಮಂಜುನಾಥ

ಹನ್ನೆರಡನೆಯ ಶತಮಾನದ ವಚನಕಾರರ ಉಜ್ವಲ ಕ್ರಾಂತಿಯ ಕೊನೆಯ ಭಾಗದ ಇತಿಹಾಸ ಸ್ವಲ್ಪ ಮಸುಕು ಮಸುಕಾಗಿರುವಂತೆ ತೋರುತ್ತದೆ. ವೀರಶೈವ, ವೀರಶೈವೇತರ ಕಾವ್ಯ ಪುರಾಣಗಳಿಂದ ಬರುವ ಚಿತ್ರ ಕೆಲವು ಕಡೆ ಸ್ಪಷ್ಟವಾಗಿಯೂ ಕೆಲವು ಕಡೆ ಅಸ್ಪಷ್ಟವಾಗಿಯೂ ಇನ್ನೂ ಕೆಲವು ಕಡೆ ವಿರೋಧಾಭಾಸಗಳಿಂದಲೂ ಕೂಡಿದೆ. ಈ ಹಿನ್ನೆಲೆಯಲ್ಲಿ ಐತಿಹಾಸಿಕವೆನ್ನಬಹುದಾದ ನಿಖರ ಆಧಾರಗಳು ಕರ್ಣಾಟಕದ ಆ ಕಾಲದ ಇತಿಹಾಸದ ಪುನರ್ರಚನೆಗೆ ಅಲಭ್ಯವಾಗಿರುವುದರಿಂದ ನಾವು ಅನಿವಾರ್ಯವಾಗಿ ವಚನ, ಕಾವ್ಯ ಮತ್ತು ಪುರಾಣಗಳನ್ನೇ ಆಧರಿಸಬೇಕಾಗಿದೆ.

ವಚನಕಾರರ ಕ್ರಾಂತಿಯ ಕೊನೆಯ ಭಾಗದ ವಿಷಯದಲ್ಲಿಯೂ, ಬಸವಣ್ಣನವರ ಜೀವನಾವಧಿಯ ಅಂತ್ಯ ಕಾಲದ ವಿಷಯದಲ್ಲಿಯೂ ಅನೇಕ ವಾದ ವಿವಾದಗಳಿವೆ. ಆದರೂ ವಚನಕಾರರ ಕ್ರಾಂತಿಯ ಅಂತ್ಯ ಭಾಗಕ್ಕೆ, ಬಸವಣ್ಣನವರ ಜೀವನಾವಧಿಯ ಅಂತ್ಯ ಭಾಗಕ್ಕೆ ಮತ್ತು ವೀರಶೈವ ಸಂಘಟನೆ ವಿಘಟನೆಯಾದದ್ದಕ್ಕೆ ಒಂದು ಒಳಸಂಬಂಧದ ಬೆಸುಗೆ ಇದ್ದಂತೆ ಕಂಡುಬರುತ್ತದೆ. ಆ ಮಹಾ ವಿಘಟನೆಗೆ ಯಾವುದೋ ಒಂದು ಅತ್ಯಂತ ಮಹತ್ವಪೂರ್ಣ ಘಟನೆ ಕಾರಣವಾಗಿರಬೇಕು ಎಂಬ ಅಭಿಪ್ರಾಯವನ್ನು ಎಲ್ಲ ವಿದ್ವಾಂಸರು ಒಪ್ಪುವಂತೆ ಕಾಣುತ್ತದೆ. ಆ ಮಹಾ ವಿಘಟನೆಗೆ ಹರಳಯ್ಯ--ಮಧುವಯ್ಯಗಳ ಪ್ರಸಂಗ ಅತ್ಯಂತ ಮಹತ್ವಪೂರ್ಣ ಪಾತ್ರವಹಿಸಿರಬೇಕು ಎಂಬ ವಿಷಯದಲ್ಲಿ ಯಾವ ಸಂಶಯವೂ ಇದ್ದಂತಿಲ್ಲ. ಅವರಾಗಿ ಬುದ್ಧಿ ಪೂರ್ವಕವಾಗಿ ಆ ಐತಿಹಾಸಿಕ ಘಟನೆಯಲ್ಲಿ ಭಾಗಿಗಳಾದರೋ ಅಥವಾ ಅವರ ನಡವಳಿಕೆ, ನಿರ್ಣಯಗಳು ವೀರಶೈವ ಕ್ರಾಂತಿಗೆ, ಧಾರ್ಮಿಕ, ಸಾಮಾಜಿಕ ಕ್ರಾಂತಿಗೆ ಒಂದು ಹೊಸ ತಿರುವನ್ನು ಕೊಟ್ಟವೋ ಹೇಳುವಂತಿಲ್ಲ.

ಒಂದು ನಾಡಿನ ಇತಿಹಾಸದಲ್ಲಿಯೇ ಅಪರೂಪವಾದ, ಅಸಾಮಾನ್ಯವಾದ, ಹೊಸ ತಿರುವಿಗೆ ಕಾರಣವಾಗಿರುವ ಹರಳಯ್ಯ-ಮಧುವಯ್ಯ ಅವರ ವಿಷಯದ ಅಧ್ಯಯನ ತುಂಬಾ ಕುತೂಹಲಕಾರಿಯಾದದ್ದು. ನಾಡಿನ ಇತಿಹಾಸದ ದಿಕ್ಕನ್ನೇ ಬದಲಾಯಿಸಿದ, ಅಷ್ಟು ಪ್ರಖ್ಯಾತರಾದ ಅವರ ಹೆಸರಾಗಲಿ, ಅಥವಾ ವಿಷಯ ಪ್ರಸ್ತಾಪವಾಗಲೀ ಬಸವಣ್ಣನವರ ಅಥವಾ ಅವರ ಸಮಕಾಲೀನ ವಚನಕಾರರಲ್ಲಾಗಲೀ ಕಂಡುಬರದಿರುವುದು ಆಶ್ಚರ್ಯದ ವಿಷಯವಾಗಿದೆ. ಆದರೆ ಹರಳಯ್ಯ-ಮಧುವಯ್ಯಗಳ ಪ್ರಸಂಗ ಕ್ರಾಂತಿಯ ಕೊನೆಯ ಭಾಗದಲ್ಲಿ ನಡೆದದ್ದಾದ್ದರಿಂದ ಬಹುಶಃ ಅವರ ಪ್ರಸ್ತಾಪ ಸಮಕಾಲೀನ ವಚನಕಾರರಲ್ಲಿ ಕಾಣಿಸಿಕೊಂಡಂತಿಲ್ಲ. ಅಲ್ಲದೆ ಅವರ ಪ್ರಸಂಗದ ನಂತರ ಬಿಜ್ಜಳನು ಕೊಟ್ಟ ಶಿಕ್ಷೆ-ಅದಕ್ಕೆ ವೀರಶೈವರ ಪ್ರತಿಕ್ರಿಯೆ, ಬಿಜ್ಜಳನ ಕೊಲೆ-ವೀರಶೈವರು ಚೆದುರಿದ್ದು-ಮುಂತಾದ ಗೊಂದಲಮಯ ಅನಿಶ್ಚಿತ ಕ್ಷೋಭೆಯ ವಾತಾವರಣವಿದ್ದದ್ದರಿಂದ ಸಮಕಾಲೀನ ವಚನಕಾರರಲ್ಲಿ ಆ ಎಲ್ಲ ವಿವರಗಳು ಬಂದಿರಲಾರವು. ಹರಳಯ್ಯನ ವಚನಗಳಾವುವೂ ನಮಗೆ ಇದುವರೆಗೂ ದೊರೆತಿಲ್ಲ. ಆದರೆ ಮಧುವಯ್ಯನ ನೂರು ವಚನಗಳು ನಮಗೆ ದೊರೆತರೂ ಅವುಗಳಲ್ಲಿ ಹೆಚ್ಚಿನವು ಬೆಡಗಿನ ವಚನಗಳಾಗಿರುವುದರಿಂದ, ಅವುಗಳ ಸಹಾಯದಿಂದ ಅವರ ಜೀವನ ರೇಖೆಯನ್ನು ಗುರುತಿಸುವುದು ಕಷ್ಟವಾಗಿದೆ.

ಬಸವಣ್ಣನವರ ಒಂದು ವಚನ ಹರಳಯ್ಯ-ಮಧುವಯ್ಯನವರ ವಿಷಯವನ್ನು ಸ್ಪಷ್ಟವಾಗಿ ಉಲ್ಲೇಖಿಸದಿದ್ದರೂ ಒಂದು ಸೂಚನೆಯನ್ನು ಕೊಡುವಂತೆ ಕಾಣುತ್ತದೆ.

> ಅರಸು ವಿಚಾರ, ಸಿರಿಯ ಶೃಂಗಾರ, ಸ್ಥಿರವಲ್ಲ ಮಾನವಾ. ಕೆಟ್ಟಿತ್ತು ಕಲ್ಯಾಣ, ಹಾಳಾಯಿತ್ತು, ನೋಡಾ !
> ಒಬ್ಬ ಜಂಗಮದಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು! ಸಂದಿತ್ತು, ಕೂಡಲ ಸಂಗಮ ದೇವಾ ನಿಮ್ಮ ಕವಳಿಗೆಗೆ ![1]

ಅರಸು ವಿಚಾರ, ಸಿರಿಯ ಶೃಂಗಾರ ಅಶಾಶ್ವತ ಎಂದು ಹೇಳಿ ಒಬ್ಬ ಜಂಗಮದ ಅಭಿಮಾನದ ಕಾರಣವಾಗಿ ಕಲ್ಯಾಣ ಕೆಟ್ಟು ಹಾಳಾಯಿತು ಎಂದು ಹೇಳಿ ಚಾಳುಕ್ಯರಾಯನ ಆಳ್ವಿಕೆ ಕೊನೆಯಾಯಿತು ಎಂದು ಹೇಳಲಾಗಿದೆ. ಈ ವಚನವು ವೀರಶೈವ ಕ್ರಾಂತಿಯ ಅಂತ್ಯದ ವಿಘಟನೆಯನ್ನು ಸೂಚಿಸುವಂತೆ ಕಾಣುತ್ತದೆ. ಈ ವಚನ ಬಿಜ್ಜಳನ ಆಳ್ವಿಕೆಯ ಕೊನೆಯನ್ನೂ ಮತ್ತು ಕಲ್ಯಾಣದ ನಾಶವನ್ನೂ ಸೂಚಿಸುತ್ತದೆ. ಆದರೆ ಇದಕ್ಕೆ ಕಾರಣವಾಗಿರುವ 'ಒಬ್ಬ ಜಂಗಮದಭಿಮಾನ' ಯಾರಿಗೆ ಅನ್ವಯವಾಗುತ್ತದೆ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ[2]. ಆ ಚಾಳುಕ್ಯರಾಯನ ಆಳ್ವಿಕೆ ಒಬ್ಬ ಜಂಗಮದ ಅಭಿಮಾನದಿಂದ ತೆಗೆಯಿತ್ತೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಆ ಪ್ರಸಂಗವು ಹರಳಯ್ಯ ಮಧುವಯ್ಯ ಎಂಬಿಬ್ಬರ ಪ್ರಸಂಗವೆನ್ನುವುದು ಸಂಭಾವ್ಯ[3].

1. ಬಸವಣ್ಣನವರ ವಚನಗಳು : ಸಂ. ಆರ್. ಸಿ. ಹಿರೇಮಠ, ವ ೬೨೪
2. ಉಪಾಯನ : ಪ್ರೊ ಡಿ. ಎಲ್. ಎನ್. ಸಂಭಾವನಾ ಗ್ರಂಥ ಪ್ರಕಾಶನ ಸಮಿತಿ. ಪುಟ. ೧೮೬
3. ಅದೇ : ಪುಟ ೧೨೬.

ವಚನಗಳಲ್ಲಿ ಸ್ಪಷ್ಟವಾಗಿ ಹರಳಯ್ಯ–ಮಧುವಯ್ಯ ಅವರ ವಿಷಯ ತಿಳಿದು ಬರುವುದಿಲ್ಲ. ಆದ್ದರಿಂದ ಕನ್ನಡ ಕಾವ್ಯ ಪುರಾಣಗಳನ್ನು ಮತ್ತು ಇತರ ಆಧಾರಗಳನ್ನು ವೀರಶೈವ ವೀರಶೈವೇತರ ಪರಂಪನೆಯಲ್ಲಿ ಕಾಲಾನುಕ್ರಮದಿಂದ ಗಮನಿಸ ಬಹುದು. ಕಾಲಾನುಕ್ರಮದ ದೃಷ್ಟಿಯಿಂದ ಬಸವಣ್ಣನವರಿಗೆ ತುಂಬಾ ಸಮೀಪದ ಕವಿಯೆಂದರೆ ಹರಿಹರ, (ಕ್ರಿ.ಶ. ೧೨೦೦). ಅವನ ಬಸವರಾಜ ದೇವರ ರಗಳೆ ಬಸವಣ್ಣನವರ ಜೀವನವನ್ನು ಚಿತ್ರಿಸುತ್ತದೆ, ಆದರೆ ಈಗ ನಮಗೆ ದೊರೆಯುತ್ತಿರುವ ಬಸವರಾಜ ದೇವರ ರಗಳೆ ಅಸಮಗ್ರ. ಸಿದ್ಧನಂಜೇಶನ ಹೇಳಿಕೆ ಪ್ರಕಾರ ಬಸವರಾಜ ದೇವರ ರಗಳೆಯಲ್ಲಿ ಇಪ್ಪತ್ತೈದು ಸ್ಥಲ ಗಳಿರಬೇಕು. ಈಗ ನಮಗೆ ದೊರತಿರುವುದು ಹದಿಮೂರು ಸ್ಥಲಗಳು ಮಾತ್ರ. ಹನ್ನೆರಡು ಸ್ಥಲಗಳಲ್ಲಿ ಅರ್ಧಕಥೆ ಮಾತ್ರಇದೆ. ಹದಿಮೂರನೆಯ ಸ್ಥಲ ಮಿಕ್ಕ ಸ್ಥಳಗಳಂತಿರದೆ ಅದರಲ್ಲಿ ಕಥೆಯನ್ನು ಓಡಿಸಿಕೊಂಡು ಹೋದಂತಿದೆ. ಅಲ್ಲದೆ ಈ ಸ್ಥಲವು ಕೆಲವು ಹಸ್ತಪ್ರತಿಗಳಲ್ಲಿದೆ, ಕೆಲವು ಹಸ್ತಪ್ರತಿಗಳಲ್ಲಿಲ್ಲ. ಆದ ಕಾರಣ ಈ ಭಾಗವು ಪ್ರಕ್ಷಿಪ್ತವಾದುದೋ ಏನೋ ಎಂಬ ಸಂಶಯಕ್ಕೆ ಅವಕಾಶವಿದೆ[4]. 'ಆದ್ದರಿಂದ ಶಿವದ್ರೋಹವಂ ಗೈದ ಬಿಜ್ಜಳನಂ ಕೊಲಿಸುತ್ತಂ' ಎಂದು ಹದಿಮೂರನೆಯ ಸ್ಥಲದಲ್ಲಿ ಬಿಜ್ಜಳನ ಕೊಲೆಯ ಪ್ರಸ್ತಾಪ ಬಂದಿದ್ದರೂ ಬಿಜ್ಜಳನ ಶಿವದ್ರೋಹ ಯಾವುದಿರಬಹುದು, ಹರಳಯ್ಯ ಮಧುವಯ್ಯಗಳಿಗೆ ಅದು ಸಂಬಂ ಧಿಸಿದ್ದೇ ಎಂದು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ.

ಹರಿಹರ ಕವಿಯ ಸೋದರಳಿಯ ರಾಘವಾಂಕ (ಕ್ರಿ.ಶ.ಸು. ೧೨೦೦) ತನ್ನ ಸಿದ್ಧರಾಮ ಚಾರಿತ್ರದಲ್ಲಿಯೂ ಹರಳಯ್ಯ ಮಧುವಯ್ಯಗಳ ಪ್ರಸ್ತಾಪವನ್ನು ನೇರವಾಗಿ ಮಾಡಿಲ್ಲ. 'ಭೂಪ ಬಿಜ್ಜಳನಳಿದ ವೀರ ಜಗದೇವನಿಂ ಸಿದ್ಧ ಸಂಕೇತದಂತೆ'[5] ಎಂದು ಮಾತ್ರ ಬರುತ್ತದೆ. ಇಲ್ಲಿಯೂ ಹರಿಹರನಂತೆ ಬಿಜ್ಜಳನ ಅಳಿವಿನ ವಿಷಯ ಬರುತ್ತದೆಯೇ ಹೊರತು ಈ ಸಿದ್ಧ ಸಂಕೇತ ಯಾರದು ? ಏತಕ್ಕೆ ಎನ್ನುವುದು ಅಸ್ಪಷ್ಟ.

ಪಾಲ್ಕುರಿಕೆ ಸೋಮನಾಥನ ಬಸವಪುರಾಣವೇ (ಕ್ರಿ.ಶ.ಸು. ೧೩೦೦) ಹರಳಯ್ಯ–ಮಧುವಯ್ಯರ ಬಗ್ಗೆ ಸ್ಪಷ್ಟವಾಗಿ ಮೊದಲ ಬಾರಿಗೆ ಹೇಳುವ ಗ್ರಂಥವೆಂದು ಹೇಳಬಹುದು. ಅಲ್ಲಯ್ಯ ಮಧುವಯ್ಯಗಳು ಲಿಂಗನಿಷ್ಠೆಯಲ್ಲಿ ಮಗ್ನವಾದ ಮನಸ್ಸು ಳ್ಳವರು. ಶ್ರೇಷ್ಠವಾದ ಶಿವಾಚಾರ ಮಾರ್ಗದಲ್ಲಿ ನಿರತರಾದವರು. ಅಸಮಾನಲೀಲೆಯಿಂದ ಬಸವೇಶ್ವರನಲ್ಲಿ ವಿಶೇಷವಾದ ಸಲಿಗೆಯುಳ್ಳವರಾಗಲು ತಪ್ಪೇನು ಇಲ್ಲದೇ ಇದ್ದರೂ ಒಳ್ಳೆಯದೆನ್ನದೆ ಕಣ್ಣುಗಳನ್ನು ತೆಗೆಯಲಾಗಿ ರಾಜನು ನಮ್ಮನ್ನು ಕೆಡಿಸಲು ಪ್ರಯತ್ನಿಸಿದ್ದಾನೆ...ಇತ್ಯಾದಿ[6]... ಬಸವನ ಅನುಯಾಯಿಗಳು ಬಿಜ್ಜಳನನ್ನು ಕೊಲ್ಲುವಂತೆ ಜಗದೇವನಿಗೆ ಹೇಳಿದರು. ಬಸವ ಮಾತ್ರ ಬಿಜ್ಜಳನನ್ನೂ ಅವನ ರಾಜ್ಯವನ್ನೂ ಹಾಳಾಗುವಂತೆ ಶಪಿಸಿ ತನ್ನ ಅನುಯಾಯಿಗಳ ಜೊತೆ ಕೂಡಲಸಂಗಮಕ್ಕೆ ಹೋದ. ತೆಲುಗು ಬಸವಪುರಾಣದಲ್ಲಿ ಬಂದಿರುವ ಕತೆಯಿದು.[7]

ಕನ್ನಡದ ಬಸವಪುರಾಣ ಭೀಮಕವಿಯಿಂದ ರಚಿತವಾಗಿದೆ (ಕ್ರಿ.ಶ. ೧೩೬೯). ಹರಳಯ್ಯ–ಮಧುವಯ್ಯಗಳ ಬಗ್ಗೆ ಸ್ಪಷ್ಟವಾಗಿ ಹೇಳುವ ಪ್ರಥಮ ಕನ್ನಡ ಕೃತಿ ಇದು ಎನ್ನಬಹುದು. ಕತೆಯ ವಿವರಗಳಲ್ಲಿ ಭೀಮಕವಿ ತೆಲುಗು ಬಸವ ಪುರಾಣ ವನ್ನು ಅನುಸರಿಸಿದ್ದಾನೆ.

> ಮತ್ತೆಯುಂ ಕಲ್ಯಾಣ ಕಟಕದೊ।ಳುತ್ತಮಾಚಾರ ಬ್ರತನಿಯಮ। ಚಿತ್ತಾರರು ಹರಳಯ್ಯ ಮಧುವಯ್ಯಗಳು ಶಿವತತ್ತ್ವ
> ವೇತ್ತರುಂ ಪರಿವೃತ ರುದ್ರರಪಗತ। ಪಿತ್ತ ಮುಖ್ಯೇಷಣ ವಿವರಣದ ಕರ್ಮಸಂಚಯರು (ಬ.ಪು. ೬೨—೧)
> ಸೊಗಸದವದಿರ ಮಾತಿಗ್ಹಳ್ಳ!ಯ್ಯ ಮಧುವಯ್ಯ ಗಳನಾಗಳೆ। ಜಗತಿಪಂ ತಪ್ಪೇನುವಿಲ್ಲದೆ ನೀತಿಯಲ್ಲೆಂದು
> ಬಗೆದವರಂ ಕರೆಸಿಕಣ್ಣಂ। ತೆಗೆಸಿದನು ಮಹೇಶ್ವರ ಮಹಿ।ಮೆಗಳನುದ್ದಂಡತೆಗಳಂ ತಾನಜಿಯನೇ ಮುನ್ನ (ಬ.ಪು.೬೨-೪)[8]

ಬಸವಣ್ಣನವರು ಬೇರೊಂದು ಸಂದರ್ಭದಲ್ಲಿ ಜಗದೇವನಿಂದ ಭಾಷೆ ತೆಗೆದುಕೊಂಡಿದ್ದ ವಿಷಯ ಬಸವಪುರಾಣದಲ್ಲಿ ಬರುತ್ತದೆ. ಜಗದೇವನಿಗೆ ಹಿಂದಿನ ಭಾಷೆಯನ್ನು ನೆನಪಿಸಿ ಅಲ್ಲಿಂದ ಕಪ್ಪಡಿಗೆ ಹೋದರೆಂದು ಬರುತ್ತದೆ. ಹರಿಹರನ ಮತ್ತು ಮೂಲ ತೆಲುಗು ಬಸವ ಪುರಾಣವನ್ನು ಅನುಸರಿಸಿಯೋ ಭೀಮಕವಿ ಬಿಜ್ಜಳನ ಸಾವಿಗೆ ಬಸವನೇ ಅನುಮತಿಯಿತ್ತನೆಂದು ಸ್ಪಷ್ಟೋಕ್ತಿಯಲ್ಲಿ ಹೇಳುತ್ತಾನೆ[9].

---

4. ಬಸವರಾಜದೇವರ ರಗಳೆ : ಸಂ. ಟಿ.ಎಸ್. ವೆಂಕಣ್ಣಯ್ಯ. ಪೀಠಿಕೆ - ಪುಟ - ೯.
5. ಸಿದ್ಧರಾಮ ಚಾರಿತ್ರೆ : ಗದ್ಯಾನುವಾದ : ಆರ್. ಎಸ್. ರಾಮರಾವ್. ಪದ್ಯ- ೯೫ ಪುಟ ೨೭೧
6. ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ : ಚ. ಉತ್ತಂಗಿ. ಪುಟ ೧೩
7. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಪ್ರ. ಸಂ. ಜಿ. ಎಸ್. ಶಿವರುದ್ರಪ್ಪ ಸಂ. ೪ ಭಾಗ-೧ ಪುಟ ೫೨.
8. ಬಸವ ಪುರಾಣ : ಸಂ. ಇ. ಸಿ. ಪಾವಟೆ ಮತ್ತು ಕೊ. ಮ. ಬಂದಮ್ಮವರ.
9. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಪ್ರ. ಸಂ. ಜಿ. ಎಸ್. ಶಿವರುದ್ರಪ್ಪ. ಸಂ. ೪ ಭಾಗ-೧. ಪುಟ ೫೨.

ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿ (ಕ್ರಿ. ಶ. ಸು. ೧೪೫೦)ಯಲ್ಲಿ ಬಸವಣ್ಣನವರ ಜೀವನವನ್ನು ಹೇಳುವು ದಾದರೂ ಸಮಗ್ರವಾಗಿ ಹೇಳುವುದಿಲ್ಲ. ಅಲ್ಲದೆ ಹರಳಯ್ಯ ಮಧುವಯ್ಯರ ಬಗ್ಗೆ ಯಾವ ವಿವರಗಳೂ ದೊರೆಯುವುದಿಲ್ಲ. ಸಿಂಗಿರಾಜನ ಅಮಲ ಬಸವಚಾರಿತ್ರ (ಕ್ರಿ. ಶ. ಸು. ೧೫೦೦) ಬಸವಣ್ಣನವರ ಜೀವನವನ್ನು ವಿಸ್ತಾರವಾಗಿ ಪ್ರತಿಪಾದಿಸುತ್ತದೆ. ಆದರೆ ಬಸವಣ್ಣನವರ ಅಂತ್ಯಕಾಲದ ವಿಷಯವನ್ನು ಹೇಳಿಲ್ಲ. ಆದ್ದರಿಂದ ಅಲ್ಲಿಯೂ ಅವರ ಪ್ರಸಂಗ ಪ್ರಸ್ತಾಪವಾಗಿಲ್ಲ. ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣದಲ್ಲಿಯೂ (ಕ್ರಿ. ಶ. ೧೫೩೦) ಬಿಜ್ಜಳನ ಕೊಲೆ ಜಗದೇವನಿಂದ ಆಯಿತೆಂಬ ಪ್ರಸ್ತಾಪ ಬರುತ್ತದೆಯೇ ಹೊರತು ಅದಕ್ಕೆ ಸ್ಪಷ್ಟ ಹಿನ್ನೆಲೆ ಮತ್ತು ಕಾರಣವನ್ನು ಕೊಟ್ಟಿಲ್ಲ.

ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣದಲ್ಲಿ (ಕ್ರಿ. ಶ. ೧೫೮೪) ಹರಳಯ್ಯ-ಮಧುವಯ್ಯಗಳ ಸ್ಪಷ್ಟ ಉಲ್ಲೇಖ ಕಂಡುಬರುತ್ತದೆ,

ಬಸವದಂಡಾಧೀಶನೈದೆ ತತ್ಪಟ್ಟವಂ। ವಸುಧೇಶ ಬಿಜ್ಜಳಂ ನಮಗೆ ಕಟ್ಟುವನಾಗ।
ಲಸವಂಕುಲವೆಂದು ಹಳ್ಳಯ್ಯ ಮಧುವಯ್ಯಗಳ ನೆಳಹೂಟಿಯಂ ಕಟ್ಟಿಸೆ।
ಹಸನಾದುದೆಂದು ಜಗದೇವ ಬೊಮ್ಮಣ್ಣಂಗ ಳೆಸೆವುತಿಹ ಪಂಜಿನವರಾಗಿ ಬಿಜ್ಜಳರಾಯ।
ನಸುಗೊಂಜಿವೆಂದೆಮ್ಮ ಕೈಯಿಂದಲಲಗಿನ ಪ್ರಸಾದವಂ ಪಡೆದೊಯ್ವರು॥ (ಚೆ. ಬ. ಪು ೬೨-೨೮)[10]

ಬಿಜ್ಜಳ ಹರಳಯ್ಯ-ಮಧುವಯ್ಯರಿಗೆ ಕೊಟ್ಟ ಶಿಕ್ಷೆ, ಬಿಜ್ಜಳನ ಕೊಲೆಗೆ ದಾರಿ ಮಾಡಿ ಕೊಟ್ಟಿತು ಎಂಬ ನಿರ್ದೇಶವಿದೆ.

ಉತ್ತರದೇಶದ ಬಸವಲಿಂಗದೇವ, ಬಸವೇಶ್ವರ ಪುರಾಣದ ಕಥಾಸಾಗರ (ಕ್ರಿ. ಶ. ೧೬೦೦)ವೆಂಬ ಗದ್ಯ ಕೃತಿಯಲ್ಲಿ ನಿಯೋಗರ ಕಥೆ ಹೇಳುವಾಗ[11], ಹರಳಯ್ಯ-ಮಧುವಯ್ಯಗಳ ಕಥೆಯನ್ನು ವಿವರವಾಗಿ ಹೇಳಿದ್ದಾನೆ. ಅದರಲ್ಲಿ ಬರುವ ಕಥೆ ಯನ್ನು ಹೀಗೆ ಸಂಗ್ರಹಿಸಬಹುದು: ಮಧುವರಸನೆಂಬ ಬ್ರಾಹ್ಮಣ ತನ್ನ ಕುಲಾಚಾರದಲ್ಲಿದ್ದು ಬಿಜ್ಜಳನನ್ನು ಓಲೈಸುತ್ತಿದ್ದನು. ಇತ್ತ ಹಳ್ಳಯ್ಯನೆಂಬ ಭಕ್ತನು ಪಾದರಕ್ಷೆ ಹೊಲಿಯುವ ಕಾಯಕದಿಂದ ಇದ್ದನು. ಅವನು ಒಂದು ದಿನ ತನ್ನ ಮನೆಗೆ ಹೋಗು ವಾಗ ಬಸವಣ್ಣನನ್ನು ಕಂಡು ಶರಣಾರ್ಥಿ ಎನಲು ಬಸವಣ್ಣನವರು ಶರಣು-ಶರಣಾರ್ಥಿ ಎನಲು, ಮನೆಗೆ ಬಂದು ಹೆಂಡತಿಯ ಹತ್ತಿರ ನಡೆದದ್ದನ್ನು ಹೇಳಿ ಬಸವಣ್ಣನವರದು ಒಂದು ಶರಣು ಹೆಚ್ಚಾಯಿತೆಂದು ಹೇಳಿದನು. ಆಗ ಅವಳು ಒಂದು ಜೋಡು ಚಮ್ಮಾವುಗೆ ಬಸವಣ್ಣನಿಗೆ ಮೆಟ್ಟಿಸಿದರೆ ಹೆಚ್ಚಾದ ಶರಣು ಸರಿ ಎನಲು ಸತಿ ಹೇಳಿದ ಹಾಗೆ ಚಮ್ಮಾವುಗೆ ಮಾಡಿ ಬಸವನಿಗೆ ಕೊಡಲು, ಅವನ್ನು ಕೈಯಲ್ಲಿ ಹಿಡಿದು ನೋಡಿ ಮಾಹೇಶ್ವರರಿಗೆ ಕೊಡಿ ಎಂದನು. ಹಾಗೆ ಅವನ್ನು ಮನೆಗೆ ತರುವಾಗ ಮಧುವರಸ ಕಂಡು ಕೈಯಲ್ಲಿರುವುದೇನೆಂದು ಹರಳಯ್ಯನನ್ನು ಕೇಳಿದನು. ಚಮ್ಮಾವುಗೆ ಎಂದು ತಿಳಿದು ಅವನ್ನು ಕೇಳಿ ಮೆಟ್ಟಿಕೊಳ್ಳಲು ಮೈಕುಷ್ಟವಾಗಿ ಕೀವುನೆತ್ತರು ಸುರಿಯಲಾರಂಭಿಸಿತು. ಅನಂತರ ಯಾವ ವೈದ್ಯರಿಂದಲೂ ಗುಣವಾಗದಿರಲು ದೈವಾನುಕೂಲದಿಂದ ಮಧುವರಸನ ದಾಸಿ ಲಕುಮಾದೇವಿ ತನ್ನೊಡೆಯನ ಜಳಕಕ್ಕೆ ನೀರಿಗೆ ಹೋಗುವಾಗ ಕತ್ತಲೆಗವಿಯಲು ಬಾವಿಗೆ ಹೋಗಲಂಜಿ ಹರಳಯ್ಯನ ಬಚ್ಚಲ ನೀರನ್ನು ತುಂಬಿಕೊಂಡು ಹೋಗಿ ಬೆರಸಿ ಮಧುವರಸನಿಗೆಱೆಯಲು ಕುಷ್ಟ ಹೋಗಿ ದಿವ್ಯಶರೀರಿಯಾದ. ಅದನ್ನು ಕಂಡು ದಾಸಿಯನ್ನು ಕರೆಸಿ ಅಂಜಬೇಡ ನೀರನ್ನು ಎಲ್ಲಿಂದ ತಂದೆ ಸತ್ಯವನ್ನು ಹೇಳು, ಎಂದು ನಿಜವನ್ನು ಕೇಳಿ ತಿಳಿದು ಹರಹರ ಇನ್ನೇನು ಫಲವಾದೀತೋ ಎಂದು ಹರಳಯ್ಯನ ಮನೆಗೆ ಬಂದು ನಮಸ್ಕರಿಸಿ ವೀರಶೈವ ದೀಕ್ಷೆಯನ್ನು ಪಡೆದು ಜಂಗ ಮಾರ್ಚನೆಯ ಮಾಡುತ್ತ ಮಧುವರಸನು ಸುಖದಲ್ಲಿದ್ದನು. ನಂಬಿಯಾಂಡರಿ ಕಥೆ ಹೇಳುವಾಗ[12].

ಕಲ್ಯಾಣದಲ್ಲಿ ಹರಳಯ್ಯ ಮಧುವಯ್ಯಗಳೆಂಬ ಭಕ್ತರು ತಾವು ಬೀಗರಾಗಲು ಅಲ್ಲಿದ್ದ ಹಾರುವರು ಉತ್ತಮ ಕುಲ ದವರು ನೀಚಕುಲದವರೊಂದಿಗೆ ನಂಟುತನ ಮಾಡಬಹುದೇ ಎಂದು ಬಿಜ್ಜಳನೊಂದಿಗೆ ಕೇಳಲು ಆತ ಅವರ ಕಣ್ಣುಕೀಳಿಸಲು, ಅದಕ್ಕೆ ಮಡಿವಾಳಮಾಚಯ್ಯನು ಬಸವೇಶ್ವರನು ಬಂದು, ಅವರ ಕಣ್ಣು ಪಡೆದು ಅನಂತರ ಜಗದೇವನಿಗೆ ವೀರತಾಂಬೂಲವ ಕೊಟ್ಟು ಈ ಶಿವದ್ರೋಹಿಯನ್ನು ಕೊಂದು ಬನ್ನಿ ಎಂದು ನೇಮಿಸಿ ಮನೆಗೆ ಕಳುಹಲು.........ಇತ್ಯಾದಿ ಮುಂದುವರಿಯುತ್ತದೆ.

ಈ ಕವಿಯ ಕೃತಿಯಲ್ಲಿ ಸ್ಪಷ್ಟವಾಗಿ ಹರಳಯ್ಯ ಮಧುವಯ್ಯಗಳ ಪ್ರಸಂಗವನ್ನು ವಿಸ್ತಾರವಾಗಿ ಬರೆದಿದ್ದಾನೆ. ತನ್ನ ಕೃತಿಯ ಆರಂಭದಲ್ಲಿ ತಾನು ಆ ಕೃತಿಯನ್ನು ಹದಿನೆಂಟು ಪುರಾಣ, ವೀರಶೈವಾಮೃತ ಮಹಾಪುರಾಣ, ಸಿಂಗಿರಾಜಯ್ಯನ ಸತ್ಕೃತಿ, ಶಿವತತ್ತ್ವಚಿಂತಾಮಣಿ, ಹರೀಶ್ವರ ದೇವರು ಮಾಡಿದ ರಗಳೆ, ಸಿದ್ಧರಾಮಚಾರಿತ್ರ್ಯ, ಶೂನ್ಯಸಂಪಾದನೆ ಮೊದ ಲಾದವರಲ್ಲಿದ್ದ ಕತೆಗಳನ್ನೇ ಸಂಗ್ರಹಿಸಿದನಲ್ಲದೆ ಕಲ್ಪನೆಯ ಕತೆಗಳ ಹೇಳಲಿಲ್ಲ[13] ಎಂದಿದ್ದಾನೆ. ಈ ಕೃತಿಯಲ್ಲಿ ಹರಳಯ್ಯನ ಪಾದ ರಕ್ಷೆ ಹೊಲಿಯುವ ಕಾಯಕವನ್ನು ಹೇಳಲಾಗಿದೆ. ಮಧುವರಸನ ಜಾತಿಯನ್ನು ಹೇಳಲಾಗಿದೆ.

10. ಚೆನ್ನಬಸವ ಪುರಾಣ : ಸಂ. ಶಿ. ಶಿ. ಬಸವನಾಳ ಮತ್ತು ಇತರರು.
11. ಬಸವೇಶ್ವರ ಪುರಾಣದ ಕಥಾಸಾಗರ : ಸಂ. ಉಮಾಪತಿ. 12. ಅದೇ : ಪು. ೫೪. 13. ಅದೇ : ಪೀಠಿಕೆ. ಪು. ೧೪.

ಶಾಂತಲಿಂಗದೇಶಿಕನ 'ಭೈರವೇಶ್ವನ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ' (ಕ್ರಿ. ಶ. ೧೬೭೨)ದಲ್ಲಿ ಮೇಲೆ ಹೇಳಿದ ಕಥೆಯನ್ನೇ ಹೇಳಿದರೂ ವಿವರಗಳಲ್ಲಿ ಸ್ವಲ್ಪ ಭಿನ್ನತೆ ಇದೆ. ಹಳ್ಳಯ್ಯ ಮಧುವಯ್ಯ ಕುಲಸೂತಕವಳಿದರು ಎಂಬುದಕ್ಕೆ ಕಥೆ[14] ಎಂಬ ಭಾಗದಲ್ಲಿ ಬರುತ್ತದೆ. ಮಧುವಯ್ಯನ ಸ್ನಾನಕ್ಕೆ ನೀರನ್ನು ತಂದವಳು ದಾಸಿ ಮಹಾದೇವಿ. ಹರಳಯ್ಯನ ಮಹತ್ವ ತಿಳಿದ ಮಧುವಯ್ಯ ಬೀಗತನವನ್ನು ಬೆಳೆಸಲು ನಿಶ್ಚಯಿಸಿದ. ಇದನ್ನು ತಿಳಿದ ಬಿಜ್ಜಳ ಅವರ ಕಣ್ಣನ್ನು ಕಳೆಸಲಾಕ್ಷಣದಲ್ಲಿ ಬಸವಣ್ಣ ಮಡಿವಾಳಯ್ಯ ಮೊದಲಾದ ಪುರಾತನರು ಅವರ ಕಣ್ಣಂ ಪಡೆದು ಜಗದೇವನಿಗೆ ವೀರ ತಾಂಬೂಲವ ಕೊಟ್ಟು...ಇತ್ತ ಬಿಜ್ಜಳನ ಸಂಹರಿಸಲು ಕಲ್ಯಾಣ ಹಾಳಾಯಿತ್ತು. ಮಧುವರಸಯ್ಯಗಳು ಅರ್ಕೇಶ್ವರನೆಂಬ ತಮ್ಮಿಷ್ಟಲಿಂಗದಲ್ಲಿ ಕೂಡಿ ಹಳ್ಳಯ್ಯ ಮೊದಲಾದ ಸಕಲ ಪ್ರಮಥರು ಲಿಂಗಾನುಭವ ಸುಖದಲ್ಲಿರ್ದರು, ಎಂದು ಸುಖಾಂತದಲ್ಲಿ ಮುಗಿಸಿದ್ದಾನೆ. ಇದರಿಂದ ಮಧುವಯ್ಯನ ಇಷ್ಟದೈವ ಅರ್ಕೇಶ್ವರ ಲಿಂಗವೆಂದು ತಿಳಿದು ಬರುತ್ತದೆ. ಅಲ್ಲದೆ 'ಅರ್ಕೇಶ್ವರಲಿಂಗ' ಎಂಬ ಅಂಕಿತದಲ್ಲಿಯೇ ಆತನ ವಚನಗಳು ದೊರೆಯುತ್ತವೆ. ಮಧುವರಸನ ದಾಸಿಯ ಹೆಸರು ಮಹಾದೇವಿ ಮತ್ತು ಅವಳು ನೀರನ್ನು ತರಲು ತಡ ಮಾಡಿಕೊಂಡದ್ದು ಬೊಂಬೆ ಆಟವನ್ನು ನೋಡುವುದರಲ್ಲಿ ಮೈಮರೆತುದು ಎಂದು ಹೆಚ್ಚಿನ ವಿವರಗಳು ಬರುತ್ತವೆ.

ಷಡಕ್ಷರದೇವ ವೃಷಭೇಂದ್ರ ವಿಜಯದಲ್ಲಿ (ಕ್ರಿ.ಶ. ೧೬೭೭) ೪೨ ಆಶ್ವಾಸಗಳ ವಿಸ್ತಾರವಾದ ಚಂಪೂ ಕಾವ್ಯವನ್ನು ಬರೆದು ಬಸವಣ್ಣನವರ ಜೀವನವನ್ನು ವಿವರವಾಗಿ ಬರೆಯಲು ಪ್ರಯತ್ನಿಸಿದ್ದಾನೆ. ಈತ ತನ್ನ ಕೃತಿಯಲ್ಲಿ ಜಗದೇವನ ವಿಷಯವನ್ನು ಹೇಳಿ, ಅನಂತರ ಕಲ್ಯಾಣದಲ್ಲಿ ಅಲ್ಲಯ್ಯ–ಮಧುವಯ್ಯರೆಂಬ ಶಿವಭಕ್ತರಿದ್ದರೆಂದು ಹೇಳಿ ಅವರ ಶಿವಭಕ್ತಿ, ಸೌಖ್ಯ. ಚರಿತ್ರ, ವೈಭವಗಳನ್ನು ಸಹಿಸಲಾರದ ಪರಸಮಯಿಗಳ ಕುಹಕೋಕ್ತಿಯಂ ಕೇಳ್ದು–

ತಿಳಿದಿರ್ದುಂ ವೃಷಭೇಂದ್ರನ। ಬಳವನ್ಮಹಿಮೆಯನಘಾಗ್ನಿ ಶೋಷಿತ ಸಂವಿ
ಜ್ಜಳ ಬಿಜ್ಜಳನಾ ಭಕ್ತರ । ವಿಳಸದ್ರುಚಿಲೋಚನಂಗಳಂ ತೆಗೆಯಿಸಿದಂ । (ವೃ. ವಿ. ೪೨-೩)[15]

ಎಂದಿದ್ದಾನೆ. ಇದರಿಂದ ಜಗದೇವನಿಗೆ ಬಿಜ್ಜಳನನ್ನು ಕೊಲ್ಲಲು ಆದೇಶವನ್ನು ನೀಡಲಾಗಿದೆ. ಇಲ್ಲಿ ಷಡಕ್ಷರದೇವ ಬಸವ ಪುರಾಣವನ್ನೇ ಅನುಸರಿಸುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಬಸವ ಪುರಾಣ ಮತ್ತು ಇತರೆ ಕೆಲವು ಕೃತಿಗಳಲ್ಲಿ ಬರುವಂತೆ ಈ ಕೃತಿಯಲ್ಲಿಯೂ ಬಿಜ್ಜಳ ಹರಳಯ್ಯ ಮಧುವಯ್ಯನವರ ಕಣ್ಣುಗಳನ್ನು ಕೀಳಿಸಲು ಕಾರಣವನ್ನು ಹೇಳಿಲ್ಲ.

ಚನ್ನಪ್ಪಕವಿಯ ಶರಣಲೀಲಾಮೃತ (ಕ್ರಿ. ಶ. ೧೭೫೦) ವಿವರವಾಗಿ ಹರಳಯ್ಯ ಮಧುವಯ್ಯನವರ ವಿಷಯವನ್ನು ಪ್ರಸ್ತಾಪ ಮಾಡುತ್ತದೆ. ಅವರ ಕಥೆ ವಿವರವಾಗಿ ಬಂದಿದೆ. ಸರ್ವಜ್ಞಮೂರ್ತಿಯ ಕಾಲ ಜ್ಞಾನದ ಭಾಗದಲ್ಲಿ–

ಖುಲ್ಲ ಬಿಜ್ಜಳ ಕುಹಕ ಮಾತಿಗೆ ಹರಳಮಧುವರಸಯ್ಯನವರನು ನಿಲ್ಲದೆಳೆಹೂಟೆಯನು ಕಟ್ಟಿಪನಲ್ಲಿ ಫಾಲ್ಗುಣದಿ, ಬಲ್ಲಿದರು ಜಗದೇವ ಮಡಿವಾಳ ಮೊಲ್ಲೆಯ ಬೊಮ್ಮಣ್ಣ ನೃಪತಿಯ ಕೊಲ್ಲುವರು ಗೂಳೆಯದ ಶರಣರು ಎಲ್ಲ ತೆರಳುವರು.[16] ಬಿಜ್ಜಳನು ಹರಳಯ್ಯ ಮಧುವಯ್ಯಗಳ ನಂಟುತನವನ್ನು ಕಂಡು ಕಡುಕೋಪಗೊಂಡಾಗ ಚನ್ನಬಸವಣ್ಣ ಸಮಾಧಾನ ಹೇಳಿದರೂ ಕೇಳದೆ–ಪೊಡವಿಯೊಳಗೀ ಹೀನ ನಡತೆಯ ನಡೆದ ಮಧುವರಸನನುಶ್ವಪಚನ ಜಡಿದು ಹಿಡಿತನ್ನಿ–ಗಾಢದಿಂ ತರಿಸಿ ಎರಡೆತ್ತನು ಹೂಡಿ ಎಳಹೂಟೆಯನು ಕಟ್ಟಿಸಿದನು. ಕಟ್ಟಿ ಎಳೆಸಲು ವೇಗದಲಿ ಧರೆಮುಟ್ಟಲೀಯದೆ ಈಶದಯದಲಿ ಸೃಷ್ಟಿ ಬೆರಗಪ್ಪಂತೆ ಎಳೆದವು ಖೇಚರತ್ವದಲಿ ತಿರುಗಿ ಶರಣರ ತರಿಸಿ ನಿಲ್ಲಿಸಿ ಶರೀರವನ್ನು ನೋಡಿದ; ಗರಿಯು ಸೋಂಕದೆ ಇರೆ ಶರೀರವು ಅರಸು ಬೆರಗಾದ. ಬಿಡಲು ಬಾರದು ಇವರನೀಕ್ಷಣ ಹಿಡಿದು ಕಣ್ಣ ತೆಗೆಸಿಯೆ ನಡೆಸು ಶೂಲಕ್ಕೆಂದು ಅಪ್ಪಣೆ ಕೊಟ್ಟ. ಮಧುವರಸನ ಕಣ್ಣು ಕೀಳಿಸಿದರು-ಹರಳಯ್ಯ ಶೂಲವನ್ನೇರಲು ಅದು ಚಿಗುರಿ ಬಿಲ್ವಪತ್ರೆ ಮರ ಆದುದು; ಅದಕ್ಕೆ ಮಧುವರಸ ಪ್ರದಕ್ಷಿಣೆ ಬರಲು ಪುನಃ ಕಣ್ಣು ಬಂದುದು-ಹರನು ತನ್ನಯ ಶರಣರನು ಪುಷ್ಪರಥದಿ ಇಟ್ಟು ಪ್ರೀತಿಯಿಂ ಕರೆದು ಒಯ್ದನು ನಿಜಪುರಿಗೆ. ಮುಂದೆ ಜಗದೇವಯ್ಯ ಬೊಮ್ಮಯ್ಯರಿಂದ ಬಿಜ್ಜಳನು ವಧೆಯಾದ ವಿಷಯ ಬರುತ್ತದೆ. ಎಳೆ ಹೂಟೆಯ ಪ್ರಸಂಗ, ಹರಳಯ್ಯ ಶೂಲ ಏರಿದಾಗ ಅದು ಚಿಗುರಿ ಬಿಲ್ವ ಪತ್ರೆ ಮರವಾದದ್ದು, ಅದನ್ನು ಪ್ರದಕ್ಷಿಣೆ ಹಾಕಿದಾಗ ಮಧುವಯ್ಯನಿಗೆ ಕಣ್ಣು ಬಂದದ್ದು ಮುಂತಾದ ಕೆಲವು ಹೆಚ್ಚಿನ ಅಂಶಗಳು ವಿವರವಾಗಿ ದೊರೆಯುತ್ತವೆ.[17]

ಶಂಕರ ಕವಿಯ ಚೋರಬಸವ ಚಾರಿತ್ರ (ಕ್ರಿ.ಶ. ೧೭೬೩)ದಲ್ಲಿ ಹರಳಯ್ಯ ಮಧುವಯ್ಯನವರ ಕಥೆ ಬರುತ್ತದೆ. ತವೆ ಸಚಿವ ಮಧುವರಸ ತತ್ಪುತ್ರಿಯಳ ಮಾದಿಗರ ಹಳ್ಳುಗನ ಮಗಗೆ ಧಾರೆಯೆರೆದು ಪೆರಸುತಲೀ[18] ಎಂದೂ ಮತ್ತು ಸೂಚನಾಪದ್ಯ

14. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ : ಸಂ. ಆರ್. ಸಿ. ಹಿರೇಮಠ ಮತ್ತು ಎಂ. ಎಸ್. ಸುಂಕಾಪುರ. ಪು. ೨೯೯.
15. ಬಸವರಾಜ ವಿಜಯಂ : ಸಂ. ಆರ್. ಸಿ. ಹಿರೇಮಠ.
16. ಶರಣ ಲೀಲಾಮೃತ : ಸಂ ಶಿವಬಸವಸ್ವಾಮಿ ಪುಟ ೪೫೧.
17. ಅದೇ. ೨೨ ನೆಯ ಸಂಧಿ.
18. ಚೋರಬಸವ ಚರಿತ್ರೆ : ಸಂ. ವಿವಿಧ ಪಂಡಿತರು ೧೦-೩೯.

ದಲ್ಲಿ 'ಬಸವೇಶ ಕೂಡಲ ಸಂಗನೋಳ್ಪೆರೆದ ಶರಧಿಯೊಳಿಹೂಟೆ ಕಟ್ಟಿಸಲುಯಾ ಶರಣಂ ಹರಪುರಿಗೆ ಪೋದವರಣುಗಾ' ಎಂದು ಈ ಕೃತಿಯಲ್ಲಿ ಬರುತ್ತದೆ.

ಹರಳಯ್ಯನ ಚರಿತ್ರೆ ಎಂಬ ಒಂದು ಚಿಕ್ಕ ಗ್ರಂಥವನ್ನು ಶ್ರೀ ಫ.ಗು. ಹಳಕಟ್ಟಿಯವರು ಪ್ರಕಟಿಸಿದ್ದಾರೆ, ಅದು ತ್ರಿಪದಿಯಲ್ಲಿ ರಚಿತವಾಗಿದೆ. ಮೂರು ಸಂಧಿಗಳ ಪುಟ್ಟಕೃತಿ. ಸಂಪಾದಕರು ತಮ್ಮಲ್ಲಿ ಹರಳಯ್ಯನ ಇನ್ನೊಂದು ಹಸ್ತಲಿಖಿತ ವಿಸ್ತಾರ ಗ್ರಂಥವಿರುವುದಾಗಿ ಹೇಳಿದ್ದಾರೆ[19]. ಆದರೆ ಆಕೃತಿ ಪ್ರಕಟನೆಗೊಂಡಂತಿಲ್ಲ. ಮೂರು ಸಂಧಿಗಳ ಈ ಚಿಕ್ಕ ಕೃತಿಯಲ್ಲಿ ಮಧುವಯ್ಯನಿಗೆ ಸ್ನಾನಕ್ಕೆ ಬಿಸಿ ನೀರಿಗೆ ಬೆರೆಸಿಕೊಳ್ಳಲು ತಣ್ಣೀರನ್ನು ತರಲು ಗೌಡಿಯನ್ನು ಕಳುಹಿಸಿದರು ಎಂದು ಬರುತ್ತದೆ. ಕತ್ತಲೆ ಮಂಜು ಮಳೆಗೆ ಹೆದರಿ 'ಬರಿಗೊಡನೊಯ್ದರೆ ತರಿವರು ಕಿವಿಮೂಗ' ಎಂದು ಹರಳಯ್ಯನ ಮನೆಯ ಬಾಗಿಲ ಬಳಿಯ ಬಚ್ಚಲುದಕವ ಮೊಗೆದಳು ಎಂದು ಬರುತ್ತದೆ. ಆ ಬಚ್ಚಲುದಕ ಆಶ್ಚರ್ಯಕರ ಫಲನೀಡಿದಾಗ ಮಧುವಯ್ಯ ಹರಳಯ್ಯನ ಮನೆಗೆ ಹೋಗಿ–

ತಂದೆನು ಮಗಳನು-ಇಂದು ನಿಮ್ಮಲ್ಲಿಗೆ ಸಂದುದು ಎಂದು ಭಸಿತವನಿಟ್ಟರೆ ಇಂದು ನಿಮ್ಮಡಿಗೆ ಎರಗುವೆ[20]. (ಹ. ಚ-೨-೯೩)

ಅಸಮಯದ ನಡೆಯಿದು-ಹೊಸವರಿಯು ಲೋಕಕ್ಕೆ ವಿಸಮಯ ಬಹುದು ನಮಗೆಲ್ಲ ಬಿಜ್ಜಳ ಮಸಗೆ ಕಲ್ಯಾಣ ಕೆಡುವುದು (ಹ. ಚ-೨-೯೬)

ಹರಳಯ್ಯ ಬೇಡವೆಂದರೂ ಮಧುವಯ್ಯ ಒತ್ತಾಯ ಮಾಡಿದ :

ಬೇಡ ಮಧುವರಸಯ್ಯ ಕಾಡಾದಿರೆಮ್ಮನು ನಾಡು ಬಿಜ್ಜಳನದು ಜಗವೆಲ್ಲ ಮೆಚ್ಚರು ಮಾಡುವ ಕೆಲಸ ನಿನಗಲ್ಲ (ಹ.ಚ-೨-೯೯)

ಆದರೂ ಮದುವೆ ನಡೆದು ಹೋಯಿತು, ಎಲ್ಲ ಶಿವಶರಣರ ಸಮ್ಮುಖದಲ್ಲಿ. ಈ ಮದುವೆಯ ಸುದ್ದಿ ನಗರದಲ್ಲೆಲ್ಲ ಹಬ್ಬಿತು:

ಪಟ್ಟಣದೊಳಗೆಲ್ಲ-ಹುಟ್ಟಿತು ಮದುವೆಯ ಸುದ್ದಿ ಕೆಟ್ಟ ಕುಲದವರ ಮನೆಗಾಗಿ ವಿಪ್ರರು ಕೊಟ್ಟರು ತಮ್ಮ ಮಗಳನು (ಹ.ಚ-೩-೩)

ಅಪರಾಧ ನಡೆಯಿತು-ವಿಪರೀತ ಬಂದಿದೆ ತಪಸಿಗಳ ತಂಡ ಇರುವಲ್ಲಿ ಮಧುವರಸ ಶ್ವಪಚರಿಗೆ ಹೆಣ್ಣ ಕೊಡಬಹುದೆ (ಹ.ಚ-೩-೪)

ಈ ಘಟನೆ ತಿಳಿದ ಬಿಜ್ಜಳ ಬಸವಣ್ಣನವರನ್ನು ಕರೆಸಿ ಕೇಳಿದ, ಅದಕ್ಕೆ ಬಸವಣ್ಣನ ಒಪ್ಪಿಗೆ ಇದೆಯೆಂದು ತಿಳಿದ ನಂತರ ಕಿಡಿಕಿಡಿಯಾಗಿ ಅವರಿಬ್ಬರನ್ನೂ ಶೂಲಕ್ಕೇರಿಸಲು ಅಪ್ಪಣೆ ನೀಡಿದ. ಆಗ ಬಸವಣ್ಣನವರು 'ನುಡಿಯ ಮೀರಿದನಿವ ಕಡೆಗಾಲ ಬಿಜ್ಜಳಗೆ' ಎಂದು ಕಪ್ಪಡಿಗೆ ಹೊರಟರು. ಹರಳಯ್ಯನ ಚರಿತೆಯಲ್ಲಿ ೨೧೪ ತ್ರಿಪದಿಗಳಿವೆ. ಹರಳಯ್ಯನ ಹೆಂಡತಿಯ ಹೆಸರು ಕಲ್ಯಾಣಮ್ಮನೆಂದು ಬಂದಿದೆ.

ಹರಳಯ್ಯನ ಚರಿತೆ ಎಂಬ[21] ಇನ್ನೊಂದು ಕೃತಿ ಪ್ರಕಟವಾಗಿದೆ. ಇದರಲ್ಲಿ ೫ ಸಂಧಿಗಳಿವೆ. ಒಟ್ಟು ೪೭೬ ತ್ರಿಪದಿಗಳಿವೆ. ಇಡೀ ಕೃತಿ ತ್ರಿಪದಿಯಲ್ಲಿ ರಚಿತವಾಗಿದೆ. ಕವಿ ೧೮ನೆಯ ಶತಮಾನಕ್ಕೆ ಸೇರಿದವನಾಗಿರಬೇಕೆಂದು ಸಂಪಾದಕರು ಊಹಿಸಿದ್ದಾರೆ. ಈ ಕೃತಿಯಲ್ಲಿಯೂ ಹರಳಯ್ಯನ ಹೆಂಡತಿ ಕಲ್ಯಾಣಿ ಎಂದು ಹೇಳಲಾಗಿದೆ. ಅನೇಕ ಕೃತಿಗಳಲ್ಲಿ ಬರುವಂತೆ ಬಸವಣ್ಣನು ತನಗೆ ಹೆಚ್ಚಿನ ಶರಣನ್ನು ಮಾಡಿದನೆಂದು ಹರಳಯ್ಯನು ತನ್ನ ಹೆಂಡತಿಯ ಹತ್ತಿರ ಹೇಳಿದ ಸಂದರ್ಭದಲ್ಲಿ, ಕಲ್ಯಾಣಿಯು ವೀರಶೈವಧರ್ಮ ಹದಗೆಡುವುದು ಎಂದು ಭವಿಷ್ಯ ಹೇಳುವಳು–

ಕೆಡುವುದು ಕಲ್ಯಾಣ ಪೊಡವಿ ಬಿಜ್ಜಳನಳಿವ ಬಿಡುವರು ಗಣರು ನೆಲೆಗಳ ಬಸವಣ್ಣ ಮೃಡಸಂಗದೊಳಗಡಗುವನು-(೧-೪೧)

ಮಧುವಯ್ಯನ ಗೌಡಿ ಇಲ್ಲಿಯೂ ಮಹಾದೇವಿ. ಮಧುವಯ್ಯನಿಗೆ ಕುಷ್ಟ ವಾಸಿಯಾಗಲು, ಹರಳಯ್ಯನ ಮನೆಗೆ ಮುತ್ತುರತ್ನ ಕೊಡಲು ಆತನು ಭವಿಗಳಿಂದ ಏನನ್ನೂ ಸ್ವೀಕರಿಸುವುದಿಲ್ಲ ಎಂದು ಹೇಳುವನು. ಕೊನೆಗೆ ಹರಳಯ್ಯನ ಮಗನಿಗೆ ತನ್ನ ಮಗಳನ್ನು ಕೊಡುವುದಾಗಿ ಹೇಳಿದಾಗ ಲಿಂಗದೀಕ್ಷೆಯಾಗದವರೊಡನೆ ಶರೀರಸಂಬಂಧ ಸಾಧ್ಯವಿಲ್ಲವೆಂದದ್ದು ಮಧುವಯ್ಯ ಲಿಂಗದೀಕ್ಷೆ ತೆಗೆದುಕೊಂಡದ್ದು ಮದುವೆ ಮಾಡಿಸಿದ್ದು–ವೀರಶೈವರಿಗೆ ವರ್ಣಾಶ್ರಮ ತೊಡಕು ಬರುವುದಿಲ್ಲವೆಂದು ಹೇಳಿದರೂ, ಚಾಡಿಕೆ ಮಾತಿಗೆ ಕಿವಿಕೊಟ್ಟು ಬಿಜ್ಜಳ ಎಳಹೂಟೆ ಕಟ್ಟಿಸಿ ಕೊನೆಗೆ ಗಲ್ಲಿಗೇರಿಸಲು ಆಜ್ಞೆ ಮಾಡಿದ. ಮುಂದೆ ಶರಣರ ಪ್ರತಿಭಟನೆ–ಬಿಜ್ಜಳನ ಹಿಂಸೆ ತಾಳಲಾರದೆ ಕಲ್ಯಾಣವನ್ನು ಬಿಟ್ಟು ಶರಣರು ತೆರಳಿದರೆಂದೂ-ಬಿಜ್ಜಳನ ಕೊಲೆ–ಇತ್ಯಾದಿ ವಿಷಯಗಳು ವಿವರವಾಗಿ ಬಂದಿವೆ. ಈ ಕೃತಿಯಲ್ಲಿ ಬಸವಣ್ಣನಿಗಾಗಿ ಹರಳಯ್ಯ ತಯಾರಿಸಿದ ಎಡ ಪಾದರಕ್ಷೆಗೆ ತನ್ನ ಮಡದಿಯ ರೂಪನ್ನೂ ಬಲ ಪಾದರಕ್ಷೆಗೆ ತನ್ನ ಪ್ರತಿ ರೂಪನ್ನೇ ಕಡಿದಿಟ್ಟು ರೇಶ್ಮೆ ವಸ್ತ್ರದಲ್ಲಿ ಸುತ್ತಿಕೊಂಡು ಅರ್ಪಿಸಲು ತೆಗೆದುಕೊಂಡು ಹೋದನೆಂದು ಬರುತ್ತದೆ. ಬಸವಣ್ಣನವರ ಸಂದರ್ಶನ ಕಷ್ಟವಾಗಲು ತನ್ನ ಲಿಂಗವನ್ನು ಸ್ಮರಿಸಿ ಆ ಮೂಲಕ ಬಸವಣ್ಣನಿಗೆ ಸಂದೇಶ ತಲುಪಿಸುತ್ತಾನೆ. ಹರಳಯ್ಯನ ಚರಿತೆಯು ವಿವರವಾಗಿ ವೀರಶೈವರ ಕ್ರಾಂತಿಯನ್ನೂ, ತ್ರಿಪದಿಯಲ್ಲಿ ತಿಳಿಸುತ್ತದೆ.

---

19. ಹರಳಯ್ಯನ ಚರಿತೆ. ಸಂ. ಫ. ಗು. ಹಳಕಟ್ಟಿ. ಪು. ೬    20. ಅದೇ. ೨-೨೦.

21. ಹರಳಯ್ಯನ ಚರಿತೆ. ಸಂ. ಎಂ. ಎಸ್. ಸುಂಕಾಪುರ.

ಸಿದ್ಧಯ್ಯ ಪುರಾಣಿಕರು ಶರಣ ಚರಿತಾಮೃತದಲ್ಲಿ ಹರಳಯ್ಯ–ಮಧುವಯ್ಯರ ಕಥೆಯನ್ನು ಹೇಳುತ್ತಾ ಹಂತಿಪದಗಳಿಂದ, ತ್ರಿಪದಿ ಕೃತಿಯಿಂದ ಉದಾಹರಿಸಿದ್ದಾರೆ. ಅಲ್ಲಿ ಬರುವಂತೆ ಹರಳಯ್ಯ ಬಸವಣ್ಣನಿಗೆ ಅರ್ಪಿಸಿದ ಪಾದರಕ್ಷೆಗೆ ಬಳಸಿದ್ದು ತನ್ನ ಮತ್ತು ತನ್ನ ಹೆಂಡತಿಯ ಮೈಚರ್ಮವನ್ನೇ.

ಮರುದಿನವೆ ಹರಳಯ್ಯ ಕೊರೆದ ಬಲದೊಡಿ ಚರ್ಮ। ಹರನೆಂದು ಮಡದಿಯೆಡದೊಡೆಯ-ತಾ ಕೊಯ್ದು। ಭರದಿ ಹದಮಾಡಿ ಒಣಗಿಸಿದ॥ 22

ಉಳಿದಂತೆ ಕಥೆಯಲ್ಲಿ ಹೆಚ್ಚಿನ ಬದಲಾವಣೆಗಳೇನೂ ಕಂಡುಬರುವುದಿಲ್ಲ.

ಜೈನ ಸಂಪ್ರದಾಯದ ಕೃತಿಗಳಾದ ಬಿಜ್ಜಳರಾಯ ಚರಿತೆಯಲ್ಲಾಗಲೀ, ಬಿಜ್ಜಳರಾಯ ಪುರಾಣದಲ್ಲಾಗಲೀ ನಮಗೆ ಹರಳಯ್ಯ ಮಧುವಯ್ಯನವರ ಕಥೆ ಕಂಡುಬರುವುದಿಲ್ಲ. ಆದರೆ ಬಿಜ್ಜಳರಾಯ ಪುರಾಣದಲ್ಲಿ ಬಸವಣ್ಣನವರು ಹಲವಾರು ಜನರಿಗೆ ಶಿವದೀಕ್ಷೆ ಕೊಡಿಸಿದರೆಂದು ಬರುವ ಹೆಸರುಗಳ ಪಟ್ಟಿಯಲ್ಲಿ ಈ ಹೆಸರುಗಳೂ ಕಂಡುಬರುತ್ತವೆ. 'ಶರಣರ ಗೈದ ಅರಳೈ ನಿನ್ನು ಮದುವ್ಯೆ ಜಗದದೇವಿವನಿನ್ನು...'[23] ಇಷ್ಟು ಮಾತ್ರ ಬರುತ್ತದೆಯೇ ಹೊರತು ಉಳಿದ ಯಾವ ವಿವರಗಳೂ ಬರುವುದಿಲ್ಲ.

ಪ್ರಾಚೀನ ಕಾವ್ಯ ಪರಂಪರೆಯಿಂದ ಗಮನಿಸುತ್ತಾ ಬಂದರೆ ಬಸವಣ್ಣನವರ ಕೊನೆಯ ದಿನಗಳಲ್ಲಿ, ವೀರಶೈವ ಕ್ರಾಂತಿಯ ಅಂತ್ಯ ಭಾಗದಲ್ಲಿ ಯಾವುದೋ ಒಂದು ಅತ್ಯಂತ ಮಹತ್ವಪೂರ್ಣ ಘಟನೆ ನಡೆದಿರಲೇಬೇಕೆಂದು ಭಾಸವಾಗುತ್ತದೆ. ಬಸವಣ್ಣನವರು ಆ ಘಟನೆಯ ಕಾರಣ ಕಲ್ಯಾಣ ತ್ಯಜಿಸಿ ಕಪ್ಪಡಿಗೆ ತೆರಳಿರಬೇಕು. ಬಸವಣ್ಣನವರು ಬೋಧಿಸಿದ ಧರ್ಮಕ್ಕೆ ವ್ಯತಿರಿಕ್ತ ಘಟನೆಗಳು ನಡೆದಿರಬೇಕು. ಬಿಜ್ಜಳನ ಕೊಲೆಗೆ 'ಶಿವದ್ರೋಹ' ಕಾರಣವಾಗಿರಬೇಕು. ಕಲ್ಯಾಣದ ಆ ಮಹಾ ವಿಘಟನೆಗೆ ಹರಳಯ್ಯ ಮಧುವಯ್ಯನವರ ಪ್ರಸಂಗ ಮಹತ್ವದ ಚಾಲನೆಯನ್ನು ನೀಡಿದಂತಿದೆ. ಆದರೆ ಅವರ ಪ್ರಸಂಗ ಹೇಗೆ ನಡೆಯಿತು ಎಂದು ಯಾವ ಪ್ರಾಚೀನ ಕೃತಿಯೂ ಖಚಿತವಾಗಿ, ವಿವರವಾಗಿ ಹೇಳಿಲ್ಲ. ಈಚಿನ ಕೃತಿಗಳು ವಿವರವಾಗಿ ಹೇಳಲು ಪ್ರಯತ್ನಿಸಿವೆ. ಕಾಲದಿಂದ ಕಾಲಕ್ಕೆ ಅವರ ಪ್ರಸಂಗ, ಕೃತಿಗಳಲ್ಲಿ ಬೆಳವಣಿಗೆ ಪಡೆಯುತ್ತಾ ಹೋಗಿರುವುದು ಕಂಡುಬರುತ್ತದೆ.

ಪ್ರಾಚೀನ ಕೃತಿಗಳಲ್ಲಿ ಹರಳಯ್ಯ–ಮಧುವಯ್ಯ ಅವರ ಸ್ಪಷ್ಟ ಉಲ್ಲೇಖ ಬರುವುದರಿಂದ, ಮಧುವಯ್ಯನ ನೂರು ವಚನಗಳು ದೊರೆಯುವುದರಿಂದ, ಕ್ರಾಂತಿಯ ಕಾರಣವಾಗಿ ಬಿಜ್ಜಳನ ವಧೆಯಾಯಿತೆಂದು ಅನೇಕ ಆಧಾರಗಳಿಂದ ತಿಳಿದು ಬರುವುದರಿಂದ, ಅವರು ಐತಿಹಾಸಿಕ ವ್ಯಕ್ತಿಗಳಾಗಿದ್ದರೆಂಬುವುದರಲ್ಲಿ ಯಾವ ಅನುಮಾನವೂ ಇಲ್ಲ. ಅಲ್ಲಯ್ಯ ಮಧುವಯ್ಯಗಳ ಪ್ರಸ್ತಾಪ ತೆಲುಗು ಬಸವಪುರಾಣದಲ್ಲಿ ಸಂಕ್ಷಿಪ್ತವಾಗಿಯಾದರೂ ಖಚಿತವಾಗಿ ಬಂದಿದೆ. ಅಲ್ಲಿಂದ ಮುಂದೆ ಕನ್ನಡ ಬಸವಪುರಾಣದಲ್ಲಿ, ವಿರೂಪಾಕ್ಷ ಪಂಡಿತನಲ್ಲಿ, ಉತ್ತರದೇಶದ ಬಸವಲಿಂಗದೇವ ಮುಂತಾದವರಲ್ಲಿ ವಿವರವಾಗಿ ಬಂದಿದೆ. ಹರಳಯ್ಯ–ಮಧುವಯ್ಯ ಇವರ ಹೆಸರುಗಳು ಸಾಮಾನ್ಯವಾಗಿ ಜೋಡಿಯಾಗಿಯೇ ಬರುತ್ತವೆ. ತೆಲುಗು ಬಸವಪುರಾಣ ಮುಂತಾದವು ಬಿಜ್ಜಳ ಹರಳಯ್ಯ ಮಧುವಯ್ಯಗಳನ್ನು ಹಿಂಸಿಸಿದ್ದು ಕಾರಣವಿಲ್ಲದೆ ಎಂದು ಹೇಳುತ್ತದೆ. ಆದರೆ ಬಸವಣ್ಣನವರ ವಚನದಲ್ಲಿ ಬರುವ 'ಒಬ್ಬ ಜಂಗಮದಭಿಮಾನದಿಂದ ಚಾಲುಕ್ಯರಾಯನ ಆಳಿಕೆ ತೆಗೆಯಿತ್ತು' ಮುಂತಾದ ಮಾತುಗಳು ಮತ್ತು ಹರಿಹರನ 'ಶಿವದ್ರೋಹವಂ ಗೈದ ಬಿಜ್ಜಳನಂ ಕೊಲಿಸುತಂ' ಇಂತಹ ಮಾತುಗಳು ಮಹತ್ವಪೂರ್ಣ 'ಶಿವದ್ರೋಹ'ವನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಆ ಶಿವದ್ರೋಹ ಬೇರಾವುದೂ ಅಲ್ಲದೆ ಹರಳಯ್ಯ–ಮಧುವಯ್ಯರನ್ನು ಬಿಜ್ಜಳ ಹಿಂಸಿಸಿ ವಧಿಸಿದ್ದೇ ಇರಬೇಕು.

ಹರಳಯ್ಯ–ಮಧುವಯ್ಯ ಅವರ ಹೆಸರುಗಳ ಬಳಕೆಯೂ ಕಾವ್ಯಪುರಾಣಗಳಲ್ಲಿ ಸಾಮಾನ್ಯವಾಗಿ ಏಕರೂಪವಾಗಿ ಇಲ್ಲ. ತೆಲುಗು ಬಸವಪುರಾಣದಲ್ಲಿ ಅಲ್ಲಯ್ಯ ಮಧುವಯ್ಯ, ಕನ್ನಡ ಬಸವಪುರಾಣದಲ್ಲಿ ಹರಳಯ್ಯ ಮಧುವಯ್ಯ. ವಿರೂಪಾಕ್ಷ ಪಂಡಿತನಲ್ಲಿ ಹಳ್ಳಯ್ಯ ಮಧುವಯ್ಯ, ಉತ್ತರದೇಶದ ಬಸವಲಿಂಗದೇವನಲ್ಲಿ ಹರಳಯ್ಯ ಮಧುವಯ್ಯ, ಶಾಂತಲಿಂಗದೇಶಿಕನಲ್ಲಿ ಹಳ್ಳಯ್ಯ ಮಧುವಯ್ಯ, ಷಡಕ್ಷರದೇವನಲ್ಲಿ ಅಲ್ಲಯ್ಯ ಮಧುವಯ್ಯ, ಚನ್ನಪ್ಪ ಕವಿಯಲ್ಲಿ ಹರಳಯ್ಯ ಮಧುವಯ್ಯ, ಶಂಕರ ಕವಿಯಲ್ಲಿ ಮಧುವರಸ ಹಳ್ಳಗ ಎಂದು ಮುಂತಾಗಿ ರೂಪಗಳು ಬಳಕೆಯಾಗಿದೆ. ಆದರೆ ಯಾವ ಪದರೂಪಗಳೂ ತೀರಾ ಭಿನ್ನರೂಪಗಳಾಗಿ ಕಾಣುವುದಿಲ್ಲ. ಹೆಚ್ಚಾಗಿ ಅವರ ಹೆಸರುಗಳು ಜೋಡಿರೂಪದಲ್ಲೇ ಬರುತ್ತವೆ. ಆದ್ದರಿಂದ ಧ್ವನಿರೂಪದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬಂದರೂ ಅವು ಆ ಇಬ್ಬರು ವ್ಯಕ್ತಿಗಳಿಗೇ ಅನ್ವಯಿಸುತ್ತದೆ ಎಂಬುದರಲ್ಲಿ ಲವಲೇಶವೂ ಅನುಮಾನವಿಲ್ಲ. ಹರಳಯ್ಯ ತೆಲುಗಿನಲ್ಲಿ ಅಲ್ಲಯ್ಯ ಆಗಲು ಅಥವಾ ಹರಳಯ್ಯ ಹಳ್ಳಯ್ಯ, ಅಲ್ಲಯ್ಯ, ಹಳ್ಳಗ ರೂಪ ತಾಳಲು, ಮಧುವಯ್ಯ ಮಧುವರಸ ಮುಂತಾದ ರೂಪಗಳ ವ್ಯತ್ಯಾಸರೂಪಗಳು ಭಾಷಾಶಾಸ್ತ್ರದ ದೃಷ್ಟಿಯಿಂದಲೂ ಒಪ್ಪಿತವಾಗಬಲ್ಲವು.

ತೆಲುಗು ಬಸವಪುರಾಣ, ಕನ್ನಡ ಬಸವಪುರಾಣ ಮತ್ತು ಅವನ್ನು ಅನುಸರಿಸಿ ಬಂದಿರುವ ಕೃತಿಗಳಲ್ಲಿ ಬಿಜ್ಜಳನು 'ತಪ್ಪೇನುಮಿಲ್ಲದೆ' ಹರಳಯ್ಯ ಮಧುವಯ್ಯಗಳ ಕಣ್ಣುಗಳನ್ನು ಕೀಳಿಸಿದನೆಂದು ಹೇಳಲಾಗಿದೆ. ತೆಲುಗು ಬಸವಪುರಾಣದಲ್ಲಿ ಬರುವಂತೆ ಅವರು ಶ್ರೇಷ್ಠ ಶಿವಾಚಾರ ಮಾರ್ಗನಿರತರೂ, ಅಸಮಾನಲೀಲೆಯಿಂದ ಬಸವೇಶ್ವರನಲ್ಲಿ ವಿಶೇಷ ಸಲಿಗೆಯುಳ್ಳವರೂ ಆಗಿ

22. ಶರಣ ಚರಿತಾಮೃತ : ಲೇ. ಸಿದ್ಧಯ್ಯ ಪುರಾಣಿಕ. ಪು. ೨೨೯.    23. ಬಿಜ್ಜಳರಾಯ ಪುರಾಣ: ಸಂ. ಚಂದ್ರಪ್ಪನವರ ಬ್ರಹ್ಮಯ್ಯ.

ದ್ದರು ಎಂದು ಬರುತ್ತದೆ. ಇಂಥವರನ್ನು ತಪ್ಪೇನು ಇಲ್ಲದೇ ಹೋದರೂ ದೊರೆ ಶಿಕ್ಷಿಸಿದನೆಂದು ಬರುತ್ತದೆ. ಕನ್ನಡ ಬಸವ ಪುರಾಣದಲ್ಲಿ ಅವರು ಶಿವತತ್ತ್ವವೇತ್ತರೆಂದೂ, 'ಜಗತಿಪಂ ತಪ್ಪೇನುಮಿಲ್ಲದೆ ನೀತಿಯಲ್ಲೆಂದು ಬಗೆದವರ ಕರೆಸಿ ಕಣ್ಣಂ ತೆಗೆಸಿದನು' ಎಂದು ಬರುತ್ತದೆ. ಈ ಎರಡು ಕೃತಿಗಳಿಂದ ಹೇಳುವುದಾದರೆ ಅವರ ಶ್ರೇಷ್ಠ ಶಿವಾಚಾರ ಮಾರ್ಗವಾಗಲಿ, ಅಸಮಾನ ಲೀಲೆ, ವಿಶೇಷಸಲಿಗೆಗಳಾಗಲೀ ಬಿಜ್ಜಳನಿಂದ ತೀಕ್ಷ್ಣ ದಂಡನೆಗೆ ಒಳಗಾಗುವಂಥವಲ್ಲ. 'ಅಸಮಾನಲೀಲೆ' ಎನ್ನುವ ಮಾತು ಅವರ ಕ್ರಾಂತಿಕಾರಕ ನಂಟತನವನ್ನು ಬಹುಶಃ ಸೂಚಿಸುತ್ತದೆ. ಕನ್ನಡ ಬಸವಪುರಾಣದಲ್ಲಿ 'ಜಗತಿಪಂ ತಪ್ಪೇನುಮಿಲ್ಲದೆ ನೀತಿಯಲ್ಲೆಂದು ಬಗೆದವರ ಕರೆಸಿ ಕಣ್ಣಂ ತೆಗೆಸಿದನು' ಎಂದು ಬರುತ್ತದೆ. ತಪ್ಪೇನುಮಿಲ್ಲದೆ ಎಂದು ಹೇಳುವುದು ಅವರು ವೀರ ಶೈವಧರ್ಮಕ್ಕೆ ಸೇರಿದವರಾದುದರಿಂದ ಅವರಿಗೆ ವರ್ಣಾಶ್ರಮದ ತೊಡಕು ಇರುವುದಿಲ್ಲವೆಂದೂ, 'ನೀತಿಯಲ್ಲೆ'ಂದು ಎನ್ನುವ ಮಾತು ಪರಧರ್ಮೀಯರ ದೃಷ್ಟಿಯಲ್ಲಿ ಅದು ಅಸಾಧಾರಣ, ಅನೀತಿಯುತ ಮದುವೆಯಾಗಿದ್ದಿತು ಎಂಬುದು ಕವಿಯ ಅಭಿಪ್ರಾಯವಾಗಿರುವಂತೆ ತೋರುತ್ತದೆ. ತೆಲುಗು ಬಸವ ಪುರಾಣದಲ್ಲಿ ಅವರಿಬ್ಬರು ಬಸವೇಶ್ವರನಲ್ಲಿ ವಿಶೇಷವಾದ ಸಲಿಗೆಯುಳ್ಳವರಾಗಿದ್ದರು ಎಂಬ ಕಾರಣವೂ ರಾಜನ ಅಷ್ಟು ಕ್ರೂರ ಶಿಕ್ಷೆಗೆ ಕಾರಣವಾಗುವಂತಿಲ್ಲ. ಬಸವಣ್ಣನವರೊಂದಿಗೆ ಆಪ್ತಸಂಬಂಧ ಇಟ್ಟುಕೊಂಡಿದ್ದ ಅನೇಕ ಶಿವಶರಣರಿದ್ದರು. ಯಾರಿಗೂ ಇಲ್ಲದ ಶಿಕ್ಷೆ ಈ ಭಕ್ತರಿಗೆ ಆಗಬೇಕೆಂದಲ್ಲ. ಬಿಜ್ಜಳನ ಅಂತಹ ಉಗ್ರ ದಂಡನೆಗೆ ಗುರಿಯಾಗಬೇಕಾದರೆ ಬಹುಶಃ ಪರಧರ್ಮಿಗಳು ಒಪ್ಪದ ಸಂಬಂಧ ಅವರ ನಡುವೆ ಏರ್ಪಟ್ಟಿರಬೇಕು. ಇದನ್ನು ಆಧುನಿಕ ವಿದ್ವಾಂಸರೆಲ್ಲಾ ಒಪ್ಪುವಂತೆ ಕಾಣುತ್ತದೆ.

ಹರಳಯ್ಯ ಮಧುವಯ್ಯಗಳ ವಿಷಯ ಕಾಲದಿಂದ ಕಾಲಕ್ಕೆ ವ್ಯತ್ಯಾಸವಾಗುತ್ತಾ, ಬೆಳೆಯುತ್ತಾ ಹೋಗಿರುವುದರಿಂದ ಅದನ್ನು ಹೀಗೇ ನಡೆಯಿತೆಂದು ಸ್ಪಷ್ಟವಾಗಿ ಹೇಳುವುದು ಕಠಿಣವೇ. ವಿದ್ವಾಂಸರೊಬ್ಬರು 'ಅದೇ ಬಸವಣ್ಣನವರ ಜೀವನದ ಕಡೆಯ ದಿನಗಳಲ್ಲಿ ಕಲ್ಯಾಣದಲ್ಲಿ ನಡೆದ ಕ್ಷೋಭೆ. ಆ ಕ್ಷೋಭೆಗೆ ಕಾರಣರಾರು ? ಆಗ ನಿಜವಾಗಿ ಏನು ನಡೆಯಿತು? ಆ ಕ್ಷೋಭೆಗೆ ಕಾರಣವೇನು ? ಅದಕ್ಕೆ ಬಿಜ್ಜಳನ ದುಡುಕು ಎಷ್ಟರ ಮಟ್ಟಿಗೆ ಕಾರಣ, ವೀರಶೈವರು ತಮ್ಮ ಕ್ರಾಂತಿಕಾರಕ ತತ್ತ್ವಗಳನ್ನು ಆಚರಣೆಗೆ ತರಲು ತೋರಿಸಿದ ಅತ್ಯುತ್ಸಾಹ ಎಷ್ಟರ ಮಟ್ಟಿಗೆ ಕಾರಣ ತಿಳಿಯದು[24]' ಎಂದಿದ್ದಾರೆ.

ಪುರಾಣಗಳಲ್ಲಿ ಮದುವೆಯ ಬಗ್ಗೆ ಸ್ಪಷ್ಟ ಉಲ್ಲೇಖವಂತೂ ಇಲ್ಲ. ವಿರೂಪಾಕ್ಷ ಪಂಡಿತನಲ್ಲಿ ಸೂಚನಾರೂಪವಾಗಿ ಬಂದರೆ, ಉತ್ತರದೇಶದ ಬಸವಲಿಂಗದೇವ, ಶಾಂತಲಿಂಗದೇಶಿಕ, ಚನ್ನಪ್ಪಕವಿ, ಶಂಕರಕವಿ ಮುಂತಾದವರು ಹರಳಯ್ಯನ ಮಗನ-ಮಧುವಯ್ಯನ ಮಗಳ ನಡುವಿನ ಮದುವೆಯನ್ನು ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಪುರಾಣಕರ್ತೃಗಳು ಈ ಮದುವೆಯನ್ನು ಸ್ಪಷ್ಟವಾಗಿ ಉಲ್ಲೇಖಿಸದಿರಲು ಬೇರೆ ಬೇರೆ ಕಾರಣಗಳಿರಬೇಕು. ಬಸವಣ್ಣ ಮುಂತಾದವರು ಆ ಮದುವೆಗೆ ಒಪ್ಪಿಗೆಯನ್ನು ಕೊಟ್ಟಿದ್ದರೂ ಅದು ಬಹು ದೊಡ್ಡ ಕ್ರಾಂತಿಕಾರಕ ವಿಷಯವಾಗಿದ್ದಿತ್ತೆಂದು ಕಾಣುತ್ತದೆ. ಆಗಿ ಹೋದ ಘಟನೆಯನ್ನು ಪುನಃ ಪ್ರಸ್ತಾಪಿಸಲು ಒಂದು ರೀತಿಯಲ್ಲಿ ಅವರಿಗೆ ಹಿಂಜರಿಕೆಯೂ ಉಂಟಾಗಿರಬಹುದು. ಅಷ್ಟು ದೊಡ್ಡ ಕ್ರಾಂತಿಗೆ ಕಾರಣವಾದ ಆ ಮದುವೆಯನ್ನು ವೀರಶೈವ ಸಮಾಜ ಮತ್ತು ಸಮಕಾಲೀನ ಸಮಾಜ ಅರಗಿಸಿಕೊಳ್ಳುವುದು ಕ್ಲಿಷ್ಟವಾಗಿರಬಹುದು. ಆದ್ದರಿಂದ ಬಹುಶಃ ಪುರಾಣಕವಿಗಳು ಆ ಘಟನೆಯನ್ನು ಬಿಡುವಂತೆಯೂ ಇಲ್ಲ, ಹೇಳುವಂತೆಯೂ ಇಲ್ಲ. ಈ ಕಾರಣದಿಂದ ಸೂಚ್ಯವಾಗಿ ಹೇಳಿರುವರೆಂಬುದನ್ನು ಈ ಹಿಂದೆಯೇ ಗಮನಿಸಿದ್ದೇವೆ.

ಹರಳಯ್ಯ ಮಧುವಯ್ಯರು ಅಸಮಾನ ಲೀಲೆಯಿಂದ ಮೆರೆದವರು. ಬಸವಣ್ಣನವರು ಬೋಧಿಸಿದ 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ' ಎಂಬ ತತ್ತ್ವವನ್ನು ತ್ರಿಕರಣ ಶುದ್ಧವಾಗಿ ಆಚರಿಸಿ ತೋರಿಸಿದರು. ಬಹುಶಃ ಆ ಕಾಲಕ್ಕೆ ಅದು ಅತ್ಯಂತ ದಿಟ್ಟ, ಕ್ರಾಂತಿಕಾರಿಕ ಹೆಜ್ಜೆ. ಸಂಪ್ರದಾಯದ ಸೆರೆಯಲ್ಲಿ ಸಿಕ್ಕ ಸಮಾಜಕ್ಕೆ ಅಲ್ಲೋಲ ಕಲ್ಲೋಲ ಉಂಟುಮಾಡಬಲ್ಲದ್ದಾಗಿತ್ತು. ಮೊದಲೇ ಬಿಜ್ಜಳನಿಗೂ ಬಸವಣ್ಣನವರಿಗೂ ಧಾರ್ಮಿಕವಾದ ವಿಷಯಗಳಲ್ಲಿ ಸಂಘರ್ಷಣೆ ನಡೆಯುತ್ತಿದ್ದಿತು. ಸಂಬೋಳಿ ನಾಗಿದೇವನ ಮನೆಯಲ್ಲಿ ಬಸವಣ್ಣ ಊಟ ಮಾಡಿದ್ದು[25], ಸ್ಪೃಶ್ಯ ಅಸ್ಪೃಶ್ಯ ಎನ್ನದೇ ಎಲ್ಲರನ್ನೂ ತನ್ನ ಧರ್ಮಕ್ಕೆ ಸೇರಿಸಿಕೊಳ್ಳುತ್ತಿದ್ದುದು ಬಿಜ್ಜಳನಿಗೆ ನುಂಗಲಾರದ ಉಗುಳಲಾರದ ತುತ್ತಾಗಿತ್ತು. ಅದರಲ್ಲಿಯೂ ಬಿಜ್ಜಳನ ಅಧಿಕಾರಿಯೊಬ್ಬ ಆ ರೀತಿ ಮಾಡುತ್ತಿದ್ದುದು, ರಾಜಕೀಯ ಬಣ್ಣ ಕೊಡಲು ಪರಧರ್ಮೀಯರಿಗೆ ಅವಕಾಶವಾಗಿದ್ದಿತೆಂದು ಕಾಣುತ್ತದೆ. ಪರಧರ್ಮೀಯರ ಚಾಡಿ ಮಾತು, ಧಾರ್ಮಿಕ ಸಂಘರ್ಷ ಅತಿ ಎತ್ತರದ ಮಟ್ಟವನ್ನು ಮುಟ್ಟಿರಬೇಕು. 'ಈ ಅಸಮಾಧಾನ, ಒಳತಿಕ್ಕಾಟ, ಶೀತಲಸಮರ ಎಷ್ಟು ದಿನ ನಡೆಯಿತೋ ತಿಳಿಯದು. ಕಲ್ಯಾಣದಲ್ಲಿ ಬ್ರಾಹ್ಮಣ ಮಧುವಯ್ಯ ಮತ್ತು ಹರಿಜನ ಹರಳಯ್ಯನ ಮನೆತನಗಳ ಮಧ್ಯೇ ವೈವಾಹಿಕ ಸಂಬಂಧ ಏರ್ಪಟ್ಟಾಗ, ಅದನ್ನು ವೀರಶೈವ ಸಮಾಜ ಅತ್ಯುತ್ಸಾಹದಿಂದ ಸ್ವಾಗತಿಸಿತು ; ಬಿಜ್ಜಳ ಅದನ್ನು ನಿಲ್ಲಿಸಲು ಸಾಧ್ಯವಾಗದೆ ಅವರಿಬ್ಬರ ಕಣ್ಣು ಕೀಳಿಸಿಬಿಟ್ಟ. ಇದಕ್ಕೆ

24. ಸಂಶೋಧನ ತರಂಗ : ಎಂ. ಚಿದಾನಂದಮೂರ್ತಿ. ಪು. ೫೭    25. ವಚನಸಾಹಿತ್ಯ : ಎಂ. ಚಿದಾನಂದಮೂರ್ತಿ. ಪು. ಪು. ೬೫

ಸೇಡಿನ ರೂಪವಾಗಿ ಬಿಜ್ಜಳನ ಕೊಲೆಯಾಯಿತು'[26]. ಈ ಘಟನೆ ನಡೆಯಿತೆಂದು ಎಲ್ಲ ಆಧುನಿಕ ವಿದ್ವಾಂಸರು ಒಪ್ಪಿದ್ದಾರೆ[27].

ವರ್ಣಾಶ್ರಮ ರಕ್ಷಣೆ ರಾಜನ ಪರಮ ಕರ್ತವ್ಯಗಳಲ್ಲೊಂದು ಎಂಬ ನಂಬಿಕೆ ಇದ್ದಿತು. ಬಿಜ್ಜಳನ ದೃಷ್ಟಿಯಿಂದ ಮತ್ತು ಆಗಿನ ಸಮಕಾಲೀನ ಸಮಾಜದ ದೃಷ್ಟಿಯಿಂದ ಹರಳಯ್ಯ ಮಧುವಯ್ಯರ ನಂಟತನ ಅಧಾರ್ಮಿಕವಾದದ್ದು. ವೀರಶೈವೇತರ ಧರ್ಮೀಯರು ಈ ನಂಟತದ ಬಗ್ಗೆ ದೂರು ಕೊಟ್ಟು ರಾಜನ ಪವಿತ್ರ ಕಾರ್ಯವಾದ ವರ್ಣಾಶ್ರಮಧರ್ಮದ ಬಗ್ಗೆ ಎಚ್ಚರ ಕೊಟ್ಟಿರಬೇಕು. ಆಗ ತಾನೇ ಹೊಸದಾಗಿ ಆಚರಣೆಗೆ ಬರುತ್ತಿದ್ದ ವೀರಶೈವ ಕ್ರಾಂತಿಕಾರಿಕ ತತ್ತ್ವಗಳನ್ನು ವರ್ಣಾಶ್ರಮ ರಕ್ಷಕನಾಗಿ ಬಿಜ್ಜಳನಿಗೆ ಅರಗಿಸಿಕೊಳ್ಳಲು ಕಷ್ಟವಾಗಿರಬೇಕು. ಸಾಂಪ್ರದಾಯಿಕ ದೃಷ್ಟಿಯಿಂದ ನೋಡಿದರೆ ಒಬ್ಬ ಶೂದ್ರ ಬ್ರಾಹ್ಮಣ ಕನ್ಯೆಯನ್ನು ವರಿಸುವುದು ಪ್ರತಿಲೋಮ ವಿವಾಹ. ಇದನ್ನು ಸಮಾಜ ಬಹು ಭಯಂಕರವಾಗಿ ವಿರೋಧಿಸುತ್ತಿತ್ತು. ಆ ರೀತಿ ವಿವಾಹವಾದ ಶೂದ್ರನನ್ನು ಸಾರ್ವಜನಿಕವಾಗಿ ಹಸಿದ ನಾಯಿಗಳಿಂದ ತಿನ್ನಿಸುವ ಅಥವಾ ಕಾದ ಕಬ್ಬಿಣದ ಮಂಚದ ಮೇಲೆ ಮಲಗಿಸುವಂತಹ ಶಿಕ್ಷೆ ಕೊಡುವುದಾಗಿ ಬೆದರಿಸುತ್ತಿದ್ದರು[28]. ಇಂತಹ ಹಿನ್ನೆಲೆಯಲ್ಲಿ ಬಿಜ್ಜಳ, ಹರಳಯ್ಯ ಮಧುವಯ್ಯಗಳನ್ನು ಬಹು ಕ್ರೂರವಾಗಿ ದಂಡಿಸಿದನು. ವರ್ಣಗಳು ಹುಟ್ಟಿನಿಂದ ಬರುವುದಿಲ್ಲ, ಸಾಧನೆಯಿಂದ ಲಭಿಸುತ್ತವೆ ಎಂಬ ತತ್ತ್ವವನ್ನು ಆಚರಣೆಗೆ ತರಹೋದರು ವೀರಶೈವರು. ಬಹುಶಃ ಆ ಕಾಲಕ್ಕೆ ಅದು ತುಂಬಾ ಮುಂದುವರಿದ ದೃಷ್ಟಿದರ್ಶನ. ಅದರ ಆಚರಣೆಗೆ ತೊಡಗಿದ ಹರಳಯ್ಯ ಮಧುವಯ್ಯ ತಮ್ಮ ಬದುಕಿಗೇ ಎರವಾಗಬೇಕಾಯಿತು. ಮಧುವಯ್ಯನಂತಹ ಬ್ರಾಹ್ಮಣ ಉನ್ನತ ಅಧಿಕಾರಿಯೊಬ್ಬ,ಹರಳಯ್ಯನಂತಹ ಮೆಟ್ಟು ಹೊಲಿಯುವ ವೃತ್ತಿಯ ಅಸ್ಪೃಶ್ಯನ ಜೊತೆ ನಂಟತನ ಬೆಳಸಿದ್ದನ್ನು ಆಗಿನ ಸಮಾಜ ಮತ್ತು ಬಿಜ್ಜಳ ಒಪ್ಪಲು ಸಾಧ್ಯವಾಗಲಿಲ್ಲವೆಂದು ತೋರುತ್ತದೆ. ಕೆಲವು ಕಥೆಗಳು ಬಿಜ್ಜಳ ಹರಳಯ್ಯ ಮಧುವಯ್ಯಗಳ ಕಣ್ಣುಗಳನ್ನು ಕೀಳಿಸಲು ಬಸವಣ್ಣ ಮತ್ತು ಆತನ ಸಂಗಡಿಗರು ಅವರ ಕಣ್ಣುಗಳನ್ನು ಪಡೆದುಕೊಟ್ಟರೆಂದು ಹೇಳುತ್ತವೆ. ಈ ಭಾಗಗಳು ಬಸವಣ್ಣ ಮತ್ತು ಅವರ ಸಂಗಡಿಗರನ್ನು ವೈಭವೀಕರಿಸಲು ಮತ್ತು ಪವಾಡಪುರುಷರನ್ನಾಗಿ ಮೆರೆಸಲು ಮಾಡಿದ ಪ್ರಯತ್ನಗಳಾಗಿವೆ.

ವರ್ಣ ವ್ಯವಸ್ಥೆಯನ್ನು ಅಂಧಾನುಕರುಣೆ ಮಾಡುತ್ತಿದ್ದ ಜನಕ್ಕೆ, ಅಟ್ಟಹಾಸದ, ಸಂಪ್ರದಾಯದ ಸಂಕೋಲೆಯಲ್ಲಿ ಬಂಧಿತ ಜನರಿಗೆ, ಕೂಪಮಂಡೂಕಗಳಿಗೆ ಹರಳಯ್ಯ ಮಧುವಯ್ಯರ ನಂಟತನ ಸಮಾಜ ವಿರೋಧಿ ಕಾರ್ಯವಾಗಿಯೂ, ವರ್ಣ ವ್ಯವಸ್ಥೆಯ ವಿಪ್ಲವಕಾರೀ ಕಾರ್ಯವಾಗಿಯೂ ಕಂಡಿರಬೇಕು, ರಾಜನ ಕರ್ತವ್ಯವನ್ನೇ ಪ್ರಶ್ನಿಸುವ, ಸಮಾಜದ ಉತ್ತಮ ವರ್ಗವಾಗಿದ್ದ ಬ್ರಾಹ್ಮಣರ ಒಳಗುದಿಗೆ, ಅಸಮಾಧಾನಕ್ಕೆ ವಿಶೇಷವಾಗಿ ಅವಕಾಶ ಮಾಡಿಕೊಟ್ಟ ಅವರ ನಂಟತನ ಆಗಿನ ಸಮಾಜಕ್ಕೆ ನಿಜವಾಗಿಯೂ ಸ್ಫೋಟಕ ಘಟನೆ ಎಂಬುದರಲ್ಲಿ ಅನುಮಾನವಿಲ್ಲ.

ಹರಳಯ್ಯ ಇತರ ಅನೇಕ ಶಿವಶರಣರಂತೆ ವಚನಗಳನ್ನು ರಚಿಸಿದಂತೆ ನಮಗೆ ತಿಳಿದು ಬಂದಿಲ್ಲ. ಮಧುವಯ್ಯನೇನೋ ವಚನಗಳನ್ನು ರಚಿಸಿರುವುದು ಕಂಡು ಬರುತ್ತದೆ. ಆತನ ನೂರು ವಚನಗಳು ನಮಗೆ ದೊರೆಯುತ್ತವೆ. ಆದರೆ ಈತನು ಬಸವಣ್ಣನವರನ್ನಾಗಲೀ ಅಥವಾ ಉಳಿದ ವಚನಕಾರರನ್ನಾಗಲಿ ಕುರಿತು ಹೇಳದಿರುವುದು ಆಶ್ಚರ್ಯದ ವಿಷಯವಾಗಿದೆ. ಈತನ ಕಾಲದ ಬಗ್ಗೆ 'ಇವನು ಬಸವನ ಸಮಕಾಲದವನಾಗಿದ್ದುದರಿಂದ ಇವನ ಕಾಲವು ಕ್ರಿ. ಶ. ೧೧೬೫ ಆಗಬಹುದು'[29] ಎಂದು ಅಭಿಪ್ರಾಯವಿದೆ. ಮಧುವಯ್ಯನ ವಚನಗಳ ಅಂಕಿತ 'ಅರ್ಕೇಶ್ವರ ಲಿಂಗ' ಎಂದು. ಮಧುವಯ್ಯನ ವಚನಗಳು ಗಾದೆಯ ಮಾತುಗಳಂತೆ ಚಿಕ್ಕವಾಗಿದ್ದು ಮೊನಚನ್ನು ಪಡೆದುಕೊಂಡಿವೆ. ಭಾಷೆ ತೀರ ಸರಳವಾದರೂ ಭಾವ ಮಾತ್ರ ಗೂಢ. ಬಹುತೇಕ ಎಲ್ಲವೂ ಕೆಲವು ಅಪವಾದ ಬಿಟ್ಟರೆ ಬೆಡಗಿನ ವಚನಗಳು....ಇಲ್ಲಿರುವಂತೆ ಅಸಂಬದ್ಧ ಪ್ರತಿಮೆಗಳಿರುವ ವಚನಗಳೇ ಹೆಚ್ಚು. ಇವನ ವಚನಗಳು ಸಾಮಾನ್ಯರಿಗೆ ಅಲ್ಲವೇ ಅಲ್ಲ[30]. ಅವನ ವಚನಗಳಿಂದ ನಮಗೆ ಆತನ ವೈಯಕ್ತಿಕ ಜೀವನದ ವಿಷಯಗಳು ತಿಳಿದು ಬರುವುದಿಲ್ಲ. ಆತನು ಬಿಜ್ಜಳನಲ್ಲಿ ಉನ್ನತಾಧಿಕಾರಿಯಾಗಿ ಇದ್ದನೆಂದು ಕೆಲವು ಕೃತಿಗಳು ಹೇಳುತ್ತವೆ. ಅವನು ಹುಟ್ಟಿನಿಂದ ಬ್ರಾಹ್ಮಣನಾಗಿದ್ದು

---

26. ಅದೇ. ಪುಟ. ೬೭
27. ಭಕ್ತಿ ಭಾಂಡಾರಿ ಬಸವಣ್ಣನವರು ಎಂ. ಆರ್. ಶ್ರೀ. ಪು.೧೪೫. ವಚನಗಳಲ್ಲಿ ವೀರಶೈವ ಧರ್ಮ: ಎಚ್. ತಿಪ್ಪೇರುದ್ರಸ್ವಾಮಿ. ಪು ೩೦೮. ಬಸವಣ್ಣನವರು : ಎಂ. ಚಿದಾನಂದಮೂರ್ತಿ ಪು.೧೨೧. ಬಸವೇಶ್ವರರ ಸಮಕಾಲೀನರು : ಪ್ರ. ಬಸವ ಸಮಿತಿ. ಪು. ೨೫. ವಚನ ಧರ್ಮಸಾರ: ಎಂ. ಆರ್. ಶ್ರೀ. ಪು. ೨೦೯. ಶರಣರ ಅನುಭಾವ ಸಾಹಿತ್ಯ : ಎಚ್. ತಿಪ್ಪೇರುದ್ರಸ್ವಾಮಿ ಪು. ೧೩೬-೩೮. Basaveswara and his times, P. B. Desai. P. 97. Shri Basaveswara, A commemoration Volume. P. 29. ಶಿವಶರಣ ಕಥಾರತ್ನಕೋಶ : ತ. ಸು. ಶಾಮರಾವ್ ಪು. ೫೨೨ ಮತ್ತು ೩೧೪-೫
28. Marriage and family in India : K. M. Kapadia. P. 102. The Sudra offender was threatented with being devoured by dogs in a public place or with burning on a red hot iron cot.
29. ಪೀಠಿಕೆಗಳು ಲೇಖನಗಳು : ಡಿ. ಎಲ್. ನರಸಿಂಹಾಚಾರ್. ಪು. ೪೬೮
30. ವಚನ ಸಾಹಿತ್ಯ : ಎಂ. ಚಿದಾನಂದಮೂರ್ತಿ. ಪು. ೧೧೯

ಹರಳಯ್ಯನ ಮಹತ್ವ ಅರಿತು ಆನಂತರ ವೀರಶೈವ ಧರ್ಮಾವಲಂಬಿಯಾದನೆಂದು ತಿಳಿದು ಬರುತ್ತದೆ. ಆತನ ಅನೇಕ ವಚನಗಳಲ್ಲಿ 'ಹೊಲೆಯ' ಪ್ರತಿಮೆ ಕಂಡು ಬರುತ್ತದೆ. ಈ ಪ್ರತಿಮೆಗಳ ಆಧಿಕ್ಯದಿಂದ ಮಧುವಯ್ಯನ ಮುಖಾಂತರ ಮತ್ತು ಹರಳಯ್ಯನೊಂದಿಗೆ ಬೆಳೆದ ನಂಟತನದ ಬಗ್ಗೆ ಊಹಿಸಲು ಮತ್ತು ಕಲ್ಪಿಸಲು ಅವಕಾಶವಿದೆ. ಆದರೆ ಹೆಚ್ಚಿನ ವಚನಗಳೆಲ್ಲವೂ ಬೆಡಗಿನ ವಚನಗಳಾಗಿರುವುದರಿಂದ ಇದು ಹೀಗೇ ಎಂದು ಹೇಳುವ ಹಾಗಿಲ್ಲ. ಉದಾಹರಣೆಗೆ ಕೆಲವು ವಚನಗಳನ್ನು

> ಊರೊಳಗಣ ದೇವಾಲಯದಲ್ಲಿ ಐವರು ಹೊಲೆಯರು ಹೊಕ್ಕು ದೇವರ ಪೂಜಿಸುತ್ತೈದಾರೆ.
> ಹೊಲೆಯರು ಮುಟ್ಟಿ ದೇವಾಲಯ ಹೊಲಗಾಯಿತ್ತು; ದೇವರೊಳಗದೆ.
> ಕುಲಜರು ಹೊಲಬುದಪ್ಪಿ ಹೊಲೆ ಒಳಗಾಯಿತ್ತು, ಅರ್ಕೇಶ್ವರ ಲಿಂಗವನಱಿದ ಕಾರಣ[31]
> ಜಾತಿ ಜಾತಿಯ ಕೂಡಿದಲ್ಲದೆ ನಿಹಿತ ಸುಖವಿಲ್ಲ ಬಲ್ಲವ ಬಲ್ಲವನಲ್ಲಿಯಲ್ಲದೆ ಒಳ್ಳಿಯ ಗುಣವಿಲ್ಲ
> ಭಟ ಮುಗ್ಗಿದಡೆ ತಿಳಿದ ಭಟ ಕೈಹಿಡಿದೆತ್ತಿ ಇದಿರಾಗೆಂದಡೆ ಊಣೆಯವೆಲ್ಲಿ ಅಡಗಿತ್ತು
> ಕೇಳುವ ಬನ್ನಿ ಅರ್ಕೇಶ್ವರಲಿಂಗವ (ಸ. ಪು. ವ-೧೯೦)
> ಕುಲವೆರಡಲ್ಲದೆ ಹಲವಿಲ್ಲ, ದಿನವೆರಲ್ಲದೆ ಸಪ್ತದಿನವಿಲ್ಲ ಅಱಿವು ಮಱವೆಯೆರಡಲ್ಲದೆ ಬೇಱೊಂದು ತಡಿಗೆಯಿಲ್ಲ
> ಅರ್ಕೇಶ್ವರಲಿಂಗ ಏಕರೂಪನಲ್ಲದೆ ಬಹು ನಾಮದವನಲ್ಲ. (ಸ. ಪು. ವ-೧೯೮)

ಮಧುವಯ್ಯನ ವಚನಗಳು ಸಿಂಗಳದ ಸಿದ್ಧಬಸವದೇವರು ವ್ಯಾಖ್ಯಾನಿಸಿರುವ ಸಕಲ ಪುರಾತನರ ಬೆಡಗಿನ ವಚನಗಳು ಗ್ರಂಥದಲ್ಲಿ ದೊರೆಯುತ್ತವೆ. ಉಳಿದ ಕೆಲವು ವಚನಕಾರರ ಬೆಡಗಿನ ವಚನಗಳ ಜೊತೆಯಲ್ಲಿ ಈತನ ಮೂವತ್ಮೂರು ವಚನಗಳಿಗೆ ವ್ಯಾಖ್ಯಾನವನ್ನು ಮಾಡಲಾಗಿದೆ[32].

ಹರಳಯ್ಯ ಮಧುವಯ್ಯ ಅವರ ಬಗ್ಗೆ ಇನ್ನೊಂದು ವಿವರ ತಿಳಿದುಬರುತ್ತದೆ. ಮಧುವರಸನ ಊರು ಸೊಲ್ಲಾಪುರಕ್ಕೆ ಸಮೀಪವಾದ ಮಂಗಳವೇಢೆ ಎಂದೂ ಹರಳಯ್ಯನು ವಿಜಾಪುರ ಜಿಲ್ಲೆಗೆ ಸೇರಿದವನೆಂದೂ ವಿಜಾಪುರದಿಂದ ೨೦ ಮೈಲಿಗಳ ಮೇಲೆ ಹರಳಯ್ಯನ ಗುಂಡವೆಂಬ ಹೆಸರಿನ ಪ್ರಸಿದ್ಧವಾದ ಒಂದು ಸ್ಥಳವಿದ್ದು, ಈವರೆಗೂ ಅಲ್ಲಿರುವ ಅಸ್ಪೃಶ್ಯರು ತಾವು ಹರಳಯ್ಯನ ಅನುಯಾಯಿಗಳೆಂದು ಹೇಳಿಕೊಂಡು ಕಪ್ಪು ಕಡಿ ತಿನ್ನದೆ ಬಹು ಶುದ್ಧವಾದ ಆಚರಣೆಯಿಂದ ವರ್ತಿಸುತ್ತಿರುವರೆಂದು ತಿಳಿದುಬರುತ್ತದೆ[33].

ಹರಳಯ್ಯ ಮಧುವಯ್ಯನವರ ನಂಟತನ ಬೆಳೆದ ನಂತರ ಈ ವಿಷಯವನ್ನು ತಿಳಿದ ಬಿಜ್ಜಳ ಅವರಿಬ್ಬರ ಕಣ್ಣು ಕೀಳಿಸಿದನೆಂದೂ, ಎಳಹೂಟೆ ಕಟ್ಟಿಸಿ ಎಳೆಸಿ ಕೊಂದನೆಂದೂ, ಶೂಲಕ್ಕೇರಿಸಿದನೆಂದೂ ಪುರಾಣ ಕಾವ್ಯಗಳಲ್ಲಿ ಬರುತ್ತದೆ. ಆದರೆ ಎಲ್ಲಾ ಕೃತಿಗಳೂ ಹರಳಯ್ಯ-ಮಧುವಯ್ಯ ಅವರ ಮಕ್ಕಳ ಗತಿ ಏನಾಯಿತು ಎಂಬುದರ ಬಗ್ಗೆ ಮೌನವಹಿಸಿವೆ. ಹಿಂದೆ ಉದಾಹರಿಸಿರುವ ಧರ್ಮಶಾಸ್ತ್ರದಂತೆ ಬ್ರಾಹ್ಮಣ ಕನ್ಯೆಯನ್ನು ಮದುವೆಯಾದ ಶೂದ್ರನಿಗೆ ಶಿಕ್ಷೆಯಾಗಬೇಕು. ಆದರೆ ಇವರ ಘಟನೆಯಲ್ಲಿ ಶಿಕ್ಷೆಯಾಗುವುದು ವಧೂವರರ ಪಿತೃಗಳಿಗೆ; ಬಹುಶಃ ವಧೂವರರು ಎಳೆಯ ವಯಸ್ಸಿನವರೆಂದೂ ಮದುವೆಯ ಸಂಪೂರ್ಣ ಜವಾಬ್ದಾರಿ ಅವರವರ ಪಿತೃಗಳದೆಂದೂ ಬಿಜ್ಜಳ ಅವರನ್ನು ಕ್ರೂರವಾಗಿ ದಂಡಿಸಿರಬೇಕು.

ಹರಳಯ್ಯ-ಮಧುವಯ್ಯ ಕರ್ಣಾಟಕದ ಧಾರ್ಮಿಕ ಇತಿಹಾಸದಲ್ಲಿ ಬೆಳಗಿದ ಅಪರೂಪದ ವ್ಯಕ್ತಿಗಳು. ವೀರಶೈವ ತತ್ತ್ವವನ್ನು 'ನುಡಿದಂತೆ ನಡೆದು' ತಮ್ಮ ಕಣ್ಣ ಜ್ಯೋತಿಯನ್ನು ಕಳೆದುಕೊಂಡವರು ಮತ್ತು ತಮ್ಮ ಬದುಕಿಗೇ ಎರವಾದವರು. ವೀರಶೈವಧರ್ಮಕ್ಕೆ, ಬಸವಣ್ಣನವರು ಪ್ರಾರಂಭಿಸಿದ್ದ ಕ್ರಾಂತಿಗೆ ಪ್ರಾಯೋಗಿಕ ಮಹತ್ವವನ್ನು ನೀಡಿದವರು. ಎಲ್ಲ ತತ್ತ್ವಗಳು ಆಚರಣೆಯಲ್ಲಿ ಅರಳಿದಾಗಲೇ ಅವುಗಳ ಸಾರ್ಥಕ್ಯ ಎಂಬುದನ್ನು ಅರಿತವರು. ತಮ್ಮ ನಡತೆಯ, ಸಾಮಾಜಿಕ ಜವಾಬ್ದಾರಿಯ ಅರಿವಿದ್ದು ಇತಿಹಾಸಪ್ರಸಿದ್ಧ ಆ ಅಗ್ನಿಪಥದಲ್ಲಿ ನಡೆದರು. ಅಂತಹ ಅತ್ಯಂತ ಮಹತ್ವಪೂರ್ಣ ಘಟನೆಯಲ್ಲಿ ಭಾಗವಹಿಸಿ ಹುತಾತ್ಮರಾದರು. 'ದೇಶಕ್ಕಾಗಿ, ಧರ್ಮಕ್ಕಾಗಿ, ಹೆಣ್ಣಿನ ಮಾನರಕ್ಷಣೆಗಾಗಿ, ಸ್ವಾಮಿನಿಷ್ಠೆಗಾಗಿ ಹುತಾತ್ಮರಾದವರ ಉದಾಹರಣೆಗಳು ವಿರಳವಲ್ಲ ವಿಶ್ವದ ಇತಿಹಾಸದಲ್ಲಿ. ಆದರೆ ಹರಳಯ್ಯ ಮಧುವರಸರ ಬಲಿದಾನವೇ ಬೇರೆ ರೀತಿಯದು. ಇಂದಿಗೂ ಜಗತ್ತಿನ ನಾನಾ ಭಾಗಗಳಲ್ಲಿ ವರ್ಣಭೇದ, ವಂಶಭೇದ, ಜಾತಿಭೇದ ಮುಂತಾದ ಅನೇಕ ರೂಪಗಳಲ್ಲಿ ಬೇರು ಬಿಟ್ಟಿರುವ ಮಾನವ ಮಾನವರಲ್ಲಿಯ ಮೇಲು ಕೀಳಿಗೆ, ತಾರತಮ್ಯಭಾವಕ್ಕೆ, ಭೇದಬುದ್ಧಿಗೆ, ಅಸಹನೆಗೆ, ವಿಷಮತೆಗೆ ಕೊಡಲಿಯೇಟಾಗಲು ಬಯಸಿ ತಮ್ಮ ಆತ್ಮ ಒಪ್ಪಿದ ಅಮರತತ್ತ್ವಕ್ಕೆ ತಾವೇ ಆಹುತಿಯಾದ ಅನುಪಮ ಹುತಾತ್ಮರಿವರು'[34].

---

31. ಸಕಲ ಪುರಾತನರ ವಚನಗಳು : ಸಂ. ಆರ್. ಸಿ. ಹಿರೇಮಠ. ವಚನ ೪೯
32. ಸಕಲ ಪುರಾತನರ ಬೆಡಗಿನ ವಚನಗಳು : ಸಂ. ಎಂ. ಎಸ್. ಸುಂಕಾಪುರ.
33. ಹರಳಯ್ಯ ಮಧುವಯ್ಯಗಳ ಕಥೆ : ಲೇ. ಚ. ಉತ್ತಂಗಿ. ವಿ. ಪ್ರ. ಪು. ೨೨
34. ಶರಣ ಚರಿತಾಮೃತ : ಲೇ. ಸಿದ್ಧಯ್ಯ ಪುರಾಣಿಕ. ಪು. ೨೯೭.

# ಕಿನ್ನರಿಯ ಬ್ರಹ್ಮಯ್ಯನವರು

—ಬಿ. ನಂ. ಚಂದ್ರಯ್ಯ

ಹನ್ನೆರಡನೆಯ ಶತಮಾನ ಭಾರತದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚರಿತ್ರೆಯಲ್ಲಿ ಉಜ್ವಲವಾದ ಕಾಲ. ಕರ್ನಾಟಕದಲ್ಲಂತೂ ಮಹತ್ತ್ವಮವಾದ ಕಾಲ. ಮಾನವ ದಿವ್ಯಗಳನ್ನು ಮೆರೆಸಿದ ಕಾಲ. ಮನುಷ್ಯ ಮನುಷ್ಯನಾಗಿ ಹಂಗು–ದಾಕ್ಷಿಣ್ಯಗಳಿಗೊಳಗಾಗದೆ, ಹಮ್ಮು–ಬಿಮ್ಮುಗಳಿಂದ ಬೀಗಿ ಮೆರೆಯದೆ ಭೂಲೋಕದಲ್ಲಿ ಕೈಲಾಸವನ್ನು ಸೃಷ್ಟಿಸಿ ಮೃಣ್ಮಯಜಗತ್ತನ್ನೇ ಚಿನ್ಮಯಜಗತ್ತನ್ನಾಗಿ ಪರಿವರ್ತಿಸಿದ ಕಾಲ. ಶರಣ ನ್ಯಾಯನಿಷ್ಠುರಿ, ದಾಕ್ಷಿಣ್ಯಪರನಲ್ಲ ; ಲಿಂಗಲಾಂಛನಕ್ಕೆ ಶರಣೆಂಬ ಡಂಬಾಚಾರವನ್ನು ಧಿಕ್ಕರಿಸಿ ದಿಟಪುಟ ಭಕ್ತಿ ಸಂಪುಟವನ್ನು, ನೈಜಶಿವಭಕ್ತಿಯ ಫಸಲನ್ನು ಹುಲುಸಾಗಿ ಬೆಳೆದ ಸುವರ್ಣಕಾಲ, ಭಕ್ತಿಯ ಬೆಳೆಸಿರಿ ಬಸವಣ್ಣನನ್ನು ಲೋಕಕ್ಕೆ ನೀಡಿದ ಕಾಲ.

ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನಮಂತ್ರಿಸ್ಥಾನವನ್ನು ವಹಿಸಿಕೊಂಡಿದ್ದ ಬಸವಣ್ಣನವರನ್ನು ಕೇಂದ್ರಬಿಂದುವನ್ನಾಗಿ ಮಾಡಿಕೊಂಡು ಅಸಂಖ್ಯಾತ ಶಿವಶರಣರು ಕಲ್ಯಾಣದಲ್ಲಿ ಬಸವಣ್ಣನವರ ಮಹಾಮನೆಯಲ್ಲಿ ಒಟ್ಟುಗೂಡಿದರು, ಚನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಿದೇವ, ಅಲ್ಲಮಪ್ರಭು, ಮರುಳಶಂಕರದೇವ, ಸಕಲೇಶಮಾದರಸ, ಸೊಡ್ಡಳ ಬಾಚರಸ, ಘಟ್ಟಿವಾಳಯ್ಯ ಮುಂತಾದ ಶರಣರು ಮುಕ್ತಾಯಕ್ಕ, ಮಹಾದೇವಿ ಮುಂತಾದ ಶರಣೆಯರು ಕೂಡಿ ರಾಜ್ಯದ ಆಗುಹೋಗುಗಳನ್ನು ಕುರಿತು ಚಿಂತಿಸುತ್ತಿದ್ದರು. ಇಂಥ ಮಹಿಮರ ಸಂಗದಲ್ಲಿ ಮಹಾಜ್ಞಾನಿ ಕಿನ್ನರಿಯ ಬ್ರಹ್ಮಯ್ಯನವರೂ ಒಬ್ಬರು.

ಆಂಧ್ರಪ್ರದೇಶದ ಪೂಡೂರು ಗ್ರಾಮದಲ್ಲಿ ಕಲಿದೇವಿ ಎಂಬ ಶಿವಭಕ್ತೆಯ ಮಗನಾಗಿ ಹುಟ್ಟಿದ ಕಿನ್ನರಿ ಬ್ರಹ್ಮಯ್ಯನವರು ಅಕ್ಕಸಾಲೆಯ ಕಾಯಕವನ್ನು ಮಾಡಿಕೊಂಡಿದ್ದರು. ಸತ್ಯಶುದ್ಧ ಕಾಯಕರಾಗಿ ನಿರ್ವಂಚನೆಯಿಂದ ತಮ್ಮ ವೃತ್ತಿಯನ್ನು ನಡೆಸುತ್ತಿದ್ದು ಅತ್ಯಂತ ಜನಪ್ರಿಯರಾಗಿದ್ದರು. ಹೀಗೆಯೇ ತಮ್ಮ ಕಾಯಕವನ್ನು ನಡೆಸುತ್ತಿರಲು ಒಮ್ಮೆ ಒಬ್ಬ ಜಂಗಮ ಬಂದು ಆಭರಣದಲ್ಲಿ ಚಿನ್ನವನ್ನು ಬೇಡಲು ಅದರಲ್ಲಿಯೇ ಸ್ವಲ್ಪ ಭಾಗವನ್ನು ಕತ್ತರಿಸಿ ಕೊಟ್ಟ. ಒಡವೆಯವರಿಗೆ ಅವರು ಕೊಟ್ಟ ತೂಕಕ್ಕೆ ಸರಿಮಾಡಿಕೊಟ್ಟರು. ಮತ್ತೊಂದು ದಿನ ಅವರ ಗುರುಗಳು ಒಂದು ಆಭರಣವನ್ನು ಮಾಡೆಂದು ಹೊನ್ನನ್ನು ಕೊಡಲು, ಆಭರಣವನ್ನು ಮಾಡಿ ಅದನ್ನು ತೂಗಿ ನೋಡಿದಾಗ ತೂಕ ಕಡಿಮೆ ಬಂದುದು ಕಂಡು, ಇದು ಶಿವನ ಆಟವೇ ಇರಬೇಕು, ಬಹುಶಃ ಈ ಕಾಯಕವನ್ನು ಬಿಡಿಸಲೆಂದೇ ಈ ಆಟವನ್ನು ಹೂಡಿರಬೇಕೆಂದು ಭಾವಿಸಿ, ಕೂಡಲೇ ಆ ಕಾಯಕವನ್ನು ಬಿಟ್ಟು ಶಿವಾಲಯಕ್ಕೆ ನಡೆದು, ಕಿನ್ನರಿಯನ್ನು ಹಿಡಿದು ನುಡಿಸುತ್ತ ಈಶನನ್ನು ಪ್ರಾರ್ಥಿಸುತ್ತಾರೆ. ಪರಮಾತ್ಮನು ಅವರ ಭಕ್ತಿಯಿಂದ ಸಂಪ್ರೀತನಾಗಿ ದಿನಕ್ಕೊಂದುಹೊನ್ನುಹಣವನ್ನು ಕೊಡ ತೊಡಗುತ್ತಾನೆ. ಅಂದಿನಿಂದ ಜಂಗಮಸೇವೆಯಲ್ಲಿ ನಿರತರಾಗಿ ದಾಸೋಹ ಕಾರ್ಯದಲ್ಲಿ ತೊಡಗುತ್ತಾರೆ. ಇವರ ಕಿನ್ನರಿನಾದದ ಮಹಿಮೆ ದಿಕ್ಕುದಿಕ್ಕುಗಳಲ್ಲಿ ಮೊಳಗುತ್ತದೆ. ವಚನಗಳಿಂದ ಹಿಡಿದು ಹಂತಿಯ ಪದಗಳವರೆಗೆ ಮೊಳಗುತ್ತದೆ.

ಕಿನ್ನರಿಯ ಬೊಮ್ಮಯ್ಯ ಬಾರಿಸಲು। ಕುನ್ನಿ ಹಸು ಮರೆತು ಕಿವಿಗೊಟ್ಟು-ಕಲ್ಯಾಣ। ಚೆನ್ನಾತು ಲೋಕ ಚೆಲುವಾತು॥

ಬ್ರಹ್ಮಯ್ಯನವರ ಕಿನ್ನರಿನಾದ ಕುನ್ನಿ, ಪಶುಗಳನ್ನೂ ಮೈಮರೆಸಿತು ; ಕಲ್ಯಾಣ ಮಾತ್ರವಲ್ಲ ಲೋಕವೇ ಆ ನಾದ ಬ್ರಹ್ಮದಲ್ಲಿ ಮಿಂದು ಪುನೀತವಾಯಿತು; ಪಾವನವಾಯಿತು.

ಪ್ರತಿನಿತ್ಯ ಕಿನ್ನರಿ ಹಿಡಿದು ಪರಬ್ರಹ್ಮನನ್ನು ಸ್ತುತಿಸಿ ಹಾಡುವುದೇ ಇವರ ಕಾಯಕವಾಗುತ್ತದೆ. ಇದರಿಂದ ಇವರಿಗೆ 'ಕಿನ್ನರಿ ಬ್ರಹ್ಮಯ್ಯ'ನೆಂದು ಹೆಸರಾಗುತ್ತದೆ. ಪ್ರತಿ ನಿತ್ಯ ತಮ್ಮ ಅಮೃತಮಯ ಕಿನ್ನರಿನಾದದಲ್ಲಿ ಪರಬ್ರಹ್ಮನನ್ನು ಪರಿತೋಷಗೊಳಿಸುತ್ತಿರುವಲ್ಲಿ ಬಸವನಸದೃಶ ಭಕ್ತಿ ಭಾವನೆ 'ವಸುಧೆಯೊಳು ನೆರೆತೀವಿ–ಪಸರಿಸಿ ದೆಸೆದೆಸೆಗಳು ಮುಸುಕೆ' ಆ ಭಕ್ತಿ ಸ್ವರೂಪವನ್ನು ತಿಳಿಯಲು ಕಿನ್ನರಿ ಬ್ರಹ್ಮಯ್ಯಗಳು ಕಲ್ಯಾಣಕ್ಕೆ ಬರುತ್ತಾರೆ.

ಕಿನ್ನರಿಬ್ರಹ್ಮಯ್ಯನವರ ಬರುವಿನ ಮುನ್ಸೂಚನೆಯೊ ಎಂಬಂತೆ' 'ಬಸವಂಗೆ ಬಲದಕಣ್ ಕೆತ್ತುತ್ತೆ, ಪುಳಕಂಗಳೊಮ್ಮೆ ನೆರೆಯೆ ಹರನ ಭಕ್ತರು ಬರ್ಪರಿಂದೆನ್ನ ಮನೆಗೆ' ಎಂದು ಭಾವಿಸಿ 'ಶಶಿಯ ಬರವಂ ಚಕೋರಂ ಬಯಸಿದಂತೆ,ಎಸೆವ ಕಾರಂಬಯಸಿನಿಂದ ಚಾದಗೆಯಂತೆ' ಬಸವಣ್ಣ ನಿರೀಕ್ಷಿಸುತ್ತಾ, ದೂರದಲ್ಲಿ ಪತಾಕೆಯ ಮಧ್ಯೇ ಬರುತ್ತಿದ್ದ ಕಿನ್ನರಯ್ಯಗಳನ್ನು ಕಂಡು, ಹರುಷಗೊಂಡು, ಇದಿರ್ಗೊಂಡು ಭಯಭಕ್ತಿಯಿಂ ಮೆಯ್ಯಿಕ್ಕಿ, ಇರ್ಬರೊಂದಾಗಿ ನಲಿದು, ಬಸವನರಮನೆಯನೊಲವಿಂ ಪೊಕ್ಕು, ಪನ್ನೆರಡು ಸಾವಿರೊಡೆಯರ ಮಧ್ಯೇ ಲಿಂಗಾರ್ಚನೆಯ ನಿರ್ವರ್ತಿಸಿ ಶಿವಪ್ರಸಾದಂಗಳಂ ಸೇವಿಸಿ ಕಲ್ಯಾಣದಲ್ಲಿ ತಂಗುತ್ತಾರೆ.

ಒಲವು ದಳವೇರಿ ಕಿನ್ನರಯ್ಯ–ಬಸವಣ್ಣನವರ ಮಧ್ಯೇ ಬೆಳೆವುತ್ತಿರಲು ಒಂದು ದಿವಸ ಕಿನ್ನರಯ್ಯಗಳು ಒಲವಿನಿಂದ ತನ್ನ ಸೊಗಸೇ ಶಿವಂಗತಿಸೊಗಸು ತಾನೆಂದು ಚೆನ್ನವುಪ್ಪುಳಿಗಳ ಮೇಲೋಗರಕ್ಕೆಂದು ತರಿಸಿ, ಸುಖಮುಖದಿಂದ ಸೋಸುತ್ತಿರ್ಪಲ್ಲಿ, ಶರಣರ ನಡುವೆ ಬರುತ್ತಿದ್ದ ಬಸವನ ನಾಸಿಕಕ್ಕೆ ಉಳ್ಳಿಯ ಕಂಪು ತೀಡಲು, ತಂದವರಾರೀಯಭೋಜ್ಯವನೆನುತ್ತು

ಳ್ಳಿಯಂ ನಿಂದಿಸುತ್ತಾ ಬಸವಣ್ಣ ತನ್ನರಮನೆಗೆ ಪೋದ. ಇದನ್ನು ಆಲಿಸಿದ ಕಿನ್ನರಬೊಮ್ಮಿತಂದೆಗಳು 'ಪಸೆಂದ ಬಸವಣ್ಣ ನೆನುತೆ ಕಾಯ್ಪಿಡಿದಪರೆ, ಕಂಗಳರೆಕೆಂಪಾಗೆ, ಮೀಸೆಗಳು ಕೆತ್ತುತ್ತೆ. ಇದೇನೆಂದು ಕಣ್ಣನೀರಿಕ್ಕುತ್ತೆ, ಪಿರಿಯಸಿರೋಧದಿಂ ಶರಣ ನತಿನೋಪುತಂ, ಬರಲಾಗದಿಲ್ಲಿಗಾಂ ಬಂದಲ್ಲಿ ಸೈರಿಪ್ಪುದು, ಶರಣರಂ ದೂರದಿಂ ಕೇಳುತಾದರಿಸುವುದು ; ಅಮೃತಮಂ ಬಿಸುಟು ಮಲ್ಲಯ್ಯನಾರೋಗಿಸುವ ಅಮೃತಮಯ ಶಾಕಮನಿದಂ ನೋಡಿ ನಿಂದಿಸುವ ನುಡಿಗೇಳ್ದು ನಿಲಲಾಗದು ಎಂದು ಘುಡಿಘುಡಿಸುತ್ತಾ ಕಡುಕೋಪದಿಂದ ಪ್ರೋಜಿಮಟ್ಟು, ಅಲ್ಲಿಂದ ಒಂದು ಗಾವುದ ದೂರದ ಊರಿನ ಒಂದು ಮನೆಯಲ್ಲಿ ನಿಲ್ಲುತ್ತಾರೆ. ಇತ್ತ ನಿತ್ಯನೇಮಕ್ಕೆಂದು ಶರಣರೆಲ್ಲ ಸೇರಿದಾಗ ಕಿನ್ನರಯ್ಯಗಳನ್ನು ಕಾಣದ ಬಸವಣ್ಣ ಶರಣರನ್ನು ಬೆಸಗೊಳಲು ಗುಣವಂತ, ಅಭಿಮಾನಿ, ತ್ರಿಣಯನವತಾರ ಮುಳಿದುಪೋದ ಸಂಗತಿಯನ್ನು ಹೇಳಿ ಉಳ್ಳಿಯಿಂ ಕಿನ್ನರಯ್ಯಂಗಾದ ಮುಳಿಸಂ ಉಳ್ಳಿಯಿಂದಲೆ ತೀರ್ಚಿ ಕಳೆವುದು ನಿರೋಧಂ ಎಂದು ಸೂಚಿಸೆ ಹಸಾದವೆಂದು ಅದನ್ನು ಕೈಕೊಂಡ ಬಸವಣ್ಣ ಕೋಟಿ ವೃಷಭಧ್ವಜದ ನಡುವೆ ಉಳ್ಳಿಗಳ ಜಪಂ ಶಿರೋಮಾಲೆಗಳನಿಕ್ಕಿ, ಉಳ್ಳಿಗಳ ಬಾಹುಬಳೆ ಕಂಠಮಾಲೆಯನಿಕ್ಕಿ, ಉಳ್ಳಿಗಳ ಮುಡಿದು ಉಳ್ಳಿಗಳ ಕೈಯೊಳ್ಪಿಡಿದು ಜಂಗಮ ಸಮೂಹದ ಮಧ್ಯೇ ಬರುತ್ತಿದ್ದ. ಬಸವಣ್ಣನನ್ನು ಕಂಡ ಕಿನ್ನರಯ್ಯಗಳ ಮುಳಿಸು ಮಾಯವಾಗಿ ಇದಿರುಬಂದ ಬಸವಣ್ಣನನ್ನು ತಕ್ಕೈಸಿ ಬಿಗಿದಪ್ಪಲು ಆಲಿಕಲ್ಲಾಲಿಕಲ್ಲಂ ತಾಗಿದಂತಾಗೆ, ಹಾಲೊಳಗೆ ಹಾಲು ಕರಂ ಬೆರೆಸಿದಂತಾಗೆ, ಬೆಳಗು ಥಳಥಳಿಪ ಬೆಳಗಂ ಕೂಡಿದಂತಾಗೆ ಇಬ್ಬರೂ ಒರ್ಬರೊರ್ಬರೊಳು ಬೆರೆತುಹೋದರು. ಅಂದಿನಿಂದ ಕಿನ್ನರಯ್ಯನವರ ಉಳ್ಳಿಯ ಹಬ್ಬವನ್ನು ಆಚರಿಸುತ್ತಾರೆ.

ಕಲ್ಯಾಣಕ್ಕೆ ಬಂದ ಹೊಸದರಲ್ಲಿಯೇ ಕಿನ್ನರಯ್ಯನವರು ತಮ್ಮ ಅಸದೃಶವಾದ ಆಚಾರನಿಷ್ಠೆ ಅಭಿಮಾನಗಳನ್ನು ಮೆರೆದು ಅಭವನ ಶರಣ ದಾಕ್ಷಿಣ್ಯಪರನಲ್ಲ ಎಂಬುದನ್ನು ತೋರಿ ತನ್ನ ಮಹಿಮೆಯ ಮುದ್ರೆಯನ್ನು ಒತ್ತಿರುವುದನ್ನು ಈಪ್ರಸಂಗದಲ್ಲಿ ಕಾಣಬಹುದು.

ಪುಡೂರಿನಿಂದ ಕಲ್ಯಾಣಕ್ಕೆ ಬಂದು ತನ್ನ ಮಾಹೇಶ್ವರ ನಿಷ್ಠೆಯನ್ನು ಪ್ರಕಟಪಡಿಸಿದ ಕಿನ್ನರಿಬ್ರಹ್ಮಯ್ಯನವರು ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಕಿನ್ನರಿಯನ್ನು ನುಡಿಸುತ್ತಾ,

> ಸಂಗೀತ ವಿದ್ಯೆಯದು ಸಂಗಡಲೆ ಬಂದದ್ದು। ಲಿಂಗಿಗಳ ಹಿರಿಮೆ ಹಾಡುತಲಿ-ಕಲ್ಯಾಣ। ಲಿಂಗ ಮಂಟಪವ ಕೂಡಿದನು॥
> ಶಿವ ಕೊಟ್ಟ ಕಿನ್ನರಿಯ ಭವದೊಳಗೆ ನುಡಿಸುತಲಿ। ಶಿವಬೋಧೆ ಜನಕೆ ಮಾಡುತಲಿ-ಬೊಮ್ಮಯ್ಯ। ಭವಿಗಳಿಗೆ ಊದಿ ಶಿವಮಂತ್ರ॥

ಲಿಂಗಿಗಳ ಹಿರಿಮೆಯನ್ನು ಹಾಡುತ್ತ ಭವಿಗಳಿಗೆ ಶಿವಮಂತ್ರ ಬೋಧಿಸುತ್ತಾ ಕಲ್ಯಾಣ ಲಿಂಗಮಂಟಪದಲ್ಲಿರುತ್ತಾರೆ. ಹೀಗಿರಲು ಒಂದು ದಿನ 'ಮೋಳಿಗಯ್ಯನ ಸಮಯಾಚಾರದ ದೇವರು ಮಜ್ಜನ ನೀಡುವುದಕ್ಕೆ ಕೆಜೆಗೆ ಬರಲು, ಆಗ ಕಿನ್ನರಯ್ಯನ ಭಕ್ತಿಯ ದೇವರು, ಆ ದೇವರಿಗೆ ಒಂದು ವಸ್ತ್ರವ ಕೊಡಲು ಅದನ್ನು ಸೆಜ್ಜೆಗೆ ಧರಿಸಿಕೊಂಡು ಮನೆಗೆ ಬರಲು, ಆಗ ಮೋಳಿಗಯ್ಯನ ಸತಿ ಆ ವಸ್ತ್ರವೆಲ್ಲಿಯದು ಎನಲು, ಕಿನ್ನರಯ್ಯನ ಮನೆಯ ದೇವರು ಕೊಟ್ಟರೆನಲು, ಅವರು ಇಷ್ಟಲಿಂಗವ ಬಿಟ್ಟು ಸ್ಥಾವರಕ್ಕೆ ಹೋಗುವವರ ವಸ್ತ್ರ ನಿಮಗೇಕೆನಲು, ಮತ್ತೆಯವರಿಗೆ ಕೊಡಲು, ಆ ಕಿನ್ನರಯ್ಯಗಳ ದೇವರು ನಾವು ಕೊಟ್ಟ ವಸ್ತ್ರವ ತಿರುಗಿ ಕೊಟ್ಟೆವೆನಲು, ಕಿನ್ನರಯ್ಯ ಆ ಮಾತ ಕೇಳಿ ನಮಗೆ ಹೀಂಗೆನ್ನಬಹುದೆ ಐಕ್ಯವಾದೆವೆನಲು, ಮೋಳಿಗೆಯ್ಯನು ನಾವು ಸ್ಥಾವರವ ಬಿಡು ಎಂದರೆ ಹೀಂಗೆ ಐಕ್ಯವಾದೇವೆನ್ನಬಹುದೆ ಎನ್ನಲು ಅದ ಕೇಳಿ ಶರಣರು ಅವರೆಂದಂತೆ ಇಷ್ಟಲಿಂಗದಲ್ಲಿ ಹಣವ ತೆಗೆದುಕೊಳ್ಳಿ ಎನಲು, ಹಾಂಗಾಗಲೆಂದು ಕರಸ್ಥಲದಲಿಂಗದ ಮುಂದೆ ಕಿನ್ನರಿಯ ನುಡಿಸಿ ಹನ್ನೊಂದು ಹಣ ಹಾಗವ ಪಡೆದು ಸುಖದಲ್ಲಿದ್ದರು'.

'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎಂದು ಬಸವಣ್ಣನವರು ಹಾಡುತ್ತಾರೆ. ಸ್ಥಾವರಕ್ಕಿಂತ ಜಂಗಮಶ್ರೇಷ್ಠ, ಶಾಶ್ವತ ಎಂಬ ತತ್ತ್ವವನ್ನು ಹೇಳುತ್ತಾರೆ. ಆ ಕಾಲಕ್ಕೆ ಸ್ಥಾವರಪೂಜೆ ವಿಶೇಷವಾಗಿದ್ದು, ಸ್ಥಾವರ ಪೂಜೆಗಿಂತ ಜಂಗಮಪೂಜೆ, ಜಂಗಮಸೇವೆ, ತ್ರಿವಿಧದಾಸೋಹ ಶ್ರೇಷ್ಠ, ಹೆಚ್ಚು ಪ್ರಯೋಜನಕಾರಿ ಎಂದು ಬೋಧಿಸುತ್ತಾರೆ ಮಾತ್ರವಲ್ಲ, ಆಚರಣೆಯಲ್ಲಿ ತರುತ್ತಾರೆ. ಇದರಿಂದ ಮೂಢಭಕ್ತಿ ತೊಲಗಿ ಸಮಾಜದಲ್ಲಿ ಒಂದು ಹೊಸ ದೃಷ್ಟಿ ಬೆಳೆಯುವುದಕ್ಕೆ, ಸಮಾಜವನ್ನು ಪ್ರಗತಿ ಪಥದಲ್ಲಿ ಕೊಂಡೊಯ್ಯುವುದಕ್ಕೆ ಸಾರ್ಥಕ ಎಂಬುದನ್ನು ತೋರಿಸಿಕೊಡುತ್ತಾರೆ. ಇದರಿಂದ ಶತ–ಶತಮಾನಗಳಿಂದ ನಡೆದುಕೊಂಡು ಬಂದಿದ್ದ ಕೆಲವು ಅನಿಷ್ಟ ಪದ್ಧತಿಗಳು, ಕೆಲವರದೇ ಸ್ವತ್ತಾಗಿದ್ದ ಕೆಲವರಿಗೇ ಮೀಸಲಾಗಿದ್ದ ರೂಢಿಗಳು ತೊಲಗಿ, ಎಲ್ಲರೂ ಎಲ್ಲಕ್ಕೂ ಹಕ್ಕುದಾರರು, ಎಲ್ಲರೂ ಶಿವಪೂಜೆಯನ್ನು, ಗುರುಲಿಂಗ ಜಂಗಮ ಪೂಜೆಯನ್ನು ಮಾಡಲು, ಮಾಡಿ ಮುಕ್ತರಾಗಲು ಅರ್ಹರು ಎಂಬುದನ್ನು ಸಮಾಜದಲ್ಲಿ ಬಿತ್ತಿದರು. ಪರಂಪರಾಗತವಾಗಿ ನಡೆದುಬಂದಿದ್ದ ಸಂಪ್ರದಾಯಗಳ ಗೋಜಲನ್ನು ಕೊಡವಿ ನೂತನಸಮಾಜನಿರ್ಮಾಣಕಾರ್ಯಕ್ಕೆ ತಳಹದಿಯನ್ನು ಹಾಕಿದರು. ಈ ಕಾಯಕದಲ್ಲಿ ಆಗಿದ್ದ ಎಲ್ಲಾ ಶರಣರೂ ಸಮಾನ ಧರ್ಮಿಗಳಾಗಿ ದುಡಿದರು, ಅವರಲ್ಲಿ ಕಿನ್ನರಿ ಬ್ರಹ್ಮಯ್ಯನವರೂ ಒಬ್ಬರೆಂದು ಬೇರೆ ಹೇಳಬೇಕಾಗಿಲ್ಲ. ಮೇಲಿನ ಪ್ರಸಂಗ ಇಂಥ ಪರಿಸ್ಥಿತಿಯೊಂದರ ಸಂಕೇತ ಮಾತ್ರ. ಕರಸ್ಥಲ ಲಿಂಗದ ಮುಂದೆ ಕಿನ್ನರಿಯ ನುಡಿಸಿ ಹನ್ನೊಂದು ಹಣ ಹಾಗವ ಪಡೆದ ಪ್ರಸಂಗ ಇಷ್ಟಲಿಂಗ ಮಹತ್ತ್ವದ ಸಾಂಕೇತಿಕ ನಿರೂಪಣೆ ಮಾತ್ರ.

ಮತ್ತೊಮ್ಮೆ ಕಿನ್ನರಿಯ ಬ್ರಹ್ಮಯ್ಯನವರು ತ್ರಿಪುರಾಂತಕೇಶ್ವರ ದೇವಾಲಯದ ಗೋಪುರದೊಳಗೆ ಕುಳಿತಿದ್ದ ಸಂದರ್ಭದಲ್ಲಿ ವಿಟನೊಬ್ಬ ವೇಶ್ಯಾರ್ಥಕ್ಕೆ ವಧಿಸಬೇಕೆಂದು ಹರಕೆಯ ಕುರಿಯೊಂದನ್ನು ಹೊಡೆದುಕೊಂಡು ಬರುತ್ತಿರುವಾಗ ತ್ರಿಪುರಾಂತಕೇಶ್ವರನ ದೇವಾಲಯದ ಬಳಿ ಬರುತ್ತಿರುವಂತೆಯೆ ಕೊರಳ ನೇಣನ್ನು ಹರಿದು ಅರುಚುತ್ತ ಅಭವನ ದೇವಾಲಯದೊಳಕ್ಕೆ ನುಗ್ಗಲು, ಆ ಮಿಂಡನು ಬಿಡದೆ ಹಿಂಬಾಲಿಸಿ ಅಭವನ ಮಂದಿರದೊಳಗೆ ಪ್ರವೇಶಿಸಲು, ಸರ್ವಜೀವದಯಾಪರರಾದ ಕಿನ್ನರ ಬೊಮ್ಮಿ ತಂದೆಗಳು ಅದನ್ನು ಕಂಡು ಕರುಣಿಸಿ,

ಹೋಗದಿರು ಹೋಗದಿರು ತಮ್ಮಾ । ಹೋಗದಿರು ನಿನಗುಚಿತವಲ್ಲಿದು । ದೇಗುಲದೊಳುಱಿ ಹೊಕ್ಕುದೀ ಕುಱಿ ಸಾವಭಯಕಂಜಿ।
ಹೋಗು ಕೊಲುವುದು ದೋಷ ನೀನಂ । ತಾಗದೊಡೆ ನೀ ಬಿಲಿತ ಬೆಲೆಯನ। ದೀಗ ತಪ್ಪದೆ ಹೇಳು ಇಮ್ಮಡಿಯಾದೊಡಂ ಕೊಳ್ಳು॥

ಬ.ಪು. ೨೮-೧೧

ಹರಭಕ್ತರು ಶರಣರು ಬಂದವರನ್ನು ರಕ್ಷಿಸುತ್ತಾರೆ. ಮನುಷ್ಯರಾಗಲಿ 'ನೋವು ಸಾವುಂ ಜೀವಿಗಳಿಗೆಲ್ಲ ಸರಿಯಲಾ ಕೇಳ್, ನಿನಗಿದನೆಬಯಕರಿಸಿ ಕೊಲುವುದು ನೇಮವೇ, ತತ್ ತರುಣಿಗೀ ಕುಱಿಯಲ್ಲದಿಳಿಯದೆ ಗಂಟಲಲಿ ಮಗನೆ. ಈ ಭೂಮಿಯಲ್ಲಿ ಪಡೆಯಲಾಗದ ವಸ್ತುವೆಂದರೆ ಹಣ. ಅಂಥ ಹಣವೇ ಬೇಕಾದರೆ ಎರಡರಷ್ಟು ಕೊಡುವೆನು' ಎಂದು ಹೇಳುತ್ತಾನೆ. ಅದಕ್ಕೆ ಆ ಬಿಜ್ಜಳನ ಊಳಿಗದ ಬೊಜ್ಜನಾಯಕನು ತಿರಸ್ಕಾರದಿಂದ :

ತಿರುಕ ಜಂಗಮ ನೀನು ಮುರುಕು ಕಿನ್ನರಿ ನಿನಗೆ ಕುರಿಬಿಟ್ಟು ನಿಲ್ಲು ಬೊಮ್ಮಯ್ಯ ಎನ್ನುದಕೆ
ಕರವೆತ್ತಿ ಹಿಡಿದ ಕಿನ್ನರಿಯ ! ಕಿನ್ನರಿಯ ಬಾರಿಸಲು ಚನ್ನಿಗರು ಕೇಳಿದರು.
ಚಿನ್ನ ಸುರುವಿದರು ಗುಡಿಮುಂದೆ-ಬೋಜಗನಿಗೆ ಹೊನ್ನು ಸಾಸಿರವ ಉಣಿಸಿದರು ।

ಬೊಜಗನಿಗೆ ಆಶ್ಚರ್ಯವಾಗುವಂತೆ, ಅವನೆಣಿಕೆ ತಲೆಕೆಳಗಾಗಿ ತಬ್ಬಿಬ್ಬಾಗುವಂತೆ ಸಾವಿರ ಹೊನ್ನು ಕೊಟ್ಟು ಆ ಕುರಿಯನ್ನು ಕೊಂಡು ಅದಕ್ಕೆ ಲಿಂಗಮುದ್ರೆಯೊತ್ತುತ್ತಾರೆ ಕಿನ್ನರಿಬ್ರಹ್ಮಯ್ಯನವರು. ಸಾವಿರ ಹೊನ್ನಿನ ರಾಶಿಯನ್ನು ಕಂಡು ಉಬ್ಬಿಹೋದ ವಿಟಪುರುಷ ತನ್ನ ವಾರನಾರಿಯು ಉಬ್ಬಿಹೋಗುವಳೆಂದು ಭಾವಿಸಿ ಬಂದು ಅವಳ ಮುಂದೆ ಹೊನ್ನಿನ ರಾಶಿಯನ್ನು ಸುರಿದು ನಡೆದ ಘಟನೆಯನ್ನು ತಿಳಿಸುತ್ತಾನೆ. ಆಗ ಇಲ್ಲಿಯೂ ಅವನ ನಿರೀಕ್ಷೆಗೆ ವಿರುದ್ಧವಾಗಿ ಎಲವೋ 'ನೀನೇತರ ಬೊಜಂಗಂ, ತೊಲಗು ಭಂಡರಭಾವ, ನಿನ್ನಂ ಕಂಡು ಸರಿ ವಿಟರು ನಗರೇ ! ನನ್ನನ್ನು ಧನಪಿಶಾಚಿಯೆಂದು ಬಗೆದೆಯಾ ? ನಿನ್ನ ಧನಗಿನವೆನಗೆ ಬಾತಿಯೆ ? ಎನ್ನ ಸೊಬಗಂ ನೋಳ್ಪೆಯಾದೊಡೆ ಹೊನ್ನನೀಗಳೆ ಬಿತ್ತಿಸುವೆನೀ ಕೇರಿಕೇರಿಯಲಿ. ಸೂಳಿಗೆಯ್ವಾ ವಿಟರತಲೆಗಳ ಮೇಲೆ ಹುಲ್ಲಂ ಕಟ್ಟಿದೆಯಲೋ ಖೂಳ' ಎಂದು ನಿಂದಿಸಿ ಇಂದು ದೇವತೆಗೆಂದು ನೀ ಬಲಿತಂದ ಕುಱಿಯಂ ತಾರದೊಡೆ ನಾವಿಂದೊಸಗೆಯಂಮಾಡಲಮ್ಮೆವು, ನಮ್ಮನಾ ದೈವ ಕೊಂದಪುದು, ಅದಕಂಜುವೆವು ನಾವು' ಎಂದು ಅವನನ್ನು ಮೂದಲಿಸಿ ಕಳುಹಿಸುತ್ತಾಳೆ.

'ಕಾಮಾತುರಾಣಾಂ ನಭಯಂ ನಲಜ್ಜಾ' ಎಂಬಂತೆ ಆ ಕಡುದುರುಳ ಬೊಜಂಗನು ದೇವಾಲಯಕ್ಕೆ ಬಂದು ಆ ಕುರಿಯನ್ನು ಹಿಡಿದ ಕೂಡಲೇ ಆ ಶರಣನು ಆಗ್ರಹಗೊಂಡು 'ಹಿಡಿಯದಿರು, ತೊಲತೊಲಗು, ನೀ ಹಿಡಿದೊಡೆ ಬಸವರನಾಣೆ, ಪಾತಕ ಹಿಡಿದೊಡೆಯು ನಾ ನಿನ್ನ ತಲೆಯ ಹೊಡೆದು ಕೆಡಹುವೆನು, ನಂಜು ನಿನಗಿದು, ಲಿಂಗಮುದ್ರೆ ಸುರಂಜಿಸುವ ಕುಱಿ ಬೇಡ' ಎಂದು ಎಷ್ಟು ಹೇಳಿದರೂ ಕೇಳದೆ ಕತ್ತಿಯನ್ನು ಓರಿಯಲು ಆಗ ಕಿನ್ನರಯ್ಯಗಳು ಕೋಪೋದ್ರೇಕದಿಂದ 'ಬೀಳು ಕೆಡೆ ಎನುತ ತಲೆ ಪರಿಯೆ' ಹೊಡೆದರು. ಆಗ ಅವನ ಬಳಗದವರು ರಾಜ ಬಿಜ್ಜಳನ ಬಳಿಗೆ ಬಂದು ಗೋಳಾಡುತ್ತಾ ದೂರು ಕೊಡುತ್ತಾರೆ. ಮುಳಿದ ಬಿಜ್ಜಳ ಬಸವಣ್ಣನ ಮುಂದೆ ಅಂದ. ಅದಕ್ಕೆ ಬಸವಣ್ಣ ಕಿನ್ನರಯ್ಯಗಳೇನು ಬಾಲಕರೆ, ಭಾಳನೇತ್ರ ಪ್ರತಿಮರು, ಎತ್ತೀಯಿತೆಂದೊಡೆ ಮೂಲೆಯಲಿ ಕಟ್ಟಿಸುವುದೆಂಬನ ಚಾಳಿಯೇತಕೆ, ವಿಚಾರಣೆ ನಡೆಯಲಿ' ಎಂದು ಕಿನ್ನರಿಬೊಮ್ಮಿತಂದೆಗಳ ಬಳಿಗೆ ಬರುತ್ತಾರೆ. ವಿಚಾರಣೆ ನಡೆಯುತ್ತದೆ. 'ಕಿನ್ನರಯ್ಯನು ನುಡಿದ ಮಾತಿಗೆ ಸಾಕ್ಷಿಯೇನು? ಈ ಘಟನೆ ನಡೆವಾಗ ಅಲ್ಲಿ ಇದ್ದವರು ಮೂವರು. ಕಿನ್ನರಿಬ್ರಹ್ಮಯ್ಯ, ವಿಟ, ತ್ರಿಪುರಾಂತಕೇಶ್ವರ. ವಿಟ ಹತನಾಗಿದ್ದಾನೆ. ಆದುದರಿಂದ ತ್ರಿಪುರಾಂತಕೇಶ್ವರನೇ ಸಾಕ್ಷಿ ನುಡಿಯಲಿ ಎಂದು ಕಿನ್ನರಯ್ಯನವರು ಹೇಳುತ್ತಾನೆ. ಆಗ ಕಲ್ಲು ದೇವರು ಎಲ್ಲಿಯಾದರೂ ನುಡಿವುದೇ ಎಂದು ಹಾಸ್ಯ ಮಾಡುತ್ತಾರೆ. ಅದಕ್ಕೆ ಕಿನ್ನರಿ ಬೊಮ್ಮಿ ತಂದೆಗಳು.

ನಿನ್ನ ಹರೆಯದ ರೂಹಿನ, ನುಡಿಯ ಚಾಗಿನ, ಚೆಲುವಿನ ಸಿರಿಯ ಸಂತೋಷದ, ಕರಿತುರಗರಥಪದಾತಿಯ ನೆರವಿಯ,
ಸತಿಸುತರ ಬಂಧುಗಳ ಸಮೂಹದ, ನಿನ್ನ ಕುಲದಭಿಮಾನದ ಗರ್ವವ ಬಿಡಿ, ಮರುಳಾಗದಿರು;
ಅಕಟಕಟಾ, ರೋಮಜನಿಂದ ಹಿರಿಯನೆ? ಮದನನಿಂದ ಚೆಲುವನೆ? ಸುರಪತಿಯಿಂದ ಸಂಪನ್ನನೆ?
ವಾಮದೇವ ವಶಿಷ್ಠರಿಂದ ಕುಲಜನೆ? ಅಂತಕನ ದೂತರು ಬಂದು ಕೈವಿಡಿದೆಳೆದೊಯ್ಯುವಾಗ ನುಡಿಗೆಡೆಯಿಲ್ಲ
ಕೇಳೋ ನರನೆ, ಎನ್ನ ಮಹಾಲಿಂಗ ತ್ರಿಪ್ರರಾಂತಕದೇವರ ಪೂಜಿಸಿದೆಯಾದರೆ ಕೇಡಿಲ್ಲದ ಪದ ದೊರೆಕೊಂಬುದು ಮರುಳೆ !

ಎಂದು ಮನುಷ್ಯ ಜೀವನದ ಪೊಳ್ಳು, ತ್ರಿಪುರಾಂತಕೇಶ್ವರನ ಶಾಶ್ವತ ತಿರುಳನ್ನು ನಿವೇದಿಸಿ, ಆತನನ್ನು ಪೂಜಿಸಿದರೆ ಕೇಡಿಲ್ಲದ ಪದವಿ ದೊರಕುವುದೆಂದು ಅವನ ಪಾರಮ್ಯವನ್ನು ಕೊಂಡಾಡಿ ಅವನಿಂದ ಸಾಕ್ಷಿನುಡಿಸುತ್ತಾರೆ. ಭಕ್ತಿಪ್ರಿಯ ತ್ರಿಪುರಾಂತಕೇಶ್ವರ ಎಂಬುದನ್ನು ಪ್ರತ್ಯಕ್ಷ ತೋರಿಸುತ್ತಾರೆ. ಪರಿಹಾಸ್ಯ ಮಾಡಿದವರ ಉಸಿರೇ ಅಡಗುವಂತೆ ಲಿಂಗದಿಂದ ಶಬ್ದ ಹೊರಡುತ್ತದೆ. ನೆರೆದ ಜನಸ್ತೋಮ ನಿಬ್ಬೆರಗಾಗಿ ಅಜೀಚೇತನರಂತೆ ನಿಲ್ಲುತ್ತಾರೆ. ಸತ್ತಬೊಜಂಗ ಎದ್ದು ನಿಲ್ಲುತ್ತಾನೆ. ಮೂರ್ಛೆ ತಿಳಿದೆದ್ದ ಬಿಜ್ಜಳ ಮೊದಲಾದವರು ದಂಡಪ್ರಣಾಮ ಮಾಡಿ ಅಭಯವನ್ನು ಬೇಡುತ್ತಾರೆ. ಇದರಿಂದ ಕಿನ್ನರಯ್ಯಗಳ ಕೀರ್ತಿ ದಶದಿಕ್ಕುಗಳಲ್ಲಿ ಹಬ್ಬುತ್ತದೆ.

ಒಮ್ಮೊಮ್ಮೆ ಮನುಷ್ಯನಿಗೆ ತಾನೊಂದು ದೊಡ್ಡ ಕಾರ್ಯವನ್ನು ಸಾಧಿಸಿದಾಗ ಜನರ ಪೊಗಳಿಕೆಯಿಂದ ಯಾರೂ ಮಾಡಲಾಗದ ಕಾರ್ಯವನ್ನು ತಾನು ಮಾಡಿದೆನೆಂಬ ಅಹಂಭಾವವನ್ನು ತಡೆಹಿದಿದು ಸಮತೆಯನ್ನು ಸಾಧಿಸಿಕೊಂಡವನೇ ಮಹಾನುಭಾವಿ. ಮೇಲಿನ ಘಟನೆಗಳು ನಡೆದ ಮೇಲೆ ಕಿನ್ನರಿ ಬ್ರಹ್ಮಯ್ಯನವರಿಗೂ ಕೊಂಚ ತಲೆತಿರುಗಿರಬೇಕು. ಆದರೆ ಕೂಡಲೇ ಅಲ್ಲಿಯೇ ಆ ಭಾವವನ್ನು ತಟ್ಟಿ ಸಮಗೊಳಿಸುವ ಗುರುವೊಬ್ಬ ದೊರೆಯುತ್ತಾನೆ. ಅವನೇ ಕಲಿಕೇತ ವೇಷದ ಕಲಿಕೇತ ಬ್ರಹ್ಮಯ್ಯ. ಕಿನ್ನರಿ ಬ್ರಹ್ಮಯ್ಯನವರ ಕೀರ್ತಿಯನ್ನು ಕೇಳಿದ ಎಡರಡಸಿದ ಬಡಭಕ್ತನೊಬ್ಬ ತನ್ನ ಬಡತನವನ್ನು ಹೋಗಲಾಡಿಸಿಕೊಳ್ಳುವ ಆಸೆಯಿಂದ ಕಲಕೇತ ಬ್ರಹ್ಮಯ್ಯನವರ ಬಳಿಗೆ ಬಂದು ತನ್ನ ಅಂತರಂಗವನ್ನು ತೋಡಿಕೊಳ್ಳುತ್ತಾನೆ. ಅದಕ್ಕೆ ಕಲಕೇತ ಬ್ರಹ್ಮಯ್ಯ ನಕ್ಕು ಬೆಲೆಗೆ ಕೆಲಸಂಗೆಯ್ವಬಂಟನು ಕೊಳಬಹುದೆ ರಾಶಿಯಧನಮಂ? ಫಲವನರ್ಥಿಸಿ ಪೂಜಿಸುವ ಸಾಮಾನ್ಯ ಭಕ್ತರಿಗೆ ಅಳವಡದುದಂ ಹೇಳದಿರು. ಇಷ್ಟು ದೂರ ಬಂದು ಬಳಲಿದ್ದೆ ಸಾಕೆಂದು ಹೇಳಿ ತನ್ನ ಟಗರಿನ ಕೊಂಬನ್ನು ಅಲ್ಲಾಡಿಸಿ ಹೊನ್ನಿನ ರಾಶಿಯನ್ನೇ ಸುರಿಯುತ್ತಾನೆ. ತನ್ನಿಂದಾಗುವಷ್ಟು ಹೊನ್ನನ್ನು ಹೊತ್ತುತಂದು ಬಸವಣ್ಣನನ್ನು ಬೇಡುತ್ತಾನೆ. ವಿಷಯ ತಿಳಿದ ಬಸವಣ್ಣ ಹಾಗೂ ಕಿನ್ನರಿಬ್ರಹ್ಮಯ್ಯಗಳಿಬ್ಬರೂ ಓಡಿ ಬಂದು ದೀರ್ಘದಂಡಪ್ರಣಾಮ ಮಾಡುತ್ತಾರೆ. ಇದರಿಂದಾಗಿ ಕಿನ್ನರಿಬ್ರಹ್ಮಯ್ಯನವರ ಭಕ್ತಿ ಪುಟವಿಟ್ಟ ಕುಂದಣದಂತೆ ಬಣ್ಣವೇರುತ್ತದೆ.

ಪ್ರಭುದೇವರು ಕಲ್ಯಾಣಕ್ಕೆ ಬಂದ ಸಂದರ್ಭದಲ್ಲಿ ಪೂಜಾ ನಿಮಗ್ನರಾಗಿದ್ದ ಬಸವಣ್ಣನವರ ಅಹಂಕಾರದಿಂದಾಗಿ ಪ್ರಭುದೇವರು ಬಸವಣ್ಣನವರ ಮನಸ್ಸನ್ನು ತಿದ್ದುವ ದೃಷ್ಟಿಯಿಂದ ಪರೀಕ್ಷೆಗೊಳಗುಮಾಡಿದಾಗ ಚೆನ್ನಬಸವಣ್ಣ, ಹಡಪದಪ್ಪಣ್ಣಗಳಾದಿಯಾಗಿ ಅಲ್ಲಿ ನೆರೆದಿದ್ದ ಶರಣರೆಲ್ಲ ಪ್ರಭುದೇವರನ್ನುಸ್ತುತಿಸಿ ಸಮಾಧಾನ ಮಾಡುತ್ತಾರೆ. ಆಗ ಬಸವಣ್ಣನವರು ಮುನ್ನ ತಪ್ಪಿದ ತಪ್ಪಲ್ಲದೆ ಇನ್ನು ತೆರಹುಮರಹಾಗಿದ್ದಡೆ, ಕಿನ್ನರಿಬೊಮ್ಮಣ್ಣಗಳು ಸಾಕ್ಷಿಯಾಗಿ ನಿಮ್ಮ ಶ್ರೀಪಾದದಾಣೆಯೆಂದು ಬಸವರಾಜದೇವರು ಬಿನ್ನಹಂ ಮಾಡಲು, ಅಲ್ಲಿ ಕಿನ್ನರಿಬೊಮ್ಮಿತಂದೆಗಳು ಪ್ರಭುದೇವರೊಡನೆ ಬಿನ್ನಹ ಮಾಡುವ ಪ್ರಸ್ತಾವದ ವಚನ ;

> ತನು ಸೆಜ್ಜೆ ಮನ ಲಿಂಗವಾಗಿದ್ದ ಬಳಿಕ ಅನುವ ಬೇಱೆ ಮತ್ತೆಯರಸಲುಂಟೆ ?
> ತನುವೆ ಬಸವಣ್ಣ, ಮನವೆ ಪ್ರಭುದೇವರೆಂಬ ಘನವೊಳಕೊಂಡಿದ್ದ ಬಳಿಕ
> ಗುಣಾವಗುಣವ ಸಂಪಾದಿಸುವರೆ ಮಹಾಲಿಂಗ ತ್ರಿಪುರಾಂತಕದೇವಾ?
> ಸಂಗನ ಬಸವಣ್ಣನಲ್ಲಿ ನಿಮ್ಮಡಿಗಳಲ್ಲಿ ಸಂದು ಸಂಶಯವುಂಟೆ ? ಶರಣು ಶರಣಾರ್ಥಿ ಬಿಜಯಂಗೈವುದಯ್ಯಾ ಪ್ರಭುವೇ!

ದೇಹವನ್ನೇ ಲಿಂಗದ ಸೆಜ್ಜೆಯನ್ನಾಗಿ, ದೇಹದೊಳಗಿರುವ ಮನವನ್ನೇ ಲಿಂಗವನ್ನಾಗಿ ಭಾವಿಸಿ ಬಸವಣ್ಣನವರು 'ತನುರೂಪು ಸೆಜ್ಜೆಯಾದರೆ ಪ್ರಭುದೇವಾ ನೀವೇ ಲಿಂಗವಾಗಿ ಒಳಕೊಂಡಿದ್ದೀರಿ! ನಿಮ್ಮಿಬ್ಬರಲ್ಲಿ ಭೇದವಿನ್ನೆಲ್ಲಿ' ಎಂದು ಅವರಲ್ಲಿ ಅಭೇದವನ್ನು ಕಾಣುವ ಕಿನ್ನರಿಬ್ರಹ್ಮಯ್ಯನವರ ಸಿದ್ಧಿಯ ನಿಲವನ್ನು ಇಲ್ಲಿ ಕಾಣಬಹುದಲ್ಲವೆ !

ಮತ್ತೊಮ್ಮೆ ಮರುಳಶಂಕರದೇವರ ನಿಲವನ್ನು ಅರಿಯುವಲ್ಲಿ, ಬಸವರಾಜದೇವರು ಮರುಳಶಂಕರದೇವರ ಇರವ ಕಂಡು ಕಿನ್ನರಿಬ್ರಹ್ಮಯ್ಯಗಳ ಕೂಡ ನಿರೂಪಿಸಲು ಇದಕ್ಕೆ ಕಿನ್ನರಿಬ್ರಹ್ಮಯ್ಯಗಳು ಬಸವರಾಜ ದೇವರ ನುಡಿಯನೊಳಕೊಂಡು ಮರುಳಶಂಕರದೇವರ ಕೊಂಡಾಡಿದ ಪ್ರಸ್ತಾವದ ವಚನ:

> ಆಕಾಶವೆಂಬೆನೆ ನಿರಾಕಾರವಾಗಿಯೇ ಇದೆ. ನಿರಾಕಾರವೆಂಬೆನೆ ಅತ್ತಿತ್ತ ತೋಱುತ್ತದೆ.
> ತನ್ನನಳಿದು ನಿಜವುಳಿದ ಮಹಾಲಿಂಗ ತ್ರಿಪುರಾಂತಕನ ನಿಲವ ಕಂಡು ಒಳಕೊಂಡ ಮರುಳ ಶಂಕರ ದೇವರ ಮೂರ್ತಿಯ
> ನಿಮ್ಮಿಂದ ಕಂಡು ಬದುಕಿದೆನು ಕಾಣಾ, ಸಂಗನ ಬಸವಣ್ಣಾ.

ಇದಕ್ಕೆ ಬಸವರಾಜ ದೇವರು ಕಿನ್ನರಿಬ್ರಹ್ಮಯ್ಯಗಳಿಂದ ಮರುಳಶಂಕರದೇವರ ನಿಲವ ಕಂಡು ಬದುಕಿದೆನೆಂದು ನುಡಿಯುತ್ತಾರೆ.

ಮತ್ತೊಬ್ಬರ ದೊಡ್ಡತನವನ್ನು ಕಾಣಬೇಕಾದರೆ ತನ್ನಲ್ಲಿ ಅಂಥ ದೊಡ್ಡತನ ಬೆಳೆದಿರಬೇಕು. ಅದಿಲ್ಲದ ಇನ್ನೊಬ್ಬರ ದೊಡ್ಡ ಗುಣವನ್ನು ಗುರುತಿಸುವುದು ಸಾಧ್ಯವಿಲ್ಲ. ಬಸವಸೌರವ್ಯೂಹದಲ್ಲಿ ನೆರೆದಿದ್ದ ಶರಣ ವೃಂದವೆಲ್ಲಾ ದಿವ್ಯವನ್ನು ಅರಿತು ಒಳಗೊಂಡಿದ್ದ ಪ್ರಭಾ ಪುಂಜಗಳೇ ಕಿನ್ನರಿ ಬ್ರಹ್ಮಯ್ಯನವರೂ ತನ್ನನಳಿದು ನಿಜವುಳಿದ ಶರಣರು ಹೀಗಾಗಿ ಮಹಾಲಿಂಗ ತ್ರಿಪು

ರಾಂತಕನ ನಿಲುವ ಕಂಡು ಬಳಕೊಂಡ ಮರುಳ ಶಂಕರ ದೇವರ ಮೂರ್ತಿಯ ಬಸವಣ್ಣನಿಂದ ಕಂಡು ಬದುಕಿದರು. ಅವರ ಸ್ತುತಿ ಮಾಡಿದರು. ಆರಿಗಾರು ಕಡಿಮೆ ಇಲ್ಲವೆಂಬಂತೆ ಮಹಾನುಭಾವಿಗಳಾಗಿದ್ದರು.

ಬರುಬರುತ್ತಾ ಕಿನ್ನರಯ್ಯಗಳು ಬಸವಣ್ಣನವರಿಗೆ ತೀರ ಸಮೀಪವಾಗುತ್ತಾರೆ. ಅವರ ಪ್ರಾಣ ಪದಕವಾಗುತ್ತಾರೆ, ಆತ್ಮ ಸಖರಾಗುತ್ತಾರೆ. ಒಮ್ಮೆ ಕಿನ್ನರಯ್ಯಗಳ ಪ್ರಾಣ ಪಕ್ಷಿ ಹಾರಿಹೋಗಿರಲು ತಾಯನ್ನು ಕಳೆದುಕೊಂಡ ತಬ್ಬಲಿಯಂತೆ ಗೋಳಿಡುತ್ತಾರೆ. 'ಎನ್ನ ಸಜ್ಜನ ಮಿತ್ರನೆ, ಎನ್ನ ಸತ್ಕುಲ ದೈವವೇ, ಎನ್ನ ತಾತನೇ, ಎನ್ನ ಭಕ್ತಿತ್ರಯ ನಿಧಾನವೇ, ಎನ್ನೊಡನೆ ಏಕೆ ಮುನಿದೆ ಸಕಳಕಳಾನಿಧಿಯೇ ಎನ್ನೊಡನೆ ಏಕೆ ನುಡಿಯಲೊಲ್ಲೆ, ಲೋಕೈಕ ವೀರಾ, ಮಾಯವಾದೇಕೆ? ಎನ್ನೊಡನೆ ಮುನಿಸೇ ಮಾತಾಡುತಂದೆ'! ಎಂದು ಮುಂತಾಗಿ ಲೋಚನ ವಾರಿಯಲಿ ಮುಳುಗಿ ಕಿನ್ನರಯ್ಯಗಳ ಪ್ರಾಣದ ಜೊತೆಯಲ್ಲಿಯೇ ತಮ್ಮ ಪ್ರಾಣವನ್ನು ಕಳುಹಿಸುತ್ತಾರೆ. ಕೊನೆಗೆ ಮಡಿವಾಳ ಮಾಚಿದೇವರ ಪ್ರಾರ್ಥನೆಯಂತೆ ಇಬ್ಬರ ಪ್ರಾಣಗಳು ಹಿಂದಿರುಗುತ್ತವೆ.

ಕಿನ್ನರಿಬ್ರಹ್ಮಯ್ಯನವರ ಜೀವನದ ಮಹಾದ್ಭುತ ಘಟನೆಯೆಂದರೆ ಮಹಾದೇವಿಯಕ್ಕಗಳನ್ನು ಸಂದರ್ಶಿಸಿದ್ದು. ಶರಣರ ದಿವ್ಯ ಜೀವನದ ಕರ್ಮಗಾರ ಬಸವಣ್ಣನವರ ಮಹಾಮನೆ. ಇದು ಈ ದಿವ್ಯ ಚೇತನಗಳ ಭವ್ಯನಾಟಕ ಮಂದಿರ. ಆ ಕಾಲದ ಸಮಸ್ತ ಮಹಾನುಭಾವಿಗಳ ಒಕ್ಕೂಟದ ದಿವ್ಯನೆಲೆ. ಈ ಪವಿತ್ರಮಂದಿರದಲ್ಲಿ ಪ್ರಭುದೇವರು ಬಸವರಾಜದೇವರು ಚಿಕ್ಕದಣ್ಣಾಯಕರು ಸಿದ್ಧರಾಮಯ್ಯದೇವರು, ಘಟ್ಟಿವಾಳಯ್ಯಗಳು ನಿರ್ವಯಲ ಸಮಾಧಿಯನೆಯ್ದಿದುದಂ ಕಂಡು ಹರುಷಾನಂದ ಸಮಾಧಿಯೊಳ್ ತೇಂಕಾಡುತ್ತಾ ಮಹಾನುಭಾವಗೋಷ್ಠಿಯಂ ಮಾಡುತ್ತಿರಲು,ಕೆಲಬಲದಲ್ಲಿ ಸೊಡ್ಡಳ ಬಾಚರಸರು,ಹಡಪದಪ್ಪಣ್ಣಗಳು, ಪಡಿಹಾರಿ ಉತ್ತಣ್ಣ, ಅಕ್ಕನಾಗಾಯಿಗಳು, ಮೋಳಿಗೆಯ ಮಾರಯ್ಯ, ಮಿಂಡ ಮಲ್ಲಿನಾಥ, ಕೋಲಶಾಂತಯ್ಯ, ಮೊಗವಾಡದ ಕೇಶಿರಾಜದೇವರು, ಖಂಡೆಯದ ಕೇಶಿರಾಜದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳೆಲ್ಲರೂ ಮಹಾನುಭಾವ ಪ್ರಸಂಗಮಂ ಕೇಳಿ, ನಿತ್ಯ ನಿಜತತ್ತ್ವದಲ್ಲಿ ಸಮರಸರಾಗಿ ಪರಮಾನಂದದಲ್ಲಿ ಓಲಾಡುತ್ತಿರಲು, ಬಸವರಾಜದೇವರು ಪ್ರಭುದೇವರೊಡನೆ ಎನ್ನ ಹೆತ್ತತಾಯಿ ಅಕ್ಕಮಹಾದೇವಿಯರು ವಿರಕ್ತಿಯಿಂದ ದಿಗಂಬರೆಯಾಗಿ ಕಾಮಾರಿಯಾಗಿ ಬರುತ್ತಿರ್ದಪಳೆಂದು ಬಿನ್ನೈಸಿ, ಆ ಪ್ರಭುದೇವರು ಸಕಲ ಪ್ರಮಥರಿಗೆ ಕಾಮಸಂಹಾರಿ ಎಂಬುದಂ ತೋಱಬೇಕೆಂದು ಭಕ್ತಿವಿಸ್ತಾರದಿಂದ ಕಿನ್ನರಯ್ಯಂಗಳಂ ಒಪ್ಪಿ ಕಳುಹಲು, ಅಕ್ಕಗಳ ದಿಗಂಬರ ವೇಷಮಂ, ನಿರ್ವಾಣದ ನಿಲುಕಡೆಯಂ, ದಿವ್ಯ ಸ್ವರೂಪಿನ ಲಾವಣ್ಯಮಂ ಕಂಡು ಆ ಪರಮಜ್ಞಾನಿಯಪ್ಪ ಕಿನ್ನರಿ ಬೊಮ್ಮಣ್ಣಗಳು–ಈಕೆ ಲಿಂಗಾನುಭಾವ ಸಂಪನ್ನೆಯಾದರೆ ಗುರು ತಾಯೆಂದು ಶರಣೆಂಬೆನು, ಅಲ್ಲಾ ದೇಹ ಲಜ್ಜಾಭಿಮಾನ ಉಳ್ಳಡೆ ಸ್ತ್ರೀಯಾಗಿ ಕೈವಿಡಿವೆನು–ಎಂದು ತನ್ನತಾಂ ನಿಶ್ಚೈಸಿ, ಆ ಮಹಾದೇವಿಯಕ್ಕಗಳ ಒರೆದೊರೆದು ನೋಡುವ ಪ್ರಸ್ತಾವದ ವಚನ.

ಕಾಯದಲ್ಲಿ ಕಳವಳವಿರಲು ಪ್ರಾಣದಲ್ಲಿ ಮಾಯೆ ಇರಲು ಏತರ ಮನ ಇದೇತರ ನಿರ್ವಾಣ
ಮಹಾಲಿಂಗ ತ್ರಿಪುರಾಂತಕ ನಿನ್ನ ಸಂಸಾರಿ ಎಂಬನಲ್ಲದೆ ಸಜ್ಜನೆಯೆಂದು, ಕೈವಿಡಿವನಲ್ಲ, ಕೇಳಾಮರುಳೆ ॥೧೧೧೧॥
ನಿನ್ನ ಸ್ವರೂಪ ಕಂಡೆನ್ನದೃಷ್ಟಿ ನೆಟ್ಟುದೆನಗೆ, ನಿನ್ನ ಲಾವಣ್ಯ ರಸವ ಕಂಡು ಮನ ಹಾರೈಸಿತ್ತೆನಗೆ, ನಿನ್ನ
ಪ್ರೌಢಿಯಿಂದ ಕೂಡಿಹೆನೆಂಬುದು ಭಾವದಲ್ಲಿ ಬಚ್ಚಬರಿಯ ಹೆಂಗುಸಾಗಿ ತೋರಿತ್ತೆನಗೆ,
ಮಹಾಲಿಂಗ ತ್ರಿಪುರಾಂತಕ ನೆನಗೊಡ್ಡಿದ ಮಾಯೆಯು ನಿನ್ನ
ಸಮ ಸುಖಿಕೊಟದೊಳಿದ್ದು ಶಿವಭಾವ ಭಕ್ತಿಯಿಂ ಗೆಲುವೆನು ಬಾರೌ ಹೆಣ್ಣೆ ಎಂದು ಕೈವಿಡಿದೆನು ॥೧೧೧೨॥

ಇಂತೀ ಮನಭಾವ ದೃಷ್ಟಿಯಿಂ ಮೆಚ್ಚಿ ಹಿಡಿದು ಕೂಡಿಹೆನೆಂಬ ಕಿನ್ನರ ಬೊಮ್ಮಣ್ಣನ ಮಹಾದೇವಿಯಕ್ಕಳು ಝಂಕಿಸಿ ವಿಡಂಬಿಸುವ ಪ್ರಸ್ತಾವದ ವಚನ:

ನೋಡುವ ಕಂಗಳಿಗೆ ರೂಹಿಂ ಬಾಗಿರಲು ನೀವು ಮನ ನಾಟದೆ ಬಂದಿರಣ್ಣಾ!
ಕೇಳಿದ ಶ್ರೋತ್ರ ಸೊಗಸಿಗೆ ನೀವು ಮರುಳಾಗಿ ಬಂದಿರಣ್ಣಾ! ನಾರಿಯೆಂಬ ರೂಪಿಗೆ ನೀವು ಮರುಳಾಗಿ ಬಂದಿರಣ್ಣಾ!
ಮೂತ್ರವು ಬಿಂದು ಒಸರುವ ನಾಳವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ!
ಬುದ್ಧಿಗೇಡಿತನದಿಂದ ಪರಮಾರ್ಥದ ಸುಖವ ಹೋಗಲಾಡಿಕೊಂಡು ಇದಾವ,
ಕಾರಣವೆಂದರಿಯದೆ ನೀವು ನರಕಹೇತುವೆಂದರಿದು ಮನ ಹೇಸದೆ ಬಂದಿರಣ್ಣಾ!
ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರ, ಛೀ ಹೋಗಾ ಮರುಳೆ ॥೧೧೧೩॥

ಬಟ್ಟ ಮೊಲೆಯ ಭರದಜವ್ವನದ ಚೆಲುವ ಕಂಡು ಬಂದಿರಣ್ಣಾ! ಅಣ್ಣಾ ನಾನು ಹೆಂಗೂಸಲ್ಲ!
ಅಣ್ಣಾ ನಾನು ಸೂಳೆಯಲ್ಲ! ಅಣ್ಣಾ ಮತ್ತೆ ನಾನು ಆರೆಂದು ಬಂದಿರಣ್ಣಾ!
ಚನ್ನಮಲ್ಲಿಕಾರ್ಜುನನಿಲ್ಲದ ಮಿಕ್ಕಿನ ಪುರುಷನು ನಮಗಾಗದ ಮೋರೆ ನೋಡಣ್ಣ ॥೧೧೧೪॥

ಎನ್ನಂತೆ ಪುಣ್ಯಗೈದವರುಂಟೆ ? ಎನ್ನಂತೆ ಭಾಗ್ಯಗೆಯ್ದವರುಂಟೆ ? ಕಿನ್ನರನಂತಪ್ಪ ಸೋದರನೆನಗೆ !
ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಳಗವೆನಗೆ ಚೆನ್ನ ಮಲ್ಲಿಕಾರ್ಜುನಂತಪ್ಪ ಗಂಡ ನೋಡಾ ಎನಗೆ ॥೧೧೧೫॥

ಹೀಗೆಂದು ಮಹಾದೇವಿಯಕ್ಕಗಳು ನಿರೂಪಿಸಲು ಆ ಕಿನ್ನರಯ್ಯಗಳು ಬರಿಯ ಮಾತಿನ ಬಣ್ಣಣೆಯು ಪಸರಿಸೆ ನಾನು ಬಿಡುವೆನೇ ಬಾರೆಂದು ತುಡುಕಿ ಹಿಡಿಯಲಾ ಮಹಾದೇವಿ ನೀನಿಂತು ಮುಂದುಗೆಡುವರೆ ನನ್ನ ತನುವನೊಪ್ಪಿಸಿಹೆನು, ನಿನ್ನ ಮನಕ್ಕೆ ಬಂದಂತೆ ಮಾಡಿ ಕೊಳ್ಳೆಂದು ಒಪ್ಪಿಸಲಾತಂ ಸರ್ವಾಂಗ ಸ್ತನ ಮಾನಂಗಳು ಪರುಕಿಸಿ ನೋಡಲು, ದೇಹಾಭಿಮಾನಗಳಿಲ್ಲದಿರ ಲಾತಂ, ಯೋನಿಯೊಳಂಗುಲಿ ಪ್ರವೇಶವಂ ಮಾಡಲಲ್ಲಿ ಚಿದ್ಭಸ್ಮಪೊದಗಲಾತಂ ನಡುಗಿ ಭೀತಾತುರನಾಗಿ, ತನ್ನ ಮನವಂ ತಾನೇ ಸಂತೈಸಿಕೊಂಡು, ಆ ಅಕ್ಕಗಳ ಶರೀರದಲ್ಲಿ ಎಲ್ಲಿಯೂ ಶಿವತನ್ಮಯವಾಗಿರ್ದಪನೆಂದು ಬಿನ್ನೈಸಿದ ಪ್ರಸ್ತಾವದ ವಚನ :

ಮಸ್ತಕವ ಮುಟ್ಟಿನೋಡಿದರೆ ಮನೋಹರನುಳುಮೆ ಕಾಣಬಂದಿತ್ತು.
ಮುಖ ಕಮಲವ ಮುಟ್ಟಿ ನೋಡಿದರೆ ಮೂರ್ತಿಯ ಉಳಿವು ಕಾಣಬಂದಿತ್ತು.ಕೊರಳ ಮುಟ್ಟಿನೋಡಿದರೆ ಗರಳಧರ ನಿರವು ಕಾಣಬಂದಿತ್ತು.
ತೋಳುಗಳ ಮುಟ್ಟಿನೋಡಿದರೆ ಶಿವನಪ್ಪು ಕಾಣಬಂದಿತ್ತು. ಉರಸ್ಥಲವ ಮುಟ್ಟಿನೋಡಿದರೆ ಗರಳಧರನಿರವು ಕಾಣಬಂದಿತ್ತು.
ಬಸುರ ಮುಟ್ಟಿನೋಡಿದರೆ ಬ್ರಹ್ಮಾಂಡವಡಗಿತ್ತ ಕಾಣಬಂದಿತ್ತು. ಗುಹ್ಯವ ಮುಟ್ಟಿನೋಡಿದರೆ ಕಾಮದಹನ ಕಾಣಬಂದಿತ್ತು.
ಮಹಾಲಿಂಗ ತ್ರಿಪುರಾಂತಕ ದೇವ, ಮಹಾದೇವಿಯಕ್ಕನ ನಿಲವನರಿಯದೆ ಆಳುಪಿಕೆಟ್ಟೆನು ॥೧೧೧೬॥

ಹೀಗೆಂದು ಕಿನ್ನರಯ್ಯಗಳು ಬಿನ್ನವಿಸಲು ಇದಕ್ಕೆ ಅಕ್ಕಗಳು ಶಿವನು ಕಾಮನ ಕೊಂದು ಭಸ್ಮವ ಪೂಸಿ ಮನಸಿಜನಾಗಿ ಉಳುಹಿದರೆ, ನಾನಾ ಮನಸಿಜನ ಸುಟ್ಟ ಬೂದಿ ಇದೆಕೋ ಎಂದು ತೋರಿ ನುಡಿವ ಪ್ರಸ್ತಾವದ ವಚನ :

'ಅಂಗದ ಭಂಗವ ಲಿಂಗ ಮುಖದಲ್ಲಿ ಗೆಲಿದೆ. ಮನದ ಭಂಗವ ಅರಿವಿನ ಮುಖದಲ್ಲಿ ಗೆಲಿದೆ.
ಜೀವನ ಭಂಗವ ಶಿವನ ಭಾವದಿಂದ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ.
ಎನ್ನ ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ.
ಚನ್ನಮಲ್ಲಿಕಾರ್ಜುನ ಕಾಮನಕೊಂದು ಮನಸಿಜನಾಗುಳುಹಿದರೆ, ಮನಸಿಜನ ತಲೆಬರಹವ ನಾನು ತೊಡೆದನು॥೧೧೧೭॥

ಇಂತು ಮಹಾದೇವಿಯಕ್ಕಗಳು ಕಾಮನ ಸುಟ್ಟು ಭಸ್ಮವ ಗುಹ್ಯಸ್ಥಾನದಲ್ಲಿಸುರಿದು ತೋರಲು, ಕಿನ್ನರಿ ಬೊಮ್ಮಿ ತಂದೆಗಳು ಕಂಡು ನಡನಡನೆ ನಡುಗಿ ಕೆಟ್ಟೆನೆಂದು ಉಮ್ಮಳಿಸಿ ಮನದಲ್ಲಿ ನೊಂದು ಬಿನ್ನೈಸುವ ಪ್ರಸ್ತಾವದ ವಚನ :

'ವಿಷಯಗಳು ವಿಷಮವಾದವಲ್ಲಾ! ಎನ್ನ ವ್ಯಸನಂಗಳು ಹಗೆಯಾದವಲ್ಲಾ! ಆಳಿಪೆ ಎದೆವಾವಾಯಿತಲ್ಲಾ ! ಎನ್ನ ಮುಳಿಸೆ ಬರಸಿಡಿಲಾಯಿತಲ್ಲಾ! ಎನ್ನ ಹುಸಿಯೇ ಮಸೆದಲಗಾಯಿತಲ್ಲಾ ! ಎನ್ನಮಹಾಲಿಂಗ ತ್ರಿಪುರಾಂತಕ ಕೊಲ್ಲು ಕಾಯಿ ನಿಮ್ಮ ಧರ್ಮ ॥೧೧೧೮॥

ಹುಸಿಯೆಂಬ ಅಲಗಿಂಗೆ ಒಡಲೆಗುರಿಯಾಯ್ತು ! ವಿಷವೆಂಬ ಅಗ್ನಿಗೆ ತನುವೆ ವಿಂಧ್ಯವಾಯಿತು.
ಏನೆಂಬೆನೇನೆಂಬೆ ವಿಧಿ ಮಾಡಿತ್ತ! ಶಮದಮಾದಿಗಳು ನೆಲೆಗೊಳದೆ ಹೋದವು.
ಮಹಾಲಿಂಗ ತ್ರಿಪುರಾಂತಕನ ಶರಣರೆನ್ನೊಡೆಯರೆಂದರಿಯದೆ ಇದ್ದ ಕಾರಣ ತೆರಹು ಮರಹಿನಲ್ಲಿ ತಾವೆಡೆಗೊಂಡವು ! ॥೧೧೧೯॥
ಹುಟ್ಟಿತಲ್ಲಾ ! ಉಂಟೆನಿಸಿತಲ್ಲಾ । ತರುವಿಟ್ಟಿತಲ್ಲಾ ರೂಪಾಯಿತಲ್ಲಾ । ನೋಡನೋಡ ಛಾಯಗುಂದಿತಲ್ಲಾ ।
ನೋಡ ನೋಡ ಭಾವ ಗುಂದಿತಲ್ಲಾ। ಆರು ವಿಕಾರದಲಾಯಿತು ಹೋಯಿತು ಮಹಾಲಿಂಗ ತ್ರಿಪುರಾಂತಕ। ನಿಮಗೆರಗದತನು ।೧೧೨೦।

ಇಂತು ಕಿನ್ನರಿ ಬೊಮ್ಮಿ ತಂದೆಗಳು ನೊಂದು ಅನುತಾಪಿಸುತ್ತಿರಲು, ಮಹಾದೇವಿಯಕ್ಕಗಳು ಕಿನ್ನರಿ ಬೊಮ್ಮಣಂಗಳಂ ಸಂತೈಸುವ ವಚನ :

ಎಲೆ ಅಣ್ಣಾ ಎಲೆ ಅಣ್ಣಾ. ನೀವು ಮರುಳರಲ್ಲಾ ! ಅಣ್ಣಾ ಎನ್ನ ನಿನ್ನ ಅಳವೆ ?
ಹದಿನಾಲ್ಕು ಲೋಕವ ನುಂಗಿದ ಕಾಮನ ಬಾಣದ ಗುಣ ಎನ್ನ ನಿನ್ನಳವೆ?
ವಾರುವ ಮುಗ್ಗಿದಡೆ ಮಿಡಿಯ ಹರಿಯ ಹೊಯ್ವರೆ? ಮುಗ್ಗಿದ ಭಂಗವ ಮುಂದೆ ಕಣದಲ್ಲಿ ತಿಳಿವುದು.
ನಿನ್ನನೀ ಸಂಹರಿಸಿ ಕೈದುವ ಕೊಳ್ಳರಣ್ಣ ಚನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣ ॥೧೧೨೧॥

ಹೀಗೆಂದು ಮಹಾದೇವಿಯಕ್ಕಗಳು ನಿರೂಪಿಸಲು ಕಿನ್ನರಿ ಬೊಮ್ಮಣ್ಣಗಳು ಹರುಷವನೆಯ್ದಿ ಬಿನ್ನೈಸಿದ ವಚನ :

ಶರಣಾರ್ಥಿ ಶರಣಾರ್ಥಿ ಎಲೆತಾಯೆ ಎಮ್ಮವ್ವ । ಶರಣಾರ್ಥಿ ಶರಣಾರ್ಥಿ ಕರುಣಾಸಾಗರ ನಿಧಿಯೇ ।
ದಯಾಮೂರ್ತಿ ತಾಯೆ ಶರಣಾರ್ಥಿ ಶರಣಾರ್ಥಿ ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೊಡಕ ನೀವು
ಬಿಡಿಸಿದಿರಾಗಿ ನಿಮ್ಮ ದಯದಿಂದ ನಾನು ಹುಲಿನೆಕ್ಕಿ ಬದುಕಿದೆನು ಶರಣಾರ್ಥಿ ಶರಣಾರ್ಥಿ ತಾಯೆ ॥೧೧೨೨॥

ಮತ್ತು ಕಿನ್ನರಿ ಬೊಮ್ಮಯ್ಯಗಳು ಆ ಮಹಾದೇವಿಯಿಂದ ಬದುಕಿದೆನೆಂದು ಎನ್ನ ಭವನಾಸ್ತಿಯಾಯಿತೆಂದು ಬಿನ್ನೈಸಿದ ಪ್ರಸ್ತಾವದ ವಚನ:

ವಿಷಯಂಗಳು ನಿರ್ವಿಷಯವಾದವಿಂದು, ಎನ್ನ ಅಳಿಪೆಂಬ ಅರೆವಾವು ಮಡಿಯಿತಿಂದು ;
ಎನ್ನ ಹೃದಯಕಲ್ಮಷ ತೊಳೆಯಿತ್ತಿಂದು, ಮಹಾಲಿಂಗ ತ್ರಿಪುರಾಂತಕಯ್ಯ,
ಮಹಾದೇವಿಯಕ್ಕಗಳ ಧರ್ಮದಿಂದ ಹಿಂದಣ ಹುಟ್ಟು ಮುರಿಯಿತಿಂದು ॥೧೧೨೩॥

ಇಂತು ಮಹಾದೇವಿಯಕ್ಕಗಳು ಕಿನ್ನರಿಬೊಮ್ಮಿತಂದೆಗಳ ಮನೋರಥ ಸಿದ್ಧಿಯಂ ಮಾಡಿ ಒಬ್ಬರಿಗೊಬ್ಬರು ನಮಸ್ಕರಿಸಿಕೊಂಡು ಆತನನ್ನು ಬೀಳ್ಕೊಂಡು ಅಕ್ಕ ಕಲ್ಯಾಣ ಪಟ್ಟಣ ಪ್ರವೇಶ ಮಾಡುತ್ತಾಳೆ.

ಶರಣ–ಶರಣೆಯರ ಸಹವಾಸ ಅಸವಲ್ಲದ ಸಹವಾಸ, ಮೈಯೆಲ್ಲಾ ಕಣ್ಣಾಗಿರಬೇಕು.ಜೀವವೆಲ್ಲ ಎಚ್ಚರಿರಬೇಕು.ಸ್ವಲ್ಪ ಮರೆತರೂ ಅಮಿತ ಕಷ್ಟಕ್ಕೆ ವಿಷಮ ಪರೀಕ್ಷೆಗೆ ಗುರಿಯಾಗಬೇಕಾದೀತು. ಇಂಥ ಸಹವಾಸ ಮಾಡಿ ಪರೀಕ್ಷಿಸಲು ಹೋಗಿ ತಾನೇ ಪರೀಕ್ಷೆಗೊಳಗಾಗಿ ಅಂತೂ ತಮ್ಮ ಘನ ವ್ಯಕ್ತಿತ್ವದಿಂದ ಹುಲಿನೆಕ್ಕಿ ಬದುಕಿ ಬಂದವರು ಕಿನ್ನರಿಬೊಮ್ಮಿತಂದೆಗಳು. ಅಷ್ಟೆ–ಮನಸ್ಸು ಬುದ್ಧಿಗಳನ್ನು ಕಾಡುತ್ತಿದ್ದ ವಿಷಯವಾವನ್ನು ಕೋದು, ಹೃದಯಕಲ್ಮಷ ತೊಳೆದು ಮರುಹುಟ್ಟು ಪಡೆದರು, ಮಹಾದೇವಿ ಯಕ್ಕನಂಥ ವೀರ ವಿರಾಗಿಣಿಗೆ ಸೋದರರಾದರು; ಅಂಥ ಸೋದರಿಯನ್ನು ಪಡೆದು ಮಹಿಮಾಸ್ಪದರಾದರು. ಆಕೆಯಿಂದ ಮನೋರಥಸಿದ್ಧಿ ಪಡೆದರು.

ಹೀಗೆ ಕಲ್ಯಾಣದಲ್ಲಿದ್ದುಕೊಂಡು ಬಸವಣ್ಣನವರ ಮಹಾಮನೆಯಲ್ಲಿ ಜರುಗುತ್ತಿದ್ದ ನವಸಮಾಜ ನಿರ್ಮಾಣ ಕಾರ್ಯ ದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ, ಜಂಗಮ ದಾಸೋಹದಲ್ಲಿ ನಿರತರಾಗಿದ್ದರು. ಆಗಿನ ಸಂಪ್ರದಾಯಶರಣಸಮಾಜದಲ್ಲಿ ಆಮೂಲಾಗ್ರ ಪರಿವರ್ತನೆಯನ್ನು ಉಂಟುಮಾಡುವ ಕಾರ್ಯದಲ್ಲಿ ಮುಂದುವರೆಯುತ್ತಾ, ಹರಳಯ್ಯ ಮಧುವರಸರ ಮಧ್ಯೇ ರಕ್ತ ಸಂಬಂಧವನ್ನು ಬೆಳೆಸಿದ ಪರಿಣಾಮವಾಗಿ ಕಲ್ಯಾಣದಲ್ಲಿ ಕ್ಷಿಪ್ರಕ್ರಾಂತಿ ನಡೆದು ಹರಳಯ್ಯ–ಮಧುವಯ್ಯಗಳ ಕೊಲೆ ನಡೆಯುತ್ತದೆ. ಅನತಿ ಕಾಲದಲ್ಲಿಯೇ ಇದಕ್ಕೆ ಕಾರಣನಾದ ಬಿಜ್ಜಳನ ಕೊಲೆಯು ನಡೆದು ಹೋಗುತ್ತದೆ. ತತ್ಪರಿಣಾಮವಾಗಿ ಶರಣರು ಕಲ್ಯಾಣ ವನ್ನು ತೊರೆದು ಬೇರೆಬೇರೆ ಕಡೆಗೆ ಚೆಲ್ಲಾಪಿಲ್ಲಿಯಾಗಿ ಹೊರಟು ಹೋಗುತ್ತಾರೆ. ಆಗ ಶರಣರ ಒಂದು ಗುಂಪು ಚಿಕ್ಕದಣ್ಣಾ ಯಕರ ನೇತೃತ್ವದಲ್ಲಿ ಉಳವಿಯ ಕಡೆಗೆ ಹೊರಡುತ್ತದೆ. ಈ ಗುಂಪಿನಲ್ಲಿ ಕಿನ್ನರಿ ಬ್ರಹ್ಮಯ್ಯನವರೂ ಸೇರಿರುತ್ತಾರೆ. ಕಲ್ಯಾಣದಿಂದ ಮಹಾರಣ್ಯದಲ್ಲಿದ್ದ ಉಳವಿಯನ್ನು ಮುಟ್ಟುವತನಕ ಅಳಿಯ ಬಿಜ್ಜಳನ ಸೇನೆಯೊಂದಿಗೆ ಭಯಂಕರ ಯುದ್ಧ ನಡೆಯುತ್ತದೆ. ಮಡಿ ವಾಳಮಾಚಿದೇವ ಮುಂತಾದ ಶರಣರೊಡನೆ ಶರಣರಕ್ಷಾಮಣಿಯಾಗಿದ್ದುಕೊಂಡು ಯುದ್ಧ ಮಾಡುತ್ತಾರೆ. ಗೊಂಡಾರಣ್ಯದ ಮಧ್ಯದಲ್ಲಿದ್ದ ಮಹಾಮನೆಯ ಮುಂದೆ ಇವರಿಗೂ ಅಳಿಯ ಬಿಜ್ಜಳನ ಸೇನೆಗೂ ಕೊನೆಯ ಯುದ್ಧ ನಡೆಯುತ್ತದೆ. ಅಲ್ಲಿ ತಡ ಸಲು ತಡಸಲಾಗಿ ಇಳಿಜಾರಿನಲ್ಲಿ ಹರಿಯುತ್ತಿದ್ದ ನದಿಯನ್ನು ಮಹಾಮನೆಯ ಗುಹೆಯದ್ವಾರದಿಂದ ೨೦೦ ಅಡಿ ಎತ್ತರದಲ್ಲಿ ಭೂಮಿಯನ್ನು ಅಗಿದು ಒಳಕ್ಕೆ ತಿರುಗಿಸಿ ಆ ಗುಹೆಯನ್ನು ಜಲದುರ್ಗವನ್ನಾಗಿ ಪರಿವರ್ತಿಸುತ್ತಾರೆ. ಆ ನೀರಿನಲ್ಲಿ ಅಳಿಯ ಬಿಜ್ಜಳನ ಬಹುಪಾಲು ಸೇನೆ ಕೊಚ್ಚಿ ಹೋಗುತ್ತದೆ. ಅಲ್ಲಿ ಅಳಿದುಳಿದ ಶರಣರನ್ನು ಕೂಡಿಕೊಂಡು ವೀರಾವೇಶದಿಂದ ಹೋರಾಡಿ ಕೊನೆ ಯುಸಿರೆಳೆಯುತ್ತಾರೆ.

ಕಲಿತನದಿಂದ ಕಾದಾಡಿ ಶರಣ ಮರಣವನ್ನು ಪಡೆಯುತ್ತಾರೆ, ಶಿವ ಶರಣರೆಲ್ಲರೂ ಶಿವಸಾಯುಜ್ಯವನ್ನು ಪಡೆ ಯುತ್ತಾರೆ, ಈ ಮಹಾಮನೆಯ ಸಮೀಪದಲ್ಲಿಯೇ ಕಿನ್ನರಯ್ಯಗಳ ಸಮಾಧಿ ಇದೆ. ಅದರ ಮೇಲೆ 'ಕಿನ್ನರಯ್ಯ' ಎಂಬ ಉಲ್ಲೇಖವಿರುವ ಶಿಲಾಶಾಸನ ಕಿನ್ನರಿಬ್ರಹ್ಮಯ್ಯನವರ ನಿರ್ಮಲ ಚರಿತ್ರೆಯನ್ನು ಸಾರಿ ಹೇಳುತ್ತಿದೆ. ಅವರು ತಿರುಗಿಸಿದ ಹೊಳೆಗೆ 'ಕಿನ್ನರಿ ಬ್ರಹ್ಮಯ್ಯನ ಹೊಳೆ' ಅಥವಾ 'ಕಾನೇರಿ ಹೊಳೆ' ಎಂಬ ಹೆಸರಿದ್ದು ಇಂದಿಗೂ ಮಹಾನುಭಾವಿ ಕಿನ್ನರಿ ಬ್ರಹ್ಮಯ್ಯನವರ ಧವಳ ಕೀರ್ತಿಯ ಯಶೋಗೀತೆಯನ್ನು ತನ್ನ ಮಂಜುಳವಾಣಿಯಿಂದ ಭೋರ್ಗರೆಯುತ್ತ ಹಾಡುತ್ತ ಸಾಗುತ್ತದೆ.

ಹೀಗೆ ಕಿನ್ನರಿ ಬ್ರಹ್ಮಯ್ಯಗಳು ಕಲ್ಯಾಣದಲ್ಲಿ ಬಸವಣ್ಣನವರ ಪ್ರಾಣಸಖರಾಗಿ, ನಿಷ್ಠುರ ಶರಣರಾಗಿ ಮಾಹೇಶ್ವರನಿಷ್ಠೆ ಬಲಿದವರಾಗಿ, ಸಮಾಜ ನಿರ್ಮಾಣ ಕಾರ್ಯದಲ್ಲಿ ಸಕ್ರಿಯ ಪಾತ್ರಧಾರಿಗಳಾಗಿ ಶರಣರು ಹಮ್ಮಿಕೊಂಡಿದ್ದ ಮಹಾಕಾರ್ಯದಲ್ಲಿ ತಮ್ಮ ದಿವ್ಯ ಮಣಿಹವನ್ನು ಸಲ್ಲಿಸಿ, ಮಹಾನುಭಾವಿಗಳಾಗಿ ಲಿಂಗದೊಳಗಾಗುತ್ತಾರೆ.

**ಆಕರ ಗ್ರಂಥಗಳು**


೧. ಬಸವ ಪುರಾಣ.
೨. ವೀರಶೈವಾಮೃತ ಮಹಾಪುರಾಣ.
೩. ಚೆನ್ನಬಸವ ಪುರಾಣ.
೪. ಸೋಮೇಶ್ವರ ಪುರಾಣ.
೫. ಶೂನ್ಯ ಸಂಪಾದನೆಗಳು.
೬. ಶಿವತತ್ತ್ವ ಚಿಂತಾಮಣಿ.
೭. ಶರಣಲೀಲಾಮೃತ.
೮. ಶರಣ ಚರಿತಾಮೃತ.
೯. ಪದ್ಮರಾಜ ಪುರಾಣ.
೧೦. ಬಸವರಾಜದೇವರ ರಗಳೆ.
೧೧. ಗುರುರಾಜ ಚಾರಿತ್ರ.
೧೨. ಭಕ್ತಿರಸದ ಸೋನೆ (K.B. 464. ಕ.ಅ.ಸಂ.)
೧೩. ಭುವನಕೋಶ. (K.B.184. ಕ.ಅ.ಸಂ.)
೧೪. ಬಸವೇಶ್ವರ ಪುರಾಣದ ಕಥಾಸಾರ.
೧೫. ಭೈರವೇಶ್ವರ ಕಥಾಮಣಿಸೂತ್ರ ರತ್ನಾಕರ.
೧೬. ಬಸವ ವಚನ ಕಥಾಮೃತ.
೧೭. ಶಿವಶರಣರ ಕಥಾರತ್ನಕೋಶ.
೧೮. ೭೭೦ ಅಮರ ಗಣಾಧೀಶ್ವರರ ಚರಿತ್ರೆಗಳು.
೧೯. ಸಮಗ್ರ ಕನ್ನಡಸಾಹಿತ್ಯ ಚರಿತ್ರೆ. (ಬೆಂಗಳೂರು)
೨೦. ಕನ್ನಡಸಾಹಿತ್ಯ ಚರಿತ್ರೆ. (ಮೈಸೂರು)
೨೧. ಕನ್ನಡ ವಿಶ್ವಕೋಶ.
೨೨. ಬಸವೇಶ್ವರರ ಸಮಕಾಲೀನರು.

# ನುಲಿಯ ಚಂದಯ್ಯ

—ಡಾ॥ ವೀರಣ್ಣ ರಾಜೂರ

ಹನ್ನೆರಡನೆಯ ಶತಮಾನ ಕನ್ನಡನಾಡಿನ ಭಾಗ್ಯೋದಯ ಕಾಲ. ಅಂದು ಅನೇಕ ಶರಣರು ಉದಿಸಿ ತಮ್ಮ ಸತ್ಯಶುದ್ಧ ನಡೆ–ನುಡಿ, ಉನ್ನತ ಆಚಾರ–ವಿಚಾರ, ಉತ್ಕೃಷ್ಟ ಆಧ್ಯಾತ್ಮ–ಅನುಭವಗಳಿಂದ ಈ ನಾಡನ್ನು ಹೊನ್ನಾಡಾಗಿಸಿದರು. ಆಗ ಎಲ್ಲೆಡೆ ಹೊಸಗಾಳಿ, ಹೊಸ ಬೆಳಕು ಪಸರಿಸಿ, ಹೊಸಸೊಗಸು ಸುಳಿವೆಗೆದು ಜಗಜನಮನ ಹೊಸ ಚೈತನ್ಯ ಚೆಲುವುಗಳಿಂದ ನಲಿಯುವಂತಾಯಿತು. ನಾಡಿನ ನರನಾಡಿಗಳಲ್ಲಿ ಹೊಸ ವಿದ್ಯುತ್ಪ್ರಭೆ ಸಂಚಾರವಾಗಿ ಪರಂಜ್ಯೋತಿಪ್ರಕಾಶ ಬೆಳಗಿತು. ಆ ಪ್ರಕಾಶದ ಸಹಸ್ರ ಹೊಂಗಿರಣಗಳೇ ಒಂದೊಂದು ದಿವ್ಯ ಚೇತನ. ಆ ಒಂದೊಂದು ಚೇತನವೇ ಒಬ್ಬೊಬ್ಬ ಶರಣ. ಆ ಶರಣ ಸಂಕುಳದಲ್ಲಿ ನುಲಿಯ ಚಂದಯ್ಯನೂ ಒಬ್ಬ.

**ಜೀವನ ಚರಿತೆ:**

ನುಲಿಯ ಚಂದಯ್ಯ ಬಸವಸಮಕಾಲೀನ ಶರಣರಲ್ಲಿ ವಿಶಿಷ್ಟ ಸ್ವಭಾವ ಹಾಗೂ ವ್ಯಕ್ತಿತ್ವಗಳನ್ನು ಹೊಂದಿದ ಸ್ವಚ್ಛ ಮನದ ಸ್ವತಂತ್ರ ವಿಚಾರವಾದಿ, ಕಾಯಕದ ಕಲಿ; ಜಂಗಮದಾಸೋಹದ ಛಲಿ. ಈತನ ಜೀವನೇತಿಹಾಸವನ್ನು ಒದಗಿಸುವ ಐತಿಹಾಸಿಕ ದಾಖಲೆಗಳು ಕಡಿಮೆ. ಅಲ್ಲಲ್ಲಿ ದೊರೆಯುವ ಸ್ಥಳ ಪುರಾಣ, ಕೆಲವು ಐತಿಹ್ಯ, ಕಾವ್ಯಗಳಲ್ಲಿ ಉಕ್ತವಾದ ಸಂಗತಿಗಳು ಹಾಗೂ ಆತನೇ ರಚಿಸಿದ ವಚನಗಳ ಮೇಲಿಂದ ಆತನ ಜೀವನ ವೃತ್ತಾಂತವನ್ನು ಸಂಗ್ರಹಿಸಬೇಕಾಗುತ್ತದೆ.

ಚಂದಯ್ಯ ಬಸವಣ್ಣನವರ ಕಾಲದಲ್ಲಿ ಕಲ್ಯಾಣಕ್ಕೆ ಬಂದು ಅಲ್ಲಿ ನುಲಿಯ ಕಾಯಕ ಕೈಕೊಂಡು, ಅನುಭವಮಂಟಪದಲ್ಲಿ ಮಡಿವಾಳ ಮಾಚಯ್ಯ, ಪ್ರಭು, ಚೆನ್ನಬಸವಣ್ಣ ಮತ್ತು ಬಸವಣ್ಣನವರೊಡನೆ ಆಧ್ಯಾತ್ಮಚರ್ಚೆ, ಚಿಂತನೆ ನಡೆಸಿದ ಸಂಗತಿಗಳು ಶೂನ್ಯ ಸಂಪಾದನೆಗಳಿಂದ ವ್ಯಕ್ತವಾಗುತ್ತವೆ. ಇದನ್ನು ಗಮನಿಸಿ ಕವಿಚರಿತೆಕಾರರು ಈತನ ಕಾಲವನ್ನು ಸು. ೧೧೬೦ ಎಂದು ನಿರ್ಧರಿಸಿದ್ದಾರೆ[1]. ಎರೇಸೀಮೆ ಚೆನ್ನಪ್ಪನವರು 'ಕ್ರಿ.ಶ.ಸು. ೧೧೩೦ರಿಂದ ೧೧೮೨ರ ಮಧ್ಯಕಾಲದಲ್ಲಿ ಇವರ ಜೀವಿತಕಾಲ ನುಲಿಯ ಕಾಯಕದಲ್ಲಿ ಸಾಗಿರಬೇಕು' ಎಂದು ಊಹಿಸುತ್ತಾರೆ[2]. ಶ್ರೀಮಾನ್ ನಾಗನಾಥಾಚಾರ್ಯ ಎಂಬವರು 'ನುಲಿಯ ಚಂದಯ್ಯನ ಬಗೆಗೆ ಬರೆದಿದ್ದ ಶಾಸನದಲ್ಲಿನ ವಿಷಯವನ್ನು ಪ್ರಾಚೀನರು ತಾಳೆಗರಿಯಲ್ಲಿ ಬರೆದಿಟ್ಟಿರುವರು. ಅದು ಈಗ ಜೀರ್ಣವಾಗಿ ಕೆಲವೇ ವಾಕ್ಯಗಳು ದೊರಕುತ್ತವೆ' ಎಂದು ತಿಳಿಸಿ, ಅವುಗಳ ಮೇಲಿಂದ ಚಂದಯ್ಯನ ಜನ್ಮಕುಂಡಲಿಯನ್ನು ರಚಿಸಿ, ೧೧೦೭ರಲ್ಲಿ ಜನನ, ೧೧೭೭ರಲ್ಲಿ ಲಿಂಗೈಕ್ಯ. ಅಂದರೆ ಸು. ೭೦ ವರ್ಷ ಅವನು ಬದುಕಿದ್ದ ಎಂದು ಲೆಕ್ಕ ಹಾಕಿದ್ದಾರೆ[3]. ಬಸವ ಸಮಕಾಲೀನರಾದ ನೀಲಮ್ಮ (೧೧೬೦), ಅಮುಗಿದೇವಯ್ಯ (೧೧೬೦), ಕಿನ್ನರಿಬ್ರಹ್ಮಯ್ಯ (೧೧೬೦), ಡೋಹರ ಕಕ್ಕಯ್ಯ (೧೧೬೦), ಹೆಂಡದ ಮಾರಯ್ಯ (೧೧೬೦), ಅಂಗಸೋಂಕಿನ ಲಿಂಗತಂದೆ (೧೧೬೦) ತಮ್ಮ ವಚನಗಳಲ್ಲಿ ಚಂದಯ್ಯನನ್ನು ಕೊಂಡಾಡಿದ್ದಾರೆ[4]. ಈ ಎಲ್ಲ ಊಹೆ–ಉಲ್ಲೇಖಗಳು ಚಂದಯ್ಯ ೧೨ನೆಯ ಶತಮಾನದಲ್ಲಿ ಬಾಳಿ ಬದುಕಿದ್ದನೆಂಬುದನ್ನು ಖಚಿತಪಡಿಸುತ್ತವೆ.

ಚಂದಯ್ಯನ ಸ್ಥಲ ಶಿವಣಗಿ. ಇದು ವಿಜಾಪುರ ಜಿಲ್ಲೆಗೆ ಸೇರಿದ ಒಂದು ಚಿಕ್ಕ ಗ್ರಾಮ. ವಿಜಾಪುರದಿಂದ ಸುಮಾರು ೧೮ ಮೈಲಿ ದೂರದಲ್ಲಿದೆ. ಇಲ್ಲಿ ಚಂದಯ್ಯನ ದೇವಾಲಯವಿದೆ[5]. ಇಲ್ಲಿಂದ ಚಂದಯ್ಯ ಬಸವಣ್ಣನವರ ಮಹಿಮೆಯನ್ನು ಕೇಳಿ ಕಲ್ಯಾಣಕ್ಕೆ ಬಂದು ನುಲಿಯ ಕಾಯಕದಲ್ಲಿ ನಿರತನಾಗುತ್ತಾನೆ. ಕಲ್ಯಾಣ ಕ್ರಾಂತಿಯ ನಂತರ ಶರಣರೆಲ್ಲ ಚೆದುರಿ ದಿಕ್ಕು ಪಾಲಾಗಲು ಚಂದಯ್ಯ ಒಂಟಿಯಾಗಿ ಉಳುವೆಗೆ ಬರುತ್ತಾನೆ. ಅಲ್ಲಿ ನಾಗಲಾಂಬೆಯನ್ನು ಕಂಡು ಕೆಲದಿವಸವಿದ್ದು ಆಮೇಲೆ ಶಿವಮೊಗ್ಗಾ ಪ್ರಾಂತದ ಎಣ್ಣೆಹೊಳೆಗೆ ಪ್ರಯಾಣ ಬೆಳಸಿ, ಅಲ್ಲಿಂದ ನಂದಿಗೆ ಹೋಗಿ, ಮುಂದೆ ಕಲ್ಲುಹತ್ತಿಕಡೆಗೆ ಸಾಗಿ ಕೊನೆಗೆ ಹೊಳಲಕೆರೆ ಹತ್ತಿರದ ನುಲೇನೂರಿಗೆ ಬರುತ್ತಾನೆ. ಅಲ್ಲಿ ಶಿವಗೋಷ್ಠಿ,ಶಿವಧ್ಯಾನದಲ್ಲಿ ನಿರತನಾಗಿ,ಧರ್ಮತತ್ತ್ವಬೋಧೆ ಮಾಡುತ್ತ ಲಿಂಗೈಕ್ಯನಾಗುತ್ತಾನೆ. ಇದಕ್ಕೆ ನಂದಿಯಲ್ಲಿ ಇಂದಿಗೂ ಪ್ರತಿವರ್ಷ ನಡೆಯುವ ಚಂದಯ್ಯನ ಜಾತ್ರೆ, ನುಲೇನೂರಿನಲ್ಲಿರುವ ಚಂದಯ್ಯನ ಗದ್ದುಗೆ ಹಾಗೂ ಆ ಭಾಗದಲ್ಲಿ ದೊರೆಯುವ ಚಂದಯ್ಯನ ಕುರಿತ ಸಾಹಿತ್ಯ ಮತ್ತು ಸ್ಥಳ ಪುರಾಣಗಳು ಸಾಕ್ಷಿಯಾಗಿವೆ[6].

---

1. ಕರ್ನಾಟಕ ಕವಿಚರಿತೆ ಸಂ. ೧. ಪು. ೨೦೮ ಲೇಖಕರು : ಆರ್. ನರಸಿಂಹಾಚಾರ್ (೧೯೩೨)
2. ಬಸವೇಶ್ವರರ ಸಮಕಾಲೀನರು. ಪು. ೩೨೧ (ಬಸವ ಸಮಿತಿ ಪ್ರಕಟನೆ ದ್ವಿ. ಮು. ೧೯೭೬) 3. ಅದೇ, ಪು. ೩೨೨,
4. ಮಿತ್ರಸ್ತೋತ್ರದ ವಚನಗಳು : ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಭಾಂಡಾರದ ತಾಪ್ರ. ೧೧೫/೧ (ವಚನಗಳು–೨೫, ೩೧, ೩೮, ೩೯, ೫೪, ೧೦೮)
5. ಶಿವಶರಣರ ಚರಿತ್ರೆಗಳು, ಭಾಗ–೨ ಲೇಖಕರು : ಡಾ॥ ಫ.ಗು. ಹಳಕಟ್ಟಿ. ಪು. ೨೨೪.
6. ಹೆಚ್ಚಿನ ವಿವರಣೆಗಾಗಿ ನೋಡಿ : ೧. ನುಲಿಯ ಚಂದಯ್ಯಗಳ ಸ್ಥಲ : ಶ್ರೀ ಸದಾಶಿವ ಶಿವಾಚಾರ್ಯ ಸ್ವಾಮಿಗಳು (ಶಿವಾನುಭವ. ೨೧–೩ ಪು. ೪೮-೫೦) ; ೨. ನುಲಿಯ ಚಂದಯ್ಯನ ಗ್ರಾಮ : ಎಸ್.ಪಿ. ಶಿವಲಿಂಗಪ್ಪ ವಾರದ (ಶಿವಾನುಭವ. ೨೬-೧೧ ಪು. ೧೯೧-೧೯೨) ; ೩. ನುಲಿಯ ಚಂದಯ್ಯನ ಗದ್ದುಗೆ : ಶ್ರೀ ಎಸ್.ಪಿ. ಶಿವಲಿಂಗಪ್ಪ ನುಲೇನೂರು. (ಶಿವಾನುಭವ. ೩೦-೨೨ ಪು; ೪೯೨).

ಕಲ್ಯಾಣದ ತ್ರಿಪುರಾಂತಕ ಕೆರೆಯ ಬದಿಯಲ್ಲಿರುವ ಚಂದಯ್ಯನ ಗವಿ, ಬನವಾಸಿಯ ಮಧುಕೇಶ್ವರ ದೇವಾಲಯದ ಕಲ್ಲುಮಂಟಪದಲ್ಲಿರುವ ಚಂದಯ್ಯನ ಮೂರ್ತಿ ಇವಿಷ್ಟು ಈ ಶರಣನ ಬಗೆಗೆ ಈಗ ದೊರಕುವ ಐತಿಹಾಸಿಕ ಕುರುಹುಗಳು. ಈತ ಸಂಚರಿಸಿದ ನುಲೇನೂರು, ಕಲ್ಲತ್ತಿಗೆರೆ, ದುಮ್ಮಿ, ಎಣ್ಣೆಹೊಳೆ, ನಂದಿ, ಮುರುಕುನಂದಿ ಮುಂತಾದ ಸ್ಥಳಗಳಲ್ಲಿ ಪರಿವೀಕ್ಷಣೆ, ಸಂಶೋಧನೆ ನಡೆಸಿದರೆ ಇನ್ನೂ ಹೆಚ್ಚಿನ ಸಂಗತಿಗಳು ದೊರಕುವ ಸಾಧ್ಯತೆಯಿದೆ.

ಚಂದಯ್ಯನ ಚರಿತ್ರೆ ಪ್ರಮುಖ ವೀರಶೈವ ಕಾವ್ಯಗಳಲ್ಲಿ ಪ್ರಸಿದ್ಧವಾಗಿದೆ. ಪಂಡಿತಾರಾಧ್ಯರ ಸಹಸ್ರಗಣನಾಮ, ಪಾಲ್ಕುರಿಕೆ ಸೋಮನಾಥನ ಗಣಸಹಸ್ರನಾಮ,ಶಾಂತಕವಿಯ ಅಭವಸ್ತೋತ್ರದ ಕಂದಗಳಲ್ಲಿ ಚಂದಯ್ಯನ ಸ್ತುತಿ ಮಾತ್ರ ಇದ್ದರೆ, ಚೆನ್ನವೃಷಭನ 'ನುಲಿಯಚಂದಯ್ಯನ ಶಾರದ'[7] ದಲ್ಲಿ ಚಂದಯ್ಯನ ಸಮಗ್ರ ಚರಿತ್ರೆ ಅಳವಟ್ಟಿದೆ. ಜಾನಪದ ರೂಪದಲ್ಲಿ ರಚನೆಗೊಂಡ ಇದು ಚಂದಯ್ಯನನ್ನು ಕುರಿತ ಒಂದು ಚಿಕ್ಕ ಸ್ವತಂತ್ರ ಕಾವ್ಯವಾಗಿದೆ. ಇಲ್ಲಿ ಕಥೆ ಜನಪದ ಕಲ್ಪನೆಯಿಂದ ಕೂಡಿದೆ. ಪಾಲ್ಕುರಿಕೆ ಸೋಮನಾಥನ ಬಸವಪುರಾಣ, ಲಕ್ಕಣ್ಣ ದಂಡೇಶನ ಶಿವತತ್ತ್ವಚಿಂತಾಮಣಿ, ಭೀಮಕವಿಯ ಬಸವಪುರಾಣ, ಸಿದ್ಧನಂಜೇಶನ ಗುರುರಾಜಚಾರಿತ್ರ, ರಾಘವಾಂಕ ಚಾರಿತ್ರ, ಕಿಕ್ಕೇರಿಯಾರಾಧ್ಯ ನಂಜುಂಡನ ಭೈರವೇಶ್ವರಕಾವ್ಯ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ, ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ, ಗುಬ್ಬಿ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ, ಶೂನ್ಯಸಂಪಾದನೆ ಮೊದಲಾದವು ಚಂದಯ್ಯನ ಕಥೆಯನ್ನು ಅಳವಡಿಸಿಕೊಂಡ ಇತರ ಕಾವ್ಯಗಳು. ಎಲ್ಲ ಕೃತಿಗಳಲ್ಲಿ ಬರುವ ಕಥೆ ಒಂದೇ ಆಗಿದೆ.

ಕಲ್ಯಾಣ ಪಟ್ಟಣದಲ್ಲಿ ಚಂದಯ್ಯನೆಂಬ ಶರಣನಿದ್ದ. ನಿತ್ಯ ಅಡವಿಗೆ ಹೋಗಿ ಹುಲ್ಲನ್ನು ಕೊಯ್ದು ತಂದು ನುಲಿಯನ್ನು (ಹಗ್ಗವನ್ನು) ಹೊಸೆದು ಒಂದು ಹಾಗಕ್ಕೆ ಮಾರಿ, ಬಂದ ಹಣದಿಂದ ಜಂಗಮದಾಸೋಹ ಮಾಡಿ ಶೇಷ ಪ್ರಸಾದವನ್ನು ಸ್ವೀಕರಿಸುವುದು ಅವನ ಸತ್ಯಶುದ್ಧ ಕಾಯಕವಾಗಿತ್ತು. ಅದಕ್ಕಾಗಿ ಆತನಿಗೆ 'ನುಲಿಯಚಂದಯ್ಯ' ಎಂಬ ಹೆಸರು ಅನ್ವರ್ಥಕವಾಗಿತ್ತು. ಅವನಲ್ಲಿ ಬಸವಣ್ಣನ ಭಕ್ತಿ, ಮಡಿವಾಳಯ್ಯನ ನಿಷ್ಠೆ, ಚೆನ್ನಬಸವಣ್ಣನ ಸಾವಧಾನ ಜ್ಞಾನ, ಸತ್ಯಣ್ಣನ ಸ್ವಾನುಭಾವಪ್ರಭೆ, ಪ್ರಭುದೇವರ ಸದಾನಂದ ಪರಾಕಾಷ್ಠೆ, ಅಜಗಣ್ಣನ ಸಮರಸೈಕ್ಯತ್ವ ಇವೆಲ್ಲ ಒಟ್ಟಾಗಿ ನೆಲೆಗೊಂಡಿದ್ದವು. ಜಂಗಮಭಕ್ತಿಯೇ ಅಧಿಕ, ಜಂಗಮ ಪೂಜೆಯೇ ಲಿಂಗಪೂಜೆ, ಜಂಗಮ ಭಕ್ತಿಯೇ ಲಿಂಗಭಕ್ತಿ, ಜಂಗಮ ತೃಪ್ತಿಯೇ ಲಿಂಗತೃಪ್ತಿ, ಜಂಗಮದಾಸೋಹವೇ ಪರಮಪದವೆಂದು ತಿಳಿದು ಎಲ್ಲ ಕ್ರಿಯೆಗಳನ್ನು ಜಂಗಮದಾಸೋಹದಲ್ಲಿಯೇ ಕಂಡು ಅದೇ ತನ್ನ ನಿಜಪದವೆಂದು ನಂಬಿ ಮನಮಗ್ನವಾಗಿರುತ್ತಿದ್ದ.

ಹೀಗಿರುವಾಗ ಒಂದು ದಿನ ಚಂದಯ್ಯ ಹುಲ್ಲುತರಲೆಂದು ಅಡವಿಗೆ ಹೋಗುತ್ತಾನೆ. ಒಂದು ಮಡುವಿನ ಬಳಿಯಲ್ಲಿ ಹುಲುಸಾಗಿ ಬೆಳೆದ ಹುಲ್ಲನ್ನು ಕೊಯ್ದು ಹೊರೆ ಕಟ್ಟತೊಡಗುತ್ತಾನೆ. ಆಗ ಆತನ ಕೊರಳಲ್ಲಿದ್ದ ಇಷ್ಟಲಿಂಗವು ಉರುಳಿ ನೀರಲ್ಲಿ ಬೀಳುತ್ತದೆ. ಕಾಯಕನಿಷ್ಠೆಯಲ್ಲಿ ಚಂದಯ್ಯ ಅದನ್ನು ಗಮನಿಸದೆ ಸುಮ್ಮನೆ ಹೊರೆ ಕಟ್ಟಿ ಹೊತ್ತುಕೊಂಡು ಮನೆಯತ್ತ ಸಾಗುತ್ತಾನೆ. ಆಗ ಲಿಂಗವು ಆತನ ಕಾರ್ಯನಿಷ್ಠೆಯನ್ನು ಕಂಡು ಬೆರಗಾಗಿ, ತನ್ನನ್ನು ಕರೆದುಕೊಂಡು ಹೋಗಲಾರನೆಂಬುದು ಖಚಿತವಾಗಿ 'ಎಲೆ ಚಂದಯ್ಯ ನಾನೂ ಬರುತ್ತೇನೆ ನಿಲ್ಲು'ಎಂದು ಕೂಗುತ್ತದೆ. ಅದಕ್ಕೆ ಚಂದಯ್ಯ 'ನಿಮ್ಮ ಭಾವ ಹೇಗಿದೆಯೋ ಹಾಗೆ ಇರಿ. ನನಗೆ ನಮ್ಮ ಒಡೆಯರ ಸೇವೆಗೆ ಹೊತ್ತಾಗುತ್ತದೆ'. ಎಂದು ಹೇಳಿ ಹೊರಟುಬಿಡುತ್ತಾನೆ. ಅದನ್ನು ಕಂಡು ಲಿಂಗ ಮಡುವಿನಿಂದ ಎದ್ದು ಮೇಲೆ ಬಂದು ಪುರುಷರೂಪತಾಳಿ 'ನಾನೂ ನಿನ್ನೊಡನೆ ಬರುತ್ತೇನೆ ಬಿಟ್ಟುಹೋಗದಿರಯ್ಯ' ಎಂದು ಕೂಗುತ್ತ ಹಿಂದೆ ಹಿಂದೆ ಬರುತ್ತದೆ. 'ಮೊದಲು ಹೋಗಿ ಈಗ ಬರುತ್ತೇನೆಂದರೆ ನಾನೊಲ್ಲೆ' ಎನ್ನುತ್ತಾನೆ ಚಂದಯ್ಯ. 'ನೀನೊಲ್ಲೆನೆಂದರೆ ನಾಬಿಡೆನು' ಎಂದು ಪಟ್ಟು ಹಿಡಿಯುತ್ತಾನೆ ಲಿಂಗದೇವ. ಕೊನೆಗೆ ಅವನ ಒತ್ತಾಸೆಗೆ ಮಣಿದು ಚಂದಯ್ಯ 'ನೀವು ಸುಮ್ಮನೆ ಬರುತ್ತೇನೆಂದರೆ ನಾನೊಪ್ಪಲಾರೆ. ಅಲ್ಲಿ ಮಡಿವಾಳಯ್ಯ ಬಟ್ಟೆ ಒಗೆಯುತ್ತಿದ್ದಾನೆ. ಇನ್ನು ಹೀಗೆ ಮಾಡದೆ ಒಡೆಯರ ಸೇವೆ ಮಾಡಿಕೊಂಡಿರುತ್ತೇನೆಂದು ಆತನ ಸಾಕ್ಷಿ ಕೊಡು. ಅಂದರೆ ನನ್ನ ಜೊತೆ ಕರೆದೊಯ್ಯುವೆ. ಇಲ್ಲವಾದರೆ ನಿನ್ನ ಸಂಗವೇ ನನಗಿನ್ನು ಬೇಡ' ಎಂದು ಹೊರಡಲನುವಾಗುತ್ತಾನೆ. ಅಸಹಾಯಕನಾದ ಲಿಂಗದೇವ ಹಾಗೇ ಆಗಲೆಂದು ಒಪ್ಪಿ ಮಡಿವಾಳಯ್ಯನನ್ನು ಸಾಕ್ಷಿಯಾಗಿಟ್ಟು ತಾನೂ ಚಂದಯ್ಯ ಹೇಳಿದಂತೆ ಕೇಳುವುದಾಗಿ ಮಾತು ಕೊಟ್ಟು ಅವನೊಡನೆ ಮನೆಗೆ ಬರುತ್ತಾನೆ.

ಲಿಂಗದೇವ ಚಂದಯ್ಯನ ಅಪ್ಪಣೆಯಂತೆ ಹಗ್ಗ ಹೊಸೆದು ಮಾರುವ ಕಾಯಕದಲ್ಲಿ ನಿರತನಾಗುತ್ತಾನೆ. ಎಂದಿನಂತೆ ಒಮ್ಮೆ ಲಿಂಗದೇವ ಹಗ್ಗ ಮಾರಲು ಪೇಟೆಗೆ ಹೋಗುತ್ತಾನೆ. ಅಂದು ಯಾರೂ ಅದನ್ನು ಕೊಳ್ಳುವದಿಲ್ಲ. ಕೊನೆಗೆ ಬಸವಣ್ಣನವರ ಮನೆಯ ಹತ್ತಿರ ಬರುತ್ತಾನೆ. ಬಸವಣ್ಣ ಚಂದಯ್ಯನ ಸತ್ಯಶುದ್ಧಕಾಯಕವನ್ನು ಪರೀಕ್ಷಿಸಲು ಇಚ್ಛಿಸಿ ಅದರ ಬೆಲೆಗಿಂತ ಸಾವಿರ ಹೊನ್ನು ಹೆಚ್ಚಿಗೆ ಕೊಟ್ಟು ಹಗ್ಗವನ್ನು ಕೊಂಡುಕೊಳ್ಳುತ್ತಾನೆ. ಲಿಂಗದೇವನಿಗೆ ಅತಿ ಆನಂದವಾಗಿ ಆ ಹಣವನ್ನು ತಂದು ತನ್ನ

7. ಇದಕ್ಕೆ 'ನುಲಿಯಚಂದಯ್ಯನ ಕಥೆ' 'ನುಲಿಯಚಂದಯ್ಯನ ವಾರ್ಧಕ' (ಕನ್ನಡ ಅಧ್ಯಯನ ಪೀಠದ ಕಾ.ಪ್ರ. ೩೦೭೩) ಎಂದೂ ಕರೆಯಲಾಗುತ್ತದೆ. ಇದು ದುಂದುಮೆ ಪದ ಆಗಿದೆ ಎಂದೂ ತಿಳಿದುಬರುತ್ತದೆ. (ನೋಡಿ, ಜೀವನ ಜೋಕಾಲಿ ಭಾಗ-೫ ದುಂದುಮೆ ಪದ. ಪು. ೧೦೫-೧೧೧)

ಒಡೆಯನ ಮುಂದೆ ರಾಶಿ ಹಾಕಿದ. ಅದನ್ನು ಕಂಡು ಚಂದಯ್ಯ ಕುಪಿತನಾದ. 'ನಿನ್ನ ಹಗ್ಗದ ಬೆಲೆಯನ್ನು ಮಾತ್ರ ತೆಗೆದುಕೊಂಡು ಉಳಿದುದನ್ನು ಯಾರು ಕೊಟ್ಟರೊ ಅವರ ಮುಂದೆ ಸುರಿದುಬಾ' ಎಂದು ಗದರಿಸಿದ. ಲಿಂಗದೇವ ಹೇಳಿದ ಹಾಗೇ ಮಾಡಿದ. ಚಂದಯ್ಯ ಅಷ್ಟಕ್ಕೇ ಬಿಡಲಿಲ್ಲ. ಕಾಯಕ ತಪ್ಪಿದ ಅವನನ್ನು ಸಾಕ್ಷಿಯಾದ ಮಡಿವಾಳಯ್ಯನಲ್ಲಿಗೆ ಕರೆದೊಯ್ದ. ಅವನು ಇವರ ನ್ಯಾಯ ಬಗೆಹರಿಸಲು ಅಸಮರ್ಥನಾಗಿ ಅನುಭವ ಮಂಟಪಕ್ಕೆ ಕರೆದೊಯ್ದ. ಅಲ್ಲಿ ಶರಣ ಸಮೂಹದ ಮುಂದೆ ಚಂದಯ್ಯ 'ಜಂಗಮಸೇವೆಯೇ ಶ್ರೇಷ್ಠ, ಅದಕ್ಕಾಗಿ ಲಿಂಗದೇವನ ಅವಶ್ಯಕತೆಯಿಲ್ಲ' ಎಂದು ತನ್ನ ವಾದವನ್ನು ಮಂಡಿಸಿದ. ಪ್ರಭು ಮೊದಲಾದ ಶರಣರು ಲಿಂಗದ ಶ್ರೇಷ್ಠತೆಯನ್ನು ಹೇಳಿದರು. ಚಂದಯ್ಯ ಅದನ್ನು ಒಪ್ಪಲಿಲ್ಲ. ಕೊನೆಗೆ ಚೆನ್ನಬಸವಣ್ಣ ಲಿಂಗದ ಮಹತಿಯನ್ನು ಹೇಳುತ್ತಾನೆ. ಚಂದಯ್ಯನ ಮನಕ್ಕೆ ಆತನ ಹೇಳಿಕೆ ಸರಿಯೆನಿಸುತ್ತದೆ. ಆಗ ತನ್ನ ವಾದವನ್ನು ಹಿಂತೆಗೆದುಕೊಂಡು ಕೊರಳಿಂದ ದೂರವಾಗಿದ್ದ ಇಷ್ಟಲಿಂಗವನ್ನು ಮತ್ತೆ ಧರಿಸಿ ನಿತ್ಯ ಸತ್ಯಶುದ್ಧಕಾಯಕ, ಲಿಂಗಪೂಜೆಯಲ್ಲಿ ನಿರತನಾಗಿ ಲಿಂಗಾಂಗ ಸಾಮರಸ್ಯವನ್ನು ಹೊಂದುತ್ತಾನೆ.

ಇದೊಂದು ಕಾಲ್ಪನಿಕ ಕಥೆ. ಇದಕ್ಕೆ ಐತಿಹಾಸಿಕ ಮಹತ್ವವಿಲ್ಲ. ಆದರೆ ಸಾಂಕೇತಿಕ ಸತ್ಯವಿದೆ. ಚಂದಯ್ಯನ ಕಾಯಕ ನಿಷ್ಠೆ, ಅಗಾಧ ಕ್ರಿಯಾಶಕ್ತಿ ಇದರಲ್ಲಿ ಬಿಂಬಿತವಾಗಿವೆ.

ಚಂದಯ್ಯ ಕಾಯಕದಲ್ಲಿಯೇ ಸರ್ವವನ್ನು ಸಾಧಿಸಿದ ಶರಣ. ಆತ ಮಾಡಿದುದೆಲ್ಲ ಲಿಂಗಪೂಜೆಯೇ ಆಗಿತ್ತು. ಆತನ ಸರ್ವಕ್ರಿಯೆಗಳು ಲಿಂಗಕ್ರಿಯೆಗಳಾಗಿದ್ದವು. ಅದು ಈ ಕಥೆಯಲ್ಲಿ ಸ್ಪಷ್ಟವಾಗಿ ಮೂಡಿ ಬಂದಿದೆ. ಇದಲ್ಲದೆ ಮೂಲಕ್ರಿಯಾ ಚೇತನ ಅಥವಾ ಕ್ರಿಯಾಶಕ್ತಿ ತನಗುಂಟಾದರೂ ಸ್ಥೂಲ ಕ್ರಿಯಾಲಿಂಗ ಧಾರಣ ಅತ್ಯಗತ್ಯ ಎಂಬುದೂ ಇಲ್ಲಿ ವ್ಯಕ್ತವಾಗಿದೆ. 'ದೇಹವಿರುವವರೆಗೆ ಧಾರಣ ಅನಿವಾರ್ಯ. ಯೋಗಿ ತನ್ನ ಯೋಗ ಸಿದ್ಧಿಯಿಂದ ಅಂತರಂಗದಲ್ಲಿ ಬ್ರಹ್ಮರಂಧ್ರದ ಅಮೃತಾಹಾರವನ್ನು ಪಡೆದಿದ್ದರೂ ಆಂಗಿಕ ನಿರ್ವಹಣೆಗೆ ಅನ್ನಾಹಾರ ಹೇಗೆ ಅನಿವಾರ್ಯವೊ ಹಾಗೆ ಲಿಂಗಧಾರಣ ಅನಿವಾರ್ಯವೆಂಬುದನ್ನು ಈ ಲಿಂಗಕಾಯಕದ ಕಥೆ ಎತ್ತಿ ತೋರುತ್ತದೆ'[8]. 'ಕಾಯಕ ನಿಷ್ಠೆಯ ವ್ಯಕ್ತಿಗೆ ಧಾರ್ಮಿಕ ಲಾಂಛನವನ್ನು ಧರಿಸುವುದು ತೀರ ಮುಖ್ಯವೇನೂ ಅಲ್ಲವೆಂಬುದೂ ಇಲ್ಲಿ ಸೂಚಿತವಾಗಿದೆ'[9].

**ಕಾಯಕದ ಕಲಿ :**

ಶರಣರು ಕಾಯಕಕ್ಕೆ ಕೊಟ್ಟ ಮಹತ್ವ ಹಿರಿದಾದುದು. ಕಾಯಕದ ಕಲ್ಪನೆ ಅವರ ಪ್ರತಿಭಾಕಲ್ಪವೃಕ್ಷದಲ್ಲಿ ಅರಳುವ ದಿವ್ಯ ಕುಸುಮ. 'ಅವರು ಸತ್ಯಶುದ್ಧ ದುಡಿಮೆಗೆ ನೀಡಿದ ಪ್ರಾಶಸ್ತ್ಯದ ಪ್ರತೀಕ, ಸ್ವಾವಲಂಬನೆಯ ದ್ಯೋತಕ, ಸಮಾಜದಲ್ಲಿನ ಕೃತಕ ತಾರತಮ್ಯವನ್ನು ಹೋಗಲಾಡಿಸಿ ಸಮಾನತೆಯ ಸಹಬಾಳ್ವೆಯನ್ನು ರೂಪಿಸಿದ ಹೊಸ ಆವಿಷ್ಕಾರ'[10]. ಇಂಥ ಕಾಯಕದಲ್ಲಿ ತೊಡಗಿ ಅದರಲ್ಲಿಯೇ ಕೈಲಾಸವನ್ನು ಕಂಡು ಆನಂದಿಸಿದ ಕಾಯಕದ ಕಲಿಗಳಲ್ಲಿ ಆಯ್ದಕ್ಕಿ ಮಾರಯ್ಯ–ಲಕ್ಕಮ್ಮ, ಮೋಳಿಗೆ ಮಾರಯ್ಯ–ಮಹಾದೇವಿಯಮ್ಮ, ನುಲಿಯ ಚಂದಯ್ಯ, ಘಟ್ಟಿವಾಳಯ್ಯ ಪ್ರಮುಖರು.

ನುಲಿಯ ಚಂದಯ್ಯನ ಕಾಯಕನಿಷ್ಠೆ ವಿಶಿಷ್ಟವಾದುದು. ಲಿಂಗದೇವನಿಂದಲೇ ಕಾಯಕ ಮಾಡಿಸಿದ ಕೀರ್ತಿ ಅವನದು. ಆತ ಕಾಯಕದಲ್ಲಿಯೇ ಗುರುಲಿಂಗ ಜಂಗಮದ ಸೇವೆ ಅಡಕವಾಗಿದೆಯೆಂದು ನಂಬಿ ನಡೆದ ಅಚಲ ಕಾಯಕಯೋಗಿ. ಅವನ ಕಾಯಕ ನಿಷ್ಠೆ, ಧ್ಯೇಯಧೋರಣೆಗಳು ಈ ವಚನದಲ್ಲಿ ಸುವ್ಯಕ್ತವಾಗಿವೆ:

'ಆವ ಕಾಯಕದಲ್ಲಿ ಬಂದರೂ ಭಾವ ಶುದ್ಧವಾಗಿ ಗುರುಲಿಂಗ ಜಂಗಮಕ್ಕೆ ಮಾಡುವುದೆ ಶಿವಪೂಜೆ'[11]

'ಸತ್ಯಶುದ್ಧ ಕಾಯಕದಿಂದ ಬಂದ ದ್ರವ್ಯದಲ್ಲಿ ಚಿತ್ತವಿಚ್ಛಂದವಾಗಿರಬೇಕು. ನೇಮದ ಕೂಲಿಯಿಂದಿನ ನಿತ್ಯನೇಮದಲ್ಲಿ ಸಂದಿರಬೇಕು.
ನೇಮದ ಕೂಲಿಯ ಬಿಟ್ಟು, ಹೇಮದಾಸೆಗೆ ಕಾಮಿನಿ ದ್ರವ್ಯವ ಹಿಡಿದರೆ ತಾ ಮಾಡುವ ಸೇವೆ ನಷ್ಟವಯ್ಯಾ!'[12]

'ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ ಕಂಡ ಕಂಡವರ ಬೇಡಿ ತಂದು ಜಂಗಮಲಿಂಗಕ್ಕೆ ಮಾಡಿಹೆನೆಂಬ ದಂದುಗದ ಮಾಟಕ್ಕೆ ಲಿಂಗ ನೈವೇದ್ಯ ಸಲ್ಲದು ; ತನು ಕರಗಿ, ಮನ ಬಳಲಿ, ಬಂದ ತೆರದನುವನರಿದು, ಸಂದಿಲ್ಲದೆ ಸಂಶಯವಿಲ್ಲದೆ ಜಂಗಮಲಿಂಗಕ್ಕೆ ದಾಸೋಹವೆ ಮಾಟ.
ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ, ದುರಾಶೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯಶುದ್ಧ ಕಾಯಕದ ನಿತ್ಯದ್ರವ್ಯವಾದರೆ ಚಂದೇಶ್ವರ ಲಿಂಗಕ್ಕೆ ನೈವೇದ್ಯಸಂದಿತ್ತು ಕೇಳಯ್ಯಾ'[13]

'ಗುರುವಾದರೂ ಕಾಯಕದಿಂದಲೆ ಜೀವನ್ಮುಕ್ತಿ. ಲಿಂಗವಾದರೂ ಕಾಯಕದಿಂದವೆ ಶಿಲೆಯ ಕುರುಹು ಹರಿವುದು.

8. ಸಂಪಾದನೆಯ ಸೊಂಪು (ಕಾಯಕದ ಸಂಪುಟ): ಜಚನಿ. ಪು. ೧೮೫
9. ವಚನ ಸಾಹಿತ್ಯ: ಡಾ॥ ಎಂ. ಚಿದಾನಂದಮೂರ್ತಿ, ಪು. ೧೧೮.
10. ಗ್ರಂಥಾಂತರಂಗ: ಟಿ. ಆರ್. ಮಹಾದೇವಯ್ಯ. ಕನ್ನಡ ನುಡಿ. ೪೨-೧೨ ಪು. ೨೩ (೧೯೭೯)
11. ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯ ಸಂಪಾದನೆ: ಸಂ. ಎಸ್. ಎಸ್. ಭೂಸನೂರಮಠ ಪು. ೨೫೨ (೧೯೬೫)
12-13 ಅದೇ ಪು. ೨೫೪. - ವ. ೧೪, ೧೫.

ಜಂಗಮವಾದರೂ ಕಾಯಕದಿಂದವೆ ತನ್ನ ವೇಷದ ಪಾಶ ಹರಿವುದು, ಗುರುವಾದರೂ ಚರ ಸೇವೆಯ ಮಾಡಬೇಕು.
ಲಿಂಗವಾದರೂ ಚರಸೇವೆಯ ಮಾಡಬೇಕು. ಜಂಗಮವಾದರೂ ಚರಸೇವೆಯ ಮಾಡಬೇಕು, ಇದು ಚಂದೇಶ್ವರಲಿಂಗದರಿವು ಕೇಳಾ ಪ್ರಭುವೆ'[14]

**ಜಂಗಮ ದಾಸೋಹ ಛಲಿ :**

ಚಂದಯ್ಯ ಜಂಗಮ ದಾಸೋಹವೇ ಸರ್ವಶ್ರೇಷ್ಠವೆಂದು ನಂಬಿದ ಛಲವಾದಿ. ಅದರಲ್ಲಿಯೇ ಎಲ್ಲವೂ ಅಡಕವಾಗಿವೆ ಎಂದು ಅರಿತು ಆಚರಿಸುತ್ತ ನಡೆದ ಜಂಗಮ ತತ್ತ್ವವೇದಿ. ಈ ಜಂಗಮ ತತ್ತ್ವಭಕ್ತಿ ಅವನ ಅನೇಕ ವಚನಗಳಲ್ಲಿ ಅಳವಟ್ಟಿದೆ. ಮಡಿವಾಳ ಮಾಚಯ್ಯ ಹಾಗೂ ಅನುಭವ ಮಂಟಪದ ಶರಣಸಮೂಹದ ಮಧ್ಯೇ ಅವನು ಜಂಗಮ ಪರವಾದ ತನ್ನ ನಿಲವನ್ನು ನಿರ್ಭೀತಿಯಿಂದ ಎತ್ತಿ ಹಿಡಿಯುತ್ತಾನೆ. ವಾದವಿವಾದ ನಡೆದು ಲಿಂಗವೇ ಎಲ್ಲಕ್ಕೂ ಆಧಾರ ಎಂಬ ಸತ್ಯ ತತ್ತ್ವ ಹೊರಹೊಮ್ಮಲು ಅದನ್ನು ಪ್ರಾಂಜಲ ಮನಸ್ಸಿನಿಂದ ಒಪ್ಪಿ ಅಂಗದ ಮೇಲೆ ಲಿಂಗ ಧರಿಸಿ ಕಾಯಕ ನಿರತನಾಗುತ್ತಾನೆ. ಇಲ್ಲಿ ಅವನು ಶರಣರೊಡನೆ ನಡೆಸಿದ ಆಧ್ಯಾತ್ಮ ಚರ್ಚೆಯ ಕಾಲಕ್ಕೆ ವ್ಯಕ್ತ ಪಡಿಸಿದ ಸ್ವತಂತ್ರವಿಚಾರ, ತೋರಿದ ಉದಾತ್ತಮನೋಭಾವ ಮೆಚ್ಚುವಂತಹವು.

'ಲಿಂಗವೆಂಬುದು ಗುರುವಿನ ಹಂಗು. ಗುರುವೆಂಬುದು ಲಿಂಗದ ಹಂಗು. ಈ ಉಭಯಕ್ಕತೀತ ಜಂಗಮ ದಾಸೋಹ'[15]

'ಇಷ್ಟವೆಂಬುದು ಗುರುವಿನ ಹಂಗು, ಆ ಗುರುವಿಗೆಯೂ ಇಷ್ಟಕ್ಕೆಯೂ ಜಂಗಮವೇ ಪ್ರಾಣವೆಂದರಿದಬಳಿಕ, ಆ ಗುರುವೂ ಇಷ್ಟವೂ ಜಂಗಮದಲ್ಲಿಯೇ ಅಡಕನೋಡಾ. ಆ ಗುರುವೂ ಲಿಂಗವೂ ಜಂಗಮದ ಹಂಗಿಗಳು'[16].

'ಗುರುಸೇವೆಯ ಮಾಡಿದರೆ ಇಹದಲ್ಲಿ ಸುಖ. ಲಿಂಗಸೇವೆಯ ಮಾಡಿದರೆ
ಪರದಲ್ಲಿ ಸುಖ, ಜಂಗಮಸೇವೆಯ ಮಾಡಿದರೆ ಇಹಪರವೆಂಬುಭಯನಾಸ್ತಿ'[17]

'ಜಂಗಮ ಸೇವೆಯ ಚಿತ್ತ ಶುದ್ಧನಾಗಿ ಮಾಡುವಲ್ಲಿ ಗುರು ಪೂಜೆ ಸಂದಿತ್ತು.
ಜಂಗಮಸೇವೆಯ ಚಿತ್ತಶುದ್ಧನಾಗಿ ಮಾಡುವಲ್ಲಿ ಲಿಂಗಪೂಜೆ ಸಂದಿತ್ತು. ಜಂಗಮ ದಾಸೋಹದಿಂದ ಸರ್ವಸಂಪದವಾಯಿತ್ತು'[18].

'ಜಂಗಮ ನಮಸ್ಕಾರವೇ ಗುರುಪೂಜೆ. ಜಂಗಮ ಪೂಜೆಯೆ ಲಿಂಗಪೂಜೆ.
ಜಂಗಮ ತೃಪ್ತಿಯೆ ತನಗೆ ಪ್ರಸನ್ನ. ತನಗೆ ಪ್ರಸಾದವಾದುದೆ ನಿತ್ಯ ಪ್ರಸಾದದಾಗು'[19]

ನುಲಿಯ ಚಂದಯ್ಯ ಪ್ರಾಣಲಿಂಗಿ ಸ್ಥಲದಲ್ಲಿ ನಿಂತ ಶರಣ. ಅವನು ಈ ಸ್ಥಲಕ್ಕೆ ಏರಿದ ವಿಚಾರವನ್ನು ಕಿನ್ನರಿ ಬ್ರಹ್ಮಯ್ಯ 'ಪ್ರಾಣಲಿಂಗಿಸ್ಥಲವನರಿದು ತಮ್ಮ ಪ್ರಾಣಲಿಂಗದಲ್ಲಿ ಬಯಲಾದರು ನುಲಿಯ ಚಂದಯ್ಯಗಳು'[20] ಎಂದೂ, ಡೋಹರ ಕಕ್ಕಯ್ಯ ಎನಗೆ ಪ್ರಾಣಲಿಂಗಿಸ್ಥಲವ ತೋರಿದಾತ ಚಂದಯ್ಯನು'[21] ಎಂದೂ ನೀಲಮ್ಮ 'ಎನ್ನ ಪ್ರಾಣಲಿಂಗಿ ಎಂಬರಯ್ಯ; ಎನ್ನ ಪ್ರಾಣಲಿಂಗಿಸ್ಥಲವ ನುಲಿಯ ಚಂದಯ್ಯ ಸೂರೆಗೊಂಡನಾಗಿ'[22] ಎಂದೂ ಹೇಳಿದ್ದಾರೆ. ಅವನ ಮಹಿಮೆಯನ್ನು 'ಎನ್ನಂತ ರಂಗವಶುದ್ಧವಮಾಡಿದಾತ ಚಂದಯ್ಯನು'[23] ಎಂದು ಹೆಂಡದ ಮಾರಯ್ಯ, 'ಎನ್ನ ತನುವಿನ ಮೂರ್ತಿಯೆ ಚಂದಯ್ಯನು'[24] ಎಂದು ಅಂಗ ಸೋಂಕಿನ ಲಿಂಗ ತಂದೆ, 'ಚಂದಯ್ಯನ ಪ್ರಸಾದವ ಕೊಂಡೆನ್ನ ಮನಸೂತಕ ಹೋಯಿತ್ತಯ್ಯ'[25] ಎಂದು ಅಮುಗಿದೇವಯ್ಯಗಳು ಕೊಂಡಾಡಿದ್ದಾರೆ.

ಚಂದಯ್ಯ ಒಬ್ಬ ಉತ್ತಮ ವಚನಕಾರ. 'ಚಂದೇಶ್ವರ' ಎಂಬುದು ಅವನ ವಚನಾಂಕಿತ. ಕವಿಚರಿತೆಕಾರರು 'ಇವನ ವಚನಗಳ ಸಂಖ್ಯೆ ೪೯' ಎಂದು ಹೇಳಿದ್ದಾರೆ[26]. ಆದರೆ ಈತ ರಚಿಸಿದ ಒಟ್ಟು ವಚನಗಳು ಎಷ್ಟೆಂಬುದು ತಿಳಿದಿಲ್ಲ. ಅದಕ್ಕೆ ಕಾರಣ ಎಲ್ಲ ವಚನಗಳು ಒಂದೆಡೆ ಸಿಕ್ಕುವದಿಲ್ಲ. ವಿವಿಧ ಸ್ಥಲಕಟ್ಟಿನ ಕೃತಿಗಳಲ್ಲಿ ಇತರ ಶರಣರ ವಚನಗಳೊಡನೆ ಬೆರೆತ ಅವನ್ನು ಒಂದೆಡೆ ರಾಶಿಗೊಳಿಸಿದಾಗ ಮಾತ್ರ ಲೆಕ್ಕ ಹತ್ತಬಹುದು. ಸದ್ಯ ಉಪಲಬ್ಧ ವಚನಗಳಲ್ಲಿ ಕಂಡು ಬರುವ ವಿಶೇಷತೆಯೆಂದರೆ ಚಂದಯ್ಯನ ಕಾಯಕ, ಕಾಯಕನಿಷ್ಠೆ, ಜಂಗಮದಾಸೋಹ ಶ್ರದ್ಧೆ, ಕ್ರಿಯಾಜ್ಞಾನಾನುಭವ ಸಾಮರಸ್ಯ, ನಿಶ್ಚಲಮನ, ನಿರ್ಭೀತ ಭಾವ, ಸ್ವತಂತ್ರ ವಿಚಾರ, ಪ್ರಾಮಾಣಿಕ ನಡೆ ನುಡಿ, ಖಚಿತವೆನಿಸಿದುದನ್ನು ಮಾತ್ರ ಒಪ್ಪುವ ತೆರೆದ ಹೃದಯ. ವಚನಭಾಷೆ ಸರಳ. ಭಾವ ಉದಾತ್ತ. ಲೌಕಿಕತೆಗಿಂತ ತಾತ್ವಿಕತೆ ಹೆಚ್ಚು.

ಒಟ್ಟಿನಲ್ಲಿ ನುಲಿಯ ಚಂದಯ್ಯ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿ, ಶ್ರೇಷ್ಠ ಅನುಭಾವಿ, ಉನ್ನತ ವಿಚಾರವಾದಿ, ಉದಾತ್ತ ತತ್ತ್ವವೇತ್ತನೆನಿಸಿ ವಚನಕಾರರಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದಾನೆ.

---

14. ಅದೇ ಪು. ೨೫೮. ವ. ೩೦ 15. ಅದೇ. ಪು. ೨೫೨. ವ. ೫ 16. ಅದೇ ಪು. ೨೫೪ ವ. ೧೩
17. ಅದೇ. ಪು. ೨೫೭ ವ. ೨೬. 18. ಅದೇ. ಪು. ೨೬೦. ವ. ೪೧ 19. ಅದೇ ಪು. ೨೬೧. ವ. ೪೨
20. ಮಿಶ್ರಸ್ತೋತ್ರದ ವಚನಗಳು : ಕಲಿಪೀ ತಾಪ್ರ ೧೧೫/೧೪ ವ. ೨೫ 21. ಅದೇ ವಚನ ೩೧
22. ಅದೇ ವಚನ ೧೦೮. 23. ಅದೇ ವಚನ ೩೮ 24. ಅದೇ ವಚನ ೩೯
25. ಅದೇ ವಚನ ೫೪ 26. ಕ. ಕ. ಚ. ಸಂಪುಟ. ೧, ಪು. ೨೦೮ (ಪರಿಶೋಧಿತ ದ್ವಿತೀಯ ಮುದ್ರಣ ; ೧೯೭೨)

# ಕೆಲವು ಶಿವಶರಣೆಯರ ವ್ಯಕ್ತಿಚಿತ್ರಗಳು

## ಗಂಗಾಂಬಿಕೆ

—ಶಾಂತಾದೇವಿ ಮಾಳವಾಡ

'ಕಲ್ಯಾಣಪುರವಿಲಾತಳಕೆ ಶುಭಕಲ್ಯಾಣ, । ಕಲ್ಯಾಣಪುರ ಮನುಜ ಮಂಗಳದ ಕಲ್ಯಾಣ, ।
ಕಲ್ಯಾಣ ಪಾಪೌಘರದನಿ ಜಿದವಿದಳನದ ಪಂಚಾಸ್ಯ ಕಲ್ಯಾಣವು, ॥ ಕಲ್ಯಾಣ ಭಕ್ತಿಸತಿಯ ವಿವಾಹ ಕಲ್ಯಾಣ ।
ಕಲ್ಯಾಣ ಪರಮಕೈವಲ್ಯಪದ ಕಲ್ಯಾಣ । ಕಲ್ಯಾಣದೊಳ್ ಬಸವನಂತಿರ್ಪ ಭಕ್ತರ ಸುಚರಣಾಂಬುಜಕ್ಕೆ ಶರಣು॥'
(ಶಿವತತ್ತ್ವ ಚಿಂತಾಮಣಿ)

ಹನ್ನೆರಡನೆಯ ಶತಮಾನದಲ್ಲಿ ಕುಲಚೂರ್ಯ ಬಿಜ್ಜಳನ ಮಂತ್ರಿ ಬಲದೇವನ ಏಕಮಾತ್ರ ಪುತ್ರಿ ಗಂಗಾಂಬಿಕೆಯ ಮದುವೆಯ ಸಂಭ್ರಮ ಕಲ್ಯಾಣ ಪಟ್ಟಣದಲ್ಲಿ ನಡೆಯಿತು. ಇಂಗಳೇಶ್ವರ ಬಾಗೇವಾಡಿಯಲ್ಲಿ ಮಾದರಸ, ಮಾದಲಾಂಬಿಕೆಯ ರಿಗೆ ಮಗುವಾಗಿ ಜನಿಸಿದ ಬಸವೇಶ, ಕೂಡಲ ಸಂಗಮದ ಗುರುಕುಲದಲ್ಲಿ ಶಿಕ್ಷಣ ಪಡೆದು ಸಾಧನೆಗೈದ. ಸಿದ್ಧಿಯನು ಪಡೆದ. ಬಸವೇಶನ ವಿನಯ, ಪಾಂಡಿತ್ಯ, ಪ್ರತಿಭೆಯ ಸಮಾಚಾರ ತಿಳಿದು ಅವನ ಸೋದರಮಾವ ಬಲದೇವಮಂತ್ರಿ ತನ್ನ ಮಗಳಿಗೆ ಬಸವೇಶ್ವರನೇ ಯೋಗ್ಯವರನೆಂದು ನಿರ್ಧರಿಸಿದನು. ಸಕಲ ವೈಭವದಿಂದ ಬಸವೇಶ್ವರನನ್ನು ಕೂಡಲಸಂಗಮದಿಂದ ಕಲ್ಯಾಣಕ್ಕೆ ಬರಮಾಡಿಕೊಂಡನು.

ಗಂಗಾಂಬಿಕೆ ಬಲದೇವ ಮಂತ್ರಿಯ ಮಗಳು; ಬಾಲ್ಯದಲ್ಲಿಯೆ ತಾಯಿಯನ್ನು ಕಳೆದುಕೊಂಡಿದ್ದಳು. ಮಗಳ ಮೇಲಿನ ಮಮತೆಯಿಂದ ತಂದೆ ಮತ್ತೆ ವಿವಾಹವಾಗಲಿಲ್ಲ, ಬಲದೇವ ಮಂತ್ರಿಗೆ ಮಗಳೂ, ಮಗನೂ, ಸರ್ವಸ್ವವೂ ಗಂಗಾಂಬಿಕೆಯೇ ಆಗಿದ್ದಳು. ಬಿದಿಗೆಯ ಚಂದಿರನಂತೆ ಬೆಳೆದ ಗಂಗಾಬಿಕೆ ಕನ್ನಡ, ಸಂಸ್ಕೃತ ಸಾಹಿತ್ಯ ವ್ಯಾಸಂಗಗೈದಳು. ಸಂಗೀತ ಸಾಧನೆ ಮಾಡಿದಳು. ಬಿಲ್ಲುವಿದ್ಯೆ, ಕತ್ತಿವರಸೆಯಲ್ಲಿಯೂ ಬಲ್ಲಿದಳಾದಳು. ದೊಡ್ಡವಳಾದಂತೆ ಮನೆಯ ಹೊಣೆಗಾರಿಕೆಯನ್ನೆಲ್ಲ ಚಾಕಚಕ್ಯತೆಯಿಂದ ನಡೆಸಹತ್ತಿದಳು, ತಂದೆಯ ಪ್ರತಿಯೊಂದು ಕಾರ್ಯದಲ್ಲಿ ಸಹಾಯಕಳಾದಳು. ರೂಪ, ಗುಣ, ಸಂಪನ್ನಳಾದ ಮಗಳನ್ನು ಬಸವೇಶ್ವರನಿಗೆ ಧಾರೆಯೆರೆದು ಕೊಡಲು ಬಲದೇವಮಂತ್ರಿ ನಿರ್ಧರಿಸಿದ. ಗಂಗಾಂಬಿಕೆ-ಬಸವೇಶ್ವರರ ವಿವಾಹದಿಂದ ಮನುಜರ ಕಲ್ಯಾಣವಾಗುವದೆಂಬುದನ್ನು ಲಕ್ಕಣ್ಣದಂಡೇಶ ತನ್ನ 'ಶಿವತತ್ತ್ವ ಚಿಂತಾಮಣಿ'ಯಲ್ಲಿ ಬರೆದುದನ್ನು ಮೇಲಿನ ಪದ್ಯದಿಂದ ಅರಿಯಬಹುದು.

ವಾದ್ಯವೈಭವದಿಂದ ಬಸವೇಶನನ್ನು ಇದಿರ್ಗೊಂಡು ಮದುವೆಯ ಮಂಟಪಕ್ಕೆ ಕರೆತಂದರು. ಗಂಗಾಂಬಿಕೆಯ ಗೆಳತಿಯರು, ಸೇವಿಕೆಯರು ಕೂಡಿ ಆಕೆಯನ್ನು ಅಲಂಕರಿಸಿದರು.

'ಗಂಗಾಧರನ ಜಟಾಜೂಟದಿಂದಿಳಿದ ಭಾ । ಗ್ಯಾಂಗನೆಯ ಭಾಗೀರಥೀನಾಮದೆಸೆವಮಲ
ಗಂಗಾಂಬಿಕೆಗೆ ಸಕಲಮುಗಳಾಭರಣಾದಿ ಪೂಜ್ಯತೆಯನೋಜೆಯಿಂದ । ಸಿಂಗರಿಸಿ ಮದನಗೆ ಮಹೇಂದ್ರಜಾಲವನೊಡ್ಡಿ
ದಂಗದ ಸುವಾಸಿನಿಯರುಗಳು ಯೀ ಮದುವಳಿಗೆ। ಸಂಗನ ಬಸವನರಸಿಯೆಂದಕ್ಷತೆಯನಿಕ್ಕಿ ಪಾಡಿದರದೇಂ ಪೊಗಳ್ವೆನು' (ಸಿಂಗಿರಾಜ ಪುರಾಣ)

ಬಸವೇಶ-ಗಂಗಾಂಬಿಕೆಯರಿಗೆ 'ನವರತ್ನಜಾಲ ಪ್ರಭಾಭಾಸಿಗಂಗಟ್ಟಿ'ದರು. ಮುತ್ತೈದೆಯರು ಮುತ್ತಿನ ಸೇಸೆಯನ್ನಿಕ್ಕಿದರು. ಕೈಲಾಸದಿಂದಿಳಿದು ಬಂದ ಶಿವಪಾರ್ವತಿಯರಂತೆ ಶೋಭಿಸುವ ಬಸವ-ಗಂಗಾಂಬಿಕೆಯರನ್ನು ಕಂಡು ಕಲ್ಯಾಣಪಟ್ಟಣದ ಜನ ಸಂತಸಪಟ್ಟರು.

'ಮಿಥುನ ಮಿತ್ರತೆಗೆ ಜಂಗಮಲಿಂಗಮುಖಸಿದ್ಧ । ವ್ರತಪ್ರಸಾದನು ಪತಿ ಪತಿಕರಿಸಿ ಕೈಪಿಡಿದು
ಸತಿಗೆ ಪಥ ಪರೀಕ್ಷೆಗೊಡುಪೋಲ್ಕೊಡಲ್ಕಿವ ಶಕ್ತಿಸಂಧಿಲೇಪನವದಾಗೆ ।
ಅತಿಶಯೋನ್ನತ ವೈಭವದಿ ಚತುರ್ಥಿಯ ಮಾಡಿ। ಕೃತಕೃತ್ಯನಾದೆನೆಂದೆಡಿಗೆಜಿಗಿ ಬಲದೇವ
ಸುತೆಯ ಸುಕೃತಕ್ಕೊಪ್ಪಿಸುವೊಲು ಬಸವಂಗೊಪ್ಪಿಸುತ ಕಳುಹಿದನು ಗೃಹಕೆ'

ಅಳಿಯ-ಮಗಳು ತನ್ನ ಮನೆಯಲ್ಲಿರಬೇಕೆಂಬ ಅಪೇಕ್ಷೆ ಬಲದೇವಮಂತ್ರಿಯದು. ಆದರೆ ಬಸವೇಶ ಇದಕ್ಕೊಪ್ಪುವವದಿಲ್ಲ. ಪರಧನ, ಪರಾಶ್ರಯ ಒಳ್ಳೆಯದಲ್ಲ, ಕಾಯಕಪ್ಪದಿಂದ ಗಳಿಸಿದ ಹಣವೇ ಸಂಸಾರ ಸಾಗಿಸಲು ಯೋಗ್ಯವೆಂದು ಭಾವಿಸಿದ ಬಸವೇಶ ಬಿಜ್ಜಳನ ಓಲಗದಲ್ಲಿ ಕರಣಿಕವೃತ್ತಿ ಕೈಕೊಂಡ. ಬೇರೆ ಮನೆಮಾಡಿ ಪತ್ನಿಯನ್ನು, ಅಕ್ಕನಾಗಲಾಂಬಿಕೆಯನ್ನು, ಆಕೆಯ ಚಿಕ್ಕಮಗು ಚೆನ್ನಬಸವೇಶನನ್ನು ಕರೆದೊಯ್ದ, ಬಲದೇವಮಂತ್ರಿ ಮಗಳಿಗೆ ಸಾಕಷ್ಟು ಬಳುವಳಿಯನ್ನು ಕೊಟ್ಟು ಕಳುಹಿದನು.

ಮಂತ್ರಿಯ ಏಕೈಕ ಪುತ್ರಿಯಾಗಿ, ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಗಂಗಾಂಬಿಕೆ ಪತಿಗೆ ತಕ್ಕ ಸತಿಯಾಗಿ ಬಾಳುತ್ತಾಳೆ. 'ಕಾಯಕವೇ ಕೈಲಾಸ'ವೆಂದು ಬಗೆದ ಬಸವೇಶನೊಂದಿಗೆ ಸಂತೋಷದಿಂದ ಕಾಯಕನಿರತಳಾಗುತ್ತಾಳೆ. ಕರಣಿಕನ ಪತ್ನಿಯಾಗಿ ಒಪ್ಪ ಓರಣದಿಂದ ಮನೆತನ ನಡೆಸುತ್ತಾಳೆ.

'ಮುನಿಕಶ್ಯಪಂಗದಿತಿ ಸಾವಿತ್ರಿ ಸತ್ಯವಂಗ। ನಸೂಯೆ ಅತ್ರಿಗೆ ವಶಿಷ್ಠಂಗರುಂಧತಿಯು
ಜನಕ ವಂಶವಲಿ ಲೋಪಾಮುದ್ರೆ ಕುಂಭಜಗೆ ಸೇರಿ ಪತಿಗಳ ಸೇವೆಯ ॥
ವಿನಯದಿಂ ಮಾಳ್ಪಂತೆ ಗಂಗಾಂಬಿಕೆಯು। ತನುಮನವನೊಚ್ಚತಗೊಟ್ಟು ಬಸವರಾಜನ ಚಿತ್ತ
ದನುಗುಣದ ಸತಿಯಾದಳೆಂದು ಕೊಂಡಾಡುವರಚರಣಾಂಬುಜಕ್ಕೆ ಶರಣು' (ಶಿವತತ್ತ್ವ ಚಿಂತಾಮಣಿ)

ಎಂದು ಲಕ್ಕಣ್ಣ ದಂಡೇಶ ತನ್ನ 'ಶಿವತತ್ತ್ವ ಚಿಂತಾಮಣಿ'ಯಲ್ಲಿ ಗಂಗಾಂಬಿಕೆಯ ಪತಿಭಕ್ತಿಯನ್ನು ಹೊಗಳಿದ್ದಾನೆ.

ವಯೋವೃದ್ಧನಾದ ಬಲದೇವಮಂತ್ರಿ ಗಂಗಾಂಬೆ, ಬಸವೇಶ್ವರರು ಸುಖದಿಂದ ದಾಂಪತ್ಯ ಜೀವನ ನಡೆಸಿದುದನ್ನು ಕಂಡು ಸಂತೃಪ್ತನಾದನು. ಪರರ ಧನ–ಕನಕ ದೇವರ ಸೇವೆಗೆ ಸಲ್ಲದು ಎಂದು ಬಸವೇಶ್ವರನು ಬಲದೇವ ಮಂತ್ರಿಯ ಸಂಪತ್ತನ್ನು ನಿರಾಕರಿಸಿದನು. ಆಗ ಬಲದೇವಮಂತ್ರಿ ತನ್ನ ಆಸ್ತಿಯನ್ನೆಲ್ಲ ಗಂಗಾಂಬಿಕೆಯ ಹೆಸರಿಗೆ ಮಾಡಿದನು. ನಿಶ್ಚಿಂತೆಯಿಂದ ಶಿವಪಾದ ಸೇರಿದನು. ಆ ವೇಳೆಗೆ ಬಿಜ್ಜಳ ದೊರೆಯ ಆಸ್ಥಾನ ಪಂಡಿತರಿಗೆಲ್ಲ ಒಂದು ಲಿಪಿಯನ್ನು ಓದಲು ಸಾಧ್ಯವಾಗಿರಲಿಲ್ಲ. ಬಸವೇಶ್ವರನು ಆ ಲಿಪಿಯನ್ನು ದೊರೆಗೆ ಓದಿ ಹೇಳಿದನು. ಬಸವೇಶನ ಸೌಮ್ಯಗುಣ, ಪಾಂಡಿತ್ಯ,ಪ್ರತಿಭೆಗಳಿಗೆ ಮಾರುಹೋದ ಬಿಜ್ಜಳದೊರೆ ಬಸವೇಶನಿಗೆ ಮಂತ್ರಿಪದವಿಯನ್ನಿತ್ತನು. ತನ್ನ ಸಾಕು ತಂಗಿ ನೀಲಾಂಬಿಕೆಯನ್ನು ಧಾರೆಯೆರೆದು ಕೊಟ್ಟನು.

ಗಂಗಾಂಬಿಕೆಯ ಬಾಲ್ಯದ ಗೆಳತಿ, ಸಿದ್ಧರಸ ದಣ್ಣಾಯಕರ ಪುತ್ರಿ ನೀಲಾಂಬಿಕೆಯೊಂದಿಗೆ ಬಸವೇಶ್ವರನ ವಿವಾಹವಾಗಬೇಕೆಂದು ಗಂಗಾಂಬಿಕೆ ಪ್ರಯತ್ನಪಟ್ಟಳು. ಬಾಲ್ಯದ ಗೆಳತಿ ನೀಲಾಂಬಿಕೆ, ಬಾಳಿನ ಗೆಳತಿಯಾಗಿರಬೇಕು. ಎಂಬ ತ್ಯಾಗಭಾವನೆ ಗಂಗಾಂಬಿಕೆಯದಾಗಿತ್ತು. ಬಸವೇಶ್ವರನ ಸಾಮಾಜಿಕ ಜೀವನದಲ್ಲಿ ಗಂಗಾಂಬಿಕೆ, ನೀಲಾಂಬಿಕೆಯರ ಪಾತ್ರ ಹಿರಿದಾಗಿತ್ತು. ಆತನ ಧಾರ್ಮಿಕ ಜೀವನದಲ್ಲಿ ಸಹಚರಿಯರಾದರು. ಆಧ್ಯಾತ್ಮಿಕ ಜೀವನದಲ್ಲಿ ಸಹಾಯಕರಾದರು. ಗಂಗಾಂಬಿಕೆ, ನೀಲಾಂಬಿಕೆಯರ ದೇಹವೆರಡಾದರೂ ಮನಸ್ಸು. ಉದ್ದೇಶ ಒಂದೇ ಆಗಿತ್ತು. ಗಂಗಾಂಬಿಕೆ, ನೀಲಾಂಬಿಕೆಯರು ಬಸವೇಶ್ವರನು ರಚಿಸಿದ ವಚನಗಳನ್ನು ಭಕ್ತಿಯಿಂದ ಹಾಡುತ್ತಿದ್ದರು. ಆ ಭಕ್ತಿಪೂರ್ಣ ಸಂಗೀತದಿಂದ ಕೇಳಿದವರ ಹೃದಯ ಭಕ್ತಿಭರಿತವಾಗುತ್ತಿತ್ತು. ಮನ ಅರಳುತ್ತಿತ್ತು.

ಗಂಗಾಂಬಿಕೆ ತನ್ನ ತಂದೆಯ ಮಂತ್ರಿಕಾರ್ಯದಲ್ಲಿ ಸದಾ ಅವನ ನೆರವಿಗಿರುತ್ತಿದ್ದಳು. ಮನೆಗೆ ಬರುವ ಅತಿಥಿ ಅಭ್ಯಾಗತರನ್ನು ಉಪಚರಿಸುತ್ತಿದ್ದಳು. ಈ ಎಲ್ಲ ಕಾರ್ಯಗಳ ಭಾರ ಪತಿಗೃಹಕ್ಕೆ ಬಂದ ಮೇಲೆಯೂ ಆಕೆಯ ಪಾಲಿನದಾಯಿತು; ಸೌಮ್ಯ ಸ್ವಭಾವದ ನೀಲಾಂಬಿಕೆ ದಾಸೋಹಂಭಾವದಿಂದ ಅಡಿಗೆ ಮನೆಯ ಪ್ರಸಾದದ ಹೊಣೆಗಾರಿಕೆ ಹೊತ್ತಳು. ಬಸವಣ್ಣ ವಿಶಾಲ ತಳಹದಿಯಮೇಲೆ ಹೊಸ ಸಮಾಜ ರಚನೆಗೈದಾಗ, ಆತನ ಮನೆ ಮಹಾಮನೆಯಾಗಲು ಬಸವಣ್ಣನ ಭಕ್ತಿ, ಆತ್ಮಶಕ್ತಿ ಹೆಚ್ಚಾಗಲು ಗಂಗಾಂಬಿಕೆ ನೀಲಾಂಬಿಕೆಯರು ಹೆಚ್ಚಿನ ಸಹಾಯಕರಾದರು. ಆಧ್ಯಾತ್ಮ ಶಕ್ತಿಯ ಕೇಂದ್ರಸ್ಥಾನವಾದ ಮಹಾಮನೆಯನ್ನು ಕಂಡ ಸಿದ್ಧರಾಮೇಶ್ವರರು ಹೀಗೆ ಹೇಳಿದ್ದಾರೆ:—

'ನಿಮ್ಮ ಸಂಗನಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ ಮರ್ತ್ಯಲೋಕವೆಲ್ಲವು ಭಕ್ತಿ ಸಾಮ್ರಾಜ್ಯವಾಯಿತ್ತು,
ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜಲಿಂಗಪದಮಂ ಪಡೆದರು. ಆ ಗೃಹವ ನೋಡಬೇಕೆಂದು ನಾನು ಹಲಕಾಲ ತಪಿಸಿದ್ದೆನು
ಕಪಿಲಸಿದ್ಧ ಮಲ್ಲಿನಾಥಾ ನಿಮ್ಮ ಶರಣ ಸಂಗನ ಬಸವಣ್ಣನ ಮಹಾಮನೆಗೆ ನಮೋ ನಮೋ ಎನುತಿರ್ದೆನು'

ಕರ್ಮಯೋಗಿ ಸಿದ್ಧರಾಮೇಶ್ವರನಂಥವರು ಬಸವಣ್ಣನ ಮಹಾಮನೆಗೆ ಬಂದು ಧನ್ಯರಾದುದನ್ನು ನೆನೆದಾಗ ಆ ಮನೆಯ ಹಾಗೂ ಮನೆಯೊಡತಿಯರ ಆತ್ಮಶಕ್ತಿಯ ಅರಿವಾಗದಿರದು. ಕನ್ಯಾಕುಮಾರಿಯಿಂದ ಹಿಮಾಲಯದವರೆಗಿನ ಆಧ್ಯಾತ್ಮ ಪ್ರೇಮಿಗಳನ್ನು ಆಕರ್ಷಿಸಿದ ಬಸವಣ್ಣನವರ ವ್ಯಕ್ತಿತ್ವ ಬೆಳೆಯಲು, ಮಹಾಮನೆಯ ಕೀರ್ತಿ ಹೆಚ್ಚಾಗಲು ಕಾರಣರಾದವರಲ್ಲಿ ಗಂಗಾಂಬಿಕೆ ಪ್ರಮುಖಳು. ಜ್ಞಾನಜ್ಯೋತಿ ಚೆನ್ನಬಸವಣ್ಣನನ್ನು ಒಡಹುಟ್ಟಿದ ತಮ್ಮನಂತೆ ಬೆಳೆಸಿದವಳು ಗಂಗಾಂಬಿಕೆ.

'ಕ್ಷಿತಿಗೆ ಲಕ್ಷ್ಮಿಗೆ ರೋಹಿಣಿಗೆ ಭಾ। ರತಿಗೆ ರತಿಗೆ ಪುಲೋಮಜೆಗರುಂ। ಧತಿಗೆ ಸೀತೆಗೆ ಜಾಹ್ನವಿಗೆ ರವಿಸತಿಗೆ ನೂಲುವುಡಿ॥
ಧೃತಿಸಿರಿಪ್ರಭೆ ಜಾಣ್ಮೆರೂಪು। ಸ್ಮೃತಿ ಪತಿವ್ರತದಾಚರಣೆ ಸಂತತ ಪವಿತ್ರತೆ ತೇಜದಿಂಬವಳಿಂದ ಗಂಗಾಯಿ ಒಪ್ಪಿದಳು'॥ (ಬ. ಪು.)

ಎಂದೂ ಆಭರಣಗಳು ಗಂಗಾಂಬಿಕೆಯ ಸೌಂದರ್ಯವರ್ಧನೆಗೆ ಸಹಾಯಕವಾಗದೆ ಈಕೆಯ ಸೌಂದರ್ಯವೇ ಆಭರಣದ ಸೊಬಗನ್ನು ಹೆಚ್ಚಿಸಿತೆಂದೂ, 'ಪತಿಭಕ್ತಿ ಗುಣಸಂಪನ್ನೆಯಂ,ಗುರುಲಿಂಗ ಭಜನಾಸನ್ನೆಯಂ, ಗಂಗಾಂಬೆಯಂ' ಎಂದು ಭೀಮಕವಿ ತನ್ನ ಬಸವಪುರಾಣದಲ್ಲಿ ಗಂಗಾಂಬಿಕೆಯ ರೂಪು ಗುಣಸಂಪನ್ನತೆಯನ್ನು ಹಾಡಿ ಹೊಗಳಿದ್ದಾನೆ.

ಗಂಗಾಂಬಿಕೆ ಪತಿಯ ಮನದೊಲವಿನಂತೆ ತನ್ನ ಬಾಳನ್ನು ರೂಪಿಸಿಕೊಂಡಳು. ನಿತ್ಯ ಮಹಾಮನೆಗೆ ಬರುವ ಸಾವಿರಾರು ಜನಪಂಡಿತರು, ಆಧ್ಯಾತ್ಮ ಜೀವಿಗಳು, ಶಿವಾನುಭಾವಿಗಳು ಹಾಗೂ ಜಂಗಮರನ್ನು ಸ್ವಾಗತಿಸುವ ಕೆಲಸ ಗಂಗಾಂಬಿಕೆಯದಾಗಿತ್ತು. ಅನುಭವ ಮಂಟಪದ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಗಂಗಾಂಬಿಕೆ ಚೆನ್ನಬಸವಣ್ಣನಿಗೆ ಸಹಾಯಕಳಾಗಿರುತ್ತಿದ್ದಳು. ಬೇನೆ ಬಿದ್ದವರ ಆರೈಕೆ, ನಿರ್ಗತಿಕರ ಕ್ಷೇಮ ಚಿಂತನೆಗಳೆಲ್ಲ ಗಂಗಾಂಬಿಕೆಯ ಪಾಲಿನ ಕೆಲಸಗಳಾಗಿದ್ದವು.

ಘನಲಿಂಗ ರುದ್ರಮುನಿಗಳು ಗಂಗಾಂಬಿಕೆಯ ಗುರುಗಳಾಗಿದ್ದರು. ಗಂಗಾಂಬಿಕೆ ಮಹಾಮನೆಯ ಬಿಡುವಿಲ್ಲದ ಕೆಲಸ ಕಾರ್ಯಗಳನ್ನು ನೋಡಿಕೊಂಡು ಮರಿದೇವರ ಗುಡ್ಡದಲ್ಲಿರುವ ಪತ್ರಿಯುವನಕ್ಕೆ ಹೋಗಿ ಗುರುಸೇವೆಯನ್ನು ಮಾಡಿ ಬರುತ್ತಿದ್ದಳು. ಗಂಗಾಂಬಿಕೆಯು ಲೋಕಸೇವಾಕಾರ್ಯದಲ್ಲಿ ಗುರುಗಳ ಮಾರ್ಗದರ್ಶನವಿರುತ್ತಿತ್ತು. 'ಗುರುಪ್ರಾಣಿ ಗಂಗಾಂಬಿಕೆ. ಲಿಂಗಪ್ರಾಣಿ ನೀಲಾಂಬಿಕೆ. ಜಂಗಮಪ್ರಾಣಿ ಬಸವಣ್ಣ' ಎಂಬ ಮಾತನ್ನು ಈ ಮೂವರ ಜೀವನದಿಂದ ಅರಿಯಬಹುದಾಗಿದೆ.

ಗಂಗಾಂಬಿಕೆ ವಚನರಚನಾಚತುರಳಾಗಿದ್ದಳು. ಆದರೆ ಆಕೆಯ ವಚನಗಳೆಲ್ಲ ದೊರೆತಿಲ್ಲ. ಕೇವಲ ೮ ವಚನಗಳು ಮಾತ್ರ ಉಪಲಬ್ಧವಿವೆ. ಹೆಣ್ಣಿಗೆ ಮಕ್ಕಳ ಆಶೆ ಬಹಳ, ಗಂಗಾಂಬಿಕೆಗೆ ಮಕ್ಕಳಾಗಿರಲಿಲ್ಲ. ಆಕೆಯ ಮನದ ದುಃಖವನ್ನು ಹೋಗಲಾಡಿಸಲು, ನಿನ್ನ ಕರದ ಇಷ್ಟಲಿಂಗವೇ ನಿನ್ನ ಮಗು ಎಂದು ಬಸವಣ್ಣನವರು ಸಮಾಧಾನ ಹೇಳಿರಬೇಕು. ನೀಲಾಂಬಿಕೆಗೆ ಒಬ್ಬ ಮಗನಿದ್ದ, ಆತನ ಹೆಸರು ಬಾಲಸಂಗಯ್ಯ ಎಂಬುದನ್ನು ಪುರಾಣಗಳಿಂದ ಅರಿಯಬಹುದಾಗಿದೆ. 'ಶರಣಸತಿ–ಲಿಂಗಪತಿ' ಎಂಬ ತತ್ತ್ವವನ್ನು ಅನುಷ್ಠಾನಗೈದ ಶರಣಸಮೂಹದಲ್ಲಿ, ಲಿಂಗದೇವ ಗಂಗಾಂಬಿಕೆಗೆ ಮಗುವಾಗಿದ್ದಾನೆ.*

> 'ಅವಳ ಕಂದ ಬಾಲಸಂಗ, ನಿನ್ನ ಕಂದ ಚೆನ್ನಲಿಂಗ ಎಂದು ಹೇಳಿದರಮ್ಮಾ ಎನ್ನ ಒಡೆಯರು. ಪೊಲಬಿಲ್ಲದ
> ಕಂದನಿರ್ಪನವಳಿಗೆ ಎನಗೆ ಫಲವಿಲ್ಲ. ಕಂದನಿಲ್ಲ, ಇದೇನೋ ದುಃಖದಿಂದುಗ ಗಂಗಾಪ್ರಿಯ ಕೂಡಲಸಂಗಮದೇವಾ'

ಗಂಗಾಂಬಿಕೆ ತನ್ನ ಮನದಳಲನ್ನು ವಚನರೂಪದಲ್ಲಿ ಹೊರಹೊಮ್ಮಿಸಿದ್ದಾಳೆ. ವಿಶಾಲ ಹೃದಯದ ಗಂಗಾಂಬಿಕೆಯಲ್ಲಿ ಎಂದೂ ಸವತಿ ಮಾತ್ಸರ್ಯ ತಲೆದೋರಲಿಲ್ಲ. ನೀಲಾಂಬಿಕೆಯನ್ನು ಒಡಹುಟ್ಟಿದ ಸೋದರಿಗಿಂತ ಹೆಚ್ಚಾಗಿ ನೋಡಿಕೊಂಡಳು. ಮಕ್ಕಳಿಲ್ಲದ ನೋವನ್ನು ಲಿಂಗಪೂಜೆ, ಗುರುಸೇವೆ, ಶರಣಸಮೂಹದ ಸೇವೆಯಲ್ಲಿ ಆಕೆ ಮರೆಯಲೆತ್ನಿಸಿದ್ದಾಳೆ. ಲಿಂಗಪೂಜೆಯಲ್ಲಿ ಧನ್ಯತೆಯನ್ನು ಪಡೆದಿದ್ದಾಳೆ. ಗಂಗಾಂಬಿಕೆಯ ಪಾಲಿಗೆ ಚೆನ್ನಬಸವಣ್ಣ ಮಮತೆಯ ತಮ್ಮನಾಗಿದ್ದ, ಮಗನಾಗಿದ್ದ. ಗಂಗಾಂಬಿಕೆ ತನ್ನ ಭಾವನೆ, ಅನಿಸಿಕೆಗಳನ್ನೆಲ್ಲ ಚೆನ್ನಬಸವಣ್ಣನಿಗೆ ಹೇಳುತ್ತಿದ್ದಳು. ಒಂದು ಸಲ ಪೂಜೆಗೆ ಕುಳಿತಾಗ ದೈವೀಆನಂದದ ಅನುಭವವಾದುದನ್ನು ಚೆನ್ನಬಸವಣ್ಣನವರಿಗೆ ಹೇಳಿದ್ದಾಳೆ:–

> 'ಇದೇನೊ, ಮಿಂಚುತೋಱುವ ಮೂರುತಿ, ಪುಷ್ಪ ಗುಂಪಿನಲ್ಲಿ ಕಾಣದೆ ಹೋಗಿದೆ.
> ಇದೇನೊ, ಮಿಂಚುತೋಱುವ ಮೂರುತಿ ಕರದಲ್ಲಿಯ ಲಿಂಗದಂತೆ ಉಲುಹದ ಸ್ಥಿತಿ ತೋಱುತ್ತದೆ.
> ಇಂತಪ್ಪ ಮೂರ್ತಿಯ ಕಂಡು ಗಂಗಾಪ್ರಿಯ ಕೂಡಲ ಸಂಗನ ಶರಣನ ಸತಿಯಳು ಧನ್ಯಳಾದಳು ಚೆನ್ನಬಸವಣ್ಣಾ.'

ಮಂತ್ರಿ ಬಸವೇಶ್ವರನ ಬಾಳಿನಲ್ಲಿ ಬಿಡುವೆಂಬುದೇ ಇರಲಿಲ್ಲ. ಸದಾ ಕಾರ್ಯನಿರತನಾಗಿರುತ್ತಿದ್ದನು. ಮಹಾಮನೆಯಲ್ಲಿ ತ್ರಿಕಾಲ ಪೂಜೆ, ಅತಿಥಿ ಅಭ್ಯಾಗತರ ಕ್ಷೇಮ ಚಿಂತನೆ, ಮಂತ್ರಿ ಕಾರ್ಯ, ಅನುಭವಮಂಟಪದ ಕಾರ್ಯಕಲಾಪಗಳಲ್ಲಿ ಮಗ್ನನಾದ ಬಸವೇಶ್ವರನನ್ನು ಕಂಡು ಗಂಗಾಂಬಿಕೆ ಅಚ್ಚರಿಪಡುತ್ತಾಳೆ.

> 'ಸಾಂದ್ರವಾಗಿ ಹರಗಣ ಭಕ್ತಿಯ ಮಾಳ್ಪನೆಂತೋ ಮಾದಲಾಂಬಿಕಾನಂದನನು ?
> ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯನೋಳ್ಪನೆಂತೋ ? ಮಾದರಸನ ಮೋಹದ ಮಗನು ?
> ಸಾಂದ್ರವಾಗಿ ಲಿಂಗಾರ್ಚನೆ, ಲಿಂಗತೃಪ್ತಿ ಅನುಗೆಯ್ವನೆಂತೋ ಗಂಗಾಪ್ರಿಯ ಕೂಡಲಸಂಗನ ಶರಣ ಚನ್ನಾ'

ಬಸವಣ್ಣನ ಕಾಯಕನಿಷ್ಠೆ, ಕಾರ್ಯತತ್ಪರತೆಯನ್ನು ಗಂಗಾಂಬಿಕೆ ಅಚ್ಚರಿಯಿಂದ ಕಂಡಿದ್ದಾಳೆ. ಅವನ ಕಾರ್ಯದಕ್ಷತೆಯನ್ನು ಕಂಡು ಸ್ಫೂರ್ತಿಗೊಂಡು ತಾನೂ ಸದಾ ಕಾರ್ಯನಿರತಳಾಗಿರುತ್ತಿದ್ದಳು.

ನೀಲಾಂಬಿಕೆಯ ಪುತ್ರ ಬಾಲಸಂಗಯ್ಯ ಬಾಲ್ಯದಲ್ಲಿಯೇ ಶಿವಪಾದ ಸೇರಿದ. ಸದಾ ಗಂಗಾಂಬಿಕೆಯ ಬಳಿ ಇರುತ್ತಿದ್ದ ಬಾಲಕನ ಅಗಲುವಿಕೆಯನ್ನು ಸಹಿಸದೆ ಹೀಗೆ ನುಡಿದಿದ್ದಾಳೆ.

> 'ನಮ್ಮಯ್ಯನ ಮನದಲ್ಲಿ, ಮಾತಿನಲ್ಲಿ ಸೂಸುವ ಮೂರ್ತಿ ನೋಡನೋಡುತ್ತ ಬಯಲಾಯಿತ್ತಲ್ಲಾ !
> ಇದು ಅಲ್ಲಮಯ್ಯ ಮಾಡಿದ ಬೇಟ. ಹೋದುದು ನಿಶ್ಚಯವಾದಡೆ ಕರುಳು ಕಳವಳಿಸುತ್ತಿದ್ದವು.
> ಇಂತಪ್ಪ ಕಂದ ಪೋದಡೆಯೂ ಪೋಗಿಲ್ಲ, ಗಂಗಾಪ್ರಿಯ ಕೂಡಲ ಸಂಗನ ಶರಣಳ
> ಮೊಲೆಯನುಂಬುದಕ್ಕೆ ಬಾರ ಕೇಳಾ, ಚನ್ನಬಸವಣ್ಣಾ'

ಮಗುವಿನ ಅಗಲಿಕೆಯ ದುಃಖ ಗಂಗಾಂಬಿಕೆಯ ಮನದಲ್ಲಿ ನೂರಾರು ವಿಚಾರಗಳಿಗೆಡೆಕೊಡುತ್ತದೆ. ಮಗು ನಿಜವಾಗಿ ನಮ್ಮೆಲ್ಲರನ್ನಗಲಿದನೇ ? ಇಲ್ಲವೆ ಅಲ್ಲಮಪ್ರಭುದೇವರು ನಮ್ಮೆಲ್ಲರ ಸತ್ವಪರೀಕ್ಷೆಗೈಯ್ಯಲು ಹೀಗೆ ಮಾಡಿರುವರೇ ? ಇಲ್ಲವೆ ಮಗು ಲಿಂಗಾರ್ಚನೆಗೆ ನೀರು, ಹೂವುಗಳನ್ನು ತರಲು ಹೋಗಿರಬಹುದೇ ಎಂದು ಮಿಡುಕಿದ್ದಾಳೆ.

> 'ಲಿಂಗಕುಸುಮಗಳನ್ನಾಚಾರಲಿಂಗಕ್ಕಿಡಿಯೆ ಚೆನ್ನ! ಲಿಂಗವಸನದಂತರಂಗವಸನ ತರಿಸಿದಿಯೆ ಚೆನ್ನ!
> ಲಿಂಗವರ್ಚನೆಗುದಕವ ತರಪೋದೆಯಾ ಚೆನ್ನ! ಬಸವಯ್ಯನಾಚರಣೆ ಸೊಗಸದಾಗಿ ಹೋದೆಯಾಚೆನ್ನ! ಗಂಗಾಪ್ರಿಯ ಕೂಡಲಸಂಗ ಚೆನ್ನ!

---

* ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಬಸವಣ್ಣನವರ ಪುತ್ರ ಬಾಲಸಂಗಣ್ಣ ಅಥವಾ ಸಿದ್ಧರಸನೆಂಬುವನು ಗಂಗಾಂಬಿಕೆಯ ಮಗನೇ ಎಂದೂ ಹೇಳಲಾಗುತ್ತಿದೆ. (ಸಂ.)

ನೀಲಾಂಬಿಕೆಯ ಮಗುವನ್ನು ತನ್ನ ಮಗುವಿನಂತೆ ಮಮತೆಯಿಂದ ಎತ್ತಿ ಆಡಿಸುತ್ತಿದ್ದ ಗಂಗಾಂಬಿಕೆಗೆ ಮಗುವಿನ ಅಗಲಿಕೆಯ ನೋವು ಸಹಿಸದಂತಾಗುವುದು. ಬಸವಣ್ಣ ತನ್ನ ಕೆಲಸಕಾರ್ಯಗಳಲ್ಲಿ ಮಗುವನ್ನು ಆಡಿಸಲಿಲ್ಲವೆಂದು ಆ ಮಗುವಿಗೆ ಸೊಗಸೆನಿಸ ಲಿಲ್ಲವೇ ಎಂದುಕೊಂಡಿದ್ದಾಳೆ.

'ದಾಸ–ದುಗ್ಗಳೆಯರಂತೆ' ಆದರ್ಶ ದಾಂಪತ್ಯ ತಮ್ಮದಾಗಬೇಕೆಂದು ಆಶಿಸಿದ ಅಣ್ಣ ಬಸವಣ್ಣನ ಕನಸು ನನಸಾಗು ವಂತೆ ಗಂಗಾಬಿಕೆ ಮಾಡಿದಳು. ತನ್ನ ಮನದೊಲವನ್ನರಿತು ಬಾಳುತ್ತಿರುವ ಗಂಗಾಂಬಿಕೆ ನೀಲಾಂಬಿಕೆಯರನ್ನು ಕಂಡ ಬಸವಣ್ಣ 'ಸಂಸಾರದಿಂದಲೇ ಸದ್ಗತಿ' ಎಂದು ಸಾರಿದನು. ಬಸವಣ್ಣನ ಆಧ್ಯಾತ್ಮಿಕ ಜೀವನ ಉನ್ನತಿಯ ಮಾರ್ಗದಲ್ಲಿ ನಡೆದಿತ್ತು. ಮಹಾ ದಾಸೋಹದ ಕಾರ್ಯದಲ್ಲಿ ಅನುಭವ ಮಂಟಪದ ಅನುಭಾವಗೋಷ್ಠಿಯಲ್ಲಿ, ಹರಪೂಜೆ, ಗುರುಸೇವೆಯಲ್ಲಿ ಗಂಗಾಂಬಿಕೆ ನೀಲಾಂಬಿಕೆಯರು ಬಸವಣ್ಣನವರ ಮನದಿಂಗಿತವನ್ನರಿತು ಸಹಾಯ ಸಹಕಾರವನ್ನೀಯುತ್ತಿದ್ದರು. ಈ ಭಕ್ತಿವನಿತೆಯರನ್ನು ಕಂಡ ಬಸವಣ್ಣನವರು 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ನಿರ್ಣಯಕ್ಕೆ ಬರುವಂತಾಯಿತು. ಬಸವಣ್ಣನ ಪಾಲಿಗೆ ಈ ಪತ್ನಿಯರು 'ನಾರಿ ನರಕಕೆ ದಾರಿ' ಯಾಗಲಿಲ್ಲ 'ನಾರಿ ಸ್ವರ್ಗಕೆ ದಾರಿ' ಯಾದರು. ಅಕ್ಕನಾಗಲಾಂಬಿಕೆಯ ಶಿವ ಯೋಗಸಾಧನೆ, ನೀಲಾಂಬಿಕೆಯ ದಾಸೋಹಂಭಾವ, ಗಂಗಾಂಬಿಕೆಯ ಕಾಯಕನಿಷ್ಠೆ, ದೈವೀಶ್ರದ್ಧೆಗಳನ್ನು ಕಂಡ ಬಸವಣ್ಣ ನವರು ತಮ್ಮ ಹೊಸ ಸಮಾಜ ರಚನೆಯಲ್ಲಿ ಹೆಣ್ಣು ಮಕ್ಕಳಿಗೆ ಗೌರವದ ಸ್ಥಾನ ಕಲ್ಪಿಸಿದರು. ಧಾರ್ಮಿಕ ಜೀವನದಲ್ಲಿ, ಹೆಣ್ಣು ಗಂಡು ಎಂಬ ಭೇದವಿಲ್ಲ; ಇಬ್ಬರೂ ಲಿಂಗಧಾರಿಗಳಾಗಬಹುದು. ಇಬ್ಬರೂ ದೀಕ್ಷಾಬದ್ಧರಾಗಿ, ಕಾಯಕನಿರತರಾಗಿರಬಹುದು, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ್ ಮಹದೇವಿ ಎಂಬ ನಿಲುವು ಅಂದಿನ ಶರಣ ಸಮೂಹದಲ್ಲಿ ಮೂಡುವಂತೆ ಬಸವಣ್ಣನ ವರು ಶ್ರಮಿಸಿದರು.

ಹರಳಯ್ಯ–ಮಧುವರಸರ ಮಕ್ಕಳ ಮದುವೆಯಿಂದಾಗಿ ವರ್ಣಸಂಕರವಾಯಿತು ಎಂದು ಸನಾತನ ಧರ್ಮದವರು ಕೆರ ಳಿದರು. ಕೊಂಡೆಯರ ಮಾತುಕೇಳಿ ಬಿಜ್ಜಳ ಹರಳಯ್ಯ–ಮಧುವರಸರಿಗೆ ಎಳೆಹೂಟೆ ಶಿಕ್ಷೆಯನ್ನಿತ್ತು ಕೊಲ್ಲಿಸಿದನು. ಈ ದಾರುಣ ಘಟನೆಯನ್ನು ಕಣ್ಣಿನಿಂದ ನೋಡಲಾರದೆ ಮೃದುಹೃದಯದ ಬಸವಣ್ಣ ಕಲ್ಯಾಣವನ್ನು ತೊರೆದು ಕೂಡಲಸಂಗಮ ಕ್ಷೇತ್ರಕ್ಕೆ ಹೋದನು. ಚಾಲುಕ್ಯರ ಅನುಯಾಯಿಗಳು ಬಿಜ್ಜಳನನ್ನು ಇರಿದು ಕೊಂದರು. ಇದರಿಂದ ಸಿಟ್ಟಿಗೆದ್ದ ಬಿಜ್ಜಳನ ಮಗ, ಅಳಿಯ ಹಾಗೂ ಸೈನಿಕರು ಶರಣರೇ ಬಿಜ್ಜಳನನ್ನು ಕೊಂದರೆಂದು ಭಾವಿಸಿದರು. ಅದಕ್ಕಾಗಿ ಶರಣರನ್ನು ಕಂಡಲ್ಲಿ ಹಿಂಸಿಸುವುದು, ಕೊಲ್ಲುವುದು ನಡೆಯಿತು. ಬಿಜ್ಜಳನ ದುರ್ಮರಣ, ಶರಣರಿಗೊದಗಿದ ಹಿಂಸೆಯನ್ನು ಕೇಳಿ ಬಸವಣ್ಣನವರು ಸಂಗಮನಾಥನ ಸಾನ್ನಿಧ್ಯದಲ್ಲಿ ಐಕ್ಯರಾಗಲು ನಿರ್ಧರಿಸಿದರು. ಬಳಿಯಿದ್ದ ಅಪ್ಪಣ್ಣನವರಿಗೆ ಹೇಳಿದರು :

'ಅಪ್ಪಣ್ಣ ನಾನು ಬಂದ ಮಣಿಹ ಪೂರೈಸಿತು. ಪ್ರಭುದೇವರ ಹೇಳಿಕೆಯಂತೆ ನಾನಿಲ್ಲಿಯೇ ಐಕ್ಯನಾಗುವೆ, ನೀಲಾಂಬಿಕೆ ಗಂಗಾಂಬಿಕೆಯರಿಗೆ ಇಲ್ಲಿಗೆ ಬರಲು ತಿಳಿಸಿ ಬಾ,' ಎಂದರು. ಅಪ್ಪಣ್ಣ ಕಲ್ಯಾಣಕ್ಕೆ ಬಂದು ಈ ಸಮಾಚಾರವನ್ನು ಇಬ್ಬರಿಗೂ ತಿಳಿಸಿದ. 'ಇಲ್ಲಿಲ್ಲದ ಸಂಗಯ್ಯ ಅಲ್ಲಿಹನೇ ? ಸಂಗಮನಾಥ ಹಾಗೂ ಬಸವೇಶ್ವರರು ನನ್ನ ಇಷ್ಟಲಿಂಗದಲ್ಲಿಯೇ ಇದ್ದಾರೆ,' ಎಂದು ನೀಲಾಂಬಿಕೆ ತನ್ನ ಕರದಿಷ್ಟಲಿಂಗದಲ್ಲಿ ದೃಷ್ಟಿಯನ್ನಿರಿಸಿ ಲಿಂಗೈಕ್ಯಳಾದಳು. ಇದರಿಂದಾಗಿ ನಿಜಭಕ್ತಿಯ ನೀಲಾಂಬಿಕೆ ಲಿಂಗ ಪ್ರಾಣೆ ಎಂದು ಪ್ರಸಿದ್ಧಳಾದಳು.

ಆ ವೇಳೆಗೆ ಕಲ್ಯಾಣದ ಶರಣಸಮೂಹ ಚೆನ್ನಬಸವಣ್ಣನ ನೇತೃತ್ವದಲ್ಲಿ ಉಳುವೆಗೆ ಹೊರಟಿದ್ದಿತು. ಬಸವಣ್ಣನ ಸಂದೇಶ ಬಂದೊಡನೆ, ಗಂಗಾಂಬಿಕೆ ತನ್ನ ಗುರುಗಳಾದ ಘನಲಿಂಗ ರುದ್ರಮುನಿಗಳ ದರ್ಶನಕ್ಕೆ ಮರಿದೇವರ ಗುಡ್ಡಕ್ಕೆ ಹೋದಳು, ಗುರುಗಳು ಹೇಳಿದರು:

'ತಾಯಿ ಗಂಗಾಂಬಿಕಾ, ನಿನ್ನ ನೆರವು ಈಗ ನಾಗಲಾಂಬಿಕೆ ಚೆನ್ನಬಸವಣ್ಣನವರಿಗೆ ಬೇಕಾಗಿದೆ. ಬಸವಣ್ಣ ಪ್ರಾರಂಭಿಸಿದ ವೀರಶೈವ ಧರ್ಮರಕ್ಷಣೆ, ವಚನಸಂಗ್ರಹದ ತಾಡೋಲೆಗಳ ರಕ್ಷಣೆ, ಶರಣಸಮೂಹದ ರಕ್ಷಣೆಯ ಹೊಣೆಗಾರಿಕೆ ನಮ್ಮೆಲ್ಲರ ಮೇಲಿದೆ. ಯುದ್ಧವಿದ್ಯೆಯಲ್ಲಿ ಬಲ್ಲಿದಳಾದ ನಿನ್ನ ನೆರವು ಈಗ ಅವಶ್ಯವಾಗಿದೆ. ಬಾಲ್ಯದಿಂದಲೂ ಎತ್ತಿ ಆಡಿಸಿದ ಬಸವಣ್ಣ ನಿಲ್ಲದೆ, ಮಗಳಂತೆ ಸಲುಹಿದ ನೀಲಾಂಬಿಕೆಯಿಲ್ಲದೆ, ಅಕ್ಕನಾಗಲಾಂಬಿಕೆ ದುಃಖ ಭರಿತಳಾಗಿದ್ದಾಳೆ. ನೀನು ಆಕೆಯ ಬಳಿ ಇದ್ದರೆ ಆಕೆಗೆ ಎಷ್ಟೋ ಸಮಾಧಾನ-ತಾಯಿ'! ಎಂದು ಹೇಳಲು ಗುರುಪ್ರಾಣೆ ಗಂಗಾಂಬಿಕೆ ಶರಣರೊಂದಿಗೆ ಉಳುವೆಗೆ ಹೋಗಲು ಸಿದ್ಧ ಳಾದಳು.

ಶರಣರು ಕಲ್ಯಾಣವನ್ನು ತೊರೆದು ಹೋಗುವ ಮೊದಲು ಅವರೆಲ್ಲರ ದರ್ಶನ ಪಡೆಯಲು ಸಿದ್ಧರಾಮೇಶ್ವರ ಬರುವ ದಾಗಿ ಹೇಳಿದ್ದ ; ಸೊನ್ನಲಿಗೆಯಿಂದ ಕಲ್ಯಾಣಕ್ಕೆ ಬಂದ. ಅಂದು ರಾತ್ರಿ ಕಲ್ಯಾಣದಲ್ಲಿದ್ದ ಶರಣರಿಗೆಲ್ಲ ಮಹಾಮನೆಯಲ್ಲಿ ಗಣ ಪರ್ವವನ್ನೇರ್ಪಡಿಸಿದರು. ಗಂಗಾಂಬಿಕೆ ಸಿದ್ಧರಾಮೇಶ್ವರರ ಪೂಜೆಗೆ ಸಿದ್ಧಗೊಳಿಸಿ ಪಾದಪೂಜೆ ಮಾಡಿದಳು.

'ನೇತ್ರಮಧ್ಯದಲ್ಲಿ ಸೂಸುವ ತ್ರಿಣೇತ್ರನರೂಪವೆ ಸಿದ್ಧರಾಮಯ್ಯನಾದ; ಜಿಹ್ವೆಯ ಮಧ್ಯದಲ್ಲಿ ಸೂಸುವ ರುಚಿಯೆ ಸಿದ್ಧರಾಮಯ್ಯನಾದ ; ಶ್ರೋತ್ರದಲ್ಲಿ ತುಂಬಿ ಪೂರೈಸುವ ಶಬ್ದವೆ ಸಿದ್ಧರಾಮಯ್ಯನಾದ; ಪ್ರಾಣದಲ್ಲಿ ತುಂಬಿ ತುಳುಕುವ ಮೂರ್ತಿಯೆ ಸಿದ್ಧರಾಮಯ್ಯನಾದ ; ತ್ವಕ್ಕಿನಲ್ಲಿ ಅಜೀವ ಮೂರ್ತಿಯೆ ಅಚ್ಚೊತ್ತಿದ ಸಿದ್ಧರಾಮಯ್ಯನಾದ. ಇಂತಪ್ಪ ಪರಶಿವಮೂರ್ತಿ ಸಿದ್ಧರಾಮಯ್ಯನ ಪಾದೋದಕವ ಕೊಂಡು ಪರವಸ್ತು ನಾನಾದೆ, ಗಂಗಾಪ್ರಿಯ ಕೂಡಲಸಂಗಮದೇವಾ'

ಎಂದು ಗಂಗಾಂಬಿಕೆ ಪ್ರಾರ್ಥಿಸುತ್ತಾಳೆ. ನೀಲಾಂಬಿಕೆಯ ಅಗಲಿಕೆಯ ದುಃಖವನ್ನು ನುಂಗಿಕೊಳ್ಳುತ್ತಾಳೆ. ರಾಣಿವಾಸದೊಂದಿಗೆ ಸಿದ್ಧರಾಮೇಶ್ವರರನ್ನು ಸ್ವಾಗತಿಸಿ ಪೂಜಿಸುತ್ತಾಳೆ. ಗಂಗಾಂಬಿಕೆಯ ಧೈರ್ಯಸ್ಥೈರ್ಯಗಳನ್ನು ಕಂಡು ಸಿದ್ಧರಾಮೇಶ್ವರರು ಬೆರಗಾಗುತ್ತಾರೆ, ಆ ತಾಯಿಯ ಅತಿಥಿಸತ್ಕಾರ ಮನೋಭಾವಕ್ಕೆ ಶಿರಬಾಗಿ ಹೀಗೆ ಹೇಳುತ್ತಾರೆ:–

'ಗಂಗಾಂಬಿಕೆಯರು ಮುಂತಾದ ಸಕಲ ಪುರಾತನರ ರಾಣಿವಾಸದ ತಾಯಿಗಳಿರಾ, ನಿಮ್ಮ ಹೃದಯದಲ್ಲಿ, ನಮ್ಮ ಮೇಲಣ ಕೃಪೆಯಿಂದ ಸಿದ್ಧರಾಮಯ್ಯ ಎಂದು ಹರಿಸಿಕೊಂಡಾಡಿರವ್ವಾ ಗಂಗಾಂಬಿಕಾ ತಾಯಿ, ಭವಾನಿ' ಎಂದು ಪ್ರೀತಿಯಿಂದ ಸ್ತುತಿಸಿ ನಮಸ್ಕರಿಸುವರು.

ಗಂಗಾಂಬಿಕೆ ಹೇಳುವಳು : 'ಎಲೆ ಸಿದ್ಧರಾಮೇಶ್ವರ ಲಿಂಗವೇ ಎನ್ನ ಮೇಲಣ ಕರುಣದಿಂ ದೇವರು ಮಹಾ ಬಳಲಿ ಚಿತ್ತೈಸಿದಿರಿ, ಒಂದು ಕ್ಷಣ ಮೂರ್ತಗೊಂಡು,ವಿಶ್ರಮಿಸಿಕೊಂಡು ಚಿತ್ತೈಸುವು'ದೆಂದು ಬಿನ್ನಹಂಮಾಡಿಕೊಂಡು ಶಿವಾರ್ಚನೆಯಂ ಮಾಡಿಸಿ, ಕದಳಿಪಣ್ಣು ಸಕ್ಕರೆ ಹಾಗೂ ತುಪ್ಪ ಎಡೆಮಾಡಿ ಆರೋಗಣೆ ಮಾಡಿಸಿ ನಮಸ್ಕರಿಸಿದಳು.

'ಸಿದ್ಧರಾಮಯ್ಯ, ಶರಣರ ಸೇವೆಯನ್ನಲ್ಲದೆ ಮತ್ತೇನನರಿಯದಂತಿರಿಸಯ್ಯಾ ಗುರುವೆ' ಎಂದು ಗಂಗಾಂಬಿಕೆ ಪ್ರಾರ್ಥಿಸಿದಳು. ಅದನ್ನು ಕಂಡು ಸಿದ್ಧರಾಮೇಶ್ವರರು ಇಂತು ನುಡಿದರು :—

'ಭವಭವಾಂತರದಲ್ಲಿ ಬಂದರೂ, ಇಂತಹ ಗಂಗಾಂಬಿಕೆಯರ ಅಮೃತಮಯವಾದ ಶ್ರೀ ಹಸ್ತದ ಭಿಕ್ಷವನೆ ಸಲಿಸುವಂತೆ ಮಾಡಯ್ಯ, ಕಪಿಲಸಿದ್ಧಮಲ್ಲಿಕಾರ್ಜುನಲಿಂಗವೇ' ಎನ್ನುತ್ತ ಸಿದ್ಧರಾಮೇಶ್ವರರು ಗಂಗಾಂಬಿಕೆ ಹಾಗೂ ಶರಣಸಮೂಹಕ್ಕೆ ವಂದಿಸಿ ಸೊನ್ನಲಿಗೆಗೆ ಹೋಗುತ್ತಾರೆ. ಎಂಬುದನ್ನು ಕಾಲಜ್ಞಾನದ ವಚನಗಳಿಂದ ಅರಿಯಬಹುದಾಗಿದೆ.

ಆ ದಿನ ಬೆಳಗಾಗುವುದರಲ್ಲಿ, ಚೆನ್ನಬಸವಣ್ಣ ಹಾಗೂ ಮಡಿವಾಳ ಮಾಚಿದೇವರ ನೇತೃತ್ವದಲ್ಲಿ ಶರಣ ಸಮೂಹ ಉಳಿವೆಯತ್ತ ಪಯಣ ಕೈಕೊಂಡರು. ಬಾಲ್ಯದಿಂದಲೂ ಜೊತೆಯಾಗಿ ಬೆಳೆದ ನೀಲಾಂಬಿಕೆಯು ಅಗಲಿ ಹೋದುದನ್ನು ಗಂಗಾಂಬಿಕೆ ಕಣ್ಣಾರೆ ಕಂಡು ದುಃಖಿಸುತ್ತಾಳೆ. ಮುಂದೆ ಕೆಲಕಾಲದಲ್ಲಿಯೆ ಬಸವೇಶ್ವರರೂ ಐಕ್ಯರಾದ ದಾರುಣ ವಾರ್ತೆಯಿಂದ ಗಂಗಾಂಬಿಕೆ ದುಃಖತಪ್ತಳಾಗುವಳು. ಸುತ್ತಲೂ ಬಿಜ್ಜಳನ ಸಶಸ್ತ್ರ ಸೈನಿಕರು ಶರಣರನ್ನು ಕೊಲ್ಲಲು ಸಿದ್ಧರಾಗಿ, ಅವರನ್ನು ಬೆನ್ನಟ್ಟುವರು. ಇಂಥ ಕಠಿಣ ಪರಿಸ್ಥಿತಿಯಲ್ಲಿ ಅಳುತ್ತ ಕೂಡ್ರಲು ಸಹ ಗಂಗಾಂಬಿಕೆಗೆ ಸಮಯವಿರುವದಿಲ್ಲ. ಬಸವಾದಿ ಪ್ರಮಥರು ರಚಿಸಿದ ವಚನ ಭಂಡಾರವನ್ನು ಸುರಕ್ಷಿತಗೊಳಿಸಿಡುವುದು ಶರಣರೆಲ್ಲರ ಪ್ರಥಮ ಕರ್ತವ್ಯವಾಗಿತ್ತು. ಬಸವಾದಿ ಪ್ರಮಥರು ಪ್ರಾರಂಭಿಸಿದ ಹೊಸ ಸಮಾಜದ ಒಂದಂಗವಾಗಿ ಬಾಳಲು, ಆಧ್ಯಾತ್ಮಜ್ಞಾನವನ್ನು ಪಡೆಯಲು ಭಾರತದ ನಾಲ್ಕೂ ನಿಟ್ಟಿನಿಂದಬಂದು, ಮಹಾಮನೆಯನ್ನಾಶ್ರಯಿಸಿದ ಸಾವಿರಾರು ಜನರಿಗೆ ಅನ್ನಹಾರವನ್ನೊದಗಿಸುವ ಕೆಲಸ ಹಾಗೂ ಅವರ ಪ್ರಾಣರಕ್ಷಣೆಯ ಕೆಲಸವನ್ನು ಚೆನ್ನಬಸವಣ್ಣ ಮಾಡಬೇಕಾಗಿತ್ತು. ರೇವಣಸಿದ್ಧೇಶ್ವರರ ಮಗ ಘನಲಿಂಗ ರುದ್ರಮುನಿಗಳು ಈ ಸಮಯದಲ್ಲಿ ಹಿರಿಯ ಪಾತ್ರವಹಿಸಿದರು. ಅವರು ಗಂಗಾಂಬಿಕೆಯ ದೀಕ್ಷಾಗುರುಗಳು; ಗುರುಗಳು ಗಂಗಾಂಬಿಕೆಗೆ ಹೇಳಿದರು: 'ತಾಯಿ, ಪತಿಯೊಂದಿಗೆ ಐಕ್ಯಳಾಗುವುದಕ್ಕಿಂತ, ಆತ ಪ್ರಾರಂಭಿಸಿದ ಹೊಸ ಸಮಾಜದ ರಕ್ಷಕಳಾಗು, ನೀನು ಬಾಲ್ಯದಲ್ಲಿ ಮಂತ್ರಿಯ ಮಗಳಾಗಿ ಕಲಿತ ಯುದ್ಧವಿದ್ಯೆಯ ಉಪಯೋಗ ಈಗ ಶರಣರಿಗೆಲ್ಲ ಆಗಬೇಕು. ಅಣ್ಣ ಹೇಳಿದ 'ಕಾಯಕವೇ ಕೈಲಾಸ' ತತ್ತ್ವದಂತೆ ನೀನೀಗ ನಡೆಯಬೇಕು'. ಎಂದು ಆಶೀರ್ವದಿಸಿದರು. ಚೆನ್ನಬಸವಣ್ಣ,ಅಕ್ಕನಾಗಲಾಂಬಿಕೆಯರು. ಗಂಗಾಂಬಿಕೆಗೆ ಸಾಂತ್ವನ ನೀಡಿದರು.

ಗಂಗಾಂಬಿಕೆಯದು ಎತ್ತರದ ನಿಲುವು;ಆ ನಿಲುವಿಗೆ ತಕ್ಕ ಮೈಮಾಟ,ಗೌರವರ್ಣ,ಯೋಗಸಾಧನೆಯಿಂದ ನಕ್ಷತ್ರದಂತೆ ಮಿಂಚುವ ಕಣ್ಣುಗಳು, ಸತ್ಯನಿಷ್ಠುರತೆಯ ಸಾಕಾರಮೂರ್ತಿಯಂತಿದ್ದಳು ಗಂಗಾಂಬಿಕೆ. ಮಂತ್ರಿಪುತ್ರಿಯಾದ ಗಂಗಾಂಬಿಕೆಯ ಕೈ ವಜ್ರಕಂಕಣಗಳಿಂದ ಶೋಭಿಸುತ್ತಿತ್ತು. ಭಕ್ತಿಭಂಡಾರಿ ಬಸವಣ್ಣನ ಕೈವಿಡಿದ ಮೇಲೆ ಆಕೆ ರುದ್ರಾಕ್ಷಿಕಂಕಣ ಧರಿಸುತ್ತಿದ್ದಳು. ಶಿವಶರಣರ ಪೂಜೆಗೆ ಹೂವು ಪತ್ರೆಗಳನ್ನಾಯ್ದು, ಪೂಜೆಗೆ ಸಿದ್ಧಗೊಳಿಸುತ್ತಿದ್ದ ಗಂಗಾಂಬಿಕೆಯ ಕೈಗಳು ಖಡ್ಗ ಹಿಡಿಯಬೇಕಾಯಿತು. ಲೆಕ್ಕಣಿಕೆ ಹಿಡಿದು ವಚನ ರಚಿಸಿದ ಕೈ ಧರ್ಮರಕ್ಷಣೆಗಾಗಿ ಖಡ್ಗಧಾರಿಯಾಗಬೇಕಾಯಿತು. ನಿತ್ಯ ಸಾವಿರಾರು ಜನ ಶರಣರ ಪೂಜೆ ಪ್ರಸಾದಗಳ ವ್ಯವಸ್ಥೆಯನ್ನು ನಾಗಲಾಂಬಿಕೆ, ಗಂಗಾಂಬಿಕೆಯರು ಮಾಡುತ್ತಿದ್ದರು. ತೊರಗಲ್ಲ ಮಾರ್ಗವಾಗಿ ಕಾತರವಳ್ಳಿಯವರೆಗೆ ಶರಣರು ಸಾಗಿದಾಗ ಅಳಿಯ ಬಿಜ್ಜಳನ ಸೈನ್ಯ ಇವರನ್ನು ಬೆಂಬತ್ತಿ ಬಂದಿತು. ಶೂರಳಾದ ಗಂಗಾಂಬಿಕೆ ಮಾರ್ಗದಲ್ಲಿ ಶರಣರಿಗೆ ಯುದ್ಧವಿದ್ಯೆಯನ್ನೂ, ಆತ್ಮರಕ್ಷಣೆಯ ವಿಧಾನವನ್ನೂ ಕಲಿಸುತ್ತಿದ್ದಳು.

ಕಾದರವಳ್ಳಿಯಲ್ಲಿ ಶರಣ ಸಮೂಹಕ್ಕೂ, ಅಳಿಯ ಬಿಜ್ಜಳನ ಸೈನಿಕರಿಗೂ ಘನಘೋರ ಯುದ್ಧವಾಯಿತು. ಮಡಿವಾಳ ಮಾಚಿದೇವ ಕಾಲಭೈರವನಂತೆ ವೈರಿಗಳನ್ನು ಚಂಡಾಡಿದ. ಶರಣರು ಅಳಿಯ ಬಿಜ್ಜಳನನ್ನು ಕೈಸೆರೆ ಹಿಡಿದರು. ಗಂಗಾಂಬಿಕೆ, ನಾಗಲಾಂಬಿಕೆಯರು ಮಾಚಿದೇವನಿಗೆ ಹೇಳಿ ಅಳಿಯ ಬಿಜ್ಜಳನಿಗೆ ಪ್ರಾಣದಾನ ಕೊಡಿಸಿದರು. ಆಗ ಗಂಗಾಂಬಿಕೆ ಮಾಚಿದೇವನಿಗೆ ಹೇಳಿದ ವಚನ ಇಂತಿದೆ :—

> ಮಡಿವಾಳಣ್ಣಂಗ್ಯಾಕೆ ಬಾರದವ್ವಾ ಕರುಣ ರಸ, ಮಡಿವಾಳಣ್ಣಂಗ್ಯಾಕೆ ಬಾರದವ್ವ ಶೌರ್ಯರಸ, ಮಡಿವಾಳಣ್ಣಂಗ್ಯಾಕೆ ಬಾರದವ್ವ ಅದ್ಭುತರಸ, ಮಡಿವಾಳಣ್ಣಂಗ್ಯಾಕೆ ಬಾರದವ್ವ ಗಂಗಾಪ್ರಿಯ ಕೂಡಲ ಸಂಗನ ಶರಣ ಪ್ರಾಣದಾನರಸ ಸಿದ್ಧರಾಮಯ್ಯ'

ಕಾದರೊಳ್ಳಿಯ ಯುದ್ಧದಲ್ಲಿ ಗಂಗಾಂಬಿಕೆಯೂ ಗಾಯಗೊಂಡಿರಬೇಕು. ಅದುವರೆಗೆ ಗಂಗಾಂಬಿಕೆ ಯುದ್ಧದಲ್ಲಿ ಗಾಯಗೊಂಡವರ ಆರೈಕೆಯನ್ನು ಶ್ರದ್ಧಾಭಕ್ತಿಯಿಂದ ಮಾಡುತ್ತಿದ್ದಳು. ಕಾದರೊಳ್ಳಿಯಿಂದ ಧಾರವಾಡ ಮಾರ್ಗವಾಗಿ ಚೆನ್ನಬಸವಣ್ಣನೊಂದಿಗೆ ಶರಣ ಸಮೂಹ ಉಳಿವೆಯತ್ತ ಸಾಗಿತ್ತು. ಆಗ ಮುಗಟಖಾನ ಹುಬ್ಬಳ್ಳಿಯ ಬಳಿ ಮಲಪ್ರಭಾನದೀತೀರದಲ್ಲಿ ಗಂಗಾಂಬಿಕೆ ಐಕ್ಯಳಾಗುವಳು. ನದೀ ಮಧ್ಯದಲ್ಲಿ ಗಂಗಮ್ಮನ ಗುಡಿ ಇಂದಿಗೂ ಇದೆ. ಈ ಗುಡಿ ಗಂಗಾಂಬಿಕೆಯ ಸಮಾಧಿ ಎಂದು ಪೂಜ್ಯ ಹಳಕಟ್ಟಿಯವರು ಶಿವಶರಣೆಯರ ಚರಿತ್ರೆಯಲ್ಲಿ ಬರೆದಿದ್ದಾರೆ.

ಗಂಗಾಂಬಿಕೆ ಬಲದೇವ ಮಂತ್ರಿಯ ಅಕ್ಕರೆಯ ಮಗಳಾಗಿ ಬೆಳೆದಳು. ಬಸವಣ್ಣನವರ ಪತ್ನಿಯಾಗಿ ಆದರ್ಶಸತಿ ಎನ್ನಿಸಿಕೊಂಡಳು. ಮಹಾಮನೆಯ ಕಾರ್ಯ ಅಚ್ಚುಕಟ್ಟುತನದಿಂದ ನಡೆಯುವಂತೆ ಪರಿಶ್ರಮಿಸಿದಳು. ಅನುಭವ ಮಂಟಪದ ಕಾರ್ಯಕಲಾಪಗಳು ವ್ಯವಸ್ಥಿತಿ ರೀತಿಯಿಂದ ಕ್ರಮಬದ್ಧವಾಗಿ ನಡೆಯುವಲ್ಲಿ ಚೆನ್ನಬಸವಣ್ಣನವರಿಗೆ ಸಹಾಯಕಳಾಗಿದ್ದಳು. ಕಲ್ಯಾಣಕ್ರಾಂತಿಯ ನಂತರ ಶರಣರಿಗೊದಗಿದ ಕಠಿಣ ಪರಿಸ್ಥಿತಿಯಲ್ಲಿ ಮಾರ್ಗದರ್ಶಕಳಾದಳು. ಭಕ್ತಿವನಿತೆಯಾದಳು, ಮುಕ್ತ್ಯಂಗನೆಯಾದಳು. ವೀರಯೋಧೆಯಾದಳು. ತನು, ಮನ, ಧನದಿಂದ ಶರಣಸಮಾಜದ ಹಿತರಕ್ಷಣೆಗೈದ ಗಂಗಾಂಬಿಕೆಯ ವ್ಯಕ್ತಿತ್ವ ಹಿರಿದಾದುದು. ಗಂಗಾಂಬಿಕೆಯ ವಚನದ ಅಂಕಿತ 'ಗಂಗಾಪ್ರಿಯ ಕೂಡಲಸಂಗಮದೇವ' ಎಂದಿದೆ. ಗಂಗಾಂಬಿಕೆಯ ಸಮಾಧಿ ಮಲಪ್ರಭಾ ನದಿಯಲ್ಲಿದೆ. ನೀಲಾಂಬಿಕೆಯ ಸಮಾಧಿ ಕೃಷ್ಣಾತೀರದಲ್ಲಿದೆ. ಬಸವೇಶ್ವರರ ಸಮಾಧಿ ಮಲಪ್ರಭಾ–ಕೃಷ್ಣಾನದಿಗಳ ಸಂಗಮದಲ್ಲಿದೆ. ಈ ಮೂರು ಮಹಾಚೇತನಗಳ ಜೀವನದ ಗುರಿ ಒಂದೇ ಎಂಬುದನ್ನು ಅವರ ಸಮಾಧಿಯ ಸ್ಥಳಗಳು ಇಂದಿಗೂ ಸಾರಿ ಹೇಳುತ್ತಿವೆ.

## ಬಸವಣ್ಣನವರ ಆಧ್ಯಾತ್ಮ ಸಂಗಾತಿ ನೀಲಲೋಚನೆ

**—ಸಿ. ಕೆ. ಪರಶುರಾಮಯ್ಯ**

ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯಕ್ಕೆ, ಆಧ್ಯಾತ್ಮಿಕ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿದ ಮಹತ್ವದ ಘಟ್ಟ. ಕನ್ನಡ ಸಾಹಿತ್ಯವು ಮಾರ್ಗಕಾವ್ಯದಿಂದ ದೇಸಿ ಕಾವ್ಯಕ್ಕೆ ಅಡಿಇಟ್ಟು ಅಪೂರ್ವ ಕೃತಿ ರಚನೆಗೆ ಪ್ರೇರಣೆ ನೀಡಿದ ಸಂಧಿಕಾಲ. ಇದು ನೂರಾರು ಶಿವಶರಣ ಶರಣೆಯರು ಮತ, ತತ್ತ್ವ, ನೀತಿ, ಅನುಭಾವಗಳಿಗೆ ಅಭಿವ್ಯಕ್ತಿ ನೀಡಲು ಅವಕಾಶ ಕಲ್ಪಿಸಿದ ಸ್ವಾತಂತ್ರ್ಯಯುಗ. ಈ ಅಭಿವ್ಯಕ್ತಿಸ್ವಾತಂತ್ರ್ಯದ ಪರಿಣಾಮವಾಗಿ ವ್ಯಕ್ತಿಯ ಸ್ವಾನುಭವದ ಸುಂದರಾಭಿವ್ಯಕ್ತಿಯಾದ ಅಸಂಖ್ಯಾತ ವಚನಗಳು ಕನ್ನಡಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದುವು. ಪರಿಣಾಮವಾಗಿ ಭಾವಗೀತಾತ್ಮಕ ಲಕ್ಷಣದಿಂದ ಕೂಡಿದ ಅನುಭಾವ ಗದ್ಯರೂಪದ ವಚನ ಪ್ರಾಕಾರ ಕನ್ನಡದಲ್ಲಿ ಪ್ರಚಲಿತವಾಯಿತು. ಹೀಗೆ ವಚನಗಳನ್ನು ರಚಿಸಿದವರಲ್ಲಿ ಪಂಡಿತರಲ್ಲದೆ, ಅರಸರೂ, ಮಂತ್ರಿಗಳೂ, ಮಹಿಳೆಯರೂ ಸೇರಿದ್ದಾರೆ. ಜೊತೆಗೆ ಆಧ್ಯಾತ್ಮದ ಅನುಭವವುಳ್ಳ ಸಾಮಾನ್ಯ ಜನರೂ ಆಣಿಮುತ್ತಿನಂತಹ ವಚನಗಳನ್ನು ನೀಡಿದ್ದಾರೆ.

ಹನ್ನೆರಡನೆಯ ಶತಮಾನದ ವೀರಶೈವ ವಚನಕಾರ್ತಿಯರಲ್ಲಿ ನೀಲಲೋಚನೆಯೂ ಒಬ್ಬಳು. ಈ ವಚನಕಾರ್ತಿಯ ವಿಚಾರವಾಗಿ ತಿಳಿದಿರುವುದು ಸ್ವಲ್ಪ; ತಿಳಿಯಬೇಕಾಗಿರುವುದು ಬಹಳ.

ಕವಿಚರಿತ್ರೆಕಾರರು 'ನೀಲಮ್ಮ–೧೧೬೦. ಈಕೆ ಪ್ರಸಾದ ಸಂಪಾದನೆಯನ್ನೂ ಒಂದು ಕಾಲಜ್ಞಾನವನ್ನೂ ಬರೆದಿರುವಂತೆ ತಿಳಿದು ಬರುತ್ತದೆ. ಇವಳು ವೀರಶೈವ ಕವಿ ಬಸವನ ಸೋದರಮಾವನಾದ ಬಲದೇವ ಮಂತ್ರಿಯ ತಮ್ಮನಾದ ಸಿದ್ಧಣ್ಣ ಮಂತ್ರಿಯ ಮಗಳು. ಈಕೆಗೆ ಬಸವನು ಸಂಗಮೇಶ್ವರನ ಕೈಯಲ್ಲಿ ದೀಕ್ಷೆ ಕೊಡಿಸಿ ಈಕೆಯನ್ನು ಮದುವೆಯಾದನು. ನೀಲಮ್ಮನ ಸ್ತೋತ್ರ, ನೀಲಾಂಬಿಕಾ ಪಂಚವಿಂಶತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳು ಇವಳ ಸ್ತುತಿರೂಪವಲ್ಲವೆ'[1] ಎಂದಿದ್ದಾರೆ.

ಶೂನ್ಯ ಸಂಪಾದನೆಯಲ್ಲಿಯೂ, ವಚನಶಾಸ್ತ್ರಸಾರದಲ್ಲಿಯೂ 'ಸಂಗಯ್ಯ', 'ಸಂಗನಬಸವಾ' ಎಂಬ ಅಂಕಿತಗಳು ನೀಲಲೋಚನೆಯವೆಂದು ಹೇಳಿದೆ. ವಚನಶಾಸ್ತ್ರಸಾರದಲ್ಲಿ 'ಬಸವಪ್ರಿಯ ಕೂಡಲಸಂಗಮದೇವಾ' ಎಂಬ ಅಂಕಿತ ನೀಲಾಂಬಿಕೆಯ

---
1. ಕವಿಚರಿತ್ರೆ–ಸಂ. ೧. ಪು. ೧೯೬. ೧೯೨೪ (ಆವೃತ್ತಿ)

ದೆಂದು ಹೇಳಿದೆ. ಎಂ. ಆರ್. ಶ್ರೀನಿವಾಸಮೂರ್ತಿಯವರು 'ನೀಲಾಂಬಿಕೆ, ನೀಲಲೋಚನೆ ಇಬ್ಬರೂ ಒಂದೇ ವ್ಯಕ್ತಿ ಎಂದೂ ಆ ವ್ಯಕ್ತಿ ಬಸವಣ್ಣನವರ ಎರಡನೆಯ ಹೆಂಡತಿ ಎಂದೂ ನಾವು ಅಭಿಪ್ರಾಯ ಪಡುತ್ತೇವೆ. 'ಬಸವಪ್ರಿಯ ಕೂಡಲಸಂಗಮ ದೇವಾ' ಎಂಬುದು ಬೇರೆಯವರ ಅಂಕಿತವಾಗಿರಬೇಕು[2] ಎಂದಿದ್ದಾರೆ.

ಡಾ॥ ಎಲ್.ಬಸವರಾಜು ಅವರು ಜೇಡರದಾಸಿಮಯ್ಯನ ಹೆಂಡತಿ ದುಗ್ಗಳೆ ವಚನಕಾರ್ತಿ ಇರಬಹುದೆಂಬುದನ್ನು ಸಿರ್ಥ ರಿಸುತ್ತ ಬಸವಣ್ಣನವರ ಹೆಂಡತಿಯಾದ ನೀಲಾಂಬಿಕೆಯು 'ಬಸವಪ್ರಿಯ ಕೂಡಲಸಂಗಮದೇವಾ' ಎಂಬ ಅಂಕಿತವನ್ನು ತನ್ನ ವಚನಕ್ಕಿಟ್ಟುಕೊಂಡಂತೆ, 'ರಾಮನಾಥ' ಎಂಬ ಅಂಕಿತದ ಜೇಡರದಾಸಿಮಯ್ಯನ ಹೆಂಡತಿ ದುಗ್ಗಳೆಯು ತನ್ನ ವಚನಕ್ಕೆ 'ದಾಸಯ್ಯ ಪ್ರಿಯ ರಾಮನಾಥಾ' ಎಂದು ಇಟ್ಟುಕೊಂಡಿರಬಹುದು[3] ಎಂದು 'ಬಸವಪ್ರಿಯ ಕೂಡಲ ಸಂಗಮದೇವಾ' ಎಂಬ ಅಂಕಿತವನ್ನು ನೀಲಲೋಚನೆಯದೆಂದು ಹೇಳಿ ಹೋಲಿಸಿದ್ದಾರೆ.

ಡಾ॥ ಎಲ್. ಬಸವರಾಜು ಅವರು, ತಮ್ಮ 'ಶಿವದಾಸ ಗೀತಾಂಜಲಿ'ಯ ಗ್ರಂಥಸ್ಥ ಗೀತೆಗಳ ಅಂಕಿತ ಮತ್ತು ಕರ್ತೃಗಳು ಎಂಬ ಭಾಗದಲ್ಲಿ 'ಸಂಗ', 'ಸಂಗನಪ್ರಭು', 'ಸಂಗಮನಾಥಾ', 'ಸಂಗಯ್ಯ' ಎಂಬುವು ನೀಲಲೋಚನೆಯಮ್ಮನ ಹಾಡುಗಳ ಅಂಕಿತವೆಂದು ಗುರುತಿಸಿದ್ದಾರೆ.

ಈ ಎಲ್ಲ ಅಂಶಗಳನ್ನೂ ಗಮನಿಸಿದಾಗ 'ಸಂಗ', 'ಸಂಗನಪ್ರಭು', 'ಸಂಗಯ್ಯ', 'ಸಂಗನ ಗುರುಬಸವಾ', 'ಬಸವ ಪ್ರಿಯ ಕೂಡಲಸಂಗಮದೇವಾ'–ಇವಿಷ್ಟು ಅಂಕಿತಗಳೂ ನೀಲಲೋಚನೆಯವೆಂದು ತಿಳಿದುಬರುತ್ತದೆ. ಒಬ್ಬ ವಚನಕಾರನ ವಚನಗಳಲ್ಲಿ ಅಂಕಿತಗಳು ವ್ಯತ್ಯಸ್ತಗೊಂಡಿರುವುದು ಅನೇಕ ವಚನಕಾರರಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಮಹಾದೇವಿಯ ಕ್ಕನ ಅಂಕಿತ 'ಚನ್ನಮಲ್ಲಿಕಾರ್ಜುನ'; ಆಕೆಯ ವಚನಗಳಲ್ಲಿ ಈ ಅಂಕಿತ, 'ಮಲ್ಲಿಕಾರ್ಜುನ', 'ಮಲ್ಲಿಕಾರ್ಜುನಯ್ಯ', 'ಮಲ್ಲೇಶ ಚನ್ನ', 'ಮಲ್ಲೇಶ' ಮುಂತಾಗಿ ವ್ಯತ್ಯಾಸ ಹೊಂದಿರುವುದನ್ನು ನೋಡಬಹುದು. ಈ ವ್ಯತ್ಯಾಸವನ್ನು ಆಕೆ ಬರೆದಿರುವ ಹಾಡು ಗಳಲ್ಲಿ ಗುರುತಿಸಬಹುದು[4].

ಈ ಲೇಖಕನು ಸಂಪಾದಿಸಿರುವ ನೀಲಲೋಚನೆಯ ೪೫ ವಚನಗಳೂ 'ಸಂಗಯ್ಯ' ಎಂಬ ಅಂಕಿತವನ್ನು ಹೊಂದಿವೆ. ಇವುಗಳಲ್ಲಿ ಒಂದೆರಡು ವಚನಗಳ ಅಂಕಿತ 'ಸಂಗನ ಗುರುಬಸವಾ' ಎಂದೂ ಬಂದಿವೆ. ಆಕೆಯ ಬಹುಪಾಲು ಹಾಡುಗಳಲ್ಲಿ 'ಸಂಗಯ್ಯ', 'ಸಂಗ' ಎಂಬ ಅಂಕಿತಗಳಿವೆ.

ನೀಲಲೋಚನೆ ಬಸವಣ್ಣನವರ ಪತ್ನಿಯೇ ಎಂಬುದನ್ನು ನಿರ್ಧರಿಸಲು ಆಧಾರಗಳಿವೆ. ನೀಲಲೋಚನೆಯ ಬಗ್ಗೆ ತಿಳಿ ದಿರುವ ಅಂಶಗಳು ಕಡಮೆಯಾದುದರಿಂದ ಆಕೆಯ ವಿಷಯವಾಗಿ ತಿಳಿದುಕೊಳ್ಳಬೇಕಾದರೆ ಸಹಜವಾಗಿಯೇ ಬಸವಣ್ಣನವರ ಜೀವನದ ಕಡೆಗೆ ಕಣ್ಣು ಹಾಯಿಸಬೇಕಾಗುತ್ತದೆ. ಇಲ್ಲಿ ನಾವು ಮುಖ್ಯವಾಗಿ ವಿಚಾರಮಾಡಬೇಕಾಗಿರುವುದು ಬಸವಣ್ಣನವರ ವಿವಾಹಕ್ಕೆ ಸಂಬಂಧಿಸಿದ ಅಂಶ. ಬಸವಣ್ಣನವರ ವೈಯಕ್ತಿಕ ಜೀವನದ ಬಗ್ಗೆ ಸತ್ಯ ಸಂಗತಿಗಳನ್ನು ತಿಳಿಯಲು ಸಹಾಯಕವಾಗಿ ರುವ ಆಕರಗಳೆಂದರೆ, ಮೊದಲನೆಯದಾಗಿ ಅವರ ವಚನಗಳು. ಎರಡನೆಯದಾಗಿ ಅವರಾದಮೇಲೆ ಅವರನ್ನು ಕುರಿತು ಕವಿಗಳು ಬರೆದ ಗ್ರಂಥಗಳು.

ಬಸವಣ್ಣನವರ ವಚನಗಳಲ್ಲಿ ಅವರ ವಿವಾಹದ ವಿಷಯವಾಗಲಿ, ದಾಂಪತ್ಯ ಜೀವನದ ಬಗ್ಗೆ ವಿವರಣೆಯಾಗಲಿ ಎಲ್ಲೂ ಸ್ಪಷ್ಟವಾಗಿ ಬಂದಂತಿಲ್ಲ.

ಅವರ ಒಂದು ವಚನ—

> ಅರ್ಥವನರ್ಥವ ಮಾಡಿ ಕೋಳಾಹಳಂಹೆಯ್ಯುತ್ತಿರಲಿ, ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ,
> ಮುಟ್ಟುವ ಸ್ತ್ರೀಯ ಮುಂದೆ ಅಭಿಮಾನಗೊಂಡು ನೆರೆಯುತ್ತಿರಲಿ, ಇಂತೀ ತ್ರಿವಿಧವು ಹೊರಗಣವು—
> ಇನ್ನೆನ್ನಂಗದ ಮೇಲೆ ಬರಲಿ, ಹಿಡಿ ಖಂಡಗೊಯ್ಯಲಿ...ನೀನಂದೆ ಮೂಗ ಕೊಯ್ಯಿ ಕೂಡಲ ಸಂಗಮದೇವ[5]

ಎಂದಿದೆ. ಅರ್ಥ, ಹೆಂಡತಿ, ಮಕ್ಕಳು–ಈ ಮೂರು ಹೊರಗಿನವು. ಇವುಗಳನ್ನು ತೊರೆಯಲು ಸಿದ್ಧ. ಆದರೆ ಜಂಗಮಾರಾಧನೆ ಲಿಂಗಪೂಜೆ–ಇವುಗಳನ್ನು ಮಾತ್ರ ತಪ್ಪದೇ ಮಾಡುವೆ. ದೇಹವನ್ನು ಖಂಡಗೊಯ್ದರೂ, ಶೂಲಪ್ರಾಪ್ತಿಯಾದರೂ ಇವನ್ನು

---

2. ಎಂ. ಆರ್. ಶ್ರೀನಿವಾಸಮೂರ್ತಿ-ವಚನಧರ್ಮಸಾರ ಪುಟ ೧೩. ಅಂಕಿತಗಳ ವಿವರ
3. ಡಾ॥ ಎಲ್. ಬಸವರಾಜು—ಅಲ್ಲಮನ ವಚನ ಚಂದ್ರಿಕೆ-ಪೀಠಿಕೆ ಪುಟ ೭
4. ಡಾ॥ ಎಲ್. ಬಸವರಾಜು-ಶಿವದಾಸಗೀತಾಂಜಲಿ, ಗ್ರಂಥಸ್ಥಗೀತೆಗಳ ಅಂಕಿತ ಮತ್ತು ಕರ್ತೃಗಳು, ಪುಟ ೨೮೪-ಉಡುತಡಿಯ ಅಕ್ಕಮಹಾದೇವಿ.
5. ಬಸವಣ್ಣನವರ ಷಟ್‌ಸ್ಥಲದ ವಚನಗಳು-೭೦೬, ಪುಟ ೧೮೫.

ಬಿಡಲು ಸಿದ್ಧವಿಲ್ಲ. ಈ ಭಾಷೆಗೆ ನಾನು ತಪ್ಪಿದೆನಾದರೆ, ಅಂದೇ ಮೂಗ ಕೊಯ್ಯಿ ಕೂಡಲ ಸಂಗಮದೇವಾ ಎಂಬ ಭಾವ ಇಲ್ಲಿದೆ. ಇದಿಷ್ಟೆ ಬಸವಣ್ಣನವರು ತಮ್ಮ ಮಡದಿ–ಮಕ್ಕಳ ವಿಚಾರವಾಗಿ ತಮ್ಮ ವಚನಗಳಲ್ಲಿ ಹೇಳಿರುವುದು.

ಬಸವಣ್ಣನವರನ್ನು ಕುರಿತು ಅವರ ಜೀವನ ಚರಿತ್ರೆಯನ್ನು ಕಾವ್ಯ ಪುರಾಣಗಳಲ್ಲಿ ಬರೆದ ಕವಿಗಳು ಆ ಮಹಾತ್ಮನ ದಿವ್ಯ ಜೀವನವನ್ನು ಚಿತ್ರಿಸುವ ಭರದಲ್ಲಿ ಅದನ್ನು ಹೆಚ್ಚು ಪವಾಡಮಯವಾಗಿ ಮಾಡಿದ್ದಾರೆ. ಹಾಗೆ ಕವಿಗಳು ಬಸವಣ್ಣನವರಿಗೆ ಸಂಬಂಧಿಸಿ ಹೇಳಿರುವ ಪವಾಡಗಳಲ್ಲಿ ಎಷ್ಟು ಆತನಿಗೆ ಸಂಬಂಧಿಸಿದವು, ಎಷ್ಟು ಕವಿಗಳು ಕಲ್ಪಿಸಿದವು ಎಂದು ವ್ಯತ್ಯಾಸ ಮಾಡಿ ಹೇಳುವುದು ಸಂಶೋಧಕರಿಗೂ ಕಷ್ಟವಾಗಿದೆ. ಹರಿಹರನಂತಹ ಕವಿಯು ಇದರಿಂದ ಹೊರತಾಗಿಲ್ಲ. ಆದರೆ ಹರಿಹರನ ಕಾವ್ಯವಾದ ಬಸವರಾಜದೇವರ ರಗಳೆ 'ಬಸವಣ್ಣನವರ ಜೀವನವನ್ನು ಕುರಿತು ಹೊರಟ ಇತರ ಕಾವ್ಯ–ಪುರಾಣಗಳಿಗೆ ಹೋಲಿಸಿ ನೋಡಿದಾಗ ಪವಾಡಗಳ ವಿಷಯವಾಗಿ ವಾಸ್ತವಕ್ಕೆ ಹತ್ತಿರವಾಗಿದೆ'. ಬಸವಣ್ಣನವರ ಅಲೌಕಿಕ ಕಾರ್ಯಗಳನ್ನು ಅದ್ಭುತ ಮಹಿಮೆಗಳನ್ನು ಹರಿಹರನು ಮೇಲಿಂದ ಮೇಲೆ ಉದ್ಘೋಷಿಸಿದರೂ ಅವರ ಸರಳವಾದ ಮಾನವ ಹೃದಯವನ್ನು ಮಾತ್ರ ಎಲ್ಲಿಯೂ ಮರೆ ಮಾಡಿಲ್ಲ[6]' ಎಂಬ ಶ್ರೀ ಟಿ.ಎಸ್. ವೆಂಕಣ್ಣಯ್ಯನವರ ಮಾತು ಯಥಾರ್ಥವಾದುದು.

ಹರಿಹರನು ಬಸವರಾಜದೇವರ ರಗಳೆಯಲ್ಲಿ ಬಸವಣ್ಣನು ಮೊದಲು ಬಿಜ್ಜಳನ ಭಂಡಾರಿಯಾದ ಸಿದ್ಧದಂಡಾಧೀಶನೊಡನೆ ಅವನ ಮನೆಯಲ್ಲೇ ಕೆಲಕಾಲವಿದ್ದನೆಂದೂ ಸಿದ್ಧದಂಡಾಧೀಶನು ತನ್ನ ಆಡಳಿತವನ್ನೆಲ್ಲ ಬಸವಣ್ಣನಿಗೆ ವಹಿಸಿದ್ದನೆಂದೂ ಅವನು ಮಡದಿ ಮಕ್ಕಳಿಲ್ಲದೆ ಮಡಿದ ಮೇಲೆ, ದವನ ಆಸ್ತಿ ಎಲ್ಲವನ್ನೂ ಬಿಜ್ಜಳನು ಬಸವಣ್ಣನಿಗೆ ಒಪ್ಪಿಸಿದನೆಂದೂ ಹೇಳಿ 'ಸಂಗನ ಬಸವಂ ಕೆಲವು ದಿನಂಗಳಂ ಕಳೆದು ಸತ್ಕುಲ ಸಾದೃಶ್ಯ ಸುಶೀಲೆಯರಪ್ಪ ಗಂಗಾದೇವಿ ಮಾಯದೇವಿಯರೊಡತನ ವಿವಾಹ ಸಂಪದದಿಂ ಸುರತಸುಖಮಿರ್ದು'[7] ಎಂದಿದ್ದಾನೆ.

ಮುಂದೆ ಹತ್ತನೆಯ ಸ್ಥಲದಲ್ಲಿ 'ಗಂಗಾದೇವಿಯರ್ಗೆ ಗರ್ಭಂ ಉದಯಿಸಿ, ಗರ್ಭವೆಂಬ ಕಾಸಾರದಿಂ ಬಾಲಹಂಸಂ ಪೊರಮಡುವಂತೆ ಸುಮುಹೂರ್ತದೊಳ್ ಪುತ್ರನುದ್ಭವಿಸೆ, ಜಾತಕರ್ಮವಲಂಕರಿಸಿ, ನಾಮಕರಣಂ ಸಿದ್ಧರಸನೆಂದಿಟ್ಟು, ಲಿಂಗ ಮುಖದೊಳು ಕಣ್ದೆರೆದ ಕಂದನಂ ಗಂಗಾದೇವಿಯರ್ ಭಾವಿಸಿ ನೋಡಿ'[8] ಎಂದು ಗಂಗಾದೇವಿಯವರಿಗೆ ಒಂದು ಮಗುವಾಯಿತೆಂದಿದ್ದಾನೆ. ಗಂಗಾದೇವಿಯು ಮಗುವಿಗೆ ಸಿದ್ಧರಸನೆಂದು ಹೆಸರಿಟ್ಟದ್ದು ಮತ್ತು ಬಸವಣ್ಣನು ಸಿದ್ಧರಸನ ಆಸ್ತಿಗೆ ಹಕ್ಕುದಾರನಾದುದು ಗಂಗಾದೇವಿಯು ಸಿದ್ಧರಸನ ಸುತೆ ಎಂದು ಅರ್ಥ ಬರುವಂತಿದೆ.

'ಸಿಂಗಿರಾಜನು ಸಿದ್ಧರಸನ ಮಗಳು ನೀಲಲೋಚನೆ ಎಂದಿದ್ದಾನೆ. ಸಿದ್ಧರಸನು ಬಿಜ್ಜಳನಲ್ಲಿ ಮಂತ್ರಿ ಕರಪಾಲಕ, ದಣ್ಣಾಯಕನಾಗಿದ್ದನೆಂದೂ ಬಲದೇವನೂ ದಣ್ಣಾಯಕನಾಗಿದ್ದನೆಂದೂ ಸಿಂಗಿರಾಜನ ಮತ. ಹರಿಹರನೊಬ್ಬನನ್ನುಳಿದು ಎಲ್ಲರೂ ಗಂಗಾದೇವಿ ಬಲದೇವನ ಮಗಳೆಂದುದರಿಂದ ನೀಲಲೋಚನೆ (ಅವಳ ಅಂಕಿತ ಮಾಯಾದೇವಿ) ಸಿದ್ಧರಸನ ಸುತೆಯೆನ್ನಬಹುದು. ಹಾಗಿದ್ದಾಗ ಗಂಗಾದೇವಿಯು ನೀಲಲೋಚನೆ (ಇಲ್ಲವೆ ಮಾಯಾದೇವಿ)ಯ ತಂದೆಯ ಹೆಸರನ್ನು ಮಗನಿಗೆ ಇಟ್ಟಿರಬೇಕೆಂದು ತಿಳಿಯಬೇಕು[9]' ಎಂಬುದು ಡಾ॥ ಬಿ. ಸಿ. ಜವಳಿ ಅವರ ಅಭಿಪ್ರಾಯ. ಹರಿಹರನು ಗಂಗಾದೇವಿ ಮಾಯಾದೇವಿಯರು ಯಾರ ಮಕ್ಕಳೆಂಬುದನ್ನು ಹೇಳಿಲ್ಲದಿರುವುದು ಮತ್ತು ಹರಿಹರನನ್ನುಳಿದು ಇತರ ಕವಿಗಳೆಲ್ಲರೂ ಗಂಗಾದೇವಿ ಬಲದೇವನ ಮಗಳೆಂದಿರುವುದು ನೀಲಲೋಚನೆಯು ಸಿದ್ಧರಸನ ಸುತೆ ಎಂದು ಊಹಿಸುವುದಕ್ಕೆ ಪೋಷಕವಾಗುತ್ತದೆ.

ಡಾ॥ ಬಿ. ಸಿ. ಜವಳಿ ಅವರ ಈ ಅಭಿಪ್ರಾಯಕ್ಕೆ ಪೋಷಕವಾಗಿ ಶ್ರೀ ಹೆಚ್. ದೇವೀರಪ್ಪನವರು ನೀಲಲೋಚನೆ ಸಿದ್ಧರಸನ ಸುತೆ ಎಂದು 'ವೀರಶೈವಾಮೃತ ಪುರಾಣ'ವನ್ನು ಬರೆದ ಗುಬ್ಬಿಯ ಮಲ್ಲಣಾರ್ಯನು ಹೇಳಿದ್ದಾನೆಂದು ಅಭಿಪ್ರಾಯ ಪಡುತ್ತಾರೆ[10].

ಡಾ॥ ಆರ್. ಸಿ. ಹಿರೇಮಠ ಅವರು 'ಭೀಮ ಕವಿಯು ಬಸವಪುರಾಣದಲ್ಲಿ ಗಂಗಾದೇವಿ ಮಾಯಿದೇವಿಯರು ಬಸವಣ್ಣನವರ-ಪತ್ನಿಯರು. ಗಂಗಾದೇವಿ ಬಸವಣ್ಣನವರ ಸೋದರ ಮಾವ ಬಲದೇವ ಮಂತ್ರಿಯ ಮಗಳು. ಮಾಯಿದೇವಿ ಯಾರ ಮಗಳು, ಆಕೆಯ ವಿವಾಹ ಎಂದು ಎಲ್ಲಿ ಆಯಿತೆಂಬುದರ ಉಲ್ಲೇಖ ಮಾತ್ರ ಮಾಡುವುದಿಲ್ಲ' ಎಂದಿದ್ದಾರೆ.

ಹರಿಹರನು ಹೇಳಿರುವ ಮಾಯಿದೇವಿಯೇ ನೀಲಲೋಚನೆ ಎಂದು ತಿಳಿಯಲು ಇನ್ನೂ ಒಂದು ಆಧಾರವಿದೆ. ನೀಲಲೋಚನೆಯು ಅತಿ ಸುಂದರಳಾಗಿದ್ದುದರಿಂದ ಅವಳನ್ನು ನೀಲಲೋಚನೆ ಎಂದು ಕರೆಯುತ್ತಿದ್ದರೆಂದೂ ನೀಲಲೋಚನೆಯು

6. ಟಿ.ಎಸ್. ವೆಂಕಣ್ಣಯ್ಯ:ಬಸವರಾಜದೇವರ ರಗಳೆ ಪೀಠಿಕೆ ಪುಟ-XXXV
7. ಬಸವರಾಜದೇವರ ರಗಳೆ-೬ನೆಯ ಸ್ಥಲ, ಗದ್ಯ-ಆರಂಭದ ಮೂರು ಪಂಕ್ತಿಗಳು
8. ಬಸವರಾಜದೇವರ ರಗಳೆ-೧೧ನೆಯ ಸ್ಥಲ, ಗದ್ಯ ೧೦೦-೧೧೦
9. ಡಾ॥ ಬಿ. ಸಿ. ಜವಳಿ:ಧರ್ಮಭಂಡಾರಿ ಬಸವಣ್ಣನವರು-ಪ್ರಸ್ತಾವನೆಯ ಅಡಿ ಟಿಪ್ಪಣಿ-ಪುಟ XX.
10. ಶ್ರೀ ಹೆಚ್. ದೇವೀರಪ್ಪ-ಸಿಂಗಿರಾಜಪುರಾಣ-ಮುನ್ನುಡಿ ಪುಟ ೮.

ಮಗನ ಹೆಸರು ಚಿಕ್ಕ ಸಂಗಯ್ಯನೆಂದೂ (ಬಾಲ ಸಂಗಯ್ಯ) ಬಸವೇಶ್ವರನು ಜಂಗಮ ವೇಷದಲ್ಲಿದ್ದ ಸಂಗಮೇಶ್ವರನಿಗೆ ನೀಲ ಲೋಚನೆಯನ್ನಿತ್ತನೆಂದೂ 'ಗಣಭಾಷ್ಯರತ್ನಮಾಲೆ'ಯಿಂದ ತಿಳಿದುಬರುತ್ತದೆ[11].

ಬಸವೇಶ್ವರನು ಸಂಗಮೇಶ್ವರನಿಗೆ ಅರ್ಪಿಸಿದ ಸತಿ ಮಾಯಿದೇವಿ. ಆಕೆ ಅಗ್ಗಳ ಚಲುವೆ ಎಂಬುದು ಹರಿಹರನ ಅಭಿ ಪ್ರಾಯ. ಹರಿಹರನಲ್ಲಿ ಬರುವ 'ಸಿರಿ ಸರಸ್ವತಿಯುರಂ ಕೀಳ್ಮಾಡುವ ತನ್ನರಸಿ ಮಾಯಿದೇವಿಯುರಂ ತಂದು ಕೊಡುವೆಂ'12 ಎಂಬ ಮಾತಿನಿಂದ ಮಾಯಿದೇವಿಯೇ ನೀಲಲೋಚನೆ ಎಂದು ಊಹಿಸಬಹುದು.

ಶ್ರೀ ಚೆನ್ನಮಲ್ಲಿಕಾರ್ಜುನ ಅವರು ತಮ್ಮ 'ಬಸವೇಶ್ವರನ ಕಾಲ' ಎಂಬ ಗ್ರಂಥದಲ್ಲಿ 'ಮೇದೂರಿನಲ್ಲಿ ಬಸವೇಶ್ವರನಿಗೆ ಮದುವೆ' ಎಂಬ ಶಿರೋನಾಮದಲ್ಲಿ ನೀಲಾಂಬಿಕೆಯನ್ನು ಬಸವೇಶ್ವರನಿಗೆ ಕೊಟ್ಟು ಮದುವೆ ಮಾಡಿದನೆಂದು 'ಬಸವಶಿಖಾಮಣಿ' ಎಂಬ ಗ್ರಂಥ ಹೇಳುತ್ತದೆ ಎಂದು ಹೇಳಿ, ಆ ಗ್ರಂಥದಲ್ಲಿನ ಕೆಲವು ಮದುವೆಯ ಪದ್ಯಗಳನ್ನು ಕೊಟ್ಟಿದ್ದಾರೆ. ಅವು ಹೀಗಿವೆ–

'ವರಗುರುರಾಯ ಹರುಷದಿಂದಲಾ ಸತಿಯಪುರುಷನ ಲಿಂಗ ತನ್ನ ಕರಸ್ಥಲದೊಳಗಿಟ್ಟು ಪಂಚಾಭಿಷೇಕವನೆರೆದನು ಹಾಲುತುಪ್ಪದಲಿ ಲಿಂಗಾಷ್ಟವಿಧಾರ್ಚನೆ ಪೂಜೆಯನು ಗುರುಸಂಗಮೇಶ್ವರನು ಮಾಡಿ ಜಂಗಮತೀರ್ಥಪ್ರಸಾದವನು ಮಂಗಳ ಮಯ ಲಿಂಗಕೊಲಿದು ಹರಿಣಲೋಚನೆ ನೀಲಲೋಚನೆ ಗುರುರಾಯ ಸಂಭ್ರಮದಿಂದ ಹರುಷದಿ ಹಸ್ತಮಸ್ತಕಸಂಯೋಗವ ಮಾಡಿ ಧರಿಸಿದನು ಲಿಂಗವನು ಪರಮ ಶಿವಭಕ್ತ ಬಸವಗೆ ನೀಲಮ್ಮಗೆ ಸಿರದ ಮೇಲಿಟ್ಟು ಹಸ್ತವನು ಗುರುರಾಯ ಓಂ ನಮಃ ಶಿವಾಯೆಂದು ಅವರಿಗೆ ಬರೆದನು ಕರ್ಣಾಮೃತನು ಬಾಲೆಗೆ. ಬಸವಗೆ ವಿಭೂತಿ ಪಟ್ಟವಕಟ್ಟಿ ಲೋಲಗುರುಮೂರ್ತಿ ತೀರ್ಥವನು ಹಾಲು ಪ್ರಸಾದವರ್ಪಿತವ ಮಾಡಿಸಿದನು. ನೀಲಲೋಚನೆಗೆ ಬಸವನಿಗೆ ಗುರುಕಂಕಣವ ಕಟ್ಟಿ ಶಿರಕೆ ಸೇಸೆಯನಿಕ್ಕಿದರು ಬಂದೈ ವರು ಮುದದಿಂದ ಹರುಷದಿ ಮಂಗಳಾಷ್ಟವ ನೋದುತ ಶಿವಶರಣರು ಸಂಭ್ರಮದಿಂದ ಸರಸಿಜಮುಖಿ ನೀಲಲೋಚನೆ ಬಸವಣ್ಣ ಹರುಷದಿಂದ ಎದ್ದು ಗುರುವಿಗೆ ಶರಣು ಮಾಡಲು ಇವರು ನಿತ್ಯರಾಗೆಂದು ಹರುಷದಿ ಹರಸಿ ಭಸ್ಮವಿಟ್ಟರು. ಹಂದರದೊಳಗೆ ಬಂದಿರ್ದ ದಿಬ್ಬಣಕೆಲ್ಲ ಗಂಧವೀಳ್ಯವ ಕೊಟ್ಟು ಕಳುಹಿಸಿದರು. ಮುಂದೆ ನಾಲ್ಕುದಿವಸಕ್ಕೆ ನಾಗವಲಿಯನಾನಂದದಿಂದೆ ಮಾಡಿದರು ನಾರಿಯ ನಾಗವಲ್ಲಿಯ ಮೆಟ್ಟಿದ ಮೇಲೆ ಮೂರನೆಯ ದಿವಸದಲಿ ಧಾರಿಣಿಪತಿಯ ಮಂತ್ರಿ ಸಿದ್ಧದಂಡೇಶನು ಊರೂಟವ ಮಾಡಿಸಿದನು'13.

ಈ ಪದ್ಯಗಳು ನೀಲಲೋಚನೆಯ ವಿವಾಹ ಬಸವಣ್ಣನೊಡನೆ ಆದುದನ್ನು ಸ್ಪಷ್ಟ ಪಡಿಸುತ್ತವೆ.

ಬಸವಣ್ಣನವರ ಪತ್ನಿಯಾದ ಈ ನೀಲಲೋಚನೆ, ಆ ಕಾಲದ ಶ್ರೇಷ್ಠ ಅನುಭಾವಿಗಳಲ್ಲಿ ಒಬ್ಬಳಾಗಿದ್ದಾಳೆ. ಡಾ॥ ಪಿ.ಜಿ. ಹಳಕಟ್ಟಿ ಅವರು ತಮ್ಮ ವಚನಶಾಸ್ತ್ರ ಸಾರ ಭಾಗ–೧ ರಲ್ಲಿ 'ಶರಣರ ವಚನಗಳನ್ನು ನಂಬು' ಎಂಬ ಶಿರೋನಾಮೆಯಲ್ಲಿ ಕೆಲವು ವಚನಗಳನ್ನು ಸಂಗ್ರಹಿಸಿದ್ದಾರೆ. ಅಲ್ಲಿ ಬರುವ ೯ ನೆಯ ವಚನದಲ್ಲಿ 'ಪ್ರಭುವಿನ ವಾದದಿಂದ ವೈರಾಗ್ಯ ಸಂಪತ್ತು. ಬಸವನ ವಾದದಿಂದ ಭಕ್ತಿಯ ಸಂಪತ್ತು. ಚೆನ್ನಬಸವನ ವಾದದಿಂದ ಶಿವಪ್ರಸಾದದ ಸಂಪತ್ತು. ಮಡಿವಾಳಯ್ಯನ ವಾದದಿಂದ ಜ್ಞಾನದ ಸಂಪತ್ತು. ಸಕಳೇಶನ ವಾದದಿಂದ ಶಾಂತಿಯ ಸಂಪತ್ತು. ನೀಲಮ್ಮನ ವಾದದಿಂದ ಲಿಂಗಪೂಜೆಯ ಸಂಪತ್ತು. ನಾಗಮ್ಮನ ವಾದ ದಿಂದ ಮಹತ್ವದ ಸಂಪತ್ತು. ಇದು ಕಾರಣ ಕಿನ್ನರ ತ್ರಿಪುರಾಂತಕಲಿಂಗ ಸಾಕ್ಷಿಯಾಗಿ ಪ್ರಮಥರ ನುಡಿಯಲ್ಲಿ ಬೇಸರ ಜೀರ ದಿರು'14 ಎಂಬ ಮಾತುಗಳು ಬಂದಿವೆ.

ಈ ವಚನಕಾರ ತನ್ನ ವಚನದಲ್ಲಿ ಹನ್ನೆರಡನೆಯ ಶತಮಾನದ ಶ್ರೇಷ್ಠ ಅನುಭಾವಿಗಳನ್ನು ವೈರಾಗ್ಯ, ಭಕ್ತಿ, ಶಿವ ಪ್ರಸಾದ, ಜ್ಞಾನ, ಶಾಂತಿ–ಇವುಗಳಿಗೆ ಆದರ್ಶರನ್ನಾಗಿ ಹೇಳಿದ್ದಾನೆ. ಈ ಅನುಭಾವಿಗಳ ಪಂಕ್ತಿಯಲ್ಲಿ 'ನೀಲಮ್ಮನ ವಾದದಿಂದ ಪೂಜೆಯ ಸಂಪತ್ತು' ಎಂದು ಆಕೆ ಪೂಜೆಯ ಸಂಪತ್ತಿಗೆ ಆದರ್ಶಳಾಗಿದ್ದಳೆಂದು ಗುರುತಿಸಿದ್ದಾನೆ. ಇದರಿಂದ ನೀಲಲೋಚನೆ ಅಂದಿನ ಶ್ರೇಷ್ಠ ಅನುಭಾವಿಗಳಲ್ಲೊಬ್ಬಳಾಗಿದ್ದಾಳೆಂದೂ ಆಕೆಯ ಭಕ್ತಿ, ಶಿವಪೂಜಾತತ್ಪರತೆ ಪ್ರಸಿದ್ಧವಾಗಿದ್ದುವೆಂದೂ ಊಹಿಸ ಬಹುದು.

ಭಕ್ತಿ ಭಂಡಾರಿ ಬಸವಣ್ಣನವರ ಮಡದಿಯಾಗಿದ್ದ ನೀಲಲೋಚನೆಗೆ ಈ ಭಕ್ತಿ ಮಾರ್ಗ ಸಹಜವೇ ಆಗಿತ್ತು. ಬಸವಣ್ಣ ನವರು ಕೇವಲ ಪ್ರಧಾನಿಯಾಗಿ ರಾಜಕಾರ್ಯದಲ್ಲಿ ನಿರತರಾಗಿದ್ದರಷ್ಟೇ ಅಲ್ಲ: ಅವರಿಗೆ ರಾಜಕಾರ್ಯಕ್ಕಿಂತ ಭಕ್ತಿಕಾರ್ಯ ಹೆಚ್ಚು ಪ್ರಧಾನವಾಗಿತ್ತು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ ಅವರಿಗೆ ದಾಸೋಹಕಾರ್ಯ ಶ್ರೇಷ್ಠವೆನಿಸಿತ್ತು. ಅವರ ನಿಲಯ ಸದಾ ಜಂಗಮರ–ಅತಿಥಿಗಳ ಸಂದಣಿಯಿಂದ ಕೂಡಿತ್ತು. ಅಂತಹ ಮನೆಯೊಡತಿಯಾಗಿ, ಬಸವೇಶ್ವರನ ಮನ

11. ಧರ್ಮ ಭಂಡಾರಿ ಬಸವಣ್ಣನವರು ಡಾ॥ ಬಿ. ಸಿ. ಜವಳಿ ಅಡಿ ಟಿಪ್ಪಣಿ ಪುಟ XXII
12. ಬಸವರಾಜ ದೇವರ ರಗಳೆ- ೧೨ ನೆಯ ಸ್ಥಲ ಪುಟ-೮೪, ಗದ್ಯ ೧೩೦.
13. ಶ್ರೀ ಮಲ್ಲಿಕಾರ್ಜುನ- ಬಸವೇಶ್ವರನ ಕಾಲ-ಪುಟ 43 (ಸಂಧಿ ೪. ಪ. ೬೭-೭೫).
14. ಡಾ॥ ಪಿ. ಜಿ. ಹಳಕಟ್ಟಿ-ವಚನಶಾಸ್ತ್ರಸಾರ ಭಾಗ ೧-ಪುಟ ೩೫೫.

ದನ್ನೆಯಾಗಿ, ಬಂದ ಅತಿಥಿ ಜಂಗಮರಿಗೆ ಅವರವರ ಮನದಿಚ್ಛೆಯರಿತು ಮಿಗೆಭಕ್ತಿ ಶ್ರದ್ಧೆಗಳಿಂದ ಪ್ರಸಾದ ನೀಡುವ ಕಾಯಕದಲ್ಲಿ ನೀಲಲೋಚನೆ ನಿರತಳಾಗಿದ್ದಳು. ಪತಿಯ ಧರ್ಮಕಾರ್ಯದಲ್ಲಿ ಇಚ್ಛೆ ಮನವರಿವ ಸತಿಯಾಗಿದ್ದಳು. 'ಆಪ್ಯಾಯನಕ್ಕೆ ಅನ್ನವ ನಿಕ್ಕುವ, ಲಾಂಛನಕ್ಕೆ ಶರಣೆನ್ನುವ' ವಿಶಾಲ ಮನೋಧರ್ಮದ ಬಸವಣ್ಣನವರ ದಾಸೋಹ ಕಾರ್ಯ ಕುಂದಿಲ್ಲದೆ ಸಾಗುವುದಕ್ಕೆ ಕಾರಣಳಾದವಳು ನೀಲಲೋಚನೆ. ಸಂಸಾರದಲ್ಲಿ ಇಂತಹ ಸಾಮರಸ್ಯವಿದ್ದುದರಿಂದಲೆ ಬಸವಣ್ಣನವರ ಆಧ್ಯಾತ್ಮಿಕ ಜೀವನ ಸುಗಮ-ಸುಂದರ ಸಾರ್ಥಕವಾಯಿತು.

ನೀಲಲೋಚನೆಯ ತಾಳ್ಮೆ ಆಕೆಯ ಸದ್ಗುಣದಷ್ಟೇ ಪ್ರಶಂಸನೀಯವಾದುದು. ಒಮ್ಮೆ ಬಸವಣ್ಣನವರ ಮನೆಗೆ ಕಳ್ಳನೊಬ್ಬನು ಬಂದು ನೀಲಲೋಚನೆಯ ಕಿವಿಯ ಆಭರಣಗಳನ್ನು ಅಪಹರಿಸಲು ಪ್ರಯತ್ನಿಸಿದ. ಭಯಗೊಂಡ ನೀಲಲೋಚನೆ ಬಸವಣ್ಣನವರನ್ನು ಎಚ್ಚರಿಸಿ ನಡೆದ ಸಂಗತಿಯನ್ನು ವಿವರಿಸಿದಳು. ಆಗ ಬಸವಣ್ಣನವರು, 'ಅಯ್ಯೋ ನಮ್ಮಯ್ಯನ ಕೈನೊಂದೀತು, ತೆಗೆದುಕೊಡಾ ಚಾಂಡಾಲಗಿತ್ತಿ, ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೊಡೆ ಕೂಡಲಸಂಗಮನಲ್ಲದೆ ಮತ್ತಾರೂ ಅಲ್ಲ' ಎಂದರು. ಬಸವಣ್ಣನವರಿಗೆ ಮಾರುತ್ತರ ಕೊಡದೆ ಆಭರಣಗಳನ್ನು ತೆಗೆದುಕೊಟ್ಟಳು ನೀಲಲೋಚನೆ.

'ಸತಿಪತಿಗಳೊಂದಾದ ಭಕ್ತಿಹಿತವಪ್ಪುದು ಶಿವಂಗೆ. ಸತಿಪತಿಗಳೊಂದಾಗದವರ ಭಕ್ತಿ ಅಮೃತದೊಳು ವಿಷವ ಬೆರೆಸಿದಂತೆ ಕಾಣಾ ರಾಮನಾಥಾ'[16] ಎಂಬ ಶರಣರ ನುಡಿಯಂತೆ ಬಸವಣ್ಣ-ನೀಲಲೋಚನೆಯರ ಭಕ್ತಿ ಶಿವನಿಗೆ ಹಿತವಾದುದು.

ಇಂತಹ ದಾಂಪತ್ಯ ಜೀವನದಲ್ಲೂ ಅಗಲಿಕೆ ಸಂಭವಿಸಿತು. ಬಸವಣ್ಣನವರು ಕಲ್ಯಾಣವನ್ನು ಬಿಟ್ಟುಹೋಗುವ ಪ್ರಸಂಗ ಬಂದಿತು. ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಹೋಗುವುದಕ್ಕೆ ಕಾರಣ ಆಗ ಕಲ್ಯಾಣದಲ್ಲಿ ನಡೆದ ಅಂತರ್ಜಾತೀಯ ವಿವಾಹ ಎಂಬುದೇನೊ ನಿರ್ವಿವಾದ. ಈ ವಿಚಾರವಾಗಿ ಹರಿಹರನು—

'ಶಿವದ್ರೋಹವಂಗೈದ ಬಿಜ್ಜಳನಂಕೊಲಿಸುತಂ ಭವಹರನ ಶರಣ ಸಗ್ಗೋಷ್ಠಿಯಂ ಸಲಿಸುತಂ ನಿಷ್ಠೆ ಮಿಗೆ ತುತಿಗೈದು ಪೊಡಮಟ್ಟು ಕೈಮುಗಿದು...
ನೋಡುತಿರೆ ಭಕ್ತರೆಲ್ಲರ ಮುಂದೆ ಬಸವಣ್ಣ ಗಾಢದಿಂ ಶಿವನೊಳಗೆ ಬೆರೆದು ತಾ ಬಯಲಾದ'[17]

ಎಂದಿದ್ದಾನೆ.

ಬಸವಣ್ಣನವರು ಹರಳಯ್ಯ-ಮಧುವಯ್ಯ ಇವರ ಮಕ್ಕಳ ನಡುವೆ ಶರೀರ ಸಂಬಂಧವೇರ್ಪಡಿಸಿ, ಶರಣಕುಲವೊಂದೇ ಎಂಬ ವಿಶಾಲ ತತ್ತ್ವಕ್ಕೆ ಆದರ್ಶಪ್ರಾಯರಾಗಿ ನಿಂತರು. ಪರಮತೀಯರು ಇದರಿಂದ ಧರ್ಮದ್ರೋಹವಾಯಿತೆಂದು ರೊಚ್ಚಿಗೆದ್ದರು. ಬಿಜ್ಜಳನು ಯುಕ್ತಾಯುಕ್ತ ವಿವೇಚಿಸದೆ ಹರಳಯ್ಯ ಮಧುವಯ್ಯರ ಕಣ್ಣು ಕೀಳಿಸಿದ. ಇದರಿಂದ ವಿಷಯ ವಿಪರೀತಕ್ಕೆ ಹೋಗಿ ಬಿಜ್ಜಳನ ಕೊಲೆಯಾಯಿತು. ಇದು ಸಹಜವಾಗಿಯೇ ಅಹಿಂಸಾಮತಿಯಾದ ಬಸವಣ್ಣನವರಿಗೆ ಬೇಸರ ತಂದಿತು. ಅವರು ಏನನ್ನೂ ಆಡದೆ ಸಂಗಮನಾಥನಲ್ಲಿಗೆ ಬಂದು ಅವನನ್ನಪ್ಪಿಕೊಂಡು ಐಕ್ಯರಾದರೆಂದು ಡಾ॥ ಆರ್. ಸಿ. ಹಿರೇಮಠ 'ಭೀಮಕವಿ ಚಿತ್ರಿಸಿದ ಬಸವಣ್ಣ'-ಎಂಬ ಲೇಖನದಲ್ಲಿ ಅಭಿಪ್ರಾಯಪಟ್ಟಿದ್ದಾರೆ. 'ಶರಣ ಲೀಲಾಮೃತ'ದಲ್ಲಿಯೂ ಬಸವಣ್ಣನವರು ಕಲ್ಯಾಣವನ್ನು ಬಿಡುವುದಕ್ಕೆ ಇದೇ ಕಾರಣವನ್ನು ಹೇಳಿದೆ. 'ಬಸವಣ್ಣನು ಈ ರಕ್ತಪಾತವನ್ನು ತಡೆಯಬೇಕೆಂದಿದ್ದರೂ ಶಿವಭಕ್ತರು ಅವರ ಶಾಂತಿಯ ಮಾತುಗಳನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಅಹಿಂಸಾವಾದಿಗಳಿಂದ ಬಸವಣ್ಣನವರಿಗೆ ಉಗ್ರಹಿಂಸಾ ಪ್ರವೃತ್ತಿ ಸಮ್ಮತವಾಗಿರಲಿಲ್ಲ. ಆದಕ್ಕಾಗಿ ನಿರಾಶರಾಗಿ ಕಲ್ಯಾಣವನ್ನು ಬಿಟ್ಟು ಕಪ್ಪಡಿಸಂಗಮದತ್ತ ತಿರುಗಿ ಅಲ್ಲಿ ಕ್ರಿ.ಶ. ೧೧೬೭-೧೧೬೮ರ ಸುಮಾರಿಗೆ ಬಯಲಾದರೆಂದು ತಿಳಿದುಬರುತ್ತದೆ.'[18]

ಹೀಗೆ ಕಲ್ಯಾಣದ ಅಶಾಂತ ವಾತಾವರಣರದಲ್ಲಿ ನಿಲ್ಲಲಾರದೆ ಸಂಗಮನಾಥನ ಧ್ಯಾನ ಮಾಡುತ್ತ ದುಃಖಭಾವದಿಂದ ಕೂಡಲಸಂಗಮ ಕ್ಷೇತ್ರದತ್ತ ಹೊರಟ ಬಸವಣ್ಣನವರಿಗೆ ತಮ್ಮ ಬಾಳ ಸಂಗಾತಿ, ಮೆಚ್ಚಿನ ಮಡದಿ ನೀಲಲೋಚನೆಯ ನೆನಪಾಗುತ್ತದೆ. ಆಗ ಬಸವಣ್ಣನವರು ತಾವು ಕೂಡಲಸಂಗಮನಲ್ಲಿ ಐಕ್ಯರಾಗುವುದಾಗಿಯೂ ನೀಲಲೋಚನೆಯೂ ಕೂಡಲಸಂಗಮ ಕ್ಷೇತ್ರಕ್ಕೆ ಬಂದು ಅಲ್ಲಿ ಐಕ್ಯಳಾಗಬೇಕೆಂದೂ ಹೇಳಿ ಕಳುಹಿಸಿದರು. ಬಸವಣ್ಣನವರ ಅಪ್ಪಣೆಯನ್ನು ಹೊತ್ತುತಂದ ಹಡಪದ ಅಪ್ಪಣ್ಣನು ಕಲ್ಯಾಣಕ್ಕೆ ಹೋಗಿ, ನೀಲಲೋಚನೆಗೆ ವಿಷಯ ತಿಳಿಸುತ್ತಾನೆ. ಆಗ ಆಕೆ ಅಪ್ಪಣ್ಣನಿಗೆ ಹೇಳುವ ಮಾತುಗಳಿಂದ ಆಕೆ ಎಂತಹ ಜ್ಞಾನಿ, ಆಧ್ಯಾತ್ಮಾನುಭವವುಳ್ಳವಳು ಎಂಬುದು ತಿಳಿಯುತ್ತದೆ. 'ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ ? ನಾನಾರ ಹೊಂದುವೆನೆಂದು ಭ್ರಮೆ ಬಡಲೇಕಯ್ಯ ? ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ ? ಪರಿಣಾಮ ಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣಾ ?'[19]

---

16. ವಚನಶಾಸ್ತ್ರಸಾರ—ಭಾಗ ೧, ಪುಟ ೧೬೬.
17. ಬಸವರಾಜದೇವರ ರಗಳೆ—ಸಂ : ಟಿ. ಎಸ್. ವೆಂಕಣ್ಣಯ್ಯ ೧೩ನೆಯ ಸ್ಥಲ, ಪುಟ ೮೯.
18. ಶಿ. ಶಿ. ಬಸವನಾಳ ಸ್ಮಾರಕ ಸಂಪುಟ: ಪುಟ ೪೮೫-೪೮೬.
19. ಶೂನ್ಯ ಸಂಪಾದನೆ ಪುಟ ೩೯೪, ವಚನ-೪೦

'ಆದಿನಾದ ಬಿಂದುವನರಿದು ಭಕ್ತಿ ಸಂಭಾಷಣೆಯ ಮಾಡಿದ ಬಸವಯ್ಯನು ಪ್ರಣವದಲ್ಲಿ ನಿಜವ ತೋರಿದ ಬಸವ
ಆ ಪ್ರಣವದ ಘನವ ಕಂಡ ಬಸವ ಇದರ ತೃಪ್ತಿಯನನುಭವಿಸಬಲ್ಲ ಬಸವ ನಾ ನಿನ್ನಲ್ಲಿಯಡಗಿ ನೀಯನ್ನಲ್ಲಿಯಡಗಿ
ನಾ ನಿನ್ನ ಮನವರಿವನರಿದು ಉಭಯವಿಲ್ಲವೆಂದೆನೆಂದೆ ಸುಖದ ಸಮಯಾಚಾರವ ಕಂಡು ನಿಜದಲ್ಲಿ ನಿಂದವಳನು ನಾನಯ್ಯ ಬಸವಯ್ಯ
ಸಂಗಯ್ಯನಲ್ಲಿ ನಿಜವಿಡಿದ ಹೆಣ್ಣು ನಾನೆ ಅಹುದೆಂದು ನುಡಿದೆನಯ್ಯ ಅಪ್ಪಣ್ಣ'[20]

'ಸಂಗನ ಬಸವಣ್ಣನೆಂದ ನಿರೂಪಕ್ಕೆ ಹಿಂಗದೆ ಕರವೆತ್ತಿ ಮುಗಿವುತಲಿ ಸಂಗಮನಾಥನೀತನೆಂದೆನುತಲೆನ್ನಂಗಯ್ಯ ಲಿಂಗದೊಳಡಗುವೆ'[21] ಎಂದು ತನ್ನ ನಿಶ್ಚಯವನ್ನು ತಿಳಿಸಿದಳು. ಮೋಹದಿಂದ ನಿಜವನ್ನು ಮರೆತರಲ್ಲಾ ಬಸವಣ್ಣನವರು ಸಂಗಮನಾಥ ಅಲ್ಲಿ ಇದ್ದಾನೆ, ಇಲ್ಲಿಲ್ಲ ಎಂಬ ಭ್ರಾಂತಿ ಅವರಿಗೆ ಜನಿಸಿತಲ್ಲಾ ಎಂದು ಆಕೆ ವ್ಯಥೆಪಟ್ಟು, ಇಷ್ಟಲಿಂಗದೆದುರು, 'ನೋಡು ನೋಡು ನೋಡು ಲಿಂಗವೆ, ನೋಡು ಬಸವಯ್ಯನಾಟವಾ. ಅಲ್ಲಿಗೆನ್ನನು ಬರಹೇಳಿದರಂತೆ ಇಲ್ಲಿ ತಾವಿಲ್ಲವೆ ಸಂಗಯ್ಯನು. ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು ಬಲ್ಲ ಮಹಾತ್ಮಂಗಿದು ಗುಣವೆ'[22] ಎಂದು ಆತ್ಮ ನಿವೇದನ ಮಾಡಿಕೊಂಡಳು.

ನೀಲಲೋಚನೆಯ ನಿಶ್ಚಯವನ್ನು ಹಡಪದ ಅಪ್ಪಣ್ಣನು ಬಸವಣ್ಣನವರಿಗೆ ಮುಟ್ಟಿಸುತ್ತಾನೆ. ಆಗ ಬಸವಣ್ಣನವರು,

'ನಾನಾಭವದಲ್ಲಿ ಹುಟ್ಟಿದ ಪ್ರಾಣಿಯನಿಲ್ಲಿಗೆ ತಂದೆ. ಇನ್ನು ಹುಟ್ಟಲಾರೆನು, ಹೊಂದಲಾರೆನು, ಜನನ ಮರಣವೆಂಬೆರಡಕ್ಕೆ ಹೊರಗಾದೆನಯ್ಯ. ನೀವು ಹೇಳಿದ ಮಣಹವ ಮಾಡಿದೆ. ಇನ್ನು ನಿಮ್ಮೊಳಗೆ ಕೂಡಿಕೊಳ್ಳಾ ಕೂಡಲಸಂಗಮದೇವಾ[23]' ಎಂದು ಸಂಗಮನಾಥನೊಳು ಗಾಳಿಯೊಳು ಸುಳಿಗಾಳಿ ಬೆರೆದಂತೆ, ಪಾಲೊಳ್ ಪಾಲ್ ಬೆರೆಸಿದಂತೆ ಐಕ್ಯರಾಗುತ್ತಾರೆ. ಬಸವಣ್ಣನವರು ಐಕ್ಯರಾದ ವಿಚಾರ ನೀಲಲೋಚನೆಗೆ ಮುಟ್ಟುತ್ತದೆ. ಅವರ ಐಕ್ಯವನ್ನು ಕೇಳಿದ ತಕ್ಷಣ ನೀಲಲೋಚನೆಗೆ ಮೋಹ ಕವಿದು ದುಃಖ ಉಂಟಾದರೂ ಮರುಕ್ಷಣವೇ ಕಣ್ತೆರೆದು ಆತ್ಮಜ್ಞಾನ ಉದಯಿಸುತ್ತದೆ. 'ಎನಗಿನ್ನೇನು, ಎನಗಿನ್ನೇನು ಎನ್ನಯ್ಯನೈಕ್ಯವನೈದಿದ ಬಳಿಕ ? ಎನಗೆ ಕಾಮವಿಲ್ಲ. ಎನಗೆ ಪ್ರಾಣವಿಲ್ಲ. ಎನಗೆ ಹೃದಯದ ಹಂಗು ಹರಿದು ಪರಿಣಾಮ ಪ್ರಸಾದಿಯಾದೆನಯ್ಯ ಸಂಗಯ್ಯ[24]'. ಎಂದು ಆತ್ಮಾನುಸಂಧಾನದಲ್ಲಿ ತೊಡಗಿದ ಆಕೆ, 'ಎಲೆ ಅಯ್ಯ ಕರಸ್ಥಲ ಬಯಲಾಯಿತ್ತು. ಎನಗೆ ಕರಸ್ಥಲ ಮನಸ್ಥಲವಾಯಿತ್ತು ಸಂಗಯ್ಯ. ಬಸವಯ್ಯ ಹೋದನತ್ತ ನಾನಡಗಿದೆನಯ್ಯ ನಿನ್ನತ್ತ' ಎಂದು ಹೇಳುತ್ತ, ಸಮುದ್ರದಲ್ಲಿ ಬುದ್ಬುದಗಳಡಗಿದಂತೆ, ಆಕಾಶದೊಳಡಗಿದ ಮಿಂಚಿನಂತೆ, ಶರೀರದೊಳಡಗಿದ ಚೈತನ್ಯದಂತೆ, ನಯನದಲ್ಲಡಗಿದ ಪ್ರತಿಬಿಂಬದಂತೆ ತನ್ನ ಇಷ್ಟಲಿಂಗದಲ್ಲಿ ಏಕಾರ್ಥವಾಗಿ ನಿರ್ವಯಲನೈದಿದಳು.

ಈ ಮೇಲಿನ ಮಾತುಗಳು ನೀಲಲೋಚನೆ ಮುಟ್ಟಿದ್ದ ಆಧ್ಯಾತ್ಮದ ನೆಲೆಯನ್ನು ಸೂಚಿಸುತ್ತವೆ. ಆಕೆಯ ತಿಳಿವಿನ ಮಟ್ಟ ಹಿರಿದಾದುದು. ಮುಕ್ತಿಯನ್ನೈದಬೇಕಾದರೆ, ಮನಃಶಾಂತಿಯನ್ನು ಪಡೆಯಬೇಕಾದರೆ ನಾವು ಎಲ್ಲಿಯೋ ದೂರ ಹೋಗಬೇಕಾಗಿಲ್ಲ. ಇದ್ದಲ್ಲಿಯೇ ಅದನ್ನು ಸಾಧಿಸಬಹುದು ಎಂಬ ಮೇಲ್ಮಟ್ಟದ ಅರಿವನ್ನು ಕಂಡಿದ್ದ ಆಕೆ ತನ್ನ ಕರಸ್ಥಲದಲ್ಲಿದ್ದ ಇಷ್ಟಲಿಂಗದಲ್ಲಿ ಐಕ್ಯವಾದಳು. ಆಕೆಯ ಅನುಭಾವದ ಬಗ್ಗೆ ಬಸವಣ್ಣನವರು ಭಕ್ತಸ್ಥಲದಲ್ಲಿದ್ದರೆ, ನೀಲಲೋಚನೆ ಪ್ರಾಣಲಿಂಗಿಸ್ಥಲದಲ್ಲಿದ್ದಳೆಂದು ಹೇಳುತ್ತಾರೆ ಅನುಭಾವಿಗಳು. ಹೀಗೆ ಇಚ್ಛಾಮರಣವನ್ನಪ್ಪಿದ ನೀಲಲೋಚನೆ ಭಕ್ತಿಭಂಡಾರಿ ಬಸವಣ್ಣನವರಿಗೆ ಅನುರೂಪಳಾದ ಪತ್ನಿ. 'ತಾಳ್ಮೆ ನಿಷ್ಠೆಗಳ ಸಾಕಾರಮೂರ್ತಿಯಾದ ನೀಲಾಂಬಿಕೆ ನಾಡಿನ ನಾರಿಯರಿಗೆ ಬೆಳಕಾಗಬಲ್ಲ ಪಂಚರತ್ನಗಳಲ್ಲಿ ಹಿರಿಯಳಾಗಿದ್ದಾಳೆ[25]'.

ನೀಲಲೋಚನೆಯ ವಚನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿಲ್ಲ. ಈ ಲೇಖಕನಿಗೆ ದೊರೆತ 'ನೀಲಲೋಚನೆಯ ವಚನಗಳು' ಎಂಬ ಪುಸ್ತಕರೂಪದಲ್ಲಿ ಸಂಪಾದಿತವಾಗಿ ಪ್ರಕಟವಾಗಿರುವ ೪೫ ವಚನಗಳು ಬಸವಣ್ಣನವರನ್ನು ಕುರಿತು ನೀಲಲೋಚನೆ ಬರೆದವುಗಳು. ಈ ಎಲ್ಲ ವಚನಗಳೂ ಬಸವಣ್ಣನವರ ಐಕ್ಯದ ನಂತರ ನೀಲಲೋಚನೆ ಅವರನ್ನು ಸ್ಮರಿಸಿ ಹಾಡಿದಂತಿವೆ. ಈ ವಚನಗಳಲ್ಲಿ ಆಕೆ ಬಸವಣ್ಣನವರ ಭಕ್ತಿ,ಜ್ಞಾನ, ವೈರಾಗ್ಯಗಳನ್ನು ಮೇಲಿಂದ ಮೇಲೆ ಹಾಡಿರುವುದನ್ನು ಕಾಣುತ್ತೇವೆ. 'ಆ ಮಹಾವ್ಯಕ್ತಿತ್ವದ ಸ್ಮರಣೆಯಿಂದ ಉಣ್ಮಿದ ಉದ್ಗಾರಗಳಂತಿವೆ ಈ ಎಲ್ಲ ವಚನಗಳು. ಏಕಮುಖವಾದ ಒಂದೇ ಭಾವ ಇವುಗಳಲ್ಲಿ ಮಿಡಿಯುತ್ತಿದೆ'[26]. ಬಸವಣ್ಣನವರು ಕೂಡಲ ಸಂಗಮನಲ್ಲಿ ಐಕ್ಯರಾದ ಅಂಶ ನೀಲಲೋಚನೆಯ ಈ ವಚನಗಳಿಂದ ಸ್ಪಷ್ಟವಾಗುತ್ತದೆ. ಬಸವಣ್ಣನವರು ಸರ್ವ ತ್ಯಾಗಮಾಡಿ ಸಂಗಮೇಶ್ವರನಲ್ಲಿ ಐಕ್ಯರಾಗುವ ವೇಳೆಗೆ ನೀಲಲೋಚನೆಯು ಆಧ್ಯಾತ್ಮದ ಪರಾಕಾಷ್ಠೆಯನ್ನು ಮುಟ್ಟಿದ್ದಳು. ಅವರಿಬ್ಬರ ನಡುವೆ ಸತಿ–ಪತಿ ಭಾವ ಮಾಯವಾಗಿತ್ತು ಎಂಬ ಅಂಶವನ್ನು

20. ನೀಲಲೋಚನೆಯ ವಚನಗಳು- ಸಂ: ಸಿ. ಕೆ. ಪರುಶುರಾಮಯ್ಯ ವಚನ-೧೯ ಪುಟ-೩೧
21. ಶೂನ್ಯ ಸಂಪಾದನೆ ಪುಟ-೩೯೪, ವಚನ-೭
22. ಶೂನ್ಯಸಂಪಾದನೆ-ಪುಟ ೩೪೯-ವಚನ-೧
23. ಶೂನ್ಯಸಂಪಾದನೆ-ಪುಟ ೩೫೫-ವಚನ-೪೫
24. ಶೂನ್ಯಸಂಪಾದನೆ-ಪುಟ-೩೯೭-ವಚನ-೫೩
25. ಶ್ರೀಮತಿ ಶಾಂತಾದೇವಿ ಮಾಳವಾಡ : ಪ್ರಸಾದ-ಪುಟ-೬೬.
26. ನೀಲಲೋಚನೆಯ ವಚನಗಳು-ಸಂ. ಸಿ.ಕೆ. ಪರಶುರಾಮಯ್ಯ ಮುನ್ನುಡಿ ಪುಟ–VIII

'ಮಡದಿ ಎನ್ನಲಾಗದು ಬಸವಂಗೆ ಎನ್ನನು, ಪುರುಷನೆನಲಾಗದು ಬಸವನನೆನಗೆ, ಉಭಯದ ಕುಲವಹಳಿದು ಬಸವಗೆ ಶಿಶುವಾದೆ ಬಸವನೆನ್ನ ಶಿಶುವಾದ. ಪ್ರಮಥ ಪುರಾತನರು ಸಾಕ್ಷಿಯಾಗಿ ಸಂಗಯ್ಯನಿಕ್ಕಿದ ದಿಬ್ಯವ ಮೀಱಿದೆ ಬಸವನೊಳಗಾನಡಗಿದೆ'27

ಎಂಬ ಈ ವಚನ ಸ್ಪಷ್ಟಪಡಿಸುತ್ತದೆ.

ನೀಲಲೋಚನೆ ವಚನಗಳನ್ನಲ್ಲದೆ ಗೀತೆಗಳನ್ನು ಬರೆದಿದ್ದಾಳೆ. ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರು ಗೀತೆ(ಹಾಡು)ಗಳನ್ನು ರಚಿಸಿದ್ದರೆಂಬುದನ್ನು ಡಾ॥ ಎಲ್ ಬಸವರಾಜು ಅವರು ಪ್ರಮಾಣಬದ್ಧವಾಗಿ ಪ್ರತಿಪಾದಿಸಿ, ಅಂತಹ ಹಾಡುಗಳ ಸಂಪಾದನ ಕಾರ್ಯವನ್ನು ಯಶಸ್ವಿಯಾಗಿ ಮಾಡಿಕೊಟ್ಟಿದ್ದಾರೆ. ಅವರ 'ಶಿವದಾಸ ಗೀತಾಂಜಲಿ'ಎಂಬ ಗ್ರಂಥದಲ್ಲಿ ನೀಲಲೋಚನೆಯ ಕೆಲವು ಹಾಡುಗಳಿವೆ.

ನೀಲಲೋಚನೆ ಈಗ ದೊರೆತಿರುವ ವಚನ-ಹಾಡುಗಳಲ್ಲದೆ ಇನ್ನೂ ಅನೇಕ ವಚನಗಳನ್ನು ಬರೆದಿರಬೇಕು. ಅವುಗಳು ಸಿಕ್ಕಿದರೆ ಆಕೆಯ ಕಾವ್ಯಶಕ್ತಿಯ ಮೇಲೆ ಹೆಚ್ಚು ಬೆಳಕು ಬೀಳುವುದು ಸಾಧ್ಯ.

## ನಾಗಲಾಂಬಿಕೆ

**—ಕಮಲಾ ಹಂಪನಾ**

'ಚಂದನವ ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೆ?' ಶಿವಶರಣರ ಬದುಕಿಗೆ ಹಿಡಿದ ಮಣಿದರ್ಪಣ ಈ ಮೇಲಿನ ವಚನ ವಾಕ್ಯ. ಹುವ್ವು ಅರಳಿ ತನ್ನ ಪರಿಮಳವನ್ನು ಇತರರಿಗೆ ಧಾರೆ ಎರೆದು ಕೊಟ್ಟಾಗಲೇ ಅದರ ಆತ್ಮಕ್ಕೆ ತೃಪ್ತಿ ! ದೇವರ ಅಡಿ ಯನ್ನೋ, ಸ್ತ್ರೀಯರ ಮುಡಿಯನ್ನೊ ಸೇರಿದಾಗಲೇ ಅದರ ಬದುಕು ಸಾರ್ಥಕ! ತನ್ನ ಸುಖಕ್ಕಾಗಿಯೇ ಜೀವಿಸುವ ಅಸಂಖ್ಯಾತ ಸಂಖ್ಯೆಯ ಜನತೆಯ ಮಧ್ಯೇ, ಧರ್ಮಕ್ಕಾಗಿ, ಧರ್ಮಕ್ಕೆ ದುಡಿಯುವ ವ್ಯಕ್ತಿಗಳಿಗಾಗಿ ಜೀವಿಸುವವರು ಬಹಳ ಕಡಿಮೆ. ತಮ್ಮೆಲ್ಲ ಸುಖವನ್ನು ಇತರರ ಹಿತಕ್ಕಾಗಿ ತ್ಯಾಗ ಮಾಡುವ ವ್ಯಕ್ತಿಗಳನ್ನು ಬೆರಳೆಣಿಕೆಯ ಸಂಖ್ಯೆಯಲ್ಲಿ ಗುರುತಿಸಬಹುದು.

ಸಮಾಜದಲ್ಲಿ ಒಂದು ದೊಡ್ಡ ಕ್ರಾಂತಿ ನಡೆದಾಗ ಅದರ ಆದ್ಯಪ್ರವರ್ತಕನನ್ನಾಗಿ ಒಬ್ಬ ವ್ಯಕ್ತಿಯನ್ನು ನಾವು ಗುರು ತಿಸುತ್ತೇವೆ. ಭಾರತ ಸ್ವಾತಂತ್ರ್ಯದ ಯಶೋಗೀತೆಯನ್ನು ಹಾಡುವಾಗ ಮಹಾತ್ಮಾಜೀಯವರನ್ನು ಸ್ಮರಿಸುತ್ತೇವೆ. ಅವರ ಈ ಶ್ರೇಯಸ್ಸಿನ ಹಿಂದೆ ಅವರ ಎರಡು ಶ್ವಾಸಕೋಶಗಳಂತೆ, ಎರಡು ಕಣ್ಣುಗಳಂತೆ ಅವರಿಗೆ ಚೈತನ್ಯ ತುಂಬಿದವರು ತಾಯಿ ಪುತಲೀ ಬಾಯಿ, ಪತ್ನಿ ಕಸ್ತೂರೀಬಾ. ಇದೇ ರೀತಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ, ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾ ಜಿಕ, ಆರ್ಥಿಕ ಕ್ರಾಂತಿಯ ಕಹಳೆಯನ್ನು ಮೊಳಗಿಸಿದ ಶಿವಶರಣರಲ್ಲಿ ಭಕ್ತಿಭಂಡಾರಿ ಬಸವಣ್ಣನವರು ಮುಖ್ಯರು. ಅವರ ಸುಪ್ತ ಚೈತನ್ಯ ವಿಕಸನಗೊಂಡದ್ದು, ಅಂತರಂಗದ ಪ್ರತಿಭೆ ಪ್ರಕಟಗೊಂಡದ್ದು ಇಂಥ ಒಬ್ಬ ಹೆಣ್ಣುಮಗಳ ಆರೈಕೆಯ ಪ್ರಭಾವಳಿಯ ಮೂಲಕ. ಲೋಕದ ಅನೇಕ ಮಹಾಪುರುಷರ ದಿವ್ಯಶಕ್ತಿಯ ಹಿಂದೆ ಕಾಣದ ಕೈಯೊಂದು ಎಂದೆಂದೂ ಆಸರೆಯಾಗಿರುತ್ತದೆ. ಅದು ತಾಯಿಯ ಕೈ ಆಗಬಹುದು, ಸೋದರಿಯದಾಗಬಹುದು, ಅಥವಾ ಪತ್ನಿಯದೂ ಆಗಬಹುದು.

ಬಸವಣ್ಣನವರ ಬೃಹತ್ ಬದುಕಿನ ಹಿಂದೆ ಇಂಥ ಒಂದು ತ್ಯಾಗ ಜೀವಿಯ ಕೈ ನೆರವಿಗೆ ನಿಂತಿತು. ಆಕೆಯೇ ಬಸವಣ್ಣನ ಅಕ್ಕ, ಅಕ್ಕನಾಗಮ್ಮ ಅಥವಾ ನಾಗಲಾಂಬಿಕೆ. ಮೆಚ್ಚಿನ ಮಗಳು, ಉತ್ತಮ ಗೃಹಿಣಿ, ಶಿವಯೋಗಿನಿ, ಆದರ್ಶದ ಅಕ್ಕ, ಅಚಲ ಭಕ್ತೆ, ಸಹನಶೀಲೆ, ಮಮತೆಯ ತಾಯಿ, ನಿಸ್ವಾರ್ಥ ತ್ಯಾಗಿ, ಅನುಭಾವಿ, ವಚನಗಾರ್ತಿ, ಆಧ್ಯಾತ್ಮವೀರೆ, ಕರ್ತವ್ಯಪರೆ–ಒಂದೇ ಎರಡೇ ಅಕ್ಕನಾಗಮ್ಮನ ಸದ್ಗುಣಗಳು ! ಸತ್‌ಕರ್ಮವೊಂದೇ ತನ್ನ ಕರ್ತವ್ಯವೆಂದು ಬಗೆದ ನಾಗಲಾಂಬಿಕೆ ತಮ್ಮ ಬಸವಣ್ಣನನ್ನು ಭಕ್ತಿಭಂಡಾರಿಯನ್ನಾಗಿಯೂ, ಮಗ ಚೆನ್ನಬಸವಣ್ಣನನ್ನು ಜ್ಞಾನಜ್ಯೋತಿಯನ್ನಾಗಿಯೂ ಕಂಡರಿಸಿದಳು.

ಬಾಗೇವಾಡಿಯ ಮಾದರಸ–ಮಾದಲಾಂಬಿಕೆಯರ ಮಗಳಾಗಿ ಸನಾತನ ಶೈವ ಬ್ರಾಹ್ಮಣ ಮನೆತನ ಒಂದರಲ್ಲಿ ನಾಗ ಲಾಂಬಿಕೆ ಜನಿಸಿದಳು. ಸುಸಂಸ್ಕೃತ–ದೈವಭಕ್ತ ತಂದೆ–ತಾಯಿಗಳಿಂದ ಸದಾಚಾರ ಸದ್ಭಕ್ತಿಗಳನ್ನು ನಾಗಲಾಂಬಿಕೆ ಚಿಕ್ಕಂದಿನಿಂದಲೇ ಮೈಗೂಡಿಸಿಕೊಂಡಳು. ಮಾದರಸನಾದರೋ ನಾಗಲಾಂಬಿಕೆ ಹೆಣ್ಣುಮಗುವೆಂದು ಅಸಡ್ಡೆ ಮಾಡಲಿಲ್ಲ. ಆಕೆಗೆ ಕನ್ನಡ–ಸಂಸ್ಕೃತದ ವಿದ್ಯಾಭ್ಯಾಸವಾಯಿತು. ಆ ಮೂಲಕ ಶಿವಶರಣರ ಪುರಾಣಗಳನ್ನು, ಧರ್ಮ ಗ್ರಂಥಗಳನ್ನು ಓದುವ ವಿದ್ಯೆ ದೊರಕಿಸಿದ. ಬುದ್ಧಿವಂತೆಯಾದ ನಾಗಲಾಂಬಿಕೆ ಈ ವಿದ್ಯೆಯ ತಳಹದಿಯ ಮೇಲೆ ತನ್ನ ಅನುಭಾವ ಹೆಚ್ಚಿದಂತೆಲ್ಲಾ ಭಾವನೆಗಳು ತೀವ್ರ ಗೊಂಡಂತೆಲ್ಲಾ ಅವುಗಳನ್ನು ಹೊರಚೆಲ್ಲಲು ಮುಂದೆ ಆಕೆ ವಚನ ಮಾಧ್ಯಮದ ಹಾದಿ ಹಿಡಿದುಕೊಂಡಳು. ಆಕೆ ಇನ್ನೂ ಚಿಕ್ಕವಳು ಇರುವಾಗಲೇ ಬಸವಣ್ಣ ತಮ್ಮನಾಗಿ ಅವರ ಕುಟುಂಬವನ್ನು ಪ್ರವೇಶಿಸಿದ. ಚಿಕ್ಕಂದಿನಿಂದಲೇ ದೈವಭಕ್ತಳಾದ ಆಧ್ಯಾತ್ಮ ಜೀವಿಯಾದ ನಾಗಲಾಂಬಿಕೆ ಬಸವಣ್ಣನನ್ನು ಕೇವಲ ಒಬ್ಬ ತಮ್ಮನೆಂದು ಭಾವಿಸಲಿಲ್ಲ, ಶಿವನ ಕರುಣೆಯಿಂದ ತಮ್ಮ ಸಂಸಾರ

27. ನೀಲಲೋಚನೆಯ ವಚನಗಳು-ವಚನ-೨೬

ವನ್ನು ಪ್ರವೇಶಿಸಿದ ಒಂದು ದಿವ್ಯ ಬೆಳಗು ಎಂದೆ ಆ ಮಗುವನ್ನು ಭಾವಿಸಿದಳು. ಅಂದಿನಿಂದಲೇ ಆ ಬೆಳಗನ್ನು ಮಹಾಬೆಳಗನ್ನಾಗಿ, ಜಗತ್ತಿನ ಜ್ಯೋತಿಯನ್ನಾಗಿ ಬೆಳಗುವಂತೆ ಮಾಡಲು ಮನಸ್ಸಿನಲ್ಲಿ ನಿರ್ಧರಿಸಿಕೊಂಡಳು. ತನ್ನ ಕಣ್ಣು ರೆಪ್ಪೆಯಲ್ಲಿ ಮಗುವನ್ನು ಕಾಪಾಡಲು ಸಿದ್ಧಳಾದಳು. ಅಕ್ಕನಾಗಮ್ಮ ಆ ಮಗುವಿಗೆ ತಾಯಿಯೇ ಆದಳು.

ಅಂದಿನ ಕಾಲದ ಪದ್ಧತಿಯಂತೆ ನಾಗಲಾಂಬಿಕೆಯ ಮದುವೆ ಕಿರಿಯವಯಸ್ಸಿಗೆ ಶಿವಸ್ವಾಮಿಯ ಜೊತೆಯಲ್ಲಿ ನೆರವೇರಿತು. ನಾಗಲಾಂಬಿಕೆಯ ಮದುವೆಯ ವಿಷಯದಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಆಕೆ ಎಂದೂ ಕನ್ನೆಯಾಗಿಯೇ ಇದ್ದಳೆಂದೂ ಬಸವೇಶ್ವರರು ಕಕ್ಕಯ್ಯನ ಪ್ರಸಾದ ತಂದುಕೊಡಲು, ಅದನ್ನು ಸೇವಿಸಿದ ನಾಗಲಾಂಬಿಕೆ ಚೆನ್ನಬಸವಣ್ಣನಿಗೆ ಜನ್ಮವಿತ್ತಳೆಂದೂ ಕೆಲವು ವೀರಶೈವ ಪುರಾಣಗಳು ತಿಳಿಸುತ್ತವೆ. ಬಸವಣ್ಣನವರಿಗಿಂತ ಚೆನ್ನಬಸವಣ್ಣ ಕೇವಲ ಎಂಟು ವರುಷಗಳು ಚಿಕ್ಕವನು. ಬಿಜ್ಜಳನ ಮಂತ್ರಿಯಾಗಿರುವಾಗ ಬಸವಣ್ಣ ಪ್ರಸಾದವನ್ನು ತಂದುಕೊಟ್ಟಂತೆ ತಿಳಿಯುತ್ತದೆ. ಹಾಗಾದರೆ ಬಸವಣ್ಣನವರ ಮರಣದ ವೇಳೆಗೆ ಚೆನ್ನಬಸವಣ್ಣನವರಿಗೆ ಕೇವಲ ಏಳು, ಎಂಟು ವರುಷಗಳು ವಯಸ್ಸಾಗಿರಬೇಕಿತ್ತು. ಆದರೆ ಬಸವಣ್ಣನವರು ಆಸ್ಥಾನ ಮಂತ್ರಿಗಳಾಗಿ ಶಿವದಾಸೋಹದಲ್ಲಿ ತೊಡಗಿದ್ದಾಗ, ಅವರ ಬಲಗೈ ಬಂಟನಾಗಿ ತುಂಬುಹರೆಯದ ಚೆನ್ನಬಸವಣ್ಣನನ್ನು ಕಾಣುತ್ತೇವೆ.

ಸಿಂಗಿರಾಜ ಪುರಾಣದಲ್ಲಿ ಶಿವ(ದೇವ)ಸ್ವಾಮಿ ನಾಗಲಾಂಬಿಕೆಯ ಪತಿಯೆಂದು ಹೇಳಿದೆ. ಬಲದೇವ ಮಂತ್ರಿಯು ಬಸವಣ್ಣನ ಮದುವೆಗಾಗಿ ಆತನನ್ನು ಕಲ್ಯಾಣಕ್ಕೆ ಕರೆಸಿಕೊಂಡಾಗ ಶಿವಸ್ವಾಮಿಯೂ ಜೊತೆಯಲ್ಲಿ ಹೋಗಿದ್ದನೆಂದು ತಿಳಿದು ಬರುತ್ತದೆ. ಮತ್ತು ಅಲ್ಲಿ ಅವರು ಸೊಡ್ಡಳ ಬಾಚರಸನ ಮನೆಯಲ್ಲಿ ಮೊದಲು ಇಳಿದುಕೊಂಡಿದ್ದರೆಂದೂ ಈ ಗ್ರಂಥದಲ್ಲಿ ಹೇಳಿದೆ. ಇದರಿಂದ ನಾಗಲಾಂಬಿಕೆಗೆ ಚಿಕ್ಕವಯಸ್ಸಿನಲ್ಲಿಯೇ ಮದುವೆಯಾಗಿದ್ದು ಆಕೆಗೆ ಸುಮಾರು ಹದಿನಾಲ್ಕು ವರ್ಷಗಳಿರುವಾಗ ಚೆನ್ನಬಸವಣ್ಣನ ಜನನವಾಗಿರಬಹುದೆಂದು ಭಾವಿಸಬಹುದು. ಪವಾಡದ ಪೊರೆಯಿಂದ ಕಳಚಿಕೊಂಡು ನೋಡಿದರೆ ಇದೇ ಸತ್ಯಾಂಶವೆಂದೂ ನಂಬಬಹುದು. ಮಹಾಭಾರತದಲ್ಲಿನ ಕರ್ಣನ ಜನನವನ್ನು ಕುರಿತು 'ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ'? ಎಂದು ಪ್ರಶ್ನಿಸಿರುವ ಬಸವಣ್ಣನವರು ಅವರ ಕಾಲದಲ್ಲೇ ಅಕ್ಕ ನಾಗಲಾಂಬಿಕೆಗೆ ಕೇವಲ ಪ್ರಸಾದ ಸೇವಿಸಿದ್ದರಿಂದ ಚೆನ್ನಬಸವಣ್ಣನ ಜನನವಾಯಿತೆಂದರೆ ನಂಬಲು ಹೇಗೆ ಸಾಧ್ಯ ?

ಶಿವಸ್ವಾಮಿ-ನಾಗಲಾಂಬಿಕೆ ಕೆಲವು ವರುಷಗಳ ಕಾಲ ಇಂಗಳೇಶ್ವದಲ್ಲಿ ನೆಲಸಿರಬಹುದು. ಇದೇ ಸಮಯದಲ್ಲಿ ತರ್ದೇವಾಡಿ ರೇವಣಸಿದ್ಧೇಶ್ವರರು ಅಲ್ಲಿಗೆ ಬಂದು ಕೆಲಕಾಲ ತಂಗಿದ್ದರು. ಆಧ್ಯಾತ್ಮ ಶಕ್ತಿಯುಳ್ಳ ರೇವಣಸಿದ್ಧೇಶ್ವರರಿಂದ ಶಿವಯೋಗ ಮಾರ್ಗವನ್ನು ಅಭ್ಯಾಸ ಮಾಡಿ ನಾಗಲಾಂಬಿಕೆ ಸಾಧಿಸಿದಳು. ಅಷ್ಟರಲ್ಲಿ ಬ್ರಾಹ್ಮಣ ಸಂಪ್ರದಾಯದ ಪ್ರಕಾರ ಬಸವಣ್ಣ ಯಜ್ಞೋಪವೀತವನ್ನು ಧರಿಸದೆ ಮನೆಬಿಟ್ಟು ಹೊರಟು ಕೂಡಲಸಂಗಮದಲ್ಲಿ ಜಾತವೇದಮುನಿಗಳ ಬಳಿ ವಿದ್ಯಾಭ್ಯಾಸಕ್ಕೆ ನಿಂತ. ಅಕ್ಕನಾಗಲಾಂಬಿಕೆಯೂ ತಮ್ಮನನ್ನೇ ಅನುಸರಿಸಿದಳು. ಕಿರಿವಯಸ್ಸಿನ ತಮ್ಮನ ಜೊತೆಯಲ್ಲಿ ಮಗನ ರಕ್ಷಣೆಯೂ ಮುಖ್ಯವಾಗಿತ್ತು. ಅಕ್ಕನಾಗಮ್ಮನ ಸದಾಚಾರ, ದೈವಭಕ್ತಿ, ವಿಶಾಲ ಮನೋಭಾವ, ನಿಷ್ಠಾವಂತ ಬದುಕು ಬಸವಣ್ಣನ ಮೇಲೆ ಗಾಢವಾದ ಪರಿಣಾಮ ಬೀರಿತು. ಬಸವಣ್ಣ ತನ್ನ ಅರಿವಿಲ್ಲದೇ ಅಕ್ಕನನ್ನು ಗುರುಸ್ಥಾನದಲ್ಲಿ ಗುರುತಿಸಿದ. ಶಿವಭಕ್ತಿಯ ಖಚಿತ ನಿಲುವನ್ನು ಅಕ್ಕ ಆತನಿಗೆ ತೋರಿಸಿದ್ದಳು. ಆಕೆಯ ಒಳ್ಳೆಯ ಭಾವನೆಯಿಂದ ಪ್ರೇರಣೆಗೊಂಡು ಬಸವಣ್ಣ ಬೆಳೆದ. ಆತನ ನೋವು, ನಲಿವು, ಸಂಕಟ ಎಲ್ಲವೂ ಅಕ್ಕನಾಗಮ್ಮನಿಗೆ ಮೊದಲು ಅರ್ಪಿತ.

ಬಸವಣ್ಣ ಬಿಜ್ಜಳನ ಆಸ್ಥಾನ ಸೇರಿದ ಮೇಲೆ ಅಕ್ಕನನ್ನು ಕರೆಸಿಕೊಂಡ. ಬಸವಣ್ಣನ ಮನೆಯ ಜ್ಯೋತಿಗಳಾಗಿ ಗಂಗಾಂಬಿಕೆ-ನೀಲಾಂಬಿಕೆಯರು ಬಂದು ಸೇರಿದರು. ನಾಗಲಾಂಬಿಕೆಯ ಉತ್ತಮ ಮಾರ್ಗದರ್ಶನದಲ್ಲಿ ಬಸವಣ್ಣನ ಮನೆ ಮಹಾಮನೆಯಾಯಿತು. ಮನೆಯ ಜ್ಯೋತಿಗಳು ಧರ್ಮಜ್ಯೋತಿಗಳಾದುವು. ನಾಗಲಾಂಬಿಕೆಗೆ ಮುಂಜಾವಿನಿಂದ ಸಂಜೆಯವರೆಗೂ ಮಹಾಮನೆಯನ್ನು ಪ್ರವೇಶಿಸುವ ಎಲ್ಲ ಶಿವಭಕ್ತರ ಊಟ-ಉಪಚಾರ, ವಸತಿ ಇವೆಲ್ಲದರ ಹೊಣೆ ಬಿಡುವಿಲ್ಲದ ದುಡಿಮೆಯಾಯಿತು. ಅನೇಕ ಶಿವಶರಣ--ಶರಣೆಯರು ಆಶೆಯಿಂದ ಶಿವಮಾರ್ಗದರ್ಶನ ಪಡೆದು ವೀರಶೈವ ಧರ್ಮವನ್ನು ಪ್ರಸಾರ ಮಾಡುವುದರಲ್ಲಿ ಸಮರ್ಥರಾದರು.

ಇಂಥ ಅಕ್ಕನ ಕಕ್ಷೆಯಲ್ಲಿ ಬೆಳೆದ ಬಸವಣ್ಣ ಭಕ್ತಿಯ ಭಂಡಾರಿಯೇ ಆದ. ಇಂಥ ತಾಯಿಯ ಮಡಿಲಲ್ಲಿ ಬೆಳೆದ ಚೆನ್ನಬಸವಣ್ಣ ಜ್ಞಾನಯೋಗಿಯಾದ. ತಾಯಿ-ಮಗ ಬಸವಣ್ಣನ ಎರಡು ಕಣ್ಣುಗಳೇ ಆದರು. ತನ್ನ ಸ್ವಸುಖವನ್ನು ಎಂದೋ ತ್ಯಾಗ ಮಾಡಿದ್ದ ನಾಗಲಾಂಬಿಕೆ ಶಿವಪೂಜೆ, ಶಿವಯೋಗಸಾಧನೆ, ಶೈವಧರ್ಮಪ್ರಚಾರ, ಶಿವಾನುಭವ ಪ್ರವಚನ, ಅತಿಥಿಸತ್ಕಾರ-ಇವುಗಳಲ್ಲಿ ಕಾಲ ಕಳೆದಳು. ಆಕೆಯ ಪ್ರಭಾವದಿಂದ ಮಹಿಳೆಯರ ಸ್ಥಾನಮಾನ ಹೆಚ್ಚಿತು. ವೀರಶೈವ ಧರ್ಮದಲ್ಲಿ ಮಹಿಳೆಯರಿಗೆ

ಶಿವಪೂಜೆಯ ಅಧಿಕಾರ ದೊರೆಯಿತು. ಸ್ನಾನಮಾಡಿ, ಭಸ್ಮಧರಿಸಿ, ಲಿಂಗಪೂಜೆ ಮಾಡಿಕೊಂಡರೆ ಅವರಿಗೆ ಯಾವ ಬಗೆಯ ಸೂತಕ–ಮೈಲಿಗೆ ಇಲ್ಲದಂತಾಯಿತು.

ಕಾಲ ಕಳೆಯಿತು, ಕೀರ್ತಿ ಬೆಳೆಯಿತು, ಅನುಭವ ಮಂಟಪ ಸಿದ್ಧವಾಯಿತು. ಕಲ್ಯಾಣಕ್ಕೆ ಸುಗ್ಗಿ ಬಂದ ಶಿವಶರಣ ಶರಣೆಯರ ಪ್ರವಾಹವನ್ನು ಅಕ್ಕನಾಗಮ್ಮ ನೋಡಿ ದಣಿಯಳು, ಹಾಡಿ ದಣಿಯಳು! ಅವರ ಸೇವೆಯಲ್ಲಿ ತನ್ನ ಶರೀರವನ್ನು ಶ್ರೀಗಂಧವಾಗಿ ಸವೆಸಿದಳು. ಆಗಿನ ಆಕೆಯ ಅನುಭಾವ, ವಚನಗಳಾಗಿ ಹೊರಹೊಮ್ಮಿದುವು. ಕನ್ನಡ ಸಾಹಿತ್ಯದ ದೃಷ್ಟಿಯಿಂದ ಅಕ್ಕನಾಗಮ್ಮನ ವಚನಗಳು ಸಂಖ್ಯೆಯಲ್ಲಿ ಕಡಮೆ, ಸತ್ವದಲ್ಲಿ ಹಿರಿಯವು. ದಿವಂಗತ ಫ.ಗು. ಹಳಕಟ್ಟಿಯವರ ಕಾಲಕ್ಕೆ ಆಕೆಯ ಕೇವಲ ನಾಲ್ಕು ವಚನಗಳು ಉಪಲಬ್ಧವಾಗಿದ್ದುವು; ಆದರೆ ಇಂದು ಹದಿನಾಲ್ಕು ವಚನಗಳು ದೊರೆತಿವೆ. ಆಕೆಯ ಅಂಕಿತ 'ಬಸವಣ್ಣಪ್ರಿಯ ಚನ್ನಸಂಗಯ್ಯ' ಎಂದು.

ಸದ್ಗೃಹಿಣಿಯಾದ ಅಕ್ಕನಾಗಮ್ಮನ ಬಳಗ ಇಂತಿದೆ :

> 'ಶ್ರೀಗುರುವೇ ತಂದೆ ತಾಯಿಯಾಗಿ ಲಿಂಗವೇ ಪತಿಯಾಗಿ ಜಂಗಮವೇ ಅತ್ತೆಮಾವಂದಿರಾಗಿ
> ಶಿವಭಕ್ತರೇ ಬಾಂಧವರಾಗಿ ಸತ್ಯ ಸದಾಚಾರವೆಂಬ ಮನೆಗೆ ಕಳುಹಿದರಾಗಿ ಶರಣಸತಿ ಎಂಬ ನಾಮ ನಿಜವಾಯಿತ್ತು.'

'ಶರಣಸತಿ-ಲಿಂಗಪತಿ'ಭಾವಕ್ಕೆ ಒಳಗಾದ ಅಕ್ಕನಾಗಮ್ಮನಂಥ ಆಧ್ಯಾತ್ಮ ಜೀವಿಗೂ ಲೋಕಾಪವಾದ ತಪ್ಪಲಿಲ್ಲ. ಆದರೆ ಅದಕ್ಕೆ ಆಕೆಯ ಸಾಂತ್ವನದ ನುಡಿ ಈ ವಚನದಲ್ಲಿ, ಉತ್ತರರೂಪದಲ್ಲಿ ಒಡಮೂಡಿದೆ ;

> 'ಮನದೊಡೆಯ ಮಹಾದೇವ ಮನವ ನೋಡಿಹೆನೆಂದು ಮನುಜರ ಕೈಯಿಂದ ಒಂದೊಂದ ನುಡಿಸುವನು.
> ಇದಕ್ಕೆ ಕಳವಳಿಸದಿರು ಮನವೆ! ಕಾತರಿಸದಿರು ತನುವೆ! ನಿಜವ ಮಱೆಯದಿರು ಕಂಡಾ
> ನಿಶ್ಚಿಂತನಾಗಿರು ಮನವೆ! ಬಸವಣ್ಣಪ್ರಿಯ ಚನ್ನಸಂಗಯ್ಯನು ಬೆಟ್ಟದನಿತಪರಾಧವನು ಒಂದು ಬೊಟ್ಟಿನಲಿ ತೊಡೆವನು.'

ಭಕ್ತರ ಅಪರಾಧದ ಹೊಣೆ ಶಿವನದು. ಅವನು ಅವರನ್ನು ರಕ್ಷಿಸಲೇಬೇಕು. ಭವದ ಬಂಧನದಲ್ಲಿ ಸಿಲುಕಿದ ವ್ಯಕ್ತಿಗೆ ಇದೆಲ್ಲ ಸಹಜ. ಸಹ್ಯವೊಂದೇ ಸುಲಭದ ದಾರಿ. ಅಕ್ಕನಾಗಮ್ಮ ಯೋಚಿಸಿದಳು, 'ಅಱಿವಿಲ್ಲದೆ ಈ ಭಾವದಲ್ಲಿ ಜನಿಸಿದೆ. ಇನ್ನು ಜ್ಞಾನದ ಅಱಿವು ಮೂಡಿದ ಬಳಿಕ ಬಳಲಲುಂಟೆ? ಹೃದಯ ಕಮಲಮಧ್ಯದಲ್ಲಿ ನಿಜವು ನೆಲೆಗೊಂಡ ಬಳಿಕ ಪುಣ್ಯಪಾಪವೆಂಬ ವಕ್ಕೆ ಹೊರಗಾದೆನು'ಎಂದು ಹಾಡಿದಳು. ಅಕ್ಕನಾಗಮ್ಮನ ಪ್ರಭಾವಕ್ಕೆ ಒಳಗಾದ ಶಿವಶರಣರ ಸಮೂಹ ಒಂದು ಕಡೆ, ಆಕೆಯ ಮೇಲೆ ಪ್ರಭಾವ ಬೀರಿದ ಹಿರಿಯ ಚೇತನಗಳ ದೊಡ್ಡ ಗುಂಪು ಇನ್ನೊಂದು ಕಡೆ, ಶಿವಶರಣರ ಸಂಬಂಧ ಅವರ ಸರ್ವಾಂಗದಲ್ಲಿ ನೆಲಸಿದೆ ಎಂದು ಆಕೆ ಹಾಡುತ್ತಾಳೆ :

> ಗುರು ಸಂಬಂಧಿ ಗುರುಭಕ್ತಯ್ಯನು ಲಿಂಗಸಂಬಂಧಿ ಪ್ರಭುದೇವರು ಜಂಗಮ ಸಂಬಂಧಿ ಸಿದ್ಧರಾಮನು
> ಪ್ರಸಾದ ಸಂಬಂಧಿ ಮರುಳಶಂಕರ ದೇವರು ಪ್ರಾಣಲಿಂಗ ಸಂಬಂಧಿ ಅನಿಮಿಷದೇವರು
> ಶರಣಸಂಬಂಧಿ ಘಟ್ಟಿವಾಳಯ್ಯನು ಐಕ್ಯಸಂಬಂಧಿ ಅಜಗಣ್ಣಯ್ಯನು ಇಂತಿವರ ಸಂಬಂಧ
> ಎನ್ನ ಸರ್ವಾಂಗದಲ್ಲಿ ನಿಂದು ಬಸವಣ್ಣಪ್ರಿಯ ಚನ್ನಸಂಗಯ್ಯನ ಹೃದಯಕಮಲದಲ್ಲಿ ನಿಜನಿವಾಸಿಯಾಗಿದ್ದೆನು'

ಹೀಗೆ ಷಟ್‌ಸ್ಥಲ ಸಂಬಂಧಿಗಳು ಶಿವಶರಣರು ; ಸರ್ವಾಂಗವೂ ಒಬ್ಬೊಬ್ಬರಿಗೆ ಅರ್ಪಿತವಾದ ಮೇಲೆ ಆಕೆಗೆ ಯಾವ ಹಂಗು? ಅಲ್ಲಮ ಪ್ರಭುವನ್ನು ಗುರುಸ್ಥಾನದಲ್ಲಿ ಅಕ್ಕನಾಗಮ್ಮ ಗೌರವಿಸಿದಳು. ಮಗ ಚೆನ್ನಬಸವಣ್ಣನಲ್ಲಿ ಜ್ಞಾನದ ಬೆಳಕ ಕಂಡಳು. ಭವದ ಬಳ್ಳಿಯ ಬೇರಹಱಿಯಿಸಿಕೊಂಡಳು.

> 'ಆಚಾರವೆಂಬುದು ಅಗೋಚರ ಆರಿಗೆಯೂ ಸಾಧ್ಯವಲ್ಲ ಆರಿಗೆಯೂ ಸಾಧ್ಯವಲ್ಲ,
> ಮರ್ತ್ಯಲೋಕದಲ್ಲಿ ಆ ಸದಾಚಾರದ ಬೆಳವಿಗೆಯು ಮೂಡಲೆಂದು ಬಸವಣ್ಣ ಬಂದು ಭಕ್ತಿಸ್ಥಲವ ಹರಹಿದ'

ಅಕ್ಕನಾಗಮ್ಮನಿಗೆ ಬಸವಣ್ಣನ ಹಿರಿಮೆ–ಗರಿಮೆಗಳು ಅಂತಸ್ತು ದಿನದಿನಕ್ಕೆ ಆಧ್ಯಾತ್ಮದ ಸೋಪಾನವೇರುತ್ತಿದ್ದುದನ್ನು ಕಂಡು ತೃಪ್ತಳಾದಳು. ತಾನು ಬೆಳಸಿದ ಕುಡಿ ದಾಂಗುಡಿಯಿಟ್ಟು ಶಿವಪಾದದ ಬಳಿ ಹಬ್ಬಿ ನಿಂತಿದೆ; ಅದು ಅಕ್ಕನಿಗೆ ಆನಂದವನ್ನು ತಂದಿದೆ; ಚೆನ್ನಬಸವಣ್ಣ ಆ ಅಣ್ಣನಿಗೆ ಹೆಗಲು ಕೊಟ್ಟು ನಿಂತಿದ್ದಾನೆ. ಈ ದೃಶ್ಯ ಅಕ್ಕನಾಗಮ್ಮನಿಗೆ ಹಿಡಿಸಲಾರದ ಆನಂದವನು ತಂದಿದೆ. ನೋಡಿದಲ್ಲಿ ಬಸವಣ್ಣನ ಪ್ರತಿಭೆ, ಕೇಳಿದಲ್ಲಿ ಬಸವಣ್ಣನ ಕೀರ್ತನೆ, ಹಾಡಿದಲ್ಲಿ ಬಸವಣ್ಣನ ಸಂಕೀರ್ತನೆ, ಎಲ್ಲೆಲ್ಲೂ ಬಸವಣ್ಣನೇ ಕಂಡ ಅಕ್ಕನಾಗಮ್ಮನಿಗೆ! ಮನತುಂಬಿ ತಮ್ಮನ ಹಿರಿಮೆಯನ್ನು ಹಾಡಿದಳು, ಕೊಂಡಾಡಿದಳು, ಆದರೂ ಆಕೆಗೆ ತೃಪ್ತಿಯಿಲ್ಲ.

> 'ಬಸವನೆ ಮುಖಮಜ್ಜೆ, ಬಸವನೆ ಅಮಲೋಕ್ಯ' 'ಎನ್ನ ಕುಲಸೂತಕವ ಕಳೆದಾತ ಬಸವಣ್ಣ ಎನ್ನ ಛಲಸೂತಕವ ಕಳೆದಾತ ಬಸವಣ್ಣ
> ಎನ್ನ ತನು ಸೂತಕವ ಕಳೆದಾತ ಬಸವಣ್ಣ ಎನ್ನ ಭಾವ ಸೂತಕವ ಕಳೆದಾತ ಬಸವಣ್ಣ'

ಹೀಗಿದ್ದ ಬಸವಣ್ಣ ಬಯಲಾದಾಗ, ಅಕ್ಕನಾಗಮ್ಮನ ದುಃಖವನ್ನು ಅರಿತವರಾರು ?

'ಬಸವಣ್ಣಾ, ನೀವು ಮರ್ತ್ಯಕ್ಕೆ ಬಂದು ನಿಂದಡೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲಾ ಪಸರಿಸಿತ್ತಲ್ಲಾ
ಅಯ್ಯಾ, ಸ್ವರ್ಗ, ಮರ್ತ್ಯ, ಪಾತಾಳದೊಳಗೆಲ್ಲಾ ನಿಮ್ಮ ಭಕ್ತಿಯ ಬೆಳವಿಗೆಯ ಘನವನಾರು ಬಲ್ಲರು!
ಅಣ್ಣಾ, ಶಿಖರನಟ್ಟಿದ ಮನೆಯ ಪೂರೈಸಿತ್ತೆಂದು ನೀವು ಲಿಂಗೈಕ್ಯವಾದಡೆ ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ
ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯಾ ನಿಮ್ಮೊಡನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣಾ
ಮರ್ತ್ಯಲೋಕದ ಮಹಾಮನೆ ಶೂನ್ಯವಾಯಿತ್ತಲ್ಲಾ ಬಸವಣ್ಣಾ ಎನ್ನನೊಯ್ಯದೆ ಹೋದೆಯಲ್ಲಾ ಪಂಚ ಪರುಷಮೂರ್ತಿ ಬಸವಣ್ಣಾ
ಬಸವಣ್ಣಪ್ರಿಯ ಚನ್ನಸಂಗಯ್ಯಂಗೆ ಪ್ರಾಣಲಿಂಗವಾಗಿ ಹೋದೆಯಲ್ಲಾ ಸಂಗನ ಬಸವಣ್ಣಾ'

ಬಸವಣ್ಣನ ಬಯಲು ಅಕ್ಕನಾಗಮ್ಮನಿಗೆ ಬರಸಿಡಿಲು. ಹರಳಯ್ಯ-ಮಧುವರಸರ ಪ್ರಕರಣ ಬಸವಣ್ಣನವರ ಹೃದಯವನ್ನು ಹಿಂಡಿತು. ಅಕ್ಕನಾಗಮ್ಮ ಚೆನ್ನಬಸವಣ್ಣನವರಿಗೆ ಮಹಾಮನೆಯ ಮಹತ್ಕಾರ್ಯವನ್ನು ವಹಿಸಿ ಕೂಡಲ ಸಂಗಮಕ್ಕೆ ಹೋಗಿ ಬಯಲಾದರು. ಈ ವಿಷಯವನ್ನು ಹಿಂದೆ ಆಗಲೇ ಪ್ರಸ್ತಾಪಿಸಿದೆ. ಈಗ ಅಕ್ಕನಾಗಮ್ಮನ ಕೈಯಕೋಲನ್ನು ಕಿತ್ತುಕೊಂಡಂತೆ ಆಯಿತು. ತತ್ತರಿಸಿದಳು, ಕುಸಿದಳು. 'ಎಳೆಗಜುವಿನ ಎಳೆಗಂತಿಯನು ಎಳೆದೊಯ್ವರೇ ಭಕ್ತರು ? ಅಯ್ಯೋ ಅಯ್ಯೋ ಎನಲೊಯ್ವರೇ'? ಎಂದು ರೋದಿಸಿದಳು. 'ಎನ್ನ ಪಾಪಿ ಮಾಡಿ ಉಳಿಹಿದೆಯಯ್ಯಾ' ಎಂದು ಅತ್ತಳು, ಮೊರೆಯಿಟ್ಟಳು. ಆದರೆ ಮುಂದಿನ ಕರ್ತವ್ಯಪ್ರಜ್ಞೆ ಆಕೆಯನ್ನು ಎಚ್ಚರಿಸಿತು. ದುಃಖವನ್ನು ಬದಿಗಿಟ್ಟಳು ; ಹೃದಯದ ಗಾಯ ಮಾಯಲಿಲ್ಲ.

ಅದೇ ವೇಳೆಗೆ ದೊರೆ ಬಿಜ್ಜಳನ ಕೊಲೆಯಾಗಿ ನಾಡೇ ವಿಷಜ್ವಾಲೆಗೆ ಸಿಲುಕಿತು. ಬಿಜ್ಜಳನ ಸೈನಿಕರು ಶಿವಶರಣರನ್ನು ಕಂಡಲ್ಲಿ ಕೊಲ್ಲಲಾರಂಭಿಸಿದರು. ಅವರನ್ನು ರಕ್ಷಿಸುವ ಹೊರೆ ಅಕ್ಕನಾಗಮ್ಮ ಚೆನ್ನಬಸವಣ್ಣನಂಥವರ ಪ್ರಮುಖ ಕರ್ತವ್ಯವಾಯಿತು. ಶಿವಶರಣನ್ನೆಲ್ಲಾ ಒಂದು ಕಡೆ ಕಲೆ ಹಾಕಿ ಮುಂದಿನ ಯೋಜನೆ ಮಾಡಲಾಯಿತು. ಮಡಿವಾಳ ಮಾಚಯ್ಯ, ಕಿನ್ನರಯ್ಯ, ರುದ್ರಮುನಿ ಮೊದಲಾದವರು ಕಲ್ಯಾಣವನ್ನು ತೊರೆದು ಶಿವಶರಣರೊಡನೆ ಸುರಕ್ಷಿತ ಜಾಗಕ್ಕೆ ವಲಸೆ ಹೋಗುವುದೊಂದೇ ಉತ್ತಮ ಮಾರ್ಗವೆಂದು ಭಾವಿಸಿದರು. ಹಾಗೆ ಹೊರಟ ಶಿವಶರಣರನ್ನು ಬಿಜ್ಜಳನ ಸೈನಿಕರು ಹಿಂಬಾಲಿಸಿ ಹಿಂಸಿಸಿದರು. ಕಡೆಗೆ ತಮ್ಮನ್ನು ರಕ್ಷಿಸಿಕೊಳ್ಳಲು ಶಿವಶರಣರು ಯುದ್ಧವನ್ನೇ ಮಾಡಬೇಕಾಯಿತು. ಇಂಥ ಸಂದರ್ಭಗಳಲ್ಲಿ ಅಕ್ಕನಾಗಮ್ಮ ವಹಿಸಿದ ಪಾತ್ರ ಬಹಳ ಧೀರೋದ್ದಾತವಾದುದು. ಎಲ್ಲ ಉತ್ಸಾಹ, ಆಸೆ, ಆಕಾಂಕ್ಷೆಗಳನ್ನು ಕಳೆದುಕೊಂಡಿದ್ದ ಶಿವಶರಣರಿಗೆ ಪ್ರೋತ್ಸಾಹ ತುಂಬಿದಳು. ಶಿವಭಕ್ತಿಯ ಮಹಿಮೆಯನ್ನು ನೆನಪಿಸಿ ನವಚೈತನ್ಯ ತುಂಬಿದಳು. ಆಕೆಯ ಮಾರ್ಗದರ್ಶನದಲ್ಲಿ ಶಿವಶರಣರು ಸಾಹಿತ್ಯದ ರಕ್ಷಣೆಗಾಗಿ. ಧರ್ಮದ ಉಳಿವಿಗಾಗಿ ಹೋರಾಡಲು ಪಣತೊಟ್ಟರು.

ತಂಡ-ತಂಡವಾಗಿ ಬಿಜ್ಜಳನ ಸೈನಿಕರು ಶಿವಶರಣರನ್ನು ಕೊಲ್ಲುತ್ತಾ ಬಂದರು. ಶಿವಶರಣರಾದರೋ ಅವರನ್ನು ಪ್ರತಿಭಟಿಸುತ್ತಾ ಮುಂದುವರೆದರು. ಯೋಗದಂಡ ಹಿಡಿದಿದ್ದ ಅಕ್ಕನಾಗಮ್ಮ ಕೈಯಲ್ಲಿಖಡ್ಗ ಹಿಡಿದು ಸೈನಿಕರೊಡನೆ ಯುದ್ಧ ಮಾಡಿದಳು. ಕಾತರವಳ್ಳಿಯ ಸಮೀಪದಲ್ಲಿ ನಡೆದ ಭೀಕರ ಯುದ್ಧದಲ್ಲಿ ಅಳಿಯ ಬಿಜ್ಜಳ ಶಿವಶರಣರಿಗೆ ಕೈಸೆರೆ ಸಿಕ್ಕಿದ. ಕೂಡಲೇ ಅವನ ತಲೆ ಹಾರುವದರಲ್ಲಿತ್ತು; ಆದರೆ, ನಾಗಲಾಂಬಿಕೆ ಆತನಿಗೆ ಜೀವದಾನ ಮಾಡಿದಳು. ಕೈಗೆ ಸಿಕ್ಕಿದ ಶತ್ರುವನ್ನೂ ಕ್ಷಮಿಸುವ ಉದಾರ ಗುಣ ಆಕೆಯದು.

ಮುಂದೆ ಕೆಲವು ಕಾಲ ನಾಗಲಾಂಬಿಕೆ ನಾಗಳಾಪುರದಲ್ಲಿ ವಾಸವಾಗಿದ್ದಳು. ಅವಳು ಇದ್ದಲ್ಲಿ ಶಿವಶರಣರ ಒಂದು ದೊಡ್ಡ ಸಮೂಹ! ಅಲ್ಲಿಂದ ಮುಂದೆ ಉಳವಿಯಲ್ಲಿ ನಿಂತು ಕಿನ್ನರಿಬೊಮ್ಮಯ್ಯನ ಹೊಳೆಯ ಸಮೀಪದಲ್ಲಿ ರಕ್ಷಣೆ ಪಡೆದಳು. ಆ ಪ್ರದೇಶ ಒಂದು ದಟ್ಟವಾದ ಅರಣ್ಯಪ್ರದೇಶವೇ ಆಗಿತ್ತು. ಬಿಜ್ಜಳನ ಸೈನಿಕರಿಗೆ ಆ ಜಾಗದ ಸುಳಿವು ಬೇಗನೆ ದೊರೆಯಲಿಲ್ಲ. ಹಾಗಾಗಿ ಅಲ್ಲಿ ನೆಲಸಿದ ಶಿವಶರಣರಿಗೆ ಸ್ವಲ್ಪ ನೆಮ್ಮದಿ ದೊರೆಯಿತು. ಅಲ್ಲಿ ಗವಿಯೊಂದರಲ್ಲಿ ಅಕ್ಕನಾಗಮ್ಮ ಹೆಚ್ಚು ಸಮಯ ಕಳೆಯುತ್ತಿದ್ದಳು. ಆ ಪ್ರದೇಶ ಶಿವಶರಣರ ಪ್ರಭಾವದಿಂದ ಮಹಾಮನೆಯ ವಾತಾವರಣವನ್ನು ಪಡೆಯಿತು. ಶಿವಾನುಭಾವ ಪ್ರವಚನ, ಅನ್ನದಾಸೋಹ ಪ್ರಾರಂಭವಾಯಿತು. ಆ ಅರಣ್ಯ ಮಧ್ಯದಲ್ಲಿ ಭಕ್ತಿಯ ಪರಿಮಳ ಪಸರಿಸಿತು. ಶಿವಶರಣರು ಸಮಾಧಾನದ, ಶಾಂತಿಯ ಬದುಕನ್ನು ಮತ್ತೆ ಕಂಡರು. ಅಕ್ಕನಾಗಮ್ಮ ಎಂದಿನ ಉತ್ಸಾಹದಿಂದ ಅತಿಥಿಸತ್ಕಾರ ಮಾಡುತ್ತಿದ್ದಳು. ಬಿಡುವಿನ ಸಮಯದಲ್ಲಿ ಗವಿಸೇರಿ ಶಿವಯೋಗಧ್ಯಾನದಲ್ಲಿ ಮೈಮರೆಯುತ್ತಿದ್ದಳು.

ಆದರೆ ಈ ನೆಮ್ಮದಿ ಹೆಚ್ಚು ಕಾಲ ದೊರೆಯಲಿಲ್ಲ. ಬಿಜ್ಜಳನ ಸೈನಿಕರು ಅಲ್ಲಿಯೂ ನುಗ್ಗಿ ಎಲ್ಲರನ್ನೂ ಸದೆಬಡೆದರು. ಗವಿಯಲ್ಲಿ ಮೈಮರೆತಿದ್ದ ಅಕ್ಕನಾಗಮ್ಮ ಅನಂತರ ಬಂದು ನೋಡಿದಳು. ಸುಂದರ ಪ್ರಶಾಂತ ಸ್ಥಳವೆಲ್ಲಾ ಕೊಲೆ-ರಕ್ತದಿಂದ ತುಂಬಿ ಶ್ಮಶಾನವಾಗಿತ್ತು. ಅನೇಕ ಶಿವಶರಣರ ಹೆಣಗಳ ಮಧ್ಯೇ ಚೆನ್ನಬಸವಣ್ಣನ ಶವವೂ ಇದ್ದಿತು. ಎಲ್ಲರನ್ನೂ ಕಳೆದುಕೊಂಡಅಕ್ಕನಾಗಮ್ಮ ಎರಡನೆಯ ಬಾರಿ ತಬ್ಬಲಿಯಾದಳು. ಮೂಕಳಾಗಿ ಅರಣ್ಯ ಮಧ್ಯದಲ್ಲಿ ರೋದಿಸಿದಳು.

ಅವಳ ದುಃಖವನ್ನು ಕೇಳಿಸಿಕೊಂಡಂತೆ, ಘನಲಿಂಗ ರುದ್ರಮುನಿಗಳು ಶಿವಶರಣರನ್ನು ರಕ್ಷಿಸಲು ಶ್ರೀಶೈಲದಿಂದ ಸಹಾಯ ಪಡೆದು ಅಲ್ಲಿಗೆ ಬಂದರು. ಅಷ್ಟರಲ್ಲಿ ಕಾರ್ಯ ಮಿಂಚಿತ್ತು. ಆದರೆ ಅಕ್ಕನಾಗಮ್ಮನ ಧರ್ಮರಕ್ಷಣೆಯ ಕಾಯಕ ಇನ್ನೂ ಮುಗಿದಿರಲಿಲ್ಲ. ಆಕೆ ರುದ್ರಮುನಿಗಳ ಸಮಾಧಾನದ ನುಡಿಗಳಿಂದ ದುಃಖದ ಭಾರವನ್ನು ಸ್ವಲ್ಪ ಹಗುರ ಮಾಡಿಕೊಂಡಳು. ತಮ್ಮ ಮಗ, ಇನ್ನೂ ಸಾವಿರಾರು ಸಂಖ್ಯೆಯ ಒಡನಾಡಿ ಶಿವಶರಣರನ್ನು ಕಳೆದುಕೊಂಡಿದ್ದ ಅಕ್ಕನಾಗಮ್ಮ ಧರ್ಮವನ್ನು ರಕ್ಷಿಸುವ ಏಕೈಕ ಕಾರಣಕ್ಕಾಗಿ ಮತ್ತೆ ಕೆಲಸಕ್ಕೆ ಸಜ್ಜಾದಳು. ಜರ್ಜರಿತ ಹೃದಯದಿಂದಲೇ ಆಕೆ ರುದ್ರಮುನಿಗಳ ಆದೇಶದಂತೆ ತುಂಗಭದ್ರಾ ತೀರದ 'ಎಣ್ಣೆಹೊಳೆ' ಸಮೀಪದಲ್ಲಿ ವಾಸಿಸಲು ನಿರ್ಧರಿಸಿದಳು. ನುಲಿಯ ಚಂದಯ್ಯನ ಜೊತೆ ಆಕೆ ಅಲ್ಲಿಗೆ ಬಂದು ವಚನ ಸಾಹಿತ್ಯ ರಕ್ಷಣೆ ಮಾಡಿದಳು. ಅಲ್ಲಿ ಹತ್ತು ವರುಷಗಳು ಅಕ್ಕನಾಗಮ್ಮ ಸಟ್ಟುಗ ಹಿಡಿದು ಅನ್ನಪೂರ್ಣೆಯಾದಳು; ಯೋಗದಂಡ ಹಿಡಿದು ಶಿವಯೋಗಿನಿಯಾದಳು; ಖಡ್ಗ ಹಿಡಿದು ಧರ್ಮರಕ್ಷಕಿಯಾದಳು; ಲೆಕ್ಕಣಿಕೆ ಹಿಡಿದು ವಚನಸಾಹಿತ್ಯ ಸೃಷ್ಟಿಸಿದಳು; ಧರ್ಮವನ್ನು ಕೆಣಕುವವರ ಪಾಲಿಗೆ ಆಕೆ ಚಂಡಿ–ಚಾಮುಂಡಿಯೇ ಆದಳು. ಶಿವಶರಣರ ಪಾಲಿಗೆ ಅಮೃತವಾಹಿನಿಯಾದಳು. ತನ್ನ ನಿರಂತರ ಶ್ರಮ ಸಾರ್ಥಕವಾದದನ್ನು ಕಂಡು ಹೃದಯಕ್ಕೆ ತಂಪು ಮೂಡಿತು. ಇನ್ನು ಶಿವಭಕ್ತರಿಗೆ ತೊಂದರೆಯಿಲ್ಲ. ನನ್ನ ಕೆಲಸ ಮುಗಿಯಿತು. ಇನ್ನು ತಾನು ಶಿವಪಾದ ಸೇರಬೇಕು ಎಂದು ಬಯಸಿದಳು. ಅವಳ ಬಯಕೆಯೇ ಆಕಾರಗೊಂಡಂತೆ ಅಲ್ಲಿಗೆ ಆಗ ಗುರುಗಳು ಆಗಮಿಸಿದರು. ಆಕೆಯ ಕೆಲಸ ಕಂಡು ಆನಂದಿಸಿದರು, ಕೊಂಡಾಡಿದರು. ಅನಂತರ ಅಕ್ಕನಾಗಮ್ಮ ಗುರುಗಳ ಅಪ್ಪಣೆ ಪಡೆದು ಗುರುಪಾದಕ್ಕೆ ನಮಿಸಿ ಹಾಗೇ ಬಯಲಾದಳು.

ಹಿರಿಯರು ಬದುಕಿದ, ಮಾಡಿದ, ಇದ್ದುಹೋದ ಗುರುತನ್ನು ಉಪಕೃತ ಜನ ನೆನಪಿನಲ್ಲಿಡಬೇಕು. ಅವರು ಸಜ್ಜನರೆನಿಸುತ್ತಾರೆ. ಅಂಥ ಜನ ಅಕ್ಕನಾಗಮ್ಮನ ಉಪಕಾರ ಸ್ಮರಣೆಗಾಗಿ ಬಸವನ ಬಾಗೇವಾಡಿಗೆ ಆರು ಮೈಲಿ ದೂರದಲ್ಲಿರುವ ಇಂಗಳೇಶ್ವರದಲ್ಲಿ ಆಕೆಯ ಒಂದು ಮೂರ್ತಿಯನ್ನು ಮಾಡಿಸಿ ಇಟ್ಟಿದ್ದಾರೆ. ಸುಮಾರು ಎರಡು ಅಡಿ ಎತ್ತರದ ಆ ವಿಗ್ರಹಕ್ಕೆ ಇಂದಿಗೂ ಪೂಜೆ ಸಲ್ಲುತ್ತದೆ. ಅದೇ ರೀತಿ ನಾಗಳಾಪುರದಲ್ಲಿಯೂ ಆಕೆಯ ಹೆಸರಿನ ವಿಗ್ರಹವಿರುವುದನ್ನು ನೋಡಬಹುದು. ಉಳವಿಯಲ್ಲಿ ಆಕೆಯ ಹೆಸರಿನ ಗವಿಯನ್ನು ಕಾಣಬಹುದು.

ಕಡೆಯವರೆಗೂ ಕಾಯಕದಲ್ಲಿಯೇ ಕರ್ಪೂರವಾಗಿ ಕರಗಿ ಹೋದಳು ಅಕ್ಕನಾಗಮ್ಮ. ಒಂದು ಅರ್ಥದಲ್ಲಿ ಅಕ್ಕನಾಗಮ್ಮ ಇಂದು ಬದುಕಿಲ್ಲ. ಆದರೆ ಆಕೆಯ ವಚನಗಳ ಮೂಲಕ, ಸಾಧಿಸಿದ ಸಿದ್ಧಿಗಳ ಮುಖೇನ ನಮ್ಮ ಮಾರ್ಗದರ್ಶಕಳಾಗಿ ಒಡನಾಡಿಯಾಗಿ ಇಂದೂ ಜೀವಂತವಾಗಿದ್ದಾಳೆ. ಧರ್ಮದ ಶಿಥಿಲತೆಯನ್ನು ಕಾಣುತ್ತಿರುವ ಇಂದಿನ ಜನತೆಗೆ ಆಕೆಯ ಹೆಸರು, ಸ್ಮರಣೆ, ಧರ್ಮಕಾಯಕದಲ್ಲಿ ತೊಡಗಲು ಪ್ರೇರಣೆಯಾಗಬಲ್ಲದು.

## ಅಕ್ಕಮಹಾದೇವಿ

—ಡಾ॥ ಸರೋಜಿನಿ ಶಿಂತ್ರಿ

ಶರಣರ ಯುಗವೆಂದು ಕರೆಯಲ್ಪಡುವ ಹನ್ನೆರಡನೆಯ ಶತಮಾನಕ್ಕೆ ಕರ್ನಾಟಕದ ಇತಿಹಾಸದಲ್ಲಿ ಒಂದು ವಿಶಿಷ್ಟವಾದ ಮಹತ್ವವಿದೆ. ಧರ್ಮದ ಹೆಸರಿನಲ್ಲಿ ಅಧರ್ಮ ತಲೆ ಎತ್ತಿ ತಾಂಡವವಾಡುತ್ತಿದ್ದಾಗ ಅದನ್ನು ವಿರೋಧಿಸಿ ಸಮಗ್ರ ಶಾಂತಿಯ ಕಹಳೆಯನ್ನು ಊದಿದ ಬಸವಣ್ಣನವರು ಸಾಮಾಜಿಕ, ಸಾಹಿತ್ಯಿಕ ಮತ್ತು ರಾಜಕೀಯ ರಂಗಗಳಲ್ಲಿಯೂ ಪ್ರಗತಿಪರ ವಿಚಾರಗಳನ್ನು ಅನುಷ್ಠಾನಕ್ಕೆ ತಂದರು. ಎಂಟು ನೂರು ವರುಷಗಳ ನಂತರ ಗಾಂಧೀಜಿಯವರು ಮಾಡಲುದ್ಯುಕ್ತವಾದ ಕಾರ್ಯವನ್ನು ಬಸವಣ್ಣನವರು ತಮ್ಮ ಕಾಲದಲ್ಲಿ ಮಾಡಿ ಸಫಲತೆಯನ್ನು ಪಡೆದರೆಂಬ ಅಂಶ ಗಮನಿಸಬೇಕಾದದ್ದು. ಕರ್ನಾಟಕ ಅವರ ಕಾರ್ಯಕ್ಷೇತ್ರವಾಗಿತ್ತೆಂಬುದು ನಮಗೆಲ್ಲರಿಗೆ ಹೆಮ್ಮೆಯ ವಿಷಯ. ಅವರು ಹೆಣ್ಣುಮಕ್ಕಳ ವಿಷಯದಲ್ಲಿ ತಳೆದ ದೃಷ್ಟಿಕೋನ ಬಹು ಉದಾರವಾದದ್ದು. ವೈದಿಕ ಧರ್ಮ ಕಾಲಾಂತರದಲ್ಲಿ ಹೆಣ್ಣುಮಕ್ಕಳಿಗೆ ಉಪನಯನ ಮಾಡಿಸಿಕೊಳ್ಳುವ ಅಧಿಕಾರವಿಲ್ಲವೆಂದು ಹೇಳಿ ಅವರ ಧಾರ್ಮಿಕ ಸ್ವಾತಂತ್ರ್ಯ ಮತ್ತು ಹಕ್ಕನ್ನು ಕಸಿದುಕೊಂಡಿತು. ಬೌದ್ಧರು ಮತ್ತು ಜೈನರು ಹೆಣ್ಣುಮಕ್ಕಳು ಧರ್ಮದೀಕ್ಷೆಯನ್ನು ಪಡೆಯಬಲ್ಲರು, ಆಧ್ಯಾತ್ಮಿಕ ಚಿಂತನೆಯಲ್ಲಿ ಪಾಲ್ಗೊಳ್ಳಬಲ್ಲರು. ಮೋಕ್ಷ ಸಂಪಾದನೆಯಲ್ಲಿ ನಿರತರಾಗಬಲ್ಲರು ಎಂದು ಹೇಳಿದ್ದೇನೋ ನಿಜ. ಆದರೆ ಅವರು ಮಹಿಳೆಯರು ಪುರುಷರಿಗೆ ಸಮಾನರು ಎಂಬುದನ್ನು ಒಪ್ಪಲಿಲ್ಲ. ಬಸವಣ್ಣನವರು ಮಾತ್ರ ಮಹಿಳೆಯರ ಹಕ್ಕನ್ನು ಎತ್ತಿಹಿಡಿದರು. ಅವರು ದೀಕ್ಷೆಯನ್ನು ಪಡೆಯಬಲ್ಲರು; ಅಷ್ಟೇ ಅಲ್ಲ, ಸ್ವತಂತ್ರರಾಗಿ ಮೋಕ್ಷವನ್ನು ಪಡೆಯುವಲ್ಲಿ ಸಾಧನೆ ಮಾಡಬಲ್ಲರು ಎಂದು ಹೇಳಿದರು. ತತ್ಪರಿಣಾಮವಾಗಿ ಅನೇಕ ಶಿವಶರಣೆಯರು ಧಾರ್ಮಿಕ ಕ್ಷೇತ್ರಗಳಲ್ಲಿ ಭಾಗವಹಿಸುವದಕ್ಕೆ ಆಸ್ಪದ ಸಿಕ್ಕಂತಾಯಿತು. ದುರ್ದೈವದಿಂದ ನಮಗೆ ಕೆಲವೇ ಶಿವಶರಣೆಯರ ಹೆಸರುಗಳು ಮತ್ತು ಕೃತಿಗಳು ಲಭ್ಯವಾಗಿವೆ. ಸಾವಿರಾರು ಶಿವಶರಣೆಯರು ಧರ್ಮದೀಕ್ಷೆಯನ್ನು ಪಡೆದು ಸಾಧನೆಯಲ್ಲಿ ತೊಡಗಿದ್ದರೆಂದು ನಂಬಲಾಗಿದೆ. ಈ ಶಿವಶರಣೆಯರಲ್ಲಿ ಅಕ್ಕಮಹಾದೇವಿ ಅಗ್ರಗಣ್ಯಳು.

ಅಕ್ಕಮಹಾದೇವಿಯ ಜೀವನ ಅನೇಕ ಕಟ್ಟುಕತೆಗಳ ನಡುವೆ ಹುದುಗಿಹೋಗಿದೆ. ಆದರೆ ಈ ಕಟ್ಟುಕತೆಗಳನ್ನು ಪೂರ್ಣ ಅಲ್ಲಗಳೆಯದೆ ಆಕೆಯ ಅನುಯಾಯಿಗಳು ತಮ್ಮ ಮುಗ್ಧಭಾವನೆಯಲ್ಲಿ ಆಕೆಯನ್ನು ಹೇಗೆ ಕಂಡರೆಂಬುದನ್ನು ಸೂಕ್ಷ್ಮವಾಗಿ ಅವಲೋಕಿಸಬೇಕು. ಆಕೆಯ ಜೀವನವಾದರೂ ಒಂದು ಮಹಾ ಪವಾಡವಂತೆಯೇ ಇತ್ತೆಂಬ ವಿಷಯ ಯಾರಿಗೂ ತೋಚದಿರಲಾರದು. ಹಲವೊಂದು ಪುರಾಣಗಳು ಆಕೆ ಪಾರ್ವತಿಯ ಸ್ವರೂಪಳೆಂದೂ, ಧರ್ಮಜಾಗ್ರತಿಗಾಗಿಯೇ ಶಿವನ ಅಣತಿಯಂತೆ ಈ ಲೋಕದಲ್ಲಿ ಹುಟ್ಟಿಬಂದಳೆಂದೂ ಹೇಳುತ್ತಿವೆ. ಈ ಪುರಾಣ ವಿಷಯವನ್ನು ಬದಿಗಿರಿಸಿ ನಾವು ಕೆಲವು ವಸ್ತುನಿಷ್ಠವಾದ ಕೃತಿಗಳನ್ನು ಅವಲೋಕಿಸಬಹುದು. ಆಕೆಯ ಜೀವನದಿಂದ ಪ್ರಭಾವಿತರಾದ ಅನೇಕ ಸಾಹಿತಿಗಳು ಆಕೆಯ ಜೀವನ ಚಿತ್ರಣವನ್ನು ವಿವಿಧ ರೀತಿಗಳಲ್ಲಿ ಚಿತ್ರಿಸಿದ್ದಾರೆ. ಅವುಗಳಲ್ಲಿ ಮಹತ್ವವಾದವುಗಳು ಇವು :

೧) ಪಾಲ್ಕುರಿಕೆ ಸೋಮನಾಥ. 'ಪಂಡಿತಾರಾಧ್ಯ ಚರಿತ್ರೆ' ೧೧೯೦'. ೨) ಹರಿಹರದೇವ 'ಮಹಾದೇವಿಯಕ್ಕನ ರಗಳೆ' ೧೨೦೦, ೩) ಚಾಮರಸ, 'ಪ್ರಭುಲಿಂಗಲೀಲೆ' ೧೪೩೦. ೪) ಎಳಂದೂರ ಹರೀಶ್ವರ, 'ಪ್ರಭುದೇವರ ಪುರಾಣ' ೧೫೨೦. ೫) ಚೆನ್ನಬಸವಾಂಕ, 'ಮಹಾದೇವಿಯಕ್ಕನ ಪುರಾಣ' ೧೫೬೦. ೬) ವಿರೂಪಾಕ್ಷ ಪಂಡಿತ, 'ಚೆನ್ನಬಸವ ಪುರಾಣ' ೧೫೮೪. ೭) ರಾಚಕವಿ, ಮಹಾದೇವಿಯಕ್ಕನ ಸಾಂಗತ್ಯ ೧೬೦೦.

ತೀರ ಇತ್ತೀಚಿನ ಕಾಲದಲ್ಲಿ ಪ್ರಕಟವಾದ ಕೃತಿಗಳೆಂದರೆ ಇವು :

೧) ಕೆ. ಜಿ. ಕುಂದಣಗಾರ, 'ಮಹಾದೇವಿಯಕ್ಕ', ೧೯೩೭, ೨) ಎಸ್. ವ್ಹಿ. ಪರಮೇಶ್ವರಭಟ್ಟ, 'ಅಕ್ಕಮಹಾದೇವಿ' ೧೯೪೭. ೩) ಬಸವರಾಜ ಕಟ್ಟೀಮನಿ. 'ಗಿರಿಯ ನವಿಲು' ೧೯೫೬. ೪) ಎಚ್. ತಿಪ್ಪೇರುದ್ರಸ್ವಾಮಿ, 'ಕದಳಿಯ ಕರ್ಪೂರ' ೧೯೬೨. ೫) ಮಾತೆ ಮಹಾದೇವಿ, 'ತರಂಗಿಣಿ' ೧೯೭೪.

ಈ ಎಲ್ಲ ಕೃತಿಗಳಲ್ಲಿ ತೋರಿ ಬರುವ ಕೆಲವೇ ಕೆಲವು ಮಹತ್ವವಲ್ಲದ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿದರೆ, ಅಕ್ಕಮಹಾದೇವಿಯ ಜೀವನದ ವಿಷಯದಲ್ಲಿ ಈ ಸಂಗತಿಗಳು ಕಂಡುಬರುತ್ತವೆ. ಅಕ್ಕಮಹಾದೇವಿ ಹುಟ್ಟಿದ್ದು ಕ್ರಿ.ಶ. ೧೨ನೇ ಶತಮಾನದ ಪೂರ್ವಾರ್ಧದಲ್ಲಿ. ಈಗಿನ ಶಿವಮೊಗ್ಗೆಯ ಜಿಲ್ಲೆಯ ಉಡುತಡಿ ಎಂಬ ಊರಲ್ಲಿ. ಆ ಕಾಲದಲ್ಲಿ ಉಡುತಡಿಯು ಅರಸು ಕೌಶಿಕನ ರಾಜಧಾನಿಯಾಗಿತ್ತು. ಆಕೆಯ ತಂದೆ-ತಾಯಂದಿರ ಹೆಸರು ನಿರ್ಮಲ ಮತ್ತು ಸುಮತಿದೇವಿಯೆಂದು. ಸದಾಚಾರ ಸಂಪನ್ನರೂ, ಧರ್ಮಪರಾಯಣರೂ ಆದ ಇವರಿಗೆ ದೀರ್ಘಕಾಲದ ತಪಸ್ಸಿನ ಫಲವಾಗಿ ಒಂದು ಹೆಣ್ಣುಮಗುವು ಜನಿಸಿತು. ಗಿರಿಜಾತೆಯ ಕೃಪೆಯಿಂದ ಜನಿಸಿದ ಮಗಳಿಗೆ 'ಮಹಾದೇವಿ'ಯೆಂದು ನಾಮಕರಣ ಮಾಡಲಾಯಿತು. ಮಹಾದೇವಿಯಕ್ಕನಿಗೆ 'ಮಹಾದೇವಿ' ಎಂದು ಹೆಸರಿಟ್ಟಿರುವದನ್ನು ಪ್ರಾಚೀನ ಗ್ರಂಥಗಳೆಲ್ಲವೂ ಒಕ್ಕೊರಲಿನಿಂದ ಹೇಳುತ್ತಿವೆ. ಆದರೆ ಸಂಸ್ಕೃತ 'ಗಣಸಹಸ್ರನಾಮಾವಳಿ'ಯಲ್ಲಿ 'ಉಡುತಡಿಯ ಮಹಾದೇವಿ ತಥೈವ-ಕಮಲವ್ವ'ಎಂದು ಉಕ್ತವಾಗಿದೆ. ಇದನ್ನು ಆಧರಿಸಿ ಮಹಾದೇವಿಯಕ್ಕನಿಗೆ 'ಕಮಲವ್ವ'ಎಂಬ ಹೆಸರಿತ್ತೆಂದು ಕೆಲವರು ಊಹಿಸಿರುವರು. ಮಹಾದೇವಿಯಕ್ಕನ ಜೀವನ ಸಾಧನೆಗಳನ್ನು ವಿಮರ್ಶಿಸುವಾಗ್ಗೆ ಈ ವಿಷಯ ಮಹತ್ತ್ವದ್ದೆಂದು ನಾನು ಹೇಳಲಾರೆ. ಆಕೆಯ ರೂಪಲಾವಣ್ಯದ ಬಗೆಗೆ ಅನೇಕ ಉಲ್ಲೇಖಗಳಿವೆ. ಆ ವರ್ಣನೆಯನ್ನು ಹರಿಹರನ ಬಾಯಿಂದ ಕೇಳಬೇಕು'.

> 'ಕಾಮನ ಬಾಣದಂತೆ, ಸೋಮನ ಕಿರಣದಂತೆ, ವಸಂತದ ವಶೀಕರಣದಂತೆ...ಕಳಾಪರಿಪೂರ್ಣ।
> ಶರೀರೆಯಾಗಿರ್ದುಡಿತಡಿಯ ಮಹಾದೇವಿಯರು'

ಧರ್ಮಪರಾಯಣರ ಮಗಳಾಗಿ ಹುಟ್ಟಿದ ಮಹಾದೇವಿಯಕ್ಕನಿಗೆ ಚಿಕ್ಕಂದಿನಿಂದಲೂ ಶಿವನ ಮೇಲೆ ಭಕ್ತಿ. ಮೊದ ಮೊದಲು ಆಕೆಯ ಭಕ್ತಿಯನ್ನು ಬಹು ಮೆಚ್ಚಿಕೊಂಡ ಆಕೆಯ ತಂದೆ-ತಾಯಂದಿರಿಗೆ ನಂತರ ಅದುವೇ ವಿವೇಚನೆಯ ವಿಷಯವಾಗಿರಬೇಕು. ಅನೇಕರು ಆಕೆಯನ್ನು ಮದುವೆಯಾಗಲು ಯಾಚಿಸಿ ಬಂದರೂ, ಆಕೆಯದು ಮಾತ್ರ ಒಂದೇ ಉತ್ತರ : 'ನನ್ನ ಗಂಡ ಚೆನ್ನಮಲ್ಲಿಕಾರ್ಜುನ. ಅನ್ಯರನ್ನು ನಾನು ವರಿಸಲೊಲ್ಲೆ'.

ಒಂದು ದಿನ ಕೌಶಿಕರಾಜನು ಬೇಟೆಯಿಂದ ಅರಮನೆಗೆ ಮರಳುತ್ತಿದ್ದಾಗ, ಅಕ್ಕಮಹಾದೇವಿ ತನ್ನ ಗೆಳತಿಯರೊಂದಿಗೆ ನಿಂತದ್ದನ್ನು ನೋಡಿದನು. ನೋಡಿದ್ದೇ ತಡ. ಆಕೆಯ ಸ್ಫುರದ್ರೂಪ ಆತನ ಹೃದಯವನ್ನು ಸೆರೆಹಿಡಿಯಿತು. ತನ್ನ ಮಂತ್ರಿಗಳನ್ನು ಆಕೆಯ ತಂದೆ-ತಾಯಂದಿರ ಬಳಿ ಕಳುಹಿಸಿ ತನ್ನ ಅಭೀಷ್ಟವನ್ನು ತಿಳಿಯಪಡಿಸಿದನು. ಆಗ ಅಕ್ಕಮಹಾದೇವಿಗೆ ಹದಿನಾರು ವರುಷ; ಕೌಶಿಕನು ಶಿವಭಕ್ತನಾಗಿರಲಿಲ್ಲ. ಆದ್ದರಿಂದ ಶರೀರಸಂಬಂಧ ಆಗಿನ ನೀತಿಗನುಗುಣವಾಗಿ ಯೋಗ್ಯವಾಗಿರಲಿಲ್ಲ. ಆದರೆ ರಾಜನ ಮನಸ್ಸಿನ ವಿರುದ್ಧ ಹೋಗುವ ಧೈರ್ಯ ಯಾರಿಗಾಗುತ್ತದೆ? ಮೇಲಾಗಿ, ಆಕೆಯನ್ನು ವಿಚಾರಿಸದೇ ಮದುವೆಯ ಮಾತನ್ನೆತ್ತುವುದು ತರವಲ್ಲವೆಂದು ತಿಳಿದು ತಂದೆ-ತಾಯಂದಿರು ಮಹಾದೇವಿಯನ್ನೇ ಕೇಳಲು ಹೇಳಿದರು. ಇಲ್ಲಿ ಗಮನಿಸಬೇಕಾದ

ವಿಷಯವೆಂದರೆ, ಅಕ್ಕಮಹಾದೇವಿ ಆ ಚಿಕ್ಕ ವಯಸ್ಸಿನಲ್ಲಿಯೇ ಹೇಗೆ ತನ್ನ ವ್ಯಕ್ತಿತ್ವವನ್ನು ಬೆಳಿಸಿಕೊಂಡು ಬಂದಿದ್ದಳೆಂಬುದು. ಸ್ವತಂತ್ರ ವಿಚಾರಶಕ್ತಿ–ಇದು ಬಸವಾದಿ ಪ್ರಮಥರು ಜನತೆಗೆ ಕೊಟ್ಟ ಅಮೂಲ್ಯವಾದ ದೇಣಿಗೆಯೆಂಬುದನ್ನು ಮರೆಯಕೂಡದು. ತನ್ನ ತಂದೆ–ತಾಯಂದಿರು ತನ್ನ ಸಲುವಾಗಿ ಎಂತಹ ಪೇಚಿನಲ್ಲಿ ಬಿದ್ದಿರುವರೆಂಬುದನ್ನು ಸೂಕ್ಷ್ಮವಾಗಿ ತಿಳಿದುಕೊಂಡು, ಕೊನೆಗೆ, ಕೌಶಿಕರಾಜನು ಲಿಂಗದೀಕ್ಷೆಯನ್ನು ಪಡೆಯಲು ಒಪ್ಪಿದರೆ ಮದುವೆಗೆ ತನ್ನದೇನೂ ಅಭ್ಯಂತರವಿಲ್ಲೆಂದು ಹೇಳಿಕಳುಹಿಸಿದಳು. ಮದುವೆಯಾದಳೆಂದು ಕೆಲವು ಗ್ರಂಥಗಳು ಹೇಳಿದರೆ, ಮದುವೆಯಾಗದೇ ಅರಮನೆಗೆ ಹೋದಳೆಂದು ಇನ್ನು ಕೆಲವು ಗ್ರಂಥಗಳು ಹೇಳುತ್ತವೆ. ಹರಿಹರನು ಮದುವೆಯಾದಳೆಂಬ ಅಭಿಪ್ರಾಯದವನಿದ್ದಾನೆ. ಚಾಮರಸ ಮದುವೆಯಾಗಲಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ. ಆಕೆಯ ವ್ಯಕ್ತಿತ್ವವನ್ನು ಅರಿತವರು ಆಕೆ ಮದುವೆಯಾಗದೇ ಕೌಶಿಕನ ಅರಮನೆಗೆ ಹೋಗಿರಬಹುದೆಂದು ಭಾವಿಸಲಾರರು. ಈ ಎರಡೂ ಅಭಿಪ್ರಾಯವುಳ್ಳವರು ಮುಂದೆ ಕೌಶಿಕನು ತನ್ನ ವಚನವನ್ನು ಪಾಲಿಸಲು ತಪ್ಪಿದ್ದಕ್ಕಾಗಿ ಮಹಾದೇವಿಯಕ್ಕ ಕುಪಿತಳಾಗಿ ಮನೆ ಬಿಟ್ಟು ದಿಗಂಬರಳಾಗಿ ಹೊರಟಿದ್ದರ ವಿಷಯದಲ್ಲಿ ಏಕಾಭಿಪ್ರಾಯದವರಾಗಿದ್ದಾರೆ. ಯಾವ ಭಯವೂ ಇಲ್ಲದೆ, ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತ ಕಲ್ಯಾಣದ ಕಡೆಗೆ ಹೊರಟುನಿಂತ ಅಕ್ಕಮಹಾದೇವಿಯನ್ನು ಆಕೆಯ ತಂದೆ–ತಾಯಂದಿರು ಬೇಡವೆಂದು ಅಂಗಲಾಚಿ ಬೇಡಿಕೊಂಡರೂ ಕೇಳುವದಿಲ್ಲ. ತನ್ನದು ಚೆನ್ನಮಲ್ಲಿಕಾರ್ಜುನನಿಗೆ ಅರ್ಪಿತವಾದ ಜೀವ, ಆತನನ್ನು ತಾನು ಅರಸಿಕೊಂಡು ಹೋಗಲೇಬೇಕೆಂದು ಹೇಳಿ ಅವರನ್ನು ಸಮಾಧಾನಮಾಡಲು ಪ್ರಯತ್ನಿಸುತ್ತಾಳೆ. ಕೆಲವು ವಿಮರ್ಶಕರು ಅಕ್ಕಮಹಾದೇವಿ ಹೀಗೆ ಪತಿಯನ್ನು ಪರಿತ್ಯಜಿಸಿ ಹೋದದ್ದು ಸತೀಧರ್ಮಕ್ಕೆ ಭೂಷಣವಲ್ಲವೆಂಬ ಮಾತನ್ನು ಹೇಳಿದ್ದಾರೆ. ಇವರಿಗೆ ಉತ್ತರ ರೂಪವಾಗಿ, ಅಕ್ಕಮಹಾದೇವಿ ಒಲ್ಲದ ಗಂಡನಿಂದ ಬೇರೆಯಾಗುವ ಹೆಣ್ಣಿನ ಅಧಿಕಾರವನ್ನು ಎತ್ತಿಹಿಡಿದಿದ್ದಾಳೆ. ಆಕೆ ಒಬ್ಬ ಪ್ರಗತಿವಾದಿ ಎಂದು ಇಷ್ಟೇ ಹೇಳಿದರೆ ಆಕೆಯ ಘನವ್ಯಕ್ತಿತ್ವಕ್ಕೆ ಅಪಚಾರವೆಸಗಿದಂತೆ ಆಗುತ್ತದೆ. ಆಕೆ ಪ್ರಾಪಂಚಿಕ ಸುಖದ ಮಹತ್ವವನ್ನು ಅಲ್ಲಗಳೆದಿಲ್ಲ. ಶಿವಶರಣರು ಪ್ರಾಪಂಚಿಕ ಜೀವನವನ್ನು ಎತ್ತಿಹಿಡಿದ ಅಂಶವನ್ನು ಇಲ್ಲಿ ಅವಶ್ಯವಾಗಿ ಗಮನಿಸಬೇಕು. ಜಗವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ ಎಂದು ಹೇಳಿದ ಬಸವಣ್ಣನವರು ತಾವೇ ಸುಖಿಸಂಸಾರಿಗರಾಗಿ ತಾವು ಉಪದೇಶಿಸಿದ್ದನ್ನು ಅನುಷ್ಠಾನದಲ್ಲಿ ತಂದರು. ಆದರೆ ಕೆಲವೇ ಕೆಲವರು ಈ ಪ್ರಾಪಂಚಿಕ ಸುಖವನ್ನು ಬದಿಗಿರಿಸಿ ವೈರಾಗ್ಯ ಜೀವನವನ್ನು ಯಾವ ಬಲವಂತವಿಲ್ಲದೇ ಸ್ವೀಕರಿಸಿದ್ದಾರೆ. ವೈರಾಗ್ಯ ಜೀವನದಲ್ಲಿಯೇ ತಮ್ಮ ಜೀವನದ ಸಾಫಲ್ಯವನ್ನು ಕಂಡುಕೊಂಡಿದ್ದಾರೆ. ಅವರ ಅಂತಸ್ತು ಹೆಚ್ಚಿನದು. ಅಂತಹರಲ್ಲಿ ಪ್ರಭುದೇವರು, ಚೆನ್ನಬಸವಣ್ಣ ಮತ್ತು ಅಕ್ಕಮಹಾದೇವಿಯರನ್ನು ಹೆಸರಿಸಬಹುದು.

ಅಕ್ಕಮಹಾದೇವಿ ಉಡತಡಿಯನ್ನು ಬಿಟ್ಟು ಕಾಲ್ನಡಿಗೆಯಲ್ಲಿಯೇ ಕಲ್ಯಾಣಕ್ಕೆ ಹೊರಡುತ್ತಾಳೆ. ಅಲ್ಲಿ ಅವಳಿಗೆ ಬಸವಣ್ಣನವರ ಮಹಾಮನೆಯಲ್ಲಿ ಆತಿಥ್ಯ ಕಾದಿತ್ತು. ಆಕೆಯನ್ನು ಅನುಭವ ಮಂಟಪಕ್ಕೆ ಕರೆತಂದು ಸ್ವತಃ ಬಸವಣ್ಣನವರೇ ಪರಿಚಯಿಸುತ್ತಾರೆ, 'ನನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲುವು ನೋಡಾ' ಎಂದು. ತಮ್ಮ ದಿವ್ಯದೃಷ್ಟಿಯಿಂದ ಆಕೆಯನ್ನು ಚೆನ್ನಾಗಿ ಬಲ್ಲವರಾಗಿದ್ದರೂ, ಅಲ್ಲಿ ಕೂಡಿದ ಶಿವಶರಣರಿಗೆ ಆಕೆಯ ನಿಲುವಿನ ನಿಜದರ್ಶನವಾಗಲೆಂದು ಪ್ರಭುದೇವರು ಅಕ್ಕಮಹಾದೇವಿಯನ್ನು ಪರೀಕ್ಷೆಗೆ ಗುರಿ ಮಾಡುತ್ತಾರೆ. 'ಬರೀ ವಸ್ತ್ರಗಳನ್ನು ತೊರೆದು ಒಗೆದರೆ ದೇಹದ ಮೇಲಿನ ಮೋಹ ಬಿಟ್ಟಂತಾಯಿತೇ ? ಹಾಗಿದ್ದ ಪಕ್ಷದಲ್ಲಿ ಕೂದಲುಗಳಿಂದ ನಿನ್ನ ಶರೀರವನ್ನು ಮುಚ್ಚಿಕೊಂಡಿದ್ದೇತಕ್ಕೆ' ? ಎಂದು ಮೂದಲಿಸುತ್ತಾರೆ. ಆಕೆಯ ಉತ್ತರವೆಂದರೆ :—

> ಫಲಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು; ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು
> ಆ ಭಾವದಿಂದ ಮುಚ್ಚಿದೆ ಇದಕ್ಕೆ ನೋವೇಕೆ ? ಕಾಡದಿರಣ್ಣಾ ಚೆನ್ನಮಲ್ಲಿಕಾರ್ಜುನದೇವನ ಒಳಗಾದವಳ.

ಮುಂದೆ ನಡೆಯುವುದು ಆಧ್ಯಾತ್ಮಿಕ ವಾಗ್ವಾದ. ಆಧ್ಯಾತ್ಮಿಕ ಚಿಂತನೆಯಲ್ಲಿ ಮೇರುವಿನ ಎತ್ತರವನ್ನು ಮುಟ್ಟಿದವರ ನಡುವೆ ಹೋರಾಟ. ಅಲ್ಲಿ ನೆರೆದ ಶಿವಶರಣರಿಗೊಂದು ರಸದೌತಣ. ಅಕ್ಕಮಹಾದೇವಿಯು:

> ಸಾವಿಲ್ಲದ ರೂಹಿಲ್ಲದ ಚಲುವಂಗೆ ಭವವಿಲ್ಲದ ಭಯವಿಲ್ಲದ ನಿರ್ಭಯದ ಚೆಲುವಂಗೆ ನಾನೊಲಿದೆನಯ್ಯ;
> ಚೆನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಧವಿಲ್ಲಯ್ಯ.

ಎಂದು ಹೇಳಲು, ಪ್ರಭುದೇವರು ಅದನ್ನು ಖಂಡಿಸಿ,

> ರೂಹಿಂಗೆ ಕೇಡುಂಟು ನಿರೂಹಿಂಗೆ ಕೇಡಿಲ್ಲ ರೂಪು ನಿರೂಪವನೊಡಗೂಡುವ ಪರಿಯೆಂತು ಹೇಳಾ ?
> ಅಸಂಬಂಧ ಸಂಬಂಧವಾಣಿ ! ದೇಹ ಇಂದ್ರಿಯವೆಂಬ ಜಾತಿಸೂತಕವಿರಲು ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವ.

ಅದಕ್ಕೆ ಅಕ್ಕನ ಪ್ರತ್ಯುತ್ತರವೆಂದರೆ:

> ಹಾವಿನ ಹಲ್ಲ ಕಳೆದು ಹಾವನಾಡಿಸ ಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯಾ ಕಾಯದ ಸಂಗವ ವಿವರಿಸಬಲ್ಲಡೆ
> ಕಾಯದ ಸಂಗವೆ ಲೇಸು ಕಂಡಯ್ಯ ತಾಯಿ ರಕ್ಕಸಿಯಾದಂತೆ ಕಾಯವಿಕಾರವು
> ಚೆನ್ನಮಲ್ಲಿಕಾರ್ಜುನಯ್ಯಾ ನೀನೊಲಿದವರು ಕಾಯಗೊಂಡಿದ್ದರೆನ್ನಬೇಡ।

ಈ ಉತ್ತರದಿಂದ ಪ್ರಭುದೇವರಿಗೆ ಸಂತೋಷ. ಆದರೆ ಅವಳಿಗೆ ಇನ್ನೂ ಕಠಿಣವಾದ ಪ್ರಶ್ನೆಗಳನ್ನು ಕೇಳುತ್ತಾರೆ :

ಕೂಡಲಿಲ್ಲದ ಘನವ ಕೂಡುವ ಪರಿ ಎಂತವ್ವ? ಹೇಳಿದಡೆ ಅದಕ್ಕೆ ಅದೇ ಕೊರತೆ ಗುಹೇಶ್ವರಲಿಂಗವ ಜೇರೆ ಮಾಡಿ ಬೆರಸುವ ಪರಿ ಎಂತು ಹೇಳಾ ?

ಅಕ್ಕಮಹಾದೇವಿಯ ತಕ್ಷಣ ಉತ್ತರ ಹೀಗೆ :—

ಗಟ್ಟಿತುಪ್ಪ ತಿಳಿದುಪ್ಪಕ್ಕೆ ಭೇದವುಂಟೆ ಅಯ್ಯಾ ? ದೀಪಕ್ಕೆ ದೀಪ್ತಿಗೆ ಭೇದವುಂಟೆ ಅಯ್ಯಾ?
ಎನ್ನ ಅಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ ಸಾವಯು ನಿರವಯಕ್ಕೆ ಭಿನ್ನವಿಲ್ಲವಯ್ಯಾ
ಚೆನ್ನಮಲ್ಲಿಕಾರ್ಜುನದೇವನ ಬೆರಸಿ ಮತಿಗೆಟ್ಟವಳ ಏತಕ್ಕೆ ನುಡಿಸುವಿರಯ್ಯಾ ಪ್ರಭುವೆ ?

ಇವನ್ನೆಲ್ಲ ಕೇಳುತ್ತ ತಲೆದೂಗುತ್ತ ಕುಳಿತಿದ್ದ ಬಸವಣ್ಣನವರೂ ಆಕೆಯನ್ನು ಕುರಿತು ಹೀಗೆ ಪ್ರಶ್ನಿಸುತ್ತಾರೆ :

ಹೆಣ್ಣು ಗಂಡಾದಡೆ ಸಂಗಕ್ಕೆ ಒಲಿವನು, ಕೇಳಾ ಶಿವನು. ಕೂಡಲಸಂಗಮದೇವರ ಬೆರಸುವಡೆ ಭಿನ್ನವಿಲ್ಲದೆ ಕಲಿಯಾಗಬೇಕು, ಕೇಳಾ ಅವ್ವಾ !

ಇದಕ್ಕೆ ಅಕ್ಕನ ಉತ್ತರ ಹೀಗೆ :

ಕಾಮನ ಗೆಲಿದನಯ್ಯಾ ಬಸವಣ್ಣಾ ನಿನ್ನ ದಯದಿಂದ; ಸೋಮಧರನ ಹಿಡಿತಪ್ಪೆನಯ್ಯಾ ಬಸವಣ್ಣಾ, ನಿನ್ನ ದಯದಿಂದ;
ನಾಮದಲ್ಲಿ ಹೆಣ್ಣುರೂಪಲ್ಲದೆ ಭಾವಿಸಲು ಗಂಡುರೂಪು ನೋಡಾ ಬಸವಣ್ಣಾ ನಿಮ್ಮ ದಯದಿಂದ;
ಅತಿಕಾಮಿ ಚೆನ್ನಮಲ್ಲಿಕಾರ್ಜುನಯ್ಯಂಗೆ ತೊಡರನಿಕ್ಕಿ ಕೂಡಿ ಎರಡರಿಯದೆ ಮರೆದೆನಯ್ಯಾ, ಬಸವಣ್ಣಾ, ನಿಮ್ಮ ದಯದಿಂದ.

ಬಸವಣ್ಣ, ಚೆನ್ನಬಸವಣ್ಣಾದಿ ಎಲ್ಲ ಶಿವಶರಣರೂ ತಲೆದೂಗುತ್ತಾರೆ. ಚೆನ್ನಬಸವಣ್ಣನ ಮಾತಿನಲ್ಲಿಯೇ ಹೇಳುವುದಾದರೆ:

ಅಜಕಲ್ಪಕೋಟಿ ವರುಷದವರೆಲ್ಲರೂ ಹಿರಿಯರೇ ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರೂ ಹಿರಿಯರೇ ? ನಡುಮುರಿದು,
ಗುಡುಗೂರಿ, ತಲೆ ನಡುಗಿ, ನರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ ಒಂಭತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ ?
ಅನುವನರಿದು ಘನವ ಬೆರಸಿ ಹಿರಿದು ಕಿರಿದು ಎಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ, ಬೇರಿಲ್ಲದಿಪ್ಪ
ಹಿರಿಯತನ ನಮ್ಮ ಮಹಾದೇವಿ ಅಕ್ಕಂಗಾಯಿತ್ತು.

ಅಕ್ಕಮಹಾದೇವಿಗೆ ಬೇಕಾದದ್ದು ಈ ಅಭಿಮಾನಪರ ಮಾತುಗಳಲ್ಲ, ಚೆನ್ನಮಲ್ಲಿಕಾರ್ಜುನನೊಂದಿಗೆ ಸಾಮರಸ್ಯ. ಅದರ ಬಗೆಯೆಂತು, ಅದನ್ನು ಪಡೆಯುವುದು ಹೇಗೆ ಎಂದು ಪ್ರಭುದೇವರನ್ನು ಕೇಳಲು, ಅವರು ಆಕೆಗೆ ಶ್ರೀಶೈಲದ ದಟ್ಟಾರಣ್ಯದ ಮಡಿಲಲ್ಲಿ ಹುದುಗಿರುವ ಕದಳೀ ವನಕ್ಕೆ ಹೋಗಲು ಉಪದೇಶಿಸುತ್ತಾರೆ. ಶಿವಶರಣರೆಲ್ಲರ ಶುಭಾಕಾಂಕ್ಷೆಗಳನ್ನು ಹೊತ್ತುಕೊಂಡು ತನ್ನ ಪ್ರಿಯಕರನನ್ನು ಅರಸುತ್ತ ಅಕ್ಕಮಹಾದೇವಿ ಕಲ್ಯಾಣದಿಂದ 'ಪ್ರೇಮಯಾತ್ರೆ'ಯನ್ನು ಕೈಕೊಳುತ್ತಾಳೆ. ಆತ ಪ್ರಿಯಕರ, ತಾನು ಪ್ರೇಯಸಿ: ವೀರಶೈವರ ಪ್ರಕಾರ ಶರಣ ಸತಿ, ಲಿಂಗಪತಿ. ಲಿಂಗದೊಂದಿಗೆ ಸಾಮರಸ್ಯ ಹೊಂದಬೇಕಾದರೆ ಶರಣ ತನ್ನನ್ನು ಪೂರ್ತಿಯಾಗಿ ಅರ್ಪಿಸಿಕೊಳ್ಳಬೇಕು. ಆ ತನ್ನ ಭಾವನಾತ್ಮಕ ಕಲ್ಪನೆಯಲ್ಲಿ ಆತನನ್ನು ಕಂಡುಕೊಂಡು, ಒಲಿಸಿಕೊಳ್ಳಲು ಪ್ರಯತ್ನಿಸುವ ಅಕ್ಕಮಹಾದೇವಿಯ ರೀತಿ ಪ್ರೇಯಸಿ–ಪ್ರೀಯಕರರ ಸಂವಾದದಂತೆ ತೋರುತ್ತದೆ. ಇಲ್ಲಿ ಒಂದೇ ಒಂದು ವಚನವನ್ನು ಉದಾಹರಿಸಬಹುದು :

ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ? ನೀವು ಕಾಣಿರೆ ?, ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ? ನೀವು ಕಾಣಿರೆ?
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ? ನೀವು ಕಾಣಿರೆ ?, ಕೊಳನ ತಡಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ? ನೀವುಕಾಣಿರೆ ?
ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ ? ನೀವು ಕಾಣಿರೆ ?, ಚೆನ್ನಮಲ್ಲಿಕಾರ್ಜುನನೆಲ್ಲಿಹನೆಂದು ಬಲ್ಲೊಡೆ
ನೀವು ಹೇಳಿರೆ ನೀವು ಹೇಳಿರೆ !

ತಾನು ಆತನೊಂದಿಗೆ ಹೇಗೆ ಬೆರೆತೆನೆಂಬುದನ್ನೂ ಆಕೆ ಪ್ರೇಯಸಿಯ ಹಾಗೇ ಹೇಳಿದ್ದಾಳೆ:

ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ, ನೋಡವ್ವ; ಕೇಳುತ್ತ, ಕೇಳುತ್ತ ಮೈಮರೆದೊರಗಿದೆ, ನೋಡವ್ವ ;
ಹಾಸಿದ ಹಾಸಿಗೆಯು ಹಂಗಿಲ್ಲದೇ ಹೋಯಿತ್ತು ಕೇಳವ್ವ ; ಚೆನ್ನಮಲ್ಲಿಕಾರ್ಜುನ ದೇವನು ಕೂಡುವ ಕೂಟದ ಪರಿಯ
ನಾನೇನೆಂದರಿಯದೆ ಮರೆದೆ ಕಾಣವ್ವ.

ಕೊನೆಗೆ ಆಕೆಯೇ ಹೇಳಿದಂತೆ,

...ಕದಳಿಯ ಬನದಲ್ಲಿ ಭವಹರನ ಕಂಡೆನು, ಭವಗೆಟ್ಟು ಬಂದ ಮಗಳೆಂದು ಕರುಣದಿಂದ ತೆಗೆದು ಬಿಗಿಯಪ್ಪಿದಡೆ
ಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು.

ಇತಿಹಾಸದ ಪೂರ್ವದಲ್ಲಿ, ಅಂದರೆ ವೇದಕಾಲದಲ್ಲಿ ಹಲವು ವೇದವಾದಿನಿಯರಿದ್ದರೆಂಬ ವಿಷಯವನ್ನು ಕೇಳುತ್ತೇವೆ. ಆ ಕಾಲ ಬಹು ಹಿಂದಿನ ಕಾಲ. ಅನಂತರದಲ್ಲಿ ಜ್ಞಾನಾರ್ಜನೆಗಾಗಿ, ಪಾರಮಾರ್ಥಿಕ ಶೋಧನೆಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟ ಮಹಿಳೆಯರ ಸಂಖ್ಯೆ ತೀರ ಕಡಿಮೆ. ಆತ್ಮ ಶೋಧನೆಯಲ್ಲಿ ತಮಗಾದ ಅನುಭವಗಳನ್ನು ಹೇಳಿದವರ ಸಂಖ್ಯೆ ಇನ್ನು ಕಡಿಮೆ. ಅವರಲ್ಲಿ ಮೊದಲನೆಯವಳೆಂದರೆ ಅಕ್ಕಮಹಾದೇವಿ.

'ನಿಜಪದವನೈದಿದ ಮಹದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು'

# ಮೋಳಿಗೆ ಮಹಾದೇವಿಯಮ್ಮ

ಡಾ॥ ಎಂ. ಆರ್. ಉಮಾದೇವಿ

ವೇದಗಳ ಕಾಲದಲ್ಲಿ ಹೆಣ್ಣಿಗೆ ಉನ್ನತ ಸ್ಥಾನ–ಮಾನಗಳನ್ನಿತ್ತು ಗೌರವಿಸಿದ ಸಮಾಜ ಮನುವಿನ 'ನಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂಬ ಮಾತಿಗೆ ಬೆಲೆಯಿತ್ತು ಹೆಣ್ಣನ್ನು ಸರ್ವ ಸ್ವಾತಂತ್ರ್ಯಗಳಿಂದ ವಂಚಿಸಿತು ; ಅಬಲೆಯ ಪಟ್ಟಗಟ್ಟಿ ಗೃಹಬಂಧನ ದಲ್ಲಿಟ್ಟಿತು. ಗಂಡಿನ ಕೈಗೊಂಬೆಯಾಗಿ, ಅಡಿಯಾಳಾಗಿ, ಸಂತಾನೋತ್ಪತ್ತಿಯ ಸಾಧನವಾಗಿ ತನ್ನ ಬಾಳನ್ನು ಸವೆಸುತ್ತಿದ್ದಳು ಹೆಣ್ಣು. ಹತ್ತನೆಯ ಶತಮಾನದಲ್ಲಿ ವೈದಿಕ ಧರ್ಮದ ವಿರುದ್ಧ ತಲೆಯೆತ್ತಿದ ಜೈನಧರ್ಮವೂ ಹೆಣ್ಣಿನ ಸ್ಥಿತಿಗತಿಗಳ ಕಡೆಗೆ ಗಮನ ಹರಿಸಲಿಲ್ಲ. ಧಾರ್ಮಿಕ ವಿಧಿಗಳನ್ನು ನಿರ್ವಹಿಸಲು ಅನರ್ಹಳಾದ ಹೆಣ್ಣಿನ ಜೀವಕ್ಕೆ ಮುಕ್ತಿಯೇ ಇಲ್ಲ ; ಗಂಡಾಗಿ ಹುಟ್ಟಿದರೆ ಮಾತ್ರ ಮೋಕ್ಷಪ್ರಾಪ್ತಿ. ಇಂತಹ ಪರಿಸರದಲ್ಲಿ ತಲೆಯೆತ್ತಿದ ಕ್ರಾಂತಿಕಾರಿ ವೀರಶೈವ ಧರ್ಮ, ಧಾರ್ಮಿಕ, ಸಾಮಾಜಿಕ, ವೈಚಾರಿಕ, ಸಾಹಿತ್ಯಿಕ ಸ್ವಾತಂತ್ರ್ಯವನ್ನು ಹೆಣ್ಣಿಗೆ ನೀಡಿದುದಲ್ಲದೆ ಆಚರಣೆಯಲ್ಲಿ ತಂದಿತು.

> ಮೊಲೆ ಮುಡಿ ಬಂದರೆ ಹೆಣ್ಣೆಂಬರು ಗಡ್ಡ ಮೀಸೆ ಬಂದರೆ ಗಂಡೆಂಬರು
> ಒಳಗೆ ಸುಳಿವಾತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ ರಾಮನಾಥಾ.

ಹೆಣ್ಣು ಗಂಡು ಎಂಬುದು ಮಾನವನ ಶಾರೀರಿಕ ರಚನೆಯ ವೈವಿಧ್ಯವಷ್ಟೆ. ಆತ್ಮ ಎರಡೂ ಜೀವಿಗಳಲ್ಲಿ ಒಂದೇ ಆಗಿರುತ್ತದೆ– ಎಂಬ ತತ್ತ್ವವನ್ನು ಸಾರಿದ ಶಿವಶರಣರು ಸ್ತ್ರೀ ಪುರುಷ ಸಮಾನತೆಯನ್ನು ಎತ್ತಿ ಹಿಡಿದರು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬಲ್ಲಿ ಪತಿಯೊಡನೆ ಸತಿಯ ಸಾಹಚರ್ಯದ ಮಹತ್ವವನ್ನು ಪ್ರಚುರ ಪಡಿಸಿದರು.

**ಮೋಳಿಗೆ ಮಹಾದೇವಿಯಮ್ಮ**

ಪಲವಾರು ಶತಮಾನಗಳಿಂದ ಗಗನಕುಸುಮವಾಗಿದ್ದ ಸ್ವಾತಂತ್ರ್ಯ ತನ್ನ ಕೈಗೆಟುಕಿದಾಗ ಅದನ್ನು ಸಾರ್ಥಕ ಪಡಿಸಿಕೊಂಡಳು ; ಸಮರ್ಥಿಸಿಕೊಂಡಳು. ಅನುಭವ ಮಂಟಪದಲ್ಲಿ ಶರಣರಿಗೆ ಹೆಗಲೆಣೆಯಾಗಿ ನಿಂತು ತಾತ್ವಿಕ ಚರ್ಚೆಯಲ್ಲಿ ದಿಟ್ಟತನದಿಂದ ಭಾಗವಹಿಸಿದಳು; ವಚನ ರಚನೆಯಲ್ಲಿಯೂ ನಿರತಳಾದಳು. 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ ನೋಡಾ'! ಎಂದ ಸಿದ್ಧರಾಮ ಹೆಣ್ಣಿನ ಸ್ಥಾನವನ್ನು ಮುಗಿಲು ಮುಟ್ಟಿಸಿದನು. ಶರಣೆಯರ ಜೀವನ ಚರಿತ್ರೆಯನ್ನು ಅವಲೋಕಿಸಿದರೆ ಈ ದಿವ್ಯಸತ್ಯದ ಅರಿವಾಗುತ್ತದೆ. ಅರ್ಧಾಂಗಿಯಾಗಿ ಪತಿಯ ಲೌಕಿಕ ಸುಖದುಃಖಗಳಲ್ಲಿ ಪಾಲ್ಗೊಳ್ಳುತ್ತಿದ್ದ ಹೆಣ್ಣು ಪಾರಮಾರ್ಥಿಕ ಸುಖದಲ್ಲಿಯೂ ಪತಿಯ ಒಡನಾಡಿಯಾದಳು, ಸಹಚರಿಯಾದಳು, ಅಷ್ಟೇ ಅಲ್ಲ ಮಾರ್ಗದರ್ಶಿಯೂ ಆದಳು. ಇಂಥವರಲ್ಲಿ ಮೋಳಿಗೆ ಮಾರಯ್ಯನ ಮಡದಿ ಮಹಾದೇವಿಯಮ್ಮ ಅಗ್ರಗಣ್ಯಳು.

ಪ್ರಕೃತಿ ರಮಣಿಯ ಮನೋಹರ ಲಾಸ್ಯನೃತ್ಯಕ್ಕೆ ನೆಲೆಬೀಡಾದ ಕಾಶ್ಮೀರದ ಸಂಪದ್ಭರಿತ ನಾಡಾದ ಮಾಂಡವ್ಯಪುರ. ವರ್ಣರಂಜಿತ ಉದ್ಯಾನಗಳಿಂದ ಫಲಪುಷ್ಪಭರಿತ ತರುಮರಗಳಿಂದ ಕಣ್ಸೆಳೆಯುವ ಮನಕ್ಕೆ ಮುದ ನೀಡುವ ಚೇತೋಹಾರಿಯಾದ ಸೌಂದರ್ಯದಿಂದ ಕಂಗೊಳಿಸುತ್ತಿತ್ತು. ಇದರಧಿಪತಿ ಮಹಾದೇವ ಭೂಪಾಲನು ಸದಾಚಾರ ಶಿವಭಕ್ತಿಗಳನ್ನು ಮೈಗೂಡಿಸಿಕೊಂಡು ಜನಾನುರಾಗಿಯಾಗಿ ರಾಜ್ಯಭಾರ ಮಾಡುತ್ತಿದ್ದನು. ಈತನ ಮಡದಿ ಗಂಗಾದೇವಿ,

> ...ಸರಸಿಜ ಮುಖಿಯು। ಪತಿಭಕ್ತಿ ವ್ರತನಿಷ್ಠೆ ಪಾರ್ವತಿಯೊಲಿಪಳು॥ ರತಿಗಿಂತ ಲಾವಣ್ಯ ರಮ್ಯವಡೆದಿಹಳು[1]...॥

ಅಷ್ಟೇ ಅಲ್ಲ, ಪತಿಯೊಡನೆ ಜಂಗಮ ಸೇವೆಯನ್ನು ನಿಷ್ಠೆಯಿಂದ ಆಚರಿಸುತ್ತಿದ್ದಳು. ಮಹಾದೇವ ಭೂಪಾಲನ ಜಂಗಮ ಸೇವಾ ನಿಷ್ಠೆಯನ್ನು ಕರ್ಣಾಕರ್ಣಿಯಾಗಿ ಕೇಳಿದ ಬಸವಣ್ಣನು ಹಸುಬೆಯ ಸೆಟ್ಟಿಯಾಗಿ ಬಂದು ಎಲ್ಲ ಜಂಗಮರನ್ನೂ ಕಲ್ಯಾಣಕ್ಕೆ ಕರೆದೊಯ್ದ. ಜಂಗಮ ಸೇವೆಯಿಂದ ವಂಚಿತರಾದ ಮಹಾದೇವ ಪ್ರಭು ಗಂಗಾದೇವಿಯರು ಮುಂಗಾಣದಾದರು. ಕೃತಕ ಜಂಗಮ ವೇಷಧಾರಿಯಾಗಿ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದ ಚಾರನೊಬ್ಬನು ಬಸವನ ಮಹಿಮಾವಲಯದಲ್ಲಿ ಲಯವಾಗಿ ನಿಜ ಜಂಗಮನಾದ ಸುದ್ದಿ ಮಾಂಡವ್ಯಪುರವನ್ನು ತಲುಪಿತು. ಮಹಾ ಮಹಿಮನಾದ ಬಸವೇಶ್ವರನನ್ನು ಕಾಣುವ ಹಂಬಲ ಬಲಿದು ಸೂಜಿಗಲ್ಲಿನೆಡೆಗೆ ಆಕರ್ಷಿತವಾಗುವ ಲೋಹದಂತೆ ಮಹಾದೇವ ಭೂಪಾಲ ಕಲ್ಯಾಣಕ್ಕೆ ಹೊರಡಲುದ್ಯುಕ್ತನಾದನು. ಪತಿಸೇವಾ ಪರಾಯಣೆಯಾದ ಗಂಗಾದೇವಿ ಪತಿಯನ್ನನುಸರಿಸಿ ಹೊರಡಲು ಸನ್ನದ್ಧಳಾದಳು. ಸಂಪದ್ಭರಿತವಾದ ಮಾಂಡವ್ಯಪುರದ ಪಟ್ಟಮಹಿಷಿ ಎಂದ ಮೇಲೆ ಅವಳ ಸಿರಿಯೇನು ವೈಭವವೇನು!

> ಕಡಗ ಕಾಂಚಿಯ ದಾಮ ಕಟಿಸೂತ್ರ ಮುದ್ರಿಕೆ। ಮುಡಿಯ ಮುತ್ತಿನ ಬಲೆಯೋಲೆ।
> ನಡುವಿನೊಡ್ಯಾಣ ಪದಕ ಕಂಠಮಾಲೆ ಪೊಂ।ದೊಡಿಗೆ ಪೆಂಡೆಯಗಳ ತೆಗೆದು॥
> ಒಸೆದು ಪೂಸಿದ ನಿಜ ಭಸಿತ ಸರ್ವಾಂಗದೊ।ಳೆಸೆವ ರುದ್ರಾಕ್ಷಿಯ ಧರಿಸಿ।
> ಮಿಸುಪ ಚೀನಾಂಬರದುಡಿಗೆಯನೆಲ್ಲ ತ್ಯ।ಜಿಸುತೆಳೆಗಾವಿಯನುಟ್ಟು॥[2]

---

1. ಶರಣಲೀಲಾಮೃತ ಸಂಧಿ ೮.
2. ಮೋಳಿಗೆಯ್ಯನ ಪುರಾಣ ಸಂಧಿ ೫ ಪದ್ಯ ೪–೫.

ಹೊಳೆವ ಹೊಸ್ಸಿನ ಹೊರೆಯನ್ನಿಳುಹಿ. ವಿಸುಪ ಭಸಿತದಿಂದ ಸರ್ವಾಂಗವನ್ನು ಸಿಂಗರಿಸಿಕೊಂಡು, ರುದ್ರಾಕ್ಷಿಯ ಮಾಲೆಯಿಂದ ಅಲಂಕರಿಸಿಕೊಂಡು ಹೊರಟಳು ಗಂಗಾದೇವಿ. ಮಿರುಮಿರುಗುವ ಕಣ್ಣು ಕುಕ್ಕುವ ಆಡಂಬರದ ಪಟ್ಟೆ ಪೀತಾಂಬರಗಳನ್ನು ತೆಗೆದಿಟ್ಟು ಕಣ್ಮನ ತಣಿಸುವ ಸಾಧಾರಣ ಕಾವಿಯ ಸೀರೆಯನ್ನುಟ್ಟಳು. ಈ ವಿನೂತನ ವೇಷ ಭೂಷಣಗಳೊಂದಿಗೆ ತನ್ನನ್ನನುಸರಿಸಲು ಅಣಿಯಾದ ಮಡದಿಯನ್ನು ಕಂಡು ಮಹಾದೇವ ಪ್ರಭುವಿಗೆ ಅಚ್ಚರಿ; ಎದುರಿಸಬೇಕಾದ ಸಂಕಷ್ಟಗಳ ಬಗೆಗೆ ಆತಂಕ; ಅತಿಸಿರಿ ಸುಖಮಿರ್ದ ಸತಿ ನಿನಗೆಲ್ಲಿಯ ಪಥ ನಿನ್ನ ಸುತರೊಳಿರು...[3] ಎಂದು ಮನವೊಲಿಸಲು ಪ್ರಯತ್ನಿಸುತ್ತಾನೆ. ಎಂಥ ಸಂದರ್ಭದಲ್ಲಿಯೂ ಎಡೆಬಿಡದೆ ಪತಿಯನ್ನನುಸರಿಸುವುದೇ ಸತೀಧರ್ಮವೆಂದು ನಂಬಿದ್ದ ಗಂಗಾದೇವಿಯ ಮನ, ಪತಿಯ ಮಾತನ್ನು ಕೇಳಿ ನೊಂದಿತು. ತನ್ನ ಕೈವಶವಾಗಿದ್ದ ರಾಜ್ಯ, ಕೋಶ, ಅಧಿಕಾರ, ಚತುರಂಗ ಬಲ: ಏಳುನೂರು ಸುಂದರ ತರುಣಿಯರ ರಾಣೀವಾಸ ಎಲ್ಲವನ್ನೂ ತೊರೆದು ಅರಸನೇ ಹೊರಟಿರುವಾಗ, ಸಕಲ ಸೌಭಾಗ್ಯವೂ ಪತಿಯೇ ಎಂದು ಭಾವಿಸಿದ್ದ ಗಂಗಾದೇವಿ ಪತಿಯಿಲ್ಲದ ರಾಜ್ಯಭೋಗಗಳನ್ನು ಅನುಭವಿಸಲಾಶಿಸುವಳೆ? ದೇಹದ ಬೆಂಬಳಿಯ ನೆಳಲಿನಂತೆ, ಪತಿಯ ಶ್ರೀಪಾದದ ಬಳಿಯೇ ತನ್ನ ಇರವು ಎಂದು ದೃಢಮನಸ್ಕಳಾಗಿ ಹೇಳಿದಳು. ಮಡದಿಯ ಮನದ ನಿಶ್ಚಲತೆಯ ಬಗೆಗೆ ಸಂದೇಹ ಅಳಿಯದ ಮಹಾದೇವ 'ನೀನೆಂತು ನಿತ್ತರಿಪೆ ನಿರ್ವಾಣ ನಮ್ಮಿರವು'[4] ಎಂದು ತಾನನುಸರಿಸಿ ಹೊರಟ ಮಾರ್ಗದ ಕಠೋರತೆಯನ್ನು ಅರುಹುತ್ತಾನೆ. ಸುಖದ ಸುಪ್ಪತ್ತಿಗೆಯಲ್ಲಿದ್ದ ಸುಕುಮಾರಿಯ ಸುಮಕೋಮಲತೆಯನ್ನು ಅರಿತಿದ್ದ ಅರಸು ಹೇಗಾದರೂ ಗಂಗಾದೇವಿಯನ್ನು ತಡೆಯಲು ಪ್ರಯತ್ನಿಸುತ್ತಾನೆ. ಆದರೆ ಗಂಗಾದೇವಿಯ ನಿರ್ಧಾರ ಅಚಲ.

ಸುಧೆಯನು ಸವಿಯಲರಿಯದೆ ಕೆಚ್ಚಲ ಕಚ್ಚಿ । ರುಧಿರವನೀಂಟುವುಣ್ಣೆಯೊಲು ॥
ಸದಮಲ ಮುಕ್ತಿಯ ಸುಖವಿರೆ ಬಿಟ್ಟು ಮಾ। ಯದ ಸಿರಿಯಲ್ಲಿ ನಾನಿಹೆನೆ ॥[5]

'ಸಿಹಿಯಾದ ಹಾಲಿನ ರುಚಿ ತಿಳಿಯದ ಉಣ್ಣೆ ಕೆಚ್ಚಲಿಗೆ ಅಂಟಿಕೊಂಡು ರಕ್ತವನ್ನು ಹೀರುತ್ತದೆ. ಮುಕ್ತಿಯ ಸುಖ ಕೈಗೆಟಕುವಂತಿದ್ದರೂ ಅದನ್ನು ಬಿಟ್ಟು ರಾಜ್ಯಭೋಗವನ್ನಿಚ್ಛಿಸಿದರೆ ಉಣ್ಣೆಯಂತಾದೇನು. ಸೂಸಲಿಗೆ ಆಸೆಪಟ್ಟು ಸೆರೆಯಾಗುವ ಇಲಿಯಂತೆ, ತುಣುಕು ಮಾಂಸಕ್ಕೆ ಆಶಿಸಿ ಗಾಳಕ್ಕೆ ಸಿಕ್ಕು ಬೀಳುವ ಮೀನಿನಂತೆ ಕ್ಷಣಿಕ ಐಹಿಕಸುಖಭೋಗಕ್ಕೆ ಮನತೆತ್ತು ಪರಮ ಗತಿಯನ್ನು ಕೈಬಿಡುವ ಮೂಢಮತಿ ನಾನಲ್ಲ'–ಎಂದು ವಾದಿಸಿ ಪತಿಯ ಮೆಚ್ಚುಗೆಯನ್ನೂ ಒಪ್ಪಿಗೆಯನ್ನೂ ಪಡೆಯುತ್ತಾಳೆ. ಸತಿಪತಿಗಳೊಂದಾಗಿ ಅರಮನೆಯನ್ನು ತೊರೆದು ರಾಜ ಬೀದಿಗೆ ಬರುತ್ತಾರೆ. ಗಂಗಾದೇವಿಯ ನಿಷ್ಠೆಯನ್ನು ಮನದಟ್ಟು ಮಾಡಿಕೊಳ್ಳುವ ಸಲುವಾಗಿ ಕೊನೆಯ ಹಾಗೂ ಕಠಿಣ ಪರೀಕ್ಷೆಯನ್ನೊಡ್ಡುತ್ತಾನೆ. ಬೀಳ್ಕೊಡಲು ನೆರೆದ ಆಪ್ತೇಷ್ಟರೆಲ್ಲರ ಸಮ್ಮುಖದಲ್ಲಿ 'ಉಟ್ಟ ವಸನವನುಳಿದು ನಿರ್ವಾಣವಾಗು'[6] ಎನ್ನುತ್ತಾನೆ. ಹಿಂದು ಮುಂದು ನೋಡದೆ ಉಟ್ಟ ಸೀರೆಯನ್ನು ಕಳಚಲು ಸನ್ನದ್ಧಳಾದ ಮಡದಿಯನ್ನು 'ನಿಲ್ಲು ಹೋ ರಮಣಿ'ಎಂದು ತಡೆಯುತ್ತಾನೆ ; ಅಲ್ಲದೆ 'ನಿನ್ನಿಂ ಮುಂದೆನಗೆ ಮುಕ್ತಿ ಪಲ್ಲವಿಸಿತು'[7] ಎಂದು ಭವಿಷ್ಯ ನುಡಿಯುತ್ತಾನೆ. ನಿತ್ಯನಿರ್ಮಲನಾದ ಶಿವನಿಗೆ ತನ್ನನ್ನೇ ಸಮರ್ಪಿಸಿಕೊಂಡ ಶರಣೆಗೆ ಅಣು ಅಣುವಿನಲ್ಲಿಯೂ ಶಿವನನ್ನು ಸಾಕ್ಷಾತ್ಕರಿಸಿಕೊಂಡು ಶಿವನೇ ತಾನಾದ ಗಂಗಾದೇವಿಯ ಕಾಯಕ್ಕೆ ಬಟ್ಟೆ ಬರೆಯ ಮುಚ್ಚು ಮರೆಯೇಕೆ ? ಹೂವನ್ನನುಸರಿಸಿ ಬರುವ ಪರಿಮಳದಂತೆ. ಚಿನ್ನದ ಬೆಂಬಳಿಯ ಕಾಂತಿಯಂತೆ, ತಪಸ್ಸಿನ ಜೊತೆಯ ಮುಕ್ತಿಯಂತೆ, ಪದದಲ್ಲಿ ಅಡಕವಾದ ಅರ್ಥದಂತೆ ಗಂಗಾದೇವಿ ಪತಿಯನ್ನನುಸರಿಸಿ ಕಲ್ಯಾಣದೆಡೆಗೆ ಪಯಣ ಬೆಳೆಸಿದಳು.

ಹವೆಯನರಿಯರು ಗರ್ಭಸುಖಿಗಳ್ ನಡೆದು । ಅವಧಿ ಪಟ್ಟರಾ ಸತಿಪತಿಗಳು ।
ತಳಿರಂತಡಿಯು ಗುಳ್ಳೆ ಬಳಲಿಕೆಯು ಅಲ್ಲಿ । ನೆಳಲ ಸಾರುತ ಬಂದರಿಳೆಯೊಳ್ ॥[8]

ರಾಜಗೃಹದ ಸುಖವಾದ ವಾತಾವರಣದಲ್ಲಿದ್ದ ರಾಜದಂಪತಿಗಳು ಹೊರಗಿನ ಬಿಸಿಲು ಚಳಿಗಳ ಅರಿವಿಲ್ಲದ 'ಗರ್ಭಸುಖಿ'ಗಳು. ಮೆತ್ತನೆಯ ರತ್ನಗಂಬಳಿಯ ಮೇಲೆಯೇ ನಡೆದು ಅಭ್ಯಾಸವಾದ ಕೋಮಲ ಪಾದಗಳು ಕಲ್ಲುಮುಳ್ಳಿನ ಹಾದಿಯಲ್ಲಿ ನಡೆದುದರ ಫಲವಾಗಿ ಬೊಬ್ಬೆಗಳೆದ್ದುವು. ಛತ್ರ ಚಾಮರಗಳ ನೆರಳಿನಲ್ಲಿಯೇ ಇದ್ದು ಅಭ್ಯಾಸವಾದ ಅರಸ ಅರಸಿಯರ ಮಂಡೆಗಳು ಬಿಸಿಲಲ್ಲಿ ಕಾದು ಬೆಂದು ಮರದ ನೆರಳನ್ನು ಅರಸಿದುವು. ಈ ಎಲ್ಲ ಬವಣೆ ಅವರ ಶರೀರಕ್ಕೆ; ಶಿವಧ್ಯಾನದಲ್ಲಿ ಮೈಮರೆತ ಈ ದಂಪತಿಗಳಿಗೆ ಕಷ್ಟದ ಅರಿವೇ ಇಲ್ಲ ; ನೋವಿನ ಪರಿವೆಯೇ ಇಲ್ಲ. ಅರಸನಾದವನು ಬೇಟೆ, ಯುದ್ಧಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಕಷ್ಟಗಳನ್ನು ಕಂಡಿರುತ್ತಾನೆ; ಅನುಭವಿಸಿಯೂ ಇರುತ್ತಾನೆ. ಆದರೆ ಅಂತಃಪುರದ ಸುಖಜೀವನವನ್ನು ಮೈಗೂಡಿಸಿಕೊಂಡ ಮಹಾರಾಣಿ, ಕಷ್ಟವೆಂದರೇನೆಂದೇ ಅರಿಯದ ಗಂಗಾದೇವಿ ಅಂಜದೆ ಅಳುಕದೆ ಎಲ್ಲವನ್ನೂ ಎದುರಿಸಿ ಗೆದ್ದಳೆಂದರೆ ಅವಳ ಆತ್ಮದೃಢತೆಯ ನಿಲುವು ಎಷ್ಟು ಉನ್ನತ ಮಟ್ಟದ್ದು ಎಂದು ಅರಿವಾಗುತ್ತದೆ. ಕಾಶ್ಮೀರದಿಂದ ಕಲ್ಯಾಣದವರೆಗಿನ ಹಾದಿಯನ್ನು ಕಾಲ್ನಡಿಗೆಯಲ್ಲಿ ಸವೆಸಿದ ಆಕೆಯ ಕೆಚ್ಚು ಮೆಚ್ಚುವಂಥದು.

---

3. ಮೊಗಳಿಗೆಯ್ಯನ ಪುರಾಣ ಸಂಧಿ ೫ ಪದ್ಯ–೪,೫
4. ಮೋಳಿಗೆಯ್ಯನ ಪುರಾಣ ಸಂಧಿ ೫ ಪದ್ಯ ೬
5. ಮೋಳಿಗಯ್ಯನ ಪುರಾಣ ಸಂಧಿ ೫, ಪದ್ಯ ೯.
6. ಮೋಳಿಗೆಯ್ಯನ ಪುರಾಣ ಸಂಧಿ ೫ ಪದ್ಯ ೧೩
7. ಮೋಳಿಗೆಯ್ಯನ ಪುರಾಣ ಸಂಧಿ ೫ ಪದ್ಯ ೧೫
8. ಶರಣಲೀಲಾಮೃತ ಸಂಧಿ ೮

ಕಲ್ಯಾಣವನ್ನು ಸೇರಿದ ದಂಪತಿಗಳು ಕಟ್ಟಿಗೆ ಮಾರುವ ಕಾಯಕವನ್ನು ಸ್ವೀಕರಿಸುತ್ತಾರೆ. ಕಾಶ್ಮೀರದ ಅರಸು 'ಮೋಳಿಗೆಯ ಮಾರಯ್ಯ'ನಾಗಿಯೂ ಆತನ ಪಟ್ಟಮಹಿಷಿ ಗಂಗಾದೇವಿ 'ಶರಣೆ ಮಹಾದೇವಿಯಮ್ಮ' ಆಗಿ ಪರವರ್ತಿತರಾಗುತ್ತಾರೆ. ಪುಟ್ಟ ಕುಟೀರವನ್ನು ಕಟ್ಟಿಕೊಂಡು ನಿತ್ಯದ ಕಾಯಕದಿಂದ ಬಂದ ಆದಾಯದಲ್ಲಿ ಜಂಗಮಸೇವೆ ಮಾಡಿಕೊಂಡಿರುತ್ತಾರೆ. ಮೃಷ್ಟಾನ್ನಭೋಜನವನ್ನು ಸವಿಯುತ್ತಿದ್ದ ರಾಜ ದಂಪತಿಗಳಿಗೆ ಅಂಬಲಿಯೇ ಪರಮಾನ್ನ; ಹುರುಳಿಕಾಳೇ ವ್ಯಂಜನವಾಗಿದೆ. ಮಹಾದೇವಿ ತಯಾರಿಸುತ್ತಿದ್ದುದು ಕೇವಲ ಅಂಬಲಿಯಲ್ಲ: ಸತ್ಯನಿಷ್ಠೆಗಳ ಬೆಂಕಿಯಲ್ಲಿ ಬೆಂದು ಭಕ್ತಿರಸದಿಂದ ಪಾಕಗೊಂಡ ವಿಶಿಷ್ಟ ಅಮೃತೋಗರ. ಅದರ ರುಚಿ ಸವಿದವರಿಗೇ ಗೊತ್ತು. ಮಾರಯ್ಯನ ಆದರದ ಸತ್ಕಾರದೊಂದಿಗೆ ಭಕ್ತಿಯಿಂದ ನೀಡಿದ ಅಂಬಲಿಯನ್ನು ಸವಿದ ಮಹಾಗಣಂಗಳು ಬಸವನ ಮಹಾಮನೆಯ ರಸರಸಾಯನವನ್ನೂ ಅಲ್ಲಗಳೆದರು. ಇದರ ಪರೀಕ್ಷೆಗೆಂದು ಬಸವಣ್ಣನು ಜಂಗಮ ವೇಷದಿಂದ ಮಾರಯ್ಯನ ಮನೆಗೆ ಬಂದು ಪ್ರಸಾದ ಸ್ವೀಕರಿಸುತ್ತಾನೆ. ಆಗ ಅವನಿಗೆ ಮನದಟ್ಟಾಯಿತು. ಜಂಗಮವೃಂದ ಮಹಾದೇವಿಯ ಕೈಯೋಗರವನ್ನು ಬಣ್ಣಿಸಿದುದರಲ್ಲಿ ಅತಿಶಯವಿಲ್ಲವೆಂಬ ಅಂಶ.

ಇದುವಲಾ ಭವರೋಗಕೌಷಧಿ । ಇದುವಲಾ ಭಕ್ತಿಯು ಬೆಳಸು ತಾ ।ನಿದುವಲಾ ಎನ್ನಯ ತಪರ್ವುನೆಗೊದವಿಸಿದ ಧನವು॥
ಇದುವಲಾ ನಿಜ ಪದವಿಗಳಿಗಾ । ಸ್ಪದವೆನುತ್ತಂ ತತ್ಪ್ರಸಾದ ಸ । ಮುದಿತ ಭೋಗಿತನಾಗಿ.........॥[9]

ಬಸವಣ್ಣ, ಹೊನ್ನು ತುಂಬಿದ ಎರಡು ಜಾಳಿಗೆಗಳನ್ನು ಮರೆಸಿಟ್ಟು ತಾನು ಬಂದ ಹಾದಿಯಲ್ಲಿ ಹಿಂದಿರುಗುತ್ತಾನೆ. ಕಾಯಕ ಮುಗಿಸಿಬಂದ ಮಾರಯ್ಯ, ಇದನ್ನು ಕಂಡು ಬಸವಣ್ಣನ ಕಾರ್ಯವೇ ಎಂದು ತಿಳಿಯುತ್ತಾನೆ. ಮಹಾದೇವಿಯನ್ನು ಪರೀಕ್ಷಿಸುವ ಸಲುವಾಗಿ ಹೀಗೆನ್ನುತ್ತಾನೆ :–

ಕಷ್ಟ ಪರಿಹಾರವಾಯ್ತು। ಪತ್ನಿ ಸಮಗಿನ್ನೆಂದು। ಪಟ್ಟದರಸಿಯೆ ಮೇಲಾ। ಭರಣಗೈಸುವೆನು। ರಾಜ ಠೀವಿಯೋಳಿರ್ದ। ರಾಜೀವ ಮುಖಿ ನೀನು॥
ತೇಜ ಮಾಗಿಯೆ ಜಿಹ್ವೆ । ರುಚಿಯು ಮಾಡಿಸುವೆ । ನವೀನತರ ಭಕ್ಷ್ಯ। ಭೋಜನವ ರುಚಿಸೆಂದು ॥[10]

ಪುಸಲಾಯಿಸುತ್ತಾನೆ. ತನ್ನದಾಗಿದ್ದ ಸಿರಿ, ವೈಭವ, ಅಧಿಕಾರಗಳನ್ನು ತ್ಯಜಿಸಿ, ಜಿಹ್ವಾಚಾಪಲ್ಯವನ್ನು ಗೆದ್ದು ಸ್ವಇಚ್ಛೆಯಿಂದ ಶರಣ ಜೀವನವನ್ನು ಸ್ವೀಕರಿಸಿದ ಮಹಾದೇವಿ ಅನಾಯಾಸವಾಗಿ ದೊರೆತ ಅನ್ಯರ ಹೊನ್ನಿಗೆ ಆಸೆಪಡುವಳೆ ?

ತರವೆ ರಮಣನೆ ನಮಗೆ। ಪರದ್ರವ್ಯ ಸೋಂಕು ॥ ಸಕಲ ಸಂಪದವೆಲ್ಲ । ಸೌಖ್ಯಗಳ ತ್ಯಜಿಸಿದೆವು॥
ದೋಷಗಳ ನೀಗಿ ಘನ । ಶೇಷಭರಣನ ಪೊಂದ ॥ ಲೋಸುಗವು ನಾವ್ಬಂದು। ಆಸೆ ಸಲ್ಲದೆಮಗೆ ॥[11]

ಎಂಬ ಮಹಾದೇವಿಯ ಮಾತು ಅವಳ ಘನತೆವೆತ್ತ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುತ್ತವೆ. ಸತಿ–ಪತಿಗಳಿಬ್ಬರೂ ಆ ಹೊನ್ನು ಅಸ್ಪೃಶ್ಯವೆಂದು ಭಾವಿಸುತ್ತಾರೆ. ಶಿವನ ಕಾರುಣ್ಯದ ಕಂದನಾದ ತನಗೆ ಯಾವ ಕೊರತೆಯೂ ಇಲ್ಲವೆಂಬುದನ್ನು ಬಸವಣ್ಣನಿಗೆ ಮನದಟ್ಟು ಮಾಡಿಸಲೆಂದು ಮಾರಯ್ಯನು ಅನುಭವಮಂಟಪದ ಶರಣರೆಲ್ಲರನ್ನೂ ತನ್ನ ಮನೆಗೆ ಆರೋಗಣೆಗೆ ಆಹ್ವಾನಿಸುತ್ತಾನೆ. ಕಲ್ಯಾಣದ ಮೂಲೆಯಲ್ಲಿ ಮಾರಯ್ಯನದೊಂದು ಬಡ ಕುಟೀರ. ಅನುಭವ ಮಂಟಪದ ಶರಣರೋ ಅಸಂಖ್ಯ! ಭಗವಂತನನ್ನು ನಂಬಿದ ಈ ಭಕ್ತನಿಗೆ ಚಿಂತೆಯೆಲ್ಲಿಯದು ?

ಹುಲು ಗುಡಿಲಾಕಾರದೊಳಗಿರ್ದ ವಸತ ಕುಂ। ದಳ ರತ್ನಮಯವಾಗಿ ಮೆಚಿಯೆ।
ಸಲೆ ನಿಷ್ಕಳಂಕ ಮಲ್ಲನ ಕೃಪೆ ದಂಪತಿ । ಗಳಿಗೈದು ಪರುಷವಾಗಿಹುದು ॥[12]

ಪುಟ್ಟ ಗುಡಿಸಲು ಮಹಾಮನೆಯಾಗಿ ಮಾರ್ಪಟ್ಟಿತು. ಶರಣೆ ಮಹಾದೇವಿಯಮ್ಮ ಭತ್ಯಗಳನ್ನು ಮುಟ್ಟಿ ಧ್ಯಾನ ಪರವಶಳಾಗಲು ನಿಃಕಳಂಕ ಮಲ್ಲಿಕಾರ್ಜುನನ ಕೃಪೆಯಿಂದ ಪಂಚಭಕ್ಷ್ಯ ಪರಮಾನ್ನಗಳು ಸಿದ್ಧವಾದವು.[13] ಆರೋಗಣೆಗೆ ಎಡೆಮಾಡಿ ಎಲ್ಲರನ್ನೂ ತುಷ್ಟಿಗೊಳಿಸಿದರು. ಮಾರಯ್ಯನು ಶರಣರ ಪಾದೋದಕವನ್ನು ತನ್ನ ಕಾಯಕದಿಂದ ತಂದ ಕಟ್ಟಿಗೆಯ ಹೊರೆಯ ಮೇಲೆ ಸಿಂಪಡಿಸಲಾಗಿ ಅವು ಸುವರ್ಣ ದಂಡಗಳಾದವು. ಬಂದ ಶರಣರಿಗೆಲ್ಲಾ ದಾನ ನೀಡಿದ ಮಾರಯ್ಯನು ಸಂತುಷ್ಟನಾದನು, ಈ ದಂಪತಿಗಳ ಭಕ್ತಿ ನಿಷ್ಠೆಗಳಿಗೆ ಬೆರಗಾದ ಬಸವಣ್ಣನು ಕ್ಷಮೆ ಬೇಡಿದನು.

ಮಾರಯ್ಯ ಕಠೋರ ಮನದ ನಿಷ್ಠುರ ಸ್ವಭಾವದವನು. 'ಭಕ್ತಿ ಜ್ಞಾನ ಕ್ರಿಯೆಯ ಮಾಟಂಗಳಲ್ಲಿ ಚಿತ್ತಶುದ್ಧವಿಲ್ಲದ ಸತಿಯಾದರೂ ಒಲ್ಲೆ'[14] ತನ್ನ ಸತಿಯಾದವಳು ತನ್ನಂತೆಯೇ ಚಿತ್ತ ಶುದ್ಧಿಯಿಂದ ಭಕ್ತಿ, ಜ್ಞಾನ, ಕ್ರಿಯೆಗಳಲ್ಲಿ ಪಾಲ್ಗೊಳ್ಳಬೇಕು. ಹಾಗಿಲ್ಲದಿದ್ದರೆ ಆ ಸತಿಯೇ ತನಗೆ ಬೇಡ ಎನ್ನುತ್ತಾನೆ. ಅಗ್ನಿಸಾಕ್ಷಿಯಾಗಿ ಕೈಹಿಡಿದವಳನ್ನು ತೊರೆಯಲೂ ಹಿಂಜರಿಯುವುದಿಲ್ಲ. ಆದರೆ ಧರ್ಮವನ್ನು, ಅದರ ಆಚರಣೆಯಲ್ಲಾಗುವ ಲೋಪವನ್ನು ಸಹಿಸಲು ಸಿದ್ಧನಿಲ್ಲ. ಇಂತಹ ಪತಿಯ ಅನುಸರಣೆ

9. ಶರಣಲೀಲಾಮೃತ : ಸಂ. ೮. 10. ಶರಣ ಲೀಲಾಮೃತ. ಸಂಧಿ ೯ 11. ಶರಣ ಲೀಲಾಮೃತ. ಸಂಧಿ ೯
12. ಮೋಳಿಗೆಯ್ಯನ ಪುರಾಣ ಸಂಧಿ ೫ ಪದ್ಯ ೯೨. 13. ಶರಣಲೀಲಾಮೃತ ಸಂಧಿ ೯
14. ಮೋಳಿಗೆ ಮಾರಯ್ಯನ ವಚನಗಳು ವಚನ ಸಂಖ್ಯೆ ೨೪೦.

ಸುಲಭ ಸಾಧ್ಯವಲ್ಲ. ಮಡದಿ ಮಕ್ಕಳು ಹಾಗಿರಲಿ ಮಾತೆ ಪಿತರೂ ತನ್ನಂತೆಯೇ ನಡೆಯಬೇಕು ಗುರುಲಿಂಗಜಂಗಮಕ್ಕೂ ವಿನಾಯಿತಿ ಇಲ್ಲ.

'ಆಚಾರ ಅನುಸರಣೆಯಾಗದಿದ್ದಲ್ಲಿ ಸತಿಸುತ ಪಿತಮಾತೆ ಸರ್ವಚೇತನ ಬಂಧುಗಳಾದರೂ ಗುರುಲಿಂಗ ಜಂಗಮವಾದರೂ ಒಪ್ಪೆನು'[15] ತನ್ನ ಆಚಾರ ನಡೆ–ನುಡಿಗಳಿಗೆ ಸರಿಯಾಗಿ ಎಲ್ಲರೂ ಹೊಂದಿಕೊಳ್ಳಬೇಕೆಂಬ ಹಟ ಮಾರಯ್ಯನದು. ಬಹುಶಃ ಅರಸನಾಗಿದ್ದಾಗಿನ ಅವನ 'ಅಹಂ' ಅವನಿಂದ ಹೋಗಿರಲಿಲ್ಲವೆನಿಸುತ್ತದೆ. ಗುರುಭಕ್ತಿ, ಲಿಂಗನಿಷ್ಠೆ, ಜಂಗಮಸೇವೆಗಳು ಅವನಲ್ಲಿ ಮುಪ್ಪುರಿಗೊಂಡಿದ್ದರೂ ಅವನ ಛಲದ ಮನೋಭಾವ ಈ ಮಾತುಗಳನ್ನು ಆಡಿಸಿವೆ. ಆದರೆ ಮಹಾದೇವಿಯಮ್ಮ ಇದಕ್ಕೆ ತದ್ವಿರುದ್ಧ. ಪತಿಯ ಗುಣಸ್ವಭಾವದ ಪರಿಚಯವಿದ್ದ ಆಕೆ ಎದುರಾಡದೆ ವಿಧೇಯಳಾಗಿದ್ದಳು.

'ಹೀಗಿರು ಎಂದರೆ ಹಾಗಿರದಿದ್ದರೆ ಅವಳು ಸತಿಯಲ್ಲ ನಾನು ಪತಿಯಲ್ಲ' ಎಂದ ಪತಿಯನ್ನು ಅನುಸರಿಸಿ, ಓಲೈಸಿ, ಸಹಬಾಳ್ವೆ ನಡೆಸಿದ ಮಹಾದೇವಿಯಮ್ಮನ ತಾಳ್ಮೆ ಅಪಾರ. ಪತಿಯೇ ಪರದೈವವೆಂದು ನಂಬಿದ್ದು 'ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುವರು ನೀವೆ' ಎಂದು ಭಾವಿಸಿದ್ದ ಈ ಮಹಾಸತಿಯ ಸಮರ್ಪಣಭಾವ ಆಕೆಯ ವಚನವೊಂದರಲ್ಲಿ ಹೀಗೆ ಅಭಿವ್ಯಕ್ತವಾಗಿದೆ :

> ಕಾಲಿದ್ದಂತೆ ತಲೆ ನಡೆದುದುಂಟೆ ಅಯ್ಯಾ? ಕಣ್ಣಿದ್ದಂತೆ ಕರ್ಣ ಕೇಳಿದುದುಂಟೆ ಅಯ್ಯಾ ?
> ಬಾಯಿದ್ದಂತೆ ನಾಸಿಕ ಉಂಡುದುಂಟೆ ಅಯ್ಯಾ? ತಾಯಿಲ್ಲದೆ ಮಕ್ಕಳು ಬಂದ ತೆಱನ ಹೇಳಯ್ಯಾ ?
> ನಿಮ್ಮ ಸೇವೆಯ ತೊತ್ತಿನ ಭಾವವ ಕೇಳಲೇತಕ್ಕೆ? ಪಟದೊಳಗಣ ಬಾಲಸರಕ್ಕೆ ಪ್ರತಿಸೂತ್ರ ನೇಣುಂಟೆ?
> ನಿಮ್ಮಲ್ಲಿಯೆ ಎನ್ನ ಭಾವ ಲೇಪ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿಯೆ? 16

ನಡೆಯುವುದಕ್ಕೆಂದೇ ಕಾಲಿರುವಾಗ ತಲೆಯಿಂದ ನಡೆಯಬೇಕೇಕೆ? ನೋಡುವ ಕ್ರಿಯೆ ಕಣ್ಣಿನದಾಗಿರುವಾಗ ಕಿವಿಗೆ ನೋಡುವ ಚಿಂತೆಯೇಕೆ? ಉಣಲೆಂದು ಬಾಯಿರುವಾಗ ಮೂಗಿಗೇಕೆ ಉಣ್ಣುವ ಕಷ್ಟ? ಶರಣನಾದ ಮಾರಯ್ಯನ ಸೇವೆಯ ತೊತ್ತಾಗಿರುವ ತನಗೆ ಒಡೆಯನಿಂದ ಭಿನ್ನವಾದ ಭಾವವಿಲ್ಲ. ಮಕ್ಕಳ ಜನನಕ್ಕೆ ತಾಯಿ ಹೇಗೆ ಮೂಲ ಕಾರಣಳೋ ಹಾಗೆಯೇ ತನ್ನೆಲ್ಲ ಭಾವಗಳ ಮೂಲ ಮಾರಯ್ಯ ಎನ್ನುತ್ತಾಳೆ. ಗಾಳಿಪಟಕ್ಕೆ ಸೂತ್ರ ಬಾಲಗಳು ಉಂಟು. ಆದರೆ ಆ ಬಾಲಕ್ಕಾಗಲೀ ಸೂತ್ರಕ್ಕಾಗಲೀ, ಪ್ರತಿಸೂತ್ರ ಬಾಲ ಉಂಟೆ ? ಪಟ ಮೇಲೇರಿಸಲು ದಾರ ಬೇಕೇ ಹೊರತು ಬಾಲ ಮೇಲೇರಲು ಪ್ರತ್ಯೇಕ ದಾರ ಏಕೆ? ಪಟ ಏರಿದಂತೆ ಬಾಲವೂ ಅದರೊಡನೆಯೇ ಮೇಲೆ ಹಾರುತ್ತದೆ. ಬಾಲ ಹೇಗೆ ಪಟದ ಅಂಗವೋ ಹಾಗೆಯೇ ಸತಿಯಾದ ತಾನೂ ಪತಿಯಾದ ಮಾರಯ್ಯನ ಒಂದು ಅಂಗವೆಂದೂ, ತನಗೆ ಪ್ರತ್ಯೇಕತೆ ಇಲ್ಲವೆಂದೂ, ತನ್ನೆಲ್ಲವೂ ಮಾರಯ್ಯನಲ್ಲಿಯೇ ಲಯವಾಗಿದೆಯೆಂದೂ ಅಭಿಪ್ರಾಯಪಡುತ್ತಾಳೆ.

ಅನುಭವಮಂಟಪದ ಶರಣ ಸಮಾಜ ಸ್ತ್ರೀ–ಪುರುಷ ಸಮಾನತೆಯನ್ನು ಎತ್ತಿ ಹಿಡಿದಿದ್ದರೂ ಪರಂಪರಾಗತ ಸಮಾಜದ ಸಂಪ್ರದಾಯವಾದಿಗಳು ಈ ತತ್ತ್ವವನ್ನು ಪೂರ್ಣವಾಗಿ ಒಪ್ಪಿರಲಿಲ್ಲ; ಬೆಂಬಲಿಸಿರಲಿಲ್ಲ. ಮಾರಯ್ಯನೂ ಇದಕ್ಕೆ ಹೊರತಲ್ಲವೆಂಬುದು ಮಹಾದೇವಿಯಮ್ಮನ ಈ ವಚನ ಹೇಳುತ್ತದೆ—

> ಚಿತ್ರದ ಬೊಂಬೆಯು ಹಾವೆ ಎಲ್ಲಕ್ಕೂ ಆತ್ಮನಿಂದ ಚೇತನಿಸಿ ನಡೆಯುತ್ತಿಹವೆ? ಅಪ್ಪ ಸೂತ್ರಾಧಿಕನ ಭೇದ, ಎನ್ನ ಶಕ್ತಿ ಜಾತಿಯ ಲಕ್ಷಣ
> ನಿಮ್ಮ ಭಕ್ತಿ ಸೂತ್ರದಿಂದ ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದದಲ್ಲಿ ಅಡಗಿತ್ತು ಎನಗೆ ಭಿನ್ನದ ಮಾತಿಲ್ಲ.
> ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುವರು ನೀವೆ.17

ಶರೀರದಲ್ಲಿ ಸೇರಿದ ಆತ್ಮನ ಕಾರಣದಿಂದ ಚಲನ ವಲನ ಚೇಷ್ಟೆ ಉಂಟಾಗುತ್ತದೆ. ಆ ಆತ್ಮ ಚಿತ್ರದ ಗೊಂಬೆಗೆ ಚೈತನ್ಯ ಕೊಟ್ಟು ನಡೆಸಬಲ್ಲುದೆ? ಇಲ್ಲ. ಕೇವಲ ಮಾನವ ಶರೀರವನ್ನು ಮಾತ್ರ ಚೇತನಿಸಬಲ್ಲುದು. ಅದಕ್ಕೆ ಗಂಡು ಹೆಣ್ಣಿನ ಭೇದವಿಲ್ಲ. ಸೂತ್ರಧಾರನಾದ ಪರಮಾತ್ಮನ ನಿರ್ಮಿತಿಯಲ್ಲಿ ಶಕ್ತಿ ಸಂಕೇತವಾಗಿ ಹೆಣ್ಣೂ, ಶಿವನ ಸಂಕೇತವಾಗಿ ಗಂಡೂ ರೂಪುಗೊಳ್ಳುತ್ತವೆ. ದೇಹ ರಚನೆಯಲ್ಲಿ ಈ ಭಿನ್ನತೆ ಕಂಡು ಬಂದರೂ ಆತ್ಮಕ್ಕೆ ಯಾವುದೇ ಭೇದ ಭಾವವಿಲ್ಲ. ನಿಃಕಳಂಕ ಮಲ್ಲಿಕಾರ್ಜುನನ ಭಕ್ತಿ ಎಂಬ ಸೂತ್ರ ಹೆಣ್ಣು ಗಂಡೆನ್ನದೆ ಎಲ್ಲರನ್ನೂ ಸಮಾನವಾಗಿ ಬಂಧಿಸುತ್ತದೆ. ಆ ಭಕ್ತಿಸೂತ್ರದ ಬಂಧನಕ್ಕೆ ಒಳಗಾದ ತನ್ನ ಸ್ತ್ರೀ ಜಾತಿ ಅಳಿದು 'ಭಕ್ತಜಾತಿ'ಗೆ ಮಾತ್ರ ಸೇರಿರುವುದಾಗಿ ಹೇಳುತ್ತಾಳೆ.

ಭಕ್ತನ ಗುಣಲಕ್ಷಣಗಳನ್ನು ಮಹಾದೇವಿಯಮ್ಮ ತುಂಬಾ ಮಾರ್ಮಿಕವಾಗಿ ಹೇಳಿದ್ದಾಳೆ. ಬೀಜವನ್ನು ಬಿತ್ತಿ ನೀರೆರೆದು ಪೋಷಿಸಿದರೆ ಮರ ಬೆಳೆದು ಪಲ್ಲವಿಸುವುದಲ್ಲದೆ ಕಲ್ಲನ್ನು ಬಿತ್ತಿ ನೀರೆರೆದರೆ ಮರ ಚಿಗಿಯಲು ಸಾಧ್ಯವೆ? ಶ್ರದ್ಧೆ, ಭಕ್ತಿ, ಸನ್ಮಾರ್ಗಗಳನ್ನು ಅಳವಡಿಸಿಕೊಂಡವನು ಗುರುಭಕ್ತಿ, ಲಿಂಗಪೂಜೆ, ಜಂಗಮಸೇವೆಗಳನ್ನು ಮಾಡಬೇಕು; ಹಾಗೆ ಮಾಡಿದರೆ ಅದರಿಂದ

15. ಮೋಳಿಗೆ ಮಾರಯ್ಯನ ವಚನಗಳು ವಚನಸಂಖ್ಯೆ ೬೨.
16. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೧೦
17. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೨.

ಫಲ ದೊರೆಯುತ್ತದೆ. ಶ್ರದ್ಧೆ ಭಕ್ತಿ ಇಲ್ಲದವನು ಗುರುಲಿಂಗ ಪೂಜೆ ಮಾಡುವುದು ವ್ಯರ್ಥ. ಅಂಥವರಿಗೆ ಪರಮಾತ್ಮನ ಸಾಕ್ಷಾತ್ಕಾರ, ಮುಕ್ತಿ ದುರ್ಲಭ.[18]

ಷಡ್ರುಚಿಗಳ ಮೋಹ ಇರುವವರೆಗೆ ಬೇಟ–ಪ್ರೀತಿ ಬಿಡದು. ಪ್ರೀತಿ ಬಲಿತ ಮೇಲೆ ದೇಹ ಕೂಟವನ್ನು ಬಯಸುತ್ತದೆ, ಬೇಡುತ್ತದೆ. ಅದಕ್ಕಾಗಿ ಹಂಬಲಿಸುತ್ತದೆ. ಸಂಭೋಗ ಸುಖವನ್ನು ಅನುಭವಿಸಿದ ಮೇಲೆ ಇಹಲೋಕದ ನಚ್ಚು ಮಚ್ಚು ಬಲೆ ಬೀಸುತ್ತವೆ. ಇಷ್ಟಾದ ಮೇಲೆ ಶರೀರದ ಮೋಹ ಹೆಚ್ಚುತ್ತದೆ. ಒಂದರಿಂದ ಒಂದು ಬೆಳೆದು ಬಲಿದು ಆಕ್ರಮಣ ಮಾಡುತ್ತವೆ; ಬಲೆ ಬೀಸುತ್ತವೆ; ಕಾಲ ತೊಡಕಾಗುತ್ತವೆ. ಕಾಮನ ಕೈಯ ಬೊಂಬೆಗಳಾದಂಥವರಿಗೆ ಭಕ್ತಿ ಹೇಗೆ ಹುಟ್ಟುತ್ತದೆ? ವಿರಕ್ತಿಯಂತೂ ದೂರವೇ ಉಳಿಯಿತು ; ಮುಕ್ತಿಯಂತೂ ಊಹಿಸಲೂ ಅಸಾಧ್ಯ[19]. ನಡೆ ನುಡಿಗಳಲ್ಲಿ ಶುದ್ಧಿಯಿದ್ದವರು ಮಾತ್ರ ಅನುಭಾವದ ಆಚರಣೆಯಲ್ಲಿ ತೊಡಗಬೇಕು. ಎಲ್ಲರೂ ಮಾಡ ಹೊರಟರೆ ಹಾಸ್ಯಾಸ್ಪದವಾದೀತು. ಸುರಸುಂದರಿ ಊರ್ವಶಿ ಕರ್ಪೂರವನ್ನು ಮೆದ್ದು ಸುವಾಸಿತವಾದ ಬಾಯಲ್ಲಿ ಮುತ್ತನಿತ್ತರೆ ಬೇಡವೆನ್ನುವ ಧೀರನಾರು? ನನಗೆ ತನಗೆ ಎಂದು ಎಲ್ಲರೂ ಮುಖವನ್ನು ಮುಂದೊಡ್ಡುವರು. ಹಂದಿಯೊಂದು ತಾನೂ ಕರ್ಪೂರವನ್ನುಮೆದ್ದುಮುತ್ತುಕೊಡಲು ಬಂದರೆ ಯಾವ ಮೂರ್ಖ ತಾನೆ ಸ್ವೀಕರಿಸಿಯಾನು? ಹುಡು ಹುಡು ಎಂದು ಅಟ್ಟುವರು. ಹಾಗೆಯೇ ನಡೆ ನುಡಿ ಶುದ್ಧವಿದ್ದವನು ಏನನ್ನು ಹೇಳಿದರೂ ಜನ ಕೇಳುತ್ತಾರೆ; ಮೆಚ್ಚುತ್ತಾರೆ; ಅವನ ಆದರ್ಶವನ್ನು ಅನುಸರಿಸುತ್ತಾರೆ. ಅದಿಲ್ಲದವನು ಉಪದೇಶ ಮಾಡ ಹೋದರೆ ಹೀಗಳೆದು ಹೊಡೆದಟ್ಟುತ್ತಾರೆ.[20]

'ಅಣೋರಣೀಯಾನ್ ಮಹತೋ ಮಹೀಯಾನ್' ಆದ ಭಗವಂತನು ಭಕ್ತಿಪ್ರಿಯ, ಸತ್ಯಪ್ರಿಯ ಎಂಬ ತತ್ತ್ವವನ್ನು ಬೋಧಿಸಿದ್ದಾಳೆ ಮಹಾದೇವಿಯಮ್ಮ. ಹೆಣ್ಣು, ಹೊನ್ನು, ಮಣ್ಣುಗಳನ್ನಿತ್ತು ಮಲ್ಲಿಕಾರ್ಜುನನನ್ನು ಮೆಚ್ಚಿಸುವುದು ಸಾಧ್ಯವಿಲ್ಲ. ಪೂಜೆಯಿಂದ ಒಲಿಸಿಕೊಳ್ಳವುದೂ ಅಸಾಧ್ಯ.

> ಕ್ರೀಯಲ್ಲಿ ನಿರತ, ಸದ್ಭಾವದಲ್ಲಿ ಶುದ್ಧ ಹಿಡಿದುದ ಬಿಡದೆ, ಬಿಟ್ಟುದ ಹಿಡಿಯದೆ,
> ನಿಶ್ಚಯವಾದ ನಿಜಜ್ಞಾನಿಗಳಲ್ಲಿ ಬೆಚ್ಚಂತಿದ್ದಡೆ ನೀನು ಅಲ್ಲಿ ತಪ್ಪದಿಪ್ಪೆ.[21]

ಭಾವಶುದ್ಧಿ ಸತ್ಕ್ರಿಯಾ ಪರತೆಗಳುಳ್ಳವನು ಭಕ್ತ; ಒಮ್ಮೆ ಹಿಡಿದ ಭಕ್ತಿ ಮಾರ್ಗವನ್ನು ಎಂದೆಂದಿಗೂ ಬಿಡದೆ, ಒಮ್ಮೆ ತೊರೆದ ಲೌಕಿಕ ಆಶೆ ಆಮಿಷಗಳನ್ನು ಅನವರತವೂ ಬಿಟ್ಟು ತನ್ನ ಮಾರ್ಗವನ್ನು ರೂಪಿಸಿಕೊಂಡ ಜ್ಞಾನಿಯಲ್ಲಿ ನಿಃಕಳಂಕ ಮಲ್ಲಿಕಾರ್ಜುನನು ನಿರಂತರವೂ ನೆಲೆಸಿರುತ್ತಾನೆ. 'ಸತ್ಯವೆಲ್ಲಿದ್ದಿತ್ತು ಅಲ್ಲಿ ತಪ್ಪದೆ ಇಪ್ಪೆ, ,ವಿಶ್ವಾಸವೆಲ್ಲಿಪ್ಪುದೊ ಅಲ್ಲಿ ತಪ್ಪದಿಪ್ಪನು'[22] ಸತ್ಯವೇ ದೇವರು ವಿಶ್ವಾಸವೇ ದೇವರು, ಎಂಬುದನ್ನು ಸರಳವಾಗಿ ನಿರೂಪಿಸಿದ್ದಾಳೆ ಮಹಾದೇವಿಯಮ್ಮ.

ಆತ್ಮದ ಮುನ್ನಡೆಗೆ ಮಾರಕವಾದ ಅಹಂಕಾರ ಶರಣ ಮಾರಯ್ಯನನ್ನು ಬಿಟ್ಟಿಲ್ಲ. 'ಎನ್ನ ಕಾಯಕದ ಕಾಷ್ಠ ಚಿನ್ನವಾದಲ್ಲಿ ಮತ್ತಾವಾವ ಗುಣ, ಅವಗುಣ ಹಿಂಗಿ ಲೇಸಾದಲ್ಲಿ ಅದು ತನ್ನಯ ವಿಶ್ವಾಸದಿಂದ' ಎಂದು ಬೀಗುತ್ತಾನೆ, ಮಾರಯ್ಯ. ಅಹಂಕಾರದ ದಮನ ಮಾಡಲು ಮಹಾದೇವಿಯಮ್ಮ ತಿಳಿವಳಿಕೆ ನೀಡುತ್ತಾಳೆ:

> ಕಾಷ್ಠವ ಸುವರ್ಣವ ಮಾಡಿದೆನೆಂಬ ಘಾತುಕ ತನವೆ ನಿಮ್ಮ ಭಕ್ತಿ ? ಸಕಲ ದೇಶ ಕೋಶ ವಾಸ ಭಂಡಾರ ಸವಾಲಕ್ಷ ಮುಂತಾದ ಸಂಬಂಧ
> ಸ್ತ್ರೀಯರ ಬಿಟ್ಟು ಬಂದೆನೆಂಬ ಕೈಕೂಲಿಯೆ ನಿಮ್ಮ ಭಕ್ತಿ ? ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮುಂತಾದ
> ಏಳುನೂರೆಪ್ಪತ್ತು ಅಮರಗಣಂಗಳ ಭಾವವಿದ್ದಂತೆ ನಿಮ್ಮ ಅಗಡವೇಕಯ್ಯಾ[23] ?

ಕಟ್ಟಿಗೆಯನ್ನು ಚಿನ್ನವಾಗಿ ಪರಿವರ್ತಿಸಿದುದೇ ಭಕ್ತಿಗೆ ಪ್ರಮಾಣವೆ ? ನಿನ್ನ ದೇಶಕೋಶಗಳನ್ನು ಬಿಟ್ಟು ಬಂದುದಕ್ಕೆ ಕೂಲಿ ಈ ಭಕ್ತಿ ಎಂದು ತಿಳಿದೆಯಾ ? ಬಸವಣ್ಣ ಪ್ರಭುದೇವ ಮೊದಲಾದ ಶ್ರೇಷ್ಠ ಅಮರಗಣಂಗಳ ಎದುರು ನಿನ್ನ ಅಗ್ಗಳಿಕೆಯನ್ನು ಹೊಗಳಿಕೊಳ್ಳುವುದು ಸಣ್ಣತನ–ಎಂದು ಮನದಟ್ಟು ಮಾಡಿಸುತ್ತಾಳೆ.

'ಕರ್ಪುರದ ಅರಣ್ಯವ ಕಿಚ್ಚು ಹತ್ತಿ ಬೆಂದಲ್ಲಿ ಭಸ್ಮ ಇದ್ದಿಲೆಂದು ಲಕ್ಷಿಸಲುಂಟೆ' ? ಕಾಡಿಗೆ ಬೆಂಕಿ ಬಿದ್ದರೆ ಸ್ವಲ್ಪ ಭಾಗ ಉರಿದು ಬೂದಿಯಾಗುತ್ತದೆ; ಅರೆಬೆಂದ ಕೆಲವು ಭಾಗ ಇದ್ದಿಲಾಗಿ ಉಳಿಯುತ್ತದೆ. ಆದರೆ ಕರ್ಪುರದ ಅರಣ್ಯಕ್ಕೆ ಬೆಂಕಿ ಬಿದ್ದರೆ ಎಲ್ಲವೂ ಜ್ವಾಲೆಯಾಗಿ ಉರಿದು ನಾಳಿಯಲ್ಲಿ ಬೆರೆತು ಹೋಗುತ್ತದೆ; ನಿಶ್ಶೇಷವಾಗಿ ಬಿಡುತ್ತದೆ. ಆತ್ಮಜ್ಞಾನದ ಜ್ವಾಲೆಗೆ ಸಿಲುಕಿದ ಭಕ್ತನ ಗುಣಾವಗುಣಗಳು ನಿಶ್ಶೇಷವಾಗಿ ಪರಮಾತ್ಮನಲ್ಲಿ ಲಯವಾಗಬೇಕು ಎಂದು ಉಪದೇಶಿಸುತ್ತಾಳೆ.

ಇಷ್ಟಲಿಂಗ–ಪ್ರಾಣಲಿಂಗ ಬೇರೆಯಲ್ಲವೆಂಬುದನ್ನು ಹೀಗೆ ಸಮರ್ಥಿಸಿದ್ದಾಳೆ:

---

18. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೪೫.
19. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೪೪.
20. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೩೫.
21. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೫೦.
22. ಮೋಳಿಗೆ ಮಹಾದೇವಿಯಮ್ಮನ ವಚನಗಳು: ವಚನ ಸಂಖ್ಯೆ ೬೩.
23. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನಸಂಖ್ಯೆ ೫೩.

ತನುವಿನ ಮೇಲಿಪ್ಪುದು ಇಷ್ಟಲಿಂಗವೆಂದೆಂಬರು ಆತ್ಮನ ನೆನಹಿನಲ್ಲಿಪ್ಪುದು ಪ್ರಾಣಲಿಂಗವೆಂದೆಂಬರು
ಇಂತೀ ಘಟಕ್ಕೂ ಆತ್ಮಕ್ಕೂ ಉಭಯ ಲಿಂಗವುಂಟೆ ? ಹೊಱಗಳ ಅಸ್ಥಿ ಚರ್ಮಕ್ಕೆ ಬೇಱೊಂದು ಅಸುವ ಕಲ್ಪಿಸಬಹುದೆ ?
ಒಳಗಳ ಕರುಳು ಮಜ್ಜೆ ಮಾಂಸಕ್ಕೆ ಬೇಱೊಂದು ಅಸುವಿನ ಕಲೆಯುಂಟೆ? ಇದಕ್ಕೆ ದೃಷ್ಟವ ಕಂಡಡೆ ಇಷ್ಟಲಿಂಗ ಪ್ರಾಣಲಿಂಗವೆಂಬುದಕ್ಕೆ ಕಟ್ಟುಂಟು.
ಅದು ಅಚೇತನವಪ್ಪ ನಿರವಯಕ್ಕೆ ಅಚೇತನವಪ್ಪುದೊಂದು ದೃಷ್ಟ; ನಿರವಯ ಸಾವಯದಲ್ಲಿ ಸಂಬಂಧಿಸಿ ಕುಱುಹಾದ ಭೇದ;
ಆ ಕಾಯದ ಒಳ ಹೊಱಗಿನ ನೋವಿನ ಭೇದದಂತೆ, ಆ ಉಭಯವನಱಿವ ಆತ್ಮ ಒಂದೆಯಾಗಿ,
ಇಂತೀ ಕಾಯದ ಇಷ್ಟವೆಂದು, ಅತ್ಮನ ಅಱಿವೆಂದು, ಎರಡೆನಿಸುವ ಲಿಂಗವೆಂಬುದೊಂದು ಕುರುಹಿಲ್ಲ.
ಅದು ಏಕ ಏವ ಸ್ವರೂಪು; ಅದು ಚಿದ್ಘನ ಸ್ವರೂಪು; ಅದು ಘಟಮಠದ ಬಯಲಿನ ಗರ್ಭದಂತೆ.
ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಅತ್ಯತಿಷ್ಠದ್ದಶಾಂಗುಲನಾಗಿಪ್ಪನು24.

ಶರೀರದ ಮೇಲೆ ಧರಿಸಿರುವುದು ಇಷ್ಟಲಿಂಗವೆಂದೂ ಆತ್ಮನ ನೆನಹಿನಲ್ಲಿರುವುದು ಪ್ರಾಣಲಿಂಗವೆಂದೂ ಹೇಳುತ್ತಾರೆ. ದೇಹಕ್ಕೆ ಬೇರೆ ಆತ್ಮಕ್ಕೆ ಬೇರೆ ಎಂದು ಎರಡು ಲಿಂಗಗಳಿರುತ್ತವೆಯೆ ? ದೇಹದ ಅಸ್ಥಿ ಚರ್ಮಗಳಿಗೆ ಒಂದು ಪ್ರಾಣ, ಒಳಗಣ ಕರುಳು ಮಜ್ಜೆ ಮಾಂಸಕ್ಕೆ ಬೇರೊಂದು ಪ್ರಾಣ ಇರಲು ಸಾಧ್ಯವೆ? ಹಾಗೆ ಇಷ್ಟ ಪ್ರಾಣಲಿಂಗಗಳು ಬೇರೆ ಎಂದು ಒಪ್ಪಿಕೊಂಡರೆ ಇಷ್ಟಲಿಂಗ ಪ್ರಾಣಲಿಂಗಗಳ ರಂಗವೇ ಬೇರೆಯಾಗುತ್ತದೆ; ಅವುಗಳು ಸ್ಥಾನ ಬದ್ಧತೆಯಲ್ಲಿದ್ದಂತಾಗುತ್ತದೆ; ನಿಬಂಧನೆಗೊಳಪಡಿಸಿದಂತಾಗುತ್ತದೆ. ನಿರಾಕಾರವಾದ ಪ್ರಾಣಲಿಂಗಕ್ಕೆ ಆಕಾರ ದೊರೆಕೊಂಡು ಇಷ್ಟಲಿಂಗದ ರೂಪದಲ್ಲಿ ಮೂರ್ತೀಭವಿಸಿರುತ್ತದೆ. ಇಷ್ಟಲಿಂಗ ಪ್ರಾಣಲಿಂಗಗಳಿಗೆ ಆವಾಸಸ್ಥಾನವಾದ ದೇಹಕ್ಕೆ ಅಂತರಂಗದ ನೋವು ಬಹಿರಂಗದ ನೋವುಗಳು ಬೇರೆ ಬೇರೆ ಇದ್ದರೂ ಎರಡನ್ನೂ ಅರಿತು ಅನುಭವಿಸುವ ಆತ್ಮ ಒಂದೇ. ಅದೇ ರೀತಿ ದೇಹಕ್ಕೆ ಇಷ್ಟಲಿಂಗ ಮನಕ್ಕೆ ಪ್ರಾಣಲಿಂಗ ಎಂಬ ಪ್ರಭೇದವಿಲ್ಲ. ಲಿಂಗವೆಂಬುದು ಒಂದೇ: ಅದು ಚಿದ್ಘನಸ್ವರೂಪ; ಅದು ಘಟಮಠ ಬಯಲಿನ ಗರ್ಭ. ಬಯಲಿನ ಗರ್ಭಸ್ಥಾನವನ್ನು ಗುರುತಿಸಬಹುದಾದರೂ ಅದೂ ಬಯಲೇ ತಾನೇ ? ಹಾಗೆಯೇ ಲಿಂಗದಲ್ಲಿ ಇಷ್ಟ ಪ್ರಾಣ ಭೇದವಿಲ್ಲ. ಎರಡೂ ಒಂದೇ ಎಂದು ಮಹಾದೇವಿಯಮ್ಮ ತರ್ಕಬದ್ಧವಾಗಿ ಸಿದ್ಧಾಂತ ಮಾಡಿದ್ದಾಳೆ.

ಕಲ್ಯಾಣಕ್ರಾಂತಿಯಾಗಿ ಶಿವಶರಣರೆಲ್ಲರೂ ಚೆಲ್ಲಾಪಿಲ್ಲಿಯಾಗಿ ಚದುರಿದರು. ಬಸವಣ್ಣ ಕಪ್ಪಡಿ ಸಂಗಮಕ್ಕೆ,ಚೆನ್ನಬಸವಣ್ಣ ಉಳಿವೆಗೆ, ಅಲ್ಲಮಪ್ರಭು ಕದಳಿಗೆ ತಮ್ಮ ತಮ್ಮ ಆರಾಧ್ಯ ದೈವಗಳನ್ನರಿಸಿ ಹೊರಟು ಹೋದರು.* ಕಲ್ಯಾಣದಲ್ಲಿಯೇ ಉಳಿದ ಮಾರಯ್ಯ ದಂಪತಿಗಳು ತುಂಬು ಜೀವನ ನಡೆಸಿ ಹಣ್ಣಾದರು. 'ಮರ್ತ್ಯವೆಂಬುದು ನಾ ಬಲ್ಲನ್ನಕ್ಕ ಕರ್ಕಶದ ಜಗ; ಇದು ಕಾರಣ ಕೈಲಾಸದ ಬಟ್ಟೆಯನರಸಬೇಕು25' ಎಂದು ಮಾರಯ್ಯ ತವಕಪಡುತ್ತಾನೆ. ಇಷ್ಟು ದಿನ ನಡೆಸಿದ ಭಕ್ತ ಜೀವನಕ್ಕೆ ಪ್ರತಿಫಲವಾಗಿ ಕೈಲಾಸಕ್ಕೆ ಹೋಗಬೇಕೆನ್ನುವುದು ಸರಿಯಲ್ಲ ಎಂದು ಮಹಾದೇವಿಯಮ್ಮ ತಿಳಿಹೇಳುತ್ತಾಳೆ.

ದೃಷ್ಟದಲ್ಲಿ ಕೊಟ್ಟುದ ಲಕ್ಷಿಸಲಱಿಯದೆ ಅಲಕ್ಷ್ಯವ ಲಕ್ಷಿಸಿ ಕಾಂಬುದಕ್ಕೆ ಲಕ್ಷ್ಯವೇನು? ಅದು ನಿರೀಕ್ಷಣೆಯ ಲಕ್ಷ್ಯದಿಂದಲ್ಲದೆ,
ಆತ್ಮಂಗೆಲಕ್ಷ್ಯವಿಲ್ಲ. ಇಂತೀ ಉಭಯದಲ್ಲಿ ಲಕ್ಷಿತವಾದವಂಗೆ ಮರ್ತ್ಯ ಕೈಲಾಸವೆಂಬುದು ; ತನ್ನಱಿವು ನಿಶ್ಚಯವಾದಲ್ಲಿ ಅದೆ ಲಕ್ಷ್ಯ.
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿ ಇಲ್ಲಿ ಎಲ್ಲಿಯೂ ತಾನೆ.26

ಕಣ್ಣಿಗೆ ಕಾಣುವಂತೆ ಅಂಗೈಯಲ್ಲಿರುವ ಇಷ್ಟಲಿಂಗದ ಮೂಲಕ ಆತ್ಮಸಾಕ್ಷಾತ್ಕಾರ ಅಸಾಧ್ಯವಾದರೆ, ಕಾಣದ ಕೈಲಾಸದಲ್ಲಿ ಲಕ್ಷ್ಯದ ಸಹಾಯವಿಲ್ಲದೆ ಪರಮಾತ್ಮನನ್ನು ಅರಸುವುದು ಸಾಧ್ಯವಿಲ್ಲ. ಆತ್ಮ, ಪರಮಾತ್ಮನ ಅಂಶ ಎಂಬುದನ್ನರಿಯದ ಮೂರ್ಖರು ಮರ್ತ್ಯ ಕೈಲಾಸವೆಂಬ ಭೇದವನ್ನು ಮಾಡುತ್ತಾರೆ. ಅಲ್ಲಿ ಇಲ್ಲಿಯೂ ಇರುವ ಪರಮಾತ್ಮ ಒಬ್ಬನೇ. ಭಕ್ತನಿದ್ದಲ್ಲಿಯೇ ಕೈಲಾಸ ಎಂಬುದು ಮಹಾದೇವಿಯ ಅಭಿಪ್ರಾಯ. ಮುಟ್ಟಿದ್ದನ್ನೆಲ್ಲಾ ಚಿನ್ನ ಮಾಡುವ ಪರುಷರಸ ನಿನ್ನದಾಗಿರುವಾಗ ಮೈ ನೋಯಿಸಿಕೊಂಡು ಕೂಲಿಮಾಡಿ ಕಷ್ಟಪಡುವ ಅವಶ್ಯಕತೆಯಿಲ್ಲ. ಹಸಿವಿನಿಂದ ಮುಕ್ತನಾದವನು ಬುತ್ತಿಯನ್ನು ಹೊತ್ತುಕೊಂಡು ಹೋಗುವ ಕಷ್ಟ ಅನುಭವಿಸಬೇಕಿಲ್ಲ. ದೀಪವನ್ನು ಕೈಯಲ್ಲಿ ಹಿಡಿದು ಕತ್ತಲೆ ಎಂದು ಹಿಂಜರಿಯಬೇಕಿಲ್ಲ. ಲೌಕಿಕ ಪಾರಮಾರ್ಥಿಕದ ಅರಿವು ಇರುವವನು ಮರ್ತ್ಯ ಕೈಲಾಸ ಎಂದು ಚಿಂತಿಸಬೇಕಿಲ್ಲ. ನಶ್ವರವಾದ ಲೋಕದಲ್ಲಿದ್ದುಕೊಂಡೇ ಪರಮಾರ್ಥದ ಕಡೆಗೆ ಚಿಂತನೆ ಬೆಳೆಸಬಲ್ಲ ಭಕ್ತನಿಗೆ ಕೈಲಾಸದ ಚಿಂತೆ ಏಕೆ? ತಾನಿದ್ದಲ್ಲಿಯೇ ಕೈಲಾಸವನ್ನು ಸೃಷ್ಟಿಸಿಕೊಳ್ಳಬಲ್ಲ ಶಕ್ತಿ ಅವನಲ್ಲಿರುತ್ತದೆ ಎಂದು ಮಾರಯ್ಯನ ಕೈಲಾಸದ ಕಲ್ಪನೆಯನ್ನು ತಿದ್ದುತ್ತಾಳೆ.

ಕಾಣಿಗೆ ಹೋಱಿ ಕಡವರವ ನೀಗಲೇತಕ್ಕೆ ? ಅಲುಗಾಡಿ ತುಂಬಿದ ಕೊಡನ ಹೊಡೆಗೆಡಹಲೇತಕ್ಕೆ ?
ನಿನ್ನಂಗದಲ್ಲಿ ಗುರುಕೊಟ್ಟ ಲಿಂಗವೆಂಬುದೊಂದು ಕುಱುಹು ಇರುತ್ತಿರಲಿಕ್ಕೆ
ಆ ನಿಜಲಿಂಗದ ಸಂಗವನಱಿಯದೆ ಸಂದಿಗೊಂದಿಯಲ್ಲಿ ಹೊಕ್ಕೆಹೆನೆಂಬ ಗೊಂದಣವೇತಕ್ಕೆ?27

---

24. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನಸಂಖ್ಯೆ ೫೯. 25. ಮೋಳಿಗೆ ಮಾರಯ್ಯನ ವಚನಗಳು ವಚನಸಂಖ್ಯೆ ೫೯

* ತಮ್ಮ ತಮ್ಮ ಅನುಷ್ಠಾನ ಯೋಗ್ಯ ಸ್ಥಾನಗಳನ್ನು ಆರಿಸಿಕೊಂಡು ಹೋದವರು, ಎನ್ನುವುದು ಸೂಕ್ತ. (ಸಂ).

26. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನ ಸಂಖ್ಯೆ ೨೬.
27. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನಸಂಖ್ಯೆ ೨೧.

'ದೀಕ್ಷೆಯಿತ್ತ ಗುರುಕೊಟ್ಟ ಇಷ್ಟಲಿಂಗವು ನಿನ್ನ ಕೈಯಲ್ಲಿಯೇ ಇದೆ. ಅದರಲ್ಲಿ ಆತ್ಮಸಾಕ್ಷಾತ್ಕಾರ ಪಡೆಯುವುದನ್ನು ಬಿಟ್ಟು ಕೈಲಾಸಕ್ಕೆ ಹೋಗಬೇಕೆನ್ನುವುದು, ರಾಜಮಾರ್ಗವನ್ನು ತೊರೆದು ಸಂದಿಗೊಂದಿಯಲ್ಲಿ ಸುತ್ತಿದಂತೆ ಆಗುತ್ತದೆ. ಪುಡಿಗಾಸಿಗೆ ಆಸೆ ಪಟ್ಟು ಕೈಯಲ್ಲಿರುವ ಚಿನ್ನವನ್ನು ಕಳೆದುಕೊಳ್ಳುವ ಮೂರ್ಖನಂತೆ ಆಗುತ್ತದೆ–' ಎಂದು ಮಾರಯ್ಯನಲ್ಲಿ ಬೇರೂರಿದ್ದ ಕೈಲಾಸದ ಭ್ರಮೆಯನ್ನು ಹೋಗಲಾಡಿಸುತ್ತಾಳೆ. ಮಡದಿಯ ವಿವೇಕವಾಣಿಯಿಂದ ಪ್ರಭಾವಿತನಾದ ಮಾರಯ್ಯ ಮಹಾದೇವಿಯಮ್ಮನ ಜ್ಞಾನಶ್ರೀಗೆ ಶರಣಾಗುತ್ತಾನೆ.

> 'ಸತ್ವಗೆಟ್ಟಲ್ಲಿ ಕಾಷ್ಟವನೂರಿ ನಡೆಯಬೇಕು. ಮಹತ್ತತ್ವವಿದ್ದಲ್ಲಿ ನಿಶ್ಚಯವ ಹೇಳಲಾಗಿ
> ಮಹಾ ಪ್ರಸಾವವೆಂದು ಕೈಕೊಳ್ಳಬೇಕು. ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ
> ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ ಎನ್ನ ಸುಖ ದುಃಖ ನಿನ್ನ ಸುಖದುಃಖ ಅನ್ಯವಿಲ್ಲ.'28

ದೇಹ ಶಕ್ತಿ ಕುಂದಿದಾಗ ಆಸರೆಗೆ ಕೋಲು ಬೇಕಾಗುವಂತೆ, ವಿಚಾರಶಕ್ತಿ ಕುಂಠಿತವಾದಾಗ ಪತ್ನಿಯ ಸಹಾಯಕೋರುತ್ತಾನೆ.

> ಎನ್ನ ಮುಕ್ತ್ಯಂಗನೆ, ಎನ್ನ ನಿಶ್ಚಯಕ್ಕೆ ಒಂದು ಗೊತ್ತ ತೋರಾ ! ನಿಃಕಳಂಕ ಮಲ್ಲಿಕಾರ್ಜುನನು ಎಲ್ಲಿಹನು ಹೇಳಾ ।

ಎಂದು ಮಹಾದೇವಿಯನ್ನು ಸೆರಗೊಡ್ಡಿ ಬೇಡುತ್ತಾನೆ. ಉತ್ತರವಾಗಿ ಮಹಾದೇವಿ ಹೀಗೆನ್ನುತ್ತಾಳೆ—

> ಅದೇತಕೆ ಅಯ್ಯಾ, ಶಿವನೊಳಗೆ ಕೂಟಸ್ಥನಾದಿಹೆನೆಂಬ ಹಲುಬಾಟ? ಇದು ನಿತ್ಯಸತ್ಯದ ಆಟವಲ್ಲ;
> ಇನ್ನಾರಿಗೆ ಕೇಳಿ ಮತ್ತಿನ್ನಾರಿಗೆ ಹೇಳುವೆ ನೀ ಮಾಡುವ ಮಾಟ? ಮುನ್ನ ನೀನಾರೆಂದಿದ್ದೆ ಹೇಳಾ!
> ಆ ಭಾವವನಱಿದು ನಿನ್ನ ನೀನೆ ತಿಳಿ, ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ29

ಮಲ್ಲಿಕಾರ್ಜುನ ನಿನ್ನಲ್ಲಿಯೇ ಇದ್ದಾನೆ. ನಿನ್ನನ್ನು ನೀನು ಅರಿತರೆ ಮಲ್ಲಿಕಾರ್ಜುನನ ಸಾಕ್ಷಾತ್ಕಾರವಾಗುತ್ತದೆ. ಎಲ್ಲಿಯೋ ಅಡಗಿರುವನೆಂಬ ಭ್ರಮೆಯಿಂದ ಕೂಡಿ, ಅವನನ್ನು ಎದುರಿಟ್ಟು ಐಕ್ಯವಾಗಬೇಕೆಂಬ ನಿನ್ನ ಹಲುಬಾಟ ವ್ಯರ್ಥ. 'ಸರ್ವರಾಗ ವಿರಾಗನಾಗಿ ಸರ್ವಗುಣ ಸಂಪನ್ನನಾಗಿ, ಜ್ಞಾನಸಿಂಧು ಸಂಪೂರ್ಣನಾಗಿ ನಿನ್ನಱಿವಿನ ಗುಡಿಯ ಬಾಗಿಲ ತೆಱೆದು' ನೋಡಿದರೆ ಆತ್ಮಸಾಕ್ಷಾತ್ಕಾರವಾಗುತ್ತದೆ. 'ಅಂಗವೆ ಕೈಲಾಸ' 'ಅಂಗದ ಲಿಂಗದಲ್ಲಿಯೇ ನಿರಂಗವಾಗಬೇಕು' 'ಆ ಲಿಂಗದ ಕೂಟವೆ ನಿರ್ವಾಣ' ಎಂದು ಮಾರಯ್ಯನ ಮುಕ್ತಿಪಥಕ್ಕೆ ದಾರಿದೀಪವಾಗುತ್ತಾಳೆ. ಎಡೆಬಿಡದೆ ಪತಿಯನ್ನನುಸರಿಸಿ ಬಂದ ಮಹಾದೇವಿಯಮ್ಮ ಅಂಗ ನಿರಂಗವಾಗುವ ಕ್ರಮವನ್ನು ಪತಿಗೆ ಬೋಧಿಸಿ ತಾನೂ ಹಿಂಬಾಲಿಸಿದಳೆನಿಸುತ್ತದೆ. ನಿರಂಗನಾದ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಐಕ್ಯರಾದ ಮಾರಯ್ಯ ಮಹಾದೇವಿಯರು ಶರಣ ಸಮೂಹದ ಕಾಂತಿ ಪುಂಜದ ಎರಡು ಮಿನುಗು ತಾರೆಗಳಾದರು.

ಮೋಳಿಗೆ ಮಹಾದೇವಿಯಮ್ಮನ ೬೯ ವಚನಗಳು ದೊರೆತಿವೆ. ಬಹುಪಾಲು ವಚನಗಳು ಆಧ್ಯಾತ್ಮಿಕ ವಿವೇಚನೆಯನ್ನೊಳಗೊಂಡಿವೆ. ಕ್ಲಿಷ್ಟವಾದ ತಾತ್ವಿಕ ವಿಷಯಗಳನ್ನು ಸರಳವಾದ ಮಾತುಗಳಲ್ಲಿ ನಿರೂಪಿಸಿದ್ದಾಳೆ.......'ಕೈಯ ಮುದ್ದೆಯ ಕೆಡಹಿದಲ್ಲಿ ಬಾಯಿಗೆ ಬಯಲು', 'ಮುಟ್ಟಿದಲ್ಲಿ ತೊಟ್ಟುಬಿಟ್ಟ ಹಣ್ಣಿನಂತಿರಬೇಕು', 'ತಾ ಕದ್ದ ಕಳವ ಪರಿಹರಿಸಿಕೊಳಲಱಿಯದೆ ಇದಿರ ನೀವು ಬನ್ನಿ ಎಂದು ಕರೆವ ಕದ್ದೆಹಕಾಱನಂತೆ', 'ತಾ ನಿಂದಲ್ಲಿ ಕೆಡಹಿದ ಒಡವೆಯ ಆಚೆಯಲ್ಲಿ ನೆನೆದು ಅಱಸಿದಡಿಲ್ಲ', 'ಅಂಧಕನ ಕೈಯ ರತ್ನದಂತೆ', 'ಪಂಗುಳನ ಕರದ ಶಸ್ತ್ರದಂತೆ', 'ಕೊಳದೊಳಗೆ ಕಾಲಿದ್ದು ಕೋಲ ಹಿಡಿದು ಸಾಧನೆಯ ಮಾಡುವನ ತೆಱದಂತೆ', 'ಕರ್ಪುರದ ಅರಣ್ಯವ ಕಿಚ್ಚು ಹತ್ತಿ ಬೆಂದಲ್ಲಿ ಭಸ್ಮ ಇದ್ದಿತೆಂದು ಲಕ್ಷಿಸಲುಂಟೆ', 'ಅಲಗು ಮಱಿ ಉಳ್ಳವಂಗೆ ಶಸ್ತ್ರದ ಭಯವೇತಕ್ಕೆ', 'ಬಾಣದ ತೊಲಗುಳ್ಳವಂಗೆ ಅಂಬಿನ ಗಾಯವೇತಕ್ಕೆ'–ಮುಂತಾದ ದಿನನಿತ್ಯದ ಹೋಲಿಕೆಗಳ ಮೂಲಕ ಅರ್ಥಸ್ಪಷ್ಟತೆಯನ್ನೊದಗಿಸಿದ್ದಾಳೆ. ಆತ್ಮ ಸಾಕ್ಷಾತ್ಕಾರ, ಇಷ್ಟಪ್ರಾಣಲಿಂಗಗಳ ಸಂಬಂಧ, ಕ್ರಿಯಾ–ಜ್ಞಾನ ಸಂಬಂಧ, ಭಕ್ತನ ಗುಣ ಲಕ್ಷಣ, ಆತ್ಮಪರಮಾತ್ಮನ ಸಂಬಂಧ–ಇವುಗಳನ್ನು ಕುರಿತು ತರ್ಕಬದ್ಧವಾದ ವ್ಯಾಖ್ಯಾನವನ್ನೊದಗಿಸಿದ್ದಾಳೆ.

ಮಾರಯ್ಯನ ಶರಣಜೀವನದ ಧೀಶಕ್ತಿ ಮಹಾದೇವಿಯಮ್ಮ. ಹುಟ್ಟಿದ ಸೇರಿದ ರಾಜ ಮನೆತನಗಳ ವೈಭವವನ್ನು ತೃಣೀಕರಿಸಿ ಶರಣ ಜೀವನವನ್ನು ನಡೆಸಿದ ವೀರ ವಿರಾಗಿಣಿ. ಲೌಕಿಕ ಪತಿಯಲ್ಲಿಯೇ ಅಲೌಕಿಕನಾದ ನಿಃಕಳಂಕ ಮಲ್ಲಿಕಾರ್ಜುನನನ್ನು ಸಾಕ್ಷಾತ್ಕರಿಸಿಕೊಂಡ ಸಾಧ್ವೀಶಿರೋಮಣಿ. ಲೌಕಿಕದಲ್ಲಿದ್ದೂ ನಿರ್ಲಿಪ್ತತೆಯನ್ನು ಸಾಧಿಸಿ ಪಾರಮಾರ್ಥದೆಡೆಗೆ ದೃಷ್ಟಿನೆಟ್ಟ ಮಹಾಜ್ಞಾನಿ. ಪತಿಯ ಜೀವನದ ಆಚಾರನಿಷ್ಠೆ ಜೀವನದಲ್ಲಿ ಅಂಜದೆ ಅಳುಕದೆ ಜೊತೆಗೂಡಿ ಹೆಜ್ಜೆ ಹಾಕಿದ ಧೀರ ಸತಿ. ಮುಂಗಾಣದೆ ಕಂಗೆಟ್ಟು ನಿಂತ ಪತಿಯನ್ನು ಮೋಕ್ಷಮಾರ್ಗದೆಡೆಗೆ ಕೈಹಿಡಿದು ನಡೆಸಿದ ಮುಕ್ತಿಕಾಂತೆ, ನಿರಂಗ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ನಿರವಯಲನ್ನಪ್ಪಿದ ಮಹಾಸತಿ.

---

28. ಮೋಳಿಗೆ ಮಾರಯ್ಯನ ವಚನಗಳು ವಚನ ಸಂಖ್ಯೆ ೪೨೩.
29. ಮೋಳಿಗೆ ಮಹಾದೇವಿಯಮ್ಮನ ವಚನಗಳು ವಚನಸಂಖ್ಯೆ ೧೩.

# ಮುಕ್ತಾಯಕ್ಕ

—ಮೊರಬದ ಮಲ್ಲಿಕಾರ್ಜುನ

ಇಪ್ಪತ್ತನೆಯ ಶತಮಾನದಲ್ಲಿ ನಿಂತುಕೊಂಡು ಎಂಟು ಶತಮಾನಗಳ ಹಿಂದೆ ಆಗಿ ಹೋದ ಒಬ್ಬ ವ್ಯಕ್ತಿಯ ಬಗ್ಗೆ–ಅದೂ ಮಹಿಳೆಯ ಬಗ್ಗೆ–ಏನನ್ನು ಹೇಳುವುದೂ ಕಷ್ಟದ ಕೆಲಸವೆ. ಎಲ್ಲ ಹಂತಗಳಲ್ಲಿಯೂ ಲಿಂಗಭೇದವಿಲ್ಲದೆ ಮುಂದುವರೆದ ಪ್ರಸ್ತುತದಲ್ಲಿ ಮುಕ್ತಾಯಕ್ಕನಂಥವರ ಸಾಧನೆ ಏನೂ ಅಲ್ಲದೆ ಹೋದರೆ ಆಶ್ಚರ್ಯವೇನೂ ಇಲ್ಲ. ಹೀಗಲ್ಲದೆ ಅಂದಿನ ಮಿತಿಯೊಳಗೆ ಆಕೆ ಅಷ್ಟು ಮಾಡಿದ್ದೇ ಅದ್ಭುತ. ಅದ್ವಿತೀಯ ಎಂದಂದುಕೊಂಡು ಇನ್ನೊಂದು ದೆಸೆಯಲ್ಲಿ ಅತಿಯಾಗಿ ವೈಭವೀಕರಿಸುವ ಸಾಧ್ಯತೆಯೂ ಇಲ್ಲದಿಲ್ಲ. ಎರಡೂ ಕೂಡ ಅಪಾಯಕಾರಿಯೆ. ಚರಿತ್ರೆಯ ಪುನರ್ ನಿರ್ಮಾಣದ ಹಂತದಲ್ಲಿ ಪ್ರತಿಯೊಂದು ಚೇತನಕ್ಕೂ ಒಂದು ನಿರ್ದಿಷ್ಟ ಸ್ಥಾನವಿದೆ. ಇದಲ್ಲದೆ, ವರ್ತಮಾನದ ಈ ಕ್ಷಣದ ನಿರ್ಮಾಣಕ್ಕೆ ಚರಿತ್ರೆಯ ಪ್ರತಿಯೊಂದು ಚೇತನವೂ ಕಾರಣವಾಗಿರುತ್ತದೆ. ಇದನ್ನು ಅರಿತುಕೊಂಡು ಯಾವ ಭಾವಾತಿರೇಕವಿಲ್ಲದೆ ನಾವಿಂದು ಆ ಗತಚೇತನಗಳ ಪರಿಚಯ ಮಾಡಿಕೊಳ್ಳಬೇಕಾಗಿದೆ.

ಮುಕ್ತಾಯಕ್ಕ ಮೂಲತಃ ಅಲ್ಲಮನ ಜಂಗಮ ಜೀವನದ ಮೊದಲ ಘಟ್ಟದಲ್ಲಿಯ ಒರೆಗಲ್ಲಾಗಿ ನಮಗೆ ಪರಿಚಿತಳಾಗಿದ್ದಾಳೆ. ಮೇಲ್ನೋಟಕ್ಕೆ ಹಾಗೂ ಇದುವರೆಗಿನ ವ್ಯಾಖ್ಯಾನದಂತೆ ಒಡಹುಟ್ಟಿದ ಅಣ್ಣ, ಜ್ಞಾನವನ್ನೆರೆದು ಪೋಷಿಸಿದ ಗುರು ಹಾಗೂ ಸಾಕಿ ಸಲುಹಿದ ತಂದೆಯ ಸ್ಥಾನದಲ್ಲಿದ್ದ ಅಜಗಣ್ಣನ ಅಗಲುವಿಕೆಯಿಂದ ಆಲಾಪಿಸುತ್ತಿದ್ದ ಮುಕ್ತಾಯಕ್ಕ ಅಲ್ಲಮನ ಉಪದೇಶದಿಂದ ಉಪಕೃತಳಾದಳೆಂಬುದೇ ಹೆಚ್ಚು ಮುಖ್ಯವಾಗುತ್ತದೆ. ಅದು ಬಹುಮಟ್ಟಿಗೆ ನಿಜವೂ ಹೌದು. ಆದರೆ ಒಬ್ಬ ಶರಣ ಇನ್ನೊಬ್ಬ ಶರಣನ ಜೊತೆ ನಡೆಸಿದ ಅನುಸಂಧಾನ ಕೇವಲ ಏಕಮುಖವಾದದ್ದು ಎನ್ನಲಾಗದು. ಅವರ ಸಂವಾದದಲ್ಲಿ ಕೊಡುವಿಕೆಯಷ್ಟೇ ಪಡೆಯುವಿಕೆಯೂ ಮುಖ್ಯವಾಗುತ್ತಿತ್ತು. ಅಂತೆಯೇ ಅಂದಿನ ಆಂದೋಲನದಲ್ಲಿ ವ್ಯಷ್ಟಿ ಬೆಳವಣಿಗೆ ಮಾತ್ರವಾಗದೆ ಸಮಷ್ಟಿಯ ಬೆಳವಣಿಗೆಯೂ ಸಾಧ್ಯವಾಯಿತು. ಇದನ್ನು ಅಲ್ಲಮ ಮತ್ತು ಮುಕ್ತಾಯಕ್ಕ ಇವರ ಸಂವಾದದಲ್ಲಿಯೂ ಗುರುತಿಸಬಹುದಾಗಿದೆ. ಅಲ್ಲಮನ ಯಾವುದೇ ಸಾಂತ್ವನದ ಮಾತುಗಳನ್ನು ಮುಕ್ತಾಯಕ್ಕ ಬಡಪೆಟ್ಟಿಗೆ ಒಪ್ಪಿಕೊಳ್ಳುವದಿಲ್ಲ. ಅಜಗಣ್ಣನ ಅಗಲುವಿಕೆ ಆಕೆಗೆಷ್ಟು ಅರಕೆಯನ್ನುಂಟುಮಾಡಿದೆ ಎಂಬುದನ್ನು ಸ್ಪಷ್ಟಪಡಿಸುತ್ತಾಳೆ. ಅಲ್ಲಮನ ಅರಿತಿರುವೆನೆಂಬ ಭ್ರಮೆ ಆತನ ಅಭಿವ್ಯಕ್ತಿಯಿಂದ ನಿರಾಕರಣೆಗೊಳ್ಳುವ ಸಾಧ್ಯತೆಯನ್ನು ಕುರಿತು ಎಚ್ಚರಿಸುತ್ತಾಳೆ. ಆಕೆಯ 'ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು ಶಿಶುಕಂಡ ಕನಸಿನಂತಿರಬೇಕಲ್ಲದೆ ನುಡಿದು ಹೇಳುವನ್ನಕ್ಕರ ಭಿನ್ನವಲ್ಲದೇನು ಹೇಳಾ?' ಎಂಬ ಪ್ರಶ್ನೆ, ಅಜಗಣ್ಣನನ್ನು ಕುರಿತಾದ 'ಅರಿತು ಮರೆತವನು', 'ಶಬ್ದ ಮುಗ್ಧ' ಎಂಬ ವಿಶೇಷಣ ಅಲ್ಲಮನನ್ನು ಕುರಿತು ನುಡಿದ 'ಉಲಿಯದಿರೋ ಭಾವ' ಎಂಬ ಮಾತುಗಳು, ಅಲ್ಲಮನ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಅಗಾಧ ಪರಿಣಾಮವನ್ನುಂಟು ಮಾಡಿವೆ ಎಂಬುದನ್ನು ಅಲ್ಲಗಳೆಯಲಾಗುವುದಿಲ್ಲ. ಅಲ್ಲಮನ ಆ ದೆಸೆಯಲ್ಲಿಯ ಪ್ರಯತ್ನವನ್ನು ಹಾಗೂ ಅಂತಹ ಅಭಿವ್ಯಕ್ತಿ ಕ್ರಮದಲ್ಲಿ ಅಲ್ಲಮ ಅಜಗಣ್ಣನಿಗೆ ದ್ವಿತೀಯನಾಗಿ ಉಳಿಯುವುದನ್ನು ಚನ್ನಬಸವಣ್ಣನವರ 'ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ, ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ...' ಎಂಬ ಮಾತಿನಿಂದ ಕಂಡುಕೊಳ್ಳಬಹುದು. ದುರದೃಷ್ಟವಶಾತ್ ಅಜಗಣ್ಣನವೇ ಎಂದು ಖಚಿತವಾಗಿ ಗುರುತಿಸಬಹುದಾದ ವಚನಗಳು ನಮಗಿಂದು ದೊರೆತಿಲ್ಲ. ಆದರೆ ಮುಕ್ತಾಯಕ್ಕನ ವಚನ ಹಾಗೂ ಅವುಗಳ ಅಭಿವ್ಯಕ್ತಿ ಕ್ರಮ ನಮ್ಮ ಕಣ್ಣ ಮುಂದೆ ಅಜಗಣ್ಣನ ಅಮೂರ್ತವಾದರೂ ಸ್ಪಷ್ಟವಾದ ಚಿತ್ರವನ್ನು ಪಡಿಮೂಡಿಸುತ್ತವೆ. ಚನ್ನಬಸವಣ್ಣನವರ ಮೇಲಿನ ವಚನ 'ನಿರ್ವಚನ'ದ ದೃಷ್ಟಿಯಿಂದ ವರಿಷ್ಠಮೌಲ್ಯಶ್ರೇಣಿಯನ್ನು ಗುರುತಿಸುತ್ತಾ 'ಅಜಗಣ್ಣನ ಐದು ವಚನಕ್ಕೆ–ಕೂಡಲಚನ್ನಸಂಗಯ್ಯನಲ್ಲಿ–ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ' ಎಂದಿದ್ದಾರೆ. ಇಲ್ಲಿ 'ವಚನ' 'ನಿರ್ವಚನ'ವಾಗುವ ಹಂತವನ್ನು ಸಾಧಕಹಾಗೂ ಅವರ ಆರಾಧ್ಯ ದೈವದ ಮಧ್ಯೇ ನಡೆದ ನೇರವಾದ ಅನುಸಂಧಾನವನ್ನು ಕುರಿತು ಹೇಳಿರುವಂತಿದೆ. ಒಬ್ಬ ಶರಣ ಬಾಹ್ಯ-ಸಂಸಾರಿಕ ಸಂಬಂಧಗಳನ್ನು ಬಯಲುಗೊಳಿಸುತ್ತ ತನ್ನ ಆರಾಧ್ಯ ದೈವದಲ್ಲಿ ಲೀನವಾಗುವುದರತ್ತ ಮುನ್ನಡೆದ ಪ್ರಕ್ರಿಯೆಯೇ 'ವಚನ' 'ನಿರ್ವಚನ'ವಾಗುವ ಪ್ರಕ್ರಿಯೆ ಎಂದು ಗುರುತಿಸಬಹುದು. ಬಸವಣ್ಣ–ಅಲ್ಲಮ–ಅಜಗಣ್ಣ ಹಾಗೂ ಮಹಾದೇವಿಯಕ್ಕ ಇವರ ಬದುಕಿನ ಸಾಧನೆಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಈ ಅರ್ಥದಲ್ಲಿ ಮುಕ್ತಾಯಕ್ಕನ ಅಭಿವ್ಯಕ್ತಿ 'ನಿರ್ವಚನ'ಕ್ಕೆ ಹತ್ತಿರವಾದುದು ಹಾಗೂ ಅಲ್ಲಮನ ಮೇಲೆ ಅಜಗಣ್ಣನ ವ್ಯಕ್ತಿತ್ವದಷ್ಟೇ ಮುಕ್ತಾಯಕ್ಕನ ಅಭಿವ್ಯಕ್ತಿ ಕ್ರಮದ ಪ್ರಭಾವವೂ ಆಗಿದೆ ಎನ್ನಬಹುದು.

ಮುಕ್ತಾಯಕ್ಕ ಮತ್ತು ಅಜಗಣ್ಣನ ಸಂಬಂಧ ಬಾಹ್ಯಸ್ವರೂಪದಲ್ಲಿ ನಿರ್ವಚಿಸಿಕೊಳ್ಳುವಷ್ಟು ಸರಳವಾದುದಲ್ಲ. ಅಂತೆಯೇ ಆತನನ್ನು ಕುರಿತು ಮುಕ್ತಾಯಿ ಹೇಳುವ ಮಾತುಗಳು ತೀರ ಅಮೂರ್ತವಾದವು ಎನಿಸುತ್ತದೆ. ಆಕೆಯ ಅಣ್ಣ 'ಸೊಲ್ಲಿ

ಲ್ಲದ ಸೊಮ್ಮಿಲ್ಲದ ನಿಜ'ವನ್ನೈದಿದವನು. ಆತ ತನ್ನ ತಂಗಿಯನ್ನು ಬೆಳಸಿದ ಪರಿ ತುಂಬಾ ಸೊಗಸಾದುದು :

ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ, ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿದ್ದನಯ್ಯ,
ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ, ಅಗ್ನಿ ಕರಗಿ ಕರ್ಪುರ ಉಳಿದುದಕ್ಕೆ ಬೆಜಗಾದೆನಯ್ಯ, ಎನ್ನ ಅಜಗಣ್ಣನ ಯೋಗಕ್ಕೆ

ಇಲ್ಲಿಯ ಮೊದಲ ಸಾಲಿನಲ್ಲಿ ಸ್ವರೂಪ ರಹಿತವಾದ ನೀರಿನಂತಹ ಮುಕ್ತಾಯಕ್ಕನ ಮುಗ್ಧ ವ್ಯಕ್ತಿತ್ವಕ್ಕೆ ಅಜಗಣ್ಣ ನಿರಾಳದ ಗೆಜ್ಜೆಯ ಕಟ್ಟುತ್ತಾನೆ. ಅಂದರೆ ಸಂಸಾರದ ಜಡತ್ವದಿಂದ ಪಾರಾಗುವ ಜ್ಞಾನದೀಕ್ಷೆ ನೀಡುತ್ತಾನೆ. ಮುಕ್ತಿ ಮಾರ್ಗದಲ್ಲಿ ಮುನ್ನಡೆಯಿಸಿ ಸಲುಹುತ್ತಾನೆ. ಎಲ್ಲ ಶರಣರ ಗುರಿಯೂ ಬಯಲ ಗಳಿಕೆಯೇ ಆದ್ದರಿಂದ, ಮುಕ್ತಾಯಕ್ಕ ಬಯಲು ಗೊಂಬೆಯ ಮುದ್ದಿನ ಮಗುವಾಗಿವುದು ಕೂಡ ಅರ್ಥಪೂರ್ಣ. ಇದು ಮುಕ್ತಾಯಕ್ಕನ ಬೆಳವಣಿಗೆಯ ಮೊದಲ ಹಂತವನ್ನು ಸೂಚಿಸಿದರೆ, ಮುಂದೆ ಬರುವ 'ಅಗ್ನಿ ಕರಗಿ ಕರ್ಪುರ ಉಳಿಯುವ' ಬೆರಗಿನ ಕ್ರಿಯೆ ಆಕೆಗೆ ಒದಗಿದ ಆತಂಕವನ್ನು ಕುರಿತಾದುದಾಗಿದೆ, ಬಹಳಷ್ಟು ಜನ ವಚನಕಾರರು ತಮ್ಮ ಸಾಧನೆಯ ಕೊನೆಯ ಹಂತವನ್ನು 'ಉರಿಯುಂಡ ಕರ್ಪುರ'ದ ಕ್ರಿಯೆಗೆ ಹೋಲಿಸಿಕೊಂಡಿದ್ದಾರೆ. ಆದರೆ ಇಲ್ಲಿಯ ವಿವರಣೆ ಅದಕ್ಕಿಂತ ಭಿನ್ನವಾದುದು. ಅಗ್ನಿ ಕರಗಿ ಕರ್ಪುರ ಉಳಿಯುತ್ತೆ. ಇಲ್ಲಿ ಜ್ಞಾನ ಪೋಷಕವಾಗಿದ್ದ ಅಜಗಣ್ಣ ಅಗ್ನಿ, ಮುಕ್ತಾಯಕ್ಕ ಕರ್ಪುರ. ಅಜಗಣ್ಣ ಮುಕ್ತಾಯಕ್ಕನಿಗೆ 'ಅಗ್ನಿಯ ಸಿಂಹಾಸನ'ವನ್ನೇನೋ ಕೊಡುತ್ತಾನೆ. ಆದರೆ ಆಕೆ 'ಉರಿಯುಂಡ ಕರ್ಪುರ'ವಾಗುವ ಮೊದಲೇ ತಾನಿಲ್ಲವಾಗುತ್ತಾನೆ. ಈ ಸ್ಥಿತಿಯನ್ನು ಮುಕ್ತಾಯಕ್ಕ ಮೇಲಿನ ವಚನದ ಮೂಲಕ ತುಂಬಾ ಸೂಚ್ಯವಾಗಿ ಹೇಳಿಕೊಂಡಿದ್ದಾಳೆ.

ಅಜಗಣ್ಣನ 'ಮೃತ್ಯುಸೂತಕ'*ದೊಂದಿಗೆ ಮುಕ್ತಾಯಕ್ಕ ಬಳಲುತ್ತಿರುವಾಗ ಅಲ್ಲಮಪ್ರಭು ಆಕೆಯ ಬಳಿ ಬರುತ್ತಾನೆ. ಅಜಗಣ್ಣ ಮುಕ್ತಾಯಕ್ಕನ ಒಡಹುಟ್ಟಿದ ಅಣ್ಣ ಮೇಲಾಗಿ ಅಂತರಂಗವನ್ನರಳಿಸಿದ ಗುರುವು. ಹೀಗಾಗಿ ಒಬ್ಬ ಒಲುಮೆಯ ತಂಗಿಯಾಗಿ ಹಾಗೂ ಅನಾಥಳಾದ ಶಿಷ್ಯೆಯಾಗಿ ಆತನ ಅಗಲುವಿಕೆಗಾಗಿ ಮುಕ್ತಾಯಕ್ಕ ಅಲಾಪಿಸುತ್ತಾಳೆ. ಅಜಗಣ್ಣ ಒಬ್ಬ ವ್ಯಕ್ತಿಯಾಗಿ ಸತ್ತಿದ್ದರೂ ಒಂದು 'ತತ್ತ್ವ'ವಾಗಿ ಬದುಕಿಯೇ ಇದ್ದಾನೆ. ಮುಕ್ತಾಯಕ್ಕನಿಗೆ ಈ ಅರಿವು ಇಲ್ಲದಿಲ್ಲ. ಆದರೆ ಅರಿವನ್ನು ಅಣಲೊಳಗಿಕ್ಕಿ ಅಗಿಯುವ ಮರ್ತ್ಯಕ್ಕೆ ಅಮೂರ್ತವಾದ ಅಜಗಣ್ಣನ ಅಸ್ತಿತ್ವದ ಅರಿವೇ ಗೊತ್ತಾಗದು. ಇದನ್ನೆಲ್ಲ 'ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತೊ, ಅಜಗಣ್ಣ ನಿನ್ನ ವಿಯೋಗ', 'ಜಂತ್ರದ ಕೀಲು ಕೂಟದ ಸಂಚದ ಭೇದವು ತಪ್ಪಿ ಮಂತ್ರ ಭಿನ್ನವಾಗಿ ನುಡಿವರೆ ಅಜಗಣ್ಣ ?' 'ಕೂರ್ಮನ ಶಿಶುವಿನ ಸ್ನೇಹದಂತಿರಲೊಲ್ಲದೆ ಆರೂಢಿಗೆಟ್ಟೆರಿ ಅಜಗಣ್ಣ'–ಮುಂತಾದ ಮಾತುಗಳಲ್ಲಿ ಹೊರಹೊಮ್ಮಿಸಿದ್ದಾಳೆ. ಇಲ್ಲೆಲ್ಲ ನಾವು ಅಜಗಣ್ಣನನ್ನು ಕುರಿತಾದ ಕಥಾನಕಗಳಲ್ಲಿರುವ ಆತನ 'ಸಂಸಾರ ವಿದೂರ'ವಾದ ವರ್ತನೆಗಳನ್ನು ಹೋಲಿಸಿ ನೋಡಿದರೆ ಮುಕ್ತಾಯಕ್ಕನ ಮಾತುಗಳಲ್ಲಿರುವ ಸೂಕ್ಷ್ಮ ದೃಷ್ಟಿಗೋಚರವಾಗುತ್ತದೆ. ಇಂತಹ ಸಮಯದಲ್ಲಿ ಬರುವ ಅಲ್ಲಮಪ್ರಭುವೂ ಸಹ ಮುಕ್ತಾಯಕ್ಕನನ್ನು ಏನೂ ಅರಿಯದವಳೆಂದು ಕಡೆಗಣಿಸಿದವನೇನಲ್ಲ. ಆತನ ಮೊದಲ ಮಾತಿನಲ್ಲಿಯೇ ಇದನ್ನು ಗಮನಿಸಬಹುದಾಗಿದೆ :

ಅಂಗಯ್ಯ ಒಳಗೊಂದು ಅರಳ್ದ ತಲೆಯ ಹಿಡಿದುಕೊಂಡು, ಕಂಗಳ ಮುತ್ತು ಪವಣಿಸುವಾಕೆ ನೀನಾರು ಹೇಳಾ ?
ಸಂದ ಸಂಪಗೆಯರಳ ತುಂಬಿ ಬಂಡುಂಡ ಭೇದವನರಿಯದೆ ಹಂಬಲಿಸುವ ಪರಿತಾಪವೇನು ಹೇಳಾ ?
ಒಂದೆಂಬೆನೆ ಎರಡಾಗಿದೆ, ಎರಡೆಂಬೆನೆ ಒಂದಾಗಿದೆ, ಅರಿವಿನೊಳಗಣ ಮರಹಿದೇನು ಹೇಳಾ ?
ದುಃಖವಿಲ್ಲದ ಅಕ್ಕೆ, ಅಕ್ಕೆ ಇಲ್ಲದ ಅನುತಾಪ ನಮ್ಮ ಗೊಗೇಶ್ವರ ಲಿಂಗದಲ್ಲಿ ತೋರುತ್ತಿದೆ. ನೀನಾರೆಂದು ಹೇಳಾ ಎಲೆ ಅವ್ವಾ ?

ಮುಕ್ತಾಯಕ್ಕ ಅರಿವಿಲ್ಲದ ಅಜ್ಞಾನಿಯಲ್ಲ. ಆಕೆಯದು 'ಅರಿವಿನೊಳಗಣ ಮರಹು' ಮರಹಿನಜವನಿಕೆಯನ್ನು ಓಸರಿಸಿದರೆ ಸಾಕು ಅರಿವು ತಾನೇ ತಾನಾಗಿ ವಿಜೃಂಭಿಸುತ್ತದೆ. ಅಲ್ಲಮ ಆ ಕೆಲಸವನ್ನು ಮಾಡುತ್ತಾನೆ, ಜೊತೆಗೆ ಅದರಿಂದಾಗಿಯೇ ಸಾಕಷ್ಟು ಸವಾಲನ್ನೂ ಎದುರಿಸುತ್ತಾನೆ.

ಅಲ್ಲಮ ಮೊದಲು ತನ್ನ ಪರಿಚಯ ಹೇಳಿಕೊಂಡು ತನ್ನ ಮತ್ತು ಮುಕ್ತಾಯಕ್ಕನ ಮಧ್ಯೇ ಒಂದು ಹಾರ್ದಿಕವಾದ ಸಂಬಂಧವನ್ನು ಹೇಳಿಕೊಳ್ಳುತ್ತಾನೆ: 'ನಾ ಭಾವನಲ್ಲಯ್ಯನು; ನೀನೆನಗೆ ನಗೆವೆಣ್ಣು. ನಮ್ಮ ಗೊಗೇಶ್ವರನ ಕೈವಿಡಿದು ಪರಮ ಸುಖಿಯಾಗಿ ಕಳವಳದ ಕಂದೆರೆವೆ ಏನು ಹೇಳಾ' ಎನ್ನುತ್ತಾನೆ. ಅಜಗಣ್ಣನನ್ನಗಲಿದ ತನಗೆ ಬೇರೆ ಬಂಧುವೇ ಇಲ್ಲ ಎಂದು ದುಃಖಿಸುತ್ತಿರುವ ಸಮಯದಲ್ಲಿ ಅಲ್ಲಮ ತಮ್ಮ ಸಂಬಂಧಗಳನ್ನು ಕುರಿತು ಹೇಳುತ್ತಾ ಸಾಂತ್ವನದ ಮಾತುಗಳನ್ನಾಡಿದ್ದು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿಯೂ ಕೂಡ ಸಮರ್ಪಕ. ಇದಲ್ಲದೆ ಮುಕ್ತಾಯಕ್ಕನ ಮೇಲೆ ಆ ಮಾತುಗಳು ಬೀರಿದ ಪರಿಣಾಮ ಕೂಡ

* ಅಪೇಕ್ಷೆ ಪಟ್ಟೋ ಅಥವಾ ಅಪ್ರಯತ್ನಪೂರ್ವಕವಾಗಿಯೋ ಅಲ್ಲಮ ಮುಕ್ತಾಯಕ್ಕನ ಜೊತೆ ನಡೆಸಿದ ಸಂವಾದದಲ್ಲಿ 'ಭ್ರಾಂತುಸೂತಕ', 'ಶಬ್ದಸೂತಕ (ನುಡಿದು ಸೂತಕಿ)' ಎಂಬ ಪದಗಳನ್ನು ಬಳಸಿದ್ದಾನೆ. ಆದ್ದರಿಂದಲೇ ನಾನಿಲ್ಲಿ 'ಮೃತ್ಯುಸೂತಕ' ಎಂಬ ಪದವನ್ನು ಬೇಕೆಂದೇ ಬಳಸಿದ್ದೇನೆ. ಅಲ್ಲಮ ಬಳಸಿದ 'ಸೂತಕ'ಗಳು ಭ್ರಮೆಗಳಾಗಿರುವಂತೆ, 'ಮೃತ್ಯುಸೂತಕ' ಕೂಡ ಒಂದರ್ಥದಲ್ಲಿ ಭ್ರಮೆಯೇ.

ಇಲ್ಲಿ ಮುಖ್ಯವಾಗುತ್ತದೆ. 'ಮರಣವಳಿದು ಮಹವನೊಡಗೂಡಿದ ಎನ್ನ ಅಜಗಣ್ಣನನಗಲಿದ ದುಃಖ ನಿಮ್ಮ ಸಂಗದಲ್ಲಿ ಸಮು ವಾಯಿತ್ತು ಪ್ರಭುವೆ'–ಎಂಬಲ್ಲಿ ಅಪೇಕ್ಷಿತ ಪರಿಣಾಮ ಉಂಟಾದುದನ್ನು ಕಾಣಬಹುದಾಗಿದೆ.

ಮುಂದೆ ನಡೆಯುವ ಸಂವಾದದಲ್ಲಿ ಮುಕ್ತಾಯಕ್ಕ ಅಜಗಣ್ಣನ ಆದರ್ಶವನ್ನು ಎತ್ತಿ ಹಿಡಿಯುತ್ತಾ ಬರುತ್ತಾಳೆ. ಇಲ್ಲಿ ನಮಗೆ ಎರಡೊಂದು ಲಾಭ. ಒಂದೆಡೆ ಅಜಗಣ್ಣನ ವ್ಯಕ್ತಿತ್ವ ರೂಹು ಪಡೆಯುತ್ತಾ ಬರುತ್ತದೆ. ಇನ್ನೊಂದೆಡೆ ಮುಕ್ತಾಯಕ್ಕನ ಅಭಿವ್ಯಕ್ತಿ ತನ್ನ ಸಾಮರ್ಥ್ಯವನ್ನು ಪ್ರಕಟಿಸುತ್ತದೆ. ಮುಕ್ತಾಯಕ್ಕನ ಮಾತಿನಲ್ಲಿ ತರ್ಕವಿದೆ, ಜ್ಞಾನವಿದೆ. ಅವುಗಳನ್ನು ಹೇಳು ವಲ್ಲಿ ನೇರವಾದ ಕ್ರಮವಿದೆ, ಖಚಿತತೆ ಇದೆ. ಇವುಗಳ ಜೊತೆ ಕಲ್ಪನಾ ಶಕ್ತಿಯೂ ಕೂಡ ಕೆಲಸ ಮಾಡಿದೆ.

> ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬರು! ಶಿಶುಕಂಡ ಕನಸಿನಂತಿರಬೇಕಲ್ಲದೆ ನುಡಿದು ಹೇಳುವನ್ನಕ್ಕರ ಭಿನ್ನವಲ್ಲದೇನು ಹೇಳಾ?
> ಅಱಿವಱತು ಮಱಹು ನಷ್ಟವಾಗಿ ಗುರುವ ತೋಱಿದೆನೆಂಬವರು ಇದಿರಿಂಗೆ ಕರುಳ ಕಲೆಯನಱಿಪುವ ಪರಿಯೆಂತು ಹೇಳಾ?
> ಮನದ ಕೊನೆಯ ಮೊನೆಯ ಮೇಲಣ ಅಱಿವಿನ ಕಣ್ಣ ಮುಂದೆ, ಸ್ವಯಂ ಜ್ಯೋತಿ ಪ್ರಕಾಶವ ತೋಱುತ್ತಿದ್ದರೆ ಅದು ತಾನಾಗಬಲ್ಲದೆ?
> ನೆಱೆಯಱಿತು ಮರೆಯಬಲ್ಲಡೆ ಎನ್ನ ಅಜಗಣ್ಣನಂತೆ ಶಬ್ದ ಮುಗ್ಧನಾಗಿರಬೇಕಲ್ಲದೆ, ಶಬ್ದ ಸಂದಣಿಯ ಮಾತು ಸಯವಲ್ಲ ನೋಡಯ್ಯ

'ಗುರುವೇ ತಾನು, ತಾನೇ ಗುರುವು' ಎಂಬ ಅಲ್ಲಮನ ಮಾತಿಗೆ ಮುಕ್ತಾಯಕ್ಕ ಕೊಟ್ಟ ಉತ್ತರವಿದು. ಆಡುವ ಮಾತಿಗಿಂತ, ತೋರುವ ಕ್ರಿಯೆ ಹೆಚ್ಚು ಮುಖ್ಯ ಎಂಬುದು ಆಕೆಯ ಅಭಿಪ್ರಾಯ. ಈ ಹಿನ್ನೆಲೆಯಲ್ಲಿ ಆಕೆ ಬಳಸಿರುವ 'ಶಿಶುಕಂಡ ಕನಸು' 'ಕರುಳ ಕಲೆಯನಱುಹುವ ಪರಿ' 'ಮನದ ಕೊನೆಯ ಮೊನೆಯ ಮೇಲಣ ಅಱಿವು' ಶಬ್ದ ಮುಗ್ಧ' 'ಶಬ್ಧಸಂದಣಿ' ಮುಂತಾದ ಉಪಮೆ, ರೂಪಕಗಳೆಲ್ಲ ನಿಜಕ್ಕೂ......ತುಂಬ ಚೆನ್ನಾಗಿವೆ. 'ಶಿಶು ಕಂಡ ಕನಸು' ಎಂಬ ಮಾತಂತೂ ನಮ್ಮ ಎಲ್ಲ ಅರ್ಥ ವಿವರಗಳನ್ನು ಹಾಗೂ ಅಭಿವ್ಯಕ್ತಿಯ ಸಾಧ್ಯತೆಗಳನ್ನು ಮೀರಿ ನಿಂತ ಉಪಮೆ. ಅದರ ಸ್ವರೂಪವೇ ಅಂತಹದು. ಶಿಶು ತಾನು ಕಂಡ ಕನಸಿನ ಸವಿಯನ್ನೆಲ್ಲ ತನ್ನ ಮುದ್ದು ಮುಖದ ಮೂಲಕ ಅಭಿವ್ಯಕ್ತಿಸುತ್ತದೆ. ಆದರೆ ಬಾಯಿಬಿಟ್ಟು ಅದೆಂತಹ ಕನಸು ಎಂಬುದನ್ನು ಹೇಳಲಾರದು. ಇದರಂತೆಯೇ 'ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು' ಶಿಶುವಿನಂತಿರಬೇಕು. ಅಜಗಣ್ಣ ಹಾಗಿದ್ದವನು. ಆತನ ತಂಗಿಯಾದ ಹಾಗೂ ಶಿಷ್ಯೆಯಾದ ಮುಕ್ತಾಯಕ್ಕ ಕೂಡ ಹಾಗಿರಬೇಕೆಂದು ಬಯಸಿದ್ದರಲ್ಲಿ ಆಶ್ಚರ್ಯ ವೇನೂ ಇಲ್ಲ.

ಅಜಗಣ್ಣ ತಂದೆ ಶಬ್ದಕ್ಕೆ ಹೇಸಿ ಮುಗುದನಾದವನು. ಮುಕ್ತಾಯಕ್ಕ ನುಡಿದು ನುಡಿದು ಹೇಳುವನ್ನಕ್ಕರ ನಡೆದು ದೆಲ್ಲಾ ಹುಸಿಯೆನ್ನುವಳು. ಅಂತೆಯೇ 'ಮಾತೆಂಬುದು ಜ್ಯೋತಿರ್ಲಿಂಗ' ಎಂಬ ಅಲ್ಲಮನ ಸೊಗಸಾದ ನುಡಿಯೂ ಸಹ ಇಲ್ಲಿ ಒರೆಗಲ್ಲಿಗೆ ತಲೆಯೊಡ್ಡಬೇಕಾಗುತ್ತದೆ. ಅಲ್ಲಮ ಸಾಕಷ್ಟು ಆಕರ್ಷಕವಾದ ಮಾತುಗಳಿಂದಲೆ ಮುಕ್ತಾಯಕ್ಕನಿಗೆ ಸಮಾಧಾನ ಹೇಳ ಹೋಗುತ್ತಾನೆ. 'ನಮ್ಮ ಗೂಗೇಶ್ವರ ಲಿಂಗಕ್ಕೆ ನೀನು ಕರುಣದ ಶಿಶುವಾದ ಕಾರಣ ಬಾಯ್ದೆರೆದೆನಲ್ಲದೆ ಭಿನ್ನವುಂಟೇ ಹೇಳಾ ಮರುಳೆ ? ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಮುಕ್ತಾಯಕ್ಕ ಕೊಡುವ ಉತ್ತರ ನಿಜಕ್ಕೂ ಎದೆಗಾರಿಕೆಯದು :

> ಕೈಯದು ಕುಱುಹು, ಬಾಯದು ಬೊಬ್ಬೆ ; ಉಳಿಯದಿರೋ ಭಾವ ! ಆಲಿಕಲ್ಲ ಕೊಡನಲ್ಲಿ ಮುತ್ತು ಮಾಣಿಕವ ತುಂಬಿ
> ಎತ್ತುವರಿಲ್ಲದೆ ಸಖಿಯನಱಸುತ್ತಿಪ್ಪೆ. ಮನದ ತನುವಿನಲ್ಲಿ, ಆ ತನುವಿನ ಮನದಲ್ಲಿ
> ತನಗೆ ತಾನೆತ್ತಿಕೊಂಡರೆ ಮನ ಮೇರೆದಪ್ಪಿ ಕರಗಿ ಉಕ್ಕಿತ್ತು ನಮ್ಮ ಅಜಗಣ್ಣನ ಯೋಗ.

ಅಲ್ಲಮ ಪ್ರಭು 'ಭಾವ' 'ನಗೆವೆಣ್ಣು' ಎಂಬ ಶಬ್ದಗಳನ್ನು ಉಪಯೋಗಿಸುವುದರ ಮೂಲಕ ಮುಕ್ತಾಯಕ್ಕನಿಗೆ ಸಾಂತ್ವನ ಹೇಳಿ ದರೆ, ಮುಕ್ತಾಯಕ್ಕ ಇನ್ನೂ ಸ್ವಾತಂತ್ರ್ಯವಹಿಸಿ 'ಉಲಿಯದಿರೋ ಭಾವ' ಎಂದು ಮಾತಿಗೆ ತಡೆಯೊಡ್ಡುತ್ತಾಳೆ. ಆಕೆ ಮಾತಿನ ಸೊಗಸಿಗೆ ಮರುಳಾಗದೆ ಅದರ ಹಿಂದಿರುವ ತರ್ಕವನ್ನು ಗ್ರಹಿಸಿ ಪ್ರತಿಭಟಿಸುತ್ತಾಳೆ. ಈ ಅರ್ಥದಲ್ಲಿ ಅಲ್ಲಮನಿಗೆ ಸಮರ್ಥವಾಗಿ ಸವಾಲು ಹಾಕುತ್ತಾಳೆ.

ಮುಕ್ತಾಯಕ್ಕ ಅಜಗಣ್ಣನನ್ನು ಗುರುವೆಂದು ನಂಬಿದವಳು. ಆತನ ನುಡಿಗಿಂತ ನಡೆಯಿಂದಲೇ ತನ್ನ ಮಾರ್ಗವನ್ನು ರೂಪಿಸಿಕೊಂಡವಳು. 'ಅಂಧಕನ ಕೈಯ ಅಂಧಕ ಹಿಡಿದಂತೆ' ಅಣ್ಣನ ಹಾದಿಯಲ್ಲಿ ಹೆಜ್ಜೆ ಇಟ್ಟವಳು. 'ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತೆ' ನಿಶ್ಶಬ್ದವಾಗಿಯೇ ಎಲ್ಲವನ್ನೂ ಗ್ರಹಿಸಿಕೊಂಡವಳು. ಅಂತೆಯೇ ಅಜಗಣ್ಣನ ಐಕ್ಯ ಆಕೆಯ ಮುನ್ನಡೆಗೆ ದೊಡ್ಡ ಅರಕೆ ಎನಿಸುತ್ತದೆ. ಅಲ್ಲಮ ಈ 'ಅರಕೆ'ಯ ಅಜ್ಞಾನವನ್ನು ಹೋಗಲಾಡಿಸಲು ಬಂದವನು. ಮುಕ್ತಾಯಕ್ಕನಲ್ಲಿದ್ದ ಗುರು–ಶಿಷ್ಯ ಭಿನ್ನಭೇದ ಭಾವವನ್ನು ತೊಡೆದು ಹಾಕಲು ಈ ರೀತಿ ಹೇಳುತ್ತಾನೆ :

> ಗುರುವಿಂಗೂ ಶಿಷ್ಯಂಗೂ ಆವುದುದೂರ, ಆವುದು ಸಾರೆ-ಎಂಬುದನಾರು ಬಲ್ಲರಯ್ಯ ? ಗುರುವೇ ಶಿಷ್ಯನಾದ ತನ್ನ ವಿನೋದಕ್ಕೆ !
> ಆ ಶಿಷ್ಯನೆ ಗುರುವಾದ ತನ್ನ ವಿನೋದಕ್ಕೆ. ಕರ್ಮವೆಂಬ ಕೌಟಿಲ್ಯವೆಡೆವೊಕ್ಕ ಕಾರಣ ಭಿನ್ನವಾಗಿ ಇದ್ದಿತ್ತೆಂದರೆ ಅದು ನಿಶ್ಚಯವಹುದೆ?
> ಆದಿ ಅನಾದಿಯಿಲ್ಲದ ತತ್ವವುಂ ತಿಳಿದು ನೋಡಲು, ನೀನೇ ಸ್ವಯಂ ಜ್ಯೋತಿ ಪ್ರಕಾಶನೆಂದಱಿಯಲು
> ನಿನಗೆ ನೀನೇ ಗುರುವಲ್ಲದೆ ನಿನ್ನಿಂದಧಿಕವಪ್ಪ ಗುರು ಉಂಟೆ ? ಇದು ಕಾರಣ, ಗೊಗೇಶ್ವರನೆಂಬ ಲಿಂಗವು ತಾನೆ ಎಂಬುದನು
> ತನ್ನಿಂದ ತಾನೆ ಅಱಿಯಬೇಕು ನೋಡಾ !

'ತನ್ನ ತಾನಱಿದವಂಗೆ ಅರಿವೆ ಗುರು' ಎಂಬುದು ಅಲ್ಲಮನ ಮೂಲ ಮಂತ್ರ. ಪ್ರತಿಯೊಬ್ಬ ಸಾಧಕನಲ್ಲಿಯೂ ಮೊದಲು ಆ ಭಾವವನ್ನು ಹುಟ್ಟು ಹಾಕುತ್ತಾನೆ, ಅಲ್ಲಮ. ಅಂತೆಯೇ ಮುಕ್ತಾಯಕ್ಕ ತನ್ನನ್ನು ತಾನು ಅರಿಯುವಂತೆ, ನಂಬುವಂತೆ ಮಾಡುತ್ತಾನೆ. ಕೊನೆಗೆ ಸಫಲನೂ ಆಗುತ್ತಾನೆ. ಅಲ್ಲಮನೊಡನೆ ಸಮರ್ಥವಾಗಿ ವಾದಿಸಿ ಕೊನೆಗೆ ಅವನ ನಿಲುವಿಗೆ ಮುಕ್ತಾಯಕ್ಕ ತಲೆ ಬಾಗುತ್ತಾಳೆ :

> ಅಹುದಹುದು ಶಿವಶರಣರ ಮಹಿಮೆ ಆರಿಗೆ ಕಾಣಬಹುದು ? ಕಬ್ಬುನ ಉಂಡ ನೀರಿನಂತೆ, ಕಬ್ಬಿಸಿಲುಂಡ ಅರಿಸಿನದಂತೆ,
> ಉರಿಯೊಳಡಗಿದ ಕರ್ಪುರದಂತೆ, ಬಯಲಸಪ್ಪಿದ ವಾಯುವಿನಂತೆ ಇಪ್ಪ ನಿಲುವು; ನುಡಿದು ಹೇಳಿಹೆನೆಂಬ ಮಾತಿಂಗೆ ಅಳವಡುವುದೆ?
> ಅಱಿವಡೆ ಮತಿಯಿಲ್ಲ, ನೆನೆವಡೆ ಮನವಿಲ್ಲ. ಎನ್ನ ಅಜಗಣ್ಣ ತಂದೆಯನೊಳಗೊಂಡಿಪ್ಪ ನಿಮ್ಮ ಮಹಿಮೆಗೆ ನಮೋ ನಮೋ ಎನುತ್ತಿದ್ದೆನು.

ಇಲ್ಲಿ ಮುಕ್ತಾಯಕ್ಕ ಸೋತಳು, ಅಲ್ಲಮ ಗೆದ್ದ ಎಂಬ ಮಾತಿಗೆ ಅವಕಾಶವೇ ಇಲ್ಲ. ಎರಡು ಹಿರಿಯ ಹೃದಯಗಳು ಮನ ದೆರೆದು ಮಾತನಾಡಿವೆ. ಅಂತೆಯೇ ಅಲ್ಲಿ ಏನೆಲ್ಲವನ್ನೂ ಕೂಡ ನಾವು ಕಂಡುಕೊಳ್ಳಬಹುದಾಗಿದೆ. ಸಾಮಾನ್ಯಳಂತೆ ಇದ್ದುಕೊಂಡೇ ಅಲ್ಲಮನನ್ನು ಸಮರ್ಥವಾಗಿ ಎದುರಿಸಿದ್ದು ಮುಕ್ತಾಯಕ್ಕನ ಹೆಗ್ಗಳಿಕೆ. ಅಲ್ಲಮ ಶೂನ್ಯಸಂಪಾದನೆಯ ಪೀಠಾಧೀಶ, ನಿಜ, ಆದರೆ ಯಾರೆಲ್ಲ ಕೂಡ ಅವನನ್ನು ಪ್ರಶ್ನಿಸಬಹುದಾಗಿತ್ತು ಎಂಬುದು ಅವನ ಅಗ್ಗಳಿಕೆ.

ಆರಂಭದಲ್ಲಿ ಮುಕ್ತಾಯಕ್ಕ ತನ್ನ ಸ್ಥಿತಿಯನ್ನು 'ಅಗ್ನಿ ಕರಗಿ ಕರ್ಪುರ ಉಳಿದುದ'ಕ್ಕೆ ಹೋಲಿಸಿಕೊಂಡಿದ್ದಳು. ಆದರೆ ಕೊನೆಗೆ 'ಉರಿಯುಂಡ ಕರ್ಪುರ'ವಾಗುತ್ತಾಳೆ. ಆ ಸ್ಥಿತಿಯ ನಂತರ ಮಾತಿಗೆ ಅವಕಾಶವೇ ಇಲ್ಲ. 'ಶಬ್ದ ಮುಗ್ಧ'ಳಾಗಿ ಅಜಗಣ್ಣ ತಂದೆಯಲ್ಲಿ ಬೆರೆಯುತ್ತಾಳೆ.

> ಘನಮಹಿಮ ಶರಣರ ಸಂಗದಿಂದ ಘನಕ್ಕೆ ಘನ ವೇದ್ಯವಾದ ಬಳಿಕ ಅಱಿಯಲಿಲ್ಲ, ಮಱೆಯಲಿಲ್ಲ ; ಕೂಡಲಿಲ್ಲ, ಅಗಲಲಿಲ್ಲ ;
> ಮನ ಮೇರೆದಪ್ಪಿ ನಿರವಯಲಾದ ಸುಖವ ಶೂನ್ಯ ನಿಶ್ಶೂನ್ಯವೆಂದು ನುಡಿಯಲುಂಟೆ ?
> ಶಬ್ದ ಮುಗ್ಧಳಾಗಿ ಎನ್ನ ಅಜಗಣ್ಣ ತಂದೆಯ ಬೆರಸಿದ ಬಳಿಕ ಉರಿಯುಂಡ ಕರ್ಪುರದಂತಾದೆನಯ್ಯ.

ಮುಕ್ತಾಯಕ್ಕ ಬಾಳಿ ಬದುಕಿದ್ದು ಹನ್ನೆರಡನೆಯ ಶತಮಾನದಲ್ಲಿ ಅದಕ್ಕೆ ಸಂಶಯವೇ ಬೇಕಿಲ್ಲ. ಆದರೆ ಆಕೆಯ ಬದುಕಿನ ಸಕೃದ್ದರ್ಶನವಾಗುವುದು, ಹದಿನೈದನೆಯ ಶತಮಾನದ ಶಿವಗಣ ಪ್ರಸಾದಿ ಮಹಾದೇವಯ್ಯ ಸಂಯೋಜಿಸಿರುವ 'ಶೂನ್ಯ ಸಂಪಾದನೆ'ಯಲ್ಲಿ. ಅನಂತರ ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಆಕೆಯ ಪಾತ್ರ ಕಾವ್ಯಾತ್ಮಕವಾಗಿ ಅರಳಿದೆ. ಎರಡರ ಕೇಂದ್ರ ಪಾತ್ರವೂ ಪ್ರಭುದೇವನೇ. ಆದರೆ ಮುಕ್ತಾಯಕ್ಕನ ಪಾತ್ರಕ್ಕೆ ಸಂಬಂಧಿಸಿದಂತೆ 'ಪ್ರಭುಲಿಂಗಲೀಲೆ'ಗಿಂತ ಶೂನ್ಯಸಂಪಾದನೆಯೇ ಹೆಚ್ಚು ಪರಿಗ್ರಾಹ್ಯವಾಗಿದೆ. 'ಪ್ರಭುಲಿಂಗಲೀಲೆ'ಯಲ್ಲಿ 'ಗುರು ಗುಹೇಶ್ವರನ ಲಿಂಗಲೀಲೆ'ಯೇ ಪ್ರಧಾನವಾಗಿ ಉಳಿದ ಪಾತ್ರಗಳು 'ವಿನುತ ನಿತ್ಯಾನಂದ ನಿರ್ಮಳ'ರಾಗುವಲ್ಲಿ ತೃಪ್ತರಾಗುತ್ತಾರೆ. ಆದರೆ 'ಶೂನ್ಯ ಸಂಪಾದನೆ'ಯಲ್ಲಿ ಅಲ್ಲಮನ ಪಾತ್ರವೂ ಸಹ ಸಾಕಷ್ಟು ಸಮರ್ಥವಾದ ಚರ್ಚೆಯನ್ನು ಎದುರಿಸಬೇಕಾಗಿ ಬರುತ್ತದೆ. ಈ ದೃಷ್ಟಿಯಿಂದ 'ಮುಕ್ತಾಯಕ್ಕಗಳ ಸಂಪಾದನೆ' ಗಮನಾರ್ಹ.

ಶೂನ್ಯಶಂಪಾದನೆ ಹಾಗೂ ಪ್ರಭುಲಿಂಗಲೀಲೆಯನ್ನು ಬಿಟ್ಟರೆ ಯಳಂದೂರು ಹರೀಶ್ವರನ (ಕ್ರಿ.ಶ. ೧೬೦೬) 'ಪ್ರಭು ದೇವರ ಪುರಾಣ', ಶಾಂತಲಿಂಗದೇಶಿಕನ (ಕ್ರಿ.ಶ. ೧೬೭೨) 'ಭೈರವೇಶ್ವರ ಕಥಾಸೂತ್ರ ರತ್ನಾಕರ', ಹಾಗೂ ಸಿದ್ಧನಂಜೇಶನ (ಕ್ರಿ.ಶ. ೧೬೫೦) 'ಗುರುರಾಜ ಚಾರಿತ್ರ'ದಲ್ಲಿ ಮುಕ್ತಾಯಕ್ಕನ ಪ್ರಸ್ತಾಪವಿದೆ. ಅದು ಕೇವಲ ಪ್ರಸ್ತಾಪ ಮಾತ್ರ. ಆಕೆಯ ಬಗೆಗೆ ಯಾವ ಹೆಚ್ಚಿನ ವಿವರಗಳೂ ದೊರೆಯುವುದಿಲ್ಲ. ಇದಲ್ಲದೆ ಈ ಎಲ್ಲ ಕೃತಿಗಳು ಶೂನ್ಯಸಂಪಾದನೆಯ ನಂತರದ ಕೃತಿಗಳೇ ಆಗಿವೆ. (ಇಲ್ಲಿ ಶಿವಗಣ ಪ್ರಸಾದಿ ಮಹಾದೇವಯ್ಯನ 'ಶೂನ್ಯಸಂಪಾದನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಈ ಮಾತನ್ನು ಹೇಳಿದ್ದೇನೆ. ಉಳಿದ 'ಶೂನ್ಯಸಂಪಾದನೆ'ಕಾರರಾದ ಹಲಗೆಯಾರ್ಯ, ಗುಮ್ಮಳಾಪುರದ ಸಿದ್ಧಲಿಂಗ ಹಾಗೂ ಗೂಳೂರು ಸಿದ್ಧವೀರಣ್ಣೊಡೆಯ ಇವರಲ್ಲಿಯೂ ಮುಕ್ತಾಯಕ್ಕನ ಪ್ರಸಂಗ ಹೆಚ್ಚು ಕಡಿಮೆ ಶಿವಗಣಪ್ರಸಾದಿಯಲ್ಲಿರುವಂತೆಯೇ ಇದೆ.)

ಮುಕ್ತಾಯಕ್ಕನ ಪ್ರಸ್ತಾಪ ಸಾಮಾನ್ಯವಾಗಿ ಅಲ್ಲಮಪ್ರಭುವಿನ ಚರಿತ್ರೆಗೆ ಸಂಬಂಧ ಪಟ್ಟಂತೆಯೇ ಕಂಡು ಬರುತ್ತದೆ. ಹರಿಹರ 'ಪ್ರಭುದೇವರ ರಗಳೆ'ಯನ್ನು ಬರೆದಿದ್ದರೂ ಸಹ ಅಲ್ಲಿ ಮುಕ್ತಾಯಕ್ಕನ ಪ್ರಸಂಗ ಕೈಬಿಟ್ಟು ಹೋಗಿದೆ. ಇದಕ್ಕೇನು ಕಾರಣವೋ ಗೊತ್ತಾಗಲಿಲ್ಲ. ಪ್ರಾಯಶಃ ಮುಕ್ತಾಯಕ್ಕ ಅಲ್ಲಮನ ಬದುಕಿಗೆ ಮೊದಲ ಹಂತದಲ್ಲಿ ಬಂದು ಹೋದವಳಾದ್ದರಿಂದ ಆಕೆಯ ವಿಷಯ ಹರಿಹರನ ಕಾಲಕ್ಕೆ ಪ್ರಚಲಿಕದಲ್ಲಿಲ್ಲದೆ ಹೋಗಿರಬಹುದು. ಮತ್ತು ಹರಿಹರನ ಗಮನಕ್ಕೆ ಆಕೆಯ ವಚನಗಳೂ ಸಿಕ್ಕದೆ ಹೋಗಿರಬಹುದು. ಇದಕ್ಕೆ ಪೂರಕವಾಗಿ ವಚನಕಾರರಲ್ಲಿ ಬಹಳಷ್ಟು ಜನ ಐಕ್ಯಸ್ಥಳಕ್ಕೆ ಅಜಗಣ್ಣನನ್ನು ಹೆಸರಿಸಿದ್ದರೂ ಸಹ ಮುಕ್ತಾಯಕ್ಕನ ಹೆಸರೆತ್ತದೆ ಹೋಗಿದ್ದಾರೆ. ಆಯ್ದಕ್ಕಿ ಲಕ್ಕಮ್ಮನ ಒಂದು ವಚನ ಇದಕ್ಕೆ ಅಪವಾದವಾಗಿದೆ. 'ಏಳುನೂರೆ

ಪ್ಪತ್ತು ಅಮರಗಣಂಗಳ ಪ್ರಸಾದವ ಕೊಂಡು ಬದುಕಿದೆನಯ್ಯ' ಎಂದು ಹೇಳುತ್ತಾ ಆಕೆ 'ಮುಕ್ತಾಯಕ್ಕಗಳ ಪ್ರಸಾದವ ಕೊಂಡು ಎನ್ನ ಬಹಿರಂಗ ಶುದ್ಧವಾಯಿತ್ತಯ್ಯ' ಎಂದು ಮುಕ್ತಾಯಕ್ಕನ ಹೆಸರನ್ನು ನೆನೆದಿದ್ದಾಳೆ.

ಇದಲ್ಲದೆ 'ಶಿವಶರಣೆಯರ ವಚನಗಳು' ಸಂಕಲನದಲ್ಲಿ ಪ್ರಕಟವಾಗಿರುವ ಮುಕ್ತಾಯಕ್ಕನ ಒಂದು ವಚನದಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ, ಮರುಳ ಶಂಕರದೇವ ಹಾಗೂ ಮಡಿವಾಳಯ್ಯ ಇವರ ಪ್ರಸ್ತಾಪವಿದೆ.

ಎನ್ನ ಭಾವಕ್ಕೆ ಗುರುವಾದನಯ್ಯ ಬಸವಣ್ಣನು. ಎನ್ನ ನೋಟಕ್ಕೆ ಲಿಂಗವಾದನಯ್ಯ ಚೆನ್ನ ಬಸವಣ್ಣನು.
ಎನ್ನ ಜ್ಞಾನಕ್ಕೆ ಜಂಗಮವಾದನಯ್ಯ ಪ್ರಭುದೇವರು. ಎನ್ನ ಪರಿಣಾಮಕ್ಕೆ ಪ್ರಸಾದವಾದನಯ್ಯ ಮರುಳಶಂಕರ ದೇವರು.
ಎನ್ನ ಹೃದಯಕ್ಕೆ ಮಂತ್ರವಾದನಯ್ಯ ಮಡಿವಾಳಯ್ಯನು. ಇಂತೀ ಐವರ ಪ್ರಸಾದವ ಕೊಂಡು ಬದುಕಿದೆನಯ್ಯ ಅಜಗಣ್ಣ ತಂದೆ.

ಆದರೆ ಮುಕ್ತಾಯಕ್ಕನ ಲಭ್ಯವಾದ ಬದುಕಿನ ವಿವರಗಳನ್ನು ಗಮನಿಸಿದರೆ ಪ್ರಭುದೇವರನ್ನು ಹೊರತು ಪಡಿಸಿ ಉಳಿದ ಬಸವಾದಿಗಳ ಪರಿಚಯ ಆಕೆಗೆ ಇತ್ತು ಎಂಬುದಕ್ಕೆ ಆಧಾರಗಳಿಲ್ಲ. ಶೂನ್ಯ ಸಂಪಾದನೆಗಳಲ್ಲಿಯೂ ಈ ಬಗ್ಗೆ ಪ್ರಸ್ತಾಪವಿಲ್ಲ. ಇದಲ್ಲದೆ ಈ ವಚನ ಹಾಗೂ ಮೇಲಿನ ಆಯ್ದಕ್ಕಿ ಲಕ್ಕಮ್ಮನ ವಚನಕ್ಕೆ ಆಕರ ಒಂದೇ. ಎಳಮಲೆ ಗುರುಶಾಂತದೇವರ 'ಮಿಶ್ರಸ್ತೋತ್ರದ ವಚನಗಳು' ಇವು ನಿಜಕ್ಕೂ ಮೂಲ ವಚನಗಳೇ ಅಥವಾ ಪ್ರಕ್ಷಿಪ್ತವೇ ಎಂದು ಪ್ರಶ್ನೆಗೆ ಖಚಿತ ಉತ್ತರದ ಅವಶ್ಯಕತೆ ಇದೆ.

ಇವನ್ನೆಲ್ಲ ಹೊರತು ಪಡಿಸಿದರೆ, 'ಶೂನ್ಯ ಸಂಪಾದನೆ'ಯಲ್ಲಿರುವ ಆಕೆಯ ವಚನಗಳೇ ಮುಕ್ತಾಯಕ್ಕನ ಬದುಕಿನ ವಿವರಗಳಿಗೆ ಒಂದು ದೊಡ್ಡ ಆಕರ. ಅಲ್ಲಿ ಆಕೆಯ ಹಾಗೂ ಆಕೆಯ ಅಣ್ಣ ಅಜಗಣ್ಣನ ಬದುಕಿನ ಸೂಕ್ಷ್ಮ ಹೊಳಹುಗಳಿವೆ. ಇಲ್ಲಿಯೂ ಕೂಡ ಒಂದು ಕೌತುಕದ ಪ್ರಶ್ನೆಗೆ ಅವಕಾಶವಿದೆ. ಮುಕ್ತಾಯಕ್ಕನ ವಚನಗಳಿಗೆ ಮೊದಲ ಆಕರ ಶಿವಗಣ ಪ್ರಸಾದಿ ಮಹದೇವಯ್ಯನ 'ಶೂನ್ಯ ಸಂಪಾದನೆ', ಉಳಿದ ಆಕರಗಳು ಬಹುಮಟ್ಟಿಗೆ ಉಳಿದ ಶೂನ್ಯ ಸಂಪಾದನೆಗಳು ಹಾಗೂ ಪ್ರಭುಲಿಂಗಲೀಲೆ. ಹನ್ನೆರಡನೆಯ ಶತಮಾನದಲ್ಲಿ ರಚಿತವಾದ ಮುಕ್ತಾಯಕ್ಕನ ವಚನಗಳು ಮೂರು ಶತಮಾನಗಳ ಕಾಲ ಅಜ್ಞಾತವಾಗಿದ್ದು 'ಶೂನ್ಯ ಸಂಪಾದನೆ'ಯ ಏಕ ಮುಖ ಪ್ರವಾಹದ ಮೂಲಕ ಹೊರಹೊಮ್ಮಿದ್ದು ನಿಜಕ್ಕೂ ಕೌತುಕವೇ. ಆದರೆ ಸರಿಯಾದ ಪ್ರವಾಹದ ಮೂಲಕ ಹರಿದು ಬಂದಿವೆಯಲ್ಲ ಎನ್ನುವುದು ನಿಜಕ್ಕೂ ಸಂತೋಷದ ವಿಷಯ.

ನಮಗೆ ಈಗಾಗಲೇ ಲಭ್ಯ ಆಕರಗಳ ಮೂಲಕ ಗೊತ್ತಾಗಿರುವಂತೆ ಮುಕ್ತಾಯಕ್ಕ ಅಜಗಣ್ಣನ ಒಡಹುಟ್ಟಿದ ತಂಗಿ. ಲಕ್ಕುಂಡಿ ಅಜಗಣ್ಣ–ಮುಕ್ತಾಯಕ್ಕಗಳು ಹುಟ್ಟಿದ ಊರು. ಅಣ್ಣ–ತಂಗಿಯರು ತುಂಬ ಅನ್ಯೋನ್ಯವಾಗಿಯೇ ಆಡಿಬೆಳೆದವರು. ಅಂತೆಯೇ ಮುಕ್ತಾಯಕ್ಕ ಮದುವೆಯಾಗಿ ಮಸಳೀಕಲ್ಲು ಸೇರಿದರು. ಅಣ್ಣನಿಗಾಗಿಯೇ ಆಕೆಯ ಹಂಬಲ.

ಅಜಗಣ್ಣ ಗುಪ್ತಭಕ್ತ. ಆತನಿಗೆ ದಿನನಿತ್ಯದ ವ್ಯಾವಹಾರಿಕ ಚಟುಲತೆಗಿಂತ, ಶಿವನನ್ನು ನೆನೆಯುವದರಲ್ಲಿಯೇ ಹೆಚ್ಚಿನ ಆಸಕ್ತಿ. ಮೊದಮೊದಲು ಪಂಚಾಕ್ಷರಿ ಮಂತ್ರವನ್ನು ಬಹಿರಂಗವಾಗಿ ಹೇಳಿಕೊಳ್ಳುತ್ತಿದ್ದವನು, ಸರ್ಪದ ಫಣಾಮಣಿಯ ರಕ್ಷಣೆಯನ್ನು ಕಂಡು ತಾನೂ ಇಷ್ಟಲಿಂಗವನ್ನು ತನ್ನ ಅಣಲೊಳಗೆ ಅಡಗಿಸಿಕೊಂಡ. ಇದಲ್ಲದೆ ತನ್ನೆಲ್ಲ ಭಕ್ತಿಯ ವ್ಯವಹಾರವನ್ನು ಅಂತರಂಗಿಕವಾಗಿಸಿಕೊಂಡ.

ಅಜಗಣ್ಣನ ರೀತಿ–ನೀತಿ ಅವನಿಗೆ ಹುಚ್ಚನೆಂಬ ಬಿರುದನ್ನು ಗಳಿಸಿಕೊಟ್ಟರೆ, ಮುಕ್ತಾಯಕ್ಕ ಮಾತ್ರ ಅವನ ವ್ಯಕ್ತಿತ್ವವನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಾಳೆ. ಹೀಗಾದ್ದರಿಂದಲೇ ಸಂಜ್ಞೆಯಿಂದ ಆತನ ಜೀವನ್ಮರಣಗಳನ್ನು ಅರಿತುಕೊಳ್ಳಲು ಆಕೆಗೆ ಸಾಧ್ಯವಾಗುತ್ತದೆ. ಬಾಗಿಲವಾಡಕ್ಕೆ ತಲೆತಾಗಿ ಅಜಗಣ್ಣ ಸತ್ತರೆ, ಮುಕ್ತಾಯಕ್ಕ ಕಡೆವ ಮೊಸರು ಕಲ್ಲಾಗುತ್ತದೆ, ತೋರ ಮುಡಿ ಬಿಚ್ಚುತ್ತದೆ, ಉಟ್ಟ ಸೀರೆಯ ನಿರಿ ಕಳಚುತ್ತದೆ. ಇಲ್ಲಿ ಅಜಗಣ್ಣನ ಅಗಲುವಿಕೆಯಿಂದ ಮುಕ್ತಾಯಕ್ಕ ತನ್ನ ಸಂಸಾರಿಕ ಬಂಧನಗಳನ್ನು ಕಳಚಿಕೊಂಡಳು ಎನ್ನಬಹುದು. 'ಕಣ್ಣರಿಯದಿದ್ದರೂ ಕರುಳರಿಯುವುದಂತೆ' ಆದರೆ ಮುಕ್ತಾಯಕ್ಕನ ಇಡೀ ದೇಹವೇ ಅಜಗಣ್ಣನ ಅಗಲುವಿಕೆಯನ್ನು ಅರಿತುಕೊಳ್ಳುತ್ತದೆ. ಅಂತೆಯೇ ಆಕೆಯ ಆಲಾಪದ ಸಾಂತ್ವನಕ್ಕಾಗಿ ಪ್ರಭುವೇ ಬರಬೇಕಾಗುತ್ತದೆ.

ಇದೆಲ್ಲ ಕೈಯಳತೆಗೆ ಸಿಗದೇ ಹೋದ ಅಜಗಣ್ಣ–ಮುಕ್ತಾಯಕ್ಕರ ಬದುಕನ್ನು ಕುರಿತು ರೂಪಿಸಿರುವ ಜನರ ಮನೋಭಿತ್ತಿಚಿತ್ರ. ಇಲ್ಲಿ ಎಲ್ಲವೂ ನೇರವಾಗಿ ನಿಜವಲ್ಲದೆ ಹೋದರೂ ಸಾಂಕೇತಿಕವಾಗಿಯಾದರೂ ಮೂಲ ವ್ಯಕ್ತಿಯನ್ನು ಗುರುತಿಸುವ ಪ್ರಯತ್ನ ನಡೆದಿರುವುದನ್ನು ಕಂಡುಕೊಳ್ಳಬಹುದಾಗಿದೆ. ಅಜಗಣ್ಣ-ಮುಕ್ತಾಯಕ್ಕರು ಚಾರಿತ್ರಿಕ ವ್ಯಕ್ತಿಗಳಾಗಿದ್ದರೂ ಸಹ ದಂತ ಕಥೆಯ ವಸ್ತುಗಳಾಗಿ ಹೋಗಿದ್ದಾರೆ. ಆದರೆ ಮುಕ್ತಾಯಕ್ಕನ ವಚನಗಳು ಅವರಿಬ್ಬರನ್ನೂ ಸದಾ ಜೀವಂತ ವ್ಯಕ್ತಿಗಳನ್ನಾಗಿ ಇರಿಸಿವೆ.

**ಗ್ರಂಥಋಣ :**


೧. ಪ್ರಭುದೇವರ ಶೂನ್ಯಸಂಪಾದನೆ (ಸಂ. ೧) : (ಸಂ)-ಡಾ॥ ಎಲ್. ಬಸವರಾಜು
೨. ಶಿವಶರಣೆಯರ ವಚನಗಳು : (ಸಂ) ಡಾ॥ ಆರ್. ಸಿ. ಹಿರೇಮಠ
೩. ಶಿವಶರಣೆಯರ ಚರಿತ್ರೆಗಳು : (ಸಂ) ಡಾ॥ ರಾ. ಬ. ಫ. ಗು ಹಳಕಟ್ಟಿ
೪. ಶರಣ ಚರಿತಾಮೃತ : ಸಿದ್ಧಯ್ಯಪುರಾಣಿಕ
೫. ಶೂನ್ಯಸಂಪಾದನೆಯನ್ನು ಕುರಿತು : ಡಾ॥ ಎಂ. ಚಿದಾನಂದಮೂರ್ತಿ
೬. ವೀರಶೈವ ಸಾಹಿತ್ಯಸಮೀಕ್ಷೆ : (ಸಂ) ಸದಾನಂದ ಕನವಳ್ಳಿ ಮತ್ತು ಚನ್ನಪ್ಪಕೆರಿ ಮನಿ
೭. ಸಂಪಾದನೆಯ ಸೊಂಪು (ಎಸಳೊಂದು) : ಡಾ॥ ಶ್ರೀ ಜ. ಚ. ನಿ.
೮. ಪ್ರಭುಲಿಂಗಲೀಲೆ : (ಸಂ) ಶಿ. ಶಿ. ಬಸವನಾಳ.

ಹಾಗೂ ಮುಕ್ತಾಯಕ್ಕನನ್ನು ಕುರಿತು ಇತರ ಲೇಖನಗಳು.


# ಆಯ್ದಕ್ಕಿ ಲಕ್ಕಮ್ಮ

—ಬಿ. ಆರ್. ಬಸವರಾಜ

ಕಳೆದ ಕೆಲವೇ ವರ್ಷಗಳ ಹಿಂದೆ ವಿಶ್ವದಾದ್ಯಂತ ಅಂತರರಾಷ್ಟ್ರೀಯ ಮಹಿಳಾ ವರ್ಷವನ್ನು ಆಚರಿಸಿ ಎಲ್ಲರೂ ಮಹಿಳೆಯರ ಹಿತಚಿಂತನೆ ಮಾಡಿದರು. ಮನುಷ್ಯ ನಾಗರಿಕನಾಗಿ ಸ್ಪುಟ್‌ನಿಕ್ ಯುಗದಲ್ಲಿ ಸಾಗುತ್ತಿದ್ದರೂ ಹೆಣ್ಣಿನ ಸ್ಥಾನ ಮಾನ, ಸುಖ ದುಃಖ, ಆಶೆ ಆಶೋತ್ತರ ಇವುಗಳ ಬಗೆಗೆ ಗಮನ ಸೆಳೆಯುವ ಕಾಳಜಿ ತೋರುವ ಪರಿಸ್ಥಿತಿ ಈಗಲೂ ಇದೆ. ಇತಿಹಾಸದಲ್ಲಿ ಹಿಂದೆ ಹಿಂದಕ್ಕೆ ಹೋದಂತೆಲ್ಲ ಹೆಣ್ಣಿನ ಸ್ಥಾನ ಮಾನಗಳು ತೀರಾ ಶೋಚನೀಯ ಎನ್ನಿಸಿರುವುದು ಸಹಜವೇ.

ಆದರೆ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಒಂದು ಮಾನವೀಯ ಕ್ರಾಂತಿ ಮಾನವ–ಮಾನವರಲ್ಲಿ ಇದ್ದ ತಾರತಮ್ಯಗಳನ್ನು ಹೋಗಲಾಡಿಸಲು ಶ್ರಮಿಸಿದ್ದೇ ಅಲ್ಲದೆ ಗಂಡಿನ ಕೇವಲ ಒಂದು ಚರಾಸ್ತಿಯಂತಿದ್ದ ಹೆಣ್ಣಿನ ಸ್ಥಾನಮಾನವನ್ನು ಮೇಲೆತ್ತುವ ಮಹಾ ಕಾರ್ಯವು ನಡೆಯಿತು. ಹೆಣ್ಣನ್ನು ಮಾಯೆಯೆಂದು ಭೋಗದ ವಸ್ತುವೆಂದು, ಅಸಹಾಯಕಳೆಂದು ಕೀಳಾಗಿ ಕಾಣುವ ಸಂಕುಚಿತ ದೃಷ್ಟಿ ತೊಲಗಿ ಅವಳಲ್ಲಿ ಮಹತ್ವವನ್ನು ಗುರುತಿಸುವ, ಪಾವಿತ್ರ್ಯವನ್ನು ಮನ್ನಿಸುವ, ಪುರುಷನಷ್ಟೇ ಸಮರ್ಥಳೆಂದು ಗಣಿಸುವ 'ಹೊರಗೆ ಭಿನ್ನವಾಗಿ ಕಂಡರೂ, ಒಳಗಿರುವ ಆತ್ಮ ಒಂದೇ' ಎಂದು ಸಾರಿ ಹೆಣ್ಣಿನ ಬಗ್ಗೆ ಜನರಲ್ಲಿದ್ದ ಕೀಳು ಭಾವನೆಯನ್ನು ಹೋಗಲಾಡಿಸಿದರು–ಶರಣರು ತಮ್ಮ ನಡೆ ನುಡಿಗಳಿಂದ.

ಬಸವಣ್ಣನವರ ಈ ಕ್ರಾಂತ ದೃಷ್ಟಿಯೆಂಬ ಪರುಷವನ್ನು ಸೋಕಿದ ಅನೇಕ ಸ್ತ್ರೀಯರು ಹೊನ್ನಿನ ವ್ಯಕ್ತಿತ್ವದಿಂದ ಕಳೆಗೂಡಿ ಬೆಳಗಿದರು. ಜಾತಿ, ಮತ, ವಯಸ್ಸು, ಹಣ, ಸ್ಥಾನಮಾನ ಮೊದಲಾದವುಗಳಲ್ಲಿ ಯಾವ ತಾರತಮ್ಯವೂ ಇಲ್ಲದೆ ಮರ್ತ್ಯವನ್ನು ಮೆಟ್ಟಿ ಮಹದತ್ತ ಬೆಳೆದು ನಿಂತ ಮಂದಾರವಾದರು.

ಹೆಣ್ಣು ಪುರುಷನಿಗಿಂತ ಕೀಳಲ್ಲ, ತನ್ನ ಶುದ್ಧ ಚರಿತ್ರೆಯ, ಶ್ರದ್ಧಾಸಕ್ತಿಯ ಆಚರಣೆಗಳಿಂದ ಪುರುಷನನ್ನೂ ಮೀರಿ ನಿಲ್ಲಬಲ್ಲ ಶಕ್ತಿ ಆಕೆಯಲ್ಲಿದೆ ಎಂಬುದಕ್ಕೆ ಬಸವಯುಗದ ಅನೇಕ ಶರಣೆಯರ ಪಾವನ ಚರಿತ್ರೆಗಳು ಸಾಕ್ಷಿಯನ್ನು ನುಡಿಯುತ್ತಿವೆ. 'ಸತಿ ಪತಿಗಳು ಒಂದಾದ ಭಕ್ತಿ ಹಿತವಪ್ಪುವುದು ಶಿವಂಗೆ' ಎಂಬ ದೇವರ ದಾಸಿಮಯ್ಯನ ವಚನದಂತೆ ಗಂಡನ ಕಾಯಕದೀವಿಗೆಯಲ್ಲಿ ಬತ್ತಿಯಾಗಿ ಉರಿದವರು, ಎಣ್ಣೆಯಾಗಿ ತೇದವರು, ಪ್ರಕಾಶವಾಗಿ ಹೊಮ್ಮಿದವರು ಅನೇಕ ಸಾಧ್ವಿಯರು ಇದ್ದಾರೆ. ನುಡಿಯಲ್ಲಿ ಎಚ್ಚತ್ತು, ನಡೆಯಲ್ಲಿ ಎಡವಿದ ತಮ್ಮ ಪತಿಯರನ್ನು ಹೆಣ್ಣು ಸರಿದಾರಿಗೆ ತಂದ ಗುರುಸ್ತ್ರೀಯರಿದ್ದಾರೆ. ಮಾನವ ಸಹಜ ದೌರ್ಬಲ್ಯಕ್ಕೆ ಸಿಕ್ಕಿ ಅಧಃಪತನದತ್ತ ಸಾಗಬಹುದಾದ ಗಂಡನನ್ನು ಸಕಾಲದಲ್ಲಿ ಎಚ್ಚರಿಸಿ ಮುಕ್ತಿ ಪಥವಿಡಿಸಿದ ಮಾಂಧಾತೆಯರು ಸಾಕಷ್ಟಿದ್ದಾರೆ. ಅಂತಹ ಶರಣೆಯರ ತಿಂಥಿಣಿಯಲ್ಲಿ ನಮಗೆ ಧ್ರುವ ತಾರೆಯಂತೆ ಕಂಗೊಳಿಸುವವಳೇ ಶರಣೆ ಆಯ್ದಕ್ಕಿ ಲಕ್ಕಮ್ಮ. ಆಯ್ದಕ್ಕಿ ಲಕ್ಕಮ್ಮ ಶರಣ ಆಯ್ದಕ್ಕಿ ಮಾರಯ್ಯನ ಧರ್ಮಪತ್ನಿ. ಈಕೆ ವಚನಕಾರ್ತಿಯೂ ಹೌದು. ಇವಳ ವಚನಗಳ ಅಂಕಿತನಾಮ 'ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗ'* ಎಂಬುದಾಗಿದೆ. ಈಕೆಯವೇ ಎಂದು ಹೇಳಬಹುದಾದ ಸುಮಾರು ೨೫ ವಚನಗಳನ್ನು ಡಾ॥ ಆರ್. ಸಿ. ಹಿರೇಮಠರವರು ತಮ್ಮ '೨೭ ಶಿವಶರಣೆಯರ ರಗಳೆಗಳು' ಭಾಗ ೩ರಲ್ಲಿ ಸಂಪಾದಿಸಿದ್ದಾರೆ.

ಈ ದಂಪತಿಗಳ ಜನ್ಮಸ್ಥಳ, ತಂದೆ–ತಾಯಿಗಳು ಮುಂತಾದ ವಿಷಯವು ಖಚಿತವಾಗಿ ತಿಳಿದು ಬರುವುದಿಲ್ಲ. ಇವರು

* ಶರಣ ಚರಿತ ಮಾನಸದಲ್ಲಿ 'ಅಮರೇಶ್ವರ' ಎಂದಿದೆ.

'ರಾಯಚೂರು ಜಿಲ್ಲೆಯ ಅಮರೇಶ್ವರದಲ್ಲಿ ವಾಸವಾಗಿದ್ದರೆಂದು ಕ್ರಮೇಣ ಕಲ್ಯಾಣದಲ್ಲಿ ಬಂದು ನೆಲಸಿದರೆಂದು',[1] ತಿಳಿದು ಬರುತ್ತದೆ. ಇಲ್ಲಿ ಈ ದಂಪತಿಗಳು ತಮ್ಮ ಜೀವನವನ್ನು ಭಕ್ತಿ ಪಥದಲ್ಲಿ ಜಂಗಮ ದಾಸೋಹದಲ್ಲಿ ನಡೆಸುತ್ತಿದ್ದ ರೀತಿ ಅನು ಕರಣಾರ್ಹವಾದುದು. ಪತಿ ಮಾರಯ್ಯ ಕಲ್ಯಾಣದ ಪೇಟೆ ಬೀದಿಯ ಅಂಗಡಿಗಳ ಮುಂದೆ ಬಿದ್ದಿದ್ದ, ಮನೆಗಳ ಮುಂದೆ ಬಿದ್ದಿದ್ದ ಅಕ್ಕಿಯನ್ನು ಆಯ್ದುಕೊಂಡು ಬರುವುದು. ಆ ದಿನಕ್ಕೆ ತಮಗಿಬ್ಬರಿಗೆ, ಜಂಗಮ ಸೇವೆಗೆ ಬೇಕಾದಷ್ಟು ಮಾತ್ರ ಅಕ್ಕಿಯನ್ನು ಆಯ್ದು ಒಯ್ಯುತ್ತಿದುದು ಮಾರಯ್ಯನ ಕಾಯಕವಾಗಿತ್ತು. ಅದನ್ನು ಸತಿ ಲಕ್ಕಮ್ಮನು ಭಕ್ತಿಯಿಂದ ಬೇಯಿಸಿ ಮೊದಲು ಜಂಗಮ ರಿಗೆ ಉಣ ಬಡಿಸಿ, ನಂತರ ದಂಪತಿಗಳು ಉಳಿದುದನ್ನು ಸಂತೋಷದಿಂದ ಪ್ರಸಾದೋಪಾದಿಯಲ್ಲಿ ಆರೋಗಿಸುತ್ತಿದ್ದರು. ಈ ರೀತಿ ನಡೆಸುತ್ತಿದ್ದ ಜೀವನವನ್ನು ಕಂಡು ಬಸವಣ್ಣನವರು ಒಮ್ಮೆ ಅವರಿಗೆ ಸಹಾಯ ಮಾಡಿದುದಕ್ಕಾಗಿ ಅವರು ಶರಣೆ ಲಕ್ಕಮ್ಮ ನಿಂದ ಭಕ್ತಿಯ ಮಹಿಮೆ ಎಂತಹುದು ಎಂದು ಅರಿಯುವಂತಾಯಿತು, ಅದು ಆದದ್ದು ಹೀಗೆ :

ಒಂದು ದಿನ ಎಂದಿನಂತೆ ಮಾರಯ್ಯನು ತನ್ನ ಕಾಯಕಕ್ಕೆ ಹೊರಟನು. ಆ ದಿನ ಬಸವಣ್ಣನವರು ಇವನ ಕಷ್ಟವನ್ನು ನೋಡಲಾರದೆ ತನ್ನ ಸತಿಯರಿಗೆ ಹೇಳಿ ಅವರ ಮುಂದೆ ಸ್ವಲ್ಪ ಹೆಚ್ಚಾಗಿಯೇ ಅಕ್ಕಿ ಕಾಳುಗಳನ್ನು ಚೆಲ್ಲಿಸುತ್ತಾರೆ. ಧ್ಯಾನಮಗ್ನ ತೆಯಲ್ಲಿದ್ದ ಮಾರಯ್ಯನೂ ಸಹ ಎಂದಿಗಿಂತ ಹೆಚ್ಚು ಅಕ್ಕಿಯನ್ನು ಕೊಂಡೊಯುತ್ತಾನೆ. ಅದನ್ನು ಕಂಡ ಲಕ್ಕಮ್ಮ ಹೇಳುವ ಮಾತು ನೋಡಿ :

> [2]'ಆಸೆಯೆಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಅಯ್ಯ ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಅಯ್ಯ ?
> ಈಸಕ್ಕಿಯಾಸೆ ನಿಮಗೇಕೆ ? ಈಶ್ವರನೊಪ್ಪ. ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ದೂರ ಮಾರಯ್ಯ'

'ಈಸಕ್ಕಿಯಾಸೆ ನಿಮಗೇಕೆ' ಈ ಮಾತಿನ ಅರ್ಥ ಅಗಾಧವಾದುದು. ಆದರೆ ಮಾರಯ್ಯನು ಸತಿಯನ್ನು ಸಂತೈಸುತ್ತ ಇದು ಬಸವಣ್ಣನವರು ಪ್ರೀತಿಯಿಂದ ನಾವು ಬಡವರೆಂದು, ನಮ್ಮ ಕಷ್ಟವನ್ನು ನೋಡಲಾರದೆ ಕರುಣೆಯಿಂದ ಬೇಕೆಂದೇ ಸುರಿಸಿರುವ ಅಕ್ಕಿಯಿದು ಎಂದು ಹೇಳಲು, ಸ್ವಾಭಿಮಾನಿಯಾದ ಲಕ್ಕಮ್ಮನು ಹೇಳುವುದಾದರೂ ಏನೆಂದು ?

> ಬಡತನವೆಂಬ ಶಬ್ದ ನಿಮ್ಮ ಬಾಯಿಂದ ಬರಬೇಕೆ ಎನ್ನರಸ! ಬಡತನವೆಂದರೇನು? ಅಂಗಕ್ಕ ಬಡತನವಲ್ಲದೆ ಮನಕ್ಕೆ
> ಬಡತನವುಂಟೆ ? ಬೆಟ್ಟ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ ಬಡತನವಿರದಿದ್ದರೆ ಒಡೆಯದೆ? ಘನಶಿವಭಕ್ತರಿಗೆ
> ಬಡತನವಿಲ್ಲ, ಸತ್ಯರಿಗೆ ದುಷ್ಕರ್ಮವಿಲ್ಲ ಎನಗೆ ಮಾರಯ್ಯಪ್ರಿಯ ಅಮಲೇಶ್ವರಲಿಂಗ ಉಳ್ಳನ್ನಕ್ಕ ಆರ ಹಂಗಿಲ್ಲ ಮಾರಯ್ಯ'[3]

ಆದುದರಿಂದ ದಯವಿಟ್ಟು ಈ ಅಕ್ಕಿಯನ್ನು ಅಲ್ಲಿಯೇ ತೆಗೆದುಕೊಂಡು ಹೋಗಿ ಸುರಿದು ಬನ್ನಿ ಎನ್ನುತ್ತಾಳೆ. ಅಷ್ಟಕ್ಕೆ ಬಿಡದೇ ಬಸವಣ್ಣ ಮತ್ತು ಅವರ ಪ್ರಥಮ ಗಣವನ್ನೇ ಭೋಜನಕ್ಕೆ ಆಹ್ವಾನಿಸಿ ಬನ್ನಿ ಎಂದು ಗಂಡನಿಗೆ ಹೇಳುತ್ತಾಳೆ. ತನ್ನ ಸತಿಯಾ ಡಿದ ಮಾತುಗಳನ್ನು ಮಾರಯ್ಯನು ಒಮ್ಮೆ ಯೋಚಿಸುವಂತಾಗುತ್ತದೆ[4]. ಈಸಕ್ಕಿಗಾಗಿ ತೋರಿಸಿದ ಆಸೆಯೂ ಆಸೆಯೇ, ಅಷ್ಟೈಶ್ವರ್ಯಕ್ಕಾಗಿ ಹಾತೊರೆದರೂ ಅಸೆಯೇ ! ಆಸೆಯಲ್ಲಿ ಹಿರಿದುಕಿರಿದುಂಟೆ ? ಕಾಣೆಯ ಲಾಭ ಕೆಡಿಸುವುದುಂಟು ಎಂದು ಬಸವಣ್ಣನವರು ಹೇಳಿಲ್ಲವೆ? ಅರಿಷಡ್ವರ್ಗಗಳಲ್ಲಿ ಕಾಮವೇ ಮೊದಲನೆಯದು, ಕಂಡದ್ದನ್ನು ಬಯಸುವುದೇ ಕಾಮ, ಅದು ದೊರೆಯದಿದ್ದರೆ ಕ್ರೋಧ, ದೊರೆತರೆ ಇನ್ನೂ ದೊರಕಲೆಂಬ ಲೋಭ, ಅದೂ ದೊರೆತಿತೆಂದರೆ ತನ್ನ ಕೈಬಿಟ್ಟು ಹೋಗದಿರ ಲೆಂಬ ಮೋಹ, ಒಂದು ವೇಳೆ ತನ್ನಲ್ಲಿಯೇ ಉಳಿದರೆ ಅದು ನನ್ನೊಬ್ಬನಲ್ಲಿಯೇ ಇದೆ ಎಂಬ ಮದ, ಒಂದು ಪಕ್ಷ ಇನ್ನೊಬ್ಬನ ಲ್ಲಿಯೂ ಇದೆ ಎಂದು ತಿಳಿದು ಬಂದರೆ ಮತ್ಸರ, ಹೀಗೆ ಕಂಡದ್ದನ್ನು ಬಯಸುವ ಕಾಮವೊಂದು ಉಳಿದ ಐದು ವೈರಿಗಳನ್ನು ಆಹ್ವಾನಿಸಿದಂತಾಗುತ್ತದೆ. ಆದುದರಿಂದ 'ಈಸಕ್ಕಿಯಾಸೆಯೂ ಬೇಡ' ಎಂದು ನಿಶ್ಚೈಸುತ್ತಾನೆ. ಹಾಗೆಯೇ ಸತಿಯನ್ನು ಕುರಿತು ತನ್ನ ತಪ್ಪನ್ನು ಈ ರೀತಿ ಒಪ್ಪಿಕೊಳ್ಳುತ್ತಾನೆ[5]. 'ಲಕ್ಕಾ, ನಿನ್ನಷ್ಟು ಜ್ಞಾನಿಯಲ್ಲ. ಇಂದು ನನಗೆ ನಿಜದ ನಿಲುವನ್ನು ತೋರಿದೆ' ಎಂದು ಕೊಂಡಾಡುತ್ತಾನೆ. ಅದಕ್ಕೆ ಈ ಸತಿಯ ವಿನಯದ ನುಡಿ, ಸತಿಪತಿಗಳು ಒಂದೇ ಜೀವ. ಎರಡು ದೇಹಗಳು ಅವರು ಗಳಲ್ಲಿ ಭೇದವಿಲ್ಲ ಎಂಬುದನ್ನು ಈ ವಚನ ಎಷ್ಟು ಸುಂದರವಾಗಿ ಸಾದರಪಡಿಸುತ್ತದೆ ನೋಡಿ :

> 'ಆವ ಬೀಜವು ಬೀಳುವಲ್ಲಿ, ಮೊಳೆ ಮುಖ, ಹಿಂಚು ಮುಂಚುಂಟೆ? ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದಡಲುಂಟೆ
> ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು. ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೆ
> ಬೇರೊಂದಡಿಯಿಡದಿರು ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವನರಿಯ ಬಲ್ಲಡೆ[6]'.

ಎಂಬುದನ್ನು ಕೇಳಿ ಮಾರಯ್ಯನು ತನ್ನ ಸತಿಯ ಬಗ್ಗೆ ಗೌರವ ಭಾವನೆಯನ್ನು ತಾಳುತ್ತಾನೆ. ಮತ್ತು ಅವಳಿಂದಲೇ ಆತ್ಯಂತಿಕ ಸತ್ಯವನ್ನೂ ತಿಳಿಯಬೇಕೆಂದು ಆಶಿಸಿ 'ಅಮಲೇಶ್ವರ ಲಿಂಗವ ತೋರಾ' ಎಂದು ಮೊರೆಯಿಡುತ್ತಾನೆ. ಆಗ ತನ್ನ ಇನಿಯನಿಗೆ ತೋರಿಸಿದ ದಾರಿ ಪ್ರತಿಯೊಬ್ಬರೂ ಅನುಸರಿಸಬೇಕಾದ್ದು'.

---

1. ಶಿವಶರಣ ಕಥಾರತ್ನಕೋಶ : ಪುಟ ೩೦. 2. ೨೭. ಶಿ. ಶ. ವ. (ಪುಟ ೩೯). 3. ಶರಣ ಚರಿತಾಮೃತ (ಪುಟ ೪೦೩) ;
4. ಅದೇ (ಪುಟ ೪೦೩) ; 5. ಅದೇ (ಪುಟ ೪೦೪) ; 6. ೨೭ ಶಿ.ಶ.ವ (ಪುಟ ೯೪)

'ಮಾಡುವ ಮಾಟವುಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ ದಾಸೋಹವೆಂಬ ಸೇವೆಯ ಬಿಟ್ಟು ನೀಸಲಾರದೆ
ಕೈಲಾಸವೆಂಬ ಆಸೆ ಬೇಡ. ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವಿದ್ದ ಠಾವೆ ಕೈಲಾಸ[7]'

ಎನ್ನುತ್ತಾಳೆ. ಈ ಮಾತನ್ನ ಕೇಳಿದರೆ ಮಾಡುವ ಕಾಯದ ಬಗ್ಗೆ, ಜಂಗಮ ಸೇವೆಯ ಬಗ್ಗೆ ಲಕ್ಕಮ್ಮನ ಮನಸ್ಸಿನಲ್ಲಿರುವ ಪೂಜ್ಯ ಭಾವನೆಯ ಪ್ರತಿಬಿಂಬವೇ ರೂಪಿತವಾಗಿರುವುದನ್ನು ಕಾಣಬಹುದಾಗಿದೆ. ಇದೇ ಅರ್ಥದಲ್ಲಿ ಬಸವಣ್ಣನವರು ಶಿವನನ್ನು ಕುರಿತು:

'ಶರಣರೊಕ್ಕುದಱ ಸವಿ ಕೈಲಾಸದೊಳಗುಂಟೆ......ಇಲ್ಲಿಯ ಸುಖ ಅಲ್ಲಿಯುಳ್ಳಡೆ ಲೇಸು[8]'

ಎಂಬುದನ್ನು ಇಲ್ಲಿ ನೆನೆಯಬಹುದಾಗಿದೆ.

ಆಯ್ದಕ್ಕಿ ಮಾರಯ್ಯನು ಹೆಂಡತಿಯ ಮಾತಿನಂತೆ ಅಕ್ಕಿಯನ್ನು ಹಿಂದೆ ಸುರಿಯಲು ಮನಸ್ಸನ್ನು ಮಾಡುತ್ತಾನೆ. ಆದರೆ ಆಕೆ ಹೇಳಿದಂತೆ ಬಸವಣ್ಣ ಮತ್ತು ಆತನ ಪ್ರಮಥಗಣಕ್ಕೆ ಅತಿಥಿಸತ್ಕಾರ ಮಾಡುವುದಾದರೂ ಹೇಗೆ ಎಂಬ ಯೋಚನೆ ಕಾಡುತ್ತದೆ. ಸೂಕ್ಷ್ಮಗ್ರಾಹಿಯಾದ ಲಕ್ಕಮ್ಮನು ಅದನ್ನು ಗ್ರಹಿಸಿ ಪತಿಯನ್ನು ಕುರಿತು 'ಬಡವರಾದ ನಾವು ಅಷ್ಟೊಂದು ಜನಕ್ಕೆ ಹೇಗೆ ಸುಧಾರಿಸಬಲ್ಲೆವು' ಎಂಬ ಅನುಮಾನವೇ ? ಚಿಂತಿಸಬೇಡಿ :

'ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು'[9]

ಎನ್ನುತ್ತಾಳೆ. ಮರು ಮಾತಾಡದೆ ಮಾರಯ್ಯ ಸತಿ ಹೇಳಿದಂತೆ ಬಸವಣ್ಣ ಮತ್ತು ಅವರ ಶಿವಗಣವನ್ನು ಭೋಜನಕ್ಕೆ ಆಹ್ವಾನಿಸುತ್ತಾನೆ, ಎಲ್ಲರಿಗೂ ಲಕ್ಕಮ್ಮ ಆಯ್ದಕ್ಕಿಯಿಂದಲೇ ಭಕ್ತಿಯಿಂದ ಸಾಕು ಸಾಕೆನ್ನುವಷ್ಟು ಉಣಿಸುತ್ತಾಳೆ! ಎಲ್ಲರೂ ಉಂಡು ಸಂತೃಪ್ತರಾಗುತ್ತಾರೆ!! ಯಾಕಾಗಬಾರದು ? ಕಬ್ಬಿಣದ ಕಡಲೆಯನ್ನು ಹುರಿದು ಅನಸೂಯೆ ದೇವತೆಗಳ ಹಸಿವನ್ನು ಇಂಗಿಸಿದ್ದರೆ ಇದೂ ನಿಜ ! ಶ್ರೀಕೃಷ್ಣನು ಅಕ್ಷಯಪಾತ್ರೆಯಲ್ಲಿನ ಒಂದಗುಳನ್ನು ತಿಂದು ತೇಗಿದ ತಕ್ಷಣ ಅತಿಥಿಗಳಾದ ಋಷಿವರ್ಯರೆಲ್ಲರ ಹೊಟ್ಟೆಯು ಭಕ್ಷ್ಯಭೋಜಗಳನ್ನುಂಡಷ್ಟು ಸಂತೃಪ್ತಿ ಹೊಂದಿದ್ದು ನಿಜವಾದರೆ ಇದೂ ಸತ್ಯ !! ಭಕ್ತಿಯ ಮುಂದೆ ಎಲ್ಲವೂ ಮಿಥ್ಯ!!! ಬಂದ ಅತಿಥಿಗಳೆಲ್ಲರೂ ಸಂತೋಷವಷ್ಟೇ ಅಲ್ಲದೆ ಆಶ್ಚರ್ಯವನ್ನೂ ವ್ಯಕ್ತಪಡಿಸುತ್ತಾರೆ. ಅಲ್ಲಮಪ್ರಭುದೇವರು.

'ಆರಾರ ನೇಮಕ್ಕೆ ಸಂದಿತ್ತು, ಇಚ್ಛಾ ಭೋಜನಕ್ಕೆ ಕೃತ್ಯವಾಯಿತ್ತು, ಗುಹೇಶ್ವರಲಿಂಗಕ್ಕೆ ಆಶ್ಚರ್ಯವಾಯಿತ್ತು'

ಎಂದರೆ ಬಸವಣ್ಣನವರು

'ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು, ಧನ ನೋಡಾ ಬಡವರು. ಘನಮನ ಸಂಪನ್ನರು
ಕೂಡಲ ಸಂಗನ ಶರಣರು ಕರುಳಿಲ್ಲದ ಕಲಿಗಳು'[10]

ಎಂದು ಕೊಂಡಾಡುತ್ತಾರೆ. ಆದರೆ ಆಯ್ದಕ್ಕಿ ದಂಪತಿಗಳು ವಿನೀತದಿಂದ ಈ ಶಕ್ತಿಯೆಲ್ಲವೂ ದೈವದ್ದು ಎನ್ನುತ್ತಾರೆ. ನಂತರ ಮಾರಯ್ಯನು ಹೆಂಡತಿಯನ್ನು ಕುರಿತು 'ಈ ಆರೋಗಣೆ ಎಲ್ಲವೂ ನಿನ್ನದು, ಅದ್ಭುತ ನಿನ್ನದು' ಎಂದು ಹೊಗಳಿದಾಗ, ಲಕ್ಕಮ್ಮನು ನಿರ್ವಿಕಾರದಿಂದ ಪುನಃ ಗಂಡನನ್ನು ಎಚ್ಚರಿಸುತ್ತಾಳೆ. ಮಾಡಿದ ಕೆಲಸವನ್ನು ನಾನು ಮಾಡಿದೆ. ನನ್ನಿಂದ ಆಯಿತು ಎಂಬುದನ್ನು ಬಿಡಬೇಕು. ಏಕೆಂದರೆ :

'ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು; ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ; ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಿಲ್ಲದ ಶೃಂಗಾರ;
ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಜಲವ ತುಂಬಿದಂತೆ ಮಾರಯ್ಯಪ್ರಿಯ ಅಮಲೇಶ್ವರ ಲಿಂಗವ ಮುಟ್ಟದ ಭಕ್ತಿ'[11]

ಹೀಗೆ ಅಡಿಗಡಿಗೆ ಪತಿಯನ್ನು ಭಕ್ತಿಮಾರ್ಗದಲ್ಲಿ ನಡೆಯಿಸುತ್ತಾ ಪತಿಯೇ ಪರದೈವವೆಂದು, ಜಂಗಮಸೇವೆಯೇ ಜನಾರ್ದನನ ಸೇವೆಯೆಂದು, ಕಾಯಕವೇ ಕೈಲಾಸವೆಂದು ಬಾಳಿನಲ್ಲಿ ನುಡಿದು, ಅದರಂತೆ ನಡೆದು ಜೀವನವನ್ನು ಸಾಗಿಸಿದವಳು ಆಯ್ದಕ್ಕಿ ಲಕ್ಕಮ್ಮ.

ಆಯ್ದಕ್ಕಿ ಲಕ್ಕಮ್ಮನ ಕಾಯಕದ ನಿಷ್ಠೆಯನ್ನು ಪ್ರದರ್ಶಿಸುವ ಮತ್ತೊಂದು ಪ್ರಸಂಗವು ಹೀಗೆ ಜರುತ್ತದೆ : ಈಕೆಯ ಪತಿಯಾದ ಮಾರಯ್ಯನಿಗೂ ಅನುಭವ ಮಂಟಪದ ಪದಾಧಿಕಾರಿ ಅಲ್ಲಮಪ್ರಭುವಿಗೂ ವಾಗ್ವಾದ ನಡೆಯುತ್ತಿರುತ್ತದೆ. ದಿನ ನಿತ್ಯದ ಕೆಲಸದ ವೇಳೆಯಾದರೂ ಮಾರಯ್ಯನು ಗಮನಿಸದೆ ವಾದಿಸುತ್ತಿರುತ್ತಾನೆ. ಆದರೆ ಲಕ್ಕಮ್ಮನು ಕರ್ತವ್ಯ ಚ್ಯುತಿಯಾದೀತೆಂದು ಗಂಡನನ್ನು ಎಚ್ಚರಿಸುವ ಆಕೆಯ ಸವಿನಯ ಮಧುರವಾದ ಮಾತುಗಳನ್ನು ನೋಡಿ :

'ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ; ಭಾವಶುದ್ಧವಾಗಿ ಮಹಾಶರಣರ ತಿಪ್ಪೆಯ ತಪ್ಪಲ ಅಕ್ಕಿಯ ತಂದು
ನಿಶ್ಚೈಸಿ ಮಾಡಬೇಕು ಮಾರಯ್ಯಪ್ರಿಯ ಅಮಲೇಶ್ವರ ಲಿಂಗಕ್ಕೆ, ಬೇಗ ಹೋಗು ಮಾರಯ್ಯ'[12]

7. ೨೭. ಶಿ.ಶ. ವ. ಪುಟ ೪೪; 8. ಬ.ಸ.ರ ೧೩-೩೩ ; 9. ೨೭. ಶಿ.ಶ.ವ ಪುಟ ೪೫;
10. ಶ.ಚ. ಪುಟ ೪೦೫; 11. ೨೭. ಶಿ.ಶ.ವ. ಪುಟ ೪೧ 12. ೨೭. ಶಿ.ಶ.ವ. ಪುಟ. ೩೮

ಆ ಕೆಲಸವನ್ನು ಮಾಡುವ ರೀತಿಯಾದರೂ ಎಂತಹುದು?

'ಅಂಗವರಿತ ಅರುವೆಯ ಅಂಗದಲ್ಲಿ ಕಟ್ಟಿ ಬಯಕೆಯರಿತ ಕೈಯಲ್ಲಿ ತಂಡುಲವನಾಯ್ದುಕೊಂಡು ತನ್ನಿ'[13]

ಎಂದು ಹೇಳಿ ಮತ್ತೆ ತನ್ನ ಪತಿಯನ್ನು ಎಚ್ಚರಿಸುತ್ತಾಳೆ. 'ದೊರೆಯಿ ನಮಗೆ ಅದು ಬೇಕು ಇದು ಬೇಕು ಎಂದು ಬಯಸಿ ಏನನ್ನೂ ತರಬೇಡಿ ಏಕೆಂದರೆ' 'ಬಯಸಿ ತಂದುದು ಅಂಗಭೋಗ' ಅಲ್ಲದೆ ಆ ರೀತಿ ತಂದ ವಸ್ತುವಿನಿಂದ ಜಂಗಮಸೇವೆ ಮಾಡಲು ಅನರ್ಹವಾದುದು. ಈಕೆಯ ಪ್ರಕಾರ ದಾಸೋಹ ಸೇವೆಗೆ ಅರ್ಹವಾದ, ಪಕ್ವವಾದ ಭಕ್ತರ ಮನಸ್ಸು ಅವಶ್ಯಕ. ಈ ಬಗ್ಗೆ ಆಕೆ ಹೇಳುವ ಮಾತುಗಳು ವಚನದಲ್ಲೇ ಶ್ರೇಷ್ಠವಾದುದಾಗಿದೆ :

'ಭಕ್ತರು ಕಾಯಕವೆಂದು ಪಾಯಗಾರಿಕೆಯಲ್ಲಿ ತಂದು ದಾಸೋಹವ ಮಾಡಬಹುದೆ? ಒಮ್ಮನದಿ ತಂದು ಒಮ್ಮನದಲ್ಲಿಯೇ ಮಾಡಿ ಇಮ್ಮನವಾಗದ ಮುನ್ನವೆ ಮಾರಯ್ಯಪ್ರಿಯ ಅಮಲೇಶ್ವರ ಲಿಂಗಕ್ಕೆ ಸಲಬೇಕು ಮಾರಯ್ಯಾ'[14]

ಹೀಗೆ ಪತಿಯನ್ನು ಅಡಿಗಡಿಗೂ ಎಚ್ಚರಿಸುತ್ತಾ ಮೋಕ್ಷದ ಪಥದತ್ತ ಶರಣದಂಪತಿಗಳು ಹತ್ತಿರ ಹತ್ತಿರವಾಗುತ್ತಾರೆ. ಆದರೆ ಕರುಣಾಸಿಂಧು ! ದಯಾಮಯಿ !! ಎಂಬ ಬಿರುದುಗಳನ್ನುಳ್ಳ ಪರಮಾತ್ಮ ತನ್ನ ಭಕ್ತರಿಗೆ ಅಷ್ಟು ಬೇಗ ಒಲಿಯುವುದೇ ಇಲ್ಲ. ಆತನು ಈ ದಂಪತಿಗಳನ್ನು ಒರೆಗೆ ಹಚ್ಚುತ್ತಾನೆ. ಅದೂ ಎಂತಹ ಪರೀಕ್ಷೆ ! ಬಹುಶಃ ಈ ಪರಮಾತ್ಮನಿಗೂ ಸ್ತ್ರೀ ವ್ಯಾಮೋಹ ಬಿಟ್ಟಿಲ್ಲವೆಂದು ಕಾಣುತ್ತದೆ. ಅನಸೂಯೆಯ ಹತ್ತಿರ ಹೋಗಿ ತ್ರಿಮೂರ್ತಿಗಳು ಬತ್ತಲೆಯಾಗಿ ಉಣ ಬಡಿಸಲು ಕೇಳುವುದು, ಬಸವಣ್ಣನ ಹತ್ತಿರ ಹೋಗಿ ಸಂಕೋಚವೇ ಇಲ್ಲದೆ ನಾವು 'ಹೆಂಗೂಸಿಲ್ಲದೆ ಇರ್ದುದಿಲ್ಲ' ಎಂದು ನಿರ್ಲಜ್ಜೆಯಿಂದ ಹೇಳುವುದು. ಅಂದರೆ ಸ್ತ್ರೀ ವಿಷಯದಲ್ಲಿ ಎಲ್ಲಕ್ಕೂ ಮಿಕ್ಕಿನ ವ್ಯಾಮೋಹ ಇರುತ್ತದೆ ಎಂಬುದು ಇದರಿಂದ ತಿಳಿದು ಬರುತ್ತದೆ. ಇದನ್ನು ಜಯಿಸಿದರೆ ತನ್ನ ಭಕ್ತ ಅತ್ಯಂತ ಉನ್ನತ, ಕಠಿಣವಾದ ಸ್ಥಿರ ಮನಸ್ಸುಳ್ಳವನು, ಕೈಲಾಸಕ್ಕೆ ಅರ್ಹನಾದವನು ಎಂಬ ಅಭಿಪ್ರಾಯ ಪರಮಾತ್ಮನಲ್ಲಿರುವುದನ್ನು ನಾವು ಸಾಮಾನ್ಯವಾಗಿ ಕಾಣಬಹುದಾಗಿದೆ. ಅದರಂತೆಯೇ ಈ ಮುಗ್ಧ, ದೃಢ ದಂಪತಿಗಳನ್ನು ಶಿವನು ಪರೀಕ್ಷಿಸುವ ರೀತಿ ನೋಡಿ :

ಒಂದು ದಿನ ಮಾರಯ್ಯ ಕಾಯಕಕ್ಕೆ ಹೋಗಿದ್ದಾಗ ಶಿವನು ಜಂಗಮನಾಗಿ ಬಂದು ಭಿಕ್ಷೆ ಕೇಳುತ್ತಾನೆ. ಲಕ್ಕಮ್ಮನು ಕೊಡಲು ಬಂದಾಗ ಶಿವನು ಇದ್ದಕ್ಕಿದ್ದಂತೆ ಗಡಗಡನೆ ನಡುಗುತ್ತಾ 'ಬಹಳ ಚಳಿಯಾಗುತ್ತಿದೆ, ವಸ್ತ್ರ ಬೇಕು' ಎನ್ನುತ್ತಾನೆ. ಲಕ್ಕಮ್ಮನು ದಾರಿ ಕಾಣದೆ ತಾನು ಉಟ್ಟಿರುವ ಆರು ಮೊಳ ಸೀರೆಯೊಳಗೆ ಅರ್ಧ ಹರಿದು ಕೊಡುತ್ತಾಳೆ ! ಆದರೆ ಹುಸಿ ಜಂಗಮನ ಹುಸಿ ಹುಸಿ ಚಳಿ ಅಷ್ಟಕ್ಕೆ ಶಮನವಾಗುವುದಿಲ್ಲ. ಮತ್ತೂ ನಡಗುತ್ತಾನೆ. 'ವಸ್ತ್ರ, ವಸ್ತ್ರ' ಎಂದು ಹಲಬುತ್ತಾನೆ. ಜಂಗಮ ಸೇವೆಯೇ ಲಿಂಗಸೇವೆ ಎಂದು ಇಡೀ ಬಾಳಿನಲ್ಲಿ ನಂಬಿಕೊಂಡು ಬಂದಿರುವ ಲಕ್ಕಮ್ಮ ಮಾಡುವುದಾದರೂ ಏನನ್ನು ? ಉಳಿದ ಅರ್ಧ ಸೀರೆಯನ್ನು ಬಿಚ್ಚಿ ಕೊಟ್ಟು ತನ್ನ ಅಂಗೈಗಳಿಂದ 'ಸ್ತ್ರೀತ್ವ'ವನ್ನು ಕಾಪಾಡಿಕೊಳ್ಳುತ್ತಾಳೆ. ಸತಿಯನ್ನು ಪರೀಕ್ಷಿಸಿಯಾಯಿತು ಅಷ್ಟಕ್ಕೆ ಬಿಟ್ಟಾನೇ ? ಪತಿಯಿರುವನಲ್ಲಾ ! ಆದ್ದರಿಂದ ಇನ್ನೂ ಚಳಿ ಹೋಗಲಿಲ್ಲ ಎಂದು ಬೊಬ್ಬೆಯಿಡುತ್ತಾ ತನ್ನ ಭಕ್ತರ ಮಹಿಮೆಯನ್ನು ಜಗತ್ತಿಗೆ ಪ್ರಚಾರಪಡಿಸಲೆಂಬಂತೆ ಬೀದಿಗೆ ಓಡುತ್ತಾನೆ. ಅಷ್ಟರೊಳಗೆ ಮಾರಯ್ಯನು ಬಂದು ವಿಷಯವನ್ನು ಬೀದಿಗೆ ಬಂದು ಹಿಂದು ಮುಂದು ನೋಡದೆ ತಾನುಟ್ಟಿದ್ದ ಪಂಚೆಯನ್ನು ಕಿತ್ತು ಕೊಡುತ್ತಾನೆ. ಹೀಗೆ ಇಬ್ಬರು ಭಕ್ತರುಗಳೂ ದಿಗಂಬರರಾಗಿ ಪರಮಾತ್ಮನ (ಜಂಗಮನ) ಕಾಲುಗಳನ್ನು ಹಿಡಿಯುತ್ತಾರೆ. ಏನೆಂದು ! ದಯವಿಟ್ಟು ಕೃಪೆ ತೋರಿ 'ನಿಮ್ಮ ಚಳಿ ಇನ್ನೂ ಅಡಗದೇ ಇದ್ದರೆ ನಮ್ಮಲ್ಲಿ ಬೇರೇನೂ ಇಲ್ಲ' ಎಂದು. ಚಳಿ ಹೋಗದೆ ಏನು ಮಾಡೀತು. ತನ್ನ ಭಕ್ತರ ಮನಸ್ಸನ್ನು ಕಂಡು ಪರಮಾತ್ಮನಿಗೆ ಈಗ ನಿಜವಾಗಿಯೂ ಮೈಯಲ್ಲಾ ನಡುಗಿ ರೋಮಗಳು ನಿಮಿರಿ ನಿಲ್ಲುತ್ತವೆ. ತಕ್ಷಣ ತನ್ನ ರೂಪವನ್ನು ತೋರಿ 'ನಿಮ್ಮಿಚ್ಛೆಯನ್ನು ಬೇಡಿ' ಎನ್ನುತ್ತಾನೆ. ಈ ದಂಪತಿಗಳು ಬೇಡಿದ್ದಾದರೂ ಏನನ್ನು ! [15] ನಿಚ್ಚ ಜಂಗಮದ ಭಕ್ತಿ ನಮಗಿಚ್ಛೆ ಬೇರೊಂದಿಲ್ಲ ಎಂದು. ತಮ್ಮಲ್ಲಿ ಧಾರಾಳವಾಗಿ ಇರುವುದನ್ನೇ ಬಯಸುವವರಿಗೆ ಪರಮಾತ್ಮ ಕರುಣಿಸುವುದೆಲ್ಲಿಂದ ಬಂತು ಎಂದು ಶಿವನು ಇವರನ್ನು ಬಹುವಾಗಿ ಕೊಂಡಾಡಿ ಕಾಲಾನಂತರ ಕೈಲಾಸಕ್ಕೊಯ್ಯುವನು.

ಹೀಗೆ ಆಯ್ದಕ್ಕಿ ಲಕ್ಕಮ್ಮ ತನ್ನ ಕೆಲಸ, ಜಂಗಮರ ಸೇವೆ, ಪತಿಯ ಏಳಿಗೆಗಾಗಿ ತನ್ನ ಜೀವನವನ್ನು ಮೀಸಲಾಗಿಟ್ಟ ಶ್ರೇಷ್ಠ ನಾರೀಮಣಿಯೆಂದರೆ ಅತಿಶಯೋಕ್ತಿಯಾಗಲಾರದು.

**ಆಯ್ದಕ್ಕಿ ಲಕ್ಕಮ್ಮನ ಮತ್ತೂ ಕೆಲವು ವಚನಗಳು :**

ಪಂಚೇಂದ್ರಿಯಗಳನ್ನು ಜಯಿಸಿದವರಾರಿಗೂ ಬಡತನವೆಂಬ ಸುಳಿವಿಲ್ಲ ಎಂಬುದನ್ನು ಹೀಗೆ ಹೇಳಿದ್ದಾಳೆ :

---

13. ಅದೇ; 14. ಅದೇ ಪುಟ ೪೦ 15. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಪುಟ ೧೫೮

ಐದು ಇಲ್ಲವಾದಂದಿಗಲ್ಲದೆ ಜಗದೊಳಗಾರಿಗೂ ಬಡತನವಲ್ಲದಿಲ್ಲ. ಐದು ಉಳ್ಳನ್ನಕ್ಕೆ ಸಕಲ ಜೀವನಕ್ಕೆ ಚೇತನ
ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ ಉಳ್ಳನ್ನಕ್ಕ16

ಸಿರಿಯಾಗಲೀ, ಭಾಗ್ಯವಾಗಲೀ ನಾನಾಗಿ ಆರಿಸಿಕೊಂಡು ಹೋದರೆ ಅದು ಸಿಕ್ಕುವುದಿಲ್ಲ. ಇವಳ ಪ್ರಕಾರ ಅದು :

ಬಾಹಾಗ ಕೊಂಡು ಬಂದ ಪ್ರಾಪ್ತಿಯಲ್ಲದೆ ಬೇರೊಂದ ಗಳಿಸಲಿಲ್ಲ ಬೇರೊಂದ ಕೆಡಿಸಲಿಲ್ಲ
ಬಂದುದು ನಿಂದುದು ಮಾರಯ್ಯ ಪ್ರಿಯ ಅಮಲೇಶ್ವರಲಿಂಗ ಕೊಟ್ಟಲ್ಲದಿಲ್ಲ.17

ಮನಸ್ಸಿನಲ್ಲಿ ಶುದ್ಧಭಾವವಿಲ್ಲದವರ ಭಕ್ತಿಯನ್ನು, ಡಂಬಾಚಾರದ ಭಕ್ತಿಯನ್ನು ಕುರಿತು :

ಪೂಜೆಯುಳ್ಳನ್ನಕ್ಕ ಪುಣ್ಯದ ಗೊತ್ತು ಕಾಣ ಬಂದಿತ್ತು. ಮಾಟವುಳ್ಳನ್ನಕ್ಕ ಮಹಾಪ್ರಮಥರ ಭಾಷೆ ಬಾಹ್ಯದೊರೆಕೊಂಡಿತ್ತು
ಮಾಟವಿಲ್ಲದವನ ಭಕ್ತಿ ಹಾಳೂರ ವಂಕಕ್ಕೆ ಕೋಲ ಹಿಡಿದಂತಾಯಿತ್ತು.
ಮಾಡುವಲ್ಲಿ ಉಭಯವಳಿದು ಮಾಡಬಲ್ಲಡೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವ ಕೂಡುವ ಕೂಟ18

ಲಕ್ಕಮ್ಮನು ತನ್ನ ಹಿರಿಯ ವಚನಕಾರರಲ್ಲಿ ಇರಿಸಿಕೊಂಡಿದ್ದ ಪೂಜ್ಯಭಾವನೆಯು ಈ ಕೆಳಗಿನ ವಚನದಿಂದ ತಿಳಿದು ಬರುತ್ತದೆ :

'ಬಸವಣ್ಣನ ಪ್ರಸಾದವ ಕೊಂಡು ಎನ್ನ ಕಾಯ ಶುದ್ಧವಾಯಿತ್ತಯ್ಯ,
ಚೆನ್ನಬಸವಣ್ಣನ ಪ್ರಸಾದವ ಕೊಂಡು ಎನ್ನ ಜೀವ ಶುದ್ಧವಾಯಿತ್ತಯ್ಯ
ಮಡಿವಾಳಯ್ಯನ ಪ್ರಸಾದವ ಕೊಂಡು ಎನ್ನ ಭಾವ ಶುದ್ಧವಾಯಿತ್ತಯ್ಯ
ಶಂಕರದಾಸಿಮಯ್ಯನ ಪ್ರಸಾದವ ಕೊಂಡು ಎನ್ನ ತನು ಶುದ್ಧವಾಯಿತ್ತಯ್ಯ
ಸಿದ್ಧರಾಮಯ್ಯನ ಪ್ರಸಾದವ ಕೊಂಡು ಎನ್ನ ಮನ ಶುದ್ಧವಾಯಿತ್ತಯ್ಯ
ಘಟ್ಟಿವಾಳಯ್ಯನ ಪ್ರಸಾದವ ಕೊಂಡು ಎನ್ನ ಪ್ರಾಣ ಶುದ್ಧವಾಯಿತ್ತಯ್ಯ
ಅಕ್ಕನಾಗಾಯಮ್ಮನ ಪ್ರಸಾದವ ಕೊಂಡು ಎನ್ನ ಅಂತರಂಗ ಶುದ್ಧವಾಯಿತ್ತಯ್ಯ
ಮುಕ್ತಾಯಕ್ಕಗಳ ಪ್ರಸಾದವ ಕೊಂಡು ಎನ್ನ ಬಹಿರಂಗ ಶುದ್ಧವಾಯಿತ್ತಯ್ಯ
ಪ್ರಭುದೇವರ ಪ್ರಸಾದವ ಕೊಂಡು ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯ
ಇವರು ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳ
ಪ್ರಸಾದವ ಕೊಂಡು ಬದುಕಿದೆನಯ್ಯಾ ಮಾರಯ್ಯಪ್ರಿಯ ಅಮಲೇಶ್ವರಾ
ನಿಮ್ಮ ಶರಣರ ಪಾದಕ್ಕೆ ಅಹೋರಾತ್ರಿಯಲ್ಲಿ ನಮೋ ನಮೋ ಎನುತಿರ್ದೆನು'19

ಇಂತಹ ವಚನ ಕಾರ್ತಿಯು ನಮ್ಮ ವೀರಶೈವ ಸಾಹಿತ್ಯದಲ್ಲಿ ಆಗಿಹೋದಳೆಂಬುದು ತಿಳಿದು ಶೈವಪಂಥಕ್ಕೆ ಅಹರ್ನಿಶಿ ನಮೋ ನಮೋ ಎನ್ನೋಣ.

**ಗ್ರಂಥಋಣ :**

1. ಶರಣ ಚರಿತಾಮೃತ : ಡಾ॥ಸಿದ್ಧಯ್ಯ ಪುರಾಣಿಕ. 2. ಘೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ(ಭಾಗ ೨):ಶಾಂತಲಿಂಗ ದೇಶಿಕ
3. ಇಪ್ಪತ್ತೇಳು ಶಿವಶರಣೆಯರ ವಚನಗಳು (ಭಾಗ ೩) : ಸಂ. ಡಾ॥ ಆರ್. ಸಿ. ಹಿರೇಮಠ 4. ಶರಣ ಚರಿತ ಮಾನಸ :
5. ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ ೩ ಬೆಂಗಳೂರು ವಿಶ್ವವಿದ್ಯಾನಿಲಯ

**ಸಂಕೇತಗಳು :**

1. ೨೭. ಶಿ. ಶ. ವ. : ಇಪ್ಪತ್ತೇಳು ಶಿವಶರಣೆಯರ ವಚನಗಳು (ಭಾಗ ೩)
2. ಬ. ಸ. ರ. : ಬಸವರಾಜ ದೇವರ ರಗಳೆ.
3. ಶ. ಚ. : ಶರಣ ಚರಿತ ಮಾನಸಂ.

---

16, ೨೭ ಶಿ. ಶ. ವ ಪುಟ ೪೧ 17. ಅದೇ ; 18. ಅದೇ ಪುಟ ೪೪ 19. ೨೭. ಶಿ. ಶ. ವ. ಪುಟ ೪೬

# ಶಿವಶರಣೆ ದುಗ್ಗಳೆ

—ಜಿ. ಎಸ್. ಪರಶಿವಮೂರ್ತಿ

'ನೆರೆನಂಬೋ ನೆರೆನಂಬೊ ದಾಸ ದುಗ್ಗಳೆಯಂತೆ' —ಬಸವಣ್ಣ

'ಮತಿಯಲ್ಲಿ, ಗುಣದಲ್ಲಿ, ಪತಿಭಕ್ತಿಯಲ್ಲಿ, ಉಮಾಪತಿ
ಪೂಜೆಯಲ್ಲಿ, ಅತಿ ಜಾಣೆಯೆನಿಸಿದ ಸತಿ ದುಗ್ಗಳವ್ವೆ ಶರಣಾಗು' —ಪುರಾತನ ದೇವಿಯರ ತ್ರಿವಿಧಿ

'ಕೇಶಿರಾಜನ ದುಗ್ಗಳವ್ವೆ ದಾಸಯ್ಯನಂ
ಭಾಷಗೀಶನ ತಂದ ಮಿಸುಪಾದಿಮಯ್ಯನಂ' —ಲಿಂಗಾರ್ಚನೆ ರಗಳೆ

ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೋಕಿನ ಮುದನೂರು ಐತಿಹಾಸಿಕ ಪ್ರಸಿದ್ಧ ಊರು. ಧರ್ಮ ಕೇಂದ್ರ. ಚಿಕ್ಕ ಮುದೇನೂರಿನ ಗೋಪಾಲಸ್ವಾಮಿ ದೇವಾಲಯದ ಶಾಸನದಲ್ಲಿ ಅದನ್ನು 'ದಕ್ಷಿಣ ವಾರಣಾಸಿ ಮುದನೂರು' ಎಂದು ವರ್ಣಿಸಲಾಗಿದೆ.

ಹನ್ನೊಂದನೆಯ ಶತಮಾನದ ಪ್ರಾರಂಭ ಅಥವಾ ಹತ್ತನೆಯ ಶತಮಾನದ ಕೊನೆಯಲ್ಲಿ ಇದ್ದಿರಬಹುದಾದ ದೇವರ ದಾಸಿಮಯ್ಯನವರ ಪತ್ನಿ ದುಗ್ಗಳೆ. ಗೊಬ್ಬೂರು ಗ್ರಾಮದ ಮಲ್ಲಿನಾಥ–ಮಹಾದೇವಿಯರ ಮಗಳು ದುಗ್ಗಳೆ–(ಶರಣ ಚರಿತಾಮೃತ, ಬಸವೇಶ್ವರರ ಸಮಕಾಲೀನರು) ಮುದನೂರಿನ ನೆಯ್ಗೆಯ ಸಂಕಣ್ಣ–ಶಿವದೇವಿಯರ ಮಗಳು–(ಭೈರವೇಶ್ವರ ಕಾವ್ಯದ ಕಥಾಮಣಿ, ಪ್ರೌಢರಾಯನ ಕಾವ್ಯ, ಬಸವೇಶ್ವರ ಪುರಾಣ ಕಥಾಸಾಗರ.) ದೇವರ ದಾಸಿಮಯ್ಯ ಒಡ್ಡಿದ ಪರೀಕ್ಷೆಯಲ್ಲಿ ಗೆದ್ದು ಅವನ ಕೈಹಿಡಿದ ಸತೀಮಣಿ.

ದುಗ್ಗಳೆಯ ಮದುವೆಗೆ ಸಂಬಂಧಿಸಿದಂತೆ ಒಂದು ಕಥೆ ಇದೆ. ಬಸವೇಶ್ವರರ ಹಿರಿಯ ಸಮಕಾಲೀನರಾದ ಜೇಡರ ದಾಸಿಮಯ್ಯ ಮುದನೂರಿನ ನೆಯ್ಗೆ ಕಾಯಕದ ಕಾಮಯ್ಯ ಮತ್ತು ಶಂಕರಿ ಇವರ ಮಗ. ದಾಸಿಮಯ್ಯನನ್ನು ದಾಸ, ದಾಸಿಮ, ದಾಸಿಮಾರ್ಯ, ದೇವರದಾಸ, ಜೇಡರದಾಸ, ದೇವರ ದಾಸಿಮಯ್ಯ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಬಾಲ್ಯದಿಂದಲೂ ಮಹಾಶಿವಭಕ್ತ. ಬೆಳೆಯುತ್ತ ಬೆಳೆಯುತ್ತ ಜ್ಞಾನದಾಹಿಯಾಗಿ ಅಂದು ಶಿವಶರಣರ ಜ್ಞಾನಕ್ಷೇತ್ರವೂ, ಮುಕ್ತಿ ಕ್ಷೇತ್ರವೂ ಎನಿಸಿದ್ದ ಶ್ರೀಶೈಲಕ್ಕೆ ಪ್ರಯಾಣ ಮಾಡಿ, ಶ್ರೀಶೈಲದ ಚಂದ್ರಗುಂಡ ಶಿವಾಚಾರ್ಯರಿಂದ ಶಿವದೀಕ್ಷೆ ಪಡೆದು ಶಿವಜ್ಞಾನಿಯಾಗುತ್ತಾನೆ. ದೇಶಸಂಚಾರ ಕೈಗೊಂಡು ಅಲ್ಲಲ್ಲಿ ಜನರಿಗೆ ಶೈವಧರ್ಮೋಪದೇಶ ಮಾಡುತ್ತ, ಬಯಸಿದವರಿಗೆ ಶಿವದೀಕ್ಷೆ ನೀಡುತ್ತ ಬರುತ್ತಾರೆ. ದಾರಿಯಲ್ಲಿ ಪೊಟ್ಟಲಕೆರೆಗೆ ಬರುತ್ತಾರೆ, ಈ ಮಹಾನಗರವನ್ನು ಚಾಲುಕ್ಯ ಚಕ್ರವರ್ತಿ ಎರಡನೆಯ ಜಯಸಿಂಹ ಆಳುತ್ತಿರುತ್ತಾನೆ. ಈತನೂ, ಇವರ ಬಹುಸಂಖ್ಯಾತ ಪ್ರಜೆಗಳೂ ಜೈನ ಧರ್ಮಾನುಯಾಯಿಗಳು. ಈತನ ಸತಿ ಸುಗ್ಗಳೆ ಮಾತ್ರ ಶೈವಧರ್ಮಪ್ರಿಯೆ. ಪ್ರಸಿದ್ಧರಾಗಿದ್ದ ದಾಸಿಮಯ್ಯನವರಿಂದ ಈಕೆ ಶಿವದೀಕ್ಷೆ ಪಡೆಯುತ್ತಾಳೆ. ಇದು ರಾಜನನ್ನೂ, ಪ್ರಜೆಗಳನ್ನೂ ಕೆರಳಿಸುತ್ತದೆ. ಧರ್ಮವಾಗ್ವಾದದಲ್ಲಿ ಅವರೆಲ್ಲರನ್ನೂ ದಾಸಿಮಯ್ಯ ಸೋಲಿಸಿ ಅವರಿಗೂ ಶಿವಧರ್ಮದೀಕ್ಷೆ ಕೊಡುತ್ತಾರೆ.

'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂದು ಪೂರ್ಣನಂಬಿಕೆ ಇದ್ದವನು ದಾಸಿಮಯ್ಯ. ಭಕ್ತಿಯಿಂದ ಜ್ಞಾನ, ಜ್ಞಾನದಿಂದ ವೈರಾಗ್ಯ, ಮುಕ್ತಿ ಪಡೆಯಲಿಪ್ಪುದು. ಈ ಶಾಸ್ತ್ರೋಕ್ತಿಯನ್ನು ತಿಳಿದು ಸದುಭಕ್ತಿ ಮಾಡಲು ಬಯಸಿ, ತನ್ನೊಳು ಭಕ್ತಿಯಂ ನಡೆಸುವಡೆ ಮನಧರ್ಮಗಳ ಬಲ್ಲ ಶಕ್ತಿಯಿಲ್ಲದೆ ಸಾಧ್ಯವಾಗದೆಂದು ತಿಳಿದು ವಿವಾಹವಾಗಲು ನಿಶ್ಚಯಿಸುತ್ತಾನೆ. ಯಾವುದೋ ಒಂದು ಹೆಣ್ಣು ಆತನಿಗೆ ಬೇಕಾಗಿರಲಿಲ್ಲ. ಒಲವಿನ ಕಣ್ಣು ಬೇಕಾಗಿದ್ದಿತು; ಸಹಧರ್ಮಿಣಿ ಬೇಕಾಗಿದ್ದಳು. ಕನ್ಯಾಪರೀಕ್ಷೆಗೆ ಒಂದು ಸಕೀಲವನ್ನು ಚಿಂತಿಸಿದನು.

ಮರುಳು ಮತ್ತು ಅಕ್ಕಿಯನ್ನು ಬೆರಸಿ ಒಂದು ಗಂಟು ಕಟ್ಟಿಕೊಂಡು ಕೈಯಲ್ಲಿ ಹಿಡಿದು, ಮತ್ತೊಂದು ಕೈಯಲ್ಲಿ ಕರಿಯ ಕಬ್ಬಿನ ಕೋಲನ್ನು ಹಿಡಿದು, ಭಿಕ್ಷಕ್ಕೆ ಹೋದ. ಮನೆಮನೆಯ ಎದುರು ನಿಂತು 'ಕಟ್ಟಿಗೆಯ ಮುಟ್ಟದೆ ಕಿಚ್ಚನೊಟ್ಟಿ, ನೀರ ಮುಟ್ಟದೆ ಮಳಲಕ್ಕಿಯಂ ಪಾಯಸವ ಮಾಡುವಲ್ಲಿ, ಕರಿಯ ಕಬ್ಬಿನ ಕೋಲ ಒಲೆಯೊಳಗಿಕ್ಕಿ ಬೆಂಕಿಯನುರುಹಿ ಮಳಲಕ್ಕಿಯಂ ಕೂಡಿ ಪಾಯಸವಂ ಮಾಡಿ ನೀಡಿದೊಡೆ ಅಂತಪ್ಪಸ್ತ್ರೀಯಂ ಮದುವೆಯಾಗುವೆನು' ಎಂದು ಹೇಳುತ್ತಾನೆ. ಇವನ ಈ ಚೋದ್ಯದ ಮಾತು ಕೇಳಿ ಜನ ಬೆರಗಾಗಿ, ಮದುವೆಯಾಗಲಾರದೆ ಈ ಆಟ ಹೂಡಿದ್ದಾನೆಂದು ನಗೆಯಾಡುತ್ತಾರೆ. ಆದರೂ ದಾಸಿಮಯ್ಯ ತನ್ನ ಪ್ರಯತ್ನ ಬಿಡಲಿಲ್ಲ. ಹನ್ನೆರಡು ವರ್ಷಗಳ ಕಾಲ ಕನ್ಯಾನ್ವೇಷಣೆ ನಡೆಯುತ್ತದೆ. ಮುನದೂರಿನ ನೆಯ್ಗೆಯ ಸಂಕಣ್ಣ–ಶಿವದೇವಿಯರ ಮನೆಯ ಮುಂದೆ ನಿಂತು ತಮ್ಮ ಪಣವನ್ನು ಒಡ್ಡುತ್ತಾನೆ. ಈ ಅಸಾಧ್ಯ ಪಣ ಕೇಳಿ ಆಗದೆಂದು ದಂಪತಿಗಳು ತಲೆ ಆಡಿಸುತ್ತಾರೆ. ಒಂಭತ್ತು ವರ್ಷದ ಇವರ ಮಗಳು ದುಗ್ಗಳೆ ದಾಸಿಮಯ್ಯನ ಮಾತು ಕೇಳಿಸಿಕೊಳ್ಳುತ್ತಾಳೆ. ಆ ಸಕೀಲದ ಅಂತರಂಗ ತಿಳಿದು ತಾನು ಪಾಯಸಮಾಡಿ ಬಡಿಸುತ್ತೇನೆಂದು ಪಣವನ್ನು ಒಪ್ಪುತ್ತಾಳೆ. ದಾಸಿಮಯ್ಯ 'ಈ ಕರಿಯ ಕಬ್ಬಿನ ಕೋಲಲ್ಲಿ

ಬೆಂಕಿಯನುರುಹು ಎಂದು ಕೊಡುತ್ತಾನೆ. ಅದು ಒಂದರಿಂದ ಸಾಧ್ಯವಾಗದೆಂದು ಆತನೊಪ್ಪಿಗೆ ಪಡೆದು ಒಂದು ತಬ್ಬಿನಷ್ಟು ಕಬ್ಬನ್ನು ತರಿಸುತ್ತಾಳೆ. ಕಯ್ಯಾಲೆಯಿಂದ ತುದಿಯ ಕಬ್ಬಿನ ರಸವನ್ನು ಬೇರೆ, ಬುಡದ ಕಬ್ಬಿನ ರಸವನ್ನು ಬೇರೆ ತೆಗೆದಿಡುತ್ತಾಳೆ. ಕಬ್ಬಿನ ಸಿಪ್ಪೆಯನ್ನು ಗಾಳಿ, ಬಿಸಿಲುಗಳಲ್ಲಿ ಒಣಗಿಸಿ ಒಲೆಗಿಕ್ಕಿ ಬೆಂಕಿ ಹಚ್ಚುತ್ತಾಳೆ. ಮಳಲಕ್ಕಿ ಪಡೆದು ಒಂದು ಭಾಂಡದಲ್ಲಿ ಹಾಕಿ ಅದಕ್ಕೆ ತುದಿಯ ಹಾಲನ್ನು ಸುರಿದು ಕಾಯಿಸುತ್ತಾಳೆ. ಅಕ್ಕಿ ಪಾಕವಾಗುತ್ತದೆ. ಬುಡದ ಹಾಲನ್ನು ಅದಕ್ಕೆ ಹಾಕಿ, ಮಳಲು ಕೆಳ ಗುಳಿವಂತೆ ಹುಟ್ಟನಾಡಿಸಿ, ಮೇಲಿನ ಪಾಯಸವನ್ನು ಮತ್ತೊಂದು ಪಾತ್ರೆಗೆ ಬಗ್ಗಿಸಿಕೊಳ್ಳುತ್ತಾಳೆ. ತಿಳಿಪಾಯಸ ಹೊರಬಂದು ಮರುಳು ಮೊದಲ ಪಾತ್ರೆಯಲ್ಲಿ ಉಳಿಯುತ್ತದೆ. ಹೀಗೆ ತೆಗೆದ ಪಾಯಸವನ್ನು ದಾಸಯ್ಯನಿಗೆ ಬಡಿಸುತ್ತಾಳೆ. 'ಕಟ್ಟಿಗೆಯಿಲ್ಲದೆ ಕಿಚ್ಚನೊಚ್ಚಿ, ನೀರಮುಟ್ಟದೆ ಮಳಲಕ್ಕಿಯ ಪಾಯಸವಂ ಕರಿಯಕಬ್ಬಿನಲ್ಲಟ್ಟಿಕ್ಕಿದಳೆಂ'ದು ಮೆಚ್ಚಿ ದುಗ್ಗಳೆಯನ್ನು ದಾಸಿಮಯ್ಯ ಮದುವೆಯಾಗುತ್ತಾನೆ.

ಈ ಕಥೆ ಎಲ್ಲ ಕಾವ್ಯಗಳಲ್ಲೂ ಬರುತ್ತದೆ. ಪರಸ್ಪರರ ಮನವರಿತು ನಡೆಯುವ ಮತ್ತು ಮಾಡುವ ಭಕ್ತಿ ಮಾತ್ರ ಶಿವನಿಗೆ ಹಿತವಾಗುತ್ತದಾದ್ದರಿಂದ ಈ ಸಮಾನದಾಂಪತ್ಯ ಕೂಡಿದ ಕಥೆ ಇದು. ಕವಿ ಕಲ್ಪನೆಯ ಆಶಯವೇನೇ ಇರಲಿ ದುಗ್ಗಳೆ ಚತುರ ಮತಿ, ಸೂಕ್ಷ್ಮಗ್ರಾಹಿ ಎಂಬುದು ಇಲ್ಲಿ ಸ್ಪಷ್ಟ. ಜೊತೆಗೆ ಅಸಾಧ್ಯವನ್ನು ಸಾಧಿಸುವ ಪಟವೂ ಇಲ್ಲಿ ಎದ್ದುಕಾಣುತ್ತದೆ. ಅವಳು ಧರ್ಮಜ್ಞಳೂ ಹೌದು. ಅಗ್ಗಳೆಯಾದ ದುಗ್ಗಳೆಯ ಕೈಹಿಡಿದು ದಾಸಿಮಯ್ಯ ಸುಖಸಂಸಾರ ನಡೆಸುತ್ತಿದ್ದ. ದುಗ್ಗಳೆ ನೂತ ನೂಲಿಂದ ದಾಸಯ್ಯ ವಸ್ತ್ರಗಳನ್ನು ನೇಯುತ್ತಿದ್ದ. ಇಂತಹ ವಸ್ತ್ರಗಳನ್ನು ಮಾರಿ ಬಂದ ಹಣದಿಂದ ಗಣಾರಾಧನೆ ಮಾಡಿ, ತಾವೂ ಪ್ರಸಾದ ಸಂತುಷ್ಟರಾಗಿ ಬಾಳುತ್ತಿದ್ದರು. ಹರಿಹರ ಮಹಾಕವಿ ಈ ದಂಪತಿಗಳ ಕಾಯಕವನ್ನು :

> 'ಬಡವರಾಗಿಯೆ ಭಕ್ತಿಗೊಡೆಯರಾಗಿರ್ಪರು । ಒಡಲಿಚ್ಚೆಗೆಳಸಿ ಪರದ್ರವ್ಯವಂ ನೋಡರು
> ಕಾಯಕದ ಧರ್ಮದಾರ್ಜನೆ ಲಿಂಗಸೊಮ್ಮೆಂದು । ದಸರಿ ದೇವಾಂಗಂಗಳೆಂಬ ಸೀರೆಯನೆಯ್ದು
> ಹಸನಾಯಿತೆಂದೊಡವರಿತ್ತ ಕೂಲಿಯ ನೊಯಿದು। ತಮ್ಮ ಸ್ವೇಚ್ಛೆಯಲಿ ಲಿಂಗಾರ್ಜನೆಯ ಮಾಡುವರೆ'

ಎಂದು ವರ್ಣಿಸಿದ್ದಾನೆ.

ದಾಸಿಮಯ್ಯ ದಂಪತಿಗಳು ಹಲವು ಪರೀಕ್ಷೆಗಳಿಗೆ ಒಳಗಾಗುತ್ತಾರೆ. ವಚನಧರ್ಮದಲ್ಲಿ ಹೆಣ್ಣು ಗಂಡಿಗಾಗಲಿ, ಗಂಡು ಹೆಣ್ಣಿಗಾಗಲಿ ಅಡಿಯಾಳಲ್ಲ. ಗುಲಾಮಿಕೆ ಇಲ್ಲಿಲ್ಲ. ಅವರವರ ಸಾಧನೆ ಅವರವರಿಗೆ ಅಂದರೆ ಇಜ್ಜೋಡಲ್ಲ. ಸಾಧನೆಯ ದಾರಿ ಬೇರೆ ಬೇರೆ ಆದರೂ ಗುರಿ ಒಂದೇ. ಪತಿಯ ಸಾಧನೆಗೆ ಸತಿ, ಸತಿಯ ಸಾಧನೆಗೆ ಪತಿ ಸಹಾಯಕ.

ಒಮ್ಮೆ ಚರಮೂರ್ತಿಗಳಿಬ್ಬರು ದಾಸಯ್ಯನ ಬಳಿಗೆ ಬರುತ್ತಾರೆ. ತಮ್ಮ ತಮ್ಮಲ್ಲಿ ಉಂಟಾದ ವಾದದ ಸಮಸ್ಯೆಯ ಪರಿಹಾರಕ್ಕಾಗಿ ಈತನ ಬಳಿ ಬಂದಿರುತ್ತಾರೆ. ಅವರು-

> 'ಇಂದುಮುಖಿಯರ ಮದುವೆಯಾಗಿ ಸಂಸಾರದೊಳು ಹೊಂದುವುದು ಸುಖವೋ
> ಎಲ್ಲವನುಳಿದು ಸುವಿರಕ್ತಿಯಿಂದೆ ದೇಶಾಂತರವ ಚರಿಸುವುದು ಸುಖವೊ ಪೇಳ್'

ಎಂದು ಕೇಳುತ್ತಾರೆ. ಅವರು ಕುಳಿತಿದ್ದಂತೆಯೇ ನೆಯ್ಗೆಯ ಎಳೆ ಹರಿದುಹೋಯಿತು. ದೀಪವ ತಾ ಎಂದು ದುಗ್ಗಳೆಗೆ ದಾಸಿಮಯ್ಯ ಹೇಳುತ್ತಾರೆ. ಮಧ್ಯಾಹ್ನದ ಉರಿ ಬೆಳಕಿನಲ್ಲಿ ದೀಪ ಕೇಳುತ್ತಾರೆ. ದುಗ್ಗಳೆ ದೀಪ ತಂದು, ಅವರ ಅಪ್ಪಣೆಯಂತೆ ಹರಿದ ಎಳೆಯನ್ನು ಕಟ್ಟಿ ಹೋಗುತ್ತಾಳೆ. ಮತ್ತೆ ಕುಂಚಿಕೆಯ ತಾ ಎನ್ನುತ್ತಾರೆ. ಸತಿ ಬಂದು ತಲೆಯ ಮೇಲೆಯೇ ಇದ್ದ ಕುಂಚಿಕೆಯನ್ನು ತೆಗೆದುಕೊಟ್ಟು ಹೋಗುತ್ತಾಳೆ. ಹೀಗೆ ದಿವಸವೆಲ್ಲವೂ ಒಂದಲ್ಲ ಒಂದು ನೆಪದಿಂದ ಆಕೆಯ ಸಹಾಯವನ್ನು ಪಡೆಯುತ್ತಲೇ ಇರುತ್ತಾನೆ. ಸರಿ, ಸಂಜೆ ಆರೋಗಣೆಗೆ ಕುಳಿತುಕೊಳ್ಳುತ್ತಾರೆ. ತಂಗುಳಂಬಲಿ ಸಲಿಸುವಾಗ ದಾಸಯ್ಯ ಬಿಸಿ ಬಹಳ, ಮೊರದಲ್ಲಿ ಬೀಸು ಎನ್ನುತ್ತಾರೆ. ಮರುಮಾತನಾಡದೆ ದುಗ್ಗಳೆ ಮೊರ ತಂದು ಗಾಳಿ ಹಾಕುತ್ತಾಳೆ. ದಿನವೆಲ್ಲ ಸಮಸ್ಯೆಗೆ ಉತ್ತರ ಕಂಡುಕೊಂಡ ವಿರಕ್ತ ಚರಮೂರ್ತಿಗಳು–

> 'ಪತಿವಾಕ್ಯವೇ ಸತ್ಯ, ಪತಿಶೀಲವೇ ಶೀಲ, ಪತಿಯ ಸ್ತೋತ್ರವೇ ಮಂತ್ರ, ಪತಿಯೆ ತನ್ನ ಮಿತ್ರ,
> ಪತಿಯುಂಡು ಮಿಕ್ಕುದೇ ಶೇಷ, ಪತಿಮನೆ ವಾಸವೇ ವಾಸ, ಪತಿ ದೈವವೆಂಬುವ ಸತಿಯಿರಲು ತನಗೆ ಸಂಸಾರಸುಖಮಲ್ಲದೊಡೆ
> ಕೃತಕದಿಂದಿಹ ಸತಿಯ ಬಿಟ್ಟು ದೇಶಾಂತರವೆ ಅತಿ ಸುಖಂ......'

ಎನ್ನುತ್ತಾ ಅವರಿಂದ ಬೀಳ್ಕೊಂಡು ಹೊರಡುತ್ತಾರೆ. ಮೇಲುನೋಟಕ್ಕೆ ಈ ಕಥೆ ಸತಿ ಪತಿಯ ಗುಲಾಮಳಂತಿರ ಬೇಕು ಎಂಬುದನ್ನು ಪ್ರತಿಪಾದಿಸಿದಂತೆ ತೋರುವುದು ನಿಜ. ಗಂಡ ಬಂದವರ ಎದುರಿನಲ್ಲಿ ವಿವೇಕರಹಿತವಾಗಿ ನಡಸಿಕೊಂಡಂತೆ ಕಾಣುತ್ತದೆ. ಮಧ್ಯಾಹ್ನದ ಉರಿಬಿಸಿನಲ್ಲಿ ಬೆಳಕಲ್ಲಿ ದೀಪ ತಾ ಎನ್ನುವುದು, ಎಳೆ ಕತ್ತರಿಸಿದ್ದು ಕಂಡರೂ ಕಾಣದವನಂತೆ ತೋರಿಕೊಡು ಎಂದು ಹೇಳುವುದೂ, ತಲೆಯ ಮೇಲಿದ್ದ ಕುಂಚಿಕೆಯನ್ನು ಕೈಎತ್ತಿ ತೆಗೆದುಕೊಳ್ಳಲಾರದೆ ಹೆಂಡತಿಯ ಸೇವೆಯನ್ನು ಬಯಸುವುದು ಯಜಮಾನಿಕೆಯ ದರ್ಪ ಪ್ರದರ್ಶನವಲ್ಲವೆ? ಮೂರು ದಿವಸದ ಹಿಂದೆ ಮಾಡಿಟ್ಟಿದ್ದ ತಂಗಳು ಅಂಬಲಿ ಕೈ ಸುಟ್ಟೀತೆಂದು ಮೊರ

ತಂದು ಗಾಳಿ ಹಾಕು ಎಂದು ಹೇಳುವುದು ವಿವೇಕಶೂನ್ಯವಲ್ಲದೆ ಮತ್ತೇನು? ಕಥಾಸಂದರ್ಭವಾಕ್ಯ ಹೀಗೆ ಪ್ರಶ್ನಿಸುವಂತಿದ್ದರೂ ಅಂತರಾರ್ಥ ಇದರಿಂದ ದೂರವಾಗಿದೆ. ವಿರಕ್ತಚರಮೂರ್ತಿಗಳು ಬಂದು ಸಂಸಾರ ಸುಖವೋ, ವಿರಕ್ತಿ ಸುಖವೋ ಎಂದು ಪ್ರಶ್ನೆ ಹಾಕಿದಾಗಲೇ ಚತುರಮತಿ, ಸೂಕ್ಷ್ಮಗ್ರಾಹಿ ದುಗ್ಗಳೆಗೆ ಎಲ್ಲವೂ ಅರ್ಥವಾಯಿತು. ಇಚ್ಛೆಯನರಿತು ನಡೆವ ಸತಿ ಇದ್ದರೆ ಸ್ವರ್ಗಕ್ಕೆ ಕಿಚ್ಚು ಹಚ್ಚು ಎಂಬ ಸರ್ವಜ್ಞನ ಮಾತಿನಂತೆ ಹೆಂಡತಿ ತನ್ನ ಸತೀಧರ್ಮವನ್ನೂ ಗಂಡ ಪತಿಧರ್ಮವನ್ನೂ ಅರ್ಥಮಾಡಿಕೊಂಡು ನಡೆವುದಾದರೆ ಸಂಸಾರವು ಕಾಣದ ಸ್ವರ್ಗಕ್ಕಿಂತ ಮೇಲಲ್ಲದೆ ಏನು? ವಚನ ಧರ್ಮದಲ್ಲಿ ಸಂಸಾರದಲ್ಲಿದ್ದರೂ ವಿರಕ್ತರಾಗಿರಬಹುದು. ಸಂಸಾರದಲ್ಲಿದ್ದೇ ಮೋಕ್ಷ ಪಡೆವ, ಆತ್ಮಜ್ಞಾನ ಪಡೆವ ಸಾಧನೆ ಸಾಧ್ಯ ಎಂದು ಪೂರ್ಣನಂಬಿದವರು. ಗಂಡ ದಾರಿತಪ್ಪಿನಡೆವಾಗ, ನುಡಿವಾಗ ಸತಿಯರು ಗಂಡಂದಿರಿಗೆ ಎಚ್ಚರಿಸಿರುವ ನಿದರ್ಶನಗಳು ಶರಣ ದಂಪತಿಗಳಲ್ಲಿ ಸಾಕಷ್ಟು ಸಿಗುತ್ತವೆ. ಶಂಕರದಾಸಿಮಯ್ಯನಿಗೆ ದಾಸಿಮಯ್ಯ ಬತ್ತಕೊಡಲು ಹೋದಾಗ ಇದೇ ದುಗ್ಗಳೆ ಪತಿಗೆ ಎಚ್ಚರಿಕೆಕೊಡುತ್ತಾಳೆ.

ದಾಸಿಮಯ್ಯ ಕುಶಲ ನೇಕಾರ. ಸತಿಪತಿಗಳಿಬ್ಬರೂ ಕೂಡಿ ವರ್ಷಾಂತರಗಳ ಕಾಲ ಶ್ರಮಿಸಿ ಅತ್ಯುತ್ತಮ ವಸ್ತ್ರವೊಂದನ್ನು ನೇಯುತ್ತಾರೆ.

> ದುಗ್ಗಳೆಯು ನೂತ ನೂಲು ಚಿತ್ತೈಸೆನುತೆ। ಅಗ್ಗಳದ ಜಲಪತ್ರಿಯುಂ ತಂದು ಶೋಧಿಸುತೆ
> ಸತ್ಯತಳಗಲ್ಲ ಸಾತ್ವಿಕದ ಕಡಹಂ ಪಿಡಿದು। ಮರ್ತ್ಯದವಗುಣವ ಕಳೆವಂತೆ ಗೋಟಿಯು ಕಳೆದು
> ಕರುಣಾದಿ ಗುಣ ಕಸವ ಕಳೆದು ಘೂರುಹ ಹಿಂಜಿ। ಅರಳೆಯುಂ ಹೊಡಚಿ ಹೊಸೆದನುಮಾಡಿದಾ ಹಂಜಿ
> ಭಕ್ತಿ ಭೈಸಿಕೆಯಾಮಣೆಯ ಮೇಲೆ ಕುಳ್ಳಿರ್ದು ಯುಕ್ತಿ ಕರಣಂ ಮುಕ್ತಿ ಕದರಿಂ ಪಿಡಿದು
> ಹಂಜಿಯಂ ಕದರಲಯೆರಿಸಿ ಪಿಡಿದು ನೂಲುತಂ। ಕುಂಜರಾಸುರವೈರಿ ಶರಣೆಂದು ಪಾಡುತಂ

ಸೀರೆಯ ನೆಯ್ವವ ನಾನೋ ನೀನೋ ರಾಮನಾಥ–ಶಿವಧ್ಯಾನ ಭಕ್ತಿಗಳಲ್ಲಿ ಕಾಯಕಮಾಡಿ ಮುಗಿಸುತ್ತಾನೆ. ಅದನ್ನು ಮಾರಲು ಸಮೀಪದ ಸಿದ್ದಾಪುರದ ಸಂತೆಗೆ ಕೊಂಡೊಯ್ಯುತ್ತಾನೆ. ಕಣ್ಣು ಕೋರೈಸುವ ಆ ವಸ್ತ್ರವನ್ನು ಬಂದು ನೋಡಿದವರೆಲ್ಲ ಮೆಚ್ಚಿ ಹೋದರೆ ಹೊರತು ಅದಕ್ಕೆ ಬೆಲೆಕಟ್ಟಿ ಕೊಂಡುಕೊಳ್ಳುವವರು ಯಾರು ಬರಲಿಲ್ಲ. ಬಂದು ನೋಡಿದವರೆಲ್ಲ ತಲೆಕೊಡಹಿ ಹಿಂದೆ ಹೋದರು. ಕೊಂಬರು ಶರಣೆಂಬುವರಯ್ಯ–ಎಂದು ದಾರಿ ತೋರದೆ ಮತ್ತೆ ವಸ್ತ್ರದೊಡನೆ ಊರಿನ ಕಡೆ ಹೊರಡುತ್ತಾನೆ.

ದಾರಿಯಲ್ಲಿ ಹಾಗಲಹಣ್ಣಿನಂಥ ಮುಪ್ಪಿನ ಜಂಗಮನೊಬ್ಬ ಚಳಿಯಿಂದ ನಡುಗುತ್ತ ಇವನಿಗೆದುರಾಗಿ, 'ಹೊದೆಯಲೇನಾದರೂ ಕೊಡಬಲ್ಲೆಯಾ ತಂದೆ' ಎಂದು ಕೇಳುತ್ತಾನೆ. ದಾಸಿಮಯ್ಯನ ಬಳಿ ಆ ಅಮೂಲ್ಯ ವಸ್ತ್ರದ ಹೊರತು ಬೇರೆ ವಸ್ತ್ರವಿರಲಿಲ್ಲ. ಹಿಂದು ಮುಂದು ನೋಡದೆ ಆ ಅಮೂಲ್ಯ ವಸ್ತ್ರವನ್ನು ಆ ಮುದಿ ಜಂಗಮನಿಗೆ ಹೊದಿಸುತ್ತಾನೆ. ಇವನ ಔದಾರ್ಯವನ್ನು ಮತ್ತೂ ಒತ್ತಿ ನೋಡಬಯಸಿದ ಜಂಗಮ 'ನನಗೇಕೆ ಇಂಥ ಬೆಲೆಯುಳ್ಳ ವಸ್ತ್ರ ತಂದೆ, ಹಳೆಯ ಹರಕು ಬಟ್ಟೆಯಿಲ್ಲವೆ?' ಎಂದು ಕೇಳಿದ. ಆಗ ದಾಸಿಮಯ್ಯ 'ಒಮ್ಮೆ ನಿಮಗೆ ಅರ್ಪಿತವಾದದ್ದು ನಿಮ್ಮಸೊಮ್ಮು ಸ್ವಾಮಿ, ಬೇರೇನೂ ಭಾವಿಸದೆ ಹೊದ್ದಿಕೊಳ್ಳಿ, ಚಳಿ ಬಹಳವಿದೆ' ಎಂದು ಹೇಳುತ್ತಾನೆ. ಅಷ್ಟಕ್ಕೆ ನಿಲ್ಲದೆ ಆ ಮುದಿ ಜಂಗಮ ದೇವತೆಗಳೂ ನೋಡಿ ಕರುಬುವಂತಿದ್ದ ಆ ವಸ್ತ್ರವನ್ನು ಹರಿದು ಚಿಂದಿ ಚಿಂದಿ ಮಾಡಿದ. ಕಾಲ ಹುಣ್ಣಿಗೆ ಒಂದನ್ನು ಸುತ್ತಿದ, ತಲೆಗೊಂದು ತುಂಡು ಸುತ್ತಿಕೊಂಡ, ಮತ್ತೊಂದು ತುಂಡನ್ನು ಹೊದ್ದುಕೊಂಡ. ಗಂಡಹೆಂಡತಿಯರಿಬ್ಬರೂ ಅಪಾರಶ್ರಮ ಪರಿಶ್ರಮಗಳಿಂದ ನೆಯ್ದಿದ್ದ ವಸ್ತ್ರವನ್ನು ಹಳೆಯ ಬಿಸಾಟ ಬಟ್ಟೆಯಂತೆ ಪರಪರನೆ ಹರಿದು ಚಿಂದಿ ಮಾಡಿದರೂ ಉದ್ವೇಗಗೊಳ್ಳದೆ ಉದ್ವಿಗ್ನನಾಗದೆ ದಾಸಿಮಯ್ಯ ಹಸನ್ಮುಖಿಯಾಗಿಯೇ ನಿಂತುನೋಡುತ್ತಾನೆ. ಮನೆಗೆ ಬಂದು ವಸ್ತ್ರದ ಕಥೆ ಹೇಳುತ್ತಾನೆ. ಇಂಥ ಸಂದರ್ಭದಲ್ಲಿ ಸಾಮಾನ್ಯ ಸ್ತ್ರೀಯ ವರ್ತನೆಯನ್ನು ಸುಲಭವಾಗಿ ಕಲ್ಪಿಸಿಕೊಳ್ಳಬಹುದು. ಆದರೆ ಈ ಸಾಧ್ವೀಮಣಿಯ ಮುಖಮಲ್ಲಿಗೆ ಬಾಡಲಿಲ್ಲ. ನಗುನಗುತ್ತಲೇ ಗಂಡನನ್ನು ಸ್ವಾಗತಿಸುತ್ತಾಳೆ. ಹಿಂದೊಮ್ಮೆ ಮನೆಗೆ ಅತಿಥಿ ಜಂಗಮರು ಬಂದಿದ್ದಾಗ ಮನೆಯಲ್ಲಿ ಏನೂ ಇಲ್ಲದೆ ತೌರಿನವರು ಕೊಟ್ಟಿದ್ದ ಕನಕಕಂಕಣವನ್ನು ಗಂಡನಿಗೆ ಕೊಟ್ಟು ಮಾರಿಸಿ ಅತಿಥಿಸತ್ಕಾರ ನಡೆಸಿದ್ದಳು. ಹೀಗಿರುವಾಗ ವಸ್ತ್ರವೊಂದು ಹಾಳಾಯಿತೆಂದು ಗೋಳಿಡುವಳೇ ಅವಳು. ಈ ವೃದ್ಧ ಜಂಗಮ ಶಿವನೆಂದೂ, ಈ ದಂಪತಿಗಳ ಭಕ್ತಿಗೆ ಮೆಚ್ಚಿ ಅವರಿಗೆ 'ತವನಿಧಿ'ಯನ್ನು ದಯಪಾಲಿಸಿದನೆಂದೂ ಕಥೆ ಬರುತ್ತದೆ. ಒಟ್ಟಿನಲ್ಲಿ ಈ ವಸ್ತ್ರದ ವ್ಯಾಪಾರದ ಕಥೆ ಹಬ್ಬುತ್ತದೆ. ಶಿವ ಮೆಚ್ಚುವಂತಹ ಬಟ್ಟೆ ನೆಯ್ದು ಕೀರ್ತಿ ಇವರದಾಗಿ, ಇವರು ನೆಯ್ದ ಬಟ್ಟೆಗಳು ಚೆನ್ನಾಗಿ ವ್ಯಾಪಾರವಾಗಿ ಮನೆ ದವಸ ಧಾನ್ಯಗಳಿಂದ ತುಂಬುತ್ತದೆ. ಗಣಾರಾಧನೆಯ ಜೊತೆಗೆ ಬೇಡಿದವರಿಗೆ ಬೇಡಿದಷ್ಟು ನೀಡುವ ಶಕ್ತಿಯೂ ಇವರದಾಗುತ್ತದೆ.

ದಾಸ–ದುಗ್ಗಳೆಯರ ಕೀರ್ತಿ ಪಸರಿಸತೊಡಗಿತು. ಹೆಂಗಳೆಯರು ಕುಟ್ಟುವಾಗ, ಬೀಸುವಾಗ, ಕೂಸನ್ನು ಮಲಗಿಸುವಾಗ 'ದಾಸಯ್ಯ ನೆಯ್ದ ದೇವಾಂಗದೊಸ್ತರವ ಜಗದೀಶ್ವರ ತಾನೆ ಕೊಳಲು ಬಂದ ದೇವಾಂಗದೊಸ್ತರವ' ಎಂದು ಮುಂತಾಗಿ ಹಾಡುತ್ತಿದ್ದರಂತೆ. ಗಂಡಸರು ಬಿತ್ತುವಾಗ, ಹರಗುವಾಗ, ಒಕ್ಕುವಾಗ ದಾಸ–ದುಗ್ಗಳೆಯರ ಪವಿತ್ರ ಜೀವನವನ್ನು ನೆನೆಯುತ್ತಿದ್ದರಂತೆ.

ಶಿವಕೃಪೆ, ರಾಜಮನ್ನಣೆ, ಶಿಷ್ಯಸ್ತೋಮ, ಆದರ್ಶಸತಿ ಎಲ್ಲವೂ ಸೇರಿ ಮಹಾಶರಣ ದಾಸಿಮಯ್ಯನಲ್ಲಿ—

> 'ಮುದನೂರೊಳ್ ಜೇಡರದಾಸಯ್ಯಂ ರಾಮನಾಥ ಪ್ರಸಾದ ಸಗರ್ವ ಹೃದಯಂ ಶಿವನಿಂ
> ತವನಿಧಿಯಂ ಪಡೆದೊಂದು ದಿವಸಂ ಶಿವನಂತೆ ಕುಡುವರೆನ್ನಂತೆ ಪಡೆದರಿಲ್ಲೆಂಬ ಗರ್ವಂ ತನ್ನ ಮನದೊಳ್ ಪೊಳೆಯೆ,
> ಮನಸಿಜಹರನೀತನ ಗರ್ವಮಂ ಕಂಡು ತನ್ನಿಂದಧಿಕನಂ ಕೊಂಡೊಯ್ದು ತೋರ್ಪೆನೆಂದು'

ದಾಸಯ್ಯನ ಮಮಕಾರ ಮುಗುಳೊಡೆಯದಂತೆ ಚಿಗುರಿನಲ್ಲೇ ಚಿವುಟಿ ಹಾಕಿದ ಘಟನೆಯೊಂದು ನಡೆಯುತ್ತದೆ.

ಕಾರಣಿಕನಾದ ಜೇಡರ ದಾಸಿಮಯ್ಯನ ಕೀರ್ತಿ ನಾಡಿನಲ್ಲೆಲ್ಲಾ ಹರಡಿತ್ತು. ಇದೇ ಕಾಲದಲ್ಲಿ ಕೀರ್ತಿವಂತನಾಗಿದ್ದ ಶಂಕರದಾಸಿಮಯ್ಯ ದಾಸಿಮಯ್ಯನನ್ನು ಕಾಣಬೇಕೆಂಬ ಹಂಬಲದಿಂದ ತನ್ನ ಸತಿ ಶಿವದಾಸಿ ಮತ್ತು ಶಿಷ್ಯ ವಕ್ರಪಾದನೊಂದಿಗೆ ಪಯಣಮಾಡಿ ಮುದನೂರಿಗೆ ಬಂದು ರಾಮನಾಥ ದೇವಾಲಯದಲ್ಲಿ ತಂಗುತ್ತಾನೆ. ಶಂಕರದಾಸಿಮಾರ್ಯರ ಆಗಮನ ತಿಳಿದು ಅತ್ಯಂತ ಆನಂದದಿಂದ ದಾಸಿಮಯ್ಯ ಅವರ ಬಳಿಗೆ ಧಾವಿಸಿ ಅವರ ಯೋಗಕ್ಷೇಮ ವಿಚಾರಿಸುತ್ತಾನೆ. ಶಿವಸಂಕಥಾಗೋಷ್ಠಿಯಲ್ಲಿ ತಲ್ಲೀನನಾಗುತ್ತಾನೆ. ಸಂಜೆ ಸಮೀಪಿಸಿತು. ದಾಸೋಹ ಸಮಯ ಸಮೀಪಿಸಿತು. ಶಿಷ್ಯ ವಕ್ರಪಾದನನ್ನು ಕರೆದು ಧಾನ್ಯ ಭಿಕ್ಷೆ ಪಡೆದು ಬರುವಂತೆ ಅಪ್ಪಣೆ ಮಾಡಿದರು. ಅಲ್ಲಿಯೇ ಇದ್ದ ದಾಸಿಮಯ್ಯ ಅವರ ಅಪ್ಪಣೆ ಕೇಳಿ 'ಮೇಲನರಿಯದೆ ಶಿವಭಕ್ತರ್ ಪಿರಿಯರ್ಗೆ ಪಿರಿಯರುಂಟೆಂಬುದನರಿಯದೆ, ವಿಚಾರಿಸದೆ, ಶೀತಕರಂಗೆ ತಂಪನೀವಂತೆ, ಭಾಸ್ಕರಂಗೆ ಬೆಳಕಂ ನೀಡುವಂತೆ, ವಹ್ನಿಗೆ ಉಷ್ಣವಂ ಕೊಡುವಂತೆ' ದಾಸಿಮಯ್ಯ ಕೈಮುಗಿದು, 'ದೇವತಾರೋಗಣೆಗೆ ಧಾನ್ಯಮಂ ತರ ಪುಗಲೇಕೆ ? ಎನ್ನ ಮನೆಯೊಳ್ ಸುಕುಮಾರ ಧಾನ್ಯಮುಂಟು. ಇಲ್ಲಿ ನೀವಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದು. ಆವ ವಿರೋಧಂ ಬೇಡ, ಹತ್ತು ಇಪ್ಪತ್ತು ಸಾವಿರ ನೆಲ್ಲ ಹೇರಂ ಕಳಿಪುವೆಂ', ಅವಂ ಕೆಯ್ಕೊಳ್ವುದು' ಎಂದು ಸ್ವಾಧೀನತೆ ಮಿಕ್ಕು ಸ್ನೇಹರಸದೊಡನೆ ಬಿನ್ನವಿಸಿ ಕೊಳ್ಳುತ್ತಾನೆ.

ಸಮಯ ಸಾಧಿಸುತ್ತಿದ್ದ ಶಂಕರದಾಸಿಮಾರ್ಯರು 'ನಿಜ, ನಿಜದಾಸಯ್ಯ ನೀವು ತವನಿಧಿಯುಳ್ಳ ಸಿರಿವಂತರು, ನಾವು ತಿರಿದುಂಬ ದರಿದ್ರರು. ಏನು ಮಾಡುವುದು ನಮ್ಮ ದೇವರೇ ತಿರುಕ. ಅವನನ್ನು ಉಪಾಸಿಸುವ ನಮಗೆ ಸಿರಿವಂತಿಕೆ ಎಲ್ಲಿಂದ ಬರಬೇಕು ? ನಿಮ್ಮ ದಾನಬುದ್ಧಿ ಹೆಚ್ಚಿನದು. ನಮ್ಮೂರ ಒಕ್ಕಲಿಗರು ಧಾನ್ಯ ಬೆಳೆಯುತ್ತಾರೆ, ಬೇಡಿದವರಿಗೆ ಮಾತ್ರ ಕೊಡುತ್ತಾರೆ. ನೀವಾದರೋ ಬೇಡದೆ ಕೊಡುವವರು. ನೀವು ಕೊಡುವೆವೆಂದುದೇ ಸಾಕು ನಮಗೆ. ನಿಮ್ಮ ತವನಿಧಿಯ ಮಹಿಮೆಯಂಥದೋ ! ಕೊಡುವೆವೆಂದು ನೀವು ಹೇಳುತ್ತಲೇ ನಮಗೆ ಧಾನ್ಯ ದೊರೆತುಬಿಟ್ಟಿತು. ಉಪಕೃತರಾದೆವು' ಎನ್ನುತ್ತಾರೆ.

ಇವರ ಒಂದೊಂದು ಮಾತೂ ದಾಸಿಮಯ್ಯನ ಗರ್ವದ ಕೊಡವನ್ನು ಚುಚ್ಚಿ ಮಡುಗಟ್ಟಿದ ಮಮಕಾರರಸ ಸೋರ ತೊಡಗಿತು. ಒಂದು ಮಾಡಹೋಗಿ ಮತ್ತೊಂದು ಆಗಿಹೋಗಿತ್ತು. ದಿಙ್ಮೂಢನಾಗಿ, ಮ್ಲಾನವದನನಾಗಿ ಮನೆಯತ್ತ ಮರಳಿದ. ಗಂಡನ ಬಾಡಿದ ಮುಖ ಕಂಡ ದುಗ್ಗಳೆಗೆ ಅಚಾತುರ್ಯ ಒಂದು ನಡೆದುಹೋಗಿರುವುದು ಅರ್ಥವಾಯಿತು. ಅವರನ್ನು ಕುಳ್ಳಿರಿಸಿ, ಉಪಚರಿಸಿ ಮುಖ ಬಾಡಿದ ಕಾರಣ ಕೇಳುತ್ತಾಳೆ.

> 'ವ್ರತ ವಿಹೀನರ ಮನೆಗೆ ಹೋದಿರೋ ? ಪತಿತರಂ ನುಡಿಸಿದಿರೋ ? ವೆಗ್ಗಳವ್ರತಿಗಳಂ ತಪ್ಪೆಂದಿರೊ? ಸಲ್ಲದುದ ಗ್ರಹಿಸಿ
> ದಿರೊ ? ಹಿತರ ಹಿಂಗಿದಿರೊ ? ವಿವೇಕೋನ್ನತಿ ಮರೆದಿರೊ ?'

ಎಂದು ಪ್ರಶ್ನಿಸುತ್ತಾಳೆ. ಆಕೆಯ ಪ್ರಶ್ನೆ ಗಂಡನ ಮನಸ್ಸನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಂಡಿದ್ದಳೆಂಬುದನ್ನು ಸ್ಪಷ್ಟ ಪಡಿಸುತ್ತದೆ. ದಾಸಿಮಯ್ಯ 'ನೀನು ಹೇಳಿದಂತೆ ವಿವೇಕೋನ್ನತಿಯನ್ನು ಮರೆತೆ' ಎಂದು ಹೇಳಿ ನಡೆದ ಘಟನೆ ವಿವರಿಸುತ್ತಾನೆ. ಕೇಳಿ ತುಂಬ ದುಃಖದಿಂದ

> 'ಬೇಡುವರೆ ಶಿವಪೂಜಕರು ? ನಾಡಾಡಿ ಮಾನವರೋ ? ಅವರೊಳಿಂತಾಡಬಹುದೆ ? ಅವರಿಗಿಂ ಸಿರಿಯುಳ್ಳವರೆ ನೀವು ?
> ರೂಢಿಸುವ ಮೋಕ್ಷವನು ದೇವರ ಬೇಡಿಕೊಳ್ಳದೆ ನಾಲ್ಕು ನೆಲ್ಲನು ಬೇಡಿಕೊಂಡರಿಗೇಕೆ ಮಾಹೇಶ್ವರರೊಳಗೆ ಹಮ್ಮು ?

ದಾಸಯ್ಯನಿಗೆ ತನ್ನ ತಪ್ಪು ಅರ್ಥವಾಯಿತು. ಮೋಕ್ಷದ ಅಕ್ಷಯಸುಖವನ್ನು ಬೇಡದೆ ನಾಲ್ಕುನೆಲ್ಲನೀವ ತವನಿಧಿಯನ್ನು ಪಡೆದ ತಪ್ಪು ತಿಳಿದು ಪಶ್ಚಾತ್ತಾಪವಾಯಿತು. ಆ ತವನಿಧಿಯಿಂದ ತನಗೆ ದೊರೆತುದೇನು? ಹಮ್ಮು, ಹಮ್ಮ ಸರ್ವ ಪತನಕ್ಕೆಮೂಲ ವಾದ ಮೂಲಾಹಂಕಾರ! ಆ ತವನಿಧಿಯೂ ತವಲಾಗಿ ಹೋಗಿದ್ದಿತು. ಸೊಮ್ಮು ಹಮ್ಮಿಗೆ ಮೂಲ, ಹಮ್ಮು ಅವನತಿಗೆ ಹಾದಿ.

ಈ ಪ್ರಕರಣದಿಂದ ದಾಸಿಮಯ್ಯನಲ್ಲಿ ಮೂಡುತ್ತಿದ್ದ ಗರ್ವ ನಾಶವಾಯಿತು. ದುಗ್ಗಳೆಯ ಸಲಹೆಯಂತೆ ಮೋಕ್ಷದ ಪರಮಸುಖದ ಕಡೆ ಮುಖ ಮಾಡಿದ.

ದಾಸಿಮಯ್ಯ-ದುಗ್ಗಳೆಯರ ಚರಿತ್ರೆ ಆ ಕಾಲಕ್ಕೆ ಕಥೆಯಾಗಿ ಹಬ್ಬಿರುವಂತೆ ತೋರುತ್ತದೆ. ಇವರ ಭಕ್ತಿ, ಇವರ ಜೀವನ, ಇವರ ಕಾಯಕ ಮುಂದೆ ಬಂದ ಬಸವಾದಿ ಶರಣರಿಗೆ ಮಾರ್ಗದರ್ಶಕವಾಗಿರುವಂತೆ ತೋರುತ್ತದೆ. ಬಸವಣ್ಣನವರು ತಮ್ಮ ಹತ್ತಾರು ವಚನಗಳಲ್ಲಿ ಇವರನ್ನು ಕೊಂಡಾಡಿದ್ದಾರೆ.

೧. 'ದಾಸಯ್ಯ ಶಿವದಾಸನ ನೆರೆಯ ನೋಡಯ್ಯ' ೨. 'ನೆರೆನಂಬೋ ನೆರೆನಂಬೋ ದಾಸ-ದುಗ್ಗಳೆಯರಂತೆ' ೩. 'ದಾಸಯ್ಯನ ಮನೆಯಲ್ಲು ಜೇಡಿದೆ' ೪. 'ದಾಸಯ್ಯನಂತೆ ಉಡ ಕೊಡ ಬಲ್ಲೆನೆ' ೫. ದಾಸದೇವ ತನ್ನ ವಸ್ತ್ರವನಿತ್ತು ತಪಸಿಧಿ ಪ್ರಸಾದ ಪಡೆದ'

ದೇವರದಾಸಿಮಯ್ಯ ಬಸವೋದಯಕ್ಕೆ ಮೊದಲು ಮೂಡಿದ ಬೆಳ್ಳಿಚುಕ್ಕಿ. ಈಗ ತಿಳಿದಿರುವಂತೆ ದಾಸಿಮಯ್ಯನೇ ಆದ್ಯ ವಚನಕಾರ. ದುಗ್ಗಳೆಯೂ ವಚನಕಾರ್ತಿಯಾಗಿರುವಂತೆ ತೋರುತ್ತದೆ. 'ದಾಸಯ್ಯಪ್ರಿಯರಾಮನಾಥಾ' ಎಂಬ ಅಂಕಿತವಿರುವ ಒಂದು ವಚನ ದೊರೆತಿದೆ.

ಇಲ್ಲಿ ಬರುವ ಬಸವ, ಅಲ್ಲಮ, ಸಿದ್ಧರಾಮರ ಹೆಸರುಗಳನ್ನು ಕಂಡು ಪ್ರೊ. ಎಲ್. ಬಸವರಾಜುರವರು ಇದು ಕೂಟ ವಚನವಿರಬೇಕೆಂದು ಹೇಳುತ್ತಾರೆ. ಜೇಡರದಾಸಿಮಯ್ಯನನ್ನು ಬಸವಣ್ಣನವರ ಹಿರಿಯ ಸಮಕಾಲೀನನೆಂದು ಇಟ್ಟುಕೊಳ್ಳುವುದಾದರೆ ಆಗ ಈ ಸಮಸ್ಯೆ ತಾನಾಗಿಯೇ ಪರಿಹಾರವಾಗುತ್ತದೆ. ಮತ್ತೆ ದುಗ್ಗಳೆ ನಮಗೆ ತಿಳಿದ ಮಟ್ಟಿಗೆ ಪ್ರಪ್ರಥಮ ವಚನಕಾರ್ತಿಯಾಗುತ್ತಾಳೆಂದು ಡಾ॥ ಚಿದಾನಂದಮೂರ್ತಿಯವರು ಅಭಿಪ್ರಾಯಪಡುತ್ತಾರೆ.

**ಗ್ರಂಥ ಋಣ :**

೧) ಉತ್ತರದೇಶದ ಬಸವಲಿಂಗ ವಿರಚಿತ 'ಬಸವೇಶ್ವರ ಪುರಾಣ ಕಥಾಸಾಗರ' ಸಂ. ಎಸ್. ಉಮಾಪತಿ. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ; ೨) ಶಾಂತಲಿಂಗದೇಶಿಕಕೃತ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ'-ಸಂ. ಡಾ॥ ಆರ್. ಸಿ. ಹಿರೇಮಠ, ಭಾಗ-೧, ಕರ್ನಾಟಕ ವಿಶ್ವವಿದ್ಯಾನಿಲಯ ; ೩) ಬಸವೇಶ್ವರರ ಸಮಕಾಲೀನರು-ಜೇಡರದಾಸಿಮಯ್ಯ ಲೇ : ಶ್ರೀ ಎನ್. ಬಸವಾರಾಧ್ಯ, ಬಸವ ಸಮಿತಿ, ಬೆಂಗಳೂರು ; ೪) ಶರಣಚರಿತಾಮೃತ-ಶ್ರೀ ಸಿದ್ಧಯ್ಯ ಪುರಾಣಿಕ, ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು : ೫) ಅದೃಶ್ಯ ಕವಿ ವಿರಚಿತ 'ಪ್ರೌಢರಾಯನ ಕಾವ್ಯ' ಸಂ : ಸಂ. ಶಿ. ಭೂಸನೂರುಮಠ, ಮುರುಘಾಮಠ, ಧಾರವಾಡ ; ೬) ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ-ಭಾಗ ೫, ವಚನ ಸಾಹಿತ್ಯ-ಡಾ॥ ಎಂ. ಚಿದಾನಂದಮೂರ್ತಿ, ಕನ್ನಡ ಅಧ್ಯಯನ ಸಂಸ್ಥೆ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

## ಶರಣೆ ಬೊಂತಾದೇವಿ

—ಜಿ. ವಿ. ಶಿವಸ್ವಾಮಿ

ಭರತಖಂಡದ ಧಾರ್ಮಿಕ ಸಾಮಾಜಿಕ ಇತಿಹಾಸದಲ್ಲಿ ಸ್ತ್ರೀಯರ ಪಾತ್ರ ಬಹು ಮುಖ್ಯವಾದುದು. ವೇದ ಕಾಲದ ಸಮಾಜ ಸ್ತ್ರೀಯರಿಗೆ ಪ್ರಾಮುಖ್ಯತೆ ನೀಡಿರಲಿಲ್ಲ. ಅಂದೂ ಸಹ ಗಾರ್ಗಿ, ಮೈತ್ರೇಯಿ ಮುಂತಾದವರು ಸ್ತ್ರೀತನದ ಹಿರಿಮೆಯ ದ್ಯೋತಕವಾಗಿ ಶೋಭಿಸಿದ್ದಾರೆ. ಸ್ತ್ರೀಯು ಪುರುಷನಂತೆ ಎಲ್ಲಾ ಕೆಲಸಗಳನ್ನು ಮಾಡಬಲ್ಲಳು, ಅವಳು ಭಾರತೀಯ ಸಂಸ್ಕೃತಿಯ ಜೀವನಾಡಿ ಎಂಬುದನ್ನು ಮನಗಾಣಿಸಿದ್ದಾರೆ, 'ಯತ್ರ ನಾರ್ಯಾಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ' ಎಂಬ ಆದರ್ಶವಾಣಿ ಇದಕ್ಕೆ ನಿದರ್ಶನ.

ಕೆಲವು ಕಾಲಾನಂತರ ಸಮಾಜದ ಮುಖ್ಯಅಂಗವೆನಿಸಿದ ಸ್ತ್ರೀಯರ ಆಂತರಿಕ ಅಭಿವೃದ್ಧಿಗೆ ಪ್ರೋತ್ಸಾಹ ದೊರೆಯದೆ ಅವರ ಜೀವನಪ್ರಗತಿ ಸ್ಥಗಿತವಾಯಿತು. ಮನೆಯೇ ಆಕೆಯ ಕಾರ್ಯರಂಗವೆಂದು, ಅವಳ ಚಟುವಟಿಕೆ ಹೊಸ್ತಿಲಿನ ಒಳಗೇ ಎಂದು ನಿರ್ಧಾರವಾಯಿತು. ಹೀಗಾಗಿ ಆಕೆ ಬಹಿರಂಗವಾಗಿ ಸಮಾಜದಲ್ಲಿ ಬೆರೆಯಲು ಅವಕಾಶಗಳೇ ದೊರೆಯಲಿಲ್ಲ. ಅವಳಿಗೆ ಆತ್ಮಕಲ್ಯಾಣದ ಸಾಧನೆಗೂ ಸ್ವಾತಂತ್ರ್ಯವಿಲ್ಲದಂತಾಯಿತು. 'ನಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ಸ್ಮೃತಿಯ ವಾಣಿಯನ್ನು ತಪ್ಪಾಗಿ ಅರ್ಥ ಮಾಡಿಕೊಂಡ ಜನ ಆಕೆಯ ಸ್ವಾತಂತ್ರ್ಯವನ್ನೇ ಕಸಿದುಕೊಂಡರು.

ಕನ್ನಡನಾಡಿನಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ, ನೈತಿಕ, ಸಾಮಾಜಿಕ ಕ್ರಾಂತಿ ಹೆಣ್ಣಿನ ಬಗ್ಗೆ ಉದಾರ ನಿಲುವನ್ನು ತಳೆಯಿತು. ಕೆಲವು ಹೊಸಮೌಲ್ಯಗಳನ್ನು ದೊರಕಿಸಿ ಕೊಟ್ಟಿತು. ಬಸವಣ್ಣನವರ ನೇತೃತ್ವದಲ್ಲಿ ನಡೆದ ಈ ಮಹಾಕ್ರಾಂತಿ ಕನ್ನಡನಾಡಿನ ಚರಿತ್ರೆಯಲ್ಲಿ ಹೊಸ ಮನ್ವಂತರವನ್ನು ಸೃಷ್ಟಿಸಿತು. 'ಕಾಯಕವೇ ಕೈಲಾಸ'ವೆಂದು ದುಡಿಮೆಗೆ ಮಾನ್ಯತೆ ನೀಡಿ ಪ್ರೋತ್ಸಾಹಿಸಿದರು ಶರಣರು. ಇವರ ಶ್ರಮದಿಂದ ಸ್ವಾತಂತ್ರ್ಯ, ವಿಶ್ವಪ್ರೇಮ, ದಯೆ, ಶಾಂತಿ, ಸ್ತ್ರೀ-ಪುರುಷರಲ್ಲಿ ಸಮಾನತೆಗಳು ಪುನರ್ಜೀವನಗೊಂಡು, ವ್ಯಕ್ತಿಯ ವಿಕಾಸಕ್ಕೆ ನಾಂದಿಯಾಯಿತು. 'ಪರವಧುವನ್ನು ಮಹಾದೇವಿಯೆಂದು ಕಾಂಬೆ'[1] 'ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ'[2] ಎಂಬ ಶರಣರ ವಾಣಿಯು ಆದರ್ಶ ಸ್ತ್ರೀಯರ ಉದ್ಧಾರಕ್ಕೆ ನಾಂದಿಯಾಯಿತು. ಹೆಣ್ಣಿನ ಬಾಳಲ್ಲಿ ಕವಿದಿದ್ದ ಅಂಧಕಾರವನ್ನು ಹೋಗಲಾಡಿಸಿ ಜ್ಞಾನ ಹಾಗೂ ಆಧ್ಯಾತ್ಮಿಕ ಜ್ಯೋತಿಯನ್ನು ಬೆಳಗಿಸಿದರು. ಸಮಾಜ ಸಮತೆಯ ರಾಜ್ಯ, ಇಲ್ಲಿ ಹೆಣ್ಣು ಗಂಡು, ಮೇಲು ಕೀಳು ಎಂಬ ಭೇದ ಭಾವನೆಗೆ ಅವಕಾಶವಿಲ್ಲವೆಂದು ಸಾರಿದರು. 'ಮೊಲೆ ಮುಡಿಗಳಿದ್ದರೆ ಹೆಣ್ಣೆಂಬರು, ಗಡ್ಡ ಮೀಸೆಗಳು ಬಂದರೆ ಗಂಡೆಂಬರು, ಒಳಗೆ ಸುಳಿವ ಆತ್ಮ ಹೆಣ್ಣೂ ಅಲ್ಲ

1. ಬಸವಣ್ಣನವರ ವಚನಗಳು ೪೪೫. 2. ಸಿದ್ಧರಾಮೇಶ್ವರರ ವಚನಗಳು ೨.

ಗಂಡೂ ಅಲ್ಲ ರಾಮನಾಥ'[3] ಎಂಬುವ ಶಿವಶರಣರ ವಿಶಾಲ ದೃಷ್ಟಿ ಜನರ ಹೃದಯವನ್ನು ಪರಿವರ್ತಿಸಿತು.

ಬಸವಣ್ಣನವರ ಕಾಲದಲ್ಲಿ ನಡೆದ ಈ ಕ್ರಾಂತಿ ಲೋಕೋತ್ತರವಾದುದು. ಎಲ್ಲಾ ದಾರಿಗಳು ಕಲ್ಯಾಣದ ಕಡೆಗೆ ಎಂಬಂತಾಯಿತು. ಭರತಖಂಡದ ನಾನಾಕಡೆಯ ಜನರನ್ನು ಕಲ್ಯಾಣದ ಕಡೆಗೆ ಆಕರ್ಷಿಸಿತು. 'ಒಮ್ಮೆ ಸಂಗನ ಬಸವೇಶ್ವರರು ಬಂದು ಕಲ್ಯಾಣದಲ್ಲಿ ಒಂದು ಮನೆಯನ್ನು ಕಟ್ಟಿದರೆ ಮರ್ತ್ಯಲೋಕವೆಲ್ಲವೂ ಭಕ್ತಿಯ ಸಾಮ್ರಾಜ್ಯವಾಯಿತು, ಆ ಮನೆಗೆ ತಲೆ ಬಾಗಿ ಹೊಕ್ಕವರೆಲ್ಲರೂ ನಿಜಲಿಂಗ ಪದವಂ, ಪಡೆದರು'[4] ಎಂಬ ವಾಣಿ ಆ ಯುಗದಲ್ಲಿ ಆಕರ್ಷಿತವಾಯಿತು. ಕನ್ನಡದ ಶಿವ ಶರಣರು ತಮ್ಮ ಭಕ್ತಿಯ ಯುಕ್ತಿಯಿಂದ ಕೈಲಾಸವನ್ನೆ ಕಲ್ಯಾಣಕ್ಕೆ ತರಲು ಮಾಡಿದ ಅದ್ಭುತಸಾಧನೆಯು ಕನ್ನಡದ ಅದೇಕೆ ಭಾರತದ, ಅಷ್ಟೇಕೆ ಈ ಇಡೀ ಜಗತ್ತಿನ ಇತಿಹಾಸದಲ್ಲಿಯೇ ರೋಮ ಹರ್ಷಕವಾಗಿದೆ[5] ಎಂಬ ನುಡಿಯಂತೆ ರಾಷ್ಟ್ರದ ಎಲ್ಲಾ ಕಡೆಯಿಂದ ಶರಣ–ಶರಣೆಯರು ಬಂದು ಕಲ್ಯಾಣದಲ್ಲಿ ನೆಲೆಸುವಂತೆ ಮಾಡಿತು. ಚನ್ನಬಸವಣ್ಣ, ಅಲ್ಲಮಪ್ರಭು, ಮಡಿವಾಳ ಮಾಚಯ್ಯ, ಕಕ್ಕಯ್ಯ, ಮಾದರ ಚನ್ನಯ್ಯ ಮುಂತಾದ ಶರಣರೂ, ನೀಲಾಂಬಿಕೆ, ನಾಗಲಾಂಬಿಕೆ, ಅಕ್ಕನಾಗಮ್ಮ, ಗಂಗಾಂಬಿಕೆ, ಅಕ್ಕಮಹಾದೇವಿಯವರೂ ಸಹ ಬಂದು ನೆಲಸಿದರು ಕಲ್ಯಾಣದಲ್ಲಿ. ಕಲ್ಯಾಣದ ಕೀರ್ತಿಯನ್ನು ಕೇಳಿ ಕಾಶ್ಮೀರ ದೇಶದ ಮಾಂಡವ್ಯ ಪುರದಲ್ಲಿ ರಾಜ್ಯವಾಳುತ್ತಿದ್ದ ಒಬ್ಬ ರಾಜನ ಮಗಳು ನಿಜದೇವಿಯು ವೈರಾಗ್ಯದಿಂದ ಕೂಡಿದವಳಾಗಿ ರಾಜ್ಯಕೋಶಾದಿಗಳನ್ನೂ, ಉಟ್ಟಬಟ್ಟೆಯನ್ನೂ ತ್ಯಾಗಮಾಡಿ ದಿಗಂಬರಳಾಗಿ ಬಸವಾದಿ ಶಿವಶರಣರನ್ನು ಕಾಣುವುದಕ್ಕಾಗಿ ಕಲ್ಯಾಣಕ್ಕೆ ಬಂದಳು. ಈ ನಿಜದೇವಿಯೇ ಮುಂದೆ ಬೊಂತಾದೇವಿಯೆಂದು ಪ್ರಸಿದ್ಧಿಯಾದಳು. ಶಿವಶರಣೆ ಬೊಂತಾದೇವಿಯನ್ನು ಕುರಿತು ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ, ಪಾಲ್ಕುರಿಕೆ ಸೋಮನಾಥ ಪುರಾಣ, ಶಿವಶರಣೆಯರ ಚರಿತ್ರೆ, ಅಮರಗಣಾಧೀಶ್ವರ ಚರಿತ್ರೆ ಮುಂತಾದ ಗ್ರಂಥಗಳಲ್ಲಿ ವಿವರಣೆ ಇದೆ. ಅವುಗಳಲ್ಲಿ ಮೂಡಿಬರುವ ಅವಳ ಜೀವನಚರಿತ್ರೆಯನ್ನು ಹೀಗೆ ಸಮೀಕರಿಸ ಬಹುದು.

ಬೊಂತಾದೇವಿ ಕಾಶ್ಮೀರದ ರಾಜನ ಮಗಳು. ಅವಳ ಹುಟ್ಟು ಹೆಸರು ನಿಜದೇವಿ. ಚಿಕ್ಕಂದಿನಿಂದಲೂ ಆಕೆ ಶಿವಭಕ್ತಿ ಪರಾಯಣೆ, ವೈರಾಗ್ಯಸಂಪನ್ನೆ ಆಗಿದ್ದಳು. ಅವಳು ಬೆಳೆದಂತೆಲ್ಲಾ ಭಕ್ತಿಯೂ ಬಲಿಯಿತು. ಆಕೆಗೆ ರಾಜವೈಭವವಾಗಲೀ ಭೋಗಜೀವನವಾಗಲೀ ಬೇಕಾಗಲಿಲ್ಲ. ಎಲ್ಲವನ್ನು ತೊರೆದಳು. ಆ ಹೊತ್ತಿಗೆ ಕಲ್ಯಾಣದ ಕೀರ್ತಿ ಅಲ್ಲಿಗೆ ಮುಟ್ಟಿತ್ತು. ಕಾಶ್ಮೀರ ದವರೇ ಆದ ರಾಜ ಮೋಳಿಗೆ ಮಾರಯ್ಯ, ರಾಣಿ ಮಹಾದೇವಿಯಮ್ಮ, ನಿಜಲಿಂಗ ಚಿಕ್ಕಯ್ಯಗಳು ಬಸವಣ್ಣನವರ ಪ್ರಭಾವಲ ಯಕ್ಕೆ ಸಿಕ್ಕಿ ಕಲ್ಯಾಣಕ್ಕೆ ಧಾವಿಸಿದ್ದರೆಂದು ಕಾಣುತ್ತದೆ. ತಂದೆತಾಯಿಗಳ ಒತ್ತಾಯವನ್ನು ಲೆಕ್ಕಿಸದೆ ಸರ್ವಸಂಗ ಪರಿತ್ಯಾಗಿನಿಯಾಗಿ, ಉಟ್ಟಬಟ್ಟೆಯನ್ನು ಕಳಚಿ ವೀರ ವಿರಾಗಿಣಿಯಾಗಿ ನಿಜದೇವಿ ಕಲ್ಯಾಣದತ್ತ ಸಾಗಿದಳು. ಅವಳ ಈ ನಿಲವು ಅಕ್ಕಮಹಾದೇವಿಯ ಜೀವನದ ಘಟನೆಯನ್ನು ಜ್ಞಾಪಕಕ್ಕೆ ತರುತ್ತದೆ. ಈ ಹರೆಯದ ಲಾವಣ್ಯವತಿ ನಗ್ನಳಾಗಿ ಒಬ್ಬಳೇ ಸಾಗುವಾಗ ಆಕೆ ಪಟ್ಟಿರುವ ಪಾಡು ಎಂಥದ್ದು ! ಶಿವಭಕ್ತಿಯ ಭ್ರಾಂತು ತಲೆಗೇರಿದ ಆಕೆಯನ್ನು ತಡೆವರಾರು ? ಜನರ ಪರೀಕ್ಷೆಗಳು ಒತ್ತಟ್ಟಿಗಿರಲಿ ದೇವರ ಪರೀಕ್ಷೆಯೇನು ಕಡಿಮೆಯೆ ? ಶಿವನು ಸುಂದರ ಯುವಕನ ವೇಷದಲ್ಲಿ ಬಂದು ಆಕೆಯನ್ನು ತನ್ನ ಸತಿಯಾಗಿರಲು ಕೇಳಿಕೊಳ್ಳುವನು, ನಿಜದೇವಿಗೆ ಆತನು ಶಿವನೆಂದು ತಿಳಿಯಿತು. ನೀನು ಕಾಮವೈರಿಯಲ್ಲವೆ? ಅದರೆ ನನಗೆ ಕಾಮವಿಲ್ಲವೆಂದು ಅವನನ್ನು ನಾಚಿಸಿದಳು. ಮತ್ತೆ ಶಿವನು ವ್ಯಾಪಾರಿಯ ವೇಷದಲ್ಲಿ ಪ್ರತ್ಯಕ್ಷನಾಗಿ ನನ್ನನ್ನು ವರಿಸು ಎಂದು ಕಾಡಿದನು. ಸುಜ್ಞಾನಿಯಾದ ಆಕೆಗೆ ಈಗಲೂ ಶಿವನನ್ನು ಗುರುತಿಸುವುದು ಕಷ್ಟವಾಗಲಿಲ್ಲ. ಆಕೆ ಎಂದಳು: ನೀನು ಜಡೆಯಲ್ಲಿ ಒಬ್ಬಳನ್ನು, ತೊಡೆಯಲ್ಲಿ ಒಬ್ಬಳನ್ನು ಸತಿಯರನ್ನಾಗಿ ಹೊಂದಿದ್ದೀಯೆ. ನಿನಗೆ ಷಣ್ಮುಖ, ಗಣಪ, ವೀರಭದ್ರರೆಂಬ ಸತ್ಪುತ್ರರಿದ್ದಾರೆ. ಇಂಥ ನಿನ್ನನ್ನು ನಾನು ವರಿಸಿದರೆ ಕಲ್ಯಾಣದ ಶರಣರು ನೋಡಿ ನಗರೇ ? ಕೈಲಾಸದ ಪ್ರಮಥರು ಮೆಚ್ಚುವರೇ ಎಂದಳು. ಅವಳ ವಿರಕ್ತಿಯನ್ನು ಶಿವನು ಮೆಚ್ಚಿ 'ನೀನು ಹೀಗೆ ದಿಗಂಬರಿಯಾಗಿ ಹೋಗಬೇಡ ಈ ಬೊಂತೆಯನ್ನು ಹೊದ್ದುಕೋ ಎಂದು ಒಂದು ಕೌದಿಯನ್ನು ಕೊಟ್ಟನು. ಶಿವನಾಣತಿ ಯಂತೆ ನಿಜದೇವಿ ಬೊಂತೆಯನ್ನು ಧರಿಸಿ 'ಬೊಂತಾದೇವಿ'ಯಾದಳು. ಈ ಪವಾಡದ ಹಿನ್ನೆಲೆಯೇನೇ ಇರಲಿ, ಭೋಗಜೀವನ ಯೋಗ್ಯ ವೇಷಭೂಷಣ ತ್ಯಾಗಮಾಡಿ ಚಿಂದಿ ಬಟ್ಟೆಗಳನ್ನು ಸೇರಿಸಿ ಮಾಡಿದ ಒಂದು ತುಂಡು ಬಟ್ಟೆಯನ್ನು ಮೈಯ ಮಾನ ವುಳಿಸಲು ಹೊದ್ದುಬಂದಳೆಂದೂ ಇಂಥವಳನ್ನು ಕಂಡು ಲೋಕ ಹುಚ್ಚಿಯೆನ್ನಲಿ, ಏನೇ ಹೇಳಲಿ ಎಲ್ಲವನ್ನೂ ಸಹಿಸಿಕೊಂಡು ಶಿವನ ಪರೀಕ್ಷೆಯನ್ನು ಗೆದ್ದು ಕಲ್ಯಾಣಕ್ಕೆ ಬಂದುದಂತೂ ನಿಶ್ಚಿತವಾದ ವಿಷಯ. ಸಮಕಾಲೀನ ಸಾಹಿತ್ಯದಲ್ಲಿ ಇವಳು ಕಲ್ಯಾಣಕ್ಕೆ ಬಂದ ಬಗೆಗೆ ವಿಪುಲ ಸಾಕ್ಷಾತ್ಕಾರಗಳು ಲಭ್ಯವಾಗುತ್ತವೆ.

ಹೀಗೆ ಅನಂತ ಕಷ್ಟ ಕೋಟಲೆಗಳನ್ನು ಅನುಭವಿಸಿದ ಆಕೆ ಕೊನೆಗೊಮ್ಮೆ ಕಲ್ಯಾಣವನ್ನು ಸೇರಿದಳು. ಅಲ್ಲಿ ಗೌಪ್ಯ ವಾಗಿಯೇ ತನ್ನ ಭಕ್ತಿ ಜೀವನವನ್ನು ಆಚರಿಸುತ್ತ ಶರಣರ ಶಿವಾನುಭಾವ ಸಂಪತ್ತನ್ನು ಮೈಗೂಡಿಸಿಕೊಂಡು ಪರಿಸರದ ಪ್ರಭಾ ವಕ್ಕೆ ಪೂರ್ಣವಾಗಿ ಓತಪ್ರೋತಗೊಂಡಳು. ಶರಣರಂತೆ ತಾನೂ ತನ್ನ ಅಭಿಪ್ರಾಯಗಳನ್ನು ವಚನಗಳ ಮೂಲಕ ಬಿತ್ತರಿಸ

3. ದೇವರ ದಾಸಿಮಯ್ಯನ ವಚನಗಳು ೧೩೩. 4. ಶ್ರೀಗುರು ಪಿರಂಗೀಶ್ವರ ಚರಿತ್ರೆ ೨೮ 5. ಸಾಹಿತ್ಯ ಸಂಶೋಧನೆ ೧೬೪.

ತೊಡಗಿದಳು. ಪರಮ ವೈರಾಗ್ಯಶೀಲೆಯಾದ ಆಕೆಗೆ ತಿಪ್ಪೆಯೇನು! ಅರಮನೆಯೇನು! ಎಲ್ಲವೂ ಒಂದೇ ಆಗಿತ್ತು. ತನ್ನ ತನವನ್ನು ಸಮಷ್ಟಿಯಲ್ಲಿ ಲೀನಗೊಳಿಸಿದ ಆಕೆಯ ಮಹತ್ವವನ್ನು ಅರಿತವರು ಅಂತರ್ದೃಷ್ಟಿಯ ಅಲ್ಲಮಪ್ರಭು ಮಾತ್ರ. ಅವಳ ಶಿವಾನುಭಾವ ಸಂಪತ್ತಿಯ ಹೊಳಪು ಅವರ ಅಂತಃಕರಣಕ್ಕೆ ಬೆಳ್ಳಂಬೆಳಕಾಗಿ ಹೋಯಿತು. ಒಂದು ಸಂದರ್ಭದಲ್ಲಿ ಆಕೆಯ ಮಹತ್ವವನ್ನು ಅವರೇ ಪ್ರಥಮತಃ ಉಳಿದವರಿಗೆ ಪರಿಚಯ ಮಾಡಿಕೊಟ್ಟರು.

ಮುಂದೆ ಕಲ್ಯಾಣದಲ್ಲಿ ಕಾಲ ಬದಲಾವಣೆಯಾಯಿತು. ಅನೇಕ ಮಹತ್ವದ ಘಟನೆಗಳು ನಡೆದವು. ಕೊನೆಗೊಮ್ಮೆ ಶರಣರ ಈ ನೂತನ ವಿಚಾರವಾದದ ಪರಿಣಾಮವಾಗಿ ದೊಡ್ಡ ಕ್ರಾಂತಿಯೇ ಆಗಿಹೋಯಿತು. ಬಿಜ್ಜಳ ರಾಜನು, ಹರಳಯ್ಯ ಮಧುವಯ್ಯನವರನ್ನು ಹಿಂಸಾಚಾರಕ್ಕೆ ಗುರಿಪಡಿಸಿದ. ಅನತಿ ಕಾಲದಲ್ಲೇ ಅವನ ಕೊಲೆಯು ನಡೆದುಹೋಯಿತು. ಇದರಿಂದ ಶರಣರು ಬೇಸರಗೊಂಡರು. ವಿರೋಧಿಗಳು ಶರಣರನ್ನು ಹಿಂಸಾಚಾರಕ್ಕೊಳಪಡಿಸಿದರು. ಬಸವಣ್ಣನವರು ಕೂಡಲಸಂಗಮದತ್ತ, ಅಕ್ಕಮಹಾದೇವಿ, ಅಲ್ಲಮಪ್ರಭು ಶ್ರೀಶೈಲದತ್ತ, ಚೆನ್ನಬಸವಣ್ಣ ಉಳಿವಿಯತ್ತ ಸಾಗಿದರು. ಇಂಥ ಸ್ಥಿತಿಯಲ್ಲೂ ಧೃತಿಗೆಡದೆ ಧೀರಳಾಗಿ ವೀರಶರಣೆಯಾಗಿ ಕಲ್ಯಾಣದಲ್ಲೇ ನೆಲೆನಿಂತವರಲ್ಲಿ ಬೊಂತಾದೇವಿಯೂ ಒಬ್ಬಳೆಂದು ಸಮಕಾಲೀನ ಸಾಹಿತ್ಯದಿಂದ ವೇದ್ಯವಾಗುವ ಅಂಶ.

ಬೊಂತಾದೇವಿಯು ಬೊಂತೆಯಿಂದ ರತ್ನಗಳನ್ನು ಉದುರಿಸಿದ ಪ್ರಸಂಗವೊಂದು ನಿರೂಪಿತವಾಗಿದೆ. ಅದರಿಂದ ಅವಳ ಪ್ರಭಾವ ಸ್ಫುಟವಾಗಿ ತೋರುತ್ತದೆ. ಬೊಂತಾದೇವಿ ಪರಮ ವೈರಾಗ್ಯದಿಂದ ಕೂಡಿ ಶರಣ ಮಾರ್ಗದಲ್ಲಿ ನಡೆಯುತ್ತಾ, ಗಿಡ, ಮರ, ಗವಿ, ಗಹ್ವರಗಳೆನ್ನದೆ, ಪವಿತ್ರ, ಅಪವಿತ್ರ ಸ್ಥಳಗಳೆನ್ನದೆ ಎಲ್ಲಾ ಕಡೆಗಳಲ್ಲಿಯೂ ವಾಸಿಸುತ್ತಿದ್ದಳು. ನಿಂತಲ್ಲಿ ಕೂತಲ್ಲಿ, ಮಲಗಿದ್ದಲ್ಲಿ ಶಿವನ ನೆನೆದು ಭಕ್ತಿರಸದಲ್ಲಿ ತನ್ಮಯಳಾಗುತ್ತಿದ್ದಳು. 'ಒಮ್ಮೆ ಈಕೆ ತಿಪ್ಪೆಯಲ್ಲಿ ಮಲಗಿರಲು ಯಾವನೋ ಒಬ್ಬನು ಅವಳನ್ನು ಕಂಡು ಹೇಸಿಕೊಂಡನು. ಬೊಂತಾದೇವಿಯು ತನ್ನ ಬೊಂತೆಯನ್ನು ಕೊಡವಲು ಅದರಿಂದ ರತ್ನಗಳು ಉದುರಿದವು. ಅದನ್ನು ಕಂಡು ಆತನು ನಾಚಿಹೋದನು.[6] ಇದರಿಂದ ಶರಣರ ಮಹಿಮೆ ಸಾಮಾನ್ಯರಿಗೆ ಅರ್ಥವಾಗುವುದಿಲ್ಲ. ಶರಣ ಮಾರ್ಗದಲ್ಲಿ ಸಾಗುವವರಿಗೆ ಮಾತ್ರ ಸಾಧ್ಯ ಎಂಬುದು ವೇದ್ಯವಾಗುತ್ತದೆ.

ಬೊಂತಾದೇವಿಯ ಜಂಗಮ ಪ್ರೇಮವನ್ನು ಕುರಿತು ಪಾಲ್ಕುರಿಕೆಯ ಸೋಮನಾಥ ತನ್ನ ಕಾವ್ಯದಲ್ಲಿ ಪ್ರಸ್ತಾಪಿಸಿದ್ದಾನೆ. ಬೊಂತಾದೇವಿಯೂ ಗುರು–ಲಿಂಗ ಜಂಗಮರನ್ನು ಸಮಭಾವನೆಯಿಂದ ಕಂಡು ಪೂಜಿಸುತ್ತಿದ್ದಳು. ತನು, ಮನ, ಧನವನ್ನು ಗುರು, ಲಿಂಗ, ಜಂಗಮಕ್ಕೆ ಅರ್ಪಿಸಿ ಆರಾಧಿಸಿ ಪರಮ ಪಾವನೆಯನಿಸಿದ್ದಳು. 'ಜಂಗಮಕ್ಕಿತ್ತು ವೈರಾಗ್ಯದಿಂದಿರ್ದು ಮತ್ತಂಗಜಾರಿಯನೊಲಿಸಿದಳ್ ಬೊಂತೆಯ ಕೊಡಹಿ ಪೊಂಗಳಂ ಜಂಗಮಕ್ಕಿತ್ತಳೊಲವಿಂದ ಬೊಂತಾದೇವಿ ಚರಮೂರ್ತಿಗೆ'[7] ಬೊಂತಾದೇವಿಯು ಜಂಗಮಕ್ಕೆ ದಾನ ಮಾಡಿ, ವೈರಾಗ್ಯದಿಂದ ಇದ್ದು, ಪರಮೇಶ್ವರನನ್ನೊಲಿಸಿಕೊಂಡಳು. ಮತ್ತು ತನ್ನ ಬೊಂತೆಯ ಕೊಡವಿ ಆ ಹಣವನ್ನು ಜಂಗಮಕ್ಕೆ ನೀಡಿ ತೃಪ್ತಿಪಡಿಸಿದಳು.

ಬಸವಣ್ಣನವರು ಸ್ತ್ರೀಯರಿಗೆ ಕೊಟ್ಟ ಸ್ಥಾನಮಾನಗಳು, ನೀಡಿದ ಸದಾವಕಾಶಗಳ ಫಲವಾಗಿ ಅಕ್ಕಮಹಾದೇವಿ, ಬೊಂತಾದೇವಿ, ಮಹಾದೇವಿಯಮ್ಮ, ಲಕ್ಕಮ್ಮ ಮೊದಲಾದ ಅಸಂಖ್ಯಾತ ಶರಣೆಯರು ಪ್ರಕಾಶಮಾನಕ್ಕೆ ಬಂದರು. ಬೊಂತಾದೇವಿ ರಾಜಭೋಗದಲ್ಲಿ ಹುಟ್ಟಿ ಯೋಗಜೀವನವನ್ನು ಆರಿಸಿಕೊಂಡು ವೈರಾಗ್ಯನಿಧಿಯಾಗಿ ಬಾಳಿದಳು. ಮೈ, ಮನ, ಭಾವಗಳಲ್ಲಿ. ಕ್ರಿಯಾ, ಮಂತ್ರ, ಜ್ಞಾನಶೀಲಗಳ ಸಿದ್ಧಿ ಇವಳದು. ಶಿವಪೂಜೆ, ಶಿವಧ್ಯಾನ, ಶಿವವ್ರತವೇ ಅವಳ ನಿತ್ಯ ನಿಯಮವಾಗಿತ್ತು. ಅಕ್ಕನ ವೈರಾಗ್ಯಕ್ಕಿಂತ ಒಂದು ಮೆಟ್ಟಲು ಇವಳದೇ ಮೇಲು, ಎಂದು ಪ್ರಭುದೇವರು ಶರಣರಿಗೆ ವಿವರಿಸಿರುವುದರಲ್ಲಿ ಔಚಿತ್ಯವಿದೆ. ಅಕ್ಕಮಹಾದೇವಿ ಮಲ್ಲಿಕಾರ್ಜುನನ್ನು ಕಾಣಲು ಶ್ರೀಶೈಲಕ್ಕೆ ಹೋದರೆ, ಬೊಂತಾದೇವಿ ಕೈಲಾಸವನ್ನೆ ಕಲ್ಯಾಣಕ್ಕೆ ತಂದು ತನ್ನ ಲಿಂಗಯ್ಯನಲ್ಲಿಯೇ ಲೀನವಾದುದು ಅವಳ ಲಿಂಗನಿಷ್ಠೆಯನ್ನು ತೋರಿಸುತ್ತದೆ. ಬೊಂತಾದೇವಿಯು ಬಯಲಾದ ಪರಿ ಒಂದು ರೋಮಾಂಚಕಾರೀ ಘಟನೆಯಾಗಿ ಉಲ್ಲೇಖವಾಗಿದೆ. ಆಕೆ ಮೊದಲು ತಾನು ಉಟ್ಟಿದ್ದ ಬೊಂತೆಯನ್ನು ಆಕಾಶಕ್ಕೆ ಎಸೆದು ಅದು ಬಯಲಾಗಲು ಅದರೊಡನೆಯೇ ಅವಳು ನಿರ್ವಯಲಾದಳು. ಬೊಂತಾದೇವಿಗೆ ಬೆಂತಲಾದೇವಿ ಎಂಬ ಹೆಸರು ಇದ್ದಂತಿದೆ. ಅದನ್ನು ಕುರಿತು ಪುರಾತನ ದೇವಿಯರ ತ್ರಿವಿಧಿಯಲ್ಲಿ 'ಬೆಂತಲಾದೇವಿ ನಿಜದ ನೆಲೆಯನ್ನು ಅರಿತವಳು. ಕಾಮನನ್ನು, ಯಮನನ್ನು ಜಯಿಸಿದವಳು. ಶಿವಧ್ಯಾನದಲ್ಲಿ ಬಲ್ಲಿದಳು' ಎಂದು ಸ್ತುತಿಸಲಾಗಿದೆ. ಅದು ಹೀಗೆ :

'ಭ್ರಾಂತಿ ಪ್ರಮೇಗಳನಳಿದು ಕಂತು ಕಾಲರತೊರೆದು ಅಂತಕಾಂತಕನ ಧ್ಯಾನ ಮುಪ್ಪುರಿಗೊಂಡ ಬೆಂತಲಾದೇವಿ ಶರಣಾಗು' ॥

ಕನ್ನಡಸಾಹಿತ್ಯಭಂಡಾರಕ್ಕೆ ವಚನಕಾರರು ನೀಡಿದ ಕಾಣಿಕೆ ಅಪಾರವಾದು, ಅಮೂಲ್ಯವಾದುದು. ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ವಚನಕಾರರಿಗೆ ಸಲ್ಲುವ ಗೌರವ ಬಹುಮುಖವಾದುದು. ಶಿವಶರಣ–ಶರಣೆಯರು ಸ್ವತಃ ಅನುಭಾವದಿಂದ ಪಡೆದ

6. ಶಿವಶರಣರ ಕಥಾರತ್ನಕೋಶ. ಪುಟ. ೨೯೦.

7. ಪಾಲ್ಕುರಿಕೆ ಸೋಮೇಶ್ವರ ಪುರಾಣ. ಪುಟ. ೨೭೪

ಜ್ಞಾನವನ್ನು ವಚನಗಳ ಮೂಲಕ ಜನಸಾಮಾನ್ಯರಿಗೆ ಎಟಗುವಂತೆ ನೀಡಿದ್ದಾರೆ. ಬೊಂತಾದೇವಿಯೂ ಕೂಡ ವಚನಗಳನ್ನು ರಚಿಸಿದ್ದಾಳೆ. ಆಕೆಯ ಕೆಲವು ವಚನಗಳು ಸಿಕ್ಕಿವೆ. ಅವಳ ವಚನಗಳ ಅಂಕಿತ 'ಓ ಎಂಬಾತನೆ ಬಿಡಾಡಿ' ಬಿಡಾಡಿ ಶಬ್ದಕ್ಕೆ ಬಿಟ್ಟು ಆಡುವವನು, ಯಾವ ನಿಯಂತ್ರಣಕ್ಕೂ ಒಳಪಡದವನು ಅಂದರೆ ವೀರ ವಿರಾಗಿ ಅಥವಾ ಸರ್ವಸಂಗ ಪರಿತ್ಯಾಗಿ ಎಂದು ಅರ್ಥ ಮಾಡಬಹುದು. ಶಿವನನ್ನು ಕುರಿತು ಆಕೆ ಇದನ್ನು ಹೇಳಿರಬಹುದು. ದೊರೆತಿರುವ ಐದು ವಚನಗಳಲ್ಲಿ ಆಕೆ ಹೆಚ್ಚಾಗಿ ಪರಮಾತ್ಮನ ಸ್ವರೂಪವನ್ನು ಕುರಿತು ನಿರೂಪಿಸಿರುವುದು ಕಂಡುಬರುತ್ತದೆ.

**ಬೊಂತಾದೇವಿಯ ವಚನಗಳು :**

ಅಂತಾಯಿತ್ತಿಂತಾಯಿತ್ತೆನಬೇಡ, ಅನಂತನಿಂತಾತ್ಮನೆಂದಱಿಯಾ ಬಿಡಾಡಿ, ಕರೆದಡೆ ಓ ಎಂಬುದು
ನಾದವೊ, ಬಿಂದುವೊ, ಪ್ರಾಣವೊ? ಇದಾವುದು ಬಲ್ಲಡೆ ನೀಹೇಳಾ, ಬಿಡಾಡಿ.
ನಾಲ್ಕು ವೇದ, ಹದಿನೆಂಟು ಪುರಾಣ, ಇಪ್ಪತ್ತೆಂಟಾಗಮ, ಇದಪ್ರತಿ ಬಿಡಾಡಿ, ಶಬ್ದವೆ ಬ್ರಹ್ಮ, ಶಬ್ದವೆ ಸಿದ್ಧ, ಶಬ್ದವೆ ಶುದ್ಧ ಕಾಣಿರೆ, ಬಿಡಾಡಿ॥೧॥
ಅಱಿವೆ ಬಿಡಾಡಿ, ಅಱಿಯದೆ ಬಿಡಾಡಿ, ಮಱೆವೆ ಬಿಡಾಡಿ, ಮಱೆಯದೆ ಬಿಡಾಡಿ, ಅಱಿವಱತು ಕುಱುಹಿಲ್ಲದಾತ ನೀನೇ ಬಿಡಾಡಿ ॥೨॥
ಘಟದೊಳಗಣ ಬಯಲು ಮಠದೊಳಗಣ ಬಯಲು, ಬಯಲು ಬಯಲು ಬಯಲು ತಾನೆಲ್ಲಾ ಬಯಲು, ಬಿಡಾಡಿ ಬಯಲು ॥೩॥
ಊರ ಒಳಗಣ ಬಯಲು, ಊರ ಹೊಱಗಣ ಬಯಲೆಂದುಂಟೆ ? ಊರೊಳಗೆ ಬ್ರಾಹ್ಮಣ-ಬಯಲು, ಊರ ಹೊರಗೆ ಹೊಲೆ-ಬಯಲೆಂದುಂಟೆ ?
ಎಲ್ಲಿ ನೋಡಿದಡೆ ಬಯಲೊಂದೆ ಭಕ್ತಿಯಿಂದ ಒಳಹೊಱಗೆಂಬ ನಾಮವೈಸೆ ! ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ ॥೪॥
ಪಱಿಪಟ್ಟ ನಾಥವೂ ಎಂಬ ಲಿಂಗ, ತಱಗೆಲೆಗಳಿಗೊಂದೆ ಗಾಳಿ, ಹಾರುತ್ತಿಪ್ಪವು ಒಂದೆ ಅನಿಲನಿಂದ.
ದೇಹ ಪಱಿಪಟಿಗಳೊಳಗೆಲ್ಲಾ, ಕರೆದಡೆ ಓ ಎಂಬಾತನೆ ಬಿಡಾಡಿ ? ॥೫॥[8]

# ವೀರಶೈವ ಪುರಾಣಗಳು ಹಾಗೂ ಅವುಗಳ ಲಾಕ್ಷಣಿಕ ವಿಕಾಸ

**ಡಾ॥ ಎಸ್. ವಿದ್ಯಾಶಂಕರ**

೧

ಭಾರತೀಯರಲ್ಲಿ ಪುರಾಣಗಳು ಪ್ರಾಚೀನ ಧಾರ್ಮಿಕ ಶ್ರದ್ಧೆಯ ಸಾಂಕೇತಿಕ ರೂಪದಲ್ಲಿವೆ. ಅವು ನಮ್ಮ ಸಾಂಸ್ಕೃತಿಕ ಇತಿಹಾಸವನ್ನೂ, ದೇವರು, ಧರ್ಮಗಳ ಬೆಳವಣಿಗೆಯ ಚರಿತ್ರೆಯನ್ನೂ ನಿರೂಪಿಸುತ್ತವೆ. ಇವು ವಿಶಿಷ್ಟ ಲಕ್ಷಣಗಳಿಂದ ಕೂಡಿ ಭಾರತೀಯರ ಮನಸ್ಸಿನ ಮೇಲೆ ಅದ್ಭುತ ಪ್ರಭಾವವನ್ನು ಬೀರುತ್ತ ಬಂದಿವೆ. ಸಂಸ್ಕೃತದಲ್ಲಿ ಪುರಾಣಸಾಹಿತ್ಯ ಅಪಾರವಾಗಿದೆ. ಪುರಾಣಗಳು ಜನರ ಮನಸ್ಸಿನಲ್ಲಿ ವೇದೋಪನಿಷತ್ತುಗಳ ಬೋಧೆಯನ್ನೂ, ಜಗನ್ನಿಯಾಮಕ ಸೂತ್ರಧಾರಿಯಾದ ಪರಮಾತ್ಮನ ಸಾಮರ್ಥ್ಯ, ದಯೆ, ಪ್ರೀತಿಯನ್ನೂ ನಿದರ್ಶನ ಸಹಿತವಾಗಿ ತಿಳಿಯಪಡಿಸಿವೆ; ದೇವತೆಗಳ ಶಾಪ-ವಿಶಾಪಗಳ ಪ್ರಭಾವವನ್ನು ಪ್ರತ್ಯಕ್ಷ ನಿದರ್ಶನಗಳ ಮೂಲಕ ಶ್ರುತಪಡಿಸಿವೆ.

'ಪುರಾಣ' (Myth) ಎಂಬ ಮಾತಿಗೆ 'ಪ್ರಾಚೀನ' ಎಂಬ ಸಾಮಾನ್ಯ ಅರ್ಥ ಭಾರತೀಯರಲ್ಲಿ ಬಳಕೆಯಲ್ಲಿದೆ. ಮಿಥ್ ಹಾಗೂ ಮೈಥಾಲಜಿ ಎಂಬ ಸಮಾನಾರ್ಥಕ ಪದಗಳನ್ನು ಬಳಸಿ. ನಮ್ಮಲ್ಲೂ ಬಳಕೆಯಾಗಲು ಪ್ರೇರಣೆ ನೀಡಿದವರು ಗ್ರೀಕ್ ಬರಹಗಾರರು. ಅವರಿಗೆ ನಮ್ಮಲ್ಲಿ ಬಳಕೆಯಲ್ಲಿರುವಂತೆ 'ಮೈಥಾಲಜಿ'ಎಂದರೆ ಬರಿಯ ಪುರಾಣದ (Myth) ಅಧ್ಯಯನವಲ್ಲ; ಪುರಾಣ ಕಥೆಗಳನ್ನು ಹೇಳುವುದು (Telling of Mythic legends) ಎಂಬಂತಿದೆ. ಮುಂದೆ, ಈ ಎರಡು ಪದಗಳಲ್ಲಿ ಸ್ಪಷ್ಟವಾದ ಅರ್ಥವ್ಯತ್ಯಾಸ ತಲೆದೋರಿತು. ಇತ್ತೀಚೆಗೆ, ಗ್ರೀಕ್ ಮೈಥಾಲಜಿ ಎಂದರೆ ಗ್ರೀಕ್ ರಿಲಿಜಿಯನ್; ರೋಮನ್ ಮೈಥಾಲಜಿ ಎಂದರೆ ರೋಮನ್ ರಿಲಿಜಿಯನ್ ಎಂಬ ಅರ್ಥ ಬಳಕೆಗೆ ಬಂದಿದೆ,

ಭಾರತೀಯ ಸಾಹಿತ್ಯದಲ್ಲಿ ಪುರಾಣಗಳ ಸ್ಥಾನ ದೊಡ್ಡದು. ಪ್ರಾಚೀನ ಧಾರ್ಮಿಕ ಇತಿಹಾಸದೊಂದಿಗೆ ಪುರಾಣಗಳ ಸಾಹಚರ್ಯ ಗಮನಾರ್ಹವಾದುದು. ಧರ್ಮದೊಂದಿಗೆ ಪುರಾಣಗಳು ಅವಿಭಾಜ್ಯ ಅಂಗಗಳಂತೆ ಬೆಸೆದುಕೊಂಡಿವೆ. ಧರ್ಮ ಹಾಗೂ ಪುರಾಣಗಳಿಗೆ ನಿಕಟ ಸಂಬಂಧವಿದೆಯೆಂಬುದನ್ನು ಪಾಶ್ಚಾತ್ಯ ವಿದ್ವಾಂಸರಲ್ಲಿ ಬಹಳ ಮಂದಿ ಸಮ್ಮತಿಸಿರಲಿಲ್ಲ. ಮನಶ್ಶಾಸ್ತ್ರಜ್ಞರಾದ ಉಂಡ್‌ಟ್ (Wundt), ಸಮಾಜ ಶಾಸ್ತ್ರಜ್ಞರಾದ ಡರ್‌ಖೈಮ್ (Durkheim), ಹ್ಯೂಬರ್ಟ್ (Hubert) ಮತ್ತು ಮೌಸ್ (Mauss), ಮಾನವ ಮೂಲ ಶಾಸ್ತ್ರಜ್ಞರಾದ (Anthropologists) ಕ್ರಾವ್ಲೆ (Crawley), ಕ್ಲಾಸಿಕಲ್ ಸಾಹಿತ್ಯದ ವಿದುಷಿಯಾದ ಮಿಸ್ ಜೇನ್ ಹ್ಯಾರಿಸನ್-ಇವರುಗಳೆಲ್ಲ ಪುರಾಣ ಹಾಗೂ ಆಚರಣಾವಿಧಿ (Ritual)ಗಳಿಗೆ, ಪವಿತ್ರಾಚರಣಾ ಪರಂಪರೆ (Sacred Tradition)ಗೆ, ಸಾಮಾಜಿಕ ಕಟ್ಟಿನ ರೂಢಿಗಳಿಗೆ (Norms of Social Structure) ತೀರಾ ಹತ್ತಿರದ ಸಂಬಂಧವಿದೆಯೆಂಬುದನ್ನು ಅರಿತಿರುವರು. ಬ್ರಿಟಿಷ್ ಮಾನವ ಮೂಲಶಾಸ್ತ್ರಜ್ಞರು ಹಾಗೂ

8. ಇಪ್ಪತ್ತೇಳು ಶಿವಶರಣೆಯರ ವಚನಗಳು. ಪು. ೩೭೬–೭೭

ಅವರ ಬಹುತೇಕ ಅನುಯಾಯಿಗಳಿಗೆ ಪುರಾಣಗಳಲ್ಲಿನ ಸಾಮಾಜಿಕ ಹಾಗೂ ಆಚರಣಾವಿಧಿಗಳ ಪ್ರಾಮುಖ್ಯತೆಯ ಬಗೆಗೆ ಸ್ಪಷ್ಟವಾದ ತಿಳುವಳಿಕೆ ಇದೆ[1],

ಜಾನಪದ ಸಾಹಿತ್ಯದ ಅಧ್ಯಯನ ವ್ಯಾಪ್ತಿಗೆ ಪುರಾಣವೂ ಒಳಪಡುತ್ತದೆ. ಲಿವಿಸ್ ಸ್ಪೆನ್ಸ್ ಹೇಳುವಂತೆ 'Mythology is the Study of a Primitive or early form of religion while it was a livings faith. Folklore is the study of Primitive religion and customs still practiced...... some authorities regard folklore and Mythology as almost interchangable words. Others look upon Myth as the ground work of folklore; but for purpose of study we shall be wise if we regard as fundamental Myth any tale in which a god or demi god figures which primitive custom among the peoples of antiqunity or the backward races to day, while folklore may denote the study of fragments or survivals of old belief or custom found amonng uneducated or semi educated people in civilized Countries'[2].

'ಪುರಾಣ' ಶಬ್ದದ ಮಿತಿಗೆ ಒಳಪಡುವ ವ್ಯಾಖ್ಯೆಯನ್ನು ಖಚಿತವಾಗಿ ಹೇಳುವಲ್ಲಿ ಪಾಶ್ಚಾತ್ಯರು ಪ್ರಾಯಶಃ ಸೋತಿರುವರು ; ವಿದ್ವಾಂಸರಲ್ಲಿ ಈ ಬಗೆಗೆ ಒಮ್ಮತವಿಲ್ಲ. ಪುರಾಣದವ್ಯಾಪ್ತಿಗೆ ಬರುವ ವಿಷಯಗಳು ಬಹಳ[3], ಬಹುಮುಖವಾದ ವಿಷಯವ್ಯಾಪ್ತಿಯನ್ನುಳ್ಳ ಪುರಾಣವನ್ನು ಲಾಕ್ಷಣಿಕವಾಗಿ ಹೀಗೆಂದು ಹೇಳಲು, ಸ್ಪಷ್ಟವಾಗಿ ವ್ಯಾಖ್ಯೆಯನ್ನೇ ಶಾಬ್ದಿಕಮಿತಿಯೊಳಗೆ ವಿವರಿಸಲು ಬಹುಶಃ ಸಾಧ್ಯವಾಗುತ್ತಿಲ್ಲ.ಆದ್ದರಿಂದಲೊ ಏನೋ ವಿದ್ವಾಂಸರು 'Formulation of definition is waste of time'[4] ಎಂಬ ಅಂತಿಮ ತೀರ್ಮಾನಕ್ಕೆ ಬಂದುದು !

ವೇದ, ಆಗಮಗಳಂತೆ ಪುರಾಣಗಳೂ ಭಾರತೀಯರಿಗೆ ಪೂಜನೀಯ. ಅವರ ಪೂಜ್ಯ ನಂಬುಗೆಯ ಪ್ರಕಾರ, ವೇದಗಳಿಗೆ ಬರೆದ ಭಾಷ್ಯಗಳು ಪುರಾಣಗಳು. ಸಂಸ್ಕೃತ ಸಾಹಿತ್ಯದಲ್ಲಿ ಹದಿನೆಂಟು ಮಹಾಪುರಾಣಗಳು, ಹದಿನೆಂಟು ಉಪಪುರಾಣಗಳು[5] ಪ್ರಖ್ಯಾತವಾಗಿವೆ. ಇವುಗಳನ್ನು ವ್ಯಾಸೋಕ್ತ ಪುರಾಣಗಳು ಎಂದು ಕರೆಯುವ ರೂಢಿ ಇದೆ. ಇದನ್ನು ಒಪ್ಪಲಾಗದು. ಪುರಾಣಗಳಾಗಲೀ, ಉಪಪುರಾಣಗಳಾಗಲೀ ಏಕವ್ಯಕ್ತಿಯ ರಚನೆಗಳಲ್ಲ. ಇವುಗಳು ಏಕ ಕರ್ತೃಗಳಾಗಿರದೆ ಭಿನ್ನ ಕರ್ತೃಗಳಾಗಿವೆ. ಕಾಲಕಾಲಕ್ಕೆ ಇವು ಮೂಲದೊಡನೆ ಪ್ರಕ್ಷಿಪ್ತ ಭಾಗಗಳನ್ನೂ ಹೊಂದಿ ಬೆಳೆಯುತ್ತಾ ಬಂದುವು. ವೈದಿಕ ಸಾಹಿತ್ಯದಲ್ಲಿ'ಪುರಾಣ' ಶಬ್ದವು ಮೊತ್ತಮೊದಲು ಇತಿಹಾಸಪೂರ್ವದ ವಿಶ್ವೋತ್ಪತ್ತಿ ವೈಚಿತ್ರ್ಯದ ಕಾಲ್ಪನಿಕ ಕಥೆ (Legend)ಗಳಿಗೆ ಸಂಬಂಧಿಸಿತ್ತು. ಅನಂತರ, ಸಾಂಪ್ರದಾಯಿಕವಾಗಿ ಬಂದ ಪ್ರಾಚೀನ ಘಟನಾವಳಿಗಳು (Episodes), ಹಳಗತೆಗಳು (Ancient Tales) ಮೊದಲಾದವುಗಳಿಗೂ ಈ ಹೆಸರು ಕೊಡಲಾಯಿತು. ಬಹುವಾಗಿ ಜಾನಪದ ಗೀತಗಳ ರೂಪದಲ್ಲಿದ್ದ ಅವನ್ನು 'ಪ್ರಾಚೀನ ಗಾಥಾ'

---

1. Bronislaw Malinowski: Magic, Science and Religion and other Essays, P-98
2. An Introduction to Mythology, P-12
3. 'A Myth is an account of deeds of a god or Supernatural being, usually expressed in terms of Primitive thought. It is an attempt to explain the relations of man to the universe, and it has for those who recount it a predominanthy religions value ; or it may have arisen to explain the peculiarities of an environment'

   —Lewis spence: An Introduction to Mythology; P-11,12
4. ನೋಡಿ : Lewis spence : An Introduction to Mythology ಪುಟ ೧೧ರ ಅಡಿಟಿಪ್ಪಣಿ
5. ಮಹಾ ಪುರಾಣಗಳ ಅಧ್ಯಯನ ವ್ಯಾಪಕವಾಗಿ ನಡೆದಿರುವಂತೆ, ಉಪಪುರಾಣಗಳ ಅಧ್ಯಯನ ನಡೆದಿಲ್ಲ. ಡಾ॥ ಆರ್. ಸಿ. ಹಜ್ರಾರವರೊಬ್ಬರೇ ಸದ್ಯಕ್ಕೆ ಈ ವಿಷಯದ ಬಗ್ಗೆ ಅಧ್ಯಯನ ನಡೆಸಿರುವ ವಿದ್ವಾಂಸರು. ಅವರು ತಮ್ಮ 'Studies in the upa-Puranas Vol-1' ಎಂಬ ಗ್ರಂಥದಲ್ಲಿ ಸಂಸ್ಕೃತ ಸಾಹಿತ್ಯರಾಶಿಯನ್ನು ಪರಿಶೋಧನೆ ನಡೆಸಿದಾಗ ನೂರಕ್ಕೂ ಮಿಕ್ಕ ಉಪಪುರಾಣಗಳ ಹೆಸರುಗಳನ್ನು ಸಂಗ್ರಹಿಸಲು ಸಾಧ್ಯವಾಯಿತು ಎಂದಿರುವರು. ಆದರೆ, ಅವರು ಹದಿನೆಂಟು ಉಪಪುರಾಣಗಳ ಹೆಸರುಗಳನ್ನು ಮಾತ್ರ ಕೊಟ್ಟಿರುವರು ಅವರ ಪ್ರಕಾರ

   1. ಸನತ್ಕುಮಾರ, 2. ನಾರಸಿಂಹ, 3. ಸ್ಕಾಂದ, 4. ಶಿವಧರ್ಮ, 5. ದುರ್ವಾಸಸ್, 6. ನಾರದೀಯ, 7. ಕಾಪಿಲ, 8. ವಾಮನ, 9. ಉಶನಸ್, 10. ಬ್ರಹ್ಮಾಂಡ, 11. ವಾರುಣ, 12. ಕಾಲಿಕಾ, 13. ಮಾಹೇಶ್ವರ, 14. ಸಾಂಬ, 15. ಸೌರ, 16. ಪರಾಶರ, 17. ಮಾರೀಚ, 18. ಭಾರ್ಗವ. —ಇವಿಷ್ಟು ಉಪಪುರಾಣಗಳು.

ಎಂದು ಕರೆಯುತ್ತಿದ್ದರು. ಅವುಗಳ ಸಂಕಲನವು 'ಪುರಾಣ ಗಾಥಾ' ಆಯಿತು. ಮುಂದೆ ಆ ಜಾತಿಯ ಕೃತಿಗಳೆಲ್ಲಾ ಪುರಾಣವೆಂಬ ಅನ್ವರ್ಥನಾಮದಿಂದಲೇ ರೂಢಿಯಲ್ಲಿ ಬಂದುವು ಎಂಬುದು ಪುರಾಣಪಂಡಿತರನೇಕರ ಅಭಿಪ್ರಾಯ.

ಪುರಾಣವು ಪಂಚಲಕ್ಷಣಗಳಿಂದ[6] ಕೂಡಿದೆಯೆಂದು ಅನೇಕ ಪುರಾಣಗಳು ಹೇಳಿವೆ. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ ಹಾಗೂ ವಂಶಾನುಚರಿತ ಇವೇ ಪುರಾಣದ ಪಂಚ ಅಂಗಗಳು. ಮೊದಲಿಗೆ ಪುರಾಣಕಾರರು ಈ ಲಕ್ಷಣಗಳ ಚೌಕಟ್ಟಿನಲ್ಲಿಯೇ ಪುರಾಣ ರಚನೆ ಮಾಡಿದರು. ಆದರೆ ಬರಬರುತ್ತಾ ಅವುಗಳ ಕ್ಷೇತ್ರವು ವಿಸ್ತಾರವಾದಂತೆ ಪುರಾಣಗಳ ಗಾತ್ರ ದೊಡ್ಡದಾಯಿತು. ಇದರಿಂದಾಗಿ ಪುರಾಣಗಳ ಲಕ್ಷಣಗಳಲ್ಲೂ ವಿಕಾಸ ತಲೆದೋರಿತು. ಪಂಚಲಕ್ಷಣಾನ್ವಿತ ಪುರಾಣಗಳಿಂದ ತಮ್ಮನ್ನು ಪ್ರತ್ಯೇಕೀಕರಿಸಿಕೊಳ್ಳಲು ಕೆಲವು ಪುರಾಣಕಾರರು ತಮಗೆ ಸರಿತೋರಿದ ಹತ್ತು ಲಕ್ಷಣಗಳನ್ನು ಹೇಳಿ ತಮ್ಮ ಕೃತಿಗಳನ್ನು ಮಹಾಪುರಾಣಗಳೆಂದು ಕರೆದರು.

ಭಾರತೀಯ ಜ್ಞಾನಶಾಖೆಯ ಬಹುಪಾಲನ್ನು ಹಾಗೂ ಅವುಗಳಲ್ಲಿ ಮುಖ್ಯಾಂಶಗಳನ್ನು ತನ್ನಲ್ಲಿ ಮೈಗೂಡಿಸಿಕೊಂಡಿರುವ 'ಪುರಾಣ'ವು, ಬಹುಶಃ ತನ್ನ ಲಕ್ಷಣಗಳ ವಿಕಾಸಕ್ಕೆ ಭಾರತೀಯ ಜ್ಞಾನವನ್ನೆಲ್ಲಾ ತನ್ನಲ್ಲಿ ಒಳಗೊಂಡಿರಬೇಕೆಂಬ ಮಹದುದ್ದೇಶವೇ ಕಾರಣವಾಗಿರಬಹುದು. ಕಾಲ ಕಾಲಕ್ಕೆ ಪುರಾಣಗಳಲ್ಲಿ ಪ್ರಕ್ಷಿಪ್ತಭಾಗಗಳು ಸೇರ್ಪಡೆಯಾಗಲಿಕ್ಕೆ ಬೇಕು ಬೇಕಾದಂತೆ ವಿಷಯಗಳನ್ನು ಜೋಡಿಸ ಹೊರಟ ಪುರಾಣರಚಕರ, ಹಸ್ತಪ್ರತಿಕಾರರ ಅಭಿರುಚಿಯೂ ಕಾರಣವಾದಂತಿದೆ. ಪುರಾಣಗಳ ಅಧ್ಯಯನ ದೇಶೀಯ ಹಾಗೂ ವಿದೇಶೀಯ ವಿದ್ವಾಂಸರುಗಳಿಂದ ನಡೆಯುತ್ತಿದೆ. ಧಾರ್ಮಿಕ, ಸಾಹಿತ್ತಿಕ, ಸಾಂಸ್ಕೃತಿಕ ಹೀಗೆ ಹಲವು ದೃಷ್ಟಿಕೋನಗಳಿಂದ ವೈಜ್ಞಾನಿಕವಾದ ಅಧ್ಯಯನ ನಡೆಯುತ್ತಿದೆ. ಹಿಂದೂ ಧರ್ಮದ ಪ್ರತಿಪಾದಕರು ಪುರಾಣಗಳನ್ನು ಆಧಾರವಾಗಿ ಅಂಗೀಕರಿಸಿರುವರು. ಶ್ರೀಮತ್ ಶಂಕರಭಗವತ್ಪಾದರು ತಮ್ಮ ಸೂತ್ರ ಭಾಷ್ಯದಲ್ಲಿ ಶಿವಪುರಾಣದ ಅನೇಕ ಶ್ಲೋಕಗಳನ್ನು ಪ್ರಮಾಣವಾಗಿ ಉದಾಹರಿಸಿದರೆ, ಶ್ರೀರಾಮಾನುಜರು ತಮ್ಮ ಭಾಷ್ಯದಲ್ಲಿ ವಿಷ್ಣುಪುರಾಣ, ಭಾಗವತ ಪುರಾಣ ಮೊದಲಾದವುಗಳಿಂದ ಅನೇಕ ಪ್ರಮಾಣ ಶ್ಲೋಕಗಳನ್ನು ಬಳಸಿಕೊಂಡಿರುವರು.

ವೈದಿಕ ಪುರಾಣಗಳಲ್ಲಿ ಒಂದೊಂದೂ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ವ್ಯಕ್ತಿಗಳಿಂದ ರಚಿಸಲ್ಪಟ್ಟ ಭಾಗಗಳ ಸಂಕಲನಗಳಾಗಿವೆ. ವೀರಶೈವ ಪುರಾಣಗಳಿಗೆ ಹಿನ್ನೆಲೆಯಾಗಿ ಬರುವ ಕನ್ನಡ ಜೈನ ಪುರಾಣಗಳಾಗಲೀ, ತಮಿಳುನಾಡಿನ ಶೈವ ಸಂತರ ಕಥೆಗಳನ್ನು ಹೇಳುವ ಶೇಕ್ಕಿಳಾರ್ ಕವಿಯ ಪೆರಿಯಪುರಾಣವಾಗಲೀ ಮೇಲಿನಂತೆ ರೂಪುಗೊಳ್ಳಲಿಲ್ಲ. ಇವುಗಳು ಒಂದೊಂದೂ ಒಬ್ಬೊಬ್ಬ ಕವಿಯಿಂದ ರಚಿತವಾದವುಗಳು. ವೈದಿಕ ಪುರಾಣಗಳಲ್ಲಿ ಪಂಚ ಲಕ್ಷಣಗಳು ಪ್ರತಿಪಾದ್ಯವಾದುವಲ್ಲದೆ ಇನ್ನೂ ಅನೇಕ ವಿಷಯಗಳು ನಿರೂಪಿತವಾಗಿವೆ. 'ಧರ್ಮ, ನೀತಿ, ವರ್ಣಾಶ್ರಮವಿಚಾರಗಳು ವಿಶದವಾಗಿ ಹೇಳಲ್ಪಟ್ಟಿವೆ. ಮತ್ತು ವಿಷಯಾಸಕ್ತರಾದವರಿಗೂ ಜಿತೇಂದ್ರಿಯರಿಗೂ, ಯತಿಗಳಿಗೂ, ಬ್ರಹ್ಮಚಾರಿಗಳಿಗೂ, ಗೃಹಸ್ಥರಿಗೂ, ವಾನಪ್ರಸ್ತರಿಗೂ, ಸ್ತ್ರೀ ಶೂದ್ರರಿಗೂ ವಿಹಿತವೂ ಯೋಗ್ಯವೂ ಆದ ಧರ್ಮಗಳು ವರ್ಣಿತವಾಗಿವೆ. ಬ್ರಾಹ್ಮಣ, ಕ್ಷತ್ರಿಯ. ವೈಶ್ಯ, ಶೂದ್ರ, ಸಂಕರ ಜಾತಿಗಳು; ಗಂಗಾದಿ ಮಹಾನದಿಗಳು, ಯಜ್ಞಯಾಗಾದಿ ಧರ್ಮಗಳು, ವ್ರತ ತಪಸ್ಸುಗಳು, ನಾನಾವಿಧ ದಾನಗಳು, ಯಮನಿಯಮಾದಿಗಳು ಯೋಗಧರ್ಮಗಳು, ಬಹು ವಿಧವಾದ ಸಾಂಖ್ಯಾದಿ ತತ್ವಗಳು, ಭಾಗವತ ಧರ್ಮಗಳು, ಭಕ್ತಿ ಜ್ಞಾನ ವೈರಾಗ್ಯ ಮಾರ್ಗಗಳು, ಪರಹಿಂಸಾದಿ ಅಧರ್ಮ ಸ್ವರೂಪಗಳು, ಮನಸ್ಸಿಗೆ ಕರ್ಮದಿಂದುಂಟಾಗುವ ಶುದ್ಧಿ ಕರ್ಮಗಳು, ಬ್ರಾಹ್ಮ, ಶೈವ, ವೈಷ್ಣವ, ಸೌರ, ಶಾಕ್ತೇಯ, ಅರ್ಹತ ಎಂಬ ಸ್ವರೂಪಸಿದ್ಧವಾದ ಆರು ದರ್ಶನಗಳು ಇತರ ವಿವಿಧ ವಿಷಯಗಳು ಅಷ್ಟಾದಶ ಪುರಾಣದಲ್ಲಿ ನಿರೂಪಿತವಾದ ಮುಖ್ಯ ವಿಷಯಗಳು' ಎಂದು ವಾಯು ಪುರಾಣದಲ್ಲಿ ಹೇಳಲಾಗಿದೆ(ವಾಯು ೧೨, ೧೧-೧೭). ಜೈನ ಪುರಾಣಗಳಲ್ಲಿ ನಿರ್ದಿಷ್ಟ ಪುರಾಣ ಲಕ್ಷಣಗಳ ಜೊತೆಗೆ ಕಾವ್ಯ ಲಕ್ಷಣಗಳನ್ನೂ, ತೀರ್ಥಂಕರ, ಚಕ್ರವರ್ತಿ, ಬಲದೇವ–ವಾಸುದೇವ–ಪ್ರತಿವಾಸುದೇವರ ಕಥೆಗಳನ್ನೂ, ಪಂಚ ಕಲ್ಯಾಣಗಳನ್ನೂ, ಭವಾವಳಿಗಳನ್ನೂ, ಲೋಕಾಲೋಕ ವಿಚಾರ, ಯುಗ ಪರಿವರ್ತನೆ, ಜೀವ-ಅಜೀವ, ಪುಣ್ಯ-ಪಾಪ, ಬಂಧ-ಮೋಕ್ಷ, ಘಾತಿ-ಅಘಾತಿ ಕರ್ಮಗಳು, ಅನಂತ ಚತುಷ್ಟಯಗಳು ಇತ್ಯಾದಿ ಧಾರ್ಮಿಕ ತತ್ತ್ವಗಳನ್ನೂ, ಪರಮತ ಖಂಡನೆಯನ್ನೂ, ಗೃಹಸ್ಥರ ಮತ್ತು ಸಾಧುಗಳ ಆಚಾರ ವ್ಯವಹಾರ

---

6. ಭಾಗವತವು, ಕೆಲವರು ಉಪ ಪುರಾಣಕ್ಕೆ ಐದೆಂದೂ, ಮಹಾಪುರಾಣಕ್ಕೆ ಹತ್ತೆಂದೂ ಲಕ್ಷಣಗಳನ್ನು ಹೇಳಿದ್ದಾರೆಂದು ಹೇಳುತ್ತದೆ. ಅದು ಸರ್ಗ, ವಿಸರ್ಗ, ವೃತ್ತಿ, ರಕ್ಷಾ, ಅಂತರ, ವಂಶ, ವಂಶಾನುಚರಿತೆ,ಸಂಸ್ಥಾ,ಹೇತು ಮತ್ತು ಅಪಾಶ್ರಯ ಎಂಬ ದಶವಿಧ ಲಕ್ಷಣಗಳನ್ನು ಮಹಾಪುರಾಣವು ಹೊಂದಿದೆ ಎಂದು ಹೇಳುತ್ತದೆ. (ಭಾಗ ೧೨, ೬. ೪೮-೯). ಆದರೆ ಈ ಲಕ್ಷಣಗಳು ಎಲ್ಲೆಡೆ ಒಂದೇ ರೀತಿಯಾಗಿರುವುದಿಲ್ಲ. ಭಾಗವತದಲ್ಲೇ ಇನ್ನೊಂದೆಡೆಯಲ್ಲಿ ಸರ್ಗ, ಪ್ರತಿಸರ್ಗ, ಸ್ಥಾನ, ಪೋಷಣ, ಊತಿ, ಮನ್ವಂತರ, ಈಶಾನುಕಥನ, ನಿರೋಧ, ಮುಕ್ತಿ ಮತ್ತು ಆಶ್ರಯ ಎಂದು ದಶಲಕ್ಷಣಗಳನ್ನು ಹೇಳಿದೆ (ಭಾಗ ೧೧, ೧೨-೧) ಬ್ರಹ್ಮವೈವರ್ತದಲ್ಲಿ ಇದು ಇನ್ನಷ್ಟು ವ್ಯತ್ಯಾಸ ಹೊಂದಿದೆ. ಅಲ್ಲಿ ಬಂದಿರುವಂತೆ ಸೃಷ್ಟಿ, ವಿಸೃಷ್ಟಿ, ಸ್ಥಿತಿ, ಪಾಲನ, ಕರ್ಮ,ವಾಸನಾ, ಮನುವಾರ್ತಾ, ಪ್ರಳಯ ವರ್ಣನ, ಮೋಕ್ಷ ನಿರೂಪಣ, ಹರಿಕೀರ್ತನ ಮತ್ತು ದೇವ ಕೀರ್ತನ ಇವು ದಶ ಲಕ್ಷಣಗಳು.

ಗಳನ್ನೂ, ವೈರಾಗ್ಯವನ್ನೂ, ಹೇಳಲಾಗಿದೆ. ತಮಿಳುನಾಡಿನ ಪುರಾತನರ ಕಥೆಗಳನ್ನು ಹೇಳುವ ಶೇಕ್ಕಿಳಾರನ 'ಪೆರಿಯ ಪುರಾಣ'ಕ್ಕೆ ನಿರ್ದಿಷ್ಟ ಪುರಾಣ ಲಕ್ಷಣವಿಲ್ಲದಿದ್ದರೂ ಅದರಲ್ಲಿ ಒಬ್ಬೊಬ್ಬ ಪುರಾತನ ಶೈವ ಸಂತನ ಕಥೆಯನ್ನು ಪ್ರತ್ಯೇಕ ಪುರಾಣವಾಗಿ ಹೇಳಲಾಗಿದೆ.

ವೇದ, ಆಗಮ, ಪುರಾಣಗಳ ಭಾಷೆ ಸಂಸ್ಕೃತ. ಜೈನಧರ್ಮದ ತತ್ತ್ವಗಳು ಹಾಗೂ ಅದರ ನಾಯಕಾಗ್ರೇಸರರ ಚರಿತ್ರೆಗಳು ಪ್ರತಿಪಾದಿತವಾದುದು ಪ್ರಾಕೃತ ಸಂಸ್ಕೃತಗಳಲ್ಲಿ. ವೈದಿಕ ವಾಙ್ಮಯವಾಗಲೀ ಜೈನ ವಾಙ್ಮಯವಾಗಲೀ ಸಾಮಾನ್ಯನ ಬದುಕಿನ ಮೇಲೆ ತೀವ್ರತರವಾದ ಪರಿಣಾಮವನ್ನು ಬೀರದಿರಲು ಕಾರಣ ಅವುಗಳು ಅಭಿವ್ಯಕ್ತಿಗೊಂಡ ಭಾಷೆ. ಸಂಸ್ಕೃತ ಪ್ರಾಕೃತಗಳು ಕನ್ನಡ ನಾಡಿನಲ್ಲಿ ಪಂಡಿತರ ಸೊತ್ತಾಗಿ ಸಾಮಾನ್ಯನಿಗೆ ಅವು ಮುಗಿಲಮಲ್ಲಿಗೆಯಾಗಿದ್ದವು. ಸಾಮಾನ್ಯನ ಬದುಕಿನೊಡನೆ ಭಾಷೆ ಬೆಸುಗೆಗೊಂಡಿರುವುದರಿಂದ ಸಾಮಾನ್ಯನಿಗೆ ನಿಲುಕುವ ಮಟ್ಟದಲ್ಲಿ ವೈದಿಕ ಹಾಗೂ ಜೈನ ವಾಙ್ಮಯಗಳು ಸಂಪರ್ಕ ಪಡೆಯಲಿಲ್ಲ. ಅವುಗಳಲ್ಲಿ ಪ್ರತಿಪಾದಿತವಾದ ಆಧ್ಯಾತ್ಮ ಚಿಂತನೆಯಾಗಲೀ, ತಾತ್ತ್ವಿಕ ಧೋರಣೆಗಳಾಗಲೀ, ಧಾರ್ಮಿಕ ಸಂಗತಿಗಳಾಗಲೀ ಜನಸಾಮಾನ್ಯನ ದೈನಂದಿನ ಬದುಕಿನೊಡನೆ ಸಾಂಗತ್ಯ ಹೊಂದಲಿಲ್ಲ. ೧೨ ನೇ ಶತಮಾನದ ಕ್ರಾಂತಿ ವರ್ಣ ಹಾಗೂ ವರ್ಗ ವ್ಯವಸ್ಥೆಯ ವಿರುದ್ಧ ನಡೆದು ಜನಸಾಮಾನ್ಯನ ಬದುಕನ್ನು ಹಸನುಗೊಳಿಸಿ ಅವನ ಆಶೋತ್ತರಗಳಿಗೂ ಅವನ ವಿಚಾರಗಳಿಗೂ ಅವನ ಆಡುಭಾಷೆಯ ಮೂಲಕ ಸಂಪರ್ಕ ಕಲ್ಪಿಸಿತು. ವಚನಕಾರರು ಅಂತರಂಗ ಶುದ್ಧಿಗೆ ಪ್ರಾಧಾನ್ಯವಿತ್ತರು. ಇಮ್ಮನವಿಲ್ಲದೆ ಒಮ್ಮನವಾದ ನಡೆ–ನುಡಿಗೆ ಹೆಚ್ಚಿನ ಪ್ರಾಮುಖ್ಯ ನೀಡಿದರು. ಆತ್ಯಂತಿಕ ಸತ್ಯವನ್ನು ಅರಿಯಲು, ವ್ಯಕ್ತಿಯ ನೀತಿ. ನಡತೆ, ಚಾರಿತ್ರೆಗಳನ್ನು ಉತ್ತಮ ಪಡಿಸಲು, ವ್ಯಕ್ತಿಯು ಸದಾ ಅಂತರಂಗ ಬಹಿರಂಗಗಳಲ್ಲಿ ಪ್ರಾಮಾಣಿಕನಾಗಿರುವಂತೆ ಮಾಡಲು, ಸಮಾಜವು ಸತ್ಯದ ಪ್ರಾಮಾಣಿಕ ಅನ್ವೇಷಣೆ ನಡೆಸಲು ಶರಣರು ಪ್ರಯತ್ನಿಸಿದರು. ಅವರ ವಚನಗಳಲ್ಲಿ ನಾವು ಕಾಣುವುದು ಈ ಪ್ರಯತ್ನದ ಪ್ರತಿಫಲನವನ್ನೇ ! ಅನುಭವಕ್ಕೆ ಬಾರದ, ಆಚರಣೆಗೆ ಸಂಬಂಧಿಸದ ಗಹನವಾದ ತತ್ತ್ವಗಳನ್ನು ತಿಳಿಯದ ಭಾಷೆಯಲ್ಲಿ ಜೇರೆಯವರಿಗೆ ಬೋಧಿಸುವುದು ಒಂದು ವಿಧದಲ್ಲಿ ಪುರೋಹಿತ ವರ್ಗವು ತಮಗೆ ತಾವೇ ಮಾಡಿಕೊಳ್ಳುವ ಆತ್ಮವಂಚನೆ. ಅರಿಯದ ಜನರಿಗೆ ಮಾಡುವ ಮೋಸವಾಗಿದೆ. ನಗೆಯ ಮಾರಿತಂದೆ ತನ್ನ ವಚನವೊಂದರಲ್ಲಿ[7] ವಾಗದ್ವೈತವನ್ನು ಚಮತ್ಕಾರದ ಸಂಸ್ಕೃತ ಮಾತುಗಳಲ್ಲಿ ಹೇಳ ಹೊರಟ ಪಂಡಿತನ ವಂಚನೆಯನ್ನು ಹೀಗೆ ಗೇಲಿ ಮಾಡಿರುವನು.

> ಕಲ್ಲಿಯ ಹಾಕಿ ನೆಲ್ಲವ ತಳಿದು ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ ವಾಗದ್ವೈತವ ಕಲಿತು,
> ಸಂಸ್ಕೃತದ ಮಾತಿನ ಪಸರದ ಮುಂದೆ ಇಕ್ಕಿಕೊಂಡು, ಮತ್ಸ್ಯದ ವಕ್ತ್ರದಲ್ಲಿ ಗ್ರಾಸವ ಹಾಕುವನಂತೆ,
> ಅದೇತರ ನುಡಿ ? ಮಾತಿನ ಮರೆ ಆತುರವೈರಿ ಮಾರೇಶ್ವರಾ

ಅರ್ಥವಾಗದ ವಾಗದ್ವೈತವನ್ನು ಮಂಜುಳವಾದ ಸಂಸ್ಕೃತ ಪದಪುಂಜಗಳಲ್ಲಿ ಹೇಳ ಹೊರಡುವುದು ಜಾಣರ ಲಕ್ಷಣ. ಬಲೆಗೆ ಅಕ್ಕಿಕಾಳು ಚೆಲ್ಲಿ ಗುಬ್ಬಿಯನ್ನು ಸೆರೆಹಿಡಿಯುವುದು, ಗಾಳದ ತುದಿಗೆ ಮಣ್ಣಿನ ಹುಳ ಹಾಕಿ ಮೀನನ್ನು ಆಕರ್ಷಿಸಿ (ಮೀನನ್ನು) ಹಿಡಿಯುವುದು ಬುದ್ಧಿವಂತರ ಲಕ್ಷಣ. ಈ ಪಂಡಿತರ, ಮಾತಿನ ಮಲ್ಲರ ಬಲೆಗೆ ಸುಲಭವಾಗಿ ಬೀಳುವ ಪ್ರಾಣಿಗಳು ಅರಿಯದ ಮುಗ್ಧ ಜನರು ! ವಸ್ತುಸ್ಥಿತಿಗೆ ಹಿಡಿದ ಕನ್ನಡಿ ಈ ಅನಿಸಿಕೆ. ೧೨ ನೇ ಶತಮಾನದ ಸಾಹಿತ್ತಿಕ ಕ್ರಾಂತಿಯ ಸಂದರ್ಭದಲ್ಲಿ ಈ ಅನಿಸಿಕೆ ಬಂದದ್ದು ಬಸವ, ಪ್ರಭು, ಅಕ್ಕ, ಸಿದ್ಧರಾಮ–ಇವರೇ ಮೊದಲಾದ ಪ್ರಮುಖ ವಚನಕಾರರಿಂದ ಅಲ್ಲ, ಒಬ್ಬ ಸಾಮಾನ್ಯ ವಚನಕಾರನಿಂದ.

ವೇದ, ಶಾಸ್ತ್ರ, ಆಗಮ, ಪುರಾಣಗಳು ಭಗವಂತನ ಸಾಕ್ಷಾತ್ಕಾರಕ್ಕೆ, ಅವನ ಲೀಲಾ ವಿಲಾಸಗಳ ಕಥನಕ್ಕೆ ಪ್ರಾಧಾನ್ಯ ನೀಡಿದುವು. ಅವುಗಳು ತಮಗೆ ತಾವೇ ಸೃಷ್ಟಿಯಾದವುಗಳೂ ಅಲ್ಲ, ಏಕಕರ್ತೃಕಗಳೂ ಅಲ್ಲ, ದೇವ ನಿರ್ಮಿತವೂ ಅಲ್ಲ. ಅವು ದ್ರಷ್ಟಾರರ, ಅನುಭಾವಿಗಳ, ಭಕ್ತರ, ಕವಿಗಳ ಅಂತರಂಗದ ಸೃಷ್ಟಿ. ಅವೇ ನಮ್ಮ ಬದುಕನ್ನು ನಿರ್ಣಯಿಸುವ, ಬದುಕಿಗೆ ಅರ್ಥವನ್ನು ಕೊಡುವ ಪ್ರಮುಖ ಅಂಶಗಳಲ್ಲ. ಆದ ಕಾರಣ ವಚನಕಾರರು ಅವಕ್ಕೆ ಹೆಚ್ಚಿನ ಪ್ರಾಧಾನ್ಯ ನೀಡಲಿಲ್ಲ. ಸಾಮಾನ್ಯನಿಗೆ ನಿಲುಕದ ಅವುಗಳ ಭಾಷೆ ಹಾಗೂ ವಿಷಯ ಸಾಮಾನ್ಯ ಬದುಕಿನ ಉತ್ತಮಿಕೆಗೆ ಯಾವ ವಿಧದಲ್ಲೂ ನೆರವಾಗಲು ಹೊರಟಿರಲಿಲ್ಲ. ಸಾಮಾನ್ಯನ ಗ್ರಹಿಕೆಗೆ ಸಿಗದ ಮಾತಿನ ಮರೆಯ ಅಧ್ಯಾತ್ಮದ ವಿಚಾರಗಳು, ಸಾಮಾನ್ಯನ ಮನಸ್ಸಿಗೆ ಬಹು ದೈವಗಳು ಹಾಗೂ ಅವುಗಳ ಮಹಿಮೆಗಳು ಉಂಟು ಮಾಡಿದ ಗಲಿಬಿಲಿ, ಶಾಸ್ತ್ರ ಪುರಾಣಗಳಲ್ಲಿ ಹೇಳಲಾಗಿದ್ದ ಆಚರಣೆಗಳು ಬಹುಶಃ ವೇದಶಾಸ್ತ್ರ, ಪುರಾಣಗಳನ್ನು ವಚನಕಾರರು ವಿರೋಧಿಸಲು ಕಾರಣಗಳಾಗಿರಬಹುದು. ಪ್ರಭುವಿನಂತಹ ಮಹಾಜ್ಞಾನಿ 'ವೇದ ಪ್ರಮಾಣವಲ್ಲ, ಶಾಸ್ತ್ರ ಪ್ರಮಾಣವಲ್ಲ, ಶಬ್ದ ಪ್ರಮಾಣವಲ್ಲ ಕಾಣೆ ಭೋ ಲಿಂಗಕ್ಕೆ' ![8] ಎಂದೂ 'ವೇದ ವೇಧಿಸಲಱಿಯದೆ ಕೆಟ್ಟವು. ಶಾಸ್ತ್ರ

7. ಮಧ್ಯಕಾಲೀನ ಕನ್ನಡ ಕವಿತೆ : (ಸಂ. ಡಾ॥ ಎಂ. ಚಿದಾನಂದಮೂರ್ತಿ, ಪ್ರೊ. ಎಂ. ಎಸ್. ವೆಂಕಟರಾವ್, ಕಿ. ರಂ. ನಾಗರಾಜ), 'ಪ್ರಸಾರಂಗ' ಬೆಂಗಳೂರು ವಿಶ್ವವಿದ್ಯಾಲಯ, ಪು. ೨೦
8. ಅಲ್ಲಮ ಪ್ರಭುದೇವರ ವಚನಗಳು ; ಸಂ. ಡಾ॥ ಆರ್. ಸಿ. ಹಿರೇಮಠ, ಡಾ॥ ಎಂ. ಎಸ್. ಸುಂಕಾಪುರ, ವಚನ ೨೪೯

ಸಾಧಿಸಲಱಿಯದೆ ಕೆಟ್ಟವು. ಪುರಾಣ ಪೂರೈಸಲಱಿಯದೆ ಕೆಟ್ಟವು. ಹಿರಿಯರು ತಮ್ಮ ತಾವಱಿಯದೆ ಕೆಟ್ಟರು.'[9] ಎಂದೂ 'ವೇದವೆಂಬುದು ಓದಿನ ಮಾತು. ಶಾಸ್ತ್ರವೆಂಬುದು ಸಂತೆಯ ಸುದ್ದಿ. ಪುರಾಣವೆಂಬುದು ಪುಂಡರ ಗೋಷ್ಠಿ. ತರ್ಕವೆಂಬುದು ತಗರ ಹೋರಟೆ. ಭಕ್ತಿಯೆಂಬುದು ತೋಱಿ ಉಂಬ ಲಾಭ. ಗುಹೇಶ್ವರನೆಂಬುದು ಮೀಱಿದ ಘನವು'[10] ಎಂದೂ ಘೋಷಿಸಿದನು. ವೇದಶಾಸ್ತ್ರಗಳನ್ನು ಕಲಿತ ಮಾತ್ರಕ್ಕೆ ವ್ಯಕ್ತಿ ಜ್ಞಾನಿಯಾಗುವುದಿಲ್ಲ ; ಹಿರಿಯನಾಗುವುದಿಲ್ಲ. ಬಸವಣ್ಣ ಹೇಳುವಂತೆ ವೇದಶಾಸ್ತ್ರ ಕಲಿತವರು, ಮಾಯಾಭ್ರಾಂತಿ ಕವಿದ ಗೀತಜ್ಞರು ಹಿರಿಯರಲ್ಲ. ಇವರು ಯಾಗ ನಟ್ಟುವಿಗ ಪಾಣರು. ಅಂದರೆ, ಇವರು ಯಾಗವನ್ನು ನಡೆಸುವ ಶ್ರೋತ್ರಿಗಳು, ಅಭಿನಯಿಸುವವರು, ಸಂಗೀತ ನೃತ್ಯಗಳಲ್ಲಿ ನಿಪುಣರು. ಇವರಿಗಿಂತ ಹೆಚ್ಚಿಗೆ ಸಾಧಿಸುವವರು ಕಿರಿಯರೇನಲ್ಲ. ವಿದ್ಯೆ, ಗುಣ, ಜ್ಞಾನ, ಧರ್ಮ, ಆಚಾರ, ಶೀಲಗಳಲ್ಲಿ ಕೂಡಲ ಸಂಗನ ಶರಣರೇ ಹಿರಿಯರು. ಅವರು ಸಾಧಿಸಿದ ಸಾಧನೆಯನ್ನೇ ಸಾಧಿಸುವುದು ಶ್ರೇಯಸ್ಕರ.

ಬಸವಣ್ಣ ಹುಟ್ಟಿನಲ್ಲಿ ಬ್ರಾಹ್ಮಣನಾಗಿ ವೇದ, ಶಾಸ್ತ್ರ, ತರ್ಕ, ಆಗಮುಗಳ ಶುಷ್ಕತೆಯನ್ನು ಚೆನ್ನಾಗಿ ಮನಗಂಡಿರುವನು. ಪರಿವರ್ತನೆಯ ಹಾದಿಯತ್ತ ಹೊರಟ ನವಸಮಾಜಕ್ಕೆ ಕರ್ಮಪ್ರಧಾನವಾದ, ಅನಾದಿ ಕಾಲದಿಂದ ಅಜ್ಞ ಜನರ ಮೇಲೆ ದಬ್ಬಾಳಿಕೆ ನಡೆಸಿದ ಪುರೋಹಿತವರ್ಗದ ವೇದ, ಶಾಸ್ತ್ರ ಪುರಾಣಗಳು ಅಗತ್ಯವಿಲ್ಲವೆಂದು ಭಾವಿಸಿದ ಬಸವಣ್ಣ 'ವೇದಕ್ಕೆ ಒಱೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳನಿಕ್ಕುವೆ. ತರ್ಕದ ಬೆನ್ನ ಬಾರನೆತ್ತುವೆ, ಆಗಮದ ಮೂಗ ಕೊಯಿವೆ'[11] ಎಂದು ವೀರಾವೇಶದಿಂದ ಆರ್ಭಟಿಸಿದನು. ಅಕ್ಕಮಹಾದೇವಿಯು 'ವೇದಶಾಸ್ತ್ರಾಗಮ ಪುರಾಣಂಗಳೆಂಬುವ ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿಭೋ ! ಅವ ಕುಟ್ಟಲೇಕೆ?'[12] ಎಂದು ಪ್ರಶ್ನಿಸಿದಳು, ಪರಮಾತ್ಮನನ್ನು ಅರಿಯಲು ವೇದ ಆಗಮ, ಪುರಾಣಗಳೇ ಏಕೆ ? ಅತ್ತಲಿತ್ತ ಚಲಿಸುವ ಮನದ ತುದಿಯನ್ನು ಅರಿಯಲು ಪ್ರಯತ್ನಿಸಿದ್ದೇ ಆದರೆ ಆ ಚನ್ನಮಲ್ಲಿಕಾರ್ಜುನ 'ಬಚ್ಚಬರಿಯ ಬಯಲು'. ವೇದಗಳೇ ಆಗಲಿ, ಶಾಸ್ತ್ರಗಳೇ ಆಗಲಿ, ಧರ್ಮಗಳೇ ಆಗಲಿ ಸ್ವಯಂಭುವಲ್ಲ. ಅಂಬಿಗರ ಚೌಡಯ್ಯನ ಪ್ರಕಾರ ಅವುಗಳೆಲ್ಲಾ ಸ್ವತಂತ್ರ ಅಸ್ತಿತ್ವವಿಲ್ಲದ ಪರಾವಲಂಬಿಗಳು. ನಾದದ ಬಲದಿಂದ ವೇದಗಳಾದವು. ಮಾತಿನ ಬಲದಿಂದ ಶಾಸ್ತ್ರಗಳಾದವು. ಕಲ್ಲಿನ ಮೂರ್ತಿಗಳಿಂದಾಗಿ ಬಗೆಬಗೆಯ ಧರ್ಮಗಳಾದವು. ವೇದಶಾಸ್ತ್ರ ಪುರಾಣಗಳು ಮಾತಿನ ಬಣಬೆಗಳು. ಈ ಮಾತಿನ ಬಣಬೆಗಳನ್ನು ಮುಂದಿಟ್ಟುಕೊಂಡು ಪರಮಾತ್ಮನನ್ನು ಕಂಡಿರುವೆವೆಂದರೆ ನಂಬಲು ಸಾಧ್ಯವೆ? ಆ ಪರಮಾತ್ಮನಾದರೊ ಅತ್ಯತಿಷ್ಠದ್ದಶಾಂಗುಲ. ಹೀಗಿರುವ ಪರಮಾತ್ಮನು ಇವುಗಳ ಬಗೆಗೆ ಸಿಲುಕುವುದಾದರೂ ಹೇಗೆ ಸಾಧ್ಯ ?[13] ಚನ್ನಬಸವಣ್ಣ ಹೇಳುವಂತೆ ಪರಮಾತ್ಮನನ್ನು 'ವೇದಶಾಸ್ತ್ರ ಪುರಾಣಾಗಮುಂಗಳೆಲ್ಲಾ ತಮ್ಮತನವಿಡಿದು ಅಱಿಸಲಱಿಯವು. ಇದಿರಿಟ್ಟುಕೊಂಡು ಕಡೆಹೋದ ನರಲೋಕದ ನರರುಗಳಱಿಯರು. ಸುರಲೋಕದ ಸುರರುಗಳಱಿಯರು...' ಶರಣನೋರ್ವನೆ ಬಲ್ಲನು.

ವಚನಕಾರರು ತಮ್ಮ ಮನ ಒಲಿದಂತೆ ಹಾಡಿದರು. ಅವು ಪಂಡಿತರ ರಚನೆಯಂತೆ ಲಕ್ಷಣಬದ್ಧವಲ್ಲ. ಅಂದಂದಿನ ಅನುಭವಗಳಿಗೆ ಹೃದಯ ಹೇಗೆ ಸ್ಪಂದಿಸಿತೊ ಹಾಗೆ ಅವುಗಳಿಗೆ ಮಾತಿನ ಮೂಲಕ ಜೀವತುಂಬಿದರು. ಶರಣರು 'ಗೀತಮಾತೆಂಬ ಜ್ಯೋತಿಯ ಬೆಳಗಿಟ್ಟರು'. ಚನ್ನಬಸವಣ್ಣ ಹೇಳುವಂತೆ 'ಜ್ಞಾನದೀಪ್ತಿಯ ಬೆಳಗುವ ತೈಲವಾವುದೆಂದಡೆ, ಶಿವಶರಣರ ನುಡಿಗಡಣದ ಒಸರು. ಆ ಒಸರಿಂಗಲ್ಲದೆ ಜ್ಞಾನಪ್ರಕಾಶವಿಲ್ಲ. ಅದು ತಾನೆಂಬ ನಿಶ್ಚಯವ ತೋಱುವುದು. ಹೀನಜಡತೆಯ ಮುಸುಕಿನ ಗ್ರಂಥಿಯನಳಿಪುದು...... ಬಸವಣ್ಣ 'ಆದ್ಯರ ವಚನ ಪರುಷ'ವೆಂದನು. ಮುಟ್ಟಿದಕಬ್ಬಿಣವನ್ನೆಲ್ಲಾ ಚೊಕ್ಕ ಚಿನ್ನವನ್ನಾಗಿ ಮಾಡುವ ಗುಣ ಪರುಷ ಶಿಲೆಯದು. ಅಂತರಂಗದ ಕಾಳಿಕೆಯನ್ನು ಪರಿಹರಿಸಲು 'ವಚನ ಪರುಷ'ವನ್ನು ಶರಣರು ಪ್ರಯೋಗಿಸಿದರು. ವೇದ ಆಗಮ ಪುರಾಣ–ಇವಾವೂ ಅವರಿಗೆ ಪ್ರಮಾಣವಾಗಲಿಲ್ಲ. ಅವರ ಅನುಭವವೇ ಅವರಿಗೆ ಪ್ರಮಾಣ. ಅನುಭವ ವಿವೇಚನೆಯ ಸಾಣೆಗೆ ಒಳಗಾಗಿ ಶುದ್ಧಗೊಂಡಿರುವುದರಿಂದ ಅನುಸರಣೀಯ. ಶರಣರು ಅನುಭಾವಿಗಳು. 'ಅನುಭಾವವೆಂಬುದು ಆತ್ಮವಿದ್ಯೆ, ತಾನಾರೆಂಬುದ ತೋರುವದು, ನಿಜನಿವಾಸದಲ್ಲಿರಿಸುವದು'. ಶರಣರು ಬೋಧಿಸಿದ ಅನುಭಾವದಿಂದ ಪರಿಪೂರ್ಣಾನಂದದ ಸ್ಥಿತಿಯನ್ನು, ಲಿಂಗಾಂಗ ಸಾಮರಸ್ಯದ, ಮಾತು ಮನಂಗಳಿಗೆ ಮೀರಿದ, ಅಂತಿಂತೆಂದು ಉಪಮಿಸಲಾಗದ ಆ ಸ್ಥಿತಿಯನ್ನು ತಿಳಿಯಲಾಯಿತು. ಶರಣರು ಬಾಹ್ಯ ಜಗತ್ತಿನ ಚಿರಂತನ ಸತ್ಯಗಳನ್ನು ಹೇಗೆ ನೇರವಾದ ಮಾತುಗಳಲ್ಲಿ ಹೇಳಿದರೊ ಹಾಗೆಯೇ ಅಂತರಂಗ ಜಗತ್ತಿನ ಸತತ ಪ್ರಯತ್ನ ಲಭ್ಯವಾದ ಊರ್ಧ್ವಮುಖೀಯಾತ್ರೆಯ ಬಗೆಗೂ ಅಷ್ಟೇ ಸರಳವಾಗಿ ಹೇಳಿದರು.

ಆತ್ಮವಿದ್ಯೆಯು ಆತ್ಯಂತಿಕ ಸತ್ಯದ ಸಾಕ್ಷಾತ್ಕಾರಕ್ಕಾಗಿ ಜೀವನು ನಡಸುವ ತೀವ್ರತರವಾದ ಶೋಧನೆಯಾಗಿದೆ. ಇದು ಅಂತರಂಗದ ಜಗತ್ತಿಗೆ ಸಂಬಂಧಿಸಿದುದು ; ವೈಯಕ್ತಿಕ ಸಾಧನೆಗೆ ಸಂಬಂಧಿಸಿದುದು. ಇದು ಬುದ್ಧಿಗೆ ನಿಲುಕುವಂತಹವಲ್ಲ, ಅನು

9. ಅದೇ, ವಚನ ೩೨೪    10. ಅದೇ, ವಚನ ೪೬೫

11. ಬಸವಣ್ಣನವರ ಷಟ್‌ಸ್ಥಲದ ವಚನಗಳು (ಜನಪ್ರಿಯ ಆವೃತ್ತಿ), ಸಂ. ಪ್ರೊ. ಬಸವನಾಳ ಶಿವಲಿಂಗಪ್ಪನವರು, ವ, ೭೯೯

12. ಅಕ್ಕನ ವಚನಗಳು : ಸಂ. ಡಾ॥ ಎಲ್. ಬಸವರಾಜು, ವ. ೧೦೩

13. ಸಕಲ ಪುರಾತನರ ವಚನಗಳು ಸಂಪುಟ ೧ : ಸಂ. ಡಾ॥ ಆರ್.ಸಿ. ಹಿರೇಮಠ, ಪುಟ. ೪೧೮, ವ. ೧೫೪೨

ಭಾವಕ್ಕೆ ನಿಲುಕುವಂತಹದು. ಈ ಅನುಭಾವ ಸಂಪತ್ತನ್ನು ಜೀವನು ತನ್ನ ಐಹಿಕ ಹಾಗೂ ಆಮುಷ್ಮಿಕ ಪ್ರಗತಿಗೆ ಬಳಸಿಕೊಳ್ಳಲು ಸಹಾಯಕವಾಗುವಂತೆ ಸರಳ ಭಾಷೆಯಲ್ಲಿ ವಚನಕಾರರು ನಿರೂಪಿಸಿದರು. ವಚನ ವಾಙ್ಮಯದಲ್ಲಿ ಐಹಿಕಕ್ಕೆ ಸಂಬಂಧಿಸಿದ ಹಲವು ಭಾಗಗಳನ್ನು ಬಿಟ್ಟರೆ, ಅದರ ಉಳಿದೆಲ್ಲ ಭಾಗ ಅಧ್ಯಾತ್ಮಶಾಸ್ತ್ರಕ್ಕೆ ಸಂಬಂಧಿಸಿದುದೇ ಆಗಿದೆ. ಮೇಲು ವರ್ಗದ ವ್ಯಕ್ತಿಗಳಂತೆ ಕೆಳವರ್ಗದಿಂದ ಬಂದ ವಚನಕಾರನೂ ಅಧ್ಯಾತ್ಮದ ವಿಷಯಗಳನ್ನು ತನ್ನ ವಚನಗಳಲ್ಲಿ ಪ್ರಸ್ತಾಪಿಸಿರುವುದು ಗಮನೀಯ ವಿಷಯ. ಅನುಭಾವದ ಸಾಧನೆಗೆ ಎಲ್ಲರೂ ಅರ್ಹರೆ. ತಾವು ಕಂಡುಕೊಂಡ ಅನುಭಾವದ ನಿಲುವನ್ನು ಇತರರಿಗೆ ತಿಳಿಯ ಹೇಳಲು ಎಲ್ಲರೂ ಅರ್ಹರೆ. ಸಮಾನತೆಯನ್ನು ಸಾಧಿಸ ಹೊರಟ ೧೨ನೇ ಶತಮಾನದ ವಚನಕಾರರ ಚಳುವಳಿಯಲ್ಲಿ ಇದೊಂದು ಮಹತ್ವದ ಸಾಧನೆ. ವಚನಕಾರರಿಗೆ ತಮ್ಮ ಸುತ್ತಮುತ್ತಲ ಪರಿಸರ ಹಾಗೂ ಆ ಪರಿಸರದಲ್ಲಿ ವಾಸಿಸುವ ಜೀವಿಗಳ ಉತ್ತಮಿಕೆಯು ಪ್ರಧಾನ ಕಳಕಳಿಯಾಗಿದ್ದಿತು. ಸಾಮಾಜಿಕವಾಗಿ ಮಹತ್ತರವಾದ ಬದಲಾವಣೆಯನ್ನು ಅವರು ಅಪೇಕ್ಷಿಸಿದ್ದರು. ಸಮಾಜದ ಸ್ವಾಸ್ಥ್ಯಕ್ಕೆ, ಆರ್ಥಿಕ ಸುಭದ್ರತೆ ಮೊದಲಿಗೆ ಆಗಬೇಕೆಂಬ ಅವರ ನಿಲುವು ವರ್ಣ ಹಾಗೂ ವರ್ಗ ವ್ಯವಸ್ಥೆಯ ನಿರ್ಮೂಲನದ ಮೂಲಕ ಕಾರ್ಯ ರೂಪಕ್ಕೆ ಬಂದಂತೆ ಕಾಣುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಸಮಾಜವನ್ನು ಮೇಲೆತ್ತ ಬಯಸಿದ ವಚನಕಾರರು, ತಾವುಕಟ್ಟ ಹೊರಟ ನವ ಸಮಾಜಕ್ಕೆ ನೀತಿಯ ತಳಹದಿ ಹಾಕಿದರು. ವಚನಕಾರರು ನಡೆಸಿದ ಕ್ರಾಂತಿ ವೈಚಾರಿಕವಾದುದು. ವಚನಕಾರರು ಸಾಹಿತ್ತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಚಳುವಳಿ ನಡೆಸಿದರು. ಈ ಚಳುವಳಿ ಸುಪ್ತವಾಗಿದ್ದ ನಾಡಿನ ಚೈತನ್ಯವನ್ನು ಬಡಿದೆಬ್ಬಿಸಿತು. ಬೌದ್ಧಿಕವಾಗಿ ವಿಚಾರಶೀಲರಾದ ಜನ ಚಿಂತಿಸಿದರು. ಸಾಮೂಹಿಕವಾಗಿ ನಡೆದ ಚಿಂತನೆಯ ಫಲವೇ ಈ ಚಳುವಳಿಗಳು. ಮುಕ್ತ ಮನಸ್ಸಿನ ಚಿಂತನೆ ವಚನಕಾರರ ಸ್ವತಂತ್ರ ವಿಚಾರಧಾರೆಗಳಲ್ಲಿ ಪ್ರತಿಫಲಿಸಿದೆ. ಅವರ ಕ್ರತುಶಕ್ತಿ ಪ್ರಗತಿಪರವಾಗಿ ವಿಚಾರ ಮಾಡಿತು, ತಮ್ಮ ನೆರೆಹೊರೆಯವರನ್ನೂ ವಿಚಾರ ಮಾಡುವಂತೆ ಪ್ರೇರೇಪಿಸಿತು. ಆಡು ಭಾಷೆಯನ್ನು ಮಾಧ್ಯಮವನ್ನಾಗಿ ಮಾಡಿಕೊಂಡು ಶರಣರ ವಿಚಾರಧಾರೆ ರೂಪುಗೊಂಡು ಚಾಲನೆ ಪಡೆಯಿತು. ಶರಣರು ವೈದಿಕ ಪದ್ಧತಿಯಲ್ಲಿ ಕಂಡು ಬಂದ ಅರ್ಥವಿಹೀನವಾದ ವಿಚಾರಗಳನ್ನು, ಆಚಾರಗಳನ್ನು, ವಿಧಿ–ನಿಷೇಧಗಳನ್ನು ಕಟುವಾಗಿ ಟೀಕಿಸಿರುವರು. ಬಹಳ ಕಾಲದಿಂದಲೂ ಪುರೋಹಿತ ವರ್ಗ ಕೆಳ ವರ್ಗದವರ ಮೇಲೆ ನಡೆಸಿದ ದರ್ಪ ದೌರ್ಜನ್ಯಗಳನ್ನು ನೋಡಿ ಸಹಿಸದವರಾಗಿದ್ದರು. ಅವರ ಮಡಿವಂತಿಕೆ ವ್ಯಕ್ತಿಗಷ್ಟೇ ಸೀಮಿತವಾಗದೆ ಭಾಷೆಗೂ ಸೀಮಿತವಾಗಿದ್ದುದನ್ನು ಕಂಡು ಶರಣರು ಕೆರಳಿದ್ದರು. ಬಹುಶಃ ಈ ಒಳಗುದಿತ ವೈದಿಕವಾದ ವೇದ, ಶಾಸ್ತ್ರ, ಆಗಮ, ಪುರಾಣಗಳನ್ನು ಅವರು ಅಲ್ಲಗೆಳೆಯಲು, ಪ್ರಮಾಣವಾಗಿ ಸ್ವೀಕರಿಸದಿರಲು ಕಾರಣವಾಗಿರಬಹುದು. ಬಸವಣ್ಣ ನೇರವಾಗಿ ವೈದಿಕ ಸಾಹಿತ್ಯ ರಾಶಿಯನ್ನು ತಿರಸ್ಕರಿಸುತ್ತಾ ;

> ವೇದ ಬಲ್ಲಿತ್ತೆಂಬೆನೆ? ನಾನಾ ಮುಖದಲ್ಲಿ ಸ್ತುತಿಯಿಸಿತ್ತಲ್ಲದೆ ಲಿಂಗದ ನಿಲುಗಡೆಯ ಕಾಣದು!
> ಶಾಸ್ತ್ರ ಬಲ್ಲಿತ್ತೆಂಬೆನೆ? ಶಬ್ದಕ್ರಿ! ಪುರಾಣ ಬಲ್ಲಿತ್ತೆಂಬೆನೆ? ಪೂರ್ವಕ್ರಿ! ಆಗಮ ಬಲ್ಲಿತ್ತೆಂಬೆನೆ? ವಾಯು ಹೊಂದಿತ್ತು!
> ಇದು ಕಾರಣ ಕೂಡಲ ಸಂಗಯ್ಯನೇ ನಿತ್ಯ; ಉಳಿದ ದೈವವೆಲ್ಲಾ ಅನಿತ್ಯ ಕಾಣ ಭೋ!

ಎಂದಿರುವನು[14]. ಮೇಲು ನೋಟಕ್ಕೆ ಕೂಡಲ ಸಂಗಮನೇ ದೈವ, ಶಾಶ್ವತನು; ಉಳಿದ ಯಾವ ದೈವಗಳೂ ದೈವವಲ್ಲ, ಶಾಶ್ವತವಲ್ಲ ಎಂಬ ನಿಲುವು ಏಕದೈವೋಪಾಸನೆಯನ್ನು ಪ್ರತಿಪಾದಿಸುತ್ತಿರುವಂತೆ ಕಂಡರೂ ಅದರ ಅಂತರಾರ್ಥ ಬೇರೆ. ಪರಂಪರೆಯಿಂದ ಆಳುತ್ತ ಬಂದ, ಪ್ರಭುಶಕ್ತಿಗೆ ಸಮಾನವಾದ, ಪುರೋಹಿತಶಾಹಿಯನ್ನು ಒಟ್ಟಾರೆ ತಿರಸ್ಕರಿಸುವ ರೀತಿಯಲ್ಲಿದೆ ಈ ಧೋರಣೆ. ವಚನಕಾರರಲ್ಲಿ ಬಹಳ ಮಂದಿ ವೇದ, ಶಾಸ್ತ್ರ, ಆಗಮ, ಪುರಾಣಗಳನ್ನು ಅಷ್ಟು ತೀಕ್ಷ್ಣವಾಗಿ ಖಂಡಿಸಬೇಕಿದ್ದರೆ ಅವರ ಅಂತರಂಗದಲ್ಲಿ ಈ ಭಾವನೆ ಬಲವಾಗಿ ಬೇರೂರಿರಲೇ ಬೇಕು.

ನೇರವಾಗಿ ಪುರಾಣಗಳಿಗೇ ಸಂಬಂಧಿಸಿದಂತೆ ಹೇಳುವಾಗ ಬಸವಣ್ಣ ಇನ್ನಷ್ಟು ನಿಷ್ಠುರಿಯಾಗುವನು :

> ಆದಿ ಪುರಾಣ ಅಸುರರಿಗೆ ಮಾರಿ, ವೇದ ಪುರಾಣ ಹೋತಿಂಗೆ ಮಾರಿ, ರಾಮಪುರಾಣ ರಕ್ಕಸರಿಗೆ ಮಾರಿ,
> ಭಾರತ ಪುರಾಣ ಗೋತ್ರಕ್ಕೆ ಮಾರಿ, ಎಲ್ಲಾ ಪುರಾಣ ಕರ್ಮಕ್ಕೆ ಮೊದಲು ; ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಕೂಡಲ ಸಂಗಮ ದೇವಾ[15]

ಎಲ್ಲಾ ಪುರಾಣಗಳು ಕರ್ಮಕ್ಕೆ ಮೊದಲು ಎಂದು ಹೇಳಿ ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲಾ ಎಂದು ಒತ್ತುಕೊಟ್ಟು ಅಭಿಪ್ರಾಯವನ್ನು ಅಥವಾ ನಿಲುವೆಯನ್ನು ಸ್ಪಷ್ಟೀಕರಿಸುವ ಬಸವಣ್ಣನ ಈ ಧೋರಣೆಯನ್ನು ಗಮನಿಸಬೇಕು. ಶಿವನ ಪುರಾಣವಾದರೋ ಕಾಳಗದ ಕಥೆಯಲ್ಲ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳಿಗೆ ವಶರಾದವರ ಕಥೆಯಲ್ಲ. ಲೋಕ ಕಲ್ಯಾಣದ ಕಥೆ, ಭಕ್ತರನ್ನು ಕಾಪಾಡಿದ ಕಥೆ, ಭಕ್ತರ ಲೋಪದೋಷಗಳನ್ನು ತಿದ್ದಲು ಯತ್ನಿಸಿದ ಕಥೆ. ಆದುದರಿಂದಲೇ ಅದಕ್ಕೆ ಎಣೆಯಾದುದು ಮತ್ತೊಂದಿಲ್ಲ. ಸಿದ್ಧರಾಮ ಹೇಳುವಂತೆ :

---

14. ಬಸವಣ್ಣನವರ ಷಟ್‌ಸ್ಥಳದ ವಚನಗಳು (ಜನಪ್ರಿಯ ಆವೃತ್ತಿ), ಸಂ. ಪ್ರೊ॥ ಬಸವನಾಳ ಶಿವಲಿಂಗಪ್ಪನವರು, ಪು ೫೫೩.
15. ಅದೇ, ಪ. ೫೭೩.

ಎಮ್ಮ ಪುರಾಣ ಶಿವಪುರಾಣ ; ಎಮಗೆ ಗುರುಲಿಂಗ ಜಂಗಮತ್ರಯ ಒಂದೆ
ಎಂದು ತಿಳಿವ ಅಱುಹಿನ ಜ್ಞಾನಪುರಾಣ ನೋಡಾ, ಕಪಿಲ ಸಿದ್ಧಮಲ್ಲಿಕಾರ್ಜುನಾ

ಸಿದ್ಧರಾಮ ಅಭಿಪ್ರಾಯ ಪಡುವಂತೆ ಎಲ್ಲ ಪುರಾಣಗಳಿಗೂ ಅವುಗಳದೇ ಆದ ಹೆಸರುಗಳಿವೆ. ನಮ್ಮ ಪುರಾಣಕ್ಕೆ ಹೆಸರಿಟ್ಟು ಕರೆಯಬೇಕೆಂದರೆ ಹೆಸರೇ ಅದಕ್ಕಿಲ್ಲ :

ಎಲ್ಲ ಪುರಾಣಕ್ಕೆ ಹೆಸರುಂಟು, ನಮ್ಮ ಪುರಾಣಕ್ಕೆ ಹೆಸರಿಲ್ಲ ನೋಡಯ್ಯ, ಲಿಂಗದ ಮಹತ್ವವ ಹೇಳಿದಲ್ಲಿ ಲಿಂಗಪುರಾಣವೆನಿಸಿತ್ತು.
ಷಣ್ಮುಖನ ಮಹಾತ್ಮ್ಯವ ಹೇಳಿದಲ್ಲಿ ಸ್ಕಂದಪುರಾಣವೆನಿಸಿತ್ತು, ವೀರಭದ್ರನ ಮಹಾತ್ಮ್ಯವ ಹೇಳಿದಲ್ಲಿ ದಕ್ಷಖಂಡವೆನಿಸಿತ್ತು.
ಶಿವನ ಮಹಿಮೆ, ಕಾಶೀಮಹಿಮೆಯ ಹೇಳಿದಲ್ಲಿ ಶಿವಪುರಾಣ, ಕಾಶೀ ಖಂಡವೆನಿಸಿತ್ತು,
ಪಾರ್ವತಿಯ ಮಾಹಾತ್ಮ್ಯವ ಹೇಳಿದಲ್ಲಿ ಕಾಳೀಪುರಾಣವೆನಿಸಿತ್ತು, ನಮ್ಮ ಪುರಾಣ ಹೆಸರಿಸಬೇಕೆಂದಡೆ,
ನಿಶ್ಶಬ್ದ ನಿರವಯಲ ಪುರಾಣ ತಾನೆಯಾಯಿತ್ತು ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

೩

ವೈದಿಕ ಪುರಾಣಗಳಿಗೆ ಹಾಗೂ ಜೈನ ಪುರಾಣಗಳಿಗೆ ನಿರ್ದಿಷ್ಟವಾದ ಪುರಾಣಲಕ್ಷಣಗಳಿವೆ. ಸಕಲಲಕ್ಷಣಾನ್ವಿತವಾಗಿಯೆ ಅವು ರಚನೆಗೊಂಡಿವೆ. ಹತ್ತನೆಯ ಶತಮಾನದ ಜೈನಕವಿಗಳು ಕನ್ನಡದಲ್ಲಿ ಪುರಾಣ ರಚಿಸಹೊರಟಾಗ ಅವರಿಗೆ ಜಿನಸೇನ ಹಾಗೂ ಗುಣಭದ್ರರ ಪೂರ್ವಪುರಾಣ, ಉತ್ತರಪುರಾಣಗಳು ಮೂಲ ಆಕರಗಳಾದುವು, ಪುರಾಣ ರಚನೆಗೂ ನಿರ್ದಿಷ್ಟ ಲಕ್ಷಣವನ್ನು ತೋರಿಸಿಕೊಟ್ಟುವು. ಸಂಸ್ಕೃತ–ಪ್ರಾಕೃತಗಳಲ್ಲಿ ಮೊದಲು ರಚಿತವಾದ ಜೈನಪುರಾಣಗಳು ಲೋಕಾಕಾರಕಥನ, ತೀರ್ಥಮಹಿಮಾಸಮರ್ಥನ, ಚತುರ್ಗತಿಸ್ವರೂಪನಿರೂಪಣ, ತಪೋದಾನವಿಧಾನವರ್ಣನ ಮತ್ತು ತತ್ಫಲಪ್ರಾಪ್ತಿಪ್ರಕಟನ ಈ ಪಂಚಲಕ್ಷಣಗಳನ್ನು ಹೊಂದಿದ್ದುವು. ಇವು ಮುನಿಮಾರ್ಗೋಕ್ತಿ ಪುರಾಣಪದ್ಧತಿ. ಈ ಪಂಚಲಕ್ಷಣಗಳ ಜೊತೆಗೆ ದೇಶ, ನಗರ ಹಾಗೂ ರಾಜ್ಯೋತ್ಸವಾಖ್ಯಾನಗಳೆಂಬ ಹೆಚ್ಚಿನ ಮೂರು ಅಂಗಗಳನ್ನೂ ಸೇರಿಸಿದರೆ ಕವಿಪ್ರೋಕ್ತ ಪುರಾಣ ಪದ್ಧತಿಯಾಗುತ್ತದೆ. ಕನ್ನಡದಲ್ಲಿ ಜೈನಕವಿಗಳು ಅನುಸರಿಸಿದುದು ಎಂಟುಲಕ್ಷಣಗಳಿಂದ ಕೂಡಿದ ಕವಿಪ್ರೋಕ್ತ ಪುರಾಣ ಪದ್ಧತಿಯನ್ನೇ. ಮೊದಲಿಗೆ ಈ ಎಂಟೂ ಲಕ್ಷಣಗಳನ್ನು ಪಂಪನು ತನ್ನ ಆದಿಪುರಾಣದಲ್ಲಿ ಅಳವಡಿಸಿ ಮುಂದಣ ಕವಿಗಳಿಗೆ ಮಾರ್ಗದರ್ಶಿಯಾದನು. 'ಪೂರ್ವಾಪರ ವಿರೋಧಮಿಲ್ಲದುದೆ ತಾಂ ಪುರಾಣಂ'16 ಎಂದು ಹೇಳಿದ ಜೈನಕವಿಯೊರ್ವನು ಲಕ್ಷಣಬದ್ಧವಲ್ಲದ ಕೃತಿ ತಿರಸ್ಕಾರಯೋಗ್ಯವೆಂದೂ ಹೇಳಿರುವನು:

ಪ್ರಣುತ ಜಿನಚರಿತವಂ ಲ । ಕ್ಷಣಮಿಲ್ಲದೆ ಕುಕವಿ ಕಬ್ಬದೊಳ್ ಕಟ್ಟಿ ಮಹಾ
ಮಣಿಯಂ ಕರ್ಬೊನ್ನೊಳೆ ಕೇ । ವಣಿಸಿದ ತೆಱನಕ್ಕುಮಲ್ಲದಪ್ಪುದೆ ಶುಭದಂ17॥

ಜೈನಕವಿಗಳು ಹೀಗೆ ಲಕ್ಷಣನಿಷ್ಠರಾಗಿ ಪುರಾಣ ರಚನೆಯನ್ನು ಸಂಪ್ರದಾಯವಾಗಿಸಿದರು. ವಚನಚಳುವಳಿಯ ಪೂರ್ವದಲ್ಲಿ ಕಾಣಿಸಿಕೊಳ್ಳುವ ಮೊದಲ ವೀರಶೈವ ಕವಿ ಕಲ್ಯಾಣಿ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ದಂಡಾಧೀಶನಾಗಿದ್ದ ಕೊಂಡಗುಳಿ ಕೇಶಿರಾಜ. ಇವನ ಉಪಲಬ್ಧ ಕೃತಿಗಳು ಐದು ಮಾತ್ರ. ಇನ್ನೂ ಹೆಚ್ಚಿನ ಕೃತಿಗಳನ್ನು ಬರೆದಿರುವನೆಂದು ವಿದ್ವಾಂಸರು ಅಭಿಪ್ರಾಯ ಪಡುವರು. ಕಾಲದ ಗರ್ಭದಲ್ಲಿ ಅಡಗಿರುವ ಅವು ಹೊರಬರುವವರೆಗೂ ಕನ್ನಡ ಸಾಹಿತ್ಯದಲ್ಲಿ ಕವಿಯ ಸ್ಥಾನ–ಮಾನಗಳೇನೆಂಬುದನ್ನು ನಿರ್ದೇಶಿಸಲಾಗದು. ಈಗ ದೊರೆತಿರುವ ಕೃತಿಗಳು ಮಂತ್ರ–ಲಿಂಗಗಳ ಮಹತ್ತ್ವವನ್ನೂ, ೬೪ ಶೀಲಗಳ ಸ್ವರೂಪವನ್ನೂ, ಭಕ್ತಿಯ ಮಹಿಮೆಯನ್ನೂ ಹೇಳಹೊರಟಿವೆ. ೧೨ನೇ ಶತಮಾನದಲ್ಲಿ ವಚನಸಾಹಿತ್ಯ ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಅಭಿವ್ಯಕ್ತಗೊಂಡಿತು. ಅಸಂಖ್ಯಾತ ವಚನಕಾರರು ವಚನರಚನೆ ಮಾಡಿದರು. ಆದರೆ ಈ ಕಾಲದಲ್ಲಿ ಈ ಪ್ರಕಾರವಲ್ಲದೆ ಬೇರೊಂದು ಪ್ರಕಾರ ಪ್ರಾದುರ್ಭಾವಗೊಳ್ಳಲೇ ಇಲ್ಲ. ವಚನ ಚಳುವಳಿಯ ನಂತರ ಕಾಣಿಸಿಕೊಳ್ಳುವ ಮೊದಲ ಕವಿ ಹರಿಹರ. ವೀರಶೈವ ಕವಿಗಳ ತಲೆಮಣಿಯಾದ ಹರಿಹರ ಒಂದು ಯುಗಮಾನದ ಕಣ್ಣು ತೆರೆಯಿಸಿದ ಕ್ರಾಂತಿಕವಿ. ವಸ್ತುವಿನ ಆಯ್ಕೆಯಲ್ಲಿ, ಅದರ ನಿರೂಪಣೆಯಲ್ಲಿ, ಛಂದಸ್ಸಿನ ಬಳಕೆಯಲ್ಲಿ ಹೊಸತನವನ್ನು ಮೂಡಿಸಿ, ಅಲ್ಲಿಯವರೆಗಿನ ಕನ್ನಡ ಸಾಹಿತ್ಯ ನಡೆದುಬಂದ ಜಾಡನ್ನು ಬದಲಿಸಿ, ಅದಕ್ಕೊಂದು ಹೊಸ ತಿರುವನ್ನೂ, ಆಯಾಮವನ್ನೂ ಕೊಟ್ಟ ಧೀಮಂತ ಕವಿ. ಶಿವನನ್ನು, ಶಿವನ ಶರಣರನ್ನು ಹಾಗೂ ಭಕ್ತರನ್ನು ಮಾತ್ರ ಸ್ತುತಿಸುವೆನಲ್ಲದೆ ಅನ್ಯದೈವವನ್ನಾಗಲೀ, ನರರನ್ನಾಗಲೀ ಸ್ತುತಿಸುವುದಿಲ್ಲವೆಂಬ ವೀರ ಪ್ರತಿಜ್ಞೆ ತೊಟ್ಟು ಮುಂದಣ ಕವಿಗಳಿಗೆ ಆದರ್ಶವಾಗಿ ಸಾಹಿತ್ಯದ ಜಾಡನ್ನೇ ಬದಲಿಸಿದನು. ಮಹಾಕಾವ್ಯಕ್ಕಿರಬೇಕಾದ ಲಕ್ಷಣಗಳಲ್ಲಿ ಒಂದಾದ ಅಷ್ಟಾದಶ ವರ್ಣನೆಗಳನ್ನು 'ಗಿರಿಜಾ ಕಲ್ಯಾಣ'ದ ಹೊರತಾಗಿ ಉಳಿದ ಕೃತಿಗಳಲ್ಲಿ ತರದಿ

16. ನೇಮಿಚಂದ್ರನ ನೇಮಿನಾಥ ಪುರಾಣಂ: ಸಂ. ಬಿ.ಎಸ್. ಸಣ್ಣಯ್ಯ, ಆ. ೧. ಪದ್ಯ ೨೯
17. ಅದೇ, ಆ. ೧. ಪದ್ಯ ೩೦

ರುವ ದೃಢಸಿರ್ಧಾರ ಕೈಗೊಂಡು ಮುಂದಣ ಬಹುತೇಕ ವೀರಶೈವ ಕವಿಗಳು ಅದನ್ನು ನಿಚ್ಚಟವಾಗಿ ಪಾಲಿಸುವಂತೆ ಪ್ರೇರಣೆ ನೀಡಿದನು. ಶಿವನ ಭಕ್ತರು, ತಮಿಳುನಾಡಿನ ಶೈವಸಂತರು, ಬಸವಪೂರ್ವದ ಹಾಗೂ ಬಸವಸಮಕಾಲೀನ ಶರಣರು–ಇವರ ಬದುಕು ಕೃತಿಗೆ ವಸ್ತುವಾಯಿತು. ಇವರ ನಿಷ್ಠಾಪೂರ್ಣ ಜೀವನವನ್ನು, ಭಕ್ತಿಪ್ರಧಾನವಾದ ಜೀವನವನ್ನು ಚಿತ್ರಿಸುವುದಷ್ಟೇ ಹರಿಹರನ ಉದ್ದೇಶ. ಈ ಸೀಮಿತ ಚೌಕಟ್ಟಿನಲ್ಲಿಯೇ ತನ್ನ ಕಥಾನಾಯಕ–ನಾಯಕಿಯರ ಆಕರ್ಷಕ ವ್ಯಕ್ತಿತ್ವವನ್ನು ಅರಳಿಸಿರುವನು. ಹರಿಹರ ಬರೆಯ ಹೊರಟುದು ಗಿರಿಜಾಕಲ್ಯಾಣ 'ಮಹಾಕಾವ್ಯ'ವನ್ನು, ಭಕ್ತರ, ಶರಣರ 'ಚಾರಿತ್ರ'ವನ್ನು 'ಪುರಾಣ'ವನ್ನಲ್ಲ. 'ಪುರಾಣ' ರಚನೆಯ ಉದ್ದೇಶವೇ ಅವನಲ್ಲಿ ಇಲ್ಲ.

ಹರಿಹರನ ಸೋದರಳಿಯ ರಾಘವಾಂಕನೂ ವಸ್ತುವಿನ ಆಯ್ಕೆ, ವಿಷಯ ನಿರೂಪಣೆ ಹಾಗೂ ಛಂದೋಮಾಧ್ಯಮಗಳಲ್ಲಿ ತನ್ನತನವನ್ನು, ಪ್ರಕಟಿಸಿದವನು. ಹರಿಹರ ಇವನಿಗೆ ಆದರ್ಶ. ಆದರೆ ಮೇಲಿನ ಮೂರು ಅಂಶಗಳಲ್ಲಿ ಭಿನ್ನ. ಹರಿಹರನಂತೆ ಇವನು ಅಸಂಖ್ಯಾತ ಭಕ್ತರ ಚಾರಿತ್ರ ನಿರೂಪಣೆಗೆ ಹೊರಡಲಿಲ್ಲ. ಹರಿಶ್ಚಂದ್ರಕಾವ್ಯ, ಸಿದ್ಧರಾಮಚಾರಿತ್ರ, ಸೋಮನಾಥ ಚರಿತೆ, ಶರಭಚಾರಿತ್ರ, ವೀರೇಶ್ವರ ಚರಿತೆ ಹಾಗೂ ಹರಿಹರ ಮಹತ್ವ. ಕೊನೆಯದು ಇನ್ನೂ ಸಿಕ್ಕಿಲ್ಲ. ಶಿವನ ಭಕ್ತನಾದ ಹರಿಶ್ಚಂದ್ರನ ಕಥೆ ಪ್ರಸಿದ್ಧ. ಆ ಕಥೆಯನ್ನು ಕಾವ್ಯರೂಪದಲ್ಲಿ ಹೇಳಿರುವನು. ಸಿದ್ಧರಾಮ ಚಾರಿತ್ರ ಹಾಗೂ ಸೋಮನಾಥ ಚರಿತೆಯ ಕಥಾನಾಯಕರು ಸಿದ್ಧರಾಮ ಹಾಗೂ ಆದಯ್ಯ. ಈರ್ವರೂ ೧೨ನೇ ಶತಮಾನದ ಶರಣರು, ಪ್ರಸಿದ್ಧ ವಚನಕಾರರು, ಇವರೀರ್ವರ 'ಚರಿತೆ'ಯನ್ನು ರಾಘವಾಂಕ ಕಾವ್ಯರೂಪದಲ್ಲಿ ಹೇಳಿರುವನು. ವೀರೇಶ್ವರ ಚರಿತೆ ಹಾಗೂ ಸೋಮನಾಥಚಾರಿತ್ರಗಳಿಗೆ ಮೂಲ ಹರಿಹರನ ವೀರಭದ್ರದೇವರ ರಗಳೆ ಹಾಗೂ ಆದಯ್ಯನ ರಗಳೆ. 'ವೀರೇಶ್ವರ ಚರಿತ್ರೆ' ದಕ್ಷಯಜ್ಞದ ಕಥೆಯ ಮೂಲಕ ಶಿವನ ೨೫ ಲೀಲೆಗಳಲ್ಲಿ ಒಂದಾದ ವೀರಭದ್ರ ಲೀಲೆಯನ್ನು ಕುರಿತ ಪುಟ್ಟ ಕಾವ್ಯ. ಶರಭ ಚಾರಿತ್ರ ಸಿಕ್ಕಿದೆ, ಆದರೆ ಇನ್ನೂ ಪ್ರಕಟವಾಗಿಲ್ಲ. ರಾಘವಾಂಕನೂ ಹರಿಹರನಂತೆ 'ಚಾರಿತ್ರ' ಪ್ರಧಾನವಾದ ಕೃತಿ ರಚಿಸುವ ಉದ್ದೇಶ ಹೊಂದಿರುವನೇ ಹೊರತು 'ಪುರಾಣ'ವನ್ನಲ್ಲ. ಸಿದ್ಧರಾಮ ಚಾರಿತ್ರ ಹಾಗೂ ಸೋಮನಾಥ ಚಾರಿತ್ರವನ್ನು ಕವಿ 'ಚಾರಿತ್ರ' ಎಂದೇ ಹೆಸರಿಸಿರುವನು. ಮುಂದೆ ಚಾರಿತ್ರ ಹಾಗೂ ಪುರಾಣಗಳ ನಡುವೆ ಹೆಚ್ಚಿನ ವ್ಯತ್ಯಾಸವನ್ನು ಗುರುತಿಸದ ಸಾಮಾನ್ಯ ಲಿಪಿಕಾರರು ಅವೆರಡನ್ನೂ ಸಿದ್ಧರಾಮ ಪುರಾಣ, ಆದಿಶೆಟ್ಟಿ ಪುರಾಣವೆಂದೇ ಕರೆದರು. ಇದು ಲಿಪಿಕಾರರ ಅಜ್ಞಾನದಿಂದಾದ ದೋಷ. (ಈಗ ಪ್ರಕಟವಾಗಿರುವ ಈ ಎರಡೂ ಕೃತಿಗಳಿಗೆ 'ಚಾರಿತ್ರ' ಎಂಬ ಶೀರ್ಷಿಕೆ ಇದೆ.) ವೀರೇಶನ ಕಥೆ ಗಾತ್ರದಲ್ಲಿ ಕಿರಿದು. ಪುರಾಣ ಪ್ರಸಿದ್ಧವಾದ ವೀರಭದ್ರನ ಲೀಲೆಯನ್ನು ಕವಿ ಹೇಳಹೊರಟಿರುವುದರಿಂದ 'ಚರಿತೆ' ಎಂಬ ಶೀರ್ಷಿಕೆ ಕೊಟ್ಟಿರಬಹುದು. 'ಪುರಾಣ'ವೆಂದು ಸ್ಪಷ್ಟವಾಗಿ ಕರೆಯಲಾದ ಮೊದಲ ಕೃತಿ ಭೀಮಕವಿಯ ಬಸವಪುರಾಣ. 'ಬಸವಪುರಾಣ' ರಚನೆಯಾದ ಕಾಲ ೧೩೬೯. ಅಲ್ಲಿಯವರೆವಿಗೂ ಕನ್ನಡದಲ್ಲಿ ವೀರಶೈವ ಸಾಹಿತ್ಯವು 'ಪುರಾಣ'ವೆಂಬ ನಿರ್ದಿಷ್ಟ ಸಾಹಿತ್ಯ ಪ್ರಕಾರವನ್ನು ಹೊಂದಿರಲೇ ಇಲ್ಲ. ಕನ್ನಡ 'ಬಸವ ಪುರಾಣ'ವೇ 'ಪುರಾಣ'ವೆಂಬ ಹೆಸರನ್ನು ಹೊತ್ತ ಮೊದಲ ವೀರಶೈವ ಪುರಾಣ, ಬಸವ ಪುರಾಣವು ಸ್ವತಂತ್ರ ಕೃತಿಯಲ್ಲ. ೧೩ನೇ ಶತಮಾನದಲ್ಲಿದ್ದ ತೆಲುಗು ಕವಿಯಾದ ಪಾಲ್ಕುರಿಕೆ ಸೋಮನಾಥನ ದ್ವಿಪದ ಛಂದಸ್ಸಿನ 'ಬಸವಪುರಾಣಮು' ಗ್ರಂಥದ ಕನ್ನಡ ರೂಪಾಂತರ. ಭೀಮಕವಿಯ ಬಸವಪುರಾಣದಲ್ಲಿ ಬರುವ,

> ಆದಿಲಿಂಗ ರಹಸ್ಯ ಸಿದ್ಧಾಂ।ತಾದಿ ವೇದ ಪುರಾಣ ಸಮ್ಮತ।ವಾದ ಬಸವ ಪುರಾತನರ ಗೀತಾರ್ಥ ಮಾತೃಕದಿ॥
> ಕೋದ ಮಣಿಗಣ ಸೂತ್ರದಂತಿರೆ। ಆದಿಗಣ ಚರಿತಂಗಳೊಳು ಸಂ। ವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು॥ (೧.೨೩)

ಈ ಪದ್ಯವನ್ನು ಆಧರಿಸಿ ಶ್ರೀ ಸದಾನಂದ ನಾಯಕರು ವೀರಶೈವ ಪುರಾಣಗಳ ಲಕ್ಷಣವನ್ನು (ಪಂಚ ಅಂಗಗಳನ್ನು) ನಿರ್ಣಯಿಸಲು ಪ್ರಯತ್ನಿಸಿರುವರು[18]. ಅವರ ಪ್ರಕಾರ ವೀರಶೈವ ಪುರಾಣಗಳ ಪಂಚಲಕ್ಷಣಗಳು ೧. ಆದಿಲಿಂಗ ರಹಸ್ಯ ೨. ಸಿದ್ಧಾಂತ ೩. ಆದಿವೇದ ಪುರಾಣ ಕಥನ ೪. ಗೀತಾರ್ಥ ಮಾತೃಕೆ ೫. ಆದಿಗಣ ಚರಿತ. ಇದೇ ಪದ್ಯವನ್ನು ಆಧರಿಸಿ ಡಾ॥ ಆರ್. ಸಿ. ಹಿರೇಮಠ ಅವರು 'ಭೀಮ ಕವಿಯು ಬಸವ ಪುರಾಣ ರಚನೆಯ ಸಂಬಂಧವಾಗಿ ಹೇಳಿದ ಪದ್ಯದಲ್ಲಿ ಆ ಪುರಾಣದ ಲಕ್ಷಣ ಧ್ವನಿತವಾಗುವಂತಿದೆ' ಎಂದು ಅಭಿಪ್ರಾಯ ಪಡುವರು[19]. ಈ ಇಬ್ಬರು ಮಹನೀಯರ ಅಭಿಪ್ರಾಯವನ್ನು ಒಪ್ಪಲಾಗದು. ಮೊದಲನೆಯದಾಗಿ, ಅವರು ಹೇಳುವ ಪದ್ಯ ಭೀಮಕವಿಯ ಸ್ವಂತ ರಚನೆಯಲ್ಲ. ಪಾಲ್ಕುರಿಕೆ ಸೋಮನಾಥನ

> ಅಕಲಂಕ ಲಿಂಗ ರಹಸ್ಯ ಸಿದ್ಧಾಂತ ಸಕಲ ವೇದ ಪುರಾಣ ಸಮ್ಮತಂ ಬೈನ
> ಪ್ರಾತತ ಸಕಲ ಪುರಾತನ ಭಕ್ತ ಗೀತಾರ್ಥ ಸಮಿತಿಯೊ ಮಾತೃಕಗಾಂಗಂ
> ಭೂರಿತಂ ಬೈಯೊಪ್ಪು ಪೂಸಲೋನ ದಾರಂಬು ಕ್ರಿಯಂ ಬುರಾತನ ಭಕ್ತವಿತತಿ
> ಚರಿತಲಲೋಪಲ ಸಂಧಿಲ್ಲ ಬಸವ ಚರಿತ ಮೇ ವರ್ಣಿಂತು ಸತ್ಕೃತಿಯ ನಂಗ

18. ಕನ್ನಡ ಸಾಹಿತ್ಯದೊಳಗಿನ ವೀರಶೈವ ಪುರಾಣಗಳು (ಬಸವಾಳ ಸ್ಮಾರಕ ಸಂಪುಟ) ಪು. ೬೦೩.
19. ಭೀಮಕವಿಯ ಬಸವಪುರಾಣ, ಪ್ರಸ್ತಾವನೆ, ಪು. ೪೧

ಎಂಬ ಈ ದ್ವಿಪದ ಪದ್ಯಗಳ[20] ಕನ್ನಡ ರೂಪಾಂತರವೇ ಮೇಲೆ ಹೇಳಲಾದ ಭೀಮಕವಿಯ ಪದ್ಯವಾಗಿದೆ. ಅವರ ಪ್ರಕಾರ. ವೀರಶೈವ ಪುರಾಣಗಳ ಲಕ್ಷಣವನ್ನು ಮೊದಲಿಗೆ ಹೇಳಿದ ಕೀರ್ತಿ ಭೀಮಕವಿಯದಾಗದೆ. ತೆಲುಗು ಕವಿ ಪಾಲ್ಕುರಿಕೆ ಸೋಮನಾಥ ನದಾಗಿರುತ್ತದೆ. ಎರಡನೆಯದಾಗಿ, ಅವರು ಆಧರಿಸಿರುವ ಪದ್ಯ ವೀರಶೈವ ಪುರಾಣದ ಲಕ್ಷಣವನ್ನು ಸುತರಾಂ ಹೇಳುತ್ತಿಲ್ಲ. ವೇದ ಪುರಾಣ ಸಮ್ಮತವಾದ ಬಸವ ಪುರಾತನರ ಗೀತೆಗಳೇ ಮಾತೃಕೆಯಾಗಿ, ಮಣಿಗಳನ್ನು ಪೋಣಿಸಿದ ದಾರದಂತೆ ಬಸವ ಚರಿತೆಯನ್ನು ಆದಿಗಣ ಚರಿತ್ರೆಗಳಲ್ಲಿ ಸಂವೇದಿಸಿ ಹೇಳಲಾಗಿದೆ ಎಂಬುದೇ ಮೇಲಿನ ಪದ್ಯದ ಒಟ್ಟು ಅರ್ಥ. ಇಡೀ ಬಸವ ಪುರಾಣದ 'ರಚನಾಸಂವಿಧಾನ'ವನ್ನು ಮನಸ್ಸಿಗೆ ತಂದುಕೊಂಡಾಗ, ಈ ಪದ್ಯದ ಭಾವ ಇನ್ನಷ್ಟು ಸ್ಪಷ್ಟವಾಗುತ್ತದೆ, ಇದಕ್ಕೆ ಹೊರತಾಗಿ, ವೀರಶೈವ ಪುರಾಣದ ಲಕ್ಷಣವನ್ನು ಈ ಪದ್ಯದಲ್ಲಿ ಅರಸುವುದಾಗಲೀ, ಬಲವಂತವಾಗಿ ಆರೋಪಿಸುವುದಾಗಲೀ ಮಾಡಿದರೆ ತಪ್ಪಾಗುತ್ತದೆ.

೪

ವೀರಶೈವ ಪುರಾಣಗಳು ತಮ್ಮ ಲಕ್ಷಣಗಳನ್ನು ತಾವೇ ನಿರ್ಮಿಸಿಕೊಳ್ಳಬೇಕಾದ ಅನಿವಾರ್ಯಸ್ಥಿತಿ ಅದರ ಪಾಲಿಗೆ ಬಂದಿತು. ಕಾಲ ಹಾಗೂ ಸಂದರ್ಭಗಳ ಒತ್ತಡ ತೀವ್ರವಾದಾಗ ಆ ಪ್ರಕಾರವು ತನ್ನ ಲಕ್ಷಣಗಳನ್ನು ಸ್ಪಷ್ಟಪಡಿಸಬೇಕಾಯಿತು. ೧೨ ನೇ ಶತಮಾನದ ಕ್ರಾಂತಿ ರಾಜಕೀಯ ಕಾರಣಗಳಿಂದ ವಿಫಲಗೊಂಡಾಗ, ಅದರ ಪರಿಣಾಮವಾಗಿ ಕ್ರಾಂತಿಯ ಕೇಂದ್ರಸ್ಥಾನವಾದ ಕಲ್ಯಾಣ ಪಟ್ಟಣ ಹಾಳಾದಾಗ ಶಿವಶರಣರ ವಚನಗಳು ಓಲೆಕಟ್ಟುಗಳು ಬಹುಸಂಖ್ಯೆಯಲ್ಲಿ ಹಾಳಾದುವು. ಪ್ರಾಣಭೀತಿಯಿಂದ ಕಲ್ಯಾಣದ ಶಿವಶರಣರು ದೇಶದ ನಾನಾ ಭಾಗಗಳಿಗೆ ಚದುರಿಹೋದಾಗ ಅವರೊಂದಿಗೆ ವಚನಗಳ ಓಲೆಕಟ್ಟುಗಳೂ ಸಾಗಿಸಲ್ಪಟ್ಟುವು. ಇದರ ಬೆನ್ನ ಹಿಂದೆಯೇ ಕ್ರಿ. ಶ. ೧೨೯೪ ರಲ್ಲಿ ದಕ್ಷಿಣದ ಮೇಲೆ ಮುಸ್ಲಿಮ್ ಅರಸರ ಧಾಳಿಯಾಯಿತು. ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣದ ಮೇಲೆ ಹಠಾತ್ತನೆ ಭೀಕರವಾದ ದಾಳಿ ನಡೆಯಿಸಿ ದಕ್ಷಿಣದ ಅನೇಕ ಪ್ರಸಿದ್ಧ ರಾಜರನ್ನು ನಡುಗಿಸಿದನು, ಕರ್ಣಾಟಕದ ಯಾದವರು, ಹೊಯ್ಸಳರು, ಕಾಕತೀಯರು ಮಹಮ್ಮದೀಯರ ದಾಳಿಗೆ ತತ್ತರಿಸಿದರು. ಕ್ರಿ. ಶ. ೧೩೧೮ ರಲ್ಲಿ ದೇವಗಿರಿ, ಕ್ರಿ. ಶ. ೧೩೨೩ ರಲ್ಲಿ ಓರುಂಗಲ್ಲು, ಕ್ರಿ. ಶ. ೧೩೨೭ ರಲ್ಲಿ ಕುಮ್ಮಟದುರ್ಗ ನಾಶ ಹೊಂದಿದವು. ಮುಸಲ್ಮಾನರಸರ ಪಾಶವೀ ಕೃತ್ಯಕ್ಕೆ ಹಿಂದೂಗಳ ದೇವಸ್ಥಾನ. ಪವಿತ್ರ ಗ್ರಂಥಗಳು ಬಲಿಯಾದವು. ಅವರ ನೃಶಂಸ ಲೀಲೆಯನ್ನು ಭಗ್ನಗೊಂಡ ದೇವಾಲಯಗಳ ದೇವತಾಮೂರ್ತಿಗಳು, ಸುಂದರವಾದ ಅಮೂಲ್ಯಶಿಲ್ಪಗಳು ಇಂದಿಗೂ ನೆನಪು ಮಾಡಿಕೊಡುತ್ತಿವೆ. ಅನ್ಯಧರ್ಮದ ಬಗೆಗೆ ದ್ವೇಷವನ್ನು ಬೆಳೆಸಿಕೊಂಡಿದ್ದ ಅವರು ಧರ್ಮದ ಒಂದು ಅಂಗವಾದ ದೇವಸ್ಥಾನಗಳನ್ನು ಛಿದ್ರಗೊಳಿಸಿದರೆ, ಅದರ ಮತ್ತೊಂದು ಅಂಗವಾದ ಗ್ರಂಥರಾಶಿಯನ್ನು ಉದ್ದೇಶ ಸಹಿತವಾಗಿ ನಾಶಗೊಳಿಸಿದರು. ಹದಿನಾಲ್ಕನೆಯ ಶತಮಾನದ ಮಧ್ಯ ಹಾಗೂ ಉತ್ತರಭಾಗಗಳಲ್ಲಿ ನಡೆದ ವೈದಿಕವಾಙ್ಮಯ ಸಂಬಂಧಿಯಾದ ಚಟುವಟಿಕೆಗಳಿಂದ ಬಹುಶಃ ಪ್ರೇರಣೆಗೊಂಡು ವೀರಶೈವ ಧರ್ಮ ಹಾಗೂ ಸಾಹಿತ್ಯದ ಪುನರುಜ್ಜೀವನ ಕಾರ್ಯವನ್ನು ೧೫ನೇ ಶತಮಾನದಲ್ಲಿ ಆ ಧರ್ಮದ ಪ್ರತಿಷ್ಠಿತ ಶಕ್ತಿಗಳು ಕೈಗೊಂಡವು. ೧೫ ನೇ ಶತಮಾನದ ಪೂರ್ವಾರ್ಧದಲ್ಲಿ ಇಮ್ಮಡಿ ದೇವರಾಯನ (ಕ್ರಿ.ಶ. ೧೪೧೯–೧೪೪೬) ಆಶ್ರಯದಲ್ಲಿ ಅವನ ಮಹಾಪ್ರಧಾನಿಯಾಗಿದ್ದ ಲಕ್ಕಣ್ಣ ದಂಡೇಶ, ದಂಡೇಶನಾಗಿದ್ದ ಜಕ್ಕಣಾರ್ಯ, ಸಮಕಾಲೀನರಾದ ಮಹಾಲಿಂಗದೇವ, ಕುಮಾರ ಬಂಕನಾಥ, ಚಾಮರಸ, ಕಲ್ಲಮಠದ ಪ್ರಭುದೇವ, ಕರಸ್ಥಲದ ನಾಗಿಲಿಂಗ, ಮಗ್ಗೆಯ ಮಾಯಿದೇವ, ಸಪ್ತಕಾವ್ಯದ ಗುರುಬಸವ–ಇವರೇ ಮೊದಲಾದವರು ಸಂಘಟಿತರಾಗಿ ಹಂಪೆಯ ತುಂಗಭದ್ರೆಯ ಮಡಿಲಲ್ಲಿ ಸಾಹಿತ್ಯದ ಪುನರುಜ್ಜೀವನ ಕಾರ್ಯವನ್ನು ಕೈಗೊಂಡರು. ಅತ್ತ ಕಗ್ಗೆರೆಯ ಸಮೀಪದಲ್ಲಿರುವ ನಾಗಿಣೀ ನದಿಯ ತೀರದಲ್ಲಿ ತೋಂಟದ ಸಿದ್ಧಲಿಂಗ ಯತಿಗಳ ನೇತೃತ್ವದಲ್ಲಿ ವೀರಶೈವ ಧರ್ಮದ ಪುನರುಜ್ಜೀವನ ಕಾರ್ಯ ನಡೆಯಿತು. ಈ ಎರಡೂ ಎಡೆಗಳಲ್ಲಿ ವ್ಯವಸ್ಥಿತ ರೂಪದಲ್ಲಿ ವೀರಶೈವ ಸಾಹಿತ್ಯ ಹಾಗೂ ಧರ್ಮಗಳ ಪುನರುಜ್ಜೀವನ ಕಾರ್ಯ ನಡೆದವು. ಇದರ ಪರಿಣಾಮವಾಗಿ ವಚನ ಸಂಕಲನ, ವ್ಯಾಖ್ಯಾನ ಕಾರ್ಯಗಳೂ, ಸ್ವತಂತ್ರ ಕೃತಿಗಳ ರಚನೆಯೂ ಪ್ರಾರಂಭವಾದವು. ವಿಜಯನಗರವು ವಿದ್ವತ್ ಚಟುವಟಿಕೆಗಳಿಗೆ ಕೇಂದ್ರವಾಯಿತು. ವೀರಶೈವ ಧರ್ಮದ ಪುನರುಜ್ಜೀವನವಾಗಬೇಕಾದರೆ ಅದರ ಆತ್ಮದಂತಿರುವ ಮಠಗಳ ನಿರ್ಮಾಣ, ನಿಷ್ಠಾವಂತರೂ ಜ್ಞಾನಿಗಳೂ ಆದ ಯತಿಗಳ ನಿರ್ಮಾಣಗಳಿಗೆ ಪ್ರಾಧಾನ್ಯ ಕೊಡಲಾಯಿತು. ಮಠಗಳನ್ನು ಮಧ್ಯಬಿಂದುವಾಗಿಸಿಕೊಂಡು ಮಠಪತಿಗಳ ಮೂಲಕ ಸಮಾಜಕ್ಕೆ ಯೋಗ್ಯ ಧಾರ್ಮಿಕ ಶಿಕ್ಷಣ ಕೊಡುವ, ವೀರಶೈವ ಧರ್ಮ ಹಾಗೂ ಅದರ ತಾತ್ತ್ವಿಕಾಂಶಗಳ ಬಗೆಗೆ ತಿಳುವಳಿಕೆ ಕೊಡಿಸುವ ವ್ಯವಸ್ಥೆಯಾಯಿತು. ಈ ಸಂಧಿಕಾಲದಲ್ಲಿ ಸೃಷ್ಟಿಯಾದ ವೀರಶೈವ ಸಾಹಿತ್ಯವು ತನ್ನ ನೆಲೆಯನ್ನು ತಾನೇ ಕಂಡುಕೊಂಡು ಗಟ್ಟಿಯಾಗಿ ತಳಹದಿಯ ಮೇಲೆ ನಿಲ್ಲಬೇಕಾಯಿತು. ವೀರಶೈವ ಧರ್ಮದ ಪುನರುಜ್ಜೀವನದ

20. ಬಸವಪುರಾಣಮು (ಬಂಡಾರು ತಮ್ಮಯ್ಯನವರಿಂದ ಪರಿಷ್ಕೃತ) ಪ್ರಥಮಾಶ್ವಾಸಮು, ಸಾಲು ೧೭೭—೧೮೪.

ಅಂಗವಾಗಿ ವೀರಶೈವ ಪುರಾಣಗಳು ಸೃಷ್ಟಿಯಾದುವು. ಆ ಮೂಲಕ ಆ ಸಾಹಿತ್ಯ ಪ್ರಕಾರವು ತನ್ನ ವಿಶಿಷ್ಟ ಲಕ್ಷಣಗಳನ್ನು ತನಗೆ ತಾನೇ ರೂಪಿಸಿಕೊಂಡು ಸ್ಪಷ್ಟಗೊಳಿಸಬೇಕಾಯಿತು.

ಪುರಾಣವೆಂಬ ಹೆಸರನ್ನು ಹೊತ್ತುಬಂದ ಮೊದಲ ವೀರಶೈವಕೃತಿ ಭೀಮಕವಿಯ ಬಸವ ಪುರಾಣವಾದರೂ ಆ ವಿಶಿಷ್ಟ ಸಾಹಿತ್ಯ ಪ್ರಕಾರಕ್ಕೆ ಲಕ್ಷಣವನ್ನೂ ಹಾಗೂ ಅದರ ಗೊತ್ತು ಗುರಿಯನ್ನು ಮೂಡಿಸಿದ ಆದ್ಯ ಕೃತಿ ಅದಲ್ಲ. ಭೀಮ ಕವಿಯ ಬಸವ ಪುರಾಣವು ತೆಲಗು ಕವಿಯಾದ ಪಾಲ್ಕುರಿಕೆ ಸೋಮನಾಥನ ಬಸವ ಪುರಾಣಮುವಿನ ಕನ್ನಡ ರೂಪ. ಛಂದಸ್ಸಿನ ಬಳಕೆಯ ದೃಷ್ಟಿಯಿಂದ, ಮೂಲನಾಯಕನ ಕಥೆಯೊಂದಿಗೆ ಅವನ ಸಮಕಾಲೀನರ ಕಥೆಗಳನ್ನು ಪ್ರಸಿದ್ಧರಾದ ಶಿವಭಕ್ತರ ಕಥೆಗಳನ್ನು ಅನುಕ್ರಮವಾಗಿ ತಮಿಳುನಾಡು ಹಾಗೂ ಆಂಧ್ರಪ್ರದೇಗಳ ಪ್ರಸಿದ್ಧರಾದ ಅರುವತ್ತುಮೂವರು ಪುರಾತನ, ಶಿವಶರಣರ ಕಥೆಗಳನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳುವ ಕ್ರಮದಿಂದ ವೀರಶೈವ ಕವಿಗಳಿಗೆ ಭೀಮಕವಿಯ ಬಸವಪುರಾಣ ಆದರ್ಶ ಪುರಾಣವಾಗಿದೆ. ಆಗಲೇ ಪ್ರಸ್ತಾಪಿಸಿರುವಂತೆ ಇದು ಸ್ವತಂತ್ರ ಕೃತಿಯಲ್ಲ. ಮೊದಲ ಪುರಾಣವೆಂದು ಒಂದು ವೇಳೆ ಕರೆದರೂ, ಅದರ ಸೃಷ್ಟಿಕರ್ತ ಕನ್ನಡದ ಕವಿಯಾಗದೆ ತೆಲುಗು ನಾಡಿನ ಪಾಲ್ಕುರಿಕೆ ಸೋಮನಾಥನಾಗುತ್ತಾನೆ ; ಕನ್ನಡಕ್ಕೆ ವೀರಶೈವ ಪುರಾಣಗಳ ಲಕ್ಷಣವನ್ನು ತಿಳಿಸಿದವನು ಕನ್ನಡಿಗನಾಗದೆ ನೆರೆನಾಡಿನವನಾಗುತ್ತಾನೆ. ಒಂದು ಪ್ರಬಲವೂ ವಿಶಿಷ್ಟವೂ ಆದ ಸಾಹಿತ್ಯ ಪ್ರಕಾರಕ್ಕೆ ನೆರೆನಾಡಿನ ಕವಿಯೊಬ್ಬನು ಆಚಾರ್ಯನಾದನೆಂಬುದನ್ನು ಒಪ್ಪಿಕೊಳ್ಳಲಾಗದು. ಏಕೆಂದರೆ ಯಾವುದೇ ಸಾಹಿತ್ಯ ಪ್ರಕಾರಕ್ಕೆ ಅದರ ಸೃಷ್ಟಿಯು ಹಾಗೂ ಅದರ ವಿಕಾಸಕ್ಕೆ ಅದರದೇ ಆದ ಸಾಂಸ್ಕೃತಿಕ ಹಿನ್ನೆಲೆಯಿರುತ್ತದೆ. ವೀರಶೈವ ಪುರಾಣಗಳ ಹುಟ್ಟಿಗೆ ಅದರ ಲಾಕ್ಷಣಿಕ ವಿಕಾಸಕ್ಕೆ ಆಗಲೇ ಹೇಳಿದ ವೀರಶೈವ ಪುನರುಜ್ಜೀವನ ಕಾರ್ಯ ಹಿನ್ನೆಲೆಯಾಗಿ ಬರುತ್ತದೆ.

ವೀರಶೈವ ಪುರಾಣಗಳ ಲಕ್ಷಣವನ್ನು ಗುರುತಿಸ ಹೊರಡುವವರಿಗೆ ಪ್ರಧಾನವಾಗಿ ಬರುವ ಸಮಸ್ಯೆ ಯಾವುದನ್ನು 'ಪುರಾಣ'ವೆಂದು ಕರೆಯಬೇಕೆಂಬುದು. ಚರಿತೆ, ಚರಿತ್ರೆ, ಚಾರಿತ್ರ, ಲೀಲೆ, ವಿಲಾಸ–ಹೀಗೆ ಭಿನ್ನಪ್ರಕಾರಗಳಲ್ಲಿ ಬಂದಿರುವ ವೀರಶೈವ ಸಾಹಿತ್ಯವನ್ನು ಪುರಾಣವೆಂದೇ ಭಾವಿಸಿ ಗುರುತಿಸಿದಂತಿದೆ. ಹೀಗೆ ಮಾಡಿದರೆ ವಚನ, ಶತಕ, ಸ್ತೋತ್ರ ಸಾಹಿತ್ಯ–ಈ ಪ್ರಕಾರಗಳ ಹೊರತಾಗಿ ಉಳಿದೆಲ್ಲ ವೀರಶೈವವಾಙ್ಮಯವನ್ನು 'ಪುರಾಣ'ದ ತಲೆ ಬರೆಹಕ್ಕೆ ಸೇರಿಸಿದಂತಾಗುತ್ತದೆ. ಇತ್ತೀಚಿನ ವಿದ್ವಾಂಸರೂ* ಚರಿತೆ, ಚರಿತ್ರೆ, ಚಾರಿತ್ರ, ಲೀಲೆ, ವಿಲಾಸ–ಈ ಪ್ರಕಾರಗಳಿಗೂ ಪುರಾಣಗಳಿಗೂ ಇರುವ ಸ್ಪಷ್ಟ ವ್ಯತ್ಯಾಸಗಳನ್ನು ಲಕ್ಷಣರೇಖೆ ಎಳೆದು ಗುರುತಿಸುವ ಪ್ರಯತ್ನ ಮಾಡಿದಂತಿಲ್ಲ. ವೀರಶೈವ ಪುರಾಣಗಳಲ್ಲದವನ್ನು ವೀರಶೈವ ಪುರಾಣಗಳೆಂದು ಕರೆದಿರುವ ಇವರುಗಳು, ಸ್ಪಷ್ಟವಾಗಿ ವೀರಶೈವ ಪುರಾಣಗಳ ಲಕ್ಷಣಗಳನ್ನು ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಗುರುತಿಸಿದಂತೆ ತೋರದು.

ವೀರಶೈವ ಪುರಾಣಗಳು ವೈದಿಕ ಪುರಾಣಗಳ ಇಲ್ಲವೆ ಜೈನ ಪುರಾಣಗಳ ಲಕ್ಷಣಗಳ ನೇರ ಪ್ರಭಾವಕ್ಕೆ ಒಳಗಾಗದಂತೆ ತೋರದು. ಅವುಗಳನ್ನು ಪೂರ್ಣವಾಗಿ ಇಲ್ಲವೇ ಆಂಶಿಕವಾಗಿ ಒಪ್ಪಿ ಅನುಸರಿಸಿರುವದೂ ಕಂಡುಬರುವದಿಲ್ಲ. ಸಾಮಾನ್ಯವಾಗಿ ಪುರಾಣಗಳಲ್ಲಿ ಸಂಗತಿಗಳ ವೈವಿಧ್ಯ ಕಡಿಮೆ; ನಿರೂಪಣೆಯಲ್ಲಿ ಏಕ ಮುಖತೆ ಇರುವದಿಲ್ಲ; ಕಾಲ್ಪನಿಕಾಂಶ ಹೆಚ್ಚು. ಎಲ್ಲ ಪುರಾಣಗಳಂತೆ ವೀರಶೈವಪುರಾಣಗಳೂ ಈ ಪ್ರಧಾನ ದೋಷಗಳನ್ನು ಹೊಂದಿವೆ. ತಮ್ಮ ತಿಳುವಳಿಕೆಯ ಮಿತಿಗೆ ಒಳಪಡುವ ಸಕಲ ಸಂಗತಿಗಳನ್ನು ಸಮಗ್ರವಾಗಿ ಹೇಳುವ ಚಾಪಲ್ಯ ಪುರಾಣಕಾರರದು. ವೀರಶೈವ ಪುರಾಣಕಾರರೂ ಈ ಚಾಪಲ್ಯದಿಂದ ಮುಕ್ತರಾಗಿಲ್ಲ ಈ ಸಾಮಾನಗುಣಗಳ ಹೊರತಾಗಿ, ಕೆಲವು ವಿಶಿಷ್ಟಲಕ್ಷಣಗಳನ್ನು ವೀರಶೈವ ಪುರಾಣಗಳು ಪಡೆದಂತೆ ತೊರುತ್ತದೆ. ಅವುಗಳನ್ನು ಹೀಗೆ ಗುರುತಿಸಬಹುದು:

ಅ) ವೀರಶೈವ ಪುರಾಣಗಳ ನಾಯಕನು ಇಲ್ಲವೇ ಅದರಲ್ಲಿ ಬರುವ ಪಾತ್ರಗಳು ಸದ್ಗುರುವು ಅನುಗ್ರಹಿಸಿದ ಇಷ್ಟ ಲಿಂಗವನ್ನು ಧರಿಸಿ ಅದನ್ನು ಆರಾಧಿಸುವವರು, ಆ) ಶಿವಾಗಮೋಕ್ತ ವೀರಶೈವ ಧರ್ಮವಾಗಲೀ, ಅದನ್ನು ವಿಶ್ವಧರ್ಮವನ್ನಾಗಿಸಲು ೧೨ನೇ ಶತಮಾನದ ಬಸವಾದಿ ಶಿವಶರಣರು ರೂಪಿಸಿದ ಸುಧಾರಿತ ವೀರಶೈವ ಧರ್ಮವಾಗಲೀ ಅವುಗಳಲ್ಲಿ ಪ್ರತಿಪಾದಿತವಾಗಿರುತ್ತದೆ, ಇ) ವೀರಶೈವ ಧರ್ಮಾನುಯಾಯಿಗಳಾದ ಮಹಾಪುರುಷರ ಚರಿತ್ರೆಗಳು ಪ್ರಧಾನವಾಗಿಯೂ, ಅವರು ತಮಗೆ ಆದರ್ಶರೆಂದು ಅಂಗೀಕರಿಸಿದ ಪುರಾತನ ಶೈವಸಂತರು ಹಾಗೂ ಪುರಾತನ ಮತ್ತು ನೂತನ ಶಿವಶರಣರು ಮೊದಲಾದವರ ಕಥೆಗಳು ಪ್ರಾಸಂಗಿಕವಾಗಿಯೂ ಅವುಗಳಲ್ಲಿ ಉಕ್ತವಾಗಿರುತ್ತವೆ, ಈ) ಈ ಪ್ರಧಾನ ಪುರುಷರು ಬಹುವಾಗಿ ಪರಶಿವ–ಪರಶಿವೆಯ ಅಂಶ ಇಲ್ಲವೇ ಅವರ ಪರಿವಾರವಾಗಿದ್ದು ಕಾರಣಾಂತರಗಳಿಂದ ಭೂಲೋಕದಲ್ಲಿ ಅವತರಿಸಿದವರಾಗಿರುತ್ತಾರೆ.

* ೧. ಎಂ. ಆರ್. ಶ್ರೀನಿವಾಸಮೂರ್ತಿ : ಸಾಹಿತ್ಯಾಲೋಕ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
೨. ಸದಾನಂದ ನಾಯಕ್ : ಕನ್ನಡ ಸಾಹಿತ್ಯದೊಳಗಿನ ವೀರಶೈವ ಪುರಾಣಗಳು (ಬಸವನಾಳ ಸ್ಮಾರಕ ಸಂಪುಟ ಪುಟ ೬೦೩)
೩. ಡಾ॥ ಆರ್. ಸಿ. ಹಿರೇಮಠ : ಬಸವ ಪುರಾಣ, ಮುರುಘಾಮಠ, ಧಾರವಾಡ.

ಮತ್ತು ಈ ಲೋಕದ ಮಣಿಹ ಮುಗಿದೊಡನೆ ಒಂಟಿಯಾಗಿಯೋ ಸಾಮೂಹಿಕವಾಗಿಯೋ ಮತ್ತೆ ಕೈಲಾಸವನ್ನು ಸೇರುತ್ತಾರೆ, ಉ) ವೀರಶೈವ ಧರ್ಮವನ್ನು ಮೆಟ್ಟಿಕ್ಕತೊಡಗಿದ ಪರಧರ್ಮೀಯರನ್ನು ವಾದಗಳ ಮೂಲಕ ಎದುರಿಸಿ, ಸ್ವಧರ್ಮವನ್ನು ರಕ್ಷಿಸಿ ಬೆಳೆಸಿದ ರೀತಿಯು ಪವಾಡ ಕಥೆಗಳ ರೂಪದಲ್ಲಿ ಪ್ರಧಾನವಾಗಿ ಕಂಡುಬರುತ್ತವೆ, ಊ) ವೀರಶೈವವು ಶೈವಧರ್ಮದ ಪ್ರಭೇದ ವಾದುದರಿಂದ ಶೈವಪುರಾಣಗಳಲ್ಲಿ ಕಂಡುಬರುವ ಶಿವಪಾರಮ್ಯ ಪ್ರತಿಪಾದನಾಕಥೆಗಳಲ್ಲಿ ಪ್ರಧಾನವಾದ ಸುಮಾರು ೨೫ ಕಥೆ ಗಳು ಲೀಲೆಗಳೆಂಬ ಹೆಸರಿನಿಂದ ಪ್ರಾಸಂಗಿಕವಾಗಿ ವರ್ಣಿತವಾಗಿರುತ್ತವೆ. ಎ) ವೀರಶೈವಧರ್ಮದ ತಾತ್ತ್ವಿಕಾಂಶಗಳಾದ ಪಂಚಾ ಚಾರ, ಅಷ್ಟಾವರಣ, ಷಟ್ಸ್ಥಲ–ಇವೇ ಮೊದಲಾದವುಗಳು ಸಂದರ್ಭೋಚಿತವಾಗಿ ವಿವರಿಸಲ್ಪಟ್ಟಿರುತ್ತವೆ.

ಹೀಗೆಂದ ಮಾತ್ರಕ್ಕೆ, ಇವು ಎಲ್ಲ ವೀರಶೈವ ಪುರಾಣಗಳಲ್ಲೂ ಕಟ್ಟುನಿಟ್ಟಾಗಿ ಬರಬೇಕೆಂಬ ಅಭಿಪ್ರಾಯವಲ್ಲ. ಪುರಾಣ ಕವಿಗಳ ರುಚಿಗನುಗುಣವಾಗಿ ಇವುಗಳ ಪ್ರಾಧಾನ್ಯ ಹೆಚ್ಚು ಕಡಿಮೆ ಇರುವುದೂ, ಕೆಲವಂಶಗಳು ಭಾಗಶಃ ಬಂದಿರುವುದೂ ಉಂಟು. ಉದಾಹರಣೆಗೆ ತಮಿಳುನಾಡಿನ ೬೩ ಮಂದಿ ಶೈವಪುರಾತನರ ವಿಷಯಗಳೂ, ಪರಶಿವನ ಪಂಚವಿಂಶತಿಲೀಲೆಗಳೂ ಕೆಲವು ಪುರಾಣಗಳಲ್ಲಿ ಸೂಕ್ಷ್ಮವಾಗಿರುತ್ತವೆ ; ಹಲವು ಪುರಾಣಗಳಲ್ಲಿ ಬರುವುದೇ ಇಲ್ಲ.

ಪ್ರಾರಂಭದ ವೀರಶೈವ ಕವಿಗಳು–ಹರಿಹರ, ರಾಘವಾಂಕರು–ಶಿವನ ಭಕ್ತರ, ತಮಿಳುನಾಡಿನ ಶೈವ ಸಂತರ, ೧೨ನೇ ಶತಮಾನದ ವೀರಶೈವ ಶರಣರ 'ಚಾರಿತ್ರ' ನಿರೂಪಣೆಯತ್ತ ಸಂಪೂರ್ಣ ಗಮನ ಹರಿಸಿದ್ದರು. ಅವರು ಕಾವ್ಯ ಮುಖೇನ 'ಚಾರಿತ್ರ' ಇಲ್ಲವೆ 'ಚರಿತ'ದ ನಿರೂಪಣೆ ಮಾಡಬಯಸಿದ್ದರು. ಆದ್ದರಿಂದ ಅವರು ಪುರಾಣ ರಚನೆಯನ್ನಾಗಲೀ ಪುರಾಣಗಳ ನಿರ್ದಿಷ್ಟ ಲಕ್ಷಣಗಳ ನಿರ್ಣಯ ಮಾಡುವುದನ್ನಾಗಲೀ ಚಿಂತಿಸಲಿಲ್ಲ. ಲಕ್ಕಣ್ಣದಂಡೇಶನವರೆವಿಗೂ ವೀರಶೈವಕವಿಗಳು 'ಚಾರಿತ್ರ' ರಚನೆಯಲ್ಲಿಯೇ ವಿಶೇಷ ಆಸ್ಥೆ ವಹಿಸಿದ್ದರು. ಅವರು 'ಕಾವ್ಯ' ಬರೆದರೇ ಹೊರತು 'ಪುರಾಣ' ಬರೆಯಲಿಲ್ಲ. ಲಕ್ಕಣ್ಣದಂಡೇ ಶನ ಕಾಲದ ವೀರಶೈವಧರ್ಮದ ಸ್ಥಿತಿ–ಗತಿಗಳನ್ನು ಗಮನಿಸಿದಾಗ ಅವನ ಹಿಂದಿನವರು, ಎದುರಿಸಿರದ ಸಮಸ್ಯೆಗಳನ್ನು ಈತ ಎದುರಿಸಬೇಕಾಗಿ ಬಂದುದು ಕಂಡುಬರುತ್ತದೆ. ಲಕ್ಕಣ್ಣದಂಡೇಶನ ದೃಷ್ಟಿಯಲ್ಲಿ ಕಾವ್ಯವಿರುವುದು ಪಾಂಡಿತ್ಯ ಪ್ರದರ್ಶನಕ್ಕಾಗಿ ಯಲ್ಲ, ಧರ್ಮಪ್ರಸಾರ ಹಾಗೂ ಪ್ರಚಾರಕ್ಕಾಗಿ. ಈ ಹೇಳಿಕೆ ಆತ ತನ್ನ ಕಾವ್ಯದಲ್ಲಿ ಹಿಂದಿನವರ ಅಷ್ಟಾದಶ ವರ್ಣನೆಗಳಿಗೆ ಬದಲಾಗಿ ಕೃತಿಗಿರಬೇಕಾದ ಬೇರೆ ಬಗೆಯ ಹದಿನೆಂಟು ಅಂಗಗಳನ್ನು ಗುರುತಿಸುವಲ್ಲಿ ಸ್ಪಷ್ಟಗೊಳ್ಳುತ್ತದೆ. 'ಶಿವತತ್ತ್ವಚಿಂತಾ ಮಣಿ'ಯಲ್ಲಿ ಅಡಕವಾಗಿರುವ ವಿಷಯಗಳು ಇವು :

೧. ನಿತ್ಯಾನಿತ್ಯ ವಸ್ತುವಿನ ವಿವರಣ, ೨. ಸಕಲ ನಿಷ್ಕಲದ ಪರಿ, ೩. ನಿಷ್ಕಲ ತತ್ತ್ವವು ಸಕಲವಾದ ಭೇದ, ೪. ಭುವನ ಕೋಶ, ೫. ಶಿವಲೋಕದಭಿವರ್ಣನ, ೬. ಹರನ ದಿವ್ಯಾಸ್ಥಾನ, ೭. ನಾರದನ ದರುಶನ, ೮. ಪುರಹರ-ನಂದೀಶ್ವರ ಸಂವಾದ, ೯. ಜಗದೋದ್ಧಾರಕ್ಕೆ ಬಸವಾವತಾರ, ೧೦. ಬಸವನ ಬಾಲ್ಯಲೀಲೆ, ೧೧. ಬಸವನ ಪವಾಡಗಳು, ೧೨. ಭೂಮಂಡಲದಲ್ಲಿ ಶಿವಧರ್ಮವನ್ನು ನೆಜೀ ತೋರಿ ಮೆಚಿದ ಗಣಪ್ರಶಂಸೆ, ೧೩. ಧರ್ಮಾಧರ್ಮ, ಪಿಂಡದುತ್ಪತ್ತಿ, ಸಂಸಾರ ನಿರಸನ, ೧೪. ಲಿಂಗ ಧಾರಣ, ೧೫. ಶಿವಪೂಜಾ ನಿಯಮ, ೧೬. ಪಾದೋದಕ ಪ್ರಸಾದ ಕ್ರಮ, ೧೭, ಶಿವಾಧಿಕ್ಯ ಮಾಹೇಶ್ವರಾಚರಣೆ, ೧೮. ಷಟ್ಸ್ಥಲ. ಲಕ್ಕಣ್ಣ ದಂಡೇಶನು ಅಧಃಪತನ ಹೊಂದುತ್ತಲಿದ್ದ ವೀರಶೈವರ ಉದ್ಧಾರಕ್ಕಾಗಿ ಅವರಿಗೊಂದು ಧಾರ್ಮಿಕ ಕೈಪಿಡಿಯೊಂದರ ಆವಶ್ಯಕತೆಯಿರುವುದನ್ನು ಮನಗಂಡು, ವೈದಿಕ ಪುರಾಣದಿಂದ ಮಾತ್ರವಲ್ಲ ವೇದೋಪನಿಷತ್ತು ಮೊದಲಾದುವುಗಳಿಂದ ಸ್ಫೂರ್ತಿ ಪಡೆದು, ವೀರಶೈವ ವಸ್ತುಕೋಶದ ರೂಪರೇಷೆಯನ್ನು ಶಿವತತ್ತ್ವಚಿಂತಾಮಣಿಯಲ್ಲಿ ಸ್ಪಷ್ಟಪಡಿಸಿದನು. ಈತನು ತನಗಿಂತ ಹಿಂದಣವರು ಹೇಳಿರದ ಸೃಷ್ಟಿಯ ಕ್ರಮ, ಶಿವಾಧಿಕ್ಯ ಸ್ಥಿರೀಕರಣ, ವೀರಶೈವಮತಾಧಿಕ್ಯಸ್ಥಾಪನೆ, ಗಣಸಹಸ್ರನಾಮ, ವೀರ ಶೈವ ತತ್ತ್ವನಿರೂಪಣೆ–ಈ ಮೊದಲಾದ ವಿಷಯಗಳನ್ನು ಹೊಸದಾಗಿ ಹೇಳಿರುವಂತೆ ಕಂಡುಬರುತ್ತದೆ. ಭೀಮ ಕವಿಯ ಬಸವ ಪುರಾಣ ಹಾಗೂ ಪದ್ಮಣಾಂಕನ ಪದ್ಮರಾಜಪುರಾಣಗಳಲ್ಲಿ ಮಾಡಲಾಗಿರುವ ವಿಷಯ ನಿರೂಪಣೆಯ ಜೊತೆಗೆ ತಾನು ಹೇಳಬೇಕೆಂದಿರುವ ಹೊಸ ವಿಷಯಗಳನ್ನೂ ಸೇರಿಸುವುದು ಲಕ್ಕಣ್ಣದಂಡೇಶನ ಉದ್ದೇಶ. ಹೀಗೆ ವೈವಿಧ್ಯಮಯ ವಿಷಯ ಗಳನ್ನು ತನ್ನ ಒಳಮೈಯಲ್ಲಿ ಒಂದುಗೂಡಿಸಿದ್ದರಿಂದ ಲಕ್ಕಣ್ಣದಂಡೇಶನ ಕೃತಿ ೫೪ ಸಂಧಿ ೨೨೩೧ ಪದ್ಯಗಳನ್ನು ಒಳಗೊಂಡ ಬೃಹತ್‌ಕೃತಿಯಾಯಿತು.

ಲಕ್ಕಣ್ಣದಂಡೇಶನು ತನ್ನ ಕೃತಿಯಲ್ಲಿ ಹೇಳಿದ ವಿಷಯಗಳೇ ಮುಂದೆ ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣದ ಹದಿನೆಂಟು ಅಂಗಗಳಾದುವು. ವೀರಶೈವಾಮೃತ ಮಹಾಪುರಾಣವು ತತ್ತ್ವಪ್ರಧಾನ ಪುರಾಣವಾಗಿದೆ. ಇದ ರಲ್ಲಿ ೧. ಪ್ರವೃತ್ತಿ ತತ್ತ್ವನಿರೂಪಣೆ, ೨. ಶಿವನ ಪಂಚವಿಂಶತಿ ಲೀಲೆಗಳು, ೩. ನಿವೃತ್ತಿ ತತ್ತ್ವ ನಿರೂಪಣೆ, ೪. ಬಸವಾದಿ ಪ್ರಮಥರು ಹಾಗೂ ಶರಣರ ಚರಿತ್ರನಿರೂಪಣೆ ಹಾಗೂ ೫. ಷಟ್‌ಸ್ಥಲ ವಿವರಣೆ ಈ ಪಂಚ ಅಂಗಗಳು ತೀರಾ ಸೂಕ್ಷ್ಮ ವಿವರ ಣೆಯೊಂದಿಗೆ ಬಂದಿದೆ. ಮೊದಲ ಅಂಗವಾದ ಪ್ರವೃತ್ತಿತತ್ತ್ವವಿವರಣೆಯ ಭಾಗದಲ್ಲಿ ಪೀಠಿಕೆ,ವಸ್ತುನಿರ್ದೇಶ, ಸದ್ಭಕ್ತಲಕ್ಷಣ,

ಅನಾದಿ ಜಂಗಮದ ಮಕುಟದಲ್ಲಿ ಶೂನ್ಯ ಲಿಂಗೋತ್ಪತ್ತಿ ಕ್ರಮ, ಚಿದಂಬರೋದ್ಧರಣೆ, ತ್ರ್ಯಕ್ಷರ ಪಂಚಾಕ್ಷರ ಹಾಗೂ ಷಡಕ್ಷರ ವಿವರಣ, ಭಾವಮೂರ್ತಿ ಲಕ್ಷಣ, ಮಾಹೇಶ್ವರ ಭೇದ ಸೃಷ್ಟಿವಿಷಯ ಕಥನ, ಲಿಂಗಾಂಗ ಸ್ವರೂಪ ವಿವರಣ, ನಿಷ್ಕಳ–ಸಕಲ, ಸಕಲ–ನಿಷ್ಕಳ ಶಕ್ತಿಸಾದಾಖ್ಯಲಕ್ಷಣ–ಇವುಗಳು ಬಂದಿವೆ. ಎರಡನೆಯ ಅಂಗದಲ್ಲೂ ಶಿವನ ಪಂಚವಿಂಶತಿ ಲೀಲೆಗಳು ಮೂರನೆಯ ಅಂಗವಾದ ನಿವೃತ್ತಿ ತತ್ತ್ವನಿರೂಪಣೆಯ ಭಾಗದಲ್ಲಿ ವಿರಾಟ ರೂಪ ಲಕ್ಷಣ, ಸಪ್ತಶೈವ, ತ್ರಿಶೈವಗಳ ವಿವರಣೆ, ವೀರಶೈವ ಮತ್ತು ಕರಣಹಸುಗೆ, ಗುರುಶಿಷ್ಯಲಕ್ಷಣ, ದೀಕ್ಷಾಸುದಿನ, ದೀಕ್ಷಾಮಂಟಪ ರಚನಾಕ್ರಮ, ಪಂಚಕಲಶ ಪ್ರತಿಷ್ಠಾಪನಾ ವಿಧಾನ, ರುದ್ರಾಕ್ಷಿಜಪ ಲಕ್ಷಣ, ಯೋಗಾಸನ, ಪಂಚಕಲಶ ವಿಧಾನ, ಚಕ್ರಬೀಜ, ರುದ್ರಾಭಿಷೇಕ, ಅಷ್ಟವಿಧ ಪೂಜೆ, ಷೋಡಶೋಪಚಾರ, ಶ್ರೀ ಗುರುವು ಶಿಷ್ಯನನ್ನು ಮಂತ್ರಮೂರ್ತಿ ಮಾಡುವಿಕೆ, ದೀಕ್ಷಾವಿಧಾನ, ಗುರುಸೇವಾ ವಿಧಾನ, ವೀರಶೈವಧರ್ಮ ಸದಾಚಾರ ಮತ್ತು ಶೀಲಕ್ರಮ, ಅರುವತ್ತುನಾಲ್ಕು ಶೀಲಗಳು, ಕ್ರಿಯಾ ಸಮಾಧಿ–ಇವುಗಳು ಬಂದಿವೆ. ನಾಲ್ಕನೆಯ ಅಂಗದಲ್ಲಿ ಬಸವಾವತಾರ, ಬಸವನ ಪಟ್ಟಿಗೆಯ ಪವಾಡದ ಕಥೆ, ಬಸವಸಮಕಾಲೀನಶರಣರ ಕಥೆ, ಪಾಲ್ಕುರಿಕೆ ಸೋಮನ ಬಸವಪುರಾಣ ಹಾಗೂ ಪಂಡಿತಾರಾಧ್ಯಚರಿತ್ರೆಗಳ ಕಥಾ ಸಂಗ್ರಹ, (ಶಿವತತ್ತ್ವಚಿಂತಾಮಣಿಯಲ್ಲಿ ಬಂದಿರುವ) ನೂತನರ ಚರಿತ್ರೆ–ಇವುಗಳು ಬಂದಿವೆ. ಐದನೆಯ ಅಂಗದಲ್ಲಿ ಷಟ್‌ಸ್ಥಲದ ವಿವರಣೆ ಬಂದಿದೆ.

ನೇರವಾಗಿ, ವೀರಶೈವ ಪುರಾಣಗಳ ಲಕ್ಷಣ ಹೇಳಿದವನು ವಿರೂಪಾಕ್ಷ ಪಂಡಿತ (ಕ್ರಿ.ಶ. ೧೫೮೫). ಆತ ಚನ್ನಬಸವ ಪುರಾಣದಲ್ಲಿ 'ಕಥಾಕುಳಕ' (=ಲಕ್ಷಣ)ವನ್ನು ಹೀಗೆ ಪಟ್ಟಿ ಮಾಡಿರುವನು (೧.೩೭-೩೯)

೧. ಕೈಲಾಸ ವರ್ಣನೆ, ೨. ನಾರದ ದರುಶನ, ೩. ಚನ್ನಬಸವೋತ್ಪತ್ತಿ, ೪. ಪುಷ್ಪಕೋತ್ಸಾಹ, ೫. ಚನ್ನಬಸವನ ಬಾಲಲೀಲೆ, ೬. ಅರಸಿನಾಸ್ಥಾನ, ೭. ಪುರ–ದೇಶ ವರ್ಣನೆ, ೮. ಗುರುಚನ್ನಬಸವನು ಸಿದ್ಧರಾಮನಿಗೆ ಬೋಧಿಸಿದ ಶಿವ ತತ್ತ್ವ, ೯, ಪಿಂಡೋತ್ಪತ್ತಿ, ಕರಣಹಸಿಗೆ(?), ೧೦. ಪಂಚವಿಂಶತಿಲೀಲೆ, ೧೧. ಸೋಮಸೂರ್ಯಾನ್ವಯ, ೧೨. ಶಿವ ಶರಣರ ಚರಿತೆ, ೧೩. ದೀಕ್ಷಾ ವಿಧಾನ, ೧೪. ಷಟ್ಸ್ಥಲ, ೧೫. ಕಾಲಜ್ಞಾನ.

ಚನ್ನಬಸವ ಪುರಾಣ ಹೇಳುವ ವೀರಶೈವ ಪುರಾಣ ಲಕ್ಷಣವನ್ನು ಗಮನಿಸಿದಾಗ, ಲಕ್ಕಣ್ಣ ದಂಡೇಶನ ಶಿವತತ್ತ್ವ ಚಿಂತಾಮಣಿಯಲ್ಲಿ ಹೇಳಲಾದ ವಿಷಯಗಳ ಪಟ್ಟಿಗೂ ಇದಕ್ಕೂ ಹೆಚ್ಚಿನ ಸಾಮ್ಯವಿರುವುದು ಕಂಡುಬರುತ್ತದೆ. ಶಿವಾದ್ವೈತ ಸಿದ್ಧಾಂತ ನಿರೂಪಣೆಯ ಜತೆಗೆ ಪ್ರಧಾನವಾಗಿ ಬಸವೇಶ ಚರಿತ್ರೆ ಲಕ್ಕಣ್ಣ ದಂಡೇಶನ ಕಾವ್ಯೋದ್ದೇಶವಾಗಿದ್ದರೆ, ಶಿವಾದ್ವೈತ ಸಿದ್ಧಾಂತ ನಿರೂಪಣೆಯ ಜತೆಗೆ ಚನ್ನಬಸವೇಶನ ಚಾರಿತ್ರ ನಿರೂಪಣೆ ವಿರೂಪಾಕ್ಷ ಪಂಡಿತನ ಕಾವ್ಯೋದ್ದೇಶವಾಗಿರುವಂತಿದೆ. ಲಕ್ಕಣ್ಣ ದಂಡೇಶ ಮಹಾಕಾವ್ಯದ ಅಂಗವಾದ ಅಷ್ಟಾದಶವರ್ಣನೆಗಳ ಆಕರ್ಷಣೆಗೆ ಒಳಗಾಗದೆ ಅವುಗಳ ಪ್ರಭಾವದಿಂದ ವಿಮುಕ್ತನಿಂತನು. ಆದರೆ ವಿರೂಪಾಕ್ಷ ಪಂಡಿತನಾದರೋ ಸಂಪ್ರದಾಯ ನಿಷ್ಠನಾಗಿ ವರಲಕ್ಷಣ, ಸುಛಂದಸ್ಸು. ನುತಶಬ್ದ, ಉರುತರಲಂಕಾರ, ಅತಿಶಯಾರ್ಥ'ಗಳಿಂದ ಕೂಡಿದ ಕೃತಿ ರಚನೆ ಮಾಡಿದನು ; 'ನುತಿವಡೆದ ಹದಿನೆಂಟು ವರ್ಣನೆಗಳಿಂದ ಸಮಾಶ್ರಿತ ನವರಸಾದ್ಯಲಂಕಾರಗಳಿಂದ ವಿಬುಧ ತತಿ ಬಣ್ಣಿಪಂತೆ' ಪುರಾಣ ರಚಿಸಿದನು. ಲಕ್ಕಣ್ಣದಂಡೇಶನು 'ಜಗದೋದ್ಧಾರಕ್ಕೆ ಬಸವಾವತಾರ, ಬಸವನ ಬಾಲ್ಯಲೀಲೆ, ಪವಾಡಗಳನ್ನು ಹೇಳಿದಂತೆ ವಿರೂಪಾಕ್ಷಪಂಡಿತನೂ ಚನ್ನಬಸವನ ಉತ್ಪತ್ತಿ, ಅವನ ಬಾಲಲೀಲೆಗಳನ್ನು ದೀರ್ಘವಾಗಿ ಹೇಳಿರುವನು. ಲಕ್ಕಣ್ಣದಂಡೇಶನು ಭೂಮಂಡಲದಲ್ಲಿ ಶಿವಧರ್ಮ ಮಾರ್ಗವನ್ನು 'ನೆಱೆ ತೋರಿ ಮೆಱೆದ ಗಣಪ್ರಶಂಸೆ'ಯನ್ನು ಹೇಳಿರುವಂತೆ ವಿರೂಪಾಕ್ಷ ಪಂಡಿತನೂ 'ಹರಶರಣ ಚರಿತೆ' ಎಂಬ ಲಕ್ಷಣವಾಗಿ ಹೇಳಿರುವನು. ಲಕ್ಕಣ್ಣದಂಡೇಶನು ಧರ್ಮಾಧರ್ಮ, ಪಿಂಡದುತ್ಪತ್ತಿ, ಸಂಸಾರನಿರಸನ, ಲಿಂಗಧಾರಣ, ಶಿವಪೂಜಾ ನಿಯಮ, ಪಾದೋದಕ ಪ್ರಸಾದ ಕ್ರಮ, ಶಿವಾಧಿಕ್ಯ, ಮಹೇಶ್ವರಾಚರಣೆ ಈ ಐದು ಲಕ್ಷಣಗಳನ್ನು ಹೇಳಿದ್ದರೆ ವಿರೂಪಾಕ್ಷಪಂಡಿತನು ಮೇಲಿನ ಲಕ್ಕಣ್ಣ ದಂಡೇಶನ ಐದೂ ಲಕ್ಷಣಗಳನ್ನು 'ದೀಕ್ಷಾ ವಿಧಾನ'ವೆಂಬ ಒಂದೇ ಒಂದು ಲಕ್ಷಣದಲ್ಲಿ ಅಳವಡಿಸಿರುವನು. ಈರ್ವರೂ ಷಟ್‌ಸ್ಥಲ ಲಕ್ಷಣವನ್ನು ಹೇಳಿರುವರು. ಹೀಗೆ ಇವರಿಬ್ಬರ ಕೃತಿಗಳಲ್ಲಿ ಹೆಚ್ಚಿನ ಸಾಮ್ಯ ಕಂಡುಬರುತ್ತದೆ. ವಿರೂಪಾಕ್ಷ ಪಂಡಿತನು ವೈದಿಕ ಪುರಾಣ ಸಂಪ್ರದಾಯದ ಬಗೆಗೆ ಒಲವು ಹೊಂದಿರುವುದರಿಂದ ಅವನಲ್ಲಿ ಲಕ್ಕಣ್ಣದಂಡೇಶನು ಹೇಳಿರದ ಸೋಮ ಸೂರ್ಯಾನ್ವಯಗಳನ್ನು ಹೇಳಿರುವನು. ಅಷ್ಟೇ ಅಲ್ಲದೆ 'ಕಾಲಜ್ಞಾನ' ಎಂಬ ಹೊಸ ವಿಷಯವನ್ನು ಪ್ರಸ್ತಾಪಿಸಿರುವನು.

ಲಕ್ಕಣ್ಣ ದಂಡೇಶನ ಶಿವತತ್ತ್ವಚಿಂತಾಮಣಿ ತತ್ತ್ವ ಪ್ರಧಾನವಾದ ಕೃತಿ,ಪುರಾಣವಲ್ಲ,'ಪುರಾಣ ಛಾಯಾಕೃತಿ';ಗುಬ್ಬಿಯ ಮಲ್ಲಣಾರ್ಯ ಹಾಗೂ ವಿರೂಪಾಕ್ಷ ಪಂಡಿತರದು ನೇರವಾಗಿ 'ಪುರಾಣ'. ಲಕ್ಕಣ್ಣದಂಡೇಶನಿಂದ ಉಳಿದೀರ್ವರು ಪ್ರಭಾವಿತರಾಗಿರುವಂತೆ ಈಮೂವರ ಕೃತಿಗಳನ್ನು ಗಮನಿಸಿದಾಗ ಅವುಗಳಲ್ಲಿ ಪ್ರಗತಿಶೀಲ ವಿಕಾಸಕ್ರಮವನ್ನು ನಾವು ಗುರುತಿಸುತ್ತೇವೆ. ಕಾಲಕಾಲಕ್ಕೆ ವೀರಶೈವ ಪುರಾಣಗಳ ಲಕ್ಷಣಗಳಲ್ಲಾದ ಈ ಹೆಚ್ಚುವರಿ ಅದರ ಪ್ರಗತಿಯುದ್ಯೋತಕವಾಗಿದೆ. ನಿತ್ಯಾನಿತ್ಯ ವಸ್ತುವಿವರಣ, ಸಕಲನಿಷ್ಕಲ, ನಿಷ್ಕಲತತ್ತ್ವ, ಸಕಲಭೇದ, ಭುವನಕೋಶ, ಗಣಪ್ರಶಂಸೆ. ಧರ್ಮಾಧರ್ಮ, ಪಿಂಡದುತ್ಪತ್ತಿ, ಸಂಸಾರ ನಿರಸನ,

ಸೋಮ ಸೂರ್ಯಾನ್ವಯ, ಕಾಲಜ್ಞಾನ ಇವು ಪ್ರಾರಂಭದ ಪುರಾಣಗಳಾದ ಬಸವ ಪುರಾಣ ಹಾಗೂ ಪದ್ಮರಾಜ ಪುರಾಣಗಳಿಗೆ ಹೊರತಾಗಿದ್ದವು. ವೈದಿಕ ಪುರಾಣದ ಗುಣಲಕ್ಷಣಗಳನ್ನು ಕಂಡ ನಮ್ಮ ಕವಿಗಳೂ ಅವುಗಳಲ್ಲಿ ತಮಗೆ ಪ್ರಿಯವಾದುದನ್ನು ತರುವ ಪ್ರಯತ್ನವನ್ನೂ ಮಾಡಿದರು. ಈ ಮೂವರು ತಮ್ಮ ಕೃತಿಗಳಲ್ಲಿ ತಂದಿರದ 'ವಾದಕಾಂಡ'ವನ್ನು ಮೊದಲಿಗೆ 'ಪದ್ಮ ರಾಜ ಪುರಾಣ'ದಲ್ಲಿ ನೋಡುತ್ತೇವೆ. ಕೆರೆಯ ಪದ್ಮರಸನು ಶಿವಭಕ್ತರೊಡನೆ ಬೇಲೂರಿಗೆ ಬಂದು ಅಲ್ಲಿ ತ್ರಿಭುವನ ತಾತನೆಂಬ ವೈಷ್ಣವನನ್ನು ವಾದದಲ್ಲಿ ಸೋಲಿಸುವನು. ಪದ್ಮರಸನು ಶಿವಸರ್ವೋತ್ತಮತ್ವವನ್ನು ವಾದದಲ್ಲಿ ಮಂಡಿಸಲು, ಪ್ರತಿಪಾದಿಸಲು ವೇದ ಆಗಮ ಪುರಾಣಗಳಿಂದ ಆಧಾರಗಳನ್ನು ಉದ್ಧರಿಸುವನು. ತ್ರಿಭುವನ ತಾತನೂ ತನ್ನ ವಾದವನ್ನು ಸಮರ್ಥಿಸಲು ಆಧಾರಗಳನ್ನು ಕೊಡುವನು. ಈ ವಾದ ಭಾಗವು ಪಾಂಡಿತ್ಯ, ತರ್ಕ, ವಿಚಾರಗಳ ಆಗರವಾದದ್ದು ವಿದ್ವತ್ಪೂರ್ಣವಾಗಿದೆ. ಲಕ್ಕಣ್ಣದಂಡೇಶನೇ ಮೊದಲಾದವರು ವಿಷಯ ಪ್ರತಿಪಾದನೆಗೆ ಉಪನಿಷತ್ತು ಸ್ಮೃತಿ, ಪುರಾಣ, ಶಿವಾಗಮ, ವಾತುಲ, ತಂತ್ರ ಇವೇ ಮೊದಲಾದವುಗಳ ಆಧಾರ ಕೊಟ್ಟು ತಮ್ಮ ವಾದವನ್ನು ಗಟ್ಟಿ ನೆಲದ ಮೇಲೆ ಮಂಡಿಸುವರು. ತಮ್ಮ ವಿಚಾರಗಳು ಶಾಸ್ತ್ರೋಕ್ತವೂ, ನಂಬಿಕೆಗೆ ಅರ್ಹವಾದವೂ ಆಗಿರುವವೆಂಬುದನ್ನು ಮನಗಾಣಿಸಲು ಅವರು ಈ ಮಾರ್ಗ ಅನುಸರಿಸಿರುವರು. ವಚನ ಚಳುವಳಿಯ ವಚನಕಾರರ ವೈದಿಕವಾದ ಜ್ಞಾನರಾಶಿಯ ಬಗೆಗಿನ ವಿರೋಧೀ ಧೋರಣೆಗೂ ವೀರಶೈವ ಪುರಾಣಕಾರರ ಸ್ವೀಕಾರ ಧೋರಣೆಗೂ ಇರುವ ಎದ್ದು ಕಾಣುವ ವ್ಯತ್ಯಾಸವನ್ನು ನಾವು ಕಾಣಬಹುದಾಗಿದೆ. ಸಾರ್ವಕಾಲಿಕ ಸತ್ಯವನ್ನೂ ಜ್ಞಾನ ವನ್ನೂ, ಸರ್ವದೇಶೀಯವಾದ ಆಚರಣೆಯನ್ನೂ ವಚನಗಳ ಮುಖೇನ ಬೋಧಿಸಿದ ವಚನಕಾರರಿಗೂ ಕೇವಲ ಮತೀಯ ವಾದ ತಾತ್ತ್ವಿಕ ವಿಷಯಗಳನ್ನು ಕೃತಿಗಳ ಮೂಲಕ ಪ್ರತಿಪಾದಿಸಹೊರಟ ಮುಂದಣ ಪುರಾಣಕಾರರಿಗೂ ಧೋರಣೆಯಲ್ಲಿ ಎಷ್ಟು ಅಂತರ!

ಲಕ್ಕಣ್ಣದಂಡೇಶ ಹಾಗೂ ಗುಬ್ಬಿಯ ಮಲ್ಲಣಾರ್ಯರ ಕೃತಿಗಳು ನಿರ್ದಿಷ್ಟ ವ್ಯಕ್ತಿಯೊಬ್ಬನ ವಿಷಯ ನಿರೂಪಣೆಗೆ ಪ್ರಾಧಾನ್ಯಕೊಟ್ಟ ಗ್ರಂಥಗಳಲ್ಲ, ಅವುಗಳ ವಿಷಯವ್ಯಾಪ್ತಿ ಬಹಳ ದೊಡ್ಡದು. ಅವು ಪ್ರಧಾನವಾಗಿ ವೀರಶೈವ ಧರ್ಮದ ಕೈಪಿಡಿಗಳು. ಇವರು ತುಳಿದ ಹಾದಿಯಲ್ಲಿ ಸಿದ್ಧನಂಜೇಶ (ಸು. ೧೬೫೦) ನಡೆದಿರುವನು. ಅವನು ತನ್ನ ಗುರುರಾಜ ಚಾರಿತ್ರ ದಲ್ಲಿ 'ವಿಷಯಸೂಚಿ'ಯನ್ನು ಹೀಗೆ ಕೊಟ್ಟಿರುವನು :

೧. ಆಚಾರ್ಯರ ಉದ್ಭವ, ೨. ಗುರುವಂಶ ವಿವರಣ, ೩. ಶಿವನ ಪಂಚವಿಂಶತಿಲೀಲೆ, ೪. ಹರಪೂಜೆ, ೫. ಪಂಡಿತಾರಾಧ್ಯರು ಹೇಳಿದ ಗಣಸಹಸ್ರನಾಮ, ೬. ಧರೆಯಲ್ಲಿ ಶಿವಕೃಪೆ ಪಡೆದ ನೂತನದ ಹರಪುರಾತನರ ಕಥೆಗಳು. ಲಕ್ಕಣ್ಣದಂಡೇಶ ಹಾಗೂ ಗುಬ್ಬಿಯ ಮಲ್ಲಣಾರ್ಯರ ಪ್ರಭಾವ ಸಿದ್ಧನಂಜೇಶನ ಮೇಲೆ ಗಾಢವಾಗಿ ಆದಂತಿದೆ. ಈತ ಅವರು ಹೇಳಿದ ಪುರಾಣ ಲಕ್ಷಣಗಳನ್ನು ಸಂಪೂರ್ಣವಾಗಿ ಹೇಳದಿದ್ದರೂ, ಅವುಗಳಲ್ಲಿ ಹಲವನ್ನಾದರೂ ಹೇಳಿರುವನು. ಸಿದ್ಧನಂಜೇಶ ನಿಗೆ ಲಕ್ಕಣ್ಣ ದಂಡೇಶ ಹಾಗೂ ಮಲ್ಲಣಾರ್ಯರಂತೆ ತನ್ನ ಧರ್ಮದ ತತ್ತ್ವಗಳ ದರ್ಶನ ಮಾಡಿಸುವ ಉದ್ದೇಶವಿದೆ. ತನ್ನೀ ಉದ್ದೇಶ ಸಾಧನೆಗೆ ಸಾಮಾನ್ಯರ ಮನರಂಜನೆಯ ಸಾಧನವಾದ ಕಥನ ತಂತ್ರವನ್ನು ಬಳಸಿಕೊಂಡಿರುವನು. ತಾನು ಹೇಳಬೇಕೆಂ ದಿರುವ ವಿಷಯಗಳನ್ನು ಪುಟ್ಟ ಪುಟ್ಟ ಕಥೆಗಳ ಮೂಲಕ ವಿವರಿಸಲು ಪ್ರಯತ್ನಿಸಿರುವನು. 'ನೂತನದ ಹರಪುರಾತನರ ಕಥೆ' ಗಳನ್ನು ಹೇಳುವಾಗ ಪಾಲ್ಕುರಿಕೆ ಸೋಮನ ಬಸವಪುರಾಣಮು, ಪಂಡಿತಾರಾಧ್ಯ ಚರಿತ್ರ, ಲಕ್ಕಣ್ಣ ದಂಡೇಶನ ಶಿವತತ್ತ್ವಚಿಂತಾ ಮಣಿ ಹಾಗೂ ಮಲ್ಲಣಾರ್ಯರ ವೀರಶೈವಾಮೃತ ಮಹಾಪುರಾಣಗಳನ್ನು ಆಧರಿಸಿರುವನು. ಗುರುರಾಜಚಾರಿತ್ರವನ್ನು ಒಟ್ಟಾರೆ ನೋಡಿದಾಗ ಅದೊಂದು 'ಶರಣಕಥಾರತ್ನಕೋಶ' 'ಶಿವಕಥಾಸರಿತ್ಸಾಗರ'ವಾಗಿ ಕಂಡುಬರುತ್ತದೆ. ವೀರಶೈವ ಪುರಾಣಗಳ ಲಾಕ್ಷಣಿಕ ವಿಕಾಸವನ್ನೂ ಅದು ಮುಟ್ಟಿದ ಘಟ್ಟವನ್ನೂ ಅದು ನಿರ್ದೇಶನ ಮಾಡುವುದರ ಜೊತೆಗೆ ವೀರಶೈವ ಪುರಾಣಗಳು ಜನಪ್ರಿಯವಾಗಲು ಹಿಡಿದ ಮಾರ್ಗವನ್ನೂ ಪರಿಚಯಿಸುತ್ತದೆ.

ವೈದಿಕ, ಜೈನ, ಶೈವಪುರಾಣಗಳ ಅಧ್ಯಯನದ ಹಿನ್ನೆಲೆಯಲ್ಲಿ, 'ಪುರಾಣ'ವೆಂದರೆ ತನ್ನದೇ ಆದ ವೈಶಿಷ್ಟ್ಯಯುಕ್ತ ವಾದ ಸಾಹಿತ್ಯ ಪ್ರಭೇದ ; ವೈದಿಕ ಪುರಾಣವೆಂದರೆ ವೇದೋಪನಿಷತ್ತುಗಳೇ ಮೊದಲಾದ ವೈದಿಕ ಸಾಹಿತ್ಯಪ್ರೋಕ್ತ ವಿಷಯ ಗಳಿಗೆ ಸಂಬಂಧಿಸಿದ ಪುರಾಣ ; ಜೈನಪುರಾಣವೆಂದರೆ ತೀರ್ಥಂಕರರೇ ಮೊದಲಾದ ಶಲಾಕಾಪುರುಷರ ಮತ್ತು ಅವರು ಬೆಳಗಿದ ಧರ್ಮದ ಸಂಬಂಧವಾದ ಪುರಾಣ; ಪೆರಿಯ ಪುರಾಣವೆಂದರೆ ಸನಾತನ ಶೈವಧರ್ಮಾನುಯಾಯಿಗಳಾಗಿ ಬಾಳಿ ಅದನ್ನು ಬೆಳಗಿದ ಮಹನೀಯರಾದ ಶೈವಸಂತರ ಸಂಬಂಧವಾದ ಪುರಾಣ–ಎನ್ನುವಂತೆ, ವೀರಶೈವ ಪುರಾಣವೆಂದರೆ, ವೀರಶೈವ ಧರ್ಮಾನು ಯಾಯಿಗಳಾಗಿ ಬಾಳಿದ ಮಹಾಪುರುಷರ ಮತ್ತು ಅವರು ಬೆಳಗಿದ ವೀರಶೈವ ಧರ್ಮದ ಸಂಬಂಧವಾದ ಪುರಾಣ ಎಂಬ ನಿಲು ವನ್ನು ತಾಳಬಹುದಾಗಿದೆ.

೫

ವೀರಶೈವ ಕವಿಗಳು ಪುರಾಣವೆಂಬ ನಿರ್ದಿಷ್ಟನಾಮದ ಕೃತಿಗಳನ್ನು ರಚಿಸಿದರು. ಅವರ ಪುರಾಣವೆಂಬ ನಿರ್ದಿಷ್ಟ ನಾಮ ಹೊಂದಿರದ ಚರಿತೆ, ಚಾರಿತ್ರ, ಲೀಲೆ, ವಿಜಯ, ವಿಲಾಸ ಮೊದಲಾದ ಕೃತಿಗಳನ್ನೂ ವೀರಶೈವ ಪುರಾಣಗಳೆಂದು ಕರೆಯುವ ವಾಡಿಕೆಯಿದೆ. ಈ ಭಿನ್ನ ಭಿನ್ನ ಹೆಸರಿನ ಕೃತಿಗಳಲ್ಲಿ ಕೆಲವು ಸ್ಪಷ್ಟವಾದ ಪುರಾಣ ಛಾಯೆಯನ್ನು ಮಾತ್ರ ಹೊಂದಿರುತ್ತವೆ, ಕೆಲವು ಕೃತಿಗಳಲ್ಲಿ ಪುರಾಣ ಛಾಯೆಯೇ ಇರುವುದಿಲ್ಲ. ಉದಾಹರಣೆಗೆ ಹರಿಹರನ ರಗಳೆಗಳು. ಬಸವರಾಜದೇವರ ರಗಳೆ ಇಲ್ಲವೆ ಯಾವುದೇ ಶರಣ ಶರಣೆಯರನ್ನು ಕುರಿತ ರಗಳೆಯಾಗಲೀ ಚಾರಿತ್ರ ಪ್ರಧಾನವಾದ ಕೃತಿಗಳು. ಕಣ್ಣುಕಟ್ಟಿದ ಕುದುರೆಯ ನಡಿಗೆಯಂತೆ ಇಲ್ಲಿ ಶರಣ-ಶರಣೆಯರ ಕಥೆ ಏಕಮುಖವಾಗಿ ಸಾಗುತ್ತದೆ, ವ್ಯಕ್ತಿಯನ್ನೇ ಕೇಂದ್ರವಾಗಿಟ್ಟುಕೊಂಡು ಚಾರಿತ್ರ್ಯ ನಿರೂಪಣೆ ಕೊಡಲಾಗುತ್ತದೆ. ಕೆರೆಯ ಪದ್ಮರಸನ 'ದೀಕ್ಷಾಬೋಧೆ'ಯು ರಗಳೆಯ ಛಂದಸ್ಸಿನಲ್ಲಿ ವಾತೂಲಾದಿ ಶಿವಾಗಮಗಳಲ್ಲಿ ಹೇಳಲಾದ ಶಿವದೀಕ್ಷಾ ವಿಧಾನವನ್ನು ಕನ್ನಡದಲ್ಲಿ ಹೇಳಹೊರಟ ಕೃತಿ. ಮುಂದಣ ವೀರಶೈವ ಕವಿಗಳು ತಮ್ಮ ಪುರಾಣಗಳಲ್ಲಿ ಒಂದು, ಲಕ್ಷಣವಾಗಿಯೇ ಇದನ್ನು ಬಳಸಿರುವರು. ವಿರತ ಮಹಾಲಿಂಗದೇವನ 'ಗುರು ಬೋಧಾಮೃತ'ವು ತ್ರಿಪದಿ ರೂಪದಲ್ಲಿ ವೀರಶೈವ ಧರ್ಮದ ತತ್ತ್ವಗಳನ್ನು ಗುರು-ಶಿಷ್ಯ ಸಂವಾದ ರೂಪದಲ್ಲಿ ಹೇಳುವ ಕೃತಿ. 'ಹೊತ್ತು ಹೋಗದೆ ಕೇಳಿ ಅರ್ಥ ಮಾಡುವುದಲ್ಲ'; 'ಕಾಳುಮತಿಗಳು ಕೂಡಿ ಹೇಳುವ ಕಥೆಯಲ್ಲ'; ವಿಷಯಂಗಳೊಳು ಮುಳಗಿ ಹಸಗೆಡುವ ಕಥೆಯಲ್ಲ'; 'ಚಿತ್ತ ಲಿಂಗದಲಿ ಬೆರೆವ, 'ಗುರುಬೋಧೆ' ತನ್ನ ಕೃತಿ ಎಂದಿರುವನು. ವೀರಣಾರ್ಯನ 'ಪ್ರಸಾದ ಚರಿತ್ರೆ'ಯು ಅಷ್ಟಾವರಣಗಳಲ್ಲಿ ಒಂದಾದ ಪ್ರಸಾದ ಮಹಿಮೆಯನ್ನು ನಿರೂಪಿಸುವ ಗ್ರಂಥ. ಚೆನ್ನಬಸವಕವಿಯ 'ನಿಜಲಿಂಗ ಚಿಕ್ಕಯ್ಯನ ಸಾಂಗತ್ಯ'ವು ಬಸವಣ್ಣನ ಸಮಕಾಲೀನನಾದ ಚೋರ ಚಿಕ್ಕಯ್ಯನೆಂಬ ಭಕ್ತನ ಕಥೆ. ಬಸವಣ್ಣನನ್ನು ಕೊಲ್ಲಲು ಬಂದ ಚೋರ ಚಿಕ್ಕಯ್ಯನು ಬಸವನ ನಿರ್ಮಲವಾದ ಚಾರಿತ್ರಕ್ಕೆ ವಶನಾಗಿ ಅವನ ಗಾಢಪ್ರಭಾವಲಯಕ್ಕೆ ಸಿಕ್ಕಿಬಿದ್ದು ಅವನಿಂದ ಉಪದೇಶಗೊಂಡ ಕಥೆಯ ಜೊತೆಗೆ ಶಿವಭಕ್ತನಾದ ಅವನನ್ನು ಕಾಮಿಸಿ ಬಂದ ಹೆಣ್ಣಿಗೆ ವಶನಾಗದೆ ತನ್ನ ಶಿರವನ್ನೇ ಕತ್ತರಿಸಿ ತನ್ನ ಚಾರಿತ್ರ್ಯಶುದ್ಧಿಯನ್ನು ಪ್ರಕಟಪಡಿಸಿದ ದಾರುಣ ಕಥೆಯೂ ಸೇರಿದೆ. ಪೆಮ್ಮಿಸೆಟ್ಟಿಯ 'ಗುರುಭಕ್ತಾಂಡಾರಿ ಚರಿತೆ'ಯ ನಾಯಕನಾದ ಗುರುಭಕ್ತಾಂಡಾರಿಯ ಹೆಸರು ನೂತನ ಪುರಾತನ ಶಿವಶರಣರ ಶ್ರೇಣಿಯಲ್ಲಿ ಬರುವುದಿಲ್ಲ. ಪಾಲ್ಕುರಿಕೆ ಸೋಮನು ತನ್ನ ಪಂಡಿತಾರಾಧ್ಯ ಚರಿತೆಯಲ್ಲಿ ಈತನ ಕಥೆ ಹೇಳಿರುವನು. ವೀರಶೈವನಲ್ಲದ ನಾಯಕ ಗುರುಭಕ್ತಾಂಡಾರಿಯ ಕಥೆ ವೀರಶೈವ ಪುರಾಣವಾಗುವುದಾದರೂ ಹೇಗೆ ? ಪರ್ವತದೇವ, ಮಾದಣ್ಣ ಹಾಗೂ ಉದ್ದಂಡ ಈ ಮೂವರು ಕವಿಗಳು ರಚಿಸಿರುವ 'ನನ್ನಯ್ಯಚಾರಿತ್ರ'ವು ಕ್ರಮವಾಗಿ ಸಾಂಗತ್ಯ, ಚಂಪೂ ಹಾಗೂ ಸಾಂಗತ್ಯ ರೂಪಗಳಲ್ಲಿ ಬಂದಿವೆ, ನನ್ನಯ್ಯನು ಬಸವ ಸಮಕಾಲೀನನಾದ ಶಿವಭಕ್ತ. ಅಜ್ಞಾನಿಯಾಗಿದ್ದ ಬೇಡ ಮಾತಂಗತಮನನ್ನು ಪರಮಜ್ಞಾನಿಯಾದ ಸುಜ್ಞಾನಿದೇವನು ತನ್ನ ಬೋಧೆಯಿಂದ ಪರಿವರ್ತಿಸಿದ ಕಥೆ ಪ್ರಧಾನವಾಗಿ ಬರುತ್ತದೆ. ಪರಿವರ್ತನೆಗೆ ಕಾರಣವಾಗಿ ಸಾಂದರ್ಭಿಕ ಕಥೆಗಳು ಬರುತ್ತವೆ. ಈ ಕಥೆಗಳ ಮೂಲಕ ಕವಿ ಸದ್ಬೋಧೆ ಮಾಡುವನು. ಸಂಪಾದನೆಯ ಸಿದ್ಧವೀರಣಾರ್ಯನ ಶಿಷ್ಯನ (?) 'ಸುಜ್ಞಾನ ಬೋಧೆ'ಯು ಶಿವಾಧಿಕ್ಯವನ್ನು ಸಾರುವ ಸಾಂಗತ್ಯ ಗ್ರಂಥವಾಗಿದೆ. ಮರುಳಸಿದ್ಧೇಶನ 'ಗುರುಲಿಂಗಜಂಗಮಚಾರಿತ್ರ'ವು ಗುರುಲಿಂಗಜಂಗಮಗಳ ಮಹಿಮೆಯನ್ನು ಸೂಚಿಸಹೊರಟ ಕೃತಿಯಾಗಿದೆ. ಮುಖಬೋಳು ಸಿದ್ಧರಾಮನ 'ಷಟ್‌ಸ್ಥಲ ತಿಲಕ'ವು ವೀರಶೈವಧರ್ಮದ ತಿರುಳಾದ ಷಟ್ಸ್ಥಲ ಸಿದ್ಧಾಂತವನ್ನು ಸಮರ್ಥವಾಗಿ ನಿರೂಪಿಸುವ ಕಾವ್ಯವಾಗಿದೆ. ಚೆನ್ನವೀರ ಜಂಗಮದೇವನ 'ಷಟ್‌ಸ್ಥಲವಲ್ಲಭ'ವು ಚಂಪೂ ರೂಪದಲ್ಲಿ ತೋಂಟದ ಸಿದ್ಧಲಿಂಗನ ಜೀವನಚರಿತ್ರೆಯನ್ನು ಹೇಳಹೊರಟ ಕೃತಿಯಾಗಿದೆ. ಬಸವರಾಜೇಂದ್ರನ 'ವಿಭೂತಿ ಮಹಿಮೆ'ಯು ಸ್ಕಾಂದಪುರಾಣದ ಶಂಕರಸಂಹಿತೆಯಲ್ಲಿ ಶಿವರಹಸ್ಯಕಾಂಡದಲ್ಲಿನ ಉಪದೇಶಕಾಂಡದಲ್ಲಿ ಹೇಳಲಾದ ವಿಭೂತಿ ಮಹಿಮೆಯ ತಿಳುವಳಿಕೆಯಷ್ಟೆ. ನಿಶ್ಚಿಂತಾತ್ಮನ 'ವೀರಭದ್ರ ವಿಜಯ'ವು ಶಿವನ ಪಂಚವಿಂಶತಿ ಲೀಲೆಗಳಲ್ಲಿ ಹನ್ನೆರಡನೆಯದಾದ ವೀರಭದ್ರ ಲೀಲೆಯನ್ನು ವಿವರಿಸುವ ಕಾವ್ಯವಾಗಿದೆ. ಶ್ರೀಜಿ.ಎಚ್,ಹೊಸೂರ ಮುಳಗುಂದ ಅವರ 'ಶ್ರೀ ಮುರುಘರಾಜೇಂದ್ರ ವಿಜಯ'ವು ಚಿತ್ರದುರ್ಗದ ಬೃಹನ್ಮಠದ ಶೂನ್ಯ ಸಿಂಹಾಸನಾಧಿಕಾರಿಗಳಾಗಿದ್ದ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳ ಜೀವನ ಚರಿತ್ರೆ ಹಾಗೂ ಅವರ ಮಹತ್ಕಾರ್ಯಗಳನ್ನು ಕುರಿತ ಗ್ರಂಥವಾಗಿದೆ. ಶ್ರೀ ಗಂಗಾಧರ ಶಿವಾಚಾರ್ಯರು ಮೊರಬ ಇವರ 'ಶ್ರೀ ಜಗದ್ಗುರು ಶಿವಾನಂದ ವಿಜಯ'ವು ಶ್ರೀ ರಂಭಾಪುರಿ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಜೀವನ ಚರಿತ್ರೆಯಾಗಿದೆ. ಗುರುಬಸವೇಶ್ವರನೆಂಬ ಸಂಕಲನಕಾರನ 'ನಿಷ್ಕಲಲಿಂಗ ಚಿದಾನಂದ ಲೀಲೆ'ಯು ಪುರಾಣಕಾವ್ಯವಾಗಿರದೆ ಒಂದು ವಚನ ಸಂಕಲನವಾಗಿದೆ.

ಮತತತ್ತ್ವಪ್ರತಿಪಾದಿಸುವ ಗ್ರಂಥಗಳಾಗಲೀ, ಶಿವಲೀಲಾಪ್ರಧಾನ ಗ್ರಂಥವಾಗಲೀ ವೀರಶೈವ ಪುರಾಣವೆನ್ನಿಸಿಕೊಳ್ಳುವುದಿಲ್ಲ. ಮೊದಲನೆಯದು, ಶಾಸ್ತ್ರಗ್ರಂಥವೆನ್ನಿಸಿಕೊಳ್ಳುತ್ತವೆ. ಎರಡನೆಯದರಲ್ಲಿ, ಪ್ರಧಾನ ವ್ಯಕ್ತಿಯಾದ ಶಿವನು ವೀರಶೈವರಿಗೆ ಮಾತ್ರ ಮೀಸಲಾದ ದೈವವಲ್ಲ. ಇಡೀ ಶೈವ ಜನಾಂಗದ ಆರಾಧ್ಯದೈವ. ಶೈವಧರ್ಮವೆಂಬ ಶಿವಪಥದ ಕೊನೆಯ

ಮೆಟ್ಟಿಲು ವೀರಶೈವಧರ್ಮ. ಶೈವರ ಉಪಾಸ್ಯ ದೈವವಾದ ಪರಶಿವನ ನಿಷ್ಕಲ, ಸಕಲ ರೂಪುಗಳೇ ವೀರಶೈವರ ಭಾವಲಿಂಗ ಪ್ರಾಣಲಿಂಗ ಹಾಗೂ ಇಷ್ಟಲಿಂಗಗಳು. ಆದ್ದರಿಂದ ವೀರಶೈವ ಧರ್ಮ ತತ್ತ್ವ ಇತ್ಯಾದಿ ವಿಷಯಗಳನ್ನು ನಿರೂಪಿಸುವಾಗ ಪ್ರಾಸಂಗಿಕವಾಗಿಯೂ, ವೈದಿಕ ಪುರಾಣಗಳ ಪಂಚ ಲಕ್ಷಣಗಳಲ್ಲಿ ಮೊದಲನೆಯದಾದ 'ಸರ್ಗ'ದ (=ಮೂಲಸೃಷ್ಟಿಯ) ಅನುಕರಣೆ ಮಾಡುವಾಗ ಅನಿವಾರ್ಯವಾಗಿಯೂ ಶಿವಪಾರಮ್ಯವನ್ನು ಸ್ಥಾಪಿಸುವುದಕ್ಕೆ ಅವನು ತಾಳಿದ ಕೆಲವು ಪ್ರಧಾನಲೀಲೆಗಳನ್ನು ಕೆಲವು ವೀರಶೈವ ಪುರಾಣಗಳಲ್ಲಿ (ಉದಾಹರಣೆಗೆ ವೀರಶೈವಾಮೃತ ಪುರಾಣ. ಚನ್ನಬಸವೇಶ್ವರ ಪುರಾಣ, ರೇಣುಕ ವಿಜಯ ಪುರಾಣಗಳು ಹಾಗೂ ಶಿವತತ್ತ್ವಚಿಂತಾಮಣಿ ಮತ್ತು ಗುರುರಾಜಚಾರಿತ್ರ ಎಂಬ ಪುರಾಣ ಛಾಯಾ ಕೃತಿಗಳಲ್ಲಿ) ತರಲಾಗಿದೆ ಹೀಗೆ ಒಂದು ನಿರ್ದಿಷ್ಟ ಉದ್ದೇಶದಿಂದ ಬೆರಳೆಣಿಕೆಯ ಪುರಾಣಗಳಲ್ಲಿ ಮಾತ್ರ ಬಂದಿರುವ ಶಿವನ ಕೆಲವು ಲೀಲೆಗಳು ವೀರಶೈವ ಪುರಾಣಗಳ ಮುಖ್ಯ ವಿಷಯ ಎಂದು ಹೇಳಲಾಗದು. ಆದ್ದರಿಂದ ವೀರಭದ್ರವಿಜಯ, ಗಿರಿಜಾಕಲ್ಯಾಣ, ಆದಿತ್ಯ ಪುರಾಣ. ಭಿಕ್ಷಾಟನಚರಿತ್ರೆ, ಶಬರಶಂಕರ ವಿಲಾಸ. ತಾರಕವಧೆ, ಜಲಂಧರ ಕಾಳಗ, ವೀರೇಶ ಚರಿತೆ, ಶರಭ ಚಾರಿತ್ರ–ಇವು ಶಿವನ ಪಂಚ ವಿಂಶತಿ ಲೀಲೆಗಳಲ್ಲಿ ಯಾವುದಾದರೂ ಒಂದು ಲೀಲೆಯನ್ನು ಕುರಿತ ಕಾವ್ಯವೇ ಹೊರತು ಪುರಾಣವಲ್ಲ.

ತಮಿಳುಶೈವಭಕ್ತರ ಚರಿತೆಗಳು ವೀರಶೈವ ಪುರಾಣವಾಗಲು ಸಾಧ್ಯವಿಲ್ಲ. ತಮಿಳು ನಾಡಿನ ಶೈವ ಸಂತರುಗಳಾದ ೬೩ ಮಂದಿ ಪುರಾತನರು ಪ್ರಧಾನವಾಗಿ ಇಷ್ಟಲಿಂಗಧಾರಕರಾದ ವೀರಶೈವರಲ್ಲ, ಇಷ್ಟಲಿಂಗಪೂಜಕರಲ್ಲ, ಸ್ಥಾವರಲಿಂಗಪೂಜಕರು, ಇವರ ಗುರು–ಜಂಗಮರು ವೀರಶೈವರ ಅಷ್ಟಾವರಣಗಳಲ್ಲಿ ಬರುವವರಾಗಿರದೆ ಶೈವಧರ್ಮೀಯರು. ಇವರು ಶೈವದಲ್ಲಿ ಮುಕ್ತಿಯನ್ನು ಪಡೆದವರು. ಇವರ ನಿಷ್ಠಾಭಕ್ತಿ ವ್ರತವನ್ನು ಪೂರೈಸುವಲ್ಲಿ ಪ್ರಾಣವನ್ನೇ ಪಣವಾಗಿಡುವ ಧೀರರು, ಪರಮ ನಿಷ್ಠಾವಂತ ಶಿವಭಕ್ತರು. ಇವರ ನಿಷ್ಕಪಟ ವರ್ತನೆ, ಶಿವನ ಹಾಗೂ ಶಿವನ ಭಕ್ತರ ಸೇವೆಯಲ್ಲಿನ ಒಮ್ಮನವಾದ ಆಸಕ್ತಿ ವೀರಶೈವ ಶರಣರಿಗೆ, ಕವಿಗಳಿಗೆ ಮೆಚ್ಚುಗೆಯಾಗಿದೆ. ಶರಣರು ತಮ್ಮ ವಚನಗಳಲ್ಲೂ, ಕವಿಗಳು ತಮ್ಮ ಕೃತಿಗಳಲ್ಲೂ ಇವರನ್ನು ಆದರ್ಶ ವ್ಯಕ್ತಿಗಳನ್ನಾಗಿ ಸ್ವೀಕರಿಸಿರುವರು ; ಇವರ ಉಲ್ಲೇಖವನ್ನು ಯಥೇಚ್ಛವಾಗಿ ಮಾಡಿರುವರು ; ಸಂದರ್ಭೋಚಿತವಾಗಿ ಇವರ ಬದುಕಿನ ಸ್ಮರಣೀಯ ಘಟನೆಗಳ ಉಲ್ಲೇಖವನ್ನು ಸೂಕ್ಷ್ಮವಾಗಿ ಇಲ್ಲವೇ ಸುದೀರ್ಘವಾಗಿ ಕೊಟ್ಟಿರುವರು. ಇಷ್ಟು ಮಾತ್ರಕ್ಕೆ ಇವರ ಚರಿತ್ರೆಗಳು ವೀರಶೈವ ಪುರಾಣಗಳೆಂದು ಹೇಳುವುದು ಸರಿಯೆನಿಸುವುದಿಲ್ಲ. ಸೌಂದರಪುರಾಣ, ತ್ರಿಷಷ್ಟಿ ಪುರಾತನರ ಚರಿತ್ರೆ, ಸಿರಿಯಾಳ ಸೆಟ್ಟಿಯ ಸಾಂಗತ್ಯ, ಹರಿಶ್ಚಂದ್ರ ಕಾವ್ಯ, ಉದ್ಭಟಕಾವ್ಯ, ಸಾನಂದ ಚರಿತ್ರೆ, ಹಮ್ಮೀರ ಕಾವ್ಯ, ನಂಬಿಯಣ್ಣನ ರಗಳೆ, ಸೌಂದರ ಪುರಾಣ, ಚೇರಮಕಾವ್ಯ, ದೀಪದ ಕಲಿಯರ ಕಾವ್ಯ, ಭಾವಚಿಂತಾರತ್ನ, ತ್ರಿಭುವನ ತಿಲಕ, ಚೋಳ ರಾಜ ಸಾಂಗತ್ಯ, ಸೌಂದರ ವಿಲಾಸ, ರಾಜಶೇಖರ ವಿಳಾಸ–ಇವೇ ಮೊದಲಾದ ಕೃತಿಗಳಲ್ಲಿ ಬಹುಪಾಲು ಶೇಕ್ಕಿಳಾರ್ ಕವಿಯ 'ಪೆರಿಯಪುರಾಣ'ದಲ್ಲಿ ಉಕ್ತರಾದ ಪುರಾತನ ಶೈವಸಂತರಿಗೆ ಸಂಬಂಧಪಟ್ಟ ಕೃತಿಗಳಾದರೆ ಕೆಲವು ಆ ಪುರಾತನರ ಶ್ರೇಣಿಯಲ್ಲಿ ಬಾರದ ಇತರ ಶೈವ ಮಹಾಪುರುಷರನ್ನು ಕುರಿತ ಗ್ರಂಥಗಳು. ವೀರಶೈವೇತರರಿಗೆ ಸಂಬಂಧಪಟ್ಟ ಈ ಕೃತಿಗಳನ್ನು ವೀರಶೈವ ಪುರಾಣಗಳೆಂದು ಕರೆಯುವುದು ಸತ್ಯದ ವಿಪರ್ಯಾಸವೇ ಸರಿ.

ವೀರಶೈವ ಕವಿಗಳು ತಮ್ಮ ಕೃತಿಗಳಿಗೆ ಹೆಸರಿಡುವಾಗ ಲೀಲೆ, ವಿಜಯ, ಚರಿತ್ರೆ, ಚರಿತೆ, ಪುರಾಣ–ಹೀಗೆ ಕರೆದಿರುವರು. ಅವು ಕವಿಯು ಸುದೀರ್ಘವಾಗಿ ಯೋಚಿಸಿ, ತೂಗಿ ನೋಡಿ ಇಟ್ಟ ಶೀರ್ಷಿಕೆಗಳು. ಅವುಗಳಲ್ಲಿ ಒಂದೊಂದೂ ವಿಶಿಷ್ಟ ಲಕ್ಷಣಯುಕ್ತವಾಗಿರುತ್ತವೆ. ಅವುಗಳಲ್ಲಿ ಒಂದಕ್ಕೂ ಇನ್ನೊಂದಕ್ಕೂ ಇರುವ ವ್ಯತ್ಯಾಸ ಸ್ಥೂಲವಾಗಿರಬಹುದು: ಅಥವಾ ಒಂದರಲ್ಲಿ ಎರಡರ ಲಕ್ಷಣಗಳು ಸಮತೂಕದಲ್ಲಿರಬಹುದು. ಯಾವ ಲಕ್ಷಣಪ್ರಧಾನವಾಗಿರುತ್ತದೋ ಆ ಹೆಸರನ್ನು ಕವಿಯು ಕೃತಿಗಿಟ್ಟಿರುವನು. ಎರಡೂ ಲಕ್ಷಣಗಳು ಸಮಾನವಾಗಿದ್ದರೆ ಎರಡೂ ಹೆಸರುಗಳಿಂದ ಕರೆಯುತ್ತಾನೆ. ಇದು ಕವಿಶ್ರೇಷ್ಠ ಕೃತಿಗಳ ಪರಿಶೀಲನೆಯಿಂದ ವೇದ್ಯವಾಗುವ ಅಂಶ. ಉದಾಹರಣೆಗೆ ತೆಲುಗಿನಲ್ಲಿ ಮೊದಲಿಗೆ ಬಸವ ಪುರಾಣವನ್ನು ಬರೆದ ಪಾಲ್ಕುರಿಕೆ ಸೋಮನಾಥನು ತಾನು ಬರೆದ ಪಂಡಿತಾರಾಧ್ಯರಿಗೆ ಸಂಬಂಧಪಟ್ಟ ಗ್ರಂಥಕ್ಕೆ 'ಪಂಡಿತಾರಾಧ್ಯ ಚರಿತ್ರೆ'ಯೆಂದು ಹೆಸರಿಟ್ಟನು, ಅದನ್ನೂ 'ಪುರಾಣ'ವೆಂಬ ಹೆಸರಿನಿಂದ ಕರೆಯಲಿಲ್ಲ. ಇದಕ್ಕೆ ಕಾರಣ, ಅದರಲ್ಲಿ ಪುರಾಣ ತಂತ್ರವನ್ನು ಹೆಚ್ಚಿಗೆ ಬಳಸದಿದ್ದುದು; ಮತ್ತು ಚಾರಿತ್ರಾಂಶಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟುದು. ಬೇರೆ ಬೇರೆ ಶಿರೋನಾಮೆಗಳಿಂದ ಹಲವಾರು ಕೃತಿಗಳನ್ನು ರಚಿಸಿದ ಉದ್ದಾಮ ಕವಿಯಾದ ಅವನಿಗೆ ಒಂದಕ್ಕೂ ಮತ್ತೊಂದಕ್ಕೂ ಇದ್ದ ವ್ಯತ್ಯಾಸವು ಚೆನ್ನಾಗಿ ಗೊತ್ತಿತ್ತು. ಪಾಲ್ಕುರಿಕೆ ಸೋಮನಾಥನ ಈ ಪಂಡಿತಾರಾಧ್ಯ ಚರಿತ್ರೆಯನ್ನೇ ತೆಲುಗಿನಲ್ಲಿ ಚಂಪೂ ರೂಪದಲ್ಲಿ ಶ್ರೀನಾಥನೂ, ಕನ್ನಡದಲ್ಲಿ ಷಟ್ಪದಿಯಲ್ಲಿ ನೀಲಕಂಠಾಚಾರ್ಯನೂ, ಅದನ್ನೇ ಗದ್ಯದಲ್ಲಿ ಬರೆದ ಪಿ.ಆರ್. ಕರಿಬಸವ ಶಾಸ್ತ್ರಿಯೂ, ಸಂಸ್ಕೃತದಲ್ಲಿ ರಚಿಸಿದ ಗುರುರಾಜನೂ ಮೂಲ ಶಿರೋನಾಮೆಯನ್ನೇ ಉಳಿಸಿಕೊಂಡರಲ್ಲದೆ ಬದಲಾಯಿಸಲಿಲ್ಲ.

ಅಲ್ಲಮ ಪ್ರಭುವಿನ ಭವ್ಯ ವ್ಯಕ್ತಿತ್ವಕ್ಕೆ ಮನಸೋತ ಕವಿಯೆಂದರೆ ಚಾಮರಸನು. ಪುರಾಣತಂತ್ರ ಇವನಿಗೆ ತಿಳಿಯದ ವಿಷಯವಾಗಿರಲಿಲ್ಲ. ಆದರೆ, ಪುರಾತನ ಹಾಗೂ ನೂತನ ಶಿವಶರಣರ ನೂರಾರು ಉಪಕಥೆಗಳನ್ನು ಹೇರಿಕ ಮೂಲಕಥೆಯನ್ನು

ಮುಳುಗಿಸುವ, ಪವಾಡಗಳನ್ನು ಮಿತಿಮೀರಿ ತಂದು ಅಜೀರ್ಣಗೊಳಿಸುವ ಪುರಾಣ ಸಂಪ್ರದಾಯ ಇವನಿಗೆ ಹಿಡಿಸಲಿಲ್ಲ. ತನ್ನದೇ ಆದ ವಿನೂತನ ಮಾರ್ಗವನ್ನು ತನ್ನ ಕಥಾನಾಯಕನ ವ್ಯಕ್ತಿತ್ವ ನಿರೂಪಣೆಗೆ ಅನುಸರಿಸಿರುವನು. ಚಾಮರಸನ ಪ್ರಕಾರ ಅವನ ಕಥಾನಾಯಕ ಅಲೌಕಿಕ ವ್ಯಕ್ತಿತ್ವವುಳ್ಳವನು. 'ಪ್ರತ್ಯಕ್ಷ ಪರಬೊಮ್ಮ' (೪.೧೩೭). ಪಾರ್ವತಿಯ ತಾಮಸಿಕ ಗುಣವನ್ನು ನಿವಾರಿಸಲು ಶಿವನೇ ಸಾತ್ವಿಕ ತೇಜದ ಅಲ್ಲಮನಾಗಿ ಅವತರಿಸಿ ಹಿಂದೆ ತಾಳಿದಂತೆ ಈ ರೂಪಿನಲ್ಲಿಯೂ ವಿನೋದಕ್ಕೆ ಹಲವು ಲೀಲೆಗಳನ್ನು ತೋರಿ ಮೆರೆದನು. ತಾನು ನಿರ್ಮಾಯನಾದರೂ ಲೋಕದ ಸಾಮಾನ್ಯ ಜನಕ್ಕೆ ಕಾಮಿಯಂತೆ ತೋರಿದನು. ಗರ್ವವೇ ರೂಪು ತಳೆದಂತಿದ್ದ ಪಾರ್ವತಿಯ ತಾಮಸಿಕ ಕಳೆಯಾದ ಮಾಯೆಯ ಜೊತೆ ಮದ್ದಳೆ ಬಾರಿಸಿದನು. ಅವಳಿಗೆ ತನ್ನ ನಿಜವನ್ನು ತೋರಲಿಲ್ಲ. ಗೊಗ್ಗಯ್ಯನನ್ನು ಸಂಧಿಸಿದ ಸಂದರ್ಭದಲ್ಲೂ 'ನರನು ತಾ ದಿಟವೆಂಬ ಬಳಕೆಯ ಪರಿಯನಂಗೀಕರಿಸಿ ಪರರಿಗೆ ಪರಮನಲ್ಲಮ ನಟಿಸುತಿರ್ದನು ತನ್ನ ಲೀಲೆಯಲಿ' (೮.೨೫೧). ಬಸವ ಸಿದ್ಧರಾಮಾದಿಗಳು ಅವರವರ ನೆಲೆಯಲ್ಲಿ ಮಹೋನ್ನತರೇ ಆಗಿದ್ದರೂ ಪರಿಪೂರ್ಣತೆಯ ಶಿಖರವನ್ನು ಮುಟ್ಟಿರಲಿಲ್ಲ. ಆ ಮಟ್ಟಕ್ಕೇರಲು ಕೈಗೊಂಡ ಕ್ರಮಗಳೂ ಲೀಲೆಗಳೇ. ಅವರನ್ನು ಜರಿದು ಅರಿವನ್ನುಂಟು ಮಾಡುವವನೂ, ಕೆಡೆ ನುಡಿದು ಒಲವಿನ ಬೆಳಕಿನಲ್ಲಿ ದಾರಿ ತೋರುವವನೂ ಅನುಪಮ ಮೂರ್ತಿಯಾದ ಪ್ರಭುವೇ. ಲಿಂಗರೂಪಿ ಪರಶಿವನೆ ಅಲ್ಲಮ ಪ್ರಭುವಾಗಿ ಅವತರಿಸಿ, ತಾನು ಹಿಂದೆ ತಾಳಿದ ೨೫ ಪ್ರಧಾನ ಲೀಲೆಗಳಂತೆ ೨೫ ನೂತನ ಲೀಲೆಗಳನ್ನು ತೋರಿ ಮೆರೆದನೆಂಬ ಮನೋಭಾವನೆಯ ಚಾಮರಸನು ತನ್ನ 'ಪ್ರಭುಲಿಂಗಲೀಲೆ'ಯ ೨೫ ಗತಿಗಳಲ್ಲಿ ಆ ಪ್ರಭುರೂಪಿ ಲಿಂಗವು ತೋರಿದ ಲೀಲೆಗಳನ್ನು ಚಿತ್ರಿಸಿ ಅದಕ್ಕೆ ಆ ಹೆಸರನ್ನಿಟ್ಟುದು ಔಚಿತ್ಯಪೂರ್ಣವಾಗಿದೆ. ಅದನ್ನು ತೆಲುಗಿಗೆ ಭಾಷಾಂತರಿಸಿದ ಪಿಡುಪರ್ತಿ ಸೋಮನಾಥನಾಗಲೀ, ತಮಿಳಿಗೆ ಭಾಷಾಂತರಿಸಿದ ತಮಿಳುನಾಡಿನ ಪ್ರಖ್ಯಾತ ಕವಿಯಾದ ತುರೈಮಂಗಲಂ ಶಿವಪ್ರಕಾಶಸ್ವಾಮಿಯಾಗಲೀ 'ಲೀಲೆ' ಎಂಬ ಹೆಸರಿನಿಂದ ಕರೆದರೇ ಹೊರತು ಬೇರೆ ಹೆಸರಿಡಲಿಲ್ಲ. ಶಿವನ ಲೀಲೆಗಳಂತೆ ಶರಣರ ಲೀಲೆಗಳೂ ಕಾವ್ಯಕ್ಕೆ ವಸ್ತುವಾಗಬೇಕೆಂದು ಬಯಸಿ ಪ್ರಭುಲಿಂಗಲೀಲೆಯ ಮೂಲಕ ನೂತನ ಕಾವ್ಯ ಪ್ರಭೇದ ಸೃಷ್ಟಿಮಾಡಿದ ಚಾಮರಸವನ್ನು ಮುಂದಿನ ಹಲವಾರು ವೀರಶೈವ ಕವಿಗಳು ಅನುಕರಿಸಿದರು. ನಿಶ್ಚಿಂತಾತ್ಮನ ವೀರಭದ್ರ ವಿಜಯ; ಚನ್ನಪ್ಪ ಕವಿಯ ಶರಣಲೀಲಾಮೃತ ; ಬಸವಕವಿಯ ಮಹಲಿಂಗಲೀಲೆ ; ವೈ. ನಾಗೇಶಶಾಸ್ತ್ರಿಗಳ ಮೃತ್ಯುಂಜಯ ಲೀಲಾವಿಲಾಸ, ಜಯದೇವ ಲೀಲೆ–ಇವು ಈ ಹೊಸ ಕಾವ್ಯ ಪ್ರಭೇದಕ್ಕೆ ಉದಾಹರಣೆಗಳು. 'ಲೀಲೆ'ಗೂ 'ಪುರಾಣ'ಕ್ಕೂ ಲಕ್ಷಣವ್ಯತ್ಯಾಸಗಳಿರುವಾಗ. ಲೀಲೆಗಳನ್ನು ಪುರಾಣವೆನ್ನುವುದು ತಪ್ಪಾಗುತ್ತದೆ.

ಗುರುಲಿಂಗ ವಿಭುವಿನ ಭಿಕ್ಷಾಟನ ಚರಿತೆಯು ಪರಶಿವನ ಭಿಕ್ಷಾಟನ ಲೀಲೆಯನ್ನು ಹೇಳುವ ಕೃತಿ. ಕವಿ ತನ್ನ ಕೃತಿಯನ್ನು 'ಲೀಲೆ' ಎಂದು ಕರೆಯದೆ 'ಚರಿತೆ' ಎಂದು ಕರೆದಿರುವನು. ಶಿವಭಕ್ತಿಯನ್ನೂ, ಶಿವಾಧಿಕ್ಯವನ್ನೂ ತೋರಿಸುವ ಅದು ಒಂದು ಲೀಲೆಯಲ್ಲಿ ಮುಗಿಯದೆ ಒಂದು ಚರಿತೆಯೇ ಆಗಿದೆ ಎಂಬುದು ಕವಿಯ ಆಶಯವಿದ್ದಿರಬಹುದು. ಏಕೆಂದರೆ, ಶಿವನು ತನ್ನ ಕೈಗೆ ಅಂಟಿಕೊಂಡ ಬ್ರಹ್ಮ ಕಪಾಲವನ್ನು ಕಳೆದುಕೊಳ್ಳಬೇಕಾದರೆ ತ್ರಿಲೋಕಗಳಲ್ಲಿ ಭಿಕ್ಷೆಮಾಡಬೇಕಾಯಿತು. ದ್ವಾರಾವತಿಗೆ ಹೋಗಿ ಭಿಕ್ಷಾಟನೆ ಮಾಡಿ ಭಿಕ್ಷಾಪಾತ್ರೆಯನ್ನು ತುಂಬುವಂತೆ ಕೃಷ್ಣನಿಗೆ ಹೇಳಲು ಅವನು ತನ್ನ ತಲೆಯನ್ನುಸೀಳಿ, ಅದರ ರಕ್ತದಿಂದ ಅದನ್ನು ತುಂಬಲಾರದೆ, ಕವಿಯು ಹೇಳುವಂತೆ ಮಹಾಭಾರತ ಯುದ್ಧವನ್ನುಂಟುಮಾಡಿ ಅಲ್ಲಿಯ ರಕ್ತ ಪ್ರವಾಹದಿಂದ ತುಂಬಿದನು. ಇದನ್ನು ವಸ್ತುವಾಗಿ ಉಳ್ಳ ಕೃತಿಗೆ 'ಚರಿತೆ' ಎಂಬ ಹೆಸರು ಒಪ್ಪುವಂತೆ 'ಲೀಲೆ' ಎಂಬ ಹೆಸರು ಒಪ್ಪುವದಿಲ್ಲ.

ಚತುರ್ಮುಖ ಬೊಮ್ಮರಸನುತನ್ನ 'ರೇವಣಸಿದ್ಧೇಶ್ವರ ಪುರಾಣ'ವನ್ನು 'ಚಾರಿತ್ರ' 'ಚರಿತ್ರ' ಎಂದು ಕರೆದಿರುವನು. ವಿರಕ್ತ ತೋಂಟದಾರ್ಯನು ಪಾಲ್ಕುರಿಕೆ ಸೋಮನನ್ನು ಕುರಿತ ಕೃತಿಯಲ್ಲಿ 'ಚರಿತ', 'ಚಾರಿತ್ರ', 'ಪುರಾಣ', ಎಂಬ ಮೂರೂ ಹೆಸರುಗಳನ್ನು ಬಳಸಿರುವನು. ಹೀಗೆ ಬಳಸಿರುವುದು ತಮ್ಮ ಕೃತಿಗಳು ಆಯಾ ಪುರಾಣಪುರುಷರ ಚರಿತ್ರೆಗಳಾಗಿರುವದರಿಂದ ಅವುಗಳಲ್ಲಿ ಪುರಾಣಾಂಶ ಚಾರಿತ್ರಾಂಶಗಳೆರಡೂ ಸಮತೂಕದಲ್ಲಿವೆ ಎಂಬ ಮನೋಭಾವದಿಂದಲೇ. ಷಡಕ್ಷರಿಯು ತನ್ನಕೃತಿಯಾದ 'ಬಸವಪುರಾಣವು' ಕೃತಿಪತಿಯಾದ ಬಸವನು ಮರ್ತ್ಯದಲ್ಲಿ ಪಡೆದ ವಿಜಯವನ್ನು ಸಾರುವ ಮಹಾಪುರಾಣವಾಗಿದೆ ಎಂಬ ದೃಢ ನಿಲುವಿನಿಂದ ಅದರ ಪ್ರತಿ ಆಶ್ವಾಸಾಂತ್ಯದಲ್ಲಿ 'ಶ್ರೀಮದ್ಬಸವರಾಜವಿಜಯಮಹಾಪುರಾಣ' ವೆಂದು ತಿಳಿಸಿರುವನು. ಆಧುನಿಕ ಪುರಾಣಕಾರನಾದ ನಂಜನಗೂಡು ಶ್ರೀಕಂಠಶಾಸ್ತ್ರಿಯು ತನ್ನ ಕೃತಿನಾಯಕನಾದ ರೇಣುಕನು ಸಾಧಿಸಿದ ವಿಜಯವನ್ನು ಕುರಿತ ಪುರಾಣವನ್ನು ತಾನು ಬರೆಯುತ್ತಿರುವುದಾಗಿ ನಂಬಿರುವುದರಿಂದ ಅದನ್ನು'ರೇಣುಕವಿಜಯಪುರಾಣಂ' ಎಂದು ಕರೆದುಕೊಂಡಿರುವನು.

ಲಕ್ಕಣ್ಣದಂಡೇಶನ ಶಿವತತ್ತ್ವಚಿಂತಾಮಣಿಯಲ್ಲಿ ವೀರಶೈವ ಪುರಾಣದ ಲಾಕ್ಷಣಿಕ ಛಾಯೆಯನ್ನು ಸ್ವಲ್ಪ ಮಟ್ಟಿಗೆ ಕಾಣಬಹುದು. ಇದರ ಕೆಲವು ಭಾಗಗಳನ್ನು ಆರಿಸಿ ಪುರಾಣ ಪ್ರವಚನ ಮಾಡುವ ಪದ್ಧತಿ ಹಿಂದಿನಿಂದಲೂ ಇದೆ. ಆದರೂ ಇದು ಪುರಾಣವಲ್ಲ. ಕವಿಯು ಎಲ್ಲಿಯೂ ಇದನ್ನು ಪುರಾಣವೆಂದು ಕರೆದಿಲ್ಲ. ಮುಂದಣ ಕವಿಗಳೂ ಇದನ್ನು ಪುರಾಣವೆಂದು

ಕರೆದಿಲ್ಲ. ಸಿದ್ಧನಂಜೇಶನು ಇದನ್ನು 'ಪೂತಶಿವತತ್ತ್ವಚಿಂತಾಮಣಿಶಾಸ್ತ್ರ' ಎಂದು ಕರೆದಿರುವನು. ವೀರಶೈವಧರ್ಮದ 'ಶಾಸ್ತ್ರ ಗ್ರಂಥ'ವಾದ ಇದು ಶಿವನ ಸಂಬಂಧವಾದ ತತ್ತ್ವಗಳಲ್ಲಿ ಯಾವುದನ್ನಪೇಕ್ಷಿಸಿದರೂ ತಿಳಿಸಿಕೊಡುವ ಚಿಂತಾಮಣಿ ಎಂಬುದು ಕವಿಯ ದೃಢನಂಬುಗೆ. 'ಶಿವತತ್ತ್ವಚಿಂತಾಮಣಿ'ಯಂತೆ ಬಹುವಿಷಯ ಗರ್ಭಿತವಾದ ವೀರಶೈವ ವಿಶ್ವಕೋಶವನ್ನು ಗುಬ್ಬಿಯ ಮಲ್ಲಣಾರ್ಯ ಕೊಡಬಯಸಿ 'ವೀರಶೈವಾಮೃತ ಮಹಾಪುರಾಣ'ವನ್ನು ರಚಿಸಿದನು.

ಶಾಂತವೀರ ದೇಶಿಕನ 'ಶಿವಲಿಂಗ ಚಾರಿತ್ರ'ದಲ್ಲಿ ಶಿವಲಿಂಗಾರ್ಯ, ವೀರಣಾರ್ಯ ಹಾಗೂ ಚನ್ನವೀರಣಾರ್ಯ ಎಂಬ ಶರಣರ ಚರಿತ್ರೆಯನ್ನು ಪ್ರಧಾನವಾಗಿ ಹೇಳಲಾಗಿದೆ. ಈ ಮೂವರು ಯಾವ ಪವಾಡಗಳನ್ನೂ ಮೆರೆದವರಲ್ಲ. ಕೃತಿಯಲ್ಲೆಲ್ಲೂ ವೀರಶೈವ ಧರ್ಮದ ತಾತ್ತ್ವಿಕಾಂಶಗಳನ್ನು ವಿವೇಚಿಸಿಲ್ಲ. ಶುದ್ಧ ಚಾರಿತ್ರಪ್ರಧಾನ ಕೃತಿಯನ್ನು 'ಚಾರಿತ್ರ'ವೆಂದು ಹೆಸರಿಸಿ ಕವಿ ಔಚಿತ್ಯವನ್ನು ಮೆರೆದಿರುವನು. ಸಿದ್ಧನಂಜೇಶನ ರಾಘವಾಂಕ ಮಹಾಕವಿಯ ದಿವ್ಯ ಜೀವನ ಚರಿತ್ರೆ ಪ್ರಧಾನವಾದ ಕೃತಿಯನ್ನು 'ಚಾರಿತ್ರ'ವೆಂದು ಕರೆದಿರುವುದು ಸರಿಯಾಗಿಯೇ ಇದೆ. 'ಗುರುರಾಜಚಾರಿತ್ರ'ವು 'ಶಿವತತ್ತ್ವಚಿಂತಾಮಣಿ'ಯಂತೆ ವೀರಶೈವ ವಿಶ್ವಕೋಶದ ರಚನೋದ್ದೇಶವನ್ನು ಹೊಂದಿದಂತಿದೆ. ಇಲ್ಲಿ ಕವಿ ಗುರುರಾಜರುಗಳೇ ಆದಿಯಾದ ಅನೇಕರ ವಿಷಯಗಳನ್ನು ಪ್ರಧಾನವಾಗಿ ಈ ಕೃತಿಯಲ್ಲಿ ಪ್ರಸ್ತಾಪಿಸಿರುವುದರಿಂದ ಇಲ್ಲೂ 'ಚಾರಿತ್ರ'ವೆಂಬ ಶೀರ್ಷಿಕೆ ಅರ್ಥಪೂರ್ಣವಾಗಿದೆ.

ಬಹುವಾಗಿ ಆಧುನಿಕ ಕವಿಗಳು ತಮ್ಮ ಕೃತಿಗಳಲ್ಲಿ ಲೀಲೆ, ವಿಲಾಸ, ಚಾರಿತ್ರ, ಪುರಾಣಗಳೆಲ್ಲವುಗಳ ಲಕ್ಷಣಗಳು ಕಾಣ ಸಿಗುತ್ತವೆಂಬ ಭಾವನೆಯಿಂದಲೋ, ವಿವೇಚನಾರಹಿತ ಹುಮ್ಮಸ್ಸಿನಿಂದಲೋ ಈ ಎಲ್ಲ ಪದಗಳನ್ನು ಸಮಾನಾರ್ಥದಲ್ಲಿ ಪ್ರಯೋಗಿಸಿರುವದು ಕಂಡುಬರುತ್ತದೆ. ಉದಾಹರಣೆಗೆ ಲೀಲೆ-ಚಾರಿತ್ರಗಳ ಪ್ರಯೋಗಕ್ಕೆ-ಜಯದೇವಲೀಲೆ ; ಲೀಲೆ-ವಿಲಾಸ-ಚಾರಿತ್ರಗಳ ಪ್ರಯೋಗಗಕ್ಕೆ-ಮೃತ್ಯುಂಜಯ ಲೀಲಾ ವಿಲಾಸ; ಪುರಾಣ-ಚರಿತೆ-ಲೀಲೆ-ವಿಲಾಸಗಳ ಪ್ರಯೋಗಕ್ಕೆ -ಶ್ರೀ ದುರದುಂಡೀಶ್ವರ ಪುರಾಣ; ಪುರಾಣ-ವಿಜಯ-ಚಾರಿತ್ರ-ಲೀಲಾ ಪ್ರಯೋಗಕ್ಕೆ-ಶಿವರುದ್ರವಿಜಯ ಈ ಕೃತಿಗಳನ್ನು ಹೆಸರಿಸಬಹುದು. ಒಟ್ಟಿನಲ್ಲಿ ಹೇಳುವುದಾದರೆ, ಒಂದು ಕೃತಿಯ ಶಿರೋನಾಮೆಯನ್ನು ವಿಮರ್ಶಿಸುವಾಗಲೂ ವಿಮರ್ಶಕನು ಆ ಕೃತಿಕಾರನ ಅಂತರಂಗವನ್ನು ಹೊಗುವ, ಅರ್ಥೈಸುವ ಪ್ರಯತ್ನ ನಡೆಸಬೇಕು. 'ಪುರಾಣನಾಮವನ್ನು ತಾಳದ ಕೃತಿಯಲ್ಲೂ ಪುರಾಣ ಲಕ್ಷಣಗಳು ಕಂಡುಬಂದರೆ 'ಇದರಲ್ಲಿ ಪುರಾಣ ಛಾಯೆಯು ಕಂಡುಬರುತ್ತದೆ' ಎಂದು ಹೇಳುವುದರ ಬದಲು ಪುರಾಣವೆಂದೇ ಕರೆಯುವುದು ವಿಮರ್ಶನ ಪ್ರಜ್ಞೆಗೆ ಊನ ತರುತ್ತದೆ. ಹಾಗೆ ಮಾಡುವುದು ಕೃತಿಕಾರನಿಗೆ ಎಸಗುವ ಅಪಚಾರವಾಗುತ್ತದೆ.

## ವೀರಶೈವ ಚಂಪೂಸಾಹಿತ್ಯ

—ಹೀ. ಚಿ. ಶಾಂತವೀರಯ್ಯ

ಭಾರತೀಯ ಭಾಷೆಗಳಲ್ಲಿ ಬಹು ಪ್ರಸಿದ್ಧವೂ ಪ್ರಾಚೀನವೂ ಆದ ಸಾಹಿತ್ಯ ಪ್ರಕಾರವೆಂದರೆ 'ಚಂಪೂ'. ಇದಕ್ಕೆ ಒಂದು ಸಹಸ್ರ ವರ್ಷದ ಚರಿತ್ರೆಯಿದೆ. ಇದರ ಲಕ್ಷಣವನ್ನು ದಂಡಿಯು (೬೫೦) ತನ್ನ 'ಕಾವ್ಯಾದರ್ಶ'ದಲ್ಲಿ ಮೊದಲು ನಿರೂಪಿಸಿದನು. ಆ ಮೇಲೆ ಹೇಮಚಂದ್ರ (೧೦೮೮), ವಿಶ್ವನಾಥ ಮತ್ತು ವಿದ್ಯಾನಾಥರು (೧೪ನೆಯ ಶತಮಾನ) ತಮ್ಮ ಅಲಂಕಾರ ಗ್ರಂಥಗಳಲ್ಲಿ ಹೇಳಿದ್ದಾರೆ. ಕನ್ನಡದಲ್ಲಿ ಎರಡನೆಯ ನಾಗವರ್ಮ (೧೧೪೫) ಮತ್ತು ಉದಯಾದಿತ್ಯ (೧೧೫೦)ರು 'ಚಂಪೂ'ವಿನ ವಿಷಯವನ್ನು ಉಲ್ಲೇಖಿಸಿದ್ದಾರೆ. 'ಗದ್ಯಪದ್ಯಮಯೀ ಕಾಚಿಚ್ಚಂಪೂರಿತ್ಯಭಿಧೀಯತೇ' ಎಂದು ದಂಡಿ ಕಾವ್ಯಾದರ್ಶದಲ್ಲಿ ಹೇಳಿದ್ದಾನೆ.

'ಚಂಪೂ' ಶಬ್ದದ ಅರ್ಥ ಮತ್ತು ನಿಷ್ಪತ್ತಿ ಅನಿರ್ದಿಷ್ಟವಾಗಿದೆ. ಇಬ್ಬಗೆಯ ವ್ಯಾಖ್ಯಾನಗಳುಂಟು. ಇದರ ಮೂಲ ಅಸ್ಪಷ್ಟವಾಗಿದೆ, ಗತ್ಯರ್ಥದ 'ಚಪ್' ಧಾತುವಿನಿಂದ ಚಂಪಯತಿ ಚಂಪತಿ ಇತಿ ಚಂಪೂ (=ಗತಿಯನ್ನುಳ್ಳದು ಚಂಪೂ) ಎಂಬುದು 'ಗದ್', 'ಪದ್' ಎಂಬ ಧಾತುಗಳಿಂದ 'ಗದ್ಯ', 'ಪದ್ಯ' ಎಂಬ ರೂಪಗಳು ಬಂದಂತೆ 'ಚಪ್' ಧಾತುವಿನಿಂದ 'ಚಂಪೂ' ಬಂದಿರಬೇಕೆಂದು ವಿದ್ವಾಂಸರ ಅಭಿಪ್ರಾಯ. 'ಕೆನ್', 'ಚೆನ್' ದ್ರಾವಿಡ ಭಾಷೆಯ ವಿಶೇಷಣಗಳಾದ 'ಕೆಂಪು', 'ಚೆಂಪು' (=ಸುಂದರ, ಮನೋಹರ) ಎಂದಾಗಿ 'ಚಂಪು', ಎಂದು ನೆಲೆಗೊಂಡು ಸಂಸ್ಕೃತ 'ಚಂಪೂ' ಆಗಿರಬೇಕು. ಕನ್ನಡ ಮತ್ತು ತುಳು ಭಾಷೆಗಳಲ್ಲಿ ಚಂಪೆ, ಜಂಪೆ, ಸಂಪು, ಸಂಪೆ ಎಂದರೆ ಸುಂದರ ಮತ್ತು ಮಿಶ್ರ ಎಂಬರ್ಥಗಳಿವೆ. ಅಂತೂ ಚಂಪುವಿನ ಉಗಮದ ವಿಚಾರದಲ್ಲಿ ಇರುವ ಇಬ್ಬಗೆಯ ಅಭಿಪ್ರಾಯವನ್ನು ತೊಡೆದು ಹಾಕುವ ಹೊಸ ಸಂಶೋಧನೆ ಅಗತ್ಯವೆನಿಸಿದೆ. ಇದರ ನಿಷ್ಪತ್ತಿ ಆರ್ಯ, ದ್ರಾವಿಡ ಭಾಷೆಗಳಲ್ಲಿಯೂ ಸೇರಿದೆ. ಕೆಲವರು ಸಂಸ್ಕೃತದಿಂದ ನಿಷ್ಪತ್ತಿ ಹೇಳಿದರೆ ಮತ್ತೆ ಕೆಲವರು ದ್ರಾವಿಡದಿಂದ ಹೇಳುತ್ತಾರೆ.

ಈಗ ಚಂಪುವಿನ ಸಾಮಾನ್ಯ ಚೌಕಟ್ಟನ್ನು ಗಮನಿಸೋಣ. ಕನ್ನಡದ ರೂಢಿಯಲ್ಲಿ ಇದನ್ನು 'ಓದುಗಬ್ಬ', 'ವಸ್ತುಕ', 'ಮಾರ್ಗ ಕಾವ್ಯ' ಎಂದು ಹೇಳುವುದುಂಟು. ಇದರಲ್ಲಿ ಪ್ರತಿಪಾದಿಸುವ ವಸ್ತು ಧಾರ್ಮಿಕ, ಲೌಕಿಕ ಮತ್ತು ಚಾರಿತ್ರಿಕವಾಗಿರು

ತ್ತದೆ. ಕನ್ನಡದ ಚಂಪುವಿನಲ್ಲಿ ಗದ್ಯ ಪದ್ಯಗಳ ಪ್ರಚುರತೆ ಸಾಮಾನ್ಯವಾಗಿರುತ್ತವೆ. ಆದರೆ ಗದ್ಯಕ್ಕಿಂತ ಪದ್ಯಗಳೇ ಹೆಚ್ಚು. ವರ್ಣನೆಗಳು, ಇತಿ ವೃತ್ತಾತ್ಮಕ ವಿವರಣೆಗಳು ಸಂಬಂಧಸೂಚನೆಗಳು ಗದ್ಯದಲ್ಲಿರುವುದುಂಟು. ಕೃತಿ ಸಾಮಾನ್ಯವಾಗಿ ಆಶ್ವಾಸಗಳಾಗಿ ವಿಭಾಗಿಸಲ್ಪಟ್ಟಿರುತ್ತದೆ. ಪ್ರತಿ ಆಶ್ವಾಸಗಳ ಕೊನೆಯಲ್ಲಿ ಒಂದು ನಿಯತವಾದ ಗದ್ಯಬಂಧವಿರುತ್ತದೆ.

ಕನ್ನಡ ಚಂಪೂಕೃತಿಯ ಉಪಕ್ರಮದಲ್ಲಿ ಇಷ್ಟದೇವತಾ ಪ್ರಾರ್ಥನೆ, ಕೃತಿ ಕರ್ತೃವಿನ ಪೋಷಕನ ವಿಚಾರ, ಕಾವ್ಯಧಾರೆ, ಸುಕವಿಸ್ತುತಿ, ಕುಕವಿನಿಂದೆ ಅಲ್ಲದೆ ಕಾವ್ಯದ ವಿಚಾರಧಾರೆ ವಿವರಗಳೇ ಮೊದಲಾದ ಸಾಂಪ್ರದಾಯಕ ವಿಚಾರಗಳು ಮತ್ತು ಇತರ ವಿವರಗಳು ಉಪಸಂಹಾರದಲ್ಲಿ ಫಲಶ್ರುತಿಯೂ ಬರುತ್ತದೆ. ಛಂದಸ್ಸಿನ ದೃಷ್ಟಿಯಿಂದ ಕಂದಗಳೂ ಅವಕ್ಕೆ ಸ್ವಲ್ಪ ಕಡಿಮೆಯಾಗಿ ಖ್ಯಾತ ಕರ್ಣಾಟಕಗಳಾದ ಉತ್ಪಲ, ಶಾರ್ದೂಲ, ಸ್ರಗ್ಧರೆ, ಮಹಾಸ್ರಗ್ಧರೆ, ಮತ್ತೇಭ, ಚಂಪಕ ವೃತ್ತಗಳು ಬಂದಿರುತ್ತವೆ. ಇವಲ್ಲದೆ ವಿರಳವಾಗಿ ತರಳ, ಮಲ್ಲಿಕಾಮಾಲೆಗಳೇ ಮೊದಲಾದ ಅನೇಕ ವರ್ಣವೃತ್ತಗಳೂ ರಗಳೆಗಳೂ, ದೇಶೀಯ ಛಂದಗಳಾದ ಅಕ್ಕರ, ತ್ರಿಪದಿ ಮುಂತಾದುವುಗಳೂ ವೈತಾಳಿಬಂದಿರುತ್ತವೆ. ಒಟ್ಟಿನಲ್ಲಿ ಕಂದ ವೃತ್ತಗಳು ಬಹುವಾಗಿ, ವಿರಳವಾಗಿ ಇತರ ಪದ್ಯ ಜಾತಿಗಳೂ ನಡುನಡುವೆ ಗದ್ಯವೂ ಹಾಸುಹೊಕ್ಕಾಗಿ ಸೇರಿಕೊಂಡು ಬಂದಿರುತ್ತದೆ. ಮುಖ್ಯವಾಗಿ ಇಷ್ಟು ಕನ್ನಡ ಚಂಪೂ ಕೃತಿಗಳ ಸಾಮಾನ್ಯ ಲಕ್ಷಣ.

ಕನ್ನಡ ಚಂಪುಸಾಹಿತ್ಯ ಪದ್ಧತಿಗೆ ಮೊದಲು 'ಬೆದಂಡೆ', ಮತ್ತು 'ಚತ್ತಾಣ', ಎಂಬಎರಡು ಪ್ರಕಾರದ ಕಾವ್ಯಗಳಿದ್ದುವು ಇದರಿಂದ 'ಕವಿರಾಜ ಮಾರ್ಗ'ದಲ್ಲಿ ಉಕ್ತವಾದ ಪದ್ಯಕವಿಗಳಲ್ಲಿ ಕೆಲವರಾದರೂ ಚಂಪುಕಾವ್ಯಗಳನ್ನು ರಚಿಸಿರಬೇಕು, ಕವಿಗಳಿಂದ ಹೆಚ್ಚು ಆದರಣೆ ಪಡೆದ ಮತ್ತು ಪಂಡಿತಮಾನ್ಯವಾಗಿದ್ದ ಕನ್ನಡ ಚಂಪುಸಾಹಿತ್ಯಕ್ಕೆ ಉಜ್ವಲವಾದ ಮತ್ತು ದೊಡ್ಡದಾದ ಚರಿತ್ರೆಯಿದೆ. ಈಗ ದೊರೆತಿರುವ ಚಂಪುಕಾವ್ಯಗಳಲ್ಲಿ ಮಹಾಕವಿ ಪಂಪನ 'ಆದಿಪುರಾಣ', 'ವಿಕ್ರಮಾರ್ಜುನ ವಿಜಯ' (ಪಂಪಭಾರತ) ಗಳು ಮೊದಲಿನವು. ಮೂರನೆಯ ಮಂಗರಸ ತನ್ನ ನೇಮಿಜಿನೇಶ ಸಂಗತಿಯಲ್ಲಿ 'ಇನ್ನು ನಾನೊರೆವೆ ಚವ್ವೀಶ ತೀರ್ಥೇಶ್ವರನತ್ಯುನ್ನತಮಪ್ಪ ಸಂಗತಿಯ ಕನ್ನಡದೊಳು ಚಂಪೂಕಾವ್ಯವನೆ ಪೇಳ್ದ ಸನ್ನುತ ಸತ್ಕವೀಶ್ವರರ. ಪುರುಜಿನಪತಿಯ ಪುರಾಣವನುಸುರಿದ ವರಕವಿ ಪಂಪರಾಜನ ದುರಿತವಿದೂರರಜಿತಚರಿತ ಪೇಳ್ದ ಗರುವ ರನ್ನನ ನುತಿಸುವೆನು' ದೇವಚಂದ್ರ ಪ್ರಭುವರನು ಕೊಂಡಾಡಿದ 'ಶ್ರೀ ವಿಜಯರ ಪುಷ್ಪದಂತ ಭಾವಜಾರಿಯ ಪೊಗಳಿದ ಗುಣವರ್ಮನ ಭಾವಶುದ್ಧಿಯೊಳು ವಂದಿಪೆನು' ಪದಿನಾಲ್ಕನೆಯ ತೀರ್ಥಂಕರ ಚರಿತವ 'ಒದವಿ ಪೇಳಿದ ಜನ್ನುಗನ ಮುದದಿಂ ಧರ್ಮಚರಿತ್ರವನುಸುರಿದ ಚದುರ ಮಧುರನ ಸ್ತುತಿಪೆನು. ಶಾಂತೀಶನ ಪೊಗಳಿದ ಪೊನ್ನನ ರಘುಕಾಂತನ ಮಲ್ಲಿತೀರ್ಥಕರ ಸಂತಸದಿಂ ವರ್ಣಿಸಿದ ನಾಗಚಂದ್ರನ ಸಂತತಮಭಿವಂದಿಸುವೆನು. ಅಂಗಜರಿಪುನೇಮಿ ವೀರೇಶ ಚರಿತವ ಪೊಂಗಿ ಪೊಗಳ್ದ ಕಣ್ಣಪ್ಪನ ಶೃಂಗಾರ ಕಾವ್ಯ ಲೀಲಾವತಿಯನು ಪೇಳ್ದಾಂಗಿಕ ನೇಮಿಯ ನೆನೆವೆ. ಬಂಧುರ ಭರತಯಾದವ ವಂಶವನು ಕೃತಿ ಬಂಧದೊಳಗೆ ಸೇರಿಸಿದ ಬಂಧುವರ್ಮನನು ನೆನೆದು ನೇಮಿಚರಿತ್ರ ಪ್ರಬಂಧವನಾನು ಸುರುವೆನು' ಎಂದು ನೆನೆದಿದ್ದಾನೆ. ದೇವಚಂದ್ರ ಪ್ರಭುವರನು ಕೊಂಡಾಡಿದ 'ಶ್ರೀವಿಜಯ' ಎಂದಿದ್ದಾನೆ, 'ಚಂದ್ರಪ್ರಭ ಪುರಾಣ'ವನ್ನು ಬರೆದ ಅಗ್ಗಳ (೧೧೮೯) ಬೇರೆ ಇದ್ದಾನೆ. ಕವಿರಾಜಮಾರ್ಗದ 'ಶ್ರೀವಿಜಯ'ನೇ (ಸು. ೮೫೦) ಇದನ್ನು ರಚಿಸಿದ್ದರೆ, ಚಂಪುಕಾವ್ಯದ ಮೊದಲಿಗನಾಗುತ್ತಾನೆ. ಅಂತು ಕನ್ನಡ ಚಂಪು ಗುಣವರ್ಮನಿಂದ (ಸು. ೯೦೦) ಆರಂಭವಾದಂತೆ ಇಟ್ಟುಕೊಳ್ಳುವುದು ಸೂಕ್ತ. ೧೦ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಹಲವಾರು ಚಂಪುಕಾವ್ಯಗಳು ರಚಿತವಾಗಿರುವುದರಿಂದ 'ಚಂಪುಯುಗ' ಎಂದು ಕರೆದಿರುವುದುಂಟು. ೧೦ನೆಯ ಶತಮಾನ ಅತಿ ಉತ್ಕೃಷ್ಟವಾದ ಚಂಪುಕಾವ್ಯಗಳನ್ನು ಪಡೆದಿರುವುದರಿಂದ ಕನ್ನಡ ಸಾಹಿತ್ಯ ಚರಿತ್ರೆಯ 'ಸುವರ್ಣಯುಗ' ಎಂದು ಪ್ರಸಿದ್ಧಿಯಾಗಿದೆ.

ಚಂಪುಸಾಹಿತ್ಯಕ್ಕೆ ಭದ್ರವಾದ ನೆಲೆಗಟ್ಟು ಹಾಕಿದವನು ಮಹಾಕವಿ ಪಂಪ. ಅವನ ಎರಡು ಕೃತಿಗಳಲ್ಲೂ ಚಂಪುಮಾರ್ಗದ ಸಿದ್ಧರೂಪ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ಅದರ ಗಾಂಭೀರ್ಯ, ಸೊಗಸು, ಸೌಲಭ್ಯಗಳು ಮನವರಿಕೆಯಾಗುತ್ತವೆ. ವಸ್ತು ಮತ್ತು ರೀತಿ ಈ ಎರಡು ದೃಷ್ಟಿಯಿಂದಲೂ ಪಂಪನ ಚಂಪುಕಾವ್ಯಗಳು ಮುಂದಿನ ಚಂಪುಕವಿಗಳಿಗೆ ಮಾರ್ಗದರ್ಶಕಗಳಾದವು. ಮುಂದಿನ ಕವಿಗಳು ಅನುಸರಿಸುವ ಚಂಪುವಿನ ಚೌಕಟ್ಟು ಪಂಪನ ಚೌಕಟ್ಟನ್ನೇ ಬಹುವಾಗಿ ಅನುಸರಿಸುತ್ತದೆ. ಕವಿಯ ದೃಷ್ಟಿವಿಶೇಷಕ್ಕೆ ಕಾಲಧರ್ಮಕ್ಕೆ ಅನುಸಾರವಾಗಿ ಆಗಾಗ ಕೆಲವು ವೈಲಕ್ಷಣ್ಯಗಳು ಹೊಸದಾಗಿ ತೋರುವುದು ಉಂಟು.

ಕನ್ನಡ ಚಂಪು ಚರಿತ್ರೆಯಲ್ಲಿ ಅಗ್ರಮಾನ್ಯತೆ ಪಡೆದವರೆಂದರೆ ಜೈನಕವಿಗಳು. ಅನಂತರದವರೂ ಜೈನ ಮಹಾಪುರಾಣ ಮತ್ತು ಹರಿವಂಶ ಪುರಾಣ, ಭಾರತ, ರಾಮಾಯಣ ಮೊದಲಾದವುಗಳ ಭಾಗವನ್ನೆ ಯಥೋಚಿತವಾಗಿ ವಿಸ್ತರಿಸಿ ಅಥವಾ ಸಂಗ್ರಹಿಸಿ ಚಂಪು ಪದ್ಧತಿಗೆ ಅಳವಡಿಸಿಕೊಂಡು ನಿರೂಪಿಸಿದರು, ಈ ಪರಂಪರೆ ನೇಮಿಚಂದ್ರ, ದೇವಕವಿ, ಚೌಂಡರಸರುಗಳಿಂದ ಮುಂದುವರಿಯಿತು. ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ಸಾಹಿತ್ಯ ಹೊಸ ತಿರುವನ್ನು ಪಡೆದುಕೊಂಡಿತು. ಈ ಕಾಲದಲ್ಲಿ ಸಾಹಿತ್ಯ ಹೆಚ್ಚು ಜನಸಮ್ಮುಖಿವಾಗತೊಡಗಿತು, ದೇಶೀಛಂದಗಳು ಕಾವ್ಯವಾಹಕಗಳಾದವು, ಅವುಗಳ ಜೊತೆಗೆ

ಚಂಪು ಮುನ್ನಡೆಯಿತು. ಹನ್ನೆರಡನೆಯ ಶತಮಾನದಿಂದ ಹದಿನೈದನೆಯ ಶತಮಾನದವರೆಗೆ ಚಂಪು ಕಾವ್ಯದ ಎರಡನೆಯ ಮಜಲು ಎನ್ನಬಹುದು. ಹದಿನೈದನೆಯ ಶತಮಾನದಿಂದ ಹದಿನೇಳನೆಯ ಶತಮಾನದವರೆಗೆ ಚಂಪುವಿನ ಇಳಿಗಾಲ. ಈ ಕಾಲದಲ್ಲಿ ದೇಶೀ ಛಂದಗಳಾದ ಷಟ್ಪದಿ, ಸಾಂಗತ್ಯಗಳಲ್ಲಿ ರಚಿತವಾದ ಕಾವ್ಯಗಳು ಹೆಚ್ಚಾಗಿ ಬಂದುವು. ಚಂಪುವಿನ ಲಕ್ಷಣವನ್ನೇ ಈ ಕಾವ್ಯಗಳಲ್ಲಿ ಅಳವಡಿಸಿದರು. ಹಿಂದಿನ ಶತಮಾನಗಳಲ್ಲಿ ಸ್ಥಗಿತಗೊಂಡಿದ್ದ ಚಂಪುಕಾವ್ಯರಚನೆ ಹದಿನೇಳನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದಲ್ಲಿ ಪುನರುಜ್ಜೀವನಗೊಂಡಿತು. ಈ ಅವಧಿಯಲ್ಲಿ ವೀರಶೈವ ಕವಿಗಳೇ ಅಧಿಕ ಸಂಖ್ಯೆಯಲ್ಲಿ ಚಂಪುಕೃತಿಗಳನ್ನು ರಚಿಸಿದರು. ಆದ್ಯ ಪ್ರವರ್ತಕರಾದ ಜೈನಕವಿಗಳು ಚಂಪು ಪದ್ಧತಿಯನ್ನು ಬಿಟ್ಟು ದೇಶೀಛಂದಸ್ಸನ್ನು ಆಶ್ರಯಿಸುವರು. ಇಪ್ಪತ್ತನೆಯ ಶತಮಾನದಲ್ಲಿ 'ಚಂಪು'ವಿನ ಭವಿಷ್ಯ ಪ್ರಶ್ನಾರ್ಥಕವಾಗಿದೆ. ಸಾಂಪ್ರದಾಯ ರೀತಿಯ ಚಂಪು ಕಾವ್ಯಗಳು ಆಗೊಂದು ಈಗೊಂದರಂತೆ ಹೊರಬರುತ್ತಿವೆ.

ಹನ್ನೆರಡನೆಯ ಶತಮಾನದಲ್ಲಿ ದೇಶೀಛಂದಗಳೇ ಕಾವ್ಯವಾಹಕವಾದರೂ, ಚಂಪುಪದ್ಧತಿ ಸಂಪೂರ್ಣವಾಗಿ ನಿಂತು ಹೋಗಲಿಲ್ಲ. ವಸ್ತು ಮತ್ತು ಶೈಲಿಯಲ್ಲಿ ಕಾಲಧರ್ಮಕ್ಕನುಗುಣವಾಗಿ ಮಾರ್ಪಾಟುಹೊಂದಿ ಮುನ್ನಡೆಯಿತು. ಹನ್ನೆರಡನೆಯ ಶತಮಾನದ ವೀರಶೈವ ಅಗ್ರಮಾನ್ಯ ಮಹಾಕವಿ ಹರಿಹರನಿಂದ ಮೊದಲ್ಗೊಂಡು ಇಪ್ಪತ್ತನೆಯ ಶತಮಾನದ ಮೈಸೂರು ಅರಮನೆ ಪಂಚಗವಿ ಮಠಾಧ್ಯಕ್ಷರಾಗಿದ್ದ ಶ್ರೀ ಗೌರೀಶಂಕರಸ್ವಾಮಿಗಳವರಿಗೆ ವೀರಶೈವರಲ್ಲಿ ಚಂಪು ಬೆಳೆದುಬಂದಿತು. ವೀರಶೈವ ಚಂಪು ಕಾವ್ಯಗಳನ್ನು ಸ್ಥೂಲವಾಗಿ ಮೂರುಯುಗಗಳಾಗಿ ವಿಭಾಗಿಸಬಹುದು, ೧) ಹರಿಹರಯುಗ, ೨) ಷಡಕ್ಷರಿ ಯುಗ, ೩) ಬಸವಪ್ಪಶಾಸ್ತ್ರಿಗಳಯುಗ. ಎಂದಿನಂತೆ ಇಲ್ಲಿಯೂ ಹದಿನೆಂಟು ವರ್ಣನೆ, ಅಲಂಕಾರ, ಕವಿಸಮಯಗಳು ಹಿಂದಿನ ಪರಂಪರೆಯನ್ನೇ ಹಿಡಿದು ಮುನ್ನಡೆದಿವೆ. ಪ್ರಭುಗನ (೧೫೨೦) 'ಶಿವಾಸ್ಥಾನ ವರ್ಣನೆ' ಅತ್ಯಂತ ಚಿಕ್ಕ ಚಂಪುಗ್ರಂಥ. ಸುಮಾರು ೧೦೧ ಪದ್ಯಗಳಿವೆ. ಚಂದ್ರಕವಿಯ (೧೪೪೬) ಪಂಪಾಸ್ಥಾನ ವರ್ಣನೆಯಲ್ಲಿ ಸಂಪ್ರದಾಯವೇ ಮುನ್ನಡೆದಿದೆ. ವೀರಭದ್ರನ (೧೫೩೦) 'ವೀರಭದ್ರವಿಜಯ'ದಲ್ಲಿ ವರ್ಣನೆಗಳೇ ಇಡಿಕಿರಿದಿವೆ. ಸದಾಶಿವಯೋಗಿಯ (೧೫೫೪) 'ರಾಮನಾಥವಿಲಾಸ'ದಲ್ಲಿ ಚಂಪು ಸಂಗಡ ಷಟ್ಪದಿಗಳೂ ಬಂದಿವೆ. ವೀರಶೈವ ಚಂಪು ಕಾವ್ಯಗಳಲ್ಲಿ ಪ್ರಧಾನರೆಂದರೆ ಮಹಾಕವಿ ಹರಿಹರ, ಷಡಕ್ಷರಿ, ಮತ್ತು ಗೌರೀಶಂಕರ ಸ್ವಾಮಿಗಳು. ಆದಿಕವಿ ಪಂಪ ಎಲ್ಲ ಜೈನ ಕವಿಗಳಿಗೂ ಆದರ್ಶನಾದರೆ ಎಲ್ಲ ವೀರಶೈವ ಕವಿಗಳೂ, ಹರಿಹರನ ಆದರ್ಶವನ್ನು ಕಟ್ಟುನಿಟ್ಟಾಗಿ ಪಾಲಿಸಿದ್ದಾರೆ. ಷಡಕ್ಷರಿಯ ಪ್ರತಿಭೆಯಲ್ಲಿ ಚಂಪು ಅಪರಂಜಿಯಾಯಿತು. ಗೌರೀಶಂಕರಸ್ವಾಮಿಗಳು ಅದಕ್ಕೊಂದು ವಿಶೇಷವಾದ ಕೀರ್ತಿತಂದರು. ವೀರಶೈವ ಚಂಪು ಕಾವ್ಯದ ಮುನ್ನಡೆಯನ್ನು ಈಗ ಪರಿಶೀಲಿಸೋಣ.

**ಹರಿಹರ :** (೧೧೨೦) ಈತನು 'ಗಿರಿಜಾಕಲ್ಯಾಣ', 'ಪಂಪಾಶತಕ'. 'ರಕ್ಷಾಶತಕ', 'ಶಿವಗಣದರಗಳೆ', ಮುಡಿಗೆ ಅಷ್ಟಕಗಳನ್ನು ಬರೆದಿದ್ದಾನೆ. ಹೊಯ್ಸಳ ನರಸಿಂಹ ಬಲ್ಲಾಳನ (೧೧೪೧–೧೧೭೩) ಆಳ್ವಿಕೆಯಲ್ಲಿ ದೋರಸಮುದ್ರವಲ್ಲಿ 'ಕರಣಿಕರ ಕುಲತಿಲಕ'ಆಗಿದ್ದನು. ಈತನ ಗುರು ಹಂಪೆಯ ಮಾಯಿದೇವ, ಇವನ ಸೋದರಳಿಯ ಮಹಾಕವಿಯಾದ ರಾಘವಾಂಕ. ಈತನ ಕಾಲದಲ್ಲಿ ಕೆರೆಯ ಪದ್ಮರಸನು ನರಸಿಂಹಬಲ್ಲಾಳನಲ್ಲಿ ಮಂತ್ರಿಯಾಗಿದ್ದನು. ಜೈನ ಕವಿಗಳಿಗೆ ಆದಿಪಂಪನಂತೆ ವೀರಶೈವ ಕವಿಗಳಿಗೆ ಹರಿಹರ ಆದರ್ಶಕವಿ. ಮುಂದೆ ಬರುವ ಎಲ್ಲ ವೀರಶೈವ ಕವಿಗಳು ಈತನನ್ನು ಸ್ತುತಿಸಿದ್ದಾರೆ.

**ಗಿರಿಜಾಕಲ್ಯಾಣ :** ವೀರಶೈವ ಚಂಪುಕಾವ್ಯಗಳಲ್ಲಿ ಮೊತ್ತಮೊದಲನೆಯದು. ೧೦ ಆಶ್ವಾಸಗಳಲ್ಲಿ ೧೧೦೨ ಕಂದ ಮತ್ತು ವೃತ್ತಗಳ ಮಧ್ಯದಲ್ಲಿ ವಚನಗಳೂ ಬಂದಿವೆ. ಪರಶಿವನ ಇಪ್ಪತ್ತಾರು ಲೀಲೆಗಳಲ್ಲಿ ಐದನೆಯದಾದ 'ಗಿರಿಜಾಕಲ್ಯಾಣ' ಲೀಲೆಯನ್ನು ಇಲ್ಲಿ ವರ್ಣಿಸಲಾಗಿದೆ. ದಕ್ಷಯಜ್ಞದಲ್ಲಿ ತನ್ನ ತನುವನ್ನು ತ್ಯಜಿಸಿ ಪರ್ವತರಾಜನ ಮಗಳಾಗಿ ಹುಟ್ಟಿದ ಪಾರ್ವತಿಯು ಉಗ್ರತಪಸ್ಸನ್ನು ಕೈಗೊಳ್ಳಲು, ಆ ತಪಸ್ಸಿಗೆ ಶಿವನು ಮೆಚ್ಚಿ ಮದುವೆಯಾದುದೇ ಕಥಾವಸ್ತು. ಜೊತೆಗೆ ಕಾಮದಹನ. ತಾರಕಾಸುರನ ಸಂಹಾರವನ್ನು ವರ್ಣಿಸಲಾಗಿದೆ.

ಗ್ರಂಥಾವತಾರದಲ್ಲಿ ಕವಿ ಹಂಪೆಯ ವಿರೂಪಾಕ್ಷನನ್ನು ಸ್ತುತಿಸಿದ್ದಾನೆ. ಬಳಿಕ ಪಾರ್ವತಿ, ಗಣೇಶ, ಷಣ್ಮುಖ, ಶಿವಭಕ್ತರು, ಸರಸ್ವತಿ ಇವರುಗಳನ್ನು ಕ್ರಮವಾಗಿ ನುತಿಸಿದ್ದಾನೆ. ಹರಿಹರನ ಬಂಧವು ಲಲಿತವಾಗಿಯೂ ಮೃದುಮಧುರ ಗಂಭೀರವಾಗಿಯೂ ಇದೆ.

ಗಿರಿಜಾಕಲ್ಯಾಣವು ಕನ್ನಡ ಸಾಹಿತ್ಯದ ವೈಶಿಷ್ಟ್ಯಯುತವಾದ ಚಂಪುಗ್ರಂಥ, ಪ್ರೌಢಕಾವ್ಯಪರಂಪರೆಗೆ ಅವನ ನಲ್ಕಾಣಿಕೆ. ಕಥಾವಿಷಯ, ವಸ್ತುರಚನೆ, ವರ್ಣನೆ, ಶೈಲಿ ಇವುಗಳಲ್ಲಿ ಪೂರ್ವ ಪರಂಪರೆಯ ಅಂಶಗಳನ್ನು ಸ್ವೀಕರಿಸಿ. ಸ್ವತಂತ್ರವಾದ ಕೆಲವನ್ನು ಸೇರಿಸಿ ವ್ಯಕ್ತಿತ್ವದ ಪ್ರಕ್ರಿಯೆಯಿಂದ ಅವಕ್ಕೆ ಕೊಟ್ಟ ಹದುವಿನಲ್ಲಿ, ಈ ಗ್ರಂಥದ ಹೊಸತನವಿದೆ. ಮುಂದಿನ ವೀರಶೈವ ಕವಿಗಳಿಗೆ ಆದರ್ಶಪ್ರಾಯನಾದ ಈ ಮಹಾಕವಿ ವೀರಶೈವ ಚಂಪು ಸಾಹಿತ್ಯದ ಆದ್ಯ ಪ್ರವರ್ತಕನೂ ಆಗಿದ್ದಾನೆ. ಹರಿಹರ ಮಹಾಕವಿಯ ಅನುಭವವಾಣಿಯಿದು : 'ಅಮೃತಕ್ಕೆ ಸ್ವಾದು ಸಂಕಲ್ಪಮೆ' 'ಕಾಲವಶದಿನಾವಂಗಂ ಅವುದಾಗದು ಧರೆಯೊಳ್'

'ಪುಸಿ ದಿಟಕ್ಕೆ ನಿಲ್ವುದೆ' 'ಪೂವಂ ಪೂವು ಸೋಂಕೆ ಕರಗದು,' 'ಬೇರಂ ಬಲ್ಲರ್ಗೆ ಎಲೆದೋಱಲೇಕೆ,' 'ಮಳೆ ಮಾಣ್ದೊಡೆ ಹನಿ ಮಾಣದು,' 'ರತ್ನಕ್ಕೆ ಕಾಂತಿಯುರವೆ.' ಹರಿಹರ ಚಂಪೂ ಕೃತಿಯನ್ನು ತನ್ನ ಸಾಮರ್ಥ್ಯ ಪ್ರಕಟನೆಗೆ ಬರೆದಿರಬಹುದು. ಕವಿ ಪ್ರಪಂಚದಲ್ಲಿ ಅವನಿಗೆ ಅಗ್ಗಳಿಕೆಯನ್ನು ತಂದುಕೊಟ್ಟ ಕಾವ್ಯಗಳು ಅವನ ರಗಳೆಯ ಕಾವ್ಯಗಳೇ.

ವೀರಶೈವ ಚಂಪೂ ಸಾಹಿತ್ಯದ ಮೊದಲ ಪುರುಷ ಮಹಾಕವಿಹರಿಹರ. ಇವನ ಉದಿತಮಾರ್ಗ ಮುಂದಿನ ವೀರಶೈವ ಕವಿಗಳಿಗೆ ಅನೇಕ ಪ್ರಕಾರಗಳಲ್ಲಿ ದಾರಿದೀಪವಾಯಿತು.

**ಸೋಮರಾಜ :** (೧೨೨೨) ಈತನು 'ಶೃಂಗಾರಸಾರ' ಎಂಬ ಕಾವ್ಯವನ್ನು ಬರೆದಿದ್ದಾನೆ. ಇದಕ್ಕೆ 'ಉದ್ಭಟಕಾವ್ಯ ಎಂಬ ಹೆಸರು. ಈತ ರಾಜನಾಗಿದ್ದ ವೀರಶೈವ ಕವಿ. ಇವನ ಮುತ್ತಜ್ಜ ಚಂದ್ರವಂಶೋತ್ಪನ್ನನಾದ ತಿರುಮಲರಾಜ, ಅಜ್ಜ ರಾಯಣರಾಜ. ತಂದೆ ಇಂದು ಶೇಖರರಾಜ. ಪಶ್ಚಿಮತೀರದಲ್ಲಿ ಆಳುತ್ತಿದ್ದ ವೀರಶೈವ ಮತಾವಲಂಬಿಗಳಾದ ಚೌಟ ರಾಜರಲ್ಲಿ ತಿರುಮಲರಾಯ, ಚಂದ್ರಶೇಖರ ಎಂಬ ಹೆಸರುಗಳು ದೊರೆಯುತ್ತವೆ. ಈ ಕವಿ ಈ ವಂಶದ ದೊರೆಯಾಗಿರಬಹುದೋ ಏನೋ ತಿಳಿಯದು. ತನ್ನ ಗ್ರಂಥವನ್ನು, ರಾಯಸದ ಲಿಂಗರಸನು ಬರೆಯಲು ತಿಳಿಸಲು ತಾನು ರಚಿಸಿದಂತೆ ಹೇಳುತ್ತಾನೆ.

**ಶೃಂಗಾರಸಾರ :** (ಉದ್ಭಟಕಾವ್ಯ), ಹನ್ನೆರಡು ಆಶ್ವಾಸಗಳಿವೆ. ೧೯೨೧ರಲ್ಲಿ ಮೈಸೂರು ಪ್ರಾಚ್ಯ ಸಂಶೋಧನಾಲಯ ದಿಂದ ಪ್ರಕಟಿತವಾಯಿತು. ಇದು ಕುಮಾರಪಾಲ ಘೂರ್ಜರನ ಅಥವಾ ಉದ್ಭಟನ ಚರಿತೆಯಾದುದರಿಂದ 'ಉದ್ಭಟಕಾವ್ಯ' ಎಂದಾಗಿದೆ. ಚಂದ್ರವಂಶದ ದೊರೆಯಾದ ಉದ್ಭಟನು ವಲ್ಲಕೀಪುರವನ್ನು ಆಳುತ್ತಿದ್ದನು. ಈತನು ಚೋಳರಾಜನ ಮಗಳಾದ ಸೌಂದರ್ಯವತಿಯನ್ನು ಮದುವೆ ಮಾಡಿಕೊಂಡು ಬಂದು ರಾಜಧಾನಿಯಲ್ಲಿ ನಲ್ಲೆಯೊಡನೆ ಪಗಡೆಯಾಡುತ್ತಿದ್ದಾಗ, ಆಕಾಶ ದಲ್ಲಿ ಕೈಲಾಸಕ್ಕೆ ಹೋಗುತ್ತಿದ್ದ ಓಹಿಲನನ್ನು ಕಂಡು ಹೀಯಾಳಿಸಲು ಪತ್ನಿಗೆ ಅಸಮಾಧಾನವುಂಟಾಗಿ, ಇಬ್ಬರಿಗೂ ವಾಗ್ವಾದ ನಡೆಯಲು ಉದ್ಭಟನು, ಏಕಾಕಿಯಾಗಿ ಓಹಿಲನು ಕೈಲಾಸಕ್ಕೆ ಹೋಗುತ್ತಿದ್ದಾನೆ. ನಾನು ಇಡೀ ನಗರವನ್ನೇ ಕೈಲಾಸಕ್ಕೆ ಕರೆದು ಕೊಂಡು ಹೋಗುವೆನು ಎಂದು ಶಪಥ ಮಾಡಿ ತನ್ನ ಪ್ರತಿಜ್ಞಾನುಸಾರವಾಗಿ ನಗರವನ್ನೆಲ್ಲಾ ಕೈಲಾಸಕ್ಕೆ ಕರೆದುಕೊಂಡು ಹೋದುದೇ ಕಥಾವಿಷಯ. ಸಹಜವರ್ಣನೆಯಲ್ಲಿ ಸೋಮರಾಜನ ಶೈಲಿ ಅತ್ಯುತ್ತಮವಾದುದು ಚಿತ್ರಗಳನ್ನು ಕಡೆದು ನಿಲ್ಲಿ ಸುವ ಅವನ ಅಭಿವ್ಯಕ್ತಿ ಅನ್ಯಾದೃಶ. ಉದ್ಭಟಕಾವ್ಯದಲ್ಲಿ ಬಂಧವು ಶಾಘ್ಯ, ಲಲಿತಸಂಸ್ಕೃತಪದ ಪ್ರಚುರವಾದರೂ ಅಪೂರ್ವ ವಾದ ಕನ್ನಡ ನುಡಿಗಳನ್ನು ಅಲ್ಲಲ್ಲಿ ಸೇರಿಸಿ ಗ್ರಂಥಕ್ಕೆ ಹಿರಿಮೆಯನ್ನು ತಂದಿದ್ದಾನೆ.

**ಚಂದ್ರಕವಿ :** ಈತನು 'ವಿರೂಪಾಕ್ಷಾಸ್ಥಾನ', 'ಗುರುಮೂರ್ತಿಶಂಕರಶತಕ' ಇವುಗಳನ್ನು ಬರೆದಿದ್ದಾನೆ. ಇವನಿಗೆ ಚಂದ್ರಶೇಖರ ಎಂಬ ಹೆಸರೂ ಉಂಟು. ಅಷ್ಟಭಾಷಾಪ್ರವೀಣ. ವಿಜಯನಗರ ಅರಸನಾದ 'ಗಜವೇಂಟೆಗಾರ ಪ್ರೌಢರಾಯನ' (೧೪೧೯–೧೪೪೬) ಮಹಾಪ್ರಧಾನ. ಗುರುರಾಯನ ಆಜ್ಞಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಹೇಳಿದೆ.

ಗ್ರಂಥಾವತಾರದಲ್ಲಿ ಪಂಪೆಯ ವಿರೂಪಾಕ್ಷನ ಸ್ತುತಿಯಿದೆ. ಬಳಿಕ ಕವಿ, ಗಣೇಶ, ತಿಟ್ಟಮಾದೇವಿ ಇವರುಗಳನ್ನು ಹೊಗಳಿದ್ದಾನೆ. ಅಂತ್ಯದಲ್ಲಿ ಇಂತಿ ಶ್ರೀ ವಿರೂಪಾಕ್ಷ ಲಿಂಗನ ಆಸ್ಥಾನವರ್ಣನೆ ವಚನ ೩೬,ಕಂದ ವೃತ್ತಾದಿ ೫೯ ಕ್ಕಂ ಮಂಗಳಂ' ಎಂದಿದೆ. ಅತಿ ಚಿಕ್ಕದಾದ ಈ ಗ್ರಂಥವು ಪ್ರೌಢವಾಗಿಯೂ ಮನೋಹರವಾಗಿಯೂ ಇದೆ.

**ಸುರಂಗ :** (೧೫೦೦) ಈತನು 'ತ್ರಿಷಷ್ಟಿಪುರಾತನರ ಚಾರಿತ್ರ' ಎಂಬ ಚಂಪೂಕಾವ್ಯ ಬರೆದಿದ್ದಾನೆ. ತಂದೆ ಸಂಗಮ ವಿಭು, ತಾಯಿ ಮಹದೇವಿ 'ಪುಲಿಗೆರೆಯ ಪುರಾಧಿಪ ಶ್ರೀ ಸೋಮನಾಥ ಭಕ್ತಿಯುಕ್ತ' ಎಂಬುದರಿಂದ ಇವನ ಸ್ಥಳವು 'ಪುಲಿಗೆರೆ' ಯಾಗಿರಬಹುದು. ಶ್ರೀ ಸೋಮನಾಥದೇವರ ಅಂಕಿತದಲ್ಲಿ ಗ್ರಂಥವನ್ನು ಬರೆದಿದ್ದಾನೆ. ಇವನಿಗೆ ಕರ್ಣಾಟಕ ಕವಿ ಚಕ್ರವರ್ತಿ ಎಂಬ ಬಿರುದಿದ್ದಂತೆ ತಿಳಿಯುತ್ತದೆ. 'ಮನುಜ ಸ್ತುತಿಯಂ ಬಿಟ್ಟು ಸುರಂಗಕವಿ ನಾಲಗೆಯಂ ಗಿರಿಶಂಗೆ ಮಾಱಿದಂ' ಎಂದು ಹೇಳಿ ಕೊಂಡಿದ್ದಾನೆ.

**ತ್ರಿಷಷ್ಟಿ ಪುರಾತನರ ಚಾರಿತ್ರ :** ೨೩ ಆಶ್ವಾಸಗಳಿವೆ. ಇದರಲ್ಲಿ ಪ್ರಸಿದ್ಧವಾದ ಅರುವತ್ಮೂರು ಪುರಾತನರ ಚರಿತ್ರೆ ಯನ್ನು ಹೇಳಿದೆ. ಉಪಮನ್ಯುಮುನಿ ಕಣಾದನಿಗೆ ಹೇಳಿದ ಈ ಚರಿತ್ರೆಯನ್ನು ಲೈಂಗ್ಯಪುರಾಣದಲ್ಲಿದ್ದಂತೆ ತಾನು ಬರೆದುದಾಗಿ ಕವಿ ಹೇಳಿಕೊಂಡಿದ್ದಾನೆ.

ಗ್ರಂಥಾವತಾರದಲ್ಲಿ ಸೋಮನಾಥನ ಸ್ತುತಿಯಿದೆ. ಬಳಿಕ ಬಸವ, ಚೆನ್ನಬಸವ, ಪ್ರಭುದೇವ, ಗಣೇಶ, ಸರಸ್ವತಿ ಇವರು ಗಳನ್ನು ಕ್ರಮವಾಗಿ ಪ್ರಾರ್ಥಿಸಿದ್ದಾನೆ. ಇದರಲ್ಲಿ ಹದಿನೆಂಟು ಕಾವ್ಯಾಂಗಗಳನ್ನು ವರ್ಣಿಸಿರುವಂತೆ ಸುರಂಗ ಹೇಳಿದ್ದಾನೆ. ಈತನ ಬಂಧವು ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆ. ಪುರಾತನರ ರಗಳೆಯನ್ನು ರಚಿಸಿ ಆದ್ಯಪ್ರವರ್ತಕನಾದ ಮಹಾಕವಿ ಹರಿಹರ ಹೆಸರನ್ನು ಎಲ್ಲಿಯೂ ಹೇಳಿಲ್ಲ. ಕನ್ನಡ ಕವಿಚಕ್ರವರ್ತಿಗಳಲ್ಲಿ ಸುರಂಗನೂ ಒಬ್ಬನು. ವಸ್ತುವಿನ್ಯಾಸ, ಭಾವೋತ್ಕರ್ಷ

ಪಾತ್ರಚಿತ್ರಣ, ರಸಸ್ರೋತ, ಶೈಲಿ ಮೊದಲಾದವುಗಳ ದೃಷ್ಟಿಯಿಂದ ಇವನೂ ಮಹಾಕವಿಗಳ ಪಂಕ್ತಿಯಲ್ಲಿ ಶೋಭಿಸಲರ್ಹನಾಗಿದ್ದಾನೆ.

**ಪ್ರಭುಗ :** (೧೫೨೦) ಈತನು 'ಚೂಡಾಸ್ಥಾನ' 'ವೈಭೋಗ ರಾಜಾಸ್ಥಾನ' ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಗುಮ್ಮಳಾಪುರದ ಶಾಂತೇಶನ ದೌಹಿತ್ರನು. ಚಿಕ್ಕಾರ್ಯನ ಮಗನು. ಹಿಂದೆ ಗುರುರಾಯನ ಆಜ್ಞೆಯಿಂದ ಚಂದ್ರಕವಿ ವಿರೂಪಾಕ್ಷಾಸ್ಥಾನವನ್ನು ರಚಿಸಿದಂತೆ ನೀನು ನಾನಾ ಅಲಂಕಾರ ಚಿತ್ರಭಾವರಸಗಳಿಂದ ವೈಭೋಗ ರಾಜಾಸ್ಥಾನವನ್ನು ರಚಿಸಬೇಕೆಂದು ಹೇಳಲು ಆ ಗ್ರಂಥವನ್ನು ರಚಿಸಿದಂತೆ ಹೇಳುತ್ತಾನೆ, ಗುಬ್ಬಿಯ ಮಲ್ಲಣಾರ್ಯನ ಸಮಕಾಲೀನನೆಂದು ತಿಳಿದುಬರುತ್ತದೆ. ತನ್ನ ಕವಿತಾ ಚಾತುರ್ಯವನ್ನು ಬಹಳ ಹೊಗಳಿಕೊಂಡಿದ್ದಾನೆ.

**ಚೂಡಾಸ್ಥಾನ :** ನೂರೊಂದು ಪದ್ಯಗಳಿವೆ. ಚೂಡೆಯ ಲಿಂಗ ಕೌಂಡನಾಥ, ಎಂದು ಕರೆಯಲ್ಪಡುವ ಈಶ್ವರನ ಆಸ್ಥಾನದ ವರ್ಣನಾರೂಪವಾದ ಚಂಪುಗ್ರಂಥ. ಇದರ ಪ್ರಾರಂಭದಲ್ಲಿ ಕೌಂಡೇಶ್ವರನನ್ನು ಸ್ತುತಿಸಿ, ಬಳಿಕ ಪಾರ್ವತಿ, ಗಣಪತಿಯನ್ನು ಪ್ರಾರ್ಥಿಸಿದ್ದಾನೆ.

ತನ್ನ ಕಾವ್ಯ 'ಪುರುಳ ತವರ್ಮನೆ, ಸೊಗಸಿನಕರು, ಸಕ್ಕದ ಕನ್ನಡಂಗಳಿನಿಗಡಲೋ ಒಗ್ಗರ ತೊಂಡುನುಡಿಯ ತಾಣಂ ಸರಸತಿಯರ ನೆಲೆಯಿದು ಚಲ್ವಿನ ಕಬ್ಬಂ' ಎಂದು ಹೆಮ್ಮೆಯಿಂದ ಹೊಗಳಿಕೊಂಡಿದ್ದಾನೆ.

**ವೈಭೋಗರಾಜಾಸ್ಥಾನ:** ಇದು 'ವೈಭೋಗರಾಜ' ಎಂದು ಕರೆಯಲ್ಪಡುವ ಈಶ್ವರನ ಆಸ್ಥಾನವರ್ಣನಾರೂಪವಾದ ಚಂಪುಗ್ರಂಥ, ನೂರೊಂದು ಪದ್ಯಗಳಿವೆ. ಪ್ರಾರಂಭದಲ್ಲಿ ವೈಭೋಗರಾಯನನ್ನು ಸ್ತುತಿಸಿ, ಬಳಿಕ ಪಾರ್ವತಿ, ಗಣಪತಿ ಇವರುಗಳನ್ನು ಹೊಗಳಿದ್ದಾನೆ.

**ವೀರಭದ್ರರಾಜ :** (೧೫೩೦) ಈತನು 'ವೀರಭದ್ರವಿಜಯ', 'ಪಾರ್ವತೀ ವಲ್ಲಭಶತಕ', ಉಮಾಮಹೇಶ್ವರ ಶತಕ', 'ಪ್ರಾಣನಾಥ ಶತಕ', ಶ್ರೀಕಂಠಸೋಮೇಶ್ವರ ಶತಕ' ಮತ್ತು ಕಂದ ಶತಕಗಳನ್ನು ರಚಿಸಿದ್ದಾನೆ. ರಾಜವಂಶಕ್ಕೆ ಸೇರಿದವನು. ತನ್ನ ವಂಶಾವಳಿಯನ್ನು ಹೀಗೆ ಹೇಳಿಕೊಂಡಿದ್ದಾನೆ. 'ಶ್ರೀಕಂಠವಂಶವಾರಿಧಿ ಚಂದ್ರನಾದ ಚಿಕ್ಕವಿರುಪರಾಜ, ಮಗ ಕಾಮನೃಪ' ಇವನ ಹೆಂಡತಿ ವೀರಾಂಬೆ, ಅವರ ಮಗ ವಿರೂಪಾಕ್ಷನೃಪ, ಮಗ ಕವಿ ವೀರಭದ್ರರಾಜ. ಈತನ ತಂದೆಯಾದ ವಿರುಪರಾಜ 'ತ್ರಿಭುವನ ತಿಲಕ'ವನ್ನು ಬರೆದಿರುವುದಾಗಿ ತಿಳಿದಿದೆ.

**ವೀರಭದ್ರ ವಿಜಯ :** ಪರಶಿವನ ಲೀಲೆಗಳಲ್ಲಿ ಒಂದಾದ ದಕ್ಷಾಧ್ವರಹರ ಲೀಲೆಯ ಕಥೆಯೇ ವೀರಭದ್ರ ವಿಜಯದ ಗ್ರಂಥದ ವಸ್ತು. ಹನ್ನೆರಡು ಆಶ್ವಾಸಗಳಲ್ಲಿ ಕಥೆ ಹರಡಿದೆ. ಪ್ರಾರಂಭದಲ್ಲಿ ವಿಶ್ವನಾಥನ ಸ್ತುತಿಯಿದೆ. ಬಳಿಕ ಪಾರ್ವತಿ, ವೀರಭದ್ರ, ನಂದಿ, ಭೃಂಗಿ, ಗಣೇಶ, ಷಣ್ಮುಖ, ಸರಸ್ವತಿಯರನ್ನು ನೆನೆದಿದ್ದಾನೆ. ಇವನ ಬಂಧವು ಹೃದಯಂಗಮವಾಗಿಯೂ ಸುಂದರವಾಗಿಯೂ ಇದೆ. 'ವೀರಭದ್ರವಿಜಯ' ನವರಸಭರಿತ ಕಾವ್ಯ ಎಂದು ಹೇಳಿಕೊಂಡಿದ್ದರೂ ಶೃಂಗಾರ ರಸವೇ ಪ್ರಧಾನವಾಗಿದೆ. ಔಚಿತ್ಯದ ಎಲ್ಲೆಯನ್ನು ಮೀರಿ ಶೃಂಗಾರದ ವರ್ಣನೆ ಬಂದಿದೆ. ಈತನ ಐದು ಶತಕಗಳೂ ಶಿವನ ಸ್ತುತಿರೂಪವಾಗಿಯೂ ವೀರಶೈವ ಸಿದ್ಧಾಂತದಬೋಧಕವಾಗಿಯೂ ನೀತಿ ವೈರಾಗ್ಯ ಪ್ರತಿಪಾದಕವಾಗಿಯೂ ಇವೆ.

**ಚನ್ನವೀರ ಜಂಗಮ :** (೧೫೨೦) ಈತನು 'ಷಟ್‌ಸ್ಥಲವಲ್ಲಭ' ಚಂಪೂ ಗ್ರಂಥ ರಚಿಸಿದ್ದಾನೆ. ಈತನು ವಿಜಯನಗರ ರಾಜನಾದ ವಿರೂಪಾಕ್ಷನ (೧೪೬೭-೧೪೭೮) ಕಾಲದಲ್ಲಿದ್ದಂತೆ ವಿರೂಪಾಕ್ಷ ಪಂಡಿತನ (೧೫೮೪) ಚನ್ನಬಸವಪುರಾಣದಿಂದ ಊಹಿಸಬಹುದಾಗಿದೆ. ಗ್ರಂಥಾರಂಭದಲ್ಲಿ ಬಸವ, ರೇವಣ, ಅಲ್ಲಮ, ಸಿದ್ಧರಾಮ, ಮುಸುಟೆಯ ಚೌಡಯ್ಯ ಮುಂತಾದ ಶರಣರ ಸ್ತೋತ್ರವಿದೆ.

**ಷಟ್‌ಸ್ಥಲ ವಲ್ಲಭ :** ೯ ಆಶ್ವಾಸಗಳ ಚಂಪು ಗ್ರಂಥ. ಗದಗಿನ ಶ್ರೀ ತೋಂಟದಾರ್ಯ ಮಠದಿಂದ ೧೯೮೦ ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಷಟ್‌ಸ್ಥಲ ಚಕ್ರವರ್ತಿ ಶ್ರೀ ತೋಂಟದ ಸಿದ್ಧಲಿಂಗರ ಚರಿತ್ರೆಯನ್ನು ವಿಸ್ತಾರವಾಗಿ ವಿವರಿಸಲಾಗಿದೆ. ಕವಿ ತನ್ನ ವರ್ಣನೆಯ ಕೌಶಲ್ಯದಿಂದ ಚಂಪು ಮಾರ್ಗದಲ್ಲಿ ತನ್ನದೇ ಆದ ಸ್ಥಾನವುಳಿಸಿಕೊಳ್ಳಲು ಬಹಳ ಪ್ರಯತ್ನಪಟ್ಟಿದ್ದಾನೆ. ಸಹಜ ಜೀವನ ಚಿತ್ರಣವನ್ನು ತನ್ನ ಕಾವ್ಯದ ಉದ್ದಕ್ಕೂ ಚನ್ನವೀರ ಜಂಗಮ ತಂದಿದ್ದಾನೆ. ಗ್ರಂಥದಲ್ಲಿ ವೀರಶೈವ ಸಿದ್ಧಾಂತ ನಿರೂಪಣೆಯ ಅಂಶ ಹೆಚ್ಚಾಗಿಯೇ ಬಂದಿದೆ.

**ಸದಾಶಿವಯೋಗಿ :** (೧೫೫೪) ಈತನು 'ರಾಮನಾಥ ವಿಲಾಸ'ವನ್ನು ಬರೆದಿದ್ದಾನೆ. ಇವನ ಪ್ರಪಿತಾಮಹ ಶೃಂಗಾರದ ಸೋಮಣಾರ್ಯ, ಪಿತಾಮಹ ಗಂಗಾಧರ, ತಂದೆ ಸಾಮವೇದಿಗುರು 'ಸಾಮವೇದಿ ಗುರು ಹಸ್ತಾಂ ಭೋಜಸಂಭೂತ'ನೆಂದು ಹೇಳಿಕೊಂಡಿರುವುದರಿಂದ ತಂದೆಯೇ ಇವನಿಗೆ ಗುರುವಾಗಿದ್ದಂತೆ ತೋರುತ್ತದೆ. ಶಾಂತನೃಪಾಖ್ಯ ಶೈವಕವಿರಾಜ ಸಭೋನ್ನತನಾಗಿದ್ದಂತೆ ಹೇಳಿಕೊಂಡಿದ್ದಾನೆ. ಈ ಶಾಂತನೃಪನಾರೊ ತಿಳಿಯದು. ಕಥಾನಾಯಕನಾದ ರಾಮನಾಥನ ಅಥವಾ ರಾಮಣಾ

ರ್ಯನ ವಂಶೋದ್ಭವನಾದ ಪ್ರಭುದೇಶಿಕನು ಕವಿಯ ಸಮಕಾಲೀನನಾಗಿದ್ದಂತೆ ತಿಳಿಯುತ್ತದೆ. ಇವನಿಗೆ 'ನವಬಾಣಕವಿ', 'ವಿಚಿತ್ರ ವಿದ್ವತ್ ಕವಿಕುಲ ಸಾರ್ವಭೌಮ' ಎಂದು ಬಿರುದುಗಳಿದ್ದಂತೆ ತೋರುತ್ತದೆ.

**ರಾಮನಾಥ ವಿಲಾಸ :** ಹದಿನಾರು ಉಲ್ಲಾಸಗಳಲ್ಲಿ ನಾಲ್ಕುಸಾವಿರದ ಮುನ್ನೂರು ಪದ್ಯಗಳಿವೆ. ಅಲ್ಲಲ್ಲಿ ಪಟ್ಪದಿಗಳೂ ಉಂಟು. ಈ ಗ್ರಂಥ ಇನ್ನೂ ಹಸ್ತ ಪ್ರತಿಯಲ್ಲಿ ಉಳಿದಿದೆ.

**ಮುರಿಗೆ ದೇಶಿಕೇಂದ್ರ:** (೧೫೬೦) ಈತನು 'ರಾಜೇಂದ್ರವಿಜಯ'ಎಂಬ ಕಾವ್ಯ ಬರೆದಿದ್ದಾನೆ. ಇದಕ್ಕೆ ಹವಿಮ್ಮೊರ ಕಾವ್ಯ ಎಂಬ ಹೆಸರೂ ಉಂಟು. ಮುರಿಗೆ ಮಠದ ಸ್ವಾಮಿಯಾಗಿದ್ದಂತೆ ತೋರುತ್ತದೆ. ಗ್ರಂಥದಲ್ಲಿ ಎಲ್ಲಿಯೂ ತನ್ನ ಹೆಸರನ್ನು ಹೇಳಿಕೊಂಡಿಲ್ಲ. 'ರಾಜೇಂದ್ರ ವಿಜಯಂ ಪ್ರಭುರಾಜಂ ಮುರಿಗೆದೇಶಿಕೇಂದ್ರನಾಗಿ ಬಂದು.ನಿರೂಪಿಸಿದುದು' ಎಂದಿರುವ ಒಂದು ಓಲೆಯ ಪ್ರತಿಯ ಲಿಖಿತವ ಆಧಾರದಿಂದ ಈತನೇ ರಚಿಸಿರಬೇಕೆಂದು ಹೇಳಲಾಗಿದೆ. ಇದನ್ನು ರಚಿಸಿದ ಮುರಿಗೆದೇಶಿಕೇಂದ್ರರು ವಿಜಾಪುರ ಜಿಲ್ಲೆಯ ಗುಳೇದಗುಡ್ಡದ ಮುರಿಗೆ ಮಠಕ್ಕೆ ಪಿಠಾಧಿಕಾರಿಯಾಗಿರಬಹುದೆಂದು ಊಹಿಸಲು ಅವನ ಕಾವ್ಯವೇ ಸಾಕ್ಷಿಯಾಗಿದೆ. ಅಲ್ಲಿ ಬರುವ ಮಲಪ್ರಭಾ ನದಿಯ ವರ್ಣನೆ, ಪಟ್ಟದಕಲ್ಲು, ಲೋಕಾಪುರ,ವಸಂತಪುರ, ವಿಡೂರಗಳ ವರ್ಣನೆ ಈ ಮಾತಿಗೆ ಸಾಕ್ಷಿಯಾಗಿದೆ. ಗುಳೇದಗುಡ್ಡ ಪಟ್ಟದಕಲ್ಲಿನ ಸಮಿಪದಲ್ಲಿದೆ. ಆದ್ದರಿಂದ ಕವಿ ಅಭಿಮಾನವಿಟ್ಟು ತಾನು ತುಳಿದ ನೆಲವನ್ನು ವರ್ಣಿಸಿದ್ದಾನೆ.

**ರಾಜೇಂದ್ರ ವಿಜಯ :** (ಹವಿಮ್ಮೊರ ಕಾವ್ಯ) ಒಂಬತ್ತು ಪ್ರಕರಣಗಳಲ್ಲಿ ಏಳುನೂರೈವತ್ಮೂರು ಪದ್ಯಗಳಿವೆ. ಇದಕ್ಕೆ 'ಮನುರಾಜನ ಕಾವ್ಯ' ಎಂಬ ಹೆಸರೂ ಉಂಟು. ಇದರಲ್ಲಿ ಮಲಪ್ರಹಾರೀತೀರದಲ್ಲಿರುವ ಹವಿಮ್ಮೊರಪುರ ಅಥವಾ ಪಟ್ಟಶಿಲಾಪುರ (ಪಟ್ಟದ ಕಲ್ಲು) ಎಂಬ ನಗರಕ್ಕೆ ದೊರೆಯಾದ ತ್ರೈಲೋಕ್ಯಚೂಡಾಮಣಿಯ ಮಗ ಹವಿಮ್ಮೊರನ ಚರಿತ್ರೆಯನ್ನು ಹೇಳಿದೆ. ಕಥಾನಾಯಕನಿಗೆ ರಾಜೇಂದ್ರ, ಮನುರಾಜ, ಅನಿಮಿಷೇಂದ್ರ ಎಂಬ ಹೆಸರುಗಳೂ ಉಂಟು. ಪೂರ್ವದಲ್ಲಿ ಚೆನ್ನಬಸವನು ಶರಣರಿಗೂ, ಪ್ರಭುರಾಜನು ಗೊಗ್ಗಯ್ಯ, ಸಿದ್ಧರಾಮ, ಬಸವ ಇವರುಗಳಿಗೂ ಹೇಳಿದ ಈ ಕಥೆಯನ್ನು ಕಾವ್ಯವಾಗಿ ಬರೆಯುವಂತೆ ಕವಿ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಶಿವಸ್ತುತಿಯಿದೆ. ಬಳಿಕ ವೃಷಭ, ಭೃಂಗಿ, ವೀರಭದ್ರ, ಷಣ್ಮುಖ, ಬಸವ ಚನ್ನಬಸವ, ಪ್ರಭುದೇವ, ನೀಲಾಂಬಿಕೆ ಇವರುಗಳನ್ನು ಹೊಗಳಿದ್ದಾನೆ.

**ಸಿದ್ಧಲಿಂಗ ಶಿವಯೋಗಿ:** (೧೬೦೦) ಈತನು ಭೈರವೇಶ್ವರ ಪುರಾಣವನ್ನು ಬರೆದಿದ್ದಾನೆ. ಇವನ ಗುರು ಚನ್ನವೃಷೇಂದ್ರ. ಹಿಂದೆ ನಂಜಯ್ಯನು ವರ್ಣಕವಾಗಿ ಹೇಳಿದ್ದ ಈ ಕಥೆಯನ್ನು ತಾನು ವಸ್ತುಕವಾಗಿ ರಚಿಸಿದಂತೆ ಹೇಳುತ್ತಾನೆ. ಇವನು ಹೇಳುವ ನಂಜಯ್ಯನು ಭೈರವೇಶ್ವರ ಕಾವ್ಯವನ್ನು ಸುಮಾರು ೧೫೫೦ರಲ್ಲಿ ಸಾಂಗತ್ಯದಲ್ಲಿ ಬರೆದಿರುವ ಕಿಕ್ಕೇರಿಯಾರಾಧ್ಯ ನಂಜುಂಡನಿರಬೇಕು. ನರರನ್ನು ಸುರರನ್ನು ಸ್ತುತಿಸಿ ನರಕಭಾಜನನಾಗುವುದಿಲ್ಲ. ಗಣಂಗಳನ್ನು ನಾಲಗೆ ದಣಿವಂತೆ ಕೀರ್ತಿಸುವೆನು ಎಂದು ಹೇಳಿದ್ದಾನೆ.

**ಭೈರವೇಶ್ವರ ಪುರಾಣ:** ಇದಕ್ಕೆ ರಾಜೇಂದ್ರವಿಜಯ ಪುರಾಣ ಎಂಬ ಹೆಸರೂ ಉಂಟು. ಇಪ್ಪತ್ತೊಂದು ಆಶ್ವಾಸಗಳಿವೆ. ಗ್ರಂಥಾವತಾರದಲ್ಲಿ ಶಿವಸ್ತುತಿಯಿದೆ. ಬಳಿಕ ಪಾರ್ವತಿ, ಗಣೇಶ, ಸುಬ್ರಮಣ್ಯ, ವೀರಭದ್ರ, ಬಸವ, ಚೆನ್ನಬಸವ, ಅಲ್ಲಮಪ್ರಭು, ಸಿದ್ಧಲಿಂಗ, ಮುರಿಗೆಯಾಚಾರ್ಯ, ಸ್ವಗುರು ಚನ್ನವೃಷೇಂದ್ರ, ಮಹದೇವಿಯಕ್ಕ, ನೀಲಾಂಬಿಕೆ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥವಿನ್ನೂ ಹಸ್ತಪ್ರತಿರೂಪವಾಗಿಯೇ ಉಳಿದಿದೆ. ಅಚ್ಚಾಗಿ ಬೆಳಕು ಕಾಣುವ ಅವಶ್ಯಕತೆಯಿದೆ.

**ಶಾಂತವೀರದೇಶಿಕ :** (೧೬೫೦). ಈತನು 'ಶಿವಲಿಂಗಚಾರಿತ್ರ', 'ಶಿವಗಣಚಾರಿತ್ರ', 'ಸೌಂದರೇಶ್ವರನ ಯಕ್ಷಗಾನ' 'ಶಿವಮಹತ್ವಸಾರ' 'ಶಿಖಾಮಣಿಸಂಗ್ರಹಶತಕ'. 'ಗಿರಿಜಾದೇವಿಯ ಸಂಕೀರ್ತನ' ಇವುಗಳನ್ನು ಬರೆದಿದ್ದಾನೆ. ಇವನ ಸ್ಥಳ ಕಣೆಯನೂರು. ಹರಕವಿ ಗಜೇಂದ್ರ ಕಂಠೀರವ, ಶಿವಕವಿಭೃತ್ಯ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ತಂದೆ ಚನ್ನಾರ್ಯನನ್ನು 'ಸರಸಕವಿ ಕರ್ನಾಟಕ ಚಕ್ರೇಶ್ವರ' ಎಂಬುದರಿಂದ ಈತನೂ ಕವಿಯಾಗಿದ್ದಂತೆ ತೋರುತ್ತದೆ. ತನ್ನ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ: ಶಿವಲಿಂಗಾರ್ಯ,ಮಗ ವೀರೇಶಾರ್ಯ.ಮಗ ಚನ್ನಬಸವೇಶ್ವರ, ಮಗ ಕವಿ ಶಾಂತವೀರದೇಶಿಕ, 'ಚಾಮರಾಜೇಂದ್ರನ ಸಭೆಯೊಳು ತರ್ಕಿಸುವ ರಾಮದೀಕ್ಷಿತನ ಭಂಜಿಸಿದ ಶ್ರೀಮದ್ವೀರಣಾರಾಧ್ಯ ತನುಜ ಗುಣಧಾಮಚೆನ್ನಾರ್ಯ' ಎಂದಿರುವುದರಿಂದ ಈತನ ತಂದೆ ಚಾಮರಾಜೇಂದ್ರನ ಸಭೆಯಲ್ಲಿ ರಾಮದೀಕ್ಷಿತನನ್ನು ವಾದದಲ್ಲಿ ಜಯಿಸಿದಂತೆ ತನ್ನನ್ನು 'ಆನಂದಾಗಮವೇದ ಶಂಕರಪುರಾಣಾರ್ಥಜ್ಞ ಸತ್ಕೋವಿದಂ ನಾನಾ ಕಾವ್ಯ ವಿಚಾರಪೂರಕವಿತಾ ಕರ್ಣಾಟಕ ಚಕ್ರೇಶ್ವರಂ' ಎಂದು ವಿಶೇಷಿಸಿ ಕರೆದುಕೊಂಡಿದ್ದಾನೆ.

**ಶಿವಲಿಂಗ ಚಾರಿತ್ರ :** ಮೂರು ಆಶ್ವಾಸಗಳಲ್ಲಿ ನೂರಿಪ್ಪತ್ನಾಲ್ಕು ಪದ್ಯಗಳಿವೆ. ಇದರಲ್ಲಿ ಪಂಡಿತಾರಾಧ್ಯ ವಂಶೋದ್ಭವನಾದ ಶಿವಲಿಂಗಾರ್ಯನ ಚರಿತೆಯನ್ನು ಹೇಳಿದೆ. ಇವನು ಕವಿಯ ಪಿತಾಮಹನು. ಪೆನುಗೊಂಡೆ ದೇಶದ ಅಪ್ಪೆಯಕೆ ಇವನ ಊರು. ಇವನ ಮಗ ವೀರಣಾಧ್ಯ. ಪದಿನಾಡ ಶಿವಪೂಜೆಯನೃಪನಿಂದಲೂ ಬೆಂಗಳೂರು ಕೆಂಪೇಗೌಡನಿಂದಲೂ ಮರ್ಯಾದೆ

ಯನ್ನು ಹೊಂದಿದನು. ಇವನ ಮಗ ಚನ್ನವೀರಾರ್ಯನು ಮೈಸೂರು ರಾಜಮಹೇಂದ್ರನಿಂದ ಪೂಜಿತನಾಗಿ ಹುಲ್ಲಹಳ್ಳಿಯ ಬಸವರಾಜನ ಮಗನಾದ ವೀರನಿಂದಲೂ ಹುಣಿಸನಹಾಳು ನಂಜರಾಜನಿಂದಲೂ ಸನ್ಮಾನಿತನಾಗಿ ಕೊಡನಾಲತ್ತೂರಿನಲ್ಲಿ ಒಂದು ಮಠವನ್ನು ಕಟ್ಟಿಸಿದನು.

ಗ್ರಂಥದ ಮೊದಲಲ್ಲಿ ಶಾಂತವೀರೇಶನ ಸ್ತುತಿಯಿದೆ. ಬಳಿಕ ಪಾರ್ವತಿ, ವೀರೇಶ, ಗಣೇಶ, ಷಣ್ಮುಖ, ನಂದಿ, ಭೃಂಗಿ, ಬಸವ, ಮಾಚಯ್ಯ, ಕಿನ್ನರ ಬೊಮ್ಮಯ್ಯ, ಚನ್ನಬಸವ ಇವರುಗಳನ್ನು ಸ್ತುತಿಸಿದ್ದಾನೆ. ಪ್ರಗಲ್ಭಕವಿ ಎಂದು ಹೇಳಲಾಗ ದಿದ್ದರೂ ಈತನ ಚಂಪೂಶೈಲಿ ಚನ್ನಾಗಿದೆ. ಈತನ ಗ್ರಂಥಗಳೂ ಹಸ್ತಪ್ರತಿಯಲ್ಲಿವೆ. ಇನ್ನೂ ಅಚ್ಚಾಗಬೇಕಾಗಿದೆ.

**ಕವಿಮಾದಣ್ಣ :** (೧೬೫೦) ಈತನು 'ನನ್ನಯ್ಯಗಳ ಚಾರಿತ್ರ'ವನ್ನು ಬರೆದಿದ್ದಾನೆ. ಇವನ ಗುರು ರಾಮನಾಥ, ತಂದೆ ಅಲ್ಲಪ್ಪ, ತಾಯಿ ಮಲ್ಲಿಯಕ್ಕ, ಸ್ಥಳ ವಾಮಶಿವಪುರ. (ಕೃಷ್ಣಾನದಿಯ ಎಡತೀರದಲ್ಲಿರುವ ಶಿವಪುರ.) 'ಬೆಲ್ಲವತ್ತದ ಬಸವೇಶನಧಿ ಪತಿಯಪ್ಪ ಸಲ್ಲಲಿತ ಮುದ್ರಾಪುರಾಧೀಶ್ವರನಪ್ಪ ಪ್ರಸನ್ನ ರಾಮೇಶ್ವರ ನಿರೂಪದಿಂ' ಎಂಬಲ್ಲಿ ಇಂದಿನ ಬೇಲಹಾಳ (ಬಿಜಾಪುರ ಜಿಲ್ಲೆ) ಇರಬಹುದು.

**ನನ್ನಯ್ಯಗಳ ಚಾರಿತ್ರ :** ಐದು ಸಂಧಿಗಳಿವೆ. ಇದರಲ್ಲಿ ಬಸವನ ಸಮಕಾಲೀನನಾದ ನನ್ನಯ್ಯ ಎಂಬ ಶಿವಭಕ್ತನ ಚರಿತ್ರವನ್ನು ಹೇಳಿದೆ. ಒಡ್ಡಿಯದೇಶದ ಕರ್ಣಿಕಾಪುರ ವಾಸಿಯಾದ ನನ್ನಯ್ಯನು ತನ್ನ ಗುರುವಾದ ಸುಜ್ಞಾನಿಯ ತಲೆ ಹೋಯಿ ತೆಂದು ಭ್ರಮಿಸಿ ತನ್ನ ತಲೆಯನ್ನು ಕತ್ತರಿಸಿಕೊಳ್ಳುವುದಕ್ಕೆ ಪ್ರಯತ್ನಿಸಿದಾಗ ಇವನ ಗುರುಭಕ್ತಿಗೆ ಮೆಚ್ಚಿ ಶಿವನು ಇವನನ್ನು ಕೈಲಾಸಕ್ಕೆ ಒಯ್ದನು ಎಂಬುದೇ ಇಲ್ಲಿಯ ಕಥೆ. ಇದು ೧೯೭೮ರಲ್ಲಿ ಕನ್ನಡ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟ ವಾಗಿದೆ. ಗ್ರಂಥದ ಮೊದಲಲ್ಲಿ ಸ್ವಗುರು ರಾಮನಾಥನ ಸ್ತುತಿಯಿದೆ, ಬಳಿಕ ಮುದ್ರಾಪುರದ ಪ್ರಸನ್ನ ರಾಮೇಶ್ವರ, ಪಾರ್ವತಿ, ಗಣಪತಿ, ಸುಬ್ರಮಣ್ಯ, ಸರಸ್ವತಿಯನ್ನು ನೆನೆದಿದ್ದಾನೆ.

**ಷಡಕ್ಷರದೇವ :** (೧೬೫೫) ಈತನು 'ರಾಜಶೇಖರವಿಲಾಸ', 'ಶಬರಶಂಕರ ವಿಲಾಸ', 'ಬಸವರಾಜ ವಿಜಯ', 'ಷಡ ಕ್ಷರ ಮಂತ್ರಸ್ತೋತ್ರ' ಮತ್ತು ಸಂಸ್ಕೃತದಲ್ಲಿ 'ಕವಿಕರ್ಣರಸಾಯನ' ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಜನ್ಮಸ್ಥಳ ಮಳವಳ್ಳಿ ತಾಲ್ಲೂಕಿನ ದನುಗೂರು. ತನ್ನ ಗುರುಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ. ರೇವಣಸಿದ್ಧನ ಮಗ ರುದ್ರಮುನಿ ಅವನ ವಂಶೋದ್ಭವ ಉದ್ದಾನಯೋಗಿ, ಅವನ ಶಿಷ್ಯ ಅನ್ನದಾನೀಶ, ಶಿಷ್ಯ ರೇವಣಸಿದ್ಧ, ಈತನು ದನಗೂರು ಮಠದಸ್ವಾಮಿ ಯಾಗಿದ್ದನು, ಇವನ ಶಿಷ್ಯ ಚಿಕ್ಕವೀರದೇಶಿಕ, ಇವನ ಶಿಷ್ಯನೇ ಷಡಕ್ಷರದೇವ. ಇವನು ಎಳಂದೂರು ಮಠಕ್ಕೆ ಸ್ವಾಮಿಯಾಗಿ ಅಲ್ಲಿಯೇ ಲಿಂಗೈಕ್ಯನಾದನು. ರಾಜಶೇಖರ ವಿಲಾಸವನ್ನು ಶಕ ೧೫೭೬ (ಕ್ರಿಸ್ತಶಕ ೧೬೫೫) ನೆಯ ಜಯ ಸಂವತ್ಸರದಲ್ಲಿ, ಬಸವ ರಾಜ ವಿಜಯವನ್ನು ಶಕ ೧೫೯೭ (ಕ್ರಿಸ್ತಶಕ ೧೬೭೫) ರಲ್ಲಿ ರಚಿಸಿದಂತೆ ತಿಳಿಯುತ್ತದೆ 'ಉಭಯ ಕವಿತಾ ವಿಶಾರದ' ಎಂಬ ಬಿರುದು ಇದ್ದಿತು. ತನ್ನ ಹನ್ನೊಂದನೆಯ ವರ್ಷದ ಎಳಮೆಯಲ್ಲಿಯೇ ತನಗೆ ಕವಿತಾಶಕ್ತಿ ಉಂಟಾಯಿತೆಂದೂ 'ಸಕ್ಕದ ಗಬ್ಬ ಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್ ಚಿಕ್ಕಸಮುಣ್ಮುವಂತೆ ಪೊಗಳುತ್ತಿರೆ ಮೊಕ್ಕಳಮಾಗಿ ಸರ್ವರಸಮೊಪ್ಪಿರೆ ಪೇಳ್ದೆಂ (ರಾಜಶೇ. ೧–೭೧) ಎಂದು ಹೇಳಿದ್ದಾನೆ.

ಷಡಕ್ಷರದೇವನೇ ಈ ಯುಗದ ವೀರಶೈವ ಚಂಪೂಕಾರರಲ್ಲಿ ಶ್ರೇಷ್ಠನು. ಮೈಸೂರು ಅರಸು ಚಿಕ್ಕದೇವಾರಾಜನ ಕಾಲ ದಲ್ಲಿ ಕನ್ನಡಸಾಹಿತ್ಯಕ್ಕೆ ಬಂದ ಮರುಸುಗ್ಗಿಯಲ್ಲಿ ಷಡಕ್ಷರಿ ತನ್ನ ರಸಗಾನವನ್ನು ಚಂಪೂಕಾವ್ಯಗಳಲ್ಲಿ ಬೆರಸಿದನು. ಅವನಿಂದ'ಚಂಪು' ವಿಗೆ ತುಂಬುಕಳೆ ಬಂದಿತು. ಈತನ 'ರಾಜಶೇಖರವಿಲಾಸ' ಮನೆ ಮನೆಯ ಮನಮನದ ಕಾವ್ಯವಾಗಿ ಬಹುಜನಪ್ರಿಯವಾಗಿದೆ.

**ರಾಜಶೇಖರ ವಿಳಾಸ :** ಹದಿನಾಲ್ಕು ಆಶ್ವಾಸಗಳಲ್ಲಿ ಹರಡಿದೆ. ಸತ್ಯೇಂದ್ರ ಚೋಳನ ಮಗನಾದ ರಾಜಶೇಖರನ ವೀಥಿ ವಿಹಾರದಲ್ಲಿ ತಿರುಕೊಳವಿನಾಚಿಯ ಮಗು ಸಾಯಲು ರಾಜನು ಮಗನಿಗೆ ಮರಣಾಂತ ದಂಡನೆಯನ್ನು ವಿಧಿಸಿ ತಾನು ಮೃತಿ ಹೊಂದಿದನು, ಮಂತ್ರಿ ಮೊದಲಾದವರು ಜೀವಬಿಟ್ಟರು, ಶಿವನು ಪ್ರಸನ್ನನಾಗಿ ಎಲ್ಲರಿಗೂ ಮುಕ್ತಿಯನ್ನು ಕೊಟ್ಟನು ಎಂಬುದೇ ಕಥಾಸಾರ. ತಮಿಳಿನಲ್ಲಿ ಪಿಳ್ಳೈನಯನಾರ್ ಹೇಳಿದ್ದ ಈ ಕಥೆಯನ್ನು ಮಲ್ಲಣಾರ್ಯನು 'ಭಾವಚಿಂತಾರತ್ನ' ಎಂಬ ವರ್ಣಕ ಗ್ರಂಥವಾಗಿ ರಚಿಸಿದನು. ಅದನ್ನು ಹರೀಶ್ವರನ ಕವಿತಾಮಾರ್ಗವನ್ನೇ ಅನುಸರಿಸಿ ತಾನು ವಸ್ತುಕ ರೂಪವಾಗಿ ರಚಿಸಿದಂತೆಯೂ ಇದನ್ನು ಕೇವಲ ಒಂದು ವರ್ಷದಲ್ಲಿಯೇ ಮುಗಿಸಿದಂತೆಯೂ ಹೇಳಿದ್ದಾನೆ.

ಗ್ರಂಥಾವತಾರದಲ್ಲಿ ಶಿವಸ್ತುತಿಯಿದೆ, ಬಳಿಕ ಪಾರ್ವತಿ ಸ್ವಗುರು ಚಿಕವೀರ ದೇಶಿಕ, ಗಣೇಶ, ಷಣ್ಮುಖ, ನಂದಿ, ವೀರ ಭದ್ರ ಬಸವ, ಚನ್ನಬಸವ, ಪ್ರಭುದೇವ, ಸಿದ್ಧರಾಮ, ಸಿದ್ದಲಿಂಗಯತಿ, ನಿಜಗುಣ ಶಿವಯೋಗಿ, ರೇಣುಕ, ರಾಮ, ಪಂಡಿತ, ಮರುಳಾರ್ಯರನ್ನು ಸ್ಮರಿಸಿದ್ದಾನೆ.

ಮಹಾಕಾವ್ಯದ ಲಕ್ಷಣಗಳಾದ ಹದಿನೆಂಟರಲ್ಲಿಯೂ ಷಡಕ್ಷರದೇವ ಸೀಮಾಪುರುಷ. ಕಾವ್ಯದ ಉದ್ದಕ್ಕೂ ಕಥೆಯ ರಚನೆಯ ಜೊತೆಗೆ ಸಾಮಯಿಕ ಶ್ರದ್ಧೆ ವಿಶೇಷವಾಗಿರುವುದನ್ನು ಈ ಮಹಾಕಾವ್ಯದಲ್ಲಿ ಕಾಣಬಹುದು.

**ಬಸವರಾಜ ವಿಜಯ :** ಇದಕ್ಕೆ 'ವೃಷಭೇಂದ್ರ ವಿಜಯ' ಎಂಬ ಹೆಸರು ರೂಢಿಯಾಗಿದೆ. ನಲವತ್ತೆರಡು ಆಶ್ವಾಸಗಳು. ಇವರಲ್ಲಿ ಶರಣ ತಿಂಥಿಣಿಯಲ್ಲಿ ಭಕ್ತಿಯ ಮೇರುವೆಂದು ಪ್ರಖ್ಯಾತನಾದ ಬಸವೇಶ್ವರನ ಜೀವನಚರಿತ್ರೆಯನ್ನು ಹೇಳಿದೆ. ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ ಬರೆದ ದ್ವಿಪದಿ ಬಸವಪುರಾಣವೇ ಇದಕ್ಕೆ ಮೂಲ. ಕನ್ನಡದಲ್ಲಿ ಈ ಮೊದಲು ಇದನ್ನು ಭೀಮಕವಿ (೧೩೬೯) ವರ್ಣಕ ಗ್ರಂಥವಾಗಿ ರಚಿಸಿದನು. ಶಂಕರಕವಿ ಅದನ್ನು ಸಂಸ್ಕೃತಕ್ಕೆ ಪರಿವರ್ತಿಸಿದನು. ಇದನ್ನೇ ತಾನು ಕನ್ನಡದಲ್ಲಿ ಚಂಪೂರೂಪದಲ್ಲಿ ರಚಿಸಿದಂತೆ ಕವಿ ಹೇಳಿದ್ದಾನೆ. ಗ್ರಂಥಾವತಾರದಲ್ಲಿ ಶಿವನ ಸ್ತುತಿಯಿದೆ. ಬಳಿಕ ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ, ಬಸವೇಶನೇಮೊದಲಾದವರನ್ನು ಸ್ತುತಿಸಿದ್ದಾನೆ.

**ಶಬರಶಂಕರ ವಿಳಾಸ :** ಐದು ಆಶ್ವಾಸಗಳ ಖಂಡಕಾವ್ಯ. ಪರಶಿವನ ಹದಿನೈದನೆಯ ಲೀಲೆಯಾದ ಶಬರಲೀಲೆಯನ್ನು ಇಲ್ಲಿ ವರ್ಣಿಸಿದೆ. ಗ್ರಂಥದ ಆರಂಭದಲ್ಲಿ ಶಿವಸ್ತುತಿಯಿದೆ. ಬಳಿಕ ಕವಿ ಪಾರ್ವತಿ, ವೃಷಭ, ಪುರಾತನರು, ಷಣ್ಮುಖ, ವೀರಭದ್ರ, ನಂದಿ, ಭೃಂಗಿ, ರೇಣುಕ, ದಾರುಕ, ಗಣೇಶ, ಚತುರಾಚಾರ್ಯರನ್ನು ಪ್ರಾರ್ಥಿಸಿದ್ದಾನೆ.

ಶಬರಶಂಕರ ವಿಲಾಸ ಚಿಕ್ಕಗ್ರಂಥವಾದರೂ ಉತ್ತಮ ಕಾವ್ಯಾಂಶಗಳಿಂದ ಕೂಡಿದ ಅಪರೂಪ ಚಂಪೂಕೃತಿಗಳಲ್ಲಿ ಒಂದೆನಿಸಿದೆ. ಕನ್ನಡ ಮಹಾಕವಿಗಳಲ್ಲಿ ಷಡಕ್ಷರದೇವ ಬಹುಶ್ರುತನಾದ ಕವಿ. ಕನ್ನಡ–ಸಂಸ್ಕೃತ ಈ ಉಭಯ ಭಾಷೆಗಳ ಮೇಲೆ ಅಪಾರವಾದ ಯಾಜಮಾನ್ಯವನ್ನು ಹೊಂದಿ, ವಿವಿಧ ರಸ ಭಾವಗಳಿಗನುಸಾರವಾಗಿ ತನ್ನ ಶೈಲಿಯನ್ನು ಅಳವಡಿಸಿಕೊಂಡು ಲಾಲಿತ್ಯ, ಮಾಧುರ್ಯ, ಮಾರ್ದವ, ಅರ್ಥವ್ಯಕ್ತಿತ್ವದ ಗುಣಗಳಿಗೆ ಮಹಾಕವಿಯ ಶೈಲಿ ಆದರ್ಶವಾಗಿದೆ. ಶೈಲಿ ಸಂಸ್ಕೃತ ಭೂಯಿಷ್ಠವಾದರೂ ದೇಸಿಯ ಲಾಸ್ಯ ಅಲ್ಲಲ್ಲಿ ಉಂಟು.

**ಇಮ್ಮಡಿ ಗುರುಸಿದ್ಧ :** (ಮುರಿಗೆಯ ಸ್ವಾಮಿ) (೧೭೨೦) ಈತನು ಹಾಲಾಸ್ಯ ಪುರಾಣವನ್ನು ಬರೆದಿದ್ದಾನೆ. ಈತನು ಶೂನ್ಯಸಿಂಹಾಸನದ ಪರಂಪರೆಯಲ್ಲಿ ಬಂದ ಚಿತ್ರದುರ್ಗದ ಮಠಾಧಿಪತಿಯಾಗಿ ಒಂಬತ್ತನೆಯ ಪಟ್ಟವನ್ನು ಅಲಂಕರಿಸಿದ್ದನು.

**ಹಾಲಾಸ್ಯ ಪುರಾಣ :** ನಾಲ್ಕು ಕಾಂಡ, ಅರುವತ್ತಾರು ಆಶ್ವಾಸ, ಮೂರು ಸಾವಿರದ ಆರುನೂರ ಮೂವತ್ತೇಳು ಪದ್ಯಗಳು, ಅಲ್ಲಲ್ಲಿ ತ್ರಿಪದಿಗಳೂ, ರಗಳೆಗಳೂ ಇವೆ. ಇದರಲ್ಲಿ ಮಧುರೆಯ ಸುಂದರೇಶ್ವರನು ಚತುಷ್ಷಷ್ಟಿ ಲೀಲೆಗಳನ್ನು ನಟಿಸಿದ ಕಥೆಯನ್ನು ಹೇಳಿದೆ. ಈ ಕಥೆಯನ್ನು ಮೊದಲು ಶಿವನು ಪಾರ್ವತಿಗೂ ಬಳಿಕ ಅಗಸ್ತ್ಯನು ಋಷಿಗಳಿಗೂ ಹೇಳಿದಂತೆ ತಿಳಿಯುತ್ತದೆ. ಪರೀಶ, ಚನ್ನವೀರೇಶ್ವರ, ಕರಿಬಸವ ಮತ್ತು ಚನ್ನಬಸವದೇವ ಇವರುಗಳ ಇಷ್ಟಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಇದನ್ನು ಈ ಹಿಂದೆ ಸೋದೆಯ ಪ್ರಭುವಾದ ಸದಾಶಿವರಾಜ 'ವರ್ಣಕ'ವಾಗಿ ಬರೆದಿದ್ದಂತೆಯೂ ಅದನ್ನು ತಾನು 'ವಸ್ತುಕ'ವಾಗಿ ರಚಿಸಿದಂತೆಯೂ ಹೇಳಿದ್ದಾನೆ. ಗ್ರಂಥಾವತಾರದಲ್ಲಿ ಸುಂದರೇಶ್ವರನ ಸ್ತುತಿಯಿದೆ. ಬಳಿಕ ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ, ನಂದಿ, ಭೃಂಗಿ, ರೇಣುಕ, ಬಸವ, ಮಡಿವಾಳ ಮಾಚಯ್ಯರನ್ನು ಸ್ತುತಿಸಿದ್ದಾನೆ.

ಹಾಲಾಸ್ಯ ಪುರಾಣವನ್ನು ಕನ್ನಡದಲ್ಲಿ ಹಲವಾರು ಜನ ಬರೆದಿದ್ದಾರೆ. ಸೋದೆಯ ಸದಾಶಿವರಾಜ (೧೬೭೪), ಇಮ್ಮಡಿ ಗುರುಸಿದ್ಧ (೧೭೨೦), ವೆಂಕಟೇಶ (೧೭೪೦), ಕಳಲೆ ನಂಜರಾಜ (೧೭೪೦), ಮುಮ್ಮಡಿ ಕೃಷ್ಣರಾಜ (೧೮೬೮) ಮೊದಲಾದವರು. ಚಂಪೂ ಕಾವ್ಯಗಳಲ್ಲಿ ಇದು ದೊಡ್ಡದು.

**ಲಿಂಗಣ್ಣ :** (೧೭೫೦) ಈತನು 'ಕೆಳದಿನೃಪ ವಿಜಯ' ರಚಿಸಿದ್ದಾನೆ. 'ಕೆಳದೀ ವರ ಬಸವೇಂದ್ರಾಶ್ರಿತ' ಎಂದು ಹೇಳಿಕೊಂಡಿರುವುದರಿಂದಲೂ 'ಮೆರೆವೀ ಸತ್ಕೃತಿಯಂ ತಾಂ ವಿರಚಿಸಿದೆಂ ಸಕಲನೃಪ ಶಿರೋಮಣಿ ಕೆಳದೀವರ ಬಸವೇಂದ್ರಾಶಿತ ಭೂಸುರ ಕುಲಮಣಿ ವೆಂಕಪಾತ್ಮಜಂ ಲಿಂಗಬುಧಂ' ಎಂಬುದರಿಂದಲೂ ಕವಿಯ ಹೆಸರು ಲಿಂಗ, ಲಿಂಗಣ್ಣ ಅಥವಾ ಲಿಂಗಣಾರ್ಯ ಎಂದಿರಬೇಕು*

**ಕೆಳದಿನೃಪ ವಿಜಯ :** ಹನ್ನೆರಡು ಆಶ್ವಾಸನೆಗಳಿವೆ. ಕಾವ್ಯ ನೇರವಾಗಿ ಸಮುದ್ರ ವರ್ಣನೆಯಿಂದಲೇ ಪ್ರಾರಂಭವಾಗುತ್ತದೆ. ಯಾರ ಸ್ತುತಿಯೂ ಇಲ್ಲ. ಹಿಂದಿನಿಂದ ನಡೆದುಬಂದ ಸಂಪ್ರದಾಯ ಇದರಲ್ಲಿ ಇಲ್ಲ. ಕಾವ್ಯಲಕ್ಷಣಗಳಲ್ಲಿ ಒಂದಾದ ಇಷ್ಟ ದೇವತಾಸ್ತುತಿ, ಕವಿಹೊಗಳಿಕೆ, ಕುಕವಿನಿಂದೆ ಯಾವುದೂ ಇಲ್ಲ. ಇದೊಂದು ವಿನೂತನ ಮಾರ್ಗದಲ್ಲಿ ಬಂದ ಕಾವ್ಯ.

**ಕುಮಾರವಿಭು :** (೧೮೮೫) ಈತನು 'ಭಿಕ್ಷುಕ ಮಹೇಶ ವಿಲಾಸ'ವನ್ನು ಬರೆದಿದ್ದಾನೆ. ಧಾರವಾಡ ಜಿಲ್ಲೆಯ ಹಾನುಗಲ್ ವಿರಕ್ತಮಠದ ಸ್ವಾಮಿಯಾಗಿದ್ದನು. ಶಕ ೧೭೪೪ ನೆಯ ಚಿತ್ರಭಾನು(ಕ್ರಿ. ಶ. ೧೮೨೨) ವಿನಲ್ಲಿ ಬರೆದಂತೆ ತಿಳಿಸಿದ್ದಾನೆ.

* ಈ ಕವಿಯು ವೀರಶೈವನಲ್ಲ. ಕೆಳದಿಯ ವೀರಶೈವ ಅರಸರಚರಿತ್ರೆ ಇವನು ಬರೆದ ಈ ಕಾವ್ಯದಲ್ಲಿ ಉಕ್ತವಾಗಿದೆ. (ಸಂ)

**ಭಿಕ್ಷುಕ ಮಹೇಶ ವಿಲಾಸ :** ಮೂರು ಪ್ರಕರಣಗಳಿವೆ. ಶಿವನು ದ್ವಾರಾವತಿಗೆ ಹೋಗಿ ಭಿಕ್ಷಾಟನೆ ಮಾಡಿದ ಕಥೆ. ಪೂರ್ವದಲ್ಲಿ ಗುರುಲಿಂಗವಿಭು ವರ್ಣಕದಲ್ಲಿ ಹೇಳಿದ ಭಿಕ್ಷಾಟನೆಚರಿತ್ರೆಯನ್ನು ತಾನು ಗುರುಸಿದ್ಧದೇಶಿಕನ ಅಪ್ಪಣೆ ಮೇರೆಗೆ ವಸ್ತುಕ ರೀತಿಯಲ್ಲಿ ಬರೆದಂತೆ ಕವಿ ಹೇಳಿದ್ದಾನೆ.

**ಬಸವಪ್ಪಶಾಸ್ತ್ರಿ :** (೧೮೪೩–೧೮೯೧) 'ಅಭಿನವ ಕಾಳಿದಾಸ' ಎಂಬ ಬಿರುದನ್ನು ಪಡೆದ ಕವಿವರೇಣ್ಯ. ಇವರ ಮೂಲ ಪುರುಷರು ಮುರುಡು ಬಸವ ಸ್ವಾಮಿಗಳು. ಬೆಂಗಳೂರು ಜಿಲ್ಲಾ ನಾಗಸಂದ್ರ ಗ್ರಾಮದ ರುದ್ರಾಕ್ಷಿ ಮಠಾಧಿಕಾರಿಗಳಾದ ಶ್ರೀ ಮಹದೇವಶಾಸ್ತ್ರಿಗಳು ಮೈಸೂರು ಮಹಾರಾಜರಾದ ಕೃಷ್ಣರಾಜ ಒಡೆಯರ ಪುರೋಹಿತರಾಗಿ ರಾಜಾಶ್ರಯ ಗಳಿಸಿಕೊಂಡಿದ್ದರು. ಇವರ ಮಗನೇ ಬಸಪ್ಪಶಾಸ್ತ್ರಿ. ಈತನು ೧೮೪೩ರಲ್ಲಿ ಹುಟ್ಟಿದನು. ವಿದ್ವನ್‌ಮಂಡಳಿಯಲ್ಲಿ ತಮ್ಮ ಬಾಲ್ಯವನ್ನು ಕಳೆದು ಹದಿನೆಂಟ ನೆಯ ವಯಸ್ಸಿನಲ್ಲಿಯೇ ಕವಿತಾಶಕ್ತಿಯನ್ನು ಪ್ರದರ್ಶಿಸಿ, ಮಹಾರಾಜರ ಅಪ್ಪಣೆಯಂತೆ ಸಂಸ್ಕೃತದಲ್ಲಿ 'ಬಿಲ್ವವೃಕ್ಷ ಪೂಜಾವಿಧಿ' ಯನ್ನೂ ಕನ್ನಡದಲ್ಲಿ 'ಕೃಷ್ಣರಾಜಾಭ್ಯುದಯ' ಎಂಬ ಚಂಪೂ ಗ್ರಂಥವನ್ನೂ ಬರೆದರು. ಅನಂತರ ಚಾಮರಾಮ ಒಡೆಯರಿಗೆ ವಿದ್ಯಾಗುರುಗಳಾಗಿಯೂ, ಆಸ್ಥಾನ ಕವಿಗಳಾಗಿಯೂ ಇದ್ದರು. ಶಾಕುಂತಲ, ರತ್ನಾವಳಿ, ವಿಕ್ರಮೋರ್ವಶೀಯ, ಮಾಲತೀ ಮಾಧವ, ಚಂಡಕೌಶಿಕ ಮೊದಲಾದ ಸಂಸ್ಕೃತದ ಕನ್ನಡಾನುವಾದ ನಾಟಕಗಳನ್ನು ಶೂರಸೇನ ಚರಿತೆ, (ಇಂಗ್ಲೀಷ್ ಕವಿ ಷೇಕ್ಸ್ ಪಿಯರ್‌ನ ಓಥೆಲೋ ನಾಟಕದ ಕನ್ನಡಾನುವಾದ), ಭರ್ತೃಹರಿಯ ನೀತಿ ಶತಕ, ಶೃಂಗಾರ ಶತಕ,ವೈರಾಗ್ಯ ಶತಕ, ಶಂಕರ ಶತಕ, ನೀತಿಸಾರಸಂಗ್ರಹ, ಸಾವಿತ್ರೀಚರಿತೆ, ಶ್ರೀ ಹರ್ಷಚರಿತೆ, ರೇಣುಕವಿಜಯ, ದಮಯಂತೀಸ್ವಯಂವರ ಮೊದಲಾದ ಕನ್ನಡ ಗ್ರಂಥಗಳನ್ನು ರಚಿಸಿದ್ದಾರೆ. **ದಮಯಂತೀಸ್ವಯಂವರ :** ನಾಲ್ಕು ಆಶ್ವಾಸಗಳಿವೆ. ಮೊದಲಲ್ಲಿ ಈಶನ ಸ್ಮರಣೆಯಿದೆ. ಆಮೇಲೆ ಪಾರ್ವತಿ. ಗಣಪತಿ, ಸರಸ್ವತಿಯನ್ನು ಪ್ರಾರ್ಥಿಸಿ ಪೂರ್ವಕವಿಗಳನ್ನು ಪ್ರಾರ್ಥಿಸಿದ್ದಾರೆ. **ರೇಣುಕ ವಿಜಯ :** (ಅಪೂರ್ಣ ಕೃತಿ). ಸುಮಾರು ಒಂದನೂರಾ ಐವತ್ತುನಾಲ್ಕು ಕಂದ, ವೃತ್ತಗಳಿವೆ. ಆಶ್ವಾಸಗಳಾಗಿ ವಿಭಾಗಿಸಿಲ್ಲ. ರೇಣುಕರ ಸ್ತುತಿಯೊಡನೆ ಪ್ರಾರಂಭವಾಗುತ್ತದೆ. ನಂತರ ಶಂಕರ, ಗಿರಿಜೆ, ಗಣಪತಿ, ಷಣ್ಮುಖ, ವೀರಭದ್ರ, ಬಸವೇಶ, ಚನ್ನಬಸವೇಶ, ಪ್ರಭುದೇವ, ಸಿದ್ಧಲಿಂಗ, ಸಿದ್ಧರಾಮ ಶರಣರನ್ನು ಸ್ತುತಿಸಿ ಹರಿಹರ, ರಾಘವಾಂಕ, ನಿಜಗುಣ, ಷಡಕ್ಷರಿ ಮೊದಲಾದ ಶಿವಕವಿ ಗಳನ್ನು ಪ್ರಾರ್ಥಿಸಿದ್ದಾರೆ.

**ಶ್ರೀ ಗೌರೀಶಂಕರ ಸ್ವಾಮಿಗಳು :** ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಠಾಧಿಪತಿಗಳಾಗಿ ಕಾವ್ಯ ರಚಿಸಿದ ಅನೇಕ ಗುರು ಗಳಿದ್ದರೂ ಗೌರೀಶಂಕರ ಮಹಾಸ್ವಾಮಿಗಳು ಮಹಾ ಪ್ರತಿಭಾಸಂಪನ್ನರಾಗಿ, ಅನುಭಾವಿಗಳಾಗಿ ತಮ್ಮ ಕಾವ್ಯವನ್ನು ರಚಿಸಿದ್ದಾರೆ. 'ಪ್ರತಿಭಾನಂ ಕಾವ್ಯವಿದ್ಯಾಪ್ರಚಯ ಪರಿಚಯಮುಂ ವೃದ್ಧ ಸೇವಾನುರಾಗಂ, ಸತತ ಅಭ್ಯಾಸ ಪ್ರಯತ್ನಂ ನಿಯತಂ ಕವಿತೆಗೆ ಕಾರಣಂ' ಎನ್ನುವ ಮಾತಿಗೆ ಸಾಕ್ಷಿಯಾಗಿ ಬಾಳಿದವರೆಂದರೆ ಶ್ರೀ ಗೌರಿಶಂಕರ ಸ್ವಾಮಿಗಳು. ಮೈಸೂರಿನ ಚಾಮುಂಡಿಬೆಟ್ಟದ ತಪ್ಪ ಲಿನ ಪಂಚಗವಿಮಠದ ಅಧ್ಯಕ್ಷರಾಗಿದ್ದು ಲೀಲಾಜಾಲವಾಗಿ ಸಾಹಿತ್ಯಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕದ ಶಿವಶರಣರ ತಿಂಥಿಣಿಯಲ್ಲಿ ಶರಣ ಸತಿ ಲಿಂಗಪತಿ ಭಾವದ ವೈರಾಗ್ಯನಿಧಿ ಅಕ್ಕಮಹಾದೇವಿಯ ವಚನಗಳನ್ನೇ ಆಧಾರವಾಗಿಟ್ಟುಕೊಂಡು ಇಪ್ಪತ್ತನೆಯ ಶತಮಾನದಲ್ಲಿ ಅಪೂರ್ವವಾದ ಚಂಪೂ ಗ್ರಂಥವನ್ನು ರಚಿಸಿದ್ದಾರೆ. ಈ ಪುರಾಣ ಆಕಾರದಲ್ಲಿ ಚಿಕ್ಕದಾದರೂ ಕಲಾ ಪರಿಣತಿಯಲ್ಲಿ ಉತ್ತುಂಗ ಶೃಂಗವನ್ನೇರಿ ನಿಂತಿದೆ. 'ಇದರಲ್ಲಿ ವಚನಕಾರರ ದರ್ಶನ ಸಂಪತ್ತು, ಹರಿಹರನ ಭಕ್ತಿಯ ಆವೇಶ, ಷಡಕ್ಷರಿಯ ಶಬ್ದ ಸಂಪತ್ತು ಮತ್ತು ನಿಸರ್ಗದ ವರ್ಣನೆ, ರಾಘವಾಂಕನ ಕಥೆಯ ಓಟ, ಸಂಸ್ಕೃತ ಮಹಾಕವಿ ಬಾಣನ ಹೃದ್ಯವಾದ ಗದ್ಯದ ಪಡಿಯಚ್ಚುಗಳು ಅವತರಿಸಿ ಸಂಗಮಗೊಂಡು ಒಂದೇ ಮೈಯಾಂತು ನಿಂತಿವೆ' ಎಂದಿದ್ದಾರೆ ವಿಮರ್ಶಕರು. ಮೈಸೂರು ಅರಮನೆಯ ಪಂಚಗವಿಮಠದ ಅಧ್ಯಕ್ಷರಾಗಿದ್ದ ಶ್ರೀಗಳು ಮಹಾಜ್ಞಾನಿಗಳೂ, ಘನವಿದ್ವಾಂಸರೂ, ಸತ್ಕವಿಗಳೂ, ಶಿವ ಯೋಗಿಗಳೂ ಆಗಿ ತಮ್ಮದೇ ಆದ ವಿಶೇಷವಾದ ಗುಣಗಳಿಂದ ಕೀರ್ತಿಯನ್ನು ಪಡೆದವರು.

**ಅಕ್ಕಮಹಾದೇವಿ ಚಂಪು :** ಐದು ಆಶ್ವಾಸಗಳ ಅಚ್ಚಾಗಿರುವ ಭಾಗ ದೊರೆತಿದೆ. ಮೊದಲ ಒಂಭತ್ತು ಪುಟಗಳಲ್ಲಿ. ಮಹಾಕವಿ ಹರಿಹರನ ಮಹಾದೇವಿಯಕ್ಕನ ರಗಳೆ ಮತ್ತು ಚನ್ನಬಸವಾಂಕನ ಮಹಾದೇವಿಯಕ್ಕ ಪುರಾಣಕ್ಕಿಂತ ಭಿನ್ನವಾಗಿ ಚಂಪೂ ಶೈಲಿಯಲ್ಲಿ ರಚಿತವಾಗಿದೆ. ಆದರೆ ಗ್ರಂಥ ಪೂರ್ಣಗೊಳ್ಳದೆ ಮಹಾದೇವಿಯಕ್ಕ ಕಲ್ಯಾಣಕ್ಕೆ ಬಂದಲ್ಲಿಗೆ ಕಥೆ ನಿಂತಿದೆ.

ಈ ಯುಗದ ಸೋಜಿಗವೆಂದರೆ ದೊರೆಯುವ ಹಲಕೆಲವು ಚಂಪೂ ಗ್ರಂಥಗಳನ್ನು ವೀರಶೈವ ಕವಿಗಳೇ ಹೆಚ್ಚಾಗಿ ರಚಿಸಿ ರುವುದು ಜೈನ ಕವಿಗಳು ಚಂಪೂವಿನ ಹತ್ತಿರ ಹಾಯಲಿಲ್ಲವೆಂದರೂ ಸರಿ. ಬಹುಶಃ ಇದಕ್ಕೆ ಕಾರಣವೆಂದರೆ ಜೈನ ವ್ಯಾಸಂಗ ಪರಂಪರೆ ಕುಂಠಿತವಾಗಿರಬೇಕು. ಪ್ರೌಢಕಾವ್ಯದ ಅಭ್ಯಾಸ ಅಭಿರುಚಿಗಳು ಕಡಿಮೆಯಾಗಿರಬೇಕು. ಜೊತೆಗೆ ದೇಸೀಗಬ್ಬದ ಅಗತ್ಯವನ್ನು ಉಳಿದವರಂತೆ ಜೈನರೂ ಅರಿತುಕೊಂಡು ವಾತಾವರಣಕ್ಕೆ ಸರಿಯಾಗಿ ಹೊಂದಿಕೊಂಡರು. ಅದೇ ವೀರಶೈವ ಪುನ ರ್ಘಟನೆಯ ಆಂದೋಲನದ ಮೂಲಕ ಪ್ರೌಢ ವ್ಯಾಸಂಗವು ಮಠ ಮಠಗಳಲ್ಲಿ ಹೆಚ್ಚುತ್ತಹೋಯಿತು. ಅದರ ಪರಿಣಾಮವಾಗಿ

ಷಟ್ಪದಿ–ಸಾಂಗತ್ಯ ಕಾವ್ಯಗಳಲ್ಲಿಯೂ ಲಕ್ಷಣವುಳ್ಳ ವರ್ಣಕ, ಲಕ್ಷಣವಿರದ ವರ್ಣಕ ಎಂದು ಎರಡು ಪ್ರಕಾರಗಳು ತಲೆದೋರಿದವು. ಅನೇಕ ವೀರಶೈವ ಪಂಡಿತರು 'ವರ್ಣಕಕ್ಕೆ ಲಕ್ಷಣವಿಲ್ಲ' ಎಂಬ ಅಪವಾದವನ್ನು ತೊಡೆದು ಹಾಕಲು ಕಂಕಣತೊಟ್ಟು ದೇಸೀಯ ಛಂದಸ್ಸಿನಲ್ಲಿ ಮಾರ್ಗದ ಬಿಗುಹನ್ನು ತರಲು ಹವಣಿಸಿದರು. ಅವರಲ್ಲಿ ಚನ್ನಬಸವಪುರಾಣದ ವಿರೂಪಾಕ್ಷ ಪಂಡಿತನು ಪ್ರಖ್ಯಾತನಾದನು. ಇದೇ ರೀತಿ ಚಂಪೂಕಾವ್ಯಗಳನ್ನು ಬರೆದು ಪ್ರೌಢಿಮೆಯನ್ನು ಮೆರೆಯುವ ಪರಂಪರೆ ಆರಂಭವಾಯಿತು. ವೀರಶೈವ ಚಂಪೂಕಾರರಲ್ಲಿ ಚಂದ್ರಕವಿ, ಸುರಂಗಕವಿ, ಪ್ರಭುಗ, ವೀರಭದ್ರರಾಜ, ಸದಾಶಿವಯೋಗಿ, ಮುರಿಗೆ ದೇಶೀಕೇಂದ್ರ, ಶಾಂತವೀರ ದೇಶಿಕ, ಕವಿಮಾದಣ್ಣ, ಷಡಕ್ಷರದೇವ ಇವರನ್ನು ಉಲ್ಲೇಖಿಸಬೇಕು. ಇವರೆಲ್ಲರೂ ಬಹುಶಃ ಕಾವ್ಯ ವಿಷಯ, ರಸಪ್ರತಿಪಾದನೆ. ಶಿವಕವಿತ್ವದೃಷ್ಟಿಯಲ್ಲಿ ಪರಿಹರನ ಮಾರ್ಗವನ್ನು ಅನುಸರಿಸಿದರು. ವರ್ಣನೆ–ಅಲಂಕಾರ–ಕವಿಸಮಯಗಳಲ್ಲಿ ಕನ್ನಡ ಚಂಪೂಕಾವ್ಯ ಇಲ್ಲವೆ ಸಂಸ್ಕೃತ ಮಹಾಕಾವ್ಯದ ದಾರಿಯಲ್ಲಿ ಹೆಜ್ಜೆಯಿಟ್ಟರು.

ಷಡಕ್ಷರಿದೇವನೇ ೧೭ನೆಯ ಶತಮಾನದ ವೀರಶೈವ ಚಂಪೂಕಾರರಲ್ಲಿ ಶ್ರೇಷ್ಠನು. ಚಂಪೂರೂಪಕ್ಕೆ ಮತ್ತೆ ಕಳೆ ಬಂದಿತು. ಆ ಕಾವ್ಯಗಳು ಸಂಸ್ಕೃತ ಮಾರ್ಗದ ಬಿಗುವಿಗೂ ಕನ್ನಡ ದೇಸೀಯ ಸರಲತೆಗೂ ಅವೆರಡರ ಲಲಿತವಾದ ಮಿಶ್ರಣಕ್ಕೂ ಒಳ್ಳೆಯ ಉದಾಹರಣೆಯಾಗಿವೆ. ಅವನ ನಂತರ ಚಂಪೂವಿನಲ್ಲಿ ವಿದ್ಯುತ್ ಪ್ರವಾಹವಾಗುವಂತೆ ರಚಿಸಿದವರು ಶ್ರೀ ಗೌರೀಶಂಕರ ಸ್ವಾಮಿಗಳು. ಇಪ್ಪತ್ತನೆಯ ಶತಮಾನದಲ್ಲಿ ಇಂತಹ ಪ್ರೌಢ ಚಂಪೂಗ್ರಂಥವನ್ನು ರಚಿಸಿದ ಶ್ರೀಗಳ ಪ್ರತಿಭೆ, ಪಾಂಡಿತ್ಯ, ವಿಮರ್ಶಾಜ್ಞಾನ ಅದ್ಭುತವಾದುದು. ಕನ್ನಡ ಚಂಪೂಚರಿತ್ರೆಯಲ್ಲಿ ಬಹು ವಿಸ್ತಾರವಾದ ಭಾಗವನ್ನು ಆಕ್ರಮಿಸಿಕೊಂಡಿರುವ ವೀರಶೈವ ಚಂಪೂ ಹಲವಾರು ಗುಣಗಳಿಂದ ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿದೆ. ಎಲ್ಲ ಚಂಪೂಕಾರರೂ ತಮ್ಮ ಕೈಲಾದಮಟ್ಟಿಗೆ ಸೇವೆ ಸಲ್ಲಿಸಿ ಕನ್ನಡ ಸಾಹಿತ್ಯ ಸರಸ್ವತಿಗೆ ತಮ್ಮ ಸಂಪ್ರದಾಯ ಮೇರೆಯಲ್ಲಿ ತಮ್ಮ ತಮ್ಮ ಪಾಲಿನ ಅಲಂಕಾರಮಾಡಿ ಅವಳ ಶೋಭೆಯನ್ನು ಅಧಿಕಗೊಳಿಸಿ ಅಜರಾಮರರಾಗಿದ್ದಾರೆ.

## ವೀರಶೈವ ರಗಳೆಯ ಸಾಹಿತ್ಯ

—ತ.ಸು. ಶಾಮರಾಯ

೧

ಮಾನವ ಇತಿಹಾಸದಂತೆ ಸಾಹಿತ್ಯದ ಇತಿಹಾಸವೂ ಕಾಲಕಾಲಕ್ಕೆ ಬದಲಾಯಿಸುತ್ತಾ ಹೋಗುತ್ತದೆ. ಭಾಷೆ ಜೀವಂತವಾಗಿದೆಯೆಂಬುದಕ್ಕೆ ಇದೊಂದು ಸಾಕ್ಷಿ. ಆದರೆ ಈ ಬದಲಾವಣೆಯೆಂಬುದು ಒಂದೇ ದಿನದಲ್ಲಿ, ಇದ್ದಕ್ಕಿದ್ದಂತೆಯೇ ನಡೆದು ಹೋಗುವ ಕೋಲಾಹಲವೇನೂ ಅಲ್ಲ. ಇದಕ್ಕೆ ವಿಸ್ತಾರವಾದ, ಸುದೀರ್ಘವಾದ ಒಂದು ಹಿನ್ನೆಲೆ ಇರುತ್ತದೆ. ಈಗ ಸುಮಾರು ಹದಿನೈದು ಶತಮಾನಗಳಿಂದ ಹರಿದುಬಂದಿರುವ ಕನ್ನಡ ಸಾಹಿತ್ಯದ ಇತಿಹಾಸವೇ ಇದಕ್ಕೆ ಒಂದು ಉದಾಹರಣೆ. ಹತ್ತನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯದ 'ಸ್ವರ್ಣ ಯುಗ'ವನ್ನು ಸ್ಥಾಪಿಸಿದ 'ಆದಿಕವಿ ಪಂಪ' ತನ್ನ ಕವಿತಾಶಕ್ತಿಯ ಹಿರಿಮೆಯನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾ 'ಹಿಂದಿನಕಬ್ಬಮನೆಲ್ಲಮಿಕ್ಕಿಮೆಟ್ಟಿದವು ಸಮಸ್ತಭಾರತಮುಮಾದಿಪುರಾಣ ಮಹಾಪ್ರಬಂಧಮುಂ' ಎಂದು ಘೋಷಿಸಿದ. ಆತನ ಮಾತೇನೋ ಬಹುಮಟ್ಟಿಗೆ ನಿಜ. ಆತನಿಗಿಂತ ಹಿಂದೆ ಹಲವು ಶತಮಾನಗಳಿಂದ ಹುಲಸಾಗಿ ಬೆಳೆದುಕೊಂಡು ಬಂದಿದ್ದ ಕನ್ನಡ ಸಾಹಿತ್ಯ ಆತನ ತರುವಾಯ ಗುರುತಿಸುವುದಕ್ಕೂ ಸಾಧ್ಯವಿಲ್ಲದಷ್ಟು ಖಿಲವಾಗಿಹೋಯಿತು. ಆದರೆ ಪಂಪಕವಿ ನಿರ್ಮಿಸಿದ ಹೆದ್ದಾರಿ ಚಿರಶಾಶ್ವತವಾಗಿ ಉಳಿಯಿತೇನು ? ಎರಡು ಶತಮಾನಗಳು ಉರುಳುವಷ್ಟರಲ್ಲಿ ಆತನು ಸ್ಥಾಪಿಸಿದ್ದ 'ಚಂಪೂ ಚಕ್ರಾಧಿಪತ್ಯ' ಕುಸಿದು ಬಿದ್ದು, 'ದೇಸೀಸಾಹಿತ್ಯದ ಪ್ರಜಾಪ್ರಭುತ್ವ'ವೊಂದು ಕನ್ನಡಸಾಹಿತ್ಯ ಜಗತ್ತಿನಲ್ಲಿ ಸ್ಥಾಪಿತವಾಯಿತು. ಇನ್ನೂರು ವರ್ಷಗಳವರೆಗೆ ತಾನೇ ತಾನಾಗಿ ವಿಜೃಂಭಿಸಿದ 'ವೀರಯುಗ' ಅಸ್ತಂಗತವಾಗಿ, ನೂತನವಾದ 'ಸ್ವತಂತ್ರಯುಗ'ವೊಂದು ಮೂಡಿ ಬಂದಿತು. ಇದೇ ವೀರಶೈವ ಸಾಹಿತ್ಯ.

ಭರತಖಂಡದ ಇತರ ಎಲ್ಲ ಸಾಹಿತ್ಯಗಳಂತೆ ಕನ್ನಡ ಸಾಹಿತ್ಯಬೆಳೆದು ಬಂದಿರುವುದಾದರೂ ಧರ್ಮನಿರೂಪಣೆಯ ಸಾಧನವಾಗಿ ನಮ್ಮ ಆಧ್ಯಾತ್ಮಿಕಜ್ಞಾನಗಂಗೆಗೆಲ್ಲ ವೇದಗಳೇ ಗಂಗೋತ್ರಿಯಪ್ಪೆ ? ಗೀರ್ವಾಣ ಭಾಷೆಯಲ್ಲಿರುವ ಈ ಜ್ಞಾನಧೇನುವಿನ ಅಮೃತಪ್ರಾಶನದ ಹಕ್ಕು, ಶಕ್ತಿ ಯಾವುದೋ ಒಂದು ವಿಶಿಷ್ಟವರ್ಗಕ್ಕೆ ಮೀಸಲಾಗಿ ಹೋಯಿತು. ಶ್ರೀಸಾಮಾನ್ಯನಿಗೆ ಇದು ಮೊಲದ ಕೋಡಾಯಿತು. ಇದನ್ನು ಪ್ರತಿಭಟಿಸಿಯೆ ಬೌದ್ಧ, ಜೈನಮತಗಳ ಸ್ಥಾಪನೆಯಾದುದು, ಈ ಮತಗಳು ಶ್ರೀಸಾಮಾನ್ಯನ ಭಾಷೆಯಾಗಿದ್ದ ಪ್ರಾಕೃತಕ್ಕೆ ಆ ಧರ್ಮಧೇನುವನ್ನು ಎಳೆತಂದರು. ಬೌದ್ಧರು ಕನ್ನಡದಲ್ಲಿ ಗ್ರಂಥಗಳನ್ನು ಬರೆದರೋ ಇಲ್ಲವೋ ಗೊತ್ತಿಲ್ಲ. ಜೈನರು ಕನ್ನಡದಲ್ಲಿ ಬರೆದ ಧರ್ಮಗ್ರಂಥಗಳು ಈಗಲೂ ಉಳಿದುಕೊಂಡಿವೆ. ಆದರೆ ಅವುಗಳನ್ನು ಬರೆದ ಜೈನಕವಿಗಳು ರಾಜಾಶ್ರಯವನ್ನು ಅವಲಂಬಿಸಿದುದರಿಂದ ಅವರ ಕೃತಿಗಳು ರಾಜಾಸ್ಥಾನದ ಘನತೆ ಗೌರವಗಳ ಪ್ರತೀಕದಂತೆ ಪಂಡಿತಮಾನ್ಯವಾದ ಭವ್ಯಕೃತಿಗಳಾದವು. ಅನೇಕ ವೇಳೆ ವಿಷಯನಿರೂಪಣೆಗಿಂತ ಪಾಂಡಿತ್ಯಕ್ಕೆ ಹೆಚ್ಚು ಮನ್ನಣೆ

ದೊರೆತುದರಿಂದ ಅವು ಶ್ರೀ ಸಾಮಾನ್ಯನಿಗೆ 'ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾದುವು'. ಈ ಅನ್ಯಾಯವನ್ನು ಕಂಡು ತಾತ್ತ್ವಿಕವಾದ ಪ್ರತಿಭಟನೆ ಆಗಾಗ ನಮ್ಮ ಸಾಹಿತ್ಯದಲ್ಲಿ ಇಣಿಕಿಹಾಕಿತಾದರೂ ಅದು ಕೇವಲ'ಬದನೆಕಾಯಿ ವೇದಾಂತ' ವಾಯಿತು. ಈ ನಿಟ್ಟಿನಲ್ಲಿ ನಿಜವಾಗಿಯೂ ಕೋಲಾಹಲಕರವಾದ ಕ್ರಾಂತಿಯಾದುದು ಸುಮಾರು ಹನ್ನೆರಡನೆಯ ಶತಮಾನದ ಹಿಂಚುಮುಂಚಿನಲ್ಲಿ. ಆಗಕಾಣಿಸಿಕೊಂಡ ವೀರಶೈವ ವಚನಕಾರರು ಕನ್ನಡ ಸಾಹಿತ್ಯದ ಭಾವ-ಭಾಷೆಗಳೆರಡಕ್ಕೂ ಹೊಸ ತಿರುವೊಂದನ್ನು ಕೊಡಲು ಕಾರಣಕರ್ತರಾದರು.

ವಚನಕಾರರ ಹೆಗ್ಗುರಿ ಕಾವ್ಯ ಸೃಷ್ಟಿಯೇನೂ ಆಗಿರಲಿಲ್ಲ. ಅವರು ಬಯಸಿದುದು ಜನಜಾಗೃತಿ, ಶ್ರೀ ಸಾಮಾನ್ಯನ ಉದ್ಧಾರ; ಆಧ್ಯಾತ್ಮಜ್ಞಾನ ಆಬಾಲವೃದ್ಧರಿಗೆ ಅರ್ಥವಾಗಿ ಅನುಸರಣ ಸಾಧ್ಯವಾಗಬೇಕು, ಅನುಕರಣ ಯೋಗ್ಯವಾಗಬೇಕು. ಆದ್ದರಿಂದ ಅವರು ತಮ್ಮ ಬೋಧನೆಗೆ ಸಾಧ್ಯವಾದಷ್ಟೂ ಶ್ರೀಸಾಮಾನ್ಯನ ಭಾಷೆಯನ್ನೆ ಬಳಸಿದರು. ನಾಲ್ಕಾರು ಪುಟ್ಟಪುಟ್ಟ ವಾಕ್ಯಗಳಲ್ಲಿ ಮಹಾತತ್ತ್ವವನ್ನು ಒಳಗೊಂಡಿದ್ದ ಅವರ 'ವಚನ'ಗಳು ಕೇಳುಗರ ಹೃದಯವನ್ನು ಸೂರೆಗೊಂಡು, ಚಿರಶಾಶ್ವತವಾದ ಮುದ್ರೆಯನ್ನು ಒತ್ತಲು ಸಮರ್ಥವಾಗಿದ್ದವು. ಸರಳವಾದ, ಸುಲಭವಾದ, ಆದರೂ ಶಕ್ತಿಯುತವಾದ ಈ ವಚನಗಳು 'ಕನ್ನಡದ ಉಪನಿಷತ್ತು'ಗಳು. ಇವು ನಮ್ಮ ಸಾಹಿತ್ಯದ ಸೃಷ್ಟಿಕರ್ತರಿಗೆ ನೂತನವಾದ ಒಂದು ಪ್ರೇರಣೆಯನ್ನು, ಪ್ರಚೋದನೆಯನ್ನು, ಪ್ರಬೋಧನೆಯನ್ನು ನೀಡಿದವು. ಇದರ ಫಲವಾಗಿ, ಅಲ್ಲಿಯವರೆಗೆ ಬೆಳೆದುಬಂದಿದ್ದ ಚಂಪೂ ಛಂದಸ್ಸಿನ ಮಾರ್ಗೀಶೈಲಿಯನ್ನು ಕಿತ್ತೆಸೆದು, ಶ್ರೀಸಾಮಾನ್ಯನಿಗೆ ಪರಿಚಿತವಾಗಿದ್ದ ದೇಸೀಛಂದಸ್ಸು, ಶೈಲಿಗಳನ್ನು ಸಾಹಿತ್ಯ ಜಗತ್ತಿನಲ್ಲಿ ಬಿತ್ತಿ ಬೆಳೆಯುವ ಹೊಸ ಪದ್ಧತಿಯೊಂದು ಹುಟ್ಟಿಕೊಂಡಿತು ; ಪ್ರಾಚೀನ ಪುರಾಣೋಕ್ತವಾದ ಕಥೆಗಳನ್ನು ಕಾವ್ಯವಸ್ತುವಾಗಿ ಬಳಸುವುದಕ್ಕೆ ಬದಲಾಗಿ, ತಮ್ಮ ಮಧ್ಯದಿಂದಲೆ ಹುಟ್ಟಿ ಬೆಳದು, ತಮಗೆ ಪರಿಚಿತರಾಗಿಯೂ ಬಾಳಿಗೆ ದಾರಿದೀಪವಾಗಬಲ್ಲ ಸಂತರನ್ನು ಕಾವ್ಯನಾಯಕರನ್ನಾಗಿ ಆರಿಸಿಕೊಳ್ಳುವ ನೂತನ ಸಂಪ್ರದಾಯವೊಂದಕ್ಕೆ ನಾಂದಿಯನ್ನು ಹಾಡಿದ ಕೀರ್ತಿ ಹರಿಹರದೇವನಿಗೆ ಸಲ್ಲುತ್ತದೆ.

೨

ಮಹಾಕವಿಯೊಬ್ಬನು ಉದಿಸುವುದು ಭುವನದ ಭಾಗ್ಯದಿಂದಂತೆ! ಇಂತಹ ಮಹಾಕವಿಗಳ ವಿರಳಪಙ್ಕ್ತಿಯಲ್ಲಿ ಮಂಡಿಸಲು ಯೋಗ್ಯನಾದವನು ಮಹಾಕವಿ ಹರಿಹರ. ಹಂಪೆಯ ವಿರೂಪಾಕ್ಷನ ಪರಮಭಕ್ತರಾದ ಮಹಾದೇವಭಟ್ಟ-ಶರ್ವಾಣಿ ಎಂಬ ಸಾತ್ವಿಕ ದಂಪತಿಗಳ ಪುಣ್ಯಗರ್ಭದಿಂದ ಹಿರಿಯಮಗನಾಗಿ ಅವತರಿಸಿದನು ಹರಿಹರ. ಆತನ ತಂಗಿ ರುದ್ರಾಣಿ. ಈ ಅಣ್ಣ-ತಂಗಿಯರು ತಾಯ್ತಂದೆಗಳ ಕಣ್‌ಮಣಿಗಳಾಗಿ ಬೆಳೆದು ದೊಡ್ಡವರಾದರು. ರುದ್ರಾಣಿ ಹಂಪೆಯ ಶಿವಭಕ್ತನೊಬ್ಬನನ್ನು ಮದುವೆಯಾಗಿ, ಮಹಾಕವಿ ರಾಘವಾಂಕವನ್ನು ಕನ್ನಡಕ್ಕೆ ನೀಡಿದಳು, ಹರಿಹರನು ಮಾಯಿದೇವನೆಂಬ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡಿ, ಗಣಿತಶಾಸ್ತ್ರದಲ್ಲಿ ನಿಪುಣನಾದನೆಂದು ತೋರುತ್ತದೆ. ಕೆಲಕಾಲ ಈತ ದ್ವಾರಸಮುದ್ರದ ಹೊಯ್ಸಳ ರಾಜ ನರಸಿಂಹ ಬಲ್ಲಾಳನಲ್ಲಿ ಕರಣಿಕನಾದನು. ಆದರೆ ಕಾರಣಿಕ ಪುರುಷನಾಗಲು ಅವತರಿಸಿದ್ದ ಹರಿಹರನಿಗೆ ಕರಣಿಕವೃತ್ತಿ ಸರಿಹೊಗಲಿಲ್ಲ. ಕವಿ ಸಹಜವಾದ ನಿರಂಕಶಮತಿಯಾಗಿದ್ದ ಹರಿಹರ ಸೇವಾವೃತ್ತಿಯನ್ನು ಕಾಲಿನಿಂದ ಒದೆದು, ಹಂಪೆಯ ವಿರೂಪಾಕ್ಷನ ಕೈಂಕರ್ಯವನ್ನು ಕೈಕೊಂಡನು. ವಿರೂಪಾಕ್ಷನ ಪೂಜೆ, ಸತ್ಕಾವ್ಯಗಳ ಸೃಷ್ಟಿ–ಇವುಗಳಲ್ಲಿ ಇಹ–ಪರಗಳೆರಡನ್ನೂ ಸಾಧಿಸುತ್ತಾ ಬಾಳನ್ನು ಸವೆಸಿ ಸಾರ್ಥಕಜೀವಿಯಾದನು.

ಸಾಹಿತ್ಯವೆಂಬುದು ಪ್ರತಿಭೆ, ಪಾಂಡಿತ್ಯ, ಲೋಕಾನುಭವಗಳೆಂಬ ತ್ರಿವೇಣೀ ಸಂಗಮದ ದೇವಗಂಗೆಯಷ್ಟೆ? ಹರಿಹರದೇವನು ಈ ಮೂರು ತುಂಬು ನೆರೆಯಿಂದ ಹರಿದುಬಂದು ಸೇರಿರುವ ಒಂದು ದೇವ ತಟಾಕ. ಹಂಪೆಯ ವಿರೂಪಾಕ್ಷನ ಕೃಪಾಕಟಾಕ್ಷದಿಂದ ಪ್ರತಿಭೆಯು ಆತನ ಹುಟ್ಟಿನೊಡನೆಯೆ ಹುಟ್ಟಿ ಬೆಳೆದು ಬಂದಿತ್ತು, ಪಾಂಡಿತ್ಯದಲ್ಲಿ ಆತನೊಬ್ಬ ಸವ್ಯಸಾಚಿ; ಕನ್ನಡ ಸಂಸ್ಕೃತಗಳೆರಡರಲ್ಲೂ ಆತನಿಗೆ ಅದ್ಭುತವಾದ ಪ್ರಭುತ್ವವಿತ್ತು. ಇದಕ್ಕೆ ಆತನ ಚಂಪೂಕಾವ್ಯವಾದ ಗಿರಿಜಾ ಕಲ್ಯಾಣವೇ ಸಾಕ್ಷಿ. ಇದನ್ನು ಬರೆಯುವಾಗ ಆತ ಬಿಸಿ ನೆತ್ತರಿನ ತರುಣನಾಗಿದ್ದನೊ ಏನೋ! ತನ್ನ ಕಾವ್ಯ 'ನೀರಸರರಿವಂತೇನಿದು ತಾರೆಲೆಯೆ, ಬೀದಿವಾಡೆ, ನೆರವಿಯ ತುಮುಕೆ?' ಎಂದು ಕಾವ್ಯಾರಂಭದಲ್ಲಿ ಭುಜಾಸ್ಫಾಲನೆಮಾಡಿ, ತನ್ನ ಕಾವ್ಯ ರಾಜಸಭೆ, ಬ್ರಹ್ಮಸಭೆ, ದೇವಸಭೆಗಳಲ್ಲಿ ಮಂಡನ ಯೋಗ್ಯವೆಂದು ಭಾವಿಸಿದ್ದ ವ್ಯಕ್ತಿ; ಅದನ್ನು ಬರೆದು ಮುಗಿಸುವಷ್ಟರಲ್ಲಿ ಹರಭಕ್ತಿ ರಕ್ತಗತವಾಗಿ, ತಾನು ಕೀಳ್ಗಂಡಿದ್ದ ಜನಸಾಮಾನ್ಯರಲ್ಲಿ ಮಮತೆ, ಕರುಣೆಗಳು ಮೂಡಿ ಮರವಾಗಿರಬೇಕು ; ಆ ಮರದ ಸುಮಧುರ ಫಲಗಳೇ ಆತನ ರಗಳೆಗಳು.

ರಗಳೆಯ ಛಂದಸ್ಸನ್ನು ಹರಿಹರದೇವ ಹೊಸದಾಗಿಯೇನೂ ಸೃಷ್ಟಿಸಲಿಲ್ಲ. ಅದನ್ನು ಚಂಪೂ ಕಾವ್ಯಗಳಲ್ಲಿ ಕ್ವಚಿತ್ತಾಗಿ ಬಳಸುವ ಪದ್ಧತಿ ಪಂಪನ ಕಾಲದಿಂದಲೂ ನಡೆದು ಬಂದಿತ್ತು. ಆದರೆ ಸಮಗ್ರ ಗ್ರಂಥವೊಂದನ್ನು ರಗಳೆಗಳಲ್ಲಿಯೆ ಬರೆಯುವ ಸಾಹಸಕ್ಕೆ ಯಾರೂ ಕೈಹಾಕಿರಲಿಲ್ಲ. ಸವೆದ ಹಾದಿಯನ್ನು ಬಿಟ್ಟು ಹೊಸ ಹೆದ್ದಾರಿಯೊಂದನ್ನು ಸೃಷ್ಟಿಸುವುದೇ ಹಿರಿತನದ ಕುರುಹಷ್ಟೆ? ಹರಿಹರನದು ಅಂತಹ ಹಿರಿಯ ಚೇತನ. ಆತನು ಶಿವಶರಣರ ಜೀವನ ಚರಿತ್ರೆಗಳನ್ನು ಬರೆಯಬೇಕಾಗಿತ್ತು. ಕಥ

ನಾತ್ಮಕವಾದ ಆ ಗ್ರಂಥಗಳಲ್ಲಿನ ನಿರೂಪಣೆ ನದಿಯ ಪ್ರವಾಹದಂತೆ ನಿರರ್ಗಳವಾಗಿ ಹರಿಯಬೇಕಾಗಿತ್ತು. ಚಂಪುವಿನಲ್ಲಿ ಬಳಸುವ ಕಂದ, ವೃತ್ತಗಳು ಪರಿಮಿತ ಆಳತೆಯುಳ್ಳವು. ಆತನು ಹೇಳಬೇಕಾಗಿದ್ದ ನೀಳ್ಗತೆಗಳಿಗೆ ಅವು ಹೊಂದಿಕೊಳ್ಳುವಂತಿರಲಿಲ್ಲ. ಹಾಸಿಗೆಗೆ ತಕ್ಕಂತೆ ಕಾಲು ಕತ್ತರಿಸಿಕೊಳ್ಳಲು ಹರಿಹರನ ಮನಸ್ಸು ಒಪ್ಪಲಿಲ್ಲ. ಕಾಲು ಚಾಚುವಷ್ಟು ಹಾಸಿಗೆ ಇರಲೆಂದುಕೊಂಡ; ಪಾದ ಸಂಖ್ಯೆಗಳ ನಿಯಮವಿಲ್ಲದ ರಗಳೆಯನ್ನು ಬಳಸಿಕೊಂಡ. ಇದೊಂದು ಮಾತ್ರಾಗಣ ಘಟಿತವಾದ ದ್ವಿಪದೀ ಮಾಲೆ. ಇದರಲ್ಲಿ ಮಂದಾನಿಲ, ಲಲಿತ, ಉತ್ಸಾಹ ಎಂಬ ಮೂರು ಪ್ರಭೇದಗಳಿವೆ. ಹರಿಹರದೇವನು ತನ್ನ ಕಥಾನಿರೂಪಣೆಗೆ ಈ ಮೂರನ್ನೂ ಬಳಸಿಕೊಂಡ. ಆದರೆ ತನ್ನ ರಗಳೆಗಳಲ್ಲಿ ಆದಿ, ಅಂತ್ಯ ಪ್ರಾಸಗಳನ್ನು ಬಳಸಿದುದರಿಂದ ಸುದೀರ್ಘವಾದ ಕಥೆಗಳಲ್ಲಿ ಓದುಗರಿಗೂ ಕೇಳುವವರಿಗೂ ಬೇಸರ ಉಂಟಾಗಬಹುದು. ಹರಿಹರ ಸಂಪ್ರದಾಯ ಶರಣನೇನೂ ಅಲ್ಲ. ಆತನು ಒಂದು ಹೆಜ್ಜೆ ಮುಂದಿಟ್ಟು ಪ್ರಾಸನಿಯಮವನ್ನು ಕಿತ್ತು ಹಾಕಿದ್ದರೆ ಕಾವ್ಯ ಮತ್ತೂ ರಮ್ಯವಾಗುತ್ತಿತ್ತೆಂಬ ಭಾವನೆ ಆತನಿಗೆ ಹೊಳೆಯಲಿಲ್ಲವೊ ಏನೋ ! ಹೊಸಗನ್ನಡ ಕವಿಗಳು ಇದನ್ನು ಅರ್ಥಮಾಡಿಕೊಂಡರು ; ಕವಿ ಕುವೆಂಪುರವರ 'ಶ್ರೀರಾಮಾಯಣ ದರ್ಶನಂ' ಇದಕ್ಕೆ ಅತ್ಯುತ್ತಮ ಉದಾಹರಣೆ. ವೈವಿಧ್ಯವಿಲ್ಲದ ಬೇಸರವನ್ನು ಕಳೆಯುವುದಕ್ಕಾಗಿ ಹರಿಹರಕವಿ ಗದ್ಯವನ್ನು ಬಳಸಿದ. ದೀರ್ಘವಾದ ಜೀವನ ಚರಿತ್ರೆಗಳನ್ನು ಬರೆಯುವಾಗ, ಅವುಗಳನ್ನು ಬೇರೆಬೇರೆ ಸ್ಥಲಗಳಾಗಿ ವಿಂಗಡಿಸಿ, ಒಂದು ಸ್ಥಲವನ್ನು ರಗಳೆಯಲ್ಲಿಯೂ, ಮತ್ತೊಂದನ್ನು ಗದ್ಯದಲ್ಲಿಯೂ ಬರೆದಿದ್ದಾನೆ. ಆತನ ಕಾಲಕ್ಕೆ ಗದ್ಯಕಾವ್ಯಗಳು ಹೆಚ್ಚಾಗಿ ಬಳಕೆಯಲ್ಲಿರಲಿಲ್ಲ. ಚಂಪೂಕಾವ್ಯಗಳಲ್ಲಿ ಕಥಾಸರಪಣಿಯ ಒಂದು ಕೊಂಡಿಯಾಗಿ ಮಾತ್ರ ಗದ್ಯವನ್ನು ಬಳಸುತ್ತಿದ್ದರು. ಹರಿಹರದೇವ ಇಡೀ ಒಂದು ಸ್ಥಲವನ್ನೆ ಗದ್ಯದಲ್ಲಿ ರಚಿಸಿ, ರಗಳೆಯಂತೆ ಗದ್ಯವೂ ನಿರೂಪಣೆಗೆ ಸೊಗಸಾಗಿ ಹೊಂದಿಕೊಳ್ಳುವುದನ್ನು ತೋರಿಸಿದ್ದಾನೆ. ಆತನ ಗದ್ಯಕ್ಕೆ ಮೇಲ್ಪಂಕ್ತಿಯಾದುದು ಚಂಪೂ ಗದ್ಯವಲ್ಲ; ವಚನಕಾರರ ಗದ್ಯ. ಕನ್ನಡ ಗದ್ಯ ಸಾಹಿತ್ಯ ಹರಿಹರನ ಕೈಲಿ ಮೈತುಂಬಿಕೊಂಡು ಕಳೆಗೂಡಿತು. ಕನ್ನಡ ಗದ್ಯಸಾಹಿತ್ಯಚರಿತ್ರೆಯಲ್ಲಿ ಆತನೊಂದು ಮೈಲಿಗಲ್ಲು, ಒಟ್ಟಿನಲ್ಲಿ ಕಥಾಕಾವ್ಯರಚನೆಗೆ ಹೊಸಮಾರ್ಗವೊಂದು ಅಗತ್ಯವೆಂದು ಕಂಡುಹಿಡಿದು, ಇದನ್ನು ಬಳಸುವುದರಲ್ಲಿ ಆತನು ಮೆರೆದ ಪ್ರಜ್ಞಾತಿಶಯ, ಆತ್ಮವಿಶ್ವಾಸ, ಧೈರ್ಯ, ಸಾಹಸಗಳು ಸ್ತೋತ್ರಾರ್ಹವಾದುವು.

೩

'ಹನ್ನೆರಡನೆಯ ಶತಮಾನದ ಧಾರ್ಮಿಕ ಕ್ರಾಂತಿ' ಎಂಬ ಮೆಕ್ಕಲು ಭೂಮಿಯ ಮೇಲೆಯೇ ಬೆಳೆದು ನಿಂತಿರುವ ಮಹೋನ್ನತ ವಟವೃಕ್ಷ ಹರಿಹರ ಭೂಮಿಯಲ್ಲಿ ಬೇರುಬಿಟ್ಟು ಆಕಾಶದಲ್ಲಿ ಅರಳಿರುವ ಆ ಮಹಾವೃಕ್ಷದ ಎತ್ತರ ಬಿತ್ತರಗಳನ್ನು ಮಹತ್ತಾಗಿ ಬೆಳೆಸಲು ಸಹಾಯಕವಾದ ಬಿಳಲುಗಳಂತಿವೆ, ಆತನ ರಗಳೆಗಳು. ಅವುಗಳ ಸಂಖ್ಯೆ ಅರವತ್ತೊಂದು ಎಂದು ಈಗ ನಿಶ್ಚಯಿಸಲಾಗಿದೆ.* ಇವು ಒಂದೊಂದೂ ಹರಪಾರಮ್ಯವನ್ನು ಸಂಸ್ಥಾಪಿಸಹೊರಟು ಕೃತಕೃತ್ಯವಾಗಿವೆ. ಈ ರಗಳೆಗಳನ್ನು ಸ್ಥೂಲವಾಗಿ ಕಥನಾತ್ಮಕ, ಭಾವಗೀತಾತ್ಮಕ–ಎಂದು ಎರಡು ಪಂಗಡಗಳಾಗಿ ವಿಂಗಡಿಸಬಹುದು. ಕಥನಾತ್ಮಕವಾದ ರಗಳೆಗಳಲ್ಲಿ ಪುರಾತನರ ಕಥೆಗಳಿಗೆಲ್ಲ ಶೆಕ್ಕಿಳಾರ್ ಎಂಬ ತಮಿಳು ಕವಿಯ 'ಪೆರಿಯಪುರಾಣಂ' ಮೂಲ. ಆದರೆ ಹರಿಹರದೇವನು ಮೂಲದಿಂದ ಬೇಕಾದಷ್ಟು ಬದಲಾವಣೆಗಳನ್ನು ಮಾಡಿದ್ದಾನೆ. ಇತರ ಶರಣರ ಕಥೆಗಳಿಗೆ ಆಕರ? ಇವರಲ್ಲಿ ಹಲವರನ್ನು ಆತನು ಪ್ರತ್ಯಕ್ಷವಾಗಿಯೇ ಕಂಡಿದ್ದಿರಬಹುದು. ಇನ್ನು ಅನೇಕರ ವಿಚಾರದಲ್ಲಿ ಅವರನ್ನು ಕಂಡವರು ಹೇಳಿದ ಕಥೆಗಳು ಆತನಿಗೆ ಆಧಾರವಾಗಿರಬಹುದು. ಈ ಎಲ್ಲ ರಗಳೆಗಳಲ್ಲಿಯೂ ಹರಿಹರದೇವನ ವ್ಯಕ್ತಿತ್ವ ತನ್ನ ಚಿರಮುದ್ರೆಯನ್ನು ಒತ್ತಿದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

---

* ಶ್ರೀಮಾನ್ ಎಚ್. ದೇವೀರಪ್ಪನವರ 'ಶರಣ ಚರಿತ ಮಾನಸಂ' ಮುನ್ನುಡಿಯನ್ನು ನೋಡಿ – ಪುರಾತನರು ೨೪. ೧) ತಿರುನೀಲಕಂಠ ೨) ಇಹಪ್ಪಗೆಯಾಂಡ, ೩) ಇಳೆಯಾಂಡ ಗುಡಿಮಾರ, ೪) ಚೇದಿರಾಜ, ೫) ಮೆಚಿಮಿಂಡದೇವ, ೬) ಅಮರನೀತಿ, ೭) ಇಚಿಭಕ್ತ, ೮) ಏಣಾಧಿನಾಥ, ೯) ಕಣ್ಣಪ್ಪ, ೧೦) ಕೊಂಗುಲಿಯ ಕಲಿ, ೧೧) ಮಾನಕಂಜರ, ೧೨) ಅರಿವಾಳ್ತಾಂಡ. ೧೩) ಆನಯನಾರ್, ೧೪) ಬಲಘಾಂಡಮೂರ್ತಿ, ೧೫) ನಮಶ್ಶಿವಾಯ ಮುರುಘ, ೧೬) ರುದ್ರಪಶುಪತಿ, ೧೭) ತಿರುನಾಳ ಪ್ರೋವ, ೧೮) ತಿರುಕುಱುಪೆತೊಂಡ, ೧೯) ಚಂಡೇಶಪಿಳ್ಳೆ, ೨೦) ವಾಗೀಶ, ೨೧) ಕಾರಿಕಾಲಮ್ಮೆ, ೨೨) ಕಲಿಕಾಮದೇವ, ೨೩) ಮಾದರಚೆನ್ನಯ್ಯ, ೨೪) ನಂಬಿಯಣ್ಣ.

ಇತರ ರಗಳೆಗಳು ೩೭—೧) ಓಹಿಲ, ೨) ಉದ್ಭಟ, ೩) ಹಲಾಯುಧ, ೪) ಸಾಮವೇದಿ, ೫) ಮಳೆಯರಾಜ, ೬) ಭೋಗಣ್ಣ, ೭) ಕುಂಬಜಿ ಗುಂಡಯ್ಯ, ೮) ಪ್ರಭುದೇವರು, ೯) ಭೃಂಗಿ, ೧೦) ವೀರಭದ್ರ, ೧೧) ಮುಸುಟಿಯ ಚೌಡಯ್ಯ, ೧೨) ಸುರಗಿಯ ಚೌಡಯ್ಯ, ೧೩) ಶಂಕರದಾಸಿಮಯ್ಯ, ೧೪) ಮಲುಹಣ, ೧೫) ವೈಜಕ್ಕವ್ವೆ, ೧೬) ಏಕಾಂತರಾಮಿ ತಂದೆ, ೧೭) ಆದಯ್ಯ. ೧೮) ತೆಲುಗು ಜೊಮ್ಮಯ್ಯ, ೧೯) ಕೇಶಿರಾಜ, ೨೦) ರೇವಣಸಿದ್ಧೇಶ್ವರ, ೨೧) ಮಹಾದೇವಿ ಅಕ್ಕ, ೨೨) ಬಾಹೂರಬೊಮ್ಮಯ್ಯ, ೨೩) ಕೋವೂರ ಬೊಮ್ಮಯ್ಯ, ೨೪) ಬಸವರಾಜದೇವರು, ೨೫) ನಿಂಬಿಯಕ್ಕ, ೨೬) ಹಾವಿನ ಹಾಳ ಕಲ್ಲಿದೇವರು, ೨೭) ಪಿಂಡೋತ್ಪತ್ತಿಯ ರಗಳೆ, ೨೮) ಹಂಪೆಯರಸನ ರಗಳೆ, ೨೯) ವಿಭೂತಿ, ೩೦) ರುದ್ರಾಕ್ಷಿ, ೩೧) ನಮಶ್ಶಿವಾಯ, ೩೨) ಪುಷ್ಪರಗಳೆ, ೩೩) ಲಿಂಗಾರ್ಚನೆ, ೩೪) ಗುಣಸ್ತೋತ್ರ, ೩೫) ಪಂಪಾಕ್ಷೇತ್ರ, ೩೬) ಜಯರಗಳೆ, ೩೭) ಬಾಣ.

ಹರಿಹರ ಕವಿಯ ಭಾವಗೀತಾತ್ಮಕ ರಗಳೆಗಳಲ್ಲಿ ಪಂಚಾಕ್ಷರಿ, ವಿಭೂತಿ, ರುದ್ರಾಕ್ಷಿ ಇತ್ಯಾದಿಗಳ ಮಹಿಮೆಯನ್ನು ಎತ್ತಿ ಹಿಡಿಯುವವುಗಳೆಲ್ಲ ವಸ್ತುನಿಷ್ಠವಾದುವು. ಪಿಂಡೋತ್ಪತ್ತಿ, ಪುಷ್ಪ ಇತ್ಯಾದಿಗಳು ವ್ಯಕ್ತಿನಿಷ್ಠವಾದುವು. ಈ ವ್ಯಕ್ತಿನಿಷ್ಠ ರಗಳೆಗಳಲ್ಲಿ ಹರಿಹರನ ಆತ್ಮಕಥೆ ಸ್ವಲ್ಪ ಮಟ್ಟಿಗೆ ವ್ಯಕ್ತವಾಗಿದೆಯೆಂದು ಪಂಡಿತರು ಊಹಿಸುತ್ತಾರೆ. ಈ ಊಹೆಯಂತೆ ಹರಿಹರ ದೇವನು ಕೆಲಕಾಲವಾದರೂ ಸಂಸಾರಿಯಾಗಿದ್ದು ಜೀವನದ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದನೆಂದು ಹೇಳಬೇಕಾಗುತ್ತದೆ. ಆತನ ಪಿಂಡೋತ್ಪತ್ತಿ ರಗಳೆಯಲ್ಲಿ ಜೀವವು ಗರ್ಭವನ್ನು ಪ್ರವೇಶಿಸಿದಂದಿನಿಂದ ಹುಟ್ಟಿ, ಬೆಳೆದು, ಯೌವನಸ್ಥನಾಗಿ, ಮುಪ್ಪಡರುವವರೆಗಿನ ಕಷ್ಟಕಾರ್ಪಣ್ಯಗಳನ್ನೆಲ್ಲ ಜೀವನದಲ್ಲಿ ಜಿಹಾಸೆ ಹುಟ್ಟಿ, ವೈರಾಗ್ಯ ಒಡಮೂಡುವಂತೆ ರುದ್ರಭೀಕರವಾದ ವರ್ಣನೆಯಿದೆ. ಆತನಿಗೆ ಯೌವನ ಮೂಡಿದಾಗ ತಾಯಿ–ತಂದೆಗಳು ಆತನಿಗೆ ಮದುವೆ ಮಾಡಲೆಂದು ನಿಶ್ಚಯಿಸಿ

> ಪಶುವಿನ ಕೊರಳೊಳೊಂದು ಪಾಶವಂ ಬಿಗಿವಂತೆ। ಮಿಸುಕದಂತಲ್ಲೊಂದು ಎಳೆ ಮರವ ಬಿಗಿವಂತೆ
> ದೈತೆಯಂ ತಂದೊರ್ಬಳಂ ಮದುವೆಯಂ ಮಾಡಿ

ಸಂಸಾರ ಬಂಧನಕ್ಕೆ ಸಿಲುಕಿಸಿದರು. ಈ ದೈತೆಯೊಡನೆ ವಿರಸ ದಾಂಪತ್ಯವಾದುದರಿಂದಲೋ, ದುರ್ಬೋಧರ ಸಹವಾಸದಿಂದಲೋ ಅವನು

> ತಲೆ ಹುಳಿತ ನಾಯಂತೆ ಪುಗವ ಮನೆಯಂ ಪೊಕ್ಕು। ಲಲನೆಯರ ನುಣ್ಣನೆಯ ಚೋಹಕ್ಕೆ ಮನವಿಕ್ಕು

ಅಡ್ಡಹಾದಿ ಹಿಡಿದ, ಕೆಲವು ಕಾಲ—

> ಪುಳಿತ ಹೆಣನಂ ಕಡಿವುತಿರ್ಪ ಪಳೆನಾಯಂತೆ। ಕಳಿತ ಮಾಂಸಕ್ಕಳುಪಿ ತಿಂಬ ಬಳ್ಳುವಿನಂತೆ

ಇಂದ್ರಿಯಕ್ಕಾಳಾಗಿ, ಸಂತತಂ ಯೌವನದ ನರಕದೊಳ್ ಮುಳುಗಿರಲು ಕೈಲಿದ್ದ ಕಾಸೂ, ಮೈಲಿದ್ದ ಕಸುವೂ ಮುಗಿದುಹೋದವು. ಆಗ ವಿಲಾಸದ ಹೆಣ್ಣುಗಳು

> ನಡೆವೆಣನೆ ನುಡಿವೆಣನೆ ಬಾಳ್ವೆಣನೆ ಪೋಗೆಂದು। ಬಡಿಯದಿರು ಬಾಲವಂ ಸುಡು ನಾಯಿ ಥೂ ಎಂದು

ಅವನನ್ನು ಬಡಿದೋಡಿಸಿದರು. ಅವನಿಗೆ ಬುದ್ಧಿ ಬಂತು; ಆದರೆ ಕಾಲ ಮಿಂಚಿತ್ತು. ಮನೆ ಬರಿದು, ಮೈಯಲ್ಲಾ ಸಾಲ, ಬಡತನಕ್ಕೆ ಕೂರೆಬಿದ್ದ ಹಾಗೆ ಮನೆತುಂಬ ಮಕ್ಕಳು. ಒಂದು ಕಡೆ 'ಸಾಲದಿಂ ಸಿಗ್ಗಾಗಿ ಪಲ ಉಪವಾಸಂ ಪತ್ತಿ' ಸಂಕಟ ಪಡುತ್ತಿದ್ದರೆ, ಮತ್ತೊಂದು ಕಡೆ 'ಬಾಲಕರ್ ಬಾಲೆಯರ್ ಕೊಯಿದು ತಿನುತಿರೆ ಪತ್ತಿ'–ಅವರ ಹೊಟ್ಟೆ ಬಟ್ಟೆಗಾಗಿ ಆರಂಭ ಕೈಕೊಂಡ ಅದು ವ್ಯರ್ಥವಾಗಲು ವ್ಯಾಪಾರಕ್ಕೆ ಕೈಹಾಕಿದ. ಅದರಲ್ಲಿ ಲಾಭವಿರಲಿ, ಅಸಲಿಗೇ ಮೋಸವಾದಾಗ ಸೇವಾವೃತ್ತಿಗಿಳಿದ.

> ಮತಿಗೆಟ್ಟು ಧೃತಿಗುಂದಿ ಮರ್ತ್ಯರ್ಗೆ ತೊತ್ತಾಗಿ। ನಡುವಿರುಳು ಪೋಗೆನಲು ನಾಲ್ಗಾವುದಂ ಪೋಗಿ
> ಎಡಹುತಂ ತಾಗುತಂ ಲಘುವಾಗಿ ಮರುಳಾಗಿ

ಜೀವ ರೋಸಿತು. ಭಿಕ್ಷಾಟನೆಯನ್ನು ಕೈಕೊಂಡ. ಆಯ್ಯೋ ಭಿಕ್ಷಾವೃತ್ತಿಯೆ !

> ಎಂಟು ಗೇಣುದ್ದಮಂ ಗೇಣುದ್ದದೊಳ್ ನಿಲಿಸಿ। ಎಂಟು ಮಡಿ ಕಾರ್ಪಣ್ಯಮಂ ಮುಖದೊಳೆಳವಡಿಸಿ
> ನಿಂದವರ್ಗಳಂ ಬೇಡಿ ನೆರೆದವರ್ಗಳಂ ಬೇಡಿ। ಬಂದವರ್ಗಳಂ ಬೇಡಿ ಬಲ್ಲವರ್ಗಳಂ ಬೇಡಿ
> ತಾನುಳಿಯನುಳಿದೆಲ್ಲರನಾವಗಂ ಬೇಡಿ। ಏನೆಂಬೆನೆಲ್ಲಿಯುಂ ಪಡೆಯದೆ ಮೊಗಂ ಬಾಡಿ

ಬಾಳು ಬೇಸರಗೊಂಡಿತು. ಕಟು ಅನುಭವಗಳಿಂದ ಆತನಿಗೆ ಸಂಸಾರ ದುಃಖಮೂಲವೆಂದು ಅರ್ಥವಾಯಿತು. 'ಆನೇಕ ಸಂಸಾರವೇಕೆ ಕೇಳಲೆ ತಂದೆ ; ನೀನು ಎನಗೊಡ್ಡಿದ ಮಹೇಂದ್ರಜಾಲಂ ತಂದೆ' ಎಂದುಕೊಂಡು ಶಿವನ ಕರುಣೆಯನ್ನು ಬೇಡಿದ.

> ನಿತ್ಯ ಲಿಂಗಾರ್ಚನೆಯೊಳಿರಿಸೆನ್ನನೆಲೆ ದೇವ ! ಸತ್ಯ ಶರಣರ ನಡುವೆ ಸಲಿಸೆನ್ನನೆಲೆ ದೇವ !

ಎಂಬ ಆತನ ಆರ್ತನಾದ ಶಿವನನ್ನು ಮುಟ್ಟಿತು. ಆತನ ಕರುಣೆಯಿಂದ ಅವನು ಸರ್ವಸಂಗ ಪರಿತ್ಯಾಗ ಮಾಡಿ ಶಿವಾನಂದದಲ್ಲಿ ತಲ್ಲೀನನಾದ. 'ಪಿಂಡೋತ್ಪತ್ತಿ ರಗಳೆ'ಯಲ್ಲಿ ಜೀವನದ ಪೂರ್ವಾರ್ಧ ಚಿತ್ರಿತವಾಗಿದ್ದರೆ 'ಪುಷ್ಪರಗಳೆ'ಯಲ್ಲಿ ವಿರಕ್ತಜೀವನದ ದಿವ್ಯಸಂದರ್ಶನವಾಗುತ್ತದೆ. ಬೆಳಗಿನ ಜಾವಕ್ಕೆ ಎದ್ದು, ವಿಭೂತಿಯನ್ನು ಧರಿಸಿ, ಹೂವಿನ ಕರಡಿಗೆಯೊಂದನ್ನು ಕೈಲಿ ಹಿಡಿದು, ಶಿವಗೀತೆಗಳನ್ನು ಹರುಷದಿಂದ ಹಾಡುತ್ತಾ, ಶಿವಭಕ್ತರ ಕೀರ್ತಿಯನ್ನು ಕೈವಾರಿಸುತ್ತಾ ಹೊರಹೊರಟ ಕವಿ 'ಪರಿಮಳದ ಸುಗ್ಗಿ, ಸೌರಭದ ಸಂದಣಿ' ಎನಿಪ ಹೂದೋಟಕ್ಕೆ ಬರುತ್ತಾನೆ. ಆತನ ಬಾಯಿ ಹಾಡುತ್ತಿದೆ. ಮನಸ್ಸು ಕುಣಿಯುತ್ತಿದೆ, ಕಣ್ಣು ಅಂದ ಚೆಂದದ ಕುಸುಮ ವೃಂದವನ್ನು ನೋಡಿ ನಲಿಯುತ್ತಿದೆ. ಆತನು,

> ಅಳಿಯರಗದನಿಲನಲುಗದ ರವಿಕರಂ ಪುಗದ। ಬೆಳೆ ಬೆಳೆದು ನಳನಳಿಸಿ ಮಘಮಘಿತ ಕವಲಿಡಿದ

ಇರುವಂತಿಗೆಯನ್ನು ಕಂಡು 'ಪರಶಿವಂಗೋಲೈಪ ಪೂವ ನೀಡೌ' ಎಂದು ಅದನ್ನು ಬೇಡಿ, ತನಿಗೆಂಪು ತೀವಿರ್ದ ಪೊಚ್ಚ ಪೊಸ ಪೂಗಳಂ ಕೊಂಡು, ಕುಣಿಯುತ್ತಾ ಸಂಪಗೆಯ ಬಳಿ ಬರುತ್ತಾನೆ—

ಏನವ್ವ ಸಂಪಗೆಯೆ ಶಿವನ ಸಿರಿಮುಡಿಗಿಂದು। ನೀನೀವ ಪೊಸ ಕುಸುಮಮಂ ನೀಡುನೀಡೆಂದು

ಕೇಳಿ, ಅವುಗಳನ್ನು ಕೊಯ್ದುಕೊಂಡು ಸೇವಂತಿಗೆಯ ಹತ್ತಿರ ಬರುತ್ತಾನೆ. ಪನ್ನೀರ ಪರಿಮಳದ ಆ ಹೂಗಳನ್ನು ಶೇಖರಿಸಿದ ಮೇಲೆ, ಮಲ್ಲಿಗೆ ಮಾಧವಿಗಳನ್ನೂ ಅದಿರ್ಗಂತಿಗಳನ್ನು ಬೇಡಿ ಆಯಾ ಪುಷ್ಪಗಳನ್ನು ಪಡೆದು ಜಾಜಿಯ ಬಳಿಗೆ ಬರುತ್ತಾನೆ—

ಜಾತಿ ನೀನೇ ಸಕಲ ಪುಷ್ಪಜಾತಿಗೆ ಜಾತಿ। ಭೂತೇಶ್ವರನ ಜಡೆಯ ಮುಡಿಗೇರಿದೊಡೆ ಜಾತಿ

ಎಂದು ಅದನ್ನು ಹೊಗಳಿ, ಹೊಸ ಕುಸುಮಗಳನ್ನು ಪಡೆದು ಕೇತಕಿಯ ಬಳಿಗೆ ಬರುತ್ತಾನೆ. ಅದನ್ನು ಕಂಡು ಆತನಿಗೆ

ಹೊರಗೆ ಮುಳ್ಳೊಳಗೆ ಕಂಪಕ್ಕಕ್ಕು ನಿನ್ನ ಪರಿ। ಹೆರೆ ಸೂಡಿದನ ಗುಪ್ತ ಭಕ್ತನಂತಿರ್ಪ ಪರಿ
ಆಹ ದೆಸೆ ದೆಸೆಗೆ ಬೀರುವ ಸುಗಂಧದ ಸೂರೆ। ಆಹ ಕೇತಕಿ ನಿನ್ನ ಪರಿಮಳದ ಪರಿ ಬೇರೆ
ಪರಿಮಳಂ ಸುಳಿಗೊಂಡು ಬೆಳೆದು ಕವಲಿರಿಯಿತ್ತೊ ! ಉರವಣಿಸಿ ಒಳಿವ ಪರಿಮಳಕೆ ಗರಿ ಮೂಡಿತ್ತೊ !

ಎನಿಸುತ್ತದೆ. ಕೇತಕಿಯನ್ನು ಸಂಗ್ರಹಿಸಿದ ಮೇಲೆ ಪಡ್ಡಳಿ, ಬಿಳಿಯ ಕಸ್ತೂರಿ, ಮೊಲ್ಲೆ, ಮರುಗ, ಮಡಿವಾಳಗಳನ್ನು ಮಾತನಾಡಿಸಿ ದವನದ ಬಳಿಗೆ ಬರುತ್ತಾನೆ. ಅದನ್ನು ಕಂಡರೆ ಕವಿಗೆ ಬಲುಪ್ರೀತಿ—

ದವನವೇ ಶಿವನ ಪರಿಮಳದ ಹಬ್ಬವೆ ಬಾರ। ಭುವನದೊಳ್ ನಿನಗೆ ಸರಿಯಿಲ್ಲ ಸೌರಭ ಸಾರ

ಎಂದು ಕುಣಿಯುತ್ತಾ ಹೋಗಿ ಅದನ್ನು ಶೇಖರಿಸುತ್ತಾನೆ. ಸುರಹೊನ್ನೆ, ಕಮಲ, ನೆಯ್ದಿಲೆ, ಚೆಂಗಣಗಿಲೆ–ಹೂಗಳ ಒಂದು ಪುಟ್ಟಕೋಶವೇ ಇಲ್ಲಿ ಕಾಣಿಸಿಕೊಂಡಿದೆ–ಇತ್ಯಾದಿ ಹೂಗಳನ್ನೆಲ್ಲ ಬಿಡಿಸಿಕೊಂಡು, ಒಂದು ಎಳೆಯ ಮಾವಿನ ಮರದ ಕೆಳಗಿದ್ದ ಚಂದ್ರಕಾಂತ ಶಿಲಾತಲದಲ್ಲಿ ಕುಳಿತು, ಹಾಳೆಯೆಲೆಯೊಂದನ್ನು ಹಾಸಿ, ಅದರ ಮೇಲೆ ಪುಷ್ಪಗಳನ್ನೆಲ್ಲ ಸುರಿದು, ಸರಸಿಜ ಸೂತ್ರದಿಂದ ಅವುಗಳ ಮಾಲೆ ಕಟ್ಟುತ್ತಾನೆ. ಅವುಗಳನ್ನು ಆತ ಬಳಸುವ ರೀತಿ ಎಷ್ಟು ಮೃದು ಮಧುರವಾಗಿದೆ !

ಕೈ ಮುಟ್ಟಿ ಮುಟ್ಟದೆ ಮನಂ ಮುಟ್ಟಿ ಕಟ್ಟುತುಂ। ಕೈ ಮರೆದು ಪೂ ಬೀಳೆ ಮೀಗೆ ಸತ್ತು ಹುಟ್ಟುತುಂ
ನೋಡಿದೊಡೆ ಪೂ ಬಾಡುಗೆಂದು ಕಣ್ಮುಚ್ಚುತುಂ। ನಾಡೆ ನೆನೆದೊಡೆ ಕುಂದುಗೆಂದು ಮನ ಬೆಚ್ಚುತುಂ

ಅವುಗಳ ಹಾರವನ್ನು ಕಟ್ಟುತ್ತಾನೆ. ಆ ವೇಳೆಗೆ ದುಂಬಿಗಳು ಹೂಗಳನ್ನರಸುತ್ತಾ ತೋಟಕ್ಕೆ ಬರುತ್ತವೆ. ಅಲ್ಲಿ ಹೂಗಳಿ ಇಲ್ಲ! ಅವು 'ಪರಿಮಳದ ಪಥವಿಡಿದು ಭಕ್ತಕವಿಯ ಬಳಿಗೆ ಬರುತ್ತವೆ. ಆತ ಅವುಗಳನ್ನು ನಿವಾರಿಸುತ್ತಾ

ಬೇಡೆಲೆಲೆ ಹಂಪೆಯರಸನ ಕುಮಾರಂ ಸಿತಗ। ನಾಡಂಬರಂಗಳಂ ಕೊಳ್ಳನಾರಡಿಗೆರಗ
ಅಳಿಯಾಸೆ ಬೇಡ ನಿಮಗಿಲ್ಲಿ ಸೋಲುವರಿಲ್ಲ। ಗಳಗಳನೆ ಬಂದಂತೆ ಮರಳಿ ಗಳಗಳನೆಲ್ಲ

ಎಂದು ಗದರಿಸಿ, ಒಂದೆರಡು ಸಂಪಗೆಯರಲ್ಗಳನ್ನು ಅವುಗಳ ಕಡೆ ಬೀಸಿ ಓಡಿಸುತ್ತಾನೆ. ಅನಂತರ ಪರಮೇಶ್ವರನ ಗುಡಿಗೆ ಬಂದು, ಆ ದೇವದೇವನು ನಿದ್ದೆಯಿಂದ ಏಳುವವರೆಗೂ ಕಾದಿದ್ದು, ಅನಂತರ ಮೆಲ್ಲಗೆ—

ಏನೆನ್ನ ಶಿವನೆ, ಉಪ್ಪವಡಿಸಿರ್ದಾ ತಂದೆ। ಏನಯ್ಯ, ತಳುವಿದ್ದನೆನುತಲಿರ್ದಾ ತಂದೆ
ಅಳಿಗಳೆರಗದ ಗಂಧವಹನಲುಗದಲರ್ಗಳಂ। ಎಳಿಸಿ ತಂದೆಂ, ತಂದೆ ! ದೇವ, ಪೊಸಪೂಗಳಂ

ಎಂದು ಹೇಳುತ್ತಾ ಹತ್ತಿರಕ್ಕೆ ಹೋಗಿ, ಸೇವಂತಿಗೆ ಹೂವಿನ ಪನ್ನೀರಿನಿಂದ ಮುಖ ತೊಳೆದು, ಪರಾಗದ ವಿಭೂತಿಯಿಟ್ಟು, ಕೇತಕಿಯ ನುಣ್ಣೆಸಲ್ಗಳಿಂದ ಶಿವನ ಜಟೆಯ ಸಿಕ್ಕು ಬಿಡಿಸಿ,ಶಶಿಕಳೆ ನೋಯದಂತೆ–ಸುರನದಿ ತುಳುಕದಂತೆ ಅದನ್ನು ಗಂಟುಹಾಕಿ, ಪುಷ್ಪದಿಂದ ಅಲಂಕರಿಸಿ, ಆತನ ಅರ್ಚನೆ ಕೀರ್ತನೆಗಳಲ್ಲಿ ಮೈಮರೆದು, ಆನಂದ ಸಾಗರದಲ್ಲಿ ಓಲಾಡುತ್ತಾನೆ. ಆತನ ಪುಷ್ಪಾಪಚಯ ಪರಶಿವನ ಅಲಂಕರಣದೊಡನೆ ಕಾವ್ಯದೇವಿಯ ಅಲಂಕರಣವಾಗಿಯೂ ತನ್ನ ಅಸ್ತಿತ್ವವನ್ನು ಸಾರ್ಥಕಪಡಿಸಿಕೊಂಡಿದೆ.

ಹರಿಹರದೇವನು ಬರೆದಿರುವ ಮೇಲಿನ ಎರಡು ರಗಳೆಗಳೆ ಸಾಕು, ಆತನ ಹಿರಿತನವನ್ನು ಒರೆಹಚ್ಚುವುದಕ್ಕೆ. ಒಂದರಲ್ಲಿ ಮಾನವ ಜೀವನ ವ್ಯಾಪ್ಯಾರವನ್ನೂ ಮತ್ತೊಂದರಲ್ಲಿ ಪ್ರಕೃತಿಯ ವ್ಯಾಪಾರವನ್ನೂ ವರ್ಣಿಸಿ, ಕವಿಕಾವ್ಯದ ಮೂಲಸಾಮಗ್ರಿಗಳನ್ನು ಆತ ಇವುಗಳಲ್ಲಿ ದಿಗ್ದರ್ಶಿಸಿದ್ದಾನೆ.

ಹರಿಹರಕವಿಯ ಕಥನಾತ್ಮಕ ರಗಳೆಗಳಲ್ಲಿ ಕಾಣಬರುವ ಜಗತ್ತು ವಿಶಾಲವಾಗಿರುವಷ್ಟೆ ವೈವಿಧ್ಯಮಯವಾಗಿದೆ. ಅಲ್ಲಿನ ವಾತಾವರಣವೆಲ್ಲ ಭಕ್ತಿಭರಿತವಾದುದು; ಅಲ್ಲಿ ಸಂಚರಿಸುವವರೆಲ್ಲ ಶಿವಶರಣರು. ಅವರಲ್ಲಿ ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲ ವಯಸ್ಸಿನವರೂ ಇದ್ದಾರೆ; ಅವರಲ್ಲಿ ಗಂಡಸರುಂಟು, ಹೆಂಗಸರುಂಟು, ಹಸುಗೂಸುಗಳೂ ಉಂಟು. ಅವರ ಸ್ವಭಾವ, ಅಭಿರುಚಿ, ಜೀವನದೃಷ್ಟಿ, ಭಕ್ತಿಮಾರ್ಗ–ಇತ್ಯಾದಿಗಳಲ್ಲಿ ಎಷ್ಟೋ ಭಿನ್ನತೆಯಿದೆ. 'ಕಾಯಕವೇ ಕೈಲಾಸ'ಎಂಬ ತತ್ತ್ವ ಎಲ್ಲರಿಗೂ ಸಮಾನವಾದರೂ ಒಬ್ಬ ಬೇಡ, ಒಬ್ಬ ಬೆಸ್ತ, ಒಬ್ಬ ಅಗಸ, ಒಬ್ಬ ಕುಂಬಾರ–ಹೀಗೆ ನಾನಾ ವೃತ್ತಿಯ ಜನ ಅವರು. ಎಲ್ಲರೂ ತಾವು ಕೈಕೊಂಡ ವೃತ್ತಿಯಲ್ಲಿಯೆ ಒಂದು ಆದರ್ಶವನ್ನು ಕಲ್ಪಿಸಿಕೊಂಡು, ಆ ವೃತ್ತಿಯನ್ನೆ ಆಧ್ಯಾತ್ಮಕ್ಕೆ ಅಳವಡಿಸಿಕೊಂಡವರು. ತನ್ನ ಆತ್ಮೋನ್ನತಿಯನ್ನು ಸಾಧಿಸಿಗೊಂಡಿರುವ ಹರಿಹರ ದೇವನ ಕೃತಿಗಳಲ್ಲಿ ಅವರೆಲ್ಲರೂ ಜೀವಂತರಾಗಿ ವ್ಯವ

ಹರಿಸುತ್ತಾರೆ. ತನ್ನಂತೆಯೆ ಆತ್ಮೋದ್ಧಾರವನ್ನು ಸಾಧಿಸಿಕೊಂಡ ಶಿವಶರಣರ ಜೀವನಗಳನ್ನು ಆತನ ಕೈಯ ಕುಂಚ ಅತ್ಯಂತ ಸ್ವಾಭಾವಿಕವಾಗಿ ಚಿತ್ರಿಸಬಲ್ಲದು. ಅವರ ಕಥೆಗಳನ್ನು ಹೇಳುವಲ್ಲಿ ಕವಿಗೆ ಅಪಾರ ಉತ್ಸಾಹ. ಆ ಉತ್ಸಾಹದ ತುಂಬು ನೆರೆಯಲ್ಲಿ ಕಥಾಪ್ರವಾಹ ಓದುಗರನ್ನೂ ಎಳೆದುಕೊಂಡು ವೇಗವಾಗಿ ತನ್ನ ಗಮ್ಯಸ್ಥಾನವನ್ನು ಮುಟ್ಟುತ್ತದೆ. ಕವಿಯ ಕಥನಾತ್ಮಕ ರಗಳೆಗಳಲ್ಲಿ ಯಾವುದನ್ನು ಓದಿದರೂ ಇದು ಸ್ಪಷ್ಟವಾಗುತ್ತದೆ.

ಕಾಯಕವನ್ನು ಆಧ್ಯಾತ್ಮಕ್ಕೆ ಅಳವಡಿಸಿಕೊಂಡ ಶರಣರಲ್ಲಿ ಕುಂಬಾರ ಗುಂಡಯ್ಯನ ಕಥೆ ಅಗ್ರಗಣ್ಯವಾದುದು, ವೃತ್ತಿಯಲ್ಲಿ ಕುಂಬಾರನಾದ ಆತ ಸಂಪಾದಿಸಿದುದನ್ನೆಲ್ಲ ಶಿವಭಕ್ತರ ಸೇವೆಗೆ ಅರ್ಪಿಸಿ, ಶಿವನನ್ನು ಮೆಚ್ಚಿಸಿದ. ಅವನು ಮಡಿಕೆಯನ್ನು ತಟ್ಟುವ ತಾಳಕ್ಕೆ ಸರಿಯಾಗಿ ಶಿವನು ನಿತ್ಯವೂ ನರ್ತನ ಮಾಡುತ್ತಾನೆ. ಕಥೆ ಇಷ್ಟೆ. ಹರಿಹರ ಕವಿ ಇಷ್ಟರಿಂದಲೆ ಒಂದು ಭಕ್ತಿರಸದ ಮಡುವನ್ನು ನಿರ್ಮಿಸಿದ್ದಾನೆ. ಪರಶಿವನ ತಾಂಡವನೃತ್ಯವನ್ನು ಪ್ರತ್ಯಕ್ಷವಾಗಿ ಕಂಡವರಂತೆ ನಾವು ಮೂಕವಿಸ್ಮಿತರಾಗಿ, ಮೈಮರೆತು, ದಿವ್ಯಜಗತ್ತೊಂದನ್ನು ದರ್ಶಿಸುತ್ತೇವೆ, ಆನಟರಾಜನು

ದಶಭುಜವಂ ದಿಕ್ತಟಕಂ ಪಸರಿಸಿ। ಎಸೆವ ಕರಂಗಳನೆತ್ತಲ್ ನೇಮಿಸಿ। ಒಂದು ಪದಂ ಪಾತಾಳವನೊತ್ತಲ್
ಒಂದು ಪದಂ ಬ್ರಹ್ಮಾಂಡವನೊತ್ತಲ್। ಜಡೆಗಳ್ ಬೆಂಬಳಿವಿಡಿದಾಡುತ್ತಿರೆ। ಮುಡಿಯೊಳ್ ಸುರನದಿ ತುಳ್ಕಾಡುತ್ತಿರೆ
ತಡಿಯೊಳ್ ಶಶಿಕಳೆಯಲ್ಲಾಡುತ್ತಿರೆ। ಕಡು ಚೆಲ್ವೆಳಕಂ ಕುಣಿದಾಡುತ್ತಿರೆ। ಮಿಸುಗುವ ಡಮರುಗ ಢಂ ಢಂ ಡಣಲೆನೆ
ತಿಸುಳದಿ ಹರಿಯುವ ತಾರಂ ತಿರ್ರನೆ। ತಿರುಗುತ್ತಿರೆ ಅಹಿಗಳ್ ಹೆಡೆಯೆತ್ತಲು। ಕರಿಯ ತೊವಲ್ ನಭಮಂ ಜೋಹರಿಸಲು
ಸರಸಿಜ ಭವನ ಶಿರಂ ಬೊಬ್ಬಿಡುತಿರೆ। ಸುರರ ಶಿರೋಮಾಲೆಗಳುಲಿವುತ್ತಿರೆ। ಪೂಂಗೆಜ್ಜೆಗಳ ರವಂ ಘುಲು ಘುಲುಕೆನೆ।
ಶೋಂಗಲ ಗಂಟೆ ಢಣಂ ಢಂ ಢಣಲೆನೆ। ಆಡಿದನಾಡಿದ ನಾಹಾ ಶಂಕರ

ಹಾಗೆ ನರ್ತನ ಮಾಡುವಾಗ ಸುರಲೋಕದ ವಾದ್ಯಗಳೂ, ಅವುಗಳನ್ನು ಬಾರಿಸಲು ತುಂಬುರ ನಾರದರೂ ಅಲ್ಲಿಗೆ ಬಂದರಂತೆ! ಆದರೆ ಶಿವನು ಅವುಗಳನ್ನು ನಿರಾಕರಿಸಿ, 'ಮಡಕೆಯ ವಾದ್ಯಂ ಸಾಲ್ಗೆ' ಎಂದು ಹೇಳಿದನಂತೆ! ಪರಶಿವನ ನಾಟ್ಯವನ್ನು ಕಂಡು ಗುಂಡಯ್ಯನಿಗೂ ಆವೇಶ ಬಂದಿತು–

ಶಿವನಂ ಕಂಡಾ ಭಕ್ತಂ ಕುಣಿಯಲು। ಶಿವಭಕ್ತನ ಕೂಡಭವಂ ಕುಣಿಯಲು। ಈರ್ವರನೀಕ್ಷಿಸಿ ಗಣಪಂ ಕುಣಿಯಲು
ಸರ್ವಸ್ಥಾವರಂ ಜಂಗಮವಾಡಲು। ಮಡಕೆಯ ಶಬ್ದಕ್ಕಾಡುತ್ತಿರ್ದಂ। ಮೃಡನಖಿಳರುವೆರಸಾಡುತ್ತಿರ್ದಂ

ಕೃತಿಯ ಒಂದೊಂದು ಸಾಲೂ,ಒಂದೊಂದು ನುಡಿಯೂ ಶಿವನೊಡನೆ ಕುಣಿಯುತ್ತಿವೆ; ಓದುಗರನ್ನೂ ಕೇಳುವವರನ್ನೂ ಕುಣಿಸುತ್ತಿವೆ. ಭಾವ–ಭಾಷೆಗಳ ವಿದ್ಯುದಾಲಿಂಗನದಿಂದ ಉದ್ಭವಿಸಿದ ಅದ್ಭುತ ಕಥೆ ಇಲ್ಲದಲ್ಲಿಯೂ ಕೃತಿಯನ್ನು ಕ್ರಿಯಾಪೂರ್ಣವನ್ನಾಗಿ ಮಾಡಿದೆ. 'ಮಾತುಗಳಿಗೆ ಮೀರಿದ, ಅನುಭವೈಕವೇದ್ಯವಾದ, ಚಿತ್ತಸಂಸ್ಕಾರ ಗೋಚರವಾದ ಅನಂತತೆ' ಇಲ್ಲಿ ಬಂದು ನೆಲೆಸಿದೆ. ಕಾವ್ಯ ಇಲ್ಲಿ ಭವ್ಯತೆಗೇರಿ 'ದರ್ಶನ'ವಾಗಿ ಪರಿಣಮಿಸಿದೆ. ಇಲ್ಲಿನ ತಾಂಡವನೃತ್ಯವನ್ನು ಧ್ಯಾನಗಮ್ಯವಾಗಿ ಮಾಡಿಕೊಂಡಾಗ ಅಚಿಂತ್ಯವಾದ ಅದ್ಭುತಾನಂದಗಳಲ್ಲಿ ನಮ್ಮ ತನ ಕರಗಿಹೋಗಿ, ಚಿತ್ತವು ವ್ಯೋಮವಿಹಾರಿಯಾಗುತ್ತದೆ; ಮೈ ಮನಸ್ಸು ರೋಮಾಂಚಗೊಂಡು ಆನಂದದಲ್ಲಿ ತಲ್ಲೀನವಾಗುತ್ತದೆ.

ಭಕ್ತಕವಿ ಹರಿಹರನ ರಗಳೆಗಳಲ್ಲಿ ತಲೆವಣಿಯಂತಿರುವುದು ಆತನ 'ಬಸವರಾಜದೇವರ ರಗಳೆ'. ಬಸವಣ್ಣನು ಕವಿಯ ಸಮಕಾಲೀನನಲ್ಲದಿರಬಹುದಾದರೂ ಆತನನ್ನು ಪ್ರತ್ಯಕ್ಷವಾಗಿ ಕಂಡವರನೇಕರು ಆಗ ಇನ್ನೂ ಇದ್ದರೆಂದು ತೋರುತ್ತದೆ. ಅವರಿಂದ ಹರಿಹರದೇವನು ಆ ಮಹಾಪುರುಷನ ಜೀವಿತ ಕಥೆಯನ್ನು ಸಂಗ್ರಹಿಸಿ, ಅಲೌಕಿಕವಾದ ಆತನ ಧಾರ್ಮಿಕ ಕಥೆಯನ್ನು ದಿವ್ಯ ಮನೋಹರವಾಗಿ ಚಿತ್ರಿಸಿದ್ದಾನೆ. ಬಸವಣ್ಣನು ಶಿವಪೂಜೆಗೆ ಪುಷ್ಪಗಳನ್ನು ಎತ್ತಿತರುವಲ್ಲಿ ಹರಿಹರದೇವನೆ ಮತ್ತೊಮ್ಮೆ ಆತನಲ್ಲಿ ಪರಕಾಯ ಪ್ರವೇಶ ಮಾಡಿ ನಮಗೆ ಗೋಚರಿಸುತ್ತಾನೆ. 'ಇಹ–ಪರದ ಪುಣ್ಯಪುರುಷ'ನಾದ ಬಸವಣ್ಣ 'ನಲಿನಲಿದು ನೇಹವಂಕುರಿಸುತಿರೆ ಕೈಮಿಕ್ಕು' ಶಿವಸಾನ್ನಿಧ್ಯವನ್ನು ಸೇರುತ್ತಾನೆ. ಪರಶಿವನನ್ನು ಪೂಜಿಸಿ, ಧೂಪ, ದೀಪ ನೈವೇದ್ಯ, ವೀಳೆಯ, ಆರತಿಗಳನ್ನು ಮಾಡಿ, ಬಗೆಬಗೆಯಾಗಿ ಸ್ತುತಿಸುತ್ತಾ

ಎನ್ನ ಕಣ್ಣೊಳಗೆ ಪರಿದಾಡು ಕೂಡಲ ಸಂಗ। ಎನ್ನ ಮನದೊಳಗೆ ಕುಣಿದಾಡು ಕೂಡಲ ಸಂಗ

ಎಂದು ಬೇಡಿಕೊಂಡು, ಸಾತ್ವಿಕರಸ ಮುಗಲುಸ

ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ। ತಣಿತಣಿದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ
ಆಡುತಾಡುತ್ತಲ್ಲಿ ಪೊಗುಳ್ವದಂ ನೆರೆ ಮರೆತು। ನೋಡು ನೋಡುತ್ತಲ್ಲಿ ನೋಟಮಂ ಮಿಗೆ ಮರೆದು
ಕಣ್ಮುಚ್ಚಿ ಗದಗದಿಸಿ ಜೋಲ್ದು ಜೊಂಪಿಸಿ ಬಿದ್ದು। ಉಣ್ಮುವ ಶಿವಾನಂದ ರಸದ ಹೊನಲೊಳಗದ್ದು.
ಈಸಾಡಿ ಗಂಗಾಧರನ ಚರಣಮಂಪಿಡಿದು। ಲೇಸಾಗಿ ಚಿತ್ತದೊಳು ಸಂಗನಂ ನೆರೆ ಪಿಡಿದು

ಸುಖ ಮೂರ್ಛೆಯಿಂದ ನೆಲಕ್ಕೆ ಬಿದ್ದು ಆನಂದಮಯನಾಗಿ ಹೊಗುತ್ತಾನೆ. ದಿವಂಗತ ಪ್ರೊ. ವೆಂಕಣ್ಣಯ್ಯನವರು ಹೇಳುವಂತೆ'ಈ

ವರ್ಣನೆಯು ಎಷ್ಟು ಉಜ್ವಲವಾಗಿರುವುದೆಂದರೆ ನಾಸ್ತಿಕನ ಹೃದಯದಲ್ಲಿ ಕೂಡ ಭಕ್ತಿಭಾವವನ್ನು ಉದ್ರೇಕಿಸುವಂತಿವೆ' ಹರಿಹರನು ಓದುಗರ ಅಥವಾ ಕೇಳುಗರ ಹೃದಯದಲ್ಲಿ ನೆಲೆ ನಿಲ್ಲುವಂತೆ ಭವ್ಯವಾಗಿ, ವಿಸ್ತಾರವಾಗಿ ವರ್ಣಿಸುವನಾದರೂ ಎಲ್ಲಿಯೂ ಔಚಿತ್ಯದ ಕೊಲೆಯಾಗುವದಿಲ್ಲ.

ಹರಿಹರನು ರಗಳೆಯಲ್ಲಿ ಕೃತಿರಚನೆ ಮಾಡಲು ಹೊರಟುದು ಶ್ರೀ ಸಾಮಾನ್ಯನ ಉದ್ಧಾರಕ್ಕಾಗಿ. ಶಿವಶರಣರ ಪುಣ್ಯ ಚರಿತ್ರೆ ವಿಶಾಲ ಜಗತ್ತಿನ ಸ್ವತ್ತಾಗಲೆಂಬುದು ಆತನ ಉದಾರಚೇತಸದ ವಿಶಾಲ ದೃಷ್ಟಿ. ಆತನು ಚಂಪೂ ಕಾವ್ಯರಚನೆಯನ್ನೇ ಮುಂದುವರಿಸಿದ್ದರೆ ಬಹುಶಃ ಪಂಪ ರನ್ನರಂತೆ ಪಂಡಿತಮಾನ್ಯನಾಗುತ್ತಿದ್ದ. ಆದರೆ ಹರಿಹರನ ಹೆಗ್ಗುರಿ ಕೀರ್ತಿಯಲ್ಲ. ಲೋಕ ಕಲ್ಯಾಣ. ಆದ್ದರಿಂದಲೇ ಆತ ತನ್ನ ವಶವರ್ತಿಯಾಗಿದ್ದ ಪಾಂಡಿತ್ಯವನ್ನು ಹೊರದೂಡಿ. ಜನರ ಮಾತಿನಲ್ಲಿ ಜನರ ಛಂದಸ್ಸಿನಲ್ಲಿ ಕಾವ್ಯಸೃಷ್ಟಿ ಮಾಡುವುದನ್ನು ಆಲಂಗಿಸಿದ. ಕನ್ನಡ ಸಾಹಿತ್ಯದಲ್ಲಿ ಆತ ನೂತನ ಪಥವೊಂದನ್ನು ನಿರ್ಮಿಸಿ ಯುಗ ಪುರಷನಾದ. ಆತನ ಕಾವ್ಯಗಳು ರಸಮಯವಾಗಿವೆ. ಆತನು ಲೋಕಕಲ್ಯಾಣವನ್ನು ಸಾಧಿಸಿದ ಸಂತರ ಚರಿತ್ರೆಗಳನ್ನು ಚಿತ್ರರಿಸಿ, ಅವನ್ನು ಓದುವವರ ಆತ್ಮ ಕಲ್ಯಾಣಕ್ಕೆ ಸಾಧಕನಾದ. ತಾನು ಉದ್ಧಾರವಾಗಿ ಲೊಕವನ್ನು ಉದ್ಧರಿಸಿದ. ಹನ್ನೆರಡನೇ ಶತಮಾನದ ಕಡೆಯ ಭಾಗ ಮತ್ತು ಹದಿಮೂರನೇ ಶತಮಾನದ ಆದಿ ಭಾಗದಲ್ಲಿದ್ದ ಆ ಸಿಮಾಪುರುಷನನ್ನು ಕುರಿತು ಷಡಕ್ಷರ ಕವಿ ಹೇಳುವ 'ಹರಿಶ್ವರಸ್ತೇನ ಸಮಃ ಕವಿಃ ಕಃ' ಎಂಬ ಮಾತು ಕಾಲಗರ್ಭದಿಂದ ತೂರಿಬಂದು, ಉತ್ತರವಿಲ್ಲದೆ ಅನುರಣಿತವಾಗುತ್ತಿದೆ.

೪

ಹರಿಹರದೇವನ ರಗಳೆಗಳ ಸಂಖ್ಯೆ ಅರವತ್ತೊಂದು-ಎಂದು ಈಗ ನಿಸ್ಸಂಧಿಗ್ಧವಾಗಿ ನಿರ್ಣಯಗೊಂಡಿದ್ದರೂ ಬಹುಕಾಲದವರೆಗೆ ಅದು ಸಂಧಿಗ್ಧವಾಗಿದ್ದುದರ ಕಾರಣ ಇಷ್ಟು: 'ಹಂಪೆಯ ವಿರೂಪಾಕ್ಷ' ಎಂಬ ಹರಿಹರದೇವನ ಕಾವ್ಯಾಂಕಿತವುಳ್ಳ ಅನೇಕ ರಗಳೆಗಳು ಪ್ರಚಾರದಲ್ಲಿದ್ದು, ಅವು ಹರಿಹರಕೃತವೆಂಬ ಭ್ರಾಂತಿಗೆ ಕಾರಣವಾದುದು. ಈ ರಗಳೆಗಳಲ್ಲಿ ಅವುಗಳ ಕರ್ತೃವಿನ ವಿಚಾರವಾದ ಯಾವ ಪ್ರಸ್ತಾಪವೂ ಇಲ್ಲದಿರುವುದು. ಅವುಗಳ ರಚನಾವಿಧಾನದಲ್ಲಿ ಹರಿಹರ ಕೃತಿಗಳ ಬಾಹ್ಯಲಕ್ಷಣಗಳೆಲ್ಲಾ ಕಂಡು ಬರುತ್ತವೆ. ಈ ಕಾವ್ಯಕರ್ತೃಗಳಲ್ಲಿ ಕೆಲವರು ಕಥಾಸಂವಿಧಾನ, ಪಾತ್ರರಚನೆ, ಶೈಲಿಗಳಲ್ಲಿ ಹರಿಹರನನ್ನು ಅಚ್ಚಳಿಯದಂತೆ ಅನುಸರಿಸುತ್ತಾರೆ. ಇವು ಹರಿಹರನವೇ ಎಂಬ ನಂಬುಗೆಯನ್ನು ಹುಟ್ಟಿಸುತ್ತಾರೆ. 'ತಮ್ಮ ಮಗ, ಯಾರ ಮಗನೆಂದಾದರೂ ಬದುಕಿಕೊಳ್ಳಲಿ' ಎಂಬ ಉದಾರ ಚೇತಸರು ಇವರು.ಇವರು ಯಾರು ? ಎಲ್ಲಿಯವರು ? ಯಾವಾಗ ಕೃತಿ ರಚನೆ ಮಾಡಿದರು ? ಎಂಬ ಪ್ರಶ್ನೆಗಳು ಸದ್ಯಕ್ಕೆ ಪ್ರಶ್ನೆಗಳಾಗಿಯೆ ಉಳಿಯಬೇಕಾಗಿದೆ. ಹದಿನೇಳನೇ ಶತಮಾನದ ಮಧ್ಯಭಾಗದಲ್ಲಿದ್ದ ಶಾಂತಲಿಂಗ ದೇಶಿಕನು ತನ್ನ 'ಭೈರವೇಶ್ವರ ಕಥಾಸೂತ್ರ ರತ್ನಾಕರ'ದಲ್ಲಿ ಹರಿಹರ ದೇವನು ನೂರೊಂದು ರಗಳೆಗಳನ್ನು ಬರೆದಿರುವನೆಂದು ಹೇಳಿ, ಆತನ ಕಾಲಕ್ಕಾಗಲೇಈ ರಗಳೆಗಳು ಹರಿಹರದೇವನವೆಂದು ಪ್ರಚುರವಾಗಿದ್ದುವೆಂಬುದಕ್ಕೆ ಸಾಕ್ಷಿಯಾಗಿದ್ದಾನೆ. 'ಹಂಪೆಯ ವಿರೂಪಾಕ್ಷ' ಎಂಬ ಮುದ್ರೆಯನ್ನು ಒತ್ತಿಸಿಕೊಂಡು ಚಲಾವಣೆಗೆ ಬಂದಿದ್ದ ಈ ಅಜ್ಞಾತ ಕವಿಕಾವ್ಯಗಳ ನಲವತ್ತೆರಡನ್ನು ಬೆಂಗಳೂರು ವಿಶ್ವವಿದ್ಯಾನಿಲಯ 'ಹರಿಹರೇತರ ಕೃತ ವಿರೂಪಾಕ್ಷಾಂಕಿತ ಶಿವಶರಣ ಸಂಪುಟ' ಎಂಬ ಹೆಸರಿನಿಂದ ಹೊರತಂದಿದೆ.[1] 'ಅರವತ್ತು ಮೂವರು ಪುರಾತನ'ರಲ್ಲಿ ಇಪ್ಪತ್ತೊಮ್ಮವರನ್ನು ಮಾತ್ರ ಕುರಿತು ಹರಿಹರದೇವ ಕೃತಿ ರಚನೆ ಮಾಡಿದ್ದ. ಉಳಿದವರ ಮೇಲೆ ಕೃತಿ ರಚನೆ ಮಾಡುವ ಕಾರ್ಯವನ್ನು ಈ ಅಜ್ಞಾತ ಕವಿಗಳು ಕೈಕೊಂಡಿರುವರೆಂದು ಹೇಳಬಹುದು.

ಅಮ್ಮೆವ್ವೆ ಎಂಬ ಮುಗ್ಧ ಭಕ್ತೆ ಜಂಗಮನೊಬ್ಬನಿಂದ ಶಿವನ ದುಸ್ಥಿತಿಯನ್ನು ಕೇಳಿ ಮರುಕದಿಂದ ಆತನ ಯೋಗಕ್ಷೇಮದ ಚಿಂತೆಯನ್ನು ಹಚ್ಚಿಕೊಂಡಳು. ಆತನನ್ನು ಅಕ್ಕರೆಯಿಂದ ಲಾಲನೆಪಾಲನೆ ಮಾಡುವ ಭಾಗ್ಯ ತನಗೆ ದೊರೆಯಬಾರದೆ! ಎಂದು ಹಂಬಲಿಸಿದಳು. ಶಿವನು ಆಕೆಯ ಕನಸಿನಲ್ಲಿ ಕಾಣಿಸಿಕೊಂಡು 'ಮಗನ ಬೇಡಿದೆಯವ್ವ, ಕಾನನದೊಳಹನೆ ಬಾ' ಎಂದ. ಎಚ್ಚೆತ್ತ ಅಮ್ಮವ್ವೆ ಕಾನನಕ್ಕೆ ಹೊರಟಳು. ಮಗುವನ್ನು ಅರಸುತ್ತಾ ಇರುವಾಗ ಶಿವನು

> ವೃಕ್ಷದೊಳಗಂ ತೊಟ್ಟಿಲಲ್ಲಿ ತಾಂ ಶಿಶುವಾಗಿ। ಲಕ್ಷಣಯುತಂ ಶಿವನು ಇರ್ದನುನ್ನತನಾಗಿ। ಬಿಟ್ಟ ಕೆಂಜೆಡೆಗಳೇ ಎಳೆಯ ಕೆಂಜೆಡೆಯಾಗಿ
> ನೆಟ್ಟನಾ ಮುಡಿದ ಸೂರಿಯನುವರಳೆಲೆಯಾಗಿ। ಹಣೆಯ ಕಣ್ಣೆಸೆವ ಕರ್ಪಿನ ತಿಲಕವಾಗಿರಲು । ಫಣಿಕುಂಡಲಂಗಳುಂ ಮಾಗಾಯ್ಸ್ಗಳಾಗಿರಲು
> ಪೊಳೆವ ಅರಳೆಲೆಯುದುಂ ಎಸೆವ ಶಶಿಯಾಗಿರಲು। ಗಳದ ವಿಷವದು ಪುಲಿಯುಗುರಿನಂದವಾಗಿರಲು
> ತರದ ಕರಗಳವೆರಡು ಕರವಾಗಿಯೊಪ್ಪಿರಲು। ಬೆರಳ ಉಂಗುರವಜನ ಶಿರವದೇಯೊಪ್ಪಿರಲು

'ಆದಿಯಾಧಾರವೇ ತೊಟ್ಟಿಲಾಗಿ, ವೇದವಾದಂಗಳೇ ಗೆಜ್ಜೆಯಾಗಿ, ಬಟ್ಟಬಯಲೇ ತೊಟ್ಟಿಲಾಗಿ, ಕಟ್ಟಿರ್ದ ನೇಣುಗಳೆ ಆಗಮವಾಗಿರಲು. ತೊಟ್ಟಿಲನ್ನು ತನಗೆ ತಾನೆ ತೂಗಿಕೊಳ್ಳುತ್ತಿದ್ದ. ಆಗ ಅಮ್ಮವ್ವೆ ಜಗನ್ಮಯನನ್ನು ಅರಸಿಬರುತ್ತಾ

---

1. ಅತಿ ಭಕ್ತರು. ಅಪ್ಪೂತಿ ಅಡಿಯರು, ಅಮ್ಮವ್ವೆ, ಅಯ್ಯಡಿಯರು, ಎಡೆಗಣೆಯರು, ಕಣಂಬುಲ್ಲ ನಂಬಿಯರು, ಕಲಿ ಕಂಪರು, ಕಲಿಯ ನಯನಾರ್ ಕೆಳಚೆಂಗ ಪೆರುಮಾಳೆ, ಕಾರಿನಾಯನಾರ್, ಕುಲಚರೆಯರು, ಕುಳಚೆಂಗ ಚೋಳರು, ಕೃತಾಂತರು, ಕೋಲ್ಪುಲಿಯರು.

ಏ ಶಿವನೆ ಬಾ ಶಿವನೆ ಕೂ ಶಿವನೆ ಆ ಶಿವನೆ। ಲೇಸು ಮಾಡಿದೆ ಶಿವನೆ ಆಶೆ ಮಾಣಿಸು ಶಿವನೆ
ನಾಗೇಶ ಬಾರಯ್ಯ, ನೀನು ಎನ್ನಯ ಮಗನು। ಆಗಯ್ಯ, ನಿನ್ನೊಳಗೆ ಮುನಿದೆನಯ್ಯಾ ನಾನು

ಎಂದುಕೊಂಡು, ಶಿಶುತನದ ನಟನೆಯಿಂದ ಅಳುತ್ತಿರುವ ಶಿವನನ್ನು ಕಾಣುತ್ತಾಳೆ. 'ಬರ್ದುಕಿದೆಂ ಕಣ್ಣ ಪುಣ್ಯಂ ಮುಂದೆ ಇದೆ ಎನುತ......ಇಲ್ಲಿರಿಸಿ ಹೋದರಾರಯ್ಯ ಚನ್ನನ ನಿನ್ನ' ಎಂದು ಅವನನ್ನು ಅಕ್ಕರೆಯಿಂದ ಎತ್ತಿಕೊಂಡು ಮನೆಗೆ ಮರಳುತ್ತಾಳೆ. ಮಗುವನ್ನು ಕಣ್ಣ ಪಾಪೆಯಂತೆ ರಕ್ಷಿಸುತ್ತಾಳೆ. ಈ ಮುಗ್ಧ ಭಕ್ತೆಯನ್ನು ಶಿವ ಒರೆ ಹಚ್ಚ ಹೊರಟ.

ಇರ್ದಿರ್ದು ಕಣ್ಣಾಲಿ ಮೇಲಕಂ ಸೇರುತಿರೆ। ಇರ್ದಿರ್ದು ಕೈ ಕಾಲುಂಗಳ ನೀಡಿ ನಡುಗುತಿರೆ
ಮೊಗ ಬೆವತು ಕಣ್ಣಾಳಿದು ಮೆಯ್ ತಣ್ಣಾಗಾಗುತಿರೆ। ಮೊಗಸಿ ಜೆವುರುಂ ಅಳ್ಳೆ ಪೊಯ್ಯುತ್ತ ನಿಗುರುತಿರೆ

ಕಣ್ಣು ಗುಣಿಸೇರಿ ಮೈ ತಣ್ಣಗಾಯಿತು. ಆ ಮುಗ್ಧೆ ಮಗುವಿನ ಸಾವಿಗಿಂತ ಮೊದಲೇ ತಾನು ಸಾಯಬೇಕೆಂದುಕೊಂಡು, ಕಣ್ಣಿಗೆ ಬಿದ್ದ ಈಳಿಗೆಯಿಂದಲೆ ಕೊರಳು ಕೊಯ್ದುಕೊಳ್ಳ ಹೊರಟಳು. ಆಗ ಶಿವ ಪ್ರತ್ಯಕ್ಷನಾಗಿ ಆಕೆಗೆ ಕೈಲಾಸ ಪದವಿಯನಿತ್ತ. ಆಕೆ ರುದ್ರಕನ್ನಿಕೆಯಾದಳು. ಈ ರಗಳೆಯ ಶೈಲಿ ಹರಿಹರ ದೇವನ ಕಮನೀಯತೆಯನ್ನು ಪಡೆದಿಲ್ಲವಾದರೂ ಕಥಾ ನಿರೂಪಣೆ, ಸನ್ನಿವೇಶ ರಚನೆ, ಪಾತ್ರ ಸೃಷ್ಟಿಗಳಲ್ಲಿ ಹರಿಹರದೇವನದೇ ಎನ್ನುವಷ್ಟು ಮನೋಹರವಾಗಿದೆ.

ವಿರೂಪಾಕ್ಷಾಂಕಿತದಿಂದ ಬರೆದಿರುವ ಅಜ್ಞಾತಕವಿಗಳಲ್ಲಿ ಹಲವರು ಹರಿಹರನ ಕೃತಿಗಳನ್ನು ಆಳವಾಗಿ ಪರಿಚಯಮಾಡಿಕೊಂಡವರು. ಆ ಮಹಾಕವಿಯ ಪ್ರಭಾವ ಇವರ ಮೇಲೆ ತನ್ನ ಅಚ್ಚೊತ್ತಿದೆ. 'ಜಡೆಯ ನಾಯ್ನಾರೆಸ್ಯಜ್ಞಾನಿ ದೇವಿಯರು' ರಗಳೆಯನ್ನು ಬರೆದ ಕವಿಯಲ್ಲಿ ಇದನ್ನು ಸ್ಪಷ್ಟವಾಗಿ ಕಾಣಬಹುದು, ಈತನು ಹರಿಹರದೇವನ ಶೈಲಿಯನ್ನು ಅನುಕರಿಸಿರುವುದು ಮಾತ್ರವೇ ಅಲ್ಲ, ಅಲ್ಲಿಂದ ಹಲವಾರು ವಾಕ್ಯಗಳನ್ನು ಅನಾಮತ್ತಾಗಿ ಎತ್ತಿಕೊಂಡಿದ್ದಾನೆ. ಇದನ್ನು ಹರಿಹರನದೇ ಎಂದು ಹೇಳುವಷ್ಟು ಇಲ್ಲಿನ ಶೈಲಿ ಸುಮನೋಹರವಾಗಿದೆ. 'ಮೊನೆಯಿಡುವರು'ವನ್ನು ರಚಿಸಿದ ಕವಿ, ಶ್ರೀಮಾನ್ ಎಚ್. ದೇವೀರಪ್ಪನವರು ಹೇಳಿರುವಂತೆ 'ಹಂಪೆಯ ಹರಿಹರನ' 'ಇಜಿಭಕ್ತ'. 'ಏಣಾಧಿನಾಥ'–ಈ ಎರಡು ಕೃತಿಗಳನ್ನೂ ನೋಡಿರುವ ಇತ್ತೀಚಿನ ಜಾಣಕವಿ'. ಹಾಗೆಯೆ 'ಪೆರೂರು ಹೆಂಗೂಸು'ವನ್ನು ಬರೆದ ಕವಿ ಹರಿಹರದೇವನ 'ವೈಜಕವ್ವೆಯ ರಗಳೆ', 'ಮಹಾದೇವಿಯಕ್ಕನ ರಗಳೆ', 'ಬಸವರಾಜದೇವರ ರಗಳೆ'ಗಳಿಂದ ಪ್ರಭಾವಿತನಾಗಿದ್ದಾನೆ. 'ಚಿಕ್ಕದಾದರೂ ಚೊಕ್ಕವಾದ ಈ ರಗಳೆಯನ್ನು ಬರೆದ ಕವಿ ಬಹು ಚಾಣಾಕ್ಷ'.

ಅಜ್ಞಾತ ರಗಳೆಯ ಕವಿಗಳಲ್ಲಿ ಮತ್ತೊಬ್ಬ ಹಿರಿಯ ಕವಿಯೆಂದರೆ 'ಗುರುಪುರದ ಮಲ್ಲಯ್ಯ'ಎಂಬ ಅಂಕಿತದಿಂದ 'ಅರವತ್ತು ಮೂವರ ರಗಳೆ'ಯನ್ನು ರಚಿಸಿರುವ ಕವಿ. ಈತನು ಚಿಕ್ಕಮಗಳೂರು ಜಿಲ್ಲೆಯ ಪುರದವನೆಂದೂ, ಈತನ ಕಾಲ ಸುಮಾರು ಕ್ರಿ.ಶ. ೧೬೮೦ ಇರಬಹುದೆಂದೂ ಶ್ರೀಮಾನ್ ಎಚ್. ದೇವೀರಪ್ಪನವರು ತಮ್ಮ 'ಶಿವಶರಣ ಸಂಪುಟದ ಪೀಠಿಕೆ ಯಲ್ಲಿ ತಿಳಿಸಿದ್ದಾರೆ. ಇವರಲ್ಲಿ 'ವೀರಶೈವ ಸಂಪ್ರದಾಯದ ಅರವತ್ತು ಮೂವರ ಲಘು ಪರಿಚಯ'ವಿದೆ. ಶ್ರೀಮಾನ್ ದೇವೀರಪ್ಪನವರ ಮಾತಿನಲ್ಲಿಯೆ ಹೇಳುವುದಾದರೆ 'ಭಕ್ತಿರಸ ಪ್ರತಿಪಾದನೆಗೆ ಒಪ್ಪುವಂತಹ ಸರಳಸುಂದರ ಶೈಲಿ. ಕಾಲ ದೇಶ ಮತ ಪಂಥಗಳ ಎಲ್ಲೆಕಟ್ಟನ್ನು ಮೀರಿ, ವಿಶ್ವಸಾಹಿತ್ಯದ ನೆಲೆಗೇರಿ ಮೆರೆಯುತ್ತಿರುವುದಿದು'.

೫

ಹರಿಹರದೇವನ ಸೋದರಳಿಯನಾಗಿರುವಂತೆ ಪಟ್ಟಶಿಷ್ಯನೂ ಆಗಿರುವ ರಾಘವಾಂಕ 'ಷಟ್ಪದಿಬ್ರಹ್ಮ'ನೆಂಬ ಕೀರ್ತಿಗೆ ಪಾತ್ರನಾಗಿರುವನಷ್ಟೆ ! ಕನ್ನಡ ದೇವಿಯು ಸುಡಿಗುಡಿಗಿಟ್ಟ ಈ ಜೋಡಿಕಲಶಗಳಲ್ಲಿ ರಾಘವಾಂಕನೇ ಹರಿಹರನಿಗಿಂತ ಹೆಚ್ಚು ಪುಣ್ಯಶಾಲಿ. ಆತನು ಹರಿಯ ಬಿಟ್ಟ 'ಷಟ್ಪದಿ'ಯ ಸಂಪ್ರದಾಯ ಚಿಗುರಿ, ದಾಂಗುಡಿಯಿಟ್ಟು'ಹಬ್ಬಿ ಹರಡಿದೆ. ಹರಿಹರದೇವನು ಹರಿಯಬಿಟ್ಟ 'ರಗಳೆ'ಯ ಚಕ್ರ ಕೆಲದೂರ ಕ್ರಮಿಸಿ, ನಿಂತುಹೊದಂತೆ ಕಾಣುತ್ತದೆ. ಅಂದಿನ ಛಂದೋನಿಯಮಗಳನ್ನು ಅನುಸರಿಸಿಯೂ ಜನಮನವನ್ನು ರಗಳೆಯತ್ತ ಆಕರ್ಷಿಸಬೇಕಾದರೆ ಹರಿಹರನಂತಹ ಉದ್ದಾಮಕವಿಗೆ ಮಾತ್ರ ಸಾಧ್ಯ. ನಾವು ಮೇಲೆ ನೋಡಿರುವಂತೆ, ಕೆಲವರು ಆತನ ಹೆಸರಿನಲ್ಲಿಯೇ ತಮ್ಮ ಕಾವ್ಯಗಳು ಬದುಕಿಕೊಳ್ಳಲೆಂದು ಕೃತಿರಚನೆ ಮಾಡಿದರು. ಇನ್ನು ಕೆಲವರು ತಮ್ಮ ಹೆಸರಿನಲ್ಲಿ ಬರೆದರಾದರೂ ಅವರ ಕಾವ್ಯಗಳು ಅಷ್ಟೇನೂ ಮಹತ್ತನ್ನು ಪಡೆಯಲಿಲ್ಲ. ಮೊದಲ ಗುಂಪಿನವರಲ್ಲಿ ಕವಿ ಅಜ್ಞಾತ; ಎರಡನೆ ಗುಂಪಿನಲ್ಲಿ ಕಾವ್ಯ ಅಜ್ಞಾತ. [ಇವು ಅಷ್ಟೇನೂ ಜನಪ್ರಿಯವಾಗಿಲ್ಲ–ಎಂದಷ್ಟೆ ಇದರ ಅರ್ಥ]

ಹರಿಹರ ರಾಘವಾಂಕರ ಗೌರವಕ್ಕೆ ಪಾತ್ರನಾದ ಕೆರೆಯ ಪದ್ಮರಸನು (ಸು. ೧೨೫೦) ತ್ರಿವಿಧ ರಗಳೆಗಳಿಂದ ಕೂಡಿದ 'ದೀಕ್ಷಾಬೋಧೆ' ಎಂಬ ಗ್ರಂಥವನ್ನು ಬರೆದಿದ್ದಾನೆ. ಆದರೆ ಇದು ಅಪ್ಪಟ ಧರ್ಮಗ್ರಂಥ; ಆದ್ದರಿಂದ ಅದರ ವಿವೇಚನೆ ಇಲ್ಲಿ ಅನಗತ್ಯ. ಕೆರೆಯ ಪದ್ಮರಸನೊಡನೆ ವಾದಮಾಡಿ, ಸೋತು, ಶಿಷ್ಯನಾದ ತ್ರಿಭುವನ ತಾತನು 'ಗುರು ವಿಶ್ವೇಶ' ಎಂಬ ಅಂಕಿತದಿಂದ 'ಗುರುರಗಳೆ', 'ಮಹಾದೇವ ರಗಳೆ', 'ಅಮ್ಮವ್ವೆಯ ರಗಳೆ', 'ಪಗಲ್ಜೋಳನ ರಗಳೆ'ಮತ್ತು 'ಚೋಳಿಯಕ್ಕನ ರಗಳೆ'

ಗಳನ್ನು ಬರೆದಿರುವುದಾಗಿ ದಿವಂಗತ ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ತಿಳಿಸುತ್ತಾರೆ (ಪೀಠಿಕೆಗಳು–ಲೇಖನಗಳು : ಕೆಲವು ರಗಳೆಯ ಕವಿಗಳು). ಈತನ ರಗಳೆಗಳಲ್ಲಿ ಸರಳತೆಯಿದೆ, ಸೌಲಭ್ಯವಿದೆ, ಓಟವಿದೆ. ಶಿಶುರೂಪಿಯಾಗಿದ್ದ ಶಿವನು ರೋಗವನ್ನು ನಟಿಸಿದಾಗ ಅಮ್ಮವ್ವೆ

ನೋಡಂ ನುಡಿಯಂ ತೆಱೆಯಂ ಕಣ್ಣಂ। ಊಡಿದರುಣ್ಣಂ ಮೊಲೆಯಂ ಚಿಣ್ಣಂ। ಏಗುವೆನೇಗುವೆ ನೆನಗುಳ್ಳಪ್ಪ
ರೋಗವಿದೆಲ್ಲಿದು ನಿನಗಿದು ಬೊಪ್ಪ ।ದೀಪನವಾಗದ ಕಾರಣವೇನ್ಯೆ। ವ್ಯಾಪಿಸುವಗ್ನಿಯ ತಾತನು ನೀನ್ಯೆ

ಎಂದು 'ಬೆರಲ ಮಿಡಿದುಕೊಳುತುಂ ಬಾಯ್ಬಿಡುತುಂ' ಹಂಬಲಿಸುತ್ತಾಳೆ. ಈ ಕವಿಯು 'ಪಗಲ್ ಚೋಳನ ರಗಳೆ'ಯಲ್ಲಿ ಚೋಳ ರಾಜನು ಜೆಡೆದಲೆಯನ್ನು ಕಂಡು ಪರಿತಪಿಸುವುದೂ, 'ಚೋಳಿಯಕ್ಕನ ರಗಳೆ'ಯಲ್ಲಿ ಶಿವನು ಹುಗ್ಗಿಯನ್ನು ಆರೋಗಿಸುವುದೂ ಸುಂದರವಾಗಿವೆ.

ಸುಮಾರು ಕ್ರಿ.ಶ. ೧೩೫೦ರಲ್ಲಿ ಇದ್ದಿರಬಹುದಾದ ಒಬ್ಬ ಕವಿ 'ಶಂಕರಲಿಂಗ'ಎಂಬ ಅಂಕಿತದಿಂದ 'ಕಲಿಗಣನಾಥನ ರಗಳೆ','ಪ್ರಸಾದ ರಗಳೆ'ಎಂಬ ಎರಡು ರಗಳೆಗಳನ್ನು ಬರೆದಿದ್ದಾನೆ. ಸುಮಾರು ಇದೇ ಕಾಲದಲ್ಲಿ ಇದ್ದಿರಬಹುದಾದ ಮತ್ತೊಬ್ಬ ಕವಿ 'ಸದಾಶಿವಲಿಂಗ' ಎಂಬ ಅಂಕಿತದಿಂದ 'ಸಾನಂದ ಗಣೇಶ್ವರ ರಗಳೆ'ಯನ್ನು ಲಲಿತ ರಗಳೆಯಲ್ಲಿ ಬರೆದಿದ್ದಾನೆ. ಇದರಲ್ಲಿ ಐದು ಸ್ಥಲಗಳಿವೆ–ಮೂರು ರಗಳೆ, ಎರಡು ಗದ್ಯ. ಸುಪ್ರಸಿದ್ಧ ತೆಲುಗು ಕವಿ ಪಾಲ್ಕುರಿಕೆಯ ಸೋಮನಾಥನು (ಸು. ೧೩೦೫) ಕನ್ನಡದಲ್ಲಿ ಕೆಲವು ಗ್ರಂಥಗಳನ್ನು ಬರೆದಿದ್ದಾನೆ. ಇವು ಸ್ತೋತ್ರರೂಪವಾದುವು. ಈತನ 'ಗಂಗೋತ್ಪತ್ತಿ ರಗಳೆ' ಮೂರು ಸ್ಥಲಗಳಲ್ಲಿದ್ದು, ಗ್ರಂಥದ ಕೊನೆಯ ಕಂದ ಪದ್ಯದಲ್ಲಿ ಕವಿಯ ಹೆಸರು ಉಕ್ತವಾಗಿದೆ. ಗಂಗೆ ಹುಟ್ಟಿ ಹರಿಯುತ್ತಾ ಬಂದುದನ್ನು ಕವಿ ಸುಂದರವಾಗಿ ವರ್ಣಿಸಿರುವನಾದರೂ ಈತನ ಕನ್ನಡ ಸಂಸ್ಕೃತಭೂಯಿಷ್ಠವಾಗಿ ಗಂಟುಗಂಟಾಗಿದೆ. 'ಬಸವ ಪುರಾಣ'ವನ್ನು ಬರೆದು ಅತ್ಯಂತ ಜನಪ್ರಿಯನಾಗಿರುವ ಭೀಮಕವಿಯು (ಸು, ೧೪೦೦) 'ಭೀಮಕವೀಶ್ವರ ರಗಳೆ'ಯನ್ನು ಬರೆದಿದ್ದಾನೆ. ಕೇವಲ ನೂರೆಂಟು ಚರಣಗಳನ್ನು ಒಳಗೊಂಡಿರುವ ರಗಳೆಯ ಛಂದಸ್ಸಿನ ಪುಟ್ಟ ಸ್ತೋತ್ರಗ್ರಂಥ ಇದು.

ಈಗ ನಮಗೆ ತಿಳಿದಿರುವಂತೆ ವೀರಶೈವ ರಗಳೆಯ ಕಾವ್ಯಗಳಲ್ಲಿ 'ಪ್ರಸನ್ನ ಶಂಕರಲಿಂಗ ರಗಳೆಗಳು' ಕಡೆಯವು. ಇವುಗಳ ಕರ್ತೃವಾದ ಶಂಕರದೇವನ ದೇಶ, ಕಾಲ, ಜೀವನವೃತ್ತಾಂತಾದಿಗಳೊಂದೂ ನಿರ್ದಿಷ್ಟವಾಗಿ ಗೊತ್ತಿಲ್ಲ. ಕವಿಚರಿತೆಕಾರರು ಸಕಾರಣವನ್ನು ನಿರೂಪಿಸದೆಯೆ ಈತನ ಕಾಲ ಸುಮಾರು ೧೬೨೦ ಎಂದು ಹೇಳಿದ್ದಾರೆ. ಈತನ ೨೩ ರಗಳೆಗಳನ್ನು ಸಂಪಾದಿಸಿ ಕರ್ಣಾಟಕ ವಿಶ್ವವಿದ್ಯಾಲಯದ ವತಿಯಿಂದ ಪ್ರಕಟಿಸಿರುವ ಪ್ರೊ. ಸುಂಕಾಪುರ ಅವರು ಈತನನ್ನು ಕುರಿತು 'ಕನ್ನಡದಲ್ಲಿ ರಗಳೆಯ ಸಾಹಿತ್ಯಕ್ಕೆ ಹಂಪೆಯ ಹರಿಹರದೇವನೇ ಆದಿ, ಶಂಕರದೇವನೇ ತುದಿ. ಹರಿಹರದೇವನ ಉದಿತೋದಿತ ಮಾರ್ಗವನ್ನು ಅವನ ತರುವಾಯ ಅನೇಕರು ತುಳಿದಿದ್ದರೂ ಯಾರೂ ರಗಳೆಗಳನ್ನು ರಚಿಸುವ ಕಾರ್ಯಕ್ಕೆ ಕೈಹಾಕಲಿಲ್ಲ (?). ಶಂಕರದೇವನೊಬ್ಬನೆ ಬಹು ಧೈರ್ಯಮಾಡಿ ಇಪ್ಪತ್ಮೂರು ರಗಳೆಗಳನ್ನು ರಚಿಸಿದ್ದಾನೆ. ಈತನ ರಗಳೆಗಳು ಹಂಪೆಯ ಹರೀಶ್ವರನ ರಗಳೆಗಳ ಮಟ್ಟಕ್ಕೆ ಏರದಿದ್ದರೂ ಬಹಳ ಕೆಳಗಿಳಿದಿಲ್ಲವೆಂಬುದು ಸ್ಪಷ್ಟವಾಗಿದೆ' ಎಂದು ಹೇಳಿರುವ ಮಾತು ಅರ್ಥವತ್ತಾಗಿದೆ.

ಶಂಕರದೇವನಿಗೆ ಹರಿಹರದೇವ ಆದರ್ಶ. ಹರಿಹರದೇವನು ಬರೆಯದೆ ಬಿಟ್ಟ ಶಿವಶರಣರ ಕಥೆಗಳನ್ನು ಈತ ಬರೆದು, ಒಂದು ದೃಷ್ಟಿಯಿಂದ ಆತ ಆರಂಭಿಸಿದ ಕೆಲಸವನ್ನು ಈತ ಮಾಡಿ ಮುಗಿಸಿದಂತಾಗಿದೆ. ಆತನು ಏರುವ ಮಟ್ಟಕ್ಕೆ ಈತ ಹಾರಲಾರನೆಂಬುದಷ್ಟೇ ಅಲ್ಲ ; ಆತನ ಪಾಂಡಿತ್ಯ, ಲೋಕಾನುಭವಗಳೂ ಈತನಲ್ಲಿ ಕಾಣಬರುವುದಿಲ್ಲ. ಹರಿಹರದೇವ ಭಕ್ತಕವಿ, ಶಂಕರಕವಿಯೂ ಭಕ್ತಕವಿ ; ಆತ ಶರಣರನ್ನು ಕುರಿತ ಕಥನಾತ್ಮಕ ರಗಳೆ ಬರೆದ, ಈತನೂ ಅದೇ ಕೆಲಸ ಮಾಡಿದ; ಇಬ್ಬರ ಪರಿಸರಗಳೂ ವಿಶಾಲವಾಗಿ ವೈವಿಧ್ಯಮಯವಾಗಿವೆ. ಭಕ್ತಿಯ ವಾತಾವರಣದಿಂದ ತುಂಬಿವೆ. ಆದರೆ ಇಬ್ಬರ ಕಾವ್ಯಶಕ್ತಿಯಲ್ಲಿ ಅಜಗಜಾಂತರ ವ್ಯತ್ಯಾಸ. ಕಲಿಗಣನಾಥನು ಮಹಾಶಿವಭಕ್ತ. ಆತ

ತನ್ನನಭವನೊಳಳಿದು ಶಿವನ ತನ್ನೊಳು ತಿಳಿದು। ತನ್ನಿಂದ ತಾನಾಗಿ ಭವಬಂಧನವ ಕಳಿದು
ಇತರ ಪಾಕವನುಳಿದು ಭವಿಯ ಸಂಗವ ತೊಱೆದು। ಅತನು ಮೊದಲಾದ ಷಡುವರ್ಗದಧಟಂ ಮುಱಿದು

*    *    *    *    *    *

ಈ ತೆಱದಿ ಭಕ್ತಿಲತೆ ಕುಡಿವರಿದು ಪರ್ಬುತಿರೆ। ಚೇತರಿಸಿ ಕೈಲಾಸಪರ್ವತವನಡರುತಿರೆ

ಶಿವಕೃಪೆಗೆ ಪಾತ್ರನಾದ. ಕಡೆಯ ಎರಡು ಸಾಲುಗಳ ಕಾವ್ಯರತ್ನವನ್ನು ಪಡೆಯಬೇಕಾದರೆ ಮುವ್ವತ್ತು ಸಾಲುಗಳಷ್ಟು ಆಳಕ್ಕೆ ಪ್ರವೇಶಿಸಬೇಕಾಗುತ್ತದೆ. ಹರಿಹರದೇವನಲ್ಲಿ ಧರ್ಮ ಕಾವ್ಯಧರ್ಮಗಳು ಶಬ್ದಾರ್ಥಗಳಂತೆ ಅವಿನಾಭಾವದಿಂದ ಸೇರಿ ರಸವತ್ಕಾವ್ಯರೂಪದಿಂದ ಹರಿದುಕೊಂಡು ಹೋಗುತ್ತವೆ. ಶಂಕರಲಿಂಗ ಕವಿಯಲ್ಲಿಯೂ ಭಕ್ತಿರಸವಿದೆ, ಆದರೆ ಕಾವ್ಯಧರ್ಮದ ಕೊರತೆಯಿಂದ ಅದು ತೆಳ್ಳಿಯಾಗಿದೆ. ಪ್ರತಿಭೆ, ಕಲ್ಪನಾಶಕ್ತಿಗಳ ರೆಕ್ಕೆಗಳನ್ನು ಪಸರಿಸಿ ವ್ಯೋಮವಿಹಾರಿಯಾಗಿರುವ ಹರಿಹರದೇವನೊ

ಡನೆ ಹೋಲಿಸುವುದಕ್ಕೆ ತಕ್ಕ ಮತ್ತೊಬ್ಬ ರಗಳೆಯ ಕವಿಯಿಲ್ಲ. ಷಟ್ಪದಿಕಾರರಲ್ಲಿ ಕುಮಾರವ್ಯಾಸ ಹೇಗೋ, ಸಾಂಗತ್ಯದಲ್ಲಿ ರತ್ನಾಕರವರ್ಣಿ ಹೇಗೋ ಹಾಗೆ ರಘಟಾಕಾವ್ಯ ಸೃಷ್ಟಿಯಲ್ಲಿ ಆತ ಅದ್ವಿತೀಯ. ಆಕಾಶಕ್ಕೆ ಆಕಾಶವೇ, ಸಮುದ್ರಕ್ಕೆ ಸಮುದ್ರವೇ ಹೋಲಿಕೆಯಾಗಿರುವಂತೆ, ಹರಿಹರಕವಿಗೆ ಹರಿಹರ ಕವಿಯೇ ಹೋಲಿಕೆ.

# ವೀರಶೈವ ಹಾಡುಗಬ್ಬಗಳು

—ಪಿ. ಎಂ. ಗಿರಿರಾಜು,

**ಹಾಡುಗಬ್ಬಗಳೆಂದರೇನು ? ಅವುಗಳ ನಿರ್ದಿಷ್ಟ ಲಕ್ಷಣಗಳೇನು ?**

ಹಾಡುವ ಕಾವ್ಯ-ಹಾಡುಗಬ್ಬವೆಂದೂ ಅರ್ಥಯಿಸುವುದುಂಟು ! ಆದರೆ ಆ ಅರ್ಥಕ್ಕೆ ಅತಿವ್ಯಾಪ್ತಿದೋಷವುಂಟಾಗುತ್ತದೆ, ಹಾಡದ ಕಾವ್ಯವುಂಟೆ ? ಪ್ರಾಚೀನ ಚಂಪೂಗ್ರಂಥದಿಂದ ತೊಡಗಿ ಈಚಿನ ನವ್ಯಕವಿತೆಯವರೆಗಿನ ಎಲ್ಲ ಕಾವ್ಯಗಳನ್ನೂ ಹಾಡಬಹುದಷ್ಟೆ ! ಇಲ್ಲ, ಕಾವ್ಯಗಳು ಪ್ರಧಾನವಾಗಿ ಪಾಠ್ಯ; ಗೌಣವಾಗಿ ಗೇಯ-ಎಂದರೆ, ನಡುಗನ್ನಡದ ಸುದೀರ್ಘಕಾವ್ಯಗಳಾದ ಷಟ್ಪದಿಕಾವ್ಯಗಳೆಲ್ಲವೂ ಗಮಕಿಗಳಿಂದ ಹಾಡಲ್ಪಡುತ್ತಿದ್ದವು; ಇಂದಿಗೂ ಹಾಡಲ್ಪಡುತ್ತಿವೆ. ಭಾವಚಿಂತಾರತ್ನ, ವೀರಶೈವಾಮೃತಮಹಾಪುರಾಣ, ಶಂಕರಸಂಹಿತೆ, ಶಿವತತ್ತ್ವಚಿಂತಾಮಣಿ ಮುಂತಾದ ಷಟ್ಪದಿಗ್ರಂಥಗಳ ಪ್ರಾಚೀನ ಹಸ್ತಪ್ರತಿಗಳಲ್ಲಿ ಸಂಧಿಸಂಧಿಗೂ ಹಾಡಬೇಕಾದ ರಾಗಗಳೂ, ತಾಳಗಳೂ, ಸ್ಪಷ್ಟವಾಗಿ ನಿರ್ದೇಶಿತವಾಗಿವೆ ! ಆದುದರಿಂದ ಹಾಡುಗಬ್ಬಗಳೆಂದರೆ ರಾಗತಾಳ ನಿರ್ದೇಶವುಳ್ಳ ಪದ್ಯಕಾವ್ಯಗಳೂ ಅಲ್ಲ ; ಹಾಡಬಹುದಾದ ಪ್ರಾಚೀನ ಅರ್ವಾಚೀನ ಕವಿಕೃತಿಗಳೂ ಅಲ್ಲ.

ಒಂದೊ, ಹಲವೊ ಹಾಡುಗಳಿಂದಾದ ಕಾವ್ಯವನ್ನು ಹಾಡುಗಬ್ಬವೆಂದು ಹೇಳಬಹುದು. ಆ ಕಬ್ಬ ಸುದೀರ್ಘವಾಗಿರಬೇಕೆಂದೇನೂ ಇಲ್ಲ ! ಅಷ್ಟಪದಂತೆ ಒಂದ ಸಣ್ಣ ಹಾಡೇ ಆಗಿರಬಹುದು. ಅಷ್ಟೇ ಏನು ! ಪಲ್ಲವಿ, ಹಾಗೂ ಹಲವು ನುಡಿಗಳಿಲ್ಲದೆ ಒಂದೇ ನುಡಿಯುಳ್ಳ ಸ್ವರಬೊಲ್ಲಿಯೂ ಹಾಡುಗಬ್ಬವೆನ್ನಿಸಿಕೊಳ್ಳಬಲ್ಲದು. ನಿರ್ದಿಷ್ಟ ವಿಷಯಪ್ರತಿಪಾದಕವಲ್ಲದ ಏಕಕರ್ತೃಕವೊ (ಸ್ವಕೃತವೊ, ಅನ್ಯಕೃತವೊ), ಬಹುಕರ್ತೃಕವೊ ಆದ ಹಲವು ಹಾಡುಗಳ ಸಂಕಲನವೂ ಹಾಡುಗಬ್ಬವೆನ್ನಿಸುತ್ತದೆ. ವ್ಯವಸ್ಥಿತ ಪ್ರಕರಣ(ಸ್ಥಲ)ವಿಭಜನೆಯಲ್ಲಿ ಪ್ರೌಢವಾಗಿ ವಿಷಯಪ್ರತಿಪಾದನೆ ಗೈಯುವ ಹಾಡುಗಳಿಂದಲೆ ರಚಿಸಲ್ಪಟ್ಟ ಶಾಸ್ತ್ರಗ್ರಂಥವೂ ಹಾಡುಗಬ್ಬವೆನ್ನಿಸಿಕೊಳ್ಳುತ್ತದೆ. ನಿಜಗುಣನ ಕೈವಲ್ಯಪದ್ಧತಿಯೆಂಬ ಹಾಡುಗಬ್ಬದ ಕೊನೆಯ ಮಾತು (ಸಮಾಪ್ತಿವಾಕ್ಯ) ಗಮನಾರ್ಹವಾಗಿದ್ದು ಶಾಸ್ತ್ರರೂಪ ಹಾಡುಗಬ್ಬವನ್ನು ನಿರ್ವಚಿಸುತ್ತದೆ. ಅದು ಇಂತಿದೆ :- ೧) ಆಬಾಲಯೌವನವೃದ್ಧರಿಗಾಯಾಸವಿನಿತಿಲ್ಲದಂತೆ ೨) ಸಮ್ಯಜ್ಞಾನಿಗಳೊಡಂಬಡುವಂತೆ ೩) ಶಾಸ್ತ್ರಸಮ್ಮತದಿಂ ೪) ಪುರಾತನಗೀತಾನುಗುಣ್ಯವೆನಿಸಿ ೫)...ಪೆಸರನಿಟ್ಟು ೬) ಮೃದುಮಧುರ ಲಕ್ಷಣಯುಕ್ತವಾದ ೭)...ಸ್ಥಲಪರಿವಿಡಿದು ೮) ಜೋಡುಗಣನೆಯನುಳ್ಳ ೯) ಸ್ವರವಚನ ಸಂಗ್ರಹಂ....೭-ಅಧ್ಯಾಯಸಂಖ್ಯೆಯನ್ನೂ ೮-ಹಾಡುಗಳ ಸಂಖ್ಯೆಯನ್ನೂ ಸೂಚಿಸುತ್ತವೆ. ಆ ಕೃತಿಯ ಹಾಡುಗಳಲ್ಲಿನ ಒಟ್ಟು ನುಡಿಗಳನ್ನು ಪದಗಳು ಎಂಬ ಹೆಸರಿನಲ್ಲಿ ಸೂಚಿಸುವುದುಂಟು.

**'ಹಾಡು'ಎಂದರೇನು ? ಹಾಡಿನ ಲಕ್ಷಣವೇನು ?**

ನಿಜಗುಣನು ಹಾಡನ್ನು ವಚನಂಗಳ ಜೋಡು ಎಂದು ಕರೆದಿದ್ದಾನೆ. ರಾಗಯುಕ್ತವಾಗಿ ಸಂಗೀತಶಾಸ್ತ್ರಕ್ಕನುಗುಣವಾಗಿ ಹಾಡಲ್ಪಡುವ 'ಗೀತೆ'ಯು ಹಾಡು ಎನಿಸುತ್ತದೆ. ಸಾಮಾನ್ಯವಾಗಿ ಹಾಡುಗಳಲ್ಲಿ ಛಂದೋಬದ್ಧವಾದ ಪದ (ಚರಣ, ನುಡಿ, ವಚನ)ಗಳು ಬೆಸಸಂಖ್ಯೆಯಲ್ಲಿ ಜೋಡಿಸಲ್ಪಟ್ಟಿರುತ್ತವೆ. ಅವುಗಳ ಆದಿಯಲ್ಲಿ ಪಲ್ಲವ (ಪಲ್ಲವಿ)ಎನ್ನುವ ಒಂದು ಆವರ್ತಕಪದ (ಚರಣ, ನುಡಿ, ವಚನ)ವಿದ್ದು ಅದು ಉಳಿದ ಪ್ರತಿಚರಣದ ಆದಿಯಲ್ಲಿ (ಅಂತ್ಯದಲ್ಲಿ ?) ಆವರ್ತನದಿಂದ ಹಾಡಲ್ಪಡಲಿಕ್ಕಾಗಿಯೆ ಇರುತ್ತದೆ. ಇಂತಹ ಹಾಡನ್ನು ಸ್ವರಪದವೆಂದೂ, ಸ್ವರವಚನವೆಂದೂ, ಕರೆಯಲಾಗುತ್ತದೆ. ಕೆಲವು ಹಸ್ತಪ್ರತಿಗಳಲ್ಲಿ ಪದ,ವಚನ, ಪದವಚನ, ವಚನಪದಗಳೆಂಬ ಪದಗಳೂ ಹಾಡುಗಳಿಗೆ ಬಳಸಲ್ಪಟ್ಟಿವೆ. ಹಾಡು ಪಲ್ಲವಿಯನ್ನೂ, ಒಂದಕ್ಕಿಂತ ಹೆಚ್ಚು ಬೆಸಸಂಖ್ಯೆಯ ನುಡಿಗಳನ್ನೂ ಹೊಂದಿಲ್ಲದೆ ಕೇವಲ ಒಂದೇ ನುಡಿಯಲ್ಲಿ ಪೂರ್ಣವಾಗಿರಬಹುದು. ಆಗ ಆ ಹಾಡಿಗೆ ಸ್ವರಬೊಲ್ಲಿ ಎನ್ನಲಾಗುತ್ತದೆ[1]. ಹಾಡುಗಳಿಗೆ ರಾಗಗಳು(ಮುಖ್ಯವಾಗಿ ೩೨ ?) ಮತ್ತು ತಾಳಗಳು(ಮುಖ್ಯವಾಗಿ ೭ ?) ಮುಖ್ಯಾಂಗವೆನಿಸುತ್ತವೆ. ವಾಗ್ಗೇಯಕಾರನು (ಹಾಡು ಕಟ್ಟುವವನು) ರಾಗತಾಳ ಸಮ್ಮತವಾಗಿಯೇ ಹಾಡನ್ನು ರಚಿಸುತ್ತಾನೆ. ಅಂತೆಯೇ ಹಾಡುಗಳ ಆದಿಯಲ್ಲಿ ರಾಗತಾಳಗಳ ನಿರ್ದೇಶವಿರುತ್ತದೆ (ಪ್ರಯೋಗಶೀಲರು ಅದಕ್ಕಿಂತ ಭಿನ್ನವಾದ ರಾಗ-ತಾಳಗಳಲ್ಲಿಯೂ ಹಾಡಬಹುದು). ಕೆಲವೊಮ್ಮೆ ಲಿಪಿಕಾರರಪ್ರಮಾದದಿಂದ ಅಥವಾ ಸಂಗೀತಜ್ಞಾನವಿಲ್ಲದವರು ಪ್ರತಿಮಾಡಿಕೊಂಡಾಗ ಹಸ್ತಪ್ರತಿಗಳಲ್ಲಿ ಹಾಡುಗಳ ರಾಗ, ತಾಳ, ರಾಗತಾಳ ಉಲ್ಲೇಖಗಳು ಕೈಬಿಡುವುದುಂಟು. ಜಾಣನಾದ ಸಂಗೀತಜ್ಞನು ರಾಗತಾಳ

1. ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ಹಸ್ತಪ್ರತಿ K-498/1

ಜ್ಞಾನದಿಂದ ಸ್ವರಪ್ರಸ್ತಾರ ಹಾಕಿಕೊಂಡು ಆ ಹಾಡುಗಳನ್ನು ಹಾಡಿಕೊಳ್ಳಬೇಕಾಗುತ್ತದೆ. ಸ್ವರಬೊಲ್ಲಿಗೂ ರಾಗತಾಳಗಳುಂಟು. ಒಟ್ಟಿನಲ್ಲಿ ಹಾಡು ಪ್ರಧಾನವಾಗಿ ಗೇಯ ; ಸಂಗೀತಜ್ಞಾನವಿಲ್ಲದವರಿಗೆ ಮಾತ್ರ ವಾಚ್ಯವೆನ್ನಿಸುತ್ತದೆ.

'ಮಾತು-ಗೀತ' ಎನ್ನುವ ಅವಳಿಶಬ್ದ ವಚನವಾಙ್ಮಯದಲ್ಲಿ ಕಾರಣಬರುತ್ತದೆ. ಅಲ್ಲಿ ಮಾತು ಛಂದೋಗಂಧಿಯಾದ ಗದ್ಯವಚನಗಳನ್ನೂ, ಗೀತ ಛಂದೋಯುಕ್ತ ರಾಗತಾಳಸಹಿತ ಹಾಡುಗಳನ್ನೂ ಸಂಕೇತಿಸುತ್ತದೆ. ಹಾಡನ್ನು 'ಕೀರ್ತನೆ'ಯೆಂದೂ ದಾಸ (ದ್ವೈತ) ಕೂಟದವರು ಕರೆಯುತ್ತಾರೆ. ಆದರೆ ಹಾಡು ಯಾವಾಗಲೂ ಕೀರ್ತನೆಯೇ (ಹೊಗಳಿಯೇ) ಆಗಿರಬೇಕಿಲ್ಲ. ಹಾಡು, ಆತ್ಮ-ಮನ-ಜೀವ-ಪರಮರನ್ನು ಕುರಿತ ಸಂಬೋಧನೆಯೋ ವಿವೇಕವೋ ಕಾರುಣ್ಯಾಹ್ವಾನವೋ ಆಗಿರಬಹುದು ; ನೀತಿ ಕ್ರಿಯೆ,ಚರ್ಯೆ, ಯೋಗ, ಜ್ಞಾನಪ್ರತಿಪಾದನೆ ಆಗಿರಬಹುದು ; ಕೊನೆಗೆ ಅವಾಚ್ಯ ಬೈಗುಳಗಳಿಂದ ಕೂಡಿದ ಛೀಮಾರಿಯೋ ವಿವೇಕಬೋಧೆಯೋ ಆಗಿರಬಹುದು[2].

**ಹಾಡುಗಳ ಸಂಗೀತ–ಛಂದ ಲಕ್ಷಣಗಳೇನು ?**

ಹಾಡುಗಳನ್ನು ನಾದಮಾಧುರ್ಯಸಮ್ಮೇಲನಕ್ಕಾಗಿ ತಂತಿಯವಾದ್ಯಗಳನ್ನೂ, ಚರ್ಮವಾದ್ಯಗನ್ನೂ, ಗಾಳಿವಾದ್ಯಗಳನ್ನೂ, ತಾಳವಾದ್ಯಗಳನ್ನೂ ಮೇಳೈಸುವುದುಂಟು. ಸಂಗೀತ ಪೂರ್ಣವೆನ್ನಿಸಲು ಕೊನೆಯ ಪಕ್ಷವಾಗಿ ತಾಳಹಾಕುವ ತಾಳಧರರು, ಚರ್ಮವಾದ್ಯ ಬಾರಿಸುವ ಆವುಜರೂ, ಹಾಡುವ ಸಂಗೀತ ಜನರೂ ಇರಬೇಕು. ವಾಚ್ಯವಾದ ವಚನ(ಮಾತು)ಗಳನ್ನು ತಾಳ ನಿಯಮ ಗಣನಿಯಮವೆಂಬ ಸಂಗೀತ ಛಂದಸ್ಸುಗಳ ಶಾಸನವಿಲ್ಲದೆ ನಾದಪ್ರಧಾನವಾಗಿ ಹಾಡಬಹುದು. ಆಗ ಅದು ಉಗಾಭೋಗವೆನ್ನಿಸಬಹುದು. ಆದರೆ ಗೇಯವಾದ ಸ್ವರ (ಗೀತ)ಗಳನ್ನು ಶುದ್ಧವಾಗಿ ಹಾಡಲು ತಾಳಮಾನ ಸರಿಸಗಳ, ಓಜೆಬಜಾವಣೆಯ ಲೆಕ್ಕಗಳ, ಅಮೃತ ದೇವಾದಿಗಣಗಳ ಜ್ಞಾನ ಅನಿವಾರ್ಯವೆನ್ನಿಸುತ್ತದೆ.

ಹಾಡುಗಳಲ್ಲಿ ಸಾಮಾನ್ಯವಾಗಿ ಪಲ್ಲವಿಯಿರುತ್ತದೆ. ಅಪರೂಪವಾಗಿ ಅನುಪಲ್ಲವಿಯೂ ಇರುವುದುಂಟು, ಪಲ್ಲವಿಯೇ ಇಲ್ಲದ್ದು ಸ್ವರಬೊಲ್ಲಿ. ಇದಕ್ಕೆ ಒಂದಕ್ಕಿಂತ ಹೆಚ್ಚು ನುಡಿಗಳಿಲ್ಲ. ಪಲ್ಲವಿ, ಹಾಗೂ ಅನುಪಲ್ಲವಿಗಳು ಇರುವಾಗ ಬೆಸ ಸಂಖ್ಯೆಯಲ್ಲಿ ೩ ರಿಂದ ತೊಡಗಿ ೨೭ ರ ವರೆವಿಗೂ ನುಡಿಗಳಾಗಿರುತ್ತವೆ. ಅಪರೂಪವಾಗಿ ೨೭ ಕ್ಕೂ ಮೀರಿ ನುಡಿಗಳಿರಬಹುದು. ಅಪರೂಪವಾಗಿ ಸಮಸಂಖ್ಯೆಯ ನುಡಿಗಳು ಕಂಡು ಬಂದಲ್ಲಿ ಅದು ಲಿಪಿಕಾರರ ಪ್ರಮಾದದಿಂದಾದ ಲೋಪವಾಗಿರಬಹುದು. ಹಾಡಿನ ಪಲ್ಲವಿ ಹಾಗೂ ಎಲ್ಲ ನುಡಿಗಳೂ ಸಾಮಾನ್ಯವಾಗಿ ಒಂದೇ ಛಂದಸ್ಸಿನ ಪ್ರಕಾರದಲ್ಲಿ ಇರುವುದಾದರೂ ಅಪರೂಪಕ್ಕೆ ಮಿಶ್ರಛಂದಸ್ಸು ಭಿನ್ನ ಭಿನ್ನ ನುಡಿಗಳಿಗಿರಬಹುದು, ಹಾಡುಗಳು ವಿಶೇಷವಾಗಿ ಅಂಶಗಣದ ಕರ್ಣಾಟಕ ವಿಷಯಜಾತಿ ಛಂದಸ್ಸಿನಲ್ಲಿಯೇ (ಏಳೆ, ತ್ರಿಪದಿ, ಉತ್ಸಾಹ, ಛಂದೋವತಂಸ, ಅಕ್ಕರ, ಷಟ್ಪದಿ, ಚೌಪದಿಗಳಲ್ಲಿ, ಅಪರೂಪವಾಗಿ ಮದನವತೀ ಅಕ್ಕರಿಕೆ, ಗೀತಿಕೆಗಳಲ್ಲಿ) ಇರುತ್ತವೆ. ಮಾತ್ರಾಗಣದ ಶರ, ಭೋಗ, ಭಾಮಿನೀ, ಪರಿವರ್ಧಿನೀ, ಕುಸುಮ, ವಾರ್ಧಕ ಷಟ್ಪದಿಗಳನ್ನೂ ಸೀಸ, ಸಾಂಗತ್ಯ ಮುಂತಾದ ಛಂದಗಳನ್ನೂ ಹಾಡುಗಳಿಗೆ ಬಳಸುವುದುಂಟು. ಸಾಮಾನ್ಯವಾಗಿ ಆದಿಪ್ರಾಸ ಪ್ರತಿಚರಣಗಳಲ್ಲಿರುತ್ತದೆ. ಕೆಲವೆಡೆ ನಡುಪ್ರಾಸ ಕಡೆಪ್ರಾಸಗಳೂ ಇರಬಹುದು. ರಾಗಾಲಾಪನೆಯ ಮಾಧುರ್ಯಕ್ಕಾಗಿಯೆ ಚರಣಗಳ ನಡುವಣ ಗಣಗಳನ್ನು ತೆರವು ಮಾಡುವುದೂ ಉಂಟು. ಹಾಡುಗಳ ನುಡಿಯ ಕಡೆಗಳಲ್ಲಿಯೋ, ನುಡಿಗಳ ಪಾದಗಳ ಕಡೆಗಳಲ್ಲಿಯೋ ಚಂದಮಮ, ದೇವರದೇವ ಮುಂತಾದ ಕಿರುಪಲ್ಲವಿಗಳನ್ನು ಮಾಧುರ್ಯನಾದಕ್ಕಾಗಿ ಲಯಕ್ಕಾಗಿ ಹೊಂದಿಸುವುದುಂಟು. ಕೆಲವಡೆ ಹಾಡುಗಳು ಸ್ವಚ್ಛಂದ ಛಂದದಲ್ಲಿಯೂ ಇರುವುದುಂಟು. ಲಿಪಿಕಾರರ ದೋಷಗಳಿಂದ ಚರಣ, ಗಣ, ಶಬ್ದ, ಅಕ್ಷರಗಳಲ್ಲಿ ಲೋಪ ಆಗಮ ಆದೇಶಗಳುಂಟಾಗಿ ಛಂದ ಕುಲಗೆಟ್ಟು ಸ್ವಚ್ಛಂದವಾಗಿ ಕಾಣಲೂ ಬಹುದು.

**ಕನ್ನಡದಲ್ಲಿ ಹಾಡುಗಳ ಆದ್ಯಪ್ರವರ್ತಕರು ಯಾರು ? ಅವರ ಪರಂಪರೆಯೇನು ?**

ಲಭ್ಯ ಪ್ರಬಲ ಪ್ರಮಾಣಗಳಂತೆ ವೀರಶೈವ ಧರ್ಮದ ಆದ್ಯ ಪ್ರವರ್ತಕರಾದ ಬಸವಾದಿ ಪ್ರಮಥರೇ ಕನ್ನಡದ ಹಾಡುಗಳಿಗೂ (ಸಂಗೀತಕ್ಕೂ) ಆದ್ಯಪ್ರವರ್ತಕರಾಗಿದ್ದಾರೆ ಎಂದು ಸಾಧಾರವಾಗಿ ಪ್ರತಿಪಾದಿಸಿ ಪ್ರತಿಷ್ಠಾಪಿಸಬಹುದಾಗಿದೆ. ಬಸವಾದಿ ಪ್ರಮಥರಿಗಿಂತ ಹಿಂದೆ ಹಾಡು (ಕನ್ನಡ ಸಂಗೀತ) ಪ್ರಬಲವಾಗಿದ್ದುದಕ್ಕೆ ಪ್ರಚಾರ ಸಾಧನವಾಗಿದ್ದುದಕ್ಕೆ ಯಾವ ಪ್ರಬಲ ವಿಶ್ವಾಸಾರ್ಹ ಪ್ರಮಾಣವೂ ದೊರೆಯುವುದಿಲ್ಲ. ಸತ್ಯ ಸಂಗತಿ ಹೀಗಿದ್ದರೂ ಸಂಸ್ಕೃತ ಸಂಗೀತಗ್ರಂಥ ಮಾನಸೋಲ್ಲಾಸವನ್ನು ಜಗ್ಗುತ್ತಾ, ಆಧಾರವಿಲ್ಲದೆ, ಹತ್ತನೆ ಶತಮಾನದಲ್ಲಿ ಇದ್ದನೆನ್ನಲಾದ, ಅಚಲಾನಂದನನ್ನು ಕರ್ಣಾಟಕ ಸಂಗೀತ ಆದ್ಯಪ್ರವರ್ತಕನೆಂದೂ, ಹರಿದಾಸ (ದಾಸಕೂಟ, ಮಾಧ್ವ) ಸಂಪ್ರದಾಯದ ಹಾಡುಗಳ ಮೊದಲಿಗನೆಂದೂ ಕೆಲವರು ಸ್ವಜನಪ್ರೇಮಿ ವಿದ್ವಾಂಸರು ಹೇಳಿಕೊಳ್ಳುತ್ತಾರೆ. ಅಚಲಾನಂದನು ಹಾಡುಗಳನ್ನು ಬರೆದದ್ದಕ್ಕೆ ಪ್ರಮಾಣವಾಗಿ ಹಾಡುಗಳು ಒಂದೂ ಸಹ ದೊರೆಯುವುದಿಲ್ಲ ! ಅಲ್ಲದೆ ಸ್ವಾರಸ್ಯ ಸಂಗತಿಯೆಂದರೆ, ಸಂಪ್ರದಾಯ ನಾಮುಗಳ ಹಿನ್ನೆಲೆಯಲ್ಲಿ ನೋಡಿದರೆ ಅಚಲಾನಂದನು ಹರಿದಾಸ–

---

2. ಚಿದಾನಂದನ ಕೋರಡೆಗಳು

ದ್ವೈತಿಯಾಗಿರಲಾರ ; ಸಹಜಾನಂದ, ಗಗನಾನಂದ, ಚಿದಾನಂದ ಮುಂತಾದ ಪ್ರಸಿದ್ಧ ವ್ಯಕ್ತಿಗಳಂತೆ ಅಚಲಾನಂದನೂ 'ನಾಥ' ಸಂಪ್ರದಾಯದ ಅವಧೂತನಾಗಿರಬಹುದು.

ಬಸವಾದಿ ಪ್ರಮಥರು ನೂತನ ಧರ್ಮವನ್ನು ಪ್ರತಿಷ್ಠಾಪಿಸಿ ಪ್ರಚಾರಗೈಯಲು ಸಹಜವಾಗಿ ದೇಶಭಾಷೆಯನ್ನು ಬಳಸಿ, ದೇಶೀಯರಿಗೆ ಸರಳವಾಗಿ ಮನದಟ್ಟುವಂತೆ 'ಮಾತು–ಗೀತ'ಗಳನ್ನು ರಚಿಸಿ ಪ್ರಚಾರಗೊಳಿಸಿ ಕೃತಕೃತ್ಯರೂ ಆದರು. ಅಲ್ಲಿಂದ ಮುಂದೆ ಮುನ್ನೂರು ವರ್ಷಗಳ ತರುವಾಯ ಎಚ್ಚರಗೊಂಡ ಪೌರೋಹಿತ ಪೌರಾಣಿಕಧರ್ಮ ಬಸವಕ್ರಾಂತಿಗೆ ವಿರುದ್ಧ ವಾಗಿ ಅಂದೋಲನವನ್ನು ಕೈಗೊಂಡು ಪಾಮರ ರಂಜನೆಗಾಗಿ ರೇಡಿಮೇಡ್ ಶಾಸ್ತ್ರಗಳಾದ ರಾಮಾಯಣ, ಭಾರತ, ಭಾಗವತ, ಭಗವದ್ಗೀತೆ ಪುರಾಣಗಳನ್ನು ಕನ್ನಡೀಕರಿಸಿತು. ಆದರ ಕೊನೆಯ ಹಂತವಾಗಿ ಪೌರಾಣಿಕ ಕಥೆ ಕಲ್ಪನೆಗಳನ್ನೂ ಸವಕಲು ನೀತಿ ಬೋಧೆಗಳನ್ನೂ ವಿಜಯನಗರ ಹಾಳಾಗುವ ಮುನ್ನ ಹಾಡುಗಳಿಗೆ ರೂಪಾಂತರಗೊಳಿಸಲಾಯಿತು. ಮೂಢಭಕ್ತಿ ಪ್ರಚೋದನೆ ಗಾಗಿ 'ಕೀರ್ತನೆ'ಗಳು ಬರೆಯಲ್ಪಟ್ಟವು. ಇವುಗಳ ದುಷ್ಪ್ರಭಾವದಿಂದಾಗಿ ವೈಚಾರಿಕ ಮತವಾದ ವೀರಶೈವದಲ್ಲಿಯೂ ಸಿದ್ಧಾಂತ ವಿರುದ್ಧವಾದ ಶೈವಪ್ರಜ್ಞೆ, ಮೂಢಭಕ್ತಿಗಳ ಪ್ರಚೋದನಾರ್ಥವಾಗಿ ಪುರಾಣ ಸಾಹಿತ್ಯ ಹುಟ್ಟಿಕೊಂಡಿತು. ಅನ್ಯರ ವ್ಯವಸ್ಥಿತ ಪಿತೂರಿಗಳಿಂದ ಬಸವಾದಿ ಪ್ರಮಥರ ಮತ್ತು ವಿಜಯನಗರವ ಶರಣರ ಸಂಗೀತ ಬದ್ಧ ಹಾಡುಗಳು ಬಹುಪಾಲು ನಷ್ಟವಾಗಿ ಹೋದವು. ಅಳಿದುಳಿದ ಸಾವಿರಾರು ಹಾಡುಗಳನ್ನು ನೋಡಿದಾಗ ವೀರಶೈವ ಹಾಡುಗಳ ಸಂಗೀತ ವೈಭವ ಅರ್ಥವಾಗುತ್ತದೆ, ಸಂಗೀತದ ಆದ್ಯಪ್ರವರ್ತಕರಾದ ಬಸವಾದಿ ಪ್ರಮಥರ ವಿಜಯನಗರ ಶರಣರ ಹಾಡುಗಳು ಸ್ವಜನರ ಅಲಕ್ಷ್ಯ, ಅನ್ಯರ ಪಕ್ಷಪಾತ ಪೂರ್ಣ ವ್ಯವಹಾರಗಳಿಂದ ಇಂದಿಗೂ ಅಸ್ಪೃಶ್ಯವೂ ಅಲಕ್ಷಿತವೂ ಅನಾಮಧೇಯವೂ ಆಗಿದೆ. ಬಸವಾದಿ ಪ್ರಮಥರಿಗೆ ನಿಜವಾಗಿ ಸಲ್ಲಬೇಕಾದ 'ಸಂಗೀತ ಅಗ್ರಮರ್ಯಾದೆ', ಅನ್ಯಾಯವಾಗಿ ಅನರ್ಹರಾದ ಅನ್ಯರಿಗೆ ಪಕ್ಷಪಾತ ಧೋರಣೆಯಿಂದ ದೊರೆಯುತ್ತಿದೆ. ವಿದ್ವತ್ಪ್ರಪಂಚದಲ್ಲಿನ ಅನ್ಯಾಯದ ಕೊನೆಯ ಮಟ್ಟ ಇದಾಗಿದೆ.

**ವೀರಶೈವ ಹಾಡುಗಬ್ಬಗಳ ಲಕ್ಷಣವೇನು ?**

ವೀರಶೈವಕವಿಯ (ವಾಗ್ಗೇಯಕಾರನ) ಕೃತಿ (ಹಾಡು)ಗಳನ್ನು ವೀರಶೈವ ಹಾಡುಗಬ್ಬಗಳೆಂದು ಕರೆಯುವ ಪರಿಪಾಠ ಸಾಮಾನ್ಯವಾಗಿದೆ. ಇದು ಅಸಾಧುವಷ್ಟೇ ಅಲ್ಲ, ಅನ್ಯಾಯವೂ ಎನ್ನಬಹುದು. ಕವಿಯು ವೀರಶೈವನಾಗಿದ್ದು ಕೃತಿ ಸಂಪೂರ್ಣ ವಾಗಿ ವೀರಶೈವೇತರವಾದಾಗಲೂ ಆ ಕೃತಿಯನ್ನು ವೀರಶೈವಕೃತಿ, ವೀರಶೈವಹಾಡುಗಬ್ಬ ಎನ್ನುವುದು ಉಚಿತವಲ್ಲ, ಯುಕ್ತ ವಲ್ಲ, ನ್ಯಾಯವಲ್ಲ. ಆದುದರಿಂದ ವಸ್ತು, ಕೃತಿ ವೀರಶೈವವಾಗಿದ್ದರೆ ಮಾತ್ರ ಆ ಹಾಡುಗಳನ್ನು ವೀರಶೈವಹಾಡುಗಬ್ಬಗಳೆಂದು ಕರೆಯುವುದು ಸಾಧುವೆನಿಸುತ್ತದೆ. ಎಂದರೆ ವಸ್ತುನಿಷ್ಠವಾಗಿಯೆ ವೀರಶೈವ ಹಾಡುಗಳನ್ನು ಗುರುತಿಸಬೇಕೇ ಹೊರತು ವ್ಯಕ್ತಿ (ಕವಿ) ನಿಷ್ಠವಾಗಿ ವೀರಶೈವೇತರವನ್ನು ವೀರಶೈವ ಎನ್ನಲಾಗದು.

**ವೀರಶೈವತ್ವವನ್ನು ಅನುಸರಿಸಿ ವೀರಶೈವ ಹಾಡುಗಳ ವರ್ಗೀಕರಣ ಹೇಗೆ ?**

ವೀರಶೈವ ಹಾಡುಗಬ್ಬಗಳೆಂದು ಈಗಾಗಲೆ ಗುರುತಿಸಲಾಗಿರುವ ಹಾಡುಗಬ್ಬಗಳನ್ನು 'ವೀರಶೈವತ್ವ'ದ ಪ್ರಮಾಣ ವನ್ನು ಅನುಸರಿಸಿ ಉತ್ತಮ (ಶುದ್ಧ) ಮಧ್ಯಮ (ಮಿಶ್ರ), ಸಾಧಾರಣ (ಗೌಣ), ಕನಿಷ್ಠ (ವಾಮ)ವೆಂದು ನಾಲ್ಕು ವರ್ಗವಾಗಿ ವಿಂಗಡಿಸಬಹುದು. ಉತ್ತಮವು ಬಸವಾದಿ ಪ್ರಮಥರು ಬೋಧಿಸಿದ ವಚನಶಾಸ್ತ್ರದ ಮೂಲ ಮನೋಧರ್ಮ ಸಿದ್ಧಾಂತಗಳಿಗೆ ಅನುಕೂಲವಾಗಿರುತ್ತದೆ. ಪ್ರತಿಕೂಲವಾದ ಅನ್ಯಬೋಧೆ, ಅನ್ಯಶಾಸ್ತ್ರಗಳನ್ನು ಅನುಸರಿಸುವುದಿಲ್ಲ. ಮಧ್ಯಮವು ಬಸವಾದಿ ಪ್ರಮಥರ ಬೋಧೆಯೊಡನೆ ತನ್ನ (ಕವಿಯ) ಅನಿಸಿಕೆಗಳನ್ನೂ ಮಿಶ್ರಣಗೆಯ್ಯುತ್ತದೆ. ಅಲ್ಲಿ ಪರೋಕ್ಷವಾಗಿ ಅನ್ಯಬೋಧೆಯ ಪ್ರಭಾವವಿರುತ್ತದೆ. ಸಾಧಾರಣವು ಬಸವಾದಿ ಪ್ರಮಥರ ಬೋಧೆಯನ್ನು ಗೌಣವನ್ನಾಗಿಸಿ ತಮ್ಮ ಅನಿಸಿಕೆ ಅನುಭವಗಳನ್ನು ಪ್ರಧಾನವನ್ನಾಗಿಸುತ್ತದೆ. ಅನ್ಯಬೋಧೆಯೂ ನಿಚ್ಚಳವಾಗಿ ಕಾಣಬರುತ್ತದೆ. ಕನಿಷ್ಠವು ಬಸವಾದಿ ಪ್ರಮಥರ ಬೋಧೆಗೆ ಪ್ರತ್ಯಕ್ಷ ವಿರುದ್ಧವಿರುತ್ತದೆ. ಎಲ್ಲೋ ಅಲ್ಪಸ್ವಲ್ಪ ವೀರಶೈವ ವಿಚಾರವನ್ನು ಏಕದೇಶೀಯವಾಗಿ ಹೇಳುತ್ತದೆ. ವಿಶೇಷವಾಗಿ ದ್ವೈತ (ಸಿದ್ಧಾಂತ), ಅದ್ವೈತ (ವೇದಾಂತ), ಕರ್ಮ (ಯೋಗ)ಗಳನ್ನೇ ಬಸವಾದಿ ಪ್ರಮಥರ ವಿರುದ್ಧವಾಗಿ ಪ್ರತಿಪಾದಿಸುತ್ತದೆ.

**ವೀರಶೈವ ಹಾಡುಗಳ ಸಂಕಲನಗಳ ಸ್ವರೂಪವೇನು ? ವೀರಶೈವ ಹಾಡುಗಳ ಪರಿಚಯವೆಂತು ? ವೀರಶೈವ ವಾಗ್ಗೇಯಕಾರರ ಪರಿಚಯವೇನು ?**

ವೀರಶೈವ ಹಾಡುಗಳು ಒಂಟಿಯಾಗಿಯೋ, ಕೆಲವೇ ಕೆಲವೋ, ಹಲವಾರೋ, ಸ್ವತಂತ್ರಪೂರ್ಣಗ್ರಂಥರೂಪದಲ್ಲಿಯೋ ತಾಡವೋಲೆಯ, ಕೋರಿಕಾಗದದ ಹಸ್ತಪ್ರತಿಗಳಲ್ಲಿ ದೊರೆಯುತ್ತವೆ. ಅವುಗಳ ಪೈಕಿ ಕೇವಲ ಸ್ವಲ್ಪಭಾಗ ಮುದ್ರಣ ಕಂಡಿದೆ. ಅಪಾರಭಾಗ ಹಸ್ತಪ್ರತಿಗಳಲ್ಲಿ ಹುಳಿತುಹೋಗಿ ಶಾಶ್ವತವಾಗಿ ನಾಶಕ್ಕೆ ಗುರಿಯಾಗುತ್ತಿವೆ.

೧. **ಒಂಟಿ ಹಾಡು**–ಅನೇಕ ಹಸ್ತಪ್ರತಿಗಳಲ್ಲಿ ಸಮಗ್ರವಾಗಿ ಅಥವಾ ಅಸಮಗ್ರವಾಗಿ ಒಂಟಿಹಾಡು ದೊರೆಯುತ್ತವೆ. ಅವುಗಳ ಮುದ್ರಿಕೆಯಿಂದಲೂ ವಸ್ತುವಿನಿಂದಲೂ ಅವುಗಳನ್ನು ವೀರಶೈವ ಹಾಡು ಎಂದು ಗಮನಿಸಬಹುದು.

೨. **ಕೆಲವು ಹಾಡುಗಳು**-ಒಬ್ಬನವೋ ಹಲವರವೋ ಕೆಲವು ಹಾಡುಗಳು ಒಂದೆಡೆ ಹಸ್ತಪ್ರತಿಗಳಲ್ಲಿ ದೊರೆಯುತ್ತವೆ.

೩. **ಮಿಶ್ರಿತಹಾಡುಗಳು**–ಒಂದೋ ಹಲವೋ ಹಾಡುಗಳು ಅನ್ಯಗ್ರಂಥದಲ್ಲಿ ಮಿಶ್ರವಾಗಿ ಬಂದಿರಬಹುದು : ಉದಾಹರಣೆಗೆ ೧. **ವಚನಗ್ರಂಥಗಳಲ್ಲಿ**–ಅ) ಶೂನ್ಯಸಂಪಾದನೆಗಳಲ್ಲಿ ಉತ್ತಮ ಹಾಡುಗಳು ಸಿಗುತ್ತವೆ. ಶಿವಗಣಪ್ರಸಾದಿ ಮಹಾದೇವಯ್ಯಗಳು ಸೇರಿಸಿದ ಶೂನ್ಯಸಂಪಾದನೆಯಲ್ಲಿ ಮೂವರು ಶರಣರ ಹನ್ನೊಂದು ಉತ್ತಮ ಹಾಡುಗಳು ಸಿಗುತ್ತವೆ. ಹಲಗೆದೇವರು ಸೇರಿಸಿದ ಶೂನ್ಯಸಂಪಾದನೆಯಲ್ಲಿ ಆರು ಶರಣ–ಶರಣೆಯರ ೩೧ ಉತ್ತಮ ಹಾಡುಗಳು ದೊರೆಯುತ್ತಿವೆ. ಗುಮ್ಮಳಾಪುರವ ಸಿದ್ಧಲಿಂಗದೇವರು ಸೇರಿಸಿದ ಶೂನ್ಯಸಂಪಾದನೆಯಲ್ಲಿ ನಾಲ್ಕು ಶರಣರ ೧೮ಉತ್ತಮ ಹಾಡುಗಳಿವೆ. ಗೂಳೂರು ಸಿದ್ಧವೀರಣಾರ್ಯರು ಸೇರಿಸಿದ ಶೂನ್ಯಸಂಪಾದನೆಯಲ್ಲಿ ೫ ಶರಣ ಶರಣೆಯರ ೨೧ ಉತ್ತಮ ಹಾಡುಗಳು ಇವೆ. ಆ) ಮಹತ್ತುದೇವನು ಸೇರಿಸಿದ ತ್ರೈಲೋಕ್ಯಚಿಂತಾಮಣಿ ವಚನ ಸಂಕಲನ ಗ್ರಂಥದಲ್ಲಿ [ಈ ಗ್ರಂಥ ವೀರಶೈವ ಚಿಂತಾಮಣಿಯೆಂಬ ಹೆಸರಿನಲ್ಲಿ (ಹಸ್ತಪ್ರತಿಗೆ ವಿರುದ್ಧವಾಗಿ ?) ಪ್ರಕಟವಾಗಿದೆ] ೮ ಸ್ಥಲಕಟ್ಟುಗಳಿಗೆ ಸ್ಥಲ ನಿರ್ದೇಶದ ಪದಗಳಾಗಿ ೫ ಸ್ವರ ವಚನಕಾರರ ೮ ಉತ್ತಮ ಹಾಡುಗಳು ದೊರೆಯುತ್ತವೆ. ಇ) ಸೋಸಲೆ ಚಿಕ್ಕಣಾರಾಧ್ಯನ (ಸೋಮನಹಳ್ಳಿ ಚಿಕ್ಕವೀರಣ್ಣೊಡೆಯರ?) ಪರಮ ಮೂಲ ಜ್ಞಾನಷಟ್ಸ್ಥಲ ವಚನಶಾಸ್ತ್ರದಲ್ಲಿ ೭ ಸ್ಥಲಕಟುಗಳ ವಚನಗಳೊಂದಿಗೆ ೧೫ ಸ್ವರ ವಚನಕಾರರ ಉತ್ತಮವಾದ ೪೭ ಹಾಡು ಹಾಡುಗಳು ದೊರೆತಿವೆ. ಈ) ಮಹಾಲಿಂಗದೇವರ 'ಏಕೋತ್ತರ ಶತಸ್ಥಲ'ದಲ್ಲಿ ೧೦೧ ಸ್ಥಲಗಳ ಅಂತ್ಯಗಳಲ್ಲಿ ಸ್ಥಲನಿರ್ದೇಶ ಪದವಾಗಿ ೧೭ ಸ್ವರವಚನಕಾರರ ೧೦೧ ಉತ್ತಮ ಹಾಡುಗಳು ೯೨೭ ವಚನಗಳೊಂದಿಗೆ ಬಂದಿವೆ. ಉ) ಸಿದ್ಧಲಿಂಗೇಶ್ವರನ (ವಿರಕ್ತ ತೋಂಟದಾರ್ಯನ?) ಏಕೋತ್ತರ ಶತಸ್ಥಲದಲ್ಲಿ ೧೦೧ ವಚನ ೧೦೧ ವೃತ್ತಗಳ ನಡುವೆಯಲ್ಲಿ ೧೭ ಸ್ವರವಚನಕಾರರ ೧೦೧ ಶುದ್ಧ (ಉತ್ತಮ) ಹಾಡುಗಳು (ಮಹಾಲಿಂಗನಲ್ಲಿರುವಂತೆಯೇ) ಬರುತ್ತವೆ.

೨. **ಷಟ್ಪದಿ ಗ್ರಂಥಗಳಲ್ಲಿನ ಹಾಡುಗಳು**–ಅ) ಸಿಂಗಿರಾಜಪುರಾಣದಲ್ಲಿ ಚನ್ನಬಸವಕೃತ ಶುದ್ಧ (ಉತ್ತಮ) ಸ್ವರ ವಚನವೊಂದು ಉದ್ಧೃತವಾಗಿದೆ. ಆ) ಸಿದ್ಧನಂಜೇಶನ ರಾಘವಾಂಕ ಚಾರಿತ್ರದಲ್ಲಿ ರಾಘವಾಂಕನ ಹಾಡೊಂದು ಬಂದಿದೆ.

೩. **ಚಂಪೂ ಗ್ರಂಥಗಳಲ್ಲಿನ ಹಾಡುಗಳು**–ಅ) ಶಾಂತವೀರದೇಶಿಕನ ಶಿವಲಿಂಗಚಾರಿತ್ರದಲ್ಲಿಯೂ ಸ್ವರವಚನಗಳು ಬಂದಿವೆಯಂತೆ[3]. **ಬಸವಲಿಂಗದೇವನ ಏಕೋತ್ತರ ಶತಸ್ಥಲದಲ್ಲಿಯೂ** ವಚನಗಳೊಂದಿಗೆ ಸ್ವರವಚನಗಳು ಬಂದಿವೆಯಂತೆ[4] **ಕಟ್ಟಿಗೆಹಳ್ಳಿಸ್ವಾಮಿಯ ಏಕೋತ್ತರಶತಸ್ಥಲದಲ್ಲಿಯೂ** ವಚನಗಳೊಂದಿಗೆ ಸ್ವರವಚನಗಳು ಬಂದಿವೆಯಂತೆ[5]. ೪. **ಭಿನ್ನಕರ್ತೃಕ ಹಾಡುಗಳ ಸಂಕಲನಗಳು** ಅ) ಕಂಬಾಳ ಶಾಂತಮಲ್ಲೇಶನು 'ಗಣವಚನ ರತ್ನಾವಳಿ' ಗ್ರಂಥದಲ್ಲಿ ೨೦೬ ಸ್ಥಲಗಳಲ್ಲಿ ೧೨೦೬ ಸ್ವರಪದ (ನುಡಿ?)ಗಳನ್ನು ಸೇರಿಸಿದ್ದಾನೆ. ಆ ಗ್ರಂಥದಲ್ಲಿ ಬಸವ, ಚನ್ನಬಸವ, ಅಲ್ಲಮ, ಸಿದ್ಧರಾಮ, ಅಪ್ಪಣ್ಣ, ದಾಸ, ಆದಯ್ಯ, ಬಹುರೂಪಿ ಚೌಡ, ನಾಗಲಾಂಬಿಕೆ, ನೀಲಾಂಬಿಕೆ, ಮಹಾದೇವಿಯೇ ಮುಂತಾದ ಪ್ರಾಚೀನ ಶರಣರ, ಕರಸ್ಥಲ ವೀರಣ್ಣೊಡೆಯ, ಕರಸ್ಥಲನಾಗದೇವ, ಮಾಯಿದೇವ,ಶಂಕರದೇವ, ಶಾಂತಯ್ಯ, ಬೋಳೇಶ, ಗುರುಬಸವ ಮುಂತಾದ ಮಧ್ಯಕಾಲೀನ ಶರಣರ ಸ್ವರಪದಗಳು ಇವೆ[6]. ಇದರ ಏಕೈಕ ಹಸ್ತಪ್ರತಿ ನಿಗೂಢವಾಗಿ ಅನ್ಯರಲ್ಲಿ ಅಡಗಿದೆ. ಇದು 'ಉತ್ತಮ' ಹಾಡುಗಳ ಸಂಕಲನವಾಗಿದೆ. ಆ) **ಚೆನ್ನವೀರಾರ್ಯ**–ಶಿವಲಿಂಗದೇವರು ಸೇರಿಸಿದ **ಶಿವಯೋಗ ಪ್ರದೀಪಿಕೆಯು** ೨೧ಸ್ಥಲಗಳಲ್ಲಿ ೧೮ ಪುರಾತನ ನೂತನ ಶರಣಶರಣೆಯರ ಉತ್ತಮವಾದ ೭೩ ಹಾಡುಗಳು ರಾಗ ನಿರ್ದೇಶಸಹಿತವಾಗಿವೆ.ಹಾಡುಗಳಿಗೆ ಬೆಡಗಿನ ಸ್ವರ ಪದಗಳುಎಂದು ನಾಮಾಂತರವೂ ಉಂಟು. ಬೆಡಗಿನ ಶಬ್ದಗಳಿಗೆ ಟಿಪ್ಪಣಿಯೂ ಇದೆ. ಇ) **ಕರಿಬಸವಾರ್ಯರು** 'ಶಿವಗಣಸಂಗೀತ' ವೆಂಬ ಹಲವಾರು ಮುದ್ರಿಕೆಗಳ ವಿಚಿತ್ರ ಕಲಸುಮೇಲೋಗರದಂತಹ ಕಾಲಜ್ಞಾನಜಾತಿಯ ಹಾಡುಗಳನ್ನು ಸಂಗ್ರಹಿಸಿದ್ದಾನೆ ಇದು 'ಸಾಧಾರಣ' ಹಾಡುಗಳ ಸಂಕಲನವಾಗಿದೆ[7]. ಈ) **ಶಿವರುದ್ರಸ್ವಾಮಿಯು** 'ಬಿಡಿಸ್ವರ ವಚನ'ಗಳನ್ನು ಸಂಗ್ರಹಿಸಿದ್ದಾನಂತೆ[8]. ಉ) ಅಜ್ಞಾತಮಹಾನುಭಾವನು ಸೇರಿಸಿದ ಹಾಡುಗಳ ಐದು ಖಂಡ ಸಂಕಲನ–ಈತನು ೧) ನಿಜಗುಣನ ಕೈವಲ್ಯಪದ್ಧತಿ ೨) ಸರ್ಪಭೂಷಣನ ಕೈವಲ್ಯ ಕಲ್ಪವಲ್ಲರಿ, ೩) ಬಸವಾದಿ ಪ್ರಮಥರ ನೂತನರ (ಅಂದಿನ ಬಸವನಿಂದ ತೊಡಗಿ ಈಚಿನ ಕಟ್ಟಿಗೆ ಹಳ್ಳಿಯ ಸ್ವಾಮಿಯವರೆಗಿನ ೪೦ ಶರಣರ) ೨೦೦ ಹಾಡುಗಳನ್ನು ಸಂಗ್ರಹಿಸಿದ್ದಾನೆ.

೪. **ನಿಜಗುರು ಸಿದ್ಧಶಾಂತರ** (ಮರುಳುದೇವರ) ೭೦ ಹಾಡುಗಳು ೫. ಸಿದ್ಧಲಿಂಗರ ಪದಗಳು (ಸಂಖ್ಯೆ?) ಹೀಗೆ ಐದು ಖಂಡಗಳಲ್ಲಿ ಅದ್ಭುತ 'ಹಾಡುಗಳ ಸಂಕಲನ'ವನ್ನು ಓಲೆಯಲ್ಲಿ ಮಾಡಿದ್ದಾನೆ. ಇದು ಪಾರ್ಶ್ವತಃ ೪ ಭಾಗಗಳಲ್ಲಿ (೨೮

---

3. ಯಲಬುರ್ಗಾ ಪ. ಬ, ೧. ಸಿದ್ಧರಾಮಶಿವಾಚಾರ್ಯರು    4-5. ಶ್ರೀ ಎಸ್. ಶಿವಣ್ಣನವರು ಬೆಂಗಳೂರು ವಿಶ್ವವಿದ್ಯಾಲಯ

6. ಕರ್ನಾಟಕಕವಿ ಚರಿತೆ II (೧೯೭೩) ಪುಟ ೩೩.    7. ಕ.ಅ.ಸಂ. ಹಸ್ತಪ್ರತಿ K. ೮೩೩    8. ೪-೫ ರಂತೆ.

ಶರಣರ ೧೨೫ ಹಾಡುಗಳು, ಬಸವಾದಿ ಪ್ರಮಥರ ಪದಗಳು ನಾಮದಲ್ಲಿ) ಪ್ರಕಟವಾಗಿದೆ[9]. ಇವು (ಪ್ರಕಟಿತ ಭಾಗ) 'ಉತ್ತಮ' ಹಾಡುಗಳಾಗಿವೆ. ಉ) ತೇರದಾಳದ ಮಗಿಯ ಪ್ರಭುವನ್ನು ಸ್ತುತಿಸಿ ಹಲವಾರು ಅಂಕಿತಗಳಲ್ಲಿ ಹಲವಾರು ಹಾಡುಗಳನ್ನು ರಚಿಸಿದ್ದು ಅವುಗಳು ಅಚ್ಚಾಗಿವೆ. ಇವು ಸಾಧಾರಣ ಹಾಡುಗಳಾಗಿವೆ.

**ಊ) ಜಕ್ಕಣಾಮಾತ್ಯನು ಸೇರಿಸಿದ 'ಏಕೋತ್ತರಶತಸ್ಥಲ'ಸ್ವರವಚನಗಳು :** ಇದು ಬಸವಾದಿಪ್ರಮಥರ ೧೦೧ ಹಾಡಿನ 'ಉತ್ತಮ' ಅತ್ಯಂತ ಪ್ರಾಮಾಣಿಕ ಗ್ರಂಥವಾಗಿದೆ. ಇದರ ಅರ್ಥವಿಸ್ತಾರಕ್ಕಾಗಿಯೇ ಮಹಾಲಿಂಗದೇವರು ಈ ಕೃತಿಗೆ ೯೨೭ ವಚನಗಳನ್ನು ಸೇರ್ಪಡೆಗೈದರು. ವಿರಕ್ತ ತೋಂಟದಾರ್ಯನು ಈ ಕೃತಿಯ ಸ್ವರವಚನಗಳ ಆದಿಅಂತ್ಯಗಳಲ್ಲಿ ಒಂದೊಂದು ವಚನ ವೃತ್ತಗಳನ್ನು ಸೇರಿಸಿದನು. ಇದಕ್ಕೆ ಸೂತ್ರವಿಡಲಾಗಿದೆ. ಇದನ್ನು ಅನುಸರಿಸಿಯೇ ಸಿದ್ಧಾಂತಶಿಖಾಮಣಿಯು ಸಂಸ್ಕೃತದಲ್ಲಿ ರಚಿತವಾಗಿದೆ. ಇದನ್ನು ವೀರಶೈವರ 'ವೇದ, ಬೈಬಲ್, ಕುರಾನ್' ಸಿದ್ಧಾಂತಗ್ರಂಥ ಎನ್ನಬಹುದು. ಇದಕ್ಕೆ ಉತ್ತಮವೂ ವಿಸ್ತೃತವೂ ಆದ ವ್ಯಾಖ್ಯಾನಗಳೂ ಉಂಟು. ಇಷ್ಟು ಮಹಿಮೆಯನ್ನೊಳಗೊಂಡಿದ್ದರೂ, ಈ ಗ್ರಂಥ ಸವ್ಯಾಖ್ಯಾನವಾಗಿ ಇನ್ನೂ ಮುದ್ರಿತವಾಗದೆ ಇರುವದು ಲಿಂಗವಂತಸಮಾಜದ ಜಡತ್ವಕ್ಕೆ ಪರಮಸಾಕ್ಷಿಯಾಗಿದೆ. ಈ ಗ್ರಂಥ ಸಿದ್ಧಾಂತಕ್ಕೆ ಶಿಖಾಮಣಿ, ಸಿದ್ಧಾಂತಕ್ಕೆ ಚಕ್ರವರ್ತಿಯಾಗಿದೆ. ಇದು ಲಿಂಗವಂತ ಧರ್ಮದ ಅತ್ಯಂತ ಅಧಿಕೃತ ಸಿದ್ಧಾಂತಗ್ರಂಥವಾಗಿದೆ. ಪುಲಿಗೆರೆಯ ಮಹಾಲಿಂಗದೇವರ ಪ್ರಶಿಷ್ಯನೂ, ಕುಮಾರ ಬಂಕನಾಥದೇವರ ಶಿಷ್ಯನೂ ಆದ ಜಕ್ಕಣಾಮಾತ್ಯನು ತನ್ನ ಗುರು, ಪರಮಗುರುಗಳ ಜೋಕೆ ತೂಕಗಳ ಎಚ್ಚರಿಕೆಯಲ್ಲಿ ಈ ಧರ್ಮಗ್ರಂಥವನ್ನು ಸೂತ್ರವಿಟ್ಟು ಸಂಗ್ರಹಿಸಿದ್ದಾನೆ. ಈ ಏಕೋತ್ತರ ಶತಸ್ಥಲವು 'ನೂರೊಂದು' ಎಂದು ಪ್ರಸಿದ್ಧವಾಗಿತ್ತು. ಹೇಮಕೂಟದಲ್ಲಿದ್ದ ವೀರವಿರಕ್ತರು ಈ ನೂರೊಂದನ್ನು ಪ್ರಬಲವಾಗಿ ಪ್ರತಿಪಾದಿಸಿ ನೂರೊಂದರ ವಿರಕ್ತರೆನ್ನಿಸಿದರು. ಇದನ್ನರಿಯದೆ ಮುಂದೆ ನೂರೊಂದು ಸಂಖ್ಯೆಯಲ್ಲಿ ವಿರಕ್ತರಿದ್ದರೆಂದು ಕಲ್ಪನೆಯುಂಟಾಗಿ ಅದರ ಚಾಲನೆಗಾಗಿ 'ನೂರೊಂದು ವಿರಕ್ತರ ಕಾವ್ಯ'ದಂತಹ ವಿಚಿತ್ರ ಕೃತಿಗಳೂ ಹುಟ್ಟಿಕೊಂಡವು. ಈಗಲೂ ಹಲವು ವಿದ್ವಾಂಸರು ಶಬ್ದಸಾದೃಶ್ಯ ಭ್ರಮೆಯನ್ನು ಹೊಂದಿ ನೂರೊಂದು ಜನ ವಿರಕ್ತರನ್ನು ಎಣಿಸಲು ವ್ಯರ್ಥಪ್ರಯತ್ನನಡೆಸಿದ್ದಾರೆ[10]. ಈ ನೂರೊಂದು ವಿರಕ್ತರಲ್ಲಿ ಪ್ರಸಿದ್ಧರಾದ ಕರಸ್ಥಲದ ನಾಗದೇವ, ಕರಸ್ಥಲದ ವೀರಣ್ಣೊಡೆಯ, ಗುರುಬಸವೇಶ, ಮಿಡಿಚಿಲ್ಲ ಶಾಂತೇಶ(ಮರುಳ ?), ಬತ್ತಲೇಶ, ನಿರ್ವಾಣಿ ಬೋಳೇಶ, ಹೊನ್ನಿದೇವ. ಬಾಲಲಿಂಗಣ್ಣ ಮುಂತಾದವರು ಅಲ್ಲಮಪ್ರಭುವಿನಂತೆ ಲೋಕದ ಲಜ್ಜೆಯನ್ನು ತೊರೆದು ದಿಗಂಬರ ವೇಷವನ್ನು ತಾಳ್ದು ಎಡದ ಕೈಯಲ್ಲಿ ಕರಸ್ಥಲ ಲಿಂಗವನ್ನೂ ಬಲದ ಕೈಯಲ್ಲಿ ವೀಣಾದಂಡವನ್ನೂ ಹಿಡಿದು ಶಿವಾನುಭಾವಗಳನ್ನು ಹಾಡುತ್ತಿದ್ದರು ಎನ್ನಲು ಸುಳುಹುಗಳಿವೆ. ಇವರೆಲ್ಲರು ವಿಪುಲವಾದ ಸ್ವರಪದ (ಹಾಡು)ಗಳನ್ನು ರಚಿಸಿ ಪ್ರಚುರಗೊಳಿಸಿದರು. ಅದರಲ್ಲಿ ಕೆಲವು ಇಂದಿಗೂ ದೊರೆಯುತ್ತವೆ[11].

**೫. ಏಕಕರ್ತೃಕವಾದ ಹಾಡುಗಬ್ಬಗಳು :**

೧. ಚಿಕ್ಕದಣ್ಣಾಯಕ ಚನ್ನಬಸವದೇವರ ಪದ(ಸ್ಥಲ)ಮಂತ್ರಗೋಪ್ಯವು ಪಲ್ಲವಿ ಸಹಿತ ಐದು ನುಡಿಗಳುಳ್ಳ ಏಳು ಹಾಡುಗಳ ಪರಿಪೂರ್ಣ ಹಾಡುಗಬ್ಬವಾಗಿದೆ. ೭ ಸ್ಥಲಗಳ ಈ ಕೃತಿಯನ್ನು ಚನ್ನಬಸವರು ಸಿದ್ಧರಾಮೇಶ್ವರರಿಗೆ ಉಪದೇಶಿಸಿದರು. ಇದಕ್ಕೂ ಎರಡನೆಯ ಚನ್ನಬಸವರು ತಾತ್ಪರ್ಯವಿವರಣೆಯನ್ನು ನೀಡಿದ್ದಾರೆ. ಭಿನ್ನಕರ್ತೃಕವಾದ ಟೀಕೆಗಳುಳ್ಳ ಈ ಹಾಡುಗಬ್ಬ ಉತ್ತಮ ವರ್ಗದ್ದಾಗಿದೆ. ಸೈದ್ಧಾಂತಿಕ ಹಾಡಾಗಿದೆ. ಚನ್ನಬಸವರು ಪಲ್ಲವಿ ಹಾಗೂ ೨೭ ನುಡಿಗಳುಳ್ಳ 'ಹಿರಿಯ ಮಂತ್ರಗೋಪ್ಯ'ವೆಂಬ ಹಾಡು (ತಾರಾವಳಿ)ಯನ್ನೂ ರಚಿಸಿದ್ದಾರೆ. ಇದೂ ಉತ್ತಮವರ್ಗದ ಸೈದ್ಧಾಂತಿಕ ಹಾಡಾಗಿದೆ. ಇದಕ್ಕೆ ರಾಗತಾಳಗಳ ನಿರ್ದೇಶವೂ ಇದೆ.

೨) ಗುಹಲ್ಲಮದೇವರು (ಪ್ರಭು) ಸಿದ್ಧರಾಮರಿಗೆ ಉಪದೇಶಿಸಿದ ಪದ (ಪರಮಯೋಗ) ಮಂತ್ರಗೋಪ್ಯವೆಂಬ ಉತ್ತಮ-ಸೈದ್ಧಾಂತಿಕ ಹಾಡಿನಲ್ಲಿ ಪಲ್ಲವಿಯೂ ೨೭ ನುಡಿಗಳೂ ರಾಗತಾಳ ನಿರ್ದೇಶವೂ ಇದೆ. ಇದಕ್ಕೆ ಕಲ್ಲುಮಠದ ಪ್ರಭುದೇವರ ಪ್ರೌಢವಾದ ಟೀಕೆ ಇದೆ. ಇನ್ನೂ ಕೆಲವು ಟೀಕೆಗಳು ಕಂಡುಬರುತ್ತವೆ. ಇದು ಶರಣಸಂಪ್ರದಾಯದ ದಿಗ್ವಿಜಯಗೀತೆಯಾಗಿದೆ. ಸಿದ್ಧ(ನಾಥ) ಶೈವನಾಗಿದ್ದ ಸಿದ್ಧರಾಮರನ್ನು ವೀರಶೈವನನ್ನಾಗಿಸಿದ ಮಹಾಕೀರ್ತಿ ಈ ಹಾಡಿಗಿದೆ. ಇದನ್ನು ನಿರ್ವಚಿಸುತ್ತಾ ಕಲ್ಲುಮಠದ ಪ್ರಭುದೇವರು ಪ್ರತಿನುಡಿಗಳಲ್ಲಿಯೂ ಶರಣಸಿದ್ಧಾಂತಕ್ಕೆ ಅಂದು ಮಾರಕಸ್ವರೂಪವಾಗಿದ್ದ ದ್ವೈತ (ಸಿದ್ಧಾಂತ), ಅದ್ವೈತ (ವೇದಾಂತ), ಕರ್ಮ(ಯೋಗ)ಗಳನ್ನು ಪ್ರಬಲವಾಗಿ ಖಂಡಿಸುತ್ತಾರೆ !

೩) ಮಹಾದೇವಿ ಅಕ್ಕನವರ ಯೋಗಾಂಗ ತ್ರಿವಿಧಿಯೂ ಒಂದು ಉತ್ತಮ ಹಾಡುಗಬ್ಬವಾಗಿದೆ.

೪) ಸಿದ್ಧರಾಮದೇವರ ಬಸವಸ್ತೋತ್ರ ತ್ರಿವಿಧಿ, ಮಿಶ್ರಸ್ತೋತ್ರ ತ್ರಿವಿಧಿ, ಅಷ್ಟಾವರಣ ತ್ರಿವಿಧಿಗಳೂ ಉತ್ತಮ ಹಾಡುಗಳಾಗಿವೆ.

---

9. ಶ್ರೀ ಸಿದ್ಧರಾಮೇಶ್ವರ ಪ್ರಕಾಶನ, ಯಲಬುರ್ಗಿ
10. ಪಟ್ಟಸ್ಥಲಜ್ಞಾನಸಾರಾಮೃತ (ಚಾರಿತ್ರಿಕ ವಿವೇಚನೆ ಪುಟ ೬-೨೦) ೧೯೬೪.
11. ಬಸವಾದಿ ಪ್ರಮಥರ ಪದಗಳು ೧-೪ ಯಲಬುರ್ಗಿ

೫) ಕಿನ್ನರಿದೇವರು ನಿರೂಪಿಸಿದ ಹಾಡು ರಾಗಯುಕ್ತವಾಗಿದೆ[12].

೬) ಆದಯ್ಯಗಳು ರಚಿಸಿದ ಉಯ್ಯಾಲೆಪದದಲ್ಲಿ ೨೩ ನುಡಿಗಳೂ, ಮುಕ್ತಿಕ್ಷೇತ್ರದಲ್ಲಿ ೫೧ ಹಾಡುಗಳೂ ಸ್ವರವಚನದಲ್ಲಿ ೮೬ ಹಾಡು (+ವಚನ ?)ಗಳು ಕಾಣಬರುತ್ತವೆ[13]. ಇವೆಲ್ಲವೂ ಉತ್ತಮವರ್ಗದ ಹಾಡುಗಳಾಗಿರಬಹುದು.

೭) ಮಾಯಿದೇವರು ನಿರೂಪಿಸಿದ ಪದೈಕೋತ್ತರಶತಸ್ಥಲ ವಾರ್ಧಕವು ಉತ್ತಮವರ್ಗದ ರಾಗಯುಕ್ತ ಸುದೀರ್ಘ ಹಾಡಾಗಿದೆ[14].

೮) ಕರಸ್ಥಲದ ನಾಗದೇವರು ಹಾಡುಗಳನ್ನು ರಚಿಸಿದ್ದಾರೆ. ಅವುಗಳಿಂದ ಆಯ್ದ ೯ ಹಾಡುಗಳು ಶಿವಯೋಗಪ್ರದೀಪಿಕೆಯಲ್ಲಿ ದೊರೆತಿವೆ. ಇವನ ಮಾಸಾಳವರ್ಣತ್ರಿವಿಧಿಯೂ ಹಾಡಾಗಿದೆ.

೯) ಚನ್ನವೃಷಭೇಂದ್ರಯೋಗೀಂದ್ರರು (ಕ್ಷೇತ್ರಜ್ಞಸುಮನೋವಾದ ಶಾಸ್ತ್ರಾರ್ಥಗ್ರಂಥಕರ್ತೃ) ರಚಿಸಿದ ಒಂಭತ್ತು ಸ್ವರಪದಗಳು ಅತ್ಯಂತ ಶಿಥಿಲವಾದ ಅಸಮಗ್ರ ಹಸ್ತಪ್ರತಿಯ ಅಂತ್ಯದಲ್ಲಿ ದೊರೆತಿವೆ[15]. ಈತನು ಇನ್ನೂ ಗಮನಾರ್ಹ ಸಂಖ್ಯೆಯಲ್ಲಿ ಹಾಡುಗಳನ್ನು ರಚಿಸಿರಬಹುದು! ಈ ಅಪೂರ್ವ ಹಾಡುಗಳ ಪರಿಚಯು ಹೀಗಿದೆ. ಮುದ್ರಿಕೆ ಚನ್ನವೃಷಭೇಂದ್ರ, ಚನ್ನವೃಷಭೇಶ್ವರ ಇತ್ಯಾದಿ.

i) ಮಾಡೀಶ್ವರಾರ್ಚನೆ...ದಿಂ। ನೋಡು ಸೋಹಂಭಾವದಿಂ ಪರಮಪದವಿಯಂ ।
ಬೇಡು ನಿತ್ಯಾನಂದ ಪರಿಪೂರ್ಣ...ನಿಷ್ಕಾಮತ್ವದಿಂ ಮನವೆ ಮಾಡೀಶ್ವರಾರ್ಚನೆಯನು ॥ಪ॥

ರಾಗ–ತೆಲುಗು ಕಾಂಬೋದಿ, ನುಡಿಗಳು–೫, ವಸ್ತು–ಮಾನಸಪೂಜೆ.

ii) ಮಂಗಳಭಕ್ತ...ಪೊರೆವಿನ ತಿಂಗಳಿಂಗಳು ಕಂಗಳಾದನಿಗೆ॥ ಮಂಗಳಮುಖಿಳ।
ಸುಖಂಗಳ ನಿಳಯ...ದರದೊಳಿರಿಸಿದಗೆ ಜಯಮಂಗಳಂ ಜಯಜಯಮಂಗಳಂ ॥ಪ॥

ರಾಗ–ನಾದರಾಮಕ್ರಿಯೆ, ನುಡಿ–೫, ವಸ್ತು–ಲಿಂಗಮಂಗಳ.

iii) ......ಹರಗಣಂಗಳ ನಾಮಮಂ ಜಪಿಸೆ ಸಂತತಂ । ಪರಮಭಕ್ತಿಜ್ಞಾನ ವೈರಾಗ್ಯ ।
ಸಂಪದಂ ದೊರೆಕೊ...ಮೋಕ್ಷವಲ್ಲಭೆಯ ಸಂಗದಿಂ ಚಿರಮೋದದಿಂ ಬಾಳ್ವರು ॥ಪ॥

ರಾಗ–ಕನ್ನಡ ಕಾಂಬೋದಿ, ನುಡಿ–೯, ವಸ್ತು–೧೦೮ ಗಣನಾಮಾವಳಿ.

iv) ಪಾಲಿಸೆನ್ನನು ಭವವಿಲೋಪ ತತ್ತ್ವ। ಮಾಲಾದಿ ಭೂಷಣ ಕಲಾಪ ಚಿದ್ರೂಪ ॥

ರಾಗ–ಆಹರಿ, ನುಡಿ–೩, ವಸ್ತು–ಲಿಂಗಕಾರುಣ್ಯಾಹ್ವಾನ.

v) ಏಕೆ ಗರ್ವಿಸಿ ಕೆಡುವೆ ಮನುಜ ನಿನ್ನಯ ನಿಜದ ಸಾ...ತಿಳಿದು
ಸರ್ವಮಂ ಮಿಥ್ಯವೆಂದೆ ಕಂಡು ಶಿವಪದವನರ್ಚಿಸಿ ಮಹಾಮೋಕ್ಷಸೌಖ್ಯಮಂ ಪಡಿ

ರಾಗ–ಶಂಕರಾಭರಣ, ನುಡಿ–೫, ವಸ್ತು–ರಾಮಕೃಷ್ಣ ಪಾಂಡವಾದಿ ನರರ ಬವಣೆಯ ವರ್ಣನಾ ಮೂಲಕ ಅಹಂಕಾರ ನಿರಸನ.

vi) ಲಿಂಗ ಗಂಭೀರ ಶರಣ ಸುಸಂಗ ಪಾವನ ಶರಣ॥

ರಾಗ–ಫಳಮಂಜರಿ, ನುಡಿ–೩, ವಸ್ತು–ಶರಣಸ್ತೋತ್ರ.

vii) ಪಾಲಿಸುವುದಳ್ಕರಿಂದೆನ್ನಮೃತಾಂಗನಾ। ಲೋಲ ಪರಿಪೂರ್ಣಹೃದಯ...
ಶಿವಯೋಗಿ ಮೋ।ದಾಲಯ ಮಹಾವೀರ ಸಂಗಮೇಶ್ವರಮಂತ್ರ। ಮೂಲಾಂಗ ಶರಣಸಂಗ ॥

ರಾಗ–ಭೂಪಾಳಾ, ನುಡಿ–೫, ವಸ್ತು-ಸಂಗಮೇಶ್ವರ ಸ್ತುತಿ.

viii) ...ಕರುಣಿಸೋ ಬಳಲಿದೆನಭವ ನಿಮ್ಮಯ ಪಾದಸರಸಿಜದೊಳು ಮಗ್ನನಹ...

ರಾಗ...ನುಡಿ-೩, ವಸ್ತು–ಲಿಂಗಕಾರುಣ್ಯಾಹ್ವಾನ.

ix) ...ಸಮಾಧಿ ಶಿವಯೋಗದಿಂದರಿವು ಮರವಳಿದು ಚಿರಸುಖ...

ರಾಗ...ನುಡಿ–೭, ವಸ್ತು–ಶಿವಯೋಗಸ್ತುತಿ.–ಇವು ಉತ್ತಮ ಹಾಡುಗಳಾಗಿವೆ.

೧೦) ಶಂಕರದೇವರ ಸ್ವರವಚನಗಳು.[16] ಇವು ಉತ್ತಮ ಹಾಡುಗಳಾಗಿವೆ. ಅಂಕಿತ – ಶಂಕರಲಿಂಗ

೧೧) ನಿಜಗುಣನ ಕೈವಲ್ಯಪದ್ಧತಿ – ಶರಣರು ವಿರೋಧಿಸಿದ ದ್ವೈತ ಅದ್ವೈತಯೋಗಗಳೇ ಇಲ್ಲಿ ನಿಚ್ಚಳವಾಗಿ ಕಂಡುಬರುವುದರಿಂದ ಇದು ಪ್ರಸಿದ್ಧ ಜನಪ್ರಿಯ ಕೃತಿಯಾದರೂ ಉತ್ತಮ ವರ್ಗದ ಹಾಡುಗಳಾಗವು ! ಅಂಕಿತ-ಶಂಭುಲಿಂಗ, ೧೭೪ ಹಾಡುಗಳಿವೆ.

---

12. G.O.M.L ಹಸ್ತಪ್ರತಿ ವಿವರ ಕೋಶ IV, 715
13. 4-5 ರಂತೆ
14. ಮೊಗ್ಗೆಯ ಮಾಯಿದೇವ ಪ್ರಭುವಾಣಿ-ಶ್ರೀ ಚನ್ನಮಲ್ಲಿಕಾರ್ಜುನ (1962)
15. ಶರಣಸಂತಾನ ತ್ರೈಮಾಸಿಕ: 3ನೇ ಸಂಪುಟದ 2ನೇ ಸಂಚಿಕೆ (1979)
16. ೧೧ ರಂತೆ

೧೨) ಜಿಗುನಿ ಮರುಳ ದೇವನ 'ಮರುಳ ದೇವರ ವಚನ'.[17] ೧೫೬ ಹಾಡುಗಳು ಉತ್ತಮೋತ್ತಮವಾಗಿವೆ. ೧೪೪ನೇ ಹಾಡಿನಲ್ಲಿ ಮೊಗ್ಗೆ ಮಾಯಿದೇವರ, ರಾಘವಾಂಕರ ಸಮಾಧಿಗಳು ಉಲ್ಲೇಖಿಗೊಳ್ಳುವುದರಿಂದ ಈತನು ಅವರಿಂದೀಚೆಯವನೇ ಆಗಿದ್ದಾನೆ. ಅಂಕಿತ–ನಿಜಗುರು ಸಿದ್ಧಶಾಂತ.

೧೩) ಸಪ್ತಕಾವ್ಯದ ಗುರುಬಸವನ ಏಳು ಕಾವ್ಯಗಳಲ್ಲಿ ವೃಷಭಗೀತೆ, ಅವಧೂತಗೀತೆಗಳು ಹೆಸರೇ ಸೂಚಿಸುವಂತೆ ಹಾಡುಗಳಾಗಿವೆ. ಉಳಿದವೂ ವಿಶಾಲಾರ್ಥದಲ್ಲಿ ಹಾಡುಗಳೇ ಆಗಿವೆ. ಇವು ಅನ್ಯಪ್ರಭಾವಯುಕ್ತವಾಗಿರುವುದರಿಂದ ಮಧ್ಯಮ ವರ್ಗಕ್ಕೆ ಸೇರುತ್ತವೆ.

೧೪) ಗುರುಬಸವಾರ್ಯನ ವಚನ[18]ದಲ್ಲಿ ೨೨೪ ಹಾಡುಗಳಿವೆ. ಅಲ್ಲಿನ ಒಂದು ವಿಸ್ತೃತ ವಚನದಂತೆ ಹರದನಹಳ್ಳಿ ಪ್ರಭುಲಿಂಗ ಗುರುಸ್ವಾಮಿಗಳ ಶಿಷ್ಯ ನಿಜಾನಂದ ಗುರು ಚನ್ನಯ್ಯ, ಇವನ ಶಿಷ್ಯ ಸಿದ್ಧವೀರೇಶ್ವರದೇವ, ಇವನ ಶಿಷ್ಯನೆ ಗುರು ಬಸವಯ್ಯನೆಂಬ ಈ ವಾಗ್ಗೇಯಕಾರ. ಇವನ ವಚನದ ಅಂಕಿತ 'ಬಸವಣ್ಣಪ್ರಿಯ ಗುರು ಬಸವ'. ಈತನು ಸಪ್ತಕಾವ್ಯಗಳ ಗುರುಬಸವನಿಗಿಂತ ಭಿನ್ನನೂ ಈಚಿನವನೂ ಆಗಿರಬಹುದು. ಶಿವಯೋಗ ಪ್ರದೀಪಿಕೆಯಲ್ಲಿಯೂ ಇವನ ಹಾಡು ಉದ್ಧೃತ ವಾಗಿದೆ! ಇವನ ಬಸವಭಕ್ತಿ ಅಸದಳವಾದುದು ಹಾಗೂ ಪಾಲ್ಕುರಿಕೆ ಸೋಮನಾರಾಧ್ಯರ ಬಸವಭಕ್ತಿಯ ಸಾಲಿನಲ್ಲಿ ನಿಲ್ಲುವಂತಹ ಶ್ರೇಷ್ಠಮಟ್ಟದ್ದು. ಇವನ ಹಾಡುಗಳು ಉತ್ತಮ ವರ್ಗದ್ದಾಗಿವೆ. ಇವನ ಹಾಡುಗಳು ಅಂಕಿತ 'ಗುರು ಬಸವ' ಎಂದೇ ಇದೆ.

೧೫) ನಿಃಕಲಾಂಕಿತದ ಏಕೋತ್ತರ ಶತಸ್ಥಲ ಹಾಡುಗಳು. ರಾಗತಾಳಪಲ್ಲವಿಗಳೊಂದಿಗೆ ಅಸಮಗ್ರವಾಗಿ ೪೩ ನೇ ಸರ್ವಾಚಾರ ಸಂಪತ್ಸ್ಥಲದವರೆವಿಗೆ ಅಚ್ಚಾಗಿದೆ. ಈ ಕೃತಿಯ ಸ್ಥಲ ಸೂತ್ರಗಳು ಜಕ್ಕಣನನ್ನೇ ಅನುಸರಿಸುತ್ತದೆ. ಇವು ಉತ್ತಮ ಹಾಡುಗಳು. ಪ್ರತಿ ನುಡಿಯಲ್ಲಿಯೂ ನಿಃಕಲಾಂಕಿತವಿದೆ. ಇಂತಹ ಶ್ರೇಷ್ಠಕೃತಿ ಸಂಪೂರ್ಣವಾಗಿ ದೊರೆಯದಿರುವುದು ಮಹಾ ನಷ್ಟವಾಗಿದೆ.

೧೬) ಚಿದಾನಂದಾವಧೂತನ ಕೋರಡೆ (ಹಾಡುಗಳು). ಇವನ ಹಾಡುಗಳಲ್ಲಿ ಶಾಸ್ತ್ರವಾದನಿರಸನ, ಯೋಗನಿರಸನ, ಉಪವಾಸನಿರಸನ ಮುಂತಾದ ವೀರಶೈವಲಕ್ಷಣಗಳಿದ್ದರೂ ಇವನ ಹಾಡುಗಳು ಕನಿಷ್ಠವರ್ಗದ್ದೆನಿಸುತ್ತವೆ. ಇವನ ಕಾಲ ಸು. ೧೭೫೦. ೯೬ ಹಾಡುಗಳಿವೆ. ಅಂಕಿತ –ಚಿದಾನಂದ.

೧೭) ಗಗನಾನಂದ ಶಿಷ್ಯ ನಿರಂಜನಾವಧೂತನು ಸು. ೧೭೫೦ ರಲ್ಲಿ ೧೫೫ ತತ್ತ್ವಹಾಡುಗಳನ್ನು ರಚಿಸಿದ್ದಾನೆ. ಷಡುವಿಧದ ಸ್ಥಲದವರ ನಡುವಳಿಯನುಸರಿಸುರುವೆನು। ನಡೆಯ ಬಲ್ಲಂತ ಸಾಧುಗಳರಿವರಿದನು ॥ಪ॥ (ಷಟ್ಸ್ಥಲ ವಿಚಾರ) ; ಆರು ಲಿಂಗವ ನೋಡಿ ಅರಿವು ಲಿಂಗವ ಹೂಡಿ। ಬೇರೆ ತನ್ನನು ತಿಳಿಯುವನೆ ಮುಕ್ತನಹನು ॥ಪ॥ (ಷಡ್ಲಿಂಗ ವಿಚಾರ) ; ಲಿಂಗ ವಂತನಾಗಿ ಇಲ್ಲಿ। ಅಂಗದ ಇಚ್ಛೇಕೆ ಅಲ್ಲಿ। ಲಿಂಗವನ್ನೆ ಕೂಡಿ ನೀನಾ ಪರಮನಾಗಲ್ಲಿ ॥ಪ॥ (ಲಿಂಗಾಂಗ ಸಾಮರಸ್ಯ)-ಈ ಮೂರು ಹಾಡುಗಳನ್ನು ಗಮನಿಸಬೇಕು. ಇವನವೂ ಕನಿಷ್ಠ ವರ್ಗದ ಹಾಡುಗಳಾಗಿವೆ.[19] ಅಂಕಿತ–ಗಗನಲಿಂಗ.

೧೮) ಮುಪ್ಪಿನ ಷಡಕ್ಷರಿಯು (ಸು. ೧೭೫೦) ೭೪ ಸ್ವರವಚನಗಳನ್ನು ರಚಿಸಿದ್ದಾನೆ. ಇವನ ಹಾಡುಗಳಲ್ಲಿ ದಾಸೋಹಂ ತತ್ತ್ವ ಓತಪ್ರೋತವಾಗಿದೆ. ಕೆಲವೆಡೆ ಶೈವ ಪೌರಾಣಿಕ ಅಂಥಪ್ರಜ್ಞೆ ಬಂದಿರುವುದರಿಂದ ಇವನ ಹಾಡುಗಳು ಭಾಗಶಃ ಉತ್ತ ಮವೂ, ಭಾಗಶಃ ಮಧ್ಯಮವೂ ಎನ್ನಿಸುತ್ತವೆ ! ಅಂಕಿತ-ಷಡಕ್ಷರಿಲಿಂಗ.

೧೯) ಕೆಸ್ತೂರು ದೇವರ ವಚನಗಳಲ್ಲಿ ಕೆಸ್ತೂರು ದೇವರ ೧೦೧ ಹಾಡುಗಳಿವೆಯಂತೆ.[20] ಅಂಕಿತ–ಗುರುಸಿದ್ಧಲಿಂಗ.

೨೦) ಇಮ್ಮಡಿ ಮುರುಗಾಗುರುಸಿದ್ಧನು (ಸು. ೧೭೦೦–೧೭೨೦) ತನ್ನ ಶಿವಲಿಂಗಾಂಕಿತ ಸ್ವತಂತ್ರ ೧೦೧ ಹಾಡುಗಳಿಂದ 'ಕೈವಲ್ಯಸೋಪಾನನಾಮೈಕೋತ್ತರ ಶತಸ್ಥಲ' ಹಾಡುಗಬ್ಬವನ್ನು ಶಾಸ್ತ್ರರೂಪವಾಗಿ ರಚಿಸಿದ್ದಾನೆ. ಹಾಲಾಸ್ಯ ಪುರಾಣ ದಂತಹ ಶೈವ ಪುರಾಣವನ್ನು ಬರೆದ ಈತನ ಹಾಡಿನ ಗ್ರಂಥವನ್ನು ಅವಲೋಕಿಸದ ಹೊರತು ವರ್ಗೀಕರಿಸಲು ಅಸಾಧ್ಯ![21]

೨೧) ಮುದ್ವೀರ ಸ್ವಾಮಿಯ 'ಶಾಂಭವ ಜ್ಞಾನಸುಪ್ರಕಾಶಿಕಾ'ದಲ್ಲಿ ರಾಗನಿರ್ದೇಶ ಸಹಿತ 'ಶ್ರೀ ಗುರು ಸಂಗ' ಅಂಕಿತದ ೮೧ ಸ್ವರವಚನಗಳು ದೊರೆತಿವೆ[22]. ಕನ್ನಡ ಕವಿಚರಿತ್ರೆಕಾರರು ಹೇಳುವ[23] 'ಶಾಂಭವಿ' ಅಂಕಿತ ಸ್ವರವಚನಕಾರ ಬೆಂಗಳೂರು ಮುದ್ದುವೀರಸ್ವಾಮಿ (ಸು. ೧೭೦೦) ಯಿಂದ ಈತನು ಅಭಿನ್ನನಾಗಿರಬಹುದು.

೨೨) ಕಾರುಗಹಳ್ಳಿ ಶಾಂತಯ್ಯನು ('ಗುರುಶಾಂತಲಿಂಗ' ಅಂಕಿತದಲ್ಲಿ ?) ವಚನಗಳನ್ನು ಬರೆದಿದ್ದಾನೆ.[23] ಇವನನ್ನು ಸು. ೧೬೫೦ ರಲ್ಲಿ ಇದ್ದ ಸಿದ್ಧನಂಜೇಶನು ಗುರುರಾಜಚಾರಿತ್ರದಲ್ಲಿ ಉಲ್ಲೇಖಿಸಿದ್ದಾನೆ![24] ಇವನ ವಚನಗಳು ಸ್ವರ ವಚನ ಗಳೂ ಆಗಿರಬಹುದು. ಶಿವಯೋಗ ಪ್ರದೀಪಿಕೆಯಲ್ಲಿ ಇವನ ಹಾಡಿವೆ.

---

17. ೧ ರಂತೆ 18. ೧ ರಂತೆ ಹಸ್ತಪ್ರತಿ ಕೆ. ಬಿ. ೨೨೪ 19. ಗಗನಾರ್ಯರ ತತ್ತ್ವಗಳು, ಬೆಂಗಳೂರು (೧೯೧೧)
20. ೪-೫ ರಂತೆ 21. ಶ್ರೀ ಗು. ಅ. ಶಿವಲಿಂಗಯ್ಯ, ಎಮ್. ಎ. ಮೈಸೂರು 22. ೪-೫ ರಂತೆ
23. ಕ. ಕ. ಚ. II (೧೯೭೩ ಪುಟ ೪೯೭) 24. ೪-೫ ರಂತೆ

೨೩) ಮೈಲಾರ ಬಸವಲಿಂಗ ಶರಣರ (ಸು. ೧೭೮೦–೧೮೦೦)[25] ಸಂಪ್ರದಾಯ ಶುದ್ಧವಾದ ೭೦ ಹಾಡುಗಳು 'ಶಿವಾನುಭಾವದರ್ಪಣ'ದಲ್ಲಿ ದೊರಕುತ್ತವೆ.[26] ಶರಣ ಸಂಪ್ರದಾಯವನ್ನು ಅತ್ಯಂತ ಶುದ್ಧವಾಗಿ ಪ್ರತಿಬಿಂಬಿಸುವ ಈ ಹಾಡುಗಳು ಅತ್ಯುತ್ತಮ ವರ್ಗಕ್ಕೆ ಸೇರಿರುತ್ತವೆ. ಇವುಗಳ ಅಂಕಿತ 'ಚನ್ನವೀರ'. ಈ ಹಾಡುಗಳಲ್ಲಿ ಬಸವಾದಿ ಪ್ರಮಥ ಪ್ರಣೀತ ಶುದ್ಧ ನಿರಾಭಾರಿ ಶರಣಸಿದ್ಧಾಂತ ಶ್ರದ್ಧೆ ನಿಷ್ಠೆ ಅವಧಾನ ಅನುಭಾವಯುಕ್ತವಾಗಿ ಅತ್ಯಂತ ಕೆಚ್ಚಿನಿಂದ ಪ್ರತಿಪಾದಿಸಲ್ಪಟ್ಟಿದೆ. ಈ ಪುಣ್ಯಗ್ರಂಥವನ್ನು ನೋಡದಿದ್ದರೆ 'ವೀರಶೈವ ಅಧ್ಯಯನ' ಅಸಮಗ್ರವಾಗಿ ಹೋಗುತ್ತದೆ. ಇವರ ಗುರುಕರುಣ ತ್ರಿವಿಧಿಯು ವಿಶಾಲಾರ್ಥದಲ್ಲಿ ಹಾಡೇ ಆಗುತ್ತದೆ.

೨೪) ಬಾಲಲೀಲಾ ಮಹಾಂತ ಶಿವಯೋಗಿಯ (ಸು.೧೮೨೩–೧೮೯೫) ೧೪೨ ಹಾಡುಗಳು 'ಮಹಾಂತಲಿಂಗ' ಅಂಕಿತದೊಡನೆ 'ಕೈವಲ್ಯದರ್ಪಣ'ದಲ್ಲಿ ದೊರೆತಿವೆ[27]. ಇವನ ಹಾಡುಗಳಲ್ಲಿ ಕೆಲವಡೆ ವಿಚಿತ್ರವಾದ ಹರ-ಗೌರಿಸಂವಾದ ರೂಪ ದೊರೆಯುತ್ತದೆ. ಕೆಲವಡೆ ಆತ್ಮಪ್ರತ್ಯಯವೂ ವಿಶೇಷವಾಗಿದೆ. ನಿಜಗುಣನ ಪರೋಕ್ಷ ಪ್ರಭಾವವಿದ್ದಿರಬಹುದಾದರೂ ಈತ ಶಾಸ್ತ್ರಜಾಲದಲ್ಲಿ ಸಿಲುಕಿಲ್ಲ. ಈತನ ಹಾಡುಗಳು ಸಾಧಾರಣ ವರ್ಗದ್ದಾಗಿವೆ.

೨೫) ಘನಮಠ ನಾಗಭೂಷಣ ಶಿವಯೋಗಿಯ (ಸು. ೧೮೨೮–೧೮೮೦) ೧೪೮ ಹಾಡುಗಳು 'ಘನಮಠೇಶ' ಅಂಕಿತದವು 'ಭಕ್ತಿಸುಧಾಸಾರ' ಎನ್ನುವ ಹೊಸ ಹೆಸರಿನಲ್ಲಿ ಪ್ರಕಟವಾಗಿವೆ.[28] ಈತನ ಬಸವಭಕ್ತಿ ಅತ್ಯಂತ ಪ್ರಶಂಸಾರ್ಹವಾಗಿದ್ದರೂ ಪೌರಾಣಿಕ ಪವಾಡ ಪ್ರಶಂಸೆಯ ಮಟ್ಟದಿಂದ ಮೇಲಕ್ಕೆ ಏರುವುದಿಲ್ಲ ! ನಿಜಗುಣ ಪ್ರಭಾವದಿಂದಲೋ ಏನೋ, ಅನೇಕ ಹಾಡುಗಳಲ್ಲಿ ಸಗುಣ ಶಿವನ ಸ್ತುತಿ, ಶಿವಕಾರುಣ್ಯಾಹ್ವಾನ ಶೈವಪ್ರಜ್ಞೆಗಳು ತುಂಬಿವೆ. ಕೆಲವು ಹಾಡುಗಳಲ್ಲಿ ಶರಣರ ಕೆಚ್ಚು ರೊಚ್ಚುಗಳು ವಿಜೃಂಭಿಸುತ್ತವೆ. ಸ್ಥಾವರನಿಂದೆ, ತಾಮಸ ವಿರಕ್ತನಿಂದೆ, ಅನಾಚಾರನಿಂದೆ, ಗುಪ್ತಪಾತರನಿಂದೆ, ಜಡಕರ್ಮನಿಂದೆ ಮುಂತಾದುವುಗಳನ್ನು ಒಳಗೊಂಡ ಹಾಡುಗಳು ಮಾತ್ರ ಉತ್ತಮ ವರ್ಗದವು ; ಉಳಿದವು ಮಧ್ಯಮ ವರ್ಗದವು.

೨೬) ಸೋಮೆಕಟ್ಟೆ ಕರಿವೃಷಭೇಂದ್ರರು (ಸು. ೧೮೬೩) ೫೦ ಕೈವಲ್ಯಪದಗಳನ್ನು ರಚಿಸಿರುತ್ತಾರೆ.[29] ಕೊನೆಯ ಹಾಡು ನಿಜಗುಣ ಪ್ರಭಾವಕ್ಕೆ ಪ್ರಬಲ ಸಾಕ್ಷಿಯಾಗಿದೆ. ಈ ಹಾಡುಗಳು ಮಧ್ಯಮ ಹಾಗೂ ಸಾಧಾರಣ ವರ್ಗಕ್ಕೆ ಸೇರುತ್ತವೆ. ಅಂಕಿತ–ಸೋಮೆಕಟ್ಟೆ ಕರಿವೃಷಭ.

೨೭) ನಿಜಾಂ ಇಲಾಖೆಯ ಕಡಕೊಳ್ಳದ ಮಡಿವಾಳಪ್ಪನು (ಸು. ೧೮೨೦) ಅನೇಕ ಹಾಡುಗಳನ್ನು ರಚಿಸಿದ್ದಾನೆ. ಈತನು 'ನಿರುಪಮ ನಿರಾಳಮತ್ಪ್ರಭು ಮಹಂತಯೋಗಿ' ಅಂಕಿತದಲ್ಲಿ ಹಲವಾರು ವಚನಗಳನ್ನೂ ಬರೆದಿರುವುದರಿಂದ ಈತನ ಹಾಡುಗಳು ಉತ್ತಮವರ್ಗಕ್ಕೆ ಸೇರಬಹುದು. ಅಂಕಿತ–ಮಹಾಂತೇಶ.

೨೮) ಶಿಶುನಾಳದ ಷರೀಫ್‌ಸಾಹೇಬನು (ಸು. ೧೮೪೦) ಹುಟ್ಟಿದ್ದು ಮುಸಲ್ಮಾನನಾಗಿ, ಪಡೆದದ್ದು ಗೋವಿಂದ ಬ್ರಾಹ್ಮಣನ ದೀಕ್ಷೆ. ಇವನಿಗೆ ಸತ್ತಾಗ ವೀರಶೈವ ಪದ್ಧತಿಯಲ್ಲಿಯೇ ಕ್ರಿಯಾಸಮಾಧಿ ಸಂಸ್ಕಾರವಾಯಿತು! ಇವನ ತತ್ತ್ವಗಳಲ್ಲಿ ವೀರಶೈವ ಶರಣರ ಬೋಧೆಗಳ ಪ್ರಭಾವ ಇದೆ ಎನ್ನುತ್ತಾರೆ. ಹಾಗಿದ್ದಲ್ಲಿ ಈತನ ಹಾಡುಗಳು ಉತ್ತಮ ವರ್ಗದವು. ಅಂಕಿತ–ಶಿಶುನಾಳಾಧೀಶ.

೨೯) ಮತುಕೂರ ನಂಜುಂಡ ಶಿವಯೋಗಿಯು (ಸು. ೧೮೬೦) ಸಿದ್ಧಗಂಗೆಯ ಮೊದಲ ಕರ್ತೃ ಅಟವೀಸ್ವಾಮಿಗಳವರ ಪರಮಭಕ್ತ. ಈತನು ಅಟವೀಶ್ವರ ಗೀತಾಮಂಜರಿಯನ್ನೂ, ಅಟವೀಶ್ವರ ಚಾರಿತ್ರವನ್ನೂ ಹಾಡುಗಳಲ್ಲಿ ಬರೆದಿದ್ದಾನೆ. ಎರಡನೆಯದರ ಆದಿಯಲ್ಲಿ ಬಹುದೈವಸ್ತುತಿ ಮುಂತಾದ ಶೈವಪ್ರಜ್ಞೆಗಳಿವೆ. ಆದುದರಿಂದ ಈತನ ಉಳಿದ ಹಾಡುಗಳು ಸಾಧಾರಣ ವರ್ಗದವು ಆಗಿರಬಹುದು. ಅಂಕಿತ–ಮತಕಪುರೀಶ.

೩೦) ನೀರಲಕೆರೆ ಬಸವಲಿಂಗನು (೧೮೬೦) ಬರೆದನೆನ್ನಲಾದ ೧೮೦ ಹಾಡುಗಳು 'ನೇರಿಲಕೇರಿ' ಅಂಕಿತದವು 'ಜ್ಞಾನಗೀತೆ' ಗ್ರಂಥವಾಗಿ ಪ್ರಕಟಿಸಲ್ಪಟ್ಟಿವೆ[30]. ಇವನು ಶಕ್ತಿಯ ಆರಾಧಕನಾಗಿದ್ದನಂತೆ! ೧೬೪ನೇ ಹಾಡು ಮೊಹರಂ ಅಲಾವಿ ಹಾಡಾಗಿದ್ದರೆ ೧೩೬ರಲ್ಲಿ ನಾರಾಯಣಭಜನೆ ಇದೆ. ಈ ಲಕ್ಷಣಗಳಿಂದ ಇವನ ಹಾಡುಗಳನ್ನು ಕನಿಷ್ಠವರ್ಗಕ್ಕೆ ಸೇರಿದವು ಎನ್ನಬೇಕಾಗುತ್ತದೆ.

೩೧) ಕೂಡಲೂರು ಬಸವಲಿಂಗನ ಹಾಡುಗಳು 'ಬ್ರಹ್ಮತತ್ತ್ವ ರತ್ನಾಕರ'ವಾಗಿ ಇವೆಯಂತೆ[31]. ಬ್ರಹ್ಮಶಬ್ದವನ್ನು ನೋಡಿದರೆ ಇವು ಉತ್ತಮ ಹಾಡುಗಳಾಗಿರಲಾರವು. ಅಂಕಿತ–ಕೂಡಲೂರೇಶ.

೩೨) ಬೆಂಗಳೂರು ಸಪ್ಪಣ್ಣನು (ಸು ೧೮೨೫) ವಿರಕ್ತಮಠದಸ್ವಾಮಿಯೂ ವಿದ್ವಾಂಸನೂ ಆಗಿದ್ದನು. ನಿಜಗುಣನ ಹೆಜ್ಜೆಗಳ ಮೇಲೆ ಹೆಜ್ಜೆಯನ್ನಿಡುತ್ತಾ 'ಕೈವಲ್ಯಕಲ್ಪವಲ್ಲರಿ' ಎಂಬ ಹಾಡುಗಬ್ಬವನ್ನು 'ಗುರುಸಿದ್ಧ' ಅಂಕಿತದಲ್ಲಿ ರಚಿಸಿದ್ದಾನೆ.

25. ೧೧ ರಂತೆ 26. ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು, ಧಾರವಾಡ (೧೯೬೨) 27. ಕೈವಲ್ಯದರ್ಪಣ, ಧಾರವಾಡ (೧೯೫೨)
28. ಭಕ್ತಿಸುಧಾಸಾರ, ಧಾರವಾಡ
29. ಶಿವಾನುಭವ ಗ್ರಂಥಮಾಲೆ ೩೮ (೧೯೩೩)
30. ಜ್ಞಾನಗೀತೆ–ಕೆಂಭಾವಿ ಗುರುಲಿಂಗಾರ್ಯ (೧೯೫೪).
31. ೪—೫ ರಂತೆ

ಈತನ ಹಾಡುಗಳಲ್ಲಿಯು ಶರಣಸಂಪ್ರದಾಯ ವಿರುದ್ಧವಾದ ದ್ವೈತ ಅದ್ವೈತಯೋಗ ಪ್ರಜ್ಞೆಗಳು ವಿಶೇಷವಾಗಿರುತ್ತವೆ. ಈತನು ಶಕ್ತಿಯನ್ನು ಸ್ತುತಿಸಿದ್ದಾನೆ! ಈ ಲಕ್ಷಣಗಳಿಂದ ಈ ಹಾಡುಗಳನ್ನು ಉತ್ತಮವೆನ್ನಲಾಗುವುದಿಲ್ಲ!

೩೩) ನಿಂಬರಗಿಯ 'ಗುರುಲಿಂಗಜಂಗಮ' ಮಹಾರಾಜರು (ಸು. ೧೮೭೫) ರಚಿಸಿದ ಗುರುಲಿಂಗಜಂಗಮ ಅಂಕಿತದ ೧೯ ಹಾಡುಗಳು ಪ್ರಕಟವಾಗಿವೆ. ಕೆಲವು ಮರಾಠೀ ಹಾಡುಗಳನ್ನೂ ರಚಿಸಿದ್ದಾರೆ. ಇವರು ಸಿದ್ಧಗಿರಿ ಕಾಡಸಿದ್ಧೇಶ್ವರರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದರಂತೆ. ಆದರೆ ಇವರ ಹಾಡುಗಳಲ್ಲಿ ಮರಾಠೀ ಪಾದಕರೀ ಸಂಪ್ರದಾಯದ ತುಕಾರಾಮ ಮುಂತಾದ ಸಂತರ ಪ್ರಭಾವ ಕಣ್ಣನ್ನು ಕುಕ್ಕುತ್ತವೆ. ಇವರ ಕೀರ್ತನೆಗಳಲ್ಲಿ ವೀರಶೈವ ತತ್ತ್ವಗಳೇ ಇಲ್ಲ! ಇವು ಕನಿಷ್ಠ ವರ್ಗಕ್ಕೆ ಸೇರುತ್ತವೆ[32].

೩೪) ಗಂಗೇಶಾಂಕಿತದ ಸುಮಾರು ೪೦ ಹಾಡುಗಳು ಸಿಕ್ಕಿವೆ[33].

೩೫) ತೋಂಟದ ಸಿದ್ಧಲಿಂಗ ಅಂಕಿತದ ಬಿಡಿಹಾಡುಗಳು ಶೃಂಗಾರ ವೈರಾಗ್ಯಜ್ಞಾನಪರವಾಗಿ ಸಿಕ್ಕಿವೆ[34].

೩೬) ಶಂಕರಾನಂದನು (ಸು. ೧೮೦೦) 'ಗುರುಶಂಕರ' ಮುದ್ರಿಕೆಯಲ್ಲಿ ಹಲವಾರು ಹಾಡುಗಳನ್ನು ರಚಿಸಿದ್ದಾನೆ[35].

೩೭) ಆನೆಗೊಂದಿಯ ಯೋಗಾನಂದಾರ್ಯನು ಬಸವ ಶತಕವೆಂಬ ೧೧೧ ಹಾಡುಗಳನ್ನು ರಚಿಸಿದ್ದಾನೆ[36].

೩೮) ಶರಣಮಾಲಿಕೆ (೯ ಹಾಡುಗಳು) ಭಕ್ತಮಾಲಿಕೆ (೯ ಹಾಡುಗಳು) ಗಮನಾರ್ಹವಾಗಿವೆ[37].

೩೯) ಕರಸ್ಥಲದ ವೀರಣ್ಣೊಡೆಯರ ಲಿಂಗನಿಜಸ್ಥಲ ತ್ರಿವಿಧಿಯು ಅತ್ಯುತ್ತಮ ಸೈದ್ಧಾಂತಿಕ ಹಾಡಾಗಿದೆ[38].

೪೦) ಚನ್ನಮಲ್ಲರ ಶೀಲವಂತಯ್ಯಗಳ ತ್ರಿವಿಧಿ (೧೧೨)ಯೂ ಸಿದ್ಧಾಂತದ ಹಾಡಾಗಿದೆ[39].

೪೧) ಪ್ರಾಣಲಿಂಗಜ್ಞಾನದರ್ಪಣಚಾರಿತ್ರವು ೨೭ ನುಡಿ ೧ ಪಲ್ಲವಿಯ ಹಾಡಾಗಿದೆ[40].

೪೨) ಪ್ರಭುಶಿವಯೋಗಿಯ ಪಾದಪೂಜಾವಿಧಾನಕ್ಕೆ (೩೬ ವಾರ್ಧಕ) ರಾಗತಾಳಯುಕ್ತ ಹಾಡಾಗಿದೆ[41].

೪೩) ಪರವಾದಿಗಜಾಂಕುಶದಂತಹ ತಾರಾವಳಿಗಳನ್ನೂ ಹಾಡುಗಳೆನ್ನಬಹುದು.

೪೪) ಅನೇಕ ಪ್ರಾಚೀನ ಹಸ್ತಪ್ರತಿಗಳಲ್ಲಿ ಪದ, ತತ್ತ್ವಪದ, ಹಾಡುಗಳ ಹೆಸರಿನ ಹಲವಾರು ಹಾಡುಗಳು ಅಡಗಿವೆ[42]. ಕಾಲಗರ್ಭದಲ್ಲಿ ಅಡಗಿಹೋದವೆಷ್ಟೋ, ಕತ್ತಲುಕೋಣೆಗಳಲ್ಲಿ ಕುಳಿತಿರುವವೆಷ್ಟೋ ತಿಳಿಯದಾಗಿದೆ.

**ವೀರಶೈವ ಹಾಡುಗಳು ಯಾವ ಯಾವ ರೂಪದಲ್ಲಿ ದೊರೆಯುತ್ತವೆ ?**

೧) ಮಹಾರೂಪಕ—ಕರ್ಮವ ಕಳೆದು ನಿರ್ಮಳಭಕ್ತಿ ಸುಜ್ಞಾನ। ಧರ್ಮವಾರದ ಪೇಟೆಯ ಬೆವಹಾರ —ಗುರುಬಸವದೇವ

೨) ಪ್ರಾಣರೂಪಕ—ಆನೆ ಬಂತು ಮದ್ದಾನೆ ತನ್ನ । ತಾನೆ ತಿಳಿದು ನೋಡಿ ನಿಂದ ಶರಣನೆಂಬ —ಸಿದ್ಧರಾಮದೇವ

೩) ಬೆಡಗು—ಗರುಡ ಭಾಗ ಕರಿದು ಭಾಗ ಬಿಳಿದು —ಗುಹಲ್ಲಮದೇವ

೪) ದ್ವಂದ್ವಾರ್ಥ—ಕಾಯಿಕಾಯಿಕಾಯಿ। ಹೃದಯಾಕಾರದ ಸೋಹಿನೊಳಿರುತಿಹ ಚಿತ್ಕಪೆ ಕಾಯಿ —ಮೈಲಾರ ಶರಣರು

೫) ಭಿನ್ನಾರ್ಥ—ಗೋವಿಂದನಾದಿಗೋವಿಂದ। ನಮ್ಮ ಗೋವಿಂದಲಾದ ಪಾವನ ಪಾಂಡುರಂಗ ! —ಮೈಲಾರ ಶರಣರು

೬) ಹೋಲಿಕೆ—ನರರ ದುರ್ನಡತೆಗಳಂತಲ್ಲ ಶಿವ । ಶರಣರಾಚರಣೆಯ ಪರಿ ಬೇರೆ —ಮೈಲಾರ ಶರಣರು

೭) ವಾದ (ಖಂಡನ-ಮಂಡನ)—ಶರಣನೇ ಶಿವನಲ್ಲದೆ ಬೇರೆ ಶಿವ । ನಿರುವನೆ? ನೀ ತಂದು ತೋರಾ ! ನಾ ಕಾಣೆ ! —ಮೈಲಾರ ಶರಣರು

೮) ಅನ್ಯಮುಖ—ನಾನಾದಿ ರುದ್ರಶಕ್ತಿ ನಾನಾ ರೂಪಿನೊಳಿಹೆ । ನೀನೆನ್ನ ಮೋಹಿಸಿ ಮರದೆ ಕಂಡಾ ಹೋ —ಗುರುಬಸವದೇವ

೯) ಸಿದ್ಧಾಂತ—ಆದಿದೇಶಿಕ ನಮಿತಜನಕೀವ ಕ್ರಿಯಮಂತ್ರ । ವೇದವೆಂಬ ತ್ರಿವಿಧವೊಂದೊಂದಕೇಳೇಳ —ಗುರುಬಸವದೇವ

೧೦) ಆತ್ಮಸಂಬೋಧೆ—ಸುಮ್ಮನಿರು ಮನವೆ ನಿನ್ನೊಳು ನೀನು ಸುಮ್ಮನಿರು —ರತ್ನಾಕರದೇವ

---

32. ಗುರುಮಹಾರಾಜರ ವಚನ (೧೯೦೮) 33. ೨೧ ರಂತೆ 34. ೧೨ ರಂತೆ ನಂ. ೬೭೨-೬೭೩, 35. ವಿವರ ಕಳೆದುಹೋಗಿದೆ.
36. ೧ರಂತೆ ಹಸ್ತಪ್ರತಿ ಕೆ. ಬಿ. ೩೨೧/೨. 37. ೧ರಂತೆ ಕೆ. ೧೬೧ ಹಸ್ತಪ್ರತಿ. 38. ಶರಣಸಂತಾನ ಗ್ರಂಥಭಂಡಾರ
39. ಶೀಲವಂತಯ್ಯನ ತ್ರಿವಿಧಿ-ಮೈಸೂರು ೧೯೫೪ 40. ೧ರಂತೆ ಹಸ್ತಪ್ರತಿ ಕೆ. ೨೫೯/೨
41. ಪಾದಪೂಜಾವಿಧಾನ-ಚನ್ನಮಲ್ಲಿಕಾರ್ಜುನ, ಹಾವೇರಿ. 42. ೧ರಂತೆ ಹಸ್ತಪ್ರತಿಗಳು ಕೆ.ಬಿ. ೩೫೮, ಕೆ. ೬೭೬, ಕೆ. ೧೭೬೩/೧ ಇತ್ಯಾದಿ.

೧೧) ಸಂಬೋಧೆ—ಎನ್ನಕರದೊಳಗಿರ್ದ್ದು। ಎನ್ನಲೇತಕೆ ನುಡಿಯೆ ? —ಮುಪ್ಪಿನ ಷಡಕ್ಷರಿ
೧೨) ಸಂವಾದ—ಸಂಗತಮಾಗಿ ಜೋಡಿಸಿ ಪೇಳಿದುತ್ತರದಿಂಗಿತವರಿತು ನಡೆವನೆ ಬಲ್ಲನು —ನಿಜಗುಣದೇವ
೧೩) ವಿವೇಕ—ಮಗಳೆ ಎನ್ನಯ ಮಾತ ಮಿಗೆ ಕೇಳು —ಮುಪ್ಪಿನ ಷಡಕ್ಷರಿ
೧೪) ನಿಂದೆ—ಛೀ ಹೆಡ್ಡ ! ನೀ ಎಂಥ ಶಿವಭಕ್ತ ! —ಮೈಲಾರ ಶರಣರು
೧೫) ಶಾಪ—ದೇವರೇ ಎನ್ನ ದೇವರೆ ಕಾಯ್ಯೆ। ದೇವರೇ ಎನ್ನದೇವರೇ ಅತ್ತೆಯ ಕಣ್ಣೆರಿಯಲಿ —ಗುಹಲ್ಲಮದೇವ
೧೬) ಉಪ್ಪವಡ (ಸುಪ್ರಭಾತ)—ಬೆಳಗಾಯಿತೇಳಿ ಸಾಸಿರದಳದ ಮಧ್ಯದಲಿ ! —ಚನ್ನಬಸವದೇವ
೧೭) ಆಹ್ವಾನ—ಬಾರೋ ಗುರುಲಿಂಗದೇವನೆ —ಮೈಲಾರ ಶರಣರು
೧೮) ಪ್ರಾರ್ಥನೆ—ಪರನೆ ನಾ ನಿಮ್ಮಲ್ಲಿ ವರವ ಬೇಡುವೆನೊಂದು ಶರಣರಿಗೆ ಭೃತ್ಯನಾಗಿಸೆನ್ನನು ! —ಮುಪ್ಪಿನ ಷಡಕ್ಷರಿ
೧೯) ಸ್ತೋತ್ರ—ಯತೋವಾಚೋನಿವರ್ತಂತೆ ಎಂಬ ಶೃತಿಯು ಬಸವ —ಚನ್ನಬಸವದೇವ
೨೦) ನಿಂದಾಸ್ತುತಿ—ಕಲ್ಲುಲಿಂಗವ ತಂದು ಕಟ್ಟಿ ಸರಕೆ ಕಟ್ಟಬಹುದು —ಲಕ್ಷ್ಮಾದೇವ
೨೧) ಅರ್ಚನೆ—ಜಯಜಯ ನಿತ್ಯನಿರಂಜನ ನಿರ್ಗುಣ —ಕರತಳ ಚನ್ನನಂಜದೇವ
೨೨) ನಾಮಾವಲಿ—ಶಿವಶರಣರಾ ಮನೆಯ। ತವೆ ಸೇವೆಯನು ಮಾಡಿ —ಮುಪ್ಪಿನ ಷಡಕ್ಷರಿ
೨೩) ಮಂಗಳಾರತಿ—ಜಯಮಂಗಳಂ ಸದಾ ಶುಭಮಂಗಳಂ —ಮೈಲಾರ ಶರಣರು
೨೪) ಹೊಗಳು—ಮುಂದೆ ಮುಂದಕೆ ಹೋಗಿ ಮುಕ್ತನಾದುದೊಂದು ಚಂದಮಾಮ —ನಿರ್ವಾಣಿದೇವ
೨೫) ಹಸೆಸೋಬಾನೆ—ಅಂಬರ ಚಪ್ಪರದಡಿಯಲ್ಲಿ ಘನ। ಕುಂಭಿನಿಯನೆ ಹಸೆಯ ಹಾಸಿರೆ —ನಿರ್ವಾಣಿ ಬೋಳುಬಸವ
೨೬) ಸಂಭ್ರಮ ಹಬ್ಬ-ನಿಬ್ಬಣ—ನಮ್ಮ ಮನೆಯಲಿಂದು ಹಬ್ಬ। ನಮಗೆ ಸಂದಣಿ ಬಹಳ ನಿಮ್ಮ ನುಡಿಸ ಹೊತ್ತಿಲ್ಲ। ಹೋಗಿ ವಿಷಯಗಳಿರಾ —ಮಹಾದೇವಿಯಕ್ಕ
೨೭) ಸಖೀವಾರ್ತೆ—ಕಂಡಿರೆಯಕ್ಕ ಕಂಡಿರೆ —ಶಾಂತಮಲ್ಲದೇವ
೨೮) ಜಾವಳಿ (ಪ್ರಣಯ)—ಹೀಗೊತ್ತಿ ಬಾರೆ ಹಿಮಘನ ! ಮಾಗಿಯ ಚಳಿ ಮಾನಿನಿ ರನ್ನಳೆ —ನಿರ್ವಾಣಿ ಬೋಳುಬಸವ
೨೯) ವಿರಹ—ಯಾಕೆ ಬಾರನೆ ಬಸವೇಶನೇಕೆ ಬಾರನೆ ? —ಗುರುಬಸವದೇವ
೩೦) ಅಳಲು—ಮೂಕುತಿಹೋಯಿತು ಮುರಕಿಸುವನಕ —ಮಹಾದೇವಿಯಕ್ಕ
೩೧) ದುಃಖ—ಒಲ್ಲೆಗಂಡನ ಕೂಟ ಒಗತನವ ಅಕ್ಕಟ ಗಂಡಮನೆ ಬಿರಿಸಯ್ಯಯ್ಯೊ —ಮಹಾದೇವಿಯಕ್ಕ
೩೨) ಓವನಿಕೆ—ಆತನ ಮಾತು ಹುಸಿಯಲ್ಲ —ಎಮ್ಮೆ ಬಸವರ ಸ್ತ್ರೀ
೩೩) ಕಾಯಕ—ಜೀವನೆಂಬ ಮೃಗ ಧಾವತಿಗೊಂಡು —ಗುರುಬಸವದೇವ
೩೪) ದುಂದುಮೆ—ಹುಯ್ಯಲೆ ಲಾಲಿಸಿರೊ —ನಿಜಲಿಂಗ ಚಿಕ್ಕಯ್ಯ
೩೫) ರಣ—ಕೈಲಾಸ ಪುರಕಿಂದು ದಂಡುದಾಳಿ ಕಾಣಿರೊ ! —ಸಿದ್ಧರಾಮದೇವ
೩೬) ಶಕುನ—ಬಳ್ಳುಕೂಗಿದ ಫಲವ ಬಲ್ಲೆಯಾ —ಕರಸ್ಥಲನಾಗದೇವ
೩೭) ಕಣಿ–ಕಣಿಯ ಕೇಳಿರಣ್ಣಗಳಿರಾ —ಮೈಲಾರ ಶರಣರು
೩೮) ಸ್ವಪ್ನ—ಎಂಥ ಕನಸ ಕಂಡೆನೆ —ಮೈಲಾರ ಶರಣರು
೩೯) ನೃತ್ಯ—ಮುದ್ದುಸುಮ್ಮಾನ ಸುಗಂಧಿ —ಬಸವಣ್ಣನವರು
೪೦) ಗೊಂದಲ—ಒಲ್ಲೆ ನಾನಂಜುವೆ ನಿಮ್ಮ ಶರಣರ ಸಂಗ —ಬಹುರೂಪಿ ಚೌಡದೇವ
೪೧) ಗೊಂಬೆ—ಕಪಟನಾಟಕನ ಕೈಯೊಳಗಣ ಬೊಂಬೆ —ಶಂಕರದೇವ
೪೨) ಉಯ್ಯಾಲೆ—ಅಮಮ ಎಲ್ಲಿ ನೋಡಿದಡಿಲ್ಲದ —ಗುಹಲ್ಲಮದೇವ
೪೩) ಕೋಲು—ಕೋಲೆ ಕೋಲೆ ಕೋಲು —ಶಾಂತಮಲ್ಲದೇವ
೪೪) ಜೋಗುಳ—ಜೋ ಜೋ ಎನ್ನ ಪರಮಹಂಸ —ನೀಲಲೋಚನೆ ದೇವಿ
೪೫) ಮಿಶ್ರಭಾಷೆ—ಬಲ್ಲೆನೆಂದರೆ ಸೊಲ್ಲೆ ರಾಹಿಣೆ ಅಂಬರಣ ದೇಗುಲ ಸಾಹಿ —ಗುರುಬಸವದೇವ

—ಇನ್ನೂ ನಾನಾ ಪ್ರಭೇದಗಳಿರಬಹುದು !

**ವೀರಶೈವ ಹಾಡುಗಳ ಬಗೆಗೆ ವೀರಶೈವರ ಕರ್ತವ್ಯವೇನು ?**

ಇನ್ನಾದರೂ ಈ ಮಹಾನಿಧಿಯ ಉಳಿದ ಭಾಗವನ್ನು ಕಂಡುಹಿಡಿಯಬೇಕು. ಕಂಡುದನ್ನು ಉಳಿಸಬೇಕು. ಉಳಿಸಿದುದನ್ನು ಬೆಳೆಸಬೇಕು. ಕಳೆದುಹೋದ ಅಗ್ರಮರ್ಯಾದೆಯನ್ನು ಮತ್ತೆ ಪಡೆಯಬೇಕು !

# ವೀರಶೈವ ತ್ರಿಪದಿಸಾಹಿತ್ಯ

—ಆರ್. ಎಸ್. ರಾಮರಾವ್

'ತ್ರಿಪದಿ' ಕನ್ನಡಸಾಹಿತ್ಯದಲ್ಲಿ ಒಂದು ಛಂದಸ್ಸಿನ ಪ್ರಕಾರ. ಇದು ಹುಟ್ಟಿ ಬೆಳೆದು ಬಂದದ್ದೇ ಒಂದು ಚರಿತ್ರೆ. ಈ ಛಂದಸ್ಸಿನ ಪ್ರಕಾರ ಮೊದಲು ನಮಗೆ ಸು. ಕ್ರಿ.ಶ. ೭೦೦ರ ಬಾದಾಮಿಯ ತಟ್ಟುಕೋಟಿ ಶಾಸನದಲ್ಲಿ ಕಂಡುಬರುತ್ತದೆ. ಅಲ್ಲಿ ಮೂರು ತ್ರಿಪದಿಗಳಿವೆ. ಅವು 'ಮಾಧವ'ನ ಗುಣಶೌರ್ಯಗಳನ್ನು ವರ್ಣಿಸುತ್ತವೆ. ಅವುಗಳ ರಚನೆ, ಅಂಶಛಂದಸ್ಸಿನಿಂದ ಕೂಡಿದೆ. ಈ ಆಧಾರವನ್ನೇ ಮೂಲವಾಗಿಟ್ಟುಕೊಂಡು ತ್ರಿಪದಿಯ ಚರಿತ್ರೆಯನ್ನು ಶಾಸ್ತ್ರಕಾರರು ವಿವರಿಸುತ್ತಾರೆ. ಶಾಸನಗಳಲ್ಲದೆ ಗ್ರಾಂಥಿಕಸಾಹಿತ್ಯದಲ್ಲಿ ಇದರ ಬಳಕೆಯಾಗಿರುವುದನ್ನು ಪಂಪನ ಕಾಲದಿಂದ ಗುರುತಿಸಬಹುದು.

'ತ್ರಿಪದಿ' ದೇಶಿಛಂದಸ್ಸು. ಕನ್ನಡದ ಮಾರ್ಗಕವಿಗಳು, ಸಂಸ್ಕೃತ ಶೈಲಿಯಲ್ಲಿ ಕಾವ್ಯರಚನೆ ಮಾಡಲು ತೊಡಗಿದ್ದುದರಿಂದ 'ದೇಸೀ' ಪ್ರಾಕಾರಗಳಿಗೆ ಹೆಚ್ಚು ಪ್ರಾಮುಖ್ಯ ಕೊಡಲಿಲ್ಲ. 'ಈ ಮೂಲಾಂಶಗಳನ್ನು ಅವರು ಮರೆತಿದ್ದರು, ಅವರಿಗೆ ತಿಳಿದಿರಲಿಲ್ಲ ಎಂದಲ್ಲ ! ಏಕೆಂದರೆ ನಮ್ಮ ಎಲ್ಲ ಕವಿಗಳೂ ದೇಶೀಯ ಛಂದಸ್ಸನ್ನು ಮಾದರಿಗಾಗಿ ತಮ್ಮ ಕಾವ್ಯದಲ್ಲಿ ಬಳಸಿದ್ದಾರೆ. ಅದರ ಪ್ರಯೋಗದಿಂದ ವೈವಿಧ್ಯವನ್ನು ಸಾಧಿಸಿದ್ದೂ ಉಂಟು. ಆದರೆ ಈ ಪ್ರಯೋಗಗಳು ಕ್ವಚಿತ್ತಾಗಿ ಮಾತ್ರ ಕಂಡುಬರುತ್ತವೆ.

'ತ್ರಿಪದಿ'ಯ ಸ್ವರೂಪವನ್ನು ನಮ್ಮ ಮೊದಲ ಛಂದಶ್ಶಾಸ್ತ್ರಜ್ಞ ನಾಗವರ್ಮ ತನ್ನ ಛಂದೋಂಬುಧಿಯಲ್ಲಿ ಹೀಗೆ ಹೇಳಿದ್ದಾನೆ:

ಬಿಸುರುಹೋದ್ಭವಗಣಂ ರಸದಶ ಸ್ಥಾನದೊಳ್ । ಬಿಸರುಹನೇತ್ರ ಗಣಮೆ ಬರ್ಕುಟಿದುವು । ಬಿಸರುಹನೇತ್ರೇ ತ್ರಿಪದಿಗೆ

ತ್ರಿಪದಿಗೆ ಮೂರು ಪಾದಗಳು. ಒಟ್ಟು ಹನ್ನೊಂದು ಗಣಗಳು. ೬ನೆಯ ಮತ್ತು ೧೦ನೆಯ ಗಣಗಳು ಬ್ರಹ್ಮಗಣ. ಉಳಿದವು ವಿಷ್ಣುಗಣಗಳು. ಇದು ತ್ರಿಪದಿಯ ಮೂಲಲಕ್ಷಣ. ಈ ರಚನೆಯಲ್ಲಿ ಪ್ರಯೋಗಗಳು ನಡೆದು ರಚಕನ 'ನಾದಕಲ್ಪನೆ'ಯನ್ನನುಸರಿಸಿ, ಬದಲಾವಣೆಗಳು ಆಗಿರುವ ಸಂಭವವೂ ಕಂಡುಬರುತ್ತದೆ. ಈ ವ್ಯತ್ಯಾಸಕ್ಕೆ ಬೇರೆಬೇರೆ ಹೆಸರುಗಳಿರುವುದನ್ನು ನಾಗವರ್ಮನೇ ಸೂಚಿಸುತ್ತಾನೆ: ೧. ಚಿತ್ರ ೨. ವಿಚಿತ್ರ. ಈ ಭೇದಗಣ ವಿನ್ಯಾಸಗಳ ಬಳಕೆಯಿಂದ ಉಂಟಾಗಿರುವುದು ಸ್ವಯಂವೇದ್ಯ.

ನಮ್ಮವರು 'ತ್ರಿಪದಿ'ಯ ರಚನೆಯ ಮೂಲಸ್ವರೂಪವನ್ನು ಕುರಿತು ದೀರ್ಘವಾಗಿ ಆಲೋಚಿಸಿ ತಮ್ಮ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಜಯಕೀರ್ತಿ ತನ್ನ ಛಂದೋನುಶಾಸನದಲ್ಲಿ 'ತ್ರಿಪದಿ'ಯ ಲಕ್ಷಣವನ್ನು ಹೇಳಿದ್ದಾನೆ. ನಾಗವರ್ಮ ಹೇಳಿರುವ ಲಕ್ಷಣಕ್ಕಿಂತ ಅದು ಅಷ್ಟೇನೂ ಭಿನ್ನವಲ್ಲ. ಸೋಮೇಶ್ವರನ ಮಾನಸೋಲ್ಲಾಸದಲ್ಲೂ 'ತ್ರಿಪದಿ' ರಚನೆಯ ಸ್ವರೂಪವನ್ನು ಹೇಳಿದೆ. ಜೊತೆಗೆ ಅದನ್ನು ಹೇಳುವ ಸಂದರ್ಭವನ್ನೂ ಆತ ಸೂಚಿಸಿದ್ದಾನೆ. ಧಾನ್ಯವನ್ನು ಒರಳಲ್ಲಿ ಕುಟ್ಟುವಾಗ, ವಿಪ್ರಲಂಭ ಶೃಂಗಾರವನ್ನು ವರ್ಣಿಸುವಾಗ, ಶೌರ್ಯಪ್ರದರ್ಶನ ಮಾಡದೆ, ಸೋತ ವ್ಯಕ್ತಿಯನ್ನೂ ಹಾಸ್ಯಮಾಡುವಾಗ ಅಥವಾ ಛೇಡಿಸುವಾಗ ತ್ರಿಪದಿಯನ್ನು ಬಳಸಬೇಕಂತೆ. ಆದರೆ ನಮಗೆ ಈ ನಿಯಮಗಳಿಗೆ ಉದಾಹರಣೆಗಳು ದೊರಕುವುದು ದುರ್ಲಭ.* ಬಹುಶಃ ಸೋಮೇಶ್ವರ 'ತ್ರಿಪದಿ'ಯನ್ನೂ 'ಒನಕೆವಾಡು' 'ಅಂಕಮಾಲೆ' ಮೊದಲಾದ ಕಾವ್ಯಪ್ರಕಾರಗಳನ್ನೂ ಗಮನಿಸಿ ಮೇಲಿನ ಅಭಿಪ್ರಾಯವನ್ನು ನೀಡಿರಬಹುದು. ಶಾಸನಾದಿಗಳಲ್ಲಿ ಕಾವ್ಯಕಥಾಪ್ರಸಂಗಗಳಲ್ಲಿ ಬಳಸಿರುವ ತ್ರಿಪದಿ ಪದ್ಯಗಳು ವ್ಯಕ್ತಿಯ ಗುಣಶೌರ್ಯಾದಿಗಳನ್ನು ವಿವರಿಸಿವೆ :

ಸಾಧುಗೆ ಸಾಧು ಮಾಧೂರ್ಯಗ್ಗೆ ಮಾಧೂರ್ಯಂ। ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತ । ಮ್ಮಾಧವನೀತನ್ಪೆಱನಲ್ಲ॥ (ಬಾದಾಮಿಶಾಸನ-೭೦೦)

ಮೋನವುಂ ಪಾಱುಯುಮ್ಮನದ ನಿರ್ಮ್ಮಳಿಕೆಯು । ಮನಿತುಮೊಳ್ಗುಣಮುಮಱಿವು ಧರ್ಮಮುಂ ಜಕ್ಕ । ನಿನಗಲ್ಲದಿಲ್ಲ ಭುವನದೊಳ್ ।
(ಹುಂಚದಶಾಸನ-೮೦೦)

ಬಳನೇಕಕುಂಡಳಂ ಬಳಿ ತಾಳಕೇತನಂ । ಪಳಹಸ್ತಂ ನೀಳವಸನಂ ಸಂಕರ್ಷಣಂ । ಬಳಭದ್ರಂ ರಾಮನೆನೆ ಸಂದಂ ॥ (ವರ್ಧಮಾನಪುರಾಣ-೩-೯)

ಆದರೆ ಇದೇ ತ್ರಿಪದಿಗಳ ವಸ್ತು ಎಂದು ಖಚಿತನಾಗಿ ಹೇಳಲು ಬರುವುದಿಲ್ಲ. ವರ್ಣನೆ, ಬೋಧನೆ, ತತ್ತ್ವ ಎಲ್ಲವನ್ನೂ ಈ ಛಂದಸ್ಸಿನಲ್ಲಿ ಹೇಳಿರುವ ಉದಾಹರಣೆಗಳು ಹಲವಾರು ಇವೆ :

* ಷಡಕ್ಷರದೇವ ತನ್ನ ರಾಜಶೇಖರ ವಿಳಾಸದಲ್ಲಿ ವೇಶ್ಯಾವಾಟಿಕೆಯ ವರ್ಣನೆಯಲ್ಲಿ ಬಳಸಿರುವುದನ್ನು ಗಮನಿಸಬಹುದು (ಸಂ).

ಬಡವಂ ನಿಧಾನಮಂ ಪಡೆದಂತೆ ಕುರುಡಂ ಕ | ಣ್ಬಡೆದಂತೆ ಮನದೊಳ್ ಪಿರಿದುಮುತ್ಸಾಹಮಂ | ಪಡೆದನಾತ್ಮಜನ ಬರವಿಂದೆ ॥ —ಪೊನ್ನ
ಅಬಿರುವನ್ನದೆ ಸೋಲಿಮುದುವೆಗಂ ಮಟುವಾ | ಮದುವೆಗಂ ಕುಜನ ಕುಳಿಕನ ರಾಹುವಿ | ಸುದಯುಮಭ್ಯುದಯಂ ಬುಧಬಂಧು ॥

—ಚಾವುಂಡರಾಯ (೧೦೨೫)

ಪತ್ತಿದ ಗಂಡರ ಚಿತ್ತವ ಕಿಡಲೀಯ| ದಿತ್ತುದೆ ಕೋಟಿ ತನಗೆಂಬ ಸೋಲೆಯ| ಪಿತ್ತಿಲಲ್ಲಿರದೆ ಸುರಭೂಜ ॥ —ನೇಮಿಚಂದ್ರ (ಲೀಲಾವತಿ ಪ್ರಬಂಧ)

ತ್ರಿಪದಿ ಛಂದಸ್ಸಿನಲ್ಲಿ ಮೊದಮೊದಲು ಶೌರ್ಯಧೈರ್ಯಾದಿಗುಣಗಳನ್ನು ವರ್ಣಿಸುತ್ತಿದ್ದರೂ, ಕವಿಗಳು ಅದನ್ನು ವೈವಿಧ್ಯಕ್ಕಾಗಿ ತಮ್ಮ ಕಾವ್ಯಗಳಲ್ಲಿ ಬಳಸುವಾಗ, ವರ್ಣನೆಗಳನ್ನೂ ವಿವರಿಸಲು ಪ್ರಯತ್ನಿಸಿದರು. ಆದರೆ 'ಷಟ್ಪದಿ' ಛಂದಸ್ಸಿನಂತೆ ಅದನ್ನು ಕಥಾನಿರೂಪಣೆಗೆ ಮಾಧ್ಯಮವನ್ನಾಗಿ ಮಾಡಿಕೊಂಡದ್ದು ಅಪರೂಪ. ಸು. ೧೫೦೦ರಲ್ಲಿ ರಚಿತವಾದದ್ದು ಎಂದು ಹೇಳುವ 'ಚಂದನಾಂಬಿಕೆಯ ಕಥೆ' ತ್ರಿಪದಿಯ ಮೊದಲ ಕಾವ್ಯ ಕಥೆ. ಇದು 'ಒನಕೆವಾಡು' ಆಗಿರಬಹುದೇನೋ ಎಂಬುದಕ್ಕೆ ಕೃತಿಯಲ್ಲಿಯೇ ಸಾಕ್ಷ್ಯವಿದೆ ಎಂದು ಹೇಳುತ್ತಾರೆ. ಹಾಗೆಯೇ ೧೫೫೦ರಲ್ಲಿ 'ಬತ್ತೀಸ ಪುತ್ತಳಿಯ ಕಥೆ'ಯನ್ನು ವಿಷಯವಾಗಿಟ್ಟುಕೊಂಡ 'ಸೌಂದರ್ಯ ಕಥಾರತ್ನ' ಎಂಬ ತ್ರಿಪದೀ ಗ್ರಂಥವೊಂದು ದೊರಕಿದೆ. ಗ್ರಂಥದಲ್ಲಿ ೩೪ ಸಂಧಿಗಳಿದ್ದು ೧೯೬೨ ಪದ್ಯಗಳಿವೆ. ಅಸಮಗ್ರ ಕೃತಿ ಇದು. ಆದರೆ ತ್ರಿಪದಿಯನ್ನು ಕಥೆಗೆ ವಾಹಕವಾಗಿ ಉಪಯೋಗಿಸಬಹುದು ಎಂಬುದನ್ನು ಕವಿ ತೋರಿಸಿಕೊಟ್ಟಿದ್ದಾನೆ. ಇವನ ಮಾದರಿಯನ್ನೋ ಅಥವಾ ತಮ್ಮ ಅನುಭವವೇದ್ಯವಾದ ಅಭ್ಯಾಸಶಕ್ತಿಯನ್ನೋ ಬಳಸಿಕೊಂಡು ಈಚೆಗೆ ಶ್ರೀಮತಿ ಜಯದೇವಿ ತಾಯಿ ಲಿಗಾಡೆ ಅವರು 'ಶ್ರೀ ಸಿದ್ಧರಾಮ ಪುರಾಣ' ಎಂಬ ತ್ರಿಪದಿಕಾವ್ಯವನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದ್ದಾರೆ.

ತ್ರಿಪದಿಯ ಛಂದಸ್ಸಿನ ಬಗ್ಗೆ ಹೆಚ್ಚು ಚರ್ಚೆ ನಡೆಸುವುದಕ್ಕಿಂತ ನಾವು ಅದರ ಹುಟ್ಟು ಬೆಳವಣಿಗೆಯನ್ನು ನೋಡಿದೆವು. ಕನ್ನಡ ಛಂದಸ್ಸುಗಳಲ್ಲಿ ತ್ರಿಪದಿಯನ್ನು ಕ್ವಚಿತ್ತಾಗಿ, ಕೆಲವು ಸಂದರ್ಭಗಳಲ್ಲಿ ಮಾತ್ರ ಬಳಸಿರುವುದನ್ನೂ ಗಮನಿಸಿದೆವು. 'ತ್ರಿಪದಿ' ಜಾನಪದ ಛಂದಸ್ಸು ಎಂಬುದನ್ನು ಅವುಗಳ ಚರಿತ್ರೆಯಿಂದ ಅಲ್ಲಗಳೆಯುವಂತಿಲ್ಲ. ಆದರಿಂದಲೇ ನಮ್ಮ ಮಾರ್ಗಕವಿಗಳು ಅದನ್ನು ವಿಶೇಷವಾಗಿ ತಮ್ಮ ಕಾವ್ಯಗಳಲ್ಲಿ ಬಳಸಲಿಲ್ಲ. ತಮಗೆ ಅದರ ಅರಿವಿದೆ ಎಂಬುದನ್ನು ಮಾತ್ರ ತೋರಿಸಿಕೊಂಡರು. ಹಾಗೆ ರಚಿಸುವಾಗಲೂ 'ಅಂಶ' ಸ್ವಭಾವವನ್ನು ಅಡಗಿಸಿ 'ಮಾತ್ರಾ' ಗಣಗಳ ಸ್ವರೂಪವನ್ನು ಕೊಡಲು ಯೋಚಿಸಿದರು. ಆದ್ದರಿಂದಲೇ ಈಗ ಅದು ಅಂಶಗಣವೇ ಮಾತ್ರಾಗಣವೇ ಎಂಬ ಚರ್ಚೆ ನಿರ್ಧಾರವಾಗದೆ ಉಳಿದಿದೆ. ಚರ್ಚೆ ಹೇಗೇ ಇತ್ಯರ್ಥವಾಗಲೀ ಮೂಲತಃ ತ್ರಿಪದಿ 'ಜಾನಪದ' ಛಂದಸ್ಸು ಎನ್ನುವುದನ್ನೇ ಅಲ್ಲಗಳೆಯುವಂತಿಲ್ಲ.

ದಿ॥ ಡಿ.ಎಲ್.ಎನ್. ಹೇಳಿರುವ ಒಂದು ಮಾತನ್ನು ಇಲ್ಲಿ ಉದಾಹರಿಸಬಹುದು :

'ವೀರಶೈವರಾದರೆ ಜನರ ನಾಡಿಯಲ್ಲಿ ಮಿಡಿಯುತ್ತಿದ್ದ ದೇಶೀಯ ಪದ್ಯಗಳನ್ನೂ ಸಾಮಾನ್ಯ ವಸ್ತುಗಳನ್ನೂ ಗ್ರಂಥರಚನೆಗೆ ಉಪಯೋಗಿಸ ತೊಡಗಿದರು...ಸಾಂಗತ್ಯ, ತ್ರಿಪದಿ, ರಗಳೆ, ಷಟ್ಪದಿ ಮುಂತಾದ ಕನ್ನಡ ವೃತ್ತಗಳು ಸಾಹಿತ್ಯರಾಜ್ಯವನ್ನು ಆಳಲು ಆರಂಭಿಸಿದುವು'

ವೀರಶೈವರು, ದೇಸೀಯ ಛಂದಸ್ಸುಗಳನ್ನು ವಿಶೇಷವಾಗಿ ಬಳಕೆಗೆ ತಂದುದಲ್ಲದೆ, ಅವುಗಳಿಗೆ ಔನ್ನತ್ಯವನ್ನೂ ಪ್ರಚಾರವನ್ನೂ ತಂದುಕೊಟ್ಟರು; ಅವುಗಳಲ್ಲಿ ಅಪೂರ್ವವಾದ ಸಿದ್ಧಿಯನ್ನೂ ಪಡೆದರು. ಹರಿಹರ 'ರಗಳೆ'ಯನ್ನೂ, ರಾಘವಾಂಕ ಚಾಮರಸರು ವಾರ್ಧಕ, ಭಾಮಿನಿ ಷಟ್ಪದಿಗಳನ್ನೂ, ಸರ್ವಜ್ಞ ತ್ರಿಪದಿಗಳನ್ನೂ ಸಾರ್ಥಕವಾಗಿ ತಮ್ಮ ಕಥನಕ್ಕೆ, ಅನುಭವ ಅಭಿವ್ಯಕ್ತಿಗೆ, ಸೊಗಸಾದ ಮಾಧ್ಯಮವನ್ನಾಗಿ ಬಳಸಿಕೊಂಡರು. ಅವರ ಶೈಲಿ ಇತರರಿಗೆ ಮಾದರಿಗಳಾದವೇ ಹೊರತು ಇತರರು ಅವುಗಳಲ್ಲಿ ಆ ಹಿರಿಯರ ಸಿದ್ಧಿಯನ್ನೇ ಪಡೆಯಲಿಲ್ಲವೆಂದೇ ಹೇಳಬಹುದು.

ಶಿವಶರಣ ಶರಣೆಯರು ತಮ್ಮ ಅನುಭವಾಮೃತವನ್ನು 'ತ್ರಿವಿಧಿ'ಗಳಲ್ಲಿ ಸಾಗರೋಪಮವಾಗಿ ವಿವರಿಸಿ ಹೇಳಿದ್ದಾರೆ. ಅವುಗಳ ಅಭ್ಯಾಸವನ್ನು ಮುಂದೆ ವಿವರವಾಗಿ ಮಾಡಲಾಗಿದೆ. ಆ ವಿಷಯವನ್ನು ಪ್ರಸ್ತಾಪಿಸುವುದಕ್ಕೆ ಮುಂಚೆ 'ತ್ರಿಪದಿ' ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿರುವ 'ಸರ್ವಜ್ಞನ' ತ್ರಿಪದಿಗಳನ್ನು ಮತ್ತು ಇತ್ತೀಚಿನ ಕವಯತ್ರಿಯಾದ ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರ ಶ್ರೀ ಸಿದ್ಧರಾಮಪುರಾಣವನ್ನು ಕುರಿತು ಪರಿಚಯಮಾಡಿಕೊಳ್ಳುವುದು ಸೂಕ್ತ ಎಂದು ತೋರುತ್ತದೆ.

'ವೀರಶೈವ ತ್ರಿಪದಿ ಸಾಹಿತ್ಯ' ಎನ್ನುವಾಗ, ವೀರಶೈವರು ರಚಿಸಿರುವ ಸಾಹಿತ್ಯದಲ್ಲಿ 'ತ್ರಿಪದಿ' ಸಾಹಿತ್ಯದ ಸ್ಥಾನವನ್ನು ಪ್ರತಿಪಾದಿಸುವುದು ಉಚಿತ ಮತ್ತು ಮುಖ್ಯ. ಇದಕ್ಕೆ ಕಾರಣ ದೇಸೀಛಂದಸ್ಸಾದ 'ತ್ರಿಪದಿ' ಹೆಚ್ಚಾಗಿ ಬೆಳೆದದ್ದು, ಪುಷ್ಟಿಗೊಂಡಿದ್ದು ವೀರಶೈವರಿಂದ ಎಂಬ ಮಾತು ಆಗಲೇ ಬಂದಿದೆ. ಈ ಹೇಳಿಕೆಯ ಆಧಾರದಿಂದಲೋ ಏನೋ 'ತ್ರಿಪದಿ' 'ವಚನ' ಸಾಹಿತ್ಯಕ್ಕೆ ಮೂಲ ಎಂಬ ಅಭಿಪ್ರಾಯವೂ ಮೂಡಿಬಂದಿದೆ. ಆದರೆ ಈ ಅಭಿಪ್ರಾಯ ಸಮಂಜಸವಲ್ಲ ಎಂದು ಡಾ॥ ಎಲ್. ಬಸವರಾಜು ಅವರು ಆಧಾರಪೂರ್ವಕ ತೋರಿಸಿಕೊಡಲು ಪ್ರಯತ್ನಿಸಿದ್ದಾರೆ. ಅವರ ಪ್ರಕಾರ ತ್ರಿಪದಿಯಿಂದ ವಚನ ಹುಟ್ಟಲಿಲ್ಲ (ಅಲ್ಲಮನ ವಚನಗಳು, ಪೀ. ಪು-೬). ಇಲ್ಲಿನ ಮುಖ್ಯಾಂಶ. ವಚನಗಳಿಗಿಂತ ತ್ರಿಪದಿ ಮುಂಚೆ ಇದ್ದುವು ಎಂಬುದು. ಇದು ನಿಸ್ಸಂದೇಹವಾದ ಸತ್ಯ. ನಾವು ಇಂದು ಯಾವುದನ್ನು 'ವಚನಸಾಹಿತ್ಯ' ಎಂದು ಕರೆಯುತ್ತೇವೆಯೋ ಅವು 'ತ್ರಿಪದಿ' ಸೃಷ್ಟಿಯಾದ ನಂತರವೇ ಮೂಡಿಬಂದದ್ದು ಎಂಬುದರಲ್ಲಿ ಭಿನ್ನಾಭಿಪ್ರಾಯವಿರಲಾರದು. ಡಾ॥ ಬಸವರಾಜು ಅವರು

ವಚನಗಳಲ್ಲಿ ತ್ರಿಪದಿ ಛಂದಸ್ಸಿನ ಚೌಕಟ್ಟನ್ನು ಗುರುತಿಸಲು ದೇವರ ದಾಸಿಮಯ್ಯನ ಎರಡು ವಚನಗಳನ್ನು ಉದಾಹರಿಸುತ್ತಾರೆ:

‘ಹೊಲಬನಱಿಯದ ಗುರು ಸುಲಭನಲ್ಲದ ಶಿಷ್ಯ। ಕೆಲಬಲನ ನೋಡದುಪದೇಶ ಅಂಧಕನು।
ಕೊಳನ ಹೊಕ್ಕಂತೆ ಕಾಣ ರಾಮನಾಥ॥

ಈ ವಚನ ತ್ರಿಪದಿಗೆ ಅಳವಟ್ಟರೆ, ಸ್ವಲ್ಪ ಮಾರ್ಪಾಟಿನಿಂದ

‘ಹೊಲಬಱಿ।ಯದಗುರು| ಸುಲಭನ| ಲ್ಲದ ಶಿಷ್ಯ| ಕೆಲಬಲ| ನೋಡಾದುಪದೇಶ| ವಂಧಕ
ಕೊಳನ ಹೊ| ಕ್ಕಂತೆ| ರಾಮನಾಥ (ರಾಮ್ನಾಥ?)—

ಹೀಗಾಗುತ್ತದೆ. ಇನ್ನೊಂದು ವಚನ :

ಜ್ವರವಿಡಿದ ಬಾಯಿಗೆ ನೊರೆವಾಲು ಉಱಿಸುವುದೆ। ನರಕದಲ್ಲಿ ಬೀಳುವ ಮನುಜರಿಗೆ ಶಿವಭಕ್ತಿ ಕರಗಹಿ ಕಾಣ ರಾಮನಾಥ
ಜ್ವರವಿಡಿ [ದಿಹ] ಬಾಯ್ಗೆ ನೊರೆವಾಲುಱಿಸುವುದೆ | ನರಕದಿ ಬೀಳ್ವ ಮನುಜರ್ಗೆ ಶಿವಭಕ್ತಿ | ಕರಗಹಿ ಕಾಣ ರಾಮನಾಥ

ದೇವರ ದಾಸಿಮಯ್ಯ ತ್ರಿಪದಿಕಾರನೆ? ಅವನು ತನ್ನ ಅನುಭವ ಸತ್ಯವನ್ನು ಮೊದಲು ತ್ರಿಪದಿಗಳಲ್ಲಿ ಹೇಳಿ, ಅನಂತರ ಅವು ಕಾಲಾನುಕಾಲದಲ್ಲಿ ವಚನರೂಪದಲ್ಲಿ ಉಳಿದು ಬಂದಿವೆ? ಈತ ಸರ್ವಜ್ಞನಿಗೆ ಆದರ್ಶವೇ? ಇವನು ತ್ರಿಪದಿಗೆ ಆದಿ ಪ್ರವರ್ತಕನೆ? ಎಂದು ಪ್ರಶ್ನಿಸುತ್ತಾರೆ ಡಾ॥ ಬಸವರಾಜು ಅವರು. ಆದರೆ ಕ್ರಿ.ಶ.ಸು. ೭೦೦ಕ್ಕೆ ತ್ರಿಪದಿಗಳು ನಮಗೆ ದೊರಕುವುದರಿಂದ, ದೇವರದಾಸಿಮಯ್ಯ ತ್ರಿಪದಿಯ ಆದ್ಯಪ್ರವರ್ತಕ ಎಂದು ಹೇಳಲು ಬರುವುದಿಲ್ಲ. ‘ತ್ರಿಪದಿ’ಗಳನ್ನು ನೇಮಿಚಂದ್ರ, ಸೋಮರಾಜ, ಸುರಂಗ ಕವಿ, ಷಡಕ್ಷರಿ ಎಲ್ಲರೂ ರಚಿಸಿದ್ದಾರೆ. ಅವರು ಅವುಗಳನ್ನು ‘ವಚನ’ ಪ್ರಕಾರದಿಂದ ಭಿನ್ನವಾಗಿಯೇ ಕಂಡಿದ್ದಾರೆ. ಆದರೆ ಚಂಪೂಕವಿಗಳು ತ್ರಿಪದಿಗಳನ್ನು ಲಾಕ್ಷಣಿಕ ನಿಯಮಾನುಸಾರವಾಗಿ ಮಾತ್ರ ಹೇಳಿದ್ದಾರೆ. ಜಾನಪದ ಸ್ವರೂಪವನ್ನು ತೋರಿಸಿಕೊಟ್ಟವರು ವೀರಶೈವಕವಿಗಳು. ಮತ್ತು ಇದರ ಬೆಳವಣಿಗೆಯಲ್ಲಿ ಅವರ ಮತ್ತು ವಚನಕಾರರ ಪಾತ್ರ ಮಿಗಿಲಾದದ್ದು.

ಸರ್ವಜ್ಞನ ಕಾಲ ಸು. ೧೬೦೦ ಇದ್ದಿರಬಹುದು ಎಂದು ಹೇಳಲು ಅವಕಾಶವಿದೆ. ಇವನು ವೀರಶೈವ ಕವಿ. ಧಾರವಾಡ ಜಿಲ್ಲೆಯ ಅಬಲೂರು ಇವನ ಸ್ಥಳ. ಈಚೆಗೆ ಅವನ ನಾನೂರನೆಯ ವರ್ಷದ ಉತ್ಸವವನ್ನು ಆಚರಿಸಲಾಯಿತು. ಅವನು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆ ಅಪೂರ್ವವಾದದ್ದು, ಅಮರವಾದದ್ದು. ಅವನ ‘ತ್ರಿಪದಿ’ಗಳು ಲೋಕಾನುಭವದ ಆಣಿಮುತ್ತುಗಳು. ಲೋಕವನ್ನು ಕಾಣುವ ಅವನ ಕಣ್ಣು ತೀಕ್ಷ್ಣವಾದದ್ದು, ವಿಮರ್ಶಾತ್ಮಕವಾದದ್ದು. ಹೇಳುವ ಅವನ ಮಾತು ಚುರುಕಾದವು; ಗಾಂಭೀರ್ಯಗಳಿಂದ ಕೂಡಿದವು. ಅವನು ಸರ್ವರೊಳೊಂದೊಂದು ನುಡಿಯನ್ನೇ ಕಲಿಯಲಿ, ಕಲಿತ ವಿದ್ಯೆ ಲೋಕಜ್ಞಾನದ ಮೂಲಸೂತ್ರಗಳೇ ಆಗಿವೆ. ಆದ್ದರಿಂದಲೇ ಜನ ಅವನನ್ನು ವರರುಚಿಯ ಅವತಾರವೆಂದರು. ಪುಷ್ಪದತ್ತನೆಂಬ ಶಿವಗಣನ ಪ್ರತಿರೂಪವೆಂದರು. ಅವನು ಕಲಿತದ್ದು ಜನದಿಂದ. ಹೇಳಿದ್ದು ಜನತೆಗೆ, ಉಪಯೋಗಿಸಿದ್ದು ಜನದ ಭಾಷೆ. ಬಳಸಿದ್ದು ಜನದ ಛಂದಸ್ಸು. ‘ತ್ರಿಪದಿ’ಗೆ ಅವನು ಗಳಿಸಿಕೊಟ್ಟ ಸ್ಥಾನ ಅದ್ವಿತೀಯ.

ಈಚೆಗೆ ಶ್ರೀಮತಿ ಜಯದೇವಿತಾಯಿ ಲಿಗಾಡೆಯವರು ‘ಶ್ರೀ ಸಿದ್ಧರಾಮೇಶ್ವರ ಪುರಾಣ’ ಎಂಬ ಕಾವ್ಯವನ್ನು ‘ತ್ರಿಪದಿ’ಯಲ್ಲಿ ರಚಿಸಿದ್ದಾರೆ. ಈ ಕಾವ್ಯ ಅವರಿಗೆ ಹೆಸರನ್ನು ತಂದುಕೊಟ್ಟಿದೆ. ಅವರು ಈ ಕಾವ್ಯರಚನೆಯಿಂದ ತಮ್ಮ ಬದುಕನ್ನೂ ಶಿವಸಾಧನೆಯ ಕಡೆಗೆ ತಿರುಗಿಸಿಕೊಂಡಿದ್ದಾರೆ. ೪೧೦೦ ತ್ರಿಪದಿಗಳನ್ನು ೪೧ ಸಂಧಿಗಳಲ್ಲಿ ಹಿಂಗಡಿಸಿ, ಆ ಕರ್ಮಯೋಗಿಯ ಜೀವನವನ್ನು ದಳದಳವಾಗಿ ಬಿಡಿಸಿದ್ದಾರೆ. ಈ ಕಾವ್ಯರಚನಾನುಭವ ತಾಯಿಯವರಲ್ಲಿ ಧರ್ಮಶ್ರದ್ಧೆಯನ್ನೂ, ಆರಾಧ್ಯದೈವವಲ್ಲಿ ಎಂದರೆ ಕರ್ಮಯೋಗಿ ಸಿದ್ಧರಾಮನಲ್ಲಿ ಅಕಳಂಕ ನಂಬಿಕೆಯನ್ನೂ, ಕಾವ್ಯೋಪಾಸನೆಯ ಸಾಧನೆಯನ್ನೂ ಬೆಳೆಸಿದೆ. ಅವರು ಆರಿಸಿಕೊಂಡ ‘ತ್ರಿಪದಿ’ ಮಾಧ್ಯಮ ಒಂದು ಸಾರ್ಥಕ ವಾಹಕವಾಗಿ ಸುಂದರವಾಗಿ ರೂಪುಗೊಂಡು ನೆಲೆನಿಂತಿದೆ.

ಮೇಲಿನ ಎರಡು ಬೃಹದ್ರಚನೆಗಳನ್ನು ಬಿಟ್ಟರೆ ಉಳಿದ ತ್ರಿಪದಿಸಾಹಿತ್ಯ ಶಿವಶರಣಶರಣೆಯರಿಗೆ ಸೇರಿದ ಅನುಭವಾಮೃತಗಳು. ಆದರೆ ಅವುಗಳನ್ನು ಪ್ರಸ್ತಾಪ ಮಾಡುವುದಕ್ಕೆ ಮುಂಚೆ ಆ ರಚನೆಗಳನ್ನು ಹೆಸರಿಸಿರುವ ನಾಮಕರಣಗಳನ್ನು ಕುರಿತು ಯೋಚಿಸುವುದು ಆಗತ್ಯ ಎಂದು ಕಂಡುಬರುತ್ತದೆ.

‘ತ್ರಿಪದಿ’ ಎಂಬ ಪದವನ್ನು ‘ತಿವಿದಿ’, ‘ತ್ರಿವಿಧಿ’ ಎಂಬ ಹೆಸರುಗಳಿಂದಲೂ ಕರೆಯುವುದುಂಟು. ಛಂದೋಂಬುಧಿಕಾರನಾದ ನಾಗವರ್ಮ ಇದನ್ನು ‘ತ್ರಿಪದಿ’ ಎಂದು ಕರೆದು ಅದರಲ್ಲಿ ಎರಡು ಭೇದಗಳನ್ನೂ (೧. ಚಿತ್ರಂ ೨. ವಿಚಿತ್ರಂ) ಹೇಳಿದ್ದಾನೆ. ಮಾನಸೋಲ್ಲಾಸದಲ್ಲೂ ಈ ಪ್ರಕಾರಕ್ಕೆ ‘ತ್ರಿಪದೀ’ ಎಂದೇ ಹೆಸರಿಸಿದೆ. ಜಯಕೀರ್ತಿ ಕೊಟ್ಟಿರುವ ಹೆಸರೂ ‘ತ್ರಿಪದಿ’ಯೇ. ಆದರೆ ಇದಕ್ಕೆ ‘ತಿವಿದಿ’ ‘ತ್ರಿವಿಧಿ’ ಎಂಬ ಹೆಸರುಗಳು ಹೇಗೆ ಬಂದುವು. ಈ ಹೆಸರುಗಳನ್ನೂ ರೂಢಿಗೆ ತಂದವರು ಯಾರು ಎಂದು ಗುರುತಿಸಲು ವೀರಶೈವ ತ್ರಿಪದಿಸಾಹಿತ್ಯದಲ್ಲಿ ಸಾಕಷ್ಟು ಅವಕಾಶಗಳಿವೆ. ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿಗಳು

ತಮ್ಮ 'ಕನ್ನಡ ಛಂದಸ್ಸ್ವರೂಪ' ಎಂಬ ಗ್ರಂಥದ 'ಅಂಶಛಂದಸ್ಸು' ಪ್ರಕರಣದ ೪೧೪ನೆಯ ಪುಟದಲ್ಲಿ 'ತ್ರಿವಿಧಿ'ಗಳೆಂದು ತ್ರಿಪದಿಗಳನ್ನೂ ಕರೆದಿದೆಯಷ್ಟೆ. ತ್ರಿಪದಿ, ತಿಪದಿ ಎಂಬ ತದ್ಭವರೂಪಕ್ಕೆ ಬಂದು, ತಿವದಿ ಸರ್ವಸಾಮ್ಯವಿಧಿಯಿಂದ ತಿವಿದಿಯಾಗಿ, ಇದೇ ಲೌಕಿಕ ನಿಷ್ಪತ್ತಿ (Folk etymology) ಕಾರಣವಾಗಿ 'ತ್ರಿವಿಧಿ'ಯಾಗಿ ಪರಿಣಮಿಸಿರಬಹುದೆಂದು ತೋರುತ್ತದೆ' ಎಂದು ಹೇಳಿದ್ದಾರೆ. ತ್ರಿಪದಿ 'ತ್ರಿವಿಧಿ' ಎಂಬ ಮತ್ತೊಂದು ಸಂಸ್ಕೃತರೂಪ ತಾಳುವುದಕ್ಕೂ ಏನಾದರೂ ಕಾರಣವಿರಬಹುದು ಎನ್ನಿಸುತ್ತದೆ. 'ತ್ರಿಪದಿ' ಛಂದಸ್ಸನ್ನು ಗುಣಶೌರ್ಯಾದಿ ವರ್ಣನೆಗಳ ನಿರೂಪಣೆಗೆ ಮಾತ್ರ ಬಳಸುತ್ತಿದ್ದರು ಎಂಬ ಅಂಶ ಮುಂದಿನ 'ತ್ರಿಪದಿ'ಗಳನ್ನೂ ನೋಡಿದರೆ ಖಚಿತವಾಗುವುದಿಲ್ಲ. ಪ್ರಾರಂಭದಲ್ಲಿ ಅದು ನಿಜವಿರಬಹುದು. ಆದರೆ ಬರಬರುತ್ತ ಅದನ್ನು ವರ್ಣನೆಗಳಿಗೂ, ಇತರ ಭಾವನೆಗಳ ನಿರೂಪಣೆಗೂ ಬಳಸುತ್ತಿದ್ದುದು ಕಂಡುಬರುತ್ತದೆ. ಕಡೆಗೆ ಅದನ್ನು 'ಕಥನ'ಕ್ಕೂ ಅಳವಡಿಸಿಕೊಂಡಿದ್ದಾರೆ. ಆದ್ದರಿಂದ 'ತ್ರಿಪದಿ' ಇಂಥದೇ ವಸ್ತುವಿನ ವರ್ಣನೆಗೆ ಮೀಸಲಾದದ್ದು ಎಂದು ಹೇಳುವಂತಿಲ್ಲ. ಕಡೆಗೆ 'ತ್ರಿಪದಿ'ಯನ್ನು ಜನ ವಚನವೆಂದು ಕರೆದದ್ದೂ ಉಂಟು. ಸರ್ವಜ್ಞ ನಿರೂಪಿಸಿದ ಲೋಕಾನುಭವಗಳು 'ತ್ರಿಪದಿ'ಗಳಲ್ಲಿವೆ. ಅದನ್ನೂ ಸರ್ವಜ್ಞನ ತ್ರಿಪದಿಗಳು ಎನ್ನದೆ 'ಸರ್ವಜ್ಞನ ವಚನ'ಗಳು ಎಂದರು ಜನ. ಏಕೆ ? ಅಲ್ಲಿ ಬರುವ ಮಾತಿನ ಹೆಣಿಕೆ, ಹೇಳುವ ಸಂಗತಿ, ಬೋಧಿಸುವ ನೀತಿ, ವಿವರಿಸುವ ಜಾಣ್ಮೆ, ಕೊಡುವ ಹೋಲಿಕೆ, ವೀರಶೈವ ಶರಣರ ವಚನಗಳನ್ನು ನೆನಪಿಗೆ ತರುತ್ತವೆ. ವಚನಗಳನ್ನು ಶರಣರು ಯಾವ ಉದ್ದೇಶದಿಂದ ಪ್ರತಿಪಾದನೆ ಮಾಡಿದರೋ ಅದೇ ಉದ್ದೇಶ ಸರ್ವಜ್ಞನ ತ್ರಿಪದಿಗಳಲ್ಲೂ ಕಂಡುಬರುತ್ತದೆ. ಆದ್ದರಿಂದ ಶರಣರ ಮಾತು ಬೇರೆ ಅಲ್ಲ; ಸರ್ವಜ್ಞನ ಮಾತು ಬೇರೆ ಅಲ್ಲ. ಆವೆರಡೂ ವಚನಗಳೇ. ಈ ಕಾರಣದಿಂದ ಸರ್ವಜ್ಞನ ತ್ರಿಪದಿಗಳು ವಚನಗಳಾದವು. ಜೇಡರದಾಸಿಮಯ್ಯನ ವಚನಗಳೇ 'ತ್ರಿಪದಿ' ಗುಣ ಕಂಡುಬಂದಂತೆ ಸರ್ವಜ್ಞನ ತ್ರಿಪದಿಗಳಲ್ಲಿ ವಚನಗುಣ ಕಂಡುಬಂದಿರುವುದರಲ್ಲಿ ಸಂದೇಹವೇನೂ ಇಲ್ಲ.

ಸರ್ವಜ್ಞನ ತ್ರಿಪದಿ 'ವಚನ'ಗಳಾದುವು. ಅಲ್ಲಮ ಬಸವಣ್ಣನವರ ಮಾತುಗಳು ವಚನಗಳಾದುವು. ಅಕ್ಕಮಹದೇವಿ, ಸಿದ್ಧರಾಮರ ವಚನಗಳು ಇದ್ದೇ ಇವೆ. ಹೀಗಿರುವಾಗ ಈ ಮಧ್ಯೇ ಈ ಹಿರಿಯ ಅನುಭಾವಿ ಶರಣರು 'ತ್ರಿಪದಿ'ಯನ್ನೂ ತ್ರಿವಿಧಿಯೆಂದು ಕರೆದು ಹೊಸ ಪ್ರಕಾರವನ್ನೂ ಏಕೆ ರೂಢಿಗೆ ತಂದರು? ಯೋಗಾಂಗ 'ತ್ರಿಪದಿ'ಯಲ್ಲ, 'ತ್ರಿವಿಧಿ'.ಪುರಾತನರ 'ತ್ರಿಪದಿ' ಅಲ್ಲ, ತ್ರಿವಿಧಿ. ಹೀಗೆ ತ್ರಿಪದಿ 'ತ್ರಿವಿಧಿ'ಯಾಗಿ ಮಾರ್ಪಟ್ಟ ಸ್ಥಿತಿಗೆ ಕಾರಣ ಹೀಗೆ ಊಹಿಸಬಹುದೋ ಏನೋ :

ಶಿವಶರಣಶರಣೆಯರು ತಮ್ಮ ರಚನೆಗೆ ಜಾನಪದ ಅಂಶವನ್ನು ವಿಶೇಷವಾಗಿ ಬಳಸಿಕೊಂಡರು. ಅವರ ಸಂಪರ್ಕ ಜನರೊಡನೆ. ಅವರದು ಹೆಚ್ಚಾಗಿ 'ಕರ್ಮಯೋಗ'. ಅವರನ್ನು ತಮ್ಮ ಜೊತೆಗೆ ಸೇರಿಸಿಕೊಳ್ಳುವಾಗ ಅವರ ಮಾತಿನಲ್ಲಿ ಸಂಭಾಷಿಸಬೇಕು. ಅವರಿಗೆ ಏನಾದರೂ ಹೇಳಬೇಕಾದರೆ ಅವರಿಗೆ ಅರ್ಥವಾಗುವ ಶಬ್ದಗಳಲ್ಲಿ, ಧಾಟಿಯಲ್ಲಿ ಹೇಳಬೇಕು. ಅಜ್ಞಾನಿ ಸಾವಿರ ಜನವನ್ನು ಸಚ್ಚಾರಿತ್ರರನ್ನಾಗಿ ಮಾಡಲು ಅವರಾಡುವ ಭಾಷೆಯನ್ನೇ ಮಾಧ್ಯಮವನ್ನಾಗಿ ಮಾಡಿಕೊಳ್ಳಬೇಕು. ಅದಕ್ಕಾಗಿ 'ವಚನ' ಪ್ರಕಾರ ಹುಟ್ಟಿಕೊಂಡಿತು. ಗದ್ಯದಲ್ಲಿ ಹೇಳಿದರೆ ಅವನು ಪಂಡಿತನಲ್ಲ, ವಿದ್ವಾಂಸನಲ್ಲ, ಬೋಧಕನಲ್ಲ, ಗುರುಸ್ಥಾನೀಯವಲ್ಲಎಂದು ಎಲ್ಲಿ ಭಾವಿಸಿಬಿಡುತ್ತಾರೋ ಎಂಬ ಅಳುಕಿನಿಂದ ತಾವು ವಿದ್ವಾಂಸರೂ ಹೌದು, ಸಾಧಕರೂ ಹೌದು, ಅವರಿಗೆ ಹೇಳುವುದಕ್ಕಿಂತ ತಮಗೆ ಹೆಚ್ಚಿಗೆ ತಿಳಿದಿದೆ ಎಂದು ತೋರಿಸಿಕೊಳ್ಳುವುದೂ ಅಗತ್ಯವಾಯಿತೇನೋ! ಹರಿಹರ 'ರಗಳೆ'ಗಳನ್ನು ರಚಿಸಿದ, ಆಡುಗರ ಬಾಯಲ್ಲಿ ಅವನು 'ರಗಳೆ' ಕವಿಯಾದ. 'ಗಿರಿಜಾಕಲ್ಯಾಣ'ವೆಂಬ ಚಂಪೂಕಾವ್ಯ ಬರೆದು ತಾನು ರಗಳೆ ಕವಿ ಅಲ್ಲ ಎಂದು ತೋರಿಸಿ ಅವರ ಬಾಯಿ ಮುಚ್ಚಿಸಿದ. ಜನರಲ್ಲಿ ಬೆರೆತ ಶರಣರು ತಾವು ಲೌಕಿಕವನ್ನೂ ಬಲ್ಲವರು, ಅಧ್ಯಾತ್ಮವನ್ನೂ ಬಲ್ಲವರು ಎಂದು ತೋರಿಸಲು ವಚನದಿಂದ ಭಿನ್ನವಾದ ಹೊಸ ಒಂದು ಸಾಹಿತ್ಯಮಾರ್ಗವನ್ನು ಕಂಡುಹಿಡಿದುಕೊಂಡರು. ಹರಿಹರ ರಗಳೆಯನ್ನು ಹರಿಸಿದ, ರಾಘವಾಂಕ ಷಟ್ಪದಿಯನ್ನು ಎತ್ತಿದ, ವಚನಕಾರರು 'ತ್ರಿಪದಿ'ಯನ್ನು ಉದ್ಧರಿಸಿದರು. ಆದರೆ ಅದನ್ನು 'ತ್ರಿಪದಿ' ಎಂದು ಕರೆಯದೆ ಅದನ್ನು 'ತ್ರಿವಿಧಿ' ಎಂದು ಹೆಸರಿಸಿದರು. ಅದರ ಲೌಕಿಕ ಸ್ವರೂಪದಿಂದ ಅಲ್ಲ, ವಿಷಯದ ಅಥವಾ ವಸ್ತುವಿನ ವೈಶಿಷ್ಟ್ಯದಿಂದ.

ತ್ರಿಪದಿ 'ತ್ರಿವಿಧಿ' ಆದಾಗ ಮೂರು ಪಾದದ ನಿಯಮ ಸಡಿಲವಾಗಿ ಕೆಲವೊಮ್ಮೆ ನಾಲ್ಕು, ಐದು ಸಾಲುಗಳನ್ನೂ ತರಲೂ ಅವರಿಗೆ ಅನುಕೂಲವಾಗುವ ಸ್ವಾತಂತ್ರ್ಯವಿತ್ತು. ಸಿದ್ಧರಾಮರದೆಂದು ಹೇಳುವ ಸಂಕೀರ್ಣ ತ್ರಿವಿಧಿ, ಬಸವಸ್ತೋತ್ರದ ತ್ರಿವಿಧಿಯಲ್ಲಿ ಈ ಉದಾಹರಣೆಗಳು ಸಿಗುತ್ತವೆ. ವೀರಶೈವ ಸಾಹಿತ್ಯದಲ್ಲಿ ಕಂಡುಬರುವ 'ತ್ರಿವಿಧಿ'ಗಳನ್ನು ಅವಗಾಹಿಸಿದರೆ ಅವು ಆಧ್ಯಾತ್ಮಿಕ ವಿಷಯದ ಪ್ರತಿಪಾದನೆಗೆ ಸಂಬಂಧಿಸಿದ, ತ್ರಿವಿಧವಾದ ಶಾಸ್ತ್ರಸಂಪತ್ತನ್ನು ಅಡಗಿಸಿಟ್ಟಿರುವ ಪದ್ಯಪ್ರಕಾರ ಎಂದು ಹೇಳಬಹುದು. ಈ 'ತ್ರಿವಿಧಿ'ಗಳಲ್ಲಿ ಸಾಮಾನ್ಯವಾಗಿ ಗುರುಲಿಂಗ ಜಂಗಮ, ಭಸಿತ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ, ಸತ್ವ ರಜ ತಮಗಳು, ಲಿಂಗತ್ರಯಗಳು, ತ್ರಿವಿಧ ಪದಾರ್ಥಗಳು, ಪ್ರಸಾದತ್ರಯಗಳು, ತ್ಯಾಗ ಭೋಗ ಯೋಗಗಳು, ರೂಪು ರುಚಿ ತೃಪ್ತಿ, ನಾದಬಿಂದುಕಲೆ, ಶಕ್ತಿಯುಕ್ತಿ ಭಕ್ತಿ, ಕರ್ಮಜ್ಞಾನಯೋಗ, ಭಕ್ತಿಕರ್ಮಜ್ಞಾನದವರೆಗೆ ಅಧ್ಯಾತ್ಮಜ್ಞಾನದ ತಿಳುವಳಿಕೆಯನ್ನು ಮೂರು ಮೂರಾಗಿ ವಿಂಗಡಿಸಿ ವಿವರಿಸುವ ಪದ್ಯಧಾಟಿಗೆ ಎಂದರೆ ತ್ರಿಪದಿಗೆ 'ತ್ರಿವಿಧಿ'

ಎಂದು ಕರೆದಿರಲು ಸಾಕು. 'ತ್ರಿಪದಿ' ಛಂದಸ್ಸಿನಲ್ಲಿ ಈ ವಸ್ತುವಿನ್ಯಾಸವನ್ನು ಕಂಡ ಜನ ಇದನ್ನು 'ತ್ರಿವಿಧಿ'ಯೆಂದೇ ಬಳಕೆಗೆ ತಂದಿರಲೂ ಸಾಧ್ಯ. ಬಸವಸ್ತೋತ್ರದ ತ್ರಿವಿಧಿಗೆ ಟೀಕು ಬರೆಯುತ್ತ ಪರ್ವತಶಿವಯೋಗಿ ಒಂದು ತ್ರಿವಿಧಿಗೆ ಈ ಕೆಳಗೆ ಕಂಡಂತೆ ಟೀಕು ಬರೆದಿರುವುದನ್ನು ನೋಡಬಹುದು :–

> ಬಸವೇಶನೇ, ತ್ರಿವಿಧತನುಗಳಿಗೆ ಪೊಡೆಯನಾದಂಥ ಬಸವಣ್ಣನೆ, ತ್ರಿವಿಧಾತ್ಮರುಗಳಿಗೊಡೆಯನಾದಂಥ ಬಸವಣ್ಣನೆ,
> ತ್ರಿಪುಟಜ್ಞಾನಕ್ಕೊಡೆಯನಾದಂಥ ಬಸವಣ್ಣನೆ, ತ್ರಿವಿಧತತ್ತ್ವಂಗಳಿಗೆ ಒಡೆಯನಾದಂಥ ಬಸವಣ್ಣನೆ
> ಶುದ್ಧ ಸಿದ್ಧ ಪ್ರಸಿದ್ಧದೆಂಬ ತ್ರಿವಿಧಪ್ರಸಾದಕ್ಕೆ ಕಡಲವಾದಂಥ ಬಸವಣ್ಣನೆ.

ವೀರಶೈವಶರಣರು, ಭಕ್ತರು, ದಾರ್ಶನಿಕರು ರಚಿಸಿದ 'ತ್ರಿವಿಧಿ' 'ವಸ್ತು'ಸಂಗತವಾಗಿ ಹೆಸರು ಪಡೆದಿದೆಯೇ ಹೊರತು ಛಂದಸ್ಸಿನ ಪ್ರಕಾರದಿಂದ ಹೆಸರು ಗಳಿಸಿದೆ ಎಂದು ಹೇಳುವಂತಿಲ್ಲ ಎನ್ನಬಹುದು.

ವೀರಶೈವ ಸಾಹಿತ್ಯದಲ್ಲಿ ತ್ರಿವಿಧಿ ಎಂದು ನಾವು ವಿಷಯವನ್ನು ಪ್ರತಿಪಾದನೆ ಮಾಡುವಾಗ ನಾವು ಆಯಾ ಶರಣರು, ಭಕ್ತರು ಪ್ರತಿಪಾದಿಸಿರುವ ವಿಚಾರವನ್ನು ಕುರಿತು ಪರಿಚಯ ಮಾಡಿಕೊಳ್ಳುವುದು ಸರಿಯಾದದ್ದು ಎನ್ನಿಸುತ್ತದೆ.

ನಮಗೆ ಕಾಲದ ದೃಷ್ಟಿಯಿಂದ ಮೊದಲಿಗೆ ದೊರಕುವ 'ತ್ರಿವಿಧಿ' ಮಹದೇವಿಯಕ್ಕನ 'ಯೋಗಾಂಗ ತ್ರಿವಿಧಿ'. ಇದು 'ತ್ರಿಪದಿ' ಛಂದಸ್ಸಿನಲ್ಲೇ ರಚಿತವಾಗಿದೆ. ಗುರುಸ್ತೋತ್ರದಿಂದ ಹಿಡಿದು 'ಯೋಗಾಂಗ'ಗಳ ವಿಚಾರವನ್ನು ತ್ರಿವಿಧಿಗಳಲ್ಲಿ ನಿರೂಪಿಸಲಾಗಿದೆ. ಆಕೆಗೆ ಗುರು ಸೋಮಶೇಖರ. ಅವನೇ ಅವಳ ಇಷ್ಟಗಳನ್ನು ನೆರವೇರಿಸಿಕೊಡತಕ್ಕವನು. ಆಕೆ ತ್ರಿವಿಧಿಯನ್ನು ಆ ಗುರುವಿನ ಕೃಪೆಯಿಂದ ರಚಿಸಿದಳಂತೆ :

> ಜೀವ ಪರಮರ ಭೇದಭಾವವನಱಿವಡೆ। ಆವಾವ ಮುಖದೊಳಿರುತಿಹುದೊ ಎನ್ನಯ। ಭಾವಕ್ಕೆ ಬಂದುದೊರೆವೆನು॥
> ಶರಣರ ನೆಲೆಗಳನು ಅಱಿವಡೆ ಅಗಣಿತವು। ಹರಿಯಜಸುರರಿಗಳವಲ್ಲ ವೆಂದೆನಲು। ಬರೆದೆನು ಅವರ ಕೃಪೆಯಿಂದ॥

ಮಹದೇವಿ ತನ್ನ ಆರಾಧ್ಯದೈವವಾದ ಮಲ್ಲಿಕಾರ್ಜುನನನ್ನು ಮನದಲ್ಲಿ ನೆಲಸಿಕೊಂಡು ಎಲ್ಲ ಭಾವಗಳನ್ನು ಚಿಂತಿಸುತ್ತಾಳೆ. ಅವಳು ಯೋಗಿನಿ. ಯೋಗಿನಿಯ ಲಕ್ಷಣಗಳನ್ನು ಅವಳೇ ವಿವರಿಸುತ್ತಾಳೆ. ದೇಹದಲ್ಲಿ ಆತ್ಮವಿದೆ. ಆ ಆತ್ಮ ಹೃದಯ ಸ್ವರೂಪದ್ದು. ಅಲ್ಲಿ ಲಿಂಗ ರೂಪು ತಾಳಿದೆ. ಆತ್ಮದ ದೃಷ್ಟಿ ಹೃದಯದ ಲಿಂಗದಲ್ಲಿ. ಹೊರದೇಹ ನಶ್ವರವಾದದ್ದು. ಶಾಶ್ವತವಾದ ದೇಹ ಶಿವ. ಅದನ್ನು ಸಾಧಿಸಬೇಕಾದರೆ ಪಂಚೇಂದ್ರಿಯಗಳು, ಮನಸ್ಸು ಸಾಧನೆಯನ್ನು ಕೈಗೊಳ್ಳಬೇಕು. ಸತ್ವ, ರಜಸ್ಸು, ತಮಸ್ಸುಗಳ ಏಕ ಸ್ವರೂಪವಾದ ಪರಶಿವನ ಚಿಂತನೆ ಅತಿ ಮುಖ್ಯ. ಇದಕ್ಕೆ ಸಾಧನೆ ಇಷ್ಟಲಿಂಗದ ಆರಾಧನೆ. ಹೀಗೆ ಹೇಳುತ್ತಾ ಆಕೆ ಅಷ್ಟಾವರಣದ ಫಲದ ವಿವರವನ್ನು ಕೊಡುತ್ತಾಳೆ:

> ಅಷ್ಟಾವರಣದ ಹಣ್ಣು ಬಟ್ಟಬಯಲೊಳಗಿರಲು। ಅಷ್ಟಾಂಗ ಯೋಗಗಳ ಮಾಡಿ। ಬಳಲುವರು। ದೃಷ್ಟಿಲಿರುವುದನು ಮಱೆದರು॥ ೩೨

ಹಣ್ಣು ಎದುರಿಗಿದ್ದರೂ ದೂರದಲ್ಲಿ ಅರಸುವ ಮೂಢಜನಕ್ಕೆ ಏನೆಂದು ಹೇಳಬೇಕು. ದೃಷ್ಟಿಯನ್ನು ಹತ್ತಿರಕ್ಕೆ ತರಬೇಕಾದರೆ ಗುರುವಿನ ಕರುಣೆ ಬೇಕೇಬೇಕು. ಹೀಗೆ ಅಕ್ಕನವರು ತಮ್ಮ ತ್ರಿವಿಧಿಯಲ್ಲಿ ವೀರಶೈವ ದರ್ಶನದ ಗೂಢ ಗಾಢ ತತ್ತ್ವಗಳು ಆಡುಮಾತಿನಲ್ಲಿ ಸಾಮಾನ್ಯರಿಗೂ ಮನಂಬುಗುವಂತೆ ತ್ರಿವಿಧಿಯ ಛಂದಸ್ಸಿನ ಪ್ರಕಾರದಲ್ಲಿ ರಚಿತವಾಗಿರುವುದನ್ನು ಕಾಣಬಹುದು.

ಸಿದ್ಧರಾಮನು ರಚಿಸಿದನೆಂದು ಹೇಳುವ ನಾಲ್ಕುಗುಂಪಿನ ತ್ರಿವಿಧಿಗಳು ನಮಗೆ ದೊರಕುತ್ತವೆ: ೧) ಸಂಕೀರ್ಣ ತ್ರಿವಿಧಿ ೨) ಬಸವಸ್ತೋತ್ರದ ತ್ರಿವಿಧಿ. ೩) ಮಿಶ್ರಸ್ತೋತ್ರದ ತ್ರಿವಿಧಿ ಮತ್ತು ೪) ಅಷ್ಟಾವರಣಸ್ತೋತ್ರ ತ್ರಿವಿಧಿ. ಈ ತ್ರಿವಿಧಿಗಳಲ್ಲಿ ಬರುವ ಅಂಕಿತಗಳು ಬೇರೆ ಬೇರೆಯಾದರೂ ಆತ ೨೭ ಅಂಕಿತಗಳಲ್ಲಿ ತ್ರಿವಿಧಿಗಳನ್ನೂ ವಚನಗಳನ್ನೂ ರಚಿಸಿದ್ದಾನೆ ಎಂದು ಹೇಳುತ್ತಾರೆ. ಅವುಗಳಲ್ಲಿ ಪ್ರಸಿದ್ಧವಾದುವೆಂದರೆ 'ಕಪಿಲಸಿದ್ಧ ಮಲ್ಲಿಕಾರ್ಜುನ' ಮತ್ತು 'ಯೋಗಿನಾಥ'. ಯೋಗಿನಾಥ ಶಬ್ದವು ಚೆನ್ನಬಸವನಿಗೆ ಅನ್ವಯಿಸುತ್ತದೆ ಎಂದು ಕವಿಚರಿತೆಕಾರರು ಹೇಳುತ್ತಾರೆ. ಎಂದರೆ ಸಿದ್ಧರಾಮ ತನ್ನ ಗುರುವಾದ ಚನ್ನಬಸವನನ್ನು ಉದ್ದೇಶಿಸಿ, ಅವನ ನಾಮವನ್ನು ಸ್ಮರಿಸುತ್ತಾ ಈ 'ತ್ರಿವಿಧಿ'ಗಳನ್ನು ರಚಿಸಿ ತಾನು ಕಲಿತ ಅಧ್ಯಾತ್ಮವಿದ್ಯೆಯನ್ನು, ತನ್ನ ಶೈವಶಾಸ್ತ್ರ ಸಂಪತ್ತನ್ನು ಗುರುವಿಗೆ ನಿವೇದಿಸಿಕೊಂಡಿರಬಹುದು. ಇವುಗಳಲ್ಲಿ ಮೊದಲನೆಯದನ್ನು ಸಿದ್ಧರಾಮೇಶ್ವರ ಪ್ರಭುದೇವರೊಡನೆ ಕಲ್ಯಾಣಕ್ಕೆ ಮೊದಲ ಸಲ ಬಂದಾಗ ಅಥವಾ ಬರುವುದಕ್ಕೆ ಮುಂಚೆ ರಚಿಸಿದ್ದಿರಬಹುದು ಎನ್ನುವ ಹೇಳಿಕೆಗಳೂ ಇವೆ. ಉಳಿದವನ್ನು ಚನ್ನಬಸವಣ್ಣನನ್ನು ಗುರುವಾಗಿ ಸ್ವೀಕರಿಸಿದ ಮೇಲೆ ಬರೆದಿರಬೇಕು. ಆದ್ದರಿಂದ 'ಯೋಗಿನಾಥ' ಎಂಬ ಅಂಕಿತದ ತ್ರಿವಿಧಿಗಳು ಗುರುವಿಗೆ ಒಪ್ಪಿಸಿದ ಮಾತುಗಳೇ ಆಗುತ್ತವೆ. ಹಾಗಾದರೆ 'ಸಂಕೀರ್ಣ ತ್ರಿವಿಧಿ'ಯಲ್ಲೂ ಬರುವ ಯೋಗಿನಾಥಾಂಕಿತದ ಪ್ರಮಾಣಿಕತೆಗೆ ಸಂದೇಹ ಬರುತ್ತದೆ. ಈ ಅಂಕಿತದ ನಿಜತ್ವವನ್ನು ಕುರಿತು ಚರ್ಚಿಸದೆ ತ್ರಿವಿಧಿಗಳ ವಸ್ತು ಸ್ವರೂಪವನ್ನು ಮಾತ್ರ ಗಮನಿಸಲು ಯತ್ನಿಸೋಣ.

ಸಂಕೀರ್ಣ ತ್ರಿವಿಧಿಯಲ್ಲಿ ೪ ನಾಲ್ಕು ಪಾದಗಳಿವೆ. ಕೆಲವೊಮ್ಮೆ ಐದರಿಂದ ಏಳು ಸಾಲುಗಳು ಇರುವುದೂ ಉಂಟು. 'ಚೆನ್ನ ಪ್ರಭುರಾಯನಿಗೆ ಅಂಜಿ ಬಂದೀ ಮಾಯೆ ಎನ್ನ ಕಾಡಿತು ಯೋಗಿನಾಥಾ'—ಎಂದು ಮಾಯೆ ಚೆನ್ನಬಸವನಿಗೆ ಹೆದರಿ ಓಡಿ ಹೋಗಿದೆ. ನನ್ನನ್ನು ಕಾಡುತ್ತಿದೆ. ಆ ಗುರುವಿನ ಆಶ್ರಯದಿಂದ ಅದನ್ನು ನಾನೂ ಓಡಿಸುತ್ತೇನೆ ಎಂಬ ಭರವಸೆ ಹೊಂದಿ, ಸಧ್ಯವಲ್ಲಿ ಮಾಯೆಗೆ ಸಿಲುಕಿಕೊಂಡ ತನ್ನ ಸ್ಥಿತಿಯನ್ನು ಸಿದ್ಧರಾಮ ಈ ತ್ರಿವಿಧಿಯಲ್ಲಿ ಸೂಚಿಸುತ್ತಾನೆ. ಶಿವನ ಶಕ್ತಿ, ಮಹಿಮೆ, ಅವನಲ್ಲಿ ಮೊರೆ, ತನ್ನ ಅವನ ಪಶುಪತಿತ್ವದ ಸಂಬಂಧ ಮೊದಲಾದ ವಿಷಯಗಳನ್ನು ಪ್ರಸ್ತಾಪಿಸಿ, ನನ್ನನ್ನು ಭೂಲೋಕದಲ್ಲಿ ಜನಿಸುವಂತೆ ಮಾಡಿ ನನಗೆ ಈ ತೊಂದರೆಗಳನ್ನು ಕೊಟ್ಟು ಸಂಸಾರದ ತೊಳಲಾಟಕ್ಕೆ ಸಿಕ್ಕಿಸಿ ಕಾಡಿಸುತ್ತಿರುವುದು ಆ ಶಿವನ ತಪ್ಪೇ ಹೊರತು ತನ್ನದಲ್ಲ. ಆದ್ದರಿಂದ ಶಿವ ತನ್ನ ತಪ್ಪನ್ನು ತಾನೇ ತಿದ್ದಬೇಕು ಎಂದು ಉದ್ಧಾರದ ಭಾರವನ್ನು ಶಿವನ ಮೇಲೆ ಹಾಕುತ್ತಾನೆ. 'ದೈವ ತನು ಮನದ ಮಂಟಪದ ನಡುವಿಪ್ಪ ಗಂಡ'(೩೧)ಸಿದ್ಧರಾಮನ ಸಾಧನೆ 'ನಾನು ನೀನಾದನೆ ಯೋಗಿನಾಥಾ'. ಈ ಭಾವವೇ ಅಥವಾ ಅನುಸರಣೆಯೆ ಇಹಲೋಕದಲ್ಲಿ ಮುಕ್ತಿ. ಇದನ್ನು ಸಾಧಿಸುವುದೇ ಮಾನವನ ಧರ್ಮ. ಆದರೆ ಈ ಸಾಧನೆ ಸುಲಭವಲ್ಲ. ಮನುಷ್ಯ ಮತ್ತು ದೈವದ ಅಂತರ ಅಗಾಧ. ಅದನ್ನು ಸಾಧಿಸುವುದು ಹೇಗೆ? ದೈವಕ್ಕೆ ಶರಣಾಗುವುದೊಂದೇ ಮಾರ್ಗ. ಭಕ್ತಿಯ ಆಚರಣೆಯಿಂದ ಮುಕ್ತಿಪದವಿ ಸಾಧ್ಯ. ಅಂಥ 'ಭಕ್ತಿವಿಧದೊಳಗೆ ತಂದಿರಿಸಿ ಪರಭವವ ತಪ್ಪಿಸಿದೈ' ಎನ್ನುತ್ತಾನೆ. ಭಕ್ತಿಯ ಆಚರಣೆಯಿಂದ ಮುಕ್ತಿ ಪದವಿ ಸಾಧ್ಯ. ಆದರೆ ಇದು ಸರಳವಲ್ಲ. ಎಲ್ಲರಿಗೂ ಸಾಧ್ಯವಿಲ್ಲ.

> ಎಲವೆಲವೊ ಮೂಜಗದ ಪರಿಯಲ್ಲ ಶಿವಯೋಗ। ಒದವಿದ ಬ್ರಹ್ಮಾಂಡದಂತ್ಯವಲ್ಲ।
> ಒದವಿದ ಸಾಯುಜ್ಯ ಪದವ ಮೀಱಿದ ಭಕ್ತಿ। ಮದಕರಿಗೆ ಅಪ್ಪುದೆ ಯೋಗಿನಾಥಾ ॥

ಈ ತತ್ವಸಾಧನೆಯಲ್ಲಿ ಎಡರು ತೊಡರುಗಳಿವೆ, ಕಷ್ಟಕಾರ್ಪಣ್ಯಗಳಿವೆ. ಇಂದ್ರಿಯಗಳ ಹತೋಟಿ ಬೇಕು. ಮನಸ್ಸಿನ ಏಕಾಗ್ರತೆ ಬೇಕು. ಲೋಕದ ಬಂಧನ ಸಂಸಾರದ ಸೆರೆ ಇವುಗಳಿಂದ ಬಿಡುಗಡೆ ಬೇಕು. ಇದನ್ನು ಸಾಧಿಸಿದವರು ಮಹಾದೇವಿಯಕ್ಕನಂಥವರು ಮಾತ್ರ. ಅವಳು

> ತನುತ್ರಯವ ಮೀಱಿದವಳು ಮಲತ್ರಯವನತಿಗಳೆದು ತ್ರೈಲಿಂಗಕ್ಕೆ ತಾನಾದಿಯಾಗಿ
> ಕರ್ಮ ಭಕ್ತಿಜ್ಞಾನ ಸೊಮ್ಮು ತಾನಾಗಿ ಪರಬೊಮ್ಮವನ್ನೈದಿದಳು ಯೋಗಿನಾಥಾ ॥

ತ್ರಿವಿಧಿಗಳ ಸಾಧನೆಯಿಂದ ಮುಕ್ತಿಯನ್ನು ಪಡೆದ ಉದಾಹರಣೆಗಳುಂಟು. ಅವರ ಮೇಲ್ಪಂಕ್ತಿಯ ಅನುಸರಣೆಯೂ ಭಕ್ತರನ್ನು ಶಿವನ ಸಾನ್ನಿಧ್ಯದ ಕಡೆಗೆ ಕರೆದೊಯ್ಯಬಹುದು. 'ಸಂಕೀರ್ಣ ತ್ರಿವಿಧಿ'ಯಲ್ಲಿ ಬೇರೆ ಬೇರೆ ವಿಚಾರಗಳನ್ನು ಒಂದೆಡೆ ತಂದು ಸೇರಿಸಲು ಪ್ರಯತ್ನ ನಡೆದಿದೆ. ಆದರೆ ಅವುಗಳೆಲ್ಲದರ ಮುಖ್ಯ ಉದ್ದೇಶ 'ಶಿವಸಾನ್ನಿಧ್ಯ' ಪಡೆಯುವ ಕ್ರಮ ವಿಚಾರಗಳು. ಬಸವಸ್ತೋತ್ರದ ತ್ರಿವಿಧಿಯಲ್ಲಿ ಬಸವಣ್ಣನವರ ಮಹಾತ್ಮೆಯನ್ನು ಉತ್ಸಾಹ ತುಂಬಿ, ಹೃದಯಪೂರ್ವಕ ತಾದಾತ್ಮ್ಯದಿಂದ ಹೊಗಳಿದ್ದಾನೆ. ಇಲ್ಲಿ ಆವೇಶವಿದೆ, ಮೆಚ್ಚಿಕೆಯಿದೆ, ಉದ್ವೇಗವಿದೆ, ಆನಂದವಿದೆ.

> ಬಸವನೇ ಜಗದಾದಿ ತತ್ತ್ವವ್ಯಕ್ತಿತೀತನು ಬಸವನೇ ಪರಬ್ರಹ್ಮಸ್ವರೂಪನು
> ಬಸವನನಾದಿ ಲಿಂಗ ಬಸವನನಾದಿಚರ ಬಸವನಿಂದಧಿಕವುಂಟೆ ಯೋಗಿನಾಥ॥

ಆದಿಗುರು ಬಸವಣ್ಣ, ಅನಾದಿಗುರು ಬಸವಣ್ಣ ಅವನು ನಾದ ಬಿಂದು ಕಳಾತೀತನಾದವನು. ಅವನು ನಂದಿಯ ಅವತಾರವಲ್ಲ. ಈಶ್ವರನ ಪ್ರತಿರೂಪನೇ ಅವನು. ಸಿದ್ಧರಾಮನಿಗೆ ಬಸವಣ್ಣನಿಗೂ, ಶಿವನಿಗೂ ವ್ಯತ್ಯಾಸವೇ ಕಾಣುವುದಿಲ್ಲ. ಬಸವ ಈಶ್ವರ ರೂಪಿಯಾಗಿ ಅಥವಾ ಅವನ ಜೀವಸತ್ತ್ವ ರೂಪಾಗಿ ಹುಟ್ಟಿ ಲೋಕೋದ್ಧಾರ ಮಾಡಿದವನು.

> ಲಿಂಗರೂಪನು ಬಸವ ಜಂಗಮರೂಪನು ಬಸವ ಸಂಗ ನಿಜಗುರು ಮೂರ್ತಿ ಬಸವಲಿಂಗ
> ಅಂಗ ಲಿಂಗದ ಬೆಳಗನೊಂದು ಮಾಡಿಯೆ ತೋಱಿದ ಸಂಗನ ಬಸವಣ್ಣನೈ ಯೋಗಿನಾಥ॥

'ಬಸವಪ್ಪ ಬಸವಯ್ಯ ಬಸವಣ್ಣ ಬಸವರಸ ಬಸವ ದಂಡೇಶನೇ ಶರಣು'. ಈ ಮಾತುಗಳನ್ನು ಓದುವಾಗ ಹರಿಹರನು ತನ್ನ ಬಸವರಾಜ ದೇವರ ರಗಳೆಯಲ್ಲಿ ಭಕ್ತಿಯ ಆವೇಶ ತುಂಬಿ ಪುನರುಚ್ಚರಿಸಿದಂತೆ ಕಾಣುತ್ತದೆ. ಅಂಥ ಉತ್ಸಾಹ ಇಲ್ಲಿ ತುಂಬಿದೆ. ಇಲ್ಲಿ ಬರುವ ೧೨೫ ತ್ರಿವಿಧಿಗಳಲ್ಲಿ, ಕರ್ಮಜ್ಞಾನಭಕ್ತಿ ಎಂಬ ಮೂರು ಬೆಟ್ಟವ ದಾಟಿ ಮಲ್ಲಿಕಾರ್ಜುನನನ್ನು ಸೇರುವ ವಿಧಿಗಳ ವಿವರಣೆಯಿದೆ. ಇವೆಲ್ಲ ಬಸವಸ್ತೋತ್ರದ ಮೂಲಕವೇ ಪ್ರತಿಪಾದಿತವಾಗಿವೆ.

ಮಿಶ್ರಸ್ತೋತ್ರ ತ್ರಿವಿಧಿಯಲ್ಲಿ ಬಸವಣ್ಣನವರಿಂದ ಹಿಡಿದು ಇತರ ಪುರಾತನ ಶರಣರ ಸ್ತೋತ್ರವನ್ನೂ ಮಾಡಿದ ಪದ್ಯಗಳು ದೊರಕುತ್ತವೆ. ವಿಭೂತಿಯ ಮಹತ್ವದ ವರ್ಣನೆಯೂ ಕಂಡುಬರುತ್ತದೆ. ಕರುಣೆ ನೀಲಮ್ಮ, ಸೊಡ್ಡಳ ಬಾಚು, ನಿರ್ಲಜ್ಜ ಶಾಂತಗುರು, ಸಗರದ ಬ್ರಹ್ಮಯ್ಯ, ಚವುಡಯ್ಯ, ಜೋದರ ಮಾಯಣ್ಣ, ದಾಸಯ್ಯ, ಕಕ್ಕಯ್ಯ, ಅನಿಮಿಷಯ್ಯ, ಮುಕ್ತಾಯಕ್ಕ, ಮಡಿವಾಳ, ಚಿಕ್ಕಮಾದಣ, ಅಜಗಣ್ಣ, ಮೋಳಿಗಯ್ಯ ಮೊದಲಾದವರನ್ನೂ ಕುರಿತ ಸ್ತೋತ್ರಗಳೂ ಇವೆ:

> ಬಸವ ಮಡಿವಳ ಚೆನ್ನಬಸವ ಪ್ರಭು ಮುಖ್ಯವಾ | ದಸಮ ಶಿವಗಣ ಮಿಶ್ರಸ್ತೋತ್ರದ |
> ಎಸೆವ ತ್ರಿವಿಧಿಯ ಮನವೊಸೆದೋದಿ ಕೇಳಿದಡೆ | ಶಶಿಧರನೊಳಗೈಕ್ಯ ದಿಟ ಯೋಗಿನಾಥ ॥

ಎಂಬ ಫಲಶ್ರುತಿಯ 'ತ್ರಿವಿಧಿ'ಯೂ ಇದೆ. ಈ ಭಾಗದಲ್ಲಿ ಸಿದ್ಧರಾಮನ ಇನ್ನೊಂದು ಗುಂಪಿನ ತ್ರಿವಿಧಿಗಳನ್ನೂ ಅಷ್ಟಾವರಣ ತ್ರಿವಿಧಿ ಎಂದು ಕರೆಯಲಾಗಿದೆ.

ಇದರಲ್ಲಿ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ ಮೊದಲಾದ ಅಷ್ಟಾವರಣಗಳನ್ನೂ ಕುರಿತ ತ್ರಿವಿಧಿಗಳಿವೆ. ಸತ್ತ್ವ, ರಜ, ತಮೋಗುಣಗಳ ವಿವರಣೆಯೂ ಉಂಟು. ಒಟ್ಟಿನಲ್ಲಿ ಗುರುವೇ ಮಾನವನನ್ನು ಉದ್ಧಾರ ಮಾಡುವ ಪ್ರತ್ಯಕ್ಷ ದಾರಿದೀಪ:

> ಗುರುವೆ ಇಹಪರಗುರುವೆ ಕರುಣಾಕರನೆ | ಗುರುವೆ ಶುದ್ಧಾತ್ಮನೆ ನಿರ್ಮಳಾಂಗ |
> ಗುರುವೆ ಎನ್ನುವನು ನಿನ್ನಂತೆ ಮಾಡಿದ | ಪರಮ ಗುರುವೇ ನೀನು ಯೋಗಿನಾಥ |

೧೧೬೦ರ ಸುಮಾರಿನಲ್ಲಿದ್ದ ಶೀಲವಂತಯ್ಯನು 'ಆತ್ಮಲಿಂಗ ಪ್ರಣವ ಸಂಯೋಗ ಸ್ಥಳದ ತ್ರಿವಿಧಿ'ಯನ್ನೂ ರಚಿಸಿದ್ದಾನೆ. ಗುರುಲಿಂಗ ಎಂಬುದು ಈತನ ಅಂಕಿತವಿರುವಂತೆ ಕಾಣುತ್ತದೆ. ಇಲ್ಲಿಯೂ ಕೂಡ ಗುರುವಿಗೆ ಪ್ರಾಧಾನ್ಯ ಕೊಟ್ಟಂತೆ ತೋರುತ್ತದೆ. ವೀರಶೈವ ಶರಣರಲ್ಲಿ ಗುರುಲಿಂಗಜಂಗಮಕ್ಕೆ ಹೆಚ್ಚಿನ ಪ್ರಾಧಾನ್ಯವನ್ನು ಕೊಟ್ಟು ಮೂವರೂ ಏಕಮೂರ್ತಿಸ್ತ್ರಯೋಭೇದಾಃ ಎಂಬಂತೆ ಶಿವನ ಏಕರೂಪವೇ ಮೂರು ರೂಪದಲ್ಲಿ ಗುರುಲಿಂಗಜಂಗಮವಾಗಿದೆ. ಆದರೆ ಮಾನವನ ಉದ್ಧಾರಕಾಗಿ ಬೇರೆ ಬೇರೆ ರೂಪ ತಾಳಿದವರು ಎಂಬ ಭಾವನೆ ಬೆಳೆದಿರುವುದು ಭಕ್ತರ, ಅನುಭಾವಿಗಳೆಲ್ಲರ ಮಾತುಗಳಲ್ಲಿ ಕಂಡುಬರುತ್ತದೆ.

> ಗುರುವೆ ಇಹಪರ ಸುಖದ ವರವೆ ಅಂತಸ್ಥಿಮಿರ | ಹರವೆ ಸುಜ್ಞಾನದಿರವೆ | ಕಾರುಣ್ಯ ಸಾ | ಗರವೆ ಮರುಳೇಶ ಶರಣಾಗು ॥
> ಸುರಚಾಪ ನಭದಲ್ಲಿ ಮರುತನೊಳ್ ಸುಳಿ ಶಿಖಿಯೋ | ಉರಿ ವಾರಿಯಲ್ಲಿ ಕರೆಕ | ಧರೆಯೊಳು ಪಾಂಸು | ಬೆರೆದಂತೆ ಗುರುವಿನೊಳೇಕ ॥

ಮಹಾತ್ಮರ ಪಾದಧೂಳಿ ನಮ್ಮನ್ನೂ ಪವಿತ್ರೀಕರಿಸುತ್ತದೆ ಎಂಬ ಭಾವನೆಗೆ ರೂಪಕೊಡುವ ಮೇಲಿನ ಉಪಮಾನ ಸೂಕ್ತವಾಗಿ ಬಂದಿದೆ.

ಕರಸ್ಥಲ ನಾಗಿದೇವನ ತ್ರಿವಿಧಿಯಲ್ಲಿ ೬೧ ಪದ್ಯಗಳವೆ, ಅವು ವೀರಶೈವ ಸಿದ್ಧಾಂತವನ್ನೂ ಗೂಡಾರ್ಥದಿಂದ ಹೇಳುವ ಸಾಹಸದ ಪ್ರಯೋಗದಂತೆ ಕಂಡುಬರುತ್ತದೆ. ಬಹುಶಃ ಶಿವನನ್ನು ಅರ್ಥಮಾಡಿಕೊಳ್ಳುವುದು ಸುಲಭವಲ್ಲ. ಹಾಗೆಯೇ ಅವನನ್ನೂ ಕುರಿತು ಹೇಳುವ ಶಾಸ್ತ್ರವನ್ನೂ ಸರಳವಾಗಿ ಹೇಳಿಬಿಟ್ಟರೆ, ಅದರ ಮಹತ್ವ ಕಡಮೆ ಆಗಿ ಬಿಡುತ್ತದೆ ಎಂಬ ಸಹಜ ಭಾವನೆಯಿರಬೇಕು. ಆದ್ದರಿಂದ ಈ ತತ್ತ್ವವಿವರಣೆ ಕಷ್ಟವಾಗಿ ಅನೇಕ ತ್ರಿವಿಧಿಗಳಿಗೆ ವ್ಯಾಖ್ಯಾನಗಳಿರುವುದೂ ಉಂಟು. ಪ್ರಕೃತ ಇದರ ವಿಶೇಷ ವಿವರಣೆ ಇಲ್ಲಿ ಅನಗತ್ಯ.

> ದಾಂಟಿ ಅರಣ್ಯವ ಸುಡುತಲಿ | ದಾಂಟಿ ಅರಣ್ಯವ ಸುಡುತಲಿ | ನರಿನಾಯ ಬೇಂಟೆಯನಾಡಿ ಮೆಱೆದುದು ॥
> ಒಂಭತ್ತು ದ್ವಾರದ ಇಂಬುಗಳ ಬಲಿವುತ್ತ | ತುಂಬಿ ಸುಷುಮ್ನೆಯೊಳು ಮನವ | ನೋಡಲ್ಕೆ । ಕುಂಭದೊಳಮೃತ ಸುರಿವುದು ॥
> ಬೆಟ್ಟದ ಮೇಲಣ ಕಿಚ್ಚು ಸುಟ್ಟಿತು ಕಾನನವ | ಅಷ್ಟ ಮೃಗಜಾತಿ ಅಳಿದವು | ಅದ ಕಂಡು| ಬಟ್ಟಬಯಲೊಳಗೆ ಮೆಱೆದೆನು ॥

(ಮೇಲಿನ ತ್ರಿವಿಧಿಯ ಟೀಕೆ ಅಥವಾ ವ್ಯಾಖ್ಯಾನ ಹೀಗಿದೆ : ಎಂಟು ಮೊನೆಯ ಮೇಲೇಱಿ ಅಷ್ಟಾವರಣಾಷ್ಟಾವಧಾನದಲ್ಲಿ ಏಱಿ ಕ್ರಿಯಾಜ್ಞಾನಾಚರಣೆಯಿಂದ ಆರೋಹಿಸಿ, ದುರ್ಗವ ಮುಱಿದು ದಾಂಟಿ ತನುತ್ರಯ ಮಲತ್ರಯಂಗಳೆಂಬ ಗಿರಿಗಹಪಗಳನು, ದೀಕ್ಷಾತ್ರಯಂಗಳಿಂ ನಷ್ಟವ ಮಾಡಿ, ಲಿಂಗತ್ರಯಂಗಳ ಸಂಬಂಧಿಸಿ, ತ್ರಿವಿಧ ಪದಾರ್ಥವನು ಗುರು ಲಿಂಗ ತ್ರಯಂಗಳ ಸಂಬಂಧಿಸಿ, ತ್ರಿವಿಧ ಪದಾರ್ಥವನು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ ಪ್ರಸಾದತ್ರಯವ ಮಾಡಿ ಲಂಘಿಸಿ ಎಂಬುದರ್ಥ.)

ಇಲ್ಲಿಯೂ ಕೂಡ ಕೆಲವು ಪದಗಳು ತತ್ತ್ವದ ತಾಂತ್ರಿಕ ಶಬ್ದಗಳಾಗಿ ಅರ್ಥವನ್ನು ತುಂಬಿ ಸಾಮಾನ್ಯರಿಗೆ ಅದರ ವಿವರಣೆ ಗೊತ್ತಾಗುವುದೇ ಕಷ್ಟವಾದ್ದರಿಂದ ವ್ಯಾಖ್ಯಾನ ಆವಶ್ಯಕವಾಗುತ್ತದೆ. ಭಕ್ತ ಸಂಸಾರದ ಒತ್ತಡ ಅಥವಾ ತೊಡಕುಗಳಿಂದ ಬಿಡಿಸಿಕೊಂಡಾಗ ಅವನ ಮನಸ್ಥಿತಿ ಹೇಗಿರುತ್ತದೆ : 'ಹಸಿವು ತೃಷೆ ವಿಷಯವ ಹೊಸೆದು ಭಸ್ಮವ ಮಾಡಿ, ಕಿಸುಕುಳದ ಗಂಟಕಡೆಗೊದ್ದು......ಸಂಸಾರ ಹಸಗೆಟ್ಟಿತೆಂದು ನಗುತಿರ್ದೆ' ಎನ್ನುತ್ತಾನೆ.

'ಕರಸ್ಥಲದ ನಾಗಲಿಂಗ ತ್ರಿಪದಿ'ಗೆ ಕ್ರಿ.ಶ.ಸು. ೧೬೫೦ರಲ್ಲಿದ್ದ ಪರ್ವತ ಶಿವಯೋಗಿ ಟೀಕೆ ಬರೆದಿದ್ದಾನೆ. ಅದರ ಒಂದು ಮಾದರಿಯನ್ನು ನೋಡಬಹುದು : ಅರಣ್ಯವ = ಭವಾಟವಿಯನ್ನೂ, ಸುಡುತಲಿ = ಸಮರಸು ಜ್ಞಾನದ ಆಚರಣೆಯಿಂದ ದಹಿಸುತ್ತ. ನರಿ = ಮನವೆಂಬ ಸೃಗಾಲವನು, ನಾಯ = ಪಂಚೇಂದ್ರಿಯಗಳೆಂಬ ಕುಕ್ಕುರಗಳನು, ಬೇಂಟೆಯನಾಡಿ = ಸಂಹರಿಸಿ, ಮೆಱೆದುದು = ವಿಡಂಬಿಸಿದುದು'. ಸಂಸಾರಕ್ಕೆ ಒಂದು ಪ್ರತಿಮೆಯ ರೂಪವನ್ನೂ ಕೊಟ್ಟು ಅದರಲ್ಲಿ ಓಡಾಡುವ ದೇಹ ಮತ್ತು

ದೇಹವನ್ನು ಅಂಟಿಕೊಂಡಿರುವ ಇಂದ್ರಿಯಾದಿಗಳಿಗೆ,ನಮಗೆ ಕಾಟಕೊಡುವ, ನಮ್ಮ ದೃಷ್ಟಿಯಲ್ಲಿ ತುಚ್ಛವಾದ ಪ್ರಾಣಿಗಳ ಹೋಲಿಕೆಯನ್ನು ಹೇಳಿ, ಅದನ್ನು ನಿರಾಕರಿಸುವ, ಹೊಡೆದೋಡಿಸುವ ಕ್ರಿಯೆಯೇ ಸಾಧನೆ ಎಂದು ಹೇಳುವ ಕ್ರಮ ಇಂಥ ಕಡೆ ರೂಢಿಗೆ ಬರುತ್ತದೆ.

ಬರಬರುತ್ತಾ ಬರೆಯಬಲ್ಲ ಸಮರ್ಥ ಶರಣರೂ 'ತ್ರಿವಿಧಿ'ಗಳನ್ನು ರಚಿಸಲೇಬೇಕು ಎಂಬ ಸಂಪ್ರದಾಯವನ್ನು ಬೆಳೆಸಿಕೊಂಡುಬಂದಂತೆ ಕಾಣುತ್ತದೆ. ಕಾಡಮಲ್ಲಯ್ಯನ ತ್ರಿವಿಧಿ, ಗುರುಬೋಧಾಮೃತ, ಗುರುಸ್ತೋತ್ರತ್ರಿವಿಧಿ, ಮಠಸ್ಥಲದ ತ್ರಿವಿಧಿ, ಸಿದ್ದೇಶ್ವರ ತ್ರಿವಿಧಿ ಮೊದಲಾದುವನ್ನು ಹೆಸರಿಸಬಹುದು. ಸು. ೧೫೦೦ರಲ್ಲಿದ್ದ ನಿಜಗುಣ ಶಿವಯೋಗಿ 'ಅನುಭವಸಾರ' ಎಂಬ ೫೫೫ ತ್ರಿಪದಿಗಳಿಂದ ಕೂಡಿದ ಗ್ರಂಥವನ್ನು ರಚಿಸಿದ್ದಾರೆ.

ಎಂತು ನಿರ್ಮಳ ಮುಕುರದಂತರಾಳದೊಳು ಜಗ। ವೆಂತು ತರು ಸರಸಿಯೊಳು ಪೊಳೆದು ತೋಱುತಿಹು। ದಂತೆಲ್ಲವಾತ್ಮನೊಳತೋರ್ಕು॥

ಲೋಕ ಕನ್ನಡಿಯಲ್ಲಿ ಕಾಣಿಸುವಂತೆ ನೀರಿನಲ್ಲಿ ಮರ ಕಾಣಿಸುವಂತೆ ಶಿವಜ್ಞಾನ ಆತ್ಮನಲ್ಲಿ ಪ್ರತಿಬಿಂಬಿಸುತ್ತದೆ.

ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು। ಮಂಗಳೊಳು ಕಂಪು ಬೆರೆವಂತೆ ಪರಮನೊಳು| ಲಿಂಗದಗಸುತೆಗೆ ನತನಪ್ಪೆ॥

ಎಂಬ ಅವರ ಅಱುವತ್ತು ಮೂವರ ತ್ರಿಪದಿಯಲ್ಲಿ ಹೇಳಿರುವ ಭಾವ ಅರ್ಧನಾರೀಶ್ವರನಾದ, ಪರಶಿವನಲ್ಲಿ ಅವಿನಾಭಾವದಿಂದಿರುವ ಪಾರ್ವತಿಯ ಶಿವಸಾಧನೆಯನ್ನು ಉಪಮಾಲಂಕಾರದಿಂದ ಯೋಗಿ ತಿಳಿಸಿ ಕೊಡುತ್ತಾನೆ.

ಕರಗಿದಗೆ ಕಾಮದಲಿ। ಕೊರಗಿದಗೆ ಕ್ರೋಧದಲಿ ಬೆರೆದವಗನೇಕ ಭವದೊಳಗೆ ನೀಲಮ್ಮ। ಪರಿಪೂರ್ಣರೂಪೆ ಕೃಪೆಯಾಗು ॥

ಎಂಬ ನೀಲಾಂಬಿಕೆ ಬರೆದಿರಬಹುದಾದ 'ನೀಲಮ್ಮ ತ್ರಿವಿಧಿ' (ಸು. ೧೫೫೦) ಶಿವಭಕ್ತೆಯರಿಗೆ ಮಾದರಿಯಾಗಿ ಬಾಳಿದ ಶಿವಶರಣೆಯ ಅನುಭಾವವನ್ನು ಸ್ತುತಿಸುತ್ತದೆ. ಸಾಧಕ ಮತ್ತೆ ಹಲವರಿಗೆ ಮಾರ್ಗದರ್ಶಕನಾಗುವುದು, ಹೀಗೆ ತನ್ನ ಭಕ್ತ್ಯಾಚರಣೆಯ ಅನುಸಂಧಾನದಿಂದ ಹಿರಿಯರಿಗೆ ನಮಿಸುವುದು, ಅವರನ್ನು ನೆನೆಯುವುದು, ಅವರ ಆಚರಣೆಗಳನ್ನು ಬಳಕೆಗೆ ತರುವುದು ತಮ್ಮ ಯಶಸ್ಸಿಗೆ ಸಹಾಯವಾಗುತ್ತದೆ ಎಂಬುದೇ 'ಪುರಾತನರ ತ್ರಿವಿದಿ'ಯ ಉದ್ದೇಶವಿದ್ದಂತೆ ಕಾಣುತ್ತದೆ. ಇದರಲ್ಲಿ ೭೭ ಪದ್ಯಗಳಿವೆ. ಎಲ್ಲವೂ ಸ್ತೋತ್ರಪದ್ಯಗಳು. ಈ ಪುರಾತನರು ಎಂಥವರು?

ಕೊರಳ ವಿಷಮಂ ಕಂಡು ಮರಣವಹುದೆಂದು ಭವ। ಹರನನಾರಯ್ಯುತಿಹ ರುದ್ರಪಶುಪತಿಗೆ। ಶರಣೆಂದು ಸಿದ್ಧಿವಡೆದೆನು॥

ಮೃಡನ ದೃಷ್ಟಿಯೊಳು ರುಜೆಯುಡರಿತೆಂದತಿಭೀತಿ।ವಿಡಿದು ನಿಜಲೋಚನವನಿತ್ತ ಕಣ್ಣಪ್ಪ|ನಡಿಗಳಂ ಪೊತ್ತು ಬಿಡಸಿರ್ಪೆ॥

ಎಲ್ಲಾ ಪುರಾತನರ ತ್ರಿವಿಧಿಯಲ್ಲೂ (೬೨ ಪದ್ಯ) ಪುರಾತನರ ಸಾಧನೆಯ ಅಲ್ಪ ಪರಿಚಯ ಬರುತ್ತದೆ. ಈ ರಚನೆಯ ಉದ್ದೇಶ ಈ ಪದ್ಯಗಳಿಗೆ ಬರೆದ ಫಲಶ್ರುತಿಯಲ್ಲಿಯೇ ಸ್ಪಷ್ಟವಾಗಿ ಗೋಚರಿಸುತ್ತದೆ:

ವರಗುರು ಸಿದ್ಧೇಶ್ವರನುರುತರ ಸ್ತೋತ್ರವನು। ಬರೆದರ್ಥವನು ಪೇಳಿ ಕೇಳಿದವರಿಗೆ। ಪರಶಿವನೊಳೈಕ್ಯವಿದು ಸಿದ್ಧಾಂತ॥

ಪುರಾತನ ಶರಣೆಯರ ತ್ರಿಪದಿಯಲ್ಲೂ ಈ ಸ್ತೋತ್ರ ರೂಪವೇ ಮುಂದುವರಿದಿದೆ.

ಈ ತ್ರಿವಿಧಿಗಳ ರಚನಾ ಸಂಪ್ರದಾಯ ೧೮ ಮತ್ತು ೧೯ನೆಯ ಶತಮಾನದಲ್ಲೂ ಮುಂದುವರಿದಿದೆ. ೧೭೫೦ರಲ್ಲಿ ಚೆನ್ನಬಸವ ಶಿವಯೋಗಿ ಆಚರಣೆಯ ತ್ರಿಪದಿಗಳು ಎಂದು ೫೮ ಪದ್ಯಗಳನ್ನು ಬರೆದಿದ್ದಾನೆ. ಇಲ್ಲಿ 'ಆಚಾರ' ವ್ಯವಹಾರಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟಂತಿದೆ. ಪ್ರತಿ ಪದ್ಯವೂ 'ಶಿವಯೋಗ' ಅಂಕಿತದಿಂದ ಮುಕ್ತಾಯವಾಗುತ್ತದೆ.

ಆಡುವುದೆಲ್ಲ ಸತ್ಯ ಮಾಡುದೆಲ್ಲವು ಕುಟಿಲ। ನೋಡುವುದೆಲ್ಲ ದುರ್ನೋಟವಿಂತಪ್ಪ| ಮೂಢಗೆಲ್ಲಿಯದೋ ಶಿವಯೋಗ॥

ಸುಮಾರು ೧೮೦೦ರಲ್ಲಿ ರಚಿತವಾದ ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳಲ್ಲಿ ದೊರಕುವ 'ಗುರು ಕರುಣ ತ್ರಿವಿಧಿ' ಕಾವ್ಯಗುಣಪೂರ್ಣವಾದ ಪರಿಷ್ಕರಣಗೊಂಡ ತ್ರಿವಿಧಿ. ಇಲ್ಲಿನ ಪದ್ಯಗಳು ಸರಳವಾಗಿರುವುದಲ್ಲದೆ ತ್ರಿಪದಿಯ ಛಂದಸ್ಸಿನಲ್ಲೇ ಮೂಡಿ ಶೈವಸಿದ್ಧಾಂತವನ್ನು ಕಾವ್ಯಮಯವಾಗಿ ರೂಪಿಸಲಾಗಿದೆ. ಬಳಸಿರುವ ಹೋಲಿಕೆಗಳು ಕೊಟ್ಟಿರುವ ದೃಷ್ಟಾಂತಗಳು, ವಿವರಿಸಿರುವ ಅಧ್ಯಾತ್ಮ ಭಾವಗಳು ಸುಸ್ಪಷ್ಟವಾಗಿ ಸಾಮಾನ್ಯರಿಗೂ ಅರ್ಥವಾಗುವಂತಿವೆ:

ಕಾರ್ಯಕಾರಣ ಭಕ್ತಿತೂರ್ಯ ತಾಮಸದ ಚಿತ್| ಸೂರ್ಯ ಎಡರಿಂಗೆ ಧೈರ್ಯವಾಗಿಹ ಗುರು। ವರ್ಯ ನೀನೆನಗೆ ಕೃಪೆಯಾಗು॥

ಕೊರಡು ಕೊನರುವುದು ಬಲು ಬರಡು ಹಯನಹುದು| ಕುರುಡಂಗೆ ಕಣ್ಣು ಬಹುದು ನಿನ್ನೊಲುಮೆಯಿಂ|ದರಿದನೈ ಗುರುವೆ ಕೃಪೆಯಾಗು॥

ಅಡಿ ಇಷ್ಟಲಿಂಗ ಕೇಳ್ ನಡು ಪ್ರಾಣಲಿಂಗ ಮೇಲ್। ಮುಡಿ ಭಾವಲಿಂಗವಿಡಿದು ತ್ರೈಲಿಂಗ ನಿ| ನ್ನೊಡಲೆಂದ ಗುರುವೆ ಕೃಪೆಯಾಗು ॥

ಮೇಲೆ ಉದಾಹರಿಸಿರುವ ಮೂರು ಪದ್ಯಗಳಿಂದಲೇ ಶರಣರ ವಚರನಚನಾಸಾಮರ್ಥ್ಯ ಕಂಡುಬರುತ್ತದೆ. 'ಕೊರಡು ಕೊನರುವುದಯ್ಯ' ಮೊದಲಾದ ಮಾತುಗಳಲ್ಲಿ ಬಸವಾದಿಗಳ ವಚನದ ಮಾತುಗಳನ್ನು ಬಳಸಿಕೊಂಡಿರುವುದರ ಜೊತೆಗೆ ಅನೇಕ ಕಡೆ ಬಂದಿರುವ ಪ್ರತೀಕಗಳಲ್ಲಿ ಅರ್ಥತುಂಬಿದ ಭಾವಗಳೂ ಸ್ಪಷ್ಟವಾಗಿ ಮೂಡಿವೆ. ಮೈಲಾರದ ಬಸವಲಿಂಗ ಶರಣರು ಅನೇಕ ಉಪಮಾನ ಉಪಮೇಯಗಳಿಂದ ಗುರುವಿನ ಶಕ್ತಿಯನ್ನೂ ಬಿಡಿಸಿ ಹೇಳಿರುವುದಲ್ಲದೆ, ಕರ್ಮೇಂದ್ರಿಯಗಳ ಮರ್ಮವನ್ನೂ, ವಿಭೂತಿ, ರುದ್ರಾಕ್ಷಿ, ಮೂಲಮಂತ್ರ ಮೊದಲಾದ ಅಷ್ಟಾವರಣಗಳ ತತ್ತ್ವವನ್ನೂ ವಿವರಿಸಿ ರೂಪು, ರುಚಿ, ತೃಪ್ತಿ, ಪಂಚಾಚಾರ, ಷಟ್‌ಸ್ಥಲ ಮೊದಲಾದವುಗಳನ್ನೂ ಕುರಿತು ಸುಲಭವಾಗಿ ಸರಳಮಾತುಗಳಲ್ಲಿ ಹೃದಯಂಗಮವಾಗಿ ವಿವರಿಸಿದ್ದಾರೆ.

ಇತ್ತೀಚೆಗೆ ದೊರಕಿರುವ ಕೆಲವರ ತ್ರಿಪದಿಗಳನ್ನು ಶ್ರೀ ಎಸ್. ಶಿವಣ್ಣನವರು 'ಸ್ನೇಹ ಕಾರ್ತೀಕ'ದಲ್ಲಿ ಕೊಟ್ಟಿದ್ದಾರೆ. ಅವು ಸ್ತೋತ್ರವಸ್ತುಗಳಿಂದಲೇ ಕೂಡಿವೆ. ಹಿರಿಯ ಶರಣ ಶರಣೆಯರ, ಗೌರಿದೇವಿಯ ವರ್ಣನೆ, ಪ್ರಾರ್ಥನೆಗಳೇ ಅವುಗಳ ವಸ್ತುವಿದ್ದಂತೆ ಕಾಣುತ್ತದೆ.

ವೀರಶೈವ ಸಾಹಿತ್ಯದಲ್ಲಿ 'ತ್ರಿವಿಧಿ' ಪ್ರಕಾರವೇ ಒಂದು ವಿಶಿಷ್ಟ ಪದ್ಧತಿಯಾಗಿ ಬೆಳೆದುಬಂದಿರುವಂತೆ ತೋರುತ್ತದೆ. ಲೌಕಿಕ ತತ್ತ್ವವನ್ನು ಪ್ರಚಾರಮಾಡಲು ವಚನಗಳನ್ನು ಮಾಧ್ಯಮವನ್ನಾಗಿ ಮಾಡಿಕೊಂಡ ಬಸವಾದಿಗಳು ತಮ್ಮ ಗದ್ಯರಚನಾ ನೈಪುಣ್ಯದಿಂದ ಅದಕ್ಕೆ ಸತ್ತ್ವವನ್ನು ತುಂಬಿದರು. ಅವರ ಪ್ರತಿಯೊಂದು ಶಬ್ದವೂ ಭಾವತುಂಬಿ ಅರ್ಥತುಂಬಿ ಒಂದೊಂದೂ ಆಣಿ ಮುತ್ತುಗಳಾದವು. ಒಂದೊಂದು ಮುತ್ತೇ ಒಂದೊಂದು ಪೂರ್ಣಾಂಶಗಳಾದ್ದರಿಂದ ಪದಗಳನ್ನು ಛಂದಸ್ಸಿನ ಸೂತ್ರದಲ್ಲಿ ಕಟ್ಟುವ ಆವಶ್ಯಕತೆ ಅವರಿಗೆ ಅಗತ್ಯವೆನಿಸಲಿಲ್ಲ. ಕೆಲವೊಮ್ಮೆ ಅವರ ವಚನಗಳ ಓಟವೇ ಛಂದೋರೂಪದಲ್ಲೂ ಹರಿದಿರುವುದುಂಟು. ಆದರೆ ಈ ವಚನಗಳಲ್ಲಿ ಪ್ರತಿಪಾದ್ಯವಾದ ವಿಷಯ ಲೋಕಾಚರಣೆಗಳು ಕ್ರಮಕ್ರಮೇಣ ಅವುಗಳನ್ನು ವಿಂಗಡಿಸಿ ಅಧ್ಯಾತ್ಮ ವಿವರಣೆಯನ್ನು ಕೊಡುವ ಶಾಸ್ತ್ರ ವಚನಗಳನ್ನೂ ರಚಿಸಿದರು ಅಥವಾ ಆರಿಸಿ ಪ್ರತ್ಯೇಕ ಗುಂಪುಗಳನ್ನಾಗಿ ಮಾಡಿರಬಹುದು. ಇಂಥ ಗದ್ಯರಚನೆ ಕಷ್ಟವಾದ್ದರಿಂದ ಶಾಸ್ತ್ರ, ಅನುಭಾವ, ಸ್ತೋತ್ರ, ಮಾಹಾತ್ಮ್ಯಮುಂತಾದ ವಿಷಯಗಳನ್ನು ಹೇಳುವುದಕ್ಕೆ 'ತ್ರಿಪದಿ'ಗಳ ಛಂದೋಮಾರ್ಗವನ್ನು ಆರಿಸಿಕೊಂಡರು. ಆದರೆ ಅವರ ದೃಷ್ಟಿ ಛಂದಸ್ಸಿನ ಕಡೆಗಿರಲಿಲ್ಲ, ತಾವು ಹೇಳುವ ಶಾಸ್ತ್ರವಿಧಿಗಳ ಕಡೆಗಿದ್ದಿತು. ಆದ್ದರಿಂದ ಅವರು ಆ ರೂಪಕ್ಕೆ 'ತ್ರಿವಿಧಿ' ಎಂದು ಕರೆದರು. ತಮ್ಮ ಉಪದೇಶಾಮೃತಕ್ಕೆ 'ವಚನ' ಸ್ವರೂಪವನ್ನು ಕೊಟ್ಟಂತೆ, ಅಧ್ಯಾತ್ಮಾದಿ ಬೋಧನೆಗಳ ವಿವರಣೆಗೆ 'ತ್ರಿವಿಧಿ'ಯೆಂಬ ರೂಪ ಕೊಟ್ಟರು. ತಮ್ಮ ಕಲ್ಪನೆಯ 'ತ್ರಿವಿಧಿ'ಯ ಸ್ವರೂಪವನ್ನು ಸರ್ವಜ್ಞ ವಸ್ತುವಿನ ದೃಷ್ಟಿಯಿಂದ ಬಳಸದಿದ್ದುದರಿಂದ ಅವನ 'ತ್ರಿಪದಿಗಳು' ಸರ್ವಜ್ಞನ ವಚನಗಳಾಗಿಯೇ ಉಳಿದುಕೊಂಡವು.

'ತ್ರಿವಿಧಿ' ಸಾಹಿತ್ಯಚರಿತ್ರೆಯಲ್ಲಿ ಒಂದು ವಿಶಿಷ್ಟವಾದ ಅಧ್ಯಾಯ. ವಚನಸಾಹಿತ್ಯದಂತೆ ಇದೂ ವಿಶಿಷ್ಟಸ್ಥಾನವನ್ನು ಪಡೆಯಬಲ್ಲದು. 'ತ್ರಿಪದಿ' ಛಂದಸ್ಸಿನಲ್ಲಿ ಒಂದು ವೈಶಿಷ್ಟ್ಯವುಂಟು. ಅವಶ್ಯ ಕಂಡಾಗ ಮೂರನೆಯ ಸಾಲನ್ನು ಪುನರುಚ್ಚರಿಸಿ ನಾಲ್ಕನೆಯ ಸಾಲನ್ನು ಮಾಡಿಕೊಳ್ಳುವುದು. ಇದರ ಉದ್ದೇಶ ಒಂದು ಮುಖ್ಯವಾಗಿ ಮನದಟ್ಟು ಮಾಡಿಕೊಳ್ಳಬೇಕಾದ ಪದವನ್ನು, ಭಾವವನ್ನು, ಭಾವಾಂಶವನ್ನು ಪುನಃ ಹೇಳುವುದಕ್ಕಾಗಿ ಕೇಳುಗನ ಮನಸ್ಸಿನ ಮೇಲೆ ಅಚಲವಾಗಿ ಮೂಡಿಸುವುದಕ್ಕಾಗಿ ಬರೆಯುವುದು 'ತ್ರಿಪದಿ'ಯಲ್ಲಿ ಹೇಳುವುದು ಸಾಂಗತ್ಯದಲ್ಲಿ. ಸಾಂಗತ್ಯ ಸಾಮಾನ್ಯ ಜನರ ಬಾಯಲ್ಲಿ ನಲಿದಾಡುವ ಏಕನಾದದ ಶ್ರುತಿಯಲ್ಲಿ ಒಡಮೂಡುವ ನಾದಸುಧೆ. ಆ ಸುಧೆಯ ಮೂಲಕ ಹರಿದುಬರುವ ಭಾವ. ಸಾಂಗತ್ಯದ ನಾಲ್ಕು ಸಾಲಿನಲ್ಲಿ ವಿಷಯ ಬೇರೆ ಬೇರೆ ಇರುತ್ತದೆಯೇ ಹೊರತು ಪುನರುಕ್ತಿಯಿಲ್ಲ. ಪುನರುಕ್ತಿ ತ್ರಿಪದಿಯ ಸಾಲಿನಿಂದ ಎಳೆದುಕೊಳ್ಳಬಹುದು. ಹಳ್ಳಿಯ ಹಾಡುಗಳಲ್ಲಿ ಸರ್ವಜ್ಞನ ತ್ರಿಪದಿಗಳಲ್ಲಿ ಇದು ವಿಶೇಷವಾಗಿ ಕಂಡುಬರುತ್ತದೆ.

ಸಿರಿಬಂದ ಕಾಲಕ್ಕೆ ಕರೆದು ದಾನವಮಾಡು। ಪರಿಣಾಮವಕ್ಕು ಪದವಕ್ಕು। ಪರಿಣಾಮವಕ್ಕು ಪದವಕ್ಕು ಕೈಲಾಸ। ನೆರೆಮನೆಯಕ್ಕು ಸರ್ವಜ್ಞ॥

ಇಲ್ಲಿ ಪರಿಣಾಮ, ಪದ, ಕೈಲಾಸ–ಈ ಮೂರು ಫಲಗಳ ಪುನರುಚ್ಚಾರಣೆ ಕೇಳುಗನ ಮೇಲೆ ಹೆಚ್ಚು ಪರಿಣಾಮವನ್ನು ಮಾಡುತ್ತದೆ. ನಾಲ್ಕು ಸಾಲಿನ 'ತ್ರಿವಿಧಿ'ಯೊಂದನ್ನು ಉದಾಹರಣೆಗೆ ತೆಗೆದುಕೊಳ್ಳೋಣ:–

ಹಸಿವು ತೃಷೆ ವಿಷಯವ ಹೊಸೆದು ಭಸ್ಮವ ಮಾಡಿ। ಕಿಸುಕಳದ ಗಂಟಕಡೆಗೊದ್ದು। ಕಿಸುಕುಳದ ಗಂಟಕಡೆಗೊದ್ದು।
ಸಂಸಾರ ಹಸಗೆಟ್ಟಿತೆಂದು ನಗುತಿರ್ದೆ॥

ಇಲ್ಲಿ ಕಿಸುಕುಳದ ಗಂಟನ್ನು ಆಚೆ ತಳ್ಳಿಹಾಕುವುದು ಮುಖ್ಯ. ಆದ್ದರಿಂದ ಅದನ್ನು ಎರಡುಸಲ ಹೇಳಬೇಕು. ಮನಸ್ಸಿನ ಮೇಲೆ ಪುನಃ ಪುನಃ ಬೀಳುವಂತೆ ಮಾಡಬೇಕು. ಇದನ್ನು ಸಾಂಗತ್ಯದಲ್ಲಿ ಹೇಳಿದರೆ ಛಂದಸ್ಸಿಗೆ, ರಚನೆಗೆ ಅಡಚಣೆ. ತ್ರಿಪದಿಯಲ್ಲಿ ಹೇಳಿದರೆ ಸೊಗಸು. ಆದ್ದರಿಂದ ತ್ರಿವಿಧಿಕಾರರು, ತ್ರಿಪದಿಯನ್ನು ಬಳಸಿಕೊಂಡು ವಸ್ತುದೃಷ್ಟಿಯಿಂದ 'ತ್ರಿವಿಧಿ' ಎಂದು ಕರೆದು ಒಂದು ಹೊಸ ಸಾಹಿತ್ಯಮಾರ್ಗವನ್ನು ರಚಿಸಿದರು. ಅದರಲ್ಲಿ ಬಳಸುವ ವಸ್ತುವನ್ನು ವಿಶಿಷ್ಟವಾಗಿ ಉಳಿಸಿದರು.

ತ್ರಿಪದಿಯಾಗಲಿ ತ್ರಿವಿಧಿಯಾಗಲಿ ಅದನ್ನು ವಿಶೇಷವಾಗಿ ರೂಢಿಗೆ ತಂದವರು ಜನಜೀವನದ ಉನ್ನತಿಗೆ ಶ್ರಮಿಸಿದ ವೀರಶೈವರು. 'ವಚನ' ರೂಪದಿಂದ ಜನದ ಸಂಪರ್ಕವನ್ನು ಬೆಳೆಸಿಕೊಂಡ ಅವರು ಅಧ್ಯಾತ್ಮ ತತ್ತ್ವ ನಿರೂಪಣೆಗೆ, ಗಾಂಭೀರ್ಯವನ್ನೂ ಶಾಸ್ತ್ರ ಸ್ವರೂಪವನ್ನೂ, ಔನ್ನತ್ಯವನ್ನೂ ಕೊಡಲು 'ತ್ರಿವಿಧಿ'ಯನ್ನು ರೂಢಿಗೆ ತಂದರು.

ತ್ರಿಪದಿ ತ್ರಿವಿಧಿ ರೂಪದಲ್ಲಿ ವೀರಶೈವ ಅಧ್ಯಾತ್ಮಶಾಸ್ತ್ರದ ನಿರೂಪಣೆಯ ಮಾಧ್ಯಮವಾಗಿ ತನ್ನ ಸ್ಥಾನವನ್ನು ಭದ್ರವಾಗಿ ಉಳಿಸಿಕೊಂಡುಬಂದಿದೆ. ವೀರಶೈವರು ಅದನ್ನು ಬಳಸಿಕೊಂಡಂತೆ ಮತ್ತಾವ ಧರ್ಮಕವಿಗಳೂ ಬಳಸಿಕೊಂಡಂತೆ ಕಾಣುವುದಿಲ್ಲ. ಜನತೆಯ ಕೈಗೆ ಎಟಕುವಂಥ ಶೈಲಿಯಲ್ಲಿ ಧರ್ಮಸೂಕ್ಷ್ಮಗಳನ್ನು ತಿಳಿಯಹೇಳಲು ತ್ರಿಪದಿ ಸಾರ್ಥಕ ವಾಹಕವಾಗಿ ಬೆಳೆದು ಬಂದಿದೆ ಎಂದು ಹೇಳಬಹುದು.

# ತ್ರಿಪದಿಯ ಸೀಮಾಪುರುಷ : ಸರ್ವಜ್ಞ

—ಎಸ್. ಬಸವಾರಾಧ್ಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಏಕಮೇವಾದ್ವಿತೀಯವಾಗಿ ವಿರಾಜಿಸಿದವರಲ್ಲಿ ಸರ್ವಜ್ಞನೂ ಒಬ್ಬ. ಈತನು ಆಗಿ ಹೋಗಿ ಸುಮಾರು ನಾಲ್ಕು ಶತಮಾನಗಳು ಸಂದಿದ್ದರೂ ನಾಡಿನ ಜನತೆಯಲ್ಲಿ ಈತನ ಪ್ರಭಾವ ಇನ್ನೂ ಅಚ್ಚಳಿಯದೆ ನಿಂತಿದೆ. ಸಮಾಜ ಸುಧಾರಣೆಗಾಗಿ ಲೋಕಕಲ್ಯಾಣಕ್ಕಾಗಿ ಶ್ರಮಿಸಿದವರಲ್ಲಿ ಸರ್ವಜ್ಞ ಅಗ್ರಗಣ್ಯನಾಗಿದ್ದಾನೆ. ಜನಮನದ ಮೈಲಿಗೆಯನ್ನು ಕಳೆಯಲು ಈತನು ನಾಡಿನಾದ್ಯಂತ ಸಂಚರಿಸಿ, ವಚನಗಳೆಂಬ ನುಡಿಮುತ್ತುಗಳಿಂದ ಆ ಕಾರ್ಯವನ್ನು ಸಾಧಿಸಿದ್ದಾನೆ. ಸಮಾಜದ ಶುದ್ಧೀಕರಣಕ್ಕಾಗಿ ಜನತೆಯ ಮೇಲ್ಮೆಗಾಗಿ ಜೀವನ ಪರ್ಯಂತ ಹೆಣಗಿದ್ದಾನೆ. ಸಮಾಜದಲ್ಲಿ ಕಂಡುಬಂದ ಲೋಪದೋಷಗಳನ್ನು ನಿರ್ಭಿಡೆಯಿಂದ ಟೀಕಿಸಿದ್ದಾನೆ. ಜನತೆಯ ಬಾಳು ಹಸನಾಗಬೇಕು ಅವರ ನಡೆನುಡಿ ಚೊಕ್ಕವಾಗಬೇಕು ಎಂಬ ಕಳಕಳಿಯಿಂದ ಅಹರ್ನಿಶಿ ಶ್ರಮಿಸಿದ್ದಾನೆ. ಸರ್ವಜ್ಞ ಒಬ್ಬ ಆದರ್ಶ ಮಾನವತಾವಾದಿ.

ಸರ್ವಜ್ಞನ ಲೋಕಾನುಭವ ಅಪಾರವಾದುದು. ಈತನು ಯಾವೊಂದೆಡೆಯೂ ನಿಲ್ಲದೆ ಸದಾ ಸಂಚರಿಸುತ್ತಾ ಎಚ್ಚರಿಕೆಯ ಕಹಳೆಯನ್ನೂದಿದ್ದಾನೆ. ಈತನ ವಚನಗಳಲ್ಲಿ ಯಾವೊಂದು ನಿರ್ದಿಷ್ಟ ವಿಷಯವೂ ಇಲ್ಲ. ಆದರೆ ಸಮಾಜದ ಎಲ್ಲ ವಿಷಯಗಳೂ ಅವುಗಳಲ್ಲಿ ತುಂಬಿವೆ; ಕಿರಿದರಲ್ಲಿ ಹಿರಿದರ್ಥವನ್ನು ಪ್ರತಿಪಾದಿಸಿವೆ. ಈ ದೃಷ್ಟಿಯಿಂದ ಸರ್ವಜ್ಞನ ಪ್ರತಿಯೊಂದು ವಚನವೂ ಸ್ಫಟಿಕದ ಶಲಾಕೆಯಂತಿವೆ.

ಸರ್ವಜ್ಞನ ಮೇಲೆ ಪ್ರಾಚೀನ ಕವಿಗಳ, ವಚನಕಾರರ ಪ್ರಭಾವ ಸಾಕಷ್ಟಾಗಿದೆ. ಈತನ ಪ್ರತಿಯೊಂದು ತ್ರಿಪದಿಯಲ್ಲಿಯೂ ವಚನಕಾರರ ಪ್ರಭಾವವನ್ನು ಗುರುತಿಸಬಹುದಾಗಿದೆ. ವಚನಕಾರರು ಜನತೆಯ ಆತ್ಮಕಲ್ಯಾಣದ ಮಾರ್ಗವನ್ನು ತೋರಿದರೆ ಸರ್ವಜ್ಞ ಲೋಕಕಲ್ಯಾಣ ಮಾರ್ಗವನ್ನು ತೋರಿದ್ದಾನೆ. ಮಾನವರಲ್ಲಿ ಕಂಡುಬಂದ ಸಹಜ ದೌರ್ಬಲ್ಯಗಳನ್ನು ಎತ್ತಿ ತೋರಿಸಿ ಅವುಗಳ ನಿವಾರಣಾಮಾರ್ಗವನ್ನೂ ಸೂಚಿಸಿದ್ದಾನೆ. ಆತನ ಧ್ಯೇಯ ಧೋರಣೆ ಇಷ್ಟು : ಜನತೆ ಕಪಟ ಮೋಸ ವಂಚನೆ ದುರ್ಮಾರ್ಗಗಳನ್ನು ಬಿಡಬೇಕು; ಆಚಾರಶುದ್ಧರಾಗಿ ವಿಚಾರಪರರಾಗಿ ಬದುಕಬೇಕು ; ಸಮಾಜಕ್ಕೆ ಕಳಂಕಪ್ರಾಯವಾಗದೆ ಭೂಷಣಪ್ರಾಯವಾಗಬೇಕು. ಈ ನಾಡಿನ ಉಚ್ಚ ಸಂಸ್ಕೃತಿಯ ತಿರುಳಾದ ದಾನಧರ್ಮ ಪರೋಪಕಾರಗಳನ್ನು ಮೆರೆಯಬೇಕು. ಮಾನವ ಮಾನವನಾಗಿ ಬದುಕಿ ಬಾಳಬೇಕೇ ಹೊರತು ದಾನವನಾಗಬಾರದು. ಈ ಎಲ್ಲ ಸಂಗತಿಗಳನ್ನು ಅಣಿಮುತ್ತುಗಳಂತಿರುವ ತ್ರಿಪದಿಗಳಲ್ಲಿ ಪೊರಸೂಸಿದ್ದಾನೆ. ಈ ಒಂದೊಂದು ತ್ರಿಪದಿಯೂ ಪರಿಪೂರ್ಣ, ಸ್ವಸಂಪೂರ್ಣ. ಇವುಗಳಲ್ಲಿ ಪ್ರತಿಪಾದಿತವಾಗಿರುವುದೆಲ್ಲ ಭಾರತೀಯ ಸಂಸ್ಕೃತಿಗೆ ನೇರವಾಗಿ ಸಂಬಂಧಿಸಿದುದು. ಈತನ ವಚನಗಳು ಸಮಾಜಕ್ಕೆ ಹಿಡಿದು ತೋರಿಸುವ ಮಣಿದರ್ಪಣದಂತಿವೆ.

ಸರ್ವಜ್ಞನ ಕಾಲದೇಶ ವರ್ತಮಾನಗಳ ಬಗೆಗೆ ನಿರ್ದಿಷ್ಟವಾಗಿ ಏನೂ ತಿಳಿದುಬಂದಿಲ್ಲ. ಆತನ ವಚನಗಳಲ್ಲಿ ಎಲ್ಲೋ ಒಂದೆರಡು ಸಂಗತಿಗಳು ವ್ಯಕ್ತವಾಗಿವೆ. ಅವು ಕೂಡ ಸರ್ವಜ್ಞನು ಬರೆದಿರಬಹುದೇ ಎಂಬ ಬಗೆಗೆ ಸಂದೇಹವಿದೆ :

'ಮಕ್ಕಳಿಲ್ಲವು ಎಂದು ಅಕ್ಕಮಲ್ಲಮ್ಮನು | ದುಕ್ಕವ ಬಸವರಸಗರುಹಲು ಕಾಶಿಯ । ಮುಕ್ಕಣ್ಣನೊಲಿದ ಸರ್ವಜ್ಞ' ॥

'ಮಾಸೂರ ಬಸವರಸ ಕೂಸನೀಶನ ಕೇಳೆ | ಕಾಶಿಯಾ ಅಭವನೊಳು ಪಡೆದ ವರವದು । ಸೂಸಿತೆಂತೆನಲು ಸರ್ವಜ್ಞ' ॥

'ಅಂಬಲೂರೊಳಗೆಸೆವ ಕುಂಬಾರ ಸಾಲೆಯಲಿ | ಇಂಬಿನ ಕಳೆಯ ಮಾಳೆಯೊಳು ಬಸವರಸ । ನಿಂಬಿಟ್ಟನೆನ್ನ ಸರ್ವಜ್ಞ' ॥

'ಹೆತ್ತವಳು ಮಾಳಿಯೆನ್ನೊತ್ತಿ ತೆಗೆದವಳು ಕೇಶಿ । ಕತ್ತು ಬೆನ್ನು ಹಿಡಿದವಳು ಕಾಳಿ ಹೊರದೊಳಗೆನ್ನ । ಬತ್ತಲಿರಿಸಿದಳು ಸರ್ವಜ್ಞ' ।

'ಮಾಳನು ಮಾಳಿಯು ಕೂಳ್ತಿಂದ ಹೆಮ್ಮೆಯಲಿ । ಕೇಳೆ ನೀನಾರ ಮಗನೆಂದು ನಾಶಿವನ | ಮೇಳದಣುಗೆಂಬೆ ಸರ್ವಜ್ಞ' ॥

ಈ ಮೇಲಿನ ವಚನಗಳಿಂದ ಅಕ್ಕಮಲ್ಲಮ್ಮ ಎಂಬಾಕೆ ಮಕ್ಕಳಿಲ್ಲದುದರಿಂದ ಬಸವರಸನೊಂದಿಗೆ ದುಃಖವನ್ನು ತೋಡಿಕೊಳ್ಳುವಳು. ಅದನ್ನು ಕೇಳಿದ ಮಾಸೂರ ಬಸವರಸ ಕಾಶಿಗೆ ಹೋಗಿ ಅಭವನಿಂದ ವರವನ್ನು ಪಡೆದು ಹಿಂದಿರುಗುವಾಗ ಅಂಬಲೂರಿನ ಕುಂಬಾರ ಸಾಲೆಯ ಮಾಳಿಯ ಮನೆಯಲ್ಲಿ ತಂಗುವನು. ಅಭವನಿತ್ತ ವರ ಮಾಳಿಯಲ್ಲಿ ಫಲಿತವಾಗುವುದು. ನಿಜಸಂಗತಿಯನ್ನು ಅರಿತ ಸರ್ವಜ್ಞ ತಿಳಿವಳಿಕೆ ಬಂದ ಕೂಡಲೆ ಮನೆಯನ್ನು ಬಿಟ್ಟು ಶಿವನ ಮೇಳದವನಾಗುವನು. ಇದು ಸರ್ವಜ್ಞನ ಜನನದ ಬಗೆಗೆ ಜನಜನಿತವಾಗಿರುವ ಕಥೆ. ಈ ಕಥೆಗೆ ಮೇಲಿನ ವಚನಗಳೇ ಆಧಾರ. ಸರ್ವಜ್ಞನ ಜನನದ ಬಗೆಗೆ ಬೇರಾವ ಆಧಾರಗಳೂ ಉಪಲಬ್ಧವಿಲ್ಲದಿರುವುದರಿಂದ ಮೇಲಿನ ಪ್ರಸಂಗವನ್ನು ನಂಬುವಂತೆಯೂ ಇಲ್ಲ, ನಂಬದೆ ಇರುವಂತೆಯೂ ಇಲ್ಲ. ಕೆಲವು ಸಂಕಲನ ಗ್ರಂಥಗಳಲ್ಲಿ ಈ ವಚನಗಳು ಇಲ್ಲದಿರುವುದು ಇದು ಕಟ್ಟುಕಥೆಯಿರಬಹುದು ಎಂಬುದಕ್ಕೆ ಪುಷ್ಟಿಯನ್ನೀಯುತ್ತದೆ. ಒಟ್ಟಿನಲ್ಲಿ ಸರ್ವಜ್ಞನ ಜನನ ನಿಗೂಢವಾಗಿಯೇ ಉಳಿಯುತ್ತದೆ.

ಸರ್ವಜ್ಞನ ಕಾಲದ ವಿಷಯವೂ ಸಂದಿಗ್ಧವಾಗಿದೆ. ಈತನ ವಚನಗಳ ಪ್ರಾಚೀನತಮ ಹಸ್ತಪ್ರತಿಯೊಂದು ಹದಿನೇಳನೆಯ ಶತಮಾನದ ಆದಿಭಾಗಕ್ಕೆ ಸೇರಿದುದಾಗಿದೆ. ಸುಮಾರು ಹದಿನಾರನೆಯ ಶತಮಾನದ ಕೊನೆಯ ಭಾಗದಲ್ಲಿ ಇದ್ದಿರಬಹುದಾದ ಸಂಪಾದನೆಯ ಸಿದ್ಧವೀರಣ್ಣ ಸರ್ವಜ್ಞನ ಆಚರಣೆ ಸಂಬಂಧದ ತ್ರಿವಿಧಿಗಳನ್ನು ಸಂಕಲಿಸಿದ್ದಾನೆ, ಇದರಿಂದ ಸರ್ವಜ್ಞ ಸಿದ್ಧವೀರಣ್ಣನಿಗಿಂತ ಹಿಂದೆ ಇದ್ದಿರಬೇಕೆಂಬುದು ಸ್ಪಷ್ಟ. ಸರ್ವಜ್ಞನ ವಚನಗಳು ನಾಡಿನ ಜನತೆಯ ನಾಲಿಗೆಯ ಮೇಲೆ ನಲಿದಾಡುತ್ತಿದ್ದಾಗಲೇ ಸಿದ್ಧವೀರಣ್ಣ ಆತನ ವಚನಗಳನ್ನು ಸಂಕಲಿಸಿರಬಾರದೇಕೆ ? ಆದುದರಿಂದ ಸರ್ವಜ್ಞ ಕ್ರಿ.ಶ. ೧೫೫೦ ರಿಂದ ೧೬೦೦ರ ಅವಧಿಯಲ್ಲಿ ಬಾಳಿ ಬದುಕಿರಬಹುದೆಂದು ಊಹಿಸಬಹುದಾಗಿದೆ.

ಸರ್ವಜ್ಞನ ಕುಲ ಯಾವುದು? ಧರ್ಮ ಯಾವುದು? ಎಂಬ ಬಗೆಗೆ ಜಿಜ್ಞಾಸೆ ನಡೆದಿದೆ. 'ಸರ್ವಜ್ಞ' ಎಂಬ ಅಂಕಿತವೇ ಸಮಸ್ಯೆಗಳಿಗೆ ಎಡೆ ಮಾಡಿಕೊಟ್ಟಿದೆ. 'ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು । ಸುಡುವಗ್ನಿಯೊಂದೆ ಇರುತಿರೆ ಕುಲ ಗೋತ್ರ । ನಡುವೆ ಎತ್ತಣದು ಸರ್ವಜ್ಞ'॥ ಎಂದು ಪ್ರಶ್ನಿಸಿದ್ದಾನೆ. ಅಷ್ಟೇ ಅಲ್ಲ : 'ಜಾತಿಹೀನನ ಮನೆಯ ಜ್ಯೋತಿ ತಾ ಹೀನವೆ । ಜಾತಿ ವಿಜಾತಿಯೆನಬೇಡ ಶಿವನೊಲಿ । ದಾತನೇ ಜಾತ ಸರ್ವಜ್ಞ'॥ ಎಂಬ ಉಚ್ಚ ಆದರ್ಶಗಳನ್ನುಳ್ಳ ಸರ್ವಜ್ಞನಿಗೆ ಕುಲವೆಂಬುದುಂಟೆ ? ಕುಲದ ಮೇಲೆ ಅಭಿಮಾನವುಂಟೆ ? ಮಾನವಕುಲವೇ ಈತನ ಕುಲವಲ್ಲವೆ ?' ಎಂದೆಲ್ಲ ತರ್ಕಿಸಬಹುದು. ಆದರೆ ಸರ್ವಜ್ಞನವು ಎಂಬ ಕೆಲವು ವಚನಗಳು ಆತನ ಕುಲವನ್ನು ನಿರ್ಧರಿಸುವಂತಿವೆ :

'ಈಶಪ್ರಸಾದವನು ಸೂಸದಲೆ ತಾ ಕೊಳ್ಳೆ । ಶಾಶ್ವತವಪ್ಪ ಪದವಕ್ಕು ಜಗಕೆಲ್ಲ । ಈಶ್ವರನಕ್ಕು ಸರ್ವಜ್ಞ॥'

'ಲಿಂಗವ ಗುಡಿ ಲೇಸು ಗಂಗೆಯು ತಡಿ ಲೇಸು । ಲಿಂಗಸಂಗಿಗಳ ನುಡಿ ಲೇಸು ಶರಣರ । ಸಂಗವೇ ಲೇಸು ಸರ್ವಜ್ಞ॥'

'ತನುವನ್ನು ಗುರುವಿಂಗೆ ಮನವನ್ನು ಲಿಂಗಕ್ಕೆ । ಧನವ ಜಂಗಮಕೆ ವಂಚಿಸದ ಭಕ್ತಂಗೆ । ಅನಘಪದವಹುದು ಸರ್ವಜ್ಞ॥'

'ಷಟುಸ್ಥಲದ ಮರ್ಮವನು ಸ್ಫುಟವಾಗಿ ತಾನರಿದು । ದಿಟವಾಗಿ ನಂಬಿ ನಡೆದಿಹರೆ ಇಹದಲ್ಲಿ । ಘಟಿಸುವುದು ಸರ್ವಜ್ಞ॥'

ಈ ವಚನಗಳು ಸರ್ವಜ್ಞ ವೀರಶೈವಧರ್ಮ ಪ್ರತಿಪಾದಕ ಎಂಬುದಕ್ಕೆ ಬಾಟಾ ಮಾರ್ಗ ಕೊಟ್ಟಂತಿವೆ. ಸರ್ವಜ್ಞನ ಮೇಲೆ ವಚನಕಾರರ ಪ್ರಭಾವ ಸಾಕಷ್ಟು ಗಾಢವಾಗಿ ಆಗಿದೆ ಎಂಬುದಕ್ಕೆ ಹಲವಾರು ದೃಷ್ಟಾಂತಗಳಿವೆ. ಆದ್ದರಿಂದಲೇ ಸರ್ವಜ್ಞ ವೀರಶೈವ ಧರ್ಮವನ್ನು ಒಪ್ಪಿಕೊಂಡಿದ್ದ, ಬಲವಾಗಿ ಅಪ್ಪಿಕೊಂಡಿದ್ದ. ಆ ಧರ್ಮದಲ್ಲಿನ ಸಾರ್ವತ್ರಿಕ ಸಾರ್ವಕಾಲಿಕ ಸತ್ಯಸಂಗತಿಗಳನ್ನು ತನ್ನ ವಚನಗಳಲ್ಲಿಯೂ ನಿರೂಪಿಸಿದ್ದಾನೆ. ಒಟ್ಟಿನಲ್ಲಿ ಸರ್ವಜ್ಞ ವೀರಶೈವಧರ್ಮದ ಮೂಲಕ ಮಾನವಧರ್ಮವನ್ನು ಬಿತ್ತರಿಸಿದ್ದಾನೆ.

ಸರ್ವಜ್ಞ ಬರೆದಿರಬಹುದಾದ ವಚನಗಳ ಸಂಖ್ಯೆ ಎಷ್ಟು ಎಂಬುದು ಒಂದು ಕಗ್ಗಂಟಾಗಿಯೇ ಉಳಿದುಕೊಂಡಿದೆ. ಕಾಲ ಕಳೆದಂತೆಲ್ಲ ಈ ವಚನಗಳ ಸಂಖ್ಯೆ ಹನುಮಂತನ ಬಾಲದಂತೆ ಬೆಳೆದುಕೊಂಡೇ ಹೋಗಿದೆ. ಇವುಗಳಲ್ಲಿ ನಿಜವಚನಗಳಾವುವು, ಮಿಥ್ಯಾವಚನಗಳಾವುವು ಎಂದು ಬೇರ್ಪಡಿಸುವುದೇ ಸಾಧ್ಯವಿಲ್ಲದಂತಾಗಿದೆ. ಒಂದು ವೇಳೆ ಸರ್ವಜ್ಞನೇ ಸಾಕ್ಷಾತ್ತಾಗಿ ಅವತರಿಸಿ ಬಂದರೂ ತನ್ನ ವಚನಗಳನ್ನು ತಾನೇ ಗುರುತಿಸಲಾರದಷ್ಟು ವಿಕೃತವಾಗಿವೆ, ವಿರೂಪವಾಗಿವೆ. ಈ ಸಮಸ್ಯೆಗೆ ಪೋಷಕವೋ ಎಂಬಂತೆ ಒಂದು ವಚನವೂ ಸೃಷ್ಟಿಯಾಗಿದೆ: 'ಏಳುಕೋಟಿಯೆ ಕೋಟಿ ಏಳು ಲಕ್ಷವೆ ಲಕ್ಷ। ಏಳು ಸಾವಿರದ ಎಪ್ಪತ್ತು ವಚನಗಳ। ಹೇಳಿದೆನು ಕೇಳೊ ಸರ್ವಜ್ಞ॥' ಈ ವಚನದಂತೆ ಏಳು ಸಾವಿರದ ಎಪ್ಪತ್ತು ವಚನಗಳನ್ನು ಸರ್ವಜ್ಞ ಬರೆದಂತಾಯಿತು. ಈವರೆಗೆ ಬೆಳೆದುಬಂದಿರುವ ಸರ್ವಜ್ಞನ ವಚನಗಳು ಎರಡು ಸಾವಿರಕ್ಕಿಂತ ಮಿಕ್ಕಿವೆ. ಮಹಾಜನಗಳಿಗೆ ಇನ್ನೂ ಐದು ಸಾವಿರ ವಚನಗಳನ್ನು ಹೊಸೆಯುವ ಸದವಕಾಶ ಯಥೇಚ್ಛವಾಗಿದೆ. ಈ ಸಂಖ್ಯೆ ತುಂಬಿತೆಂದರೆ ಏನು ಮಾಡಬೇಕೆಂದು ಚಿಂತಿಸಬೇಕಾಗಿಲ್ಲ. 'ಏಕೆಂದರೆ ಏಳು ಕೋಟಿಯೆ ಕೋಟಿ ಏಳು ಲಕ್ಷವೆ ಲಕ್ಷ' ಎಂಬ ಸಾರ್ವಕಾಲಿಕ ಮಾತನ್ನು ಸರ್ವಜ್ಞನ ಬಾಯಿಂದಲೇ ಹೇಳಿಸಿದ್ದಾರೆ. ಒಟ್ಟಿನಲ್ಲಿ ನಮ್ಮ ಜನ ಸರ್ವಜ್ಞನ ಹೆಸರಿನಲ್ಲಿ ಬೇಕುಬೇಕಾದ ವಚನಗಳನ್ನು ಕಟ್ಟಿ ತಮ್ಮ ಚಾಪಲ್ಯವನ್ನು ತೀರಿಸಿಕೊಂಡಿದ್ದಾರೆ. ಸರ್ವಜ್ಞ ಎಲ್ಲ ವಿದ್ಯೆಗಳಲ್ಲೂ ಪರಿಣತ ಎಂಬ ಪ್ರಶಸ್ತಿಯನ್ನು ದೊರಕಿಸಿಕೊಟ್ಟಿದ್ದಾರೆ. ಪ್ರಸ್ತುತ ಲೇಖನದಲ್ಲಿ ಉದ್ಧರಿಸಿರುವ ವಚನಗಳು ಎಷ್ಟು ಸರ್ವಜ್ಞ ಬರೆದುವು ಎಂಬುದನ್ನು ಸರ್ವಜ್ಞನೆ ಬಲ್ಲ !

ಸರ್ವಜ್ಞ ಎಂಬ ಅಂಕಿತವೂ ಅಷ್ಟೆ. ಇದನ್ನು ಯಾರು ಕೊಟ್ಟರು ಏಕೆ ಕೊಟ್ಟರು ಎಂಬುದೂ ತಿಳಿದುಬರುವಂತಿಲ್ಲ. ಇದಕ್ಕೆ ಪರ್ಯಾಯವಾಗಿ 'ಪರಮಾರ್ಥ' ಎಂಬ ಅಂಕಿತವೊಂದು ಕಂಡುಬರುತ್ತದೆ. ಇದು ಅಷ್ಟೊಂದು ಚಾಲ್ತಿಯಲ್ಲಿದ್ದಂತೆ ತೋರುವುದಿಲ್ಲ. ವಚನಕಾರರು ತಮ್ಮ ಇಷ್ಟದೈವದ ಅಂಕಿತಗಳನ್ನು ತಾವೇ ಇಟ್ಟುಕೊಂಡಂತೆ ಸರ್ವಜ್ಞನೂ ಅದನ್ನೇ ಅಂಕಿತವನ್ನಾಗಿ ಏಕೆ ಇಟ್ಟುಕೊಂಡಿರಬಾರದು ? ಬಹುಮಟ್ಟಿಗೆ ಇದೇ ಸಮಂಜಸವಾಗಿ ತೋರುತ್ತದೆ.

ಸರ್ವಜ್ಞನ ಒಂದೊಂದು ವಚನವೂ ಒಂದೊಂದು ಬಿಡಿಮುಕ್ತಕ. ಒಂದೊಂದು ವಚನದಲ್ಲಿ ಒಂದೊಂದು ಸಂಗತಿಯನ್ನು ನಿರೂಪಿಸಲಾಗಿದೆ. ಕಥೆಗಾಗಲಿ ಕಲ್ಪನೆಗಾಗಲಿ ಇಲ್ಲಿ ಅವಕಾಶವೇ ಇಲ್ಲ. ತಾನು ಕಂಡದ್ದನ್ನು ಕಂಡಂತೆಯೇ ಸುಲಭವೂ ಸರಳವೂ ಆದ ಮಾತುಗಳಲ್ಲಿ ನಿರೂಪಿಸಿದ್ದಾನೆ. ಸರ್ವಜ್ಞನ ಪರಿಮಿತಿಗೆ ಒಳಪಡದ ವಿಷಯವೇ ಇಲ್ಲ.

'ಗಂಡು ತನ್ನದೆ ಎಂದು ಲೆಂಡೆಸುತನೆಂಬುವಳು । ಖಂಡಪರಶುವಿನ ವರಪುತ್ರ ಆನು ನೆರೆ । ಕಂಡುದನೆ ನುಡಿದೆ ಸರ್ವಜ್ಞ॥'

ಇದು ಸರ್ವಜ್ಞನ ನಿಲವು.

ಸರ್ವಜ್ಞನ ಲೋಕಾನುಭವ ಅಪಾರ. ಅದನ್ನೇ ಆತನು ಈ ರೀತಿ ಹೇಳಿದ್ದಾನೆ:

ಸರ್ವಜ್ಞನೆಂಬುವನು ಗರ್ವದಿಂದಾದವನೆ । ಸರ್ವರೊಳೊಂದೊಂದು ನುಡಿಗಲಿತು ವಿದ್ಯೆಯು ಪರ್ವತವೆ ಆದ ಸರ್ವಜ್ಞ॥'

ಸರ್ವಜ್ಞ ತಾನು ವಿದ್ಯೆಯ ಪರ್ವತವೆ ಎಂದು ಹೇಳಿಕೊಂಡಿದ್ದರೂ, ತನ್ನ ವಿನಯವನ್ನು ಮೆರೆದಿದ್ದಾನೆ :

'ಹೇಳಲರಿಯೆನು ನಾನು ಹೇಳೆನಲು ಹೇಳಿದೆನು । ಬಾಳಲೋಚನನ ಶರಣರ ಆಳಾಗಿ । ಹೇಳಿದೆನು ನೋಡಾ ಸರ್ವಜ್ಞ॥'

ಗುರುವಿನ ಬಗೆಗೆ ಸರ್ವಜ್ಞನಿಗೆ ಅಪಾರ ಗೌರವ. ಇಹಪರಗಳಲ್ಲಿ ಸದ್ಗತಿದಾಯಕವಾದ ಗುರುವನ್ನು ಮುಕ್ತಕಂಠದಿಂದ ಸ್ಮರಿಸಿದ್ದಾನೆ, ಸ್ತುತಿಸಿದ್ದಾನೆ :

'ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ । ಮತ್ತೆ ಪಾದದ ಕೆರನಾಗಿ ಗುರುವಿನ । ಹತ್ತಿಲಿರು ಎಂದ ಸರ್ವಜ್ಞ॥'

'ಗುರುವಿಂದ ಬಂಧುಗಳು ಗುರುವಿಂದ ದೈವಗಳು । ಗುರುವಿಂದಲಹುದು ಪುಣ್ಯವದು ಜಗಕೆಲ್ಲ । ಗುರುವಿಂದ ಮುಕ್ತಿ ಸರ್ವಜ್ಞ॥'

'ಗುರುಪಾದಸೇವೆ ತಾ ದೊರೆಕೊಂಡಿತಾದಡೆ । ಹಿರಿದಪ್ಪ ಪಾಪ ಪರಿದಿಹುದು ಕರ್ಪುರದ । ಗಿರಿಯು ಬೆಂದಂತೆ ಸರ್ವಜ್ಞ॥'

ವೀರಶೈವಧರ್ಮದಲ್ಲಿ ಗುರುವಿನ ಸ್ಥಾನ ಏನೆಂಬುದನ್ನು ಚೆನ್ನಾಗಿ ಅರಿತಿದ್ದ ಸರ್ವಜ್ಞ ಅದನ್ನು ತನ್ನ ವಚನಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಜ್ಞಾನ ಇಹಪರಗಳಿಗೆ ಸಾಧನ. ಜ್ಞಾನವಿಲ್ಲದಿದ್ದರೆ ಸರ್ವವೂ ವ್ಯರ್ಥ. ಆದ್ದರಿಂದಲೇ ಜ್ಞಾನಸಂಪಾದನೆ ಮನುಷ್ಯನಿಗೆ ಅತ್ಯಾವಶ್ಯಕವಾದುದು.

'ಜ್ಞಾನದಿಂದಲಿ ಇಹವು ಜ್ಞಾನದಿಂದಲಿ ಪರವು । ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು । ಹಾನಿ ಕಾಣಯ್ಯ ಸರ್ವಜ್ಞ॥'

ಮಾನವಜನ್ಮ ದೊಡ್ಡದು. ಈಶ್ವರೇಚ್ಛೆಯಂತೆ ಯಾವಾಗ ಏನೇನು ಪ್ರಾಪ್ತವಾಗುವುದೋ ಅದನ್ನು ಅನುಭವಿಸಿಯೇ ತೀರಬೇಕು. ಅದು ಬೇಕು ಇದು ಬೇಕು ಎಂದು ಆಶೆಪಡದೆ ಯಾವ ಯಾವ ಕಾಲಕ್ಕೆ ಏನೇನು ಲಭಿಸುವುದೋ ಅದನ್ನು ಅನುಭವಿಸುವವನೇ ಲೋಕದಲ್ಲಿ ನಿಜವಾದ ಸುಖಿ ಎಂಬುದನ್ನು : 'ದೊರಕಿದನು ಉಂಡುಂಡು ದೊರಕಿದನು ಉಟ್ಟುಟ್ಟು । ದೊರಕಿದಲಿ ಶಯನ ಪಡೆವಾತ ಲೋಕಕ್ಕೆ । ನಿರುತನಾಗಿಕ್ಕು ಸರ್ವಜ್ಞ ॥' ಈ ವಚನ ಸಾರುತ್ತಿದೆ. ದೇವರು ಸರ್ವಾಂತರ್ಯಾಮಿ, ಎಲ್ಲಿ ನೆನೆದರೆ ಅಲ್ಲೇ ಪ್ರತ್ಯಕ್ಷನಾಗುವನು ಎಂದು ಅನೇಕ ಸಾಧುಸಂತರೂ ಮಹಾತ್ಮರೂ ಹೇಳಿದ್ದಾರೆ. ಅವರಂತೆಯೇ ಸರ್ವಜ್ಞನೂ ಕೂಡ ತಿಳಿಸಿದ್ದಾನೆ. 'ಕಲ್ಲಿನಲಿ ಮಣ್ಣಿನಲಿ ಮುಳ್ಳಿನ ಮೊನೆಯಲ್ಲಿ । ಎಲ್ಲಿ ನೆನೆದಲ್ಲಿ ಶಿವನಿರ್ಪ ಅವ ನೀನಿ । ದ್ದಲ್ಲಿಯೆ ಇರುವ ಸರ್ವಜ್ಞ ॥' ನಾವು ಮಾಡುವ ಯಾವುದೇ ಕಾರ್ಯದಲ್ಲಾಗಲಿ ಶ್ರದ್ಧೆಯಿರಬೇಕು, ನಿಷ್ಠೆಯಿರಬೇಕು, ಇದರಿಂದ ಫಲಪ್ರಾಪ್ತಿಯಾಗುತ್ತದೆ. ಇಲ್ಲದಿದ್ದರೆ ಜೆಟ್ಟಿಕ್ಕೆ ಕಲ್ಲು ಹೊತ್ತಂತೆ ನಿರರ್ಥಕವಾಗುತ್ತದೆ. ಆದ್ದರಿಂದಲೇ ಚಿತ್ತಶುದ್ಧಿಯಿರಬೇಕು ಎಂಬುದನ್ನು : 'ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು । ಎತ್ತು ಗಾಣವನು ಹೊತ್ತು ತಾ ನಿತ್ಯದಿ । ಸುತ್ತಿ ಬಂದಂತೆ ಸರ್ವಜ್ಞ॥' ಈ ವಚನದಲ್ಲಿ ನಿರೂಪಿಸಿದ್ದಾನೆ. ಕೈಯಲ್ಲಿ ಕಪ್ಪರವನ್ನು ಹಿಡಿದುಕೊಂಡು ನಾಡಿನಾದ್ಯಂತ ಸಂಚರಿಸುತ್ತಾ ಹರನಾಮಸ್ಮರಣೆ ಮಾಡಿಕೊಂಡು ಭಿಕ್ಷಾಟನೆಯಿಂದ ಕಾಲಯಾಪನ ಮಾಡುವವರಿಗಿಂತ ಸಿರಿವಂತರು ಯಾರಿದ್ದಾರೆ ಎಂದು ಸರ್ವಜ್ಞ ಪ್ರಶ್ನಿಸಿದ್ದಾನೆ :

ಕರದಿ ಕಪ್ಪರವುಂಟು ಹಿರಿದೊಂದು ನಾಡುಂಟು । ಹರನೆಂಬ ದೈವ ನಮಗುಂಟು ತಿರಿವರಿಂ । ಸಿರಿವಂತರಾರು ಸರ್ವಜ್ಞ ॥

ಜಗತ್ತಿನಲ್ಲಿ ಯಾರನ್ನು ನಂಬಬೇಕು ? ಸರ್ವಸಂಗಪರಿತ್ಯಾಗಿಗಳನ್ನೂ ಸನ್ಯಾಸಿಗಳನ್ನೂ ನಂಬಬೇಕು ಎಂದಿದ್ದಾನೆ ಸರ್ವಜ್ಞ. ಆತನ ನಿಲವು ಇದು : 'ಮಂಡೆ ಬೋಳಿಸಿಕೊಂಡು ತುಂಡುಗಂಬಳಿ ಹೊದೆದು। ಹಿಂಡಿನಗಲಿದ ಗಜದಂತೆ ಇಪ್ಪವರ। ಕಂಡು ನಂಬುವುದು ಸರ್ವಜ್ಞ' ॥ ದೇವನೊಬ್ಬ ನಾಮಹಲವು ಎಂದಿದ್ದಾರೆ ಭಕ್ತಿಭಂಡಾರಿ ಬಸವಣ್ಣನವರು. ಏಕದೇವೋಪಾಸನೆಯನ್ನು ಅನೇಕರು ಪ್ರತಿಪಾದಿಸಿದ್ದಾರೆ. ಸರ್ವಜ್ಞನೂ ಕೂಡ ಅದನ್ನೇ ಹೇಳಿದ್ದಾನೆ. 'ಒಬ್ಬನಲ್ಲದೆ ಜಗಕೆ ಇಬ್ಬರುಂಟೆ ಮತ್ತೆ । ಒಬ್ಬ ಸರ್ವಜ್ಞಕರ್ತನೀ ಜಗಕೆಲ್ಲ । ಒಬ್ಬನೇ ದೈವ ಸರ್ವಜ್ಞ ॥' ಹಣ್ಣು ಹೆಣ್ಣು ಹೊನ್ನುಗಳನ್ನು ಈ ಲೋಕದಲ್ಲಿ ಬಯಸದವರಾರು ? ಹೆಣ್ಣು ಹೊನ್ನುಗಳಿಗಾಗಿ ಸತ್ತು ಸುಣ್ಣವಾದವರು ಎಷ್ಟೋ ಮಂದಿ. ಹೆಣ್ಣು ಹೊನ್ನುಗಳಿಗಾಗಿ ಸಾಮ್ರಾಜ್ಯಗಳು ಅಳಿದಿರುವುದನ್ನೂ ಸಾಮ್ರಾಜ್ಯಗಳು ಉಳಿದಿರುವುದನ್ನೂ ನಾವು ಚರಿತ್ರೆಯಿಂದ ತಿಳಿದುಕೊಂಡಿದ್ದೇವೆ. ಮತಿಹೀನಮಾನವ ಈ ಆಮಿಷಗಳಿಗೆ ಬಹುಬೇಗ ವಶನಾಗುತ್ತಾನೆ. ಈ ಆಸೆ ಆಮಿಷಗಳಿಗೆ ವಶರಾಗದ ಮಹಾನುಭಾವರು ಯಾರು ಎಂದು ಮಾರ್ಮಿಕವಾಗಿ ಪ್ರಶ್ನಿಸಿದ್ದಾನೆ ಸರ್ವಜ್ಞ :

ಹೆಣ್ಣನ್ನು ಹೊನ್ನನ್ನು ಹಣ್ಣಾದ ಮರಗಳನು । ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ । ಅಣ್ಣಗಳು ಯಾರು ಸರ್ವಜ್ಞ ॥'

ಪಂಚೇಂದ್ರಿಯಗಳಿಗೆ ವಶವಾದವರು ಬಹುಬೇಗ ನಾಶವಾಗುತ್ತಾರೆ. ಇವುಗಳ ಬಗೆಗೆ ನನ್ನದು ತನ್ನದು ಎಂಬ ಅಭಿಮಾನ ಸಲ್ಲದು. ಇವುಗಳಿಗೆ ಭೇದಭಾವವೇ ಇಲ್ಲ. ಇವು ತನ್ನನ್ನು ಕೊಲ್ಲುತ್ತವೆ, ಅನ್ಯರನ್ನೂ ಕೊಲ್ಲುತ್ತವೆ ಎಂಬುದನ್ನು :

'ಕಣ್ಣು ನಾಲಿಗೆ ಮನವು ತನ್ನವೆಂದೆನಬೇಡ | ಅನ್ಯರು ಕೊಂದರೆನಬೇಡ ಇವು ಮೂರು | ತನ್ನ ಕೊಲ್ಲುವುವು ಸರ್ವಜ್ಞ ||'

ಈ ವಚನದಲ್ಲಿ ಮಾರ್ಮಿಕವಾಗಿ ಹೇಳಿದ್ದಾನೆ.

'ಸಾಲವನು ಕೊಂಬಾಗ ಹಾಲೋಗರುಂಡಂತೆ | ಸಾಲಿಗನು ಬಂದು ಎಳೆವಾಗ ಕಿಬ್ಬದಿಯ | ಕೀಲು ಮುರಿದಂತೆ ಸರ್ವಜ್ಞ ||'

ಲೋಕರೂಢಿಯಲ್ಲಿರುವ ಸಂಗತಿಯನ್ನು ಸರ್ವಜ್ಞ ತುಂಬ ಸ್ವಾರಸ್ಯವಾಗಿ ಹೇಳಿದ್ದಾನೆ. ಸಾಲವನ್ನು ಪಡೆದಾಗ ಆಗುವ ಸಂತೋಷ ಸಾಲಿಗನು ಬಂದು ತಗಾದೆ ಮಾಡುವಾಗ ಆಗುವ ಪರಿತಾಪಗಳನ್ನು ಮನಮುಟ್ಟುವಂತೆ ಮೇಲಿನ ವಚನದಲ್ಲಿ ಸಾರಿದ್ದಾನೆ. ದಾನ ಧರ್ಮಗಳಿಗೆ ನಮ್ಮ ನಾಡು, ನಮ್ಮ ಜನ ಹೆಸರುವಾಸಿಯಾಗಿದ್ದಾರೆ. ದಾನಶೂರಕರ್ಣ ಶಿಬಿ, ದಧೀಚಿ ಮೊದಲಾದವರ ಹೆಸರುಗಳು ಅವರ ಕಾರ್ಯಗಳಿಂದಾಗಿ ಇಂದಿಗೂ ಜೀವಂತವಾಗಿವೆ. ಈ ನಾಡಿನ ಸಂಸ್ಕೃತಿ ನೆಲಸಿರುವುದು ಇಂತಹ ಮಹಾತ್ಮರಿಂದ, ಅವರು ಮಾಡಿದ ಸತ್ಕಾರ್ಯಗಳಿಂದ :

'ಕೊಟ್ಟದ್ದು ತನಗೆ ಬೈಚಿಟ್ಟದ್ದು ಪರರಿಂಗೆ। ಕೊಟ್ಟು ತಾ ಕೆಟ್ಟೆನೆನಬೇಡ ಮುಂದಕ್ಕೆ । ಕಟ್ಟಿಹುದು ಬುತ್ತಿ ಸರ್ವಜ್ಞ ||'

'ಇಕ್ಕಿದಾತನು ಉಂಡು ನಕ್ಕು ಸ್ವರ್ಗಕ್ಕೆ ಹೋದ । ಇಕ್ಕದವನು ಹೋದ ನರಕಕ್ಕೆ ಲೋಕದೊಳ । ಗಿಕ್ಕಲೆಬೇಕು ಸರ್ವಜ್ಞ ||'

'ಆಗಬಾ ಈಗಬಾ ಹೋಗಿಬಾ ಎನ್ನದಲೆ। ಆಗಲೇ ಕರೆದುಕೊಡುವವನ ಧರ್ಮ ಹೊ। ನ್ನಾಗದೇ ಬಿಡದು ಸರ್ವಜ್ಞ ||'

ಎಲ್ಲ ದಾನಗಳಿಗಿಂತ ಅನ್ನದಾನವೇ ಶ್ರೇಷ್ಠವಾದುದು. ಈ ಅನ್ನದಾನಕ್ಕಾಗಿ ಭೂಮಿಕಾಣಿಯನ್ನು ಮೀಸಲಾಗಿರಿಸಿದುದಕ್ಕೆ ಅನೇಕ ಶಾಸನಗಳಿವೆ. 'ಅನ್ನದಾತಾ ಸುಖೀಭವ' ಎಂಬ ಆರ್ಯೋಕ್ತಿಯೂ ಇದನ್ನೇ ಸಾರುತ್ತಿದೆ. ಅನ್ನವನು ಇಕ್ಕುವುದು ನನ್ನಿಯನು ನುಡಿಯುವು ಇವೆರಡೂ ಬಹುಮುಖ್ಯ. ಅದನ್ನೇ :

'ಅನ್ನದಾನಗಳಿಂದ ಮುನ್ನದಾನಗಳಿಲ್ಲ | ಅನ್ನಕ್ಕೆ ಮಿಗಿಲು ಇನ್ನಿಲ್ಲ ಜಗದೊಳಗೆ | ಅನ್ನವೇ ಪ್ರಾಣ ಸರ್ವಜ್ಞ||'

'ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು | ತನ್ನಂತೆ ಪರರ ಬಗೆವಡೆ ಕೈಲಾಸ | ಬಿನ್ನಾಣವಕ್ಕು ಸರ್ವಜ್ಞ||'

'ಅನ್ನವನು ಇಕ್ಕದಲೆ ನನ್ನಿಯನು ನುಡಿಯದಲೆ | ಮನ್ನಣೆಯನೀಯದಿರುತಿಪ್ಪ ಅರಸನು | ಕುನ್ನಿಗು ಕಷ್ಟ ಸರ್ವಜ್ಞ||'

ನಾವು ಸದಾ ಸಜ್ಜನರ ಸಂಗವನ್ನೇ ಮಾಡಬೇಕು. ದುರ್ಜನರ ಸಹವಾಸದಿಂದ ಅನರ್ಥಗಳಾಗುತ್ತದೆ, ಅನಾಹುತಗಳಾಗುತ್ತವೆ ; ಸರ್ವನಾಶವಾಗುತ್ತದೆ. ಸಗಣಿಯವನೊಂದಿಗೆ ಸರಸವಾಡುವುದಕ್ಕಿಂತ ಗಂಧದವನೊಡನೆ ಗುದ್ದಾಡುವುದು ಲೇಸು ಎಂಬ ನಾಣ್ಣುಡಿಯೂ ಉಂಟು.

'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ । ದುರ್ಜನರ ಸಂಗದೊಡನಾಟ ಬಚ್ಚಲ । ನಂತಿಹುದು ಸರ್ವಜ್ಞ' ||

'ಒಳ್ಳಿದರ ಒಡನಾಡಿ ಕಳ್ಳನೊಳ್ಳಿದನಕ್ಕು । ಒಳ್ಳಿದನು ಕಳ್ಳರೊಡನಾಡಿ ಅವಕುದ್ದ । ಕಳ್ಳ ತಾನಕ್ಕು ಸರ್ವಜ್ಞ' ||

ಪಂಚೇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಬಹಳ ದುಸ್ತರವಾದದ್ದು. ಇಂದ್ರಿಯ ಲೋಲುಪತೆಗೆ ಬಲಿಯಾಗಿ ವಿನಾಶಕ್ಕೊಳಗಾದವರನ್ನು ನಾವು ಕಂಡಿದ್ದೇವೆ. ಇತಿಹಾಸದಲ್ಲಿ ಕೇಳಿದ್ದೇವೆ. ಇಂದ್ರಿಯನಿಗ್ರಹ ಮಾಡಿದವನಿಗೆ ಯಾವ ಬಾಧೆಗಳೂ ಯಾರ ಬಾಧೆಗಳೂ ಇರುವುದಿಲ್ಲ. ಅಂತಹನು ಸದಾ ನಿಶ್ಚಿಂತನಾಗಿರುತ್ತಾನೆ ಎಂಬುದನ್ನು : 'ಕಚ್ಚೆ ಕೈಬಾಯಿಗಳು ಇಚ್ಚೆಯಲಿ ಇದ್ದಿಹರೆ। ಅಚ್ಯುತನಪ್ಪ ಅಜನಪ್ಪ ಲೋಕದಲಿ। ನಿಶ್ಚಿಂತನಪ್ಪ ಸರ್ವಜ್ಞ'|| ಈ ವಚನದಲ್ಲಿ ವಿವರಿಸಿದ್ದಾನೆ.

ಕೃಷಿಗೆ ಸಂಬಂಧಿಸಿದಂತೆ ಸರ್ವಜ್ಞ ಹೇಳಿರುವುದು ತುಂಬ ಮಾರ್ಮಿಕವಾಗಿದೆ. ಎಲ್ಲ ವಿದ್ಯೆಗಳಲ್ಲಿ ಮೇಟಿವಿದ್ಯವೆ ಮೇಲು ಎಂಬುದು ಆತನ ನಿಲವು. ಇದು ಇಲ್ಲದಿದ್ದರೆ ದೇಶದ ಪರಿಸ್ಥಿತಿಯೇ ತಲೆಕೆಳಗಾಗುತ್ತದೆ:–

'ಕೋಟಿವಿದ್ಯೆಗಳಲ್ಲಿ ಮೇಟಿವಿದ್ಯವೆ ಲೇಸು । ಮೇಟಿಯಿಂ ರಾಟಿ ನಡೆದುದಲ್ಲದೆ ದೇಶ । ದಾಟವೇ ಕೆಡುಗು ಸರ್ವಜ್ಞ||'

ಈವರೆಗೆ ಸರ್ವಜ್ಞನ ಕೆಲವು ಮುಖಗಳನ್ನು ಮಾತ್ರ ಪರಿಚಯ ಮಾಡಿಕೊಳ್ಳಲಾಗಿದೆ. ಆತನ ಉಳಿದ ಮುಖಗಳನ್ನೂ ಆತನ ವಚನಗಳಿಂದಲೇ ಕಂಡುಕೊಳ್ಳಬೇಕಾಗಿದೆ. ಸರ್ವಜ್ಞ ಜಗತ್ತಿಗೆ ನೀಡಿದ ಸಂದೇಶವಾದರೂ ಏನು ? ಆತನು ಬೋಧಿಸಿದ್ದೇನು ? ಸಾಧಿಸಿದ್ದೇನು ? ಜನತೆಯ ಮೇಲೆ ಇವು ಎಷ್ಟರ ಮಟ್ಟಿನ ಪರಿಣಾಮವನ್ನು ಬೀರಿದುವು ? ಇವೇ ಮೊದಲಾದ ಪ್ರಶ್ನೆಗಳಿಗೆ ಆತನ ವಚನಗಳು ಜ್ವಲಂತ ನಿದರ್ಶನಗಳಂತಿವೆ. ಸರ್ವಜ್ಞನ ವಚನಗಳಲ್ಲಿ ಎಲ್ಲ ಸಮಸ್ಯೆಗಳಿಗೂ ಪರಿಹಾರಗಳನ್ನು ಸೂಚಿಸಲಾಗಿದೆ. ಸಮಾಜದಲ್ಲಿನ ಅನಾಚಾರ ಅತ್ಯಾಚಾರ ಭ್ರಷ್ಟಾಚಾರಗಳ ನಿರ್ಮೂಲನಕ್ಕೆ ಸರ್ವಜ್ಞನ ವಚನಗಳು ನಿರಂತರ ಪರಿಹಾರ ಸೂಚಕಗಳಾಗಿವೆ. ತ್ರಿಕಾಲಾಬಾಧಿತವಾದ ಸರ್ವಜ್ಞನ ವಚನಗಳು ಸಮಾಜದಲ್ಲಿ ವಿವಿಧ ವ್ಯಾಧಿಗಳಿಂದ ನರಳುತ್ತಿರುವವರಿಗೆ ಸಂಜೀವಿನಿ ಮಾತ್ರೆಗಳಂತಿವೆ. ಈ ಭವರೋಗ ವೈದ್ಯನ ಚಿಕಿತ್ಸೆಯನ್ನು ಯಥಾಶಕ್ತಿಯಾಗಿ ಪಡೆದುಕೊಳ್ಳುವುದು ಈ ನಾಡಿನ ಜನತೆಗೆ ಸೇರಿದುದಾಗಿದೆ. ರೋಗಿಗಳೂ ಭೋಗಿಗಳೂ ವಿರಾಗಿಗಳೂ ಈ ವಚನಗಳ ಅಧ್ಯಯನ ಅನುಷ್ಠಾನದಿಂದ ತುಷ್ಟಿ ಪುಷ್ಟಿ ಶಾಂತಿದಾಂತಿಗಳನ್ನು ಪಡೆದುಕೊಳ್ಳುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಒಟ್ಟಿನಲ್ಲಿ ಸರ್ವಜ್ಞನ ವಚನಗಳು ಸಾರ್ವಕಾಲಿಕ ವಿಶ್ವಕೋಶದಂತಿವೆ. ಸರ್ವಜ್ಞ ಒಬ್ಬ ಜಂಗಮ ವಿಶ್ವಕೋಶದಂತಿದ್ದಾನೆ. ಸರ್ವರ ಹೃದಯದಲ್ಲಿಯೂ ನಿರಂತರವಾಗಿ ಜ್ವಲಿಸುತ್ತಿರುವ ಧ್ರುವತಾರೆಯಂತಿದ್ದಾನೆ.

# ವೀರಶೈವ ಸ್ತೋತ್ರಸಾಹಿತ್ಯ

—ಎಸ್. ಶಿವಣ್ಣ

ದೈವೀಕೃಪೆಗಾಗಿ ಮನುಷ್ಯನ ಹೃದಯ ಮಿಡಿದ ಹಂಬಲು-ಹಾರೈಕೆಗಳ ಅಭಿವ್ಯಕ್ತಿಯೆ ಸ್ತೋತ್ರಸಾಹಿತ್ಯದ ಉಗಮಕ್ಕೆ ಮೂಲವಾಗಿದೆ. ಕನ್ನಡದಲ್ಲಿ ವೀರಶೈವ ಸ್ತೋತ್ರಸಾಹಿತ್ಯದ ಪ್ರಾರಂಭವನ್ನು ಉಪಲಬ್ಧ ಆಧಾರಗಳಿಂದ ಹನ್ನೆರಡನೆಯ ಶತಮಾನದ ಆದಿಯಿಂದಲೂ ಗುರುತಿಸಬಹುದಾಗಿದೆ. ಕೊಂಡಗುಳಿ ಕೇಶಿರಾಜನ (೧೧೦೭–೧೧೩೨) 'ಷಡಕ್ಷರಕಂದ' ('ಮಂತ್ರ ಮಹತ್ವದ ಕಂದ'),'ಲಿಂಗಸ್ತೋತ್ರದ ಕಂದ'ಹಾಗೂ 'ನವರತ್ನಮಾಲೆ'ಗಳು ದೊರಕಿರುವ ಪ್ರಾಚೀನತಮ ಉಲ್ಲೇಖಗಳಾಗಿವೆ.

ಸ್ತೋತ್ರಸಾಹಿತ್ಯ ಪ್ರಾರಂಭದಲ್ಲಿ ದೈವೀಕೃಪೆಯನ್ನೇ ಪ್ರಧಾನ ವಸ್ತುವನ್ನಾಗಿ ಆಶ್ರಯಿಸಿದರೂ, ಕಾಲಕ್ರಮದಲ್ಲಿ ವಸ್ತುವಿನ ಹರಹು ವಿಶಾಲಗೊಂಡಿದೆ. ಅಷ್ಟಾವರಣ, ವೀರಶೈವ ಶಿವಶರಣ–ಶರಣೆಯರು, ಮಠಾಧೀಶರು ಮೊದಲಾದವರೆಲ್ಲ ವಸ್ತುವಾಗಿದ್ದಾರೆ. ಅಲ್ಲದೆ ಸ್ತೋತ್ರಸಾಹಿತ್ಯ ವಿವಿಧ ಛಂದೋರೂಪಗಳಲ್ಲಿ ತನ್ನ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಕಂದ,ವೃತ್ತ, ರಗಳೆ, ವಿವಿಧ ಷಟ್ಪದಿಗಳಲ್ಲಿ ಸ್ತೋತ್ರಸಾಹಿತ್ಯ ವಿಪುಲವಾಗಿ ಹೊರಹೊಮ್ಮಿದೆ. ಕನ್ನಡದಲ್ಲಿನ ಅಷ್ಟಕಗಳು, ತಾರಾವಳಿಗಳು, ಶಾರದ, ನಾಮಾವಳಿಗಳ ಬಹುಪಾಲು ಸ್ತೋತ್ರಕ್ಕೆ ಮೀಸಲಾಗಿವೆ. ಪ್ರಸ್ತುತ ಪ್ರಬಂಧದಲ್ಲಿ ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗಿನ ಸ್ತೋತ್ರಸಾಹಿತ್ಯದ ವಿವೇಚನೆಯನ್ನು ಮಾತ್ರ ಕೈಕೊಳ್ಳಲಾಗಿದೆ.

## ಅಷ್ಟಾವರಣ

೧. ಅಷ್ಟಾವಣರದ ಶಾರದ : ಅಂಕಿತ–'ವರದಗುರು ರುದ್ರಮುನಿ'. ಶಾರದ ಛಂದಸ್ಸಿನ ೯ ಪದ್ಯಗಳಿವೆ.

೨. ಅಷ್ಟಾವರಣದ ಸ್ತೋತ್ರದ ಕಂದ : ಕರ್ತೃ ಅಜ್ಞಾತ. 'ಬಸವ ಚೆನ್ನಬಸವಪ್ರಭುವೇ' ಎಂದು ಮುಗಿಯುವ ೧೦೫ ಕಂದಗಳಿವೆ. ಅಪ್ರಕಟಿತ.

೩. ಅಷ್ಟಾವರಣದ ಸ್ತೋತ್ರಶತಕ : ಬೇರೆ ಬೇರೆ ಶತಕಗಳಿಂದ ಆರಿಸಿದ ವೃತ್ತಗಳ ಸಂಕಲನ ಸ್ವರೂಪಕೃತಿ. ೧೦೮ ವೃತ್ತಗಳಿವೆ. ಅಪ್ರಕಟಿತ.

೪. ಅಷ್ಟಾವರಣ ಮಣಿದರ್ಪಣ ಶತಕ : ಕರ್ತೃ ಚೆನ್ನವೀರದೇಶಿಕ (ಸು. ೧೬೫೦). 'ಶಂಭುಶತಕ'ವೆಂಬ ಮತ್ತೊಂದು ಹೆಸರಿದೆ. ವೃತ್ತದಲ್ಲಿನ ಅಪ್ರಕಟಿತ ಕೃತಿ.

೫. ಅಷ್ಟಾವರಣ ಮಹತ್ವದ ಸ್ತೋತ್ರ : ಶ್ರೀ ಆರ್. ನರಸಿಂಹಾಚಾರ್ಯರಿಂದ ಉಕ್ತ, ವಿವರಗಳಿಲ್ಲ.

೬. ಅಷ್ಟಾವರಣ ವಾರ್ಧಿಕ : ಕರ್ತೃ ಅಜ್ಞಾತ, ೯ ವಾರ್ಧಕ ಷಟ್ಪದಿಗಳಿವೆ.

೭. ಅಷ್ಟಾವರಣಸ್ತೋತ್ರದ ತ್ರಿವಿಧಿ: ಸಿದ್ಧರಾಮ(೧೧೬೦)ಕೃತ. 'ಯೋಗಿನಾಥ' ಅಂಕಿತದ ೧೪೪ ತ್ರಿವಿಧಿಗಳಿವೆ.

೮. ಅಷ್ಟಾವರಣ ಸ್ತೋತ್ರದ ವಚನ : ಎಳೆಮಳೆ ಗುರುಶಾಂತದೇವನಿಂದ (೧೬೨೫) ಸಂಕಲಿತ. ೩೦ ಶಿವಶರಣ–ಶರಣೆಯರ ೧೬೧ ವಚನಗಳಿವೆ. ಅಪ್ರಕಟಿತ.

೯. ಅಷ್ಟಾವರಣ ಸ್ತೋತ್ರದ ಷಟ್ಪದಿ : ಗುರುನಂಜೇಸ್ವಾಮಿ(೧೫೦೦)ಯ ಸಂಕಲಿತ ಕೃತಿ. ೧೧೩ ಷಟ್ಪದಿಗಳಿವೆ. ಅಪ್ರಕಟಿತ.

೧೦. ಮಲ್ಲೇಶ್ವರ ಶತಕ : ಸಿರಿನಾಮಧೇಯ (ಸು. ೧೬೦೦) ಕೃತಿ. ಕೃತಿಗೆ 'ಅಷ್ಟಾವರಣಸ್ತವ' ಹಾಗೂ 'ಅಷ್ಟಾವರಣಸ್ತೋತ್ರ ಶತಕ'ಗಳೆಂಬ ಹೆಸರುಗಳಿವೆ. ೧೧೧ ವೃತ್ತಗಳಿದ್ದು ಬಹುಪಾಲು ವೃತ್ತಗಳು 'ಶ್ರೀ ಶೈಲಮಲ್ಲೇಶ್ವರಾ' ಅಂಕಿತದಲ್ಲಿವೆ. ಅಪ್ರಕಟಿತ.

## ಗುರು

೧೧. ಗುರುಕರುಣ ತ್ರಿಪದಿ : ಮೈಲಾರ ಬಸವಪ್ಪ (೧೮೦೦) ಕೃತ. ಲಿಂಗನಾಯಕನಹಳ್ಳಿ ಚನ್ನವೀರಸ್ವಾಮಿಯ ಶಿಷ್ಯ. ೩೩೩ ತ್ರಿಪದಿಗಳಿದ್ದು ಪ್ರತಿ ಪದ್ಯವು 'ಗುರುವೆ ಕೃಪೆಯಾಗು' ಎಂದಿದೆ.

೧೨. ಗುರುಪಂಚವಿಂಶತಿ : ಕರ್ತೃ ಅಜ್ಞಾತ. ವಾರ್ಧಕದಲ್ಲಿನ ೨೫ ಪದ್ಯಗಳಿವೆ. ಅಪ್ರಕಟಿತ.

೧೩. ಗುರು ರಗಳೆ : ತ್ರಿಭುವನತಾತ (೧೨೦೦) ಕೃತ. ಲಲಿತರಗಳೆಯಲ್ಲಿನ ಕೃತಿಯ ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಂಕ್ತಿಯು 'ಗುರುಶರಣು' ಎಂದು ಮುಗಿದಿದೆ.

೧೪. ಗುರು ರಗಳೆ: ಎಳಂದೂರು ಷಡಕ್ಷರಿ (೧೬೫೫-೭೭) ಕೃತ. ಲಲಿತರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿ ಸಾಲೂ 'ಗುರುಶರಣು' ಎಂದು ಮುಗಿದಿದೆ.

೧೫. ಗುರು ರಗಳೆ : ಮುಗಳಿ ಕಾಶಪ್ಪ (೧೮೦೦) ಕೃತ. ಗುರು ಜಕ್ಕಪ್ಪಯ್ಯನಾಥ. ವಿವರಗಳಿಲ್ಲ.

೧೬. ಗುರುಸ್ತೋತ್ರ : ಷಣ್ಮುಖಸ್ವಾಮಿ ಕೃತ? 'ನಿರಾಳಗುರು ಸ್ತೋತ್ರ'ವೆಂಬ ಹೆಸರಿನಲ್ಲಿ ಪ್ರಚಲಿತವಾಗಿದೆ. ಪಲ್ಲವಿ ಹಾಗೂ ೨೫ ಭಾಮಿನೀ ಷಟ್ಪದಿಗಳಿವೆ. ಷಟ್ಪದಿಗಳು 'ಗುರುವೆ ಶರಣಾರ್ಥಿ' ಎಂದು ಮುಗಿದಿವೆ.

೧೭. ಗುರುಸ್ತೋತ್ರ ತ್ರಿವಿಧಿ : ಅಂಕಿತ–ಸಂಗಮೇಶ್ವರ. ೪೧ ತ್ರಿವಿಧಿಗಳಿವೆ.

೧೮. ಗುರುಸ್ತೋತ್ರದ ನಾಂದ್ಯ : ಲೋಚಿನ ಸಿದ್ಧಲಿಂಗ (ಸು. ೧೮೦೦) ಕೃತ. ಭಾಮಿನಿ, ವಾರ್ಧಕಗಳಲ್ಲಿನ ೨೫ ಷಟ್ಪದಿಗಳಿವೆ. ಅಪ್ರಕಟಿತ.

೧೯. ಮುತ್ತಿನಕಂಥೆದೇವರಷ್ಟಕ : ಕರ್ತೃ ಅಜ್ಞಾತ. 'ಮುತ್ತಿನ ಕಂಥೆ ಸದ್ಗುರುವೇ'–ಅಂಕಿತದ ೮ ಭಾಮಿನೀ ಷಟ್ಪದಿಗಳಿವೆ. ಅಪ್ರಕಟಿತ.

೨೦. ಶೀಲವಂತಯ್ಯನ ತ್ರಿವಿಧಿ : ಚೆನ್ನಮಲ್ಲ (೧೧೬೦) ಕೃತ. 'ಗುರುಸ್ತವ'ವೆಂಬ ಇನ್ನೊಂದು ಹೆಸರಿದೆ. ಆದಿ, ಅಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ೧೧೧ ತ್ರಿವಿಧಿಗಳಿದ್ದು 'ಗುರುಲಿಂಗ' ಎಂದು ಮುಗಿಯುತ್ತವೆ.

೨೧. ಸದ್ಗುರು ರಗಳೆ : ಪಾಲ್ಕುರಿಕೆ ಸೋಮ (೧೨೯೦) ಕೃತ. ಆದ್ಯಂತ್ಯಗಳಲ್ಲಿ ಒಂದು ಹಾಗೂ ಮೂರು ಕಂದ ಗಳಿದ್ದು ಉಳಿದ ಭಾಗ ಲಲಿತರಗಳೆಯಲ್ಲಿದೆ. ಪ್ರತಿ ಸಾಲೂ 'ಸದ್ಗುರುವೆ' ಎಂದು ಮುಗಿಯುತ್ತದೆ. ಅಪ್ರಕಟಿತ.

ಲಿಂಗ

೨೨. ಅಭವ ಕಂದ : ವಿರತ ಮಹಲಿಂಗ (೧೫೦೦) ಕೃತ. ಈತ ೭೦೦ ಕಂದಗಳನ್ನು ರಚಿಸಿದರೂ ಪ್ರಸ್ತುತದಲ್ಲಿ ೧೭೭–೧೭೮ ಕಂದಗಳು ಉಪಲಬ್ಧವಾಗಿವೆ. ಪ್ರತಿ ಕಂದವು ಪ್ರಾಯಿಕವಾಗಿ 'ಅಭವಾ' ಎಂದು ಮುಗಿಯುತ್ತದೆ.

೨೩. ಅಭವ ಕಂದ : ಶಾಂತ (೧೬೦೦) ಕೃತ. ತೋಂಟದ ಸಿದ್ಧಲಿಂಗನ ಶಿಷ್ಯ, ಸಪ್ಪೆಯಾರ್ಯನ ಶಿಷ್ಯ. 'ಅವಧಾರ ಭವಾ' ಎಂದು ಮುಗಿಯುವ ೧೦೮ ಕಂದಗಳಿವೆ. ಅಪ್ರಕಟಿತ.

೨೪. ಆದಯ್ಯಗಳ ಕಂದ : ಆದಯ್ಯ (೧೧೮೦) ಕೃತ. 'ಸೋಮನನತಿ ವೇಗದಿಂದ ಭಾವಿಸಿ ಕಂಡೆಂ' ಎಂದು ಮುಗಿಯುವ ೧೬ ಕಂದಗಳಿವೆ. ಅಪ್ರಕಟಿತ.

೨೫. ಇಷ್ಟಲಿಂಗ ಚಾರಿತ್ರ : ಶಂಕರದೇವ (ಸು. ೧೬೦೦) ಕೃತ. ೪೭ ವಾರ್ಧಕ ಷಟ್ಪದಿಗಳಿವೆ.

೨೬. ಇಷ್ಟಲಿಂಗ ಚಾರಿತ್ರ : ಅಂಕಿತ–'ಗುರುಚೆನ್ನಬಸವೇಶ್ವರ' ಪಲ್ಲವಿ ಹಾಗೂ ೨೩ ಭಾಮಿನೀ ಷಟ್ಪದಿಗಳಿವೆ. ಅಪ್ರಕಟಿತ.

೨೭. ಇಷ್ಟಲಿಂಗ ಜಗನ್ಮಯಾಷ್ಟಕ : ಅಂಕಿತ–'ಗುರುವರ ಚನ್ನಮಲ್ಲ'. 'ಎಮ್ಮ ರಕ್ಷಿಸೊ ಇಷ್ಟಲಿಂಗ ಜಗನ್ಮಯಾ' ಎಂದು ಮುಗಿಯುವ ೮ ವೃತ್ತಗಳಿವೆ.

೨೮. ಇಷ್ಟಲಿಂಗ ರಗಳೆ : ಕರ್ತೃ ಅಜ್ಞಾತ. ಲಲಿತ ರಗಳೆಯಲ್ಲಿನ ಕೃತಿಯ ಆದ್ಯಂತ್ಯಗಳಲ್ಲಿ ಒಂದೊಂದು ವೃತ್ತ ಗಳಿವೆ. ಪ್ರತಿ ಎರಡನೆಯ ಸಾಲಿನ ಅಂತ್ಯದಲ್ಲಿ 'ಇಷ್ಟಲಿಂಗೇಶ' ಎಂದು ಬರುತ್ತದೆ. ಅಪ್ರಕಟಿತ.

೨೯. ಇಷ್ಟಲಿಂಗ ಶತಕ : ಕಾಡ ಸಿದ್ಧೇಶ (ಸು. ೧೭೨೫) ಕೃತ. ಪರ್ವತೇಶನ ಶಿಷ್ಯ 'ಶಿವಾಧಿಕ್ಯ'ವೆಂಬ ಮತ್ತೊಂದು ಹೆಸರಿದೆ. 'ಶ್ರೀ ಯಿಷ್ಟಲಿಂಗೇಶ್ವರಾ' ಅಂಕಿತದ ೧೧೧ ವೃತ್ತಗಳಿವೆ. ಅಪ್ರಕಟಿತ.

೩೦. ಇಷ್ಟಲಿಂಗಸ್ತೋತ್ರ : ಮಲ್ಲಿಕಾರ್ಜುನ ಪಂಡಿತಾರಾಧ್ಯ (೧೧೬೦) ಕೃತ. ಅಲಭ್ಯ.

೩೧. ಇಷ್ಟಲಿಂಗಾಷ್ಟಕ : ಶ್ರೀ ಫ.ಗು. ಹಳಕಟ್ಟಿಯವರು ಹೆಸರಿಸಿ, ಕಾಲ ೧೬–೧೭ನೆಯ ಶತಮಾನವೆಂದಿದ್ದಾರೆ. ವಿವರಗಳಿಲ್ಲ.

೩೨. ಇಷ್ಟಲಿಂಗೇಶ್ವರ ಶತಕ : ಮೋಡ್ಲೇರಿ ಶಿವಲಿಂಗ (೧೫೭೦) ಕೃತ. 'ಶ್ರೀ ಇಷ್ಟಲಿಂಗೇಶ್ವರಾ'ಅಂಕಿತದ ೯೮ ವೃತ್ತಗಳಿವೆ. ಅಪ್ರಕಟಿತ.

೩೩. ಇಷ್ಟಲಿಂಗೇಶ್ವರಾಷ್ಟಕ : ಕರ್ತೃ ಅಜ್ಞಾತ. ೮ ವೃತ್ತಗಳಿದ್ದು ಅಂತ್ಯದಲ್ಲಿ ಒಂದು ಸಂಸ್ಕೃತ ಶ್ಲೋಕವಿದೆ. ವೃತ್ತಗಳು 'ಶ್ರೀಇಷ್ಟಲಿಂಗೇಶ್ವರಾ' ಎಂದು ಮುಗಿಯುತ್ತವೆ.

೩೪. ಇಷ್ಟಲಿಂಗೇಶ್ವರಾಷ್ಟಕ : ಕರ್ತೃ ಅಜ್ಞಾತ. ಶ್ರೀ ಇಷ್ಟಲಿಂಗೇಶ್ವರಾಂಕಿತದ ೧೦ ವೃತ್ತಗಳಿವೆ.

೩೫. ಕರಸ್ಥಲದ ವೀರಣ್ಣೊಡೆಯರ ಕಂದ : ಕ.ವೀರಣ್ಣೊಡೆಯ (೧೪೩೦) ಕೃತ. ೨೫ ಕಂದಗಳಿದ್ದು ಬಹುಪಾಲು ಕಂದಗಳು 'ಕಂಡೆ ಕರಕಮಲದೊಳುಂ' ಎಂದು ಮುಗಿದಿವೆ.

೩೬. ಪ್ರಭುಲಿಂಗದ ಕಂದ : ಕಟ್ಟಿಗೆಹಳ್ಳಿ ಸಿದ್ಧಲಿಂಗ (೧೬೭೫)ನ ಶಿಷ್ಯ ಮುರಿಗೆ ಶಾಂತವೀರ (?–೧೭೦೩) ಕೃತ. 'ರಾಜಲಿಂಗ ಪ್ರಭುವೇ' ಅಂಕಿತದ ೫೩ ಕಂದಗಳಿವೆ.

೩೭. ಲಿಂಗತ್ರಿವಿಧಿ : ಕಾಡಸಿದ್ಧೇಶ್ವರ (ಕಾಲ–?) ಕೃತ. ೨೧೦ ತ್ರಿವಿಧಿಗಳಿವೆ. 'ಗುರುಸ್ವಾಮಿ' ಎಂದು ಮುಗಿಯುತ್ತವೆ. ಅಪ್ರಕಟಿತ.

೩೮. ಲಿಂಗನಮಸ್ಕಾರ ರಗಳೆ : ಸಿದ್ಧಲಿಂಗ ಕೃತ. ಉತ್ಸಾಹ ರಗಳೆಯಲ್ಲಿನ ಕೃತಿಯ ಆದಿ, ಅಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿ ಪಂಕ್ತಿಯು 'ಲಿಂಗಶರಣು' ಎಂದು ಮುಗಿದಿದೆ. ಅಪ್ರಕಟಿತ.

೩೯. ಲಿಂಗರಗಳೆ : ಅಂಕಿತ–'ಶಾಂತಮಹಾಘನಲಿಂಗ' ಕೃತಿ ಮಂದಾನಿಲ ರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ವೃತ್ತಗಳಿವೆ. ಪ್ರತಿ ಸಾಲು 'ಲಿಂಗಂ' ಎಂದು ಮುಗಿಯುತ್ತದೆ.

೪೦. ಲಿಂಗಸ್ತುತಿ : ದೇವಲಾಪುರದ ನಂಜುಂಡ (೧೮೪೧) ಕೃತ. ೨೭ ಪದ್ಯಗಳಿವೆ. ಅಪ್ರಕಟಿತ.

೪೧. ಲಿಂಗಸ್ತೋತ್ರದ ಕಂದ-೧ : ಕೊಂಡಗುಳಿ ಕೇಶಿರಾಜ (೧೧೦೭-೧೧೩೨) ಕೃತ. 'ಶಿವಪ್ರಾರ್ಥನಾಶತಕವೆಂಬ ಮತ್ತೊಂದು ಹೆಸರಿದೆ. ೧೦೦ ಕಂದಗಳಿವೆ. ಲಿಂಗಸ್ತೋತ್ರದ ಕಂದ-೨ : ಕೊಂಡಗುಳಿ ಕೇಶಿರಾಜ (೧೧೦೭-೧೧೩೨) ಕೃತ. ೧೦೮ ಕಂದಗಳಿವೆ. ಈ ಕಂದಗಳನ್ನು ಸಂಪಾದನೆ ಸಿದ್ಧವೀರೇಶ್ವರದೇವರು ಸಂಕಲಿಸಿದ್ದಾರೆ. ಈ ಕಂದಗಳು ವೀರಶೈವ ಸಾಹಿತ್ಯದ ಉಪಲಬ್ಧ ಪ್ರಾಚೀನ ದಾಖಲೆಗಳಾಗಿವೆ.

೪೨. ಲಿಂಗಸ್ತೋತ್ರದ ಪದ : ಮುಮ್ಮಡಿ ತಮ್ಮ (೧೬೬೫)ನ 'ಶಂಕರಸಂಹಿತೆ'ಯಿಂದ ಆಯ್ದು ಸಂಕಲಿಸಿದ ೧೦೧ ವಾರ್ಧಕ ಷಟ್ಪದಿಗಳಿವೆ. ಅಪ್ರಕಟಿತ.

೪೩. ಲಿಂಗಸ್ತೋತ್ರದ ವಚನ : ಸಂಪಾದನೆ ಸಿದ್ಧವೀರಣಾಚಾರ್ಯ (೧೬೫೦)ನ ಸಂಕಲಿತ ಕೃತಿ. ೨೭ ಶಿವಶರಣ, ಶರಣೆಯರ ೧೦೮ ವಚನಗಳಿವೆ.

೪೪. ಲಿಂಗಸ್ತೋತ್ರದ ಶರಪಟ್ಪದಿ : ಅಂಕಿತ-'ಅರುಣಾಚಲಾನ್ವಯ'. ೩೫ ಶರಷಟ್ಪದಿಗಳಿವೆ. ಅಪ್ರಕಟಿತ.

೪೫. ಲಿಂಗಸ್ತೋತ್ರಷಟ್ಪದಿ : ಸಂಪಾದನೆ ಸಿದ್ಧವೀರಣಾಚಾರ್ಯ (೧೬೫೦)ನ ಸಂಕಲಿತ ಕೃತಿ. ೧೧೧ ಭಾಮಿನೀ, ವಾರ್ಧಕ, ಶರಪಟ್ಪದಿಗಳಿವೆ. ಅಪ್ರಕಟಿತ.

೪೬. ಲಿಂಗಾರ್ಚನ ರಗಳೆ : ವಿರೂಪಾಕ್ಷ (ಸು. ೧೬೦೦) ಕೃತ. ಆದಿಯಲ್ಲಿ ವೃತ್ತವಿದ್ದು ಲಲಿತರಗಳೆಯಲ್ಲಿದೆ. ಅಪ್ರಕಟಿತ.

೪೭. ಲಿಂಗಾರ್ಚನೆ ರಗಳೆ : ಹಂಪೆಯ ಹರಿಹರ (೧೨೦೦) ಕೃತ. ಲಲಿತರಗಳೆಯಲ್ಲಿದ್ದು ಆದಿ, ಅಂತ್ಯಗಳಲ್ಲಿ ಒಂದೊಂದು ಕಂದಗಳಿವೆ.

೪೮. ಲಿಂಗಾಷ್ಟಕ : ೧೦ ವೃತ್ತಗಳಿವೆ. ವಿವರಗಳಿಲ್ಲ.

೪೯. ಶಂಕರದೇವರ ಕಂದ : ಶಂಕರದೇವ (ಸು. ೧೬೦೦) ಕೃತ. ಪ್ರಸನ್ನಶಂಕರಲಿಂಗಾಂಕಿತದ ೬೧೫ ಕಂದಗಳು ಉಪಲಬ್ಧವಿವೆ. ಈತನ ೧೧೭ ಕಂದಗಳನ್ನು ಸಂಪಾದನೆ ಚೆನ್ನಂಜೇದೇವ (೧೬೦೦) ಮತ್ತು ೧೨೨ ಕಂದಗಳನ್ನು ಸಂಪಾದನೆ ಸಿದ್ಧವೀರಣ್ಣೊಡೆಯರು (೧೬೫೦) ಸಂಕಲಿಸಿದ್ದಾರೆ.

೫೦. ಶಿವದರ್ಶನಾಷ್ಟಕ : ಶಂಕರದೇವ (ಸು.೧೬೦೦) ಕೃತ. 'ಕಂಡೆನೆನ್ನ ಕರಸರಸಿಜದೊಳ್' ಎಂದು ಮುಗಿಯುವ ೯ ಕಂದಗಳಿವೆ.

**ಜಂಗಮ**

೫೧. ಕಾರಣಾಗಮದ ವಾರ್ಧಿಕ : ಕಲ್ಯಾಣದ ಸ್ವಾಮಿ (೧೫೦೦) ಕೃತ. ೨೫ ವಾರ್ಧಕ ಷಟ್ಪದಿಗಳಿವೆ.

೫೨. ಜಂಗಮ ತಾರಾವಳಿ : ಕಾಶಿಕಾಂಡದ ಚೆನ್ನವೀರ(ಸು. ೧೫೦೦)ಕೃತ. ಪಲ್ಲವಿಸಹಿತ ೫ ಪದಗಳಿವೆ.ಅಪ್ರಕಟಿತ.

೫೩. ಜಂಗಮ ರಗಳೆ : ಸ್ವತಂತ್ರ ಸಿದ್ಧಲಿಂಗೇಶ್ವರ (೧೬ಶತ) ಕೃತ. ಲಲಿತರಗಳೆಯ ೧೦೮ ಸಾಲುಗಳಿವೆ. ಆದ್ಯಂತ್ಯಗಳಲ್ಲಿ ಒಂದೊಂದು ಕಂದವಿದೆ. ಪ್ರತಿಸಾಲು 'ಜಂಗಮಂ' ಎಂದು ಮುಗಿದಿದೆ.

೫೪. ಜಂಗಮಲಿಂಗ ರಗಳೆ : ಆದಿಯಲ್ಲಿ ಕಂದವಿದೆ. ಲಲಿತರಗಳೆಯಲ್ಲಿದ್ದು ಪ್ರತಿ ಪಂಕ್ತಿಯು'ಜಂಗಮಲಿಂಗ' ಎಂದು ಮುಗಿಯುತ್ತದೆ. ಕೃತಿ ಅಪೂರ್ಣವಾಗಿದೆ.

೫೫. ಜಂಗಮಸ್ತೋತ್ರ : 'ಗುರುಬಸವಲಿಂಗೇಶಾ'ಅಂಕಿತವಿದೆ. ೫ ವಾರ್ಧಕಗಳಿವೆ. ಪ್ರತಿ ಪದ್ಯವು 'ನಿಜಜಂಗಮದ ಚರಣಾಂಬುಜಕ್ಕೆ ಶರಣು' ಎಂದು ಮುಗಿದಿದೆ.

**ವಿಭೂತಿ**

೫೬. ವಿಭೂತಿಯ ರಗಳೆ : ಹಂಪೆಯ ಹರಿಹರ (೧೨೦೦) ಕೃತ. ಉತ್ಸಾಹರಗಳೆಯಲ್ಲಿವೆ, ಆದ್ಯಂತ್ಯಗಳಲ್ಲಿ ಕಂದ, ವೃತ್ತಗಳಿವೆ. ಪ್ರತಿಪಾದವು 'ವಿಭೂತಿ' ಎಂದು ಮುಗಿಯುತ್ತದೆ.

### ರುದ್ರಾಕ್ಷಿ

೫೭. ರುದ್ರಾಕ್ಷಮಹಿಮೆ : ಶ್ರೀ ಆರ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ. ವಿವರಗಳಿಲ್ಲ.

೫೮. ರುದ್ರಾಕ್ಷಿಯ ರಗಳೆ : ಹಂಪೆಯ ಹರಿಹರ (೧೨೦೦) ಕೃತ. ಲಲಿತರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಾದವು 'ರುದ್ರಾಕ್ಷಿ' ಎಂದು ಮುಗಿಯುತ್ತದೆ.

### ಪಂಚಾಕ್ಷರಿ; ಷಡಕ್ಷರಿ

೫೯. ನಮಃಶಿವಾಯ ರಗಳೆ : ಹಂಪೆಯ ಹರಿಹರ (೧೨೦೦) ಕೃತ. ಉತ್ಸಾಹರಗಳೆಯಲ್ಲಿದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಾದವು 'ನಮಃಶಿವಾಯ' ಎಂದು ಮುಗಿಯುತ್ತದೆ.

೬೦. ನಮಃಶಿವಾಯ ರಗಳೆ :ಕರ್ತೃ ಅಜ್ಞಾತ. ಉತ್ಸಾಹ ರಗಳೆಯಲ್ಲಿನ ಕೃತಿಯ ಆದಿಯಲ್ಲಿ ತರಳ ವೃತ್ತವಿದೆ. ಪ್ರತಿಪಾದವು 'ನಮಃಶಿವಾಯ' ಎಂದು ಕೊನೆಗೊಂಡಿದೆ. ಅಪ್ರಕಟಿತ.

೬೧. ನಮಃಶಿವಾಯ ರಗಳೆ : ಕರ್ತೃ ಅಜ್ಞಾತ. ಕೃತಿಗೆ 'ಪಂಚಾಕ್ಷರೀರಗಳೆ' ಎಂದು ಮತ್ತೊಂದು ಹೆಸರಿದೆ. ಉತ್ಸಾಹ ರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಾದವು 'ನಮಃಶಿವಾಯ' ಎಂದು ಮುಗಿಯುತ್ತದೆ. ಅಪ್ರಕಟಿತ.

೬೨. ನಮಃಶಿವಾಷ್ಟಕ : ಶ್ರೀ ಫ.ಗು. ಹಳಕಟ್ಟಿಯವರು ಈ ಕೃತಿಯು ೧೬–೧೭ನೆಯ ಶತಮಾನದ್ದೆಂದು ತಿಳಿಸಿದ್ದಾರೆ. ವಿವರಗಳಿಲ್ಲ.

೬೩. ಪಂಚಾಕ್ಷರಿಯ ರಗಳೆ : ಹಂಪೆಯ ಹರಿಹರ (೧೨೦೦) ಕೃತ. ಮಂದಾನಿಲರಗಳೆಯಲ್ಲಿದೆ. ಆದಿಯಲ್ಲಿ ವೃತ್ತವಿದ್ದು ಅಂತ್ಯದಲ್ಲಿ ಕಂದವಿದೆ. ಪ್ರತಿಪಾದವು 'ಪಂಚಾಕ್ಷರೀ' ಎಂದು ಮುಗಿಯುತ್ತದೆ.

೬೪. ಭೀಮಕವೀಶ್ವರ ರಗಳೆ : ಭೀಮಕವಿ (೧೩೬೯) ಕೃತ. ಉತ್ಸಾಹರಗಳೆಯಲ್ಲಿದ್ದು ಆದ್ಯಂತಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಾದವು 'ಓಂ ನಮಃಶಿವಾಯ' ಎಂದು ಮುಗಿಯುತ್ತದೆ.

೬೫. ಮಂತ್ರಮಹತ್ವದ ರಗಳೆ : ಕರ್ತೃ ಅಜ್ಞಾತ. ಉತ್ಸಾಹರಗಳೆಯಲ್ಲಿದೆ. ಆದಿಯಲ್ಲಿ ಕಂದವೊಂದಿದ್ದು ಅಂತ್ಯದಲ್ಲಿ ೩ ಕಂದಗಳಿವೆ. ಪ್ರತಿ ಎರಡು ಸಾಲಿನ ಪದ್ಯದ ಅಂತ್ಯದಲ್ಲಿ 'ಓಂ ನಮಃಶಿವಾಯ' ಎಂದಿದೆ. ಅಪ್ರಕಟಿತ.

೬೬. ಶಿವಮಂತ್ರ ಪ್ರತಿಷ್ಠಾಪನ ವಾರ್ಧಿಕ : ವಿವರಗಳಿಲ್ಲ. ಅಪ್ರಕಟಿತ.

೬೭. ಷಡಕ್ಷರಕಂದ : ಕೊಂಡಗುಳಿ ಕೇಶಿರಾಜ (೧೧೦೭–೧೧೩೨) ಕೃತ. 'ಮಂತ್ರಮಹತ್ವದ ಕಂದ'ವೆಂಬ ಮತ್ತೊಂದು ಹೆಸರಿದೆ. ಕೃತಿ ಎಳಮಲೆ ಗುರುಶಾಂತದೇವ (೧೬೨೦) ನಿಂದ ಸಂಕಲಿತವಾಗಿದೆ. ೧೧೦ ಕಂದಗಳಿದ್ದು ಪ್ರತಿಯೊಂದು 'ಓಂ ನಮಃಶಿವಾಯೆಂಬ ಪದಂ' ಎಂದು ಮುಗಿದಿವೆ.

೬೮. ಷಡಕ್ಷರ ಮಂತ್ರಸ್ತೋತ್ರ : ಎಳಂದೂರು ಷಡಕ್ಷರಿ (೧೬೫೫—೭೭) ಕೃತ. ಉತ್ಸಾಹ ರಗಳೆಯಲ್ಲಿದ್ದು ಆದಿಯಲ್ಲಿ ಒಂದು ಕಂದ ಹಾಗೂ ಅಂತ್ಯದಲ್ಲಿ ಎರಡು ಕಂದಗಳಿವೆ. ಪ್ರತಿಪಾದವು 'ಓಂ ನಮಃಶಿವಾಯ' ಎಂದು ಮುಗಿಯುತ್ತದೆ.

೬೯. ಷಡಕ್ಷರ ರಗಳೆ : ಶಂಕರದೇವ (ಸು. ೧೬೦೦)ನ ಉತ್ಸಾಹ ರಗಳೆಯ ಕೃತಿಯ ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿ ಎರಡು ಸಾಲಿನ ಪದ್ಯದ ಅಂತ್ಯದಲ್ಲಿ 'ಶಂಕರರಾಯ ಓಂ ನಮಃಶಿವಾಯ' ಎಂದಿದೆ.

### ಅರುವತ್ತು ಮೂವರು ಪುರಾತನರು

೭೦. ಅರವತ್ತು ಮೂವರು ಪುರಾತನರ ನುತಿ : ಪಗಡದಿನ್ನೆ ನನ್ನಪ್ಪ ಶಾಸ್ತ್ರಿ (೧೯ಶತ) ಕೃತ. ಹಾಡಿನಲ್ಲಿದೆ.

೭೧. ಅರುವತ್ತು ಮೂವರು ಪುರಾತನರ ನೆನಹು : ಗುರುಪುರದ ಮಲ್ಲಿಕಾರ್ಜುನ (ಸು. ೧೪೦೦) ಕೃತ. ಲಲಿತರಗಳೆಯಲ್ಲಿದೆ. ಆದಿಯಲ್ಲಿ ವೃತ್ತವಿದ್ದು ಅಂತ್ಯದಲ್ಲಿ ಕಂದವಿದೆ.

೭೨. ಅರುವತ್ತು ಮೂವರು ತ್ರಿಪದಿ : ನಿಜಗುಣಶಿವಯೋಗಿ (ಸು. ೧೫೮೦) ಕೃತ. ೭೭ ತ್ರಿಪದಿಗಳಿವೆ.

೭೩. ಅರುವತ್ತು ಮೂವರು ತ್ರಿವಿಧಿ : ಕಳಲೆ ನಂಜರಾಜ (ಸು. ೧೭೪೦) ಕೃತ. ೬೫ ತ್ರಿವಿಧಿಗಳಿದ್ದು ಪ್ರತಿಯೊಂದು 'ಪೊಡಮಡುವೆ ಮನದಣಿಯಲು' ಎಂದು ಮುಗಿಯುತ್ತವೆ. ಅಪ್ರಕಟಿತ.

೭೪. ಅರುವತ್ತು ಮೂವರು ಪ್ರಮಥಗಣಾಧೀಶ್ವರರ ಸ್ತುತಿ : ಶ್ರೀ ಆರ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ. ವಿವರಗಳಿಲ್ಲ.

೭೫. ಪ್ರಾಕ್ತನ ಗಣ ಕಥಾವಳಿ : ಪಗಡಿದಿನ್ನೆ ನನ್ನಪ್ಪ (೧೯ ಶತ) ಕೃತ. ನಿಜಗುಣರ 'ತ್ರಿಪದಿ'ಯನ್ನು ಆಧರಿಸಿದೆ. ಭಾಮಿನಿ ಷಟ್ಪದಿಯಲ್ಲಿನ ೭೨ ಪದ್ಯಗಳಿವೆ.

೭೬. ಪುರಾತನ ನಾಮಾವಳಿ : ಅಬ್ಬಿಗೇರಿ ಅನ್ನದಾನ ಶಾಸ್ತ್ರಿ (೧೯ಶತ) ಕೃತ. ಶರಪಟ್ಪದಿ. ಅಪ್ರಕಟಿತ.

೭೭. ಪುರಾತನರ ತ್ರಿವಿಧಿ : ಹೊನ್ನಬಸವಶೆಟ್ಟಿ ಶಿವಬಸಪ್ಪ ಕೃತ. ೬೮ ತ್ರಿವಿಧಿಗಳಿವೆ.

೭೮. ಪುರಾತನರ ರಗಳೆ : ಕರ್ತೃ ಮಲ್ಲಿಕಾರ್ಜುನ. ವಿವರಗಳಿಲ್ಲ.

## ಶರಣರ ನಾಮಾವಳಿ

೭೯. ಅವಧಾರಭವಾಷ್ಟಕ : ಕರ್ತೃ ಅಜ್ಞಾತ. ೮ ಕಂದ ಹಾಗೂ ಅಂತ್ಯದಲ್ಲಿ ಒಂದು ಸಂಸ್ಕೃತ ಶ್ಲೋಕವಿದೆ. ಪ್ರತಿ ಕಂದವೂ 'ಅವಧಾರಭವಾ' ಎಂದು ಮುಗಿಯುತ್ತದೆ.

೮೦. ಅಷ್ಟೋತ್ತರ ಗಣನಾಮದ ಅಷ್ಟಕ : ಶ್ರೀ ಫ. ಗು. ಹಳಕಟ್ಟಿಯವರು ಈ ಕೃತಿಯ ಕಾಲವನ್ನು ೧೬–೧೭ ನೆಯ ಶತಮಾನವೆಂದಿದ್ದಾರೆ. ವಿವರಗಳಿಲ್ಲ.

೮೧. ಅಸಂಖ್ಯಾತ ರಗಳೆ : ಗುರುಪುರದ ಮಲ್ಲಿಕಾರ್ಜುನ (ಸು. ೧೪೦೦) ಕೃತ. ಲಲಿತರಗಳೆಯಲ್ಲಿದೆ. ಆದಿ ಅಂತ್ಯಗಳಲ್ಲಿ ಒಂದು ವೃತ್ತ ಮತ್ತು ಒಂದು ಕಂದಗಳಿವೆ.

೮೨. ಎಲ್ಲ ಪುರಾತನರ ತ್ರಿವಿಧಿ : ಅಂಕಿತ-'ಅರುಣಾಚಲೇಶ'. ೭೭ ತ್ರಿವಿಧಿಗಳಿವೆ.

೮೩. ಎಲ್ಲಾ ಪುರಾತನರ ತ್ರಿಪದಿ : ಕರ್ತೃ ಅಜ್ಞಾತ. (ಸು. ೧೬೦೫) ೬೩ ತ್ರಿಪದಿಗಳಿವೆ.

೮೪. ಗಣಂಗಳ ತಾರಾವಳಿ : ಅಂಕಿತ-'ಚೆನ್ನವೀರೇಶ'. ಪಲ್ಲವಿ ಸಹಿತ ೫ ಪದಗಳಿವೆ. ಅಪ್ರಕಟಿತ.

೮೫. ಗಣಂಗಳ ನೂರಾಎಂಟು ನಾಮಾವಳಿ: ಅಂಕಿತ-'ಗುರುಸಿದ್ಧಲಿಂಗೇಶ'. ಪಲ್ಲವಿಸಹಿತವಾದ ೭ ವಾರ್ಧಕಗಳಿವೆ. ಅಪ್ರಕಟಿತ.

೮೬. ಗಣಂಗಳ ನೂರೆಂಟು ನಾಮ : ಅಂಕಿತ-'ಗುರುಸಿದ್ಧಲಿಂಗೇಶ'. ಪಲ್ಲವಿ ಹಾಗೂ ೯ ವಾರ್ಧಕಗಳಿವೆ. ಅಪ್ರಕಟಿತ.

೮೭. ಗಣನಾಯಕ ಸ್ತವ : ಕರ್ತೃ ಅಜ್ಞಾತ. ೯ ಶ್ಲೋಕಟೀಕೆಗಳಿವೆ. ಅಪ್ರಕಟಿತ.

೮೮. ಗಣರಗಳೆ : ಐನೂಲಿ ಕರಿಬಸವಾರ್ಯ (೧೭೪೫-೧೮೪೦) ಕೃತ. ಅಲಭ್ಯ.

೮೯. ಗಣಸಹಸ್ರನಾಮ : ಶ್ರೀಗಿರಿವಾಸ ನೀಲಕಂಠೇಶನ ಶಿಷ್ಯ ವೀರಭದ್ರ ಕೃತ. ೧೪೦ ಸಾಂಗತ್ಯಗಳಿವೆ. ಅಪ್ರಕಟಿತ.

೯೦. ಗಣಾಷ್ಟಕ : ಅಂಕಿತ-'ಮಳೆಯ ಮಲ್ಲೇಶ'. ಪಲ್ಲವಿ ಹಾಗೂ ೯ ವೃತ್ತಗಳಿವೆ.

೯೧. ನಿರಂಜನ ಲಿಂಗ ಕಂದ : ವಿರತ ತೋಂಟದಾರ್ಯ (೧೬೧೬) ಕೃತ. 'ಶರಣಸ್ತೋತ್ರದ ಕಂದ'ವೆಂಬ ಹೆಸರಿದೆ. 'ನಿರಂಜನ ಲಿಂಗಾ' ಎಂದು ಮುಗಿಯುವ ೧೦೫ ಕಂದಗಳಿವೆ.

೯೨. ಮಿಶ್ರಸ್ತೋತ್ರದ ತ್ರಿವಿಧಿ : ಸಿದ್ಧರಾಮ (೧೧೬೦) ಕೃತ.'ಯೋಗಿನಾಥ' ಅಂಕಿತದಲ್ಲಿನ ೧೧೯ ತ್ರಿವಿಧಿಗಳಿವೆ.

೯೩. ಶರಣರ ನೂರಾಎಂಟು ನಾಮಾವಳಿ : ಅಂಕಿತ-'ಸಿದ್ಧೇಶ'. ಪಲ್ಲವಿ ಮತ್ತು ೮ ವಾರ್ಧಕಗಳಿವೆ. ಅಪ್ರಕಟಿತ.

೯೪. ಶರಣ ಶತಾಷ್ಟನಾಮಾಷ್ಟಕ : ಅಂಕಿತ-'ಶಾಂತೇಶ'. ಹಾಡಿನಲ್ಲಿದ್ದು ಪಲ್ಲವಿ ಹಾಗೂ ೧೪ ನುಡಿಗಳಿವೆ. ಅಪ್ರಕಟಿತ.

೯೫. ಶಿವಗಣಂಗಳ ರಗಳೆ : ಅಂಕಿತ-'ಷಡಕ್ಷರಲಿಂಗ'. ಲಲಿತರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಅಪ್ರಕಟಿತ.

೯೬. ಸಹಸ್ರ ಗಣನಾಮ : ಪಾಲ್ಕುರಿಕೆ ಸೋಮ (೧೨೯೦) ಕೃತ. ಕಂದ, ನಾಮಾವಳಿಗಳಿವೆ.

೯೭. ಸಹಸ್ರ ಗಣನಾಮ : ಮಲ್ಲಿಕಾರ್ಜುನ (ಸು. ೧೬೦೦) ಕೃತ. ಪಾಲ್ಕುರಿಕೆ ಸೋಮನ ಕೃತಿಯಾಧಾರಿತ, ಅಪ್ರಕಟಿತ.

೯೮. ಸಹಸ್ರ ಗಣನಾಮ ತಾರಾವಳಿ : ಅಂಕಿತ 'ಶಾಂತವೀರೇಶ' (ಸು. ೧೭೦೦) ಹಾಡು. ಅಪ್ರಕಟಿತ.

೯೯. ಹರಗಣ ಸ್ತೋತ್ರನಾಮ : ನೂರೊಂದು ಕೃತ. ೭ ಹಾಡುಗಳಿವೆ. ಅಪ್ರಕಟಿತ.

## ಶರಣೆಯರ ಸ್ತುತಿ

೧೦೦. ನೂರೆಂಟು ಶರಣೆಯರ ಮಂಗಳಾಷ್ಟಕ : ಕರ್ತೃ ಅಜ್ಞಾತ. ೮ ವೃತ್ತ ಮತ್ತು ಅಂತ್ಯದಲ್ಲಿ ಸಂಸ್ಕೃತದ ಶ್ಲೋಕವೊಂದಿದೆ. ಅಪ್ರಕಟಿತ.

೧೦೧. ಪುರಾತನ ದೇವಿಯರ ತ್ರಿವಿಧಿ : ಕರ್ತೃ ಅಜ್ಞಾತ (ಸು. ೧೬೦೧) 'ಪುರಾತನ ಶರಣೆಯರ ತ್ರಿಪದಿ' ಎಂಬ ಹೆಸರೂ ಇದೆ. 'ಶರಣಾಗು' ಎಂದು ಮುಗಿಯುವ ೫೫ ತ್ರಿವಿಧಿಗಳಿವೆ.

೧೦೨. ಶರಣೆಯರ ೧೦೮ ನಾಮಾವಳಿ : ವಿರತ ತೋಂಟದಾರ್ಯ (೧೬೧೬) ಕೃತ ಪಲ್ಲವಿ ಮತ್ತು ೭ ವಾರ್ಧಕ ಷಟ್ಪದಿಗಳಿವೆ.

**ನೂರೊಂದು ವಿರಕ್ತರು**

೧೦೩. ನೂರೊಂದು ವಿರತರ ನಾಮ : ಕರ್ತೃ ಅಜ್ಞಾತ. ಪಲ್ಲವಿ ಮತ್ತು ೯ ವಾರ್ಧಕಗಳಿವೆ.

**ಮಠಾಧೀಶರು ಇತ್ಯಾದಿ**

೧೦೪. ಅಟವೀಶ ಭಜನಾಮೃತ : ವೀರಪ್ಪಾರಾಧ್ಯ (೧೯ ಶತ) ಕೃತ. ಸಿದ್ಧಗಂಗಾ ಶ್ರೀಗಳ ಸ್ತುತಿ. ಶರಪಟ್ಪದಿ ಅಪ್ರಕಟಿತ.

೧೦೫. ಉಜ್ಜನಿ ಪಟ್ಟದ ಸ್ವಾಮಿಗಳಯ್ಯನವರ ಅಷ್ಟಕ : ಅಂಕಿತ–'ಶಿವಲಿಂಗೇಶಗುರು'. 'ಉಜ್ಜನಿ ಪುರದ ಪಟ್ಟದ ಚೆನ್ನವೀರ ದಯಾನಿಧೇ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೧೦೬. ಉಜ್ಜಯಿನಿ ಸಿದ್ಧಲಿಂಗಾಷ್ಟಕ : ಕರ್ತೃ ಅಜ್ಞಾತ. 'ಉಜ್ಜಯಿನಿ ಸಿದ್ಧಲಿಂಗ ಶುಭಾಂಗನಾ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೧೦೭. ಕಿರೀಟ ಚೆನ್ನಬಸವ ಸ್ತುತಿ : ಕರ್ತೃ ಅಜ್ಞಾತ. ೧೨ ವೃತ್ತಪದ್ಯಗಳು 'ಶ್ರೀ ಚೆನ್ನಬಸವೇಶ್ವರಾ' ಅಥವಾ 'ಏಳೆಮಲ್ಲಿಗೆ ಪುರವಾಸ ಮಹೇಶ ಕಿರೀಟ ಚೆನ್ನಬಸವೇಶ್ವರ' ಎಂದು ಮುಗಿಯುತ್ತವೆ. ಅಪ್ರಕಟಿತ.

೧೦೮. ಕೊಟ್ಟೂರ ಬಸವಲಿಂಗ ಕೃಪಾಂಗನಾಷ್ಟಕ : ಕರ್ತೃ ಅಜ್ಞಾತ. 'ಬಸವಲಿಂಗ ಕೃಪಾಂಗನಾ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೧೦೯. ಕೊಟ್ಟೂರಯ್ಯನ ಅಷ್ಟಕ : ಕರ್ತೃ ಅಜ್ಞಾತ. ೮ ವೃತ್ತಗಳಿವೆ. ಅಪ್ರಕಟಿತ.

೧೧೦. ಕೊಟ್ಟೂರಯ್ಯನ ಕಂದ : ಮುಖಬೋಳ ಸಿದ್ಧರಾಮ (೧೯೫೪) ಕೃತ. 'ಬಸವಲಿಂಗಪ್ರಭುವೇ' ಎಂದು ಮುಗಿಯುವ ೧೫ ಕಂದಗಳಿವೆ.

೧೧೧. ಗಂಗಾಂಬಿಕಾ ಸ್ತುತಿ : ಬಸವನ ಪತ್ನಿ ಗಂಗಾಂಬಿಕಾ ನುತಿ. ಕರ್ತೃ ಅಜ್ಞಾತ. ೮ ವೃತ್ತ ಹಾಗೂ ಕೊನೆಯಲ್ಲಿ ಕಂದವಿದೆ. ವೃತ್ತಗಳು 'ಗಂಗಾಂಬಿಕಾ ಪಾಹಿಮಾಂ' ಎಂದು ಮುಗಿಯುತ್ತವೆ. ಅಪ್ರಕಟಿತ.

೧೧೨. ಚೆನ್ನಬಸವ ರಗಳೆ : ಪಾಲ್ಕುರಿಕೆ ಸೋಮ (೧೨೫೦) ಕೃತ. ಉತ್ಸಾಹ ರಗಳೆಯಲ್ಲಿದ್ದು ಆದಿಯಲ್ಲಿ ಒಂದು ಕಂದ ಮತ್ತು ಅಂತ್ಯದಲ್ಲಿ ೩ ಕಂದಗಳಿವೆ. ಪ್ರತಿಪಾದವು 'ಚೆನ್ನಬಸವ' ಎಂದು ಮುಗಿದಿದೆ.

೧೧೩. ಚೆನ್ನಬಸವೇಶ್ವರ ತಾರಾವಳಿ ಅಷ್ಟಕ : ಕರ್ತೃ ಅಜ್ಞಾತ. ೮ ವೃತ್ತಗಳಿವೆ. ಅಪ್ರಕಟಿತ.

೧೧೪. ಚೆನ್ನಬಸವೇಶ್ವರನ ಅಷ್ಟಕ : ಕರ್ತೃ ಅಜ್ಞಾತ. ವಿವರಗಳಿಲ್ಲ.

೧೧೫. ಚೆನ್ನಬಸವೇಶ್ವರ ವೃತ್ತಾಷ್ಟಕ : ಕರ್ತೃ ಅಜ್ಞಾತ. ೯ ವೃತ್ತಗಳಿದ್ದು 'ಶ್ರೀ ಚೆನ್ನದಂಡೇಶ್ವರಾ' ಎಂದು ಮುಗಿದಿವೆ. ಅಪ್ರಕಟಿತ.

೧೧೬. ತಿಪ್ಪೇರುದ್ರನ ಪಲ್ಲಕ್ಕಿ ತಾರಾವಳಿ : ಕರ್ತೃ ಬಸವಲಿಂಗ. ೯ ಪದ್ಯ. ಅಪ್ರಕಟಿತ.

೧೧೭. ತಿಪ್ಪೇರುದ್ರಶತಕ : ವೃತ್ತದಲ್ಲಿದ್ದು ಆರಂಭದ ೪ ಪದ್ಯಗಳು ಲಭಿಸಿವೆ.

೧೧೮. ಜಯಸಿದ್ಧಲಿಂಗ ರಗಳೆ : ಸಿದ್ಧಲಿಂಗಮುನಿ ಕೃತ. ಲಲಿತರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಾದವೂ 'ಜಯ ಸಿದ್ಧಲಿಂಗೇಶ' ಎಂದು ಮುಗಿದಿದೆ. ಅಪ್ರಕಟಿತ.

೧೧೯. ತೋಂಟದ ಸಿದ್ಧದೇಶಿಕನ ಭಾವರತ್ನಾಭರಣ : ಸಿದ್ಧನಂಜೇಶ (೧೬೫೦) ಕೃತ. ವಾರ್ಧಕದ ೧೧೧ ಪದ್ಯಗಳಿವೆ. ಪ್ರತಿ ಷಟ್ಪದಿಯೂ 'ಗುರುವೆ ತೋಂಟದ ಸಿದ್ಧಲಿಂಗ ಮತ್ಕಲ್ಪತರುವೇ' ಎಂದು ಮುಗಿಯುತ್ತದೆ.

೧೨೦. ತೋಂಟದ ಸಿದ್ಧಲಿಂಗಸ್ತೋತ್ರ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ. ಷಟ್ಪದಿಯಲ್ಲಿದೆ.

೧೨೧. ತೋಂಟದ ಸಿದ್ಧೇಶ್ವರನ ತಾರಾವಳಿ : ೯ ಪದ್ಯಗಳಿವೆ. ವಿವರಗಳು ಅಲಭ್ಯ. ಅಪ್ರಕಟಿತ.

೧೨೨. ತೋಂಟದ ಸಿದ್ಧೇಶ್ವರನ ವಾರ್ಧಕ : ಕರ್ತೃ ಅಜ್ಞಾತ. ೫ ವಾರ್ಧಕಗಳಿವೆ. ಅಪ್ರಕಟಿತ.

೧೨೩. ತೋಂಟದ ಸಿದ್ಧೇಶಾಷ್ಟಕ : ಕರ್ತೃ ಅಜ್ಞಾತ. ೮ ವೃತ್ತ ಹಾಗೂ ಕೊನೆಯಲ್ಲಿ ಕಂದವಿವೆ. ಅಪ್ರಕಟಿತ.

೧೨೪. ತೋಂಟದಾರ್ಯ ರಗಳೆ : ವಿರತ ತೋಂಟದಾರ್ಯ (೧೬೧೬) ಕೃತ. ಉತ್ಸಾಹ ರಗಳೆಯಲ್ಲಿದೆ. ಆದಿಯಲ್ಲಿ ವೃತ್ತವಿದ್ದು ಅಂತ್ಯದಲ್ಲಿ ೩ ಕಂದಗಳಿವೆ. ಪ್ರತಿ ಎರಡನೆಯ ಪಾದದ ಅಂತ್ಯದಲ್ಲಿ 'ಮೆರೆದ ಸಿದ್ಧಲಿಂಗ' ಎಂದಿದೆ.

೧೨೫. ಭಿಕ್ಷಾಚರ್ಯೆಯ ಹಾಡು : ತೋಂಟದ ಸಿದ್ಧಲಿಂಗನ ಸ್ತುತಿ. ಹಾಡಿನಲ್ಲಿದೆ. ಅಪ್ರಕಟಿತ.

೧೨೬. ಸಿದ್ಧಲಿಂಗನ ಅಷ್ಟಕ : ಕರ್ತೃ ಅಜ್ಞಾತ. ೮ ವೃತ್ತಗಳಿವೆ. ಪ್ರಾಯಿಕವಾಗಿ ವೃತ್ತಗಳು 'ಪಾಲಿಸೆನ್ನ ಸಿದ್ಧಲಿಂಗಮಾಪತೇ' ಎಂದು ಮುಗಿಯುತ್ತವೆ. ಅಪ್ರಕಟಿತ.

೧೨೭. ಸಿದ್ಧೇಶ್ವರ ತ್ರಿವಿಧಿ : ಅಂಕಿತ-ಕೊಳಗುಂದದ ಚೆನ್ನಬಸವ. ೬೭ ತ್ರಿವಿಧಿಗಳಿವೆ. ಪ್ರಾಯಿಕವಾಗಿ 'ಸಿದ್ಧ ದಯವಾಗು', 'ಗುರುಸಿದ್ಧ ದಯವಾಗು' ಎಂದು ಮುಗಿಯುತ್ತವೆ. ಅಪ್ರಕಟಿತ.

೧೨೮. ಸಿದ್ಧೇಶ್ವರ ತ್ರಿಪದಿ : ನಂದಿ (ಸು. ೧೬೦೦) ಕೃತ. ೫೫ ತ್ರಿಪದಿಗಳಿವೆ. ಪದ್ಯಗಳು 'ಸಿದ್ಧ ದಯವಾಗು' ಎಂದು ಮುಗಿಯುತ್ತವೆ.

೧೨೯. ಸಿದ್ಧೇಶ್ವರನಷ್ಟಕ : ೮ ವೃತ್ತಗಳಿವೆ. ವಿವರಗಳಿಲ್ಲ.

೧೩೦. ದುರದುಂಡೇಶ್ವರ ವಾರ್ಧಿಕ : ವಿವರಗಳಿಲ್ಲ.

೧೩೧. ನಾಗಭೂಷಣ ಶಿವಯೋಗಿಗಳ ಅಷ್ಟಕ : ಕರ್ತೃ ಅಜ್ಞಾತ. (೧೯ ಶತ). ಭಾಮಿನೀ ಷಟ್ಪದಿಯಲ್ಲಿನ ೯ ಪದ್ಯಗಳಿವೆ.

೧೩೨. ನೀಲಮ್ಮನ ತ್ರಿಪದಿ : ಕರ್ತೃ ಅಜ್ಞಾತ (ಸು. ೧೫೫೦). ೫೫ (೫೬?) ಪದ್ಯಗಳಿವೆ. ಕೆಲವು ಪದ್ಯಗಳು 'ನೀಲಮ್ಮ ಕೃಪೆಯಾಗು' ಎಂದು ಮುಗಿದಿವೆ.

೧೩೩. ನೀಲಲೋಚನೆಯ ಸ್ತವಿತ್ಯ : ಕರ್ತೃ ಅಜ್ಞಾತ. ಪಲ್ಲವಿ ಹಾಗೂ ೫ ವಾರ್ಧಕಗಳಿವೆ. ಅಪ್ರಕಟಿತ.

೧೩೪. ನೀಲಾಂಬಿಕಾ ಲಲಿತಸ್ತೋತ್ರ : ಷಟ್ಪದಿಯಲ್ಲಿನ ಈ ಕೃತಿಯನ್ನು ಶ್ರೀ ಆರ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ. ವಿವರಗಳಿಲ್ಲ.

೧೩೫. ನೀಲಾಂಬಿಕಾ ಸ್ತುತಿ : ಕರ್ತೃ ಅಜ್ಞಾತ. ಭಾಮಿನೀ ವಾರ್ಧಕಗಳ ೨೫ ಷಟ್ಪದಿಗಳಿವೆ.

೧೩೬. ನೀಲಾಂಬಿಕಾ ಸ್ತೋತ್ರ : ಕರ್ತೃ ಅಜ್ಞಾತ. ಪಲ್ಲವಿ ಸಹಿತ ೯ ನುಡಿಗಳಿವೆ. ಅಪ್ರಕಟಿತ.

೧೩೭. ನೀಲಾಂಬಿಕೆಯ ತತ್ತ್ವಮಾಲಾಸ್ತೋತ್ರ. ಕರ್ತೃ ಅಜ್ಞಾತ. ೨೪ ವಾರ್ಧಕಗಳಿವೆ. ಅಪ್ರಕಟಿತ.

೧೩೮. ಪಂಚಾಚಾರ್ಯರ ಶೋಭನದ ತ್ರಿವಿಧಿ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ. ವಿವರಗಳಿಲ್ಲ.

೧೩೯. ಮಠಸ್ಥಲ ತ್ರಿವಿಧಿ : ಗವಿಯ ಸಿದ್ಧಾಂಕ ಕೃತ. ಚತುರಾಚಾರ್ಯರ ಸ್ತುತಿರೂಪವಾದ ೬೭ ತ್ರಿವಿಧಿಗಳಿವೆ. ಅಪ್ರಕಟಿತ.

೧೪೦. ಅಲ್ಲಮಪ್ರಭುವಿನಷ್ಟಕ : ಕರ್ತೃ ಅಜ್ಞಾತ. (ಸು. ೧೭೦೦) 'ಪ್ರಭುದೇವಾಷ್ಟಕ'ವೆಂಬ ಹೆಸರಿದೆ. 'ಅಲ್ಲಮದೇವನಂ ಸುಖವೀವನಂ' ಎಂದು ಮುಗಿಯುವ ೮ ಪದ್ಯಗಳಿವೆ. ಅಪ್ರಕಟಿತ.

೧೪೧. ಪ್ರಭುದೇವರ ಅಷ್ಟಕ : ಕರ್ತೃ ಅಜ್ಞಾತ. 'ಯತಿಪ್ರಭುರಾಯನಾ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೧೪೨. ಪ್ರಭುದೇವರ ತ್ರಿವಿಧಿ : ಜಟಾಶಂಕರದೇವ (ಸು. ೧೩೨೫) ಕೃತ. ೧೧೦ ತ್ರಿವಿಧಿಗಳಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಬಹುಪಾಲು ಪದ್ಯಗಳು 'ಪ್ರಭುವೆ ಶರಣಾಗು' ಎಂದು ಮುಗಿದಿವೆ.

೧೪೩. ಪ್ರಭುದೇವರ ರಗಳೆ : ಕರ್ತೃ ಅಜ್ಞಾತ. ಉತ್ಸಾಹ ರಗಳೆಯಲ್ಲಿದ್ದು ಆದಿಯಲ್ಲಿ ವೃತ್ತವಿದೆ, ಅಂತ್ಯದಲ್ಲಿ ಕಂದವಿದೆ. ಪ್ರತಿಪಾದವು 'ಪ್ರಭುವೆ ಶರಣು' ಎಂದು ಮುಗಿಯುತ್ತದೆ.

೧೪೪. ಪ್ರಭುದೇವರ ಸ್ತೋತ್ರದ ತ್ರಿವಿಧಿ : ಮರಿರಾಚವಟ್ಟೇಶ (ಸು. ೧೬೨೦) ಕೃತ. 'ಪ್ರಭುವೆ ಶರಣಾಗು' ಎಂದು ಮುಗಿಯುವ ೬೩ ತ್ರಿವಿಧಿಗಳಿವೆ. ಅಪ್ರಕಟಿತ.

೧೪೫. ಪ್ರಭುದೇವಸ್ತುತಿ : ಕರ್ತೃ ಅಜ್ಞಾತ. ೧೧ ಕಂದಗಳಿವೆ. ಅಪೂರ್ಣ.

೧೪೬. ಅಕ್ಷರಾಂಕನ ಗದ್ಯ : ಪಾಲ್ಕುರಿಕೆ ಸೋಮ (೧೨೯೦) ಕೃತ. ಕಂದ–ವೃತ್ತಗಳಲ್ಲಿದೆ. ೪೦ ಪದ್ಯಗಳಿವೆ. ವೃತ್ತಗಳು 'ಬಸವೇಶ ಪಾಹಿಮಾಂ' ಎಂದು ಮುಕ್ತಾಯಗೊಂಡಿವೆ.

೧೪೭. ಚಿಕ್ಕಬಸವ ತ್ರಿವಿಧಿ : ಶ್ರೀ ಸಿ. ಮಹಾದೇವಪ್ಪನವರು ಇದರ ಕರ್ತೃ ಸೋಲೂರ ಚಿಕ್ಕಬಸವ (೧೫ಶ) ನಿರಬಹುದೆಂದಿದ್ದಾರೆ. ೫೩ ತ್ರಿಪದಿಗಳಿವೆ. ಅಪ್ರಕಟಿತ.

೧೪೮. ಜಯತು ಬಸವರಗಳೆ : ಅಂಕಿತ–'ಶಾಂತಮಲ್ಲಿಕಾರ್ಜುನ'. ಉತ್ಸಾಹರಗಳೆಯಲ್ಲಿದ್ದು ಆದಿಯಲ್ಲಿ ವೃತ್ತವಿದೆ. ಅಂತ್ಯದಲ್ಲಿ ೪ ಕಂದಗಳಿವೆ. ಪ್ರತಿಪಾದಾಂತ್ಯದಲ್ಲೂ 'ಜಯತುಬಸವ' ಎಂದಿದೆ.

೧೪೯. ಪಂಚರತ್ನ: ಪಾಲ್ಕುರಿಕೆ ಸೋಮ (೧೨೯೦) ಕೃತ. ೫ ಮಾಲಿನೀ ವೃತ್ತ ಹಾಗೂ ಅಂತ್ಯದಲ್ಲಿ ಶ್ಲೋಕವಿದೆ.

೧೫೦. ಬಸವ ಕಂದ : ಉಲ್ಲೇಖವಿದ್ದು ವಿವರಗಳಿಲ್ಲ.

೧೫೧. ಬಸವಗೀತ : ಮಲ್ಲಿಕಾರ್ಜುನ ಪಂಡಿತಾರಾಧ್ಯ (೧೧೬೦) ಕೃತ. ಅಲಭ್ಯ.

೧೫೨. ಬಸವ ತ್ರಿವಿಧಿ : ಕರ್ತೃ ಅಜ್ಞಾತ. ೪೪ ತ್ರಿವಿಧಿಗಳಿವೆ.

೧೫೩. ಬಸವನ ಪವಾಡ ರಗಳೆ : ಬಸವಲಿಂಗ ಕೃತ. ೫೪ ಪಂಕ್ತಿಗಳಿವೆ. ಕೃತಿಯ ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ.

೧೫೪. ಬಸವ ಭಕ್ತಿಸಾರ : ಮಹಾಂತದೇಶಿಕ (೧೯–೨೦ಶತ) ಕೃತ. ವಿವರಗಳು ಅಲಭ್ಯ.

೧೫೫. ಬಸವಮಹಿಮಾ ತ್ರಿವಿಧಿ ; ಘನಮಠದಾರ್ಯ (೧೮೩೦) ಕೃತ. ೧೦೦ ಪದ್ಯಗಳಿವೆ.

೧೫೬. ಬಸವರಗಳೆ : ಐಸೂಲಿ ಕರಿಬಸವಾರ್ಯ (೧೭೪೫–೧೮೪೦) ಕೃತ. ಅಲಭ್ಯ.

೧೫೭. ಬಸವರಾಜದೇವರ ತಾರಾವಳಿ : ಗರಣಿ ಬಸವಲಿಂಗ (ಸು. ೧೬೦೦) ಕೃತ. 'ಬಸವೇಶ್ವರನ ಮಹಿಮಾ ತಾರಾವಳಿ' ಎಂಬ ಹೆಸರೂ ಉಂಟು. ೨೭ ನುಡಿ, ಪಲ್ಲವಿ ಹಾಗೂ ಅಂತ್ಯದಲ್ಲಿ ೨ ಕಂದಗಳಿವೆ. ಅಪ್ರಕಟಿತ.

೧೫೮. ಬಸವರಾಜ ರಗಳೆ : ಅಂಕಿತ–'ಮದ್ಗುರುಶಾಂತಾ'. ಉತ್ಸಾಹರಗಳೆಯಲ್ಲಿದ್ದು ಆದಿ, ಅಂತ್ಯಗಳಲ್ಲಿ ಒಂದೊಂದು ಕಂದವಿದೆ. 'ಬಸವರಾಜ' ಎಂದು ಪ್ರತಿ ಪಾದವು ಮುಗಿಯುತ್ತದೆ.

೧೫೯. ಬಸವಲಿಂಗನಾಮಾಷ್ಟೋತ್ತರ : ಪಾಲ್ಕುರಿಕೆ ಸೋಮ (೧೨೯೦) ಕೃತ. ಉತ್ಸಾಹರಗಳೆಯಲ್ಲಿದ್ದು ಆದಿಯಲ್ಲಿ ಕಂದವಿದೆ. ೧೦೮ ಪಂಕ್ತಿಗಳಿವೆ. ಪ್ರತಿ ಸಾಲೂ 'ಬಸವಲಿಂಗ' ಎಂದು ಮುಗಿಯುತ್ತದೆ.

೧೬೦. ಬಸವ ಶತಕ : ಸಿದ್ಧನಂಜೇಶ (೧೬೫೦) ಕೃತ. ಅಲಭ್ಯ.

೧೬೧. ಬಸವ ಶತಕ : ಗಣೇಕಲ್ ಸಂಗಪ್ಪ (೧೮೩೨) ಕೃತ. ೧೦೦ ವೃತ್ತಗಳಿವೆ. ಪ್ರತಿವೃತ್ತವು 'ಶರಣಾಗತ ವಜ್ರಪಂಜರಾ' ಎಂದು ಮುಕ್ತಾಯವಾಗಿದೆ.

೧೬೨. ಬಸವಸ್ತುತಿ : ಐನೂಲಿ ಕರಿಬಸವಾರ್ಯ (೧೭೪೫–೧೮೪೦) ಕೃತ. ೧೭ ಭೋಗಷಟ್ಪದಿಗಳಲ್ಲಿದೆ.

೧೬೩. ಬಸವಸ್ತೋತ್ರದ ಕಂದ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ. ವಿವರಗಳಿಲ್ಲ.

೧೬೪. ಬಸವಸ್ತೋತ್ರದ ಕಂದಾಷ್ಟಕ ; ಕರ್ತೃ ಅಜ್ಞಾತ. 'ಗುರುಬಸವೇಶಾ' ಎಂದು ಮುಗಿಯುವ ೯ ಕಂದಗಳಿವೆ.

೧೬೫. ಬಸವಸ್ತೋತ್ರದ ತ್ರಿವಿಧಿ : ಸಿದ್ಧರಾಮ (೧೧೬೦) ಕೃತ. 'ಯೋಗಿನಾಥ' ಅಂಕಿತದ ೧೨೫ ತ್ರಿವಿಧಿಗಳಿವೆ.

೧೬೬. ಬಸವ ಸ್ತೋತ್ರದ ತ್ರಿವಿಧಿ : ಸಿದ್ಧಲಿಂಗ ಕೃತ. ೬೭ ಪದ್ಯಗಳಿವೆ. ಅಪ್ರಕಟಿತ.

೧೬೭. ಬಸವ ಸ್ತೋತ್ರದ ವಚನ : ಸಂಪಾದನೆ ಚೆನ್ನಂಜೇದೇವ (೧೬೭೦) ಸಂಕಲಿತ. ಈ ಕಟ್ಟುಗಳಲ್ಲಿ ೨ ಪ್ರಭೇದಗಳಿವೆ. ೧೨೩ ವಚನಗಳನ್ನುಳ್ಳ ಪ್ರತಿಗಳಲ್ಲಿ ೧೫ ಶಿವಶರಣ-ಶರಣೆಯರ ವಚನಗಳಿದ್ದು, ೧೪೨ ವಚನಗಳನ್ನುಳ್ಳ ಪ್ರತಿಯಲ್ಲಿ ೧೭ ಶಿವಶರಣ-ಶರಣೆಯರ ವಚನಗಳಿವೆ.

೧೬೮. ಬಸವ ಸ್ತೋತ್ರದ ವಚನ : ಸಂಪಾದನೆ ಬೋಳಬಸವ (೧೬೭೫) ಸಂಕಲಿತ. ೧೭ ಶಿವಶರಣ-ಶರಣೆಯರ ೧೨೪ ವಚನಗಳಿವೆ.

೧೬೯. ಬಸವ ಸ್ತೋತ್ರದ ಷಟ್ಪದಿ : ಸಂಪಾದನೆ ಚೆನ್ನಂಜೇದೇವ (೧೬೦೦) ಸಂಕಲಿತ, ಭಾಮಿನಿ, ವಾರ್ಧಕದಲ್ಲಿನ ೧೧೧ ಷಟ್ಪದಿಗಳಿವೆ. ಅಪ್ರಕಟಿತ.

೧೭೦. ಬಸವ ಸ್ತೋತ್ರ ರಸಾಯನ : ಅಂಕಿತ-'ರಜತಪುರೀಶ'. ಭೋಗ ಷಟ್ಪದಿಯ ೧೬೯ ಪದ್ಯಗಳಿವೆ. ಅಪ್ರಕಟಿತ.

೧೭೧. ಬಸವಾಷ್ಟಕ : ಕರ್ತೃ ಅಜ್ಞಾತ. ಪಲ್ಲವಿ ಹಾಗೂ ೮ ವೃತ್ತಗಳಿವೆ. 'ಬಸವೇಶ್ವರಾಷ್ಟಕ'ವೆಂಬ ಮತ್ತೊಂದು ಹೆಸರಿದೆ. ಪದ್ಯಗಳು 'ಬಸವನೂ' 'ಬಸವೇಶನೂ' ಎಂದು ಮುಗಿದಿವೆ. ಅಪ್ರಕಟಿತ.

೧೭೨. ಬಸವಾಷ್ಟೋತ್ತರ ಶತನಾಮ ಸ್ತೋತ್ರದ ಅರ್ಥ : ಕರ್ತೃ ಅಜ್ಞಾತ. ಸಂಸ್ಕೃತ ನಾಮಾವಳಿಗೆ ಕನ್ನಡ ಟೀಕೆ ಇದೆ. ಅಪ್ರಕಟಿತ.

೧೭೩. ಬಸವಾಷ್ಟೋತ್ತರ ಶತ ನಾಮಾವಳಿ : ಅಂಕಿತ-'ನೀಲಕಂಠಗುರು'. ಆದಿಯಲ್ಲಿ ಕಂದವಿದೆ. ಕೃತಿ ಮಂದಾನಿಲ ರಗಳೆಯಲ್ಲಿದ್ದು ಪ್ರತಿ ಪಾದವು 'ಬಸವನ ನಾಮಂ' ಎಂದು ಮುಗಿದಿದೆ.

೧೭೪. ಬಸವೇಶ್ವರನ ತಾರಾವಳಿ : ಕರ್ತೃ ಅಜ್ಞಾತ (ಸು. ೧೬೦೦). 'ಬಸವೇಶ್ವರನ ಚರಣಾಂಬುಜಕ್ಕೆ ಶರಣು' ಎಂದು ಮುಗಿಯುವ ೮೬ ವಾರ್ಧಕ ಷಟ್ಪದಿಗಳಿವೆ. ಅಪ್ರಕಟಿತ.

೧೭೫. ಬಸವೇಶ್ವರನ ನೂರೆಂಟು ನಾಮ : ವಿರತ ತೋಂಟದಾರ್ಯ (೧೬೧೬) ಕೃತ. ಪಲ್ಲವಿ ಮತ್ತು ೫ ವಾರ್ಧಕಗಳಿವೆ. ಅಪ್ರಕಟಿತ.

೧೭೬. ಬಸವೇಶ್ವರನ ಪಂಚಸ್ತೋತ್ರ: ಸಂಕಲಿತ ಕೃತಿ (ಸು. ೧೮ಶತ). ೯೮ ಭಾಮಿನೀ, ವಾರ್ಧಕ, ಸಾಂಗತ್ಯಗಳಿವೆ.

೧೭೭. ಬಸವೇಶ್ವರನ ಮಹಿಮಾಶತಕ : ಅಂಕಿತ–'ಶಂಕರಾ'. ೧೧೮ ವೃತ್ತಗಳಿವೆ. ಅಪ್ರಕಟಿತ.

೧೭೮. ಬಸವೇಶ್ವರ ಪರಿವರ್ಧಿನಿ: ಜಸೂಲಿ ಕರಿಬಸವಾರ್ಯ (೧೭೪೫-೧೮೪೦) ಕೃತ. ೨೫ ಪರಿವರ್ಧಿನಿ ಷಟ್ಪದಿಗಳಿವೆ. ಅಪ್ರಕಟಿತ.

೧೭೯. ಬಸವೇಶ್ವರ ಸಹಸ್ರನಾಮಾವಳಿ : ವಿರತ ತೋಂಟದಾರ್ಯ (೧೬೧೬) ಕೃತ. ವೃತ್ತ, ಕಂದ ಹಾಗೂ ಪಂಕ್ತಿಗಗಳೆಲ್ಲ 'ಬಸವಾಯನಮಃ' ಎಂದು ಮುಗಿದಿವೆ.

೧೮೦. ವೃಷಭಸ್ತೋತ್ರ : ಶ್ರೀ ಆರ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ. ವಿವರಗಳಿಲ್ಲ.

೧೮೧. ವೃಷಭಾಷ್ಟಕ : ಶ್ರೀ ಫ. ಗು. ಹಳಕಟ್ಟಿ ಅವರು ೧೬-೧೭ನೆಯ ಶತಮಾನದ ಕೃತಿಯೆಂದು ತಿಳಿಸಿದ್ದಾರೆ.

೧೮೨. ಶರಣು ಬಸವ ರಗಳೆ : ಪಾಲ್ಕುರಿಕೆ ಸೋಮ (೧೨೯೦) ಕೃತ. ಉತ್ಸಾಹ ರಗಳೆಯಲ್ಲಿದ್ದು ಆದಿಯಲ್ಲಿ ವೃತ್ತವಿದೆ. ಅಂತ್ಯದಲ್ಲಿ ೧೫ ಕಂದಗಳಿವೆ. ಪ್ರತಿಪಾದವು 'ಶರಣು ಬಸವ' ಎಂದು ಮುಕ್ತಾಯವಾಗಿದೆ.

೧೮೩. ಮಡಿವಾಳಮಾಚಯ್ಯಗಳ ತಾರಾವಳಿ : ಕರಸ್ಥಲದ ನಾಗಲಿಂಗ (೧೪೬೦) ಕೃತ. ಪಲ್ಲವಿ ಸಹಿತವಾದ ೨೭ ಪದಗಳಿವೆ.

೧೮೪. ಮಡಿವಾಳಯ್ಯನ ಶತಕ : ಕರ್ತೃ ಅಜ್ಞಾತ. 'ರಕ್ಷಿಸು ವೀರಘಂಟೆ ಮಡಿವಾಳೇಶಂ ಸದಾ ಪಾಹಿಮಾಂ' ಎಂದು ಮುಗಿಯುವ ೧೦೯ ವೃತ್ತಗಳಿವೆ. ಅಪ್ರಕಟಿತ.

೧೮೫. ವೀರಭದ್ರಾವತಾರ ಮಡಿವಾಳಮಾಚಯ್ಯಗಳ ತಾರಾವಳಿ : ಅಂಕಿತ-'ವರದೇಷ್ಟಗುರುಲಿಂಗವೀರೇಶ',ಪಲ್ಲವಿ ಕೂಡಿದ ೫ ಪದಗಳಿವೆ. ಅಪ್ರಕಟಿತ.

೧೮೬. ಮನುರಾಜೇಂದ್ರನ ತಾರಾವಳಿ : ಅಂಕಿತ-'ಮುರಿಗೆಯ ನಾಗರಪತಿಭರಣ'. ಪಲ್ಲವಿ ಹಾಗೂ ೧೫ ಪದಗಳಿವೆ. ಅಪ್ರಕಟಿತ.

೧೮೭. ಮರುಳಸಿದ್ಧೇಶ್ವರ ಸ್ತೋತ್ರ : ಮಹಾಂತದೇಶಿಕ (೧೯-೨೦ ಶತ) ಕೃತ. ವಿವರಗಳು ಅಲಭ್ಯ.

೧೮೮. ಮಲೆಯ ಮಾದಾಷ್ಟಕ : ಬಸವಲಿಂಗರಾಜಕೃತ, ೮ ಚೌಪದಿಗಳಿದ್ದು 'ಮಲೆಯಮಾದಕೃಪಾನಿಧಿ' ಎಂದು ಮುಗಿಯುತ್ತವೆ. ಅಪ್ರಕಟಿತ.

೧೮೯. ಮಹಾಂತೇಶ್ವರ ನಾಮಾವಳಿ : ಕಡಕೋಳ ಮಡಿವಾಳಪ್ಪ (೧೯ಶತ) ಕೃತ.

೧೯೦. ಮಹಾಂತೇಶ್ವರ ಸ್ತೋತ್ರ : ಕಡಕೋಳ ಮಡಿವಾಳಪ್ಪ (೧೯ಶತ) ಕೃತ.

೧೯೧. ಮಹಾಲಿಂಗೇಶ್ವರ ಅಷ್ಟಕ : ವಿವರಗಳು ಅಲಭ್ಯ.

೧೯೨. ಮುರಿಗಾ ಗುರುಸಿದ್ಧಾಷ್ಟಕ : ಕರ್ತೃ ಅಜ್ಞಾತ. (ಸು. ೧೮ ಶತ) ಚಿತ್ರದುರ್ಗದಲ್ಲಿನ ಬೃಹನ್ಮಠದ ಮುರಿಗಾ ಶಾಂತವೀರರ ಶಿಷ್ಯ ಇಮ್ಮಡಿ ಗುರುಸಿದ್ಧರಸ್ತುತಿ, 'ಮುರಿಗಂ ಲಿಂಗಂ ಗುರುಸಿದ್ಧನೇ' ಎಂದು ಮುಕ್ತಾಯವಾಗುವ ೮ ವೃತ್ತಗಳಿವೆ.

೧೯೩. ಮಂಗಳಾಷ್ಟಕ : ಕರ್ತೃ ಅಜ್ಞಾತ. ಮುರಿಗಾ ಶಾಂತವೀರರಸ್ತುತಿ. ೫ ವೃತ್ತಗಳಿವೆ. ಅಪೂರ್ಣ. ಅಪ್ರಕಟಿತ.

೧೯೪. ಮುರಿಗೆಯ ಸ್ವಾಮಿಗಳ ಸ್ತೋತ್ರದನಾಂದ್ಯ : ಕಂಪಿನಂಜಯ್ಯ (೧೭೦೦) ಕೃತ. ವಾರ್ಧಕ, ಭಾಮಿನಿಗಳ ೨೪ ಪದ್ಯಗಳಿವೆ. ಅಪ್ರಕಟಿತ.

೧೯೫. ಮುರಿಗೆಯ ಸ್ವಾಮಿಗಳು ನಿರೂಪಿಸಿದ ನಾಂದ್ಯ : ಮಹಾಂತಸ್ವಾಮಿ (೧೭೦೦) ಕೃತ?. ವಾರ್ಧಕ, ಪರಿವರ್ಧಿನಿ, ಭಾಮಿನಿಗಳ ೨೪ ಪದ್ಯಗಳಿವೆ. ಅಪ್ರಕಟಿತ.

೧೯೬. ಮುರಿಗೆ ಶಾಂತವೀರನ ನಾಂದ್ಯ : ಮಹಾಂತಸ್ವಾಮಿ (೧೭೦೦) ಕೃತ. 'ಮುರಿಗೆಯ ಶಾಂತವೀರೇಶಾ' ಎಂದು ಮುಗಿಯುವ ೨೫ ಭಾಮಿನಿಷಟ್ಪದಿಗಳಿವೆ. ಅಪ್ರಕಟಿತ.

೧೯೭. ಮುರಿಗೆ ಶಾಂತವೀರೇಶ್ವರನ ಕಂದ : ಕರ್ತೃ ಅಜ್ಞಾತ. ೨೫ ಕಂದಗಳಿವೆ. 'ಶಾಂತವಿರೇಶ' ಎಂದು ಮುಗಿಯುತ್ತವೆ.

೧೯೮. ರೇಣುಕಗಣಾಷ್ಟಕ : ಕರ್ತೃ ಅಜ್ಞಾತ. ೮ ವೃತ್ತ ಹಾಗೂ ಕೊನೆಯಲ್ಲಿ ಕಂದವಿದೆ. ಅಪ್ರಕಟಿತ.

೧೯೯. ರೇಣುಕಾರ್ಯ ಸೋತ್ರವು : ಮಹಾಂತ ದೇಶಿಕ (೧೯-೨೦ನೆಯ ಶ) ಕೃತ. 'ರೇಣುಕಾರ್ಯವರ್ಯ ಪಾಹಿಮಾಂ ಪ್ರಭೋ' ಎಂದು ಮುಗಿಯುವ ೨೭ ಸುಗಂಧಿವೃತ್ತಗಳಿವೆ.

೨೦೦. ರೇವಣ ಸಿದ್ಧೇಶ್ವರ ಭಕ್ತಿಸಾರವು ; ಮಹಾಂತದೇಶಿಕ (೧೯-೨೦ ನೆಯಂ ಶ) ಕೃತ, ಆದಿಯಲ್ಲಿ ವೃತ್ತವಿದೆ. 'ರೇವಣಸಿದ್ಧ ರಕ್ಷಿಸುಯನ್ನನವರತಾ' ಎಂದು ಮುಗಿಯುವ ೧೧೩ ಭಾಮಿನಿ ಷಟ್ಪದಿಗಳಿವೆ.

೨೦೧. ಶಾಂತಲಿಂಗಾಷ್ಟಕ : ಕರ್ತೃ ಅಜ್ಞಾತ. ಶಿವಗಂಗೆಯಲ್ಲಿನ ಕಂಬಾಳು ಮಠದ ಶಾಂತಲಿಂಗೇಶ್ವರನ ಸ್ತುತಿ ಕೃತಿಯವಸ್ತು. 'ಶ್ರೀ ಶಾಂತಲಿಂಗೇಶ್ವರಾ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೨೦೨. ಸಾವಳಗೀ ಶಿವಲಿಂಗೇಶ್ವರಾಷ್ಟಕ : ೭ ವೃತ್ತಗಳಿವೆ. ವಿವರಗಳು ಅಲಭ್ಯ. ಅಪ್ರಕಟಿತ.

೨೦೩. ಹೋಳಿನ ಹಂಪಯ್ಯನ ಅಷ್ಟಕ : ಕರ್ತೃ ಅಜ್ಞಾತ. 'ಹೋಳಿನ ಹಂಪಮದ್ಗುರು ಪಾಹಿಮಾಂ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೨೦೪. ಹೋಳಿನ ಹಂಪಯ್ಯನ ಸ್ತುತಿ : ಕರ್ತೃ ಅಜ್ಞಾತ. ಹಾಡಿನಲ್ಲಿದೆ. ಅಪ್ರಕಟಿತ.

೨೦೫. ಅಕ್ಷರಾಂಕ ಗದ್ಯ : ಅಂಕಿತ–'ಹಂಪೆಯ ವಿರೂಪಾಕ್ಷ' ಆದಿಯಲ್ಲಿ ವೃತ್ತವಿದೆ. ಅಪ್ರಕಟಿತ.

೨೦೬. ಅಗಜಾಪತಿಯಷ್ಟಕ : ಅಳಿಯ ಲಿಂಗರಾಜ (೧೮೨೩–೭೩) ಕೃತ. ೯ ವೃತ್ತಗಳಿವೆ.

೨೦೭. ಅಪರಾಧಸ್ತೋತ್ರ : ದೇವಲಾಪುರದ ನಂಜುಂಡ (೧೮೪೧) ಕೃತ. ೧೨೭ ವಾರ್ಧಕಗಳಿವೆ. ಅಪ್ರಕಟಿತ.

೨೦೮. ಕೊಡೆಯಕಲ್ ಬಸವಣ್ಣನವರ ಸ್ತೋತ್ರ : ರಾಚಯ್ಯ(೧೬–೧೭ ಶ)ಕೃತ. ಪಲ್ಲವಿ ಹಾಗೂ ೨೯ ತ್ರಿವಿಧಿಗಳಿವೆ. ಅಪೂರ್ಣ, ಅಪ್ರಟಿತ.

೨೦೯. ಗಂಗಾಧರನ ಅಷ್ಟಕ : ಅಂಕಿತ- 'ಕಕುದ್ಗಿರಿಯ ಗಂಗಾಧರ'. ೮ ಚೌಪದಿಗಳಿವೆ. ಅಪ್ರಕಟಿತ.

೨೧೦. ಗಂಗಾಧರನ ಅಷ್ಟಕ : ಅಂಕಿತ- 'ಕಕೋದ್ಗಿರಿಯ ವಾಸಗಂಗಾಧರೇಶ' ಪಲ್ಲವಿ ಹಾಗು ೧೧ ವಾರ್ಧಕಗಳಿವೆ. ಅಪ್ರಕಟಿತ.

೨೧೧. ಗಂಗಾಧರ ಸ್ತೋತ್ರ : ಮಹಾಂತದೇಶಿಕ(೧೯-೨೦ ಶ) ಕೃತ. ವಿವರಗಳು ಅಲಭ್ಯ.

೨೧೨. ತೇರಮಲ್ಲಾಷ್ಟಕ : ಕೆಂಚಭೂಪ ಕೃತಿ. ಹಿರಿಯೂರ ತೇರಮಲ್ಲನ ಸ್ತುತಿ. 'ತೇರಮಲ್ಲ ದಯಾನಿಧೀ' ಎಂದು ಮುಗಿಯುವ ೮ ವೃತ್ತಗಳಿವೆ.

೨೧೩. ನೀಲಕಂಠಾಷ್ಟಕ : ಕರ್ತೃ ಅಜ್ಞಾತ, ೮ ವೃತ್ತ ಹಾಗೂ ಅಂತ್ಯದಲ್ಲಿ ಸಂಸ್ಕೃತ ಶ್ಲೋಕವಿದೆ. ಅಪ್ರಕಟಿತ.

೨೧೪. ನೀಲಕಂಠಾಷ್ಟಕ; ಕರ್ತೃ ಅಜ್ಞಾತ. ಹೊನ್ನಹಳ್ಳಿ ವಿಶ್ವೇಶನಸ್ತುತಿ. 'ನೀಲಕಂಠನಮೋಸ್ತುತೇ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೨೧೫. ಬಳ್ಳಾರಿವಾಸ ಮಲ್ಲೇಶನ ಅಷ್ಟಕ; ಕರ್ತೃ ಅಜ್ಞಾತ. 'ತೋರೆ ಬಳ್ಳಾರಿವಾಸ ಶ್ರೀ ಮಲ್ಲೇಶನಾ' ಎಂದು ಮುಗಿಯುವ ೯ ವೃತ್ತಗಳಿವೆ. ಅಪ್ರಕಟಿತ.

೨೧೬. ಬಾಲಚಂದ್ರಶೇಖರಾಷ್ಟಕ : ಕರ್ತೃ ಅಜ್ಞಾತ. ೯ ದ್ವಿಪದಿಗಳಿವೆ. ಪ್ರಾಯಿಕವಾಗಿ 'ಬಂದನೆನ್ನ ಕರದೊಳು ಬಾಲಚಂದಿರ ಶೇಖರಂ' ಎಂದು ಪ್ರತಿ ದ್ವಿಪದಿಯ ಅಂತ್ಯದಲ್ಲಿದೆ.

೨೧೭. ಭೋಗಲಿಂಗಾಷ್ಟಕ : ಕರ್ತೃ ಅಜ್ಞಾತ. 'ಜರಿಮಲೆ ಭೋಗಲಿಂಗ ದಯಾನಿಧೇ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೨೧೮. ಪರ್ವತಾಷ್ಟಕ : ಕರ್ತೃ ಅಜ್ಞಾತ. ಶ್ರೀಶೈಲದ ಮಲ್ಲಿಕಾರ್ಜುನನ ಸ್ತುತಿ. 'ಗಿರಿಯ ಪರ್ವತ ಲಿಂಗನು' ಎಂದು ಮುಗಿಯುವ ೮ ವೃತ್ತಗಳಿವೆ.

೨೧೯. ಮಲ್ಲಿಕಾರ್ಜುನನ ತ್ರಿಪದಿ : ವಿವರಗಳು ಅಲಭ್ಯ.

೨೨೦. ಮಲ್ಲಿಕಾರ್ಜುನಾಷ್ಟಕ : ಕರ್ತೃ ಅಜ್ಞಾತ. 8 ವೃತ್ತ ಹಾಗೂ ಕೊನೆಯಲ್ಲಿ ಸಂಸ್ಕೃತ ಶ್ಲೋಕವಿದೆ. ಪ್ರತಿ ಪದ್ಯವೂ 'ಶ್ರೀ ಮಲ್ಲಿಕಾರ್ಜುನಾ' ಎಂದು ಮುಗಿಯುತ್ತದೆ. ಅಪ್ರಕಟಿತ.

೨೨೧. ಮಲ್ಲಿಕಾಮಾಲೆ: ಅಂಕಿತ- 'ಶಾಂತೇಶಲಿಂಗ' 'ಅರ್ಚಿಪೆಂ'ಎಂದು ಮುಗಿಯುವ ೧೧ ವೃತ್ತಗಳಿವೆ.ಅಪ್ರಕಟಿತ.

೨೨೨. ಮಲ್ಲೇಶನ ತಾರಾವಳಿ : ಕವಿ ಚೆನ್ನಕೃತ. ಪಲ್ಲವಿ ಹಾಗು ೫ ಹಾಡುಗಳಿವೆ. ಅಪ್ರಕಟಿತ.

೨೨೩. ಮಲ್ಲೇಶ ಸ್ತೋತ್ರ : ಷಟ್ಪದಿಯಲ್ಲಿದೆ, ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ.

೨೨೪. ಮಹಾದೇವ ರಗಳೆ : ತ್ರಿಭುವನತಾತ(೧೨೦೦ ) ಕೃತ. ಉತ್ಸಾಹರಗಳೆಯಲ್ಲಿದ್ದು ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿ ಪಾದವೂ 'ಮಹಾದೇವ' ಎಂದು ಮುಗಿಯುತ್ತದೆ.

೨೨೫. ಮಹಾಲಿಂಗ ನಕ್ಷತ್ರ ಮಾಲಿಕೆ : ಅಳಿಯ ಲಿಂಗರಾಜ (೧೮೨೩-೭೪) ಕೃತ. ಅಲಭ್ಯ.

೨೨೬. ಅನತಕಲ್ಪಭೋಜ ಶತಕ : ಕರ್ತೃ ಅಜ್ಞಾತ, (ಸು, ೧೩೦೦) ವೃತ್ತದಲ್ಲಿದೆ. ಪ್ರತಿವೃತ್ತವೂ 'ಯೀ ವಿರೂಪಾಕ್ಷನೆ ದೇವನೆಂದು ನೆಜಿ ನಂಬಿದೆನಾನತ ಕಲ್ಪಭೂಜನಂ' ಎಂದು ಮುಗಿದಿದೆ. ಅಪೂರ್ಣ. ಅಪ್ರಕಟಿತ.

೨೨೭. ಜಯರಗಳೆ : ಹಂಪೆಯ ಹರಿಹರ (೧೨೦೦) ಕೃತ, ವಿರೂಪಾಕ್ಷ ಸ್ತುತಿಯನ್ನುಳ್ಳ ಮಂದಾನಿಲರಗಳೆ ಯಲ್ಲಿದೆ. ಆದ್ಯಂತ್ಯಗಳಲ್ಲಿ ಒಂದೊಂದು ಕಂದಗಳಿವೆ. ಪ್ರತಿಪಾದವು 'ಜಯ' ಎಂದು ಮುಗಿಯುತ್ತದೆ.

೨೨೮. ಪಂಪಾಶತಕ : ಗಣೇಕಲ್ಲು ಸಂಗವಿಭು (೧೮೩೨) ಕೃತ, 'ಪಂಪಾಪುರಾಧೀಶ್ವರಾ' ಎಂದು ಮುಗಿಯುವ ೧೦೧ ವೃತ್ತಗಳಿವೆ.

೨೨೯. ಪ್ರೇಮಾಷ್ಟಕ ಅಥವಾ ವಿರೂಪಾಕ್ಷ ಪ್ರೇಮಾಷ್ಟಕ : ಹಂಪೆಯ ಹರಿಹರ (೧೨೦೦) ಕೃತ (?) 'ದಸಿ ದೋಱು ಹಂಪೆಯ ವಿರೂಪಾಕ್ಷ' ಎಂದು ಮುಗಿಯುವ ೯ ಕಂದಗಳಿವೆ. ಅಪ್ರಕಟಿತ.

೨೩೦. ಮಹಿಮಾಷ್ಟಕ : ಹಂಪೆಯ ಹರಿಹರ (೧೨೦೦) ಕೃತ(?) : 'ದೇವವಿರೂಪಾಕ್ಷಗಲ್ಲದುಳಿದುರ್ಗಂಟೇ' ಎಂದು ಮುಗಿಯುವ ಕಂದಗಳಿವೆ.

೨೩೧. ಮುಡಿಗೆಯ ಅಷ್ಟಕ : ಹಂಪೆಯ ಹರಿಹರ (೧೨೦೦) ಕೃತ 'ವಿರೂಪಾಕ್ಷನೆ ದೇವನೆಂದು ಮುಡಿಗಿಕ್ಕಿದೆನಾ ವನೆಸ್ತುವಂ' ಎಂದು ಮುಗಿಯುವ ೮ ವೃತ್ತಗಳಿವೆ.

೨೩೨. ವಿರೂಪಾಕ್ಷಸ್ತವ : ಕರ್ತೃ ಅಜ್ಞಾತ. 'ವಿರೂಪಾಕ್ಷಂ ಲಲಾಟೇಕ್ಷಣಂ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೨೩೩. ವಿರೂಪಾಕ್ಷಾಷ್ಟಕ : ಕರ್ತೃ ಅಜ್ಞಾತ. 'ತಂದು ತೋರಮ್ಮ ಶ್ರೀ ವಿರೂಪಾಕ್ಷನಾ' ಎಂದು ಮುಗಿಯುವ ೮ ಪದ್ಯಗಳಿವೆ.

೨೩೪. ನಿಡುಗಲ್ಲ ಶ್ರೀ ವೀರಭದ್ರಾಷ್ಟಕ : ಕರ್ತೃ ಅಜ್ಞಾತ. 'ನಿಡುಗಲ್ಲ ಶ್ರೀ ವೀರಭದ್ರದಯಾನಿಧೀ' ಎಂದು ಮುಗಿಯುವ ೮ ವೃತ್ತಗಳಿವೆ. ಅಪ್ರಕಟಿತ.

೨೩೫. ವೀರಭದ್ರ ಗದ್ಯ: ಕರ್ತೃ ಅಜ್ಞಾತ, ಉತ್ಸಾಹ ರಗಳೆಯಲ್ಲಿದ್ದು ಆದಿಯಲ್ಲಿ ವೃತ್ತವಿದೆ. ಅಂತ್ಯದಲ್ಲಿ ೨ ಕಂದ ಗಳಿವೆ. ಪ್ರತಿಪಾದವು 'ವೀರಭದ್ರ' ಎಂದು ಮುಗಿದಿದೆ. ಅಪ್ರಕಟಿತ.

೨೩೬. ವೀರಭದ್ರ ಚೌಪದನ : ಅಂಕಿತ–'ವರದಗುರು ಬಸವೇಶ' ೫೦ ಚೌಪದಿಗಳಿವೆ.

೨೩೭. ವೀರಭದ್ರ ತಾರಾವಳಿ : ಮೆಡ್ಲೇರಿ ಶಿವಲಿಂಗ (೧೫೭೦) ಕೃತ. ಪಲ್ಲವಿ ಹಾಗೂ ೨೭ ನುಡಿಗಳಿವೆ. ಅಪ್ರಕಟಿತ.

೨೩೮. ವೀರಭದ್ರ ತಾರಾವಳಿ : ಅಂಕಿತ 'ಸಿದ್ಧಲಿಂಗ' ಪಲ್ಲವಿ ಹಾಗೂ ೭ ನುಡಿಗಳಿವೆ. ಅಪ್ರಕಟಿತ.

೨೩೯. ವೀರಭದ್ರದೇವರ ಅಷ್ಟಕ : ಕರ್ತೃ ಅಜ್ಞಾತ, 'ವೀರಭದ್ರಜಯ ಗಂಡರಗಂಡ ಮಹಾಪ್ರಭಾಮಯಾ' ಎಂದು ಮುಗಿಯುವ ೯ ವೃತ್ತಗಳಿವೆ. ಅಪ್ರಕಟಿತ.

೨೪೦. ವೀರಭದ್ರದೇವರ ಖಡ್ಗ : ಕರ್ತೃ ಅಜ್ಞಾತ. ರಾಚೋಟಿ ವೀರಭದ್ರಸ್ತುತಿ. ಅಪ್ರಕಟಿತ.

೨೪೧. ವೀರಭದ್ರದೇವರ ಪಾರಿಜಾತ : ಪಲ್ಲವಿ ಮತ್ತು ೯ ಪದಗಳಿವೆ.

೨೪೨. ವೀರಭದ್ರನ ತಾರಾವಳಿ : ಕರ್ತೃ ಅಜ್ಞಾತ, ಪಲ್ಲವಿ ಹಾಗೂ ೧೮ ನುಡಿಗಳಿವೆ.

೨೪೩. ವೀರಭದ್ರಶತಕ : ಅಳಿಯ ಲಿಂಗರಾಜ (೧೮೨೩–೭೪) ಕೃತ, 'ಶ್ರೀವೀರಭದ್ರೇಶ್ವರಾ' ಎಂದು ಮುಗಿಯುವ ೧೦೧ ವೃತ್ತಗಳಿವೆ. ಅಪ್ರಕಟಿತ.

೨೪೪. ವೀರಭದ್ರ ಶತಕ : ಕರ್ತೃ ಅಜ್ಞಾತ, 'ವೀರಭದ್ರಾ' ಎಂದು ಮುಗಿಯುವ ೧೩೭ ವೃತ್ತಗಳಿವೆ. ಅಪ್ರಕಟಿತ.

೨೪೫. ವೀರಭದ್ರಶತಕ : 'ಓದಿನ ಮಲ್ಲಯ್ಯ (೧೯ ಶತಕ) ಕೃತ, ವಿವರಗಳಿಲ್ಲ.

೨೪೬. ವೀರಭದ್ರಸ್ತವ : ಚನ್ನವೀರದೇಶಿಕ (ಸು. ೧೬೫೦) ಕೃತ, ವಿವರಗಳಿಲ್ಲ.

೨೪೭. ವೀರೇಶ ತಾರಾವಳಿ : ಅಳಿಯ ಲಿಂಗರಾಜ (೧೮೨೩–೭೪) ಕೃತ. ೨೮ ಕಂದಗಳಿವೆ.

೨೪೮. ವೀರೇಶ್ವರನ ಕಂದ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ. ವಿವರಗಳಿಲ್ಲ.

೨೪೯. ವೀರೇಶಾಷ್ಟಾಕಂ : ಅಳಿಯ ಲಿಂಗರಾಜ (೧೮೨೩–೭೪) ಕೃತ. ೯ ಕಂದಗಳಿದ್ದು ಪ್ರಾಯಿಕವಾಗಿ 'ವೀರೇಶಾ; 'ವರವೀರೇಶಾ' ಎಂದು ಮುಗಿದಿವೆ.

೨೫೦. ವೀರೇಶಾಷ್ಟಾಕಂ : ಅಳಿಯಲಿಂಗರಾಜ (೧೮೨೩–೭೪) ಕೃತ, ೮ ಕಂದಗಳಿದ್ದು 'ವೀರೇಶಾ' ಎಂದು ಮುಗಿ ದಿವೆ.

೨೫೧. ನವರತ್ನಮಾಲೆ : ಕೊಂಡಗುಳಿ ಕೇಶಿರಾಜ (೧೧೦೭–೧೧೩೨) ಕೃತ, ೯ ವೃತ್ತಗಳಿವೆ. ಪ್ರತಿವೃತ್ತವೂ 'ಕಂಡೆರ್ದೆದಣಿದು ಕುಳಿರ್ಕೊಳಿತೆನ್ನಂತರಂಗಂ' ಎಂದು ಮುಗಿದಿದೆ.

೨೫೧ಎ. ಶಂಕರಾಷ್ಟಕ : ದೇವಲಾಪುರದ ನಂಜುಂಡ (೧೮೪೧) ಕೃತ, ೮ ತೋಟಕ ವೃತ್ತಗಳಿವೆ ; ಅಪ್ರಕಟಿತ.

೨೫೨. ಶಂಭುಲಿಂಗದ ಕಂದ : ಶ್ರೀ ಆರ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ. ವಿವರಗಳಿಲ್ಲ,

೨೫೩. ಶಂಭುವಿನ ಕಂದ : ಐನೂಲಿ ಕರಿಬಸವಾರ್ಯ (೧೭೪೫–೧೮೦೪) ಕೃತ. 'ಶಂಭು ಮಾಂ ಪಾಹಿ' ಎಂದು ಮುಗಿವ ೨೫ ಕಂದಗಳಿವೆ. ಅಪ್ರಕಟಿತ.

೨೫೪. ಶಿವಕಾರುಣ್ಯಾಹ್ವಾನ ಶತಕ : ಬರಹದ ಗುರುನಂಜೇಸ್ವಾಮಿಗಳ (ಸು. ೧೬೨೦) ಸಂಕಲಿತ ಕೃತಿ. ೨೧ ಭಿನ್ನ ಭಿನ್ನ ಶತಕಗಳಿಂದಾರಿಸಿದ ೧೧೫ ವೃತ್ತಗಳಿವೆ. ಅಪ್ರಕಟಿತ.

೨೫೫. ಶಿವಕೀರ್ತಿ ಶತಕ : ಬರಹದ ಗುರುನಂಜೇಸ್ವಾಮಿಗಳ (ಸು. ೧೬೨೦) ಸಂಕಲಿತ ಕೃತಿ, ೧೧೦ ವೃತ್ತಗಳಿವೆ.

೨೫೬. ಶಿವಪ್ರಾರ್ಥನಾ ಶಾರದ : ಐನೂಲಿ ಕರಿಬಸವಾರ್ಯ (೧೭೪೫–೧೮೪೮) ಕೃತ. ಶಾರದ ಛಂದಸ್ಸಿನ ೧೬ ಪದ್ಯಗಳಿವೆ.

೨೫೭. ಶಿವಲಿಂಗನಾಂದ್ಯ : ಇಮ್ಮಡಿ ಗುರುಸಿದ್ಧ (೧೭೨೦) ಕೃತ. ಭಾಮಿನಿ, ವಾರ್ಧಕಗಳ ೨೫ ಷಟ್ಪದಿಗಳಿವೆ.

೨೫೮. ಶಿವಲಿಂಗ ಮಹಿಮಾಷಟ್ಪದ : ಇಮ್ಮಡಿ ಗುರುಸಿದ್ಧ (೧೭೨೦) ಕೃತ. 'ಶಿವಲಿಂಗೇಶ್ವರಾ' ಎಂದು ಮುಗಿಯುವ ೧೦೫ ವಾರ್ಧಕಗಳಿವೆ.

೨೫೯. ಶಿವಲಿಂಗ ವಿಕಳತೆ ಸನ್ನಿವರ್ಶನ ಅರ್ಚನ ಪೂಜನಾಶತಕ : ಬರಹದ ಗುರುನಂಜೇಸ್ವಾಮಿಗಳ (ಸು. ೧೬೨೦) ಸಂಕಲಿತ ಕೃತಿ. ೧೯ ಶತಕಗಳಿಂದಾಯ್ದ ೧೧೦ ವೃತ್ತಗಳಿವೆ. ಅಪ್ರಕಟಿತ.

೨೬೦. ಶಿವಸರ್ವಾಂಗಸ್ತುತಿ : ಶಿವಲಿಂಗಯೋಗಿ (ಸು. ೧೭೦೦) ಕೃತ. ವರ್ಗಪುರದ ಗುರುನಂಜೇಶ್ವರನ ಶಿಷ್ಯ. ೩೫ ವೃತ್ತಗಳಿವೆ. ಅಪ್ರಕಟಿತ.

೨೬೧. ಶಿವಸ್ತುತಿ : ಕಂದದಲ್ಲಿನ ಈ ಕೃತಿಯನ್ನು ಶ್ರೀ ಆರ್. ನರಸಿಂಹಾಚಾರ್ಯರು ಉಲ್ಲೇಖಿಸಿದ್ದಾರೆ.

೨೬೨. ಶಿವಾಕ್ಷರಮಾಲೆ : ಕರ್ತೃ ಅಜ್ಞಾತ. (ಸು. ೧೪೦೦) ೪೪ ಕಂದಗಳಿವೆ. ಅಪ್ರಕಟಿತ.

೨೬೩. ಶಿವಾಕ್ಷರಮಾಲೆ : ನಾಗಿದೇವನಾತ್ಮಜಸೋಮ ಕೃತ. ೪೪ ಕಂದಗಳಿವೆ. ಅಪ್ರಕಟಿತ.

೨೬೪. ಶಿವಾಷ್ಟಕ : ಕರ್ತೃ ಅಜ್ಞಾತ (ಸು. ೧೭೦೦) ಕಂದದಲ್ಲಿದೆ. ಅಪ್ರಕಟಿತ.

೨೬೫. ಶ್ರೀಕಂಠನಕ್ಷತ್ರಮಾಲಿಕೆ : ಅಳಿಯ ಲಿಂಗರಾಜ (೧೮೨೩–೭೪) ಕೃತ. ಅಲಭ್ಯ.

೨೬೬. ಶೃಂಗಾರ ಶಿವಸ್ತುತಿ : ಕರ್ತೃ ಅಜ್ಞಾತ. (ಸು. ೧೫೧೦). ಅಪ್ರಕಟಿತ.

೨೬೭. ಶೈಲಜಾಧವ ಸ್ತೋತ್ರ : ದೇವಲಾಪುರದ ನಂಜುಂಡ (೧೮೪೧) ಕೃತ. ೩೩ ವೃತ್ತಗಳಿವೆ. ಅಪ್ರಕಟಿತ.

೨೬೮. ಸಂಗಮ ಲಿಂಗಾವಷ್ಟಕ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ.

೨೬೯. ಸಂಗಮೇಶ್ವರಾಷ್ಟಕ : ಕರ್ತೃ ಅಜ್ಞಾತ. ೮ ವೃತ್ತಗಳಿವೆ. ಅಪ್ರಕಟಿತ.

೨೭೦. ಸಾಂಬಮೂರ್ತಿ ಸ್ತೋತ್ರ : ಮಹಾಂತದೇಶಿಕ (೧೯–೨೦ಶತ) ಕೃತ. ವಿವರಗಳಿಲ್ಲ.

೨೭೧. ಸಿದ್ಧೇಶ್ವರಾಷ್ಟಕ : ಸೂಳೇಕೆರೆ ಸಿದ್ಧೇಶ್ವರನ ಸ್ತುತಿ. ಕರ್ತೃ ಅಜ್ಞಾತ. 'ತಂದು ತೋರೆಲೆ ತಂದೆ ಶ್ರೀ ಗುರು ಸಿದ್ಧನಾ' ಎಂದು ಮುಗಿಯುವ ೮ ವೃತ್ತಗಳಿವೆ ಅಪ್ರಕಟಿತ.

೨೭೨. ಸೋಮೇಶ್ವರ ಸ್ತುತಿ : ಕರ್ತೃ ಅಜ್ಞಾತ. 'ಸೋಮೇಶಲಿಂಗ ಜಯಭವ ಭಂಗಾ' ಎಂದು ಮುಗಿಯುವ ೮ ಕಂದಗಳಿವೆ. ಅಪ್ರಕಟಿತ.

೨೭೩. ಹರ್ಯಕ್ಷರಮಾಲೆ : ಕರ್ತೃ ಅಜ್ಞಾತ. (ಸು. ೧೪೦೦). ೩೯ ಕಂದಗಳಿವೆ. ಅಪ್ರಕಟಿತ.

೨೭೪. ಹರ್ಯಷ್ಟಕ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ, ವಿವರಗಳಿಲ್ಲ.

೨೭೫. ಹರಿಹರಸ್ತೋತ್ರವು : ಮಹಾಂತದೇಶಿಕ (೧೯–೨೦ಶತ) ಕೃತ. ೩೪ ಭಾಮಿನಿಷಟ್ಪದಿಗಳಿವೆ.

೨೭೬. ಹರಿಹರಾಂಕನ ಸ್ತೋತ್ರ : ಶ್ರೀ ಆರ್. ನರಸಿಂಹಾಚಾರ್ಯರ ಉಲ್ಲೇಖ. ವಿವರಗಳಿಲ್ಲ.

೨೭೭. ಹಾಲೇಶ್ವರಾಷ್ಟಕ : ಚೆನ್ನಪಂಡಿತ ಕೃತ. ೮ ವೃತ್ತ ಹಾಗೂ ಅಂತ್ಯದಲ್ಲಿ ಒಂದು ಸಂಸ್ಕೃತ ಶ್ಲೋಕವಿದೆ. ವೃತ್ತಗಳು 'ರಾಮನಾಮಕ ಪುರದಿ ಮೆರೆಯುವ ಹಾಲಸ್ವಾಮಿಯ ನುತಿಸುವೆ' ಎಂದು ಮುಗಿದಿವೆ. ಅಪ್ರಕಟಿತ.

೨೭೮. ಅಂಬಾಸ್ತೋತ್ರ : ಮಹಾಂತದೇಶಿಕ (೧೯–೨೦ಶತ). ಕೃತ ೨೩ ಲಲಿತಪದ ವೃತ್ತಗಳಲ್ಲಿದೆ.

೨೭೯. ಅಂಬಿಕಾಸ್ತೋತ್ರ : ಶಾಂತವೀರದೇಶಿಕ (ಸು. ೧೬೫೦) ಕೃತ. ಅಲಭ್ಯ.

೨೮೦. ಅಂಬಿಕಾಸ್ತೋತ್ರ ರತ್ನತ್ರಯಂ : ದೇವಲಾಪುರದ ನಂಜುಂಡ (೧೮೪೧) ಕೃತ. ವಿವರಗಳಿಲ್ಲ.

ಶಾಸನೋಕ್ತ ನಾಗವರ್ಮನೇ ಈ ಕವಿಯಾಗಿರಬಹುದೆಂದು ಊಹಿಸುತ್ತೇವೆ. ಹಾಗಿದ್ದ ಪಕ್ಷದಲ್ಲಿ ಇವನು ಸು. ೧೦೭೦ ರಲ್ಲಿದ್ದಿರಬೇಕು. ಈ ಕವಿಗೆ ಗುಣಗಳ್ಳನೆಂಬ ಬಿರುದಿದ್ದಂತೆಯೂ ಈತನು ಅದ್ವೈತಿಯಾಗಿಯೂ ದೊಡ್ಡ ಪಂಡಿತನಾಗಿಯೂ ಇದ್ದಂತೆಯೂ ಮೇಲಣ ಶಾಸನ'ದ ಪದ್ಯಗಳಿಂದ ತಿಳಿಯುತ್ತದೆ, ಎಂಬ ಕವಿಚರಿತೆಕಾರರ ಹೇಳಿಕೆಯ ಪ್ರಕಾರ ಉದಯಾದಿತ್ಯನು ಕೀರ್ತಿತನಾಗಿದ್ದಾನೆ. ಆದರೆ ವಾಸ್ತವವಾಗಿ ೧೨೯ ನೆಯ ಶಾಸನ (೧೦೬೨ ನೇ ಜನವರಿ, ಸೋಮವಾರ) ದಲ್ಲಿ ಉಕ್ತನಾದ ೧) ಸಂಧಿ ವಿಗ್ರಹಿ ಮನೆವೆಗ್ಗಡೆ ದಂಡನಾಯಕ ಉದಯಾದಿತ್ಯನ ಜೊತೆಗೆ ಅದೇ ತಾಲೋಕಿಗೆ ಸೇರಿದ ೧೩೦ ನೆಯ ಶಾಸನ (೧೦೬೨ ನೇ ಜನವರಿ, ಸೋಮವಾರ) ದಲ್ಲಿ ಉಕ್ತನಾದ ಮತ್ತೊಬ್ಬ ಮಂಡಳಿಕ ಚಾಲುಕ್ಯ ಪೆರ್ಮಾಡಿ ಭುವನೈಕವೀರ ಉದಯಾದಿತ್ಯನ ಬಿರುದುಗಳೂ ಸೇರಿಕೊಂಡಿವೆ. ಹೀಗೆ ಒಂದೇ ತಾಲೋಕಿನ ಪ್ರತ್ಯೇಕವಾದ ಈ ಶಾಸನಗಳಲ್ಲಿ ಉಕ್ತರಾದ ಬೇರೆ ಬೇರೆ ಉದಯಾದಿತ್ಯರನ್ನು ಒಬ್ಬನೇ ಉದಯಾದಿತ್ಯನೆಂದು ಕವಿಚರಿತೆಕಾರರು ಏಕೀಕರಿಸಿದುದುರಲ್ಲಿ ಕಂಡು ಬಂದ ತಪ್ಪನ್ನು ಆಯಾ ಶಾಸನಗಳ ಪ್ರಮಾಣಗಳ ಆಧಾರದಿಂದಲೆ ತೋರಿಸಿಕೊಟ್ಟು 'ವಸ್ತುತಃ ಈ ಚಂದ್ರಚೂಡಾಮಣಿಶತಕವು ಒಬ್ಬ ನಾಗವರ್ಮನಿಂದ ರಚಿಸಲ್ಪಟ್ಟಿತೆಂಬ ವಿಷಯದಲ್ಲಿಯೇ ನಮಗೆ ಪ್ರಬಲವಾದ ಸಂದೇಹವಿರುವುದು' ಎಂದು ಡಾ॥ ಎ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಟ್ಟರು. 'ಕವಿಚರಿತೆಕಾರರು ಈ ಮೇಲಿನ ಪದ್ಯದಲ್ಲಿ ಒಂದನೇ ಪಾದದಲ್ಲಿರುವ ಉದಯಾದಿತ್ಯನ ಸಂಧಿವಿಗ್ರಹಿ ಲಲಾಮಂ ನಾಗವರ್ಮಂ' ಎಂಬ ಪದಗಳನ್ನು ಮೂರನೇ ಪಾದದಲ್ಲಿರುವ 'ಪೇೞ್ದ' ಎಂಬ ಪದದೊಡನೆ ಅನ್ವಯಿಸಿ ಈ ಶತಕವನ್ನು ನಾಗವರ್ಮನು 'ಪೇಳಿದ'ನೆಂದು ಅರ್ಥಮಾಡಿರುವರು. ನಮಗಾದರೆ ಈ ಒಂದನೇ ಪಾದದ ಅಂತ್ಯದಲ್ಲಿರುವ 'ಸಮಂತು' ಎಂಬ ಪದವನ್ನು ಪರ್ಯಾಲೋಚಿಸಿದಲ್ಲಿ 'ಉದಯಾದಿತ್ಯನ ರಾಯಭಾರಿಯೆನಿಸಿರ್ದಾತ್ಮಾಗ್ರಜಂ ಭಾಸ್ಕರ'ನಂತೆಯೇ ಉದಯಾದಿತ್ಯನ ಸಂಧಿವಿಗ್ರಹಿಲಲಾಮನಾದ ನಾಗವರ್ಮನೂ ಮೂರನೇ ಪಾದದಲ್ಲಿ ಹೇಳಿರುವ ಈಶ್ವರ ಭಕ್ತರಲ್ಲಿ ಒಬ್ಬನಾಗಿದ್ದಾನೆಂದು ಅರ್ಥ ಮಾಡುವುದೇ ಯುಕ್ತವೆಂದು ತೋರುವುದು.' ಎಂದು ಪದ್ಯದ ಅನ್ವಯಕ್ರಮದ ಅರ್ಥವನ್ನು ಸೂಚಿಸಿದರು. ಇದಕ್ಕೆ ಉತ್ತರವಾಗಿ 'ಶಿಕಾರಿಪುರ ೧೨೯, ೧೩೦ ಇವುಗಳಲ್ಲಿ ಉಕ್ತರಾದ ಇಬ್ಬರು ಉದಯಾದಿತ್ಯರ ಬಿರುದುಗಳನ್ನು ಮಿಶ್ರ ಮಾಡಿರುವುದು ತಪ್ಪೆಂದು ಅಯ್ಯನವರು ತೋರಿಸಿರುವುದು (ಪುಟಗಳು ೨೩೪–೨೩೫) ನ್ಯಾಯವೇ ಸರಿ. ನಮಗೆ ಬೇಕಾದ ಉದಯಾದಿತ್ಯನು ಪು. ೧೨೯ ರಲ್ಲಿ ಉಕ್ತನಾದವನು. ಈ ತಪ್ಪಿಗೆ ಮೂಲವೇನೋ ತಿಳಿಯಲಿಲ್ಲ; ಬಹುಶಃ ಮಿ॥ ರೈಸ್ ಮಾಡಿರುವ ಈ ಇಬ್ಬರು ಉದಯಾದಿತ್ಯರ ಸಮೀಕರಣವೇ (ಶಿವಮೊಗ್ಗ I, ಪೀಠಿಕೆ ೨೧) ಆಗಿರಬಹುದು[2]. ಎಂದು ಕವಿಚರಿತೆಕಾರರು ತಮ್ಮ ಆ ಒಂದು ಪ್ರಮಾದಕ್ಕೆ ಏನು ಕಾರಣ ಎಂಬುವದನ್ನೂ ಸೂಚಿಸಿದ್ದಾರೆ. ಬಳಿಕ ಮುಂದುವರಿದು ಅಯ್ಯನವರು ದುರ್ಬಲವಾದ ಆಧಾರಗಳ ಮೇಲೆ ಚಂದ್ರಚೂಡಾಮಣಿ ಶತಕದಲ್ಲಿ ಉಕ್ತರಾದ ನಾಗವರ್ಮಾಚಾರ್ಯರು ಶಿಕಾರಿಪುರ ೧೨೯ರಲ್ಲಿ ಹೇಳಿರುವ ಅದೇ ಹೆಸರಿನ ವ್ಯಕ್ತಿಗಳಿಂದ ಭಿನ್ನರೆಂದು ಹೇಳುತ್ತಾರೆ (ಪು ೧೩೫).

೧. "ಶಾಸನವು ನಾಗವರ್ಮಾಚಾರ್ಯನು ಉದಯಾದಿತ್ಯನ ಸಂಧಿವಿಗ್ರಹಿ ಎಂದು ಹೇಳುವುದಿಲ್ಲ. ೨. ರಾಜನಾದ ಭುವನೈಕಮಲ್ಲನು ತನ್ನ ಸೇವಕನ ಕೈಕೆಳಗಿರುವವನ ಕಾಲನ್ನು ತೊಳೆಯಲಾರನು."ಎಂಬ ಅಯ್ಯನವರ ಆಕ್ಷೇಪಣೆಗಳಿಗೆ ಗ್ರಂಥದಲ್ಲಿ ಉಕ್ತವಾದ ಒಂದೊಂದು ಅಂಶವೂ ಶಾಸನದಲ್ಲಿ ಹೇಳಿಯೆ ಇರಬೇಕೆಂಬ ನಿಯಮವೇನೂ ಇಲ್ಲ. "ಪ್ರಕೃತ ವಿಷಯವನ್ನು ಈ ರೀತಿ ಸ್ಪಷ್ಟಪಡಿಸುತ್ತೇನೆ: 'ಚಂದ್ರಚೂಡಾಮಣಿಶತಕದಲ್ಲಿ ಉದಯಾದಿತ್ಯನೆಂಬ ಒಬ್ಬ ಅಧಿಕಾರಿಯೊಡನೆ ಸಂಬಂಧವುಳ್ಳ ಅದೇ ಹೆಸರಿನ ಇಬ್ಬರು ವ್ಯಕ್ತಿಗಳು ಒಂದೇ ಒಂದು ಶಾಸನದಲ್ಲಿ (ಶಿಕಾರಿಪುರ ೧೨೯) ಉಕ್ತರಾಗಿದ್ದಾರೆ. /ಈ ಸಾಮ್ಯವು ಕಾಕತಾಳೀಯವಾಗಿರಲಾರದು. ಗ್ರಂಥೋಕ್ತ ವ್ಯಕ್ತಿಗಳು ಶಾಸನೋಕ್ತ ವ್ಯಕ್ತಿಗಳಿಂದ ಅಭಿನ್ನರಾಗಿರಬಹುದು ಎಂದು ಭಾವಿಸುವುದು ತಪ್ಪೆ ? 'ಉದಯಾದಿತ್ಯನ ಇತ್ಯಾದಿ' ಎಂಬ ಪದ್ಯಕ್ಕೆ ಅಪಾರ್ಥಮಾಡಿದ್ದಾರೆ (ಪು.೨೩೬), ಈ ಪದ್ಯದ ಮೊದಲನೆಯ ಪಾದದಲ್ಲಿರುವ ನಾಗವರ್ಮಂ ಎಂಬುದು ೩ನೆಯ ಪಾದದಲ್ಲಿರುವ ಪೇೞ್ದ ಎಂಬುದರೊಡನೆ ಅನ್ವಯಿಸುವುದಿಲ್ಲವಂತೆ ; ಸಮಂತು ಎಂಬ ಪದದ ಪ್ರಯೋಗದಿಂದ ನಾಗವರ್ಮಂ ಎಂಬುದು ಈಶ್ವರಭಕ್ತರೊಡನೆ ಸೇರುತ್ತದಂತೆ. ಹೀಗಾದರೆ ಆತ್ಮಾಗ್ರಜಂ ಎಂಬುದರಲ್ಲಿ ಆತ್ಮ ಶಬ್ದಕ್ಕೆ ಪ್ರಯೋಜನವೇನೋ ; ಪೇೞ್ದ ಎಂಬುದಕ್ಕೆ ಕರ್ತೃವಾವುದೋ ತಿಳಿಯುವುದಿಲ್ಲ"–ಹೀಗೆ ಶತಕದ ಕರ್ತೃವಿಚಾರವಾಗಿ ಕವಿಚರಿತೆಕಾರರು ಅಯ್ಯನವರ ಅಭಿಪ್ರಾಯವನ್ನು ಆಕ್ಷೇಪಿಸುತ್ತ ಸ್ಪಷ್ಟವಾಗಿ ತಮಗೊದಗಿದ ಪದ್ಯದ ಅನ್ವಯಾರ್ಥದ ಕ್ಲೇಶವನ್ನೂ ಇಲ್ಲಿ ಮಾರ್ಮಿಕವಾಗಿ ತೋಡಿಕೊಂಡಿದ್ದಾರೆ, ವಸ್ತುಸ್ಥಿತಿಯಿದು, ಆದರೂ "ಚಂದ್ರಚೂಡಾಮಣಿ ಶತಕದಲ್ಲಿಯ 'ಉದಯಾದಿತ್ಯನ ನಾಗವರ್ಮಂ'ಇತ್ಯಾದಿ ಪದ್ಯದ ಅನ್ವಯ ಮತ್ತು ಅರ್ಥವನ್ನು ಕವಿಚರಿತೆಕಾರರು ಸರಿಯಾಗಿ ಮಾಡಿಕೊಂಡಿದ್ದಾರೆಂದೂ ಶಾಸನೋಕ್ತ ಉದಯಾದಿತ್ಯ ಮತ್ತು ನಾಗವರ್ಮಾಚಾರ್ಯರೊಡನೆ ಅವರನ್ನು ಸಮೀಕರಿಸಿ ಸು ೧೦೭೦ ಎಂದು ನಾಗವರ್ಮಾಚಾರ್ಯನ ಕಾಲ ನಿರ್ಧರಿಸಿದ್ದು ವಿರೋಧಕ ಪ್ರಮಾಣಗಳಿಲ್ಲದ್ದರಿಂದ ಸಂಭವನೀಯ ಎಂದೂ

2. ಪ್ರಬುದ್ಧ ಕರ್ಣಾಟಕ : 'ಕೆಲವು ಕನ್ನಡ ಕವಿಗಳ ಕಾಲವಿಚಾರ' ಪು. ೨೩೬.

ನಮಗೆ ಕಾಣುತ್ತದೆ". ಎಂಬ ಶ್ರೀ ರಂ. ಶ್ರೀ ಮುಗಳಿಯವರು ಶತಕದ ಕರ್ತೃ ಹಾಗೂ ಕಾಲಗಳ ಬಗೆಗೆ ವಿರೋಧಕ ಪ್ರಮಾಣಗಳಂತೂ ಇಲ್ಲ ಎಂಬ ಭಾವನೆಯನ್ನೇ ಓದುಗರಿಗೆ ಕೊಟ್ಟಿದ್ದಾರೆ.

'ಚಂದ್ರಚೂಡಾಮಣಿ ಶತಕವು **ಪೂರ್ತಿಯಾಗಿ ನೋಡಲು ದೊರೆತಿಲ್ಲ.** ಕವಿಚರಿತೆಯಲ್ಲಿ ಉದಾಹೃತವಾದ ಮೂರು ನಾಲ್ಕು ಪದ್ಯಗಳು ಮತ್ತೇಭದಲ್ಲಿರುತ್ತವೆ. ಪದ್ಯರಚನೆ ಮಾರ್ಗಕಾವ್ಯದ ಸರಣಿಯಲ್ಲಿ ನಿರಾಯಾಸವಾಗಿದೆ. ವೈರಾಗ್ಯದ ಜಾಗ್ರತಿಗೆ ಸಮರ್ಪಕವಾಗಿದೆ'[3]. ಎಂಬ ಈ ಹಿನ್ನೆಲೆಯಲ್ಲಿ ಕೃತಿಯನ್ನೇ ಸಮಗ್ರವಾಗಿ ನೋಡದೆ ಕೃತಿವಿಮರ್ಶೆಗೆ ತೊಡಗಿದವರು. ಕೃತಿಕಾರನ ಹಾಗೂ ಆತನ ಕಾಲವಿಚಾರಕ್ಕೆ ಸಂಬಂಧಿಸಿದ ವಿರೋಧಕ ಪ್ರಮಾಣಗಳಿಲ್ಲವೆಂಬ ನಿರ್ಣಯಕ್ಕೆ ಅದರ ಬಣ್ಣವನ್ನು ಒರೆಹಚ್ಚಿ ನೋಡಿಕೊಳ್ಳಲು ಸಮಗ್ರಕೃತಿದರ್ಶನದ ಒರೆಗಲ್ಲೇ ಅಗತ್ಯ ಎಂದು ಭಾವಿಸುವುದರಲ್ಲಿ ಔಚಿತ್ಯವುಂಟು. ಆ ಕಾರಣ ಚಂದ್ರಚೂಡಾಮಣಿಶತಕದ ಕರ್ತೃ ಉದಯಾದಿತ್ಯ ಎಂಬುದರ ಬಗೆಗೆ ಆತನ ಪದ್ಯರಚನಾಕ್ರಮವೇ ಸುಳಿವುದೋರಬಲ್ಲುದೆ? ನೋಡೋಣ. ಈ ಶತಕದ ಮೊದಲನೆಯ ಪದ್ಯವು ಬೆಂಗಳೂರು ವಿಶ್ವವಿದ್ಯಾಲಯದ 'ಸಮಗ್ರ ಕನ್ನಡ ಸಾಹಿತ್ಯಚರಿತ್ರೆ'ಯಲ್ಲಿ (ಪು.೨೯೩) 'ಶ್ರೀರಾಮಜನಿತೋತ್ಸವಕ್ಕೆ ಮನದೊಳ್ಮೆಯಾಂತು ತತ್ತ್ವದಭೇದಾರಂಭ (ದೊ)ಳ (ಗಿ)ರ್ದು ಚಿಂತಿಸಿ ತದೀಯೋಪಾ (ರ್ಜಿ)ತಾಯಾಸದುರ್ವಾರ (ಕ್ಲೇ)ಶ ದಿನ(ಪ್ಪಂ) ಜೀವಸ (ವ)ನೊಲ್ಲೆಂ ಮಾಡು ನಿಶ್ರೇಯಸ ಶ್ರೀರಾಮ ಸುಖಮಂ ಮತೀಶದಯೆಯಿಂ ಶ್ರೀ ಚಂದ್ರಚೂಡಾಮಣೀ' ಎಂದು ಹೀಗೆ ಪ್ರಾರಂಭವಾಗಿದೆ. ಶತಕಕಾವ್ಯದ ಪರಿಚಯದ ಸಲುವಾಗಿ ಉದ್ಧೃತವಾಗಿರುವ ಈ ಪದ್ಯದಿಂದ ಓದುಗರಿಗೆ ಆಗಿರುವ ಲಾಭಕ್ಕಿಂತ ಹಾನಿಯೇ ಹೆಚ್ಚು ಎಂದು ಮೇಲಣ ಪದ್ಯಭಾಗಗಳಲ್ಲಿರುವ ಛಂದೋಭಂಗವೇ ಮನಗಾಣಿಸದಿರದು. ಕಣ್ಣಿಗೆ ಕಾಣುವಂತೆ ಇರುವ ದೋಷಗಳನ್ನು ಬಾಯಿಬಿಟ್ಟು ಹೇಳುವುದರಿಂದಾಗಲಿ ಇಲ್ಲವೆ ಬೆರಳಿಟ್ಟು ತೋರಿಸುವುದರಿಂದಾಗಲಿ ಅದೂ ದೋಷವೇ ಆದೀತು. ಓಲೆಪ್ರತಿಯ ಮೂಲ ಲೇಖಕನು ಬರೆದ ಪದವನ್ನಿಲ್ಲಿ ಉದ್ಧರಿಸಿದೆ. ಎಂದು ಭಾವಿಸಿದರೂ ಪ್ರಸ್ತುತ ಪದ್ಯದ ಯಾವ ದೇಹಭಾಗದಲ್ಲೂ ಸಂಪಾದಕರಿಗೆ ಸಂದೇಹವೇ ತೋರಿಬಂದಂತಿಲ್ಲ. ಆ ಕಾರಣ ಪದ್ಯದಲ್ಲಿ ಪ್ರಶ್ನಾರ್ಥಕ ಅಥವಾ ಸಂದೇಹಸೂಚಕ ಚಿಹ್ನೆಯೊಂದೂ ಕಂಡುಬಂದಿಲ್ಲ. ವಾಸ್ತವವಾಗಿರುವ ಮೇಲಣ ಪದ್ಯದ ಮೂಲಪಾಠಕ್ಕೆ ಇಲ್ಲಿ ಯಾವ ಗತಿಯೊದಗಿದೆ ಎಂಬುದನ್ನು ಶುದ್ಧಪಾಠದ ಪರಿಚಯದಿಂದಲೇ ಮನಗಾಣಬಹುದು :

> ಶ್ರೀರಾಮಾಜನಿತೋತ್ಸವಕ್ಕೆ ಮನದೊಳ್ಮ್ರಯಾಂತು 1 ತತ್ಕೃತಮ। ಪ್ರಾರಂಭಕ್ಕೊಳಸೋರ್ದು। ಚಿಂತಿಸಿತದೀಯೋಪಾರ್ಜಿತಾಯಾಸದು
> ರ್ವಾರಕ್ಲೇಶದಿನಪ್ಪ ಜೀವಸವನೊಲ್ಲೆಂ ಮಾಡು ನಿಶ್ರೇಯಸ। ಶ್ರೀರಾಮಾ ಸುಖಮಂ ಮದೀಶ ದಯೆಯಿಂ ಶ್ರೀಚಂದ್ರಚೂಡಾಮಣೀ॥೧॥[4]

ಹೀಗೆ ಶುದ್ಧಪಾಠವನ್ನು ಪಾಠಾಂತರ ಸಹಿತ ಕೊಟ್ಟ ಸಂದರ್ಭದಲ್ಲಿಯೂ ಅರ್ಥಕ್ಲೇಶ ಒದಗಬಹುದು. ಗ್ರಂಥದ ಮೂಲಪಾಠ ಅಚ್ಚು ಕಾಣುವಷ್ಟರಲ್ಲಿ ಎಷ್ಟು ಮಾರ್ಪಟ್ಟು ಹೋಗುತ್ತದೆ ಎಂಬುದಕ್ಕೆ ವಿಶ್ವವಿದ್ಯಾಲಯದ ಪ್ರಕಟಿತ ಪದ್ಯದ ದೃಷ್ಟಾಂತವೇ ಸಾಕು. ಈ ತೆರನಾದ ಕೃತಿ ಸಂಪಾದನೆಯಿಂದ ಕೃತಿರಚನೆಯಲ್ಲಿಲ್ಲದ ರೂಪವನ್ನೂ, ಭಾವವನ್ನೂ, ಛಂದೋಭಂಗವನ್ನೂ ಅಪಶಬ್ದವನ್ನೂ ಓದುಗರ ಮುಂದಿಟ್ಟು ಕವಿಗೆ ದುಷ್ಕೀರ್ತಿಯನ್ನೂ ಕೃತಿಗೆ ಸ್ವರೂಪಹಾನಿಯನ್ನೂ ಉಂಟುಮಾಡಿದಂತಾಗದೆ?

ಚಂದ್ರಚೂಡಾಮಣಿ ಶತಕದ ಈ ಪದ್ಯದ ಶುದ್ಧಪಾಠವನ್ನು ದೃಷ್ಟಿಯಲ್ಲಿಟ್ಟುಕೊಂಡು ಅದರ ಭಾವಾಭಿವ್ಯಕ್ತಿಯನ್ನು ಕವಿಯು ನಿರೂಪಿಸಿರುವಂತೆ ಪರಿಶೀಲಿಸಬಹುದು. 'ಶ್ರೀವನಿತೆಯಾದ ಧನಲಕ್ಷ್ಮಿಯ ಪ್ರಾಪ್ತಿಗಾಗಿ ಮನಸ್ಸಿನಲ್ಲಿಯೇ ಹಿಗ್ಗಿ, ಹೆಗಲ ಮೇಲೆ ಮೆರೆಯಿಸಿ, ಆಕೆ ಕಾಲ್ತೆಗೆದು ತೊಲಗಿ, ವಂಚಿಸತೊಡಗಿದುದನ್ನು ಕಂಡು ಭಯಪಟ್ಟು, ಚಿಂತೆಗೆ ಗುರಿಯಾಗಿ ಆ ಧನಾಂಗನೆಯನ್ನು ಮತ್ತೆ ಗಳಿಸುವ ಆಯಾಸಬೇಡ. ದ್ರವ್ಯೋಪಾರ್ಜನೆಯ ಕರ್ಮಕ್ಲೇಶದ ಸಹಿಸಲಶಕ್ಯವಾದ ಸ್ವೇದಖೇದಗಳಿಂದುಂಟಾಗುವ ದುಗುಡ ದುಮ್ಮಾನಗಳನ್ನೊಲ್ಲೆ. ನನ್ನೊಡೆಯ, ಚಂದ್ರಚೂಡಾಮಣಿಯೇ, ಮೋಕ್ಷ ಲಕ್ಷ್ಮಿಯ ಪರಮಸುಖವನ್ನು ನನಗೆ ನೀಡು,'—ಪದ್ಯದ ತಾತ್ಪರ್ಯವಿದು. ಶ್ರೀವನಿತೆಯ ಸಂಗದಿಂದ ದೂರವಾಗಿ ಮುಕ್ತಿ ಶ್ರೀಯನ್ನು ಕೋರುವ ಆಕಾಂಕ್ಷೆ ಈ ವೃತ್ತದಲ್ಲಿ ವ್ಯಕ್ತವಾಗಿದೆ. ನಿಡುಬಾಳಿನ ಒಂದು ಘಟ್ಟದಲ್ಲಿ ನಡೆದು ಬಂದ ದಾರಿಯನ್ನು ಒಮ್ಮೆ ಹಿಂದಿರುಗಿ ನೋಡುವ ಒಂದು ನೋಟ ಇಲ್ಲಿ ಸುಸ್ಪಷ್ಟವಾಗಿದೆ. ಶ್ರೀವನಿತೆಯ ಜನ್ಮವೃತ್ತಾಂತದ ರಹಸ್ಯವೂ ಇಲ್ಲಿ ಮಾರ್ಮಿಕವಾಗಿ ಚಿತ್ರಿತವಾಗಿದೆ. ಅದರ ಮೂಲ ಸಂದರ್ಭವನ್ನು ನೆನಪು ಮಾಡಿಕೊಡುವ ಕಾವ್ಯವಸ್ತುವಿನ ದೃಶ್ಯವಿದು :—

ಹಿನ್ನೆಲೆ : ಕುರುಚಕ್ರಿ ಕಾಲಚಕ್ರಿಯಾಗುವ ಸಮಯ. ಆತನನ್ನು ಬಿಟ್ಟು ಹೋಗುತ್ತಿರುವ ಕಮಲಾಕ್ಷಿ.

ಅಶ್ವತ್ಥಾಮ : ನೀನಾರ್ಗೆ ? ಎತ್ತಣಿಂದ ಬಂದೆ ? ಎಲ್ಲಿಗೆ ಪೋದಪೆ ?

---

3. ಪ್ರಾಚೀನ ಕನ್ನಡ ಸಾಹಿತ್ಯರೂಪಗಳು ಪು.೧೦೧.
4. 'c' ತಾಡಪ್ರತಿಯಲ್ಲಿರುವಂತೆ ಉದ್ಧರಿಸಲಾಗಿದೆ[1]. ತತ್ಕಾಪದಭೇದಾರಂಭಕ್ಕೊಳಸಾರ್ದು (a), ತತ್ಸ್ವೇದಖೇದಾರಂಭಕ್ಕೊಳಸಾರ್ದು (c), ಸ್ವೀಪಾ (b).

ಲಕ್ಷ್ಮಿ : ಅಮೃತಪಯೋಧಿ ಮಂಥನದೆ ಪುಟ್ಟಿದೆನ್. ಅಬ್ಜಭವಾಂತ
ರಾಳದೊಳ್ ರಮಿಯಿಪ, ಪದ್ಮನಾಭನುರದೊಳ್ ನೆಲಸಿರ್ಪ
ಮಹಾನುಭಾವೆಯಾಂ, ಕಮಲೆಯೆನ್, ಇನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದೆನ್ ಈಗಳ್
ಉತ್ತಮ ಪುರುಷೋತ್ತಮಂ ಬೆಸಸೆ ಪಾಂಡವರೊಳ್ ನೆಲಸಲ್ಕೆ ಪೋದಪೆಂ

'ಪುರುಷೋತ್ತಮ'ನ ಹೆಸರು ಕೇಳಿ ಬಂದೊಡನೆ ಕೋಪೋದ್ರಿಕ್ತನಾದ ಅಶ್ವತ್ಥಾಮನು ಲಕ್ಷ್ಮಿಯನ್ನು ಕುರಿತು ಅವಳ ಚಪಲಚಿತ್ತಕ್ಕೆ ಹೇಸಿ 'ಅಜಗುಲಿ, ನಿನ್ನಿಂ ನಿಕೃಷ್ಟರುಮೊಳರೆ ?' ಎಂದು ಆಕೆಯ ಜನ್ಮದಲ್ಲಿಯೇ ದೋಷವಿದೆಯೆಂಬುದನ್ನು ಎತ್ತಿ ಆಡುತ್ತಾನೆ. ಅದಲ್ಲದೆಯುಂ

ಅಮೃತಸಮುದ್ರಮಂಥನದೊಳ್ ಪುಟ್ಟುವಂದು ಐರಾವತದೊಡನೆ ಪುಟ್ಟಿದುದಱಿಂ ವಿಪರೀತ ವೃತ್ತಿಯುಂ, ಚಂದ್ರನೊಡನೆ ಪುಟ್ಟಿ,
ದುದಱಿಂ ಕೌಟಿಲ್ಯಮುಂ, ಕೌಸ್ತುಭದೊಡನೆ ಪುಟ್ಟಿದುದಱಿಂ ಕಠಿನತ್ವಮುಂ,ವಾಗ್ದೇವಿಯೊಡನೆ ಪುಟ್ಟಿದುದಱಿಂ ವಾಚಾಳತೆಯುಂ,
ಅಮರವೈರಿಯೊಡನೆ ಪುಟ್ಟಿದುದಱಿಂ ಗ್ರಹಣಸಲ್ಲೀಖನಾ ಬುದ್ಧಿಯುಂ, ವೈದ್ಯನೊಡನೆ ಪುಟ್ಟಿದುದಱಿಂ ಪ್ರಾಣಶೂಲವೇದಿಯುಂ,
ನಾರದನೊಡನೆ ಪುಟ್ಟಿದುದಱಿಂ ಕಲಹ ಸ್ವಭಾವಮುಂ, ಕಾಳಕೂಟದೊಡನೆ ಪುಟ್ಟಿದುದಱಿಂ ಕೊಲೆಯುಂ,
ಕಳ್ಳೊಡನೆ ಪುಟ್ಟಿದುದಱಿಂ ಸೊರ್ಕುಂ, ಅಚ್ಚರಸಿಯರೊಡನೆ ಪುಟ್ಟಿದುದಱಿಂ ಪಾಱುಗೆಯ್ತುಮುಂ ನಿನಗೆ ಸಹಜಮಾಗಿರ್ದುವು'?[5]

ಹೀಗೆ ದೋಷಯುಕ್ತಳಾದ ಲಕ್ಷ್ಮಿಯ ಪೌರಾಣಿಕ ಕಥನದ ರನ್ನನ ಕಲ್ಪನೆಯ ಪ್ರಭಾವದ ನೆರಳು ಚಂದ್ರಚೂಡಾಮಣಿ ಶತಕ ರಚನೆಯ ಮೇಲೆ ಆಗದೆಯಿಲ್ಲವೆಂಬುದು ಶತಕದ ಆರಂಭವೃತ್ತದಲ್ಲಿ ಪ್ರಯೋಗವಾಗಿರುವ ಕೈತವ, ಪಾದಭೇದ, ದುರ್ವಾರಕ್ಲೇಶ ಇತ್ಯಾದಿ ಪದಗಳಿಂದ ವೇದ್ಯವಾಗುತ್ತದೆ. ಭಾಗ್ಯಲಕ್ಷ್ಮಿ ಬೇಡವೆಂಬ ಈ ನಿರೂಪಣೆ ಕೇವಲ ವೈರಾಗ್ಯ ಸೂಚಕವೆ ? 'ನಿಶ್ರೇಯಸ ಶ್ರೀ ರಾಮಾಸುಖಮಂ' ಕೊಂಡಾಡುವ ಇದೇ ಕವಿ 'ಶ್ರೀರಾಮಾಜನಿತೋತ್ಸವ'ದ ಸಹಜವಾದ ಕೌಟಿಲ್ಯ ಚಾಂಚಲ್ಯಗಳ ಸೂಚನೆಯ ಕಾವ್ಯೋದ್ದೇಶವಾದರೂ ನಿರರ್ಥಕವಾದುದೆ ? ಶ್ರೀವನಿತೆಯ ದೋಷಚಾರಿತ್ರದೃಷ್ಟಿಯಿಂದ ಆಕೆಯನ್ನು ನಿರಾಕರಣೆ ಮಾಡುವ ಇಂತಹ ಮತ್ತೊಂದು ಉದಾಹರಣೆ ಅದ್ವೈತ ಗಂಥಗಳಲ್ಲಿ ಎಲ್ಲೂ ದೊರೆಯುವ ಸಾಧ್ಯತೆ ಇಲ್ಲವಾದ ಕಾರಣ 'ಕನ್ನಡದಲ್ಲಿ ಶಂಕರಾದ್ವೈತದ ಪ್ರಥಮ ಕೃತಿಯೆಂದರೆ ಚಂದ್ರಚೂಡಾಮಣಿಶತಕ'[6] ಎಂಬ ಹೇಳಿಕೆಗೆ ಯಾವ ಆಧಾರವೂ ಇಲ್ಲ. ಈ ಶತಕ ಗ್ರಂಥದ ಸಮಗ್ರ ಪರಿಶೋಧನೆಯಂತೂ ಈ ನಿಲವನ್ನು ದೃಢಪಡಿಸುತ್ತದೆ.

ಜೀವ–ದೇವ–ಜಗತ್ತುಗಳನ್ನು ಕುರಿತ ಶತಕಕಾರನ ವಿಚಾರಸರಣಿಯ ವಿವೇಚನಾತ್ಮಕ ಪದ್ಯಗಳಲ್ಲಿನ ತನುವುಂ ಜೀವನುಮುಮೇಕರೂಪಮೆನೆ ನೀರಕ್ಷೀರದಂತಿರ್ದ ತತ್ತನು ಬೇಱಿಂದೊಡೆ ಪುತ್ರಮಿತ್ರರವರೆಂತುಂ ತಾವೇ ಬೇಱಲ್ತೆ ದೇಹನಿಬದ್ಧಾಂತರ ಬಾಹ್ಯಕರ್ಮಮನವಂ ಬೇರಾಗಿಱಲ್ಕಂಡು ನಿಮ್ಮನೆ ಬೇಱಿಲ್ಲದೆ ಕಾಣ್ಬೆನಕ್ಕೆ ಮನದೊಳ್ ಶ್ರೀ ಚಂದ್ರಚೂಡಾಮಣೀ ॥೨॥ ಈ ಭಾವಗಳ ವಿಶ್ಲೇಷಣೆ ಹಾಗೂ ಮೂಲ ಸಂಬಂಧಗಳನ್ನು ಸೂಚಿಸಬಹುದಾಗಿದೆ: ಈ ಪದ್ಯದಲ್ಲಿ

೧) ತನು–ಜೀವಗಳು ಏಕರೂಪ. ೨) ನೀರ–ಕ್ಷೀರದಂತೆ ಏಕರೂಪವಾದ ಶರೀರವು ತನ್ನಿಂದ ಬೇರೆ. ೩) 'ಆತ್ಮಾ ವೈ ಪುತ್ರನಾಮಾಸಿ' ಈ ಲೌಕಿಕ ದೃಷ್ಟಿಯೂ ನಿಜಾತ್ಮ ದೃಷ್ಟಿಯಿಂದ ಭಿನ್ನವಾದುದು. ೪) ದೇಹನಿಬದ್ಧವಾದ ಶ್ರೋತ್ರಾದಿ ಜ್ಞಾನೇಂದ್ರಿಯಗಳ ಹಾಗೂ ವಾಗಾದಿ ಕರ್ಮೇಂದ್ರಿಯಗಳ ವ್ಯಾಪಾರಗಳು ತನ್ನಿಂದ ಅನ್ಯವಾದುವು. ೫) ದೇವ–ಜೀವನ ಅನನ್ಯತಾ ಸ್ವರೂಪದ ಏಕತೆ.

ದೇಹ–ದೇಹಿಯ ಸಂಬಂಧವಾದ ಗುಣಭದ್ರಾಚಾರ್ಯರ ಆತ್ಮಾನುಶಾಸನದ (೨೫೩ ನೆಯ) ಶ್ಲೋಕವಿದು :

ಕ್ಷೀರನೀರವದಭೇದ ರೂಪಸ್ಥಿತ್ಯತೋರಪಿ ಚ ದೇಹ ದೇಹಿನೋಃ ಭೇದ ಏವ ಯದಿ ಭೇದವತ್ಸ್ವಲಂ ಬಾಹ್ಯವಸ್ತುಷು ವದಾತ್ರಕಥಾ॥

(ಸಮ್ಯಕ್ತ್ವಸಾರ : ಪು ೧೭)

ಪ್ರಮುಖ ವಚನಕಾರರ ಜೀವ–ದೇಹ ಸಂಬಂಧದೃಷ್ಟಿಯನ್ನು ಶತಕ ನೆನಪು ಮಾಡಿಕೊಡುತ್ತದೆ : ಸಿದ್ಧರಾಮನ

(೧) 'ನೀರಕ್ಷೀರದ ಸಂದುಗಳ ಹಂಸೆ ಬಿಚ್ಚಬಲ್ಲುದು ನೋಡಯ್ಯ, ದೇಹ-ಜೀವದ ಸಂದ ನೀವು ಬಿಚ್ಚಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ
ನೀನಿಕ್ಕಿದ ತೊಡಕ ಬಿಡಿಸಬಾರದು, ನೀವು ಬಿಡಿಸಿದ ತೊಡಕನಿಕ್ಕಬಾರದು, ಕಪಿಲಸಿದ್ಧ ಮಲ್ಲಿನಾಥಯ್ಯ,
ನೀನೇ ಎನ್ನ ಕಾಯದ ಜೀವದ ಹೊಲಿಗೆಯ ಬಿಡಿಸಾ ನಿಮ್ಮ ಧರ್ಮ'[7]

ಎಂಬ ಈ ವಚನ ಪ್ರತಿಪಾದಿತ ದೇಹ–ಜೀವದ ಸ್ಪಷ್ಟವಾದ ಸಂಬಂಧವನ್ನು ಕುರಿತೇ ಶತಕದ ಮೇಲಣ ವೃತ್ತ ಪ್ರಸ್ತಾಪಿಸಿದೆ.

(೨) 'ನೀರುಕ್ಷೀರದಂತೆ' ಕೂಡಿಹ ಭೇದವನಾರೂ ಅರಿಯಲಿಲ್ಲ, ಆರಿಗೂ ಹೇಳಲಿಲ್ಲ, ಹೇಳಿ ಹೊಗಳಲಿಲ್ಲ
ಊರಬೆರಸಿ ಬೆಚ್ಚ ಭಂಗಾರಕ್ಕೆ ಸಂದುಂಟೆ ಹೇಳಾ ! ಉರಿಯುಂಡ ಕರ್ಪುರದ ಪರಿಯಂತಿರ್ದುದ ಇದಿರಿಂಗೆ ಕೊಂಡಾಡಿ ಹೇಳಲುಂಟೆ ?
ಅದಂತಿರಲಿ. ನಮ್ಮ ಗೊಗೇಶ್ವರ ಲಿಂಗದ ಕಣ್ಣಮುಂದೆ ನಿಮ್ಮ ಧರ್ಮದಲೊಂದು ಅತಿಶಯುವ ಕಂಡು ನೋಡಾ, ಸಂಗನ ಬಸವಣ್ಣಾ!'

೯೩೦ ಮ. ಶೂ. ಸಂ.

---

5. ಗದಾಯುದ್ಧ.
6. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಪು. ೨೯೩.
7. ಸಿದ್ಧರಾಮನ ವಚನಗಳು : ೧೩೦.

ಅಲ್ಲಮಪ್ರಭುವಿನ ಈ ವಚನಭಾಗದ ಜೀವ–ದೇವನ ಸಂದಿಲ್ಲದ ಸಂಬಂಧವನ್ನೇ ಶತಕಕಾರನು 'ನಿಮ್ಮನೆ ಬೇಱಿಲ್ಲದೆ ಕಾಣ್ಬೆನಕ್ಕೆ ಮನದೊಳ್' ಎಂಬ ನುಡಿಯಲ್ಲಿ ಆಶಿಸಿದ್ದಾನೆ.

(೩) ಎ) 'ನೀರಕ್ಷೀರದಂತೆ ನೀನಿಪ್ಪೆಯಾಗಿ, ಆವುದುಮುಂದು ಆವುದು ಹಿಂದು ಎಂದರಿಯೆನು.
ಆವುದು ಕರ್ತೃ ಆವುದು ಭೃತ್ಯನೆಂದರಿಯೆನು, ಆವುದು ಘನ, ಆವುದು ಕಿರಿದೆಂದರಿಯೆನು.[8]

ಬಿ) 'ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೆ ? ಅಪಾರ ಮಹಿಮ ಚೆನ್ನಮಲ್ಲಿಕಾರ್ಜುನ
ನೀನೆನ್ನೊಳಡಗಿರ್ದ ಪರಿಯ ಬೇರಿಲ್ಲದೆ ಕಂಡು ಕಣ್ದೆಱೆದೆನು'[9]

ಅಕ್ಕಮಹಾದೇವಿಯ ತತ್ತ್ವಚಿಂತನೆಯ ಈ ಜ್ಞಾನಸಿದ್ಧಿ ಶತಕಕವಿಯ 'ನಿಮ್ಮನೆ ಬೇಱಿಲ್ಲದೆ ಕಾಣ್ಬೆನಕ್ಕೆ ಮನದೊಳ್' ಎಂಬ ನುಡಿಯಲ್ಲಿ ಧ್ವನಿತವಾಗಿರುವುದನ್ನು ಲಾಲಿಸಿ ಕೇಳಿ ಮನಗಾಣಬಹುದು. ಇನ್ನು ಜಗತ್ತತ್ತ್ವವನ್ನು ಕುರಿತ ಆದ್ಯಶತಕಕಾರರ ಜೀವನ ದೃಷ್ಟಿಯನ್ನು ಇಲ್ಲಿ ವಿವೇಚಿಸುವಾಗ ಚಂದ್ರಚೂಡಾಮಣಿ ಶತಕದ ನಿಲವನ್ನೂ ಗಮನಿಸಬಹುದು.

೧) ಶಿವ ನಿಮ್ಮಿಂ ಪುಟ್ಟಿತೀ ಮಾಯೆ ಗಡೆನಿಪದನಾಂ ಸೈರಿಸೆಂ ಪುಟ್ಟಿತೆಂಬೊಂ
ದವಿಚಾರಂ ನಿಷ್ಕ್ರಿಯಾತ್ಮ ಪ್ರಭುತನಕೆ ಕರಂ ಹಾನಿ ಶುದ್ಧಾತ್ಮನೊಳ್ ಶಂ
ಭುವಿನೊಳ್ ಸಮ್ಯಕ್ ಪರಾನಂದದ ತವ ನಿಧಿಯೊಳ್ ನಿನ್ನೊಳೀ ಭ್ರಾಂತಿಯೆಂಬಾ
ಶ್ರುವೆಯಂ ತರ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ರ. ಶ. ೯೨

೨) ಮೊದಲಿಂದಂ ಕೂರ್ಮರೋಮಂ ಬಗೆಯೆ ಶಶವಿಷಾಣಂವಿಯತ್ಪುಷ್ಪದಂತಿ
ಲ್ಲದುದೇ ಸತ್ಯಂ ಪ್ರಪಂಚಂ ಬಗೆದು ತಿಳಿಯೆ ನಿಷ್ಕಾಮ ನಿರ್ಮಾಯ ನಿತ್ಯಾ
ಭ್ಯುದಯಾನಂದೈಕ ತೇಜೋನಿಧಿ ನಿರುಪಮ ನಿರ್ಲೇಪ ನಿರ್ವಾಣ ನೀನೆಂ
ಬುದನೇ ಸೈತಿತ್ತು ಪಂಪಾಪುರದರಸವಿರೂಪಾಕ್ಷ ರಕ್ಷಿಪ್ಪುದೆನ್ನಂ ॥೯೩॥

ಜಗದ್ಗುರು ಶಂಕರಾಚಾರ್ಯರು ಪ್ರತಿಪಾದಿಸಿರುವ 'ಬ್ರಹ್ಮಸತ್ಯಂ ಜಗನ್ಮಿಥ್ಯಾ', 'ಜೀವೋ ಬ್ರಹ್ಮೈವ ನಾಪರ' ಎಂಬ ಸೂತ್ರಗಳ ಅರ್ಥದಲ್ಲಿ, ಅದ್ವೈತ ತತ್ತ್ವಸಾರ ಸರ್ವಸ್ವವೂ ಅಡಗಿದೆ, 'ಅಹಂ ಬ್ರಹ್ಮಾಸ್ಮಿ' 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ಉಪನಿಷದ್ವಾಕ್ಯಗಳಲ್ಲಿ ಹೇಳಿರುವಂತೆ ಬ್ರಹ್ಮವೇ ನಿಜವಾದ ವಸ್ತು. ಅದೊಂದೇ ಸತ್ತು. ಉಳಿದುದೆಲ್ಲ ಅಸತ್ತು. ಶಂಕರಾಚಾರ್ಯರ ಸಿದ್ಧಾಂತದ 'ಪರಮಾರ್ಥ ದೃಷ್ಟಿ'ಯಿಂದ ಈ ಜಗತ್ತು ಅಸತ್ಯ, ಮಾಯೆ; ಅದು ಬ್ರಹ್ಮದ ಭ್ರಮಾತ್ಮಕವಾದ ತೋರಿಕೆಯೇ ಹೊರತು ಬ್ರಹ್ಮದ ಸೃಷ್ಟಿಯೂ ಅಲ್ಲ, ಬ್ರಹ್ಮದ ಪರಿಣಾಮವೂ ಅಲ್ಲ. ಶಂಕರಾಚಾರ್ಯರ ಪ್ರಕಾರ 'ವ್ಯಾವಹಾರಿಕ ದೃಷ್ಟಿ'ಯಿಂದ ಜಗತ್ತು ಸತ್ಯ. ವ್ಯವಹಾರವಿರುವ ತನಕ ಜಗತ್ತಿನ ಸಾಕ್ಷಿಯಲ್ಲಿ ಕಾಣುವ ನಾಮರೂಪಾತ್ಮಕವಾದ ಭೇದಗಳು, ಉಚ್ಚನೀಚಾದಿ ತರತಮಭಾವಗಳು ಅನಾದಿಯಾದ ಅವಿದ್ಯೆಯ ದೆಸೆಯಿಂದ ನಿಜವೆಂದು ತೋರುವುವು. ಬದುಕಿನ ದುಃಖದಾರುಣತೆಗಳೂ ನಿಜವೆಂದು ತೋರುವುದಕ್ಕೆ ಆತನ ಅವಿದ್ಯೆಯೇ ಕಾರಣ. ಜೀವನು ಸ್ವಸ್ವರೂಪಜ್ಞಾನವನ್ನು ಮರೆತು ಜಗತ್ತೆ ಸತ್ಯ ಎಂದು ಭ್ರಮಿಸುತ್ತಾನೆ. ವ್ಯವಹಾರ ನೀತ ಕೂಡಲೆ ದುಃಖವಾಗಲಿ, ಜಗದ ನಾನಾತ್ವದ ಭೇದವಾಗಿ ಪರಮಾತ್ಮನಲ್ಲಿ ಕಾಣದಾಗುತ್ತದೆ.

ಶಾಂಕರ ಸಿದ್ಧಾಂತದ ಪ್ರಮುಖ ಸೂತ್ರಗಳ ಈ ಅರ್ಥದೃಷ್ಟಿಯಿಂದ ಕನ್ನಡಶತಕ ಸಾಹಿತ್ಯದ ಆದ್ಯಪ್ರವರ್ತಕರಲ್ಲಿ ಮೊದಲಿಗನಾದ ಹರಿಹರನ ಮೇಲಣ ಪದ್ಯಗಳ ತತ್ತ್ವ ನಿರೂಪಣೆಯ ನಿಲವನ್ನು ವಿವೇಚಿಸಿ ನೋಡಬಹುದು. ಬ್ರಹ್ಮದ ಭ್ರಮೆಯೆ ಜಗತ್ತಿನ ಮಾಯೆಗೆ ಕಾರಣವೆಂಬ ಮಾತನ್ನು ಹರಿಹರನು ಸ್ಪಷ್ಟವಾಗಿ ಸೈರಿಸಲಾರೆನೆಂದು ಹೇಳಿರುವುದನ್ನು ಕಾಣುತ್ತೇವೆ (ಪದ್ಯ ೯೨). ಪ್ರಪಂಚ ಸತ್ಯವಷ್ಟೇ ಅಲ್ಲ, ಅದೇ ಪರಮಾತ್ಮನ ನಿಜನಿಧಿಯೆಂಬ ದೃಢನಿಷ್ಠೆಯನ್ನು ಆತನು ಸ್ಪಷ್ಟಪಡಿಸಿದ್ದಾನೆ (ಪದ್ಯ ೯೩). ಹೀಗೆ 'ಸತ್ಯಮದ್ವೈತಂ' 'ಶುದ್ಧಶಿವಚೈತನ್ಯ'ವೇ ಆದ ಜಗತ್ತಿಗೆ ಶಿವನ ಮಾಯೆ ಮುಸುಕಿದೆಯೆಂಬ ಶಂಕರಾಚಾರ್ಯರ ಜಗನ್ಮಿಥ್ಯಾವಾದವನ್ನು ಅಲ್ಲಗಳೆದಿದ್ದಾನೆ. ಜಗತ್ತು ಸತ್ಯ ಎಂದು ಸಾರಿದ್ದಾನೆ. ಹರಿಹರನ ಈ ಜಗತ್ ಸತ್ಯವಾದವನ್ನೇ ಚಂದ್ರಚೂಡಾಮಣಿ ಶತಕಕಾರನು ಎತ್ತಿ ಹಿಡಿದಿದ್ದಾನೆಂಬುದನ್ನು ಆತನ ಮುಂದಿನ ಪದ್ಯದಲ್ಲಿ ಕಾಣಬಹುದು :—

ಒಳಕೊಂಡಿರ್ಪ ಪದಾರ್ಥಮಿಲ್ಲಣಮೆ ತಾನೀ ವಿಶ್ವಮಂ ಕೂಡಿನೀ। ನೊಳಕೊಂಡಿರ್ದೆಡೆಯೆಂಬ ಪಂಬಲೊಳಿ ಸರ್ವಂ ಖಲ್ವಿದಂ ಬ್ರಹ್ಮವೆಂ
ದೊಳಕೊಂಡಿಪ್ಪುವ ಶೇಷಮುಂ ಸಕಲಮುಂ ತಾನಕ್ಕುಮಂತಾಗಿ ನೀ। ನೊಳಕೊಳ್ವೈ ಬಿಡದಾ ಮಹಾಪುರುಷರಂ ಶ್ರೀಚಂದ್ರಚೂಡಾಮಣೀ ೮೧

ಸಕಲವೂ ತಾನೇ ಆಗಿರುವಾಗ ಮತ್ತೊಂದು ಒಳಕೊಳ್ಳುವುದಕ್ಕೆ ಎಡೆಯುಂಟೆ ? ಆದರೂ ಹಾಗೆಂದು ಭಾವಿಸಿದ ಕಾರಣ 'ಸರ್ವಂ ಖಲ್ವಿದಂ ಬ್ರಹ್ಮ' ಎಂದೆಂಬ ಉಪನಿಷದ್ವಾಕ್ಯವನ್ನು ಅದೊಂದು 'ಹಂಬಲ'–ಔತ್ಸುಕ್ಯದ ಆಸೆ, ವ್ಯಗ್ರವಾದ ಬಯಕೆ ಎಂದೇ ಕವಿ ಟೀಕಿಸಿರುವುದನ್ನು ಕಾಣಬಹುದು. 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಸತ್ಯವನ್ನು ಒಳಕೊಂಡ ಮಿಥ್ಯಾಜಗತ್ತಿಗೆ ಅಧಿ

8. ಶಿವಾ. ಮಹಾದೇವಿಯಕ್ಕನ ವಚನಗಳು ಭಕ್ತಸ್ಥಲ–೧೬. ಪುಟ ೧೪. 9. ಅದೇ ಪುಟ ೩೨.

ಪ್ಥಾನವಾದ ಆಶ್ರಯಸ್ಥಾನವು ಇಲ್ಲದ ಕಾರಣ ಜಗತ್ತಿನ ಮಿಥ್ಯಾತ್ವಕ್ಕೆ ಭಂಗ ಬಂದಿದೆ ಎಂಬುದು ಕವಿಯ ಸ್ಪಷ್ಟವಾದ ಅಭಿಪ್ರಾಯ. 'ಅಹಂ ಬ್ರಹ್ಮಾಸ್ಮಿ' ಎಂಬ ಮಹಾಪುರುಷರನ್ನು ನೀನು ಒಳಕೊಳ್ಳುವವನಲ್ಲವೆ ? ಎಂದು ಮಾರ್ಮಿಕವಾಗಿ ಕವಿ ಜಗನ್ಮಿಥ್ಯಾವಾದವನ್ನು ಪೊಳ್ಳು ಎಂದು ಸಾರಿದ್ದಾನೆ. ಚಂದ್ರಚೂಡಾಮಣಿ ಶತಕದ ಈ ತತ್ತ್ವನಿರೂಪಣೆಯಲ್ಲಿ ಅಲ್ಲಮಪ್ರಭುವಿನ ಮುಂದಿನ ವಚನದ ಪ್ರಭಾವವು ಪ್ರತ್ಯಕ್ಷವಾಗಿರುವಂತೆ ತೋರಿಬರುತ್ತದೆ.

> 'ಸತ್ಯವನೊಳಕೊಂಡ ಮಿಥ್ಯಕ್ಕೆ ಭಂಗ. ಮಿಥ್ಯವನೊಳಕೊಂಡ ಸತ್ಯಕ್ಕೆ ಭಂಗ. ಸತ್ಯಮಿಥ್ಯವನೊಳಕೊಂಡ ಮನಕ್ಕೆ ಭಂಗ.
> ಮನವನೊಳಕೊಂಡ ಜ್ಞಾನಕ್ಕೆ ಭಂಗ. ಜ್ಞಾನವನೊಳಕೊಂಡ ನಿಜಕ್ಕೆ ಭಂಗವುಂಟೆ ಗುಹೇಶ್ವರ ?' —ಪ್ರಭುಗೀತೆ-೬೩೩

ಮೊಗ್ಗೆಯ ಮಾಯಿದೇವರು (ಸು. ೧೪೩೦) ಸಂಪಾದಿಸಿ ಸಂಸ್ಕೃತಕ್ಕೆ ಅನುವಾದಿಸಿರುವ ಪ್ರಭುದೇವರ ವಚನಗಳ ಸಂಕಲನ ಗ್ರಂಥವಾದ 'ಪ್ರಭುಗೀತೆ'ಯಲ್ಲಿನ ಅಲ್ಲಮನ ಪೂರ್ವೋಕ್ತ ವಚನದ ಅನುವಾದವೂ ಚಂದ್ರಚೂಡಾಮಣಿ ಶತಕದ ಅಭಿಪ್ರಾಯವನ್ನು ಪುಷ್ಟೀಕರಿಸಿರುವುದನ್ನಿಲ್ಲಿ ಕಾಣಬಹುದು.

> 'ಸತ್ಯಂ ಮಿಥ್ಯಾಮನೋಜ್ಞಾನಂ ಸ್ವಯಂ ಚಾನ್ಯೋನ್ಯಯೋಗತಃ। ನಿಜಲಿಂಗೈಕ್ಯ ಸಂಪ್ರಾಪ್ತೇರಭಾವಾದ್ಭಂಗಮಾಪ್ನುಯುಃ
> ಪ್ರಾಪ್ತೇತು ನಿಜಲಿಂಗೈಕ್ಯೇ ಸರ್ವಂ ಚಾಸ್ಮಿನ್ವಿಲೀಯತೇ ' ಪ್ರ.ಗೀ. ೧೦೬೧.

'ಸರ್ವಂ ಖಲ್ವಿದಂ ಬ್ರಹ್ಮ'ವೆಂಬ ಜ್ಞಾನವನ್ನೊಳಕೊಂಡ ಮಹಾಸತ್ತಾಸ್ವರೂಪದ ನಿಜಲಿಂಗೈಕ್ಯಾನುಭವದಲ್ಲಿನ ಜಗತ್ತಿನ ನಿಜಕ್ಕೆ ಎಂದಿಗೂ ಭಂಗವಿಲ್ಲವೆಂಬ ಅಲ್ಲಮನತತ್ತ್ವದೃಷ್ಟಿಯನ್ನು ಚಂದ್ರಚೂಡಾಮಣಿಶತಕ ಪ್ರತಿಪಾದಿಸಿರುವುದರಿಂದ ಜಗತ್ ಸತ್ಯವಾದವನ್ನು ಅದು ಎತ್ತಿಹಿಡಿದಿದೆ. ತಾನಲ್ಲದ ದೇಹಾದಿಗಳನ್ನೂ, ಅವುಗಳಿಗೆ ಸಮವಾದ ಸಮಸ್ತ ಅನಿತ್ಯವಸ್ತುಗಳನ್ನೂ ಜ್ಞಾನವಿಹೀನವಾದ ಮನಸ್ಸಿನಿಂದ ತಾನೆಂಬ ಊಹೆಗೂ ಎಟುಕದ–ದುರ್ಬೋಧವನ್ನು ಹೊರದೂಡಿ, ಜ್ಞಾನರೂಪದಿಂದ 'ಅಂ–ನೀನ್' 'ಅಹಂತ್ವಮಸ್ಮಿ'ಎಂಬ ಧ್ಯಾನವಿಶೇಷವು ಮನಸ್ಸಿನಲ್ಲಿ ಅಡಗಿಹೋಗಲಿ, ಜ್ಞಾನಶೂನ್ಯವಾಗಿ ಹೋಗಲಿ ಎಂಬರ್ಥವುಳ್ಳ ಚಂದ್ರಚೂಡಾಮಣಿಶತಕದ ಮುಂದಿನ ಪದ್ಯದಲ್ಲಿ 'ನಾ–ನೀನೆಂಬ ಭೇದ'ವಳಿದು ಸಯವಾದ ನಿಜೈಕ್ಯದ ನಿಲವೇ ಪರಮಾತ್ಮಸ್ವರೂಪವೆಂಬುದನ್ನಿಲ್ಲಿ ಕಾಣಬಹುದು :–

> ಕರಣಜ್ಞಾನಮನೆಲ್ಲಮಂ ಮಱೆದು ತದ್ದೇಹಾದಿ ತದ್ವಸ್ತುವಂ। ಚಿರಮಾಗಲ್ಲದವಂ ವಿಭೇದಮನದಿಂ ತಾನೆಂಬ ಸಂಕಲ್ಪ ದು
> ಸ್ತರದುರ್ಬೋಧಮನೊಕ್ಕುಮಿಕ್ಕಱಿತ ದಿಂದಾಂ ನೀನೆನುತ್ತಿಪ್ಪ ಸಂ।ಸ್ಮರಣವ್ಯಾಪ್ತಿ ಜಿಗುಲ್ತುನಿಲ್ಕೆ ಮನದೊಳ್ ಶ್ರೀಚಂದ್ರಚೂಡಾಮಣೀ೮೦

ನೀನೆಂಬುದೆ ಅಜ್ಞಾನ, ನಾನೆಂಬುದು ಮಾಯಾಧೀನ ಆ ಕಾರಣ 'ನಾ–ನೀನೆಂಬ ಭೇದ ಅಂದೂ ಇಲ್ಲ, ಇಂದೂ ಇಲ್ಲ'ವೆಂಬ ಪ್ರಭುದೇವರ ತತ್ತ್ವದೃಷ್ಟಿಯನ್ನೇ ಮೇಲಣ ಪದ್ಯ ಪ್ರತಿಪಾದಿಸಿದೆ. ವೀರಶೈವ ವಚನಕಾರರ ವಚನಗಳ ಪ್ರಭಾವದ ಮುದ್ರೆ ಚಂದ್ರಚೂಡಾಮಣಿಶತಕದ ಮೇಲೆ ಬಿದ್ದಿರುವುದನ್ನು ಕಾಣಬಹುದು.

'ವಿಯತ್ಪುಷ್ಪದಂತೆ ಇಲ್ಲದುದೆ ಸತ್ಯಂ ಪ್ರಪಂಚಂ'ಎಂದು ಜಗನ್ಮಿಥ್ಯಾವಾದವನ್ನು ಹರಿಹರನು ತಿರಸ್ಕರಿಸಿದಂತೆ ಚಂದ್ರ ಚಂದ್ರಚೂಡಾಮಣಿಶತಕಕಾರನು 'ತನುವಾನ್ ಅಲ್ಲದುದೆ ಸತ್ಯಂ'ಎಂದು 'ದೇಹೋಽಹಂ ಭಾವವನ್ನು ಸ್ಪಷ್ಟವಾಗಿ ಅಲ್ಲಗಳೆದಿದ್ದಾನೆ:

> ಮನೆಯಿಂದಂ ಮನೆಗೆಯ್ದಿ ಪೋಪಪೆಱದಿಂ ನಾನಾಪ್ರಕಾರಂಗಳಿಂ। ತನುವಿಂದಂ ತನುಗೆಯ್ದಿ ಪೋಗಿ ಪುಗುಗುಂ ವಿಭ್ರಾಂತಿಯಿಂ ಜೀವಮಾ
> ತನುವಾನೆಂಬುದಸತ್ಯಮಲ್ಲದುದೆ ಸತ್ಯಂ ಸತ್ಯಮುಂ ನಿತ್ಯಮಾ। ಗಿನಿತಂ ನಂಬುಗೆ ನಿನ್ನೊಳೆನ್ನಯ ಮನಂ ಶ್ರೀ ಚಂದ್ರಚೂಡಾಮಣಿ ॥೩॥

ವಾಕ್ಯರಚನಾದೃಷ್ಟಿಯಿಂದ 'ತನುವಾನೆಂಬುದಸತ್ಯಮಲ್ಲದುದೆ ಸತ್ಯಂ'ಎಂಬುದರಲ್ಲಿ ೧) 'ತನುವಾನ್ ಎಂಬುದು ಅಸತ್ಯಂ ೨) 'ಅಲ್ಲದುದೆ ಸತ್ಯಂ'ಎಂಬ ಎರಡು ವಾಕ್ಯಗಳಿವೆ. ಈ ಉಭಯವಾಕ್ಯಗಳಿಗೂ ಒಂದೇ ಒಂದು ವಾಕ್ಯಪದರೂಪದ ಕರ್ತೃವು ಅನ್ವಯಿಸಿಕೊಂಡಿದೆ ಎಂಬುದನ್ನು ಇಲ್ಲಿ ಹೀಗೆ ಗುರುತಿಸಬಹುದು : 'ತನು–ಆನ್ ಎಂಬುದು ಅಸತ್ಯಂ 'ತನು–ಆನ್ ಅಲ್ಲದುದೆ ಸತ್ಯಂ'. ವಾಕ್ಯದೊಳಗಣ ವಾಕ್ಯದ ಸುರುಳಿಯನ್ನು ಹೊರಳಿಸಿ ಬಿಡಿಸಿದಾಗಲೆ ಅಲ್ಲಡಗಿರುವ ವಾಕ್ಯದ್ವಯ ಸ್ಪಷ್ಟವಾಗಿ ಕಂಡುಬರುವುದು. ಸಂಶ್ಲಿಷ್ಟವಾಕ್ಯರಚನೆಗೆ ಇದೊಂದು ಉದಾಹರಣೆಯಾದರೆ ಚಂದ್ರಚೂಡಾಮಣಿಶತಕದ ಮುಂದಿನ ಪದ್ಯವು ಪ್ರಹೇಳಿಕೆಯ ಸಂಗೋಪನಾರಚನೆಗೆ ಗೂಢಸಾಕ್ಷಿಯಾಗಿದೆ:–

> ಮೊಡನುಯ್ಯಂ ಕುಡದಿರ್ದ ಮೂಲನಲರೆಲ್ಲಂತಪ್ಪರೆಲ್ಲಂದದಿಂ। ಪಿಡಿದಿರ್ದಾತನನೊಯ್ದು ತಾ ನಡಿಗೆ ನಿಮ್ಮಂ ನಂಬಿದೆಂ ನಿಮ್ಮನಾಂ
> ಬಿಡೆ ನೀನಿರ್ದೆಡೆಗೊಯ್ ಭವಾಂಬುಧಿಯನೆತ್ತಂ ಪೊಯ್ನುನೀನೆನ್ನನಾ। ವಡೆಯೋಳ್ನೀನೊಳಕೊಳ್ಮದೀಶ ದಯೆಯಿಂ ಶ್ರೀಚಂದ್ರಚೂಡಾಮಣೀ ೮೮

ಮೃಡನು ತನಗೆ ಒಪ್ಪಿಸದ ಮೂಲಚೈತನ್ಯವಸ್ತುವನ್ನು ಪ್ರಾಣವಾಯುವನ್ನು ಸೆಳೆದೊಯ್ಯುವನು. ಪಾಣಲಿಂಗ ಸೇವಕರೂ ಜ್ಞಾನಾಗ್ನಿಸ್ವರೂಪರೂ ಆದ ರುದ್ರಗಣಗಳೆಲ್ಲರೂ ಪ್ರಾಣಲಿಂಗ ಪ್ರಸಾದವನ್ನು ಅರ್ಪಿಸುವವರೆ. ಶ್ರೋತ್ರಾದಿ ಪಂಚಜ್ಞಾನೇಂದ್ರಿಯಗಳೆಂಬ ಪಂಚಬ್ರಹ್ಮಮುಖದಿಂದ ಸರ್ವಾಂಗದಲ್ಲಿಯೂ ಧರಿಸಿದ ಪ್ರಾಣಲಿಂಗಿಯಾದ ತಾನು ಅಡಿಗೆ, ನಿಮ್ಮ ಅನ್ನಂಬಿದು, ಎನ್ನ ಇಮ್ಮನ್ ಆಂ ಬಿಡೆ, ನೀನ್ ಇರ್ದು ಎಡೆಗೆ ಒಯ್,ಭವ,ಅಂಬುಧಿಯನ್ ಎತ್ತಂ ಪೊಯ್ನು, ನೀನ್; ಎನ್ನನ್

ಆವಡೆಯೊಳ್, ಮದೀಶ, ದಯೆಯಿಂ, ಒಳಕೊಳ್,ಭವ,ಅಂಬುಧಿ (ಘಟಭಾಜನ–ದೇಹ) ಅನ್,ಎತ್, ತಂಪೊಯ್ಸು,ಮತ್ತೆಯೂ ಅಂಬುಧಿಯ ನೆತ್ತಂ (ನೇತ್ರಂ) ಪೊಯ್ಸು, ಎನ್ನನ್ ಆವಎಡೆಯೊಳ್ ನೀನ್ ಒಳಕೊಳ್, ಮದೀಶ ದಯೆಯಿಂ, ಶ್ರೀ ಚಂದ್ರ ಚೂಡಾಮಣೀ–ಎಂಬೀ ಅರ್ಥವುಳ್ಳ ಶತಕದ ಈಪದ್ಯದಲ್ಲಿ ಕಾಯಾರ್ಪಿತದಿಂದ ಐಕ್ಯವಾಗಲೆಳಸುವ ಶತಕಕಾರನ ಪ್ರಸಾದೈಕ್ಯ ಮತಿಯನ್ನು ಕಾಣುತ್ತೇವೆ, ಅಂಗ ಸಹಿತಲಿಂಗಾರ್ಪಿತವಾದ ತನ್ನ ಅಂಗಸುಖಾದಿಗಳೂ ಶಿವ ಸಮರ್ಪಣೆಗೆ ಯೋಗ್ಯವಾದವು. ದೇಹದ ಅಭಿಮಾನ ತೊರೆದವನಿಗೆ ಪುನರ್ಭವವಿಲ್ಲದಂತೆ ಮಾಡುವ ಶಿವೈಕ್ಯದ ಸಲುವಾಗಿ ಶಿವನನ್ನೇ ಬಿಡದೇ ಆಶ್ರಯಿಸಿರುವನೆಂಬುದನ್ನು ಈ ಪದ್ಯದಿಂದ ತಿಳಿಯಬಹುದು.

> ಸಹಬಾಜನ, ಸಹಭೋಜನವೆಂಬರು ಭಾಜನವಾವುದು, ಭೋಜನವಾವುದೆಂದರಿಯರು; ಭಾಜನವೆ ಅಂಗ, ಭೋಜನವೆ ಲಿಂಗ !
> ಭಾಜನಸಹಿತ ಭೋಜನವ ಮಾಡುವ ಹಿರಿಯರು ಭಾಜನವನಿರಿಸಿ ಹೋದರೆ ಅದು ವ್ರತಕ್ಕೆ ಭಂಗ ಗುಹೇಶ್ವರ.

ಅಲ್ಲಮಪ್ರಭುವಿನ ಈ ವಚನವು ಶಿವಪೂಜೆಯ ಅರ್ಪಣ ಕ್ರಮವನ್ನು, ಜ್ಞಾನಕ್ರಿಯಾಚರಣೆಯ ಸಾಮರಸ್ಯದ ಗುರಿಯನ್ನು ನಿರ್ದೇಶಿಸಿದೆ. ತಾನಾದಿಯಾಗಿ ಶಿವಸಮೇತ ಸರ್ವವೂ ಶಿವಮಯ. ಹೀಗೆ ಅರಿಯುತ್ತ ಶಿವರೂಪವಾದ ಆಶ್ರಯದಲ್ಲಿ ಶಿವೈಕ ಭಾಜನಾತ್ಮತ್ವದ ಚಿದೈಕ್ಯದಿಂದ ಅಂಗ–ಲಿಂಗಭೇದವಳಿದು, ಪರಬ್ರಹ್ಮವೇ ತಾನಾದ ದೇಹವನ್ನು–ಅಂಗವನ್ನು ಭೋಗಸಾಧನ (–ಭಾಜನ) ವನ್ನಾಗಿಯೂ. ಭೋಜನವನ್ನಾಗಿಯೂ ಮಾಡಿ ಜಗದ್ಭೇದಭಕ್ಷಕವಾದ ಸಹಭೋಜನ ಸ್ಥಲದ ಶಿವಾದ್ವೈತದ ನಿಲವನ್ನು ನಿರೂಪಿಸುವ ಅಲ್ಲಮನ ಈ ವಚನದ ತಾತ್ಪರ್ಯವನ್ನೇ ಚಂದ್ರಚೂಡಾಮಣಿ ಶತಕದ ಮೇಲಣ ಪದ್ಯ ಪ್ರತಿಪಾದಿಸಿದೆ. ಗುಪ್ತಭಕ್ತಿಯ ಆಚರಣೆಗೆ ಕವಿ ಮನಗೊಟ್ಟವನೆಂಬುದನ್ನು ಈ ನಿಗೂಢ ಪದರಚನಾ ಸಂವಿಧಾನದಿಂದ ಕಂಡುಕೊಳ್ಳಬಹುದು. ಕವಿಯ ಈ ವಿಶಿಷ್ಟವಾದ ರಚನಾ ತಂತ್ರವನ್ನು, ಪ್ರಹೇಳಿಕೆಯ ಸಂಗೋಪನಾಮರ್ಮವನ್ನು ತಿಳಿದಾತನಿಗೆ ಪದ್ಯದ ಮೂಲ ಉದ್ದಿಷ್ಟಾರ್ಥ ಮೈದೋರದಿರದು.

ಚಂದ್ರಚೂಡಾಮಣಿ ಶತಕದ ಮೇಲಣ ಪ್ರಹೇಳಿಕೆಯ ಗುಪಿತಾರ್ಥವನ್ನು ಗ್ರಹಿಸಿ ಪದ್ಯಾತ್ಮಕವಾಗಿ ವಿವೇಚಿಸಿರುವ ಸಮಕಾಲೀನ ವಿಮರ್ಶನ ಕೃತಿಯೆಂದು ಭಾವಿಸಲವಕಾಶವಿರುವ ಅರ್ಧೇಂದುಮೌಳಿಶತಕದ ಕರ್ತೃ ಗುಮ್ಮಟಾರ್ಯನು ನೀಡಿರುವ ವಿವರಣೆಯಿದು :—

> ಪುಸಿದೊರ್ಬಂ ಒರ್ಬನೊಳ್ಕೊಂಡುದನೆ ಕುಡದೆಯುಂ ದೇವನಂ ಮುಟ್ಟಿಯುಂ ವಂ।
> ಚಿಸಿತಕ್ಕಾ ದಿಬ್ಯಮುಂ ಸುಟ್ಟುದನರಿದರಿದಾ ದೇವನಂ ಮುಟ್ಟಿಯುಂ ಪೂ
> ಜಿಸುವರ್ ದೇಹಾರಮೆಂದುಂ ಮನದೊಳೆ ಪುಸಿಯಂ ತಾಳ್ದನಾಪತ್ತ ನೇನಂ
> ದುಸಿರಲ್ಕಾರ್ ಬಲ್ಲರಾ ದೇವನೆಯರಿವನದಂ ಕಾಣರರ್ಧೇಂದು ಮೌಳೀ ೨೬-೮೪.

ಚಂದ್ರಚೂಡಾಮಣಿಶತಕದ ಸಂಗೋಪನಾರಚನೆಯ ಮರ್ಮವನ್ನರಿತು ಅದರಂತೆ ಓದುವ ಕ್ರಮವನ್ನು ಕವಿ ಗುಮ್ಮಟಾರ್ಯನು ಕೇಳಿ ಬಲ್ಲುದರಿಂದಲೇ ದೇಹಾರ (ಪ್ರಸಾದಾರ್ಪಣೆಯ ತತ್ತ್ವ)ದ ಪ್ರಸ್ತಾಪವನ್ನಿಲ್ಲಿ ಮಾಡಿದ್ದಾನೆ. ಮನಶ್ಶುದ್ಧವಿಲ್ಲದವರ ಅರ್ಪಣೆಯಿಂದ ಅನರ್ಥವೇ ಆದೀತು ಎಂಬ ಎಚ್ಚರಿಕೆಯನ್ನೂ ಕೊಟ್ಟಿದ್ದಾನೆ. ವ್ಯವಹಾರದಲ್ಲಿ ಹುಸಿದು, ವಂಚಿಸಿ ದೇವರನ್ನು ಮುಟ್ಟಿ ಪ್ರಮಾಣಮಾಡಿ ಕೈಸುಟ್ಟುಕೊಂಡವರು ಮಾಡುವ ಅರ್ಪಣೆಯ ಆಚರಣೆಯೆಂದಿಗೂ ನಿಜಾಚರಣೆಯಾಗದು. ಅದು ಹುಸಿ ಎಂಬುದನ್ನು ಕವಿ ತಿಳಿಸುತ್ತ ಮೂಲ ಪ್ರಹೇಳಿಕೆಯ ಪ್ರಚ್ಛನ್ನಾರ್ಥವನ್ನು ಪ್ರಕಟಗೊಳಿಸಿರುವಲ್ಲಿ ಆತನದೇ ಆದ ವಿಶಿಷ್ಟ ದೃಷ್ಟಿಯ ವಿಮರ್ಶೆಯನ್ನೂ ಸಾಮಾಜಿಕ ನಡವಳಿಯ ರೀತಿನೀತಿಗಳ ನಿರೂಪಣೆಯ ಅನ್ವಯವನ್ನೂ ಕಾಣುತ್ತೇವೆ. ಚಂದ್ರ ಚೂಡಾಮಣಿಶತಕದಲ್ಲಿ ಹೀಗೆ ಸಂಶ್ಲಿಷ್ಟವಾಕ್ಯರಚನಾತಂತ್ರ, ಪ್ರಹೇಳಿಕೆಯ ಸಂಗೋಪನಾಮರ್ಮದ ಜೊತೆಗೆ ನಿಗೂಢವೂ ದೂರಗತವೂ ಆದ ಪದರಚನೆಯಲ್ಲಿ ಕವಿ ಕರ್ತೃಪದವನ್ನು ಕಾಣದಂತೆ ಹುದುಗಿಸಿರುವುದೂ ಉಂಟು. ಉದಾಹರಣೆ :

> ಒಡಲಿಂಗಾತ್ಮಭವಂಗೆ ತಳೊಡ್ತವೆ ನಿಪ್ಪಂಗಾಪ್ತವರ್ಗಕ್ಕೆ ತ। ಳ್ತೊಡಗೂಡಿರ್ದ ಮನಃಪ್ರಿಯಾಪ್ರತತಿಗಳ್ಗಪ್ಪೊಂದರಿಂ ಭಕ್ತಿ ಇಂ
> ಮೃಡ ನಿಮ್ಮಂಸಲೆ ಕೂಡುತಿರ್ಕೆ ಖಗದೊಳ್ ಮತ್ತನ್ಯರಾರ್ ನಿನ್ನ ಕಾ। ಲ್ಪಿಡಿವೆಂ ಮಾಡಿದನಾವಗಂ ಕರುಣದಿಂ ಶ್ರೀಚಂದ್ರಚೂಡಾಮಣಿ ೮೯

ಈ ವೃತ್ತದಲ್ಲಿ 'ಭಕ್ತಿ ಇಂ, ಮೃಡ, ನಿಮ್ಮಂಸಲೆ ಕೂಡುತಿರ್ಕೆ ಎಂಬೀ ಪೂರ್ಣವಾಕ್ಯದ ಬಳಿಕ ೨) ಜಗದೊಳ್ ಮತ್ತನ್ಯರಾರ್ ? ೩) ನಿನ್ನ ಕಾಲ್ಪಿಡಿವೆಂ ೪) ಕರುಣದಿಂ ಮಾಡಿದನಾವಗಂ ಎಂಬ ಮಿಕ್ಕ ವಾಕ್ಯಗಳು ಬಂದಿವೆ'. 'ಒಡಲಿಂಗಾತ್ಮಭವಂಗೆ...ಪ್ರತತಿಗಳ್ಗೆ ಅಪ್ಪ ಒಂದರಿಂ' ಎಂಬುದರಲ್ಲಿನ ಸಹೇತುಕ ಕೃದಂತ ವಿಶೇಷಣವಾದ 'ಅಪ್ಪ' ಎಂಬುದಕ್ಕೆ ಇಲ್ಲಿ ಕರ್ತೃವಾವುದೋ ತಿಳಿಯುವುದಿಲ್ಲ ಎಂದು ಉದ್ಗಾರವನ್ನು ಎತ್ತಬೇಕಾಗುತ್ತದೆ. ಕವಿಯ ಉದ್ದಿಷ್ಟವಾಚನಕ್ರಮದಂತೆ 'ಒಡಲಿಂಗ, ಒಡಲಿಂಗೆ, ಆತ್ಮಭವಂಗೆ...ಅಪ್ಪ ಒಂದರಿಂ' ಎಂದು ಬಿಡಿಸಿ ಓದುವಾಗ 'ಒಡಲಿಂಗ'ಎಂಬ ಗುಪ್ತಪದ ಮುಕ್ತಪದ ಗ್ರಾಸದಿಂದ ಒಡಲಿಂಗೆ ಇತ್ಯಾದಿಗಳಿಗೆ ಸಂಬಂಧಿಸಿ 'ಅಪ್ಪ'ಎಂಬುದಕ್ಕೆ ಕರ್ತೃಪದವಾಗಿಪೆಯೆಂಬುದು ಸುವಿದಿತವಾಗಿದೆ. ಈ ಕರ್ತೃಪದವು ಒಡಲಿಂಗೆ ಇತ್ಯಾದಿ ಕಾರಕಗಳ ಅನ್ವಯದಲ್ಲಿ ಗುಪ್ತವಾಗಿಯೂ, 'ಅಪ್ಪ'ಎಂಬ ಕೃದಂತವಿಶೇಷಣದಲ್ಲಿ ಸುವ್ಯಕ್ತವಾಗಿಯೂ ಸಂಬಂಧಿಸಿರು

ವುದನ್ನು ಕಾಣಬಹುದು. ಕರ್ತೃವಿಗೂ ಕೃದಂತವಿಶೇಷಣಕ್ಕೂ ಇಲ್ಲಿ ಇರುವ ದೂರಾನ್ವಯವು ಗುಪ್ತವಾದ 'ಒಡಲಿಂಗ'ವೆಂಬ ಕರ್ತೃಪದದಿಂದಲೇ ಎದ್ದುಕಾಣುತ್ತದೆ. 'ಒಡಲಿಂಗ'–ಪದಪ್ರಯೋಗವು ಚಂದ್ರಚೂಡಾಮಣಿಶತಕಕಾರನಿಗೆ ಮಾರ್ಗದರ್ಶಕವೋ ಎನ್ನುವಂತೆ ಆತನಿಗಿಂತ ಮೊದಲೆ ಹರಿಹರನ ಶತಕದಲ್ಲಿ ಬಳಕೆಯಾಗಿರುವುದನ್ನು ಕಾಣಬಹುದುದು:–

ಮೃಡ ನೀಂ ಕಲ್ಲೊಳಗೇಕೆ ಪೊಕ್ಕುಸುರದಿಂತಿರ್ದಪ್ಪೆ ಭಕ್ತರ್ಗೆ ನೀಂ। ಕೊಡೆನಿಪ್ಪಿಲ್ಲೆನೆ ಸಾಲದೇನಡಗಲೇಕಿಲ್ಲೆಂಬುದಂ ಬಲ್ಲೆವಿ
ಟ್ಟೊಡಲಿಂಗಿಲ್ಲದೆ ಪೇಣ್ ಪರಾನ್ನಮಣಿಸಿಂ ದಾರಿದ್ರ್ಯ ನೀನಾವಗಂ। ಒಡವಂ ಬಲ್ಲೆನು ಚೇಡೆನಂಜದಿರಲೇ ಪಂಪಾಪುರಾಧೀಶ್ವರಾ॥೧೦೧॥

ಪಂಪಾಶತಕದ ಈ ಪದ್ಯದಲ್ಲಿನ 'ಇಟ್ಟೊಡಲಿಂಗಿಲ್ಲದೆ' ಎಂಬ ಸಮಸ್ತ ಪದವೇ ಚಂದ್ರಚೂಡಾಮಣಿ ಶತಕಕಾರನ ಗೂಢ ಕರ್ತೃಪದ ಪ್ರಯೋಗಕ್ಕೆ ಪ್ರೇರಣೆಯನ್ನಿತ್ತಿರುವಂತೆ ಕಾಣುತ್ತದೆ. ಈ ಸಮಸ್ತ ಪದವನ್ನು 'ಇಟ್ಟು ಒಡಲಿಂಗೆ + ಇಲ್ಲದೆ' ಎಂದೂ, 'ಇಟ್ಟ + ಒಡಲಿಂಗ ಇಲ್ಲದೆ' ಎಂದೂ ಪದದ ಪಾಳಿಯ ಬೇರೆ ಬೇರೆಯಾಗಿ, ಜೋಡು ಬಿಡುವಂತೆ ವಿಂಗಡಿಸಬಹುದು. 'ಇಟ್ಟ' ೧) ಇಷ್ಟಾರ್ಥಪ್ರದ, ೨) ಪ್ರೀತಿಯುಕ್ತ ಹಾಗೂ, ೩) ಅಂಗದಲ್ಲಿ ಧಾರಣೆ ಮಾಡಿದ ಎಂಬರ್ಥದಲ್ಲಿ ಹರಿಹರನು ಈ ಪದವನ್ನು ಪ್ರಯೋಗಿಸಿದ್ದಾನೆ ಎಂಬುದನ್ನು ಆತನ ೧) ಸಿರಿ. ೨) ಸರಸತಿ ಮುಂತಾದ ರಿಟ್ಟೊಳೆಗಾದಾಮಾದೇವಂ ನೀನೆ ಅಂತಾಳ್ ಎಂಬ ಮತ್ತೊಂದು ಪ್ರಯೋಗದಿಂದಲೂ ತಿಳಿಯಬಹುದಾಗಿದೆ. 'ಇಟ್ಟ'—ಪದಕ್ಕೆ 'ಇಷ್ಟಲಿಂಗ'ವೆಂದೇ ಅರ್ಥವಿರುವುದನ್ನು ತುರುಗಾಹಿ ರಾಮಣ್ಣನ ಈ ವಚನದಿಂದ ಅರಿಯಬಹುದಾಗಿದೆ :

'ಕಂಗಳ ದೃಷ್ಟದಿಂದ ಇಟ್ಟ ಕಂಡು ಮನದ ದೃಷ್ಟದಿಂದ ನಿಷ್ಠೆಯನಱಿತು
ನಿಷ್ಠೆ ನಿಜದಲ್ಲಿ ನಿಂದು ಅಱಿವು ಕರಿಗೊಂಡಲ್ಲಿ ಗೋಪತಿನಾಥ ವಿಶ್ವೇಶ್ವರಲಿಂಗ ದೃಷ್ಟವಾಯಿತು.'

ಇಷ್ಟಲಿಂಗವೇ ಆಗಮದಲ್ಲಿ ಉಕ್ತವಾದ 'ಪಿಂಡಜಲಿಂಗ.'

ದೇಹೋ ದೇವಾಲಯಃ ಪ್ರೋಕ್ತೋ ಜೀವೋದೇವಃ ಸದಾಶಿವಃ ಇತಿನಿಶ್ಚಿತ ಸದ್ಭಾವಃ ಪಿಂಡಜಂ ಲಿಂಗಮುಚ್ಯತೇ ॥

ಆ ಕಾರಣ 'ಒಡಲಲಿಂಗ'ವೆಂಬ ಮಾತು ಮೂಡಿಬಂದಿದೆ. ಸಮಾಸೋಕ್ತಿಯಲ್ಲಿ ಪ್ರಹೇಳಿಕಾರಚನೆಯ ರಹಸ್ಯದ ಅಂಗವಾಗಿ 'ಒಡಲ + ಲಿಂಗ'ವೆ 'ಒಡಲಿಂಗ'ವಾಗಿದೆ. ದೇವ + ವರ್ಷ, ಅಂತಕ + ಕುಲ, ಸೊಗಯಿಪ + ಪೆನ್ನಾಕಾರ, ಒದವಿಪ್ಪ + ಪ್ರುದ್ಗ, ಪೋಗಲ್ಕೆ + ಕೇವಲ ಜ್ಞಾನ ಇವು ಸಂಧಿಕಾರ್ಯವನ್ನು ಹೊಂದಿ ದೇವರ್ಷ, ಅಂತಕುಲ, ಸೊಗಯಿಪೆನ್ನಾಕಾರ, ಒದವಿಪ್ರುದ್ಗ, ಪೋಗಲ್ಕೇವಲಜ್ಞಾನ ಎಂದು ಒಂದುಗೂಡಿದ ಸಮಷ್ಟಿಪದಗಳಾದಂತೆ 'ಒಡಲ + ಲಿಂಗ'ವೆ 'ಒಡಲಿಂಗ'ವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಪಂಪಾ ಮತ್ತು ಚಂದ್ರಚೂಡಾಮಣಿ ಶತಕಗಳ 'ಒಡಲಿಂಗ'ವೇ ಮೈಲಾರ ಬಸವಲಿಂಗ ಶರಣರ 'ಮೈಲಿಂಗ' ಪರ್ಯಾಯಪದವಾಗಿದೆ ಎಂಬುದನ್ನು ಗುರುಕರುಣ ತ್ರಿವಿಧಿಯಲ್ಲಿ ಕಾಣಬಹುದು :

ಈ ಲಿಂಗ ನಿನ್ನಂಗ । ಕ್ಕಾ ಲಿಂಗನವಾಗಲ್ಕೆ।ನೀ ಲಿಂಗ ನಿನ್ನ- ಮೈಲಿಂಗವೆಂದೆನ್ನೊಳ್। ಕೀಲಿಸಿದ ಗುರುವೆ ಕೃಪೆಯಾಗು॥ ಗು.ಕ.ತ್ರಿ. ೧೦೭

ಪಂಪಾಶತಕದಲ್ಲಿನ 'ಒಡಲಿಂಗಿಲ್ಲದೆ' ಎಂಬ ಶ್ಲೇಷಾರ್ಥಸಹಿತವಾದ ಈ ಅಪೂರ್ವಪದ ಪ್ರಯೋಗವನ್ನೂ, ಜೊತೆಗೆ ಅದೇ ಪದ್ಯದ 'ಡ'ಕಾರ ದ್ವಿತೀಯಾಕ್ಷರ ಪ್ರಾಸವನ್ನೂ ಬಿಡದೆ ಉಳಿಸಿಕೊಂಡಿರುವ ಚಂದ್ರಚೂಡಾಮಣಿ ಶತಕಕಾರನ 'ಒಡಲಿಂಗಾತ್ಮಭವಂ'ಗೆ ಇತ್ಯಾದಿಯ ಪ್ರಯೋಗವು ಹರಿಹರನ ಪಂಪಾಶತಕದಿಂದ ಪಡೆದ ಪದಪ್ರಯೋಗದ ಸ್ವೀಕಾರವೋ ಎನ್ನುವಂತಿದೆ. ಆದರೂ ಚಂದ್ರಚೂಡಾಮಣಿ ಶತಕದಲ್ಲಿನ 'ಮಾಡಿದನಾವಗಂ ಕರುಣದಿಂ' ಎಂಬ ಪ್ರಹೇಳಿಕಾ ಮಾರ್ಗೋಕ್ತಿಯು ಓದುಗರಿಗೆ ನೀಡಿದ ಸವಾಲಾಗಿದೆ. ಪದ್ಯದ ಒಡಲಿಂಗ, ಅಪ್ತವರ್ಗ, 'ಸಲೆ ಕೂಡು', 'ಕಾಲ್ವಿಡಿ' ಪದಗಳಂತೆ ಈ ಪ್ರಹೇಳಿಕೆಯಲ್ಲಿ 'ಆವಗಂ' ಎಂಬುದು ರಹಸ್ಯಗರ್ಭಿತವಾದ ಪ್ರಧಾನಪದ; ಆದ್ದರಿಂದ ಕವಿಯೇ ಈ ಸಮಸ್ಯೆಯನ್ನು 'ಕರುಣದಿಂ ಆವಗಂ (–ಪೂರಣ–) ಮಾಡು' ಎಂದು ಕೋರಿರುವನು. ವ್ಯಂಗ್ಯವೂ ಇದರಲ್ಲಿ ಅಡಗಿದೆ. ಹಿಂದಿನ ವಾಕ್ಯಸಹಿತವಾಗಿ ಈ ಪ್ರಹೇಳಿಕೆಯ ಪ್ರಚ್ಛನ್ನಾರ್ಥವನ್ನು ಕಂಡುಕೊಳ್ಳಬೇಕು. 'ನಿನ್ನ ಕಾಲ್ವಿಡಿವೆಂ, ಮಾಡಿದನಾವಗಂ ಕರುಣದಿಂ' ಎಂಬೀ ವಾಕ್ಯದ್ವಯದ ಏಕಾರ್ಥವನ್ನು ಸಮಾಹಿತಗೊಳಿಸಿ ಗ್ರಹಿಸಿದರೆ ಮಾತ್ರ ಇಲ್ಲಿನ 'ಒಡಪ'ನ್ನು ಬಿಡಿಸಿ ಹೇಳಲು ಸಾಧ್ಯ. ಗುರುಭಕ್ತಿಯ ಉತ್ಕಟತೆ 'ನಿನ್ನ ಕಾಲ್ವಿಡಿವೆಂ'–ಎಂಬ ನುಡಿಯಲ್ಲಿದೆ. ಗುರುವಿನ ಆಧಿಕ್ಯವನ್ನು ಸಾರುವ ಸಲುವಾಗಿಯೇ 'ಜಗದೊಳಾ ಮತ್ತನ್ಯರಾರ್' ಎಂದು ಕವಿ ಉದ್ಗಾರ ತೆಗೆದಿದ್ದಾನೆ. ಪದ್ಯದ ಈ ಪೂರ್ವವಾಕ್ಯಗಳ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಹೇಳಿಕೆಗಳ ಪ್ರಸ್ಫುರಣಾರ್ಥವನ್ನು ಗ್ರಹಿಸಬಹುದು. ಗುರುಶಿಷ್ಯರ ಸಮರಸ ಸಂಯೋಗದ ಶಿವಾನುಭವದ 'ತನ್ನ ಮೊದಲ ಕೂಡಿಸುವ' ಪಾದಕರುಣಜಲದ ಸಮತೆಯ ಸಂಕೇತವಾಗಿ 'ಆವಗಂ' ಎಂಬ ಪರಿಭಾಷೆಯ ಪದ ಇಲ್ಲಿ ಪ್ರಯುಕ್ತವಾಗಿದೆ. ವ್ಯಾಪಕ, ಸಯ, ಐಕ್ಯ, ಸಮರಸ–ಎಂಬರ್ಥವುಳ್ಳ ಶಿವಾನುಭವದ ಈ ಉಕ್ತಿಯ ಅನ್ವಯವನ್ನು ಕುರಿತು ವಿವೇಚಿಸಬಹುದು. 'ನಿನ್ನ ಕಾಲ್ವಿಡಿವೆಂ, ಮಾಡು + ಇದನ್ + ಆವಗಂ ಕರುಣದಿಂ' ಈ ಪ್ರಹೇಳಿಕೆಯ 'ಮಾಡು + ಇದನ್' ಎಂಬುದರ 'ಇದನ್'–ಎಂಬ ಸರ್ವನಾಮ ಯಾವುದನ್ನು ಕುರಿತು ಹೇಳಿದ್ದು ? 'ಕಾಲ್' ಎಂಬ ವಾಚ್ಯ 'ಇದನ್' ಸರ್ವನಾಮದ ಸಮೇತ 'ಕಾಲಿದನ್' ಎಂದಾಗುತ್ತದೆ, 'ಕಾಲ್ ಇದನ್ ಕರುಣದಿಂ ಆವಗಂ (= ಪಾದುಕಂ) ಮಾಡು' ಎಂದರ್ಥವಾಗುತ್ತದೆ. 'ಆವಗಂ' –ಎಂಬುದಕ್ಕೆ 'ಪೂರ್ಣ' ಸದಾ,

ಎಂದೂ ಅರ್ಥವುಂಟು. ಆವುಗ (ಕ) (=ಆವಿಗೆ, –ಕಡಾವಿಗೆ–) (–ಆವುಗೆ–ಹಾವುಗೆ–ಪಾದುಕೆ) +ಅಂ (ದ್ವಿ.ಪ್ರ) ಎಂಬುದು (ಬೇಜಿ+ಅಲ್ತೆ—ಬೇಜಿಲ್ತೆ ಆದಂತೆ) 'ಆವಗಂ' ಆಗಿ–'ಆವಗಂ ಮಾಡು' ಎಂದರೆ ಪಾದುಕೆಯನ್ನಾಗಿ ಮಾಡು ಎಂದರ್ಥ ವಾಗುತ್ತದೆ. ಕಾಲ್–ಎಂಬುದು ಕ್ರಿಯೆ ಇಲ್ಲವೆ ಜ್ಞಾನಾಚರಣೆಯ ಬೆಡಗಿನ ನುಡಿ, ಕ್ರಿಯೆ ಮತ್ತು ಜ್ಞಾನದ ಆಚರಣೆಯ ಪಾದ ದ್ವಯಗಳೊಂದಾದ ನಿಜದ ನಿಲವು ಒಂದೇ ಎಂಬುದರ ಸೂಚನೆಯಾಗಿ ಪಾದದ್ವಯಕ್ಕೆ 'ಇದನ್' ಎಂಬ ಏಕವಚನದ ಪ್ರಯೋಗ ವಾಗಿದೆ. ಸರ್ವಜೀವದಯಾಪರವಾದ ಕರುಣಜಲ ಸ್ವರೂಪವಾದ ಆವಗ–ಪಾದು'ಕ'ವನ್ನು ಶಿಷ್ಯನು ಗುರುವಿನಿಂದ ಕೋರಿರುವ ಈ ಪ್ರಹೇಳಿಕೆಯಲ್ಲಿ ವ್ಯಕ್ತವಾಗಿರುವುದು ವಾಗದ್ವೈತವಲ್ಲ. ಜ್ಞಾನಕ್ರಿಯಾಚರಣೆಯ ನುಡಿ–ನಡೆಯೊಳಗಾದ ಸಮರಸದ ಸಾಮ್ಯ ವಿದೆ. ಲಿಂಗಾಂಗ ಸಂಗಾದ್ವೈತಭಾವನೆಯೂ ಜೀವಶಿವೈಕ್ಯತಾದೃಷ್ಟಿಯೂ, ಪ್ರಸಾದಲಿಂಗ ಪ್ರಸಾದಿತ್ವವೂ, ಇಷ್ಟಲಿಂಗಧಾರಣೆ ಯಲ್ಲಿನ ನಿಷ್ಠೆಯೂ ಸುವ್ಯಕ್ತವಾಗಿರುವುದನ್ನಿಲ್ಲಿ ಕಾಣುತ್ತೇವೆ. ಸತ್–ಆನಂದ–ದಯಾಪಯೋರಾಶಿಯಲ್ಲಿ ಓಲಾಡುವ ಬಯಕೆ ಯಲ್ಲಿ ಜೈನಾಗಮಾದ್ವೈತದಯಾ ಮೂಲಧರ್ಮವೂ, ಶಕ್ತಿವಿಶಿಷ್ಟಾದ್ವೈತದ ಜೀವಶಿವೈಕ್ಯತಾ ಲಿಂಗಾಂಗ ಸಾಮರಸ್ಯವೂ ಅಭಿವ್ಯಕ್ತವಾಗಿದೆ. ಹೀಗೆ ಈ ಪ್ರಹೇಳಿಕೆಯಲ್ಲಿ 'ಆವಗಂ' ಸಮಸ್ಯೆಯನ್ನು ಓದುಗರೆ 'ಪೂರಣ' ಮಾಡಲೆಂದು ಕವಿ ಆಶಿಸಿದ್ದಾನೆ. ಚಂದ್ರಚೂಡಾಮಣಿ ಶತಕಕಾರನ ವಿಶಿಷ್ಟ ಪದರಚನಾ ಸಂವಿಧಾನಕ್ರಮವನ್ನೂ, ಆತನ ಪ್ರಹೇಳಿಕಾ ಮಾರ್ಗವನ್ನೂ ಅರಿತೇ ಓದು ಗರು ಕವಿಯ ಗೂಢಾರ್ಥವನ್ನು ಗ್ರಹಿಸಬೇಕಾಗುತ್ತದೆ ಎಂಬುದನ್ನು ಈವರೆಗೂ ಮಾಡಿದ ಶತಕದ ಪದ್ಯರಚನೆಯ ವಿಶ್ಲೇಷಣೆ ಯಿಂದ ತಿಳಿದುದಾಗಿದೆ. ಚಂದ್ರಚೂಡಾಮಣಿಶತಕಕರ್ತನಾದ ಉದಯಾದಿತ್ಯನು ತನ್ನ ಶತಕಾಂತ್ಯದ ಮುಂದಿನ ಒಂದು ಪದ್ಯ ದಲ್ಲಿ ತನ್ನನ್ನು ಸಾಮಾನ್ಯ ಓದುಗರು ಸುಲಭವಾಗಿ ಗುರುತಿಸದಂತೆ ಮಾಡಿರುವ ರಚನಾ ರಹಸ್ಯದ ವೈಶಿಷ್ಟ್ಯವನ್ನು ಇನ್ನು ಪರಿ ಶೀಲಿಸಬಹುದು :

> ಉದಯಾದಿತ್ಯನ ಸಂಧಿವಿಗ್ರಹಿಲಲಾಮಂ ನಾಗವರ್ಮಂ ಸಮಂ|ತುದಯಾದಿತ್ಯನ ರಾಯಭಾರಿ[1]ಯೆನಿಸಿರ್ದಾತಗ್ರಜಂ[1]ಭಾಸ್ಕರಂ
> ಮೊದಲಾದೀಶ್ವರ ಭಕ್ತರಪ್ಪಿವರ್ಗೆ ಪೇಳ್ದೀಜ್ಞಾನಸಾರಂ ಸುಖಾ|ಸ್ಪದಮೊಲ್ದೋದುಗೆ ಭುಕ್ತಿ ಮುಕ್ತಿಫಲಮಂ ಶ್ರೀಚಂದ್ರಚೂಡಾಮಣೀ ॥೧೦೪॥

ಈ ಪದ್ಯದ ವಾಚಕ ಕ್ರಮವನ್ನು ತಿಳಿಯುವ ಮೊದಲು ತಾಡವೋಲೆ ಪ್ರತಿಯ ಆಧಾರದಿಂದ ಪಾಠಾಂತರ ಸಹಿತ ಇದನ್ನು ಇಲ್ಲಿ ಕೊಟ್ಟಿದೆಯೆಂಬುದನ್ನು ತಿಳಿಯುವುದು ಅಗತ್ಯ. ಕವಿಚರಿತೆಕಾರರಿಂದ ಉದ್ಧೃತವಾದ ಪದ್ಯದಲ್ಲಿನ 'ಯೆನಿಸಿರ್ದಾತ್ಮಾಗ್ರಜಂ' ಎಂಬ ಪಾಠಕ್ಕಿಂತ ಭಿನ್ನ ಪಾಠವಿರುವುದನ್ನು ಇಲ್ಲಿ ಕಾಣಬಹುದು. ಈ ಪದ್ಯದಲ್ಲಿ ಅಂತೆಯೆ, ಹಾಗೆಯೆ, ಅದೇ ಪ್ರಕಾರ,-ರೀತಿ ಎಂಬರ್ಥವುಳ್ಳ 'ಸಮಂತು' ಪದವು ಸಂಬಂಧವಾಚಕವೆಂದೂ, 'ಅಗ್ರಜಂ' ಎಂಬುದು ಶ್ಲಿಷ್ಟಾರ್ಥಕಪದವೆಂದೂ ತಿಳಿಯುವುದ ಗತ್ಯ. ನಾಗವರ್ಮನು ಸಂಧಿವಿಗ್ರಹಿಲಲಾಮನು ಹೇಗೋ ಹಾಗೆ, ರಾಯಭಾರಿಯೂ ಆಗಿದ್ದಾತನೆಂಬುದು 'ಸಮಂತು' ಎಂಬ ಪ್ರಕಾರಾರ್ಥದ ಸಂಬಂಧಾವ್ಯಯದಿಂದ ಸೂಚಿತವಾಗಿದೆ. ಆ ಕಾರಣ 'ಅಗ್ರಜಂ'–ಅಣ್ಣ, ಸಹಜಸೋದರ–ಎಂಬುದು ನಾಗ ವರ್ಮನಿಗೆ ಅನ್ವಯಿಸಿದೆ. ಉದಯಾದಿತ್ಯನ ಸಂಧಿವಿಗ್ರಹಿಲಲಾಮನಾದ ನಾಗವರ್ಮನು, ಸಮಂತು ಹಾಗೆ ಎಂದರೆ ಸಂಧಿವಿಗ್ರಹಿ ಲಲಾಮನಾಗಿದ್ದ ಹಾಗೆಯೇ ಉದಯಾದಿತ್ಯನ ರಾಯಭಾರಿ ಇಲ್ಲವೆ ರಾಜದೂತನೂ ಎನಿಸಿದ್ದ ಆತನು ಅಣ್ಣ ಇಲ್ಲವೆ ಬ್ರಾಹ್ಮ ಣನು. ಪಾಠಾಂತರ 'ಆತ್ಮಾಗ್ರಜಂ' ಆದಲ್ಲಿ, ಸಹಜಸೋದರ ಇಲ್ಲವೆ ಅವ್ಯಕ್ತ ಬ್ರಾಹ್ಮಣ ಎಂಬರ್ಥ ಹೊಂದಿ ನಾಗವರ್ಮನಿಗೇ ಸಂಬಂಧಿಸಿದೆ. ಅಲ್ಲದೆ 'ಮುಂತಾದ ಮೊದಲಾದ' ಎಂಬ ಪದವು ದ್ವಂದ್ವಪದ ಸಮಾಸವಾಕ್ಯಪೂರ್ವಕವಾಗಿಯೇ ಪ್ರಯೋಗ ವಾಗಬೇಕೆಂಬ ವಾಕ್ಯರಚನಾಕ್ರಮದ ನಿಯಮವನ್ನನುಸರಿಸಿ (ಸಿರಿ ಸರಸ್ವತಿ ಮುಂತಾದರಿಟ್ಟೋಲೆಗಾದ ಮಾದೇವಂ[10] ಎಂಬ ಹರಿಹರನ ಪ್ರಯೋಗದಂತೆ) 'ಯೋ ರುದ್ರೋ ಅಗ್ನೌ ಶಿವಸ್ಸರ್ವಂ'ಯೆಂಬಾದಿಯಾದ ಪ್ರಮಾಣಂಗಳಿಂ ಸರ್ವಾತ್ಮಕನಾಗಿ[11] ಎಂಬಂತೆ ರಚಿತವಾದ ಈ ಪದ್ಯಭಾಗದ ಉದಯಾದಿತ್ಯನ ಸಂಧಿವಿಗ್ರಹಿಲಲಾಮಂ ನಾಗವರ್ಮಂ, ಸಮಂತು, ಉದಯಾದಿತ್ಯನ ರಾಯಭಾರಿಯೆನಿಸಿರ್ದಾತ ಅಗ್ರಜಂ (ನಾಗವರ್ಮಂ) ಭಾಸ್ಕರಂ ಮೊದಲಾದೀಶ್ವರ ಭಕ್ತರಪ್ಪ ಇವರ್ಗೆ ಪೇಳ್ವೀ ಜ್ಞಾನಸಾರಂ' ಎಂಬಲ್ಲಿ ಕೃತಿಕರ್ತನು ತನ್ನ ಕೃತಿ 'ನಾಗವರ್ಮ ಭಾಸ್ಕರ ಮೊದಲಾದ' ಈಶ್ವರ ಭಕ್ತರಿಗೆ ಹೇಳಿದಂತಹುದೆಂದು ನಿರ್ದೇಶಿಸಿ ದ್ದಾನೆ. ಯಾರು ಹೇಳಿದುದು ಎಂಬ ಪ್ರಶ್ನೆಗೂ ಈ ಪದ್ಯರಚನೆಯಲ್ಲಿ ಉತ್ತರವಿಲ್ಲದೆ ಇಲ್ಲ, ಅದು ವ್ಯಾಕರಣ ನಿಯಮವನ್ನು ಮೀರಿದುದೂ ಅಲ್ಲ, ಆದರೆ 'ಪೇಳ್ದ' ಎಂಬ ಕ್ರಿಯೆಗೆ ಅದರದೇ ಆದ ವಾಕ್ಯದಿಂದ ಹೊರಗೆ ಕರ್ತೃ ಇರದೆ, ಅದರ ವಾಕ್ಯದೊ ಳಗೇ ಅನತಿದೂರದಲ್ಲಿಯೇ ನಿಂತು ತನ್ನ ಪೇಳ್ದ ಕೃತಿಗೆ ತಾನೇ ನಿರ್ಲಿಪ್ತನೋ ಎಂಬಂತೆ ಇದ್ದಾನೆ. ಇದೇ ಇಲ್ಲಿನ ರಚನಾರಹ ಸ್ಯದ ವೈಶಿಷ್ಟ್ಯ. 'ಉದಯಾದಿತ್ಯನ ರಾಯಭಾರಿಯೆನಿಸಿರ್ದಾತ ಅಗ್ರಜಂ (ನಾಗವರ್ಮಂ) ಭಾಸ್ಕರಂ ಮೊದಲಾದೀಶ್ವರ ಭಕ್ತ ರಪ್ಪ ಇವರ್ಗೆ ಪೇಳ್ದೀ ಜ್ಞಾನಸಾರಂ' ಎಂಬ ವಾಕ್ಯದಲ್ಲಿ ನಾಗವರ್ಮಂ ಭಾಸ್ಕರಂ–ಇವರು ಮೊದಲ್–ಪೂರ್ವದಲ್ಲಿ, ಆದ ಈಶ್ವರ ಭಕ್ತರ್ (ಆದ ವಿಷ್ಣು ವಿಜಯಾದಿತ್ಯಂ ಎಂಬಂತೆ) ಬಳಿಕ ಇವರು ಶಿವಭಕ್ತರಾಗಿರುವವರು ಎಂಬುದೆ ಇಲ್ಲಿನ ಧ್ವನಿ. ಉದಯಾದಿ

---

1. ಯೆನಿಸಿರ್ದಾತ್ಮಗ್ರಜಂ (c). ಸ್ವೀಪಾಠ (a)

10. ಪಂಪಾಶತಕ ಪದ್ಯ ೧೦೨. 11. ವಿವೇಕ ಚಿಂತಾಮಣಿ ಪುಟ ೨೮೫.

ತ್ಯನ.........ಭಕ್ತರಪ್ಪಿವರ್ಗೆ ಪೇಳ್ದೀ ಜ್ಞಾನಸಾರಂ'–ಎಂಬೀ ಪ್ರಯೋಗವನ್ನು ಯಾವ ಮಧ್ಯಮ ವ್ಯಾಕರಣವನ್ನು ಬಲ್ಲ ವಿದ್ಯಾರ್ಥಿಯೂ ಇದರ ವ್ಯಾಕರಣಾಂಶವನ್ನು ಕುರಿತು ಇದೊಂದು ವಿಭಕ್ತಿ ಪಲ್ಲಟದ ಪ್ರಥಮಾರ್ಥ ಷಷ್ಠಿಗೆ ಉದಾಹರಣೆಯೆಂದು ತಿಳಿಸದಿರನು. ಉದಯಾದಿತ್ಯನು ಹೇಳಿದ ಜ್ಞಾನಸಾರವೆ ಚಂದ್ರಚೂಡಾಮಣಿಶತಕವೆಂದು ಮತ್ತೆ ಹೇಳಬೇಕಾದ ಅಗತ್ಯವಿಲ್ಲ. 'ಆತ್ಮ' ಪದಕ್ಕೆ ಪ್ರಯೋಜನವಾವುದೋ 'ಪೇಟ್ದ' ಎಂಬುದಕ್ಕೆ ಕರ್ತೃವಾವುದೋ ತಿಳಿಯುವುದಿಲ್ಲ ಎಂದ ಕವಿಚರಿತೆಕಾರರ ಸಮಸ್ಯೆಗೆ ಕವಿಯ ಕಾವ್ಯರಚನಾ ರಹಸ್ಯದ ಸಾಂಕೇತಿಕವಾದ ಉತ್ತರದ ದಿಕ್ಸೂಚಿಯಿದೆಂದು ಗ್ರಹಿಸಬಹುದಷ್ಟೆ! ಉದಯಾದಿತ್ಯನ ಪೇಳ್ದ ಈ ಜ್ಞಾನಸಾರವು ಶಿವಜ್ಞಾನಸಾರವೂ ಹೌದು ಎಂಬುದನ್ನು ಆತನ ಮಾತಿನಿಂದಲೇ ಅರಿಯಬಹುದಾಗಿದೆ:

ಶಿವನುಂಬಂ ಶಿವನುಡುಗುಂ ಶಿವನೆ ಪೂಜ್ಯಂ ಪೂಜೆಯುಂ ಮಾಳ್ಪನುಂ|ಶಿವನಾಪ್ತಂ ಶಿವನಾಗಮತ್ರಿಷ್ಟಿ ಶಿವಜ್ಞಾನಂ ಶಿವಜ್ಞಾನಿಯುಂ
ಶಿವನಿಷ್ಟಂ ಶಿವನಿಷ್ಟಸಿದ್ಧಿಯುನೊಚಿಲ್ದಿಪಂ ಶಿವಂ ಸರ್ವನುಂ| ಶಿವನೆಂದಾಂ ಶಿವ ನಿಮ್ಮನೆಲ್ಲಿ ತಿಳಿದೆಂ ಶ್ರೀಚಂದ್ರಚೂಡಾಮಣಿ —೮೭

'ಜ್ಞಾನಸಾರಂ ಸುಬಾಸ್ಪದಮೊಲ್ದೋದುಗೆ ಭುಕ್ತಿಮುಕ್ತಿಫಲಮಂ' ಎಂಬ ಉದಯಾದಿತ್ಯನ ಈ ಶತಕೋಕ್ತಫಲಶ್ರುತಿಯಲ್ಲಿ ಆತನಿಗೆ ಹರಿಹರನ ಈ ಮುಂದಣ ನಿರೂಪಣತಿಯ ಪ್ರಮುಖ ಪದಪ್ರಯೋಗದ ಪರಿಚಯವಿರುವುದನ್ನು ಕಾಣಬಹುದಾಗಿದೆ.

'...ಮಱೆವೊಗಲಸು ನಿಲ್ಕಾಗ ಸೈತೋದುಗತ್ಯುನ್ನತಿಯಿಂ ನಾಕೋರ್ವಿಮಂ ಜೀವಮನುಱೆ ಕೊಡುವರ್' ಪಂ. ಶ. ೬೦

'ಭಕ್ತರನ್ನು ಮರೆಹೊಕ್ಕವರ ಜೀವ ತಾನು ಮೇಲೆದ್ದೇಳುವುದು (ನಿಲ್ಕು). ಆ ರೀತಿ ಆಗದೆ ಹೋದಲ್ಲಿ, ಒದುಕಿಕೊಂಡು ಮೇಲೆ ಏಳದಿದ್ದಲ್ಲಿ ಆ ಭಕ್ತರು ಮಹಿಮಾತಿಶಯದಿಂದ ಸ್ವರ್ಗಭೂಮಿಯ (ನಾಕ + ಉರ್ವಿ + ಮಂ) ಸೌಖ್ಯದ ವರಪ್ರಸಾದವನ್ನು ನೀಡುವರು, ಸ್ವರ್ಗ ಸೌಖ್ಯವನ್ನು ಆಶೀರ್ವದಿಸುವರು (ಓದುಗು). ಆ ಸುರಲೋಕದಲ್ಲಿ ಸುಖವಾಗಿ ಬಾಳಲು ಜೀವವನ್ನು ಕೊಡುವರು.'–ಈ ಅರ್ಥಕೊಡುವ ಹರಿಹರನ ಪದ್ಯಭಾಗದಲ್ಲಿ 'ಓದುಗು' ಕ್ರಿಯಾಪದಕ್ಕೆ ವರಪ್ರಸಾದ ನೀಡು, ಆಶೀರ್ವದಿಸು ಎಂಬೀ ಅರ್ಥವಿರುವುದು ಸ್ಪಷ್ಟವಾಗಿದೆ. ಇದೇ ಕ್ರಿಯಾಪದ 'ಓದುಗೆ' ಎಂದು ವಿಧ್ಯರ್ಥದಲ್ಲಿ ಉದಯಾದಿತ್ಯನ ಶತಕದಲ್ಲಿ ಬಳಕೆಯಾಗಿದೆ. ಜ್ಞಾನಸಾರವು ಸುಖದ ತಾಣವಾದುದಾಗಿ ಭೋಗಮೋಕ್ಷದ ಫಲವನ್ನು 'ಕೊಡಲಿ' 'ನೀಡಲಿ' ಎಂಬ ಅರ್ಥದಲ್ಲಿ 'ಓದುಗೆ' ಎಂಬ ಕ್ರಿಯೆ ಪ್ರಯೋಗವಾಗಿದೆ. ಈ ಕ್ರಿಯೆಗೆ ಸಂಬಂಧಪಟ್ಟ 'ಜ್ಞಾನಸಾರಂ ಸುಖಾಸ್ಪದಂ' ಎಂಬ ವಿಶೇಷಣಾತ್ಮಕ ಕರ್ತೃಪದವು ಪಂಪಾಶತಕದ 'ನಾಕೋರ್ವಿಮಂ' ಪದದ ಸುಖ–ಕ್ಷೇಮ ಎಂಬರ್ಥದ 'ಮಂ' ಎಂಬುದನ್ನು ನೆನಪಿಗೆ ತಂದುಕೊಡುತ್ತದೆ. ಹರಿಹರನ 'ಓದುಗು' 'ನಾಕೋರ್ವಿಮಂ' ಎಂಬ ಈ ಪ್ರಯೋಗದ ಮೂಲಪಾಠದ ಪರಿಚಯ ಚಂದ್ರಚೂಡಾಮಣಿ ಶತಕದ ಕರ್ತೃವಾದ ಉದಯಾದಿತ್ಯನಿಗೆ ಇದ್ದಿರಬಹುದೊ ಎಂಬ ಸೂಚನೆಗೆ ಇಲ್ಲಿ ಖಚಿತವಾದ ಸುಳಿವು ತಲೆದೋರಿರುವುದನ್ನು ಕಾಣುತ್ತೇವೆ.

'ಅದಟಾಯ್ತು, ಉನ್ನತಬಲಂ ತಾನಾಯ್ತು'

'ಇನ್ನೆಂಜೆನಂಜೆನಾಹಾ|ಉನ್ನತಬಲವಾಯ್ತೆನುತ್ತೆ ವಿಕ್ರಮಬಳಸಂ ‖ ಪನ್ನಂ ಕಾಮಂ ತೆಗೆದಂ । ತನ್ನಗ್ಗದ ಮಂಚ ಪಂಚಬಾಣಂಗಳಂ ‖

ಶಿವನ ತಪಸ್ಸನ್ನು ಭಂಗಪಡಿಸಲು ಬಂದ ಮದನನ ಕಣ್ಣಿಗೆ ಶಿವಪೂಜಾ ನಿರತಳಾದ ಮೃಡಾಣಿಯು ತನ್ನ ಸರಸದೃಷ್ಟಿಗಳಿಂದ ಹರನನ್ನು ನೋಡುತ್ತಲಿದ್ದುದು ಕಂಡುಬಂದಿತು. ಹರನಡಿಗಳನ್ನು ತನ್ನ ದೃಷ್ಟಿಬಾಣಗಳಿಂದ ಎಸೆಯುತ್ತಿದ್ದ ಗಿರಿರಾಜಸುತೆಯನ್ನು ಕಂಡ ಮನ್ಮಥನಿಗೆ ಇದ್ದ ಭಯ ತೊಲಗಿತು. ಇನ್ನು ಅಂಜೆನು, ಅಂಜೆನು ಅಹಾ! ಎಂದು ಆತ ಉದ್ಗಾರ ತೆಗೆದ. ಆ ವಿಕ್ರಮ ಬಳ ಸಂಪನ್ನನೆನಿಸಿದ ಅದಟನು ತನ್ನ ಪಂಚಬಾಣಗಳನ್ನು ಕೈಗೆ ತೆಗೆದುಕೊಂಡನು. ಹರಿಹರನ ಗಿರಿಜಾಕಲ್ಯಾಣದ ಈ ಕಥಾಪ್ರಸಂಗದಲ್ಲಿ ಬರುವ ಮನ್ಮಥನ ಆಟೋಪಕ್ಕೆ ಜೀವನದಲ್ಲಿ ಪೂರ್ಣವಿರಾಮ ಬಂದೊದಗಿದ ಸನ್ನಿವೇಶದ ಬೇರೊಂದು ಮುಖದ ಚಿತ್ರಣವಿರುವದು:—

ಅದಟಾಯ್ತುರ್ವರೆಯಾಯ್ತು ಮುನ್ನತಬಲಂ ತಾನಾಯ್ತುಮಾಯುಷ್ಯಮಾ।
ಯ್ತಿದು ಮಂತರ್ಥಮದಾಯ್ತು ಸಂಪದಮುಮಾ ಸಂಭೋಗ ಭೋಗಂಗಳು|
ನ್ನದಯಿಂದ್ರುಂಗೆಯುಮಿಂದ್ರಿಯಾಳಿಗಮಿವಂನೋಡಲ್ಕರಂಸಂತತಂ।
ಹುದುಗಿತ್ತುನ್ಮದವೆಂದಡೇನುಳಿದವಂ ಶ್ರೀಚಂದ್ರಚೂಡಾಮಣೀ ೩೪

ಇಲ್ಲಿನ 'ಅದಟಾಯ್ತು', 'ಉನ್ನತಬಲಂತಾನಾಯ್ತು' ಎಂಬ ಪದಪ್ರಯೋಗಗಳು ಹರಿಹರನ ಕಂದದ 'ಆಹಾ ಉನ್ನತ ಬಲವಾಯ್ತು!' 'ವಿಕ್ರಮಬಳಸಂಪನ್ನಂ' ಎಂಬ ಉಕ್ತಿಗಳಿಂದ ಪ್ರಭಾವಿತವಾಗಿರುವಂತೆ ತೋರುತ್ತದೆ. ಕಾಮನ ಅಳಿವು ಶತಸ್ಸಿದ್ಧ ಎಂದ ಬಳಿಕ ಉಳಿದ ವಿಕ್ರಮ, (ಅದಟು) ಉನ್ನತಬಲ, ಆಯುಷ್ಯ, ಅರ್ಥಸಂಪತ್ತುಗಳು, ಭೋಗೋಪಭೋಗಳು ಚಿರವೆ? ಎಂಬ ಈ ವೈರಾಗ್ಯಭಾವದ ಉದ್ಗಾರದಲ್ಲಿ ಕಾಮ ನಿಷ್ಕಾಮವಾಗಿದೆ. ಸತ್ಕವೀಶ್ವರನೊಬ್ಬನ ಕಲ್ಪನಾಚಮತ್ಕೃತಿ, ಶಬ್ದಪ್ರಯೋಗದ ಭಾವಕೋಶ ಮತ್ತೊಬ್ಬನಲ್ಲಿ ಬೇರೊಂದು ಕಾವ್ಯಪರಿಣಾಮದ ಚಿತ್ರಣಕ್ಕೆ ಹೇಗೆ ನೆರವಾಗಬಹುದು ಎಂಬುದಕ್ಕೆ ಇದೊಂದು ಸುಂದರ ನಿದರ್ಶನ. ಇಲ್ಲಿನ ವೈರಾಗ್ಯಪ್ರಸಂಗದ ಈ ಚಿತ್ರಣ ಆ ಕಂದದಲ್ಲಿ ಕಂಡುಬರುವ ಶೃಂಗಾರರಸದ

ಚಿತ್ರಣಕ್ಕೆ ಪ್ರೇರಣೆ ನೀಡಿರುವ ಸಾಧ್ಯತೆಗಿಂತ ತದ್ವ್ಯತಿರಿಕ್ತವಾದುದರ ಸಾಧ್ಯತೆಯೆ ಹೆಚ್ಚು ಎಂದು ಕಾಣುತ್ತದೆ. ಪ್ರಸಕ್ತ ಕವಿ ಸಾಮರ್ಥ್ಯವನ್ನು ಹೋಲಿಸಿ ನೋಡಿದಾಗಲೂ ಹರಿಹರನಂತಹ ಉತ್ತುಂಗ ಕವಿ ಮತ್ತೊಬ್ಬನ ಕೃತಿಯೊಂದರಲ್ಲಿ ಒಂದೆ ಕಡೆ ಬರುವ ಒಂದೆರಡು ಮಾತುಗಳನ್ನು ಆರಿಸಿಕೊಂಡು ತನ್ನ ರಸಪ್ರತಿಪಾದನೆಯಲ್ಲಿ ಬಳಸಿದ್ದಾನೆ ಎಂಬುದೊಂದು ದೂರದ ಊಹೆಯಾಗಿಯೆ ಉಳಿಯುವುದು. ಹರಿಹರನ ಕಾವ್ಯನಿರ್ಮಾಣಸಾಮರ್ಥ್ಯವನ್ನು ಬಲ್ಲ ವಿಮರ್ಶಕರು ಹಾಗೆ ಭಾವಿಸುವುದು ಸಹಜವಷ್ಟೆ.

**ಆರೊರೂಪಾಗಿ ಮಾಡಿದರಂಗಾವಲಿಯಂ**

'ತಾಯಿತಂದೆಯ ಶುಕ್ಲಶೋಣಿತಂ ನೆವವಾಗೆ । ಆಯುವಿಂದವಯವಂ ಬಲಿವುತಂತೊಂದಾಗೆ ॥ ಪಿಂ. ರ. ಸಾಲು ೧೬-೧೭

ಹರಿಹರನ ಪಿಂಡೋತ್ಪತ್ತಿರಗಳೆ ಅಥವಾ ಸಂಸಾರವ್ಯಾಮೋಹ ನಿರಸನ ರಗಳೆಯ ಈ ಮೇಲಣ ಎರಡು ಸಾಲುಗಳಲ್ಲಿರುವ ವಿಷಯ ಪ್ರತಿಪಾದನೆಗೂ ಉದಯಾದಿತ್ಯನ ಮುಂದಿನ ಪದ್ಯಭಾಗಗಳಲ್ಲಿನ ನಿರೂಪಣೆಗೂ ಇರುವ ನಾದ ಭಾವಗಳ ಸಾದೃಶ್ಯವನ್ನು ಗಮನಿಸಬಹುದು. (೧) 'ತನು ಶುಕ್ಲಶೋಣಿಜಾತಂ' -೯ (೨) 'ಉದಬಿಂದುದ್ವಯಮಂ ವಧೂಜಠರದೊಳ್ ಪೊಕ್ಕಾರೊರೂಪಾಗಿಮಾಡಿದರಂಗಾವಲಿಯಂ'೬೩. ರಗಳೆಯಲ್ಲಿನ 'ಅವಯುವಂ ಬಲಿವು'ದೆ ಶತಕದಲ್ಲಿ 'ಅಂಗಾವಲಿ'ಯಾಗಿರುವುದನ್ನು ಕಾಣಬಹುದು. (೩) ಮಾತ್ರಪಿತ್ರಯೋಗಂ ಕ್ಷೇತ್ರ ಬೀಜಾದಿಯೆಂಬ **ನಿವಂ ಸೂತಿಗೆ** -೬೪ (೪) ಮಾತೃಪಿತೃಯೋಗಂ ದಂಪತಿ ಕ್ರೀಡೆಯೆಂಬ **ನೆವಂ ಸೂತಿಗೆ** -೬೫. ರಗಳೆಯ 'ನೆವ' ಎಂಬ ಪದವು ಶತಕದಲ್ಲಿ 'ನೆವಂ' 'ನಿವಂ' ಎಂಬ ಎರಡು ರೂಪಗಳನ್ನು ತಳೆದಿರುವುದು ಗಮನಾರ್ಹವಾಗಿದೆ.

ಕವಿ ಹರೀಶ್ವರನು ತನ್ನ ಶತಕಗಳಲ್ಲಿ ಬಳಸಿರುವ ಕೆಲವು ವಿಶೇಷಾರ್ಥದ ಪದಪ್ರಯೋಗಗಳನ್ನು ಆತನ ಕಿರಿಯ ಸಮಕಾಲೀನ ಕವಿಯಾದ ಉದಯಾದಿತ್ಯನು ತನ್ನ ಚಂದ್ರಚೂಡಾಮಣಿ ಶತಕದಲ್ಲಿ ಬಳಸುತ್ತಾನೆ. ಉದಾಹರಣೆಗೆ ಪಂಪಾಶತಕದಲ್ಲಿ ಬರುವ **'ಶಿವೋಪಜೀವನವೃಥಾಳಾಪನ್'** ಎಂಬ ಉಕ್ತಿಯನ್ನು ಗಮನಿಸಬಹುದು :-

ಮನುಜರ್ ಗಾವಿಲರೇನನೆಂಬೆನಳಿಪಂಗಾರ್ತಂಗೆ ದಂಭಂಗೆ ದುರ್ಜನ ಶೀಲಂಗೆ ಶಿವೋಪಜೀವನವೃಥಾಲಾಪಂಗೆ ಛೀ ಕಾಕ ಭಾ
ಜನಮಂ ಮಾಡುವರಲ್ಲದಚ್ಚ ಶಿವಭಕ್ತಂಗೀಶಯುಕ್ತಂಗೆ ಲಾಂ। ಛನಗುಪ್ತಂಗಱಿದೀವರುಂಟೆ ಧರೆಯೊಳ್ ಪಂಪಾವಿರೂಪಾಕ್ಷನೇ ೧೦

ಇಲ್ಲಿ ಉಕ್ತವಾಗಿರುವ 'ಶಿವೋಪಜೀವನ'ವನ್ನೇ 'ಭವೋದ್ಯೋಗ'ವೆಂದು ಕರೆದಿರುವ ಉದಯಾದಿತ್ಯನ ಶತಕದ ಪದ್ಯವಿದು :

ಪರಮಾರಾಧ್ಯರುಮಂ* ಪೆರಳ್ಚಿದುದು ಕರ್ಮಂ ಕರ್ಮಿಯಪ್ಪೆನ್ನನೊ। ತ್ತರಿಸುತ್ತಿಪ್ಪುದಿದಾವ ಚೋದ್ಯಮದು ತಾಂ ಗೆಲ್ಗುಂ ಭವೋದ್ಯೋಗತ
ತ್ಪರನಾಗಿರ್ದು ವಿಷಾಪಹಾರಮಣಿಯಂ ಕಟ್ಟಿರ್ದವಂ ಗೆಲ್ವವೋ। ಲ್ಗರಳೋಗ್ರಾನಳನಪ್ಪು ಕಯ್ಪು ಮನಮಂ ಶ್ರೀಚಂದ್ರಚೂಡಾಮಣೀ-೨೪

ಮನುಜಸಾಮಾನ್ಯರು ಗಾಂಪರು. ಏನೆಂದು ಹೇಳಲಿ: ಆಳಿಯಾಸೆ ಪಡುವ ತೃಷ್ಣಾಲೋಲನಿಗೆ, ಡಾಂಬಿಕನಿಗೆ, ದುರ್ಜನಶೀಲನಾದವನಿಗೆ, ಶಿವಸ್ತೋತ್ರವನ್ನು ಜೀವನೋಪಾಯವಾಗುಳ್ಳವನಿಗೆ, ಛೀ! ದಾನಮಾಡಿ ಕಾಗೆಪಾಲು ಮಾಡುವರಲ್ಲದೆ ಅಚ್ಚ ಶಿವಭಕ್ತನಿಗೆ, ಈಶಯುಕ್ತನಿಗೆ ಲಾಂಛನಗುಪ್ತನಿಗೆ ತಾವಾಗಿ ತಿಳಿದು ಲೋಕದಲ್ಲಿ ಕೊಡುವವರುಂಟೆ ? ಉದರಪೋಷಣೆಗಾಗಿ ಶಿವಪೂಜಕರಾದವರನ್ನು ಕವಿ ಹರಿಹರನು ಕಾಗೆಗಳಿಗೆ ಹೋಲಿಸಿರುವನು. ಭಕ್ತಿಯನ್ನು ಮಾರಿ ಉಂಬಾತನೆಂಬ ಅರ್ಥದಲ್ಲಿ 'ಶಿವೋಪಜೀವನವೃಥಾಲಾಪನ್' ಎಂಬ ಮಾತನ್ನು ಇಲ್ಲಿ ಬಳಸಲಾಗಿದೆ ಎಂಬುದು ಸುಸ್ಪಷ್ಟ. ಸ್ಥಾವರಲಿಂಗ ಪೂಜಕನಾದರೂ ಲಿಂಗಧಾರಿಯಾದಲ್ಲಿ ಆತ ಕರ್ಮವನ್ನು ಗೆಲ್ಲಬಹುದು ಎಂಬ ಅಭಿಪ್ರಾಯವನ್ನು ಉದಯಾದಿತ್ಯನು ತನ್ನ ಶತಕದ ಮೇಲಣ ಪದ್ಯದಲ್ಲಿ ಗೂಢವಾಗಿ ಸೂಚಿಸಿದ್ದಾನೆ. 'ಭವೋದ್ಯೋಗತತ್ಪರನಾದರೂ ವಿಷಾಪಹಾರಮಣಿಯನ್ನು ಕಟ್ಟಿದ್ದವನು ವಿಷಾಗ್ನಿಯ ಭಯಂಕರವಾದ ಉರಿತಾಕಿದ ಮನಸ್ಸನ್ನು ಗೆಲ್ಲುವಂತೆ, ಕರ್ಮವು ವಿಷಯವಿಷಾಗ್ನಿಯುಂಡ ಮನವನ್ನು ಗೆದ್ದು ಆಳುತ್ತದೆ. ವಿಷಯದ ವಿಷವನ್ನು ಕಳೆಯುವ ವಿಷಾಪಹಾರಿಮಣಿ (ಲಿಂಗ)ಧಾರಿಯಾದಲ್ಲಿ ವಿಷಯೋನ್ಮತ್ತ ಚಿತ್ತರನ್ನು ಕಾಡುವ ಕರ್ಮವು ಆ ನಿಜಯೋಗಿಯನ್ನು ಬಂಧಿಸಲಾರದು, ಎಂಬುದೇ ಉದಯಾದಿತ್ಯನ ಪೂರ್ವೋಕ್ತ ವೃತ್ತದ ತಾತ್ಪರ್ಯ, ಶಿವೋಪಜೀವನ, ಸಂಸಾರನಿರ್ವಹಣೆಯ ವೃತ್ತಿ, ಭವಾವಳಿ ಎಂಬೀ ಅರ್ಥಗಳನ್ನುಳ್ಳ 'ಭವೋದ್ಯೋಗ'ವೆಂಬ ಪದ, ವಿಷಾಪಹಾರಮಣಿಯಂ ಕಟ್ಟಿರ್ದವಂ, ಗರಳೋಗ್ರಾನಳನ್, ಅಪ್ಪುಕೆಯ್-ಇತ್ಯಾದಿ ಗೂಢಪದಗಳ ಪ್ರಯೋಗದಿಂದ ಉದಯಾದಿತ್ಯನು ಲಾಂಛನಗುಪ್ತನೆಂಬುದು ಸುವಿದಿತವಾಗುತ್ತದೆ. ಹರಿಹರ-ಉದಯಾದಿತ್ಯರ ಮೇಲಣ ವೃತ್ತಗಳೊಡನೆ ಗುಮ್ಮಟಾರ್ಯನ ಮುಂದಿನ ಪದ್ಯವನ್ನು ಹೋಲಿಸಬಹುದು.

ನೆವದಿಂದಂ ಜೀವನೋಪಾಯುವನೆ ನಡೆಯಿಸಲ್ವೇಡಿ ಭಕ್ತಿಧ್ವಜಂಗ।ಟ್ಟುವ ತರ್ಕಂಗುಟ್ಟುವಾತ್ಮೇಚ್ಛೆಯೊಳೆ ನಡೆವರಂತಿರ್ಕೆ ಲಿಂಗೋಪಜೀವಿ।
ತ್ವವನೆಂತುಪೊರ್ದನೆಂತುಂ ಪಳಿದು ನುಡಿಯನೆಂತುಂ ದುರಾಚಾರಮಂ ಪ್ರೋ।ದ್ಯವನಲ್ಲಂ ಸಾತ್ವಿಕಂ ಕಾರಣಿಕನೆನಿಸಿದಂ ಭಕ್ತನತ್ಯಂತ ಶುದ್ಧಾ-೨೮-೫೯

ಹರಿಹರನ 'ಶಿವೋಪಜೀವನ' ಪದವು ಉದಯಾದಿತ್ಯನಲ್ಲಿ 'ಭವೋದ್ಯೋಗ'ವೆಂಬ ಶ್ಲಿಷ್ಟಾರ್ಥಯುಕ್ತ ಪದವಾಗಿ, ಗುಮ್ಮಟಾರ್ಯನಲ್ಲಿ 'ಲಿಂಗೋಪಜೀವಿತ್ವ'ವೆಂಬ ಬಹುಸ್ಪಷ್ಟೋಕ್ತಿಯಲ್ಲಿ ತನ್ನ ನೈಜವಾದ ಅರ್ಥವನ್ನು ಮರೆಮಾಚದೆ ಕಾಣಿಸಿದೆ. ಆದ್ಯ

---

* ಹರಿಬೊಮ್ಮಾದಿಗಳಂ (b) ಸ್ವಿ ಪಾ. (c).

ಶತಕಪ್ರವರ್ತಕರ ಈ ಪದಗಳ ಪ್ರಯೋಗ ಒಂದಕ್ಕಿಂತ ಮತ್ತೊಂದು ವಿಸ್ತೃತವೂ ವಿವರಣಾತ್ಮಕವೂ ಆದುದಾಗಿದೆ. ಅರ್ಥ ಸ್ಪಷ್ಟತೆಯ ಆವಶ್ಯಕತೆಗನುಗುಣವಾಗಿ ತಲೆದೋರಿದ ಪದಗಳಿವೆಂದು ಗ್ರಹಿಸುವುದಗತ್ಯ. ಸ್ಥಾವರಲಿಂಗಪೂಜಕನಾದರೂ ಲಿಂಗ ಧಾರಿಯಾದಲ್ಲಿ ಕರ್ಮದ ಕೋಟಲೆಯಿಲ್ಲವೆಂಬುದು ಉದಯಾದಿತ್ಯನ ಇಂಗಿತ, ಸ್ಥಾವರ ಲಿಂಗಪೂಜಕನಾಗಿ ಲಿಂಗೋಪಜೀವಿ ಯಾದ ಮೂಢವಾಹೇಶ್ವರನಿಗಿಂತ ಸಾತ್ತ್ವಿಕನೂ ಕಾರಣಿಕನೂ ಆದ ಭಕ್ತನೇ ಅಧಿಕ. ಕರ್ಮ ಕೀಳು, ಭಕ್ತಿ ಮೇಲು ಎಂಬು ದನ್ನು ಗುಮ್ಮಟಾರ್ಯನು ಇಲ್ಲಿ ಸಾರಿರುವುದನ್ನು ಕಾಣುತ್ತೇವೆ. ಕಲ್ಯಾಣದ ಕ್ರಾಂತಿಯ ಬಳಿಕ ೧೨ನೆಯ ಶತಮಾನದ ಉತ್ತ ರಾರ್ಧ ಹಾಗೂ ೧೩ನೆಯ ಶತಮಾನದ ಆದಿಭಾಗದಲ್ಲಿ ಮೂಡಿದ ಧಾರ್ಮಿಕ ಜಾಗೃತಿಯ, ವಿಚಾರಕ್ರಾಂತಿಯ ಕಾಲದ ಆಲೋ ಚನಾ ಸರಣಿಯ ಬೆಳವಣಿಗೆಯನ್ನೂ ಲಿಂಗತತ್ತ್ವಪ್ರತಿಪಾದನೆಯ ನಿಜಭಕ್ತಿಯುಗದ ಹಿನ್ನೆಲೆಯನ್ನು ಪ್ರತಿನಿಧಿಸುವ ಕಾವ್ಯ ಪ್ರಯೋಗಗಳಿವು ಎಂಬುದನ್ನು ಗುರುತಿಸಿಕೊಳ್ಳುವುದರ ಔಚಿತ್ಯವನ್ನು ಒತ್ತಿಹೇಳಬೇಕಾದುದಿಲ್ಲ. ಕವಿಚರಿತೆಕಾರರು ಗುಮ್ಮಟಾ ರ್ಯನಿಗೆ ಕ್ರಿ.ಶ ಸು ೧೫೦೦ ಎಂದು ಕೊಟ್ಟಿರುವ ಕಾಲವು ಕೇವಲ ಊಹೆಯಿಂದಲೇ ಹೊರತು ಮತ್ತಾವ ಗ್ರಂಥಸ್ಥ ಅಥವಾ ಇತರ ಲೇಖನಾಧಾರದಿಂದಲೂ ಅಲ್ಲ ಎಂಬುದನ್ನು ಮತ್ತೊಮ್ಮೆ ನಾವಿಲ್ಲಿ ಸ್ಪಷ್ಟವಾಗಿ ತಿಳಿದಿರಬೇಕಾದುದು ಅತ್ಯಗತ್ಯ. 'ಇವನ ಕಾಲವು ಸುಮಾರು ೧೫೦೦ ಆಗಿರಬಹುದೆಂದು ಊಹಿಸುತ್ತೇವೆ'[12] ಎಂದು ಕವಿಚರಿತೆಕಾರರೇ ಹೇಳಿರುವುದರಿಂದ ಅದೇ ಪರಮ ಸತ್ಯವೆಂದು ಸಾಧಿಸುವುದಂತೂ ಸಾಧುವೆನಿಸದು.

ಗುಮ್ಮಟಾರ್ಯನು ಹರಿಹರನ ಸತ್ಕವಿಪರಂಪರೆಗೆ ಸೇರಿದವನು. ಉದಯಾದಿತ್ಯನಂತೆ ಈತನೂ ಮುಕ್ತಿಯನ್ನು ಬಯಸಿ ಶತಕರಚನೆಗೆ ತೊಡಗಿದವನು. ಮುಕ್ತಿಯನ್ನು ಪಡೆಯುವುದರಲ್ಲಿ ರಾಜರನ್ನು–'ನಾಡಂಗೆಲ್ವರಂ–ಗೆಲ್ವರುಂ ಒಳರ್ ಎನಿಸಲ್ ಸಾಲ್ವರೆ ನಿಜಪದಮಂ ಕಂಡಪೆಂ' ಎಂದು ಸ್ಪರ್ಧೆ ತೋರಿದವನು. ಆತನು ದೊರೆ ಉದಯಾದಿತ್ಯನ ಕವಿತ್ವವನ್ನು ಎಚ್ಚರದಿಂದ ವಿಚಾರದ ಒರೆಗಲ್ಲಿನ ಪರೀಕ್ಷೆಗೆ ಗುರಿಮಾಡಿದ ವಿಮರ್ಶಕಕವಿಯೂ ಹೌದು. ಉದಯಾದಿತ್ಯನು ತನ್ನ ಶತಕವನ್ನು ಹೇಳಿ ಮುಗಿಸಿದ ಮೇಲೆ, ಬಹುಶಃ ಆತನ ಸಮ್ಮುಖದಲ್ಲಿ, ಸಮಕಾಲೀನನಾಗಿಯೆ ಕವಿ ಗುಮ್ಮಟಾರ್ಯನು ತನ್ನ ಅರ್ಧೇಂದು ಮೌಳಿಶತಕವನ್ನು ರಚಿಸಿದನೆಂಬುದಕ್ಕೆ ಅದರ ಒಂದು ಪದ್ಯ ತೋರು ಬೆರಳಾಗಿದೆ. ಉದಯಾದಿತ್ಯನು ಕಾಮಲತೆಯ ರಾಗರಂಜ ನೆಯನ್ನು ತನ್ನ ಆಲಂಕಾರಿಕ ಭಾಷೆಯಲ್ಲಿ ವೈಭವೋಪೇತವಾದ ಕಲ್ಪನೆಯಿಂದ ಚಿತ್ರಿಸಿರುವ ಬಗೆಯಿದು :–

ಸ್ಮರವಲ್ಲೀ ಪರಿವೃದ್ಧಿ[13]ಗೇಕಸಲಿಲಂ ಮೋಹಾರ್ಣವೋದ್ಯನ್ನಿಶಾ| ಕರಬಿಂಬಂ ಪ್ರಮದಾವ್ರುವೈಭವವಸಂತಂ ಲೋಲುಪಾಂಭೋರುಹೋ
ತ್ಕರ ಭಾಸ್ವದ್ದ್ಯುತಿಯೊಂದಗುರ್ವನೊಳಕೊಂಡೀರಾಗಮಂ ಮನ್ಮನೋಂ|ತರದೊಳ್ ಪತ್ತಿರದಂತೆ ಕರ್ಚಿಕಳೆನೀಂ ಶ್ರೀಚಂದ್ರಚೂಡಾಮಣಿ ೫೦

"ಕಾಮಲತೆ ಕವಲೊಡೆದು ಕುಡಿಯಿಟ್ಟು ವಿಜೃಂಭಿಸಲಿರುವ 'ಏಕಸಲಿಲ'ವೋ ಎಂದೆನಿಸಿದ ಮೋಹಾರ್ಣವದ ರಾಗರಸವನ್ನುಕ್ಕಿ ಸುವ 'ನಿಶಾಕರ ಬಿಂಬ'ವೋ, ಪ್ರಮದಾವ್ರು ಪ್ರದೀಪ್ತ ವರ್ಣರಂಜಿತ 'ವಸಂತ'ವೋ, ಕಾಮಲೋಲುಪ ಕಮಲ ಪುಷ್ಪದಳವಿದ ಳನ 'ಚಂಡದ್ಯುತಿ'ಯೋ ಎಂಬ ಆಶ್ಚರ್ಯಚಕಿತ ಮನೋ 'ರಾಗ' ರಂಜನೆಯನ್ನು, ಎಲೆ ಚಂದ್ರಚೂಡಾಮಣಿಯೇ, ನನ್ನ ಮನಸ್ಸಿನಲ್ಲಿ ಲೇಪಿಸಿಕೊಂಡಿರದಂತೆ ತೊಳೆದು ಬಿಡು", -ಕವಿಯ ರಸಭಾವದ ವೈಭವದಿಂದ ಮೆರೆಯುವ ಈ ವೃತ್ತದ ತತ್ತ್ವಾರ್ಥ ವನ್ನು ನಿಶ್ಚಿತ ಜ್ಞಾನದಿಂದ ಒಪ್ಪಿದನಾದರೂ ಅದರ ವರ್ಣನಾಕ್ರಮದ ಬಗೆಗೆ ಕವಿ ಗುಮ್ಮಟಾರ್ಯ ತನ್ನ ಸಮ್ಮತಿಯನ್ನು ತೋರಿ ಸಿಲ್ಲ. ರಾಗರಸದಿಂದ ರಂಜಿಸುವ ರಮ್ಯಶೈಲಿ ವೈರಾಗ್ಯ ನಿರೂಪಣೆಗೆ ಅಡ್ಡಿಯಾಗದೆ ಎಂದು ಬೊಟ್ಟಿಟ್ಟು ತೋರುವಂತೆ ಹಾಗೆ ಬಳಸಿ ಹೇಳುವುದೇಕೆ ? ನೇರವಾಗಿ ನಿರೂಪಿಸಬಾರದೆ? ಎಂದು ಎಚ್ಚರಿಸುವ ಆತನ ಶತಕದ ವೃತ್ತವಿದು :-

'ಸುತ್ತೇನೋ ಸರ್ವಶಾಸ್ತ್ರಾರ್ಥದ ತಿರುಳಿದೆ ಸಂಸಾರವಲ್ಲೀಪ್ರರೋಹಂ
ವಿತ್ತಸ್ತ್ರೀ ಪುತ್ರಮೋಹಂ ಮಿಗೆ ಸಕಲ ವಿಮೋಹಕ್ಕಮೀ ದೇಹಮೋಹಂ |
ಬಿತ್ತಿಂತೀ ದೇಹಮೋಹಂ ಕಿಡೆ ಕನಕ ವಿಮೋಹಾದಿ ತಮ್ಮಿಂದೆ ಪೋಕುಂ |
ಮತ್ತೊಂದುಂ ಬೇಡ ಮೋಹಂ ಕಿಡೆ ಕೆಡುವುದು ಜನ್ಮಾಳಿಯರ್ಧೇಂದು ಮೌಳಿ' —೪೦

ಈ ವೃತ್ತದ 'ಸುತ್ತೇನೋ' ಎಂಬ ಪದ್ಯ ಪ್ರಾರಂಭದ ಈ ಉದಯಾದಿತ್ಯನ ಪೂರ್ವೋಕ್ತ ವರ್ಣನೆಯನ್ನೇ ಮನಸ್ಸಿ ನಲ್ಲಿಟ್ಟುಕೊಂಡು ಗುಮ್ಮಟಾರ್ಯನು ಉದಯಾದಿತ್ಯನನ್ನು ತನ್ನ ಕಾವ್ಯಮುಖದಿಂದ ಸಂಬೋಧಿಸಿ ಆಡಿದ ನುಡಿಯಿದು ಎಂಬು ದನ್ನು ಅಲ್ಲಗಳೆಯುವಂತಿಲ್ಲ. ಏಕೆಂದರೆ ಉದಯಾದಿತ್ಯನ 'ಸ್ಮರವಲ್ಲೀ ಪರಿವೃದ್ಧಿ'ಯ ಕಲ್ಪನೋಕ್ತಿಯೇ ಗುಮ್ಮಟ ಶತಕದ ಈ ಪದ್ಯದ ಮೊದಲನೆಯ ಸಾಲಿನ 'ಸಂಸಾರವಲ್ಲಿ ಪ್ರರೋಹಂ' ಆಗಿರುವುದರಲ್ಲಿ ಯಾವ ಸಂದೇಹವೂ ಮೂಡುವಂತಿಲ್ಲ. 'ಸುತ್ತೇನೋ' ಎಂಬುದು ಉದಯಾದಿತ್ಯನ 'ಸ್ಮರವಲ್ಲಿ'ಯ ಬಳಸುಬಳಸಿನ ವರ್ಣನೆಗೇ ನೇರವಾಗಿ ಅನ್ವಯಿಸುವ ಕಾರಣ ಈ ಉಕ್ತಿ ಸಾಭಿಪ್ರಾಯವೂ ಔಚಿತ್ಯಪೂರ್ಣವೂ ಆಗಿದೆ. ಉದಯಾದಿತ್ಯನ ಸಮಕಾಲೀನನಾದರೂ ಆತನಿಗಿಂತ ಗುಮ್ಮಟಾರ್ಯ ಹಿರಿಯನಾದವನು ಎಂಬುದರ ಸ್ಪಷ್ಟ ಸೂಚನೆಯೋ ಎಂಬಂತೆ 'ಸುತ್ತೇನೊ' ಎಂಬುದರಲ್ಲಿ ಏಕವಚನದ ಸಂಬೋಧನೆಯಿರುವು ದನ್ನು ಕಾಣಬಹುದು.

---

12. ಕಕಚ III, ಪು ೧೭೦.
13. ಮೋಹಲತಾಪರಿವೃದ್ಧಿ : ನಾಗ.ಮ. ಪು ನೋಡಿ.೪–೮.

ಚಂದ್ರಚೂಡಾಮಣಿ ಶತಕಕ್ಕೂ ಗುಮ್ಮಟಶತಕಕ್ಕೂ ಇರುವ ಸಂಬಂಧದ ವೈಶಿಷ್ಟ್ಯವನ್ನು ಸೂಚಿಸುವ ನಿದರ್ಶನವೊಂದನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು. ಜಗದ್ಭಿನ್ನನಾದ ಸೃಷ್ಟಿಕರ್ತ ಈಶ್ವರನೊಬ್ಬನುಂಟೆ ಎಂಬ ಗಾಢವಾದ ತತ್ತ್ವಜಿಜ್ಞಾಸೆಯ ಬಗೆಗೆ ಇರುವ ಭಿನ್ನದೃಷ್ಟಿಯನ್ನು ಉದಯಾದಿತ್ಯನು ತನ್ನ ಗೂಢ ಕಾವ್ಯರಚನಾ ನಿರೂಪಣೆಯಲ್ಲಿ ಕಂಡೂ ಕಾಣದಂತೆ ಪ್ರಕಟಿಸಿ ತನ್ನ ಈಶನಿಷ್ಠೆಯನಿಲವನ್ನು ತಾಳಿರುವ ಬಗೆಯಿದು:–

'ಹರನೀಂ ವಿಶ್ವಜನಕ್ಕೆ ಕರ್ತೃ ಧರಣೀನೀರಗ್ನಿಸೂರ್ಯಾನಿಳಾಂ | ಬರ ಚಂದ್ರಾತ್ಮಕ ಮೂರ್ತಿಯೆಂದು ನುಡಿಗುಂ ವೇದಂಗಳೀವಸ್ತುವಿಂ
ಪರಮಾತ್ಮಂ ಪೆಱತೊಬ್ಬನಲ್ಲದೊಳರೇ ಮಾಹೇಶನೀ ಜೈನಬೌ| ದ್ಧರನೇಳಿಪ್ಪರು ನಿಮ್ಮನೇಳಿಸಿದವರ್ ಶ್ರೀಚಂದ್ರಚೂಡಾಮಣೀ' —೯೫

ಎಲೆ ಚಂದ್ರಚೂಡಾಮಣಿಯೆ, ವಿಶ್ವಜನಕ್ಕೆ ನೀನು 'ಹರ' ಎನಿಸಿದವನು. ಕರ್ತೃ(ಯಜಮಾನ), ಧರಣಿ, ನೀರ್, ಅಗ್ನಿ, ಸೂರ್ಯ, ಅನಿಳ, ಅಂಬರ, ಚಂದ್ರ-ಸ್ವ-ರೂಪನಾದ ಅಷ್ಟಮೂರ್ತಿ-ಬ್ರಹ್ಮ-ಎಂದು ನಿಮ್ಮನ್ನು ಕುರಿತು ವೇದಗಳು ಸಾರುತ್ತವೆ. ಈ ಎಂಟು ತನುಗಳಿಂದ ಕೂಡಿ 'ಪರಮಾತ್ಮ'ನೆನಿಸಿದಾತನು 'ಮಾಹೇಶ'ನಲ್ಲದೆ ಬೇರೊಬ್ಬನುಂಟೆ ?

ಹರನೆ, ನೀನು ವಿಶ್ವಜನಕ್ಕೆ ಕರ್ತೃ. ಧರಣಿ, ನೀರ್, ಅಗ್ನಿ, ಸೂರ್ಯ, ಅನಿಲ, ಆಕಾಶ, ಚಂದ್ರ, ಆತ್ಮ (ವಸ್ತು) ಮೂರ್ತಿಯೆಂದು ವೇದಗಳು ನುಡಿಯುತ್ತವೆ. ಧರಣಿ ಆದಿಯಾಗಿ ಆತ್ಮವಸ್ತು ಕಡೆಯಾದ ಈ ಎಂಟುವಸ್ತುಗಳಿಗಿಂತಲೂ ಪರಮ ಆತ್ಮನು ಬೇರೊಬ್ಬನಲ್ಲದೆ 'ಮಾಹೇಶ'ನುಂಟೆ ?–ಎಂಬ ಈ ಜೈನಬೌದ್ಧರನ್ನು ನಿಂದಿಸುವವರು ನಿಮ್ಮನ್ನೇ ನಿಂದಿಸಿದವರು.' ಇಲ್ಲಿ ಪ್ರಚ್ಛನ್ನ ಪಕಟಾರ್ಥಗಳಿಂದೊಡಗೂಡಿದ 'ಹರ' 'ಕರ್ತೃ' ಈ ಪದಗಳ ಪ್ರಯೋಜನವನ್ನು ಕವಿಯ ಪ್ರಹೇಳಿಕಾ ಮಾರ್ಗವನ್ನು ಕಂಡುಕೊಂಡವರು ಚೆನ್ನಾಗಿಬಲ್ಲರು. ವಿಶ್ವಜನಕ್ಕೆ 'ಹರ' ನಿನೊಬ್ಬನೆ 'ಕರ್ತೃ' ಬೇರೊಬ್ಬನಿಲ್ಲವೆಂಬುದೆ ಉದಯಾದಿತ್ಯನ ನಿಲವು. ಹರನಿಗೆ ಸಮನಾಗಿ ಜಿನ, ಬುದ್ಧ, ಅಸುರಹರ(ವಿಷ್ಣು) ಬೇರೆ ಇದ್ದಾರೆಂಬ ಮಾಹೇಶ್ವರರನ್ನು ಮೂಢಾತ್ಮರೆನ್ನುವರು ಎಂಬ ಗುಮ್ಮಟಾರ್ಯನ ಈ ಮುಂದಣ ನಿಲವಿನೊಡನೆ ಉದಯಾದಿತ್ಯನ ನಿರ್ಣಯವನ್ನು ಹೋಲಿಸಿನೋಡಬಹುದು.

'ಹರ ನಿಮ್ಮಂಗ[1] ಧರಾಂಭಃ[1] ಶಿಖಿ ಮರುತ ವಿಯತ್ಸೂರ್ಯ ಚಂದ್ರಾತ್ಮ[2] ರೆಂಟಂ[2]
[3]ಪರಪಿ[3]ನ್ನೊಂದುಂಟೆ ಬುದ್ಧಂ ಜಿನನ ಸುರಹರಂ ಬೇಱೆನುತ್ತಿರ್ಪದುರ್ಬೋಧ
ಧರ ಮಾತಂತಿರ್ಕೆ ನಿಮ್ಮೊಳ್ [4]ಸಮದೊಳವರ್ಗಳಂ[4] ಬೇಱೆನುತ್ತಿರ್ಪ ಮಾಹೇ
ಶ್ವರರಂ ಮೂಢಾತ್ಮರೆಂಬಲ್ ಶಿವಗಣಮತದಾಚಾರ್ಯರತ್ಯಂತ ಶುದ್ಧಾ' ೭೯–೯೬

ಹರನ ಅಂಗದಲ್ಲಿ ಸಮರಸ ಸಂಗಿಗಳಾದ ಬುದ್ಧ, ಜಿನ, ವಿಷ್ಣು ಇವರನ್ನು ಬೇರೆಯೆಂದು ಭಾವಿಸುವುದು ದಡ್ಡತನವೆಂದು ಇಲ್ಲಿ ಹೇಳಿದೆ. ಉದಯಾದಿತ್ಯನ ಪೂರ್ವೋಕ್ತ ಪದ್ಯವೇ ಗುಮ್ಮಟಾರ್ಯನ ಈ ಪದ್ಯ ರಚನೆಗೆ ಪ್ರೇರಕಶಕ್ತಿಯೆಂದರೆ ತಪ್ಪಾಗಲಾರದು. ಏಕೆಂದರೆ ಈ ಪದ್ಯದ ಆರಂಭದಿಂದ ಹಿಡಿದು ಕಡೆಯತನಕ ಪ್ರದಿಪಾದಿತವಾದ ಭಾವಕ್ಕೆ ನೆಮ್ಮುಗೆಯೋ ಎನ್ನುವಂತೆ ಉದಯಾದಿತ್ಯನ ಪದ್ಯವಿದೆ. ಅಷ್ಟತನುಗಳಿಂದ ಇಷ್ಟನಾದ ಪರಮೇಶ್ವರನ ಪಾರಮ್ಯವನ್ನು, ಉದಯಾದಿತ್ಯನಂತೆ ಸೂಕ್ಷ್ಮವಾದ ಗೂಢರಚನೆಗೆ ಎಡೆಗೊಡದೆ, ಸುಸ್ಪಷ್ಟವಾದ ವಿವರಣಾತ್ಮಕ ಉಕ್ತಿಗಳಿಂದ ಸುವ್ಯಕ್ತವಾಗಿ ಎತ್ತಿ ಹಿಡಿದಿರುವುದನ್ನು ಗುಮ್ಮಟಾರ್ಯನ ಈ ಪದ್ಯದಿಂದ ಕಾಣಬಹುದು. ಇದನ್ನು ನೋಡಿದರೆ ಒಮ್ಮೊಮ್ಮೆ ಉದಯಾದಿತ್ಯನ ಶತಕದ ಟೀಕಾ ಇಲ್ಲವೆ ವಾಖ್ಯಾನ ರೂಪದ ಅನುಬಂಧ ಶತಕವೋ ಎನ್ನುವಂತಿದೆ ಈ ಗುಮ್ಮಟಶತಕ. ಉದಯಾದಿತ್ಯನ ಪದ್ಯಶೈಲಿಯ, ಪದದ ಧಾಟಿಯ ಅನುಕರವನ್ನು ಗುಮ್ಮಟಾರ್ಯನು ಸಾಧಿಸಲೂ ಯತ್ನಿಸದೆ ಇಲ್ಲ ಎಂಬುದಕ್ಕೆ ಉದಾಹಾರಣೆ :–

ಮುಳಿಸಾರಾರನದಿರ್ಪದಾರಱಿತಮಂ ಕೀಳ್ಮಾಡದಾರೊಳ್ಗುಣಂ| ಗಳ ನಕ್ಕಾಡಿಸದಾರ ನಿರ್ಮಳತೆಯಂ ನಿರ್ಮೂಲನಂ ಮಾಡದಾ
ರಳವಂ ತುಂಡಿಸದಾರ ಕೀರ್ತಿಲತೆಯಂ ಕಿಳ್ತಿತ್ತದಾನಂಜುವೆಂ। ಮುಳಿಸಿಂದಂ ಮುಳಿಸಾಗದಿಕ್ಕೆ ದುಗುಣಂ ಶ್ರೀಚಂದ್ರಚೂಡಾಮಣೀ-೩೧

ಮುಳಿಸನ್ನು ಕುರಿತ ಉದಯಾದಿತ್ಯನ ಈ ಪದ್ಯವು ಕೋಪದಿಂದಾಗುವ ಅನರ್ಥವನ್ನು ಚಿತ್ರಿಸಿದೆ. ಕೋಪದಿಂದ ಕೋಪ ದ್ವಿಗುಣವಾಗದಿರಲಿ ಎಂಬ ಕೋರಿಕೆ ಇಲ್ಲುಂಟು. ವಿಷಯದ ಆಯ್ಕೆ ಮತ್ತೊಂದಾದರೂ ಉದಯಾದಿತ್ಯನ ಈ ಪದ್ಯ ಶೈಲಿಯನ್ನೇ ಅನುಕರಿಸಿರುವ ಗುಮ್ಮಟಾರ್ಯನ ಪದ್ಯವಿದು.

ಅಳಿಪಾರಾರಾಯುಮಂ ಕುಂದಿಸದು ಕದಡದಾರಾರ ಗುಣ್ಪುಳ್ಳ ಧೈರ್ಯಂ | ಗಳನಾರಾರೊಳ್ಪನಳ್ಕಿಸದು ಮಸುಳಿಸದಾರಾರ ಪೆರ್ಚಿರ್ದ ತೇಜಂ
ಗಳನಾರಾರುರ್ಕನಳ್ಕಾಡಿಸದು ಕೆಡಿಸದಾರಾರ ಜೀರಗಳಂ ಮಾ|ಯ್ದಳಿಪೆನ್ನಂ ಪೊರ್ದದತ್ತುತ್ತಲೆ ತಳರ್ಗಿನಿಸಂ ಬೇಳ್ಪೆನರ್ಥೇಂದು ಮೌಳಿ -೭೯-೨೪

ಗುಮ್ಮಟ ಶತಕದ ಈ ಪದ್ಯದ ಪ್ರಾಸ, ಪದಗತಿ, ಸಮತೂಕವಾದ ವಾಕ್ಯಯೋಜನೆಯ ವಿಶ್ರಾಂತಿ, ತತ್ತ್ವನಿರ್ಣಯ ಕ್ರಮ– ಈ ದೃಷ್ಟಿಗಳಿಂದ ಉದಯಾದಿತ್ಯನ ಮೇಲಿನ ಪದ್ಯದೊಡನೆ ಹೋಲಿಸಿದಾಗ ಸನ್ನಿಕಟವಾದ ಸಾಮ್ಯವನ್ನು ಕಾಣುತ್ತೇವೆ.

---

1-1. ದರಾಂಬು (c) 2-2. ರೆಂಟೇ (ಖ), ಸ್ವೀಪಾ (ಕ.ಚ.) 3-3. ಪೆರತಿ (ಖ)
4.4. ಸಮದೊಳವರಂ (ಖ), ಸವದರವರ್ಗಳಂ (ಚ),

ಪದ್ಯದ ನಿರೂಪಣೆಯು ಆಸೆಯ ಅನಾಹುತವನ್ನು ಚಿತ್ರಿಸುತ್ತದೆ. 'ಮಾಯ್ದು ಅಳಿಪ್ಪ ಎನ್ನಂ ಪೊರ್ದದೆ ಅತತ್ತಲೆ ತಳರ್ಗೆ'– ಎಂಬ ನಿರ್ಣಾಯಕವಾದ ನಿಲವಿನಿಂದ ನಿರೂಪಣೆ ಮುಕ್ತಾಯಗೊಳ್ಳುತ್ತದೆ. ಪದಸಂಯೋಜನೆ, ವಾಕ್ಯವಿಶ್ರಾಂತಿ, ಕವಿತಾ ವಸ್ತುವಿಸ್ತಾರದ ವರ್ಣನಾ ರೀತಿಯ ಅನುಕರಣೆ ಎಷ್ಟೇ ಸಮರ್ಥವಾಗಿದ್ದರೂ ಗುಮ್ಮಟಾರ್ಯನ ಈ ಪದ್ಯದಲ್ಲಿ ಉದಯಾದಿತ್ಯನ ಸ್ವೋಪಜ್ಞತೆಯಾಗಲಿ, ರಸಾಭಿವ್ಯಕ್ತಿಯ ಸಹಜ ಸತ್ವವಾಗಲಿ ಮೂಡಿದೆಯೆಂದು ಧೈರ್ಯವಾಗಿ ಹೇಳುವಂತಿಲ್ಲ. ಇಲ್ಲಿನ ಆಸೆ ಹೊದ್ದಿರುವ ಭಾಷೆಗೂ ಅಲ್ಲಿ ಮುಳಿಸು ತಾಳಿರುವ ವಾಚಾಳತೆಗೂ ಹೋಲಿಸಿನೋಡಿದಾಗ, ಅಜ ಗಜದ ಹೆಜ್ಜೆಯನ್ನು ಹಿಂಬಾಲಿಸಿದಂತಿದೆ. 'ಆಸೆ'ಯನ್ನೇ ಕುರಿತ ಉದಯಾದಿತ್ಯನ ಮುಂದಿನ ಪದ್ಯದೊಡನೆ ಹೋಲಿಸಿನೋಡಿದಾಗಲಂತೂ ಈ ಹೇಳಿಕೆಯ ಯಥಾರ್ಥತೆ ಮನಗಾಣದಿರದು.

> ದಸಯಂ! ನುಂಗಿಯು! ನುರ್ಬಿಯಂನೊಣೆದುಮಂಭೋರಾಶಿಯಂ ಪೀರ್ದುವಾ
> ಗಸಮಂತಳ್ಳಡರ್ದೇಱಿಯುಂ ದಣಿಗುಮೇ ಮತ್ತೆಯ್ದದಿಪ್ಪಲ್ಲಿಗೆ
> ಯ್ದಿಸುತಿಕ್ಕುಂ ಚಲದಿಂದೆ ತೃಷ್ಣೆ ನೆಗಳ್ದಾ ತೃಷ್ಣಾಗ್ನಿಯಂ ಕೂಡೆಮು
> ಗ್ಗಿಸಲಕ್ಕುಂ ನಿಜತತ್ತ್ವವೆಂಬಮೃತದಿಂ ಶ್ರೀ ಚಂದ್ರಚೂಡಾಮಣೀ ೩೭

ಇಲ್ಲಿನ ಮಿಂಚಿನಂತೆ ಸಂಚಲಿಸುವ ಕಲ್ಪನೆಗೂ, ಸಾಹಸೋಚಿತವಾದ ಉತ್ಸಾಹ ಶೈಲಿಗೂ ಗುಮ್ಮಟ ಶತಕದ ಮೇಲಣ ಪದ್ಯವನ್ನು ಹೋಲಿಸಿದಾಗ ಅಜ–ಗಜದ ಅಂತರವೇ ಕಾಣಿಸದೆ ?

ಕನ್ನಡ ಶತಕಸಾಹಿತ್ಯದ ಆದ್ಯಪ್ರವರ್ತಕರಾದ ಹರಿಹರ, ಉದಯಾದಿತ್ಯ ಮತ್ತು ಗುಮ್ಮಟಾರ್ಯರ ಶತಕಗಳಲ್ಲಿ ಕಂಡುಬರುವ ಭಾವೈಕ್ಯ, ಭಾವವಿಸ್ತಾರ ಹಾಗೂ ಭಾವಾನುಬಂಧದ ನಿಗದಿತ ವೃತ್ತಗಳ, ಉಲ್ಲೇಖನದ ಮೂಲಕ ಹರಿಹರ ಕವಿಯ ಶತಕಪ್ರಭಾವ ಮಿಕ್ಕ ಇಬ್ಬರ ಮೇಲೆ ಹೇಗೆ ಪರಿಣಾಮಕಾರಿಯಾಗಿ ಬಿದ್ದಿದೆ ಎಂಬುದನ್ನು ಇಲ್ಲಿ ಕಾಣಬಹುದಾಗಿದೆ. ಶಿವಕಾರುಣ್ಯಾಹ್ವಾನ ಮಾಡುವ ಹರಿಹರನು ತನ್ನ ಮನೋವ್ಯಥೆಯನ್ನು ತೋಡಿಕೊಳ್ಳುವ ಬಗೆಯಿದು:–

> ದ್ವಿರದಂ ಮತ್ಸ್ಯಂ ಪತಂಗಂ ಭ್ರಮರನಹಿಯನಿಪ್ಪಂತಿವೇಕೇಂದ್ರಿಯಾರ್ಥಂ
> ತಿರುಗುತ್ತಿರ್ದಪ್ಪುವಿಂತೀ ಜನನದ ಬಳಿಯೊಳ್ ದೇವ ಪಂಚೇಂದ್ರಿಯಾರ್ಥಂ
> ವಿರಸಂ ವಿದ್ರೂಪಿ ಮೂರ್ಖಂ ವಿಷಯವಿಕಳನೇನಪ್ಪೆನೆಂತಿರ್ಪೆನಯ್ಯೋ
> ಕರುಣೇ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥ ರ. ಶ. ೨೮

ಆನೆ, ಮೀನು, ದೀಪದಹುಳು, ದುಂಬಿ, ಹಾವು–ಎಂಬಿವು ಒಂದು ಇಂದ್ರಿಯದ ಇಚ್ಛೆಯ ಸಲುವಾಗಿ ಜನ್ಮಜನ್ಮಾಂತರಗಳ ಬಳಿ ವಿಡಿದು ತೊಳಲುತ್ತಿವೆ. ಪಂಚೇಂದ್ರಿಯಗಳ ವಿಷಯವಿಕಾರಗಳ ವಿಕಳತೆಗೆ ಈಡಾದ ಮಾನವನ ಪಾಡೇನು? ಹೇಗೆ ತಾನೆ ಆ ಭವಾವಳಿಯಲ್ಲಿ ತಾನು ತೊಳಲುವೆನು ! ವಿರಸವೂ ವಿಕೃತವೂ ಆದ ವಿಷಯಾಸಕ್ತಿಯ ವಿಪರೀತಬುದ್ಧಿಯಿಂದ ಕೇಡಾಗದಂತೆ ಕೈಹಿಡಿದು ಕಾಪಾಡು ಎಂದು ಸೆರಗೊಡ್ಡಿ ಬೇಡುವ ಹರಿಹರನ ಈ ಮೊರೆಯಲ್ಲಿ ಆತನ ವ್ಯಕ್ತಿತ್ವವೇ ಮೂರ್ತಿವೆತ್ತಂತೆ ಭಕ್ತಿರಸಾವೇಶದ ಪ್ರವಾಹವೇ ಉಕ್ಕಿ ಹರಿದಿದೆ.

ವಿಷಯಾಭಿಲಾಷೆಯೇ ಭವದ ಬೀಜ ಎಂಬ ಈ ತತ್ತ್ವವನ್ನು ಪ್ರತಿಪಾದಿಸಿರುವ ಹರಿಹರನ ಈ ಮೇಲಣ ಪದ್ಯದಲ್ಲಿ ಏಕ ಇಂದ್ರಿಯಾರ್ಥವಾಗಿ ಭ್ರಮಿಸುವ ಜೀವಿಗಳ ಹೆಸರುಗಳು ಮಾತ್ರ ಇವೆ. ಪ್ರಶ್ನೆಗೆ ಉತ್ತರವೋ ಎಂಬಂತೆ ಏಕೆ ಆ ಜೀವಿಗಳು ಇಂದ್ರಿಯಾರ್ಥವಾಗಿ ತಿರುಗುತ್ತ ನಷ್ಟವಾದುವು ಎಂಬುದರ ಕಡೆಗೆ ನಮ್ಮ ದೃಷ್ಟಿಯನ್ನು ಹರಿಸಿ ಉದಯಾದಿತ್ಯನು ಹರಿಹರನ ಭಾವವನ್ನು ತನ್ನದನ್ನಾಗಿ ಮಾಡಿಕೊಂಡು ವಿಸ್ತರಿಸಿರುವ ಬಗೆಯಿದು :–

> 'ಶಯು ಕರ್ಣಾರಂತರದಿಂ ಗಜಂ ತ್ವಚದಿನುದ್ಭ್ರಾಮ್ಯತ್ಪತಂಗಂ ನಿಜಾ। ಕ್ಷಿಯಲಂಪಿಂ ಶಫರಾಳಿ ನಾಲಗೆಯಿನುನ್ಮತ್ತಾಳಿ ಮೂಗಿಂದಮಿಂ
> ದ್ರಿಯಮೊಂದಱಿಲೊಂದಿ ಕೆಟ್ಟಪೆನೆ ತತ್ಪಂಚೇಂದ್ರಿಯಕ್ಕುದ್ಭವಾ। ಲಯಮಾದೆನ್ನಗಲ್ಚು ತದ್ವಿಷಯದಿಂ ಶ್ರೀಚಂದ್ರಚೂಡಾಮಣೀ ॥೨೧॥

ಉದಯಾದಿತ್ಯನ ಈ ಪದ್ಯಾರಂಭದ ಪದದಿಂದಲೇ ಪ್ರಾರಂಭವಾಗುವ ಗುಮ್ಮಟಶತಕದ ಮುಂದಿನ ವೃತ್ತದಲ್ಲಿ ಹರಿಹರ ಉದಯಾದಿತ್ಯರು ಉಲ್ಲೇಖಿಸಿರುವ, ಏಕೇಂದ್ರಿಯಾರ್ಥವಾಗಿ ಭವರಾಟಳದಲ್ಲಿ ತಿರುಗುತ್ತಿರುವ, ಜೀವಿಗಳ ಹೆಸರುಗಳೇ ಕಂಡುಬರುತ್ತವೆ. ಯಾವ ಬದಲಾವಣೆಯೂ ಆಗಿಲ್ಲದಿರುವುದನ್ನು ನೋಡಿದರೆ ಹರಿಹರನು ಆದ್ಯಶತಕಕರ್ತಮಾತ್ರನಲ್ಲ, ಅಗ್ರಮಾನ್ಯನೂ ಹೌದು ಎಂಬುದನ್ನು ಅದು ಪುಷ್ಟೀಕರಿಸುವಂತಿದೆ. ಜಡಜೀವಿಗಳು ತಮ್ಮ ತಮ್ಮ ಇಂದ್ರಿಯದಿಂದ ಕೇಡುಳ್ಳವಾದರೂ ಅದನ್ನು ಅರಿತುಕೊಂಡರೆ ಮತ್ತೆ ಎಂದಿಗೂ ಆ ಇಂದ್ರಿಯಲಾಲಸೆಗೆ ಅವು ಸಿಕ್ಕಿಬೀಳುವುದಿಲ್ಲ. ದುಃಖಾರ್ತನಾದ ಮಾನವನಾದರೋ ವಿಷಯಾಭಿಲಾಷೆಯನ್ನು ಎಷ್ಟು ಅನುಭವಿಸಿದರೂ ಬಿಡನು ಎಂದು ಹೇಳಿ ಅದು ನಿನ್ನ ಮಾಯೆ, ಗೆಲಲಸಾಧ್ಯ ಎಂಬ ಗುಮ್ಮಟಾರ್ಯನ ಮತದಲ್ಲಿ ಮಾಯಾವಿಲಾಸದ ಮಾತು ಸುಳಿದಿರುವುದನ್ನಿಲ್ಲಿ ಕಾಣಬಹುದು :–

1. ಹೋಲಿಸಿ : ಬಂಧುವರ್ಮ (ಕ್ರಿ. ಶ. ೧೨೦೦)ನ ಸತಿಧರ್ಮಸಾರ 'ಎಪ್ಪರಿಸಿಯು' (೪೯), 'ಸಾರಿಯು' (೧೭೫).

'ಶಯು ಮಾತಂಗಂ ಪತಂಗಂ ಶಫರಮಳಿಜಡಪ್ರಾಣಿಗಳ್ತಮ್ಮತಮ್ಮಿಂ
ದ್ರಿಯದಿಂ ಕೇಡುಳ್ಳೊಡಂ ತಾವಱಿದೊಡವನವೇಗೇಯ್ದೊಡಂಪೊರ್ದವಾಂ ನಿ
ಶ್ಚಯಮಾದುಃಖಾರ್ತದಿಂದಪ್ಪುದನಳಲೊದವಂ ಕಂಡುಮುಂಡುಂ ಬಿಜಂ ವಾಂ
ಛೆಯನೆಂದೆಂದೋವಿದಾರ್ಗಂ ಗೆಲಲರಿದು ಭವನ್ಮಾಯೆಯರ್ಥೇಂದು ಮೌಳೀ' ॥೩೬-೧೯॥

ಪ್ರಾಣಿಗಳು ತಮ್ಮ ಇಂದ್ರಿಯದಿಂದಾಗುವ ಕೇಡನ್ನು ತಾವು ಅರಿತರೆ ಅವು ಏನು ಮಾಡಿದರೂ ಆ ಇಂದ್ರಿಯದ ಲಾಲಸೆಗೆ ಮತ್ತೆ ಬಲಿಯಾಗವು. ಇಂದ್ರಿಯವ್ಯಾಮೋಹದಿಂದಾಗುವ ದುಃಖವನ್ನು ಕಂಡುಂಡೂ ಆ ವಿಷಯಾಪೇಕ್ಷೆಯನ್ನು ಬಿಡದ ಮಾನವನು ಪ್ರಾಣಿಗಳಿಗಿಂತಲೂ ಕೀಳು ಎಂಬ ಭಾವನೆಯೂ ಇಲ್ಲಿ ಸೂಚ್ಯವಾಗಿ ಇದೆ. ವಿಷಯಸುಖಾಭಿಲಾಷೆಯ ಭಾವವಿಸ್ತಾರದ ತ್ರಿವಿಕ್ರಮಾವತಾರವನ್ನೇ ಶತಕಸಾಹಿತ್ಯದ ಆದ್ಯಪ್ರವರ್ತಕರ ಈ ಮೂರು ವೃತ್ತಗಳು ಮೂರ್ತೀಕರಿಸಿದಂತಿವೆ ಎನ್ನಬಹುದು.

**ಬಸವಾದಿ ಪ್ರಮುಖ ವಚನಕಾರರ ವಚನಗಳು ಹಾಗೂ ಚಂದ್ರಚೂಡಾಮಣಿಶತಕ**

ಉದಯಾದಿತ್ಯನು ತನ್ನ ಚಂದ್ರಚೂಡಾಮಣಿ ಶತಕವನ್ನು ರಚಿಸಿದ ಕಾಲಕ್ಕಾಗಲೇ ಶರಣರ ವಚನಗಳು ಆತ್ಮಚಿಂತನೆಯ ಆಧ್ಯಾತ್ಮಿಕ ವಲಯದಿಂದ ಜನಸಾಮಾನ್ಯರ ಜಗಜ್ಜೀವನ ಕ್ಷೇತ್ರಕ್ಕೆ ಅಡ್ಡಿಯಿಟ್ಟುದಲ್ಲದೆ ಕವೀಶ್ವರರ ಆಧಿಪತ್ಯವಾದ ಕಾವ್ಯಸಾಮ್ರಾಜ್ಯಕ್ಕೂ ಮುತ್ತಿಗೆ ಹಾಕಿ ಅವರ ಅಂತರಂಗವನ್ನೂ ಸೂರೆಗೊಂಡಿದ್ದವು. ವಚನಕಾರರಲ್ಲಿ ಬಸವಣ್ಣನವರಿಗೆ ಇರುವ ಸ್ಥಾನ ಅಗ್ರಮಾನ್ಯವಾದುದೆ ಸರಿ. ಅವರ ವಚನಗಳು ಸರಳತೆಯಿಂದಲೂ ಸಹಜಸೌಂದರ್ಯದ ಚಿತ್ತಾಕರ್ಷಕತೆಯಿಂದಲೂ ಕೂಡಿದುವು. ಸತ್ಯಾನುಭೂತಿಯೇ ವಚನಸಾಹಿತ್ಯದ ಜೀವಜೀವಾಳ. ಬಸವಣ್ಣನವರ ವಚನಗಳು ಉದಯಾದಿತ್ಯನ ಮನಸ್ಸನ್ನು ಸೂರೆಗೊಂಡಿದ್ದುದಕ್ಕೆ ಕೆಲವು ನಿದರ್ಶನಗಳನ್ನಿಲ್ಲಿ ಕಾಣಬಹುದು :

ನಿಳಯ ಸ್ಥಾನದೊಳೊಂದಶುದ್ಧವಿರಲೆತ್ತಾನುಂ ಬಿಸುಟ್ಟಲ್ಲದಾ । ಸ್ಥಳದೊಳ್ ನಿಂದಿರಬಾರದೀಯೊಡಲ ಶುದ್ಧಕ್ಕಾಸ್ಪದಂ ತಾನಿದಂ
ತಿಳಿದುಂ ಪೇಸದಿದೆಂತು ಮನ್ಮನವಿದೇಂ ವಿಭ್ರಾಂತಿಯೋ ಪೇಳಿದಂ। ತಿಳಿಯಲ್ ನಿನ್ನಯ ಮಾಯೆಯೊಂದೆಸಕಮೋಶ್ರೀ ಚಂದ್ರಚೂಡಾಮಣೀ ॥೬॥

ಮಾಯಾವಿಲಾಸಕ್ಕೆ ಮರುಳಾದ ಮಾನವನ ಮನದ ಭ್ರಾಂತಿಯನ್ನೂ ಅದರ ಕಾರಣವನ್ನೂ ಕವಿ ಇಲ್ಲಿ ನಿರೂಪಿಸಿದ್ದಾನೆ. ತನು ಅಶುಚಿಗೆ ಆಸ್ಪದ. ತಾನು ಅದನ್ನು ತಿಳಿದೂ ಹೇಸದೆ ಮನಸ್ಸು ಅವಕ್ಕೇ ಮರುಳಾಗಿದೆ. ಈ ಭ್ರಾಂತಿಯ ಮೂಲ ತಿಳಿಯಲು–ನೀನಿಲ್ಲದೆ ಮಾಯವಾಗಿರುವುದರ ಬಲವ್ರೋ ! ಕೊಳೆ ತೊಳೆದು ಕಳೆದು ಹಾಕಿದ ಹೊರತು ನಿಲಯಸ್ಥಾನದಲ್ಲಿ ನಿಂತಿರಬಾರದಲ್ಲಾ ! ಮನದ ಮಾಯಾಭ್ರಾಂತಿಯನ್ನು ಕಳೆದು ನಿರ್ಮಲಗೊಳಿಸಿದ ಹೊರತು ಅದು ಹೇಗೆ ತಾನೆ ನಿಜದ ನೆಲೆಯಾದೀತು ? ಎಂದು ಎಚ್ಚರಿಸಿರುವ ಈ ಪದ್ಯದ ಚರಣಗಳಲ್ಲಿ ಬಸವಣ್ಣನವರ ಮುಂದಿನ ವಚನದ ನುಡಿಯು ಮಿಡಿತವಿರದಿದ್ದರೂ ಭಾವದ ಹರವರಿಯನ್ನು ನಾವು ಸ್ಪಷ್ಟವಾಗಿ ಕಾಣಬಹುದು.

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ? ತನುವಿನೊಳಗೆ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯ ನಿಲ್ಲಾ, ಕೂಡಲಸಂಗಮದೇವ ! ಬ.ಷ.ವ.೯೭.

'ಪಂಡಿತನಾಗಲಿ, ಮೂರ್ಖನಾಗಲಿ, ಸಂಚಿತಕರ್ಮ ಉಂಡಲ್ಲದೆ ಬಿಡದು. ಪ್ರಾರಬ್ಧಕರ್ಮ ಭೋಗಿಸಿದಲ್ಲದೆ ಹೋಗದು–ಬಸವಣ್ಣನವರ ಈ ವಚನಭಾಗಕ್ಕೂ 'ಎಂತುಂ ಏತೆಱದಿನ್ ಆರ್ಗಂ ನೆಟ್ಟನುಂಡಲ್ಲದೇಂ ಕೆಡಿಸಲ್ಬರ್ಕುಮೆ ಗೆಯ್ದ ಕರ್ಮಫಲಮಂ' (ಪ.೫೩) ಎಂಬ ಚಂದ್ರಚೂಡಾಮಣಿಶತಕದ ಅಭಿವ್ಯಕ್ತಿಗೂ ಇರುವ ಸಾಮ್ಯ ಸುವಿದಿತವಾಗಿದೆ. ಬಸವಣ್ಣನವರ

'ನೆರೆ ಕೆನ್ನೆಗೆ ತೆರೆ ಗಲ್ಲಕೆ, ಶರೀರಗೂಡುವೋಗದ ಮುನ್ನ. ಹಲ್ಲು ಹೋಗಿ, ಬೆನ್ನು ಬಾಗಿ, ಅನ್ಯರಿಗೆ ಹಂಗಾಂಗದಮುನ್ನ,
ಕಾಲ ಮೇಲೆ ಕೈಯನೂಱಿ ಕೋಲ ಹಿಡಿಯದ ಮುನ್ನ, ಮುಪ್ಪಿಂದೊಪ್ಪವಳಿಯದ ಮುನ್ನ,
ಮೃತ್ಯು ಮುಟ್ಟದ ಮುನ್ನ ಪೂಜಿಸು ನಮ್ಮ ಕೂಡಲ ಸಂಗಮದೇವನ ಬ.ಷ.ವ.೧೬೧

ಈ ವಚನದ ಪರಿಚಯದ ಪ್ರಭಾವವೇ ಉದಯಾದಿತ್ಯನ ಶತಕದ ಈ ವೃತ್ತಾರಂಭದ ರಚನೆಯಲ್ಲಿ ಮೈದೋರಿರುವುದನ್ನು ಸ್ಪಷ್ಟವಾಗಿ ಕಾಣಬಹುದು :–

'ನರೆಯಿಂ ತೆರೆಯಿಂದಮಾದ ನೆರೆಯಿಂದ ಮುಪ್ಪಿನೊಳ್ ಜಲ್ಲ್ವಗೆ।ಟ್ಟಿರುತಂ ವ್ಯಾದಿಯೊಳಾಗಳುಸ್ಸಿವಿಪ್ಪತಂ ತಳ್ತಿರ್ದದಾರಿದ್ರ್ಯದೊ
ಳ್ಪೊರಳುತ್ತಿರ್ದುಮದೆಂತುಮಿಂತುವಳಿಪೆಂತುಂ ಪೋಗದಾ ಕುತ್ಸ್ನಮಂ। ಪರಿಪ್ರೊದೌಷಧಿಯುಂಸಮಂತು ದಯೆಗೆಯ್ ಶ್ರೀಚಂದ್ರಚೂಡಾಮಣೀ ೪೯

ಪ್ರಾಚೀನ ಚಂಪೂಕವಿಗಳಲ್ಲಿ ಹರಿಹರನ ಕಾವ್ಯಪ್ರಭಾವದಂತೆ ನಾಗಚಂದ್ರನ ಕಾವ್ಯಪ್ರಭಾವವೂ ಉದಯಾದಿತ್ಯನ ಮೇಲೆ ಸಾಕಷ್ಟು ಬಿದ್ದಿರುವುದನ್ನು ಕಾಣಬಹುದು. ಉದಾಹರಣೆಗೆ ಮೇಲಣ ಈ ಶತಕವೃತ್ತದಲ್ಲಿ ಮಲ್ಲಿನಾಥಪುರಾಣದ

'ಮೃಡಸುತನಂತೆ ದಂತಹತಿ ಪೊರ್ದದೆ ಶೂದ್ರಕನಂತೆ ಶಕ್ತಿಯಂ
ಕಿಡಿಸದೆ ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್
ನಡೆಯದೆ ಪೋದೆವೋದ ಮರದಂತೆ ಕರಂ ನರೆಯೇಱದಿಟ್ಟು ಮು
ಪ್ಪಡಸದ ಮುನ್ನಮೇಕೆ ಮನುಜರ್ ಮುಱಿದಿಕ್ಕರೊಮೋಹಮಲ್ಲನಂ' ಅ.೧೪-೯೪

ಈ ಪದ್ಯದ ಭಾವ–ದೋಹ–ವೇ ಶತಕದ 'ಅಳಿಪು' : ಇಲ್ಲಿನ ತೆರೆ–ನರೆಗಳೇ ಅಲ್ಲಿನ ನರೆ–ತೆರೆಗಳಾಗಿರುವುದು. ಹೀಗೆ ಉದಯಾದಿತ್ಯನು ಈ ಪದ್ಯದಿಂದ ಪ್ರಭಾವಿತನಾಗಿದ್ದರೂ ಇಲ್ಲಿನ 'ಮುಪ್ಪಡಸು' ಪದದ ಪ್ರಭಾವಕ್ಕಿಂತ ಬಸವಣ್ಣನವರ 'ಮುಪ್ಪಿಂದೊಪ್ಪವಳಿ' ಎಂಬೀ ಉಕ್ತಿಯ ಅರ್ಥ ಪ್ರಭಾವಕ್ಕೇ ಮನಸೋತಿರುವುದನ್ನು ಆತನ ಮೇಲಣ ವೃತ್ತದಲ್ಲಿ ನಿರ್ದಿಷ್ಟವಾಗಿ ಕಾಣಬಹುದು.

ಕವಿ ಉದಯಾದಿತ್ಯನು ಆತ್ಮಜ್ಞಾನಿ ಅಲ್ಲಮನ ವಚನಗಳ ಪ್ರಭಾವಕ್ಕೆ ಮಾರುಹೋದವನು ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಅಲ್ಲಮಪ್ರಭುವಿನ ಬೆಡಗಿನ ವಚನಗಳು ಅನುಭಾವದ ಗೂಢವೂ ಗಾಢವೂ ಆದ ರಹಸ್ಯಜ್ಞಾನದ ನಿಜನಿಧಿಗಳು. ಪ್ರಚ್ಛನ್ನ ಪ್ರಕಟಾರ್ಥಗಳನ್ನುಳ್ಳ ಪ್ರಹೇಳಿಕಾಮಾರ್ಗಪ್ರತಿಪಾದಕನಾದ ಉದಯಾದಿತ್ಯನು ಸ್ವಯಂ ಗೂಢಕಾವ್ಯರಚನಾ ನೈಪುಣ್ಯದಲ್ಲಿ ಅದ್ವಿತೀಯನಾದ ಕವಿ. ಸಹಜವಾಗಿ ಬೆಡಗಿನ ವಚನಸಾಹಿತ್ಯಸಾಮ್ರಾಟನಾದ ಪ್ರಭುದೇವರ ವ್ಯಕ್ತಿತ್ವದ ಮಹಿಮೆಗೆ ಆತ ಮಾರುಹೋದವನಾಗಿ ಅಲ್ಲಮನನ್ನು ನೆನೆದು ಆತನ 'ಇಂಬಾಗಿ ಅಜಿಪ್ಪೊಂದು ಬುದ್ಧಿ'ಯಿಂದ ಮಾಯೆಯನ್ನು ಜಯಿಸಲು ಬಯಸಿದ್ದಾನೆ.

ಲಿಂಗವನ್ನು ಧರಿಸಿ ಪೂಜಿಸುವ ಕರಸ್ಥಲದ ಮೇಲೆ ಕತ್ತಲೆ; ಇಷ್ಟಲಿಂಗವನ್ನು ದೃಷ್ಟಿಸಿ ನೋಡುವ ಹೊರ–ಒಳ ಕಂಗಳ ಮೇಲೆ ದಟ್ಟವಾಗಿ ಕವಿದ ಕಗ್ಗತ್ತಲೆ. ದೇಹನಿಬದ್ಧ ಅಂತರ–ಬಾಹ್ಯ ವ್ಯಾಪಾರಗಳ ನೆಲೆಯಾದ ಮನದ ಇತ್ತಲೆಯಾದ ಕತ್ತಲೆಯಿಂದ ಅತ್ತ, ಅಜ್ಞಾನದಿಂದ ಆಚೆಗೆ, ಅದ್ವಯವಾದ ಸ್ವಯಂಪ್ರಭೆಯಿದೆ. ಆ ಚಿಜ್ಜ್ಯೋತಿಯನ್ನು ಕುರಿತ ತಾತ್ತ್ವಿಕ ಚಿಂತನೆಯನ್ನು ಅಲ್ಲಮಪ್ರಭುವಿನ ಈ ವಚನದಲ್ಲಿ ಕಾಣಬಹುದು.

> 'ಹಿಡಿವ ಕೈಯ ಮೇಲೆ ಕತ್ತಲೆಯಯ್ಯ; ನೋಡುವ ಕಂಗಳ ಮೇಲೆ ಕತ್ತಲೆಯಯ್ಯ; ನೆನೆವ ಮನದ ಮೇಲೆ ಕತ್ತಲೆಯಯ್ಯ;
> ಕತ್ತಲೆಯೆಂಬುದು ಇತ್ತಲೆಯಯ್ಯ ಗುಹೇಶ್ವರನೆಂಬುದು ಅತ್ತಲೆಯಯ್ಯ'

ಸ್ವಯಂಪ್ರಕಾಶವೆ ಲಿಂಗ ಸ್ವರೂಪ. ಅದನ್ನು ಬಲ್ಲವನೇ ಕೇವಲಜ್ಞಾನಿ. ಜ್ಞಾನಜ್ಯೋತಿಯಿಂದ ವಿಶ್ವವನ್ನೇ ವಿಶದವಾಗಿ ತಿಳಿಯಬಹುದು ಎಂದು ಉದಯಾದಿತ್ಯನು ನಿರೂಪಿಸಿರುವ ಮುಂದಿನ ವೃತ್ತದಲ್ಲಿ ಅಲ್ಲಮನನ್ನು ನೆನೆದು ಆತನ ವಿಶುದ್ಧ ಬುದ್ಧಿಯನ್ನು ಕೊಂಡಾಡಿರುವುದನ್ನು ಕಾಣಬಹುದು.

> ತಿಮಿರಂ ಪೋಪಡೆ ಕಾಣ್ಬ ಕಣ್ಮಲರೊಳೆತ್ತಾನುಂ ಮರುಳ್ಗೊಳ್ಪೇದಡ। ಲ್ಲಮನಿಂಬಾಗಜಿಪ್ಪೊಂದು ಬುದ್ಧಿಯೊಳೆಯಿನ್ನಂ ಮೋಹಿಸುತ್ತಿಪ್ಪಮಾ
> ಯುಮನೋಜಾರಿಭವ ಪ್ರಭಾವದೊಳೆ ಪೋಗಲ್ಕೇವಲಜ್ಞಾನಮಾ। ಗಿ ಮನಂ ವಿಶ್ವಮುಮಂ ಜಲಕ್ಕನಜಿಗುಂ ಶ್ರೀಚಂದ್ರಚೂಡಾಮಣೀ -೪೦

'ನೋಡುವ ಕಂಗಳ'ಲ್ಲಿ ಕತ್ತಲೆ ಹಿಡಿದಾಗ ಅಲ್ಲಮನ ಅಂದದಿಂದ ಅರಿಯುವ, ಮತಿಯಿದ್ದರೆ ಆ ಕತ್ತಲೆ ಹೋದಿತು. ವೃತ್ತದ 'ಕಾಣ್ಬಕಣ್'ವಚನದ 'ನೋಡುವ ಕಂಗಳು' ಕಾಮವೈರಿಯಾದ ಶಿವನ ಆಶ್ರಯದ ಪ್ರಭಾವದಿಂದ, ಶಿವಜನ್ಮೋದಯದಿಂದ ತನ್ನನ್ನು ಮರಳು ಮಾಡುವ ಮಾಯಾಪ್ರಕೃತಿಯು ಹೋಗಲಾಗಿ ಕೇವಲಜ್ಞಾನವು ಉದಯಿಸುವುದು ಎಂಬುದೆ ಉದಯಾದಿತ್ಯನ ಮತ.

ಕಲ್ಯಾಣದ ಕ್ರಾಂತಿಯ ಬಳಿಕ ನಿಜಶರಣರಿಗೆ ಕಲಿಯುಗದಲ್ಲಿ ಮುಂದೆ ಇರಬಾರದ ಸ್ಥಿತಿ ಒದಗಿತು. ಅವಧಿ ಅಳಿಯಿತು. ಆಗಲಿಕೆ ಉಳಿಯಿತು ಎಂಬ ಸಂದರ್ಭದ ಪ್ರಭುದೇವರ ವಚನವಿದು:–

'ಅವಧಿಯಳಿಯಿತ್ತು. ವ್ಯವಧಾನ (ಮತಿ) ಉಳಿಯಿತ್ತು. ನಿಜವೆ ನಿಜವನೊಡಗೂಡಿತ್ತು–ಕೇಳಾ ಬಸವಣ್ಣ'. ಕಲಿಯುಗದಲ್ಲಿ ಮುಂದೆ ಇರಬಾರದು ನಿಜ ಶರಣರಿಗೆ, ನಡೆ ನೀನು ಕಪ್ಪಡಿಯ ಸಂಗಮನಲ್ಲಿ ಒಡಗೂಡು. ಉಳುವೆಯಲ್ಲಿ ನಿಜವನೆಯ್ದುವೆ ನಡೆ ಚನ್ನಬಸವಣ್ಣ. ಮಹವನೊಡಗೂಡು। ಮಡಿವಾಳ ಮಾಚಯ್ಯ, ಸೊಡ್ಡಳ ಬಾಚರಸರು ಮೊದಲಾದ ಪ್ರಮಥರೆಲ್ಲರು ನಿಮ್ಮ ನಿಮ್ಮ ನಿಜವನೆಯ್ದುವುದು, ನಿರ್ವಯಲ ಸಮಾಧಿಯಲ್ಲಿ ಬಗಿದು ಹೋಗುವವರೆಲ್ಲರೂ ಹೋಗಿ. ಲಿಂಗದೊಳಗೆ ಪೋಗುವವರೆಲ್ಲರೂ ನಡೆಯಿರಿ. ಕಾಯವೆರಸಿ ಕೈಲಾಸಕ್ಕೆ ಹೋಗುವರೆಲ್ಲರೂ ಹೋಗಿ ಕಾಯವ ನಿಜಸಮಾಧಿಯಲ್ಲಿರಿಸಿ ಅವಿರಳ ಲಿಂಗೈಕ್ಯವನೆಯ್ದುವವರೆಲ್ಲರೂಯೆಯ್ದಿ. ನಿಮಗೆಲ್ಲರಿಗೆಯೂ ಉಪದೇಶಮಂತ್ರ ತಪ್ಪದು. ನಮಗೆ ಕದಳಿಯಲ್ಲಿ ಪೊಕ್ಕು ನಿಜದಲ್ಲಿ ಒಡಗೂಡುವ ಪರಿಣಾಮ. ಇದು ನಮ್ಮ ಗುಹೇಶ್ವರಲಿಂಗದಾಣತಿ. ನಿಮಗೆಲ್ಲರಿಗೆಯೂ ಇದೆಯಾಣತಿ.' (ಮ. ಶೂ. ಸಂ–೩೨೩.) ಹೀಗೆ ಬಸವಣ್ಣ, ಚನ್ನಬಸವಣ್ಣ, ಮಡಿವಾಳ ಮಾಚಯ್ಯ, ಸೊಡ್ಡಳ ಬಾಚರಸ ಮೊದಲಾದ ಪ್ರಮಥರೆಲ್ಲರಿಗೂ ತಮ್ಮ ತಮ್ಮ ನಿಜವನೈದುವುದೆಂದು ಲಿಂಗದಾಣತಿಯಿತ್ತ ಪ್ರಭುದೇವರ ಈ ವಚನದಲ್ಲಿ ಅವರ ಸಮಕಾಲೀನ ಶರಣರ ಬದುಕಿನ ಕಡೆಯ ದಿನಗಳ ಸೂಚನೆಯನ್ನು ಕಾಣುತ್ತೇವೆ. ಪ್ರಭುದೇವರ ಈ ವಚನದ ಅರ್ಥವನ್ನು ಸಮರ್ಥಿಸಿರುವ ತುರುಗಾಹಿ ರಾಮಣ್ಣನ ವಚನವಿದು.

> 'ಬಂದಿತ್ತು ದಿನ -ಬಸವಣ್ಣ ಕ(ಪ್ಪಡಿಯ)ಲ್ಲಿಗೆ, ಚನ್ನಬಸವಣ್ಣ ಉಳುವೆಯಲ್ಲಿಗೆ, ಪ್ರಭು ಅಕ್ಕ
> ಕದಳಿ ದ್ವಾರಕ್ಕೆ, ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ. ನಾನು ತುರುವಿನ ಬೆಂಬಳಿಯಲ್ಲಿ. ಹೋದ ಹಾದಿಯಲ್ಲಿ
> ಅಡಗಿದರೆಲ್ಲರೂ. ಅಡಗಿದುದ ಕೇಳಿ ನಾ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿಯೆ ಉಡುಗುವೆನು'. -ವ.೪೫

ಬಸವಣ್ಣ, ಚೆನ್ನಬಸವಣ್ಣ, ಪ್ರಭು ಅಕ್ಕಗಳು ಮಿಕ್ಕಾದ ಪ್ರಮಥರೆಲ್ಲರೂ ನಿಜೈಕ್ಯರಾಗಲಿರುವರೆಂದು ತಿಳಿಸುವ ಈ ವಚನದ ಆಧಾರದಿಂದ ಬಸವಾದಿ ಪ್ರಮಥರ ಲಿಂಗೈಕ್ಯದ ಕಾಲ ಸು.ಕ್ರಿ.ಶ. ೧೧೬೭ ರಲ್ಲಿ ಇದ್ದ ತುರುಗಾಹಿ ರಾಮಣ್ಣನ ಮುಂದಿನ ವಚನಕ್ಕೂ ಪ್ರಸ್ತುತ ಉದಯಾದಿತ್ಯನ ಚಂದ್ರಚೂಡಾಮಣಿ ಶತಕಕ್ಕೂ ಇರುವ ನಿಕಟಸಂಬಂಧವನ್ನು ಗಮನಿಸಬಹುದು.

> 'ವರ್ತುಳವಾಯುವಿನಲ್ಲಿ ಎದ್ದ ತೃಣಪರ್ಣ ಕುಂಪಟಿ ಮುಂತಾದುವನೆಲ್ಲವನೂ ದಂಡಸಾಕಾರ ಮುಂತಾಗಿ
> ತೋಱಿ ಸಂಚಾರನಿಂದ ಮತ್ತೆ ಅವು ಮುನ್ನಿನ ಸಂಚದಂತೆ ನಿಂದವು. ನಿರವಯವಸ್ತುವಿನೊಡಗೂಡಿದ ಕ್ರೀವಸ್ತು
> ವಸ್ತುಕವಾಗಲಾಗಿ ಮುಂಚಿ ಮುಟ್ಟು ಕ್ರೀ ಮುನ್ನಿನ ಸಂಚದಲ್ಲಿಯೇ ಅಡಗಿದವು. ಇದು ಕ್ರಿ-ಜ್ಞಾನ
> ನಿರ್ವಾಹಭಾವ ಗೋಪತಿನಾಥ ವಿಶ್ವೇಶ್ವರ ಲಿಂಗವು ನಿರ್ವಾಹನಾದ ಆಟ.' ವ.೩೮

ತುರಗಾಹಿನ ರಾಮಣ್ಣನ ಈ ವಚನದಲ್ಲಿ ಪಂಚಭೌತಿಕವಾದ ಜೀವಶರೀರವು ಸುಂಟುರುಗಾಳಿಗೆ ಸಿಲುಕಿದ ಧೂಳು ತರಗೆಲೆಗಳ ದಂಡಸಾಕಾರವು ತೋರಿ ಅಡಗುವಂತೆ, ಪಂಚಭೂತಗಳಲ್ಲಿ ಮತ್ತೆ ಮೊದಲಂತೆ ಅಡಗುವುದು ಎಂಬ ತತ್ತ್ವವನ್ನು ವಿವರಿಸಲಾಗಿದೆ. ಈ ವಚನಾರ್ಥವನ್ನು ವ್ಯಕ್ತಾವ್ಯಕ್ತವಾಗಿ ಅಳವಡಿಸಿಕೊಂಡ ಚಂದ್ರಚೂಡಾಮಣಿ ಶತಕದ ವೃತ್ತವಿದು :–

> ಮರುದಾವರ್ತದಿ ಪರ್ಣಪಾಂಶು ತತಿ ದಂಡಾಕಾರಮಾಗುತ್ತೆ ತಾಂ
> ಪರಿವೊಂದಂದದೆ ಪಂಚಭೌತಿಕಮಿವೊಂದಾಗಿರ್ದು ಜೀವಾನಿಳಂ
> ಬೆರಸೊಂದಾಕೃತಿಯಾಗಿ ತೋರ್ಕುಮನಿಳಂ ಪೋಗಲ್ಕೆ ತದ್ಭೌತಿಕೋ
> ತ್ಕರಮುಂ ಪೋಕುಮಿದಕ್ಕೆ ವಿಸ್ಮಯಮಿದೇಂ ಶ್ರೀಚಂದ್ರಚೂಡಾಮಣೀ ೧೯

ಪೂರ್ವೋಕ್ತ ವಚನದಲ್ಲಿನ 'ವರ್ತುಳವಾಯು', 'ಪರ್ಣಕುಂಪಟಿ' 'ದಂಡಸಾಕಾರ' 'ತೋಱಿ ಸಂಚಾರ' 'ಕ್ರೀವಸ್ತು' 'ವಸ್ತುಕ' 'ಮುಟ್ಟುಕ್ರೀ' 'ಮುನ್ನಿನ ಸಂಚ'–ಈ ಪದಗಳಲ್ಲಿ ಕೆಲವನ್ನು ಉದಯಾದಿತ್ಯನು ನೇರವಾಗಿ ಸ್ವೀಕರಿಸಿರುವುದನ್ನು ಆತನ ಈವೃತ್ತದಲ್ಲಿ ಕಾಣುತ್ತೇವೆ. ಮಿಕ್ಕಪದಗಳ ಅರ್ಥವನ್ನು ಕವಿತಾರೂಪದಲ್ಲಿ ಪರಿಣಾಮಕಾರಿಯಾಗುವಂತೆ ಬಳಸಿಕೊಂಡಿರುವುದನ್ನೂ ಗಮನಿಸಬಹುದು. ವಚನದಲ್ಲಿನ ವರ್ತುಳವಾಯು (ಸುಂಟರಗಾಳಿ, ಸುಳಿಗಾಳಿ)ವೇ ವೃತ್ತದಲ್ಲಿ 'ಮರುದಾವರ್ತ' (ಗಾಳಿಯ ಸುಳಿ) ಆಗಿದೆ. 'ಪರ್ಣ-ಕುಂಪಟಿ'ಯೆ 'ಪಾಂಶು–ಪರ್ಣ'ವಾಗಿದೆ; ಹಿಂದುಮುಂದಾಗಿದೆ. ಕುಂಪಟಿ (ಕುಂಪಟೆಯೊಳಗಿನ ಕೆಂಡದ ಬೂದಿ, ಧೂಳಿ) ಪದಕ್ಕೆ ಪರ್ಯಾಯಪದವಾಗಿ 'ಪಾಂಶು' (ಧೂಳು) ಪದವನ್ನು ಬಳಸಲಾಗಿದೆ. ವಚನದ 'ದಂಡಸಾಕಾರ'ವೇ ವೃತ್ತದಲ್ಲಿ 'ದಂಡಾಕಾರ'ವಾಗಿದ್ದು ಆ ವಚನದಿಂದ ಪ್ರಭಾವಿತವಾದುದಕ್ಕೆ ಸುಸ್ಪಷ್ಟವಾದ ನಿದರ್ಶವಾಗಿದೆ. ವಚನದ 'ತೋಱಿ ಸಂಚಾರ'ವೆ ಕಾವ್ಯದ 'ಪರಿವ ಒಂದಂದ'ವಾಗಿ, 'ವಸ್ತುಕ'ವೆ–'ಪಂಚಭೌತಿಕ'ವಾಗಿ, 'ನಿರವಯವಸ್ತು'ವೆ 'ಜೀವಾನಿಳ'ವಾಗಿ, 'ಮುಟ್ಟು ಕ್ರೀ'ಯೆ–ಆ ಕೃತಿಯಾಗಿ ತೋರಿದೆ. ಪದಪದಕ್ಕೂ ವಚನವನ್ನು ಅದರ ಆರಂಭದಿಂದ ಮುಕ್ತಾಯದ ತನಕ ಅನುಸರಿಸಿ ರಚಿತವಾಗಿದ್ದರೂ ಈ ಶತಕಕಾವ್ಯದ ವೃತ್ತವು ಸ್ವತಂತ್ರವಾದ ರಚನೆಯೋ ಎಂಬಂತಿದೆ. ವಚನದ ಪ್ರಕಟಾರ್ಥದೊಡನೆ ತನ್ನ ಕಾವ್ಯವೃತ್ತದ ಪ್ರಚ್ಛನ್ನಾರ್ಥದ ಗುಪ್ತಗಾಮಿನಿಯಲ್ಲಿ ಕವಿ ಮುಳುಗಿ ತನಗೆ ತಾನೆ ವಿಸ್ಮಿತನಾಗಿದ್ದಾನೆ. ಕವಿಯ ಅತ್ಯದ್ಭುತವಾದ ದಾರ್ಶನಿಕ ದೃಷ್ಟಿಗೆ ಈ ಒಂದು ಪದ್ಯ ಚಿರಸಾಕ್ಷಿಯಾಗಿ ನಿಲ್ಲಲು ಸಾಕಷ್ಟು ಯೋಗ್ಯವೂ ಸಮರ್ಥವೂ ಆದುದಾಗಿದೆ.

ಉದಯಾದಿತ್ಯನ ಪೇಳ್ದೀ ಜ್ಞಾನಸಾರದಲ್ಲಿ ಕವಿವಿಷಯಕವಾದ ಸಂಗತಿ ಗೂಢವಾಗಿ ನಿರೂಪಿತವಾಗದೆಯಿಲ್ಲ. ಮಾನವ ಸಹಜವಾದ ದೇಹ ಮೋಹದ ಅಹಂಭಾವವನ್ನು ಸಮಾಸೋಕ್ತಿಯಿಂದ ಚಿತ್ರಿಸುತ್ತ ಸ್ವಸಂಗತಿಯನ್ನು ಮಾರ್ಮಿಕವಾಗಿ ವರ್ಣಿಸಿರುವ ಬಗೆಯಿದು :–

> 'ಎನಗಾವಂ ತಲೆದೋರ್ಪನೀ ಸೊಗಯಿಪೆನ್ನಾಕಾರಮಂ ಕಂಡು ಕಾ| ಮಿನಿ ಕಣ್ಸೋಲದಳಾವಳೆಂಬ ಮುದಿತಾಹಂಕಾರದಿಂ ನೋಡಿನೋ
> ಡಿ ನೆಲಕ್ಕಿಕ್ಕುವ ಮೃತ್ಯುವಂ ನೊಣೆವ ಕಾಳವ್ಯಾಳನಂ ತಿಂಬಗು| ರ್ವಿನ ಮೇರ್ವಾಲಿಯನಾವನೆತ್ತಲಱಿವಂ ಶ್ರೀಚಂದ್ರಚೂಡಾಮಣೀ'-೨೨

ಇಲ್ಲಿ ಉಕ್ತವಾಗಿರುವ 'ಈ ಸೊಗಯಿಪೆನ್ನಾಕಾರಮುಂ ಕಂಡು ಕಾಮಿನಿ ಕಣ್ಸೋಲದಳಾವಳ್' ಎಂಬೀ ದೇಹಸೌಂದರ್ಯಾಭಿಮಾನದ ವರ್ಣನೆಯಲ್ಲಿ

> '.........ನೋ ಡಾವನ ಮುದೆಗನ ರೂಪಂ ಭಾವಿಸುವೊಡೆ ಕೆಳದಿ, ತನ್ಮಯಂ ಜಗಮೆಲ್ಲಂ' —ಉದ. ೪೭

ಎಂಬ ಉದೆಗನ ಭವ್ಯವೂ ರಮ್ಯವೂ ಆದ ರೂಪವರ್ಣನೆಯ ಚಿತ್ತಾಕರ್ಷಕ ಅಭಿವ್ಯಕ್ತಿಯ ತನ್ಮಯತೆಯನ್ನೇ ಕಾಣುತ್ತೇವೆ. '......ನೋಡಿನೋಡಿನೆಲಕ್ಕಿಕ್ಕುವ' ಕ್ರಿಯೆಯನ್ನುಳ್ಳ 'ಮೃತ್ಯುವಂ ನೊಣೆವ ಕಾಳವ್ಯಾಳನಂ ತಿಂಬ ಮೇರ್ವಾಲಿಯ (ಮೇರುಶಿಖರಮಣಿ ಶಿರೋಭೂಷನ) ಈ ವರ್ಣನೆ

> ಉದೆಗನೊಳಾಂಪರಾರ್ ಮುಳಿದೊಡಂತಕನಾಂತೊಡೆಕೆಂಡದಿಂಡೆಯಂ| ಕಿದಱುವನೊಡ್ಡಿದಾನೆಗಳ ನಿರ್ಕಡಿ ಮಾಡುವನಾತನೊಳ್ಸಸಂ
> ಬೆದಱಿಸದಾರನೋಡಿಸದದಾರನದಾರನುದಾತ್ತ ದೈನ್ಯದೊಳ್। ಪ್ರದಿಯಿಸದು? ಆರನಾಗಿಸದು ತಾಪಸವೃತ್ತಿಯನಬ್ಜಲೋಚನೇ॥ ಉ.ಅಂ.೪೮

ಉದೆಗನ ವಿಕ್ರಮವನ್ನು, ಅದರಲ್ಲಿಯೂ 'ಒಡ್ಡಿದಾನೆಗಳನ್ನು ಇರ್ಕಡಿಮಾಡುವ' (ನೋಡಿನೋಡಿ ನೆಲಕ್ಕಿಕ್ಕುವ ಕ್ರಿಯೆಯುಳ್ಳ ಗಜಗಳ ಹಿಂಡನ್ನು ತುಂಡರಿಸುವ) ಗಜಸಂಹಾರಿಯ, ಕೀರ್ತಿಯ ಈ ವರ್ಣನೆಯೊಡನೆ ಸ್ಪಷ್ಟವಾಗಿ ಅನ್ವಯವಾಗಿರುವುದನ್ನು

ಕಾಣುತ್ತೇವೆ. ಯಮಾಂತಕನೂ ಗಜಾಸುರವೈರಿಯೂ, ಮೇರುಗಿರಿ ಶಿಖರಮಣಿಯೂ ಯತೀಶ್ವರನೂ ಆದ ಸಾಕ್ಷಾತ್ ಕಿರಾತ ವೇಷದ ಶಿವನೋ ಎನ್ನುವ ಕೀರ್ತಿಗಳಿಸಿದ ನಿಷಾದಪ್ರಭು ತಾನೆಂಬುದನ್ನು ಮಾರ್ಮಿಕವಾಗಿ ಇಲ್ಲಿ ಉದಯಾದಿತ್ಯನು ಗೂಢ ವಾದ ಈ ವರ್ಣನೆಯಲ್ಲಿ ಚಿತ್ರಿಸಿಕೊಂಡಿದ್ದಾನೆ. ತಾನು ಈಶ್ವರಸಮರೂಪನೆಂಬುದು ಕವಿಯಭಾವ. ಆಕಾರಣ'ಆವಗಂ'ಉದೆಗನ ರೂಪಂ ಭಾವಿಸುವೊಡೆ, ತನ್ಮಯಂ ಜಗವೆಲ್ಲಂ ಎಂದಿದ್ದಾನೆ. ಉದಯಾದಿತ್ಯನ 'ಎನಗಾವಂ ತಲೆದೋರ್ಪ'ನೆಂಬ ಪದ್ಯದಲ್ಲಿನ 'ಸೊಗಯಿಪೆನ್ನಾಕಾರಮಂ'ಎಂಬ ಸಮಾಸೋಕ್ತಿಯಲ್ಲಿ ಸಾಮಾನ್ಯಾರ್ಥ. ವಿಶೇಷಾರ್ಥಗಳೆರಡಿವೆ. 'ಸೊಗಯಿಪ + ಎನ್ನಾಕಾರ' ಎಂಬ ಈ ಪದವಿಭಾಗ ಕ್ರಮದಿಂದ 'ಸೊಗಯಿಸುವ ನನ್ನ ದೇಹದ ಆಕೃತಿ' ಎಂಬ ಸಾಮಾನ್ಯ ಅರ್ಥದ ಜೊತೆಗೆ ಅದರ ವಿಶೇ ಷಾರ್ಥವೂ ಇಲ್ಲಿ ಸಂಗತವಾಗಿದೆ. 'ಸೊಗಯಿಪ + ಪೆನ್ನಾಕಾರ' ಈ ಪದಚ್ಛೇದವನ್ನುಳ್ಳ ಸಮಾಸೋಕ್ತಿಗೆ'ಸೊಗಯಿಸುವಪೆನ್ನೆನಾ ಡಪ್ರಭುತ್ವ, ಆಳ್ತನ' ಎಂಬ ಗೂಢಾರ್ಥವೂ ಸ್ವಸಂಗತಿಗೆ ಸಂಬಂಧಿಸಿದಂತೆ ಇರುವುದನ್ನು ಕಾಣಬಹುದು. ಈ ಸಮಾಸೋಕ್ತಿಯ ವಿಶೇಷಾರ್ಥವನ್ನೇ ಗುಮ್ಮಟಾರ್ಯನು ಸ್ವೀಕರಿಸಿರುವುದನ್ನಿಲ್ಲಿ ಕಾಣಬಹುದು, ಗುರುತಿಸಬಹುದು.

ಅತಿರಾಗೋದ್ರೇಕದಿಂಮೆಯ್ಯಱಿಯದೆ ತನುಗೆತ್ತಿಚ್ಚೆಯೆಂತೋಱಿ ವಾಚಾ।
ಳತೆಯಿಂದಂದಂದವಂದಂಗಿಡಲೆನಗರಿದೇನೆಂದು ಗರ್ವೋಕ್ತಿಯಿಂ ಸಂ
ಸೃತಿಯೊಳ್ಕೊಡಿರ್ದು ರಾಜ್ಯಂಬಡೆದವೊಲಿರರಾರ್ ಪೊಂಗಿಪೊಂಗುತ್ತಮಿರ್ಪ ।
ಜ್ಞಾತೆ ಕಷ್ಟಂ ವೀತರಾದಂಗೆಱಗುವೆನಿದಱಿಂ ಯೋಗಿಗರ್ಧೇಂದುಮೌಳೀ ೫೩-೫೫

ಔಚಿತ್ಯ ಪೂರ್ಣವಾದ ಈ ಪದ್ಯವು 'ಎನಗಾವಂ ತಲೆದೋರ್ಪ ನೀ ಸೊಗಯಿಪೆನ್ನಾಕಾರಮಂ' ಇತ್ಯಾದಿ ಪದ್ಯದ ಅನುವಾದವೋ ಎಂಬಂತಿದೆ. ಇಲ್ಲಿಯ 'ಪೆನ್ನಾಕಾರ' ವೇ ಸ್ವೀಕೃತ ಪದವಾಗಿ 'ರಾಜ್ಯಂ' ಎಂಬ ಅರ್ಥವನ್ನು ಅದು ಪಡೆದಿರುವು ದಕ್ಕೆ ನಿರ್ದಿಷ್ಟವಾದ ಬೇರೆ ಉದಾಹರಣೆ ಬೇಕಿಲ್ಲ, ಉದಯಾದಿತ್ಯನು ಸೂಚಿಸಿದ ವಿಶೇಷಾರ್ಥವನ್ನೇ ಗುಮ್ಮಟಾರ್ಯನೂ ಸ್ವೀಕ ರಿಸಿರುವನು. ಆತನ ಈ ಸಮಾಸೋಕ್ತಿಯ ಅರ್ಥವಿವರಣೆಯಿಂದ ಉದಯಾದಿತ್ಯನೇ ಚಂದ್ರಚೂಡಾಮಣಿ ಶತಕದ ಪೆನ್ನನಾಡ ರಾಜ್ಯಭಾರ–ಪೆನ್ನಾಕಾರ–ವಹಿಸಿದ ಪ್ರಭುವೆಂಬುದು ನಿರ್ಣಾಯಕವಾಗಿ ಸ್ಪಷ್ಟಪಡುತ್ತದೆ. ಚಂದ್ರಚೂಡಾಮಣಿ ಶತಕದ ಕರ್ತೃ ಉದಯಾದಿತ್ಯನು ಶಿವಭಕ್ತನಾಗಿ ಶಿವನನ್ನು ಮೊರೆಹೊಕ್ಕವನು ತಾನು ಎಂಬುದನ್ನು ತಿಳಿಸಿರುವನು.

ಗುರುವಂತಂದೆಯುಮಾಪ್ತನುಂ ಜನನಿಯುಂಮತ್ಸ್ವಾಮಿಯುಂ ದೈವಮುಂ।ಪರ ನೀನೆಂದೆರಡಿಲ್ಲದಾಂ ಬಗೆವುತಿರ್ದೆಂ ತೊತ್ತುವೊಕ್ಕೆಂ ಮಹೇ
ಶ್ವರ ನೀಂ ರಕ್ಷಿಪುದೆನ್ನನಾಶ್ರಿತಜನಪ್ರಾಕಾರನೆಂಬೊಂದು ನಾ। ಣ್ಣೆರುದಂತೋಱನಗಾಶ್ರಿತಂಗೆ ದಯೆಯಿಂಶ್ರೀಚಂದ್ರಚೂಡಾಮಣಿ ೯೩

ಅನ್ಯಧರ್ಮದಿಂದ ತಾನು ಬಂದವನೆಂಬುದನ್ನು ಈ ಪದ್ಯ ತಿಳಿಸಿಕೊಡುತ್ತದೆ. ಭವಾವಳಿಯ ಜನ್ಮಸಾಗರದಿಂದ ತನ್ನನ್ನು ಹೊರಗೆ ಹಾಕೆಂದು ಕೋರುವ ಆತನು ತನ್ನನ್ನು 'ಇಂದು ಶೇಖರ' । 'ಇಂದುಶೇಖರ'ನೆಂದು ಕರೆದುಕೊಂಡಿರುವುದನ್ನು ನೋಡಿ ದರೆ ಆತನ ನೂತನ ಮತದ ಸ್ವೀಕಾರದ ಸೂಚನೆಯೋ ಎನ್ನುವಂತೆ ಈ ಹೊಸ ನಾಮಕರಣವಾಗಿದೆ :–

ನೆರವಿಲ್ಲೆಯ್ದಿಪರಿಲ್ಲ ಕಾವವರುಮಿಲ್ಲಾರುಂ ಭವಾರಾತಿಗಂ। ನೆರಮಾಗಲ್ಬುದಿಗೆಯ್ದಿಸಲ್ಕೆಱಿಯೆ ತಾಂ ಸಾಮರ್ಥ್ಯರಿಲ್ಲಿಂದುಶೇ।
ಖರನೆಂದಾಂ ಶರಣಾರ್ಥಿಯಾಗಿ ಮಱಿಯಂಪೊಕ್ಕಂ ದಿಟಂ ಜನ್ಮಸಾ।ಗರದಿಂದಂ ಪೊಱಗಿಕ್ಕುನೀಂ ಕರುಣದಿಂ ಶ್ರೀಚಂದ್ರಚೂಡಾಮಣೀ ೬೦

'ಇಂದುಶೇಖರ' ಇಲ್ಲವೆ ಚೂಡಮಣಿಯಾಗಿ ಉದಯಾದಿತ್ಯನು ಹೇಳಿದ ಜ್ಞಾನಸಾರವೆ 'ಶ್ರೀ ಚಂದ್ರಚೂಡಾಮಣಿಯ ಶತಕ' ಇಲ್ಲವೆ 'ಚೂಡಾಮಣಿ ಶತಕ'. ಈ ಶತಕೋಕ್ತ ಪೆನ್ನಾಕಾರ–ಪೆನ್ನರಾಜ್ಯದ ಪ್ರಭುತ್ವವನ್ನು ಮಾಡುತ್ತಿದ್ದ ಉದಯಾದಿತ್ಯನೂ, ತಾಡಪತ್ರಿಯ (ಕ್ರಿ.ಶ. ೧೧೯೯) ಶಾಸನೋಕ್ತ ಪೆನ್ನಪರಿನಾಡ ಪ್ರಭು ಉದಯಾದಿತ್ಯನೂ ಒಬ್ಬನೇ ಎಂದು ಭಾವಿಸಬಹುದು. 'ಕ್ಷತ್ರಿಯ ಪವಿತ್ರ, ಭುವನತ್ರಿಣೇತ್ರನೌದುಂಬರಾಭರಣಂ ಪಾಂಡ್ಯಗಜಕೇಸರಿ ಕಲುಕಡೆ ಪುರಾಧೀಶ್ವರಂ ಅಷ್ಟಮಹಾಸಿದ್ಧಿ ಸಿದ್ಧ ಪಟದೇವ ದಿವ್ಯ ಶ್ರೀಪಾದಪದ್ಮಾರಾಧಕ ಪರಬಲಸಾಧಕ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀ ಮಹ್ಮಾಮಂಡಳೇಶ್ವರಂ ತ್ರೈಲೋಕ್ಯಮಲ್ಲ ಭುಜಬಳವೀರನಾರಾಯಣ ಪ್ರತಾಪಕುಮಾರ'ನಾದ 'ಉದಯಾದಿತ್ಯದೇವ ಮಹಾರಾಜ'ನ ವಂಶಾವಳಿ ಹೀಗಿದೆ: ಸೋಮವಂಶಾನ್ವಯಜನಿತ ಅತ್ಯರಸ, ಆತನ ಮಗ ಆಹವಮಲ್ಲದೇವ–ಆತನ ಮಹಾದೇವಿ ಬಾಗಲದೇವಿ, ಅವರ ಪ್ರಿಯಸುತ ಕಲಿಗಂಗರಾಜ–ಆತನ ರಮಣಿ, ಅಂಗವೆಸಕಂಚಿತ್ತ ಮಹಾದೇವಿ. ಅವರ ಪ್ರಿಯಸುತ ಸೋಮಿದೇವ–ಆ ನೃಪ ಕಾಂತೆ ಕಂಚಲದೇವಿ, ಅವರ ಪ್ರಿಯಕುಮಾರನೆ ಉದಯಾದಿತ್ಯ. ಆ ಅಪ್ರತಿಹತೋದಗ್ರಪ್ರತಾಪೋದಯನಾದರೋ–

ಸ್ಮರನಂ ರೂಪಿನೊಳಿಂದ್ರನಂ ವಿಭವದೊಳ್ ಕಾನೀನನಂ ದಾನದೊಳ್। ಹರಿಯಂ ವಿಕ್ರಮಶಕ್ತಿಯೊಳ್ ಯಮಜನಂ ಸತ್ಯೋಕ್ತಿಯೊಳ್ ಶೀಪ್ರಭಾ
ಸ್ಕರನಂ ತೇಜದೊಳಂಬುಜಪ್ರಭವನಂ ಚಾತುರ್ಯದೊಳ್ ಹೇಮಭೂ। ಧರಮಂ ಧೈರ್ಯದೊಳೆಯ್ದೆ ಪೋಲ್ವನುದಯಾದಿತ್ಯೋರ್ವರಾವಲ್ಲಭಂ

ಹೀಗೆ ರಜತಗಿರಿ ರಾಜವೌಳಿಯನ್ನು ಹೋಲುವ ಕಲುಕಡೆಯ ಪುರಾಧೀಶ್ವರನಾದ ಉದಯಾದಿತ್ಯನು ಅಜೇಯನಾದ ವೈದುಂಬ ರಾಜವಂಶಕ್ಕೆ ಆಭರಣಪ್ರಾಯನಾಗಿದ್ದನು; ಅಲ್ಲದೆ ಆತನು ಜೈನಧರ್ಮದಲ್ಲಿ ಗೌರವವನ್ನುಳ್ಳವನಾಗಿದ್ದನು ಎಂಬುದೂ ಈ ಶಾಸನದಲ್ಲಿ ಸ್ಪಷ್ಟವಾಗಿದೆ. ಪ್ರಸಿದ್ಧವಾದ ಇಂಗಳೇಶ್ವರದ ಮೂಲ ಸಂಘದೊಳಗಣ ದೇಸಿಗಣದ, ಕೊಡಕುಂದಾನ್ವಯ

ಪುಸ್ತಕಗಚ್ಛದ ಯತೀಶ್ವರರಲ್ಲಿ ಅಕಳಂಕಚರಿತರೂ, ಅರ್ಹತ್ಸಕಳಾಗಮವೇದಿಗಳೂ ಆದ ಬಾಹುಬಲಿಯತೀಂದ್ರರು, ಅವರ ಶಿಷ್ಯ ಭಾನುಕೀರ್ತಿ ಭಟ್ಟಾರಕರು, ಅವರ ಶಿಷ್ಯರಾದ ಮೇಘಚಂದ್ರಮುನಿ ಮುಖ್ಯರ ಪ್ರಸ್ತಾಪವನ್ನೂ ಈ ಶಾಸನದಲ್ಲಿ ಕಾಣುತ್ತೇವೆ. ಈ ಶಾಸನದ ಒಪ್ಪಿತದಲ್ಲಿ ಅಳಿದವರಿಗೆ ಗಂಗೆ, ಗಯೆ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಪಾರ್ಬರು, ಕವಿಲೆ. ಸ್ತ್ರೀ ಬಾಲರನ್ನೂ, 'ಲಿಂಗಿಯಪ್ಪವರ'ನ್ನೂ ಕೊಂದ ಪಾಪವೂ ನರಕವೂ ಬರುತ್ತದೆಯೆಂಬ ಎಚ್ಚರಿಕೆಯೂ ಈ ಶಾಸನಾಂತ್ಯದಲ್ಲಿದೆ. ಹೀಗೆ 'ಲಿಂಗಿಯಪ್ಪವರ' ಪ್ರಸ್ತಾಪವಿರುವಂಥ ಫಲಾಫಲಶ್ರುತಿಯುಳ್ಳ ಶಾಸನಗಳು ಬಹಳ ವಿರಳವೆಂದೇ* ತಿಳಿಸಿದರೂ ತಪ್ಪಾಗಲಾರದು ಎಂಬ ದೃಷ್ಟಿಯಿಂದ ಆಂಧ್ರದೇಶದ ದಕ್ಷಿಣಕ್ಕೆ ಸೇರಿದ ಪೆಸ್ನಪರಿನಾಡ ರಾಜಾಶ್ರಯವಾದ ತಾಟಿಪಾರಪುರದ ಈ ಶಾಸನವು ಅಪೂರ್ವವೂ ವಿಶಿಷ್ಟವೂ ಆದ ಶಾಸನ. ಇದರ ಕರ್ತನಾದ ಉದಯಾದಿತ್ಯನೃಪನ 'ಒಡಲಿಂಗಿಯಪ್ಪ'ಲಕ್ಷಣದ ದ್ಯೋತಕವಾಗಿಯೂ, ಆ ದೇಶಕಾಲಗಳ ಪರಿಸ್ಥಿತಿಯಲ್ಲಿ ಲಿಂಗವಂತ ಸಮಾಜಕ್ಕೆ ಪೆನ್ನನಾಡಪ್ರಭುತ್ವವು ತೋರಿದ ಗೌರವಕ್ಕೆ ಹಿಡಿದ ಕನ್ನಡಿಯಾಗಿಯೂ ಈ ಕನ್ನಡ ಶಾಸನದಲ್ಲಿ 'ಲಿಂಗಿಯಪ್ಪವರ' ಈ ಪ್ರಸ್ತಾಪವಿದೆ. ಆ ಕಾರಣ ಈ ಶಾಸನೋಲ್ಲೇಖವು ಚಾರಿತ್ರಕ ಸತ್ಯದ ದಾಖಲೆ ಎನ್ನಬಹುದು. ಜೈನಬಸದಿಯೊಂದರ ಜೀರ್ಣೋದ್ಧಾರ, ದೇವರಷ್ಟವಿಧಾರ್ಚನೆ ಹಾಗೂ ಆಹಾರದಾನಕ್ಕಾಗಿ ಮೇಘಚಂದ್ರದೇವರ ಕಾಲಂ ಕರ್ಚಿ ಕೊಟ್ಟ ಈ ಶಾಸನದಲ್ಲಿ ಉದಯಾದಿತ್ಯನ ಮಹಾಪ್ರಧಾನನೂ, ಬಾಹತ್ತರ ನಿಯೋಗಾಧಿಪತಿಯೂ, ಬೀಡಿನ ರಕ್ಷಾಪಾಳಕನೂ, 'ಉದಯಾದಿತ್ಯದೇವರಾಜ್ಯಸಮುದ್ಧರಣ'ನೂ ಆದ ಚಿದೆಪನಾಯಕನೆಂಬ ಒಬ್ಬ ಮಹಾಮಂತ್ರಜ್ಞನ ಹೆಸರೂ ಉಲ್ಲೇಖವಾಗಿರುವುದರಿಂದ ಉದಯಾದಿತ್ಯನು ತನ್ನದೇ ಆದ ಸ್ವತಂತ್ರರಾಜ್ಯಸ್ಥಾಪನೆಯಲ್ಲಿ ತೊಡಗಿದ್ದ ಕಾಲದ ಶಾಸನವಿದು ಎಂದು ಊಹಿಸಬಹುದಾಗಿದೆ.

ಕವಿಯ ಜೀವನ ಸಂಗತಿಯ ಹೆಚ್ಚಿನ ನಿರೂಪಣೆಗೆ ಸದ್ಯಕ್ಕೆ ಇಲ್ಲಿ ತೊಡಗದೆ ಶತಕೋಕ್ತ 'ಒಡಲಿಂಗಿಯಪ್ಪ' ಪೆನ್ನಾಕಾರವನ್ನುಳ್ಳ ಉದಯಾದಿತ್ಯನೂ ಶಾಸನೋಕ್ತ 'ಲಿಂಗಿಯಪ್ಪವರ'ನ್ನು ಪೂಜ್ಯಭಾವದಿಂದ ಕಾಣುವ ಪೆನ್ನಪರಿನಾಡ ಉದಯಾದಿತ್ಯನೂ ಒಬ್ಬನೇ ಎಂದೂ ಬಿಡುವ ಮುರಿದ ಆಂಧ್ರಕನ್ನಡದ ವೈಶಿಷ್ಟ್ಯವನ್ನುಳ್ಳ ಚಂದ್ರಚೂಡಾಮಣಿ ಶತಕದ ಕರ್ತೃ ಆತನೇ ಹೊರತು ಮತ್ತಾವನೂ ಅಲ್ಲವೆಂದು ಹೇಳಿ ಕವಿವಿಷಯಕವಾಗಿ ಕವಿಚರಿತೆಕಾರರು ಮಾಡಿದ ಪ್ರಮಾದಾತ್ಮಕವಾದ ಊಹೆಗೆ ಇತಿಶ್ರೀಯನ್ನು ಹಾಡಿ ತತ್ಸಂಬಂಧವಾದ ಈ ಪ್ರಸ್ತಾಪವನ್ನಿಲ್ಲಿಗೆ ಮುಕ್ತಾಯಗೊಳಿಸಬಹುದೆಂದು ಭಾವಿಸಲಾಗಿದೆ.

# ವೀರಶೈವ ಶತಕಸಾಹಿತ್ಯ

— ಸಿ. ಬಸಪ್ಪ

ಕನ್ನಡದಲ್ಲಿ ಶತಕಸಾಹಿತ್ಯ ವಿಪುಲವಾಗಿ ಬೆಳೆದಿದೆ. ಬೇರೆ ಯಾವ ಸಾಹಿತ್ಯಪ್ರಕಾರವೂ ಸಂಖ್ಯಾಬಾಹುಳ್ಯದಲ್ಲಿ ಶತಕವನ್ನು ಮೀರಲಾರದು. ಶತಕಗಳನ್ನು ಅಭ್ಯಾಸ ಮಾಡುತ್ತಾ ಹೋದಹಾಗೆಲ್ಲಾ ಒಂದು ಅಂಶವು ನಮಗೆ ಸ್ಪಷ್ಟವಾಗುತ್ತದೆ. ಎಲ್ಲ ಶತಕಗಳು ಭಕ್ತಿ, ಜ್ಞಾನ, ವೈರಾಗ್ಯ. ಶೃಂಗಾರ, ನೀತಿ–ಮೊದಲಾದ ಗೊತ್ತಾದ ವಿಷಯ ನಿರೂಪಣೆ ಮಾಡುವುದರಿಂದ ಇವುಗಳನ್ನು ಭಾವಗೀತೆಗಳ ಗುಂಪಿಗೆ ಸೇರಿಸುವುದು ಸೂಕ್ತವೆನಿಸುತ್ತದೆ. ಭಾವಗೀತೆಗಳಲ್ಲಿ ಒಂದು ಗೊತ್ತಾದ ಭಾವ ಆದಕ್ಕೆ ಪೂರಕವಾದ ಅಂಶಗಳು ನಿರೂಪಿತವಾಗಿರುವುದು ಕಂಡು ಬರುತ್ತದೆ. ಹಾಗೆಯೇ ಶತಕಸಾಹಿತ್ಯದಲ್ಲಿಯೂ ಕೂಡಾ ವಸ್ತುವಿನ ನಾನಾಮುಖ ನಿರೂಪಣೆಯು ಭಕ್ತಿಯಾಗಲಿ, ಜ್ಞಾನವಾಗಲಿ, ವೈರಾಗ್ಯವಾಗಲಿ ಕಂಡುಬರುತ್ತದೆ ಎಂದರೆ ಯಾವುದೇ ಒಂದು ಭಾವ ಶತಕದಲ್ಲಿ ಆದಿಯಿಂದ ಅಂತ್ಯದವರೆವಿಗೆ ಹರಿದು ಬರುವುದು ಪ್ರಧಾನವಾದದ್ದು. ಹಾಗಾಗಿ ಶತಕಸಾಹಿತ್ಯ ಉಳಿದ ಇತರ ಸಾಹಿತ್ಯ ಪ್ರಕಾರಗಳಿಗಿಂತ ಭಿನ್ನವಾದುದೆಂದು ಹೇಳಲು ಅಡ್ಡಿಯಿಲ್ಲ. ಯಾವುದೇ ಒಂದು ಶತಕದಲ್ಲಿ ನೂರಾರು ಪ್ರತ್ಯೇಕವಾದ ಮುಕ್ತಕಗಳು ಉಕ್ತವಾಗಿದ್ದರೂ ಈ ಎಲ್ಲ ಮುಕ್ತಕಗಳು ಶತಕದ ಪ್ರಧಾನ ಭಾವವನ್ನು ಪುಷ್ಟಿಗೊಳಿಸುವ ಸಲುವಾಗಿಯೇ ನಿರೂಪಿತವಾದವುಗಳು. ಆದ್ದರಿಂದ ಶತಕಗಳಲ್ಲಿ ಭಾವಗೀತೆಗಳನ್ನು ಕಾಣಬಹುದು. ಶತಕವನ್ನು ಇಡಿಯಾಗಿ ನೋಡಿದರೂಭಾವಗೀತೆ, ಬಿಡಿಯಾಗಿ ನೋಡಿದರೂ ಭಾವಗೀತೆಯೇ.

ಶತಕ ಎಂದರೆ ನೂರು. ಇದರ ಅರ್ಥವು ವಿಸ್ತಾರವಾಗಿ ನೂರು ಪದ್ಯಗಳ ಕೃತಿಗೆ ಶತಕವೆಂಬ ಅರ್ಥವು ವಿಸ್ತಾರವಾಗಿ ನೂರು ಪದ್ಯಗಳ ಕೃತಿಗೆ ಶತಕವೆಂಬ ಅರ್ಥವು ಕ್ರಮೇಣ ಬಂದಿರುವುದು ವಿದಿತವಾಗುತ್ತದೆ. ನೂರು ಪದ್ಯಗಳ ಗೊಂಚಲಿಗೆ ಶತಕ ಎಂದು ಯಾವಾಗ ನಾಮಕರಣವಾಯಿತೋ ತಿಳಿಯದು. ಪ್ರತಿಯೊಂದು ಪದ್ಯವೂ ಸ್ವಯಂ ಪೂರ್ಣವಾದುದು. ಈ ರೀತಿ ಸ್ವಯಂಪೂರ್ಣವಾಗಿ ಒಂದು ವಿಷಯವನ್ನು ನಿರೂಪಿಸಬಲ್ಲ ಈ ಪದ್ಯಗಳನ್ನು ಮುಕ್ತಕಗಳು ಎಂದು ಕರೆಯಬಹುದು. ಇಂತಹ ಪದ್ಯಗಳನ್ನು ಒಂದು ಕಡೆ ನೂರರವರೆವಿಗೆ ಸಂಗ್ರಹಿಸಿ ಶತಕ ಎಂದು ಹೆಸರಿಸಿದಂತೆ ಕಂಡುಬರುತ್ತದೆ. ಕೆಲವು ಸಂದರ್ಭ

* ನೋಡಿ; E.C. VII ಶಿಕಾರಿಪುರ ಶಾಸನ ೯೪, ಕ್ರಿ.ಶ. ೧೦೯೪,

ಗಳಲ್ಲಿ ಶತಕಗಳಲ್ಲಿ ನೂರಕ್ಕಿಂತಲೂ ಹೆಚ್ಚು ಪದ್ಯಗಳನ್ನು ಕಾಣಬಹುದು ಇದಕ್ಕೆ ಕಾರಣವಿಲ್ಲದಿಲ್ಲ. ಶತಕದ ಕರ್ತೃ ತಾನು ಹೇಳಬೇಕಾದ ವಿಷಯವನ್ನು ನೂರುಪದ್ಯಗಳಲ್ಲಿ ಹೇಳಿ ಅಲ್ಲಿಗೆ ಮುಗಿಸದೆ, ಶತಕವನ್ನು ಪ್ರಾರಂಭಮಾಡುವಾಗ ಕೆಲವು ಮಂಗಳಾಚರಣೆಯ ಪದ್ಯಗಳನ್ನು ಮತ್ತು ಶತಕವನ್ನು ಮುಕ್ತಾಯ ಮಾಡುವಾಗ ಸ್ವವಿಷಯಕವಾದ ಕೆಲವು ಪದ್ಯಗಳನ್ನು ರಚಿಸಿರುವುದುಂಟು, ಹೀಗಾಗಿ ಶತಕದ ಒಟ್ಟು ಪದ್ಯ ಸಂಖ್ಯೆಯು ನೂರರಿಂದ ನೂರನಲವತ್ತುನಾಲ್ಕರವರೆವಿಗೆ ವಿಸ್ತಾರವಾಗಿರುವುದು ಗಮನಾರ್ಹ.

ಶತಕಗಳನ್ನು ರಚಿಸುವವರು ನೂರು ಪದ್ಯಗಳನ್ನೇ ಮಾನಮಿತಿಯಾಗಿ ಏಕೆ ಇಟ್ಟುಕೊಂಡರು ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಸಂಸ್ಕೃತ ಶತಕಸಾಹಿತ್ಯದಲ್ಲಿಯೂ ಕೂಡ ಶತಕಗಳ ಪದ್ಯಸಂಖ್ಯಾ ಮಿತಿ ನೂರು. ಇದನ್ನು ಕಂಡಾಗ ಮಾನವ ಜೀವನದಲ್ಲಿ ನೂರರ ಸಂಖ್ಯೆಗೆ ಯಾವುದೋ ಒಂದು ಮಹತ್ವ ಇದ್ದಂತೆ ಕಂಡುಬರುತ್ತದೆ. ಹಿರಿಯರು ಕಿರಿಯರಿಗೆ ಆಶೀರ್ವಾದ ಮಾಡುವಾಗಲೂ 'ನೂರು ವರ್ಷ ಬಾಳಿ'ಎಂದು ಹೇಳುವುದು ರೂಢಿಯಾಗಿದೆ. ಬಾಳು ನೂರು ವರ್ಷಗಳಲ್ಲಿ ಸಾರ್ಥಕತೆಯನ್ನು ಕಂಡುಕೊಳ್ಳುವುದೆಂಬ ನಂಬಿಕೆಯೇ ಇದಕ್ಕೆ ಕಾರಣವಾಗಿರಬಹುದು. ಶತಕಗಳ ಸಂಖ್ಯಾನಿರ್ಬಂಧವೂ ಕೂಡ ಇದಕ್ಕೆ ಸಂಸ್ಕೃತದ ಸ್ತೋತ್ರ, ಮಂತ್ರ ಮುಂತಾದವುಗಳ ಪ್ರೇರಣೆಯಿಂದ ಬಂದಿರಲುಸಾಕು. ಒಂದು ಮಂತ್ರವನ್ನು ಅಥವಾ ಒಂದು ಸ್ತೋತ್ರವನ್ನು ಇಂತಿಷ್ಟು ಬಾರಿ ಜಪಿಸುವುದರಿಂದ ಉಂಟಾಗುವ ಪ್ರಯೋಜನವು ಅಧಿಕವಾಗುವ ನಂಬಿಕೆ ಇದ್ದುದರಿಂದ ಶತಕಗಳಲ್ಲಿ ಸಂಖ್ಯಾ ಪ್ರವೇಶ ಉಂಟಾಗಿರಬಹುದು. ನೂರೆಂಟು ಪ್ರದಕ್ಷಿಣೆ, ನೂರೆಂಟು ಸೂರ್ಯನಮಸ್ಕಾರ, ನೂರೆಂಟು ರೂಪಾಯಿಗಳ ಕಾಣಿಕೆ ಮೊದಲಾದವುಗಳ ಸಾಮ್ಯರೂಪವಾಗಿ ನೂರೆಂಟು ಪದ್ಯಗಳ ಸಂಗ್ರಹವೊಂದು ಶತಕವೆಂದು ಹೆಸರುಗೊಂಡಿರುವುದು ಕಂಡುಬರುತ್ತದೆ. ಜಪಸರದಲ್ಲಿ ನೂರೆಂಟು ಮಣಿಗಳು ಇರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಈ ಬಗ್ಗೆ ಭಿನ್ನಾಭಿಪ್ರಾಯವಿದ್ದೇ ಇದೆ.

ಶತಕವು ವಸ್ತುನಿಷ್ಠವಾದುದಲ್ಲ ; ಆತ್ಮನಿಷ್ಠವಾದುದು. ಕವಿಯ ಬಿಡಿಬಿಡಿಯಾದ ಪದ್ಯಗಳಲ್ಲಿ ತನ್ನ ಮನಸ್ಸಿನ ಅಭಿಪ್ರಾಯಗಳನ್ನು ನಿರೂಪಿಸಿ ಶತಕವೆಂಬ ಚೌಕಟ್ಟಿನಲ್ಲಿ ಇಟ್ಟಿರುತ್ತಾನೆ. ಸ್ವಸಂಪೂರ್ಣಭಾವಗಳಿಂದೊಡಗೂಡಿದ ಆತ್ಮಾನುಭಾವದ ಅಭಿವ್ಯಕ್ತಿಯೇ ಶತಕದ ವೈಶಿಷ್ಟ್ಯ. ಶತಕಗಳು ಪುರಾಣಗಳಂತೆ ವಸ್ತುಪ್ರಾಧಾನ್ಯತೆಯನ್ನು ಹೊಂದಿರುವುದಿಲ್ಲ. ಅತಿಯಾದ ವರ್ಣನೆಗಳೂ ಕಂಡುಬರುವುದಿಲ್ಲ. ಕಾವ್ಯಗಳಂತೆ ದೀರ್ಘವಾದ ವಸ್ತುವಿನ್ಯಾಸ ಇವುಗಳಲ್ಲಿಲ್ಲ. ಹೃದಯಾಂತರಾಳದಿಂದ ನೇರವಾಗಿ ಹೊರಟು ಓದುಗರ ಹೃದಯವನ್ನು ಮುಟ್ಟುವ ಮುಕ್ತಕಗಳು ಇವು. ಈ ಮೇಲಿನ ಮಾತುಗಳಿಗೆ ಅಪವಾದವೋ ಎಂಬಂತೆ ಶಿವರಾತ್ರಿ ಮಹಿಮೆಯನ್ನು ಕಥಾರೂಪದಲ್ಲಿ ನಿರೂಪಿಸುವ ವೇದಮೂರ್ತಿ ಅಪರೋಕ್ಷಾನುಭವಿ ಸಕ್ರಪ್ಪ ಸ್ವಾಮಿಗಳ 'ಶ್ರೀಮಹಾ ಶಿವರಾತ್ರಿ ಮಾಹಾತ್ಮ್ಯ ಕಥಾಶತಕ' ಇವರದೇ ಆದ ಶ್ರೀ ತಿಪ್ಪೇಶನ ಚರಿತ್ರಾ ಲಾವಣಿ ಶತಕ' ಮೊದಲಾದವು ಕಂಡುಬರುತ್ತವೆ.

ಒಂದೆರಡು ಶತಕಗಳನ್ನು ಬಿಟ್ಟರೆ ಉಳಿದ ಶತಕಗಳ ವಸ್ತು, ಭಕ್ತಿ, ಜ್ಞಾನ, ವೈರಾಗ್ಯನಿಷ್ಟವಾದುದೆಂದು ಮುಂಚೆಯೇ ಹೇಳಿದೆ. ಲೌಕಿಕವಾದ ಪ್ರಯೋಜನಗಳಿಗೆ ಇಲ್ಲಿ ಎಡೆಯಿಲ್ಲ. ಮುಕ್ತಿ ಸಾಧನೆಗೆ ಆಧಾರವಾದ ಪರಮಾತ್ಮನ ಸ್ತುತಿ ಇವುಗಳ ಉದ್ದೇಶ. ಕನ್ನಡ ಶತಕ ಸಾಹಿತ್ಯಕ್ಕೆಲ್ಲಾ ಈ ಮಾತು ಅನ್ವಯಿಸುತ್ತದೆ. ಭಕ್ತಿರಸದ ಆವೇಶದಿಂದ ಮೂಡಿಬಂದ ಮುಕ್ತಕಗಳೇ ಶತಕಗಳ ಅವಯವಗಳು. ಮಾನವನು ಆತ್ಮಜ್ಞಾನವನ್ನರಿಯದೆ ಕೇವಲ ಲೌಕಿಕ ವ್ಯವಹಾರಗಳಲ್ಲಿ ನಿರತನಾಗಿರುವಾಗ ದೈವದ ಕಡೆಗೆ ಅವನನ್ನು ತಿರುಗಿಸಿ ಆತ್ಮೋನ್ನತಿಯನ್ನುಂಟುಮಾಡಿ ಮುಮುಕ್ಷುವನ್ನಾಗಿಸಿ ಜೀವನದ ಪರಮೋದ್ದೇಶವಾದ ಮೋಕ್ಷವನ್ನು ಗಳಿಸಿಕೊಡುವುದೇ ಶತಕಗಳ ಗುರಿ. ಲೌಕಿಕ ಪ್ರಯೋಜನಗಳಿಗಾಗಿ ಮಾನವರನ್ನು ಬೇಡುವುದುಸರಿಯಲ್ಲ. ನಮಗೆ ಎಲ್ಲ ಇಷ್ಟಾರ್ಥಗಳನ್ನು ಕರುಣಿಸುವ ಭಗವಂತನಿರುವಾಗ ಮಾನವರನ್ನೇಕೆ ಪೂಜಿಸಬೇಕು ? ಈ ಸಂದರ್ಭದಲ್ಲಿ ಹರಿಹರ ಕವಿಯ ಪಂಪಾಪಶತಕದ ಮಾತುಗಳನ್ನು ನೋಡಬಹುದು.

> 'ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲಿಯುಕ್ಕಟಾ । ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದುಮೇಣ್
> ಅನುವರತಂ ಪೊಗಳ್ದುಕೆಡಬೇಡಲೆ ಮಾನವ ನೀನಹರ್ನಿಶಂ । ನೆನೆಪೊಗಳರ್ಚಿಸೆಮ್ಮ ಕಡು ನೋಂಪಿನ ಪೆಂಪಿನ ಹಂಪೆಯಾಳ್ದನಂ ॥೮೨॥

ನರರ ಸೇವೆ ಮಾಡುತ್ತ ಜೀಯ,ಹಸಾದ ಎಂದು ಹೇಳುವುದು ಹೊಲ್ಲ. ಶರೀರಗಳು ತೃಣದ ಹಾವೆಗಳು,ಮಣ್ಣ ಬೊಂಬೆಗಳು ಆದ್ದರಿಂದ ಅವರನ್ನು ಓಲಗಿಸದೆ ಮಹಾನಿಧಿಯಾದ ಮಹೇಶನನ್ನು ಪೂಜಿಸುವಂತೆ ಹರಿಹರ ಕರೆ ಕೊಡುತ್ತಾನೆ. ಮಾನವರು ಕೊಡುವುದರಿಂದ ತೃಪ್ತಿಯಾಗಲಾರದು. ಬೇಡಿದರೆ ಭಗವಂತನನ್ನು ಬೇಡಬೇಕು. ಸೇವಿಸಿದರೆ ನಿತ್ಯನಾದ ಶಿವನನ್ನು ಸೇವಿಸಬೇಕು.

ಕನ್ನಡದಲ್ಲಿ ರಚಿತವಾಗಿರುವ ಶತಕ ಸಾಹಿತ್ಯದಲ್ಲಿ ಸುಮಾರು ಮೂರನೆಯ ಎರಡು ಭಾಗ ವೀರಶೈವ ಕವಿಗಳಿಂದ ರಚಿತವಾಗಿದೆ. ಶತಕಗಳ ರಚನೆಯಲ್ಲಿ ಆದಿಕವಿಯಾದ ಹರಿಹರನು ಉಳಿದೆಲ್ಲ ವೀರಶೈವ ಶತಕಕಾರರಿಗೆ ಸ್ಫೂರ್ತಿಯನ್ನು ನೀಡಿರುವುದು ಕಂಡುಬರುತ್ತದೆ. ಕಥಾಕಾವ್ಯವನ್ನು ರಚಿಸುವಾಗ ಕವಿಯು ಕೆಲವು ನಿರ್ಬಂಧಗಳಿಗೆ ಒಳಗಾಗಿರುತ್ತಾನೆ. ಆದರೆ ಶತಕಗಳ ರಚನೆಯಲ್ಲಿ ಅಂತಹ ನಿರ್ಬಂಧವೇನೂ ಇಲ್ಲ. ಭಕ್ತಿ, ಜ್ಞಾನ ಮತ್ತು ವೈರಾಗ್ಯ ಇವುಗಳನ್ನು ನಿರೂಪಿಸುವಾಗ ಕವಿಯು ಈ ಸಂವೇದ

ನೆಗಳಿಂದ ಹೊರತಾಗಿ ಸೃಷ್ಟಿಕಾರ್ಯದಲ್ಲಿ ತೊಡಗಿದವನಲ್ಲ. ಕವಿಯು ಅನುಭಾವಿಯಾಗಿ ತಾನೂ ಕಂಡುಂಡ ಅನುಭವವನ್ನು ಭಾವಪರವಶತೆಯಿಂದ ಹಾಡುತ್ತಿದ್ದನು. ಈ ಹಾಡುಗಳೇ ಶತಕಗಳಾಗಿವೆಯೆಂಬುದಕ್ಕೆ ಹರಿಹರನೇ ಸಾಕ್ಷಿ.

ಐಹಿಕ ಜೀವನಕ್ಕೆ ಈಗ ಇರುವಷ್ಟು ಮಹತ್ವ ಆಗ ಇರಲಿಲ್ಲ. ಈಗಿನಷ್ಟು ಮಾನವ ಯಾಂತ್ರಿಕವಾಗಿ ಜೀವನ ನಡೆಸುತ್ತಿರಲಿಲ್ಲ. ಐಹಿಕ ಜೀವನ ಆಧ್ಯಾತ್ಮಿಕ ಜೀವನದ ಒಂದು ಭಾಗ ಮಾತ್ರವಾಗಿತ್ತು. ಧರ್ಮಾರ್ಥಕಾಮ ಮೋಕ್ಷಗಳು ಮನುಷ್ಯನ ಪುರುಷಾರ್ಥಗಳು. ಅರ್ಥ ಮತ್ತು ಕಾಮಗಳು ಧರ್ಮಾವಲಂಬಿಯಾಗಿದ್ದು ಮೋಕ್ಷವೇ ಪರಮಾರ್ಥವಾಗಿತ್ತು. ಭಕ್ತನಾದವನಿಗೆ ಶಿವನಾಮಸಂಕೀರ್ತನೆ ಪೂಜೆ ಮೊದಲಾದವುಗಳು ನಿತ್ಯಕಾಯಕದ ಅವಿಭಾಜ್ಯ ಅಂಗಗಳಾಗಿದ್ದವು. ಹಾಗಾಗಿ ಭಾರತೀಯ ಸಾಂಸ್ಕೃತಿಕ ಹಿನ್ನೆಲೆ ಶತಕ ಸಾಹಿತ್ಯರಚನೆಯ ಬುನಾದಿಯಾಗಿ ಉಳಿಯಿತು. ಅದನ್ನು ದೃಷ್ಟಿಯಲ್ಲಿಟ್ಟುಕೊಂಡು ಅಂದಿನ ಶತಕಗಳನ್ನು ವಿಮರ್ಶೆಗೆ ಗುರಿಪಡಿಸಿದಾಗ ಶತಕಗಳು ನಮ್ಮ ಜನತೆಯ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವುದು ವೇದ್ಯವಾಗುತ್ತದೆ. ಜನತೆಯ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಯನ್ನು ಅವಗಾಹನೆಗೆ ತೆಗೆದುಕೊಂಡು ಶತಕಗಳನ್ನು ಅಭ್ಯಾಸಮಾಡುವುದು ಹೆಚ್ಚು ಪ್ರಯೋಜನಕಾರಿಯಾಗುತ್ತದೆ. ಮಾತ್ರವಲ್ಲ ಅರ್ಥಪೂರ್ಣವೂ ಆಗುತ್ತದೆ. ಈ ದಿಸೆಯಲ್ಲಿ ವೀರಶೈವ ಶತಕಸಾಹಿತ್ಯವು ಮಹತ್ತರ ಪಾತ್ರವನ್ನು ವಹಿಸಿದೆ ಮತ್ತು ವಹಿಸುತ್ತಿದೆ ಎಂದು ಹೇಳಿದರೆ ತಪ್ಪಾಗದು. ಮನುಷ್ಯನ ಓರೆ ಕೋರೆಗಳನ್ನು ತಿದ್ದಿ ಶಾಂತಿ, ಸಹನೆ, ಸಹಬಾಳ್ವೆ ಮೊದಲಾದ ಸಾರ್ವಕಾಲಿಕ ಮೌಲ್ಯಗಳ ಅರ್ಥವಂತಿಕೆಯನ್ನು ವೀರಶೈವ ಶತಕಗಳು ಅಧಿಕಗೊಳಿಸಿವೆ. ಜನತೆಯ ಜೀವನಾಡಿಯಾಗಿ ಆಧ್ಯಾತ್ಮಿಕ ಜೀವನದ ದೀಪ್ತಿಯನ್ನು ಪ್ರಸರಿಸಿ ಚಿರಂತನ ಚೇತನವನ್ನು ನೀಡುತ್ತ ಬಂದಿರುವ ಕೆಲವು ಶ್ರೇಷ್ಠ ಶತಕಗಳನ್ನು ಕುರಿತು ನಾವು ಈಗ ವಿಚಾರ ಮಾಡಬಹುದು.

**ಹರಿಹರನ ಶತಕಗಳು**

ಹರಿಹರನು ರಗಳೆಯ ಕವಿಯೆಂದು ಪ್ರಸಿದ್ಧನಾಗಿದ್ದಾನೆ. ಈತನು ರಚಿಸಿರುವ ಪಂಪಾಶತಕ ಮತ್ತು ರಕ್ಷಾಶತಕಗಳು ಶತಕಸಾಹಿತ್ಯದಲ್ಲಿಯೇ ಅತಿ ಶ್ರೇಷ್ಠಗಳಾಗಿರುತ್ತವೆ. ಎರಡು ಶತಕಗಳು ನೇರವಾಗಿ ಆತ್ಮಕಥನಗಳಾಗಿದ್ದು ಹರಿಹರನು ಹಂಪೆಯ ವಿರೂಪಾಕ್ಷನಲ್ಲಿ ತಳೆದ ಭಕ್ತಿಭಾವಗೀತೆಯಾಗಿ, ಅನುಭಾವಗೀತೆಯಾಗಿ ಹೊರಹೊಮ್ಮಿರುವುದು ಕಂಡುಬರುತ್ತದೆ. ಭಕ್ತಿ ಪ್ರಧಾನವಾದ ವಿಷಯ. ಭಕ್ತನು ಅನ್ಯರಸಹಾಯಕ್ಕಾಗಿ ಕೈಚಾಚದೆ ಶಿವನನ್ನೇ ನಂಬಿ ನಿಷ್ಠೆಯಿಂದ ಪೂಜಿಸಿದಾಗ ಎಲ್ಲವನ್ನು ಪಡೆಯುವ ಭಾಗ್ಯಮಾತ್ರವಲ್ಲ ಮೋಕ್ಷಕ್ಕೂ ಅದು ಸಾಧನವಾಗುತ್ತದೆ ಎಂದು ಹರಿಹರನ ಹೇಳಿಕೆ, ಧರ್ಮ ಮತ್ತು ಕಾವ್ಯಧರ್ಮವನ್ನು ಈ ಶತಕಗಳು ಮೈಗೂಡಿಸಿಕೊಂಡಿವೆ.

ರಕ್ಷಾಶತಕವು ೧೦೦ ವೃತ್ತಗಳಿಂದ ಕೂಡಿದ್ದು ವಿವಿಧ ಛಂದೋ ವೃತ್ತಗಳಿಂದ ರಚನೆಯಾಗಿದೆ. ಪ್ರತಿಯೊಂದು ಪದ್ಯದ ಕೊನೆಯಲ್ಲಿ 'ಪಂಪಾಪುರದರಸ ರಕ್ಷಿಪುದೆನ್ನಂ' ಎಂಬ ಅಂಕಿತವು ಬರುತ್ತದೆ. ಹೊನ್ನು, ಹೆಣ್ಣು ಮತ್ತು ಮಣ್ಣು ಇವುಗಳಲ್ಲಿ ಯಾವುದೂ ಶಾಶ್ವತವಲ್ಲ. ಭಕ್ತನು ಶಿವನನ್ನು ನಿಷ್ಠೆಯಿಂದ ಪೂಜಿಸಿ ತನ್ಮ ಖಾಂತರ ವೈರಾಗ್ಯವನ್ನು ಪಡೆದು ಮೋಕ್ಷವನ್ನು ಸಾಧಿಸಬೇಕೆಂಬುದೇ ಈ ಶತಕದ ಉದ್ದೇಶ. ದೇವನ ಕಡೆಗೆ ಮನಸ್ಸು ಸ್ವಲ್ಪ ಒಲಿದರೆ ಸಾಕು 'ಕರೆವಲ್ಲಿಂ ಮುನ್ನ ಓ ಮಗನೆ ಬಂದೆಂ ದಿಟಂ ಬಂದೆಂ'ಎಂಬ ಕಾತರತೆಯಿಂದ ಶಿವನು ಭಕ್ತನ ಬಳಿಗೆ ಧಾವಿಸಿ ಬರುತ್ತಾನೆ. ಹೀಗೆ ಬರುವ ಶಿವನನ್ನು ಬಿಟ್ಟು ಮನೆ ಮಡದಿ ಮಕ್ಕಳಿಗಾಗಿ ಪರರಾಶ್ರಯವನ್ನು ಸೇರುವುದು ಹರಿಹರನ ದೃಷ್ಟಿಯಿಂದ ಹೀನಾಯವಾದದ್ದು. ಕವಿಗೆ ಶಿವನಲ್ಲಿ ಅಚಲನಿಷ್ಠೆ ಅನನ್ಯ ಶರಣತೆ ಇರುವುದು ಈ ಕೆಳಗಿನ ಪದ್ಯಗಳಿಂದ ತಿಳಿಯುತ್ತದೆ.

'ಕರೆವಲ್ಲಿಂ ಮುನ್ನವೋ ಓ ಮಗನೆ ಮಗನೆ ಬಂದೆಂ ದಿಟಂ ಬಂದೆನೆಂದಾ। ದರ ದಿಂದಂ ನೀನೆ ಬಂದೆನ್ನ ವಯವವನಿತಂ ಮುಟ್ಟಿನೋಂದಾ ಬಳಲ್ದಾ
ಕರೆದಾ ಕಂದಾ ಎನುತ್ತುಂ ಕೃಪೆ ಮಿಗೆನಲವಿಂ ನೋಡಿ ಮುಂಡಾಡು ತೆಂದುಂ।ಶಿರದೊಳ್ ಕೈಯಿಕ್ಕಿ ಪಂಪಾಪುರವರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

॥೭೭॥

ನಿಮಗೆನ್ನಂ ಮಾಱಿಗೊಟ್ಟೆಂ ಪುರಹರ ನಿಮಗೆನ್ನಂ ಸದಾತೊಳ್ತುಗೊಟ್ಟೆಂ।ನಿಮಗೆನ್ನಂ ಸೂಱಿಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಗೊಟ್ಟೆನಾಹಾ
ನಿಮಗೆನ್ನಂ ಮಚ್ಚುಗೊಟ್ಟೆಂ ಗುರುವೆ ಘನವೆ ಸಂತೋಷದಿಂದೊಪ್ಪುಗೊಟ್ಟೆಂ। ನಿಮಗೆನ್ನಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ'

॥೭೮॥

ರಕ್ಷಾಶತಕದಲ್ಲಿ ಪ್ರಯೋಗಿಸಿರುವ ವಿವಿಧ ವೃತ್ತಗಳು ಮಾರ್ಗೀಯ ಮತ್ತು ದೇಶೀಯ ಶೈಲಿಗಳೆರಡರಲ್ಲೂ ರಚಿತವಾಗಿರುವುದು ಕಂಡುಬರುತ್ತದೆ. ಭಾವ, ಭಾಷೆ, ಪದಪ್ರಯೋಗ-ಎಲ್ಲವೂ ಹದವಾಗಿ ಮಿಳಿತವಾಗಿ ಭಕ್ತಿಭಾವಗೀತವಾಗಿದೆ.

ಪಂಪಾಶತಕವು ಹರಿಹರನ ಮತ್ತೊಂದು ಮೇರು ಕೃತಿ. ರಕ್ಷಾಶತಕದಲ್ಲಿ ಬರುವಂತೆ ಪ್ರತಿವೃತ್ತದ ಅಂತ್ಯದಲ್ಲಿ ಒಂದೇ ಅಂಕಿತವು ಪಂಪಾಶತಕದಲ್ಲಿ ಕಂಡುಬರುವುದಿಲ್ಲ. 'ಹಂಪೆಯೊಳ್ದನೆ', 'ವಿರೂಪಾಕ್ಷನೆ', 'ವಿರೂಪಾಕ್ಷಲಿಂಗ', 'ಲಲಾಟೇಕ್ಷಣಂ' ಮೊದಲಾದ ಬೇರೆ ಬೇರೆ ಅಂಕಿತಗಳನ್ನು ಕಾಣಬಹುದು. ಈ ಶತಕದಲ್ಲಿ ೧೦೩ ವೃತ್ತಗಳಿದ್ದು ವಿವಿಧ ವೃತ್ತಗಳಲ್ಲಿ ಈ ಶತಕವು

ಹರಿದುಬಂದಿದೆ. ರಕ್ಷಾಶತಕಕ್ಕಿಂತ ಪಂಪಾಶತಕದಲ್ಲಿ ಶಬ್ದಾಡಂಬರ ಹೆಚ್ಚೆಂದು ತೋರುತ್ತದೆ. ಬಹುಶಃ ಭಕ್ತಿಯ ಆವೇಶದಲ್ಲಿ ಭಾಷೆ ಸಮತೋಲನವನ್ನು ಕಳೆದುಕೊಂಡಿದೆ. ಇಲ್ಲಿಯೂ ಭಕ್ತಿಯೇ ಪ್ರಾಧಾನ್ಯ. ಭಕ್ತಿಮಾರ್ಗವೊಂದು ಕಲ್ಪವೃಕ್ಷ. ಅದರಿಂದ ಎಲ್ಲವನ್ನೂ ಪಡೆಯಲು ಸಾಧ್ಯ. ಶಿವಭಕ್ತನೇ ಕಲಿ, ಶಿವಭಕ್ತನೇ ಸುಖಿ, ಶಿವಭಕ್ತನೇ ಛಲಿ, ಶಿವಭಕ್ತನೇ ಉತ್ತಮ. ಆದ್ದರಿಂದ ಪ್ರಪಂಚದಲ್ಲಿ ಶಿವಭಕ್ತನಿಗೆ ಸಮಾನನಾದವನಿಲ್ಲ. ಜೀವನದಾದ್ಯಂತ ಸಂಗಾತಿಗಳಾಗಿ ಬರುವ ಹೆಂಡತಿ, ಮಕ್ಕಳು, ನೆಂಟರಿಷ್ಟರು ಸಖೀಜನರು ಇವರಾರೂ ಸಾಯುವಾಗ ಹಿಂದೆ ಬರುವುದಿಲ್ಲ. ಸಾಯುವಾಗ ಹಿಂದೆ ಬರುವುದು ಪಾಪ ಮತ್ತು ಪುಣ್ಯ ಮಾತ್ರ. ಆದ್ದರಿಂದ ಮಹೇಶನನ್ನು ಬಿಡದೆ ಸೇವಿಸಿ ಪೂಜಿಸಿದಾಗ ಮುಕ್ತಿ ಕಟ್ಟಿಟ್ಟ ಬುತ್ತಿಯಾಗುತ್ತದೆ. ಆದ್ದರಿಂದ ಭಕ್ತಕವಿಯಚೇತನ ಈ ರೀತಿ ಮಿಡಿಯುತ್ತದೆ;

> 'ನೋಡದ ಕಣ್ಗಳೇಕೆ ಸಲೆಕೇಳದ ಕರ್ಣಮದೇಕೆ ಭಕ್ತಿಯಿಂ। ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ
> ಮಾಡದ ಕೈಗಳೇಕೆ ನೆಱೆಸೋಂಕದ ದೇಹಮದೇಕೆ ಕೂಡಿಯು। ಳ್ಳಾಡದ ಚಿತ್ತವೇಕೆನಗೆ ಹಂಪೆಯಲಿಂಗವೆ ನಿಮ್ಮೊಳಿಳ್ಕಟಿಂ ||೮||

ಬೇರೆಯವರ ಕೈಕೆಳಗೆ ಸೇವಕನಾಗಿ, ಹೋಗೆಂದರೆ ಹೋಗುವ, ಬಾ ಎಂದರೆ ಬರುವ, ಬೇಡ ಎಂದರೆ ಸುಮ್ಮನಿರುವ ಸೇವೆಯ ಕಷ್ಟ ವೃತ್ತಿಯಿಂದ ಬಿಡುಗಡೆಯನ್ನು ಕಾಣಬೇಕಾದರೆ ಕರುಣಾಕರನಾದ ಪಂಪಾವಿರೂಪಾಕ್ಷನಿಗೆ ಶರಣುಹೋಗಬೇಕು ಎಂದು ಹೇಳಿ ಇದು ಪುಣ್ಯಮಾರ್ಗ. ಇದು ಸಾತ್ವಿಕ ಲಕ್ಷಣ, ಇದು ವಿನೂತನ ಭಕ್ತಿರಸಪೂರ, ಉತ್ತಮಶೀಲಭಕ್ತರಾಶ್ರಯ ಎಂದು ಶರಣರು ಬಣ್ಣಿಸುತ್ತಿರಲು ಸಕಲೇಷ್ಟಫಲಪ್ರದಾಯಕವಾದ ಈ ಶತಕವನ್ನು ಬರೆದಿರುವುದಾಗಿ ಹರಿಹರನು ಹೇಳಿಕೊಂಡಿದ್ದಾನೆ. ಅಂದಮೇಲೆ ಅನ್ಯದೈವವನ್ನು ಭಜಿಸದೆ ಹರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾಲಗೆಯಂ ಮಾಱಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ ಎಂದು ಘೋಷಿಸಿದ ಕವಿಯ ಉತ್ಕಟ ಭಕ್ತಿಭಾವಕ್ಕೆ ಮೆಚ್ಚಿ ನಾಸ್ತಿಕನೂ ಆಸ್ತಿಕನಾಗುವನಲ್ಲವೇ ?

**ಷಡಕ್ಷರ ಮಂತ್ರ ಮಹಿಮೆ**

ಹರಿಹರ ಕವಿಗಿಂತ ಸ್ವಲ್ಪ ಮುಂಚೆ ಕೊಡಗುಳಿಕೇಶಿರಾಜದಂಡಾಧೀಶ ರಚಿಸಿರುವ 'ಷಡಕ್ಷರಮಂತ್ರಮಹಿಮೆಯ ಕಂದ' ಎಂಬ ಗ್ರಂಥವೊಂದು ತೆರೆದಿದೆ. ಈತನಕಾಲ ಸುಮಾರು ೧೧೬೦. ಇದರಲ್ಲಿ 'ಓಂ ನಮಃ ಶಿವಾಯ' ಎಂಬ ಷಡಕ್ಷರಮಂತ್ರದ ಮಹಿಮೆಯನ್ನು ಪ್ರತಿಪಾದಿಸಲಾಗಿದೆ. ಇದರಲ್ಲಿ ೧೧೦ ಕಂದ ಪದ್ಯಗಳಿದ್ದು ಒಂದೊಂದು ಕಂದವೂ 'ಓಂ ನಮಶ್ಶಿವಾಯೆಂಬ ಪದಂ' ಎಂಬ ಅಂಕಿತದಿಂದ ಮುಗಿಯುತ್ತದೆ, ಕೊಂಡಗೂಳಿ ಕೇಶಿರಾಜನು ಇದನ್ನು ಶತಕವೆಂದು ಹೇಳದಿದ್ದರೂ ಶತಕದ ಲಕ್ಷಣಗಳಿಗೆ ಇದು ಹೊಂದಿಕೆಯಾಗಿರುವುದರಿಂದ ಇದನ್ನು ಷಡಕ್ಷರಮಂತ್ರಮಹಿಮಾಶತಕವೆಂದು ಹೇಳಲಡ್ಡಿಯಿಲ್ಲ. ಇದನ್ನು ದಿವಂಗತ ಬಿ. ಶಿವಮೂರ್ತಿಶಾಸ್ತ್ರಿಗಳವರು ಸಂಪಾದಿಸಿರುವುದಲ್ಲದೆ ಸರಳವೂ ಉಪಯುಕ್ತವೂ ಆದ ತಾತ್ಪರ್ಯವನ್ನು ಬರೆದಿರುತ್ತಾರೆ. ಕಂದ ಪದ್ಯಗಳು ಬಹಳ ಸುಲಭವಾಗಿದ್ದು ಶೈಲಿಯು ತುಂಬಾ ಸರಳವಾಗಿದೆ. ಹೊನ್ನು, ಹೆಣ್ಣು, ಮಣ್ಣು–ಅವುಗಳ ಸಂಬಂಧದ ಸೌಖ್ಯವನ್ನು ಖಂಡಿಸಿ ಅವುಗಳ ನಶ್ವರತೆಯನ್ನು ಸ್ಥಾಪಿಸಿ ಓಂ ನಮಃ ಶಿವಾಯ ಎಂಬ ಷಡಕ್ಷರಮಂತ್ರವು ಅಮೃತಪ್ರಾಯವೆಂತಲೂ ಮೋಕ್ಷಸಾಧನೆ ಶಾಂತಿ ಸುಖಗಳಿಗೆ ಅದೊಂದೆ ಸಾಧನವೆಂತಲೂ ಪ್ರತಿಪಾದಿಸಿರುವ ಅಪೂರ್ವ ಶತಕವಾಗಿರುತ್ತದೆ.

> ನೀರೊಳ್ ಬರೆದಕ್ಕರ ವಿದ|ನಾರೈವೊಡೆ ಮರನ ನೆಳಲು ಯಾಮದ ಮನೆ ಸಂ |
> ಸಾರದಭಿಮಾನ ಭಯವ ನಿ। ವಾರಿಸುವೊಡದೋಂ ನಮಶ್ಶಿವಾಯೆಂಬ ಪದಂ ||೪೬||
> ತರಿಯಲ್ ಮೋಹದಕೆಚ್ಚಂ। ಹರಿಯಲ್ ಭವಪಾಶಮಂ ಮನೋಜನಬಿಲ್ಲಂ
> ಮುರಿಯಲ್ ಮಾಯೆಯ ಬೇರಂ| ಕೊರೆಯಲ್ ಜಪವೋಂ ನಮಶ್ಶಿವಾಯೆಂಬ ಪದಂ ||೧೬||

ಮೇಲಿನ ಪದ್ಯಗಳಿಂದ ಶತಕದ ಉದ್ದೇಶ ವಿದಿತವಾಗುತ್ತದೆ.

**ಮಗ್ಗೆಯ ಮಾಯಿದೇವನ ಶತಕತ್ರಯ**

ವೀರಶೈವ ಶತಕ ರಚನಕಾರರ ಪಂಕ್ತಿಯಲ್ಲಿ ಮಗ್ಗೆಯ ಮಾಯಿದೇವನಿಗೆ ಉತ್ತಮಸ್ಥಾನವಿದೆ. ತನ್ನ ಶತಕಗಳಲ್ಲಿ ಭಕ್ತಿ,ಜ್ಞಾನ, ವೈರಾಗ್ಯಗಳ ಜೊತೆಗೆ ಷಟ್‌ಸ್ಥಲ ಮಾರ್ಗವನ್ನು ವಿವರಿಸಿರುವುದು ಈ ಶತಕದ ಮಹಿಮೆಯನ್ನು ಹೆಚ್ಚಿಸಿದೆ. ಈ ಶತಕಗಳು ವೃತ್ತದಲ್ಲಿ ರಚಿತವಾಗಿವೆ. ಈ ಶತಕಗಳಿಗೆ ವಿರಕ್ತ ತೋಂಟದಾರ್ಯನು ಒಂದು ವ್ಯಾಖ್ಯಾನವನ್ನು ಬರೆದಿರುವುದು ಶತಕಗಳ ಜನಪ್ರಿಯತೆಯ ದ್ಯೋತಕವಾಗಿರುತ್ತದೆ.

ಶಿವಾಧವ ಶತಕದಲ್ಲಿ ೧೦೧ ವೃತ್ತಗಳಿದ್ದು ಪ್ರತಿಪದ್ಯವೂ 'ಶಿವಾಧವ'ಎಂದು ಮುಗಿಯುತ್ತದೆ. ಆರಂಭದಲ್ಲಿ ಬಸವ ಚನ್ನಬಸವ, ಪ್ರಭುದೇವ ಇವರುಗಳ ಸ್ತುತಿಯಿದೆ. ಈ ಗ್ರಂಥವನ್ನು 'ಷಟ್‌ಸ್ಥಲಾತ್ಮಕ ವಿಶಿಷ್ಟ ಮಹತ್ತರ ಭಕ್ತಿಯೋಗ ವಿದ್ಯಾಪರಮಾರ್ಥತತ್ತ್ವಮಯಮಪ್ಪ ಲಸಚ್ಛತಕ ಪ್ರಬಂಧಂ'ಎಂದು ಕವಿ ಕರೆದಿರುವುದು ಶತಕದ ಉದ್ದೇಶವನ್ನು ನಿರ್ದೇಶಿಸಿದೆ.

**ಶಿವಾವಲ್ಲಭ** ಶತಕದಲ್ಲಿ ೧೧೩ ವೃತ್ತಗಳಿವೆ. ಪ್ರತಿಪದ್ಯವು 'ಶಿವಾವಲ್ಲಭ' ಎಂಬ ಅಂಕಿತದಿಂದ ಮುಗಿಯುತ್ತದೆ. ಆರಂಭದಲ್ಲಿ ಐಪುರದ ಸೋಮೇಶ್ವರ ಸ್ತುತಿಯು ಬರುತ್ತದೆ.

ಐಪುರೀಶ್ವರ ಶತಕದಲ್ಲಿ ೧೧೩ ವೃತ್ತಗಳಿವೆ. ಪ್ರತಿ ಪದ್ಯವೂ 'ಮಹದೈಪುರೀಶ್ವರ'ಎಂಬ ಅಂಕಿತದೊಂದಿಗೆ ಕೂಡಿದೆ. ಪ್ರಾರಂಭದ ಹತ್ತು ಪದ್ಯಗಳಲ್ಲಿ ಐಪುರದ ಸೋಮೇಶ್ವರ ಸ್ತುತಿಯಿದೆ.ಮಾಯಿದೇವನ ಕವಿತಾಸಾಮರ್ಥ್ಯ ಮತ್ತು ವಿಷಯ ನಿರೂಪಣೆ ತಿಳಿಯಲು ಒಂದೆರಡು ಪದ್ಯಗಳನ್ನು ಉದ್ಧರಿಸಬಹುದು.

'ನೆನೆವುದರಿಂ ನಿರೀಕ್ಷಿಸುವುದತ್ಯಧಿಕಂ ನೆನಹಿಂ ನಿರೀಕ್ಷೆಯಿಂ| ದನುದಿವಸಂ ಸಮರ್ಚಿಸುವುದತ್ಯಧಿಕಂ ನೆನಹಿಂ ನಿರೀಕ್ಷೆಯಿಂ
ದನುದಿವಸಂ ಸಮರ್ಚಿಪುದರಿಂ ಶಿವಲಿಂಗಮನಂಗದಲ್ಲಿ ಸು। ಮ್ಮನೆ ಧರಿಸಿರ್ಪುದತ್ಯಧಿಕಮತ್ಯಧಿಕಂ ನಿರುತಂ ಶಿವಾಧವಾ' ॥೩೯॥

**'ಲಿಂಗಾಧಾರೀ ಸದಾಶುಚಿಃ'** ಎಂಬ ತತ್ತ್ವವನ್ನು ಇದು ಸಾರುವುದಲ್ಲವೇ ?

'ಓದನಮುಂ ನಿವೇದಿಸಿದ ತತ್ಫಲ ಮೋಷಧಿಗಳ್ಗೆ ಪತ್ರಪು| ಷ್ಪಾದಿ ಸಮರ್ಚನಾಫಲಮುದ್ಯೆದೆ ವನಸ್ಪತಿಗಳ್ಗೆ ನಿರ್ಮಲ
ಸ್ವಾದು ಜಲಾಭಿಷೇಚಿತವುನಿತ್ತ ಫಲಂ ನದಿಗಳ್ಗೆ ಮಿಕ್ಕವ। ಗ್ರಾದ ಪುದೆಂತದಯ್ಯ ಪರಮಪ್ರಭುವೇ ಮಹದೈಪ್ರರೀಶ್ವರಾ ॥೯೯॥

ಜಲಕುಸುಮೋದನಕ್ಕಿಂತ ಆತ್ಮಸಮರ್ಪಣ ಫಲದಾಯಕವೆಂಬುದನ್ನು ಮೇಲಿನ ಪದ್ಯದಿಂದ ತಿಳಿಯಬಹುದು.

ಈ ಶತಕಗಳನ್ನು 'ಬಿಡಿ ಬಿಡಿಯಾಗಿ ಓದಿದರೆ **ಶಿವಾಧವಶತಕದಲ್ಲಿ ಭಕ್ತಿ, ಶಿವಾವಲ್ಲಭಶತಕದಲ್ಲಿ ಜ್ಞಾನ, ಮಹದೈ ಪುರೀಶ್ವರ ಶತಕದಲ್ಲಿ ವೈರಾಗ್ಯ** ಮೂಡಿ ಬಂದುದನ್ನು ನಾವು ಸ್ಪಷ್ಟವಾಗಿ ಅರಿಯುತ್ತೇವೆ. ಮೂರನ್ನು ಇಡಿಯಾಗಿ ವಿವೇಚಿಸಿದಲ್ಲಿ ಭಕ್ತಿ ಜ್ಞಾನ ವೈರಾಗ್ಯವೇ ಒಡಲಾಗಿರುವ ಷಟ್‌ಸ್ಥಲಸಿದ್ಧಾಂತವು ಮೈಗೊಂಡಿರುವುದನ್ನು ತಿಳಿಯುತ್ತೇವೆ. ಆದುದರಿಂದ ಈ ಗ್ರಂಥ ವೀರಶೈವ ಧರ್ಮದ ಆದರ್ಶಕೃತಿಯಾಗಿ ಇಂದಿನವರೆವಿಗೂ ಮೆರೆಯುತ್ತ ಬಂದಿದೆ'. ಎಂಬ ಶತಕತ್ರಯದ ಸಂಪಾದಕರಾದ ಪಂಡಿತ ವೈ. ನಾಗೇಶಶಾಸ್ತ್ರಿಗಳ ಮಾತು ಶತಕಗಳಿಗೆ ಒಪ್ಪಿ ಮನನೀಯವಾಗಿದೆ. ಮಗ್ಗೆಯ ಮಾಯಿದೇವನಿಗೆ ವೀರಶೈವ ಶತಕ ಸಾಹಿತ್ಯದಲ್ಲಿ ವಿಶಿಷ್ಟಸ್ಥಾನವಿದೆ.

**ಶಂಕರ ಶತಕ**

ಶಂಕರ ಶತಕವನ್ನು ಚಂದ್ರಕವಿಯು ಬರೆದಿರುತ್ತಾನೆ. ಈತನ ಕಾಲ ಸುಮಾರು ೧೪೨೦. ಈ ಶತಕವನ್ನು ಶ್ರೀ ಸಿ. ಮಹಾದೇವಪ್ಪನವರು ಓಲೆಪ್ರತಿಗಳ ಸಹಾಯದಿಂದ ಪರಿಶೋಧಿಸಿ, 'ವಚನಶಂಕರಶತಕ' ವೆಂಬ ಗದ್ಯಾನುವಾದದೊಂದಿಗೆ ಸಂಪಾದಿಸಿ ಸುದೀರ್ಘಪೀಠಿಕೆ ವಿಮರ್ಶೆಯೊಂದಿಗೆ ಪ್ರಕಟಿಸಿದ್ದಾರೆ. ೧೦೧ ವಿವಿಧ ವೃತ್ತಗಳಲ್ಲಿ ರಚನೆಯಾಗಿದ್ದು, ಪ್ರತಿಯೊಂದು ವೃತ್ತವೂ ಗುರುಮೂರ್ತಿ ಶಂಕರಾ ಎಂಬ ಅಂಕಿತವನ್ನು ಪಡೆದಿದೆ. ಚಂದ್ರಕವಿಯ ಮೇಲೆ ಹರಿಹರನ ಪ್ರಭಾವ ಬಹಳವಾಗಿದೆ. ತಾನು ನರಸ್ತುತಿಯನ್ನು ಮಾಡದೆ 'ಚಂದ್ರ ಶೇಖರಕವಿರಾಜ ಭಕ್ತಿಗೆ ವಿರಕ್ತಿಗೆ ಮುಕ್ತಿಗೆ ಬೀಜ ಮಾಗೆ' ಶಂಕರ ಶತಕವನ್ನು ಬರೆದಂತೆ ಹೇಳಿದ್ದಾನೆ. ಸಂಸಾರದ ಅನಿತ್ಯತೆಯನ್ನು ಪ್ರತಿಪಾದಿಸಿ, ಶಿವನ ಮಹಿಮೆಯನ್ನು ಹೊಗಳಿ, ಭಕ್ತಿಮಾರ್ಗವನ್ನು ಕವಿಯು ಮನೋಹರವಾಗಿ ನಿರೂಪಿಸಿದ್ದಾನೆ.

'ಹರಿಹರನ ಭಕ್ತಿಯ ಆವೇಶ ಈ ಶತಕಕಾರನ ಪದ್ಯಗಳಲ್ಲಿ ಅಲ್ಲಲ್ಲಿ ಸುಳಿದರೂ ಕವಿಯ ವಿಚಾರ ಸರಣಿಯ ಗಾಂಭೀರ್ಯವೆ ಎದ್ದುತೋರುವುದು' ಎಂಬ ಶ್ರೀ ಸಿ. ಮಹಾದೇವಪ್ಪನವರ ಮಾತು ಸತ್ಯ. ಸದಾಶಿವಭಕ್ತಿಯುಳ್ಳವನಿಗೆ ಇಹವೇ ಸ್ವರ್ಗವೆಂಬುದು ಈ ಮುಂದಿನ ಪದ್ಯದಲ್ಲಿ ಸುಂದರವಾಗಿ ಅಭಿವ್ಯಕ್ತಿ ಹೊಂದಿದೆ.

ಎಲ್ಲಿಯು ಸ್ವರ್ಗಮೆಲ್ಲಿಯು ಸುಧಾರಸಮೆಲ್ಲಿಯು ನೀಱೆವೆಣ್ಗಳೆ। ನ್ನೆಲ್ಲಿಯು ದಿವ್ಯಭೋಗವೆನಲೇಕೆ ಸದಾಶಿವಭಕ್ತಿಯುಳ್ಳವಂ
ಗಿಲ್ಲಿಯೆ ಸ್ವರ್ಗವಿಲ್ಲಿಯೆ ಸುಧಾರಸಮಿಲ್ಲಿಯೆ ನೀಱೆವೆಣ್ಗಳಿಂ| ತಿಲ್ಲಿಯೆ ದಿವ್ಯಭೋಗಮೆನೆ ಸಂದೆಗಮೇಂ ಗುರುಮೂರ್ತಿ ಶಂಕರಾ ॥೨೦॥

ಇದುವರೆಗೆ ಪ್ರಮುಖರಾದ ಕೆಲವು ಶತಕಕಾರರ ಶತಕಗಳನ್ನು ವಿಸ್ತಾರವಾಗಿ ವಿಚಾರ ಮಾಡಿದುದಾಯಿತು. ಆದರೆ ಸ್ಥಳಾಭಾವದಿಂದ ಉಳಿದ ಶತಕಕಾರರ ಕೃತಿಗಳನ್ನು ವಿಸ್ತಾರವಾಗಿ ವಿಚಾರ ಮಾಡುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ಉಳಿದ ಶತಕಗಳ ಸ್ಥೂಲ ಪರಿಚಯ ಮಾತ್ರ ಸಾಧ್ಯವಾಗುತ್ತದೆ.

ದಿವಂಗತ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಸಂಪಾದಿಸಿ ಪ್ರಕಟಿಸಿರುವ ಶತಕಸಂಕಲನದಲ್ಲಿ ಶಂಕರಲಿಂಗ ಶತಕ, ನಿರಂಜನಲಿಂಗ ಶತಕ, ಗುರುಶಂಕರೇಶ್ವರ ಶತಕ, ಪಾರ್ವತೀ ಭಕ್ತಿಸಾರಶತಕ ಮತ್ತು ಸಿರಿನಂಜುಂಡ ಶತಕ ಎಂಬ ೫ ಶತಕಗಳು ಸೇರ್ಪಡೆಯಾಗಿರುತ್ತದೆ.

ಶಂಕರಲಿಂಗಶತಕ, ಗುರುಶಂಕರೇಶ್ವರ ಶತಕಗಳೆರಡನ್ನು ಶಂಕರದೇವಕವಿಯೇ ರಚಿಸಿರುವನೆಂದು ತಿಳಿಯುತ್ತದೆ. ಶಂಕರಲಿಂಗ ಶತಕದ ಪದ್ಯಗಳು 'ಪ್ರಸನ್ನ ಶಂಕರಲಿಂಗಾ' ಎಂದು ಮುಗಿಯುವ ಕಂದಗಳಾಗಿದ್ದು ೧೨೧ರ ವರೆಗೆ ಇರುತ್ತವೆ. ಇದು ಶಂಕರ ಸ್ತುತಿಯಾಗಿರುತ್ತದೆ. ಗುರುಶಂಕರೇಶ್ವರ ಶತಕವು ೧೦೭ ವೃತ್ತಗಳಿಂದ ಕೂಡಿ 'ಗುರಶಂಕರೇಶ್ವರಾ' ಎಂಬ ಅಂಕಿತವಿದೆ.

ಇದು ವೀರಶೈವ ವೇದಾಂತವನ್ನು ಬೋಧಿಸುವ ಶತಕ. ಭಕ್ತಿ, ಜ್ಞಾನ, ವೈರಾಗ್ಯಗಳು ಮನಮುಟ್ಟುವಂತೆ ಪ್ರತಿಪಾದಿತ ವಾಗಿವೆ.

ನಿರಂಜನಲಿಂಗ ಶತಕವು ೧೦೫ ಕಂದಪದ್ಯಗಳಿಂದ ಕೂಡಿದ್ದು 'ನಿರಂಜನಲಿಂಗ'ಎಂಬ ಅಂಕಿತವಿರುತ್ತದೆ. ಇದಕ್ಕೆ 'ಶಿವ ಗಣ ಸ್ತೋತ್ರ'ಎಂಬ ಹೆಸರೂ ಇದೆ. ಇದನ್ನು ವಿರಕ್ತ ತೋಂಟದಾರ್ಯರು ರಚಿಸಿರುವರೆಂದು ದಿವಂಗತ ಶ್ರೀ ಜಿ. ಶಿವ ಮೂರ್ತಿಶಾಸ್ತ್ರಿಗಳು ಅಭಿಪ್ರಾಯ ಪಟ್ಟಿದ್ದಾರೆ. ಈ ಶತಕದಲ್ಲಿ ವಿಭೂತಿಪುರುಷರಾದ ೧೦೧ ಮಂದಿ ಶಿವಶರಣರ ವಿಷಯ ವನ್ನು ಹೇಳಲಾಗಿದೆ.

ಪಾರ್ವತೀಭಕ್ತಿಸಾರ ಮತ್ತು ಸಿರಿನಂಜುಂಡ ಶತಕಗಳನ್ನು ಬರೆದಕವಿ ಮೈಸೂರರಸರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು. ಪಾರ್ವತೀಭಕ್ತಿಸಾರ ಶತಕವು ೧೧೦ ಭಾಮಿನಿ ಷಟ್ಪದಿಗಳಿಂದ ಕೂಡಿ ರ 'ಕ್ಷಿಸುನಮ್ಮ ನನವರತ'ಎಂಬ ಅಂಕಿತದಲ್ಲಿ ಮುಗಿಯುತ್ತವೆ. ಈ ಶತಕದಲ್ಲಿ ಪಾರ್ವತಿಯ ನಾನಾರೂಪಗಳನ್ನು ಆಕೆಯು ಮೆರೆದ ನಾನಾ ಮಹಿಮೆಗಳನ್ನು ಸವಿಸ್ತಾರವಾಗಿ ನಿರೂಪಿಸಲಾಗಿದೆ. ಕವಿಗೆ ಪಾರ್ವತಿಯಲ್ಲಿರುವ ಭಕ್ತಿ ಅನನ್ಯವಾಗಿದೆ.

ಸಿರಿನಂಜುಂಡ ಶತಕವು ೧೦೩ ಕಂದಗಳಿಂದ ಕೂಡಿದ್ದು 'ಸಿರಿನಂಜುಂಡ'ಎಂಬ ಅಂಕಿತದಿಂದ ಪದ್ಯಗಳು ಮುಗಿಯು ತ್ತವೆ. ನಂಜನಗೂಡಿನ ನಂಜುಂಡೇಶ್ವರನ ಸ್ತುತಿರೂಪವಾಗಿದ್ದು ಭಕ್ತಿ, ಜ್ಞಾನ, ವೈರಾಗ್ಯಗಳ ಜೊತೆಗೆ ಅಲ್ಲಲ್ಲಿ ಲೋಕಾನು ಭವವೂ ಒಡಮೂಡಿದೆ.

ಈಶ್ವರನಾಮ ನಿಜಲಿಂಗೇಶ ಎಂಬ ಕರ್ತೃವಿನಿಂದ ರಚಿತವಾದ 'ನಿಜಲಿಂಗ ಶತಕ'ವೊಂದನ್ನು ನಾವು ಕಾಣಬಹುದು. ಈ ಶತಕವು ೧೦೦ ವಾರ್ಧಕ ಷಟ್ಪದಿಗಳಿಂದ ಕೂಡಿ 'ನಿಜಲಿಂಗಾ' ಎಂಬ ಅಂಕಿತದಿಂದ ಮುಕ್ತಾಯವಾಗುತ್ತದೆ. ಈ ಶತಕದಲ್ಲಿ ಭಕ್ತಿ, ಜ್ಞಾನ. ವೈರಾಗ್ಯದ ಬಗ್ಗೆ ವಿವರವಾದ ನಿರೂಪಣೆಯಿದ್ದು ಅಲ್ಲಲ್ಲಿ ಸಾಮಾಜಿಕ ನೀತಿಯೂ ಪ್ರತಿಪಾದಿತವಾಗಿದೆ. ಭಾಷೆ ಅಲಂಕಾರಿಕವಾಗಿದ್ದು ಹೋಲಿಕೆಗಳು ಮತ್ತು ರೂಪಕಗಳು ಮನಸೆಳೆಯುತ್ತವೆ.

ಕೊನೆಯದಾಗಿ ಶ್ರೀ ಸಕ್ರಪ್ಪಸ್ವಾಮಿಗಳ ಶತಕಗಳ ವಿಚಾರ ಮಾಡಬಹುದು. ಅತಿಹೆಚ್ಚಿನ ವೈವಿಧ್ಯಮಯ ಶತಕ ಗಳನ್ನು ಕನ್ನಡ ಸಾಹಿತ್ಯಕ್ಕೆ ನೀಡಿರುವವರಲ್ಲಿ ಇವರೇ ಮೊದಲಿಗರು. ಇವರ ಹೆಸರು ಸಾಹಿತ್ಯಚರಿತ್ರೆಯ ಪುಟಗಳಿಗೆ ಇನ್ನೂ ಸೇರಬೇಕಾಗಿದೆ. ಇವರ ಜನ್ಮಸ್ಥಳ ಅನಂತಪುರ ಜಿಲ್ಲೆಯ ರಾಯದುರ್ಗ. ಇದು ಈಗ ಆಂಧ್ರಪ್ರದೇಶದಲ್ಲಿದೆ. ಇವರ ಗುರುಗಳು ಬಸವಂತಾಚಾರ್ಯ. ರಾಯದುರ್ಗದ ಸುತ್ತಮುತ್ತ ತೆಲಗುಭಾಷೆಯಿದ್ದರೂ ಕನ್ನಡ ಶತಕ ಕ್ಷೇತ್ರದಲ್ಲಿ ಕೃಷಿಮಾಡಿದ ಕೀರ್ತಿ ಇವರಿಗೆ ಸಲ್ಲಬೇಕು.

ಇವರು ಹರಿಹರೇಶ್ವರ ಶತಕ, ಶ್ರೀಸಿರ್ವೋಪ್ಪ ಶತಕ,ಶ್ರೀಗುರುನಾಥ ಶತಕ,ಶ್ರೀಮಹಾಶಿವರಾತ್ರಿ ಮಾಹಾತ್ಮ್ಯಕಥಾ ಶತಕ, ಲಘುಲಿಪಿಶತಕ, ಶ್ರೀ ತಿಪ್ಪೇಶನ ಚರಿತ್ರಾ ಲಾವಣಿ ಶತಕ ಎಂಬ ಆರು ಶತಕಗಳನ್ನು ಬರೆದಿರುತ್ತಾರೆ. ಶ್ರೀ ಗುರುನಾಥ ಶತಕವು ೧೦೫ ವಾರ್ಧಕ ಷಟ್ಪದಿಗಳಿಂದ ಕೂಡಿದೆ, 'ನಗುರೋರಧಿಕಂ' ಎಂಬ ವೇದ ಶಾಸ್ತ್ರಗಳ ಒಕ್ಕೊರಲಿನ ಮಾತುಗಳನ್ನು ಗಮನಿಸಿ ಗುರುವಿನ ಕೃಪಾಸುವೃಷ್ಟಿಯನ್ನು ಪಡೆಯಲು ಮುಮುಕ್ಷುಗಳಿಗೆ ಪ್ರತಿನಿತ್ಯವೂ ಪಾರಾಯಣ ಮಾಡಲು ಅನುಕೂಲವಾ ಗುವಂತೆ ಗುರುಪ್ರೇರಣೆಯಿಂದ ಬರೆಯಲಾಗಿದೆಯೆಂದು ಕವಿ ಮುನ್ನುಡಿಯಲ್ಲಿ ಹೇಳಿದ್ದಾರೆ. ಹರಿಹರೇಶ್ವರ ಶತಕವು ೧೦೮ ಭಾಮಿನೀ ಷಟ್ಪದಿಗಳಿಂದ ಕೂಡಿವೆ. ಈ ಶತಕದ ಹೆಸರೇ ಸೂಚಿಸುವಂತೆ ಶಿವ ಮತ್ತು ವಿಷ್ಣುಗಳಲ್ಲಿ ಅಭೇದವನ್ನು ಸೂಚಿಸಿ ಸ್ತುತಿಸಿರುವುದು ಇದರ ವಸ್ತು. ಕವಿಯು ಹರಿಹರರಲ್ಲಿ ಭೇದವನ್ನು ಕಲ್ಪಿಸುವವರು ಪಾತಕಿಗಳು. ಅವರಿಗೆ ನರಕ ಪ್ರಾಪ್ತಿಯೆಂದು ವಾದಿಸಿದ್ದಾರೆ.

ಶ್ರೀಮಹಾಶಿವರಾತ್ರಿಮಾಹಾತ್ಮ್ಯಕಥಾ ಶತಕವು ಕಥೆಯೊಂದನ್ನು ಬಿತ್ತರಿಸುತ್ತದೆ. ೧೦೮ ವಾರ್ಧಕ ಷಟ್ಪದಿಗಳಿಂದ ಕೂಡಿದೆ. ಶಬರನೊಬ್ಬನು ಬೇಟೆದೊರೆಯದೆ ತಾನರಿಯದಂತೆ ಬಿಲ್ವಮರದ ಮೇಲೆ ರಾತ್ರಿಯೆಲ್ಲಾ ಕುಳಿತು ನಿದ್ರಾಹಾರ ವಿಲ್ಲದೆ ನೀರು ಕುಡಿಯುತ್ತ, ಮರೆಯಾದ ಮರದೆಲೆಗಳನ್ನು ಉದರಿಸುತ್ತ ಜಾಗರಣೆ ಮಾಡುತ್ತಾನೆ. ಅಂದು ಶಿವರಾತ್ರಿಯಾದ ರಿಂದ ಚೆಲ್ಲಿದ ನೀರು, ಉದುರಿಸಿದ ಪತ್ರೆ, ಇದ್ದ ಜಾಗರಣೆ ಇವೆಲ್ಲವೂ ಶಿವಪೂಜೆಯಾಗಿ, ಶಿವನೊಲಿದು ಅವನು ಉದ್ಧಾರಿ ವಾಗುತ್ತಾನೆ. ಇದು ಈ ಶತಕದ ಕಥೆ. ಸಕ್ರಪ್ಪ ಸ್ವಾಮಿಗಳ ಶತಕಗಳಲ್ಲಿ ಇದು ಅತ್ಯಂತ ಶ್ರೇಷ್ಠ ಶತಕ. ಕಥೆ ಉತ್ಸುಕತೆಯಿಂದ ಕೂಡಿದೆ. ಲಘುಲಿಪಿ ಶತಕದಲ್ಲಿ ೧೦೦ ಭಾಮಿನಿ ಷಟ್ಪದಿಗಳಿವೆ. ಕೇವಲ ಲಘ್ವಕ್ಷರಗಳಿಂದಲೇ ರಚಿತವಾಗಿರುವ ಶತಕಕ್ಕೆ 'ಲಘು ಲಿಪಿ ಶತಕ' ಎಂದು ಹೆಸರಿಸಲಾಗಿದೆ. ಈ ಶತಕದಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ಲೋಕನೀತಿಯನ್ನು ಹೇಳಲಾಗಿದೆ.

ಶ್ರೀ ತಿಪ್ಪೇಶನ ಚರಿತ್ರಾಲಾವಣಿ ಶತಕದಲ್ಲಿ ೧೦೮ ಲಾವಣಿ ಪದ್ಯಗಳಿವೆ. ನಾಯಕನ ಹಟ್ಟಿಯ ತಿಪ್ಪೇಶನ ಚರಿತೆ ಇದರಲ್ಲಿ ನಿರೂಪಿತವಾಗಿದೆ. ಲಾವಣಿಯ ರೂಪದಲ್ಲಿ ಚರಿತೆಯನ್ನೊಳಗೊಂಡ ಶತಕ ಇದೇ ಮೊದಲನೆಯದೆಂದು ಕಾಣು ತ್ತದೆ. ತಿಪ್ಪೇಶರು ಮೆರೆದ ಅನೇಕ ಪವಾಡಗಳ ನಿರೂಪಣೆಯೂ ಇಲ್ಲಿದೆ.

ಶ್ರೀ ಸಕ್ರಪ್ಪಸ್ವಾಮಿಯವರ ಶತಕಗಳು ಸರಳವಾಗಿದ್ದು ಸಾಮಾನ್ಯ ಓದುಗರಿಗೂ ಅರ್ಥವಾಗುವಂತಿವೆ. ಭಕ್ತಿ ಪ್ರಧಾನವಾದ ಶತಕಸಾಹಿತ್ಯವನ್ನು ರಚಿಸುವುದರಲ್ಲಿ ಶ್ರೀ ಸಕ್ರಪ್ಪಸ್ವಾಮಿಯವರು ಸಿದ್ಧಹಸ್ತರಾಗಿದ್ದರೆಂದು ಹೇಳಲು ಸಂಶಯವಿಲ್ಲ. ಕನ್ನಡ ಶತಕ ಸಾಹಿತ್ಯ ಚರಿತ್ರೆಯಲ್ಲಿ ವೀರಶೈವ ಶತಕಸಾಹಿತ್ಯಕ್ಕೆ ಗುಣದಲ್ಲಿ ಮತ್ತು ಗಾತ್ರದಲ್ಲಿ ಅಗ್ರಮಾನ್ಯ ಸ್ಥಾನವಿದೆ. ವೀರಶೈವ ಶತಕಕಾರರು ಜನತೆಯಲ್ಲಿ ಭಕ್ತಿ ಬೀಜವನ್ನು ಬಿತ್ತಿ. ಜ್ಞಾನ ದೀವಿಗೆಯನ್ನು ಹಚ್ಚಿ ವೈರಾಗ್ಯಪರರನ್ನಾಗಿಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಮಾನವನಿಗೆ ವೈರಾಗ್ಯ ಮೂಡುವುದು ಅತ್ಯಾವಶ್ಯಕ. ವೈರಾಗ್ಯವು ಮಾನವನ 'ಅಸಂಗ್ರಹ' ಮನೋಭಾವವನ್ನು ಬೆಳೆಸಿ ಮನಸ್ಸನ್ನು ವಿಶಾಲಗೊಳಿಸಿ ತಾನೂ ಬಾಳಲು ಇತರರನ್ನೂ ಬಾಗೊಡಲು ಅವಕಾಶ ವೀಯುತ್ತದೆ. ಮಾನವಕಲ್ಯಾಣ ಮತ್ತು ಲೋಕಕಲ್ಯಾಣಕ್ಕಾಗಿ ರಚಿತವಾಗಿರುವ ಈ ಶತಕಗಳು ಒಂದು ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿವೆ. ಜನತೆಯ ಹಿತದೃಷ್ಟಿಯಿಂದ ಇಂಥ ಶತಕಗಳ ಮುದ್ರಣ ಮತ್ತು ಪ್ರಸಾರ ಅಧಿಕಗೊಳ್ಳಬೇಕು. ಸಮಾಜದ ಏಳ್ಗೆಯನ್ನು ಅಪೇಕ್ಷಿಸುವವರು ಇಂಥ ಕಾರ್ಯಗಳಲ್ಲಿ ತೊಡಗಬೇಕು.

# ವೀರಶೈವ ಶಾಸ್ತ್ರಗ್ರಂಥಗಳು

**ಡಾ|| ಟಿ. ವಿ. ವೆಂಕಟಾಚಲಶಾಸ್ತ್ರೀ**

**ಲಕ್ಷಣ ಗ್ರಂಥಗಳು**

ವೀರಶೈವ ಕವಿಗಳಿಂದ ರಚಿತವಾದ ಪ್ರಾಚೀನ ಕಾಲದ ಅಲಂಕಾರ ಶಾಸ್ತ್ರಗ್ರಂಥಗಳು ಯಾವುವಾದರೂ ಇರುವಂತೆ ತಿಳಿದುಬಂದಿಲ್ಲ. ಛಂದೋಗ್ರಂಥಗಳು ಮಾತ್ರ ಒಂದೆರಡು ಇರುವಂತಿದೆ.

ಈಶ್ವರಕವಿ (ಸು.೧೫೦೦) ಕೃತವಾದ 'ಕವಿಜಿಹ್ವಾಬಂಧನಂ' ಮುಖ್ಯವಾಗಿ ಛಂದಸ್ಸಿನ ಗ್ರಂಥವಾದರೂ, ಒಟ್ಟಾಗಿ ಒಂದು ಸಮ್ಮಿಶ್ರ ಲಕ್ಷಣಗ್ರಂಥ. ಇದರಲ್ಲಿ ವ್ಯಾಕರಣ ಅಲಂಕಾರದ ವಿಷಯಗಳೂ ಇವೆ. ಛಂದಶ್ಶಾಸ್ತ್ರದ ಸಂಜ್ಞಾಪ್ರಕರಣಕ್ಕೆ ಸಂಬಂಧಿಸಿದ ಕೆಲವು ವಿಷಯಗಳು, ಪದ್ಯರಚನೆಯ ಕೆಲವು ನಂಬಿಕೆಗಳು ಸಂಸ್ಕೃತ ಮತ್ತು ತೆಲುಗು ಭಾಷೆಗಳ ಛಂದೋಗ್ರಂಥಗಳಲ್ಲಿ ಕೆಲವಲ್ಲಿ ಬಂದಿರುವ ವಿಶಿಷ್ಟವಾದೊಂದು ಛಂದೋಪದ್ಧತಿಗೆ ಅನುಸಾರವಾಗಿ ಇಲ್ಲಿ ಬಂದಿರುವಂತೆ ತೋರುತ್ತದೆ. ವಡಿಯ ಭೇದಗಳೂ ಕನ್ನಡ ಭಾಷಾಭೇದಗಳೂ ಈ ಕೃತಿಯ ಕುತೂಹಲಕರವಾದ ಅಂಶಗಳು. ಈ ಕವಿ ಕೆಲವರ ಪ್ರಕಾರ ವೀರಶೈವ ಮತೀಯ. ಆದರೆ ಇವನು ವೀರಶೈವನೇ ಎನ್ನುವುದು ಇನ್ನೂ ನಿಶ್ಚಯವಿಲ್ಲ. ಇದು ನಿಶ್ಚಯವಾದರೆ, ಇವನೇ ಈ ಮತದ ಛಂದಶ್ಶಾಸ್ತ್ರಕಾರರಲ್ಲಿ ಮೊದಲಿಗನಾಗುತ್ತಾನೆ.

'ನಂದಿ ಛಂದೋರ್ಣವ' (= ನಂದಿ ಛಂದಸ್ಸು) ಎಂಬ ಇನ್ನೊಂದು ಛಂದೋಗ್ರಂಥದಕರ್ತೃ ವೀರಭದ್ರನೆಂದೂ (೧೮೪೬) ಈತನು ಕೊಲ್ಲಿಪಾಕಿಯ ರೇಣುಕಾರ್ಯನ ಪರಂಪರೆಗೆ ಸೇರಿದವನೆಂದೂ ಈಚೆಗೆ ತಿಳಿದಿದೆ. ಈ ಗ್ರಂಥಕರ್ತೃ ಕನ್ನಡ ತೆಲುಗು ಭಾಷೆ ಛಂದಸ್ಸುಗಳನ್ನು ಬಲ್ಲವನಾಗಿದ್ದ. ಕನ್ನಡದ 'ಛಂದೋಂಬುಧಿ' ತೆಲುಗು 'ಕವಿಜನಾಶ್ರಯಮು' ಈ ಕೆಲವು ಗ್ರಂಥಗಳನ್ನು ಆಧರಿಸಿ, ಗಣಲಕ್ಷಣ, ವಡಿಭೇದಗಳು, ವರ್ಣವೃತ್ತಗಳು ಮುಂತಾದುವನ್ನು ನಿರೂಪಿಸಿದ್ದಾನೆ. ಕನ್ನಡ ಭಾಷೆಯ ಅಂಶ ಛಂದಸ್ಸಿನ ಮಟ್ಟುಗಳನ್ನೂ ಆ ಮಟ್ಟುಗಳ ಸಾಮಾನ್ಯ ಗಣಸ್ವರೂಪವನ್ನೂ ನಿರೂಪಿಸದಿರುವುದು ಈ ಗ್ರಂಥದ ಒಂದು ಮುಖ್ಯ ಕೊರತೆಯಾದರೆ, ಅನಾವಶ್ಯಕವಾಗಿ ತೆಲುಗು ಛಂದಸ್ಸಿನ ದೇಶ್ಯವೃತ್ತಗಳನ್ನೂ ಅವುಗಳ ಗಣಸ್ವರೂಪವನ್ನೂ ಕುರಿತಿರುವುದು ಒಂದು ದೋಷವಾಗಿದೆ. ಹೀಗಿದ್ದೂ, ಕನ್ನಡ ಮಾತ್ರಾಷಟ್ಪದಿಗಳ ವಿಚಾರವನ್ನು ಹೇಳಿರುವುದು ಒಂದು ಸಮಾಧಾನದ ಸಂಗತಿ. ಜೊತೆಗೆ, ಛಂದಸ್ಸು 'ಛಂದೋಂಬುಧಿ'ಗಳ ಅಧ್ಯಯನವನ್ನು ಮುನ್ನಡಸಿರುವುದಕ್ಕಾಗಿಯೂ ಈ ಶಾಸ್ತ್ರಕಾರನಿಗೆ ನಮ್ಮ ಮೆಚ್ಚುಗೆ ಸಲ್ಲಬೇಕಾಗಿದೆ. ಈಚೆಗೆ ರಚಿತವಾದ್ದು ಎಂದರೆ ಗಂಗಾಧರ ಮಡಿವಾಳೇಶ್ವರರ (ಸು. ೧೮೬೦) 'ಕವಿತಾ ಪದ್ಧತಿ'.

ಪ್ರಾಚೀನ ವೈಯಾಕರಣರು, ಜೈನರು. ವೀರಶೈವರು ವ್ಯಾಕರಣಶಾಸ್ತ್ರದ ರಚನೆಯಲ್ಲಿ ಕ್ವಚಿತ್ತಾಗಿ ಹೊರತು ಸ್ವತಂತ್ರವಾಗಿ ಕೈ ತೊಡಗಿಸಿದಂತೆ ತೋರುವುದಿಲ್ಲ. ಆದರೆ ಜೈನ ಶಾಸ್ತ್ರಕಾರ ಕೇಶಿರಾಜನ (ಸು. ೧೨೬೦) 'ಶಬ್ದಮಣಿದರ್ಪಣ'ವೆಂಬ ಸುಪ್ರಸಿದ್ಧ ಹಳಗನ್ನಡ ವ್ಯಾಕರಣಕ್ಕೆ 'ಸೂತ್ರಾನ್ವಯ ರತ್ನಮಾಲೆ' ಎಂಬ ಹೆಸರಿನ ವ್ಯಾಖ್ಯಾನವನ್ನು ರಚಿಸಿದ ಲಿಂಗಣಾರಾಧ್ಯನೂ (ಸು. ೧೫೦೦), ಅನ್ವಯಾನುಸಾರ ಟೀಕೆಯೊಂದನ್ನು ರಚಿಸಿರುವ ನಿಟ್ಟೂರ ನಂಜಯ್ಯನೂ (ಸು, ೧೭೨೫) ವೀರಶೈವರಾಗಿದ್ದಾರೆ. 'ಶಬ್ದಮಣಿದರ್ಪಣ'ದ ಸಮ್ಯಕ್ ಜ್ಞಾನಕ್ಕೆ ಇವರ ಕೊಡುಗೆ ಅಮೂಲ್ಯವಾದುದು. ಇವರ ಮೂಲಕವಾಗಿ ಈ ವ್ಯಾಕರಣದ ಅಭ್ಯಾಸ ಸುಗಮವೆನಿಸಿದೆ, ಮುನ್ನಡೆದಿದೆ. ಲಿಂಗಣಾರಾಧ್ಯನು ಸಂಸ್ಕೃತ ಕರ್ಣಾಟಕೋಭಯ ಭಾಷಾವಿಶಾರದನು, ವ್ಯಾಕರಣ ಪಾಂಡಿತ್ಯವಿದ್ದವನು. ಇದರಿಂದಾಗಿ ಮೂಲಗ್ರಂಥದ ಕೆಲವು ವಿಷಯಗಳನ್ನು ವಿವರಿಸಿರುವುದು, ಪೂರ್ವಾಭಿಪ್ರಾಯವನ್ನು ವಿಮರ್ಶಿಸಿರುವುದು, ಪಾಠನಿಷ್ಕರ್ಷೆ ಮಾಡಿರುವುದು ಮುಂತಾದವು ಕಂಡುಬರುತ್ತವೆ. ಈತನ ವ್ಯಾಖ್ಯೆಯಲ್ಲಿ 'ಕೇಶಿರಾಜನು ಕೊಟ್ಟಿರುವ ಉದಾಹರಣೆಗಳಲ್ಲಿ ಕೆಲವನ್ನು ಲಿಂಗಣಾರಾಧ್ಯನು ಮಾರ್ಪಡಿಸಿರುವನು : ಕೆಲವನ್ನು ಹೆಚ್ಚಿಗೆ ಕೊಟ್ಟಿರುವನು;

ಕೆಲವನ್ನು ಬಿಟ್ಟಿರುವನು. ಈ ಅಂಶಗಳನ್ನು ಗ್ರಂಥದಿಂದ ಸುಲಭವಾಗಿ ತಿಳಿಯಬಹುದು'. 'ಶಬ್ದಮಣಿದರ್ಪಣ' ಕಾಲಾಪ ವ್ಯಾಕರಣಮಾರ್ಗದಿಂದ ನಿರೂಪಿತವಾದ್ದೆಂದು ಈ ವೃತ್ತಿಕಾರ ತಿಳಿಸಿದ್ದಾನೆ. ಆ ವ್ಯಾಕರಣದ ಅಭ್ಯಾಸದಲ್ಲಿ ಇದು ಉಪಯುಕ್ತ ಸೂಚನೆ.

ಇನ್ನೊಬ್ಬ ಟೀಕಾಕರ್ತೃ ನಿಟ್ಟೂರು ನಂಜಯ್ಯ. ಈತ ಶಮದ. ದ ಪ್ರತಿಸೂತ್ರದ ಶಬ್ದಾರ್ಥವನ್ನೂ ಅನ್ವಯಕ್ರಮಾನುಸಾರವಾಗಿ ಬರೆದಿರುವುದು ಮಾತ್ರವಲ್ಲದೆ, ವಿಶೇಷಾಂಶಗಳನ್ನೂ ಹೇಳಿದ್ದಾನೆ. ಪಾಠಭೇದ ಗುರುತಿಸಿರುವುದು ಸಹ ಉಂಟು. ಭಟ್ಟಾಕಳಂಕನ (೧೬೦೪) 'ಶಬ್ದಾನುಶಾಸನ'ದ ಸೂತ್ರಗಳನ್ನು ಉದಾಹರಿಸಿ, ಸ್ವತಂತ್ರ ವಿಮರ್ಶೋಕ್ತಿಗಳನ್ನು ಸೇರಿಸಿದ್ದಾನೆ. ಈತ ಸಂಸ್ಕೃತದಲ್ಲಿ 'ವೇದಾಂತಸಾರ', 'ವೀರಶೈವ ಚಿಂತಾಮಣಿ'ಎಂಬ ಕೃತಿಗಳನ್ನೂ ಬರೆದಿರುವಂತೆ ತಿಳಿಯುವುದು.

ಚೆನ್ನವೀರಕವಿಯ (ಸು. ೧೫೦೦) 'ಕಾಶಕೃತ್ಸ್ನಶಬ್ದಕಲಾಪಧಾತುಪಾಠ' ೧೦ ಪ್ರಕರಣಗಳಲ್ಲಿ ಸಂಸ್ಕೃತದ ಧಾತುರೂಪಗಳನ್ನು ಸಂಗ್ರಹಿಸಿ ಕನ್ನಡದಲ್ಲಿ ಅರ್ಥಗಳನ್ನು ಹೇಳಿದೆ. ಇದೊಂದು ಟೀಕಾಕೃತಿ. ಅನೇಕ ಅಪೂರ್ವ ಶಬ್ದರೂಪಗಳೂ ಶಬ್ದಗಳೂ ಇಲ್ಲಿವೆ. ವೀರಶೈವ ನಿಘಂಟುಕಾರರು ಕೆಲವರು ಜನಪ್ರಿಯವಾದ ಕೆಲವು ಕನ್ನಡ ನಿಘಂಟುಗಳನ್ನು ರಚಿಸಿದ್ದಾರೆ. 'ಕರ್ಣಾಟಕ ಶಬ್ದಸಾರ'ದ (ಸು. ೧೪೦೦) ಕರ್ತೃ ಯಾರೆಂದು ತಿಳಿಯದು. ಆರಂಭದ ಶೈವ ದೇವತಾವ್ಯೂಹದ ಪರ್ಯಾಯ ಪದಗಳ ಪ್ರಸ್ತಾಪ ಮತ್ತು ಆ ವ್ಯಾಜದಲ್ಲಿ, ಶೈವಸ್ತುತಿ ಮಾಡಿರುವುದರಿಂದ ಕವಿ ವೀರಶೈವನಿದ್ದರೂ ಇರಬಹುದು. ಗದ್ಯರೂಪದ ನಿಘಂಟಿನಲ್ಲಿ ಕವಿಚರಿತೆಕಾರರ ಪ್ರಕಾರ ಮತ್ತು ೧೮೯೭ರ ಮುದ್ರಣದ ಪ್ರಕಾರ ೬೭೬ ವಾಕ್ಯಗಳಿವೆ ; ಈಚಿನ ೧೯೭೬ರ ಮುದ್ರಣದ ಪ್ರಕಾರ ೬೬೬ ವಾಕ್ಯಗಳಿವೆ. ನಾಮಪದ, ಕ್ರಿಯಾಪದ ಮತ್ತು ಅವ್ಯಯಗಳಿಗೆ ಅರ್ಥವನ್ನು ಇಲ್ಲಿ ಹೇಳಿದೆ. ಬಿಡಿಯಾಗಿ ಕಠಿಣಪದಗಳಿಗೆ ಅರ್ಥ ಸೂಚಿಸಿರುವುದಲ್ಲದೆ,ಸಮಾನಾರ್ಥಕ ಪರ್ಯಾಯ ಶಬ್ದಗಳನ್ನು ಸಂಗ್ರಹಿಸಿ, ಒಗ್ಗೂಡಿಸಿ ಅರ್ಥ ಹೇಳಿರುವುದೂ ಉಂಟು. ರಚನೆಗೆ ಶಮದ. ವನ್ನು ಧಾರಾಳವಾಗಿ ಬಳಸಿಕೊಂಡಿದೆ. ಪ್ರಥಮ ಪರಿಷ್ಕರಣದ ಸಂಪಾದಕರು, 'ಇದರ ಆಧಾರದಿಂದಲೇ ತೋಂಟದಾರ್ಯನ ಕರ್ಣಾಟಕಶಬ್ದಮಂಜರಿಯೆಂಬ ನಿಘಂಟು ಹುಟ್ಟಿದ ಹಾಗೆ ತೋರುತ್ತದೆ' ಎಂದಿದ್ದಾರೆ.

'ಚತುರಾಸ್ಯ ನಿಘಂಟು' ಚತುರಾಸ್ಯ ಬೊಮ್ಮರಸನ (ಸು.೧೪೦೦) ರಚನೆ. ಈ ಕವಿ 'ವೀರಶೈವ ಕವಿಯೆಂದು ತೋರುತ್ತದೆ' ಎಂದು ಕವಿಚರಿತೆಕಾರರ ಸೂಚನೆ. ಬ್ರಾಹ್ಮಣನಾದ ಹಂಪರಸನ ಮಗ ತಿಪ್ಪರಸನ ಪ್ರೇರಣೆಯಿಂದ ಈ ನಿಘಂಟು ರಚನೆಯಾಯಿತೆಂದು ಕರ್ತೃವೇ ತಿಳಿಸಿದ್ದಾನೆ. (ಪದ್ಯ ೪). ಆತನೂ ಇದರ ರಚನೆಯಲ್ಲಿ ಪಾಲುಗೊಂಡಿರಬಹುದು ಎಂಬುದು 'ಸಂತಸದಿನಱಿಸಿದಂ ಕವಿ। ಚಿಂತಾಮಣಿಯೆನಿಪ ಸರಸಕವಿ ತಿಪ್ಪರಸಂ' ಎಂಬ ಪದ್ಯಭಾಗದಿಂದ (ಪದ್ಯ ೧೩೩) ತಿಳಿಯುವ ಹಾಗೆ ತೋರುತ್ತದೆ. ಕವಿಚರಿತೆಕಾರರು ಸಹ ಹಾಗೆಯೇ ಊಹಿಸಿದ್ದಾರೆ. ಈ ನಿಘಂಟಿನಲ್ಲಿ ದೇಶ್ಯ ಶಬ್ದಗಳಿಗೂ ತತ್ಸಮ ತದ್ಭವ ಶಬ್ದಗಳಿಗೂ ಅರ್ಥ ಬರೆದಿದೆ. ಕೃತಿ ಕಂದಪದ್ಯಗಳಿಲ್ಲಿದ್ದು, ಪ್ರತಿಪದ್ಯವೂ 'ಚತುರಾಸ್ಯಾ' ಎಂದು ಮುಗಿಯುತ್ತದೆ. ಈ ನಿಘಂಟು, 'ಶಬ್ದಮಣಿದರ್ಪಣ'ದ ನಿಘಂಟುಸದೃಶ ಭಾಗಗಳ ಸಂಗ್ರಹ ರೂಪವೇ ಎನ್ನುವಂತೆ, ಅದರ ಅವಲಂಬನೆಯಿಂದ ಸಿದ್ಧವಾಗಿರುವಂತೆ ಕಂಡುಬರುತ್ತದೆ. ಈಗ ಲಬ್ಧವಾದ ಇದರ ಹಸ್ತಪ್ರತಿಗಳ ಅವ್ಯವಸ್ಥೆಯಿಂದ, ಒಟ್ಟು ಪದ್ಯಗಳ ಸಂಖ್ಯೆ ಎಷ್ಟು ? ಆನುಪೂರ್ವಿಯಾವುದು ? ಎನ್ನುವುದು ಕ್ಲಿಷ್ಟವಾದ ವಿಷಯವಾಗಿದೆ.

'ಕಬ್ಬಿಗರ ಕೈಪಿಡಿ'ಎಂಬ ನಿಘಂಟಿನ ಕರ್ತೃ ಲಿಂಗಮಂತ್ರಿ (ಸು.೧೫೩೦). ಈತ ವೀರಶೈವ ಕವಿಯೆಂಬುದಾಗಿ ಕವಿಚರಿತೆಕಾರರು ಬರೆದಿದ್ದಾರೆ. ಆದರೆ ನಿಘಂಟು ಕರ್ತೃ ತಾನೇ ತನ್ನನ್ನು 'ಭೂಸುರವರ ವಿರೂಪಾಕ್ಷಸುತ ಲಿಂಗಮಂತ್ರಿಪಂ' (ಪ.೧೦೦) ಎಂಬುದಾಗಿ ಕರೆದುಕೊಂಡಿರುವುದರಿಂದ, ಇವನು ಬ್ರಾಹ್ಮಣ ಕವಿಯೆಂದು ತೋರುವುದು. ಹೆಸರುಘಟ್ಟದ ಹೊನ್ನಪ್ಪನ 'ಚಕೋರ ಚಂದ್ರಿಕೆ' ಟೀಕೆಯಲ್ಲಿಯೂ ಈ ಭಾಗದಲ್ಲಿ ಬ್ರಾಹ್ಮಣನೆಂದೇ ಅರ್ಥ ಬರೆದಿದೆ. ಇದು ನಿಜವಾದರೂ, ನಾದೀಪದ್ಯದಲ್ಲಿಯ ಹಂಪೆಯ ವಿರೂಪಾಕ್ಷ ಸ್ತುತಿಯಲ್ಲಿ 'ವಿಷ್ಣು ಇಂದ್ರ ಬ್ರಹ್ಮ ಮೊದಲಾದ ದೇವತೆಗಳಿಂದ ನಮಸ್ಕೃತನಾದ'ಶಿವನನ್ನು ವರ್ಣಿಸಿರುವುದರಿಂದಾಗಿ ನಿಘಂಟುಕರ್ತೃ ವೀರಶೈವನಿದ್ದರೂ ಇದ್ದಿರಬಹುದು ; ಈ ಕಾರಣವೇ ಕವಿಚರಿತೆಕಾರರು ಹಾಗೆ ಭಾವಿಸಿದ್ದಿರಬಹುದು.

ಈ ನಿಘಂಟುಕರ್ತೃ ಲಿಂಗಮಂತ್ರಿ, ವಿಜಯನಗರದ ಅಚ್ಯುತರಾಯನ (೧೫೩೦–೪೨) ಸಾಮಂತನಾಗಿದ್ದ ನುಗ್ಗೆಹಳ್ಳಿ ರಾಯಣರಾಜನ ಮಂತ್ರಿಯಾಗಿದ್ದನೆಂದು ತಿಳಿಯುವುದು. ಇವನು ತನ್ನನ್ನು ಸರಸಸಂಗೀತನಿಪುಣನೆಂದೂ; ಬಹುಲಿಪಿಜ್ಞನೆಂದೂ ಕರೆದುಕೊಂಡಿದ್ದಾನೆ. ಷಟ್ಪದಿಯಲ್ಲಿಯ ನಿಘಂಟುಗಳಲ್ಲಿ ಬಹುಶಃ ಇವನ ನಿಘಂಟೇ ಮೊದಲನೆಯದು. ಇದರಲ್ಲಿ ೧೦೦ ವಾರ್ಧಕಷಟ್ಪದಿಗಳಿವೆ. ದೇಶ್ಯಶಬ್ದಗಳಿಗೂ ತತ್ಸಮ ತದ್ಭವ ಶಬ್ದಗಳಿಗೂ ಅರ್ಥ ಹೇಳಿದೆ. ಶಬ್ದಮಣಿದರ್ಪಣದ ನಿಘಂಟು ರೂಪದ ಬೇರೆ ಬೇರೆ ಭಾಗಗಳ ಹಾಗೂ ವ್ಯಾಕರಣ ಭಾಗಗಳ ಶಬ್ದಗಳು ಇಲ್ಲಿ ಸಮಾವೇಶಗೊಂಡಿವೆ.

ವಿರಕ್ತ ತೋಂಟದಾರ್ಯನು (ಸು. ೧೫೬೦) ರಚಿಸಿರುವ ಹಲವು ಗ್ರಂಥಗಳಲ್ಲಿ 'ಕರ್ಣಾಟಕ ಶಬ್ದಮಂಜರಿ' ಸಹ ಒಂದು. ಅಚ್ಚ ಕನ್ನಡ ಗೂಢಪದ ತತ್ಸಮ ತದ್ಭವ ಶಬ್ದಗಳಿಗೆ ಕೆಲವಕ್ಕೆ ಇಲ್ಲಿ ೧೨೦ ವಾರ್ಧಕಷಟ್ಪದಿಯ ಪದ್ಯಗಳಲ್ಲಿ ಅರ್ಥ ಹೇಳಿದೆ. ನಿಘಂಟು ರಚನೆಗೆ ಶಬ್ದಮಣಿದರ್ಪಣದ ಪ್ರಯೋಜನವನ್ನು ವಿಶೇಷವಾಗಿ ಪಡೆದಿದೆ. ಇದಕ್ಕೆ ಈಗ ತಿಳಿದಿರುವಂತೆ ಮುನೇಗೌಡ ಪರಿಶೋಧಿಸಿದ 'ಕರ್ಣಾಟಕ ಶಬ್ದಮಂಜರೀಟೀಕು', ಹೆಸರುಘಟ್ಟದ ಹೊನ್ನಪ್ಪನ 'ವಿಬುಧಾನಂದಿನೀ', ಎನ್ ಆರ್. ಕರಿಬಸವಶಾಸ್ತ್ರಿಯ 'ಸುಜನೋಲ್ಲಾಸಿನೀ', ಶ್ರೀನಿವಾಸನ (?) 'ಕರ್ಣಾಟಕ ಶಬ್ದಮಂಜರೀಟೀಕು'ಎಂಬ ಟೀಕೆಗಳು ರಚನೆಯಾಗಿವೆ. ಇದು ಈ ನಿಘಂಟು ಅಭ್ಯಾಸಿಗಳಿಗೆ ತುಂಬ ಉಪಯುಕ್ತವಾಗಿದ್ದಿತೆನ್ನುವುದನ್ನು ಸೂಚಿಸುವುದು. ಕರ್ತೃ ತೋಂಟದಾರ್ಯನು ಬೋಳ ಬಸವೇಶ್ವರನ ಶಿಷ್ಯ; ತನ್ನನ್ನು 'ಷಟ್ಸ್ಥಲಾಚಾರಸಂಪನ್ನ', 'ಅಖಿಲ ಶಾಸ್ತ್ರಾರ್ಥಕೋವಿದ' ಮುಂತಾಗಿ ಹೊಗಳಿಕೊಂಡಿದ್ದಾನೆ.

ಗಂಗಾಧರ ಮಡಿವಾಳೇಶ್ವರರ (ಸು. ೧೮೭೦) ಹಲವು ಗ್ರಂಥಗಳಲ್ಲಿ ದೇಶ್ಯಶಬ್ದಗಳ ಕೋಶವಾದ 'ಶಬ್ದಮಂಜರಿ' ೧೮೯೦ರಲ್ಲಿ ಪ್ರಕಟವಾಗಿದೆ. ೧೯ನೆಯ ಶ.ದ ಉತ್ತರಾರ್ಧದ ಲಾಕ್ಷಣಿಕರಲ್ಲಿ 'ಶಬ್ದಾದರ್ಶ'ಎಂಬ ಜನಪ್ರಿಯ ವ್ಯಾಕರಣ ಕರ್ತೃವೂ ಕಾವ್ಯಾವಲೋಕನದ 'ಅರ್ಥಾಲಂಕಾರದಟೀಕೆ'ಯ ಕರ್ತೃವೂ ಆದ ಬಿ. ಮಲ್ಲಪ್ಪನವರು ಮುಖ್ಯರು. ನಾಗವರ್ಮನ 'ಕರ್ಣಾಟಕ ಕಾದಂಬರಿ'ಯನ್ನು ತಿದ್ದಿ ಮುದ್ರಿಸಿದವರೂ ಇವರೇ.

**ಲೌಕಿಕ ಶಾಸ್ತ್ರಗ್ರಂಥಗಳು**

ವೈದ್ಯ, ಜ್ಯೋತಿಷ, ಗಣಿತ, ಶಕುನ ಇತ್ಯಾದಿ ಲೌಕಿಕ ಶಾಸ್ತ್ರಗ್ರಂಥಗಳನ್ನು ರಚಿಸಿರುವ ವೀರಶೈವ ಕವಿಗಳು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಎದ್ದು ತೋರುತ್ತಿಲ್ಲ. ಈ ಶಾಖೆಯ ಲೌಕಿಕ ಗ್ರಂಥಗಳಲ್ಲಿ ಜೈನ ಮತ್ತು ಬ್ರಾಹ್ಮಣ ಕವಿಗಳಂತೆ ಇವರು ಏಕೆ ಉತ್ಸಾಹವನ್ನು ತೋರಿಸಲಿಲ್ಲವೆಂಬುದು ತಿಳಿಯದು. ತೀರ ಈಚೆಗೆ ಅರಮನೆ ಮರಿಸೆಟ್ಟಿ (೧೯ನೆಯ ಶ.) 'ವೈದ್ಯಸಂಗ್ರಹ' ರಚಿಸಿದ್ದಾನೆ; ಇನ್ನೂ ಕೆಲವರು ಹೀಗೆಯೇ ಗ್ರಂಥ ರಚನೆಮಾಡಿರಬಹುದು.

**ಧಾರ್ಮಿಕ ಗ್ರಂಥಗಳು**

ವೀರಶೈವ ಕವಿಗಳು ಜೈನಕವಿಗಳಿಗಿಂತ ಅಧಿಕವಾಗಿ ಸಿದ್ಧಾಂತ ಮತ್ತು ತಾತ್ತ್ವಿಕ ಗ್ರಂಥಗಳ ರಚನೆಗೆ ತೊಡಗಿದಂತೆ ತೋರುತ್ತದೆ. ವಚನಸಾಹಿತ್ಯದ ಬಹುಭಾಗವು ಸಿದ್ಧಾಂತ ಮತ್ತು ತಾತ್ತ್ವಿಕ ವಿಷಯಗಳಿಂದ ತುಂಬಿಕೊಂಡಿದ್ದು, ಅವುಗಳ ಪ್ರತಿಪಾದನ ವಿಧಾನವೂ ಪರಿಭಾಷೆಯೂ ಸಂಸ್ಕೃತ ವಾಙ್ಮಯದ ವೇದೋಪನಿಷತ್ತುಗಳ, ಪುರಾಣಾಗಮಾದಿಗಳ ವಿಶೇಷ ಪ್ರಭಾವವನ್ನೂ ಪ್ರತಿಬಿಂಬಿಸುತ್ತವೆ. ವಚನಕವಿಗಳಲ್ಲಿ ಪ್ರಮುಖರೂ ಇತರ ಹಲವರೂ ಸಂಸ್ಕೃತದ ಪ್ರಮಾಣಗ್ರಂಥಗಳ ಹಾಗೂ ಅಧ್ಯಾತ್ಮ ಗ್ರಂಥಗಳ ಪರಿಚಯವನ್ನು ಪಡೆದಿದ್ದರೆಂಬುದಕ್ಕೆ ಸಾಕ್ಷ್ಯಗಳು ದೊರೆಯುತ್ತವೆ. ವಚನಗಳಲ್ಲಿಯೂ ವಚನೇತರ ವೀರ ಶೈವ ಸಾಹಿತ್ಯದಲ್ಲಿಯೂ ಶ್ರುತಿಸ್ಮೃತ್ಯಾದಿಗಳ ಸಾರಾನುವಾದವನ್ನು ಮಾಡಿಕೊಡುವುದರ ಜತೆಗೆ ಎಡೆಯೆಡೆಯಲ್ಲಿ ಅವುಗಳ ಸೂಕ್ತಿಗಳನ್ನು ಪ್ರಮಾಣಗಳಾಗಿ ಉದ್ಧರಿಸಿರುವುದುಂಟು; ಟೀಕೆಗಳನ್ನು ಬರೆದಿರುವುದುಂಟು. ಭಾರತೀಯ ಸಂಸ್ಕೃತಿ, ಮತ ಧರ್ಮ ಮತ್ತು ವಿಶಿಷ್ಟ ಆಚರಣೆಗಳು ಶ್ರುತಿಸ್ಮೃತ್ಯಾದಿಗಳ ಅವಲಂಬನದಿಂದಲೇ, ಆರ್ಷೇಯ ಕಾಲದಿಂದ ಬೆಳೆದುಬಂದಿರುವುದರಿಂದ ವಚನಸಾಹಿತ್ಯವೂ ಅವುಗಳ ಪ್ರೇರಣೆಗೆ ಒಳಗಾಗಿರುವುದು ಸಹಜವೇ ಆಗಿದೆ. ಬಸವಾದ್ಯರ ವಚನಗಳಲ್ಲಿಯೂ ವಚನೇತರ ರಚನೆಗಳಲ್ಲಿಯೂ ಮಾತ್ರವಲ್ಲದೆ ವಿಶಿಷ್ಟ ರೀತಿಯ ವಚನ ಸಂಕಲನಗಳಲ್ಲಿಯೂ ಇದನ್ನು ಗಮನಿಸಬಹುದಾಗಿದೆ. ನಿಜಗುಣ ಶಿವಯೋಗಿಯಂತಹ ವೀರಶೈವ ವೇದಾಂತಿಗಳು ಸಂಸ್ಕೃತ ಭಾಷೆಯ ಶಾಸ್ತ್ರ ಮತ್ತು ವೇದಾಂತ ವಿಷಯಗಳಲ್ಲಿ ಅಗಾಧವಾದ ವ್ಯುತ್ಪತ್ತಿಯನ್ನು ಗಳಿಸಿದ್ದರು. ಕೆಲವು ವೀರಶೈವಕವಿಗಳು ಶೈವಾಗಮ ವಿಷಯಗಳನ್ನು ಅನುವಾದಿಸಿಯೋ ಸಂಗ್ರಹಿಸಿಯೋ ವ್ಯಾಖ್ಯಾನಿಸಿಯೋ ಇದ್ದರೆ, ಇನ್ನು ಕೆಲವರು ಸ್ವತಂತ್ರವಾಗಿಯೇ ಸಂಸ್ಕೃತದಲ್ಲಿ ಸಿದ್ಧಾಂತಗ್ರಂಥಗಳನ್ನು ರಚಿಸಿದ್ದಾರೆ. ಕೆಲವರು ತಮ್ಮ ಕೃತಿಗಳನ್ನೇ ವೇದವೇದಾಂತಗಳ ಸಾರಸಂಗ್ರಹವೆಂದು ಉಗ್ಗಡಿಸಿದ್ದಾರೆ. ಈಗ ವಿವರದಲ್ಲಿ ವೀರಶೈವ ಕವಿಗಳ ಇಂಥ ರಚನೆಗಳನ್ನು ನಾವು ಗಮನಿಸಬಹುದು.

ಸೈದ್ಧಾಂತಿಕ ಅಥವಾ ತಾತ್ತ್ವಿಕ ವಿಷಯನಿರೂಪಣೆಯಲ್ಲಿ ಮೊದಲ ದೃಢವಾದ ಪ್ರಯತ್ನ ಕಂಡುಬರುವುದು ಷಟ್ಸ್ಥಲ ಸಿದ್ಧಾಂತ ಪ್ರತಿಪಾದಕನಾದ ಚೆನ್ನಬಸವಣ್ಣನ (ಸು. ೧೧೬೦) ಕೆಲವು ರಚನೆಗಳಲ್ಲಿ. ಮುಖ್ಯವಾಗಿ ಆತನ 'ಕರಣಹಸಿಗೆ', 'ಮಿಶ್ರಾರ್ಪಣ', 'ಪದಮಂತ್ರಗೋಪ್ಯ', 'ಪಿರಿಯಮಂತ್ರಗೋಪ್ಯ', 'ಸಕೀಲದ ವಚನ'ಗಳು ಇವುಗಳಲ್ಲಿ ಅದನ್ನು ಗಮನಿಸಬಹುದು. 'ಕರಣಹಸಿಗೆ'ಎಂದರೆ ತತ್ತ್ವವಿಭಾಗ ಎಂದರ್ಥ. ವಿಜಯಭೈರವಿಯೆಂಬ ಆಗಮದಿಂದ ಇದಕ್ಕೆ ವಿಷಯವನ್ನು ಸಂಗ್ರಹಿಸಿದೆಯೆಂದು ಒಂದು ಸೂಚನೆಯುಂಟು. ಪ್ರಣವ, ಪಂಚಭೂತಗಳು, ಜಗತ್ತು ಇತ್ಯಾದಿಯಾಗಿ ೪೦ ತತ್ತ್ವಗಳಿಗೆ ಸಂಬಂಧಿಸಿದ ಭಾಗಗಳು ಇಲ್ಲಿ ಬರುತ್ತವೆ. ದಶನಾಡಿಗಳು, ಅಷ್ಟತನುಗಳು, ಅರಿಷಡ್ವರ್ಗಗಳು–ಇತ್ಯಾದಿಗಳ ವಿವರಗಳು ಇದ

ರಲ್ಲಿ ಬರುವುದರಿಂದ ಇದಕ್ಕೆ ಒಂದು ಕೋಶದ ಸ್ವರೂಪ ಬಂದಿದೆ. 'ಮಿಶ್ರಾರ್ಪಣ'ವೆಂಬ ಗದ್ಯಕೃತಿ 'ಪದಾರ್ಥದ ಅರ್ಪಣ' ಕುರಿತದ್ದು. ಲಿಂಗಕ್ಕೆ ಸಮರ್ಪಿಸಬೇಕಾದ ಪದಾರ್ಥವೆಂದು ಆಶಯ. ಲಿಂಗಾರ್ಪಣದ ಸಕೀಲಗಳನ್ನು ಹೇಳುವ ಶಾಸ್ತ್ರವಿದು. ಕರಣಗಳೆಲ್ಲ ಮಂತ್ರತತ್ತ್ವ ರೂಪಗಳಾಗಿ ಲಿಂಗಾರ್ಪಣೆಗೆ ಬೇಕಾದ ಪದಾರ್ಥಗಳಾಗುತ್ತವೆ. ಸರ್ವವನ್ನೂ ಲಿಂಗಾರ್ಪಿತ ಮಾಡಿ ಪರಮಾತ್ಮ ನೀಡಿರುವ ಸ್ಥಿತಿಯುಂಟುಮಾಡಿಕೊಳ್ಳುವುದೇ ಕಾಯ ಕರಣ ಮತ್ತು ಭಾವಗಳ ಅರ್ಪಣವೆಂಬ ತ್ರಿವಿಧ ಮಿಶ್ರಾರ್ಪಣದ ಉದ್ದೇಶ. ಛಂದೋಬದ್ಧವಾದ ಏಳು ಗೀತಗಳನ್ನು ಒಳಕೊಂಡಿರುವ 'ಮಂತ್ರಗೋಪ್ಯ' ಶಿವಶರಣನ ಭಕ್ತಿ, ಸಾಧನೆ ಮತ್ತು ಅವುಗಳ ರಹಸ್ಯಗಳನ್ನು ವಿವರಿಸುವ ಉದ್ದೇಶದಿಂದ ಕೂಡಿದ್ದು. 'ಪರಶಿವನನ್ನು ನೆನೆಯುವವನು ಸಂಸಾರವ್ಯಾಪ್ತಿಯಿಂದ ಚಿತ್ತವನ್ನು ವಿಮುಖಗೊಳಿಸಿ ತನ್ನಲ್ಲಿ ಸಂಬಂಧಿಸಿಕೊಳ್ಳುವ ನೆನಹೇ ಮಂತ್ರ ; ಗೋಪ್ಯವೆಂದರೆ ರಹಸ್ಯಾರ್ಥ'. ಒಟ್ಟಿನಲ್ಲಿ ಶಿವಭಕ್ತಿ, ಶಿವಯೋಗ, ಶಿವಜ್ಞಾನ ಸಂಬಂಧವಾದ ರಹಸ್ಯಗಳನ್ನು ಬೋಧಿಸುವ ತಾತ್ತ್ವಿಕ ಕೃತಿಯೇ ಮಂತ್ರಗೋಪ್ಯವೆನ್ನಬಹುದು. 'ಸಕೀಲದ ವಚನಗಳು' ಇಷ್ಟಲಿಂಗದ ರಹಸ್ಯವನ್ನು ಪರಿಚಯಿಸುವ ವಚನಗಳಾಗಿವೆ. ಇಷ್ಟಲಿಂಗದ ವೃತ್ತ, ಕಲ, ವರ್ತುಳ ಇತ್ಯಾದಿ ಷಡ್ವಿಧಸ್ಥಾನಗಳಲ್ಲಿನ ೬೪ ಸಕೀಲಗಳನ್ನು ಇಲ್ಲಿ ವಿವರಿಸಲಾಗಿದೆ. ಇಂತಹ ಕೃತಿಗಳಿಂದ ಚೆನ್ನಬಸವಣ್ಣನು ವೀರಶೈವ ಸಿದ್ಧಾಂತದ ಪ್ರತಿಪಾದಕರಲ್ಲಿ ಅಗ್ರಗಣ್ಯನೆನಿಸಿದ್ದಾನೆ.

ಅಲ್ಲಮಪ್ರಭು (ಸು. ೧೧೬೦) ವಿನ ಹೆಸರಿನಲ್ಲಿಯೂ, ವಚನಗಳ ಜೊತೆಗೆ 'ಮಂತ್ರಗೋಪ್ಯ'ವೆಂಬ ೨೭ ಪದಗಳ ರಚನೆಯೂ ಇದೆ. ಇವೂ ಛಂದೋಬದ್ಧವಾಗಿದ್ದು ಸಂಕೇತಗಳ ಮೂಲಕ ತತ್ತ್ವವಿಚಾರವನ್ನು ಪ್ರಕಟಿಸಿರುವುದು ಕಾಣುತ್ತದೆ. ಈ ಪದ್ಧತಿಯಿಂದಾಗಿ ತತ್ತ್ವಗಳಿಗೆ ಚಿಂತನೆಗಳಿಗೆ ಒಂದು ಘನಿಭೂತವಾದ ರೂಪ ಸಾಧ್ಯವಾಗಿದೆಯೆಂದು ಹೇಳಬೇಕು. ಸಿದ್ಧರಾಮನ (ಸು. ೧೧೬೦) ಮಿಶ್ರಸ್ತೋತ್ರ, ಬಸವಸ್ತೋತ್ರ, ಅಷ್ಟಾವರಣಸ್ತೋತ್ರಗಳೆಂಬ ಮೂರುವಿಧದ ತ್ರಿವಿಧಿಗಳಲ್ಲಿ, ಮುಖ್ಯವಾಗಿ ಕೊನೆಯದರಲ್ಲಿ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ ಮುಂತಾದವುಗಳ ಮಹಿಮೆಯನ್ನು ವಿವರಿಸುವ ಮಟ್ಟಿಗೆ ಅಲ್ಲಿ ಶಾಸ್ತ್ರದೃಷ್ಟಿಗೋಚರಿಸುತ್ತದೆ. ಈ ಮಾತು ಮಹಾದೇವಿಯಕ್ಕನ (೧೧೬೦) 'ಯೋಗಾಂಗ ತ್ರಿವಿಧಿ' 'ಸೃಷ್ಟಿಯ ವಚನ' ಇವುಗಳಲ್ಲಿಯ ತಾತ್ತ್ವಿಕ ಚಿಂತನೆಯ ದೃಷ್ಟಿಯಿಂದಾಗಿ. ಅವಕ್ಕೆ ಕೂಡ ಅನ್ವಯಿಸುತ್ತದೆ. ಕೆರೆಯ ಪದ್ಮರಸನ (ಸು. ೧೨೦೦) 'ದೀಕ್ಷಾಬೋಧೆ' ಗುರುಶಿಷ್ಯಸಂವಾದರೂಪದಲ್ಲಿ ಶಿವಭಕ್ತರ ಶೀಲವನ್ನೂ ಮಲತ್ರಯಗಳು, ಪರತತ್ತ್ವ ಮತ್ತು ಅಷ್ಟಾವರಗಳ ಸ್ವರೂಪವನ್ನೂ ಪ್ರತಿಪಾದಿಸಿರುವ ಒಂದು ಸೈದ್ಧಾಂತಿಕ ಗ್ರಂಥವಾಗಿದೆ. ಸಂಸ್ಕೃತದ ಪ್ರಮಾಣ ವಾಕ್ಯಗಳನ್ನು 'ಸಾಕ್ಷಿ'ಗಳೆಂದು ಅಲ್ಲಲ್ಲಿ ಉದ್ಧರಿಸಿದ್ದು ನಿರೂಪಣೆ ಮಂದಾನಿಲ ಮತ್ತು ಇತರ ರಗಳೆಗಳಲ್ಲಿದೆ.

ಮುಂದೆ ವೀರಶೈವ ಸೈದ್ಧಾಂತಿಕ ಗ್ರಂಥಗಳನ್ನು ರಚಿಸಿದವರಲ್ಲಿ ಪಾಲ್ಕುರಿಕೆ ಸೋಮನಾಥನು (ಸು. ೧೩೦೦) ಪ್ರಮುಖನು. ಈತನ ಬಿರುದುಗಳಲ್ಲಿ 'ತತ್ತ್ವವಿದ್ಯಾಕಲಾಪ' ಎಂಬುದು ಈ ದೃಷ್ಟಿಯಿಂದ ಸಾರ್ಥಕವಾದುದು. 'ಶೀಲ ಸಂಪಾದನೆ'ಯೆಂಬ ವಚನರೂಪ ಗ್ರಂಥದಲ್ಲಿ, ವೀರಶೈವರ ೬೪ ಶೀಲಗಳನ್ನೂ 'ಸಹಸ್ರಗಣನಾಮ'ದಲ್ಲಿ ಪ್ರಮಥಗಣ ರುದ್ರಗಣ ಆದಿಯಾದ ಶಿವಗಣಗಳನ್ನು ಕುರಿತಿದೆ. ವೀರಶೈವಸೈದ್ಧಾಂತಿಕ ಗ್ರಂಥಗಳು ಒಂದು ಉತ್ಸಾಹಪೂರ್ಣ ವಾತಾವರಣದಲ್ಲಿ ನಿರ್ಮಾಣವಾಗತೊಡಗಿದ್ದು ೧೫ ನೆಯ ಶತಮಾನದಲ್ಲಿ ಎಂಬುದು ತಿಳಿದಿದೆ. ವಚನಕಾರರ ರಚನೆಗಳನ್ನು ಸಂರಕ್ಷಿಸುವ ನಾನಾ ಪ್ರಯತ್ನಗಳು ನಡೆದುದು ಈ ಅವಧಿಯಲ್ಲಿ. "ಕಾಲ ಕಳೆಯುತ್ತಿದ್ದಂತೆ ಗಹನ ಗಂಭೀರವಾದ ವಚನಗಳ ಅರ್ಥವು ವಿವರಣೆಯಿಲ್ಲದೆ ತಿಳಿಯುವುದಾಗದೆ, ಒಂದು ವೇಳೆ ಅರ್ಥ ಮಾಡಿದರೂ ಮೂಲಕೃತಿಯ ಆಶಯಕ್ಕೆ ವಿಭಿನ್ನವೂ ವಿರುದ್ಧವೂ ಆದ ಅರ್ಥವನ್ನು ಹೊರಡಿಸುವ ಶಂಕೆಯಿದ್ದುದರಿಂದ, ಬಾಯಿಂದ ಬಾಯಿಗೆ ಪ್ರತಿಯಿಂದ ಪ್ರತಿಗೆ ವಚನಗಳ ಪಾಠದಲ್ಲಿಯೂ ವ್ಯತ್ಯಾಸಗಳು ತಲೆದೋರುತ್ತಿದ್ದುದರಿಂದ, ವಚನಗಳಿಗೆ ಅಧಿಕೃತವಾದ ಟೀಕೆ ವ್ಯಾಖ್ಯಾನಗಳನ್ನು ಅಧಿಕಾರಿಗಳಾದವರು ಬರೆಯಬೇಕೆಂಬುದಾಗಿ, ವಚನಗಳ ಅರ್ಥವನ್ನು ವೇದಾಗಮಗಳ ಅರ್ಥದಂತೆ ನಿಷ್ಕೃಷ್ಟಗೊಳಿಸಬೇಕೆಂಬುದಾಗಿ, ವಚನಗಳ ಮೂಲಪಾಠವನ್ನು ಕಾಪಾಡಬೇಕೆಂಬುದಾಗಿ ಕೆಲವು ಪಂಡಿತರಿಗೆ ಸಹಜವಾಗಿ ತೋರಿರಬಹುದು. ಶ್ರುತಿಪ್ರಾಮಾಣ್ಯವನ್ನೊಲ್ಲದ ವೀರಶೈವ ಧರ್ಮವು ವಚನವಾಙ್ಮಯವನ್ನೆ ಶ್ರುತಿಯ ಸ್ಥಾನದಲ್ಲಿ ಸ್ಥಾಪಿಸಿ ಧರ್ಮದ ಅಸ್ತಿವಾರವನ್ನು ಭದ್ರಗೊಳಿಸಲು ಬಗೆಯಿತು. ಈಯವಧಿಯಲ್ಲಿಯೇ ಸಾಹಿತ್ಯವಾಗಿದ್ದ ವಚನಕೃತಿಗಳು ಶಾಸ್ತ್ರದ ರೂಪರೇಷೆಗಳನ್ನೂ ಮಹತ್ತ್ವವನ್ನೂ ತಳೆದಿದ್ದು ಎನ್ನಬಹುದು."

ಶ್ರೇಷ್ಠರ ವಚನಗಳನ್ನು ಸಿದ್ಧಾಂತ ಮತ್ತು ಆಚರಣೆಯ ದೃಷ್ಟಿಯಿಂದ ಸಾಧ್ಯವಿದ್ದ ಮಟ್ಟಿಗೆ ಸಂಗ್ರಹಿಸುವುದು, ಸಂಯೋಜಿಸುವುದು, ಟೀಕೆ ವ್ಯಾಖ್ಯಾನಗಳನ್ನು ಬರೆಯುವುದು ಮುಂತಾದ ಕೆಲಸಗಳು ಆರಂಭವಾಗಿ ೧೫ ರಿಂದ ೧೬ ನೆಯ ಶತಮಾನದ ನಡುವೆ ಸಂಕಲನ ವ್ಯಾಖ್ಯಾನಯುಗವೊಂದು ಪ್ರವರ್ತಿಸಿತು. ವಿಜಯನಗರದ ಅರಸು ಪ್ರೌಢದೇವರಾಯನಲ್ಲಿ(೧೪೧೯-೪೬) ದಂಡಾಧೀಶನಾಗಿದ್ದ ಜಕ್ಕಣಾರ್ಯನ ಪ್ರಾರ್ಥನೆಯಂತೆ ಮಹಾಲಿಂಗದೇವನು (ಸು. ೧೪೩೫) ಬಸವ, ಚನ್ನಬಸವ, ಅಲ್ಲಮಪ್ರಭು ಮೊದಲಾದವರ ವಚನಗಳನ್ನು ೧೦೧ ಸ್ಥಲಗಳ ವಿಭಾಗ ಕ್ರಮವನ್ನು ಅನುಸರಿಸಿ 'ಏಕೋತ್ತರ ಶತಸ್ಥಲ' ಎಂಬ ಹೆಸರಿನಲ್ಲಿ ಸಂಕಲಿಸಿದನು. ಅಲ್ಲಮನ ವಚನಗಳಿಗೆ 'ಪ್ರಭುದೇವರ ಷಟ್ಸ್ಥಲಜ್ಞಾನಚಾರಿತ್ರವಚನವಟೀಕೆ' ರಚಿಸಿದನು.

ಮಹಾಲಿಂಗದೇವನ ಶಿಷ್ಯನಾದ ಕುಮಾರ ಬಂಕನಾಥನೂ (ಸು. ೧೪೩೦) ಅಲ್ಲಮನ ವಚನಗಳಿಗೆ ಒಂದು ಟೀಕೆ ರಚಿಸಿದನು. 'ಷಟ್ಸ್ಥಲೋಪದೇಶ' ಎಂಬ ಒಂದು ಸ್ವತಂತ್ರ ಗ್ರಂಥವನ್ನೂ ರಚಿಸಿದನು. ಸ್ವತಃ ಜಕ್ಕಣಾರ್ಯನೇ (ಸು.೧೪೩೦) "ಪುರಾತನರ ಮಹಾ ವಚನಂಗಳೊಳಗೆ......ಸಾರಾಯವಾದ ನೂಱೊಂದು ಸ್ಥಲವಚನಂಗಳಂ ತೆಗೆದುಕೊಂಡು ಸೂತ್ರವಿಟ್ಟು ಸಂಗ್ರಹಿಸಿ" ತಾನೂ ಒಂದು 'ಏಕೋತ್ತರ ಶತಸ್ಥಲ'ವನ್ನು ಸಂಪಾದಿಸಿದಂತೆ ತಿಳಿದುಬರುತ್ತದೆ. 'ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ'ದ ಕರ್ತೃ ಶಾಂತಲಿಂಗ ದೇಸಿಕನ ಪ್ರಕಾರ (೧೬೭೨) ಈತನು '...ಪ್ರಭುದೇವರು ನಿರೂಪಿಸಿದ ವಚನಂಗಳಿಗೆಯೂ ಸೂತ್ರಸ್ಥಲವಿಟ್ಟು ಅರ್ಥಪದ್ಧತಿಯ ವಾಖ್ಯಾನಮಂ' ಮಾಡಿದ್ದುದು ತಿಳಿಯುತ್ತದೆ. ಮೂರನೆಯ ಇನ್ನೂ ಒಂದು 'ಏಕೋತ್ತರ ಶತಸ್ಥಲ'ವು 'ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ'ವೆಂಬ ಹೆಸರಿನಲ್ಲಿ ದೊರೆಯುತ್ತದೆ. ಇದರಲ್ಲಿ ಕೃತಿಕರ್ತನ ಹೆಸರಾಗಲಿ, ಅವನ ಕಾಲ ದೇಶಗಳ ವಿಚಾರವಾಗಲಿ ತಿಳಿದಿಲ್ಲ. ಇದರಲ್ಲಿ ೧೦೨ ವಚನಗಳನ್ನು ಸಂಗ್ರಹಿಸಿದ್ದು, ಇಲ್ಲಿಯ ೧೦೧ ಸ್ಥಲಗಳಲ್ಲಿ 'ಸೂತ್ರ ವಚನ ಪದಪದ್ಯಂಗಳ್ ೫೧೯' ಎಂದು ತಿಳಿಯುತ್ತದೆ.

ಏಕೋತ್ತರ ಶತಸ್ಥಲವೆಂಬ ರಚನೆ ವೀರಶೈವದ ೪೪ ಅಂಗಸ್ಥಲಗಳು ಮತ್ತು ೫೭ ಲಿಂಗಸ್ಥಲಗಳಿಗೆ ಸಂಬಂಧಪಟ್ಟಿದ್ದು ಅಂಗಸ್ಥಲದಲ್ಲಿ ಭಕ್ತ, ಮಾಹೇಶ್ವರ ಮೊದಲಾದ ಷಟ್ಸ್ಥಲ ಸಂಬಂಧದ ವಿವರಗಳೂ ಲಿಂಗಸ್ಥಲದಲ್ಲಿ ಆಚಾರಲಿಂಗ, ಗುರುಲಿಂಗ ಮೊದಲಾದ ೬ ಸ್ಥಲಗಳಿಗೆ ಸಂಬಂಧಿಸಿದ ವಿವರಗಳೂ ಬಂದಿರುತ್ತವೆ. ಈ ಸಂಕಲನದಲ್ಲಿ ಸ್ಥಲಾನುಗುಣವಾಗಿ ಶರಣರ ವಚನಗಳು ಸಂಗ್ರಹಗೊಂಡಿರುತ್ತವೆ. ಪೂರ್ವಸ್ಥಲದ ಅರ್ಥವನ್ನು ಉತ್ತರಸ್ಥಲಕ್ಕೆ ವಿರಳವಿಲ್ಲದೆ ಸೂಚಿಸಿ ಕೊಡುವ ಸೂತ್ರಗಳು ಬಂದಿರುತ್ತವೆ. ಪ್ರೌಢದೇವರಾಯನ (೧೪೧೯–೪೬) ಮಹಾಪ್ರಧಾನಿಯಾಗಿದ್ದ ಲಕ್ಕಣ್ಣದಂಡೇಶನು (೧೪೨೪) ರಚಿಸಿರುವ 'ಶಿವತತ್ತ್ವ ಚಿಂತಾಮಣಿ' ಕವಿಯ ಅಭಿಪ್ರಾಯದಂತೆ. 'ವಿತತ ವೇದಾಗಮ ಪುರಾತನೋಕ್ತಿಗಳ ಸಮುಂತದ ಸಾರಾಯ', 'ಸಕಲವೇದಾಗಮದ ಶಿಖಾಸೂತ್ರ'. ವಾರ್ಧಕಷಟ್ಪದಿಯ ಈ ದೊಡ್ಡ ಗ್ರಂಥದಲ್ಲಿ, ಷಟ್ಸ್ಥಲ, ಲಿಂಗಧಾರಣ, ಧರ್ಮಾಧರ್ಮವಿವರಣ ಮುಂತಾದ ಆಚಾರ ವಿಚಾರಗಳ ನಿರೂಪಣೆ ವಿಸ್ತಾರವಾಗಿ ಬಂದಿರುವುದರಿಂದ ವೀರಶೈವ ತಾತ್ತ್ವಿಕ ಗ್ರಂಥಗಳಲ್ಲಿ ಈ ಗ್ರಂಥಕ್ಕೆ ಹಿರಿಯ ಸ್ಥಾನವಿದೆ. ಅಲ್ಲದೆ ಕೆಲವು ಪ್ರತ್ಯೇಕ ಸಂಧಿಗಳಲ್ಲಿ ನಾನಾ ವೀರಶೈವ ಧಾರ್ಮಿಕ ತಾತ್ತ್ವಿಕ ವಿಚಾರಗಳು ಪ್ರತ್ಯೇಕವಾಗಿ ನಿರೂಪಿಸಲ್ಪಟ್ಟಿರುವುದರಿಂದ, ಗ್ರಂಥದ ಉತ್ತರಾರ್ಧ ಭಾಗದಲ್ಲಿ ಅವು ಸಮಾವೇಶವಾಗಿರುವುದರಿಂದ ಅದನ್ನು ಪ್ರತ್ಯೇಕವಾಗಿಯೇ ಅಭ್ಯಾಸ ಮಾಡುವವರಿಗೆ ಅನುಕೂಲವಾಗಿಯೂ ಇದೆ.

ಕಲ್ಲುಮಠದ ಪ್ರಭುದೇವನ (ಸು. ೧೪೩೦) 'ಲಿಂಗಲಿಂಗಾ ವಿಲಾಸ ಚಾರಿತ್ರ'ಷಟ್ಸ್ಥಲ ಪ್ರತಿಪಾದಕವಾದ ಇನ್ನೊಂದು ಕೃತಿ. ಸು. ೩೬ ವಚನಕಾರರಿಂದ ಆಯ್ದ ೭೭೦ (೭೨೫) ವಚನಗಳನ್ನು ಸಂಕಲಿಸಿ, ಕ್ಲಿಷ್ಟವೆಂದು ತೋರಿದ ವಚನಗಳಿಗೆ ಟೀಕೆಯನ್ನು ಬರೆದು ೧೬ ಸ್ಥಲಗಳ ವಿಭಾಗವಿರುವಂಥ ಈ ಗ್ರಂಥವನ್ನು ರಚಿಸಿದ್ದಾನೆ. ನಿಷ್ಕಲಲಿಂಗ ಆದಿಯಾದ ಷೋಡಶಸ್ಥಲಗಳಲ್ಲಿಯೂ ಸೂತ್ರ ಪುರಾಣಾಗಮಾದಿಗಳಿಂದ ಎತ್ತಿಕೊಟ್ಟ ಸಂಸ್ಕೃತ ಸೂಕ್ತಿಗಳು ಮತ್ತು ಅವುಗಳ ಟೀಕೆ, ಆಯಾ ಸ್ಥಲ ಸಂಬಂಧಿಯಾದ ಪುರಾತನರ ವಚನಗಳು ಮತ್ತು ಅವುಗಳ ಟೀಕೆ ಈ ಕ್ರಮದಲ್ಲಿ ಗ್ರಂಥರಚನೆಯಾಗಿದೆ. ಏಕೋತ್ತರ ಶತಸ್ಥಲಗಳ ಪ್ರತಿಯಾಗಿ ಷೋಡಶಸ್ಥಲಗಳನ್ನು ಕಲ್ಪಿಸಿರುವುದೂ ಬೇರೆ ಬೇರೆ ವಚನಕಾರರ ವಚನಗಳಿಗೆ ಒಂದು ಕಡೆಯಲ್ಲಿ ವಿವರವಾದ ಟೀಕೆಯನ್ನು ಬರೆದಿರುವುದೂ ಗ್ರಂಥದ ಹೆಸರನ್ನು 'ಲಿಂಗಲೀಲಾವಿಲಾಸಚಾರಿತ್ರ' ಎಂದಿರುವುದೂ ವಚನಸಂಕಲನ ಕಾರ್ಯದಲ್ಲಿ ಹೊಸ ಹಾದಿಯನ್ನು ತುಳಿದಿರುವುದರ ಸ್ಪಷ್ಟ ಸೂಚನೆಗಳಾಗಿವೆ. ಪೂರ್ವಾಪರಸ್ಥಲಗಳಲ್ಲಿ ವಿವೃತವಾಗಿರುವ ವೀರಶೈವ ಸಿದ್ಧಾಂತ ಮತ್ತು ವಿಚಾರಗಳೇ ಸಂಕ್ಷಿಪ್ತವಾಗಿ ಸ್ಥಲಾದಿಯ ಸೂತ್ರವಾಗಿದ್ದು, ಅದರ ಮುಂದೆ ಶೈವಾಗಮ ಪುರಾಣಾದಿಗಳ ಸಂಸ್ಕೃತ ಸೂಕ್ತಿಗಳು ಸಟೀಕವಾಗಿರುತ್ತಿದ್ದು, ಇವುಗಳ ತರುವಾಯದಲ್ಲಿ ವಚನಗಳು ಸಟೀಕವಾಗಿ ಕಾಣಿಸಿಕೊಳ್ಳುತ್ತವೆ. ಪ್ರಭುದೇವನು 'ವೇದಾಗಮಂಗಳು ಜಡ್ಡುಗೊಜಡೆಂದು' ತಿರಸ್ಕರಿಸಿ ಪುರಾತನರ ವಚನಗಳನ್ನು 'ವಚನಾಗಮ'ವೆಂದು ಪುರಸ್ಕರಿಸಿದ್ದು ಗಮನಾರ್ಹವಾದ ವಿಷಯವಾಗಿದೆ. 'ಪ್ರಭುದೇವರ ಮಂತ್ರಗೋಪ್ಯ ಟೀಕೆ', ಈತನು ಅಲ್ಲಮಪ್ರಭುವಿನ ಮಂತ್ರಗೋಪ್ಯದ ಪದ್ಯಗಳಿಗೆ ಬರೆದ ಒಂದು ವ್ಯಾಖ್ಯಾನಗ್ರಂಥವಾಗಿದೆ. ಪ್ರತಿ ಪದ್ಯಕ್ಕೆ ಟೀಕೆ ತಾತ್ಪರ್ಯಗಳನ್ನು ಬರೆದಿರುವಂತೆ ತೋರುವುದು.

ಜಕ್ಕಣಾರ್ಯನ (ಸು. ೧೪೩೦) 'ಏಕೋತ್ತರ ಶತಸ್ಥಲ'ದ ಟೀಕೆಯನ್ನು ಶ್ರೀಗಿರೀಂದ್ರನೆಂಬವನು (ಸು. ೧೪೩೦) ಸಿದ್ಧಪಡಿಸಿ, ಇದನ್ನು ಆತನು ವಾರಾಣಸೀಂದ್ರನ (ಎಂದರೆ ಮಹಾಲಿಂಗ ದೇವನ ?) ಸೂಚನೆಯಂತೆ ಜಕ್ಕಣ್ಣನು ಬರೆದ ಏಕೋತ್ತರ ಶತಸ್ಥಲದ ವ್ಯಾಖ್ಯಾನ ಎಂದಿರುವುದರಿಂದ, ೧೫ನೆಯ ಶ.ದ ಪೂರ್ವಾರ್ಧದಲ್ಲಿ ಈ ಬಗೆಯ ಟೀಕಾಗ್ರಂಥಗಳು ಒಂದರ ಮೇಲೆ ಒಂದು ಸಿದ್ಧವಾಗುತ್ತಿದ್ದುವು ಎಂಬುದನ್ನು ಸೂಚಿಸುತ್ತದೆ ಎನ್ನಬಹುದು. ಇದೇ ಕಾಲದ, ಕರಸ್ಥಲದ ವೀರಣ್ಣೊಡೆಯನ ಶಿಷ್ಯನೂ ೧೦೧ ವಿರಕ್ತರಲ್ಲಿ ಒಬ್ಬನೂ ಆದ, ಕರಸ್ಥಲದ ನಾಗಿದೇವನು (ಸು. ೧೪೩೦) ೩೧ ಗೂಢಾರ್ಥವುಳ್ಳ ತ್ರಿಪದಿಗಳಲ್ಲಿ ವೀರಶೈವ ಸಿದ್ಧಾಂತವನ್ನು ನಿರೂಪಿಸಿದ್ದಾನೆ. ಇವನ ವಾರ್ಧಕಷಟ್ಪದೀರೂಪದ ವಚನಗಳಲ್ಲಿ ಸಹ ಷಟ್ಸ್ಥಲಮಾರ್ಗದ ಬೋಧನೆಯಿರುವಂತಿದೆ

ಪ್ರೌಢದೇವರಾಯನ ಕಾಲದವನೇ ಆದ ಮಗ್ಗೆಯ ಮಾಯಿದೇವನ (ಸು. ೧೪೩೦)ಶತಕತ್ರಯಗಳೂ ಈಗ ಪ್ರಾಯಃ ದೊರೆಯದಿರುವ 'ಅನುಭವ ಸೂತ್ರ',* 'ಏಕೋತ್ತರ ಶತಸ್ಥಲ ಷಟ್ಪದಿ', 'ಷಟ್ಸ್ಥಲಗದ್ಯ' ಮೊದಲಾದವೂ ವೀರಶೈವ ಸಿದ್ಧಾಂತದ ನಾನಾ ವಿಷಯಗಳನ್ನು ಕುರಿತಿರಬೇಕೆಂದು ತೋರುವುದು. ಉಪಲಬ್ಧವಾಗಿ ಪ್ರಸಿದ್ಧವಾಗಿರುವ ಶತಕಗ್ರಂಥಗಳಲ್ಲಿ ವೀರಶೈವ ಸಿದ್ಧಾಂತಾನುಸಾರವಾಗಿ ಜ್ಞಾನ ಭಕ್ತಿ ವೈರಾಗ್ಯಗಳ ವಿವೇಚನೆಯಿದ್ದು, ಇದಕ್ಕೆ ವಿರಕ್ತ ತೋಂಟದಾರ್ಯನು (ಸು. ೧೫೬೦) ಈಚೆಗೆ ಒಂದು ವ್ಯಾಖ್ಯಾನವನ್ನು ಬರೆದಿರುವುದು ಅವುಗಳ ಮಹತ್ತ್ವವನ್ನೂ ಜನಪ್ರಿಯತೆಯನ್ನೂ ಸೂಚಿಸುವುದು.

ಸಪ್ತಕಾವ್ಯದ ಗುರುಬಸವನೆಂದು (ಸು. ೧೪೩೦) ಪ್ರಸಿದ್ಧನಾಗಿರುವ ಕವಿಯು ಸಹ ಪ್ರೌಢದೇವರಾಯನ ಕಾಲದಲ್ಲಿಯೇ ಇದ್ದವನು. ಈತನ 'ಶಿವಯೋಗಾಂಗಭೂಷಣದಲ್ಲಿ ಯೋಗಾಸನಗಳೂ ಯೋಗಾಭ್ಯಾಸಕ್ರಮಗಳೂ ಇತರ ಕೆಲವು ವಿಷಯಗಳೂ ಬಂದಿವೆ. ಇದು ೬ ಸಂಧಿ ೨೭೮ ಪದ್ಯಗಳ ಪರಿವರ್ಧಿನೀಷಟ್ಪದಿಯ ಕೃತಿ. ಸದ್ಗುರುರಹಸ್ಯ 'ಪರಮ ಸಮಾಧಿ ಶಾಂಭವ ಸತ್ಯಸಮ್ಯಗ್ಬೋಧಲೀಲಾಲೋಲಶೀಲಾನ್ವಯ ರಹಸ್ಯವಿದು'ಎಂದು ಕವಿಯೇ ಹೇಳಿರುವ ರೀತಿಯ ಕೃತಿ; ೯ ಉಪದೇಶ ೨೩೭ ಪದ್ಯಗಳ ಭಾಮಿನೀ ಷಟ್ಪದಿಯ ಕೃತಿ. ಹೀಗೆಯೇ ಈತನ 'ವೃಷಭಗೀತೆ', 'ಅವಧೂತ ಗೀತೆ', 'ಮನೋವಿಜಯ ಕಾವ್ಯ', 'ಕಲ್ಯಾಣೇಶ್ವರ', 'ಸ್ವರೂಪಾಮೃತ' ಈ ಗ್ರಂಥಗಳಲ್ಲಿ ವೀರಶೈವಸಿದ್ಧಾಂತದ ನಾನಾ ಸಂಗತಿಗಳು ನಿರೂಪಿತವಾಗಿವೆ. ಈ ಸಿದ್ಧಾಂತದ ಪ್ರತಿಪಾದನೆಯಲ್ಲಿ ಈತನಿಗೆ ಮಿಗಿಲಾದ ಸ್ಥಾನವಿದೆ. ಇವುಗಳ ರಚನೆಯಲ್ಲಿ ಶ್ರುತಿಸ್ಮೃತ್ಯಾದಿ ಗ್ರಂಥಗಳ ನೆರವನ್ನು ಪಡೆದಿರುವ ಸಾಧ್ಯತೆ ಕವಿಯ ಸಂಕಲ್ಪವಾಕ್ಯಗಳಿಂದಲೇ ವಿದಿತವಾಗುತ್ತದೆ. ಆದ್ಯ ವಚನಕಾರರ ಸ್ತುತಿ, ಯೋಗ, ವೈರಾಗ್ಯ, ಅವಧೂತಲಕ್ಷಣ, ನೀತಿಬೋಧೆ ಮೊದಲಾದ ಹಲವು ವಿಷಯಗಳನ್ನು ಈ ಗ್ರಂಥಗಳಲ್ಲಿ ಉಚಿತಪರಿತು ವಿವರಿಸಿದೆ.

ವಚನಕಾರರಾದ ಶಿವಶರಣರೆಂಬ ಗಣಗಳ ವಚನಗಳೆಂಬ ಭಾಷಿತಗಳ ರತ್ನಮಾಲೆಯನ್ನು ಪವಣಿಸಿರುವ ಗುಬ್ಬಿಯ ಮಲ್ಲಣ್ಣನು (ಸು. ೧೪೭೫) ತನ್ನ 'ಗಣಭಾಷಿತರತ್ನಮಾಲೆ'ಯಲ್ಲಿ ಏಕೋತ್ತರಶತಸ್ಥಲದ ಸ್ಥಲಕಟ್ಟುಗಳನ್ನು ಅನುಸರಿಸಿಯೇ ಸೂತ್ರವಾಕ್ಯಗಳನ್ನೂ ವೇದಾಗಮ ಪುರಾಣಾದಿ ಶ್ಲೋಕಸೂಕ್ತಿಗಳನ್ನುದಾಹರಿಸಿ, ಅವುಗಳಿಗೆ ತಾತ್ಪರ್ಯವನ್ನೂ ಬರೆದು, ಬಳಿಕ ಕೆಲವು ವಚನಗಳನ್ನು ಉದ್ಧರಿಸಿದ್ದಾನೆ. ವಚನಗಳು ವೇದಶಾಸ್ತ್ರಗಳಂತೆ ಸಮಪ್ರಾಮಾಣ್ಯವುಳ್ಳವು, ಮಾನ್ಯವಾದವು ಎಂದು ಅಭಿಪ್ರಾಯವುಂಟಾಗುವಂತೆ ಹೀಗೆ ಯೋಜಿಸಿರಬಹುದೆಂದು ತೋರುತ್ತದೆ. ಮೂಲವಚನಕಾರರೇ ಪುರಾಣಾಗಮಾದಿಗಳ ಶ್ಲೋಕಗಳನ್ನು ಉದಾಹರಿಸಿರುವಂತಹ ವಚನಗಳನ್ನು ಬಲುಮಟ್ಟಿಗೆ ಆಯ್ದುಕೊಂಡಿರುವುದು ಈ ದೃಷ್ಟಿಯಿಂದ ಗಮನಾರ್ಹವಾಗಿದೆ. ಕಲ್ಲುಮಠದ ಪ್ರಭುದೇವನು 'ವಚನಾಗಮ'ವೆಂದು ವಚನಗಳನ್ನು ನಿರ್ದೇಶಿಸಿದ್ದು, ಇಲ್ಲಿ ಸಾರ್ಥಕ್ಯವನ್ನು ಪಡೆದಿದೆಯೆನ್ನಬಹುದು. ಆಚರಣೆ ಮತ್ತು ನೈತಿಕ ದೃಷ್ಟಿಗಳು ಪ್ರಧಾನವಾಗಿರುವ ೪೮೫ ವಚನಗಳನ್ನು ೩೮ ವಚನಕಾರರ ವಚನಗಳಿಂದ ತೆಗೆದುಕೊಂಡು ಈ ಕೃತಿಯನ್ನು ರೂಪಿಸಲಾಗಿದೆ.

ತೋಂಟದ ಸಿದ್ಧಲಿಂಗ ಯತಿಯ (ಸು. ೧೪೭೦) ಶಿಷ್ಯಪರಂಪರೆಗೆ ಸೇರಿದ ಸಂಪಾದನೆಯ ಚೆನ್ನಂಜೆದೇವ (ಸು.೧೫೩೦), ಎಳಮಲೆಯ ಗುರುಶಾಂತದೇವ (ಸು. ೧೫೭೫) ಸಂಪಾದನೆಯ ಸಿದ್ಧವೀರಣಾರ್ಯ (ಸು. ೧೬೦೦) ಈ ಕೆಲವರು ಕೆಲವು ವಚನ ಸಂಕಲನಗಳನ್ನು ಸಿದ್ಧಗೊಳಿಸಿದ್ದಾರೆ. ಪ್ರಸಿದ್ಧನಾದ ತೋಂಟದ ಸಿದ್ಧಲಿಂಗಯತಿಯ ಶಿಷ್ಯನಾದ ಗುಮ್ಮಳಾಪುರದ ಸಿದ್ಧಲಿಂಗೇಶ್ವರ (ಸು. ೧೪೮೦) 'ಷಟ್ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ', ಶಿಷ್ಯನೆಂದು ಊಹಿಸಿರುವ ಸ್ವತಂತ್ರ ಸಿದ್ಧಲಿಂಗೇಶ್ವರನ (ಸು. ೧೪೮೦) ವಚನಗಳು ಮತ್ತು 'ಮುಕ್ತ್ಯಂಗನೆಯ ಕಂಠಮಾಲೆ'ವೀರಶೈವ ಸಿದ್ಧಾಂತ ಬೋಧಕಗಳಾದ ರಚನೆಗಳಾಗಿವೆ. ಇವು ಪ್ರಧಾನವಾಗಿ ವೀರಶೈವಸ್ತೋತ್ರ ರೀತಿಯವು, ಅಷ್ಟಾವರಣ ಮತ್ತು ಆಚರಣೆಯ ವಿವರಗಳಿಂದ ಕೂಡಿದವು. ಸ್ವಮತೀಯರ ಆಚಾರ ಅನುಷ್ಠಾನಗಳ ಪ್ರಯೋಜನಾರ್ಥವಾಗಿ ಇವು ಸಂಕಲಿತವಾಗಿವೆ.

ಆನಂದ ಬಸವಲಿಂಗ ಶಿವಯೋಗಿ (ಸು. ೧೫೦೦) ವಿರಚಿತವಾದ ೩೪ ಪ್ರಕರಣಗಳ 'ಮಾಚಿದೇವ ಮನೋವಿಲಾಸ' 'ಮಡಿವಾಳ ಮಾಚಿದೇವನ ಮನೋಭಾವವನ್ನು ಅನುಸರಿಸಿ ವೀರಶೈವಸಿದ್ಧಾಂತವು ನಿರೂಪಿತವಾಗಿದೆ. ಕವಿ ಅನೇಕ ಸಂಸ್ಕೃತ ಶ್ಲೋಕಗಳನ್ನು ಉದಾಹರಿಸಿ ಅವುಗಳಿಗೆ ಟೀಕೆಯನ್ನು ಬರೆದಿದ್ದಾನೆ'. ಗ್ರಂಥವನ್ನು ಪ್ರಕರಣಾಂತಗದ್ಯದಲ್ಲಿ 'ಇತಿ ಶ್ರೀ ವೇದ ವೇದಾಂತ ಶಿವಾಗಮಸ್ಮೃತಿ ಪುರಾಣೇತಿಹಾಸ ಸಾರಭೂತ ವೀರಶೈವಾಚಾರಸಾರೋದ್ಧಾರೇ–' ಎಂದಿರುವುದನ್ನು ಗಮನಿಸಬೇಕು. ವಿರತಮಹಲಿಂಗದೇವನ (ಸು. ೧೫೦೦) ೫ ಸ್ಥಳಗಳ 'ಗುರುಬೋಧಾಮೃತ' ವೈರಾಗ್ಯಬೋಧಕವಾದ ಗುರುಶಿಷ್ಯ ಸಂವಾದ ರೂಪದ ಗ್ರಂಥ.

ವೀರಶೈವ ವೇದಾಂತಿಗಳಲ್ಲಿ ಪ್ರಖ್ಯಾತನಾಗಿರುವ ನಿಜಗುಣ ಶಿವಯೋಗಿ (ಸು.೧೫೦೦) 'ಅನುಭವಸಾರ', 'ಕೈವಲ್ಯ ಪದ್ಧತಿ', 'ಪರಮಾನುಭವಬೋಧೆ', 'ವಿವೇಕಚಿಂತಾಮಣಿ', 'ಪರಮಾರ್ಥಗೀತೆ'. 'ಪರಮಾರ್ಥಪ್ರಕಾಶಿಕೆ' ಈ ಕೆಲವು ವೀರಶೈವಾಚಾರ ವಿಚಾರಗಳ ಮತ್ತು ಶಾಸ್ತ್ರಪರವಾದ ಗ್ರಂಥಗಳ ರಚನೆಯನ್ನು ಮಾಡಿದ್ದಾನೆ. ಸಂಸ್ಕೃತದಲ್ಲಿ 'ದರ್ಶನಸಾರ'ಮತ್ತು

* ಅನುಭವಸೂತ್ರವೇ ಶಿವಾನುಭವಸೂತ್ರ. ಈ ಗ್ರಂಥ ಸಿಕ್ಕಿದೆ, ಪ್ರಚಾರಗೊಂಡಿದೆ. (ಸಂ)

'ತರ್ಕ ಚಿಂತಾಮಣಿ' ಎಂಬುವು ಆತನ ಕೃತಿಗಳೆಂದು ತಿಳಿಯುತ್ತದೆ. ಆದರೆ ಇವು ಉಪಲಬ್ಧವಿಲ್ಲ. ವೇದಾಂತ ಮತ್ತು ಶಾಸ್ತ್ರ ವಿಷಯಗಳಲ್ಲಿ ಈ ಕವಿಯ ವ್ಯುತ್ಪತ್ತಿ ಗಾಢವೂ ಆಶ್ಚರ್ಯಕರವು ಆಗಿದ್ದೆಂದು ತೋರುತ್ತದೆ. 'ಸಕಲವೇದಾಂತಸಾರವನೆ ತಿಳಿವಂತೆ ಸಾಧಕರಿಗೆ ಒರೆವೆನು', 'ಶ್ರುತಿ ಪುರಾಣೇತಿಹಾಸ ಸ್ಮೃತಿಯರ್ಥವನಿಂತು ಕನ್ನಡಿಸಿದೆ'. ಎಂದು ಮುಂತಾಗಿ ಗ್ರಂಥಗಳ ಆರಂಭದಲ್ಲಿ ಹೇಳಿಕೊಂಡಿರುವದರಿಂದ ಆತನ ಉದ್ದೇಶ ಸ್ಪಷ್ಟವಾಗುತ್ತದೆ. ವೇದಾಂತತತ್ತ್ವ, ಅದ್ವೈತಸಿದ್ಧಾಂತ, ಯೋಗಶಾಸ್ತ್ರ, ಲೌಕಿಕ ಶಾಸ್ತ್ರವಿಚಾರ ಮುಂತಾದವುಗಳನ್ನು ಸಂಗ್ರಹವಾಗಿ ಕನ್ನಡದಲ್ಲಿ ನಿರೂಪಿಸಿದೆ, ಈತನ ಗ್ರಂಥಗಳಲ್ಲಿ.

'ಅನುಭವಸಾರ' ೮ ಸಂಧಿ, ೪೬ ಸೂತ್ರ, ೫೩೫ ಪದ್ಯಗಳ ತ್ರಿಪದಿಛಂದಸ್ಸಿನ ಕೃತಿ. ಇದರಲ್ಲಿ ಜೀವೇಶ್ವರ ವಿಚಾರ, ಉಪಾಧಿಗಳು, ಕರ್ಮಗಳು, ಅದ್ವೈತತತ್ತ್ವದ ನಾನಾ ವಿವರಗಳ ನಿರೂಪಣೆಯಿದೆ. 'ಕೈವಲ್ಯಪದ್ಧತಿ' ಸ್ಥಲ ೫, ವಚನಗಳ ಜೋಡು ೧೭೪, ಪದಗಳು ೬೪೪, ಇರುವ ರಚನೆ. ಇದರಲ್ಲಿ ನೀತಿಬೋಧೆ, ಯೋಗ ಮತ್ತು ಶಿವಯೋಗ ವಿಚಾರ, ಜ್ಞಾನ ಸ್ವರೂಪ ಇತ್ಯಾದಿಗಳ ನಿರೂಪಣೆಯಿದೆ. 'ಪರಮಾರ್ಥಗೀತೆ'ಯು ೧೧ ಗತಿ, ೩೨ ಕಂದ, ೧೨೧ ನಿರೂಪಣೆ ೧೪೯೬ ಚರಣಗಳ ಚಿಕ್ಕ ರಚನೆ. ಅಹಂಕಾರಾದಿತತ್ತ್ವಗಳ ವಿಚಾರ, ಜೀವ ಶರೀರಗಳ ತಾತ್ತ್ವಿಕಭೇದಗಳು, ಮೋಕ್ಷದ ಪರಿಕರಗಳು ಮುಂತಾದುವು ಬಂದಿವೆ. 'ಪರಮಾನುಭವಬೋಧೆ' ೬ ಸಂಧಿ ೧೨೨ ಸೂತ್ರ ೯೮೫ ಪದ್ಯಗಳ ಸಾಂಗತ್ಯರಚನೆ. ಅದ್ವೈತತತ್ತ್ವನಿರೂಪಕವಾದ ಕೃತಿ. 'ಪರಮಾರ್ಥಪ್ರಕಾಶಿಕೆ' ಚೆನ್ನಸದಾಶಿವಯೋಗಿಯ ಶಿವಯೋಗಪ್ರದೀಪಿಕೆಗೆ ಕನ್ನಡ ವ್ಯಾಖ್ಯಾನ; ೫ ಪರಿಚ್ಛೇದಗಳನ್ನು ಉಳ್ಳದ್ದು. ಈ ಕವಿಯ ಜನಪ್ರಿಯ ಗ್ರಂಥ 'ವಿವೇಕ ಚಿಂತಾಮಣಿ' ೧೦ ಪ್ರಕರಣ ೭೬೫ ವಿಷಯಗಳ ದೊಡ್ಡ ಗದ್ಯಗ್ರಂಥ. ಇದು ನಾನಾ ವಿಷಯಗಳ ಒಂದು ವಸ್ತುಕೋಶ, 'ಬಹುಶಾಸ್ತ್ರವನೋದುವ ಬಾಧೆ' ಹಿಂಗಲೆಂದು ಒಂದೆಡೆ ನಾನಾ ಶಾಸ್ತ್ರಗಳ ವಿಚಾರ ವನ್ನು ಸಂಗ್ರಹಿಸಿ ಕೊಡುವುದು ಕವಿಯ ಉದ್ದೇಶವಾಗಿದೆ. ವೀರಶೈವಧರ್ಮಕ್ಕೆ ಸಂಬಂಧಿಸಿದ ವಿಚಾರಗಳು ಮಾತ್ರವಲ್ಲದೆ ಇತರ ಸಾಮಾನ್ಯ ಧಾರ್ಮಿಕ ವಿಷಯಗಳೂ, ಕಲೆಗಳು, ಜ್ಯೋತಿಷ್ಯಶಾಸ್ತ್ರ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದ ವಿಷಯಗಳೂ ಇಲ್ಲಿ ಸಂಗ್ರಹೀತವಾಗಿವೆ. ಆದರೆ ಸಮರ್ಪಕವಾದ ವಿವರಣೆಗಳಿಲ್ಲದೆ ಇಲ್ಲಿಯವಿವರಗಳು ಬರಿಯ ಪಟ್ಟಿಗಳಾಗಿ ಬೆಳೆದಿರುವುದು ಒಂದು ಕೊರತೆಯಾಗಿದೆ.

ನಂಜನಾಥಾಚಾರ್ಯನ (ಸು. ೧೫೦೦) 'ವೈಷ್ಣವವಾದಖಂಡನ' ಗದ್ಯಗ್ರಂಥವಾಗಿದ್ದು, ಇದು ತ್ರಿಭುವನ ತಾತನ ವಿಷ್ಣುಮಹತ್ತ್ವಪ್ರತಿಪಾದನೆಯನ್ನು ವಚನ ರೂಪಿನಿಂದ ಖಂಡಿಸುವ ಕೃತಿಯೆಂದು ತಿಳಿಯುವುದು. ನೀಲಕಂಠಾರಾಧ್ಯನ (ಸು. ೧೫೦೦) ಗದ್ಯಕೃತಿ 'ಪರವಾದಿ ಗಜಾಂಕುಶ ತಾರಾವಳಿ' ಜೈನಚಾರ್ವಾಕ ಮಾಯಾವಾದಿ ವೈಷ್ಣವರೆಂಬ ಮದಗಜಕ್ಕೆ ಅಂಕುಶವಾಗಿ ರಚಿಸಿದ ಗ್ರಂಥವೆಂದು ಕವಿಯ ಮಾತಿನಿಂದ ತಿಳಿಯುವುದರಿಂದಾಗಿ, ಇದೊಂದು ವಾದಗ್ರಂಥವಾಗಿದೆ. ಕಲ್ಯಾಣದ ಸ್ವಾಮಿಯ (ಸು. ೧೫೦೦) 'ಕಾರಣಾಗಮದ ವಾರ್ಧಕ' ಶೈವಾಗಮಗಳಲ್ಲಿ ಒಂದಾದ ಕಾರಣಾಗಮದ ವಿಷಯಗಳನ್ನು ೨೫ಪದ್ಯ ಗಳಲ್ಲಿ ಸಂಗ್ರಹಿಸಿರುವ ರಚನೆ. ಚನ್ನವೀರನ (ಸು.೧೫೦೦) 'ಷಟ್ಸ್ಥಲ ವಲ್ಲಭ' ವೀರಶೈವ ಸಿದ್ಧಾಂತ ಪ್ರತಿಪಾದಕವಾದ ಕೃತಿ.* ಗುಬ್ಬಿಯ ಮಲ್ಲಣಾರ್ಯನ (೧೫೧೩) ಕೃತಿಗಳಲ್ಲಿ 'ವೀರಶೈವಾಮೃತ ಪುರಾಣ' ಪಂಚವಿಂಶತಿಲೀಲೆಗಳು, ಪುರಾತನ ನೂತನ ಶರಣರ ಕಥೆಗಳು ಇವುಗಳ ಜೊತೆಗೆ ವೀರಶೈವ ಸಿದ್ಧಾಂತದ ವಿಸ್ತೃತ ನಿರೂಪಣೆಯನ್ನು ಒಳಕೊಂಡ ದೊಡ್ಡಗ್ರಂಥವಾಗಿದೆ. ೮ ಕಾಂಡ, ೧೩೬ ಸಂಧಿ, ೭೦೯೯ ಪದ್ಯಗಳ ವಾರ್ಧಕ ಷಟ್ಪದೀ ಕಾವ್ಯವಿದು. ವೇದಾಗಮ ಪುರಾಣೇತಿಹಾಸಗಳಿಂದ, ಸ್ಮೃತಿ ಗಳಿಂದ 'ಸಾಕ್ಷಿ'ಗಳಾಗಿ ವಾಕ್ಯಗಳು ಉದಾಹೃತವಾಗಿವೆ. ಈ ಗ್ರಂಥಕ್ಕೂ ನೀಲಕಂಠನಾಗನಾಥಾಚಾರ್ಯನ ಸಂಸ್ಕೃತ ವೀರಮಾಹೇಶ್ವರಾಚಾರ ಸಂಗ್ರಹಕ್ಕೂ ಸಂಗತಿಗಳಲ್ಲಿ ಸಾದೃಶ್ಯಗಳು ವಿಶೇಷವಾಗಿವೆಯೆಂದು ತಿಳಿಯಲಾಗಿದೆ.

ಮುರಿಗೆಯ ಶಾಂತವೀರ (ಸು. ೧೫೩೦ ?)ನ 'ಪ್ರಭು ಲಿಂಗದಕಂದ'ದಲ್ಲಿ ಯೋಗಶಾಸ್ತ್ರಕ್ರಮದಲ್ಲಿ ಶಿವಪೂಜೆಯೂ 'ವೈರಾಗ್ಯ ಷಟ್ಪದಿ'ಯಲ್ಲಿ ನೀತಿಯೂ 'ಏಕೋನ ವಿಂಶತಿ ಪ್ರಬಂಧ'ದಲ್ಲಿ ವೇದಾಂತಬೋಧೆಯೂ ನಿರೂಪಿತವಾಗಿದೆ. ಮೂರೂ ಚಿಕ್ಕ ಪ್ರಮಾಣದ ಗ್ರಂಥಗಳು. ಕುಮಾರ ಚೆನ್ನಬಸವನು (ಸು.೧೫೫೦) 'ವೀರಮಾಹೇಶ ಸಂಗ್ರಹದಲ್ಲಿ ಗ್ರಂಥ ರೂಪಾಗಿರ್ದ ಶಂಭುಪೂಜಾವಿಧಿಯನಂತಲ್ಲಿ ಭೂತಿಯಧ್ಯಾಯಾದಿಯಂ ಕುಮಾರೇಶ್ವರಂ ಕನ್ನಡಿಸಿದಂ' ಎಂಬುದಾಗಿ ತನ್ನ 'ಬಸವಪುರಾಣದ ಪುರಾತನರ ಚರಿತೆ'ಯಲ್ಲಿ ಹೇಳಿಕೊಂಡಿರುವುದರಿಂದ ಶಂಭು ಪೂಜಾವಿಧಿ, ವಿಭೂತಿ ಮಹಿಮೆ ಮುಂತಾದ ಸೈದ್ಧಾಂತಿಕ ಗ್ರಂಥ ಗಳನ್ನು ಸಹ ಆತ ಬರೆದಿದ್ದನೆಂದು ತಿಳಿಯುವುದು. ವಿರೂಪಾಕ್ಷ ಪಂಡಿತನ (೧೫೮೪) 'ಚೆನ್ನಬಸವ ಪುರಾಣ'ದಲ್ಲಿಯೂ ಪ್ರಾಸಂಗಿಕವಾಗಿ ದೀಕ್ಷಾವಿಧಾನ, ಷಟ್ಸ್ಥಲ ಮುಂತಾದ ವೀರಶೈವಾಚಾರ ವಿಚಾರಗಳ ಪ್ರಸ್ತಾಪವುಂಟು.

ಸು. ೧೬೦೦ರಲ್ಲಿದ್ದನೆಂದು ತಿಳಿದಿರುವ ಸಂಪಾದನೆಯ ಸಿದ್ಧವೀರಣಾಚಾರ್ಯ ಕನ್ನಡದಲ್ಲಿ ಕೆಲವು ಗ್ರಂಥಗಳನ್ನು ಸಂಪಾದಿಸಿರುವುದರ ಜೊತೆಗೆ ಸಂಸ್ಕೃತದಲ್ಲಿ 'ಅನಾದಿ ವೀರಶೈವಾಚಾರ ಸಂಗ್ರಹ'ವೆಂಬ ಕೃತಿಯನ್ನೂ ಬರೆದಿದ್ದಾನೆ. 'ವೀರ ಮಾಹೇ

---

* ಇದು ಕೇವಲ ವೀರಶೈವ ಸಿದ್ಧಾಂತ ಪ್ರತಿಪಾದಕ ಗ್ರಂಥವಲ್ಲ. ತೋಂಟದ ಸಿದ್ಧಲಿಂಗ ಶಿವಯೋಗಿಗಳ ಚರಿತ್ರೆಯ ಮಧ್ಯದಲ್ಲಿ ವೀರಶೈವ ಸಿದ್ಧಾಂತ ನಿರೂಪಣೆಯಿದೆ. (ಸಂ).

ಶ್ವರಾಚಾರ್ಯವರ್ಯ', 'ವೀರಶೈವ ಷಟ್ಸ್ಥಲ ಮಾರ್ಗಸ್ಥಾಪನಾಗ್ರಗಣ್ಯ' ಎಂಬ ವಿಶೇಷಣಗಳಿಂದ ಈ ಧರ್ಮದಲ್ಲಿ ಈತನ ಸ್ಥಾನ ವೇನೆಂಬುದು ಸೂಚಿತವಾಗುತ್ತದೆ. 'ಜಜಿದು ಶೈವವ ವೀರಶೈವಮಂ ಸ್ಥಾಪಿಸಿದಂ' ಎಂದು 'ಚತುರಾಚಾರ್ಯ ಪುರಾಣ'ದಲ್ಲಿ (೧೬೯೮) ಈತನ ಬಗೆಗೆ ಹೇಳಿರುವುದನ್ನೂ ಗಮನಿಸಬೇಕು. ಸಂಗನ ಬಸವೇಶ್ವರನ (ಸು. ೧೬೦೦) 'ರಥೋದ್ಧರಣೆ ವಾಚ್ಯ' ವೇದಾಂತಬೋಧಕವಾದ, ಪ್ರಾಯಶಃ ದೇಹವನ್ನು ರಥಕ್ಕೆ ಹೋಲಿಸಿರುವ, ವಿವಿಧ ಛಂದಸ್ಸಿನ ಕೃತಿಯೆಂದು ತೋರುವುದು. ವಾರತೆ ಸೋಮಣ್ಣನ (ಸು. ೧೬೦೦) 'ಪಂಚೀಕರಣದ ಪದಗಳು' ಕೆಲವು ಷಟ್ಪದಿಗಳನ್ನೂ ಹಾಡುಗಳನ್ನೂ ಒಳಕೊಂಡ 'ಪಂಚ ಭೂತಗಳ ಸೇರುವೆ'ಯನ್ನು ನಿರೂಪಿಸಿರುವ ಒಂದು ಗ್ರಂಥವಾಗಿದ್ದು ಇದಕ್ಕೆ ಒಂದು ವ್ಯಾಖ್ಯಾನವೂ ಇದೆ. ಬಸವೇಶನ (ಸು. ೧೬೦೦) ವಾರ್ಧಕದ 'ಪದ್ಯೆಕೋತ್ತರ ಶತಸ್ಥಲ' 'ವೀರಶೈವಾಂಬುರಾಶಿಯೊಳೊಗೆದ ವ್ರತನಿಯಮ ಸಾರ ರತ್ನಂಗಳೊಳನರ್ಘ್ಯ ಮಣಿ ನೂಱೊಂದನಾರೈದು ತೆಗೆದು' ಸಿದ್ಧಪಡಿಸಿದ ಕೃತಿ. ಮಲ್ಲಿಕಾರ್ಜುನನ (ಸು. ೧೬೦೦) 'ಸಹಸ್ರಗಣನಾಮ' ಪ್ರಮಥ ರಾದಿಯಾಗಿ ಶಿವಗಣಗಳನ್ನು ಕೀರ್ತಿಸುವ ರಚನೆ. ಪಾಲ್ಕುರಿಕೆ ಸೋಮನಾಥನ ಇದೇ ಹೆಸರಿನ ಕೃತಿಯ ವಿಸ್ತರಣೆ. ಗಿರಿನಾಥ ನೆಂಬುವವನ ಮಗನಾದ ಬಸವೇಶನು (ಸು. ೧೬೦೦) ಭಾಮಿನೀ ಷಟ್ಪದಿಯಲ್ಲಿ, ೯ ಸಂಧಿ ೩೮೬ ಪದ್ಯಗಳಲ್ಲಿ ಗುರುಶಿಷ್ಯಸಂವಾದ ವಾಗಿ ರಚಿಸಿರುವ 'ಸುಜ್ಞಾನ ಚಿಂತಾಮಣಿ' ವೇದಾಂತ ಬೋಧಕವಾಗಿದೆ. 'ಪ್ರಸನ್ನ ಶಂಕರಲಿಂಗ' ಅಂಕಿತದ ಶಂಕರದೇವ ಕವಿಯ (ಸು. ೧೬೨೦) ಕೆಲವು ರಚನೆಗಳು ವೀರಶೈವದ ಆಚಾರ ವಿಚಾರಗಳನ್ನು ಕುರಿತವು. ಉದಾ. ಗೆ ಷಡಕ್ಷರರಗಳೆ, ವೀರಶೈವ ರಗಳೆ ಇತ್ಯಾದಿ. ವ್ಯಾಖ್ಯಾಕರ್ತೃವಾದ ಸೋಸಲೆ ರೇವಣಾಚಾರ್ಯನು (೧೬೨೩) 'ಶಾರೀರ ಪ್ರಕಾಶಿಕೆ', 'ಅಂತಃಕರಣ ಪ್ರಕಾಶಿಕೆ', 'ಸ್ವಸ್ವರೂಪ ಪ್ರಕಾಶಿಕೆ', 'ಪರಮಾತ್ಮ ಪ್ರಕಾಶಿಕೆ', 'ನಿಜದೀಪ್ತಿ ಪ್ರಕಾಶಿಕೆ' ಎಂಬ ೫ ಸ್ವತಂತ್ರ ಗ್ರಂಥಗಳನ್ನೂ (ಇಲ್ಲವೆ ಒಂದೇ ಗ್ರಂಥದ ೫ ಭಾಗಗಳನ್ನೂ) ರಚಿಸಿದ್ದು, ಇವು ವೀರಶೈವ ಸಿದ್ಧಾಂತ ಸಂಬಂಧಿಯಾದ ರಚನೆಗಳಾಗಿವೆ.

ತೋಂಟದ ಸಿದ್ಧಲಿಂಗಯತಿಯ (ಸು. ೧೪೭೦) ಸಂಪ್ರದಾಯಕ್ಕೆ ಸೇರಿದವರ, ಅನುಭಾವಿಗಳ, ವಾಕ್ಯಾಮೃತವನ್ನು ಸ್ವೀಕರಿಸಿ ಕೃತಿ ರಚನೆ ಮಾಡಿರುವ ಶಾಂತಮಲ್ಲ (ಸು. ೧೬೫೦) ಕವಿಯ 'ಅನುಭವ ಮುದ್ರೆ' ೨೯ ಸ್ಥಲಗಳಲ್ಲಿ ವೀರಶೈವ ಸಿದ್ಧಾಂತವನ್ನು ನಿರೂಪಿಸುತ್ತದೆ. ೧೭–೧೮ ನೆಯ ಶತಾಬ್ದದಲ್ಲಿ, ಚೆನ್ನವೀರಣ್ಣೊಡೆಯನು ಚೆನ್ನಬಸವಣ್ಣನ, ಮುಪ್ಪಿನಯ್ಯನ ಆಚರಣೆಯ ಸಂಬಂಧವ ವಚನಗಳನ್ನು ಸಂಪಾದಿಸಿದ್ದಾರೆ. ಮಲ್ಲಿಕಾರ್ಜುನ (ಮಲ್ಲು) ಕವಿಯ (ಸು.೧೬೫೦) 'ಪ್ರಸಾದ ಸಾಂಗತ್ಯ' ಪ್ರಸಾದ ಮಾಹಾತ್ಮ್ಯವನ್ನು ಹೇಳುತ್ತದೆ. ವೀರಣಾರ್ಯನ (ಸು. ೧೬೫೦) 'ಪ್ರಸಾದ ಚಾರಿತ್ರ' ಸಹ ಪ್ರಾಯಃ ಇದೇ ವಸ್ತು ವಿನ ಸಾಂಗತ್ಯ ಕೃತಿ. ಮರುಳ ಸಿದ್ಧೇಶನ (ಸು. ೧೬೫೦) 'ಗುರುಲಿಂಗಜಂಗಮ ಚಾರಿತ್ರ' ೫ ಸಂಧಿ ೯೩೭ ಪದ್ಯಗಳ, ಪ್ರಾಯಃ ಗುರುಲಿಂಗ ಜಂಗಮ ಮಹಾತ್ಮ್ಯ ಕುರಿತಿರಬಹುದಾದ ಸಾಂಗತ್ಯ ಕೃತಿ. ವೀರಶೈವ ಕವಿಯೆಂದು ಊಹಿಸಿರುವ ನಿಜಗುಣಾರ್ಯ (ಸು. ೧೬೫೦) ರಚಿಸಿದ 'ಅದ್ವೈತ ರಾಮಾಯಣ'ವೆಂಬ ೨೪ ಸಂಧಿ ೯೩೩ ವಚನಗಳ ಒಂದು ವಿಶಿಷ್ಟಕೃತಿಯಲ್ಲಿ ಅದ್ವೈತ ಬೋಧಕವಾದ ಗೂಢಾರ್ಥವನ್ನು ರಾಮಾಯಣ ಕಥೆಗೆ ಹೇಳಿರುವಂತೆ ತೋರುತ್ತದೆ.

ಷಡಕ್ಷರದೇವನ (೧೬೫೫) ಹಲವು ಕೃತಿಗಳಲ್ಲಿ 'ಷಡಕ್ಷರ ಮಂತ್ರ ಸ್ತೋತ್ರ'ವು ೧೦೫ ಪಾದಗಳ ಉತ್ಸಾಹ ರಗಳೆಯ ರಚನೆಯೆಂದು ಹೇಳಲಾಗಿದೆ; ಈ ಮಂತ್ರದ ಮಾಹಾತ್ಮ್ಯ ಇದರ ವಸ್ತು. ಮುಖಬೋಳು ಸಿದ್ಧರಾಮಯೋಗಿಯ (ಸು.೧೬೫೬/ ೧೫೯೬ ?) 'ಷಟ್ಸ್ಥಲತಿಲಕ' ೨೦ ಸ್ಥಲ ೯೨೩ ಪದ್ಯಗಳಲ್ಲಿ ಗುರುಶಿಷ್ಯ ಸಂವಾದರೂಪವಾಗಿ ಷಟ್ಸ್ಥಲಗಳನ್ನು ವಿವರಿಸುವ ರಚನೆ. ವಾರ್ಧಕ ಷಟ್ಪದಿಯಲ್ಲಿ ಬರೆದಿದ್ದರೆ, ನಡುನಡುವೆ ಕಂದವೃತ್ತಗಳೂ ಇವೆ. ಮುಮ್ಮಡಿ ತಮ್ಮನ (೧೬೭೫) 'ಶಂಕರ ಸಂಹಿತೆ' ಸ್ಕಂದವಿಷಯಕವಾದರೂ ವಿಭೂತಿ ರುದ್ರಾಕ್ಷಪಂಚಾಕ್ಷರೀ ಮಹಿಮೆ, ವ್ರತಗಳು ಮುಂತಾದ ಆಚಾರ ಸಂಬಂಧ ವಿಷಯ ಗಳನ್ನೂ ಒಳಕೊಂಡಿದೆ ; ೮೦ ಸಂಧಿ ೪೧೦೦ ವಾರ್ಧಕಗಳ ಬೃಹತ್‌ಕಾವ್ಯವಿದು. ಸಂಪಾದನೆಯ ಪರ್ವತೇಶ್ವರನ (೧೬೯೮) 'ಚತುರಾಚಾರ್ಯಪುರಾಣ' ೭ ಕಾಂಡ, ೫೪ ಸಂಧಿ, ೩೧೮೭ ಪದ್ಯಗಳ ವಾರ್ಧಕಷಟ್ಪದಿಯ ಗ್ರಂಥವಾಗಿದ್ದು, ಇದರಲ್ಲಿ ವೀರಶೈವ ರಾದ ನಾಲ್ವರು ಆಚಾರ್ಯರ ಚರಿತ್ರೆ ನಿರೂಪಿತವಾಗಿದೆ; ಆದರೆ ವೇದೋಪನಿಷತ್ತುಗಳು. ಪುರಾಣಗಳು ಆಗಮಗಳು ತಂತ್ರಗಳು, ಇತರ ವೀರಶೈವ ಸಿದ್ಧಾಂತ ಗ್ರಂಥಗಳು ಇವುಗಳಿಂದ ವಿಷಯಗಳನ್ನು ಸಂಗ್ರಹಿಸಿದೆ.

ಶಾಂತವೃಷಭೇಶ (ಸು. ೧೭೦೦) ಕೃತವಾದ 'ಅನುಭವಶತಕ' ಪ್ರಾಯಃ ವೀರಶೈವ ಆಚಾರವಿಚಾರ ಕುರಿತದ್ದು : ೧೧೫ ಕಂದಪದ್ಯಗಳಿವೆ. ಶಾಂತಾಚಾರ್ಯನ (ಸು. ೧೭೦೦) 'ಮರಣ ಮಣಿದರ್ಪಣಶತಕ'ದಲ್ಲಿ ಸ್ಕಾಂದಪುರಾಣಾಂತರ್ಗತ ವಾದ ಮರಣಸೂಚನೆಗಳನ್ನು ಅನುವಾದಿಸಿ ಕೊಟ್ಟಿದೆ; ಅಲ್ಲದೆ ಸ್ವಪ್ನಫಲ, ಆಯುರ್ವೃದ್ಧಿಕಾರಣ ಇವೂ ಹೇಳಲ್ಪಟ್ಟಿವೆ. ಸಪ್ಪಣ್ಣಕವಿಯ (ಸು. ೧೭೦೦) 'ಕೈವಲ್ಯ ಕಲ್ಪವಲ್ಲರಿ' ೭೧೦ ಪದಗಳನ್ನೂ ೧೭೭ 'ವಚನಸಂಪುಟ'ವನ್ನೂ ೫ ಸ್ಥಲಗಳನ್ನೂ ಉಳ್ಳ ಹಾಡಿನರೂಪದ ತಾತ್ತ್ವಿಕಗ್ರಂಥ. ಗುರವನ (ಸು. ೧೭೦೦) 'ಪ್ರಾಣಲಿಂಗಶತಕ'ದಲ್ಲಿ ವೀರಶೈವ ಸಿದ್ಧಾಂತದ ಸಂಗತಿ ಗಳೂ ಪುರಾತನರ ಚರಿತವೂ ಕೂಡಿ ಬರುತ್ತವೆ. ಮುಮ್ಮಡಿ ಕಾರ್ಯೇಂದ್ರ (ಸು. ೧೭೦೦) ಕೃತ 'ವೇದಸಂಜೀವಿನಿ' ವೀರಶೈವ

ಸಿದ್ಧಾಂತವನ್ನು ಬೋಧಿಸುವ ೧೧೬ ವಚನಗಳ ಗ್ರಂಥ. ಹುಬ್ಬಳ್ಳಿ ಸಂಗಯ್ಯನ (ಸು.೧೭೦೦) 'ಶಿವಯೋಗರತ್ನಾಕರ'ವೇದಾಂತ ಬೋಧಕವಾದ ಪದ್ಯಗ್ರಂಥ; ವರದರಾಜನೆಂಬ ಶಿವಯೋಗಿ ತೆಲುಗಿನಲ್ಲಿ ಬರೆದ ಗ್ರಂಥದ ಅನುವಾದ. ಅಲ್ಲಲ್ಲಿ ಸಂಸ್ಕೃತ ಶ್ಲೋಕಗಳನ್ನು ಉದ್ಧರಿಸಿದೆ. ಹಾಗಲವಾಡಿ ಸಿದ್ಧರಾಮಪ್ಪನಾಯಕನ (ಸು. ೧೭೦೦) 'ಮಹಾನುಭಾವ ಪ್ರಕಾಶಿಕೆ' 'ಪೂರ್ವ ಪುರಾತನರಿಂದ ಯುಕ್ತವಾದ ನವಚಕ್ರದ ವಚನಂಗಳ ಅಭಿಪ್ರಾಯಮಂ ತಾತ್ಪರ್ಯಮಾತ್ರದಿಂ' ತಿಳಿಸುವ ಗದ್ಯಗ್ರಂಥ.

೧೬–೧೭ನೆಯ ಶತಮಾನದ ಕೆಲವು ಗ್ರಂಥಗಳು, ಕವಿಚರಿತೆಕಾರರು ಗುರುತಿಸಿರುವಂಥವು, ಉದಾ.ಗೆ 'ಶಾಂಭವೀ ಚಕ್ರೋದ್ಧರಣೆ', 'ಪರಮರಹಸ್ಯ', 'ಚಿತ್ಕ್ರಿಯಾಸಂಗ್ರಹ' ಮುಂತಾದುವು, ವೀರಶೈವ ಆಚಾರವಿಚಾರಗಳನ್ನು ಕುರಿತಿರುವಂತೆ ತೋರುತ್ತವೆ. ಇವುಗಳ ಕವಿಗಳು ಯಾರೆಂಬದು ತಿಳಿದಿಲ್ಲ.

೧೮ನೆಯ ಶ.ದಲ್ಲಿ ಕೆಲವರು ಮಾತ್ರ ವೀರಶೈವ ಶಾಸ್ತ್ರಕಾರರು ಗೋಚರಿಸುವಂತೆ ತೋರುತ್ತದೆ. ನಿರ್ವಾಣಮಂತ್ರಿ (ಸು.೧೭೨೫) 'ಶಿವಪೂಜಾವಿಧಾನ'ವನ್ನು ಗದ್ಯದಲ್ಲಿ ರಚಿಸಿದ್ದಾನೆ. ಇದರಲ್ಲಿ ಸಂಸ್ಕೃತಶ್ಲೋಕಗಳು ಉದಾಹೃತವಾಗಿವೆ. ವೀರ ಶೈವ ಮತಾನುಸಾರವಾಗಿ ಶಿವಪೂಜಾಕ್ರಮವು ಇಲ್ಲಿ ನಿರೂಪಿತವಾಗಿದೆ. ಮಹಾದೇವನು (ಸು. ೧೮೨೫) ತನ್ನ 'ಬ್ರಹ್ಮೋತ್ತರ ಖಂಡ'ವೆಂಬ ೩೨ ಸಂಧಿಗಳ ಭಾಮಿನೀಷಟ್ಪದಿಯ ಕೃತಿಯಲ್ಲಿ ಷಡಕ್ಷರಿ ಮಂತ್ರದ ಮಹಿಮೆ, ವಿಭೂತಿ ರುದ್ರಾಕ್ಷಿಗಳ ಮಹಿಮೆ, ಪುರಾಣಶ್ರವಣ ಮತ್ತು ವ್ರತಗಳ ಮಹಿಮೆ, ಶಿವಶಿವಯೋಗಿಳ ಪೂಜೆ ಇತ್ಯಾದಿ ವಿಷಯಗಳನ್ನು ನಿರೂಪಿಸಲಾಗಿದೆ. ವಿರಕ್ತ ಷಡಕ್ಷರಯ್ಯ (ಸು. ೧೭೫೦) ಶಿವಸ್ತುತಿ ಮತ್ತು ವೇದಾಂತಬೋಧಕವಾದ ವಚನಗಳನ್ನೂ (ಕೈವಲ್ಯಪದ್ಧತಿ), 'ಶಿವಪೂಜಾಷ್ಟಕ', 'ಶಿವಯೋಗಾಷ್ಟಕ'ಎಂಬೆರಡು ಅಷ್ಟಕಗಳನ್ನೂ ರಚಿಸಿದ್ದಾನೆ. ಯೋಗಾನಂದನು (ಸು. ೧೭೫೦) ವಿರೂಪಾಕ್ಷಶತಕ, ಬಸವಶತಕ ಗಳು ವೇದಾಂತ ಬೋಧಕವಾದವು. ಮಡಿವಳ ದೇಶಿಕೇಂದ್ರನ (ಸು. ೧೭೫೦) 'ಮೋಕ್ಷಚಿಂತಾರತ್ನ' ೯ ಸಂಧಿ ೫೭೬ ಪದ್ಯಗಳಲ್ಲಿ ಮೋಕ್ಷವಿಚಾರವನ್ನು ಕುರಿತಿದೆ. 'ಮಹಮೂರ್ತಿ (೧೭೭೨) ೧೧ ಸಂಧಿ ೧೩೩೬ ವಾರ್ಧಕ ಷಟ್ಪದಿಗಳ 'ಅಷ್ಟಾವರಣ ತಿಲಕ' ಎಂಬ ಗ್ರಂಥದಲ್ಲಿ ಗುರುಲಿಂಗ ಜಂಗಮ ವಿಭೂತಿ ರುದ್ರಾಕ್ಷಿ ಪಂಚಾಕ್ಷರಿ ಪಾದೋದಕ ಪ್ರಸಾದ ಇವುಗಳ ಮಹಿಮೆಯನ್ನು ನಿರೂಪಿಸಿದ್ದಾನೆ.

೧೯ನೆಯ ಶತಮಾನದಲ್ಲಿಯಾದರೂ ಕಳೆದ ಶತಮಾನದಂತೆಯೇ, ಶಿವಯೋಗೀಶ್ವರ (ಸು. ೧೮೦೦) 'ವೀರಶೈವ ಷಟ್ಸ್ಥಲಸಿದ್ಧಾಂತಸಾರ'ವನ್ನು ೩ ಪ್ರಕರಣ ೧೨೧ ಪದ್ಯಗಳಲ್ಲಿ, ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾನೆ. ಇದರಲ್ಲಿ ಪಂಚಾಚಾರ ಗಳು, ಅಷ್ಟಾವರಣಗಳು ಮುಂತಾದ ವಿಷಯಗಳನ್ನು ಕುರಿತಿದೆ. ಮೈಲಾರದ ಬಸವಪ್ಪನು (ಸು. ೧೮೦೦) ರಚಿಸಿರುವ 'ಗುರು ಕರುಣ ತ್ರಿಪದಿ' ಗುರುಮಹಿಮೆಯನ್ನೂ 'ಸಿರಾಭಾರಿ ವೀರಶೈವಸಿದ್ಧಾಂತ' ಅಷ್ಟಾವರಣ ಪಂಚಾಚಾರಗಳನ್ನೂ ನಿರೂಪಿಸು ತ್ತವೆ. ಬಾಲಲೀಲಾಮಹಂತ ಶಿವಯೋಗಿ (ಸು. ೧೮೨೦) ಮುಮ್ಮಡಿ ಕೃಷ್ಣರಾಜನ ಕಾಲದವನು. 'ಕೈವಲದರ್ಪಣ'ವೆಂಬ ಈತನ ಕೃತಿ ಹಾಡುಗಳು, ಕಂದ,ಷಟ್ಪದಿಗಳಲ್ಲಿದ್ದು,ವೇದಾಂತವಿಷಯಕವಾಗಿರುವಂತೆ ತೋರುವುದು. ಕಡಕೊಳ್ಳದ ಮಡಿವಾಳಪ್ಪ (ಸು. ೧೮೨೦) ತತ್ತ್ವಪದಗಳನ್ನು ವಚನಗಳನ್ನು ಹೇಳಿದ್ದಾನೆ. ೧೯ನೆಯ ಶ.ದ ಉತ್ತರಾರ್ಧದಲ್ಲಿಯ ಕೆಲವು ವೀರಶೈವ ಶಾಸ್ತ್ರ ಕಾರರನ್ನು ಕವಿಚರಿತೆಕಾರರು ಗುರುತಿಸಿದ್ದಾರೆ : ಧಾರವಾಡದ ಎರಡೆತ್ತಿನ ಮಠದಸ್ವಾಮಿಯಾಗಿದ್ದ ಗುರುಲಿಂಗಸ್ವಾಮಿ 'ಲಿಂಗಾ ಯತ ಮತೋತ್ಪತ್ತಿ ನಿರ್ಣಯ'ದ ಕರ್ತೃ; ಪಗಡದಿನ್ನಿಮಠದ ನನ್ನಪ್ಪ ಶಾಸ್ತ್ರಿ 'ವೇದಾಂತಪಟಲ', 'ಶಿಖಾಧಾರಣಖಂಡನೆ' ಗಳ ಕರ್ತೃ.

ಕವಿಚರಿತೆಕಾರರು ತಮ್ಮ 'ಕರ್ಣಾಟಕ ಕವಿಚರಿತೆ'ಯ ಸಂಪುಟಗಳಲ್ಲಿ ನಿರೂಪಿಸಿರುವ ಅನುಕ್ರಮವನ್ನು ಹಿಡಿದು, ಇಲ್ಲಿ ವೀರಶೈವ ಕವಿಗಳೂ ಶಾಸ್ತ್ರಕಾರರೂ ರಚಿಸಿರುವ ಧಾರ್ಮಿಕ ಮತ್ತು ಸೈದ್ಧಾಂತಿಕ ಗ್ರಂಥಗಳ ವಿಚಾರವನ್ನು ಬರೆದಿದೆ. ವಚನ ಗಳು, ಅಷ್ಟಕಗಳು, ಶತಕಗಳು ಈ ಸಾಹಿತ್ಯಪ್ರಕಾರಗಳಲ್ಲಿಯೂ, ಕಂದವೃತ್ತಗಳು, ಷಟ್ಪದಿ, ತ್ರಿಪದಿ ಮೊದಲಾದ ಛಂದೋ ರೂಪಗಳಲ್ಲಿಯೂ ಗದ್ಯದಲ್ಲಿಯೂ ಈ ಧಾರ್ಮಿಕ ಸೈದ್ಧಾಂತಿಕ ಗ್ರಂಥಗಳು ರಚಿತವಾಗಿವೆ. ಕಥೆಯ ಭಾಗವಾಗಿ, ಸ್ತುತಿಪರ ಹಾಗೂ ಭಕ್ತಿಪರಗ್ರಂಥಗಳ ಭಾಗವಾಗಿ ಧರ್ಮ ಮತ್ತು ಸಿದ್ಧಾಂತ ವಿಷಯಗಳು ಕೆಲವೊಮ್ಮೆ ಬಂದಿದ್ದರೆ, ಇನ್ನು ಕೆಲವೊಮ್ಮೆ ಸ್ವತಂತ್ರವಸ್ತುವಾಗಿಯೇ ಬಂದಿರುವುದೂ ಉಂಟು. ಸಾಮಾನ್ಯ ನೀತಿ ಬೋಧೆಯಿಂದ ಹಿಡಿದು ಸೂಕ್ಷ್ಮವಾದ ಅದ್ವೈತ ತತ್ತ್ವದ ವರೆಗೆ ವಿಷಯಗಳ ವ್ಯಾಪ್ತಿಯಿದೆ. ಆಗಮವಿಚಾರಗಳು, ತಂತ್ರ, ಯೋಗ, ಭಕ್ತಿ, ಜ್ಞಾನ, ವೈರಾಗ್ಯ, ವೀರಶೈವ ಸಮಯಾ ಚಾರಗಳು ಹೀಗೆ ಬಹುಮುಖವಾದ ಕ್ಷೇತ್ರಗಳ ತಾತ್ತ್ವಿಕ ವಿವರಗಳನ್ನು ಯಥೋಚಿತ ವಿಸ್ತಾರದಲ್ಲಿ ಈ ಕವಿಗಳು ಶಾಸ್ತ್ರಕಾರ ರಾಗಿ ನಿರೂಪಿಸಿದ್ದಾರೆ. ೧೦–೨೦ ಪದ್ಯಗಳ ಪ್ರಮಾಣದಿಂದ ೬–೭ ಸಾವಿರ ಪದ್ಯಗಳ ಪ್ರಮಾಣದವರೆಗೆ ಗ್ರಂಥದ ಸಂಕೋಚ ವಿಸ್ತಾರಗಳಿವೆಯೆಂದು ಪ್ರಾಯಶಃ ತೋರುತ್ತದೆ. ಈ ತಾತ್ತ್ವಿಕ ಗ್ರಂಥರಾಶಿಯಲ್ಲಿ ವೀರಶೈವ ಕವಿಗಳೊಡನೆ ಹೋಲಿಸಬಹು ದಾದವರು ಎಂದರೆ ಜೈನ ಕವಿಗಳು ಮಾತ್ರವೇ. ಈ ಇಬ್ಬರೂ ಸೇರಿ ಕನ್ನಡದ ತತ್ತ್ವಸಾಹಿತ್ಯವನ್ನೂ ಶಾಸ್ತ್ರಸಾಹಿತ್ಯವನ್ನೂ ಪುಷ್ಟಿಗೊಳಿಸಿದ್ದಾರೆ ; ಕನ್ನಡಿಗರ ಚಿಂತನಶಕ್ತಿಯನ್ನು ಆಧ್ಯಾತ್ಮ ಪ್ರವೃತ್ತಿಯನ್ನೂ ಪ್ರಕಟಿಸಿದ್ದಾರೆ.

**ಟೀಕೆ ವ್ಯಾಖ್ಯಾನಗಳು :**

ಹರಿಭಕ್ತನೆಂಬವನು (ಸು. ೧೨೫೦) ಅನೇಕಂಜನೂರಿನಲ್ಲಿ ಅಂಡಿಯಾಗಿದ್ದನೆಂದೂ ವೇದಭಾಷ್ಯವನ್ನು ಬರೆದನೆಂದೂ 'ಚೆನ್ನ ಬಸವ ಪುರಾಣ'ದ ಪದ್ಯವೊಂದರಿಂದ ತಿಳಿಯುತ್ತದೆ. ಈ ಭಾಷ್ಯ ಬಹುಶಃ ಕನ್ನಡದಲ್ಲಿ ಇದ್ದಿರಬಹುದೆಂದೂ ಕವಿಚರಿತೆಕಾರರು ಊಹಿಸಿದ್ದಾರೆ. ಇದು ದೊರೆತಿಲ್ಲವಾದ್ದರಿಂದ, ಇದರ ಬಗೆಗೆ ಹೆಚ್ಚು ವಿವರಗಳು ತಿಳಿದಿಲ್ಲ. ಈಗ ತಿಳಿದ ಮಟ್ಟಿಗೆ 'ಮಹಿಮ್ನ ಸ್ತೋತ್ರ', 'ಮಲ್ಹಣ ಸ್ತೋತ್ರ', 'ಮಲೆಯರಾಜ ಸ್ತೋತ್ರ', 'ಅನಾಮಯ ಸ್ತೋತ್ರ', 'ಹಲಾಯುಧ ಸ್ತೋತ್ರ', 'ಭೃಂಗಿಸ್ತವ' ಇವುಗಳಿಗೆ ಕನ್ನಡ ವ್ಯಾಖ್ಯಾನಗಳನ್ನು ರಚಿಸಿರುವ ಗುರುದೇವನೆಂಬವನೇ (ಸು. ೧೩೬೦) ಪ್ರಾಯಃ ಮೊದಲಿಗನೆಂದು ತೋರುತ್ತದೆ. ಇವನು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಸಂಪ್ರದಾಯಕ್ಕೆ ಸೇರಿದವನು. ಇವನು ಸಿದ್ಧದೇವನೆಂಬವನಿಗೋಸ್ಕರ ಸಂಸ್ಕೃತದಲ್ಲಿ 'ವೀರಶೈವಾಚಾರ ಪ್ರದೀಪಿಕೆ' ಎಂಬ ಕೃತಿಯನ್ನು ರಚಿಸಿದನು. ಕನ್ನಡದಲ್ಲಿಯೂ ಕೃತಿ ರಚನೆ ಮಾಡಿದ್ದಂತೆ ಆಧಾರವಿರುವ ನೀಲಕಂಠಶಿವಾಚಾರ್ಯನು (ಸು. ೧೪೦೦) ಬ್ರಹ್ಮಸೂತ್ರಗಳಿಗೆ ಸಂಸ್ಕೃತದಲ್ಲಿಯೇ 'ಕ್ರಿಯಾಸಾರ' ವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ.

೧೫ ನೆಯ ಶತಮಾನದಲ್ಲಿ ನಡೆದ ವಚನ ಸಂಕಲನ ಸಂಸ್ಕರಣಗಳ ಕಾರ್ಯದಲ್ಲಿ ಕೆಲವರು ವೀರಶೈವ ಕವಿಗಳು ಸಂಸ್ಕೃತದ ಮೂಲ ಗ್ರಂಥಗಳಿಗೆ ಟೀಕೆ ವ್ಯಾಖ್ಯಾನಗಳನ್ನು ರಚಿಸುವ ರೀತಿಯಲ್ಲಿಯೇ ವಚನಗಳಿಗೆ ಕೂಡ ವ್ಯಾಖ್ಯಾನ ವಿವರಣೆ ಮೊದಲಾದುವನ್ನು ರಚಿಸಿದ್ದಾರೆ. ಇಂತಹ ಸಂದರ್ಭಗಳಲ್ಲಿ ಪುರಾಣಾಗಮಾದಿಗಳಿಂದ ಸಂಸ್ಕೃತ ಶ್ಲೋಕಗಳನ್ನು ಯಥೋಚಿತವಾಗಿ ಉದ್ಧರಿಸಿರುವುದು, ವ್ಯಾಖ್ಯಾನಿಸಿರುವುದು ಕೂಡ ಕಂಡುಬರುತ್ತದೆ. ಕಲ್ಲುಮಠದ ಪ್ರಭುದೇವ (ಸು. ೧೪೩೦), ಗುಬ್ಬಿಯ ಮಲ್ಲಣಾರ್ಯ (ಸು. ೧೪೭೫) ಮೊದಲಾದವರು ಬರೆದ ಗ್ರಂಥಗಳಲ್ಲಿ ಇದನ್ನು ನಾವು ಗಮನಿಸಬಹುದು. ಗುಬ್ಬಿಯ ಮಲ್ಲಣಾರ್ಯನು (ಸು. ೧೪೭೫) 'ವಾತುಲ ತಂತ್ರ'ವೆಂಬ ಶೈವಾಗಮಕ್ಕೆ ಕನ್ನಡದಲ್ಲಿ ಸ್ವತಂತ್ರವಾಗಿ ವ್ಯಾಖ್ಯೆ ರಚಿಸಿದ್ದಾನೆ, ಸಾಸಲ ಚಿಕ್ಕಣಾರಾಧ್ಯನು (ಸು. ೧೪೫೦) ಅಥರ್ವವೇದ ಮಂತ್ರವ್ಯಾಖ್ಯೆಯೆಂದು ಹೇಳಲ್ಪಟ್ಟಿರುವ 'ಪಂಚ ಬ್ರಹ್ಮೋದಯ ಭಾಷ್ಯ' ಎಂಬ ಗದ್ಯ ಗ್ರಂಥವನ್ನು ಬರೆದಿದ್ದಾನೆ. ಕೆಲವು ವೀರಶೈವ ಕವಿಗಳು ವೇದಮಂತ್ರಕ್ಕೆ ವಿಸ್ತಾರವಾದ ಭಾಷ್ಯಗಳನ್ನು ಹಿಂದೆ ಬರೆದಿದ್ದಂತೆಯೂ ಅವೆಲ್ಲ ಸಂಸ್ಕೃತದಲ್ಲಿರುವುದರಿಂದ ತಾನು ತನ್ನ ಭಾಷ್ಯವನ್ನು ಕನ್ನಡದಲ್ಲಿ ಬರೆದುದಾಗಿಯೂ ಈ ಕವಿ ಹೇಳಿಕೊಂಡಿದ್ದಾನೆ. ಸಾನಂದ ಶಿವಯೋಗಿ (ಸು. ೧೪೮೦) 'ವೀರಶೈವ ಮಾಹೇಶ್ವರಾಚಾರ ಸಾರೋದ್ಧಾರ'ದ ಟೀಕಾಕರ್ತೃ.

ನಿಜಗುಣ ಶಿವಯೋಗಿ (ಸು. ೧೫೦೦) ಜನಪ್ರಿಯ ಅನುಭಾವಿಕವಿಯಾಗಿದ್ದು, ಸ್ವತಂತ್ರವಾದ ತಾತ್ತ್ವಿಕಗ್ರಂಥಗಳನ್ನು ಬರೆದಿರುವ ಜೊತೆಗೆ, ಚೆನ್ನಸದಾಶಿವಯೋಗಿಕೃತವಾದ 'ಶಿವಯೋಗ ಪ್ರದೀಪಿಕೆ'ಎಂಬ ಸಂಸ್ಕೃತಗ್ರಂಥಕ್ಕೆ 'ಪರಮಾರ್ಥ ಪ್ರಕಾಶಿಕೆ'ಎಂಬ ಹೆಸರಿನ ಕನ್ನಡ ವ್ಯಾಖ್ಯಾನವೊಂದನ್ನು ಬರೆದಿದ್ದಾನೆ. 'ಸಂಸ್ಕೃತಜ್ಞಾನವಿಲ್ಲದ ಮೋಕ್ಷಾಪೇಕ್ಷಿಗಳಿಗೆ ಸುಲಭವಾಗಿ ತಿಳಿಯುವಂತೆ' ಈ ವ್ಯಾಖ್ಯಾನವನ್ನು ಬರೆದುದಾಗಿ ತಿಳಿಸಿದ್ದಾನೆ. ಎರಡನೆಯ ಚನ್ನಬಸವನು (ಸು. ೧೫೮೦) 'ಚೆನ್ನಬಸವನ ಪದಮಂತ್ರ ಗೋಪ್ಯ'ಕ್ಕೆ ವಿವರಣೆ ಬರೆದಿರುವಂತೆ ತೋರುವುದು. ಗುರುನಂಜನೆಂಬುವನು (ಸು. ೧೫೦೦) ಭಟ್ಟಭಾಸ್ಕರ ಕೃತವಾದ ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆ ರಚಿಸಿದ್ದಾನೆ. ಈ ಟೀಕೆ ಪ್ರೌಢವಾಗಿದ್ದು, ಇದಕ್ಕೆ 'ರುದ್ರಭಾಷ್ಯ' ಎಂಬ ಹೆಸರಿರುವಂತೆ ತೋರುತ್ತದೆ. ಸತಾವರ ಶಾಂತಯೋಗಿಯ ಇಷ್ಟಾನುಸಾರವಾಗಿ ಈ ಟೀಕೆಯನ್ನು ಬರೆದಂತೆ ಕವಿ ಹೇಳಿಕೊಂಡಿದ್ದಾನೆ. ಹೀಗೆಯೇ ಇದೇ ಅವಧಿಯವನೆಂದು ಊಹಿಸಿರುವ ಚೆನ್ನವೀರ ಕವಿ 'ಸಾರಸ್ವತ ವ್ಯಾಕರಣ', 'ಪುರುಷ ಸೂಕ್ತ', 'ನಮಕ ಚಮಕ' ಇವುಗಳಿಗೆ ಕನ್ನಡದಲ್ಲಿ ಟೀಕೆಗಳನ್ನು ಬರೆದಿದ್ದಾನೆ. ಈತನ 'ಸಾರಸ್ವತ ವ್ಯಾಕರಣ' ಟೀಕೆಗೆ 'ಶಬ್ದಮಣಿ' ಎಂದು ಹೆಸರು. ಇವನು 'ವೀರಶೈವ ಮಾಹೇಶ್ವರ ತಂತ್ರ'ಕ್ಕೆ ಟೀಕೆಯನ್ನೂ ಬರೆದಿರುವಂತೆ ತಿಳಿಯಲಾಗಿದೆ.

ಉಜ್ಜನೀಶನು (ಸು. ೧೫೫೦) 'ವೀರಶೈವ ಸಿದ್ಧಾಂತ ಶಿಖಾಮಣಿ'ಗೂ ಮಗ್ಗೆಯ ಮಾಯಿದೇವನ 'ವಿಶೇಷಾರ್ಥ ಪ್ರಕಾಶಿಕೆ'ಗೂ ಟೀಕಾಕರ್ತೃವಾಗಿದ್ದಾನೆ. ಶ್ರೀಧರಾಂಕನು (ಸು. ೧೫೫೦) ನೀಲಕಂಠ ನಾಗನಾಥಾಚಾರ್ಯನ 'ವೀರ ಮಾಹೇಶ್ವರಾಚಾರ ಸಂಗ್ರಹ'ಕ್ಕೆ ಟೀಕಾಕರ್ತೃ, ಮಲ್ಲಿಕಾರ್ಜುನ ಕವಿ (೧೫೯೩), ಗುರುರಾಜ (ಸು.೧೪೩೦) ವಿರಚಿತವಾದ ಸಂಸ್ಕೃತ 'ಪಂಡಿತಾರಾಧ್ಯ ಚಾರಿತ್ರ'ಕ್ಕೆ ಹಾಗೂ ಶಂಕರ ಕವಿ ಕೃತವಾದ ಸಂಸ್ಕೃತ 'ಬಸವ ಪುರಾಣ'ಕ್ಕೆ ಕನ್ನಡದಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾನೆ. ಸಿದ್ಧಾಂತ ಗ್ರಂಥಗಳಿಗೆ ಮಾತ್ರವಲ್ಲದೆ ಕಾವ್ಯಗಳಿಗೆ ಕೂಡ ವ್ಯಾಖ್ಯಾನಗಳನ್ನು ರಚಿಸುತ್ತಿದ್ದ ವಿರಳವಾದ ಪದ್ಧತಿಗೆ ಇಲ್ಲಿ ನಿದರ್ಶನ ದೊರೆತಿದೆ. ಸೋಸಲೆ ರೇವಣಾರ್ಯನು (ಸು. ೧೭೨೩) 'ಮಹಿಮ್ನಸ್ತವ', ವೀರಶೈವಸಿದ್ಧಾಂತ ಶಿಖಾಮಣಿ', 'ಶಿವಾಧಿಕ್ಯ ಶಿಖಾಮಣಿ', 'ಸದ್ಗುರು ರಗಳೆ' ಈ ಕೆಲವು ಗ್ರಂಥಗಳ ವ್ಯಾಖ್ಯಾನಕರ್ತೃ. 'ಮಹಿಮ್ನಸ್ತವ ಟೀಕೆ'ಗೆ 'ಮಹಿಮ್ನ ಪ್ರದೀಪಿಕಾ' ಎಂದೂ 'ವೀರಶೈವ ಸಿದ್ಧಾಂತ ಶಿಖಾಮಣಿ ಟೀಕೆ'ಗೆ 'ಸಿದ್ಧಾರ್ಥ ಸಂಬೋಧಿನಿ' ಎಂದೂ ಹೆಸರು ಹೇಳಿದೆ. ಎರಡನೆಯದನ್ನು ಭೋಗಮಲ್ಲೇಶನ ಶಿಷ್ಯನಾದ ಸಿದ್ಧವೃಷೇಶ್ವರನ ಆಜ್ಞಾನುಸಾರವಾಗಿ ಬರೆದಂತೆ ಕವಿ ಹೇಳಿದ್ದಾನೆ. ಹೀಗೆಯೇ

'ಶಿವಾಧಿಕ್ಯ ಶಿಖಾಮಣಿ' ಟೀಕೆಯನ್ನು ಕಳಿಲೆ ಕೆಂಪನಂಜಾರ್ಯ, ನಮಸ್ಕಾರಪುರೀ ಸಿದ್ಧನಂಜಾರ್ಯ, ಸುತ್ತೂರು ಸಿಂಹಾಸನದ ಗುರು ನಂಜಾರ್ಯನ ಶಿಷ್ಯ ಚೆನ್ನಬಸವ ಈ ಮೂವರ ಇಷ್ಟಾನುಸಾರವಾಗಿ ಬರೆದಂತೆಯೂ ಹೇಳಿಕೊಂಡಿದ್ದಾನೆ. ಮುದಿಗೆರೆ ರಘುವಪ್ಪ ನಾಯಕನೆಂಬುವನೂ ಈ ಗ್ರಂಥದ ರಚನೆಗೆ ಕಾರಣಭೂತನೆಂದು ತಿಳಿದಿರುವುದು. ಇದೇ ಕವಿ ರುದ್ರಭಾರತಕ್ಕೆ ಟೀಕೆಯನ್ನು ಬರೆದಿರುವಂತೆಯೂ ತಿಳಿಯುತ್ತದೆಂದು ಕವಿಚರಿತೆಕಾರರು ತಿಳಿಸಿದ್ದಾರೆ. ಇದೇ ಕಾಲದವನಾಗಿ ತಿಳಿದಿರುವ ಸಿದ್ಧನಂಜಯತಿ ಬೋಳ ರೇಣುಕಾಚಾರ್ಯನ 'ಶಿವಾಧಿಕ್ಯ ಶಿಖಾಮಣಿ'ಗೆ ಕನ್ನಡ ಟೀಕೆಯ ಕರ್ತೃ. ಇದಕ್ಕೆ ವೀರಭದ್ರೀಯವೆಂದು ಹೆಸರು. ಕಳಿಲೆ ಕೆಂಪ ನಂಜಾಚಾರ್ಯನ ಪ್ರಾರ್ಥನಾನುಸಾರವಾಗಿ ಇದನ್ನು ಬರೆದಂತೆ ಕವಿ ತಿಳಿಸಿದ್ದಾನೆ.

ವೀರಣಾರಾಧ್ಯನು (ಸು. ೧೬೫೦), ತಂದೆ ವಿಶ್ವನಾಥಾಚಾರ್ಯ ರಚಿಸಿದ್ದ 'ದಶಗ್ರಂಥಿ'ಗೆ 'ಶಿವಜ್ಞಾನ ಪ್ರದೀಪಿಕೆ'ಎಂಬ ಕನ್ನಡ ವ್ಯಾಖ್ಯಾನ ರಚಿಸಿದ್ದಾನೆ. ಬಸವಣ್ಣ ಮತ್ತು ತೋಂಟದ ಸಿದ್ಧಲಿಂಗನ ಷಟ್ಸ್ಥಲವಚನಗಳಿಗೆ ಬೆಡಗಿನ ವಚನಗಳಿಗೆ ಸೋಮಶೇಖರ ಶಿವಯೋಗಿ (ಸು. ೧೭೦೦) ಟೀಕೆಗಳನ್ನು ರಚಿಸಿದ್ದಾನೆ. ಬಸವಾರಾಧ್ಯನು (ಸು. ೧೭೦೦) ಚೆನ್ನಸದಾಶಿವ ಯೋಗಿಯ ಸಂಸ್ಕೃತ 'ಶಿವಯೋಗ ಪ್ರದೀಪಿಕೆ'ಗೆ ಕನ್ನಡ ಟೀಕೆ ರಚಿಸಿದ್ದಾನೆ. ಇದಕ್ಕೆ ಮೊದಲು ನಿಜಗುಣ ಶಿವಯೋಗಿ ಇದರ ಒಂದು ಟೀಕೆ ರಚಿಸಿದ್ದುದನ್ನು ಇಲ್ಲಿ ನೆನೆಯಬಹುದು. ಸಂಗನಬಸವಪ್ಪ (ಸು. ೧೭೫೦) 'ವೀರಶೈವ ಸುಧಾನಿಧಿ ಟೀಕೆ'ಯ ಕರ್ತೃ. ಉದ್ದಾನ ಸಿದ್ಧಲಿಂಗದೇವನು (ಸು. ೧೭೫೦) ನಿಟ್ಟೂರ ನಂಜಯ್ಯನ ಸಂಸ್ಕೃತ ಕೃತಿ 'ವೀರಶೈವ ಚಿಂತಾಮಣಿ'ಗೆ ಟೀಕೆ ಬರೆದಿದ್ದಾನೆ. ವೀರೇಶ್ವರ ಶಾಸ್ತ್ರಿ (ಸು. ೧೮೬೦) ಸ್ವರಚಿತವಾದ 'ವೀರಶೈವಾನ್ವಯ ಚಂದ್ರಿಕೆ'ಗೆ ಕನ್ನಡ ಟೀಕೆಯನ್ನು ರಚಿಸಿದ್ದಾನೆ.

ವೀರಶೈವ ವ್ಯಾಖ್ಯಾನಗಳು ಸ್ತೋತ್ರಗಳು, ಪ್ರಸಿದ್ಧ ವಚನಕಾರರ ವಚನಗಳು, ವೇದ ಮತ್ತು ವೇದಭಾಷ್ಯಗಳು, ಆಗಮಗಳು, ಪುರಾಣಾಗಮಾದಿಗಳ ಸೂಕ್ತಿಗಳು, ತಾತ್ತ್ವಿಕ ಮತ್ತು ಸಿದ್ಧಾಂತ ಗ್ರಂಥಗಳು, ಕಾವ್ಯಗಳು, ವ್ಯಾಕರಣ –ಈ ಮೊದಲಾದವುಗಳನ್ನು ಆಶ್ರಯಿಸಿ ಹುಟ್ಟಿವೆ. ವೀರಶೈವ ಮತದ ಪ್ರಭಾವವನ್ನೂ ಪ್ರಸಾರವನ್ನೂ ಬೆಳಸುವುದು, ಸಿದ್ಧಾಂತ ಗ್ರಂಥಗಳನ್ನು ಜನಸಾಮಾನ್ಯರಿಗೆ ಸುಬೋಧವನ್ನಾಗಿ ಮಾಡುವುದು—ಇವೇ ಈ ವ್ಯಾಖ್ಯಾನಕಾರರ ಉದ್ದೇಶವಾಗಿರುವಂತೆ ತೋರುತ್ತದೆ. ಇಲ್ಲಿ ರಚನೆಗೆ ಹೇತುವಾಗಿ ಪ್ರೇರಣೆ ಪ್ರತಿಬೋಧನೆಗಳುಂಟು, ಜೈನ ವ್ಯಾಖ್ಯಾನಗಳ ಹಾಗೆಯೇ.

## ನವೋದಯ ವೀರಶೈವಸಾಹಿತ್ಯ

**—ಟಿ. ಆರ್. ಮಹಾದೇವಯ್ಯ.**

ಕನ್ನಡಸಾಹಿತ್ಯಚರಿತ್ರೆಯಲ್ಲಿ ವೀರಶೈವಸಾಹಿತ್ಯಕ್ಕೆ ವಿಶಿಷ್ಟವಾದ ಸ್ಥಾನವಿದೆ. ಕನ್ನಡ ಸಾಹಿತ್ಯ ಸಂಪದಕ್ಕೆ ವೀರಶೈವರ ಕೊಡುಗೆ ಅಪಾರ , ಸಮೃದ್ಧ. 'ಕನ್ನಡಸಾಹಿತ್ಯವೆಂದರೆ ವೀರಶೈವಸಾಹಿತ್ಯ, ವೀರಶೈವಸಾಹಿತ್ಯವೆಂದರೆ ಕನ್ನಡಸಾಹಿತ್ಯ' ಎನ್ನುವಷ್ಟರ ಮಟ್ಟಿಗೆ ಅದು ಖ್ಯಾತ. ಯಾವುದೋ ಒಂದು ನಿರ್ದಿಷ್ಟ ತತ್ತ್ವಪ್ರತಿಪಾದನೆಗೆ, ಧರ್ಮ ಜಿಜ್ಞಾಸೆಯ ಸಲುವಾಗಿ ವೀರಶೈವ ಸಾಹಿತ್ಯ ಸೃಷ್ಟಿಯಾಗಿದ್ದರೂ ಅದು ಮತಾತೀತವಾಗಿ ಬೆಳೆದು ನಿಂತಿರುವುದನ್ನು ಕಾಣಬಹುದು. ಕೇವಲ ಕೆಲವರದಾಗಿದ್ದ ಸಾಹಿತ್ಯವನ್ನು ಹಲವರದನ್ನಾಗಿ ಮಾಡಿ ಧರ್ಮ–ಸಂಸ್ಕೃತಿಗಳನ್ನು ಸಾಹಿತ್ಯಸುಧೆಯೊಡನೆ ಮನೆಮನೆಗೆ, ಮನಮನಕ್ಕೆ ಮುಟ್ಟಿಸಿದ ಕೀರ್ತಿ ವೀರಶೈವ ಸಾಹಿತ್ಯಕ್ಕೆ ಸಲ್ಲುತ್ತದೆ. ಅದರ ಕ್ರಾಂತ ದೃಷ್ಟಿ, ಜನ ಬದುಕಲೆಂಬ ಉದಾತ್ತ ಆಶಯ, ವೈವಿಧ್ಯಮಯವಾದ ಹರವು ವೀರಶೈವ ಸಾಹಿತ್ಯದ ಹಿರಿಮೆ–ಗರಿಮೆಗಳನ್ನು ಸಾರುತ್ತವೆ. ವೀರಶೈವರು ಬರಿಯ ಸಂಖ್ಯೆಯ ದೃಷ್ಟಿಯಿಂದ ಮಾತ್ರವಲ್ಲದೆ, ಸತ್ವದ ದೃಷ್ಟಿಯಿಂದಲೂ ಮೌಲ್ಯವುಳ್ಳ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ. ವಿಶ್ವಸಾಹಿತ್ಯಕ್ಕೆ ಸಲ್ಲುವ ಓಜಸ್ವಿಯಾದ ಕೃತಿಗಳು ಇವುಗಳಲ್ಲುಂಟು. ಹೀಗೆ ಸಾಗಿ ಬಂದ ಸಂಪದ್ಭರಿತವೂ, ವೈವಿಧ್ಯಪೂರ್ಣವೂ, ಉದಾತ್ತ ಧ್ಯೇಯ-ಧೋರಣೆಯುಳ್ಳುದೂ ಆದ ವೀರಶೈವ ಸಾಹಿತ್ಯವಾಹಿನಿಯಲ್ಲಿ ನವೋದಯ ಸಾಹಿತ್ಯದ (೧೮೫೦–೧೯೨೦) ಎತ್ತರ–ಬಿತ್ತರಗಳನ್ನು ಗುರುತಿಸುವುದು ಈ ಲೇಖನದ ಉದ್ದೇಶ.

ಹತ್ತೊಂಬತ್ತನೆಯ ಶತಮಾನದ ಅರ್ಧಭಾಗದಿಂದ ಇಪ್ಪತ್ತನೆಯ ಶತಮಾನದ ಆರಂಭದವರೆಗಿನ ಕನ್ನಡಸಾಹಿತ್ಯದ ಹರವಿನಲ್ಲಿ ವೀರಶೈವ ಕವಿಗಳ ಸಂಖ್ಯೆ ಹಿರಿದಾಗಿದ್ದು, ಅವರಿಂದ ಗಣನಾರ್ಹ ಸೇವೆ ಸಂದಿರುವುದನ್ನು ಒಬ್ಬ ಸಾಮಾನ್ಯ ಸಾಹಿತ್ಯಾಭ್ಯಾಸಿಯೂ ಕೂಡ ಸ್ಪಷ್ಟವಾಗಿ ಕಂಡುಕೊಳ್ಳಬಹುದಾಗಿದೆ. ಇತ್ತೀಚೆಗೆ ದೊರಕಿರುವ ಕವಿ–ಕೃತಿಗಳ ಮಾತಿರಲಿ, ಕವಿಚರಿತೆಕಾರರು ನಡೆಸಿರುವ ಸಮೀಕ್ಷೆ ಹಾಗೂ ಉಲ್ಲೇಖಿಸಿರುವ ಕವಿಗಳ ಪಟ್ಟಿಯನ್ನು ಗಮನಿಸಿದರೂ ಇದು ಸ್ಪಷ್ಟವಾಗುತ್ತದೆ.

ಆಧುನಿಕ ಯುಗದಲ್ಲಿ ಬೀಸಿದ ಹೊಸಗಾಳಿ ಎಲ್ಲೆಲ್ಲೂ ನವಚೇತನವನ್ನು ಉಂಟು ಮಾಡಿತು. ಕನ್ನಡದಲ್ಲಿ ನವೋದಯ ಸಾಹಿತ್ಯ ಆರಂಭವಾದದ್ದೇ ಇಂಗ್ಲೀಷ್ ಕಲಿಕೆಯಿಂದ ಎನ್ನಬಹುದು. ಇಂಗ್ಲೀಷ್ ಕಲಿಕೆ ಜನರಿಗೆ ವಿಶಾಲದೃಷ್ಟಿಯನ್ನೊದಗಿಸಿತು. ಹೊಸ ವಿಚಾರಗಳು ಆಧುನಿಕ ಮಾನವಜೀವನದಲ್ಲಿ ಪರಿಣಾಮವನ್ನುಂಟುಮಾಡುತ್ತಾ ಬಂದಂತೆ ಕೆಲವು ಹಳೆಯ ಸಂಪ್ರದಾಯ

ಗಳು ಗೊಡ್ಡಾಗಿ ಕಂಡವು. ಅವನ್ನು ಕೈಬಿಡುವ ಹುರುಪಿನಲ್ಲಿ ಜೀವನದ ಕೆಲವು ಮೌಲ್ಯಗಳೂ ಕಣ್ಮರೆಯಾಗಹತ್ತಿದವು. ಜನ ಧರ್ಮದಿಂದ ವಿಮುಖರಾಗತೊಡಗಿದರು. ಇದು ಒಂದು ರೀತಿಯ ಸಮಸ್ಯೆಯನ್ನೊಡ್ಡಿದರೆ, ಸಮಾಜ ಇನ್ನೊಂದು ಕೇಡನ್ನು ಎದುರಿಸಿತು. ಕೆಲವು ಜನ ರೂಢಿಯಲ್ಲಿದ್ದ ಕಂದಾಚಾರಗಳನ್ನು ನಿಜಧರ್ಮವೆಂದು ನಂಬಿದರು. ಅವರು ಅಂಧವಿಶ್ವಾಸವನ್ನು ಬೆಳೆಸಿಕೊಂಡು ಮೂಢ ಆಚಾರಗಳನ್ನು ಅನುಸರಿಸತೊಡಗಿದರು. ಇಂಥವರನ್ನು ಸುಲಭವಾಗಿ ಶೋಷಣೆ ಮಾಡುತ್ತಿದ್ದ ಪುರೋಹಿತಶಾಹಿ ಹೊಸ ಹೊಸ ವ್ರತಗಳನ್ನು ಸೃಷ್ಟಿಸಿ ತಾವು ಬದುಕುವ ಮಾರ್ಗ ಕಂಡುಕೊಂಡರು. ನಿಜವಾದ ತತ್ತ್ವ ಯಾವುದು ಎಂಬುದನ್ನು ಇಂಥವರಿಗೆ ತೋರಿಸುವ ಅಗತ್ಯ ಬಹಳವಾಗಿತ್ತು. ಇದನ್ನು ಗಮನಿಸಿದ ಕೆಲವು ಅನುಭಾವಿಗಳು ಜನರ ಮನಸ್ಸಿಗೆ ಹಿಡಿಸುವ ಧಾಟಿ ಹಾಗೂ ಭಾಷೆಗಳಲ್ಲಿ ತತ್ತ್ವಬೋಧೆ ಮಾಡಿದರು. ಹೀಗಾಗಿ ಸಮಾಜದ ಅಗತ್ಯವನ್ನು ಪೂರೈಸಲೆಂಬಂತೆ ಆಧ್ಯಾತ್ಮಿಕ ಚಿಂತನ ಹಾಗೂ ಆ ಬಗೆಗಿನ ಸಾಹಿತ್ಯ ಸೃಷ್ಟಿಯಾಯಿತು.

ಇದರಂತೆಯೇ ಹಳೆಯ ಸಾಹಿತ್ಯಕೃತಿಗಳನ್ನು ಪರಿಷ್ಕರಿಸಿ ಪ್ರಕಟಿಸುವ ಕಾರ್ಯವೂ ವ್ಯಾಪಕವಾಗಿ ಸಾಗಿತು. ಹೊಸ ಹೊಸ ದೃಷ್ಟಿಕೋನಗಳಿಂದ, ಸಂವೇದನೆಗಳಿಂದ ಪ್ರಭಾವಿತರಾದ ಸಾಹಿತಿಗಳು ಅವರೆಗೆ ರಚನೆಗೊಂಡ ಸಾಹಿತ್ಯರಾಶಿಯನ್ನು ಪರಿಶೀಲಿಸತೊಡಗಿದರು. ಅಂದರೆ ಸೃಷ್ಟಿಕಾರ್ಯದ ಜೊತೆಗೆ ಸಂವರ್ಧನಕಾರ್ಯವೂ ಸಾಗಿತು. ವಿಶಾಲ ಮನೋಧರ್ಮದಿಂದ ಉಳಿದ ಧರ್ಮೀಯರ ಕೃತಿಗಳ ಸಂಪಾದನೆ-ವಿವೇಚನೆಗಳಿಗೆ ತೊಡಗಿದರು. ವೀರಶೈವೇತರರು ವೀರಶೈವ ಸಾಹಿತ್ಯದ ಬಗ್ಗೆ ಶ್ಲಾಘನೀಯವಾದ ಕೆಲಸ ಮಾಡಿರುವುದನ್ನು ಇಲ್ಲಿ ನೆನೆಯಬಹುದು. ಹಳೆಯದನ್ನು ಹೊಸದೃಷ್ಟಿಕೋನದಿಂದ ಪರಿಶೀಲಿಸುವುದು, ಪ್ರಕಟಿಸುವುದು, ಸೃಜನಶೀಲ ಸಾಹಿತ್ಯ ನಿರ್ಮಾಣ, ಕಾಲೋಚಿತವಾದ ತತ್ತ್ವಗಳ ವಿವೇಚನೆ ಮೊದಲಾದ ಹಲವು ಮುಖಗಳಲ್ಲಿ ವ್ಯಕ್ತಗೊಂಡ ವೀರಶೈವ ನವೋದಯ ಸಾಹಿತ್ಯದಲ್ಲಿ ಕೆಲವು ಪ್ರಮುಖ ಹೆಜ್ಜೆಗಳನ್ನು, ಅಲ್ಲಿ ಕಂಡುಬರುವ ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು:–

೧. ಸಾಂಪ್ರದಾಯಿಕವಾದ ಕೃತಿ ರಚನೆಯನ್ನು ಮುಂದುವರಿಸಿದ್ದು: ಈ ಅವಧಿಯಲ್ಲಿ ಧಾರ್ಮಿಕಾಂಶ ಮತ್ತು ಕಾವ್ಯಾಂಶಗಳೆರಡರಿಂದಲೂ ಶೋಭಿಸುವ ವೀರಶೈವ ಪುರಾಣ ಕಾವ್ಯಗಳು ರಚನೆಯಾಗಿವೆ. ಮೇಲ್ಮಟ್ಟದ ಕವಿಗಳು, ಬಹುಶ್ರುತ ಪಂಡಿತರು ಕಾವ್ಯ ರಚಿಸಿದ್ದಾರೆ. ಅನೇಕರು ವೀರಶೈವ ಪುರಾಣಗಳ ವಿಶಿಷ್ಟವಾದ ಚೌಕಟ್ಟಿಗೆ ಅಳವಡುವಂತೆ ಪ್ರಾಚೀನ ಅಥವಾ ಸಮಕಾಲೀನ ಶರಣರನ್ನು ಕುರಿತು ಕಾವ್ಯಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಚಾರಿತ್ರಿಕ ಅಥವಾ ಪೌರಾಣಿಕವಾದ ರಮ್ಯ ಕಥೆಯ ಜೊತೆಗೆ ಅವಕಾಶ ಸಿಕ್ಕಾಗಲೆಲ್ಲಾ ವೀರಶೈವ ಧರ್ಮದ ತಾತ್ತ್ವಿಕ ವಿಶ್ಲೇಷಣೆ ಹಾಗೂ ಸಿದ್ಧಾಂತಗಳ ಪ್ರತಿಪಾದನೆ ಇರುತ್ತದೆ. ಇಲ್ಲೆಲ್ಲಾ ಸಂಪ್ರದಾಯ ಶರಣತೆ ಹೆಚ್ಚಾಗಿ ಕಂಡರೂ, ಗಹನವಾದ ತಾತ್ತ್ವಿಕ ವಿಷಯಗಳನ್ನು ಸರಳವಾಗಿ, ಸರಸವಾಗಿ ನಿರೂಪಿಸ ಬೇಕೆಂಬ ಕಾಳಜಿ ಎದ್ದು ಕಾಣುತ್ತದೆ. ಕಾವ್ಯದ ಶೋಭೆ, ಆಧ್ಯಾತ್ಮದ ಹೊಳವು ಎರಡೂ ಇಲ್ಲಿ ಉಂಟು. ಬಸವಕವಿ, ಸಿದ್ಧಲಿಂಗ, ಜಗದೀಶಶಾಸ್ತ್ರಿ ನಾಲ್ವಾರ, ಚನ್ನಕವಿ ದ್ಯಾಂಪುರ ಮೊದಲಾದವರನ್ನು ಇಲ್ಲಿ ಹೆಸರಿಸಬಹುದು.

೨. ಜನರಲ್ಲಿ ಪ್ರೀತಿ-ವಿಶ್ವಾಸಗಳು ಮಾಯವಾಗಿ, ಅವುಗಳ ಸ್ಥಾನದಲ್ಲಿ ದ್ವೇಷಾಸೂಯೆಗಳು ಕಾಣಿಸಿಕೊಂಡು ಮಾನವನ ಬದುಕು ಮಾರಣವೆನಿಸಿದ್ದನ್ನು ಗಮನಿಸಿ ಕೆಲವು ಅನುಭಾವಿಗಳು ತತ್ತ್ವಬೋಧೆ ಮಾಡಿದ್ದಾರೆ. ಅವರು ಹಿಡಿದಿರುವ ಮಾರ್ಗ ಅನುಕರಣೀಯ. ಜನರಿಗೆ ಮನರಂಜನೆಯೊದಗಿಸಿ, ಅದರೊಂದಿಗೇ ಧರ್ಮೋಪದೇಶ ಮಾಡುವ ವಿಧಾನ ಅವರದು. ವಿವಿಧ ರಾಗ, ತಾಳ, ಲಯಬದ್ಧವಾದ ತತ್ತ್ವಪದ ಹಾಗೂ ಅನುಭಾವ ಗೀತೆಗಳ ಮೂಲಕ ಅವರು ನೀತಿ, ಧರ್ಮಗಳ ಅರಿವು ಮಾಡಿಸಿದರು. ಹೀಗಾಗಿ ಹಾಡುಗಬ್ಬಗಳ ರಚನೆ ಯಥೇಚ್ಛವಾಗಿ ಸಾಗಿತು. ಈ ಬಗೆಯ ಸಾಹಿತ್ಯವನ್ನು ಸೃಷ್ಟಿಸಿದವರಲ್ಲಿ ಗುರುಲಿಂಗ ಜಂಗಮ ಮಹಾರಾಜರು, ಸೋಮೇಕಟ್ಟಿ ಕರಿವೃಷಭೇಂದ್ರಸ್ವಾಮಿ, ನೀರಲಕೇರಿ ಬಸವಲಿಂಗ ಶಿವಯೋಗಿ, ನಂಜುಂಡ ಶಿವಯೋಗಿ, ಕಡಕೋಳ ನಾಗಲಿಂಗಪ್ಪ, ನುಂದ್ಯಾಳ ಸಂಗ ಇತ್ಯಾದಿ ದೊಡ್ಡ ಶ್ರೇಣಿಯೇ ಇದೆ.

೩. ಕೆಲವು ಕವಿಗಳು ಮಠಾಧೀಶರಿಂದ ಪ್ರಭಾವಿತರಾಗಿ ಕಾವ್ಯರಚನೆ ಮಾಡಿರುವುದು ಕಂಡು ಬರುತ್ತದೆ. ಅವು ಬಹುಮಟ್ಟಿಗೆ ತಾತ್ತ್ವಿಕ ಗ್ರಂಥಗಳು; ವೇದಾಂತ, ಸಿದ್ಧಾಂತ, ಧರ್ಮಜಿಜ್ಞಾಸೆ, ನೀತಿ ನಿರೂಪಣೆಗಳಿಂದ ಕೂಡಿದ ಕೃತಿಗಳು. ಈ ಕಾಲದ ಆರಂಭದಲ್ಲಿದ್ದ ಗುಬ್ಬಿಯ ಅಟವಿಸ್ವಾಮಿಗಳ ಪ್ರಭಾವ ಬಹಳ ದೊಡ್ಡದು. ಅವರನ್ನು ಕುರಿತಾಗಿ ಅನೇಕ ಗ್ರಂಥಗಳು ಬಂದಿವೆ. ಉದಾಹರಣೆಗೆ– ಮತಕೂರು ನಂಜುಂಡ ಶಿವಯೋಗಿಗಳು ರಚಿಸಿದ ಹಾಡುಗಳು; ಅರಸಿನಕುಂಟೆ ಹೊಸಮಠದ ವೀರಪ್ಪಾರಾಧ್ಯರು ರಚಿಸಿದ ಅಟವೀಶಭಜನಾಮೃತ. ಇದರಂತೆಯೇ ಅಳಂದೆಯ ಶರಣಬಸವಸ್ವಾಮಿಗಳ ಹಾಗೂ ಅಥಣಿಯ ಮುರುಘೇಂದ್ರ ಶಿವಯೋಗಿಗಳ ಪ್ರೇರಣೆ ಹಾಗೂ ಪ್ರಭಾವ ಉಲ್ಲೇಖನಾರ್ಹ. ಮಾವನೂರು ಚನ್ನಬಸವ, ವಿರೂಪಾಕ್ಷ, ಬಸವಲಿಂಗ, ದ್ಯಾಂಪುರದ ಚನ್ನಕವಿ, ನಾಗೇಶಶಾಸ್ತ್ರಿ ಮೊದಲಾದವರು ಈ ಗುರುಗಳನ್ನು ಕೊಂಡಾಡಿ ಹಾಡುಗಳನ್ನು, ಕಾವ್ಯಗಳನ್ನು ರಚಿಸಿದ್ದಾರೆ.

೪. ತಾವು ಸ್ವತಃ ಸಾಹಿತಿಗಳಲ್ಲದಿದ್ದರೂ ಕೆಲವು ಅಧಿಕಾರಿಗಳು ಕನ್ನಡದ ಬಗ್ಗೆ ಆಸಕ್ತಿತೋರಿ, ಕನ್ನಡಭಾಷಾ ಸಾಹಿತ್ಯದ ಉಳಿವಿಗಾಗಿ ಶ್ರಮಿಸಿರುವುದು ಈ ಕಾಲದಲ್ಲಿ ಕಂಡುಬರುವ ಇನ್ನೊಂದು ವಿಶೇಷ ಅಂಶ. ಅಂದು ಮುಂಬಯಿಪ್ರಾಂತಕ್ಕೆ ಸೇರಿದ ಉತ್ತರ ಕರ್ನಾಟಕದಲ್ಲಿ ಮರಾಠಿಯ ಪ್ರಭಾವದಿಂದ ಕನ್ನಡ ಅನಾದರಕ್ಕೊಳಗಾಗಿತ್ತು. ವಿದ್ಯಾಧಿಕಾರಿಗಳಾಗಿದ್ದ ಡೆಪ್ಯುಟಿ ಚನ್ನಬಸಪ್ಪನವರು ಉತ್ಸಾಹದಿಂದ ಕೆಲಸಮಾಡದಿದ್ದರೆ ಕನ್ನಡಕ್ಕೆ ಅಲ್ಲಿ ಉಳಿಗಾಲವೇ ಇರುತ್ತಿರಲ್ಲಿಲ್ಲ. ಅವರು ಕನ್ನಡದ ಅಭಿಮಾನದ ಗಾಳಿ ಸುಳಿವಂತೆ ಮಾಡಿದರು. ಇದು ಜನರ ದೃಷ್ಟಿಯನ್ನು ಪ್ರಾಚೀನ ಸಾಹಿತ್ಯದತ್ತ ತಿರುಗಿಸಲೂ ಮತ್ತು ಹೊಸ ಸಾಹಿತ್ಯಸೃಷ್ಟಿಯಾಗಲೂ ನೆರವಾಯಿತು. ಕನ್ನಡ ಕ್ರಮಿಕಪುಸ್ತಕಗಳನ್ನು ರಚಿಸಿ ಶಾಲೆಗಳಲ್ಲಿ ಕನ್ನಡ ಕಲಿಕೆಗೆ, ಕನ್ನಡ ಮಾಧ್ಯಮದ ಓದಿಗೆ ವಾತಾವರಣವನ್ನು ಸೃಷ್ಟಿಸಿದರು. ಸಾಹಿತ್ಯದ ಉಳಿವು-ಬೆಳವಿಗೆ ಇಂಥ ಅಭಿಮಾನಿ ಅಧಿಕಾರಿಗಳ ಮುಂದಾಲೋಚನೆ,ರಚನಾತ್ಮಕ ಕಾರ್ಯಕ್ರಮಗಳು ಕಾರಣವಾದವು ಎಂಬುದನ್ನು ನಾವು ಮರೆಯುವಂತಿಲ್ಲ. 'ಉತ್ತರ ದಿಕ್ಕಿನಿಂದ ಆಡಿಗಡಿಗೆ ಆಕ್ರಮಣಮಾಡುತ್ತಿದ್ದ ಮರಾಠರ ಅವಾಂತರದಲ್ಲಿ ಇತ್ತೀಚೆಗೆ ಅಂದವಾದ ಕನ್ನಡ ಭಾಷೆಯನ್ನು ಉಳಿಸಿದ ಕೀರ್ತಿ ಬಹಳಮಟ್ಟಿಗೆ ವೀರಶೈವರಿಗೆ ಸಲ್ಲತಕ್ಕದ್ದಾಗಿದೆ'[1] ಎಂಬ ಪಾಶ್ಚಾತ್ಯವಿದ್ವಾಂಸ ಡಾ॥ ಫ್ಲೀಟರ ಮಾತು ಇದನ್ನೇ ಪುಷ್ಟೀಕರಿಸುತ್ತದೆ.

೫. ಈ ಅವಧಿಯಲ್ಲಿ ಪ್ರಾಚೀನಗ್ರಂಥಗಳನ್ನು ಪರಿಷ್ಕರಿಸಿ, ಟೀಕೆ–ಟಿಪ್ಪಣಿಗಳಿಂದ ಪ್ರಕಟಿಸುವ ಮಹತ್ವದ ಕಾರ್ಯ ನಡೆಯಿತು. ಪ್ರೌಢವಾದ ಕಾವ್ಯಗಳಿಗೆ ಸರಳವಾದ ಟೀಕೆ, ವ್ಯಾಖ್ಯಾನಗಳು ರಚಿತವಾದವು. ಅನೇಕ ಹಳೆಯ ಗ್ರಂಥಗಳು ಪರಿಶೋಧಿಸಲ್ಪಟ್ಟು ಬೆಳಕುಕಂಡವು. ಇದು ಒಂದು ಶ್ಲಾಘನೀಯ ಕಾರ್ಯವೆನ್ನಬಹುದು. ಹಿಂದಿನ ಸಾಹಿತ್ಯರಾಶಿಯನ್ನು ಕಾಪಾಡಬೇಕೆಂಬ ಸಂಕಲ್ಪ ಒಂದಾದರೆ ಅದನ್ನು ಜನಸಾಮಾನ್ಯರೂ ಓದಿ ಅರ್ಥಮಾಡಿಕೊಳ್ಳಲೆಂಬ ಸದಾಶಯವೂ ಇಲ್ಲಿ ಎದ್ದು ಕಾಣುತ್ತದೆ. ಈ ಬಗೆಯ ಸಂಸ್ಕರಣಕ್ಕೆ ಒಳಗಾದ ಕೃತಿಗಳಲ್ಲಿ ಸೋಮೇಶ್ವರಶತಕ, ಚನ್ನಬಸವ ಪುರಾಣ, ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ, ಅನುಭವಸಾರ, ಕೈವಲ್ಯಪದ್ಧತಿ ಮೊದಲಾದ ಕನ್ನಡಗ್ರಂಥಗಳನ್ನೂ, ಕ್ರಿಯಾಸಾರ,ಶಿವಾದ್ವೈತ ಮಂಜರಿ, ಬಸವೇಶ ವಿಜಯ, ಭಕ್ತಾಧಿತ್ಯರತ್ನಾವಳಿ, ಇತ್ಯಾದಿ ಸಂಸ್ಕೃತಗ್ರಂಥಗಳನ್ನೂ ಹೆಸರಿಸಬಹುದು.

೬. ಈ ಕಾಲವನ್ನು 'ಯಕ್ಷಗಾನಗಳ ಸುಗ್ಗಿ' ಎಂದು ಕರೆಯಬಹುದು. ಜಾನಪದದಲ್ಲಿ ನಾಟಕ ಕಲಾಭಿರುಚಿಯ ಸ್ರೋತವು ಬತ್ತದಂತೆ ನೋಡಿಕೊಂಡ ಈ ಗ್ರಾಮೀಣಕಲೆ ಸಾಕಷ್ಟು ಪ್ರವರ್ಧಮಾನಕ್ಕೆ ಬಂತು. ಜನರ ಅಭಿರುಚಿಯನ್ನು ಅನುಸರಿಸಿ ಅನೇಕ ಯಕ್ಷಗಾನ ಕೃತಿಗಳು ರಚನೆಯಾದವು. ಅವುಗಳಲ್ಲಿ ಇಡಗೂರು ರುದ್ರಕವಿ, ನಂಜುಂಡ ಶಿವಯೋಗಿ, ಮಹಾಂತ ದೇಶಿಕ ಮೊದಲಾದ ಕವಿಗಳು ರಚಿಸಿದ ಯಕ್ಷಗಾನಗಳನ್ನು ಉಲ್ಲೇಖಿಸಬಹುದು.

೭. ಧರ್ಮಪ್ರಸಾರ ಹಾಗೂ ತತ್ತ್ವನಿರೂಪಣೆಗಾಗಿ ಗ್ರಂಥಗಳು ರಚಿತವಾದಂತೆಯೇ ಅಂಥ ಕೃತಿಗಳ ಪ್ರಕಟಣೆಗಾಗಿಯೇ ಕೆಲವು ಪ್ರಕಾಶನ ಸಂಸ್ಥೆಗಳೂ, ಪತ್ರಿಕೆಗಳೂ ಹುಟ್ಟಿಕೊಂಡವು. ಉದಾಹರಣೆಗೆ- 'ಮೈಸೂರುಸ್ಟಾರ್', 'ವೀರಶೈವಾನಂದಿನಿ', 'ವೀರಶೈವ ಧರ್ಮಸಂಗ್ರಹ' ಮೊದಲಾದ ಪತ್ರಿಕೆಗಳು. ವೀರಶೈವ ಗ್ರಂಥಪ್ರಕಾಶಿಕಾ,ವೀರಶೈವ ಮತ ಪ್ರಕಾಶಿಕಾ, ವೀರಶೈವಮತ ಸಂವರ್ಧಿನೀ ಸಭಾ, ಶಿವಯೋಗಮಂದಿರ, ಮೊದಲಾದ ಪ್ರಕಾಶನ ಸಂಸ್ಥೆಗಳು.

೮. ವೀರಶೈವರಲ್ಲದೆ ವೀರಶೈವೇತರರು ವೀರಶೈವ ಸಾಹಿತ್ಯದ ಬಗ್ಗೆ ಆಸಕ್ತಿ ಬೆಳೆಸಿಕೊಂಡು, ವೀರಶೈವ ಧಾರ್ಮಿಕ ವಿಚಾರಗಳನ್ನು ಕುರಿತು ಸಾಹಿತ್ಯರಚನೆ ಮಾಡಿರುವುದು ಈ ಕಾಲದ ಒಂದು ವೈಶಿಷ್ಟ್ಯವಾಗಿ ಕಾಣುತ್ತದೆ. ಮುಮ್ಮಡಿ ಕೃಷ್ಣರಾಜರು ನಂಜುಂಡಶತಕ, ಶಂಕರಸಂಹಿತೆ. ದಕ್ಷಾಧ್ವರ ಕಥೆ, ಶ್ರೀಶೈಲಮಹಾತ್ಮೆ, ಮೊದಲಾದ ಕೃತಿಗಳಲ್ಲಿ ಧಾರ್ಮಿಕ ವಿಷಯಗಳ ಪ್ರತಿಪಾದನೆಗೆ ಅವಕಾಶವಿತ್ತಿದ್ದಾರೆ. ಅಳಿಯಲಿಂಗರಾಜರ ಗಿರಿಜಾಕಲ್ಯಾಣ, ಪಂಚವಿಂಶತಿಲೀಲೆ. ಮಹಾಲಿಂಗಶತಕ, ವೀರಭದ್ರಶತಕ, ಮಹಾಲಿಂಗ ನಕ್ಷತ್ರಮಾಲಿಕೆ, ವೀರೇಶತಾರಾವಳಿಗಳಲ್ಲಿ ಧಾರ್ಮಿಕ ವಿಚಾರಗಳ ನಿರೂಪಣೆಯಿದೆ. ಸಿದ್ಧಾಂತಿ ಸುಬ್ರಮಣ್ಯಶಾಸ್ತ್ರೀ ಹಾಗೂ ಅವರ ಪುತ್ರ ಸಿದ್ಧಾಂತಿ ಶಿವಶಂಕರಶಾಸ್ತ್ರಿಗಳು ಹಳೆಯ ವೀರಶೈವ ಗ್ರಂಥಗಳಿಗೆ ಟೀಕೆ–ಟಿಪ್ಪಣಿ ಬರೆದಿರುವುದಲ್ಲದೆ, ಹೊಸ ಕೃತಿಗಳನ್ನು ರಚಿಸಿ ಮಹೋಪಕಾರ ಮಾಡಿದ್ದಾರೆ. ಇವರ ಪ್ರಯತ್ನದ ಫಲವಾಗಿ ಲಿಂಗಸೂತ್ರ ನಿರ್ಣಯ ಟೀಕೆ, ವಿವೇಕಚಿಂತಾಮಣಿ, ಚನ್ನಬಸವಪುರಾಣ, ಪ್ರೌಢದೇವರಾಯನ ಕಾವ್ಯ, ಕೈವಲ್ಯಕಲ್ಪವಲ್ಲರಿ ಮೊದಲಾದ ಕೃತಿಗಳು ಟೀಕೆಯೊಡನೆ ಬೆಳಕು ಕಂಡವು. ಅಲ್ಲದೆ ಅವರು ವೀರಶೈವ ವಿಜಯಗ್ರಂಥ ಮೊದಲಾದ ಸ್ವತಂತ್ರ ಗ್ರಂಥಗಳನ್ನು ರಚಿಸಿದ್ದಾರೆ. ಹೀಗೆ ಅವರು ವೀರಶೈವ ಧಾರ್ಮಿಕ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಅಮೋಘವಾದುದು.

ಈ ಮಾಲಿಕೆಯಲ್ಲಿ ಶಿಶುನಾಳ ಶರೀಫ್‌ಸಾಹೇಬರ ಹೆಸರನ್ನು ಸೇರಿಸಬೇಕು. ಅವರು ಹುಟ್ಟಿದ್ದು ಮುಸ್ಲಿಂಜಾತಿಯಲ್ಲಿ, ದೀಕ್ಷೆ ಕೊಟ್ಟ ಗುರು ಬ್ರಾಹ್ಮಣ–ಕಳಸದ ಗೋವಿಂದಭಟ್ಟ, ರಚಿಸಿದ್ದು ವೀರಶೈವತತ್ತ್ವಪ್ರಸಂಗಗಳನ್ನು. ಪ್ರಭುಲಿಂಗಲೀಲೆ ಅವರಿಗೆ ಅಚ್ಚುಮೆಚ್ಚು. 'ಆರು ಶಾಸ್ತ್ರ, ಹದಿನೆಂಟು ಪುರಾಣ ನನ್ನ ಬಗಲಾಗ. ಪ್ರಭುಲಿಂಗಲೀಲೆ ನನ್ನ ತಲೀಮ್ಯಾಗ' ಎಂದು

1. Dynasties of Kanarese districts. P. 477.

ಅವರು ಹೇಳುತ್ತಿದ್ದರಂತೆ. ಅವರ ತತ್ತ್ವಪದಗಳ ಸಂಕಲನ ಅನೇಕ ಭಾಗಗಳಾಗಿ ಹೊರಬಂದಿದೆ. ಅವರ ಹಾಡುಗಳು ವೀರಶೈವ ಆಧ್ಯಾತ್ಮ ಕಣಜವನ್ನು ಶ್ರೀಮಂತಗೊಳಿಸಿವೆ. ವೀರಶೈವ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ, ಆ ಕಡೆ ಜನತೆಯ ಗಮನನ್ನು ಸೆಳೆದ ಆಧುನಿಕರಲ್ಲಿ ಎಂ. ಆರ್. ಶ್ರೀನಿವಾಸಮೂರ್ತಿಗಳದು ಬಹುದೊಡ್ಡ ಹೆಸರು. ಅವರು ರಚಿಸಿರುವ ಭಕ್ತಿ ಭಂಡಾರಿ ಬಸವಣ್ಣ, ವಚನಧರ್ಮಸಾರ ಹಾಗೂ ವೀರಶೈವ ಸಾಹಿತ್ಯವನ್ನು ಕುರಿತ ನೂರಾರು ಲೇಖನಗಳು ಈ ನಿಟ್ಟಿನಲ್ಲಿ ಅವರು ನಡೆಸಿದ ಸಾಧನೆಯ ದ್ಯೋತಕವಾಗಿವೆ.

**ಇನ್ನು ಮುಂದೆ ನವೋದಯ ವೀರಶೈವ ಸಾಹಿತ್ಯದ ನಿರ್ಮಾತೃಗಳಲ್ಲಿ ಪ್ರಮುಖರಾದವರ ಸಂಕ್ಷಿಪ್ತ ಪರಿಚಯವನ್ನು ಮಾಡಿಕೊಳ್ಳೋಣ:–**

**ಗುರುಲಿಂಗಜಂಗಮ ಮಹಾರಾಜರು (೧೭೭೯–೧೮೮೫):** ಉತ್ತರ ಕರ್ನಾಟಕದಲ್ಲಿ ಇವರ ತತ್ತ್ವಪದಗಳು ಪ್ರಸಿದ್ಧವಾಗಿವೆ. ಇವರನ್ನು ನಿಂಬರಗಿ ಮಹಾರಾಜರೆಂದೂ ಕರೆಯುವರು. ಡಾ॥ ರಾನಡೆಯವರು 'ಬೋಧಸುಧೆ'ಎಂಬ ಗ್ರಂಥದಲ್ಲಿ ಇವರ ವಚನಗಳನ್ನು, ಪದಗಳನ್ನು ಪ್ರಕಟಿಸಿದ್ದಾರೆ. ೧೯೦೮ರಲ್ಲಿ ಬಾಬಾಚಾರ್ಯರು ಇವರ ವಚನಗಳನ್ನು ಮೊದಲಿಗೆ ಪ್ರಕಟಿಸಿದರು. ಈಚೆಗೆ ಇವರ ತತ್ವಪದಗಳ ಸಂಕಲನ 'ಶ್ರೀ ಸದ್ಗುರು ಗುರುಲಿಂಗಜಂಗಮ ಮಹಾರಾಜರ ವಚನಗಳು' ಎಂಬ ಹೆಸರಲ್ಲಿ ಪ್ರಕಟವಾಗಿದೆ.[2]

ಬಿಜಾಪುರ ಜಿಲ್ಲೆ ದೇವರ ನಿಂಬರಗಿಯಲ್ಲಿ ಹುಟ್ಟಿದ ನಾರಾಯಣ ಬಾಲ್ಯದಲ್ಲಿ ತುಂಟನಾಗಿದ್ದು, ನಂತರ ಬಾಳಲ್ಲಿ ಬೇಸರ ಹೊಂದಿ ಪಂಡರಪುರ, ಸಿದ್ಧಗಿರಿಗಳಿಗೆ ಹೋಗಿ ಮುಪ್ಪಿನ ಜಂಗಮಸಾಧುಗಳಿಂದ ದೀಕ್ಷೆ ಹೊಂದಿ ಗುರುಲಿಂಗಜಂಗಮರಾದದ್ದು ಒಂದು ರೋಮಾಂಚಕ ಕಥೆ. ೩೬ ವರ್ಷ ಸತತವಾಗಿ ಸಾಧನೆ ಮಾಡಿ ಊರಿಗೆ ಹಿಂತಿರುಗಿದ ಇವರು ಕುರಿ ಕಾಯುವ ಕಾಯಕ ಕೈಗೊಂಡರು. ಇವರಿಗೆ ಅನೇಕರು ಶಿಷ್ಯರಾದರು. ಅವರಲ್ಲಿ ತೆಲುಗುದೇಶದ ರಘುನಾಥಪ್ರಿಯರು ಮತ್ತು ಬಾಪೂಸಾಹೇಬರು ಮುಖ್ಯರು.

ಇವರು ತಮ್ಮ ಹಾಡುಗಳಲ್ಲಿ ಆಡಂಬರದ ಭಕ್ತಿಯನ್ನು, ಡಾಂಭಿಕತೆಯನ್ನು ಅಲ್ಲಗಳೆದಿದ್ದಾರೆ. ಭಕ್ತ-ದೇವರ ಸಂಬಂಧವನ್ನು ಕುರಿತು, ಮನಸ್ಸಿನ ದೌರ್ಬಲ್ಯಗಳನ್ನು ಕುರಿತು ಹೇಳಿರುವ ಹಾಡುಗಳು ಮನನೀಯವಾಗಿವೆ:

ಅಂದಿಲ್ಲ ಸ್ವಾಮಿ ಇಂದಿಲ್ಲ| ಎಂದಿಗಾದರೂ ನಿಮ್ಮನಗಲಿ ನಾ ಇಲ್ಲ॥
ನಿರ್ಬೈಲನು ನೀನು ನಿರ್ವಿಕಾರನು ನಾನು। ಸದ್ಗುಣರೂಪ ನೀನು ಶರಣ ಮಾಡುವೆ ನಾನು ॥೧॥
ಪಂಚವದನ ನೀನು ಪಾದ ನಂಬಿದೆ ನಾನು | ಜಗಭರಿತ ನೀನು ಜಗದ ಒಳಗೆ ನಾನು ॥೨॥
ಪ್ರಣವಸ್ವರೂಪ ನೀನು ಪರಿಸಿ ನೋಡುವೆ ನಾನು। ಗುರುಲಿಂಗಜಂಗಮ ನೀನೆ ನಾನೂ ನೀನೆ ॥೩॥

**ಸೋಮೇಕಟ್ಟೆ ಕರಿವೃಷಭೇಂದ್ರಸ್ವಾಮಿ (೧೮೦೮–೧೮೭೯):** ನೊಣವಿನಕೆರೆಮಠದ ಚರಪಟ್ಟಾಧಿಕಾರಿಯಾಗಿದ್ದ ಇವರು ವೀರಶೈವಧರ್ಮಾಚರಣೆಯನ್ನು ಅನುಷ್ಠಾನದಲ್ಲಿ ತಂದು ಶಿವಯೋಗದ ಘನತೆಯನ್ನು ಎತ್ತಿಹಿಡಿದು ಧರ್ಮಪ್ರಚಾರಕಾರ್ಯವನ್ನು ಕೈಗೊಂಡರು. ನಿಜಗುಣರು, ಸರ್ಪಭೂಷಣರು, ಮುಪ್ಪಿನಾರ್ಯರು ಮೊದಲಾದ ಶಿವಯೋಗಿಗಳು ನಡೆದ ದಾರಿಯಲ್ಲಿ ಸಾಗಿದರು. ಅವರು ಲಿಂಗಾನಂದದಲ್ಲಿ ಗುನುಗುಟ್ಟಿದ್ದೇ ಅನುಭಾವಸಾಹಿತ್ಯ. ಅವುಗಳಲ್ಲಿ ಭಕ್ತಿ, ತತ್ತ್ವಪ್ರತಿಪಾದನೆಯುಳ್ಳ ಅನೇಕ ಹಾಡುಗಳಿವೆ. 'ಶಿವಾನುಭವ'ದಲ್ಲಿ ಸುಮಾರು ೫೦ ಹಾಡುಗಳು ಪ್ರಕಟವಾಗಿವೆ[3].

ಅವರ ಕೃತಿಗಳು : ೧. ಕೈವಲ್ಯ ಪದಗಳು : ಬೆಡಗಿನ ವಚನಗಳನ್ನು ಹೋಲುವ ತತ್ತ್ವಪದಗಳು ಇವೆ. ೨. ಅಷ್ಟಾವರಣತ್ರಿವಿಧಿ: ೩೨ ಪದ್ಯಗಳು ಇವೆ. ೩. ಅಷ್ಟೋತ್ತರ ಶತತ್ರಿವಿಧಿ : ೧೦೮ ಪದ್ಯಗಳು ಇವೆ.

ಅವರ ಒಂದು ಬೆಡಗಿನ ತತ್ತ್ವಪದ ಹೀಗಿದೆ :–

ಆವ ಮೃಗವೋ ಕಾಣೆ ಹಾರಿತು| ಗಗನಕ್ಕೆ ಮೀರಿದ ಶಬ್ದವಲ್ಲಾಗುತಿದೆ।
ದಾರಿನೋಡಲು ಸರ್ವಜನವೆಲ್ಲವೊಳಕೊಂಡ| ಧೀರತ್ವವನು ತಾನೆ ಬೀರುತಿದೆ॥
ನೋಡಿ ತಿಳಿವುದು ನೀನೆ ನಿಜವೆಂದು । ತತ್ತ್ವಗೂಢದಿ ನಿಂದ ಸಾಕ್ಷಿಕನೆಂದು।
ಪಂಚವಿಂಶತಿ ತತ್ತ್ವಗಳಿವು ಎಲ್ಲಾ | ನಿನ್ನ ಅಂಶದಿ ಆದವು ಎಲ್ಲಾ ॥[4]

ಅಷ್ಟಾವರಣತ್ರಿವಿಧಿಯ ಒಂದು ಪದ್ಯ :

ಗುರುವೆ ಎನ್ನಯ ಭಾಗ್ಯದಿರವೆ ಸುರತರುವೆ| ಮದ್ಗುರುವೆ ಕರುಣಿಪುದು ಪರಮಪದವಿಯನೀಗ|ಕರಿವೃಷಭಲಿಂಗ ಕೃಪೆಯಾಗು॥[5]

2. ಸಂ. ಗಣಪತಿರಾವ್ ಕನ್ನೂರ, ಅಧ್ಯಾತ್ಮಭಂಡಾರ, ಹಿಂಚಿಗೇರಿ. ೧೯೫೦.
3. ಸಿರಿಗನ್ನಡ ಗ್ರಂಥಕರ್ತರ ಚರಿತ್ರ ಕೋಶ, ಪು.೧೫
4. ನೊಣವಿನಕೆರೆ ಸೋಮೇಕಟ್ಟೆ ಶಿವಾನುಭವಸಾಹಿತ್ಯ, ಪು.೮
5. ಅದೇ, ಪು.೫೧.

—ಸಂ. ಹೆಚ್.ಆರ್. ಮಹಾಂತಯ್ಯ

**ನೀರಲಕೇರಿ ಬಸವಲಿಂಗ ಶಿವಯೋಗಿ** (೧೮೧೨–೧೮೭೨) : ವಿಜಾಪುರ ಜಿಲ್ಲೆ ಹುನಗುಂದ ತಾಲ್ಲೂಕು ಗೂಡೂರಿನಲ್ಲಿ ಜನಿಸಿದ ಇವರು ಶಿವಯೋಗಪಥದಲ್ಲಿ ಸಾಗಿ ರಾಯಚೂರು ಜಿಲ್ಲೆ ಲಿಂಗಸೂಗೂರು ತಾಲ್ಲೋಕು ನೀರಲಕೇರಿಯನ್ನು ತಮ್ಮ ಸಾಧನ ರಂಗವನ್ನಾಗಿ ಮಾಡಿಕೊಂಡರು. ಮಹಾಜ್ಞಾನಿಯಾಗಿದ್ದ ಇವರ ತತ್ತ್ವಪದಗಳು ಜನಪ್ರಿಯವಾಗಿವೆ. ಇವರ ೧೮೨ ಹಾಡುಗಳು ಮಾತ್ರ ಸಿಕ್ಕ 'ಜ್ಞಾನಗೀತೆ'ಎಂಬ ಹೆಸರಿನಲ್ಲಿ ಅಚ್ಚಾಗಿವೆ. ಇವರನ್ನು ಕುರಿತು 'ಬಸವಲಿಂಗ ಶಿವಯೋಗಿಗಳ ಪುರಾಣವು' ಎಂಬ ಪುರಾಣವು ರಚಿತವಾಗಿದೆ[6]. ಪತಿಯು ಸತಿಗೆ ಬುದ್ಧಿ ಹೇಳುವಂತೆ ಗುರುವು ಶಿಷ್ಯನಿಗೆ ಬೋಧಿಸಿದ ಈ ಹಾಡು ಬಹಳ ಜನಪ್ರಿಯವಾಗಿದೆ:

> ಎಂತಾತ ಗುರುನಾಥನು ಬಹಳ ಬಹಳಂತಃಕರಣುಳ್ಳಾತನು। ಕಾಂತೆ ನೀ ಬಾರೆಂದು ಏಕಾಂತ ಕರೆದೊಯ್ದು ಎಂತ ಮಾತ್ಹೇಳಿದನು ॥ಪ॥
> ಸಾಧುವನು ನೆನೆಯೆಂದನು ಅವರ ಪಾದಕ್ಕೆ ಎರಗೆಂದನು। ಸಾಧುಸತ್ಪುರುಷರ ಭೇದವ ತಿಳಿದರೆ ಬಾಧೆ ನಿನಗಿಲ್ಲೆಂದನು ॥೧॥
> ಆರುಗುಣ ಅಳಿಯೆಂದನು ಮತ್ತು ಮೂರುಗುಣ ತಿಳಿಯೆಂದನು। ಆರುಮೂರೊಂಭತ್ತು ಭೇದವ ತಿಳಕೊಂಡು ಪಾರಾಗು ನೀನೆಂದನು ॥೨॥

ನೀರಲಕೇರಿ ಬಸವಲಿಂಗ ಶಿವಯೋಗಿಗಳು ಉದಾರ ಚರಿತರು. ವಿಶಾಲದೃಷ್ಟಿಯುಳ್ಳ ಅವರು ಎಲ್ಲ ಧರ್ಮಗಳಲ್ಲಿಯೂ ಸಮಾನ ಗೌರವವಿಟ್ಟುಕೊಂಡಿದ್ದರು ಎಂಬುದಕ್ಕೆ ಅವರು ಪ್ರಾರ್ಥಿಸಿರುವ ಶಿವ ಮತ್ತು ವಿಷ್ಣು ಸ್ತೋತ್ರಗಳು, ಅವರು ಪ್ರಶಂಸಿಸಿ ಹಾಡಿರುವ ಮೊಹರಂಹಬ್ಬದ ಪದಗಳು ಸಾಕ್ಷಿಯಾಗಿವೆ.

**ಕುಮಾರ ವಿಭು** (೧೮೨೧): ಧಾರವಾಡ ಜಿಲ್ಲೆಯ ಹಾನಗಲ್ಲ ವಿರಕ್ತಮಠ ಸ್ವಾಮಿ. ಇವರ ಗುರು ಗುರುಸಿದ್ಧ ದೇಶಿಕ. ಭಿಕ್ಷುಕ ಮಹೇಶ ವಿಲಾಸವೆಂಬ ಚಂಪೂಕೃತಿಯನ್ನು ಬರೆದಿದ್ದಾರೆ. ತೋಂಟದ ಸಿದ್ಧಲಿಂಗ ಹಾಗೂ ಷಡಕ್ಷರದೇವನನ್ನು ಸ್ಮರಿಸಿರುವ ಇವರು ಕಾವ್ಯರಚನೆಯಲ್ಲಿ ಷಡಕ್ಷರಿಯನ್ನು ಅನುಕರಣೆ ಮಾಡಿರುವಂತೆ ಕಾಣುತ್ತದೆ. ಲಿಂಗಣಾರ್ಯನ 'ಭಿಕ್ಷಾಟನ ಚರಿತೆ' ಎಂಬ ವರ್ಣಕ ಕೃತಿಯನ್ನು ಗುರುಸಿದ್ಧ ದೇಶಿಕನ ಅಪ್ಪಣೆಯ ಮೇರೆಗೆ ವಸ್ತುಕದಲ್ಲಿ ರಚಿಸಿದಂತೆ ಹೇಳಿಕೊಂಡಿದ್ದಾರೆ. ಇವರ ಇನ್ನೊಂದು ಕೃತಿ ಕುಮಾರೇಶ್ವರ ಪುರಾಣ. (೧೯ ಸಂಧಿ ; ೧೭೫೫ ವಾರ್ಧಕಷಟ್ಪದಿಗಳು)ದಲ್ಲಿ ವೀರಶೈವಸಿದ್ಧಾಂತ ನಿರೂಪಣೆ ಇದೆ.

> ಇದು ಸಕಲ ವೀರಮಾಹೇಶ್ವರ ಮೃದುಲತರ ಪದಪದ್ಮ ಮಕರಂದ ಷಟ್ಪದಂ ಪಟ್ಟಸ್ಥಲದ
> ಸದಮಲಾಚಾರಸಂಸಿದ್ಧನನ್ವಿತ ಕ್ರಿಯಾಜ್ಞಾನ ಸಂಪದ್ವಿಭೂಷಂ ವಿದಿತ ಶಿವಮತವಾರ್ಧಿವರ್ಧನ
> ಸುಧಾಂಶು ವಾಚ್ಯದ ಕುಮಾರಾರ್ಯನೆಂದೆಂಬ ಶಿವಯೋಗಿಕವಿ ಮುದದಿ ರಚಿಸಿದ

ಎಂಬ ಕಾವ್ಯಾಂತ್ಯದ ಮಾತುಗಳಲ್ಲಿ ಅದು ವ್ಯಕ್ತವಾಗಿದೆ. ಈತ 'ವೀರಶೈವ ಚಿಂತಾಮಣಿ'ಎಂಬ ವಚನ ಸಂಕಲನವನ್ನು ಮಾಡಿದ್ದು ಅದು ಪ್ರಕಟವಾಗಿದೆ[7].

**ಬಾಲಲೀಲಾ ಮಹಾಂತ ಶಿವಯೋಗಿ** (೧೮೨೬-೧೮೫೮): ಇವರು ಬಿಜಾಪುರ ಜಿಲ್ಲೆಯ ಮನಗೋಳಿಯ ಬಳಿಯ ಯರನಾಳದಲ್ಲಿ ಹುಟ್ಟಿ ಆಲಮಟ್ಟಿಯ ಭಕ್ತದಂಪತಿಗಳ ಪಾಲನೆಯಲ್ಲಿ ಬೆಳೆದು, ಮುಳಗುಂದದ ಕಲ್ಮಠದ ಮಹಂತದೇಶಿಕರ ಅನುಗ್ರಹಕ್ಕೆ ಪಾತ್ರರಾಗಿ ಅನಂತರ ಮುಳಗುಂದದ ವಿರಕ್ತಮಠದ ಸ್ವಾಮಿಯಾದರು. ಈ ಅನುಭಾವಿಯ ಜೀವನ ಬಾಲವತ್, ಬಾಲಕರಂತೆ ಲೀಲೆಯನ್ನು ಮಾಡುತ್ತಿದ್ದುದರಿಂದ ಇವರಿಗೆ ಈ ಹೆಸರಾಯಿತು. ಇವರು ಮೈಸೂರಿನ ಮುಮ್ಮಡಿಕೃಷ್ಣರಾಜರಿಂದ ಸನ್ಮಾನಿತರಾಗಿ ಉಪದೇಶಗೈದಂತೆ ತಿಳಿಯುತ್ತದೆ. 'ಅವರು ಬದುಕಿದ್ದ ಕಾಲ ಕೇವಲ ೩೨ ವರ್ಷಗಳು. ಅದರೆ ಅಷ್ಟೊಂದು ಅಲ್ಪಾವಧಿಯಲ್ಲಿಯೇ ಅವರು ಭಕ್ತಿಜ್ಞಾನವೈರಾಗ್ಯಸಂಪನ್ನರಾಗಿ ತಮ್ಮ ಶಿವಯೋಗ ಸಾಮರ್ಥ್ಯದಿಂದ ಅಸಾಮಾನ್ಯ ವ್ಯಕ್ತಿತ್ವದಿಂದ, ಘನಪಾಂಡಿತ್ಯದಿಂದ,ನಿಷ್ಕಾಮಕರ್ಮದಿಂದ,ಸತ್ಯನಿಷ್ಠೆಯಿಂದ,ಕಾವ್ಯಶಕ್ತಿಯಿಂದ, ಲೋಕಕಲ್ಯಾಣವನ್ನೆಸಗಿ ಬಯಲಲ್ಲಿ ಬಯಲಾದರು'[8]. ಇವರು ಕಾವ್ಯ ಬರೆಯ ಹೊರಟವರಲ್ಲ. ಇವರು ಮುಖ್ಯವಾಗಿ ಅನುಭಾವಿಗಳು, ತತ್ವಜ್ಞಾನಿಗಳು. ಆಶುಕವಿಗಳಾದ ಇವರು ಪ್ರತಿಭಾಸಂಪನ್ನರಾದ ಅನೇಕ ಹಾಡು, ಪದ್ಯಗಳನ್ನು ವಿಭೂತಿಉಂಡೆಯಿಂದ ಮಠದ ಗೋಡೆ, ತೊಲೆ, ಕಂಬಗಳ ಮೇಲೆ ಬರೆಯುತ್ತಿದ್ದರೆಂದೂ, ಅವುಗಳನ್ನು ಭಕ್ತರು ಸಂಗ್ರಹಿಸಿ ಭಜನೆಪದಗಳಾಗಿ ಹಾಡುತ್ತ ಬಂದರೆಂದೂ ತಿಳಿಯುತ್ತದೆ. 'ಕೈವಲ್ಯದರ್ಪಣ'ವೆಂಬ ಹೆಸರಿನಲ್ಲಿ ಅವರ ಹಾಡುಗಳು ಪ್ರಕಟವಾಗಿವೆ.

ಬಾಲಲೀಲಾಮಹಾಂತ ಶಿವಯೋಗಿಗಳ ಹಾಡುಗಳಲ್ಲಿ ಪರಮತಖಂಡನೆಯಿಲ್ಲ. ವಿಶ್ವವಿಶಾಲವಾದ ಅವರ ಹೃದಯದಲ್ಲಿ ಸಂಕುಚಿತತೆಗೆ ಎಡೆಯಿಲ್ಲ. 'ಈ ಹೃದಯ ವೈಶಾಲ್ಯದ ಬಗೆಗೆ ಎಷ್ಟು ಹೇಳಿದರೂ ಕಡಮೆಯೇ. ಮತಭ್ರಾಂತಿಯ ಉರಿದಾರಿಯಲ್ಲಿ ಕನ್ನಡ ಸಾಹಿತ್ಯ ಹಾಯ್ದು ಬರುವಾಗ, ಇಂಥ ತಂಪು ಆಪ್ಯಾಯಮಾನವಾಗಿದೆ. ಹಿಮತುಹಿನನ ಹಾಗೆ ದೇಹಕ್ಕೂ

---

6. ಸಂ. ಅಮರನಾಥಶಾಸ್ತ್ರಿಗಳು ಗುರುವಿನಮಠ, ಸಂತೆಕೆಲ್ಲೂರು.
7. ವೀರಶೈವ ಚಿಂತಾಮಣಿ, ಸಂ. ಡಾ॥ ಆರ್.ಸಿ. ಹಿರೇಮಠ, ಕರ್ಣಾಟಕ ವಿಶ್ವವಿದ್ಯಾನಿಲಯ, ಧಾರವಾಡ.
8. ವೈರಾಗ್ಯದಲರು. ಪು. ೨

ಮೆದುಳಿಗೂ ತಂಪನ್ನು ಕೊಡುತ್ತದೆ9. ಕನ್ನಡ ಸಾರಸ್ವತಲೋಕಕ್ಕೆ, ಆಧ್ಯಾತ್ಮಿಕ ಪ್ರಪಂಚಕ್ಕೆ ಈ ಶಿವಯೋಗಿಗಳ ಕೊಡುಗೆ ಮಿಗಿಲಾದದ್ದು. ಇವರ ಒಂದು ಹಾಡು :

> ಅವರವರ ಭಕ್ತಿಗೆ ಅವರವರ ಭಾವಕ್ಕೆ। ಅವರವರ ತೆರನಾಗಿ ಇರುತಿಹನು ಶಿವಯೋಗಿ ॥ಪ॥
> ಇರದೊಂದು ಕನ್ನಡಿಯು ನೂರಾರುಜನ ಪಿಡಿಯ। ಸರಳಾಗಿ ಅವರವರ ರೂಪು ಕಾಣ್ಬಂತೆ
> ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ। ನರರೇನು ಭಾವಿಸಲವರವರಂತೆ ತೋರುವವನು ॥೧॥

**ಗಂಗಾಧರ ಮಡಿವಾಳೇಶ್ವರ ತುರುಮರಿ** (೧೮೨೭–೧೮೭೭) : ಬೆಳಗಾವಿಯ ಹೈಸ್ಕೂಲು ಮುಖ್ಯೋಪಾಧ್ಯಾಯರಾಗಿದ್ದ ತುರುಮರಿಯವರು ಬಹುಶ್ರುತ ಪಂಡಿತರು ; ಜನಪ್ರಿಯ ಅಧ್ಯಾಪಕರು. ಇವರು ಸ್ವತಂತ್ರ ಕೃತಿಗಳ ಜೊತೆಗೆ ಅನೇಕ ಗ್ರಂಥಗಳಿಗೆ ಟೀಕೆ ಬರೆದಿದ್ದಾರೆ. ಅವರ ಟೀಕೆಗಳು ಸರಳಸುಂದರವಾದ ಅಚ್ಚಗನ್ನಡದಲ್ಲಿ ಮೂಡಿಬಂದಿವೆ. ಕೈವಲ್ಯಪದ್ಧತಿ ಟೀಕೆ(೧೮೭೬), ರಾಜಶೇಖರವಿಳಾಸ ಟೀಕೆ (೧೮೭೧, ೧೮೭೪). ಕನ್ನಡ ಕವಿತಾಪದ್ಧತಿ (ಕಂದ): ಕವಿತಾ ಸಂಗ್ರಹ (೧೮೬೭). ಸಂಕ್ಷಿಪ್ತ ಛಂದಸ್ಸಾರ (೧೮೯೬) ಇವು ಇವರ ಕೃತಿಗಳು. ಇವರು ಕನ್ನಡ ಕ್ರಮಿಕ ಪುಸ್ತಕಗಳನ್ನು ರಚಿಸಿದ್ದಾರೆ. ಅವರಲ್ಲಿ 'ಓದುವ ರೀತಿ' ಎಂಬ ಉಪಯುಕ್ತ ಭಾಗವನ್ನು ಸೇರಿಸಿದ್ದಾರೆ. ಬಾಣ ಕಾದಂಬರಿಯ ಅನುವಾದ ೧೮೬೬–೬೭ರಲ್ಲಿ ಮಾಡಿದ ಅವರು ಶಬ್ದಮಂಜರಿ ಕೋಶ ಎಂಬ ೫೮೭ ಪುಟದ ನಿಘಂಟನ್ನು ೧೮೯೯ರಲ್ಲೇ ರಚಿಸಿದರು. ಮಠಪತ್ರಿಕೆಯಲ್ಲಿ 'ಭಾಷಾದರ್ಪಣ'ವೆಂಬ ವ್ಯಾಕರಣ ವಿಷಯವ್ಯಾಖ್ಯಾನ ಧಾರಾವಾಹಿಯಾಗಿ ಪ್ರಕಟವಾಯಿತು (೧೮೬೬–೧೮೭೦).

**ಶಾಂತವೀರ ರಾಚಿದೇವ ಕಿತ್ತೂರ** (೧೮೩೭–೧೮೮೨) : ಕನ್ನಡದ ನಿಸ್ಸೀಮ ಅಭಿಮಾನಿಗಳೆಂದು ಹೆಸರಾಂತ ಇವರು ಧಾರವಾಡದ ಟ್ರೈನಿಂಗ್ ಕಾಲೇಜಿನ ಕನ್ನಡ ಅಧ್ಯಾಪಕರಾಗಿದ್ದರು. ಶಾಂತವೀರ ಛಂದಸ್ಸು, ಶಾಂತವೀರ ನಿಘಂಟು, ನವರತ್ನಹಾರ, ದೊರೆ ಮಲ್ಲಸರ್ಜಕಾವ್ಯ (ಸೀಗೇಹಳ್ಳಿ ರುದ್ರಗೌಡ ಅವರೊಡನೆ) ಮೊದಲಾದ ಸ್ವತಂತ್ರಕೃತಿಗಳನ್ನು ರಚಿಸಿರುವುದಲ್ಲದೆ ಕೆಲವು ಕ್ರಮಿಕ ಪುಸ್ತಕಗಳನ್ನು ತಯಾರಿಸಿದ್ದಾರೆ. ಅಲ್ಲದೆ ಸುಪ್ರೌಢಗ್ರಂಥ ರಾಜಶೇಖರ ವಿಳಾಸದ ಮೇಲೆ ಹೊಸ ಬೆಳಕು ಚೆಲ್ಲಿದ್ದಾರೆ. ಅದರ ಎರಡನೇ ಆಶ್ವಾಸಕ್ಕೆ ಟೀಕೆ ಬರೆದು (೧೮೭೨) ಶಬ್ದಕೋಶವನ್ನು ಕೊಟ್ಟಿದ್ದಾರೆ ; ಸಂಸ್ಕೃತಶಬ್ದಗಳನ್ನು ಬೇರೆ ಮಾಡಿ ಅರ್ಥ, ನಿಷ್ಪತ್ತಿಕೊಟ್ಟಿದ್ದಾರೆ. ಈ ಕವಿಯ ಹೆಸರಿನ ಒಂದು ಪುಸ್ತಕವೂ ಪ್ರಕಟವಾಗಿದೆ10. ಇವರ ಹೊಮ್ಮಗ ಶಾಂತವೀರ ಸ್ವಾಮಿ ಸುಪ್ರಸಿದ್ಧ ವೈದ್ಯ. ಅವರು ಬರೆದ 'ಪಶುಸಂಜೀವಿನಿ' 'ಹುರುಕಿನ ಔಷಧಗಳು', ಗ್ರಂಥಗಳು ಸುಪ್ರಸಿದ್ಧವಾಗಿದ್ದುವು. ಅವರು ತಮ್ಮ ಔಷಧಗಳ ಜಾಹೀರಾತನ್ನು ಕಾವ್ಯಮಯವಾಗಿ ಪ್ರಕಟಿಸುತ್ತಿದ್ದರು :–

> ತರತರದ ತಿಂಡಿಯಿಂದಂ। ಪರಪರನೇ ಕೆರೆದುಕೆರೆದು ಬೇಸರಗುಡುವಾ॥
> ಹುರುಕಿನ ಬಾಧೆಯ ಹುರಿಯುವ । ವರತರದೀ ಶಾಂತವೀರನೌಷಧ ತರಿಸೈ॥11

**ನಾಗಭೂಷಣ ವೀರಣ್ಣ ಘನಮಠ (ಘನಮಠ ಶಿವಯೋಗಿ)** (೧೮೩೮–೧೮೮೪): ಆಂಧ್ರದ ಅತ್ರಾಫ ಜಿಲ್ಲಾ ಪಟ್ಲೂರು ತಾಲ್ಲೂಕು ದೋರ್ವಾಡದಲ್ಲಿ ಜನ್ಮಕಳೆದ ಇವರು ಚಿಕ್ಕವಯಸ್ಸಿನಿಂದಲೇ ಆಧ್ಯಾತ್ಮಿಕಕ್ಕೆ ಒಲಿದರು. ಸತತಾಭ್ಯಾಸದಿಂದ ಸಾಕಷ್ಟು ಜ್ಞಾನ ಹಾಗೂ ಆಧ್ಯಾತ್ಮಸಂಪತ್ತನ್ನು ಗಳಿಸಿದರು. ವಚನಸಾಹಿತ್ಯದಿಂದ ಪ್ರಭಾವಿತರಾಗಿ ಕನ್ನಡನಾಡಿಗೆ ಬಂದು ಉತ್ತರ ಕರ್ನಾಟಕವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡರು. ಘನಮಠಾರ್ಯರೆಂದು ಪ್ರಸಿದ್ಧರಾದರು. ೩೦ವರ್ಷಗಳ ಕಾಲ ದೇಶಪರ್ಯಟನ ಮಾಡಿ ಪುರಾಣಪ್ರವಚನ, ಧರ್ಮೋಪದೇಶಗಳ ಮೂಲಕ ಜನತೆಯನ್ನು ಎಚ್ಚರಿಸಿದರು. ಸಂಗೀತಶಾಸ್ತ್ರದಲ್ಲಿ ಬಲ್ಲಿದರಾದ ಇವರ ತತ್ತ್ವಪದಗಳು, ಅದರಲ್ಲೂ, ಶಿವನ ಮತ್ತು ಶಿವಶರಣರ ಬಗೆಗಿನ ಹಾಡುಗಳು ಬಹಳ ಜನಪ್ರಿಯವಾಗಿವೆ. ಇವರ ೧೪೮ ಭಕ್ತಿಗೀತೆಗಳು 'ಭಕ್ತಿಸುಧಾಸಾರ'ಎಂಬ ಹೆಸರಿನಲ್ಲಿ ಪ್ರಕಟವಾಗಿವೆ12. ಇವರ ಇನ್ನೊಂದು ಕೃತಿ ಕೃಷಿಜ್ಞಾನಪ್ರದೀಪಿಕೆಯಲ್ಲಿ13 ವ್ಯವಸಾಯಕ್ಕೆ ಸಂಬಂಧಿಸಿದ ವಿಷಯಗಳ ಜೊತೆಗೆ ಆಧ್ಯಾತ್ಮ ವಿಚಾರಗಳೂ ಮಿಳಿತವಾಗಿವೆ. ಐಹಿಕ-ಪಾರಮಾರ್ಥಿಕ ಎರಡನ್ನೂ ಒಮ್ಮಲೇ ಸಾಧಿಸುವ ಕ್ರಮ ಇದರಲ್ಲಿದೆ. ಗ್ರಂಥದ ಪೂರ್ವಾರ್ಧದಲ್ಲಿ ಒಕ್ಕಲಿಗರಿಗೆ ಉಪಯುಕ್ತವಾದ ಕೃಷಿಗೆ ಸಂಬಂಧಿಸಿದ ವಿಷಯಗಳೂ, ೯ನೇ ಪ್ರಕರಣದಿಂದ ಮುಂದಕ್ಕೆ ಪರಮಾರ್ಥ ಕೃಷಿ ಎಂಬ ಭಾಗದಲ್ಲಿ ನೀತಿ ಮತ್ತು ಧರ್ಮಸಾಧನೆಯನ್ನು ಕುರಿತು ಹೇಳಿದೆ. ಅವರು ನಿರೂಪಿಸಿರುವ ಅನೇಕ ವಿಚಾರಗಳು ಸಮಾಜದ ಎಲ್ಲ ಧರ್ಮದವರಿಗೂ ಅನ್ವಯಿಸುವಂಥವು. ಅಂತೆಯೇ ಈ ಗ್ರಂಥಕ್ಕೆ ಹೆಚ್ಚಿನ ಮಹತ್ವವಿದೆ. 'ಸ್ವಾಮಿಗಳು ಕೃಷಿ ವಿಷಯವನ್ನು ಆಯ್ದುಕೊಂಡು ಅದನ್ನು ಗದ್ಯದಲ್ಲಿ ಬರೆಸಿರುವುದು ಅವರ ಜನಹಿತಚಿಂತನೆಯ ದ್ಯೋತಕವಾಗಿದೆ ; ಲೌಕಿಕವಿಚಾರಗಳನ್ನು

9. ಹೊಸಗನ್ನಡ ಸಾಹಿತ್ಯದ ಉದಯಕಾಲ, ಡಾ॥ ರಾ.ಯ. ಧಾರವಾಡಕರ, ಪು.೧೪೧.
10. ಲೇ. ಕೊಪ್ಪಳ ವೀರಭದ್ರಪ್ಪ, ಧಾರವಾಡ, ೧೯೫೮.
11. ಹೊ.ಸಾ.ಉ. ಪು.೧೯೦.
12. ಸಂ. ಎಸ್.ಎಸ್. ಭೂಸನೂರುಮಠ, ಮುರುಘಾಮಠ, ಧಾರವಾಡ, ೧೯೪೫.
13. ೧೯೧೭ರಲ್ಲಿ ಪಿ.ಎಂ. ದಾನಯ್ಯ, ಬಿಜಾಪುರ ಮಾಸ್ತರ, ಜೇಗಂಟಿ ಅವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ.

ಆಧ್ಯಾತ್ಮಿಕಕ್ಕೆ ಹೊಂದಿಸಿ ಹೇಳಿದ ಬಗೆಯು ಮನೋಜ್ಞವಾಗಿದೆ[14]'. ಘನಮಠಾರ್ಯರ ಪರಮಶಿಷ್ಯರಾದ ಕುನ್ನಾಳ ಸಿದ್ಧರಾಮಪ್ಪನವರು ಗುರುವಿನಾಜ್ಞೆಯಂತೆ ಈ ಕೃತಿಯನ್ನು ಪೂರ್ಣಗೊಳಿಸಿದ್ದಾರೆ. ಈ ಅಂಶ ಗ್ರಂಥಾಂತ್ಯದ ಮಾತುಗಳಿಂದ ಸ್ಪಷ್ಟವಾಗುತ್ತದೆ.

**ಸಿದ್ಧಾರೂಢಸ್ವಾಮಿ** (೧೮೩೬–೧೯೨೯): ಇವರು ನಿಜಾಮ ಪ್ರಾಂತದ ವಂಶದುರ್ಗದಲ್ಲಿ ಹುಟ್ಟಿ ಭಾರತದಲ್ಲೆಲ್ಲಾ ಸಂಚರಿಸಿ ಹುಬ್ಬಳ್ಳಿಯಲ್ಲಿ ನೆಲಸಿದ ಸಿದ್ಧಪುರುಷರು. ಇವರು ಅವಧೂತರು, ಅದ್ವೈತ ತತ್ತ್ವದ ಹಿರಿಯ ಉಪಾಸಕರು. ದಕ್ಷಿಣಭಾರತದ ಈ ಮಹಾನ್ ಪವಾಡಪುರುಷರು ಹುಬ್ಬಳ್ಳಿಯಲ್ಲಿ ಮಠವೊಂದನ್ನು ಸ್ಥಾಪಿಸಿದರು. ಇವರು ನಿಜಗುಣರ ಪರಮಾನುಭವ ಬೋಧೆಯನ್ನು ಪರಿಷ್ಕರಿಸಿ ೧೮೮೭ರಲ್ಲಿ ಪ್ರಕಟಿಸಿದರು. ಇವರ 'ಭಜನೆ ಪದಗಳು' ೧೮೯೦ರಲ್ಲಿ ಪ್ರಕಟಗೊಂಡಿವೆ. ಇವರ ಪ್ರೇರಣೆಯಿಂದಲೇ ಗುಂಡಾಶಾಸ್ತ್ರಿಯು ಚಿದಾನಂದಾವಧೂತರ 'ಜ್ಞಾನಸಿಂಧು'ವಿಗೆ ಟೀಕೆ ಬರೆದುದು ಮತ್ತು ನಿರ್ವಾಣಪ್ಪನವರು 'ಪಂಚೀಕರಣ'ವನ್ನು ಕನ್ನಡಕ್ಕೆ ಭಾಷಾಂತರಿಸಿದ್ದು.

**ಡೆಪ್ಯುಟಿ ಚನ್ನಬಸಪ್ಪ** (೧೮೩೩–೧೮೮೧) : ಚನ್ನಬಸಪ್ಪನವರು ಪರಭಾಷೆಯ ಧಾಳಿಯ ಸಮಯದಲ್ಲಿ ಕನ್ನಡದ ಉಳಿವಿಗಾಗಿ ಶ್ರಮಿಸಿದರು. ಶಿಕ್ಷಣರಂಗದ ಮೂಲಕ ಹೊಸಗನ್ನಡಕ್ಕೆ ನಾಂದಿ ಹಾಡಿದರು. ಇವರು ಒಬ್ಬ ಕನ್ನಡದ ಸೇನಾನಿಯಂತೆ ಅನ್ಯಭಾಷಾಪ್ರಭಾವದೆದುರು ಉತ್ತರಕರ್ಣಾಟಕದಲ್ಲಿ ಕನ್ನಡವು ಬಲವಾಗಿ ಬೇರೂರಲು ಕಂಕಣಬದ್ಧರಾಗಿ ಕೆಲಸ ಮಾಡಿದರು. ಅನೇಕ ಶಾಲೆಗಳನ್ನು ಸ್ಥಾಪಿಸಿ, ಕನ್ನಡ ಬೋಧನೆಗೆ ಉಪಾಧ್ಯಾಯರನ್ನು ನೇಮಿಸಿ, ಜನರಲ್ಲಿ ಕನ್ನಡಾಭಿಮಾನ ಜಾಗೃತರಾಗಲು ಸಹಾಯಕರಾದರು. ಇದು ಆ ಕಾಲಕ್ಕೆ ಸಣ್ಣ ಕೆಲಸವೇನಲ್ಲ. ಅವರು ಸ್ವತಃ ಸಾಹಿತಿಗಳಲ್ಲದಿದ್ದರೂ ಕನ್ನಡ ಭಾಷಾಸಾಹಿತ್ಯಗಳಿಗೆ ಸಿಕ್ಕಬೇಕಾದ ಸ್ಥಾನವನ್ನು ದೊರಕಿಸಲು ಸಾಕಷ್ಟು ಯತ್ನಿಸಿದರು ಸಾಹಿತಿಗಳನ್ನು ಪುರಸ್ಕರಿಸಿದರು. ಕನ್ನಡ ಭಂಟರ ಒಂದು ಗುಂಪನ್ನೇ ಅವರು ತಯಾರುಮಾಡಿದ್ದು ಅವರು ಮುಂದಾಲೋಚನೆ, ಮುತ್ಸದ್ಧಿತನಗಳ ಫಲವೇ ಎನ್ನಬೇಕು. ಇವರು ತುರುಮರಿ ಹಾಗೂ ಶಾಂತವೀರ ಕಿತ್ತೂರ ಅವರ ಮೂಲಕ ಕನ್ನಡದ ಕ್ರಮಿಕಪುಸ್ತಕಗಳನ್ನು ಬರೆಸಿ ಆ ಬಗೆಗೆ ಇದ್ದ ಕೊರತೆಯನ್ನು ನೀಗಿದ್ದರು. ಇದು ಅವರ ಕಾರ್ಯದಕ್ಷತೆಗೆ ಉದಾಹರಣೆ !

ಚನ್ನಬಸಪ್ಪನವರು ಸ್ವತಃ ಒಂದೆರಡು ಕೃತಿಗಳನ್ನು ರಚಿಸಿದ್ದಾರೆ. ಕೆಲವು ಕ್ರಮಿಕಪುಸ್ತಕಗಳ ಜೊತೆಗೆ ಷೇಕ್ಸ್‌ಪಿಯರನ 'Comedy of errors'ನಾಟಕವನ್ನು 'ನಗದವರನ್ನು ನಗಿಸುವ ಕಥೆ'ಯೆಂದು ಕನ್ನಡಿಸಿರುವುದಲ್ಲದೆ,ಮ್ಯಾಕ್‌ಬೆತ್ ನಾಟಕವನ್ನು ಅನುವಾದಿಸಿದ್ದಾರೆ.

**ವ್ಯಾಕರಣದ ಮಲ್ಲಪ್ಪ** (೧೮೩೫–೧೯೦೭) : ಪ್ರಸಿದ್ಧ ವಿದ್ವಾಂಸರಾಗಿದ್ದ ಮಲ್ಲಪ್ಪನವರು ಸಾಹಿತ್ಯ ಕ್ಷೇತ್ರದಲ್ಲಿ ಪಾಂಡಿತ್ಯಪೂರ್ಣವಾದ ಕೆಲಸವನ್ನು ಮಾಡಿದ್ದಾರೆ. ಇವರು ಶಬ್ದಾದರ್ಶ (ವ್ಯಾಕರಣ) (೧೮೯೭), ಕಾವ್ಯಾವಲೋಕನದ ಟೀಕೆ (ಅರ್ಥಾಲಂಕಾರ ಪ್ರಕರಣ) (೧೮೮೩)ಗಳಲ್ಲದೆ ಕರ್ಣಾಟಕ ಕಾದಂಬರಿ, ಕರ್ಣಾಟಕ ಶಾಕುಂತಲ ನಾಟಕ, ರಾಜಶೇಖರವಿಳಾಸಗಳನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ರಮಾಬಾಯಿ ಅವರ ಮರಾಠಿಯ ಶ್ರೀ ಧರ್ಮನೀತಿಯನ್ನು ಸಂಪಾದಿಸಿದ್ದಾರೆ.

**ಕಡಕೋಳ ಮಡಿವಾಳಪ್ಪ** (೧೮೪೦–೧೯೦೦) : ಅಫಜಲ್ಪುರ ತಾಲ್ಲೂಕು ಬಿದನೂರಿನ ಕಡಕೋಳ ಮಡಿವಾಳಪ್ಪ ಕಲ್ಬುರ್ಗಿಯ ಶರಣಬಸವೇಶ್ವರರ ಸಮಕಾಲೀನರು. ಶ್ರೀ ಸಾಮಾನ್ಯರ ಬಂಧುವಾದ ಇವರು ಜನಸಾಮಾನ್ಯರಿಗೆ ಓಡಿಸುವಂಥ ಭಾಷೆಯಲ್ಲಿ ಆಧ್ಯಾತ್ಮವನ್ನು ಹೇಳಿದ್ದಾರೆ. ಆಡುಮಾತನ್ನು ಅನುಭಾವದೆತ್ತರಕ್ಕೆ ಏರಿಸಿದ ಕೀರ್ತಿ ಈ ಪ್ರಯೋಗಶೀಲ ಅನುಭಾವಿಯದು. 'ನಿರುಪಮ ನಿರಾಳ ಮತ್ರ್ಪಭು ಮಹಾಂತಯೋಗಿ'ಎಂಬ ಅಂಕಿತವುಳ್ಳ ಅವರ ಹಾಡುಗಳು ಜನಪ್ರಿಯವಾಗಿವೆ. 'ಗ್ರಾಮ ಭಾಷೆಯಾದ ಜಾನಪದ ಸಾಹಿತ್ಯದಲ್ಲಿ ಆಧ್ಯಾತ್ಮದ ಜೀವಕಳೆ ತುಂಬಿ ನಾದಮಾಧುರ್ಯಕ್ಕೆ ಹೊರಳಿಸಿ ತಾಳ, ಲಯಗಳಿಗೆ ಮೇಳೈಸಿ ನಾಡಜನರ ನಾಲಗೆಯ ಮೇಲೆ ಲಾಸ್ಯವಾಡುವಂತಹ ಪದ್ಯಗಳನ್ನು ಬರೆದು ವೇದಕ್ಕೆ ಸಮಾನವಾಗಿ ತಂದು ಅವುಗಳನ್ನು ನಿಲ್ಲಿಸಿದರು. ಇಂಥ ಅಗಾಧವಾದ ಶಕ್ತಿ ರಸಋಷಿಗಳಾದವರಿಗೆ ಮಾತ್ರ ಸಾಧ್ಯ. ಅಂಥ ಋಷಿಕವಿ ಈ ಮಡಿವಾಳಪ್ಪನವರು'[15] 'ಶರಣತತ್ತ್ವಗಳನ್ನು ಜಾನಪದ ಸ್ವರಕ್ಕಿಳಿಸಿ ಅವನ್ನು ಹೆಚ್ಚು ಶ್ರೀಮಂತಗೊಳಿಸಿದ, ಜೀವಂತಪಡಿಸಿದ ಶರಣಕವಿ ಈತ'[16] ಎಂಬ ಮಾತಿನಲ್ಲಿ ಅತಿಶಯೋಕ್ತಿಯಿಲ್ಲ.

ಅವರ ಆಧ್ಯಾತ್ಮದ ಔನ್ನತ್ಯಕ್ಕೆ

'ತನ್ನ ತಾ ತಿಳಿದ ಮ್ಯಾಲ ಇನ್ನೇನಿನ್ನೇನೋ। ತನ್ನಂತೆ ಸರ್ವಜೀವವ ಮನ್ನಿಸಿ ಮೂಕಾದ ಮ್ಯಾಲೆ ಇನ್ನೇನಿನ್ನೇನೋ ಇನ್ನೇನಿನ್ನೇನೋ॥'

ಎಂಬ ಹಾಡನ್ನೂ, ಅವರ ಹಾಡುಗಳಲ್ಲಿ ಕಾಣುವ ಸಮಾಜವಿಮರ್ಶೆಗೆ,

14. ಹೊಸಗನ್ನಡದ ಅರುಣೋದಯ, ಡಾ॥ ಶ್ರೀನಿವಾಸ ಹಾವನೂರ, ಪು.೨೦೮.
15. ಕಡಕೋಳ ಮಡಿವಾಳಪ್ಪ—ಎ.ಕೆ. ರಾಮೇಶ್ವರ, ಐ ಬಿ ಎಚ್. ಪ್ರಕಾಶನ, ಪು.೫೫
16. ಕಡಕೋಳ ಮಡಿವಾಳಪ್ಪ—ಲಿಂಗಣ್ಣ ಸತ್ಯಂಪೇಟೆ, ಪು.೮೫.

ಬಾಯಿಲೊಂದು ಆಡ್ತೀರಿ ಮನಸಿನಾಗೊಂದು ಮಾಡ್ತೀರಿ। ಬರೆದಿಟ್ಟದ್ದೋದಿಕೊಂಡು ಭ್ರಾಂತಿಗೆಟ್ಟು ತಿರಗತೀರಿ॥'

ಎಂಬ ಹಾಡನ್ನು ನೆನೆಯಬಹುದು. ಕವಿಚರಿತೆಕಾರರು ಅವರ ಒಂದು ವಚನವನ್ನು ಉಲ್ಲೇಖಿಸಿದ್ದಾರೆ[17].

**ಬಸವಪ್ಪಶಾಸ್ತ್ರಿ** (೧೮೪೩–೧೮೯೧): ಮೈಸೂರು ಅರಸರ ಆಸ್ಥಾನಕವಿಯಾಗಿದ್ದ ಬಸವಪ್ಪಶಾಸ್ತ್ರಿಗಳು ಪ್ರಮುಖವಾಗಿ ಒಳ್ಳೆಯ ನಾಟಕಕಾರು; ಅನುವಾದಕರು. ಕಾಳಿದಾಸನ ನಾಟಕಗಳನ್ನು ಸಮರ್ಥವಾಗಿ ಅನುವಾದಿಸಿ 'ಅಭಿನವ ಕಾಳಿದಾಸ'ರೆಂದು ಖ್ಯಾತಿ ಗಳಿಸಿದರು. ಸು. ಹನ್ನೆರಡು ಸಂಸ್ಕೃತನಾಟಕಗಳನ್ನು ಇವರು ಕನ್ನಡಿಸಿದ್ದಾರೆ. ಅದ್ವಿತೀಯ ಪಾಂಡಿತ್ಯ ಹಾಗೂ ಅನುಪಮ ಕವಿತಾ ಶಕ್ತಿಗಳ ಅಪೂರ್ವ ಮೇಳ ಇವರಲ್ಲಿತ್ತು. ಕನ್ನಡದಲ್ಲಿ ದಮಯಂತಿ ಸ್ವಯಂವರ (ಚಂಪೂ), ಶಂಕರಶತಕ (ಕಂದ), ನೀತಿ ಸಾರಸಂಗ್ರಹ (ಕಂದ), ಹರ್ಷಚರಿತ್ರೆ, ಕೃಷ್ಣರಾಜಾಭ್ಯುದಯ, ಮೊದಲಾದ ಕೃತಿಗಳನ್ನೂ,ಸಂಸ್ಕೃತದಲ್ಲಿ ವೀರಶೈವ ಧಾರ್ಮಿಕ ಆಚರಣೆಗೆ ಸಂಬಂಧಿಸಿದ ಶಿವಾಷ್ಟಕಂ, ಶಿವಭಕ್ತಿಸುಧಾತರಂಗಿಣೀ, ತ್ರಿಷಷ್ಟಿಪುರಾತನ ಸ್ತವನ, ಇತ್ಯಾದಿ ೧೨ ಕೃತಿಗಳನ್ನು ರಚಿಸಿದ್ದಾರೆ. ರೇಣುಕ ಚರಿತ್ರೆ, ದಕ್ಷಿಣಮೂರ್ತ್ಯಷ್ಟಕ, ಬಿಲ್ವವೃಕ್ಷಪೂಜಾವಿಧಿ ಮೊದಲಾದ ಕೆಲವು ಅಪ್ರಕಟಿತ ಕೃತಿಗಳೂ ಇವೆ.

**ಇಡಗೂರು ರುದ್ರಕವಿ** (೧೮೮೭) : ಇವರ ಮೂಲಸ್ಥಳ ತುಮಕೂರು ಜಿಲ್ಲೆಯ ಬೇವಿನಹಳ್ಳಿ. ನೆಲಸಿದ್ದು ದೊಡ್ಡಬಳ್ಳಾಪುರ ತಾಲ್ಲೋಕು ಕಾಡತಿಪ್ಪೂರು.ಬೆಳಗಿದ್ದು ಗೌರೀಬಿದನೂರು ತಾಲ್ಲೂಕು ಇಡಗೂರು(ಹಿಡಿಂಬಾಪುರ).ಇವರು ನಿಡುಮಾಮಿಡಿ ಪೀಠದ ಶಿಷ್ಯರು. ರುದ್ರಕವಿ 'ಕರ್ಣಾಟಕಾಂಧ್ರೋಭಯ ಕವಿತಾವಿಶಾರದ', 'ಯಕ್ಷಗಾನನಾಟಕ ಪಿತಾಮಹ' ಎಂದು ಪ್ರಖ್ಯಾತರಾಗಿದ್ದಾರೆ. ಕನ್ನಡ ಮತ್ತು ತೆಲುಗಿನಲ್ಲಿ ಇವರು ಅನೇಕ ಕೃತಿಗಳನ್ನು ರಚಿಸಿರುತ್ತಾರೆ. ಮಾರ್ಕಂಡೇಯ ಚರಿತ್ರೆ, ಗಿರಿಜಾಕಲ್ಯಾಣ ಮೊದಲಾದವನ್ನು, ಹೊನ್ನಾವರದ ಹೊನ್ನೇಗೌಡ ವಂಶಾವಳಿ (ದ್ವಿಪದಿ) ಮೊದಲಾದ ಪದ್ಯಗಳನ್ನು ರಚಿಸಿದ್ದಾರೆ. ವಿರೂಪಾಕ್ಷ ಮಹಾತ್ಮ್ಯಮು ಮೊದಲಾದ ಶತಕ, ದಂಡಕಗಳನ್ನು ತೆಲುಗಿನಲ್ಲಿ ಬರೆದಿದ್ದಾರೆ. ಪಾಲ್ಕುರಿಕೆಸೋಮನಾಥನ ಅಕ್ಷರಾಂಕ ಗದ್ಯಕ್ಕೆ ಟೀಕೆ ಬರೆದಿದ್ದಾರೆ[18].

**ಬಸವ ಕವಿ I** (೧೮೬೦): ಗೋಕಾಕ ತಾಲ್ಲೂಕು ತೊಂಡೀಕಟ್ಟಿ ಗ್ರಾಮದಲ್ಲಿ ಹುಟ್ಟಿದ ಇವರಿಗೆ ಬಸವ ಕುಮಾರನೆಂದೂ ಹೆಸರಿದೆ. ಸೋಲೂರಿನ ಚನ್ನವೀರದೇಶಿಕೇಂದ್ರರೇ ಇವರ ಗುರು.ವೀರಶೈವ ಧರ್ಮ ಮತ್ತು ಶಾಸ್ತ್ರಗ್ರಂಥಗಳ ವಿಶೇಷ ಅಧ್ಯಯನ ಮಾಡಿದ ಇವರು ಮೂರು ಷಟ್ಪದಿಕಾವ್ಯಗಳನ್ನು ರಚಿಸಿದ್ದಾರೆ:೧.ಮುಗ್ಧ ಸಂಗಮಲೀಲೆ: ಉಪ್ಪರಗಟ್ಟಿಯ ಮುಗ್ಧಸಂಗಯ್ಯನ ಜನಪ್ರಿಯ ಕಥೆ. ೨. ದುರುದುಂಡೇಶ್ವರ ಪುರಾಣ (ಶಿವಲಿಂಗಲೀಲೆ): ದುರುದುಂಡೇಶ್ವರನ ದಿವ್ಯಜೀವನವನ್ನು ಕುರಿತ ಮೇಲ್ಮಟ್ಟದ ಕೃತಿ. ೩. ಮಹಲಿಂಗಲೀಲೆ: ೧೭೮೦ರಲ್ಲಿದ್ದ ಕಾರಣಿಕಪುರುಷ ಮಹಾಲಿಂಗನ ಕಥೆ. ತನಗಿಂತ ಹಿಂದೆ ಆಗಿಹೋದ ವೀರಶೈವ ಸಂಸ್ಥಾನಾಧಿಪತಿಗಳನ್ನು, ವೀರಶೈವ ಗುರುಗಳನ್ನು ಕುರಿತು ಕವಿ ಬರೆದಿದ್ದಾನೆ. ಈ ಪುರಾಣಗಳಲ್ಲಿ ಚಾರಿತ್ರಕ ಅಂಶಗಳು ಗೌಣವಾದರೂ, ಅವುಗಳಲ್ಲಿರುವ ಕಾವ್ಯಗುಣಗಳನ್ನಾಗಲೀ, ನಿರೂಪಿತರಾಗಿರುವ ತಾತ್ವಿಕ ಹಾಗೂ ಸೈದ್ಧಾಂತಿಕ ಅಂಶಗಳನ್ನು ಕಡೆಗಣಿಸುವಂತಿಲ್ಲ. ಅದಕ್ಕೇ 'ಆತ ಸಂಪ್ರದಾಯದ ಸೆರಗುಹಿಡಿದು ನವ್ಯತೆಯ ಮಂಗಳಾರತಿ ಎತ್ತಿರುವುದು ಕನ್ನಡದೇವಿಗೆ ಭೂಷಣಪ್ರಾಯ'[19] ಎಂಬ ಅಗ್ಗಳಿಕೆಯ ಮಾತು ಹೊಮ್ಮಿದೆ.

**ವೀರನಗೆರೆ ಪುಟ್ಟಣ್ಣ** (೧೯ ಶತ. ಪೂರ್ವಾರ್ಧ): ಇವರು ಮೈಸೂರಿನ ಸಿದ್ಧರಾಜ ಅರಸಿನ ಆಶ್ರಿತರಾಗಿದ್ದಂತೆ ತಿಳಿಯುತ್ತದೆ. ಇವರು ಪ್ರಖ್ಯಾತ ಪಂಡಿತರು ಹಾಗೂ ನಾಟಕಕಾರರು. ಅಂಕನಾಥೇಶ್ವರ (ಷಟ್ಪದಿ), ಚಾಮರಾಜೇಂದ್ರಶತಕಗಳು ಇವರ ವೈದುಷ್ಯಕ್ಕೆ ಉದಾಹರಣೆಯಾದರೆ, ಅರ್ಜುನ ಜೋಗಿಹಾಡು, ದೇವರಜಾತ್ರೆಯ ಪದಗಳು, ತುರಾಲಾವಣಿಗಳು ಮೊದಲಾದ ಜಾನಪದಹಾಡುಗಬ್ಬಗಳು ಅವರ ಜಾನಪದಸಾಹಿತ್ಯಶಕ್ತಿಗೆ ನಿದರ್ಶನಗಳಾಗಿವೆ. ಇವರು ಒಳ್ಳೆಯ ನಾಟಕಕಾರರೂ ಹೌದು. ಅವರ ಕೃತಿಗಳಲ್ಲಿ ಕೆಲವು: ದುಶ್ಶಾಸನ ನಾಟಕ, ಹರಿಶ್ಚಂದ್ರ ನಾಟಕ, ಪಂಚವಟೀರಾಮಾಯಣ, ರತಿ ಕಲ್ಯಾಣ, ವಿವೇಕವಿಜಯ, ಗರುಡಹನುಮದ್ವಿಲಾಸ, ಸಾನಂದಗಣೇಶನ ಕಥೆ; ದ್ರೌಪದೀ ಸ್ವಯಂವರ, ವಿನೋದರಸಮಂಜರಿ, ಇತ್ಯಾದಿ.

**ನಂಜುಂಡ ಶಿವಯೋಗಿ** (೧೮೬೦) : ತುಮಕೂರು ಜಿಲ್ಲೆ ಮತುಕೂರಿ(ಕೈದಾಳ)ನವರು. ಇವರ ಗುರು ಅಟವೀಂದ್ರ ಶಿವಯೋಗಿ. ಉಪಾಧ್ಯಾಯ ವೃತ್ತಿಯಲ್ಲಿದ್ದ ಇವರದು ವೈವಿಧ್ಯಪೂರ್ಣವಾದ ವ್ಯಕ್ತಿತ್ವ. ಇವರು ಕವಿ, ಚಿತ್ರಕಲಾನಿಪುಣ, ಸಂಗೀತಶಾಸ್ತ್ರಸಂಪನ್ನ, ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳ ಉದ್ದಾಮ ಪಂಡಿತ. ೧. ಅಟವೀಶ್ವರ ಗೀತಾಮಂಜರಿ ಎಂಬ ಅವರ ಕೃತಿಯಲ್ಲಿ ಲೋಕನೀತಿ ಹಾಗೂ ವೈರಾಗ್ಯಬೋಧೆಯ ನಾನಾರಾಗದ ಹಾಡುಗಳಿವೆ. ಇದು ನಿಜಗುಣರ 'ಕೈವಲ್ಯಪದ್ಧತಿ' ಹಾಗೂ ಸರ್ಪಭೂಷಣರ 'ಕೈವಲ್ಯಕಲ್ಪವಲ್ಲರಿ'ಯನ್ನು ಹೋಲುತ್ತದೆ. ೨. ಶ್ರೀಮದಟವೀಶ ಗುರುಭಕ್ತಿಸಾರ (ಷಟ್ಪದಿ): ಶಿವಭಕ್ತಿಸಾರ ಮತ್ತು ಹರಿಭಕ್ತಿಸಾರಗಳ ಮಾದರಿಯಲ್ಲಿದ್ದು ಗುರುಭಕ್ತಿಯ ಆಧಿಕ್ಯವಿಲ್ಲಿದೆ. ಭಕ್ತಿರಸಪೂರವೆನಿಸಿದ ಈ ಕೃತಿ ಪಾರಾ

---

17. ಕವಿಚ. III, ೪೫೫.
18. ಇದನ್ನು 1891 ರಲ್ಲಿ ಬೆಳ್ಳಾವಿ ಗಟ್ಟಪ್ಪನವರ ಚೆನ್ನಪ್ಪನವರು ಪ್ರಕಟಿಸಿದ್ದಾರೆ.
19. ದುರುದುಂಡೇಶ್ವರ ಪುರಾಣ. ಪೀಠಿಕೆ X, ಸಂ. ಡಾ॥ ಎಂ. ಎಸ್. ಸುಂಕಾಪುರ.

ಯಣ ಯೋಗ್ಯವೆನಿಸಿದೆ. ೩. ಯಕ್ಷಗಾನಗಳು: ಇವರು ಸುರಾಭಾಂಡೇಶ್ವರೋಪಾಖ್ಯಾನ, ಮಾರ್ಕಂಡೇಯ ವಿಳಾಸ, ಹಾಲಾಹಲ ಭಕ್ಷಣೆಯ ಕಥೆ ಮೊದಲಾದ ಪ್ರಸಿದ್ಧ ನಾಟಕಗಳನ್ನು ರಚಿಸಿದ್ದಾರೆ. ಇದಲ್ಲದೆ ಚಿತ್ರಕಲಾಕೋವಿದರಾದ ಇವರು ಬರೆದ ಸರ್ವಸಿದ್ಧಿಗಣಪತಿ, ಗಿರಿಜಾಕಲ್ಯಾಣಮಹೋತ್ಸವ, ನಂದಿವಾಹನಮೂರ್ತಿ, ಚಂದ್ರಶೇಖರಮೂರ್ತಿ, ಅಂಧಕಾಸುರಸಂಹಾರ ಮೊದಲಾದ ಚಿತ್ರಗಳು ಪ್ರಸಿದ್ಧವಾಗಿವೆ.

**ಸಿದ್ಧಲಿಂಗ:** (೧೮೬೦). ಇವರು ಶಿವಶರಣರನ್ನು ಕುರಿತು ಕಾವ್ಯಗಳನ್ನೂ, ಸ್ತೋತ್ರಾವಳಿಗಳನ್ನೂ ರಚಿಸಿದ್ದಾರೆ. ಪುರಾಣಗಳು : ಸಾಲೋಟಗಿ ಶಿವಯೋಗೀಶ್ವರ ಪುರಾಣ, ಮಡಿವಾಳಪ್ಪ ಚಾರಿತ್ರ, ಸಿದ್ಧರಾಮೇಶ್ವರಕಾವ್ಯ, ರೇವಣಸಿದ್ಧೇಶ್ವರ ಚರಿತ್ರೆ, ಸಿಂದಗಿ ನೀಲಗಂಗಮ್ಮನ ಚರಿತ್ರೆ, ಮರಳುಸಿದ್ಧೇಶ್ವರ ಪುರಾಣ. ಸ್ತೋತ್ರಗಳು : ಜೇರಟಗಿ ರೇವಣಸಿದ್ಧೇಶ್ವರಸ್ತೋತ್ರ. ಚಿಕ್ಕ ಮಣ್ಣೂರಗಡ್ಡಿಲಿಂಗೇಶ್ವರಸ್ತೋತ್ರ. ಗುಡ್ಡಾಪುರ ದಾನಮ್ಮನಸ್ತೋತ್ರ, ಗುಡ್ಡ್ಯಾಳೀಶನ ಸ್ತೋತ್ರ. ಇವುಗಳಲ್ಲಿ ಶಿವಯೋಗೀಶ್ವರ ಪುರಾಣ[20] ಉಲ್ಲೇಖನಾರ್ಹ. ೧೭ ಸಂಧಿ, ೭೭೬ ಷಟ್ಪದಿಗಳಿಂದ ಕೂಡಿದ ಈ ಕಾವ್ಯದಲ್ಲಿ ೧೬ನೇ ಶತಮಾನದಲ್ಲಿ ಆಗಿಹೋದ ಶಿವಯೋಗೀಶ್ವರನ ಪವಾಡಗಳ ವರ್ಣನೆಗಳು, ಅವರ ಮಹಿಮಾನ್ವಿತ ಸಾಧನೆಗಳು ಪುರಾಣದ ಧಾಟಿಯಲ್ಲಿ ಭಕ್ತಿರಸದ ಹೊನಲಾಗಿ ಬಿತ್ತರಗೊಂಡಿವೆ.

**ಗುಬ್ಬಿ ವೀರೇಶಶಾಸ್ತ್ರಿ** (೧೮೬೦): ಇವರು ಕನ್ನಡ ಮತ್ತು ಸಂಸ್ಕೃತದಲ್ಲಿ ಒಳ್ಳೆಯ ಪಂಡಿತರು. ಇವರೇ ಬರೆದ 'ವೀರಶೈವಾನ್ವಯಚಂದ್ರಿಕಾ' ಎಂಬ ಸಂಸ್ಕೃತಗ್ರಂಥಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾರೆ. ಅದರಲ್ಲಿ ವೀರಶೈವ ಮತತತ್ತ್ವಗಳನ್ನು ಸ್ವಾರಸ್ಯವಾಗಿ, ಸರಳವಾಗಿ ನಿರೂಪಿಸಿದ್ದಾರೆ. ಅದು ೧೮೯೦ರಲ್ಲೇ ಅಚ್ಚಾಗಿದೆ. ಇದಲ್ಲದೆ ಇವರು ಗುಲೇಬಕಾವಲಿ, ಚೋರವಧೆ, ಜಗನ್ಮೋಹಿನೀ ಚರಿತ್ರೆ ಮೊದಲಾದ ಕೃತಿಗಳನ್ನು ಬರೆದಂತೆ ತಿಳಿದುಬರುತ್ತದೆ[21].

**ಹಾನುಗಲ್ಲು ಕುಮಾರಸ್ವಾಮಿ** (೧೮೬೭–೧೯೩೦) : ಹಾನುಗಲ್ಲಿನ ವಿರಕ್ತಮಠದ ಪೀಠಾಧ್ಯಕ್ಷರಾಗಿದ್ದ ಕುಮಾರ ಸ್ವಾಮಿಗಳು ಧರ್ಮಪ್ರಸಾರಕ್ಕಾಗಿ ಅನೇಕ ಯೋಜನೆಗಳನ್ನು ಹಾಕಿದರು. ೧೯೦೪ರಲ್ಲಿ ಧಾರವಾಡದಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ಪ್ರಥಮಾಧಿವೇಶನದ ಅಧ್ವರ್ಯು ಅವರೇ. ೧೯೦೮ರಲ್ಲಿ ಶಿವಯೋಗಮಂದಿರದ ಸ್ಥಾಪನೆಮಾಡಿ ವೀರಶೈವ ಧರ್ಮದ ಸಿದ್ಧಾಂತಗಳ ಅಧ್ಯಯನ ಹಾಗೂ ಸಂಶೋಧನೆಗಳಿಗೆ ಅನುವುಮಾಡಿದರು. ಕುಮಾರಸ್ವಾಮಿಗಳು ಅನೇಕ ಹಾಡುಗಳನ್ನು ಬರೆದಿದ್ದಾರೆ. ಅವು 'ಭಜನಾವಳಿ' ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ಇದಲ್ಲದೆ ಅವರು ನೀತಿಸಂಗ್ರಹ, ಬಸವಭಾಷೆ[22] ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

> ಶಿವ ಮಂಗಲವನು ಕೊಡಬೇಗ। ಭವದುಃಖದಿ ಬಳಲುವೆವೀಗ
> ಭುವಿಗವತರಿಸಿದ ಕಾರಣವ। ಜವದೊಳು ನೆನೆಯುತ ಗುರುದೇವ ॥ಪ॥

ಎಂಬ ಅವರ ಹಾಡು ತುಂಬಾ ಜನಪ್ರಿಯವಾಗಿದೆ.

**ಸದಾಶಿವ ನಾರಾಯಣ ದೇವರಕೆರೆ** (೧೯ನೆಯ ಶತಮಾನದ ನಡುವೆ): ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ಪಂಡಿತರಾಗಿದ್ದ ಸದಾಶಿವ ಕವಿಗಳು ಪುರಾಣ ಹೇಳುವುದರಲ್ಲಿ ನಿಸ್ಸೀಮರಾಗಿದ್ದರು. ಇವರು ಪುರಾಣಿಕರೆಂದೇ ಕರೆಯಲ್ಪಡುತ್ತಿದ್ದರು. ಎಂಟು ತಿಂಗಳು ಸತತವಾಗಿ ಬಸವಪುರಾಣವನ್ನು ಪ್ರವಚನಮಾಡಿದ ಖ್ಯಾತಿ ಇವರದು. ಇವರು ಮಹಾಕೂಟೇಶ್ವರ ಪುರಾಣ ಎಂಬ ಷಟ್ಪದಿ ಕಾವ್ಯವನ್ನು ಬರೆದಿದ್ದಾರೆ. ಸ್ಕಂದಪುರಾಣದಲ್ಲಿ ಬರುವ ಮಹಾಕೂಟಕ್ಷೇತ್ರದ ಭಾಗವನ್ನು ಕನ್ನಡಕ್ಕೆ ಅನುವಾದಿಸಿ ಕಾವ್ಯ ರಚಿಸಿದ್ದಾರೆ. ಪ್ರಾಚೀನ ಕಾವ್ಯಮಾರ್ಗವನ್ನು ಕಟ್ಟುನಿಟ್ಟಾಗಿ ಅನುಸರಿಸಿರುವ ಈ ಕಾವ್ಯದಲ್ಲಿ ಭಕ್ತಿರಸಕ್ಕೆ ಅಗ್ರಮರ್ಯಾದೆ ಸಂದಿದೆ. ಕಾವ್ಯದಲ್ಲಿ ತತ್ತ್ವನಿರೂಪಣೆಗೆ, ನೀತಿ ಪ್ರತಿಪಾದನೆಗೆ ೧೪ ಕಥೆಗಳನ್ನು ಉಪಯುಕ್ತನಾಗಿ ಬಳಸಿಕೊಂಡಿದ್ದಾರೆ.

**ಮಾಗಡಿ ವೀರಪ್ಪಶಾಸ್ತ್ರಿ** (೧೮೬೮–೧೯೨೬): ಕನ್ನಡ ಹಾಗೂ ಸಂಸ್ಕೃತದಲ್ಲಿ ಪರಮಪಂಡಿರಾದ ಶಾಸ್ತ್ರಿಗಳು ತೊಡಗಿದ್ದು ವಿದ್ಯಾದಾನದ ಕಾಯಕದಲ್ಲಿ. ಜೊತೆಗೆ, ವೀರಶೈವಧರ್ಮದ ಪ್ರಸಾರಕಾರ್ಯವನ್ನು ಕೈಗೊಂಡರು. ವೀರಶೈವಾನಂದಿನಿ ಮತ್ತು ವೀರಶೈವ ಧರ್ಮಸಂಗ್ರಹ ಎಂಬ ಎರಡು ಪತ್ರಿಕೆಗಳ ಮೂಲಕ ಧರ್ಮಪ್ರಚಾರ ಹಾಗೂ ಪ್ರಾಚೀನ ವೀರಶೈವ ಗ್ರಂಥಗಳ ಪ್ರಕಟಣೆಯನ್ನು ಆರಂಭಿಸಿದರು.

i) ಪ್ರಾಚೀನ ಗ್ರಂಥಗಳ ಪರಿಷ್ಕರಣ, ಪ್ರಕಟನಕಾರ್ಯ : ಉದಾ. ರಾಘವಾಂಕ ಚಾರಿತ್ರ (೧೯೦೪ ರಲ್ಲಿ) ii) ಕ್ಲಿಷ್ಟವಾದ ಶಾಸ್ತ್ರಗ್ರಂಥಗಳಿಗೆ ಟೀಕೆ ಟಿಪ್ಪಣಿಗಳ ರಚನೆ. ಉದಾ. ವೀರಶೈವಾಮೃತ ಮಹಾಪುರಾಣ. iii) ಸ್ವತಂತ್ರ ಕೃತಿರಚನೆ : ಕನ್ನಡದಲ್ಲಿ–ಅಷ್ಟಾವರಣ ವಿಚಾರದರ್ಪಣ, ಸಿದ್ಧಲಿಂಗೇಶ್ವರ ಶತಕ, ಕೋಳೂರು ಕೊಡುಗೂಸಿನ ಕಥೆ, ವೇಮನಾ

20. ಪ್ರಕಟಣೆ: ಶ್ರೀ ಶಿವಯೋಗೀಶ್ವರ ಸಂಸ್ಥಾನ ಸಾಲೋಟಗಿ, ಇಂಡಿ ತಾಲ್ಲೂಕು, ವಿಜಾಪುರ ಜಿಲ್ಲಾ, ೧೯೭೨.
21. ವೀರಶೈವ ಸಾಹಿತ್ಯ ಸಮೀಕ್ಷೆ. ಸಂ. ಸದಾನಂದ ಕನವಳ್ಳಿ, ಚನ್ನಪ್ಪಕೆರಿಮನಿ, ಪು. ೪೧೧.
22. ಇದನ್ನು ಮಹಾಲಿಂಗಯ್ಯ ವೀರಯ್ಯ ಹಿರೇಮಠ ಅವರು ಪರಿಷ್ಕರಿಸಿ ಪ್ರಕಟಿಸಿದ್ದಾರೆ.

ರಾಧ್ಯನ ಕಥೆ, ಗುರುಭಜನೆ, ಶಿವಗೀತೆ, ಶಿವಾಧಿಕ್ಯ ಮೊದಲಾದ ಕೃತಿಗಳನ್ನೂ, ಸಂಸ್ಕೃತದಲ್ಲಿ ಸಿದ್ಧಲಿಂಗೇಶ್ವರ ಸ್ತೋತ್ರ ಮೊದಲಾದುವನ್ನೂ ಬರೆದಿದ್ದಾರೆ. 'ವೀರಶೈವಾನಂದಿನಿ'ಯಲ್ಲಿ(೧೯೦೬) ಅಮೃತೇಶ್ವರನ ಭಾಷ್ಯ, ದೀಕ್ಷಾಬೋಧೆ, ಸಿದ್ಧೇಶ್ವರ ಮಹಿಮೆ ಗ್ರಂಥಗಳನ್ನೂ 'ವೀರಶೈವ ಧರ್ಮಸಂಗ್ರಹ'ದಲ್ಲಿ (೧೯೨೪) ಶರಣಚಾರಿತ್ರ್ಯ, ಕವಿಕರ್ಣರಸಾಯನಂ, ಸೋಮನಾಥಭಾಷ್ಯಂ (ಬಸವರಾಜೀಯಂ)ಗ್ರಂಥಗಳೂ, ಶಿವಭಕ್ತಿ, ಶಿವಾಧಿಕ್ಯ, ವೀರಶೈವಾಚಾರ ಮೊದಲಾದ ವಿಚಾರ ಪರಿಪ್ಲುತ ಲೇಖನಗಳೂ ಪ್ರಕಟವಾದವು. ಸಮಾಜದ ದೌರ್ಭಾಗ್ಯ ಆ ಪತ್ರಿಕೆಗಳು ಬಹುಕಾಲ ನಡೆಯಲಿಲ್ಲ. ವೀರಶೈವಧರ್ಮ ಹಾಗೂ ಸಾಹಿತ್ಯಕ್ಕೆ ಶಾಸ್ತ್ರಿಗಳ ಸೇವೆ ಗಣನೀಯವಾದುದು. ಅವರ ಉದ್ದೇಶ ವೀರಶೈವಾನಂದಿನಿ ಮಾಸಪತ್ರಿಕೆಯ ಮುಖಪುಟದಲ್ಲಿ ಕಾಣುವ ಈ ಪದ್ಯದಿಂದ ಸ್ಪಷ್ಟವಾಗುತ್ತದೆ :

ಪರ ವೀರಶೈವ ಹೃದಯಾಂ। ಬುರುಹಕ್ಕಾನಂದಮಿತ್ತು ಸನ್ಮತ ತತ್ವಂ। ನರರೊಳ್ ಪಜ್ಜಳಿಪಂದದೆ। ಕರುಣಿಸುಗೆ ಭವಾಂಧ ಭಾಸ್ಕರಂ ತ್ರಿಪುರಹರಂ॥

**ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ (ಗೌರೀಶ) (೧೮೪೯–೧೯೧೮) :** ಪ್ರಸಿದ್ಧ ವಿದ್ವಾಂಸರಾಗಿದ್ದ ಕುಲಕರ್ಣಿಯವರು ತಮ್ಮ ಗುರು ದೊಂಡೋನರಸಿಂಹ ಮುಳಬಾಗಿಲ ಅವರು ಬರೆದು ಅಪೂರ್ಣವಾಗಿದ್ದ ಹಿತೋಪದೇಶವನ್ನು ಪೂರ್ಣಗೊಳಿಸಿದರು. ಇವರು ಕಿಟೆಲ್ ಅವರಿಗೆ ಸಹಾಯಕರಾಗಿದ್ದರು. ಇವರು ಮಕ್ಕಳಿಗಾಗಿ ಬರೆದ ಹಾಡುಗಳು ಹಾಗೂ ನೀತಿಪರ ನುಡಿಗಳು ತುಂಬಾ ಜನಪ್ರಿಯವಾಗಿದ್ದವು. ಅವುಗಳ ಸಂಕಲನಗಳೇ ಪದಾರ್ಥಬೋಧಿನಿ (೧೯೦೦). ಅವರ ಕೃತಿಗಳು: ನಾಡನೆಲೆಗಾರ, ನನ್ನ ತಾಯಿ, ನನ್ನ ತಂದೆ, ನನ್ನ ಅಜ್ಜಿ, ಭೂಮಂಡಲ ಬೋಧಿನಿಯ ಒಂಭತ್ತನೇ ಆವೃತ್ತಿ ೧೯೩೮ರಲ್ಲಿ ಆಗಿದೆ. ಇದರ ಮೇಲಿಂದ ಆ ಪುಸ್ತಕದ ಜನಪ್ರಿಯತೆ ಮತ್ತು ಉಪಯುಕ್ತತೆ ಎಷ್ಟೆಂಬುದರ ಅರಿವಾಗುವುದು. ಹಿತೋಪದೇಶ–ಸಂಸ್ಕೃತದ ಅನುವಾದ. ನಾಲ್ಕು ಭಾಗಗಳಾಗಿ ಬಂದಿದೆ (೧೯೦೦). ಇವರು ಕೆಲವು ವೈದ್ಯಕ ಕೃತಿಗಳನ್ನೂ ರಚಿಸಿದ್ದಾರೆ–ಲಂಘನ ಚಿಕಿತ್ಸೆ, ಜಲಚಿಕಿತ್ಸೆ, ಬೇನಿಗರ ಲಘು ಚಿಂತಾಮಣಿ (೧೯೧೫) ಇತ್ಯಾದಿ. ಇವರು ಕನ್ನಡಶಬ್ದಕೋಶವೊಂದನ್ನು ರಚಿಸಿದ್ದು ಅದು ಸುಟ್ಟು ಹೋಯಿತೆಂದು ಹೇಳುವುದುಂಟು[23].

**ಎನ್. ಆರ್. ಕರಿಬಸವಶಾಸ್ತ್ರಿ (೧೮೭೨–೧೯೨೩):** ತಿರುಮಕೂಡಲು ನರಸೀಪುರದ ಶಾಸ್ತ್ರಿಗಳು ಮೈಸೂರರಸರ ಆಸ್ಥಾನಪಂಡಿತರಾಗಿದ್ದರು. ಕನ್ನಡ ಮತ್ತು ಸಂಸ್ಕೃತದಲ್ಲಿ ನಿಷ್ಣಾತಪಂಡಿತರು. 'ವೀರಶೈವ ಗ್ರಂಥಪ್ರಕಾಶಿಕೆ' ಎಂಬ ಪತ್ರಿಕೆಯನ್ನು ಆರಂಭಿಸಿ, ವೀರಶೈವಧರ್ಮ, ತತ್ತ್ವಪ್ರಸಾರಕ್ಕೆ ಅವಕಾಶ ಮಾಡಿದ ಕೀರ್ತಿ ಅವರದು. ಹಳೆಯಕಾವ್ಯಗಳನ್ನು ಪರಿಷ್ಕರಿಸಿ ಟೀಕೆ--ಟಿಪ್ಪಣಿಗಳೊಡನೆ ಪ್ರಕಟಿಸಿದ್ದಾರೆ. ಸೌಂದರಪುರಾಣ, ರೇವಣಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮನಾಥಪುರಾಣ, ಶಂಕರಲಿಂಗಕಂದ.ಸ್ತುತಿಮುಕ್ತಾವಳಿ ಮೊದಲಾದ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಚನ್ನಬಸವೇಶ ವಿಜಯ, ಬಸವರಾಜವಿಜಯಗಳಿಗೆ ಗದ್ಯಾನುವಾದ ಬರೆದಿದ್ದಾರೆ. ಸಿದ್ಧಾಂತಶಿಖಾಮಣಿಗೆ ತಾತ್ಪರ್ಯಪ್ರದೀಪಿಕೆಯನ್ನೂ, ಪಂಡಿತಾರಾಧ್ಯಚರಿತೆಗೆ ಭಾವಮಂಜರಿಯನ್ನೂ ಬರೆದು ೧೯೨೧ ರಲ್ಲಿ ಪ್ರಕಟಿಸಿದ್ದಾರೆ. ಇವರ ಇತರ ಕೃತಿಗಳಲ್ಲಿ ವೀರಶೈವಧರ್ಮಶಿರೋಮಣಿ, ವೀರಶೈವದೀಕ್ಷಾನಿಧಿ, ಶಿವಯೋಗಪ್ರದೀಪಿಕಾ, ಶಿವಸೂತ್ರರತ್ನ, ತತ್ತ್ವಪ್ರಕಾಶಿಕಾ–ಇವುಗಳನ್ನು ಹೆಸರಿಸಬಹುದು. ಅವರ ಲೇಖನಗಳು ಹಾಗೂ ಗ್ರಂಥಗಳಲ್ಲಿ ಪರಿಶುದ್ಧಭಾಷೆ, ಮನೋಹರಶೈಲಿ, ಗಂಭೀರವಾದ ವಿಷಯವಿವೇಚನೆಗಳು ಮುಪ್ಪುರಿಗೊಂಡಿವೆ.

**ಪಿ. ಆರ್. ಕರಿಬಸವಶಾಸ್ತ್ರಿ (೧೮೪೮–೧೯೩೧) :** 'ಕರ್ಣಾಟಕ ಭಾಷಾರತ್ನ'ರೆಂಬ ಬಿರುದಾಂಕಿತ ಶಾಸ್ತ್ರಿಗಳು ೩೦ವರ್ಷ ಹೈಸ್ಕೂಲು ಹಾಗೂ ಕಾಲೇಜುಗಳಲ್ಲಿ ಕನ್ನಡ ಬೋಧಕರಾಗಿದ್ದರು, ಕನ್ನಡ ಹಾಗೂ ಸಂಸ್ಕೃತದಲ್ಲಿ ನಿಸ್ಸೀಮ ಪಾಂಡಿತ್ಯವನ್ನು ಪಡೆದಿದ್ದ ಅವರು ಮೈಸೂರುರಾಜರ ಆಸ್ಥಾನವಿದ್ವಾಂಸರಾಗಿದ್ದರು. ಅವರು ಮುಡುಕುತೊರೆಯಲ್ಲಿ 'ಶ್ರೀವೀರಶೈವ ಮತ ಸಂವರ್ಧಿನೀ ಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಅದರ ಆಜೀವ ಸಭಾಧ್ಯಕ್ಷರಾಗಿದ್ದರು. 'ವೀರಶೈವಗ್ರಂಥ ಪ್ರಸಾರಕ ಮಂಡಲಿ'ಯ ಸ್ಥಾಪನೆಗೂ ಅವರೇ ಕಾರಣ. 'ವೀರಶೈವ ಮತ ಪ್ರಕಾಶಿಕಾ' ಎಂಬ ಮಾಸಿಕೆಯ ಮೂಲಕ ವೀರಶೈವಧರ್ಮಕ್ಕೆ ಸಂಬಂಧಿಸಿದ ವಿಚಾರ ಪರಿಪ್ಲುತ ಲೇಖನಗಳನ್ನು ಪ್ರಕಟಿಸಿದರು. ಇದು ಅವರ ವೀರಶೈವ ಸಮಾಜ ಮತ್ತು ಸಂಸ್ಕೃತಿಗಳ ಹಿತ ಚಿಂತನೆ ಹಾಗೂ ಅವರ ದೂರದೃಷ್ಟಿಯ ದ್ಯೋತಕವಾಗಿದೆ.

೧. ಶಾಸ್ತ್ರಿಗಳ ಗ್ರಂಥ ಪರಿಶೋಧನಾಶಕ್ತಿ ಬಹಳದೊಡ್ಡದು. ರಾಜಶೇಖರವಿಳಾಸ, ಸಿದ್ಧೇಶ್ವರಪುರಾಣ, ಪ್ರಹ್ಲಾದ ಚರಿತ್ರೆ, ಶಿವಭಕ್ತಿಸಾರ, ಗಣಸಹಸ್ರನಾಮ, ಅಥಣಿ ಶಿವಯೋಗೀಶ್ವರ ಪುರಾಣ. ಶಿವಾತ್ರಗಣೇಶ್ವರಪುರಾಣ ಮೊದಲಾದವನ್ನೂ, ಸಂಸ್ಕೃತದ ಕ್ರಿಯಾಸಾರ, ವೀರಶೈವದೀಕ್ಷಾವಿಧಿ, ಲಿಂಗಧಾರಣ ಚಂದ್ರಿಕಾ. ಶಿವಾದ್ವೈತಮಂಜರಿ ಮೊದಲಾದ ಗ್ರಂಥಗಳನ್ನು ಪರಿಷ್ಕರಿಸಿ ಸಂಪಾದಿಸಿದ್ದಾರೆ.

---

23. ಹೊಸಾಳು, ಪು. ೪೨೭.

೨. ಪ್ರಾಚೀನ ಕಾವ್ಯಗಳಿಗೆ ಟೀಕೆ–ವ್ಯಾಖ್ಯಾನಗಳನ್ನು ಬರೆಯುವುದರಲ್ಲಿ ಶಾಸ್ತ್ರಿಗಳದು ಸಿದ್ಧಹಸ್ತ. ಬಸವಪುರಾಣ, ವೃಷಭೇಂದ್ರವಿಜಯ,ಚನ್ನಬಸವಪುರಾಣಗಳಿಗೆ ಟೀಕೆ ಅಥವಾ ಗದ್ಯಾನುವಾದವನ್ನು ಬರೆದಿದ್ದಾರೆ.ನಿಜಗುಣರ ಅನುಭವಸಾರಕ್ಕೆ, ಷಡಕ್ಷರಿಯ ಭಕ್ತಾಧಿಕ್ಯರತ್ನಾವಳಿಗೆ ಟೀಕೆ ಬರೆದಿದ್ದಾರೆ. ಶಂಕರಾರಾಧ್ಯರ ಗ್ರಂಥವನ್ನು 'ಕನ್ನಡ ಬಸವೇಶವಿಜಯ'ವೆಂಬ ಹೆಸರಿಟ್ಟು ಭಾಷಾಂತರಿಸಿದ್ದಾರೆ. ಶಿವಾದ್ವೈತ ಮಂಜರಿಯನ್ನು ಕನ್ನಡ ಲಿಪಿಯಲ್ಲಿ, ಟೀಕೆ ಸಮೇತ ಪ್ರಕಟಿಸಿದ್ದಾರೆ.

೩. **ಅವರ ಸ್ವತಂತ್ರ ಕೃತಿಗಳು :** ಕನ್ನಡದಲ್ಲಿ ವಿವಾಹವಿಧಿ, ಶಿವಪೂಜಾವಿಧಿ, ಸ್ತುತಿಮುಕ್ತಾವಳಿ (ಪ್ರಾಚೀನ ಕವಿಗಳ ಪ್ರಾರ್ಥನಾಗೀತಸಂಗ್ರಹ), ಕೊಟ್ಟೂರು ಬಸವೇಶ್ವರಪುರಾಣ ಮೊದಲಾದುವನ್ನು, ಸಂಸ್ಕೃತದಲ್ಲಿ ವೀರಶೈವೋತ್ಕರ್ಷ ಸಂಗ್ರಹ,ವೀರಶೈವಧರ್ಮಶಿರೋಮಣಿ,ವೀರಶೈವ ಧರ್ಮನಿರ್ಣಯ ಮೊದಲಾದವನ್ನು ರಚಿಸಿದ್ದಾರೆ.ವೀರಶೈವಧರ್ಮ ಹಾಗೂ ಸಾಹಿತ್ಯದ ಬಗ್ಗೆ ಅವರು ಪ್ರಕಟಿಸಿರುವ ಲೇಖನಗಳು ಅವರ ಆಳವಾದ ಅಧ್ಯಯನ, ಅದ್ವಿತೀಯ ಪಾಂಡಿತ್ಯ–ಪ್ರತಿಭೆಗಳನ್ನು ಸೂಚಿಸುವಂತಿವೆ. ಹೀಗೆ ವೀರಶೈವ ನವೋದಯ ಸಾಹಿತ್ಯಕ್ಕೆ ಕಾವ್ಯ ರಚನಾಶಕ್ತಿ,ಗ್ರಂಥ ಪರಿಷ್ಕರಣ ಶಕ್ತಿ ಹಾಗೂ ಬೋಧನಾ ಶಕ್ತಿಗಳ ಸಂಗಮವೆನಿಸಿದ್ದ ಪಿ. ಆರ್. ಕರಿಬಸವಶಾಸ್ತ್ರಿಗಳ ಕೊಡುಗೆ ಅಪಾರವಾದುದು, ಅಮೂಲ್ಯವಾದುದು.

**ಮಹಾದೇವ (೧೮೭೦) :** ಗುರುಶಿವಲಿಂಗದೇಶಿಕನ ಶಿಷ್ಯನಾದ ಮಹಾದೇವಕವಿ ಮಹಾಲಿಂಗೇಂದ್ರವಿಜಯವನ್ನು ಬರೆದಿದ್ದಾರೆ. ಶಕ ೧೭೯೨ ನೆಯ ಪ್ರಮೋದ ವರ್ಷದಲ್ಲಿ (೧೮೭೦) ರಚಿಸಿದಂತೆ ಹೇಳಿದೆ. ಇದು ೩೦ ಸಂಧಿ, ೨೦೬೪ ವಾರ್ಧಕ ಷಟ್ಪದಿಗಳುಳ್ಳ ಬೃಹತ್ಕಾವ್ಯ. ಚಿನ್ಮೂಲಾದ್ರಿಯ ಮಹಾಲಿಂಗೇಶಗುರುವಿನ ದಿವ್ಯಚರಿತ್ರೆ ಇದರ ವಸ್ತು. ಮಹಾಲಿಂಗಗುರುವಿನ ಜೀವನ ಚರಿತ್ರೆಯಿಂದ ಆರಂಭವಾಗುವ ಕಾವ್ಯ, ಚನ್ನಬಸವಣ್ಣನಿಂದ ಹಿಡಿದು ಮಹಾಲಿಂಗಗುರುವಿನವರೆಗಿನ ಶೂನ್ಯಸಿಂಹಾಸನ ಸಂಪ್ರದಾಯದ ಇಪ್ಪತ್ತು ಜಗದ್ಗುರುಗಳ ಜೀವನವನ್ನು ನಿರೂಪಿಸಿರುವುದಲ್ಲದೆ ಕೊನೆಯಲ್ಲಿ ಇಪ್ಪತ್ತೆರಡನೆಯ ಜಗದ್ಗುರು ರುದ್ರಸ್ವಾಮಿಗಳ ವಿಚಾರವೂ ಬಂದಿದೆ. ಅಲ್ಲಲ್ಲಿ ಉಪಕಥೆಗಳಂತೆ ತಮಿಳುನಾಡಿನ ಶಿವಭಕ್ತರ ಬಸವಾದಿ ಪ್ರಮಥರ ಕಥೆಗಳೂ ಬಂದಿವೆ. ಇದು ಪುರಾಣಕಾವ್ಯವಾದ್ದರಿಂದ ತಾತ್ತ್ವಿಕವಿಚಾರಗಳು ಮೇಳೈಸಿವೆ. 'ಮಹಾಲಿಂಗ ವಿಜಯ'ವು ಮಹಾಲಿಂಗನ ಜೀವನ ವೃತ್ತಾಂತದಿಂದ ಜೀವನಚರಿತ್ರೆಯೂ, ಶೂನ್ಯಸಿಂಹಾಸನ ಪರಂಪರೆಯ ವಿವರವಾದ ವಿಚಾರದಿಂದ ಚರಿತ್ರೆಯೂ, ದಸರಯ್ಯ ಮುಂತಾದ ಪುರಾತನರ ಪ್ರಸಂಗಗಳಿಂದ ಪುಣ್ಯಕಥಾಮೃತವೂ, ಬಸವಣ್ಣ, ನಿಡುಸೋಗಿ ಬಸವಸ್ವಾಮಿಗಳು...ಮುಂತಾದವರ ಕಥಾ ಮಹತ್ವದಿಂದ ವೀರಶೈವ ಮಹಾಪುರಾಣವೂ, ಅಷ್ಟಾವರಣ, ಷಟ್ಸ್ಥಲ, ಮುಂತಾದವುಗಳ ನಿರೂಪಣೆಯಿಂದ ಧರ್ಮ ಶಾಸ್ತ್ರವೂ ಏಕಕಾಲದಲ್ಲಿ ಆಗಿದೆಯೆಂದು ಹೇಳಬಹುದು' ಎಂದು ಅದರ ಸಂಪಾದಕರು ಹೇಳಿದ್ದಾರೆ24.

**ಗದಿಗಯ್ಯ ಹುಚ್ಚಯ್ಯ ಹೊನ್ನಾಪುರಮಠ (೧೮೭೦–೧೯೩೩) :** ವೃತ್ತಿಯಿಂದ ವಕೀಲರಾದ ಗ. ಹು. ಹೊನ್ನಾಪುರಮಠ ಪ್ರವೃತ್ತಿಯಲ್ಲಿ ಸಾಹಿತಿ. ಇವರು ಉಗ್ರ ಕನ್ನಡಾಭಿಮಾನಿ. ಚಂದ್ರೋದಯವೆಂಬ ಮುದ್ರಣಾಲಯ ತೆಗೆದು 'ವಾಗ್ದೇವಿ' ಎಂಬ ಮಾಸಪತ್ರಿಕೆಯನ್ನು ಆರಂಭಿಸಿದರು. ಮರಾಠಿಭಾಷೆಯ ಪ್ರಾಚುರ್ಯವಿದ್ದ ಆ ಕಾಲದಲ್ಲಿ ಅದೊಂದು ಸಾಹಸದ ಪ್ರಯತ್ನವೇ ಸರಿ. ಇವರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ೧. ನೀತಿಮಂಜರಿ (೧೮೯೮):Use of life ಎಂಬ ಆಂಗ್ಲ ಗ್ರಂಥದಿಂದ ಪ್ರೇರಿತರಾಗಿ ಬರೆದ ೩೭ ಬೇರೆ ಬೇರೆ ವಿಷಯಗಳ ಉಪಯುಕ್ತಪುಸ್ತಕ. ಇದು ೧೯೫೦ಕ್ಕೆ ಹನ್ನೊಂದು ಆವೃತ್ತಿಗಳನ್ನು ಪಡೆದಿತ್ತು. ೨. ಬಸವೇಶ್ವರ ಚರಿತ್ರೆ (೧೯೨೯):೧೪೮ ವಚನಗಳನ್ನು ಅಳವಡಿಸಿದ ಬಸವಣ್ಣನವರ ಜೀವನದ ಕಥಾನಕ. ೩. ವೀರಶೈವ ಮತದ ಪುರಾತತ್ತ್ವ: ೫೭ ಪುಟಗಳ ಪುಟ್ಟ ಪುಸ್ತಕ. ಗ್ರಂಥದ ಕೊನೆಯಲ್ಲಿ ವೀರಶೈವ ಮತದ ಪ್ರಾಚೀನತೆಯನ್ನು ಕುರಿತ ಶಾಸನಗಳ ಆಧಾರಗಳನ್ನು ಒದಗಿಸಿದ್ದಾರೆ. ೪. ಮೋಹಿನೀ ಅಥವಾ ನಿಂದಕರ ನಡವಳಿ (೧೯೧೧): ಇದು ಶೆರಿಡನ್ ಕೃತ 'School of Scandal'ಎಂಬ ನಾಟಕದ ಅನುವಾದ. ೫. ತೂರಿದ ಚಿಂತನೆಗಳು: ಬೇಕನ್ನನ ಪ್ರಬಂಧಗಳ ಅನುವಾದ. ಇದಲ್ಲದೆ ಅದ್ಭುತಪ್ರೇಮ, ಸಚಿತ್ರನಾರಾಯಣ, ಪ್ರಹ್ಲಾದಚರಿತ್ರೆ,ಶ್ರೀಕೃಷ್ಣಚರಿತ್ರೆ, ಸಾವಿತ್ರೀಚರಿತ್ರೆ,ಶ್ರೀರಾಮಕೃಷ್ಣಪರಮಹಂಸರ ಸತ್ಕಥೆಗಳು, ಶ್ರೀಸಮರ್ಥರಾಮದಾಸರಚರಿತ್ರೆ,ಶ್ರೀಶನಿಮಹಾತ್ಮೆ.ಶ್ರೀಶಿವಲೀಲಾಮೃತ ಕಥೆಗಳು, ಸುಧಾಮ ಮೊದಲಾದ ಕೃತಿಗಳು ಅನೇಕ ಆವೃತ್ತಿಗಳಾಗಿ ಅಚ್ಚಾಗಿದ್ದು ಅವುಗಳ ಜನಪ್ರಿಯತೆಯನ್ನು ಸಾರಿಹೇಳುತ್ತದೆ. ಇದಲ್ಲದೆ ಇವರು ಅನೇಕ ಕಾಯಿದೆ ಗ್ರಂಥಗಳನ್ನು ರಚಿಸಿದ್ದಾರೆ. ಉದಾ. ಗ್ರಾಮಪಂಚಾಯತಿ ಆಕ್ಟ, ದಿವಾನಿ ಕಾಯಿದೆ ಬೋಧಿನಿ ಇತ್ಯಾದಿ. ಇವರನ್ನು ೧೯೩೨ರಲ್ಲಿ ಮಡಕೇರಿಯಲ್ಲಿ ನಡೆದ ಸಾಹಿತ್ಯಸಮ್ಮೇಲನದ ಅಧ್ಯಕ್ಷಪೀಠಕ್ಕೆ ಆಮಂತ್ರಿಸಲಾಗಿತ್ತು. ಆದರೆ ಅವರು ಹಾಸಿಗೆ ಹಿಡಿದರು. ಅವರನ್ನು ಗೌರವಿಸುವ ಭಾಗ್ಯ ಕನ್ನಡಿಗರಿಗೆ ತಪ್ಪಿತು,

**ಜಗದೀಶಶಾಸ್ತ್ರಿ ವೀರೇಶ್ವರಶಾಸ್ತ್ರಿ. ನಾಲ್ವಾರ (೧೮೭೨) :** ಕಲಬುರ್ಗಿ ಜಿಲ್ಲೆ ನಾಲ್ವಾರಗ್ರಾಮದಲ್ಲಿ ಜನ್ಮತಳೆದ ಜಗದೀಶಶಾಸ್ತ್ರಿಗಳು ಸೊಲ್ಲಾಪುರದ ವೀರಶೈವ ಗುರುಕುಲದ ಪ್ರಧಾನಾಧ್ಯಾಪಕರಾಗಿದ್ದರು. ೮೦ ವರ್ಷಕ್ಕೂ ಮೇಲ್ಪಟ್ಟು ಬದುಕಿದ್ದ ಇವರು

24. ಸಂ. ಡಾ॥ ಎಲ್. ಬಸವರಾಜು. ಪ್ರಕಾಶನ : ಶ್ರೀ ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ. ಪೀಠಿಕೆ.೨.

ವೀರಶೈವ ಧಾರ್ಮಿಕ ಸಾಹಿತ್ಯಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಕನ್ನಡ, ಸಂಸ್ಕೃತ ಹಾಗೂ ಮರಾಠಿಭಾಷೆಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಕನ್ನಡದಲ್ಲಿ ಶ್ರೀಮಜ್ಜಗದ್ಗುರು ಸಿದ್ಧಲಿಂಗವಿಜಯಪುರಾಣ (೧೯೫೨ ರಲ್ಲಿ ಪ್ರಕಟ). ಶ್ರೀಮದ್ದ್ವಾರಪಮಲ್ಲಪ್ಪಾರ್ಯರ ಅಷ್ಟೋತ್ತರಶತನಾಮಾವಳಿ (೧೯೧೪ ರಲ್ಲಿ ಪ್ರಕಟ). ಸಂಸ್ಕೃತದಲ್ಲಿ ಶ್ರೀರುದ್ರ, ಚನ್ನಬಸವ ವಿಜಯ ಸಂಕ್ಷಿಪ್ತಪೂಜಾ ವಿಧಿ, ಶ್ರೀಮಜ್ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಅಷ್ಟೋತ್ತರ ಶತನಾಮಾವಳಿ, ಮರಾಠಿಯಲ್ಲಿ ಶ್ರೀ ರೇಣುಕವಿಜಯ, ಶ್ರೀಸಿದ್ಧರಾಮೇಶ್ವರಪುರಾಣ, ವೀರಶೈವಾಂಚೆ ಸ್ಥಿತಿ. ಅವರ ಅಪ್ರಕಟಿತ ಕೃತಿಗಳಲ್ಲಿ ಶ್ರೀಶೈಲ ಮಹಾತ್ಮೆ, ಶ್ರೀಶರಣಬಸವೇಶ್ವರ ವಿಜಯ ಮೊದಲಾದುವನ್ನು ಹೆಸರಿಸಬಹುದು.

**ಮಲ್ಲಿಕಾರ್ಜುನ** (೧೮೬೩–೧೯೩೮) : ಇವರು ಬಿಜಾಪುರ ಜಿಲ್ಲೆಯ ಜೈನಾಪುರದವರು. ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬಲ್ಲಿದರಾದ ಇವರು ಹಳೆಯ ಹಸ್ತಪ್ರತಿಗಳ ಸಂಗ್ರಹಣ, ಪರಿಷ್ಕರಣ ಹಾಗೂ ಪ್ರಕಟಣ ಕಾರ್ಯಗಳನ್ನು ಕೈಗೊಂಡರು. ವೀರಶೈವಧರ್ಮದ ಕಟ್ಟಾಭಿಮಾನಿಗಳಾದ ಇವರು ಸಮಾಜ ಹಾಗೂ ಧರ್ಮಕ್ಕೆ ಸಲ್ಲಿಸಿದ ಸೇವೆಗೆ 'ವೀರಶೈವಧರ್ಮಸುಧಾರಕ' ಎಂಬ ಪ್ರಶಸ್ತಿ ಸಂದಿತ್ತು. ಲಿಂಗನಕಟ್ಟೆಯಲ್ಲಿ ಅವರ ಗದ್ದುಗೆ ಇದೆ. ಇವರ ಕೃತಿ : ಕಿರೀಟೇಶ್ವರಪುರಾಣ[25]. ೧೭ ಸಂಧಿ, ೭೭೭ ವಾರ್ಧಕ ಷಟ್ಪದಿಗಳುಳ್ಳ ಈ ಕಾವ್ಯದಲ್ಲಿ ೧೭–೧೮ನೇ ಶತಮಾನದಲ್ಲಿ ಆಗಿಹೋದ ನೂತನ ಶರಣರಲ್ಲೊಬ್ಬರಾದ ವೀರವಿರಕ್ತರಾದ ಕಿರೀಟ ಚೆನ್ನಬಸವಸ್ವಾಮಿಗಳ ಜೀವನ ಚರಿತ್ರೆ ಇದೆ. ಮೊದಲು ಈ ಶರಣರನ್ನು ಕುರಿತು ಕಾವ್ಯ ರಚಿಸಿದವರು ದೇವಣಗಾ ನಿವಾಸಿ ರೇವಣಸಿದ್ಧ. ಅನಂತರ ಮಲ್ಲಿಕಾರ್ಜುನರು ಷಟ್ಪದಿ ಕಾವ್ಯ ರಚಿಸಿದರು.

**ಚನ್ನಕವಿ ದ್ಯಾಂಪುರ** (೧೮೭೨–೧೯೪೭): ಕೊಪ್ಪಳದ ಬಳಿಯ ದ್ಯಾಂಪುರದಲ್ಲಿ ಹುಟ್ಟಿದ ಚನ್ನಕವಿಗಳು ಕನ್ನಡ,ಸಂಸ್ಕೃತ,ಮರಾಠಿ ಮತ್ತು ಉರ್ದು ಭಾಷೆಗಳಲ್ಲಿ ಬಲ್ಲಿದರು. ಶಿವಯೋಗಮಂದಿರದಲ್ಲಿ ಶ್ರೀ ಕುಮಾರಸ್ವಾಮಿಗಳ ಬಳಿ ವೀರಶೈವ ತತ್ತ್ವಾಧ್ಯಯನ ಮಾಡಿ ಕೀರ್ತನೆ, ಪುರಾಣ, ಪ್ರವಚನಗಳ ಮೂಲಕ ಧರ್ಮಪ್ರಚಾರದಲ್ಲಿ ತೊಡಗಿದರು. ಇವರಿಗೆ 'ಕವಿರತ್ನ' ಎಂಬ ಬಿರುದು ಇತ್ತು. ಇವರು ರಚಿಸಿರುವ ಪುರಾಣಗಳು ಹಾಗೂ ಶತಕಗಳು ಪ್ರಸಿದ್ಧವಾಗಿವೆ. ಶತಕಗಳು:–ಕಲ್ಲಿನಾಥಶತಕ,ಕುಮಾರೇಶ್ವರಶತಕ, ಕಾಲಿಕಾಲೇಶ್ವರಶತಕ,ಕೊಟ್ಟೂರೇಶ್ವರ ಶತಕಗಳು. ಪುರಾಣಗಳು :– ಕಂಬಳಿಹಾಳ ದೊಡ್ಡ ಬಸವೇಶ್ವರಪುರಾಣ, ನಾಲ್ವತ್ತವಾಡ ವೀರೇಶ್ವರಪುರಾಣ, ಮುಳುಗುಂದ ಬಾಲಲೀಲಾಮಹಾಂತೇಶ್ವರ ಪುರಾಣ, ಹಾಸಗಲ್ಲ ಕುಮಾರಸ್ವಾಮಿಗಳ ಪುರಾಣ, ಹಾಲಕೆರೆ ಅನ್ನದಾನಿಮಹಾಸ್ವಾಮಿಗಳ ಪುರಾಣ, ಹುಚ್ಚೇಶ್ವರ ಪುರಾಣ, ಹೇಮರಡ್ಡಿ ಮಲ್ಲಮ್ಮನ ಪುರಾಣ, ಇಳಕಲ್ಲು ಮಹಾಸ್ವಾಮಿಗಳ ಚರಿತ್ರೆ, ಸದಾಶಿವಲೀಲೆ, ಶಿರಹಟ್ಟಿ ಫಕೀರಸ್ವಾಮಿಗಳ ಚರಿತ್ರೆ. ಇವರ ಇತರ ಕೃತಿಗಳಲ್ಲಿ ಕೆಲವು ಗವಿಸಿದ್ಧೇಶನ ಮಂಗಲ ಗೀತೆಗಳು, ಅನ್ನದಾನೇಶ್ವರ ಜೋಗುಳಪದ, ಬಸವ ತ್ರಿವಿಧಿ, ಮನೋಬೋಧೆ, ಮಂತ್ರರಹಸ್ಯ, ಇತ್ಯಾದಿ.

**ಕಂಬಿ ಬಸವಾರ್ಯ (ಬಸವಾರ್ಯ ಕಿತ್ತೂರು)** (೧೮೭೫–೧೯೨೦): ಶಾಲಾ ಉಪಾಧ್ಯಾಯರಾಗಿದ್ದ ಬಸವಾರ್ಯರು ಸಾಹಿತ್ಯೋಪಾಸಕರೂ ಆಗಿದ್ದರು. ಅವರ ಕೃತಿಗಳು ಅವರಿಗೆ ವೀರಶೈವ ಸಮಾಜ ಹಾಗೂ ಸಂಸ್ಕೃತಿಯ ಬಗ್ಗೆ ಇದ್ದ ಕಾಳಜಿಯನ್ನು ಶ್ರುತಪಡಿಸುತ್ತವೆ. ಲಿಂಗರಾಜ ನಾಮಾವಳಿ, ವೀರಶೈವ ಸಮಾಜಗುಣದರ್ಪಣ, ವಿಷಮ ವಿವಾಹ, ಮುರುಘೇಂದ್ರಾಷ್ಟಕ, ಚಂದ್ರಿಕಾ ವಿಜಯನಾಟಕ, ಸಮಾಜಾದರ್ಶ ಅಥವಾ ರುದ್ರಪ್ರಭುನೀತಿ (೧೯೧೩) ಇವು ಅವರು ರಚಿಸಿದ ಕೆಲವು ಕೃತಿಗಳು. ಇವುಗಳಲ್ಲಿ ಬಹುಪಾಲು 'ಪ್ರಭಾತ' ಪತ್ರಿಕೆಯ ಮೂಲಕ ಬೆಳಕು ಕಂಡಿವೆ.

**ಚನ್ನವೀರಸ್ವಾಮಿ** (೧೯ ಶತದ ಉತ್ತರಾರ್ಧ) : ಹುಬ್ಬಳ್ಳಿಯ ಎರಡೆತ್ತಿನ ಮಠದ ಸ್ವಾಮಿಗಳಾಗಿದ್ದ ಇವರು ವೀರಶೈವ ಧರ್ಮಪ್ರಚಾರದ ಕಾರ್ಯವನ್ನು ಕೈಗೊಂಡರು. 'ಲಿಂಗಾಯತ ಮತೋತ್ಪತ್ತಿ ನಿರ್ಣಯ (೧೮೮೪) ಗ್ರಂಥದಲ್ಲಿ ಇವರು ಲಿಂಗಾಯತ ಧರ್ಮದ ಉತ್ಪತ್ತಿಯನ್ನು ವೇದಾಗಮಗಳ ಆಧಾರದಿಂದ ಮಂಡಿಸಿರುವುದಲ್ಲದೆ ವೀರಶೈವರಲ್ಲಿನ ಗುರುವರ್ಗ, ವಿರಕ್ತವರ್ಗ, ಲಿಂಗ, ಜಂಗಮ ಮೊದಲಾದ ಅನೇಕ ವಿಚಾರಗಳನ್ನು ನಿರೂಪಿಸಿದ್ದಾರೆ. ಇವರ 'ವೀರಶೈವ ಮತಸಾರ ಸಂಗ್ರಹ'ವು ಕಂದ,ವೃತ್ತ ಹಾಗೂ ಗದ್ಯಭಾಗಗಳಿಂದ ಕೂಡಿದ್ದು ವೀರಶೈವ ಧರ್ಮವನ್ನು ಕುರಿತ ಮಾಹಿತಿಯನ್ನು ನೀಡುತ್ತದೆ[26]. ಇವರ ಇನ್ನೊಂದು ಕೃತಿ 'ಪುನರ್ವಿವಾಹ' ೧೮೮೫ ರಲ್ಲಿ ಪ್ರಕಟವಾಗಿ, ೧೮೮೭ ರಲ್ಲಿ ಪುನರ್ಮುದ್ರಣ ಕಂಡಿದೆ. ಕವಿಚರಿತೆಕಾರರು ಇವರನ್ನು ಗುರುಲಿಂಗಸ್ವಾಮಿ ಎಂದು ಕರೆದಿದ್ದಾರೆ[27].

**ಸಿದ್ಧರಾಮಪ್ಪ ದುಂಡಪ್ಪ ಪಾವಟೆ** (೧೮೭೪–೧೯೩೯): ಹಳೆಯತಲೆಮಾರಿನ ವೈಚಾರಿಕ ಲೇಖಕರಾದ ಪಾವಟೆಯವರು ಗೋಕಾಕ ತಾಲ್ಲೂಕು ಮಮದಾಪುರದಲ್ಲಿ ಹುಟ್ಟಿದರು. ಇವರು ವೀರಶೈವಸಿದ್ಧಾಂತ ಹಾಗೂ ತತ್ತ್ವಜ್ಞಾನದ ಜಿಜ್ಞಾಸು. ಇವರು ೧೯೨೨ ರಲ್ಲಿ ಮದರಾಸಿನಲ್ಲಿ ನಡೆದ ಸರ್ವಧರ್ಮ ಪರಿಷತ್ತಿನಲ್ಲಿ ವೀರಶೈವ ಧರ್ಮದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಇವರ ಕೃತಿಗಳು : ಚನ್ನಬಸವತೇಜಸ, ಬಸವಭಾನು, ವೃಷಭೇಂದ್ರ ಭೂಷಣ, ಶ್ರೀಮದಲ್ಲಮವ್ಯೋಮ, ಸುಪ್ರಭೇದ ಪ್ರಭಂಜನ ಇತ್ಯಾದಿ.

---

25. ಸಂ. ಡಾ. ವಿ. ಶಿವಾನಂದ. ಜಗದ್ಗುರು ಕಿರೀಟೇಶ್ವರ ಪ್ರಕಾಶನ, ೧೯೬೮.
26. ಬಳ್ಳಾರಿಯ ಕರ್ಣಾಟಕ ಬುಕ್ ಡಿಪ್ಪೋದಿಂದ ೧೯೦೫ ರಲ್ಲಿ ಪ್ರಕಟವಾಗಿದೆ.
27. ಕವಿಚರಿತ್ರೆ III, ೨೨೭

ತಾತ್ವಿಕ ವಿಚಾರಗಳನ್ನು ಸಾಂಕೇತಿಕವಾಗಿ ನಿರೂಪಿಸಿರುವ ವಿಧಾನ ವಿನೂತನವಾಗಿದೆ. ಶರಣರ ವ್ಯಕ್ತಿತ್ವಗಳನ್ನು ಒಂದೊಂದು ಸಂಕೇತದಲ್ಲಿ ಹಿಡಿದಿಡಲು ಅವರು ಯತ್ನಿಸಿದ್ದಾರೆ.

**ಬುದ್ಧಯ್ಯ ಮಗೆಯ್ಯ ಪುರಾಣಿಕ** (೧೮೭೮) : ಜಮಖಂಡಿ ತಾಲ್ಲೋಕಿನಲ್ಲಿ ತೇರದಾಳದಲ್ಲಿ ಜನಿಸಿದ ಪುರಾಣಿಕರು ವೃತ್ತಿಯಲ್ಲಿ ಉಪಾಧ್ಯಾಯರು. ಇವರು ವೀರಶೈವ ಸಮಾಜದ ಏಳಿಗೆಗಾಗಿ ದುಡಿದರು. ಅಲ್ಲಮಪ್ರಭುವಿನ ಕಟ್ಟಭಿಮಾನಿಯಾದ ಪುರಾಣಿಕರು ಪ್ರಭುದೇವರ ಬಗ್ಗೆ ಆಳವಾಗಿ ಅಭ್ಯಾಸಮಾಡಿ ಆ ಬಗ್ಗೆ ಅಧಿಕಾರವಾಣಿಯಿಂದ ಹೇಳಬಲ್ಲವರಾಗಿದ್ದರು. ಇವರು ಪ್ರಭುದೇವರ ಪುರಾಣವನ್ನು ಪರಿಷ್ಕರಿಸಿ ಪ್ರಕಟಿಸಿರುವುದಲ್ಲದೆ,ಪ್ರಭುದೇವರ ಹಾಡುಗಳು ಮತ್ತು ಪ್ರಭುದೇವರ ಸಾಂಗತ್ಯವನ್ನು ಬೆಳಕಿಗೆ ತಂದಿದ್ದಾರೆ. ಇವರ ಬಗ್ಗೆ 'ಪುರಾಣಿಕ ವಿಚಾರ ಮಂಜರಿ' ಎಂಬ ಗ್ರಂಥ ೧೯೫೩ ರಲ್ಲಿ ಹೊರಬಂದಿದೆ.

**ಮಲ್ಲಿಕಾರ್ಜುನಪ್ಪ ಶಿವಲಿಂಗಪ್ಪ ರೈನಾಪುರ** (೧೮೮೦–೧೯೫೩) : ಮಾಮಲೆದಾರರಾಗಿದ್ದ ಇವರು ಸಾಹಿತ್ಯದಲ್ಲಿ ಆಸಕ್ತಿ ತೋರಿಸಿದರು. ಮೇಘದೂತ ಮತ್ತು ಶಾಕುಂತಲ ನಾಟಕಗಳನ್ನು ಅನುವಾದಿಸಿದ್ದಾರೆ. ಷಡಕ್ಷರಕವಿಯ 'ಕವಿಕರ್ಣರಸಾಯನ'ವನ್ನು ಸಂಪಾದಿಸಿದ್ದಾರೆ. ತುರುಮರಿಯವರ ಬಾಣ ಕಾದಂಬರಿಯನ್ನು ಪರಿಷ್ಕರಿಸಿದ್ದಾರೆ. ಲಿಂಗರಾಜರಚರಿತ್ರೆಯನ್ನು ರಚಿಸಿದ್ದಾರೆ. ಇವರು 'ಶಿವಲಿಂಗತನಯ'ಎಂಬ ಕಾವ್ಯನಾಮದಲ್ಲಿ ಅನೇಕ ಕವನಗಳನ್ನು ಬರೆದಿದ್ದಾರೆ[28].

**ಬಸವರಾಜಶಾಸ್ತ್ರಿ ಮಲ್ಲಿನಾಥಶಾಸ್ತ್ರಿ ಕೋಡಿಕೊಪ್ಪಮಠ** (೧೮೮೬–೧೯೫೪) : ಧಾರವಾಡ ಜಿಲ್ಲೆಯ ಕೋಡಿಕೊಪ್ಪದ ಶಾಸ್ತ್ರಿಗಳು ಕಾಶಿ ಹಾಗೂ ಕಲಕತ್ತೆಗಳಲ್ಲಿ ಪ್ರೌಢವಿದ್ಯಾಭ್ಯಾಸಮಾಡಿ ಸಂಸ್ಕೃತ ಅಧ್ಯಾಪಕರಾದರು.ಇವರು ಉತ್ತಮ ಗ್ರಂಥ ಪರಿಶೋಧಕರು. ಇವರು ಮಾಡಿದ ದೊಡ್ಡ ಉಪಕಾರವೆಂದರೆ ಸಂಸ್ಕೃತ ಹಾಗೂ ಕನ್ನಡ ಉದ್ಗ್ರಂಥಗಳ ಸಾರವನ್ನು ಬರೆದು ಪ್ರಕಟಿಸಿ ಜಿಜ್ಞಾಸುಗಳಿಗೆ ಒದಗಿಸಿದ್ದು. ಅವರು ಸರಳವಾಗಿ ನಿರೂಪಿಸಿರುವ ರಾಜಶೇಖರವಿಳಾಸ ತಿರುಳು, ಹರಿಶ್ಚಂದ್ರಕಾವ್ಯದ ತಿರುಳು, ಕಿರಾತಾರ್ಜುನೀಯಸಾರ,ಕುಮಾರಸಂಭವಸಾರ,ನೈಷಧೀಯಸಾರ,ರಘುವಂಶರಹಸ್ಯ ಮೊದಲಾದವು ಜನಸಾಮಾನ್ಯರ ಬಗ್ಗೆ ಅವರಿಗಿದ್ದ ಕಳಕಳಿಯನ್ನು ತೋರಿಸುತ್ತದೆ. ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಗ್ರಂಥಪರಿಷ್ಕರಣ ಸಮಿತಿಯಲ್ಲಿದ್ದ ಶಾಸ್ತ್ರಿಗಳು ಚನ್ನಬಸವಪುರಾಣ, ವೀರಶೈವ ಧಾರ್ಮಿಕಗ್ರಂಥಗಳ ಪ್ರಕಟಣೆಗಾಗಿ ಶ್ರಮಿಸಿದರು. ಚನ್ನಬಸವ ಪುರಾಣದ ನಾಲ್ಕನೇ ಕಾಂಡವನ್ನು ಪರಿಷ್ಕರಿಸಿದ್ದಾರೆ. ಶಂಕರಲಿಂಗಮಹಾರಾಜರ ಚರಿತ್ರೆ, ಹುಚ್ಚೀರಜ್ಜನ ಸಂಕ್ಷಿಪ್ತ ಚರಿತ್ರೆ ಅವರ ಇತರ ಕೃತಿಗಳು.

**ವೀರಪ್ಪ ವೀರಭದ್ರಪ್ಪ ನಾಗಶೆಟ್ಟಿ** (೧೮೭೯–೧೯೫೯): ಶಾಲಾಶಿಕ್ಷಕರಾಗಿದ್ದ ವೀರಪ್ಪನವರು ಕನ್ನಡ ಹಾಗೂ ಸಂಸ್ಕೃತದಲ್ಲಿ ಪಂಡಿತರಾಗಿದ್ದರು. ಇವರು ಆದಿಶಂಕರರ ಸಂಸ್ಕೃತಗ್ರಂಥ ಶಿವಾನಂದಲಹರಿಯನ್ನು ಅನುವಾದಿಸಿದ್ದಾರೆ. ಗಂಗಾಧರ ಮಡಿವಾಳೇಶ್ವರ ಚರಿತ್ರೆ, ಕೆ. ಬಸವಾರ್ಯರ ಪದಪದ್ಯಗಳು, ಆಯುಕಿಕ್ರಮದ ಪರಿಚಯಪುಸ್ತಕ (ದಿನಚರಿ), ಅಲ್ಪಕೃತಿಗಳು (ಕವನ ಸಂಗ್ರಹ)–ಇವು ಅವರ ಕೃತಿಗಳು. 'ಕರ್ನಾಟಕ ಲೋಕೋಕ್ತಿವಿಧಾನ'ಎಂಬ ಹೆಸರಿನ ಗ್ರಂಥದಲ್ಲಿ ಸುಮಾರು ೪೫೦ ಗಾದೆಗಳನ್ನು ಸಂಗ್ರಹಿ ಕೊಟ್ಟಿದ್ದಾರೆ. ಅವರ ಕೃತಿಗಳಲ್ಲಿ ಬಹುಪಾಲು ಇನ್ನೂ ಅಪ್ರಕಟಿತ.

**ಬಸವಕವಿ** II (೧೮೮೭) : ಉರುವತ್ತಿಮಠಾಧೀಶನಾದ ಚೆನ್ನಬಸವನ ಶಿಷ್ಯರಾದ ಇವರು ಸಿದ್ಧಲಿಂಗಕಾವ್ಯವನ್ನು ರಚಿಸಿದ್ದಾರೆ. ೧೫ ಸಂಧಿ, ೪೩೮ ವಾರ್ಧಕಪಟ್ಪದಿಗಳುಳ್ಳ ಈ ಕಾವ್ಯದಲ್ಲಿ ಕಂಥೆಯ ಸಿದ್ಧಲಿಂಗನ ಚರಿತ್ರೆಯನ್ನು ಹೇಳಿದೆ. ಆತ ಸೂಳೆಯಕೆರೆಯನ್ನು ಕಟ್ಟಿಸಿದ್ದನ್ನು ಚಿತ್ರಿಸಿದೆ[29]. ಇವರು ಶಿವಭಕ್ತಿಸಾರ, ಗುರುಬೋಧಾಮೃತಗಳನ್ನು ಸಾಂಗತ್ಯದಲ್ಲಿ ಬರೆದಿದ್ದಾರೆ.

**ಚನ್ನಮಲ್ಲಕವಿ** (೧೮೮೮): ದೇವದುರ್ಗದ ಚನ್ನಮಲ್ಲಕವಿ ಗುರುಚನ್ನವೀರನ ಶಿಷ್ಯ. ಇವರ ಕೃತಿ ಶ್ರೀಕರುಣೇಶ್ವರಪುರಾಣ. ಇದರಲ್ಲಿ ಗುಲ್ಬರ್ಗಜಿಲ್ಲೆ, ಜೇವರ್ಗಿ ತಾಲ್ಲೂಕು ಆಂದೋಲದಲ್ಲಿ ಮುನ್ನೂರು ವರ್ಷಗಳ ಹಿಂದೆ ಆಗಿಹೋದ ಹಿರೇಮಠದ ಮೂಲಪುರುಷರಾದ ಮಹಾತ್ಮ ಕರುಣೇಶ್ವರದೇವರ ಚರಿತ್ರೆ ನಿರೂಪಿತವಾಗಿದೆ. ೧೮ ಸಂಧಿ, ೬೪೭ ಭಾಮಿನಿಷಟ್ಪದಿಗಳಿರುವ ಈ ಕಾವ್ಯದಲ್ಲಿ ಚರಿತ್ರೆಯ ಜೊತೆಗೆ ಕಾಯಕಜೀವನ, ಧರ್ಮನಿಷ್ಠೆ, ದಾಸೋಹಭಾವ, ಗುರುಲಿಂಗಜಂಗಮಪ್ರೇಮ ಮೊದಲಾದ ತಾತ್ತ್ವಿಕ ವಿಷಯಗಳು ನಿರೂಪಿತವಾಗಿವೆ[30].

**ಶ್ರೀಕಂಠಶಾಸ್ತ್ರಿ ಅಮರಾರ್ಯ ಹಿರೇಮಠ** (೧೮೯೧–೧೯೬೭) : ಧಾರವಾಡದ ಈ ಶಾಸ್ತ್ರಿಗಳು ಪುರಾಣಪ್ರವಚನಕಾರರಾಗಿ, ಕೀರ್ತನಕಾರರಾಗಿ ಪ್ರಸಿದ್ಧರಾಗಿದ್ದರು. ಕೈವಲ್ಯಕಲ್ಪವಲ್ಲರಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅಕ್ಕಮಹಾದೇವಿಯ ವಚನಗಳು, ಬಸವಣ್ಣನವರ ವಚನ ಸಂಗ್ರಹಗಳನ್ನು ಭಾವಾರ್ಥಸಹಿತ ಪ್ರಕಟಿಸಿದ್ದಾರೆ.

**ಹೆಸರುಘಟ್ಟದ ಹೊನ್ನಪ್ಪ** (೧೮೯೪): ಪ್ರಸಿದ್ಧರಾದ ಪಂಡಿತರು. ಗಿರಿಜಾಕಲ್ಯಾಣ, ರಾಜಶೇಖರವಿಳಾಸ ಟೀಕು (ಮೊದಲ ಐದು ಆಶ್ವಾಸಗಳು), ಕರ್ಣಾಟಕ ಶಬ್ದಮಂಜರಿ ಟೀಕು (ವಿಬುಧಾನಂದಿನೀ), ಸಟೀಕಾ ಕಬ್ಬಿಗರ ಕೈಪಿಡಿ (ಚಕೋರಚಂದ್ರಿಕೆ),

28. 'ಪ್ರಭಾತ' ಪತ್ರಿಕೆಯಲ್ಲಿ ಅವು ಪ್ರಕಟವಾಗಿವೆ.

29. ಕವಿಚ. III, ೨೧೪.

30. ಇದು ಜೇವರಿಗಿ ತಾಲ್ಲೋಕು ಆಂದೋಲಾದ ಕರುಣೇಶ್ವರ ಪ್ರಕಾಶನದಲ್ಲಿ ಪ್ರಕಟವಾಗಿದೆ, ೧೯೬೩.

ಸಟೀಕಾ ನಾನಾರ್ಥಕಂದಪದ್ಯ (ವಿದ್ವದ್‌ರಂಜಿನೀ), ಸಟೀಕಾ ನಾನಾರ್ಥರತ್ನಾಕರಗಳು ಅವರ ಸಂಪಾದನಾ ಕೌಶಲ್ಯವನ್ನೂ ವಿದ್ವತ್ತನ್ನೂ ಪರಿಚಯಿಸುತ್ತವೆ. ಅವರ ವ್ಯಾಕರಣ ಸಂಗ್ರಹ (೧೮೯೦), ಕರ್ನಾಟಕ ಕಲ್ಪದ್ರುಮ (ಕೋಶ) (ರಾಮಾಶಾಸ್ತ್ರಿಗಳೊಡನೆ) (೧೮೮೫) ಇಂದಿಗೂ ಮಾದರಿಯಾಗಿವೆ.

**ಮಹಾಂತದೇಶಿಕ** (೧೯ ಶತ): ಬೆಂಗಳೂರು ತಿಪ್ಪಶೆಟ್ಟಿಮಠದ ಸ್ವಾಮಿಯಾಗಿದ್ದ ದೇಶಿಕರು ಕನ್ನಡ ಹಾಗೂ ಸಂಸ್ಕೃತದಲ್ಲಿ ಪಂಡಿತರಾಗಿದ್ದು ಅನೇಕ ಗ್ರಂಥಗಳನ್ನು ಸಂಸ್ಕರಿಸಿ ಸಂಪಾದಿಸಿರುವುದಲ್ಲದೆ ಹದಿನಾರಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿ, ವೀರಶೈವ ಧಾರ್ಮಿಕ ಸಾಹಿತ್ಯಕ್ಕೆ ಕಾಣಿಕೆ ಸಲ್ಲಿಸಿದ್ದಾರೆ. ಅವುಗಳಲ್ಲಿ ಶತಕ, ಸ್ತೋತ್ರ, ಅಷ್ಟಕ, ಚರಿತ್ರೆ ಮತ್ತು ವಿಲಾಸಗಳಿವೆ. ೧. ಸಂಪಾದಿತ ಕೃತಿಗಳು : ಕರಣಹಸಿಗೆ, ಗಣಾಷ್ಟಕ, ಲಿಂಗಾಷ್ಟಕ, ಷಡಕ್ಷರರಗಳೆ, ಚೋರಬಸವಚರಿತ್ರೆ ಬಸವಲಿಂಗರಗಳೆ, ಶಿವಲಿಂಗತ್ರಿವಿಧಿ, ಪಂಚಶತನೀತಿ, ನಿರಾಳಗುರು ಸ್ತೋತ್ರ. ೨. ಸ್ವತಂತ್ರಕೃತಿಗಳು : ರೇವಣಸಿದ್ಧೇಶ್ವರ ಭಕ್ತಿಸಾರ, ರೇಣುಕಾರ್ಯಸ್ತೋತ್ರ, ಅಂಬಾಸ್ತೋತ್ರ, ಗಂಗಾಧರಸ್ತೋತ್ರ, ಬಸವಭಕ್ತಿಸಾರ, ಮಹಾಂತದೇಶಿಕೇಂದ್ರವಿಲಾಸ, ರಾಜೇಶ್ವರಶತಕ, ನಂಜುಂಡೇಶ್ವರಶತಕ, ಇತ್ಯಾದಿ. ೩. ಯಕ್ಷಗಾನಗಳು: ಶಿವಶರಣವಿಲಾಸ (ಶಿವಶರಣರ ಚರಿತ್ರೆಗಳು), ಹರಿಶ್ಚಂದ್ರಮಹಾರಾಜನ ಚರಿತ್ರೆ, ನಳಮಹಾರಾಯನ ಚರಿತೆಯು, ಇತ್ಯಾದಿ. ಇವರು ಬರೆದ ವೀರಭದ್ರಖಿಡ್ಗಗಳು ಜನಪ್ರಿಯವಾಗಿವೆ. ಇವರ ಎಲ್ಲಕೃತಿಗಳಲ್ಲಿ ಪ್ರಯೋಗಶೀಲತೆ, ಕಲಾತ್ಮಕತೆ ಎದ್ದು ಕಾಣುತ್ತವೆ.

**ದೊಡ್ಡಪೇಟೆ ಬಸವ** (ಸು. ೧೯ ಶತ): ಇವರು ಹಾಡು ಮತ್ತು ತತ್ತ್ವಪದಗಳನ್ನು ಬರೆದಿದ್ದಾರೆ. 'ಗುರುವೆ ನಿಮ್ಮ ಸ್ಮರಣೆಯನು ನಾನು ಮರೆಯಲಾರೆನು' ಎಂಬ ಅವರ ಗುರುಸ್ಮರಣೆಯ ಹಾಡು ಜನಪ್ರಿಯವಾಗಿದೆ. ಆ ಹಾಡಿನ ಕೊನೆಯಲ್ಲಿ 'ಧರೆಯೊಳು ಹಿರಿಯ ಹರಿದಾಸ ಪುರಂದರದಾಸನೇ ಮೆರೆಯುವ ದೊಡ್ಡಪೇಟೆ ಬಸವ ಗುರುವರ್ಯನೆ' ಎಂದಿದೆ. ಇಲ್ಲಿ ಕವಿಯ ವಿಶಾಲ ಹೃದಯ ವ್ಯಕ್ತವಾಗಿದೆ. ಅಂತೆಯೇ ವೀರಶೈವ ಕವಿಯೊಬ್ಬ ಇಷ್ಟು ಮುಕ್ತಕಂಠವಾಗಿ ಬ್ರಾಹ್ಮಣ ಪುರಂದರದಾಸನನ್ನು ಹೊಗಳಿದ್ದೂ ಗಮನಾರ್ಹ[31] ಎಂಬ ಶ್ಲಾಘನೆ ವ್ಯಕ್ತವಾಗಿದೆ. ಇವರು ಬರೆದ ಹಿಂದೂ–ಮುಸ್ಲಿಂ ಬಾಂಧವ್ಯವನ್ನು ಸಾರುವ 'ಹುಸೇನಿಸಾಹೇಬರ ಬದಿಯಲಿ ಹೋಗಿ ಹಸನಾಗಿ ನಾವು ಬಂದೇವು' ಎಂಬ ಹಾಡುಗಳು ಅನುಭಾವಿಗಳು ಜಾತಿಮತ ಪಂಥಗಳಿಗೆ ಅತೀತರು ಎಂಬುದನ್ನು ಸಾರುತ್ತವೆ.

**ನಂದ್ಯಾಳ ಸಂಗ** (ಸು.೧೯ಶತ): ಬಿಜಾಪುರ ಜಿಲ್ಲೆ ಬಾಗೇವಾಡಿ ತಾಲ್ಲೋಕು ನಂದ್ಯಾಳದಲ್ಲಿ ಹುಟ್ಟಿದ ಸಂಗ ಅವರದು ಆಧ್ಯಾತ್ಮಿಕಕ್ಕೆ ಒಲಿದ ಚೇತನ. ಆ ಬಗ್ಗೆ ಆಳವಾದ ಅಧ್ಯಯನವನ್ನೇ ನಡೆಸಿದರು. ಅದರ ಫಲವಾಗಿ ಅನೇಕ ಹಾಡು ಹಾಗೂ ತತ್ವಪದಗಳು ಮೂಡಿವೆ. ಅವರ ಹಾಡುಗಳೆಂದರೆ ಅನುಭಾವ ಹಾಗೂ ಕಾವ್ಯಾಂಶಗಳ ಸಂಗಮ. ಭವಬಾಧೆಯನ್ನು ವರ್ಣಿಸುವಲ್ಲಿ,ಸತ್ಕಾರ್ಯ ಮಾಡಲು ಮನವನ್ನು ಪ್ರಚೋದಿರುವಲ್ಲಿ ಅವು ಸಫಲವಾಗಿವೆ. ಬಿಜಾಪುರದ ಪ್ರಾದೇಶಿಕ ಗಂಡುಭಾಷೆಯ ಬನಿಯುಳ್ಳ ಆ ಹಾಡುಗಳಲ್ಲಿ ವಿಶೇಷ ಕಸುವು ಉಂಟು. ದುರ್ದೈವವೆಂದರೆ ಅವರ ಎಲ್ಲಹಾಡುಗಳು ದೊರೆಯುವಂತಿಲ್ಲ.ಆತ್ಮದರ್ಶನವಾದ ಸಾಧಕನಿಗೆ ಪೂರ್ಣದೃಷ್ಟಿ ಸಮನಿಸಿದಾಗ ಆದ ಅನುಭವ ಇದು :

> ಎಂದು ಮೈಯ ಮರೆಸಿ ಇದರಂತೆ । ಈ ಜಗವೆಲ್ಲ ಶಿವಮಯವಾಗುವಂತೆ...ತಾರೆ ಕಡೆದು ಸೂರ್ಯ ಕೆಳಗೆ ಬಂದಂತೆ।
> ಗುರು ನಂದ್ಯಾಳ ಸಂಗನ ದಯಾಪೂರ್ಣವಾಗುವಂತೆ॥[32]

**ನನ್ನಪ್ಪಶಾಸ್ತ್ರಿ ಪಡಗದಿನ್ನೆಮಠ** (ಸು. ೧೯ಶತ): ಇವರು ರಾಯಚೂರಜಿಲ್ಲೆ ಪಡಗದಿನ್ನೇಮಠದ ಸ್ವಾಮಿ. ಇವರು ವೀರಶೈವ ಧರ್ಮ ಹಾಗೂ ಸಾಹಿತ್ಯಗಳಿಗೆ ಸಲ್ಲಿಸಿರುವ ಸೇವೆ ಗಣನಾರ್ಹ. ಇವರ ಕೃತಿಗಳು: ೧. ನವಮುಗ್ಧಲೀಲೆ (ಒಂಬತ್ತು ಜನ ಭಕ್ತರ ಲೀಲಾಮಯಚರಿತ್ರೆ). ೨. ತ್ರಿಷಷ್ಠಿ ಪುರಾತನರ ಚರಿತ್ರೆ(ನಿಜಗುಣರ ತ್ರಿಪದಿ ಕೃತಿಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾರೆ. 'ಪ್ರಾಕ್ತನಗಣ ಕಥಾವಳಿ 'ಎಂಬ ಹೆಸರಿನಲ್ಲಿ ಅಚ್ಚಾಗಿದೆ) ೩. ಅರವತ್ತುಮೂವರು ಪುರಾತನ ನುತಿ(ಹಾಡುಗಳು). ೪. ವೇದಾಂತ ಪಟಲ, ಮತ್ತು ೫. ಶಿವಾಧಾರಣ ಖಂಡನಗಳಲ್ಲಿ ತಾತ್ವಿಕ ವಿಚಾರಗಳ ಪ್ರತಿಪಾದನೆ ಇದೆ.

**ಎಂ. ಬಸವಲಿಂಗಶಾಸ್ತ್ರೀ** (೧೯ ಶತ): ಪ್ರಾಚೀನಗ್ರಂಥಗಳ ಸಂಪಾದನೆ, ಕಷ್ಟಕರವಾದ ಕೃತಿಗಳಿಗೆ ಗದ್ಯಾನುವಾದ ರಚನೆ ಮತ್ತು ವೀರಶೈವಧರ್ಮದ ಆಚರಣೆಯ ಬಗ್ಗೆ ವಿಚಾರಪೂರ್ಣ ಕೃತಿರಚನೆ–ಹೀಗೆ ಮೂರು ಬಗೆಯಿಂದ ಇವರು ವೀರಶೈವ ಸಾಹಿತ್ಯ ಹಾಗೂ ಧರ್ಮಗಳಿಗೆ ಸೇವೆಸಲ್ಲಿಸಿದ್ದಾರೆ. ಕೊಟ್ಟೂರು ಬಸವೇಶ್ವರ ಪುರಾಣವನ್ನು ಎನ್.ಆರ್. ಕರಿಬಸವಶಾಸ್ತ್ರಿಗಳೊಡನೆ (೧೯೪೪ರಲ್ಲಿ), ಘನಲಿಂಗದೇವರ ವಚನಗಳು ೧೯೦೭ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಸಿಂಗಿರಾಜಪುರಾಣಕ್ಕೆ ೧೯೧೧ರಲ್ಲಿ ಗದ್ಯಾನುವಾದ ಬರೆದಿದ್ದಾರೆ. 'ವೀರಶೈವ ನಿತ್ಯ ಶಿವಪೂಜಾವಿಧಿಯು' ಅವರ ಇನ್ನೊಂದು ಕೃತಿ.

**ಬಸವಲಿಂಗಸ್ವಾಮಿ ಚರಮೂರ್ತಿ ಹೊಸಮಠ** (ಸು. ೧೯ ಶತ): ಮೈಸೂರು ಹೊಸಮಠದ ಸ್ವಾಮಿಗಳಾಗಿದ್ದ ಇವರು ವೀರಶೈವ ಶಾಸ್ತ್ರಗ್ರಂಥಗಳಿಗೆ ಟೀಕೆ ಬರೆದಿರುವುದಲ್ಲದೆ ವೀರಶೈವ ಸಿದ್ಧಾಂತಕ್ಕೆ ಸಂಬಂಧಿಸಿದ ಕೃತಿಗಳನ್ನು ರಚಿಸಿದ್ದಾರೆ. ಶ್ರೀ ವಿಶ್ವಾ

---

31. ಕ ಸಾ ಉ. ಪು. ೧೧೩.
32. ಕನ್ನಡ ಪರಮಾರ್ಥಸೋಪಾನ, ಕರ್ನಾಟಕ ವಿಶ್ವವಿದ್ಯಾನಿಲಯ. ೧೯೬೭, ಪು.೯೭.

ರಾಧ್ಯರ 'ಶಿವಪಂಚಸ್ತವ'ವನ್ನು ವ್ಯಾಖ್ಯಾನಸಹಿತ ಭಾಷಾಂತರ ಮಾಡಿದ್ದಾರೆ (೧೯೦೮). ಷಡಕ್ಷರಿಯ 'ಶಿವಾಧಿಕ್ಯರತ್ನಾವಳಿ'ಗೆ ಟೀಕೆ ಬರೆದಿದ್ದಾರೆ (೧೯೨೯). ಅಲ್ಲದೆ ಶಿವಸ್ತವ ಶಿರೋಮಣಿ, ಪರಮಾತ್ಮ ಪ್ರಕಾಶಿಕೆ, ಸ್ವಸ್ವರೂಪ ಪ್ರಕಾಶಿಕೆ, ಷಟ್ಸ್ಥಲಕೌಮುದಿ ಮೊದಲಾದ ಕೃತಿಗಳನ್ನು ಪರಿಷ್ಕರಿಸಿದ್ದಾರೆ.

**ವೀರಪ್ಪಾರಾಧ್ಯ** (ಸು. ೧೯ ಶತ): ಮಾಲೂರು ತಾಲ್ಲೋಕು ಅರಸಿನಕುಂಟೆಮಠದ ಅಧ್ಯಕ್ಷರಾದ ಇವರು ಸಿದ್ಧಗಂಗೆಯ ಅಟವಿ ಸ್ವಾಮಿಗಳ ಶಿಷ್ಯರು. ಇವರ ಭಜನೆ ಹಾಡುಗಳು ಪ್ರಸಿದ್ಧವಾಗಿವೆ. ಇವರ ಕೃತಿ 'ಅಟವೀಶ ಭಜನಾಮೃತ'. ಇದು ಗುರುವಿನ ಸ್ತುತಿಪರವಾದ ಗೀತಗಳ ಗುಚ್ಛ. ಇವು ಶ್ರೇಷ್ಠಮಟ್ಟದ ಭಕ್ತಿಗೀತೆಗಳೆನಿಸಿವೆ.

**ಸಿದ್ಧರಾಮ ಶಿವಯೋಗಿ** (೧೯ ಶತ): ತಾಂಡೂರು ಹೊಸಪೇಟೆ ನಿಜಮಠದ ಸ್ವಾಮಿಯಾಗಿದ್ದ ಇವರು ವೀರಶೈವ ಧರ್ಮವನ್ನು ಆಳವಾಗಿ ಅಭ್ಯಾಸಮಾಡಿದ್ದಾರೆ. ಇವರ ಕೃತಿ ಚನ್ನಬಸವಾಭ್ಯುದಯ (ಜ್ಞಾನನಿಧಿ ಚನ್ನಬಸವಣ್ಣನ ಚರಿತ್ರೆ) ೪೩ ಸಂಧಿ, ೨೪೦೦ ಭಾಮಿನಿಷಟ್ಪದಿಗಳ ಈ ಕಾವ್ಯದಲ್ಲಿ ಕಥೆಯ ಜೊತೆಗೆ ಅನೇಕ ಧಾರ್ಮಿಕ ಸಂಗತಿಗಳು ನಿರೂಪಣೆಗೊಂಡಿವೆ[33],

**ನಂ. ಶಿವಪ್ಪಶಾಸ್ತ್ರಿ** (೧೯ ಶತದ ಕೊನೆ): ಕನ್ನಡ ಮತ್ತು ಸಂಸ್ಕೃತಗಳಲ್ಲಿ ಹೆಸರಾಂತ ಪಂಡಿತರಾದ ಶಾಸ್ತ್ರಿಗಳು ಪ್ರಸಿದ್ಧ ಕೀರ್ತನಕಾರರು. ವೈವಿಧ್ಯಮಯವಾದ ತಮ್ಮ ಕೃತಿಗಳಿಂದ ಕನ್ನಡ ಆಧ್ಯಾತ್ಮ ಹಾಗೂ ಸಾಹಿತ್ಯದ ಬೊಕ್ಕಸವನ್ನು ತುಂಬಿದ್ದಾರೆ. ೧. ಶಿವಯೋಗರಹಸ್ಯ (೧೯೦೯), ವೀರಶೈವ ವರ್ಣಾಶ್ರಮ ಧರ್ಮವಿಚಾರ (೧೯೦೯). ಈ ಗದ್ಯಕೃತಿಗಳು ಧಾರ್ಮಿಕಚರ್ಚೆಗೆ ಮೀಸಲಾಗಿವೆ. ವೀರಶೈವಾಚಾರ ಬೋಧೆ (೧೯೦೯) ಮತ್ತು ಲಿಂಗಾಯತರ ಏಳಿಗೆ (೧೯೧೨) ಅವರು ವೀರಶೈವ ಧರ್ಮದ ಬಗ್ಗೆ ತೋರಿದ ಕಳಕಳಿಯ ಕುರುಹಾಗಿವೆ. ೨. ವೀರಶೈವಾಮೃತ ಮಹಾಪುರಾಣ, ಮನೋವಿಜಯ ಮೊದಲಾದ ಗ್ರಂಥಗಳಿಗೆ ಟೀಕೆ ಬರೆದಿದ್ದಾರೆ. ೩. ಗುಬ್ಬಿಬಸವಾರ್ಯರ ಶ್ರೀ ಮತ್ಸೊಲ್ಲಾಪುರ ಸಿದ್ಧರಾಮ ಶಿವಯೋಗಿ ಚರಿತ್ರೆ (೧೯೦೭), ನಂಜುಂಡ ಶಿವಯೋಗಿಗಳ ಅಟವೀಶಗೀತಮಂಜರಿ (೧೯೦೮), ತಾಂಡೂರು ಸಿದ್ಧರಾಮ ಶಿವಯೋಗಿಯ ಚನ್ನಬಸವಾಭ್ಯುದಯ, ವಿರಕ್ತ ತೋಂಟದಾರ್ಯನ ಕೃತಿಯ ಗದ್ಯಾನುವಾದ–ಸಿದ್ಧಲಿಂಗವಿಜಯ (ತೋಂಟದ ಸಿದ್ಧಲಿಂಗೇಶ್ವರ ಚರಿತ್ರೆ) (೧೯೧೨), ಗಣಭಾಷ್ಯರತ್ನಮಾಲೆ (೧೯೦೯)ಗಳನ್ನು ಸಂಪಾದಿಸಿದ್ದಾರೆ. ೪. **ಅನುವಾದಗಳು**: ವೀರಶೈವಾಚಾರ ನಿರ್ಣಯ ಚಿಂತಾಮಣಿ, ಸಾಮಾನ್ಯ ವೀರಶೈವ ಉತ್ಪತ್ತಿ (ಸುಪ್ರಭೇದಾಗಮದ ಷೋಡಶಪಟಲದ ಅನುವಾದ), ಸ್ವಯಂಭುವಾಗಮ (ಮೂಲ ಮತ್ತು ತಾತ್ಪರ್ಯ) (೧೯೦೩). ಹೀಗೆ ಹಲ ಬಗೆಯಲ್ಲಿ ಸಂದಿರುವ ಶಾಸ್ತ್ರಿಗಳ ಸೇವೆ ಶ್ಲಾಘನೀಯವಾದದ್ದು.

**ತುಂಬಳಬೀಡು ಪರ್ವತಪ್ಪ** (೧೯ ಶತದ ಉತ್ತರಾರ್ಧ) ಇವರ ಸ್ಥಳ ಆದವಾನಿ. ಇವರು ಮೂರು ಧಾರ್ಮಿಕ ಕೃತಿಗಳನ್ನು ರಚಿಸಿದ್ದಾರೆ. ೧. ಬೈರೂಪಳಿ ವೀರಭದ್ರಶತಕವು (ಷಟ್ಪದಿ), ೨. ಸುಜ್ಞಾನಬೋಧ ಚಿಂತಾರತ್ನಶತಕವು (ಷಟ್ಪದಿ), ೩, ದೇವೀಸ್ತೋತ್ರ (ಉತ್ಸಾಹವೃತ್ತ), ಇವು ೧೯೦೯ರಲ್ಲೇ ಅಚ್ಚಾಗಿವೆ.

**ಟಿ.ಎಂ. ಚಂದ್ರಶೇಖರಶಾಸ್ತ್ರಿ** (೧೯೦೦): ದಾವಣಗೆರೆಯ ತೆಲಗಿಮಠದ ಅಧಿಕಾರಿಯಾಗಿದ್ದ ಶಾಸ್ತ್ರಿಗಳು ಉದ್ದಾಮಪಂಡಿತರು. ಇವರು ಏಕೋರಾಮನ ವಂಶಜರೆಂದು ತಿಳಿಯುತ್ತದೆ. ೧. ಅಥಣಿ ಶಿವಯೋಗೀಶ್ವರ ಚರಿತ್ರೆ (ಷಟ್ಪದಿ) ೧೯೨೧ರಲ್ಲಿ ರಚಿತವಾಗಿ ಗದ್ಯಾನುವಾದದೊಡನೆ ೧೯೨೩ರಲ್ಲಿ ಮುದ್ರಣಗೊಂಡಿದೆ[34]. ಅಥಣಿಯ ಮುರುಘೇಂದ್ರಶಿವಯೋಗಿಗಳು ಉನ್ನತಮಟ್ಟದ ಯೋಗಿಗಳು. ಅವರ ಪ್ರಭಾವ ಬಹಳ ದೊಡ್ಡದು. ಅಂತೆಯೇ ಕೃತಿಗೂ ಹಿರಿಮೆ–ಗರಿಮೆಗಳು ಸಂದಿವೆ. ೨. ಅಥಣಿ ಶಿವಯೋಗಿ ಮಹಿಮ ಮಂಜರಿ (ಹಾಡುಗಳು). ೩. ನವರಾತ್ರಿಸಮಾರಂಭ ಕಾವ್ಯ (ಚಂಪೂಕೃತಿ). ಇದು ನವರಾತ್ರಿಯ ಕಥೆಯನ್ನು ನಿರೂಪಿಸಿದೆ.

**ಹರ್ಡೇಕರ ಮಂಜಪ್ಪ** (೧೮೮೬–೧೯೪೭): ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಜನಿಸಿದ ಮಂಜಪ್ಪನವರು ಧರ್ಮ ಮತ್ತು ತತ್ತ್ವಜ್ಞಾನಪ್ರಸಾರಕ್ಕಾಗಿ ಜೀವನವನ್ನು ಮುಡುಪಾಗಿಟ್ಟವರು. 'ಕರ್ನಾಟಕದ ಗಾಂಧಿ'ಎಂದೇ ಜನ ಅವರನ್ನು ಕರೆದರು,'ರಾಷ್ಟ್ರದ್ರಷ್ಟಾರ'ರೆಂದು ಗೌರವಿಸಿದರು. ಇವರು 'ಶರಣ ಸಂದೇಶ'ವೆಂಬ ಪತ್ರಿಕೆಯ ಮೂಲಕ ಜನಜಾಗೃತಿಯನ್ನುಂಟುಮಾಡಲು ಶ್ರಮಿಸಿದರು. ಇವರ ಕೃತಿಗಳು:–ಪ್ರಮಥಾಚಾರ ದೀಪಿಕೆ, ವೀರಶೈವ ಮಹತ್ವ, ವೀರಶೈವಮತಬೋಧೆ, ವೀರಶೈವ ಏಕೀಕರಣ,ಲಿಂಗಪೂಜೆಯ ಐತಿಹಾಸಿಕ ವಿವೇಚನೆ, ವೀರಶೈವ ಸಮಾಜಸುಧಾರಣೆ–ಎಂಬ ಧಾರ್ಮಿಕ ಗ್ರಂಥಗಳಲ್ಲದೆ ಬಸವಬೋಧಾಮೃತ, ಶ್ರೀ ಬಸವಸ್ತುತಿ, ಮಡಿವಾಳ ಮಾಚಿದೇವರ ಉಪದೇಶ, ಅರವತ್ತುಮೂರು ಪುರಾತನ ಚರಿತ್ರೆ,ವಚನಕಾರರ ಸಮಾಜರಚನೆ, ವಾರದಮಲ್ಲಪ್ಪನವರ ಸಚಿತ್ರಚರಿತ್ರೆ ಮೊದಲಾದ ಪುಸ್ತಕಗಳನ್ನು ಬರೆದಿದ್ದಾರೆ. ಅವರು ರಚಿಸಿದ ಮಕ್ಕಳಸಾಹಿತ್ಯರಾಶಿಯಲ್ಲಿ ಬಸವಣ್ಣನವರ ಚರಿತ್ರೆ, ಅಕ್ಕನವರ ಉಪದೇಶ, ಪ್ರಭುದೇವರ ಕಥೆ, ಶರಣ ಬಸವೇಶ್ವರ ಚರಿತೆ, ಅಣ್ಣನ ಕ್ರಾಂತಿ, ಬಸವಭಕ್ತಿ, ಕಾಯಕವೇ ಕೈಲಾಸ ಮೊದಲಾದವನ್ನು ಉಲ್ಲೇಖಿಸಬಹುದು.

---

33. ಇದು ೧೯೧೫ರಲ್ಲಿ ಅಚ್ಚಾಗಿದೆ. ಸಂ. ನಂ. ಶಿವಪ್ಪಶಾಸ್ತ್ರಿ.

34. ೧೯೫೪ರಲ್ಲಿ ಮತ್ತೆ ಮುರುಘಾಮಠದಿಂದ ಪ್ರಕಟವಾಗಿದೆ.

**ಡಾ॥ ಫ. ಗು. ಹಳಕಟ್ಟಿ** (೧೮೮೦-೧೯೬೪) : ಬಿಜಾಪುರದಲ್ಲಿದ್ದ ಫಕೀರಪ್ಪನವರು ವೃತ್ತಿಯಲ್ಲಿ ವಕೀಲರು. ಅವರು ನಡೆಸಿದ ವೀರಶೈವ ಸಾಹಿತ್ಯ ಸಂಶೋಧನೆಗಳು, ಅದರಲ್ಲಿಯೂ ವಚನ ಸಾಹಿತ್ಯದ ಪರಿಶೋಧನೆ ಹಾಗೂ ಪ್ರಕಾಶನದ ಕಾರ್ಯ ಬಹಳ ದೊಡ್ಡದು. ಅವರು ನಡೆಸಿದ ವಚನ ವಾಙ್ಮಯದ ಸಂಶೋಧನೆ, ಪರಿಷ್ಕರಣ ಹಾಗೂ ಪ್ರಕಟಣಕಾರ್ಯದ ಫಲವಾಗಿ 'ವಚನ ಶಾಸ್ತ್ರ ಪಿತಾಮಹ'ರೆಂಬ ಅಗ್ಗಳಿಕೆಗೆ ಪಾತ್ರರಾದರು. ಸ್ವಂತ ಅಚ್ಚುಕೂಟವನ್ನಿಟ್ಟುಕೊಂಡು 'ಶಿವಾನುಭವ' ಎಂಬ ಪತ್ರಿಕೆಯನ್ನು ನಡೆಸಿದರು. ಅವರ ಮೂಲಕ ವೀರಶೈವಧರ್ಮ-ಸಾಹಿತ್ಯ-ಸಂಸ್ಕೃತಿಗಳ ಪ್ರಸಾರ ಕಾರ್ಯವನ್ನು ಯಶಸ್ವಿಯಾಗಿ ಕೈಗೊಂಡರು. ವಚನಶಾಸ್ತ್ರಸಾರ ಭಾಗ ೧, ೨ ಮತ್ತು ೩, ಅಮರಗಣಾಧೀಶ್ವರ ಚರಿತ್ರೆ, ಶಿವಶರಣರ ಚರಿತ್ರೆ. ಶಿವಶರಣೆಯರ ಚರಿತ್ರೆ, ಶಿವಾನುಭವ ಶಬ್ದಕೋಶಗಳನ್ನು ಅವರು ಸಂಕಲಿಸಿರುವುದಲ್ಲದೆ, ಅನೇಕ ಶರಣ-ಶರಣೆಯರ ವಚನಗಳನ್ನು ಮೊಟ್ಟಮೊದಲಿಗೆ ಪರಿಶೋಧಿಸಿ ಬೆಳಕಿಗೆ ತಂದರು. ಈ ನಿಟ್ಟಿನಲ್ಲಿ ಏಕಾಂಗಸಾಹಸಿಯಾಗಿ ನಡೆಸಿದ ಕಾರ್ಯ ಒಂದು ಸಂಸ್ಥೆ ಮಾಡಬಹುದಾದ ಅಪಾರವಾದ ಕಾರ್ಯ. ನವೋದಯ ಸಾಹಿತ್ಯದ ಈ ಮಹಾಮೇರು ಮುಂದಿನ ಜನಾಂಗವನ್ನು ಋಣಿಯನ್ನಾಗಿ ಮಾಡಿ ನಡೆದಿದೆ.

**ಉತ್ತಂಗಿ ಚನ್ನಪ್ಪ** (೧೮೮೧-೧೯೬೨) : ಕನ್ನಡ ಜನತೆಗೆ ಸರ್ವಜ್ಞನನ್ನು ಪರಿಚಯಿಸಿ ಆತನ ಸಾವಿರಾರು ವಚನಗಳನ್ನು ಪರಿಶೋಧಿಸಿ ಪ್ರಕಟಿಸಿ ಮಹೋಪಕಾರ ಮಾಡಿದ ಚನ್ನಪ್ಪನವರು ವೀರಶೈವಸಾಹಿತ್ಯಕ್ಕೆ ಮಿಗಿಲಾದ ಸೇವೆ ಸಲ್ಲಿಸಿದ್ದಾರೆ. ಅವರು 'ಸಿದ್ಧರಾಮ ಸಾಹಿತ್ಯ'ವನ್ನು ಸಂಪಾದಿಸಿರುವುದಲ್ಲದೆ, Anubhava Mantap-The heart of Veerashivism ಎಂಬ ಇಂಗ್ಲೀಷ್ ಗ್ರಂಥವನ್ನು, ಹರಳಯ್ಯ ಮಧುವಯ್ಯಗಳ ಕಥೆ, ಅನುಭವ ಮಂಟಪದ ಐತಿಹಾಸಿಕತೆ, ಬಸವೇಶ್ವರನೂ, ಅಸ್ಪೃಶ್ಯರ ಉದ್ಧಾರವೂ, ಇತ್ಯಾದಿ ವಿಚಾರಾತ್ಮಕ ಕೃತಿಗಳನ್ನು ರಚಿಸಿದ್ದಾರೆ.

**ವೈ.ನಾಗೇಶಶಾಸ್ತ್ರಿ** (೧೮೯೩-೧೯೬೫): ಬಳ್ಳಾರಿ ಜಿಲ್ಲೆಯ ಏಳುಬೆಂಚೆಯಲ್ಲಿ ಹುಟ್ಟಿದ ನಾಗೇಶಶಾಸ್ತ್ರಿಗಳು ಬಹುಭಾಷಾಪಂಡಿತರು. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಶಾಸ್ತ್ರಿಗಳು ಕಲ್ಕತ್ತ ವಿಶ್ವವಿದ್ಯಾಲಯದಿಂದ 'ಸರ್ವದರ್ಶನ ತೀರ್ಥ' ಪ್ರಶಸ್ತಿ ಪಡೆದಿದ್ದ ಇವರು ಮೈಸೂರರಸರ ಆಸ್ಥಾನವಿದ್ವಾಂಸರೂ ಆಗಿದ್ದರು. ಇವರು ವೀರಶೈವ ಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಅಮೋಘವಾದದು. ೧೯೩೩ ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು, ಅವರು ರಚಿಸಿರುವ ಗ್ರಂಥಗಳಲ್ಲಿ ಅಷ್ಟಾವರಣವಿವೇಕ, ಪಂಚಾಚಾರ ಪ್ರಕಾಶಿಕೆ, ಶಿವಾನುಭವಸೂತ್ರಸಾರ, ಅಭಿನವಗೀತಾ, ಗವಿಸಿದ್ಧೇಶ್ವರಪುರಾಣ, ಮರಿಯೋಗೀಶ್ವರಪುರಾಣ, ಶ್ರೀ ಫಲಾಹಾರ ಶಿವಯೋಗೀಶ್ವರಪುರಾಣ, ಅರ್ಧನಾರೀಶ್ವರಪುರಾಣ ಮೊದಲಾದವು ಪ್ರಕಟವಾಗಿವೆ. ಮೊಗ್ಗೆಯ ಮಾಯಿದೇವರ ಅನುಭವಸೂತ್ರವನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಶ್ರೀ ಮೃತ್ಯುಂಜಯಲೀಲಾವಿಲಾಸಂ, ಶ್ರೀ ಚನ್ನಬಸವೇಶ್ವರಲೀಲೆ, ಷಟ್ಸ್ಥಲ ಸಿದ್ಧಾಂತ, ನೀತಿಚಿಂತಾಮಣಿ, ಮೊದಲಾದ ಅಪ್ರಕಟಿತ ಕೃತಿಗಳೂ ಇವೆ.

**ಶಿ.ಶಿ. ಬಸವನಾಳ** (೧೮೯೩-೧೯೫೧) : ಧಾರವಾಡದ ಬಸವನಾಳರು ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದರು. ಪ್ರಾಚೀನ ಗ್ರಂಥಗಳ ಪರಿಶೋಧನೆಯಲ್ಲಿ ಅವರದು ಸಿದ್ಧಹಸ್ತ. ಕೈವಲ್ಯಕಲ್ಪವಲ್ಲರಿ. ಕೈವಲ್ಯದರ್ಪಣ, ಚನ್ನಬಸವಪುರಾಣ, ಪ್ರಭುಲಿಂಗಲೀಲೆ, ಬಸವಣ್ಣನವರ ಷಟ್ಸ್ಥಲವಚನಗಳು, ಶಬರಶಂಕರವಿಳಾಸ. ಬಸವಲಿಂಗಶರಣರ ಕೃತಿಗಳು ಮೊದಲಾದವು ಅವರ ಸಮರ್ಥ ಸಂಪಾದಕತ್ವದಲ್ಲಿ ಪರಿಶೋಧಿಸಲ್ಪಟ್ಟ ಕೃತಿಗಳು. ಇವರು ವೀರಶೈವ ತತ್ತ್ವಪ್ರಕಾಶನ. ಶಿವತತ್ತ್ವಪ್ರಕಾಶನಗಳನ್ನು ಸಂಪಾದಿಸಿದ್ದಾರೆ. Musings of Basava ಎಂಬ ಹೆಸರಿನಲ್ಲಿ ಬಸವಣ್ಣನವರ ವಚನಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿ ಪ್ರಕಟಿಸಿದ್ದಾರೆ.

**ವಿ. ಪಾ. ಗುರುಸಿದ್ಧಪ್ಪ** (೧೯ ಶತದ ಉತ್ತರಾರ್ಧ): ಗುಬ್ಬಿಯ ವೀರಪ್ಪನವರ ಮಕ್ಕಳಾದ ಗುರುಸಿದ್ಧಪ್ಪನವರು ಪ್ರಸಿದ್ಧರಾದ ನಾಟಕಕಾರರು. ಅವರ 'ಇಂದ್ರಸಭಾನಾಟಕ'ವು ಐದನೇ ಆವೃತ್ತಿಯನ್ನು ಕಂಡಿದೆ (೧೮೯೬). ಕರ್ನಾಟಕ ಸಾರಂಗಧರ ನಾಟಕ, ಕೃಷ್ಣಾರ್ಜುನ ಕಾಳಗ, ಗೋವಿನಚರಿತ್ರೆ (೧೮೬೩), ಚಂದ್ರಹಾಸನಾಟಕವು (೧೮೯೬), ನಳನಾಟಕ, ಮಾರ್ಕಂಡೇಯ (೧೮೯೭), ಶ್ರೀ ನಾಟಕವು, ಸಾನಂದಗಣೇಶನ ನಾಟಕ (೧೮೯೫), ಸಿರಿಯಾಳ ನಾಟಕ (ಧರ್ಮಪಾಲಚರಿತೆ), ಕಲಾವತೀಪರಿಣಯ ನಾಟಕ, ಚೋರಕಥೆ ನಾಟಕ ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. ಅವರ ಪದ್ಯಕೃತಿಗಳಲ್ಲಿ ನಂಜುಂಡೇಶ್ವರ ಕೀರ್ತನೆ, ಅಡವಿಸ್ವಾಮಿಗಳ ಕೀರ್ತನೆ (೧೮೯೩), ಮೈಸೂರು ಚರಿತ್ರೆ ಎಂಬ ದಸರಾಜಾವಡಿ(೧೮ ಹಾಡುಗಳು) (೧೮೯೩)ಗಳನ್ನು ಉಲ್ಲೇಖಿಸಬಹುದು.

**ಡಿ.ಆರ್. ತಿಪ್ಪಯ್ಯ ಶಾಸ್ತ್ರಿ** (೧೯ಶತದ ಉತ್ತರಾರ್ಧ) ಚಳ್ಳಕೆರೆ ತಾಲ್ಲೋಕು ದೊಡ್ಡೇರಿ ರಾಮಗಿರಿಮಠದ ಶಾಸ್ತ್ರಿಗಳು ಒಳ್ಳೆಯ ಪಂಡಿತರು. ಮನೋವಿಜಯವನ್ನು ತೋಂಟದ ಸಿದ್ಧಲಿಂಗನ ಟೀಕೆಯೊಡನೆ ಸಂಪಾದಿಸಿದ್ದಾರೆ (೧೯೧೧), ಶ್ರೀ ಬಸವೇಶನ ಸ್ತೋತ್ರ ಶತಕ, ಗುರು ಬೋಧೆ.ಮನೊಬೋಧೆ. ಲಿಂಗ ತ್ರಿವಿಧಿ (೧೯೧೧) ಮೊದಲಾದ ಕೃತಿಗಳನ್ನು ಪರಿಶೋಧಿಸಿ ಸಂಪಾದಿಸಿದ್ದಾರೆ. ಮುಕ್ತಾಂಗನಾಕಂಠಮಾಲೆ, ಜ್ಯೋತಿರ್ಮಯ ಶಾಂಭವ ದೀಕ್ಷಾಬೋಧೆ ಮೊದಲಾದವು ಅವರ ಇತರ ಕೃತಿಗಳು.

**ಮಧುರಚನ್ನ** (೧೯೦೩-೧೯೫೩): ನವೋದಯ ಸಾಹಿತ್ಯದಲ್ಲಿ ಮಧುರಚನ್ನರದು ಬಹುದೊಡ್ಡ ಹೆಸರು. ಹಲಸಂಗಿ ಚನ್ನಮಲ್ಲಪ್ಪ ಗಲಗಲಿಯವರ ಕಾವ್ಯನಾಮವೇ 'ಮಧುರಚನ್ನ'. ಆಧ್ಯಾತ್ಮಿಕ ಬರವಣಿಗೆಯಲ್ಲಿ ಇವರಿಗೆ ಹೆಚ್ಚಿನ ಆಸಕ್ತಿ. ಪೂರ್ವ

ರಂಗ, ಕಾಳರಾತ್ರಿ, ಬೆಳಗು—ಇವು ಅವರ ಆಧ್ಯಾತ್ಮಿಕ ಆತ್ಮಕಥನಗಳು. ನನ್ನನಲ್ಲ-ಅವರ ಕವನ ಸಂಕಲನ. ಇವಲ್ಲದೆ ವಿನೋದ ಕುಸುಮಾವಳಿ, ಕನ್ನಡಿಗರ ಕುಲಗುರು ಶ್ರೀ ವಿದ್ಯಾರಣ್ಯರು, ಸಿರಿಯಾಳ ಸತ್ತ್ವಪರೀಕ್ಷೆ (ನಾಟಕ)ಗಳನ್ನೂ, ಪೂರ್ಣಯೋಗ, ಮಾತೃವಾಣಿ ಮೊದಲಾದ ಅರವಿಂದಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ರಾಕ್ಷಸೀಮಹತ್ವಾಕಾಂಕ್ಷೆ, ವಿಸರ್ಜನ, ಬಾಳಿನಲ್ಲಿ ಬೆಳಗು ಮೊದಲಾದ ಅನುವಾದಗಳನ್ನು ಮಾಡಿದ್ದಾರೆ.

**ಚನ್ನಮಲ್ಲಿಕಾರ್ಜುನ** (೧೮೭೫-೧೯೬೨): ಶಿರಾಳಕೊಪ್ಪವಲ್ಲಿ ಜನಿಸಿದ ಇವರ ಹುಟ್ಟುಹೆಸರು ಚನ್ನಮಲ್ಲಪ್ಪ ನೂರೊಂದಪ್ಪ ಕೋರಿಸೆಟ್ಟಿ. ವೃತ್ತಿಯಲ್ಲಿ ಶಾಲಾ ಅಧ್ಯಾಪಕರಾಗಿದ್ದ ಇವರು ಶರಣಧರ್ಮ ಮತ್ತು ಸಾಹಿತ್ಯ ಸಂಶೋಧನೆ ಹಾಗೂ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡದ್ದು ನಾಡಿನ ಭಾಗ್ಯ. ಚನ್ನಮಲ್ಲಿಕಾರ್ಜುನರು ಆದರ್ಶಶಿಕ್ಷಕರಾಗಿದ್ದಂತೆಯೇ ಪ್ರವಚನಕಾರರೂ,ಸಂಶೋಧಕರೂ ಆಗಿದ್ದರು. ಇವರು ಶಿವಯೋಗಮಂದಿರದ ಶ್ರೀ ಕುಮಾರ ಸ್ವಾಮಿಗಳ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದರು. ವೀರಶೈವಧರ್ಮ ಹಾಗೂ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸಮಾಡಿದ್ದ ಇವರು ಆಗಿನ 'ವೀರಶೈವ ಧರ್ಮ ತರಂಗಿಣಿ' ಎಂಬ ಮಾಸಪತ್ರಿಕೆಯ ಮೂಲಕ ಲೇಖನಗಳನ್ನು ಬರೆಯುತ್ತಿದ್ದರು.

ಚನ್ನಮಲ್ಲಿಕಾರ್ಜುನರು 'ಶಿವಲಿಂಗ ವಿಜಯ ಮುದ್ರಣಾಲಯ'ಎಂಬ ಒಂದು ಪ್ರೆಸ್ಸನ್ನು ತೆರೆದು 'ಸದ್ಧರ್ಮದೀಪಿಕೆ' ಎಂಬ ಮಾಸ ಪತ್ರಿಕೆಯನ್ನು ೧೯೩೧ ರಿಂದ ೧೯೬೨ವರೆಗೆ, ಎಷ್ಟೇ ತೊಂದರೆಗಳು ಬಂದರೂ,ನಡೆಸಿಕೊಂಡುಬಂದರು. ಇದೊಂದು ಮಹತ್ವಪೂರ್ಣವಾದ ಸಾಧನೆ. ಹಳೆಯ ಓಲೆಗರಿಗಳ ಸಂಗ್ರಹಣ, ಪರಿಷ್ಕರಣ, ಪ್ರಕಟಣ-ಈ ಮೂರನ್ನೂ ಕೈಗೆತ್ತಿಕೊಂಡ ಇವರು ಅತ್ಯಂತ ಸಮರ್ಥವಾಗಿ ಅದನ್ನು ನಡೆಸಿದರು. 'ಸದ್ಧರ್ಮಗ್ರಂಥಮಾಲೆ'ಯ ಮೂಲಕ ಸಂಶೋಧಿತ ಕೃತಿಗಳನ್ನು ಪ್ರಕಟಿಸುತ್ತಿದ್ದರು. ಈ ಬಗ್ಗೆ ಸಾಕಷ್ಟು ಪ್ರೋತ್ಸಾಹವಿಲ್ಲದಿದ್ದ ಕಾಲದಲ್ಲಿ, ಕಷ್ಟ-ನಷ್ಟಗಳಿಗೆ ಗುರಿಯಾದರೂ ಎದೆಗೆಡದೆ ಈ ಏಕಾಂಗ ಸಾಹಸಿ ಕಾರ್ಯೋನ್ಮುಖವಾಗದಿದ್ದರೆ ಎಷ್ಟೋ ಅಮೂಲ್ಯಸಾಹಿತ್ಯ ಹುಳುಗಳ ಪಾಲಾಗುತ್ತಿತ್ತು! ಅವರು ಸಿದ್ಧೇಶ್ವರ ವಚನಗಳು, ಮಾಯಿದೇವರ ಶತಕಗಳು, ನಿರಂಜನವಂಶರತ್ನಾಕರ, ಏಕೋಕ್ಷರಶತಸ್ಥಲ, ಸರ್ವಜ್ಞನ ವಚನಗಳು, ಮುಂತಾದ ೪೦ಕ್ಕೂ ಹೆಚ್ಚು ಗ್ರಂಥಗಳನ್ನು ಸಂಪಾದಿಸಿರುವುದಲ್ಲದೆ ಬಸವೇಶ್ವರನ ಕಾಲ (೧೯೪೯) ರೇವಣ ಸಿದ್ಧೇಶ್ವರರು (೧೯೫೮), ಮಾಯಿದೇವ ಪ್ರಭುವಾಣಿ (೧೯೬೨) ಮೊದಲಾದ ಸಂಶೋಧನಾತ್ಮಕ, ವಿಚಾರಪರಿಪ್ಲುತ ಕೃತಿಗಳನ್ನೂ ರಚಿಸಿದ್ದಾರೆ. ಈ ಶರಣರ ಹೆಸರಿನ ಪುಸ್ತಕವೊಂದು ಈಚೆಗೆ ಪ್ರಕಟವಾಗಿದೆ[35].

**ಮುಂದಿನದು ಈ ಅವಧಿಯಲ್ಲಿ ವೀರಶೈವ ಸಾಹಿತ್ಯದಲ್ಲಿ ಕೃಷಿಮಾಡಿದ ಇತರ ಕೆಲವು ಕವಿಗಳ ಹಾಗೂ ಅವರ ಕೃತಿಗಳ ಪಟ್ಟಿ: ***

| ಕವಿ | ಕಾಲ | ಕೃತಿಗಳು | ಆಕರ |
|---|---|---|---|
| ೧. ನರೇಗಲ್ಲ ಶಿವಬಸಪ್ಪಶಾಸ್ತ್ರಿ | ೧೮೩೦-೧೯೦೨ | ಬಸವಪವಾಡಲೀಲಾಮೃತ | ಕವಿಚ III, ೪೬೧ |
| ೨. ನಂದಪ್ಪ (ನಂದಿನಾಥ) | ೧೮೫೦ | ಪ್ರಭುಚರಿತ್ರೆ, ವಲ್ಲಿಕಂಠಾಭರಣ, ಅಕ್ಕಮಹಾದೇವಿ-ಯಕ್ಷಗಾನಗಳು. | |
| ೩. ಮಾನವಿ ವೀರಪ್ಪ | ೧೮೫೦ | ಕಥಾಸಾಗರ (೫೩ ಕಥೆಗಳು) | ಕವಿಚ III,೧೯೮ |
| ೪. ರೋಣದ ಅನ್ನದಾನೇಶ | ೧೮೫೦ | ೧. ಅರವತ್ತುಮೂರು ಪುರಾತನರ ಪುರಾಣ ಜೇವರಗಿಮಠದ ಹಸ್ತಪ್ರತಿ<br>೨. ಅರವತ್ತುಮೂರು ಪುರಾತನರ ನಾಮಾವಳಿ(ಷಟ್ಪದಿ)೧೮೯೭ರಲ್ಲಿ ಪ್ರಕಟ | |
| ೫. ಸಂಗನ ಬಸವದೇಶಿಕ | ೧೮೫೦-೧೯೧೨ | ಗುರುನಂಜೇಶ್ವರ ಪುರಾಣ. | ಪ್ರಕಟ: ಸಂ.ವಿ. ಶಿವಾನಂದ |
| ೬. ಗುರುಬಸಪ್ಪ ಹಳಕಟ್ಟಿ | ೧೮೫೪-೧೯೩೬ | ೧. ಇಂಗ್ಲೆಂಡ್ ದೇಶದ ಇತಿಹಾಸ, ೨. ಏಕನಾಥಸಾಧುಗಳ ಚರಿತ್ರೆ, ೩. ಯೂಕ್ಲಿಡನ ಆರು ಪುಸ್ತಕಗಳು, ೪. ಡ್ಯೂಕ್ ಆಫ್ ವೆಲ್ಲಿಂಗ್ಟನ್, ೫. ಚಿಂತಾಮಣಿ ಅಥವಾ ಟಾಲಿಸ್ಮನ್, ೬. ನೆಪೋಲಿಯನ್ ಬೋನಪಾರ್ಟ, ೭. ವಿಲಿಯಂ ಎವರ್ಟ್ ಗ್ಲ್ಯಾಡ್‌ಸನ್, ೮. ಸಿಕಂದರ್ ಬಾದಶಹ, ೯. ಫ್ರಾನ್ಸಿನ ಮಹಾಕ್ರಾಂತಿ, ಇತ್ಯಾದಿ. | |
| ೭. ಹೇರೂರ ವಿರುಪಣ್ಣ | ೧೮೫೫ | ೧. ಕೈವಲ್ಯ (ಹಾಡುಗಳು) ೨. ರುದ್ರೇಶ ಶತಕ | ೧೯೫೫ರಲ್ಲಿ ಪ್ರಕಟ |
| ೮. ಅಯ್ಯಪ್ಪಯ್ಯ ಹಿರೇಮಠ ಶಾಂತಗಿರಿ | ೧೮೬೦ | ೧. ಸ್ತ್ರೀಯರ ಹಾಡು ೨. ಬಾಲಿಕಾಗೀತ ಶತಕ<br>೩. ಬೀಗಿತ್ತಿಯರಪದ | ೧೯೧೧ರಲ್ಲಿ ಪ್ರಕಟ. |

35. ಪಂ. ಚನ್ನಪ್ಪ ಎರೇಸೀಮೆ: ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೮೦

* ವಿವರಣೆಗೆ ಅವಕಾಶವಿಲ್ಲದೆ ಕೇವಲ ಒಂದು ಪಕ್ಷಿನೋಟದಿಂದ ಸಂಗ್ರಹಿಸಿದೆ.

| | | | |
|---|---|---|---|
| ೯. ಗುಬ್ಬಿ ವೀರೇಶ್ವರಶಾಸ್ತ್ರೀ | ೧೮೬೦ | ವೀರಶೈವಾನ್ವಯ ಚಂದ್ರಿಕೆ (ಟೀಕೆ), ಗುಲೇಬಕಾವಲಿ, ಚೋರಕಥೆ, ಜಗನ್ಮೋಹಿನಿ ಚರಿತ್ರೆ (ಕರಿಭಂಟನ ಕಥೆ), ಸಿರಿಯಾಳ ಚರಿತ್ರೆ, ಸತ್ಯವ್ರತನ ಚರಿತ್ರೆ, ಹರಿಶ್ಚಂದ್ರ (ನಾಟಕಗಳು). | |
| ೧೦. ನಂಜಯ್ಯ | ೧೮೬೦ | ತ್ರಿಪುರದಹನ, ರಾಧಾವಿಲಾಸ, ಹರಿಶ್ಚಂದ್ರೋಪಾಖ್ಯಾನ, ಬಲಿಚಕ್ರವರ್ತಿ ಚರಿತ್ರೆ, ಸಾರಂಗಧರನ ಕಥೆ, ಚಂದ್ರಹಾಸನ ಕಥೆ, ಇತ್ಯಾದಿ ಯಕ್ಷಗಾನಗಳು | |
| ೧೧. ಬಳಗಾನೂರು ಮರಿಸ್ವಾಮಿ | ೧೮೬೦ | ಗಿರಿಜಾಕಲ್ಯಾಣ, ದೇವಿಯಕಥೆ. ಶಿವಜಲಂಧರ (ನಾಟಕಗಳು) ಹಾಗೂ ಹಾಡುಗಳು | |
| ೧೨. ಖಾಸ್ಗತ ವಿರಕ್ತಪ್ಪ | ೧೮೬೩-೧೮೯೬ | ಮುಕ್ತಿಸುವಿಚಾರ | ೧೯೨೪ ಪ್ರಕಟ |
| ೧೩. ಅಯ್ಯಪ್ಪ | ೧೮೬೮ | ದೇವಾಂಗ ಪುರಾಣ | |
| ೧೪. ಅನ್ನದಾನಿ ಬಸವಲಿಂಗಯ್ಯ | ೧೮೬೨ | ರಾಜಶೇಖರ ವಿಳಾಸ ಟೀಕೆ (೨ನೇ ಆಶ್ವಾಸ). | |
| ೧೫. ಗುರುಸಿದ್ಧಸ್ವಾಮಿ (ಸಿರಿಗೆರೆ ಹೊಸಮಠ) | ೧೮೭೪ | ಮರುಳಸಿದ್ಧ ಸಾಂಗತ್ಯ | |
| ೧೬. ಚನ್ನಸಂಗಪ್ಪ (ಪೂತಗೇರಿ ಹಿರೇಮಠ) | ೧೮೭೫ | ಪ್ರಸ್ತಾವಶ್ಲೋಕ (೧೨೦ ಶ್ಲೋಕಗಳಿಗೆ ಟೀಕೆ) | |
| ೧೭. ವೀರಭದ್ರಪ್ಪ ಹಾಲಭಾವಿ | ೧೮೭೭ | ಶಂಕರದಾಸಿಮಯ್ಯ ಪುರಾಣ, ಮೋಳಿಗೆಮಾರಯ್ಯ ಹಾಗೂ ರಾಣಿಮಹಾದೇವಿಯ ವಚನಗಳು-ಸಂಪಾದನೆ | |
| ೧೮. ಕ್ರೀಡಾಪುರದ ಪ್ರೌಢ ಲಿಂಗಾರ್ಯತನಯ | ೧೯೭೬ | ರೇಣುಕಾಚರಿತ್ರೆ (ಯಲ್ಲಮ್ಮ) ಎಂಬ ವಚನಕಾವ್ಯ | ೧೮೭೬ರಲ್ಲಿ ಪ್ರಕಟ |
| ೧೯. ಕರವೀರ ಕವಿವರ್ಯ | ೧೮೭೭ | ಮುಂಡುಬಂಡೆ ಶರಭನ ಶತಕ (ಕಂದ) | |
| ೨೦. ವೃಷಭ ಪಂಡಿತದೇವ ಶಿವಯೋಗಿ (ಸರ್ಪಭೂಷಣರ ಶಿಷ್ಯ) | ೧೮೭೮ | ನಿಜಗುಣರ ಅನುಭವಸಾರ ಟೀಕೆ | |
| ೨೧. ಗುರುಪಾದಪ್ಪ ಹೊಂಗಲ | ೧೮೮೦ | ಕವನಸಂಕಲನ, ಕೀರ್ತನೆಗಳು: ಹಲಾಯುಧಾಖ್ಯಾನ, ಘೋಷಯಾತ್ರೆ, ಕೋಳೂರು ಕೊಡಗೂಸಿನ ಕಥೆ, ಶಬರಶಂಕರಲೀಲೆ. | |
| ೨೨. ಫಕೀರಪ್ಪ ಬಸಪ್ಪ ಕರಡೀಗುಡ್ಡ (ಭೂಮೀಶ) | ೧೮೮೩ | ಬರಗಾಲವರ್ಣನೆ (ಷಟ್ಪದಿ), ಹರಿಲೀಲಾಮೃತಸಾರ ಅಥವಾ ದಶಾವತಾರ ಸ್ತೋತ್ರ. | |
| ೨೩. ಭಾಗವತ ನಂಜುಂಡ | ೧೮೮೩ | ಶೂನ್ಯಸಿಂಹಾಸನ ನಿರ್ಣಯ (ಗದ್ಯ) | 'ಸದ್ಧರ್ಮದೀಪಿಕೆ'ಯಲ್ಲಿ ಪ್ರಕಟ. |
| ೨೪. ಶಿಖರಾಖ್ಯ | ೧೮೮೭ | ರಾಮೇಶ್ವರಶತಕ (ಸೀಸಪದ್ಯ) | |
| ೨೫. ರಘುಪ್ಪಶೆಟ್ಟಿ | ೧೮೯೨ | ವೀರಶೈವ ನಿರ್ಣಯ ಚಿಂತಾಮಣಿ | ಭಾಗ I, ೧೮೯೨ರಲ್ಲಿ ಪ್ರಕಟ. |
| ೨೬. ಚನ್ನಬಸವ | ೧೮೯೩ | ವೀರಶೈವಮತಾಭ್ಯುದಯ ಚಂದ್ರಿಕಾ | ೧೮೯೩ ಪ್ರಕಟ |
| ೨೭. ನಂಜುಂಡಸ್ವಾಮಿ (ಗಂಜಾಂಮಠ) | ೧೮೯೩ | ಸದ್ವಿದ್ಯನ್ನದಾನ ಪ್ರಾಭವ ಪ್ರಕಾಶಿಕಾ | ೧೮೯೭ ಪ್ರಕಟ |
| ೨೮. ಸೋನೆವಡೆ ಕರಿವೀರಪ್ಪ ಯರಮಠ | ೧೮೯೫ | ಸೋಮೇಶ್ವರ ಶತಕ ಪ್ರತಿಪದ ಟೀಕೆ | |
| ೨೯. ಗುಬ್ಬಿ ಎನ್. ಮುರಿಗಾರಾಧ್ಯ | ೧೮೯೬ | ಶೃಂಗಾರ ಚಾತುರೋಲ್ಲಾಸಿನಿ,<br>ಷಡಕ್ಷರ ದೇವ | ೧೮೯೬<br>೧೯೦೬ |
| ೩೦. ವೀರಭದ್ರಯ್ಯ ಉಜ್ಜಯನಿ ಗೊಂಗಡಿ | ೧೮೯೯ | ಮರುಳಸಿದ್ಧ ಸಾಂಗತ್ಯ | |

೩೧. ಎಮ್ಮಡಿಗಿ ಪ್ರಭುದೇವ ೧೯೦೦ ತತ್ತ್ವಪದಗಳು; ಹಾಡುಗಳು. ಕನ್ನಡ ನಾಡಿನಸತ್ಪುರುಷರಅನುಭವ ಪದಗಳು. ಸಂ. I ರಿಂದ VIIಸಂ. ಗಣಪತಿರಾವ್ ಕನ್ನೂರ.

೩೨. ರೋಡಗ ಮಡಿವಾಳ ಕವಿ ೧೯೦೦ ಕೆಂಭಾವಿ ಭೋಗಣ್ಣನ ಪುರಾಣ ಜೇವರಿಗಿಮಠದ ಹಸ್ತಪ್ರತಿ

೩೩. ಓದಿನ ಮಲ್ಲಯ್ಯ ೧೯೦೦ ಮೈಲಾರಕ್ಷೇತ್ರ ಮಹಾತ್ಮೆ (ಷಟ್ಪದಿ), ವೀರಭದ್ರಶತಕ

೩೪. ಗಂಗಮ್ಮ (ಕಡಕೋಳ ಮಡಿವಾಳಪ್ಪನ ತಾಯಿ) ತತ್ತ್ವಪದಗಳು

೩೫. ಕರಿಬಸವಶಾಸ್ತ್ರಿ ಹಿರೇಮಠ ಗೋರ್ಕಲ್ ಅಮರೇಶ್ವರ ಪುರಾಣ

೩೬. ನಂಜುಂಡ ದೇಶಿಕೇಂದ್ರ (ಗುರುವಣ್ಣದೇವರಮಠ) ೧೯ ಶತ ಶಿವಪೂಜಾವಿಧಿ 'ಸದ್ಧರ್ಮದೀಪಿಕೆ'ಯಲ್ಲಿ ಪ್ರಕಟ

೩೭. ಯಜಮಾನ ಸಿದ್ಧಲಿಂಗಪ್ಪ (ಬೇಲೂರು) " ಕರಿಭಂಟನ ಕಥೆ (೧೮೮೩) ೧೮೯೫ರಲ್ಲಿ ೨ನೇ ಆವೃತ್ತಿ

೩೮. ಬಸವಣ್ಣಕವಿ " ನಯನಜನ ಕಥೆ (ಹಾಡುಗಬ್ಬ)

೩೯. ರುದ್ರದೇವ " ಮುರುಘೇಂದ್ರ ವಿಜಯ (ಷಟ್ಪದಿ) ೧೯೦೬ ಪ್ರಕಟ

೪೦. ನಾಗನಬಸವ " ಸಂಗೀತ ಬಸವೇಶ್ವರ ನಾಟಕ

೪೧. ಪರ್ವತಯ್ಯ " ಘನಮಠದಾರ್ಯರ ಶತಕ

೪೨. ರೇವಣಯ್ಯಸ್ವಾಮಿ(ತಳೆಯವಾಡ) " ಬೊಮ್ಮಲಿಂಗದೇವರ ಕಾವ್ಯ

೪೩. ವರಕೋಡು ಗುರುಶಾಂತ ಒಡೆಯ " ರುದ್ರಮುನಿ ತತ್ತ್ವಬೋಧೆ

೪೪. ಹಾನಗಲ್ಲು ರಾಚೋಟಪ್ಪಶಾಸ್ತ್ರೀ " ಶ್ರೀರುದ್ರ ಟೀಕೆ, ಕವಿಕರ್ಣರಸಾಯನ ಟೀಕೆ

೪೫. ಶಿವನಂಜೇಗೌಡ (ಹಳೇಬೀಡು) " ಹಳೆಯ ಬೀಡು ಪುರಾತನರ ಚರಿತ್ರೆ (ಗದ್ಯ) ೧೯೦೯ ಪ್ರಕಟ

೪೬. ವಿರೂಪಾಕ್ಷ ಪಂಡಿತ " ಆಲಂದೆಯ ಶರಣಬಸವಪುರಾಣ ಕವಿಚ. III, ೨೩೬

೪೭. ಹೂವಿನ ಶಿವಲಿಂಗದೇವ " ಹರಿಣೀಹರಣೋದ್ಧರಣ (ಗೋವಿನಹಾಡಿನ ಧಾಟಿ)

೪೮. ಅರಮನೆ ಮರಿಶೆಟ್ಟಿ " ವೈದ್ಯಸಂಗ್ರಹ, ನೀತಿಸಾರ ಕವಿಚ. III, ೨೩೬

೪೯. ಪಂಡಿತ ಪ್ರಭುವಪ್ಪ " ಹಳಗನ್ನಡ ಶಬ್ದಕೋಶ ಕನ್ನಡ ಸಾಹಿತ್ಯ ಪರಿಷತ್ತಿನ ಹಸ್ತಪ್ರತಿ.

೫೦. ಬೂದಿಹಾಳು ಬಸವಾರ್ಯ " ವಿದ್ಯಾಸುಂದರಿ, ಮನೋಹರಿ, ಮಾನವಧರ್ಮ, ವಿಚಿತ್ರಕಾರಸ್ಥಾನ, ಸತ್ವಪ್ರಕಾಶ, ಸರಸ್ವತಿ ಪ್ರಕಾಶ, ಸುಲಭ ಬಾಲಬೋಧೆ (ಮಕ್ಕಳಿಗೆ).

೫೧. ಎಂ. ವೀರಮುದ್ದಯ್ಯ " ಸಿರಿಯಾಳನ ಚರಿತ್ರೆ, ವೀರಶೈವ ಭಕ್ತಶ್ರೇಷ್ಠನ ಚರಿತ್ರೆ ಕೃಷ್ಣರಾಜ ಪಟ್ಟಾಭಿಷೇಕ–ಲಾವಣಿ.

೫೨. ಶಿವಲಿಂಗಯ್ಯ ಹಿರೇಮಠ " ವೀರಶೈವ ಧರ್ಮಸಿಂಧು.

೫೩. ಸಿದ್ಧಲಿಂಗದೇವ ಚಿಕ್ಕನಹಳ್ಳಿಮಠ " ವಿಶ್ವಾರಾಧ್ಯ ವಿರಚಿತ 'ವೀರಶೈವಾಂತ್ಯೇಷ್ಟಿವಿಧಿ'ಯ ಅನುವಾದ

೫೪. ಎರಗಂಬಳಿ ಸಿದ್ಧವೀರಲಿಂಗ " ಕೈವಲ್ಯಪದ್ಧತಿಯನ್ನು ಯಕ್ಷಗಾನದಲ್ಲಿ ರಚಿಸಿದ್ದಾನೆ.

# ಬಸವಪ್ಪ ಶಾಸ್ತ್ರಿಗಳು

—ಸುಭಾಸ್ ಎಸ್. ಖೋತ್

ಕನ್ನಡ ಸಾಹಿತ್ಯವಾಹಿನಿಯು ತುಂಬಿದ ಗಂಗೆಯಂತೆ ಪ್ರವಹಿಸಿದ್ದರೂ ಹತ್ತೊಂಬತ್ತನೆಯ ಶತಮಾನದಲ್ಲಿ ಬತ್ತಿ ಹೋಗುವುದರಲ್ಲಿತ್ತು. ಬೆರಳು ಎಣಿಕೆಯ ಮೇಲೆ ಎಣಿಸುವಷ್ಟು ಮಾತ್ರ ಕವಿಗಳಿಂದ ಕಳಪೆಯಾಗಿ ಸಾಹಿತ್ಯ ಸೃಷ್ಟಿಯಾಗುತ್ತಲಿತ್ತು. ಹಳೆಯ ಗ್ರಂಥಗಳನ್ನು ಸೃಷ್ಟಿಸುವಷ್ಟು ಶಕ್ತಿ ಉಳಿದಿರಲಿಲ್ಲ. ಆಗ ಪಾಶ್ಚಾತ್ಯರ ಇಂಗ್ಲೀಷಿನ ತಣ್ಣನೆಗಾಳಿ ಬೀಸಿ,ಒಲವು ಬೆಳೆಯಿಸಿಕೊಳ್ಳುವುದರಲ್ಲಿತ್ತು. ಅಂಥ ಪ್ರಕ್ಷುಬ್ಧ ವಾತಾವರಣದಲ್ಲಿ ಶ್ರೀ ಬಸವಪ್ಪಶಾಸ್ತ್ರಿಗಳು ಜನ್ಮವೆತ್ತಿದರು.

ಬಸವಪ್ಪಶಾಸ್ತ್ರಿಗಳ ಪೂರ್ವಜರು ಸುಸಂಸ್ಕೃತ ಮತ್ತು ಸಂಸ್ಕಾರಯುತರಾಗಿದ್ದರು. ವೇದಮೂರ್ತಿ ಮುರುಡು ಬಸವಸ್ವಾಮಿಗಳು ಅವರ ಪಿತಾಮಹರು. ಅವರ ಮಕ್ಕಳಾದ ಮಹದೇವಶಾಸ್ತ್ರಿಗಳು ಬೆಂಗಳೂರು ಜಿಲ್ಲೆಯ ನಾರುಸಂದ್ರದ ರುದ್ರಾಕ್ಷಿ ಮಠದ ಒಡೆಯರಾಗಿದ್ದರು. ಮಹದೇವಶಾಸ್ತ್ರಿಗಳ ಧರ್ಮಪತ್ನಿ ಸಾಧ್ವೀಮಣಿಯಾದ ಬಸಮ್ಮನವರು. ದಂಪತಿಗಳಿಬ್ಬರೂ ದೈವಭಕ್ತರು. ಆದರೂ ಮಕ್ಕಳಿಂದ ಮನೆ ಬೆಳಗಲಿಲ್ಲವೆಂಬ ಕೊರಗು ಅವರನ್ನು ಬಿಟ್ಟಿರಲಿಲ್ಲ. ಬಹುದಿನದ ತಪಸ್ಸಿನಿಂದ ಕ್ರಿ.ಶ. ೧೮೪೩ರಲ್ಲಿ ಬಸವಪ್ಪ ಶಾಸ್ತ್ರಿಗಳು ಜನಿಸಿದರು. ದೈವಭಕ್ತ ದಂಪತಿಗಳಿಗೆ ಹಿಡಿಸಲಾರದಷ್ಟು ಆನಂದವಾಗಿ ಹರಸಿದ ದೇವತೆಗಳನ್ನೆಲ್ಲ ಕೃತಜ್ಞತೆಯಿಂದ ನೆನೆದರು.

ಮೈಸೂರಿನ ಒಡೆಯರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರೊಮ್ಮೆ ಪ್ರಯಾಣದಲ್ಲಿರುವಾಗ ನಾರುಸಂದ್ರದ ರುದ್ರಾಕ್ಷಿ ಮಠಕ್ಕೆ ಆಗಮಿಸಿದರು. ಪ್ರಭುಗಳು ಬಂದುದರಿಂದ ಮಹದೇವಶಾಸ್ತ್ರಿಗಳು ವೇದೋಕ್ತವಾಗಿ ಆಶೀರ್ವದಿಸಿದುದನ್ನು ಕಂಡು ಅವರಿಗೆ ಆಸ್ಥಾನಕ್ಕೆ ಬರಹೇಳಿ ಪುರೋಹಿತರನ್ನಾಗಿ ನಿಯಮಿಸಿಕೊಂಡರು.

ಬಸವಪ್ಪಶಾಸ್ತ್ರಿಗಳು ಜನಿಸಿ ಆರೇಳು ವರ್ಷ ಸಂದಿರಲಿಲ್ಲ. ದುರ್ದೈವದಿಂದ ಮಹದೇವಶಾಸ್ತ್ರಿಗಳು ದೈವಾಧೀನರಾದರು, ಬಸಮ್ಮನವರಿಗೆ ಪ್ರಪಂಚದ ವ್ಯವಹಾರ ದೃಷ್ಟಿ ಅಷ್ಟಕ್ಕಷ್ಟೆ. ಹೇಗಾದರಾಗಲಿ ತಾಯಿಯ ಜೊತೆಗಾದರೂ ಬದುಕಬೇಕೆಂದರೆ ಅದೂ ಬಸವಪ್ಪಶಾಸ್ತ್ರಿಗಳಿಗೆ ಶಾಪವಾಗಿ ಅದೂ ಅಸಾಧ್ಯವಾಯಿತು. ಎಳೆಯಮಗು ಬೀದಿಪಾಲಾಗುವ ಪ್ರಸಂಗ ಬಂದಿತು. ಅವರಿವರ ತೋಳ ತೆಕ್ಕೆಯಲ್ಲಿ ನುಸುಳಿಕೊಂಡು ತಂದೆಯು ಪ್ರೌಢಾವಸ್ಥೆಯಲ್ಲಿ ಪ್ರಭುಚಿತ್ತವನ್ನು ಸೆಳೆದುಕೊಂಡಿದ್ದರೆ, ಬಾಲ್ಯಾವಸ್ಥೆಯಲ್ಲಿದ್ದ ಶಾಸ್ತ್ರಿಗಳೂ ಒಮ್ಮೆ ಪ್ರಭುಗಳ ಮನ ಸೂರೆಗೊಳಿಸುವ ಒಂದು ಘಟನೆ ಘಟಿಸಿತು.

ಪರದೇಸಿಯಾದ ಮಗು ಸುಪ್ರಭಾತಕಾಲದಲ್ಲಿ ಮೆಟ್ಟಿಲುಗಳ ಮೇಲೆ ಕುಳಿತು ತಂದೆ ಹೇಳಿಕೊಟ್ಟಿದ್ದ ಪ್ರಾರ್ಥನಾಪದ್ಯ ಮತ್ತು ಮಂತ್ರಗಳನ್ನು ಸುಮಧುರವಾಗಿ ಹಾಡುತ್ತಲಿದ್ದನು. ಪ್ರಶಾಂತವಾತಾವರಣದಲ್ಲಿ ಕಂಠಮಾಧುರ್ಯ ಆಕರ್ಷಕವಾಗಿದ್ದುದರಿಂದ ಎಚ್ಚತ್ತ ಪ್ರಭುಗಳು ಅಲ್ಲಿಗೆ ಬರುವಂತಾಯಿತು. ಮೆಟ್ಟಿಲುಗಳ ಮೇಲೆ ಹಾಡು ಮುಗಿಯುವ ವರೆಗೆ ಒಡೆಯರು ನಿಂತುಕೊಂಡೇ ಕೇಳುತ್ತಲಿದ್ದರು. ಅನಂತರ ಕಣ್ಣು ಹನಿಗೂಡಿ ತಾವು ಪ್ರಭುಗಳು ಎಂಬ ಹಮ್ಮು-ಬಿಮ್ಮು ಬಿಟ್ಟು ಆ ಮಗುವನ್ನು ಎರಡೂ ಕೈಗಳಿಂದೆತ್ತಿಕೊಂಡು ಮುದ್ದಾಡಿದರು. ಮುಂದೆ ಮುಮ್ಮಡಿ ಕೃಷ್ಣರಾಜ ಒಡೆಯರೇ ಬಾಲಕನ ಸರ್ವತೋಮುಖ ಅಭಿವೃದ್ಧಿಗೆ ಅನುವು ಮಾಡಿಕೊಟ್ಟು ಕೃಪಾಪೋಷಿತರಾದರು.

ಆಸ್ಥಾನಕವಿ ಅಳಿಯಲಿಂಗರಾಜರು, ಗರಳಪುರಿ ಶಾಸ್ತ್ರಿಗಳು, ವ್ಯಾಕರಣ ಪಂಡಿತ ಬಿ. ಮಲ್ಲಪ್ಪನವರ ಸಾನ್ನಿಧ್ಯದಲ್ಲಿ ಸಂಸ್ಕೃತ, ಕನ್ನಡ ಭಾಷೆಗಳೆರಡನ್ನು ಹಿಡಿದು ಸಂಗೀತ, ವೇದ, ದರ್ಶನ ಮುಂತಾದವುಗಳಲ್ಲಿ ವಿದ್ಯಾಭ್ಯಾಸ ನಡೆದು, ಪರಿಣತರಾದರು. ಅವರಿಗೆ ಸತ್ಪ್ರೇರಣೆಯನ್ನು ಸಕಾಲದಲ್ಲಿ ಒದಗಿಸಿದವರೆಂದರೆ ನೀಲಗಿರಿ ಪಾಪಣ್ಣನವರು, ಭಕ್ಷಿ ಮರಿಮಲ್ಲಪ್ಪನವರು, ಗಿರಿಭಟ್ಟರ ತಮ್ಮಯ್ಯನವರು,ಲಕ್ಷ್ಮೀನರಸಿಂಹಶಾಸ್ತ್ರಿಗಳು,ಮೈಸೂರು ಸದಾಶಿವರಾಯರು. ವೈಯಕ್ತಿಕವಾಗಿ ಸಾಕಷ್ಟು ಕಷ್ಟ ಜೀವನವಿದ್ದರೂ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದುದರಿಂದ ಅದನ್ನು ಒಂದು ಕ್ಷಣ ಮರೆತು ವೈಭವೋಪೇತ ಜೀವನದ ನಿಕಟ ಪರಿಚಯವಾಗಿ ಎರಡರ ಸೊಗಸನ್ನೂ ಕಂಡರು. ಹೀಗಾಗಿ ಶಾಸ್ತ್ರಿಗಳಿಗೆ ಸಮಚಿತ್ತ ಪ್ರಾಪ್ತಿಯಾಯಿತು. ಬಸವಪ್ಪಶಾಸ್ತ್ರಿಗಳ ಜ್ಞಾಪಕಶಕ್ತಿ ಎಷ್ಟಿತ್ತೆಂದರೆ ಹತ್ತುಸಾವಿರ ಶ್ಲೋಕಗಳನ್ನು ನಿರರ್ಗಳವಾಗಿ ಹೇಳುತ್ತಿದ್ದರು.

ಬಸವಪ್ಪಶಾಸ್ತ್ರಿಗಳಿಗೆ ಹದಿನೆಂಟರ ಹದಿಹರೆಯದಲ್ಲಿಯೇ ಕವಿತಾಶಕ್ತಿಯು ಪ್ರಾಪ್ತಿಸಿತು. ಅಲ್ಲಿಂದ ಕಾವ್ಯಕೃಷಿಗೆ ಪಾದಾರ್ಪಣೆ ಮಾಡಿದರು. 'ಶ್ರೀಕೃಷ್ಣರಾಜಾಭ್ಯುದಯ' ಎಂಬ ಚೊಚ್ಚಲು ಕೃತಿಯಿಂದ ಪ್ರಭುಗಳ ಚಿತ್ತವನ್ನು ಮತ್ತೊಮ್ಮೆ ಸೆಳೆದುಕೊಳ್ಳುವಲ್ಲಿ ಬಸವಪ್ಪಶಾಸ್ತ್ರಿಗಳು ಯಶಸ್ವಿಯಾದರು. ಅವರು ಕನ್ನಡ, ಸಂಸ್ಕೃತ ಭಾಷೆಗಳೆರಡರಲ್ಲಿಯೂ ಸಮನಾದ ಪ್ರಭುತ್ವ ಹೊಂದಿದ್ದರು. 'ಬಿಲ್ವವೃಕ್ಷಪೂಜಾವಿಧಿ' ಸಂಸ್ಕೃತದಲ್ಲಿ ರಚಿಸಿದ ಪ್ರಥಮ ಕಿರುಕೃತಿ. ಕವಿತ್ವಶಕ್ತಿ ವೃದ್ಧಿಯಾದಂತೆ ಆಶುಕವನಗಳ ರಚನೆಗೂ ಶಾಸ್ತ್ರಿಗಳು ಕೈಹಾಕಿದರು. ಸಂಗೀತದಲ್ಲಿ ಪರಿಣತಿ ಪಡೆದವರಾದುದರಿಂದ ಕಾವ್ಯವಾಚನ ಮಾಡಿ ಪಂಡಿತರ ಪ್ರೀತಿ ಆದರಗಳಿಗೆ ಬಹುಬೇಗನೆ ಪಾತ್ರರಾದರು.

ಮುಮ್ಮಡಿ ಕೃಷ್ಣರಾಜರ ಕಾಲಾನಂತರ ರಾಜಕುಮಾರ ಜಯಚಾಮರಾಜ ಒಡೆಯರರಿಗೆ ವಿದ್ಯಾಗುರುಗಳಾಗಿ, ಅವರ ಪೋಷಕ ಮತ್ತು ಮಾರ್ಗದರ್ಶಕರಾಗಿದ್ದರು. ದಿವಾನ ರಂಗಾಚಾರ್ಯ ಮತ್ತು ರಾ. ಬ. ಅಂಬಲ್‌ನರಸಿಂಗಯ್ಯಂಗಾರ್ಯ ರಿಂದ ಪ್ರೋತ್ಸಾಹ, ಪ್ರೇರಣೆ ಪಡೆದು ಹಲವಾರು ಕೃತಿಗಳ ರಚನೆಮಾಡಿದರು. ತರುಣ ಪ್ರಭುಗಳಿಗೆ ನಾಟಕದತ್ತ ವಿಶೇಷ ಒಲವು ಇದ್ದುದರಿಂದ ನಾಟಕಗಳ ರಚನೆಗೆ ತೊಡಗಿದರು. ಅರಮನೆ ನಾಟಕಮಂಡಳಿಗೆ ಸಂಸ್ಕೃತ ಮತ್ತು ಇಂಗ್ಲೀಷ್ ನಾಟಕ ಗಳ ಅನುವಾದಗಳನ್ನು ಒದಗಿಸಿಕೊಡುತ್ತಿದ್ದರು. ರಂಗಮಂಚದ ಮೇಲೆ ತರಲುಯೋಗ್ಯವಾದ ಕನ್ನಡಕೃತಿಗಳೇ ಇಲ್ಲದ ಸಂದಿಗ್ಧಕಾಲದಲ್ಲಿ ನಾಟಕಗಳ ರಚನೆಯಿಂದ 'ನಾಟಕ ಪಿತಾಮಹ'ರೆನಿಸಿಕೊಂಡರು. ಆಸ್ಥಾನದಲ್ಲಿ ಅನೇಕ ಜನ ಕವಿಗಳಿಂದ ರಚಿತವಾದ ಕೃತಿಗಳಿದ್ದರೂ ಅವು ಹೆಚ್ಚು ಪ್ರಸಿದ್ಧಿಗೆ ಬರಲಿಲ್ಲ.

ಬಸವಪ್ಪ ಶಾಸ್ತ್ರಿಗಳು ಸ್ವತಃ ರಚಿಸಿದ ಕೃತಿಗಳಿಗಿಂತ ಅನುವಾದ ಕೃತಿಗಳೇ ಹೆಚ್ಚು ಪ್ರಚಾರಗೊಂಡವು. ಅವರ ಭಾಷಾಂ ತರ ಕೃತಿಗಳಲ್ಲಿಯೆ ಮೇರು ಕೃತಿ ಎಂದರೆ 'ಕರ್ಣಾಟಕ ಶಾಕುಂತಲ ನಾಟಕ'. ಅದು ಸ್ವತಂತ್ರ ಕೃತಿ ಎಂದು ಹೇಳುವಷ್ಟರ ಮಟ್ಟಿಗೆ ಮೂಲವನ್ನು ಅನುವಾದಿಸಿರುವಲ್ಲಿ ಚಾತುರ್ಯ ತೋರಿಸಿ ಯಶಗಳಿಸಿದ್ದಾರೆ.

ಬಸವಪ್ಪ ಶಾಸ್ತ್ರಿಗಳ ಕೃತಿಗಳು ಇಂತಿವೆ :–

**I ಸ್ವತಂತ್ರ ಕೃತಿಗಳು:**

೧) ಸಾವಿತ್ರೀ ಚರಿತ್ರೆ (ಭಾಮಿನೀ ಷಟ್ಪದಿ) ೨) ದಮಯಂತೀ ಸ್ವಯಂವರ (ಚಂಪೂ) ೩) ನೀತಿಸಾರ ಸಂಗ್ರಹ (ಕಂದ) ೪) ರೇಣುಕ ವಿಜಯ (ಅಪೂರ್ಣ) (ಚಂಪೂ) ೫) ಶಂಕರ ಶತಕ(ಅಪೂರ್ಣ) (ಕೆಲವು ಮುಕ್ತಕಗಳು) ೬) ಮೈಸೂರು ರಾಷ್ಟ್ರಗೀತೆ ೭) ಚರಮ ಗೀತೆಗಳು.

**II ಅನುವಾದ ಕೃತಿಗಳು:**

೧) ಕರ್ಣಾಟಕ ಶಾಕುಂತಲ ನಾಟಕಂ ೨) ಕನ್ನಡ ವಿಕ್ರಮೋರ್ವಶೀಯ ನಾಟಕಂ (ಅಪೂರ್ಣ) ೩) ಕನ್ನಡಉತ್ತರ ರಾಮ ಚರಿತ ನಾಟಕಂ ೪) ಕನ್ನಡ ರತ್ನಾವಳೀ ನಾಟಕಂ ೫) ಕರ್ಣಾಟಕ ಚಂಡಕೌಶಿಕ ನಾಟಕಂ (ಅಪೂರ್ಣ) ೬) ಶೂರ ಸೇನ ಚರಿತ್ರೆ (Othello) ೭) ಕನ್ನಡ ಭರ್ತೃಹರಿ ಸುಭಾಷಿತ ಶತಕತ್ರಯ ೮. ವಿಮರ್ಶೆಯ ಒರೆಗಲ್ಲು.

**III ಸಂಸ್ಕೃತ ಕೃತಿಗಳು:**

೧) ಅಂಬಾಷೋಡಶಮಂಜರೀ ೨) ಆರ್ಯಾಶತಕಂ ೩) ತ್ರಿಷಷ್ಟಿಪುರಾತನ ಗಣಸ್ತವಃ (ಕನ್ನಡ ತಾತ್ಪರ್ಯಸಹಿತ) ೪) ಶಿವಾಷ್ಟಕಂ (ಕನ್ನಡ ತಾತ್ಪರ್ಯ ಸಹಿತ) ೫) ಶಿವಭಕ್ತಿ ಸುಧಾತರಂಗಿಣೀ (ಕನ್ನಡ ತಾತ್ಪರ್ಯ ಸಹಿತ)

**IV ಅಪ್ರಕಟಿತ ಕೃತಿಗಳು:**

೧) ಮಾಲತೀ ಮಾಧವ (ನಾಟಕ) ೨) ಶಂಕರೀ ನಕ್ಷತ್ರಮಾಲಾ ೩) ಬಸವಾಷ್ಟಕಂ ೪) ಬಿಲ್ವವೃಕ್ಷ ಪೂಜಾವಿಧಿಃ (ಸಂಸ್ಕೃತ) ೫) ಹರ್ಷಚರಿತ್ರೆ (ಕನ್ನಡ) (ಚಂಪೂ) ೬) ಬಾಲಿಕಾಗೀತ ಮುಕ್ತಾಕಲಾಪ (ಗೀತೆಗಳು) ೭) ಮಾಲವಿಕಾಗ್ನಿಮಿತ್ರ.

**V ಅಷ್ಟಕ ಮತ್ತು ದಂಡಕಗಳು:**

೧) ದಕ್ಷಿಣಾಮೂರ್ತ್ಯಷ್ಟಕ ೨) ಅಷ್ಟಮೂರ್ತಿತನಯಾಷ್ಟಕ ೩) ಸದಾಶಿವಾಷ್ಟಕ ೪) ಸರಸ್ವತೀ ದಂಡಕಂ. ಮೇಲಿನವು ಗಳಲ್ಲಿ ಮಾಲವಿಕಾಗ್ನಿಮಿತ್ರ, ಮಾಲತಿಮಾಧವ, ಬಿಲ್ವವೃಕ್ಷಪೂಜಾವಿಧಿಃ, ಶ್ರೀ ಕೃಷ್ಣರಾಜಾಭ್ಯುದಯಂ, ಬಾಲಿಕಾಗೀತ ಕಲಾಪ, ಹರ್ಷಚರಿತೆ, ಶಂಕರಚರಿತೆಗ್ರಂಥಗಳು ಕಾಲಗರ್ಭದಲ್ಲಿ ಅಡಗಿ ಸಂಶೋಧಕರಿಗೆ ಆಹ್ವಾನವಿತ್ತಿವೆ. ಶ್ರೀ ಟಿ. ಎನ್. ಚೆನ್ನಪ್ಪ ನವರು ಇನ್ನೂ ಕೆಲವು ಕೃತಿಗಳಿರಬೇಕೆಂದು ಅಭಿಪ್ರಾಯಪಡುತ್ತಾರೆ.

ಮೊದಲೇ ವಿದ್ವಜ್ಜನರ ಪ್ರೀತಿಗೆ ಪಾತ್ರರಾದ ಶಾಸ್ತ್ರಿಗಳಿಗೆ ಜನಾನುರಾಗಕ್ಕೆ ಬಾಧ್ಯವಾದ 'ಕರ್ಣಾಟಕ ಶಾಕುಂತಲನಾಟಕ' ವನ್ನು ವಿದ್ವತ್ಸಭೆಯಲ್ಲಿ ಕಾವ್ಯವಾಚನ ಮಾಡುವ ಸಂದರ್ಭ ಒದಗಿಬಂದಿತು. ದಿವಾನ ರಂಗಾಚಾರ್ಯರು ಅಂದಿನ ಸಭೆಗೆ ಅಧ್ಯಕ್ಷ ರಾಗಿದ್ದರು. 'ಶೃಂಗಾರಕ್ಕೆ ಆಗರಮೆನಿಸಿದ ಶಾಕುಂತಳವನ್ನು ಉದ್ದಾಮ ಸಾಹಿತ್ಯಮುಂ ಮೇಣ್ ಸಂಗೀತ ಪ್ರೌಢಿಯುಂ ಸಂಗಳಿಸಿ ಕರ್ಣಾಟ ವಾಗ್ಧಾಟಿಯಿಂ'ದ ವಾಚಿಸಿ ಜನಮನವನ್ನು ಸೂರೆಗೊಳಿಸಿದರು. ಅಂದಿನ ಸನ್ನಿವೇಶವನ್ನು ಚಿತ್ರಿಸುವ ಪದ್ಯವಿದು:

ಕರ್ಣಾನಂದಮುದಾಗಲ್। ಕರ್ಣಾಟಕ ಕಾಳಿದಾಸನೆಂಬೀ ಬಿರುದಂ।
ತೂರ್ಣದಿನಿತ್ತಂ ವಿದ್ವ। ತ್ಪೂರ್ಣ ಸಭಾಮಂಡಳಿಯೊಳಗಾ ಮಂತ್ರೀಶಂ

ಸ್ವಾರಸ್ಯಕರವಾದ ಸಂಗತಿಯೆಂದರೆ ಶಾಸ್ತ್ರಿಗಳು ಇಂಗ್ಲಿಷನ್ನು ಬಲ್ಲವರಲ್ಲ. ಆದರೂ ಶೂರಸೇನ ಚರಿತ್ರೆಯನ್ನು ಇಂಗ್ಲೀಷಿ ನಿಂದ ಕನ್ನಡಕ್ಕೆ ಅನುವಾದಿಸಿದರು. ಸಿ. ಸುಬ್ಬರಾಯ ಎಂಬ ಆಂಗ್ಲಪಂಡಿತರಿಂದ ಓದಿ, ಕೇಳಿ ತಿಳಿದು ಭಾಷಾಂತರಿಸಿದರೆಂದರೆ ನಂಬುವುದು ಬಲುಕಷ್ಟ. ಅವರ ಮೇಲೆ ಕನ್ನಡನಾಡಿನ ಹಿರಿಯಕವಿಗಳ ಪ್ರಭಾವವಿದ್ದರೂ ತಮ್ಮದೇ ಆದ ಸತ್ವಶೀಲಗಳಿಂದ ಬೆಳ

ಗಿದ್ದಾರೆ. ಬಸವಪ್ಪ ಶಾಸ್ತ್ರಿಗಳು ಆಸ್ಥಾನಕವಿಗಳಾಗಿ, ವಿದ್ವಜ್ಜನರ ಪ್ರೀತಿಗೆ ಪಾತ್ರರಾಗಿ ನಾಡಿನ ಜನರ ಮನವನ್ನು ಅಲ್ಪಕಾಲದಲ್ಲಿಯೇ ಆಕರ್ಷಿಸಿಕೊಂಡ ಧೀಮಂತಕವಿ. ಸ್ವತಂತ್ರಕೃತಿಗಳಿಗಿಂತ ಅನುವಾದ ಕೃತಿಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಪೂರ್ವವಾದ ಸಂಗತಿ. ಅದು ಶಾಸ್ತ್ರಿಗಳ ವಿಶಿಷ್ಟಲಕ್ಷಣವೂ ಆಗಿದೆ. ಸಾಹಿತ್ಯ ಚರಿತ್ರೆಯಲ್ಲಿ ಅವರ ಸ್ಥಾನ ಚಿರಸ್ಥಾಯಿಯಾಗಿ ನಿಲ್ಲುವಂಥದು.

ಕ್ರಿ.ಶ. ೧೮೯೧ರಲ್ಲಿ ಮೈಸೂರಿನಿಂದ ಕುದುರೆಗಾಡಿಯಲ್ಲಿ ಪ್ರಯಾಣಮಾಡುವಾಗ ಅಪಘಾತ ಸಂಭವಿಸಿ ವಿಧಿವಶವಾದರು, ಆಗ ಅವರಿಗೆ ಕೇವಲ ನಾಲ್ವತ್ತೆಂಟು ವರ್ಷ. ಹೀಗೆ ಅನಿರೀಕ್ಷಿತದುರಂತ ಮರಣಕ್ಕೆ ಈಡಾಗಿ ಸಮಸ್ತ ಕನ್ನಡ ನಾಡನ್ನು ಶೋಕ ಸಂಕುಲಕ್ಕೆ ನೂಕಿ ಅಪಾರ ದೂರ ಕ್ರಮಿಸಿದರು. ಆ ಸಂದರ್ಭದ ನೊಂದ ಕವಿಹೃದಯ ಹೀಗೆ ಮಿಡಿದಿದೆ:

ಕನ್ನಡ ಕಬ್ಬದ ಹಬ್ಬಮು । ದಿನ್ನೆಲ್ಲಿ ಮನೋಜ್ಞಮೆನಿಪ ಪುಸ್ತಕಪಠನಂ।
ಇನ್ನೆಲ್ಲಿ ಸುಕವಿತಾಂಗನೆ!ಯುನ್ನತಮಾದುತ್ತಮಾಂಗೆ ಕಾದುದು ನಮನಂ॥
ಬಸವಪ್ಪಶಾಸ್ತ್ರಿಯಳಿಯಲ್। ವ್ಯಸನಮದೆಳ್ಳಿನಿತುಮೆನ್ನಮನದೊಳಗಿಲ್ಲಂ॥
ರಸಕವಿತಾಂಗನೆ ಹಿಮದೊಳ್। ಬಸವಳಿದಬ್ಬಿನಿವೊಲಾದಳೆಂಬುದೇ ದುಗುಡಂ॥

**ಗ್ರಂಥಋಣ**

೧) ಅಭಿನವಕಾಳಿದಾಸ ಬಸವಪ್ಪ ಶಾಸ್ತ್ರಿಗಳು, ಸಂಪಾದಕರು : ಎಂ. ಜಿ. ನಂಜುಂಡಾರಾಧ್ಯ ೨) ಬಸವಪ್ಪ ಶಾಸ್ತ್ರಿಗಳು: ಡಾ॥ ಬಿ. ಶಿವಮೂರ್ತಿಶಾಸ್ತ್ರಿ ೩) ಬಸವಪಥ-ಸಂಪುಟ ೧ ಸಂಚಿಕೆ-೬.

## ಬಸವಪ್ಪಶಾಸ್ತ್ರಿಗಳ ಕಾವ್ಯಪ್ರತಿಭೆ

**–ಡಾ॥ ರಂ. ಶ್ರೀ. ಮುಗಳಿ**

೧೯ನೆಯ ಶತಮಾನದ ಉತ್ತರಾರ್ಧವು ಕನ್ನಡಸಾಹಿತ್ಯಕ್ಕೆ ಸಂಕ್ರಮಣ ಕಾಲವಾಗಿತ್ತು. ಅದರ ಪೂರ್ವಾರ್ಧದಿಂದಲೇ ಕ್ರಿಶ್ಚನ್ ಮಿಶನರಿಗಳು ಬೈಬಲ್ ಗ್ರಂಥದ ಕನ್ನಡ ಅನುವಾದ ಮುಂತಾದ ಮತೀಯ ಪುಸ್ತಕಗಳನ್ನು ಬರೆದು ಪ್ರಕಟಿಸುತ್ತಿದ್ದರಾದರೂ ಇಂಗ್ಲೀಷ್ ಸಾಹಿತ್ಯದ ಪ್ರಭಾವವು ವಿದ್ಯಾವಂತರ ಮೇಲೆ ಆಗತೊಡಗಿತ್ತಾದರೂ ಕನ್ನಡ ಸಾಹಿತ್ಯವು ಹಳೆಯ ಜಾಡಿನಲ್ಲಿಯೆ ಹೆಚ್ಚಾಗಿ ನಡೆದಿತ್ತು. ಈ ಕಾಲದಲ್ಲಿ ಮುಮ್ಮಡಿ ಕೃಷ್ಣರಾಜ ಮತ್ತು ಅಳಿಯ ಲಿಂಗರಾಜ ಇವರು ಬರೆದ ಇಲ್ಲವೆ ಇವರ ಹೆಸರಿನಲ್ಲಿ ಬರೆಯಲಾದ ಸುಮಾರು ನೂರುಗ್ರಂಥಗಳಲ್ಲಿ ಸಾಂಪ್ರದಾಯಿಕ ಆಸ್ಥಾನಸಾಹಿತ್ಯದ ಸೊಗಡೇ ಹೆಚ್ಚಾಗಿರುತ್ತದೆ. ಇದ್ದುದರಲ್ಲಿ ಹೊಸಗನ್ನಡದ ಒಂದು ವೈಶಿಷ್ಟ್ಯವಾದ ಗದ್ಯಪ್ರಾಧಾನ್ಯದ ಗಾಳಿ ಆಗಲೇ ಬೀಸತೊಡಗಿತ್ತೆಂದು ತಿಳಿಯಬಹುದು.

ಯಾವುದೇ ಭಾಷೆಯ ಪುನರುಜ್ಜೀವನಯುಗದಲ್ಲಿ ಮೊದಲು ಅನುವಾದ ಗ್ರಂಥಗಳು ವಿಪುಲವಾಗಿ ರಚಿತವಾಗುವುದರಿಂದ ಮೇಲೆ ಕಾಣಲಿಕ್ಕೆ ಸೃಜನಶೀಲತೆಯ ಕೊರತೆಯ ಕಾಲವಿದೆಂದು ನಾವು ಒಮ್ಮೊಮ್ಮೆ ತಿಳಿಯುತ್ತೇವೆ. ಅನುವಾದ ಗ್ರಂಥರಚನೆಯಲ್ಲಿಯೆ ಸೃಜನಾತ್ಮಕ ಗುಣವಿರುವುದೆಂಬುದನ್ನು ಮುಂದೆ ಬರಲಿರುವ ಸೃಜನಶೀಲ ಕೃತಿಗಳ ನಿರ್ಮಾಣಕ್ಕೆ ಅನುವಾದ ಗ್ರಂಥಗಳು ನಾಂದಿ ಹಾಕುತ್ತವೆಂಬುದನ್ನು ನಾವು ಕೆಲವು ಸಲ ಗಮನಿಸುವದಿಲ್ಲ. ಅಂತೇ ಒಟ್ಟಿನಲ್ಲಿ ಅವಲೋಕಿಸಿದಾಗ '೧೯ನೇ ಶತಮಾನದ ಹಣೆಬರಹವೇ ಹೀಗೆಂದು ತೋರುತ್ತದೆ. ರಾಜಾಶ್ರಯದಿಂದ ದೊರೆತ ಸ್ವಾಸ್ಥ್ಯದಲ್ಲಾಗಲಿ ಯಾವ ಆಶ್ರಯವೂ ಇಲ್ಲದೆ ಇರುವ ಅಸ್ವಾಸ್ಥ್ಯದಿಂದಾಗಲಿ ವಿಪುಲವಾದ ಗ್ರಂಥಗಳು ಹುಟ್ಟಿ ಹೊಸಗನ್ನಡದ ಪೀಠಿಕೆಯನ್ನು ಹಾಕಿದ್ದರೂ ಅವುಗಳಲ್ಲಿ ನೈಜ ಪ್ರತಿಭೆಯ ಹೊಳಪು ಅಪರೂಪವಾಗಿ ಕಾಣುತ್ತದೆ. ಬರವಣಿಗೆ ಹಳೆಯ ರೀತಿಯಲ್ಲಾದರೂ ಇದೆ. ಹೊಸರೀತಿಯಲ್ಲಿ ಇದ್ದುದಾದರೂ ಅನುವಾದರೂಪವಾಗಿ ಇದೆ. ಇವುಗಳ ಅಂತರಂಗದಲ್ಲಿ ಮುಂಬರುವ ನಿರ್ಮಾಣಶೀಲ ಪ್ರತಿಭೆ ಹೊಂಚುಹಾಕುತ್ತಿರಬೇಕು' ಎಂಬ ಹೇಳಿಕೆಗೆ ಮಹತ್ವ ಬರುತ್ತದೆ. ಬಸವಪ್ಪಶಾಸ್ತ್ರಿಗಳು ಇಂಥ ಪ್ರತಿಭೆಯನ್ನು ಪಡೆದವರಾಗಿ ಈ ಕಾಲವನ್ನು ಬೆಳಗಿದರು.

ಧಾರ್ಮಿಕ ನಿಷ್ಠೆಯುಳ್ಳ ಶಾಸ್ತ್ರಿಗಳ ಮನೆತನದಲ್ಲಿ ಜನ್ಮತಾಳಿ ಕನ್ನಡ–ಸಂಸ್ಕೃತ ಎರಡೂ ಭಾಷೆಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಬಸವಪ್ಪಶಾಸ್ತ್ರಿಗಳು ತಮ್ಮ ಕಾವ್ಯಪ್ರತಿಭೆಯ ಆವಿಷ್ಕಾರಕ್ಕೆ ಅವಶ್ಯಕವಾದ ವ್ಯುತ್ಪತ್ತಿಯನ್ನು ಪಡೆದಿದ್ದರು. ಹಳೆಯ ಜಾಡಿನಲ್ಲಿ ಕೃತಿರಚನೆ ಮಾಡಬೇಕೆಂಬ ಆಸೆಯೊಡನೆ ಅವರಲ್ಲಿ ಹೊಸ ವಿಷಯ ಮತ್ತು ಹೊಸಶೈಲಿ ಇವುಗಳ ಬಗ್ಗೆ ಆಸಕ್ತಿ ಉಂಟಾಗಿತ್ತು. ಅಂತೇ ಅವರು ಅನುವಾದಕ್ಕಾಗಿ ಇಂಗ್ಲಿಷ್‌ನಾಟಕವನ್ನು ಆರಿಸಿದರು, ಹೊಸಗನ್ನಡವನ್ನು ತಮ್ಮ ಗದ್ಯದಲ್ಲಿ ಬಳಸಿದರು. ಅವರು ಇನ್ನೂ ಹೆಚ್ಚುಕಾಲ ಬದುಕಿದ್ದರೆ ಇಪ್ಪತ್ತನೆಯ ಶತಮಾನದ ಪ್ರಭಾವಗಳಿಗೆ ಒಳಗಾಗಿ ಹೊಸರೀತಿಯ ಕವನಗಳನ್ನು ನಾಟಕಗಳನ್ನು ಬರೆಯುವ ಸಂಭವವಿತ್ತು. ಅದರಿಂದ ಈಗ ಭಾಷಾಂತರ ರೂಪದಲ್ಲಿ ಹೆಚ್ಚಾಗಿ ಪ್ರಕಟವಾದ ಅವರ ಕಾವ್ಯಪ್ರತಿಭೆ ಸ್ವತಂತ್ರಕೃತಿನಿರ್ಮಾಣದಲ್ಲಿ ಅಭಿವ್ಯಕ್ತಿಯನ್ನು ಅರಸುತ್ತಿತ್ತು. ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆ ಇನ್ನೂ ಎದ್ದು ಕಾಣುವಂತಾಗುತ್ತಿತ್ತು. ಅವರ ಈಗಿನ ಕೃತಿಗಳಲ್ಲಿ ಕಣ್ಣಿಟ್ಟು ನೋಡಿದರೆ ಈ ಸಂಭವನೀಯತೆಯ ಕುರುಹುಗಳು ದೊರೆಯುತ್ತವೆ.

ಬಸವಪ್ಪ ಶಾಸ್ತ್ರಿಗಳ ಸ್ವತಂತ್ರಕೃತಿಗಳಲ್ಲಿ ಸಾಂಪ್ರದಾಯಿಕ ವಿಷಯಗಳಿದ್ದು ಒಂದು ಬಗೆಯ ಪರತಂತ್ರತೆ ಇದ್ದರೆ ಭಾಷಾಂತರ ಕೃತಿಗಳಲ್ಲಿ ಭಾಷಾಂತರ ಪ್ರಕ್ರಿಯೆಯಲ್ಲಿ ಅವಶ್ಯವಾದ ಸ್ವತಂತ್ರತೆ ಅಥವ ಸೃಜನಶೀಲತೆ ಕಂಡುಬರುತ್ತದೆ. ಅಂತೇ ಅವರ ಕಾವ್ಯ ಪ್ರತಿಭೆಗೆ ಅನುವಾದ ಗ್ರಂಥಗಳಲ್ಲಿ ಹೆಚ್ಚಿನ ಅವಕಾಶ ದೊರೆತಿದ್ದು ಕನ್ನಡಸಾಹಿತ್ಯಕ್ಕೆ ಅವು ಅಮೂಲ್ಯವಾದ ಕಾಣಿಕೆಗಳಾಗಿ ಪರಿಣಮಿಸಿರುತ್ತವೆ. ಅವರ ಸ್ವತಂತ್ರ ಕೃತಿಗಳೆಂದರೆ ಸಾವಿತ್ರೀಚರಿತ್ರೆ, ದಮಯಂತೀ ಸ್ವಯಂವರ, ನೀತಿ ಸಾರ ಸಂಗ್ರಹ, ರೇಣುಕ ವಿಜಯ (ಅಪೂರ್ಣ), ಶಂಕರ ಶತಕ (ಅಪೂರ್ಣ)ಮತ್ತು ಕೆಲವು ಮುಕ್ತಕಗಳು ಎಂದು ಗುರುತಿಸಲಾಗಿದೆ. ಇವುಗಳಲ್ಲಿ ಅವರ ನಿರರ್ಗಳವಾದ ರಚನೆಯ ಮತ್ತು ಶೈಲಿಯ ಸಾಮರ್ಥ್ಯವನ್ನು ನೋಡಿ ಮೆಚ್ಚಿದರೂ ಒಟ್ಟಿನಲ್ಲಿ ಇವುಗಳ ವಿಷಯಪರಾಧೀನತೆ, ವಿಚಾರ ಪರತಂತ್ರತೆ ಮತ್ತು ಪ್ರಾಚೀನ ಕವಿಸಮಯದ ಅನುಸರಣ ಇವನ್ನು ಅವಲೋಕಿಸಿದಾಗ ನಾವು ವ್ಯಕ್ತಮಾಡಿದ ಅಭಿಪ್ರಾಯದ ಸತ್ಯತೆ ಅರಿವಾಗುತ್ತದೆ. ಸಾವಿತ್ರಿಯಚರಿತ್ರೆ ಇದು ವಿಷಯದದೃಷ್ಟಿಯಿಂದ ತೀರ ಹಳೆಯದು. ಕಥನಕ್ರಮವು ಹಳೆಯದೇ, ಭಾಮಿನೀಷಟ್ಪದಿಯಲ್ಲಿ ಇವರ ರಚನೆ ಕುಮಾರವ್ಯಾಸ–ಚಾಮರಸರ ಜಾಡಿನಲ್ಲಿ ತಡೆಯಿಲ್ಲದೆ ತೊಡಕಿಲ್ಲದೆ, ಸಾಗಿದೆ. ಕೆಲವಡೆಗೆ ಕುಮಾರವ್ಯಾಸನ ಪ್ರಭಾವವನ್ನು ಗುರುತಿಸಬಹುದು. ಉದಾಹರಣೆಗೆ,

> ನೋಡಿ ದಣಿಯರು ಮಂಗಳ ಸಿಂಗರ| ಮಾಡಿ ದಣಿಯರು ನೇಹ ಮಿಗೆ ಮು। ದ್ದಾಡಿ ದಣಿಯರು ಮನದೊಳಡಿಗಡಿಗಣುಗಿ ಬೇಡಿದುದ॥
> ನೀಡಿ ದಣಿಯರು ನಿಚ್ಚಲವಳೊಡ| ನಾಡಿ ದಣಿಯರು ಹರುಷಗಡಲೊಳು। ಮೂಡಿ ಮುಳುಗುಪರವಳ ಜನನೀಜನಕರನವರತ॥ (ಸಾಚ.೧-೨೫)

ಈ ಪದ್ಯದಲ್ಲಿಯ ಪುನರುಕ್ತಿ 'ಹೊರೆಯ ಸಖಿಯರ ನೋಟ ಮೈಯುಲಿ ಹರಿದು ಬಳಲದು ಚಿತ್ರವೀಕೆಯ ಧರಿಸಿ ಕುಸಿಯದು' (ಆದಿ ಪರ್ವ ೨೯–೧೦)ಇಂಥ ಕುಮಾರವ್ಯಾಸನರೂಪ ವರ್ಣನಾತ್ಮಕ ಪದ್ಯಗಳನ್ನು ನೆನಪಿಸುತ್ತದೆ. 'ದಮಯಂತೀ ಸ್ವಯಂವರಂ'-ಇದು ಬಸವಪ್ಪಶಾಸ್ತ್ರಿಗಳ ಚಂಪೂಕಾವ್ಯ. ದಮಯಂತೀ ಸ್ವಯಂವರದವರೆಗಿನ ಕಥೆಗೆ ಸೀಮಿತವಾಗಿದ್ದರೂ ನಾಲ್ಕುಆಶ್ವಾಸಗಳ ಈ ಚಿಕ್ಕ ಚಂಪೂವಿನ ಕಥೆ ಪ್ರಾಚೀನವಾದದ್ದೇ. ಕನ್ನಡದಲ್ಲಿಯುಂತೂ ಚೌಂಡರಸನು ಬರೆದ 'ನಳ ಚರಿತ್ರೆ'ಚಂಪೂ ರೂಪದಲ್ಲಿದೆ. ಆಮೇಲೆ ಕನಕದಾಸನು ಭಾಮಿನಿಷಟ್ಪದಿಯಲ್ಲಿ ಬರೆದ ನಳಚರಿತ್ರೆ ಪ್ರಸಿದ್ಧವಾಗಿದೆ. ಇದೇ ವಿಷಯವನ್ನು ಬಸವಪ್ಪಶಾಸ್ತ್ರಿಗಳು ತಮ್ಮ ಮಾರ್ಗಕಾವ್ಯರಚನೆಯ ಸಾಮರ್ಥ್ಯವನ್ನು ಒರೆಗೆ ಹಚ್ಚಿ ನೋಡಲೆನ್ನುವಂತೆ ಸಾಂಪ್ರದಾಯಕವಾದ ದಾಟಿಯಲ್ಲಿ ನಿರೂಪಿಸಿದ್ದಾರೆ. ಸಾವಿರಾರು ವರ್ಷಗಳಿಂದ ಬೆಳೆದುಬಂದ ಚಂಪೂಕೃತಿಗಳ ಸಾಲಿನಲ್ಲಿ ಇದೊಂದು ನಿರ್ದುಷ್ಟವಾದ ಕೃತಿಯೆಂದು ಹೇಳಬಹುದಾದರೂ ಇದರಲ್ಲಿ ಯಾವ ಹೆಚ್ಚಿನ ನವೀನತೆಯಿಲ್ಲ. ಒಂದು ದೃಷ್ಟಿಯಿಂದ ಮುಂದೆ ಭಾಷಾಂತರಿತವಾದ ಸಂಸ್ಕೃತ ನಾಟಕಗಳಲ್ಲಿ ಬಂದಿರುವ ಅಕ್ಷರವೃತ್ತ ಮತ್ತು ಕಂದಪದ್ಯಗಳ ರಚನೆಗೆ ಪೂರ್ವಭಾವಿಯಾಗಿ ಇಲ್ಲಿ ಕವಿ ತನ್ನನ್ನೇ ತಾನು ಪಳಗಿಸಿಕೊಳ್ಳಲು ಈ ಕಾವ್ಯ ಉಪಯುಕ್ತವಾಯಿತೆಂದು ಹೇಳಬಹುದು. ಇದೇ ಮಾತನ್ನು 'ರೇಣುಕ ವಿಜಯ'ಮತ್ತು 'ಶಂಕರಶತಕ'ಮುಂತಾದ ಅಪೂರ್ಣ ಕೃತಿಗಳ ವಿಷಯದಲ್ಲಿಯೂ ಹೇಳಲು ಅಡ್ಡಿಯಿಲ್ಲ. ಬಸವಪ್ಪಶಾಸ್ತ್ರಿಗಳ ಭಾಷಾಂತರಕೃತಿಗಳೆಂದರೆ ಕಾಳಿದಾಸನ ಶಾಕುಂತಲ ಮತ್ತು ವಿಕ್ರಮೋರ್ವಶೀಯ ನಾಟಕಗಳು, ಭವಭೂತಿಯ ಉತ್ತರ ರಾಮಚರಿತ, ರತ್ನಾವಳಿ ಮತ್ತು ಚಂಡಕೌಶಿಕ ನಾಟಕಗಳು– ಹೀಗೆ ಐದು ಸಂಸ್ಕೃತ ನಾಟಕಗಳಲ್ಲದೆ ಶೇಕ್ಸಪಿಯರನ ಅಥೆಲ್ಲೊ ನಾಟಕದ 'ಶೂರಸೇನಚರಿತ್ರೆ'ಎಂಬ ಅನುವಾದ ಮತ್ತು ಭರ್ತೃಹರಿಯ ಶತಕತ್ರಯದ ಅನುವಾದ ಇವು. ಈ ಮೊದಲು ಸಿಂಗರಾರ್ಯನ 'ಮಿತ್ರವಿಂದಾಗೋವಿಂದ'ಎಂಬ ಅನುವಾದಿತ ನಾಟಕವು ಮೊದಲನೆಯದಾಗಿ, ಸ್ವತಂತ್ರಕೃತಿಯೆಂಬ ಆಭಾಸದಲ್ಲಿ ರಚಿತವಾಗಿತ್ತು. ಅದರ ತರುವಾಯ ಭಾಷಾಂತರವೆಂಬ ನಿಚ್ಚಳವಾದ ತಲೆಕಟ್ಟಿನಲ್ಲಿ ರಚಿತವಾದ ಈ ಐದಾರು ನಾಟಕಗಳು ಕನ್ನಡ ನಾಟಕಕ್ಷೇತ್ರಕ್ಕೆ ಮತ್ತು ಹೊಸದಾಗಿ ಕಣ್ದೆರೆಯುತ್ತಿರುವ ಕರ್ನಾಟಕ ರಂಗಭೂಮಿಗೆ ಮಹತ್ವದ ಕಾಣಿಕೆಗಳಾಗಿ ಉಪಲಬ್ಧವಾದವು. ಇವನ್ನು ರಚಿಸುವಲ್ಲಿ ಶಾಸ್ತ್ರಿಗಳು ತಮ್ಮ ಉಭಯ ಭಾಷೆಗಳ ಪರಿಜ್ಞಾನವನ್ನು ಮಾತ್ರವಲ್ಲ ತಮ್ಮ ಕಾವ್ಯಪ್ರತಿಭೆಯನ್ನು ಎಷ್ಟರಮಟ್ಟಿಗೆ ದುಡಿಸಿದ್ದಾರೆ ಎಂಬುದು ಅವುಗಳ ಕೂಲಂಕಷವಾದ ಪರಿಶೀಲನೆಯಿಂದ ಅರಿತುಕೊಳ್ಳಬಹುದು. ಇಲ್ಲಿ ಕೆಲವು ನಿದರ್ಶನಗಳನ್ನು ಮಾತ್ರ ಕೊಟ್ಟು ಮೇಲಿನ ಹೇಳಿಕೆಯನ್ನು ವಿವರಿಸಬಯಸುತ್ತೇವೆ. ಸಾಮಾನ್ಯವಾಗಿ ಇಲ್ಲಿಯ ಭಾಷಾಂತರ ಕ್ರಮವೆಂದರೆ ಮೂಲಾನುಸಾರಿಯಾಗಿ ಅಲ್ಲಿರುವ ಅರ್ಥ ಸಂಪತ್ತಿಯನ್ನು ಕನ್ನಡದಲ್ಲಿ ತರುವುದರ ಜೊತೆಗೆ ಅಚ್ಚಕನ್ನಡ ನುಡಿಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಬಳಸಿ ಬರವಣಿಗೆ ಮೂಲತಃ ಕನ್ನಡದಲ್ಲಿಯೆ ಆಗಿರಬೇಕು ಎಂಬ ಸಹಜತೆಯ ಪರಿಣಾಮವನ್ನು ಉಂಟುಮಾಡುವುದಾಗಿದೆ. ಇಷ್ಟಾದರೂ ಕೆಲವೆಡೆಗೆ ಮೂಲ ಸಂಸ್ಕೃತ ಪದಗಳೂ ಸಮಾಸಗಳೂ ವಿಶೇಷತಃ ಪದ್ಯಾನುವಾದದಲ್ಲಿ ಬಳಕೆಯಾಗಿವೆ. ಅದಕ್ಕೆ ಛಂದಸ್ಸಿನ ಮತ್ತು ವಿಶೇಷವಾಗಿ ದ್ವಿತೀಯಾಕ್ಷರ ಪ್ರಾಸದ ನಿಯಮಗಳು ಕಾರಣವಾಗಿರಬಹುದು. ಉದಾಹರಣೆಗೆ,

> ಯೋಷಾಜನಮೊಲವಿಂದೆ ಶಿ। ರೀಷಮನತಿಮೃದುಲಕೇಸರಾಗ್ರಮನಳಿಯಿಂ॥
> ದೀಷಚ್ಚುಂಬಿತಮಂ ಸವಿ। ಶೇಷದಯಂ ಕನ್ನವುರವನೆಸಗುವುದಲ್ತೆ॥ (ಶಾಕುಂ. ೧-೪)

ಇಲ್ಲಿ 'ಈಷಚ್ಚುಂಬಿತ' ಎಂಬುದು ಮೂಲದಲ್ಲಿದ್ದಂತೆಯೆ ಉಳಿದಿರುವುದಕ್ಕೆ ಪ್ರಾಸಸ್ಥಾನದಲ್ಲಿ ಅದು ಸರಿಯಾಗಿ ಹೊಂದುವುದಲ್ಲದೆ ಕಂದಪದ್ಯದ ಅಡಕದಲ್ಲಿ ಅದರ ಭಾವವನ್ನು ಕನ್ನಡಿಸುವುದು ಶಕ್ಯವಿಲ್ಲ ಎಂಬುದು ಕಾರಣವಾಗಿರಬೇಕು. ಇಂಥ ಉದಾ

ಹರಣೆಗಳಲ್ಲಿ ಸಂಸ್ಕೃತವನ್ನು ಅರಿಯದವರಿಗೆ ಅನುವಾದವು ಅರ್ಥವನ್ನು ನಿವೇದಿಸಲಾರದೆಂಬುದನ್ನು ಒಪ್ಪಬೇಕು. ಆದರೆ ಕೆಳಗಿನ ಪದ್ಯವನ್ನು ನೋಡಿದರೆ ಭಾಷಾಂತರವು ಅಂಥವರಿಗೆ ಕೂಡ ಹೇಗೆ ಅರ್ಥವನ್ನು ತಲುಪಿಸುತ್ತದೆ ಮತ್ತು ಕನ್ನಡ ದೇಸಿಯನ್ನು ಬಹುಮಟ್ಟಿಗೆ ಬಳಸಿ ಸಾರ್ಥಕವಾಗುತ್ತದೆ ಎಂಬುದನ್ನು ತಿಳಿಯಬಹುದು:

ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ಸ।
ಟ್ಟಿರೆ ನೋಟಂ ಬಾಣಪಾತಕ್ಕಗಿದಿರುಕಿಸುತಂ ಪೃಷ್ಠಮಂ ಮಾರ್ಗದೊಳ್ ತೀ।
ವಿರೆ ನೀಡುಂ ಬಿಟ್ಟಬಾಯಿಂ ಶ್ರಮದುದಿರ್ವರೆಮೆಲ್ದಿರ್ದ ದರ್ಭಾಂಕುರಂಗಳ್
ಧರೆಯಲ್ಲೋರೊರ್ಮೆ ಕಾಲಿಟ್ಟಹಹ ನಿರುಕಿಸೈ ಬಾನೊಳೇ ಪಾರಿಪೋಕುಂ॥ (ಶಾಕುಂ.೧-೭)

ಇದು 'ಗ್ರೀವಾಭಂಗಾಭಿರಾಮಂ' ಮುಂತಾಗಿ ಪ್ರಸಿದ್ಧವಾದ ಪದ್ಯದ ಅನುವಾದ. ಈ ಅನುವಾದದಲ್ಲಿ ಕನ್ನಡದೇಸಿಯ ಬಳಕೆಯನ್ನು ಸಾಧ್ಯವಾದಷ್ಟು ಮಾಡಿ.ಬಹುಮಟ್ಟಿನ ಮೂಲಾರ್ಥವನ್ನು ನಿವೇದಿಸುವ ಸಾರ್ಥಕಪ್ರಯತ್ನ ನಡೆದಿದೆ. 'ಕೊರಲಂ ತಾಂ ಕೊಂಕುಗೆಯ್ಯುತ್ತ' ಇದರಲ್ಲಿ 'ಅಭಿರಾಮ'ದ ಸೊಗಸು ಕೈತಪ್ಪಿದರೂ ಗ್ರೀವಾಭಂಗದ ವರ್ಣನೆ ಸಮರ್ಪಕವಾಗಿದೆ. ಪದ್ಯದ ಕೊನೆಯ ಎರಡು ಪಂಕ್ತಿಗಳು ಮೂಲದ ಸಕಲಾರ್ಥವನ್ನು ನಿವೇದಿಸುವ ಪ್ರಯತ್ನದಲ್ಲಿ ಅತ್ಯಂತ ಸಫಲವಾಗಿವೆ. 'ಶಷ್ಪೈರರ್ಧಾವಲೀಢೈಃ ಶ್ರಮವಿತತಮುಖಭ್ರಂಶಿಭಿಃ ಕೀರ್ಣವರ್ತ್ಮಾ' ಎಂಬ ಮೂರನೆಯ ಸಾಲಿನ ಎಲ್ಲ ಅರ್ಥವು 'ತೀವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವ ಅರೆಮೆಲ್ದು ಇರ್ದ ದರ್ಭಾಂಕುರಂಗಳ್' ಎಂಬ ಭಾಷಾಂತರದಲ್ಲಿ ಮೂಡಿದೆ. ನಾಲ್ಕನೆಯ ಸಾಲಿನಲ್ಲಿಯಂತೂ 'ಪಶ್ಯ ಉದಗ್ರಪ್ಲುತತ್ವಾತ್ ವಿಯತಿ ಬಹುತರಂ ಸ್ತೋಕಂ ಉರ್ವ್ಯಾಂ ಪ್ರಯಾತಿ' ಎಂಬಲ್ಲಿಯ ಆಶಯವು 'ಧರೆಯಲ್ಲಿ ಓರೊರ್ಮೆ ಕಾಲಿಟ್ಟು ಅಹಹ ನಿರುಕಿಸೈ ಬಾನೊಳೇ ಪಾರಿಪೋಕುಂ' ಎಂಬ ಅನುವಾದದಲ್ಲಿ ಸಮರ್ಥವಾಗಿ ಸುಂದರವಾಗಿ ವ್ಯಕ್ತವಾಗಿದೆ. ಈ ಅನುವಾದದ ಯಶಸ್ಸಿಗೆ ಎರಡುಭಾಷೆಗಳ ಪರಿಜ್ಞಾನವಿಷ್ಟೇ ಸಾಲದು. ಭಾಷಾಂತರಕಾರನ ಕಾವ್ಯಪ್ರತಿಭೆಯ ಸಹಜ ಕಾರ್ಯವು ಅವಶ್ಯ ಎಂಬುದನ್ನು ಇಲ್ಲಿ ಮನಗಾಣಬಹುದು. 'ಯಾವುದರ ಉನ್ಮೀಲನಶಕ್ತಿಯಿಂದ ವಿಶ್ವವು ಉನ್ಮೀಲಿತವಾಗುತ್ತದೆ' ಎಂದು ವರ್ಣಿಸಲಾದ ಪ್ರತಿಭೆ ಕಾರ್ಯಪರವಾದಾಗ ಸ್ವತಂತ್ರನಿರ್ಮಿತಿ ಸಾಧ್ಯವಾಗುವಂತೆ ಭಾಷಾಂತರ ಕ್ರಿಯೆಯೂ ಯಶಸ್ವಿಯಾಗುತ್ತದೆ. ಅಂತೇ ಭಾಷಾಂತರ ಪ್ರಕ್ರಿಯೆಯಲ್ಲಿ ಅನುವಾದಕ ಕವಿಯ ಕಾವ್ಯಪ್ರತಿಭೆ ತೀರ ಅವಶ್ಯ ಎಂದು ಅರಿಯಬೇಕು. ಅದಿಲ್ಲದೆ 'ಬಾನೊಳೇ ಪಾರಿಪೋಕುಂ' ಎಂಬ ಅರ್ಥವಾಹಿಯಾದ ಅನುವಾದವು ದೊರೆಯುತ್ತಿರಲಿಲ್ಲ.

ಹೀಗೆ ಇಡೀ ಶಾಕುಂತಲ ನಾಟಕದ ಅನುವಾದ ವೈಖರಿಯನ್ನು, ವಿಶೇಷತಃ ಪದ್ಯರೂಪದಲ್ಲಿಯ ಭಾಷಾಂತರವನ್ನು ಪರೀಕ್ಷಿಸಿದರೆ ಕೆಲವು ಅನುಕ್ರಮ ವ್ಯತ್ಯಾಸಗಳು ಮತ್ತು ಮೂಲಭಾವತ್ಯಾಗಗಳು ಕಂಡುಬಂದರೂ ಒಟ್ಟಿನಲ್ಲಿ ಮಾತ್ರ ಸಾಫಲ್ಯದ ಸಮಾಧಾನವು ಲಭಿಸುತ್ತದೆ. ಕೆಲವೆಡೆಗೆ ಮೂಲಕ್ಕಿಂತ ಹೆಚ್ಚಿನ ಅರ್ಥವು ಆನುವಾದದಲ್ಲಿ ಕಾಣಿಸಿಕೊಂಡಿವೆ. ಉದಾಹರಣೆಗೆ, 'ಮಾನುಷೀಷು ಕಥಂ ವಾಸ್ಯಾದಸ್ಯ ರೂಪಸ್ಯ ಸಂಭವಃ। ನ ಪ್ರಭಾತರಲಂ ಜ್ಯೋತಿರುದೇತಿ ವಸುಧಾ ತಲಾತ್'–ಇದರ ಭಾಷಾಂತರವು

ಈ ಮಧುರಾಕೃತಿ ಮಾನುಷ। ಕಾಮಿನಿಯರ ಬಸಿರೊಳೆಂತು ಪುಟ್ಟುಗುಮಿಳೆಯೊಳ್॥
ವ್ಯೋಮದೊಳುದಯಿಪ ಮಿಂಚೀ। ಭೂಮಿತಲದತ್ತಣಿಂದದೇಂ ಪುಟ್ಟುಗುಮೇ॥ ( ಶಾಕುಂ. ೧-೨೬)

ಇಲ್ಲಿ ಮೂಲದಲ್ಲಿ 'ಮಾನುಷೀಷು' ಎಂದಿರುವುದರ ಅನುವಾದವು 'ಮಾನುಷಕಾಮಿನಿಯರ ಬಸಿರೊಳ್' ಎಂದಾಗಿದೆ. ಕಾಮಿನಿ ಎಂದರೆ ಸ್ತ್ರೀ ಎಂಬ ಸಾಮಾನ್ಯಾರ್ಥವು 'ಕಾಮವುಳ್ಳ, ಲೌಕಿಕ ಆಸೆ ಆಮಿಷಗಳುಳ್ಳ ಸ್ತ್ರೀ' ಎಂಬ ಧ್ವನಿಯನ್ನೂ ಒಳಗೊಂಡಿರುವುದರಿಂದ ಅದು ಸಂದರ್ಭದಲ್ಲಿ ಇನ್ನಿಷ್ಟು ಸ್ವಾರಸ್ಯವಾಗುತ್ತದೆ. ಪ್ರಾಸಕ್ಕಾಗಿ 'ಕಾಮಿನಿ' ಶಬ್ದವನ್ನು ಕವಿ ಬಳಸಿದನೆಂದು ಹೇಳಬಹುದು. ಆದರೆ ಪ್ರಾಸಕ್ಕಾಗಿ ಭಾಮಿನಿ ಎಂಬ ಶಬ್ದವನ್ನೂ ಬಳಸಬಹುದಾಗಿತ್ತು. ಪ್ರಾಸಯೋಜನೆಯೊಂದಿಗೆ ಬೇರೊಂದು ಅರ್ಥವನ್ನು ಸೂಚಿಸುವ ಕವಿಪ್ರತಿಭೆ ಕೆಲಸಮಾಡಿತೆಂದೇ ಭಾಷಾಂತರದ ಸೊಗಸು ಹೆಚ್ಚಿದೆ. ಇಂಥ ಉದಾಹರಣೆಗಳನ್ನು ಉಳಿದೆಲ್ಲ ಅನುವಾದಿತ ನಾಟಕಗಳಲ್ಲಿ ನೋಡಿದಾಗ ಭಾಷಾಂತರವು ಬರೀ ಒಂದು ಭಾಷೆಯಿಂದ ಇನ್ನೊಂದು ಭಾಷೆಯ ನುಡಿಗಳಿಗೆ ಪರಿವರ್ತಿಸುವುದಲ್ಲ. ಅದು ಸವಿನುಡಿಯಾಗಿ ಹೆಚ್ಚಿನ ನುಡಿಯಾಗಿ ಒಡಮೂಡುವ ಪ್ರಕ್ರಿಯೆ ಎಂಬುದರ ಅರಿವಾಗುತ್ತದೆ.

ಶಾಕುಂತಲ ನಾಟಕವು ನಾಲ್ಕನೆಯ ಅಂಕಿನ ನಾಲ್ಕು ಪದ್ಯಗಳಿಂದ ಸುಪ್ರಸಿದ್ಧವಾಗಿದೆ. ಈ ನಾಟಕದಲ್ಲಿ ನಾಲ್ಕನೆಯ ಅಂಕವು ಹೆಚ್ಚು ರಮ್ಯ. ಅದರಲ್ಲಿ ನಾಲ್ಕು ಪದ್ಯಗಳು ಇನ್ನೂ ರಮ್ಯ ಎಂಬ ಸಂಸ್ಕೃತ ಸುಭಾಷಿತದ ಉತ್ತರಾರ್ಧವನ್ನು ಎಲ್ಲರೂ ಒಪ್ಪದಿರಬಹುದು. ಆದರೆ ಅವುಗಳ ಭಾಷಾಂತರವು ಎಷ್ಟು ರಮ್ಯವಾಗಿದೆ ಎಂಬುದನ್ನು ಪರೀಕ್ಷಿಸಿದರೆ ಬಸವಪ್ಪ ಶಾಸ್ತ್ರಿಗಳು ತಮ್ಮ ಸಹಜವಾದ ಕನ್ನಡದೇಸಿಯಿಂದ ಬಹುಮಟ್ಟಿಗೆ ಸಮರ್ಪಕವಾಗಿ ಭಾಷಾಂತರ ಕಾರ್ಯವನ್ನು ನಿರ್ವಹಿಸಿದ್ದಾರೆಂದು ಹೇಳಬಹುದು. ಉದಾಹರಣೆಗೆ,

ಜಲವನದಾವಳೆಂಟಲೆರೆಸಲ್ಲದೆ ನಿಮ್ಮಯ ಪಾತೆಗಂಬುವಂ। ತಳಿರ್ಗಳ ಕೊಯ್ಯಲಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ।
ಅಲರ್ಗಳ ತಾಳೆ ನೀವು ಮೊದಲುತ್ಸವದಾಂತಪಳಾವಳಾ ಶಕುಂತಳೆ ಪತಿ ಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ॥ (ಶಾಕುಂ. ೪-೯)

ಇದರ ಸಹಜತೆ ಮತ್ತು ಮಾತಿನ ಮೃದುತೆಯನ್ನು ಗಮನಿಸಬೇಕು. 'ತಳಿರ್ಗಳ್' ಮತ್ತು 'ಅಲರ್ಗಳ್' ಈ ಪದಗಳಲ್ಲಿಯ ಸಹಜ ಶಿಥಿಲದ್ವಿತ್ವದಿಂದ ಉಂಟಾಗುವ ನವುರಿನ ಪರಿಣಾಮವನ್ನು ಲಕ್ಷಿಸಬೇಕು. ಇದೇ ರೀತಿ ಶಕುಂತಲೆ ಪತಿಗೃಹಕ್ಕೆ ಹೊರಟಾಗ ಕಣ್ವ ಮುನಿ ಮಾಡಿದ ಉಪದೇಶವು ಸಹಜವಾಗಿದೆ, ಸಮರ್ಪಕವಾಗಿದೆ.

ಪಿರಿಯರ ಸೇವೆಗೆಯ್ ಸವತಿಯರ್ಕಳೊಳಿಷ್ಟವಯಸ್ಯೆಯಂದದಿಂ। ದಿರು ಪತಿಯೊರ್ಮೆ ಹೇವಗೊಳಿಸಲ್ ಮುಳಿಸಿಂ ಪ್ರತಿಕೂಲೆಯಾಗದಿರ್
ಪರಿಜನವಂ ಕರಂ ಸಲಹು ಭಾಗ್ಯದೆ ಬಾಗಿರು ಪೆಣ್ಗಳಿಂತಿರಲ್।ಗರತಿಯಪ್ಪರಿಂತಿರದರನ್ವಯಕಾಧಿಯನುಂಟುಮಾಳ್ಪರೌ॥ (ಶಾಕುಂ.೪-೯೬)

ಇದರಲ್ಲಿ ಸ್ವಲ್ಪ ಸಂಧಿಯ ಬಿಗುವಿನಿಂದ ಕ್ಲಿಷ್ಟತೆ ತೋರಿದೆ. ಆದರೆ ಒಟ್ಟಿನಲ್ಲಿ ಸರಿಯಾಗಿದೆ. 'ಭಾಗ್ಯೇಷು ಅನುತ್ಸೇಕಿನೀ' ಎಂಬುದರ ಭಾಷಾಂತರವು 'ಭಾಗ್ಯದೆ ಬಾಗಿರು' ಎಂದು ಸೊಗಸಾಗಿ ಬಂದಿದೆ. ಅದೇ 'ಕಳವಳವಾಂತುದೆನ್ನೆರ್ದೆ ಶಕುಂತಳೆ ಪೋದ ಪಳೆಂದು' ಎಂಬ ಅನುವಾದ ಪದ್ಯದಲ್ಲಿ 'ವನೌಕಸಾಂ' ಎಂಬುದಕ್ಕೆ 'ಕಾಡಮನುಜಂಗೆ ಎನಗಂ' ಎಂಬ ಭಾಷಾಂತರವು ಅಷ್ಟು ಸಮರ್ಪಕವೆನಿಸುವದಿಲ್ಲ. 'ವನೌಕಸ್' ಎಂದರೆ 'ವನದಲ್ಲಿ ವಾಸಿಸುವವರು' ಅಂದರೆ 'ತಪೋವನದಲ್ಲಿ ಮನೆಮಾಡಿಕೊಂಡಿದ್ದು ಸಂಸಾರಮೋಹತ್ಯಾಗಮಾಡಿ ತಪಸ್ಸಿನಲ್ಲಿ ತೊಡಗಿರುವವರು' ಎಂಬುದು ಸೂಚಿತಾರ್ಥ. 'ಕಾಡಮನುಜ' ಎಂಬುದು ಈ ಸೂಚಿತಾರ್ಥವನ್ನು ನಿವೇದಿಸುವುದಿಲ್ಲ ಮಾತ್ರವಲ್ಲ ಬೇರೆ ಧ್ವನಿಯನ್ನು ಒಳಗೊಳ್ಳುತ್ತದೆ. ಕೆಲವೆಡೆಗೆ ಮೂಲ ಸಂಸ್ಕೃತದ ಪದ ಪ್ರಯೋಗವನ್ನೇ ಪ್ರಾಸಸ್ಥಾನವಿಲ್ಲದಲ್ಲಿಯೂ ಮಾಡಿರುವುದರಿಂದ ಸಂಸ್ಕೃತವನ್ನರಿಯದ ಕನ್ನಡಿಗನಿಗೆ ಭಾಷಾಂತರದ ಮೂಲಕ ಅರ್ಥವು ಪ್ರವಹಿಸುವುದಿಲ್ಲ. ಉದಾಹರಣೆಗೆ, 'ದೊರೆತನಮೈತರಲ್ ಬಯಕೆ ಪಿಂಗಿದುದು' (ಶಾಕುಂತಲ ೫–೧೦೬) ಈ ಪದ್ಯದಲ್ಲಿ 'ಕಟ್ಟರಸುತನಂ ಸ್ವಹಸ್ತಧೃತದಂಡಮುಹಾತಪವಾರಣೋಪಮಂ' ಎಂಬ ಭಾಷಾಂತರವನ್ನು ನೋಡಬೇಕು. ಹೆಚ್ಚು ಕಡಿಮೆ ಮೂಲ ಸಂಸ್ಕೃತ ಸಮಸ್ತಪದವನ್ನೇ ಇಲ್ಲಿ ಬಳಸಲಾಗಿದೆ. ಸಂಸ್ಕೃತದಲ್ಲಿ ಸಮಸ್ತಪದಗಳಿಗೆ ಇರುವ ಸೌಕರ್ಯವು ಕನ್ನಡದಲ್ಲಿ ಇಲ್ಲವೆಂಬುದು ನಿಜ. ಆದರೆ ಅವನ್ನು ಅನೇಕ ಕಡೆಗೆ ಬಿಡಿಬಿಡಿಯಾದ ಕನ್ನಡನುಡಿಗಳಲ್ಲಿ ಮೂಡಿಸಿದಂತೆ ಇಲ್ಲಿಯೂ ಬಸವಪ್ಪ ಶಾಸ್ತ್ರಿಗಳು ಮಾಡಬಹುದಾಗಿತ್ತು. ಆದರೆ ಪದ್ಯಬಂಧವು ಅವರನ್ನು ಇಕ್ಕಟ್ಟಿಗೆ ಸಿಲುಕಿಸಿರಬೇಕು.

ಹೀಗೆ ಇನ್ನೂ ಕೆಲವು ಉದಾಹರಣೆಗಳನ್ನು ಕೊಡಬಹುದು. ಕಾಳಿದಾಸನ ಶಾಕುಂತಲದಂತೆ ಅವನ ವಿಕ್ರಮೋರ್ವಶೀಯ ನಾಟಕದ ಅನುವಾದವು ಕೂಡ ಅದೇ ಪ್ರಸನ್ನತೆ ಮತ್ತು ಕನ್ನಡದೇಸಿಯ ಪ್ರಯೋಗಗಳಿಂದ ಸಾರ್ಥಕವಾಗಿದೆ, ಎರಡೂ ನಾಟಕಗಳಲ್ಲಿ ಗದ್ಯರೂಪದಲ್ಲಿಯ ಸಂಭಾಷಣೆಗಳು ಬಸವಪ್ಪಶಾಸ್ತ್ರಿಗಳ ಕಾಲದಲ್ಲಿ ರೂಪುಗೊಳ್ಳುತ್ತಿದ್ದ ಹೊಸಗನ್ನಡ ಶೈಲಿಯನ್ನು ಪ್ರತಿನಿಧಿಸುತ್ತವೆ. ಕ್ವಚಿತ್ತಾಗಿ 'ಬರವೇಳ್ಕುಂ' ಮತ್ತು 'ಪೋಗಿ ಬರ್ಪುದು' ಇಂಥ ಹಳಗನ್ನಡ ರೂಪಗಳು ವಿಕ್ರಮೋರ್ವಶೀಯದ ಅನುವಾದದಲ್ಲಿ ಕಂಡುಬರುತ್ತಿವೆ. ಪದ್ಯ ಶೈಲಿಯೆಲ್ಲವೂ ಹೆಚ್ಚಾಗಿ ಹಳಗನ್ನಡವಾಗಿದೆ. ಈ ಎರಡು ನಾಟಕಗಳಲ್ಲದೆ ಉತ್ತರರಾಮ ಚರಿತ ಮುಂತಾದ ಅನುವಾದ ನಾಟಕಗಳಲ್ಲಿ ಬಸವಪ್ಪಶಾಸ್ತ್ರಿಗಳ ಭಾಷಾಂತರಶಕ್ತಿ ಏಕಪ್ರಕಾರವಾಗಿ ಪ್ರಕಟವಾಗಿದೆ. ಶಾಕುಂತಲದಿಂದ ಮೊದಲಾಗಿ ಚಂಡಕೌಶಿಕದವರೆಗೆ ಪದ್ಯಾನುವಾದಗಳ ಅಡಿಟಿಪ್ಪಣಿಯಲ್ಲಿ ಅದೇ ಅರ್ಥವುಳ್ಳ ಹಾಡುಗಳಿವೆ ಅಥವಾ ಪದ್ಯಗಳ ಬದಲಾಗಿ ಹಾಡುಗಳಿವೆ. ಕೆಲವಡೆಗೆ ಯಾವ ಯಾವ ರಾಗಗಳಲ್ಲಿ ಹಾಡುಗಳನ್ನು ಹೇಳಬೇಕೆಂಬುದನ್ನು ಸೂಚಿಸಲಾಗಿದೆ. ಚಂಡಕೌಶಿಕ ನಾಟಕದ ಭಾಷಾಂತರದಲ್ಲಿ ಮಾತ್ರ ಹಾಡುಗಳ ಯೋಜನೆಯಿಲ್ಲ.

ಆಥೆಲೊ ನಾಟಕವು ಶೂರಸೇನಚರಿತ್ರೆ ಎಂಬ ಹೆಸರಿನಲ್ಲಿ ಪಾತ್ರ ಮತ್ತು ಸ್ಥಲಗಳಲ್ಲಿಯ ಹೆಸರುಗಳ ಭಾರತೀಕರಣದಿಂದ ಭಾಷಾಂತರವಾಗಿದೆ. ಆದರೆ ಇದು ಬಸವಪ್ಪ ಶಾಸ್ತ್ರಿಗಳು ನೇರವಾಗಿ ಮೂಲದಿಂದ ಮಾಡಿದ ತರ್ಜುಮೆಯಲ್ಲ. ಅವರೇ ಹೇಳಿದಂತೆ 'ವರನಾಟಕಮನಿದಂ ಸುಬ್ಬರಾಯನತಿ ಲಲಿತ ಶೈಲಿಯೊಳೆ ಕನ್ನಡದೊಳ್। ವಿರಚಿಪ ಕುತುಕದೆ ಕವಿಶೇಖರನಾದಾ ಬಸವಶಾಸ್ತ್ರಿಯಿಂ ಬರೆಯಿಸಿದಂ॥' ಸುಬ್ಬರಾಯನೆಂಬ ಇಂಗ್ಲಿಷ್‌ಬಲ್ಲ ವ್ಯಕ್ತಿ ಆಥೆಲೊ ನಾಟಕದ ಆಶಯವನ್ನು ತಿಳಿಸಿ ಹೇಳುತ್ತ ಶಾಸ್ತ್ರಿಗಳಿಂದ ಅನುವಾದವನ್ನು ಮಾಡಿಸಿರಬಹುದೆಂದು ಸ್ಪಷ್ಟವಾಗುತ್ತದೆ. ಈ ಅನಿವಾರ್ಯಕ್ರಮದ ಮೂಲಕ ಅನುವಾದದಲ್ಲಿ ಮೂಲದ ಅಭಿಪ್ರಾಯ ಬಂದಿದ್ದರೂ ಅದರ ಭಾವಪುಷ್ಟಿ, ಧ್ವನಿಸ್ವಾರಸ್ಯ, ನಾಟಕೀಯ ಕಾಕು ಇವು ಸಾಧಿಸಲಾರದೆ ಹೋಗಿವೆ. ಇಷ್ಟಾದರೂ ಹೊಸಗನ್ನಡ ಸಾಹಿತ್ಯಕ್ಕೆ ದೊರೆತ ಇಂಗ್ಲೀಷ್ ನಾಟಕವೆಂದು ಮೆಚ್ಚಬಹುದು. ಅದೇ ನಾಟಕದ ರೂಪಾಂತರಿತ ಅನುವಾದವು ಚುರಮುರಿ ಎಂಬುವರಿಂದ 'ರಾಘವೇಂದ್ರರಾವ್' ಎಂಬ ಹೆಸರಿನಲ್ಲಿ ಬರೆಯಲಾಗಿದ್ದು ಅದು ೧೮೮೫ರಲ್ಲಿ ಪ್ರಕಟವಾಯಿತು. 'ಶೂರಸೇನಚರಿತ್ರೆ'ಯ ಮೊದಲನೆಯ ಮುದ್ರಣ ೧೮೯೫ರಲ್ಲಿ ಪ್ರಕಟವಾದುದಾಗಿ ತಿಳಿದುಬರುತ್ತದೆ. ಈ ಎರಡೂ ಕೃತಿಗಳು ಇಂಗ್ಲಿಷ್ ನಾಟಕದ ರೂಪಾಂತರಿತ ಅನುವಾದಕ್ಕೆ ಮೊದಲನೆಯ ಮೇಲ್ಪಂಕ್ತಿಯಾದುವು. ಈ ಲೇಖನದಲ್ಲಿ ಬಸವಪ್ಪ ಶಾಸ್ತ್ರಿಗಳ ಎಲ್ಲ ಕೃತಿಗಳ ಸಮಗ್ರ ಸಮೀಕ್ಷೆಯನ್ನು ಮಾಡುವ ಉದ್ದೇಶವಿರಲಿಲ್ಲ. ಆದರೆ ಅವರ ಸ್ವತಂತ್ರ ಮತ್ತು ಅನುವಾದಿತ ಕೃತಿಗಳಲ್ಲಿ ಅವರ ಕಾವ್ಯಪ್ರತಿಭೆ ಹೇಗೆ ಸಫಲವಾಗಿದೆ ಎಂಬುದನ್ನು ದಿಗ್ದರ್ಶಕವಾಗಿ ತೋರಿಸುವ ಉದ್ದೇಶವಿತ್ತು. ಅದಿಲ್ಲಿ ನೆರವೇರಿದೆ. ಅವರಿಗೆ 'ಅಭಿನವಕಾಳಿದಾಸ' ಎಂಬ ಬಿರುದಿನ ಗೌರವ ದೊರೆಯಿತು. ಕಾಳಿದಾಸನ ಒಂದೆರಡು ನಾಟಕಗಳ ಅನುವಾದಕರಾರೆಂದು ಮಾತ್ರವಲ್ಲ, ಅವನ ಕೃತಿಗಳ ಅಂತರಂಗ–ಬಹಿರಂಗಗಳನ್ನು ಪಾಂಡಿತ್ಯದ ರೀತಿಗಿಂತ ಪ್ರತಿಭಾದೃಷ್ಟಿಯಿಂದ ಅರ್ಥಮಾಡಿಕೊಂಡು ಸಮರ್ಥವಾಗಿ ಅದನ್ನು ಕನ್ನಡಿಸಿದ್ದರಿಂದ ಅದು ಅವರಿಗೆ ಸುಯೋಗ್ಯವಾದ ಗೌರವ ಸಂದಿತೆಂದು ಹೇಳಬಹುದು.

# ಶ್ರೀ ಗೌರೀಶಂಕರ ಸ್ವಾಮಿಗಳು

**—ಹೆಚ್. ಗಂಗಾಧರನ್**

ಕರ್ನಾಟಕದ ಮೈಸೂರು ಜಿಲ್ಲೆ ಮಲೆಯ ಮಹದೇಶ್ವರರು, ತೋಂಟದ ಸಿದ್ಧಲಿಂಗ ಶಿವಯೋಗಿಗಳು, ಘನಲಿಂಗಿ ಶಿವಯೋಗಿಗಳು, ಷಡಕ್ಷರ ಮಹಾಯೋಗಿಗಳು, ಮುಟ್ಟಿನ ಷಡಕ್ಷರ ಶಿವಯೋಗಿಗಳು, ಕೊಂಗಹಳ್ಳಿ ಮಲ್ಲೇಶ್ವರರು, ಇತ್ತೀಚಿನ ಮಹಾನುಭಾವರಾದ ಶ್ರೀಗುರು ಮಲ್ಲೇಶ್ವರರೂ ಶ್ರೀ ಚಿಕ್ಕವೀರ ದೇಶಿಕೇಂದ್ರ ಮಹಾನುಭಾವರೂ, ಶ್ರೀ ಕಂಬಳೀಶ್ವರರು ಮುಂತಾದ ಪುಣ್ಯಪುರುಷರಿಗೆ ಜನ್ಮವಿತ್ತ ಪವಿತ್ರ ಪರಿಸರದ ಮಹಾಕ್ಷೇತ್ರ. ಅಂತೆಯೇ ಲಕ್ಷಾಂತರ ಭಕ್ತರ ಅಭ್ಯುದಯದ ಸಿದ್ಧಿ ಕ್ಷೇತ್ರಗಳೆನಿಸಿದ ಶ್ರೀಕಂಠೇಶ್ವರ ಶಿವಲಿಂಗ ಕ್ಷೇತ್ರವಾದ ನಂಜನಗೂಡು, ಶ್ರೀ ಮಹದೇಶ್ವರರ ತಪೋಭೂಮಿ, ಮಹಾಮಲೆ, ಮಹಿಷಮರ್ದಿನಿಯು ನೆಲೆಸಿರುವ ಚಾಮುಂಡಿ ಬೆಟ್ಟ, ತ್ರಿಪುರಸುಂದರಿಯು ಅನುಗ್ರಹಿಸುತ್ತಿರುವ ಮೂಗೂರು ಮುಂತಾದ ಮಹಾಪುಣ್ಯಕ್ಷೇತ್ರಗಳಿರುವುದು ಇದೇ ಜಿಲ್ಲೆಯಲ್ಲಿ.

ಪಶ್ಚಿಮಾದ್ರಿಯಲ್ಲಿ ಭಾಗಮಂಡಲದಲ್ಲಿ ಮೂಡಿ ಮೂಡಣ ದಿಕ್ಕಿಗೆ ಪ್ರವಹಿಸಿ ಬರುತ್ತಿರುವ ಸೋದರಿಯರಂತೆಸೆವ ಕಾವೇರಿ ಕಪಿಲೆಯರಿಬ್ಬರೂ ಒಂದುಗೂಡಿ ಒಂದಾಗಿ ಮುನ್ನಡೆವ ಕ್ಷೇತ್ರಕ್ಕೆ ತಿರುಮಕೂಡಲು ಎಂದು ಹೆಸರು. ಈ ಸಂಗಮದ ಬಳಿ ಇರುವ ಪಟ್ಟಣವೇ ನರಸೀಪುರ. ಇದನ್ನೇ ಟಿ. ನರಸೀಪುರ ಅರ್ಥಾತ್ ತಿರುಮಕೂಡಲು ನರಸೀಪುರ ಎಂದು ಕರೆಯುತ್ತಾರೆ. ಈ ಕ್ಷೇತ್ರದಲ್ಲಿ ಅಗಸ್ತ್ಯೇಶ್ವರರು ಪ್ರತಿಷ್ಠಾಪಿಸಿದ ಅಗಸ್ತ್ಯೇಶ್ವರ ಲಿಂಗವಿದೆ. ಈ ಸಂಗಮಕ್ಕೆ ಸಮೀಪದಲ್ಲಿಯೇ ಉಕ್ಕಲಗೆರೆ ಎಂಬ ಕಿರುವಳ್ಳಿ ಇದೆ. ಹೆಸರಿಗೆ ತಕ್ಕಂತೆ ಅಲ್ಲಿ ಹಾಲು ಅಥವಾ ನೀರಾದರೂ ಉಕ್ಕಿಬಂದಿತೋ ಇಲ್ಲವೋ ತಿಳಿಯದು. ಆದರೆ ಭಾರತಕ್ಕೇ ಭಾಗ್ಯನಿಧಿಯೆನಿಸಿದ್ದ ಜ್ಞಾನಾಮೃತವು ಮಾತ್ರ ಉಕ್ಕಿಬಂದದ್ದು ನಿಜ. ಅವರೇ ಪರಮ ಪೂಜ್ಯ ಶ್ರೀ ಗೌರಿ ಶಂಕರ ಮಹಾಸ್ವಾಮಿಗಳು. ಅಲ್ಲಿ ಅವರು ಉಕ್ಕಿಬಂದದ್ದೇ ಭಾಗ್ಯ. ಅದು ನಿರಂತರ ಹರಿದು ಕುಲಕೋಟಿಯನ್ನು ಉದ್ಧರಿಸಲಾಗ ಲಿಲ್ಲವೆಂಬುದು ನಾಡಿನ ದೌರ್ಭಾಗ್ಯ.

ಉಕ್ಕಲಗೆರೆಯಲ್ಲಿ 'ಬೆಟ್ಟದ ಮಠ' ಎಂಬ ಶರಣತಾಣ. ಅಲ್ಲಿ ಲಿಂಗಪ್ಪ ಲಿಂಗಮ್ಮ ಎಂಬ ಶರಣ ದಂಪತಿಗಳು ಶಿವ ಭಕ್ತಿ ಸಂಪನ್ನರಾಗಿ, ಗುರುಲಿಂಗಜಂಗಮಪ್ರೇಮಿಗಳಾಗಿ ಕೃಷಿಕಾಯಕ ನಿರತರಾಗಿ ಸಜ್ಜನಸ್ನೇಹಿಗಳಾಗಿ ಮೆರೆಯುತ್ತಿದ್ದರು. ತಾಯಿಗೆ ಮಾಂಗಲ್ಯಯೋಗ ದೊರೆತದ್ದು ಬೇಗ, ದೇವ ಫಲನೀಡಿದ್ದು ತಡವಾಯಿತು. ಆದರೇನು ಅವನಿತ್ತ ಫಲ ಅಪೂರ್ವ. ಮೊದಲ ಫಲವಾದ ಶಿವಸ್ವರೂಪಿ 'ಶಂಕರ' ಇಳೆಗೆ ಬಂದ ಶಿಶು ಮನೆಗಲ್ಲ ಮಹತ್ತಿಗೆ ಮಾತ್ರ ಎನ್ನುವುದು ಶಿಶುವನ್ನು ದೃಷ್ಟಿಸಿದ ವರಿಗಾದ ಅನುಭವ. ಇಂತಹ ಶಿಶು ಇವರ ಮನೆಯಲ್ಲಿ ಜನಿಸಿದೆಯೇ ಎಂದು ಅಚ್ಚರಿಪಟ್ಟವರೂ ಇದ್ದರೆಂದು ವದಂತಿ. ಇಷ್ಟ ಲಿಂಗ ಪೂಜೆಯಲ್ಲದೆ ಮತ್ತಾವ ಆಧ್ಯಾತ್ಮ ಭಾಗ್ಯವನ್ನು ಕಾಣದ ಮುಗ್ಧ ದಾಂಪತ್ಯದಲ್ಲಿ ಪಲ್ಲವಿಸಿದ ಈ ಫಲವನ್ನು ಕಂಡವರಿಗೆ ಹಾಗೆನಿಸುವುದು ಸಹಜವೇ ಆಗಿರಬಹುದು, ಇಂತಹ ಅನುಭವ ಅನ್ಯರಿಗೇ ಅಲ್ಲ, ಹೆತ್ತು ಹೊತ್ತವರಿಗೂ ಆಗಿತ್ತೆಂದು ಹೇಳು ತ್ತಾರೆ. ಶಿಶುವಿನ ಲೀಲಾವಿನೋದಗಳನ್ನು ನೋಡಿದವರು ತಂದೆಯನ್ನು ಕುರಿತು ಯಾವುದಾದರೂ ಮಠಕ್ಕೆ ಗುರುವಾಗಿ ಮಾಡಲು ಕೊಟ್ಟುಬಿಡಿ ಎಂದಾಗ ತಂದೆಯ ಮುಖದ ಮೇಲೆ ಮಂದಹಾಸದ ನಗೆ ಮೂಡಿದಂತೆ ಕಾಣುತ್ತಿತ್ತು. ಆದರೆ ಅಂತ ರಂಗ ಕರಗಿ ನೀರಾಗುತ್ತಿತ್ತು. ಶಂಕರಕುಮಾರನನ್ನು ಬೆಂಬಲಿಸಿ ಸುಬ್ಬಣ್ಣ ನಂತರ ಶಿವಪ್ಪ ಎಂಬುವರು ಮಕ್ಕಳು ಈ ದಂಪತಿಗಳಿ ಗಾದರು. ಇದರಿಂದ ತಂದೆತಾಯಿಗೆ ಕೊಂಚ ಸಮಾಧಾನವಾಯಿತು. ಈ ಶಂಕರನು ನಮ್ಮ ಕೈಗೆ ನಿಲುಕದ ಫಲವೆಂದು ನಿರ್ಧರಿಸಿದ ಮಾತಾ ಪಿತೃಗಳು ಅವನ ಮೇಲೆ ಹೆಚ್ಚು ಪ್ರಭುತ್ವ ಸ್ಥಾಪಿಸುವ ಪ್ರಯತ್ನ ನಡೆಸಲಿಲ್ಲ.

ಶಿಶುವು ಬಂದ ಗುರು ಜಂಗಮರೊಡನೆ ನಡೆದುಕೊಂಡ ರೀತಿ ನೀತಿಗಳು, ಕೇಳುವ ಪ್ರಶ್ನೆಗಳು ಎಲ್ಲರನ್ನು ಚಕಿತಗೊಳಿ ಸುತ್ತಿದ್ದವು. ಆದುದರಿಂದ ಬಂದವರೆಲ್ಲರೂ ಇವನಿಗೆ ಸರಿಯಾದ ಗುರುಸನ್ನಿಧಿಯಲ್ಲಿ ಶಿಕ್ಷಣ ಕೊಡಿಸಬೇಕೆಂದು ಅಪೇಕ್ಷಿಸುತ್ತಿದ್ದರು. ತಮ್ಮ ಹತ್ತಿರದ ಬಂಧುವೊಬ್ಬರ ವಾತ್ಸಲ್ಯದ ಮೇರೆ ಶಂಕರನು ಮೈಸೂರು ನಗರಕ್ಕೆ ವಿದ್ಯಾಭ್ಯಾಸಕ್ಕಾಗಿ ಬರುವ ಅವಕಾಶ ತಾನಾಗಿ ಪ್ರಾಪ್ತವಾಯಿತು. ಆಗಿನ್ನೂ ಅವರಿಗೆ ಎಂಟುವರ್ಷ ವಯಸ್ಸು. ಮೈಸೂರಿನಲ್ಲಿ ಸಮಾಜದ ಗಣ್ಯರ ನೆರವಿನಿಂದ ಸಂಸ್ಕೃತ ವೇದಗಳನ್ನು ಕಲಿಯಲು ಅವಕಾಶ ದೊರೆಯಿತು. ಅಂದು ಬಡವರಿಗೆ ಇಂಗ್ಲಿಷ್ ಕಲಿಯಲು ಅವಕಾಶವಿರಲಿಲ್ಲ. ಅನು ಕೂಲಗಳೂ ಸಿಗುತ್ತಿರಲಿಲ್ಲ. ಸಿಕ್ಕಿದ ಅವಕಾಶವನ್ನು ಶಂಕರನು ಸದುಪಯೋಗಪಡಿಸಿಕೊಂಡನು. ಗುರುಗಳೇ ಬೆರಗಾಗುವಂತಹ ಸ್ಮೃತಿಶಕ್ತಿ ಇದ್ದುದರಿಂದ ಒಮ್ಮೆ ಹೇಳಿದುದನ್ನು ಕೇಳಿದರೆ ಸಾಕಾಗುತ್ತಿತ್ತು, ಅದನ್ನೇ ಮತ್ತೆ ಓದಬೇಕಾದ ಅಗತ್ಯವಿರಲಿಲ್ಲ, ಒಬ್ಬರಿಗಾಗಿ ಯಾವ ಗುರುವೂ ದಿನವೂ ಹೊಸಪಾಠವನ್ನು ಹೇಳಲು ಸಾಧ್ಯವಾಗುತ್ತಿರಲಿಲ್ಲ. ಹಾಗೆಂದು ಕಾಲ ವ್ಯಯಮಾಡು ತ್ತಿರಲಿಲ್ಲ. ಮುಂದಿನದನ್ನು ಇಂದೇ ಓದಿಕೊಂಡಿರುತ್ತಿದ್ದರು. ಹೇಳಿದ ಪಾಠ ತಿಳಿಯಲಿಲ್ಲ ಎಂದು ಹೇಳಿದ ದಿನ ಅವರ ಜೀವನ ದಲ್ಲಿ ಎಂದೂ ಬಂದಿರಲಿಲ್ಲವೆಂದೂ ಹೇಳುತ್ತಿದ್ದರು. ಆದುದರಿಂದ ಸ್ವತಃ ಅಭ್ಯಾಸಮಾಡಿಕೊಳ್ಳುವ ಶಕ್ತಿ ದೈವದತ್ತವಾಗಿ ಅವ

ರಿಗೆ ಬಂದಿತ್ತು. ಪುರಾಣ ಪ್ರವಚನಗಳು, ಕೀರ್ತನೆಗಳು, ಧರ್ಮಗ್ರಂಥಗಳ ಮೇಲೆ ಗೋಷ್ಠಿಗಳು ನಡೆದರೆ ಬಿಡದೆ ಹೋಗುತ್ತಿದ್ದರು. ಅಲ್ಲಿ ಕೇಳಿದುದನ್ನೆಲ್ಲಾ ನೆನಪಿಟ್ಟುಕೊಂಡು ಅನ್ಯರಿಗೆ ಪ್ರಶ್ನೆಮಾಡುತ್ತಿದ್ದರು. ಹೀಗೆ ಅವರ ಪ್ರತಿಭೆ ಬೆಳೆಯುತ್ತಿರುವುದು ಅನೇಕ ಸಮಾಜದ ಗಣ್ಯರ ಗಮನ ಸೆಳೆಯಿತು.

ಮೈಸೂರು ನಗರದಲ್ಲಿ ಅರಮನೆಯವರಿಗೆ ಸಂಬಂಧಿಸಿದ ಗವೀಮಠವೊಂದಿದೆ. ಮೈಸೂರು ರಾಜಮನೆತನದವರು ಮಠಗಳು, ಜಂಗಮರು, ಗುರುಗಳ ಬಗೆಗೆ ಅಪಾರ ಗೌರವವುಳ್ಳವರಾಗಿದ್ದರು. ಅರಮನೆಯಲ್ಲಿ ಹಿಂದೆ ರಾಜರೊಬ್ಬರಿಗೆ ತಲೆದೋರಿದ ರೋಗಕ್ಕೆ ವೈದ್ಯಚಿಕಿತ್ಸೆಯೆಲ್ಲಾ ನಡೆದು ವಿಫಲವಾದಾಗ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿರುವ ಗವಿಯೊಂದರಲ್ಲಿ ಅನುಷ್ಠಾನ ಮಾಡುತ್ತಿದ್ದ ಶ್ರೀ ಶಿವಬಸವಸ್ವಾಮಿಗಳವರು ತಮ್ಮ ಅನುಗ್ರಹದಿಂದ ಅವರನ್ನು ಗುಣಮುಖರನ್ನಾಗಿ ಮಾಡಿದರು. ಅದಕ್ಕಾಗಿ ರಾಜಮನೆತನದವರು ಅವರಿಗಾಗಿ ಗವಿ ಇರುವ ಸ್ಥಳದಲ್ಲೇ ಮಠವನ್ನು ನಿರ್ಮಿಸಿದರು. ಅದಕ್ಕೆ ಈಗಲೂ ಅರಮನೆ ಗವೀಮಠವೆಂದೇ ಹೆಸರು. ಶ್ರೀ ಶಿವಬಸವಸ್ವಾಮಿಗಳ ನಂತರ ಅನೇಕರು ಶ್ರೀ ಮಠದ ಅಧ್ಯಕ್ಷರಾಗಿ ಲಿಂಗದಲ್ಲಿ ಲೀನವಾಗಿದ್ದರು. ಮುಂದೆ ಇದೇ ಮಠಕ್ಕೆ ಉಕ್ಕಲಗೆರೆ ಶಂಕರನು ಗೌರಿಶಂಕರ ಎಂಬ ನೂತನಾಭಿಧಾನದಿಂದ ಮಠಾಧಿಪತಿಯಾದನು.

ಮಠಾಧಿಪತಿಯೆಂದರೆ, ಮಠದಲ್ಲಿ ಸಂಪತ್ತಿರಬೇಕು, ಸದಾ ನೆರವಾಗುವ ಭಕ್ತವೃಂದವಿರಬೇಕು ಇತ್ಯಾದಿ ಕಲ್ಪನೆಗಳು ಅವರಿಗಿರಲಿಲ್ಲ. ಸಂಸಾರ ಬಂಧನಕ್ಕೆ ಸಿಕ್ಕದೆ ವೈರಾಗ್ಯದಿಂದ ಸಿದ್ಧರಾಗಬೇಕೆಂಬುದು ಅವರ ಅನುದಿನದ ಬಯಕೆಯಾಗಿತ್ತು. ಶ್ರೀಗಳವರು ಈ ಮಠಕ್ಕೆ ಅಧಿಪತಿಗಳಾಗಲು ಒಪ್ಪಿದುದಕ್ಕೆ ಮುಖ್ಯವಾಗಿ ಎರಡು ಕಾರಣಗಳನ್ನು ಕೊಡುತ್ತಿದ್ದರು. ಮೊದಲನೆಯದು ತಮ್ಮ ವಿದ್ಯಾರ್ಜನೆಗೆ ಸರ್ವರೀತಿಯ ನೆರವು ಬೇಕಾಗಿತ್ತು. ಹುಟ್ಟಿದ ಮನೆಯಿಂದ ಅದನ್ನು ನಿರೀಕ್ಷಿಸುವಂತಿರಲಿಲ್ಲ. ಆದ ಕಾರಣ ಮಠಾಧಿಪತಿಯಾದರೆ ವಿದ್ಯಾಭ್ಯಾಸ ಮುಂದುವರಿಸಬಹುದೆಂದು ನಿಶ್ಚಯಿಸಿದರು. ಎರಡನೆಯದು ಗಮನಾರ್ಹವಾದ ಕಾರಣ: ನಗರದಿಂದ ದೂರದಲ್ಲಿ ಪ್ರಕೃತಿ ಸೌಂದರ್ಯಮಧ್ಯದಲ್ಲಿ ಚಾಮುಂಡಿ ಬೆಟ್ಟದ ತಪ್ಪಲಿನಲ್ಲಿರುವುದು. ತಮ್ಮ ಅಕ್ಕಮಹಾದೇವಿ ಚಂಪೂಚರಿತದಲ್ಲಿ ಆ ಮಠದ ಬಗೆಗೆ

''ಭರದಿಂ ಪಾದದೊಳಿರ್ಪ ಕಾರಡವಿಯೋಳ್ ಶೃಂಗಾಗ್ರದಿಂ ಬೀಳ್ವ ನಿ।
ರ್ಝರಣಂ ಗೈರಿಕಶೋಣಮುಣ್ಮೆ ಕೆಲದೊಳ್ ಚಾಮುಂಡಿಕಾ ಭೂಧರಂ।
ಧುರದೊಳ್ ಕೆಯ್ದುವೆನಿಕ್ಕಿ ಕೀಳ್ವರಿವಿಸಂ ಕೆನ್ನೀರ್ವೊನಲ್ ಕಾಸರಾ।
ಸುರನಂ ಚಂಡಿಕೆ ಖಂಡಿಸಿರ್ದದಟನೇಂ ತೋರುತ್ತೆ ಚೆಲ್ವಾದುದೋ।। (೧-೫)
ಯೋಗಕೆ ಬೀಡೆನಿಪ್ಪದರ ಸಾನುವೊಳೋದುವ ಶಿಷ್ಯರಿಂದೆವೇ।
ದಾಗಮವಾದಮಂ ಗ್ರಹಿಸಿ ಮಾರ್ದನಿಗೆಯ್ದು ಗುಹಾಗಣಂದಿಗಾ।
ಭೋಗಕೊರಲ್ದು ಬೀರೆ ಮೆರೆಗುಂ ಮಹಿಷಾಸುರಮರ್ದಿನೀವನೀ।
ಭಾಗದೊಳರ್ಚಿತಾಭವನ ದೇಶಿಕ ದೇವನ ಪಾವನಂ ಮಠಂ॥ (೧-೬)

ಎಂದು ಶ್ರೀ ಮಠದ ಪರಿಸರವನ್ನು ಅಭಿಮಾನದಿಂದ ಹೇಳಿದ್ದಾರೆ. ನಿಜವಾಗಿಯೂ ಅದು ಯೋಗದ ಬೀಡು. ಈಗಲೂ ಶ್ರೀಮಠದಲ್ಲಿ ಗವಿಯೊಂದಿದೆ. ಶ್ರೀ ಮಠದಿಂದ ಗವಿ ಎಲ್ಲಿಯವರೆಗೆ ಹೋಗುತ್ತದೆಂದು ಯಾರಿಗೂ ತಿಳಿಯದು. ಕಾಶಿಯಿಂದ ಶ್ರೀಗಳವರು ಬಂದ ಮೇಲೆ ಅಭಿಮಾನದಿಂದ ಗವಿಯ ರಕ್ಷಣೆಯ ವ್ಯವಸ್ಥೆ ಮಾಡಿಸಿದ್ದರು. ಆ ಗವಿಯ ದ್ವಾರ ಮತ್ತು ಮುಂದೆ ಸಾಗುವ ದಾರಿ ಅತ್ಯಂತ ಕಿರಿದಾದುದು. ಕೆಲವು ವೇಳೆ ಆ ಗವಿಯ ಬಳಿಯಲ್ಲಿ ಕುಳಿತು ಧ್ಯಾನಮಗ್ನರಾಗುತ್ತಿದ್ದರು. ಹಾಗೆ ಕುಳಿತ ಯಾವುದೋ ಸಮಯದಲ್ಲಿ ಅವರ ನೇತ್ರದಿಂದ ಜಲಧಾರೆ ಬಂದುದನ್ನು ನೋಡಿದ ನೆನಪು ಈ ಲೇಖಕನಿಗಿದೆ. ಆದರೂ ಅಂದು ಅದೇಕೆಂದು ಕೇಳುವ ಧೈರ್ಯವೂ ಇರಲಿಲ್ಲ, ಊಹಿಸುವ ಶಕ್ತಿಯೂ ಇರಲಿಲ್ಲ. ಶ್ರೀಗಳವರು ಕಾಶಿಯಿಂದ ಬಂದಾಗ ಕ್ಷೇಮಕಾಯರಾಗಿದ್ದರು. ಹಿಂದಿನ ಗುರುಗಳು ಅದೇ ಗವಿಯಲ್ಲಿ ಅನುಷ್ಠಾನಗೈಯ್ಯುತ್ತಿದ್ದರೆಂದು ಹಿರಿಯರು ಹೇಳುತ್ತಿದ್ದುದು ಅವರಿಗೆ ಗೊತ್ತು.

ಇಂಥ ಗವೀಮಠದ ಅಧಿಕಾರಸೂತ್ರ ಹಿಡಿದು ಅರಮನೆಯ ಆರೋಗಣೆಯಲ್ಲಿ ಮತ್ತರಾಗದೆ ತಮ್ಮ ಸಾಧನಾ ಕ್ಷೇತ್ರದಲ್ಲಿ ದಿನದಿನಕ್ಕೆ ವೃದ್ಧಿಯಾಗತೊಡಗಿದರು. ಅನುದಿನವೂ ಬೆಳೆಯುತ್ತಿರುವ ಜ್ಞಾನದಾಹದ ದಣಿವಾರಿಸುವ ಪರಿಸರವು ಇಲ್ಲಿ ಇಲ್ಲವೆಂಬ ಅನುಭವ ಶ್ರೀಗಳವರಿಗೆ ಆಗತೊಡಗಿತು. ಆತ್ಮಶಕ್ತಿ ಸಾಧನೆಗೆ, ಜ್ಞಾನಾರ್ಜನೆಗೆ ಸಾಕಷ್ಟು ಪ್ರೋತ್ಸಾಹ ಸಿಕ್ಕುವುದಂತಿರಲಿ, ಬರಬಹುದಾದ ತೊಡಕುಗಳನ್ನು ಪರಿಹರಿಸಿಕೊಳ್ಳುವುದೇ ಕಷ್ಟಸಾಧ್ಯವಾಗತೊಡಗಿತು. ಗುರುಗಳಾಗಿ ಸಾಧನೆಮಾಡುವುದಕ್ಕಿಂತ ಅವರು ಮನೆಮನೆಗೆ ಬಿನ್ನಹಕ್ಕೆ ಮಣಿದು ಹೋಗಬೇಕೆಂಬುದೇ ಬಹುಜನರ ಅಪೇಕ್ಷೆ. ಈ ವೃತ್ತಿಯಲ್ಲಿ ಕಾಲಕಳೆಯುವುದು ಅವರ ಸ್ವಾಭಾವಕ್ಕೆ ಒಗ್ಗುತ್ತಿರಲಿಲ್ಲ. ಅವರು ಪ್ರತಿಭಾವಂತರಾಗುತ್ತಿರುವುದು ಕೆಲವರ ಸಹನೆ ಕೆಡಿಸುತ್ತಿತ್ತು. ತಮಗೆ ದೊರೆಯುತ್ತಿದ್ದ ಅಲ್ಪಶಿಕ್ಷಣದಲ್ಲೇ ಪ್ರತಿಭೆ ಬೆಳಗತೊಡಗಿತ್ತು. ಅತ್ಯಂತ ಕಠಿಣವಾದ ಶ್ಲೋಕಗಳಿಗೆ ಸುಲಭವಾಗಿ ವ್ಯಾಖ್ಯಾನ ಮಾಡುತ್ತಿದ್ದರು, ಧಾರಾಳವಾಗಿ ಶ್ಲೋಕಗಳನ್ನು ರಚಿಸುತ್ತಿದ್ದರು. ಅವಧಾನಿಗಳಂತೆ ಒಮ್ಮೆ ಓದುವುದನ್ನು ಕೇಳಿದರೆ ಪುನರು

ಚ್ಚರಿಸುತ್ತಿದ್ದರು. ನೂರಾರು ವಚನಗಳು ಅವರಿಗೆ ಹೃದ್ಗತವಾಗಿದ್ದವು. ಕಾಳಿದಾಸನ ಕಾವ್ಯಗಳಲ್ಲಿ ಒಂದೆರಡನ್ನು ಪ್ರತ್ಯಪುಸ್ತಕ ಓದಿದ್ದರು. ಆದರೆ ಅಧ್ಯಾಪಕರ ನೆರವಿಲ್ಲದೆ ಅವರ ಎಲ್ಲಾ ಕೃತಿಗಳನ್ನು ಓದಿ ಅರ್ಥಮಾಡಿಕೊಂಡಿದ್ದರು. ಎಷ್ಟೋ ಜನರಿಗೆ ಅವರು ಓದದಿರುವ ಕಾವ್ಯಗಳನ್ನು ಕುರಿತು ಪಾಠಹೇಳಿದರು. ಇದಿಷ್ಟು ಅವರು ಜ್ಞಾನಾರ್ಜನೆಯ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ. ಅದರ ಜೊತೆಗೆ ಆತ್ಮಶಕ್ತಿಯನ್ನು ಬೆಳೆಸುವುದರಲ್ಲಿ ತೊಡಗಿದ್ದರು. ಪೂಜೆಗೆ ಕುಳಿತಾಗ, ಧ್ಯಾನಕ್ಕೆ ಕುಳಿತಾಗ ಕಾಲದ ಪರಿವೆಯೇ ಇರುತ್ತಿರಲಿಲ್ಲ. ಧ್ಯಾನ ಮೌನದಲ್ಲಿ ಕುಳಿತಾಗ ಎಷ್ಟೋ ರಾತ್ರಿಗಳು ನಿದ್ರೆಯಿಲ್ಲದೆ ಕಳೆದ ಪ್ರಸಂಗಗಳಿದ್ದುವೆಂದು ತಿಳಿದು ಬರುತ್ತದೆ. ಇಂತಹ ಪ್ರತಿಭಾವಂತರಿಗೆ ಬೆಳೆಯಲು ಸೂಕ್ತ ಪರಿಸರವನ್ನು ನಿರ್ಮಾಣ ಮಾಡಬೇಕೆಂದು ಹಿರಿಯರು, ಅಭಿಮಾನಿಗಳು ಆಲೋಚಿಸತೊಡಗಿದರು. ಆಚಾರ್ಯಪುರುಷರಿಗೆಲ್ಲ ಸಿದ್ಧಿಯನ್ನಿತ್ತ ಕ್ಷೇತ್ರ ಶ್ರೀಕಾಶಿಯೆಂಬುದು ಶ್ರೀಗಳವರ ಮನಸ್ಸಿನಲ್ಲಿತ್ತು. ಆದರೆ ತಮ್ಮ ಪರಿಸರವನ್ನು ನೆನೆದಾಗ ಮನಸ್ಸು ಎತ್ತಣಿಂದೆತ್ತಣ ಸಂಬಂಧವಯ್ಯ ಎನಿಸುತ್ತಿತ್ತು. ಅವರ ದರ್ಶನಕ್ಕೆ ಬಂದು ಅವರೊಡನೆ ಸಂಭಾಷಿಸಿದವರು ಕಾಶಿಗೆ ಹೋಗಿ ಏಕೆ ಅಭ್ಯಾಸ ಮಾಡಬಾರದು ಎನ್ನುತ್ತಿದ್ದರು. ಈ ಮಾತು ಅವರ ಮನದ ಆಕಾಂಕ್ಷೆಯನ್ನು ದೃಢಗೊಳಿಸುತ್ತಿತ್ತು, ಶ್ರೀ ಮಠದ ವ್ಯವಹಾರದಲ್ಲಿ ಆಸಕ್ತರಾಗಿದ್ದ ಸಮಾಜದ ಮುಖಂಡರ ಮನಸ್ಸಿಗೂ ಶ್ರೀಗಳವರನ್ನು ಕಾಶಿಯಲ್ಲಿ ವಿದ್ಯಾಭ್ಯಾಸಕ್ಕೆ ಕಳುಹಿಸಬೇಕೆಂಬ ಬಯಕೆ ಮೂಡಿ ಬಂದಿತ್ತು. ಆದರೆ ಅವರಿಗೆ ಸೌಲಭ್ಯಗಳನ್ನು ಒದಗಿಸುವ ಸಾಮರ್ಥ್ಯವಿರಲಿಲ್ಲ. ಅನೇಕರ ಪ್ರಯತ್ನ ನಮಶ್ಶಿವಾಯ ಮಠದ ಶ್ರೀಗಳವರ ನೆರವು ಮತ್ತು ಮೈಸೂರು ಶ್ರೀಮನ್ ಮಹಾರಾಜರವರು ತೋರಿದ ಔದಾರ್ಯ ಇವುಗಳಿಂದ ಶ್ರೀಗಳವರು ಕಾಶಿಗೆ ವಿದ್ಯಾಭ್ಯಾಸಕ್ಕಾಗಿ ತೆರಳಿದರು. ಇತ್ತ ಮತ್ತೆ ಗವೀಮಠವು ನಾಥರಿಲ್ಲದ ಕ್ಷೇತ್ರವಾಗಿಯೇ ಉಳಿಯಿತು. ಒಂದಲ್ಲ ಐದುಗವಿಗಳಲ್ಲಿ ಅನುಷ್ಠಾನ ನಡೆದಿತ್ತೋ ಏನೋ ಒಂದೆರಡು ಗವಿ ಮಾತ್ರ ಗೋಚರವಾಗುತ್ತವೆ. ಗುಹೆಯೊಳಗೆಷ್ಟು ಗುಹೆಗಳಿರುವುವೋ ತಿಳಿಯದು. ಆದರೂ ಇದಕ್ಕೆ ಪಂಚಗವೀಮಠವೆಂದೇ ಹೆಸರು. ಶ್ರೀಗಳವರು ಕಾಶಿಗೆ ತೆರಳಿದ ನಂತರ ಶ್ರೀಮಠವು ಅರಮನೆಯವರ ಕೈಯಲ್ಲೇ ಉಳಿದಿತ್ತು.

**ಕಾಶಿಯಲ್ಲಿ ಸಾಧನೆ**

ಪೂಜ್ಯ ಶ್ರೀಗಳವರು ಕಾಶಿಯಲ್ಲಿ ವಿದ್ಯಾಭ್ಯಾಸಕ್ಕೆ ಬಂದ ಮೇಲೆ ಅವರ ಪ್ರತಿಭಾಶಕ್ತಿಗೆ ಬಹುಜನ ಪಂಡಿತರು ಚಕಿತರಾಗುತ್ತಿದ್ದರು. ಸರಾಗವಾಗಿ ಸಾಹಿತ್ಯ, ಅಲಂಕಾರ, ವ್ಯಾಕರಣ ಇತ್ಯಾದಿ ಶಾಸ್ತ್ರಗಳಲ್ಲಿ ವಿದ್ವತ್ ಪದವಿಯನ್ನು ಪಡೆದರು. ಅರಮನೆಯ ಸಂಪರ್ಕದ ಶರಣೆಯರಾದ ಮಾತೆಯೋರ್ವರ ನೆರವಿನಲ್ಲಿ ನಿರಂತರವಾಗಿ ವ್ಯಾಸಂಗ ನಡೆದಿತ್ತು. ಪಾಳಿ, ಪ್ರಾಕೃತ, ಬಂಗಾಳಿ, ಹಿಂದಿ ಮುಂತಾದ ಉತ್ತರ ಭಾರತದಲ್ಲಿ ಪ್ರಚಲಿತವಿರುವ ಹತ್ತಾರು ಭಾಷೆಗಳಲ್ಲಿ ಪಾಂಡಿತ್ಯವನ್ನುಗಳಿಸಿದರು. ದರ್ಶನ ಶಾಸ್ತ್ರ, ಇತಿಹಾಸ, ಮನಶ್ಶಾಸ್ತ್ರ, ಸಂಸ್ಕೃತ ಮುಂತಾದ ವಿಷಯಗಳಲ್ಲಿ ಒಂದರ ಮೇಲೊಂದರಂತೆ ಎಂ. ಎ. ಪದವಿಗಳನ್ನು ಗಳಿಸಿದರು. ಉತ್ತರ ಭಾರತದ ಭಾಷೆಗಳ ಮೇಲೆ ಅವರು ಗಳಿಸಿದ ಪ್ರಭುತ್ವ ಮತ್ತು ವಿದ್ವತ್ತು ಬಹುಜನ ಪಂಡಿತರನ್ನು ಆಕರ್ಷಿಸಿತು. ವಿದ್ವದ್‌ಗೋಷ್ಠಿಗಳಲ್ಲಿ, ಸಭೆ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣ ವ್ಯಾಖ್ಯಾನದಿಂದ ಭಾರತದ ವಿದ್ವನ್ಮಣಿಗಳಲ್ಲಿ ಅವರೂ ಒಬ್ಬರೆಂದು ವಿದ್ವತ್ ಸಮುದಾಯ ಅತಿಶೀಘ್ರವಾಗಿ ಪರಿಗಣಿಸಿತು. ಸರ್ಕಾರದ ಪ್ರಾರ್ಥನೆಯಂತೆ ಸಂಸ್ಕೃತ ವಿಶ್ವವಿದ್ಯಾನಿಲಯದಲ್ಲಿ ಕೆಲವು ಕಾಲ ಪ್ರಾಧ್ಯಾಪಕರಾಗಿ ಕೆಲಸಮಾಡಿ ನೂರಾರು ಜನರಿಗೆ ಜ್ಞಾನದಾನ ಮಾಡಿದರು. ಅವರ ಬಿಡಾರವೇ ಒಂದು ವಿದ್ಯಾಮಂದಿರವಾಗಿತ್ತು. ಹಲವು ಶಾಸ್ತ್ರಾಭ್ಯಾಸಿಗಳು ಅವರ ಸನ್ನಿಧಿಗೆ ಬಂದು ಜ್ಞಾನಾರ್ಜನೆ ಮಾಡಿಕೊಂಡು ಹೋಗುತ್ತಿದ್ದರು. ಕಾಶಿಯಲ್ಲಿ ಅವರು ನಡೆಸಿದ ಸಾಧನೆ ಅಪಾರ, ಅವರು ಗಳಿಸಿದ ಅನುಭವ ಅಮೋಘ. ಅವುಗಳನ್ನು ಕುರಿತು ಪುಸ್ತಕ ಒಂದು ಪ್ರಕಟವಾಗಲಿರುವುದರಿಂದ ಇಲ್ಲಿ ವಿಸ್ತರಿಸಲು ಅವಕಾಶವಿಲ್ಲ.

ಕಾಶೀಕ್ಷೇತ್ರದಲ್ಲಿ ಸಂಸ್ಕೃತಾದಿ ಉತ್ತರ ಭಾರತದ ಭಾಷೆಯ ಬಳಕೆಯಲ್ಲದೆ ಕನ್ನಡದ ಬಳಕೆಗೆ ಯಾವ ಪ್ರೋತ್ಸಾಹವೂ ಇಲ್ಲ. ಹುಮಾಯೂನ್, ಜಹಂಗೀರ್‌ರವರ ಕಾಲದಲ್ಲೇ ರಾಜ ಗೌರವವನ್ನು ಪಡೆದ ಪಂಚಪೀಠಗಳಲ್ಲೊಂದಾದ ಶ್ರೀ ವಿಶ್ವೇಶ್ವರಾಚಾರ್ಯರ ತಪೋಭೂಮಿಯಾದ ಜಂಗಮವಾಡಿ ಮಠವು ಕನ್ನಡಿಗರಿಗೆ ಮೇಲಾಗಿ ವೀರಶೈವರಿಗೆ ಆಸರೆಯಾಗಿದೆ. ಈ ಮಠದ ಆಶ್ರಯದಲ್ಲಿ ಹತ್ತಾರುಜನ ಅದ್ವಿತೀಯ ವಿದ್ವಾಂಸರು ಬೆಳೆದು ಬೆಳಗಿದ್ದಾರೆ. ಅಂತೆಯೇ ಹತ್ತಾರುಜನ ವಿದ್ಯಾರ್ಥಿಗಳಿಗೆ ಆಶ್ರಯ ನೀಡುತ್ತಿರುವ ಜಯದೇವವಾಡಿ ಮಠವಿದೆ. ಇನ್ನೂ ಒಂದೆರಡು ಕನ್ನಡಿಗರ ಆಶ್ರಯಸ್ಥಾನಗಳಿವೆ. ನೂರಾರು ಕನ್ನಡಿಗರ ಮನೆಗಳಿವೆ. ಮೂರು ನಾಲ್ಕು ಸಾವಿರ ಕನ್ನಡಿಗರು ಅಲ್ಲಿ ವಾಸಿಸುತ್ತಾರೆ. ಆದರೆ ಕನ್ನಡದ ಬೆಳವಣಿಗೆಯ ಕಾರ್ಯಕ್ರಮಗಳು ಸಾಕಷ್ಟು ನಡೆದಿಲ್ಲ. ಹೀಗಾಗಿ ಕನ್ನಡಿಗರು ಅನ್ಯ ಭಾಷೆಯಲ್ಲಿ ಗಳಿಸುವ ಪ್ರತಿಭೆಯ ನೆರಳಿನಲ್ಲಿ ಕನ್ನಡವನ್ನು ಮರೆಯುವ ಸಂಭವ ಉಂಟು. ಆದರೆ ಶ್ರೀಗಳವರಿಗೆ ದೊರೆತ ಮಾತೆಯವರ ಆಶ್ರಯ ಅವರಿಗೆ ಶರಣಸಾಹಿತ್ಯದಲ್ಲಿ ಅಭಿರುಚಿಯನ್ನು ಬೆಳೆಸುತ್ತಿತ್ತು. ಅವರ ಆನಂದಕ್ಕಾಗಿಯಾದರೂ ಕನ್ನಡದಲ್ಲಿ ಕೆಲಸಮಾಡಬೇಕಾಗಿತ್ತು. ಆದುದರಿಂದ ಶರಣ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ತತ್ತ್ವವನ್ನು ಕರಗತಮಾಡಿಕೊಂಡಿದ್ದರು. ಪ್ರತಿದಿನ ತಾಯಿಯವರಿಗೆ ಶರಣರ ಬಗೆಗೆ ಏನನ್ನಾದರೂ ಹೇಳುತ್ತಿದ್ದರು. ಅಂತೆಯೇ ತಾಯಿಯವರೂ ಶ್ರೀಗಳವರೂ ಶರಣತತ್ತ್ವಚಿಂತನೆಯಲ್ಲಿ ತೊಡಗುತ್ತಿದ್ದರು. ಆದಕಾರಣ ಅಪಾರ

ವಾದ ಅಮೂಲ್ಯವಾದ ವಚನ ಹಾಗೂ ಇತರ ಸಾಹಿತ್ಯವನ್ನು ಸಂಗ್ರಹಿಸಿದ್ದರು ಸಂಸ್ಕರಿಸಿದ್ದರು, ಅದರಲ್ಲಿ ಮೂರುಸಾವಿರ ವಚನಗಳ ಸಂಗ್ರಹವೊಂದರ ಸಂಸ್ಕರಣ ನಡೆದಿರುವುದಾಗಿ ಶ್ರೀಗಳವರೇ ಅಪ್ಪಣೆ ಕೊಡಿಸಿದ್ದರು. ವಚನ ಸಾಹಿತ್ಯದ ಜೊತೆಗೆ ತಾಯಿಯವರಿಗೆ ಹರಿಹರನ ರಗಳೆಗಳ ಮೇಲೆ ಅತ್ಯಾಸಕ್ತಿ. ದಿನವೂ ಅದನ್ನು ಕೇಳಬೇಕೆನ್ನುವರು. ಶ್ರೀಗಳವರು ಗಾನಕಲೆಯಲ್ಲಿಯೂ ಪಳಗಿದ್ದರು. ಮೃದಂಗ ಹಾಗೂ ಪಿಟೀಲುವಾದನದಲ್ಲಿ ಆಸಕ್ತರಾಗಿದ್ದರು. ಆದುದರಿಂದ ಶರಣರ ವಾಣಿಯನ್ನು ಮಧುರವಾಗಿ ಹಾಡುತ್ತಾ ಮೈಮರೆಯುತ್ತಿದ್ದರೆಂದು ಕೇಳಿದ್ದೇನೆ.

ಹೀಗೆ ಕನ್ನಡ ಸಾಹಿತ್ಯವು ಅವರ ಅಂತರಂಗದಲ್ಲಿ ಮೆರೆಯುತ್ತಿತ್ತು. ಅದರ ಫಲವಾಗಿ ಹರಿಹರನ ರಗಳೆಯ ಶೈಲಿಯಲ್ಲಿ ಅನೇಕ ಶರಣರ ಚರಿತ್ರೆಯನ್ನು ಬರೆದರು. ತಿರುನೀಲಕಂಠರ ಬಗೆಗೆ ಅವರಿಗೆ ಅಪಾರ ಅಭಿಮಾನ. ಅವರನ್ನು ಕುರಿತು ಬರೆದ ರಗಳೆಯ ಕೆಲವೇ ಪಂಕ್ತಿಗಳನ್ನು ಒಮ್ಮೆ ಹೇಳಿದುದರ ನೆನಪಿದೆ. ಆಯ್ದಕ್ಕಿ ಮಾರಯ್ಯ ಮತ್ತು ಲಕ್ಕಮ್ಮನವರ ತಾತ್ತ್ವಿಕ ವಿಚಾರಧಾರೆಯನ್ನು ರಗಳೆಯಲ್ಲಿ ಬರೆದಿದ್ದರು. ಹೀಗೆ ಎಷ್ಟೋ ರಗಳೆಗಳನ್ನು ಬರೆದು ತಾಯಿಗೆ ಅರ್ಪಿಸಿದ್ದರು. ಆದರೆ ಆ ಕೃತಿಗಳು ಪ್ರಕಟಣೆಗೆ ದೊರೆಯದೇ ಹೋದುದು ಕನ್ನಡಿಗರ ದುರ್ದೈವ. ಅಂತೆಯೇ ಸಂಸ್ಕೃತದಲ್ಲಿ ಅನೇಕ ಪ್ರಾರ್ಥನಾ ಪದ್ಯಗಳನ್ನು ರಚಿಸಿದ್ದರು. ಶರಣರನ್ನು ಕುರಿತ ಪ್ರಾರ್ಥನೆಗಳನ್ನು ಸಂಸ್ಕೃತದಲ್ಲಿ ರಚಿಸಿದ್ದರು. 'ತಿರುನೀಲಕಂಠವಿಜಯ'ವೆಂಬ ಸಂಸ್ಕೃತ ನಾಟಕವನ್ನು ರಚಿಸಿದ್ದರು. ಕಾಳಿದಾಸನ ಪ್ರತಿಭೆಯನ್ನು ಮೀರಿದ ಪ್ರತಿಭೆಯು ಈ ನಾಟಕದ ರಚನೆಯಲ್ಲಿ ಕಂಡುಬಂದಿರುವುದಾಗಿ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದರು. ದುರ್ದೈವದಿಂದ ಅದೂ ಪ್ರಕಟವಾಗಲಿಲ್ಲ.* ಪ್ರಕಟನೆಗೆ ಪ್ರತಿ ಲಭ್ಯವಾಗಲಿಲ್ಲ. ಪೂಜ್ಯ ಶ್ರೀಗಳವರು ವಿದ್ವತ್ ಪ್ರತಿಭೆಯಲ್ಲಿ, ಆಧ್ಯಾತ್ಮಿಕ ಸಾಧನೆಯಲ್ಲಿ ಗೌರೀಶಂಕರದಷ್ಟೇ ಎತ್ತರವಾಗುತ್ತಾ ಬಂದಿದ್ದರು. ಆದುದರಿಂದ ಅವರು ಉತ್ತರ ನಾಡಿನಲ್ಲೇ ಮೂವತ್ತಮೂರು ವರ್ಷಗಳ ಜೀವನ ಸಾಧನೆ ನಡೆಸಿದ್ದರು. ಮಾತೆಯವರಿಗೆ ಕೊಟ್ಟ ಮಾತಿನಂತೆ ಅವರು ಜೀವಂತವಾಗಿರುವವರೆಗೆ ಕಾಶಿಯಲ್ಲೇ ಇದ್ದು ಅವರಿಗೆ ಸದ್ಗತಿಯನ್ನಿತ್ತು ನಂತರ ಕನ್ನಡಿಗರ ಕರೆಗೆ ಓಗೊಟ್ಟು ೧೯೪೬ ರಲ್ಲಿ ತಮ್ಮ ತಾಯ್ನಾಡಿಗೆ ಮರಳಿದರು.

**ಕನ್ನಡನಾಡಿನ ಕಣ್ಮಣಿ**

ಶ್ರೀಗಳವರು ಕನ್ನಡನಾಡಿನ ರಾಜಧಾನಿಯಾದ ಬೆಂಗಳೂರಿಗೆ ಆಗಮಿಸುವ ಮುನ್ನವೇ ಅವರ ಪಾಂಡಿತ್ಯದ ಪ್ರಚಾರ ಸಾಕಷ್ಟಾಗಿತ್ತು. ಬಂದೊಡನೆ ಹತ್ತಾರು ಕಡೆ ಉತ್ತಮ ಶ್ರೋತೃಗಳ ಸಮುದಾಯದಲ್ಲಿ ಸಭೆಗಳು ನಡೆದವು. ಶರಣರ ಸಂಸ್ಕೃತಿ, ಭಾರತೀಯ ಸಂಸ್ಕೃತಿ, ಮಾನವ ಧರ್ಮ, ಇತ್ಯಾದಿ ಹಲವು ವಿಷಯಗಳ ಮೇಲೆ ಉದ್ದಾಮ ಭಾಷಣಗಳಾದುವು. ಶರಣರ ವಿಚಾರಧಾರೆಯನ್ನು ಪಂಡಿತ ಪಾಮರರೆಲ್ಲರ ಮನಮುಟ್ಟುವಂತೆ ಚಿತ್ರಿಸುತ್ತಿದ್ದರು. ಶ್ರೋತೃಗಳಿಗೆ ಶರಣರ ಜೀವನದ ಅನುಭವಗಳು ಕೇವಲ ಶ್ರವ್ಯವಾಗಿರದೆ ದೃಶ್ಯವಾದಂತೆ ಭಾಸವಾಗುತ್ತಿತ್ತು. ಮೂರು ಗಂಟೆಗಳು ಮಾತನಾಡಿದಾಗಲೂ ಸಭೆ ಸ್ತಬ್ಧವಾಗಿ ತನ್ಮಯತೆಯನ್ನು ಅನುಭವಿಸುತ್ತಿದ್ದುದು ಕಂಡುಬರುತ್ತಿತ್ತು. ಒಂದು ಭಾಷಣದಲ್ಲಿ ಅದೆಷ್ಟೋ ವಚನಗಳು, ಶ್ಲೋಕಗಳು ಪುಂಖಾನುಪುಂಖವಾಗಿ ಬರುತ್ತಿದ್ದವು. ಎಳೆಯರಿಗೂ ತಿಳಿಯುವಂತೆ ಮನಸ್ಸನ್ನು ಸೂರೆಗೊಳ್ಳುತ್ತಿದ್ದರು. ಕರ್ನಾಟಕದಲ್ಲಿ ಬೆಂಗಳೂರಿನಲ್ಲಿ ಪ್ರಾರಂಭಗೊಂಡ ಅವರ ಪ್ರವಚನ ಕಾರ್ಯ ರಾಜ್ಯದ ನೂರಾರು ಕಡೆಗಳಲ್ಲಿ ನಡೆಯಿತು. ಸಭಿಕರಿಗೆ ಕಾಲದ ಮಿತಿಯೇ ಗೊತ್ತಾಗುತ್ತಿರಲಿಲ್ಲ. ಜೀವನದಲ್ಲೇ ಎಂದೂ ಕೇಳರಿಯದ ಸಂಗತಿಗಳು ಶ್ರೀಗಳವರ ಗಂಭೀರವಾಣಿಯಿಂದ ಹೊರಹೊಮ್ಮುತ್ತಿದ್ದವು.

ಬೆಂಗಳೂರಿನಿಂದ ಮೈಸೂರಿಗೆ ಬಂದು ಅರಮನೆ ಪಂಚಗವೀ ಮಠದಲ್ಲಿ ನೆಲೆಸಿದರು. ಶ್ರೀಗಳವರು ಕಾಶಿಯಿಂದ ಹೊರಡುವ ಮುನ್ನ ಈ ಮಠಕ್ಕೆ ಅಭಿಮಾನಿಗಳಾದ ಡೊವೇಜರ್ ಮಹಾರಾಣಿಯವರು ತಮ್ಮ ಸ್ವಂತ ವೆಚ್ಚದಿಂದ ಶ್ರೀಮಠವನ್ನು ಸಜ್ಜುಗೊಳಿಸಿದರು. ತಾವು ಜೀವಂತವಿರುವವರೆಗೆ ಶ್ರೀಗಳವರ ಸೇವೆಮಾಡಬೇಕೆಂದು ಅಪೇಕ್ಷಿಸಿ ನಿತ್ಯವೂ ಶ್ರೀಗಳವರ ದರ್ಶನ ಪಡೆಯುತ್ತಾ ಅವರ ಉಪದೇಶಾಮೃತದ ಸವಿಯಲ್ಲಿ ತಲ್ಲೀನರಾಗುತ್ತಿದ್ದರು. ಸಮಾಜಜೀವನದ ನೈತಿಕ ವಿಷಯಗಳಿಂದ ಹಿಡಿದು ಆತ್ಮ ಸಾಕ್ಷಾತ್ಕಾರದವರೆಗೆ ಸಾವಿರಾರು ವಿಷಯಗಳನ್ನು ಮಹಾರಾಣಿಯವರು ಕೇಳುತ್ತಿದ್ದರು. ಎಲ್ಲವನ್ನೂ ಹಸನ್ಮುಖಿಗಳಾಗಿ ಸರಳವಾಗಿ ವಿವರಿಸುತ್ತಿದ್ದರು. ಅರಮನೆ ಪಂಚಗವೀಮಠದ ಮೂಲಗುರುಗಳಾದ ಶ್ರೀ ಶಿವಬಸವಸ್ವಾಮಿಗಳವರ ಗದ್ದುಗೆಯ ದರ್ಶನದಿಂದ ಜೀವನದಲ್ಲಿ ನೆಮ್ಮದಿಯನ್ನು ಕಂಡಿದ್ದರು. ಶ್ರೀಮನ್ಮಹಾರಾಣಿಯವರು ನಾಲ್ವಡಿ ಕೃಷ್ಣರಾಜ ಒಡೆಯರವರ ಧರ್ಮಪತ್ನಿ. ಅವರು ಡೊವೇಜರ್ ಮಹಾರಾಣಿಯವರೆಂದೇ ವಿಖ್ಯಾತರಾಗಿದ್ದರು. ಶ್ರೀಮಠದ ವಿಷಯದಲ್ಲಿ ಹತ್ತಾರು ವರ್ಷಗಳಿಂದ ಅಭಿಮಾನ ಬೆಳೆದಿತ್ತು. ಇನ್ನು ಶ್ರೀಗಳಂತಹ ತಪೋಮೂರ್ತಿಗಳ ದರ್ಶನಭಾಗ್ಯ ಸಿಕ್ಕಿದ್ದು ತಮ್ಮ ಪೂರ್ವಜನ್ಮದ

---

* ಮಾದಾರ ಚನ್ನಯ್ಯನವರ ಬಗೆಗೂ ಶ್ರೀಗಳವರು ಒಂದು ರಗಳೆ ಬರೆದಿದ್ದರು. ಒಮ್ಮೆ ನನ್ನೆದುರು ಅದನ್ನೂ ಓದಿದುದನ್ನು ಮರೆಯುವಂತಿಲ್ಲ. (ಸಂ)

ಪುಣ್ಯವಿಶೇಷವೆಂದೇ ಭಾವಿಸಿದ್ದರು. ಅಂತೆಯೇ ಶ್ರೀಗಳವರ ವ್ಯವಹಾರಕ್ಕೆ ಯಾವ ಕುಂದೂ ಬಾರದಂತೆ ನಡೆದುಕೊಳ್ಳುತ್ತಿದ್ದರು. ಮೇಲಾಗಿ ಸುತ್ತೂರು ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ಶ್ರೀಗಳವರ ಕೃಪಾವಲಂಬಿಗಳಾಗಿ ಅವರ ಎಲ್ಲ ವ್ಯವಹಾರದಲ್ಲಿ ನೆರವಾಗಿದ್ದರಿಂದ ಶ್ರೀಮಠವು ನಿತ್ಯ ದಾಸೋಹ ಕೇಂದ್ರವಾಗಿತ್ತು. ಶ್ರೀಗಳವರ ದರ್ಶನಕ್ಕಾಗಿ ಭಕ್ತಾದಿಗಳೂ,ಗುರು ಜಂಗಮರಾದಿ ಬಹುಜನರು ಬರುತ್ತಿದ್ದರು. ಹೃಷಿಕೇಶದ ಶಿವಾನಂದಾಶ್ರಮ ಸ್ಥಾಪಕರಾದ ಸ್ವಾಮಿ ಶಿವಾನಂದರವರು ಆಗಮಿಸಿ ಶ್ರೀಗಳವರೊಡನೆ ಕುಶಲ ಸಂಭಾಷಣೆ ನಡೆಸಿದರು. ಹೀಗೆ ಅನೇಕ ತಪೋಧನರು ಶ್ರೀ ಮಠಕ್ಕೆ ಆಗಮಿಸಿ ಅದನ್ನು ಪುಣ್ಯಕ್ಷೇತ್ರವಾಗಿಸಿದ್ದರು.

ಶ್ರೀಮಠದಲ್ಲಿರುವಾಗ ಬರುವ ಭಕ್ತಾದಿಗಳಿಗೆ ದರ್ಶನ ಆಶೀರ್ವಚನವನ್ನು ನೀಡುವ ಸಮಯವನ್ನುಳಿದು ಇತರಸಮಯದಲ್ಲಿ. ಶ್ರೀಗಳು ಅಭ್ಯಾಸದಲ್ಲಿ ತೊಡಗುತ್ತಿದ್ದರು,ಶ್ರೀಗಳವರ ಬಹುದಿನದ ಬಯಕೆಯೆಂದರೆ ಗೀತೆಗೆ ವೀರಶೈವ ಪರವಾಗಿ ಭಾಷ್ಯ ಬರೆಯಬೇಕೆಂಬುದು. ಅವರು ಬರೆದ ಪ್ರತಿಯನ್ನು ನಾನೂ ನೋಡಲಿಲ್ಲ. ಆದರೆ ಹದಿನೈದು ಹದಿನಾರನೆಯ ಅಧ್ಯಾಯಗಳ ಕೆಲವು ಭಾಗಗಳನ್ನು ಹೇಳಿ ಅರ್ಥವಿವರಣೆ ಕೊಡುತ್ತಿದ್ದರು. ಹದಿನಾರು ಅಧ್ಯಾಯಗಳಿಗೆ ಭಾಷ್ಯ ಮುಗಿದಿದೆ ಎಂದು ಹೇಳುತ್ತಿದ್ದರು. ಅನಂತರ ಸುತ್ತೂರಿನಲ್ಲಿ ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಯ ತಪೋಭೂಮಿಯಲ್ಲಿ ಕುಳಿತು ಉಳಿದುದನ್ನು ಮುಗಿಸುವುದಾಗಿ ಹೇಳಿ ಅಲ್ಲಿ ಅನೇಕ ದಿನಗಳ ಕಾಲ ಏಕಾಂತದಲ್ಲಿದ್ದರು, ಬಹುಶಃ ಅಲ್ಲಿ ಭಾಷ್ಯವ್ಯಾಖ್ಯಾನಕಾರ್ಯ ಸಾಕಷ್ಟು ಮುಂದುವರಿಯಲಿಲ್ಲ. ಏಕೆಂದರೆ ನದಿ ತೀರದಲ್ಲಿರುವ ನಿರ್ಜನ ಪ್ರದೇಶವಾದ ಈ ಪ್ರಶಾಂತ ವಾತಾವರಣದಲ್ಲಿ ಅವರಿಗೆ ಬಾಹ್ಯ ಜಗತ್ತಿನ ವ್ಯಾಪಾರಗಳ ಅಭಿಮಾನ ಉಳಿದಿರಲಿಲ್ಲ. ಹಗಲಿರುಳು ಭೇದವಿಡದೆ ಅನುಷ್ಠಾನದಲ್ಲಿ ನಿರತರಾದರು. ಅಲ್ಲಿ ಅವರಿಗೆ ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರರ ಆತ್ಮದರ್ಶನವಾಯಿತು. (ಈ ವಿಷಯ ಅವರ ಜೀವನಚರಿತ್ರೆಯಲ್ಲಿ ವಿವರಿಸಲಾಗಿದೆ) ಅವರು ಗೀತಾ ಭಾಷ್ಯವನ್ನು ಬರೆಯಲೇಬೇಕೆಂದು ಬಹುಜನರ ಅಭಿಮತವಾಗಿತ್ತು. ಅವರಿಗೂ ಅದರಲ್ಲಿ ಆಸಕ್ತಿಯಿತ್ತು. ಆದರೆ ಮೈಸೂರಿನಲ್ಲಿದ್ದರೆ ಅದು ಅಸಾಧ್ಯವೆಂದು ತಿಳಿದು ಕೆಮ್ಮಣ್ಣುಗುಂಡಿಯಲ್ಲಿ ಕೆಲವು ದಿನ ಲೇಖನವನ್ನು ಮುಂದುವರಿಸಿದರು. ನಂತರ ಚಾಮುಂಡಿಬೆಟ್ಟದ ಮೇಲೆ ಬಿಡಾರ ಮಾಡಿ ಅನೇಕ ತಿಂಗಳ ಕಾಲ ಏಕಾಂತದಲ್ಲಿದ್ದರು. ಆ ವೇಳೆಗೆ ಗೀತಾವ್ಯಾಖ್ಯಾನ ಮುಗಿದಿರಬಹುದೆಂದು ನಾವೆಲ್ಲ ಭಾವಿಸಿದ್ದೆವು.* ಆದರೆ ಅದರ ಒಂದು ಪುಟವೂ ನಮಗೆ ಲಭ್ಯವಾಗದಿರುವುದು ದುರ್ದೈವ. ಓದುವುದರಲ್ಲಿ, ಚಿಂತನ ಮಾಡುವುದರಲ್ಲಿ, ಪ್ರವಚನದಲ್ಲಿ ಇದ್ದ ಆಸಕ್ತಿ ಲೇಖನದಲ್ಲಿ ಇರಲಿಲ್ಲವೋ ಏನೋ ? ಅವರ ಭಾಷಣಗಳನ್ನು ಬರೆದುಕೊಳ್ಳುವುದಕ್ಕೆ ಅವಕಾಶ ಕೊಡುತ್ತಿರಲಿಲ್ಲ. ಅವರ ಭಾಷಣವನ್ನೆಲ್ಲಾ ಸಂಗ್ರಹಿಸಿ ಪ್ರಕಟಿಸಬೇಕೆಂದು ನಾನೇ ಅವರನ್ನು ಪ್ರಾರ್ಥಿಸಿಕೊಂಡಾಗ ಅವರು ಒಪ್ಪಲಿಲ್ಲ. ಒಂದೇ ವಿಷಯವನ್ನು ಕುರಿತು ನಾಲ್ಕು ಕಡೆ ಭಾಷಣ ಮಾಡಿದ ನಂತರ ಐದನೇ ಭಾಷಣವನ್ನು ಬರೆದುಕೊಳ್ಳಬಹುದೆಂದು ಅಪ್ಪಣೆ ಕೊಡಿಸಿದ್ದರು. ಕಾರಣ ಕೇಳಿದಾಗ ಯಾವುದೇ ವಿಷಯ ತಮಗೆ ತೃಪ್ತಿಯಾಗದ ಹೊರತು ಅದು ಪ್ರಕಟವಾಗಬಾರದೆಂದು ತಿಳಿಸಿದ್ದರು. ಅದೇ ಪ್ರವೃತ್ತಿ ಅವರಲ್ಲಿ ಬೆಳೆದು ಬಂದಿತ್ತು.

**ಮಹಾಕಾವ್ಯದ ಮಹಲಿನಲ್ಲಿ**

ಮೈಸೂರಿನ ಮಠದಲ್ಲಿ ಬರೆದ ಕೃತಿಗಳಲ್ಲಿ ನಾಟಕರತ್ನ ಗುಬ್ಬೀ ವೀರಣ್ಣನವರ ಕೋರಿಕೆಯಂತೆ ಚಲನಚಿತ್ರಕ್ಕಾಗಿ ರಚಿಸಿಕೊಟ್ಟ 'ಬಸವೇಶ್ವರ'ರು ಮತ್ತು 'ಅಕ್ಕಮಹಾದೇವಿ' ಕಥಾಚರಿತ್ರೆಗಳೂ ಸಹ ಬೆಳಕು ಕಾಣಲಿಲ್ಲ. ಆ ಕಾಲದಲ್ಲೇ ಹತ್ತು ಲಕ್ಷವೆಚ್ಚದ ಅಂದಾಜಾದುದರಿಂದ ಚಿತ್ರೀಕರಣದ ಕಾರ್ಯ ಮುನ್ನಡೆಯಲಿಲ್ಲ. ಭಕ್ತರ ಕೋರಿಕೆಯಂತೆ 'ಶಿವಶರಣರ ಸೊಳ್ನುಡಿ' ಎಂಬ ಪುಟ್ಟ ವಚನ ಸಂಗ್ರಹವೊಂದನ್ನು ರಚಿಸಿ ಕೊಟ್ಟರು. ಅದು ಪ್ರಕಟವಾಯಿತು. ನಂತರ ಅಕ್ಕಮಹಾದೇವಿಯ ಜೀವನ ಚರಿತ್ರೆಯನ್ನು ಚಂಪೂ ಕಾವ್ಯದಲ್ಲಿ ರಚಿಸತೊಡಗಿದರು. ಕೈಯಲ್ಲಿ ಯಾವ ಪ್ರತಿಯೂ ಇಲ್ಲದೆ ಅನೇಕ ಸಂದರ್ಭದ ಗದ್ಯಪದ್ಯವನ್ನು ನಿರರ್ಗಳವಾಗಿ ಹೇಳುತ್ತಿದ್ದರು. ಈ ಕೃತಿಯನ್ನು ಮುದ್ರಣ ಮಾಡಿಸುವ ಹೊಣೆ ನನ್ನ ಪಾಲಿಗೆ ಬಂದಿತ್ತು. ಶ್ರೀಗಳವರೇ ಸ್ವತಃ ಬರೆದ ಹಸ್ತ ಪ್ರತಿಯನ್ನು ಮುದ್ರಣಾಲಯಕ್ಕೆ ಕೊಂಡೊಯ್ದು ಮೊದಲನೆಯ ಮುದ್ರಣ ದೋಷವನ್ನು ಎಚ್ಚರದಿಂದ ತಿದ್ದಿ ಸರಿಪಡಿಸಿಕೊಂಡು ದೋಷರಹಿತ ಪ್ರತಿಯನ್ನು ಅವರ ಸನ್ನಿಧಿಗೆ ತೆಗೆದುಕೊಂಡು ಹೋಗುತ್ತಿದ್ದೆ. ಅದರಲ್ಲಿ ಅನೇಕ ತಿದ್ದುಪಡಿಗಳಾಗುತ್ತಿದ್ದವು. ಕೆಲವು ಸಮಯದಲ್ಲಿ ಪದ್ಯಗಳ ಆಮೂಲಾಗ್ರ ಬದಲಾವಣೆಯಾಗುತ್ತಿದ್ದವು. ಈ ರೀತಿ ಬದಲಾವಣೆಗೆ ಕಾರಣವನ್ನು ಕೇಳಿದಾಗ ಹಿಂದೆ ಬರೆದ ಪದ್ಯ ಇಂದು ತೃಪ್ತಿಯಾಗಿ ಕಾಣಲಿಲ್ಲ. ಅದಕ್ಕಾಗಿ ಈ ಬದಲಾವಣೆ ಎನ್ನುತ್ತಿದ್ದರು. ಅವರು ಅಂದಂದಿಗೆ ಕೊಡುತ್ತಿದ್ದ ಹಸ್ತಪ್ರತಿಯನ್ನು ಸಂಗ್ರಹಿಸಿಡಬೇಕೆಂಬ ಬಯಕೆಯೂ ನನಗಿತ್ತು. ಏಕೆಂದರೆ ತಿದ್ದುವುದಕ್ಕೆ ಮೊದಲಿದ್ದ ಪದ್ಯಗಳೂ ಸುಂದರವಾಗಿ ಅರ್ಥಗರ್ಭಿತವಾಗಿದ್ದವು. ಆದರೆ ಅದಕ್ಕೂ ಅನುಮತಿ ಸಿಕ್ಕಲಿಲ್ಲ. ಮೂಲ ಹಸ್ತಪ್ರತಿ

*ಗೀತಾಭಾಷ್ಯ ಪೂರ್ಣವಾಗಿದಿತ್ತು. ಅದರ ಮುದ್ರಣಕ್ಕಾಗಿ ಪ್ರಯತ್ನಿಸುತ್ತಿದ್ದುದು ನನಗೆ ತಿಳಿದ ಅಂಶ. ಮತ್ತು ಅನೇಕ ಸಲ ನನ್ನೆದುರು ಓದಿದುದನ್ನು ನಾನು ಕಿವಿಯಾರೆ ಕೇಳಿದ್ದೇನೆ. (ಸಂ.)

ಅವರ ಬಳಿಗೆ ಹೋದ ಮೇಲೆ ಹಿಂದಕ್ಕೆ ಬರುತ್ತಿರಲಿಲ್ಲ. ಶ್ರೀಗಳವರು ಆರೋಗ್ಯದಿಂದಿರುವಾಗ ಅಕ್ಕಮಹಾದೇವಿ ಚಂಪೂಚರಿತ್ರೆಯ ಮುದ್ರಣ ಕಾರ್ಯ ನಿರಂತರವಾಗಿ ನಡೆಯುತ್ತಿತ್ತು. ಪೂರ್ಣ ಕೃತಿಯ ಹಸ್ತಪ್ರತಿಯನ್ನು ನಾನು ನೋಡಿರಲಿಲ್ಲ. ಅಂದಂದಿನ ಮುದ್ರಣಕ್ಕಾಗುವಷ್ಟು ಭಾಗದ ಹಸ್ತಪ್ರತಿಯನ್ನು ಮಾತ್ರ ಕೊಡುತ್ತಿದ್ದರು. ಶ್ರೀಗಳವರು ಲಿಂಗದಲ್ಲಿ ಲೀನವಾದ ನಂತರ ಸಿದ್ಧಗಂಗಾ ಮಠಾಧೀಶ್ವರರಾದ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ಶ್ರೀಗಳವರ ಗ್ರಂಥ ಭಂಡಾರಕ್ಕೆ ಹಾಕಿದ್ದ ಬೀಗಮುದ್ರೆಯನ್ನು ತೆಗೆದದ್ದು. ಆದರೆ ನಮಗೆ ಸಿಕ್ಕಿದ ಒಂದು ಪುಸ್ತಕದ ಕೊನೆಯಲ್ಲಿ ತಾವು ಅಕ್ಕಮಹಾದೇವಿ ಚಂಪೂಕಾವ್ಯವನ್ನು ಬರೆದು ಮುಗಿಸಿದುದಾಗಿ ಹೇಳಿದ ಎರಡು ಪದ್ಯಗಳು ಮಾತ್ರ ಗೋಚರವಾದವು. ಶ್ರೀಗಳವರ ಅಂತರಂಗದಲ್ಲಿ ಹೃದ್ಗತವಾಗಿದ್ದ ಕಾವ್ಯ ಲೇಖನ ರೂಪದಲ್ಲಿ ತುಣುಕಾಗಿ ಬರುತ್ತಿತ್ತೆಂದು ಕಾಣುತ್ತದೆ. ಈಗ ಐದು ಆಶ್ವಾಸಗಳಿಂದ ಕೂಡಿ ಅಪೂರ್ಣವಾದ ಪ್ರೌಢಕಾವ್ಯವೊಂದು ಕನ್ನಡ ನಿಧಿಗೆ ಲಭ್ಯವಾಗಿದೆ. ಇಪ್ಪತ್ತನೆಯ ಶತಮಾನದ ಚಂಪೂಕಾವ್ಯರಚನೆಯಲ್ಲಿ ಏಕಾಂಗಿಯಾಗಿ, ಶ್ರೇಷ್ಠ ಕವಿಯಾಗಿ, ದಾರ್ಶನಿಕರಾಗಿ ಇಷ್ಟೊಂದು ಎತ್ತರಕ್ಕೇರಿದವರು ನನಗೆ ತಿಳಿದ ಮಟ್ಟಿಗೆ ಇವರೊಬ್ಬರೇ. ವೀರಶೈವಚಂಪೂಸಾಹಿತ್ಯವಾಹಿನಿಯು ಇಪ್ಪತ್ತನೆಯ ಶತಮಾನದಲ್ಲೂ ಬತ್ತಿ ಹೋಗಿಲ್ಲವೆಂಬುದಕ್ಕೆ ಶ್ರೀಗಳವರ ಅಕ್ಕಮಹಾದೇವಿ ಚಂಪೂಚರಿತವೊಂದು ಜೀವಂತ ನಿದರ್ಶನ. ಪ್ರಾಚೀನಚಂಪೂಸಂಪ್ರದಾಯದ ಸಮಸ್ತ ರೂಪಧರಿಸಿ ಹೊರಬಂದ ಈ ಕಾವ್ಯ ಈಯುಗದ ಮಾರ್ಗಸಾಹಿತ್ಯದ ಒಂದು ಮೈಲುಗಲ್ಲು.

**ಕಾವ್ಯಕಥಾವೈಭವ**

ಶ್ರೀಗಳವರ 'ಅಕ್ಕಮಹಾದೇವಿ ಚಂಪೂಕಾವ್ಯ'ದಲ್ಲಿ ಮೂಡಿ ಬಂದ ಕಥೆ ವಿಶಿಷ್ಟವಾದುದು. "ಶ್ರೀಗಳವರು ತಮ್ಮ ವಿಶಿಷ್ಟ ದೃಷ್ಟಿಕೋನದ ಬೆಳಕಿನಲ್ಲಿ ಬಳಸಿಕೊಂಡಿರುವರು. ಅವರು ಕಥಾನಿರೂಪಣೆಗೆ ಆಧಾರವಾದ ಅಕ್ಕನ ವಚನಗಳನ್ನೂ ಮತ್ತಿತರ ಶರಣರವಚನಗಳನ್ನೂ ಅಡಿಟಿಪ್ಪಣಿಯ ಭಾಗದಲ್ಲಿ ಕೊಟ್ಟು ತಮ್ಮ ಹೇಳಿಕೆಗಳು ಸಾಧಾರವೆಂಬುದನ್ನು ತೋರಿಸಿರುವರು.ಅಕ್ಕನ ವಚನಗಳನ್ನು ಅವರು ಛಂದಸ್ಸಿಗೆ ತಿರುಗಿಸಿ ಕಾವ್ಯಶರೀರದಲ್ಲಿ ಅಳವಡಿಸಿರುವ ಮೋಡಿಯು ಮನೋಜ್ಞವಾದುದು. ಅವರ ಈ ಚಂಪೂ, ಜಡ ಸಂಪ್ರದಾಯದ ಕುರುಡು ನಕಲಾಗಿರದೆ ಇಪ್ಪತ್ತನೆಯ ಶತಮಾನದ ಸ್ವತಂತ್ರವಾತಾವರಣದ ಸಹಜವಾದ ಫಸಲಾಗಿದೆ".

ಸಾಹಿತ್ಯ ಸೃಷ್ಟಿ, ಇತಿಹಾಸ ದೃಷ್ಟಿಯಲ್ಲಿ ಕಂಡು ಬರುವ ವೈಶಿಷ್ಟ್ಯ ಇಷ್ಟಾದರೆ, ಕಥಾಸೃಷ್ಟಿಯಲ್ಲಿ ಮತ್ತಷ್ಟು ಮನೋಜ್ಞವಾದ ವೈಶಿಷ್ಟ್ಯಗಳನ್ನು ಕಾಣುತ್ತೇವೆ.

> ''ಚೆನ್ನಮಲ್ಲಿಕಾರ್ಜುನನ ಚಿತ್ಕಳೆಯೆ ತಾನೆನಿಸಿದಕ್ಕಮಾದೇವಿ ಲೋಕಾನುಗ್ರಹ ಲೀಲೆಯಿಂದೀ ಲೋಕಮಂ ಪೊಕ್ಕು, ಮುಗಮುಗಿಪೀ ಮಲ್ಲಿಗೆಗಳಂತೆ ಸದಾಮೋದಮಂ ದೆಸೆದೆಸೆಗೆ ಪಸರಿಸುತೆ, ತಣಿತಣಿಪ ಮಣಿದೀಪಿಕೆಯಂತೆ ಕರೆವೊರ್ದದಿರಿವಿಂ ತೊಳತೊಳಗಿ ತಳವೆಳಗಾಗಿ ಬಳಿ ಸಾರ್ದರ ತಮಮಂ ತೊಲಗಿಸುತೆ, ಶಿವಶರಣಕುಲ ಕಲ್ಪಲತೆಯಂತ ಕಲಿಲ ಕಾಮನಾವಸಾನ ಭೂಮಿಯೊಳ್ ವಿರಕ್ತಿಯಿಂ ಬೇರೂರಿ, ಬೆಳೆದು, ಶಿವಾನುರಕ್ತಿಯಿಂ ಮಿಡಲ್ತು, ನಿಜಾನುಭೂತಿಯಿಂ ಪೂತು, ಪರಿಪೂರ್ಣ ರಸ ಪರಿಣತಿಯಿಂ ಪಣ್ತು, ಪರತತ್ವಂ ತಾನೆ ಪೆಣ್ಣೊಡಲಂ ಪಡೆದುದೆನೆ, ಪರಮುಕ್ತಿ ತಾನೆ ಪುಣ್ಯಲಾವಣ್ಯಮಯ ವಿಗ್ರಹಮಂ ಗ್ರಹಿಸಿದುದೆನೆ, ಶಿವಸಮಯ ನಿಷ್ಠಾಗರಿಷ್ಠತೆಯಿಂ ಮೆರೆದು, ನಿಜ ಜೀವನದಿಂ ಜಗದೊಳೇ ತತ್ವಮಂ ಬಿತ್ತರಿಸಿರ್ಪಳು॥ (೧-೩೪)

–ಹೀಗೆಂದು ಅಕ್ಕನ ಚರಿತ್ರೆಯನ್ನು ಆರಂಭಿಸಿ

> ಕಾಮಿಸಿ ಕಾಮಾಂತಕವವ। ಕಾಮ ಪದಕ್ಕೇರಿದಕ್ಕಮಾದೇವಿಯಸ |
> ತ್ಪ್ರೇಮ ಮಯಂ ಜೀವನಮೀ। ಭೂಮಿಗೆ ಹೊಸತೆಂಬರಲ್ತೆ ಪಾವನಚರಿತರ್ ॥ (೧-೩೫)

ಎಂದು ಅಕ್ಕನ ಸಮಗ್ರ ಜೀವನವನ್ನು ಕಾವ್ಯದ ಭೂಮಿಕೆಯಾಗಿ ಚಿತ್ರಿಸಿದ್ದಾರೆ. ಉಡುತಡಿಯಲ್ಲಿ ದೈವಭಕ್ತಿಸಂಪನ್ನರಾದ ಮಲ್ಲಿನಾಯಕ ಮತ್ತು ಗಂಗಾದೇವಿಯವರ ಮಗಳಾಗಿ ಮಹಾದೇವಿ ಜನಿಸಿದರು. ಮಲ್ಲಿಕಾರ್ಜುನ ದೇಶಿಕರೆಂಬ ಗುರುಗಳ ಅನುಗ್ರಹದ ಐಸಿರಿಯಲ್ಲಿ ಅಕ್ಕ ಬೆಳೆದಂತೆ ಅಂತರಂಗದಲ್ಲಿ ಅಧ್ಯಾತ್ಮ ಚಿಂತನೆಯೂ ಬೆಳೆಯುತ್ತಿತ್ತು, ಅಕ್ಕನೂ ಪ್ರಾಪ್ತವಯಸ್ಕಳಾದಳು. ಒಂದು ದಿನ ಪೈಹಾಳಿಕೋತ್ಸವದಲ್ಲಿ ಆಗಮಿಸಿದ ಕೌಶಿಕ ಮಹಾರಾಜನನ್ನು ಉಪ್ಪರಿಗೆಯ ಮೇಲೆ ನಿಂತು ಅಕ್ಕ ನೋಡಿದಳು. ಪುರ ಜನರು ನೋಡಿ ಆನಂದ ಪಡುತ್ತಿದ್ದಾರೆ. ಅಕ್ಕನ ಅಂತರಂಗದಲ್ಲಿ ನಶ್ವರ ಜೀವಿಯ ವಿಲಾಸ ಅಟ್ಟಹಾಸಗಳನ್ನು ಕಂಡು ಮನ ಮರುಗುತ್ತಿತ್ತು. ಅಕ್ಕ ಒಮ್ಮೆ ಕೌಶಿಕನತ್ತ ನೋಡಿದರು. ಆದರೆ ಕೌಶಿಕ ಅಕ್ಕನ ಸೌಂದರ್ಯವನ್ನು ವೀಕ್ಷಿಸಿದೊಡನೆಯೇ ಜಗತ್ತೆಲ್ಲವೂ ಶೂನ್ಯವಾಗಿ ತೋರಿತು. ಅವನ ಮನಸ್ಸಿನ ಮೇಲಾದ ಅನಂತ ಪರಿಣಾಮಗಳನ್ನು ಹಲವು ಪದ್ಯಗಳಲ್ಲಿ ವರ್ಣಿಸುತ್ತಾರೆ:

> ಮಂಗಳತೂರ್ಯತಾರ ತುಮುಲಧ್ವನಿಸಾಧ್ವಸದಿಂ ದಿಗಂತಮಾ| ತಂಗಗಳೋಳಿ ಘೀಳಿಡೆ, ಯುಗಾಂತ ಘನಾಘನ ಘೋಷಿತಂಗಳಂ॥
> ಪಿಂಗಿಪ ಮಾಳ್ಕೆಯಿಂ ಮೊಳಗೆ ಪೌರಜಮೂಜಯಘೋಷಿತಂ ದಿಗಂ। ತಂಗಳೊಳೇಳ್ದನಂಗಜ ಮಹಾಜ್ವರ ಮೂರ್ಛೆಯಿನಾ ಮಹೀಶ್ವರಂ॥

ಅವನಿಗಾದ ಅವಸ್ಥೆಯನ್ನು ರಮ್ಯವಾಗಿ ಈ ಪದ್ಯದಲ್ಲಿ ಚಿತ್ರಿಸಿದ್ದಾರೆ. ಅವನ ವಿರಹಾವಸ್ಥೆ ಉಲ್ಬಣಗೊಳ್ಳುತ್ತಿರುವುದನ್ನು ಕಂಡ ಮಂತ್ರಿಯು ರಾಜನಿಗೆ ಸಮಾಧಾನಮಾಡಿ ಅವನು ಅಪೇಕ್ಷಿಸಿದ ಹೆಣ್ಣನ್ನೇ ತಂದು ವಿವಾಹ ಮಾಡುವುದಾಗಿ ಭರವಸೆ ಕೊಡುತ್ತಾನೆ. ಅರಮನೆಯಿಂದ ಮೂವರು ಕನ್ಯೆಯರು ಬಂದು ಸಂಧಾನ ನಡೆಸುತ್ತಾರೆ. ತನ್ನ ಮಗಳು ರಾಣಿಯಾಗುವಳೆಂಬುದು ತಾಯಿ ಗಂಗಾದೇವಿಗೆ ಆನಂದವನ್ನುಂಟುಮಾಡುತ್ತದೆ. ತಂದೆಯು ಶಿವಭಕ್ತರಿಗೂ ಜಿನ ಭಕ್ತರಿಗೂ ಸಾಮರಸ್ಯವೇರ್ಪಡದೆಂದು ನಿರ್ಧರಿಸಿ ಈ ಸಂಬಂಧಕ್ಕೆ ಮನವೆಳೆಸಲಿಲ್ಲ. ತಾಯಿ ಮಗಳನ್ನು ಒಪ್ಪಿಸಲು ವಿವಿಧ ಪ್ರಯತ್ನ ನಡೆಸುತ್ತಾಳೆ. ಈ ಸಮಯದಲ್ಲಿ ಅಕ್ಕನ ಅಂತರಂಗದಲ್ಲಿದ್ದ ಆಧ್ಯಾತ್ಮ ಪ್ರವೃತ್ತಿಯ ಬೆಳಕು ಪ್ರಜ್ವಲಿಸಿ ಹೊರ ಹೊಮ್ಮುತ್ತದೆ. ಈ ದೃಷ್ಟಿಯಿಂದ ತೃತೀಯಾಶ್ವಾಸ ಈ ಕಾವ್ಯದಲ್ಲಿ ಮಹತ್ವಪೂರ್ಣವಾಗಿದೆ. ಈ ಆಶ್ವಾಸದಲ್ಲಿ ಅಕ್ಕನ ಲಿಂಗಲೀಲಾವಿಲಾಸವನ್ನು ಕಾಣಬಹುದು. ಶಿವಕಾರುಣ್ಯ ಸ್ಥಲದ ತುಟ್ಟತುದಿಯನ್ನೇರಿದ ಸಾಧನೆಯ ಹಿರಿಮೆ ಇಲ್ಲಿ ವ್ಯಕ್ತವಾಗಿದೆ. ಲಿಂಗನಿಷ್ಠಾಗರಿಷ್ಠತೆಯ ಅಕ್ಕನ ಹತ್ತಾರು ವಚನಗಳು ವೃತ್ತ ಮತ್ತು ಕಂದ ಪದ್ಯಗಳಾಗಿ ಮೈವೆತ್ತಿವೆ:

“ಕೀಡೆ, ತುಂಬಿಯು ಹಂಬಲದಿಂದ ತುಂಬಿಯಾಗಿ ತನ್ನ ಬಿಡಲುಂಟೇ ಅಯ್ಯಾ? ಆನು ನಿಮ್ಮ ನೆನೆದು ಎನ್ನ
ಕರ ತುಂಬಿ, ಎನ್ನಮನ ತುಂಬಿ, ಮತ್ತಿಲ್ಲದೆ ನಿನ್ನ ಕೂಟದ ಸವಿಗಲೆಯನೆಂತು ಕಾಣುವೆನಯ್ಯಾ ಚನ್ನಮಲ್ಲಿಕಾರ್ಜುನ !”

ಹರೆಯದಲ್ಲೆ ಅಕ್ಕನ ಮನದ 'ಪರಿಣಾಮವೇನೆಂಬುದು ಈ ವಚನದಿಂದ ಗೊತ್ತಾಗುತ್ತದೆ. ಇದು ವೃತ್ತದಲ್ಲಿ ಹೀಗೆ ಮೂಡಿ ಬಂದಿದೆ:

ದಿನ ಸಮಯಂ ವಿಯೋಗ ಭರದೊಳ್ ಕಳೆದತ್ತೆಸಗಾ ಕುಲತ್ವದಿಂ । ದಿನ ನಿಶೆಯೆಲ್ಲಮುಂ ವಿಕಲ ಭಾವದಿನೆಯ್ದುದು ಹಾ! ದಿವಾನಿಶಂ.॥
ನಿನಗೆ ಪಲುಂಬಿ ಪಂಬಲಿಸಿ ಮೆಯ್ಮರೆದೆಂ ಗಡ! ಚೆನ್ನಮಲ್ಲಿಕಾ।ರ್ಜುನ ನಡೆ ನಿನ್ನ ನಲ್ಮೆ ಮನದೊಳ್ ಮರೆದೆಂ ಪಸಿವಂ ಪಿಪಾಸೆಯಂ॥ (೩.೦೦)

ಅಕ್ಕನು ಹಗಲಿರುಳು ಲಿಂಗಲೀಲಾವಿಲಾಸದಲಿದ್ದಾಗ ಹೇಳಿದ ವಚನವನ್ನು ಪದ್ಯರೂಪದಲ್ಲಿ ಚಿತ್ರಿಸಿರುವಿಕೆ ಶ್ರೀಗಳವರ ಕವಿತಾ ಪ್ರಾಗಲ್ಭ್ಯವನ್ನು ಮನಗಾಣಿಸುತ್ತದೆ.

ಇತ್ತ ಕಾಮುಕನಾದ ಕೌಶಿಕನ ಕಡೆಯಿಂದ ಅವನ ಸಾಕು ತಾಯಿ ಸಾಂತಮ್ಮನ ನಿರ್ದೇಶನದಂತೆ ಮೂರು ಮಂದಿ ಮಹಿಳೆಯರು ಅಕ್ಕನ ಮನೆಗೆ ಸಂಧಾನಕ್ಕೆ ಬಂದರು. ಅಕ್ಕನನ್ನು ನೋಡಿ **'ಈ ಸೌಂದರ್ಯ ಸ್ವರ್ಗಸುಂದರಿಯರ್ಗಂ ಸ್ಪೃಹಣೀಯಮಲ್ತೆ'** ಎಂದು ಅಚ್ಚರಿಪಟ್ಟರು. ಕೌಶಿಕನು ಇಂತಹ ಸೌಂದರ್ಯಕ್ಕೆ ಮಾರುಹೋದುದು ಸಹಜವೇ ಎನ್ನಿಸಿತು. ಅಕ್ಕನ ತಾಯಿ ಗಂಗಾದೇವಿಗೆ ಪರಮ ಸಂತೋಷ. **“ಅಪ್ರತೀಕ್ಷಿತಂ ಕೌಶಿಕಕ್ಷಿತೀಶ್ವರಕಟಾಕ್ಷಮಿಂದೆನ್ನ ನಂದಿನಿಯೊಳಕ್ಷಯ ಸುಕೃತಸೌಭಾಗ್ಯ ಸಂಪದಮಂ ಸೂಚಿಸುವುದರೊಳ್ ಸಂದೇಹಮೇಂ”** ಎನ್ನುತ್ತಾ ತನ್ನ ಮಗಳು ಅರಸಿಯಾಗುವಳೆಂದು ಆನಂದಿತಳಾದಳು. ಮಲ್ಲಿನಾಯಕನಮನಕ್ಕೆ ಈ ಪ್ರಸಂಗ ಸಂತಸವನ್ನುಂಟುಮಾಡಲಿಲ್ಲ. **“ಶ್ರೀಗುರು ಕರುಣೆಯಿಂ ಕರತಳದೊಳ್ ಕಳೆವೆತ್ತು ತಳತಳಿಪ ಕರುಪಂ ತಳೆದೆಮ್ಮ ಕುವರಿ ಕೌಶಿಕೇಶ್ವರಂಗೆ ಕರಮನೆಂತು ನೀಡಿದಪಳೊ! ಭವಿಸಂಗ ವಿದೂರತಾ ಸಾರ ವೀರಶೈವಾಚಾರ ಪರಾಯಣತೆಯನುಳಿದು ಮಹಾದೇವಿ ತಾನೆಂತಾನುಮೀ ಕಿರುಕುಳಕ್ಕೊಲ್ದಪಳೆ”**

–ಎಂದು ಪರಿತಪಿಸಿದನು. ಆದರೆ ತಾಯಿಗೆ ಮಗಳು ಪಟ್ಟದರಸಿಯಾಗಿ ಮೆರೆಯುವುದನ್ನು ನೋಡಬೇಕೆಂಬ ಬಯಕೆಯಿಂದ ಪತಿಯನ್ನು ಒಪ್ಪಿಸಲು ಪ್ರಯತ್ನವನ್ನು ಮಾಡುತ್ತಾಳೆ. ಆದರೆ ಅದಕ್ಕೆ ಮಲ್ಲಿನಾಯಕನು,

“ಗಿರಿಪತಿಗೊಲ್ದು ಮೇಲ್ಮೆವಡೆದೆನ್ನ ತನೂಜೆಯ ಚಿತ್ತವೃತ್ತಿ ಪಾ। ಮರ ಜನ ಯೋಗ್ಯಕೀ ಕಿರುಕುಳಕ್ಕಿಳಿದಪ್ಪುದದೆಂತೊ ದೇವಿ ನಿ।
ರ್ಜರತಟನೀತರಂಗ ತರಲಾಂಬುರುಹೋದರದೊಳ್ ವಿಲಾಸದಿಂ। ಚರಿಸುವ ರಾಜಹಂಸಿ ಕಿರುವಳ್ಳದ ಕೇಳಿಗೆ ಮೆಚ್ಚಿದಪ್ಪುದೇ॥ (೩-೫೦)

ಎನ್ನುತ್ತಾನೆ. ತಾಯಿಗಿಂತಲೂ ಮಿಗಿಲಾಗಿ ಮಗಳ ಮನದ ಇಂಗಿತವನ್ನು ತಂದೆ ಬಲ್ಲವರಾಗಿದ್ದರು. ತಾಯಿ ಮಗಳನ್ನು ಒಪ್ಪಿಸಲು ಪ್ರಯತ್ನಿಸಿ,

ಮಣಿ ಮುಕುಟ ರತ್ನಮಯ ಭೂ। ಷಣ ಕಿರಣ ಶ್ರೇಣಿಯೊಳ್ ಮಹೀಶ್ವರನೆಡದೊಳ್ ॥
ಮಣಿದೀ ಮೊಗಮಂ ಕಣ್ಗಳ್। ತಣಿವನ್ನಂ ಕುವರಿ ನೋಡಿ ನಲಿದಪೆನಿನ್ನೇಂ॥ (೩-೬೦)

ಎಂದು ತನ್ನ ಆಸೆಯನ್ನು ವ್ಯಕ್ತಪಡಿಸುತ್ತಾಳೆ. ಅದಕ್ಕೆ ಅಕ್ಕ–

ಜನನಿ ಧನಂಗಳಿಲ್ಲದ ಕುಲಸ್ಥಲ ಸೀಮೆಗೆ ಸಲ್ಲದೀಶನೊಳ್। ಜನನಿ ಮದೀಯ ಚಿತ್ತಮೊಸೆದತ್ತದರಿಂದಮೆ ಚನ್ನಮಲ್ಲಿಕಾ।
ರ್ಜುನನೆನಗೊಲ್ದ ಗಂಡನವನೊಲ್ಮೆಯವಳ್ ಸತಿಯಾಂ ಬಿಡಲ್ಕಮೇಂ। ಜನಿಮೃತಿ ದುಸ್ತರಂ ಜಗದ ಗಂಡರನೊಯ್ದೊಲೆಗಿಕ್ಕಲಾಗದೇ ॥ (೩-೬೯)

ಎಂದು ತನ್ನ ಅಚಲ ನಿರ್ಧಾರವನ್ನು ತಿಳಿಸುತ್ತಾಳೆ. ಆದರೆ ಕಾಮಾತುರನಾದ ಕೌಶಿಕನಿಂದ ತಪ್ಪಿಸಿಕೊಳ್ಳುವುದು ಸುಲಭಸಾಧ್ಯವಾದ ಕಾರ್ಯವಲ್ಲ. ಅರಸರಿಗೆ ಸರಸದಿಂದ ಸಿಕ್ಕದಿಹ ವಸ್ತುವನ್ನು ವಿರಸದಿಂದಲೇ ಪಡೆಯುವ ಅಧಿಕಾರದ ಪರಿಸರವಿದೆ. ಇದನ್ನು ಚಿಂತಿಸಿದ ತಂದೆ ತಾಯಿಗಳು ಮಗಳ ರಕ್ಷಣೆಗೆ ಪರಮಗುರು ದೇಶಿಕೇಂದ್ರರ ಕೃಪೆಯನ್ನು ಅಪೇಕ್ಷಿಸುತ್ತಾರೆ. ಅಕ್ಕನ ಆಧ್ಯಾತ್ಮಶಕ್ತಿಯನ್ನು ಅರ್ಥಮಾಡಿಕೊಂಡ ಗುರುಗಳು 'ಮಗಳಿವಳ್ ಮಹಾ ಪ್ರಾಜ್ಞೆ, ವಿಜ್ಞಾನ ವೇದಿತವ್ಯೆ! ಇಂತಿವಳ್

**ತನ್ನ ಸೊಗದ ಸೀಮೆಯುಂ ತಾನರಿದಪಳಲ್ತೆ! ನೀನಿದಂ ಚಿಂತಿಸಲೇಂ ದೇವಿ; ತನ್ನಂ ನರ್ಚಿದೆನ್ನ ಕುವರಿಯುಂ ಮಲ್ಲಿಕಾರ್ಜುನಂ ತಾನೆ ಕೆಯ್ವಿಡಿದು ಕಲ್ಯಾಣ ಮಾರ್ಗದೊಳ್ ನಡೆಯಿಪಂ ಗಡಾ''** ಎಂದು ಸಂತೈಸುತ್ತಾರೆ.

ಮತ್ತೆ ರಾಜಾಂಗನೆಯರು ಅಕ್ಕನವರ ಮನವನ್ನು ಸೂರೆಗೊಂಡು ಕೌಶಿಕನರಸಿಯನ್ನಾಗಿ ಮಾಡಲೆಳಸುತ್ತಾರೆ. ರಾಜತ್ವ ದೈಸಿರಿಯನ್ನು ಬಣ್ಣಿಸುತ್ತಾರೆ. ಅಕ್ಕಮಹಾದೇವಿ ಅನಂತ ಜನ್ಮಗಳ ಪುಣ್ಯದ ರಾಶಿ. ಯುಗಯುಗದ ಸಾಧನೆಯ ಸಿದ್ಧಿ. ಆರ ಪುಣ್ಯದ ಫಲವೋ ಆವಭಾಗ್ಯದ ನಿಧಿಯೋ ಇಳೆಗೆ ಮಹಿಳೆಯಾಗಿ ಬಂದಿದ್ದಾರೆ. ಅಪಾರ ಸೌಂದರ್ಯವಿದೆ ನಿಜ. ಈ ಸೌಂದರ್ಯವೂ ಜನ್ಮಾಂತರದ ಪುಣ್ಯದ ಪುಂಜ. ಆದರೆ ಆ ಸೌಂದರ್ಯ ಐಹಿಕ ವ್ಯಕ್ತಿಗಳ ಭೋಗಕ್ಕಲ್ಲ. ಅದು ಇಹಕ್ಕೆ ಬಂದಿರುವುದೇ ಆದನಿತ್ತ ಮಹಾದೇವನ ಯೋಗಕ್ಕೆ. ಇಂತಹ ಅಚಲನಿರ್ಧಾರವನ್ನು ಬದಲಿಸಲು ನಡೆಸುವ ಪ್ರಯತ್ನ ವ್ಯರ್ಥ. ಅರಸೆಂಬ ಅಂಜಿಕೆಯಿಲ್ಲದೆ ಐಸಿರಿಯ ಮೋಹಕ್ಕೆ ಮರುಳಾಗದೆ ಅರಸಾಂಗನೆಯರಿಗೆ ತನ್ನ ನಿರ್ಧಾರವನ್ನು ತಿಳಿಸುತ್ತಾರೆ ಅಕ್ಕನವರು.

ಗಿರಿವನಮನುಳಿದು ಪು|ಲ್ಮೊರಡಿಯೊಳ್ ಮದಕೇಕಿ। ಕೇಳಿಯಿಂ ತೊನೆತೊನೆದು। ಕೇಗಿದಪುದೆ ॥
ನಲಿನಕಾಸಾರದೊಳ್।ನಲಿನಲಿವುದಂ ತೊರೆದು| ರಾಯಂಚೆ ಬೆಂಚೆಯೊಳ್| ರಮಿಸಿದಪುದೆ॥
ಪಲ್ಲವಿಸಿದೆಳಮಾವೊ|ಳಲ್ಲದೇಂ ಕೋಗಿಲೆಗೆ| ಮುದವೊದವೆ ಪಂಚಮಂ| ಮೂಡಿದಪುದೆ॥
ಮಗ ಮಗಿಪ ಕಮಲದೊಳ್|ಮೊಗಸಾಂತ ಮರಿದುಂಬಿ|ಬರ್ಬೂರ ಕುಸುಮಮಂ| ಬಯಸಿದಪುದೆ॥
ಅರಿದುಂ ಮನ್ಮನದೊಳ್ಪಿನ | ತೆರನಂ ಶ್ರೀ ಚೆನ್ನಮಲ್ಲಿಕಾರ್ಜುನನಂ ॥
ತೊರೆದೆನ್ನ ಕೆಳದಿಯರಿರಾ। ಪೆರತೊಂದರೊಳಾಹ! ಮನ್ಮನಂ ಸಂದಪುದೇ॥ (೩-೧೪೯)

ಎಂದು ನಿರ್ದಾಕ್ಷಿಣ್ಯವಾದ ಉತ್ತರವನ್ನಿತ್ತರು. ಅಕ್ಕಮಹಾದೇವಿಯು ಮದುವೆಯಾಗಲು ನಿರಾಕರಿಸಿದಳೆಂಬ ಸಂಗತಿಯನ್ನು ತಿಳಿದು ಕೌಶಿಕನು ಮೂರ್ಛೆಗೊಳ್ಳುತ್ತಾನೆ. ಅವನ ಮಾವ ದೇವರಾಯ ಅಳಿಯನ ಅವಸ್ಥೆಯನ್ನು ನೋಡಿ ಬಲಾತ್ಕಾರವಾಗಿ ಲಗ್ನಮಾಡುವ ನಿಶ್ಚಯಮಾಡಿ ಖಡ್ಗಧಾರಿಯಾಗಿ ಅಕ್ಕನ ಮನೆಗೆ ಬಂದು, ಅವರ ಮನೆಗೆ ಭಟರ ಕಾವಲಿಟ್ಟು ಹೋಗುವನು. ರಾಜನೂ ಮಂತ್ರಿಯೂ ಮತ್ತೆ ಅಕ್ಕನ ಮನೆಗೆ ಬರುವರು. ಅಕ್ಕನ ಮಾತಾಪಿತರು ಸಂಕಟಕ್ಕೆ ಸಿಲುಕಿದ ಪರಿಸ್ಥಿತಿಯನ್ನು ಕಂಡು ಅಕ್ಕ ಮರುಗಿದರು. ಮನಸೊಂದು ಮಲ್ಲಿಕಾರ್ಜುನನಲ್ಲಿ ಮೊರೆಹೊಕ್ಕು ಮುನ್ನಡಿಯಿಡುತ್ತಾರೆ. ಮದುವೆಯಾಗಲು ರಾಜನು ಎರಡು ನುಡಿಗಳನ್ನು ನಡೆಸಿಕೊಡಬೇಕೆಂದು ಅಕ್ಕ ಬಿನ್ನವಿಸಿದರು. ಕಾಮಾತುರನಾದ ಕೌಶಿಕನು ಯೋಚಿಸದೆಯೇ ನಡೆಸಿಕೊಡುವುದಾಗಿ ಪ್ರಮಾಣವಚನ ನೀಡುವನು. ಮೊದಲ ವಚನವಾಗಿ ತನ್ನ ತಂದೆತಾಯಿಗೆ ಯಾವ ಹಿಂಸೆಯೂ ಆಗಬಾರದೆಂಬುದು; ಅದನ್ನು ಸಂತೋಷದಿಂದ ಒಪ್ಪುತ್ತಾನೆ. ಎರಡನೆಯ ಮಾತನ್ನು ಕೇಳಲು ರಾಜನು ಕುತೂಹಲಿಯಾಗಿರುವಾಗ ಅದನ್ನು ಅರಮನೆಯ ವಸಂತಾರಾಮದಲ್ಲಿ ತಿಳಿಸುವುದಾಗಿ ಅಕ್ಕ ಹೇಳುವಳು ; ರಾಜನಿಗೆ ಅತ್ಯಾನಂದವಾಯಿತು. ಅಕ್ಕ ತನ್ನವಳಾದಳೆಂಬ ನಂಬಿಕೆ ಅವನಲ್ಲಿ ಮೂಡಿತು.

ಈ ವೇಳೆಗಾಗಲೇ ಗುರುಕರುಣೆಯಿಂದ ಅಕ್ಕ ಕಲ್ಯಾಣಕ್ಕೆ ಐತರುವ ನಿರ್ದೇಶನ ದೊರಕಿತ್ತು. ನಂಬಿದ ಒಡೆಯನು ಎಂತಹ ಪ್ರಸಂಗದಲ್ಲೂ ತಲೆ ಕಾಯುವನೆಂಬ ದೃಢನಿರ್ಧಾರ ಅಕ್ಕನದು. ಅವರನ್ನು ಅರಸು ಅತ್ಯಾದರದಿಂದ ಅರಮನೆಗೆ ಬರಮಾಡಿಕೊಂಡನು. ಎರಡನೆಯ ನುಡಿಯನ್ನು ನಡೆಸಿಕೊಡಲು ಆಣೆಮಾಡಿಕೊಂಡನು. ಅಕ್ಕ ಅರಮನೆಯನ್ನು ಸೇರಿದರು. ಕೌಶಿಕ ಮಹಾರಾಜನು ಜೈನಮಾರ್ಗಾವಲಂಬಿ. ರಾಜರಾದವರು ಹೆಣ್ಣಿಗಾಗಿ ರಾಜ್ಯಕೋಶಗಳನ್ನು ಬಿಟ್ಟವರುಂಟು. ಆದರೆ ಇದೊಂದು ಅಪೂರ್ವ ಪ್ರಸಂಗ; ಕನ್ನಡಿಗರ ಆದ್ಯ ಗುಣಧರ್ಮವನ್ನು ಶ್ರೀಗಳವರು ಚಿತ್ರಿಸಿರುವುದು ಈ ಕಾವ್ಯದ ಮತ್ತೊಂದು ವೈಶಿಷ್ಟ್ಯ. ಅಕ್ಕನ ಜೀವನ ಚಿತ್ರಣದಲ್ಲಿ ಹೊಸ ದೃಷ್ಟಿ ಮತ್ತು ಹೊಸ ಸೃಷ್ಟಿಯನ್ನು ಚತುರ್ಥಾಶ್ವಾಸದಲ್ಲಿ ಕಾಣುತ್ತೇವೆ. ಅಕ್ಕನ ಹಲವು ವಚನಗಳು ಇಲ್ಲಿ ಪದ್ಯರೂಪ ತಳೆದಿವೆ. ಅವು ಸಂದರ್ಭೋಚಿತವಾಗಿವೆ. ಅಕ್ಕನ ಆಧ್ಯಾತ್ಮಶಕ್ತಿಯ ಬೆಳವಣಿಗೆಗೆ ಮೆರಗು ಕೊಟ್ಟಂತಿವೆ. ಕೊನೆಗೆ ಅಕ್ಕ ಕೌಶಿಕನ ಅರಮನೆಗೆ ಬರುವುದೇನೂ ತಪ್ಪಲಿಲ್ಲ.

ಅರಮನೆಗೆ ಬಂದ ಅಕ್ಕನವರಿಗೆ ಕೌಶಿಕನ ಅಕ್ಕರೆಯ ಸ್ವಾಗತ ಸಿಕ್ಕಿದೆ. ಅವನು ಬಹು ಎತ್ತರದ ಆಕಾಸೌಧವನ್ನೇ ನಿರ್ಮಾಣ ಮಾಡಿಕೊಂಡು ಅಕ್ಕ ಕೇಳುವ ಮುನ್ನವೇ ಅವರ ಬಯಕೆಯನ್ನು ಈಡೇರಿಸುವ ಕಾತರದಲ್ಲಿದ್ದಾನೆ. ಆಕೆಯ ಎರಡನೆಯ ಮಾತನ್ನು ನಡೆಸಿಕೊಡುವ ಪ್ರತಿಜ್ಞೆಯನ್ನು ಮಾಡುತ್ತಾನೆ. ಅಕ್ಕ ನಸುನಗುತ್ತಾ ತಮ್ಮ ಎರಡನೆಯ ಮಾತನ್ನು ತಿಳಿಸುತ್ತಾರೆ.

ಮತವಮಂ ಮಹೀಶ ನೀನಾ। ಹರ್ತಮುಂ ತೊರೆದಂತರಂಗ ದೊಲ್ಮೆಯಿಂನತ್ಯು॥
ಸ್ನತ ಮೆನಿಪ ವೀರಶೈವ। ವ್ರತಮಂ ಕೆಯ್ಗೊಳ್ವುದೆಂದು ಕೇಳ್ದಪೆನೀಗಳ್॥ (೪-೧೯೩)

ಜೈನ ಧರ್ಮವನ್ನು ಬಿಟ್ಟು ವೀರಶೈವ ಧರ್ಮಾವಲಂಬಿಯಾದರೆ ಮಾತ್ರ ಇಬ್ಬರ ಸಮಾಗಮ ಸಾಧ್ಯವೆಂಬ ಅಕ್ಕನ ವಾಣಿ ಕೌಶಿಕನ ಹೃದಯಕ್ಕೆ ಶೂಲವಿಕ್ಕಿದಂತಾಯಿತು; ಸಿಡಿಲು ಬಡಿದಂತಾಯ್ತು. ಕೌಶಿಕ ಹರೆಯದರಸು, ಸಿರಿಯಲ್ಲಿ ಮೆರೆವ ದೊರೆ. ಹೆಣ್ಣಿನಲ್ಲಿ ಅನುರಾಗ ಬರುವುದು ಸಹಜಸ್ವಭಾವ. ಆದರೂ ಈ ಕೃತಿಯಲ್ಲಿ ಕೌಶಿಕ ಕಾಮಿಯಾಗಿಲ್ಲ. ಸಹಜಗುಣ ಧರ್ಮಗಳ ಪ್ರೇಮಿ

ಯಾಗಿದ್ದಾನೆ. ಶ್ರೀಗಳವರು ಕೌಶಿಕನ ಪಾತ್ರದಲ್ಲೂ ವ್ಯಕ್ತಿನಿಷ್ಠೆ ತತ್ತ್ವನಿಷ್ಠೆಗಳ ಹಿರಿತನವನ್ನು ತುಂಬಿದ್ದಾರೆ. ಅರಸನ ಗೌರವ ಪ್ರತಿಷ್ಠೆಗಳು ಅತ್ಯಂತ ಭಿನ್ನವೂ ಮಹತ್ವಪೂರ್ಣವೂ ಆಗಿ ಈ ಕೃತಿಯಲ್ಲಿ ಮೈವೆತ್ತಿವೆ. ಬಯಸಿದ ಹೆಣ್ಣು ತನ್ನ ಅಭೀಷ್ಟವನ್ನು ನೆರವೇರಿಸಲು ಒಪ್ಪದ ವಾರ್ತೆ ಕೇಳಿ ಮೂರ್ಛಿತನಾದ ಅರಸು ತನ್ನ ಕುಲಧರ್ಮವನ್ನು ತ್ಯಜಿಸಿದರೆ ತಾನು ವಿವಾಹಕ್ಕೆ ಒಪ್ಪುವು ದಾಗಿ ತಿಳಿಸಿದಾಗ ಸ್ವಾಭಿಮಾನ, ಸ್ವಧರ್ಮಾಭಿಮಾನದ ನಾಗರ ಹೆಡೆಯೆತ್ತಿನಿಲ್ಲುತ್ತದೆ. ತನ್ನ ಕಣ್ಮುಂದಿದ್ದರೂ ಕೈಗೆಟುಕದಂತಿರುವ ಲಾವಣ್ಯವತಿ ಹೆಣ್ಣನ್ನು ಕುರಿತು.

ಸುತನು ಸುರಾ ಸುರ ಸಂಭಾ । ವಿತನ ಜಿನಸ್ವಾಮಿಯಡಿಯ ಸಮ್ಮೊಗದೊಳ್ ಸ್ವೀ ॥
ಕೃತಮಾದೀ ವ್ರತದ ಪರಿ । ಚ್ಯುತಿಯಿಂ ಮೃತಿ ಸೂರ್ವೆ ಲೇಸು ಲೇಸೆನಗೆಂಬೆಂ ॥ (೪-೨೦೦)

"ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ" ಎಂಬ ಗೀತೋಕ್ತಿಯನ್ನು ನೆನೆದ ಅರಸು ಒಂದು ಹೆಣ್ಣಿಗಾಗಿ ಕ್ಷಣಿಕ ಸುಖಕ್ಕಾಗಿ ಧರ್ಮ ಭ್ರಷ್ಟನಾಗುವುದಕ್ಕಿಂತಲೂ ಮರಣವೇ ಲೇಸೆಂಬ ದಿಟ್ಟತನವನ್ನು ತಳೆದಿದ್ದಾನೆ. ಇದರಿಂದ ಕೌಶಿಕನ ಲ್ಲಿಯೂ ಶ್ರೇಷ್ಠ ಗುಣವಿದೆಯೆಂದು ಮೆಚ್ಚಬೇಕು. ಹೆಣ್ಣಿಗಾಗಿ ಅತಿ ಆಸೆಪಟ್ಟು ಕಾಮಜ್ವರ ಪೀಡಿತನಾದನೆಂದು ಅವನನ್ನು ಕೀಳು ದೃಷ್ಟಿಯಿಂದ ನೋಡುವಂತಿಲ್ಲ. ಇಂತಹ ಪಾತ್ರ ಸೃಷ್ಟಿ ಅಕ್ಕನ ಚಾರಿತ್ರಿಕವಾದ ಮತ್ತಾವ ಕೃತಿಯಲ್ಲೂ ಇಷ್ಟು ಸೊಗ ಸಾಗಿ ಮೂಡಿ ಬಂದಿಲ್ಲ. ಸಕಲೈಶ್ವರ್ಯವನ್ನೂ ಇಡೀ ರಾಜ್ಯಕೋಶವನ್ನೂ ಅಕ್ಕನ ಪಾದತಲಕ್ಕಿಡಲು ಅರಸು ಸಿದ್ಧನಾದನೇ ಹೊರತು ಕುಲದ ಛಲವಳಿಯಲು ಒಪ್ಪಲಿಲ್ಲ. ಆಗ, ಅಕ್ಕ ಅರಮನೆಯನ್ನು ತೊರೆದು ಹೊರಡುವುದಕ್ಕೆ ಸಿದ್ಧಳಾದಳು. ಮೋಹ ಪರವಶನಾದ ಕೌಶಿಕನು ಕರುಣೆಗಾಗಿ ಕೈಚಾಚಿದಾಗ ಅಕ್ಕನ ಸೆರಗು ಅವನ ಕೈ ತಾಕಿರಲು ಮಲ್ಲಿಕಾರ್ಜುನನಿಗೊಪ್ಪಿದ ದೇಹಕ್ಕೆ ಲೋಕದ ಹಂಗಿಲ್ಲವೆಂದು ನಿಶ್ಚಯಿಸಿ "ಕಾಯ ಲಜ್ಜಾಕಾರಮಂ ಸಂಸಾರ ಭಾರಮಂ ಕಡೆಗೋಸರಿಸಿ ನಿಜಾಂಸಂಗಗ ಳಿಂದಂಗದೊಳ್ತರಂಗಂ ಬಡೆದು ತೋರ್ಪ ಕೇಶರಾಶಿಯಂ ಕರಂಗಳಿಂ ನೇವರಿಸಿ ನೆಟ್ಟನಳವಡಿಸಿ ತಾನುಟ್ಟುದುಗುಲಮಂ ತಟ್ಟನೆ ಳೆದು ಕಾಯದಿಂ ಕಳೆದು ಬೀಸಿಟ್ಟು" ಎಲ್ಲರೂ ಅಚ್ಚರಿಗೊಳ್ಳುವಂತೆ ಮುನ್ನಡೆಯುತ್ತಾ ಕೌಶಿಕನನ್ನು ಕುರಿತು–

ಏ ಮರುಳೆ, ನೀಂ ವಿವೇಕಿಸಿ । ಕಾಮಿಸಿದೀ ಕಾಯಮಂ ಮಲಾಮಯ ಮಯಮಂ॥
ಪ್ರೇಮ ಪ್ರಕರ್ಷಮಾರ್ಗದ। ಸೀಮೆಯೊಳಿರಿ ಚೆನ್ನಮಲ್ಲಿಕಾರ್ಜುನ ವಿಭುವಂ॥ (೪-೨೨೪)

ಎಂದು ಅಂತಿಮ ಉಪದೇಶವನ್ನು ಅರಸನಿಗಿತ್ತು ಅರಮನೆಬಿಟ್ಟು ಹೊರಬಂದಾಗ ಅದೆಷ್ಟು ಆತಂಕಗಳು ಬರುವುವೋ ಹೇಳ ತೀರದು. ಆದರೆ ಅವಳದು ಅಚಲ ನಿರ್ಧಾರ.

ಪಸಿವಪ್ಪೊಡುಂಟು ಭೈಕ್ಷಂ। ತಿಸೆಯಡಸಿದೊಡುಂಟು ಬಾವಿ ಕೆರೆತೊರೆಗಳ್ ಮೇಣ್॥
ವಸತಿಗೆ ಪಳೆ ದೇಗುಲ ಮುಂ। ಟು ಸಮಾಗಮಕ್ಕುಂಟು ನಾಥ ನೀನೆನಗಿನ್ನೇಂ॥ (೪-೨೩೩)

ಎಂದು ಭವಿತವ್ಯದ ಜೀವನ ನಿರ್ವಹಣೆಯನ್ನು ನಿಶ್ಚಯಿಸಿ ನಡೆದುದೇ ಬಟ್ಟೆಯಾಗಿ ಕಲ್ಯಾಣಕ್ಕೆ ಬಂದು ಬಸವಣ್ಣನ ಮಹಾ ಮನೆಯ ಮುಂದೆ ನಿಲ್ಲುವಳು. ಮಹಾಮನೆಯ ಪ್ರವೇಶಕ್ಕೆ ಅನುಮತಿ ದೊರೆಯಬೇಕಾದರೆ ಮತ್ತೆ ಅಗ್ನಿಪರೀಕ್ಷೆಗೆ ತುತ್ತಾಗಬೇ ಕಾಯಿತು. ಪಡಿಹಾರಿ ಉತ್ತಣ್ಣ, ಕಿನ್ನರಿ ಬೊಮ್ಮಯ್ಯನವರು ಒಡ್ಡಿದ ಸವಾಲಿಗೆ ಜವಾಬು ಕೊಡುತ್ತಾ ಮುನ್ನಡಿಯಿಡಬೇಕಾ ಯಿತು. ತೊತ್ತುಗೆಲಸ ಮಾಡುವರಂತೆ ಕಂಡರೂ ಶಿವತತ್ತ್ವವೇತ್ತರಾದ ಈ ಈರ್ವರು ಶರಣರನ್ನು ಗೆಲ್ಲುವುದು ಸುಲಭವಲ್ಲ. ಪಡಿಹಾರಿ ಉತ್ತಣ್ಣನವರ ಪ್ರಶ್ನೆ ಅತ್ಯಂತ ಜಟಿಲವಾಗಿದೆ. ಇವೆಲ್ಲ ವಚನಗಳ ಆಧಾರದ ಮೇಲೆ ರೂಪಿತವಾದ ಪದ್ಯಗಳು

ಮರೆಮಗು ನಿಷ್ಕಲಕ್ಕೆ ಸಕಲಂ, ಮರೆ ಲಿಂಗಕೆ ನೋಳ್ಪೊಡಂಗಮೇ।
ಮರೆ ಗಡ ಮಾಯೆಯಾತ್ಮನಿರವಿಂಗಖಿಲಂ ಮರೆಗೊಂಡಿದಿರ್ಪಿನಂ।
ತೊರೆದಪೆಯೆಂತೋ ನೀಂ ಮರೆಯನಿಂತಿದನೆಮ್ಮವರೆಂದುಮೊರ್ಪರೆಂ।
ದರಿ ಬಸವಣ್ಣನಾಲಯಕೆ ಬರ್ಪೊಡೆ ನೂಲ್ಮರೆಗೊಳ್ಳದಾಗದೌ (೫-೬೩)

ಅಕ್ಕನವರು ಉತ್ತಣ್ಣನವರ ಪ್ರಶ್ನೆಗೆ "ಚನ್ನಮಲ್ಲಿಕಾರ್ಜುನಯ್ಯ ಜಗವೆಲ್ಲ ಕಣ್ಣಾಗಿ ನೋಡುತ್ತಿರೆ ಮುಚ್ಚಿಮರೆಯಿಸುವೆನೆಂತು ಹೇಳಾ ಅಯ್ಯಾ" ಎಂದು ಉತ್ತರಿಸುತ್ತಾಳೆ.

ಪಡಿಹಾರಿ ಮುತ್ತಣ್ಣನವರೊಬ್ಬರೇ ತಾತ್ತ್ವಿಕವಾಗಿ ಕಾಡುತ್ತಿರುವಾಗ ಕಿನ್ನರಿ ಬೊಮ್ಮಯ್ಯನವರು ಬರುತ್ತಾರೆ. ಅವರು ತುಂಬುಯೌವನದ ಈ ವೇಷದಲ್ಲಿನ ಹೆಣ್ಣು ಬಸವಣ್ಣನ ಮಹಾಮನೆಯ ಶರಣರ ಸಂಗದಲ್ಲಿರಲು ಸಾಧ್ಯವಿಲ್ಲವೆಂದು ಹೇಳಿದರು. ಇದರಿಂದ ಅಕ್ಕನ ಸರ್ವತೋಮುಖ ಪರೀಕ್ಷೆಯೇ ನಡೆಯಿತು. ಕೊನೆಗೆ ಅಕ್ಕನವರು ನಾನು ಭಕ್ತೆ, ಮಾಹೇಶ್ವರಿ, ಪ್ರಸಾದಿನಿ, ಪ್ರಾಣಲಿಂಗಿ, ಶಿವಶರಣೆ ಕೊನೆಗೆ ಐಕ್ಯವನಪ್ಪುಗೊಂಬೆ; ಇಂತಹ ಪಟ್ಟಸ್ಥಲದೊಳಗಾನು ನಿಸ್ಥಲೆಯಾಗಿಪ್ಪೆನೆಂದು ತನ್ನ ಸ್ವರೂಪ ದರ್ಶನವನ್ನು ಬೊಮ್ಮಣ್ಣನವರಿಗೆ ಮಾಡಿಸಿಕೊಡುತ್ತಾರೆ. ಇಲ್ಲಿಯವರೆಗೆ ಇವರೀರ್ವರ ಸವಾಲು ಮತ್ತು ಅಕ್ಕನ ಉತ್ತರದ

ಹತ್ತಾರು ವಚನಗಳು ಪದ್ಯರೂಪ ತಾಳಿವೆ. ಇಲ್ಲಿಗೆ ಕಾವ್ಯ ಹಠಾತ್ತಾಗಿ ನಿಂತಿದೆ. ಕಾವ್ಯದಲ್ಲಿ ಅಕ್ಕನಿಗಿನ್ನೂ ಅಣ್ಣನ ದರ್ಶನವೇ ಆಗಲಿಲ್ಲ.

ಶ್ರೀಗಳವರ ಪ್ರವಚನದ ಹಲವಾರು ವಿಷಯಗಳಲ್ಲಿ 'ಅಣ್ಣ ನಿನ್ನನ್ನು ಕಂಡೆ' ಎಂಬ ವಿಷಯ ಅತ್ಯಂತ ಪ್ರಿಯವಾದುದು. ಎಷ್ಟು ಗಂಟೆಗಳು ಹೇಳಿದರೂ ತೀರದು. ಶ್ರೋತೃಗಳಿಗೆ ಕಾಲ ಪ್ರಜ್ಞೆಯೇ ತಿಳಿಯುತ್ತಿರಲಿಲ್ಲ. ಅವರಿಗೆ ಗೋಚರವಾಗದಂತೆ ಅವರ ಕಣ್ಣುಗಳಲ್ಲಿ ಅಶ್ರುಜಲಧಾರೆ ಬರುತ್ತಿತ್ತು. ಅದೇ ಸಂಗತಿ ಮುಂದೆ ಕಾವ್ಯರೂಪದಲ್ಲಿ ಮೂಡಬೇಕಾಗಿತ್ತು. ಮೂಡಿಸುವವರೇ ಅಸ್ತಮಿಸಿದರು. ಕಾವ್ಯ ಕಿರಿದಾದರೂ ಮುರುಕಾದರೂ, ಅದರ ರಸಸಾರ, ಸ್ವಾದಗಳು ಹಿರಿದಾಗಿವೆ, ಗರಿಷ್ಠವಾಗಿವೆ. ಇಂತಹ ಎಷ್ಟೋ ಕೃತಿಗಳ ನಿರೀಕ್ಷೆಯಲ್ಲಿದ್ದ ಕನ್ನಡ ಜನತೆ ಕಾವ್ಯ ಋಷಿಯೊಬ್ಬರನ್ನು ಕಳೆದುಕೊಂಡಿತು. ತಾ। ೧೨-೮-೧೯೫೨ ರ ಕರಾಳದಿನ ಶ್ರೀಗಳವರನ್ನು ತನ್ನ ಕಾಲ ಗರ್ಭದಲ್ಲಿ ಅಡಗಿಸಿಕೊಂಡಿತು.

**'ಗುರುಲಿಂಗ ಜಂಗಮ ಪ್ರೇಮಿ' :**

ಗುರುವಾದರೂ ಕಾಯಕದಿಂದಲೇ ಮುಕ್ತಿ ಎಂಬುದನ್ನರಿತು, ಲೇಖನ, ಪ್ರವಚನ, ಅಭ್ಯಾಸ ಮುಂತಾದ ಕಾಯಕ ಮಗ್ನರಾದ ಶ್ರೀಗಳವರು ಗುರುಲಿಂಗ ಜಂಗಮ ಪ್ರಿಯರು; ತಪೋಧನರಾದ ಗುರುಗಳ ಮುಂದೆ ಶಿಶುವಾಗುತ್ತಿದ್ದರು. ಅಂತೆಯೇ ಧಾರವಾಡ ಮುರುಘಾಮಠದ ಶ್ರೀ ನಿ॥ ಪ್ರ॥ ಸ್ವ॥ ಮೃತ್ಯುಂಜಯ ಮಹಾಸ್ವಾಮಿಗಳು, ಕನಕಪುರದ ದೇಗುಲ ಮಠಾಧ್ಯಕ್ಷರಾದ ಶ್ರೀ॥ ನಿ॥ ಪ್ರ॥ ಸ್ವ॥ ನಿರ್ವಾಣ ಮಹಾಸ್ವಾಮಿಗಳವರು, ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ॥ ನಿ॥ ಪ್ರ॥ ಸ್ವ॥ ಶಿವಕುಮಾರ ಮಹಾಸ್ವಾಮಿಗಳನ್ನು ನೆನೆದಾಗ ನೋಡಬೇಕೆಂದು ಬಯಸುತ್ತಿದ್ದರು. ಶ್ರೀ ಮಠಕ್ಕೆ ಬರಮಾಡಿಕೊಂಡು ಅತ್ಯಾದರದಿಂದ ಸತ್ಕರಿಸುತ್ತಿದ್ದರು, ಉಪಚರಿಸುತ್ತಿದ್ದರು, ನೋಡಿ ನೆನೆದು ಮನದಣಿಯುತ್ತಿದ್ದರು. ಅವರೊಡನಿರುವ ಕಾಲವನ್ನು ಮಹಾಭಾಗ್ಯದ ಕಾಲವೆಂದು ಹೇಳುತ್ತಿದ್ದರು. ಅವರ ಗುರುಪ್ರಿಯತೆಗೊಂದು ನಿದರ್ಶನವನ್ನು ಹೇಳಬಹುದು. ಶ್ರೀಗಳವರು ಒಮ್ಮೆ ಸುತ್ತೂರು ಜಗದ್ಗುರು ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರೊಡನೆ ಬೆಂಗಳೂರಿನ ಬನಶಂಕರಿ ದೇವಾಲಯದಲ್ಲಿ ಬಿಡಾರಮಾಡಿದ್ದರು. ಒಂದು ದಿನ ರಾತ್ರಿ ಪೂಜಾಪ್ರಸಾದ ಸ್ವೀಕಾರದ ನಂತರ ಪವಡಿಸಲು ಸಿದ್ಧರಾಗಿದ್ದರು. ಸುಮಾರು ರಾತ್ರಿ ಹತ್ತು ಘಂಟೆ ಮೀರಿತ್ತು. ಆ ಸಮಯಕ್ಕೆ ಸಿದ್ಧಗಂಗಾ ಮಠಾಧೀಶರಾದ ಶ್ರೀ॥ ನಿ॥ ಪ್ರ॥ ಸ್ವ॥ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀಗಳವರ ದರ್ಶನಕ್ಕಾಗಿ ಬಂದರು. ಅವರನ್ನು ತಮ್ಮ ಹಾಸಿಗೆಯ ಮೇಲೆ ಕುಳ್ಳಿರಿಸಿಕೊಂಡು ಕುಶಲಪ್ರಶ್ನೆ ನಡೆಸಿದರು. ನಂತರ ಅವರನ್ನು ಬೀಳ್ಕೊಡಲು ಹೊರಗೆ ಬಂದರು. ಬೀಳ್ಕೊಟ್ಟು ಒಳಕ್ಕೆ ಬರುವ ವೇಳೆಗೆ ಪರಿಚಾರಕರು ಶ್ರೀಗಳವರ ಹಾಸಿಗೆಯು ಧೂಳಾಗಿದೆಯೆಂದು ಕೊಡವಿ ಹಾಸಲು ಕೈಚಾಚಿದರು. ಶ್ರೀಗಳವರು ಆತುರದಿಂದ ಬಂದು ಅದನ್ನು ತಡೆದು ನನ್ನ ಶ್ರಮವನ್ನೆಲ್ಲ ವ್ಯರ್ಥಮಾಡುತ್ತಿದ್ದಿರಿ, ಎಂದಾಗ ಎಲ್ಲರಿಗೂ ಆಶ್ಚರ್ಯವಾಯಿತು. ಯಾರಿಗೂ ಅವರರ್ಥ ತಿಳಿಯಲಿಲ್ಲ. ಆಗ ಶ್ರೀಗಳವರೇ ಸಮಾಧಾನದ ನುಡಿಗಳನ್ನಾಡಿದರು. ಶರಣರ ಪಾದಧೂಳಿನ ಮೇಲೆ ಮಲಗಿ ಈ ದೇಹವನ್ನು ಪಾವನಗೊಳಿಸಬೇಕೆಂದೇ ಸಿದ್ಧಗಂಗಾ ಶ್ರೀಗಳವರನ್ನು ಹಾಸಿಗೆಯ ಮೇಲೆ ಕೂರುವುದಕ್ಕೆ ಒತ್ತಾಯಿಸಿದ್ದರು. ಪಾದಧೂಳಿಯನ್ನೆ ಹಾಳುಮಾಡಿದರೆ ಸಿಕ್ಕಿದ ಭಾಗ್ಯ ಕಳೆದುಕೊಂಡಂತಾಗುತ್ತಿತ್ತು ಎಂದರು. ಶ್ರೀಗಳವರು ಎಷ್ಟೋ ವೇಳೆ ಮಹಾ ತಪೋಧನರನ್ನು ತಮ್ಮ ಹಾಸಿಗೆಯ ಮೇಲೆ ಕೂಡಿಸಿಕೊಳ್ಳುತ್ತಿದ್ದರು. ಏಕೆಂಬುದಕ್ಕೆ ಅಂದು ಉತ್ತರ ದೊರೆಯಿತು.

ಹೀಗೆ ನುಡಿಯಲ್ಲಿ ಮಾತ್ರವೇ ಅಲ್ಲ, ನಡೆಯಲ್ಲಿ ಶರಣತ್ವಕ್ಕೇರಿದ ಮಹಾನುಭಾವರು ನಮ್ಮ ಬಯಕೆ ತೀರುವ ಮುನ್ನ ೧೯೫೨ರಲ್ಲಿ ಐಕ್ಯವಾದರು. ತಮ್ಮ ಗುರಿಮುಟ್ಟುವ ಮುನ್ನ ಬಯಲಾದರು. ಅಲ್ಲಮರ ಪ್ರತಿರೂಪರಂತಿದ್ದವರು ಇನ್ನಿಲ್ಲವಾದರು. ಅಂಗವಿನ್ನಿಲ್ಲ. ಆದರೆ ಅವರನ್ನು ಕಂಡು ಅವರ ಉಪದೇಶದ ಸವಿಯನ್ನುಂಡವರು ಅವರ ಸಂಗದಿಂದ ದೂರವಾಗಿರುವಂತೆ ಭಾವಿಸಿಲ್ಲ,

# ವೀರಶೈವ ಹಸ್ತಪ್ರತಿಕಾರರು

ಜೆ. ಜಿ. ಮಂಜುನಾಥನ್

ಬರೆಯದೆ ಓದುವವನು, ಕರೆಯದೆ ಬರುವವನು ಸರ್ವಜ್ಞನ ಪ್ರಕಾರ ಒಂದು ವರ್ಗಕ್ಕೆ ಸೇರಿದವರು. ಬರೆಯದ ಕೈಯಿ ಕರೆಯದ ಬಾಯಿ ನಿಷ್ಪ್ರಯೋಜಕ. ಬರೆಯುವವನ ಸಂಗಡ ದ್ವೇಷ, ದಾಯಾದಿಯ ಸಂಗಡ ಸ್ನೇಹ ಬೇಡ. ನಡೆಯುವವ ಎಡ ವುತ್ತಾನೆ. ಬರೆಯುವವ ತಪ್ಪುತ್ತಾನೆ ಇದು ಸಹಜ. ಹೀಗೆ ಬರವಣಿಗೆ ಮನುಷ್ಯಜೀವಿತದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಬರೆದ ಅಕ್ಷರಗಳ ಆಕಾರ, ಸ್ಥಿತಿ, 'ಲಿಪಿ' ಎನ್ನಿಸಿಕೊಳ್ಳುತ್ತದೆ. ಲಿಪಿಕಾರರನ್ನು ಬರಹದ, ಅಕ್ಷರದ, ಹೊತ್ತಿಗೆಯ ಎನ್ನುವ ವಿಶೇಷಣಗಳೊಡನೆ ಗುರುತಿಸುತ್ತಿದ್ದರು. 'ಲಲಿತಪದಂ ಪ್ರಸನ್ನ ಕವಿತಾಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ ಕೃತಿಬಂಧಮುಂ ಬರೆ(ಪ)ಕಾಜಿರ ಕೈಗಳ ಕೇಡು, ಸುಣ್ಣನಪ್ಪಳಕದ ಕೇಳು'[1] ಎನ್ನುವುದು ಪಂಪನ ಅಭಿಪ್ರಾಯ.

ಸ್ವಂತಖುಷಿಗಾಗಿ, ಸ್ವಂತ ಉಪಯೋಗಕ್ಕಾಗಿ ಬರೆದುಕೊಳ್ಳುವವರು, ಜೀವನೋಪಾಯಕ್ಕಾಗಿ ಬರೆಯುವವರು ಎಂದು ಬರಹಗಾರರಲ್ಲಿ ಎರಡು ವಿಧ. ಬರೆಯುವವರು ಕನ್ನಡ ಲಿಪಿಯ ವೈಶಿಷ್ಟ್ಯ, 'ಬಿಂದುವಿನೊಂದು ಶೋಭೆ, ತಲೆಕಟ್ಟಿನ, ಪೊರ್ಕುಳಿಚೆಲ್ವು, ಮಾತ್ರೆಯೊಳ್ ನಿಂದ ಬೆಡಂಗು, ಬಳ್ಳಿಯೊಳೊಡಂಬಡುತಿರ್ಪ ನಯಂ, ವಿಸರ್ಗದೊಳ್ಪು...'[2] ಮುಂತಾದು ವನ್ನು ಗಮನಿಸಬೇಕಾಗುತ್ತಿದ್ದಿತು. ಆನೆಯ ಸಿಂಹದ ಗಿಳಿಗಳ ನಾನಾರೂಪಗಳನ್ನು ಅಕ್ಷರಗಳಲ್ಲಿ ಅಳವಡಿಸುವವರಿದ್ದರು.[3] ಕೆಲ ವರು ತಿಲು, ತಿವುಳ, ಕನ್ನಡ, ನಾಗರದಕ್ಕರಗಳನ್ನು ಬರೆಯುವುದನ್ನು ರೂಢಿಸಿಕೊಂಡಿದ್ದರು.[4]

ಲಿಪಿಕಾರರಲ್ಲಿ ತರಳತನದಿಂದ ಬರೆಯುವ ಬಾಲಕರಿದ್ದರು. ಅಂತೆಯೇ ತೊರವೆ ರಾಮಾಯಣದ ಪ್ರತಿಕಾರನೊಬ್ಬ

ಎಪ್ಪತ್ತು ನಾಲ್ಕು ವರುಷದ । ಮುಪ್ಪಿನವಂ ಬರದ ಬರಹವಿದರೊಳಗೊಂದರೆ ॥
ತಪ್ಪು ತಡಿಯಿದ್ದರೆಲ್ಲವ । ನೊಪ್ಪದಿ ತಿದ್ದುವದು ನೋಡಿ ವಿದ್ಯಾವಂತರು ॥[5]

ಎಂದು ಹೇಳಿಕೊಂಡಿದ್ದಾನೆ. ಹೀಗೆ ವಯೋಮಾನದ ಯಾವ ನಿರ್ಬಂಧವೂ ಲಿಪಿಕಾರನಿಗಿರಲಿಲ್ಲ. ಅದು ಆತನ ಶಕ್ತಿ ಮತ್ತು ಶ್ರದ್ಧೆಗಳನ್ನು ಅವಲಂಬಿಸುತ್ತಿದ್ದಿತು.

ಜೈನರು ತಮ್ಮ ಧಾರ್ಮಿಕ ಜೀವನದ ಒಂದು ಅಂಗವಾಗಿ ಶಾಸ್ತ್ರದಾನವನ್ನು ಅಂಗೀಕರಿಸಿದರು. ಹೀಗಾಗಿ ಅವರ ಧರ್ಮಗ್ರಂಥಗಳು ಮತ್ತು ಲೌಕಿಕ ಗ್ರಂಥಗಳು ತಲೆ ತಲಾಂತರದಿಂದ ಉಳಿದುಕೊಂಡು ಬಂದವು. ಹತ್ತನೆಯ ಶತಮಾನದಲ್ಲಿಯೇ ಪೊನ್ನನ ಶಾಂತಿಪುರಾಣದ ಒಂದು ಸಾವಿರ ಪ್ರತಿಗಳನ್ನು ಅತ್ತಿಮಬ್ಬೆ ಮಾಡಿಸಿದುದಾಗಿ ಕೆಳಗಿನ ಪದ್ಯದಿಂದ ತಿಳಿದುಬರುತ್ತದೆ:

ಎಸೆಯದೆ ಪೊಟ್ಟುಕೆಟ್ಟಪುದು ಶಾಂತಿಪುರಾಣಮದಂ ನೆಗೞ್ಚುವೆಂ।ವಸುಧೆಯೊಳೆನ್ನ ತಂದೆಯ ಪರೋಕ್ಷದೊಳೆಂದು ಸಹಸ್ರಪುಸ್ತಕ।
ಪ್ರಸರಮನತ್ತಿಮಬ್ಬೆ ಪರಮಾದರದಿಂ ಬರೆಯಲ್ಕೆಪೇೞ್ದ ಪೆಂ।ಪಸದಳಮದ್ವಿತೀಯಮಸಮಂ ಸಲೆ ಭಾವಿಸಲೆಯ್ದೆ ಬಣ್ಣಿಸಲ್ ॥[6]

ಹಿಂದಿನ ಕಾಲದಲ್ಲಿ ಪ್ರತಿಕಾರರು ಬರೆಯಲು ಕಂಠ ಮತ್ತು ಓಲೆಯನ್ನು ಸಂಗ್ರಹಿಸುತ್ತಿದ್ದರು. 'ಕಂಠಪತ್ರದ ಉಲುಹು ಕೆಡದಗ್ಗಳಿಕೆ' ಕುಮಾರವ್ಯಾಸನಿಗಿದ್ದಿತು. ವೀರಮಾಹೇಶ್ವರಾಚಾರ ಸಂಗ್ರಹವನ್ನು ಪ್ರತಿಮಾಡಿದ ಬರಹದ ವಿರಕ್ತದೇವರು ನೀಡುವ ವಿವರಗಳಿಂದ ಪ್ರತಿಕಾರನ ಕಷ್ಟದ ಅರಿವಾಗುತ್ತದೆ. ಅದರಲ್ಲಿ ಓಲೆಗರಿಯನ್ನು ತಂದು ಹದಗೊಳಿಸಿ ಬರೆಯುವ ವಿವರ ಹೀಗಿದೆ :

'ಪಡುವಣದೆಸೆಯಿಂದೊಪ್ಪುತ್ತಿರ್ದ ಲವಣಾಂಬುಧಿಗೆ ಪುರ್ಬುಂಪುಟ್ಟಿದಹಾಂಗಿರ್ದ ಘಟ್ಟದ ಸರೋವರಂಗಳಲ್ಲೀಕ ಪಾದಚರ ಕೆಡಜಿದ ಮುಂಡೆ ಮೌನವ್ರತದಿಂದೊಪ್ಪುತ್ತಿರ್ದ ದಿವ್ಯ ತಾಳಪತ್ರಮಂ ತಂದು ದ್ವಿತೀಯ ರಂಧ್ರವಂ ಮಾಡಿ ಬಿಂಗದ ಹೊರೆಯುಂತೊಂದೊಂದ ಪೊಂದಿಸಿ ಇಕ್ಕೆಲದಲುಭಯಂ ಪಲಗೆಯಷ್ಟಲೋಪೆಯಷ್ಟಮೂಲೆಗಳಿಂದತ್ಯಂತಲಂಕಾರವಾಗಿ ಕಣ್ಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯ ಶಿವಾಲಯವಂ ನಿರ್ಮಿಸಿದಂತಿರಬೇಕೆಂದು ಬಿಂದು ವಿಸರ್ಗಂ ದಡ್ಡತೆ ಪೊಂದಿದಾವೃತೋರ್ಧ್ವರೇಫ ದೀರ್ಘ ಹ್ರಸ್ವದಿಂದೊಪ್ಪುತ್ತಿರ್ದ ಅಕ್ಷರ ಮೂರ್ತಿಗಳಂ ಲೇಖನವಂ ಮಾಡೆಂದು ಚಿಕ್ಕೈಯನವರು ದಿವ್ಯ ಆಲೇಖಮಂ ಪಟ್ಟಿಸ್ಥಲಜ್ಞಾನ ಸಂಪನ್ನರಾದ ವಿರಕ್ತ ಅನ್ನದಾನ ದೇವರ ಹಸ್ತದಲ್ಲಿ ಪಾಲಿಸಲು ಯಿಂತೀ ಶಿವಗಣಂಗಳ ನಿರೂಪವಂ ಕೈಕೊಂಡು ಬರುವುದಕ್ಕೆಯೆನ್ನ ಕಂಗಳು ಜಿಹ್ವೆ ಕರ ಕರ್ಣಂಗಳು ಗತಿ ಮತಿ ಚೈತನ್ಯಕ್ಕೆ ಸಮಸ್ತ ಸದ್ಭಕ್ತ ವೀರಮಾಹೇಶ್ವರರುಗಳೇ ಕರ್ತೃರಾದ ಕಾರಣ ಯಿಂತಿವರ ಕರುಣ ಪ್ರಸಾದಮಂ ಕೈಕೊಂಡು ಈ ವೀರಮಾಹೇಶ್ವರಾಚಾರ ಸಂಗ್ರಹವ ಬರೆದೆನಲ್ಲದೆ ನನ್ನಿಚ್ಚೆಯೊಳಂ ನಾ ಬರದುದಿಲ್ಲ'.

---

1. ಪಂಪಭಾರತ ೧-೧೨.
2. ಕರ್ನಾಟಕ ಕವಿಚರಿತ್ರೆ ಪು. ೪೬೨. ಕನ್ನಡ ಸಾಹಿತ್ಯ ಪರಿಷತ್ತು.
3. ಎಪಿಗ್ರಾಫಿಯ ಕರ್ನಾಟಕ, ಚಿತ್ರದುರ್ಗ-೪೭.
4. ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ೯-೧ ಪುಟ ೯೬.
5. ಕಹಪ್ರವಸೂ ೨-೧೪೨
6. ಶಾಂತಿಪುರಾಣ ಪರಿಶಿಷ್ಟ -೧

'ಯಾದೃಶಂ ಪುಸ್ತಕಂ ದೃಷ್ಟ್ವಾ ತಾದೃಶಂ ಲಿಖಿತಂ ಮಯಾ। ಅಬದ್ಧೋವಾ ಸುಬದ್ಧೋವಾ ಮಮದೋಷೋನವಿದ್ಯತೇ'

'ಇಂತೆಂದುದಾಗಿ ಈ ಪುಸ್ತಕವಂ ಬರೆದ ಸ್ಥಿತಿಯೆಂತೆಂದಡೆ'–

'ಸ್ವಸ್ತಿ ಶ್ರೀ ಜಯಾಭ್ಯುದಯ ವಿಧಿಷ್ಟರ ಶಕ ವಿಕ್ರಮ ಶಕಯೋ ದ್ವಿತೀಯ ಶಕ ಸಂದುದು ೪೦೦೦ ವರುಷ ಶಾಲಿವಾಹನ ಶಕಸಂದುದು ೧೫೮೩ ವರುಷ ಸಂದು ವರ್ತಮಾನವಾದ ಶಾರ್ವರಿ ಸಂವತ್ಸರದ ಚೈತ್ರ ಮಾಸದ ಶುಕ್ಲಪಕ್ಷದ ರೇವತಿ ನಕ್ಷತ್ರದ ಶುದ್ಧ ದಶಮಿ ಶಶಿವಾರದಲ್ಲು ಬರದ ವಿರಕ್ತ ಅನ್ನದಾನದೇವರು ಆಚಾರ್ಯ ಚಿಕ್ಕೈಯದೇವಗೆ ನೀಲಕಂಠ ನಾಗನಾಥಾಚಾರ್ಯರು ವಿರಚಿಸಿದಂಥಾ ವೀರಮಾಹೇಶ್ವರಾಚಾರ ಸಂಗ್ರಹವೆಂಬ ಬಾಹುಲ್ಯವಾದ ವ್ಯಾಖ್ಯಾನಶಾಸ್ತ್ರದ ಬರಹ ಸಂಪೂರ್ಣವಾಯಿತು. ಯಿಂತೀ ಪುಸ್ತಕಕ್ಕೈಶ್ವರ್ಯಮಸ್ತು ಶುಭಮಸ್ತು ನಿರ್ವಿಘ್ನಮಸ್ತು ಅಜೀರ್ಣಮಸ್ತು ಆಯುರಾರೋಗ್ಯಮಸ್ತು ಚಂದಾರ್ಕತಾರಾನಭವುಳ್ಳನಕಂ ಸ್ಥಾಯಿಯಸ್ತು.'

'ಭಗ್ನಪೃಷ್ಠ ಕಟಿಗ್ರೀವ ಬದ್ಧದೃಷ್ಟಿರಧೋಮುಖಂ । ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಪರಿಪಾಲಯ ॥'

'ಇಂತೆಂದುದಾಗಿ ಈ ಪುಸ್ತಕವಂ ಬರವರ್ಗಂ ಶಿವಾನುಭಾವವಂ ನಿರೂಪಿಸುವರ್ಗಂ ಲಾಲಿಸುವರ್ಗಂ ಸಹಸ್ರಕೋಟಿ ನಮಸ್ಕಾರವಂ ಮಾಡುತ್ತಿದ್ದೇನೆ. ಎನ್ನ ಬಿಂನಪವನವಧರಿಸಿ ಯಿದಂ ಬರವ ನಿಂಮ ಕರುಣದ ಕಂದನಿಗೆ ನಿಮ್ಮ ಕೃಪಾಮೃತರಸವನೆಜಿದು ನೋಡಿ ಸಲಹಿ ನಿಮ್ಮ ಶ್ರೀಪಾದ ಪದ್ಮಾರಾಧನೆಯ ಯೆಂದೆಂದು ಪಿಂಗದಂತೆ ಮಾಡಯ್ಯಾ ಲಿಂಗತಂದೆ ಶರಣು ಶರಣು ಶರಣಾರ್ಥಿ.'

'ಪುಸ್ತಕಂ ವನಿತಾವಿತ್ತಂ ಪರಹಸ್ತಂ ಗತಂ ಗತಂ । ಆಯೊತಂ ಪುನರಾಯಾಸಂ ಭ್ರಷ್ಟ ಭ್ರಷ್ಟಾಚ ಭ್ರಷ್ಟಂಯೋ ।
ಜಲಾದ್ರಕ್ಷ ತೈಲಾದ್ರಕ್ಷ ದಕ್ಷಮಸ್ಲಾಘ್ಯ ಬಂಧನಾತ್ । ಅವಶ್ಯಯಾಚಕಾದ್ರಕ್ಷ ಮಮರಕ್ಷಂತು ಪುಸ್ತಕಂ' ॥

'ನೀಲಕಂಠಾನಾಗನಾಥಾಚಾರ್ಯ ವಿರಚಿತಂ ವೀರಮಾಹೇಶ್ವರಾಚಾರ ಸಂಗ್ರಹಂ ಸಂಪೂರ್ಣಂ ಮಂಗಳ ಮಾಹಾಶ್ರೀ'[7]

ವೀರಶೈವ ಮತ ಬಸವಪೂರ್ವಯುಗದಿಂದಲೂ ಇದ್ದು ಅಲ್ಲಮ, ಬಸವ, ಚನ್ನಬಸವ, ಸಿದ್ಧರಾಮ, ಅಕ್ಕಮಹಾದೇವಿ, ನೀಲಲೋಚನೆ ಮುಂತಾದ ಶರಣ ಶರಣೆಯರ ನೇತೃತ್ವದಲ್ಲಿ ನಿಶ್ಚಿತ ರೂಪವೊಂದನ್ನು ಪಡೆಯಿತು. ಅನುಭವಮಂಟಪದಲ್ಲಿ ನಡೆಯುತ್ತಿದ್ದ ಶಿವಾನುಭವಗೋಷ್ಠಿಯಲ್ಲಿ ವೀರಶೈವಸಿದ್ಧಾಂತ ಮೂಡಿಬಂದು ವಚನಗಳ ರೂಪದಲ್ಲಿ, ಹಾಡುಗಳ ರೂಪದಲ್ಲಿ ನೆಲೆಗೊಂಡಿತು. ವಚನ ಭಂಡಾರಿ ಶಾಂತರಸನ ನೇತೃತ್ವದಲ್ಲಿ ವಚನ ಭಂಡಾರವೊಂದು ಬಸವಣ್ಣನ ಕಾಲಕ್ಕಾಗಲೆ ರೂಪುಗೊಂಡಿದ್ದಿತು. ಶಾಂತರಸನು 'ಅಲೇಖನಾದ ಶೂನ್ಯ' ಎಂದು ಅಂಕಿತವನ್ನಿಟ್ಟುಕೊಂಡಿದ್ದಾನೆ 'ಅಲೇಖ' ಎಂದರೆ ಬರೆಯದ ತಾಳಪತ್ರ.

ಬಸವಯುಗದ ಕ್ರಾಂತಿಯ ನಂತರ ಲಕ್ಕಣ್ಣದಂಡನಾಯಕ, ಭಾಂಡಾರಿ ಜಕ್ಕಪ್ಪ ಮತ್ತು ಕಲ್ಲೆಹದ ಕೇತಿಶೆಟ್ಟಿಯರು ವೀರಶೈವದ ಉದ್ಧಾರಕಾರ್ಯದಲ್ಲಿ ಲಕ್ಕಸಂಖ್ಯೆಯ ವಿತ್ತವನ್ನು ವೆಚ್ಚಿಸಿದರು. ನೂರೊಂದು ವಿರಕ್ತರು ವಚನ ಸಾಹಿತ್ಯಸಂಗ್ರಹ, ಟೀಕೆ, ಟಿಪ್ಪಣಿ, ವ್ಯಾಖ್ಯಾನಗಳನ್ನು ಕೈಗೊಂಡರು. ಸಿದ್ಧಲಿಂಗನ ಶಿಷ್ಯಕೋಟಿಯಲ್ಲಿ ಚನ್ನಂಜಿದೇವನ ಸಂಪ್ರದಾಯಕ್ಕೆ ಸೇರಿದ 'ಸಂಪಾದನೆಯ ಸಮಯ'ವೊಂದು ರೂಪುಗೊಂಡಿತು.

ಇತರ ಮಠಗಳೂ ಈ ಕಾರ್ಯದಲ್ಲಿ ಕೈಗೂಡಿಸಿದವು. ಬಸವಣ್ಣನವರ ವಚನಗಳನ್ನು ಅಂಗಸ್ಥಲದಲ್ಲಿಯೂ ಚನ್ನಬಸವಣ್ಣನವರ ವಚನಗಳನ್ನು ಲಿಂಗಸ್ಥಲದಲ್ಲಿಯೂ ಅಳವಡಿಸಿದರು. ಅಂಗಲಿಂಗಸ್ಥಲದ ಸಾಮರಸ್ಯರೂಪವಾಗಿ 'ಏಕೋತ್ತರ ಶತಸ್ಥಲ' ರೂಪುಗೊಂಡಿತು. ವೀರಶೈವ ಕಾವ್ಯಗಳನ್ನು ಉಡುಗೊರೆಯಾಗಿ ನೀಡುತ್ತಿದ್ದರು. ಶಿಷ್ಯವರ್ಗವೂ ಕೂಡ ತಮ್ಮ ಗುರುಗಳಿಗೆ ವಚನಗ್ರಂಥಗಳನ್ನು ಬರೆದು, ಬರಸಿ ಕೊಡುತ್ತಿದ್ದುದುಂಟು. ಇದಕ್ಕೆ ಒಂದು ಒಳ್ಳೆಯ ಉದಾಹರಣೆಯೆಂದರೆ : ಯಳಂದೂರ ಚೆಂನೊಡೆಯ ವಿರಕ್ತಸಿದ್ಧಲಿಂಗದೇವರಿಗೆ ಶೂನ್ಯ ಸಂಪಾದನೆಯನ್ನು ಬರೆಸಿಕೊಟ್ಟುದು. ಆ ವಿವರ ಈ ಕೆಳಕಂಡಂತಿದೆ:

'ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೫೦೨ನೆಯ ವಿಕ್ರಮ ಸಂವತ್ಸರದ ಕಾರ್ತಿಕ ಬಹುಳ 3 ಮಂಗಳವಾರದಲ್ಲು... ಸರ್ವಾಚಾರಸಂಪನ್ನ ಏಕಲಿಂಗ ನಿಷ್ಠಾಪರ ವೀರಶೈವಸಂಪನ್ನ ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತರಾದ ವಿರಕ್ತಸಿದ್ಧಲಿಂಗದೇವರಿಗೆ ಹದಿನಾಡ ಯಳಂದೂರ ಅರಸು ಚೆಂನೊಡೆಯರು ಈ ಶೂನ್ಯ ಸಂಪಾದನೆಯ ವಚನ ಸಂಗ್ರಹವನು ಬರಿಸಿ ಶಿವಾರ್ಪಿತವಾಗಿ ನಮಸ್ಕರಿಸಿದರು. ಈ ಶೂನ್ಯಸಂಪಾದನೆಯ ವಚನ ಸಂಗ್ರಹವ ಬರೆದವರು ಜ್ಯೋತಿಗೊಂಡನಪುರದ ಸಿಂಹಾಸನಕ್ಕೆ ಕರ್ತರಾದ ಶಿವಸಂಕಾರದೇವರ ಶಿಷ್ಯರು ಚಿಕ್ಕ ಶಿವಸಂಕಾರ ದೇವರು ಬರದರು. ಎಲ್ಲಾ ಪುರಾತನರ ಶ್ರೀ ಚರಣಕ್ಕೆ ಶರಣಾರ್ಥಿ ಶ್ರೀ ಶ್ರೀ'[8]

ಸಂಪಾದನೆಯ ಮಠಗಳಂತೆ 'ಓಲೆಯಮಠ'ಗಳೂ ರೂಪುಗೊಂಡವು. ಇವುಗಳಲ್ಲಿ ವಚನಗ್ರಂಥಗಳನ್ನು ಓಲೆಯಲ್ಲಿ ಬರೆದು, ಬರೆಸಿ ಸಂಗ್ರಹಿಸುತ್ತಿದ್ದರು. ಹೀಗೆ ವೀರಶೈವ ಪ್ರತಿಕಾರರು ವಚನವಾಙ್ಮಯದ ಉಳಿವಿಗಾಗಿ ಮಹತ್ತರ ಕಾಣಿಕೆಯನ್ನು ನೀಡಿದ್ದಾರೆ. ಇಲ್ಲಿ ಬರಹಗಾರರ ಶ್ರದ್ಧಾಭಕ್ತಿವಿಶ್ವಾಸಗಳು ಸ್ತೋತ್ರಾರ್ಹವಾದುವು.

---

7. ಶ್ರೀ ಎಚ್. ದೇವಿರಪ್ಪ ಪೀಠಿಕೆ ಪುಟ-೪, ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕಸೂಚೀ ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು -೧೯೬೨.
8. ಸಿದ್ಧರಾಮೇಶ್ವರ ವಚನಗಳು ೧೯೬೮. ಪೀಠಿಕೆ- ಪುಟ ೯.

ವೀರಶೈವ ಕೃತಿಕಾರರು ಕೂಡ ಪ್ರತಿಮಾಡುವವರಿಗೆ ಒಳ್ಳೆಯ ಮಾತುಗಳನ್ನು ಆಡಿದ್ದಾರೆ, ಭಿಕ್ಷಾಟನ ಚರಿತೆಯನ್ನು ಬರೆದ ಗುರುಲಿಂಗವಿಭು ತನ್ನ ಕೃತಿಯನ್ನು ಮುದದಿಂದ ಓದುವವರಿಗೆ, ಕೇಳಿದವರಿಗೆ, ಪ್ರತಿಯ ಬರೆವವರಿಗೆ ಆಯುರಾರೋಗ್ಯ ಐಶ್ವರ್ಯವನ್ನು ಅಭವನು ನೀಡುತ್ತಾನೆಂದು ಹೇಳಿದ್ದಾನೆ. ಇಮ್ಮಡಿ ಮುರಿಗೆ ಸ್ವಾಮಿಯು ಶಿವಲಿಂಗಸಾಂದ್ಯವನ್ನು ಓದುವ, ಕೇಳುವ.ಬರೆವ, ಪೇಳುವವರುಗಳು ಜನನ ಮರಣಗಳನ್ನು ಮೀರಿ ಮಹಾದೇವನಲ್ಲಿ ಏಕತ್ವವನ್ನು ಪಡೆಯುತ್ತಾರೆಂದಿದ್ದಾನೆ. ಮಿಶ್ರ ಸ್ತೋತ್ರಕಾರ ಮಿಶ್ರಸ್ತೋತ್ರವನ್ನು ನೋಡಿ ಬರೆದು ಓದಿದರೆ, ವಿಸ್ತರಿಸಿ ಹೇಳಿದರೆ, ಪಠಿಸಿದರೆ ಗುರುಸೋಮನಾಥನ ಕರುಣ ಸಂಭವಿಸುತ್ತದೆಯೆಂದಿದ್ದಾನೆ. ಬರೆಯುವವರಿಗೆ ಇಂತಹ ಒಂದು ಮೆಚ್ಚಿನ ನುಡಿ, ಆಸೆ. ಆಮಿಷಗಳು ಅನೇಕ ಕೃತಿಗಳಲ್ಲಿ ದೊರೆಯುತ್ತವೆ.

ಪ್ರತಿಕಾರನ ಮುಖ್ಯಧ್ಯೇಯ ಮೂಲಪ್ರತಿಯಿದ್ದಂತೆ ಬರೆಯುವುದು; ಇದು ಪ್ರತಿಕಾರನ ಮೂಲ ಆದರ್ಶವಾಗಿರಬೇಕು. ಇದರ ಬಗೆಗೆ ಉದ್ಭಟಕಾವ್ಯವನ್ನು ಬರೆದ ಒಬ್ಬ ಪ್ರತಿಕಾರ ಹೀಗೆ ಹೇಳುತ್ತಾನೆ.

ಪುಣ್ಯಂ ಬಡೆದಂ ಪೌರಾಣದ ಬಸ | ವಣ್ಣಂ ನೆರೆ ಪೇಳ್ದುದ್ಭಟದೇವನ | ಗಣ್ಯಾಕೃತಿಯೊಳ್ಪೂರ್ವಾಪ್ರತಿಯುಳ್ಳಂತಾಂ ಬರದೆ ॥
ತಿಣ್ಣಂಜಿತ್ತಿಪ್ಪಲಿಪಂ ಸೂನೃತ | ವಾಣ್ಯಂ ರಸಶಬ್ದಾರ್ಥಂ ತಳ್ವಿರೆ। ಬಣ್ಣ ಬಡೆದುಪ್ರೋಲ್ತಿರ್ದುದುವುದುತ್ತಮ ಭಕ್ತರ್ಬಲ್ಲವರು ॥[9]

ಇನ್ನು ಕೆಲವು ಬಾರಿ ಪ್ರತಿಯೇ ಚೆನ್ನಾಗಿರದೆ ಪ್ರತಿಕಾರ ತಪ್ಪು ಮಾಡಿರುವ ಸಾಧ್ಯತೆಯಿದೆ. ಈ ವಿವರ ಬಸವ ಚರಿತ್ರೆ ಬರೆದ ದ್ಯಾವಯ್ಯ ನೀಡುವ ಕೆಳಗಿನ ವಿವರದಿಂದ ತಿಳಿಯುತ್ತದೆ: 'ರುಧಿರೋದ್ಗಾರಿ ಸಂವತ್ಸರದ ವೈಶಾಖ ಬಹುಳ ೧೪ಯಲು ಶನಿವಾರದಲ್ಲು ಅಸ್ತಮಯಕಾಲಕ್ಕೆ ಬಸವ ಚರಿತ್ರೆ ಸಂಪೂರ್ಣ ಮಂಗಳಂ × × × ಯೀ ಬಸವನ ಚರಿತ್ರೆಯಲ್ಲಿದೊ ತಿಳಿಯಲಿಲ್ಲಾವಾದರಿಂದ ಜಾಗ್ರತೆಯಾಗಿ ಬರೆದುಯಿದೇನೆ. ನಾನು ತಿದ್ದುವಥಕ್ಕೆ ಬರದ್ದೆ ಹೊರತು ನಾನು ಚಂನಾಗಿ ಬರೆಲಿಲ್ಲವಾದುದರಿಂದ ಬೈಯಲಾಗದು ಯಾಕ್ಕಂದರೆ ಪ್ರತಿಸ್ಯೇ(?)ಹಳಗನಡು ಅದರಿಂದ ತಪಂ ಬರದಿರ್ದಡಂ ವಪ್ಪದಿಂದೋದಿಕೊಳುವದು. ತಪ್ಪೆಂದು ಬೈದಡೆ ಆಪಾಪ ನಿಂಮ್ಮನ್ನೆ ಕೂಡಿದ್ದು ಪ್ರತಿಯಿದ್ದ ಹಾಗೆ ಬರದುಯಿದೇನೇ ಬರವಾತ ವೀರಣಗೆರೆ ದೊಡಸುಬ್ಬಯನ ಮೊಂಮಗ ದ್ಯಾವಯ್ಯನ ಬರಹ'.[10]

ಮೇಲಿನ ಬರಹಗಾರನಿಗೆ ಮೂಲಪ್ರತಿಯೆಲ್ಲಿಯದು ಎಂದು ಗೊತ್ತಿಲ್ಲ. ಆದರೆ ಅಕ್ಷರಪ್ರಶ್ನೆ ಬರೆದ ಪ್ರತಿಕಾರ ಹೀಗೆ ಹೇಳಿಕೊಂಡಿದ್ದಾನೆ: 'ಬುಧವಾರ ಚಿಕ್ಕಬೇವೂರ ತಂಮಡಿ ಹಲಗಪ್ಪನ ಮನೆಪ್ರತಿ ಸಮಾನವಾಗಿ ಬರೆದ ಪುಸ್ತಕಕ್ಕೆ ಮಂಗಳ ಮಹಾಶ್ರೀ ಶ್ರೀ'.[11] ಸಿದ್ಧರಾಮೇಶ್ವರ ದೇವರ ವಚನವೊಂದರ ಪ್ರತಿಯಲ್ಲಿ ಹೀಗಿದೆ: 'ಈ ಪುಸ್ತಕವು ಮಾನವಳ್ಳಿಲೆ ಚಂದ್ರಶೇಖರ ಮಠದ ರಾಚೋಟೆಪ್ಪನವರು ತಮ್ಮ ಪ್ರತಿಯಿಂದ ಬರಸಿಕೊಂಡದ್ದು ಸಹಿಸಹಿಸಹಿ.'[12]

ಕೆಲವು ಹಸ್ತಪ್ರತಿಗಳಲ್ಲಿ ಕೃತಿಸಂಖ್ಯೆ, ಪ್ರಮಾಣಸಂಖ್ಯೆಯಿರುತ್ತದೆ. ಪಾಲ್ಕುರಿಕೆ ಸೋಮೇಶ್ವರ ಹಸ್ತಪ್ರತಿಯ ಒಬ್ಬ ಪ್ರತಿಕಾರ ಹೀಗೆ ಬರೆದಿದ್ದಾನೆ: 'ಸ್ವಸ್ತಿ ಶ್ರೀ ಸಮಸ್ತ ಪ್ರಶಸ್ತಿ ಸಹಿತ ಶಾಲಿವಾಹನ ಶಕ ವರುಷ ೧೫೯೪ನೆಯ ವರುಷ ಪರಿಧಾವಿ ನಾಮ ಸಂವತ್ಸರದ ಅಶ್ವೀಜ ಶುದ್ಧ ಪಾಡ್ಯ ಬ್ರುಹಸ್ಪತಿವಾರದ ಸೂರ್ಯೋದಯ ಸಮಯದಲ್ಲಿ ಬಿಳಿಗಿಯ ಶಿವಲಿಂಗ ದೇವರ ಮಠದಲ್ಲಿ ಬೋಳಮಲ್ಲಿಕಾರ್ಜುನದೇವರು ಲೇಖನಮಾಡಿದ ಲಿಂಗಪುರಾಣ ಪಾಲ್ಕುಜಿರಿಕೆಯ ಸೋಮೇಶ್ವರನ ಪುರಾಣ ಯಿಾಪ್ರಭಯಂ ಸಮಾಪ್ತಮಂಗಳ ಮಹಾಶ್ರೀಶ್ರೀ'.

ಅಂತು ಶ್ರೀಲಿಂಗಪೌರಾಣಕ್ಕೆ ಸಂಧಿ ೩೬ಕ್ಕಂ ಪದನು ೧೮೨೧ಕ್ಕೆ ಮಾತ್ರೆಗಳು ಯೆರಡುಲಕ್ಷದ ಅರವತ್ತೆರಡು ಸಾವಿರದ ಮುನ್ನೂರಿಪ್ಪತ್ತನಾಲ್ಕಕ್ಕಂ ಮಂಗಳ ಮಹಾಶ್ರೀ

ಅಂತು ಸೋಮೇಶ್ವರ ಪುರಾಣಕ್ಕೆ ಸಂಧಿ ೧೫ಕ್ಕಂ ಪದನು ೧೪೬೮ಕ್ಕಂ ಮಾತ್ರೆಗಳು ಅಜುವತ್ತೊಂಬತ್ತು ಸಾವಿರವು ವೊಂಭೈನೂರ ಐವತ್ತೆರಡು ಅಂತು ವುಭಯಪದನು ೩೨೮೯ಕ್ಕಂ ವುಭಯ ಮಾತ್ರೆಗಳು ನಾಲ್ಕುಲಕ್ಷವು ಮೂವತ್ತೆರಡುಸಾವಿರವು ೨೨೬ಕ್ಕಂ ಮಂಗಳ ಮಹಾಶ್ರೀ[13]

ಶಿವಾಧಿಕ್ಯಪುರಾಣದ ಕಡೆಯಲ್ಲಿ ಈ ಭಾಗವಿದೆ–

'ಇದು ಶಿವಾಧಿಕ್ಯಪೌರಾಣ ಭಿಕ್ಷದ ಚರಿತ| ಪದುಳದಿಂ ಪರವಾದಿಗಳಗಜಾಂಕುಶತಾರಾವಳಿಯು |
ಹುದಗಿ ಬರೆಸಿದನು ಕುಮುಸಿಯನಗರದೊಳು ವಾಸ ರೇವಣಯ್ಯನ ಪುತ್ರನ॥
ಉದರದಿಂ ಜನಿಸಿದಾತನು ತನ್ನ ಪ್ರೀತಿಯಲಿ । ಚದುರತ್ವದಲಿ ಬರೆಸಿದಂಥ ಪುಸ್ತಕವಿದನು ।
ಮದವೆರೆದ ವಾದಿಗಳ ವಾಗ್ಬಂಧಮಂ ಮುದದಿ ಮಾಡುವುದು ಪೌಢರುಗಳು' ॥[14]

9. ಕಹಪ್ರವಸೂ ೧-೬೯ 10. ಕಹಪ್ರವಸೂ ೩-೧೩

11. ಕನ್ನಡ ಸಂಶೋಧನ ಸಂಸ್ಥೆ ಧಾರವಾಡದಲ್ಲಿರು ಕನ್ನಡ ಹಸ್ತಪ್ರತಿಗಳ ವಿವರಣಾತ್ಮಕ ಸೂಚೀ ೫-೭

12. ಸಿದ್ಧರಾಮೇಶ್ವರ ವಚನಗಳು (೧೯೬೮) ಪುಟ ೯೭ 13. ಕಹಪ್ರವಸೂ ೬-೫೧೦ 14. ಶಿವಾಧಿಕ್ಯಪೌರಾಣ (ಹಸ್ತಪ್ರತಿ)

ಎಂದಿದೆ. ಹೀಗೆ ಒಂದು ಕಟ್ಟಿನಲ್ಲಿರುವ ಕೃತಿಯ ಪ್ರಮಾಣ ಮತ್ತು ಕೃತಿನಾಮಗಳ ಸೂಚನೆ ದೊರೆಯುವಂತೆಯೇ ಒಂದು ಕೃತಿಯ ಪ್ರಕ್ಷಿಪ್ತಭಾಗಗಳ ಬಗೆಗೂ ಸೂಚನೆಗಳು ದೊರೆಯುತ್ತವೆ–

'ಶ್ರೀಮತು ಶಿವದೇವೈಯ್ಯಗಳ್ । ತಾಮಸಗಜರಾತಿ ಶರಭ ವಿಶ್ವಾಚಾರ್ಯರೂ ॥
ಕಾಮಾರಿಯಂ ಬೆರದ ಕೃತಿಯಂ। ಪ್ರೇಮದಿಂ ಪ್ರತಿಗೈದ ಚಂನಬಸವೇಶ್ವರನೂ'॥

'ಅಂತೂ ಸಂಧಿ ೧೧೪ಂ ಪದನು ೬೫೧, ಕಂದ ೧೦೦, ಶ್ರುತಿಗ್ರಂಥಂಗಳು ೩೦೫, ಉತ್ತ ೪೪, ಉಭಯಂ ೧೧೨೦; ಯಿದರಲ್ಲಿ ಹೊಸ್ತಾಗಿ ನಾರುವೆ ಶ್ಯಾನಭಾಗ ಲಿಂಗಪ್ಪ ಬದಲ ಪುರಾಣ ಪುಸ್ತಕದಲ್ಲಿದ್ದಂತಾದ ತಂದೂ ಸೇರಿಸಿ ಬರದ ಬಾವನಿಪದ ೧೦೦, ದೀಕ್ಷಾವಿಧಾನಗ್ರಂಥ ೪೦, ಪುರಾತನರ ವಚನ ಗ್ರಂಥ ಕಾಲಚ ಸಹವಾಗಿ ೧೩೦, ಅಂತ್ತೂ ೨೭೦, ಉಭಯಂ ೧೩೭೦ ಕಂ, ಸಮಪ್ತ ಮಂಗಳ ಮಹಾಶ್ರೀ × × × ದುರ್ಮುಖಿನಾಮ ಸಂಪ್ವತ್ಸರದಾ ಭಾದ್ರಪದ ಶು ೧೦ಲ್ಲು ಭಾನುವಾರದಲ್ಲು ಮರಿಯನೆ ಕೆಂಪನಂಜೈಯ್ಯ ಕೆಂಪನಂಜೆಸ್ವಾಮಿಗಳ ಪಾದದ ಕೃಪಾಕಟಾಕ್ಷದಿಂದ ಶಿವಾಧಿಕ್ಯಪುರಾಣ ಪುಸ್ತಕಕ್ಕೆ ಶುಭಮಸ್ತು'[15]

ಹಸ್ತಪ್ರತಿಕಾರರ ಬರೆಹಗಳಿಂದ ಕವಿಯ ಕಾಲವನ್ನು ನಿರ್ಧರಿಸಬಹುದು. ಕಡೆಯಪಕ್ಷ ಆ ಹಸ್ತ ಪ್ರತಿಯ ಕಾಲದಿಂದ ಹಿಂದಕ್ಕೆ ಕೃತಿಯು ಕಾಲ ಎನ್ನುವುದು ನಿಶ್ಚಯವಾಗುತ್ತದೆ. ಪರಮರಹಸ್ಯ ಮತ್ತು ಮನೋವಿಜಯ ಕಾವ್ಯಗಳಿಂದ ನಿಜಗುಣಶಿವ ಯೋಗಿಗಳ ಕಾಲ ಕ್ರಿ, ಶ. ೧೭೪೨ ಎನ್ನುವುದು ತಿಳಿಯುತ್ತದೆ.. ಶೈವಸಂಜೀವಿನಿ ಹಸ್ತ ಪ್ರತಿಯ ಕಡೆಯ ಭಾಗದಿಂದ ನಿಜಗುಣ ಸ್ವಾಮಿಗಳು ಊರು ಕುಲ್ಕುಣಿ, ಅವರ ತಾಯಿ ಬಸವಾಜಮ್ಮ ಮತ್ತು ನಿಜಗುಣಸ್ವಾಮಿಗಳ ಅಣ್ಣ ಚೆನ್ನವೀರಸ್ವಾಮಿ ಎನ್ನುವುದು ತಿಳಿದುಬರುತ್ತದೆ,

ಶೂನ್ಯಸಂಪಾದನೆಯ ಹಸ್ತಪ್ರತಿಯೊಂದರ ಕಡೆಯ ಭಾಗದಲ್ಲಿ 'ಸ್ವಸ್ತಿಶ್ರೀ ವಿಜಯಾಭ್ಯುದಯ ಸಾಲಿವಾಹನ ಶಖ ವರುಷ ೧೫೩೮ನೆಯ ನಳಸಂವತ್ಸರದ ೧೪ನೆಯ ಸೋಮವಾರದಲ್ಲು ಗೂಳೂರು ಸಿದ್ಧವೀರಣ್ಣೊಡೆಯದೇವರಿಗೆ ನಂದಿಯಪುರದ ಪರ್ವತದೇವರು ಶಿಷ್ಯರು ತೋಂಟದ ದೇವರು ಲೇಖನವಮಾಡಿದ ಪ್ರಭುದೇವರ ಶೂನ್ಯಸಂಪಾದನೆ ಸಮಾಪ್ತ ಮಂಗಳ ಮಹಾಶ್ರೀ ಶ್ರೀ. ಸ್ರಾವಣ ಶುದ್ಧ ಷಷ್ಟಿ ಸೋಮವಾರದಲ್ಲು ಪ್ರಭುದೇವರ ಶೂನ್ಯಸಂಪಾದನೆ ಸಮಾಪ್ತ ಮಂಗಳ ಮಹಾಶ್ರೀ'[16] ಎಂದಿದೆ. ಶ್ರೀ ಸಂ. ಶಿ ಭೂಸನೂರುಮಠರು ಗೂಳೂರು ಸಿದ್ಧವೀರಣ್ಣೊಡೆಯನ ಕಾಲ ೧೫ನೆಯ ಶತಮಾನದ ಕೊನೆ ಎಂದಿದ್ದಾರೆ. ಈ ಹಸ್ತಪ್ರತಿಯ ಲೇಖಕನು ಈ ಕೃತಿಯನ್ನು ಶಕ ೧೫೩೮ ರಲ್ಲಿ ಸಿದ್ಧವೀರಣ್ಣೊಡೆಯರಿಗಾಗಿಯೇ ಪ್ರತಿಮಾಡಿದ್ದಾನೆ ಎಂದರೆ ಶೂನ್ಯಸಂಪಾದನೆಯ ಕರ್ತೃ ಸಿದ್ಧವೀರಣ್ಣೊಡೆಯರು ಕ್ರಿ.ಶ. ೧೬೧೬ರಲ್ಲಿಯೂ ಇದ್ದರೆಂದಾಯಿತು.

ಹಸ್ತ ಪ್ರತಿಕಾರರ ಬರೆವಣಿಗೆಗಳಿಂದ ಅನೇಕ ಮಠಗಳು, ಗುರುಪೀಠಗಳ ವಿವರಗಳು ದೊರೆಯುತ್ತವೆ. ಬಸವಣ್ಣನವರ ವಚನದ ಪ್ರತಿಕಾರ ನಂಜಪ್ಪನ ಹೇಳಿಕೆಯಂತೆ ಮೈಸೂರು ಚಾಮುಂಡಿಬೆಟ್ಟದ ಪಂಚಗವಿಮಠದ ಕಾರಣಕರ್ತೃಗಳು ಸುಲೆಗಾವಿ ಚರಮೂರ್ತಿ ಶಿವಬಸವ ದೇಶಿಕೇಂದ್ರರು ಇವರ ಕಾಲ ಶಕ ೧೭೬೩ ಎಂದರೆ ಕ್ರಿ.ಶ. ೧೮೪೨ ಆಗುತ್ತದೆ.

ಹಸ್ತಪ್ರತಿಗಳನ್ನು ಬರೆಯುವವರು ಹಸ್ತಪ್ರತಿಯನ್ನು ಪುತ್ರಿಕೆಯೆಂದು ತಕ್ಕೊಂಡುದಾವರು ಶಿವಭಕ್ತರಾದರು × × × ತಂಮ ಕುಲದೈವ ಮನದೈವಕ್ಕೆ ಅಳುಪಿದ ಹಾಗೆ × × × ಗುರುಪತ್ನಿ ಗುರುವಿಗೆ ಅ × × × ಎಂದು ಬರೆದಿದ್ದಾನೆ. ಕೆಲವರು ತಮ್ಮ ಮನೆಗೆ ಸ್ವಂತಕ್ಕೆ ಓದಿಕೊಳ್ಳೋ ನಿಮಿತ್ತ ಬರೆದಿರುತ್ತಾರೆ. ಶಿಷ್ಯನು ಗುರುವಿಗೆ ಭೈರವೇಶ್ವರ ಕಾವ್ಯವನ್ನು ಬರೆದುಕೊಟ್ಟಿರುತ್ತಾನೆ. ತಂದೆ ಮಗನಿಗೆ ಮೋಳಿಗಯ್ಯನ ಪುರಾಣವನ್ನು ಬರೆದುಕೊಟ್ಟಿದ್ದಾನೆ. ಗಿರಿಜಾ ರಮಣ ವಿಲಾಸದ ಕರ್ತೃ ಅಪ್ಪಾಜಿಯ ಸೋದರ ಅಳಿಯ ಮಲೇದೇವನ ಮಗ ಮಲ್ಲಲಿಂಗ ಗಿರಿಜಾರಮಣ ವಿಲಾಸವನ್ನು ಪ್ರತಿಮಾಡಿದ್ದಾನೆ.

ವೃತ್ತಿನಿರತ ಹಸ್ತಪ್ರತಿಕಾರರು ದುಡ್ಡನ್ನು ಪಡೆದು ಹಸ್ತ ಪ್ರತಿಗಳನ್ನು ಬರೆದುಕೊಡುತ್ತಿದ್ದರು. ಮರಳುದೇವರ ಕಂದ ಸೂಲೆಗಾವಿ 'ಶಾಂತಲಿಂಗ ಮರಿದೇವರಿಗೆ ತೋಟದ ಡಂಬಳದ ಸ್ವಾಮಿಗಳ ಪಾದದ ಮರಿಮಳ್ಳೆಯ ಬರೆದುಕೊಟ್ಟ ಪುಸ್ತಕವೊಂದು ವರಕೆವೊಂದು ಹಡಕ್ಕೆ ಆೃದುಟೆಂಕ್ಕೆ ರೊಕ್ಕಕೊಡುವರು ಮೇಲೆಯೇನು ಕೊಟ್ಟದು ಮಾಪು ಕೊಡದಿದ್ದರೆಯಿಲ್ಲ'[17] ಎಂದು ತಿಳಿಸಿದ್ದಾನೆ. ವೀರೇಶಚರಿತೆಯ ಪ್ರತಿಕಾರ 'ಗದ್ದೆ ಮಟದ ಶಾಂತಲಿಂಪ್ಪನವರಿಗೆ ತೋಟದ ಸ್ವಾಮಿಗಳ ಮಳ್ಳೆಯ ಬರದ ಕುಲ ಪುಸ್ತ ೧ವರ ಬೇಕಾದವರು ಬರೆಸಿರಿ'[18]

ಹಸ್ತಪ್ರತಿಗಳ ಮಾರಾಟ ನಡೆಯುತ್ತಿದ್ದಿತು. ಕೆಲವುವೇಳೆ ಇದಕ್ಕೆ ಸಾಕ್ಷಿಗಳೂ ಇರುತ್ತಿದ್ದರು. ಬಸವಪುರಾಣ ಕಾವ್ಯದ ಕಡೆಯ ಭಾಗ ಹೀಗಿದೆ: 'ಬಸವಪುರಾಣಕಾವ್ಯ ...ದ್ರಿ... ಬ॥ ೮ ಗುರುವಾರದಲ್ಲು... ೯ ಮ...ಬಾಹದರನವರಿಗೆ ಸಾಂತಿಂ ೯(ಐ) ಗಂಗಾವತಿ ವೋ(ಯೋ) ದಿಸುವ...ಬಸವಯ್ಯ... ಬರೆಸಿಕೊಟ್ಟ ರಷಿದಿಕ್ರಮ ಎಂತೆಂದರೆ ನೀವು ನಮ್ಮ ಬಸವಪುರಾಣ ತೆಗೆದುಕೊಂಡು ನಮಗೆ ಸಮಾಧಾನ ಮಾಡಿ ಸಂಭಾವನೆ ಕೊಟ್ಟ ೧೩ ರೂಪಾಯಿ(ಗಳು) ಮುಟ್ಟಿತು ಎಂಬುದಾಗಿ ಬರೆಸಿಕೊಟ್ಟ ಸ್ವಹಸ್ತ ಲಿಖಿತರುಜುವು. ಇದಕ್ಕೆ ಸಾಕ್ಷಿಗಳು ಅನೆಗೊಂದಿವೇಷಧಾರಿ ಅಪ್ಪಯ್ಯ. ಹೊಸಪೇಟೆ ರಾಮಾಜೋಯಿಸರು'.

15. ಕಹಪ್ರವಸೂ ೪-೨೪೨ 16. ಕಹಪ್ರವಸೂ ೮-೪೨೬ 17. ಕಹಪ್ರವಸೂ ೭-೩೪೩ 18. ಕಹಪ್ರವಸೂ ೮-೧೨೫

ವೀರಶೈವ ಹಸ್ತಪ್ರತಿಕಾರರು ಕ್ವಚಿತ್ತಾಗಿ ಭಾರತ, ಜೈಮಿನಿ ಭಾರತ, ಶಬ್ದಮಣಿದರ್ಪಣ, ಕರ್ಕೋಕ ಶಾಸ್ತ್ರಗಳನ್ನು ಪ್ರತಿಮಾಡಿದ್ದಾರೆ. ವೀರಶೈವೇತರರು ಎಂದರೆ ಉದಾಹರಣೆಗೆ ಶಿಲಾಪುರಿನಂಜ್ಯಪ್ಪ, ಮಗ ನಂಜಪ್ಪ ಮತ್ತು ಇನ್ನೊಬ್ಬ ಮಗ ಸುಬ್ಬರಾಯ ಮಲಿಮಾದೇಶ್ವರನ ಬೆಟ್ಟದ ತಮ್ಮಡಿಗಳ ಕುಟುಂಬಕ್ಕೆ ಹಲವಾರು ವೀರಶೈವ ಮತ್ತು ವೀರಶೈವೇತರ ಕೃತಿಗಳನ್ನು ಬರೆದುಕೊಟ್ಟಿದ್ದಾನೆ.

ವೀರಶೈವ ಹಸ್ತಪ್ರತಿಯನ್ನು ಬರೆದ ಮಹಿಳೆಯರು ಇಲ್ಲವೇ ಇಲ್ಲವೆನ್ನಬಹುದು. ಅಪವಾದವೋಎನ್ನುವಂತೆ ಒಬ್ಬಳೇ ಒಬ್ಬಳು ಹಸ್ತಪ್ರತಿಕಾರ್ತಿ ದೊರೆತಿದ್ದಾಳೆ. ಆಕೆ ಲಿಂಗಲೀಲಾ ವಿಲಾಸವನ್ನು ಪ್ರತಿಮಾಡಿದ್ದಾಳೆ.ಆ ವಿವರಗಳು ಹೀಗಿವೆ: 'ಮನ್ಮಥನಾಮಸಂವತ್ಸರದ ಪುಷ್ಯ ಶುದ್ಧ ಬನದಹುಣ್ಣಿವೆ ಅಷ್ಟಮಿಯ ಮಂಗಳವಾರದ ೧೦ ತಾಸಿಗೆ...ವೀರಮಹೇಶ್ವರ ಕೊಟ್ಟೂರ ಬಸವಲಿಂಗದೇವರಿಗೆ ಸಿಗ್ಗಾವಿಯ ಚನ್ನಪ್ಪಗವುಡರ ಸೊಸೆ ಭೈರಾಜಮ್ಮನು ತಮ್ಮ ಶ್ರೀ ಗುರುವಿನ ಕೃಪೆಯಿಂದ ಲಿಂಗಲೀಲಾ ವಿಲಾಸದ ಪುಸ್ತಕವನ್ನು ಪ್ರತಿಮಾಡಿದ್ದಾಳೆ'.

ವೀರಶೈವ ಹಸ್ತಪ್ರತಿಕಾರರು ತಮ್ಮ ಹೆಸರನ್ನು ಹೇಳಿಕೊಳ್ಳದೆ ಇರುವ ಸಾವಿರಾರು ಪ್ರತಿಗಳಿವೆ. ಅಲ್ಲದೆ ಎಷ್ಟೋ ಹಸ್ತಪ್ರತಿಗಳನ್ನು ಸದ್ಯದಲ್ಲಿ ಪರಿಶೀಲಿಸಲು ಸಾಧ್ಯವಾಗಿಲ್ಲ. ಈ ಎಲ್ಲ ಮಾಹಿತಿಗಳ ಸಂಗ್ರಹದಿಂದ ವೀರಶೈವಧರ್ಮದ, ಸಮಾಜದ ಅನೇಕ ಮಾಹಿತಿಗಳು ದೊರೆಯುತ್ತವೆ. ಇವುಗಳ ಅಭ್ಯಾಸ ತೀರ ಅವಶ್ಯಕವಾಗಿದೆ.

# ವೀರಶೈವ ಅರಸು ಮನೆತನ

—ಕೆಳದಿ ಗುಂಡಾಜೋಯಿಸ್.

ದಕ್ಷಿಣಭಾರತ ಚರಿತ್ರೆಯಲ್ಲಿ ವೀರಶೈವ ಅರಸುಮನೆತನಗಳು ಸನಾತನ ಧರ್ಮದ ಪುನರುದ್ಧಾರದ ಕ್ರಾಂತಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದುವು, ಚೋಳರ ಕಾಲದಲ್ಲಿ ಶೈವ ಮತ್ತು ವೈಷ್ಣವ ಪಂಥಗಳು ಪ್ರಚಾರದಲ್ಲಿದ್ದಾಗ ನಾಯನ್ಮಾರ್ ಎಂದು ಹೇಳಲಾದ ಸಮಾಜದ ವಿವಿಧ ಜಾತಿಗಳಿಂದಲೂ ಅಂತಸ್ತುಗಳಿಂದಲೂ ಬಂದ ೬೩ ಮಂದಿ ಶೈವಸಂತರು ಶೈವ ಮತವನ್ನು ಪ್ರಚಾರಮಾಡಿದರು. ಕ್ರಿ. ಶ. ೧೨ನೆಯ ಶತಮಾನದಲ್ಲಿ ಜೀವಿಸಿದ್ದ ಬಸವಣ್ಣನವರು ಅಂಧಾನುಸರಣೆಯಿಂದ ಧರ್ಮಕ್ಷೇತ್ರವು ಕಲುಷಿತಗೊಂಡಿದ್ದನ್ನು ಕಂಡುಕೊಂಡು, ಇವುಗಳನ್ನು ಖಂಡಿಸಲು ಕಂಕಣಬದ್ಧರಾಗಿ ಸಮಾಜದಲ್ಲಿದ್ದ ಲೋಪದೋಷಗಳನ್ನು ಖಂಡಿಸಿ, ಈಶ್ವರ ಸಾಕ್ಷಾತ್ಕಾರಕ್ಕೆ ದಿವ್ಯ ಪ್ರಭೆಯನ್ನು ಹೊರಹೊಮ್ಮಿಸುವಂತೆ ಮಾಡಿದರು. ಇವರು ನಡೆಸಿದ ಪ್ರಭಾವವು ಕನ್ನಡ ಸಾಹಿತ್ಯಕ್ಷೇತ್ರದಲ್ಲಂತೂ ಅಪಾರಕೊಡುಗೆಯನ್ನಿತ್ತಿದೆ.

ಕಲ್ಯಾಣವೆಂಬ ಹಣತೆಯಲ್ಲಿ ಭಕ್ತಿರಸವೆಂಬ ತೈಲವನ್ನೆರೆದು ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನವರು ಜ್ಯೋತಿಯಾಗಿ ಜಗತ್ತನ್ನೇ ಬೆಳಗಿಸಿದರು ಎಂಬುದಾಗಿ ಅಲ್ಲಮಪ್ರಭು ಹೇಳಿದ್ದಾರೆ.[1] 'ಈ ಸೂತ್ರಕ್ಕನುಸರಿಸಿ ಹಲವು ವೀರಶೈವ ಅರಸುಮನೆತನಗಳು ಸನಾತನ ಧರ್ಮದ ಪುನರುದ್ಧಾರಕ್ಕಾಗಿ ಮುಂದೆಬಂದುದು ಇತಿಹಾಸದಲ್ಲಿ ವ್ಯಕ್ತಪಡುತ್ತವೆ. ಪ್ರಮುಖವಾಗಿ ಈ ದಿಸೆಯಲ್ಲಿ ಕೆಳದಿ[2], ಬಿಳಗಿ.ಕೊಡಗು ಹಾಗೂ ಹಾಗಲ್ವಾಡಿ ಮನೆತನಗಳು ದಕ್ಷಿಣಭಾರತದಲ್ಲಿ ತಮ್ಮವೇ ಆದ ಪರಂಪರೆಯಲ್ಲಿ ಬಾಳಿ ಬೆಳಗಿದುವು. ಮಹಾರಾಷ್ಟ್ರ ಹಾಗೂ ವಿಜಯನಗರವು (ಸುಮಾರು) ಹಾಗೂ ಹೀಗೂ ಹದಿನೇಳನೆಯ ಶತಮಾನದವರೆಗೂ ಸಂಸ್ಕೃತಿಯನ್ನು ಪರಿಪೋಷಿಸಿಕೊಂಡು ಬಂದುವು. ಔರಂಗಜೇಬನ ಹಾವಳಿಯ ಹೊತ್ತಿಗೆ ಮಹಾರಾಷ್ಟ್ರವಾಗಲೀ ವಿಜಯನಗರವಾಗಲೀ ತಮ್ಮನ್ನು ತಾವು ರಕ್ಷಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಈ ನಿಸ್ಸಹಾಯಕ ಪರಿಸ್ಥಿತಿಯಲ್ಲಿ ಕೆಳದಿಯು ಕೈಹಾಕಿ ಜಯಗಳಿಸದೆ ಇದ್ದಿದ್ದರೆ ಮಹಾರಾಷ್ಟ್ರವೂ ಸೇರಿದಂತೆ ದಕ್ಷಿಣಭಾರತದ ಪಾಲಿಗೆ ಸನಾತನ ಧರ್ಮದ ಸಂಸ್ಕೃತಿ ಎಂದೋ ಮೊಲದ ಕೊಂಬಾಗುತ್ತಿತ್ತು. ವೀರಶೈವ ಧರ್ಮದಲ್ಲಿರುವ ಕೆಳದಿ ಅರಸರ ದೃಢನಂಬಿಕೆ ಹಾಗೂ ಈ ಧರ್ಮಕ್ಕೆ ನೀಡಿದ ಅವರ ಅಪಾರ ಕೊಡುಗೆಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕ್ರಿ. ಶ. ೧೪೯೯ ರಿಂದ ೧೭೬೩ ರವರೆಗೂ ಈ ರಾಜ್ಯವು ತನ್ನದೇ ಆದ ಪರಂಪರೆಯಲ್ಲಿ ವೈಭವದಿಂದ ಬಾಳಿತು. ಕ್ರಿ.ಶ. ೧೫೬೫ ರಲ್ಲಿ ವಿಜಯನಗರದ ಪತನಾನಂತರ ಕೆಳದಿಯು ಸ್ವತಂತ್ರವಾಗಿ ಆಳತೊಡಗಿತು. ಸುಮಾರು ೧೯ ಮಂದಿ ಅರಸರೂ ಇಬ್ಬರು ರಾಣಿಯರೂ ಈ ರಾಜ್ಯದ ಆಡಳಿತ ಸೂತ್ರವನ್ನು ಧರ್ಮದಿಂದ ನಡೆಸಿದರು. ಈ ಸಂಸ್ಥಾನಕ್ಕೆ ಧರ್ಮದ ಸಂಕೇತವಿತ್ತೆಂಬುದಕ್ಕೆ ಈಗಲೂ ಹಲವಾರು ಅವಶೇಷಗಳನ್ನು ಗುರುತಿಸಬಹುದಾಗಿದೆ.[3] ಕ್ರಿ. ಶ. ೧೬೨೩ ರಲ್ಲಿ ಇಟಲಿಯ ಪ್ರವಾಸಿ

1. ದಕ್ಷಿಣಭಾರತದ ಇತಿಹಾಸ, ಪು. ೩೦೨. ಡಾ. ಬಿ. ಮುದ್ದಾಚಾರಿ
2. ದಕ್ಷಿಣಭಾರತದ ಇತಿಹಾಸದಲ್ಲಿ ಕೆಳದಿಗೆ ಪ್ರಮುಖ ಸ್ಥಾನವಿದೆಯೆಂಬುದಾಗಿ ಫಾದರ್ ಹೆರಾಸ್ ಹೇಳಿದ್ದಾರೆ- Heras Aravindu P.177
3. ಕೇವಲ ಕೃಷಿಕರಾಗಿದ್ದ ಇದರ ಮೂಲನಿವಾಸಿಗಳು ಹೇಗೆ ಧರ್ಮದಿಂದ ಅಭ್ಯುದಯವನ್ನು ಸಾಧಿಸಿದರೆಂಬುದಕ್ಕೆ ಕೆಳದಿಯಲ್ಲಿರುವ ಎಡವ ಮುರಾರಿ ಎಂಬ ಹರಿಜನರ ಸ್ಮಾರಕಗಳು, ಅವಶೇಷಗಳು ಈಗಲೂ ಸಾಕ್ಷಿಯಾಗಿವೆ. ವಿವರಗಳಿಗೆ 'ಇಕ್ಕೇರಿಯ ಐತಿಹಾಸಿಕ ಹಿನ್ನೆಲೆ' ಗ್ರಂಥವನ್ನು ಅವಲೋಕಿಸಬಹುದು.

'ಪಿಯತ್ರೋ ಡೆಲ್ಲಾವಾಲ್ಲೆ'ಯು ಇಕ್ಕೇರಿಗೆ ಹಾಗೂ ಅರಮನೆಗೆ ಭೇಟಿಯಿತ್ತು ಆ ಕಾಲದ ವೈಭವವನ್ನು ವಿವರಿಸಿ ಪ್ರವಾಸೀ ಕಥನವನ್ನು ನಿರೂಪಿಸಿದ್ದಾನೆ. ಇಂಗ್ಲೆಂಡಿನ ರಾಯಭಾರಿ'ವೆಡ್ಡೆಲ್ಸ್'ಹಾಗೂ'ರಾಬಿನ್‌ಸನ್ಸ್'ನ(Weddels and Robinson) ನಿಯೋಗದಲ್ಲಿ ೨೫–೧–೧೬೩೭ ರಲ್ಲಿ 'ಪೀಟರ್ ಮುಂಡಿ'ಯು ಕೆಳದಿ ಅರಸರ ಉದಾತ್ತಗುಣಗಳನ್ನು ಶ್ಲಾಘಿಸಿದ್ದಾನೆ. ಇವರೆಲ್ಲರೂ ಹೇಳಿರುವ ವೀರಶೈವತತ್ತ್ವ ಪ್ರಣೀತವಾದ ಹಲವಾರು ಘಟನೆಗಳು ಗಮನಾರ್ಹ ಸಂಗತಿಗಳೆನಿಸಿವೆ.4 ಕೆಳದಿ ರಾಜ್ಯದ ಮೇರೆ ಹಾಗೂ ವಿಸ್ತಾರವು ಉತ್ತರಕ್ಕೆ ಗಂಗವಳ್ಳಿ ನದಿ, ಪೂರ್ವ ಹಾಗೂ ಉತ್ತರಕ್ಕೆ ಮಾಸೂರು ಹೊಳಲ್ಕೆರೆ, ಪೂರ್ವಕ್ಕೆ ಚಿಕ್ಕನಾಯಕನ ಹಳ್ಳಿ, ಪಶ್ಚಿಮಕ್ಕೆ ಕಡಲ ತೀರಗಳು (ಅರಬ್ಬೀ ಸಮುದ್ರ), ದಕ್ಷಿಣಕ್ಕೆ ಜಿಲಿಯಾ ಪಟಮ್‌ದವರೆಗೂ ಹಬ್ಬಿತ್ತು. ಇಷ್ಟು ವಿಶಾಲ ಪ್ರದೇಶಗಳನ್ನು ಪಡೆದಿರುವ ಕೆಳದಿಯು ಮೈಸೂರು ಸಂಸ್ಥಾನಕ್ಕಿಂತಲೂ ಆ ಕಾಲವಲ್ಲಿ ಕಿರಿದಾದುದೇನೂ ಆಗಿರಲಿಲ್ಲವೆಂಬುದನ್ನು ಇತಿಹಾಸಜ್ಞರು ಮನಗಾಣಬಹುದಾಗಿದೆ.

**ದೊಡ್ಡಸಂಕಣ್ಣ ನಾಯಕ (ಕ್ರಿ. ಶ. ೧೫೪೬–೧೫೭೦)**

ಕೆಳದಿ ರಾಜ್ಯದ ಮೂರನೆಯ ದೊರೆ ದೊಡ್ಡ ಸಂಕಣ್ಣನಾಯಕನು ಅಪಾರ ಪರಾಕ್ರಮಿ ಹಾಗೂ ಧರ್ಮಭೀರುವಾಗಿದ್ದನು. ಕವಿ ಲಿಂಗಣ್ಣನು–

I ಭಸಿತರುದ್ರಾಕ್ಷಮಾಲಾ। ಪ್ರಸರಂಗಳನಾಂತು ಕಾವಿಕಾಷಾಯಾಂಬರ
ಮೆಸೆಯಲ್ ನಾಗರಮರಿಯೆಂ। ಬಸಿಯಂ ಕೊಂಡಧಿಕಹರುಷದಿಂ ಪೊರಮಟ್ಟಂ ॥

ವ॥ ಇಂತತೀತ ಜಂಗಮ ವೇಷಮಂ ತಾಳ್ದು ಪೊರಮಟ್ಟು ತೆಂಕಲಭಿಮುಖನಾಗಿ ನಡೆಯುತ್ತುಂ ಸ್ವದೇಶಮಂ ಕಳೆದು ಗ್ರಾಮೈಕರಾತ್ರಿನಿವಾಸಿಯಾಗಿರುತ್ತುಂ ತತ್ತದ್ದೇಶಂಗಳೊಳುಳ್ಳ ಪುಣ್ಯಕ್ಷೇತ್ರ ತೀರ್ಥಲಿಂಗದೇವತಾವಿಶೇಷಭೇದಾದಿಗಳುಮಂ ತತ್ತ್ವದ್ವಿಷಯ ಜನಂಗಳ ನಡೆನುಡಿಯುಡಿಗೆ ತೊಡುಗೆ ಮುಂತಾದ ನಾನಾವಿಧ ವಿಚಿತ್ರತರರಚನಾಪ್ರೌಢಿಗಳನಾಲೋಕನಂಗೆಯ್ಯುತ್ತುಂ ತೆರಳ್ದು...(ಕೆ. ನೃ. ವಿ. ಪು–೪೧)

ಅಲ್ಲಿಂ ತೆರಳ್ದು ತನ್ನೃಪ। ಮಲ್ಲಂ ಮೆರೆವಾ ಪ್ರಯಾಗಮಂಸಾರ್ದು ಬಳಿ
ಕ್ಕಲ್ಲಿ ಸುಜಂಗಮಧರ್ಮ। ಕ್ಕುಲ್ಲಸದಿಂದಸೆವ ಮಠವನುರೆವಿರಚಿಸಿದಂ

ವ॥ ಇಂತು ಗಂಗಾಯಮುನಾ ಸರಸ್ವತೀ ನದೀಸಂಯೋಗದಿಂ ತ್ರಿವೇಣಿಯೆಂಬ ಪೆಸರ್ವಡೆದ ಮಹಾವಟಮೂಲೋತ್ಪತ್ತಿ ಸ್ಥಾನಮಾದ ಮುಕ್ತಿಸ್ಥಾನವೆನಿಸಿ ಮೆರೆವ ಪ್ರಯಾಗ ಕ್ಷೇತ್ರದೊಳ್ ಜಂಗಮಮೂರ್ತಿಧರ್ಮಕ್ಕಂ ಮಂಗಲಮಯಮಪ್ಪ ಮಠಮಂ ನಿರ್ಮಾಣಂಗೈಸಿ ಶಿವಾರ್ಪಣಂಗೈದನಂತರಂ (ಕೆ. ನೃ. ವಿ. ಪು–೫೦)

...ವಿಶ್ವೇಶ್ವರನಡಿದಾವರೆಯಂ ಭಜಿಸಿ ಮತ್ತಂ ಕಾಶೀಕ್ಷೇತ್ರಮಹಿಮಾತಿಶಯಂಗಳಂ ಕೇಳ್ದು ಸಂತಸಂಬಡುತ್ತುಂ ತತ್ತಲ್ಲಿಂಗತೀರ್ಥಂಗಳನವಲೋಕಿಸುತ್ತುಂ ಪಂಚಕ್ರೋಶಯಾತ್ರೆಯಂ ರಚಿಸಿ ಸಂತಸಂದಳೆಯುತಿಂತು ಕತಿಪಯದಿವಸಂ ವರ್ತಿಸುತ್ತುಮಿರ್ದು ಪಿಂತೆ ಬಹುಕಾಲದೊಳ್ ಶ್ರೀಶೈಲದೊಳ್ ನಂದೀಶ್ವರಾಂಶೀಭೂತನಾಗುದಿಸಿದ ವೀರಶೈವಶಿರೋಮಣಿಯಪ್ಪ ಶೀಲವಂತನಾಯಕನೆಂಬ ಕಾರಣಪುರುಷನೈತಂದು ಮೂರನನೆರಂಕೆಗಳಂ ಮಾಡಿಕೊಂಡು ಪಾರಿ ಪವಾಡಂಗಳಂ ಮೆರೆದು ಜಯಚಂದ್ರನರೇಂದ್ರನಂ ಮೆಚ್ಚಿಸಿ ದಶಾಶ್ವಮೇಧದ ಘಟ್ಟದ ಪಶ್ಚಿಮದಿಕ್ಕಿನೊಳೆಸೆವ ಹರಿಕೇಶವಾನಂದ ಕಾನನಮಂ ಪಡೆದಾಭೂಮಿಯೊಳ್ ಮಠಮಂಕಟ್ಟಿಸಿ ತನ್ಮಠದೊಳ್ ಮಲ್ಲಿಕಾರ್ಜುನದೇವರೆಂಬ ಜಂಗಮಂಗೆ ಪಟ್ಟಮಂ ಕಟ್ಟಿ ತನ್ನೊಡನೈದಿದ ಶಿಷ್ಯರ್ಕಳನಲ್ಲಿರಿಸಿ ತಾನಾ ಮಠಮಧ್ಯಸ್ತಂಭಾಗ್ರದೊಳ್ ಯೋಗಾರೂಢನಾಗಿ ಕುಳ್ಳಿರ್ದಂತರ್ಧಾನವನೈದಲ್ ಬಳಿಕಿತ್ತಂ ಪಲವು ವತ್ಸರಂಗಳ್ ಪೋಗಲೊಡನೆ ಜಯಚಂದ್ರನರೇಂದ್ರನ ವಂಶಾಗತರೆಲ್ಲಂ ಧರ್ಮಸಂತಾನಮಂ ಪಡೆಯಲಾಗಿ ಬಳಿಕಿತ್ತಂ ಮ್ಲೇಂಛರ್ಕಳ್ ಪೆರ್ಚಿ ತತ್ಸ್ಥಳವನಾಕ್ರಮಿಸಿರಲವರ್ಕಳಂ ಪಾರೆದೆಗೆಸಿ ಸಂಕಣನಾಯಕಂ ತಾನಾಸ್ಥಾನಮಂ ಸಂಪಾದಿಸಿ ಚತುರ್ಗಡಿಗಳೊಳ್ ಶಿಲಾಸ್ಥಾಪನಮಂ ರಚಿಸಿ ಜಂಗಮಗಾಟಿಯೆಂದು ಪೆಸರಿಟ್ಟು ತನ್ಮಧ್ಯದೊಳತಿ ಮನೋಹರವಾದ ಮಠಮಂ ನಿರ್ಮಾಣಂಗೈಸಿ ತದ್ಧರ್ಮಾರ್ಥಮಾಮಠದ ನಿರ್ಋತಿದಿಶಾ ಪ್ರಾಂತದೊಳ್ ಜಂಗಮಪುರವೆಂಬ ಗ್ರಾಮಮಂ ಬಿಡಿಸಿ ಸ್ಥಿರಶಾಸನಮಂ ಬರೆಸಿ ಜಂಗಮಮೂರ್ತಿಗಳ್ಗೆ ಶಿವಾರ್ಪಣಂಗೈದು ಮತ್ತಮದಲ್ಲದೆ ಪಂಚಮಠಮಂ ಕಟ್ಟಿಸಿ ಶಿವಜಂಗಮಕ್ಕೆ ಶಿವಾರ್ಪಣಂಗೈದು ಪ್ರೌಢರುಗಳಪ್ಪ ಶಿಲ್ಪಿಗಳಂ ಬರಿಸಿ ತತ್ಕಾಶೀಕ್ಷೇತ್ರದೊಳೊಪ್ಪುವ ಕಪಿಲಾಧಾರಾತೀರ್ಥ ಮಾನಸಸರೋವರ ಗಂಧರ್ವಸಾಗರಮೆಂಬ ತೀರ್ಥಂಗಳಂ ಶಿಲಾಮಯಂಗಳನಾಗಿಸಿ ಜೀರ್ಣೋದ್ಧಾರಮಂ ರಚಿಸಿ...

ವರಕಾಶೀಕ್ಷೇತ್ರದಿನಾ। ಧರಣೀಶಂ ತೆರಳ್ದು ಕೂಡೆಗಯೆಯಂ ಸಾರ್ದಾ
ಧರೆಯೊಳ್ ಶಿವಜಂಗಮಕ। ತ್ಯುರುತರಮಠಮಾನ್ಯಧರ್ಮಮಂ ವಿರಚಿಸಿದಂ (ಕೆ. ನೃ. ವಿ. ಪು-೫೨-೫೩)
ಕರಮೆಸೆವಾ ಕೇತಾರೇ। ಶ್ವರನಡಿದಾವರೆಯನ್ನೆದೆ ಪೂಜಿಸಿ ತದ್ಭೂ
ವರನಾ ಸ್ಥಳದೊಳ್ ಜಂಗಮ। ವರಧರ್ಮಾರ್ಥಂ ಸುಮಠವನಿರದಾಗಿಸಿದಂ (ಕೆ. ನೃ. ವಿ. ಪು-೫೪)

---

4. ಅನುಬಂಧ I ನೋಡಿರಿ

......ಆಲವಳ್ಳಿಯೆಂಬ ಗ್ರಾಮಮಂ ಪ್ರೊರ್ದಿ ಮಲಂಗಿರಲಾ ಗ್ರಾಮತಟಾಕದೊಳಿರ್ಪ ವೀರಭದ್ರಮೂರ್ತಿಯಾ ಸಂಕಣನಾಯಕನ ಸ್ವಪ್ನದೊಳ್ ಜಂಗಮಮೂರ್ತಿಯಾಕಾರದಿಂದೈತಂದೆನ್ನಂ ನಿನ್ನಂ ರಾಷ್ಟ್ರಕ್ಕೆ ತೆಗೆದುಕೊಂಡುಪೋಗಿ ಪ್ರತಿಷ್ಠೆಯಂ ರಚಿಸಿ ಪ್ರೂಜಿಸಲ್ ನಿನಗೆ ಸಮಸ್ತ ಮನೋಭಿಷ್ಟಂಗಳನೀವೆನೆಂದುಸಿರ್ದಂತರ್ಧಾನವನೈದಲ್ ಎಳ್ಚತ್ತು ಬಳಿಕಾ ತಟಾಕ ಜಲ ಮಧ್ಯದೊಳಿರ್ಪ ವೀರಭದ್ರಮೂರ್ತಿಯಂ ಸ್ವಾಧೀನಂಗೈದು ......(ಕೆ. ನೃ. ವಿ. ಪು-೫೫)

ಹೀಗೆ ದೊಡ್ಡ ಸಂಕಣ್ಣನ ಕಾಲದಲ್ಲಿ ವೀರಶೈವ ಧರ್ಮದ ಪ್ರತಿಷ್ಠಾನದ ಆವಿಷ್ಕಾರವು ಪ್ರಾದುರ್ಭಾವವನ್ನು ಹೊಂದಿರುವುದನ್ನು ಕಂಡುಕೊಳ್ಳಬಹುದು. ಸ್ವತಃ ವೀರಶೈವಧರ್ಮಾಭಿಮಾನಿಯಾದ ಈ ಅರಸು ಜಂಗಮ ವೇಷಧಾರಿಯಾಗಿ ಉತ್ತರ ದೇಶಕ್ಕೆ ಯಾತ್ರೆಹೊರಟು ದಿಗ್ವಿಜಯವನ್ನು ಹೊಂದಿದ್ದಾನೆ. ಜಂಗಮಧರ್ಮದ ಪುನರುದ್ಧಾರಕ್ಕಾಗಿ ಪ್ರಯಾಗದಲ್ಲಿ ಮಠವೊಂದನ್ನು ನಿರ್ಮಿಸಿದನೆಂಬುದಾಗಿ ಉಲ್ಲೇಖವಿದೆ. ಇದೇ ಹಂತದಲ್ಲಿ ಕಾಶಿ ಹಾಗೂ ಗಯೆಯಲ್ಲಿಯೂ ಈ ನಾಯಕನು ಮಠವನ್ನು ವೀರಶೈವ ಧರ್ಮೋದ್ಧಾರಕ್ಕಾಗಿ ವಿರಚಿಸಿದನೆಂಬುದಾಗಿ ಲಿಂಗಣ್ಣಕವಿಯು ನಿರೂಪಿಸಿದನು. ದೊಡ್ಡಸಂಕಣ್ಣನು ಕೇದಾರದಲ್ಲಿರುವ ಈಶ್ವರನನ್ನು ಪೂಜಿಸಿ 'ಜಂಗಮವರಧರ್ಮಾರ್ಥಂ ಸುಮಠವನಿರದಾಗಿಸಿದಂ' ಎಂಬ ರೀತಿಯಲ್ಲಿ ವೀರಶೈವ ಧರ್ಮ ತತ್ತ್ವಪ್ರಚಾರವನ್ನು ಕ್ರಿ. ಶ. ೧೬ ನೆಯ ಶತಮಾನದಲ್ಲಿಯೇ ಹಿಮವತ್ಕೇತಾರದಲ್ಲಿಯೂ ಬಿತ್ತರಿಸಿರುವುದು ಉಲ್ಲೇಖನೀಯವಿರುತ್ತದೆ. ಕಾಶಿಯಲ್ಲಿಯೂ ಈ ನಾಯಕನು ಮಠವನ್ನು ಗುರುಲಿಂಗಜಂಗಮಧರ್ಮದ ಪುನರುದ್ಧಾರಕ್ಕಾಗಿ ನಿರ್ಮಿಸಿರುವುದಕ್ಕೆ ಶಾಸನಾಧಾರವೂ ಇರುತ್ತದೆ.[5] ಜಂಗಮಮೂರ್ತಿಯ ಆದೇಶವನ್ನು ಅನುಸರಿಸಿ ದೊಡ್ಡಸಂಕಣ್ಣನು ಕೆಳದಿಯಲ್ಲಿ ವೀರಭದ್ರಮೂರ್ತಿಯನ್ನು ಆಗಮೋಕ್ತ ಪ್ರಕಾರದಿಂದ ಪ್ರತಿಷ್ಠಿಸಿ, ಶಿಲಾಮಯವಾದ ಗರ್ಭಗೃಹವನ್ನು ನಿರ್ಮಿಸಿ, ತದ್ದೇವತಾಪೂಜಾರ್ಥ ಮತಿಮನೋಹರಮಪ್ಪ ಭೂರಿಭೂಸ್ವಾಸ್ಥ್ಯೆಯನ್ನು ನೀಡಿರುವುದು ಕಂಡುಬರುತ್ತದೆ.[6]

**ಹಿರಿಯ ವೆಂಕಟಪ್ಪನಾಯಕ (೧೫೮೩–೧೬೩೦)**

ಈತನ ಕಾಲದಲ್ಲಿ ಘಟ್ಟದ ಸೀಮೆಗಳಲ್ಲಿ ಮಠಗಳು ನಿರ್ಮಿಸಲ್ಪಟ್ಟವು, ಕವಿ ಲಿಂಗಣ್ಣನು–

ಬಾರಕೂರ್ ಬೆಣ್ಣೆವಳ್ಳಿಯಂ| ಮಾರಗ ಶಂಕರನಾರಾಯಣ ಸಾಗರಬೋ
ಳೂರು ಕೊಡೆಯಾಲಗಳೊಳಮು। ದಾರ ಮಹತ್ತಿನ ಮಠಗಳಂ ಕಟ್ಟಿಸಿದಂ

ವ॥ ಇಂತಿವು ಮುಂತಾದ ಸ್ಥಳಂಗಳೊಳ್ ಮಹತ್ತಿನ ಮಠಮಂ ಕಟ್ಟಿಸಿ ಭೂಸ್ವಾಸ್ಥ್ಯಗಳಂ ಬಿಡಿಸಿ ಶಿವಜಂಗಮಾರ್ಥಂ ಶಿವಾರ್ಪಿತವಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು ......(ಕೆ. ನೃ. ವಿ. ಪು–೭೭)

ಎಂಬುದಾಗಿ ಉಲ್ಲೇಖಿಸಿದ್ದಾನೆ, ಈನಾಯಕನೂ ವೀರಶೈವ ಧರ್ಮದಲ್ಲಿ ಅಚಲ ನಿಷ್ಠೆಯುಳ್ಳವನಾಗಿ ಗುರುಲಿಂಗ ಜಂಗಮಾದಿ ಪೂಜಾನಿರತನಾಗಿದ್ದನು.[7]

**ಭದ್ರಪ್ಪನಾಯಕ (ಕ್ರಿ.ಶಕ ೧೬೬೨ ೧೬೬೪)**

**ಚೆನ್ನಮಾಜಿ–(ಕ್ರಿ. ಶ:೧೬೭೨-೧೬೯೮)**

ಮತ್ತಮದಲ್ಲದಾ ಭದ್ರಪ್ಪನಾಯಕನುಚಿತಮಾದ ಸ್ಥಳಂಗಳೊಳ್ ಮಹತ್ತಿನ ಮಠಂಗಳಂ ಕಟ್ಟಿಸಿ ಶಿವಜಂಗಮಾರ್ಥಂ ಭೂಸ್ವಾಸ್ಥ್ಯಗಳಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತು.......

ಎಂಬ ಉಲ್ಲೇಖದ ಮೇರೆಗೆ ಭದ್ರಪ್ಪನಾಯಕನಿಂದ ನಿರ್ಮಿಸಲ್ಪಟ್ಟ ಹಲವಾರು ಮಹತ್ತಿನ ಮಠಗಳು ಅಲ್ಲಲ್ಲಿಯೇ ಉಪಲಬ್ಧವಿದೆ. ಇವುಗಳ ಅಧ್ಯಯನ ಅಗತ್ಯವಾಗಿದೆ.

ಇದೇ ಮಾರ್ಗದಲ್ಲಿ ವೀರರಾಣಿಚೆನ್ನಮ್ಮಾಜಿಯೂ ಅನೇಕ ಧರ್ಮಕಾರ್ಯಗಳನ್ನು ನಡೆಸಿ ವೀರಶೈವ ಧರ್ಮವನ್ನು ಪುನರುದ್ಧರಿಸಿದಳು. ಕಾಶಿ,ರಾಮೇಶ್ವರ, ಶ್ರೀಶೈಲ ಮುಂತಾದ ಪುಣ್ಯಕ್ಷೇತ್ರಗಳ್ 'ಸ್ಥಿರವಾಗಿ ನಡೆವಂತು ಮಹಾಶನದ ಕಟ್ಟಳೆಯಂ ಕಟ್ಟಿಸಿ ಮತ್ತಮದಲ್ಲದುಚಿತಸ್ಥಾನಂಗಳೊಳ್ ಮಠಗಳಂ ಕಟ್ಟಿಸಿ ಶಿವಜಂಗಮಾರ್ಥಂ ಶಿವಾರ್ಪಿತಮಾಗಿ ಧಾರೆಯನೆರೆದು ಸ್ಥಿರಶಾಸನಮಂ ಬರೆಸಿತ್ತಳ್[8]. ಕೆಳದಿ ಚೆನ್ನಮ್ಮಾಜಿಯು ತನ್ನ ದತ್ತಪುತ್ರನಿಗೆ ನೀಡಿದ ಉಪದೇಶದ ಸಾರಾಂಶವು ವೀರಶೈವ ಧರ್ಮದ ಸಾಧನೆಯಲ್ಲಿ ತಿಲಕಪ್ರಾಯವಾಗಿದೆ.[9]

---

5. ಭಾರತ ಸರಕಾರದ ಮುಖ್ಯ ಶಾಸನತಜ್ಞ ಡಾ. ಗಾಯಿಯವರು ಇವುಗಳನ್ನು ಬೆಳಕಿಗೆ ತಂದಿದ್ದಾರೆ. ಈ ಪ್ರದೇಶದಲ್ಲಿ ವಿಶ್ವವಿದ್ಯಾನಿಲಯವಿರುವುದಾಗಿ ಉಕ್ತವಾಗಿದೆ.
6. ಈಗಲೂ ಇವುಗಳನ್ನು ಗಮನಿಸಬಹುದಾಗಿದೆ.
7, ಕೆ.ನೃ.ವಿ. ಪು. ೭೮ ಹಾಗೂ ವಿದೇಶೀ ಪ್ರವಾಸಿ ಕಥನದ ಸಾರಾಂಶವೊಂದನ್ನು ಇದೇ ಅನುಬಂಧ I ನೋಡಿರಿ.
8. ಅದೇ ಪು. ೧೪೬.
9. ಅನುಬಂಧ II ನೋಡಿರಿ. ಕೆಳದಿ ನಾಯಕರು—ಪ್ರೊ. ಜಿ.ಎಸ್. ದೀಕ್ಷಿತ್.

**ಹಿರಿಯ ಬಸವಪ್ಪನಾಯಕ (ಕ್ರಿ.ಶ. ೧೬೯೭-೧೭೧೪)**

ವೀರಶೈವ ಧರ್ಮ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಹಿರಿಯ ಬಸವಪ್ಪನಾಯಕನ ಕಾಲವು ಪ್ರಾಮುಖ್ಯವಾದುದು. ಕೆಳದಿ ನೃಪವಿಜಯದಲ್ಲಿ–

ಮೆರೆವ ಶಿವತತ್ವರತ್ನಾ। ಕರಮೆಂದೆನಿಪಾ ಸುಭಾಷಿತಸುರದ್ರುಮವೆಂ
ಬುರುತರಕಾವ್ಯದ್ವಯಮಂ। ವಿರಚಿಸಿ ಸದ್ಯಶವನಾಂತನಾ ಬಸವನೃಪಂ

ಇಂತು ಸಂಸ್ಕೃತ ಗ್ರಂಥನಿಬಂಧದ್ವಯಮಂ ವಿರಚಿಸಿ ಮತ್ತಮದಲ್ಲದನಂತರಂ ಗೀರ್ವಾಣ ಕರ್ಣಾಟಕ ಭಾಷೆಗಳಿಂ10

ಅನುಪಮ ಸೂಕ್ತಿಸುಧಾರಕ। ಮೆನಿಪಾವಸ್ತುಕಸುಕಾವ್ಯಮಂ ವಿರಚಿಸಿಸೂ
ರಿನಿಕರಕಲ್ಪದ್ರುಮನೆಂ।ದೆನಿಪೀ ಬಿರುದಾಂತು ಮೆರೆದನಾ ಬಸವನೃಪಂ

ವ॥ ಮತ್ತಮದಲ್ಲದೆ

ದಾಸೋಹಂ ಪುರವರ್ಗಂ। ಭಾಸುರ ಮಠಮಾನ್ಯಸತ್ರವೆಂಬಿವು ಮೊದಲಾ
ದಾಸಕಲ ಧರ್ಮಮಂ ಚಿ। ತ್ಕೋಶಂ ಬಸವಾವನೀಶನುರೆ ವಿರಚಿದಸಿಂ

ವ॥ ಮತ್ತಮದಲ್ಲದೆ ಪ್ರತಿವರ್ಷದೊಳ್ ಕಾರ್ತಿಕ ಮಾಸದೊಳ್ ಸೋಮವಾರಂಗಳೊಳ್ ಜಂಗಮ ಪಾದಪೂಜೆಯಂ ಮಾಳ್ಪ ಪದ್ಧತಿಯಂ ರಚಿಸಿ ಸಕಲಜನಹಿತಾರ್ಥಂ ವೇಣುಪುರೀನದಿಗೆ ಶಿಲಾಸೇತುವಂ ಕಟ್ಟಿಸಿ ಪರಮಹಂಸ ಪಕೀರರ್ಗಂ ಪ್ರತಿದಿನದೊಳ್ ರೊಟ್ಟಿಗಳನೀವ ಧರ್ಮಮುಮಂ ಮತ್ತಂ ಪಸಿದವರ್ಗನ್ನಮಂ ಶಿಶುಗಳ್ಗೆ ಪಾಲ್ಬೆಣ್ಣೆಗಳನೀವಂತು ಕಟ್ಟಳೆಯುಮಂ ರಚಿಸಿ ಮತ್ತಂ ತಮ್ಮ ಮಾತೃ ಚೆನ್ನಮ್ಮಾಜಿಯವರ ತದ್ದಿವಸದೊಳ್ ಪ್ರತಿವರ್ಷ ಶ್ರಾವಣ ಶುದ್ಧ ೧೪ ನೆಯ ದಿವಸದೊಳನೇಕ ಜಂಗಮಾತಿಥಿ ಪರಮಹಂಸ ಪಕೀರ ರಾಮದಾಸ ಜೋಗಿ ಪರದೇಶಿ ಮುಂತಾದ ಜನರ್ಗನ್ನದಾನ ವಸ್ತ್ರದಾನಂಗಳಂ ಮಾಳ್ಪಂತು ಸ್ಥಿರವಾದ ಕಟ್ಟಳೆಯಂ ರಚಿಯಿಸಿ ಮತ್ತಂ ಸ್ವರಾಷ್ಟ್ರಂಗಳೊಳಕಾಲಚಕ್ರದೊಳೆತ್ತುವುತ್ತಾರ ಪಗುದಿಯನೆತ್ತದಂತು ರಚಿಸಿ ಕೆಳದಿಯ ವೀರಭದ್ರ ದೇವಸ್ಥಾನದ ಶಿಲಾಮಯದ ಕೆಲಸಗತಿಯಂ ಸಂಪೂರ್ಣಮಾಗಿಸಿ ಮತ್ತಂ ತಮ್ಮ ಸೇವಕ ಗುರಿಕಾರ ಹರಿಕಾರರ ಮುಖದಿಂದೆ ಯುಮಗ್ರಹಾರಾದಿ ಧರ್ಮಂಗಳನ್ನಾಗಿಸಿ ಶಾಶ್ವತ ಧರ್ಮಕೀರ್ತಿಗಳನುಪಾರ್ಜಿಸಿದನಂತುಮಲ್ಲದೆಯುಂ

ವಿಲಸತ್ಸಮಸ್ತ ಶಾಸ್ತ್ರಂ।ಗಳನುರೆ ಸಂಗ್ರಹಿಸಿ ಸರ್ವವಿದ್ವಜ್ಜನಸಂ
ಕುಲಮಂ ರಕ್ಷಿಸಿ ಧರ್ಮದೊ।ಳಿಳೆಯಂ ಪಾಲಿಸಿದನೊಲ್ದು ಬಸವಮಹೀಶಂ (ಕೆ. ನೃ. ವಿ. ಪು.೧೫೨-೫೩)

ಈ ಉಲ್ಲೇಖನದಂತೆ ಕೆಳದಿ ಬಸವಪ್ಪನಾಯಕನು ವೀರಶೈವಧರ್ಮದ ಶ್ರೇಷ್ಠತೆಯನ್ನು ವಿದ್ವಜ್ಜನ ಸಮ್ಮತ ರೀತಿಯಲ್ಲಿ ಪ್ರತಿಪಾದಿಸಿದ್ದಾನೆ. ಈತನ ಕೃತಿ 'ಶಿವತತ್ವರತ್ನಾಕರವು' ಸಂಸ್ಕೃತ ಸಾಹಿತ್ಯಕ್ಷೇತ್ರದಲ್ಲಿ ಅಪೂರ್ವ ವಿಶ್ವಕೋಶವೆಂದೆನಿಸಿದೆ. ಧರ್ಮಜಿಜ್ಞಾಸುಗಳಿಗೆ ಇದೊಂದು ಆಕರಗ್ರಂಥವಾಗಿರುತ್ತದೆ[11]. ದಾಸೋಹ, ಅನ್ನದಾನ, ವಸ್ತ್ರದಾನಗಳು ಬಸವಪ್ಪನಾಯಕನ ಸುಸಂಸ್ಕೃತ ಧರ್ಮನಿಷ್ಠೆಗಳನ್ನು ಪ್ರತಿಬಿಂಬಿಸುತ್ತದೆ.

**ಇಮ್ಮಡಿ ಸೋಮಶೇಖರನಾಯಕ (ಕ್ರಿ. ಶ. ೧೭೭೪-೧೭೪೦)**

ಇಮ್ಮಡಿ ಸೋಮಶೇಖರನಾಯಕನ ಕಾಲದಲ್ಲಿ ವೀರಶೈವಧರ್ಮ ರಕ್ಷಣೆಯಲ್ಲಿ ಸ್ವತಃ ಅರಸನೇ ಲಿಂಗಣ್ಣ ಕವಿಯು ನಿರೂಪಿಸಿದಂತೆ

ವ॥ ಮತ್ತಮದಲ್ಲದಾನೃಪಾಲಪುಂಗವಂ ಪರಶುರಾಮ ಕ್ಷೇತ್ರದತ್ತಣಿಂ ಮಾತೃಗಳ್ವೆರಸಿರ್ವರ್ ಪಾರ್ವಕುಮಾರರಂ ಬರಸಿಯವರ್ಗೆ ಷಡಕ್ಷರಿ ಪಂಚಾಕ್ಷರಿಯೆಂದು ಪೆಸರಿಟ್ಟು ಲಿಂಗಧಾರಣಮಂ ಮಾಡಿಸಿ ಪೋಷಿಸಿಯವರ್ಗೆ ವಿದ್ಯಾಭ್ಯಾಸಮಂ ಮಾಡಿಸಿ ಷಡಕ್ಷರಿಯೆಂಬ ಸಣ್ಣವನ ವಾಕ್ಪಟುತ್ವಮಂ ನೋಡಿ ಚಿತ್ತಾಸಕ್ತಿಯಿಟ್ಟು.........(ಕೆ.ನೃ.ವಿ. ಪು.೧೬೧)

ಶ್ರೀ ವೀರಭದ್ರನೆಸೆವಡಿ।ದಾವರೆಯಂ ಪರಮಭಕ್ತಿಯಿಂ ಪೂಜಿಸಿ ತ
ದ್ದೇವರ ದೇವಂಗವನಿಪ।ದೇವಂತಾಂ ಕೆಂಡದರ್ಚನೆಯನರ್ಪಿಸಿದಂ

ವ॥ ಇಂತು ಕೆಳದಿಯ ವೀರಭದ್ರೇಶ್ವರಂಗೆ ಕೆಂಡದರ್ಚನಾದಿ ಪೂಜೆಗಳಂ ಸಮರ್ಪಿಸಿ ಬೀಳ್ಕೊಂಡ ನಂತರಂ ವೇಣುಪುರದ ರಮನೆಯಂ ಸಾರ್ದುವರ್ತಿಸುತ್ತುಮಿರಲ್ಕೆ ಭುಜಬಲಪರಾಕ್ರಮಾತಿಶಯದೇಳ್ಗೆಯಂ ಕೇಳ್ದು ಸಂದರ್ಶನೌತ್ಸುಕ್ಯದಿಂ ನಿಜಕುಟುಂಬ ಸಹಿತ ಮಾಗೆಳ್ತಂದ...........(ಕೆ. ನೃ. ವಿ. ಪು–೧೬೬)

ಪಂಚಾಕ್ಷರಿ ಮತ್ತು ಷಡಕ್ಷರಿ ಎಂಬ ಬಾಲಕರಿಗೆ ಲಿಂಗಧಾರಣವನ್ನು ನಡೆಸಿ ಪರಿಪೋಷಿಸಿಕೊಂಡು ಬಂದಿರುವುದು ವ್ಯಕ್ತ ಪಡುತ್ತದೆ. ಈ ಷಡಕ್ಷರಿಯೆ ಹಲವಾರು ಕೃತಿಗಳನ್ನು ವಿರಚಿಸಿರುವುದೂ ವ್ಯಕ್ತಪಟ್ಟಿದೆ. ವೀರಶೈವಧರ್ಮಸಾರಸಂಗ್ರಹವನ್ನೊಳ

10. ಪಾಠಾಂತರದಲ್ಲಿ 'ಮಿಶ್ರ ಭಾಷೆಯೊಳ್' ಎಂದು 'ಕ' ಪ್ರತಿಯಲ್ಲಿದೆ.

11. ದೆಹಲಿಯ ಪ್ರಸಿದ್ಧ ವಿದ್ವಾಂಸರೊಬ್ಬರು ಇದನ್ನು ಜರ್ಮನಿ ಭಾಷೆಯಲ್ಲಿ ಭಾಷಾಂತರಿಸಲು ಉದ್ದೇಶಿಸಿರುವುದಾಗಿ ನನಗೆ ತಿಳಿಸಿದ್ದಾರೆ.

ಗೊಂಡ 'ವೀರಶೈವಧರ್ಮಶಿರೋಮಣಿ'ಯು ಈತನ ಕೃತಿಯಾಗಿರುತ್ತದೆ. ಕೆಳದಿ ಸೋಮಶೇಖರನಾಯಕನು, ಶೈವ ಧರ್ಮಕ್ಕನು ಸರಿಸಿ ಕೆಳದಿಯ ಶ್ರೀ ವೀರಭದ್ರದೇವರಿಗೆ ಕಂಡದರ್ಶನೆಯನ್ನು ಕೈಗೊಂಡಿರುವುದು ಮನಸೀಯ ಉಲ್ಲೇಖನವಾಗಿದೆ.

**ಬಸಪ್ಪನಾಯಕ II (ಕ್ರಿ. ಶ. ೧೭೪೦–೧೭೫೫)**

ಕೆಳದಿಯನ್ನಾಳಿದ ಈತನಿಗೆ ಇಮ್ಮಡಿ ಬಸಪ್ಪನಾಯಕ ಹಾಗೂ ಬೂದಿ ಬಸಪ್ಪನಾಯಕನೆಂಬುದಾಗಿಯೂ ಹೆಸರುಂಟು. ವೀರಶೈವ ಧರ್ಮದಲ್ಲಿ ಪರಮ ನಿಷ್ಠಾವಂತನಾದ ಈತನು ಈ ಧರ್ಮದ ಉಚ್ಛ್ರಾಯ ಸ್ಥಿತಿಗೆ ಕಾರಣಕರ್ತನಾದನು. ಅದೇ ಕೆಳದಿ ನೃಪವಿಜಯದಲ್ಲಿ ವಿಪುಲ ಅಂಶಗಳು ಈ ದಿಸೆಯಲ್ಲಿ ಉಪಲಬ್ಧವಿರುತ್ತವೆ.

ವರವೇಣುಪುರದ ಮಧ್ಯದ । ವರಬಾಳೆಯಕೊಪ್ಪದೆಡೆಯ ಪಶ್ಚಿಮದೆಸೆಯೊಳ್।
ಸುರುಚಿರಮಠಮಂ ಭೂಮೀ । ಶ್ವರಮಣಿ ಬಸವಾವನೀಶ್ವರಂ ಕಟ್ಟಿಸಿದಂ ॥

ವ॥ ಇಂತು ಮಠಮಂ ನಿರ್ಮಾಣಂಗೈಯ್ಸಿ ಆ ಸ್ಥಳಕ್ಕೆ ಭದ್ರರಾಜಪುರಮೆಂದು ನಾಮಾಂಕಿತಂಗೆಯ್ದು ಭೂರಿಭೂಸ್ವಾಸ್ಥೆಯಂ ಕಲ್ಪಿಸಿ ದುರ್ಮತಿ[12] ಸಂವತ್ಸರದ ಕಾರ್ತಿಕ ಮಾಸದೊಳ್ ಡಂಬಳದ ಸಿದ್ಧೇಶ್ವರ ದೇವರ ಗದ್ದುಗೆಯಂ ತೋಂಟದ ಸ್ವಾಮಿಗಳ್ಗೆ ಶಿವಾರ್ಪಿತಮಾಗಿ ಧಾರೆಯನೆರೆದು ಶಾಶ್ವತಮಾದ ಧರ್ಮಕೀರ್ತಿಯಂ ಸಂಪಾದಿಸಿದನಂತುಮಲ್ಲದೆಯುಂ (ಕೆ.ನೃ.ವಿ. ಪು-೧೭೪)

ವ॥ ಮತ್ತಮದಲ್ಲದಾಬಸವನರೇಂದ್ರಂ ಪರಶುರಾಮ ಕ್ಷೇತ್ರದೊಳೊಪ್ಪುವ ಸ್ಥಳದೊಳ್.........ಆ ಸ್ಥಳಕ್ಕೆ ಮಂತ್ರರಾಜಪುರವೆಂದು ನಾಮಾಂಕಿತಮಂ ಮಾಡಿ ಷಡಕ್ಷರಯ್ಯನ ಮುಖದಿನಾಸ್ಥಳದೊಳತ್ಯದ್ಭುತಮಾದ ಮಠಮಂ ಕಟ್ಟಿಸಿ ವಿಶೇಷಭೂಸ್ವಾಸ್ಥೆಯಂ ಜಂಗಮಧರ್ಮಾರ್ಥಮಾಗಿ ಆಮಠಮಂ ಗುರುನಂಜುಂಡಸ್ವಾಮಿಗಳ್ಗೆ ಧಾರೆಯನೆರೆದು ಶಿವಾರ್ಪಿತ ಮಾಗೆ ಸ್ಥಿರಶಾಸನಮಂ ಬರೆಸಿತ್ತುಸದ್ಧರ್ಮ ಕೀರ್ತಿಯಂ ಸಂಪಾದಿಸಿದನಂತು ಮಲ್ಲದೆಯುಂ

ಆಮಂತ್ರರಾಜಪುರದೊಳ್। ಶ್ರೀಮತ್ಸಿದ್ಧೇಶ್ವರಂಗೆ ಪ್ರತಿ ವರ್ಷದೊಳು
ದ್ದಾಮರಥೋತ್ಸವ ವಿಭವಂ। ನೇಮದೆ ನಡೆವಂತೆ ಕಟ್ಟಳೆಯನಾಗಿಸಿದಂ
ಮಿರುಗುವಾನಂದಪುರದೊಳ್। ಮುರಿಗೆಯ ದೇವರ್ಗೆ ವರರಥೋತ್ಸವಮಂ ವ
ತ್ಸರ ವತ್ಸರದೊಳ್ ನಡೆಸುವ। ಪರಿಯನೊಡರ್ಚಿಸಿದನಿಂತು ಬಸವ ಮಹೀಶಂ

ವ॥ ಮತ್ತಮಂತಲ್ಲದೆ—

ಡಂಬಳದೊಳ್ ಸಿದ್ಧೇಶ್ವರ। ಗಿಂಬಾದಭಿನವರಥೊತ್ಸವಂ ಪ್ರತಿವರ್ಷಂ
ತಾಂಬಿಡದೆ ನಡೆವ ಪದ್ಧತಿ। ಯಂ ಬಸವನರೇಂದ್ರನಾಜ್ಞೆಯಿಂ ವಿರಚಿಸಿದಂ
ನೆರೆಷಣ್ಣವತಿ ಸಹಸ್ರೋ। ತ್ತರಲಕ್ಷ ಸುಜಂಗಮಕ್ಕಭಿಷ್ಟಪದಾರ್ಥೋ
ತ್ಕರಗಳ ನೊದವಿಸಿ ನೀಡಿಸಿ। ಪಿರಿದೆನೆ ಸಂತುಷ್ಟಿವಡಿಸಿದಂ ಬಸವನೃಪಂ

ವ ॥ ಇಂತು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮ ಮೂರ್ತಿಗಳ್ಗೆ ನಾನಾವಿಧ ಭಕ್ಷ್ಯ ಭೋಜ್ಯ ರಸಾಯನ ಫಲಂಗಳ್ ಮುಂತಾದ ಇಚ್ಛಾಪದಾರ್ಥಂಗಳಂ ನೀಡಿಸಿ ಸಂತುಷ್ಟಿವಡಿಸಿಯವರ್ಗೆ ನಾನಾವಿಧ ವಿಚಿತ್ರತರ ವಸ್ತ್ರ ಕಂಬಳಿ ಕಂಥೆ ಶಿವದಾರ ವಿಭೂತಿಯಾಧಾರ ಭಸ್ಮ ರುದ್ರಾಕ್ಷಿ ಆಗಮ ಶಿವಶಾಸ್ತ್ರ ಲಿಖಿತ ಪುಸ್ತಕ ಪಾವಡ ಛತ್ರ ಪಾದುಕೆ ಹಸ್ತಾಧಾರ ದಂಡ ಮುಂತಾದ ಇಚ್ಛಾಪದಾರ್ಥಂಗಳಂ ಕೊಡಿಸಿ ಪೇಟೆಯಲ್ಲಿ ಆರಾಧನ ಪೂರ್ವಕಂ ಮಹೋತ್ಸವ ಮೆರವಣಿಗೆಗಳಂ ಮಾಡಿಸಿ ಶಾಶ್ವತ ಧರ್ಮ ಕೀರ್ತಿಗಳಂ ಸಂಪಾದಿಸಿ ರಾಜ್ಯಂಗೆಯ್ಯುತಿರ್ದ ಬಸವನರೇಂದ್ರ ನೊಂದವಸರದೊಳ್ (ಕೆ. ನೃ. ವಿ. ಪು-೧೭೭ ೧೭೭ XI)

......ವೇಣುಪುರದರಮನೆಯೊಳ್ ಸಾರ್ದು ಸಂತತಂ ಶಿವಪೂಜೆ ಸತ್ಪುರಾಣಶ್ರವಣ ಸುಖಸಂಕಥಾ ವಿನೋದಗೋಷ್ಠಿ ಗಳಿಂ ಗುರುಲಿಂಗಜಂಗಮಸೇವಾತತ್ಪರನೆನಿಸಿ......(ಕೆ. ನೃ. ವಿ. ಪು–೧೭೮ XI)

ಮೆರೆವ ಡಂಬಳದ ಸಿದ್ಧೇ।ಶ್ವರಗಂ ವಿಲಸದ್ರಥೋತ್ಸವಾದ್ಯುಪಚಾರೋ।
ತ್ಕರಗಳ್ ನಡೆವಂತಿರೆ ಸ। ದ್ಧರಣಿಯನುತ್ತಾರಗೆಯ್ಸಿದಂ ತದ್ಭೂಪಂ ॥

ವ॥ ಇಂತು ಡಂಬಳದ ಸಿದ್ಧೇಶ್ವರದೇವರ್ಗೆ ಭೂಸ್ವಾಸ್ಥೆಯನುತ್ತಾರಂಗೆಯ್ಸಿ ಸುಖದಿಂ ರಾಜ್ಯಮಾಳುತ್ತಿರಲ್...... (ಕೆ. ನೃ. ವಿ. ೧೮೩XI)

ಮುರಿಗೆಯ ಸಮಯದೆ ವರ್ತಿಸು । ತಿರುತಿಹ ವರಚನ್ನವೀರದೇವರನುರುಹಂ।
ಗರದ ಮಠದಾಧಿಪತ್ಯಕೆ । ಚಿರಮೆನೆ ನೆಲೆಗೊಳಿಸಿ ನಿಲಿಸಿದಂ ತದ್ಭೂಪಂ (ಕೆ. ನೃ. ವಿ. ಪು-೧೮೫ XI)

ಕ್ರಿ.ಶ.೧೭೪೦ ರಿಂದ ೫೫ರವರೆಗೆ ಬೂದಿ ಬಸಪ್ಪನಾಯಕನಿಂದ ಬಾಳೆಹಳ್ಳಿ ಮಠವು ನಿರ್ಮಿಸಲ್ಪಟ್ಟು ಸಿದ್ಧೇಶ್ವರ ದೇವರ ಗದ್ದುಗೆ ತೋಂಟದ ಸ್ವಾಮಿಗಳಿಗೆ ಧಾರೆಯೆರೆಯಲ್ಪಟ್ಟಿತು. ಇದೇ ರೀತಿ ಮಂತ್ರರಾಜಪುರ ಮಠವನ್ನು ನಿರ್ಮಿಸಿ ನಂಜುಂಡೇ

12. ಪಾಠಾಂತರ 'ಗ' ಪ್ರತಿಯಲ್ಲಿ 'ಯುಂಮಂ ಬಿಡಿಸಿ ಸಕಲ ಸೋಪಸ್ಕರಂಗಳಂ ಸಂಪೂರ್ಣವಾಗಿಸಿ ಬಳಿಕ್ಕಂ ಮಠಮಂ ಶಿವಜಂಗಮ ಧರ್ಮಾರ್ಥ ಮಾಗಿ ದು' ಎಂದಿರುತ್ತದೆ.

ಸ್ವಾಮಿಯ ವಿಗ್ರಹಗಳನ್ನು ಮೇಲ್ಕಂಡ ದೇವಾಲಯದಲ್ಲಿ ಪ್ರತಿಷ್ಠಾಪಿಸಿದುದನ್ನೂ ೧೮೭೭ರಲ್ಲಿ ವೀರ ರಾಜೇಂದ್ರ ನೀಡಿದ ಶಾಸನ ಹೇಳುತ್ತದೆ. ೧೮೧೧ ರಲ್ಲಿ ಇಮ್ಮಡಿ ಲಿಂಗರಾಜನು ಮಡಕೇರಿ ತಾಲ್ಲೂಕು ಪಾಡಿ ದೇವಸ್ಥಾನದ ಸುಬ್ಬರಾಯ ದೇವರಿಗೆ ಒಪ್ಪಿಸಿದ ಒಂದಡಿ ಎತ್ತರದ ಬೆಳ್ಳಿ ಆನೆಯ ಉಲ್ಲೇಖವೂ ಶಾಸನದಲ್ಲಿದೆ. ಈ ಆನೆಗೆ ಸಂಬಂಧಿಸಿರುವ ಶಾಸನವನ್ನು ಅದರ ಬೆನ್ನಿನ ಮೇಲೆಯೇ ಕೆತ್ತಿರುವರು.

ಜೈನ ಮತ್ತು ವೀರಶೈವ ಧರ್ಮಗಳು ಕೊಡಗಿನಲ್ಲಿ ಆಚರಣೆಯಲ್ಲಿದ್ದರೂ ಯಾವೊಂದು ಧರ್ಮವೂ ಜನರನ್ನು ಅಷ್ಟಾಗಿ ತಮ್ಮತ್ತ ಆಕರ್ಷಿಸುವಲ್ಲಿ ಯಶಸ್ವಿಯಾಗಲಿಲ್ಲವೆಂದು ಇತಿಹಾಸಕಾರರು ಅಭಿಪ್ರಾಯ ಪಡುವರು. ವೀರಶೈವ ಧರ್ಮವು ಹಾಲೇರಿ ಅರಸು ಮನೆತನದವರಿಗೂ ಅವರ ಪರಿವಾರದವರಿಗೂ ಇತರರಿಗೂ ಸೀಮಿತವಾಗಿದ್ದಿತೆಂದಷ್ಟೆ ಹೇಳಬಹುದು. ಕೊಡವರು ಅನೂಚಾನವಾಗಿ ಬಂದ ತಮ್ಮ ಧಾರ್ಮಿಕ ನಂಬಿಕೆ,ಸಂಪ್ರದಾಯ,ಸಂಸ್ಕೃತಿಗಳನ್ನು ಎಲ್ಲ ಸಂದರ್ಭಗಳಲ್ಲೂ ಕಾಯ್ದು ಕೊಂಡರು. ಇಂದಿಗೂ ಅದರ ಜೀವಂತಿಕೆಯನ್ನು ಅವರ ಆಚರಣೆಗಳಲ್ಲಿ ಕಾಣಬಹುದು. ಆದರೂ ಹಾಲೇರಿ ಅರಸರು ಕೊಡಗಿನಲ್ಲಿ ಒಟ್ಟು ೫೭ ವೀರಶೈವ ಮಠಗಳನ್ನು ಸ್ಥಾಪಿಸುವಲ್ಲಿ ನೆರವಾದರು. ಅವುಗಳಿಗೆ ಉದಾರವಾಗಿ ದತ್ತಿದಾನಗಳನ್ನು ನೀಡಿ ಪ್ರೋತ್ಸಾಹಿಸಿದರು. ಆದರೆ ಕೆಳದಿಯರಸರಂತೆ ವೀರಶೈವ ಧರ್ಮವನ್ನು ಜನಪ್ರಿಯಗೊಳಿಸುವಲ್ಲಿ ಇವರು ಸಮರ್ಥರಾಗಲಿಲ್ಲ. ಹಾಲೇರಿ ಅರಸರು ಸ್ಥಾಪಿಸಿದ ಮಠಗಳಲ್ಲಿ ಯಡವುನಾಡಿನ ಬಸವನಹಳ್ಳಿಮಠ, ಅಬ್ಬಿಮಠ; ಗಡಿನಾಡಿನ ಮಾದಾಪುರಮಠ, ತೊರೆನೂರುಮಠ; ನೂರೊಕ್ಕಲು ನಾಡಿನ ಹೊರೂರು ಸಿದ್ಧಾಪುರದ ಮಠ; ಹೊರೂರು ಚಾದರಳ್ಳಿಯಮಠ; ಅಮ್ಮತ್ತಿನಾಡಿನ ತನದಿ ಮಠ; ಎಡೆನಾಲ್ಕುನಾಡಿನ ಜಪದಕಟ್ಟೆಮಠ-ಇವುಗಳು ಮುಖ್ಯವಾದುವು ಮತ್ತು ಶ್ರೀಮಂತವಾದುವು. ಈ ಎಂಟು ಮಠಗಳಿಗೂ ಸಾಕಷ್ಟು ಗದ್ದೆ ಇತ್ಯಾದಿ ಆಸ್ತಿಯಿದ್ದು ಆರ್ಥಿಕವಾಗಿ ಮುಂದುವರೆದಿವೆ. ಉಳಿದ ೪೯ ಮಠಗಳಿಗೂ ಅವುಗಳ ಸ್ಥಾನಮಾನಗಳಿಗನುಸಾರವಾಗಿ ಆಸ್ತಿ ಬಿಡಲಾಗಿದೆ.

## ಬೆಳವಡಿ ಸಂಸ್ಥಾನ

ಬೆಳಗಾವಿ ಜಿಲ್ಲೆಯ (ಪೂವಲ್ಲಿ) ಹೂಲಿ ಬೃಹನ್ಮಠದಲ್ಲಿರುವ ೧೬೮೦ರಲ್ಲಿ ಮಲ್ಲಮ್ಮ ರಾಣಿ ನೀಡಿದ ದಾನಶಾಸನವು (ಸನ್ನದು), ಬೆಳವಡಿ ಸಂಸ್ಥಾನದವರು ರಾಷ್ಟ್ರಕೂಟ ರಾಜಮನೆತನಕ್ಕೆ ಸೇರಿದ ಸೌದತ್ತಿ ರಟ್ಟರ ಒಂದು ಶಾಖೆಗೆ ಸೇರಿದವರೆಂದು ತಿಳಿಸುತ್ತದೆ. ಈ ದಾನ ಶಾಸನವು ಸಂಸ್ಕೃತ ಭಾಷೆಯಲ್ಲಿದೆ. ರಾಷ್ಟ್ರಕೂಟರ ಶಾಸನಗಳಲ್ಲಿ 'ರಟ್ಟ ವಂಶೋದ್ಭವಃ' ಎಂಬ ಉಲ್ಲೇಖವಿರುವುದು ಗಮನಾರ್ಹ. ಹೂಲಿ ಬೃಹನ್ಮಠದಲ್ಲೇ ಇರುವ ಬೆಳವಡಿ ಸಂಸ್ಥಾನಿಕರ ವಂಶಾವಳಿ ಪ್ರಕಾರ ಒಟ್ಟು ೩೨ ಜನರು ಈ ಸಂಸ್ಥಾನವನ್ನು ಆಳಿದರೆಂದೂ ಧರ್ಮವರ್ಧನನೆಂಬುವನು ಮೂಲಪುರುಷನೆಂದೂ ಬೆಳವಡಿ ಸಂಸ್ಥಾನದ ಸ್ಥಾಪನೆಯಾದುದು ಕಾಂತಿವರ್ಮನೆಂಬುವನೆಂದೆಂತಲೂ ತಿಳಿಯುವುದು.

ಕಲ್ಯಾಣಿ ಚಾಲುಕ್ಯರ ಅರಸ ಭುವನೈಕಮಲ್ಲ ಎರಡನೆಯ ಸೋಮೇಶ್ವರನ ಆಳ್ವಿಕೆಯಲ್ಲಿ ನೀಡಿದ ಶಿಲಾ ಶಾಸನವೊಂದು ಇಲ್ಲಿ ದೊರೆತಿದ್ದು, ೧೦೭೫ ಮತ್ತು ಅದಕ್ಕೂ ಹಿಂದೆ ಬೆಳವಡಿಯು ಜೈನಧರ್ಮದ ಕೇಂದ್ರವಾಗಿದ್ದಿತೆಂದು ಸ್ಪಷ್ಟಪಡಿಸುತ್ತದೆ. ಇಲ್ಲಿನ ಸಹಸ್ರಕೂಟ ಜಿನಾಲಯವು ಪ್ರಸಿದ್ಧವಾಗಿದ್ದು ಜಿನಯತಿಗಳು ಪ್ರಭಾವಶಾಲಿಗಳಾಗಿದ್ದರೆಂತಲೂ ವ್ಯಕ್ತಪಟ್ಟಿದೆ. ಅಲ್ಲದೆ ಬೆಳಗಾವಿಯೂ ಸೇರಿದಂತೆ ಈ ಜಿಲ್ಲೆಯ ರಾಯಬಾಗ್, ಅಥಣಿ, ಚಿಕ್ಕೋಡಿ, ಹುಕ್ಕೇರಿ, ಬೈಲಹೊಂಗಲ ಭಾಗಗಳಲ್ಲಿ ಇಂದಿಗೂ ಹೆಚ್ಚು ಸಂಖ್ಯೆಯಲ್ಲಿ ಜೈನರು ವಾಸಿಸುತ್ತಿದ್ದಾರೆ. ಶಾಸನಗಳಲ್ಲಿ ಬೆಳವಡಿನಾಡನ್ನು ಬೆಳ್ವಡಿ, ಬೆಳ್ವಾಡಿ ಎಂತಲೂ ಬೆಳ್ವಡಿ ಹೊಳಲ್ಗುಂದ ಮೂವತ್ತು ಎಂತಲೂ ಸಂಬೋಧಿಸಲಾಗಿದೆ. 'ಬೆಳ್ವಲ' ಎಂಬ ಪ್ರಯೋಗವೂ ಇದೆ. ಬಿಳಿಯ ಹೊಲ ಅಥವಾ ಸಮೃದ್ಧಿಯಾದ ಬೆಳೆಯನ್ನು ಬೆಳೆಯುವ ಹೊಲ ಅಥವಾ ಹತ್ತಿ ಬೆಳೆಗೆ ಉಪಯುಕ್ತವಾದ ಹೊಲ ಹೀಗೆಲ್ಲ 'ಬೆಳ್ವೊಲ'ವನ್ನು ಪಂಡಿತರು ಅರ್ಥೈಸಿದ್ದಾರೆ. ಅಲ್ಲದೆ ಈ ಅರ್ಥವೇ ಹೆಚ್ಚು ಸಮಂಜಸ ಎಂತಲೂ ಅಭಿಪ್ರಾಯಪಟ್ಟಿದ್ದಾರೆ. ಬೆಳವಡಿಯಲ್ಲಿನ ಶಿಲಾಲಿಪಿಗಳನ್ನು ಅಧ್ಯಯನ ಮಾಡಿರುವ ಪಂಡಿತರನೇಕರು ಮೂವತ್ತು ಗ್ರಾಮುಗಳನ್ನೊಳಗೊಂಡ ವಿಭಾಗದಲ್ಲಿದ್ದ ಹೊಳಲ್ಗುಂದವು ಈ ಪ್ರಾಂತ್ಯದ ಮುಖ್ಯಸ್ಥಳವಾಗಿದ್ದಿತೆಂದು ಸೂಚಿಸಿರುವರು.

ಬೆಳವಡಿ ಅರಸರ ವಂಶಾವಳಿ ಬಗೆಗೆ ಸ್ಪಷ್ಟವಾಗಿ ಹೇಳಲಿಕ್ಕಾಗದಿದ್ದರೂ ಹದಿನಾರನೆಯ ಶತಮಾನದಲ್ಲಿ ಬಿಜಾಪುರದ ಸರದಾರರೊಡನೆ ಹೋರಾಡಿ ಮಡಿದ ಬೆಳಗಾವಿ ಪ್ರಾಂತ್ಯವನ್ನಾಳುತ್ತಿದ್ದ ಸೋಮರಾಜನೆಂಬ ರಟ್ಟವಂಶದ ಅರಸನೂ ಮುಂದೆ ಬೆಳವಡಿಯನ್ನಾಳಿದ ಚಂದ್ರಶೇಖರ ರಾಜನೂ ಅವನ ತಮ್ಮಂದಿರಾದ ಸಿದ್ದಪ್ಪನಾಯಕ (ಮುರಗೋಡು ಮೊದಲಾದ ಮೂವತ್ತು ಹಳ್ಳಿಗಳಿಗೆ ದೇಸಾಯಿ ಆದವನು) ಹಾಗೂ ಸಿದ್ದಬಸಪ್ಪ ನಾಯಕ (ಬೈಲಹೊಂಗಲ ಸೇರಿದಂತೆ ಹತ್ತು ಹಳ್ಳಿಗಳಿಗೆ ನಾಡಗೌಡ ಆದವನು) ಇವರುಗಳೂ ಹದಿನೇಳನೆಯ ಶತಮಾನದಲ್ಲಿ ಶೌರ್ಯ ಸಾಹಸ ಉದಾರತೆಗಳಿಗೆ ಹೆಸರಾದ ಬೆಳವಡಿ ಮಲ್ಲವ್ವನ ಪತಿಯಾದ ಈಶ್ವರ ಪ್ರಭು (ಈಶ ಪ್ರಭು) ರಾಯನೂ ಇತಿಹಾಸದಲ್ಲಿ ಉಲ್ಲೇಖಿಸಲರ್ಹರು. ಮಲ್ಲವ್ವನ ಕಾಲದ

ವೇಳೆಗೆ (೧೯೭೮) ಬಿಜಾಪುರ ಸುಲ್ತಾನರ ಪ್ರಾಬಲ್ಯ ಮೊದಲಿನಷ್ಟಿರಲಿಲ್ಲ. ಇದಕ್ಕೆ ಕಾರಣವಾದರೊ ಮರಾಠರ ಅಭ್ಯುದಯ. ಬಿಜಾಪುರದವರಿಂದ ಬೆಳವಡಿ ಪಾರಾದರೂ ಮರಾಠರ ವಕ್ರದೃಷ್ಟಿ ಬೆಳವಡಿಯಂಥಾ ಪುಟ್ಟ ಸಂಸ್ಥಾನಗಳ ಮೇಲಿದ್ದಿತು. ಛತ್ರಪತಿ ಶಿವಾಜಿಯು ೧೬೭೪ರಲ್ಲಿ ಮರಾಠ ಸಿಂಹಾಸನಾರೋಹಣ ಮಾಡಿ, 'ಮಹಾರಾಜ'ನೆಂಬ ಬಿರುದು ಹೊಂದಿ, ಅನಂತರ ದಕ್ಷಿಣದ ದಂಡಯಾತ್ರೆ ಕೈಗೊಂಡನು. ದಕ್ಷಿಣದಲ್ಲಿ ಜಂಜಿ, ವೆಲ್ಲೂರುಗಳವರೆಗೂ, ಕರ್ನಾಟಕದಲ್ಲಿ ಬೆಂಗಳೂರು, ಕೋಲಾರ, ಹೊಸಪೇಟೆ ಹಾಗೂ ಶಿರಾದವರೆಗೂ ತನ್ನ ಪ್ರಭಾವ ಬೀರಿದನು. ಬೆಳಗಾವಿ ಜಿಲ್ಲೆಯ ಮೂಲಕ ರಾಯಗಢ ಕೋಟೆಗೆ ಹಿಂದಿರುಗುವ ಹಾದಿಯಲ್ಲಿ ಅವನ ಸೇನೆ ಬೆಳವಡಿಯನ್ನು ಮುತ್ತಿತು (೧೬೭೮). ಬೆಳವಡಿಯ ಈಶ್ವರ ಪ್ರಭು ಮರಾಠರೊಡನೆ ಹೋರಾಡಿ ಮಡಿದಾಗ ಅವನ ಪಟ್ಟದ ರಾಣಿ ಮಲ್ಲಮ್ಮ ಪತಿವಿಯೋಗದಿಂದ ನೊಂದರೂ ಕೆಚ್ಚು ಬಿಡದೆ ತಾನೇ ಸ್ವತಃ ಶತ್ರುಗಳ ಮೇಲೆ ಬಿದ್ದು ಅವರನ್ನು ಹೊಡೆದೋಡಿಸಿ ರಾಜ್ಯ ಉಳಿಸಿಕೊಂಡಳೆಂದು ಕನ್ನಡ ಮತ್ತು ಮರಾಠಿ ಇತಿಹಾಸ ಕಡತಗಳಲ್ಲಿ ವರ್ಣಿಸಲಾಗಿದೆ. ಎರಡನೆಯ ಬಾರಿ ಮರಾಠರು ಬೆಳವಡಿಗೆ ಮುತ್ತಿಗೆ ಹಾಕಿದಾಗ ೨೭ ದಿವಸಗಳ ಕಾಲ ತೀವ್ರ ಕದನ ನಡೆದು ಮಲ್ಲಮ್ಮನು ಮರಾಠ ಸರದಾರರಿಗೆ ಸೆರೆಸಿಕ್ಕಳು. ಆದರೆ ಶಿವಾಜಿ ಆಕೆಯನ್ನು ಗೌರವದಿಂದ ನಡೆಸಿಕೊಂಡು ಎರಡು ಹಳ್ಳಿಗಳನ್ನು ಉಂಬಳಿ ಹಾಕಿಕೊಟ್ಟನೆಂದು ತಿಳಿದುಬರುವುದು. ಈ ಬಗೆಗೆ ಮರಾಠಿ ಬರಹಗಳಾದ ಜೇದೇ ಶಕಾವಲಿ, ಸುಭಾಸದ ಬಖೈರು, ಚಿತ್ರಗುಪ್ತ ಬಖೈರು, ೯೧ ಕಲಮೀ ಬಖೈರು, ಶಿವದಿಗ್ವಿಜಯ ಬಖೈರು, ಚಿಟ್ನೀಸ್ ಬಖೈರು, ಶೇಡಗಾವಕರ ಬಖೈರು ಇವೇ ಮೊದಲಾದುವು ಮಾಹಿತಿ ನೀಡುತ್ತವೆಂದು ಡಾ॥ ಕೆ. ಎನ್. ಚಿಟ್ನೀಸ್ ಅವರು ತಿಳಿಸುತ್ತಾರೆ (ಬೆಳವಡಿ ಮಲ್ಲಮ್ಮ ಸ್ಮರಣ ಸಂಚಿಕೆ, ೧೯೭೮). ಆದರೆ ಮೇಲ್ಕಂಡ ಘಟನೆ ಕುರಿತು ಬೆಳವಡಿ ಮನೆತನದ ಇತಿಹಾಸದಲ್ಲಿ ಸ್ಪಷ್ಟತೆ ಸಾಲದು. ನಾನಾ ಸಂದೇಹಗಳು ತಲೆದೋರುತ್ತವೆ. ಮಲ್ಲಮ್ಮಳ ಸೋಲಿನೊಂದಿಗೆ ಬೆಳವಡಿ ಇತಿಹಾಸ ಕೊನೆಗೊಂಡರೂ ಆಕೆಯ ಮೊಮ್ಮಗ ಸಿದ್ಧಲಿಂಗ ನಾಯಕನವರೆಗೆ ಈ ಸಂಸ್ಥಾನದ ಅಸ್ತಿತ್ವ ಇದ್ದಿತು. ಈಗಲೂ ಈ ಮನೆತನದವರು ಇದ್ದಾರೆ.

ಬೆಳವಡಿ ಸಂಸ್ಥಾನವು ಕಿತ್ತೂರು ಸಂಸ್ಥಾನದ ಎಂಟನೆಯ ದೇಸಾಯಿಯಾದ ಮಲ್ಲಸರ್ಜನಿಂದ ನಾಶವಾಯಿತೆಂದು 'ತುರುಕಾರಿ ಪಂಚಮರ ಇತಿಹಾಸ'ದಲ್ಲಿ (ಪು. ೨೩) ಬರೆದಿರುವುದನ್ನು ಬೆಟಗೇರಿ ಕೃಷ್ಣಶರ್ಮರೂ ಅನುಮೋದಿಸುತ್ತಾರೆ. ಆದರೆ ಕಿತ್ತೂರಿನ ಇತಿಹಾಸ ಕಡತಗಳಲ್ಲಿ ಈ ಸಂಗತಿ ಉಪಲಬ್ಧವಿಲ್ಲವೆಂದು ತಿಳಿಯುವುದರಿಂದ ಸದ್ಯಕ್ಕೆ ಇದು ಜಿಜ್ಞಾಸೆಗೊಳಪಟ್ಟ ಸಂಗತಿ ಅಲ್ಲದೆ ಬೇರೆ ಅಲ್ಲ. ಅಲ್ಲದೆ 'ಇತಿಹಾಸ'ದಲ್ಲಿ ಪ್ರಸ್ತಾಪಿಸಲ್ಪಟ್ಟಿರುವ 'ಮಲ್ಲಮ್ಮನು ಸ್ವಾದಿಯರಸರ ಕುಮಾರಿ' ಎಂಬ ವಿಚಾರವೂ ಜಿಜ್ಞಾಸೆಗೊಳಪಟ್ಟಿರುವುದೆಂದೇ ಹೇಳಬೇಕು (ನೋಡಿ : ಸ್ವಾದಿಮನೆತನ)

ಇನ್ನು ಯಾದವಾಡದ ವೀರಗಲ್ಲಿಗೆ ಸಂಬಂಧಿಸಿದ ವಿಚಾರ: ಧಾರವಾಡದ ಉತ್ತರಕ್ಕೆ ಆರು ಮೈಲಿ ದೂರದಲ್ಲಿ ಈ ಊರು ನೆಲೆಸಿದೆ. ಇಲ್ಲಿರುವ ವೀರಗಲ್ಲಿನಲ್ಲಿ ಶಿವಾಜಿಯನ್ನೂ ಇತರ ವ್ಯಕ್ತಿಗಳನ್ನೂ ಚಿತ್ರಿಸಲಾಗಿದೆ, ಇದು ೧೬೭೮ರಲ್ಲಿ ನಡೆದ ಯುದ್ಧಕ್ಕೆ ಸಂಬಂಧಿಸಿದುದು. ವೀರಗಲ್ಲಿನಲ್ಲಿರುವ ಕನ್ನಡ ಬರಹವು ಮರಾಠರು ಮತ್ತು ಮಲ್ಲಮ್ಮನ ನಡುವೆ ನಡೆದ ಯುದ್ಧ ಸಂಗತಿಯನ್ನು ಹೇಳುತ್ತದೆ. ಮರಾಠರೊಡನೆ ಬೆಳವಡಿ ಸಂಸ್ಥಾನದ ಬಾಂಧವ್ಯದ ಕುರುಹಾಗಿ ರಾಜ್ಯದಲ್ಲೆಲ್ಲ ಇಂಥಾ ವೀರಗಲ್ಲುಗಳನ್ನು ನೆಡಲಾಯಿತಂತೆ. ಈ ವೀರಗಲ್ಲಿನ ಶಿಲ್ಪದ ಬಗೆಗೆ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯ ಇಲ್ಲದಿಲ್ಲ. ಅಲ್ಲದೆ, ಶಿವಾಜಿಯೊಡನೆ ನಡೆದ ಒಪ್ಪಂದದಂತೆ ಬೆಳವಡಿಯ ೪೦ ಹಳ್ಳಿಗಳು ಮರಾಠರಿಗೂ ೪೦ ಹಳ್ಳಿಗಳು ಸಾವುಕಾರ್ ವೀರಪ್ಪ ಎಂಬ ಸುಭೇದಾರನಿಗೂ ಉಳಿದ ೩೨೦ (೩೬೦ ?) ಹಳ್ಳಿಗಳು ಮಲ್ಲಮ್ಮನಿಗೂ ಸೇರಿದವೆಂಬ ಇವೇ ಮೊದಲಾದ ವಿಚಾರಗಳನ್ನು ಪುಷ್ಟೀಕರಿಸಲು ಖಚಿತ ಶೋಧನೆ ಹಾಗೂ ಅಧ್ಯಯನಗಳಿಂದ ಮಾತ್ರವೇ ನೆರವಾದೀತು. ಬೆಳವಡಿ ಸಂಸ್ಥಾನಿಕರು ನಡೆಸಿದ ಉದಾರವಾದ ಆಡಳಿತವು ಅವರ ಪ್ರಜೋಪಕಾರಿ ಗುಣವನ್ನು ತೋರಿಸಿಕೊಡುತ್ತದೆ. ಅದರಲ್ಲೂ ಮಲ್ಲಮ್ಮನ ಸ್ವಾಭಿಮಾನ ಮತ್ತು ಸ್ತ್ರೀ ಸಹಜ ವಾತ್ಸಲ್ಯವು ಇತಿಹಾಸ ಪುಟದಲ್ಲಿ ಆಕೆಗೆ ಹೆಮ್ಮೆಯ ಸ್ಥಾನ ನೀಡಲು ನೆರವಾಗಿವೆ. ೧೭೧೭ರಲ್ಲಿ ಆಕೆ ಕೊನೆಯುಸಿರೆಳೆದಳು.

ಸುದೀರ್ಘ ಆಳ್ವಿಕೆಯ ಹಿನ್ನಲೆಯಿರುವ ಈ ಸಂಸ್ಥಾನದ ಮೇಲೆ ಪ್ರಭಾವ ಬೀರಿದುದು ಹೂಲಿಯ ಬೃಹನ್ಮಠ ಅಥವಾ ಹಿರೇಮಠ. ಇದು ಸವದತ್ತಿಗೆ ಐದು ಮೈಲಿ ದೂರದಲ್ಲಿದೆ. ಈವರೆಗೆ ಈ ಮಠದ ಸ್ಥಿರಪಟ್ಟಾಧಿಕಾರಿಗಳಲ್ಲಿ ೫೨ಜನ, ಚರಪಟ್ಟಾಧಿಕಾರಿಗಳಲ್ಲಿ ೪೪ಜನ ಸ್ವಾಮಿಗಳು ಆಗಿ ಹೋಗಿದ್ದಾರೆ. ಈ ಪೀಠದ ೧೭ನೆಯ ಚರಪಟ್ಟಾಧಿಕಾರಿ ಅಘೋರೇಶ್ವರ ಸ್ವಾಮಿಗಳು ಇಕ್ಕೇರಿ ಸಂಸ್ಥಾನದ ಸ್ಥಾಪನೆಗೂ ಸ್ಫೂರ್ತಿ ನೀಡಿದರೆಂದು ವ್ಯಕ್ತಪಡುವುದು. ವಿಜಯನಗರದ ಇಮ್ಮಡಿ ಹರಿಹರನ ಕಾಲದಲ್ಲಿ ಹಂಪೆಯಲ್ಲಿ ಮಠವೊಂದನ್ನು ಸ್ಥಾಪಿಸಲು ಪ್ರೇರಣೆನೀಡಿದವರು ಇದೇ ಮಠದ ಚರಪಟ್ಟಾಧಿಕಾರಿಗಳಲ್ಲೊಬ್ಬ ಸಿದ್ಧನಂಜೇಶ್ವರರೆಂದು ತಿಳಿದು ಬರುತ್ತದೆ. ಮಲ್ಲಮ್ಮರಾಣಿಯು ಹೂಲಿ ಮಠಾಧೀಶರಲ್ಲಿ ಅಚಲವಾದ ನಂಬಿಕೆ,ನಿಷ್ಠೆ ಇರಿಸಿದ್ದಳು. ದಾನ ಧರ್ಮಗಳನ್ನು ಹೇರಳವಾಗಿ ನೀಡಿದಳು. ಯುದ್ಧ ಕಾಲದಲ್ಲಿ ಹಾಗೂ ಯಾವುದೇ ದುರ್ಭರ ಸಮಯದಲ್ಲಿ ಈ ಮಠಾಧೀಶರು ಈ ಅರಸರಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು; ಸಂದರ್ಭೋಚಿತ ಸಲಹೆ ನೀಡುತ್ತಿದ್ದರು. ಬೆಳವಡಿ ಸಂಸ್ಥಾನದ

ವಂಶಜರು ಇಂದಿಗೂ ಈ ಮಠದ ಭಕ್ತರಾಗಿರುವರು. ಬೆಳವಡಿ ಸಂಸ್ಥಾನದ ಮೇಲೆ ಹೂಲಿ ಮಠ ಬೀರಿರುವ ಪ್ರಭಾವವನ್ನು ಈ ಅರಸರ ಇತಿಹಾಸ ಬರೆಯುವಲ್ಲಿ ಪ್ರತ್ಯೇಕವಾಗಿ ಗಮನಿಸುವಂಥಾದ್ದು.

ಬೆಳವಡಿಯಲ್ಲಿ ಇಂದು ವೀರಭದ್ರ ದೇವಾಲಯ ಮತ್ತು ಒಂದು ದೊಡ್ಡ ವೀರಶೈವ ಮಠ ಇವು ಮಾತ್ರ ಕಂಡುಬರುತ್ತವೆ, ಕೋಟೆಯ ಅವಶೇಷಗಳೂ ಇವೆ. ವೀರಭದ್ರದೇವಾಲಯವು ಹಿಂದೆ ಶೈವಾಲಯವಾಗಿದ್ದಿತೆಂದು ಪುರಾತತ್ತ್ವಶೋಧಕರು ಅಭಿಪ್ರಾಯ ವ್ಯಕ್ತಪಡಿಸಿರುವರು. ಈ ಊರಿನ ಸಮೀಪದ ದಂಡಪ್ಪನ ದೇವಾಲಯವೂ ಹಿಂದೆ ಶೈವಾಲಯವಾಗಿದ್ದಿತೆಂದು ಹೇಳಿರುವರು, ಬೆಳಗಾವಿಯ ಸೊಗಲದಲ್ಲಿರುವ ಸೋಮೇಶ್ವರಕ್ಷೇತ್ರವನ್ನು ಮಲ್ಲಮ್ಮನು ದರ್ಶಿಸುತ್ತಿದ್ದಳೆಂದೂ ಸೊಗಲದ ಸೋಮೇಶ್ವರ ಈ ರಾಣಿಯ ಆರಾಧ್ಯದೈವನಾಗಿದ್ದನೆಂದೂ ತಿಳಿಯುವುದು. ಈಕೆ ಶ್ರಾವಣಮಾಸದಲ್ಲಿ ಅರಮನೆಯಲ್ಲಿ ಗುರುಗಳ ಪಾದಪೂಜೆಯನ್ನೂ ವೀರಭದ್ರ ಸ್ವಾಮಿಯ ಪೂಜೆಯನ್ನು ಮಾಡುತ್ತಿದ್ದಳಂತೆ. ವೀರಭದ್ರ ದೇವರ ಪೂಜೆಗೋಸ್ಕರ ಅರ್ಚಕ ವೇದಮೂರ್ತಿ ಶ್ರೀಪಾದ ಭಟ್ಟಜೋಶಿ ಎಂಬುವನಿಗೆ ಗುಡಿಕಟ್ಟಿ ಗ್ರಾಮದ ಒಂದು ಮಾರು ಹೊಲವನ್ನು ದತ್ತಿನೀಡಿ ದಾನ ಪತ್ರ ಬರೆದು ಕೊಟ್ಟಿರುವುದರ ಉಲ್ಲೇಖನವೂ ಇದೆ. ವೀರಶೈವ ಸಂಸ್ಥಾನವಾಗಿ ಮೆರೆದ ಬೆಳವಡಿಯು ಇತಿಹಾಸದಲ್ಲಿ ಇಂದಿಗೂ ತನ್ನನೆನಪನ್ನು ಉಳಿಸಿಕೊಂಡಿದೆ.

## ಕಿತ್ತೂರು ಸಂಸ್ಥಾನ

ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನಲ್ಲಿರುವ ಕಿತ್ತೂರು ವೀರಶೈವಸಂಸ್ಥಾನಗಳಲ್ಲೊಂದು. ೧೫೮೫ರಿಂದ ೧೮೨೪ರ ವರೆಗೆ ಅಂದರೆ ೨೩೯ ಕಾಲ ಇದು ಬಾಳಿತು. ೧೨ ಜನ ದೇಸಾಯಿಯರು ಇಲ್ಲಿ ಆಳ್ವಿಕೆ ನಡೆಸಿದ್ದಾರೆ.

ಗೋವೆಯ ಕದಂಬರಿಗೆ ಸೇರಿದ ಮೂರನೆಯ ಜಯಕೇಶಿಯ ಕಾಲದ (೧೧೮೮) ಶಿಲಾಶಾಸನವೊಂದು ಕಿತ್ತೂರಿನ ಬಸವಣ್ಣ ದೇವರ ಗುಡಿಯಲ್ಲಿ ಇದ್ದು, ಅದರಲ್ಲಿ ಕಿತ್ತೂರಿನ ಹೆಸರನ್ನು ಮೊಟ್ಟಮೊದಲಬಾರಿಗೆ ಬಳಸಲಾಗಿದೆ, ಅದಕ್ಕೂ ಮೊದಲು ಈ ಊರು ಅಸ್ತಿತ್ವದಲ್ಲಿದ್ದು ಗೀಜಗನಹಳ್ಳಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದಿತಂತೆ. ಮಲೆನಾಡಿನ ಗೌಡ ಕುಲಕ್ಕೆ ಸೇರಿದ ಹಿರೇಮಲ್ಲ ಮತ್ತು ಚಿಕ್ಕಮಲ್ಲ ಎಂಬುವರು (ಇವರು ಗುಲ್ಬುರ್ಗ ಜಿಲ್ಲೆಯವರೆಂದು ಕೆಲವರು ಭಾವಿಸಿರುವರು) ಕಿತ್ತೂರು ಮನೆತನದ ಸ್ಥಾಪಕರು. ಹಿರೇಮಲ್ಲನೇ (ಮಲ್ಲಪ್ಪಶೆಟ್ಟಿ?) ಮೂಲಪುರುಷನೆಂದೂ ಹೇಳಲಾಗುತ್ತದೆ. ಕಿತ್ತೂರಿನ ಪ್ರಾರಂಭದ ಅರಸರಲ್ಲಿ ನಾಲ್ವರು ಸಂಪಗಾವಿ ಎಂಬಲ್ಲಿ ಇರುತ್ತಿದ್ದು ಅನಂತರ ಬಂದ ಎಂಟು ಜನರು ಕಿತ್ತೂರಿನಲ್ಲಿಯೆ ಆಳಿದರು. ಈ ಸಂಸ್ಥಾನದ ದೇಸಾಯಿಯರಲ್ಲಿ ಐದನೆಯವನಾದ ಅಲ್ಲಪ್ಪಗೌಡನು ಮೊಗಲರಿಗೂ ಬಿಜಾಪುರದವರಿಗೂ ನಡೆದ ಯುದ್ಧ ಸಮಯವನ್ನು ಸಾಧಿಸಿ, ಸಂಪಗಾಂವಿ ಮತ್ತು ಬೀಡಿ ಎಂಬೆರಡು ಪ್ರಾಂತ್ಯಗಳನ್ನು ಇನಾಮು ಪಡೆದು, ಅವುಗಳನ್ನು ಸ್ವಂತದ್ದಾಗಿ ಮಾಡಿಕೊಂಡು, ಕಿತ್ತೂರಿನಲ್ಲಿ ಕೋಟೆ ಕಟ್ಟಿಸುವುದರ ಮೂಲಕ ತನ್ನರಾಜಧಾನಿ ಮಾಡಿಕೊಂಡನು. ಎಂಟನೆಯ ದೇಸಾಯಿ ಮಲ್ಲಸರ್ಜನ ಕಾಲಕ್ಕೆ ಕಿತ್ತೂರು ಅಭಿವೃದ್ಧಿ ಹೊಂದಿತು. ಇವನು ಮರಾಠರೊಂದಿಗೂ ಇಂಗ್ಲಿಷರೊಂದಿಗೂ ರಾಜಕೀಯ ಸಂಪರ್ಕ ಇಟ್ಟುಕೊಂಡಿದ್ದ. ವೆಲ್ಲೆಸ್ಲಿ ನಡೆಸಿದ ಯುದ್ಧಗಳಲ್ಲಿ ಅವನಿಗೆ ನೆರವಾದ. ಆದರೆ ಕಿತ್ತೂರನ್ನು ಕಬಳಿಸಲು ಹೊಂಚು ಹಾಕಿದ ಮರಾಠರ ಪಿತೂರಿಗೆ ಬಲಿಬಿದ್ದು ಅವರ ಬಂದಿಯಾದ. ೧೮೧೬ರಲ್ಲಿ ಬಿಡುಗಡೆ ಹೊಂದಿದ. ಮಲ್ಲಸರ್ಜ ಅನಾರೋಗ್ಯಪೀಡಿತನಾಗಿದ್ದು, ಕಿತ್ತೂರಿಗೆ ಬರುವ ಮಾರ್ಗಮಧ್ಯದಲ್ಲೇ ಕೊನೆಯುಸಿರೆಳೆದ. ಈತನ ವಿಧವಾರಾಣಿಯೇ ಚೆನ್ನಮ್ಮರಾಣಿ. ಮಲ್ಲಸರ್ಜನು ಕಿತ್ತೂರು ನಾಡಿನ ದೊರೆಗಳಲ್ಲಿ ಅತ್ಯಂತ ಮುಖ್ಯನಾದವನೆಂದು ಗುರುತಿಸಲಾಗಿದೆ.

ಮಲ್ಲಸರ್ಜನ ಕಾಲದಲ್ಲಿ ಕಿತ್ತೂರು ಐಶ್ವರ್ಯಭರಿತ ರಾಜ್ಯವಾಗಿ ಮುನ್ನಡೆಯಿತು. ಇವನು ವೀರಶೈವ ಧರ್ಮವನ್ನಲ್ಲದೆ ಇತರ ಧರ್ಮಗಳಿಗೂ ಪುರಸ್ಕಾರ ನೀಡಿದ. ಬ್ರಾಹ್ಮಣ ಪಂಡಿತ ಕೊಳಸೀ ರಂಗಾಚಾರ್ಯನು ಇವನ ಆಸ್ಥಾನದಲ್ಲಿದ್ದವ. ವ್ಯಂಗಿ ಚನ್ನಬಸಪ್ಪ, ಮುಳುಗುಂದ ಜವಳೀ ಚನ್ನಬಸಪ್ಪ ಇವರೇ ಮೊದಲಾದ ವೀರಶೈವ ಪಂಡಿತರಿಗೂ ರಾಜಾಶ್ರಯ ದೊರೆತಿದ್ದಿತು. ಇದೇ ಕಾಲಕ್ಕೆ ರಚಿತವಾದ 'ಮಲ್ಲಸರ್ಜನ ಕಾವ್ಯ'ವನ್ನು ರುದ್ರ ಕವಿಯೂ (ಗುರುಶಾಂತ ಕವಿ ?) ಮಲ್ಲಸರ್ಜನ ಸ್ತುತಿಪರವಾಗಿರುವ 'ಮಲ್ಲೇಂದ್ರ ಮಾನಸೋಲ್ಲಾಸ ತರಂಗಿಣಿ' ಎಂಬ ಗ್ರಂಥವನ್ನು ಅಮೃತೇಶ್ವರನೆಂಬ ಕವಿಯೂ ಬರೆದರು. ಮುನಿಪುರದ ನೀಲಕಂಠಾರ್ಯ, ಮೂಗುಂಡಿ ಬಸವ, ದೇವರ ಶೀಗಿಹಳ್ಳಿ ರುದ್ರಗೌಡ, ಬೇಟಗೇರಿ ಶಿವಲಿಂಗಶಾಸ್ತ್ರಿ ಇವರೇ ಮೊದಲಾದವರು ಆಸ್ಥಾನ ಕವಿಗಳಾಗಿದ್ದರೆಂಬ ಪ್ರಸ್ತಾಪವೂ ಉಂಟು. ಮಲ್ಲಸರ್ಜನು ಕವಿಗಳಿಂದ 'ಜಂಗಮ ದಾಸೋಹ ಪ್ರಿಯ'ನೆಂಬ ಹೊಗಳಿಕೆಗೂ ಪಾತ್ರನಾಗಿದ್ದಾನೆ. ಇವನು ನೀಡಿದ ಸನ್ನದುಗಳು ಕೆಲವರಲ್ಲಿ ಇಂದಿಗೂ ಸುರಕ್ಷಿತವಾಗಿವೆ.

ಮಲ್ಲಸರ್ಜನು ೧೮೧೬ರಲ್ಲಿ ಮರಣ ಹೊಂದಿದ ನಂತರ ಅವನ ಮಗ ಶಿವಲಿಂಗರುದ್ರಸರ್ಜನು ಎಂಟು ವರುಷಗಳ ಕಾಲ ಆಳಿ ೧೮೨೪ ರಲ್ಲಿ ಮೃತನಾದನು. ಇದಾದ ತರುವಾಯ ಕರುಣಾಶಾಲಿನಿಯೂ ರಾಜ್ಯಕಾರ್ಯ ಕುಶಲಳೂ,ರಣಚಂಡಿಯೂ ಆದ ರಾಣಿ ಚೆನ್ನಮ್ಮನು ಕಿತ್ತೂರಿನ ಆಡಳಿತ ಸೂತ್ರ ವಹಿಸಿಕೊಂಡಳು. ಈಕೆ ಬೆಳಗಾವಿ ಸಮೀಪದ ಕಾಕತಿ ಗ್ರಾಮದಲ್ಲಿ ಜನಿಸಿದವಳು.

ತನ್ನ ಹದಿನೈದನೆಯ ವಯಸ್ಸಿನಲ್ಲಿ ಮಲ್ಲಸರ್ಜನನ್ನು ವಿವಾಹವಾದಳು. ಶಿವಲಿಂಗ ರುದ್ರಸರ್ಜನ ಮರಣಾನಂತರ ಶಿವಲಿಂಗಪ್ಪನೆಂಬ ದತ್ತುಪುತ್ರನ ಪರವಾಗಿ ಆಡಳಿತ ನೋಡಿಕೊಳ್ಳಬೇಕಾಯಿತು. ಆದರೆ ಇಂಗ್ಲಿಷರು ದತ್ತುಪುತ್ರ ಹಕ್ಕು ವಿರೋಧ ಕಾನೂನಿನ ನೆಪದೊಡನೆ ಕಿತ್ತೂರನ್ನು ಕಬಳಿಸಲು ಯೋಚಿಸಿದರು. ಈ ಪ್ರಯತ್ನದಲ್ಲಿ ಧಾರವಾಡದ ಇಂಗ್ಲಿಷ್ ಕಲೆಕ್ಟರ್ ಥ್ಯಾಕರೆಯು ಕಿತ್ತೂರು ಸೇನೆಯಿಂದ ಕೊಲ್ಲಲ್ಪಟ್ಟ (೧೮೨೪ ಅಕ್ಟೋಬರ್ ೨೩). ಇದರಿಂದ ಮತ್ತಷ್ಟು ರೇಗಿದ ಇಂಗ್ಲಿಷರು ಚಾಪ್ಲಿನ್ ಎಂಬುವನ ನಾಯಕತ್ವದಲ್ಲಿ ಕಿತ್ತೂರನ್ನು ಮತ್ತೆ ಮುತ್ತಿದರು. ಹನ್ನೆರಡು ದಿವಸ ನಡೆದ ಈ ಹೋರಾಟದಲ್ಲಿ ಚೆನ್ನಮ್ಮನಿಗೆ ಸೋಲುಂಟಾಯಿತು. ದೇಶದ್ರೋಹಿಗಳ ಮೋಸದ ಫಲವಾಗಿ ಕಿತ್ತೂರು ವಿದೇಶೀಯರ ಪಾಲಾಯಿತು. ೧೮೨೪ ಡಿಸೆಂಬರ್ ೩ರಂದು ಇಂಗ್ಲಿಷರು ಕಿತ್ತೂರು ಕೋಟೆಯಲ್ಲಿ ತಮ್ಮ ಧ್ವಜ ಹಾರಿಸಿದರು, ಚೆನ್ನಮ್ಮನು ಬೈಲಹೊಂಗಲ ಸೆರಮನೆ ಕಂಡಳು. ಕಿತ್ತೂರಿನ ಬೊಕ್ಕಸದಲ್ಲಿದ್ದ ೧೬ ಲಕ್ಷ ರೂಪಾಯಿ, ೪ ಲಕ್ಷ ಮೌಲ್ಯವುಳ್ಳ ಆಭರಣಗಳು, ೩೬ ಫಿರಂಗಿಗಳು ಇನ್ನಿತರ ವಸ್ತುಗಳು ಇಂಗ್ಲಿಷರ ಪಾಲಾಯಿತೆಂದು ತಿಳಿದುಬರುತ್ತದೆ. ಕಿತ್ತೂರಿನ ಹೋರಾಟದ ಕಥೆ ಇಷ್ಟಕ್ಕೆ ನಿಲ್ಲದೆ, ಸಂಗೊಳ್ಳಿ ರಾಯಣ್ಣನೆಂಬ ಉತ್ಸಾಹಿ ತರುಣನ ನಾಯಕತ್ವದಲ್ಲಿ ಇಂಗ್ಲಿಷರ ವಿರುದ್ಧ ಜನ ಬಂಡೆದ್ದರು. ಆದರೆ ಎಂದಿನಂತೆ ಪಿತೂರಿಗಾರರು ಅವನನ್ನು ಇಂಗ್ಲಿಷರಿಗೆ ಹಿಡಿದು ಕೊಟ್ಟದ್ದರಿಂದ ಅವನು ಗಲ್ಲುಗಂಬ ಏರಬೇಕಾಯಿತು. ಈ ಘಟನೆಯೊಡನೆ ಇಂಗ್ಲಿಷರನ್ನು ವಿರೋಧಿಸಿದ ಕಿತ್ತೂರು ಸಂಸ್ಥಾನದ ಚಟುವಟಿಕೆಗಳು ಸ್ತಬ್ಧಗೊಂಡವು. ೧೮೨೯ ಫೆಬ್ರವರಿಯಲ್ಲಿ ಕಾರಾಗೃಹದಲ್ಲಿಯೇ ಚೆನ್ನಮ್ಮ ಮೃತಳಾದಳು.

ಕಿತ್ತೂರು ಮನೆತನದವರು ಗುರು–ಜಂಗಮರಲ್ಲಿ ವಿಶೇಷ ಭಕ್ತಿ ಇಟ್ಟಿದ್ದರು. ಚೆನ್ನಮ್ಮನು ತನ್ನ ದಿನನಿತ್ಯದ ಕಾರ್ಯಕ್ರಮವನ್ನು ಪ್ರಾರ್ಥನೆ ಹಾಗೂ ಗುರುಗಳ ದರ್ಶನದೊಂದಿಗೆ ಪ್ರಾರಂಭಿಸುತ್ತಿದ್ದಳಂತೆ. ಈ ಮನೆತನದವರ ಆಳ್ವಿಕೆಯ ಅವಧಿಯಲ್ಲಿ ಸುಮಾರು ಒಂದು ಸಾವಿರ ಮಠಗಳು ನಿರ್ಮಾಣಗೊಂಡವೆಂದು ಹೇಳಲಾಗುತ್ತದೆ. ಕಿತ್ತೂರಿನಲ್ಲಿಯೇ ಇದ್ದ ಸಾವಿರಮಠ ಸಂಸ್ಥಾನವು ಇವುಗಳ ನಾಯಕಪೀಠವಾಗಿದ್ದಿತು. ಕಿತ್ತೂರರಸರಿಗೆ ಕಲ್ಲುಮಠದಸ್ವಾಮಿಗಳು ರಾಜಗುರುಗಳಾಗಿದ್ದರು. ಈ ಮಠದ ಸ್ವಾಮಿಗಳು ಪಂಡಿತರೂ ನಿಷ್ಠಾವಂತರೂ ಧಾರ್ಮಿಕ ಕ್ರಿಯೆಗಳಲ್ಲಿ ಅನುಭವ ಶೀಲರೂ ಅರಸರ ನಂಬಿಕೆಗೆ ಪಾತ್ರರಾದವರೂ ಆಗಿರುತ್ತಿದ್ದರು. ರಾಜಕಾರ್ಯಗಳಲ್ಲಿ ತಮ್ಮ ಸಲಹೆ ಕೊಡುತ್ತಿದ್ದರು. ತುರ್ತು ಸಂದರ್ಭಗಳಲ್ಲಿ ರಾಜವರ್ಗದವರ ಪ್ರಾಣ ರಕ್ಷಣೆಗೂ ಸಿದ್ಧರಿರುತ್ತಿದ್ದರು. ಹೀಗೆ, ಕೆಳದಿ ಅರಸರಂತೆ, ಕಿತ್ತೂರು ದೇಸಾಯರೂ ಧರ್ಮತತ್ತ್ವ ಹಾಗೂ ಧರ್ಮಗುರುಗಳ ಆದೇಶದ ಮೇರೆಗೆ ಆಡಳಿತ ರೂಪಿಸಿದ್ದರು. ಇಂದಿಗೂ ಕಿತ್ತೂರಿನಲ್ಲಿರುವ ಕಲ್ಲುಮಠದಲ್ಲಿ ಚೆನ್ನಮ್ಮ ಮತ್ತು ಕಿತ್ತೂರಿನ ಕೊನೆಯ ದೇಸಾಯಿಯ ಪತ್ನಿ ವೀರವ್ವ ಇವರೀರ್ವರ ಸಮಾಧಿಗಳೊಂದಿಗೆ ಉಳಿದೆಲ್ಲ ದೇಸಾಯರ ಸಮಾಧಿಗಳೂ ಇವೆ. ಅಭಿಮಾನಿಗಳು ಈ ಸಮಾಧಿಗಳನ್ನು ಸಂದರ್ಶಿಸುತ್ತಾರೆ. ಹಿಂದೆ ಇಂಗ್ಲಿಷರೂ ಟಿಪ್ಪುಸುಲ್ತಾನನೂ ಈ ಸಮಾಧಿಗಳನ್ನು ನಾಶಗೊಳಿಸಲೆತ್ನಿಸಿದರೆಂದು ಹೇಳಲಾಗುತ್ತದೆ.ಕಲ್ಲುಮಠದಲ್ಲಿ ದೇಸಾಯರ ಸಮಾಧಿಗಳಿರುವಂತೆ ಚೌಕಿಮಠದಲ್ಲಿ ಕಲ್ಲುಮಠದ ಸ್ವಾಮಿಗಳ ಗದ್ದುಗೆಗಳಿವೆ.

## ಸ್ವಾದಿ ಮನೆತನ

ಉತ್ತರ ಕನ್ನಡ (ಕಾರವಾರ) ಜಿಲ್ಲೆಯ ಸಿರಸಿ ನಗರದ ಉತ್ತರಕ್ಕೆ ಸುಮಾರು ಹತ್ತು ಮೈಲಿ ದೂರದಲ್ಲಿ ನೆಲೆಸಿರುವುದೇ ಸ್ವಾದಿ. ನಾಲ್ಕನೆಯ ಶತಮಾನದಿಂದಲೂ ಇದು ಜೈನರ ಆವಾಸಸ್ಥಾನವಾದುದರಿಂದ ಶ್ವೇತಪುರವೇ ಸುಧಾಪುರವಾಗಿ ಸೋದೆ ಅಥವಾ ಸ್ವಾದಿಯಾಯಿತೆಂದು ಅಭಿಪ್ರಾಯ ಪಡಲಾಗಿದೆ. ೧೧೨೧ರ ಶಾಸನದಲ್ಲಿ ಸುಧಾಪುರವೆಂಬ ಉಲ್ಲೇಖವಿರುವುದು ವ್ಯಕ್ತಪಟ್ಟಿದೆ. ಸೋಂದಾ, ಸೋಂದಕರದಿಂದ ಸುಧಾಪುರಿಯಾಯಿತೆಂದೂ ಕ್ರಮೇಣ ಸ್ವಾದಿಯೆಂಬ ನಾಮವೇ ಬಳಕೆಗೆ ಬಂದಿತೆಂದೂ ಮತ್ತೊಂದು ಅಭಿಪ್ರಾಯವಿದೆ. 'ಕೆಳದಿ ನೃಪವಿಜಯಂ' ಹಾಗೂ 'ಬಿಳಿಗಿಯ ಅರಸುಗಳ ವಂಶಾವಳಿಯು' ಗ್ರಂಥಗಳಲ್ಲಿ 'ಸೋದೆ' ಎಂದೇ ಸಂಬೋಧಿಸಲಾಗಿದೆ ("ಇಂತಿರಲ್ಕಾ ಸೋದೆಯರಸಪ್ಪನಾಯಕರು......" ಬಿ. ಅ. ವಂ. ಪು–೨೨). ಈ ಮನೆತನದ ಮೂಲಪುರುಷ ಅರಸಪ್ಪನಾಯಕ. ಅವನು ಸ್ವಾದಿ ಸಂಸ್ಥಾನಮ್ನ ಪಡೆದುಕೊಂಡ ಬಗೆಗೆ ಕೆಲವಾರು ಹಿನ್ನೆಲೆಗಳಿದ್ದರೂ ವಿಜಯನಗರದ ಕೃಷ್ಣದೇವರಾಯನ ಸೋದರಿಯ ಮಗನಾಗಿದ್ದ ಈ ನಾಯಕನು ರಾಯನ ಕೃಪಾಕಟಾಕ್ಷದಿಂದ ಸ್ವಾದಿಯ ಒಡೆಯನಾದನೆಂಬ ಪ್ರಚಲಿತ ಕಥೆಯನ್ನಾಧರಿಸಲಾಗಿದೆ. ೧೫೫೫ರಲ್ಲಿ ಈ ಅರಸಪ್ಪನಾಯಕ ಸ್ವಾದಿ ಸಂಸ್ಥಾನದ ಸ್ಥಾಪಕನಾಗಿ ಆಳತೊಡಗಿದನೆಂದು ತೋರುತ್ತದೆ. ನಾಯಕನು ಸ್ವಾದಿಯ ಸುತ್ತಮುತ್ತಲಿನ ಪಾಳೆಯಗಾರರನ್ನು ಜಯಿಸಿ ತನ್ನ ಸಂಸ್ಥಾನವನ್ನು ಬಲಪಡಿಸಿಕೊಂಡನು.

ಸ್ವಾದಿ ಮನೆತನದ ಇತಿಹಾಸವನ್ನು ಕೆಳದಿ ಮತ್ತು ಉತ್ತರ ಕನ್ನಡ ಜಿಲ್ಲೆಯ ಬಿಳಿಗಿ ಸಂಸ್ಥಾನಗಳೊಡನೆ ಸಂಬಂಧಿಸಿ ಬರೆಯುವ ರೂಢಿ ಪ್ರಾರಂಭವಾಗಿದೆ. 'ಕೆಳದಿ ನೃಪ ವಿಜಯಂ'ನಲ್ಲಿ ಸ್ವಾದಿ ಮತ್ತು ಬಿಳಿಗಿ ರಾಜ್ಯಗಳು ಕೆಳದಿಯರಸರ ವಿರುದ್ಧ ಹಾಗೂ ಕೆಲವೊಮ್ಮೆ ಪರವಾಗಿ ಹೋರಾಡಿದ ಸಂದರ್ಭಗಳನ್ನು ಪ್ರಸ್ತಾಪಿಸಲಾಗಿದೆ. ಈ ಮೂರು ರಾಜ್ಯಗಳೂ ಸಮಕಾಲೀನವಾಗಿದ್ದುದರಿಂದ, ಮಲೆನಾಡಿನ ಸೆರಗಿನಲ್ಲಿ ಸ್ಥಾಪಿತಗೊಂಡಿದ್ದರಿಂದ, ಮೆಣಸು ಮತ್ತಿತರ ಮಸಾಲೆ ವಸ್ತುಗಳ ವಿಕ್ರಯ

ಸಂಬಂಧದಲ್ಲಿ ಪೋರ್ಚುಗೀಸ್, ಡಚ್, ಇಂಗ್ಲಿಷ್ ಇವರೇ ಮೊದಲಾದ ವಿದೇಶೀಯರೊಂದಿಗೆ ಸಂಬಂಧ ಬೆಳೆಸಿದ್ದರಿಂದ ಹಾಗೂ ಇವರೊಡನೆ ಹೋರಾಡುವ ಅನಿವಾರ್ಯ ಸಂದರ್ಭಗಳು ಎದುರಾಗುತ್ತಿದ್ದುದರಿಂದ ಈ ಮೂರು ಸಂಸ್ಥಾನಗಳೂ ಪರಸ್ಪರ ಹೊಂದಾಣಿಕೆ ಹಾಗೂ ಸಂಬಂಧ ಇಟ್ಟುಕೊಳ್ಳುವುದು ಅಗತ್ಯವಾಗಿದ್ದಿತು. ಸ್ವಾದಿಮನೆತನದ ಮಟ್ಟಿಗೆ, ಇದರ ಅರಸರು ಪ್ರಭಾವಶಾಲಿಗಳಾಗಿದ್ದರು. ಕಾರವಾರ, ಹೊನ್ನಾವರ, ಕುಮಟ, ಸಿರಿಸಿ, ಯಲ್ಲಾಪುರ, ಹಲ್ಯಾಳ, ಸುಪಾ ಮೊದಲಾದ ಪ್ರದೇಶಗಳೂ ಅಂಕೋಲಾ, ಕಡೆಮುಡಿ, ಭಟ್ಕಲ್ಲು, ಮಿರ್ಜಾನ ಎಂಬ ಬಂದರು ಭಾಗಗಳೂ ಉತ್ತರಕ್ಕೆ ಗೋವಾದ ಕೆಲವು ಭಾಗಗಳೂ ಸೇರಿ ಸ್ವಾದಿ ರಾಜ್ಯವಾಗಿದ್ದಿತು. ಗೇರುಸೊಪ್ಪೆ, ಕಾರ್ಕಳ ಮತ್ತು ಬಿಳಿಗಿ ಸಂಸ್ಥಾನಗಳು ಕೆಳದಿಯಲ್ಲದೆ ಸ್ವಾದಿಯ ರಸರ ಮಾಂಡಲಿಕ ಪ್ರಾಂತ್ಯಗಳಾಗಿಯೂ ಇದ್ದವು. ಹೆಚ್ಚಿನ ವಿಶೇಷವೆಂದರೆ, ಸ್ವಾದಿಯರಸರು ಬಿಳಿಗಿ, ಪುಂಗನೂರು ಹಾಗೂ ಬೆಳವಡಿ(?) ಮನೆತನಗಳೊಂದಿಗೆ ರಕ್ತಸಂಬಂಧ ಬೆಳೆಸಿದ್ದರು. 'ಬೀಳಗಿಯ ಅರಸುಗಳ ವಂಶಾವಳಿ'ಯಲ್ಲಿ (ಪು. ೨೨) '... ಸೋದೆಯರಸಪ್ಪ ನಾಯಕರು ಧರಣೀಪತಿ ಘಂಟ್ರೇಂದ್ರುಸುರುಸಾಹಸಕ್ಕೆ ಮೆಚ್ಚಿ ವರಕುವರಿ ವೀರಮಾಂಬೆಯ ಮದುವೆಯಂ ಮಾಡುತ್ಯೆದೂರ ಸಹಿತವಿತ್ತು' ಎಂದು ಹೇಳಿದೆ. ಅರಸಪ್ಪನಾಯಕನು ತನ್ನ ಕುಮಾರಿ ವೀರಮಾಂಬೆಯನ್ನು ಬೀಳಿಗಿ ಮನೆತನದ ಘಂಟೇಂದ್ರ ಅರಸನಿಗೆ ಕೊಟ್ಟು ವಿವಾಹ ಮಾಡಿದನು. 'ವಂಶಾವಳಿ' ಪ್ರಕಾರ ವೀರಮಾಂಬೆಯು ಘಂಟೇಂದ್ರನನ್ನು ಮದುವೆ ಯಾದರೂ ಅದು ಸ್ಪಷ್ಟಪಡುವುದಿಲ್ಲ. ಘಂಟೇಂದ್ರನ ಮೊಮ್ಮಗ (ನರಸನ ಪುತ್ರ) ವೀರಪ್ಪನು ವೀರಾಂಬಿಕೆಯನ್ನು ಮದುವೆ ಯಾಗಿದ್ದನೆಂದೂ ಆಕೆಯು ಬೀಳಿಗಿಯಲ್ಲಿ ೧೫೭೦ರಲ್ಲಿ ವಿರೂಪಾಕ್ಷ ಮಂದಿರ ನಿರ್ಮಿಸಿ ಅದಕ್ಕೆ ಭೂದಾನ ನೀಡಿದಳೆಂದೂ ಅಲ್ಲಿನ ಶಾಸನ ಹೇಳುತ್ತದೆ. 'ವಂಶಾವಳಿ'ಯಲ್ಲೂ ಈ ಭೂದಾನದ ವಿಚಾರ ಪ್ರಸ್ತಾಪಿಸಲ್ಪಟ್ಟಿದೆ. ಆದ್ದರಿಂದ ಸ್ವಾದಿ ಮತ್ತು ಬೀಳಿಗಿ ಮನೆತನಗಳ ನಡುವೆ ರಕ್ತಸಂಬಂಧ ಇದ್ದುದನ್ನು ಒಪ್ಪಲಡ್ಡಿಯಿಲ್ಲ. ಹಾಗೆಯೇ ೧೬೩೮ ರಿಂದ ೧೬೭೪ರವರೆಗೆ ಸ್ವಾದಿಯನ್ನಾಳಿದ ನಾಲ್ಕನೆಯ ದೊರೆ ಮಧುಲಿಂಗ ನಾಯಕನ ಮಗಳು ಮಲ್ಲಮ್ಮನು ಬೆಳವಡಿ ಸಂಸ್ಥಾನದ ಈಶ್ವರ ಪ್ರಭುವನ್ನು ವಿವಾಹವಾಗಿದ್ದಳೆಂಬ ಪ್ರಸ್ತಾಪವಿದೆ. ೧೬೭೮ರಲ್ಲಿ ಮರಾಠರ ವಿರುದ್ಧ ನಡೆದ ಕಾಳಗದಲ್ಲಿ ಪ್ರಭುವು ಮರಣಿಸಲು ತಾನೇ ಅಧಿಕಾರ ಸೂತ್ರ ಹಿಡಿದು ಶಿವಾಜಿಯನ್ನೆದುರಿಸಿ ಬೆಳವಡಿಯ ಕೀರ್ತಿ ಹೆಚ್ಚಲು ಈಕೆ ಕಾರಣಳಾದಳು. ಈ ಸಂಬಂಧದ ಪ್ರಸ್ತಾಪವನ್ನು 'ತುರುಕಾರಿ ಪಂಚಮರ ಇತಿಹಾಸ'ದಲ್ಲಿ ಮಾಡಲಾಗಿದೆ. ಈ ವಿಚಾರವನ್ನು ಪುಷ್ಟೀಕರಿಸಲು ಸದ್ಯಕ್ಕೆ ಇತರ ಐತಿಹಾಸಿಕ ಆಧಾರಗಳು ಇಲ್ಲ ವಾದ್ದರಿಂದ ಈ ಬಗೆಗೆ ನಂಬಿಕೆ ಸಾಲದು. ಸ್ವಾದಿ ಮನೆತನದ ಇತಿಹಾಸದಲ್ಲಿಯೂ ಈ ಸಂಬಂಧ ಕುರಿತು ಪ್ರಸ್ತಾಪಿಸಿರುವಂತೆ ತೋರದು. ಸ್ವಾದಿಯ ಮಹಾರಾಜರು ವೀರಶೈವ ಮತದ ಒಳಪಂಗಡವಾದ ಪಂಚಮ ಸಾಲೆ ವರ್ಗಕ್ಕೆ ಸೇರಿದವರೆಂಬುದನ್ನು ಅನುಮೋದಿಸಲಡ್ಡಿಯಿಲ್ಲ.

೧೫೫೫ ರಿಂದ ೧೭೬೩ರ ವರೆಗೆ ಸ್ವಾದಿ ಸಂಸ್ಥಾನದ ಸ್ಥಾಪಕ ಅರಸಪ್ಪನಾಯಕನನ್ನು ಮೊದಲ್ಗೊಂಡು ಆಳಿದ ಏಳು ಜನ ಅರಸರಲ್ಲಿ ತಮ್ಮ ಸ್ವಾತಂತ್ರ್ಯರಕ್ಷಣೆಗಾಗಿ ಬಿಜಾಪುರದ ಸುಲ್ತಾನರೊಡನೆ ಕೆಲವು ಕಾಳಗಗಳನ್ನು ನಡೆಸಬೇಕಾಯಿತು. ಮೆಣಸು ಈ ಭಾಗದ ಮುಖ್ಯ ಉತ್ಪತ್ತಿಯಾಗಿದ್ದುದರಿಂದ ಪೋರ್ಚುಗೀಸ್, ಇಂಗ್ಲಿಷ್ ಮತ್ತು ಡಚ್ ವ್ಯಾಪಾರಿಗಳು ಸ್ವಾದಿಯ ಸಂಪರ್ಕ ಇಟ್ಟುಕೊಂಡಿದ್ದರು. ಕಾರವಾರದಲ್ಲಿ ನೆಲೆಗೊಂಡಿದ್ದ ಇಂಗ್ಲಿಷ್ ವ್ಯಾಪಾರಿ ಮಳಿಗೆಗಳಿಂದ ಈ ಪ್ರಾಂತೀಯರಿಗೆ ಹಲವು ರೀತಿಯ ಉಪಯೋಗವಿದ್ದಿತು. ಆದರೆ ಕೆಲವು ರಾಜಕೀಯ ಹಾಗೂ ವ್ಯಾವಹಾರಿಕ ಭಿನ್ನಾಭಿಪ್ರಾಯಗಳು ತಲೆದೋರಿ ಇಂಗ್ಲಿಷರು ೧೬೮೫ರಲ್ಲಿ ಸ್ವಾದಿ ರಾಜ್ಯವನ್ನು ತ್ಯಜಿಸಬೇಕಾಯಿತು. ಇದೇ ವರುಷ ಪೋರ್ಚುಗೀಸರು ಸ್ವಾದಿಯ ಐದನೆಯ ಅರಸ ಸದಾಶಿವರಾಯನೊಡನೆ (೧೬೭೮–೧೬೯೭) ಒಪ್ಪಂದ ಮಾಡಿಕೊಂಡರು. ಈ ರಾಯನು ಮೊಗಲರೊಂದಿಗೆ ಕಾದಾಡಿದನು. ಇವನ ಮಗ ಬಸವಲಿಂಗರಾಯನು (೧೬೯೭–೧೭೪೫) ಮರಾಠ ಪೇಷ್ವೆ ಬಾಲಾಜಿ ಬಾಜಿರಾಯನನ್ನು ಎದುರಿಸಬೇಕಾಯಿತು; ವರುಷಕ್ಕೆ ೪೫ ಸಾವಿರ ರೂಪಾಯಿ ಚೌಥ್ ಕೊಡಲೂ ಸಮ್ಮತಿಸಬೇಕಾಯಿತು. ಏಳನೆಯ ಹಾಗೂ ಸ್ವಾದಿಯಲ್ಲಿ ಆಳಿದ ಅರಸರುಗಳಲ್ಲಿ ಕೊನೆಯವನಾದ ಇಮ್ಮಡಿ ಸದಾಶಿವರಾಯನು (೧೭೪೫–೧೭೬೩) ಶ್ರೀರಂಗಪಟ್ಟಣದ ಹೈದರಾಲಿಯ ಅಪಾಯ ವನ್ನೆದುರಿಸಿದನು. ಅಲ್ಲದೆ ಮರಾಠರೂ ಉಪಟಳ ನೀಡಲು ಪ್ರಾರಂಭಿಸಿದರು. ಇದರಿಂದ ರೋಸಿ ಹೋದ ರಾಯನು ಪೋರ್ಚುಗೀಸರ ಮೊರೆ ಹೊಗಬೇಕಾಯಿತು. ಇವನ ನಂತರ ಆಳಿದ ಈ ಮನೆತನದ ಏಳು ಜನ ಅರಸರು ಪೋರ್ಚುಗೀಸರ ರಕ್ಷಣೆಯಲ್ಲಿ ಗೋವಾದಲ್ಲಿಯೆ (ಪೋಂಡಾ ಜಿಲ್ಲೆಯ ಬಾಂದೇವಾಡಿ ಅರಮನೆಯಲ್ಲಿ) ನೆಲೆಸಿದರು. ಈ ಮನೆತನದವರು ಈಗಲೂ ಇರುವರೆಂದು ತಿಳಿಯುತ್ತದೆ. ಒಟ್ಟಿನಲ್ಲಿ ಕರ್ನಾಟಕದ ಪುಟ್ಟ ರಾಜಮನೆತನವಾಗಿ ಸ್ವಾದಿ ಸಂಸ್ಥಾನ ಬೆಳಗಿದರೂ ವಿಜಯನಗರ, ಬಿಜಾಪುರ, ಮೊಗಲ್, ಮರಾಠ, ಇಂಗ್ಲಿಷ್, ಡಚ್, ಪೋರ್ಚುಗೀಸ್ ಹಾಗೂ ಕೆಳದಿ, ಕೊಡಗು, ಬೀಳಿಗಿ, ಪುಂಗನೂರು ಇನ್ನಿತರ ಶಕ್ತಿ ಹಾಗೂ ಸಂಸ್ಥಾನಗಳೊಂದಿಗೆ ಇಟ್ಟುಕೊಂಡಿದ್ದ ನಾನಾ ಬಗೆಯ ಸಂಬಂಧಗಳಿಂದಾಗಿ ಇತಿಹಾಸದಲ್ಲಿ ಪ್ರಾಮುಖ್ಯತೆಪಡೆದಿದೆ.

ಸ್ವಾದಿಯರಸರ ಮೂಲ ಮತ ಯಾವುದೆಂಬುದು ಸ್ಪಷ್ಟವಿಲ್ಲ. ಆದರೆ ಸಂಸ್ಥಾನದ ಮೊದಲನೆಯ ದೊರೆ ಅರಸಪ್ಪ ಹವ್ಯಕ ಬ್ರಾಹ್ಮಣರಿಗೆ ಉತ್ತೇಜನ ನೀಡಿದ ಮತ್ತು ಸ್ವಾದಿಯಲ್ಲಿನ ವಾದಿರಾಜ ಮಠಕ್ಕೆ ಭೂಮಿಯನ್ನು ದತ್ತಿಬಿಟ್ಟ ಸಂಗತಿಗಳನ್ನು

ಅವನಿಗೆ ಸಂಬಂಧಿಸಿದ ಶಾಸನಗಳು ಹೇಳುತ್ತವೆ. ಡಾ॥ ದೇಸಾಯಿ ಪಾಂಡುರಂಗರಾಯರು ಸ್ವಾದಿಯಲ್ಲಿ ಸಂಗ್ರಹಿಸಿದ ಎರಡು ತಾಮ್ರ ಶಾಸನಗಳೂ ಈ ದಿಸೆಯಲ್ಲಿ ಬೆಳಕು ಚೆಲ್ಲುತ್ತವೆ (ಶರಣ ಸಾಹಿತ್ಯ, ೨೦–೧). ಮೊದಲನೆಯ ತಾಮ್ರ ಪಟವು ೧೬೦೫ರದು; ಮೇಲೆ ಹೇಳಿದ ಅರಸಪ್ಪ ನಾಯಕನ ಮಗ ರಾಮಚಂದ್ರನ ಕಾಲದ್ದು (೧೫೯೮–೧೬೧೮). ಈ ಅರಸನು ತನ್ನ ಮನೆ ದೇವರಾದ ರಾಮಚಂದ್ರನಿಗೆ ದೇವಸ್ಥಾನವನ್ನು ಕಟ್ಟಿಸಿ, ದತ್ತಿ ನೀಡಿ ಪೂಜಾದಿಗಳಿಗೆ ವ್ಯವಸ್ಥೆ ಮಾಡಿದ ವಿಚಾರ ಈ ಪಟದಿಂದ ತಿಳಿಯುತ್ತದೆ. ಪಟದಲ್ಲಿ 'ಅರಸಪ್ಪನಾಯಕರ ವರಕುಮಾರರು ಕೌಶಿಕ ಗೋತ್ರದ ಆಪಸ್ತಂಬ ಸೂತ್ರದ ರಾಮಚಂದ್ರ ರಾಜೇಂದ್ರರು ಸೋದೆಯ ರಾಜ್ಯವನ್ನು ಸದ್ಧರ್ಮದಿಂದ ಪ್ರತಿಪಾಲಿಸುತ್ತ ಬರುತ್ತಿರುವ ಸಮಯದಲ್ಲಿ ...' ಎಂದು ಉಕ್ತಗೊಂಡಿರುವುದರಿಂದ ಈ ಅರಸನು ಬ್ರಾಹ್ಮಣ ಮತದ ಬಗೆಗೆ ಒಲವುಳ್ಳವನಾಗಿದ್ದನೆಂದು ತಿಳಿಯುವುದು. ಡಾ। ದೇಸಾಯಿಯವರು ಸ್ವಾದಿಯರಸರಿಗೆ ಸಂಬಂಧಿಸಿದ ಇತರ ಶಾಸನಾಧಾರಗಳನ್ನು ಬಳಸಿ, ೧೫೫೫ರಿಂದ ೧೫೯೮ರ ವರೆಗೆ ಆಳಿದ ಅರಸಪ್ಪನಾಯಕನು ಇಮ್ಮಡಿ ಅರಸಪ್ಪನಾಯಕನೆಂತಲೂ ಅವನಿಗಿಂತ ಮೊದಲೇ (ಇಮ್ಮಡಿ ಪ್ರೌಢದೇವರಾಯನ ಕಾಲಕ್ಕೆ) ಸಂಕಣ್ಣ ಎಂಬುವನು ಹಾಗೂ ಅನಂತರ ಬಂದ ಅವನ ಮಗ ಒಂದನೆಯ ಅರಸಪ್ಪನಾಯಕನು (ಸ್ವಾದಿ ಮನೆತನದ ಸ್ಥಾಪಕನಾಗಿ) ಸುಮಾರು ೧೪೭೮ರವರೆಗೆ ಆಳಿರಬೇಕೆಂತಲೂ ನಿರ್ಣಯಿಸಿರುವರು. ೧೫೫೫ ರವರೆಗೆ ಯಾರು ಆಳಿದರೆಂಬ ಬಗೆಗೆ ಸ್ಪಷ್ಟಪಡಿಸಲಾಗಿಲ್ಲ. (ಮೊದಲನೆಯ) ಅರಸಪ್ಪನಾಯಕನು ತಾನು ಸೂರ್ಯವಂಶದವನು ಎಂದು ಶಾಸನದಲ್ಲಿ ಹೇಳಿಕೊಂಡಿರುವುದನ್ನೂ ಆತನಿಗೆ ಅರಸಮ್ಮ ಎಂಬ ಪುತ್ರಿಯಿದ್ದುದನ್ನೂ ಡಾ। ದೇಸಾಯಿ ತಿಳಿಸಿರುವರು. ಸ್ವಾದಿಯಲ್ಲಿ ಅವರೇ ಸಂಗ್ರಹಿಸಿದ ಎರಡನೆಯ ತಾಮ್ರಶಾಸನದ ಕಾಲ ೧೬೦೬; ರಾಮಚಂದ್ರನಾಯಕನೇ ಅದನ್ನು ಕೊಟ್ಟಿದ್ದಾನೆ. 'ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯರಾದ ವ್ಯಾಸತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ ಶ್ರೀರಘುಪತಿತೀರ್ಥ ಶ್ರೀಪಾದಂಗಳಿಗೆ ಶ್ರೀಮನ್ಮಾಳ್ವ ಮಹಾಪ್ರಭು ಸೋದೆ ಅರಸಪ್ಪನಾಯಕರ ಕುಮಾರರು ರಾಮಚಂದ್ರನಾಯಕರು ಕೊಟ್ಟ ಹುಲೇಕಲ್ಲು ಗ್ರಾಮ....' ಎಂದು ಶಾಸನದಲ್ಲಿ ನಮೂದಿಸಿ ವ್ಯಾಸತೀರ್ಥ ಪರಂಪರೆಯ ಹಯಗ್ರೀವತೀರ್ಥ ಸ್ವಾಮಿಗಳಿಗೆ ಲಕ್ಷ್ಮೀನಾರಾಯಣಪುರ ಎಂಬ ನಾಮಾಂತರ ಹುಲೇಕಲ್ಲು ಗ್ರಾಮವನ್ನು ಹಾಗೂ ಅಲ್ಲಿಯೇ ಇರುವ ಲಕ್ಷ್ಮೀನಾರಾಯಣ ದೇವಸ್ಥಾನದ ಅಧಿಪತ್ಯವನ್ನು ನೀಡಿದ ವಿಚಾರವನ್ನು ಈ ಶಾಸನ ತಿಳಿಸುತ್ತದೆ. ಹೀಗಾಗಿ ರಾಮಚಂದ್ರನಾಯಕನು ತನ್ನ ತಂದೆಯಂತೆ ಬ್ರಾಹ್ಮಣ ಮತಾವಲಂಬಿಯಾಗಿದ್ದಿರಬೇಕೆಂದು ತೋರುತ್ತದೆ.

ಆದರೆ ಮೂರನೆಯ ಅರಸ ರಘುನಾಥನಾಯಕನು (೧೬೧೮–೧೬೩೮) ವೀರಶೈವ ಧರ್ಮಾನುಯಾಯಿಯಾಗಿದ್ದನೆಂದು ಭಾವಿಸಬಹುದು. ಮರಾಠಿ ಬಖೈರ್‌ನಲ್ಲಿ ಇವನು ಹಾಗೂ ಇವನ ಕುಟುಂಬ ವರ್ಗದವರು ವೀರಶೈವ ದೀಕ್ಷೆ ('ಲಿಂಗಾಧಾರಣಾದಿ ಶಿವದೀಕ್ಷೆ') ತೆಗೆದುಕೊಂಡದ್ದನ್ನು 'ಸ್ವತಃ ಪರಮಾತ್ಮನೇ ಮಾನವರೂಪದಿಂದ ಬಂದು' ಈ ದೀಕ್ಷೆಯನ್ನು ನೀಡಿದನೆಂಬ ಕಥೆಯೋಪಾದಿಯಲ್ಲಿ ವಿವರಿಸಲಾಗಿದೆ. ಈ ಅರಸನು ವೀರಶೈವ ಧರ್ಮಕ್ಕೆ ತನ್ನ ಒಲವು ತೋರಿಸಿದುದು ಇದರಿಂದ ಸ್ಪಷ್ಟಪಡುತ್ತದೆ, ಹಾಗೆಯೇ ಬನವಾಸಿ ಮಧುಕೇಶ್ವರ ದೇವಾಲಯಕ್ಕೆ ಈ ಅರಸನು ಸುಂದರ ಕೆತ್ತನೆಯ ಕಲ್ಲುಮಂಟಪ (ಮಂಚ)ವನ್ನು ಮಾಡಿಸಿ ಶಿವರಾತ್ರಿಯಂದು ಅರ್ಪಿಸಿದ ಸಂಗತಿ ಶಾಸನೋಕ್ತವಾದುದು. ಮಂಟಪದಲ್ಲಿರುವ ವಿಗ್ರಹಗಳು ಮೋಳಿಗಯ್ಯ. ನುಲಿಯ ಚಂದಯ್ಯ, ಆಯ್ದಕ್ಕಿ ಮಾರಯ್ಯ, ಹಡಪದ ಅಪ್ಪಣ್ಣ ಇನ್ನಿತರ ಶಿವಶರಣರದೆಂದು ಅಲ್ಲಿಯೇ ಕೆತ್ತಿರುವ ಲಿಪಿಗಳು ತಿಳಿಸುತ್ತವೆ. ಈ ಅರಸನು ಮಧುಕೇಶ್ವರನ ತೇರಿನ ಉತ್ಸವವನ್ನೂ ಮಾಡಿಸಿದನಂತೆ. ರಘುನಾಥನ ನಂತರ ಅರಸನಾದ ಮಧುಲಿಂಗನಾಯಕನು (೧೬೩೮–೧೬೭೪) ಹುಟ್ಟುವೀರಶೈವ. ಇವನೊಂದಿಗೆ ಸ್ವಾದಿ ಮನೆತನವೇ ವೀರಶೈವ ಧರ್ಮವನ್ನನುಸರಿಸಿತು. ಈತನ ಮಗಳೇ ಮಲ್ಲಮ್ಮ ಎಂತಲೂ ಬೆಳವಡಿಸಂಸ್ಥಾನದ ಈಶ್ವರ ಪ್ರಭುವು ಈತನ ಅಳಿಯನೆಂತಲೂ ಹೇಳುವ ಸಂಗತಿಗೆ ಯಾವ ಆಧಾರವೂ ತಿಳಿಯದು. ಸ್ವಾದೀ ಅರಸು ಮನೆತನಕ್ಕೆ ಸಂಬಂಧಿಸಿದ ದಾಖಲೆಗಳನ್ನು ವಿವರವಾಗಿ ಪರಿಶೀಲಿಸಿದರೆ ಇದಕ್ಕೆ ಉತ್ತರ ದೊರಕೀತು.

ಈ ಮಧುಲಿಂಗನಾಯಕನ ಮಗನೇ ಸದಾಶಿವರಾಯ (೧೬೭೪–೧೬೯೭), ಸಂಸ್ಥಾನದ ಐದನೆಯ ಅರಸು; ಶೂರನೂ ಚತುರನೂ ಪಂಡಿತನೂ ಆಗಿದ್ದವನು. 'ಸದಾಶಿವ ನೀತಿ' ಎಂಬ ಪಂಚಶತನೀತಿಗಳನ್ನು ಹೇಳುವ ಗ್ರಂಥದ ಕರ್ತೃ ಇವನೇ ಎಂದು ತಿಳಿಯುವುದು. ಆದರೆ 'ಕರ್ನಾಟಕ ಕವಿಚರಿತೆ'ಯಲ್ಲಿ (೩, ಅನು. ೧, ಪು.೨೧) ಈ ಕೃತಿಯ ಕಾಲವು ೧೮೫೩ ಎಂದಿದೆ. ೧೬೯೭ರಲ್ಲಿ ಈ ಸದಾಶಿವರಾಯ ಮೃತನಾದ. ಅಲ್ಲದೆ ಸಂಸ್ಥಾನದ ಏಳನೆಯ ದೊರೆ ಇಮ್ಮಡಿ ಸದಾಶಿವರಾಯನೂ ೧೬೬೩ರಲ್ಲಿ ಮಡಿಯುತ್ತಾನೆ. ಅನಂತರ ಗೋವೆಯಲ್ಲಿ ಆಳ್ವಿಕೆ ಪ್ರಾರಂಭಿಸಿದ ಈ ಮನೆತನದವರಲ್ಲಿ ಸದಾಶಿವ ರಾಜೇಂದ್ರರೆಂಬುವರು ಮೂವರು ಆಗಿ ಹೋದುದು ತಿಳಿಯುತ್ತದೆ. ಹೀಗಾಗಿ 'ಸದಾಶಿವ ನೀತಿ'ಯ ಕರ್ತೃ ಯಾವ ಸದಾಶಿವ ಎಂಬುದು ಸಂದೇಹಾಸ್ಪದವಾದರೂ ಐದನೆಯ ದೊರೆ ಸದಾಶಿವರಾಯನು ಇತಿಹಾಸಕಾರರ ಗಮನ ಹೆಚ್ಚಾಗಿ ಸೆಳೆದಿರುವುದರಿಂದಲೂ ಇತರು ಅಷ್ಟಾಗಿ ಪ್ರಸಿದ್ಧಿಗೆ ಬಾರದೆ ಇರುವುದರಿಂದಲೂ ಅವನೇ ಕೃತಿ ಬರೆದವನೆಂದು ನಿರ್ಧರಿಸಬಹುದು. ಕೃತಿಕಾರನು ಗ್ರಂಥದಲ್ಲಿ 'ಶ್ರೀಮನ್ಮಹಾವೀರ ಮಹೇಶ್ವರಾಚಾರ್ಯ ಮಳೆಯ ಗುರು ನಂದೀಶ್ವರಕರುಣಸಂಜಾತ' ಎಂದು ತನ್ನ ವಿಚಾರ ಹೇಳಿಕೊಂಡಿದ್ದಾನೆ. ಪ್ರತಿ

ಕಂದ ಪದ್ಯವೂ 'ಗುರು ನಂದೀಶ' ಎಂದು ಮುಗಿಯುತ್ತದೆ. ಭಕ್ತಿ ಜ್ಞಾನ ವೈರಾಗ್ಯ ಹಾಗೂ ವ್ಯವಹಾರಬೋಧಕ ನೀತಿಗಳ ಪ್ರತಿಪಾದನೆಯೇ ಈ ಗ್ರಂಥದ ಸಾರ. ಈ ಗ್ರಂಥವು ಐದುನೂರಕ್ಕೂ ಹೆಚ್ಚು ಪದ್ಯಗಳನ್ನೊಳಗೊಂಡಿದ್ದು, 'ನಂದೀಶ್ವರ ಶತಕ' ಎಂಬ ಕೃತಿಯ ಜೊತೆಗೆ ನಿಜಗುಣ ಶಿವಯೋಗಿಗಳ 'ಕೈವಲ್ಯ ಪದ್ಧತಿ', ಮುದ್ವೀರಸ್ವಾಮಿ ಹಾಗೂ ವಿರಕ್ತಸ್ವಾಮಿಗಳ ವಚನಗಳು, ಹಾಡುಗಳು ಇನ್ನಿತರ ಪದ್ಯಗಳನ್ನೂ ಸಂಗ್ರಹಿಸಿ ಸೇರಿಸಲಾಗಿದೆಯೆಂತಲೂ ಈ ಗ್ರಂಥದ ಪದ್ಯಗಳಲ್ಲಿ ಸರ್ವಜ್ಞನ ಪದಗಳಂತೆ ವಿವಿಧ ವಿಷಯಗಳ ಜ್ಞಾನ ಹಾಗೂ ಅನುಭವಗಳ ಸಂಗ್ರಹವಿದೆಯೆಂತಲೂ ಪಂಡಿತರು ಅಭಿಪ್ರಾಯ ಪಡುತ್ತಾರೆ. ಗಜಾಶ್ವಗಳ ಲಕ್ಷಣಗಳನ್ನು ತಿಳಿಸುವ ಪದ್ಯಗಳು ಗ್ರಂಥದ ಕೊನೆಯಲ್ಲಿ ಇರುವ ವಿಚಾರವೂ ಬರುತ್ತದೆ. ಮತ್ತೊಂದು ಸಂಗತಿ ಎಂದರೆ, ಸ್ಕಾಂದ ಪುರಾಣದ ಅಗಸ್ತ್ಯಸಂಹಿತೆಯ ಮಧ್ಯದಲ್ಲಿರುವ ಹಾಲಾಸ್ಯಮಾಹಾತ್ಮ್ಯವನ್ನು 'ಸಕಲಕಲಾವಿಶಾರದನೂ ನರೇಂದ್ರ ಶಿರೋಮಣಿಯೂ ಲಿಂಗಜಂಗಮಾರ್ಚಕನೂ ಆದ ಸೋದೆಯ ಪ್ರಭು' ಸದಾಶಿವರಾಯನು ವರ್ಣಕದಲ್ಲಿ 'ಹಾಲಾಸ್ಯ ಪುರಾಣ' ರಚಿಸಿದ್ದನೆಂತಲೂ ಈ ಕೃತಿಯು ಕವಿಚರಿತೆಕಾರರ ಕಣ್ಣಿಗೆ ಬಿದ್ದಿಲ್ಲವೆಂತಲೂ ಜೊತೆಗೆ ಶಂಕರಾರಾಧ್ಯನ ಸಂಸ್ಕೃತ 'ಬಸವ ಪುರಾಣ'ಕ್ಕೆ ಟೀಕೆ ಬರೆದಿದ್ದು ಆ ಕೃತಿ ದೊರೆತಿಲ್ಲವೆಂತಲೂ ಡಾ॥ ಎಸ್. ವಿದ್ಯಾಶಂಕರರು ಶೋಧಿಸಿದ್ದಾರೆ. (ಜಂಗಮ ಜ್ಯೋತಿ, ಪು. ೪೩). ಸದಾಶಿವರಾಯನ 'ಹಾಲಾಸ್ಯ ಪುರಾಣ'ವನ್ನು ಆಧರಿಸಿ ಸುಮಾರು ೧೭೧೦ ರಿಂದ ೧೭೨೫ರ ವರೆಗೆ ಚಿತ್ರದುರ್ಗ ಬೃಹನ್ಮಠದ ಗುರುಗಳಾಗಿದ್ದ ಇಮ್ಮಡಿ(ಗುರುಸಿದ್ದ) ಮುರಿಗೆ ಸ್ವಾಮಿಗಳು 'ವಸ್ತುಕ'ವಾಗಿ ರಚಿಸಿದಂತೆ ತಿಳಿದು ಬರುತ್ತದೆ. (ಕ.ಕ.ಚ.೩, ಪು. ೧೨). ಗುರುಸಿದ್ಧರು ತಮ್ಮ ಪದ್ಯವೊಂದರಲ್ಲಿ 'ಸಕಲ ಕಲಾವಿಶಾರದ ನರೇಂದ್ರಶಿರೋಮಣಿ ಲಿಂಗಜಂಗಮಾ। ರ್ಚಕನುರು ಸೋದೆಯ ಪ್ರಭು ಸದಾಶಿವಭೂಪತಿಯೊಲ್ದು ಪೂರ್ವದೊಳ್। ಪ್ರಕಟಸುವರ್ಣವರ್ಣಕದೆ ಪೇಟ್ದುದನಾಂ ಪ್ರಮಥೋಕ್ತಿಯಿಂದ ವ। ಸ್ತುಕದಿನಿದಂ ನೆಗಟ್ಚಿದೆನುಮೇಶನ ಭಕ್ತರಪಾರರೊಲ್ವಿನಂ॥' ಎಂದು ಹೇಳಿಕೊಂಡಿದ್ದಾರೆ. ಇವರು ೧೭೨೦ರಲ್ಲಿ ಈ 'ವಸ್ತುಕ' ರಚಿಸಿದರು. ಕವಿಚರಿತೆಕಾರರು ಕವಿಚರಿತೆಯ ಸಂಪುಟ ೨, ಪುಟ ೪೯೩ರಲ್ಲಿ ಇಮ್ಮಡಿ ಗುರುಸಿದ್ಧರ ಕಾಲವನ್ನು (ಹಾಲಾಸ್ಯ ಪುರಾಣದ ರಚನೆಯ ಕಾಲವನ್ನು) ೧೫೯೦ ಎಂದು ತಪ್ಪಾಗಿ ಭಾವಿಸಿದ್ದು, ಆ ಬಗೆಗಿನ ತಮ್ಮ ಸಂದೇಹವನ್ನು ಸಂಪುಟ ೩, ಪುಟ ೧೧ರಲ್ಲಿ ವ್ಯಕ್ತಪಡಿಸಿದ್ದಾರೆ. ಗುರುಸಿದ್ದರ ಜೀವಿತ ಕಾಲವನ್ನು ಗಮನಿಸಿದರೆ 'ಹಾಲಾಸ್ಯ ಪುರಾಣ'ಕ್ಕೆ 'ವಸ್ತುಕ'ವಾಗಿ ಬರೆದ ಆದೇ ಗ್ರಂಥ ರಚನೆಯ ಕಾಲ ೧೭೨೦ ಸರಿ.

ಸಿರಸಿಯಿಂದ ಸ್ವಾದಿಗೆ ಹೋಗುವ ಮಾರ್ಗದಲ್ಲಿ ಹುಲಗೋಡು ಗ್ರಾಮದ ಸಮೀಪದಲ್ಲಿರುವ ಶಾಲ್ಮಲೀ ನದಿಯ ಒಡಲಿನಲ್ಲಿ ಸಹಸ್ರಲಿಂಗ (ಅಥವಾ ಬಂಡೆಬಸಪ್ಪ) ಸ್ಥಳವಿದೆ. ಇಲ್ಲಿನ ಕಲ್ಲುಗಳ ಮೇಲೆ ಶಿವಲಿಂಗ, ನಂದಿ ಇನ್ನಿತರ ಶೈವ ಮೂರ್ತಿಗಳನ್ನು ಕೆತ್ತಿರುವರು. ಲಿಪಿಗಳನ್ನೂ ಮೂಡಿಸಲಾಗಿದೆ. ಸ್ವಾದಿಯರಸರ ಕಾಲದಲ್ಲಿ ಇಲ್ಲಿ ಲಿಂಗಗಳನ್ನು ಕೆತ್ತಲಾಯಿತು. ಈ ಲಿಂಗಸಮೂಹದಲ್ಲಿ ಸ್ವಾದಿ ಸಂಸ್ಥಾನದ ಎರಡು, ಮೂರು ಮತ್ತು ನಾಲ್ಕನೆಯ ಅರಸರುಗಳಾದ ರಾಮಚಂದ್ರನಾಯಕ, ರಘುನಾಥನಾಯಕ ಮತ್ತು ಮಧುಲಿಂಗನಾಯಕ ಇವರುಗಳ ಹೆಸರಿನಲ್ಲಿ ಮೂರು ಲಿಂಗಗಳನ್ನು ಸ್ಥಾಪಿಸಲಾಗಿದೆ. ಇಂತಹ ಸಹಸ್ರಲಿಂಗವು ಶ್ರೀಶೈಲದ ಪಾತಾಳಗಂಗೆಯಲ್ಲಿರುವುದಾಗಿ ತಿಳಿದು ಬರುತ್ತದೆ. ಅಲ್ಲದೆ ಕಾಕತೀಯ ಅರಸು ಗಣಪತಿದೇವನ ಕಾಲದಲ್ಲಿ (೧೧೯೮-೧೨೬೧) ಆಂಧ್ರದಲ್ಲಿ ಸ್ಥಾಪಿಸಲಾದ ಸಹಸ್ರಲಿಂಗಗಳ ಪ್ರಸ್ತಾಪ ಇಲ್ಲಿ ಅಪ್ರಸ್ತುತವಾಗಲಾರದು. ಸಹಸ್ರಲಿಂಗ ಸ್ಥಾಪನೆಯು ಗಣಪತಿದೇವನ ಅವಧಿಯಲ್ಲಿ ಭರದಿಂದ ನಡೆದಂತೆ ತೋರುವುದು. ವಾರಂಗಲ್ಲಿನ ಸಹಸ್ರಲಿಂಗ ಗಣಪತಿ ಸ್ಥಾಪನೆಯಿಂದ ಮೊದಲ್ಗೊಂಡು ವಿಶಾಖಪಟ್ಟಣ ಜಿಲ್ಲೆಯ ಪಂಚಧಾರಳ, ಗುಂಟೂರು ಜಿಲ್ಲೆಯ ಚೆಜೇರ್ಲ ಹಾಗೂ ನೆಲ್ಲೂರು, ಕಾಶೀಬುಗ್ಗ ಮೊದಲಾದ ಸ್ಥಳಗಳಲ್ಲಿ ಸಹಸ್ರಲಿಂಗಗಳನ್ನು ಸ್ಥಾಪಿಸಲಾಯಿತು; ಶತಲಿಂಗಸ್ಥಾಪನೆಯ ಉಲ್ಲೇಖವೂ ಇದೆ. ಇಲ್ಲಿ ಸಹಸ್ರ ಲಿಂಗವೆಂದರೆ ಒಂದು ಸಾವಿರ ಲಿಂಗಗಳನ್ನು ಪ್ರತಿಷ್ಠಾಪಿಸಲಾಯಿತೆಂದು ಅರ್ಥವಲ್ಲ. ಬೃಹದಾಕಾರದ ಲಿಂಗದ ಮೇಲೆ ಲಿಂಗವನ್ನು ಹೋಲುವ ಒಂದು ಸಾವಿರ ಅತಿ ಸಣ್ಣ ಆಕೃತಿಗಳನ್ನು(ಉಬ್ಬುಗಳು)ಕೆತ್ತಿರುವಂಥಾದ್ದೂ ಆಗಿರುತ್ತದೆ. ವಾರಂಗಲ್ಲು ದೇವಾಲಯದ ಸಹಸ್ರಲಿಂಗವೂ ಇದೇ ಆಕೃತಿಯಲ್ಲಿದೆ.

ಸ್ವಾದಿಯರಸರಾದ ಸದಾಶಿವರಾಯ ಮತ್ತು ಬಸವಲಿಂಗರಾಯರ ಸಮಾಧಿಗಳು ಸ್ವಾದಿಯ ಗದ್ದುಗೆಯ ಮಠದಲ್ಲಿರುವುದನ್ನು ಇಂದಿಗೂ ಕಾಣಬಹುದು.

## ಬೀಳಿಗಿ ಮನೆತನ

ಕೆಳದಿ, ಕೊಡಗು, ಸ್ವಾದಿ ರಾಜಮನೆತನಗಳಂತೆಯೇ ಮಲೆನಾಡಿನಲ್ಲಿ ಆಗಿ ಹೋದ ಪ್ರಾಂತ್ಯಗಳಲ್ಲಿ ಬೀಳಿಗಿಯೂ ಒಂದು. ಇಂದಿನ ಉತ್ತರ ಕನ್ನಡದ ಸಿದ್ದಾಪುರ ತಾಲ್ಲೂಕು ಹಾಗೂ ಸುತ್ತಮುತ್ತಲ ಪ್ರದೇಶವು ಬೀಳಿಗಿ ಒಡೆಯರ ರಾಜ್ಯವೆನಿಸಿದ್ದಿತು. ಈ ಮನೆತನದ ಪ್ರಾರಂಭದ ಅರಸರು ಜೈನ ಧರ್ಮೀಯರು. ವಿಜಯನಗರದ ಸಾಮಂತರಾಗಿದ್ದರು. ಪ್ರಾರಂಭದಲ್ಲಿ ಬೀಳಿಗಿಗೆ ಹತ್ತು ಮೈಲಿ ದೂರವಿರುವ ಐಸೂರು (ಹೊಸೂರು>ಇಂದಿನ ಚಂದ್ರಗುತ್ತಿ) ಇವರ ರಾಜಧಾನಿಯಾಗಿದ್ದಿತು.

ಇಲ್ಲಿ ಬಲವಾದ ಕೋಟೆಯೊಂದಿದೆ. 'ಬೀಳಗಿಯ ಅರಸುಗಳ ವಂಶಾವಳಿ' ತಿಳಿಸುವಂತೆ, ಈ ಮನೆತನದ ಮೂಲಪುರುಷ ಆಂಡಣ್ಣ (ಮುಂಡಣ್ಣ ಎಂಬ ಹೆಸರು ಇನ್ನೊಂದು ದಾಖಲೆಯಲ್ಲಿದೆ). ೧೫೯೩ರ ಭಟ್ಟಾಕಲಂಕನ ಶಾಸನದಲ್ಲಿಯೂ (ಇದರ ವಿವರ ಮುಂದೆ ಬರುತ್ತದೆ) ಮುಂಡಣ್ಣೊಡೆಯ ಎಂದಿದೆ. ಈ ಮುಂಡಣ್ಣನಿಗೆ ಭೈರವ(ಭೈರವೇಂದ್ರ), ಕಲ್ಲಪ್ಪ (ಕಲ್ಲಪ್ಪೊಡೆಯ) ಮತ್ತು ನರಸಿಂಹ (ಬೋಳಪ್ಪೊಡೆಯ ?) ಈ ಮೂವರು ಪುತ್ರರು. ನರಸಿಂಹನು ವಿಜಯನಗರ ಕೃಷ್ಣದೇವರಾಯನ ಸಮಕಾಲೀನವನಾಗಿದ್ದನು. ಇವನ ಕಾಲದಲ್ಲಿ ಸಿದ್ದಾಪುರದ ಪಶ್ಚಿಮಕ್ಕೆ ಸುಮಾರು ಎಂಟು ಮೈಲಿ ದೂರದಲ್ಲಿ, ಸೋಮನದಿ ತೀರದಲ್ಲಿ, ಬೀಳಿಗಿ ಪಟ್ಟಣವನ್ನು ಸ್ಥಾಪಿಸಿ ಅದನ್ನು ರಾಜಧಾನಿ ಮಾಡಿಕೊಂಡನು. ಇವನ ಮಕ್ಕಳಾದ ಒಂದನೆಯ ಘಂಟೆಯೊಡೆಯ (ಘಂಟೇಂದ್ರ) ಮತ್ತು ಇಮ್ಮಡಿ ಮುಂಡಣ್ಣಗಳು ಇಲ್ಲಿ ಕೋಟೆ ಕಟ್ಟಿಸಿ ರಾಜಧಾನಿಯನ್ನು ಬಲಪಡಿಸಿದರು. ೧೫೯೩ರ ಭಟ್ಟಾಕಲಂಕನ ಶಾಸನದಲ್ಲಿ ಒಂದನೆಯ ಘಂಟೆಯೊಡೆಯ (ಘಂಟೆಣ್ಣೊಡೆಯ)ನೇ ಸೋಮನದಿಯ ದಂಡೆಯ ಮೇಲೆ ಬೀಳಿಗಿ(ಗೆ)ಎಂಬ ಪಟ್ಟಣವನ್ನು ಕಟ್ಟಿ ಅದರಲ್ಲಿ ಪಾರ್ಶ್ವತೀರ್ಥಂಕರರ ಬಸದಿಯನ್ನು ನಿರ್ಮಿಸಿದನೆಂದಿದೆ. ಭೂಮಿಯನ್ನು ದಾನ ಮಾಡಿದ ವಿಚಾರವೂ ಬರುತ್ತದೆ. ಆದರೆ ೧೫೯೨ರ ಭಟ್ಟಾಕಲಂಕನ ಎರಡನೆಯ ಶಾಸನವು ಅಮ್ಮಣ್ಣೊಡೆಯನೆಂಬ ನಾಮಾಂತರವುಳ್ಳ ಘಂಟಣ್ಣೊಡೆಯ ನರಸಿಂಹನೆಂಬ ಮಹಾರಾಜನು ಶ್ವೇತಪುರ (ಬೀಳಿಗಿ) ಪಟ್ಟಣವನ್ನು ಕಟ್ಟಿಸಿ ರಾಜ್ಯವಾಳಿದನೆಂದು ಹೇಳುತ್ತದೆ (ಸಾಧನೆ, ೮–೨; ೮–೪). ಇಲ್ಲಿ ನರಸಿಂಹನೇ ಬೀಳಿಗಿ ನಗರ ನಿರ್ಮಾತೃ ಎಂದರೆ ಸರಿಹೋದೀತು. ಶಿವಮೊಗ್ಗೆಯ ನಗರ ತಾಲ್ಲೂಕು ಹುಂಚ ಗ್ರಾಮದ ಪದ್ಮಾವತಿ ಬಸದಿ ಪ್ರಾಕಾರದಲ್ಲಿರುವ ಸುಮಾರು ೧೫೩೦ರ ವಾದಿವಿದ್ಯಾನಂದನೆಂಬುವನ ಶಾಸನವೂ ಇದಕ್ಕೆ ಪುಷ್ಟಿ ನೀಡುತ್ತದೆ. ವಾದಿವಿದ್ಯಾನಂದನು ನರಸಿಂಹನ ಆಸ್ಥಾನಕ್ಕೆ ಭೇಟಿ ನೀಡಿದ್ದನಂತೆ. ಬೀಳಗಿ ಮನೆತನದ ವಂಶಾವಳಿ ಹಾಗೂ ಘಟನೆಗಳನ್ನು ಅರಿಯಲು ದಾಖಲೆಗಳಿದ್ದರೂ ಅವುಗಳಲ್ಲಿನ ಅಸ್ಪಷ್ಟ ವಿಚಾರಗಳಿಂದಾಗಿ ಶೋಧಕರು ಅನಾವಶ್ಯಕ ಗೊಂದಲಕ್ಕೆ ಒಳಗಾಗಬೇಕಾಗುತ್ತದೆ.

ಬೀಳಿಗಿ ವಂಶದ ಎಂಟನೆಯ ದೊರೆ ವೀರಪ್ಪನು (ಒಂದನೆಯ ಘಂಟೇಂದ್ರನ ಮೊಮ್ಮಗ; ನರಸ ಅಥವಾ ಇಮ್ಮಡಿ ನರಸಿಂಹ ಭೂಪಾಲನ ಮಗ) ಸ್ವಾದಿಯ ಅರಸಪ್ಪನಾಯಕನ (೧೫೫೫–೧೫೯೮) ಮಗಳು ವೀರಮಾಂಬೆ (ವೀರಾಂಬಿಕೆ)ಯನ್ನು ಮದುವೆಯಾಗಿದ್ದನು. ೧೫೬೬ರ ಸ್ವರ್ಣವಳ್ಳಿ ಮಠದ ಶಿಲಾಶಾಸನ ಮತ್ತು ಸ್ವಾದಿಯ ವಾದಿರಾಜ ಮಠಕ್ಕೆ ಸಂಬಂಧಿಸಿದ ೧೫೯೩ರ ಶಾಸನದಲ್ಲಿ ಹೇಳಿರುವ ವಾದಿರಾಜ ಸ್ವಾಮಿಗಳ ಭಕ್ತನಾಗಿದ್ದವನೇ ಈ ಅರಸಪ್ಪನಾಯಕ. ವೀರಮಾಂಬೆಯ ಉದರದಲ್ಲಿ ಜನಿಸಿದವನು ರಂಗರಾಜ (ಮುಮ್ಮಡಿ ನರಸಿಂಹ). ಇವನ ಮಗ ಇಮ್ಮಡಿ ಘಂಟೇಂದ್ರ. ಇವನು ಗೇರುಸೊಪ್ಪೆಯ 'ಮೆಣಸು ಮಹಾರಾಣಿ' ಭೈರಾದೇವಿಯನ್ನು ಸೋಲಿಸಿದವನು. 'ಬಿಳಗಿಲ ಅರಸುಗಳ ಚರಿತ್ರೆ'ಯಲ್ಲಿ, ಕೆಳದಿಯ ಹಿರಿಯ ವೆಂಕಟಪ್ಪನಾಯಕನು (೧೫೮೩–೧೬೩೦) ರಣದುಲ್ಲಾಖಾನನ ನೇತೃತ್ವದಲ್ಲಿ ದಂಡೆತ್ತಿಬಂದ ಬಿಜಾಪುರದ ಸೇನೆಯನ್ನು ಬಗ್ಗುಬಡಿದ ಸಂದರ್ಭದಲ್ಲಿ ಇಮ್ಮಡಿ ಘಂಟೇಂದ್ರನು ಅವನಿಗೆ ಸಹಾಯಮಾಡಿ 'ವಿಕ್ರಮ ಕಂಠೀರವ' ಎಂಬ ಬಿರುದಿಗೆ ಪಾತ್ರನಾದನೆಂದೂ ವೆಂಕಟಪ್ಪನಾಯಕನ ಮಗಳು ರಮಾದೇವಿಯನ್ನು ಮದುವೆಯಾದನೆಂದೂ ಹೇಳಿದೆ. ರಮಾದೇವಿಯೊಂದಿಗೆ ನಡೆದ ಘಂಟೇಂದ್ರನ ವಿವಾಹ ಸಂಗತಿ ಆಧಾರರಹಿತವಾದುದೆಂದು ಸಕಾರಣಗಳೊಂದಿಗೆ ಸಿದ್ಧಪಡಿಸಲು ಡಾ। ಸೂರ್ಯನಾಥ ಕಾಮತರು ಯತ್ನಿಸಿದ್ದಾರೆ (ಕ.ಸಾ.ಪ.ಪ. ೫೫–೨). ಆದರೆ ಭಟ್ಟಾಕಲಂಕನ ೧೫೯೩ರ ಶಾಸನವು ರಮಾದೇವಿಯು ಘಂಟೇಂದ್ರನ ಪಟ್ಟದ ರಾಣಿಯಾಗಿದ್ದಳೆಂದು ಸೂಚಿಸುತ್ತದೆ. ಇದು ಪರಿಶೀಲನಾರ್ಹ ವಿಚಾರ. ಡಾ। ಶಾಮಾಶಾಸ್ತ್ರಿಗಳು ಸಂಗ್ರಹಿಸಿ ಪ್ರಕಟಿಸಿದ 'ಬಿಳಗಿಲ ಅರಸುಗಳ ಚರಿತ್ರೆ'ಯ (ಆಂಗ್ಲಾನುವಾದ) ಪ್ರಕಾರ (ಮಿಥಿಕ್ ಸೊಸೈಟಿಯ ತ್ರೈಮಾಸಿಕ, ೧೩–೪), ಇಮ್ಮಡಿ ಘಂಟೇಂದ್ರನು ಹಿರಿಯ ವೆಂಕಟಪ್ಪನಾಯಕನ ಆಹ್ವಾನದ ಮೇರೆಗೆ ಕೆಳದಿಗೆ ಹೋಗುವಾಗ ತನ್ನ ಸಂಗಡ ಪುಟ್ಟಯ್ಯ, ಚನ್ನಯ್ಯ, ದೊಡ್ಡಭದ್ರಯ್ಯ, ಗಿರಿಯಪ್ಪ ಮತ್ತಿತರ ಆಪ್ತರನ್ನೂ ಮಂತ್ರಿಗಳನ್ನೂ ಕರೆದೊಯ್ದನು. ಇವರೆಲ್ಲರೂ ವೀರಶೈವರೇ ಆಗಿದ್ದರೆಂದೂ ಸ್ವತಃ ಇಮ್ಮಡಿ ಘಂಟೇಂದ್ರನೇ ವೀರಶೈವನಾಗಿದ್ದಿರಬೇಕೆಂದೂ ಡಾ। ಶಾಸ್ತ್ರಿಗಳು ತೀರ್ಮಾನಿಸುತ್ತಾರೆ.

'ವಂಶಾವಳಿ' ಪ್ರಕಾರ, ಇಮ್ಮಡಿ ಘಂಟೇಂದ್ರನ ಆಳ್ವಿಕೆಯನಂತರ ಬೀಳಿಗಿ ಮನೆತನದರಸರ ಇನ್ನೊಂದು ಶಾಖೆ (ಅಂದರೆ ಒಂದನೆಯ ಘಂಟೇಂದ್ರನ ಇನ್ನೊಬ್ಬ ಪುತ್ರ ತಿಮ್ಮಪ್ಪ ಎಂಬುವನ ಪೀಳಿಗೆ) ಅಧಿಕಾರ ವಹಿಸಿದಂತೆ ತೋರುತ್ತದೆ. ತಿಮ್ಮಪ್ಪ–ದೇವಪ್ಪ(ದೇವರಾಜ)–ತಮ್ಮಪ್ಪ(ತಮ್ಮಯ್ಯ)–ಮುಮ್ಮಡಿ ಘಂಟೇಂದ್ರ ಇವರ ಪೀಳಿಗೆಯ ನಾಲ್ಕನೆಯ (ಮೌನ) ಘಂಟೇಂದ್ರನ ಕಾಲಕ್ಕೆ ಕೆಳದಿಯರಸರು ಬೀಳಿಗಿ ರಾಜಕೀಯದಲ್ಲಿ ನೇರ ಪ್ರವೇಶ ಮಾಡಿದ್ದರು. ಇದಕ್ಕೆ ಮುನ್ನವೇ ಈ ಎರಡು ಮನೆತನಗಳ ನಡುವೆ ರಕ್ತಸಂಬಂಧ ಇದ್ದಿತೆಂದು ಭಾವಿಸಿದರೂ ನಾಲ್ಕನೆಯ ಘಂಟೇಂದ್ರನ ಅವಧಿಯಲ್ಲಿ ಅದಕ್ಕೆ ಸ್ಪಷ್ಟರೂಪ ಬಂದಿತು. ಇವನ ಸಹೋದರಿ ಘಂಟೆ ಅಮ್ಮಾಜಿಯನ್ನು ಕೆಳದಿ ವಂಶದ ಭದ್ರಪ್ಪನಾಯಕ (ವೀರಭದ್ರನಾಯಕನ ತಂಗಿಯ ಮಗ)ನಿಗೆ ಕೊಟ್ಟು ಮದುವೆ ಮಾಡಲಾಗಿದ್ದಿತೆಂಬ ಸಂಗತಿ 'ಕೆಳದಿ ನೃಪವಿಜಯಂ'ದಿಂದಲೂ ('ಬಿಳಿಗಿಯ ಘಂಟೆವೊಡೆಯರ ಪುತ್ರಿ ಘಂಟೆಯಮ್ಮನಂ ಸದಾಶಿವಯ್ಯನವರ ಪುತ್ರನಾದಳಿಯ ಭದ್ರಯ್ಯಂಗತ್ಯಂತ ಸಂಭ್ರಮದಿಂ ವಿವಾಹವಂ ರಚಿಯಿಸಿ ಸುಖದಿಂ

ರಾಜ್ಯಂಗೆಯುತ್ತಮಿರಲ್ಕೆ......'ಷಷ್ಠಾಶ್ವಾಸಂ –೨೫) ತೀರ್ಥಹಳ್ಳಿ ತಾಲ್ಲೂಕು ಕವಲೇದುರ್ಗದ ಮಹಾಮತ್ತಿನ ಮಠದಲ್ಲಿರುವ ೧೬೬೬ರ ತಾಮ್ರಪಟ ಶಾಸನದಿಂದಲೂ ತಿಳಿದು ಬರುತ್ತದೆ. ತಾಮ್ರಪಟದ ಆರಂಭದಲ್ಲಿ 'ಶ್ರೀ ಶಿವಾಯನಮಃ' ಎಂದಿದೆ. 'ಶ್ರೀ ಮನ್ಮಹಾಪ್ರಭು ಶಿವಭಕ್ತಿ ಪಾರಾಯಣರಾದ ಬೀಳಿಗಿ ದೇವಪ್ಪವೊಡೇರ ಪುತ್ರರಾದ ತಂಮಪ್ಪವೊಡೆರು ತಂಮಪ್ಪವೊಡೆರ ಪುತ್ರರಾದ ಘಂಟೆವೊಡೆರು ಘಂಟೆವೊಡೊರ ಪುತ್ರಿಯಾದ ಘಂಟೆ ಅಮ್ಮಾಜಿಯವರು ಕೊಟ್ಟ ಧರ್ಮಶಾಸನ' ಎಂದಿರುವುದರಿಂದ, ಬೀಳಿಗಿ ಮನೆತನದವರು ೧೬ನೆಯ ಶತಮಾನದ ಮಧ್ಯಭಾಗದಲ್ಲಿಯೇ ವೀರಶೈವ ಧರ್ಮವನ್ನನುಸರಿಸಿರಬಹುದೆಂದು ತೋರುತ್ತದೆ.

ಮೌನಘಂಟೆಯ ಮರಣಾನಂತರ ಅವನ ಪತ್ನಿ ಚನ್ನಮ್ಮನು ಕ್ಯಾದಗೆ ಮನೆತನದ ಶಿವಪ್ಪನಾಯಕನೆಂಬುವನನ್ನು ದತ್ತು ಪಡೆದು ಬೀಳಿಗಿ ಸಿಂಹಾಸನದ ಮೇಲೆ ಕುಳ್ಳಿರಿಸಿದಳು. ಇವನು ವೀರಶೈವ ದೊರೆ. ೧೬೬೫ ಮತ್ತು ೧೬೬೭ ರಲ್ಲಿ ವೀರಶೈವ ಮಠ ಮತ್ತು ಜಂಗಮನೊಬ್ಬನಿಗೆ ನೀಡಿದ ದತ್ತಿಯ ವಿವರ ಈ ಮೇಲಿನ ಅವಧಿಯ ಶಾಸನಗಳಲ್ಲಿದೆ. ಇವನಿಗೂ ಸಂತಾನವಿಲ್ಲ. ಇವನ ಹೆಂಡತಿ ಶಾಂತಮ್ಮನು ಜಂಬೂರ ಮನೆತನದ ಶಿವಪ್ಪ (ಇಮ್ಮಡಿ ಶಿವಪ್ಪ)ನನ್ನು ದತ್ತು ತೆಗೆದುಕೊಂಡು ಅವನಿಗೆ ಪಟ್ಟಗಟ್ಟಿದಳು. ಇವನ ಮಗ ಇಮ್ಮಡಿ ಸೋಮಶೇಖರ (ಇವನು ಇಮ್ಮಡಿ ಶಿವಪ್ಪನ ಸಹೋದರ ಸಣ್ಣ ತಮ್ಮಯ್ಯನೆಂದೂ ವೀರಮ್ಮನೆಂಬ ತನ್ನ ಮಡದಿಯಿಂದ ಇಮ್ಮಡಿ ಸೋಮಶೇಖರನನ್ನು ಪಡೆದನೆಂದೂ 'ಚರಿತ್ರೆ'ಯಲ್ಲಿ ಹೇಳಿದೆ). ಇಮ್ಮಡಿ ಸೋಮಶೇಖರನು ಮಹಾ ಶಿವಭಕ್ತನೂ ಪಂಡಿತನೂ ಆದ ಅರಸು. ಇವನಿಗೆ ವೀರಭದ್ರನೆಂಬ ಮಗ. ಇವನು ತನ್ನ ತಂದೆಯಂತೆಯೇ ಶಿವನ ಆರಾಧಕ. ವೀರಶೈವ ಧರ್ಮತತ್ತ್ವಗಳ ಅನುಷ್ಠಾನದಲ್ಲಿ ಸ್ವಲ್ಪವೂ ಚ್ಯುತಿ ಬಾರದಂತೆ ವರ್ತಿಸುತ್ತಿದ್ದನೆಂದು 'ಚರಿತ್ರೆ' ತಿಳಿಸುತ್ತದೆ. ಇವನು ಮಾಸೂರಿನ ವೀರೇಶ ದೇವಾಲಯದ ದುರಸ್ತಿ ಕಾರ್ಯ ಕೈಗೊಂಡನು ; ಭುವನೇಶ್ವರಿ ದೇವಾಲಯ ನಿರ್ಮಿಸಿ ಬ್ರಾಹ್ಮಣರಿಗೆ ದತ್ತಿ ಬಿಟ್ಟನು. ಈ ವೀರಭದ್ರನು ತನ್ನ ಪುತ್ರ ಬಸವೇಂದ್ರನಿಗೆ ೧೯೭೨ರ ಸುಮಾರಿನಲ್ಲಿ ಅಧಿಕಾರ ಬಿಟ್ಟುಕೊಟ್ಟಿರಬೇಕೆಂದು ಭಾವಿಸಲಾಗಿದೆ. ಬಸವೇಂದ್ರನು ಮೊಘಲರ ವಿರುದ್ಧ ಹೋರಾಡಿದನು. ಬಹುಶಃ ೧೭೧೧ರ ವೇಳೆಗೆ ಅವರಿಂದಲೇ ಸೋಲನ್ನನುಭವಿಸುವುದರೊಂದಿಗೆ ಬೀಳಿಗಿ ಸಂಸ್ಥಾನ ಪತನದ ಹಾದಿ ಹಿಡಿಯಿತು.

ಮೇಲೆಯೇ ಹೇಳಿದಂತೆ, ನಾಲ್ಕನೆಯ ಘಂಟೇಂದ್ರ ಕಾಲಕ್ಕೆ ಬೀಳಗಿ ಅರಸು ಸಂತತಿಯು ವೀರಶೈವ ಧರ್ಮದತ್ತ ಪೂರ್ಣವಾಗಿ ತಿರುಗಿದ್ದಿತು. ಅದಕ್ಕೂ ಮುಂಚೆಯೇ ಅಂದರೆ ಮುಮ್ಮಡಿ ಘಂಟೇಂದ್ರನ ಕಾಲದಲ್ಲಿಯೇ ಇವರು ವೀರಶೈವರಾಗಿರಲು ಸಾಧ್ಯ. ಮುಮ್ಮಡಿ ಘಂಟೇಂದ್ರನ ತಾಯಿ ಜಯಮ್ಮನು (ಜಯಾಂಬ) ೧೬೫೧ರಲ್ಲಿ ಸಿದ್ಧಾಪುರದ ಸಿದ್ಧಿವಿನಾಯಕ ದೇವಾಲಯವನ್ನು ಕಟ್ಟಿಸಿದಳೆಂದು ಅಲ್ಲಿಯ ಶಾಸನ ತಿಳಿಸುತ್ತದೆ. ನಾಲ್ಕನೆಯ ಘಂಟೇದ್ರನು ನೀಡಿರುವ ೧೬೪೫ರ ಶಾಸನದಲ್ಲಿ ಅವನು ವೀರಶೈವ ಸ್ವಾಮಿಗಳಿಗೆ ನೀಡಿದ ದತ್ತಿ ವಿಚಾರವಿದೆ. ಹೀಗಾಗಿ ಇವನ ನಂತರ ಬಂದ ಅರಸರು ಸಹಜವಾಗಿಯೇ ವೀರಶೈವ ಮತಾನುಯಾಯಿಗಳಾಗಿದ್ದುದನ್ನು ಗಮನಿಸುತ್ತೇವೆ.

ಬೀಳಿಗಿಯ ಅರಸರು ಮೂಲತಃ ಜೈನರಾಗಿದ್ದು ವೀರಶೈವರಾದ ನಂತರವೂ ಜೈನಧರ್ಮವನ್ನು ಪುರಸ್ಕರಿಸುವ ಉದಾರತೆ ತೋರಿದರು. ಅವರು ಜೈನ ಬಸದಿಗಳನ್ನು ಕಟ್ಟಿಸಿಕೊಟ್ಟ ಸಂಗತಿ ೧೯೯೨ ಮತ್ತು ೧೯೯೫ರ ಭಟ್ಟಾಕಲಂಕನ ಎರಡು ಶಾಸನಗಳಿಂದ ತಿಳಿದುಬರುತ್ತದೆ. ಈ ಎರಡು ಶಾಸನಗಳನ್ನು ಬೀಳಿಗಿಯ ತ್ರಿಕೂಟ ಬಸದಿಯ ಚಂದ್ರಶಾಲೆಯಲ್ಲಿ ಗೋಡೆಗೊರಗಿಸಿ ನಿಲ್ಲಿಸಲಾಗಿದೆ. ಈ ಶಾಸನಸಾಹಿತ್ಯದ ಕರ್ತೃ ಸುಮಾರು ೧೬೦೪ರಲ್ಲಿ 'ಕರ್ನಾಟಕ ಶಬ್ದಾನುಶಾಸನ' ಎಂಬ ಕನ್ನಡ ಭಾಷೆಯ ವ್ಯಾಕರಣ ಗ್ರಂಥ ರಚಿಸಿದ ಭಟ್ಟಾಕಲಂಕದೇವ; ಜೈನ ಗುರು ಅಕಳಂಕದೇವನ ಶಿಷ್ಯ. 'ಶಬ್ದಾನುಶಾಸನ'ವು ನಾಗವರ್ಮನ 'ಕರ್ನಾಟಕ ಭಾಷಾಭೂಷಣ'ಕ್ಕಿಂತಲೂ ವಿಸ್ತಾರವಾಗಿಯೂ ಪ್ರೌಢವ್ಯಾಖ್ಯಾನಸಮೇತವಾಗಿಯೂ ಇರುವುದೆಂತಲೂ ಕೇಶಿರಾಜನ 'ಶಬ್ದಮಣಿದರ್ಪಣ'ಕ್ಕಿಂತಲೂ ಹೆಚ್ಚು ವಿಷಯಗಳನ್ನು ಒಳಗೊಂಡಿದೆಯೆಂತಲೂ ಕವಿಚರಿತೆಕಾರರು ಬರೆದಿದ್ದಾರೆ (ಸಂ. ೮ ೨, ಪು.೩೦೬).ಭಟ್ಟಾಕಳಂಕದೇವನು ಬೀಳಿಗಿಯ ಇಮ್ಮಡಿ ಘಂಟೇಂದ್ರನ ಸಮಕಾಲೀನ. ಅವನು ತನ್ನ ಶಾಸನದಲ್ಲಿ "...ತಚ್ಚೆಲ್ವಾಂಬಾ ರಂಗರಾಜ ದಂಪತ್ಯೋರ್ಗ್ಗರ್ಭವಾರಿಧೌ । ಜಾತೋ ಘಂಟೇಂದ್ರ ಚಂದ್ರೋಽಸೌ ಶುಚಿಃ ಕುವಲಯಪ್ರಿಯಃ॥" ಎಂದು ರಂಗರಾಜ ಮತ್ತು ಚಲ್ವಾಂಬೆಯರ ಪುತ್ರ ಇಮ್ಮಡಿ ಘಂಟೇಂದ್ರನನ್ನು ಸ್ಮರಿಸಿದ್ದಾನೆ. ಅಲ್ಲದೆ ಇವನು ಘಂಟೇಂದ್ರ ಒಡೆಯನ ಪರಮ ಗುರುವಾಗಿದ್ದನು (ಸಾಧನೆ, ೮–೪. ಪು.೧೧೩). ಭಟ್ಟಾಕಳಂಕನು ಶಾಸನದಲ್ಲಿ ಬೀಳಗಿ ಅರಸರ ವಂಶಾನುಕ್ರಮಣಿಕೆಯನ್ನೂ ತನ್ನ ಗುರು ಪರಂಪರೆಯನ್ನೂ ಬಸದಿಗಳನ್ನು ನಿರ್ಮಿಸಿದ ಬೀಳಗಿ ಅರಸರುಗಳ ವೃತ್ತಾಂತವನ್ನೂ ಮತ್ತಿತರ ವಿಚಾರಗಳನ್ನೂ ವಿವರಿಸಿದ್ದಾನೆ. ಬೀಳಗಿ ಮನೆತನದ ಸಮಗ್ರ ಇತಿಹಾಸ ರಚಿಸುವಾಗ ಇವನ ಶಾಸನಗಳನ್ನು ಪ್ರಧಾನವಾಗಿ ಪರಿಗಣಿಸಬೇಕಾಗುತ್ತದೆ. ಬೀಳಿಗಿಯವನೂ ಬೀಳಿಗಿ ಅರಸರ ಆಶ್ರಯ ಹೊಂದಿದವನೂ ಪಂಡಿತನೂ ವೈಯಾಕರಣನೂ ಆದ ಭಟ್ಟಾಕಲಂಕನ ವಿಚಾರ ಬೀಳಗಿಯರಸರನ್ನು ಪ್ರಸ್ತಾಪಿಸುವಾಗಲೆಲ್ಲ ಬಂದೇ ಬರುತ್ತದೆ. ಜೈನ ಧರ್ಮಕ್ಕೆ ಸಂಬಂಧಿಸಿದ ವಿಚಾರಗಳ ವಿನಾ ಇತರ ಧರ್ಮಗಳ ಬಗೆಗೆ ಸಾಂದರ್ಭಿಕವಾಗಿಯಾದರೂ ಇವನು ತನ್ನ ಶಾಸನಗಳಲ್ಲಿ ಪ್ರಸ್ತಾಪಿಸದಿರುವುದೊಂದು ಆಶ್ಚರ್ಯ.

# ಹಾಗಲವಾಡಿ ಮನೆತನ

ಕರ್ನಾಟಕದ ನಾನಾ ಭಾಗಗಳಲ್ಲಿ ತಮ್ಮ ಪಾಳೆಪಟ್ಟನ್ನು ಸ್ಥಾಪಿಸಿ ಆಳ್ವಿಕೆ ನಡೆಸಿದ ಅಸಂಖ್ಯಾತ ಪಾಳೆಯಗಾರರ ಬಗೆಗೆ ಈಗಿನ್ನು ವ್ಯವಸ್ಥಿತ ಅಧ್ಯಯನ, ಶೋಧನೆ ಪ್ರಾರಂಭವಾಗಿದೆ. ವಿಜಯನಗರದ ಜೀವಿತದ ಕಾಲ ಮತ್ತು ಅನಂತರದಲ್ಲಿ ಈ ಸಣ್ಣ-ಪುಟ್ಟ ಸಂಸ್ಥಾನಗಳವರು ತಮ್ಮ ಶಕ್ತ್ಯನುಸಾರವಾಗಿ ವಿಜಯನಗರದ ಮಾಂಡಲಿಕರಾಗಿಯೋ ಅಥವಾ ಮಾಂಡಲಿಕರ ಆಶ್ರಿತರಾಗಿಯೋ ಇದ್ದವರು. ಬಾಹುಬಲ, ಧನಬಲ, ಸೈನ್ಯಬಲ, ಕೆಲವೊಮ್ಮೆ ಜಾತಿಬಲಗಳ ಆಧಾರದಿಂದ ಇವರಲ್ಲಿ ಬದುಕಿದವರು ಬಹುಮಂದಿ.ಅದು ಅನಿವಾರ್ಯ ಪ್ರಸಂಗವೂ ಹೌದು. ಆದರೆ ಬಲಶಾಲಿಗಳಾದಂತೆಯೇ ಪ್ರತಿಭಾಶಾಲಿ ಹಾಗೂ ವಿವೇಕಶಾಲಿಗಳಾದ ಪಾಳೆಯಗಾರರು ಕರ್ನಾಟಕದ ಕೆಲವೆಡೆ ಸಮರ್ಥ ಆಡಳಿತವನ್ನು ನಡೆಸಿದ್ದಾರೆ; ಪ್ರಜೆಗಳಿಗೆ ಆದರ್ಶ ಪ್ರಾಯರಾಗಿಯೂ ಇದ್ದು ಹೋಗಿದ್ದಾರೆ, ಅಂತಹ ಕೆಲವೇ ಮನೆತನಗಳಲ್ಲಿ ಹಾಗಲವಾಡಿ ಪಾಳೆಯಪಟ್ಟು ಒಂದಾಗಿದೆ.

ತುಮಕೂರು ಜಿಲ್ಲೆಯ ಕೆಲವು ಭಾಗಗಳ ಸೇರ ಅಧಿಕಾರ ಸ್ಥಾಪಿಸಿದ್ದ ಈ ಪಾಳೆಯಗಾರರು ಗುಬ್ಬಿ ತಾಲ್ಲೂಕಿನ ಹಾಗಲವಾಡಿಯನ್ನು ತಮ್ಮ ರಾಜಧಾನಿ ಮಾಡಿಕೊಂಡಿದ್ದರಿಂದ ಅವರ ವಂಶಿಕರನ್ನು ಹಾಗಲವಾಡಿ ಪಾಳೆಯಗಾರರೆಂದೇ ಕರೆಯಲಾಗಿದೆ. ಈ ಊರಿಗೆ ಹಿಂದೆ ಇದ್ದ ಹೆಸರು ಹಾಗಲಹಳ್ಳಿ. ನಾಲ್ಕನೆಯ ದೊರೆ ಹಿರಿಯ ಮುದಿಯಪ್ಪನಾಯಕನು (೧೫೭೮–೧೬೧೮) ಈ ಹಳ್ಳಿಯಲ್ಲಿ ಕೋಟೆಕೊತ್ತಲ, ದೇವಾಲಯ ಇತ್ಯಾದಿ ಕಟ್ಟಿಸಿದನು. ಈ ಕಾರಣದಿಂದ ಹಾಗಲವಾಡಿ ಎಂದು ಕರೆದರು. [ವಾಡಿ ಎಂದರೆ (ಕೋಟೆಯ) ಗೋಡೆ; ಊರಿನ ಒಂದು ಭಾಗ, ಇತ್ಯಾದಿ]. ಐದನೆಯ ದೊರೆ ಇಮ್ಮಡಿ ಭೈರಪ್ಪ ನಾಯಕನು (೧೬೧೮–೧೬೪೬) ಬಿಜಾಪುರದ ಸೇನಾನಿಯ ತೊಂದರೆಯಿಂದಾಗಿ ೧೬೪೧ ರಲ್ಲಿ ಹಾಗಲವಾಡಿಗೆ ತನ್ನ ರಾಜಧಾನಿ ಬದಲಿಸಿದನು.

ಈ ಪಾಳೆಯಗಾರರು ವಿಜಯನಗರವ ಅಧೀನ ಸಾಮಂತರಾಗಿದ್ದವರು. ಇವರ ಮೂಲಪುರುಷ ತುಮ್ಮಳ ಎಂಬಲ್ಲಿಂದ ಬಂದ ಎರಿಮಾದನಾಯಕ. ೧೪೭೮ರಲ್ಲಿ ವನವಾಸದುರ್ಗ (?) ಎಂಬಲ್ಲಿ ತನ್ನ ಪ್ರಾಬಲ್ಯ ಸ್ಥಾಪಿಸಿದನು. ೧೫೦೮ರಲ್ಲಿ ಇವನು ಮರಣಿಸಿದಾಗ ಇವನ ಮಗ ಸಾಲಿನಾಯಕನು (೧೫೦೮–೧೫೪೪) ತನ್ನ ತಂದೆ ಆಕ್ರಮಿಸಿದ್ದಿರ ಬಹುದಾದ ಪ್ರದೇಶಗಳ ಒಡೆಯನಾಗಿ ಪಾಳೆಯಪಟ್ಟಿನ ವಿಸ್ತಾರಕ್ಕೆ ತಾನೂ ಶ್ರಮಿಸಿದನು. ಚಿಕ್ಕನಾಯಕನಹಳ್ಳಿ ತಾಲ್ಲೂಕು ಎರೇಕಟ್ಟೆ ಗ್ರಾಮವನ್ನು ಕಟ್ಟಿಸಿ ಅದನ್ನು ಕೇಂದ್ರವಾಗಿಸಿಕೊಂಡನು. ಇವನು ವಿಜಯನಗರದ ತುಳುವಂಶದ ಕೃಷ್ಣದೇವರಾಯನ (೧೫೦೯–೧೫೨೯) ಸಮಕಾಲೀನ. ೧೫೩೦ರಲ್ಲಿ ಕೃಷ್ಣದೇವರಾಯನು ಮಡಿಯಲು ವಿಜಯನಗರದಲ್ಲಿ ಅಂತಃಕಲಹ ಮೊದಲಿಟ್ಟಿತು. ರಾಯನ ಮಲತಮ್ಮ ಅಚ್ಯುತರಾಯನು (೧೫೨೯-೧೫೪೨) ಸಿಂಹಾಸನ ಏರುವಲ್ಲಿ ಸಮರ್ಥನಾದರೂ ರಾಮರಾಯನ ಹಿಡಿತದಲ್ಲೇ ಇರಬೇಕಾಯಿತು. ಪೆನುಗೊಂಡದಲ್ಲಿ ವಿಜಯನಗರದ ಶಾಖೆಯೊಂದಿದ್ದು, ಬಹುಶಃ ರಾಮರಾಯನ ಸಹೋದರರಲ್ಲೊಬ್ಬನಾದ ವೆಂಕಟಾದ್ರಿಯು ಅಲ್ಲಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದು, ವಿಜಯನಗರದ ಸಿಂಹಾಸನಕ್ಕೆ ನಡೆದ ಕಲಹದಲ್ಲಿ ಅವನು ಭಾಗವಹಿಸಿರಬೇಕು, ಅವನಿಗೆ ಹಾಗಲವಾಡಿಯ ಸಾಲಿನಾಯಕನು ಸೈನಿಕ ಸಹಾಯ ನೀಡಲು ಹೋಗಿದ್ದು, ಅದಕ್ಕೆ ಪ್ರತಿಯಾಗಿ ಕೆಲವು ಊರುಗಳ ಜಹಗೀರು ಬಯಸಿ, ಅದು ಸಫಲವಾಗದೆ ಕೇವಲ ಕೊಳ್ಳೆಯೊಡನೆ ಹಿಂದಿರುಗಿದನೆಂದು ಈ ಪಾಳೆಗಾರರ ಚರಿತ್ರೆಯಲ್ಲಿ ಹೇಳಿದೆ. ಘಟನೆ ಬಗೆಗೆ ವಿವರಗಳು ಇಲ್ಲದ್ದರಿಂದ ಕೇವಲ ಊಹೆಯೊಂದನ್ನೆ ಆಧರಿಸಬೇಕಾಗುತ್ತದೆ. ಈ ನಾಯಕನು ತನ್ನ ಸಹೋದರನ ಹೆಸರಿನಲ್ಲಿ ಚಿಕ್ಕನಾಯಕನಹಳ್ಳಿಯನ್ನು ಕಟ್ಟಿಸಿದನು. ಹೊನ್ನವಳ್ಳಿ, ತುರುವೇಕೆರೆ ಮತ್ತು ನೊಣವಿನಕೆರೆಗಳು ಇವನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ ಕೆಲವು ಊರುಗಳು.

೧೫೪೪ರಲ್ಲಿ ಸಾಲಿನಾಯಕ ಮರಣಹೊಂದಿದ. ಅವನ ಮಗ ಭೈರವನಾಯಕನು ಮೂರನೆಯ ಪಾಳೆಗಾರನಾಗಿ ಅದೇ ವರುಷ ಪಟ್ಟಾಭಿಷಿಕ್ತನಾದ. ಪ್ರಾರಂಭ ಇವನು ಸೆಟ್ಟಿಕೆರೆಯನ್ನು ಜಯಿಸಿ, ಅನಂತರ ಚಿಕ್ಕನಾಗನಹಳ್ಳಿ ಎಂಬ ಊರನ್ನು ಸ್ಥಾಪಿಸಿ ಅಲ್ಲಿ ಅಳ್ವೇರಿ, ಚಂದ್ರಶಾಲೆ, ಚಾವಡಿ ಇವೆಲ್ಲವನ್ನೂ ನಿರ್ಮಿಸಿ ಅದನ್ನು ತನ್ನ ರಾಜಧಾನಿಯಾಗಿಸಿಕೊಂಡನು. ಕಂದಿಕೆರೆಯಲ್ಲೂ ಕೋಟೆ ಕಟ್ಟಲಾಯಿತು. ಪಾಳೆಯ ಪಟ್ಟನ್ನು ವಿಸ್ತರಿಸಿದ. ಇವನು ವೀರಶೈವ ಮತವನ್ನವಲಂಬಿಸಿದುದರ ಹಿನ್ನೆಲೆಯಾಗಿ 'ಚರಿತ್ರೆ'ಯಲ್ಲಿ ಐತಿಹ್ಯಗಳನ್ನು ಪ್ರಸ್ತಾಪಿಸಲಾಗಿದೆ. ಸಿದ್ಧರಾಮೇಶ್ವರನನ್ನು ಇವನು ತನ್ನ ಮನೆದೇವರನ್ನಾಗಿ ಪರಿಗ್ರಹಿಸಿದನು. ಅಲ್ಲದೆ ಇವನಿಗೆ ಪುತ್ರಸಂತಾನವಿಲ್ಲದ್ದರಿಂದಲೂ ಸಿದ್ಧರಾಮೇಶ್ವರನನ್ನು ಆರಾಧಿಸಿದಂತೆ ತೋರುತ್ತದೆ. ಇದರ ಪರಿಣಾಮವಾಗಿ, ಅನಂತರ ಅವನಿಗೆ ಜನಿಸಿದ ಹಿರಿಯ ಮುದಿಯಪ್ಪನಾಯಕನಿಗೆ ಅವನಿನ್ನು ಕೂಸಾಗಿದ್ದಾಗಲೇ ಜಂಗಮದೀಕ್ಷೆಯನ್ನು ಕೊಡಿಸಿದನು. ಐತಿಹ್ಯ ಹೇಳುವಂತೆ, ಮುದಿ ಜಂಗಮನ ಪ್ರಸಾದದಿಂದ ಜನಿಸಿದುದರಿಂದ ಇವನಿಗೆ ಮುದಿಯಪ್ಪನೆಂದು ಹೆಸರಿಟ್ಟರು. ಹಾಗೆಯೇ ಹಾಗಲವಾಡಿ ವಂಶದವರೆಲ್ಲ ವೀರಶೈವರಾಗಿ ಹೋದರು. ಹಾಗಲವಾಡಿಯು ವೀರಶೈವ ಸಂಸ್ಥಾನವೆಂದಾಯಿತು. ಭೈರವನಾಯಕನು ೧೫೭೮ರಲ್ಲಿ ಮೃತನಾಗಲು ಅವನ ಮಗ ಹಿರಿಯ ಮುದಿಯಪ್ಪನಾಯಕನು ಸಿಂಹಾಸನ ಏರಿ

ಗ್ರಹಿಸಿದನು. ಇವನು ಆಳಿದುದು ೧೬೧೮ರ ವರೆಗೆ. ಹಾಗಲದಹಳ್ಳಿಯು ಹಾಗಲವಾಡಿಯಾಗಿ ಪರಿವರ್ತನೆ ಹೊಂದಿದುದು ಇವನ ಕಾಲದಲ್ಲೆ. ಆದರೂ ಚಿಕ್ಕನಾಯಕನ ಹಳ್ಳಿಯೇ ಇವನ ರಾಜಧಾನಿಯಾಗಿದ್ದಿತು.

ಚಿಕ್ಕನಾಯಕನಹಳ್ಳಿ ಹೋಬಳಿ ಜೋಗಿಹಳ್ಳಿ ದಳವಾಯಿ ಮಠದಲ್ಲಿರುವ ಶಾಸನವು (೧೬೨೩) ಮುದಿಯಪ್ಪನಾಯಕ ನನ್ನು ಪ್ರಸ್ತಾಪಿಸುತ್ತದೆ. ಈ ಶಾಸನ ನೀಡಿದ ಸಮಯದಲ್ಲಿ ಚಿಕ್ಕನಾಯಕನಹಳ್ಳಿಯೇ ಇನ್ನೂ ಇವನ ರಾಜಧಾನಿಯಾಗಿದ್ದಿತು. ಇವನ ಅವಧಿಯಲ್ಲಿ 'ವೀರ ಮಹೇಶ್ವರಾರಾಧಕ'ನಾದ ಶೀಲವಂತ ದಳವಾಯಿ ಎಂಬುವನು ಸಜ್ಜನ, ಶುದ್ಧ ಶಿವಾಚಾರ ಸಂಪನ್ನ ರಾದ ಗುರುಗಳ ಮಠಕ್ಕೆ ದತ್ತಿ ನೀಡಿದ ವಿಚಾರ ಈ ಶಾಸನದಿಂದ ವ್ಯಕ್ತಪಡುತ್ತದೆ. ಇಲ್ಲಿನ ಸಮಸ್ಯೆಯೆಂದರೆ, ಈ ಶಾಸನ ಮತ್ತು 'ಚರಿತ್ರೆ'ಯಲ್ಲಿ ನಮೂದಿಸಿರುವ ತೇದಿಗಳಿಗೆ ತಾಳೆ ಹೊಂದುವುದಿಲ್ಲ, ಕೈಬರಹದ ದಾಖಲೆಗಳಲ್ಲಿ ಕಾಲ ವ್ಯತ್ಯಾಸವಾಗು ವುದು ಅಪರೂಪವೇನಲ್ಲ. ಆದ್ದರಿಂದ ಈ ಶಾಸನವನ್ನೆ ಮುಖ್ಯಾಧಾರವಾಗಿಟ್ಟುಕೊಂಡು ಕಾಲನಿರ್ಣಯದ ಬಗೆಗೆ ಪ್ರಯತ್ನಿಸ ಬಹುದು. ಒಟ್ಟಿನಲ್ಲಿ ಹಿರಿಯ ಮುದಿಯಪ್ಪನ ಅವಧಿಯಲ್ಲಿ ವೀರಶೈವ ಮಠಗಳಿಗೆ ನೆರವು ದೊರಕಿತು. ಹಾಗಲವಾಡಿ ಸಂಸ್ಥಾ ನವು ವಿಸ್ತರಿಸಲ್ಪಟ್ಟು 'ಒಂದು ಲಕ್ಷ' ಸೀಮೆಯಾಯಿತು. ರಾಜಚಿಹ್ನೆಯುಳ್ಳ ಝುಂಡಾ ಕೋಟೆಯ ಮೇಲೆ ಹಾರಾಡಿತು.

ಈ ಮೇಲಿನ ಶಾಸನದ ವರುಷದಲ್ಲೆ (೧೬೨೩) ಸೋಸಲೆ ರೇವಣಾಚಾರ್ಯ ಎಂಬ ವೀರಶೈವ ಕವಿಯು ಇದ್ದುದು ತಿಳಿದುಬರುತ್ತದೆ (ಕ.ಕ.ಚ ೨, ಪು. ३२०–२१). ಇವನು ಮಹಿಮ್ನಸ್ತವ, ವೀರಶೈವ ಸಿದ್ಧಾಂತ ಶಿಖಾಮಣಿ, ಶಿವಾಧಿಕ್ಯ ಶಿಖಾ ಮಣಿ, ಸದ್ಗುರು ರಗಳೆ ಇವುಗಳಿಗೆ ಕನ್ನಡ ವ್ಯಾಖ್ಯಾನವನ್ನೂ ಶಾರೀರ ಪ್ರಕಾಶಿಕೆ, ಅಂತಃಕರಣ ಪ್ರಕಾಶಿಕೆ, ಸ್ವಸ್ವರೂಪ ಪ್ರಕಾ ಶಿಕೆ, ನಿಜದೀಪ್ತಿ ಪ್ರಕಾಶಿಕೆ ಎಂಬ ಗ್ರಂಥಗಳನ್ನೂ ಬರೆದಿರುವನು. 'ಚಿಕನಾಯಕಪೂಷ್ಕರ್ತುರ್ಮುದಿನಾಯಕ ಭೂಭುಜಃ ಮುದೇ ಟೀಕಾಕಾರಿತೇಯಂ ಸೋಮಶೇಖರಯೋಗಿನಾ॥' ಅಂದರೆ ಮಹಿಮ್ನಸ್ತವ ಟೀಕೆಯನ್ನು ಚಿಕ್ಕನಾಯಕಪುರದ (ಚಿಕ್ಕನಾಯಕನ ಹಳ್ಳಿ) ಅರಸನಾದ ಮುದಿ[ಯಪ್ಪ]ನಾಯಕನ ಸಂತೋಷಾರ್ಥವಾಗಿ ಸೋಮಶೇಖರ ಯೋಗಿ ತನ್ನಿಂದ ಮಾಡಿಸಿದನೆಂದು ಈ ಕವಿ ಹೇಳಿಕೊಂಡಿರುವುದರಿಂದ ಬಹುಶಃ ಇವನು ಈ ಹಿರಿಯ ಮುದಿಯಪ್ಪನಾಯಕನ ಆಸ್ಥಾನದಲ್ಲಿದ್ದಿರಬೇಕು. ಇದು ಪರಿ ಶೀಲನಾ ಯೋಗ್ಯ.

ಹಿರಿಯ ಮುದಿಯಪ್ಪನಾಯಕನ ತರುವಾಯ ಬಂದ ಐದನೆಯ ದೊರೆ ಇಮ್ಮಡಿ ಭೈರಪ್ಪನಾಯಕನು (೧೬೧೮-೧೬೩೬) ಬಿಜಾಪುರದ ಸೇನಾನಿ ರಣದುಲ್ಲಾಖಾನನೊಡನೆ ಹೋರಾಡುವ ಸನ್ನಿವೇಶ ಒದಗಿತು. ಹೋರಾಡಲು ಮನಸ್ಸಿಲ್ಲದ ನಾಯಕನು ಖಾನನೊಡನೆ ಕೌಲು ಮಾಡಿಕೊಂಡು ಚಿಕ್ಕನಾಯಕನಹಳ್ಳಿಯನ್ನು ಅವನಿಗೆ ಬಿಟ್ಟುಕೊಟ್ಟು ೧೬೪೧ರಲ್ಲಿ ಹಾಗಲವಾಡಿಯನ್ನು ತನ್ನ ರಾಜಧಾನಿ ಮಾಡಿಕೊಂಡನು. ಇವನ ನಂತರ ೧೬೪೬ ರಿಂದ ೧೭೨೦ರ ವರೆಗೆ ಆರು, ಏಳು ಮತ್ತು ಎಂಟನೆಯ ಅರಸರು ಗಳಾದ ಚನ್ನಬಸವನಾಯಕ, ರಾಮಪ್ಪನಾಯಕ ಹಾಗೂ ಇಮ್ಮಡಿ ಚನ್ನಬಸಪ್ಪನಾಯಕರು ಇಲ್ಲಿ ಆಳ್ವಿಕೆ ನಡೆಸಿದರು. ಎಂಟನೆಯ ಅರಸನ ಕಾಲದಲ್ಲಿ ಹರತಿಕೋಟೆ ಆಕ್ರಮಣಕ್ಕೆ ಸಂಬಂಧಿಸಿದಂತೆ ಚಿತ್ರದುರ್ಗ ಮತ್ತು ಹಾಗಲವಾಡಿ ಪಾಳೆಯಗಾರರ ನಡುವೆ ನಡೆದ ಕಾಳಗದ ವಿನಾ ಇವರ ಕಾಲದಲ್ಲಿ ಇನ್ನಾವ ವಿಶೇಷಗಳೂ ಜರುಗಲಿಲ್ಲ. ಇಮ್ಮಡಿ ಚನ್ನಬಸಪ್ಪನ ಮಗ ಇಮ್ಮಡಿ ಮುದಿ ಯಪ್ಪನಾಯಕನ ಆಡಳಿತಾವಧಿಯು ಹಾಗಲವಾಡಿ ಪಾಳೆಯಪಟ್ಟಿನ ಸುವರ್ಣಯುಗವೆಂದರೆ ತಪ್ಪಾಗಲಾರದು. ಉತ್ತಮ ಸ್ವಭಾವ, ಅಭಿರುಚಿ, ಉದ್ದೇಶ, ಆದರ್ಶವುಳ್ಳ ಕೆಲವೇ ಪಾಳೆಯಗಾರರಲ್ಲಿ ಇವನೂ ಒಬ್ಬ. ೧೭೨೦ರಲ್ಲಿ ಪಟ್ಟಕ್ಕೆ ಬಂದ ಈ ಇಮ್ಮಡಿ ಮುದಿಯಪ್ಪನ ಕಾಲಕ್ಕೆ ಹೊಂದಿಕೊಳ್ಳುವ ೧೬೬೯ರ ತಾಮ್ರಪಟ ಶಾಸನವೊಂದಿದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕು ಹುಳಿಯೂರು ಹೋಬಳಿ ಜೋಡಿ ತಿರುಮಲಾಪುರದಲ್ಲಿ ದೊರೆತದ್ದೆಂದು ಹೇಳಲಾದ ಈ ತಾಮ್ರಪಟವು ಹಾಗಲವಾಡಿ ಪಾಳೆಯ ಗಾರರ ವಂಶಾವಳಿಯ ಮೇಲೆ ಸ್ವಲ್ಪ ಬೆಳಕು ಚೆಲ್ಲುತ್ತದೆ. ಗೋವಳ(ಗೌಳ)ಗೋತ್ರದ ಸಾಲಿನಾಯಕ–ಮಗ ಸಂಗಪ್ಪನಾಯಕ(?) ಇವನ ಮೊಮ್ಮಗ (ಇಮ್ಮಡಿ)ಚನ್ನಬಸವನಾಯಕ–ಇವನ ಮಗ ಮುದಿಯಪ್ಪನಾಯಕರಯ್ಯ ಎಂದು ತಿಳಿಯುವುದು. ಇಲ್ಲಿನ ಕಾಲ ವ್ಯತ್ಯಾಸ ಸಹಜವಾಗಿಯೇ ಗಮನಕ್ಕೆ ಬಂದರೂ ಈ ಶಾಸನದಲ್ಲಿ ಉಕ್ತವಾಗಿರುವ ಮುದಿಯಪ್ಪನು ಇಮ್ಮಡಿ ಮುದಿಯಪ್ಪ ನಾಯಕನೆಂದೇ ತಿಳಿಯಬೇಕಾಗುತ್ತದೆ. ಇಲ್ಲಿನ ವಿಶೇಷವೆಂದರೆ, ಶಾಸನದಲ್ಲಿ 'ನಾಯಕರಯ್ಯ' ಎಂದು ಬಳಸಲಾಗಿದೆ. ಈ ಮನೆ ತನದವರು 'ಐಯ್ಯ' (ಅಯ್ಯ)ನವರೆಂದು ಕರೆದುಕೊಳ್ಳುತ್ತಿದ್ದರೆಂದು ಚರಿತ್ರೆ ಯಲ್ಲಿ ಹೇಳಿದೆ. ಇದಕ್ಕೆ ಶಾಸನಾಧಾರ ಇರು ವುದು ಈ ತಾಮ್ರಪಟದಲ್ಲಿಯೇ ಎಂದು ತೋರುವುದು. ಇದೊಂದು ದಾನಶಾಸನ. ಇದರಲ್ಲಿ ಅಣೆಹಳ್ಳಿ ತೋಪಿನಲ್ಲಿ ನೂತನ ವಾಗಿ ನಿರ್ಮಿಸಲಾದ ಮಠದ ಪ್ರಸ್ತಾಪ ಬರುತ್ತದೆ.

ಇಮ್ಮಡಿ ಮುದಿಯಪ್ಪನಾಯಕನು ವಿದ್ವಾಂಸರನೇಕರಿಗೆ ಗ್ರಾಮಗಳನ್ನು ಉಂಬಳಿಯಾಗಿ ನೀಡಿ ಪ್ರೋತ್ಸಾಹಿಸಿದನು. ಕಾಶಿಯಲ್ಲಿ ಧರ್ಮಛತ್ರ ಕಟ್ಟಿಸಿ, ವೀರಶೈವಾಚಾರ ಸಂಪನ್ನರಾಗಿ, 'ಪರಲೋಕ ಸಾಧನೆಗೋಸ್ಕರ ಮಹಾಜ್ಞಾನಿಗಳಾದ ಮುದ್ದು ವೀರಸ್ವಾಮಿಗಳೆಂಬ ಜಂಗಮಶ್ರೇಷ್ಠರನ್ನು ಕಾಶೀಕ್ಷೇತ್ರದಿಂದ ಕರೆಯಿಸಿ ಇವರಿಂದ ತತ್ತ್ವಜ್ಞಾನೋಪದೇಶವನ್ನು ತೆಗೆದುಕೊಂಡು ಸಕಲ ಸಾಮ್ರಾಜ್ಯಯುಕ್ತವಾದ ರಾಜ್ಯಭಾರವನ್ನು ತ್ಯಜಿಸಿ ಜೀವನ್ಮುಕ್ತಿ, ಮುಂದೆ ನಡೆಯುವ ಕಾಲ ಸೂಚನೆ ಇವೇ ಮೊದಲಾದ

ಏಳುನೂರು ತತ್ತ್ವಗ್ರಂಥಗಳನ್ನು ಸ್ವತಃ ಮಾಡಿ,ತಮ್ಮ ದೇಶದೊಳಗೆ ಎಲ್ಲಾ ಜನರೂ ಜೀವನ್ಮುಕ್ತರಾಗಬೇಕೆಂದು ಯೋಚಿಸಿ, ಅನೇಕ ಜ್ಞಾನಿಗಳನ್ನಿಟ್ಟು ಅವರು ದೇಶನೊಳಗೆಲ್ಲಾ ಸಂಚಾರ ಮಾಡುತ್ತಾ ಸರ್ವಜನರಿಗೂ ತತ್ತ್ವವಿಚಾರವನ್ನು ಪದೇಶಿಸುತ್ತಾ ಇರುವಂತೆ ನೇಮಕ ಮಾಡಿದರು...' (ಚರಿತ್ರೆ, ಪು. ೧೯). ಜಂಗಮರಿಗೂ ಬ್ರಾಹ್ಮಣರಿಗೂ ಉದಾರಾಶ್ರಯ ನೀಡಿದ ಉದಾರತೆ ಈ ನಾಯಕನದು. ಬಂದಿಗಳನ್ನೂ ಉದಾರವಾಗಿ ನೋಡಿಕೊಳ್ಳುತ್ತಿದ್ದನಂತೆ. ತನ್ನ ಆಳ್ವಿಕೆಯ ಕೊನೆಯ ದಿವಸಗಳಲ್ಲಿ ಈತ ಧರ್ಮಬೋಧನೆಗಾಗಿ ದೇಶಯಾತ್ರೆ ಕೈಗೊಂಡನೆಂದು ತಿಳಿಯುವುದು. ಹಾಗಲವಾಡಿಯು 'ಧರ್ಮ ಸಂಸ್ಥಾನ'ವೆಂಬ ಖ್ಯಾತಿ ಪಡೆಯಲು ಇವನೂ ಪರೋಕ್ಷವಾಗಿ ಕಾರಣನೆನಿಸಿದ್ದಾನೆ.

೧೭೪೦ಕ್ಕೆ ಇಮ್ಮಡಿ ಮುದಿಯಪ್ಪನ ಆಳ್ವಿಕೆ ಮುಗಿದು ಹತ್ತನೆಯ ದೊರೆ ಮುದ್ದುವೀರಪ್ಪನಾಯಕನು ಪಟ್ಟಕ್ಕೆ ಬಂದನು. ಇವನ ಕಾಲ ೧೭೪೦ ರಿಂದ ೧೭೫೩. ಇವನು ಮೊಗಲರ ಸೇನಾಪತಿ ದಿಲಾವರಖಾನನೊಡನೆ ನಡೆಸಿದ ಹೋರಾಟದಲ್ಲಿ ಪರಾಕ್ರಮ ತೋರಿದನಲ್ಲದೆ ಆ ಸೇನಾನಿಯ ಮೆಚ್ಚುಗೆಯನ್ನೂ ಗಳಿಸಿ, ಅವನಿಂದ ೧೭೫೨ರಲ್ಲಿ 'ರಾಜಾಜಂಗ್‌ಬಹಾದೂರ್' ಎಂಬ ಬಿರುದನ್ನು ಪಡೆದನು. ಅಲ್ಲದೆ ಹನ್ನೆರಡು ಹಳ್ಳಿಗಳು ಸಹ ಖಾನನಿಂದ ಇವನಿಗೆ ದೊರೆತವು. ಇವನ ನಂತರ ಪ್ರಸನ್ನ ರಾಮಪ್ಪನಾಯಕನೂ (೧೭೫೩–೧೭೫೬) ಮುಮ್ಮಡಿ ಚನ್ನಬಸವನಾಯಕನೂ (೧೭೫೬–೧೭೭೫) ಆಳಿದರು. ಈ ವೇಳೆಗೆ ಹೈದರಾಲಿಖಾನನು ಕರ್ನಾಟಕದ ಸಣ್ಣ–ಪುಟ್ಟ ಪಾಳೆಯಗಾರರನ್ನೆಲ್ಲ ಹತ್ತಿಕ್ಕುವ ಕೆಲಸ ಪ್ರಾರಂಭಿಸಿದ್ದನು. ವಿಜಯನಗರದ ತರುವಾಯ ಸರ್ವದೃಷ್ಟಿಯಿಂದಲೂ ಆದರ್ಶ ರಾಜ್ಯ ಹಾಗೂ ಬಲಿಷ್ಠರಾಜ್ಯವೆನಿಸಿದ್ದ ಕೆಳದಿ ಸಂಸ್ಥಾನವು ೧೭೬೩ರಲ್ಲಿ ಅವನ ವಶವಾಯಿತು. ಅದಕ್ಕೆ ಮುನ್ನ ನಿಡುಗಲ್ಲು, ಹೊಸಕೋಟೆಯಂತಹ ಎಷ್ಟೋ ಪಾಳೆಯಪಟ್ಟುಗಳು ಅವನ ಅಧೀನಕ್ಕೆ ಸೇರಿ ಹೋಗಿದ್ದವು. ಈಗ ಹಾಗಲವಾಡಿಯ ಸರದಿ ಬಂದಿತು. ಪ್ರಾರಂಭದಲ್ಲಿ ಖಂಡಣಿ ಹಣಕ್ಕಾಗಿ ಹೈದರನು ಮುಮ್ಮಡಿ ಚನ್ನಬಸವನಾಯಕನನ್ನು ಒತ್ತಾಯಿಸಿದನು. ಅನಂತರ ಕುಂಟುನೆಪ ಹುಡುಕಿ ಈ ನಾಯಕನನ್ನು ಶ್ರೀರಂಗಪಟ್ಟಣದಲ್ಲಿ ಸೆರೆವಾಸ ವಿಧಿಸಿದನು. ಈ ನಾಯಕನು ಸೆರೆಯಲ್ಲಿಯೇ ಕೊನೆಯುಸಿರೆಳೆಯಬೇಕಾಯಿತು. ಆಗ ಹಾಗಲವಾಡಿಯಲ್ಲಿದ್ದ ಶ್ರೀರಂಗಪಟ್ಟಣದ ವಕೀಲ ನಾರಾಯಣಪ್ಪ ಎಂಬುವನು ಹೈದರಾಲಿಯ ಸೂಚನೆಯಂತೆ ಚನ್ನಬಸವನಾಯಕನ ಮಗ ಮುಮ್ಮಡಿ ಮುದಿಯಪ್ಪ ನಾಯಕನನ್ನು ಅರಸನೆಂದು ಘೋಷಿಸಿದನು. ಮುದಿಯಪ್ಪನು ಇನ್ನು ಬಾಲಕನಾಗಿದ್ದ ಕಾರಣದಿಂದ ಸಮಯಸಾಧಕನಾಗಿದ್ದ ಹೈದರನು ಹಾಗಲವಾಡಿಯನ್ನು ತನ್ನ ಆಧಿಪತ್ಯಕ್ಕೆ ಸೇರಿಸಿಕೊಂಡನು. ಹಾಗಲವಾಡಿಯ ಇತಿಹಾಸ ಇಲ್ಲಿಗೆ ಮುಗಿದಂತಾಯಿತು. ಕೊನೆಯ ಅರಸ ಸಿಂಹಾಸನವನ್ನೇರಿದ ಕಾಲಕ್ಕೆ ಚೇಳೂರು, ಬಿದರೆ, ತುಮಕೂರು, ಕಡಬ, ಕಂದಿಕೆರೆ, ಚಿಕ್ಕನಾಯಕನಹಳ್ಳಿ, ತುರುವೇಕೆರೆ ಮೊದಲಾದ ಪ್ರದೇಶಗಳು ಹಾಗಲವಾಡಿ ಸಂಸ್ಥಾನಕ್ಕೆ ಸೇರಿದ್ದವು. ಬದುಕಿನಲ್ಲಿ ವೈರಾಗ್ಯ ತಾಳಿದ ಮುಮ್ಮಡಿ ಮುದಿಯಪ್ಪನಾಯಕನು ಜಂಗಮನಾಗಿ ದೇಶಾಂತರ ಹೊರಟುಹೋದನಂತೆ.

ಹಾಗಲವಾಡಿ ಪಾಳೆಯಗಾರರನ್ನು ಕುರಿತು ಎಂ. ಎಸ್. ಪುಟ್ಟಣ್ಣನವರು ಸಂಗ್ರಹಿಸಿ ಪ್ರಕಟಿಸಿದ 'ಹಾಗಲವಾಡಿ ಪಾಳೆಯಗಾರರು' (ಒಳಪುಟದಲ್ಲಿ 'ಹಾಗಲವಾಡಿ ಪಾಳಯಗಾರರ ಚರಿತ್ರೆ') ಏಕೈಕ ಆಧಾರ ಗ್ರಂಥವೆನಿಸಿದೆ. ಉಳಿದಂತೆ ಕೆಲವು ದಾನಶಾಸನಗಳಿವೆ. ಇವುಗಳಿಂದಲೇ ಈ ಪಾಳೆಯಗಾರರ ಸಮಗ್ರ ಇತಿಹಾಸ ರಚಿಸಲಾಸ್ಪದವಿಲ್ಲ. ವೀರಶೈವ ಧರ್ಮ,ಸಾಹಿತ್ಯ ವಾಙ್ಮಯಗಳಿಗೆ ಈ ಪಾಳೆಯಗಾರರು ಸಲ್ಲಿಸಿದ ಕಾಣಿಕೆ ಮಹತ್ತರವಾದುದೆಂದು ತೋರಿದರೂ ಅದನ್ನು ಪುಷ್ಟೀಕರಿಸಲು, ಸವಿಾಕರಿಸಲು, ವಿವರಿಸಲು ಆಧಾರಗಳ ಅಭಾವ. ಉದಾಹರಣೆಗೆ, ಹಾಗಲವಾಡಿ ಸಿದ್ಧರಾಮಪ್ಪನಾಯಕನೆಂಬುವನು ಸುಮಾರು ೧೭೦೦ರಲ್ಲಿ 'ಮಹಾನುಭಾವ ಪ್ರಕಾಶಿಕೆ' ಎಂಬ ಗದ್ಯ ಗ್ರಂಥ ರಚಿಸಿರುವನೆಂದೂ ಇದನ್ನು ಪೂರ್ವದಲ್ಲಿ ಸಿದ್ಧಲಿಂಗೇಶ್ವರನು ಶೀಲವಂತ ಮುರಿಗೆಪ್ಪನೆಂಬ ಶಿವಶರಣನಿಗೆ ನಿರೂಪಿಸಿದಂತೆ ಹೇಳಿದೆಯೆಂತಲೂ 'ಕವಿಚರಿತೆ'ಯ ಎರಡನೆಯ ಸಂಪುಟ, ಪುಟ ೫೩೨ರಲ್ಲಿ ಹೇಳಿದೆ. ೧೬೭೧ರಲ್ಲಿ ದೊರೆತನ ಮಾಡಿದ ಹಾಗಲವಾಡಿ ಸಂಸ್ಥಾನದ ಏಳನೆಯ ಅರಸ ರಾಮಪ್ಪನೇ ಅಥವಾ ೧೭೫೩ ರಿಂದ ೧೭೫೬ರ ವರೆಗೆ ಆಳಿದ ಹನ್ನೊಂದನೆಯ ದೊರೆ ಪ್ರಸನ್ನರಾಮಪ್ಪನಾಯಕನೇ ಈ ಸಿದ್ಧರಾಮಪ್ಪನಾಯಕ ಇರಬಹುದೇ ? ಸ್ಪಷ್ಟಪಡುವುದಿಲ್ಲ. ಇವರ ಕಾಲದಲ್ಲಿ ಶಿವಾಲಯಗಳು ನಿರ್ಮಾಣವಾದುವೆಂದು ಹೇಳಿದೆ. ಇವರೀರ್ವರೂ ಪಂಡಿತರಾಗಿದ್ದರೆಂದು ತಿಳಿಯಲು ಅವಕಾಶವೇ ಇಲ್ಲ. 'ಸಿದ್ಧರಾಮಪ್ಪನಾಯಕ' ಎನ್ನುವ ಹೆಸರು ಚರಿತ್ರೆಯಲ್ಲಿ ಕಂಡುಬರುವುದಿಲ್ಲ. ಇನ್ನೊಂದು ಸಂಗತಿಯೆಂದರೆ, ಚಿತ್ರದುರ್ಗದ ಬೃಹನ್ಮಠಕ್ಕೆ ತಮ್ಮ ಭಕ್ತಿಯ ಪ್ರತೀಕವಾಗಿ ಈ ಪಾಳೆಯಗಾರರು ಡಮರುಗವೊಂದನ್ನು ಅರ್ಪಿಸಿದ್ದಾರೆ. ಅದರ ಮೇಲೆ 'ಹಾಗಲವಾಡಿ ಅರಸು ಮುದ್ವೀರಪ್ಪ ನಾಯಕರ ಭಕ್ತಿ' ಎಂದಷ್ಟೆ ಇದೆ (ಜಂಗಮ ಜ್ಯೋತಿ, ಪು. ೫೧). ಕಾಲ ನಿರ್ದೇಶವಿಲ್ಲ. 'ರಾಜಾಜಂಗ್ ಬಹಾದೂರ್' ಬಿರುದು ಪಡೆದ ಹತ್ತನೆಯ ದೊರೆ ಮುದ್ದುವೀರಪ್ಪನಾಯಕನೇ ಈ ಡಮರುಗ ಶಾಸನದ ವ್ಯಕ್ತಿಯೆಂದು ಭಾವಿಸಲಾಗಿದೆ. 'ಚರಿತ್ರೆ'ಯಲ್ಲಿ ನೀಡಿರುವ ದಾನ ಶಾಸನದ ಸಂಗ್ರಹ ವಿನಾ ಈ ಪಾಳೆಯಗಾರರ ಬಹಳಷ್ಟು ವಿಚಾರಗಳು ಇನ್ನೂ ಗುಪ್ತವಾಗಿವೆ. ಈ ದಿಸೆಯಲ್ಲಿ ಕೆಲವರಾದರೂ ಗಮನ ಹರಿಸಬೇಕು.

## ಮತ್ತೋಡು ಮನೆತನ

ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕು ವೇದಾವತಿ ನದಿಯ ಬಲದಂಡೆಯ ಸಮೀಪದಲ್ಲಿರುವ ಮತ್ತೋಡು ಇಂದು ಸಾಮಾನ್ಯ ಗ್ರಾಮ. ಹಿಂದೆ ಇದು ಇಲ್ಲಿನ ಪಾಳೆಯಗಾರರ ರಾಜಧಾನಿಯಾಗಿದ್ದಿತು. ಶಾಸನಗಳಲ್ಲಿ ಈ ಊರನ್ನು ಮತ್ತಿನಡು, ಮತ್ತನಡು, ಮತ್ತೋಡು ಎಂದೆಲ್ಲ ಸಂಬೋಧಿಸಲಾಗಿದೆ. 'ಮತಿವಂತರ ನಾಡು' ಮತ್ತೋಡು ಆಯಿತೆಂದು ಪಂಡಿತರು ಅಭಿಪ್ರಾಯಪಡುವರು. ಇಲ್ಲಿ ಆಳಿದ ಪಾಳೆಯಗಾರರು ವೀರಶೈವ ಮತಾನುಯಾಯಿಗಳಾಗಿದ್ದರೆಂದು ಅವರ ಶಾಸನಗಳಿಂದಲೇ ತಿಳಿದು ಬರುತ್ತದೆ.

ಮತ್ತೋಡು ಪಾಳೆಯಗಾರರ ಮೂಲಪುರುಷ ಗಿರಿಯಪ್ಪ ಎಂಬುವನು. ಪೆನುಗೊಂಡದ ಅಧಿಪತಿ ವೆಂಕಟಪದಿರಾಯನಿಂದ ೧೬೦೪ರಲ್ಲಿ ಲಕ್ಕವ್ವನಹಳ್ಳಿ ಜಹಗೀರು ಪಡೆದು (ಇವನು ಇದೇ ಊರಿನ ಮೂಲ ನಿವಾಸಿಯೆಂದೂ ಹೇಳಿದೆ) ಕ್ರಮೇಣ ಸುತ್ತಮುತ್ತಲಿನ ಪ್ರದೇಶಗಳನ್ನು ತನ್ನ ವಶಮಾಡಿಕೊಂಡು ಮತ್ತೋಡು ಸಂಸ್ಥಾನದ ಉದಯಕ್ಕೆ ಕಾರಣನಾದನು. ಇವನ ನಂತರ ಬಂದ ದೊಡ್ಡಾಳ ನಾಯಕನು ೧೭೧೧ರಲ್ಲಿ ಮತ್ತೋಡಿನಲ್ಲಿ ಕೋಟೆ ಕಟ್ಟಿಸಿ ಬಲಪಡಿಸಿದನು. ಇವನೇ ಈ ಮನೆತನದ ಮೊದಲ ವೀರಶೈವ. ಇವನ ತರುವಾಯ ಆಳಿದವರು ಸಂಗಪ್ಪನಾಯಕ, ಹಾಲಪ್ಪನಾಯಕ, ಸಿದ್ಧಪ್ಪನಾಯಕ, ಇಮ್ಮಡಿ ದೊಡ್ಡಾಳ ನಾಯಕ. ಹೊಳಲ್ಕೆರೆ ಮತ್ತು ಹಿರಿಯೂರು ತಾಲ್ಲೂಕುಗಳ ಕೆಲ ಭಾಗಗಳಲ್ಲಿ ಇವರ ಒಡೆತನವಿದ್ದಿತು. ಸಿದ್ಧಪ್ಪನಾಯಕನ ಮಗ ಹಾಲಪ್ಪನಾಯಕನು ಚಿತ್ರದುರ್ಗ ಪಾಳೆಯಗಾರರೊಂದಿಗೆ ಪೈಪೋಟಿ ನಡೆಸುವುದರೊಂದಿಗೆ ಮತ್ತೋಡಿನ ಅವನತಿಗೆ ಕಾರಣನಾದನು. ೧೭೭೯ರಲ್ಲಿ ಚಿತ್ರದುರ್ಗವು ಹೈದರಾಲಿಯ ವಶಕ್ಕೆ ಬಂದಾಗ ಮತ್ತೋಡು ಸಹ ಅವನ ರಾಜ್ಯದ ಒಂದು ಭಾಗವಾಯಿತು. ಆದರೆ ಮತ್ತೋಡಿನ ಮನೆತನಕ್ಕೆ ಸೇರಿದ ಶಾಸನಗಳು ಬೇರೆಯದೇ ಆದ ವಂಶಾವಳಿ ನೀಡುತ್ತವೆ. ಹೊಳಲ್ಕೆರೆ ತಾಲ್ಲೂಕು ನೇರಲಕೆರೆಯಲ್ಲಿ ದೊರೆತ ೧೭೩೬ರ ಶಾಸನವೊಂದು, ಉಚ್ಚಕುಲದಿಂದ ಬಂದ, ಸುಂದರಾಂಗನೆನಿಸಿದ ಹಾಗೂ ಶೈವಶಾಸ್ತ್ರಗಳಲ್ಲಿ ಪಾರಂಗತನಾದ ಹಾಲಪ್ಪನಾಯಕನೇ ಮೂಲಪುರುಷ ಎನ್ನುತ್ತದೆ. ಇವನ ಕಾಲ ತಿಳಿಯದು. ಈ ಶಾಸನ ನೀಡಿದವನು ಇದೇ ವಂಶದ ಹಾಲರಾಜ. ಶಾಸನದ ಪ್ರಕಾರ, ಹಾಲಪ್ಪ–ದೊಡ್ಡಪ್ಪ–ಸಂಗಪ್ಪ–ಹಾಲರಾಜ-ಇವನ ಮಕ್ಕಳು ಸಿದ್ಧರಾಯ ಮತ್ತು ದೊಡ್ಡಣ್ಣ. ಹಾಲಪ್ಪನಾಯಕನು ವಿಜಯನಗರದ (ಒಂದನೆಯ ?) ಹರಿಹರನ ಸಮಕಾಲೀನನೆಂದು (೧೪ನೆಯ ಶತಮಾನ) ಶಾಸನದಲ್ಲಿದೆ. ಆದರೆ ೧೬೭೨ರಲ್ಲಿ ಈ ವಂಶದ ದೊಡ್ಡಣ್ಣನಾಯಕ ನೀಡಿದ ಶಾಸನದಲ್ಲಿ ಈ ಮೇಲಿನ ಯಾವುದೇ ವಿಚಾರವಿಲ್ಲ.

ಮತ್ತೋಡು ಪಾಳೆಯಗಾರರು ಪ್ರಜಾಹಿತ ಕಾರ್ಯಗಳಲ್ಲಿ ಆಸಕ್ತಿ ವಹಿಸಿದ್ದರು. ಅಗ್ರಹಾರ ಮತ್ತು ಧರ್ಮಪೀಠಗಳಿಗೆ ದತ್ತಿ ಬಿಟ್ಟರು. ದೊಡ್ಡಣ್ಣನಾಯಕನು ೧೬೭೨ರಲ್ಲಿ ಸಂಸ್ಥಾನದಲ್ಲಿನ ಕ್ಷೌರಿಕರಿಗೆ ವಿಧಿಸಿದ್ದ ತೆರಿಗೆಯನ್ನು ಮನ್ನಾಮಾಡಿ ಉದಾರತೆ ತೋರಿದನು. ಅನಂತರ ಬಂದ ಸಂಗಪ್ಪನಾಯಕನ ಮಗ ಹಾಲಪ್ಪನಾಯಕನು ೧೭೦೧ ರಲ್ಲಿ ತನ್ನ ತಂದೆ–ತಾಯಿಯರಿಗೆ ಶಿವಸಾನ್ನಿಧ್ಯ ದೊರಕಲೆಂಬ ಉದ್ದೇಶದಿಂದ ಮತ್ತೋಡಿನಲ್ಲಿ ಮುರಿಗೆಸ್ವಾಮಿಗಳ (ವಿರಕ್ತ)ಮಠವನ್ನು ಕಟ್ಟಿಸಿ ಅದರ ಪಾಲನೆಗೆ ಅರೆಹಳ್ಳಿಯನ್ನು ಉಂಬಳಿ ಬಿಟ್ಟನು. ಹಾಲಪ್ಪನಾಯಕನ ಮಗ ಹಾಲರಾಜನು (೧೭೦೬–೧೭೩೬) ಗಂಜಗೆರೆ ಎಂಬಲ್ಲಿ ಹಿಂದೆ ದೊಡ್ಡಣ್ಣನಾಯಕನು ಸ್ಥಾಪಿಸಿದ್ದ ಗಂಜಗೆರೆ ಅಗ್ರಹಾರವನ್ನು ಪುನಃ ಸ್ಥಾಪಿಸಿ, ಅದಕ್ಕಿಟ್ಟಿದ್ದ ನರಸಾಪುರ ಎಂಬ ಹಿಂದಿನ ಹೆಸರನ್ನೆ ಮತ್ತೆ ಅನುಸರಣೆಗೆ ತಂದನು.

ಈ ಪಾಳೆಯಗಾರರು ವೀರಶೈವರೆಂದು ಹಿಂದೆಯೇ ಹೇಳಿದೆ. ೧೭೦೧ರಲ್ಲಿ ಸಂಗಪ್ಪನಾಯಕನ ಮಗ ಹಾಲಪ್ಪನಾಯಕನು ಮತ್ತೋಡಿನ ವಿರಕ್ತಮಠ ಕಟ್ಟಿಸುವ ಸಮಯದಲ್ಲಿ ಚಿತ್ರದುರ್ಗ ಸಂಸ್ಥಾನದಲ್ಲಿ ಆಳುತ್ತಿದ್ದವನು ಬಿಚ್ಚುಗತ್ತಿ ಭರಮಣ್ಣನಾಯಕ (೧೬೮೯–೧೭೨೧). ಇವನು ಚಿತ್ರದುರ್ಗ ಬೃಹನ್ಮಠದ ಸ್ಥಾಪನೆಗೆ ಕಾರಣರಾದ ಮುರುಗೇಂದ್ರ ರಾಜೇಂದ್ರರಿಗೆ (೧೬೪೦–೧೭೧೦) ಬೆಟ್ಟದ ಮೇಲೆ ಮಠವೊಂದನ್ನು ಕಟ್ಟಿಸಿ ಅದರ ಪೋಷಣೆ ಮಾಡುತ್ತಿದ್ದ. ಈ ಮುರುಗೇಂದ್ರರ ಪ್ರಭಾವ ಮತ್ತೋಡು ಪಾಳೆಯಗಾರರ ಮೇಲೂ ಆದಂತೆ ತೋರುತ್ತದೆ. ಈ ಬಗೆಗೆ ಖಚಿತವಾಗಿ ಹೇಳಲು ಸಾಧ್ಯವಿಲ್ಲದಿದ್ದರೂ ಚಿತ್ರದುರ್ಗ ಬೃಹಸ್ಮಠದ ಒಂದು ಶಾಖೆ ಈ ಅವಧಿಯಲ್ಲಿ ಮತ್ತೋಡಿನಲ್ಲೂ ಸ್ಥಾಪಿತವಾಯಿತೆಂದು ಒಪ್ಪಬಹುದು. ಇಲ್ಲಿನ ಮಠದ ಗೋಡೆಗಳ ಮೇಲೆ ಚಿತ್ರಗಳನ್ನು ಬಿಡಿಸಿದ್ದರಿಂದ ಅದನ್ನು ಚಿತ್ರಕಲ್ಲು ಮಠವೆಂದು ಕರೆಯಲಾಯಿತಂತೆ. ಚಿತ್ರಕಲ್ಲು ಎಂಬುದು, ಚಿತ್ರದುರ್ಗಕ್ಕೂ ಅನ್ವಯವಾಗುವುದರಿಂದ ಮೇಲಿನ ಮಾತಿಗೆ ಇದು ಪುಷ್ಟಿ ನೀಡುವಂತೆ ತೋರುತ್ತದೆ. ಇಂದು ಮತ್ತೋಡಿನ ಬೃಹನ್ಮಠದ ಜಮೀನಿನಲ್ಲಿರುವ ಈ ಮಠದ ಅವಶೇಷಗಳನ್ನು ಕಾಣಬಹುದು.

## ಬಿಜ್ಜಾವರ ಮನೆತನ

ತುಮಕೂರು ಜಿಲ್ಲೆ ಮಧುಗಿರಿಯ ಅಕ್ಕಪಕ್ಕಗಳಲ್ಲಿ ಇರುವ ಬಿಜ್ಜಾವರ ಮತ್ತು ಸಿದ್ಧಾಪುರಗಳು ಹದಿನಾರನೆಯ ಶತಮಾನದಲ್ಲಿ ಪ್ರಬುದ್ಧಮಾನ ಹೊಂದಿದ ಊರುಗಳು; ವೀರಶೈವ ಧಾರ್ಮಿಕ ಕೇಂದ್ರಗಳು. ಇಂದು ಇಲ್ಲಿ ನೋಡಲು ಸಿಕ್ಕುವ

ಸ್ಮಾರಕಗಳು, ಗುಡಿ, ಗೋಪುರ, ಮಠಗಳು ಹಿಂದೆ ಇಲ್ಲಿ ನೆಲೆಸಿದ್ದ ಭವ್ಯತೆಯ ಕುರುಹುಗಳು. ಬಿಜ್ಜಾವರವು ಕೇವಲ ಒಂದು ಪಟ್ಟಣವಾಗಿರದೆ ಧಾರ್ಮಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಕೇಂದ್ರವಾಗಿ ಮೆರೆದಂತೆ ತೋರಿಬರುತ್ತದೆ. ವಿಷಾದದ ಸಂಗತಿಯೊಂದರೆ, ಬಿಜ್ಜಾವರ ಮನೆತನವನ್ನು ಕುರಿತು ಸ್ಪಷ್ಟ ವೃತ್ತಾಂತ ನೀಡಲು ಸೂಕ್ತ ಆಧಾರಗಳಿಲ್ಲ. ಕೇವಲ ಸಾಹಿತ್ಯಿಕ ಕೃತಿಗಳನ್ನಾಧರಿಸಿ, ಒಂದೆರಡು ಶಾಸನಗಳನ್ನವಲಂಬಿಸಿ ಇದರ ಇತಿಹಾಸ ಬರೆಯಬೇಕಾಗಿದೆ.

ಬಿಜ್ಜಾವರ ಮನೆತನದ ಸ್ಥಾಪಕ ತೋಂಟದ ಸಿದ್ಧಲಿಂಗಭೂಪಾಲನೆಂದು ತಿಳಿಯುವುದು. ಇವನನ್ನು ಕುರಿತು ಮಲ್ಲಿಕಾರ್ಜುನ ಕವಿಯು 'ತೋಂಟದರಾಯನ ಸಾಂಗತ್ಯ' ಎಂಬ ಗ್ರಂಥ ರಚಿಸಿರುವನೆಂದೂ ಅದಿನ್ನು ಅಪ್ರಕಟಿತವೆಂದೂ ವ್ಯಕ್ತಪಟ್ಟಿದೆ. ಈ ಮನೆತನದ ಅರಸರಲ್ಲಿ ಕೆಲವರ ಹೆಸರು ಚಿಕ್ಕಭೂಪಾಲ, ಇಮ್ಮಡಿ ಚಿಕ್ಕಭೂಪಾಲ, ಮುಮ್ಮಡಿ ಚಿಕ್ಕಭೂಪಾಲ ಎಂದಿರುವುದನ್ನು ಗಮನಿಸಬಹುದು. 'ಗುರುರಾಜಕೃತ ಪಂಡಿತಾರಾಧ್ಯ ಚಾರಿತ್ರ' ಮತ್ತು 'ಶಂಕರಕವಿ ಕೃತ ಬಸವಪುರಾಣ' ಈ ಎರಡು ಸಂಸ್ಕೃತ ಗ್ರಂಥಗಳಿಗೆ ಕನ್ನಡ ವ್ಯಾಖ್ಯಾನ ಬರೆದ ಮಲ್ಲಿಕಾರ್ಜುನನೆಂಬ ವೀರಶೈವ ಕವಿಯು (೧೫೫೩) ಇಮ್ಮಡಿ ಚಿಕ್ಕಭೂಪಾಲನ ಆಶ್ರಯದಲ್ಲಿದ್ದವನು (ಕ.ಕ.ಚ. ೨, ಪು.೨೬೫). ವ್ಯಾಖ್ಯಾನಕಾರನು ತನ್ನ ಕೃತಿಯಲ್ಲಿ ವಂಕಿಣಿನಾರಾಯಣ, ಸಮರನಿಶ್ಯಂಕ, ನೂತನ ಭೋಜರಾಜ, ತಲಾಘರಾಯರಾವುತ, ವೇಶ್ಯಾಭುಜಂಗ ಇವೇ ಮೊದಲಾದ ಬಿರುದಾಂಕಿತ (ಚಿಕ್ಕಭೂಪಾಲನ ಮಗನಾದ) ಬಿಜ್ಜಾವರ ಪುರವರಾಧೀಶ್ವರ ಇಮ್ಮಡಿ ಚಿಕ್ಕಭೂಪಾಲನು ತನಗೆ ಪೋಷಕನೆಂದು ಹೇಳಿಕೊಂಡಿರುವನಲ್ಲದೆ, ಈ ಮೇಲೆ ಹೆಸರಿಸಿದ ಎರಡು ಗ್ರಂಥಗಳ ಕೊನೆಯಲ್ಲಿ 'ಶ್ರೀಮದ್ಬಿಜ್ಜವರ ಪುರವರಾಧೀಶ್ವರ ಶ್ರೀಮದಿಮ್ಮಡಿ ಚಿಕ್ಕಭೂಪಾಲ ಕೃಪಾಲಾಲಿತ ಮಲ್ಲಿಕಾರ್ಜುನ ಕವೀಶ್ವರ ವಿರಚಿತಂ' ಎಂದು ಸ್ಮರಿಸಿದ್ದಾನೆ. ೧೫೫೩ರಲ್ಲಿ ಸಿದ್ದಾಪುರದ ಬಸವನಗುಡಿಯ ಬಳಿ ಸ್ಥಾಪಿಸಲ್ಪಟ್ಟಿರುವ ಶಿಲಾಶಾಸನವು, ವಿಜಯನಗರದ '(ಒಂದನೆಯ) ವೀರವೆಂಕಟಪತಿದೇವ ಮಹಾರಾಯರು' ಆಳುತ್ತಿದ್ದಾಗ ಮಹಾನಾಡಪ್ರಭು ಬಿಜ್ಜಾವರದ ಚಿಕ್ಕಪ್ಪಗೌಡ (ಚಿಕ್ಕಭೂಪಾಲ)ನ ಮಗ ಇಮ್ಮಡಿ ಚಿಕ್ಕಭೂಪಾಲನು ಸಿದ್ದಾಪುರದಲ್ಲಿ ಕೋಟೆಯೊಂದನ್ನು ಕಟ್ಟಿಸಿ ಹಾಗೆಯೇ ವಿಘ್ನೇಶ್ವರ, ವೀರಭದ್ರ, ಭೈರವ ಮತ್ತಿತರ ದೇವರುಗಳನ್ನು ಪ್ರತಿಷ್ಠಾಪಿಸಿ ಐದು ದೇವಾಲಯಗಳನ್ನು ನಿರ್ಮಿಸಿದನೆಂದಿದೆ. ಸಿದ್ಧಾಪುರದಲ್ಲಿ ಸುಸ್ಥಿತಿಯಲ್ಲಿರುವ ವೀರಶೈವ ಮಠವಿದೆ. ಅದನ್ನು ಬಾಲಾರಾಧ್ಯರ ಮಠವೆಂದು ಕರೆಯುತ್ತಿದ್ದು, ಬಾಲಾರಾಧ್ಯರು ಈ ಚಿಕ್ಕಪ್ಪಗೌಡನ ಗುರುವಾಗಿದ್ದರೆಂದು ಭಾವಿಸಲಾಗಿದೆ.

ಬಿಜ್ಜಾವರ ಮನೆತನದ ಮುಮ್ಮಡಿ ಚಿಕ್ಕಭೂಪಾಲನು 'ಅಭಿನವ ಭರತಸಾರ ಸಂಗ್ರಹ'ದ ಕರ್ತೃ. ಡಾ॥ ಬಿ. ಶಿವಮೂರ್ತಿ ಶಾಸ್ತ್ರಿಗಳು ಗುರುತಿಸಿದಂತೆ (ಕರ್ನಾಟಕ ಭಾರತಿ, ೮–೨) ಈ ಮನೆತನದ ಅರಸರು 'ಬಿಜ್ಜಾವರ ಪುರವರಾಧೀಶ್ವರ' ಎಂಬ ಬಿರುದು ಧರಿಸಿದ್ದುದುಂಟು. ಶಾಸನದಲ್ಲಿ ಉಕ್ತವಾಗಿರುವಂತೆ, ಈ ಅರಸರಿಗೆ 'ಮಹಾನಾಡ ಪ್ರಭು' ಎಂಬ ಬಿರುದೂ ಇದ್ದಿರಬೇಕು. ಇನ್ನೊಬ್ಬ ವೀರಶೈವ ಕವಿಯಾದ ವಿರಕ್ತ ತೋಂಟದಾರ್ಯನು (೧೫೬೦) ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ಕರ್ನಾಟಕ ಶಬ್ದಮಂಜರಿ, ಮನೋವಿಜಯ ತಾತ್ಪರ್ಯ, ಮಗ್ಗೆಯ ಮಾಯಿ ದೇವರ ಶತಕತ್ರಯ ಟೀಕೆ ಇವೇ ಮೊದಲಾದ ಗ್ರಂಥ ಮತ್ತು ವ್ಯಾಖ್ಯಾನ ಬರೆದಿದ್ದು, ತನ್ನ ಗ್ರಂಥವೊಂದರಲ್ಲಿ 'ಬಿಜ್ಜಾವರ ಪುರಾಧೀಶ ತೋಂಟದ ಸಿದ್ಧಲಿಂಗ ಭೂಪಾಲಕನಿಂ....' ಎಂದು ಬಿಜ್ಜಾವರದ ಅರಸನನ್ನು ಸಂಬೋಧಿಸಿದ್ದಾನೆ (ಕ.ಕ.ಚ. ೨, ಪು. ೨೩೩). ಇವನು ಬಿಜ್ಜಾವರದರಸರ ಗುರುವೆಂದು ಡಾ॥ ಶಾಸ್ತ್ರಿಗಳ ಅಭಿಮತ.

ಬಿಜ್ಜಾವರ ಮತ್ತು ಸಿದ್ದಾಪುರಗಳು ವೀರಶೈವರ ಯಾತ್ರಾಸ್ಥಳಗಳೆಂದು ಭಾವಿಸಲು ಸಾಧ್ಯವಾಗುವಂತೆ ಬಿಜ್ಜಾವರದ ಶಿವಶರಣೆಯಾದ ಬಿಜ್ಜಮಹಾದೇವಿಯನ್ನು ಅಮ್ಮವ್ವೆಯೆಂದು ಕರೆಯಲಾಗಿದೆ. ಆಕೆಯ ಗುಡಿಯನ್ನು ಬಿಜ್ಜಾವರದಿಂದ ಮೂರು ಮೈಲಿ ದೂರದಲ್ಲಿ ನಿರ್ಮಿಸಲಾಗಿದೆ. ಅಂತೆಯೇ, ಸಿದ್ದಾಪುರದಲ್ಲಿ ನಂಜಮ್ಮನ ಮಠ, ಪುಟ್ಟಯ್ಯಸ್ವಾಮಿ ಮಠಗಳೊಂದಿಗೆ ಎಡೆಯೂರು ಸಿದ್ಧಲಿಂಗೇಶ್ವರರ ಶಿಷ್ಯನಾದ ಬೋಳಬಸವೇಶ್ವರನ ಸಮಾಧಿಯೇ ಇಲ್ಲಿರುವ ಬೋಳಾರಾಧ್ಯರ ಮಠವಾಗಿರಬೇಕೆಂದು ಪಂಡಿತರು ಊಹಿಸಿರುವರು. ಈ ಸಿದ್ಧಾಪುರವು ಎಡೆಯೂರು ಸಿದ್ಧಲಿಂಗೇಶ್ವರನ ಹೆಸರಿನಲ್ಲಿ ಸ್ಥಾಪಿತವಾದುದೆಂಬುದಕ್ಕೆ ಸಪ್ರಮಾಣ ಆಧಾರಗಳು ಬೇಕು. ಮಧುಗಿರಿ ಮತ್ತು ಅಲ್ಲಿಯ ಕೋಟೆಗಳನ್ನು ಬಿಜ್ಜಾವರದ ಅರಸರೇ ನಿರ್ಮಿಸಿದರೆಂಬುದನ್ನೂ ಶೋಧಿಸಬೇಕಾಗಿದೆ.

## ಇತರ ಸಂಸ್ಥಾನಗಳು

ಪೂರ್ಣವಾಗಿ ವೀರಶೈವ ಧರ್ಮವನ್ನೇ ಅವಲಂಬಿಸದೆ ಆ ಧರ್ಮಕ್ಕೆ ಆಶ್ರಯ ನೀಡಿದ, ಪುರಸ್ಕರಿಸಿದ ಮಠಮಾನ್ಯಗಳನ್ನು ಕಟ್ಟಿಸಿದ, ಆ ಧರ್ಮದತ್ತ ಸ್ವಲ್ಪವಾದರೂ ಒಲವು ತೋರಿದ ದೃಷ್ಟಾಂತಗಳು ಅನೇಕವಿವೆ. ಕರ್ನಾಟಕದ ಇಂಥಾ ಕೆಲವು ಸಂಸ್ಥಾನ ಅಥವಾ ಮನೆತನಗಳ ಬಗೆಗೆ ಸಂಕ್ಷಿಪ್ತವಾಗಿ ಇಲ್ಲಿ ಅರಿಯಬಹುದು :–

## ಚಿತ್ರದುರ್ಗ

ಚಿತ್ರದುರ್ಗ ಸಂಸ್ಥಾನಿಕರು ವಿಜಯನಗರದ ಅವಧಿಯಲ್ಲಿ ಮತ್ತು ಅನಂತರ ಅಸ್ತಿತ್ವದಲ್ಲಿದ್ದ ಸುಮಾರು ೭೫ ಸಂಸ್ಥಾನಗಳಲ್ಲಿ ಶೌರ್ಯದಲ್ಲೂ ಶ್ರೀಮಂತಿಕೆಯಲ್ಲೂ ಯಾರೊಬ್ಬರಿಗೂ ಕಡಿಮೆಯಿಲ್ಲದವರು. ಇವರು ವಾಲ್ಮೀಕಿ ಮತಸ್ಥರೂ ಕಾಮಗೇತಿ ವಂಶದವರೂ ಆಗಿದ್ದು 'ಶ್ರೀ ಮನ್ಮಹಾನಾಯಕಾಚಾರ್ಯ' ಎಂಬ ಬಿರುದು ಧರಿಸಿಕೊಂಡಂಥವರು. ಇನ್ನೂರಾ ಹನ್ನೊಂದು ವರುಷಗಳ (೧೫೬೮–೧೭೭೯) ಆಳ್ವಿಕೆಯಲ್ಲಿ ಒಟ್ಟು ಹದಿನಾಲ್ಕು ಜನ ಅರಸರು ಈ ಸಂಸ್ಥಾನವನ್ನು ಪಾಲಿಸಿದರು. ೧೬೦೨ ರಿಂದ ೧೬೫೨ರ ವರೆಗೆ ಆಳಿದ ಸಂಸ್ಥಾನದ ಮೂರನೆಯ ದೊರೆ ಒಂದನೆಯ ಕಸ್ತೂರಿ ರಂಗಪ್ಪನಾಯಕನ ದಳವಾಯಿ ಭರಮಪ್ಪನಾಯಕನೆಂಬುವನು ಜಗಲೂರಿನ ವಿರಕ್ತಮಠಕ್ಕೆ ಗ್ರಾಮದಾನ ಮಾಡುವುದರೊಂದಿಗೆ ವೀರಶೈವಧರ್ಮಕ್ಕೆ ಪ್ರೋತ್ಸಾಹ ನೀಡಿದನು. ಚಿತ್ರದುರ್ಗ ಸಂಸ್ಥಾನದ ಧಾರ್ಮಿಕ ಚರಿತ್ರೆಯಲ್ಲಿ ಬಹು ಮುಖ್ಯ ಘಟ್ಟವೆಂದರೆ, ಐದನೆಯ ದೊರೆ ಚಿಕ್ಕಣ್ಣನಾಯಕನ ಆಡಳಿತಾವಧಿ (೧೬೭೫–೧೬೮೬). ಬಹುಶಃ ನಾಯಕನ ಹಟ್ಟಿಯಿಂದ ಚಿತ್ರದುರ್ಗಕ್ಕೆ ಬಂದ (ತಿಪ್ಪೇರುದ್ರ ಸ್ವಾಮಿ ಶಿಷ್ಯ ಪರಂಪರೆಯ) ಉಗ್ರ ಚನ್ನವೀರದೇವರೆಂಬ ವಿರಕ್ತ ಜಂಗಮನು ಚಿಕ್ಕಣ್ಣನಾಯಕ ಮತ್ತು ರಾಜಪರಿವಾರದವರನ್ನು ವೀರಶೈವ ಧರ್ಮಕ್ಕೆ ಮತಾಂತರಿಸಿದನು. ಇದರಲ್ಲಿ ನಾಯಕನ ಹಟ್ಟಿಯ ಮಲ್ಲವ್ವನಾಗತಿ ಎಂಬುವಳು ಇದ್ದಳು. ಈ ಜಂಗಮನಿಗೆ ಚಿತ್ರದುರ್ಗ ಕೋಟೆಯ ಹೊರಸುತ್ತಿನ ಮಹಾದ್ವಾರಗಳಲ್ಲೊಂದಾದ ಲಾಲದ ಕೋಟೆಯ ಬಾಗಿಲು ಬಳಿಯಲ್ಲಿ ಒಂದು ಮಠವನ್ನು ಕಟ್ಟಿಸಿಕೊಟ್ಟಿದ್ದರು. ಆದರೆ ಸ್ವಲ್ಪ ಕಾಲದ ನಂತರ ನಾಯಕನೂ ಒಳಗೊಂಡಂತೆ (ಮಲ್ಲವ್ವನಾಗತಿ ವಿನಾ) ಎಲ್ಲರೂ ಆ ಧರ್ಮವನ್ನು ತ್ಯಜಿಸಿದರು. ಇದಕ್ಕೆ ಸ್ಪಷ್ಟ ಕಾರಣ ತಿಳಿಯದು. ಆದರೂ ಈ ನಾಯಕ ಮನೆತನದವರು ವೀರಶೈವ ಧರ್ಮದತ್ತ ಒಲವು ತೋರಿಸಲಾರಂಭಿಸಿದುದು ಈ ಅವಧಿಯಿಂದ ಎಂಬುದಂತೂ ಖಚಿತ. ಇದಾದ ನಂತರ ೧೬೮೯ರಲ್ಲಿ ಪಟ್ಟಕ್ಕೆ ಬಂದ ಬಿಚ್ಚುಗತ್ತಿ ಭರಮಣ್ಣನಾಯಕನು ಚಿತ್ರದುರ್ಗ ಕೋಟೆಯಲ್ಲಿ ನಡೆದ ಸೈನಿಕ ಕ್ರಾಂತಿಯನ್ನು ಅಡಗಿಸುವಲ್ಲಿ ಚಿತ್ರದುರ್ಗ ಬೃಹನ್ಮಠ ಸ್ಥಾಪನೆಗೆ ಕಾರಣರೆನಿಸಿದ ಮುರುಗೇಂದ್ರ ರಾಜೇಂದ್ರರಿಂದ (೧೬೪೦–೧೭೧೦) ಸಹಾಯ ಪಡೆದು, ಅದಕ್ಕೆ ಪ್ರತಿಯಾಗಿ ಬೆಟ್ಟದ ಮೇಲೆ ೩೬೦ ಅಂಕಣವುಳ್ಳ ಬೃಹತ್ತಾದ ಮಠ(ಬೃಹನ್ಮಠ)ವನ್ನು ಕಟ್ಟಿಸಿಕೊಟ್ಟನು. ಅನಂತರ ಈ ಮಠವು ಊರ ಹೊರಗಿನ (ಇಂದಿನ) ಮಠಕ್ಕೆ ವರ್ಗಾವಣೆಯಾಯಿತು. ಭರಮಣ್ಣನಾಯಕನು ಸ್ವಾಮಿಗಳ ಮೇಲೆ ಗೌರವದಿಂದ ತನ್ನ ಏಳು ಜನ ಮಕ್ಕಳಲ್ಲಿ ಒಬ್ಬನನ್ನು 'ಮುರಿಗಿಮಠ'ದ ಸೇವೆಗೆ ಕೊಟ್ಟನು. ಅಲ್ಲದೆ ೧೭೧೨ರಲ್ಲಿ ಮಠಕ್ಕೆ ಗಂಟೆಯೊಂದನ್ನು ಕಾಣಿಕೆ ನೀಡಿದನು. ಇವನ ನಂತರ ಆಳಿದ ಇತರ ಅರಸರೂ ಬೃಹನ್ಮಠಾಧೀಶರುಗಳ ಸಲಹೆ–ಸೂಚನೆಗಳನ್ನು ಪಾಲಿಸುತ್ತಿದ್ದರು. ಭರಮಣ್ಣನಾಯಕನ ಕಾಲದಲ್ಲಿ ಚಿತ್ರದುರ್ಗ ಮನೆತನಕ್ಕೆ ರಾಜಗುರುಗಳಾದ ಈ ಪೀಠದವರು ಆ ಪರಂಪರೆಯನ್ನು ಕಡೆಯವರೆಗೂ ಕಾಯ್ದುಕೊಂಡರು; ಅರಮನೆ--ಗುರುಮನೆಗಳ ನಡುವಣ ಬಾಂಧವ್ಯ ಸುಗಮವಾಗಿ ಇರುವಂತೆ ಅರಸರೂ ಸ್ವಾಮಿಗಳೂ ಪರಸ್ಪರ ಸಹಕರಿಸುತ್ತಿದ್ದರು. ಈ ನಾಯಕ ಜನಾಂಗದ ಮೇಲಿನ ಬೃಹನ್ಮಠದ ಪ್ರಭಾವವನ್ನು ನಾವು ಇಂದಿಗೂ ಗಮನಿಸಬಹುದು.

## ನಾಯಕನ ಹಟ್ಟಿ

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನಲ್ಲಿರುವ ಈ ಊರು ಹದಿನೈದನೆಯ ಶತಮಾನದಲ್ಲಿ ಹಟ್ಟಿ ಪಾಳೆಯಗಾರರ ಕೇಂದ್ರವಾಗಿದ್ದಿತು. ಈ ಮನೆತನದ ಮೂಲಪುರುಷ ಕಾಟೀಮಲ್ಲಪ್ಪನಾಯಕ. ಇವನ ವಂಶಿಕರಿಗೂ ಚಿತ್ರದುರ್ಗ ಪಾಳೆಯಗಾರರಿಗೂ ರಕ್ತಸಂಬಂಧವಿದ್ದಿತು. ಈ ಸಂಸ್ಥಾನದ ಕಸ್ತೂರಿ (ಹಟ್ಟಿ) ಮಲ್ಲಪ್ಪನಾಯಕನು ಚಳ್ಳಕೆರೆ ತಾಲ್ಲೂಕಿನಲ್ಲಿ ತಿಮ್ಮಯ್ಯನಹಳ್ಳಿ ಮಠದ ಜಂಗಮ ಚನ್ನಯ್ಯ ಎಂಬುವರಿಗೆ ನೀಡಿದ ಭೂದತ್ತಿ ಕುರಿತು ೧೬೮೫ರ ಶಾಸನವೊಂದರಲ್ಲಿ ತಿಳಿಸಲಾಗಿದೆ. ಈ ಮನೆತನದವರು ಮೊದಲು ವಾಲ್ಮೀಕಿಕುಲದರಾವಗಿದ್ದು ಅನಂತರ ವೀರಶೈವರಾದರೆಂಬುದಕ್ಕೆ ಕೆಲವು ಆಧಾರಗಳು ದೊರೆಯುತ್ತವೆ. 'ನಿರಂಜನ ವಂಶರತ್ನಾಕರ'ದಲ್ಲಿ ರುದ್ರಮುನಿಸ್ವಾಮಿಗಳ ವಿಚಾರ ಹೇಳಿದೆ. ಶೂನ್ಯಸಿಂಹಾಸನಾಧೀಶ್ವರರ ಸಾಲಿನಲ್ಲಿ ಹನ್ನೊಂದನೆಯ ಪಟ್ಟವೆಂದು ಹೇಳಲಾಗಿರುವ ಈ ರುದ್ರಮುನಿಸ್ವಾಮಿಗಳು ಧರ್ಮ ಪ್ರಸಾರಕ್ಕಾಗಿ ಯಾತ್ರೆ ಕೈಗೊಂಡು, ಕಡೆಗೆ ಕರ್ನಾಟಕದ ಯಳಂದೂರು ನಿಡುಗಲ್ಲುಗಳಿಗೆ ಬಂದು ಅನಂತರ 'ನಾಯಕನ ಹಟ್ಟಿಗೆ ದಯಮಾಡಿಸಿ ಅಲ್ಲಿಯ ವಾಲ್ಮೀಕಿ ಕುಲದವರಿಗೆ ಒಲಿದು ಅಲ್ಲಿಯ ಶಿವಭಕ್ತರ ಭಕ್ತಿಯಿಂ ಅಲ್ಲಿ ಇರ್ದು ಅಲ್ಲಿಯೇ ಚತುರ್ವರ್ಣದವರಿಗೆ ಮಹತ್ವವಂ ತೋರಿ ಅವರನ್ನು ಭಕ್ತರನ್ನಾಗಿ ಮಾಡಿಕೊಂಡು ಅಲ್ಲಿಯೇ ತಮ್ಮ ಶಿವಾನುಭವ ಚರಂತಿಗೆ ಪಟ್ಟವಂ ಬಸವಪ್ರಭು ಸ್ವಾಮಿಗಳಿಗೆ ಮಾಡಿ, ತಾವು ಅದೇ ಸ್ಥಲದಿ ನಿರ್ವಯಲಾದರು. ಇವರ ತೊರಗದ್ದಿಗೆ ನಾಯಕನಹಟ್ಟಿಯಲ್ಲಿ ಇರುತ್ತದೆ. ಇವರು ಮಹಿಮಾಪುರುಷರಾದ್ದರಿಂದ ಇವರ ರಥೋತ್ಸವು ಇವತ್ತಿಗೂ ಆಗುತ್ತದೆ. ಇವರು ಆ ಊರಲ್ಲಿ ತಿಪ್ಪೆ ಇದ್ದ ಸ್ಥಳದಲ್ಲಿಯೇ ಮಠವಂ ಕಟ್ಟಿಸಿ ಯೋಗ ಸಮಾಧಿಯಲ್ಲಿ ಮೂರ್ತ ಮಾಡಿದ ಕಾರಣದಿಂ ತಿಪ್ಪೆರುದ್ರಸ್ವಾಮಿಗಳೆಂಬ ರೂಢನಾಮವಾಗಿದೆ. ಇದಕ್ಕೆ ನಾಯಕನ ಹಟ್ಟಿಯ ಸ್ಥಲದಲ್ಲಿ

ಇವರ ಸ್ಥಲ ಪುರಾಣವೇ ಸಾಕ್ಷಿಯು' (ಪು. ೨೦–೨೧) ಎಂದಿದೆ. ಈ ತಿಪ್ಪೇರುದ್ರಸ್ವಾಮಿಯ ಕಾಲಮಾನ ಖಚಿತಪಟ್ಟಿಲ್ಲ. ಹದಿನೈದನೆಯ ಶತಮಾನದಲ್ಲಿ ಬದುಕಿದ್ದವರು ಎಂದಷ್ಟೆ ತರ್ಕಿಸಬಹುದು. ಇವರು ನಾಯಕನಹಟ್ಟಿ ಪಾಳೆಯಗಾರರಲ್ಲಿ ಬಂದ ಬೋಡಿ ಮಲ್ಲಪ್ಪನಾಯಕನಿಗೆ ರಾಜಗುರುಗಳಾಗಿದ್ದರಂತೆ. ಹಲವು ಜನೋಪಕಾರಿ ಕೆಲಸಗಳಲ್ಲಿ ಅವನಿಗೆ ನೆರವಾದರೆಂತಲೂ ಹೇಳಲಾಗಿದೆ. ಇಲ್ಲಿರುವ ಕೆರೆಯನ್ನು ಈ ನಾಯಕನು ತಿಪ್ಪೇರುದ್ರಸ್ವಾಮಿಯ ನೇತೃತ್ವದಲ್ಲಿ ನಿರ್ಮಿಸಿದನೆಂದು ತಿಳಿಯುವುದು. ಈ ಘಟನೆಗಳ ಬಗೆಗೆ ಸೂಕ್ತ ಕಾಲ ನಿರ್ದೇಶವಿಲ್ಲದಿರುವುದರಿಂದ, ಖಚಿತ ಐತಿಹಾಸಿಕಾಧಾರಗಳ ಮುಗ್ಗಟ್ಟಿನಿಂದ ಈ ಬಗೆಗೆ ದೃಢವಾಗಿ ಹೇಳುವಂತಿಲ್ಲ. ಆದರೆ ನಾಯಕನ ಹಟ್ಟಿಯಲ್ಲಿ ತಿಪ್ಪೇರುದ್ರಸ್ವಾಮಿಯ ಗದ್ದುಗೆ ಸ್ಥಾಪನೆ ಹಾಗೂ ವೀರಶೈವರಾಗಿ ಈ ಪಾಳೆಯಗಾರರು ಅನುಸರಿಸಿದ ಮತಾಚರಣೆ ಇತ್ಯಾದಿಗಳು ಐತಿಹಾಸಿಕವೆಂಬುದನ್ನು ಮರೆಯಲಾಗದು.

## ಹರಪನಹಳ್ಳಿ

ಕರ್ನಾಟಕದ ಬಹುಮಂದಿ ಪಾಳೆಯಗಾರರಂತೆ ಹರಪನಹಳ್ಳಿಯವರೂ ವಾಲ್ಮೀಕಿ ಮತಸ್ಥರು. ದಾದಯ್ಯನಾಯಕ ಎಂಬುವನು ಈ ಮನೆತನದ ಮೂಲಪುರುಷ. ಬಳ್ಳಾರಿ ಜಿಲ್ಲೆ ಹರಪನಹಳ್ಳಿಯ ಸ್ಥಾಪಕನು ಇವನೇ. ಹರಪುರಹಳ್ಳಿ (ಶಿವನಗರಿ)ಯು ಕ್ರಮೇಣ ಹರಪನಹಳ್ಳಿಯೆನಿಸಿತು. ವಿಜಯನಗರದ ಪತನಾನಂತರ ಸ್ವತಂತ್ರರಾಗಲು ಪ್ರಯತ್ನಿಸಿ ಸಫಲರಾದವರಲ್ಲಿ ದಾದಯ್ಯನೂ ಒಬ್ಬ, ಇವನ ಕಾಲದಲ್ಲಿ ಹರಪನಹಳ್ಳಿ ಮತ್ತು ಚಿತ್ರದುರ್ಗ ಸಂಸ್ಥಾನಗಳ ಬಾಂಧವ್ಯ ಬೆಳೆಯಿತು. ಇವನ ನಂತರ ಬಂದ ಅರಸರೆಂದರೆ–ರಂಗನಾಯಕ (೧೫೯೨–೧೬೧೬), ಭರಮಣ್ಣನಾಯಕ (೧೬೧೬–೧೬೫೦), ಓಬಣ್ಣನಾಯಕ (೧೬೫೦–೧೬೫೫), ವೀರ ಮುಮ್ಮಡಿನಾಯಕ (೧೬೫೫–೧೬೬೭), ಮುಮ್ಮಡಿನಾಯಕ (೧೬೬೭–೧೬೮೭) ಮತ್ತು ಬಸವಂತನಾಯಕ (೧೬೮೭–೧೭೦೫). ೧೬೮೭ ರಿಂದ ಆಳ್ವಿಕೆ ನಡೆಸಿದ ಬಸವಂತನಾಯಕನು ಪೂರ್ಣ ವೀರಶೈವನಾಗಿ ತನ್ನ ಹೆಸರನ್ನು ಕೊಟ್ರಪ್ಪನಾಯಕನೆಂದು ಬದಲಿಸಿಕೊಂಡ. ಇವನ ಮಗ ಮರಿಕೊಟ್ರಪ್ಪನು ೧೭೦೫ ರಿಂದ ೧೭೧೮ರ ವರೆಗೂ ಇವನ ಮಗ ಬಸವಂತನು ೧೭೧೫ ರಿಂದ ೧೭೨೧ರ ವರೆಗೂ ಆಳ್ವಿಕೆ ನಡೆಸಿದನು. ಬಸವಂತನಿಗೆ ಮಕ್ಕಳಿಲ್ಲದ್ದರಿಂದ ಮೂಲಪುರುಷ ದಾದಯ್ಯನಿಂದ ಬೆಳೆದು ಬಂದ ವಂಶ ಇಲ್ಲಿಗೆ ನಿಂತಿತು. ಗೋಣಪ್ಪ ಎಂಬುವನನ್ನು ದತ್ತುಪಡೆದು, ಅವನನ್ನು ವೀರಶೈವನನ್ನಾಗಿ ಪರಿವರ್ತಿಸಿ ಅಂತೆಯೇ ಮುದಿಬಸಪ್ಪ ಎಂದು ಹೆಸರನ್ನು ಬದಲಿಸಿ ಪಟ್ಟಕಟ್ಟಿದರು. ಹೀಗೆ ವೀರಶೈವ ಅರಸರ ಪರಂಪರೆ ಮುಂದುವರಿಯಿತು. ೧೭೪೧ ರಿಂದ ೧೭೬೬ರ ವರೆಗೆ ಆಳಿದ ಸೋಮಶೇಖರನಾಯಕನು ಚಿತ್ರದುರ್ಗ ಅರಸು ಹಿರೇಮದಕರಿನಾಯಕ (೧೭೨೧–೧೭೪೮) ಮತ್ತು ಹೈದರಾಲಿಯ ಸಂಗಡ ಯುದ್ಧ ಮಾಡಬೇಕಾಯಿತು (೧೭೬೨). ಇವನ ಮರಣಾನಂತರ ಇವನ ವಿಧವೆ ರಾಣಿ ಸೋಮಮ್ಮಾಜಿಯು ಅಡವಿ ಬೊಮ್ಮಣ್ಣ ಎಂಬ ಬಾಲಕನನ್ನು ದತ್ತುಪಡೆದು ವೀರಬಸಪ್ಪನಾಯಕನೆಂದು ಮರುನಾಮಕರಣ ಮಾಡುವುದರೊಂದಿಗೆ ಅವನನ್ನು ವೀರಶೈವನನ್ನಾಗಿ ಮಾಡಿದಳು, ಇವನು ಬೇಗ ಸಾಯಲು (೧೭೬೮) ಚಿನ್ನಗಿರಿಯಪ್ಪನೆಂಬುವನನ್ನು ದತ್ತುಪಡೆದು ಅವನನ್ನು ಬಸಪ್ಪನಾಯಕನೆಂದು ಕರೆದರು. ಇವನೂ ವೀರಶೈವನಾದ. ೧೭೭೫ರಲ್ಲಿ ಹೈದರನು ಹರಪನಹಳ್ಳಿಯ ವಿರುದ್ಧ ಇನ್ನೊಮ್ಮೆ ದಾಳಿ ನಡೆಸಿ ಎರಡು ಲಕ್ಷ ರೂಪಾಯಿಗಳ ಕಾಣಿಕೆ ಪಡೆದ. ಇವನ ಮಗ ಟಿಪ್ಪುಸುಲ್ತಾನನು ೧೭೮೭ರಲ್ಲಿ ಇಲ್ಲಿ ಮುತ್ತಿಗೆ ಹಾಕಿ ಈ ಬಸಪ್ಪನಾಯಕನನ್ನು ಸೆರೆಹಿಡಿದು, ಅವನ ರಾಣಿಯರು ಸಹಿತ ಶ್ರೀರಂಗಪಟ್ಟಣಕ್ಕೆ ಒಯ್ದನು. ಈ ನಾಯಕನು ಅಲ್ಲಿಯೇ ಮರಣಹೊಂದಿದನು. ಇವನಿಗೆ ಮಕ್ಕಳಿಲ್ಲ. ಈ ಘಟನೆಗಳ ತರುವಾಯ ಬಸಪ್ಪನಾಯಕನ ಸಹೋದರ ಸೋಮಶೇಖರನು ಹರಪನಹಳ್ಳಿಯನ್ನು ಪುನಃ ಪಡೆಯಲು ಯತ್ನಿಸಿದುದರ ಬಗೆಗೆ ವೃತ್ತಾಂತ ಮುಂದುವರೆಯುತ್ತದೆ.

ಹರಪನಹಳ್ಳಿ ಪಾಳೆಯಗಾರರ ಈ ಮೇಲಿನ ವಿವರಣೆಯಲ್ಲದೆ ಅವರು ನಿರ್ಮಿಸಿದ ಮಠ–ಮಾನ್ಯ ಇತ್ಯಾದಿಗಳ ಬಗೆಗೆ ವಿವರಗಳು ದೊರೆಯುವುದಿಲ್ಲ.

## ಜರಿಮಲೆ

ವಿಜಯನಗರದ ಅಧಿಪತಿ ಅಚ್ಯುತರಾಯನು (೧೫೨೯–೧೫೪೨) ಆಳ್ವಿಕೆ ನಡೆಸುತ್ತಿದ್ದಾಗ ಅವನಿಂದ ಪುರಸ್ಕೃತನಾದ ಪೆನ್ನಪ್ಪನಾಯಕನೆಂಬುವನು ಜರಿಮಲೆ ಸಂಸ್ಥಾನದ ಸ್ಥಾಪಕನೆನಿಸಿದನು. ಈ ಜರಿಮಲೆ ಇರುವುದು ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನಲ್ಲಿ. 'ಜರಿಮಲೆ ಸಂಸ್ಥಾನದ ವಂಶಾವಳಿ' ತಿಳಿಸುವಂತೆ (ಚಂದ್ರವಳ್ಳಿ, ಪು. ೩೭–೪೨), ಕದ್ರಿಯಿಂದ ಬಂದ ಬೂದಿ ಸಿದ್ಧರಾಜು ಎಂಬುವನ ಏಳು ಜನ ಮಕ್ಕಳಲ್ಲಿ ಆರನೆಯವನ ಹೆಸರು ಕುಕ್ಕುಲ ಪೆನ್ನಪ್ಪನಾಯಕನೆಂದು ಬರುತ್ತದೆ (ಈ ಏಳು ಜನದ ಹೆಸರು: ಬೊಮ್ಮಂತ್ರರಾಜು, ಇಮ್ಮಡಿರಾಜು, ಮುಮ್ಮಡಿರಾಜು, ಮಲ್ಲಿಕಾರ್ಜುನನಾಯ್ಕ, ಲಿಂಗಳನಾಯಕಾ, ಕುಕ್ಕುಲ ಪೆನ್ನಪ್ಪನಾಯಕಾ ಮತ್ತು ಕಲಿಪುರುಷ ಭೂಮರಾಜೂ). ಇತಿಹಾಸದಲ್ಲಿ ಸೂಚಿಸಿರುವ ಪೆನ್ನಪ್ಪನಾಯಕ ಇವನೇ ಎಂದು ತೋರುತ್ತದೆ. ಇವನ ಕಾರ್ಯಸಾಧನೆಗಳೇನೂ ತಿಳಿಯುವುದಿಲ್ಲ. ಆದರೆ ಕೊನೆಯವನಾದ ಭೂಮರಾಜನು ಉಜ್ಜಯಿನಿ ಪೀಠದ ಸ್ಥಾಪ

ಕರಾದ ಮರುಳಸಿದ್ಧನನ್ನು ತನ್ನ 'ಮನೆಗುರು' ಎಂದಿದ್ದಾನೆ. 'ವಂಶಾವಳಿ'ಯಲ್ಲಿ ಹೇಳಿರುವಂತೆ ಈ ಭೂಮರಾಜನು ತನ್ನ ಗುರುವಾದ 'ಮರುಳಸಿದ್ಧನ ಶೇವಾ ಮಂಟಪಗಳೂ ದೇವಸ್ಥಾನಗಳೂ ಬಾವಿಗಳೂ ಬೀದಿ ಬಾಜಾರುಗಳೂ ಗುಡಿಸುತ್ತ ಅವ ರಣಂಗಳೂ ಮಹಾಧ್ವಾರ ಗೋಪುರಗಳೂ ಕಾಮಟಿಗರ ಕಡೆಯಿಂದ ಕಟ್ಟಿಶಿದರೂ, ಮಹಾಸ್ವಾಮಿಯೂ ಪೂಜೆಯಂ ಮಾಡುವುದಕ್ಕೆ ಪಟ್ಟದ ಕಾಶಿಯ ಪೂಜಾರಿಯಂ ನೇಮಿಶಿದರೂ' ಅಂದರೆ ಉಜ್ಜಯಿನಿಯ ಮರುಳಸಿದ್ಧ ದೇವಾಲಯವನ್ನು ಈ ನಾಯಕನು ಕಟ್ಟಿಸಿದನು. ಇವನು ಈ ಪಟ್ಟಣದಲ್ಲಿ ಕೋಟೆ ಕಟ್ಟಿಸಿ, ಇಲ್ಲಿನ ಮಠಕ್ಕೆ ಚನ್ನಬಸವಸ್ವಾಮಿಗಳನ್ನು ಗುರುಗಳಾಗಿ ಪಟ್ಟಾಭಿಷೇಕ ಮಾಡಿಸಿ, ಪಾದ ಕಾಣಿಕೆ ಕೊಟ್ಟು ಗೌರವಿಸಿದ ವಿಚಾರವೂ ವ್ಯಕ್ತಪಡುತ್ತದೆ. ಒಟ್ಟಿನಲ್ಲಿ ಈ ಪಾಳೆಯಗಾರರಿಗೆ ವೀರಶೈವದ ಬಗೆಗೆ ಗೌರವ ಇದ್ದಿತೆನ್ನಬಹುದು.

ಈ ಮೇಲೆ ಪ್ರಸ್ತಾಪಿಸಿದ ಮನೆತನಗಳಂತೆಯೇ ವೀರಶೈವ ಧರ್ಮದ ಬಗೆಗೆ ಅಭಿಮಾನವಿರಿಸಿದ ಇನ್ನು ಕೆಲವು ರಾಜಮನೆತನಗಳು ಗಮನಕ್ಕೆ ಬರುತ್ತವೆ. ಇತಿಹಾಸಕಾರರು ಅಭಿಪ್ರಾಯ ಪಟ್ಟಿರುವಂತೆ, ವಿಜಯನಗರದ ಪಂತನಾನಂತರ ಆಳಿದ ಸಂಸ್ಥಾನಗಳವರಲ್ಲಿ ಬಹುಮಂದಿ ವೀರಶೈವಧರ್ಮದಿಂದ ಆಕರ್ಷಿತರಾದರು. ಕೆಲವರು ಮತಾಂತರಗೊಂಡರು. ಉಳಿದವರು ಆ ಧರ್ಮಸಂಸ್ಥೆ, ಗುರುಗಳೊಂದಿಗೆ ಸಂಪರ್ಕ ಇರಿಸಿಕೊಂಡರು. ಮಾಗಡಿಯ ಕೆಂಪೇಗೌಡ ನಾಯಕರ ಸಾಲಿನಲ್ಲಿ ಬರುವ ಮುಮ್ಮಡಿ ಕೆಂಪ(ಕೆಂಚ)ವೀರಪ್ಪಗೌಡನು (೧೭೦೫–೧೭೨೮) ವೀರಶೈವ ಧರ್ಮದ ಬಗೆಗೆ ತೋರಿದ ಗೌರವ ಮೆಚ್ಚುವಂಥಾದ್ದು. ಮಾಗಡಿಯ ಆಸುಪಾಸಿನಲ್ಲಿ ಇವನು ವೀರಶೈವ ಮಠಗಳನ್ನು ನಿರ್ಮಿಸಿದ. ಒಂದು ಮಠಕ್ಕೆ ಮುಮ್ಮಡಿ ಕೆಂಪೇಗೌಡನ ಮಠವೆಂದೇ ಹೆಸರು, ಕೆಂಪಸಾಗರದಲ್ಲೂ ಇವನು ಮಠಕಟ್ಟಿಸಿದ್ದಾನೆ. ಇವನು ಭಾರ್ಗಾವತಿ ಎಂಬ ವೀರಶೈವ ಸ್ತ್ರೀಯಿಂದ ಪ್ರಭಾವಿತನಾಗಿ ತಾನೂ ವೀರಶೈವನಾದ. ಅಲ್ಲದೆ ತನ್ನ ಚತುರ್ಥ ಗೋತ್ರವನ್ನು ಸದಾಶಿವ ಗೋತ್ರವಾಗಿ ಪರಿವರ್ತಿಸಿದನೆಂದು ತೆಲಗು ಭಾಷೆಯ ಹಸ್ತಪ್ರತಿಯೊಂದು ಹೇಳುತ್ತದೆ (ಮಿಥಿಕ್ ಸೊಸೈಟಿಯ ತ್ರೈಮಾಸಿಕ, ೧೩–೪,ಪು.೭೩೫). ಇವರ ಪರಿಣಾಮ ಅವನ ಆಳ್ವಿಕೆಯ ಮೇಲೆ ಉಂಟಾದರೂ ಅವನಲ್ಲಿದ್ದ ಶಿವನಿಷ್ಠೆ ಗಮನಾರ್ಹವಾದುದು. ಅಂತೆಯೆ, ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕು ಐಮಂಗಲದಲ್ಲಿ ಕೋಟೆಯೊಂದಿದ್ದು, ೯೭೫ರ ಶಾಸನದ ಪ್ರಕಾರ ಅದನ್ನು 'ಅಯ್ಯಪಮಂಗಲ'ವೆನ್ನಲಾಗುತ್ತಿತ್ತು. ಈ ಕೋಟೆಯಲ್ಲಿರುವ ಮಠವು ವೀರಶೈವ ಜಂಗಮರದೆಂದೂ ಚಿತ್ರದುರ್ಗ ಅರಸು ಹಿರಿಯ ಮದಕರಿನಾಯಕನು(೧೭೨೧–೧೭೪೮) ಈ ಜಂಗಮರಿಗಾಗಿ ಕೋಟೆ ಮತ್ತು ಮಠವನ್ನು ಕಟ್ಟಿಸಿದನೆಂದೂ ತಿಳಿಯುವುದು. ಹೀಗೆ ಇತಿಹಾಸ ದಾಖಲೆಗಳಲ್ಲಿ ಉಲ್ಲೇಖಗೊಂಡ ಹಾಗೂ ಉಲ್ಲೇಖಗೊಳ್ಳದೆ ಹೋದ ಇಂತಹ ಎಷ್ಟೋ ವೃತ್ತಾಂತಗಳು ಶೋಧಕರ ಗಮನಕ್ಕೆ ಬಾರದೆ, ಸೂಕ್ತ ಸಂದರ್ಭದಲ್ಲಿ ಪ್ರಸ್ತಾಪಿಸಲ್ಪಡದೆ ಹೋಗಿವೆ,ಕರ್ನಾಟಕ ಇತಿಹಾಸದ ಪುನರ್ರಚನೆ ಸಂದರ್ಭದಲ್ಲಿ ಧಾರ್ಮಿಕ ಇತಿಹಾಸವನ್ನು ರಚಿಸುವಾಗ ಇಂತಹ ಸಂಗತಿಗಳನ್ನೂ ಪ್ರಸ್ತಾಪಿಸಬೇಕಾದ ಅಗತ್ಯ ತೋರುವುದು. ಮಾನವ ಕುಲದ ಒಂದು ಮುಖವಾದ ಧರ್ಮದ ಬಗೆಗೆ ಇತಿಹಾಸದಲ್ಲಿ ಸೇರಿಸುವಾಗ ಯಥಾವತ್ತಾಗಿ ಬರೆಯುವ ಧೋರಣೆ ಅನುಸರಣೆಗೆ ಬಂದರೆ ಅದಕ್ಕಿಂತ ಉತ್ತಮವಾದುದಿನ್ನೇನು ?

## ಆಧಾರ ಸಾಹಿತ್ಯ

### ಕನ್ನಡ

೧) ಕರ್ನಾಟಕ ಕವಿಚರಿತೆ (೩ ಸಂಪುಟಗಳು-ದ್ವಿ.ಮು.), ಆರ್. ನರಸಿಂಹಾಚಾರ್ಯ, ಬೆಂಗಳೂರು, ೧೯೭೨,೭೩ ಮತ್ತು ೭೪. ೨) ಕರ್ನಾಟಕದ ಪರಂಪರೆ-೨, ಮೈಸೂರು ರಾಜ್ಯ ಸರ್ಕಾರ, ೧೯೭೦. ೩) ಕರ್ನಾಟಕದ ಸೇವುಣರ ಇತಿಹಾಸ, ಡಾ॥ ಎ.ವಿ. ನರಸಿಂಹಮೂರ್ತಿ, ಮೈಸೂರು, ೧೯೭೧. ೪) ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ-೧, ಸಂ. ಡಾ॥ ಹಾ.ಮಾ. ನಾಯಕ, ಡಾ॥ ಟಿ.ವಿ. ವೆಂಕಟಾಚಲಶಾಸ್ತ್ರಿ, ಮೈಸೂರು, ೧೯೭೪. ೫) ಕನ್ನಡ ವಿಶ್ವಕೋಶ-೨,೪,೫ ಮತ್ತು ೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೦,೭೨ ಮತ್ತು ೭೪. ೬) ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ॥ ಎಂ. ಚಿದಾನಂದಮೂರ್ತಿ, ಮೈಸೂರು, ೧೯೬೬. ೭) ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ-೭,೧೨,೩೬ ಮತ್ತು ೫೫, ೧೯೨೨-೨೩, ೨೭-೨೮, ೫೧ ಮತ್ತು ೭೦. ೮) ಕರ್ನಾಟಕದ ಇತಿಹಾಸ ದರ್ಶನ. ಡಾ॥ ಎಂ.ವಿ. ಕೃಷ್ಣರಾವ್, ಎಂ. ಕೇಶವಭಟ್. ಬೆಂಗಳೂರು, ೧೯೭೦. ೯) ಕವಿಚೆನ್ನನ ಗುಂಡಬ್ರಹ್ಮಯ್ಯಗಳ ಚರಿತ್ರೆ, ಸಂ. ಡಾ॥ ವಿ. ಶಿವಾನಂದ, ಗುಲ್ಬರ್ಗಾ, ೧೯೭೪. ೧೦) ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ, ಡಾ॥ ಸಾ.ಶಿ. ಮರುಳಯ್ಯ, ಬೆಂಗಳೂರು, ೧೯೮೦. ೧೧) ಕೆಳದಿನೃಪವಿಜಯಂ, ಗದ್ಯಾನುವಾದ: ಕೆಳದಿ ಗುಂಡಾಜೋಯಿಸ್, ಬೆಂಗಳೂರು, ೧೯೬೬. ೧೨) ಕೊಡಗು ಸಂಸ್ಥಾನದ ರಾಜೇಂದ್ರನಾಮೆ, ಕಾವೇರಿ ಪ್ರಕಟನಾಲಯ, ಮಡಿಕೇರಿ, ವರ್ಷ (?) ೧೩) ಚಂದ್ರವಳ್ಳಿ, ಸಂ. ಡಾ॥ ಎಂ.ವಿ. ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ, ಚಿತ್ರದುರ್ಗ, ೧೯೬೬. ೧೪) ಜಂಗಮಜ್ಯೋತಿ (ಶ್ರೀ ಜಯದೇವ ಪ್ರಶಸ್ತಿ), ಪ್ರ.ಸಂ. ಪ್ರೊ॥ ಜಿ.ಎಸ್. ಸಿದ್ಧಲಿಂಗಯ್ಯ, ಚಿತ್ರದುರ್ಗ, ೧೯೭೫. ೧೫) ತುರುಕಾರಿ ಪಂಚಮರ ಇತಿಹಾಸವು, ಶಿವಬಸವಶಾಸ್ತ್ರಿ, ಹೂಲಿ(ಬೆಳಗಾವಿ), ೧೯೨೯. ೧೬) ನಿರಂಜನವಂಶರತ್ನಾಕರ, ಸಂ. ಡಾ॥ ಫ.ಗು. ಹಳಕಟ್ಟಿ. ಬಿಜಾಪುರ, ೧೯೩೨. ೧೭) ಪಟ್ಟೋಲೆ ಪಳಮೆ, ಸಂ. ನಡಿಕೇರಿಯಂಡ ಚಿಣ್ಣಪ್ಪ, ಮೈಸೂರು, ೧೯೭೫. ೧೮) ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಡಾ॥ ಶಿವಾನಂದ ವಿರಕ್ತಮಠ, ಧಾರವಾಡ, ೧೯೭೮. ೧೯) ಬೀಳಿಗಿಯ ಅರಸುಗಳ ವಂಶಾವಳಿಯು, ಸಂ.ಬಿ. ರಾಮರಾವ್, ಬಿಜಾಪುರ, ೧೯೩೩. ೨೦) ಮಹಾದೇವನ ಮಹಾಲಿಂಗೇಂದ್ರ ವಿಜಯ,

ಸಂ. ಡಾ॥ ಎಲ್. ಬಸವರಾಜು, ಚಿತ್ರದುರ್ಗ, ೧೯೭೨, ೨೧) ಮಾನವಿಕ ಕರ್ನಾಟಕ, ೮-೨, ೧೯೭೮. ೨೨) ವೀರರಾಣಿ ಮಲ್ಲಮ್ಮ ಬೆಳವಡಿ (೩ನೆಯ ಶತಮಾನೋತ್ಸವ ಸ್ಮರಣ ಸಂಚಿಕೆ), ಪ್ರ.ಸಂ. ಬಿ.ಆರ್. ಜಕಾತಿ, ಬೆಳವಡಿ (ಬೆಳಗಾವಿ), ೧೯೭೬. ೨೩) ವೀರಶೈವದ ಉಗಮ ಮತ್ತು ಪ್ರಗತಿ, ಟಿ.ಎಸ್. ಮಲ್ಲಪ್ಪ, ಬೆಂಗಳೂರು, ೧೯೬೯. ೨೪) ಶರಣ ಸಾಹಿತ್ಯ, ೮-೧೦ ಮತ್ತು ೧೧,೧೮-೩, ೨೦-೪, ೨೨-೨ ಮತ್ತು ೩,೨೩-೪, ೧೯೪೬, ೫೫, ೫೭, ೫೯ ಮತ್ತು ೬೦. ೨೫) ಶಿವತತ್ತ್ವರತ್ನಾಕರ (ಆದ್ಯ ಸಂಪುಟ), ಸಂ.ಹು.ಚಂ. ರಾಮಶಾಸ್ತ್ರೀ, ಚಿತ್ರದುರ್ಗ, ೧೯೬೫. ೨೬) ಶಿವಾನುಭವ, ೧-೧, ೧-೪, ೬-೪, ೧೩-೨ ಮತ್ತು ೩೧-೧, ೧೯೨೬, ೩೧, ೩೮ ಮತ್ತು ೫೭. ೨೭) ಶ್ರೀಕಂಠತೀರ್ಥ (ತೀ.ನಂ.ಶ್ರೀ ಸ್ಮಾರಕ ಗ್ರಂಥ), ಸಂ. ಡಾ॥ ಎಂ. ಚಿದಾನಂದಮೂರ್ತಿ, ತೀ. ಶ್ರೀ ನಾಗಭೂಷಣ ಮತ್ತು ಡಾ॥ ತೀ.ನಂ. ಶಂಕರನಾರಾಯಣ, ಬೆಂಗಳೂರು, ೧೯೭೬. ೨೮) ಸಾಧನೆ, ೮-೨ ಮತ್ತು ೮-೪, ೧೯೭೯. ೨೯) ಸ್ವಾದಿ ಅರಸು ಮನೆತನ, ಪ್ರೊ॥ ಸ.ಸ. ಮಾಳವಾಡ, ಧಾರವಾಡ, ೧೯೬೯. ೩೦) ಹಾಗಲವಾಡಿ ಪಾಳಯಗಾರರು, ಎಂ.ಎಸ್. ಪುಟ್ಟಣ್ಣ, ಬೆಂಗಳೂರು, ೧೯೩೧.

## ಇಂಗ್ಲಿಷ್

1) Chitradurga District Gazetteer, Ed. B.N. Sri Sathyan, Bangalore, 1967. 2) Epigraphia Carnatica, I (coorg-NE), VIII (Shimoga), XI (Chitradurga) and XII (Tumkur). 3) Founders of Vijayanagara. S. SriKantaya, Bangalore, 1938. 4) Gazetteer of the Bellary District, W. Francis, Madras, 1904. 5) Indian Antiquary, XIX, XLIV and LVII, 1890, 1915 and 1928. 6) Kanarese Literature, Edward P. Rice, Madras, 1915. 7) Kittur Channmma Rani, Shridhar Telkar, Bailhongal (Belagaum), 1957. 8) Kodavas, B.D. Ganapathy, Madikeri, 1980. 9) Mysore Archaeological Report, 1923, 29 and 43. 10) Mysore Gazetteer, 2-3, Ed. C. Hayavadana Rao, 1930. 11) The Journal of Karnatak University-Social Sciences, 3, 1967. 12) The Quarterly Journal of the Mythic Society, 11-4, 13-4, 1921 and 23. 13) The Sculpture of the Kakatiyas, S. Gopalakrishnamurthy, Hyderabad, 1964. 14) Tumkur District Gazetteer, C. Ed. K. Abhishankar, Bangalore, 1969. 15) Vijayanagara Sexcentenary commemoration Volume, Dharwar, 1936.



# ಕಲಾಶ್ರೀ

**ಒಳಗಡೆಯಲ್ಲಿ :**

ನಾಟಕಸಾಹಿತ್ಯ ಮತ್ತು ನಾಟಕಕಲೆಗೆ ವೀರಶೈವರ ಕೊಡುಗೆ

ಕರ್ನಾಟಕದಲ್ಲಿ ಚಲನಚಿತ್ರ ಉದ್ಯಮದ ಬೆಳವಣಿಗೆಗೆ ವೀರಶೈವರ ಕೊಡುಗೆ

ಸಂಗೀತಕ್ಕೆ ಶಿವಶರಣರ ಕೊಡುಗೆ

ಇಪ್ಪತ್ತನೆಯ ಶತಮಾನದ ಸಂಗೀತಕ್ಕೆ ವೀರಶೈವರ ಕೊಡುಗೆ

ವೀರಶೈವ ಪ್ರವಚನಕಾರರು
(ಶಿವಾನುಭವಪ್ರವಚನ, ಪುರಾಣಪ್ರವಚನ, ಶಿವಕೀರ್ತನೆ, ಗಮಕಾದಿ ಪ್ರಸಾರಕರು)

# ನಾಟಕಸಾಹಿತ್ಯ ಮತ್ತು ನಾಟಕಕಲೆಗೆ ವೀರಶೈವರ ಕೊಡುಗೆ

**ಡಾ|| ಸಾ. ಶಿ. ಮರುಳಯ್ಯ**

ಪೀಠಿಕೆ : ಶಿಷ್ಟಸಾಹಿತ್ಯದ ಮೂಲವನ್ನು ನಾವು ಜಾನಪದದಲ್ಲಿಯೇ ಹುಡುಕಬೇಕು. ವೇದ ಮಂತ್ರಗಳಿಗೂ ಪ್ರಾಕೃತದ ಜಾನಪದದಲ್ಲಿಯ ಗಾಥಾ–ಗಾಹೆಗಳಲ್ಲಿ ಮೂಲವಿರುವ ಸಾಧ್ಯತೆ ಇದೆ. ಋಗ್ವೇದ, ನಮಕ,ಚಮಕ ಅಥವಾ ಶ್ರೀರುದ್ರಕ್ಕೆ ಭರತ ಖಂಡದ ಮೂಲನಿವಾಸಿಗಳಾದ ದ್ರಾವಿಡ ಜನಪದವೇ ತಲಕಾವೇರಿ. ಅನಂತರದ ರಾಮಾಯಣ ಮಹಾಭಾರತಾದಿ ಮಹಾಕಾವ್ಯಗಳಿಗಂತೂ ಜಾನಪದವೆ ತವರು. ಅವುಗಳ ಮೂಲ ಇರುವುದು ಪಪ್ಯಾಮೈನರದ ಜಾನಪದದಲ್ಲಿ. ಅಲ್ಲಿನ ಮೂಲನಿವಾಸಿಗಳಲ್ಲಿ ಜನಜನಿತವಾಗಿದ್ದ ಜಾನಪದ ಕಥೆ: ಒಬ್ಬ ರಾಜನ ಹೆಂಡತಿಯನ್ನು ಬೇರೊಂದು ರಾಜ್ಯದ ಅರಸು ಹೊತ್ತುಕೊಂಡು ಹೋದ. ಪತ್ನಿಯನ್ನು ಕಳೆದುಕೊಂಡ ರಾಜ ತನ್ನ ಸೋದರನನ್ನೊಡಗೂಡಿ ಹೋಗಿ ಯುದ್ಧಮಾಡಿ ಶತ್ರುವನ್ನು ನಾಶಪಡಿಸಿ, ತನ್ನ ಪರಿವಾರ ಸಮೇತನಾಗಿ ತನ್ನ ರಾಜ್ಯಕ್ಕೆ ಹಿಂತಿರುಗಿದ ಎಂಬ ಕಥೆ ಮತ್ತು ರಾಜ್ಯದಾಕಾಂಕ್ಷೆಯ ವಸ್ತುವುಳ್ಳ ಮತ್ತೊಂದು ಕಥೆ ಪಪ್ಯಾಮೈನರ್‌ನಿಂದ ಗ್ರೀಸ್‌ದೇಶಕ್ಕೆ ವಲಸೆಹೋದ ಜನರೊಡನೆ ಹೋಗಿ ಅಲ್ಲಿ 'ಇಲಿಯಡ್' ಮತ್ತು 'ಒಡಸ್ಸಿ' ಆಯಿತು; ಭಾರತಕ್ಕೆ ಬಂದು ರಾಮಾಯಣ-ಮಹಾಭಾರತ ಆಯಿತು. ಇದರಿಂದ ವೇದ್ಯವಾಗುವುದಿಷ್ಟೆ: ಇಂದಿನ ಶಿಷ್ಟಸಾಹಿತ್ಯದ ಮಾತೃಸ್ಥಾನ ಅಂದಿನ ಜಾನಪದ ಎಂಬುದು. ಇದು ಸ್ಪಷ್ಟಗೊಳ್ಳಬೇಕಾದರೆ ನಿರ್ಭೀತವಾದ, ನಿರ್ಮೋಹದಿಂದ ಕೂಡಿದ ಸಂಶೋಧನೆ ಅಗತ್ಯ. ಅದರಿಂದ ದೇವಭಾಷೆಯಾದ ಸಂಸ್ಕೃತಕ್ಕೆ ಅಪಚಾರವಾಗುತ್ತದೆ ಎಂಬ ಭಾವನೆ ಬೆಳೆಯುವುದು ಬೇಡ. ದ್ರಾವಿಡ ಭಾಷೆಗಳಿಗಂತೂ ಇಂತಹ ಸಂಶೋಧನೆ ಮುಂದೆ ಅನಿವಾರ್ಯ ಎನ್ನಿಸದಿರದು. ಆಧುನಿಕ ಕನ್ನಡ ಹೇಗೆ ಸಂಪೂರ್ಣವಾಗಿ ಇಂಗ್ಲೀಷ್ ಸಾಹಿತ್ಯಕ್ಕೆ ಋಣಿಯಲ್ಲವೋ ಹಾಗೆಯೇ ಕನ್ನಡವೇ ಮೊದಲಾದ ದ್ರಾವಿಡ ಭಾಷಾ ಸಾಹಿತ್ಯವೂ ಕೂಡ ಸಂಪೂರ್ಣವಾಗಿ ಸಂಸ್ಕೃತಕ್ಕೆ ತೊತ್ತಲ್ಲ.

**ನಾಟಕ ಸಾಹಿತ್ಯದ ಉಗಮ:** ಸಾಹಿತ್ಯಕಲೆಯಂತೆ ಇತರ ಲಲಿತಕಲೆಗಳಾದ ಚಿತ್ರ, ಶಿಲ್ಪ,ನೃತ್ಯ, ಸಂಗೀತಗಳ ಬೇರು ಇರುವುದು ಜಾನಪದ ಭೂಮಿಕೆಯಲ್ಲಿ. ಪಂಡಿತಪಾಮರರಿಗೆ ಪ್ರಿಯವಾದ, ಆಬಾಲವೃದ್ಧರಿಗೂ ಮೆಚ್ಚಾದ ಎಲ್ಲಾ ಲಲಿತ ಕಲೆಗಳನ್ನೂ ಒಳಗೊಂಡು ಸಂಕೀರ್ಣಕಲೆ (collective art) ಎನಿಸಿಕೊಂಡಿರುವ ನಾಟಕದ ಅವತಾರಕ್ಕೂ ಜಾನಪದವೇ ಮಾತೃಗರ್ಭ. ಭರತನ ನಾಟ್ಯಶಾಸ್ತ್ರದ ಅಲಂಕಾರ ವಿಭಾಗದ ಮೊದಲ ಅಧ್ಯಾಯದಲ್ಲಿ ಒಂದು ದಂತಕಥೆ ಬರುತ್ತದೆ. ಅದರ ಪ್ರಕಾರ ಒಂದು ಅನಧ್ಯಯನದ ದಿನ ಆತ್ರೇಯಾದಿ ಬ್ರಹ್ಮಮಾನಸಪುತ್ರರು ಭರತನನ್ನು ಸಂದರ್ಶಿಸಿ, ತಾವು ಸಂಪಾದಿಸಿರುವ ವೇದ ಸಮಾನವಾದ ನಾಟ್ಯಶಾಸ್ತ್ರಕ್ಕೆ ಉತ್ಪತ್ತಿ ಹೇಗೆ ? ಯಾರಿಗೋಸ್ಕರ ನಿರ್ಮಿಸಿದಿರಿ ......? ಇತ್ಯಾದಿಗಳಿಗೆ ವಿವರ ಕೇಳಿದರಂತೆ. ಅದಕ್ಕೆ ಭರತನು ಬ್ರಹ್ಮನು 'ನಾಲ್ಕು ವೇದಗಳನ್ನು ಸ್ತ್ರೀ ಶೂದ್ರಾದಿಗಳು ಕೇಳಬಾರದು. ಆದ್ದರಿಂದ ಸರ್ವ ಶ್ರಾವ್ಯವಾದ ಮತ್ತೊಂದು ವೇದವನ್ನು ಸೃಷ್ಟಿಸೋಣ ಎಂದುಕೊಂಡು, ಭಕ್ತಿಪಠನ ಯೋಗ್ಯವಾದ ಮಂತ್ರಗಳಿಂದ ಕೂಡಿದ ಋಗ್ವೇದದಿಂದ ಶಬ್ದಾರ್ಥರೂಪದ ಪಾಠ್ಯಭಾಗ ಅಥವಾ ವಸ್ತುವನ್ನೂ, ಗಾನಪ್ರಧಾನವಾದ ಸಾಮವೇದದಿಂದ ಸಂಗೀತವನ್ನೂ, ಯಜ್ಞಕರ್ಮವಿವರಗಳನ್ನೊಳಗೊಂಡ ಯಜುರ್ವೇದದಿಂದ ಅಭಿನಯವನ್ನೂ. ಉದ್ದೇಶ ಸಾಧನೆಗಾಗಿಯೇ ಮೀಸಲಿರುವ ಅಥರ್ವಣ ವೇದದಿಂದ ರಸಗಳನ್ನೂ ಪಡೆದು ಪಂಚಮವೇದವೆನಿಸಿದ ಗಾಂಧರ್ವವೇದವನ್ನು ಸೃಷ್ಟಿಸಿದೆ' ಎಂದು ಹೇಳಿದನಂತೆ.

ಈ ಕಟ್ಟುಕಥೆಯಲ್ಲಿ ಬರುವ ಬ್ರಹ್ಮಮಾನಸಪುತ್ರರ ಎರಡು ಪ್ರಶ್ನೆಗಳು ಅರ್ಥವತ್ತಾಗಿವೆ. ಅದರ ಪ್ರಕಾರ ಭರತ ನಾಟ್ಯಶಾಸ್ತ್ರವನ್ನು ಸೃಷ್ಟಿಸಲಿಲ್ಲ. 'ಸಂಪಾದಿಸಿದ'(ಸಮ್ಯಕ್ ಗ್ರಂಥ); ಯಾರಿಗೋಸ್ಕರ? ಸ್ತ್ರೀ ಶೂದ್ರಾದಿಗಳಿಗಾಗಿ ಅಂದರೆ ಶ್ರೀ ಸಾಮಾನ್ಯರಿಗಾಗಿ; ಆದರೆ ಆತ ಸಂಪಾದಿಸಿದ್ದು ಪರಬ್ರಹ್ಮನಿಂದಲ್ಲ; ಕಲಾಬ್ರಹ್ಮನಿಂದ. ಈ ಕಲಾಬ್ರಹ್ಮನ ಸೃಷ್ಟಿಯ ಹಿನ್ನಲೆಯಲ್ಲಿ ಪ್ರಾಚೀನ ಜನಪದ ಬೆವರಿನ ಹಳ್ಳ ಹರಿದಿದೆ ಎಂಬುದು ಸತ್ಯ.

ಭಾರತೀಯ ನಾಟಕ ಸಾಹಿತ್ಯ ದ್ರಾವಿಡರ ದುಡಿಮೆಯೇ ಹೊರತು, ಆರ್ಯರ ಕೃಷಿಯಲ್ಲ. ಅದರ ಉಗಮ ಮೂಲತಃ ಆದದ್ದು ದ್ರಾವಿಡ ಜನಪದದಲ್ಲಿ. ಅದಕ್ಕೆ ಕಾರಣರಾದವರು ಭರತಖಂಡದ ಮೂಲನಿವಾಸಿಗಳಾದ ದ್ರಾವಿಡರು. ಆರ್ಯರಿಗೆ ಕಾವ್ಯ ರಚನೆ ತಿಳಿದಿದ್ದಿತೇ ಹೊರತು ನಾಟಕ ರಚನೆ ಗೊತ್ತಿರಲಿಲ್ಲ ಎನ್ನಿಸುತ್ತದೆ. ಅವರು ಈ ಕಲೆಯನ್ನು ಕಲಿತದ್ದು ದ್ರಾವಿಡರಿಂದ. ಶಿವ ಅಥವಾ ನಟರಾಜ ದ್ರಾವಿಡರ ದೇವತೆ, ಆರ್ಯರ ದೇವತೆಯಲ್ಲ. ಈ ಪರಶಿವನೇ ಭರತಖಂಡದ ನಾಟಕದ ಅಧಿಷ್ಠಾತೃ ದೇವತೆ. ಅವನೇ ಆದಿಪುರುಷ, ಆದಿನಟ. ಆತನು ಬ್ರಹ್ಮನಿಗೂ, ಬ್ರಹ್ಮನು ಭರತನಿಗೂ, ಭರತನು ಭೂಲೋಕದ ಸಮಸ್ತರಿಗೂ ನಾಟ್ಯವೇದವನ್ನು ಕಲಿಸಿದನೆಂದು ಪ್ರತೀತಿ. ದ್ರಾವಿಡದೇವತೆಯಾದ ಶಿವನನ್ನು ನಾಟ್ಯಾಧಿದೇವತೆ ಎಂದು ಹೇಳುವ ಮೂಲಕ ದ್ರಾವಿಡರ ಮೂಲಕಲೆಯಾದ ನಾಟಕವನ್ನು ಸಾಂಕೇತಿಸಿದ್ದಾರೆ ಎನ್ನಿಸುತ್ತದೆ.

ಎರಡನೆಯದಾಗಿ 'ನಾಟಕ' ಎಂಬ ಪದವು 'ನಟ್' ಅಥವಾ 'ನೃತ್' ಎಂಬ ಧಾತುವಿನಿಂದ ಬಂದಿದೆ ಎಂದು ಹಲವರು ನಿಷ್ಪತ್ತಿ ಹೇಳುವುದುಂಟು. ಆದರೆ ನಟ್ ಮತ್ತು ನೃತ್ ರೂಪಗಳು ಒಂದಕ್ಕೊಂದು ಸಂಬಂಧವಿಲ್ಲದ ಬೇರೆ ಬೇರೆ ಧಾತುಗಳು.[1] 'ನಟ್' ಎಂಬ ಧಾತುವಿಗೆ ಕುಣಿತ ಎಂದಷ್ಟೇ ಅರ್ಥ. ಅದು ಕಾಲಕ್ರಮದಲ್ಲಿ 'ಅಭಿನಯ' ಎಂಬರ್ಥವನ್ನು ತಳೆದಿರಬಹುದು. ಈ 'ನಟ್'ನ ಮತ್ತೊಂದು ರೂಪ ಆಟ ಎಂದಿರಬಹುದು. ಆಟ ಅಥವಾ ಆಟ್ಟಂ ಎಂದರೆ ದ್ರಾವಿಡಭಾಷೆಯಲ್ಲಿ ಕುಣಿತ ಅಥವಾ ನರ್ತನ ಎಂದು; ಆದರಿಂದಾದ 'ಅಟ್ಟ' ಎಂದರೆ ಅದರ ಪ್ರದರ್ಶನದ ವೇದಿಕೆ 'ರಂಗಸ್ಥಳ' ಎಂದು. ಆದ್ದರಿಂದ 'ಆಟ' 'ನಟ್' ಆಗಿ 'ಆಟಿಕೆ' 'ನಾಟಕ' ಆಗಿ ಪರಿಣಾಮ ಹೊಂದಿರಬಹುದು. ಮೊದಲು ಕುಣಿತ ಅನಂತರ ಅಭಿನಯಪೂರ್ಣವಾದ ಕಲೆ. ಗ್ರೀಕರ ರುದ್ರನಾಟಕ ಮತ್ತು ಪ್ರಹಸನಗಳ ಅವತಾರಕ್ಕೆ ಮೂಲಕಾರಣ ಈ ಬಗೆಯ ಜಾನಪದ ನೃತ್ಯ. ಜರ್ಮನಿಯಲ್ಲೂ ಇದೇ ರೂಪು ಇದೆ. ಮೊದಲು Play ಅನಂತರದಲ್ಲಿ Drama. ಆದ್ದರಿಂದ 'ನಾಟಕ'ಕ್ಕೆ 'ಆಟ'ವೇ ಮೂಲ. 'ನಟ' ಎಂಬ ಶಬ್ದ ಕನ್ನಡದ 'ನಟುವ' ಅಥವಾ ನಟ್ಟುವ ಎಂಬುದರಿಂದ ಬಂದದ್ದು.[2]

ನಾಲ್ಕನೆಯದಾಗಿ : ಇಂದಿನ ಶಿಷ್ಟನಾಟಕಗಳಲ್ಲಿ ಬರುವ ಸೂತ್ರಧಾರ, ವಿದೂಷಕ ಮೊದಲಾದ ಪಾತ್ರಗಳು ನಮ್ಮ ಜಾನಪದ ಆಟ್ಟದಿಂದಿಳಿದು ಬಂದವರು. ನಮ್ಮ ರಸಿಕ ಜನ ತಮ್ಮ ಮನರಂಜನೆಗಾಗಿ, ಚಂದಮಾಮನ ಆಟ, ತೊಗಲು ಬೊಂಬೆಆಟ, ಪುತಲೀಮೇಳ, ಕೋಲೇಬಸವನ ಆಟ, ಹಗಲುವೇಷದವರಆಟ, ಕಿಳ್ಳೀಕೇತರಮೇಳ, ದೊಂಬಿದಾಸರಮೇಳ, ದಸರೆಯ ಕುಣಿತ, ದೀಪಾವಳಿಹಾಡು–ಕುಣಿತ, ಸುಗ್ಗಿಕುಣಿತ ಇತ್ಯಾದಿಗಳನ್ನು ಆಚರಣೆಯಲ್ಲಿಟ್ಟುಕೊಂಡಿದ್ದರು. ಇವೆಲ್ಲವೂ ಕ್ರಮೇಣ ಯಕ್ಷಗಾನವೆಂಬ ಅಭಿನಯ ಕಲೆಗೆ ಪ್ರೋತ್ಸಾಹ ನೀಡಿದವು. ಈ ಯಕ್ಷಗಾನ, ಬಯಲಾಟ, ದೊಡ್ಡಾಟ, ಆಟ್ಟಿನಮೇಳ, ಆಟ್ಟದಾಟ, ಪರಸಂಗ (ಪ್ರಸಂಗ), ತಾಳಮದ್ದಳೆ,ದಶಾವತಾರದ ಆಟ,ಭಾಗವತರಾಟ,ಮ್ಯಾಳ (ಮೇಳ)-ಇತ್ಯಾದಿ ಪರ್ಯಾಯ ನಾಮಗಳನ್ನು ಪಡೆಯಿತು. ಈ ಪಟ್ಟಿಯಲ್ಲಿ ಬರುವ ತೊಗಲುಬೊಂಬೆ, ಮರದಬೊಂಬೆಯ ಆಟದ ದಾರಹಿಡಿದು ಆಡಿಸುವವನೇ ಸಂಸ್ಕೃತ ನಾಟಕದ ಸೂತ್ರಧಾರ. ಸೂತ್ರದ ಬೊಂಬೆಗಳನ್ನು ಆಡಿಸುವಂತೆ ಈ ಸೂತ್ರಧಾರನು ಪಾತ್ರಗಳನ್ನೂ, ನಾಟಕವನ್ನೂ ನಿರ್ದೇಶಿಸುತ್ತಾನೆ.

ವಿದೂಷಕನೂ ಸೂತ್ರಧಾರನಂತೆಯೇ ಬಯಲಾಟದ ಕೋಡಂಗಿಯಿಂದ ರೂಪಾಂತರ ಹೊಂದಿದವನು. ಬಯಲಾಟಗಳಲ್ಲಿ ಈ ಕೋಡಂಗಿಯನ್ನು ಸಾರಥಿ, ಹನುಮನಾಯಕ ಎಂದೆಲ್ಲಾ ಕರೆಯುತ್ತಾರೆ. ಇವನು ಶುದ್ಧ ಹಾಸ್ಯಗಾರ. ಸಂಸ್ಕೃತ ನಾಟಕದ ವಿದೂಷಕ ಹಾಸ್ಯರಸ ಪ್ರತಿಪಾದನೆಗಾಗಿಯೇ ಸೃಷ್ಟಿಯಾದವನು. ಈ ವಿಶಿಷ್ಟ ಪಾತ್ರಸೃಷ್ಟಿಗೆ ನಮ್ಮ ಬಯಲಾಟದ ಹನುಮನಾಯಕ ಪ್ರತ್ಯಕ್ಷ ಪ್ರೇರಣೆ. ಶಿಷ್ಟ ನಾಟಕದ ಪಾತ್ರಗಳ ವೇಷಭೂಷಣಗಳು ತುಂಬಾ ಮಾರ್ಪಟ್ಟಿದ್ದರೂ ನರ್ತನದ ಪಾತ್ರಗಳು ಹಾಕುವ ಗೆಜ್ಜೆ ಬಯಲಾಟದ್ದು. ಈ ಜಾನಪದ ಮೇಳದಲ್ಲಿ ಪ್ರತಿಯೊಂದು ಪಾತ್ರವೂ ಗೆಜ್ಜೆ ಕಟ್ಟಿರುತ್ತದೆ ಎಂಬುದು ಗಮನೀಯ ಅಂಶ. ಇದೇ ರೀತಿ ರಂಗಸಜ್ಜಿಕೆಗೆ ಸಂಬಂಧಿಸಿದಂತೆ ನಾಟಕದ ಪರದೆಯೂ ಯಕ್ಷಗಾನ ಬಯಲಾಟದ ಕೊಡುಗೆ. ಪರದೆಯನ್ನು ಸಂಸ್ಕೃತದಲ್ಲಿ 'ಯವನಿಕಾ' ಎಂದು ಕರೆಯುತ್ತಾರೆ. ಅದು ಯವನರಿಂದ ಅಂದರೆ ಗ್ರೀಕ್‌ರಿಂದ ಎರವಲು ಪಡೆದದ್ದು ಎಂದು ಭಾವಿಸಿ ಕೆಲವರು ಅದರ ಆಗಮನಕ್ಕೆ ಗ್ರೀಕರೇ ಕಾರಣರು ಎಂದಿದ್ದಾರೆ. ಆದರೆ ಪರದೆ ನಮ್ಮ ಅಟ್ಟದಾಟದವರ ಕಾಣಿಕೆ. ಬಯಲಾಟಗಳಲ್ಲಿ ಪ್ರಮುಖ ಪಾತ್ರಗಳಿಗೆ ಮೊದಲು ರಂಗಪ್ರವೇಶ ಮಾಡುವಾಗ ಇಬ್ಬರು ವ್ಯಕ್ತಿಗಳು ಪಾತ್ರದ ಮುಖ ಕಾಣಿಸದಂತೆ ಅಡ್ಡಲಾಗಿ ಒಂದು ಅಂತರಪಟ ಹಿಡಿದಿರುತ್ತಾರೆ. ಇಲ್ಲವೇ ಸಣ್ಣ ಪುಟ್ಟ ಪಾತ್ರಗಳಾದರೆ ಆ ಪಾತ್ರಗಳೇ ತಮ್ಮ ಮುಖಕ್ಕೆ ಅಡ್ಡಲಾಗಿ ಒಂದು ಕರವಸ್ತ್ರವನ್ನು ಹಿಡಿದು ರಂಗಸ್ಥಳವನ್ನು ಪ್ರವೇಶಿಸಿ, ಸ್ವಲ್ಪ ಹೊತ್ತು ಕುಣಿದ ಮೇಲೆ ಆ ತೆರೆಯನ್ನು ಸರಿಸುತ್ತವೆ. ಈ ತೆರೆ ಸಂಸ್ಕೃತ ನಾಟಕಕಾರರಲ್ಲಿ ಯವನಿಕೆಯೆನಿಸಿ ಬಳಕೆಯಾಯಿತು.

ನಾಟ್ಯಶಾಸ್ತ್ರದಲ್ಲಿ : ಅಧ್ಯಯನದ ವೇಳೆಯಲ್ಲಿ ನಾವೊಮ್ಮೆ ಭರತಮುನಿಯನ್ನು ಪ್ರಾರ್ಥಿಸಿಕೊಂಡರೆ, ಅವನು ತನ್ನ ನಾಟ್ಯಶಾಸ್ತ್ರದ ರಚನೆಗೆ ಜಾನಪದದ ಅಟ್ಟದಾಟ ಅಥವಾ ಬಯಲಾಟಗಳೇ ಆಧಾರವೆಂದು ಹೇಳದಿರಲಾರನು. ಸಂಸ್ಕೃತಸಾಹಿತ್ಯ ಕ್ಷೇತ್ರದ ನಾಟಕದ ಕೊರತೆಯನ್ನು ಸಂಸ್ಕೃತ ಕವಿಗಳು ತುಂಬಲಿ ಎಂಬ ಮಹದಾಸೆಯನ್ನಿಟ್ಟುಕೊಂಡೇ ಭರತನು ದ್ರಾವಿಡರ'ಆಟ'

1. ನೋಡಿ ಮಂಕಡ್‌ರವರ Types of Sanskrit Drama.

2. ಕರ್ನೂಲು ತಾಲ್ಲೂಕಿನ ಚರುವು ಬೆಳಗಲ್ಲೆಂಬ ಗ್ರಾಮದಲ್ಲಿನ ಕೇಶವ ದೇವಾಲಯದ ಒಂದು ಕಂಬದಲ್ಲಿರುವ ಶಾ. ಶ. ೧೪೩೩ ನೆಯ ಭಾವ ಸಂ॥ ವೈಶಾಖ ಶುದ್ಧ ಪೂರ್ಣಿಮೆಯ ದಿನ ಅಂದರೆ ಕ್ರಿ. ಶ. ೧೫೧೧ ನೆಯ ಇಸವಿಯಲ್ಲಿ ತಿರುಪತ್ತೂರು ಸೋಮರಸನ ಮಗ ಕರಣಂ ಬಸವರಸನು ಪಾತ್ರಿ ಪೋತವರದ 'ನಟ್ಟುವ' ತಿಂಮಯನ ಮಗಳಿಗೂ, ತಾಯಿಕುಂದ 'ನಾಟಕ'ದ ಚೆಯ್ಯಗಸ ಮಗ 'ನಟ್ಟುವ' ನಾಗಯ್ಯನಿಗೂ ಭೂಮಿಯನ್ನು ದತ್ತಿ ಬಿಟ್ಟ ವಿಷಯ ಇದೆ. ಇಲ್ಲಿ ಬರುವ 'ನಟ್ಟುವ' ಶುದ್ಧ ಕನ್ನಡ ಶಬ್ದ, ಸಂಸ್ಕೃತದ ತದ್ಭವ ಅಲ್ಲ.

—ನೋಡಿ T. T. Sharma; Kannada Poets mentioned in insription (Memories of the Archeological Survey of India) P. 19-20.

ಗಳನ್ನು ನೋಡಿ ಕೂಲಂಕಷವಾಗಿ ವಿಶ್ಲೇಷಿಸಿ, ವಿಭಜಿಸಿ ಅವುಗಳಲ್ಲಿನ ಎಲ್ಲಾ ಪ್ರಮುಖ ಅಂಶಗಳಿಗೂ ಸಂಸ್ಕೃತದ ಹೆಸರಿಟ್ಟು, ಹಲವು ಸೂತ್ರಗಳನ್ನು ರಚಿಸಿ, ಮುಂದಿನ ಬರಹಗಾರರಿಗೆ ಒಂದು ಹೊಸ ಹಾದಿಯನ್ನು ಸಿದ್ಧಪಡಿಸಿ ಕೊಟ್ಟಿರುತ್ತಾರೆನ್ನಬಹುದು. ಅವನ ಅನಂತರದಲ್ಲಿ ಅರಮನೆ ಅಗ್ರಹಾರಗಳಲ್ಲಿ, ಕಲಾಶಾಲೆ ನಾಟ್ಯಗೃಹಗಳಲ್ಲಿ ಪ್ರದರ್ಶಿತವಾಗಹತ್ತಿದ ಸುಸಜ್ಜಿತ ಸುಸಂಸ್ಕೃತ ನಾಟಕಗಳು,ಅವನ ಕಾಲದಲ್ಲಿನ್ನೂ ಹುಟ್ಟಿಯೇ ಇರಲಿಲ್ಲ.ಆದ್ದರಿಂದಲೇ ಆತ ಯಾವ ಸಂಸ್ಕೃತ ನಾಟಕವನ್ನೂ ಹೆಸರಿಸಲಾಗಲಿಲ್ಲ. ಅಂತೆಯೇ ತನ್ನ ಕೃತಿಗೆ ಆಕರಗಳೆನಿಸಿದ ಅಂದು ಪ್ರಚಲಿತವಿದ್ದ ಆಟ್ಟದಾಟದ ಕೃತಿಗಳನ್ನು ಹೆಸರಿಸದಿರಲು ಅವು ಶೂದ್ರ ಸೃಷ್ಟಿ ಎಂದು. (ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ನಟರನ್ನು ಶೂದ್ರರೆಂದೇ ಕರೆದಿದ್ದಾನೆ.) ಈ ಭಾವನೆ ಭರತನಿಗೆ ಇದ್ದುದರಿಂದಲೇ ಆತ ಯಾವ ಬಯಲಾಟಗಳನ್ನೂ ಹೆಸರಿಸಿಲ್ಲ.

ಆರು ಸಹಸ್ರ ಶ್ಲೋಕಗಳುಳ್ಳ ಅವನ ನಾಟ್ಯಶಾಸ್ತ್ರ ನಾಟ್ಯ, ನೃತ್ಯ, ಸಂಗೀತ, ಕಾವ್ಯ, ಆತೋದ್ಯ ಮೊದಲಾದವುಗಳಲ್ಲಿ ಹಂಚಿಕೊಂಡಿದೆ. ಅದರಿಂದಾಗಿ ನಾಟಕಕ್ಕೆ ನೇರವಾಗಿ ಸಂಬಂಧಿಸಿದ ವಿವರ ಸಿಗುವುದು ಕಡಿಮೆಯೇ. ಅದು ಹೇರಳವಾಗಿ ಸಿಗುವುದು ಧನಂಜಯನ ದಶರೂಪಕದಲ್ಲಿ. ಅವನ ಕಾಲ ಕ್ರಿ. ಶ. ಹತ್ತನೆಯ ಶತಮಾನ. ಭರತನ ಕಾಲ ಕ್ರಿ.ಪೂ. ಮೂರನೆಯ ಶತಮಾನ. ಸುಮಾರು ಒಂದು ಸಾವಿರ ಮುನ್ನೂರು ವರ್ಷಗಳಲ್ಲಿ ಸಂಸ್ಕೃತದಲ್ಲಿ ನಾಟಕಸಾಹಿತ್ಯ ವಿಪುಲವಾಗಿ ಬೆಳೆದು ತನ್ನ ಯೌವನವನ್ನು ಕಳೆದುಕೊಂಡು ಮುಪ್ಪಿನ ಮೆಟ್ಟಿಲು ಹತ್ತಿತು. ಆ ಕಾಲದ ಮೀಮಾಂಸಕನಾದ ಧನಂಜಯನಿಗೆ ಭರತನಿಗಿಂತಲೂ ಹೆಚ್ಚಿನ ಅನುಕೂಲ್ಯಗಳು ಲಭಿಸಿದ್ದವು. ಆದ್ದರಿಂದಲೇ ತನ್ನ ದಶರೂಪಕದಲ್ಲಿ ನಾಟಕದ ಪ್ರಭೇದ, ಪ್ರಯೋಗ, ರಂಗಸಜ್ಜಿಕೆ, ಪಾತ್ರಸೃಷ್ಟಿ, ದೃಶ್ಯವಿಭಜನೆ, ನಾಟಕದಿಂದ ಲಭಿಸುವ ಫಲ ಇತ್ಯಾದಿಗಳನ್ನು ವಿಸ್ತೃತವಾಗಿ ವಿವರಿಸಿದ್ದಾನೆ.

**ಸಂಸ್ಕೃತ ನಾಟಕಕ್ಕೆ ಮೂಲ :** ಇಷ್ಟು ಹೇಳಿದ ಮೇಲೂ ಸಂಸ್ಕೃತ ನಾಟಕದ ಪ್ರಾಚೀನತೆಯನ್ನು ವೇದಗಳಲ್ಲೂ ರಾಮಾಯಣ ಮಹಾಭಾರತಗಳಲ್ಲೂ ಹುಡುಕ ಹೊರಡುವುದರಲ್ಲಿ ಔಚಿತ್ಯವಿರುವದಿಲ್ಲ. ಋಗ್ವೇದದಲ್ಲಿ ಬರುವ ಯಮ–ಯಮಿ, ಊರ್ವಶಿ– ಪುರೂರವಸ್, ಇಂದ್ರ–ಇಂದ್ರಾಣಿ ಈ ಮೊದಲಾದ ಸಂಭಾಷಣೆಗಳು ಅಲ್ಲಿ ಪ್ರಾಸಂಗಿಕ. ರಾಮಾಯಣವನ್ನು ಮೊದಲು ಹಾಡಿದ ಕುಶೀಲವರು ಗಮಕಿಗಳು, ನಟರಲ್ಲ. ಅವರು ಹಾಡಿದರು, ಅಭಿನಯಿಸಿ ಪ್ರದರ್ಶಿಸಲಿಲ್ಲ. ಪಾಣಿನಿಯ ಶಿಲಾಲಿ ಮತ್ತು ಕೃಶಾಶ್ವರು ಆಟ್ಟದಾಟದ ಭಾಗವತರು ಅಥವಾ ಮೇಳದ ನಾಯಕರು, ನಟರಲ್ಲ. ಅಂತೆಯೆ ಗ್ರಂಥಿಕರು ಹಾಡುತ್ತಿದ್ದ ಕಂಸವಧ, ಬಲಿಬಂಧಾದಿ ಕಾವ್ಯಭಾಗಗಳನ್ನು ಶೋಭನಿಕರು ಪ್ರತ್ಯಕ್ಷವಾಗಿ ಅಭಿನಯಿಸಿ ತೋರಿಸುತ್ತಿದ್ದರೆಂದು ಪತಂಜಲಿಯ ಮಹಾಭಾಷ್ಯ ತಿಳಿಸುತ್ತದೆಯಷ್ಟೆ. ಇಲ್ಲಿ ಬರುವ ಗ್ರಂಥಿಕರು ಬಯಲಾಟದಲ್ಲಿ ಕಾಣಸಿಗುವ ಮೃದಂಗ, ಮುಖವೀಣೆಗಳೊಡನೆ ಹಾಡುವ ಹಿನ್ನೆಲೆಗಾಯಕರು. ಶೋಭನಿಕರು ನಮ್ಮ ಆಟ್ಟದಾಟದ ನಟರು. ಪತಂಜಲಿಯ ಕಾಲಕ್ಕೆ ಪ್ರಚಲಿತವಾಗಿದ್ದ ನಾಟಕಗಳು ಬಯಲಾಟಗಳೇ.

**ಕನ್ನಡ ನಾಟಕದ ಪ್ರಾಚೀನತೆ :** ಕನ್ನಡ ನಾಟಕದ ಪ್ರಾಚೀನತೆಯನ್ನು ಕುರಿತು ಶೋಧನೆ ನಡೆಸ ಹೊರಟ ಕೆಲವರು ಅಜ್ಞಾತಕವಿಗಳ ಅಮರಕೃತಿಗಳನ್ನು ಕಾಣದೆ ಕಂಗಾಲಾಗಿ ಪ್ರಾಚೀನಕಾವ್ಯಗಳಲ್ಲಿ ನಾಟಕದ ಹೆಜ್ಜೆಗಳನ್ನು ಗುರುತಿಸ ಹೊರಟಿದ್ದಾರೆ. ಅಷ್ಟಿದ್ದರೆ ಸಾಕಿತ್ತು; ಆದರೆ ಅವರು ಹಲವು ಅಪಾಯಕಾರಿ ಹೇಳಿಕೆಗಳನ್ನಿತ್ತಿದ್ದಾರೆ. ಉದಾಹರಣೆಗೆ—ರನ್ನ ನಾಟಕ ರಚನೆಗೆ ಕೈಹಾಕಿದ. ಆದರೆ ಕೈ ತಪ್ಪಿ ಅದು ಕಾವ್ಯವಾಯಿತು, ಎಂಬ ಅರ್ಥ ಬರುವಂತೆ ನುಡಿದಿದ್ದಾರೆ. ಇದು ಶುದ್ಧ ಹಾಸ್ಯಾಸ್ಪದ. ರನ್ನ ಬರೆಯ ಹೊರಟದ್ದು ಕಾವ್ಯವನ್ನೆ ಹೊರತು ನಾಟಕವನ್ನಲ್ಲ. ಅವನ ಕಣ್ಣ ಮುಂದಿದ್ದದ್ದು ಭಟ್ಟನಾರಾಯಣನ ವೇಣೀಸಂಹಾರ ನಾಟಕ. ಅದರ ಪ್ರಭಾವದಿಂದ, ಪಂಪನ ಕಾವ್ಯದ ತೀವ್ರ ಪ್ರಭಾವದಿಂದ ಎಷ್ಟೇ ಶಕ್ತಿಶಾಲಿ ಕವಿಯಾಗಿದ್ದರೂ ರನ್ನನಿಗೆ ಬಿಡಿಸಿಕೊಳ್ಳಲಾಗಲಿಲ್ಲ. ಅದರಿಂದಾಗಿ ಅವನು ನಾಟಕೀಯತೆಯನ್ನೊಳಗೊಂಡ ಕಾವ್ಯವನ್ನು ಬರೆಯಬೇಕಾಯಿತು. ಶೂನ್ಯಸಂಪಾದನೆಗಳನ್ನು ನೋಡಿದಾಗಲಾಗಲೀ, ರಾಘವಾಂಕನನ್ನು ಓದಿದಾಗಲಾಗಲೀ ನಾಟಕವೆ ಪ್ರತ್ಯಕ್ಷವಾಗಿ ನಡೆಯುತ್ತದೆ ಎಂಬ ಭಾವನೆ ಬರುತ್ತದೆ. ಆದರೆ ಅವುಗಳಲ್ಲಿ ನಾಟಕೀಯ ಗುಣ ಇದೆ, ಅಷ್ಟೇಹೊರತು ಅವರು ನಾಟಕ ಬರೆಯಹೊರಟು ಹಾದಿ ತಪ್ಪಿ ಕಾವ್ಯ ಬರೆದರು. ಎಂದು ಹೇಳ ಬರುವುದಿಲ್ಲ. ಆದರೆ ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ತನ್ನ ಕೃತಿಗಳ ಪಟ್ಟಿಯನ್ನು ಕೊಡುತ್ತಾ ಸುಭದ್ರಾಹರಣಂ, ಪ್ರಭೋದಚಂದ್ರಂ, ಕಿರಾತಮ್, –ಎಂಬ ಕೃತಿಗಳನ್ನು ಹೇಳುತ್ತಾನೆ. ಇವು ಬಹುಶಃ ನಾಟಕಗಳಾಗಿದ್ದಿರಬೇಕು ಎಂಬ ಊಹೆ ಅರ್ಥಪೂರ್ಣವಾಗಿದೆ. ಆದರೂ ಅವು ಸ್ವತಂತ್ರವಾದವುಗಳೋ ಅಥವಾ, ಅನುವಾದಗಳೋ ಹೇಳ ಬರುವದಿಲ್ಲ. ಆ ಕಾಲದಲ್ಲಿ ಜಾನಪದ ಆಟಗಳು ಇಲ್ಲದಿಲ್ಲ; ಅವು ಇದ್ದವೆಂಬುದಕ್ಕೆ ಅನೇಕ ಮಾಹಿತಿಗಳು ದೊರೆಯುತ್ತವೆ.[3] ನೂರಾರು ವರ್ಷಕ್ಕೆ ಹಿಂದಿನಿಂದಲೂ ಕನ್ನಡನಾಡಿನ ಎಲ್ಲಾ ಕಡೆಯಲ್ಲೂ ಅಭಿನಯ ಯೋಗ್ಯವಾದ ಈ ಯಕ್ಷಗಾನ ನಾಟಕ

---

3. ಕನ್ನಡ ರಂಗಭೂಮಿ ಶತಮಾನೋತ್ಸವ ಸ್ಮಾರಕ ಗ್ರಂಥ-ಇದರಲ್ಲಿನ ಗೋವಿಂದ ಪೈ ಅವರ 'ಕನ್ನಡ ನಾಟಕದ ಹಳಮೆ' ಲೇಖನ. ಭಾಗ II ಪುಟ ೭ ಮತ್ತು ೨೨ ನೋಡಿ.

ಸಾಹಿತ್ಯ ಸೃಷ್ಟಿಯಾಗಿತ್ತೆಂಬುದು ಸ್ಪಷ್ಟಪಟ್ಟಿದೆ. ಆ ನಾಟಕಗಳು ಯಶಸ್ವಿಯಾಗಿ ಅಂದಿನ ರಂಗಮಂಟಪದಲ್ಲಿ ಅಭಿನಯವಾಗುತ್ತಿದ್ದು ಜನಜೀವನದಲ್ಲಿ ಆಸಕ್ತಿಯನ್ನು ಹುಟ್ಟಿಸಿ ಪರಿಣಾಮಕಾರಿಯಾಗಿದ್ದುದೇ ಅವು ಸಾಹಿತ್ಯ ಮಟ್ಟಕ್ಕೆ ಏರಬಲ್ಲುವೆಂಬುದಕ್ಕೆ ಕಾರಣಗಳಾಗಿವೆ. ಆದರೂ ಗ್ರಂಥಸ್ಥರೂಪದಲ್ಲಿದ್ದು ಸಾಹಿತ್ಯದಲ್ಲಿ ಒಂದು ಸ್ಥಾನ ಪಡೆದುಕೊಳ್ಳದಿದ್ದುದು ಆಶ್ಚರ್ಯವೆನಿಸಿದರೂ ಕಾರಣಗಳು ಇಲ್ಲದೇ ಇಲ್ಲ. ದೇಶೀಮಟ್ಟಿನ ಅಂಥ ನಾಟಕಗಳು ಪಂಡಿತರ ಲಾಕ್ಷಣಿಕರ ಮುಂದೆ ಸಂಸ್ಕೃತ ನಾಟಕಗಳನ್ನು ಹೋಲದಿದ್ದುದೂ, ಕೇವಲ ಲಾಕ್ಷಣಿಕ ರೀತಿಯಲ್ಲಿ ಬರೆದಿದ್ದ ನಾಟಕಗಳಿಗೇ ಸಾಹಿತ್ಯದಲ್ಲಿ ಸ್ಥಾನವೆಂಬ ಬಿಗುಪೂ ಅದಕ್ಕೆ ಕಾರಣಗಳಿರಬೇಕು. ನಿಜವಾಗಿಯೂ ಆ ನಾಟಕಗಳು ಬಾಯಿಂದ ಬಾಯಿಗೆ ಮುಂದುವರಿದು ಬದುಕಿಕೊಂಡು ಅಭಿನಯವಾಗುತ್ತಿದ್ದವು. ಅವುಗಳ ಕಥನಕೌಶಲವೂ ಪಾತ್ರಸೃಷ್ಟಿಯೂ ಉತ್ತಮ ಮಟ್ಟದವು. ಅದರಿಂದಲೇ ಅವು ಜನತೆಗೆ ಪ್ರಿಯವಾಗಿದ್ದುದು. ನಮಗೆ ಗ್ರಂಥಸ್ಥರೂಪದಲ್ಲಿ ದೊರಕಿರುವ ಮತ್ತು ಸಂಸ್ಕೃತ ಲಕ್ಷಣ ಶಾಸ್ತ್ರವನ್ನು ಅನುಸರಿಸಿ ರೂಪಗೊಂಡಿರುವ ಕನ್ನಡ ಪ್ರಾಚೀನತಮ ನಾಟಕವೆಂದರೆ ೧೬೮೦ರಲ್ಲಿ ಚಿಕ್ಕದೇವರಾಜರ ಕಾಲದಲ್ಲಿ ರಚನೆಯಾದ **ಸಿಂಗರಾರ್ಯನ ಮಿತ್ರವಿಂದಾ ಗೋವಿಂದ** ಎಂಬ ನಾಟಕ; ಇದು ಸ್ವತಂತ್ರ ಕೃತಿಯಲ್ಲ. 'ರತ್ನಾವಳೀ ನಾಟಕ'ದ ಅನುವಾದ. ಅದೂ ಉಚಿತವಲ್ಲದ ರೀತಿಯ ಅನುವಾದ. ಗ್ರಂಥಸ್ಥವಾಗಿ ನಮಗೆ ದೊರೆಯದಿದ್ದರೂ ಅದಕ್ಕೂ ಹಿಂದೆ ಕನ್ನಡ ರಂಗಭೂಮಿ ಜನಸಾಮಾನ್ಯರ ಸೊತ್ತಾಗಿ ಬದುಕಿಯೇ ಇತ್ತು. ಇಲ್ಲಿ ಅಭಿನಯವಾಗುತ್ತಿದ್ದ ನಾಟಕಗಳೂ ಇದ್ದವು. ಅವುಗಳು ಜನತೆಯ ಬಾಯಲ್ಲಿ ಭಾಗವತರ, ದೊಂಬಿದಾಸರ ಮನಸಿನಲ್ಲಿ ಇದ್ದುಕೊಂಡು ರಂಗದಲ್ಲಿ ಪ್ರದರ್ಶಿತವಾಗುತ್ತಿದ್ದವು. ಈ ಅಂಶವನ್ನು ಸ್ಪಷ್ಟೀಕರಿಸಲು ಕೆಳಗಿನ ಆಧಾರಗಳನ್ನು ಕೊಡಬಹುದು:

ಕ್ರಿ.ಶ.೧೫೦೦ ರಲ್ಲಿ ಬದುಕಿದ್ದ ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯ ೪ನೆಯ ಪ್ರಕರಣದಲ್ಲಿ 'ನಾಟಕದಲ್ಲಿ ದಿನದಿನಕ್ಕಭಿನಯಿಸಲ್ತಕ್ಕ ರಸ ಭಾವ ಸಂವಿಧಾನ ಆಶ್ರಯಗಳೆಂಬ ಚತುರ್ವಿಧ ಪ್ರಬಂಧಾಂಶಗಳಂ.........' ಎಂದು ಮುಂತಾಗಿ ವರ್ಣಿಸಿರುವುದನ್ನು ನೋಡಿದರೆ ಆ ಕಾಲದಲ್ಲಿ ಸುವ್ಯವಸ್ಥಿತವಾದ ದೇಶೀನಾಟಕಗಳಿದ್ದುವೆಂಬುದು ಸ್ಪಷ್ಟವಾಗುತ್ತದೆ. ೧೪೩೦ರ ಸುಮಾರಿನಲ್ಲಿ ಬದುಕಿದ್ದ ಕುಮಾರವ್ಯಾಸನು ತನ್ನ ಭಾರತದಲ್ಲಿ 'ನಾಡಾಡಿಗಳ ನಾಟಕವದೇ' ಎಂದು ಹೇಳಿರುವುದು ಅಂದು ಪ್ರಚಾರದಲ್ಲಿದ್ದ ದೇಶೀನಾಟಕಗಳನ್ನೇ ಉದ್ದೇಶದಲ್ಲಿಟ್ಟುಕೊಂಡು ಬರೆದಂತಿದೆ. ಅದೇ ದೃಷ್ಟಿಯನ್ನು ಅವನ 'ರಣನಾಟಕಕೆ ಜವನಿಕೆಯಾಯ್ತು ರಜನಿ' ಎಂಬ ಅಂಶವು ಅಂದಿನ ನಾಟಕದ ಸ್ವರೂಪವನ್ನೇ ಸ್ಮರಣೆಗೆ ತರುವಂತಿದೆ. ಕೇಶಿರಾಜನ (೧೨೬೦) ಶಬ್ದಮಣಿದರ್ಪಣದಲ್ಲಿ 'ಸುಭದ್ರಾಹರಣಂ ಪ್ರಬೋಧಚಂದ್ರಂ ಕಿರಾತಮಿವು ಕೇಶಿರಾಜಕವಿ ರಚಿತಂಗಳ್' ಎಂದು ತನ್ನ ಕೊನೆಯ ಕಂದದಲ್ಲಿ ಹೇಳಿರುವುದರಿಂದ ಆ ಮೂರು ಕೇಶಿರಾಜ ರಚಿಸಿರಬಹುದಾದ ನಾಟಕಗಳೆನಿಸುತ್ತವೆ. ಹಾಗೂ ಪ್ರಬೋಧಚಂದ್ರ ಸಂಸ್ಕೃತ ನಾಟಕವಾದ ಪ್ರಬೋಧ ಚಂದ್ರೋದಯದ ಅನುವಾದವೋ ಏನೋ ಎನ್ನಿಸುತ್ತದೆ. ೧೧೫೦ ರ ಸುಮಾರಿನಲ್ಲಿ ರಚಿತವಾಗಿರಬಹುದಾದ ನಾಗವರ್ಮನ ಕರ್ಣಾಟಕ ಕಾವ್ಯಾವಲೋಕನದಲ್ಲಿ ಉದಾಹರಣೆಗಾಗಿ ಹರ್ಷನ ನಾಗಾನಂದ ನಾಟಕದ ಕನ್ನಡ ಅನುವಾದದ ಭಾಗಗಳನ್ನು ಕೊಟ್ಟಿರುವನು. ಹಾಗೆಯೇ ಕಾಳಿದಾಸನ ವಿಕ್ರಮೋರ್ವಶೀಯದ ಅನುವಾದಗಳೂ ಬಂದಿವೆ–ಎಂದ ಮೇಲೆ ಆ ನಾಟಕಗಳು ಅಂದಿಗಾಗಲೇ ಕನ್ನಡಕ್ಕೆ ಅನುವಾದವಾಗಿದ್ದಿರಬೇಕೆನ್ನಿಸುತ್ತದೆ. ಆದರೆ ಅವು ಗ್ರಂಥರೂಪದಲ್ಲಿ ದೊರೆತಿಲ್ಲ, ಹಾಗಾದರೆ ಆ ಕಾಲದ ನಾಟಕದ ಸಾಹಿತ್ಯ ಗ್ರಂಥ ರೂಪದಲ್ಲಿ ಏಕೆ ಉಳಿಯಲಿಲ್ಲ? ಶ್ರವ್ಯಕಾವ್ಯಗಳನ್ನು ಜನ ಹಬ್ಬಹುಣ್ಣಿಮೆಗಳಲ್ಲಿ ಓದಬೇಕಾದ ಆವಶ್ಯಕತೆ ಇತ್ತು. ನಾಟಕ ಸಾಹಿತ್ಯ ಅಭಿನಯಕ್ಕೆ ಮಾತ್ರ; ಅಭಿನಯಿಸುತ್ತಿದ್ದವರು ಮಾತ್ರ ಅದನ್ನು ಗ್ರಂಥಸ್ಥವಾಗಿಯೇ ಇಟ್ಟುಕೊಂಡು ಉಪಯೋಗಿಸುತ್ತಿದ್ದರು. ಆದರೆ ಅಂಥವರ ಸಂಖ್ಯೆಯಾದರೂ ಎಷ್ಟು? ಅಂತು ಶ್ರವ್ಯ ಕಾವ್ಯಗಳು ಗ್ರಂಥಸ್ಥವಾಗಿ ಉಳಿದುಕೊಂಡು ಬರುವಷ್ಟು ಸಂಭವ ದೃಶ್ಯಕಾವ್ಯಗಳಿಗಿದ್ದಿರಲಾರದು. ಆದ್ದರಿಂದ ಅಂಥ ನಾಟಕಸಾಹಿತ್ಯ ಲುಪ್ತವಾಗಿರಬಹುದು. ಪಂಚತಂತ್ರದಲ್ಲಿ ದುರ್ಗಸಿಂಹಕವಿ 'ಮಾಳತೀ ಮಾಧವಮಂ ವಿರಚಿಸಿದ ಕನ್ನಮಯ್ಯಂ' ಎಂದು ಹೇಳಿರುವದರಿಂದ ಕನ್ನಮಯ್ಯನು ಮಾಲತೀಮಾಧವವನ್ನು ಕನ್ನಡದಲ್ಲಿ ಬರೆದಿದ್ದಾನೆಂಬುದು ಶ್ರುತವಾಗುತ್ತದೆ. ಕನ್ನಮಯ್ಯನು ಇದ್ದುದು ಹತ್ತನೆಯ ಶತಮಾನದ ಹಿಂದೆ ಇರಬಹುದು. ಜಯಕೀರ್ತಿ ತನ್ನ ಛಂದೋನುಶಾಸನದಲ್ಲಿ 'ಕನ್ನಡದ ಮಾಲತೀ ಮಾಧವ'ವನ್ನು ಉಲ್ಲೇಖಿಸಿರುವನು, ಆದ್ದರಿಂದ ಈ ಎರಡೂ ಹೆಸರು ಒಂದೇ ಇದ್ದು, ಆ ಗ್ರಂಥ ಭವಭೂತಿಯ ಮಾಲತೀ ಮಾಧವದ ಕನ್ನಡ ಅನುವಾದವಿರಬೇಕೆನಿಸುತ್ತದೆ. ಎಂದರೆ, ನಮಗೆ ದೊರೆತಿರುವ ಕನ್ನಡ ಸಾಹಿತ್ಯಗ್ರಂಥಗಳು ಆ ಕಾಲದಲ್ಲಿ ನಾಟಕಸಾಹಿತ್ಯವಿತ್ತೆಂಬುದನ್ನು ದೃಢಪಡಿಸುತ್ತವೆ. ಅವುಗಳಲ್ಲಿ ಕನ್ನಮಾರ್ಯನೂ, ಕೇಶಿರಾಜನೂ ಸಂಸ್ಕೃತ ನಾಟಕಗಳನ್ನು ಕನ್ನಡಿಸಿರುವರೆಂಬ ಅಂಶವೂ ಸ್ಪಷ್ಟಪಡುತ್ತದೆ. ಜೊತೆಗೆ ದೇಶೀನಾಟಕಗಳು ಇದ್ದುವೆಂಬುದೂ ಸ್ಪಷ್ಟಪಡುತ್ತದೆ. ಎಂದ ಮೇಲೆ ಕನ್ನಡ ನಾಟಕದ ಸಾಹಿತ್ಯ ಹುಟ್ಟಿದ್ದು ಹಾಗೂ ರಂಗಭೂಮಿ ಆದದ್ದು ಒಂದು ಶತಮಾನ ಮಾತ್ರವಲ್ಲ, ಹತ್ತು ಶತಮಾನಗಳಿಗೆ ಮೇಲ್ಪಟ್ಟು!

"ಕನ್ನಡ ನಾಟಕ ಸಾಹಿತ್ಯ ನಮ್ಮ ಇತರ ಕಾವ್ಯಗಳಷ್ಟೇ ಹಳೆಯದು, ಆದರೆ ನಮಗೆ ಅದು ದೊರಕಿರುವುದು ಮಾತ್ರ ೧೭ ನೆಯಶತಮಾನದಿಂದೀಚೆಗೆ. ೯–೧೦ ನೆಯ ಶತಮಾನಗಳಲ್ಲೇ ಸಂಸ್ಕೃತ ನಾಟಕಗಳು ಕನ್ನಡಕ್ಕೆ ಪರಿವರ್ತನೆಯಾದುವೆಂದೂ

ದೇಶೀನಾಟಕಗಳು ಅಭಿನಯವಾಗುತ್ತಿದ್ದವೆಂದೂ ಮೇಲೆ ಹೇಳಿದ ಉಲ್ಲೇಖಗಳಿಂದ ಸ್ಪಷ್ಟಪಟ್ಟಿದೆ. ಅವುಗಳಲ್ಲಿ ದೇಶೀಯ ನಾಟಕಗಳು ಬಹುಮಟ್ಟಿಗೆ ಇಂದಿನ ಬಯಲಾಟದ ನಾಟಕ ಸಾಹಿತ್ಯವನ್ನು ಹೋಲುತ್ತಿದ್ದಿರಬೇಕು. ಹಾಗೂ ಆ ನಾಟಕಸಾಹಿತ್ಯ ಸಂಸ್ಕೃತ ನಾಟಕಗಳಿಗೆ ಸಮಗ್ಯೆಯಾಗಿ ಕ್ರಿಸ್ತ ಶಕದ ಆದಿಯಿಂದಲೂ ಪ್ರಚಾರದಲ್ಲಿದ್ದಿರಬೇಕೆಂದು ನಮ್ಮ ಭಾವನೆ ಎಂದ ಮೇಲೆ ಕನ್ನಡ ರಂಗಭೂಮಿಯ ಪ್ರಾಚೀನತೆ ಎರಡು ಸಹಸ್ರ ವರ್ಷಗಳವರೆಗೂ ಹಾದುಹೋಗುವುದೆಂದು ಈ ಸಮಯದಲ್ಲಿ ನಾವು ಮನನ ಮಾಡಿಕೊಳ್ಳಬಹುದಾಗಿದೆ"[4] ವೀರಪ್ಪನವರ ಈ ಅಭಿಪ್ರಾಯ ಸ್ವಾಗತಾರ್ಹ.

### ಕನ್ನಡ ನಾಟಕ ಕಲೆಗೆ ವೀರಶೈವರ ಕೊಡುಗೆ

ವೀರಶೈವರ ಅರಸು ಮನೆತನಗಳು: ಕನ್ನಡ ನಾಡು, ನುಡಿ, ಸಂಸ್ಕೃತಿ ಮೊದಲಾದವುಗಳಿಗೆ ಕರ್ನಾಟಕದ ವೀರಶೈವರಿಂದ ಅಪಾರ ಸೇವೆ ಸಂದಿದೆ. ವಚನ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಅಷ್ಟೇಕೆ ವಿಶ್ವ ಸಾಹಿತ್ಯಕ್ಕೆ–ವೀರಶೈವರಿತ್ತಕೊಡುಗೆ. ಅಂತೆಯೇ ವಿಶ್ವವಿಖ್ಯಾತ ಮಹಾಸಾಮ್ರಾಜ್ಯವೆನಿಸಿದ ವಿಜಯನಗರ ಸಾಮ್ರಾಜ್ಯವನ್ನು ಸಂಸ್ಥಾಪಿಸಿ ಅದರ ಪ್ರಗತಿಗೆ ಕಾರಣರಾದವರು ವೀರಶೈವರು. ಕನ್ನಡಿಗರ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಇತಿಹಾಸ ಸಂಪುಟಗಳಲ್ಲಿ ವಿಜಯನಗರದ ಸಂಗಮವಂಶದ ಪ್ರಸಿದ್ಧ ಪ್ರೌಢ ದೇವರಾಯನ ಆಳ್ವಿಕೆಯಂತೂ ಸುವರ್ಣಾಧ್ಯಾಯವೆನಿಸಿದೆ. ವಿಜಯನಗರದ ಪತನಾಂತರ ಕನ್ನಡನಾಡು ಹರಿದು ಹಂಚಾದಾಗ, ನಾಡಿನಾದ್ಯಂತ ತಲೆ ಎತ್ತಿದ ಪಾಳೆಪಟ್ಟುಗಳಲ್ಲಿ ಬಹಳ ರಾಜ್ಯಗಳು ವೀರಶೈವರವು. ಪ್ರಮುಖವಾಗಿ, ಕೆಳದಿ, ಕೊಡಗು, ಸ್ವಾದಿ, ಬೀಳಗಿ, ಬಿಜ್ಜಾವರ, ಹಾಗಲ್ವಾಡಿ, ಮತ್ತೋಡು, ಪುಂಗನೂರು ಇತ್ಯಾದಿ. ಈ ಎಡೆಗಳಲ್ಲಿ ಆಳಿದ ಅರಸರು ಕನ್ನಡ ಕಲೆ, ಕನ್ನಡ ಸಂಸ್ಕೃತಿ ಮೊದಲಾದವುಗಳಿಗೆ ಪ್ರೋತ್ಸಾಹ ನೀಡುವ ಮೂಲಕ ವಿಶಿಷ್ಟ ಭಾರತೀಯ ಸಂಸ್ಕೃತಿಯ ವೃಕ್ಷಕ್ಕೆ ನೀರೆರೆದು ಪೋಷಿಸಿದ್ದಾರೆ; ಅವರು ಹುಟ್ಟಿನಿಂದ ವೀರಶೈವರು; ಭಾವನೆಯಲ್ಲಿ ಭಾರತಿಯರು.

ಕೆಳದಿಯವರು ಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆ, ನಾಟಕ, ಯುದ್ಧಕಲೆ, ಕೋಟೆನಿರ್ಮಾಣ, ವಾಣಿಜ್ಯ, ನಾಣ್ಯಪದ್ಧತಿ, ಶಿಸ್ತು, ಆಡಳಿತದಕ್ಷತೆ, ಸರ್ವಧರ್ಮಸಮನ್ವಯತೆ, ಸಂಸ್ಕೃತಿ ಇತ್ಯಾದಿಗಳನ್ನು ಪ್ರಚುರ ಪಡಿಸುವ ಮೂಲಕ ಕನ್ನಡಿಗರ ಹಿರಿಮೆಯನ್ನು ಮೆರೆದಿದ್ದಾರೆ. ವಾಸ್ತುಶಿಲ್ಪದಲ್ಲಿ ಇಕ್ಕೇರಿ ಶೈಲಿ ಎಂಬುದಿದೆ. ನಾಣ್ಯಗಳಲ್ಲಿ ಇಕ್ಕೇರಿ ವರಹಗಳಿವೆ; ತೆರಿಗೆ, ಕಂದಾಯಗಳ ಸುವ್ಯವಸ್ಥೆಗೆ ಶಿವಪ್ಪನಾಯಕನ 'ಸಿಸ್ತು' ಇದೆ; ಅಂದಿನ ಯಕ್ಷಗಾನವೇ ಮೊದಲಾದ ನಾಟಕಗಳನ್ನು ಪ್ರದರ್ಶಿಸುವುದಕ್ಕೂ ಆಗಾಗ ವಿದ್ವನ್ಮಣಿಗಳನ್ನು ಸೇರಿಸಿ ವಿಚಾರಗೋಷ್ಠಿ, ವಿದ್ವತ್‌ಗೋಷ್ಠಿಗಳನ್ನು ನಡೆಸುವುದಕ್ಕೂ ಕೆಳದಿಯಲ್ಲಿ ಹಿರಿಯ ವೆಂಕಟಪ್ಪನಾಯಕನ 'ನಾಟಕಶಾಲೆ' ಇದೆ; ಕಿರಿಯ ಬಸವಪ್ಪ ನಾಯಕನ ಆಸ್ಥಾನದಲ್ಲಿ ಹಲವು ಸದ್ಗ್ರಂಥಗಳ ಜೊತೆಗೆ 'ಶಿವ ಕಲ್ಯಾಣ'ವೆಂಬ ಯಕ್ಷಗಾನ ಕೃತಿಯನ್ನಿತ್ತ ಕವಿ ಲಿಂಗಣ್ಣನೂ, ರುಕ್ಮಿಣೀಸ್ವಯಂವರ ಮತ್ತು ಪಾರಿಜಾತ ಎಂಬ ಉತ್ತಮ ಯಕ್ಷಗಾನ ಕೃತಿಗಳನ್ನಿತ್ತ ಲಿಂಗಣ್ಣನ ಮೊಮ್ಮಗ ಕೆಳದಿಯ ಸುಬ್ಬನೂ, ಇನ್ನೆನಿತೋ ಮಂದಿ ಯಕ್ಷಗಾನ ಕಲಾವಿದರು, ಬೊಂಬೆಯಾಟದವರು, ಸೊರಬ ಸಾಗರದಲ್ಲಿರುವ ಗುಡಿಕಾರರು, ತಾಳಮದ್ದಳೆಯ ಗಂಧರ್ವರು–ಎಲ್ಲರೂ ಇದ್ದಾರೆ. ಕೇರಳದ ಕೊಟ್ಟಾರ್‌ಕಪ್ ಮಹಾರಾಜನನ್ನು ಬಿಟ್ಟರೆ, ಕರ್ನಾಟಕದಲ್ಲಿ ಮೊಟ್ಟಮೊದಲು ಯಕ್ಷಗಾನಕ್ಕೆ ರಾಜಾಶ್ರಯ ಸಿಕ್ಕಿದ್ದು ಕೆಳದಿಯಲ್ಲಿ. ಅನಂತರದಲ್ಲಿ ಮೈಸೂರರಸರು, ಸಗಟೂರು ರಾಜಮನೆತನದ ಮುಮ್ಮಡಿ ತಮ್ಮ ಇತ್ಯಾದಿಗಳು ಪೋಷಿಸಿದ್ದಾರೆ. ಅಂತೂ ಕೆಳದಿಯವರಿಂದ ರಾಜಾಶ್ರಯ ದೊರೆತ ಕೂಡಲೇ ಯಕ್ಷಗಾನ ಕಲೆಗೆ ಸಹಸ್ರಭುಜಗಳು ಮೂಡಿದವು. ಅದು ವಿಪುಲವಾಗಿ ಬೆಳೆದು, ವಿದ್ವಜ್ಜನರ ಗೌರವಾದರಗಳಿಗೆ ಪಾತ್ರವಾಯಿತು. ಆದರೆ ಗ್ರಂಥ ರೂಪದಲ್ಲಿ ಅಷ್ಟಾಗಿ ಹೊರಬರಲಿಲ್ಲ. ಬಂದ ಕೃತಿಗಳಲ್ಲಿ ಕ್ರಿ. ಶ. ೧೭೫೦ರ ಸುಮಾರಿನಲ್ಲಿ ಕಾಣಸಿಗುವ ಚನ್ನಪ್ಪ ಕವಿಯ 'ಶಿವಶರಣಲೀಲಾಮೃತ' ಗಣನೀಯ ಗ್ರಂಥ. ಇದರಲ್ಲಿ ಬಸವೇಶ್ವರನ ಹಾಗೂ ಅವನ ಸಮಕಾಲೀನರ ಪೂರ್ವ ಚರಿತ್ರೆಯು ಹನ್ನೊಂದು ಸಂಧಿಗಳಲ್ಲಿ ಬಿತ್ತರಗೊಂಡಿದೆ.

ಕೆಳದಿಯಂತೆ ಕೊಡಗು ಬಿಜ್ಜಾವರ ಮೊದಲಾದೆಡೆಗಳ ವೀರಶೈವ ಅರಸರು ಈ ಯಕ್ಷಗಾನ ಕಲೆಗೆ ಪ್ರೋತ್ಸಾಹ ನೀಡಿರಬಹುದು. ಆದರೆ ಅದು ಇನ್ನೂ ಸಂಶೋಧನೆಯ ಗರ್ಭದಲ್ಲಿರುವ ಅಂಶ.

### ವೀರಶೈವ ವೃತ್ತಿ ನಾಟಕ ಸಂಸ್ಥೆಗಳು ಮತ್ತು ಹವ್ಯಾಸಿ ಕಲಾಮಂಡಳಿಗಳು

ನಮ್ಮ ಭಾರತೀಯ ಸಾಹಿತ್ಯ ಗುರು ಮನೆಯಲ್ಲಿ ಅರಮನೆಯಲ್ಲಿ ಅನುಪ್ರಾಣಿತವಾಗಿ, ನೆರೆಮನೆಗೆ ಬಂದು ಸೇರಿತು. ಅಂದರೆ ರಾಜಾಶ್ರಯ ತಪ್ಪಿದ ಮೇಲೆ ಅದು ಜನಸಾಮಾನ್ಯರ ಪೋಷಣೆ ಪ್ರೋತ್ಸಾಹಗಳಿಂದ ಬೆಳೆಯಬೇಕಾಯಿತು. ನಾಟಕ ಸಾಹಿತ್ಯವೂ ಅಷ್ಟೇ. ರಾಜಾಶ್ರಯವನ್ನು ಕಳೆದುಕೊಂಡ ಈ ತಬ್ಬಲಿ ಶಿಶುವನ್ನು ಕೈಗೆತ್ತಿಕೊಂಡು ಹಾಲೂಡಿಸಿ, ಜೋಗುಳ ಹಾಡಿ ಬೆಳೆಸಿದ ಮಾತೃವಾತ್ಸಲ್ಯದ ಮಡಿಲು ಎಂದರೆ ವೃತ್ತಿನಾಟಕ ಹಾಗೂ ಹವ್ಯಾಸಿ ಕಲಾಮಂಡಳಿಗಳು. ಅವುಗಳಲ್ಲಿ ವೀರಶೈವರು ಕಟ್ಟಿಬೆಳೆಸಿದ ನಾಟಕ ಮಂಡಳಿಗಳೇ ಹೆಚ್ಚು. ಬರಿಯ ಸಂಖ್ಯೆಯಲ್ಲಲ್ಲ ಸತ್ವದಲ್ಲೂ ಅವು ಬೆಲೆಯುಳ್ಳವು.

4. ಎಸ್. ಎಸ್. ವೀರಪ್ಪ: ಕನ್ನಡ ರಂಗ ಭೂಮಿಯ ಇತಿಹಾಸ. ಕನ್ನಡ ರಂಗಭೂಮಿ ಶತಮಾನೋತ್ಸವ ಸ್ಮಾರಕ ಸಂಚಿಕೆ, ಪುಟ. ೨೦-೨೧

ನಾಟಕ ಎಂದ ಕೂಡಲೇ, ರಂಗಭೂಮಿಯೊಂದು ನಮ್ಮ ಕಣ್ಣೆದುರಿನಲ್ಲಿ ಬಂದು ನಿಲ್ಲುತ್ತದೆ. ಅದು ಅಭಿನಯಕ್ಕೆ ಮೀಸಲಾದ ಕಲೆ. 'ಪ್ರಯೋಗ ಪ್ರಧಾನಂ ಹಿ ನಾಟ್ಯಂ' ಅಲ್ಲವೇ ? ಆದ್ದರಿಂದ ನಾಟಕಕ್ಕೆ ಇಂದು ಯಾವುದೇ ಮಾಧ್ಯಮವಿರಲಿ ಅಂದು ಅದು ರಂಗಭೂಮಿಗಾಗಿ ಹುಟ್ಟಿಕೊಂಡದ್ದು; ಪ್ರದರ್ಶನಕ್ಕೆ ಮೀಸಲಾದದ್ದು. ಎಂದರೆ ಅದು ರಂಗಭೂಮಿ ಹುಟ್ಟಿದ ಮೇಲೆ ಸೃಷ್ಟಿಯಾಯಿತೆಂದು ಅರ್ಥವಲ್ಲ. ರಂಗಭೂಮಿ ಇಲ್ಲದ ನಾಟಕ ಕಲೆಯನ್ನು ರೂಪಿಸಿಕೊಳ್ಳಲು ಸಾಧ್ಯ; ಆದರೆ ನಾಟಕವೇ ಇಲ್ಲದ ರಂಗಭೂಮಿಯನ್ನು ಕಲ್ಪಿಸಿಕೊಳ್ಳುವುದಕ್ಕೂ ಬರುವುದಿಲ್ಲ. ಆದರೂ ಇವೆರಡು ಅನ್ಯೋನ್ಯಾಶ್ರಯಿಗಳು. ಈ ಬಾಂಧವ್ಯವನ್ನು ಕನ್ನಡನಾಡಿನಲ್ಲಿ ಮೊದಲು ಬೆಸೆದವರು ಕಲಾಭಿಜ್ಞರಾದ ವೀರಶೈವರು. ಸೂಕ್ಷ್ಮವಾಗಿ ಅವಲೋಕಿಸಿದರೆ ನಾಟಕದ ಪ್ರದರ್ಶನ ವೀರಶೈವರಿಗೇ ಒಲಿದು ಬಂದ ಕಲೆಯೇನೋ ಎನ್ನಿಸುವ ಮಟ್ಟಿಗೆ ಅದರ ಪ್ರಾಚುರ್ಯಕ್ಕೆ ಕಾರಣರಾಗಿದ್ದಾರೆ. ಅಂತಹ ಒಂದೆರಡು ಸಂಸ್ಥೆಗಳನ್ನಿಲ್ಲಿ ಹೆಸರಿಸಬಹುದು.

**ಗುಬ್ಬಿ ಕಂಪನಿ :** ಕನ್ನಡ ರಂಗ ಭೂಮಿಗೆ ಕಾಲಿರಿಸಿರುವವರು ಯಾರೇ ಆಗಲಿ, ಅವರು ಮೊದಲು 'ಗುಬ್ಬಿ ಶ್ರೀ ಚನ್ನಬಸವೇಶ್ವರ ಕೃಪಾಪೋಷಿತ ನಾಟಕಸಭಾ'–ಎಂಬ ಸಂಸ್ಥೆಗೆ ಶಿರಬಾಗಿ ನಮಿಸಿ ಮುಂದಡಿಯಿಡಬೇಕಾಗುತ್ತದೆ. ಏಕೆಂದರೆ ಕನ್ನಡ ರಂಗಭೂಮಿಯ ಗೌರವ ಪ್ರತಿಷ್ಠೆಗಳನ್ನು ಹೆಚ್ಚಿಸಿದ ಮಹಾಸಂಸ್ಥೆ ಎಂದರೆ ಅದೊಂದೇ. ಅದು ಡಾ॥ ಜಿ.ಹೆಚ್. ವೀರಣ್ಣನವರಂತಹ ಕುಲಪತಿಗಳನ್ನು ಪಡೆದ ಒಂದು ಜನತಾ ವಿಶ್ವವಿದ್ಯಾಲಯ; ಸಮಸ್ತ ಲಲಿತಕಲೆಗಳ ಶಿಕ್ಷಣಕ್ಷೇತ್ರ. ಅಲ್ಲಿ ಸಾವಿರಾರು ಜನ ಕವಿಕಲಾವಿದರು ಬೆಳಕು ಕಂಡಿದ್ದಾರೆ. ೧೮೮೪ರಲ್ಲಿ ಗುಬ್ಬಿ ಚಂದ್ರಣ್ಣನವರು ಅಬ್ದುಲ್ ಅಜೀಜ್ ಸಾಹೇಬರು, ಸಾವುಕಾರ್ ನೀಲಕಂಠಪ್ಪನವರು ಇದನ್ನು ಸ್ಥಾಪಿಸಿದರು,ಇವರಲ್ಲಿ ಶ್ರೀ ನೀಲಕಂಠಪ್ಪನವರು ವೀರಶೈವರು. ಆ ಸಂಸ್ಥೆಯ ಮೊದಲ ಪ್ರದರ್ಶನ 'ಕುಮಾರ ರಾಮನಕಥೆ' ಎಂಬ ಯಕ್ಷಗಾನ ಐತಿಹಾಸಿಕ ನಾಟಕ. ಮೇಲಿನ ಮೂವರು ಮಹನೀಯರ ನಂತರ ಕನ್ನಡಿಗರ ಭಾಗ್ಯ ವಿಶೇಷದಿಂದ ಆ ಸಂಸ್ಥೆ ಶ್ರೀ ವೀರಣ್ಣನವರ ಆಡಳಿತಕ್ಕೆ ಬಂತು. ವೀರಣ್ಣನವರು ಸಂಸ್ಥೆಯ ಸರ್ವತೋಮುಖ ಪ್ರಗತಿಯನ್ನು ಸಾಧಿಸಿಕೊಟ್ಟರು. ಗುಬ್ಬಿ ಕಂಪನಿ ಅವರಿಂದ ಜಗದ್ವಿಖ್ಯಾತಿ ಪಡೆಯಿತು. ಕನ್ನಡಿಗರು ನಮ್ಮದೂ ಒಂದು ರಂಗಭೂಮಿ ಇದೆ ಎಂದು ಎದೆ ತಟ್ಟಿ ಹೇಳಿಕೊಳ್ಳುವ ಕನ್ನಡ ನಾಡಿನ, ಕನ್ನಡ ರಂಗಭೂಮಿಯ ವೈಜಯಂತಿಯನ್ನು ಹಾರಿಸಿದ ಕೀರ್ತಿ ಗುಬ್ಬಿ ಕಂಪನಿಗೆ ಸಲ್ಲುತ್ತದೆ. ಡಾ॥ ಗುಬ್ಬಿವೀರಣ್ಣನವರ ನಂತರವೂ ಅವರ ಮಕ್ಕಳಾದ ಚನ್ನಬಸವಣ್ಣನವರು ಕಂಪನಿಗೆ ಶತಮಾನ ತುಂಬುವವರೆಗಾದರೂ ನಡೆಸಬೇಕೆಂಬ ಸಂಕಲ್ಪದಿಂದ ಮುಂಪುವರೆಸುತ್ತಿದ್ದಾರೆ. ಗುಬ್ಬಿಕಂದನಿ ನೂರಾರು ಕಲಾವಿದ ಕುಟುಂಬಗಳನ್ನು ಪೋಷಿಸಿದ್ದಲ್ಲದೆ, ಕನ್ನಡ ನಾಟಕ ಕಲೆಯು ವಿಪುಲವಾಗಿ ಬೆಳೆಯುವುದಕ್ಕೆ ನೆರವು ನೀಡಿತು. ಗುಬ್ಬಿ ವೀರಣ್ಣನವರು ಸಾವಿರಾರು ಜನ ನಟನಟಿಯ.ರನ್ನು ಕಲೆ ಹಾಕಿದಂತೆ, ನಾಲ್ಕಾರು ನಾಟಕಕಾರರನ್ನು ಆಹ್ವಾನಿಸಿ, ಹೊಸ ಹೊಸ ನಾಟಕಗಳನ್ನು ರಚಿಸುವಂತೆ ಅವರನ್ನು ಪ್ರಾರ್ಥಿಸಿ. ಅವರಿಂದ ರಚಿತವಾದ ನಾಟಕಗಳನ್ನು ಪ್ರದರ್ಶಿಸಿ, ತನ್ಮೂಲಕ ಕನ್ನಡ ನಾಟಕ ಸಾಹಿತ್ಯಕ್ಕೆ ಕನ್ನಡ ಕುಲಕೋಟಿಗೆ ಮಹದುಪಕಾರ ಮಾಡಿದ್ದಾರೆ. ಇಂದು ಕನ್ನಡ ರಂಗಭೂಮಿಯಷ್ಟೇ ಅಲ್ಲ, ಕನ್ನಡ ರಜತರಂಗವೂ ವಿರಾಜಮಾನವಾಗಿ ಬೆಳಗುತ್ತಿದೆ. ವೀರಣ್ಣನವರ ಔದಾರ್ಯದಿಂದ. ಡಾ॥ ರಾಜಕುಮಾರ್, ಬಾಲಕೃಷ್ಣ. ನರಸಿಂಹರಾಜು, ಬಿ. ಜಯಮ್ಮ ಮೊದಲಾದ ಶ್ರೇಷ್ಠ ನಟ ನಟಿಯರು ಗುಬ್ಬಿಕಂಪನಿ ಎಂಬ ಶಿಲ್ಪಶಾಲೆಯಲ್ಲಿ ತಯಾರಾದ ಶುದ್ಧ ಶಿಲ್ಪಾಕೃತಿಗಳು.

ಕನ್ನಡ ರಂಗಭೂಮಿಯನ್ನು ಹೊತ್ತು ನಿಂತ ಕಲಾದಿಗ್ಗಜವೆಂದರೆ ಡಾ॥ ಜಿ. ಹೆಚ್. ವೀರಣ್ಣ. ಇವರಂತೆಯೇ ಇನ್ನು ಕೆಲವರು ದಿಗ್ಗಜಗಳೆನಿಸಿ ಮೆರೆದಿದ್ದಾರೆ, ಆದರೆ ವೀರಣ್ಣನವರಷ್ಟು ಸಾಮರ್ಥ್ಯದಿಂದಲ್ಲ. ಅವರು ತಮ್ಮ ಅಳಿಲು ಸೇವೆ ಸಲ್ಲಿಸಿದ್ದಾರೆ; ಮುಖ್ಯ ನಾಟಕ ಸಂಸ್ಥೆಗಳನ್ನು ಅವಲೋಕಿಸಬಹುದು.

**ಚಾಮುಂಡೇಶ್ವರಿ ಕಂಪನಿ :** ೧೯೯೯ರಲ್ಲಿ ಎನ್. ಸುಬ್ಬಣ್ಣನವರಿಂದ ಸ್ಥಾಪಿತವಾಯಿತು. ಶ್ರೀ ಚಾಮುಂಡೇಶ್ವರಿ ಕರ್ನಾಟಕ ನಾಟಕ ಸಭಾ, ಮೈಸೂರು. ಇದರ ಕರ್ಣಧಾರರು ಧರ್ಮರತ್ನಾಕರ ನಂದಿ ಬಸಪ್ಪನವರು; ಚಾಲಕರು ಶ್ರೀ ಸಿ. ಬಸವರಾಜ್; ಶ್ರೇಷ್ಠ ನಟರು: ಬಸವರಾಜ ಸಹೋದರರು ಮತ್ತು ಕೊಟ್ಟೂರು ಬಸವಯ್ಯನವರು.

**ಶ್ರೀ ಹಾಲಸಿದ್ಧೇಶ್ವರ ಪ್ರಾಸಾದಿಕ ಸಂಗೀತ ನಾಟಕ ಸಭಾ ಹಲಗೇರಿ :** ಇದು ಶ್ರೀ ಲಿಂಗನಗೌಡ ಪಾಟೀಲರಿಂದ ಸ್ಥಾಪಿತವಾಗಿ ದೊಡ್ಡ ಜೆಟ್ಟೆಪ್ಪ ಮತ್ತು ಚಿಕ್ಕಜೆಟ್ಟೆಪ್ಪ ಎಂಬುವರಿಂದ ಪ್ರಸಿದ್ಧಿಗೆ ಬಂತು. ಪಠಾಣಿ ಪಾಶ, ಉತ್ತರಭೂಪ, ಸ್ತ್ರೀ, ಬಿ. ಎ. ಮುಂತಾದವು ಇವರ ಪ್ರಖ್ಯಾತ ಪ್ರದರ್ಶನಗಳು. ಸಮಕಾಲೀನ ನಾಟಕ ಕಂಪನಿಗಳಾವುವೂ ಈ ಕಂಪನಿಯನ್ನು ಮಿಕ್ಕಿಸಿರಲಿಲ್ಲ. ಹಾಸ್ಯದಲ್ಲಿ ಸಣ್ಣ ಜಟ್ಟೆಪ್ಪನವರದು ಅತ್ಯದ್ಭುತ ನಟನೆ. ಮೈಸೂರು ಮಹಾರಾಜರು ಈ ಕಂಪನಿಯನ್ನು ಮೈಸೂರಿಗೆ ಕರೆಸಿ ಸಮ್ಮುಖದಲ್ಲಿ ಆಡಿಸಿ ಆದರಿಸಿದರು.

**ಕನ್ನಡ ಥಿಯೇಟರ್ಸ್ :** ಶ್ರೀ ಎಂ. ಸಿ. ಮಹಾದೇವಸ್ವಾಮಿಗಳವರಿಂದ ಸ್ಥಾಪಿತವಾಗಿ, ಅವರ ಪುತ್ರರಾದ ಡಾ॥ ಸೋಮಶೇಖರ್‌ರವರ ಕೈಯಲ್ಲಿ ಕೆಲದಿನಗಳು ಕಷ್ಟಪಟ್ಟುಕೊಂಡೇ ಸಾಗಿಬಂದ ಸಂಸ್ಥೆ. ರಾಜಾವಿಕ್ರಮ, ಹರಿಶ್ಚಂದ್ರ, ಚಂದ್ರಹಾಸ ಮೊದಲಾದ ಪೌರಾಣಿಕ ನಾಟಕಗಳು ಈ ಸಂಸ್ಥೆಯ ಯಶಸ್ವೀ ಪ್ರಯೋಗಗಳು.

ಇತರ ಸಂಸ್ಥೆಗಳು : ಇದೇ ರೀತಿ ಚಿಂದೋಡಿ ವೀರಪ್ಪನವರ ಕೆ. ಬಿ. ಆರ್. ಡ್ರಾಮಾ ಕಂಪನಿ, ದಾವಣಗೆರೆ, ಶ್ರೀ ಕುಮಾರೇಶ್ವರ ನಾಟ್ಯ ಸಂಘ. ಹುಬ್ಬಳ್ಳಿ, ಗದಗ, ಗೋಕಾಕ ಮುಂತಾದೆಡೆಗಳಲ್ಲಿ ನಾಲ್ಕಾರು ವರ್ಷಗಳಿಂದಲೂ ನೆಲೆ ನಿಂತಿರುವ ಉತ್ತರ ಕರ್ನಾಟಕದ ಹಲವು ನಾಟಕ ಸಂಸ್ಥೆಗಳು –ಇವು ಇಂದು ವೀರಶೈವ ಮಾಲೀಕರಿಂದ ಪೋಷಿತವಾಗಿ ಬೆಳೆಯುತ್ತಿವೆ. ಹಿಂದಿನ ಕಾಲದ ಕೆಲವು ಸಣ್ಣ ಪುಟ್ಟ ಸಂಸ್ಥೆಗಳೆಂದರೆ ಶ್ರೀ ಶಿವಮೂರ್ತಿಸ್ವಾಮಿ ಕಣಬರಗಿಮಠದವರ ಕೊಣ್ಣೂರಕರ ಸಂಗೀತ ನಾಟಕ ಮಂಡಳಿ ಕೊಣ್ಣೂರ; ಶ್ರೀ ಸಿ. ಮರಿದೇವರ ಶ್ರೀ ವಿಜಯಲಕ್ಷ್ಮೀ ನಾಟಕ ಸಭಾ, ಆಲಹಳ್ಳಿ ; ೧೯೧೪ ರಲ್ಲಿ ಎಂ. ವಿ. ಶಿವಪ್ಪ ಮತ್ತು ಅವರ ಸಹೋದರ ಮಾದಪ್ಪ ಇವರಿಂದ ಸ್ಥಾಪಿತವಾದ ಶ್ರೀ ಶಾರದಾ ವಿಲಾಸ ಒಫೆಲೋ ಥಿಯೇಟ್ರಿಕಲ್ ಯೂನಿಯನ್. ಮತ್ತು ಇದೇ ಸಂಸ್ಥೆ ಕೆಲದಿನಗಳ ನಂತರ ನಾಮಾಂತರಗೊಂಡ ಶ್ರೀ ಸರಸ್ವತೀ ಸುಪ್ರಸಾದಿತ ನಾಟಕ ಸಭಾ, ಮೈಸೂರು. ರಾವಬಹದ್ದೂರ್ ಜಿ. ಪಿ. ಮಲ್ಲಪ್ಪನವರು, ಜಿ. ಪಿ. ಪರಮಶಿವಯ್ಯನವರು, ಜಿ. ಎಮ್. ನಾಗಭೂಷಣಪ್ಪನವರು ೧೯೪೩ ರಲ್ಲಿ ಸ್ಥಾಪಿಸಿದ 'ಶ್ರೀ ಅಕ್ಕಮಹಾದೇವಿ ಕೃಪಾಪೋಷಿತ ನಾಟಕ ಸಭಾ' ಕೊಳ್ಳೇಗಾಲ; ಮೋತಿ ವೀರಪ್ಪ ಎಚ್. ಕೊಟ್ಟೂರ ಬಸಪ್ಪ. ಮಾಗಾನಹಳ್ಳಿ ಗುರುಸಿದ್ದಪ್ಪ, ಮಾಗನೂರ ಬಸಪ್ಪ, ಹನಗವಾಡಿ ಮುರಿಗಪ್ಪಯ್ಯ, ಕೆ.ಟಿ.ಜಂಬಣ್ಣ –ಇವರೇ ಮೊದಲಾದ ಶಿವಭಕ್ತ ಶಿರೋಮಣಿಗಳಿಂದ ಪೋಷಿತವಾದ ಶ್ರೀ ವಿ. ಬಿ. ಪುರಾಣಿಕಮಠದವರನ್ನು ನಿರ್ದೇಶಕರನ್ನಾಗಿ ಪಡೆದಿದ್ದ ಮಹಾಸಂಸ್ಥೆ 'ಶ್ರೀ ಶಿವಯೋಗಿ ಬಕ್ಕೇಶ್ವರ ಸಂಗೀತ ನಾಟಕ ಮಂಡಳಿ' ದಾವಣಗೆರೆ; ಶ್ರೀಕಂಠಮೂರ್ತಿಯವರ 'ಶ್ರೀಕಂಠೇಶ್ವರ ನಾಟಕ ಮಂಡಳಿ' ಮೈಸೂರು; ಪಣಗಿ ಬಾಳಪ್ಪನವರ 'ಕಲಾ ವೈಭವ ನಾಟ್ಯ ಸಂಘ; ಬಿ. ಟಿ. ಹೊಸಮನಿ ಬಂಧುಗಳ 'ಶ್ರೀ ಶಾರದಾ ಸಂಗೀತ ನಾಟಕ ಸಂಘ; ಕೆ. ಸಂಗಣ್ಣನವರ ವೀರಭದ್ರೇಶ್ವರ ನಾಟ್ಯ ಸಂಘ, ಬಾದಾಮಿ; ಕವಲಿ ಚನ್ನಪ್ಪನವರ ಕಲಾಪ್ರಕಾಶ ಸಂಘ, ಶ್ರೀ ಬಿ. ಆರ್. ಅರಿಷಿಣಗೋಡಿ ಅವರ ಶ್ರೀ ಹುಚ್ಚೇಶ್ವರ ನಾಟ್ಯ ಸಂಘ, ಶ್ರೀ ಬಸವರಾಜು ಅವರ ಸಂಗಮೇಶ್ವರ ನಾಟ್ಯ ಸಂಘ, ಗುಡಿಗೇರಿ; ಹಾಗೂ ಶ್ರೀಶೈಲ ಮಲ್ಲಿಕಾರ್ಜುನ ನಾಟ್ಯ ಸಂಘ, ಸುಳ್ಳ –ಇತ್ಯಾದಿ ಹತ್ತಾರು ನಾಟಕ ಸಂಸ್ಥೆಗಳನ್ನು ಹೆಸರಿಸಬಹುದು.

### ವೀರಶೈವ ಕವಿಗಳು ಮತ್ತು ನಾಟಕಕಾರರು

ಕನ್ನಡದಲ್ಲಿರುವ ವೀರಶೈವ ಸಾಹಿತ್ಯ ಒಂದು ಅಮೇಯ ಪರಿಧಿ. ಚಂಪೂಸಾಹಿತ್ಯದಿಂದ ಮೊದಲ್ಗೊಂಡು ಇಂದಿನ ನವ್ಯ ಕಾವ್ಯದವರೆಗೂ ಅದರ ವ್ಯಾಪ್ತಿ ಇದೆ. ವೀರಶೈವ ಕವಿಗಳು ಕಾಲಕಾಲಕ್ಕೂ ನೂತನ ರೀತಿಯ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ. ಅಂತೆಯೇ ನಾಟಕ ಕಲೆಗೂ ಅವರ ವಿಶೇಷ ಸೇವೆ ಸಂದಿದೆ. ಅದನ್ನಿಲ್ಲಿ ಅವಲೋಕಿಸೋಣ:

**ಅ) ರಂಗ ನಾಟಕಗಳು : ಪೌರಾಣಿಕ ಮತ್ತು ಐತಿಹಾಸಿಕ ನಾಟಕಕಾರರು**

ಬಸವಪ್ಪಶಾಸ್ತ್ರಿಗಳು : ಕನ್ನಡ ನಾಟಕ ಅಂದಾಗ ಥಟ್ಟನೆ ಕಾಣಿಸಿಕೊಳ್ಳುವವರೆಂದರೆ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು. ಆದರೆ ಅವರಿಗಿಂತಲೂ ಮುಂಚೆ ಹಲವಾರು ಯಕ್ಷಗಾನ ಕೃತಿಗಳಿದ್ದವು. ಶಿಷ್ಟ ನಾಟಕ ರಚಕರೂ ಇದ್ದರು. ಉದಾಹರಣೆಗೆ ಸಂಸ್ಕೃತದ ಪ್ರಬೋಧ ಚಂದ್ರೋದಯ ನಾಟಕವನ್ನು ಶರ, ಕುಸುಮ, ಭೋಗಷಟ್ಪದಿಗಳಲ್ಲಿ ಕ್ರಿ. ಶ. ೧೭ನೆಯ ಶತಮಾನದಲ್ಲಿ ಓರ್ವ ವೀರಶೈವ ಕವಿಯು ಕನ್ನಡಿಸಿದ್ದಾನೆಂದು ತಿಳಿದು ಬರುತ್ತದೆ. ಇದು ಸತ್ಯವಿದ್ದಲ್ಲಿ ಬಸಪ್ಪಶಾಸ್ತ್ರಿಗಳು ಕನ್ನಡ ಶಿಷ್ಟ ನಾಟಕ ರಚಕರಲ್ಲಿ ಎರಡನೆಯವರಾಗಿ ಗೋಚರಿಸುತ್ತಾರೆ. ಆದರೂ ಶಾಸ್ತ್ರಿಯವರಿಗೆ 'ಕರ್ನಾಟಕ ನಾಟಕ ಪಿತಾಮಹ' ಎಂಬ ಪದವಿ ಕಟ್ಟಿಟ್ಟ ಬುತ್ತಿಯಾಗಿದೆ. ಕ್ರಿ.ಶ. ೧೮೭೭ರಲ್ಲಿ ಹುಟ್ಟಿದ ಅರಮನೆ ನಾಟಕ ಕಂಪನಿಯೂ ಅನಂತರದ ಬೆಂಗಳೂರಿನ ಎನ್. ಜಿ. ಬುಳ್ಳಪ್ಪನವರ 'ಹಿಂದೂ ಥಿಯೇಟ್ರಿಕಲ್ ಕಂಪನಿ'ಯೂ ಯಕ್ಷಗಾನ ನಾಟಕಗಳನ್ನು ಸಾಧಾರಣವಾಗಿ ಅಭಿನಯಿಸುತ್ತಿದ್ದವು. ಆದರೆ ಇದ್ದಕ್ಕಿದ್ದ ಹಾಗೆ ಬೆಂಗಳೂರಿಗೆ ಬಂದ 'ಬಾಲಿವಾಲಾ ಕಂಪನಿ' ಎಂಬ ಪಾರ್ಸಿ ನಾಟಕ ಮಂಡಲಿಯ ನಾಯಕಗಳನ್ನು ನೋಡಿದ ಮೇಲೆ ನಮ್ಮವರ ದೃಷ್ಟಿ ಬದಲಾಯಿತು. ಅಲ್ಲಿ ಸ್ತ್ರೀಯರೇ ಸ್ತ್ರೀ ಪಾತ್ರಗಳನ್ನು ವಹಿಸುತ್ತಿದ್ದು, ಅವರ ಕಣ್ಣನ್ನು ಕೋರೈಸುವ ವೇಷ ಭೂಷಣ, ಸೀನರಿ ಇತ್ಯಾದಿಗಳನ್ನು ಕಂಡು ಬೆರಗಾದ ಕನ್ನಡ ರಸಿಕರು ಅಂಥದೇ ಒಂದು ನಾಟಕ ಸಂಸ್ಥೆಯನ್ನು ಕಟ್ಟಲು ಆಲೋಚಿಸಿ, ಶ್ರೀ ಚಾಮರಾಜ ಒಡೆಯರ್‌ರವರ ಅನುಗ್ರಹದಿಂದ ೧೮೮೨ ರಲ್ಲಿ 'ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಆ ಸಂಸ್ಥೆಗೆ ಪ್ರದರ್ಶನ ಯೋಗ್ಯವಾದ ನಾಟಕಗಳ ಆಗತ್ಯ ಬಹಳವಿತ್ತು. ಅದನ್ನು ಪೂರೈಸಿದವರು ಶ್ರೀ ಬಸವಪ್ಪ ಶಾಸ್ತ್ರಿಗಳು. ಅವರ ಉಳಿದ ನಾಟಕಗಳು ಹೇಗೇ ಇರಲಿ 'ಕನ್ನಡ ಅಭಿಜ್ಞಾನ ಶಾಕುಂತಲಾ' ನಾಟಕ ಜಯಭೇರಿ ಭಾರಿಸಿತು. ಕನ್ನಡ ವೃತ್ತಿ ನಾಟಕದ ನವೋದಯಕ್ಕೆ ನಾಂದಿ ಹಾಡಿತು. ಅದರಿಂದ ಶಾಸ್ತ್ರಿಗಳಿಗೆ 'ಅಭಿನವ ಕಾಳಿದಾಸ' ಎಂಬ ಪ್ರಶಸ್ತಿಯೂ ರಾಜ ಮನ್ನಣೆಯೂ ದೊರೆಯಿತು. ಎಲ್ಲಕ್ಕೂ ಹೆಚ್ಚಾಗಿ ನಾಟಕ ಸಾಹಿತ್ಯಾಕಾಶದಲ್ಲಿ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು ಏಕೈಕ ಧ್ರುವತಾರೆಯಾದರು.

ಬಿ. ಪುಟ್ಟಸ್ವಾಮಯ್ಯನವರು : ಗುಬ್ಬಿ ಕಂಪನಿ ಸ್ಥಾಪಿತವಾದ ಮೇಲೆ ಅದಕ್ಕೆ ಬೇಕಾದ ಆಹಾರವನ್ನು ಒದಗಿಸಿ ಕೊಟ್ಟವರು ಹಲವು ಜನ ಕವಿಗಳು; ಅವರಲ್ಲಿ ಮೊದಲಿಗರು ಶಿವಕಥಾ ವಿದ್ವಾನ್ ವೀರಪ್ಪ ಶಾಸ್ತ್ರಿಗಳು. ಇವರು ೧೮೮೬ ರಿಂದ

೧೯೦೯ ರವರೆಗೆ ನಾಟಕಕಂಪನಿಯಲ್ಲಿದ್ದುಕೊಂಡು ಸೋಮಶೇಖರ–ಚಿತ್ರಶೇಖರ ಚರಿತ್ರೆ, ಚೋರಕಥೆ, ಜಗನ್ಮೋಹನ ಚರಿತ್ರೆ ಮೊದಲಾದ ನಾಟಕಗಳನ್ನು ಬರೆದುಕೊಟ್ಟು, ತಾವೇ ನಿರ್ದೇಶಿಸಿದರು. ಶಿವಲಿಂಗ ಸ್ವಾಮಿಗಳೆಂಬುವರೂ ಈ ಕಂಪನಿಯಲ್ಲಿದ್ದು ಹಲವು ನಾಟಕಗಳನ್ನು ಬರೆದುಕೊಟ್ಟರೆಂದು ತಿಳಿಯುತ್ತದೆ. ಆದರೆ ರಂಗಭೂಮಿಗಾಗಿಯೇ ಸಿದ್ಧಪಡಿಸಿದ ಪೌರಾಣಿಕ, ಐತಿಹಾಸಿಕ ನಾಟಕಗಳಲ್ಲಿ ಬಿ. ಪುಟ್ಟಸ್ವಾಮಯ್ಯನವರದು ಬಹು ದೊಡ್ಡ ಹೆಸರು. ಇವರ ಕುರುಕ್ಷೇತ್ರ, ಗೌತಮಬುದ್ಧ, ಷಾಜಹಾನ್, ಅಕ್ಕಮಹಾದೇವಿ ಮೊದಲಾದ ನಾಟಕಗಳು ಕನ್ನಡ ರಂಗಭೂಮಿಯನ್ನು ವಿಶಿಷ್ಟ ರೀತಿಯಲ್ಲಿ ರೂಪಿಸಿಕೊಟ್ಟವು. ತಕ್ಕ ರಂಗಸಜ್ಜಿಕೆಯು ನಿಜವಾದ ಪೌರಾಣಿಕ ವಲಯವನ್ನು ಸೃಷ್ಟಿಸಿ, ಪ್ರೇಕ್ಷಕರನ್ನು ಯಾವುದೋ ಒಂದು ಯಕ್ಷ ಲೋಕಕ್ಕೆ ಕೊಂಡೊಯ್ದಿತು. ಅಂತೆಯೇ ಬಿ. ಪುಟ್ಟಸ್ವಾಮಯ್ಯನವರ ಹತ್ತಾರು ಕೃತಿಗಳು, ಅವರ ಶಾಶ್ವತ ಕೀರ್ತಿಗೆ ಕಾರಣವಾಗಿವೆ.

**ವಿ. ಬಿ. ಪುರಾಣಿಕಮಠ :** ದಾವಣಗೆರೆ ಶ್ರೀ ಶಿವಯೋಗಿ ಬಕ್ಕೇಶ್ವರ ಸಂಗೀತ ನಾಟಕ ಮಂಡಲಿಯು ಸ್ಥಾಪಿತವಾದ ಮೇಲೆ, ಅದರ ನಿರ್ದೇಶನದ ಹೊಣೆಹೊತ್ತವರು ಶ್ರೀ ವಿ. ಬಿ. ಪುರಾಣಿಕಮಠರವರು. ಇವರು 'ಕಾಯಕವೇ ಕೈಲಾಸ' ಎಂಬ ನಾಟಕವನ್ನು ರಚಿಸಿದ್ದರು. ಶ್ರೀಯುತರ ವಂಶೀಯರು ಇಂದಿಗೂ ಕಲೋಪಾಸಕರಾಗಿದ್ದಾರೆ ದಾವಣಗೆರೆಯಲ್ಲಿ.

**ಶ್ರೀಕಂಠ ಶಾಸ್ತ್ರಿಗಳು ನಲವಡಿ :** ಬೇಡರ ಕಣ್ಣಪ್ಪ, ಜಗಜ್ಜ್ಯೋತಿ ಬಸವೇಶ್ವರ, ಹೇಮರೆಡ್ಡಿ ಮಲ್ಲಮ್ಮ, ಸಿದ್ಧರಾಮೇಶ್ವರ, ಚೆನ್ನಬಸವೇಶ್ವರ ಮೊದಲಾದ ನಾಟಕಗಳನ್ನು ರಂಗಭೂಮಿಗಾಗಿಯೇ ಬರೆದಿದ್ದಾರೆ.

**ರಂಗನಾಟಕಗಳು II –ಸಾಮಾಜಿಕ ನಾಟಕಕಾರರು : ಮಹಾಂತೇಶ ಶಾಸ್ತ್ರಿಗಳು :** ತಮ್ಮ ಹದಿನೇಳರ ಹರಿಯದಲ್ಲೇ 'ನರ ರಾಕ್ಷಸಿ'ಯನ್ನು ಸೃಷ್ಟಿಸಿ, ರಂಗಭೂಮಿಯ ಮೇಲಕ್ಕೆ ತಳ್ಳಿದ ಹಿರಿಮೆ ನಾಟ್ಯ ಕವಿರಾಜ, ಕವಿತಿಲಕ, ಗದುಗಿನ ಶ್ರೀ ಮಹಾಂತೇಶ ಶಾಸ್ತ್ರಿಗಳವರದು. ಶ್ರೀಯುತರು ಜ್ಯೋತಿರ್ವಿದ್ಯಾವಿಶಾರದ ಪಂಡಿತ ತೋಟಪ್ಪಯ್ಯ ಶಾಸ್ತ್ರಿಗಳವರ ಜೇಷ್ಠಪುತ್ರರು. ಅವರದು ಸುಸಂಸ್ಕೃತ ಮನೆತನ. ಸುಮಾರು ೪೦ ನಾಟಕಗಳನ್ನು ರಚಿಸಿದ್ದಾರೆ. ಎಲ್ಲವೂ ರಂಗಭೂಮಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ರಚಿತವಾದವುಗಳು, ಹಾಗೂ ರಂಗದ ಮೇಲೆ ತುಂಬ ಯಶಸ್ವಿಯಾಗಿ ಪ್ರಯೋಗವಾದವುಗಳು. ಮುಖ್ಯವಾಗಿ ಗುಬ್ಬಿ ಕಂಪನಿಯಲ್ಲಿ ಜಯಘಂಟೆ ಬಾರಿಸಿದ ಅಣ್ಣ–ತಮ್ಮ, ಏಣಗಿ ಬಾಳಪ್ಪನವರ 'ಕಲಾವೈಭವ'ದಲ್ಲಿ ಪ್ರದರ್ಶಿತವಾದ 'ವಧೂವರ', ಬಿ.ಟಿ. ಹೊಸಮನಿ ಬಂಧುಗಳ 'ಶಾರದಾ ನಾಟಕಸಂಘ'ದಲ್ಲಿ ಪ್ರಥಮಪ್ರಯೋಗ ಪಡೆದ 'ರೂಪವತಿ'ನೂರಾರು ಹವ್ಯಾಸಿ ಕಲಾವಿದರುಗಳು ಮೆಚ್ಚಿ ಅಭಿನಯಿಸುವ ಮಾನವತಿ, ದತ್ತುಪುತ್ರ, ಹೆಣ್ಣಿನ ಹಂಬಲ, ಅಕ್ಕತಂಗಿ ಇತ್ಯಾದಿ ನಾಟಕಗಳು. ನಿಜಕ್ಕೂ ಮಹಂತೇಶ ಕನ್ನಡದ ಭಾಸ.

**ದಾವಣಗೆರೆ ಕೋಲ ಶಾಂತಪ್ಪ :** ರಂಗಭೂಮಿಗೆ ಮೊದಲು ಸಾಮಾಜಿಕ ನಾಟಕಗಳನ್ನು ಒದಗಿಸಿ ಕೊಟ್ಟವರು ದಾವಣಗೆರೆ ಕೋಲಶಾಂತಪ್ಪನವರು. ಚಾಲ್ತಿದುನಿಯಾ, ಸ್ತ್ರೀ, ಬಿ.ಎ.,ಇವು ಇವರ ಖ್ಯಾತ ಕೃತಿಗಳು. ಚಾಲ್ತಿದುನಿಯಾ ನಾಟಕ ಗುಬ್ಬಿ ಕಂಪನಿಯಲ್ಲಿ ಅತ್ಯಂತ ಯಶಸ್ವಿಯಾಗಿಯೇ ಪ್ರಯೋಗವಾಗುತ್ತಿದ್ದುದುಂಟು. ಹಲಗೇರಿ ಕಂಪನಿಯಲ್ಲಿ 'ಸ್ತ್ರೀ' ಮತ್ತು 'ಬಿ.ಎ.' ನಾಟಕಗಳ ಪ್ರದರ್ಶನ 'ನಭೂತೋ ನಭವಿಷ್ಯತಿ' ಎಂಬಂತೆ ಪ್ರದರ್ಶಿತವಾದವು.

**ಎಚ್. ಎನ್. ಹೂಗಾರ :** ನಾಟ್ಯಕವಿತಿಲಕ ಮಹಾಂತೇಶ ಶಾಸ್ತ್ರಿಗಳಷ್ಟೇ ಮಟ್ಟದಲ್ಲಿ ಕನ್ನಡ ರಂಗಭೂಮಿಯ ಸೇವೆ ಸಲ್ಲಿಸಿದ ಶ್ರೇಷ್ಠರೆಂದರೆ ಹುಚ್ಚಪ್ಪ. ಎನ್. ಹೂಗಾರ. ಇವರು ಮತ್ತು ಶಾಸ್ತ್ರಿಗಳು ಇಬ್ಬರೂ ಗದುಗಿನವರು; ಸಮಕಾಲೀನರು; ರಂಗನಾಟಕ ರಚನೆಯಲ್ಲಿ ಸಿದ್ಧಹಸ್ತರು. ಬದುಕನ್ನು ಚೆನ್ನಾಗಿ ಕಲಿತು ಅನುಭವಿಸಿ, ಅದರ ಸಾರವನ್ನು ಕಲಾತ್ಮಕವಾಗಿ ರಂಗಭೂಮಿಗೆ ತಂದುಕೊಟ್ಟವರು. ಶ್ರೀಯುತ ಹೂಗಾರರ ಕೃತಿ ರತ್ನಗಳು ಇಪ್ಪತ್ತೈದಕ್ಕೂ ಹೆಚ್ಚಿನ ಸಂಖ್ಯೆಯಲ್ಲಿವೆ. ಅವರ ಕೊಂಡು ತಂದ ಗಂಡ, ತಂಗಿ ತಂದ ಅತ್ತಿಗೆ. ಕುಲಪುತ್ರ, ಪೃಥ್ವಿ, ದೀಪಾವಳಿ, ಕಂಕಣಬಲ ಮೊದಲಾದ ನಾಟಕಗಳು ಶತದಿನೋತ್ಸವ ಮಾಡಿಸಿಕೊಂಡು ಸಹಸ್ರ ದಿನಗಳನ್ನೂ ಮುಟ್ಟಿದವುಗಳು. ಆ ಕಾರಣದಿಂದಲೇ ಹೂಗಾರರಿಗೆ 'ಜ್ಯೂಬಿಲಿಕವಿ' ಎಂದು ಬಿರುದು ಬಂದಿದೆ.

**ಬಿ. ಆರ್. ಅರಿಷಿಣಗೋಡಿ :** ವೃತ್ತಿನಾಟಕದಲ್ಲಿ ಮತ್ತೊಂದು ಉತ್ತಮ ಹೆಸರು ಎಂದರೆ ಬಿ. ಆರ್. ಅರಿಷಿಣಗೋಡಿ. ಇವರು ನಟರಾಗಿ ನಿರ್ದೇಶಕರಾಗಿ ನಾಟಕ ಸಂಸ್ಥೆಯ ಮಾಲಿಕರಾಗಿ ವಿಶೇಷ ದುಡಿದಿದ್ದಾರೆ. ಇವರ ಸೈನಿಕನ ಸಹೋದರಿ, ಹೆಣ್ಣುಮಗಳು, ಬಸ್ ಕಂಡಕ್ಟರ್, ಕಣ್ಣಿದ್ದೂ ಕುರುಡ, ಎಲ್ಲಿಗೆ ಬಂತೋ ಸಂಗಯ್ಯ ಇತ್ಯಾದಿ ಹೆಸರಾಂತ ನಾಟಕಗಳಲ್ಲಿ ಬಸ್ ಕಂಡಕ್ಟರ್, ಮತ್ತು ಎಲ್ಲಿಗೆ ಬಂತೋ ಸಂಗಯ್ಯ – ಎಂಬ ನಾಟಕಗಳು ತುಂಬಾ ಜನಪ್ರಿಯವಾಗಿವೆ. ಶ್ರೀಯುತರ ಖ್ಯಾತಿಗೆ ಕಾರಣವಾಗಿವೆ.

**ಇತರರು :** ಈ ಸಾಲಿನಲ್ಲಿ ನಿಲ್ಲುವ ಪ್ರಸಿದ್ಧ ನಾಟಕಕಾರರೆಂದರೆ ಚಿತ್ತರಗಿ ಗಂಗಾಧರ ಶಾಸ್ತ್ರಿಗಳು; ಬಾಲಚಂದ್ರ, ಸೌಭಾಗ್ಯಲಕ್ಷ್ಮೀ, ಪ್ರೇಮಜ್ಯೋತಿ, ಕಾರಸ್ಥಾನ ಮೊದಲಾದವು ಅವರ ಕೃತಿಗಳು. ಗೋಕಾಕದ ಬಿ. ಟಿ. ಹೊಸಮನಿಯವರ ಗಂಡನ ಮಾನ, ಗೌಡಶಾನಿ, ಬಸವರಾಜ ಗುಡಿಗೇರಿಯವರ ಸೂಳೇ ಮಗ, ಬಣ್ಣದ ಹೆಣ್ಣು, ಭೈರಾಪುರದ ಎಂ. ಟಿ. ಅರಳಿ

ಯವರ ಅತ್ತಿಗೆ ತಂದ ಆಪತ್ತು, ಹರಪನಹಳ್ಳಿ ಬಿ. ವಿ. ಈಶ್ವರವರ ಗೌಡ್ರಗದ್ಲ, ಸಿ. ಕೆ. ನಿಟ್ಟಾಲಿಕೊಪ್ಪಳ ಇವರ ಜೀವನ ಯಾತ್ರೆ, ಎಸ್. ವಿ. ಮೊಖಾಸಿಯವರ ತಂಗಿ ತೀರಿಸಿದ ಋಣ, ದಾರಿ ತಪ್ಪಿದ ಮಗಳು, ಗ್ಯಾರೆಂಟಿ ಗಂಡ, ಇತ್ಯಾದಿ ನಾಟಕಗಳು ಪ್ರಸಿದ್ಧವಿವೆ.

ಆ) **ಆಡು ನಾಟಕಗಳು ಮತ್ತು ಓದು ನಾಟಕಗಳು:** ಇವು ರಂಗ ಭೂಮಿಗಾಗಿಯೇ ಬರೆದವುಗಳಲ್ಲ. ಸಾಹಿತ್ಯದ ವಿಶೇಷ ಸೌರಭವನ್ನೊಳಗೊಂಡ ಈ ಕೃತಿಗಳು, ಆಡಿದರೂ ಮೆಚ್ಚು ಓದಿದರೂ ಮೆಚ್ಚು. ಈ ದಿಸೆಯಲ್ಲಿ ದುಡಿದ ಹಲವು ಖ್ಯಾತ ನಾಮರಿದ್ದಾರೆ. ಡಾ॥ ಜ. ಚ. ನಿ. ತರಳಬಾಳು ಜಗದ್ಗುರು ಶ್ರೀ ಶಿವಕುಮಾರಸ್ವಾಮಿಗಳು, ಡಾ॥ ಪ್ರಭುಶಂಕರ, ಡಾ॥ ಸಾ. ಶಿ. ಮರುಳಯ್ಯ, ಎಚ್. ದೇವೀರಪ್ಪ, ಡಾ॥ ಎಲ್. ಬಸವರಾಜು, ಶಿವಕವಿ, ಡಾ॥ ಆರ್. ಸಿ. ಹಿರೇಮಠ, ಆರ್. ಸಿ. ಭೂಸನೂರ ಮಠ, ಡಾ॥ ಸಿದ್ಧಯ್ಯ ಪುರಾಣಿಕ, ನಂಜುಂಡ ಶಿವಯೋಗಿ, ಕೋ-ಚನ್ನಬಸಪ್ಪ, ಕೊಟ್ಟೂರ ಬಸಪ್ಪ, ಡಾ॥ ತಿಪ್ಪೇರುದ್ರಸ್ವಾಮಿ, ಸಂಗಣ್ಣ ಕುಪ್ಪಸ್ತ, ಬಸವಲಿಂಗ ಶಾಸ್ತ್ರಿ, ಮರುಳಸಿದ್ಧಯ್ಯಸ್ವಾಮಿ, ಡಾ॥ ಪುಟ್ಟರಾಜಗವಾಯಿ, ಡಿ. ರೇಣುಕಾಚಾರ್ಯ, ದೇವೇಂದ್ರಕುಮಾರ ಹಕಾರಿ, ಬಿ. ಸಂ. ಚಂದ್ರಯ್ಯ, ಸ್ವಾಮಿ ಮಹಾಮನೆ, ಶ್ರೀಮತಿ ಸುಲೋಚನಾ ಆರಾಧ್ಯ, ಶಿವಲಿಂಗ ಶಾಸ್ತ್ರಿ, ಜೋಳದರಾಶಿ ದೊಡ್ಡನಗೌಡ, ಸದಾಶಿವಶಾಸ್ತ್ರಿ ಗದಗ್, ಜಿ. ಸಿ. ಅಡವೀಮಠ, ಗದ್ದೆಪ್ಪ ಮಾಸ್ತರ, ಅನ್ನದಾನೇಶ್ವರ ಹುಚ್ಚಯ್ಯನವರ ಮಠ, ಅ. ಸಿ. ಹಂಜಗಿಮಠ, ಜಿ. ಜಿ. ಗಣಾಚಾರಿ, ಬಿ. ಎಸ್. ಸ್ವಾಮಿ, ಶಿವಲಿಂಗಶಾಸ್ತ್ರಿ ಚಿಕ್ಕೋಡಿ, ಅಮರಯ್ಯ ಶಾಸ್ತ್ರಿಗಳು, ಯು. ಆರ್. ಶಿವರುದ್ರಪ್ಪ ಶಿರಗುಪ್ಪ, ಪ್ರಕಾಶ ಕಡಪಟ್ಟಿ ಜಮಖಂಡಿ. ಎನ್. ಎಂ. ಮಡಿವಾಳರ. ಬೀಡನಾಳ, ಜಿ. ಎಸ್. ಗೌಡ ಹೊಳಗುಂದಿ, ಎಮ್. ಕೆ. ಬಳ್ಳಾರಿ ಮುಳಗುಂದ, ಶ್ರೀಮತಿ ಶಾಂತಗಿರಿ ನೀಲಮ್ಮ. ತಾಳಕೇರಿ ಬಸವರಾಜ, ಗುರು ಸ್ವಾಮಿ ತಲಕೇರಿ, ಪಂಡಿತ ಜಿ. ಎ. ಕವಲಿ, ಮಲ್ಲಪ್ಪ ಕವಲಿ, ಮಹದೇವ ಬಣಕಾರ, ಸಿದ್ಧಲಿಂಗ ಪಟ್ಟಣಶೆಟ್ಟಿ, ಸಿ. ಅಂಕಪ್ಪ ಮೈಸೂರು, ಬಸವರಾಜ ಕಟ್ಟೀಮನಿ, ಚನ್ನಬಸವರಾಜ, ಓ. ಎನ್ ಲಿಂಗಣ್ಣಯ್ಯ, ಫ.ಬ. ಇಂಡಿಮಠ, ಪಿ. ಬಸವಯ್ಯ, ನರೇಂದ್ರ ಬಾಬು, ವೃಷಭೇಂದ್ರಪ್ಪ, ಕ. ಮ. ಶಿ. ಚಂದ್ರಶೇಖರಯ್ಯ, ಹಿ. ಮ. ನಾಗಯ್ಯ, ಎಂ. ಜಿ. ನಂಜುಡಾರಾಧ್ಯ ಇತ್ಯಾದಿ.

**ಪ್ರಸಾರ ನಾಟಕಗಳು:** ರೇಡಿಯೋ ತಂತ್ರಗಳನ್ನಾ ಧರಿಸಿ, ಕೇಳುಗರನ್ನು ತೃಪ್ತಿಪಡಿಸುವುದರಲ್ಲಿ ಯಶಸ್ವಿಯಾದ ಕೆಲವೇ ಬರಹಗಾರರಲ್ಲಿ ಹೆಸರಾದವರು ಆರ್. ಸಿ. ಭೂಸನೂರಮಠ, ಡಾ. ವಸಂತಕವಲಿ, ಡಾ॥ ಸಾ. ಶಿ. ಮರುಳಯ್ಯ, ಬಿ. ಎಸ್. ಸ್ವಾಮಿ ಡಾ॥ ಜಿ.ಎಸ್. ಶಿವರುದ್ರಪ್ಪ ಮತ್ತು ಕೆ.ಬಿ. ಪ್ರಭುಪ್ರಸಾದ ಇವರುಗಳು. ವಸಂತಕವಲಿ ಮತ್ತು ಸಾ.ಶಿ. ಮರುಳಯ್ಯ ಇವರಿಬ್ಬರೂ ಸೇರಿ ರಚಿಸಿದ, ಕನ್ನಡ ಪ್ರಾಚೀನತೆಯನ್ನು ಕುರಿತ, 'ಬೇರೆ ಕೊಂಚ ಮಧು ಪಾತ್ರಕ್ಕೆ ಹಾಕಿ' ಎಂಬ ಪ್ರಸಾರ ನಾಟಕಗಳಲ್ಲಿ ಬಳಸಿಕೊಂಡ ತಂತ್ರ ಎಲ್ಲರ ಪ್ರಶಂಸೆಗೆ ಪಾತ್ರವಾಯಿತು. ಇವರಿಬ್ಬರು ರೇಡಿಯೋದಲ್ಲಿ Flesh-Back ತಂತ್ರವನ್ನು ಯಶಸ್ವಿಯಾಗಿ ಪ್ರಯೋಗಿಸಿದವರು. ಶಬ್ದ ಚಿತ್ರ (teatures)ಗಳನ್ನು ನೀಡುವಲ್ಲಿ ಸಾ.ಶಿ.ರವರದು ಸಿದ್ಧಹಸ್ತ.

ಪೌರಾಣಿಕ ಹಾಗೂ ಐತಿಹಾಸಿಕ ವಸ್ತುಗಳನ್ನು ಆಧುನಿಕ ರೀತಿಯಲ್ಲಿ ಜನಮನವನ್ನು ಸೆಳೆಯುವಂತೆ. ಸರಳ ಸುಂದರ ಸಂಭಾಷಣೆಗಳೊಂದಿಗೆ ಪ್ರಸಾರ ಮಾಡಿದವರು ಶ್ರೀ ಆರ್. ಸಿ. ಭೂಸನೂರಮಠ, ಬಿ. ಎಸ್. ಸ್ವಾಮಿ, ಜಿ. ಎಸ್. ಶಿವರುದ್ರಪ್ಪ ಮತ್ತು ಕೆ. ಬಿ. ಪ್ರಭುಪ್ರಸಾದ ಇವರುಗಳು. ಭೂಸನೂರಮಠರವರ ಅನಾರ್ಕಲಿ, ಅಕ್ಕಮಹಾದೇವಿ ಇವು ಗಮನಾರ್ಹ ಕೃತಿಗಳು. ಮಹಾಸಂಗಮ, ನಾದ ಸೇತು, ಇವು ಜಿ. ಎಸ್. ಎಸ್. ಮತ್ತು ಕೆ. ಬಿ. ಪಿ. ಯವರ ಹೆಸರಾಂತ ಪ್ರಸಾರ ನಾಟಕಗಳು. ಬಿ.ಎಸ್. ಸ್ವಾಮಿಯವರ ಬಾನುಲಿಯ ಮೂರು ನಾಟಕಗಳು, ಬಾನುಲಿಯ ರೂಪಕಗಳು_ಇವುಗಳನ್ನು ಹೆಸರಿಸಬಹುದು. ಶ್ರೀ ಯುತರು ಆಯ್ದ ವಸ್ತುವನ್ನು ನೇರವಾಗಿ ಗುರಿ ಮುಟ್ಟುವವರೆಗೂ ಅತ್ತಿತ್ತ ನೋಡದಂತೆ ಎಳೆದುಕೊಂಡುಹೋಗುತ್ತಾರೆ. ಅದೇ ಅವರ ರಚನೆಯ ಗುಟ್ಟು. ಇತ್ತೀಚೆಗೆ ಆಕಾಶವಾಣಿಯಿಂದ ಬಿತ್ತರಗೊಂಡ 'ಬಹುರೂಪಿ ಚೌಡಯ್ಯ' ಮತ್ತು 'ತರಳಬಾಳು ಪತ್ರಿಕೆಯಲ್ಲಿ ಪ್ರಕಟಗೊಂಡ 'ನಾಗಾಭರಣ ದರ್ಶನ' ಎಂಬ ಏಕಾಂಕ ಪೌರಾಣಿಕ ನಾಟಕಗಳ ಕರ್ತೃವಾದ ಪಂಡಿತ ಚನ್ನಪ್ಪ ಎರೇಸೀಮೆಯವರದು ಹೊಸ ಹೆಸರು. ಇವರ ಲೆಕ್ಕಣಿಕೆಯಿಂದ ಹೊಸ ಉತ್ತಮ ನಾಟಕಗಳನ್ನು ನಿರೀಕ್ಷಿಸಬಹುದಾಗಿದೆ.

ಈ) **ಅಸಂಗತ ನಾಟಕಗಳು:** (Absurd plays) ಕ್ರಾಂತಿಯ ಹೊಸಗಾಳಿ ವಿಶ್ವಾದ್ಯಂತ ಬೀಸಿಬಂದಾಗ, ಅದರಿಂದ ತಮ್ಮೆದೆಯ ತಾಪವನ್ನು ಆರಿಸಿಕೊಂಡ ಕನ್ನಡಿಗರಲ್ಲಿ ಪಿ. ಲಂಕೇಶ ಮತ್ತು ಚಂದ್ರ ಶೇಖರ ಪಾಟೀಲ ಇವರು ಪ್ರಸಿದ್ಧರು. ಆದರೆ ಆ ಗಾಳಿ ಸುಳಿಗಾಳಿಯಾಗಿ ಬರಲಿಲ್ಲ, ಬೀರುಗಾಳಿಯಾಗಿ ಬೀಸಿಬಂತು. ಬಂದಷ್ಟೇ ಬೇಗ ಅಡಗಿಯೂ ಬಿಟ್ಟಿತು. ಏಕೋ ಏನೋ ಕನ್ನಡಕ್ಕೂ, ಅಸಂಗತ ನಾಟಕಕ್ಕೂ ಜಾತಕ ಅಷ್ಟಾಗಿ ಕೂಡಿಬರಲಿಲ್ಲ. ಆದರೂ ಅಂತಹ ರಚನೆ ಯಾವುದೇ ಭಾಷಾಸಾಹಿತ್ಯದಲ್ಲೂ ಸ್ವಾಗತಾರ್ಹ.

ಬದುಕನ್ನು ತೀವ್ರವಾಗಿ ವೀಕ್ಷಿಸುವ, ವಿಡಂಬಿಸುವ, ವಿಶ್ಲೇಷಿಸುವ, ಅರ್ಥವಿಲ್ಲದ ಆದರ್ಶನವನ್ನು ಕಿತ್ತೊಗೆದು ಸಹಜ ಅಭಿವ್ಯಕ್ತಿ ನೀಡುವ ವಿಧಾನವೊಂದು ಜಾಗೃತವಾಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ, ಫ್ರಾನ್ಸಿನ ಇಂಪ್ರೆಷನಿಸ್ಟ್, ಸಿಂಬ

ಲಿಸ್ಟ್‌ಗಳ ಕಲ್ಪಕತೆ ನವ್ಯಕ್ಕೆ ನಾಂದಿಯಾಯಿತು. ಗದ್ಯಪದ್ಯಗಳೆರಡರಲ್ಲೂ ಹೊಸತನ ಮೂಡಿ ಬಂತು. ಅಂಥದೇ ಒಂದು ಬದಲಾವಣೆ ನಾಟಕದಲ್ಲೂ ಕಾಣಿಸಿಕೊಂಡಿತು, ಅದನ್ನೇ ಅಸಂಗತ (Absured) ಎಂದು ಕರೆಯುತ್ತಾರೆ. ಬದುಕಿನ ಅದ್ಯತನ ಸ್ಥಿತಿಯನ್ನು ಅದರ ಅಸಂಗತ ಅವ್ಯಸ್ಥೆಯನ್ನು ಸಾಂಕೇತಿಕವಾಗಿ, ಮುಚ್ಚು ಮರೆಯಿಲ್ಲದೆ ಬಿಚ್ಚಿ ತೋರಿಸುವ ಪ್ರಯತ್ನ ಈ ಅಸಂಗತದಲ್ಲಿದೆ. ಈ ರಚನೆ ಇಂಗ್ಲೇಂಡ್, ಜರ್ಮನಿ ಮೊದಲಾದೆಡೆಗಳಲ್ಲಿ ಪ್ರಚಲಿತವಿದ್ದು, ಅದು ಕನ್ನಡ ನಾಡಿಗೂ ಕಾಲಿರಿಸಿತು. ಕನ್ನಡದಲ್ಲಿ ಅದನ್ನು ಮೊದಲು ಸ್ವಾಗತಿಸಿದವರು ಪಿ. ಲಂಕೇಶ ಮತ್ತು ಚಂದ್ರಶೇಖರ ಪಾಟೀಲ. ಪಿ. ಲಂಕೇಶರ ಟಿ. ಪ್ರಸನ್ನನ ಗೃಹಸ್ಥಾಶ್ರಮ, ನನ್ನ ತಂಗಿಗೊಂದು ಗಂಡುಕೊಡಿ, ತೆರೆಗಳು, ಬಿರುಕು, ಪೋಲಿಸ್‌ರಿದ್ದಾರೆ ಎಚ್ಚರಿಕೆ, ಸಿದ್ಧತೆ, ಗಿಳಿಯು ಪಂಜರದೊಳಿಲ್ಲ, ಕ್ರಾಂತಿ ಬಂತು ಕ್ರಾಂತಿ; ಚಂದ್ರಶೇಖರ ಪಾಟೀಲರ ಗೋಕರ್ಣದ ಗೌಡಸಾನಿ, ಕುಂಟಾ ಕುಂಟಾ ಕುರವತ್ತಿ, ಗುರ್ತಿನವರು, ಟಿಂಗರ ಬುಡ್ಡಣ್ಣ ಮೊದಲಾದವು ಕನ್ನಡದ ಪ್ರಸಿದ್ಧ ಅಸಂಗತ ನಾಟಕಗಳು.

ಪಿ. ಲಂಕೇಶರ ನಾಟಕಗಳಲ್ಲಿ ಸಿದ್ಧವಸ್ತುವೆನಿಸಿದ ಬದುಕಿನದುಃಸ್ಥಿತಿ–ಅದರಲ್ಲೂ ದುರ್ಬಲನ ಪತನ, ಪುಂಡಸಪ್ರಾಬಲ್ಯ, ಜಾಣನನೇಣು ಇವೇ ಮೊದಲಾದ ಬದುಕಿನ ಅಸಾಂಗತ್ಯ-ಅಭಿವ್ಯಕ್ತವಾಗಿದೆ.

ಚಂದ್ರಶೇಖರ ಪಾಟೀಲರ ಲೇಖನಿ ಲಂಕೇಶರ ಲೇಖನಿಗಿಂತಲೂ ಹರಿತವಾದದ್ದು. ರಂಗಭೂಮಿಯ ಮೇಲೆ ಇವರು ನಡೆಸಿದ ಕ್ರಾಂತಿ ಪ್ರಶಂಸನೀಯವಾದದ್ದು. ಕನ್ನಡಕ್ಕೆ ಹೊಸ ರಂಗವನ್ನೇ ಸೃಷ್ಟಿಸಿ ಕೊಟ್ಟವರು ಪಾಟೀಲರು. ಇವರ 'ಅಸಪ್ಡಾಳ ನಾಟಕ'ಗಳಲ್ಲಿ 'ಮಿಸಳ ಬಾಜಿ' 'ಕೆತ್ತೇಬಜೆ ಕಾರಬಾರ'ಗಳನ್ನು ಚೆನ್ನಾಗಿ ಗುರುತಿಸಬಹುದು. ನಾಟಕದ ರಂಗಭೂಮಿಗೂ, ಪ್ರೇಕ್ಷಣಾಂಕಕ್ಕೂ ಅಭೇದವನ್ನು ಕಲ್ಪಿಸುವಲ್ಲಿ, ಜಾನಪದ ದಾಟಿಯಲ್ಲಿ ಸಮಕಾಲೀನ ಪ್ರಜ್ಞೆಯನ್ನು ಎಚ್ಚರಿಸುವಲ್ಲಿ ತುಂಬು ವಿಜಯಿಗಳಾಗಿದ್ದಾರೆ.'ತಂತ್ರ ಸಾಮ್ರಾಟ' ಎಂಬ ಪ್ರಶಂಸೆಗೆ ಪಾತ್ರರಾಗಿದ್ದಾರೆ.

ಅಸಂಗತಗಳಲ್ಲಿ ಅನಂತರದಲ್ಲಿ ಕಾಣಿಸಿಕೊಳ್ಳುವ ಕವಿ ನಾಟಕಕಾರ ಕಲಾವಿದ ಶ್ರೀ ಎಚ್. ಎಂ. ಚನ್ನಯ್ಯ, ಇವರ 'ಎಲ್ಲರಂಥವನಲ್ಲ ನನಗಂಡ' ರಾಜಕೀಯ ವಿಡಂಬನೆಯನ್ನೊಳಗೊಂಡ ಒಂದು ಸಾಂಕೇತಿಕನಾಟಕ; ಅಸಂಗತವೂ ಹೌದು. ಇದನ್ನು ಲೇಖಕರು 'ಕಥಾ ನಾಟಕ' ಎಂದು ಕರೆದಿದ್ದಾರೆ.

**ಉಪಸಂಹಾರ:** ಕನ್ನಡ ನಾಟಕ ಸಾಹಿತ್ಯ ಇಂದು ಸಮೃದ್ಧವಾಗಿ ಬೆಳೆದು ಸರ್ವಾದರಣೀಯವಾಗಿದೆ. ಕನ್ನಡ ರಂಗಭೂಮಿ ಸರ್ವಾಂಗ ಸುಂದರವಾಗಿದೆ. ಅವುಗಳ ರೂಪಸ್ವರೂಪಗಳು ಇಂದು ಸ್ವಪ್ರಕಾಶದಿಂದ ಶೋಭಿಸಿವೆ. ಅನ್ಯ ಭಾಷಾನಾಟಕಗಳಿಗೆ ಹೊಯ್ ಕಯ್ಯಾಗಿ ನಿಲ್ಲಬಲ್ಲ ಶಕ್ತಿಯನ್ನು ಕನ್ನಡ ನಾಟಕ ಸಂಪಾದಿಸಿಕೊಂಡಿದೆ. ಆದರೆ ರಂಗಭೂಮಿ ಅಧಃಪಾತಾಳಕ್ಕಿಳಿಯುತ್ತಿರುವುದು ಶೋಚನೀಯ. ಸಲ್ಲದ ಸಿನಿಮಾ ಹಾವಳಿಯಿಂದ ಸಹಜಾಭಿವ್ಯಕ್ತಿ ಸಾಧನವಾದ ನಾಟಕರಂಗ ಹಾಳಾಗುತ್ತಿದೆ. ಅದಕ್ಕೆ ನಾವೆಲ್ಲರೂ ಕಾರಣ. ಅಂತೆಯೇ ಅದರ ಪುನರುತ್ಥಾನಕ್ಕೆ ಎಲ್ಲ ಪ್ರಯತ್ನವೂ ಇಂದು ಬೇಕಾಗಿದೆ. ಆದರೆ ನಾಟಕ ಸಾಹಿತ್ಯ ಸಮರ್ಥಶಾಲಿಯಾಗಿದೆ. ಸಾಕಷ್ಟು ಪ್ರಮಾಣದಲ್ಲಿ ಇಂದು ಬೆಳೆದುನಿಂತಿದೆ. ನಾಟಕ ಸಾಹಿತ್ಯದ ವಿವಿಧ ಮುಖಗಳನ್ನು ವೀರಶೈವ ಕವಿಗಳು ಗುರುತಿಸಿದ್ದಾರೆ, ಅಲಂಕರಿಸಿದ್ದಾರೆ ಎಂಬುದನ್ನು ಈ ಲೇಖನ ತೋರಿಸಿಕೊಟ್ಟಿದೆ.

## ಕರ್ನಾಟಕದಲ್ಲಿ ಚಲನಚಿತ್ರ ಉದ್ಯಮದ ಬೆಳವಣಿಗೆಗೆ ವೀರಶೈವರ ಕೊಡುಗೆ

—ಟಿ. ಎಸ್. ಕರಿಬಸಯ್ಯ

ಇಂದು ಕರ್ನಾಟಕದ ಚಲನಚಿತ್ರ ಉದ್ಯಮ ರಾಷ್ಟ್ರೀಯ ಮಟ್ಟದಲ್ಲಿಯೇ ಅಲ್ಲದೆ ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿಯನ್ನುಗಳಿಸಿರುವುದು ನಮಗೆಲ್ಲರಿಗೂ ಸಂತೋಷದ ವಿಷಯ. ಸರ್ವತೋಮುಖ ಅಭಿವೃದ್ಧಿಯನ್ನು ಮೈಗೂಡಿಸಿಕೊಂಡಿರುವ ಈ ಉದ್ಯಮ ನಮ್ಮೆಲ್ಲರ ಆಶಾಸೌಧ. ನಮ್ಮ ಹಿರಿಯರ ಕನಸಿನ ಈ ಆಶಾಸೌಧ; ಇಂದು ನಮ್ಮ ಮುಂದೆ ನನಸಾಗಿ, ಭದ್ರವಾಗಿ ಎಲ್ಲರನ್ನು ಆಕರ್ಷಿಸುತ್ತಾ ಹೊಳೆಯುತ್ತಿದೆ. ಇತ್ತೀಚಿನ ದಿನಗಳಲ್ಲಿ ಉದ್ಯಮ ಗಳಿಸಿರುವ ಖ್ಯಾತಿ ಆ ಸೌಧಕ್ಕೆ ಅಲಂಕಾರ ರೂಪದ ಕಳಶ. ಆದರೆ ಆ ಸೌಧವನ್ನು ಕಟ್ಟುವಲ್ಲಿ ಭದ್ರವಾದ ಬುನಾದಿ ಹಾಕಿಕೊಟ್ಟ ಮಹಾಶಯರಲ್ಲಿ ವೀರಶೈವರ ಪಾತ್ರವು ಅಪಾರ. ಮೂವತ್ತು ವರ್ಷಗಳ ಹಿಂದೆ ಬೆರಳೆಣಿಕೆಗೂ ಸಾಲದಷ್ಟು ಕನ್ನಡ ಚಲನ ಚಿತ್ರಗಳು ತಯಾರಾಗುತ್ತಿದ್ದು ಕಾಲಕ್ರಮೇಣ ಮಂದಗತಿಯಲ್ಲಿ ಸಾಗುತ್ತಿದ್ದ ಉದ್ಯಮ, ಪ್ರಸ್ತುತವರ್ಷಕ್ಕೆ ಸರಾಸರಿ ಐವತ್ತು ಚಿತ್ರಗಳು ತಯಾರಾಗುತ್ತಿರುವುದಕ್ಕೆ ಸರ್ಕಾರದ 'ಸಬ್ಸಿಡಿ' ಹಾಗೂ ಬಹುಮಾನಗಳ ಪ್ರೋತ್ಸಾಹ ಎಷ್ಟು ಕಾರಣವೋ, ಅಷ್ಟೇ ಉದ್ಯಮದಲ್ಲಿ ವೀರಶೈವರ ಕೊಡುಗೆಯೂ ಕಾರಣ ಎಂಬುದರಲ್ಲಿ ಸಂಶಯವಿಲ್ಲ. ಉದ್ಯಮದ ಪ್ರತಿ ಕ್ಷೇತ್ರದಲ್ಲಿಯೂ ಅವರ ಆಸಕ್ತಿ, ಶಿಸ್ತಿನಿಂದ ಕೂಡಿದ ಶ್ರದ್ಧೆ, ಮುಂದಾಳುತನ ಮತ್ತು ಮುಂದಾಲೋಚನೆಯ ಶ್ರಮಪೂರಿತ ದುಡಿಮೆಯ ಫಲ, ಉದ್ಯಮದ ಭದ್ರ ಬುನಾದಿ ಎಂದರೆ ಅತಿಶಯೋಕ್ತಿಯಾಗಲಾರದು.

ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿಗಳು ಕನ್ನಡ ರಂಗಭೂಮಿಯ ಪಿತಾಮಹರೆನಿಸುವ ಖ್ಯಾತಿಗೆ ಪಾತ್ರರಾದಂತೆ ಕನ್ನಡ ಚಲನ ಚಿತ್ರೋದ್ಯಮಕ್ಕೆ ಸಂಬಂಧ ಪಟ್ಟಂತೆ ಈ ಖ್ಯಾತಿಗೆ ಪಾತ್ರರಾಗಿರುವ ಮತ್ತೊಬ್ಬ ವೀರಶೈವ ದಿವಂಗತ ವಿನೋದ ರತ್ನಾಕರ, ಕರ್ನಾಟಕಾಂಧ್ರ ನಾಟಕ ಸಾರ್ವಭೌಮ, ನಾಟಕರತ್ನ ಡಾ॥ ಗುಬ್ಬಿವೀರಣ್ಣನವರು. ರಂಗಭೂಮಿಯ ಏಳ್ಗೆಗೆ ತಮ್ಮ ತನು-ಮನ-ಧನವನ್ನೇ ಅರ್ಪಿಸಿಕೊಂಡ ವೀರಣ್ಣನವರು ಚಲನಚಿತ್ರರಂಗಕ್ಕೂ ತಮ್ಮ ಸೇವೆಸಲ್ಲಿಸಿದ ಕನ್ನಡ ಸೇನಾನಿಗಳಲ್ಲಿ ಮೊದಲಿಗರು. ೧೯೩೦ಕ್ಕೂ ಹಿಂದೆ 'ಕರ್ನಾಟಕ ಫಿಲಂ ಕಾರ್ಪೊರೇಷನ್' ಎಂಬ ಸಂಸ್ಥೆಯನ್ನು ಹಲವಾರು ಪಾಲುಗಾರರೊಡನೆ ಸ್ಥಾಪಿಸಿ, ಬೆಂಗಳೂರು ನಗರದಲ್ಲಿ ಸ್ಥಾಪಿಸಲ್ಪಟ್ಟ ಸ್ಟುಡಿಯೋವೊಂದರಲ್ಲಿ 'His love affair' ಮತ್ತು 'ಕಳ್ಳರ ಕೂಟ' ಎಂಬ ಎರಡು ಮೂಕಿ ಚಿತ್ರಗಳನ್ನು ತಯಾರಿಸಿದ ಖ್ಯಾತಿ ಅವರದು. 'ಟಾಕಿ' ಚಿತ್ರಗಳ ಪ್ರಾರಂಭದಿಸೆಯಲ್ಲಿ ಉತ್ತರ ಕರ್ನಾಟಕದಲ್ಲಿ ಶ್ರೇಷ್ಠ ಮಟ್ಟದ ನಾಟಕ ಕಂಪನಿಯನ್ನು ಕಟ್ಟಿ ಬೆಳೆಸಿ ಯಶಸ್ಸನ್ನು ಗಳಿಸಿದ ಮನಸೂರು ಬಸವರಾಜರವರು 'ಚಿರಂಜೀವಿ' (ಭಕ್ತಮಾರ್ಕಂಡೇಯ) ಚಿತ್ರದಲ್ಲಿ ಮುದವೀಡು ಕೃಷ್ಣರಾವ್, ದೇವುಡು ನರಸಿಂಹ ಶಾಸ್ತ್ರಿ, ನಾಡಿಗೇರ ಕೃಷ್ಣಮೂರ್ತಿ ಅವರುಗಳೊಡನೆ ನಾರದನ ಪಾತ್ರ ನಿರ್ವಹಿಸಿದ ಸಂದರ್ಭವನ್ನಿಲ್ಲಿ ಜ್ಞಾಪಿಸಬಹುದು. ಸಂಗೀತ ಮತ್ತು ಅಭಿನಯಗಳೆರಡರಲ್ಲೂ ವಿಖ್ಯಾತರಾದ ಬಸವರಾಜರ ಆ ಪಾತ್ರ ಕಲಾತ್ಮಕ. ಇವರಂತೆಯೇ ಅದೇ ಕಾಲದಲ್ಲಿ ಚಂದ್ರಹಾಸ ಚಿತ್ರದಲ್ಲಿ ದುಷ್ಟಬುದ್ಧಿಯ ಪಾತ್ರವಹಿಸಿದ್ದ ಪ್ರಖ್ಯಾತ ಕಲಾವಿದ ಹಂದಿಗನೂರು ಸಿದ್ರಾಮಪ್ಪನವರ ಚಿತ್ರ ಪ್ರಪಂಚ ಸೇವೆಯೂ ಸಂಸ್ಮರಣೀಯ. ಈ ದೃಷ್ಟಿಯಿಂದ ಕನ್ನಡ ನಾಟಕ ಮತ್ತು ಚಲನ ಚಿತ್ರೋದ್ಯಮದಲ್ಲಿ ವೀರಶೈವರ ಪಾತ್ರ ಪ್ರಾರಂಭದ ದಿಸೆಯಿಂದಲೂ ಅತ್ಯಂತ ಸಂಸ್ಮರಣೀಯ ಅಂಶವೇ ಆಗಿದೆ.

ಟಾಕೀ ಚಿತ್ರಗಳು ಬಂದ ಮೇಲೆ ಉದ್ಯಮದಲ್ಲಿ ಆಸಕ್ತಿ ತೋರಿಸಿದ ಕನ್ನಡಿಗರಲ್ಲಿ ಮತ್ತೆ ವಿರಣ್ಣನವರೇ ಪ್ರಮುಖ ಸ್ಥಾನಗಳಿಸಿದರು. ಆಗ ಅವರು ತಯಾರಿಸಿದ ಕನ್ನಡ ಚಿತ್ರಗಳು ಇಂದಿಗೂ ತಮ್ಮ ಪ್ರಭಾವವನ್ನು ಉಳಿಸಿಕೊಂಡು ಮನೆಮಾತಾಗಿರುವ 'ಸುಭದ್ರ' 'ಜೀವನ ನಾಟಕ' 'ಹೇಮರೆಡ್ಡಿ ಮಲ್ಲಮ್ಮ' 'ಗುಣಸಾಗರಿ' 'ಬೇಡರ ಕಣ್ಣಪ್ಪ' ಮತ್ತು 'ಸದಾರಮೆ' ಮುಂತಾದುವು.

ಕೇವಲ ನಿರ್ಮಾಪಕರಾಗಿ ಮಾತ್ರವಲ್ಲದೆ ವೀರಣ್ಣನವರ ಹೆಸರು ಮತ್ತೊಂದು ಕಾರಣಕ್ಕೂ ಕನ್ನಡ ಚಲನಚಿತ್ರೋದ್ಯಮದ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿದೆ. ತಮ್ಮ ಮಾಲೀಕತ್ವದಲ್ಲಿದ್ದ "ಗುಬ್ಬಿ ಕಂಪನಿ"ಯನ್ನು "ಕಾರ್ಯಾಗಾರ" ಅಂದರೆ Workshop ನಂತೆ ಇಟ್ಟುಕೊಂಡು ಕಲಾವಿದರ ಪ್ರತಿಭೆಗೆ ಸಾಣೆ ಹಿಡಿದು ತರಬೇತಿ ನೀಡಿ ಚಿತ್ರರಂಗದಲ್ಲಿ ಉಪಯೋಗಿಸಿ ಕಲಾವಿದರ ಪೂರ್ಣಯಶಸ್ಸಿಗೆ ಕಾರಣಕರ್ತರಾಗಿದ್ದಾರೆ. ಕನ್ನಂಬಾಡಿಯ ಮುಂದೆ ಚಿಮ್ಮುವ ಬುಗ್ಗೆಗಳು ನೋಡಲು ಬಹಳ ಸುಂದರವಾಗಿ ಆಕರ್ಷಿತವಾಗಿರುತ್ತವೆ. ಆದರೆ ಆ ಬುಗ್ಗೆಯಮೂಲ-ತುಂಬಿತುಳುಕುವ ಕನ್ನಂಬಾಡಿ ಸರೋವರ. ಅಲ್ಲಿಂದ ಹರಿದು ಬಂದು, ಸುಂದರಾಕಾರ ತಾಳಿ-ನರ್ತಿಸಿ ಮೆರೆಯುವ ಆ ಬುಗ್ಗೆಗಳ ಆಶ್ರಯದಾತ ಕೃಷ್ಣರಾಜಸಾಗರದಂತೆ ವೀರಣ್ಣನವರ "ಗುಬ್ಬಿಕಂಪನಿ" ಇಲ್ಲಿಂದ ಹರಿದು ಬಂದ ಅನೇಕ ಕಲಾವಿದರುಗಳು ಇಂದು ಚಿತ್ರರಂಗದಲ್ಲಿ ಯಶಸ್ವಿಯಾಗಿ ಕೃತಕೃತ್ಯರಾಗಿದ್ದಾರೆ. "ಗುಬ್ಬಿ-ಕಂಪನಿ"-ಎಂಬ ವಿಶ್ವವಿದ್ಯಾಲಯದಲ್ಲಿ ಸುರಿತು, ರಂಗಭೂಮಿಯಿಂದ ಚಿತ್ರರಂಗಕ್ಕೆ ಬಂದು ಯಶಸ್ವಿಯಾದ ಕಲಾವಿದರ ಪಟ್ಟಿ ಮಾಡಿದರೆ ಅದು ಅತಿ ದೊಡ್ಡ ಪಟ್ಟಿಯಾಗುತ್ತದೆ. ನಟಸಾರ್ವಭೌಮ ಡಾ॥ ರಾಜಕುಮಾರ್, ದಿ॥ ನರಸಿಂಹರಾಜು, ಜಿ. ವಿ. ಅಯ್ಯರ್, ಪ್ರತಿಭಾನ್ವಿತ ನಟ ಉದಯಕುಮಾರ್, ರಾಷ್ಟ್ರಪ್ರಶಸ್ತಿ ವಿಜೇತರುಗಳಾದ ವಾಸುದೇವರಾವ್, ಮತ್ತು ಬಿ. ವಿ. ಕಾರಂತ್ ರಂತಹ ಅಪಾರ ಪ್ರತಿಭೆಯನ್ನು ಪ್ರದರ್ಶಿಸಿರುವವರೆಲ್ಲರೂ ವೀರಣ್ಣನವರ ಗರಡಿಯಲ್ಲಿ ಪಳಗಿ ಮುಂದೆ ಬಂದಿರುವವರು ಎಂಬುದು ಹೆಮ್ಮೆಯ ವಿಷಯ. ಅಲ್ಲದೆ ಡಾ॥ ರಾಜಕುಮಾರ್ ಹಾಗು ನರಸಿಂಹರಾಜು ಅವರುಗಳನ್ನು ಅವರೇ ತಯಾರಿಸಿದ "ಬೇಡರ-ಕಣ್ಣಪ್ಪ" ಚಿತ್ರದ ಮೂಲಕ ಚಿತ್ರರಂಗಕ್ಕೆ ಪದಾರ್ಪಣ ಮಾಡಿಸಿದ ಕೀರ್ತಿ ವೀರಣ್ಣನವರದು.

ಹೊನ್ನಪ್ಪ ಭಾಗವತರು ಮತ್ತು ಬಿ. ಜಯಮ್ಮನವರಂತಹ ಉತ್ತಮ ಕಲಾವಿದರು ವೀರಣ್ಣನವರ ಪೋಷಣೆ ಹಾಗು ಪ್ರೋತ್ಸಾಹದಿಂದ ಚಿತ್ರರಂಗಕ್ಕೆ ಉತ್ತಮ ಕಾಣಿಕೆ. ಇದೂ ಅಲ್ಲದೆ ವೀರಣ್ಣನವರು ತಮ್ಮ ವಂಶವನ್ನೆಲ್ಲ ಕಲೆಯ ಸೇವೆಗೆ ಮುಡಿಪಾಗಿಡುವ ಪರಂಪರೆಗೆ ಕಾರಣಕರ್ತರಾಗಿ ಚಿತ್ರರಂಗಕ್ಕೆ ಅಮೂಲ್ಯವಾದ ಕಾಣಿಕೆಯನ್ನು ನೀಡಿದ್ದಾರೆ. ಅವರ ಮಕ್ಕಳು ಮತ್ತು ಮೊಮ್ಮಕ್ಕಳು ಇಂದು ಚಿತ್ರರಂಗದಲ್ಲಿ ಬಹಳವಾಗಿ ಕೀರ್ತಿಶಾಲಿಗಳಾಗಿದ್ದಾರೆ. ಈ ದಿಸೆಯಲ್ಲಿ ವೀರಣ್ಣನವರ ಮಕ್ಕಳಾದ ಶ್ರೀ ಜಿ. ವಿ. ಶಿವಾನಂದರವರು ಹವ್ಯಾಸಿ ಕಲಾವಿದರಾಗಿ ರಂಗಭೂಮಿಯಲ್ಲಿ ಖ್ಯಾತಿಗಳಿಸಿರುವುದಲ್ಲದೆ ಚಲಚ್ಚಿತ್ರರಂಗದಲ್ಲಿಯೂ ಹೆಸರು ಗಳಿಸಿದ್ದಾರೆ. ಕಲಾ ಸೇವೆಗಾಗಿ ಶ್ರೀಯುತರು ತಂದೆಯಂತೆಯೇ ತಮ್ಮ ಜೀವನವನ್ನು ಸಮರ್ಪಿಸಿದ್ದಾರೆ. ಅಲ್ಲದೆ ತಮ್ಮ ಮಕ್ಕಳನ್ನೂ ಕಲೆಗೆ ಹಚ್ಚಿದ್ದಾರೆ. ಮಾಸ್ಟರ್ ನಟರಾಜ್ ಶ್ರೀ ಜಿ. ವಿ. ಶಿವಾನಂದರವರ ಪುತ್ರ. ತಾತ ವೀರಣ್ಣನವರು ಮತ್ತು ತಂದೆ ಶಿವಾನಂದರವರ ಕಲೆಯನ್ನು ಮೈಗೂಡಿಸಿಕೊಂಡು ಬಾಲ್ಯದಲ್ಲಿಯೇ ನಟಿಸಿದ ಚಿತ್ರ "ಕಾಡು". ತನ್ನ ಪಾತ್ರಕ್ಕೆ ರಾಷ್ಟ್ರ ಪ್ರಶಸ್ತಿಗಳಿಸಿ ವಂಶಗೌರವವನ್ನು ಕಾಪಾಡಿದ್ದಾರೆ. ಅಲ್ಲದೆ ಶಿವಾನಂದರವರ ಕುಮಾರಿ ಸುಂದರಶ್ರೀಯೂ ಸಹ ಇತ್ತೀಚೆಗೆ ಚಲನ ಚಿತ್ರರಂಗಕ್ಕೆ ಪದಾರ್ಪಣ ಮಾಡಿ ಅಭಿಮಾನಿಗಳ ಶ್ರೀರಕ್ಷೆಗೆ ಪಾತ್ರರಾಗಿದ್ದಾರೆ. ಒಟ್ಟಿನಲ್ಲಿ ವೀರಣ್ಣನವರು ಕನ್ನಡ ಚಲನ

ಚಿತ್ರೋದ್ಯಮದ ಪೂರ್ಣ ಅಂಗವಾಗಿದುಡಿದು, ಉದ್ಯಮದ ಅಭಿವೃದ್ಧಿಗಾಗಿ ತಮ್ಮ ಅಮೂಲ್ಯವಾದ ಕೊಡುಗೆಯನ್ನು ಸಲ್ಲಿಸಿ ಕಲಾ ಪ್ರಪಂಚಕ್ಕೆ ವೀರಶೈವ ಸಮಾಜದ ದೊಡ್ಡ ಕೊಡುಗೆಯಾಗಿದ್ದಾರೆ.

ಟಾಕಿ ಚಿತ್ರಗಳು ಪ್ರಾರಂಭವಾದ ಉದ್ಯಮದ ಶೈಶಾವಸ್ಥೆಯ ಕಾಲದಲ್ಲಿ ಕನ್ನಡ ಚಿತ್ರರಂಗದ ಸಂಪರ್ಕ ಬೆಳೆಸಿದವರು ಮಾಜಿ ಉಪರಾಷ್ಟ್ರಪತಿಗಳಾದ ಶ್ರೀಯುತ ಬಿ. ಡಿ. ಜತ್ತಿಯವರು. "ಪಂಪ–ಪಿಕ್ಚರ್ಸ್" ಸಂಸ್ಥೆಯ ಸಂಸ್ಥಾಪಕರಲ್ಲಿ ಶ್ರೀ ಜತ್ತಿಯುವರು ಒಬ್ಬರು. ಈ ಸಂಸ್ಥೆಯು ಹೊರತಂದ ಏಕೈಕ ಚಿತ್ರ "ಚಂದ್ರಹಾಸ". ಈ ಚಿತ್ರವನ್ನು ನಿರ್ದೇಶಿಸಿದವರು "ರಣಜಿತ್ ಸ್ಟುಡಿಯೋ"ದಲ್ಲಿ "ಸೌಂಡ್–ರೆಕಾರ್ಡಿಸ್ಟ್" ಆಗಿ ಕೆಲಸಮಾಡಿ ಅನುಭವ ಪಡೆದಿದ್ದ ಮತ್ತೋರ್ವ ವೀರಶೈವ ಕಲಾವಿದ ಶ್ರೀ ಶಾಂತೇಶ ಪಾಟೀಲ್‌ರವರು. ತದನಂತರ, ಶ್ರೀಯುತ ಪಾಟೀಲ್‌ರವರು ಕರ್ನಾಟಕ ಸರ್ಕಾರದ ಸ್ವಾಮ್ಯಕ್ಕೊಳಪಟ್ಟ "Karnataka State Film Industry Development Corporation" ಸಂಸ್ಥೆಯ Managing Director ಆಗಿ ತಮ್ಮ ಸೇವೆ ಸಲ್ಲಿಸಿದರು.

ಸೀಮಿತ ಮಾರುಕಟ್ಟೆಯನ್ನು ಹೊಂದಿ ಬಾಲ್ಯಾವಸ್ಥೆಯಲ್ಲಿದ್ದ ಚಿತ್ರರಂಗಕ್ಕೆ ಚೈತನ್ಯವನ್ನು ನೀಡುವಲ್ಲಿ ಪ್ರಾರಂಭದಿಂದಲೂ ವೀರಶೈವರು ಉದ್ಯಮದಲ್ಲಿ ಆಸಕ್ತಿತೋರಿ ಅದರ ಸರ್ವತೋಮುಖ ಏಳ್ಗೆಗೆ ದುಡಿದಿದ್ದಾರೆ. ಕನ್ನಡ ಚಿತ್ರರಂಗಕ್ಕೆ ಮೆರಗು ಕೊಡುವಲ್ಲಿ ಎಲ್ಲ ರೀತಿಯ ಪ್ರತಿಭೆಗಳನ್ನು ಬಳಸಿಕೊಳ್ಳಲು ಅವರು ತೋರಿರುವ ಆಸಕ್ತಿ ಅಪಾರ. ಈ ದಿಶೆಯಲ್ಲಿ M/s ಮಲ್ಲಿಕ್ ಪ್ರೊಡಕ್ಷನ್‌ನಾರವರು ಗಮನಾರ್ಹರು. ಉತ್ತರ ಭಾರತದ ಹಿಂದೀ ಚಿತ್ರರಂಗದ ಪಿತಾಮಹರಾದ ಶ್ರೀ ಪೃಥ್ವೀರಾಜ್‌ಕಪೂರ್‌ರವರನ್ನು ಇವರು ಕನ್ನಡ ಚಿತ್ರರಂಗಕ್ಕೆ ಕರೆತಂದು 'ಸಾಕ್ಷಾತ್ಕಾರ'ದಲ್ಲಿ ಅಭಿನಯಿಸಲು ಅವಕಾಶ ಕಲ್ಪಿಸಿಕೊಟ್ಟುದುದರ ಮೂಲಕ ಕನ್ನಡಿಗರ ಔದಾರ್ಯವನ್ನು ಬೆಳಗಿದುದು ಉದ್ಯಮಕ್ಕೆ ಒಂದು ಕೀರ್ತಿ. ಭುವನೇಶ್ವರಿ ಆರ್ಟ್ಸ್ ಪ್ರೊಡಕ್ಷನ್ಸ್ ಮತ್ತೊಂದು ವೀರಶೈವರ ಸಂಸ್ಥೆ. ಪ್ರಥಮಬಾರಿಗೆ ಕನ್ನಡ ಚಿತ್ರರಂಗಕ್ಕೆ 'ಸಿನೇಮಾ-ಸ್ಕೋಪ್' ಚಿತ್ರ ನೀಡಿದ ಕೀರ್ತಿ ಈ ಸಂಸ್ಥೆಯದು.

ವೀರಶೈವರಿಂದ ಈ ಉದ್ಯಮದಲ್ಲಿ ಸ್ಥಾಪಿತವಾದ ನಿರ್ಮಾಣ ಸಂಸ್ಥೆಗಳು ಹೊಸ ಪ್ರಯೋಗಗಳಿಗೆ ಅವಕಾಶ ಕಲ್ಪಿಸಿಕೊಟ್ಟಿವೆ. ಈ ದಿಶೆಯಲ್ಲಿ ಪತ್ರೆ ವಿನಾಯಕರವರನ್ನು ನಾವು ಗಮನಿಸಬಹುದು.

ಕನ್ನಡ ಚಲನ ಚಿತ್ರರಂಗದಲ್ಲಿ ಮನೆ ಮಾತಾಗಿ ಶ್ರೇಷ್ಠ ಚಿತ್ರವೆಂದು ಖ್ಯಾತಿಗಳಿಸಿದ 'ಗಂಧದ ಗುಡಿ' ಹಾಗು ಇನ್ನಿತರ ಉತ್ತಮ ಚಿತ್ರಗಳನ್ನು ನೀಡಿದ ಕೀರ್ತಿ ಶ್ರೀ ಎಂ. ಪಿ. ಶಂಕರ್‌ರವರದು. ಈ ವೀರಶೈವ ಕಲಾವಿದ ಕೇವಲ ನಿರ್ಮಾಪಕ ಮಾತ್ರವಲ್ಲ. ಸ್ವಯಂ ಶ್ರೇಷ್ಠ ನಟ ಮತ್ತು ನಿರ್ದೇಶಕ. ಅವರ ಪ್ರತಿಭೆ ಕನ್ನಡ ನಾಡಿನ ಚಲನ ಚಿತ್ರರಂಗಕ್ಕೆ ಒಂದು ದೊಡ್ಡ ಆಸ್ತಿ.

ಈ ರೀತಿಯ ಪ್ರತಿಭಾನ್ವಿತರ ಪಟ್ಟಿಯಲ್ಲಿ ನಿಲ್ಲುವ ನಿರ್ಮಾಪಕರಲ್ಲಿ ಮುಖ್ಯವಾದ ಹೆಸರು ಶ್ರೀ ಪಿ. ಲಂಕೇಶ್‌ರವರದು. ಅವರು ನಿರ್ದೇಶಕರಾಗಿ ರಾಷ್ಟ್ರಪ್ರಶಸ್ತಿಗಳಿಸಿ ಕನ್ನಡ ಚಿತ್ರೋದ್ಯಮಕ್ಕೆ ಕೀರ್ತಿತಂದಿದ್ದಾರೆ. ಅವರು ನಿರ್ದೇಶಿಸಿದ ಚಿತ್ರಗಳು ಹಲವಾರು ಪ್ರಶಸ್ತಿಗಳನ್ನು ಗಳಿಸಿ ಕನ್ನಡ ಚಿತ್ರಜಗತ್ತಿನ ಮೈಲುಗಲ್ಲಾಗಿವೆ.

ಕನ್ನಡ ಚಿತ್ರೋದ್ಯಮದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ಚಿತ್ರ 'ಬಂಗಾರದ-ಮನುಷ್ಯ'. ಎರಡು ವರ್ಷಗಳ ಕಾಲ ಸತತವಾಗಿ ಪ್ರದರ್ಶನಗೊಂಡು ಕನ್ನಡ ಚಿತ್ರೋದ್ಯಮದಲ್ಲಿ ಇತಿಹಾಸದಲ್ಲಿ ದಾಖಲೆಯನ್ನು ನಿರ್ಮಿಸಿದ ಖ್ಯಾತಿ ಈ ಚಿತ್ರದ್ದು. ಈ 'ಬಂಗಾರದ ಮನುಷ್ಯ' ಚಿತ್ರದ ರೂವಾರಿ ಶ್ರೀಯುತ ಸಿದ್ಧಲಿಂಗಯ್ಯನವರು. ಶ್ರೀಯುತರ ನಿರ್ದೇಶನದ ಈ ಚಿತ್ರ ೧೯೭೧-೭೨ರಲ್ಲಿ ಶ್ರೇಷ್ಠ ಚಿತ್ರವೆಂದು ರಾಜ್ಯ ಪ್ರಶಸ್ತಿಗಳಿಸಿ, ಆ ಚಿತ್ರದ....'ಚಿತ್ರ ಕಥೆ'ಗಾಗಿ ಅವರಿಗೆ ಬಹುಮಾನವನ್ನು ತಂದು ಕೊಟ್ಟಿತು. ನಂತರ ನಿರ್ದೇಶಿಸಿದ 'ಭೂತಯ್ಯನ ಮಗ ಅಯ್ಯು' ಚಿತ್ರವು ಪ್ರಶಸ್ತಿಗಳ ಮಾಲೆಯನ್ನು ಸಿದ್ಧಲಿಂಗಯ್ಯನವರಿಗೆ ಅರ್ಪಿಸಿತು. ಚಿತ್ರೋದ್ಯಮಕ್ಕೆ ಈ ಸಮಾಜದ ಕೊಡುಗೆಯಲ್ಲಿ ಸಿದ್ಧಲಿಂಗಯ್ಯನವರ ಸಾಧನೆಯ ಫಲ ಅಮೂಲ್ಯಸ್ಥಾನಗಳಿಸಿದೆ. ಅವರು ನಿರ್ಮಿಸಿದ ಒಂದೊಂದು ಚಿತ್ರವೂ ಕನ್ನಡ ಚಿತ್ರರಂಗದ ಒಂದೊಂದು ಮೈಲಿಗಲ್ಲು. ಉತ್ತಮ ಚಿತ್ರಗಳ ಮಾಲಿಕೆಯನ್ನು ಕರ್ನಾಟಕ ಚಲನ ಚಿತ್ರರಂಗಕ್ಕೆ ಶ್ರೀಯುತರು ಅರ್ಪಿಸಿದ್ದಾರೆ. ಅವರ ಕಾರ್ಯದಕ್ಷತೆಗೆ ಎಷ್ಟೋ ಬಹುಮಾನಗಳು ಬಂದಿದ್ದರೂ ಸಹ, ಅದಾವುದೂ ಅವರ ಪ್ರತಿಭೆಗೆ ಕನ್ನಡ ಚಿತ್ರಪ್ರೇಮಿಗಳು ನೀಡಿರುವ ಶ್ರೀರಕ್ಷೆಯ ಮುಂದೆ ಅತೀಶಯವಾಗಿ ಕಾಣಲಾರವು. ಉದ್ಯಮಕ್ಕೆ ಕೀರ್ತಿ ಹಾಗು ಭದ್ರವಾದ ಅಭಿರುಚಿಯನ್ನು ಬೆಳೆಸುವುದರ ಮೂಲಕ ಕಲಾಭಿಮಾನಿಗಳ ಆದರವನ್ನು ಗಳಿಸಿದ್ದಾರೆ ಶ್ರೀಯುತ ಸಿದ್ಧಲಿಂಗಯ್ಯನವರು.

ಚಿತ್ರ ನಿರ್ಮಾಣ ಸಂಸ್ಥೆಯನ್ನು ಕಟ್ಟಿ, ವಿತರಕರಾಗಿ ಸ್ವತಃ ನಟರಾಗಿ ಸೇವೆ ಸಲ್ಲಿಸುತ್ತಿರುವ ತರುಣ ಶ್ರೀಬಸಂತಕುಮಾರ ಪಾಟಿಲ್ ರವರು 'ಮಾಂಗಲ್ಯ ಭಾಗ್ಯ' ಹಾಗು 'ಅನುರಾಗ ಬಂಧನ' ಚಿತ್ರಗಳನ್ನು ತಮ್ಮ ಕಾಣಿಕೆಯಾಗಿ ಉದ್ಯಮಕ್ಕೆ ನೀಡಿದ್ದಾರೆ.

ಹಲವಾರು ಚಿತ್ರಗಳ ಸಾಹಿತ್ಯ, ಸಂಭಾಷಣೆ, ಚಿತ್ರಕಥೆಯ ಯಶಸ್ವೀ ಸಾಹಿತಿಗಳಾದ ಶ್ರೀ ನರೇಂದ್ರ ಬಾಬುರವರು ಸಹ ಚಿತ್ರೋದ್ಯಮದ ಬೆಳವಣಿಗೆಯಲ್ಲಿ ತಮ್ಮ ಸೇವೆಸಲ್ಲಿಸುತ್ತಿರುವ ವೀರಶೈವರಲ್ಲಿ ಪ್ರಮುಖ ಸ್ಥಾನಗಳಿಸಿದ್ದಾರೆ.

ವೀರಶೈವ ಪುರುಷರಂತೆ ಸ್ತ್ರೀಯರೂ ಸಹ ಚಿತ್ರನಿರ್ಮಾಣದಲ್ಲಿ, ನಟನೆಯಲ್ಲಿ ಪ್ರತಿಭೆಯನ್ನು ಪ್ರದರ್ಶಿಸಿ ದಾಖಲೆಯನ್ನು ನಿರ್ಮಿಸಿದ್ದಾರೆ. ಈ ದಿಶೆಯಲ್ಲಿ ನಾವು ಶ್ರೀಮತಿ ಎಂ. ವಿ. ರಾಜಮ್ಮನವರನ್ನು ಗಮನಿಸಬಹುದು, ದಕ್ಷಿಣ ಭಾರತದ ನಾಲ್ಕು ಸಹೋದರ ಭಾಷೆಗಳ ಚಿತ್ರೋದ್ಯಮ ಇತಿಹಾಸದಲ್ಲಿಯೇ ಮೊದಲನೇ ನಿರ್ಮಾಪಿಕೆಯಾಗಿ 'ರಾಧಾ ರಮಣ' ಚಿತ್ರವನ್ನು ನಿರ್ಮಿಸಿದ ಖ್ಯಾತಿ ಈ ಪ್ರತಿಭಾನ್ವಿತ ಚತುರ್ಭಾಷಾ ತಾರೆ ಶ್ರೀ ಮತಿ ಎಂ. ವಿ. ರಾಜಮ್ಮನವರದು.

ಇಂದಿನ ಚಿತ್ರರಂಗದ ಧ್ರುವತಾರೆಯಾಗಿ ಮೆರೆಯುತ್ತಿರುವ ಪ್ರತಿಭಾವಂತ ನಟಿ ಕುಮಾರಿ ಮಂಜುಳ ಶ್ರೀ ಶಿವಣ್ಣನವರ ಪುತ್ರಿ. ಈಕೆಯ ಅಭಿನಯ ಕಲೆಯನ್ನು ಮೆಚ್ಚದ ಅಭಿಮಾನಿಗಳಿಲ್ಲ. ಅಂತೆಯೇ ಡಾ॥ ಗುಬ್ಬಿ ವೀರಣ್ಣನವರ ಪುತ್ರಿ ಸ್ವರ್ಣಮ್ಮ-ಚಿತ್ರರಂಗದ ಹಿರಿಯ ಹಾಗು ನುರಿತ ಕಲಾವಿದೆ.

ವೀರಶೈವರು ನಿರ್ಮಾಣ ಸಂಸ್ಥೆಗಳನ್ನು ಕಟ್ಟಿ, ನಿರ್ದೇಶಕರಾಗಿ, ನಟ–ನಟಿಯರಾಗಿ ಉದ್ಯಮದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿ ದಾಖಲೆಗಳನ್ನು ನಿರ್ಮಿಸಿ, ತಮ್ಮ ಅಮೂಲ್ಯ ಸೇವೆಯನ್ನು ಎಷ್ಟು ಸಲ್ಲಿಸಿದ್ದಾರೆಯೋ . ಅಷ್ಟೇ ಸೇವೆಯನ್ನು ಉದ್ಯಮದ ಇತರ ಕ್ಷೇತ್ರಗಳಲ್ಲಿಯೂ ಸಲ್ಲಿಸಿದ್ದಾರೆ. ಉದಾಹರಣೆಗೆ ಕ್ಯಾಮರಾ ಮೆನ್‌ಗಳಾಗಿ ಶ್ರೀಯುತ **ಪರಮೇಶಿಯವರು** ಮತ್ತು **ಗೌರೀಶಂಕರ್‌ರವರು** ಹೆಸರುಗಳಿಸಿದ್ದಾರೆ. ಉದ್ಯಮದ ಪ್ರಾರಂಭದಲ್ಲಿಯೇ ದೇವೇಂದ್ರಪ್ಪನವರಂತಹ ಸಂಗೀತ ನಿರ್ದೇಶಕರೂ ಸೇವೆಸಲ್ಲಿಸಿದ್ದಾರೆ. ಪರಮೇಶಿಯವರು ಕ್ಯಾಮರಾ ಮೆನ್ ಮತ್ತು ಭಾರತ ಸರಕಾರದ ವಾರ್ತಾ ಮತ್ತು ಪ್ರಸಾರ ಇಲಾಖೆಯಲ್ಲಿ ಫಿಲ್ಮ್ ವಿಭಾಗದ ನಿರ್ದೇಶಕರಾಗಿದ್ದಾರೆ.

ಇತ್ತೀಚೆಗೆ ತಮ್ಮ ಮಧುರ ಕಂಠದಿಂದ ಎಲ್ಲರ ಅಭಿಮಾನವನ್ನು ಗಳಿಸಿರುವ ಹಿನ್ನಲೆಗಾಯಕಿ ಶ್ರೀಮತಿ ಕಸ್ತೂರಿ ಶಂಕರ್‌ರವರ ಪ್ರತಿಭೆ ವೀರಶೈವರ ಕೊಡುಗೆಯೇ. ಹಾರ್ಮೋನಿಯಂ ವಿದ್ವಾನ್ ಶ್ರೀ ಅರುಣಾಚಲಂರವರ ಸೊಸೆಯಾದ ಶ್ರೀಮತಿ ಕಸ್ತೂರಿ ಶಂಕರ್‌ರವರ ಸಂಗೀತ ಸಾಧನೆ ಕನ್ನಡ ಚಿತ್ರೋದ್ಯಮಕ್ಕೆ ಒಂದು ಅಮೂಲ್ಯ ಕಾಣಿಕೆ.

ಉದ್ಯಮಕ್ಕೆ ವೀರಶೈವರ ಅತ್ಯಮೂಲ್ಯವಾದ ಕಾಣಿಕೆಗಳಲ್ಲಿ ಮಹತ್ತರ ಸ್ಥಾನಗಳಿಸಿರುವುದು ಸ್ಟುಡಿಯೋಗಳ ಸ್ಥಾಪನೆ. ಕನ್ನಡ ಚಿತ್ರಗಳ ತಯಾರಿಕೆ ಮದರಾಸಿನಲ್ಲಿ ನಡೆಯುತ್ತಿದ್ದಾಗ ಕನ್ನಡ ನಿರ್ಮಾಪಕರು ಅನುಭವಿಸುತ್ತಿದ್ದ ಕಷ್ಟ ಕಾರ್ಪಣ್ಯಗಳ ನಿವಾರಣೆಗಾಗಿ, ಸ್ಥಳೀಯ ಕಲಾವಿದರ ಮತ್ತು ತಾಂತ್ರಿಕ ತಜ್ಞರ ಪ್ರತಿಭೆಗೆ ಅವಕಾಶ ಕಲ್ಪಿಸಿಕೊಡುವ ಸಲುವಾಗಿ ರಾಜ್ಯದಲ್ಲಿ ಎರಡು ಉನ್ನತ ಸ್ಟುಡಿಯೋಗಳ ನಿರ್ಮಾಣಕ್ಕೆ ಕಾರಣಕರ್ತರಾದ ಶ್ರೀಯುತ ಬಸವರಾಜಯ್ಯನವರು ಮತ್ತು ಶ್ರೀಯುತ ಟಿ.ಎಸ್. ಕರಿಬಸಯ್ಯನವರು ಮುಖ್ಯರು. ಶ್ರೀಯುತ ಬಸವರಾಜಯ್ಯನವರು ಮೈಸೂರು ನಗರದಲ್ಲಿ ಸ್ಥಾಪಿಸಿರುವ "ಪ್ರಿಮಿಯರ್ ಸ್ಟುಡಿಯೋ" ಸುಸಜ್ಜಿತವಾಗಿ ಉದ್ಯಮದ ಬೆಳವಣಿಗೆಗೆ ಸರ್ವರೀತಿಯ ಸಹಾಯಕವಾದರೆ, ಬೆಂಗಳೂರು ನಗರದಲ್ಲಿ ಶ್ರೀಯುತ ಟಿ. ಎಸ್. ಕರಿಬಸಯ್ಯನವರು ಸ್ಥಾಪಿಸಿರುವ "ಕಂಠೀರವ ಸ್ಟುಡಿಯೋ" ಉದ್ಯಮಕ್ಕೆ ಒಂದು ಅಮೂಲ್ಯ ಆಸ್ತಿ. ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರ ಪ್ರೋತ್ಸಾಹದಿಂದ ಮತ್ತು ಶ್ರೀ ವೀರೇಂದ್ರ ಪಾಟೀಲ್‌ರವರ ಸಹಕಾರದಿಂದ ಕಾರ್ಯೋನ್ಮುಖರಾದ ಶ್ರೀಯುತ ಕರಿಬಸಯ್ಯನವರು ಶ್ರಮವಹಿಸಿ ನಿರ್ಮಿಸಿದ ಈ ಸ್ಟುಡಿಯೋ ಏಷ್ಯಾ ಖಂಡದಲ್ಲಿಯೇ ಅತಿ ದೊಡ್ಡ ಫ್ಲೋರ್‌ಗಳನ್ನುಳ್ಳ ಸ್ಟುಡಿಯೋ ಎಂಬ ಖ್ಯಾತಿಗೆ ಪಾತ್ರವಾಗಿ ದೇಶದ ಎಲ್ಲ ಭಾಷೆಯ ನಿರ್ಮಾಪಕರನ್ನೂ ಆಕರ್ಷಿಸಿದೆ. ಇಲ್ಲಿ ಹಿಂದಿ, ತಮಿಳು, ತೆಲುಗು ಭಾಷೆಗಳ ಚಿತ್ರಗಳೂ ಸಹ ನಿರ್ಮಾಣಗೊಂಡಿವೆ. ಈ ಸ್ಟುಡಿಯೋದಲ್ಲಿ ನಿರ್ಮಾಣಗೊಂಡ ಅನೇಕ ಚಿತ್ರಗಳು ಶತಮಾನೋತ್ಸವವನ್ನು ಆಚರಿಸಿರುವುವದಲ್ಲದೆ, ಕನ್ನಡ ಚಿತ್ರರಂಗದಲ್ಲಿ ದಾಖಲೆ ನಿರ್ಮಿಸಿದ "ಬಂಗಾರದ ಮನುಷ್ಯ" ಚಿತ್ರ ನಿರ್ಮಾಣವಾದದ್ದು ಕಂಠೀರವ ಸ್ಟುಡಿಯೋದಲ್ಲಿಯೇ. ಕರ್ನಾಟಕದಲ್ಲಿ ಉದ್ಯಮಕ್ಕೆ ಶಾಶ್ವತವಾದ ಸ್ಥಾನ ರೂಪಿಸಿಕೊಡುವಲ್ಲಿ ಈ ಎರಡು ಸ್ಟುಡಿಯೋಗಳು ಮಹತ್ತರ ಪಾತ್ರವಹಿಸುವಂತೆ ಹಿಂದೆ ನಿಂತ ವೀರಶೈವ ಶಿಲ್ಪಿಗಳಾದ ಶ್ರೀ ಬಸವರಾಜಯ್ಯ ಮತ್ತು ಶ್ರೀ ಟಿ. ಎಸ್. ಕರಿಬಸಯ್ಯನವರ ಶ್ರಮ ಕರ್ನಾಟಕ ಜನತೆಗೆ ಉತ್ತಮ ಕಾಣಿಕೆ. ಪ್ರಸ್ತುತ ಕಂಠೀರವ ಸ್ಟುಡಿಯೋ ಮ್ಯಾನೆಜಿಂಗ್ ಡೈರೆಕ್ಟರ್ ಆಗಿ ಸೇವೆಸಲ್ಲಿಸುತ್ತಿರುವ ಶ್ರೀಯುತ ಟಿ. ಎಸ್.ಕರಿಬಸವಯ್ಯನವರು ತಮ್ಮ ಎಳೆಯ ವಯಸ್ಸಿನಲ್ಲಿಯೇ ಕಲೆಯ ಗೀಳು ಹಚ್ಚಿಕೊಂಡು ತಮ್ಮ ಜೀವಮಾನವಿಡೀ ರಂಗಭೂಮಿ, ಚಿತ್ರೋದ್ಯಮ ಹಾಗು ಕಲಾವಿದರ ಸೇವೆಯಲ್ಲಿ ದುಡಿದಿದ್ದಾರೆ. ನಟರಾಗಿ, ನಿರ್ದೇಶಕರಾಗಿ, ವಿತರಕರಾಗಿ, ಪ್ರದರ್ಶಕರಾಗಿ ಚಿತ್ರೋದ್ಯಮದ ಸೇವೆ ಸಲ್ಲಿಸುತ್ತಾ, ಕಲಾವಿದರ ಪುರೋಭಿವೃದ್ಧಿಗಾಗಿ ದುಡಿಯುವ ಮಾನವೀಯ ಅನುಕಂಪವನ್ನೂ ಹೊಂದಿದ್ದಾರೆ.

ಆಡಳಿತಗಾರರಾಗಿಯೂ ಸಹ ವೀರಶೈವರು ಚಿತ್ರರಂಗಕ್ಕೆ ಸೇವೆ ಸಲ್ಲಿಸಿದ್ದಾರೆ. ಮಾಜಿ ಮುಖ್ಯಮಂತ್ರಿಗಳಾದ ಶ್ರೀಯುತ ವೀರೇಂದ್ರ ಪಾಟೀಲ್‌ರವರ ಸಬ್ಸಿಡಿಯ ಮುಂದಾಲೋಚನೆ ಇಂದಿನ ಉದ್ಯಮ ಪ್ರಗತಿಯಲ್ಲಿ ಸಿಂಹಪಾಲು ಪಡೆದಿದೆ. ಕನ್ನಡ ಚಿತ್ರೋದ್ಯಮದ ಬೆಳವಣಿಗೆಗೆ ಸಹಾಯಕವಾಗುವಂತೆ ಪ್ರೋತ್ಸಾಹ ಧನವಾಗಿ ಸಹಾಯಹಸ್ತ ನೀಡುವ ಸರ್ಕಾರದ ಈ ದೃಢ ನಿರ್ಧಾರದ ಮೂಲ ಪುರುಷ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರೇಂದ್ರ ಪಾಟೀಲರು.

ತಯಾರಾದ ಚಿತ್ರಗಳನ್ನು ವಿತರಣೆ ಮಾಡುವುದರಲ್ಲಾಗಲಿ ಮತ್ತು ಪ್ರದರ್ಶನ ನಡೆಸುವಲ್ಲಿಯಾಗಲಿ ವೀರಶೈವರು ಹಿಂದೆ ಬಿದ್ದಿಲ್ಲ. ರಾಜ್ಯದಾದ್ಯಂತ ಅನೇಕ ವಿತರಣಾ ಕೇಂದ್ರಗಳೂ ಮತ್ತು ಚಿತ್ರಮಂದಿರಗಳು ವೀರಶೈವರ ನೇತೃತ್ವದಲ್ಲಿ, ಮಾಲೀಕತ್ವದಲ್ಲಿ ಕಾರ್ಯ ನಿರ್ವಹಿಸುತ್ತಾ ಉದ್ಯಮದಲ್ಲಿ ತೊಡಗಿವೆ. ಸಂಖ್ಯಾ ದೃಷ್ಟಿಯಿಂದ ಅವುಗಳನ್ನು ಪಟ್ಟಿ ಮಾಡುವುದು ಅತಿ ಪ್ರಯಾಸದ ಕೆಲಸ.

ಒಟ್ಟಿನಲ್ಲಿ ಕನ್ನಡ ಚಲನ ಚಿತ್ರೋದ್ಯಮದ ಉಗಮ ಕಾಲದಿಂದಲೂ ಇಲ್ಲಿಯವರೆಗಿನ ಅಭಿವೃದ್ಧಿಯ ಸ್ಥಿತಿಯವರೆವಿಗೂ ಉದ್ಯಮದ ಎಲ್ಲ ಕ್ಷೇತ್ರಗಳಲ್ಲಿಯೂ ವೀರಶೈವರು ಮೊದಲೇ ಹೇಳಿದಂತೆ ತಮ್ಮ ಶಿಸ್ತಿನಿಂದ ಕೂಡಿದ, ಸಮರ್ಪಣೆಯ ಭಾವದಿಂದ ಉದ್ಯಮಕ್ಕೆ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದ್ದಾರೆ. ಉದ್ಯಮದ ಬೆಳವಣಿಗೆಗೆ ಶ್ರಮಿಸಿದ್ದಾರೆ–ಶ್ರಮಿಸುತ್ತಿದ್ದಾರೆ.

# ಸಂಗೀತಕ್ಕೆ ಶಿವಶರಣರ ಕೊಡುಗೆ

**ಪ್ರೊ॥ ಮಲ್ಲಿಕಾರ್ಜುನ ಮನಸೂರ**

(೧)

ಕನ್ನಡ ನಾಡಿನ ಶಿವಶರಣರು ಸಾಹಿತ್ಯ, ಸಂಗೀತ, ನೃತ್ಯ, ನಾಟಕಗಳ ಮೂಲಕ ಈಶ್ವರ ಸೇವೆಸಲ್ಲಿಸಿ ಭಕ್ತರರನ್ನು ತಣಿಸಿ, ಇಹಪರಗಳಿಗೂ ಪೂಜ್ಯರಾಗಿದ್ದಾರೆ. ಅವರು ಆಶ್ರಯಿಸಿದ್ದು ಜನತೆಯನ್ನು; ಆದುದರಿಂದ ಜನತೆಯ ಭಾಷೆಯನ್ನು ಸಾಹಿತ್ಯಕ್ಕೆ ಬಳಸಿದಂತೆ, ಜನತೆಯ ಕಲೆಗಳಾದ ಹಾಡು, ಕುಣಿತಗಳನ್ನು, ವೇಷಗಳನ್ನು, ಭಕ್ತಿಯಕಾಯಕಗಳನ್ನಾಗಿ ಪರಿವರ್ತಿಸಿಕೊಂಡು ಈಶ್ವರಾನುಗ್ರಹ ಸಂಪಾದಿಸಿದರು. ಅವರು ಈ ಕಲೆಗಳನ್ನು ಬಳಸಿದ್ದು, ಬೆಳೆಸಿದ್ದು ಉದರ ಪೋಷಣೆಗೆ ಮಾತ್ರವಲ್ಲ; ದೈವದತ್ತಶಕ್ತಿಯಾದ ಕಲಾಪ್ರತಿಭೆಯನ್ನು ಸಮಾಜೋದ್ಧಾರ, ಲೊಕಕಲ್ಯಾಣಕ್ಕಾಗಿ; ಆದರಿಂದಾಗಿ ದೈವದ ಪೂಜೆಗೆಂದು ಅವುಗಳನ್ನು ಬಳಸಿಕೊಂಡುದು ಗೋಚರಿಸುತ್ತದೆ. ಕಾವ್ಯಕಲೆಯನ್ನು ವೀರಶೈವ ಶರಣರು 'ನರಸುತ್ತಿ'ಗೆ 'ಉದರ ಪೋಷಣೆ'ಗೆ 'ಕೀರ್ತಿ ವಾರ್ತೆಲಾಭ'ಗಳಿಗೆ ಬಳಸಿಲ್ಲ. ಈ ತತ್ತ್ವವೇ ಇತರ ಕಲಾವಿದರಿಗೂ ಅನ್ವಯಿಸುತ್ತದೆ. ಕಲಾವಿದರಲ್ಲಿ ಕವಿಗಳು ಮತ್ತು ವಚನಕಾರರಾದ ಶಿವಶರಣರು ಇದ್ದಾರೆ. 'ದೇಶಿ' ಮತ್ತು 'ಮಾರ್ಗ' ಎರಡರಲ್ಲಿಯೂ ಅವರ ಕೊಡುಗೆ ಮಹತ್ತವಾದುದು. ಇವರ ಕಲಾಭಿರುಚಿ ನೃತ್ಯದಲ್ಲಿಯೂ ಕಂಡು ಬರುತ್ತದೆ. ಕಲೆಗಳನ್ನು ಪ್ರಯೋಗಗಳ ಮೂಲಕ ಪ್ರದರ್ಶಿಸುತ್ತಿದ್ದುದು ಮಾತ್ರವಲ್ಲದೆ ಕೆಲವರು ಈಬಗೆಗೆ ಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾರೆ. ಶರಣರು ರಚಿಸಿದ 'ವಚನ', 'ಗೀತ'. 'ಜಾನಪದ ಹಾಡು' 'ಒನಕೆವಾಡು', 'ಯಕ್ಷಗಾನ', 'ಸಣ್ಣಾಟ' (ಶರಣರಾಟ)-ಇವೆಲ್ಲವುಗಳನ್ನು ಹಾಡುವುದು ಒಂದು ರೀತಿಯಲ್ಲಿ 'ಜಾನಪದ ಸಂಗೀತ'ಕ್ಕೆ ಕೊಟ್ಟ ಕೊಡುಗೆಯೆಂದೇ ಹೇಳಬೇಕು. ಶಿವಶರಣರ ಕಥೆಗಳನ್ನು ನಾಡಿನಲ್ಲಿ ಹಲವು ಕಲಾಮಾಧ್ಯಮದ ಮೂಲಕ ಪ್ರಸಾರಮಾಡುತ್ತಿದ್ದರೆಂಬುದಕ್ಕೆ ಬಸವಪುರಾಣದ ಈ ಕೆಳಗಿನ ಪದ್ಯವನ್ನು ನೋಡಬಹುದು. ಸಿರಿಯಾಳಶೆಟ್ಟಿಯಿಂದಲೇ ಶಿವಭಕ್ತಿ ಹುಟ್ಟಿತಂತೆ! 'ಇಳಿಯೊಳಾ ಸಿರಿಯಾಳ ಸೆಟ್ಟಿಯ ತಲೆಯುಲೇ ಶಿವಭಕ್ತಿ ಹುಟ್ಟಿತು ; 'ಸರಸ ಭಾಷಾಂಗ ಕ್ರಿಯಾಂಗೋತ್ಕರದ ಗದ್ಯ ಪದ್ಯವಿಸರ ಮಧುರ ಗೀತೋಕ್ತಿಯಿಂ, ಸಲೆ ದೇಶ ದೇಶದಲಿ, ಕರಂ ಎಸೆಯಲು ಊರೂರೊಳು ಅತಿ ಶುಭಕರಮೆನಲು ಸಿರಿಯಾಳ ಚರಿತೆಯ ನೊರೆದೊರೆದು ವಿರಚಿಪರು ಭಕ್ತ ಸಭಾಂತರಾಳದೊಳು'. ಸಿರಿಯಾಳನ ಕಥೆ ಎಷ್ಟೊಂದು ಜನಪ್ರಿಯವಾಗಿತ್ತೆಂಬುದನ್ನು, ಆ ಕಥೆಯನ್ನು ಜನರಲ್ಲಿ ಪ್ರಸಾರ ಮಾಡಲು ಕಾವ್ಯ ನಾಟಕ ಗದ್ಯಪದ್ಯ, ಮಧುರಗೀತೊಕ್ತಿ ಬಳಸಿದುವನ್ನು ನಾವೆಲ್ಲ ಕಾಣುತ್ತೇವೆ; 'ಸತಿಯರು ಮನೆ ಮನೆಗೆ ಒನಕೆವಾಡಂ ಪಾಡುವರು' ಎಂದಿದ್ದಾನೆ ಭೀಮಕವಿ. ಇಲ್ಲಿ 'ದೇಸಿ' 'ಮಾರ್ಗ' ಸಂಗೀತಗಳ ಪ್ರಸ್ತಾಪವೂ ಇರುವುದನ್ನು ಗಮನಿಸುತ್ತೇವೆ.

(೨)

ಕರ್ನಾಟಕದ ಜನ ಎಂದಿನಿಂದಲೂ ಸಂಗೀತ ಪ್ರಿಯರು. ಪಂಪ ಕವಿ ಆಡಿದ ಮಾತು : 'ಚಾಗದ ಭೋಗದ, ಗೇಯದ .... .. ಮಾನಿಸರೆ ಮಾನಿಸರು' ಎಂಬುದು, 'ಇಂಪನಾಳ್ದ ಗೇಯಂ ಕಿವಿಪೊಕ್ಕೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ'- ಎಂಬುದು, ಕನ್ನಡಿಗರ ಸಾಂಸ್ಕೃತಿಕ ಜೀವನದ ಮನೋಧರ್ಮವನ್ನು ಸೂಚಿಸುತ್ತದೆ. ಸಂಗೀತವನ್ನು ಕೇಳುವುದು, ಕನ್ನಡಿಗರ ಮನೋಧರ್ಮ. ಶಿವಶರಣರ ಪೂರ್ವದಲ್ಲಿಯೂ ಅನೇಕ ಸಂಗೀತಗಾರರ ಹೆಸರುಗಳು ನಮಗೆ ದೊರೆಯುತ್ತವೆ. 'ಶಾಂತರ' ಎಂಬ ದೊರೆಯು ಸಂಗೀತದಲ್ಲಿಯೂ ಚತುರನಾಗಿದ್ದನು. 'ಪಿರಿಯಕೇತಲದೇವಿ' ಎಂಬವಳಿಗೆ 'ಸಂಗೀತ ವಿದ್ಯಾಧರಿ' ಎಂದು ಕರೆಯುತ್ತಿದ್ದರು. ಗಂಗ ಪೆರ್ಮಾಡಿಯ ಪತ್ನಿ 'ಬಾಚಲದೇವಿ' ಸಂಗೀತ ವಿದ್ಯೆಯಲ್ಲಿ ಅಸಮಾನಳು ಎಂದು ವರ್ಣಿತವಾಗಿದೆ. ಸಾಮಂತನಾದ ಎರೆಯಪ್ಪ(ಮ್ಮ)ನು 'ವಾದ್ಯವಿದ್ಯಾಧರನೂ' 'ಸಕಳ ಕಳಾಧರನೂ' ಆಗಿದ್ದನು. ವಿಷ್ಣುವರ್ಧನನು 'ಸಂಗೀತಪ್ರಸಂಗಭಂಗೀ

ಸಂಗತ ಚತುರಭರತ''ನಾಗಿದ್ದನು. ಈ ಹೆಸರುಗಳನ್ನು ನೋಡಿದರೆ ಶಿವಶರಣರ ಪೂರ್ವದಲ್ಲಿಯೂ ಸಂಗೀತವು ಪರಂಪರಿತ ವಾಗಿ ಈ ನಾಡಿನಲ್ಲಿ ಬೆಳೆದು ಬಂದಿದೆಯೆಂಬುದು ಗೋಚರಿಸುತ್ತದೆ.

(೩)

ಕನ್ನಡ ಸಾಹಿತ್ಯಕ್ಕೆ ಸಂಗೀತದ ಮೆರಗು ಕೊಟ್ಟು ಜನತೆಯ ಮನೆಮನೆಗೂ ವಚನಗಳನ್ನು ಮುಟ್ಟಿಸಿದ ಕೀರ್ತಿ ವಚನ ಕಾರರಿಗೆ ಸಲ್ಲುತ್ತದೆ. ವಚನಗಳನ್ನು ಹಾಡುವ ಪರಂಪರೆಯೇ ಏರ್ಪಟ್ಟು, ಅವುಗಳಿಗೆ ರಾಗ, ತಾಳಗಳನ್ನೂ ಸೂಚಿಸುತ್ತಿದ್ದುದಕ್ಕೆ ಉದಾಹರಣೆಗಳು ಹರಿಹರ, ರಾಘವಾಂಕ, ಭೀಮಕವಿ ಇವರಲ್ಲಿ ದೊರೆಯುತ್ತವೆ. ಬಸವಣ್ಣನವರು ವಚನಗಳನ್ನು ಹಾಡಿದರು. 'ತಾಳ, ಮಾನ, ಓಜೆ, ಬಜಾವಣೆಗಳ ಲೆಕ್ಕ ಭಕ್ತಿಯ ಹಾಡಿಗೇಕೆ' ಎಂದು ಒಂದು ವಚನದಲ್ಲಿ ಹೇಳಿದ್ದಾರೆ. ಇನ್ನೊಂದು ವಚನ ದಲ್ಲಿ 'ದಂಡಿಗೆ' 'ಸೋರೆ' 'ತಂತಿ' 'ಕಡ್ಡಿ' 'ಬತ್ತೀಸರಾಗ' ಮೊದಲಾದವುಗಳನ್ನು ಉಲ್ಲೇಖಿಸಿದ್ದಾರೆ. 'ಕೂಡಲಸಂಗನ ಶರ ಣರ ಕಂಡು, ಆಡಿ ಹಾಡಿ ಬದುಕು' ಎಲೆ ಮನವೇ ಎಂದಿದ್ದಾರೆ. 'ಆಡದೆ ನವಿಲು? ಹಾಡದೆ ತಂತಿ?' ಎಂದು ಮತ್ತೊಂದು ವಚನದಲ್ಲಿ ನುಡಿದಿದ್ದಾರೆ. ಭಕ್ತಿಯಿಲ್ಲದೆ ಹಾಡಿದ ಹಾಡು, ತಂತಿಯ ಮಿಡಿತ, ನವಿಲಿನ ಕುಣಿತ, ಇಕ್ಕುಳದ ಕೈಮುಗಿತಕ್ಕೆ ಸಮಾ ನವೆಂದಿದ್ದಾರೆ. ಅವರು ಹಾಡಿದುದು ಕೇಡಿಲ್ಲದ ಪದವಿಯನ್ನೀವ ಭಕ್ತಿಯ ಹಾಡು. ಅಲ್ಲಮಪ್ರಭುದೇವನೂ 'ಎರಡೆಂಬತ್ತು ಕೋಟಿ ವಚನವ ಹಾಡಿ'ದೆನೆಂದು ತಿಳಿಸಿದ್ದಾನೆ. ಅಲ್ಲದೆ ಅಲ್ಲಮನು ಅನೇಕ ಹಾಡುಗಳನ್ನು ಬರೆದು ಅವುಗಳಿಗೆ ಹಾಡಲು ಅನುಕೂಲವಾ ಗುವಂತೆ ರಾಮಕ್ರೀ, ಮಾಳವಗೌಳ, ಮಧುಮಾಧವಿ, ದೇಶಾಕ್ಷಿ, ಗೌಳ, ಧನ್ಯಾಸಿ, ಭೌಳಿ, ನಾಟಿ–ಮೊದಲಾದ ರಾಗಗಳ ಹೆಸರು ಗಳನ್ನು ಸೂಚಿಸಿದ್ದಾನೆ. ಅಲ್ಲದೆ ಹರೀಶ್ವರ ಕವಿಯು ಪ್ರಭುದೇವರ ರಗಳೆಯಲ್ಲಿ ಅವನನ್ನು ವರ್ಣಿಸುವಾಗ :

> 'ಇಂತು ಬಳೆಯಲ್ ಬಳೆದುದಾತನೊಡನಾ ವಿದ್ಯೆ; ಸಂತತಂ ಸೊಗಯಿಪ ಮೃದಂಗದ ಮಹಾವಿದ್ಯೆ;
> ಆ ವಿದ್ಯೆಯೊಡನೆ ಯೌವನವೊಸೆದು ಬಳೆಯುತಿರೆ; '

ಎಂದು ಅಲ್ಲಮನೊಡನೆಯೆ 'ಮೃದಂಗ' ಬಾರಿಸುವ ಕಲೆಯೂ ಬೆಳೆಯಿತೆಂದು ಕವಿ ಹರಿಹರದೇವನು ವರ್ಣಿಸಿದ್ದಾನೆ. ಗೊಗ್ಗೇ ಶ್ವರಾಲಯಕ್ಕೆ ಬಂದು 'ಮೃದಂಗಮುಂ ಇಕ್ಕೆಲದೊಳುಂ ನಿರಿಸಿ, ಸಿಂಗರಿಸಿ, ರಂಗಂಬೊಕ್ಕು ಮೇಳೈಸಿ, ಅತಿರಸಾಮೃತ, ಕಾಂತಿ ಯುತ, ನುತಗತಿ, ನವೀನಗತಿ, ರಸಗತಿ, ನುಣ್ಗತಿ, ಗಂಭೀರಗತಿ, ಸಾಂದ್ರಗತಿ, ಜಾಣ್ಗತಿ, ಮಧುರಗತಿ, ಮನೋಹರಗತಿ, ಸಂಗ ತಿಗಳನ್ನು'–ಶಂಕರನಿಗೆ ಕರ್ಣಾಭರಣವಾಗುವಂತೆ ಬಾರಿಸಲು ಕುಳಿತು ಕೇಳಿದ ಜನ, ನಂದಿ ಮಾಕಾಳರು ತಲೆದೂಗುತ್ತಾರೆ! ಮುರ ಜದ ಗತಿಗೆ ಮಾರುಹೋದವರಲ್ಲಿ ಕಾಮಲತೆಯೂ ಒಬ್ಬಳು ಎಂದಿದ್ದಾನೆ ಹರಿಹರ ಕವಿ. ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಅಲ್ಲಮನು ಮದ್ದಳೆ ಬಾರಿಸುತ್ತಿದ್ದರೆ ಮಾಯಾದೇವಿ 'ಕಾರಮುಗಿಲಿನ ಗರ್ಜನೆಯ ಕೇಳಿ, ನಲಿದು, ನಟಿಸುವ ಸೋಗೆ ನವಿಲಂತೆ ನಟಿಸುತ್ತಾಳೆ' ಎಂದು ವರ್ಣಿಸಲಾಗಿದೆ. ಈ ಎರಡೂ ಕಾವ್ಯಗಳಲ್ಲಿ ಅಲ್ಲಮಪ್ರಭುವನ್ನು ಮದ್ದಳೆಯಲ್ಲಿ ನುರಿತ ಕಲಾವಿದನೆಂದು ವರ್ಣಿಸಲಾಗಿದೆ.ಬಸವಣ್ಣನಂತೆ ಅಲ್ಲಮನೂ ಶ್ರೇಷ್ಠ ಸಂಗೀತಗಾರನಿದ್ದುದು ಸುಸ್ಪಷ್ಟ.ಪ್ರಸಿದ್ಧಯೋಗಿ ಸಿದ್ಧರಾಮನು ತನ್ನೊಂದು ವಚನದಲ್ಲಿ, "ಅಜುವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ ಸೋತಿತೆನ್ನ ಮನ ನೋಡಯ್ಯ:"ಎಂದು ನುಡಿದಿದ್ದಾನೆ. ಗಜೇ ಶಮಸಣಯ್ಯನೆಂಬ ವಚನಕಾರನು, 'ದೇಶಾಕ್ಷಿಯಿಲ್ಲದ ರಾಗ ಉಪ್ಪಿಲ್ಲದೂಟ ಸಪ್ಪೆ ಕಾಣಿರಣ್ಣಾ'–ಎಂದಿದ್ದಾನೆ. ಇದು ಅವನಿಗೆ ದೇಶಾಕ್ಷಿರಾಗದ ಮೇಲಿದ್ದ ಮಮತೆಯನ್ನು ತೋರಿಸುತ್ತದೆ. ಹೀಗೆ ವಚನಕಾರರಲ್ಲನೇಕರು ಸಂಗೀತವಿದ್ಯೆಯಮೇಲಿದ್ದ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸಿದುದು ಮಾತ್ರವಲ್ಲ, ಅವರು ಸ್ವತಃ ಸಂಗೀತಗಾರರಿದ್ದು ಅದನ್ನು ಪ್ರದರ್ಶಿಸುತ್ತಿದ್ದರೆಂದೆನಿಸುತ್ತದೆ. ಢಕ್ಕೆಯ ಮಾರಯ್ಯ, ಕಿನ್ನರಿಯ ಬ್ರಹ್ಮಯ್ಯ, ಸಕಳೇಶ ಮಾದರಸರು ಸಂಗೀತದಲ್ಲಿ ಬಲ್ಲಿದರಾಗಿದ್ದರು, ಕಿನ್ನರಿಯ ಬ್ರಹ್ಮಯ್ಯನು ಕಿನ್ನರಿ ನುಡಿಸುವಲ್ಲಿ, ಸಕಳೇಶ ಮಾದರಸನು ವೀಣೆ ನುಡಿಸುವಲ್ಲಿ ಖ್ಯಾತರಾಗಿದ್ದರು. ಭೀಮಕವಿಯ ಬಸವಪುರಾಣದಲ್ಲಿ ಮಾದ ರಸರ ವೀಣಾವಾದನದ ವಿಷಯದಲ್ಲಿ ಹೀಗೆ ಬರೆಯಲಾಗಿದೆ.

'ನಾದ ವಿದ್ಯಾಪಂಡಿತಂ, ಸಕಳ ವೀಣಾದಿ ಕಳಾವಿದಂ, ಭರತಾದಿ ಶಾಸ್ತ್ರ ವಿಚಕ್ಷಣಂ.' 'ಬತ್ತಿಸಾದಿ ರಾಗಗಳಿಂ ದಂಡಿಗೆ ಗಳಂ ರಚಿಸಿ, ಪ್ರೀಯವಾದ ವೀಣೆವೊರೆಯಲು ಪ್ರಸ್ತುತವನರಿದು, ಕ್ಷೋಣಿಯೊಳು ಹೆಸರುಳ್ಳ ರಾವಳ ವೀಣೆ, ವಾರಣಹಸ್ತ, ಗೌರೀವೀಣೆ, ಕಿನ್ನರವೀಣೆ, ಕಚ್ಛಪವೀಣೆ, ಕೈಲಾಸವೀಣೆ, ತುಂಬುರವೀಣೆ, ಪದ್ಮಜವೀಣೆ, ಸ್ವಾಯಂಭುವೀಣೆ, ಸಾರಂಗವೀಣೆ, ಪಿನಾಕವೀಣೆ ಇವು ಮೊದಲಾದವುಗಳಿಂದ, ಮೇಘಜಾಳ, ಯೌತಾಣಮಾನಿತ, ನವತಾಣ, ಸಂಧಾನ, ಅಮರ, ತಾಳಪಾತ್ರ ಮೊದಲಾದವುಗಳನ್ನು ನಾದಮೂರ್ತಿ ಶಿವನೇಕೇಳೆಂದು ನುಡಿಸುತ್ತಿದ್ದನು. ಸಪ್ತ ಸ್ವರಗಳಲ್ಲಿ, ಇಪ್ಪತ್ತೆರಡು ಶ್ರುತಿಗಳಲ್ಲಿ, ನಾರಾಟ, ಕಾವುಳವೆಂಬ ಧ್ವನಿಗೂಡಿ, ಚೌಕುಳವೆಂಬ ಸುಗತಿಯಿಂದ ಅನುಬದ್ಧಗೂಡಿ, ಗಮಕ ಸಪ್ತಕದಲ್ಲಿ, ಮಂಧ್ರ ಮಧ್ಯಮ ಮತ್ತು ತಾರಸ್ವರದಲ್ಲಿ, ಶುದ್ಧಸಾಳಗದ ದೇಶಿ ಮಾರ್ಗದಲ್ಲಿ ನುಡಿಸುತ್ತಿದ್ದನು. ಅಲ್ಲದೆ ಪ್ರಸಿದ್ಧವಾದ ವ:ಲಹರಿ, ಲಲಿತೆ,

ಧನ್ಯಾಸಿ, ಮಂಗಳಕೌಶಿ, ದೇಶಾಕ್ಷಿ, ಕುರಜೆ, ಗುಜ್ಜರಿ, ದೇಶಿ, ವೇಳಾಪುರಿ ಮೊದಲಾದ ರಾಗಗಳಲ್ಲದೆ ಪುರುಷರಾಗಳನ್ನು ಗೀತ
ರೂಪದಲ್ಲಿ ವಾದ್ಯದಲ್ಲಿ ನುಡಿಸುತ್ತಿದ್ದನು. ಇವೆಲ್ಲ ಭಕ್ತಿಯಿಂದ ಶಿವನನ್ನುಹಾಡುವ ಹಾಡುಗಳು. ಕಿನ್ನರಿ ಬ್ರಹ್ಮಯ್ಯನು ಕಿನ್ನರಿ
ವೀಣೆ ನುಡಿಸುತ್ತಿದ್ದು ಶಿವನು 'ಸುನಾದರಸಲೋಲ' ನಾಗಿ ಒಂದು 'ಹೊನ್ನು' ಒಂದು 'ಹಣ' ಒಂದು 'ಹಾಗ' ಕರುಣಿಸುತ್ತಿದ್ದ
ನಂತೆ. ಸಂಗೀತವು ಶರಣರಿಗೆ ಶಿವನನ್ನೊಲಿಸುವ ಸಾಧನವಾಗಿದ್ದಿತು. 'ರಾಗದ ಸಂಕಣ್ಣ'ನೆಂಬುವನು ಸಂಗೀತದಿಂದಲೇ ಪ್ರಸಿದ್ಧ
ನಾಗಿದ್ದನು. ಅವನ ಹೆಸರೇ ಅದನ್ನು ಸೂಚಿಸುತ್ತದೆ. ಕಲ್ಯಾಣದ ಚಾಳುಕ್ಯ ಚಕ್ರವರ್ತಿ ವಿಕ್ರಮಾದಿತ್ಯನ ಆಸ್ಥಾನದಲ್ಲಿ ವಿದ್ವಾಂ
ಸನೀತ. ಆಸ್ಥಾನದಲ್ಲಿ ನಿತ್ಯವು ಹಾಡಿ ಎರಡು ವರಹಗಳನ್ನು ಪಡೆಯುತ್ತಿದ್ದನಂತೆ. ಸಂಕಣ್ಣನ ಸಂಗೀತವು ಭಕ್ತಿಯ ಕಂಪುಗೂಡಿ
ರುತ್ತಿತ್ತು. ಈತನು ಗೌಳದೇಶದ ಗಾಯಕನೊಡನೆ ಗೆಲ್ದುದರಿಂದ ದೊರೆಯು ಈತನಿಗೆ 'ರಾಗರಸಾಂಕ' ಎಂಬ ಬಿರುದು ಕೊಟ್ಟಿ
ದ್ದಾನೆ. ಅನೇಕ ಶಿವ ಶರಣರ ವಚನಗಳಿಗೆ ರಾಗ ನಿರ್ದೇಶನಗಳು ದೊರೆಯುತ್ತವೆ. 'ಅಲ್ಲಮನ ವಚನ ಚಂದ್ರಿಕೆ,' 'ಶಿವದಾಸ
ಗೀತಾಂಜಲಿ' ಗಳಲ್ಲಿ ಇದಕ್ಕೆ ಹೇರಳ ಉದಾಹರಣೆಗಳನ್ನು ಕಾಣುತ್ತೇವೆ.

(೪)

ಮಹಾಕವಿ ಹರಿಹರನು ಸಂಗೀತ ಕಲೆಯನ್ನು ಚೆನ್ನಾಗಿ ಅರಿತಿದ್ದನೆಂಬುದನ್ನು ಆತನ ಕಾವ್ಯಗಳ ಅಧ್ಯಯನದಿಂದ ಗೀತ
ಗಳನ್ನು ಹಾಡುತ್ತಿದ್ದುದನ್ನು ಪ್ರಸ್ತಾಪಿಸುತ್ತಾನೆ. ಕವಿ ಹರಿಹರದೇವನು ರಗಳೆಗಳಲ್ಲಿ ಶರಣರ ಕಥೆಗಳನ್ನೇ ಹಾಡುತ್ತಿದ್ದನೆಂದು
ಹೇಳಿದ್ದಾನೆ. "ಲಲಿತ ಬಂಗಾಳದಿಂದೊಲಿದು, ಮಲಹರಿ,ವರಾಳಿಯಿಂದೊಲಿದು, ದೇಶಿಗುಜ್ಜರಿಗಳಿಂದ, ದೇಶಾಕ್ಷಿ, ಗೌಳಗಳಿಂದ"-
ಹೀಗೆ 'ಬತ್ತೀಸ ರಾಗ'ದಿಂದ ಈಶ್ವರನನ್ನು ಹಾಡುತ್ತಾನೆಂದು ಹೇಳಿದ್ದಾನೆ. ರಗಳೆಯ ಮುಖ್ಯಲಕ್ಷಣಗಳಲ್ಲೊಂದು 'ತಾಳ'.
ಸಂಗೀತಕ್ಕೂ ಇದು ಮುಖ್ಯವಾಗಿದೆ. ಹರೀಶ್ವರ ಕವಿಯು ಹಲವಾರು ಕೃತಿಗಳಲ್ಲಿ ತನಗಿದ್ದ ಸಂಗೀತದ ಅಭಿರುಚಿಯನ್ನು ವ್ಯಕ್ತ
ಪಡಿಸಿದ್ದಾನೆ. ಆನಯನಾರರ ರಗಳೆಯಲ್ಲಿ, ಆ ಶರಣನು ದನಗಾಹಿಯಾಗಿದ್ದರೂ ಅವನು ಮಹಾಭಕ್ತನಾಗಿದ್ದನು. ದನಗಳನ್ನು
ಒಟ್ಟುಗೂಡಿಸಿಕೊಂಡು, ಶಿವನ ಕಿವಿಗೆ ಸವಿದನಿಸುನೀವಂತೆ, ರಾಗರಸದೊಳಗೆ ಪಂಚಾಕ್ಷರಿಗಳನ್ನು ತನ್ನ ಕೊಳಲಿನಿಂದ ನುಡಿಸು
ತ್ತಿದ್ದನು. ಆ ನಾದಕ್ಕೆ ಮರಳಾದ ಗೋವುಗಳೆಲ್ಲ 'ಮುಗಿದಕಣ್, ಎತ್ತಿದಮುಖ, ಇಳಿದಕಟವಾಯ ಹೊಸನೊರೆಗರುಂಕೆಗಳಿಂದ'
ಆಲಿಸುತ್ತಿದ್ದುವು. ಹುಲಿ–ಹುಲ್ಲೆ, ಹಾವು–ಮುಂಗಲಿಗಳು ವೈರವನ್ನು ಮರೆತು ಕಿವಿಗೊಡುತ್ತಿದ್ದವು; ಗಿಳಿ,ಅಂಚೆ,ಕೋಗಿಲೆ ಕೇಳಿ
ನಲಿಯುತ್ತಿದ್ದುವು; ತರುಗಿರಿಗಳೂ ಎಳಸಿ ಕೇಳುತ್ತಿದ್ದುವು. ಈರೀತಿ ನಿಸರ್ಗವನ್ನೇ ತೃಪ್ತಿಪಡಿಸಿದ ಮೇಲೆ ಈಶ್ವರನ ಮನ ಆತನ
ಕೊಳಲ ಧ್ವನಿಯೊಳಗೆ ಮುಳುಗದಿದ್ದೀತೆ? ಆ ಧ್ವನಿ ನಾಯನಾರನ ಹೃದಯದ ಉಸಿರು. ಗೋವು ಕಾಯುತ್ತಲೆ ಭಕ್ತಿಭಾವ
ವನ್ನು ಬೆಳೆಯಿಸಿಕೊಂಡ ಆತನ ಕೊಳಲದನಿಯ ಸುಶ್ರಾವ್ಯತೆಯನ್ನು ಆತನ ಭಕ್ತಿಯ ಇಂಪನ್ನು ಲೋಕಕ್ಕೆ ಪ್ರಕಟಪಡಿಸಬೇಕೆಂಬ
ಹಂಬಲವುಳ್ಳ ಶಿವನು, ಒಂದುದಿನ ಒಂದು ಕಕ್ಕೆಯ ಮರದಮೇಲೇರಿ ಕುಳಿತುಕೊಂಡಿರುತ್ತಾನೆ. ಶರಣನು ಭವಮೂರ್ತಿಯನ್ನಪ್ಪಿ
ತನ್ನ ಹೃತ್ಕಮಲದೊಳಿರಿಸಿಕೊಂಡು ಮರದ ಮುಂದೆ 'ಅಡ್ಡಂ ತಿಗಟಂ ಪರಿದಾಡಿ, ಕೊಳಲಿಂದ ಪಂಚಾಕ್ಷರಿಯನೂದಿ ಹೆಚ್ಚಿ,
ಹಿಗ್ಗಿ, ಸವಿದು, ಹೊರಗಿನ ದನಿಯನಾಲಿಸದಂತೆ ಆಡುತ್ತ, ಶಿವನನ್ನು ಧ್ಯಾನಿಸುತ್ತ' ತಲ್ಲೀನನಾಗಿರುತ್ತಾನೆ. ಇನ್ನೊಂದು ಕೊಳಲು
ವಾದನದ ಉತ್ತಮ ದೃಶ್ಯನಿರ್ಮಾಣ ಹರಿಹರನಲ್ಲಿ: ತಿರುನೀಲಕಂಠಪಾಣರೂ 'ಗಾನವಿದ್ಯಾವಿಶಾರದ'ರು; ಶಿವದೇವಾಲಯ
ಗಳಲ್ಲಿ ಅತ್ಯಂತ ಭಕ್ತಿಯಿಂದ ಭಕ್ತಿಯ ಹಾಡುಗಳನ್ನು ಹಾಡುತ್ತಿದ್ದ ಶಿವಶರಣರು. ಅವರು ಸುಶ್ರಾವ್ಯವಾಗಿ ಹಾಡುತ್ತಿದ್ದ
ಇನ್ನೊಂದು ದೃಶ್ಯವನ್ನು ಕವಿ ಹೀಗೆ ವರ್ಣಿಸಿದ್ದಾನೆ: ಕಣ್ಮುಚ್ಚಿ ಸಪ್ತಸ್ವರ, ತ್ರಿಸ್ವರದಿಂದ, ಮಲಹರಿ, ಪಳಮಂಜರಿ, ಲಲಿತೆ,
ವರಾಳಿ, ಕನ್ನಡ, ಗೌಳ, ದೇಶಿ, ನಾಟಿ, ಬಹುಳಿ, ಶಾಂತಮಲಹರಿ, ರಾಮಕ್ರಿಯಾ, ಶುದ್ಧಸಾಳಗ–ರಾಗಗಳನ್ನು ತಾರ ಮಧುರ
ಮಂದ್ರವೆನಿಪ ತ್ರಿಪಾದಗಳಿಂದ ಸೊಗಸಾಗಿ ಭಕ್ತಿರಸದಲ್ಲಿ ಹಾಡಿದ ಹಲವು ಚಿತ್ರಗಳನ್ನು ನಿರ್ಮಿಸುತ್ತಾನೆ. ಸಂಗೀತವು ಸ್ವತಂತ್ರ
ವಾಗಿ ಹೊರಹೊಮ್ಮಿದಂತೆ ನೃತ್ಯದ ಜೊತೆಗೂ ಹೊರಹೊಮ್ಮುತ್ತದೆ. ಸಂಗೀತವಿಲ್ಲದೆ ನೃತ್ಯವು ಹೊರಹೊಮ್ಮುವಂತಿಲ್ಲ.
ಭೃಂಗೀಶ್ವರನ ನಾಟ್ಯನ್ನು ವಿವರಿಸುವಲ್ಲಿ ಆವುಜಗಳ ಧ್ವನಿ ಸುಧೆಯನ್ನು ಸೂಸುತ್ತಿತ್ತು; ಕಹಳೆಯ ಧ್ವನಿ ಸುಗತಿಯನ್ನು ಹೊರ
ಹೊಮ್ಮಿಸುತ್ತಿತ್ತು; ಕರಡೆಯಧ್ವನಿ ಸೊಂಪನ್ನು, ಕೌಸಾಳವು ಸಂಜ್ಞೆಯನ್ನು, ತಾಳಗಳು ನರ್ತನವನ್ನು ಹೊರಸೂಸುತ್ತಿದ್ದುವು
ಎಂದು ವರ್ಣಿಸಿದ್ದಾನೆ. ಮಲುಹಣನ ರಗಳೆಯಲ್ಲಿ ಮಲುಹಣಿಯ ನೃತ್ಯವನ್ನು ಹೀಗೆ ವರ್ಣಿಸುತ್ತಾನೆ:

> "ಮುಂದಣ ರಂಗಭೋಗ ಮಂಟಪದೊಳಿತ್ತರಂಗೊಂಡೋಲಗವಿತ್ತು ಕುಳ್ಳಿರ್ದ, ಪರಮಭಕ್ತರ, ಸಚಿವರ, ರಾಜಪುತ್ರರ,
> ವಡ್ಡವ್ಯವಹಾರಿಗಳ, ಕಳಾವಿದರ, ಸತ್ಕರ, ಸಾಹಿತ್ಯರ, ವಿಳಾಸಿನಿಯರ, ಪುರಜನರ, ಪರಿಜನರ,
> ನಡುವಣ ರಂಗಮಧ್ಯದೊಳ್– ನರ್ತನಂಗೊಡುವ, ತಾಳದ ಗತಿಗೊಡುವ, ಮದ್ದಳೆಯ ಲಹಣೆಗೊಡುವ, ಆವುಜದ
> ದೆಖ್ಖಾಳಂಗೊಡುವ, ಕೌಸಾಳದ ಹಲ್ಲಣೆಗೊಡುವ, ವಾಸದ ಲಲ್ಲೆಗೊಡುವ ಚೇಹಣಿಯರ ಸಂಗೀತದ ಸಂದಣಿಯೊಳ್......"

ಎಂದು—

ಕುಂಬಾರ ಗುಂಡಯ್ಯನ ರಗಳೆಯಲ್ಲಿ ಮತ್ತೆ ಹರಿಹರ ಕವಿ ಸಂಗೀತ ನಾಟ್ಯಗಳ ಪರಿಜ್ಞಾನವನ್ನು ಪ್ರಕಟಿಸುತ್ತಾನೆ. ಘಟಗಳನ್ನು ಮಾಡುತ್ತ, ಹಾಡುತ್ತ ಕುಣಿಯುತ್ತಾನೆ; ಭಕ್ತಿಭಾವದಿಂದ ಘಟಗಳನ್ನು ಬಾರಿಸುತ್ತಾನೆ. 'ಕುಣಿದಾಡುತೆ ಮಡಕೆಗಳಂ ಬಾರಿಸಿ, ಮಣಿದು, ತೂಗಾಡುತ್ತಾನೆ' ಇವನ ಕುಣಿತಕ್ಕೆ ಶಿವನೂ ಮೆಚ್ಚಿ ಕುಣಿಯುತ್ತಾನೆ. ಆತನು ಘಟಗಳನ್ನು ಬಾರಿಸುವ ದನಿಗೆ ಶಿವನ ಪಾದಗಳ ಅಂದುಗೆ ಘಲಕ್ ಎಂದೂ, ಕಟಕಧ್ವನಿ ಝಣಕ್ ಎಂದೂ ನಾದ ಮಾಡುತ್ತವೆ.

ಸಂಗೀತ, ಗಮಕ, ನಾಟ್ಯಪ್ರೇಮಿಯಾಗಿದ್ದ ಕವಿ ರಾಘವಾಂಕನು 'ಗಾನವಿನೋದಿ ಇರ್ದೊಡೇಂ ಜಾಣರಿಲ್ಲದೊಡೆ, ಕಣ್ಣಾಸ್ವಿತರ ನವಹವಿದ್ದೇನು ಕಲಾಪ್ರೌಢರಿಲ್ಲದೊಡೆ' ಎಂದು ಕೇಳಿರುವಲ್ಲಿ ಮತ್ತು ಹರಿಶ್ಚಂದ್ರ ಕಾವ್ಯದಲ್ಲಿ ಸಂಗೀತ ನರ್ತನ ವಿದ್ಯಾ ಪ್ರವರ್ತನಕ್ಕೆಂದೇ ಒಂದು ಸನ್ನಿವೇಶ ರಚಿಸಿಕೊಂಡಿದ್ದಾನೆ. ಹೊಲತಿಯರು ಹರಿಶ್ಚಂದ್ರನೆದುರು ಹಾಡಿ, ಕುಣಿದು ಆತನನ್ನೊಲಿಸಿದ ಸನ್ನಿವೇಶವೇ ಇದು. ಅಲ್ಲಿ ಕವಿ ರಾಘವಾಂಕನು ಅವರು ಹಾಡಿ ನರ್ತಿಸಿದ ಪ್ರಸಂಗವನ್ನು ವರ್ಣಿಸಿದ ನುಡಿಗಳಿವು: "ಗತಿ, ಗಮಕ, ಗಹಗಹಿಕೆ, ತಿರುಪು, ಚಾಳೆಯ, ಕೊಂಕು, ಜತಿ, ಜೋಕೆ, ಮಾರ್ಗವಣೆ, ವಹಣಿ, ತರಹರಿಕೆ, ಕಂಪಿತಹೊಂಪು, ಬಾಗು, ಡೊಕ್ಕರ ವಿವರ, ಕಾಳಾಸ, ಕಮ್ಮವಣೆ, ಲೋಲಂಗಿತ, ನುತಶುದ್ಧಸಾಳಂಗ, ಸಂಕೀರ್ಣಮುಂ ಯಥೋಚಿತ ತಾರ, ಮಧುರ, ಮಂದ್ರಂಗಳಿಂ ಹಾಡಿ, ಭೂಪತಿಯ ದುಗುಡವನು ತೊಳೆದರು, ರಾಗರಸಲಹರಿಯಿಂದ ಅನಾಮಿಕ ಸತಿಯರು" ಅವರು 'ದಂಡಿಗೆವಿಡಿದು ಹಾಡಿದ್ದಾರೆ.

ಭೀಮಕವಿಯು ಬಸವ ಪುರಾಣದಲ್ಲಿ ಶಿವನ ಆಸ್ಥಾನದಲ್ಲಿ ನಡೆದ ಸಂಗೀತನ್ನು ವರ್ಣಿಸುವ ಮಾತುಗಳಿವು: "ತತ ವಿತತ ಘನ ಶುಷಿರ ವಾದ್ಯ ಪ್ರತಿಮಿಳಿತ ಷಡ್ಜಾದಿ ಸಪ್ತಶೃತಿಗಳ ಇಂಪು ಉಗೆ, ಮಂದ್ರ ಮಧ್ಯಮ ತಾರ ವಿಕ್ರಮದ ಅತಿಮಧುರ ಮೃದುಗೀತ ಜಾತೋನ್ನತ ರಸದೊಳೊಡಗೂಡಿ ಪಾಡುತ ಚತುರ ತುಂಬುರ ನಾರದಾದ್ಯರು ಮುಂದೆಸೆಯೊಳಿರಲು"–ಎಂದು. ಬಸವಣ್ಣನ ಮದುವೆಯ ಪ್ರಸಂಗದಲ್ಲಿ ಬಂದಭಕ್ತರ ಸಂತೋಷಕ್ಕೆಂದು ಭಂಡಾರಿ ಬಲದೇವನು ಭಕ್ತಾಸ್ಥಾನಂಗಳನಲ್ಲಿ ಕೀರ್ತನ, ನಾಟಕ, ಸಂಗೀತ ಮೊದಲಾದವುಗಳ ಮೇಳಗಳನ್ನು ಏರ್ಪಡಿಸಿದ್ದನು. ಆಗ "ರೀತಿಯಲಿ, ಆನಂದಗೀತ ಸಮೇತ ಶಂಕರಗೀತ ತತಿಯೊಳು ಖ್ಯಾತರುದ್ರನ ಮಹಿಮೆಯನಂಕಿಸಿ ಪಾಡುವರು ಕೆಲರು" ಎಂದು ಭೀಮಕವಿಯು ವರ್ಣಿಸಿದ್ದಾನೆ. ಇದಲ್ಲದೆ ಇನ್ನೂ ಅನೇಕ ಪ್ರಸಂಗಗಳಲ್ಲಿ ಭೀಮಕವಿಯು ತನ್ನ ಸಂಗೀತ ಕಲಾಭಿರುಚಿಯನ್ನು ವ್ಯಕ್ತಪಡಿಸಿದ್ದಾನೆ. ಚಾಮರಸನೂ ಈ ಮಾತಿಗೆ ಹೊರತಾಗಿಲ್ಲ. ಸಂಗೀತದ ಅಭಿರುಚಿ ವೀರಶೈವರಲ್ಲಿ ವಚನಕಾರರಿಂದಲೇ ಬಳುವಳಿಯಾಗಿ ಬಂದ ಆಸ್ತಿ ಎನ್ನಬಹುದು. ಬಸವ ಪುರಾಣವನ್ನು ಹಾಡುವುದಕ್ಕೆ ಹಾಕಿದ ರಾಗ–ತಾಳಗಳನ್ನು ನೋಡಿದರೆ 'ಗಮಕ'ದ ಪರಂಪರೆಯು ಹೇಗೆ ಬೆಳೆದಿತ್ತೆಂದು ಗೋಚರಿಸುತ್ತದೆ.

ಸಂಗೀತ ಶಾಸ್ತ್ರವನ್ನು ತಾತ್ವಿಕವಾಗಿ ಮತ್ತು ಪ್ರಾಯೋಗಿಕವಾಗಿ ವಿವೇಚಿಸುವಾಗ ಗಮನಕ್ಕೆ ಬರುವ ಇನ್ನೊಂದು ಪ್ರಮುಖ ಹೆಸರೆಂದರೆ ಶ್ರೀ ನಿಜಗುಣಶಿವಯೋಗಿಗಳದು; ಅವರು ಪ್ರಸಿದ್ಧ ಕವಿಗಳೂ ದಾರ್ಶನಿಕರೂ ಆಗಿದ್ದು ಕನ್ನಡದಲ್ಲಿ ಹಲವು ಕೃತಿ ರಚಿಸಿದ್ದಾರೆ. ಅವರು ರಚಿಸಿದ 'ವಿವೇಕ ಚಿಂತಾಮಣಿ' ಕನ್ನಡದ ಪ್ರಥಮ ವಿಶ್ವಕೋಶ. ಅವರು ಆಕೃತಿಯ ನಾಲ್ಕನೆಯ ಅಧ್ಯಾಯದಲ್ಲಿ ಸಂಗೀತ ಶಾಸ್ತ್ರದ ಸಂಪೂರ್ಣ ವಿವರಗಳನ್ನೇ ಕೊಟ್ಟಿದ್ದಾರೆ. ಗಮಕಿಯ ಲಕ್ಷಣವನ್ನು ಹೇಳುವಾಗ 'ತಾನ ಮಾನಂದೋರಿ, ವಿಶ್ರಮಣವರಿದು, ಪದನಂ ವ್ಯಕ್ತಿಗೆಯ್ದು, ಕೇಳ್ವರ ಕಿವಿಗೊಳಿಸಿ, ಮೃದು ಮಧುರ ವರ್ಣೋಚ್ಚಾರ ಮಾಳ್ಪ ಗಮಕಿಗಳಿಂ ಎಂದು ವಿವರಿಸಿದ್ದಾನೆ. ಓಂಕಾರ, ಅದರಿಂದುದಿಸುವ ದಶವಿಧಧ್ವನಿ, ಮಧುರ ಮದ್ರ ತಾರ ಸ್ವರಭೇದ, ಷಡ್ಜಾದಿ ಸ್ವರಗಳುತ್ಪತ್ತಿ, ಸ್ವರೋತ್ಪತ್ತಿ, ತಾಲ, ಷಡ್ಜಾದಿ ಸ್ವರ ಧ್ವನಿಭೇದ, ಸ್ವರ ಜನ್ಮನಕ್ಷತ್ರ, ಸ್ವರಗಳಿಂದ ಹುಟ್ಟುವ ಧ್ವನಿ, ಇಪ್ಪತ್ತೆರಡು ಶೃತಿಗಮಕ, ಏಳು ದೇಶೀ ಗಮಕ, ಗೀತ, ಗೀತ ಲಕ್ಷ್ಮಣ, ರಾಗೋತ್ಪತ್ತಿಗೆ ಗ್ರಾಮತ್ರಯ ಇವುಗಳಿಂದ ರಾಗ ಜನನ, ಮೂವತ್ತಾರು ರಾಗ, ರಾಗಾಂಗ, ಭಾಷಾಂಗ, ಕ್ರಿಯಾಂಗ ಮತ್ತು ಉಪಾಂಗಗಳೆಂಬ ನಾಲ್ಕು ಅಂಗಗಳಿಂದ ಹುಟ್ಟುವ ಒಂದು ನೂರಾ ಐವತ್ತೇಳು ರಾಗಗಳು, ಪ್ರಸಿದ್ಧ ಮೂವತ್ತೆರಡು ರಾಗಗಳು, ಮಿಶ್ರರಾಗ, ಗಾನವೈಖರಿ,ವಾದ್ಯಭೇದ,ಇಪ್ಪತ್ತೆರಡು ತೆರನಾದ ತಂತಿವಾದ್ಯ, ಗಾಯಕಿಯರು, ಮದ್ದಳೆ, ಆವುಜಕಾರರು, ತಾಳ. ಧ್ರುವ, ಮಾತ್ರೆ, ಪ್ರಸ್ತಾರ, ತಾಳಭೇದ – ಇತ್ಯಾದಿಗಳನ್ನೂ ವಿವರವಾಗಿ ಕೊಟ್ಟಿದ್ದಾರೆ. ಅಲ್ಲದೆ ಅವರ ಕೈವಲ್ಯ ಪದ್ಧತಿಯ ಅನೇಕ ಹಾಡುಗಳು ಸಂಗೀತಕ್ಕಾಗಿಯೇ ರಚಿತವಾಗಿದ್ದು ಇಂದಿಗೂ ಅವುಗಳನ್ನು ವೀಣೆ ಏಕಧಾರಿಗಳ ಮೂಲಕ ಹಾಡುತ್ತಾ ಬಂದಿದ್ದಾರೆ. ಭಕ್ತರ ತಂಡಗಳು, ಭಜನಾಮೇಳಗಳು, ನಿಜಗುಣಶಿವಯೋಗಿಗಳ ಹಾಡು ಮಾತ್ರವಲ್ಲ, ಅನೇಕ ಸಂತಕವಿಗಳೂ ಅನುಭಾವಿಗಳೂ ಆದ ಸರ್ಪಭೂಷಣ ಶಿವಯೋಗಿಗಳು, ಘನಮಠ ಶಿವಯೋಗಿಗಳು, ಮೈಲಾರದ ಬಸವಲಿಂಗ ಶರಣರು, ನೊಣವಿನ ಕೆರೆ ಕರಿವೃಷಭೇಂದ್ರ ಸ್ವಾಮಿಗಳು, ಕೂಡಲೂರು ಬಸವಲಿಂಗ ಶರಣರು ಇವರೇ ಮೊದಲಾದವರ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಾ ಬಂದಿದ್ದಾರೆ. ಶಿವನನ್ನು 'ವೀಣಾದಿಲೋಲ' ಎಂದಿದ್ದಾರೆ ನಿಜಗುಣರು. ಹೀಗಾಗಿ ಸರಸ್ವತಿಯ ಎರಡು ಕಣ್ಣುಗಳಂತಿರುವ ಸಾಹಿತ್ಯ-ಸಂಗೀತಕ್ಕೆ ವೀರಶೈವ ವಚನಕಾರರು, ಅನುಭಾವಿಗಳು ಕೊಟ್ಟ ಕೊಡುಗೆ ಅಪೂರ್ವವೆಂದೇ ಹೇಳಬೇಕು.

# ಇಪ್ಪತ್ತನೆಯ ಶತಮಾನದ ಸಂಗೀತಕ್ಕೆ ವೀರಶೈವರ ಕೊಡುಗೆ

ಡಾ॥ ವಸಂತ ಕವಲಿ

ಉತ್ತಮ, ಸನಾತನ "ಘರಾಣೇದಾರ" ಪದ್ಧತಿಯಲ್ಲಿ ಬೆಳೆದುಬಂದ ಗಾಯಕರು ತಾವು ಹಾಡುವಾಗ ಯಾವುದಾದರೊಂದು ಚೀಜಿನಲ್ಲಿ ತಾನಸೇನನ ಹೆಸರು ಬಂದರೆ ತಮ್ಮ ಕಿವಿ ಹಿಡಿದುಕೊಳ್ಳುತ್ತಾರೆ. ಆತನ ಹೆಸರನ್ನುಚ್ಚರಿಸುವುದಕ್ಕೆ ಕೂಡಾ ತಮಗೆ ಯೋಗ್ಯತೆಯಿಲ್ಲ; ಆದ ಕಾರಣ ಈ ಅಪಚಾರವನ್ನು ಮನ್ನಿಸಬೇಕೆಂದು ಬೇಡುವ ತಪ್ಪೊಪ್ಪಿಗೆಯ ಕಾರ್ಯವಿಧಿ ಅದು. ಗಾಯಕರ ವಿನಯವೂ, ತಾನಸೇನನಲ್ಲಿ ಅವರಿಗಿರುವ ಆದರ ಭಾವನೆಯೂ, ಅಂತೆಯೇ ತಾನಸೇನನ ಅತ್ಯುನ್ನತಿಯೂ ಇದರಿಂದ ವ್ಯಕ್ತವಾಗುತ್ತಿವೆ. ಕೆಲ ಸಂಗೀತಗಾರರ ಮನೆಗಳಲ್ಲಿ ತಾನಸೇನನ ಭಾವಚಿತ್ರಗಳನ್ನು ಗೋಡೆಯ ಮೇಲೆ ತೂಗಿಸಿರುವುದನ್ನು ಕಾಣಬಹುದು. ದೇವರ ಪಟಗಳಿಗೆ ಸಲ್ಲುವಂತೆ ತಾನಸೇನನ ಪಟಕ್ಕೂ ಪೂಜೆ ಸಲ್ಲುತ್ತಿರುವುದು ಅಪರೂಪವೇನಲ್ಲ. ಇದಕ್ಕೆಲ್ಲ ಕಾರಣವೇನೆಂದರೆ: ನಮಗೆ, ಆಧುನಿಕರಿಗೆ ನಮ್ಮ ಸಂಗೀತದ ಇತಿಹಾಸ ಗೊತ್ತಿದೆ. ಆದರಿಂದಾಗಿ ತಾನಸೇನನ ಮಹತಿಯ ಅರಿವಿದೆ. ಆದರೆ, ನನಗೆನಿಸುತ್ತಿದೆ : ತಾನಸೇನನಿಗೇನಾದರೂ ತನ್ನ ಪೂರ್ವದ ಸಂಗೀತೇತಿಹಾಸ ತಿಳಿದಿದ್ದರೆ ಅವನ ಮನೆಯಲ್ಲಿ ಬಸವಣ್ಣನವರ ಮತ್ತು ಪುರಂದರದಾಸರ ಪಟಗಳಿರಬೇಕಾಗಬಹುದಿತ್ತು.

ಈವರೆಗೆ ಭಾರತೀಯ ಸಂಗೀತೇತಿಹಾಸದ ಬಗೆಗೆ ನಡೆಸಿದ ಸಂಶೋಧನೆಯಿಂದ ನಾನು ಮನಗಂಡ ಸತ್ಯವಿದು: ಭಾರತೀಯ–ಎಂದರೆ ಹಿಂದುಸ್ತಾನೀಯ–ಸಂಗೀತಕ್ಕೆ ಬಸವಣ್ಣ ಪಿತಾಮಹ; ಪುರಂದರದಾಸ ಪಿತ; ತಾನಸೇನ ಪತಿ; ಮಿಕ್ಕವರೆಲ್ಲ ಸಂತತಿ.

"ಮನಸೋಲ್ಲಾಸ"ವನ್ನು ಬರೆದ ಕಲ್ಯಾಣಚಾಲುಕ್ಯ ಚಕ್ರವರ್ತಿ ಸೋಮೇಶ್ವರನಿಗೆ ಕೈಪಿಡಿಯಾಗಿದ್ದುದು ಶಿವಶರಣರ ವಚನಸಂಗೀತ ಮತ್ತು ಕೀರ್ತನಗಳು. "ಬತ್ತೀಸ ರಾಗವ ಹಾಡಯ್ಯಾ" ಎಂದು ಹಾಡಿದರು ಬಸವಣ್ಣನವರು. "ಮದ್ದಳೆಯ ಅಲ್ಲಮ"ನೆಂದು ಪ್ರಸಿದ್ಧರಾಗಿದ್ದರು ಪ್ರಭುದೇವರು. ಸಕಲೇಶ ಮಾದರಸನೆಂಬ ಶರಣ ಒಂದೊಂದು ರಾಗಕ್ಕೆ ಒಂದೊಂದರಂತೆ ಮೂವತ್ತೆರಡು ವೀಣೆಗಳನ್ನು ಶ್ರುತಿ ಮಾಡಿಟ್ಟುಕೊಂಡು "ಬತ್ತೀಸ" ರಾಗಗಳನ್ನು ನುಡಿಸುತ್ತಿದ್ದ. ಇನ್ನು ಕಿನ್ನರಿ ಬೊಮ್ಮಯ್ಯನ ವಾದ್ಯವಾವುದೆಂಬುದನ್ನು ಅವನ ಹೆಸರೇ ಹೇಳುತ್ತಿದೆ. ಕಲ್ಯಾಣದ ಈ ಶರಣರೆಲ್ಲರ ಸಂಗೀತ ನೆರೆಯ ಕನ್ನಡ ರಾಜ್ಯವಾದ ದೇವಗಿರಿಯ ಸೇವುಣ ಅರಸರ ಆಸ್ಥಾನದ ಅರ್ಥಮಂತ್ರಿಯಾಗಿದ್ದ ಶಾರ್ಙ್ಗದೇವನಿಗೆ "ಸಂಗೀತರತ್ನಾಕರ" ಗ್ರಂಥವನ್ನು ಬರೆವಲ್ಲಿ ಸಾಕಷ್ಟು ಸಾಮಗ್ರಿಯನ್ನು ಒದಗಿಸಿರಲಾರದೆ?

ಇಲ್ಲಿ ಇನ್ನೊಂದು ಕುತೂಹಲಕರವಾದ ಅಂಶವಿದೆ. ಶಾರ್ಙ್ಗದೇವನು ತನ್ನ ತಂದೆಯ ಹೆಸರನ್ನು 'ಸೋಢಲ' ಎಂಬುದಾಗಿ ಹೇಳಿದ್ದಾನೆ. ಸೊಡ್ಡಳ ಎಂಬ ಹೆಸರಿಗೆ ಇದು ತೀರಾ ಸಮೀಪವಾಗಿಲ್ಲವೆ? ಆದಕ್ಕಾಗಿ ಅವನು ಕಲ್ಯಾಣದ ಶರಣ ಸೊಡ್ಡಳ ಬಾಚರಸನ ಸಂಬಂಧಿಕನಿರಬಹುದೆ? ಎಂಬ ಸಾಧ್ಯತೆಯ ಸೂಚನೆಯನ್ನು ನನ್ನ 'ನಾದೋಪಾಸನಾ' ನಾಟಕದಲ್ಲಿ ಕೊಟ್ಟಿದ್ದೇನೆ.

ಶಿವಶರಣರ ಕೀರ್ತನೆಗಳ ಮಾದರಿಯನ್ನೇ ಮುಂದುವರಿಸಿಕೊಂಡು ಬಂದವರು ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ ಮತ್ತು ಸಪ್ಪಣ್ಣಾರ್ಯ(ಸರ್ಪಭೂಷಣ ಶಿವಯೋಗಿ)ರು. ಈ ಭವ್ಯ ಪರಂಪರೆಯಿಂದಾಗಿ ಕರ್ನಾಟಕದಲ್ಲಿ ಸಂಗೀತ ಅಂದಿನಿಂದ ಇಂದಿನವರೆಗೆ ಎಂದರೆ ಎಂಟು ನೂರು ವರ್ಷಗಳ ಕಾಲ ಉಳಿದು ಬೆಳೆದು ಬಂದಿದೆ. ಇದು ಭಾರತೀಯ ಸಂಗೀತ ಅರ್ಥಾತ್ ಹಿಂದುಸ್ತಾನೀ ಸಂಗೀತವೇ ಹೊರತು ದಕ್ಷಿಣ ಭಾರತದ ಕೇವಲ ಮೂರುವರೆ ರಾಜ್ಯಗಳಲ್ಲಿ ಪ್ರಚಲಿತವಿರುವ ಕರ್ನಾಟಕ ಸಂಗೀತವಲ್ಲ. ಕರ್ನಾಟಕ ಸಂಗೀತವೆಂಬ ಹೆಸರೇ ಇತ್ತೀಚಿನದು, ಬರಿದೆ ಎರಡುನೂರು ವರ್ಷಗಳಿಂದೀಚಿಗಿನದು. ಆದರೂ ಕೆಲ ತಮಿಳು ವಿದ್ವಾಂಸರು ಕರ್ನಾಟಕದ ಸಂಗೀತವು ಪ್ರಾಚೀನವಾದುದೆಂದೂ ಹನ್ನೆರಡನೆಯ ಶತಮಾನದಲ್ಲೇ ಭೂಲೋಕಮಲ್ಲ ಸೋಮೇಶ್ವರ ಚಕ್ರವರ್ತಿಯು ತನ್ನ 'ಅಭಿಲಷಿತಾರ್ಥ ಚಿಂತಾಮಣಿ' (ಮಾನಸೋಲ್ಲಾಸ) ಗ್ರಂಥದಲ್ಲೇ ದಾಕ್ಷಿಣಾತ್ಯ ಸಂಗೀತಕ್ಕೆ ಕರ್ನಾಟಕ ಸಂಗೀತವೆಂಬ ಹೆಸರನ್ನು ಕೊಟ್ಟನೆಂದೂ ಸುಳ್ಳನ್ನು ಬೊಂಕಿದ್ದಾರೆ, ಬೊಂಕುತ್ತಿದ್ದಾರೆ. ಇದು ಕೇವಲ ನಿರಾಧಾರವಾದುದೆಂದೂ 'ಅಭಿಲಷಿತಾರ್ಥ ಚಿಂತಾಮಣಿ' ಯಲ್ಲಿ ಕರ್ನಾಟಕ ಸಂಗೀತದ ಹೆಸರಿಲ್ಲವೆಂದೂ ನಾನು ಈ ಮುನ್ನ ನನ್ನ ಬೇರೆ ಲೇಖನಗಳಲ್ಲೇ ಪ್ರತಿಪಾದಿಸಿದ್ದೇನೆ; ಆದಕಿನ್ನೂ ಸಾಕಷ್ಟು ಪ್ರಚಾರ ದೊರೆತಿಲ್ಲ.

ವಿಚಿತ್ರವೆಂದರೆ, ಕರ್ನಾಟಕಕ್ಕೂ ಕರ್ನಾಟಕ ಸಂಗೀತಕ್ಕೂ ಸಂಬಂಧವಿಲ್ಲ. ಆ ಸಂಗೀತದಲ್ಲಿ ಹಾಡುವ ಕೃತಿಗಳ ಭಾಷೆ ಕನ್ನಡವಲ್ಲ, ತೆಲುಗು. ಆ ಕ್ಷೇತ್ರದಲ್ಲಿ ಹೆಸರುವಾಸಿಯಾಗಿರುವವರು ಕನ್ನಡಿಗರಲ್ಲ, ತಮಿಳರು. ಆದರೆ ಹಿಂದುಸ್ತಾನೀ ಸಂಗೀತದ ವಿಚಾರ ಹಾಗಲ್ಲ. ಈಗ ಇಡಿಯ ಹಿಂದುಸ್ಥಾನದಲ್ಲಿಯೆ ಶ್ರೇಷ್ಠದರ್ಜೆಯ ಸಂಗೀತಗಾರರೆನಿಸಿಕೊಂಡವರ ಸಾಲಿನಲ್ಲಿ ಕನ್ನಡಿಗರ ಹೆಸರುಗಳೇ ಪ್ರಮುಖವಾಗಿವೆ. ಮಲ್ಲಿಕಾರ್ಜುನ ಮನಸೂರ, ಗಂಗೂಬಾಯಿ ಹಾನಗಲ್ಲ, ರಾಮರಾವ ನಾಯಕ, ಬಸವರಾಜ ರಾಜಗುರು, ಭೀಮಸೇನ ಜೋಶಿ, ಕುಮಾರ ಗಂಧರ್ವ (ನಿಜವಾದ ಹೆಸರು:ಶಿವಪುತ್ರಪ್ಪ ಕೊಂಕಾಳಿಮಠ), ದೇವೇಂದ್ರ ಮುರು

ಮೇಶ್ವರ, ಅರ್ಜುನಸಾ ನಾಕೋಡ, ದಿನಕರ ಕಾಯಿಕಿಣಿ, ಕೆ. ಜಿ. ಗಿಂಡೆ, ಎಸ್. ಸಿ. ಆರ್. ಭಟ್ಟ, ಎಂ.ಆರ್. ಗೌತಮ್, ಸಂಗಮೇಶ್ವರ ಗುರುವ, ಲಲಿತಾ ಜೆ.ರಾವ್, ಲಲಿತಾ ಉಭಯಂಕರ ಮುಂತಾಗಿ. ಇವರೆಲ್ಲ ಕರ್ನಾಟಕದಿಂದ ಹೊರಗೆ ದಿಲ್ಲಿ, ಕಲಕತ್ತಾ, ಮುಂಬಯಿ, ಬನಾರಸ, ಜಲಂಧರ ಎಂಬುದಾಗಿ ಎಲ್ಲೆಡೆಗೂ ಹೋಗಿ ಗಾಯನ, ವಾದನ ಕಾರ್ಯಕ್ರಮಗಳನ್ನು ಜರುಗಿಸಿ ಜನಮನ್ನಣೆಯನ್ನೂ ವಿದ್ವಜ್ಜನರ ಗೌರವಾದರಗಳನ್ನೂ ಸಂಪಾದಿಸಿಕೊಂಡು ಬರುತ್ತಿರುತ್ತಾರೆ. ಆದರೆ ಬೆಂಗಳೂರಿನಿಂದ ಕೇವಲ ಎರಡು ನೂರು ಮೈಲುದೂರದ ಮದರಾಸಿಗೆ ಹೋಗಿ ಕಚೇರಿ ಮಾಡಿಬರುವ ಕರ್ನಾಟಕ ಸಂಗೀತಗಾರರು ಒಬ್ಬಿಬ್ಬರು ಸಿಕ್ಕಬಹುದಷ್ಟೆ. ಅಷ್ಟರಿಂದ ಕರ್ನಾಟಕದ ಸಂಗೀತ ಹಿಂದುಸ್ತಾನಿಯೇ ಹೊರತು ಕರ್ನಾಟಕದ ಸಂಗೀತವಲ್ಲ.

ಕನ್ನಡನಾಡಿನಲ್ಲಿ ಹಿಂದುಸ್ತಾನೀ ಸಂಗೀತವನ್ನು ಪೋಷಿಸುವಲ್ಲಿ ವೀರಶೈವ ಮಠಗಳ ಪಾತ್ರ ಬಹು ಮಹತ್ವದ್ದು. ಪ್ರಾತಃಸ್ಮರಣೀಯರಾದ ಕೆಲ ಮಠಾಧೀಶರ ಹೆಸರುಗಳನ್ನು ಸಂಗೀತಗಾರರೂ ಸಂಗೀತಪ್ರೇಮಿಗಳೂ ಕೃತಜ್ಞತೆಯಿಂದ ನೆನೆಯಬೇಕು. ಅವರೆಂದರೆ ಹಾನಗಲ್ಲ ಕುಮಾರಸ್ವಾಮಿಗಳು, ಹಾವೇರಿಯ ಹುಕ್ಕೇರಿಮಠದ ಶಿವಬಸವ ಸ್ವಾಮಿಗಳು ಹಾಗೂ ಹುಬ್ಬಳ್ಳಿಯ ಸಿದ್ಧಾರೂಢ ಸ್ವಾಮಿಗಳು.

ಸಿದ್ಧಾರೂಢರ ಬಲಗೈಯಾಗಿ ಅವರ ಶಿಷ್ಯರೊಬ್ಬರು ಕಬೀರದಾಸರೆಂಬ ಮುಸಲ್ಮಾನ ಸಂತರು ಮಠದಲ್ಲಿದ್ದರು. ಮಠದಲ್ಲಿ ಈಗಲೂ ಅವರದೊಂದು ದೊಡ್ಡ ತೈಲಚಿತ್ರವಿದೆ. ಅದರಲ್ಲಿ ಅವರು ಜರತಾರೀ ನಿಲುವಂಗಿಯನ್ನು ಹಾಕಿಕೊಂಡು ತಲೆಗೆ ಮುತ್ತಿನ ಕಿರೀಟವನ್ನಿಟ್ಟುಕೊಂಡು ಕುಳಿತಿದ್ದಾರೆ. ಹಣೆಯ ಮೇಲೆ ವಿಭೂತಿಯಿದೆ. ಪಕ್ಕದಲ್ಲಿ ತಂಬೂರಿ ತಬಲಾಗಳಿವೆ. ಈ ಕಬೀರದಾಸರು ದೊಡ್ಡ ಸಂಗೀತಗಾರರಾಗಿದ್ದರೆಂದು ಪ್ರತೀತಿ. ಕರ್ನಾಟಕಕ್ಕೆ ಬಂದ ಯಾವುದೇ ಉತ್ತರಾದಿ ಸಂಗೀತಗಾರರೇ ಆಗಲಿ, ಮೊದಲು ಹುಬ್ಬಳ್ಳಿಗೆ ಬಂದು ಆರೂಢಪ್ಪನವರ ಸನ್ನಿಧಿಯಲ್ಲಿ ಹಾಡಿ, ಕಬೀರದಾಸರನ್ನು ಮೆಚ್ಚಿಸಿ, ಇಬ್ಬರ ಆಶೀರ್ವಾದಗಳನ್ನು ಪಡೆದು ಹೋಗುವ ವಾಡಿಕೆಯಿತ್ತು. ಆಗ ಮಹಾರಾಷ್ಟ್ರದ ಸುಪ್ರಸಿದ್ಧ ನಾಟಕ ಕಂಪನಿಗಳು ಧಾರವಾಡ, ಹುಬ್ಬಳ್ಳಿ, ಬೆಳಗಾವಿಗಳಲ್ಲದೆ ಮೈಸೂರು ಬೆಂಗಳೂರುಗಳ ವರೆಗೂ ಬಂದು ತಿಂಗಳುಗಟ್ಟಲೆ ವಾಸ್ತವ್ಯ ಮಾಡಿ ಮರಾಠೀ ನಾಟಕಗಳನ್ನಾಡುತ್ತಿದ್ದರು. ಆ ಕಂಪನಿಗಳಲ್ಲಿ ನಟರಾಗಿ ಇಲ್ಲವೆ ಸಂಗೀತನಿರ್ದೇಶಕರಾಗಿ ದೊಡ್ಡ ದೊಡ್ಡ ಹಿಂದೂಸ್ಥಾನೀ ಗಾಯಕರಿರುತ್ತಿದ್ದರು. ಅವರೆಲ್ಲ ತಪ್ಪದೆ ಹುಬ್ಬಳ್ಳಿಗೆ ಯಾತ್ರೆ ಮಾಡಿ, ಆರೂಢ ಸ್ವಾಮಿಗಳ ಪದತಲದಲ್ಲಿ ಸಂಗೀತಸೇವೆ ಸಲ್ಲಿಸಿ ಬರುತ್ತಿದ್ದರು.

ಅದಲ್ಲದೆ ಆಗ ಮೈಸೂರು ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಒಳ್ಳೆಯ ಸಂಗೀತದ ಅಭಿರುಚಿಯಿತ್ತು. ಆದುದರಿಂದ ಅವರು ಉತ್ತರ ಹಿಂದುಸ್ತಾನದ ಗಾಯಕ ವಾದಕರನ್ನು ತಮ್ಮ ವರ್ಧಂತಿ ಉತ್ಸವದ ಕಾಲಕ್ಕೆ ಹಾಗೂ ದಸರಾ ಹಬ್ಬದ ಸಂದರ್ಭಗಳಲ್ಲಿ ಪ್ರತಿವರ್ಷ ಮೈಸೂರಿಗೆ ಕರೆಸುತ್ತಿದ್ದರು. ಆ ಪಂಡಿತರೂ ಉಸ್ತಾದರೂ ಹೋಗುವಾಗ, ಬರುವಾಗ ಹುಬ್ಬಳ್ಳಿಗಿಳಿದು ಮಠದ ಅತಿಥಿಗಳಾಗಿ ನಾಲ್ಕಾರು ದಿನವಿದ್ದು, ಆರೂಢಪ್ಪನವರೂ ಕಬೀರದಾಸರೂ ಕೇಳಬೇಕೆಂದು ಮನಸ್ಸು ಮಾಡಿದಾಗ ಅವರ ಸಮ್ಮುಖದಲ್ಲಿ ಕುಳಿತು ಹಾಡುತ್ತಿದ್ದರು. ಹೀಗಾಗಿ ಧಾರವಾಡ-ಹುಬ್ಬಳ್ಳಿಯ ಜನಗಳಿಗೆ ಭಾರತದ ಘಟಾನುಘಟಿಗಳಾದ ಸಂಗೀತಗಾರರ ಗಾಯನ ಕೇಳುವ ಅವಕಾಶ ಸಿಕ್ಕುತ್ತಿತ್ತು. ಆ ಮಾಧುರ್ಯದ ಮೋಡಿಗೆ ಮರುಳಾಗಿ ಕೆಲವರು ಆ ಮುನ್ನ ಕರ್ನಾಟಕೀ ಸಂಗೀತ ಕಲಿತಿದ್ದವರು ಕೂಡಾ ಹಿಂದುಸ್ತಾನೀ ಕಲಿಯಬೇಕೆಂದು ಮನಸ್ಸು ಮಾಡಿದರು. ಕೆಲವರಿಗೆ ಸ್ವತಃ ಆ ಸಂಕಲ್ಪ ಮಾಡುವ ಶಕ್ತಿಯಿಲ್ಲದಿದ್ದಾಗ ಅವರ ಭಾಗ್ಯವಿಧಾತರಾದ ಮಠಾಧೀಶರು ಮಾರ್ಗದರ್ಶನ ಮಾಡಿದರು.

ಹಾನಗಲ್ಲ ಕುಮಾರಸ್ವಾಮಿಗಳು ಹಾನಗಲ್ಲು ಹತ್ತಿರದ ಕಾಡಶೆಟ್ಟಿಹಳ್ಳಿಯ ಇಬ್ಬರು ಅಂಧ ಬಾಲಕರನ್ನು ತಮ್ಮ ಆಶ್ರಯದಲ್ಲಿ ತೆಗೆದುಕೊಂಡು ಪೋಷಿಸಿದರು. ಅವರಲ್ಲಿ ಕಿರಿಯವನಾದ ಪಂಚಾಕ್ಷರಿಗೆ ಸಂಗೀತ ಶಿಕ್ಷಣ ಕೊಡಿಸಿದರು. ಅವರದು ಕರ್ನಾಟಕೀ. ಅದರಲ್ಲಿ ಅತ ಪರಿಣತಿಯನ್ನು ಪಡೆದ ಮೇಲೆ ಹಿಂದುಸ್ತಾನೀ ಸಂಗೀತ ಕಲಿಸಬೇಕೆಂದು ಶ್ರೀಗಳವರು ಸಂಕಲ್ಪ ಮಾಡಿದರು. ಆಗ ಆ ಕ್ಷೇತ್ರದಲ್ಲಿ ಘನವಿದ್ವಾಂಸರೆಂದು ಮನ್ನಣೆ ಪಡೆದಿದ್ದವರು ಗಾಯನಾಚಾರ್ಯ ಮಿರಜಿ ನೀಲಕಂಠಬುವಾ ಅವರು. ಅಲೂರಮಠ ಎಂದು ಅವರ ಅಡ್ಡ ಹೆಸರು. ಕುಮಾರಸ್ವಾಮಿಗಳು ಅವರನ್ನು ಪಟ್ಟದಕಲ್ಲಿನ ಬಳಿಯ ತಮ್ಮ ಶಿವಯೋಗ ಮಂದಿರ ಆಶ್ರಮಕ್ಕೆ ಕರೆಸಿದರು. ವರ್ಷೆರಡುವರ್ಷ ತಮ್ಮಲ್ಲಿರಿಸಿಕೊಂಡು ಪಂಚಾಕ್ಷರಿಯವರಿಗೆ ಸಂಗೀತ ಹೇಳಿಸಿದರು. ಅವರೇ ಮುಂದೆ ಪಂಚಾಕ್ಷರೀಬುವಾ ಎಂದು ನಾಡಿನಲ್ಲೆಲ್ಲ ಪ್ರಸಿದ್ಧರಾದರು.*

ಹಾನಗಲ್ಲ ಶ್ರೀಗಳವರ ಆದೇಶದಂತೆ ಪಂಚಾಕ್ಷರಿಬುವಾ ಅವರು ಕಲೆಗಾಗಿ, ಸಮಾಜದ ಸೇವೆಗಾಗಿ ತಮ್ಮ ಜೀವನವನ್ನು ಮೀಸಲಾಗಿರಿಸಿದರು. ವಿರಕ್ತರಾದ ಅವರು ಗದುಗಿನಲ್ಲಿ ವೀರೇಶ್ವರ ಆಶ್ರಮವನ್ನು ಸ್ಥಾಪಿಸಿ ಅಲ್ಲಿ ಶಿಷ್ಯರಿಗೆ ಅನ್ನ-ವಸ್ತ್ರ-ವಸತಿ

---

* ಪ್ರಥಮತಃ ಪಂಚಾಕ್ಷರಿಗವಾಯಿಗಳು ಶಿರಾಳಕೊಪ್ಪದ ಘನಸಂಗೀತ ವಿದ್ವಾಂಸರಾದ ಗದಿಗೆಯ್ಯನವರಲ್ಲಿ ಹಾನಗಲ್ಲು ಕುಮಾರಸ್ವಾಮಿಗಳವರ ಅಪ್ಪಣೆಮೇರೆಗೆ ಅಭ್ಯಾಸಮಾಡಿದರು. ಗದಿಗೆಯ್ಯನವರು ಸಮಕಾಲೀನ ಸಂಗೀತ ವಿದ್ವಾಂಸರಲ್ಲಿ ಪ್ರಖ್ಯಾತರು. ಇವರ ಪ್ರಖ್ಯಾತಿಯನ್ನು ಕೇಳಿ ತಂಜಾವೂರಿನ ಎಷ್ಟೋ ಜನ ಸಂಗೀತಗಾರರು ಶಿರಾಳಕೊಪ್ಪಕ್ಕೆ ಬಂದು, ಗದಿಗೆಯ್ಯನವರ ಶಿಷ್ಯತ್ವವಹಿಸಿ ಸಂಗೀತಾಭ್ಯಾಸ ಮಾಡಿದರೆಂದು ತಿಳಿದು ಬರುವುದು.

ಗಳನ್ನಿತ್ತು ಸಂಗೀತ ವಿದ್ಯಾದಾನವನ್ನು ಮಾಡತೊಡಗಿದರು. ಅದಕ್ಕೆಲ್ಲ ಹಣವೆಲ್ಲಿ? ಅಯ್ಯೋ, ಅದಕ್ಕೇನು! ಭಿಕ್ಷ ಎಂದರೆ ಲಕ್ಷ! ಪಂಚಾಕ್ಷರಿಬುವಾರವರು ಜಂಗಮರು. ಸಾತ್ವಿಕ ಶಿವಯೋಗಿಗಳು. ವರ್ಚಸ್ವೀ ಮುಖಮುದ್ರೆಯ ಭವ್ಯವ್ಯಕ್ತಿತ್ವದ ಭೀಮಭಿಕ್ಷುಕರು. ಅವರು ಜೋಳಿಗೆ ಹಿಡಿದುಕೊಂಡು ಗದುಗಿನ ಶ್ರೀಮಂತ ವ್ಯಾಪಾರಸ್ಥರ ಅಂಗಡಿಗಳಿಗೆ ಹೋಗಿ 'ಶಿವಶಿವಾ ಕೋರಾನ್ನ ಭಿಕ್ಷ!' ಎಂದು ಉಗ್ಘಡಿಸಿದಾಕ್ಷಣ ಜೋಳಿಗೆಯಲ್ಲಿ ಕೋರಾ ನೋಟುಗಳು ಬೀಳುತ್ತಿದ್ದುವು. ಅಂಗಡಿಯ ಮಾಲಕರಾದಿಯಾಗಿ ಕಾರಕೂನರೂ ಹಮಾಲರೂ ಪಾದಕ್ಕೆ ಬೀಳುತ್ತಿದ್ದರು. ಕೆಲ ಶ್ರೀಮಂತರು 'ಶಿವಾಯ ನಮಃ ನೀವು ಇಲ್ಲಿಯವರೆಗೆ ಪಾದ ಬೆಳೆಸುವ ಅಗತ್ಯವಿರಲಿಲ್ಲ. ನಮ್ಮನ್ನೇ ಆಶ್ರಮಕ್ಕೆ ಕರೆಸಿಕೊಂಡು ಅಪ್ಪಣೆ ಮಾಡಬಹುದಿತ್ತು. ಸರಿ, ಈಗಲಾದರೂ ಏನಾಯಿತು. ತಾವು ದಯಮಾಡಿಸಿ; ತಮ್ಮ ಬೆನ್ನಿಗೇನೇ ಎರಡು ಚೀಲ ಜೋಳ ಕಳಿಸುತ್ತೇವೆ ಆಶ್ರಮಕ್ಕೆ' ಎಂದು ಸಾಷ್ಟಾಂಗವೆರಗುತ್ತಿದ್ದರು.

ಪಂಚಾಕ್ಷರ ಗವಾಯಿಗಳು ತಮ್ಮ ಅಂಗಡಿಗೆ ಕಾಲಿಟ್ಟರೆ ತಮಗೆ ವಿಪುಲ ಲಾಭದಾಯಕವಾದ ವ್ಯಾಪಾರವಾಗುವುದೆಂದು ಅಂಗಡಿಕಾರರ ನಂಬುಗೆಯಾಗಿತ್ತು. ಅದು ಅಲ್ಲದೆ ಗವಾಯಿಗಳು ನಿಸ್ಪೃಹರಾಗಿ ಶಿಷ್ಯರಿಗೆ ಸಂಗೀತವಿದ್ಯಾದಾನ ಮಾಡುತ್ತಿರುವುದರಿಂದ ಅವರ ಆಶ್ರಮಕ್ಕೆ ಸರ್ವವಿಧದ ಸಹಾಯವನ್ನು ಮಾಡುವುದು ತಮ್ಮ ಕರ್ತವ್ಯವೆಂದು ಊರಿನ ಶ್ರೀಮಂತರೆಲ್ಲ ತಿಳಿದಿದ್ದರು. ಶಿಷ್ಯವರ್ಗದ ಮೇಲೆ ಬಹಳ ಕಟ್ಟುನಿಟ್ಟಾಗಿ ಪಂಚಾಕ್ಷರಿ ಬುವಾ ಅವರು ಹೇರಿದ್ದ ಶಿಸ್ತನ್ನು, ಕಠಿಣ ಅಭ್ಯಾಸ ಕ್ರಮವನ್ನು ಊರವರು ಮೆಚ್ಚಿದ್ದರು. ಅಲ್ಲದೆ ಸ್ವತಃ ನಿಷ್ಠೆಯಿಂದ ಮಾಡುತ್ತಿದ್ದ ಲಿಂಗಪೂಜೆ, ಜಪತಪಾನುಷ್ಠಾನಗಳಿಂದಾಗಿ ಅವರ ವಿಷಯದಲ್ಲಿ ಭಯ ಭಕ್ತಿಗಳನ್ನು ತಳೆದಿದ್ದರು.

ಪಂಚಾಕ್ಷರಿಬುವಾ ಅವರ ಆಶ್ರಮದಲ್ಲಿ ಗಾಯನವಲ್ಲದೆ, ವಾದನ ವಿದ್ಯೆಯನ್ನು ಕಲಿಸುವ ಏರ್ಪಾಟೂ ಇದ್ದಿತು. ಪಿಟೀಲು, ಹಾರ್ಮೋನಿಯಂ, ಕೊಳಲು, ಸಾರಂಗೀ. ತಬಲಾ ವಾದ್ಯಗಳಲ್ಲದೆ ಶಹನಾಯಿ ನುಡಿಸುವುದನ್ನೂ ಕಲಿಸಲಾಗುತ್ತಿತ್ತು.

ಶಹನಾಯಿ ಅಥವಾ ಸನಾದಿಯನ್ನು ಕಲಿಯುವ ಶಿಷ್ಯರು ಸಾಮಾನ್ಯವಾಗಿ ಕೊರಗರು. ಇನ್ನು ಇತರ ವಾದ್ಯಗಳನ್ನು ಮತ್ತು ಗಾಯನವನ್ನು ಅಭ್ಯಸಿಸುವ ವಿದ್ಯಾರ್ಥಿಗಳು ಕೆಲವರು ಬ್ರಾಹ್ಮಣರೂ ಇದ್ದರು. ಅಲ್ಲದೆ ಕೀಳುಜಾತಿ ಎಂದು ಮೂರ್ಖರಿಂದ ಹೇಳಲ್ಪಡುವ ವರ್ಗದವರೂ ಇದ್ದರು. ಆದರೆ ಪಂಚಾಕ್ಷರಿಬುವಾ ಅವರು ತಮ್ಮ ಶಿಷ್ಯರಲ್ಲಿ ಜಾತಿಭೇದವನ್ನು ಎಣಿಸುತ್ತಿರಲಿಲ್ಲ.ಅವರೆಲ್ಲರೂ ಆಶ್ರಮದ ದಾಸೋಹದ ಪ್ರಸಾದವನ್ನೇ ಸ್ವೀಕರಿಸಬೇಕು; ಬ್ರಾಹ್ಮಣ,ಲಿಂಗಾಯತ,ಶೂದ್ರ ಎಂಬ ಭೇದವಿಲ್ಲ. ಶಿಷ್ಯರೆಲ್ಲರೂ ಒಂದೇ ಪಙ್ಕ್ತಿಯಲ್ಲಿ ಕುಳಿತು ಊಟಮಾಡಬೇಕೆಂದು ವಿಧಿಸಿದ್ದರು. ಆದರೆ ಯಾರಾದರೂ ಬ್ರಾಹ್ಮಣ ವಿದ್ಯಾರ್ಥಿಗಳು ಪರಪಾಕ ವ್ರತ ಹಿಡಿದಿದ್ದರೆ ಅಂತಹವರಿಗೆ ಆಶ್ರಮದ ಪಡಿಪದಾರ್ಥಗಳನ್ನು ಕೊಡಲಾಗುತ್ತಿತ್ತು. ಅವರು ಆಶ್ರಮದ ಅಡುಗೆ ಮನೆಯಲ್ಲಿಯೇ ಸ್ವತಃ ಅಟ್ಟುಣಬಹುದೆಂಬ ಸವಲತ್ತನ್ನು ನಿಡಲಾಗಿತ್ತು.

ಐವತ್ತು ವರ್ಷಗಳ ಹಿಂದೆ ನಮ್ಮ ನಾಡಿನಲ್ಲಿ ಜಾತೀಯತೆ ತಾನೇ ತಾನಾಗಿತ್ತು ಆ ಕಾಲದಲ್ಲಿ ಬ್ರಾಹ್ಮಣರೂ ಶೂದ್ರರೂ ಒಂದೇ ಪಙ್ತಯಲ್ಲಿ ಕುಳಿತು ಊಟ ಮಾಡುವುದೆಂದರೆ ಕಲ್ಪನಾತೀತವಾಗಿತ್ತು. ಅದನ್ನು ಪಂಚಾಕ್ಷರಿಬುವಾ ಅವರು ವೀರೇಶ್ವರ ಆಶ್ರಮದಲ್ಲಿ ಸಾಧ್ಯ ಮಾಡಿತೋರಿಸಿದ್ದರು.

ಪಂಚಾಕ್ಷರಿ ಗವಾಯಿಗಳ ಶಿಷ್ಯರನೇಕರು ಸುಪ್ರಸಿದ್ಧರಾಗಿ ಕನ್ನಡ ನಾಡಿನ ಒಳಗೂ ಹೊರಗೂ ಗಾಯನ ಕಾರ್ಯಕ್ರಮಗಳನ್ನು ನಡೆಸುತ್ತಿದ್ದಾರೆ. ಪ್ರಮುಖರು ಪುಟ್ಟರಾಜ ಗವಾಯಿಗಳು, ಬಸವರಾಜ ರಾಜಗುರು, ಕರೂರ ಗುರುಬಸವಾರ್ಯ ಹಿರೇಮಠ, ಮೃತ್ಯುಂಜಯಸ್ವಾಮಿ ಪುರಾಣಿಕಮಠ, ಅರ್ಜುನಸಾ ನಾಕೋಡ, ಕಣೇಕಲ್ಲ ಆಚಾರ್ಯರು, ಬಸವಣ್ಣಪ್ಪ ಹೊಸಪೇಟೆ, ಶೇಷಾದ್ರಿ ಗವಾಯಿ ಮುಂತಾದವರು.

ಬುವಾ ಅವರು ಆಶ್ರಮದ ಖರ್ಚನ್ನು ನಿಭಾಯಿಸಲು ತಮ್ಮ ಶಿಷ್ಯರದೇ ಒಂದು ನಾಟಕ ಕಂಪನಿಯನ್ನು ಪ್ರಾರಂಭಿಸಿದ್ದರು.ಅದು ಈಗಲೂ ನಡೆಯುತ್ತಿದೆ. ಪ್ರತಿವರ್ಷ ಪಂಚಾಕ್ಷರಿಬುವಾಪುಣ್ಯತಿಥಿಯಂದು ನಾಟಕದ ಬದಲಿಗೆ ರಾತ್ರಿಯಿಡೀ ಸಂಗೀತ ಕಾರ್ಯಕ್ರಮಗಳನ್ನಿಟ್ಟುಕೊಂಡಿರುತ್ತಾರೆ. ಅಂದು ಕಂಪನಿಯ ಕ್ಯಾಂಪು ಎಲ್ಲಿದ್ದರೂ ಅಲ್ಲಿಗೆ ಪ್ರಮುಖ ಶಿಷ್ಯರೂ ಇತರ ಸಂಗೀತಗಾರರೂ ಹೋಗಿ ಆ ಸಂಗೀತೋತ್ಸವದಲ್ಲಿ ಭಾಗವಹಿಸಿ ಗವಾಯಿಗಳಿಗೆ ಶ್ರದ್ಧಾಂಜಲಿಯನ್ನರ್ಪಿಸಿ ಬರುತ್ತಾರೆ.

ಪಂಚಾಕ್ಷರಿಬುವಾ ಅವರು ಮೊದಲು ಕರ್ನಾಟಕೀ ಸಂಗೀತ ಕಲಿತು ಆಮೇಲೆ ಹಿಂದುಸ್ತಾನೀ ಮಟ್ಟಕ್ಕೇರಿದರು. ಇಂದು ಹಿಂದುಸ್ತಾನೀ ಗಾಯನದ ನಾಯಕಮಣಿ ಎನ್ನಿಸಿಕೊಂಡಿರುವ ಮಲ್ಲಿಕಾರ್ಜುನ ಮನಸೂರರೂ ಮೊದಲು ಕಲಿತುದು ಕರ್ನಾಟಕೀಯನ್ನೇ. ಅವರು ಚಿಕ್ಕವರಾಗಿದ್ದಾಗ ಅವರ ಮನೆಯಲ್ಲಿ ಉದಾರಾಶ್ರಯ ಪಡೆದಿದ್ದ ರಬಕವಿ ಅಪ್ಪಣ್ಣನವರೆಂಬ ಒಬ್ಬ ವಿದ್ವಾಂಸರಿದ್ದರು. ಅವರಿಂದ ಮಲ್ಲಿಕಾರ್ಜುನರಿಗೂ ಅವರ ಅಣ್ಣಂದಿರಾದ ಬಸವರಾಜ ಮನಸೂರರಿಗೂ ಕರ್ನಾಟಕೀ ಸಂಗೀತದ ದೀಕ್ಷೆದೊರೆಯಿತು. ಬಸವರಾಜ ಮನಸೂರಿನಿಂದ ಧಾರವಾಡಕ್ಕೆ ವಿದ್ಯಾಭ್ಯಾಸಕ್ಕೆಂದು ಹೊದವರು ವಾಮನರಾವ ಮಾಸ್ತರರ

ನಾಟಕ ಕಂಪನಿಯನ್ನು ಸೇರಿದರು. ಬಣ್ಣದ ಬದುಕಿಗೆ ಮರುಳಾದ ಮಲ್ಲಿಕಾರ್ಜುನರೂ ಮನೆಯಿಂದ ಓಡಿ ಹೋಗಿ ಅದೇ ಕಂಪನಿಯಲ್ಲೇ ಬಾಲನಟರಾಗಿ ಸೇರಿದರು. ಆಗ ಅವರಿಗೆ ಎಂಟು ವರುಷ. ಅಣ್ಣ ತಮ್ಮಂದಿರಿಬ್ಬರಿಗೂ ವಾಮನ ರಾಯರೇ ಗುರುಗಳಾಗಿ ಹಿಂದುಸ್ತಾನೀ ಪದ್ಧತಿಯ ನಾಟ್ಯಸಂಗೀತವನ್ನು ಕಲಿಸಿದರು.

ವಾಮನರಾಯರ ನಾಟಕ ಕಂಪನಿ ಅಥಣಿಯಲ್ಲಿ ಬೀಡು ಬಿಟ್ಟಿದ್ದಾಗ ಒಂದುದಿನ ಕಂಪನಿಯ ನಟವರ್ಗವೆಲ್ಲ ಅಥಣಿಯ ಶಿವಯೋಗಿಗಳ ದರ್ಶನ ಪಡೆಯಲು ಮಠಕ್ಕೆ ಹೋಯಿತು. ವಾಮನರಾಯರನ್ನೂ ಇತರ ನಟ–ನಟಿಯರನ್ನೂ ಆಶೀರ್ವದಿಸಿದ ಶ್ರೀಗಳವರು ಮಲ್ಲೇಶಿ (ಮಲ್ಲಿಕಾರ್ಜುನ) ಕಾಲಿಗೆ ಬಿದ್ದಾಗ ಹಿಡಿದೆತ್ತಿ ಕ್ಷಣಕಾಲ ಬಾಲಕನ ಮುಖಲಕ್ಷಣವನ್ನು ನಿರುಕಿಸಿದರು. ಅನಂತರ 'ದೊಡ್ಡವನಾಗು' ಎಂದು ಆಶೀರ್ವದಿಸಿ ಉತ್ತತ್ತಿಯ ಪ್ರಸಾದಕೊಟ್ಟರು.

ಇತ್ತ ಹಾವೇರಿಯ ಹುಕ್ಕೇರಿಮಠದ ಶಿವಬಸವಸ್ವಾಮಿಗಳು ಮಿರ್ಜಿ ನೀಲಕಂಠಬುವಾ ಅವರಿಗೆ ಹೇಳಿಕಳಿಸಿದ್ದರು. ಎಳೆಯತನದಲ್ಲಿ ಗೆಳೆಯರಾಗಿ ಇಬ್ಬರು ಒಂದೇ ಮಠದಲ್ಲಿ ಅಧ್ಯಯನ ಮಾಡಿದ್ದವರು; ನದೀಸ್ನಾನ ಇಲ್ಲವೆ ಬಾವಿಯ ಜಳಕದ ವೇಳೆಗೆ ಈಜಾಟದ ಸ್ಪರ್ಧೆಯಲ್ಲಿ ಒಬ್ಬರನ್ನೊಬ್ಬರು ಸೋಲಿಸುತ್ತ ಪರಸ್ಪರ ಪರಾಕ್ರಮವನ್ನು ಮೆಚ್ಚುತ್ತ ಓದಿನಲ್ಲಿ ಒಬ್ಬರೊಬ್ಬರು ಸಹಕಾರಿಯಾಗಿ ಒಟ್ಟಿಗೆ ಬೆಳೆದವರು. ಮುಂದೆ ನೀಲಕಂಠಬುವಾ ಸಂಗೀತ ಕಲಿತು ಸಂಸಾರಿಯಾದರು; ಶಿವಬಸವಸ್ವಾಮಿಗಳು ವಿರಕ್ತರಾಗಿ ಮಠಾಧೀಶರಾದರು. ಸ್ವಾಮಿಗಳು ಬಾಲಕ ಮಲ್ಲೇಶಿಯನ್ನು ಕಂಡಿರಲಿಲ್ಲ. ಆದರೆ ಅವನ ಕೀರ್ತಿಯನ್ನು ಕೇಳಿದ್ದರು. ತನ್ನ ಎಂಟೊಂಬತ್ತನೆಯ ವಯಸ್ಸಿನಲ್ಲಿಯೇ ಹೆಸರಾಂತ ನಟನಾಗಿರುವನೆಂದೂ ಅವನ ಗಾಯನ ಕೇಳಲೆಂದೇ ಜನರು ದೂರ ದೂರುಗಳಿಂದ ಚಕ್ಕಡಿ ಕಟ್ಟಿಸಿಕೊಂಡು ನಾಟಕ ನೋಡಲು ಬರುತ್ತಿರುವರೆಂದೂ ಶಿವಬಸವ ಸ್ವಾಮಿಗಳಿಗೆ ವರದಿ ಬಂದಿತ್ತು. ಅಂತೆಯೇ ನೀಲಕಂಠಬುವಾ ಅವರು ಬಂದು ಕಂಡಾಗ ಶ್ರೀಗಳವರು ಅವರೊಂದಿಗೆ ಈ ಬಾಲನಟನ ವಿಚಾರವನ್ನೇ ಮಾತನಾಡಿದರು. ಅವನನ್ನು ನಾಟಕ ಕಂಪನಿಯಿಂದ ಬಿಡಿಸಿಕೊಂಡು ನಿನ್ನೊಡನೆ ಮಿರಜಿಗೆ ಕರೆದುಕೊಂಡು ಹೋಗು; ಅವನಿಗೆ ಸಂಗೀತ ಕಲಿಸು; ಇಡೀ ದೇಶದಲ್ಲಿಯೇ ಅದ್ವಿತೀಯ ಗಾಯಕನಾಗಿ ಬೆಳೆಯುತ್ತಾನವನು, ಎಂದು ಒಡನುಡಿದರು.

ಹುಕ್ಕೇರಿ ಮಠಾಧೀಶರ ಈ ಭವಿಷ್ಯವನ್ನು ನಿಜಮಾಡಲಿರುವ ತನ್ನ ಶಿಷ್ಯನನ್ನು ಹುಡುಕುತ್ತ ಹೊರಟರು ನೀಲಕಂಠ ಬುವಾ; ವಾಮನರಾಯರ ನಾಟಕ ಕಂಪನಿ ಬಾಗಲಕೋಟೆಯಲ್ಲಿ ಕ್ಯಾಂಪ್ ಮಾಡಿದ್ದ ಸಂಗತಿ ತಿಳಿದು ಅಲ್ಲಿಗೇ ಹೋದರು. ಕಂಪನಿಯಲ್ಲಿ ಬುವಾ ಅವರ ಶಿಷ್ಯನಾದ ಪಾಂಡೋಬಾ ಪವಾರ ಹಾರ್ಮೋನಿಯಂ ಮಾಸ್ತರನಾಗಿದ್ದ. ಅವನು ಗುರುಗಳನ್ನು ಸಂತೋಷದಿಂದ ಇದಿರ್ಗೊಂಡು ಕಂಪನೀ ಮಾಲಿಕರ ಭೇಟಿ ಮಾಡಿಸಿದ. ನೀಲಕಂಠಬುವಾರಂತಹ ಸಂಗೀತ ದಿಗ್ಗಜ ತಮ್ಮನ್ನು ಕಾಣಲು ಬಂದುದಕ್ಕಾಗಿ ವಾಮನರಾಯರು ಅಭಿಮಾನಪಟ್ಟುಕೊಂಡರು. ಆದರೆ ಗಾಯನಾಚಾರ್ಯರ ಉದ್ದೇಶ ತಿಳಿದು ಹುಬ್ಬುಗಂಟಿಕ್ಕಿದರು. ತಮ್ಮ ಕಂಪನಿಯ ಮುಖ್ಯ ಆಕರ್ಷಣ ಶಕ್ತಿಯಾದ ಮಲ್ಲೇಶಿಯನ್ನು ಬಿಟ್ಟು ಕೊಡಲು ಅವರೆಂದೂ ಒಪ್ಪಲಿಲ್ಲ. ಆದರೆ ಅಣ್ಣ ಬಸವರಾಜ ಮನಸೂರರು ಮಲ್ಲಿಕಾರ್ಜುನನ ಭವಿಷ್ಯವನ್ನು ಅತ್ಯಂತ ಉಜ್ವಲಗೊಳಿಸಬಹುದಾದ ಇಂತಹ ಅವಕಾಶವನ್ನು ಕಳೆದುಕೊಳ್ಳಲು ಸಿದ್ಧರಿರಲಿಲ್ಲ. ಶಿವಬಸವ ಸ್ವಾಮಿಗಳ ಆದೇಶದಂತೆ ಬುವಾ ಬಂದಿರುವರೆಂಬ ಸಂಗತಿ ಅವರಿಗೊಂದು ದೈವ ಸಂಕೇತವೆಂದೇ ತೋರಿತು. ಅಲ್ಲದೆ ಅಥಣಿಯ ಶಿವಯೋಗಿಗಳ ಆಶೀರ್ವಚನವೂ ಅವರ ಕಿವಿಯಲ್ಲಿನ್ನೂ ಮಾರ್ದನಿಗೊಳ್ಳುತ್ತಲಿತ್ತು. ಅದಕ್ಕಾಗಿ ತಮ್ಮನನ್ನು ಮಿರಜಿಗೆ ಕಳಿಸಲೇಬೇಕೆಂದು ಹಟ ಹಿಡಿದರು. ಮಾಲಿಕರಿಗೆ ರೇಗಿತು, 'ಹಂಗಾದರೆ ನೀನೂ ನನ್ನ ಕಂಪನ್ಯಾಗ ಇರಬ್ಯಾಡ ಹೊಗಲೇ!' ಎಂದು ಗುಡುಗಿದರು. ಬಸವರಾಜರು ನೌಕರಿ ಕಳೆದುಕೊಂಡು ಮನಸೂರಿಗೆ ಮರಳಿದರು. ಮಲ್ಲಿಕಾರ್ಜುನ ಗುರುವಿನೊಂದಿಗೆ ಮಿರಜಿಗೆ ನಡೆದ. ದೂರದ ಆ ಊರಿಗೆ ಹೊರಡುವ ಸಂಗತಿ ತಿಳಿದು ತಂದೆ ಭೀಮರಾಯಪ್ಪ ಗೌಡರು ಮಲ್ಲೇಶಿಯನ್ನು ಮೊದಲು ಹುಬ್ಬಳ್ಳಿಗೆ ಕರೆದುಕೊಂಡು ಹೋಗಿ ಸ್ವಾಮಿ ಸಿದ್ಧಾರೂಢರ ಪಾದದ ಮೇಲೆ ಹಾಕಿ ಆ ಮೇಲೆ ಕಳಿಸಿಕೊಟ್ಟರು.

ನೀಲಕಂಠಬುವಾ ಅವರ ಮನೆಯ ಮಗನಾಗಿ ಬೆಳೆದು, ಶಿಷ್ಯನಾಗಿ ಸಂಗೀತಸಾಧನೆಯಲ್ಲಿ ಪರಿಣತಿ ಪಡೆದು ಕೆಲವರ್ಷಗಳಲ್ಲಿಯೇ ವಾಮನರಾಯರ ನಾಟಕದ ಮಲ್ಲೇಶಿ ಸಂಗೀತರತ್ನ ಮಲ್ಲಿಕಾರ್ಜುನ ಮನಸೂರರೆಂದು ಕರ್ನಾಟಕ ಹಾಗೂ ಮಹಾರಾಷ್ಟ್ರದಲ್ಲಿ ಪ್ರಸಿದ್ಧರಾದರು. ಮುಂಬಯಿಯ ಎಚ್.ಎಂ.ವಿ. ಮನಸೂರರ ಗ್ರಾಮೊಫೋನ್ ರೆಕಾರ್ಡುಗಳನ್ನು ಮಾಡಿತು. ಆಲ್ ಇಂಡಿಯಾ ರೇಡಿಯೋ ಇವರ ಗಾಯನವನ್ನು ಬಿತ್ತರಿಸತೊಡಗಿತು. ಇವರ ಕಾರ್ಯಕ್ರಮವಿದ್ದಾಗಲೆಲ್ಲ ಕಾಯ್ದುಕೊಂಡಿದ್ದು ರೇಡಿಯೋ ಹಚ್ಚಿ, ಆರಂಭವಾದ ಕೂಡಲೇ ವಾಮನರಾವ ಮಾಸ್ತರರು ಅಡುಗೆ ಮನೆಗೆ ಓಡಿ, ತಮ್ಮ ಹೆಂಡತಿಗೆ 'ನಿನ್ನ ಮಗಾ ಹಾಡತಾಯಿದ್ದಾನ ಕೇಳಬಾರ್ದss ಅಲ್ಲೇನು ಮಾಡತಿದ್ದೀ ಒಲಿ ಮುಂದೆ ಕೂತುಗೊಂಡು' ಎಂದು ಹೇಳಿ ರೇಡಿಯೋದ ಬಳಿಗೆ ಕರೆತರುತ್ತಿದ್ದರು.

ಸಂಗೀತಗಾರರೆಂದು ಪ್ರಸಿದ್ಧರಾದ ಮೇಲೂ ಮನಸೂರರು ನಾಟಕ ಕಂಪನಿಯ ಸಂಪರ್ಕವನ್ನು ಕಳೆದುಕೊಳ್ಳಲಿಲ್ಲ. ಯರಾಶಿ ಭರಮಪ್ಪನವರ 'ವಾಣೀವಿಲಾಸ ಸಂಗೀತ ನಾಟಕ ಮಂಡಳಿ'ಯಲ್ಲಿ ನಟರಾಗಿ ಸೇರಿದರು. ಅಲ್ಲಿಯೂ ತಮ್ಮ ಸಂಗೀತಾ

ಭ್ಯಾಸವನ್ನು ಮುಂದುವರೆಯಿಸಬೇಕೆಂದು ಬಯಸಿ, ಮಿರಜಿಯಿಂದ ಗುರುಗಳನ್ನು ನಾಟಕ ಕಂಪನಿಗೇ ಕರೆಸಿಕೊಂಡರು. ರಾತ್ರಿ ನಾಟಕಗಳಲ್ಲಿ ಪಾರ್ಟು ಮಾಡುವುದಕ್ಕಾಗಿ ಮನಸೂರರಿಗೆ ಸಂಬಳ ಕೊಡುವುದಲ್ಲದೆ ಹಗಲು ಇವರಿಗೆ ಸಂಗೀತ ಕಲಿಸುವುದಕ್ಕಾಗಿ ನೀಲಕಂಠಬುವಾ ಅವರಿಗೂ ಕಂಪನಿ ಮಾಲಕ ಭರಮಪ್ಪನವರೇ ಸಂಬಳ ಕೊಡುತ್ತಿದ್ದರು. ಆ ಮೇಲೆ ಬುವಾ ಅವರನ್ನು ಗುಬ್ಬಿ ವೀರಣ್ಣನವರು ತಮ್ಮ ಕಂಪನಿಗೆ ಕರೆಸಿಕೊಂಡು ಮಕ್ಕಳಾದ ಶ್ರೀಮತಿ ಮಾಲತಮ್ಮ ಮತ್ತು ಸ್ವರ್ಣಮ್ಮನವರಿಗೆ ಹಿಂದುಸ್ತಾನೀ ಸಂಗೀತ ಪಾಠ ಹೇಳಿಸಿದರು. ಅದೇ ವೇಳೆಗೆ ಕಂಪನಿಯಲ್ಲಿದ್ದ ಮರೋಳ ನೀಲಪ್ಪ ಮಾಸ್ತರರು ಶ್ರೀಮತಿ ಬಿ. ಜಯಮ್ಮನವರಿಗೆ ಹಿಂದುಸ್ತಾನೀ ಗಾಯನ ಕಲಿಸಿದರು. ವೀರಣ್ಣನವರ 'ಸುಭದ್ರಾ' ಚಿತ್ರಕ್ಕೆ ಜಯಮ್ಮನವರೇ ನಾಯಿಕೆ,ಮಲ್ಲಿಕಾರ್ಜುನ ಮನಸೂರರು ಸಂಗೀತನಿರ್ದೇಶಕರು.

ಮುಂದೆ ಮನಸೂರರು ಮುಂಬೈಗೆ ಹೋಗಿ ಉಸ್ತಾದ್ ಮಂಜೀಖಾನ ಹಾಗೂ ಉಸ್ತಾದ್ ಬುರಜೀಖಾನಸಾಹೇಬರಲ್ಲಿ ಉಚ್ಚ ಶಿಕ್ಷಣ ಪಡೆದು ಬಂದರು. ಧಾರವಾಡದಲ್ಲಿಯೇ ನೆಲೆಸಿದರು. ಆಗ ಅವರಿಗೆ ಪ್ರೊ॥ ಬಸವನಾಳ ಶಿವಲಿಂಗಪ್ಪನವರ ಮಾರ್ಗದರ್ಶನದಿಂದಾಗಿ ವಚನ ಸಾಹಿತ್ಯದ ಸೊಗಸಿನ ಅರಿವುಂಟಾಯಿತು.ಹೊಸಹೊಸದಾಗಿ ವಚನಗಳಿಗೆ ಸ್ವರಪ್ರಸ್ತಾರ ಹಾಕಿ, ಆಗಾಗ ಧಾರವಾಡದಲ್ಲಿರುವ ಮುರುಘಾಮಠದ ಮೃತ್ಯುಂಜಯ ಅಪ್ಪಗಳ ಸನ್ನಿಧಿಯಲ್ಲಿ ಕುಳಿತು ಹಾಡಿಬರತೊಡಗಿದರು. ವಚನ ಗಾಯನದ ನೇತೃತ್ವವನ್ನು ಮನಸೂರರು ವಹಿಸಿಕೊಂಡಮೇಲೆ ಆ ಸಂಗೀತರೂಪಕ್ಕೆ ತಕ್ಕ ಸ್ಥಾನಮಾನಗಳು ದೊರೆತುವು. ಈಗೀಗ ಆಕಾಶವಾಣಿಯ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಕೂಡಾ ವಚನಗಳು ಕೇಳಿಬರುತ್ತಿವೆ.

ಮನಸೂರರ ಶಿಷ್ಯರಲ್ಲಿ ಸಿದ್ಧರಾಮ ಜಂಬಲದಿನ್ನಿ ಮತ್ತು ಪಂಚಾಕ್ಷರಸ್ವಾಮಿ ಮತ್ತೀಗಟ್ಟಿ ಅವರು ಪ್ರಸಿದ್ಧರಾಗಿದ್ದಾರೆ. ಅಳಿಯನೂ ಶಿಷ್ಯನೂ ಆದ ಅಜ್ಜಣ್ಣ ಪಾಟೀಲ ಅವರು ಕರ್ನಾಟಕ ಕಾಲೇಜಿನಲ್ಲಿ ಸಂಗೀತ ಪ್ರಾಧ್ಯಾಪಕರಾಗಿದ್ದಾರೆ. ಸ್ವತಃ ಮನಸೂರರು ಕರ್ನಾಟಕ ವಿಶ್ವವಿದ್ಯಾಲಯವು ನಡೆಸುತ್ತಿರುವ ಸಂಗೀತಶಾಲೆಯ ಡೈರೆಕ್ಟರರಾಗಿ ಕೆಲಸ ಮಾಡುತ್ತಿದ್ದಾರೆ. ಭಾರತೀಯ ಸಂಗೀತದ ಉಜ್ವಲ ಪರಂಪರೆಯನ್ನು ತಮ್ಮ ವಿದ್ಯಾರ್ಥಿಗಳ ಮೂಲಕ ಮುಂದುವರೆಯಿಸುವ ಹೋರಾಟದಲ್ಲಿ ತೊಡಗಿದ್ದಾರೆ. ಅವರಿಗೆ ಯಶ ದೊರೆಯಬಹುದೆ? ಒಂದು ಕಡೆಯಿಂದ ಸಿನಿಮಾ ಸಂಗೀತದ ಹಾವಳಿ, ಇನ್ನೊಂದೆಡೆಯಿಂದ ಜಾನಪದ ಕಲೆಗಳ ದಾಳಿ! ಸರಕಾರ, ಅಕೆಡಮಿಗಳು, ಸಾಹಿತ್ಯ ಪರಿಷತ್ತು ಮತ್ತು ವಿಶ್ವವಿದ್ಯಾಲಯಗಳು ಜಾನಪದ ಜಾನಪದ ಎಂದು ಹುಚ್ಚೆದ್ದು ಕುಣಿಯುತ್ತಿರುವಾಗ ಶಾಸ್ತ್ರೀಯ ಸಂಗೀತ ತತ್ತರಿಸಿ ತಲ್ಲಣಿಸತೊಡಗಿದೆ. ಎಪ್ಪತ್ತೈದು ವರ್ಷಗಳ ಹಿಂದೆ ಒರತೆಯ ನೀರಿನಂತೆ ಆರಂಭವಾದ ವೀರಶೈವರ ಕೊಡುಗೆ ನಲವತ್ತು ವರ್ಷಗಳ ಹಿಂದೆ ತುಂಬು ಪ್ರವಾಹವಾಗಿ ಭಾರತೀಯ ಸಂಗೀತವನ್ನು ಪೋಷಿಸಿತು. ಅದೀಗ ಕ್ಷೀಣವಾಗಿ ಬತ್ತಿಹೋಗುವ ಅವಲಕ್ಷಣಗಳು ಕಾಣತೊಡಗಿವೆ. ಮತ್ತೀಗ ವೀರಶೈವ ಮಠಾಧೀಶರು ಶಾಸ್ತ್ರೀಯ ಸಂಗೀತದ ಕಡೆಗೆ ಗಮನ ಕೊಡಬೇಕಾದ ಕಾಲವೊದಗಿಬಂದಿದೆ. ಇನ್ನು ಮುಂದೆ ಸಂಗೀತ ಕಚೇರಿಗಳಲ್ಲಿ ರಾಗಭಾವ ಕಡಿಮೆಯಾಗಿ ಸಾಹಿತ್ಯ ಭಾವ ಹೆಚ್ಚಾಗಬೇಕಾದುದು ಅನಿವಾರ್ಯ. ಏಕೆಂದರೆ ರಾಗಭಾವವನ್ನು ಅನುಭವಿಸಿ ಆನಂದಿಸುವ ನೆಮ್ಮದಿಯ ಮನೋಭಾವ ಗಾನರಸಿಕರಲ್ಲಿ ಇತ್ತೀಚೆಗೆ ಕಡಿಮೆಯಾಗತೊಡಗಿದೆ. ಆದ ಕಾರಣ, ಬ್ರಿಜಭಾಷೆಯ (ಹಿಂದೀ) ಚೀಜುಗಳ ಸ್ಥಾನವನ್ನೀಗ ವಚನಗಳು ಆಕ್ರಮಿಸಬೇಕಾಗಿದೆ. ಅಂತಹ ಶಾಸ್ತ್ರೀಯ ಖಯಾಲ ಪದ್ಧತಿಯ ವಚನಗಾಯನವನ್ನು ನಮ್ಮ ಸ್ವಾಮಿಗಳು ಪೋಷಿಸಿ ಪ್ರೋತ್ಸಾಹಿಸಬೇಕು.ಮಠಾಧಿಪತಿಗಳು ತಾವು ನಡೆಸುತ್ತಿರುವ ಶೈಕ್ಷಣಿಕ ಸಂಸ್ಥೆಗಳಿಗಾಗಿ ಪ್ರತಿ ವರ್ಷ ತೆಗೆದುಕೊಳ್ಳುವ ಡೋನೆಶನ್ನುಗಳ ನೂರರಲ್ಲೊಂದು ಭಾಗವನ್ನು ವಿನಿಯೋಗಿಸಿದರೂ ಸಾಕು; ಭಾರತೀಯ ಸಂಗೀತಕ್ಕೆ ವೀರಶೈವರ ಕೊಡುಗೆ ಇಲ್ಲಿಗೇ ನಿಲ್ಲದೆ ಮುಂದುವರೆಯುವ ಸಾಧ್ಯತೆಯಿದೆ. ಬಸವಾದಿ ಪ್ರಮಥರ 'ಋಣ'ವನ್ನು ತೀರಿಸಲು ವಚನಸಂಗೀತವನ್ನು ಪೋಷಿಸುವುದು, ಪ್ರೋತ್ಸಾಹಿಸುವುದು, ಅದನ್ನು ಅಭಿಜಾತ ಸಂಗೀತದ ಮಟ್ಟಕ್ಕೇರಿಸುವುದು ಅತ್ಯಗತ್ಯ. ಮಠಗಳ ವಿಶೇಷ ಉತ್ಸವಗಳಲ್ಲಿ ವಚನಸಾಹಿತ್ಯ, ವಚನಶಾಸ್ತ್ರ ಇವುಗಳ ಮೇಲೆ ವಿದ್ವಾಂಸರ ಭಾಷಣಗಳಾಗುತ್ತಿರುತ್ತವೆ. ಅದರೊಂದಿಗೆ ಸಂಗೀತ ಕಲಾಕಾರರ ವಚನಗಾಯನದ ಕಾರ್ಯಕ್ರಮಗಳೂ ಏರ್ಪಡಬೇಕು. ಆಗ ಮಾತ್ರವೇ ಶರಣಸಂದೇಶ ಜನಮನಗಳನ್ನು ಮುಟ್ಟಲು ಸಾಧ್ಯ. ಆ ಮೂಲಕ ಕರ್ನಾಟಕದಲ್ಲಿ ಶಾಸ್ತ್ರೀಯ ಸಂಗೀತ ಕಲೆಯೂ ಊರ್ಜಿತಗೊಳ್ಳುವುದು. ವೀರಶೈವ ಮಠಾಧೀಶರು ಇದೊಂದು ತಮ್ಮ ಪಾಲಿನ ಪವಿತ್ರ ಕರ್ತವ್ಯವೆಂದು ಭಾವಿಸಬೇಕು.

# ವೀರಶೈವ ಪ್ರವಚನಕಾರರು *

—ಗೊ. ರು. ಚನ್ನಬಸಪ್ಪ

ಯಾವುದೇ ಒಂದು ಸಮಾಜದ ಧರ್ಮತತ್ತ್ವ, ನೀತಿಸಂಹಿತೆ, ಆಚಾರವಿಚಾರಗಳ ಪ್ರಚಾರಕ್ಕೆ ಅನುಭವಗೋಷ್ಠಿಗಳು, ತತ್ತದ್ಧರ್ಮತತ್ತ್ವ ಪ್ರತಿಪಾದಕ ಪುರಾಣ ಮತ್ತು ಸಾಹಿತ್ಯಕೃತಿಗಳ ಪಠಣ, ಕೀರ್ತನೆ, ತತ್ತ್ವಭೂಯಿಷ್ಠ ಹಾಡುಗಳ ವಾಚನಗಳೇ ಮೊದಲಾದವು ಉತ್ತಮ ಸಾಧನಗಳು. ಈ ಸಾಧನೆಗಳ ಮೂಲಕ ಸಾಮಾನ್ಯ ಜನಜೀವನದಲ್ಲಿ ನೀತಿಕ್ರಿಯಾಚಾರ, ಸಮಯನಿಷ್ಠೆ, ಧರ್ಮತತ್ತ್ವಪಾಲನೆಗಳನ್ನು ಕುದುರಿಸಲು ಎಲ್ಲ ಧರ್ಮದವರೂ ಹೆಣಗಿದುದು, ಹೆಣಗುತ್ತಿರುವುದು ಕಂಡುಬರುತ್ತದೆ.

ವೀರಶೈವ ಧರ್ಮತತ್ತ್ವಗಳ ಸ್ವರೂಪವನ್ನು ಪ್ರಚಾರ ಮಾಡಲು ಬಹುಪ್ರಾಚೀನ ಕಾಲದಿಂದಲೂ ಅನೇಕ ಶಿವಾನುಭಾವ ಪ್ರಚಾರಕರು, ಪುರಾಣಪ್ರವಚನ ಪಟುಗಳು, ಗಮಕಿಗಳು, ವಾದಿಗಳು, ವಾಗ್ಮಿಗಳು, ವ್ಯಾಖ್ಯಾನಕಾರರು, ಕೀರ್ತನ (ಕಥಾ ಕಾಲಕ್ಷೇಪಕಾರರು ಕಂಡುಬರುತ್ತಾರೆ. ಆ ಬಗೆಗೆ ಒಂದು ಸ್ಥೂಲಸಮೀಕ್ಷೆ ಮಾಡುವುದೇ ಪ್ರಕೃತ ಲೇಖನದ ಮುಖ್ಯೋದ್ದೇಶ.

ಬಸವಾದಿ ಪ್ರಮಥರ ಇತಿಹಾಸ ಪ್ರಸಿದ್ಧ ಧಾರ್ಮಿಕ, ಸಾಮಾಜಿಕ ಕ್ರಾಂತಿಯ ನಂತರ ಅವರ ನೂತನ ವಿಚಾರಧಾರೆಯನ್ನು ಭಾರತಾದ್ಯಂತ ಪ್ರಚಾರ ಮಾಡತಕ್ಕ ಒಂದು ಸುವ್ಯವಸ್ಥಿತ ಏರ್ಪಾಡು ಆಗ ಇತ್ತೆಂದು ಪ್ರಾಚೀನ ವೀರಶೈವ ಸಾಹಿತ್ಯಗ್ರಂಥಗಳಿಂದ ನಮಗೆ ಅನೇಕ ಆಧಾರಗಳು ಲಭ್ಯವಾಗುತ್ತವೆ. ೧೨ನೆಯ ಶತಮಾನದ ಮತ್ತು ಅನಂತರದ ಶರಣ ಶರಣೆಯರಲ್ಲಿ ಅನೇಕರು ಪುರಾಣ, ಕೀರ್ತನೆ, ಗಾಯನ, ವೇಷಧಾರಣೆ, ಶಿವಾನುಭವ ಗೋಷ್ಠಿಗಳ ಮಾಧ್ಯಮದ ಮೂಲಕ ತಮ್ಮ ತಮ್ಮ ಪಾಲಿನ ಧರ್ಮಸಂಸ್ಕೃತಿಯ ಪ್ರಚಾರ ಮಾಡಿದ್ದಾರೆ. ಈ ರೀತಿಯ ಪ್ರಚಾರಮಾಡಿದ ಶಿವಶರಣರಲ್ಲಿ ಮುಖ್ಯವಾಗಿ ಭದ್ರಗಾಯಕ, ಚಾರಮ, ಇಂಡಿಯಶಾಂತಯ್ಯ, ನಿಂಬಾಣದ ಗಣೇಶ್ವರ, ಅಲ್ಲಯ್ಯ, ಕೇಶಿರಾಜ, ನಿರ್ಲಜ್ಜ ಶಾಂತಯ್ಯ, ಸುಜ್ಞಾನಿದೇವ, ಶ್ರೀಪತಿ ಪಂಡಿತ, ಪೇಮನಾರಾಧ್ಯ, ತಾಳಿಕೋಟೆಯ ಶಿವದೇವ, ಎಡೆಮಠದ ನಾಗಿದೇವ, ವೀರದೇವಮ್ಮ, ವಿಮಳಾದೇವಿ ಇವರೇ ಮೊದಲಾದವರ ಹೆಸರನ್ನು ಹೇಳಬಹುದಾಗಿದೆ.[1] ಇವರೆಲ್ಲ ಒಂದಿಲ್ಲೊಂದು ರೀತಿಯಲ್ಲಿ ಪ್ರವಚನ, ಸಂಗೀತ, ಪುರಾಣಪ್ರವಚನಗಳ ಮೂಲಕ ಬಸವಾದಿ ಪ್ರಮಥರ ತತ್ತ್ವಗಳನ್ನು ಕರ್ನಾಟಕಾಂಧ್ರಾದಿ ದೇಶಗಳಲ್ಲಿ ಪ್ರಚಾರಮಾಡಿದ್ದಾರೆ. ಬಹುರೂಪಿ ಚೌಡಯ್ಯನಂಥ ವೇಷಧಾರಿ ಕಲಾವಿದ ವೇಷಗಳನ್ನು ಹಾಕಿ ಹಾಡಿ, ಕುಣಿದು ಶಿವಾನುಭವ ತತ್ತ್ವಪ್ರಚಾರ ಮಾಡಿದುದು ಕಂಡುಬರುವುದು. ಬಸವಣ್ಣನವರ ಕಾಲದಲ್ಲಿ ಅವರ ಅಮೂಲ್ಯವಾದ ವಚನಗಳನ್ನು ಭಾರತಾದ್ಯಂತ ಪ್ರಚಾರಮಾಡುವ ಪ್ರಚಾರಕರಿದ್ದರೆಂಬ ಬಗೆಗೆ ನಮಗೆ ಹರಿಹರನ ಬಸವರಾಜದೇವರ ರಗಳೆ ಸುಳುವು ಕೊಡುತ್ತದೆ. ಉದಾಹರಣೆಗೆ: ಓರ್ವ ಮಾಹೇಶ್ವರನು ಕಳಿಂಗ ದೇಶಕ್ಕೆ ಹೋಗಿ ಬಸವಣ್ಣನವರ ವಚನ ಹಾಡಿದ ನಂತರ ವಚನಾರ್ಥವನ್ನು ಗ್ರಹಿಸಿದ ಮಹಾದೇವಿಸೆಟ್ಟಿಯೆಂಬುವನು ಬಸವಣ್ಣನವರನ್ನು ಪರೀಕ್ಷಿಸಲು ಕಲ್ಯಾಣಕ್ಕೆ ಬಂದಂತೆ ಬಸವರಾಜದೇವರ ರಗಳೆ ಉಲ್ಲೇಖಿಸಿರುತ್ತದೆ.[2] ಕಲ್ಯಾಣ ಮೊದಲಾದ ಪ್ರಸಿದ್ಧ ನಗರಗಳಲ್ಲಿ ಮಠಮಾನ್ಯಗಳನ್ನಾಶ್ರಯಿಸಿ ಶಿವಾನುಭವ ಗೋಷ್ಠಿಗಳು ಏರ್ಪಟ್ಟು ಅಲ್ಲಿ ಅನುಭಾವಿಗಳಾದ ಪ್ರವಚನಕಾರರ ಪ್ರವಚನ ನಡೆಯುತ್ತಿತ್ತು. ಅನೇಕ ಜಂಗಮಮೂರ್ತಿಗಳು ದೇಶದ ನಾನಾಮೂಲೆಗಳನ್ನು ತಿರುಗುತ್ತ ಪ್ರಚಾರ ಕಾರ್ಯಗಳನ್ನು ವಿವಿಧ ರೀತಿಯ ಕಲೆಯಿಂದ ಪ್ರಚಾರಮಾಡುತ್ತಿದ್ದರು. (ತತ್ತ್ವಭೂಯಿಷ್ಠವಾದ ಪದಪದ್ಯಗಳು, ಮಂತ್ರಗೋಪ್ಯ, ಪದಮಂತ್ರಗೋಪ್ಯ ಮೊದಲಾದ ಸಾಹಿತ್ಯ ಸೃಷ್ಟಿಯಾದುದೂ ಕೂಡ ಹೀಗೆ ಪ್ರಚಾರಕ್ಕೆ ಮುಖ್ಯಸಾಧನವಾಗಲಿ ಎಂದೇ ಇರಬಹುದು. ಇವನ್ನು ಪರಿಣಾಮಕಾರಿಯಾಗಿ ಪ್ರವಚನ ಮಾಡಿ ಜನತೆಯಲ್ಲಿ ಜ್ಞಾನಪ್ರಕಾಶವನ್ನುಂಟುಮಾಡಬಹುದೆಂದು ಅಂದಿನ ಶರಣರು ಕಂಡುಕೊಂಡಿರಬಹುದು. ಈ ದೃಷ್ಟಿಯಿಂದಲೇ ನಿಜಗುಣರ ಕೈವಲ್ಯಪದ್ಧತಿ, ಮುಪ್ಪಿನಷಡಕ್ಷರಿ, ಸರ್ಪಭೂಷಣರ ಕೃತಿಗಳೇ ಮೊದಲಾದವನ್ನು ಸಮಾಲೋಚಿಸಬಹುದು.

ಇದೇ ರೀತಿಯಲ್ಲಿ ಪ್ರಖ್ಯಾತ ಕವಿಗಳ ಕಾವ್ಯಗಳೂ ಗಮಕಿಗಳಿಂದ ಮತ್ತು ಪುರಾಣ ಪ್ರವಚನ ಪಟುಗಳಿಂದ ಪರಿಣಾಮಕಾರಿಯಾಗಿ ಪ್ರಚಾರಗೊಳ್ಳುತ್ತಿದ್ದವು. ಹರಿಹರ ರಾಘವಾಂಕರಂಥ ಕ್ರಾಂತಿಕಾರಕ ಕವಿಗಳ ಕಾವ್ಯಗಳನ್ನು ಪ್ರವಚನ

---

* i) ಈ ಲೇಖನ ತಯಾರಿಸಲು ಪಂಡಿತ ಚನ್ನಪ್ಪ ಎರೇಸೀಮೆಯವರ ಸಲಹೆ, ಸಹಕಾರ, ಸಂಗ್ರಹಗಳನ್ನು ಕೃತಜ್ಞತೆಯಿಂದ ಸ್ವೀಕರಿಸಿದ್ದೇನೆ. ಇದು ಶಿವಾನುಭಾವಪ್ರವಚನ, ಪುರಾಣಪ್ರವಚನ, ಶಿವಕೀರ್ತನೆ, ಗಮಕಾದಿ ವಿವಿಧ ವಿದ್ಯಾಪ್ರಸಾರಕರ ಒಂದು ಸ್ಥೂಲಸಮೀಕ್ಷೆ.

ii) ಈ ಲೇಖನದಲ್ಲಿ ಬಂದಿರುವ ವ್ಯಕ್ತಿಗಳ ಬಗೆಗೆ ಕಾಲಮಾನದ ಆದ್ಯತೆ ಕ್ರಮವನ್ನಾಗಲಿ ಅಥವಾ ಹೆಸರುಗಳ ಅಕ್ಷರಾನುಕ್ರಮಣಿಕೆಯ ಕ್ರಮವನ್ನಾಗಲಿ ಅನುಸರಿಸಿಲ್ಲ. ವಿವರಗಳು ದೊರಕಿದಂತೆಲ್ಲ ಸಂಗ್ರಹಿಸಿ ಬರೆಯಲಾಗಿದೆ.

1. ಡಾ. ಫ. ಗು. ಹಳಕಟ್ಟಿ: ಶಿವಶರಣರ ಚರಿತ್ರೆಗಳು ಭಾ. ೨, ಪು- ಪೀಠಿಕೆ ೧ ರಿಂದ ೭೯ ನೋಡಿ. ಮತ್ತು ಶಿವಶರಣೆಯರ ಚರಿತ್ರೆ ಪೀಠಿಕಾ ಪ್ರಕರಣ ನೋಡಿ.
2. ಬ. ರಾ. ದೇ. ರಗಳೆ ಸ್ಥಲ: ೧೨ ಸಾಲು ೧ ರಿಂದ ೩೬ರವರೆಗೆ ನೋಡಿ ಟಿ. ಎಸ್. ವೆಂಕಣ್ಣಯ್ಯ ಸಂ. (ಪ್ರಥಮಮುದ್ರಣ)

ಕಾರರು ದೇಶಾಂತರಗಳಲ್ಲಿ ಪ್ರಚಾರಮಾಡುತ್ತಿದ್ದುದು ಸಮಕಾಲೀನ ಸಾಹಿತ್ಯದಿಂದ ವೇದ್ಯವಾಗುವ ಅಂಶ. ಹರಿಹರ ಮಹಾಕವಿಯ ನಂಬಿಯಣ್ಣನ ರಗಳೆಯ ಸ್ವಾರಸ್ಯವನ್ನು ತಮಿಳುನಾಡಿನ ತಿರುವಾಲೂರಿನ ತ್ಯಾಗರಾಯನ ಸೇವೆಯ ನಾಗವಾಸದ ಮೇಳದೊಡತಿ ಮಾದೇವಿ ಕೇಳಿ, ಅದನ್ನು ಬರೆದ ಹರಿಹರನ ಮೇಲೆ ಮೋಹಗೊಂಡು ಹಂಪೆಗೆ ಬಂದುಬಿಟ್ಟಳಂತೆ.[3] ಸ್ವತಃ ರಾಘವಾಂಕನೇ ತನ್ನ ಮೊಸಲುಗವಿತೆಯಾದ ವೀರೇಶಚರಿತೆಯನ್ನು ಓರಂಗಲ್ಲಿನ ಕಾಕತೀಯ ಅರಸು ಪ್ರತಾಪರುದ್ರನ ಸಭೆಯಲ್ಲಿ ಗಮಕವಾಚನಮಾಡಿ (ಓದಿ), ಎಲ್ಲರನ್ನೂ ಮೆಚ್ಚಿಸಿದ ವಿಷಯ ಸಾಹಿತ್ಯಕ್ಷೇತ್ರವಲ್ಲಿ ಅತ್ಯಂತ ಪ್ರಸಿದ್ಧವಾದ ಅಂಶಗಳಲ್ಲೊಂದು.ಕೆರೆಯ ಪದ್ಮರಸನ ಮುಂದೆ ರಾಘವಾಂಕನ ಸಿದ್ಧರಾಮಚರಿತ್ರೆಯನ್ನು ವಿರೂಪಾಕ್ಷನೆಂಬ ಗಮಕಿಯು 'ಇನಿರಸದ ಸೊಬಗಿನ ಸೋನೆಗರೆವಂತೆ' ವಾಚನಮಾಡಿ ಪದ್ಮರಸನನ್ನು ಮೆಚ್ಚಿಸಿದನೆಂದು ತಿಳಿದುಬರುವುದು.[4] ಸ್ವತಃ ರಾಘವಾಂಕನೇ ಓರ್ವಉತ್ತಮ ಪ್ರವಚನಕಾರನೆಂದು ತಿಳಿಯಲು ವಿಪುಲ ಆಧಾರಗಳು ಸಿಗುತ್ತವೆ.

ಇಂಥ ಶಿವಾನುಭವ ಪ್ರವಚನಕಾರರ, ಕೀರ್ತನ ಪುರಾಣಕಾರರ ಸಮೂಹ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಕ್ರಾಂತಿಯ ನಂತರವೂ ನಮಗೆ ವಿಪುಲ ಸಂಖ್ಯೆಯಲ್ಲಿ ಕಾಣಸಿಗುತ್ತದೆ. ಕ್ರಿ.ಶ.ಸು.೧೬ನೆಯ ಶತಮಾನದಲ್ಲಿ ಶೀಲವಂತಾರ್ಯರ ಶಿಷ್ಯ ಹಲಗೆಯಾರ್ಯನು ಅತ್ಯುತ್ತಮ ಮಟ್ಟದ ಶಿವಾನುಭವ ಪ್ರವಚನಕಾರ. ಇವನ ಪ್ರವಚನ ವಿಷಯವೇ ವಿಸ್ತಾರಗೊಂಡು ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಪುರಾಣವಾದ ಹಾಗೆ ತಿಳಿದುಬರುವುದು. ಹಲಗೆಯಾರ್ಯನು ಜ್ಯೋತಿಯಮ್ಮ ಎಂಬ ಶಿವಶರಣೆಯ ಮನೆಯಲ್ಲಿ ಕಲ್ಲೇಶ್ವರ, ಸೈಂಧವದ ಶಾಂತದೇವ, ಕಲ್ಯಾಣದ ಮಲ್ಲೇಶ್ವರ, ನಂಜಯ್ಯ, ಸಪ್ಪೆಯ ಮಲ್ಲಿಕಾರ್ಜುನ ವಿಭು, ಸಮಾಧಿಸಿದ್ದಮ್ಮ, ಸಪ್ಪೆಯಮ್ಮ ಮುಂತಾದ ವಿವೇಕಿಗಳ ಮಧ್ಯದಲ್ಲಿ ಶಿವಾನುಭವ ಪ್ರವಚನ ಮಾಡುತ್ತಿದ್ದನೆಂದು ತಿಳಿದು ಬರುವುದು.[5] ಈ ಹಲಗೆಯಾರ್ಯನು ಘನವಿದ್ವಾಂಸನಾಗಿದ್ದು ಒಂದು ಶೂನ್ಯಸಂಪಾದನೆಯನ್ನು ಬರೆದಿದ್ದಾನೆ. ಸ್ವತಃ ತೋಂಟದ ಸಿದ್ಧಲಿಂಗ ಶಿವಯೋಗಿಗಳೇ ಅತ್ಯುಚ್ಚ ಮಟ್ಟದ ಶಿವಾನುಭವ ಪ್ರವಚನ ಪಟುಗಳು; ಇವರ ಪರಿಣಾಮಕಾರೀ ಶಿವಾನುಭವ ಪ್ರವಚನದ ಮೂಲಕ ೧೫-೧೬ನೆಯ ಶತಮಾನದ ವೀರಶೈವಧಾರ್ಮಿಕರಂಗ ಜಾಜ್ವಲ್ಯಮಾನವಾಗಿ ಬೆಳಗಿತೆನ್ನಬಹುದು.ಇವರು ಪ್ರವಚನ ಕಾಲದಲ್ಲಿ ಅಪ್ಪಣೆ ಕೊಡಿಸಿದ ವಿವಿಧ ವಿಷಯಗಳೇ ಬೇರೆಯವರಿಂದ ಸಂಗ್ರಹಿಸಲ್ಪಟ್ಟು 'ತೋಂಟದ ಸಿದ್ಧಲಿಂಗೇಶ್ವರರ ವಚನಗಳು' ಎಂದು ಈಗ ನಾವು ಕರೆಯುವ ವಚನಗಳಾಗಿವೆಯೆಂದು ಊಹಿಸಲು ಸಾಧ್ಯವಿದೆ.[6] ಹೀಗೆ ಎಂದಿನಿಂದಲೂ ಈ ಸಮಾಜದಲ್ಲಿ ಕವಿ, ಗಮಕಿ, ಪುರಾಣಕಾರ, ಶಿವಾನುಭವ ಪ್ರವಚನಕಾರ, ಕೀರ್ತನಕಾರ, ಮೊದಲಾದವರಿಂದ ಆದ ಅನುಪಮ ಧಾರ್ಮಿಕ ಸಾಮಾಜಿಕ ಸೇವೆ ಅವಿಸ್ಮರಣೀಯ. ಭೀಮಕವಿಯು ಪಾಲ್ಕುರಿಕೆ ಸೋಮನಾಥರ ಬಸವ ಪುರಾಣವನ್ನು ಕನ್ನಡಿಸಿ ಕನ್ನಡಿಗರ ಕೈಗಿತ್ತ ಮೇಲೆ ಬಸವ ಪುರಾಣ ಪ್ರವಚನಕ್ರಾಂತಿ ಅತ್ಯದ್ಭುತ ರೀತಿಯಲ್ಲಿ ಈ ಸಮಾಜದಲ್ಲಿ ಆದಹಾಗೆ ಕಂಡುಬರುತ್ತದೆ. ಆ ಪುರಾಣ ಪ್ರವಚನ ಮತ್ತು ಶ್ರವಣಗಳೆರಡೂ ಪುಣ್ಯಪ್ರದವೆಂಬ ಭಾವನೆ ವೀರಶೈವರಲ್ಲಿ ಬೆಳೆದು ಬಂದುದೇ ಒಂದು ಇತಿಹಾಸವಾಗಿದೆ. ಈ ಪುರಾಣದ ಪ್ರವಚನ ಮಾಡುವವರಿಗೆ ಅದರಲ್ಲಿ ಅಂತರ್ಗತವಾಗಿರುವ ದೃಷ್ಟಾಂತ ಕಥೆಗಳು ಪೂರ್ವ ಕಥೆಗಳ ಬಗೆಗೆ ಅನೇಕ ಗ್ರಂಥಗಳು ಹುಟ್ಟಲು ಕಾರಣವಾಗಿದೆ.[7] ವೀರಶೈವಾಮೃತ ಮಹಾಪುರಾಣ ಭಾವಚಿಂತಾರತ್ನ ಗ್ರಂಥಕರ್ತೃವಾದ ಗುಬ್ಬಿಯ ಮಲ್ಲಣಾರ್ಯ (ಕ್ರಿ. ಶ. ೧೫೧೩) ಬಸವಪುರಾಣ ಪ್ರವಚನಕಾರರಲ್ಲಿ ಅದ್ವಿತೀಯನೆಂದು ಕೀರ್ತಿತನಾಗಿದ್ದಾನೆ. ಶಿವಗಂಗೆಯ ಮೇಲಣಗವಿಯ ಸಿಂಹಾಸನಾಧೀಶ ಶಾಂತಸಂಜೇಶ್ವರನ ಶಿಷ್ಯನಾದ ಈತನನ್ನು ಜನರು 'ಕರ್ನಾಟಕ ಸಂಸ್ಕೃತೋಭಯ ಕವಿತ್ವಂಗಳಂ ಪೂರ್ಣಲಕ್ಷಣ ಚಮತ್ಕಾರದಿಂದ ಮಾಳ್ಪ ನಿರ್ಣಯಕೆ ನೀನೆ ಯಗ್ಗಳವಲಾ; ಬಸವ ಪೌರಾಣದರ್ಥಮಂ ಪೇಳ್ವೊಡೆ ಆರ್ಣವ ಪ್ರಾಂತದ ಭೂಮಿಯೊಳು ಪೆಸರಾಗಿರ್ದೆ' ಎಂದು ಹೊಗಳುತ್ತಿದ್ದರಂತೆ.[8] ಗುಬ್ಬಿಗೆ 'ಗುಬ್ಬಿ' ಎಂದು

---

3. ರಾಘವಾಂಕ ಚರಿತೆ: ಅಧ್ಯಾಯ ೧೪, ಪದ್ಯ ೯೪ ರಿಂದ ೧೦೨ರವರೆಗೆ ನೋಡಿ.
4. ರಾಘವಾಂಕ ಚರಿತೆ: ಅಧ್ಯಾಯ ೧೬, ಪದ್ಯ ೮ ರಿಂದ ೨೯ರವರೆಗೆ ನೋಡಿ. ಇಲ್ಲಿ ವಿರುಪಾಕ್ಷನೇ ಜಂಗಮರೂಪ ಧರಿಸಿ ಹೋಗಿ ಗಮಕ ವಾಚನ ಮಾಡಿದನೆಂದು ಹೇಳಿರುವ ಪವಾಡದ ಹಿನ್ನೆಲೆ ಕಾವ್ಯದ ಉತ್ಕೃಷ್ಟತೆಯನ್ನು ಹೇಳುವ ಒಂದು ಪರೋಕ್ಷ ಸಾಧನವೆಂದು ತಿಳಿಯಬೇಕು. ಸತ್ಯವಿಷಯ: ಓರ್ವ ಉತ್ತಮ ಗಮಕಿಯ ಗಮಕವಾಚನವೆಂದು ಭಾವಿಸಲು ಬರುವಂತಿದೆ.
5. ಕ. ಕ. ಚ. II ಪು. ೧೪೨
6. ಚನ್ನವೀರಜಂಗಮದೇವ ಕೃತ 'ಷಟಸ್ಥಲವಲ್ಲಭ' ಅಧ್ಯಾಯ ೬. ಪದ್ಯ-೨೧-೨೨ ನೋಡಿ.
7. ಉತ್ತರ ದೇಶದ ಬಸವಲಿಂಗದೇವ (ಕ್ರಿ. ಶ. ೧೭೦೦) ಬಸವೇಶ್ವರ ಪುರಾಣದ ಕಥಾಸಾಗರ. ಇದರಲ್ಲಿ ೪೬೪ ಕಥೆಗಳು ಸಮಾವೇಶಗೊಂಡಿವೆ. 'ಬಸವೇಶ್ವರ ಪುರಾಣದ ಕಥೆಗಳನ್ನು ಭಕ್ತಮಹೇಶ್ವರರು ಸುಲಭದಲ್ಲಿ ತಿಳಿವಂತೆ ಕಲ್ಪಿತ ಕಥೆಗಳಲ್ಲದೆ ಸಕಲ ಶಿವಪುರಾಣ ಸಮ್ಮತವಾಗಿ ಕಥಾಸಾಗರವೆಂಬ ಪೆಸರಿಟ್ಟು ಬಸವಾದಿ ಪ್ರಮಥರ ಕರುಣದಿಂ ಮಾಡಿದೆವು' ಎಂದು ಕವಿ ಹೇಳಿಕೊಂಡಿದ್ದಾನೆ. (ಕ.ಕ.ಚ. II ಪು. ೨೭೨-೭೩) ಭೈರವೇಶ್ವರ ಕಾವ್ಯದ ಕಥಾಸಾರ, ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ-ಮುಂತಾದ ಕಾವ್ಯಗಳೂ ಕೂಡ ಪುರಾಣ ಪ್ರವಚನ, ಕೀರ್ತನಕಾರರೇ ಮೊದಲಾದವರಿಗೆ ಅನುಕೂಲ್ಯ ಒದಗಿಸುವ ಕೃತಿಗಳೆಂದೇ ತಿಳಿಯಬೇಕು.
8. ಕ. ಕ. ಚ. II ಪು. ೧೫೮-೧೫೯.

ಹೆಸರು ಬರಲು ಈ ಬಸವಪುರಾಣ ಪ್ರವಚನ ಸಂದರ್ಭವೇ ಕಾರಣವಾದ ಹಾಗೆ ತಿಳಿದುಬರುವುದು. ಅದುಹೀಗೆ: ಮಲ್ಲಣಾರ್ಯನು ಗುಬ್ಬಿಯ ಮಲ್ಲಿಕಾರ್ಜುನ ದೇವಾಲಯದಲ್ಲಿ ಸ್ವಾರಸ್ಯವಾಗಿ ಬಸವಪುರಾಣ ಪ್ರವಚನ ಮಾಡುವ ಸಮಯದಲ್ಲಿ ಆ ಪುರಾಣ ಕೇಳಲು ಜನಜಂಗುಳಿಯ ಮಧ್ಯದಲ್ಲಿ ಎರಡು ಗುಬ್ಬಿಗಳು ದಿನಾಲು ಬಂದು ಮಲ್ಲಣಾರ್ಯನ ಎದುರಿನಲ್ಲಿಯೇ ಕೂಡುತ್ತಿದ್ದುವಂತೆ. ಮಲ್ಲಣಾರ್ಯರು 'ಅವುಗಳ ಜನ್ಮ ಸಾರ್ಥಕ' ಎಂದು ಎಲ್ಲರೆದುರಿಗೂ ಆ ಗುಬ್ಬಿಗಳನ್ನು ತೋರಿಸಿ ಹೇಳುತ್ತಿದ್ದರು. ಪುರಾಣ ಪರಿಸಮಾಪ್ತಿಯ ಮಹಾಮಂಗಲದ ದಿನ ಆ ಗುಬ್ಬಚ್ಚಿಗಳು ಮಲ್ಲಣಾರ್ಯರ ಪಾದಗಳ ಮೇಲೆ ಬಿದ್ದು ಅಸುನೀಗಿದುವಂತೆ. ಹೀಗೆ ಸತ್ತ ಅವುಗಳನ್ನು ಅದೇ ದೇವಾಲಯದ ಪಕ್ಕದಲ್ಲಿ ಸಮಾಧಿಮಾಡಿ, ಒಂದು ಬಸವನ ಶಿಲಾವಿಗ್ರಹವನ್ನು ಆ ಗುಬ್ಬಚ್ಚಿಗಳ ಸಮಾಧಿಯ ಮೇಲೆ ಪ್ರತಿಷ್ಠಾಪಿಸಿ, ಅದಕ್ಕೆ 'ಗುಬ್ಬಚ್ಚಿ ಬಸವ' ಎಂದು ನಾಮಕರಣ ಮಾಡಿದರು. 'ಅಮರಗೊಂಡ' ಎಂಬ ಊರಿನ ಹೆಸರನ್ನೂ ಕೂಡ ಇದೇ ಕಾರಣದಿಂದ ಮಲ್ಲಣಾರ್ಯರೇ 'ಗುಬ್ಬಿ' ಎಂದು ಕರೆದರಂತೆ.[9] ತಮ್ಮ ಹೆಸರಿನ ಹಿಂದೆ 'ಗುಬ್ಬಿ' ಎಂಬ ವಿಶೇಷಣವನ್ನು ಇಟ್ಟುಕೊಂಡ ಹಾಗೆ ತಿಳಿದುಬರುವುದು.

ಹೀಗೆ ಬಸವಾದಿ ಪ್ರಮಥರ ಕಾಲದಿಂದಲೂ ವೀರಶೈವ ಪ್ರವಚನಕಾರರ ಒಂದು ಇತಿಹಾಸದ ಪರಂಪರೆಯೇ ಹರಿದು ಬಂದಿದೆ. ಯಕ್ಷಗಾನ, ತ್ರಿಪದಿ, ತ್ರಿವಿಧಿ, ಹಾಡುಹಬ್ಬಗಳು, ಸಾಂಗತ್ಯ ಮೊದಲಾದ ಪ್ರಕಾರಗಳಲ್ಲಿ ರಚಿಸಲ್ಪಟ್ಟ ಅನೇಕ ವೀರಶೈವ ಗ್ರಂಥಗಳು ಪ್ರವಚನ, ವ್ಯಾಖ್ಯಾನ, ಕೀರ್ತನೆಗಳ ಮೂಲಕ ಪ್ರಚುರಗೊಂಡಿವೆ. ಶರಣಜನರ ಜೀವನತತ್ತ್ವಗಳು, ಧರ್ಮತತ್ತ್ವಗಳು, ಕಾಯಕದ ಮಹತ್ವ ಮೊದಲಾದವುಗಳು ಪ್ರಚಾರಗೊಳ್ಳುತ್ತಿವೆ. ಈ ದಿಸೆಯಲ್ಲಿ ಆಧುನಿಕ ಯುಗದಲ್ಲಿ ಮುಖ್ಯರೆನಿಸಿದ ಅನೇಕ ಪ್ರವಚನಕಾರರ, ಪುರಾಣ ಕೀರ್ತನ, ವ್ಯಾಖ್ಯಾನಕಾರರ ಸಂಕ್ಷೇಪಪಟ್ಟಿಯನ್ನು ಈ ಮುಂದೆ ಅವಲೋಕಿಸಬಹುದು:–

೧) **ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು:** ಮೈಸೂರು ಮಹಾರಾಜರ ಆಸ್ಥಾನ ಮಹಾವಿದ್ವಾಂಸರಾದ ಲಿಂ. ಬಸವಪ್ಪ ಶಾಸ್ತ್ರಿಗಳು ಬಸವಪುರಾಣ ಪ್ರವಚನದಲ್ಲಿ ೧೯ನೆಯ ಶತಮಾನದ ಬಹುದೊಡ್ಡ ಹೆಸರು. ಮಧುರಕಂಠದಿಂದ ರಾಗತಾಲಲಯಬದ್ಧವಾಗಿ ಹಾಡಿ ಪುರಾಣ ಪ್ರವಚನ ಮಾಡುತ್ತಿದ್ದರೆ ಸಭೆ ಮಂತ್ರಮುಗ್ಧವಾಗುತ್ತಿತ್ತು. ಇವರು ಬಸವಪುರಾಣವಲ್ಲದೆ ರಾಜಶೇಖರ ವಿಳಾಸ, ಭಾರತ ಮೊದಲಾದ ಕಾವ್ಯಗಳನ್ನು ವಿದ್ವತ್‌ಪೂರ್ಣವಾಗಿ ಪ್ರವಚನ ಮಾಡುತ್ತಿದ್ದರು. ಸುಶ್ರಾವ್ಯವಾದ ಸಂಗೀತ, ನಕ್ಕು ನಗಿಸುವ ತಿಳಿಹಾಸ್ಯಬೆರೆತ ವ್ಯಾಖ್ಯಾನ, ಪುರಾಣಾರ್ಥವಿವರಣೆ, ತತ್ತ್ವಾರ್ಥ ವಿಶ್ಲೇಷಣೆ ಮೊದಲಾದವುಗಳಲ್ಲಿ ಸಮಕಾಲೀನ ಪ್ರವಚನಕಾರರಲ್ಲಿ ಇವರನ್ನು ಮಿಕ್ಕಿಸುವವರು ಯಾರೂ ಇರಲಿಲ್ಲವೆಂದು ಹೇಳಲಾಗುತ್ತಿದೆ.

೨) **ಹಾನಗಲ್ಲು ಲಿಂ. ನಿ. ಪ್ರ. ಕುಮಾರ ಸ್ವಾಮಿಗಳು:** ಶಿವಾನುಭವ ಪ್ರವಚನವನ್ನು ಅತ್ಯಂತ ಅಧಿಕಾರವಾಣಿಯಿಂದ ಮಾಡುವವರಲ್ಲಿ ಶ್ರೀ ಕುಮಾರ ಸ್ವಾಮಿಗಳು ಅಗ್ರಗಣ್ಯರು. ನಿಜಗುಣರ ಷಟ್‌ಶಾಸ್ತ್ರ, ಶರಣತತ್ತ್ವಗಳನ್ನು ಪೂರ್ಣವಾಗಿ ಅರಿತು ಆಚರಣೆಯಲ್ಲಿ ತಂದಿದ್ದ ಈ ಮಹಾನುಭಾವಿಗಳು ತಮ್ಮ ಪ್ರಭಾವಪೂರ್ಣ ಘೋಷೆ, ಅಧಿಕಾರವಾಣಿ, ಶುಚಿರುಚಿ, ಶುದ್ಧಿಯಿಂದ ಬಂದ ಸಿದ್ಧಿಗಳಿಗೆ ತೋರುಗಂಬದಂತಿದ್ದರು. ಅತ್ಯುಚ್ಚ ಮಟ್ಟದ ಆಚಾರನಿಷ್ಠರಾಗಿದ್ದ ಇವರ ಶಿವಾನುಭಾವ ಪ್ರವಚನದಿಂದ ಜನ ಪ್ರಭಾವಿತರಾಗುತ್ತಿದ್ದರು.

೩. **ಲಿಂ. ಶ್ರೀ. ನಿ. ಪ್ರ. ಗೌರೀಶಂಕರ ಸ್ವಾಮಿಗಳು, ಅರಮನೆ ಪಂಚಗವೀಮಠ ಮೈಸೂರು:** ಅಖಂಡ ೩೫ ವರ್ಷ ಕಾಶಿಯಲ್ಲಿ ಅನೇಕ ಶಾಸ್ತ್ರಗಳನ್ನು ಅಭ್ಯಾಸಮಾಡಿ ತಾಯ್ನಾಡಿಗೆ ಬಂದಿದ್ದ ಶ್ರೀ ಸ್ವಾಮಿಗಳು ದೊಡ್ಡ ದಾರ್ಶನಿಕರು. ಸಂಸ್ಕೃತ-ಕನ್ನಡ-ಇಂಗ್ಲಿಷ್, ಹಿಂದಿ ಮೊದಲಾದ ಅನೇಕ ಭಾಷಾಪಾಂಡಿತ್ಯ ಪಡೆದ ಇವರು ವೀರಶೈವ ಶರಣರು ಮತ್ತು ತತ್ತ್ವಜ್ಞಾನದ ಬಗೆಗೆ ಮಾಡುತ್ತಿದ್ದ ಪ್ರವಚನ ಆಬಾಲವೃದ್ಧರಿಗೊಂದು ರಸದೌತಣವಿದ್ದಂತೆ ಇರುತ್ತಿತ್ತು. ಅಖಿಲ ಭಾರತಮಟ್ಟದ ಇವರ ಪ್ರವಚನ ವಿಖ್ಯಾತವಾದುದು. ಗೀತಾಭಾಷ್ಯವನ್ನು ವೀರಶೈವದ ಪರವಾಗಿ ಬರೆದ ಮೇಲ್ಮೆ ಇವರದು[10]. 'ಅಣ್ಣಾ ನಿನ್ನನ್ನು ಕಂಡೆ' 'ಬಸವಣ್ಣನವರ ಪಂಚಪರುಷಗಳು', 'ಸಿದ್ಧರಾಮನ ಅಖಂಡಸಾಕ್ಷಾತ್ಕಾರ', 'ಗುರುವಿನ ಆವಶ್ಯಕತೆ'–ಇತ್ಯಾದಿ ವಿಷಯಗಳು ಇವರ ಪ್ರವಚನಾಂಶಗಳಾಗಿರುತ್ತಿದ್ದವು.

೪. **ಶ್ರೀ ನಿ.ಪ್ರ.ಶಿವಕುಮಾರ ಸ್ವಾಮಿಗಳು, ಸಿದ್ಧಗಂಗಾಕ್ಷೇತ್ರ:** ಅತ್ಯಂತ ಪ್ರಭಾಯುತವಾಗಿಯೂ, ನೇರವಾಗಿ ಹೃದಯಕ್ಕೆ ನಾಟುವ ಹಾಗೆಯೂ ಉಪದೇಶ ಭಾಷಣ ಮಾಡುವಲ್ಲಿ ಶ್ರೀ ಸಿದ್ಧಗಂಗಾಶ್ರೀಗಳವರು ಅಗ್ರಗಣ್ಯರು. ಎಲ್ಲ ಸಮಾಜದವರೂ ತಮ್ಮ ತಮ್ಮ ಸಂಘಸಂಸ್ಥೆಗಳಿಗೆ ಶ್ರೀಗಳವರನ್ನು ಬರಮಾಡಿಕೊಂಡು ಅವರ ಉಪದೇಶಾಮೃತವನ್ನುಂಡು ತೃಪ್ತರಾಗಿದ್ದಾರೆ; ಆಗುತ್ತಿದ್ದಾರೆ. ಶ್ರೀಗಳವರು ಸಂಸ್ಕೃತ, ಆಂಗ್ಲ, ಕನ್ನಡ ಭಾಷೆಗಳಲ್ಲಿ ಪರಿಣತಿ ಪಡೆದವರಿದ್ದು ಕನ್ನಡದ ಅವರ ಭಾಷಾಶೈಲಿ, ಭಾಷೆಯ ಮೇಲಿನ ಪ್ರಭುತ್ವ ಅನ್ಯಾದೃಶ. ಎಷ್ಟು ಕೇಳಿದರೂ ಇನ್ನಷ್ಟು ಕೇಳಬೇಕೆಂಬ ಕಾತರ ಶ್ರೋತೃಗಳಿಗೆ. ಶ್ರೀಗಳವರು

9. ಶ್ರೀ ಪ್ರಭುಸ್ವಾಮಿಗಳು: ಸಂ. ಗಣಭಾಷಿತ ರತ್ನಮಾಲೆ, ಪ್ರಸ್ತಾವನೆ ಪು. ೮-೯, ನೋಡಿ.

10 ಈ ಭಾಷ್ಯ ಈಗ ಲುಪ್ತವಾಗಿರುವುದು ಒಂದು ದೊಡ್ಡ ಕೊರತೆ. ಅವರು ಆ ಭಾಷ್ಯವನ್ನು ಬರೆದುದು ಮತ್ತು ಅನೇಕರು ಓದಿದುದು ದಿಟ. ೧೯೫೨ರಲ್ಲಿ ಅವರು ಲಿಂಗೈಕ್ಯರಾದ ನಂತರ ಆ ಭಾಷ್ಯವೆಲ್ಲಿದೆಯೋ ಯಾರ ಕೈಗೂ ಸಿಕ್ಕಿಲ್ಲವೆಂದು ತಿಳಿದು ಬಂದಿದೆ.

ಪುರಾಣ ಪ್ರವಚನ ಮಾಡುವುದರಲ್ಲೂ ವಿಕ್ರಮ ಸಾಧಿಸಿದ್ದಾರೆ. 'ಪ್ರಭುಲಿಂಗಲೀಲೆ' ಅವರಿಗೆ ಬಹಳ ಅಚ್ಚುಮೆಚ್ಚು. ೧೯೫೨ರಲ್ಲಿ ಅವರು ತಮ್ಮ ಮಠದಲ್ಲಿ ಪ್ರಭುಲಿಂಗಲೀಲೆ ಪ್ರವಚನಮಾಡಿ ಶ್ರೋತೃಗಳನ್ನು ಬೆಕ್ಕಸ ಬೆರಗುಗೊಳಿಸಿದರು. ಕಾರ್ಯಬಾಹುಳ್ಯದಲ್ಲಿ ಪುರಾಣ ಪ್ರವಚನಕಾರ್ಯಗಳನ್ನು ಕೈಬಿಟ್ಟಿದ್ದಾರೆ.

೫. **ಲಿಂ. ಚೌಡದಾನಪುರದ ಜಗದ್ಗುರು ಜಗದಾಚಾರ್ಯ ಸ್ವಾಮಿ ವಿರೂಪಾಕ್ಷ ಒಡೆಯರು:** ಧರ್ಮ, ಸಾಹಿತ್ಯ, ವ್ಯಾಕರಣ, ಸಾಹಿತ್ಯ, ಪುರಾಣಾದಿಗಳಲ್ಲಿ ಪಾರಂಗತರಾಗಿ ಬರೋಡಾ ಮಹಾರಾಜರವರಿಂದ 'ಧರ್ಮಭೂಷಣ' ಎಂಬ ಪ್ರಶಸ್ತಿ ಪಡೆದ ಶ್ರೀಗಳು ೧೯೧೨ರಲ್ಲಿ ಕಲಕತ್ತಾ ಗೌರ್ನಮೆಂಟ ಸಂಸ್ಕೃತ ಕಾಲೇಜಿನಲ್ಲಿ ಷಡ್ದರ್ಶನ, ವೇದಾಂತ, ವೇದಭಾಷ್ಯಗಳನ್ನು ಓದಿ ಮುಗಿಸಿ, ಬಂಗಾರದ ಮೆಡಲ್‌ನೊಡನೆ 'ವೇದತೀರ್ಥ' ಪದವಿಯನ್ನು ಸಂಪಾದಿಸಿದರು. ಇಂದೂರು ಮಹಾರಾಜರವರ ಸಂಸ್ಕೃತಕಾಲೇಜಿನಲ್ಲಿ ವೇದಭ್ಯಾಷದ ಮಹಾಮಹೋಪಾಧ್ಯಾಯರಾಗಿ ಕೆಲಸ ಮಾಡಿದ ಶ್ರೀಗಳವರು ಕನ್ನಡ, ಮರಾಠಿ, ಹಿಂದಿ, ಗುಜರಾತ, ಪಾಲಿ, ಸಂಸ್ಕೃತ, ಇಂಗ್ಲಿಷ್ ಮೊದಲಾದ ಬಹು ಭಾಷೆಗಳ ಮೇಲೆ ಪ್ರಭುತ್ವಪಡೆದವರು. ಇವರು ವೀರಶೈವ ದರ್ಶನ, ಸಾಹಿತ್ಯದ ಮೇಲೆ ಅಧಿಕಾರಯುತವಾಗಿ ಪ್ರವಚನ ಮಾಡಬಲ್ಲವರಾಗಿದ್ದರಲ್ಲದೆ, ತರ್ಕದಲ್ಲಿ ಇವರನ್ನು ಸರಿಗಟ್ಟುವ ವಿದ್ವಾಂಸರು ತೀರ ಕಡಿಮೆ. ಪರಳಿ ಮತ್ತು ಬನವಾಸಿ ವ್ಯಾಜ್ಯಗಳಲ್ಲಿ ಶ್ರೀಗಳವರು ವೀರಶೈವ ಸಿದ್ಧಾಂತದ ಪರವಾಗಿ ವಾದಮಾಡಿ ಸಮಾಜಕ್ಕೆ ಯಶಸ್ಸು ತಂದುಕೊಟ್ಟಿದ್ದನ್ನು ಸಮಾಜ ಮರೆಯುವಂತಿಲ್ಲ.

೬. **ಲಿಂ. ಹರ್ಡೇಕರ ಮಂಜಪ್ಪನವರು:** ಬನವಾಸಿಯಲ್ಲಿ ಜನಿಸಿ ಕೆಲವುವರ್ಷ ಉಪಾಧ್ಯಾಯ ವೃತ್ತಿಯನ್ನು ಮಾಡಿ, ಭಾರತಸ್ವಾತಂತ್ರ್ಯಚಳುವಳಿಯಲ್ಲಿ ಸಕ್ರಿಯ ಭಾಗವಹಿಸಿ, 'ಕರ್ನಾಟಕದ ಗಾಂಧಿ' ಎನಿಸಿಕೊಂಡಿದ್ದ ಮಂಜಪ್ಪನವರು ದಾವಣಗೆರೆಗೆ ಬಂದು, ಅಲ್ಲಿ ತಮ್ಮ ಧಾರ್ಮಿಕ, ರಾಜಕೀಯ, ಸಾಮಾಜಿಕ ಕ್ರಾಂತಿಗೆ ಮೊದಲುಮಾಡಿದರು. ಅನಂತರ ಹರಿಹರದ ಹತ್ತಿರ ತುಂಗಭದ್ರಾ ತೀರದಲ್ಲೂ, ಅನಂತರ ವಿಜಾಪುರ ಜಿಲ್ಲಾ ಕಡ್ಲಿಮಟ್ಟಿಯಲ್ಲೂ ಆಶ್ರಮಗಳನ್ನು ಸ್ಥಾಪಿಸಿ, ತಮ್ಮ ಪ್ರವಚನ, ವ್ಯಾಖ್ಯಾನ, ಪತ್ರಿಕಾ ಜೀವನ, ಗ್ರಂಥಪ್ರಕಟನೆಯೇ ಮೊದಲಾದ ಬಹುಮುಖ ಸೇವೆಯಿಂದ ಸಮಾಜಕ್ಕೆ ದೊಡ್ಡ ಉಪಕಾರ ಮಾಡಿದ ಮಹಾಪುರುಷರು. ಬಸವೇಶ್ವರರ ಬಗೆಗಿನ ಇವರ ಪ್ರವಚನಗಳು ಬೋಧಪ್ರದವಾಗಿರುತ್ತಿದ್ದವು.

೭. **ರತಿದೇವಿ ಹಾಗು ಸುಗ್ಗಲಾದೇವಿತಾಯಿಯವರು, ಸೊಲ್ಲಾಪುರ:** ಸೊಲ್ಲಾಪುರದ ಶಿವಶರಣೆ ತಾಯಿರುದ್ರಮ್ಮನವರ ಕೃಪಾಶೀರ್ವಾದದಿಂದ ಪುರಾಣಪ್ರವಚನ ಮಾಡುತ್ತಿದ್ದ ಈ ಸಹೋದರಿಯರು ಪುರಾಣಿಕರೆಂದೇ ಕೀರ್ತಿತರಾಗಿದ್ದಾರೆ. ಇವರ ಪುರಾಣಪ್ರವಚನ ಅತ್ಯಂತ ಹೃದಯಂಗಮ. ಇವರು ಪುರಾಣಿಕರಾಗಲು ತಾಯಿ ರುದ್ರಮ್ಮ ಶಿವಶರಣೆಯರ ಪ್ರೋತ್ಸಾಹವೇ ಮುಖ್ಯ ಕಾರಣವಾಗಿದೆ.

೮. **ಲಿಂ. ಶ್ರೀ ಚೆನ್ನಮಲ್ಲಿಕಾರ್ಜುನರವರು:** ಶಿವಾನುಭವ ಪ್ರವಚನಕಾರರಾಗಿ, ಉತ್ತಮ ವ್ಯಾಖ್ಯಾನಕಾರರಾಗಿ, ಪತ್ರಿಕಾ ಸಂಪಾದಕರಾಗಿ, ಗ್ರಂಥಕರ್ತರಾಗಿ, ಸಂಶೋಧಕರಾಗಿ, ಉಪಾಧ್ಯಾಯರಾಗಿ ಶಿರಾಳಕೊಪ್ಪದ ಚನ್ನಮಲ್ಲಪ್ಪ ಮಾಸ್ತರರ ಸೇವೆ ಅನ್ಯಾದೃಶ. ಹುಟ್ಟುವೈರಾಗ್ಯಶಾಲಿಗಳಾದ ಇವರು ನಡೆನುಡಿಗಳೆಲ್ಲದರಲ್ಲೂ ಆದರ್ಶಪ್ರಾಯರಾಗಿದ್ದರು. ನಡೆದಂತೆ ನುಡಿ, ನುಡಿದಂತೆ ನಡೆ ಎಂಬ ಮಾತು ಇವರಿಗೆ ಪೂರ್ಣ ಅನ್ವಯಿಸುತ್ತಿತ್ತು. ಹಾನಗಲ್ಲು ಕುಮಾರಸ್ವಾಮಿಗಳ ಹಾವೇರಿ ಹುಕ್ಕೇರಿ ಮಠದ ಶಿವಬಸವಸ್ವಾಮಿಗಳ ಪೂರ್ಣಕೃಪೆಗೆ ಪಾತ್ರರಾಗಿದ್ದ ಇವರ ವೀರಶೈವ ಸಮಾಜದ ಸೇವೆ ಗಣನೀಯವಾದುದು. ವೀರಶೈವ ಧರ್ಮದ ಸ್ವರೂಪವನ್ನು ಕೂಲಂಕಷವಾಗಿ ತಿಳಿದಿದ್ದ ಇವರ ವ್ಯಾಖ್ಯಾನಗಳು ಅನುಭವಪೂರ್ಣವಾಣಿಗಳಾಗಿ ಹೊರಬರುತ್ತಿದ್ದವು.

೯. **ತರಳಬಾಳುಜಗದ್ಗುರು ಶಿವಕುಮಾರ ಶಿವಾಚಾರ್ಯ ಸ್ವಾಮಿಗಳು, ಸಿರಿಗೆರೆ:** ಬಸವತತ್ತ್ವದ ಬಗ್ಗೆ ಅಧಿಕಾರಯುತವಾಗಿ ಮಾತನಾಡಬಲ್ಲ ಕೆಲವೇ ಜನ ಮಠಾಧಿಪತಿಗಳಲ್ಲಿ ಶ್ರೀ ತರಳಬಾಳುಶ್ರೀಗಳು ಒಬ್ಬರು. ಇವರು ಬಸವಣ್ಣನವರ ಬಗೆಗೆ ಮಾಡುವ ಪ್ರವಚನ ಸ್ತೋತ್ರಾರ್ಹವಾದುದು.

೧೦. **ಲಿಂ. ಕಬ್ಬೂರು ಶರಣರು, ಶಿರಾಳಕೊಪ್ಪ:** ಶಿರಾಳಕೊಪ್ಪದ ನಾಡಿನಲ್ಲಿ ಪ್ರಖ್ಯಾತ ಶಿವಾನುಭವಿಗಳಾಗಿ ಬೆಳಗಿದವರಲ್ಲಿ ಕಬ್ಬೂರು ಶರಣರೂ ಒಬ್ಬರು. ಹಾನಗಲ್ಲು ಕುಮಾರಸ್ವಾಮಿಗಳವರ ವರ್ಚಸ್ಸು ಇವರ ಮೇಲೆ ಅತ್ಯಧಿಕವಾಗಿತ್ತು. ಅವರ ಶಿವಾನುಭವ ಪ್ರವಚನ ಕಾರ್ಯಕ್ರಮಗಳು ಶಿರಾಳಕೊಪ್ಪದ ಸುತ್ತಮುತ್ತಣ ನಾಡಿನ ಜನಜೀವನದ ಮೇಲೆ ಮಹತ್ವದ ಪರಿಣಾಮ ಬೀರುವಂತಹವಾಗಿದ್ದವು.

೧೧. **ಆಸ್ಥಾನ ವಿದ್ವಾನ್ ಲಿಂ. ಪಿ. ಆರ್. ಕರಿಬಸವಶಾಸ್ತ್ರಿಗಳು, ಮೈಸೂರು :** 'ಕರ್ನಾಟಕ ಭಾಷಾರತ್ನಂ' ಎಂಬ ಗೌರವಾರ್ಹ ಬಿರುದನ್ನು ಸಂಪಾದಿಸಿದ್ದ ಮಹಾಪಂಡಿತರಾದ ಪಿ. ಆರ್. ಕರಿಬಸವಶಾಸ್ತ್ರಿಗಳು ಉತ್ತಮ ಬೋಧಕರಾಗಿ, ಗ್ರಂಥ ಸಂಪಾದಕರಾಗಿ, ಪತ್ರಿಕಾಕರ್ತರಾಗಿ ಮಾಡಿದ ಸೇವೆ ಅನುಪಮ. ಅಂತೆಯೇ ಇವರ ಧಾರ್ಮಿಕೋಪನ್ಯಾಸಗಳು ವಿದ್ವತ್ಪೂರ್ಣವಾಗಿದ್ದು ವಿಚಾರಪ್ರಚೋದಕಗಳಾಗಿರುತ್ತಿದ್ದವು.

**೧೨. ಆಸ್ಥಾನ ವಿದ್ವಾನ್ ಲಿಂ. ಎಸ್. ಆರ್. ಕರಿಬಸವಶಾಸ್ತ್ರಿಗಳು, ಮೈಸೂರು :** ಸಾಹಿತ್ಯಪರಿಜ್ಞಾನ, ವೇದಾಧ್ಯಯನಾದಿಗಳಲ್ಲಿ ಪರಿಣತ ಪಂಡಿತರೆಂದು ಖ್ಯಾತರಾಗಿದ್ದ ಶ್ರೀ ಕರಿಬಸವಶಾಸ್ತ್ರಿಗಳು ಲಿಂ. ಪಿ. ಆರ್. ಕರಿಬಸವಶಾಸ್ತ್ರಿಗಳ ಶಿಷ್ಯರು. ಗುರುವಿಗೆ ತಕ್ಕಶಿಷ್ಯರೆಂದು ಕೀರ್ತಿತರಾಗಿದ್ದ ಇವರೂ ಉತ್ತಮವರ್ಗದ ಬೋಧಕರಾಗಿ, ಗ್ರಂಥಕರ್ತೃಗಳಾಗಿ, ಗ್ರಂಥಸಂಪಾದಕರಾಗಿ, ಪತ್ರಿಕಾ ವ್ಯವಸಾಯಿಗಳಾಗಿ ಖ್ಯಾತಿವೆತ್ತವರು. ಇವರು ವೀರಶೈವ ಧರ್ಮತತ್ತ್ವಗಳ ಬಗೆಗೆ ಅಧಿಕಾರವಾಣಿಯಿಂದ ಮಾತನಾಡುವ ಮಹಾವಿದ್ವಾಂಸರೆನಿಸಿದ್ದರು.

**೧೩. ಆಸ್ಥಾನ ವಿದ್ವಾನ್ ಪಂಡಿತರತ್ನಂ ಲಿಂ. ಡಾ. ಬಿ. ಶಿವಮೂರ್ತಿಶಾಸ್ತ್ರಿಗಳು, ಬೆಂಗಳೂರು :** ಲಿಂ.ಪಿ.ಆರ್. ಕರಿಬಸವಶಾಸ್ತ್ರಿಗಳವರ ಶಿಷ್ಯರಲ್ಲೊಬ್ಬರಾದ ಬಿ. ಶಿವಮೂರ್ತಿಶಾಸ್ತ್ರಿಗಳು, ಶಿವಕೀರ್ತನ, ಪುರಾಣ ಪ್ರವಚನ, ಭಾಷಣ, ಲೇಖನಗಳಿಂದ ಕನ್ನಡನಾಡಿನಲ್ಲಿ ಪ್ರಸಿದ್ಧ ಪ್ರವಚನಕಾರರೆನಿಸಿದ್ದರು. ಗ್ರಂಥಸಂಪಾದನೆ, ಪತ್ರಿಕಾಸಂಪಾದನೆ, ಸಮಾಜ ಚಿಂತನೆ ಇವರ ಇನ್ನಿತರ ಪ್ರಮುಖ ಹವ್ಯಾಸಗಳು.

**೧೪. ಸರ್ವದರ್ಶನತೀರ್ಥ ಲಿಂ. ವೈ. ನಾಗೇಶಶಾಸ್ತ್ರಿಗಳು, ಬಳ್ಳಾರಿ:** ಉತ್ತಮವರ್ಗದ ಬೋಧಕರಾಗಿ, ಆಧುನಿಕಯುಗದ ದೊಡ್ಡ ಕವಿಗಳಾಗಿ, ಲೇಖಕರಾಗಿ, ಗ್ರಂಥಸಂಪಾದಕರಾಗಿ ಪ್ರಖ್ಯಾತರಾದ ಶ್ರೀ ನಾಗೇಶಶಾಸ್ತ್ರಿಗಳು ಉತ್ತಮವರ್ಗದ ಶಿವಾನುಭವ ಪ್ರವಚನಕಾರರಾಗಿದ್ದರು. ಇವರ ಶಿವಾನುಭವ ಪ್ರವಚನಗಳು ಆಬಾಲವೃದ್ಧರಿಗೆ ರಸದೌತಣಗಳಾಗಿರುತ್ತಿದ್ದವು. ಧಾರವಾಡದ ತ್ರಿವಿಧ ದಾಸೋಹಿ ಮೃತ್ಯುಂಜಯ ಸ್ವಾಮಿಗಳವರ ಪೂರ್ಣಕೃಪೆಗೆ ಪಾತ್ರರಾಗಿ ಇವರು ಕೊನೆಯುಸಿರು ಇರುವವರೆಗೂ ಶಿವಾನುಭವ ಪ್ರಸಾರ ವಿಷಯದಲ್ಲಿ ಅವಿಶ್ರಾಂತ ಸೇವೆ ಮಾಡಿದ ದೊಡ್ಡ ಪ್ರವಚನಕಾರರು.

**೧೫. ಲಿಂ. ಹಲಸಂಗಿ ಚನ್ನಮಲ್ಲಪ್ಪ (ಮಧುರಚೆನ್ನ) :** ಮಹಾ ಅನುಭವಿಗಳೂ, ಕವಿಗಳೂ, ಸಂಶೋಧಕರೂ ಎಂದು ಕೀರ್ತಿತರಾಗಿದ್ದ ಚನ್ನಮಲ್ಲಪ್ಪನವರು ಬಾಲ್ಯದಿಂದಲೂ ತಾವು ಓದಿದುದನ್ನು ಇನ್ನೊಬ್ಬರಿಗೆ ಸವಿಕಟ್ಟಾಗಿ ಹೇಳುವ ಉತ್ತಮ ಶಕ್ತಿಯನ್ನು ಸಂಪಾದಿಸಿಕೊಂಡೇ ಬೆಳೆದು ಬಂದವರು. ಸ್ವಲ್ಪಮಟ್ಟಿಗೆ ಇಂಗ್ಲೀಷ್ ಮತ್ತು ಸಂಸ್ಕೃತ ಜ್ಞಾನ ಪಡೆದಿದ್ದ ಇವರು ಶ್ರೇಷ್ಠವರ್ಗದ ಅನುಭವ ಮಾರ್ಗದ ಪ್ರವಚನಕಾರರೆನಿಸಿದ್ದರು. ಇವರ ಪ್ರವಚನ ಇವರ ಆಧ್ಯಾತ್ಮಿಕ ಸಾಧನೆಯ ಮಧುರಫಲವಾಗಿ ಎಲ್ಲರಿಗೂ ಸಿಹಿಯಾಗಿರುತ್ತಿತ್ತು.

**೧೬. ನಾಗನೂರು ಹಿರಿಯಮಠಾಧ್ಯಕ್ಷ ಲಿಂ. ಕಾಶೀನಾಥಶಾಸ್ತ್ರಿ:** ರಂಭಾಪುರಿ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯ ಸ್ವಾಮಿಗಳವರ ಪೂರ್ಣಕೃಪೆಗೆ ಪಾತ್ರರಾಗಿ ಶ್ರೀ ಶಾಸ್ತ್ರಿಗಳು ತಮ್ಮ ಉದ್ದಾಮ ಶಿವಾನುಭವಪ್ರವಚನ ಕಾರ್ಯಕ್ರಮಗಳಿಂದ ಖ್ಯಾತರಾಗಿದ್ದರು. ಇವರು ಲೇಖಕರಾಗಿ, ಗ್ರಂಥಕರ್ತರಾಗಿ, ಪತ್ರಿಕಾ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ ಹಿರಿಯ ವಿದ್ವಾಂಸರಲ್ಲೊಬ್ಬರು.

**೧೭. ಬೆಂಗಳೂರು ಸರ್ಪಭೂಷಣಮಠದ ಲಿಂ. ಶ್ರೀ ಮಹಾದೇವಸ್ವಾಮಿಗಳು:** ಶಿವಾನುಭವ ಪ್ರವಚನ, ಪುರಾಣ ಪ್ರವಚನಾದಿಗಳಲ್ಲಿ ಸರ್ಪಭೂಷಣ ಮಠಾಧ್ಯಕ್ಷರಾಗಿದ್ದ ಮಹಾದೇವ ಸ್ವಾಮಿಗಳದು ಬಹು ದೊಡ್ಡ ಹೆಸರು. ಇವರು ತಮ್ಮ ಶಿವಾನುಭವ ಪ್ರವಚನ ಪ್ರಚಾರದಿಂದ 'ಅಭಿನವಾಲ್ಲಮ' ಎಂದೇ ಕೀರ್ತಿತರಾಗಿದ್ದರು. ಇವರು ಬೆಂಗಳೂರು ಸರ್ಪಭೂಷಣ ಮಠಾಧ್ಯಕ್ಷರಾದ ಮೇಲೆ ತಮ್ಮ ಪ್ರವಚನ ಕಾರ್ಯಕ್ರಮಗಳಿಂದ ಬೆಂಗಳೂರಿನಲ್ಲಿ ಒಂದು ನೂತನ ಮನ್ವಂತರವನ್ನೇ ಉಂಟುಮಾಡಿದರೆಂದು ಹೇಳಲಾಗುತ್ತಿದೆ.

**೧೮. ವ್ಯಾಕರಣಾಚಾರ್ಯ ಪಂಡಿತ ಮಲ್ಲಿಕಾರ್ಜುನ ದೇವರು, ಹೊಸಮಠ, ಹಾವೇರಿ:** (ಈಗಿನ ಚಿತ್ರದುರ್ಗದ ಮುರುಘಾಮಠದ ನಿರಂಜನ ಜಗದ್ಗುರುಗಳು) ಶ್ರೀಗಳವರು ಬಹುಶ್ರುತ ವಿದ್ವಾಂಸರು. ಇವರು ತಮ್ಮ ತರ್ಕಬದ್ಧವಾದ ಶಿವಾನುಭವ ಪ್ರವಚನ ಕಾರ್ಯಕ್ರಮಗಳಿಂದ ವಿದ್ವಾಂಸರ ಲೋಕದಲ್ಲಿ ವಿಶೇಷವಾಗಿ ಕೀರ್ತಿತರಾಗಿದ್ದಾರೆ. ತಾರ್ಕಿಕಶೈಲಿಯಲ್ಲಿ ಸಾಧಾರಪೂರ್ವಕವಾಗಿ ವಿವರಣೆ ಮಾಡುತ್ತಿದ್ದ ಇವರ ಪ್ರವಚನ ಅನನ್ಯ ಸಾಧಾರಣವಾದುದು.

**೧೯. ದ್ಯಾಂಪುರದ ಲಿ. ಚೆನ್ನಕವಿಗಳು:** ೨೦ನೆಯ ಶತಮಾನದ ಪುರಾಣ ಕರ್ತೃಗಳಲ್ಲಿ ಚೆನ್ನಕವಿಗಳ ಹೆಸರು ದೊಡ್ಡದು. ಇವರು ಅನೇಕ ಪುರಾಣಗಳನ್ನು ಷಟ್ಪದಿಯಲ್ಲಿ ರಚಿಸಿದ್ದಾರೆ. ದೊಡ್ಡ ಪಂಡಿತರಲ್ಲದಿದ್ದರೂ ಉತ್ತಮ ಶಿವಾನುಭವಿಗಳು, ತಮ್ಮ ಶಿವಾನುಭವ ಸಂಜನಿತ ನಿರ್ಮಲಾಂತಃಕರಣದಿಂದ ವೀರಶೈವ ಶರಣ ಶರಣೆಯ ಪುರಾಣ ಪ್ರವಚನಾದಿಗಳನ್ನು ಅನೇಕ ವರ್ಷಗಳು ಮಾಡಿ, ಜನಮನದಲ್ಲಿ ಧರ್ಮ, ಸಂಸ್ಕೃತಿ, ಸಾಹಿತ್ಯ, ಅನುಭವಗಳ ಬೆಳಕನ್ನುಂಟು ಮಾಡಿದ್ದಾರೆ.

**೨೦. ಲಿಂ. ಪಂಡಿತ ಹುಕ್ಕೇರಿ ಸದಾಶಿವ ಶಾಸ್ತ್ರಿಗಳು:** ೨೦ನೆಯ ಶತಮಾನದ ಪುರಾಣಕರ್ತೃಗಳಲ್ಲಿ ಶ್ರೀ ಶಾಸ್ತ್ರಿಗಳು ಪ್ರಮುಖರು. ಸಂಸ್ಕೃತ, ಕನ್ನಡ ಭಾಷೆಗಳ ಮೇಲೆ ಹಿಡಿತವಿಟ್ಟುಕೊಂಡಿದ್ದ ಶಾಸ್ತ್ರಿಗಳು ಆಚಾರನಿಷ್ಠರೂ, ಶಿವಾನುಭವಿಗಳೂ ಎನಿಸಿದ್ದರು. ಅನೇಕ ವರ್ಷಗಳ ಕಾಲ ಉತ್ತರ ಕರ್ನಾಟಕದ ವಿವಿಧ ಕಡೆಗಳಲ್ಲಿ ಇವರು ಪುರಾಣಪ್ರವಚನ ಮಾಡಿ ಶಿವಾನುಭವದ ಬೆಳಕನ್ನು ಹರಡಿದ್ದಾರೆ.

**೨೧. ಪಗಡದಿನ್ನಿ ಬಸವರಾಜ ಶಾಸ್ತ್ರಿಗಳು, ಹುಬ್ಬಳ್ಳಿ :** ಹುಬ್ಬಳ್ಳಿ ಮೂರುಸಾವಿರಮಠದ ಆಶ್ರಯದಲ್ಲಿ ಶ್ರೀ ಶಾಸ್ತ್ರಿಗಳು ಮಾಡಿದ ಶಿವಾನುಭವ ಪ್ರಚಾರ ಸೇವೆ ಅನುಪಮವಾದುದು. ಕರ್ನಾಟಕ ಸಂಸ್ಕೃತೋಭಯ ಭಾಷಾವಿಶಾರದರೂ, ಆಚಾರ ವಿಚಾರಶೀಲರೂ ಎಂದು ಕೀರ್ತಿತರಾಗಿರುವ ಶಾಸ್ತ್ರಿಗಳು ಅತ್ಯುತ್ತಮ ಬೋಧಕರೂ ಶ್ರೇಷ್ಠವರ್ಗದ ಶಿವಾನುಭವ ಪ್ರವಚನ ಪಟುಗಳೂ ಎಂದು ಕೀರ್ತಿತರಾಗಿದ್ದಾರೆ. ಇವರು ಸಂಸ್ಕೃತದಲ್ಲಿ ಅನೇಕ ಗ್ರಂಥ ರಚನೆ ಮಾಡಿದ್ದಾರೆ.

**೨೨. ಕಜ್ಜರಿ ಲಿಂ. ಗುರುಮೂರ್ತಿ ಶಾಸ್ತ್ರಿಗಳು:** ಹಾನಗಲ್ಲು ಕುಮಾರಸ್ವಾಮಿಗಳವರಿಂದ ಸ್ಥಾಪಿಸಲ್ಪಟ್ಟ ಶಿವಯೋಗ ಮಂದಿರಕ್ಕೆ ವಿದ್ವಾಂಸರಾದ ಶ್ರೀ ಶಾಸ್ತ್ರಿಗಳ ಸೇವೆ ಅನೇಕ ವರ್ಷಗಳು ಸಂದಿದೆ. ಇವರು ನಡೆಸಿಕೊಡುತ್ತಿದ್ದ ಪುರಾಣ ಪ್ರವಚನ ಕಾರ್ಯಕ್ರಮಗಳು ಅನುಭವವಾಣಿಗಳಾಗಿ ಹೊರಬರುತ್ತಿದ್ದವು. ರೇವಣಸಿದ್ಧೇಶ್ವರ ಪುರಾಣಪ್ರವಚನದಲ್ಲಿ ಬಹುಸಮರ್ಥರೆನಿಸಿದ್ದರು.

**೨೩. ಪಂಡಿತ ನಾಗಭೂಷಣ ಶಾಸ್ತ್ರಿಗಳು, ಧಾರವಾಡ:** ಅಖಿಲಭಾರತ ಶಿವಾನುಭವ ಸಂಸ್ಥೆಯಿಂದ ನಡೆಯಿಸಲ್ಪಡುವ ಸಾವಧಾನ ಪತ್ರಿಕೆಯ ಸಂಪಾದಕರಾಗಿರುವ ಶ್ರೀ ಶಾಸ್ತ್ರಿಗಳು ಮಹಾವಿದ್ವಾಂಸರು, ಕರ್ನಾಟಕ ಸಂಸ್ಕೃತೋಭಯ ಭಾಷಾವಿಶಾರದರು. ಧಾರವಾಡ ಲಿಂ.ಮೃತ್ಯುಂಜಯ ಸ್ವಾಮಿಗಳವರ ಕೃಪೆಗೆ ಪಾತ್ರರಾಗಿರುವ ಶಾಸ್ತ್ರಿಗಳ ಶಿವಾನುಭವ ಪ್ರವಚನ, ಪುರಾಣ ಪ್ರವಚನಗಳು ವಿದ್ವತ್ಪೂರ್ಣವಾದವುಗಳು.

**೨೪. ನವಕಲ್ಯಾಣ ಮಠದ ಕುಮಾರಸ್ವಾಮಿಗಳು, ಧಾರವಾಡ :** ಆಧುನಿಕ ಕನ್ನಡನಾಡಿನ ವಿಮರ್ಶಕರು, ಲೇಖಕರು, ಗ್ರಂಥಕರ್ತರಲ್ಲಿ ಕುಮಾರಸ್ವಾಮಿಗಳ ಹೆಸರು ಬಹಳ ದೊಡ್ಡದು. ಕನ್ನಡ, ಇಂಗ್ಲೀಷ್ ಭಾಷೆಗಳಲ್ಲಿ ಪೂರ್ಣಪಾಂಡಿತ್ಯ ಗಳಿಸಿರುವ ಶ್ರೀಗಳವರ ಉಪನ್ಯಾಸಗಳು ವಿದ್ವಾಂಸ ಲೋಕದಲ್ಲಿ ಬಹಳ ಹೆಸರು ಪಡೆದಿವೆ. ಈ ದೃಷ್ಟಿಯಿಂದ ಇವರಿಗೆ ಅಂತರರಾಷ್ಟ್ರೀಯ ಗೌರವವಿದೆ ಇವರ ಇಂಗ್ಲೀಷ್ ಭಾಷಣದ ಪ್ರವಚನ ಕಾರ್ಯಕ್ರಮಗಳು ದೇಶವಿದೇಶಗಳ ವಿದ್ವಾಂಸರ ಗಮನಸೆಳೆದಿವೆ. ಇವರ ವೀರಶೈವ ದರ್ಶನ, ಮುಂಕಣ್, ಮೊನೆಕಣ್, ಕಾಲಪ್ರವಾಹ ಮುಂತಾದ ಗ್ರಂಥಗಳ ಲೇಖನಗಳೆಲ್ಲ ಇವರ ಪ್ರವಚನಗಳ ಸಾರ ಸಂಗ್ರಹಗಳೇ ಆಗಿವೆ. ಇವರ ಅನೇಕ ಇಂಗ್ಲೀಷ್ ಗ್ರಂಥಗಳು ದೇಶವಿದೇಶಗಳಲ್ಲಿ ಪ್ರಖ್ಯಾತಿ ಹೊಂದಿವೆ.

**೨೫. ಯಾದಗಿರಿ ಚಂದ್ರಶೇಖರ ಶಾಸ್ತ್ರಿ:** ಬಸವಣ್ಣನವರ ಬಗೆಗೆ ಅಧಿಕಾರಿಯುತವಾಗಿ ಪ್ರವಚನ ಮಾಡುವವರಲ್ಲಿ ಶ್ರೀ ಶಾಸ್ತ್ರಿಗಳು ಒಬ್ಬರು.ಇವರು ಒಳ್ಳೆಯ ಸಂಸ್ಕೃತ ಭಾಷಾಬೋಧಕರಾಗಿ,ಗ್ರಂಥಕರ್ತೃಗಳಾಗಿ ಪುರಾಣ ಪ್ರವಚನಪಟುಗಳಾಗಿ ಭಾಷಣಕಾರರಾಗಿ ಮಾಡಿದ ಸೇವೆ ದೊಡ್ಡದು.

**೨೬. ಡಾ॥ ಪುಟ್ಟರಾಜ ಗವಾಯಿಗಳು,ವೀರೇಶ್ವರಾಶ್ರಮ,ಗದಗ:** ಹುಟ್ಟುಗುರುಡರಾದ ಶ್ರೀ ಪುಟ್ಟರಾಜ ಗವಾಯಿಗಳು ಲಿಂ. ಪಂಚಾಕ್ಷರಿ ಗವಾಯಿಗಳ ಶಿಷ್ಯರೆನಿಸಿ ಖ್ಯಾತ ಸಂಗೀತಗಾರರಾಗಿದ್ದಾರೆ. ಅಲ್ಲದೆ ನಾಟಕ, ಪುರಾಣ ಕರ್ತೃಗಳೆನಿಸಿದ್ದಾರೆ. ಶ್ರೇಷ್ಠಮಟ್ಟದ ಪ್ರವಚನಕಾರರು. ಆಚಾರಶುದ್ಧಿಯಿಂದ ಕ್ರಿಯಾಶುದ್ಧಿಯೆಂದು ನಂಬಿ ಕಟ್ಟುನಿಟ್ಟಾದ ಆಚಾರವಿಚಾರ ಸಂಹಿತೆಗಳಿಂದ ಜೀವಿಸುತ್ತಿರುವ ಇವರು ಒಳ್ಳೆಯ ಪ್ರವಚನ ಪಟುಗಳೆನಿಸಿ ಖ್ಯಾತಿಪೆತ್ತಿದ್ದಾರೆ. ಇವರ ಕೀರ್ತನೆಗಳು ನವರಸಭರಿತವಾದವುಗಳಾಗಿ ಜನಪ್ರೀತಿ ಗಳಿಸಿವೆ.

**೨೭. ಧರ್ಮರತ್ನಾಕರ ಲಿಂ.ಶಂಕರಶಾಸ್ತ್ರಿಗಳು,ಗದಗ:** ಕರ್ನಾಟಕ ಸಂಸ್ಕೃತೋಭಯ ಭಾಷಾವಿಶಾರದರಾದ ಶ್ರೀ ಶಾಸ್ತ್ರಿಗಳು ಉತ್ತಮವರ್ಗದ ಬೋಧಕರು ಮತ್ತು ಲೇಖಕರು. ಇವರ ವೀರಶೈವ ಧಾರ್ಮಿಕ ಪ್ರವಚನಗಳು ವಿದ್ವಾಂಸ ಲೋಕದಲ್ಲಿ ಅಪಾರ ಮೆಚ್ಚುಗೆ ಗಳಿಸಿದ್ದವು.

**೨೮. ಶಿವಕಥಾವಿದ್ವಾನ್ ಲಿಂ. ಮೈಸೂರು ಶಿವಪ್ಪಶಾಸ್ತ್ರಿಗಳು:** ಶಿವಕಥಾಪ್ರಪಂಚದಲ್ಲಿ ಮೈಸೂರು ಶಿವಪ್ಪಶಾಸ್ತ್ರಿಗಳ ಹೆಸರು ದೊಡ್ಡದು. ಪ್ರತ್ಯುತ್ಪನ್ನಮತಿಗಳಾದ ಇವರು ನಿಂತ ನಿಂತಲ್ಲಿ ಪದ್ಯಕಟ್ಟಿ ತಾಲಲಯಬದ್ಧವಾಗಿ ಹಾಡಿ ಜನಮನತಣಿಸುವ ಅದ್ಭುತಶಕ್ತಿ ಪಡೆದಿದ್ದರು. ಅವರು ರಾಮರಸಕುಡಿದು ಶಿವಕಥೆಗೆ ನಿಂತರೆ ತಮ್ಮನ್ನು ತಾವು ಮರೆತು ಅಭಿನಯವಿಶಿಷ್ಟವಾಗಿ ಶಿವಕಥೆ ಮಾಡಿ ಸಮಸ್ತಜನಮನೋಭೂಮಿಕೆಯಲ್ಲಿ ಆನಂದದ ಹೊನಲು ಹರಿಸುತ್ತಿದ್ದರು. ಇವರ ಕಂಠಶ್ರೀಗೆ ಸಮಾನರಾದವರು ಇನ್ನೊಬ್ಬರು ಹುಟ್ಟಿಲ್ಲವೆಂದು ಜನ ಈಗಲೂ ಕೊಂಡಾಡುತ್ತಾರೆ.

**೨೯. ಸದ್ಗುರು ಲಿಂಗಾನಂದ ಸ್ವಾಮಿಗಳು:** ಬಸವಾದಿ ಪ್ರಮಥರ ತತ್ತ್ವಗಳನ್ನು ಸಮರ್ಥವಾಗಿ ಪ್ರತಿಪಾದನೆ ಮಾಡಿ ಜನಮನದಲ್ಲಿ ಬಸವಣ್ಣನವರ ಆಳ್ತನದ ಬಗೆಗೆ ಸ್ಪಷ್ಟಚಿತ್ರವನ್ನು ಮೂಡಿಸುವುದರಲ್ಲಿ ಕೃತಕೃತ್ಯರಾಗಿರುವ ಲಿಂಗಾನಂದ ಸ್ವಾಮಿಗಳು ಬಹು ಶ್ರುತ ವಿದ್ವಾಂಸರಲ್ಲಿ ಒಬ್ಬರೆನಿಸಿದ್ದಾರೆ. ಅಸ್ಖಲಿತವಾಣಿ, ಸುಂದರೋಪಮಾನಗಳ ಜೋಡಣೆ, ತರ್ಕಬದ್ಧ ಶೈಲಿ ಇವು ಇವರ ಪ್ರವಚನದ ವೈಶಿಷ್ಟ್ಯಗಳಾಗಿವೆ.

**೩೦. ಮಾತೆ ಮಹಾದೇವಿಯವರು:** ಸದ್ಗುರು ಲಿಂಗಾನಂದರ ಶಿಷ್ಯೆಯರಾಗಿ ದೇಶವಿದೇಶಗಳಲ್ಲಿ ಬಸವತತ್ತ್ವ ಪ್ರಕಾಶವನ್ನು ಹರಡುತ್ತಿರುವವರಲ್ಲಿ ಶ್ರೀಮಾತೆ ಮಾಹಾದೇವಿಯವರ ನಿಲುವು ಅನ್ಯಾದೃಶ.ನೇರವಾಗಿ ಹೃದಯಕ್ಕೆ ಮುಟ್ಟುವ ಅನುಭವ

ಪೂರ್ಣ ವಾಣಿಯಿಂದ ಸಮುಪಚಿತ ಸುಂದರೋಪಮಾನಗಳ ಮೂಲಕ ಕರ್ನಾಟಕದ ಮೂಲೆಮೂಲೆಗಳಲ್ಲಿ ಪ್ರವಚನ ಕಾರ್ಯ ಕೈಕೊಂಡಿರುವ ಶ್ರೀ ಮಾತೆಯವರು ಉತ್ತಮ ಕೀರ್ತಿಯನ್ನು ಸಂಪಾದಿಸಿದ್ದಾರೆ.

೩೧. **ಕಾಡು ಸೆಟ್ಟಿಹಳ್ಳಿ ಲಿಂ. ಪಂಚಾಕ್ಷರಗವಾಯಿಗಳು:** ಹುಟ್ಟುಗುರುಡರಾದ ಹಾನಗಲ್ ತಾಲೂಕು ಕಾಡುಸೆಟ್ಟಿ ಹಳ್ಳಿ ಪಂಚಾಕ್ಷರ ಗವಾಯಿಗಳು ಕರ್ನಾಟಕ–ಹಿಂದುಸ್ತಾನೀ ಸಂಗೀತ ಪ್ರಪಂಚದಲ್ಲಿ ಮಹಾಕ್ರಾಂತಿಯನ್ನು ಮಾಡಿದ ಮಹಾಪುರುಷರು. ಹಾನುಗಲ್ಲು ಕುಮಾರಸ್ವಾಮಿಗಳವರ ಕೃಪೆಗೆ ಬಾಲ್ಯದಲ್ಲಿಯೇ ಪಾತ್ರರಾದ ಶ್ರೀ ಗವಾಯಿಗಳು ಶ್ರೇಷ್ಠ ಸಂಗೀತದೊಡನೆ ಕೀರ್ತನ ಪುರಾಣ ಪ್ರವಚನಗಳನ್ನು ಮಾಡಿ ಅನುಪಮ ಸೇವೆ ಸಲ್ಲಿಸಿ ವೀರಶೈವ ಶರಣತತ್ತ್ವ ಪ್ರಚಾರ ಮಾಡಿದ್ದಾರೆ. ೨೦ನೆಯ ಶತಮಾನ ದಲ್ಲಿ ಉತ್ತರ ಕರ್ನಾಟಕದಲ್ಲಿ ಸಂಗೀತ ಪ್ರಪಂಚದಲ್ಲಿ ಅದ್ಭುತ ಕ್ರಾಂತಿಯನ್ನು ಮಾಡಿದ ಕೀರ್ತಿ ಇವರದಾಗಿದೆ.

೩೨. **ಶ್ರೀ ನಿ.ಪ್ರ.ಮುಧೋಳದ ಮೃತ್ಯುಂಜಯ ಸ್ವಾಮಿಗಳು:** ಕಾಶಿಯಲ್ಲಿ ಅನೇಕ ವರ್ಷಗಳ ಪ್ರೌಢ ವ್ಯಾಸಂಗ ಮಾಡಿ ತಾಯ್ನಾಡಿಗೆ ಮರಳಿದ ಶ್ರೀಗಳವರು ಶರಣತತ್ತ್ವಪ್ರವಚನ ಮಾಡುವಲ್ಲಿ ನಿಷ್ಣಾತರು. ಪ್ರೌಢ ಶೈಲಿಯಲ್ಲಿ ವಿದ್ವಾಂಸರನ್ನು, ಸುಲಭ ಶೈಲಿಯಲ್ಲಿ ಸಾಮಾನ್ಯರನ್ನು ತಲೆದೂಗಿಸಬಲ್ಲ ಪ್ರವಚನ ಕಲೆ ಶ್ರೀಗಳಿಗೆ ಒಲಿದು ಬಂದಿದೆ. ಕಂಚಿನಂತಹ ಕಂಠದಿಂದ ಪ್ರವಚನ ಪ್ರಾರಂಭಿಸಿದರೆ ಸಭೆ ಮಂತ್ರ ಮುಗ್ಧತೆಯಿಂದ ಕೂಡಿರುತ್ತದೆನ್ನಬಹುದು.

೩೩. **ಗುಡಿಗೇರಿ ಬಸವಲಿಂಗ ಶಾಸ್ತ್ರಿಗಳು:** ಬೋಧನಾಸಾಮರ್ಥ್ಯ, ಪುರಾಣ ಪ್ರವಚನಗಳ ಶಕ್ತಿಗಳಿಂದ ತಮ್ಮ ಸ್ಥಾನ ಭದ್ರಪಡಿಸಿಕೊಂಡಿರುವ ಶ್ರೀ ಶಾಸ್ತ್ರಿಗಳು ಆಚಾರನಿಷ್ಠರು, ಸುಸಂಸ್ಕೃತರು. ಶಾಸ್ತ್ರೀಯವಾಗಿ ವಿಷಯ ಪ್ರತಿಪಾದಿಸುವಲ್ಲಿ ಒಲವುಳ್ಳವರು. ಚಿತ್ರದುರ್ಗ, ಹಾವೇರಿ ಮುರುಘಾಮಠಗಳಲ್ಲಿ ಅನೇಕ ವರ್ಷ ಇವರ ಪುರಾಣ ಪ್ರವಚನಗಳು ನಡೆದಿವೆ.

೩೪. **ಶ್ರೀ ನಿ. ಪ್ರ. ರುದ್ರಸ್ವಾಮಿಗಳು, ಕರ್ಜಗಿ:** ಧಾರವಾಡದ ಮುರುಘಾಮಠದ ಮೃತ್ಯುಂಜಯ ಮಹಾಸ್ವಾಮಿಗಳವರ ಕೃಪೆಗೆ ಬಾಲ್ಯದಿಂದಲೂ ಪಾತ್ರರಾದ ಶ್ರೀಗಳು ಕರ್ಜಗಿ ವಿರಕ್ತಮಠಾಧ್ಯಕ್ಷರಾಗಿ ತಮ್ಮ ಪುರಾಣಪ್ರವಚನ, ಶಿವಾನುಭವ ಪ್ರವಚನ ಕಾರ್ಯಕ್ರಮಗಳಿಂದ ಧಾರ್ಮಿಕ ಲೋಕಕ್ಕೆ ಚಿರಪರಿಚಿತರಾಗಿದ್ದಾರೆ.

೩೫. **ಪಂಡಿತ ಚನ್ನಪ್ಪ ಎರೇಸೀಮೆ, ಬೆಂಗಳೂರು:** ಉತ್ತಮ ವರ್ಗದ ಬೋಧಕರಾಗಿ, ಲೇಖಕರಾಗಿ,ಪತ್ರಿಕಾ ಸಂಪಾದಕರಾಗಿ, ಗ್ರಂಥಕರ್ತರಾಗಿ ಸಮಾಜಸೇವೆಯನ್ನು ಮಾಡಿದ ಪಂಡಿತರು ಕಳೆದ ೪೦ ವರ್ಷ ಮೊದಲ್ಗೊಂಡು ತಮ್ಮ ಕೀರ್ತನೆ, ಪುರಾಣಪ್ರವಚನಗಳಿಂದ ಕರ್ನಾಟಕದಲ್ಲಿ ಖ್ಯಾತರಾಗಿದ್ದಾರೆ. ಚಿತ್ರದುರ್ಗ, ಸಿದ್ಧಗಂಗೆ, ಬೆಂಗಳೂರು ಮೊದಲಾದ ಸ್ಥಳಗಳಲ್ಲಿ ಇವರ ಅನೇಕ ಕೀರ್ತನೆ, ಪುರಾಣ ಪ್ರವಚನಗಳು ನಡೆದಿವೆ. ಬೆಂಗಳೂರು ಆಕಾಶವಾಣಿಯಲ್ಲೂ ಇವರ ಕೀರ್ತನೆ ಮತ್ತು ಭಾಷಣ ಕಾರ್ಯಕ್ರಮಗಳು ಅನೇಕ ಸಲ ಬಿತ್ತರಗೊಂಡಿವೆ.

೩೬. **ಹುಕ್ಕೇರಿ ಬಾಳಪ್ಪ:** ಶರಣರ ವಚನಗಳು ಮತ್ತು ಜಾನಪದ ಸಾಹಿತ್ಯವನ್ನು ತಮ್ಮ ಸುಶ್ರಾವ್ಯವಾದ ಕಂಠದ ಮೂಲಕ ಕಳೆದ ನಾಲ್ವತ್ತು ನಾಲ್ವತ್ತೈದು ವರ್ಷಗಳಿಂದ ಹಾಡಿ, ಕನ್ನಡಿಗರನ್ನು ತಣಿಸಿದ ಹುಕ್ಕೇರಿ ಬಾಳಪ್ಪನವರ ಕಲಾಸೇವೆ ಅನುಪಮವಾದುದು.ಕನ್ನಡನಾಡಿನ ಸಮಸ್ತ ವೀರಶೈವ ಮಠಾಧಿಪತಿಗಳು ಬಾಳಪ್ಪನವರ ಸೇವೆಯನ್ನು ಪಡೆದಿದ್ದಾರೆನ್ನಬಹುದು.

೩೭. **ಲಿಂ. ಪಗಡದಿನ್ನಿ ನನ್ನಪ್ಪಶಾಸ್ತ್ರಿಗಳು, ಸಿಂಧನೂರು :** ಇವರು ಒಳ್ಳೆಯ ಪ್ರವಚನ ಪಟುಗಳು. ನವಮುಗ್ಧ ಲೀಲೆ, ತ್ರಿಷಷ್ಠಿ ಪುರಾತನರ ಚರಿತ್ರೆ, ವೇದಾಂತಪಟಲ, ಶಿಖಾಧಾರಣ ಖಂಡನ ಮುಂತಾದ ಗ್ರಂಥರಚನೆ ಮಾಡಿರುವುದರ ಜೊತೆಗೆ ನೈಜಾಂ ಕರ್ನಾಟಕಭಾಗದಲ್ಲಿ ಇವರ ಪುರಾಣಪ್ರವಚನಕಾರ್ಯಕ್ರಮಗಳು, ಶಿವಾನುಭವಪ್ರವಚನ ಕಾರ್ಯಕ್ರಮಗಳು ವಿಶೇಷವಾಗಿ ಆಗಿವೆ.

೩೮. **ಉಣಕಲ್ಲು ಶಿಖಾಮಠದ ವಿರೂಪಾಕ್ಷಶಾಸ್ತ್ರಿ :** ಉದ್ದಾಮ ಪಂಡಿತರು, ತರ್ಕಶಾಸ್ತ್ರಜ್ಞರು. ಇವರು ಎರಡು ಮೂರು ಗ್ರಂಥರಚನೆ ಮಾಡಿರುವುದಲ್ಲದೆ ಉತ್ತಮ ಪುರಾಣಪ್ರವಚನಕಾರರೆಂದು ಹುಬ್ಬಳ್ಳಿ ಧಾರವಾಡ ಭಾಗದಲ್ಲಿ ಪ್ರಖ್ಯಾತರಾಗಿದ್ದಾರೆ.

೩೯. **ಆಸ್ಥಾನವಿದ್ವಾನ್ ನಂಜುಂಡಾರಾಧ್ಯರು, ಮೈಸೂರು:** ಉತ್ತಮ ಸಂಸ್ಕೃತ ಬೋಧಕರು. ಅನೇಕ ಗ್ರಂಥರಚನೆ, ಸಂಶೋಧನೆ, ಸಂಪಾದನೆಗಳಿಂದ ಪ್ರಖ್ಯಾತರಾದ ಇವರು ಮೈಸೂರು ಮಹಾರಾಜಾ ಸಂಸ್ಕೃತ ಕಾಲೇಜಿನ ಶಕ್ತಿವಿಶಿಷ್ಟಾದ್ವೈತ ಮಹಾ ಮಹೋಪಾಧ್ಯಾಯರಾಗಿ ನಿವೃತ್ತಿಗೊಂಡು ಈಗ ಸಾಹಿತ್ಯ ಸೇವೆ ಮಾಡುತ್ತಿದ್ದಾರೆ. ಪುರಾಣಪ್ರವಚನ, ಉಪನ್ಯಾಸಗಳಿಂದ ತಮ್ಮ ಜ್ಞಾನವನ್ನು ಜನತೆಯಲ್ಲಿ ಹರಡಿದ್ದಾರೆ.

೪೦. **ಪಂಡಿತ ಕೆ. ಪಿ. ಶಿವಲಿಂಗಯ್ಯ, ಬೆಂಗಳೂರು:** ಶ್ರೀಯುತರು ಜೂನಿಯರ್ ಕಾಲೇಜೊಂದರ ಶಿಕ್ಷಕರಾಗಿದ್ದಾರೆ. ಅನೇಕ ಗ್ರಂಥರಚನೆ ಮಾಡಿದ ಇವರು ಪುರಾಣಪ್ರವಚನ, ಭಾಷಣ, ಲೇಖನಗಳಿಂದ ಕರ್ನಾಟಕದಲ್ಲಿ ಪ್ರಸಿದ್ಧರಾಗಿದ್ದಾರೆ. ಶೂನ್ಯ ಸಂಪಾದನೆಯ ಪ್ರವಚನ ಇವರಿಗೆ ಅಚ್ಚು ಮೆಚ್ಚು. ಇವರ ಸೇವೆಯನ್ನು ಗಮನಿಸಿ ೧೯೮೦ರಲ್ಲಿ ಸಾರ್ವಜನಿಕರು ಇವರಿಗೆ ಸನ್ಮಾನ ಮಾಡಿದ್ದಾರೆ.

**೪೧. ಲಿಂ. ಶ್ರೀ ಶಿವದೇವ ಶಾಸ್ತ್ರಿ, ದೊಡ್ಡಬಳ್ಳಾಪುರ:** ಪಂಡಿತರೂ, ನಾಟ್ಯಕಲಾಕೋವಿದರೂ ಎನಿಸಿದ್ದ ಶಾಸ್ತ್ರಿಗಳು ಉತ್ತಮ ಸಂಗೀತದೊಡನೆ ಶಿವಕೀರ್ತನೆಗಳನ್ನು ಮಾಡುತ್ತ ಶರಣತತ್ತ್ವ ಪ್ರಚಾರ ಮಾಡಿದ್ದಾರೆ.ಮೈಸೂರಿನ ಪ್ರಸಿದ್ಧ ಕೀರ್ತನ ಕಾರರಾದ ಲಿಂ. ಶಿವಪ್ಪ ಶಾಸ್ತ್ರಿಗಳ ನಂತರ ಇವರ ಶಿವಕೀರ್ತನಗಳೇ ಪ್ರಸಿದ್ಧವಾದವುಗಳು.

**೪೨. ಹುಣಸಘಟ್ಟದ ಶ್ರೀ ನಂಜುಂಡಾರಾಧ್ಯರು:** ಶಿವಕಥೆಗಳನ್ನು ಮಾಡುಡುವುದರಲ್ಲಿ ಬಲ್ಲಿದರು. ಭಕ್ತಿಪ್ರಧಾನವಾದ ಅನೇಕ ಕಥೆಗಳನ್ನು ಕರ್ನಾಟಕವನ್ನೆಲ್ಲ ಸುತ್ತಿ ಮಾಡಿದ್ದಾರೆ. ಶ್ರೀ ಎಚ್. ಎಸ್. ಶಿವಲಿಂಗಸ್ವಾಮಿ ಹಿರೇಮಠ ಅವರು ಇವರ ಮಕ್ಕಳು.

**೪೩. ಶ್ರೀ ಶಿವಲಿಂಗಸ್ವಾಮಿ ಹಿರೇಮಠ:** ಬಾಲ್ಯದಲ್ಲಿ ನಾಟಕ ಕಲೆಯಲ್ಲಿ ಆಸಕ್ತಿ ವಹಿಸಿದ್ದ ಇವರು ಅನಂತರ ತಮ್ಮ ತಂದೆ ಹುಣಸ ಘಟ್ಟದ ನಂಜುಂಡಾರಾಧ್ಯರಿಂದ ಕೀರ್ತನ ಕಲೆಯನ್ನು ಕಲಿತು ಕರ್ನಾಟಕದಲ್ಲೆಲ್ಲ ಸಂಚರಿಸಿ ಕೀರ್ತನ ಮಾಡಿ ಪ್ರಸಿದ್ಧಿ ಪಡೆದಿದ್ದಾರೆ. ಬೆಂಗಳೂರು ಆಕಾಶವಾಣಿಯೂ ಇವರ ಎಷ್ಟೋ ಕಥೆಗಳನ್ನು ಪ್ರಸಾರ ಮಾಡಿದೆ. ಚಿತ್ರದುರ್ಗ, ಬಾಳೆ ಹೊನ್ನೂರು ಶ್ರೀಗಳವರಿಂದ ಸನ್ಮಾನಿತರಾಗಿ ಅನೇಕ ಬಿರುದು. ಮೆಡಲ್‌ಗಳನ್ನು ಪಡೆದಿದ್ದಾರೆ.

**೪೪. ಲಿಂ. ಪಂಡಿತ ಹೆಚ್. ಎಂ. ರಾಮಾರಾಧ್ಯ ಬೆಂಗಳೂರು :** ಉತ್ತಮ ಬೋಧಕರೂ, ಗಾಯಕಗರೂ, ಲೇಖಕರೂ, ಗ್ರಂಥಕರ್ತಕರೂ ಆಗಿ ಖ್ಯಾತಿಗೊಂಡಿದ್ದ ರಾಮಾರಾಧ್ಯರು ಶಿವಕೀರ್ತನಕಲೆಯಲ್ಲೂ ನಿಷ್ಣಾತರಾಗಿದ್ದರು. ಸುಶ್ರಾವ್ಯವಾದ ಕಂಠದಿಂದ ಪುರಾಣ ಪ್ರವಚನ ಮಾಡುವುದು ಇವರ ಹವ್ಯಾಸಗಳಲ್ಲಿ ಒಂದು. ಇವರು ಅನೇಕ ಗೀತರೂಪಕಗಳನ್ನು ರಚಿಸಿ ಯಶಸ್ವಿಯಾಗಿ ಪ್ರದರ್ಶನಗೊಳಿಸುತ್ತಿದ್ದರು.

**೪೫. ಗಮಕ ಕಲಾನಿಧಿ ಜೋಳದ ರಾಶಿ ದೊಡ್ಡನ ಗೌಡರು:** ಉತ್ತಮ ಮಟ್ಟದ ಗಮಕಿಗಳೂ, ಪುರಾಣ ಪ್ರವಚನಕಾರರೂ ಆಗಿ ನಾಡಿನಾದ್ಯಂತ ಖ್ಯಾತಿಗೊಂಡಿರುವ ದೊಡ್ಡನ ಗೌಡರು ಕವಿಗಳೂ ಆಗಿದ್ದಾರೆ. ಸುಶ್ರಾವ್ಯವಾದ ಕಂಠಶ್ರೀಯಿಂದ ಇವರು ಮಾಡುವ ಶೂನ್ಯಸಂಪಾದನೆಯ ಪ್ರವಚನ ಜನತೆಯಲ್ಲಿ ಆಶಾದೀಪವನ್ನು ಹೊತ್ತಿಸುವಂತಿರುತ್ತದೆ. ಇದಲ್ಲದೆ ಇವರು ಉತ್ತಮ ವರ್ಗದ ನಟರೂ, ನಾಟಕಕರ್ತೃಗಳೂ ಆಗಿದ್ದಾರೆ. ಧಾರವಾಡದ ಲಿಂ.ಮೃತ್ಯುಂಜಯ ಸ್ವಾಮಿಗಳವರ ಕೃಪೆಗೆ ಪಾತ್ರರಾದ ಇವರ ಕಲಾಸೇವೆ ಅನುಪಮವಾದುದು.

**೪೬. ಶ್ರೀ ಸಿ. ವ. ಚೆನ್ನಬಸವೇಶ್ವರ, ಬಳ್ಳಾರಿ:** ಒಳ್ಳೆಯ ಲೇಖಕರೂ, ಗ್ರಂಥಕರ್ತೃಗಳೂ,ಗ್ರಂಥಸಂಪಾದಕರೂ ಆಗಿರುವ ಚೆನ್ನಬಸವೇಶ್ವರರು ಪುರಾಣ ಪ್ರವಚನದಲ್ಲಿ ಬಲ್ಲಿದರು. ಬಳ್ಳಾರಿ ಪ್ರಾಂತದಲ್ಲಿ ಇವರ ಅನೇಕ ಕಾರ್ಯಕ್ರಮಗಳು ನಡೆಯುತ್ತಿರುತ್ತವೆ.

**೪೭. ಶ್ರೀ ರೇವಣಸಿದ್ಧೇಶ್ವರ ಶಾಸ್ತ್ರಿ:** ಗದುಗಿನ ಡಾ॥ ಪುಟ್ಟರಾಜ ಗವಾಯಿಗಳಲ್ಲಿ ಸಂಗೀತಾಭ್ಯಾಸಮಾಡಿ, ಕೀರ್ತನ ಕಲೆಯನ್ನು ಮೈಗೂಡಿಸಿಕೊಂಡಿರುವ ಶ್ರೀಯುತರು ಕರ್ನಾಟಕದಲ್ಲೆಲ್ಲ ಸಂಚರಿಸಿ ಶಿವಕೀರ್ತನೆ ಮಾಡುತ್ತಿದ್ದಾರೆ. ಇವರು ಉತ್ತಮ ವರ್ಗದ ನಟರೂ ಆಗಿದ್ದಾರೆ. ಚಲನಚಿತ್ರವೊಂದರಲ್ಲಿ ನಟಸಿರುವುದಾಗಿ ತಿಳಿದು ಬರುತ್ತದೆ.

**೪೮. ಶ್ರೀ ಬಿ. ಮಹಾದೇವ ಶಾಸ್ತ್ರಿ, ಬೆಂಗಳೂರು:** ಕೀರ್ತನೆ ಕಲೆಯನ್ನು ಅಭ್ಯಾಸ ಮಾಡಿ ಬೆಂಗಳೂರು ಸುತ್ತಮುತ್ತಣ ಪ್ರದೇಶದಲ್ಲಿ ಶಿವಕೀರ್ತನೆ ಪುರಾಣ ಪ್ರವಚನ ಮಾಡುತ್ತಿರುವ ಮಹದೇವ ಶಾಸ್ತ್ರಿ ಒಳ್ಳೆಯ ಗಮಕಿಗಳೂ ಆಗಿದ್ದಾರೆ.

**೪೯. ಶಿವಯೋಗ ಮಂದಿರದ ಲಿಂ. ಬಸವಲಿಂಗ ಶಾಸ್ತ್ರಿಗಳು:** ಸುಮಾರು ೪೦–೫೦ ವರ್ಷಗಳ ಹಿಂದೆ ಕೀರ್ತನ ಕಲೆಯನ್ನು ವಿದ್ವತ್ಪೂರ್ಣವಾಗಿ ಪ್ರಚಾರಗೊಳಿಸುತ್ತಿದ್ದ ಬಸವಲಿಂಗ ಸ್ವಾಮಿಗಳು ಮಹಾಪಂಡಿತರು, ಆಚಾರನಿಷ್ಠರು. ಶಾಸ್ತ್ರ ಜ್ಞಾನವನ್ನು ಚನ್ನಾಗಿ ಪಡೆದಿದ್ದ ಇವರ ಕೀರ್ತನ ಮತ್ತು ಪ್ರವಚನ ಕಾರ್ಯಕ್ರಮಗಳು ವಿದ್ವಾಂಸಲೋಕಕ್ಕೆ ರಸದೌತಣಗಳಂತಿರುತ್ತಿದ್ದವು. ಹಾನಗಲ್ಲು ಕುಮಾರಸ್ವಾಮಿಗಳು ಮತ್ತು ಹಾವೇರಿ ಹುಕ್ಕೇರಿ ಮಠದ ಶಿವಬಸವಸ್ವಾಮಿಗಳ ಕೃಪೆಗೆ ಪಾತ್ರರಾಗಿದ್ದರು.

**೫೦. ಶ್ರೀ ಸಿದ್ಧೇಶ್ವರ ಸ್ವಾಮಿಗಳು,ಜ್ಞಾನಯೋಗಾಶ್ರಮ.ವಿಜಾಪುರ:** ಶ್ರೀಗಳವರು ಬಹುಶ್ರುತ ವಿದ್ವಾಂಸರು. ಇವರು ಪ್ರವಚನ ಕಾರ್ಯಕ್ರಮಗಳು ಪಂಡಿತ ಪಾಮರರಿಗೆಲ್ಲ ಮೆಚ್ಚುಗೆಯಾಗುವಂತಹವು. ತರ್ಕಬದ್ಧವಾದ ಇವರ ಶೈಲಿ ಅನ್ಯಾದೃಶ. ಉತ್ತರ ಕರ್ನಾಟಕದ ವಿವಿಧ ಕಡೆಗಳಲ್ಲಿ ಇವರ ವೀರಶೈವ ಧರ್ಮತತ್ತ್ವಗಳ ಬಗೆಯ ಪ್ರವಚನಗಳು ನಡೆಯುತ್ತಿರುತ್ತವೆ.

**೫೧. ಶ್ರೀ ಶಂಭುಲಿಂಗ ಶಿವಾಚಾರ್ಯರು, ಹುಲ್ಯಾಳ:** ಪರಿಣಾಮಕಾರಿ ಪ್ರವಚನ ಕಾರ್ಯಕ್ರಮ ನಡೆಸಿಕೊಡುವಲ್ಲಿ ಶ್ರೀ ಶಂಭುಲಿಂಗ ಶಿವಚಾರ್ಯರ ಹೆಸರು ಉತ್ತರ ಕರ್ನಾಟಕದಲ್ಲಿ ಜನಜನಿತ.

**೫೨. ಸುರಕೋಡದ ಶ್ರೀ ವೀರಯ್ಯನವರು:** ದ್ಯಾಂಪುರದ ಬಸವಲಿಂಗ ಶಾಸ್ತ್ರಿಗಳ ಶಿಷ್ಯರಾದ ಶ್ರೀ ವೀರಯ್ಯನವರು ಕನ್ನಡ ಸಂಸ್ಕೃತ ಭಾಷಾಜ್ಞಾನವನ್ನು ಸಾಕಷ್ಟು ಪಡೆದು ಉತ್ತರ ಕರ್ನಾಟಕದಲ್ಲಿ ಶಿವಕೀರ್ತನೆಗಳ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತ ತಮ್ಮ ಪಾಲಿನ ಸೇವೆಸಲ್ಲಿಸುತ್ತಿದ್ದಾರೆ. ಸಂಗೀತದಲ್ಲೂ ಬಲ್ಲಿದರು.

೫೩. **ಹಿರೇಹಾಳು ಶ್ರೀ ವೀರಯ್ಯನವರು:** ಧಾರವಾಡ ಜಿಲ್ಲಾ ರೋಣ ತಾಲೂಕಿನ ಹಿರೇಹಾಳಿನ ಶ್ರೀ ವೀರಯ್ಯನವರು ಶ್ರೀ ಶಿವಯೋಗಮಂದಿರದಲ್ಲಿ ಸಾಕಷ್ಟು ಅಭ್ಯಾಸಮಾಡಿ, ಶಿವಕೀರ್ತನೆಗಳ ಕಾಯಕದಿಂದ ಜೀವಿಸುತ್ತಿದ್ದಾರೆ. ಉತ್ತರ ಕರ್ನಾಟಕದಲ್ಲಿ ಇವರ ಶಿವಕೀರ್ತನೆಗಳು ವಿಶೇಷವಾಗಿ ಜರುಗುತ್ತಿವೆ.

೫೪. **ಶ್ರೀ ಗುಡ್ಡದಪ್ಪಮಾಸ್ತರ, ಬೆಳಗೆರೆ:** ಚನ್ನಗಿರಿ ತಾಲೂಕು ಬೆಳಗೆರೆಯ ಗುಡ್ಡದಪ್ಪ ಮಾಸ್ತರರು ಒಳ್ಳೆಯ ಪ್ರವಚನಕಾರರೆಂದು ಖ್ಯಾತಿಪೆತ್ತಿದ್ದಾರೆ. ಶಿವಮೊಗ್ಗ ಚಿತ್ರದುರ್ಗ ಜಿಲ್ಲೆಗಳ ಅನೇಕ ಕಡೆ ಇವರ ಪ್ರವಚನ ಕಾರ್ಯಕ್ರಮಗಳು ಜರಗುತ್ತಿರುತ್ತವೆ.

೫೫. **ಶ್ರೀ ರೇಣುಕಾರಾಧ್ಯರು, ಶೀತಕಲ್ಲು:** ತುಮಕೂರು ಜಿಲ್ಲಾ ಶೀತಕಲ್ಲಿನ ಶ್ರೀಯುತ ಆರಾಧ್ಯರು ಕೀರ್ತನಕಲೆಯಲ್ಲಿ ನಿಷ್ಣಾತರು. ಜೀವಿತದ ಕೊನೆಯುವರೆಗೂ ಇವರು ಕೀರ್ತನ ಕಾರ್ಯವನ್ನೇ ನೆಮ್ಮಿ ಬಾಳಿದವರು. ಇವರು ರಾಜಶೇಖರ ವಿಳಾಸ, ಶಬರಶಂಕರ ವಿಳಾಸ ಕಥೆಮಾಡುವುದರಲ್ಲಿ ವಿಶೇಷ ಆಸಕ್ತಿ ತೋರಿಸುತ್ತಿದ್ದರು.

೫೬. **ಲಿಂ. ಗಂಗಾಧರಯ್ಯ, ಎಲಚಗೆರೆ:** ತುಮಕೂರು ಜಿಲ್ಲಾ ಎಲಚಗೆರೆಯ ಗಂಗಾಧರಯ್ಯನವರು ಶಿವಕೀರ್ತನೆಗಳನ್ನುಮಾಡಿ ಸೇವೆ ಮಾಡಿದವರಲ್ಲಿ ಒಬ್ಬರು.

೫೭. **ಸೋಸಲೆ ಶಿವಸ್ವಾಮಿ:** ಟಿ. ನರಸಿಪುರ ತಾಲೂಕಿನ ಚಿದರಹಳ್ಳಿ ಶಿವಸ್ವಾಮಿಯವರು ಉತ್ತಮ ಪ್ರವಚನಕಾರರೆಂದು ಆ ಭಾಗದಲ್ಲಿ ಪ್ರಖ್ಯಾತರಾಗಿದ್ದಾರೆ.

೫೮. **ಶ್ರೀ ಗುರುಸ್ವಾಮಿ ಕಲಕೇರಿ:** ಪಂಚಾಕ್ಷರಿ ಗವಾಯಿಗಳಲ್ಲಿ ಸಂಗೀತಾಭ್ಯಾಸಮಾಡಿದ ಶ್ರೀಯುತರು ಮಧುರವಾದ ಸಂಗೀತದೊಡನೆ ಶಿವಕೀರ್ತನೆಗಳನ್ನು ಉತ್ತರ ಕರ್ನಾಟಕದಲ್ಲಿ ನಡೆಸಿಕೊಡುತ್ತಿದ್ದರು.

೫೯. **ಶ್ರೀ ಸಿದ್ಧಲಿಂಗಶಾಸ್ತ್ರಿ, ಹೊಸಮಠ, ಗದಗ:** ತಕ್ಕಮಟ್ಟಿಗೆ ಸಂಸ್ಕೃತ ಇಂಗ್ಲಿಷ್ ಭಾಷೆಯ ಪರಿಚಯವಿರುವ ಶ್ರೀ ಶಾಸ್ತ್ರಿಗಳು ಉತ್ತರ ಕರ್ನಾಟಕದ ಅನೇಕ ಸ್ಥಳಗಳಲ್ಲಿ ಪುರಾಣ ಪ್ರವಚನ, ಕೀರ್ತನ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತ ತಮ್ಮ ಪಾಲಿನ ಸೇವೆ ಮಾಡುತ್ತಿದ್ದಾರೆ. ಇವರು ಒಂದೆರಡು ಚಿಕ್ಕ ಪುಸ್ತಕಗಳನ್ನೂ ಬರೆದು ಪ್ರಕಟಿಸಿದ್ದಾರೆ.

೬೦. **ಸಾಲಂಕಿಮಠದ ಎಸ್. ಎಂ. ಷಡಕ್ಷರಸ್ವಾಮಿ, ಮಲೆಬೆನ್ನೂರು:** ಪ್ರಾಥಮಿಕಶಾಲಾ ಉಪಾಧ್ಯಾಯರಾದ ಇವರು ಪುರಾಣ ಪ್ರವಚನ, ಕಾವ್ಯವಾಚನ, ಕೀರ್ತನ ಕಲೆಗಳನ್ನು ಅಭ್ಯಾಸಮಾಡಿ, ಅನೇಕ ಕಡೆ ಶಿವಕೀರ್ತನೆ, ಕಾವ್ಯವಾಚನಗಳನ್ನೂ ಮಾಡುತ್ತಿದ್ದಾರೆ. ಇವರಿಗೆ ಅನೇಕಕಡೆ ಸಾರ್ವಜನಿಕ ಸನ್ಮಾನಗಳೂ ನಡೆದಿವೆಯೆಂದು ತಿಳಿದುಬರುತ್ತದೆ.

೬೧. **ಶ್ರೀ ಟಿ. ಎಂ. ಚಂದ್ರಶೇಖರ ಶಾಸ್ತ್ರಿಗಳು, ದಾವಣಗೆರೆ;** ಗದಗಿನ ಪುಟ್ಟರಾಜ ಗವಾಯಿಗಳಲ್ಲಿ ಸಂಗೀತ ಮತ್ತು ಶಿವಕೀರ್ತನ ಕಲೆಯನ್ನು ಅಭ್ಯಾಸ ಮಾಡಿದ ಶ್ರೀಯುತರು ಕರ್ನಾಟಕದ ಅನೇಕ ಕಡೆಗಳಲ್ಲಿ ಸಂಚರಿಸಿ ಶಿವಕೀರ್ತನೆ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದಾರೆ. ಇವರು ಅನೇಕ ಸ್ತೋತ್ರ ಗೀತೆಗಳನ್ನು ಪ್ರಕಟಿಸಿದ್ದಾರೆ.

೬೨. **ಶ್ರೀ ಟಿ. ಎಂ. ಪಂಚಾಕ್ಷರಿ, ದಾವಣಗೆರೆ:** ಶ್ರೀ ಟಿ. ಎಂ. ಚಂದ್ರಶೇಖರ ಶಾಸ್ತ್ರಿಗಳ ಕುಮಾರನಾದ ಇವನು ಬಾಲ್ಯದಲ್ಲಿಯೇ ಅಂದರೆ ೬ನೆಯ ವರ್ಷದಲ್ಲಿಯೇ ಕೀರ್ತನೆ ಮಾಡಿ ಜನವನ್ನು ಬೆರಗುಗೊಳಿಸಿದವನು, ೧೯೬೨ರಲ್ಲಿ ಜನ್ಮವೆತ್ತಿದ ಇವನು ಈಗಾಗಲೆ ಕರ್ನಾಟಕದ ಅನೇಕ ಕಡೆ ಉತ್ತಮ ಶಿವಕೀರ್ತನೆಯ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದಾನೆ. ಅನೇಕ ಬಿರುದು ಬಾವಲಿಗಳೂ ಇವನಿಗೆ ಸಾರ್ವಜನಿಕರಿಂದ ಲಭ್ಯವಾಗಿವೆ. ಬೆಂಗಳೂರು, ಧಾರವಾಡ ಆಕಾಶವಾಣಿಗಳು ಇವನ ಕೀರ್ತನಗಳನ್ನು ಬಿತ್ತರಿಸಿವೆ.

೬೩. **ಶ್ರೀ ಶಿವಯೋಗಿ ಶಾಸ್ತ್ರಿ ಗಡ್ಡದಮಠ, ದೇವಗಿರಿ:** ಹಾವೇರಿ ತಾಲೂಕಿನ ದೇವಗಿರಿಯ ಶ್ರೀ ಶಾಸ್ತ್ರಿಗಳು ಗದಗಿನ ಪುಟ್ಟರಾಜ ಗವಾಯಿಗಳಲ್ಲಿ ಸಂಗೀತ ಮತ್ತು ಕೀರ್ತನ ಕಲೆಯನ್ನು ಅಭ್ಯಾಸಮಾಡಿ ಕನ್ನಡನಾಡಿನ ಅನೇಕ ಕಡೆಗಳಲ್ಲಿ ಶಿವಕೀರ್ತನೆ, ಪುರಾಣ ಪ್ರವಚನ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದಾರೆ. ಸುಮಧುರ ಸಂಗೀತದೊಡನೆ ನಡೆಸಿಕೊಡಲ್ಪಡುವ ಕೀರ್ತನೆಗಳು ಸಾರ್ವಜನಿಕ ಮೆಚ್ಚುಗೆ ಪಡೆದಿವೆ. ಅನೇಕ ಕಡೆ ಇವರಿಗೆ ಇವರ ಕಲೆ ಸನ್ಮಾನಗಳನ್ನೊದಗಿಸಿದೆ. ಆಕಾಶವಾಣಿ ಧಾರವಾಡ ಕೇಂದ್ರದಿಂದ ಇವರ ಅನೇಕ ಕೀರ್ತನೆಗಳು ಬಿತ್ತರಗೊಂಡಿವೆ. ನಾಟಕಗಳಲ್ಲಿಯೂ ಇವರು ನಟಿಸಿ ಒಳ್ಳೆಯ ನಟರೆಂದು ಖ್ಯಾತಿವೆತ್ತಿದ್ದಾರೆ.

೬೪. **ಶ್ರೀ ಬಸವರಾಜ ತೆಗ್ಗಿನಮಠ, ಹುನಗುಂದ:** ವಿಜಾಪುರ ಜಿಲ್ಲಾ ಹುನಗುಂದದ ಶ್ರೀಯುತರು ಒಳ್ಳೆಯ ಪ್ರವಚನಕಾರರೆಂದು ಉತ್ತರ ಕರ್ನಾಟಕ ಭಾಗದಲ್ಲಿ ಪ್ರಸಿದ್ಧರಾಗಿದ್ದಾರೆ. ಇವರ ಅನೇಕ ಲೇಖನಗಳು ರಾಜ್ಯದ ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿವೆ. ಇವರ ಒಂದೆರಡು ಕೃತಿಗಳೂ ಪ್ರಕಟಗೊಂಡಿವೆ.

೬೫. **ಶ್ರೀ ಉಳವೀರಸ್ವಾಮಿ ಮುರಗೋಡ:** ಪ್ರಾಥಮಿಕ ಶಾಲಾ ಉಪಾಧ್ಯಾಯವೃತ್ತಿಯಲ್ಲಿರುವ ಶ್ರೀ ಉಳುವೀರರು ಲಾವಣಿಕಾರರಾಗಿ. ಜಾನಪದ ಸಾಹಿತ್ಯವಾಚಕರಾಗಿ, ಉತ್ತಮ ಪ್ರವಚನ ಪಟುಗಳಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಪ್ರಸಿದ್ಧ

ರಾಗಿದ್ದಾರೆ. ಅನೇಕ ಮಠಾಧಿಪತಿಗಳ ಸಂಪರ್ಕ ಹೊಂದಿರುವ ಶ್ರೀಯುತರು ಪುರಾಣಪ್ರವಚನ, ಗಮಕ, ಕೀರ್ತನೆಗಳಲ್ಲಿ ನಿವೃತ್ತಿಯ ನಂತರ ಕಾಲಕಳೆಯಲು ಸಂಕಲ್ಪಿಸಿದ್ದಾರೆ. ಇವರಿಗೆ ಅನೇಕ ಸಾರ್ವಜನಿಕ ಸನ್ಮಾನ ಸಮಾರಂಭಗಳೂ ಜರುಗಿವೆಯೆಂದು ತಿಳಿದುಬರುವುದು.

**೬೬. ಪಂಡಿತ ಶ್ರೀ ಚನ್ನವೀರಶಾಸ್ತ್ರಿ ಎಡ್ರಾಮಿಮಠ, ಕಮತಗಿ:** ಹುನಗುಂದ ತಾಲೂಕು ಕಮತಗಿಯ ಈ ವಯೋವೃದ್ಧ ಶಾಸ್ತ್ರಿಗಳು ಸಂಸ್ಕೃತ ವಿದ್ಯಾಭ್ಯಾಸವನ್ನು ಬನಾರಸದಲ್ಲಿ ಮಾಡಿ, ಪಾಂಡಿತ್ಯ ಗಳಿಸಿ ಉತ್ತರ ಕರ್ನಾಟಕದ ಅನೇಕ ಕಡೆಗಳಲ್ಲಿ ಪುರಾಣಪ್ರವಚನ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದ್ದಾರೆ. ವೃದ್ಧಾಪ್ಯದ ಮೂಲಕ ಸದ್ಯಕ್ಕೆ ಇವರ ಕಾರ್ಯಕ್ರಮಗಳು ಸ್ಥಗಿತಗೊಂಡಿವೆ. ಇವರಿಗೆ ಅನೇಕ ಕಡೆಗಳಲ್ಲಿ ಸಾರ್ವಜನಿಕ ಸನ್ಮಾನ ಸಮಾರಂಭಗಳು ನಡೆದಿವೆ.

**೬೭. ಶ್ರೀ ವೀರಭದ್ರ ಶಾಸ್ತ್ರಿಗಳು ಹಿರೇಮಠ, ಕುರುಬಗೊಂಡ:** ಹಾವೇರಿ ತಾಲೂಕಿನ ಕುರುಬಗೊಂಡದ ಶ್ರೀ ಶಾಸ್ತ್ರಿಗಳು ಗದಗಿನ ಶ್ರೀ ಪುಟ್ಟರಾಜಗವಾಯಿಗಳಲ್ಲಿ ಸಂಗೀತ ಮತ್ತು ಕೀರ್ತನ ಕಲೆಯನ್ನು ಅಭ್ಯಾಸಮಾಡಿ ಪುರಾಣ ಪ್ರವಚನ, ಶಿವಕೀರ್ತನ ಪ್ರಸಂಗಗಳನ್ನು ಉತ್ತರ ಕರ್ನಾಟಕದ ಅನೇಕ ಕಡೆ ನಡೆಸಿಕೊಟ್ಟಿದ್ದಾರೆ. ಇವರಿಗೆ ಅನೇಕ ಕಡೆ ಸಾರ್ವಜನಿಕ ಪ್ರಶಸ್ತಿ ಪತ್ರಗಳು ಲಭಿಸಿವೆ.

ಮೇಲ್ಕಂಡ ಈ ಮಹಾಶಯರಲ್ಲದೆ ಶಿವಕೀರ್ತನೆ, ಗಮಕ, ಪುರಾಣಪ್ರವಚನಕಾರರ ಪಟ್ಟಿ ಇನ್ನೂ ದೊಡ್ಡದಾಗುವ ಸಂಭವವಿದೆ. ಸರಿಯಾದ ಮಾಹಿತಿ ಲಭ್ಯವಾಗದಿರುವುದರಿಂದಲೂ ಮುಖ್ಯವಾಗಿ ಸ್ಥಳಾಭಾವದಿಂದಲೂ ಕೆಲವರ ಹೆಸರನ್ನು ಮಾತ್ರ ಈ ಕೆಳಗೆ ಸೂಚಿಸಿದ್ದೇವೆ. ಬಳ್ಳಾರಿ ಕರಡೆಪ್ಪನವರು ಸ್ಥಾಪಿಸಿದ್ದ ಸಂಸ್ಕೃತ ಪಾಠಶಾಲೆಯಲ್ಲಿ ತರಬೇತಿಗೊಂಡ ಅನೇಕ ಶಾಸ್ತ್ರಿಗಳು ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ವೀರಶೈವ ಧರ್ಮತತ್ತ್ವ ಪ್ರಸಾರದಲ್ಲಿ ಪ್ರವಚನಕಾರರಾಗಿ ಕೀರ್ತನಕಾರರಾಗಿ ಬಹಳ ಸೇವೆ ಸಲ್ಲಿಸಿದ್ದಾರೆ. ಅವರಲ್ಲಿ ಮುಖ್ಯವಾಗಿ ಮುದುಗಲ್ಲು ಹಿರೇಮಠದ ಲಿಂ. ಅಮರಪ್ಪಶಾಸ್ತ್ರಿ, ನಾರಾಯಣದೇವರಕೆರೆ ಶಿವರಾತ್ರಿಮಠದ ಲಿಂ ಸದಾಶಿವಶಾಸ್ತ್ರಿ. ಕೊಳಗಲ್ಲು ಹಿರೇಮಠದ ಗುರುಶಾಂತಶಾಸ್ತ್ರಿ, ಮಸೂತಿಜಗಲಿ ಹಿರೇಮಠದ ಲಿಂ. ನೀಲಕಂಠಶಾಸ್ತ್ರಿ, ನರೇಗಲ್ಲುಮಠದ ಲಿಂ. ಶಿವಬಸವಶಾಸ್ತ್ರಿ, ಕೋಡಿಕೊಪ್ಪ ಹಿರೇಮಠದ ಲಿಂ. ಗುರುಲಿಂಗಶಾಸ್ತ್ರಿ, ಪಗಡದಿನ್ನಿ ಹಿರೇಮಠದ ಲಿಂ. ಪಂಚಾಕ್ಷರಿಶಾಸ್ತ್ರಿ. ಕೊಟ್ಟೂರು ಹಿರೇಮಠದ ಲಿಂ. ರೇವಣಶಾಸ್ತ್ರಿ, ಹರಪನಹಳ್ಳಿ ಹಿರೇಮಠದ ಲಿಂ. ಬಸವಲಿಂಗಶಾಸ್ತ್ರಿ. ಉಂತಕಲ್ಲು ಶಿಖಾಮಣಿ ಮಠದ ಲಿಂ. ವಿರೂಪಾಕ್ಷಶಾಸ್ತ್ರಿ. ದ್ಯಾಂಪುರದ ಹಿರೇಮಠದ ಲಿಂ. ವೀರೇಶ್ವರಶಾಸ್ತ್ರಿ, ಶಿರಾಳಕೊಪ್ಪದ ಎಮ್ಮಿಗನೂರು ಗದಿಗೆಯ್ಯನವರು ಮುಂತಾದವರು ಈ ಪಟ್ಟಿಯಲ್ಲಿ ಸೇರುವರು. ಇವರಲ್ಲದೆ ಪಂಡಿತ ಜಿ. ಎಂ. ಚಂದ್ರಶೇಖರಶಾಸ್ತ್ರಿ ಇಜಾರಿ ಲಕಮಾಪುರ, ದಾನಪ್ಪ ಜತ್ತಿ ತೀಕೋಟಾ, ಬಿ. ಶಾಂತವೀರಯ್ಯ ಆಗರ ಬನ್ನಿಹಟ್ಟಿ, ಲಿಂ. ಟಿ. ಎನ್. ಚನ್ನಪ್ಪನವರು, ಬೆಂಗಳೂರು. ದಯಾನಂದ ಸ್ವಾಮಿಗಳು ಯರನಾಳು, ಅಕ್ಕೂರುಮಠದ ಷಣ್ಮುಖಯ್ಯ ಬೆಂಗಳೂರು, ಶಂಕರೇಗೌಡರು ಪಡಗಾನೂರು, ಲಕಮಾಪುರದ ಜಯದೇವಶಾಸ್ತ್ರಿಗಳು ಹಾವೇರಿ (?), ಹುಬ್ಬಳ್ಳಿ ವಿರೂಪಾಕ್ಷಶಾಸ್ತ್ರಿ, ಹಾನಗಲ್ಲಿನ ಕುಮ್ಮೂರು ಕೊಟ್ರಯ್ಯ, ಅಕ್ಕಿ ಆಲೂರಿನ ಕಲ್ಯಾಣಯ್ಯ, ತೆವರಮೆಳ್ಳಿಹಳ್ಳಿ ಲಿಂ. ಮಹಾಂತಯ್ಯ. ನಾಯಕಲ್ ಬಸವರಾಜಶಾಸ್ತ್ರಿ, ತುಮಕೂರಿನ ಗಮಕ ವಿದ್ವಾನ್ ಸಿದ್ಧಗಂಗಯ್ಯ ಇತ್ಯಾದಿ. ಹೀಗೆ ಸಮಾಜದಲ್ಲಿ ಶಿವಾನುಭವ ಪ್ರವಚನಕಾರರು, ಪುರಾಣಕೀರ್ತನಕಾರರು, ಗಮಕಿಗಳು ಇವರ ಸೇವೆ ಧರ್ಮತತ್ತ್ವ ಜಾಗೃತಿಗೆ ತನ್ನ ಕೈಲಾದ ಸೇವೆ ಮಾಡಿದೆ.



# ಶರಣೆನ್ನಿರೋ ಸಿದ್ಧಗಂಗಾಶ್ರೀಗೆ-

—ಮಹದೇವ ಬಣಕಾರ

ಲಿಂಗವನೊಡೆವೆರಸಿ ನೀವು ಪೂಜಿಸಿದ ಕಾರಣ
ನಿಮ್ಮಂಗವೇ ಲಿಂಗವಾಯಿತ್ತಯ್ಯಾ।
ಅಂಗಗುಣಂಗಳನಳಿದ ಲಿಂಗಭೋಗಿ ನೀವಾದ ಕಾರಣ
ಸಿದ್ಧಲಿಂಗ ನಿಮ್ಮ ಕರಸ್ಥಲದಿ ಸ್ಥಾಪ್ಯಗೊಂಡನಯ್ಯಾ।
ಕಾಮನ ಗೆಲಿದ ನಿಃಕಾಮಿ ನೀವಾದ ಕಾರಣ
ಪ್ರಸಾದ ಕಾಯ ನಿಮಗೆ ಸಂದಿತ್ತಯ್ಯಾ।
ಚಿದ್‌ಘನ ಜ್ಞಾನಾನುಭವ ಕರಿಗೊಂಡಿತ್ತಾಗಿ
'ಜಂಗಮ'ವು ನಿಮಗೆ ಸಮನಿಸಿತ್ತು ನೋಡಾ!
ನೀವಾವ ಪರಿಯೊಳವತರಿಸಿಹಿರೆಂಬುದನರಿಯ
ಲೆನ್ನಳವೇನು ಹೇಳಾ ?
ಉದ್ಧಾನ ವರವೀರಯೋಗಿಯ ಕರಕಮಲಸಂಜಾತ
ಶಿವಸುತ ಶಿವಕುಮಾರ ಪ್ರಭುವೆ ?

ಮನುಕುಲಕೆ ಶಿವಕುಲದ ದೀಕ್ಷೆಯನಿತ್ತು
ಉಭಯವನಳಿದ ಅನುಭಾವ ಯೋಗದಲಿ
ನಿಮ್ಮ ನುಡಿ ಪರುಷವಾಯಿತ್ತು, ನಿಮ್ಮ ನಡೆ ಪರುಷ
ವಾಯಿತ್ತು!
ಹರಬಂದು ನಿಂದನಿಳೆಗೆಂಬೆ
ಮರ್ತ್ಯದ ಕರ್ತಾರ ನೀವೆಂಬೆ
ಧ್ಯಾನಿಸಲು ಶಿವಪಂಚಾಕ್ಷರಿಯೆ ನಿಮ್ಮ ನಾಮ
ವೆಂಬೆನಯ್ಯಾ!
ನಿಮ್ಮ ಶ್ರೀಚರಣಂಗಳಿಗೆರಗಿ ಎನ್ನ ಪೂರ್ವ
ಭವಂಗಳಳಿದು ಪಾವನವಾದುದಕೆ
ಎನ್ನವರ ಗುರು ಶಿವಕುಮಾರ ಪ್ರಭುವಿನ ಕಾರುಣ್ಯ
ವೆಂಬೆ ನೋಡಾ !

(೨)

ಕಾಯಕವೆ ಅಷ್ಟವಿಧಾರ್ಚನೆ
ಕಾಯಕವೆ ಶೋಡಶೋಪಚಾರ
ಕಾಯಕವೆ ನಿತ್ಯ ಜಪತಪಂಗಳಯ್ಯಾ
ಶಿವಪೂಜೆಯಲಿ ಶಿವಯೋಗ, ಮತ್ತೆ
ಲಿಂಗಾಂಗ ಸಾಮರಸ್ಯ–ಮೇಣ್
ಸಕಲ ಜೀವಾತ್ಮರಿಗೆ ಲೇಸ ಬಯಸುವ ಬಯಕೆ,
ನಿಮ್ಮಂತರಂಗವನರಿವ ಪರಿಯುದೆಂತಯ್ಯಾ ?
ಎನ್ನವರಗುರು ಶಿವಕುಮಾರ ಪ್ರಭುವೆನಗರುಹನೆ ?
ಅಷ್ಟಾವರಣವೇ ನಿಮ್ಮಂಗವಾಯಿತ್ತು
ಪಂಚಾಚಾರವೇ ನಿಮ್ಮ ಪ್ರಾಣವಾಯಿತ್ತು
ಷಟ್‌ಸ್ಥಲ ಜ್ಞಾನಾನುಭಾವವೇ ನಿಮ್ಮ ನಿತ್ಯಾನಂದ
ವಾಯಿತ್ತು,
ಬಿದ್ದ ಜಗವನುದ್ಧರಿಸಲೆಂದು
ಶ್ರೀ ಸಿದ್ಧಲಿಂಗನೆದ್ದು ಬಂದಿಹ ನೋಡಾ !

ಮದ್ದು ನಿಮ್ಮುಪದೇಶ ಭವರೋಗ ಬಂಧನಕೆ
ಸಿದ್ಧಗಂಗೆಯು ಸಿದ್ಧಿಗೈಸಿರಿಯು ಮನುಕುಲಕೆ
ಧನ್ಯನಾದೆನು ನೋಡಾ, ಎನ್ನವರಗುರು ಶಿವಕುಮಾರ
ಪ್ರಭುವೆ,
ಸಿದ್ಧಗಂಗಾ ಶ್ರೀ ಶಿವಕುಮಾರರ ದರುಶನದ ಕೃಪೆಯ
ನೀವೆನಗಿತ್ತುದಕೆ,

ಶರಣೆನ್ನಿರೋ ಸಿದ್ಧಗಂಗಾ ಸಿರಿಗೆ
ಶರಣೆನ್ನಿರೋ ಶಿವನ ಸಿರಿಮುಡಿಗೆ
ಶರಣೆನ್ನಿರೋ ಶಿವನ ಚಿದ್‌ರೂಪಿಂಗೆ
ಶರಣೆನ್ನಿರೋ ಶರಣ ಕುಲ ಸಂಜಾತಂಗೆ
ಶರಣೆನ್ನಿರೋ ಶಿವಸುತ ಶಿವಕುಮಾರಂಗೆ
ಶರಣೆನ್ನಿರೋ ಶಿದ್ಧಲಿಂಗಾವತಾರಂಗೆ
ಶರಣೆನ್ನಿರೋ ಸಿದ್ಧಗಂಗಾ ಶ್ರೀಗೆ–
ಶರಣು ಶರಣೆನ್ನದವರ ಮೆಚ್ಚ
ಎನ್ನ ವರಗುರು ಶಿವಕುಮಾರ ಪ್ರಭುವು !

